॥ ಶ್ರೀರಾಧಾಕೃಷ್ಣಾಭ್ಯಾಂ ನಮಃ ॥

173

## ಮಹರ್ಷಿ ವೇದವ್ಯಾಸ ಪ್ರಣೀತ

# ಶ್ರೀಮದ್ಭಾಗವತ ಮಹಾಪುರಾಣಮ್

### (ಸರಳ - ಸಚಿತ್ರ ಕನ್ನಡ ಅನುವಾದ ಸಹಿತ)

## ಪ್ರಥಮ ಖಂಡ

### (ಮೊದಲನೇ ಸ್ಕಂಧದಿಂದ ಎಂಟನೆಯ ಸ್ಕಂಧದವರೆಗೆ)

**श्रीमद्भागवतमहापुराणम् (कन्नड) प्रथम खण्ड**




ಗೀತಾಪ್ರೆಸ್, ಗೋರಖಪು

॥ ಶ್ರೀರಾಧಾಕೃಷ್ಣಾಭ್ಯಾಂ ನಮಃ ॥

ಮಹರ್ಷಿ ವೇದವ್ಯಾಸ ಪ್ರಣೀತ

# ಶ್ರೀಮದ್ಭಾಗವತ ಮಹಾಪುರಾಣಮ್

(ಸರಳ - ಸಚಿತ್ರ ಕನ್ನಡ ಅನುವಾದ ಸಹಿತ)

## ಪ್ರಥಮ ಖಂಡ

(ಮೊದಲನೇ ಸ್ಕಂಧದಿಂದ ಎಂಟನೆಯ ಸ್ಕಂಧದವರೆಗೆ)

**श्रीमद्भागवत महापुराणम् (कन्नड) प्रथम खण्ड**

---

ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವದೇವ ॥

---

ಕನ್ನಡಾನುವಾದ :

ಕೀರ್ತನಾಚಾರ್ಯ ಶ್ರೀಲಕ್ಷ್ಮಣದಾಸ ವೇಲಣಕರ್

ಗೀತಾಪ್ರೆಸ್, ಗೋರಖಪುರ

॥ ಶ್ರೀಹರಿಃ ॥

# ನಮ್ರ ನಿವೇದನೆ

ಶ್ರೀಮದ್ಭಾಗವತವು ಸಾಕ್ಷಾತ್ ಭಗವಂತನ ಸ್ವರೂಪವಾಗಿದೆ. ಭಕ್ತ - ಭಾಗವತರು ಭಗವದ್ಭಾವನೆಯಿಂದ ಇದರ ಪೂಜೆ-ಆರಾಧನೆ ಅನುಸಂಧಾನ ಮಾಡುತ್ತಾರೆ. ಭಾರತೀಯ ಸಾಹಿತ್ಯದಲ್ಲಿ ಶ್ರೀಮದ್ಭಾಗವತದ ಸ್ಥಾನವು ಅನುಪಮವಾದುದು. ಅದು ಭಕ್ತಿಶಾಸ್ತ್ರದ ಸಾರಸರ್ವಸ್ವವಾಗಿ ಸಂಸ್ಕೃತ ಸಾಹಿತ್ಯದ ಅನರ್ಘ್ಯ ರತ್ನವೂ ಆಗಿದೆ. ಮಹರ್ಷಿಗಳು ಗ್ರಂಥಾರಂಭದಲ್ಲಿ ಸಾರಿರುವಂತೆ ಅದು ನಿಗಮ ಕಲ್ಪತರುವಿನಿಂದ ಭೂಮಿಗೆ ಜಾರಿ ಬಂದಿರುವ ಅಮೃತಮಯವಾದ ಫಲ. ವೇದವು ಸರ್ವ ಪುರುಷಾರ್ಥಗಳಿಗೂ ಉಪಾಯವಾದ ಕಲ್ಪತರುವೇನೋ ಹೌದು. ಆದರೆ ಸ್ವರ್ಗ-ವೈಕುಂಠಧಾಮಗಳಿಗೆ ಹತ್ತಿ ಅದರಿಂದ ಫಲಗಳನ್ನು ದೊರಕಿಸಿಕೊಳ್ಳುವ ಶಕ್ತಿ ನಮಗಿಲ್ಲ. ಅದಕ್ಕಾಗಿ ದೇವರ್ಷಿ ನಾರದರು ಅದನ್ನು ತಂದು ವೇದವ್ಯಾಸರ ಕೈಗೆ ಕೊಟ್ಟರು. ವ್ಯಾಸರು ಅದನ್ನು ತಮ್ಮ ಜ್ಞಾನಪುತ್ರನೂ, ಔರಸ ಪುತ್ರನೂ ಆದ ಅಮರಜೀವಿ ಶುಕಮುನಿಯೆಂಬ ಅರಗಿಳಿಯ ಬಾಯಲ್ಲಿಟ್ಟರು. ಆ ದಿವ್ಯ ಶುಕವು ಅದನ್ನು ಆಸ್ವಾದಿಸಿ, ಭೂಮಿಗೆ ಬೀಳಿಸಿತು. ಆ ಗಿಳಿಯು ಕಚ್ಚಿದ ರಸ ಫಲವು ಭೂಮಿಗೆ ಜಾರಿದರೂ ಒಡೆಯದೆ ರಸಪೂರ್ಣವಾಗಿಯೇ ಧರೆಗೆ ಇಳಿದಿದೆ. ಸಿಪ್ಪೆ, ನಾರು, ಬೀಜಗಳಿಲ್ಲದೆ ಕೇವಲ ರಸರೂಪದಲ್ಲೇ ಇರುವ ಹಣ್ಣು ಅದು. ರಸರೂಪವಾಗಿದ್ದರೂ ಘನಫಲ ರೂಪವಾಗಿದೆ. ಹಾಗೆಯೇ ಘನವಾಗಿದ್ದರೂ ರಸರೂಪವಾಗಿದೆ. ಸೋರಿಹೋಗದಿರಲೆಂದು ಘನಾಕೃತಿ, ಆಸ್ವಾದನೀಯವೇ ಆಗಿರಲೆಂದು ರಸಾಕೃತಿ. ಹೀಗೆ ರಸ-ಘನಗಳೆರಡೂ ಸೇರಿರುವ ಅದ್ಭುತವಾದ ಅಮೃತಫಲವೇ ಶ್ರೀಮದ್ಭಾಗವತ ಗ್ರಂಥವು.

ಶ್ರುತಿ, ಸ್ಮೃತಿ, ಇತಿಹಾಸ - ಪುರಾಣಗಳಾಗಿದ್ದು ಪುರಾಣವು ಮೂರನೆಯದಾಗಿದ್ದರೂ ಶ್ರೀಮದ್ಭಾಗವತ ಮಹಾ ಪುರಾಣವು ಅನ್ಯಾದೃಶ ಮಹಿಮೆಯಿಂದ ಉಪನಿಷತ್ತು, ಗೀತೆ, ಬ್ರಹ್ಮಸೂತ್ರಗಳಂತೆ ಪ್ರಥಮ ಸ್ಥಾನದಲ್ಲೇ ಇರುವ ಅಗ್ಗಳಿಕೆಯ ಶಾಸ್ತ್ರವೆಂದು ದಾರ್ಶನಿಕರು ಸಾರಿರುತ್ತಾರೆ. ಅಷ್ಟೇ ಅಲ್ಲ ಅದು ವೇದವ್ಯಾಸರ ಸಮಾಧಿಭಾಷೆ ಎಂದು ಶ್ರೀ ವಲ್ಲಭಾಚಾರ್ಯರು ಘೋಷಿಸಿದ್ದಾರೆ. ಇದರ ಆಧಾರದ ಮೇಲೆಯೇ ತಮ್ಮ ಆಧ್ಯಾತ್ಮಿಕ ಸಿದ್ಧಾಂತವನ್ನು ಶ್ರೀ ವಲ್ಲಭಾಚಾರ್ಯರು, ಶ್ರೀ ಚೈತನ್ಯ ಮಹಾಪ್ರಭುಗಳು, ಮೊದಲಾದ ಮಹಾತ್ಮರು ಸಾರಿರುತ್ತಾರೆ. ಇಷ್ಟು ಅಧಿಕ ಸಂಖ್ಯೆಯ ವ್ಯಾಖ್ಯಾನ - ಟೀಕೆಗಳಿಂದ ಸಂಭಾವಿತವಾಗಿರುವ ಹಿರಿಮೆ ಬೇರಾವ ಪುರಾಣಕ್ಕೂ ಇಲ್ಲ. ಅತ್ಯಧಿಕ ಸಂಖ್ಯೆಯ ವ್ಯಾಖ್ಯಾನಗಳಿಂದ ಭೂಷಿತವಾಗಿರುವ ಗ್ರಂಥಗಳಲ್ಲಿ ಶ್ರೀಮದ್ಭಗವದ್ಗೀತೆಗೆ ಎರಡನೆಯದು ಶ್ರೀಮದ್ಭಾಗತವೊಂದೇ. ವಿಶುದ್ಧಾದ್ವೈತ, ವಿಶಿಷ್ಟಾದ್ವೈತ, ಶುದ್ಧಾದ್ವೈತ, ದ್ವೈತ, ದ್ವೈತಾದ್ವೈತ ಮುಂತಾದ ನಾನಾ ವೇದಾಂತ ಶಾಖೆಗಳ ಆಚಾರ್ಯರಿಂದ ವ್ಯಾಖ್ಯಾನಗೊಂಡಿರುವ ಶಾಸ್ತ್ರ ಸಾರ್ವಭೌಮ ಈ ಶ್ರೀಮದ್ಭಾಗವತ. ಅದ್ವೈತಾಚಾರ್ಯರೂ, ಭಕ್ತಸತ್ತಮರೂ ಆದ ಶ್ರೀಧರ ಸ್ವಾಮಿಗಳ "ಭಾಗವತಾರ್ಥ ದೀಪಿಕಾ", ವಿಶಿಷ್ಟಾದ್ವೈತದ ಸಂಪ್ರದಾಯದ ಸುದರ್ಶನ ಸೂರಿಗಳ "ಶುಕಪಕ್ಷೀಯ", ವೀರರಾಘವಾಚಾರ್ಯರ "ಭಾಗವತ ಚಂದ್ರ ಚಂದ್ರಿಕಾ" ವೆಂಕಟಕೃಷ್ಣಮಾಚಾರ್ಯರ "ಭಾಗವತ ಚಂದ್ರಿಕಾ" ದ್ವೈತಮತ ಸ್ಥಾಪಕರಾದ ಶ್ರೀಮದಾನಂದತೀರ್ಥ ಭಗವತ್ಪಾದರ "ಭಾಗವತ ತಾತ್ಪರ್ಯ ನಿರ್ಣಯ", ಶ್ರೀ ವಿಜಯಧ್ವಜರ "ಪದರತ್ನಾವಳಿ", ನಿಂಬಾರ್ಕಮತದ ಶ್ರೀ ಶುಕದೇವಾಚಾರ್ಯರ, "ಸಿದ್ಧಾಂತ ಪ್ರದೀಪ", ಶುದ್ಧಾದ್ವೈತ ಸಂಪ್ರದಾಯದ ಪ್ರತಿಷ್ಠಾಪನಾಚಾರ್ಯರಾದ ಶ್ರೀ ವಲ್ಲಭಾಚಾರ್ಯರ "ಸುಬೋಧಿನೀ", ಶ್ರೀಗಿರಿಧರಾಚಾರ್ಯರ "ಆಧ್ಯಾತ್ಮಿಕ ವ್ಯಾಖ್ಯಾನ", ಶ್ರೀ ಚೈತನ್ಯ ಮತೀಯರಾದ ಜೀವಗೋಸ್ವಾಮಿಗಳ "ಸಂದರ್ಭ", ಶ್ರೀ ವಿಶ್ವನಾಥ ಚಕ್ರವರ್ತಿಗಳ "ಸಾರಾರ್ಥ ದರ್ಶಿನೀ" ಮತ್ತು ಶ್ರೀಹರಿಯ "ಹರಿಭಕ್ತಿ ರಸಾಯನ" ಇವುಗಳಲ್ಲದೆ ಇನ್ನೂ ಅನೇಕ ಮಹಾಮಹಿಮರ ವ್ಯಾಖ್ಯಾನಗಳು ಪ್ರಸಿದ್ಧವಾಗಿದೆ.

ಇದು ಪುರಾಣವಾದರೂ ಸಾಹಿತ್ಯದ ಪರಮಾವಧಿ ಗ್ರಂಥವಾಗಿ **"ವಿದ್ಯಾ ಭಗವತಾವಧಿಃ"** ಎಂಬ ಪ್ರಸಿದ್ಧಿಗೆ ಕಾರಣವಾಗಿದೆ. ವಿದ್ಯಾವಂತರನ್ನು ಪರೀಕ್ಷೆ ಮಾಡಬೇಕಾದರೆ ಶ್ರೀಮದ್ಭಾಗವತವೇ ಒರೆಗಲ್ಲು. **"ವಿದ್ಯಾವತಾಂ ಭಾಗವತೇ ಪರೀಕ್ಷಾ"** ಎಂಬ ಮಾತು ವಿಶ್ರುತವಾಗಿದೆ. ಭಗವದ್ರಸದಿಂದ ಪರಿಪೂರ್ಣವಾಗಿ **"ಸ್ವಾದು ಸ್ವಾದು ಪದೇ ಪದೇ"** ಎಂಬ ಅನುಭವವಾಣಿಗೆ ಆಶ್ರಯವಾಗಿರುವ ಅಸದೃಶ ಗ್ರಂಥವೂ ಆಗಿದೆ.

ಇದರ ಅನುಸಂಧಾನದಿಂದ ಪಾರಮಾರ್ಥಿಕ ಲಾಭವಾದರೋ ಇದ್ದೇ ಇದೆ. ಜೊತೆಗೆ ಲೌಕಿಕವಾದ ಅನೇಕ ಲಾಭಗಳು ದೊರೆಯುವವು ಎಂದು ಸಾರುವ ಫಲಶ್ರುತಿಗಳು ಇವೆ. ಉದಾಹರಣೆಗಾಗಿ - ಇದರಲ್ಲಿ ಬರುವ ನಾರಾಯಣ ಕವಚದ ಅನುಸಂಧಾನದಿಂದ ವಿಘ್ನಗಳ ನಾಶ, ವಿಜಯ - ಆರೋಗ್ಯ - ಐಶ್ವರ್ಯಗಳ ಪ್ರಾಪ್ತಿ ; ಗೋಪಿಕಾ ಕನ್ಯೆಯರೂ, ಶ್ರೀ ರುಕ್ಮಿಣೀ ದೇವಿಯೂ, ಕಾತ್ಯಾಯಿನಿ ದೇವಿಯಲ್ಲಿ ಮಾಡುವ ಪ್ರಾರ್ಥನೆ ಮತ್ತು ಶ್ರೀ ರುಕ್ಮಿಣೀ ದೇವಿಯು ಶ್ರೀಕೃಷ್ಣನಿಗೆ ಕಳುಹಿಸುವ ಸಂದೇಶ - ಇವುಗಳನ್ನು ಅನುಸಂಧಾನ ಮಾಡುವುದರಿಂದ ಕನ್ಯೆಯರಿಗೆ ಶೀಘ್ರವಾಗಿ ವಿವಾಹಪ್ರಾಪ್ತಿ ; ಪುಂಸವನ ವ್ರತದಿಂದ ಉತ್ತಮ ಸಂತಾನ ಪ್ರಾಪ್ತಿ ಮತ್ತು ಸಮಸ್ತ ಕಾಮನೆಗಳ ಪೂರ್ತಿ ; "ಗಜೇಂದ್ರ ಸ್ತವನ"ದಿಂದ ಋಣಮುಕ್ತಿ, ಶತ್ರು ಮುಕ್ತಿ ಮತ್ತು ದೌರ್ಭಾಗ್ಯ ಪರಿಹಾರ ; "ಪಯೋವ್ರತ"ದಿಂದ ಇಷ್ಟವಾದ ಸಂತಾನ ಪ್ರಾಪ್ತಿ ಮತ್ತು "ಭಾಗವತ ಸಪ್ತಾಹ ಶ್ರವಣ - ಪಾರಾಯಣ"ಗಳ ಫಲವಾಗಿ ಪ್ರೇತಯೋನಿಯಿಂದ ಬಿಡುಗಡೆ - ಇತ್ಯಾದಿ ಫಲಗಳನ್ನು ಶ್ರೀಮದ್ಭಾಗವತ ಶಾಸ್ತ್ರವು ಘೋಷಣೆ ಮಾಡುತ್ತದೆ. ಇದು ಅನೇಕರ ಪ್ರಯೋಗಗಳಿಂದಲೂ ಜೀವನದಲ್ಲಿ ಸಿದ್ಧವಾಗಿರುವ ಸತ್ಯ. ಇಷ್ಟೆಲ್ಲ ಇದ್ದರೂ

॥ ಶ್ರೀಹರಿಃ ॥

# ನಮ್ರ ನಿವೇದನೆ

ಶ್ರೀಮದ್ಭಾಗವತವು ಸಾಕ್ಷಾತ್ ಭಗವಂತನ ಸ್ವರೂಪವಾಗಿದೆ. ಭಕ್ತ - ಭಾಗವತರು ಭಗವದ್ಭಾವನೆಯಿಂದ ಇದರ ಪೂಜೆ-ಆರಾಧನೆ ಅನುಸಂಧಾನ ಮಾಡುತ್ತಾರೆ. ಭಾರತೀಯ ಸಾಹಿತ್ಯದಲ್ಲಿ ಶ್ರೀಮದ್ಭಾಗವತದ ಸ್ಥಾನವು ಅನುಪಮವಾದುದು. ಅದು ಭಕ್ತಿಶಾಸ್ತ್ರದ ಸಾರಸರ್ವಸ್ವವಾಗಿ ಸಂಸ್ಕೃತ ಸಾಹಿತ್ಯದ ಅನರ್ಘ್ಯ ರತ್ನವೂ ಆಗಿದೆ. ಮಹರ್ಷಿಗಳು ಗ್ರಂಥಾರಂಭದಲ್ಲಿ ಸಾರಿರುವಂತೆ ಅದು ನಿಗಮ ಕಲ್ಪತರುವಿನಿಂದ ಭೂಮಿಗೆ ಜಾರಿ ಬಂದಿರುವ ಅಮೃತಮಯವಾದ ಫಲ. ವೇದವು ಸರ್ವ ಪುರುಷಾರ್ಥಗಳಿಗೂ ಉಪಾಯವಾದ ಕಲ್ಪತರುವೇನೋ ಹೌದು. ಆದರೆ ಸ್ವರ್ಗ-ವೈಕುಂಠಧಾಮಗಳಿಗೆ ಹತ್ತಿ ಅದರಿಂದ ಫಲಗಳನ್ನು ದೊರಕಿಸಿಕೊಳ್ಳುವ ಶಕ್ತಿ ನಮಗಿಲ್ಲ. ಅದಕ್ಕಾಗಿ ದೇವರ್ಷಿ ನಾರದರು ಅದನ್ನು ತಂದು ವೇದವ್ಯಾಸರ ಕೈಗೆ ಕೊಟ್ಟರು. ವ್ಯಾಸರು ಅದನ್ನು ತಮ್ಮ ಜ್ಞಾನಪುತ್ರನೂ, ಔರಸ ಪುತ್ರನೂ ಆದ ಅಮರಜೀವಿ ಶುಕುಮುನಿಯೆಂಬ ಅರಗಿಳಿಯ ಬಾಯಲ್ಲಿಟ್ಟರು. ಆ ದಿವ್ಯ ಶುಕವು ಅದನ್ನು ಆಸ್ವಾದಿಸಿ, ಭೂಮಿಗೆ ಬೀಳಿಸಿತು. ಆ ಗಿಳಿಯು ಕಚ್ಚಿದ ರಸ ಫಲವು ಭೂಮಿಗೆ ಜಾರಿದರೂ ಒಡೆಯದೆ ರಸಪೂರ್ಣವಾಗಿಯೇ ಧರೆಗೆ ಇಳಿದಿದೆ. ಸಿಪ್ಪೆ, ನಾರು, ಬೀಪುಗಳಿಲ್ಲದೆ ಕೇವಲ ರಸರೂಪದಲ್ಲೇ ಇರುವ ಹಣ್ಣು ಅದು. ರಸರೂಪವಾಗಿದ್ದರೂ ಘನಫಲ ರೂಪವಾಗಿದೆ. ಹಾಗೆಯೇ ಘನವಾಗಿದ್ದರೂ ರಸರೂಪವಾಗಿದೆ. ಸೋರಿಹೋಗದಿರಲೆಂದು ಘನಾಕೃತಿ, ಆಸ್ವಾದನೀಯವೇ ಆಗಿರಲೆಂದು ರಸಾಕೃತಿ. ಹೀಗೆ ರಸ-ಘನಗಳೆರಡೂ ಸೇರಿರುವ ಅದ್ಭುತವಾದ ಅಮೃತಫಲವೇ ಶ್ರೀಮದ್ಭಾಗವತ ಗ್ರಂಥವು.

ಶ್ರುತಿ, ಸ್ಮೃತಿ, ಇತಿಹಾಸ - ಪುರಾಣಗಳಾಗಿದ್ದು ಪುರಾಣವು ಮೂರನೆಯದಾಗಿದ್ದರೂ ಶ್ರೀಮದ್ಭಾಗವತ ಮಹಾ ಪುರಾಣವು ಅನ್ಯಾದೃಶ ಮಹಿಮೆಯಿಂದ ಉಪನಿಷತ್ತು, ಗೀತೆ, ಬ್ರಹ್ಮಸೂತ್ರಗಳಂತೆ ಪ್ರಥಮ ಸ್ಥಾನದಲ್ಲೇ ಇರುವ ಅಗ್ಗಳಿಕೆಯ ಶಾಸ್ತ್ರವೆಂದು ದಾರ್ಶನಿಕರು ಸಾರಿರುತ್ತಾರೆ. ಅಷ್ಟೇ ಅಲ್ಲ ಅದು ವೇದವ್ಯಾಸರ ಸಮಾಧಿಭಾಷೆ ಎಂದು ಶ್ರೀ ವಲ್ಲಭಾಚಾರ್ಯರು ಘೋಷಿಸಿದ್ದಾರೆ. ಇದರ ಆಧಾರದ ಮೇಲೆಯೇ ತಮ್ಮ ಆಧ್ಯಾತ್ಮಿಕ ಸಿದ್ಧಾಂತವನ್ನು ಶ್ರೀ ವಲ್ಲಭಾಚಾರ್ಯರು, ಶ್ರೀ ಚೈತನ್ಯ ಮಹಾಪ್ರಭುಗಳು, ಮೊದಲಾದ ಮಹಾತ್ಮರು ಸಾರಿರುತ್ತಾರೆ. ಇಷ್ಟು ಅಧಿಕ ಸಂಖ್ಯೆಯ ವ್ಯಾಖ್ಯಾನ - ಟೀಕೆಗಳಿಂದ ಸಂಭಾವಿತವಾಗಿರುವ ಹಿರಿಮೆ ಬೇರಾವ ಪುರಾಣಕ್ಕೂ ಇಲ್ಲ. ಅತ್ಯಧಿಕ ಸಂಖ್ಯೆಯ ವ್ಯಾಖ್ಯಾನಗಳಿಂದ ಭೂಷಿತವಾಗಿರುವ ಗ್ರಂಥಗಳಲ್ಲಿ ಶ್ರೀಮದ್ಭಗವದ್ಗೀತೆಗೆ ಎರಡನೆಯದು ಶ್ರೀಮದ್ಭಾಗತವೊಂದೇ. ವಿಶುದ್ಧಾದ್ವೈತ, ವಿಶಿಷ್ಟಾದ್ವೈತ, ಶುದ್ಧಾದ್ವೈತ, ದ್ವೈತ, ದ್ವೈತಾದ್ವೈತ ಮುಂತಾದ ನಾನಾ ವೇದಾಂತ ಶಾಖೆಗಳ ಆಚಾರ್ಯರಿಂದ ವ್ಯಾಖ್ಯಾನಗೊಂಡಿರುವ ಶಾಸ್ತ್ರ ಸಾರ್ವಭೌಮ ಈ ಶ್ರೀಮದ್ಭಾಗವತ. ಅದ್ವೈತಾಚಾರ್ಯರೂ, ಭಕ್ತಸತ್ತಮರೂ ಆದ ಶ್ರೀಧರ ಸ್ವಾಮಿಗಳ "ಭಾಗವತಾರ್ಥ ದೀಪಿಕಾ", ವಿಶಿಷ್ಟಾದ್ವೈತದ ಸಂಪ್ರದಾಯದ ಸುದರ್ಶನ ಸೂರಿಗಳ "ಶುಕಪಕ್ಷೀಯ", ವೀರರಾಘವಾಚಾರ್ಯರ "ಭಾಗವತ ಚಂದ್ರ ಚಂದ್ರಿಕಾ" ವೆಂಕಟಕೃಷ್ಣಮಾಚಾರ್ಯರ "ಭಾಗವತ ಚಂದ್ರಿಕಾ" ದ್ವೈತಮತ ಸ್ಥಾಪಕರಾದ ಶ್ರೀಮದಾನಂದತೀರ್ಥ ಭಗವತ್ಪಾದರ "ಭಾಗವತ ತಾತ್ಪರ್ಯ ನಿರ್ಣಯ", ಶ್ರೀ ವಿಜಯಧ್ವಜರ "ಪದರತ್ನಾವಳಿ", ನಿಂಬಾರ್ಕಮತದ ಶ್ರೀ ಶುಕದೇವಾ ಚಾರ್ಯರ, "ಸಿದ್ಧಾಂತ ಪ್ರದೀಪ", ಶುದ್ಧಾದ್ವೈತ ಸಂಪ್ರದಾಯದ ಪ್ರತಿಷ್ಠಾಪನಾಚಾರ್ಯರಾದ ಶ್ರೀ ವಲ್ಲಭಾಚಾರ್ಯರ "ಸುಬೋಧಿನೀ", ಶ್ರೀಗಿರಿಧರಾಚಾರ್ಯರ "ಆಧ್ಯಾತ್ಮಿಕ ವ್ಯಾಖ್ಯಾನ", ಶ್ರೀ ಚೈತನ್ಯ ಮತೀಯರಾದ ಜೀವಗೋಸ್ವಾಮಿಗಳ "ಸಂದರ್ಭ", ಶ್ರೀ ವಿಶ್ವನಾಥ ಚಕ್ರವರ್ತಿಗಳ "ಸಾರಾರ್ಥ ದರ್ಶಿನೀ" ಮತ್ತು ಶ್ರೀಹರಿಯ "ಹರಿಭಕ್ತಿ ರಸಾಯನ" ಇವುಗಳಲ್ಲದೆ ಇನ್ನೂ ಅನೇಕ ಮಹಾಮಹಿಮರ ವ್ಯಾಖ್ಯಾನಗಳು ಪ್ರಸಿದ್ಧವಾಗಿದೆ.

ಇದು ಪುರಾಣವಾದರೂ ಸಾಹಿತ್ಯದ ಪರಮಾವಧಿ ಗ್ರಂಥವಾಗಿ **"ವಿದ್ಯಾ ಭಗವತಾವಧಿಃ"** ಎಂಬ ಪ್ರಸಿದ್ಧಿಗೆ ಕಾರಣವಾಗಿದೆ. ವಿದ್ಯಾವಂತರನ್ನು ಪರೀಕ್ಷೆ ಮಾಡಬೇಕಾದರೆ ಶ್ರೀಮದ್ಭಾಗವತವೇ ಒರೆಗಲ್ಲು. **"ವಿದ್ಯಾವತಾಂ ಭಾಗವತೇ ಪರೀಕ್ಷಾ"** ಎಂಬ ಮಾತು ವಿಶ್ರುತವಾಗಿದೆ. ಭಗವದ್ರಸದಿಂದ ಪರಿಪೂರ್ಣವಾಗಿ **"ಸ್ವಾದು ಸ್ವಾದು ಪದೇ ಪದೇ"** ಎಂಬ ಅನುಭವವಾಣಿಗೆ ಆಶ್ರಯವಾಗಿರುವ ಅಸದೃಶ ಗ್ರಂಥವೂ ಆಗಿದೆ.

ಇದರ ಅನುಸಂಧಾನದಿಂದ ಪಾರಮಾರ್ಥಿಕ ಲಾಭವಾದರೋ ಇದ್ದೇ ಇದೆ. ಜೊತೆಗೆ ಲೌಕಿಕವಾದ ಅನೇಕ ಲಾಭಗಳು ದೊರೆಯುವವು ಎಂದು ಸಾರುವ ಫಲಶ್ರುತಿಗಳು ಇವೆ. ಉದಾಹರಣೆಗಾಗಿ - ಇದರಲ್ಲಿ ಬರುವ ನಾರಾಯಣ ಕವಚದ ಅನುಸಂಧಾನದಿಂದ ವಿಘ್ನಗಳ ನಾಶ, ವಿಜಯ - ಆರೋಗ್ಯ - ಐಶ್ವರ್ಯಗಳ ಪ್ರಾಪ್ತಿ ; ಗೋಪಿಕಾ ಕನ್ಯೆಯರೂ, ಶ್ರೀ ರುಕ್ಮಿಣೀ ದೇವಿಯೂ, ಕಾತ್ಯಾಯಿನಿ ದೇವಿಯಲ್ಲಿ ಮಾಡುವ ಪ್ರಾರ್ಥನೆ ಮತ್ತು ಶ್ರೀ ರುಕ್ಮಿಣೀ ದೇವಿಯು ಶ್ರೀಕೃಷ್ಣನಿಗೆ ಕಳುಹಿಸುವ ಸಂದೇಶ - ಇವುಗಳನ್ನು ಅನುಸಂಧಾನ ಮಾಡುವುದರಿಂದ ಕನ್ಯೆಯರಿಗೆ ಶೀಘ್ರವಾಗಿ ವಿವಾಹಪ್ರಾಪ್ತಿ ; ಪುಂಸವನ ವ್ರತದಿಂದ ಉತ್ತಮ ಸಂತಾನ ಪ್ರಾಪ್ತಿ ಮತ್ತು ಸಮಸ್ತ ಕಾಮನೆಗಳ ಪೂರ್ತಿ ; "ಗಜೇಂದ್ರ ಸ್ತವನ"ದಿಂದ ಋಣಮುಕ್ತಿ, ಶತ್ರು ಮುಕ್ತಿ ಮತ್ತು ದೌರ್ಭಾಗ್ಯ ಪರಿಹಾರ ; "ಪಯೋವ್ರತ"ದಿಂದ ಇಷ್ಟವಾದ ಸಂತಾನ ಪ್ರಾಪ್ತಿ ಮತ್ತು "ಭಾಗವತ ಸಪ್ತಾಹ ಶ್ರವಣ - ಪಾರಾಯಣ"ಗಳ ಫಲವಾಗಿ ಪ್ರೇತಯೋನಿಯಿಂದ ಬಿಡುಗಡೆ - ಇತ್ಯಾದಿ ಫಲಗಳನ್ನು ಶ್ರೀಮದ್ಭಾಗವತ ಶಾಸ್ತ್ರವು ಘೋಷಣೆ ಮಾಡುತ್ತದೆ. ಇದು ಅನೇಕರ ಪ್ರಯೋಗಗಳಿಂದಲೂ ಜೀವನದಲ್ಲಿ ಸಿದ್ಧವಾಗಿರುವ ಸತ್ಯ. ಇಷ್ಟೆಲ್ಲ ಇದ್ದರೂ

ಶ್ರೀಮದ್ಭಾಗವತದ ಶ್ರವಣ, ಪಾರಾಯಣ ಮತ್ತು ಪೂಜೆಗಳ ಮುಖ್ಯಫಲ ಭಕ್ತಿ – ಜ್ಞಾನ – ವೈರಾಗ್ಯಗಳು. ಮುಕ್ತಿಯು ಭಕ್ತಿಯ ದಾಸಿಯಾಗಿ ತಾನಾಗಿಯೇ ಬರುವಳೆಂದು ಇದು ಸಾರುತ್ತದೆ. ''**ಮುಕ್ತಿಂ ದಾಸೀಂ ದದೌ ತುಭ್ಯಂ**'' ಸಾಧನಭಕ್ತಿ ಮತ್ತು ಸಾಧ್ಯಭಕ್ತಿ ಇವೆರಡನ್ನು ಕರುಣಿಸುವ ಕಾಮಧೇನು ಇದು. ಅಷ್ಟೇಕೆ, ಭಗವಾನ್ ಶ್ರೀಕೃಷ್ಣನ ವಾಙ್ಮಯ ಮೂರ್ತಿಯೇ ಶ್ರೀಮದ್ಭಾಗವತ. ಭಗವಾನ್ ಶ್ರೀಕೃಷ್ಣನು ಪರಂಧಾಮವನ್ನು ಸೇರಿಕೊಳ್ಳುವಾಗ ತನ್ನ ಪ್ರತಿನಿಧಿಯನ್ನಾಗಿ ಭಕ್ತೋತ್ತಮ ಉದ್ಧವನಿಗೆ ಅನುಗ್ರಹಿಸಿದ ಅಪೂರ್ವ ಪ್ರಸಾದವೂ ಇದಾಗಿದೆ.
**ಸ್ವಕೀಯಂ ಯದ್ಭವೇತ್ತೇಜಃ ತಚ್ಚ ಭಾಗವತೇಽದಧಾತ್ । ತಿರೋಧಾಯ ಪ್ರವಿಷ್ಟೋಽಯಂ ಶ್ರೀಮದ್ಭಾಗವತಾರ್ಣವಮ್ ॥**
**ತೇನೇಯಂ ವಾಙ್ಮಯೀ ಮೂರ್ತಿಃ ಪ್ರತ್ಯಕ್ಷಾ ವರ್ತತೇ ಹರೇಃ । ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮ ಸಮ್ಮಿತಮ್ ॥**

ಇದರ ಅಪಾರ ಮಹಿಮೆಯನ್ನು ಪದ್ಮ ಪುರಾಣ, ಮತ್ಸ್ಯ ಪುರಾಣ ಮುಂತಾದ ಮಹಾಪುರಾಣಗಳು ಘೋಷಿಸುತ್ತವೆ. ಕೆಲವು ಧರ್ಮ ಗ್ರಂಥಗಳು ಸಾರ್ವಭೌಮನ ಆಜ್ಞೆಯಂತೆ ನಮಗೆ ಧರ್ಮವನ್ನು ಬೋಧಿಸುತ್ತವೆ. ಉದಾಹರಣೆಗೆ – ಶ್ರುತಿ, ಕಾವ್ಯಗಳು. ಕೆಲವು ಗ್ರಂಥಗಳು ಸ್ನೇಹಿತನಂತೆ ನಮಗೆ ಧರ್ಮಜಾಗೃತಿಯನ್ನು ಉಂಟು ಮಾಡುತ್ತವೆ. ಉದಾಹರಣೆಗೆ – ಪುರಾಣಗಳು, ಕಾವ್ಯಗಳು ಪ್ರಿಯತಮೆಯಂತೆ ಮಧುರವಾದ ಮಾರ್ಗದಿಂದ ಅರಿವು ಮೂಡಿಸುತ್ತವೆ. ಇವುಗಳನ್ನು ಕ್ರಮವಾಗಿ ಪ್ರಭಸಮ್ಮಿತ, ಮಿತ್ರ ಸಮ್ಮಿತ ಮತ್ತು ಕಾಂತಾ ಸಮ್ಮಿತ ಎಂದು ಕರೆಯುತ್ತಾರೆ. ಈ ಮೂರು ರೀತಿಯಿಂದಲೂ ನಮಗೆ ಉಪದೇಶ ನೀಡಿ, ನಮ್ಮನ್ನು ಉದ್ಧರಿಸುವ ಅನುಪಮ ಗ್ರಂಥ ಶ್ರೀಮದ್ಭಾಗವತ. ಶ್ರೀಮದ್ಭಾಗವತವನ್ನು ಪುರಾಣ ರತ್ನವೆಂದೂ, ಆಧ್ಯಾತ್ಮಿಕ ಕಾವ್ಯಗಳ ಶಿರೋಮಣಿಯೆಂದೂ, ಪರಮಶ್ರೇಷ್ಠ ಪರಮಹಂಸ ಸಂಹಿತೆಯೆಂದೂ ಮನೀಷಿಗಳು ಮಾನ್ಯ ಮಾಡಿರುತ್ತಾರೆ.

ಭಕ್ತಿ ಶಾಸ್ತ್ರವಾದ ಶ್ರೀಮದ್ಭಾಗವತದ ಪ್ರಧಾನ ಪ್ರತಿಪಾದಿತ ವಸ್ತು ಭಗವಲ್ಲೀಲೆ, ಭಗವಂತನ ಅವತಾರಗಳ ವರ್ಣನೆ ಮತ್ತು ಭಾಗವತೋತ್ತಮರ ಚರಿತ್ರೆಗಳು. ಅದರಲ್ಲಿಯೂ ನಿತ್ಯ, ಶುದ್ಧ, ನಿರಂಜನ, ವಿಶ್ವರೂಪೀ, ಪರಮಾತ್ಮನಾದ ಭಗವಾನ್ ಶ್ರೀಕೃಷ್ಣನ ದಿವ್ಯ ಚರಿತ್ರೆ. ಅದರಲ್ಲಿ ಬರುವ ಭಗವಂತನ ಬಾಲಲೀಲೆ, ನವನೀತಲೀಲೆ, ಗೋಚಾರಣ, ಮುರಳೀಗಾನ, ಬ್ರಹ್ಮ ಗರ್ವಭಂಗ, ಕಾಳೀಯದಮನ, ದಾವಾಗ್ನಿ ಪಾನ, ಗೋಪಿಕಾ ವಸ್ತ್ರಾಪಹಾರ, ರಾಸಲೀಲೆ ಮುಂತಾದವುಗಳು ಅವನ ಮಾಹಾತ್ಮ್ಯಲೀಲೆಗಳು. ಪೂತನಾ, ತೃಣಾವರ್ತ, ಶಕಟ, ಪ್ರಲಂಬ, ಧೇನುಕ, ಬಕ, ವತ್ಸಾಸುರ, ಕಂಸನೇ ಮೊದಲಾದ ದಾನವರ ಉದ್ಧಾರ. ಇನ್ನೂ ಅನೇಕ ಅಧರ್ಮಿಗಳ ಸಂಹಾರ ಮಾಡಿ, ಧರ್ಮಸ್ಥಾಪನೆ ಮಾಡಿದ ಧರ್ಮಮೂರ್ತಿಯ ಚರಿತ್ರೆ ಇದರಲ್ಲಿ ವರ್ಣಿತವಾಗಿದೆ. ಗೋಪಿಕಾಗೀತೆ, ಯುಗ್ಮಗೀತೆ, ಶ್ರುತಿಗೀತೆ, ಭ್ರಮರ ಗೀತೆ, ವೇಣುಗೀತೆ ಹೀಗೆ ಆಧ್ಯಾತ್ಮ ತತ್ತ್ವಗಳನ್ನೊಳಗೊಂಡ ಅನೇಕ ಪ್ರಕರಣಗಳಿವೆ. ಶ್ರೀಮದ್ಭಾಗವತದಲ್ಲಿ ಬರುವ ಭಗವತ್ ಸ್ತುತಿಗಳಂತೂ ವೇದಾಂತ ತತ್ತ್ವಗಳ ಸಾರಸರ್ವಸ್ವವೇ ಆಗಿವೆ. ಇನ್ನು ಭಾಗವತೋತ್ತಮರ ಕಥೆಗಳಿಂದ ತುಂಬಿ ತುಳುಕುತ್ತದೆ. ಪಾಪಿಷ್ಠತಮನಾಗಿದ್ದರೂ ಭಗವನ್ನಾಮದ ಬಲದಿಂದ ಭವವನ್ನು ದಾಟಿದ ಅಜಾಮಿಳನ ಕಥೆ, ಬಾಲಕ ಭಕ್ತವರೇಣ್ಯರಾದ ಧ್ರುವ-ಪ್ರಹ್ಲಾದರ ಕಥೆ, ಅಸುರರಾಗಿದ್ದರೂ ಅಸುರತ್ವವನ್ನು ಗೆದ್ದು ದೇವತೆಗಳನ್ನು ನಾಚಿಸಿದ ಬಲಿ-ವೃತ್ರರ ಕಥೆ, ದರಿದ್ರತಮನಾಗಿದ್ದರೂ ಲಕ್ಷ್ಮೀಪತಿಯಿಂದ ತನ್ನ ಮಿತ್ರನೆಂದು ಸಂಭಾವಿಸಲ್ಪಟ್ಟ ಸುದಾಮನ ಕಥೆ, ತಾನು ಹಸಿದಿದ್ದರೂ ದುಃಖ ಸಂತಪ್ತರಾದ ಎಲ್ಲ ಜೀವಿಗಳ ಶೋಕನಾಶವೇ ತಾನು ಬೇಡುವ ಏಕಮಾತ್ರ ವರ ಎಂದು ಪ್ರಾರ್ಥನೆ ಮಾಡಿದ ರಂತಿದೇವನ ಕಥೆ – ಇವುಗಳನ್ನು ಮರೆಯಲಾಗುವುದಿಲ್ಲ. ಪುರಂಜನೋಪಾಖ್ಯಾನದಂತಹ ರೂಪಕ ಕಥೆಯು ವಿಶ್ವಸಾಹಿತ್ಯದಲ್ಲೇ ಅತಿ ದುರ್ಲಭ.

ಶ್ರೀಮದ್ಭಾಗವತವು ಪಾರಮಹಂಸ ಸಂಹಿತೆಯಾಗಿದ್ದರೂ ಧರ್ಮ-ಅರ್ಥ-ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ಹೇಳುತ್ತದೆ. ಧರ್ಮಾರ್ಥ-ಕಾಮ ಪ್ರಧಾನವಾದ ಗೃಹಸ್ಥಾಶ್ರಮದ ಮಹಿಮೆಯನ್ನು ಅನೇಕ ಕಡೆ ನಿರೂಪಿಸುತ್ತದೆ. ಗೃಹಸ್ಥಾಶ್ರಮದಲ್ಲಿದ್ದು ಕೊಂಡೇ ಭಗವದ್ಭಕ್ತಿ-ಜ್ಞಾನಗಳ ಬಲದಿಂದ ಮುಕ್ತಿಯನ್ನು ಪಡೆದ ಮಹಾತ್ಮರನೇಕರ ಕಥೆಗಳನ್ನು ಹೇಳುತ್ತದೆ. ಕಥಾನಾಯಕನಾದ ಲೀಲಾ ವಿನೋದಿ ಶ್ರೀಕೃಷ್ಣಪರಮಾತ್ಮನೇ ಅವ್ಯಾಕೃತ ಗೃಹಸ್ಥನು. ಅವನ ಗ್ರಹಸ್ಥಾಶ್ರಮದ ಅನಂತ ಲೀಲೆಯನ್ನು ನಾರದರು ದರ್ಶಿಸಿದ್ದನ್ನು ದಶಮ ಸ್ಕಂಧದಲ್ಲಿ ವರ್ಣಿತವಾಗಿದೆ. ಆತನ ಭಕ್ತಶ್ರೇಷ್ಠರಾದ ಅಂಬರೀಷ – ಉದ್ಧವಾದಿಗಳು ಗೃಹಸ್ಥೋತ್ತಮರೇ. ಮಿತ್ರಮಣಿಯಾದ ಆ ಭಗವಂತನಿಂದ ಅದ್ಭುತವಾದ ಐಶ್ವರ್ಯವನ್ನು ಪಡೆದ ಕುಚೇಲನೂ ತನ್ನ ಧರ್ಮಪತ್ನಿಯೊಡನೆ ಅನಾಸಕ್ತನಾಗಿ ಸುಖವನ್ನು ಅನುಭವಿಸುವ ಸದ್ಗೃಹಸ್ಥನೇ ಆಗಿದ್ದನು. ''**ವಿಷಯಾನ್ ಜಾಯಯಾತ್ಯಕ್ಷ್ಯನ್ ಬುಭುಜೇ ನಾತಿಲಂಪಟಃ**'' (೧೦/೮೧/೩೮). ಏಕಾಂತ ಭಕ್ತನು ಗೃಹಸ್ಥನಾಗಿದ್ದರೂ ಶ್ರೇಷ್ಠನೆ. ಆದರೂ ಶ್ರೀಮದ್ಭಾಗವತಕ್ಕೆ ಪ್ರಿಯವಾದುದು ಸರ್ವಸಂಗ ಪರಿತ್ಯಾಗ ಮತ್ತು ಪರಮ ವೈರಾಗ್ಯಗಳಿಂದ ಕೂಡಿದ ಏಕಾಂತಿಕ ಧರ್ಮವೇ. ಶ್ರೀಕೃಷ್ಣ ಪರಮಾತ್ಮನು 'ಅಕಿಂಚನ ವಿತ್ತ'. ಋಷಭದೇವರು, ಜಡಭರತ, ನಾರದರು, ದತ್ತಾತ್ರೇಯರು – ಎಲ್ಲರೂ ಪರಮಹಂಸ ಧರ್ಮವನ್ನೇ ಎತ್ತಿ ಹೇಳುತ್ತಾರೆ. ''**ಧರ್ಮಸ್ಯ ಹ್ಯಾಪವರ್ಗ್ಯಸ್ಯ**'' ಎಂಬಂತೆ ಧರ್ಮದ ಫಲವು ಮೋಕ್ಷವೇ. ''**ಜನಯತ್ಯಾಶು ವೈರಾಗ್ಯಂ ಜ್ಞಾನಂ ಚ ಯದಹೈತುಕಮ್**'' ಎಂಬಂತೆ ಭಕ್ತಿಯ ಫಲವೂ ವೈರಾಗ್ಯವೂ ಮತ್ತು ಜ್ಞಾನಗಳೇ.

ಶ್ರೀಮದ್ಭಾಗವತವು ವೇದ, ಉಪನಿಷತ್ತು, ಭಗವದ್ಗೀತೆಗಳ ಕಥಾರೂಪವಾದ ಭಾಷ್ಯವೆಂದೂ ಹೇಳಬಹುದು. ಕೆಲವು ಕಡೆಗಳಲ್ಲಿ ಆ ಮಂತ್ರಗಳ ಸಾಕ್ಷಾದ್ಭಾಷ್ಯಗಳನ್ನು ಇಲ್ಲಿ ನೋಡುತ್ತೇವೆ. ಎರಡನೇ ಸ್ಕಂಧವನ್ನು ಅಲಂಕರಿಸಿರುವ 'ಚತುಃಶ್ಲೋಕೀ ಭಾಗವತ'ವು ವೈದಿಕ ನಾಸದೀಯ ಸೂಕ್ತ ಮತ್ತು ತೈತರೀಯ ಶ್ರುತಿಗಳ ಸಾರವೇ ಆಗಿದೆ. ವಿರಾಟ್ ಸ್ವರೂಪದ ವರ್ಣನೆಯಲ್ಲಿ ಬೆಳಗುತ್ತಿರುವ ಪುರುಷಸೂಕ್ತ ಭಾಷ್ಯವು ಸ್ಪಷ್ಟವೇ ಆಗಿದೆ. ಶ್ರೀಕೃಷ್ಣನು ಉದ್ಧವನಿಗೆ ಮಾಡಿದ ಭಾಗವತ ಧರ್ಮದ ಉಪದೇಶವು ಇನ್ನೊಂದು ಭಗವದ್ಗೀತೆಯಂತೆಯೇ

ಇದೆ. ಕುರುಕ್ಷೇತ್ರದಲ್ಲಿ ಶೋಕ-ಮೋಹಗಳ ಮಹೋದಧಿಯಲ್ಲಿ ಮುಳುಗಿದ್ದ ಅರ್ಜುನನಿಗೆ ತಾನು ಉಪದೇಶ ಮಾಡಿದುದು ಭಾಗವತ ಧರ್ಮವನ್ನೇ ಎಂದು ಭಗವಂತನೇ ಪ್ರತಿಜ್ಞೆ ಮಾಡುತ್ತಾನೆ.

**ಸ ತದಾ ಪುರುಷವ್ಯಾಘ್ರೋಯುಕ್ತ್ಯಾ ಮೇ ಪ್ರತಿಬೋಧಿತಃ । ಅಭ್ಯಭಾಷತ ಮಾಮೇವಂ ಯಥಾ ತ್ವಂ ರಣಮೂರ್ಧನಿ॥** (೧೧/೧೬/೮)

ಭಗವದ್ಗೀತೆಯಲ್ಲಿ ಹೇಳುವಂತೆಯೇ ಇಲ್ಲಿಯೂ ಮೋಕ್ಷವನ್ನು ಹೊಂದುವುದಕ್ಕೂ ಪ್ರಧಾನವಾಗಿ ಜ್ಞಾನಯೋಗ-ಕರ್ಮಯೋಗ ಭಕ್ತಿಯೋಗಗಳೆಂಬ ಮೂರು ಉಪಾಯಗಳನ್ನು ಭಗವಂತನು ಉಪದೇಶ ಮಾಡಿದ್ದಾನೆ. "**ಜ್ಞಾನಂ ಕರ್ಮ ಚ ಭಕ್ತಿಶ್ಚ ನೋಪಾಯೋಽನ್ಯೋಽಸ್ತಿ ಕುತ್ರಚಿತ್**" (೧೧/೨೦/೬) ಹೀಗೆ ಉಪನಿಷತ್ತು – ಗೀತೆಗಳ ಪರಮಾರ್ಥವನ್ನು ತಿಳಿಯ ಬಯಸುವವರು ಶ್ರೀಮದ್ಭಾಗವತವನ್ನು ಅನುಸಂಧಾನ ಮಾಡುವುದರಿಂದ ಬಹುಮಟ್ಟಿಗೆ ಕೃತಕೃತ್ಯರಾಗುತ್ತಾರೆ.

ಗೀತಾಪ್ರೆಸ್ಸಿನಿಂದ ಕನ್ನಡ ಅನುವಾದ ಸಹಿತ ಶ್ರೀಮದ್ಭಾಗವತವು ಎರಡು ಖಂಡಗಳಲ್ಲಿ ಪ್ರಕಟವಾಗುವುದಕ್ಕೆ ಭಗವತ್ಕೃಪೆಯೇ ಕಾರಣವಾಗಿದೆ. ಇದರ ಕನ್ನಡಾನುವಾದವನ್ನು ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್ ಇವರು ಪರಿಶ್ರಮಪೂರ್ವಕವಾಗಿ ಅಚ್ಚುಕಟ್ಟಾಗಿ, ಸುಂದರವಾಗಿ ಮಾಡಿಕೊಟ್ಟಿದ್ದಾರೆ. ಬೆಂಗಳೂರಿನ ಅಷ್ಟಾಂಗ ಯೋಗ ವಿಜ್ಞಾನ ಮಂದಿರದ ಸಂಸ್ಥಾಪಕರಾದ ಶ್ರೀ ಶ್ರೀ ರಂಗಪ್ರಿಯ ದೇಶಿಕೇಂದ್ರ ಸ್ವಾಮಿಗಳ ಅನುಗ್ರಹ ಆಶೀರ್ವಾದವೂ ಇದರಲ್ಲಿ ಪ್ರಧಾನವಾಗಿದೆ. ಇದರ ಕರಡನ್ನು ತಿದ್ದಿ ಸೂಕ್ತ ಸಲಹೆಗಳನ್ನಿತ್ತ ವಿದ್ವಾನ್ ಶಂಕರಭಟ್ಟ ಉಂಚವಳ್ಳಿ ಇವರುಗಳೆಲ್ಲರಿಗೂ ಗೀತಾಪ್ರೆಸ್ಸು ಆಭಾರಿಯಾಗಿದೆ. ನಮ್ಮ ಗ್ರಂಥಗಳನ್ನು ಪ್ರೇಮದಿಂದ ಆದರಿಸಿದ ಕನ್ನಡ ಓದುಗರು ಇದನ್ನೂ ಸ್ವಾಗತಿಸುವರು ಎಂದು ನಂಬಿದ್ದೇವೆ. ಇದರ ಅನುಸಂಧಾನದ ಮೂಲಕ ಭಗವಾನ್ ಶ್ರೀಕೃಷ್ಣನು ಎಲ್ಲರಿಗೂ ಕರುಣಿಸಲೀ ಎಂದು ಆಶಿಸುತ್ತೇವೆ.

\- ಪ್ರಕಾಶಕರು

# ಚತುಃಶ್ಲೋಕೀ ಭಾಗವತ

**ಅಹಮೇವಾಸಮೇವಾಗ್ರೇ ನಾನ್ಯದ್ ಯತ್ ಸದಸತ್ ಪರಮ್ ।**
**ಪಶ್ಚಾದಹಂ ಯದೇತಚ್ಚ ಯೋಽವಶಿಷ್ಯೇತ ಸೋಽಸ್ಮ್ಯಹಮ್ ॥ ೧ ॥**
**ಋತೇಽರ್ಥಂ ಯತ್ ಪ್ರತೀಯೇತ ನ ಪ್ರತೀಯೇತ ಚಾತ್ಮನಿ ।**
**ತದ್ವಿದ್ಯಾದಾತ್ಮನೋ ಮಾಯಾಂ ಯಥಾಽಽಭಾಸೋ ಯಥಾ ತಮಃ ॥ ೨ ॥**
**ಯಥಾ ಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷ್ವನು ।**
**ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಮ್ ॥ ೩ ॥**
**ಏತಾವದೇವ ಜಿಜ್ಞಾಸ್ಯಂ ತತ್ತ್ವಜಿಜ್ಞಾಸುನಾಽಽತ್ಮನಃ ।**
**ಅನ್ವಯವ್ಯತಿರೇಕಾಭ್ಯಾಂ ಯತ್ ಸ್ಯಾತ್ ಸರ್ವತ್ರ ಸರ್ವದಾ ॥ ೪ ॥**

**(ಶ್ರೀಮದ್ಭಾಗವತ ೨/೯/೩೨-೩೫)**

ಸೃಷ್ಟಿಯ ಮೊದಲು ನಾನೇ ನಾನಾಗಿದ್ದೇನೆ. ನನ್ನನ್ನು ಬಿಟ್ಟು ಸ್ಥೂಲವಾಗಲೀ, ಸೂಕ್ಷ್ಮವಾಗಲೀ, ಎರಡರ ಕಾರಣವಾದ ಅಜ್ಞಾನವಾಗಲೀ ಇರಲಿಲ್ಲ. ಸೃಷ್ಟಿ ಇಲ್ಲದ ಕಡೆಯಲ್ಲೂ ನಾನೇ ನಾನಾಗಿದ್ದೇನೆ. ಮತ್ತು ಈ ಸೃಷ್ಟಿಯ ರೂಪದಲ್ಲಿ ಕಂಡು ಬರುವುದೆಲ್ಲವೂ ನಾನೇ ಆಗಿದ್ದೇನೆ. ಏನಾದರೂ ಉಳಿದರೂ ಅದೂ ನಾನೇ ಆಗಿದ್ದೇನೆ. ॥ ೧ ॥ ವಾಸ್ತವವಾಗಿ ಇಲ್ಲದಿದ್ದರೂ ಏನೆಲ್ಲ ಅನಿರ್ವಚನೀಯ ವಸ್ತುಗಳಿರುವವೆಯೋ, ನಾನಲ್ಲದೆ ಪರಮಾತ್ಮನಾದ ನನ್ನ ಎರಡು ಚಂದ್ರರಂತೆ ಮಿಥ್ಯೆಯಾಗಿಯೇ ಪ್ರತೀತವಾಗುತ್ತದೋ, ಅಥವಾ ಇದ್ದುಕೊಂಡಿದ್ದರೂ ಆಕಾಶದ ನಕ್ಷತ್ರಗಳಲ್ಲಿ ರಾಹುವಿನಂತೆ ನನ್ನ ಪ್ರತೀತ ಆಗುವುದಿಲ್ಲವೋ ಇದನ್ನು ನನ್ನ ಮಾಯೆಯೆಂದು ತಿಳಿಯಬೇಕು. ॥ ೨ ॥ ಪ್ರಾಣಿಗಳ ಪಂಚಭೂತ ರಚಿತ ಸಣ್ಣ – ದೊಡ್ಡ ಶರೀರಗಳಲ್ಲಿ ಆಕಾಶಾದಿ ಪಂಚ ಮಹಾಭೂತಗಳು ಈ ಶರೀರಗಳ ಕಾರ್ಯರೂಪದಿಂದ ನಿರ್ಮಿತವಾದ ಕಾರಣ ಪ್ರವೇಶಿಸುತ್ತವೆ ಮತ್ತು ಮೊದಲಿನಿಂದಲೂ ಆ ಸ್ಥಾನಗಳಲ್ಲಿ ಮತ್ತು ರೂಪಗಳಲ್ಲಿ ಕಾರಣರೂಪದಿಂದ ಇರುವುದರಿಂದ ಪ್ರವೇಶಿಸುವಿದಿಲ್ಲ, ಹಾಗೆಯೇ ಆ ಪ್ರಾಣಿಗಳ ಶರೀರ ದೃಷ್ಟಿಯಿಂದ ನಾನು ಅವುಗಳಲ್ಲಿ ಆತ್ಮನ ರೂಪದಿಂದ ಪ್ರವೇಶಿಸಿರುವೆನು ಹಾಗೂ ಆತ್ಮ ದೃಷ್ಟಿಯಿಂದ ನಾನಲ್ಲದೆ ಬೇರೆ ಯಾವ ವಸ್ತುವೂ ಇಲ್ಲದಿರುವುದರಿಂದ ಅವುಗಳಲ್ಲಿ ಪ್ರವಿಷ್ಟನಾಗಿಯೂ ಇಲ್ಲ. ॥ ೩ ॥ ಇದು ಬ್ರಹ್ಮವಲ್ಲ ಹೀಗೆ ನಿಷೇಧದ ಪದ್ಧತಿಯಿಂದ ಮತ್ತು ಇದು ಬ್ರಹ್ಮವಾಗಿದೆ, ಇದು ಬ್ರಹ್ಮವಾಗಿದೆ ಎಂಬ ಅನ್ವಯ ಪದ್ಧತಿಯಿಂದ ಸರ್ವಾತೀತ,ಸರ್ವಸ್ವರೂಪ ಭಗವಂತನೇ ಸರ್ವದಾ, ಸರ್ವತ್ರ ಸ್ಥಿತನಾಗಿದ್ದಾನೆ ಎಂಬುದು ಸಿದ್ಧವಾಗುತ್ತದೆ. ಅದೇ ವಾಸ್ತವಿಕ ತತ್ತ್ವವಾಗಿದೆ. ಯಾರು ಆತ್ಮಾ ಅಥವಾ ಪರಮಾತ್ಮನ ತತ್ತ್ವವನ್ನು ತಿಳಿಯಲು ಬಯಸುವನೋ, ಅವನಿಗೆ ಕೇವಲ ಇಷ್ಟೇ ತಿಳಿಯುವ ಅವಶ್ಯಕತೆಯಿದೆ. ॥ ೪ ॥

॥ ಶ್ರೀಹರಿಃ ॥

# ಶ್ರೀಮದ್ಭಾಗವತದ ವಿಷಯಾನುಕ್ರಮಣಿಕೆ

## ಪ್ರಥಮ ಖಂಡ

| ಅಧ್ಯಾಯ | ವಿಷಯ | ಪುಟ |
|---|---|---|



## ಚತುರ್ಥ ಸ್ಕಂಧ

ಅಧ್ಯಾಯ ವಿಷಯ ಪುಟ



## ಪಂಚಮ ಸ್ಕಂಧ



## ಷಷ್ಠ ಸ್ಕಂಧ

॥ ಓಂ ನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತ ಪೂಜಾವಿಧಿ - ವಿನಿಯೋಗ, ನ್ಯಾಸ - ಧ್ಯಾನ

ಪ್ರಾತಃಕಾಲ ಸ್ನಾನ - ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಶ್ರೀ ಭಗವಂತನಿಗೆ ನಮಸ್ಕಾರ ಮಾಡಿ "**ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ**" ಇತ್ಯಾದಿ ಶಾಂತಿ ಮಂತ್ರಗಳನ್ನು ಪಠಿಸಬೇಕು. ಅನಂತರ ಶ್ರೀಕೃಷ್ಣ ಪರಮಾತ್ಮನಿಗೂ, ಶ್ರೀ ವೇದವ್ಯಾಸರಿಗೂ, ಶ್ರೀಶುಕ ಮಹರ್ಷಿಗಳಿಗೂ, ಶ್ರೀಮದ್ಭಾಗವತ ಗ್ರಂಥಕ್ಕೂ ಧ್ಯಾನ - ಆವಾಹನಾದಿ ಷೋಡಶೋಪಚಾರ ಪೂಜೆಯನ್ನು ಸಮರ್ಪಿಸಬೇಕು. ಶ್ರೀಪುರುಷಸೂಕ್ತದ ಋಕ್ಕುಗಳಿಂದ ಆ ಪೂಜೆಯನ್ನು ಸಲ್ಲಿಸ ಬೇಕು.

ಅದಕ್ಕಾಗಿ ಪವಿತ್ರಪಾಣಿಯಾಗಿ ಪ್ರಾಯಾಣಾಮ ಮಾಡಿ ಸಂಕಲ್ಪವನ್ನು ಹೇಳಬೇಕು. "**ಹರಿಃ ಓಂ ತತ್ಸತ್ ಅದ್ಯ ಬ್ರಹ್ಮಣಃ ದ್ವಿತೀಯ ಪರಾರ್ಧೇ ಅಮುಕ ಸಂವತ್ಸರೇ ಆಯನೇ ಋತೌ ಮಾಸೇ ಪಕ್ಷೇ ಶುಭತಿಥೌ ವಾಸರಯುಕ್ತಾಯಾಂ ನಕ್ಷತ್ರ ಯುಕ್ತಾಯಾಂ ಶುಭ ತಿಥೌ ಗೋತ್ರಸ್ಯ ಶರ್ಮಣಃ/ವರ್ಮಣಃ / ಗುಪ್ತಸ್ಯ / ಮಮ ಸಕುಟುಂಬಸ್ಯ ಸಪರಿವಾರಸ್ಯ ಶ್ರೀಗೋವರ್ಧನಧಾರಣಚರಣಾರವಿಂದಪ್ರಸಾದಾತ್ ಸರ್ವ ಸಮೃದ್ಧಿಪ್ರಾಪ್ತ್ಯರ್ಥಂ ಶ್ರೀಭಗವದನುಗ್ರಹ ಪೂರ್ವಕ ಭಗವದೀಯ ಪ್ರೇಮೋಪ ಲಬ್ಧಯೇ ಚ ಶ್ರೀಭಗವನ್ನಾಮಾತ್ಮಕ ಭಗವತ್ಸ್ವರೂಪ ಶ್ರೀಭಾಗವತಸ್ಯ ಪಾಠೇ ಅಧಿಕಾರ ಸಿದ್ಧ್ಯರ್ಥಂ ಶ್ರೀಕೃಷ್ಣ ಪರಮಾತ್ಮನಃ ಶ್ರೀವ್ಯಾಸ ಮಹರ್ಷೇಃ ಶ್ರೀಶುಕಮಹರ್ಷೇಃ ಶ್ರೀಭಗವನ್ನಾಮಾತ್ಮಕ ಸ್ವರೂಪಿ ಶ್ರೀಭಾಗವತಸ್ಯ ಪುರುಷಸೂಕ್ತ ವಿಧಾನೇನನ ಪೂಜಾಂ ಕರಿಷ್ಯೇ**" ಇತ್ಯಾದಿಯಾಗಿ ಸಂಕಲ್ಪ ಮಾಡುವುದು.

**ಓಂ ತದಸ್ತು ಮಿತ್ರಾ ವರುಣಾ ತದಗ್ನೇ**
**ಶಂಯ್ಯೋಽಸ್ಮಭ್ಯಮಿದಮಸ್ತು ಶಸ್ತಮ್ ।**
**ಅಶೀಮಹಿ ಗಾಥಮುತ ಪ್ರತಿಷ್ಠಾಂ**
**ನಮೋ ದಿವೇ ಬೃಹತೇ ಸಾಧನಾಯ ॥**

ಎಂಬ ಮಂತ್ರದಿಂದ ಪೂಜ್ಯ ವಸ್ತುವನ್ನು ದಿವ್ಯ ಪೀಠದ ಮೇಲೆ ಪ್ರತಿಷ್ಠೆ ಮಾಡುವುದು. "**ಓಂ ಸಹಸ್ರಶೀರ್ಷಾ ಪುರುಷಃ... ದ್ದಶಾಙ್ಗುಲಮ್**" **ಶ್ರೀಕೃಷ್ಣಪರಮಾತ್ಮನೇ ಶ್ರೀವೇದವ್ಯಾಸ ಶ್ರೀಶುಕಮಹರ್ಷಯೇ ಶ್ರೀಭಗವನ್ನಾಮಾತ್ಮಕ ಸ್ವರೂಪಿಣೇ ಶ್ರೀಮಧ್ಭಾಗವತಾಯ ನಮಃ ಆವಾಹಯಾಮಿ**" ಇತ್ಯಾದಿ ವಿಧಾನಗಳಿಂದ ಪುರುಷಸೂಕ್ತದ ಹದಿನಾರು ಅಥವಾ ಹದಿನೆಂಟು ಋಕ್ಕುಗಳಿಂದ ಶ್ರೀಕೃಷ್ಣ ಪರಮಾತ್ಮನಿಗೂ, ಶ್ರೀವೇದವ್ಯಾಸಗುರುದೇವರಿಗೂ, ಶ್ರೀಕೃಷ್ಣಮಹಾಮುನಿಗಳಿಗೂ, ಶ್ರೀಮದ್ಭಾಗವತಕ್ಕೂ ಪೂಜೆಯನ್ನು ಭಕ್ತಿಯಿಂದ ಸಮರ್ಪಿಸಬೇಕು.

### ಪ್ರಾರ್ಥನೆ :

**ವಂದೇ ಶ್ರೀಕೃಷ್ಣದೇವಂ ಮುರನರಕಭಿದಂ ವೇದವೇದಾಂತವೇದ್ಯಂ**
**ಲೋಕೇ ಭಕ್ತಿಪ್ರಸಿದ್ಧ್ಯಂ ಯದುಕುಲಜಲಧೌ ಪ್ರಾದುರಾಸಿದಪಾರೇ ।**
**ಯಸ್ಯಾಸೀದ್ರೂಪಮೇವಂ ತ್ರಿಭುವನತರಣೇ ಭಕ್ತಿವಚ್ಚ ಸ್ವತಂತ್ರಂ**
**ಶಾಸ್ತ್ರಂ ರೂಪಂ ಚ ಲೋಕೇ ಪ್ರಕಟಯತಿ ಮುದಾ**
**ಯಃ ಸ ನೋ ಭೂತಿಹೇತುಃ ॥**

ಶ್ರೀ ಕೃಷ್ಣಪರಮಾತ್ಮನಿಗೆ ಪ್ರಣಾಮಗಳು. ಮುರ - ನರಕಾಸುರರನ್ನು ಸಂಹರಿಸಿದವನೂ, ವೇದ-ವೇದಾಂತಗಳಿಂದಲೇ ತಿಳಿಯಲ್ಪಡಲು ಯೋಗ್ಯನಾದವನೂ, ಭಕ್ತಿಯಿಂದಲೇ ಹೊಂದಲ್ಪಡುವವನೂ, ಅಪಾರವಾದ ಯದುಕುಲ ಮಹಾಂಬುಧಿಯಲ್ಲಿ ಈ ಲೋಕದಲ್ಲಿ ಪ್ರಕಟಗೊಂಡವನೂ ಆದ ಸ್ವಾಮಿ ಶ್ರೀಕೃಷ್ಣನಿಗೆ ನಮಸ್ಕಾರಗಳು. ಈ ಲೋಕದಲ್ಲಿ ತನ್ನ ಸ್ವರೂಪವನ್ನು ಮತ್ತು ಶಾಸ್ತ್ರವನ್ನೂ ಪ್ರಕಟಪಡಿಸುವ ಮತ್ತು ಮೂರುಲೋಕಗಳ ಜೀವಗಳನ್ನು ದಾಟಿಸಲು ಭಕ್ತಿಯಂತೆಯೇ ಸ್ವತಂತ್ರವಾದ ನೌಕೆಯಂತಿರುವ ಆ ಶ್ರೀಭಗವಂತನು ನಮ್ಮೆಲ್ಲರಿಗೂ ಮಂಗಲವನ್ನುಂಟುಮಾಡಲಿ.

**ನಮಃ ಕೃಷ್ಣಪದಾಬ್ಜಾಯ ಭಕ್ತಾಭೀಷ್ಟಪ್ರದಾಯಿನೇ ।**
**ಆರಕ್ತಂ ರೋಚಯೇಚ್ಛಶ್ವನ್ ಮಾಮಕೇ ಹೃದಯಾಂಬುಜೇ ॥**

ಕೆಂದಾವರೆಯಂತೆ ಕಂಗೊಳಿಸುತ್ತಾ ನನ್ನ ಹೃದಯ ಕಮಲದಲ್ಲಿ ಸದಾ ಪ್ರಕಾಶವನ್ನು ಚೆಲ್ಲುತ್ತಿರುವ ಮತ್ತು ಭಕ್ತ ಜನರ ಅಭೀಷ್ಟಗಳನ್ನು ಈಡೇರಿಸುವ ಶ್ರೀಕೃಷ್ಣಪರಮಾತ್ಮನ ಪೊನ್ನಡಿಗಳಿಗೆ ಪುನಃ ಪುನಃ ಪ್ರಣಾಮ ಮಾಡುತ್ತೇನೆ.

**ಶ್ರೀಭಾಗವತರೂಪಂ ತತ್ಪೂಜಯೇದ್ಭಕ್ತಿಪೂರ್ವಕಮ್ ।**
**ಅರ್ಚಕಾಯಾಖಿಲಾನ್ಕಾಮಾನ್ ಪ್ರಯಚ್ಛತಿ ನ ಸಂಶಯಃ ॥**

ಶ್ರೀಮದ್ಭಾಗವತವು ಆ ಶ್ರೀಭಗವತ್‌ಸ್ವರೂಪವೇ ಆಗಿದೆ. ಅದನ್ನು ಭಕ್ತಿಪೂರ್ವಕವಾಗಿ ಭಜಿಸಬೇಕು. ಅದು ಪೂಜಕರ ಎಲ್ಲ ಇಷ್ಟಾರ್ಥಗಳನ್ನೂ ಈಡೇರಿಸುತ್ತದೆ ಎಂಬುದರಲ್ಲಿ ಸಂಶಯವೇ ಇಲ್ಲ.

### ಋಷಿ - ದೇವತೆ - ಛಂದಸ್ಸುಗಳು :

ಓಂ ಅಸ್ಯ ಶ್ರೀಮದ್ಭಾಗವತಾಖ್ಯಸ್ತೋತ್ರಮಹಾಮಂತ್ರಸ್ಯ । ಶ್ರೀನಾರದೋ ಭಾಗವಾನೃಷಿಃ । ಬೃಹತೀ ಛಂದಃ । ಶ್ರೀಕೃಷ್ಣಃಪರಮಾತ್ಮಾ ದೇವತಾ । ಓಂ ಬ್ರಹ್ಮ ಬೀಜಂ । ಭಕ್ತಿಃ ಶಕ್ತಿಃ । ಜ್ಞಾನ ವೈರಾಗ್ಯೇ ಕೀಲಕಂ । ಮಮ ಶ್ರೀಮದ್ಭಗವತ್‌ಪ್ರಸಾದಸಿದ್ಧ್ಯರ್ಥೇ ಪಾಠೇ ವಿನಿಯೋಗಃ ॥

### ಋಷ್ಯಾದಿನ್ಯಾಸಗಳು :

**ಓಂ ನಾರದ ಮಹರ್ಷಯೇ ನಮಃ - ಶಿರಸಿ । ಓಂ ಬೃಹತೀ ಛಂದಸೇ ನಮಃ-ಮುಖೇ । ಓಂ ಶ್ರೀಕೃಷ್ಣಪರಮಾತ್ಮ ದೇವ ತಾಯೈ ನಮಃ - ಹೃದಯೇ । ಓಂ ಬ್ರಹ್ಮ ಬೀಜಾಯ ನಮಃ ಗುಹ್ಯೇ । ಓಂ ಭಕ್ತಿಶಕ್ತಯೇ ನಮಃ - ಪಾದಯೋಃ । ಓಂ ಜ್ಞಾನ ವೈರಾಗ್ಯಕೀಲಕಾಭ್ಯಾಂ ನಮಃ - ನಾಭೌ । ಓಂ ವಿನಿಯೋಗಾಯ ನಮಃ - ಸರ್ವಾಂಗೇ ॥**

### ಕರನ್ಯಾಸ :

**ಓಂ ನಮೋ ಭಗವತೇ ವಾಸುದೇವಾಯ**

**ಓಂ ಓಂ ಓಂ ನಮೋ ದಕ್ಷಿಣತರ್ಜನ್ಯಾಂ । ಓಂ ನಂ ಓಂ ನಮೋ ದಕ್ಷಿಣಮಧ್ಯಮಾಯಾಂ । ಓಂ ಮೋಂ ಓಂ ನಮೋ ದಕ್ಷಿಣಾನಾಮಿಕಾಯಾಂ । ಓಂ ಭಂ ಓಂ ನಮೋ ದಕ್ಷಿಣಕನಿಷ್ಠಿ ಕಾಯಾಂ । ಓಂ ಗಂ ಓಂ ನಮೋ ವಾಮಕನಿಷ್ಠಿಕಾಯಾಂ । ಓಂ ವಂ ಓಂ ನಮೋ ವಾಮನಾಮಿಕಾಯಾಂ । ಓಂ ತೇಂ ಓಂ ನಮೋ ವಾಮಮಧ್ಯಮಾಯಾಮ್ । ಓಂ ವಾಂ ಓಂ ನಮೋ ವಾಮತರ್ಜನ್ಯಾಮ್ । ಓಂ ಸುಂ ಓಂ ನಮಃ ಓಂ ದೇಂ ಓಂ ನಮೋ ದಕ್ಷಿಣಾಂಗುಷ್ಠ ಪರ್ವಣೋಃ । ಓಂ ವಾಂ ಓಂ ನಮಃ ಓಂ ಯಂ ಓಂ ನಮೋ ವಾಮಾಂಗುಷ್ಠ ಪರ್ವಣೋಃ ।**

ಎಂದು ಕರದ ಆಯಾ ನಿರ್ದಿಷ್ಟ ಭಾಗಗಳಲ್ಲಿ ದ್ವಾದಶಾಕ್ಷರ ಮಹಾ ಮಂತ್ರದ ಅವಯವಗಳನ್ನು ನ್ಯಾಸ ಮಾಡಬೇಕು.

### ಅಂಗನ್ಯಾಸ :

**ಓಂ ನಮೋ ನಮೋ ಹೃದಯಾಯ ನಮಃ । ಓಂ ಭಗವತೇ ನಮಃ ಶಿರಸೇ ಸ್ವಾಹಾ । ಓಂ ವಾಸುದೇವಾಯ ನಮಃ ಶಿಖಾಯೈ ವಷಟ್ । ಓಂ ನಮೋ ನಮಃ ಕವಚಾಯ ಹುಂ । ಓಂ ಭಗವತೇ ನಮಃ ನೇತ್ರತ್ರಯಾಯ ವೌಷಟ್ । ಓಂ ವಾಸುದೇವಾಯ ನಮಃ ಅಸ್ತ್ರಾಯ ಫಟ್ ॥**

ಹೀಗೆ ಹೃದಯಾದಿ ಸ್ಥಾನಗಳಲ್ಲಿ ನ್ಯಾಸಮಾಡಬೇಕು.

### ಧ್ಯಾನಂ :

**ಕಿರೀಟಕೇಯೂರಮಹಾರ್ಹನಿಷ್ಕೈ -**
**ರ್ಮಣ್ಯುತ್ತಮಾಲಂಕೃತಸರ್ವಗಾತ್ರಮ್ ।**
**ಪೀತಾಂಬರಂ ಕಾಂಚನಚಿತ್ರನದ್ಧ -**
**ಮಾಲಾಧರಂ ಕೇಶವಮಭ್ಯುಪೈಮಿ ॥**

ಮಸ್ತಕದಲ್ಲಿ ಕಿರೀಟವನ್ನೂ, ತೋಳುಗಳಲ್ಲಿ ತೋಳ್ಬಳೆಗಳನ್ನೂ, ಕೊರಳಿನಲ್ಲಿ ಬಹುಮೂಲ್ಯ ಹಾರಗಳನ್ನೂ, ಎಲ್ಲ ಅಂಗಗಳಲ್ಲಿಯೂ ಮಣಿಗಳ ಸುಂದರ ಆಭರಣಗಳನ್ನೂ ಧರಿಸಿ ಕಂಗೊಳಿಸುತ್ತಿರುವ, ಪೀತಾಂಬಧಾರಿಯೂ ವನಮಾಲಾವಿಭೂಷಿತನೂ ಆದ ಶ್ರೀಕೇಶವ ಸ್ವಾಮಿಯನ್ನು ಧ್ಯಾನ ಸಮಾಧಿಯಿಂದ ಹೊಂದುವೆನು.

## ಶ್ರೀಮದ್ಭಾಗವತ ಸಪ್ತಾಹ ಆಚಾರಣೆಗೆ ಅವಶ್ಯಕವಾದ ಕೆಲವು ಮುಖ್ಯ ವಿಧಿಗಳು :

**ಮುಹೂರ್ತ ವಿಚಾರ :** ವಿದ್ವಾಂಸರಾದ ಜ್ಯೋತಿಷಿಗಳನ್ನು ಕರೆಸಿ, ಅವರೊಡನೆ ವಿಚಾರ ಮಾಡಿ ಸಪ್ತಾಹಕ್ಕೆ ಬೇಕಾಗುವ ಶುಭ ಮುಹೂರ್ತವನ್ನು ನಿಶ್ಚಯಿಸಬೇಕು. ನಕ್ಷತ್ರಗಳಲ್ಲಿ ಹಸ್ತ, ಚಿತ್ತೆ, ಸ್ವಾತಿ, ವಿಶಾಖೆ, ಅನುರಾಧೆ, ಪುನರ್ವಸು, ಪುಷ್ಯ, ರೇವತಿ, ಅಶ್ವಿನಿ, ಮೃಗಶಿರೆ, ಶ್ರವಣ, ಧನಿಷ್ಠೆ ಮತ್ತು ಪೂರ್ವಾಭಾದ್ರ ಇವು ಶ್ರೇಷ್ಠ ತಿಥಿಗಳಲ್ಲಿ ದ್ವಿತೀಯೇ, ತೃತೀಯೇ, ಪಂಚಮೀ, ಷಷ್ಠೀ, ದಶಮೀ, ಏಕಾದಶೀ ಮತ್ತು ದ್ವಾದಶೀ – ಇವು ಪ್ರಶಸ್ತ. ಸೋಮ, ಬುಧ, ಗುರು ಮತ್ತು ಶುಕ್ರ – ಇವು ಸರ್ವೋತ್ಕೃಷ್ಟವಾದ ವಾರಗಳು. ತಿಥಿ-ವಾರ-ನಕ್ಷತ್ರಗಳನ್ನು ವಿಚಾರ ಮಾಡುವುದರ ಜೊತೆಗೆ ಗುರು-ಶುಕ್ರಗ್ರಹಗಳು ಅಸ್ತ, ಬಾಲ ಅಥವಾ ವೃದ್ಧ ಸ್ಥಿತಿಯಲ್ಲಿ ಇವೆಯೇ ಎಂಬುದನ್ನು ಗಮನಿಸಬೇಕು. ಆ ಗ್ರಹಾಸ್ತ ಮುಂತಾದುವು ಇರಬಾರದು. ಭದ್ರಾದಿದೋಷಗಳೂ ಕಥಾರಂಭಕಾಲದಲ್ಲಿ ಇರಕೂಡದು. ಆ ದಿವಸ ಪೃಥ್ವಿಯು ಜಾಗ್ರತವಾಗಿರಬೇಕು. ಪ್ರವಚನ ಕರ್ತೃ ಮತ್ತು ಪ್ರಧಾನ ಶ್ರೋತೃಗಳಿಗೆ ಚಂದ್ರಬಲ ಸರಿಯಾಗಿರಬೇಕು. ಲಗ್ನದಲ್ಲಿ ಶುಭಗ್ರಹಗಳ ಯೋಗ ಅಥವಾ ದೃಷ್ಟಿ ಇರಬೇಕು. ಶುಭಗ್ರಹಗಳ ಸ್ಥಿತಿಯು ಕೇಂದ್ರದಲ್ಲಿ ಅಥವಾ ತ್ರಿಕೋಣದಲ್ಲಿ ಇದ್ದರೆ ಉತ್ತಮ. ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತೀಕ ಮತ್ತು ಮಾರ್ಗಶಿರ–ಇವಿಷ್ಟು ಮಾಸಗಳೂ ಕಥಾರಂಭಕ್ಕೆ ಪ್ರಶಸ್ತ. ಹಲವು ವಿದ್ವಾಂಸರ ಅಭಿಪ್ರಾಯದಲ್ಲಿ ಚೈತ್ರ ಮತ್ತು ಪೌಷವನ್ನು ಬಿಟ್ಟು ಉಳಿದ ಎಲ್ಲ ಮಾಸಗಳೂ ಕಥಾ ಪ್ರಾರಂಭಕ್ಕೆ ಆಗಬಹುದು.

### ಯಾವ ಸ್ಥಾನದಲ್ಲಿ ಕಥೆ ನಡೆಯಬೇಕು ?

ಶ್ರೀಮದ್ಭಾಗವತ ಸಪ್ತಾಹಕ್ಕೆ ಉತ್ತಮವೂ, ಪವಿತ್ರವೂ ಆದ ಸ್ಥಾನ ವ್ಯವಸ್ಥೆ ಅವಶ್ಯಕ. ಹೆಚ್ಚು ಜನರು ಸೌಕರ್ಯವಾಗಿ ಕುಳಿತುಕೊಳ್ಳಲು ಅನುಕೂಲವಾದ ಜಾಗದಲ್ಲಿ ಕಥೆಯನ್ನು ಏರ್ಪಡಿಸುವುದು ಉತ್ತಮ. ನದಿಯ ದಡ, ಉಪವನ, ದೇವಾಲಯ ಅಥವಾ ಸ್ವಗೃಹ – ಇವುಗಳೆಲ್ಲಾ ಸಪ್ತಾಹ ಕಥೆಗೆ ತಕ್ಕ ಸ್ಥಾನಗಳು. ಜಾಗವನ್ನು ಗುಡಿಸಿ, ಸಾರಿಸಿ ಸ್ವಚ್ಛವಾಗಿರಿಸಬೇಕು. ನೆಲವನ್ನು ಗೋಮಯ ಮತ್ತು ಹಳದೀಮಣ್ಣಿನಿಂದ ಸಾರಿಸಿ ಲೇಪಿಸಿರಬೇಕು ಅಥವಾ ದೃಢವಾದ ಅಂಗಳವಾಗಿದ್ದರೆ ಅದನ್ನು ಚೆನ್ನಾಗಿ ತೊಳೆಯಿಸಿ ಪವಿತ್ರವೂ ಸುಂದರವೂ ಆದ ಆಸನಗಳನ್ನು ಅಲ್ಲಿ ಹಾಕಬೇಕು. ಮೇಲುಗಡೆ ಚಪ್ಪರಗಳನ್ನು ಕಟ್ಟಬೇಕು. ಆದರೆ ಚಪ್ಪರ-ಛಾವಣಿ ಮುಂತಾದ ಯಾವುದೇ ಅಲಂಕಾರಕ್ಕಾಗಲೀ, ಉಪಕರಣಗಳಾಗಲೀ ನೀಲಿ ಬಣ್ಣದ ವಸ್ತುವನ್ನು ಬಳಸಬಾರದು. ಯಜಮಾನನ ಕೈಯ್ಯ ಹದಿನಾರು ಹಸ್ತಗಳಷ್ಟು ಉದ್ದವಾಗಿ ಮತ್ತು ಅಷ್ಟೇ ಅಗಲವಾಗಿರುವಂತೆ ಕಥಾಮಂಟಪವನ್ನು ನಿರ್ಮಿಸಬೇಕು ಅದನ್ನು ಬಾಳೆಯ ಕಂಬಗಳಿಂದ ಸಿಂಗರಿಸಬೇಕು. ಹಸಿರಾಗಿರುವ ಬಿದಿರಿನ ಕಂಬಗಳನ್ನು ನೆಡಬೇಕು. ಹೊಸ ತಳಿರು ತೋರಣಗಳಿಂದಲೂ, ಪುಷ್ಪಮಾಲೆಗಳಿಂದಲೂ, ಧ್ವಜಪತಾಕೆಗಳಿಂದಲೂ ಮಂಟಪವನ್ನು ಚೆನ್ನಾಗಿ

ಅಲಂಕರಿಸಬೇಕು. ಆ ಮಂಟಪದ ನೈಋತ್ಯ ಭಾಗದಲ್ಲಿ ಕಥಾ ಪ್ರವಚಕಾರನಿಗೂ ಮುಖ್ಯ ಶ್ರೋತೃವಿಗೂ ಕುಳಿತುಕೊಳ್ಳುವ ಜಾಗ ಇರಬೇಕು. ಪ್ರವಚನಕಾರನು ಕುಳಿತುಕೊಳ್ಳಲು ಎತ್ತರವಾದ ವೇದಿಕಾ ಪೀಠವನ್ನು ನಿರ್ಮಿಸಿ ಅದರ ಮೇಲೆ ಶುದ್ಧವಾದ ಆಸನವನ್ನು ಇಡ ಬೇಕು. ಅದರ ಹಿಂದೆ ಮತ್ತು ಪಾರ್ಶ್ವಭಾಗಗಳಲ್ಲಿ ಒರುಗುಮಣೆ ದಿಂಬುಗಳು ಇರಬೇಕು. ಶ್ರೀಮದ್ಭಾಗವತವನ್ನು ಬಿಜಯ ಮಾಡಿಸಲು ಸ್ವರ್ಣದಿಂದ ಅಲಂಕೃತವಾದ ಒಂದು ಸಣ್ಣ ಸಿಂಹಪೀಠ ಅಥವಾ ಆಧಾರಪೀಠವನ್ನು* ಇರಿಸಿ ಅದರ ಮೇಲೆ ಪವಿತ್ರವಾದ ಮಡೀ ಬಟ್ಟೆಯನ್ನು ಹೊದಿಸಬೇಕು. ಅದರ ಮೇಲೆ ಮುಂದೆ ಹೇಳುವ ವಿಧಿಗೆ ತಕ್ಕಂತೆ ಅಷ್ಟದಳ ಕಮಲವನ್ನು ಮಾಡಿಸಿ ಪೂಜೆ ಮಾಡಿ ಶ್ರೀಮದ್ಭಾಗವತ ಪುಸ್ತಕವನ್ನು ಅದರ ಮೇಲೆ ಸ್ಥಾಪಿಸಬೇಕು. ಕಥಾ ಪ್ರವಚನಕಾರನು ವಿದ್ವಾಂಸನೂ, ಸಕಲಶಾಸ್ತ್ರ ಕುಶಲನೂ, ದೃಷ್ಟಾಂತ ಗಳನ್ನು ಕೊಟ್ಟು ಶ್ರೋತೃಗಳಿಗೆ ವಿಷಯವನ್ನು ಮನದಟ್ಟು ಮಾಡುವ ಶಕ್ತಿಯುಳ್ಳವನೂ, ಸದಾಚಾರಿಯೂ, ಸದ್ಗುಣ ಸಂಪನ್ನನೂ ಆದ ಬ್ರಾಹ್ಮಣನಾಗಿರಬೇಕು. ಆತನು ಸುಶೀಲನೂ, ಸತ್ಕುಲ ಪ್ರಸೂತನೂ, ಗಂಭೀರ ಸ್ವಭಾವದವನೂ ಮತ್ತು ಶ್ರೀಕೃಷ್ಣ ಭಕ್ತನೂ ಆಗಿರುವುದು ಅವಶ್ಯಕ. ಅವನಲ್ಲಿ ಅಸೂಯೆ ಪರನಿಂದೆ ಮುಂತಾದ ದುರ್ಗುಣ - ದುರಾಚಾರಗಳು ಕಿಂಚಿತ್ತೂ ಇರಬಾರದು. ಶ್ರೀಮದ್ಭಾಗವತದ ಪುಸ್ತಕವನ್ನು ರೇಷ್ಮೆ ವಸ್ತ್ರದಿಂದ ಮುಚ್ಚಿ ಛತ್ರ - ಚಾಮರಗಳೊಡನೆ ಪಲ್ಲಕ್ಕಿಯಲ್ಲಿ ಅಥವಾ ತನ್ನ ತಲೆಯ ಮೇಲೆ ಇರಿಸಿಕೊಂಡು ಕಥಾ ಮಂಟಪಕ್ಕೆ ಮೆರವಣಿಗೆಯಲ್ಲಿ ತಂದು ದಿವ್ಯಪೀಠದ ಮೇಲೆ ಸ್ಥಾಪಿಸ ಬೇಕು. ಆ ಪ್ರತಿಷ್ಠಾ ಸಮಯದಲ್ಲಿ ಮಂಗಳವಾದ್ಯ, ಗೀತ ಮುಂತಾ ದವುಗಳು ಮೊಳಗುವ ಉತ್ಸವ ಆಗಬೇಕು. ಕೆಲಸಕ್ಕೆ ಬಾರದಿರುವ ಪದಾರ್ಥ ಯಾವುದೂ ಕಥಾ ಮಂಟಪದಲ್ಲಿರಬಾರದು. ಅಲ್ಲಲ್ಲಿ ಗೋಡೆಗಳಲ್ಲಿ ಆ ಭಗವಂತನನ್ನೂ ಅವನ ಲೀಲೆಗಳನ್ನೂ ಸ್ಮರಣೆಗೆ ತರುವ ಚಿತ್ರಗಳನ್ನು ಹಾಕಬೇಕು. ಪ್ರವಚನಕಾರನು ಉತ್ತರಾಭಿ ಮುಖನಾಗಿದ್ದರೆ. ಮುಖ್ಯ ಶ್ರೋತೃವು ಪೂರ್ವಾಭಿಮುಖನಾಗಿರ ಬೇಕು. ಅವನು ಪೂರ್ವಾಭಿಮುಖನಾಗಿದ್ದರೆ ಶ್ರೋತೃವು ಉತ್ತರಾಭಿ ಮುಖನಾಗಿರಬೇಕು.

ಸಪ್ತಾಹ ಕಥೆಯು ಒಂದು ದೊಡ್ಡ ಯಜ್ಞ. ಅದು ಚೆನ್ನಾಗಿ ನೆರವೇರುವಂತೆ ಮಾಡಲು ಬಂಧು-ಮಿತ್ರರೂ ಮತ್ತು ಇತರೇ ಜನರೂ ಸಹಾಯ ಮಾಡಬೇಕು. ಹಣಕಾಸು - ಸಂಪತ್ತಿನ ವ್ಯವಸ್ಥೆ ಯನ್ನು ಮೊದಲಿನಿಂದಲೇ ಮಾಡಿರಬೇಕು. ಕಥಾಶ್ರವಣಕ್ಕೆ ಎಳೆಂಟು ದಿನ ಮೊದಲಿನಿಂದಲೇ ದೂರದ ಜಾಗಗಳಿಗೆ ಸಮಾಚಾರ ಕಳುಹಿಸಿ ಅವರು ತಾವಾಗಿಯೇ ಅಲ್ಲಿಗೆ ಆಗಮಿಸಿ ಕಥಾಶ್ರವಣದ ಲಾಭವನ್ನು ಪಡೆಯಬೇಕೆಂದು ಪ್ರಾರ್ಥಿಸಬೇಕು. ಹೆಚ್ಚು ಸಮಯ ಅಲ್ಲಿ ಬಂದಿರಲು ಸಾಧ್ಯವಾಗದಿದ್ದರೆ ಒಂದು ದಿವಸವಾದರೂ ದಯ ಮಾಡಿಸಿ ಕಥಾಶ್ರವಣಮಾಡಬೇಕೆಂದು ಅರಿಕೆ ಮಾಡಬೇಕು. ದೂರ ದಿಂದ ಬಂದ ಅತಿಥಿಗಳಿಗೆ ಇಳಿದುಕೊಳ್ಳುವುದಕ್ಕೂ ಮತ್ತು ಭೋಜನಾದಿಗಳಿಗೂ ವ್ಯವಸ್ಥೆ ಮಾಡಬೇಕು. ಪ್ರವಚನಕಾರನು ವ್ರತಕೈಗೊಳ್ಳುವುದಕ್ಕೆ ಒಂದು ದಿನ ಮೊದಲೇ ಕ್ಷೌರ ಮಾಡಿಸಿ ಕೊಂಡಿರಬೇಕು ; ಒಂದು ದಿನ ಮೊದಲೇ ದೇವತಾಸ್ಥಾಪನೆ, ಪೂಜೆ ಇತ್ಯಾದಿಗಳನ್ನು ಮಾಡಿರುವುದು ಉತ್ತಮ. ಪ್ರತಿದಿನವೂ ಸೂರ್ಯೋದಯಕ್ಕೆ ಮೊದಲೇ ಸ್ನಾನಾದಿಗಳನ್ನು ಮಾಡಿ ಸಂಧ್ಯಾ ವಂದನೆಗಳನ್ನು ಸಂಕ್ಷೇಪವಾಗಿ ಆಚರಿಸಿ, ಕಥಾವಾಚನಕ್ಕೆ ಯಾವ ವಿಘ್ನವೂ ಬರದಿರಲೆಂದು ಪ್ರತಿದಿನವೂ ಶ್ರೀಗಣಪತಿಯ ಪೂಜೆ ಯನ್ನು ಮಾಡಬೇಕು.

ಸಪ್ತಾಹದ ಮೊದಲನೆಯ ದಿವಸ ಯಜಮಾನನು ಸ್ನಾನ ಮುಂತಾದವುಗಳಿಂದ ಶುದ್ಧನಾಗಿ ನಿತ್ಯಕರ್ಮಗಳನ್ನು ಮುಗಿಸಿ ಅಭ್ಯುದಯ ಶ್ರಾದ್ಧವನ್ನು ಮಾಡಬೇಕು. ಆ ಅಭ್ಯುದಯಶ್ರಾದ್ಧವನ್ನು ಇದಕ್ಕಿಂತ ಮೊದಲೂ ಮಾಡಿರಬುಹುದು. ಯಜ್ಞದಲ್ಲಿ ಇಪ್ಪತ್ತೊಂದು ದಿವಸ ಮೊದಲು ಅಭ್ಯುದಯ ಶ್ರಾದ್ಧ ಮಾಡಬಹುದೆಂಬ ವಿಧಿಯಿದೆ. ಇದೂ ಪ್ರವಚನ ಮಹಾಯಜ್ಞವೇ ತಾನೇ ! ಅನಂತರ ಶ್ರೀ ಗಣಪತಿ, ಬ್ರಹ್ಮದೇವರು, ಮುಂತಾದ ದೇವತೆಗಳೊಡನೆ ನವಗ್ರಹಗಳನ್ನೂ, ಹದಿನಾರುಮಂದಿ ಮಾತೃಕೆಯನ್ನೂ, ಅಶ್ವತ್ಥಾಮ, ಬಲಿ, ವ್ಯಾಸ, ಹನುಮಂತ, ವಿಭೀಷಣ, ಕೃಪ, ಪರಶು ರಾಮರೆಂಬ ಏಳು ಮಂದಿ ಚಿರಂಜೀವಿಗಳನ್ನೂ ಹಾಗೆಯೇ ಕಲಶ ಗಳನ್ನು ಪ್ರತಿಷ್ಠೆ ಮಾಡಬೇಕು. ಒಂದು ವೇದಿಕಾಪೀಠದ ಮೇಲೆ ಸರ್ವತೋ ಭದ್ರಮಂಡಲವನ್ನು ರಚಿಸಿ ಅದರ ಮಧ್ಯದಲ್ಲಿ ಲಕ್ಷ್ಮೀ- ನಾರಾಯಣರ ಪೂರ್ಣಪ್ರತಿಮೆಯನ್ನು ಪ್ರತಿಷ್ಠೆ ಮಾಡಬೇಕು. ಕಲಶಕ್ಕೆ ಪಕ್ಕದಲ್ಲಿಯೇ ಸಾಲಿಗ್ರಾಮ ರೂಪಿಯಾದ ಭಗವಂತನು ಸಿಂಹಾಸನದ ಮೇಲೆ ಬೆಳಗುತ್ತಿರಬೇಕು. ಸರ್ವತೋಭದ್ರ ಮಂಡಲ ದಲ್ಲಿರುವ ಎಲ್ಲ ದೇವತೆಗಳನ್ನೂ ಪೂಜಿಸಿದ ನಂತರ ಭಗವಂತರಾದ ನರ-ನಾರಾಯಣರನ್ನೂ, ಗುರು, ವಾಯು, ಸರಸ್ವತೀ, ಆದಿಶೇಷ, ಸನಕಾದಿ ಕುಮಾರರು, ಸಾಂಖ್ಯಾಯನರು, ಪರಾಶರರು, ಬೃಹಸ್ಪತಿ ಗಳು, ಮೈತ್ರೇಯರು ಮತ್ತು ಉದ್ಧವ - ಇವರನ್ನೂ ಆವಾಹಿಸಿ ಪ್ರತಿಷ್ಠೆ ಮಾಡಿ ಅವರೆಲ್ಲರನ್ನೂ ಪೂಜೆ ಮಾಡಬೇಕು. ಅನಂತರ ತ್ರಯ್ಯಾ ರುಣಿಯೇ ಮುಂತಾದ ಆರು ಮಂದಿ ಪೌರಾಣಿಕರನ್ನೂ ಸ್ಥಾಪಿಸಿ ಪೂಜಿಸಿ, ಪ್ರತ್ಯೇಕವಾದ ಪೀಠದ ಮೇಲೆ ಸುಂದರವಾದ ವಸ್ತ್ರವನ್ನು ಹೊದಿಸಿ ಶ್ರೀನಾರದ ಮಹರ್ಷಿಗಳನ್ನು ಪ್ರತಿಷ್ಠೆ ಮಾಡಿ ಪೂಜಿಸ ಬೇಕು. ಅನಂತರ ಆಧಾರಪೀಠ ಮತ್ತು ವ್ಯಾಸರು (ಪ್ರವಚನ ಮಾಡುವ ಆಚಾರ್ಯರು) ಇವರಿಗೂ ಸಾಧ್ಯವಾದಷ್ಟು ಉಪಚಾರ ಗಳನ್ನು ಸಮರ್ಪಿಸಿ ಅವರನ್ನು ಆರಾಧಿಸಬೇಕು. ಕಥೆಯು ನಿರ್ವಿಘ್ನ ವಾಗಿ ಪೂರ್ಣವಾಗುವುದಕ್ಕಾಗಿ ಶ್ರೀಗಣಪತಿ ಮಂತ್ರ, ದ್ವಾದಶಾಕ್ಷರ ಮಂತ್ರ ಮತ್ತು ಗಾಯತ್ರೀ ಮಂತ್ರಗಳನ್ನು ಜಪಿಸುವುದಕ್ಕೂ ಶ್ರೀವಿಷ್ಣು ಸಹಸ್ರನಾಮ ಮತ್ತು ಭಗವದ್ಗೀತೆಗಳನ್ನು ಪಾರಾಯಣ ಮಾಡು ವುದಕ್ಕೂ ಯಥಾಶಕ್ತಿಯಾಗಿ, ಏಳು, ಐದು ಅಥವಾ ಮೂರು ಮಂದಿ ಬ್ರಾಹ್ಮಣರನ್ನು ವರಣಮಾಡಬೇಕು. ಬೇರೊಬ್ಬ ಬ್ರಾಹ್ಮಣನ ಮೂಲಕ ಪ್ರತ್ಯೇಕವಾಗಿ ಶ್ರೀಮದ್ಭಾಗವತವನ್ನು ಪಾರಾಯಣ ಮಾಡಿಸಬೇಕು. ದೇವತೆಗಳ ಸ್ಥಾಪನೆ ಮತ್ತು ಪೂಜೆಗಳನ್ನು ಮೊದಲು

* ಈ ಪೀಠದಲ್ಲಿ ಮೂರು ತೊಲ ಚಿನ್ನದ ಹೊದಿಕೆ ಇರಬೇಕು. ಅಷ್ಟು ಸಾಧ್ಯವಾಗದಿದ್ದರೆ ತನ್ನ ಶಕ್ತಿಗೆ ಅನುಗುಣವಾಗಿ ಎಷ್ಟು ಸಾಧ್ಯವಾಗುತ್ತದೆಯೋ ಅಷ್ಟು ಚಿನ್ನವನ್ನು ಸೇರಿಸಿಯೇ ಈ ಸಿಂಹಾಸನವನ್ನು ಮಾಡಿಸಬೇಕು. ಆದರೆ ಶಕ್ತಿ ಇರುವವರು ಜಿಪುಣತನದಿಂದ ಚಿನ್ನದಪ್ರಮಾಣವನ್ನು ಕಡಿಮೆ ಮಾಡಬಾರದು.

ಸ್ವಸ್ತಿವಾಚಕ ಪೂರ್ವಕವಾಗಿ ಕೈಯಲ್ಲಿ ಪವಿತ್ರ, ಅಕ್ಷತೆ, ಪುಷ್ಪ ತೀರ್ಥ ಮತ್ತು ದ್ರವ್ಯಗಳನ್ನು ಇಟ್ಟುಕೊಂಡು ಮಹಾ ಸಂಕಲ್ಪ ಮಾಡಬೇಕು.

**"ಓಂ ತತ್ಸತ್, ಅದ್ಯ ಶ್ರೀಮಹಾಭಾಗವತೋ ವಿಷ್ಣೋ ರಾಜ್ಞಯ ಪ್ರವತಮಾನಸ್ಯ... ಸಂವತ್ಸರೇ... ಆಯನೇ.... ಋತೌ.... ಮಾಸೇ.... ಪಕ್ಷೇ.... ಮುಹೂರ್ತೇ.... ಕರುಣಾದಿ ಯುಕ್ತಾಯಾಂ.... ವಾಸರಯುಕ್ತಾಯಾಂ.... ನಕ್ಷತ್ರಯುಕ್ತಾಯಾಂ... ಶುಭತಿಥೌ ಶುಭನಕ್ಷತ್ರ - ಶುಭಯೋಗ - ಶುಭಕರಣ ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ.... ಶುಭತಿಥೌ.... ಗೋತ್ರಃ.... ಪ್ರವರಃ.... ಶರ್ಮಾ/ವರ್ಮಾ/ಗುಪ್ತಃ ಅಹಂ ಪೂರ್ವಾತೀತಾತ್ಮನೇಕಜನ್ಮಸಂಚಿತಾಖಿಲದುಷ್ಕೃತಿನಿವೃತ್ತಿ ಪುರಸ್ಸರೈಹಿ ಕಾಧ್ಯಾತ್ಮಿಕಾದಿವಿವಿಧತಾಪಪಾಪಾಪನೋದನಾರ್ಥಂ, ದಶಾಶ್ವ ಮೇಧಯಜ್ಞಜನ್ಯಸಮ್ಯಗಿಷ್ಟ ರಾಜಸೂಯಯಜ್ಞ ಸಹಸ್ರ ಪುಣ್ಯ ಸಮಪುಣ್ಯಚಂದ್ರಸೂರ್ಯಗ್ರಹಣಕಾಲಿಕ ಬಹು ಬ್ರಾಹ್ಮಣಸಂಪ್ರ ದಾನಸರ್ವಸಸ್ಯಪೂರ್ಣಸರ್ವರತ್ನೋಪ ಶೋಭಿತಮಹೀದಾನ-ಪುಣ್ಯಪ್ರಾಪ್ತಯೇ ಶ್ರೀಗೋವಿಂದ ಚರಣಾರವಿಂದಯುಗಲೇ ನಿರಂತರಮುತ್ತರೋತ್ತರಮೇಧಮಾನನಿಸ್ಸೀಮ ಪ್ರೇಮೋ-ಪಲಬ್ಧಯೇ, ತದೀಯಪರಮಾನಂದಮಯ ಗೋಲೋಕ ಧಾಮ್ನಿ ನಿತ್ಯನಿವಾಸ ಪೂರ್ವಕತತ್ಪರಿ ಚರ್ಯಾ ರಸಾಸ್ವಾದನ ಸೌಭಾಗ್ಯಸಿದ್ಧಯೇ ಚ ಅಮುಕ ಗೋತ್ರಾಮುಕ ಪ್ರವರಾಮುಕ ಬ್ರಾಹ್ಮಣವದನಾರವಿಂದಾತ್ ಶ್ರೀಕೃಷ್ಣವಾಙ್ಮಯಮೂರ್ತೀ ಭೂತಂ ಶ್ರೀಮದ್ಭಾಗವತಮಷ್ಟಾದಶಪುರಾಣ ಪ್ರಕೃತಿಭೂತ ಅನೇಕ ಶ್ರೋತ್ಯ ಶ್ರವಣ ಪೂರ್ವಕ ಅಮುಕದಿನಾದಾರಭ್ಯಾಮುಕ ದಿನಪರ್ಯಂತಂ ಸಪ್ತಾಹ ಯಜ್ಞರೂಪತಯಾ ಶ್ರೋಷ್ಯಾಮಿ* ಪ್ರಾಪ್ಸ್ಯಮಾನೇ ಅಸ್ಮಿನ್ ಸಪ್ತಾಹ ಯಜ್ಞೇವಿಘ್ನ ಪೂಗನಿವಾರಣ ಪೂರ್ವಕಂ ಯಜ್ಞರಕ್ಷಾ ಕರಣಾರ್ಥಂ ಗಣಪತಿ ಬ್ರಹ್ಮಾದಿ-ಸಹಿತನವಗ್ರಹಷೋಡಶಮಾತೃಕಾ ಸಪ್ತಚಿರಂಜೀವಿ ಪುರುಷಸರ್ವತೋಭದ್ರಮಂಡಲಸ್ಥದೇವಕಲಶಾದ್ಯರ್ಚನಪುರಸ್ಸರಂ ಶ್ರೀಲಕ್ಷ್ಮೀನಾರಾಯಣ ಪ್ರತಿಮಾ-ಸಾಲಗ್ರಾಮ-ನರ ನಾರಾಯಣ-ಗುರು-ವಾಯು-ಸರಸ್ವತೀ-ಶೇಷ-ಸನತ್ಕುಮಾರ-ಸಂಖ್ಯಾಯನ-ಪರಾಶರ-ಬೃಹಸ್ಪತಿ-ಮೈತ್ರೇಯೋದ್ಧವ-ತ್ರಯ್ಯಾರುಣಿ-ಕಶ್ಯಪ - ರಾಮಶಿಷ್ಯಾಕೃತವ್ರಣ - ವೈಶಂಪಾಯನ - ಹಾರೀತ - ನಾರದಪೂಜನಂ ಆಧಾರಪೀಠಪುಸ್ತಕವ್ಯಾಸಪೂಜಾಂ ಚ ಯಥಾಲಬ್ಧೋಪಚಾರೈಃ ಕರಿಷ್ಯೇ"**

ಹೀಗೆ ಸಂಕಲ್ಪ ಮಾಡಿದ ನಂತರ ಹಿಂದೆ ಹೇಳಿದ ದೇವತೆಗಳನ್ನು ಚಿತ್ರಪಟದಲ್ಲಿ, ವಿಗ್ರಹದಲ್ಲಿ ಅಥವಾ ಅಕ್ಷತೆಗಳಲ್ಲಿ ಆವಾಹಿಸಿ, ಸ್ಥಾಪಿಸಿ, ವೈದಿಕ ಪೂಜಾಪದ್ಧತಿಯಂತೆ ಪ್ರತಿಯೊಬ್ಬರಿಗೂ ಪೂಜೆ ಮಾಡಬೇಕು. ಸಪ್ತ ಚಿರಂಜೀವಿಗಳಿಗೆ ಮತ್ತು ಸನತ್ಕುಮಾರರೇ ಮುಂತಾದವರಿಗೆ ನಾಮ ಮಂತ್ರಗಳಿಂದ ಪೂಜೆ ಮಾಡುವುದು.

ಕಥಾಮಂಟಪದಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಅಥವಾ ಕೋಣ ಗಳಲ್ಲಿಯೂ ಒಂದೊಂದು ಕಲಶವನ್ನೂ ಮತ್ತು ಮಧ್ಯದಲ್ಲಿ ಒಂದು ಕಲಶವನ್ನೂ - ಹೀಗೆ ಒಟ್ಟು ಐದು ಕಲಶಗಳನ್ನು ಸ್ಥಾಪಿಸಬೇಕು. ನಾಲ್ಕು ಕಡೆಗಳಲ್ಲಿರುವ ಕಲಶಗಳಲ್ಲಿ ಪೂರ್ವಕಲಶದಲ್ಲಿ ಋಗ್ವೇದ ವನ್ನೂ ದಕ್ಷಿಣ ಕಲಶದಲ್ಲಿ ಯಜುರ್ವೇದವನ್ನೂ, ಪಶ್ಚಿಮಕಲಶದಲ್ಲಿ ಸಾಮವೇದವನ್ನೂ, ಉತ್ತರ ಕಲಶದಲ್ಲಿ ಅಥರ್ವ ವೇದವನ್ನೂ ಪ್ರತಿಷ್ಠೆ ಮಾಡಿ ಪೂಜಿಸಬೇಕು. ಕೆಲವರು ಮಧ್ಯದಲ್ಲಿ ಸರ್ವತೋಭದ್ರ ಮಂಡಲದ ಮಧ್ಯಭಾಗದಲ್ಲಿ ಒಂದೇ ತಾಮ್ರಕಲಶ ವನ್ನು ಪ್ರತಿಷ್ಠೆ ಮಾಡಿ ಪೂಜಿಸಬೇಕೆಂದು ಹೇಳುತ್ತಾರೆ ಇದೇ ಕಲಶದ ಮೇಲೆ ಭಗವಂತನಾದ ಲಕ್ಷ್ಮೀನಾರಾಯಣ ಸ್ವಾಮಿಯ ಚಿನ್ನದ ಪ್ರತಿಮೆ ಯನ್ನು ಸ್ಥಾಪನೆ ಮಾಡಿ ಷೋಡಶೋಪಚಾರ ವಿಧಿಯಿಂದ ಅದನ್ನು ಪೂಜಿಸಬೇಕು. ಪೂಜೆಯ ಕ್ರಮವು ಹೀಗಿರಬೇಕು :

ಮೊದಲು ರಕ್ಷಾದೀಪವನ್ನು ಹತ್ತಿಸಬೇಕು. ಒಂದು ಪಾತ್ರೆಯಲ್ಲಿ ತುಪ್ಪವನ್ನು ತುಂಬಿ ಹತ್ತಿಯ ಹೂಬತ್ತಿಗಳನ್ನು ಹತ್ತಿಸಿ ಅದನ್ನು ಸುರಕ್ಷಿತ ವಾದ ಜಾಗದಲ್ಲಿ ಅಕ್ಷತೆಯ ಮೇಲೆ ಸ್ಥಾಪಿಸಬೇಕು. ಗಾಳಿ ಮುಂತಾ ದವುಗಳ ಹೊಡೆತದಿಂದ ಅದು ನಂದಿ ಹೋಗದಂತೆ ಎಚ್ಚರಿಕೆ ಯಿಂದ ಏರ್ಪಡಿಸಬೇಕು. ಅನಂತರ ಸ್ವಸ್ತಿವಾಚನ ಪೂರ್ವಕವಾಗಿ ಮಂಗಲಪಾಠವನ್ನು ಸರ್ವದೇವ ನಮಸ್ಕಾರಗಳನ್ನೂ ಮಾಡಿ ಹಿಂದೆ ಹೇಳಿರುವ ಮಹಾ ಸಂಕಲ್ಪವನ್ನು ಪಠಿಸಬೇಕು. ಅನಂತರ ಒಂದು ಪಾತ್ರೆಯಲ್ಲಿ ಅಕ್ಕಿಯನ್ನು ತುಂಬಿ ಅದರಲ್ಲಿ ಶ್ರೀ ಗಣಪತಿಯನ್ನು ಆವಾಹನೆ ಮಾಡಬೇಕು : **'ಓಂ ಭೂರ್ಭುವಸ್ಸ್ವಃ, ಗಣಪತೇ ಇಹಾಗಚ್ಛ ಇಹ ತಿಷ್ಠ ಮಮ ಪೂಜಾಂ ಗೃಹಾಣ'** ಎಂದು ಆವಾಹನೆ ಮಾಡಿ **'ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ'** ಇತ್ಯಾದಿ ಮಂತ್ರಗಳನ್ನು ಪಠಿಸಬೇಕು. ಅನಂತರ **"ಗಜಾನನಂ ಭೂತಗಣಾಧಿ ಸೇವಿತಂ ಕಪಿತ್ಥ ಜಂಬೂಫಲಸಾರಭಕ್ಷಿತಮ್॥"** ಇತ್ಯಾದಿ ಶ್ಲೋಕಗಳನ್ನು ಪಠಿಸುತ್ತಾ ಅವುಗಳಲ್ಲಿರುವಂತೆ ಧ್ಯಾನ ಮಾಡಬೇಕು. **"ಓಂ ಮನೋ ಜೂತಿಃ"** ಇತ್ಯಾದಿ ಮಂತ್ರಗಳಿಂದ ವಿಧವಿಧವಾದ ಉಪಚಾರಗಳಿಗೆ ಸಂಬಂಧಿಸಿದ ಶ್ಲೋಕಗಳನ್ನು ಪಠಿ ಸುತ್ತಾ ಗಣಪತಿಗೆ ಕ್ರಮವಾಗಿ ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನೀಯ, ಪುನರಾಚಮನೀಯ, ಪಂಚಾಮೃತಸ್ನಾನ, ಶುದ್ಧೋದಕ ಸ್ನಾನ, ವಸ್ತ್ರ ರಕ್ಷಾಸೂತ್ರ, ಯಜ್ಞೋಪವೀತ, ಗಂಧ, ಶ್ರೀಚೂರ್ಣ (ಅರಿಸಿನ), ಕುಂಕುಮ, ಗಂಧೋದಕ, ಅಕ್ಷತೆ, ಪುಷ್ಪ, ಮಾಲ್ಯ, ದೂರ್ವಾದಳ, ಭೂಷಣ, ಗಂಧಲೇಪನ, ಧೂಪ, ದೀಪ ನೈವೇದ್ಯ ಮತ್ತು ಫಲಗಳನ್ನು ಸಮರ್ಪಿಸಬೇಕು. ಗಂಗೋದಕದಿಂದ ಆಚಮನ

* ಸಂತಾನದ ಇಚ್ಛೆಯಿಂದ ಪ್ರಯೋಗ ಮಾಡುವ ಮನಸ್ಸಿದ್ದರೆ ಸಂಕಲ್ಪದಲ್ಲಿ ಹೀಗೆ ಯೋಜನೆ ಮಾಡಿಕೊಳ್ಳಬೇಕು : **"ಅತೀತಾನಂತಜನ್ಮಸಂಪಾದಿತ ದುಷ್ಕೃತಪರಿಪಾಕವಶಪ್ರಾಪ್ತಜನ್ಮಾಙ್ಗಕ್ರೂರಗ್ರಹ ಸೂಚಿತ ಪತ್ನೀ ವಂಧ್ಯಾತ್ವ ಮೃತವತ್ಸಾತ್ವ ಕಾಕವಂಧ್ಯಾತ್ವ ಸ್ರವದ್ಗರ್ಭತ್ವಾದಿ ರೂಪ ಸಂತತಿ ಪ್ರತಿಬಂಧಕ ದೋಷನಿವೃತ್ತಯೇ ಸದ್ಗುಣಸಂಪನ್ನಚಿರಂಜೀವಿ ಸ್ವಸ್ಥ ಸುಂದರ ಸುಪುತ್ರಪ್ರಾಪ್ತಯೇ ಚ..."**
ಯಾವನಾದರೂ ಗತಿಸಿದ ವ್ಯಕ್ತಿಯ ಸದ್ಗತಿಗಾಗಿ ಶ್ರೀಮದ್ಭಾಗವತ ಸಪ್ತಾಹ ಮಾಡುವ ಉದ್ದೇಶವಿದ್ದರೆ ಸಂಕಲ್ಪದಲ್ಲಿ ಹೀಗೆ ಯೋಜನೆ ಮಾಡಬೇಕು : **"ಸ್ವೀಯಾನಂತದುಷ್ಕೃತಪರಿಪಾಕವಶಾತ್ ನಾನಾವಿಧ ದುಃಖಕ್ಷೇತ್ರ ಯೋನಿನಾಂ ಪಿತೃಣಾಂ ಅಮುಕಾಮುಕಶರ್ಮಣಾಂ... ಯೋನೇಃ ಪಿತುಃ ಅಮುಕಶರ್ಮಣಃ ಅನ್ಯಸ್ಯ ವಾ ಕಸ್ಯಚಿತ್, ಪ್ರೇತತ್ವ ನಿವೃತ್ತಿ ಪೂರ್ವಕಂ ಉತ್ತಮವೈಕುಂಠಧಾಮೋಪಲಬ್ಧಯೇ"** ಹೀಗೆ ಅವಶ್ಯಕತಾನುಸಾರ ಬೇರೆ - ಬೇರೆ ಉದ್ದೇಶಕ್ಕೆ ತಕ್ಕಂತೆ ಬೇರೆ ಬೇರೆ ಯೋಜನೆಗಳನ್ನು ಸೇರಿಸಿಕೊಳ್ಳಬೇಕು.

ಮಾಡಿಸಿ ಮುಖ ಶುದ್ಧಿಗಾಗಿ ಅಡಕೆ, ಲವಂಗ, ಏಲಕ್ಕಿ, ಪಚ್ಚಕರ್ಪೂರ ಸಹಿತವಾದ ತಾಂಬೂಲ-ಇವುಗಳನ್ನು ಸಮರ್ಪಿಸಬೇಕು. ಕೊನೆಗೆ ದಕ್ಷಿಣಾದ್ರವ್ಯ ಮತ್ತು ವಿಶೇಷಾರ್ಘ್ಯಗಳನ್ನೂ ಪ್ರದಕ್ಷಿಣ-ನಮಸ್ಕಾರಗಳನ್ನೂ ನಿವೇದಿಸಿ ಹೀಗೆ ಪ್ರಾರ್ಥಿಸಬೇಕು : (ಫಲಹಸ್ತವಾಗಿ)

**''ಓಂ ಲಂಬೋದರಂ ಪರಮಸುಂದರಮೇಕದಂತಂ**
**ರಕ್ತಾಂಬರಂ ತ್ರಿನಯನಂ ಪರಮಂ ಪವಿತ್ರಮ್ ।**
**ಉದ್ಯದ್ದಿವಾಕರಕರೋಜ್ಜ್ವಲಕಾಯಕಾಂತಂ**
**ವಿಘ್ನೇಶ್ವರಂ ಸಕಲವಿಘ್ನಹರಂ ನಮಾಮಿ ॥**
**ತ್ವಾಂ ದೇವ ವಿಘ್ನದಲನೇತಿ ಚ ಸುಂದರೇತಿ**
**ಭಕ್ತಿಪ್ರಿಯೇತಿ ಸುಖದೇತಿ ಫಲಪ್ರದೇತಿ ।**
**ವಿದ್ಯಾಪ್ರದೇತ್ಯಘಹರೇತಿ ಚ ಯೇ ಸ್ತುವಂತಿ**
**ತೇಭ್ಯೋ ಗಣೇಶ ವರದೋ ಭವ ನಿತ್ಯಮೇವ ॥**

''**ಅನಯಾ ಪೂಜಯಾ ಶ್ರೀಗಣಪತಿಃ ಪ್ರಿಯತಾಂ ನ ಮಮ**'' ಎಂದು ಹೇಳಿ ಶ್ರೀಗಣಪತಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಇದಾದನಂತರ ಬ್ರಹ್ಮಾದಿ ಸಹಿತ ನವಗ್ರಹಗಳನ್ನೂ ಆವಾಹನೆ ಮಾಡಿ ಪೂಜಿಸಬೇಕು. ಆವಾಹನ ವಾಕ್ಯ = ''**ಓಂ ಭೂರ್ಭುವಸ್ಸ್ವಃ ಭೋಃ ಬ್ರಹ್ಮ ವಿಷ್ಣು ಶಿವ ಸಹಿತ ಸೂರ್ಯಾದಿ ನವಗ್ರಹಾಃ ಇಹಾಗಚ್ಛತ । ಇಹ ತಿಷ್ಠತ ಮಮ ಪೂಜಾಂ ಗೃಹ್ಣೀತ ।**'' ವೈದಿಕ ಮಂತ್ರಗಳಿಂದಲೂ ಇವರ ಆವಾಹನೆ ಮಾಡಬಹುದು. ಮತ್ತೆ ಹಿಂದಿನಂತೆ ಉಪಚಾರ ಮಂತ್ರಗಳಿಂದ ಅಥವಾ ''**ಓಂ ಬ್ರಹ್ಮಣೇ ನಮಃ । ಓಂ ವಿಷ್ಣವೇ ನಮಃ । ಓಂ ಶಿವಾಯ ನಮಃ । ಓಂ ಸೂರ್ಯಾಯ ನಮಃ । ಓಂ ಚಂದ್ರಮಸೇ ನಮಃ । ಓಂ ಭೌಮಾಯ ನಮಃ । ಓಂ ಬುಧಾಯ ನಮಃ । ಓಂ ಬೃಹಸ್ಪತಯೇ ನಮಃ । ಓಂ ಭಾರ್ಗವಾಯ ನಮಃ । ಓಂ ಶನೈಶ್ಚರಾಯ ನಮಃ । ಓಂ ರಾಹವೇ ನಮಃ । ಓಂ ಕೇತವೇ ನಮಃ ।**'' ಎಂಬ ನಾಮ ಮಂತ್ರಗಳಿಂದ ಅವರಿಗೆ ಅರ್ಘ್ಯ, ಪಾದ್ಯ, ಮುಂತಾದ ಉಪಚಾರಗಳನ್ನು ಸಮರ್ಪಿಸಿ, ಈ ಕೆಳಗಿನ ಪ್ರಾರ್ಥನೆಯನ್ನು ಸಲ್ಲಿಸಬೇಕು :

**ಓಂ ಬ್ರಹ್ಮಾ ಮುರಾರಿಸ್ತ್ರಿಪುರಾಂತಕಾರೀ**
**ಭಾನುಃ ಶಶೀ ಭೂಮಿಸುತೋ ಬುಧಶ್ಚ ।**
**ಗುರುಶ್ಚ ಶುಕ್ರಃ ಶನಿರಾಹುಕೇತವಃ**
**ಸರ್ವೇ ಗ್ರಹಾಃ ಶಾಂತಿಕರಾ ಭವಂತು ॥**

''**ಅನಯಾ ಪೂಜಯಾ ಬ್ರಹ್ಮವಿಷ್ಣುಶಿವಸಹಿತ ಸೂರ್ಯಾದಿನವಗ್ರಹಾಃ ಪ್ರೀಯಂತಾಮ್ ನ ಮಮ**'' ಎಂದು ಹೇಳಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಅನಂತರ

'**ಓಂ ಭೂರ್ಭುವಸ್ಸ್ವಃ ಭೋಃ ಗೌರ್ಯಾದಿ ಷೋಡಶ ಮಾತರಃ ಇಹಾಗಚ್ಛತ । ಮಮ ಪೂಜಾಂ ಗೃಹ್ಣೀತ ।**' ಎಂದು ಆವಾಹನೆ.

**ಓಂ ಗೌರ್ಯೈ ನಮಃ । ಓಂ ಪದ್ಮಾಯೈ ನಮಃ । ಓಂ ಶಚ್ಯೈ ನಮಃ । ಓಂ ಮೇಧಾಯೈ ನಮಃ । ಓಂ ಸಾವಿತ್ರ್ಯೈ ನಮಃ । ಓಂ ವಿಜಯಾಯೈ ನಮಃ । ಓಂ ಜಯಾಯೈ ನಮಃ । ಓಂ ದೇವಸೇನಾಯೈ ನಮಃ । ಓಂ ಸ್ವಧಾಯೈ ನಮಃ ಓಂ ಸ್ವಾಹಾಯೈ ನಮಃ । ಓಂ ಮಾತೃಭ್ಯೋ ನಮಃ । ಲೋಕ ಮಾತೃಭ್ಯೋ ನಮಃ । ಓಂ ಹೃಷ್ಟ್ಯೈ ನಮಃ । ಓಂ ಪುಷ್ಟ್ಯೈ ನಮಃ । ಓಂ ತುಷ್ಟ್ಯೈ ನಮಃ । ಓಂ ಆತ್ಮಕುಲದೇವತಾಯೈ ನಮಃ ।** (ಎಂಬ ನಾಮಮಂತ್ರಗಳಿಂದ ಪಾದ್ಯಾದಿ ಉಪಚಾರಗಳು.)

**ಪ್ರಾರ್ಥನಾ ಶ್ಲೋಕ** : (ಫಲಹಸ್ತನಾಗಿ)

**ಗೌರೀ ಪದ್ಮಾ ಶಚೀ ಮೇಧಾ ಸಾವಿತ್ರೀ ವಿಜಯಾ ಜಯಾ ।**
**ದೇವಸೇನಾ ಸ್ವಧಾ ಸ್ವಾಹಾ ಮಾತರೋ ಲೋಕಮಾತರಃ ॥**
**ಹೃಷ್ಟಿಃ ಪುಷ್ಟಿಸ್ತಥಾ ತುಷ್ಟಿರಾತ್ಮನಃ ಕುಲದೇವತಾ ।**
**ಇತ್ಯೇತಾ ಮಾತರಸ್ಸರ್ವಾ ವೃದ್ಧಿಂ ಕುರ್ವಂತು ಮೇ ಸದಾ ॥**

'**ಅನಯಾ ಪೂಜಯಾ ಗೌರ್ಯಾದಿಷೋಡಶಮಾತರಃ ಪ್ರಿಯಂತಾಮ್ ನ ಮಮ**' ಎಂದು ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಇದಾದ ಮೇಲೆ ಸಪ್ತ ಚಿರಂಜೀವಿಗಳ ಆವಾಹನೆ, ಪೂಜೆ ಮತ್ತು ಅವರಿಗೆ ಪುಷ್ಪಾಂಜಲಿ.

ಆವಾಹನಾವಾಕ್ಯ :- '**ಓಂ ಭೂರ್ಭುವಸ್ಸ್ವಃ ಭೋಃ ಅಶ್ವತ್ಥಾಮಾದಿಸಪ್ತಚಿರಂಜೀವಿನಃ ಇಹಾಗತ್ಯ ಮಮ ಪೂಜಾಂ ಗೃಹ್ಣೀತ ।**'

ಪೂಜಾ ನಾಮಮಂತ್ರ :- '**ಓಂ ಅಶ್ವತ್ಥಾಮ್ನೇ ನಮಃ । ಓಂ ಬಲಯೇ ನಮಃ । ಓಂ ವ್ಯಾಸಾಯ ನಮಃ । ಓಂ ಹನುಮತೇ ನಮಃ । ಓಂ ವಿಭೀಷಣಾಯ ನಮಃ । ಓಂ ಕೃಪಾಯ ನಮಃ । ಓಂ ಪರಶುರಾಮಾಯ ನಮಃ ।** ಇವರನ್ನು ಫಲಹಸ್ತನಾಗಿ ಹೀಗೆ ಪ್ರಾರ್ಥಿಸಬೇಕು :

**ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।**
**ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ।**
**ಯಜಮಾನಗೃಹೇ ನಿತ್ಯಂ ಸುಖದಾಃ ಸಿದ್ಧಿದಾಃ ಸದಾ ॥**

'**ಅನಯಾ ಪೂಜಯಾಅಶ್ವತ್ಥಾಮಾದಿಸಪ್ತಚಿರಜೀವಿನಃ ಪ್ರಿಯಂತಾಮ್ ನ ಮಮ**' ಎಂದು ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಇದಾದ ನಂತರ ಸರ್ವತೋಭದ್ರಮಂಡಲದಲ್ಲಿರುವ ದೇವತೆಗಳ ಅವಾಹನ-ಪೂಜಾಪದ್ಧತಿಗಳಿಗನುಗುಣವಾಗಿ ಮಾಡಿ ಮಧ್ಯದಲ್ಲಿ ತಾಮ್ರ ಕಲಶವನ್ನು ಸ್ಥಾಪಿಸಬೇಕು. ಅದರ ಸಂಕ್ಷಿಪ್ತ ವಿಧಿ : '**ಓಂ ಭೂರಸಿ**' ಇತ್ಯಾದಿ ಮಂತ್ರಗಳಿಂದ ಭೂಮಿಯನ್ನು ಪ್ರಾರ್ಥಿಸಿ ಕೈಯಿಂದ ಕಲಶದ ಕೆಳಗಿರುವ ಭೂಮಿಯನ್ನು ಸ್ಪರ್ಶಿಸಬೇಕು. '**ಓಂ ಮಹೀ ದ್ಯೌಃ ಪೃಥ್ವೀ ಚ ನ ಇಮಂ ಯಜ್ಞ ಮಿಮಿಕ್ಷತಾಂ । ಪಿಪೃತಾನ್ನೋ ಭರೀಮಭಿಃ**' ಎಂಬ ಮಂತ್ರವನ್ನು ಆ ಸಮಯದಲ್ಲಿ ಹೇಳಬೇಕು. ಅದೇ ಭೂಮಿಯಲ್ಲಿ ಕುಂಕುಮ ಮುಂತಾದವುಗಳಿಂದ ಅಷ್ಟದಳ ಕಮಲವನ್ನು ರಚಿಸಿ ಮೇಲೆ '**ಓಂ ಧಾನ್ಯಮಸಿ**' ಇತ್ಯಾದಿ ಮಂತ್ರದಿಂದ ಸಪ್ತ ಧ್ಯಾನಗಳನ್ನು ಹಾಕಬೇಕು. ಮತ್ತೆ ಆ ಸಪ್ತ ಧಾನ್ಯಗಳ ಮೇಲೆ '**ಓಂ ಆಜಿಘ್ರಕಲಶಂ**' ಇತ್ಯಾದಿ ಮಂತ್ರಗಳನ್ನು ಉಚ್ಚರಿಸುತ್ತಾ ಕಲಶವನ್ನು ಸ್ಥಾಪಿಸಬೇಕು. ಅನಂತರ '**ಓಂ ವರುಣ**

**ಸ್ಯೋತ್ತಂಭನಮಸಿ**' ಇತ್ಯಾದಿ ಮಂತ್ರದಿಂದ ಕಲಶಕ್ಕೆ ಶುದ್ಧವಾದ ಜಲವನ್ನು ಸುರಿಯಬೇಕು. ಆಮೇಲೆ '**ಓಂ ಸ್ಥಿರೋಭವ**' ಇತ್ಯಾದಿ ಮಂತ್ರಗಳನ್ನು ಪಠಿಸಿ ಬೀಳದಂತೆ ಮತ್ತು ಅಲ್ಲಾಡದಂತೆ ಕಲಶವನ್ನು ಸ್ಥಿರವಾಗಿ ಇರಿಸಬೇಕು. ಆ ಕಲಶದ ಪೂರ್ವಭಾಗದಲ್ಲಿ '**ಓಂ ಅಗ್ನಿಮೀಳೇ**' ಇತ್ಯಾದಿ ಮಂತ್ರದಿಂದ ಋಗ್ವೇದವನ್ನೂ, ದಕ್ಷಿಣ ಭಾಗದಲ್ಲಿ '**ಓಂ ಇಷೇತ್ವೋರ್ಜೇತ್ವಾ**' ಇತ್ಯಾದಿ ಮಂತ್ರದಿಂದ ಯಜುರ್ವೇದವನ್ನೂ, ಪಶ್ಚಿಮಭಾಗದಲ್ಲಿ '**ಓಂ ಅಗ್ನ ಆಯಾಹಿ ವೀತಯೇ**' ಇತ್ಯಾದಿ ಮಂತ್ರದಿಂದ ಸಾಮವೇದವನ್ನೂ, ಉತ್ತರ ಭಾಗದಲ್ಲಿ '**ಓಂ ಶನ್ನೋದೇವೀರಭೀಷ್ಟಯೇ**' ಇತ್ಯಾದಿ ಮಂತ್ರ ದಿಂದ ಅಥರ್ವವೇದವನ್ನೂ ಆವಾಹಿಸಿ ಸ್ಥಾಪಿಸಬೇಕು. ಐದು ಕಲಶಗಳಿದ್ದರೆ ಬೇರೆ–ಬೇರೆ ಕಲಶಗಳಲ್ಲಿ ಬೇರೆ–ಬೇರೆ ವೇದಗಳನ್ನು ಸ್ಥಾಪಿಸಬೇಕು. ಅನಂತರ ಕಲಶದಲ್ಲಿ '**ಓಂ ಅಶ್ವತ್ಥೇ**' ಇತ್ಯಾದಿ ಮಂತ್ರ ದಿಂದ ಆಲ, ನೇರಳೆ, ಮತ್ತು ಮಾವಿನ ಚಿಗುರುಗಳನ್ನು ಹಾಕಬೇಕು. '**ಕಾಂಡಾತ್ಕಾಂಡಾತ್ ಪ್ರರೋಹನ್ತೀ**' ಇತ್ಯಾದಿ ಮಂತ್ರದಿಂದ ಅದರೊಳಗೆ ಗರಿಕೆಯ ದಳಗಳನ್ನು ಸೇರಿಸಬೇಕು. '**ಓಂ ಪವಿತ್ರೇಸ್ಥೋ**' ಎಂಬ ಮಂತ್ರದಿಂದ ಕುಶವನ್ನೂ, '**ಓಂ ಯಾಃ ಫಲಿನಿ**' ಎಂಬ ಮಂತ್ರದಿಂದ ಅಡಕೆಯನ್ನೂ '**ಓಂ ಹಿರಣ್ಯಗರ್ಭ**' ಇತ್ಯಾದಿ ಮಂತ್ರದಿಂದ ಚಿನ್ನದ ಚೂರನ್ನೂ '**ಓಂ ಪರಿವಾಜಪತಿಃ**' ಎಂಬ ಮಂತ್ರದಿಂದ ಪಂಚರತ್ನಗಳನ್ನೂ (ಬಂಗಾರ, ಬೆಳ್ಳಿ, ಮುತ್ತು, ಹವಳ, ವಜ್ರಗಳನ್ನೂ) '**ಓಂ ಯಾ ಓಷಧೀಃ**' ಎಂಬ ಮಂತ್ರದಿಂದ ಸರ್ವೌಷಧಗಳನ್ನೂ (ದಶಮೂಲಗಳನ್ನೂ) '**ಓಂ ಗಂಧದ್ವಾರಾಂ**' ಎಂಬ ಮಂತ್ರದಿಂದ ಗಂಧವನ್ನೂ '**ಓಂ ಅಕ್ಷನ್ನಮೀದಂತ**' ಎಂಬ ಮಂತ್ರದಿಂದ ಅಕ್ಷತೆ ಯನ್ನೂ ಕಲಶದೊಳಗೆ ಹಾಕಬೇಕು. '**ಓಂ ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ**' ಎಂಬ ಮಂತ್ರದಿಂದಾಗಲೀ '**ಓಂ ಓಷಧಯಃ ಪ್ರತಿಗೃಹ್ಣೀತ ಪುಷ್ಪವತೀಃ**' ಎಂಬ ಮಂತ್ರ ದಿಂದಾಗಲೀ ಅಥವಾ '**ಓಂ ಆಯನೇ ತೇ ಪರಾಯಣೇ**' ಎಂಬ ಮಂತ್ರದಿಂದಾಗಲೀ ಪುಷ್ಪಗಳನ್ನೂ ಅದರಲ್ಲಿ ಸೇರಿಸಬೇಕು. '**ಓಂ ಧೂರಸೀ**' ಎಂಬ ಮಂತ್ರದಿಂದ ಧೂಪದಿಂದ ಅದನ್ನು ಸುವಾಸಿತ ವಾಗಿಸುವುದು. '**ಓಂ ಅಗ್ನಿರ್ಜ್ಯೋತಿಃ**' ಅಥವಾ '**ಓಂ ಉದ್ದೀಪ್ಯಸ್ವ ಜಾತವೇದಃ**' ಎಂಬ ಮಂತ್ರದಿಂದ ದೀಪವನ್ನು ಹೊತ್ತಿಸಿ ಇಡು ವುದು. '**ಓಂ ಪಂಚ ನದ್ಯಃ**' ಎಂಬ ಮಂತ್ರದಿಂದ ತೀರ್ಥೋದಕವನ್ನೂ '**ಓಂ ಉಪಹ್ವರೇ**' ಎಂಬ ಮಂತ್ರದಿಂದ ನದೀ ಸಂಗಮತೀರ್ಥ ವನ್ನೂ '**ಓಂ ಸಮುದ್ರಾಯ ತ್ವಾ**' ಎಂಬ ಮಂತ್ರದಿಂದ ಸಮುದ್ರ ತೀರ್ಥವನ್ನೂ ಕಲಶದಲ್ಲಿ ಸೇರಿಸಬೇಕು. '**ಓಂ ಸ್ಯೋನಾ ಪೃಥಿವಿ**' ಇತ್ಯಾದಿ ಮಂತ್ರಗಳಿಂದ ಸಪ್ತ ಮೃತ್ತಿಕೆಗಳನ್ನೂ (ಅಂದರೆ ಗಜಶಾಲೆ, ಅಶ್ವಶಾಲೆ, ಚೌಕ, ಸಂಗಮ, ಹುತ್ತ, ಗೋಷ್ಠ ಹಸುವಿನ ಕೊಟ್ಟಿಗೆ ಮತ್ತು ಮಡು ಇವುಗಳ ಮಣ್ಣುಗಳನ್ನು) ಹಾಕಬೇಕು. '**ಓಂ ವಸೋಃ ಪವಿತ್ರಮಸಿ**' ಎಂಬ ಮಂತ್ರದಿಂದ ಕಲಶದ ಮೇಲೆ ಕೆಂಪು ಬಟ್ಟೆಯನ್ನು ಹೊದ್ದಿಸುವುದು.'**ಓಂ ಪೂರ್ಣಾದರ್ವಿಪರಾಪತ**' ಎಂಬ ಮಂತ್ರದಿಂದ ಕಲಶದ ಮೇಲೆ ಒಂದು ಪೂರ್ಣಪಾತ್ರವನ್ನು (ಅಂದರೆ ಅಕ್ಕಿ ತುಂಬಿದ ಕಂಚಿನ ಅಥವಾ ತಾಮ್ರದ ಪಾತ್ರೆಯನ್ನು) ಇರಿಸುವುದು. '**ಓಂ ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ**' ಎಂಬ ಮಂತ್ರದಿಂದ ಆ ಪೂರ್ಣ ಪಾತ್ರದ ಮೇಲೆ ಕೆಂಪುಬಟ್ಟೆ ಸುತ್ತಿರುವ ಶ್ರೀಫಲವನ್ನು(ತೆಂಗಿನ ಕಾಯಿ) ಇರಿಸಬೇಕು. ಕೈಯಲ್ಲಿ ಅಕ್ಷತೆಯನ್ನು ತೆಗೆದುಕೊಂಡು '**ಓಂ ಮನೋ ಜೂತಿಃ**' ಇತ್ಯಾದಿ ಮಂತ್ರದಿಂದ ಕಲಶದ ಮೇಲೆ ಅಕ್ಷತೆಯನ್ನು ಹಾಕುವುದು – ಇದು ಕಲಶಪ್ರತಿಷ್ಠೆ ಎನ್ನಿಸುವುದು. ಅನಂತರ '**ಸರ್ವೇ ಸಮುದ್ರಾಃ ಸರಿತಃ**' ಅಥವಾ :-

**'ಓಂ ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ।**
**ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ॥**
**ಕುಕ್ಷೌ ತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ।**
**ಋಗ್ವೇದೋಽಥ ಯಜುರ್ವೇದಃ ಸಾಮವೇದೋಹ್ಯಥರ್ವಣಃ॥**
**ಅಂಗೈಶ್ಚ ಸಹಿತಾಃ ಸರ್ವೇ ಕಲಶಾಂಬುಸಮಾಶ್ರಿತಾಃ।**
**ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ॥**

'**ಆಪೋವಾ ಇದಗ್ಂ ಸರ್ವಂ...ಭೂರ್ಭುವಸ್ಸುವರಾಪ ಓಂ**' '**ಗಂಗೇ ಚ ಯಮುನೇ ಚೈವ**' ಇತ್ಯಾದಿ ಮಂತ್ರಶ್ಲೋಕಗಳನ್ನು ಮತ್ತು '**ಇಮಂ ಮೇ ಗಂಗೇ ಯಮುನೇ ಸರಸ್ವತೀ**' ಎಂಬ ಮಂತ್ರ ವನ್ನೂ ಹೇಳಿ ಅದರಲ್ಲಿ ತೀರ್ಥಗಳನ್ನು ಆಹಾವನೆ ಮಾಡಬೇಕು. ಗಂಧವೇ ಮುಂತಾದ ಉಪಚಾರಗಳಿಂದ ತೀರ್ಥಗಳನ್ನು ಪೂಜಿಸಿ ಕಲಶವನ್ನು ಹೀಗೆ ಪ್ರಾರ್ಥಿಸಬೇಕು.

**ದೇವದಾನವಸಂವಾದೇ ಮಥ್ಯಮಾನೇ ಜಲಾರ್ಣವೇ।**
**ಉತ್ಪನ್ನೋಽಸಿ ತದಾ ಕುಂಭ ವಿಧೃತೋ ವಿಷ್ಣುನಾ ಸ್ವಯಮ್॥**
**ತ್ವತ್ತೋಯೇ ಸರ್ವತೀರ್ಥಾನಿ ದೇವಾ ಸರ್ವೇ ತ್ವಯಿಸ್ಥಿತಾಃ।**
**ತ್ವಯಿ ತಿಷ್ಠಂತಿ ಭೂತಾನಿ ತ್ವಯಿ ಪ್ರಾಣಾಃ ಪ್ರತಿಷ್ಠಿತಾಃ॥**
**ಶಿವಃ ಸ್ವಯಂ ತ್ವಮೇವಾಸಿ ವಿಷ್ಣುಸ್ತ್ವಂ ಚ ಪ್ರಜಾಪತಿಃ।**
**ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾಃ ಸಪೈತೃಕಾಃ॥**
**ತ್ವಯಿ ತಿಷ್ಠಂತಿ ಸರ್ವೇಽಪಿ ಯತಃ ಕಾಮಫಲಪ್ರದಾಃ।**
**ತ್ವತ್ಪ್ರಸಾದಾದಿಮಂ ಯಜ್ಞಂ ಕರ್ತುಮೀಹೇ ಜಲೋದ್ಭವ॥**
**ಸಾನ್ನಿಧ್ಯಂ ಕುರು ಮೇ ದೇವ ಪ್ರಸನ್ನೋ ಭವ ಸರ್ವದಾ।**
**ಬ್ರಾಹ್ಮಣೈರ್ನಿರ್ಮಿತಸ್ತ್ವಂ ಹಿ ಮಂತ್ರೈರೇವಾಮೃತೋದ್ಭವೈಃ॥**
**ಪ್ರಾರ್ಥಯಾಮಿ ಚ ಕುಂಭ ತ್ವಾಂ ವಾಂಛಿತಾರ್ಥಂದದಸ್ವಮೇ॥**
**ಪುರಾ ಹಿ ಸೃಷ್ಟಃ ಪಿತಾಮಹೇನ**
**ಮಹೋತ್ಸವಾನಾಂ ಪ್ರಥಮೋ ವರಿಷ್ಠಃ।**
**ದೂರ್ವಾವಟಾಶ್ವತ್ಥ ಸುಪಲ್ಲವೈರ್ಯುಕ್**
**ಕರೋತು ಶಾಂತಿಂ ಕಲಶಃ ಸುವಾಸಾಃ॥**

(ಆಲ, ಅಶ್ವತ್ಥ ನೇರಳೇ, ಮಾವು, ಅಡಿಕೆಗೋಳಿ – ಎಂಬ ಐದು ಮರಗಳ ತೊಗಟೆಗಳನ್ನೂ ಕಲಶೋದಕಕ್ಕೆ ಸೇರಿಸುವುದುಂಟು.)

ಹೀಗೆ ಕಲಶ ಪ್ರಾರ್ಥನೆಯ ನಂತರ '**ಗಣಾನಾಂ ತ್ವಾ**' ಎಂಬ ಮಂತ್ರದಿಂದ ಗಣಪತಿಯನ್ನು, '**ತತ್ತ್ವಾಯಾಮಿ**' ಎಂಬ ಮಂತ್ರ ದಿಂದ ವರುಣನನ್ನು ಅದರಲ್ಲಿ ಆವಾಹಿಸಿ ಷೋಡಶೋಪಚಾರ ಗಳಿಂದ ಪೂಜಿಸಬೇಕು. ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನ, ವಸ್ತ್ರ ಯಜ್ಞೋಪವೀತ, ಗಂಧ, ಅಕ್ಷತೆ, ಪುಷ್ಪ ಧೂಪ, ದೀಪ, ನೈವೇದ್ಯ, ತಾಂಬೂಲ, ದಕ್ಷಿಣೆ, ಪ್ರದಕ್ಷಿಣ ಮತ್ತು ಪುಷ್ಪಾಂಜಲಿ – ಇವು ಷೋಡಶೋಪಚಾರಗಳು (ಇಲ್ಲಿ ಅಕ್ಷತೆ, ದಕ್ಷಿಣೆ ಇವುಗಳನ್ನು ಬಿಟ್ಟು ನಮಸ್ಕಾರ ಸ್ತುತಿಗಳನ್ನು ಸೇರಿಸುವುದೂ ಉಂಟು.) ಈ

ಪೂಜಾ ನಂತರ **'ಅನಯಾ ಪೂಜಯಾ ವರುಣಾದ್ಯಾವಾಹಿತ ದೇವತಾಃ ಪ್ರೀಯಂತಾಮ್ ನ ಮಮ'** ಎಂದು ಹೇಳಿ ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಇದಾದನಂತರ ಕಲಶದ ಮೇಲೆ ಸುವರ್ಣದ ಲಕ್ಷ್ಮೀ ನಾರಾಯಣ ಪ್ರತಿಮೆಯನ್ನು ಸಂಸ್ಕರಿಸಿ ಸ್ಥಾಪಿಸಬೇಕು. ಪುರುಷ ಸೂಕ್ತದ ಹದಿನಾರು ಅಥವಾ ಹದಿನೆಂಟು ಋಕ್ಕುಗಳಿಂದ ಈ ಲಕ್ಷ್ಮೀ ನಾರಾಯಣ ದೇವರ ಪೂಜೆ ಮಾಡಿ ಸಾಲಿಗ್ರಾಮವನ್ನೂ ಹೀಗೆಯೇ ಪೂಜಿಸಬೇಕು. ಪೂಜಾನಂತರ ಶ್ರೀಭಗವಂತನನ್ನು :

**ಬ್ರಹ್ಮಸತ್ರಂ ಕರಿಷ್ಯಾಮಿ ತಾವಾನುಗ್ರಹತೋ ವಿಭೋ ।**
**ತನ್ನಿರ್ವಿಘ್ನಂ ಭವೇದ್ದೇವ ರಮಾನಾಥ ಕ್ಷಣಸ್ವ ಮೇ ॥**

ಎಂದು ಪ್ರಾರ್ಥಿಸಿ, **'ಅನಯಾ ಪೂಜಯಾ ಲಕ್ಷ್ಮೀ ಸಹಿತೋ ಭಗವಾನ್ನಾರಾಯಣಃ ಪ್ರೀಯತಾಮ್ ನ ಮಮ'** ಎಂದು ಹೇಳಿ ಪುಷ್ಪಾಂಜಲಿಯನ್ನು ಸ್ವಾಮಿಗೆ ಸಮರ್ಪಿಸಬೇಕು. (ಪ್ರತಿ ಪೂಜೆಯಲ್ಲೂ ಹೀಗೆಯೇ ವಿಧಿ)

ಆಮೇಲೆ **'ನರನಾರಾಯಣಾಭ್ಯಾಂ ನಮಃ'** ಎಂಬ ನಾಮ ಮಂತ್ರದಿಂದ ನರ-ನಾರಾಯಣದೇವರನ್ನು ಆವಾಹಿಸಿ ಪೂಜಿಸಿ ಹೀಗೆ ಪ್ರಾರ್ಥಿಸಬೇಕು :

**ಯೋ ಮಾಯಯಾ ವಿರಚಿತಂ ನಿಮಾತ್ಮನೀದಂ**
**ಖೇ ರೂಪಭೇಮಿವ ತತ್ಪ್ರತಿಚಕ್ಷಣಾಯ ।**
**ಏತೇನ ಧರ್ಮಸದನೇ ಋಷಿಮೂರ್ತಿನಾದ್ಯ**
**ಪ್ರಾದುಶ್ಚಕಾರ ಪುರುಷಾಯ ನಮಃ ಪರಸ್ಮೈ ॥**
**ಸೋಽಯಂ ಸ್ಥಿತಿವ್ಯತಿಕರೋಽಪಶಮಾಯ ಸೃಷ್ಟಾನ್**
**ಸತ್ತ್ವೇನ ನಃ ಸುರಗಣಾನನುಮೇಯತತ್ತ್ವಃ ।**
**ದೃಶ್ಯಾವದಭ್ರಕರುಣೇನ ವಿಲೋಕನೇನ**
**ಯಚ್ಛ್ರೀನಿಕೇತಮಮಲಂ ಕ್ಷಿಪತಾರವಿಂದಮ್ ॥**

**'ಅನಯಾ ಪೂಜಯಾ ಭಗವನ್ತೌ ನರ-ನಾರಾಯಣೌ ಪ್ರೀಯೇತಾಮ್ ನ ಮಮ'** ಎಂದು ಪುಷ್ಪಾಂಜಲಿಯನ್ನು ಸಮರ್ಪಿಸುವುದು.

ಇದಾದ ನಂತರ ಪ್ರವಚನಕಾರನ ಮತ್ತು ಸರ್ವ ವಿಕಾರಗಳನ್ನೂ ಹೋಗಲಾಡಿಸುವುದಕ್ಕಾಗಿ ಶ್ರೀವಾಯುದೇವರನ್ನು ಆವಾಹಿಸಿ ಪೂಜಿಸಬೇಕು.

**'ಓಂ ವಾಯವೇ ಸರ್ವಕಲ್ಯಾಣಕರ್ತ್ರೇ ನಮಃ'** ಎಂಬ ಮಂತ್ರದಿಂದ ಪಾದ್ಯ ಮುಂತಾದ ಉಪಚಾರಗಳನ್ನು ಸಮರ್ಪಿಸಿ ಹೀಗೆ ಪ್ರಾರ್ಥಿಸಬೇಕು.

**ಅಂತಃ ಪ್ರವಿಶ್ಯ ಭೂತಾನಿ ಯೋ ಬಿಭರ್ತ್ಯಾತ್ಮಕೇತುಭಿಃ ।**
**ಅಂತರ್ಯಾಮೀಶ್ವರಃ ಸಾಕ್ಷಾತ್ ಪಾತು ನೋ ಯದ್ವಶೇ ಸ್ಫುಟಮ್ ॥**

**'ಅನಯಾ ಪೂಜಯಾ ಸರ್ವಕಲ್ಯಾಣಕರ್ತಾ ವಾಯುಃ ಪ್ರೀಯತಾಮ್ ನ ಮಮ'** ಎಂದು ಪುಷ್ಪಾಂಜಲಿಯನ್ನು ಸಮರ್ಪಿಸಬೇಕು.

ಶ್ರೀವಾಯುದೇವರ ಪೂಜಾ ನಂತರ **'ಓಂ ಗುರವೇ ನಮಃ'** ಎಂಬ ಮಂತ್ರದಿಂದ ಶ್ರೀಗುರುದೇವರಿಗೆ ಪೂಜೆಯನ್ನು ಸಲ್ಲಿಸಿ ಹೀಗೆ ಪ್ರಾರ್ಥನೆ ಮಾಡಬೇಕು :

**ಬ್ರಹ್ಮಸ್ಥಾನಸರೋಜಮಧ್ಯವಿಲಸಚ್ಛೀತಾಂಶುಪೀಠಸ್ಥಿತಂ ।**
**ಸ್ಫೂರ್ಜತ್ಸೂರ್ಯರುಚಿಂ ವರಾಭಯಕರಂ ಕರ್ಪೂರ ಕುಂದೋಜ್ಜ್ವಲಮ್ ।**
**ಶ್ವೇತಸ್ರಗ್ವಸನಾನುಲೇಪನಯುತಂ ವಿದ್ಯುದ್ರುಚಾ ಕಾಂತಯಾ**
**ಸಂಶ್ಲಿಷ್ಟಾರ್ಧತನುಂ ಪ್ರಸನ್ನವದನಂ ವಂದೇ ಗುರುಂ ಸಾದರಮ್ ॥**

**'ಅನಯಾ ಪೂಜಯಾ ಶ್ರೀಗುರುದೇವಃ ಪ್ರೀಯತಾಮ್ ನ ಮಮ'** ಎಂದು ಪುಷ್ಪಾಂಜಲಿ.

ಅನಂತರ ಬಿಳಿಯ ಪುಷ್ಪ ಮುಂತಾದವುಗಳಿಂದ ಶ್ರೀ ಸರಸ್ವತೀ ದೇವಿಯನ್ನು **'ಓಂ ಸರಸ್ವತ್ಯೈ ನಮಃ'** ಎಂಬ ನಾಮ ಮಂತ್ರದಿಂದ ಪೂಜೆ ಮಾಡಿ ಹೀಗೆ ಪ್ರಾರ್ಥಿಸಬೇಕು :

**ಯಾ ಕುಂದೇಂದು ತುಷಾರಹಾರ ಧವಳಾ ಯಾ ಶುಭ್ರವಸ್ತ್ರಾವೃತಾ**
**ಯಾ ವೀಣಾವರದಂಡಮಂಡಿತಕರಾ ಯಾ ಶ್ವೇತ ಪದ್ಮಾಸನಾ ।**
**ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿರ್ದೇವೈಃಸದಾವಂದಿತಾ**
**ಸಾ ಮಾಂ ಪಾತು ಸರಸ್ವತೀ ಭಗವತೀ ನಿಶ್ಶೇಷ ಜಾಡ್ಯಾಪಹಾ॥**

**'ಅನಯಾ ಪೂಜಯಾ ಭಗವತೀ ಸರಸ್ವತೀ ಪ್ರೀಯತಾಮ್ ನ ಮಮ'** ಎಂದು ಪುಷ್ಪಾಂಜಲಿಯನ್ನು ಸಮರ್ಪಿಸುವುದು.

ಸರಸ್ವತೀ ಪೂಜೆಯ ನಂತರ **ಓಂ ಶೇಷಾಯ ನಮಃ । ಓಂ ಸನತ್ಕುಮಾರಾಯ ನಮಃ । ಓಂ ಸಾಂಖ್ಯಾಯನಾಯ ನಮಃ । ಓಂ ಪರಾಶರಾಯ ನಮಃ । ಓಂ ಬೃಹಸ್ಪತಯೇ ನಮಃ । ಓಂ ಮೈತ್ರೇಯಾಯ ನಮಃ । ಓಂ ಉದ್ಧವಾಯ ನಮಃ ।** ಎಂಬ ನಾಮಮಂತ್ರಗಳಿಂದ ಆದಿಶೇಷನೇ ಮುಂತಾದವರನ್ನು ಆವಾಹಿಸಿ ಪೂಜಿಸಬೇಕು. ಅನಂತರ ಮಾಡಬೇಕಾದ ಪ್ರಾರ್ಥನೆ :

**ಶೇಷಃ ಸನತ್ಕುಮಾರಶ್ಚ ಸಾಂಖ್ಯಾಯನಪರಾಶರೌ ।**
**ಬೃಹಸ್ಪತಿಶ್ಚ ಮೈತ್ರೇಯ ಉದ್ಧವಶ್ಚಾತ್ರ ಕರ್ಮಣಿ ।**
**ಪ್ರತ್ಯೂಹವೃಂದಂ ಸತತಂ ಹರಂತಾಂ ಪೂಜಿತಾ ಮಯಾ ॥**

**'ಅನಯಾ ಪೂಜಯಾ ಶೇಷ-ಸನತ್ಕುಮಾರ-ಸಾಂಖ್ಯಾಯನ-ಪರಾಶರ - ಬೃಹಸ್ಪತಿ ಮೈತ್ರೇಯೋದ್ಧವಾಃ ಪ್ರಿಯಂತಾಮ್ ನ ಮಮ'** ಎಂದು ಪುಷ್ಪಾಂಜಲಿಯನ್ನು ಸಮರ್ಪಣೆ ಮಾಡುವುದು.

ಅನಂತರ **ಓಂ ತ್ರಯ್ಯಾರುಣಯೇ ನಮಃ । ಓಂ ಕಶ್ಯಪಾಯ ನಮಃ । ಓಂ ರಾಮಶಿಷ್ಯಾಯ ನಮಃ । ಓಂ ಅಕೃತವ್ರಣಾಯ ನಮಃ । ಓಂ ವೈಶಂಪಾಯನಾಯ ನಮಃ । ಓಂ ಹಾರೀತಾಯ ನಮಃ ।** ಎಂಬ ನಾಮಮಂತ್ರಗಳಿಂದ ತ್ರಯ್ಯಾರುಣಿಯೇ ಮುಂತಾದ ಆರು ಮಂದಿ ಪೌರಾಣಿಕರಿಗೆ ಪೂಜೆಯನ್ನು ಸಲ್ಲಿಸಿ ಹೀಗೆ ಪ್ರಾರ್ಥಿಸುವುದು :

**ತ್ರಯ್ಯಾರುಣಿಃ ಕಶ್ಯಪಶ್ಚ ರಾಮಶಿಷ್ಯೋಽಕೃತವ್ರಣಃ ।**
**ವೈಶಂಪಾಯನಹಾರಿತೌ ಷಡ್ ವೈಪೌರಾಣಿಕಾ ಇಮೇ ।**
**ಸುಖದಾಃ ಸಂತು ಮೇ ನಿತ್ಯಮನಯಾ ಪೂಜಯಾರ್ಚಿತಾಃ ॥**

**'ಅನಯಾ ಪೂಜಯಾ ತ್ರಯ್ಯಾರುಣಿಪ್ರಭೃತಯಃ ಷಟ್ ಪೌರಾಣಿಕಾಃ ಪ್ರೀಯಂತಾಂ ನ ಮಮ'** ಎಂದು ಪುಷ್ಪಾಂಜಲಿಯನ್ನು ಅವರಿಗೆ ಸಮರ್ಪಿಸುವುದು.

ಅನಂತರ **'ಓಂ ಭಗವತೇ ವ್ಯಾಸಾಯ ನಮಃ ।'** ಎಂಬ ನಾಮ ಮಂತ್ರದಿಂದ ಭಗವಾನ್ ವೇದವ್ಯಾಸರನ್ನು ಸ್ಥಾಪಿಸಿ ಪೂಜಿಸಿ ಹೀಗೆಂದು ಪ್ರಾರ್ಥಿಸಬೇಕು.

**ನಮಸ್ತಸ್ಮೈ ಭಗವತೇ ವ್ಯಾಸಾಯಾಮಿತತೇಜಸೇ । ಪಪುರ್ಜ್ಞಾನಮಯಂ ಸೌಮ್ಯಂ ಯಸ್ಮುಖಾಂಬುರುಹಾಸವಮ್ ॥** ಆಮೇಲೆ ಶ್ರೀಮದ್ಭಾಗವತ ಸಪ್ತಾಹಯಜ್ಞವನ್ನು ಉಪದೇಶ ಮಾಡಿದ ಸೂರ್ಯಭಗವಂತನನ್ನು ಸ್ಥಾಪಿಸಿ ಪ್ರತಿನಿತ್ಯವೂ ಅವನನ್ನೂ ಪೂಜಿಸಬೇಕು. ಅವನನ್ನು ಪೂಜಿಸಲು ನಾಮ ಮಂತ್ರ = '**ಓಂ ಸೂರ್ಯಾಯ ನಮಃ**' ಪೂಜಾ ನಂತರ ಅವನನ್ನು ಹೀಗೆ ಪ್ರಾರ್ಥಿಸಬೇಕು.

**ಲೋಕೇಶ ತ್ವಂ ಜಗಚ್ಚಕ್ಷುಃ ಸತ್ಕರ್ಮ ತವ ಭಾಷಿತಮ್ । ಕರೋಮಿ ತಚ್ಚ ನಿರ್ವಿಘ್ನಂ ಪೂರ್ಣಮಸ್ತು ತ್ವದರ್ಚನಾತ್ ॥**

'**ಅನಯಾ ಪೂಜಯಾ ಸಪ್ತಾಹಯಜ್ಞೋಪದೇಷ್ಟಾ ಭಗವಾನ್ ಸೂರ್ಯಃ ಪ್ರೀಯತಾಮ್ ನ ಮಮ**' ಎಂದು ಪುಷ್ಪಾಂಜಲಿ.

ಇದಾದ ನಂತರ ಪರಮಾತ್ಮನ ದಶಾವತಾರಗಳನ್ನೂ ಶ್ರೀಶುಕಮಹಾ ಮುನಿಗಳನ್ನೂ ಸ್ಥಾಪಿಸಿ ಪೂಜಿಸಬೇಕು.

ಅಲ್ಲಿಂದ ಮುಂದೆ ನಾರದಪೀಠ ಮತ್ತು ಪುಸ್ತಕಪೀಠ - ಇವೆರಡನ್ನೂ ಒಟ್ಟಿಗೇ ಪೂಜಿಸಬೇಕು. ಮೊದಲು ಆ ಎರಡು ಪೀಠಗಳಿಗೂ ನೀರಿನಿಂದ ಅಭಿಷೇಕ ಮಾಡಿ ಅವುಗಳ ಮೇಲೆ ಚಂದನ ಮುಂತಾದವುಗಳಿಂದ ಅಷ್ಟದಳ ಕಮಲವನ್ನು ರಚಿಸಬೇಕು. ಅನಂತರ **ಓಂ ಆಧಾರಶಕ್ತ್ಯೈ ನಮಃ । ಓಂ ಮೂಲ ಪ್ರಕೃತಯೇ ನಮಃ । ಓಂ ಕ್ಷೀರ ಸಮುದ್ರಾಯ ನಮಃ । ಓಂ ಶ್ವೇತದ್ವೀಪಾಯ ನಮಃ । ಓಂ ಕಲ್ಪವೃಕ್ಷಾಯ ನಮಃ । ಓಂ ರತ್ನ ಮಂಟಪಾಯ ನಮಃ । ಓಂ ರತ್ನ ಸಿಂಹಾಯ ನಮಃ ।** ಎಂಬ ಮಂತ್ರಗಳಿಂದ ಈ ಎರಡು ಪೀಠಗಳಲ್ಲೂ ಆಧಾರಶಕ್ತಿ ಮುಂತಾದವುಗಳನ್ನು ಭಾವಿಸಿ ಪೂಜಿಸಬೇಕು. ನಾಲ್ಕು ದಿಕ್ಕುಗಳಲ್ಲಿಯೂ ಪೂರ್ವದಿಕ್ಕಿನಿಂದ ಪ್ರಾರಂಭಿಸಿ ಕ್ರಮವಾಗಿ (ಪ್ರದಕ್ಷಿಣವಾಗಿ) **ಓಂ ಧರ್ಮಾಯ ನಮಃ । ಓಂ ಜ್ಞಾನಾಯ ನಮಃ । ಓಂ ವೈರಾಗ್ಯಾಯ ನಮಃ । ಓಂ ಐಶ್ವರ್ಯಾಯ ನಮಃ ।** ಎಂಬ ಮಂತ್ರಗಳಿಂದ ಧರ್ಮಾದಿಗಳನ್ನು ಭಾವಿಸಿ ಪೂಜಿಸಬೇಕು. ಪೀಠದ ಮಧ್ಯಭಾಗದಲ್ಲಿ '**ಓಂ ಅನಂತಾಯ ನಾಗರಾಜಾಯ ನಮಃ**' ಎಂದು ಅನಂತನನ್ನೂ '**ಓಂ ಮಹಾಪದ್ಮಾಯ ನಮಃ**' ಎಂದು ಮಹಾ ಪದ್ಮವನ್ನೂ ಭಾವಿಸಿ ಪೂಜಿಸಬೇಕು. ಮತ್ತು ಈ ಮಹಾ ಪದ್ಮದ ಕಂದವು (ಮೂಲ ಭಾಗವು) ಆನಂದಮಯವಾಗಿದೆ. ಅದರ ನಾಳವು ಸಂವಿತ್ (ಜ್ಞಾನ) ಸ್ವರೂಪವಾಗಿದೆ. ಅದರ ದಳಗಳು ಪ್ರಕೃತಿಮಯವಾಗಿದೆ. ಅದರ ಬೀಜಗಳು ಐವತ್ತು ವರ್ಣ ಸ್ವರೂಪಗಳಾಗಿವೆ ಮತ್ತು ಅವುಗಳಿಂದಲೇ ಆ ಮಹಾಪದ್ಮದ ಕರ್ಣಿಕೆಯು ಅಲಂಕೃತವಾಗಿದೆ ಎಂದು ಭಾವಿಸಬೇಕು. ಆ ಕರ್ಣಿಕೆಯಲ್ಲಿ ಸೂರ್ಯ ಮಂಡಲ ಮತ್ತು ವಹ್ನಿ ಮಂಡಲಗಳು ಬೆಳಗುತ್ತಿವೆ. ಅಲ್ಲಿಯೇ ಪ್ರಬೋಧಾತ್ಮಕವಾದ ಸತ್ತ್ವಗುಣವೂ, ರಜೋಗುಣವೂ, ತಮೋಗುಣವೂ ಬೆಳಗುತ್ತಿವೆ - ಎಂದು ಭಾವಿಸಿಕೊಂಡು ಅವೆಲ್ಲಕ್ಕೂ ಪಂಚೋಪಚಾರಗಳನ್ನು ಸಮರ್ಪಿಸಬೇಕು. ಅದಕ್ಕೆ ಮಂತ್ರಗಳು : '**ಓಂ ಆನಂದಮಯ ಕಂದಾಯ ನಮಃ । ಓಂ ಸಂವಿನ್ನಾಳಾಯ ನಮಃ । ಓಂ ಪ್ರಕೃತಿಮಯ ಪತ್ರೇಭ್ಯೋ ನಮಃ । ಓಂ ವಿಕೃತಿಮಯ ಕೇಸರೇಭ್ಯೋ ನಮಃ । ಓಂ ಪಂಚಾಶದ್ವರ್ಣಬೀಜಭೂಷಿತಾಯೈ ಕರ್ಣಿಕಾಯೈ ನಮಃ । ಓಂ ಅಂ ಅರ್ಕಮಂಡಲಾಯ ನಮಃ । ಓಂ ಸಂ ಸೋಮಂಡಲಾಯ ನಮಃ । ಓಂ ವಂ ವಹ್ನಿಮಂಡಲಾಯ ನಮಃ । ಓಂ ಸಂ ಪ್ರಬೋಧಾತ್ಮನೇ ಸತ್ತ್ವಾಯ ನಮಃ । ಓಂ ರಂ ರಜಸೇ ನಮಃ । ಓಂ ತಂ ತಮಸೇ ನಮಃ ॥**'

ಹೀಗೆ ಇವೆಲ್ಲವನ್ನೂ ಪೂಜಿಸಿದ ನಂತರ ಕಮಲದ ಎಲ್ಲಕಡೆಗಳಲ್ಲೂ ಪೂರ್ವಾದಿ ಎಂಟು ದಿಕ್ಕುಗಳಲ್ಲೂ ಪ್ರದಕ್ಷಿಣ ಕ್ರಮವಾಗಿ "**ಓಂ ವಿಮಲಾಯೈ ನಮಃ । ಓಂ ಉತ್ಕರ್ಷಿಣ್ಯೈ ನಮಃ । ಓಂ ಜ್ಞಾನಾಯೈ ನಮಃ । ಓಂ ಕ್ರಿಯಾಯೈ ನಮಃ । ಓಂ ಯೋಗಾಯೈ ನಮಃ । ಓಂ ಪ್ರಹ್ವ್ಯೈ* ನಮಃ । ಓಂ ಸತ್ಯಾಯೈ ನಮಃ । ಓಂ ಈಶಾನಾಯೈ ನಮಃ ।**" ಎಂಬ ಮಂತ್ರಗಳಿಂದ ವಿಮಲೆಯೇ ಮುಂತಾದ ಎಂಟು ಶಕ್ತಿಗಳನ್ನೂ ಪೂಜಿಸಬೇಕು. ಮತ್ತು ಕಮಲದ ಮಧ್ಯಭಾಗದಲ್ಲಿ '**ಓಂ ಅನುಗ್ರಹಾಯೈ ನಮಃ**' ಎಂದು ಅನುಗ್ರಹಾ ಎಂಬ ಶಕ್ತಿಯನ್ನು ಪೂಜಿಸಬೇಕು. (ಇವರೆಲ್ಲರೂ ಚಾಮರಹಸ್ತೆಯರಾಗಿ ಭಗವಂತನಿಗೆ ಸೇವೆ ಸಲ್ಲಿಸುತ್ತಿದ್ದಾರೆ. ಎಂದು ಭಾವಿಸಬೇಕು.) ಅನಂತರ '**ಓಂ ನಮೋ ಭಗವತೇ ವಿಷ್ಣವೇ ಸರ್ವಭೂತಾತ್ಮನೇ ವಾಸುದೇವಾಯ ಪದ್ಮ ಪೀಠಾತ್ಮನೇ ನಮಃ**' ಎಂಬ ಮಂತ್ರದಿಂದ ಸಂಪೂರ್ಣವಾದ ಪದ್ಮಪೀಠವನ್ನು ಪೂಜಿಸಿ ಅದರ ಮೇಲೆ ಸುಂದರವಾದ ವಸ್ತ್ರವೊಂದನ್ನು ಹಾಸಿ, ಅದರ ಮೇಲೆ ಬಿಜಯ ಮಾಡಿಸಲು ಶ್ರೀಮದ್ಭಾಗವತ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು "**ಓಂ ಧ್ರುವಾ ದ್ಯೌರ್ಧ್ರುವಾ ಪೃಥಿವೀ ಧ್ರುವಾ ಸಾ ಪರ್ವತಾ ಇಮೇ । ಧ್ರುವಂ ವಿಶ್ವಮಿದಂ ಜಗತ್ ಧ್ರುವೋ ರಾಜಾ ವಿಶಾಮಸಿ ॥**" ಎಂಬ ಮಂತ್ರವನ್ನು ಹೇಳುತ್ತಾ ಅದನ್ನು ಮೇಲ್ಕಂಡ ಪೀಠದ ಮೇಲೆ ಸ್ಥಾಪಿಸಬೇಕು. '**ಓಂ ಮನೋ ಜೂತಿಃ**' ಎಂಬ ಮಂತ್ರದಿಂದ ಪುಸ್ತಕವನ್ನು ಪ್ರತಿಷ್ಠೆ ಮಾಡಿ ಪುರುಷ ಸೂಕ್ತದ ೧೬ ಅಥವಾ ೧೮ ಮಂತ್ರಗಳಿಂದ ಅದಕ್ಕೆ ಉಪಚಾರಗಳನ್ನು ಸಮರ್ಪಿಸಬೇಕು. (ಶ್ರೀಮದಾಗವತದ ಪೂಜನ ವಿಧಿಯಲ್ಲಿ ವಿವರಣೆಯನ್ನು ನೋಡಿರಿ.) ಅನಂತರ ಎರಡನೇ ಪೀಠವನ್ನು ಸ್ಥಾಪಿಸಿ ಅದರ ಮೇಲೆ ದೇವರ್ಷಿ ನಾರದರನ್ನು ಸ್ಥಾಪಿಸುವುದು ಮತ್ತು '**ಓಂ ಸುರರ್ಷಿ ನಾರದಾಯ ನಮಃ**' ಎಂಬ ಮಂತ್ರದಿಂದ ಅವರನ್ನು ವಿಧಿವತ್ತಾಗಿ ಪೂಜೆ ಮಾಡಿ ಹೀಗೆ ಪ್ರಾರ್ಥಿಸಬೇಕು :

**ಓಂ ನಮಸ್ತುಭ್ಯಂ ಭಗವತೇ ಜ್ಞಾನವೈರಾಗ್ಯಶಾಲಿನೇ । ನಾರದಾಯ ಸದಾ ಸರ್ವಲೋಕ ಪೂಜಿತಾಯ ಸುರರ್ಷಯೇ ॥**

'**ಅನಯಾ ಪೂಜಯಾ ದೇವರ್ಷಿನಾರದಃ ಪ್ರೀಯತಾಂ ನ ಮಮ**' ಎಂದು ಪುಷ್ಪಾಂಜಲಿಯನ್ನು ಸಮರ್ಪಣೆ ಮಾಡುವುದು. ಹೀಗೆ ಪೂಜೆ ಮಾಡಿದ ನಂತರ ಯಜಮಾನನು 'ಪುಷ್ಪ, ಗಂಧ, ತಾಂಬೂಲ, ವಸ್ತ್ರ ದಕ್ಷಿಣೆ, ಅಡಕೆ ಮತ್ತು ರಕ್ಷಾ ಸೂತ್ರಗಳನ್ನು ಕೈಯಲ್ಲಿ ಹಿಡಿದುಕೊಂಡು - '**ಅದ್ಯ ಅಮುಕಗೋತ್ರಮಮುಕ ಪ್ರವರಮಮುಕ ಶರ್ಮಾಣಂ ಬ್ರಾಹ್ಮಣಮೇಭಿಃ ವರಣದ್ರವ್ಯೈಃ ಸರ್ವೇಷ್ಟದ ಶ್ರೀಮದ್ಭಾಗವತವಕ್ತೃತ್ವೇನ ಭವನ್ತಮಹಂ ವೃಣೇ**'

* ಪ್ರಭ್ವ್ಯೈ – ಎಂಬ ಪಾಠಾಂತರವೂ ಇದೆ. ಆಗಮಶಾಸ್ತ್ರದಲ್ಲಿ ಈ ಪರಿಪಾಠವೇ ಇದೆ.

ಎಂದು ಹೇಳಿ ಕಥಾ ಪ್ರವಚನಕರ್ತೃವಾದ ಆಚಾರ್ಯನನ್ನು ವರಣ ಮಾಡಬೇಕು. ಅವನಿಗೆ ಆ ವರಣದ್ರವ್ಯಗಳನ್ನು ಸಮರ್ಪಿಸಬೇಕು. ಅವುಗಳನ್ನು ತೆಗೆದುಕೊಂಡು ಆಚಾರ್ಯನು '**ಓಂ ವೃತೋಽಸ್ಮಿ**'- ಎಂದು ಉತ್ತರ ಕೊಡಬೇಕು. ಆಮೇಲೆ ಪುನಃ ಅದೇ ರೀತಿಯಲ್ಲಿ ಆ ಸಾಮಗ್ರಿದ್ರವ್ಯಗಳನ್ನು ತೆಗೆದುಕೊಂಡು ಜಪ ಮಾಡುವ ಮತ್ತು ಪಾರಾಯಣ ಮಾಡುವ ಬ್ರಾಹ್ಮಣರನ್ನು ವರಣ ಮಾಡಬೇಕು. ಅದಕ್ಕೆ ಸಂಕಲ್ಪ ವಾಕ್ಯ '**ಅದ್ಯಾಹಂ ಅಮುಕಗೋತ್ರಾನ್ ಅಮುಕ ಪ್ರವರಾನ್ ಅಮುಕ ಶರ್ಮಣೋ ಯಥಾಸಂಖ್ಯಾಕಾನ್ ಬ್ರಾಹ್ಮಣಾನ್ ಏಭಿಃವರಣ ದ್ರವ್ಯೈಃ ಕಥಾವಿಘ್ನಾಪನೋದನಾರ್ಥಂ ಗಣೇಶ-ಗಾಯತ್ರೀ ವಾಸುದೇವಮಹಾಮಂತ್ರಜಪಕರ್ತೃತ್ವೇನ ಗೀತಾ-ವಿಷ್ಣು ಸಹಸ್ರನಾಮಪಾಠಕರ್ತೃತ್ವೇನ ಚ ವೋ ವಿಭಜ್ಯ ವೃಣೇ**' ಹೀಗೆ ಸಂಕಲ್ಪ ಮಾಡಿ ಪ್ರತಿಯೊಬ್ಬ ಬ್ರಾಹ್ಮಣನಿಗೂ ವರಣ ಸಾಮಗ್ರಿಗಳನ್ನು ಸಮರ್ಪಿಸಬೇಕು. ಆ ಸಾಮಗ್ರಿಗಳನ್ನು ತೆಗೆದುಕೊಂಡು ಅವನು '**ಓಂ ವೃತಾಸ್ಮಃ**' ಎಂದು ಉತ್ತರಿಸಬೇಕು.

ಅನಂತರ ಮೊದಲು ಕಥಾ ಪ್ರವಚನ ಮಾಡುವ ಆಚಾರ್ಯನ ಕೈಯಲ್ಲಿ ಸಮರ್ಪಿಸಿದ್ದ ರಕ್ಷಾ ಸೂತ್ರವನ್ನು ತೆಗೆದುಕೊಂಡು ಅದನ್ನು ಅವನ ಹಸ್ತಕ್ಕೇ ಕಟ್ಟಬೇಕು. ಆಗ ಆಚಾರ್ಯನು ಈ ಕೆಳಗಿನ ಮಂತ್ರವನ್ನು ಹೇಳಲಿ.

**ವ್ರತೇನ ದೀಕ್ಷಾಮಾಪ್ನೋತಿ ದೀಕ್ಷಯಾಽಽಪ್ನೋತಿ ದಕ್ಷಿಣಾಮ್ ।**
**ದಕ್ಷಿಣಾ ಶ್ರದ್ಧಾಮಾಪ್ನೋತಿ ಶ್ರದ್ಧಯಾ ಸತ್ಯಮಾಪ್ಯತೇ ॥**

ಹೀಗೆ ರಕ್ಷೆಯನ್ನು ಕಟ್ಟಿದ ನಂತರ ಜಯಮಾನನು ಆಚಾರ್ಯನ ಹಣೆಗೆ ಕುಂಕುಮ ಮತ್ತು ಅಕ್ಷತೆಗಳಿಂದ ತಿಲಕವನ್ನಿಡಬೇಕು. ಇದೇ ಪ್ರಕಾರ ಜಪ ಮಾಡುವ ಮತ್ತು ಪಾರಾಯಣ ಮಾಡುವ ಬ್ರಾಹ್ಮಣರ ಹಸ್ತಗಳಿಗೂ ರಕ್ಷೆಯನ್ನು ಕಟ್ಟಿ ಅವರ ಹಣೆಗೆ ತಿಲಕವನ್ನಿಡಬೇಕು. ಅನಂತರ ಹಳದಿ ಅಕ್ಷತೆಯನ್ನು ತೆಗೆದುಕೊಂಡು ಯಜಮಾನನು ನಾಲ್ಕು ದಿಕ್ಕುಗಳಲ್ಲಿಯೂ ರಕ್ಷಣೆಗೋಸ್ಕರ ಅವುಗಳನ್ನು ಚೆಲ್ಲಬೇಕು. ಅದಕ್ಕೆ ಮಂತ್ರ :-

**ಪೂರ್ವೇ ನಾರಾಯಣಃ ಪಾತು ವಾರಿಜಾಕ್ಷಸ್ತು ದಕ್ಷಿಣೇ ।**
**ಪಶ್ಚಿಮೇ ಪಾತು ಗೋವಿಂದಃ ಉತ್ತರೇ ಮಧುಸೂದನಃ ॥**
**ಐಶಾನ್ಯಾಂ ವಾಮನಃ ಪಾತು ಚಾಗ್ನೇಯ್ಯಾಂ ಚ ಜನಾರ್ದನಃ ।**
**ನೈರ್ಋತ್ಯಾಂ ಪದ್ಮನಾಭಶ್ಚ ವಾಯುವ್ಯಾಂ ಮಾಧವಸ್ತಥಾ ॥**
**ಊರ್ಧ್ವಂ ಗೋವರ್ಧನಧರೋ ಹ್ಯಧಸ್ತಾಚ್ಚ ತ್ರಿವಿಕ್ರಮಃ ।**
**ರಕ್ಷಾಹೀನಂ ತು ಯತ್‌ಸ್ಥಾನಂ ತತ್ಸರ್ವಂ ರಕ್ಷತಾಂ ಹರಿಃ ॥**

ಆಮೇಲೆ ಪ್ರವಚನಕಾರ ಆಚಾರ್ಯರು ಯಜಮಾನನ ಹಸ್ತಕ್ಕೆ :

**ಯೇನ ಬದ್ಧೋ ಬಲೀ ರಾಜಾ ದಾನವೇಂದ್ರೋ ಮಹಾಬಲಃ ।**
**ತೇನ ತ್ವಾಂ ಪ್ರತಿಬಧ್ನಾಮಿ ರಕ್ಷೇ ಮಾ ಚಲ ಮಾ ಚಲ ॥**

ಎಂಬ ಮಂತ್ರವನ್ನು ಹೇಳಿ ರಕ್ಷೆಯನ್ನು ಕಟ್ಟಬೇಕು. ಮತ್ತು :-

**ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।**
**ತಿಲಕಂ ತೇ ಪ್ರಯಚ್ಛಂತು ಧರ್ಮಕಾಮಾರ್ಥಸಿದ್ಧಯೇ ॥**

ಎಂಬ ಮಂತ್ರದಿಂದ ಆತನ ಹಣೆಗೆ ತಿಲಕವನ್ನಿಡಬೇಕು.

ಅನಂತರ ಯಜಮಾನನು ವ್ಯಾಸಾಸನಕ್ಕೆ ಗಂಧ - ಪುಷ್ಪಾದಿಗಳಿಂದ ಪೂಜೆ ಮಾಡಬೇಕು. ಪೂಜೆಯ ಮಂತ್ರ : '**ಓಂ ವ್ಯಾಸಾಸನಾಯ ನಮಃ**' ಎಂಬುದಾಗಿ. ಆಮೇಲೆ ಪ್ರವಚನ ಮಾಡುವ ಬ್ರಾಹ್ಮಣನು ಬ್ರಾಹ್ಮಣರ ಮತ್ತು ವೃದ್ಧ ಪುರುಷರ ಅನುಜ್ಞೆ ಪಡೆದು, ವಿಪ್ರವರ್ಗಕ್ಕೆ ನಮಸ್ಕರಿಸಿ, ಶ್ರೀಗುರುಚರಣಗಳನ್ನು ಧ್ಯಾನಿಸಿ ವ್ಯಾಸಾಸನದಲ್ಲಿ ಕುಳಿತುಕೊಳ್ಳಬೇಕು. ಮನಸ್ಸಿನಲ್ಲೇ ಶ್ರೀಗಣಪತಿ, ಶ್ರೀನಾರದರು ಮುಂತಾದವರನ್ನು ಸ್ಮರಿಸಿ ಪೂಜಿಸಬೇಕು. ಅನಂತರ ಯಜಮಾನನು "**ಓಂ ನಮಃ ಪುರಾಣಪುರುಷೋತ್ತಮಾಯ**" ಎಂಬ ಮಂತ್ರದಿಂದ ಮತ್ತೊಮ್ಮೆ ಪುಸ್ತಕಕ್ಕೆ ಗಂಧ - ಪುಷ್ಪ - ತುಳಸೀದಳ ಮತ್ತು ದಕ್ಷಿಣೆ - ಇತ್ಯಾದಿಗಳಿಂದ ಪೂಜೆ ಮಾಡಬೇಕು. ಗಂಧ-ಪುಷ್ಪಾದಿಗಳಿಂದ ಪ್ರವಚನಕಾರ ಆಚಾರ್ಯನನ್ನು ಮತ್ತೊಮ್ಮೆ ಪೂಜಿಸುತ್ತಾ ಈ ಕೆಳಗಿನ ಶ್ಲೋಕಗಳನ್ನು ಪಠಿಸಬೇಕು :

**ಜಯತಿ ಪರಾಶರಸೂನುಃ ಸತ್ಯವತೀಹೃದಯನಂದನೋ ವ್ಯಾಸಃ ।**
**ಯಸ್ಯಾಸ್ಯ ಕಮಲಗಲಿತಂ ವಾಙ್ಮಯಮಮೃತಂ ಜಗತ್ಪಿಬತಿ ॥**

ಮತ್ತು ಈ ಕೆಳಗಿನ ಶ್ಲೋಕಗಳನ್ನೂ ಪಠಿಸಿ ಅವನಲ್ಲಿ ಪ್ರಾರ್ಥನೆ ಮಾಡಬೇಕು :

**ಶುಕರೂಪ ಪ್ರಬೋಧಜ್ಞ ಸರ್ವಶಾಸ್ತ್ರವಿಶಾರದ ।**
**ಏತತ್ಕಥಾಪ್ರಕಾಶೇನ ಮದಜ್ಞಾನಂ ವಿನಾಶಯ ॥**
**ಸಂಸಾರಸಾಗರೇ ಮಗ್ನಂ ದೀನಂ ಮಾಂ ಕರುಣಾನಿಧೇ ।**
**ಕರ್ಮಗ್ರಾಹಗೃಹೀತಾಙ್ಗಂ ಮಾಮುದ್ಧರ ಭವಾರ್ಣವಾತ್ ॥**

ಈ ಪ್ರಾರ್ಥನಾನಂತರ ಕೆಳಗಿನ ಶ್ಲೋಕಗಳನ್ನು ಹೇಳಿ ಶ್ರೀಮದ್ಭಾಗವತಕ್ಕೆ ಗಂಧ, ಪುಷ್ಪ ತೆಂಗಿನಕಾಯಿ ಮುಂತಾದವುಗಳನ್ನು ಅರ್ಪಿಸಬೇಕು :

**ಶ್ರೀಮದ್ಭಾಗವತಾಖ್ಯೋಽಯಂ ಪ್ರತ್ಯಕ್ಷಃ ಕೃಷ್ಣ ಏವ ಹಿ ।**
**ಸ್ವೀಕೃತೋಽಸಿ ಮಯಾ ನಾಥ ಮುಕ್ತ್ಯರ್ಥಂ ಭವಸಾಗರೇ ॥**
**ಮನೋರಥೋ ಮದೀಯೋಽಯಂ ಸರ್ವಥಾ ಸಫಲಸ್ತ್ವಯಾ ।**
**ನಿರ್ವಿಘ್ನೇನೈವ ಕರ್ತವ್ಯೋ ದಾಸೋಽಹಂ ತವ ಕೇಶವ ॥**

ಕಥಾ ಮಂಟಪದಲ್ಲಿ ವಾಯುರೂಪದಲ್ಲಿರುವ ಅತಿವಾಹಕ ಶರೀರವುಳ್ಳ ಜೀವವಿಶೇಷಕ್ಕಾಗಿ ಏಳು ಗಂಟುಗಳುಳ್ಳ ಒಂದು ಬಿದಿರಿನ ಗಳುವನ್ನೂ ನೆಟ್ಟಿರಬೇಕು.

ಅನಂತರ ಪ್ರವಚನಕಾರನು ಶ್ರೀಭಗವಂತನನ್ನು ಸ್ಮರಿಸಿ ಆ ದಿವಸದಲ್ಲಿ ಶ್ರೀಮದ್ ಭಾಗವತಮಾಹಾತ್ಮ್ಯದ ಕಥೆಯನ್ನು ಎಲ್ಲ ಶ್ರೋತೃಗಳಿಗೂ ಹೇಳಲಿ ಮತ್ತು ಮಾರನೆಯ ದಿವಸದಿಂದ ಪ್ರತಿದಿನವೂ ದೇವರ ಪೂಜೆ, ಪುಸ್ತಕಪೂಜೆ ಮತ್ತು ವ್ಯಾಸಪೂಜೆಗಳನ್ನು ಮಾಡಿದ ಬಳಿಕ ಕಥಾಪ್ರವಚವನ್ನು ಪ್ರಾರಂಭಿಸಬೇಕು. ಸಂಜೆ ಕಥೆಯು ಮುಗಿದ ನಂತರವೂ ಪ್ರತಿದಿನವೂ ಪುಸ್ತಕಕ್ಕೂ - ಪ್ರವಚನಕಾರನಿಗೂ ಪೂಜೆ, ಆರತಿ, ಪ್ರಸಾದ, ತುಳಸೀದಳ ವಿನಿಯೋಗಗಳನ್ನು ಮಾಡಿ ಭಗವನ್ನಾಮ ಸಂಕೀರ್ತನೆಯನ್ನೂ, ಶಂಖ ಧ್ವನಿಯನ್ನೂ ಮಾಡಬೇಕು. ಕಥೆಯ ಪ್ರಾರಂಭದಲ್ಲೂ, ಮಧ್ಯೆ-ಮಧ್ಯೆಯೂ ಮತ್ತು ಕಥೆಯ ಪ್ರವಚನ ನಿಲ್ಲುವಾಗಲೂ ಸಮಯಾನುಸಾರ ಭಗವನ್ನಾಮ ಸಂಕೀರ್ತನೆ ಮಾಡಬೇಕು.

ಪ್ರವಚನಕಾರನು ಪ್ರತಿದಿನವೂ ಪ್ರವಚನ ಪ್ರಾರಂಭಿಸುವುದಕ್ಕೆ ಮೊದಲು ೧೦೮ ಬಾರಿ '**ಓಂ ನಮೋ ಭಗವತೇ ವಾಸುದೇವಾಯ**'

ಎಂಬ ದ್ವಾದಶಾಕ್ಷರಮಹಾಮಂತ್ರವನ್ನಾಗಲೀ ಅಥವಾ 'ಓಂ ಕ್ಲೀಂ ಕೃಷ್ಣಾಯ ಗೋವಿಂದಾಯ ಗೋಪಿಜನ ವಲ್ಲಭಾಯ ಸ್ವಾಹಾ' ಎಂಬ ಗೋಪಾಲಮಂತ್ರವನ್ನಾಗಲೀ ಭಜಿಸಬೇಕು. ಅನಂತರ ಈ ಕೆಳಗಿನ ವಾಕ್ಯಗಳಿಂದ ಋಷಿ ನ್ಯಾಸ, ಕರನ್ಯಾಸ, ಅಂಗನ್ಯಾಸಗಳನ್ನು ಮಾಡಬೇಕು.

**'ಓಂ ಅಸ್ಯ ಶ್ರೀಮದ್ಭಾಗವತ ಸ್ತೋತ್ರ ಮಹಾಮನ್ತ್ರಸ್ಯ । ಶ್ರೀನಾರದ ಋಷಿಃ । ಬೃಹತೀಚ್ಛಂದಃ । ಶ್ರೀಕೃಷ್ಣಃ ಪರಮಾತ್ಮಾ ದೇವತಾ । ಓಂ ಬ್ರಹ್ಮ ಬೀಜಂ । ಭಕ್ತಿಃ ಶಕ್ತಿಃ । ಜ್ಞಾನ ವೈರಾಗ್ಯ ಕೀಲಕಂ । ಮಮ ಶ್ರೀಮದ್ಭಗವತ್‌ಪ್ರಸಾದಸಿದ್ಧ್ಯರ್ಥೇ ಪಾಠೇ ವಿನಿಯೋಗಃ ।'**

**ಋಷ್ಯಾದಿನ್ಯಾಸಃ :**

**ಓಂ ನಾರದಮಹರ್ಷಯೇ ನಮಃ-ಶಿರಸಿ । ಓಂ ಬೃಹತೀ-ಚ್ಛಂದಸೇ ನಮಃ - ಮುಖೇ । ಓಂ ಶ್ರೀಕೃಷ್ಣಃ ಪರಮಾತ್ಮ ದೇವತಾಯೈ ನಮಃ - ಹೃದಿ । ಓಂ ಬ್ರಹ್ಮಬೀಜಾಯ ನಮಃ-ಗುಹ್ಯೇ । ಓಂ ಭಕ್ತಿಶಕ್ತಯೇ ನಮಃ-ಪಾದಯೋಃ । ಓಂ ಜ್ಞಾನ ವೈರಾಗ್ಯ ಕೀಲಕಾಭ್ಯಾಂ ನಮಃ-ನಾಭೌ । ಓಂ ಶ್ರೀಮದ್ಭಗವತ್ ಪ್ರಸಾದ ಸಿದ್ಧ್ಯರ್ಥಕಪಾಠ ವಿನಿಯೋಗಾಯ ನಮಃ - ಸರ್ವಾಂಗೇ ।**

ದ್ವಾದಶಾಕ್ಷರ ಮಂತ್ರದಿಂದ ಕರನ್ಯಾಸ ಮತ್ತು ಅಂಗನ್ಯಾಸಗಳನ್ನು ಮಾಡಬೇಕು ಅಥವಾ ಕೆಳಗೆ ಹೇಳಿರುವಂತೆ ಅದನ್ನು ನೆರವೇರಿಸಬೇಕು.

**ಕರನ್ಯಾಸಃ :**

**ಓಂ ಕ್ಲಾಂ ಅಂಗುಷ್ಠಾಭ್ಯಾಂ ನಮಃ - ಓಂ ಕ್ಲೀಂ ತರ್ಜನೀಭ್ಯಾಂ ನಮಃ । ಓಂ ಕ್ಲೂಂ ಮಧ್ಯಮಾಭ್ಯಾಂ ನಮಃ । ಓಂ ಕ್ಲೈಂ ಅನಾಮಿಕಾಭ್ಯಾಂ ನಮಃ । ಓಂ ಕ್ಲೌಂ ಕನಿಷ್ಠಿಕಾಭ್ಯಾಂ ನಮಃ । ಓಂ ಕ್ಲಃ ಕರತಲಕರಪೃಷ್ಠಾಭ್ಯಾಂ ನಮಃ ।**

**ಅಂಗನ್ಯಾಸಃ :**

**ಓಂ ಕ್ಲಾಂ ಹೃದಯಾಯ ನಮಃ । ಓಂ ಕ್ಲೀಂ ಶಿರಸೇ ಸ್ವಾಹಾ । ಓಂ ಕ್ಲೂಂ ಶಿಖಾಯೈ ವಷಟ್ । ಓಂ ಕ್ಲೈಂ ಕವಚಾಯ ಹುಂ । ಓಂ ಕ್ಲೌಂ ನೇತ್ರತ್ರಯಾಯ ವೌಷಟ್ । ಓಂ ಕ್ಲಃ ಅಸ್ತ್ರಾಯ ಫಟ್ ।**

ಅನಂತರ ಕೆಳಗೆ ಹೇಳಿರುವಂತೆ ಧ್ಯಾನಮಾಡಬೇಕು.

**ಕಸ್ತೂರಿತಿಲಕಂ ಲಲಟಪಟಲೇ ವಕ್ಷಸ್ಥಲೇ ಕೌಸ್ತುಭಂ**
**ನಾಸಾಗ್ರೇ ವರಮೌಕ್ತಿಕಂ ಕರತಲೇ ವೇಣುಃ ಕರೇ ಕಙ್ಕಣಮ್ ।**
**ಸರ್ವಾಂಗೇ ಹರಿಚನ್ದನಂ ಚ ಸುಲಲಿತಂ ಕಣ್ಠೇ ಚ ಮುಕ್ತಾವಲಿ**
**ಗೋಪಸ್ತ್ರೀಪರಿವೇಷ್ಟಿತೋ ವಿಜಯತೇ ಗೌಪಾಲ ಚೂಡಾಮಣಿಃ ॥**

ಹಣೆಯಲ್ಲಿ ಕಸ್ತೂರಿತಿಲಕವನ್ನೂ, ವಕ್ಷಸ್ಥಲದಲ್ಲಿ ಕೌಸ್ತುಭ ಮಣಿಯನ್ನೂ , ಮೂಗಿನ ತುದಿಯಲ್ಲಿ ಶ್ರೇಷ್ಠವಾದ ಮುತ್ತಿನ ಮೂಗುತಿಯನ್ನು, ಕೈಯಲ್ಲಿ ಕೊಳಲನ್ನೂ, ಕೈಮಣಿಕಟ್ಟಿನಲ್ಲಿ ಕಂಕಣವನ್ನೂ, ಕೊರಳಲ್ಲಿ ಮುತ್ತಿನ ಹಾರಗಳನ್ನೂ ಧರಿಸಿ ಸರ್ವಾಂಗಗಳಲ್ಲೂ ಹರಿಚಂದನವನ್ನು ಲೇಪಿಸಿಕೊಂಡು ಕಂಗೊಳಿಸುತ್ತಾ ಗೋಪಸ್ತ್ರೀಯರಿಂದ ಸುತ್ತುವರಿಯಲ್ಪಟ್ಟಿರುವ ಗೋಪಾಲಬಾಲಶಿರೋಮಣಿಗೆ ಜಯ-ವಿಜಯವಾಗಲೀ । ಅವನು ಸರ್ವೋತ್ಕೃಷ್ಟನು.

**ಅಸ್ತಿ ಸ್ವಸ್ತರುಣೀಕರಾಗ್ರವಿಲಸತ್ಕಲ್ಪಪ್ರಸೂನಾಪ್ಲುತಂ ।**
**ವಸ್ತು ಪ್ರಸ್ತುತವೇಣುನಾದಲಹರೀನಿರ್ವಾಣನಿರ್ವ್ಯಾಕುಲಮ್ ॥**
**ಸ್ರಸ್ತಸ್ರಸ್ತನಿಬದ್ಧನೀವಿವಿಲಸದ್ಗೋಪೀಸಹಸ್ರಾವೃತಂ ।**
**ಹಸ್ತನ್ಯಸ್ತನತಾಪವರ್ಗಮಖಿಲೋದಾರಂ ಕಿಶೋರಾಕೃತಿಃ ॥**

ಸ್ವರ್ಗ ಲೋಕದ ಹೆಂಗಸರು ತಮ್ಮ ಕರಾಗ್ರಗಳಿಂದ ಕಲ್ಪವೃಕ್ಷದ ಪುಷ್ಪಗಳ ಮಳೆಗರೆಯುತ್ತಿದ್ದಾರೆ. ಆ ಪುಷ್ಪವೃಷ್ಟಿಯನ್ನು ಸ್ವೀಕರಿಸುತ್ತಾ ತಾನೂ ವೇಣುನಾದಾಮೃತಲಹರಿ ಆನಂದವೃಷ್ಟಿಯನ್ನು ಸುರಿಸುತ್ತಾ ಪ್ರಸನ್ನನಾಗಿದ್ದಾನೆ. ಪ್ರೇಮಪರವಶರಾಗಿರುವ ಸಾವಿರಾರು ಮಂದಿ ಗೋಪಸ್ತ್ರೀಯರು ಸುತ್ತಲೂ ಕಂಗೊಳಿಸುತ್ತಿದ್ದಾರೆ. ಇಂತಹ ಸುಂದರ ಸುಖ-ಶಾಂತಿಯ ಸನ್ನಿವೇಶದಲ್ಲಿ ತನಗೆ ನಮಿಸುತ್ತಿರುವ ಭಕ್ತರಿಗೆ "**ಇದೋ ಕೊಳ್ಳಿರಿ**" - ಎಂದು ಕಡು ಧಾರಾಳವಾಗಿ ಕೈಯಲ್ಲಿರಿಸಿಕೊಂಡ ಮುಕ್ತಿಯನ್ನು ದಯಪಾಲಿಸುತ್ತಿರುವ ಬಾಲಗೋಪಾಲ ಪ್ರಭುವಿಗೆ ಜಯವಾಗಲಿ ! ವಿಜಯವಾಗಲಿ !

ಹೀಗೆ ಧ್ಯಾನಿಸಿದ ನಂತರ ಕಥೆಯನ್ನು ಪ್ರಾರಂಭಿಸಬೇಕು. ಪ್ರತಿದಿನವೂ ಸೂರ್ಯೋದಯದಿಂದ ಪ್ರಾರಂಭಮಾಡಿ ಮೂರುವರೆ ಪ್ರಹರ ಕಾಲದವರೆಗೂ ಕಥಾ ಪ್ರವಚನ ನಡೆಯಬೇಕು. ಮಧ್ಯಾಹ್ನ ಎರಡು ಘಳಿಗೆಗಳ ಕಾಲ ಕಥೆಗೆ ವಿಶ್ರಾಂತಿ. ಪ್ರಾತಃಕಾಲದಿಂದ ಮಧ್ಯಾಹ್ನದವರೆಗೆ ಮೂಲ ಭಾಗವತ ಪಾರಾಯಣ ಮಾಡಬೇಕು. ಮಧ್ಯಾಹ್ನದಿಂದ ಸಾಯಂಕಾಲದವರೆಗೆ ಪಾರಾಯಣ ಮಾಡಿದಷ್ಟು ಕಥೆಯ ಭಾವಾರ್ಥವನ್ನು ಸಂಕ್ಷಿಪ್ತವಾಗಿ ದೇಶಭಾಷೆಯಲ್ಲಿ ಪ್ರವಚನ ಮಾಡಬೇಕು. ಮಧ್ಯಾಹ್ನದಲ್ಲಿ ವಿಶ್ರಾಂತಿ ಸಮಯದಲ್ಲೂ ಭಗವನ್ನಾಮಸಂಕೀರ್ತನೆ ಮಾಡುವ ವ್ಯವಸ್ಥೆ ಇರಬೇಕು.

**ಕಥಾ ವಿರಾಮದ ನಿಯಮ :**

**ಮನುಕರ್ದಮಸಂವಾದಪರ್ಯನ್ತಂ ಪ್ರಥಮೇಽಹನಿ ।**
**ಭರತಾಖ್ಯಾನಪರ್ಯನ್ತಂ ದ್ವಿತೀಯೇಽಹನಿ ವಾಚಯೇತ್ ॥**
**ತೃತೀಯೇ ದಿವಸೇ ಕುರ್ಯಾತ್ ಸಪ್ತಮಸ್ಕಂಧಪೂರಣಮ್ ।**
**ಕೃಷ್ಣಾವಿರ್ಭಾವಪರ್ಯನ್ತಂ ಚತುರ್ಥೇ ದಿವಸೇ ವದೇತ್ ॥**
**ರುಕ್ಮಿಣ್ಯುದ್ವಾಹಪರ್ಯನ್ತಂ ಪಂಚಮೇಽಹನಿ ವಾಚಯೇತ್ ।**
**ಶ್ರೀಹಂಸಾಖ್ಯಾನಪರ್ಯನ್ತಂ ಷಷ್ಠೇಽಹನಿ ವದೇತ್ಸುಧೀಃ ॥**
**ಸಪ್ತಮೇ ತು ದಿನೇ ಕುರ್ಯಾತ್ ಪೂರ್ತಿಂ ಭಾಗವತಸ್ಯವೈ ।**
**ಏವಂ ನಿರ್ವಿಘ್ನ ತಾ ಸಿದ್ಧಿರ್ವಿಪರ್ಯಾಯ ಇತೋಽನ್ಯಥಾ ॥**

ಕಥೆಯನ್ನು ಪ್ರತಿದಿನವೂ ನಿರ್ದಿಷ್ಟವಾದ ಘಟ್ಟದಲ್ಲಿಯೇ ನಿಲ್ಲಿಸಬೇಕು. ಮೊದಲನೆಯ ದಿವಸ ಮನು ಕರ್ದಮ ಸಂವಾದದವರೆಗೆ, ಎರಡನೆಯ ದಿವಸ ಭರತನ ಚರಿತ್ರೆಯವರೆಗೆ, ಮೂರನೆಯ ದಿವಸ ಏಳನೇ ಸ್ಕಂಧದ ಕೊನೆಯವರೆಗೆ, ನಾಲ್ಕನೆಯ ದಿವಸ ಶ್ರೀಕೃಷ್ಣನ ಅವತಾರದವರೆಗೆ, ಐದನೆಯ ದಿವಸ ರುಕ್ಮಿಣೀ ವಿವಾಹದವರೆಗೆ ಮತ್ತು ಆರನೆಯ ದಿವಸ ಹಂಸೋಪಾಖ್ಯಾನದವರೆಗೆ ಕಥಾ ಪ್ರವಚನ ಮಾಡಿ ಉಳಿದ ಭಾಗವನ್ನು ಏಳನೆಯ ದಿವಸದಲ್ಲಿ ಮುಗಿಸಿಬಿಡಬೇಕು. ಸ್ಕಂಧದ ಮೊದಲನೆಯ ಮತ್ತು ಕಡೆಯ ಶ್ಲೋಕಗಳನ್ನು ಹಲವುಬಾರಿ ಪಠಿಸಬೇಕು.

# ಶ್ರೀಮದ್ಭಾಗವತದ ಮಹಿಮೆ

ಶ್ರೀಮದ್ಭಾಗವತದ ಮಹಿಮೆಯನ್ನು ನಾನೇನು ಬರೆಯಲಿ ? ಅದರ ಮೊದಲಿನ ಮೂರು ಶ್ಲೋಕಗಳಲ್ಲಿ ಹೇಳಲ್ಪಟ್ಟ ಮಹಿಮೆಗೆ ಸರಿಗಟ್ಟುವಂತೆ ಯಾರು ಹೇಳಬಲ್ಲರು ? ಆ ಮೂರು ಶ್ಲೋಕಗಳನ್ನು ಎಷ್ಟೋ ಬಾರಿ ಓದಿದರೂ, ಅದರ ಸ್ಮರಣೆಯಾದಾಗ ಮನಸ್ಸಿನಲ್ಲಿ ಅದ್ಭುತ ಭಾವವು ಉದಯವಾಗುತ್ತದೆ. ಯಾವುದೇ ಅನುವಾದವು ಆ ಶ್ಲೋಕಗಳ ಗಂಭೀರತೆಯನ್ನು ಮತ್ತು ಮಾಧುರ್ಯವನ್ನು ಪಡೆಯಲಾರದು. ಆ ಮೂರು ಶ್ಲೋಗಳಿಂದ ಮನಸ್ಸನ್ನು ನಿರ್ಮಲಗೊಳಿಸಿ ಮತ್ತೆ ಭಗವಂತನನ್ನು ಈ ಪ್ರಕಾರ ಧ್ಯಾನಿಸಬೇಕು.

**ಧ್ಯಾಯತಶ್ಚರಣಾಂಭೋಜಂ ಭಾವನಿರ್ಜಿತಚೇತಸಾ । ಔತ್ಕಂಠ್ಯಾಶ್ರುಕಲಾಕ್ಷಸ್ಯ ಹೃದ್ಯಾಸೀನ್ಮೇ ಶನೈರ್ಹರಿಃ ॥**
**ಪ್ರೇಮಾತಿಭರನಿರ್ಭಿನ್ನಪುಲಕಾಂಗೋಽತಿನಿರ್ವೃತಃ । ಆನಂದಸಂಪ್ಲವೇ ಲೀನೋ ನಾಪಶ್ಯಮುಭಯಂ ಮುನೇ ॥**
**ರೂಪಂ ಭಗವತೋ ಯತ್ತನ್ಮನಃ ಕಾಂತಂ ಶುಚಾಪಹಮ್ । ಅಪಶ್ಯನ್ ಸಹಸೋತ್ತಸ್ಥೇ ವೈಕ್ಲವ್ಯಾದ್ ದುರ್ಮನಾ ಇವ ॥**

ನನಗೆ ಶ್ರೀಮದ್ಭಾಗವತದಲ್ಲಿ ಅತ್ಯಂತ ಪ್ರೇಮವಿದೆ. ಇದನ್ನು ಓದುವುದರಿಂದ, ಕೇಳುವುದರಿಂದ ಮನುಷ್ಯನಿಗೆ ಈಶ್ವರನ ನಿಜವಾದ ಜ್ಞಾನ ಪ್ರಾಪ್ತವಾಗುತ್ತದೆ. ಮತ್ತು ಅವನ ಚರಣಕಮಲಗಳಲ್ಲಿ ಅಚಲಭಕ್ತಿಯು ಉಂಟಾಗುತ್ತದೆ ಎಂಬ ವಿಶ್ವಾಸ ನನಗಿದೆ. ಹಾಗೂ ನನ್ನ ಅನುಭವವೂ ಆಗಿದೆ. ಇದನ್ನು ಓದುವುದರಿಂದ ಮನುಷ್ಯನಿಗೆ ಈ ಪ್ರಪಂಚವನ್ನು ರಚಿಸಿ, ಪಾಲಿಸುವ ಒಂದು ಸರ್ವವ್ಯಾಪಕ ಶಕ್ತಿ ಇದೆ ಎಂಬ ದೃಢ ನಿಶ್ಚಯ ಉಂಟಾಗುತ್ತದೆ.

**ಏಕ ಅನಂತ ತ್ರಿಕಾಲ ಸಚ, ಚೇತನ ಶಕ್ತಿ ದಿಖಾತ । ನಿರಜತ, ಪಾಲಕ, ಹರತ, ಜಗ, ಮಹಿಮಾ ಬರನಿ ನ ಜಾತ ॥**

ಈ ಒಂದೇ ಶಕ್ತಿಯನ್ನು ಜನರು, ಈಶ್ವರ, ಬ್ರಹ್ಮ ಪರಮಾತ್ಮಾ ಮುಂತಾದ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಭಾಗವತದ ಮೊದಲಿನ ಶ್ಲೋಕದಲ್ಲೇ ವೇದವ್ಯಾಸರು ಈಶ್ವರನ ಸ್ವರೂಪವನ್ನು ಇಂತು ವರ್ಣಿಸಿರುವರು – ಆ ಈಶ್ವರನಿಂದ ಈ ಪ್ರಪಂಚದ ಸೃಷ್ಟಿ, ಪಾಲನೆ ಮತ್ತು ಸಂಹಾರವಾಗುತ್ತದೆ. ಅವನು ತ್ರಿಕಾಲಗಳಲ್ಲಿಯೂ ಸತ್ಯನಾಗಿದ್ದಾನೆ. ಅರ್ಥಾತ್ ಅವನು ಸದಾ ಇದ್ದಾನೆ ಮತ್ತು ಇರುವವನು. ಅವನು ತನ್ನ ಪ್ರಕಾಶದಿಂದ ಅಂಧಕಾರವನ್ನು ದೂರಗೊಳಿಸಿರುವನು. ಅಂತಹ ಪರಮ ಸತ್ಯಸ್ವರೂಪವನ್ನು ನಾವು ಧ್ಯಾನಿಸುತ್ತೇವೆ. ಅಲ್ಲೇ ಶ್ರೀಮದ್ಭಾಗವತದ ಸ್ವರೂಪವನ್ನು ಸಂಕ್ಷೇಪವಾಗಿ ಹೀಗೆ ವರ್ಣಿತವಾಗಿದೆ – ಈ ಭಾಗವತದಲ್ಲಿ ಇತರರ ಉನ್ನತಿಯನ್ನು ನೋಡಿ ಮತ್ಸರಿಸದೆ ಇರುವ ಸಾಧು ಜನರ ಎಲ್ಲ ಪ್ರಕಾರದಿಂದ ಸ್ವಾರ್ಥರಹಿತ ಪರಮಧರ್ಮ ಮತ್ತು ಅವರು ತಿಳಿಯಲು ಯೋಗ್ಯವಾದ ಜ್ಞಾನವು ವರ್ಣಿತವಾಗಿದೆ. ಅದು ವಾಸ್ತವವಾಗಿ ಎಲ್ಲ ಶ್ರೇಯಸ್ಸನ್ನು ಕೊಡುವುದು ಹಾಗೂ ಆಧಿಭೌತಿಕ, ಆದಿ ದೈವಿಕ ಮತ್ತು ಆಧ್ಯಾತ್ಮಿಕ ಈ ಮೂರು ರೀತಿಯ ತಾಪಗಳನ್ನು ಇಲ್ಲವಾಗಿಸುವುದಾಗಿದೆ. ಯಾವ ಸುಕೃತಿಗಳು ಪುಣ್ಯಕರ್ಮಗಳನ್ನು ಆಚರಿಸಿರುವರೋ, ಯಾರು ಶ್ರದ್ಧೆಯಿಂದ ಭಾಗವತವನ್ನು ಓದುವರೋ, ಕೇಳುವರೋ, ಅವರು ಇದನ್ನು ಸೇವಿಸಿದಂದಿನಿಂದ ತಮ್ಮ ಭಕ್ತಿಯಿಂದ ಈಶ್ವರನ ಜ್ಞಾನ ಮತ್ತು ಅವನಲ್ಲಿ ಭಕ್ತಿಯ ಪರಮ ಸಾಧನೆ – ಇವೆರಡು ಪದಾರ್ಥಗಳು ಯಾವುದಾದರೂ ಪ್ರಾಣಿಗೆ ಪ್ರಾಪ್ತವಾದರೆ ಮನುಷ್ಯನು ಬಯಸುವ ಯಾವ ಪದಾರ್ಥ ಉಳಿದಿದೆ ? ಇವೆರಡೂ ಪದಾರ್ಥಗಳು ಶ್ರೀಮದ್ಭಾಗವತದಿಂದ ಪೂರ್ಣವಾಗಿ ಪ್ರಾಪ್ತವಾಗುತ್ತವೆ. ಆದಕ್ಕಾಗಿ ಆ ಪವಿತ್ರ ಗ್ರಂಥವು ಮನುಷ್ಯ ಮಾತ್ರರ ಉಪಕಾರಿಯಾಗಿದೆ. ಎಲ್ಲಿಯವರೆಗೆ ಮನುಷ್ಯನು ಭಾಗವತವನ್ನು ಓದುವುದಿಲ್ಲವೋ, ಅವನಿಗೆ ಇದರಲ್ಲಿ ಶ್ರದ್ಧೆ ಉಂಟಾಗುವುದಿಲ್ಲವೋ, ಅಲ್ಲಿಯವರೆಗೆ ಜ್ಞಾನ, ಭಕ್ತಿ, ವೈರಾಗ್ಯಗಳ ಸಮುದ್ರ ಎಷ್ಟು ವಿಶಾಲವಾಗಿದೆ ಎಂದು ತಿಳಿಯಲಾರದು. ಭಾಗವತವನ್ನು ಓದುವುದರಿಂದ ಅವನಿಗೆ – ಒಂದೇ ಪರಮಾತ್ಮನು ಪ್ರತಿಯೊಂದು ಪ್ರಾಣಿಯಲ್ಲಿಯೂ ನೆಲೆಸಿರುವನು ಎಂಬ ವಿಮಲಜ್ಞಾನ ಉಂಟಾಗುತ್ತದೆ. ಅವನಿಗೆ ಈ ಜ್ಞಾನವು ಉಂಟಾದಾಗ ಅವನು ಅಧರ್ಮಕ್ಕೆ ಮನಗೊಡುವುದಿಲ್ಲ. ಏಕೆಂದರೆ, ಇತರರಿಗೆ ಬಯಸಿದ ಕೇಡು ತನಗೇ ಬಯಸಿದಂತೆ ಇದೆ. ಇದರ ಅರಿವು ಮೂಡಿದಾಗ ಮನುಷ್ಯನು ಸತ್ಯ, ಧರ್ಮದಲ್ಲಿ ಸ್ಥಿರನಾಗುತ್ತಾನೆ. ಸ್ವಾಭಾವಿಕವಾಗಿ ದಯೆ-ಧರ್ಮಗಳನ್ನು ಪಾಲಿಸ ತೊಡಗುವವನು ಹಾಗೂ ಯಾವುದೇ ಅಹಿಂಸಕ ಪ್ರಾಣಿಯ ಮೇಲೆ ಕೈ ಎತ್ತಲು ಇಚ್ಛಿಸುವುದಿಲ್ಲ. ಮನುಷ್ಯರಲ್ಲಿ ಪರಸ್ಪರ ಪ್ರೇಮ ಮತ್ತು ಪ್ರಾಣಿಮಾತ್ರರ ಕುರಿತು ದಯಾಭಾವವನ್ನು ಸ್ಥಾಪಿಸಲಿಕ್ಕಾಗಿ ಇದಕ್ಕಿಂತ ಮಿಗಿಲಾದ ಸಾಧನ ಮತ್ತೊಂದಿಲ್ಲ. ವರ್ತಮಾನ ಕಾಲದಲ್ಲಿ ಪ್ರಪಂಚದ ಹೆಚ್ಚಿನ ಭಾಗಗಳಲ್ಲಿ ಭಯಂಕರ ಯುದ್ಧಗಳು ಹತ್ತಿಕೊಂಡಿವೆ. ಮನುಷ್ಯ ಮಾತ್ರರಿಗೆ ಈ ಪವಿತ್ರ ಧರ್ಮದ ಉಪದೇಶ ಅತ್ಯಂತ ಶ್ರೇಯಸ್ಕರವಾದೀತು. ಭಗವದ್ಭಕ್ತನಾದವನಿಗೆ ಹಾಗೂ ಶ್ರೀಮದ್ಭಾಗವತದ ಮಹತ್ವವನ್ನು ತಿಳಿದವನಿಗೆ ಇಹಲೋಕ ಮತ್ತು ಪರಲೋಕ ಎರಡನ್ನೂ ಸುಧಾರಿಸುವ ಈ ಪವಿತ್ರ ಗ್ರಂಥವನ್ನು ಎಲ್ಲ ಪ್ರಾಂತೀಯ ಭಾಷೆಗಳಲ್ಲಿ ಅನುವಾದ ಮಾಡಿ ಪ್ರಚಾರ ಮಾಡಬೇಕಾದುದು ಪರಮ ಕರ್ತವ್ಯವಾಗಿದೆ.

– ಮದನ ಮೋಹನ ಮಾಲವೀಯ

|| ಓಂ ನಮೋಭಗವತೇ ವಾಸುದೇವಾಯ ||

# ಶ್ರೀಮದ್ಭಾಗವತಮಾಹಾತ್ಮ್ಯಮ್

ಕೃಷ್ಣಂ ನಾರಾಯಣಂ ವಂದೇ ಕೃಷ್ಣಂ ವಂದೇ ವ್ರಜಪ್ರಿಯಮ್ ।
ಕೃಷ್ಣಂ ದ್ವೈಪಾಯನಂ ವಂದೇ ಕೃಷ್ಣಂ ವಂದೇ ಪೃಥಾಸುತಮ್ ॥

## ಮೊದಲನೆಯ ಅಧ್ಯಾಯ

### ಭಕ್ತಿದೇವಿಯೊಂದಿಗೆ ದೇವರ್ಷಿ ನಾರದರ ಭೇಟಿ

ಸಚ್ಚಿದಾನಂದರೂಪಾಯ ವಿಶ್ವೋತ್ಪತ್ತ್ಯಾದಿಹೇತವೇ ।
ತಾಪತ್ರಯವಿನಾಶಾಯ ಶ್ರೀಕೃಷ್ಣಾಯ ವಯಂ ನುಮಃ ॥ ೧ ॥

ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ
ದ್ವೈಪಾಯನೋ ವಿರಹಕಾತರ ಆಜುಹಾವ ।
ಪುತ್ರೇತಿ ತನ್ಮಯತಯಾ ತರವೋಽಭಿನೇದು-
ಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ॥ ೨ ॥

ನೈಮಿಷೇ ಸೂತಮಾಸೀನಮಭಿವಾದ್ಯ ಮಹಾಮತಿಮ್ ।
ಕಥಾಮೃತರಸಾಸ್ವಾದಕುಶಲಃ ಶೌನಕೋಽಬ್ರವೀತ್ ॥ ೩ ॥

*ಶೌನಕ ಉವಾಚ*

ಅಜ್ಞಾನಧ್ವಾಂತವಿಧ್ವಂಸಕೋಟಿಸೂರ್ಯಸಮಪ್ರಭ ।
ಸೂತಾಖ್ಯಾಹಿ ಕಥಾಸಾರಂ ಮಮ ಕರ್ಣರಸಾಯನಮ್ ॥ ೪ ॥

ಭಕ್ತಿಜ್ಞಾನವಿರಾಗಾಪ್ತೋ ವಿವೇಕೋ ವರ್ಧತೇ ಮಹಾನ್ ।
ಮಾಯಾಮೋಹನಿರಾಸಶ್ಚ ವೈಷ್ಣವೈಃ ಕ್ರಿಯತೇ ಕಥಮ್ ॥ ೫ ॥

ಇಹ ಘೋರೇ ಕಲೌ ಪ್ರಾಯೋ ಜೀವಶ್ಚಾಸುರತಾಂ ಗತಃ ।
ಕ್ಲೇಶಾಕ್ರಾಂತಸ್ಯ ತಸ್ಯೈವ ಶೋಧನೇ ಕಿಂ ಪರಾಯಣಮ್ ॥ ೬ ॥

ಶ್ರೇಯಸಾಂ ಯದ್ಭವೇಚ್ಛ್ರೇಯಃ ಪಾವನಾನಾಂ ಚ ಪಾವನಮ್ ।
ಕೃಷ್ಣಪ್ರಾಪ್ತಿಕರಂ ಶಶ್ವತ್ಸಾಧನಂ ತದ್ವದಾಧುನಾ ॥ ೭ ॥

ಸಚ್ಚಿದಾನಂದಸ್ವರೂಪನಾದ ಭಗವಾನ್ ಶ್ರೀಕೃಷ್ಣನಿಗೆ ನಾವು ನಮಸ್ಕರಿಸುತ್ತೇವೆ. ಅವನು ಜಗತ್ತಿನ ಉತ್ಪತ್ತಿ, ಸ್ಥಿತಿ, ವಿನಾಶ ಮಾಡಲು ಹಾಗೂ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ತ್ರಿತಾಪಗಳನ್ನು ನಾಶಮಾಡುವಂತಹವನಾಗಿದ್ದಾನೆ. ॥ ೧ ॥

ಶ್ರೀಶುಕಮಹಾಮುನಿಗಳು ಉಪನಯನವೇ ಆಗದಿದ್ದರೂ ನೈಸರ್ಗಿಕವಾಗಿಯೇ ಬ್ರಹ್ಮಜ್ಞಾನ ಸಂಪನ್ನರಾಗಿದ್ದರು. ಆದ್ದರಿಂದ ಅವರಿಗೆ ಏನನ್ನೂ ಮಾಡುವುದೂ ಬಾಕಿ ಇರಲಿಲ್ಲ. ಇಂತಹ ಬ್ರಹ್ಮನಿಷ್ಠ ಪುತ್ರನು ಮನೆ ಬಿಟ್ಟು ಹೊರಟು ಹೋಗುವಾಗ ಅವನ ತಂದೆ ವೇದವ್ಯಾಸರು ವ್ಯಾಕುಲರಾಗಿ ಮಗೂ ! ಮಗನೇ ! ಎಂದು ಕರೆಯ ತೊಡಗಿದರು. ಶುಕಮಹಾಮುನಿಗಳಿಗೆ ಸರ್ವಾತ್ಮಭಾವ ಉಂಟಾದ್ದರಿಂದ ಚರಾಚರಗಳಲ್ಲೂ ಏಕಾಕಾರವಾಗಿ ಹೋಗಿದ್ದರಿಂದ ಆ ಕಾಡಿನ ವೃಕ್ಷಗಳೇ ಅವರ ಪರವಾಗಿ ಉತ್ತರಿಸತೊಡಗಿದವು. ಅಂತಹ ಸರ್ವಭೂತರ ಆತ್ಮ ಸ್ವರೂಪರಾದ ಶ್ರೀಶುಕಮುನಿಗಳಿಗೆ ಸಾಷ್ಟಾಂಗನಮಸ್ಕಾರ ಮಾಡುತ್ತೇನೆ. ॥ ೨ ॥

ಒಮ್ಮೆ ಭಗವತ್ಕಥಾಮೃತದ ರಸಾಸ್ವಾದದಲ್ಲಿ ಕುಶಲರಾದ ಮುನಿವರ ಶೌನಕರು ನೈಮಿಷಾರಣ್ಯ ಕ್ಷೇತ್ರದಲ್ಲಿ ವಿರಾಜಮಾನರಾದ ಮಹಾಮತಿವಂತ ಸೂತಪುರಾಣಿಕರಿಗೆ ನಮಸ್ಕರಿಸಿ, ಅವರಲ್ಲಿ ಕೇಳಿದರು. ॥ ೩ ॥

**ಶೌನಕರು ಹೇಳಿದರು** – ಸೂತಪುರಾಣಿಕರೇ ! ನೀವು ಅಜ್ಞಾನಾಂಧಕಾರವನ್ನುನಾಶಮಾಡುವುದರಲ್ಲಿ ಕೋಟಿಸೂರ್ಯರಿಗೆ ಸಮಾನರಾಗಿದ್ದೀರಿ. ನೀವು ನಮ್ಮಗಳಿಗೆ ಕರ್ಣರಸಾಯನವಾದ ಅಮೃತ ಸ್ವರೂಪವಾದ ಸಾರಗರ್ಭಿತವಾದ ಕಥೆಯನ್ನು ಹೇಳಿರಿ.॥ ೪ ॥

ಭಕ್ತಿ, ಜ್ಞಾನ, ವೈರಾಗ್ಯಗಳಿಂದ ದೊರೆಯುವ ಮಹಾನ್ ವಿವೇಕದ ವೃದ್ಧಿ ಹೇಗಾದೀತು? ಹಾಗೂ ವೈಷ್ಣವರು ಈ ಮಾಯಾ ಮೋಹದಿಂದ ಹೇಗೆ ಪಾರಾಗಬಲ್ಲರು ? ॥ ೫ ॥ ಈ ಘೋರವಾದ ಕಲಿಕಾಲದಲ್ಲಿ ಜೀವರು ಪ್ರಾಯಶಃ ಆಸುರೀ ಸ್ವಭಾವದವರಾಗಿದ್ದಾರೆ. ವಿವಿಧ ಕ್ಲೇಶಗಳಿಂದ ಆಕ್ರಾಂತರಾದ ಈ ಜೀವರನ್ನು ಶುದ್ಧ (ದೈವೀಶಕ್ತಿ ಸಂಪನ್ನ)ರಾಗಿಸುವ ಸರ್ವಶ್ರೇಷ್ಠವಾದ ಉಪಾಯವೇನು ? ॥ ೬ ॥

ಎಲ್ಲಕ್ಕಿಂತ ಹೆಚ್ಚಾದ ಶ್ರೇಯಸ್ಕರವೂ, ಪವಿತ್ರವೂ ಮಾಡುವುದರಲ್ಲಿ ಪವಿತ್ರನಾಗಿರುವ ಭಗವಾನ್ ಶ್ರೀಕೃಷ್ಣನ ಪ್ರಾಪ್ತಿಯಾಗಿಸುವ ಶಾಶ್ವತವಾದ ಸಾಧನೆಯನ್ನು ನೀವು ನಮಗೆ ತಿಳಿಸಿರಿ. ॥ ೭ ॥

# ಶ್ರೀಮದ್ಭಾಗವತದ ಮಹಿಮೆ

ಶ್ರೀಮದ್ಭಾಗವತದ ಮಹಿಮೆಯನ್ನು ನಾನೇನು ಬರೆಯಲಿ ? ಅದರ ಮೊದಲಿನ ಮೂರು ಶ್ಲೋಕಗಳಲ್ಲಿ ಹೇಳಲ್ಪಟ್ಟ ಮಹಿಮೆಗೆ ಸರಿಗಟ್ಟುವಂತೆ ಯಾರು ಹೇಳಬಲ್ಲರು ? ಆ ಮೂರು ಶ್ಲೋಕಗಳನ್ನು ಎಷ್ಟೋ ಬಾರಿ ಓದಿದರೂ, ಅದರ ಸ್ಮರಣೆಯಾದಾಗ ಮನಸ್ಸಿನಲ್ಲಿ ಅದ್ಭುತ ಭಾವವು ಉದಯವಾಗುತ್ತದೆ. ಯಾವುದೇ ಅನುವಾದವು ಆ ಶ್ಲೋಕಗಳ ಗಂಭೀರತೆಯನ್ನು ಮತ್ತು ಮಾಧುರ್ಯವನ್ನು ಪಡೆಯಲಾರದು. ಆ ಮೂರು ಶ್ಲೋಗಳಿಂದ ಮನಸ್ಸನ್ನು ನಿರ್ಮಲಗೊಳಿಸಿ ಮತ್ತೆ ಭಗವಂತನನ್ನು ಈ ಪ್ರಕಾರ ಧ್ಯಾನಿಸಬೇಕು.

**ಧ್ಯಾಯತಶ್ಚರಣಾಂಭೋಜಂ ಭಾವನಿರ್ಜಿತಚೇತಸಾ । ಔತ್ಕಂಠ್ಯಾಶ್ರುಕಲಾಕ್ಷಸ್ಯ ಹೃದ್ಯಾಸೀನ್ಮೇ ಶನೈರ್ಹರಿಃ ॥**
**ಪ್ರೇಮಾತಿಭರನಿರ್ಭಿನ್ನಪುಲಕಾಂಗೋಽತಿನಿರ್ವೃತಃ । ಆನಂದಸಂಪ್ಲವೇ ಲೀನೋ ನಾಪಶ್ಯಮುಭಯಂ ಮುನೇ ॥**
**ರೂಪಂ ಭಗವತೋ ಯತ್ತನ್ಮನಃ ಕಾಂತಂ ಶುಚಾಪಹಮ್ । ಅಪಶ್ಯನ್ ಸಹಸೋತ್ತಸ್ಥೇ ವೈಕ್ಲವ್ಯಾದ್ ದುರ್ಮನಾ ಇವ ॥**

ನನಗೆ ಶ್ರೀಮದ್ಭಾಗವತದಲ್ಲಿ ಅತ್ಯಂತ ಪ್ರೇಮವಿದೆ. ಇದನ್ನು ಓದುವುದರಿಂದ, ಕೇಳುವುದರಿಂದ ಮನುಷ್ಯನಿಗೆ ಈಶ್ವರನ ನಿಜವಾದ ಜ್ಞಾನ ಪ್ರಾಪ್ತವಾಗುತ್ತದೆ. ಮತ್ತು ಅವನ ಚರಣಕಮಲಗಳಲ್ಲಿ ಅಚಲಭಕ್ತಿಯು ಉಂಟಾಗುತ್ತದೆ ಎಂಬ ವಿಶ್ವಾಸ ನನಗಿದೆ. ಹಾಗೂ ನನ್ನ ಅನುಭವವೂ ಆಗಿದೆ. ಇದನ್ನು ಓದುವುದರಿಂದ ಮನುಷ್ಯನಿಗೆ ಈ ಪ್ರಪಂಚವನ್ನು ರಚಿಸಿ, ಪಾಲಿಸುವ ಒಂದು ಸರ್ವವ್ಯಾಪಕ ಶಕ್ತಿ ಇದೆ ಎಂಬ ದೃಢ ನಿಶ್ಚಯ ಉಂಟಾಗುತ್ತದೆ.

**ಏಕ ಅನಂತ ತ್ರಿಕಾಲ ಸಚ, ಚೇತನ ಶಕ್ತಿ ದಿಖಾತ । ನಿರಜತ, ಪಾಲಕ, ಹರತ, ಜಗ, ಮಹಿಮಾ ಬರನಿ ನ ಜಾತ ॥**

ಈ ಒಂದೇ ಶಕ್ತಿಯನ್ನು ಜನರು, ಈಶ್ವರ, ಬ್ರಹ್ಮ ಪರಮಾತ್ಮಾ ಮುಂತಾದ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಭಾಗವತದ ಮೊದಲಿನ ಶ್ಲೋಕದಲ್ಲೇ ವೇದವ್ಯಾಸರು ಈಶ್ವರನ ಸ್ವರೂಪವನ್ನು ಇಂತು ವರ್ಣಿಸಿರುವರು – ಆ ಈಶ್ವರನಿಂದ ಈ ಪ್ರಪಂಚದ ಸೃಷ್ಟಿ, ಪಾಲನೆ ಮತ್ತು ಸಂಹಾರವಾಗುತ್ತದೆ. ಅವನು ತ್ರಿಕಾಲಗಳಲ್ಲಿಯೂ ಸತ್ಯನಾಗಿದ್ದಾನೆ. ಅರ್ಥಾತ್ ಅವನು ಸದಾ ಇದ್ದಾನೆ ಮತ್ತು ಇರುವನು. ಅವನು ತನ್ನ ಪ್ರಕಾಶದಿಂದ ಅಂಧಕಾರವನ್ನು ದೂರಗೊಳಿಸಿರುವನು. ಅಂತಹ ಪರಮ ಸತ್ಯಸ್ವರೂಪವನ್ನು ನಾವು ಧ್ಯಾನಿಸುತ್ತೇವೆ. ಅಲ್ಲೇ ಶ್ರೀಮದ್ಭಾಗವತದ ಸ್ವರೂಪವನ್ನು ಸಂಕ್ಷೇಪವಾಗಿ ಹೀಗೆ ವರ್ಣಿತವಾಗಿದೆ – ಈ ಭಾಗವತದಲ್ಲಿ ಇತರರ ಉನ್ನತಿಯನ್ನು ನೋಡಿ ಮತ್ಸರಿಸದೆ ಇರುವ ಸಾಧು ಜನರ ಎಲ್ಲ ಪ್ರಕಾರದಿಂದ ಸ್ವಾರ್ಥರಹಿತ ಪರಮಧರ್ಮ ಮತ್ತು ಅವರು ತಿಳಿಯಲು ಯೋಗ್ಯವಾದ ಜ್ಞಾನವು ವರ್ಣಿತವಾಗಿದೆ. ಅದು ವಾಸ್ತವವಾಗಿ ಎಲ್ಲ ಶ್ರೇಯಸ್ಸನ್ನು ಕೊಡುವುದು ಹಾಗೂ ಆಧಿಭೌತಿಕ, ಆದಿ ದೈವಿಕ ಮತ್ತು ಆಧ್ಯಾತ್ಮಿಕ ಈ ಮೂರು ರೀತಿಯ ತಾಪಗಳನ್ನು ಇಲ್ಲವಾಗಿಸುವುದಾಗಿದೆ. ಯಾವ ಸುಕೃತಿಗಳು ಪುಣ್ಯಕರ್ಮಗಳನ್ನು ಆಚರಿಸಿರುವರೋ, ಯಾರು ಶ್ರದ್ಧೆಯಿಂದ ಭಾಗವತವನ್ನು ಓದುವರೋ, ಕೇಳುವರೋ, ಅವರು ಇದನ್ನು ಸೇವಿಸಿದಂದಿನಿಂದ ತಮ್ಮ ಭಕ್ತಿಯಿಂದ ಈಶ್ವರನ ಜ್ಞಾನ ಮತ್ತು ಅವನಲ್ಲಿ ಭಕ್ತಿಯ ಪರಮ ಸಾಧನೆ – ಇವೆರಡು ಪದಾರ್ಥಗಳು ಯಾವುದಾದರೂ ಪ್ರಾಣಿಗೆ ಪ್ರಾಪ್ತವಾದರೆ ಮನುಷ್ಯನು ಬಯಸುವ ಯಾವ ಪದಾರ್ಥ ಉಳಿದಿದೆ ? ಇವೆರಡೂ ಪದಾರ್ಥಗಳು ಶ್ರೀಮದ್ಭಾಗವತದಿಂದ ಪೂರ್ಣವಾಗಿ ಪ್ರಾಪ್ತವಾಗುತ್ತವೆ. ಅದಕ್ಕಾಗಿ ಆ ಪವಿತ್ರ ಗ್ರಂಥವು ಮನುಷ್ಯ ಮಾತ್ರರ ಉಪಕಾರಿಯಾಗಿದೆ. ಎಲ್ಲಿಯವರೆಗೆ ಮನುಷ್ಯನು ಭಾಗವತವನ್ನು ಓದುವುದಿಲ್ಲವೋ, ಅವನಿಗೆ ಇದರಲ್ಲಿ ಶ್ರದ್ಧೆ ಉಂಟಾಗುವುದಿಲ್ಲವೋ, ಅಲ್ಲಿಯವರೆಗೆ ಜ್ಞಾನ, ಭಕ್ತಿ, ವೈರಾಗ್ಯಗಳ ಸಮುದ್ರ ಎಷ್ಟು ವಿಶಾಲವಾಗಿದೆ ಎಂದು ತಿಳಿಯಲಾರದು. ಭಾಗವತವನ್ನು ಓದುವುದರಿಂದ ಅವನಿಗೆ – ಒಂದೇ ಪರಮಾತ್ಮನು ಪ್ರತಿಯೊಂದು ಪ್ರಾಣಿಯಲ್ಲಿಯೂ ನೆಲೆಸಿರುವನು ಎಂಬ ವಿಮಲಜ್ಞಾನ ಉಂಟಾಗುತ್ತದೆ. ಅವನಿಗೆ ಈ ಜ್ಞಾನವು ಉಂಟಾದಾಗ ಅವನು ಅಧರ್ಮಕ್ಕೆ ಮನಗೊಡುವುದಿಲ್ಲ. ಏಕೆಂದರೆ, ಇತರರಿಗೆ ಬಯಸಿದ ಕೇಡು ತನಗೇ ಬಯಸಿದಂತೆ ಇದೆ. ಇದರ ಅರಿವು ಮೂಡಿದಾಗ ಮನುಷ್ಯನು ಸತ್ಯ, ಧರ್ಮದಲ್ಲಿ ಸ್ಥಿರನಾಗುತ್ತಾನೆ. ಸ್ವಾಭಾವಿಕವಾಗಿ ದಯೆ-ಧರ್ಮಗಳನ್ನು ಪಾಲಿಸ ತೊಡಗುವವನು ಹಾಗೂ ಯಾವುದೇ ಅಹಿಂಸಕ ಪ್ರಾಣಿಯ ಮೇಲೆ ಕೈ ಎತ್ತಲು ಇಚ್ಛಿಸುವುದಿಲ್ಲ. ಮನುಷ್ಯರಲ್ಲಿ ಪರಸ್ಪರ ಪ್ರೇಮ ಮತ್ತು ಪ್ರಾಣಿಮಾತ್ರರ ಕುರಿತು ದಯಾಭಾವವನ್ನು ಸ್ಥಾಪಿಸಲಿಕ್ಕಾಗಿ ಇದಕ್ಕಿಂತ ಮಿಗಿಲಾದ ಸಾಧನ ಮತ್ತೊಂದಿಲ್ಲ. ವರ್ತಮಾನ ಕಾಲದಲ್ಲಿ ಪ್ರಪಂಚದ ಹೆಚ್ಚಿನ ಭಾಗಗಳಲ್ಲಿ ಭಯಂಕರ ಯುದ್ಧಗಳು ಹತ್ತಿಕೊಂಡಿವೆ. ಮನುಷ್ಯ ಮಾತ್ರರಿಗೆ ಈ ಪವಿತ್ರ ಧರ್ಮದ ಉಪದೇಶ ಅತ್ಯಂತ ಶ್ರೇಯಸ್ಕರವಾದೀತು. ಭಗವದ್ಭಕ್ತನಾದವನಿಗೆ ಹಾಗೂ ಶ್ರೀಮದ್ಭಾಗವತದ ಮಹತ್ವವನ್ನು ತಿಳಿದವನಿಗೆ ಇಹಲೋಕ ಮತ್ತು ಪರಲೋಕ ಎರಡನ್ನೂ ಸುಧಾರಿಸುವ ಈ ಪವಿತ್ರ ಗ್ರಂಥವನ್ನು ಎಲ್ಲ ಪ್ರಾಂತೀಯ ಭಾಷೆಗಳಲ್ಲಿ ಅನುವಾದ ಮಾಡಿ ಪ್ರಚಾರ ಮಾಡಬೇಕಾದುದು ಪರಮ ಕರ್ತವ್ಯವಾಗಿದೆ.

– ಮದನ ಮೋಹನ ಮಾಲವೀಯ

॥ ಓಂ ನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಾಹಾತ್ಮ್ಯಮ್

ಕೃಷ್ಣಂ ನಾರಾಯಣಂ ವಂದೇ ಕೃಷ್ಣಂ ವಂದೇ ವ್ರಜಪ್ರಿಯಮ್ ।
ಕೃಷ್ಣಂ ದ್ವೈಪಾಯನಂ ವಂದೇ ಕೃಷ್ಣಂ ವಂದೇ ಪೃಥಾಸುತಮ್ ॥

## ಮೊದಲನೆಯ ಅಧ್ಯಾಯ

### ಭಕ್ತಿದೇವಿಯೊಂದಿಗೆ ದೇವರ್ಷಿ ನಾರದರ ಭೇಟಿ

**ಸಚ್ಚಿದಾನಂದರೂಪಾಯ ವಿಶ್ವೋತ್ಪತ್ತ್ಯಾದಿಹೇತವೇ ।**
**ತಾಪತ್ರಯವಿನಾಶಾಯ ಶ್ರೀಕೃಷ್ಣಾಯ ವಯಂ ನುಮಃ ॥ ೧ ॥**

ಸಚ್ಚಿದಾನಂದಸ್ವರೂಪನಾದ ಭಗವಾನ್ ಶ್ರೀಕೃಷ್ಣನಿಗೆ ನಾವು ನಮಸ್ಕರಿಸುತ್ತೇವೆ. ಅವನು ಜಗತ್ತಿನ ಉತ್ಪತ್ತಿ, ಸ್ಥಿತಿ, ವಿನಾಶ ಮಾಡಲು ಹಾಗೂ ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ತ್ರಿತಾಪಗಳನ್ನು ನಾಶಮಾಡುವಂತಹವನಾಗಿದ್ದಾನೆ. ॥ ೧ ॥

**ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ**
**ದ್ವೈಪಾಯನೋ ವಿರಹಕಾತರ ಆಜುಹಾವ ।**
**ಪುತ್ರೇತಿ ತನ್ಮಯತಯಾ ತರವೋಽಭಿನೇದು-**
**ಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ॥ ೨ ॥**

ಶ್ರೀಶುಕಮಹಾಮುನಿಗಳು ಉಪನಯನವೇ ಆಗದಿದ್ದರೂ ನೈಸರ್ಗಿಕವಾಗಿಯೇ ಬ್ರಹ್ಮಜ್ಞಾನ ಸಂಪನ್ನರಾಗಿದ್ದರು. ಆದ್ದರಿಂದ ಅವರಿಗೆ ಏನನ್ನೂ ಮಾಡುವುದೂ ಬಾಕಿ ಇರಲಿಲ್ಲ. ಇಂತಹ ಬ್ರಹ್ಮನಿಷ್ಠ ಪುತ್ರನು ಮನೆ ಬಿಟ್ಟು ಹೊರಟು ಹೋಗುವಾಗ ಅವನ ತಂದೆ ವೇದವ್ಯಾಸರು ವ್ಯಾಕುಲರಾಗಿ ಮಗೂ! ಮಗನೇ! ಎಂದು ಕರೆಯ ತೊಡಗಿದರು. ಶುಕಮಹಾಮುನಿಗಳಿಗೆ ಸರ್ವಾತ್ಮಭಾವ ಉಂಟಾದ್ದರಿಂದ ಚರಾಚರಗಳಲ್ಲೂ ಏಕಾಕಾರವಾಗಿ ಹೋಗಿದ್ದರಿಂದ ಆ ಕಾಡಿನ ವೃಕ್ಷಗಳೇ ಅವರ ಪರವಾಗಿ ಉತ್ತರಿಸತೊಡಗಿದವು. ಅಂತಹ ಸರ್ವಭೂತರ ಆತ್ಮ ಸ್ವರೂಪರಾದ ಶ್ರೀಶುಕಮುನಿಗಳಿಗೆ ಸಾಷ್ಟಾಂಗನಮಸ್ಕಾರ ಮಾಡುತ್ತೇನೆ. ॥ ೨ ॥

**ನೈಮಿಷೇ ಸೂತಮಾಸೀನಮಭಿವಾದ್ಯ ಮಹಾಮತಿಮ್ ।**
**ಕಥಾಮೃತರಸಾಸ್ವಾದಕುಶಲಃ ಶೌನಕೋಽಬ್ರವೀತ್ ॥ ೩ ॥**

ಒಮ್ಮೆ ಭಗವತ್ಕಥಾಮೃತದ ರಸಾಸ್ವಾದದಲ್ಲಿ ಕುಶಲರಾದ ಮುನಿವರ ಶೌನಕರು ನೈಮಿಷಾರಣ್ಯ ಕ್ಷೇತ್ರದಲ್ಲಿ ವಿರಾಜಮಾನರಾದ ಮಹಾಮತಿವಂತ ಸೂತಪುರಾಣಿಕರಿಗೆ ನಮಸ್ಕರಿಸಿ, ಅವರಲ್ಲಿ ಕೇಳಿದರು. ॥ ೩ ॥

*ಶೌನಕ ಉವಾಚ*

**ಅಜ್ಞಾನಧ್ವಾಂತವಿಧ್ವಂಸಕೋಟಿಸೂರ್ಯಸಮಪ್ರಭ ।**
**ಸೂತಾಖ್ಯಾಹಿ ಕಥಾಸಾರಂ ಮಮ ಕರ್ಣರಸಾಯನಮ್ ॥ ೪ ॥**

**ಶೌನಕರು ಹೇಳಿದರು** – ಸೂತಪುರಾಣಿಕರೇ! ನೀವು ಅಜ್ಞಾನಾಂಧಕಾರವನ್ನುನಾಶಮಾಡುವುದರಲ್ಲಿ ಕೋಟಿ ಸೂರ್ಯರಿಗೆ ಸಮಾನರಾಗಿದ್ದೀರಿ. ನೀವು ನಮ್ಮಗಳಿಗೆ ಕರ್ಣರಸಾಯನವಾದ ಅಮೃತ ಸ್ವರೂಪವಾದ ಸಾರಗರ್ಭಿತವಾದ ಕಥೆಯನ್ನು ಹೇಳಿರಿ.॥ ೪ ॥

**ಭಕ್ತಿಜ್ಞಾನವಿರಾಗಾಪ್ತೋ ವಿವೇಕೋ ವರ್ಧತೇ ಮಹಾನ್ ।**
**ಮಾಯಾಮೋಹನಿರಾಸಶ್ಚ ವೈಷ್ಣವೈಃ ಕ್ರಿಯತೇ ಕಥಮ್ ॥ ೫ ॥**

ಭಕ್ತಿ, ಜ್ಞಾನ, ವೈರಾಗ್ಯಗಳಿಂದ ದೊರೆಯುವ ಮಹಾನ್ ವಿವೇಕದ ವೃದ್ಧಿ ಹೇಗಾದೀತು? ಹಾಗೂ ವೈಷ್ಣವರು ಈ ಮಾಯಾ ಮೋಹದಿಂದ ಹೇಗೆ ಪಾರಾಗಬಲ್ಲರು? ॥ ೫ ॥

**ಇಹ ಘೋರೇ ಕಲೌ ಪ್ರಾಯೋ ಜೀವಶ್ಚಾಸುರತಾಂ ಗತಃ ।**
**ಕ್ಲೇಶಾಕ್ರಾಂತಸ್ಯ ತಸ್ಯೈವ ಶೋಧನೇ ಕಿಂ ಪರಾಯಣಮ್ ॥ ೬ ॥**

ಈ ಘೋರವಾದ ಕಲಿಕಾಲದಲ್ಲಿ ಜೀವರು ಪ್ರಾಯಶಃ ಆಸುರೀ ಸ್ವಭಾವದವರಾಗಿದ್ದಾರೆ. ವಿವಿಧ ಕ್ಲೇಶಗಳಿಂದ ಆಕ್ರಾಂತರಾದ ಈ ಜೀವರನ್ನು ಶುದ್ಧ (ದೈವೀಶಕ್ತಿ ಸಂಪನ್ನ)ರಾಗಿಸುವ ಸರ್ವಶ್ರೇಷ್ಠವಾದ ಉಪಾಯವೇನು? ॥ ೬ ॥

**ಶ್ರೇಯಸಾಂ ಯದ್ಭವೇಚ್ಛ್ರೇಯಃ ಪಾವನಾನಾಂ ಚ ಪಾವನಮ್ ।**
**ಕೃಷ್ಣಪ್ರಾಪ್ತಿಕರಂ ಶಶ್ವತ್ಸಾಧನಂ ತದ್ವದಾಧುನಾ ॥ ೭ ॥**

ಎಲ್ಲಕ್ಕಿಂತ ಹೆಚ್ಚಾದ ಶ್ರೇಯಸ್ಕರವೂ, ಪವಿತ್ರವೂ ಮಾಡುವುದರಲ್ಲಿ ಪವಿತ್ರನಾಗಿರುವ ಭಗವಾನ್ ಶ್ರೀಕೃಷ್ಣನ ಪ್ರಾಪ್ತಿಯಾಗಿಸುವ ಶಾಶ್ವತವಾದ ಸಾಧನೆಯನ್ನು ನೀವು ನಮಗೆ ತಿಳಿಸಿರಿ. ॥ ೭ ॥

ಚಿಂತಾಮಣಿರ್ಲೋಕಸುಖಂ ಸುರದ್ರುಃ ಸ್ವರ್ಗಸಂಪದಮ್ ।
ಪ್ರಯಚ್ಛತಿ ಗುರುಃ ಪ್ರೀತೋ ವೈಕುಂಠಂ ಯೋಗಿದುರ್ಲಭಮ್ ॥ ೮ ॥

*ಸೂತ ಉವಾಚ*

ಪ್ರೀತಿಃ ಶೌನಕ ಚಿತ್ತೇ ತೇ ಹ್ಯತೋ ವಚ್ಮಿ ವಿಚಾರ್ಯ ಚ ।
ಸರ್ವಸಿದ್ಧಾಂತ ನಿಷ್ಪನ್ನಂ ಸಂಸಾರಭಯನಾಶನಮ್ ॥ ೯ ॥

ಭಕ್ತ್ಯೋಘವರ್ಧನಂ ಯಚ್ಚ ಕೃಷ್ಣಸಂತೋಷಹೇತುಕಮ್ ।
ತದಹಂ ತೇಽಭಿಧಾಸ್ಯಾಮಿ ಸಾವಧಾನತಯಾ ಶೃಣು ॥ ೧೦ ॥

ಕಾಲವ್ಯಾಲಮುಖಗ್ರಾಸತ್ರಾಸನಿರ್ನಾಶಹೇತವೇ ।
ಶ್ರೀಮದ್ಭಾಗವತಂ ಶಾಸ್ತ್ರಂ ಕಲೌ ಕೀರೇಣ ಭಾಷಿತಮ್ ॥ ೧೧ ॥

ಏತಸ್ಮಾದಪರಂ ಕಿಂಚಿನ್ಮನಃಶುದ್ಧ್ಯೈ ನ ವಿದ್ಯತೇ ।
ಜನ್ಮಾಂತರೇ ಭವೇತ್ ಪುಣ್ಯಂ ತದಾ ಭಾಗವತಂ ಲಭೇತ್ ॥ ೧೨ ॥

ಪರೀಕ್ಷಿತೇ ಕಥಾಂ ವಕ್ತುಂ ಸಭಾಯಾಂ ಸಂಸ್ಥಿತೇ ಶುಕೇ ।
ಸುಧಾಕುಂಭಂ ಗೃಹೀತ್ವೈವ ದೇವಾಸ್ತತ್ರ ಸಮಾಗಮನ್ ॥ ೧೩ ॥

ಶುಕಂ ನತ್ವಾವದನ್ ಸರ್ವೇ ಸ್ವಕಾರ್ಯಕುಶಲಾಃ ಸುರಾಃ ।
ಕಥಾಸುಧಾಂ ಪ್ರಯಚ್ಛಸ್ವ ಗೃಹೀತ್ವೈವ ಸುಧಾಮಿಮಾಮ್ ॥ ೧೪ ॥

ಏವಂ ವಿನಿಮಯೇ ಜಾತೇ ಸುಧಾ ರಾಜ್ಞಾ ಪ್ರಪೀಯತಾಮ್ ।
ಪ್ರಪಾಸ್ಯಾಮೋ ವಯಂ ಸರ್ವೇ ಶ್ರೀಮದ್ಭಾಗವತಾಮೃತಮ್ ॥ ೧೫ ॥

ಕ್ವ ಸುಧಾ ಕ್ವ ಕಥಾ ಲೋಕೇ ಕ್ವ ಕಾಚಃ ಕ್ವ ಮಣಿರ್ಮಹಾನ್ ।
ಬ್ರಹ್ಮರಾತೋ ವಿಚಾರ್ಯೈವಂ ತದಾ ದೇವಾಂಜಹಾಸಹ ॥ ೧೬ ॥

ಅಭಕ್ತಾಂಸ್ತಾಂಶ್ಚ ವಿಜ್ಞಾಯ ನ ದದೌ ಸ ಕಥಾಮೃತಮ್ ।
ಶ್ರೀಮದ್ಭಾಗವತೀ ವಾರ್ತಾ ಸುರಾಣಾಮಪಿ ದುರ್ಲಭಾ ॥ ೧೭ ॥

ರಾಜ್ಞೋ ಮೋಕ್ಷಂ ತಥಾ ವೀಕ್ಷ್ಯ ಪುರಾ ಧಾತಾಪಿ ವಿಸ್ಮಿತಃ ।
ಸತ್ಯಲೋಕೇ ತುಲಾಂ ಬದ್ಧ್ವಾತೋಲಯತ್ಸಾಧನಾನ್ಯಜಃ ॥ ೧೮ ॥

ಲಘೂನ್ಯನ್ಯಾನಿ ಜಾತಾನಿ ಗೌರವೇಣ ಇದಂ ಮಹತ್ ।
ತದಾ ಋಷಿಗಣಾಃ ಸರ್ವೇ ವಿಸ್ಮಯಂ ಪರಮಂ ಯಯುಃ ॥ ೧೯ ॥

ಮೇನಿರೇ ಭಗವದ್ರೂಪಂ ಶಾಸ್ತ್ರಂ ಭಾಗವತಂ ಕಲೌ ।
ಪಠನಾಚ್ಛ್ರವಣಾತ್ಸದ್ಯೋ ವೈಕುಂಠಫಲದಾಯಕಮ್ ॥ ೨೦ ॥

ಚಿಂತಾಮಣಿಯು ಕೇವಲ ಲೌಕಿಕ ಸುಖನೀಡಬಲ್ಲದು. ಕಲ್ಪವೃಕ್ಷವು ಹೆಚ್ಚೆಂದರೆ ಸ್ವರ್ಗದ ಸಂಪತ್ತನ್ನು ಕೊಡಬಲ್ಲದು. ಆದರೆ ಸದ್ಗುರುಗಳು ಪ್ರಸನ್ನರಾದರೆ ಯೋಗಿಗಳಿಗೆ ದುರ್ಲಭವಾದ ಭಗವಂತನ ವೈಕುಂಠಧಾಮವನ್ನೇ ಕೊಡುತ್ತಾರೆ. ॥ ೮ ॥

ಸೂತಪುರಾಣಿಕರು ಹೇಳಿದರು – ಶೌನಕರೇ! ನಿಮ್ಮ ಹೃದಯದಲ್ಲಿ ಭಗವಂತನ ಪ್ರೇಮ ತುಂಬಿದೆ. ಅದಕ್ಕಾಗಿ ನಾನು ವಿಚಾರಗೈದು ಜನ್ಮ-ಮೃತ್ಯುವಿನ ಭಯವನ್ನು ನಾಶಮಾಡುವಂತಹ ಸಮಸ್ತ ಸಿದ್ಧಾಂತಗಳ ನಿಷ್ಕರ್ಷವನ್ನು ನಿಮಗೆ ಹೇಳುತ್ತೇನೆ. ॥ ೯ ॥

ಭಕ್ತಿಯ ಪ್ರವಾಹವನ್ನು ಹೆಚ್ಚಿಸುವ, ಭಗವಾನ್ ಶ್ರೀಕೃಷ್ಣನ ಪ್ರಸನ್ನತೆಯ ಪ್ರಧಾನ ಕಾರಣವಾದ ಸಾಧನೆಯನ್ನು ನಾನು ನಿಮಗೆ ಹೇಳುವೆನು. ಅದನ್ನು ದತ್ತಚಿತ್ತರಾಗಿ ಕೇಳಿರಿ. ॥ ೧೦ ॥ ಶ್ರೀಶುಕ ಮಹಾಮುನಿಗಳು ಕಲಿಯುಗದಲ್ಲಿ ಜೀವರು ಕಾಲರೂಪವಾದ ಸರ್ಪಕ್ಕೆ ತುತ್ತಾಗುವ ದುಃಖವನ್ನು ಪೂರ್ಣವಾಗಿ ನಾಶಮಾಡಲಿಕ್ಕಾಗಿ ಶ್ರೀಮದ್ಭಾಗವತ ಶಾಸ್ತ್ರವನ್ನು ಹೇಳಿರುವರು. ॥ ೧೧ ॥ ಮನಸ್ಸಿನ ಶುದ್ಧಿಗಾಗಿ ಇದರಿಂದ ಮಿಗಿಲಾದ ಯಾವ ಸಾಧನೆಯೂ ಇಲ್ಲ. ಮನುಷ್ಯನ ಜನ್ಮ-ಜನ್ಮಾಂತರದ ಪುಣ್ಯವು ಉದಯಿಸಿದಾಗಲೇ ಅವನಿಗೆ ಈ ಭಾಗವತಶಾಸ್ತ್ರವು ದೊರೆಯುತ್ತದೆ. ॥ ೧೨ ॥ ಶ್ರೀಶುಕಮಹಾಮುನಿಗಳು ಪರೀಕ್ಷಿತನಿಗೆ ಈ ಕಥೆಯನ್ನು ಹೇಳಲು ಸಭೆಯಲ್ಲಿ ವಿರಾಜಮಾನರಾಗಿದ್ದಾಗ ದೇವತೆಗಳು ಅಮೃತ ಕಲಶವನ್ನೆತ್ತಿಕೊಂಡು ಅವರ ಬಳಿಗೆ ಬಂದರು. ॥ ೧೩ ॥ ದೇವತೆಗಳು ತಮ್ಮ ಕಾರ್ಯಸಾಧನೆಯಲ್ಲಿ ತುಂಬಾ ಕುಶಲರಾಗಿರುತ್ತಾರೆ. ಆದ್ದರಿಂದ ಇಲ್ಲಿಯೂ ಎಲ್ಲರು ಶುಕಮಹಾಮುನಿಗಳಿಗೆ ನಮಸ್ಕರಿಸಿ ಹೇಳಿದರು–"ನೀವು ಈ ಅಮೃತಕಲಶವನ್ನು ಸ್ವೀಕರಿಸಿ, ಬದಲಿಗೆ ನಮಗೆ ಕಥಾಮೃತದ ದಾನವನ್ನು ಕೊಡಿರಿ. ॥ ೧೪ ॥ ಹೀಗೆ ಪರಸ್ಪರ ವಿನಿಮಯವಾದಾಗ ರಾಜಾಪರೀಕ್ಷಿತನು ಅಮೃತವನ್ನು ಪಾನ ಮಾಡುವನು ಹಾಗೂ ನಾವೆಲ್ಲರೂ ಶ್ರೀಮದ್ಭಾಗವತ ರೂಪವಾದ ಅಮೃತವನ್ನು ಪಾನ ಮಾಡುವೆವು." ॥ ೧೫ ॥ ಈ ಪ್ರಪಂಚದಲ್ಲಿ ಗಾಜಿನತುಂಡೆಲ್ಲಿ, ಮಹಾಮೂಲ್ಯ ವಜ್ರವೆಲ್ಲಿ? ಎಲ್ಲಿ ಸುಧೆ ಮತ್ತು ಎಲ್ಲಿ ಹರಿಕಥೆ ? ಹೀಗೆ ಯೋಚಿಸಿ ಶ್ರೀಶುಕ ಮುನಿಗಳು ಆಗ ದೇವತೆಗಳನ್ನು ಪರಿಹಾಸ್ಯ ಮಾಡಿದರು. ॥ ೧೬ ॥ ಅವರನ್ನು ಭಕ್ತಿ ಶೂನ್ಯ (ಕಥೆಯ ಅನಧಿಕಾರಿ)ರೆಂದು ತಿಳಿದು ಕಥಾಮೃತವನ್ನು ದಾನ ಮಾಡಲಿಲ್ಲ. ಹೀಗೆ ಈ ಶ್ರೀಮದ್ಭಾಗವತದ ಕಥೆ ದೇವತೆಗಳಿಗೂ ದುರ್ಲಭವಾಗಿದೆ. ॥ ೧೭ ॥

ಹಿಂದೆ ಶ್ರೀಮದ್ಭಾಗವತದ ಶ್ರವಣದಿಂದಲೇ ರಾಜಾ ಪರೀಕ್ಷಿತನು ಮುಕ್ತನಾದುದನ್ನು ನೋಡಿ ಬ್ರಹ್ಮದೇವರಿಗೆ ಭಾರೀ ಆಶ್ಚರ್ಯವಾಗಿತ್ತು. ಅವರು ಸತ್ಯಲೋಕದಲ್ಲಿ ತಕ್ಕಡಿ ಹಿಡಿದು ಎಲ್ಲ ಸಾಧನೆಗಳನ್ನು ತೂಕಮಾಡಿದರು. ॥ ೧೮ ॥ ಬೇರೆ ಎಲ್ಲ ಸಾಧನೆಗಳು ತೂಕದಲ್ಲಿ ಹಗುರವಾಗಿ, ಭಾಗವತವು ಎಲ್ಲಕ್ಕಿಂತ ಭಾರವಾಯಿತು. ಇದನ್ನು ನೋಡಿ ಎಲ್ಲ ಋಷಿಗಳಿಗೆ ಭಾರೀ ವಿಸ್ಮಯವಾಯಿತು. ಅವರೆಲ್ಲರೂ ಕಲಿಯುಗದಲ್ಲಿ ಈ ಭಗವದ್ರೂಪವಾದ ಭಾಗವತ ಶಾಸ್ತ್ರದ ಶ್ರವಣ-ಪಾರಾಯಣವು ಕೂಡಲೇ ಮೋಕ್ಷ ಕೊಡುವಂತಹುದು ಎಂದು ನಿಶ್ಚಯಿಸಿದರು. ॥ ೧೯-೨೦ ॥

ಸಪ್ತಾಹೇನ ಶ್ರುತಂ ಚೈತತ್ಸರ್ವಥಾ ಮುಕ್ತಿದಾಯಕಮ್ ।
ಸನಕಾದ್ಯೈಃ ಪುರಾ ಪ್ರೋಕ್ತಂ ನಾರದಾಯ ದಯಾಪರೈಃ ॥ ೨೧ ॥

ಯದ್ಯಪಿ ಬ್ರಹ್ಮಸಂಬಂಧಾಚ್ಛ್ರುತಮೇತತ್ಸುರರ್ಷಿಣಾ ।
ಸಪ್ತಾಹಶ್ರವಣವಿಧಿಃ ಕುಮಾರೈಸ್ತಸ್ಯ ಭಾಷಿತಃ ॥ ೨೨ ॥

*ಶೌನಕ ಉವಾಚ*

ಲೋಕವಿಗ್ರಹಮುಕ್ತಸ್ಯ ನಾರದಸ್ಯಾಸ್ಥಿರಸ್ಯ ಚ ।
ವಿಧಿಶ್ರವೇ ಕುತಃ ಪ್ರೀತಿಃ ಸಂಯೋಗಃ ಕುತ್ರ ತೈಃ ಸಹ ॥ ೨೩ ॥

*ಸೂತ ಉವಾಚ*

ಅತ್ರ ತೇ ಕೀರ್ತಯಿಷ್ಯಾಮಿ ಭಕ್ತಿಯುಕ್ತಂ ಕಥಾನಕಮ್ ।
ಶುಕೇನ ಮಮ ಯತ್ಪ್ರೋಕ್ತಂ ರಹಃ ಶಿಷ್ಯಂ ವಿಚಾರ್ಯ ಚ ॥ ೨೪ ॥

ಏಕದಾ ಹಿ ವಿಶಾಲಾಯಾಂ ಚತ್ವಾರ ಋಷಯೋಽಮಲಾಃ ।
ಸತ್ಸಂಗಾರ್ಥಂ ಸಮಾಯಾತಾ ದದೃಶುಸ್ತತ್ರ ನಾರದಮ್ ॥ ೨೫ ॥

*ಕುಮಾರಾ ಊಚುಃ*

ಕಥಂ ಬ್ರಹ್ಮನ್ ದೀನಮುಖಃ ಕುತಶ್ಚಿಂತಾತುರೋ ಭವಾನ್ ।
ತ್ವರಿತಂ ಗಮ್ಯತೇ ಕುತ್ರ ಕುತಶ್ಚಾಗಮನಂ ತವ ॥ ೨೬ ॥

ಇದಾನೀಂ ಶೂನ್ಯಚಿತ್ತೋಽಸಿ ಗತವಿತ್ತೋ ಯಥಾ ಜನಃ ।
ತವೇದಂ ಮುಕ್ತಸಂಗಸ್ಯ ನೋಚಿತಂ ವದ ಕಾರಣಮ್ ॥ ೨೭ ॥

*ನಾರದ ಉವಾಚ*

ಅಹಂ ತು ಪೃಥಿವೀಂ ಯಾತೋ ಜ್ಞಾತ್ವಾ ಸರ್ವೋತ್ತಮಾಮಿತಿ ।
ಪುಷ್ಕರಂ ಚ ಪ್ರಯಾಗಂ ಚ ಕಾಶೀಂ ಗೋದಾವರೀಂ ತಥಾ ॥ ೨೮ ॥

ಹರಿಕ್ಷೇತ್ರಂ ಕುರುಕ್ಷೇತ್ರಂ ಶ್ರೀರಂಗಂ ಸೇತುಬಂಧನಮ್ ।
ಏವಮಾದಿಷು ತೀರ್ಥೇಷು ಭ್ರಮಮಾಣ ಇತಸ್ತತಃ ॥ ೨೯ ॥

ನಾಪಶ್ಯಂ ಕುತ್ರಚಿಚ್ಛರ್ಮ ಮನಸ್ಸಂತೋಷಕಾರಕಮ್ ।
ಕಲಿನಾಧರ್ಮಮಿತ್ರೇಣ ಧರೇಯಂ ಬಾಧಿತಾಧುನಾ ॥ ೩೦ ॥

ಸತ್ಯಂ ನಾಸ್ತಿ ತಪಃ ಶೌಚಂ ದಯಾ ದಾನಂ ನ ವಿದ್ಯತೇ ।
ಉದರಂಭರಿಣೋ ಜೀವಾ ವರಾಕಾಃ ಕೂಟಭಾಷಿಣಃ ॥ ೩೧ ॥

ಮಂದಾಃ ಸುಮಂದ ಮತಯೋ ಮಂದಭಾಗ್ಯಾ ಹ್ಯುಪದ್ರುತಾಃ ।
ಪಾಖಂಡ ನಿರತಾಃ ಸಂತೋ ವಿರಕ್ತಾಃ ಸಪರಿಗ್ರಹಾಃ ॥ ೩೨ ॥

ತರುಣೀಪ್ರಭುತಾ ಗೇಹೇ ಶ್ಯಾಲಕೋ ಬುದ್ಧಿದಾಯಕಃ ।
ಕನ್ಯಾವಿಕ್ರಯಿಣೋ ಲೋಭಾದ್ದಂಪತೀನಾಂ ಚ ಕಲ್ಕನಮ್ ॥ ೩೩ ॥

ಶ್ರೀಮದ್ಭಾಗವತವನ್ನು ಸಪ್ತಾಹ ವಿಧಿಯಿಂದ ಶ್ರವಣಿಸಿದಾಗ ನಿಶ್ಚಯವಾಗಿಯೂ ಭಕ್ತಿಯು ಲಭಿಸುತ್ತದೆ. ಹಿಂದೆ ಇದನ್ನು ದಯಾಪರಾಯಣರಾದ ಸನಕಾದಿಗಳು ದೇವರ್ಷಿ- ನಾರದರಿಗೆ ಹೇಳಿದ್ದರು. ॥ ೨೧ ॥ ದೇವರ್ಷಿನಾರದರು ಮೊದಲು ಬ್ರಹ್ಮ ದೇವರಿಂದ ಇದನ್ನು ಶ್ರವಣಿಸಿದ್ದರೂ ಕೂಡ ಸಪ್ತಾಹ ಶ್ರವಣದ ವಿಧಿ ಯನ್ನಾದರೋ ಅವರಿಗೆ ಸನಕಾದಿಗಳೇ ತಿಳಿಸಿದ್ದರು. ॥ ೨೨ ॥

**ಶೌನಕರು ಕೇಳಿದರು** - ಪ್ರಾಪಂಚಿಕದಿಂದ ಮುಕ್ತರೂ, ವಿಚರಣಶೀಲರೂ ಆದ ನಾರದರಿಗೆ ಸನಕಾದಿಗಳೊಂದಿಗೆ ಸಂಯೋಗ ಎಲ್ಲಿ ಉಂಟಾಯಿತು ? ಹಾಗೂ ವಿಧಿ-ವಿಧಾನದಿಂದ ಶ್ರವಣಿಸುವ ಪ್ರೀತಿ ಅವರಿಗೆ ಹೇಗೆ ಉಂಟಾಯಿತು ? ॥ ೨೩ ॥

**ಸೂತಪುರಾಣಿಕರು ಹೇಳಿದರು** - ಶ್ರೀಶುಕಮಹಾಮುನಿಗಳು ನನ್ನನ್ನು ತಮ್ಮ ಅನನ್ಯ ಶಿಷ್ಯನೆಂದು ತಿಳಿದು ಏಕಾಂತದಲ್ಲಿ ಹೇಳಿದ ಭಕ್ತಿಪೂರ್ಣ ಕಥಾನಕವನ್ನು ನಿಮಗೆ ಹೇಳುತ್ತೇನೆ. ॥ ೨೪ ॥ ಒಂದು ದಿನ ವಿಶಾಲಾಪುರಿಗೆ ಸತ್ಸಂಗಕ್ಕಾಗಿ ಬಂದಿರುವ ಸನಕಾದಿ ನಾಲ್ವರು ನಿರ್ಮಲ ಋಷಿಗಳು ನಾರದರನ್ನು ನೋಡಿದರು. ॥ ೨೫ ॥

**ಸನಕಾದಿಗಳು ಕೇಳಿದರು** – ಬ್ರಹ್ಮನ್ ! ನಿಮ್ಮ ಮುಖ ಏಕೆ ಬಾಡಿದೆ ? ನೀವು ಚಿಂತಾತುರ ಹೇಗಾದಿರಿ ? ಇಷ್ಟು ಆತುರವಾಗಿ ಯಾವ ಕಡೆಗೆ ಹೋಗುತ್ತಿರುವಿರಿ ? ನಿಮ್ಮ ಆಗಮನ ಯಾವ ಕಡೆಯಿಂದಾಯಿತು ? ॥ ೨೬ ॥ ಈಗಲಾದರೋ ನೀವು ಎಲ್ಲ ಧನವನ್ನು ಕಳಕೊಂಡ ಮನುಷ್ಯನಂತೆ ವ್ಯಾಕುಲರಾಗಿರುವಿರಿ ಎಂದು ಕಾಣುತ್ತದೆ. ನಿಮ್ಮಂತಹ ಆಸಕ್ತಿರಹಿತ ಪುರುಷರಿಗೆ ಇದು ಉಚಿತ ವಲ್ಲ. ಇದರ ಕಾರಣವನ್ನು ಹೇಳಿರಿ. ॥ ೨೭ ॥

**ನಾರದರು ಹೇಳಿದರು** - ನಾನು ಸರ್ವೋತ್ತಮಲೋಕವೆಂದು ಎಣಿಸಿ ಪೃಥ್ವಿಗೆ ಬಂದೆ. ಇಲ್ಲಿ ಪುಷ್ಕರ, ಪ್ರಯಾಗ, ಕಾಶೀ, ಗೋದಾ ವರಿ (ನಾಸಿಕ), ಹರಿದ್ವಾರ, ಕುರುಕ್ಷೇತ್ರ, ಶ್ರೀರಂಗ, ಸೇತುಬಂಧ (ರಾಮೇಶ್ವರ) ಮುಂತಾದ ಅನೇಕ ತೀರ್ಥಗಳಲ್ಲಿ ಅತ್ತ-ಇತ್ತ ಅಲೆಯುತ್ತಿದ್ದೆ; ಆದರೆ ಮನಸ್ಸಿಗೆ ಸಂತೋಷವೀಯುವಂತಹ ಶಾಂತಿಯು ನನಗೆ ಸಿಗಲಿಲ್ಲ. ಈಗ ಅಧರ್ಮದ ಸಹಾಯಕ ಕಲಿಯುಗವು ಇಡೀ ಪೃಥಿವಿಯನ್ನು ಬಾಧಿಸುತ್ತಿದೆ. ॥ ೨೮-೩೦ ॥ ಈಗ ಇಲ್ಲಿ ಸತ್ಯ, ತಪಸ್ಸು, ಶೌಚ (ಒಳ-ಹೊರಗಿನ ಪವಿತ್ರತೆ), ದಯೆ, ದಾನ, ಇವುಗಳು ಏನೂ ಉಳಿಯಲಿಲ್ಲ. ಬಡಪಾಯಿ ಜೀವರು ಕೇವಲ ಹೊಟ್ಟೆ ಹೊರೆಯುವುದರಲ್ಲೇ ತೊಡಗಿರುವರು. ಅವರು ಸುಳ್ಳನ್ನಾಡುವವರೂ, ಆಲಸಿಗಳೂ, ಮಂದಬುದ್ಧಿಯ ವರೂ, ಭಾಗ್ಯಹೀನರೂ, ಉಪದ್ರವಗ್ರಸ್ತರೂ ಆಗಿದ್ದಾರೆ. ಹೊರ- ಗಿನ ವೇಷಮಾತ್ರ ಸಾಧು-ಸಂತರು ಪೂರ್ಣ ಪಾಷಂಡಿಗಳಾಗಿದ್ದಾರೆ. ನೋಡಲು ವಿರಕ್ತರಂತೆ ಕಂಡು ಬಂದರೂ ಸ್ತ್ರೀ, ಸಂಪತ್ತು ಎಲ್ಲ- ವನ್ನೂ ಪರಿಗ್ರಹಿಸುತ್ತಾರೆ. ಮನೆಗಳಲ್ಲಿ ಸ್ತ್ರೀಯರ ರಾಜ್ಯವೇ ನಡೆಯುತ್ತಿದೆ. ಭಾವ ಮೈದುನರೇ ಸಲಹೆಗಾರರಾಗಿದ್ದಾರೆ. ಲೋಭದಿಂದ ಜನರು ಹೆಣ್ಣುಮಕ್ಕಳನ್ನು ಮಾರುತ್ತಿದ್ದಾರೆ. ಗಂಡ-ಹೆಂಡಿರಲ್ಲಿ ನಿತ್ಯ ಜಗಳ ನಡೆಯುತ್ತಾ ಇದೆ. ॥ ೩೧-೩೩ ॥

ಆಶ್ರಮಾ ಯವನೈ ರುದ್ಧಾಸ್ತೀರ್ಥಾನಿ ಸರಿತಸ್ತಥಾ।
ದೇವತಾಯತನಾನ್ಯತ್ರ ದುಷ್ಟೈರ್ನಷ್ಟಾನಿ ಭೂರಿಶಃ ॥ ೩೪ ॥

ನ ಯೋಗೀ ನೈವ ಸಿದ್ಧೋ ವಾ ನ ಜ್ಞಾನೀ ಸತ್ಕ್ರಿಯೋ ನರಃ।
ಕಲಿದಾವಾನಲೇ ನಾದ್ಯ ಸಾಧನಂ ಭಸ್ಮತಾಂ ಗತಮ್ ॥ ೩೫ ॥

ಅಟ್ಟಶೂಲಾ ಜನಪದಾಃ ಶಿವಶೂಲಾ ದ್ವಿಜಾತಯಃ।
ಕಾಮಿನ್ಯಃ ಕೇಶಶೂಲಿನ್ಯಃ ಸಂಭವಂತಿ ಕಲಾವಿಹ ॥ ೩೬ ॥

ಏವಂ ಪಶ್ಯನ್ ಕಲೇರ್ದೋಷಾನ್ ಪರ್ಯಟನ್ನವನೀಮಹಮ್।
ಯಾಮುನಂ ತಟಮಾಪನ್ನೋ ಯತ್ರ ಲೀಲಾ ಹರೇರಭೂತ್ ॥ ೩೭ ॥

ತತ್ರಾಶ್ಚರ್ಯಂ ಮಯಾ ದೃಷ್ಟಂ ಶ್ರೂಯತಾಂ ತನ್ಮುನೀಶ್ವರಾಃ।
ಏಕಾ ತು ತರುಣೀ ತತ್ರ ನಿಷಣ್ಣಾ ಖಿನ್ನಮಾನಸಾ ॥ ೩೮ ॥

ವೃದ್ಧೌ ದ್ವೌ ಪತಿತೌ ಪಾರ್ಶ್ವೇ ನಿಃಶ್ವಸಂತಾವಚೇತನೌ।
ಶುಶ್ರೂಷಂತೀ ಪ್ರಬೋಧಂತೀ ರುದತೀ ಚ ತಯೋಃ ಪುರಃ ॥ ೩೯ ॥

ದಶದಿಕ್ಷು ನಿರೀಕ್ಷಂತೀ ರಕ್ಷಿತಾರಂ ನಿಜಂ ವಪುಃ।
ವೀಜ್ಯಮಾನಾ ಶತಸ್ತ್ರೀಭಿರ್ಬೋಧ್ಯಮಾನಾ ಮುಹುರ್ಮುಹುಃ ॥ ೪೦ ॥

ದೃಷ್ಟ್ವಾ ದೂರಾದ್ಗತಃ ಸೋಽಹಂ ಕೌತುಕೇನ ತದಂತಿಕಮ್।
ಮಾಂ ದೃಷ್ಟ್ವಾ ಚೋತ್ಥಿತಾ ಬಾಲಾ ವಿಹ್ವಲಾ ಚಾಬ್ರವೀದ್ವಚಃ ॥ ೪೧ ॥

*ಬಾಲೋವಾಚ*

ಭೋ ಭೋಃ ಸಾಧೋ ಕ್ಷಣಂ ತಿಷ್ಠ ಮಚ್ಚಿಂತಾಮಪಿ ನಾಶಯ।
ದರ್ಶನಂ ತವ ಲೋಕಸ್ಯ ಸರ್ವಥಾಘಹರಂ ಪರಮ್ ॥ ೪೨ ॥

ಬಹುಧಾ ತವ ವಾಕ್ಯೇನ ದುಃಖಶಾಂತಿರ್ಭವಿಷ್ಯತಿ।
ಯದಾ ಭಾಗ್ಯಂ ಭವೇದ್ಭೂರಿ ಭವತೋ ದರ್ಶನಂ ತದಾ ॥ ೪೩ ॥

*ನಾರದ ಉವಾಚ*

ಕಾಸಿ ತ್ವಂ ಕಾವಿಮೌ ಚೇಮಾ ನಾರ್ಯಃ ಕಾಃ ಪದ್ಮಲೋಚನಾಃ।
ವದ ದೇವಿ ಸವಿಸ್ತಾರಂ ಸ್ವಸ್ಯ ದುಃಖಸ್ಯ ಕಾರಣಮ್ ॥ ೪೪ ॥

*ಬಾಲೋವಾಚ*

ಅಹಂ ಭಕ್ತಿರಿತಿ ಖ್ಯಾತಾ ಇಮೌ ಮೇ ತನಯೌ ಮತೌ।
ಜ್ಞಾನವೈರಾಗ್ಯನಾಮಾನೌ ಕಾಲಯೋಗೇನ ಜರ್ಜರೌ ॥ ೪೫ ॥

ಮಹಾತ್ಮರ ಆಶ್ರಮ, ತೀರ್ಥಗಳು, ನದಿಗಳು ಇವುಗಳ ಮೇಲೆ ಯವನರು ಅಧಿಕಾರ ನಡೆಸುತ್ತಿದ್ದಾರೆ. ಆ ದುಷ್ಟರು ಅನೇಕ ದೇವಾಲಯಗಳನ್ನು ನಾಶಮಾಡಿರುವರು. ॥ ೩೪ ॥ ಈಗಲಂತೂ ಇಲ್ಲಿ ಯೋಗಿಗಳೂ, ಸಿದ್ಧರೂ, ಜ್ಞಾನಿಗಳೂ ಯಾರೂ ಇಲ್ಲ. ಸತ್ಕರ್ಮ ಮಾಡುವವರು ಯಾರೂ ಇಲ್ಲ. ಎಲ್ಲ ಸಾಧನೆಗಳು ಈಗ ಕಲಿಯುಗರೂಪಿ ದಾವಾನಲದಿಂದ ಸುಟ್ಟು ಭಸ್ಮವಾಗಿ ಹೋಗಿವೆ. ॥ ೩೫ ॥ ಈ ಕಲಿಕಾಲದಲ್ಲಿ ಎಲ್ಲೆಡೆ ಪೇಟೆಯಲ್ಲಿ ಅನ್ನವನ್ನು ಮಾರುತ್ತಿದ್ದಾರೆ. ಬ್ರಾಹ್ಮಣರು ಹಣ ಪಡೆದು ವೇದವನ್ನು ಕಲಿಸುತ್ತಿದ್ದಾರೆ. ಸ್ತ್ರೀಯರು ಸದಾಚಾರ ಹೀನರಾಗಿದ್ದಾರೆ. ॥ ೩೬ ॥

ಈ ವಿಧವಾಗಿ ಕಲಿಯುಗದ ದೋಷಗಳನ್ನು ನೋಡುತ್ತಾ ಪೃಥಿವಿಯಲ್ಲಿ ಸಂಚರಿಸುತ್ತಾ ನಾನು ಯಮುನಾ ತೀರಕ್ಕೆ ಬಂದೆ. ಅಲ್ಲಿ ಭಗವಾನ್ ಶ್ರೀಕೃಷ್ಣನ ಅನೇಕ ಲೀಲೆಗಳು ನಡೆದಿದ್ದವು. ॥ ೩೭ ॥ ಮುನಿವರ್ಯರೇ ! ಕೇಳಿರಿ. ಅಲ್ಲಿ ನಾನು ಬಹುದೊಡ್ಡ ಆಶ್ಚರ್ಯವನ್ನು ನೋಡಿದೆ. ಅಲ್ಲಿ ಓರ್ವ ಯುವತಿಸ್ತ್ರೀಯು ಖಿನ್ನ ಮನಸ್ಕಳಾಗಿ ಕುಳಿತಿದ್ದಳು. ॥ ೩೮ ॥ ಅವಳ ಬಳಿಯಲ್ಲಿ ಇಬ್ಬರು ವೃದ್ಧಪುರುಷರು ಅಚೇತನರಾಗಿ ಬಿದ್ದು ಜೋರಾಗಿ ಉಸಿರಾಡುತ್ತಿದ್ದರು. ಆ ತರುಣಿಯು ಅವರ ಸೇವೆ ಮಾಡುತ್ತಾ, ಕೆಲವೊಮ್ಮೆ ಅವರನ್ನು ಎಚ್ಚರಿಸಲು ಪ್ರಯತ್ನಿಸಿದರೆ, ಕೆಲವೊಮ್ಮೆ ಅವರ ಮುಂದೆ ಅಳುತ್ತಿದ್ದಳು. ॥ ೩೯ ॥ ಅವಳು ತನ್ನ ಶರೀರದ ರಕ್ಷಕನಾದ ಪರಮಾತ್ಮನನ್ನು ಹತ್ತು ದಿಕ್ಕುಗಳಲ್ಲಿಯೂ ನೋಡುತ್ತಿದ್ದಳು. ಅವಳ ಸುತ್ತಲೂ ನೂರಾರು ಸ್ತ್ರೀಯರು ಅವಳಿಗೆ ಗಾಳಿ ಬೀಸುತ್ತಾ ಪದೇ-ಪದೇ ಸಮಾಧಾನ ಪಡಿಸುತ್ತಿದ್ದರು. ॥ ೪೦ ॥ ದೂರದಿಂದಲೇ ಇವೆಲ್ಲವನ್ನು ನೋಡಿ ನಾನು ಕುತೂಹಲದಿಂದ ಅವಳ ಬಳಿಗೆ ಹೋದೆ. ನನ್ನನ್ನು ನೋಡುತ್ತಲೇ ಆ ಯುವತಿಯು ಎದ್ದು ನಿಂತು ಬಹು ವ್ಯಾಕುಲತೆಯಿಂದ ಹೇಳ ತೊಡಗಿದಳು. ॥ ೪೧ ॥

**ಯುವತಿಯು ಹೇಳಿದಳು** – ಮಹಾತ್ಮರೇ ! ಒಂದು ಕ್ಷಣ ನಿಂತುಕೊಳ್ಳಿ, ಹಾಗೂ ನನ್ನ ಚಿಂತೆಯನ್ನು ದೂರಮಾಡಿರಿ. ನಿಮ್ಮ ದರ್ಶನವಾದರೋ ಪ್ರಪಂಚದ ಸಮಸ್ತ ಪಾಪಗಳನ್ನು ಸರ್ವಥಾ ನಾಶ ಮಾಡುವುದಾಗಿದೆ. ॥ ೪೨ ॥ ನಿಮ್ಮ ಮಾತಿನಿಂದ ನನ್ನ ದುಃಖವು ಶಾಂತವಾದೀತು. ಮನುಷ್ಯನಿಗೆ ಭಾಗ್ಯವು ಒದಗಿದಾಗಲೇ ನಿಮ್ಮ ದರ್ಶನವಾಗುತ್ತದೆ. ॥ ೪೩ ॥

**ನಾರದರು ಹೇಳುತ್ತಾರೆ** – ಆಗ ನಾನು ಆ ಸ್ತ್ರೀಯ ಬಳಿ ಕೇಳಿದೆ – ದೇವಿ ! ನೀನು ಯಾರು ? ಇವರಿಬ್ಬರು ಪುರುಷರು ನಿನಗೇನಾಗಬೇಕು ? ನಿನ್ನ ಬಳಿಯಲ್ಲಿ ಕಮಲನಯನೆಯರಾದ ಈ ದೇವಿಯರು ಯಾರು ? ನೀನು ನನಗೆ ವಿವರವಾಗಿ ನಿನ್ನ ದುಃಖದ ಕಾರಣವನ್ನು ಹೇಳು. ॥ ೪೪ ॥

**ಯುವತಿಯು ಇಂತೆಂದಳು** – ನನ್ನ ಹೆಸರು ಭಕ್ತಿಯೆಂದು. ಇವರಿಬ್ಬರೂ ಜ್ಞಾನ ಮತ್ತು ವೈರಾಗ್ಯರೆಂಬ ನನ್ನ ಮಕ್ಕಳಾಗಿದ್ದಾರೆ. ಕಾಲದ ಮಹಿಮೆಯಿಂದ ಇವರು ಹೀಗೆ ಜರ್ಜರಿತರಾಗಿದ್ದಾರೆ. ॥ ೪೫ ॥ ಈ ದೇವಿಯರು ಗಂಗಾದಿ ನದಿಗಳು. ಇವರೆಲ್ಲರೂ ನನ್ನ

ಗಂಗಾದ್ಯಾಃ ಸರಿತಶ್ಚೇಮಾ ಮತ್ಸೇವಾರ್ಥಂ ಸಮಾಗತಾಃ ।
ತಥಾಪಿ ನ ಚ ಮೇ ಶ್ರೇಯಃ ಸೇವಿತಾಯಾಃ ಸುರೈರಪಿ ॥ ೪೬ ॥

ಇದಾನೀಂ ಶೃಣು ಮದ್ವಾರ್ತಾಂ ಸಚಿತ್ತಸ್ತ್ವಂ ತಪೋಧನ ।
ವಾರ್ತಾ ಮೇ ವಿತತಾಪ್ಯಸ್ತಿ ತಾಂ ಶ್ರುತ್ವಾ ಸುಖಮಾವಹ ॥ ೪೭ ॥

ಉತ್ಪನ್ನಾ ದ್ರವಿಡೇ ಸಾಹಂ ವೃದ್ಧಿಂ ಕರ್ಣಾಟಕೇ ಗತಾ ।
ಕ್ವಚಿತ್ಕ್ವಚಿನ್ಮಹಾರಾಷ್ಟ್ರೇ ಗುರ್ಜರೇ ಜೀರ್ಣತಾಂ ಗತಾ ॥ ೪೮ ॥

ತತ್ರ ಘೋರಕಲೇರ್ಯೋಗಾತ್ಪಾಖಂಡೈಃ ಖಂಡಿತಾಂಗಕಾ ।
ದುರ್ಬಲಾಹಂ ಚಿರಂ ಯಾತಾ ಪುತ್ರಾಭ್ಯಾಂ ಸಹ ಮಂದತಾಮ್ ॥ ೪೯ ॥

ವೃಂದಾವನಂ ಪುನಃ ಪ್ರಾಪ್ಯ ನವೀನೇವ ಸುರೂಪಿಣೀ ।
ಜಾತಾಹಂ ಯುವತೀ ಸಮ್ಯಕ್ ಪ್ರೇಷ್ಠರೂಪಾ ತು ಸಾಂಪ್ರತಮ್ ॥ ೫೦ ॥

ಇಮೌ ತು ಶಯಿತಾವತ್ರ ಸುತೌ ಮೇ ಕ್ಲಿಶ್ಯತಃ ಶ್ರಮಾತ್ ।
ಇದಂ ಸ್ಥಾನಂ ಪರಿತ್ಯಜ್ಯ ವಿದೇಶಂ ಗಮ್ಯತೇ ಮಯಾ ॥ ೫೧ ॥

ಜರಠತ್ವಂ ಸಮಾಯಾತೌ ತೇನ ದುಃಖೇನ ದುಃಖಿತಾ ।
ಸಾಹಂ ತು ತರುಣೀ ಕಸ್ಮಾತ್ಸುತೌ ವೃದ್ಧಾವಿಮೌ ಕುತಃ ॥ ೫೨ ॥

ತ್ರಯಾಣಾಂ ಸಹಚಾರಿತ್ವಾದ್ವೈಪರೀತ್ಯಂ ಕುತಃ ಸ್ಥಿತಮ್ ।
ಘಟತೇ ಜರಠಾ ಮಾತಾ ತರುಣೌ ತನಯಾವಿತಿ ॥ ೫೩ ॥

ಅತಃ ಶೋಚಾಮಿ ಚಾತ್ಮಾನಂ ವಿಸ್ಮಯಾವಿಷ್ಟಮಾನಸಾ ।
ವದ ಯೋಗನಿಧೇ ಧೀಮನ್ ಕಾರಣಂ ಚಾತ್ರ ಕಿಂ ಭವೇತ್ ॥ ೫೪ ॥

*ನಾರದ ಉವಾಚ*

ಜ್ಞಾನೇನಾತ್ಮನಿ ಪಶ್ಯಾಮಿ ಸರ್ವಮೇತತ್ತವಾನಘೇ ।
ನ ವಿಷಾದಸ್ತ್ವಯಾ ಕಾರ್ಯೋ ಹರಿಃ ಶಂ ತೇ ಕರಿಷ್ಯತಿ ॥ ೫೫ ॥

*ಸೂತ ಉವಾಚ*

ಕ್ಷಣಮಾತ್ರೇಣ ತಜ್ಜ್ಞಾತ್ವಾ ವಾಕ್ಯಮೂಚೇ ಮುನೀಶ್ವರಃ ॥ ೫೬ ॥

*ನಾರದ ಉವಾಚ*

ಶೃಣುಷ್ವಾವಹಿತಾ ಬಾಲೇ ಯುಗೋಽಯಂ ದಾರುಣಃ ಕಲಿಃ ।
ತೇನ ಲುಪ್ತಃ ಸದಾಚಾರೋ ಯೋಗಮಾರ್ಗಸ್ತಪಾಂಸಿ ಚ ॥ ೫೭ ॥

ಜನಾ ಅಘಾಸುರಾಯಂತೇ ಶಾಠ್ಯ ದುಷ್ಕರ್ಮಕಾರಿಣಃ ।
ಇಹ ಸಂತೋ ವಿಷೀದಂತಿ ಪ್ರಹೃಷ್ಯಂತಿ ಹ್ಯ ಸಾಧವಃ ।
ಧತ್ತೇ ಧೈರ್ಯಂ ತು ಯೋ ಧೀಮಾನ್ಸ ಧೀರಃ ಪಂಡಿತೋಽಥವಾ ॥ ೫೮ ॥

ಸೇವೆ ಮಾಡಲೆಂದು ಬಂದಿರುವರು. ಹೀಗೆ ಸಾಕ್ಷಾತ್ ದೇವಿಯರಿಂದ ಸೇವಿತಳಾಗಿದ್ದರೂ ನನಗೆ ಸುಖ-ಶಾಂತಿ ಇಲ್ಲ. ॥ ೪೬ ॥ ತಪೋಧನರೇ! ಮನಸ್ಸಿಟ್ಟು ನನ್ನ ವೃತ್ತಾಂತವನ್ನು ಕೇಳಿರಿ. ನನ್ನ ಕಥೆಯಾದರೋ ಪ್ರಸಿದ್ಧವೇ ಇದೆ, ಆದರೂ ಕೂಡ ಅದನ್ನು ಕೇಳಿ ನೀವು ನನಗೆ ಶಾಂತಿಯನ್ನು ಕರುಣಿಸಿರಿ. ॥ ೪೭ ॥

ನಾನು ದ್ರವಿಡ ದೇಶದಲ್ಲಿ ಹುಟ್ಟಿದೆ. ಕರ್ನಾಟಕದಲ್ಲಿ ಬೆಳೆದೆ. ಮಹಾರಾಷ್ಟ್ರದ ಕೆಲವೆಡೆ ಸಮ್ಮಾನಿತಳಾದೆ. ಆದರೆ ಗುಜರಾತದಲ್ಲಿ ನನಗೆ ವೃದ್ಧಾಪ್ಯವು ಆವರಿಸಿತು. ॥ ೪೮ ॥ ಅಲ್ಲಿ ಘೋರಕಲಿ-ಯುಗದ ಪ್ರಭಾವದಿಂದ ಪಾಷಂಡಿಗಳು ನನ್ನ ಅಂಗ ಭಂಗಮಾಡಿಬಿಟ್ಟರು. ಅನೇಕ ಕಾಲದವರೆಗೆ ಈ ಅವಸ್ಥೆಯಲ್ಲೇ ಇದ್ದ ಕಾರಣ ನಾನು ನನ್ನ ಪುತ್ರರೊಂದಿಗೆ ದುರ್ಬಲಳಾಗಿ ನಿಸ್ತೇಜಳಾಗಿ-ಹೋದೆ. ॥ ೪೯ ॥ ನಾನು ವೃಂದಾವನಕ್ಕೆ ಬಂದಂದಿನಿಂದ ಪುನಃ ಪರಮ ಸುಂದರ ರೂಪವತಿಯೂ, ನವಯುವತಿಯೂ ಆದೆ. ॥ ೫೦ ॥ ಆದರೆ ಎದುರಿಗೆ ಬಿದ್ದಿರುವ ಇವರಿಬ್ಬರೂ ನನ್ನ ಪುತ್ರರು ಬಳಲಿ ದುಃಖಿತರಾಗಿದ್ದಾರೆ. ಈಗ ನಾನು ಈ ಸ್ಥಾನವನ್ನು ಬಿಟ್ಟು ಬೇರೆಲ್ಲಾದರೂ ಹೋಗಲು ಬಯಸುತ್ತಿರುವೆನು. ॥ ೫೧ ॥ ಇವರಿಬ್ಬರೂ ಮುದುಕರಾಗಿದ್ದಾರೆ. ಇದರಿಂದಲೇ ನಾನು ದುಃಖಿತಳಾಗಿದ್ದೇನೆ. ನಾನು ತರುಣಿಯಾಗಿದ್ದು ಇವರಿಬ್ಬರು ಪುತ್ರರೂ ಮುದುಕರೇಕೇ? ॥ ೫೨ ॥ ನಾವು ಮೂವರೂ ಜೊತೆ-ಜೊತೆಯಾಗಿ ಇರುವವರು. ಆದರೂ ಹೀಗೆ ವಿಪರೀತವೇಕೆ? ತಾಯಿ ವೃದ್ಧಳಾಗಿದ್ದು ಪುತ್ರರು ತರುಣರಾಗ ಬೇಕಾಗಿತ್ತು. ॥ ೫೩. ॥ ಇದರಿಂದ ನಾನು ಆಶ್ಚರ್ಯಚಕಿತಳಾಗಿ ನನ್ನ ಈ ಅವಸ್ಥೆಯ ಕುರಿತು ಶೋಕಿಸುತ್ತಿದ್ದೇನೆ. ನೀವು ಪರಮ ಬುದ್ಧಿಶಾಲಿಗಳೂ, ಯೋಗನಿಧಿಗಳೂ ಆಗಿರುವಿರಿ. ಆದ್ದರಿಂದ ಇದರ ಕಾರಣವೇನಿರಬಹುದು? ಎಂಬುದನ್ನು ಹೇಳಿರಿ. ॥ ೫೪ ॥

**ನಾರದರೆಂದರು** – ಸಾಧ್ವಿ! ನಾನು ನನ್ನ ಹೃದಯದಲ್ಲಿ ಜ್ಞಾನ ದೃಷ್ಟಿಯಿಂದ ನಿನ್ನ ಎಲ್ಲ ದುಃಖದ ಕಾರಣವನ್ನು ನೋಡುತ್ತಿದ್ದೇನೆ. ನೀನು ವಿಷಾದಿಸಬಾರದು. ಶ್ರೀಹರಿಯು ನಿನ್ನ ಕಲ್ಯಾಣ ಮಾಡುವನು. ॥ ೫೫ ॥

**ಸೂತಪುರಾಣಿಕರು ಹೇಳುತ್ತಾರೆ** – ಮುನಿವರ್ಯರಾದ ನಾರದರು ಒಂದು ಕ್ಷಣದಲ್ಲೇ ಅವಳ ಕಾರಣವನ್ನು ತಿಳಿದುಕೊಂಡು ಹೇಳಿದರು- ॥ ೫೬ ॥

**ನಾರದರೆಂದರು** - ದೇವಿ! ಎಚ್ಚರಿಕೆಯಿಂದ ಕೇಳು. ಇದು ದಾರುಣವಾದ ಕಲಿಯುಗವಾಗಿದೆ ಆದರಿಂದಾಗಿ ಈಗ ಸದಾಚಾರ, ಯೋಗಮಾರ್ಗ, ತಪಸ್ಸು ಮೊದಲಾದವುಗಳೆಲ್ಲ ಲುಪ್ತವಾಗಿ ಹೋದುವು. ॥ ೫೭ ॥ ಜನರು ಶಠರಾಗಿ ದುಷ್ಕರ್ಮದಲ್ಲಿ ತೊಡಗಿ ಅಘಾಸುರರಂತಾಗಿದ್ದಾರೆ. ಪ್ರಪಂಚದಲ್ಲಿ ಎಲ್ಲಿ ನೋಡಿದರಲ್ಲಿ ಸತ್ಪುರುಷರು ದುಃಖದಿಂದ ಮ್ಲಾನರಾಗಿದ್ದಾರೆ ಹಾಗೂ ದುಷ್ಟರು ಸುಖಿಗಳಾಗುತ್ತಿದ್ದಾರೆ. ಇಂತಹ ಕಾಲದಲ್ಲಿ ಬುದ್ಧಿವಂತರಾದ ಧೈರ್ಯವುಳ್ಳ ಪುರುಷರೇ ಜ್ಞಾನಿಗಳು ಅಥವಾ ಪಂಡಿತರಾಗಿದ್ದಾರೆ. ॥ ೫೮ ॥ ಭೂಮಿಯು ಕ್ರಮಶಃ ಪ್ರತಿವರ್ಷ ಶೇಷನಿಗೆ

**ಅಸ್ಪೃಶ್ಯಾನವಲೋಕ್ಯೇಯಂ ಶೇಷಭಾರಕರೀ ಧರಾ।**
**ಪದೇ ಪದೇ ಕ್ರಮಾಜ್ಞಾತಾ ಮಂಗಲಂ ನಾಪಿ ದೃಶ್ಯತೇ ॥ ೫೯ ॥**

**ನ ತ್ವಾಮಪಿ ಸುತೈಃ ಸಾಕಂ ಕೋಽಪಿ ಪಶ್ಯತಿ ಸಾಂಪ್ರತಮ್।**
**ಉಪೇಕ್ಷಿತಾನುರಾಗಾಂಧ್ಯೈರ್ಜರ್ಜರತ್ವೇನ ಸಂಸ್ಥಿತಾ ॥ ೬೦ ॥**

**ವೃಂದಾವನಸ್ಯ ಸಂಯೋಗಾತ್ ಪುನಸ್ತ್ವಂ ತರುಣೀ ನವಾ।**
**ಧನ್ಯಂ ವೃಂದಾವನಂ ತೇನ ಭಕ್ತಿರ್ನೃತ್ಯತಿ ಯತ್ರ ಚ ॥ ೬೧ ॥**

**ಅತ್ರೇಮೌ ಗ್ರಾಹಕಾಭಾವಾನ್ನ ಜರಾಮಪಿ ಮುಂಚತಃ।**
**ಕಿಂಚಿದಾತ್ಮಸುಖೇನೇಹ ಪ್ರಸುಪ್ತಿರ್ಮನ್ಯತೇಽನಯೋಃ ॥ ೬೨ ॥**

*ಭಕ್ತಿರುವಾಚ*

**ಕಥಂ ಪರೀಕ್ಷಿತಾ ರಾಜ್ಞಾ ಸ್ಥಾಪಿತೋ ಹ್ಯಶುಚಿಃ ಕಲಿಃ।**
**ಪ್ರವೃತ್ತೇ ತು ಕಲೌ ಸರ್ವಸಾರಃ ಕುತ್ರ ಗತೋ ಮಹಾನ್ ॥ ೬೩ ॥**

**ಕರುಣಾಪರೇಣ ಹರಿಣಾಪ್ಯಧರ್ಮಃ ಕಥಮೀಕ್ಷ್ಯತೇ।**
**ಇಮಂ ಮೇ ಸಂಶಯಂ ಛಿಂಧಿ ತ್ವದ್ವಾಚಾ ಸುಖಿತಾಸ್ಮ್ಯಹಮ್ ॥ ೬೪ ॥**

*ನಾರದ ಉವಾಚ*

**ಯದಿ ಪೃಷ್ಟಸ್ತ್ವಯಾ ಬಾಲೇ ಪ್ರೇಮತಃ ಶ್ರವಣಂ ಕುರು।**
**ಸರ್ವಂ ವಕ್ಷ್ಯಾಮಿ ತೇ ಭದ್ರೇ ಕಶ್ಮಲಂ ತೇ ಗಮಿಷ್ಯತಿ ॥ ೬೫ ॥**

**ಯದಾ ಮುಕುಂದೋ ಭಗವಾನ್ ಕ್ಷ್ಮಾಂ ತ್ಯಕ್ತ್ವಾ ಸ್ವಪದಂ ಗತಃ।**
**ತದ್ದಿನಾತ್ಕಲಿರಾಯಾತಃ ಸರ್ವಸಾಧನಬಾಧಕಃ ॥ ೬೬ ॥**

**ದೃಷ್ಟೋ ದಿಗ್ವಿಜಯೇ ರಾಜ್ಞಾ ದೀನವಚ್ಛರಣಂ ಗತಃ।**
**ನ ಮಯಾ ಮಾರಣೀಯೋಽಯಂ ಸಾರಂಗ ಇವ ಸಾರಭುಕ್ ॥ ೬೭ ॥**

**ಯತ್ಫಲಂ ನಾಸ್ತಿ ತಪಸಾ ನ ಯೋಗೇನ ಸಮಾಧಿನಾ।**
**ತತ್ಫಲಂ ಲಭತೇ ಸಮ್ಯಕ್ಕಲೌ ಕೇಶವಕೀರ್ತನಾತ್ ॥ ೬೮ ॥**

**ಏಕಾಕಾರಂ ಕಲಿಂ ದೃಷ್ಟ್ವಾ ಸಾರವತ್ಸಾರನೀರಸಮ್।**
**ವಿಷ್ಣುರಾತಃ ಸ್ಥಾಪಿತವಾನ್ ಕಲಿಜಾನಾಂ ಸುಖಾಯ ಚ ॥ ೬೯ ॥**

**ಕುಕರ್ಮಾಚರಣಾತ್ಸಾರಃ ಸರ್ವತೋ ನಿರ್ಗತೋಽಧುನಾ।**
**ಪದಾರ್ಥಾಃ ಸಂಸ್ಥಿತಾ ಭೂಮೌ ಬೀಜಹೀನಾಸ್ತುಷಾ ಯಥಾ ॥ ೭೦ ॥**

**ವಿಪ್ರೈರ್ಭಾಗವತೀ ವಾರ್ತಾ ಗೇಹೇ ಗೇಹೇ ಜನೇ ಜನೇ।**
**ಕಾರಿತಾ ಕಣಲೋಭೇನ ಕಥಾಸಾರಸ್ತತೋ ಗತಃ ॥ ೭೧ ॥**

ಭಾರವಾಗ ತೊಡಗಿದೆ. ಈಗ ಇದನ್ನು ಮುಟ್ಟುವುದಿರಲಿ, ನೋಡಲೂ ಕೂಡ ಯೋಗ್ಯವಾಗಿ ಉಳಿದಿಲ್ಲ. ಇದರಲ್ಲಿ ಎಲ್ಲಿಯೂ ಮಂಗಳವು ಕಂಡುಬರುವುದೇ ಇಲ್ಲ. ॥ ೫೯ ॥ ಈಗ ಯಾರಿಗೂ ಪುತ್ರರೊಂದಿಗೆ ನಿನ್ನ ದರ್ಶನವೂ ಆಗುತ್ತಿಲ್ಲ. ವಿಷಯಾನುರಾಗದ ಕಾರಣ ಅಂಧರಾದ ಜೀವಿಗಳಿಂದ ಉಪೇಕ್ಷಿತಳಾಗಿ ನೀನು ಜರ್ಜರಿತಳಾಗಿ ಹೋಗಿರುವೆ. ॥ ೬೦ ॥ ವೃಂದಾವನದ ಸಂಯೋಗದಿಂದ ನೀನು ಮತ್ತೆ ನವತರುಣಿಯಾಗಿರುವೆ. ಈ ವೃಂದಾವನ ಧಾಮವು ಧನ್ಯವಾಗಿದೆ. ಏಕೆಂದರೆ, ಇಲ್ಲಿ ಸರ್ವತ್ರ ಭಕ್ತಿಯು ನೃತ್ಯವಾಡುತ್ತಿದೆ. ॥ ೬೧ ॥ ಆದರೆ ನಿನ್ನ ಈ ಇಬ್ಬರು ಪುತ್ರರನ್ನು ಇಲ್ಲಿ ಬಯಸುವವರೇ ಇಲ್ಲ. ಅದಕ್ಕಾಗಿ ಇವರ ಮುದಿತನವು ಕಳೆದು ಹೋಗಿಲ್ಲ. ಇಲ್ಲಿ ಇವರಿಗೆ ಸ್ವಲ್ಪ ಆತ್ಮಸುಖ (ಭಗವತ್ ಆನಂದ)ದ ಪ್ರಾಪ್ತಿಯಾದ್ದರಿಂದ ಇವರು ಮಲಗಿದಂತೆ ಕಂಡು ಬರುತ್ತಿದ್ದಾರೆ. ॥ ೬೨ ॥

**ಭಕ್ತಿಯು ಹೇಳಿದಳು** - ರಾಜಾ ಪರೀಕ್ಷಿತನು ಈ ಪಾಪೀ ಕಲಿಯುಗವನ್ನು ಇಲ್ಲಿ ಏಕೆ ಇರಲು ಬಿಟ್ಟನು ? ಅದು ಬರುತ್ತಲೇ ಎಲ್ಲ ವಸ್ತುಗಳ ಸಾರವು ಎಲ್ಲಿಗೆ ಹೊರಟು ಹೋಯಿತೋ ತಿಳಿಯದು. ॥ ೬೩ ॥ ಕರುಣಾಮಯನಾದ ಶ್ರೀಹರಿಯು ಈ ಅಧರ್ಮವನ್ನು ಹೇಗೆ ನೋಡುತ್ತಾನೆ ? ಮುನಿವರ್ಯ ! ನನ್ನ ಈ ಸಂದೇಹವನ್ನು ದೂರಮಾಡಿರಿ. ನಿಮ್ಮ ವಚನಗಳಿಂದ ನನಗೆ ಬಹಳ ಶಾಂತಿ ದೊರೆತಿದೆ. ॥ ೬೪ ॥

**ನಾರದರೆಂದರು** - ಎಲೈ ಭಕ್ತಿಯೇ ! ನೀನು ಕೇಳಿದ್ದರಿಂದ ಪ್ರೇಮದಿಂದ ಆಲಿಸು. ಶುಭಪ್ರದಳೇ ! ನಾನೆಲ್ಲವನ್ನು ಹೇಳುವೆನು. ಇದರಿಂದ ನಿನ್ನ ದುಃಖವು ದೂರವಾಗುವುದು. ॥ ೬೫ ॥ ಭಗವಾನ್ ಶ್ರೀಕೃಷ್ಣನು ಈ ಭೂಲೋಕವನ್ನು ಬಿಟ್ಟು ತನ್ನ ಪರಮಧಾಮಕ್ಕೆ ಹೊರಟು ಹೋದಂದಿನಿಂದ ಇಲ್ಲಿ ಸಮಸ್ತ ಸಾಧನೆಗಳಲ್ಲಿಬಾಧೆಯನ್ನೊಡ್ಡುವ ಕಲಿಯುಗವು ಆವರಿಸಿಬಿಟ್ಟಿದೆ. ॥ ೬೬ ॥ ದಿಗ್ವಿಜಯದ ಸಮಯದಲ್ಲಿ ರಾಜಾ ಪರೀಕ್ಷಿತನ ದೃಷ್ಟಿಯು ಕಲಿಯುಗದ ಮೇಲೆ ಬಿದ್ದಾಗ ಅದು ದೀನವಾಗಿ ಅವನಿಗೆ ಶರಣಾಯಿತು. ಭ್ರಮರದಂತೆ ಸಾರಗ್ರಾಹಿಯಾದ ರಾಜನು ಇದನ್ನು ನಾನು ಕೊಲ್ಲಬಾರದು ಎಂದು ನಿಶ್ಚಯಿಸಿದನು. ॥ ೬೭ ॥ ಏಕೆಂದರೆ, ತಪಸ್ಸು, ಯೋಗ, ಸಮಾಧಿಯಿಂದಲೂ ಸಿಗದಿರುವ ಫಲವು ಕಲಿಯುಗದಲ್ಲಿ ಶ್ರೀಹರಿಯ ಕೀರ್ತನೆಯಿಂದಲೇ ಸುಲಭವಾಗಿ ದೊರೆಯುತ್ತದೆ. ॥ ೬೮ ॥ ಈ ಪ್ರಕಾರ ಸಾರಹೀನವಾದರೂ ಅದನ್ನು ಇದೊಂದೇ ದೃಷ್ಟಿಯಿಂದ ಸಾರಯುಕ್ತವೆಂದರಿತು ಅವನು ಕಲಿಯುಗದಲ್ಲಿ ಹುಟ್ಟುವ ಜೀವಿಗಳ ಸುಖಕ್ಕಾಗಿಯೇ ಅದನ್ನು ಇರಲು ಬಿಟ್ಟನು. ॥ ೬೯ ॥

ಈಗ ಜನರಲ್ಲಿ ಕುಕರ್ಮದಲ್ಲಿ ಪ್ರವೃತ್ತಿಯಿರುವ ಕಾರಣ ಎಲ್ಲ ವಸ್ತುಗಳ ಸಾರವು ಹೊರಟು ಹೋಗಿದೆ. ಪೃಥಿವಿಯ ಎಲ್ಲ ಪದಾರ್ಥಗಳು ಬೀಜಹೀನವಾದ ಹೊಟ್ಟಿಗೆ ಸಮಾನವಾಗಿವೆ. ॥ ೭೦ ॥ ಬ್ರಾಹ್ಮಣರು ಕೇವಲ ಧನ-ಧಾನ್ಯದ ಲೋಭದಿಂದ ಮನೆ-ಮನೆಗಳಲ್ಲಿ ಹಾಗೂ ಎಲ್ಲ ಜನರಿಗೆ (ಅಭಕ್ತರಿಗೆ, ಅಪಾತ್ರರಿಗೆ) ಭಾಗವತದ ಕಥೆಯನ್ನು ಹೇಳತೊಡಗಿರುವರು. ಇದರಿಂದ ಕಥೆಯ ಸಾರವು ಹೊರಟು ಹೋಯಿತು. ॥ ೭೧ ॥

ಅತ್ಯುಗ್ರಭೂರಿಕರ್ಮಾಣೋ ನಾಸ್ತಿಕಾ ರೌರವಾ ಜನಾಃ ।
ತೇऽಪಿ ತಿಷ್ಠಂತಿ ತೀರ್ಥೇಷು ತೀರ್ಥಸಾರಸ್ತತೋ ಗತಃ ॥ ೭೨ ॥

ಕಾಮಕ್ರೋಧಮಹಾಲೋಭತೃಷ್ಣಾ ವ್ಯಾಕುಲಚೇತಸಃ ।
ತೇऽಪಿ ತಿಷ್ಠಂತಿ ತಪಸಿ ತಪಸ್ಸಾರಸ್ತತೋ ಗತಃ ॥ ೭೩ ॥

ಮನಸಶ್ಚಾಜಯಾಲ್ಲೋಭಾದ್ದಂಭಾತ್ಪಾಖಂಡ ಸಂಶ್ರಯಾತ್ ।
ಶಾಸ್ತ್ರಾನಭ್ಯಸನಾಚ್ಚೈವ ಧ್ಯಾನಯೋಗಫಲಂ ಗತಮ್ ॥ ೭೪ ॥

ಪಂಡಿತಾಸ್ತು ಕಲತ್ರೇಣ ರಮಂತೇ ಮಹಿಷಾ ಇವ ।
ಪುತ್ರಸ್ಯೋತ್ಪಾದನೇ ದಕ್ಷಾ ಅದಕ್ಷಾ ಮುಕ್ತಿ ಸಾಧನೇ ॥ ೭೫ ॥

ನ ಹಿ ವೈಷ್ಣವತಾ ಕುತ್ರ ಸಂಪ್ರದಾಯಪುರಸ್ಸರಾ ।
ಏವಂ ಪ್ರಲಯತಾಂ ಪ್ರಾಪ್ತೋ ವಸ್ತುಸಾರಃ ಸ್ಥಲೇ ಸ್ಥಲೇ ॥ ೭೬ ॥

ಅಯಂ ತು ಯುಗಧರ್ಮೋ ಹಿ ವರ್ತತೇ ಕಸ್ಯ ದೂಷಣಮ್ ।
ಅತಸ್ತು ಪುಂಡರೀಕಾಕ್ಷಃ ಸಹತೇ ನಿಕಟೇ ಸ್ಥಿತಃ ॥ ೭೭ ॥

*ಸೂತ ಉವಾಚ*

ಇತಿ ತದ್ವಚನಂ ಶ್ರುತ್ವಾ ವಿಸ್ಮಯಂ ಪರಮಂ ಗತಾ ।
ಭಕ್ತಿರೂಚೇ ವಚೋ ಭೂಯಃ ಶ್ರೂಯತಾಂ ತಚ್ಚ ಶೌನಕ ॥ ೭೮ ॥

*ಭಕ್ತಿರುವಾಚ*

ಸುರರ್ಷೇ ತ್ವಂ ಹಿ ಧನ್ಯೋऽಸಿ ಮದ್ಭಾಗ್ಯೇನ ಸಮಾಗತಃ ।
ಸಾಧೂನಾಂ ದರ್ಶನಂ ಲೋಕೇ ಸರ್ವಸಿದ್ಧಿ ಕರಂ ಪರಮ್ ॥ ೭೯ ॥

ಜಯತಿ ಜಗತಿ ಮಾಯಾಂ ಯಸ್ಯ ಕಾಯಾಧವಸ್ತೇ
ವಚನರಚನಮೇಕಂ ಕೇವಲಂ ಚಾಕಲಯ್ಯ ।
ಧ್ರುವಪದಮಪಿ ಯಾತೋ ಯತ್ಕೃಪಾತೋ ಧ್ರುವೋऽಯಂ
ಸಕಲಕುಶಲಪಾತ್ರಂ ಬ್ರಹ್ಮಪುತ್ರಂ ನತಾಸ್ಮಿ ॥ ೮೦ ॥

ತೀರ್ಥಗಳಲ್ಲಿ ಅನೇಕ ಪ್ರಕಾರದ ಅತ್ಯಂತ ಘೋರ ಕರ್ಮ ಮಾಡುವವರೂ, ನಾಸ್ತಿಕರೂ, ನರಕ ಭಾಜನರೂ ಆದ ಜನರೇ ಇರತೊಡಗಿದ್ದಾರೆ. ಇದರಿಂದ ತೀರ್ಥಗಳ ಪ್ರಭಾವವೂ ಹೊರಟು ಹೊಗುತ್ತಾ ಇದೆ. ॥ ೭೨ ॥ ಕಾಮ, ಕ್ರೋಧ, ಮಹಾನ್‌ಲೋಭ, ತೃಷ್ಣೆ ಇವುಗಳಿಂದ ನಿರಂತರ ಚಿತ್ತವೂ ತಳಮಳಿಸುವವರೂ ಕೂಡ ತಪಸ್ಸಿನ ಅಣಕಮಾಡ ತೊಡಗಿದರು. ಅದರಿಂದ ತಪಸ್ಸಿನ ಸಾರವೂ ಹೊರಟು ಹೋಯಿತು. ॥ ೭೩ ॥ ಮನಸ್ಸಿನ ಮೇಲೆ ಹತೋಟಿ ಇಲ್ಲದ್ದರಿಂದ ಲೋಭ, ದಂಭ, ಪಾಷಂಡತನವನ್ನು ಆಶ್ರಯಿಸಿದ್ದರಿಂದ ಹಾಗೂ ಶಾಸ್ತ್ರದ ಅಭ್ಯಾಸ ಮಾಡದೇ ಇರುವುದರಿಂದ ಧ್ಯಾನಯೋಗದ ಫಲವೂ ಮುಗಿದು ಹೋಯಿತು. ॥ ೭೪ ॥ ಪಂಡಿತರಾದವರು ತಮ್ಮ ಪತ್ನೀಯರೊಂದಿಗೆ ಪಶುಗಳಂತೆ ರಮಿಸುತ್ತಾರೆ. ಅವರಲ್ಲಿ ಸಂತಾನವನ್ನು ಉತ್ಪಾದಿಸುವುದರಲ್ಲಿ ಕುಶಲತೆ ಕಂಡು ಬರುತ್ತದೆ. ಆದರೆ ಮುಕ್ತಿ ಸಾಧನೆಯಲ್ಲಿ ಅವರು ಅಕುಶಲರಾಗಿದ್ದಾರೆ. ॥ ೭೫ ॥ ಸಂಪ್ರದಾಯಕ್ಕನುಸಾರ ಪ್ರಾಪ್ತವಾದ ವಿಷ್ಣುಭಕ್ತಿ ಎಲ್ಲಿಯೂ ಕಂಡುಬರುವುದಿಲ್ಲ. ಹೀಗೆ ಎಲ್ಲೆಡೆ ಎಲ್ಲ ವಸ್ತುಗಳ ಸಾರವು ಉಡುಗಿ ಹೋಗಿದೆ. ॥ ೭೬ ॥ ಇದಾದರೋ ಈ ಯುಗದ ಸ್ವಭಾವವೇ ಆಗಿದೆ. ಇದರಲ್ಲಿ ಯಾರ ದೋಷವೂ ಇಲ್ಲ. ಇದರಿಂದಲೇ ಭಗವಾನ್ ಪುಂಡರೀಕಾಕ್ಷನು ಅತಿಸಮೀಪ ಇರುತ್ತಿದ್ದರೂ ಇದೆಲ್ಲವನ್ನು ಸಹಿಸುತ್ತಿರುವನು. ॥ ೭೭ ॥

**ಸೂತಪುರಾಣಿಕರು ಹೇಳುತ್ತಾರೆ** - ಶೌನಕರೇ! ಹೀಗೆ ದೇವರ್ಷಿ ನಾರದರ ಮಾತನ್ನು ಕೇಳಿ, ಭಕ್ತಿಗೆ ಅತ್ಯಂತ ಆಶ್ಚರ್ಯವಾಯಿತು. ಮತ್ತೆ ಅವಳು ಹೇಳಿದುದನ್ನು ಮುಂದೆ ಕೇಳಿರಿ. ॥ ೭೮ ॥

**ಭಕ್ತಿಯು ಹೇಳಿದಳು** - ದೇವರ್ಷಿಗಳೇ! ನೀವು ಧನ್ಯರಾಗಿದ್ದೀರಿ. ನಿಮ್ಮ ಸಮಾಗಮವಾದುದು ನನ್ನ ದೊಡ್ಡ ಸೌಭಾಗ್ಯವೇ ಸರಿ! ಜಗತ್ತಿನಲ್ಲಿ ಸಾಧುಗಳ ದರ್ಶನವೇ ಸಮಸ್ತ ಸಿದ್ಧಿಗಳ ಪರಮ ಕಾರಣವಾಗಿದೆ. ॥ ೭೯ ॥ ಕೇವಲ ಒಮ್ಮೆಯೇ ನಿಮ್ಮ ಉಪದೇಶವನ್ನು ಕೇಳಿದ ಕಯಾಧು ಕುಮಾರ ಪ್ರಹ್ಲಾದನು ಮಾಯೆಯನ್ನು ಗೆದ್ದಿರುವನು. ಧ್ರುವನೂ ಕೂಡ ನಿಮ್ಮ ಕೃಪೆಯಿಂದಲೇ ಧ್ರುವ ಪದವನ್ನು ಪಡೆದು ಕೊಂಡಿದ್ದನು. ನೀವು ಸರ್ವ ಮಂಗಲ ಮಯರೂ, ಬ್ರಹ್ಮದೇವರ ಪುತ್ರರೂ ಆಗಿರುವಿರಿ. ನಿಮಗೆ ನಾನು ನಮಸ್ಕರಿಸುತ್ತೇನೆ. ॥ ೮೦ ॥

*ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥*

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ ಭಕ್ತಿನಾರದಸಮಾಗಮೋ ನಾಮ ಪ್ರಥಮೋऽಧ್ಯಾಯಃ ॥ ೧ ॥

# ಎರಡನೆಯ ಅಧ್ಯಾಯ

## ಭಕ್ತಿದೇವಿಯ ದುಃಖವನ್ನು ದೂರಗೊಳಿಸಲು ನಾರದರ ಪ್ರಯತ್ನ

*ನಾರದ ಉವಾಚ*

**ವೃಥಾ ಖೇದಯಸೇ ಬಾಲೇ ಅಹೋ ಚಿಂತಾತುರಾ ಕಥಮ್ ।**
**ಶ್ರೀಕೃಷ್ಣಚರಣಾಂಭೋಜಂ ಸ್ಮರ ದುಃಖಂ ಗಮಿಷ್ಯತಿ ॥ ೧ ॥**

**ದ್ರೌಪದೀ ಚ ಪರಿತ್ರಾತಾ ಯೇನ ಕೌರವಕಶ್ಮಲಾತ್ ।**
**ಪಾಲಿತಾ ಗೋಪಸುಂದರ್ಯಃ ಸ ಕೃಷ್ಣಃ ಕ್ವಾಪಿ ನೋ ಗತಃ ॥ ೨ ॥**

**ತ್ವಂ ತು ಭಕ್ತಿಃ ಪ್ರಿಯಾ ತಸ್ಯ ಸತತಂ ಪ್ರಾಣತೋಽಧಿಕಾ ।**
**ತ್ವಯಾಽಽಹೂತಸ್ತು ಭಗವಾನ್ ಯಾತಿ ನೀಚಗೃಹೇಷ್ವಪಿ ॥ ೩ ॥**

**ಸತ್ಯಾದಿತ್ರಿಯುಗೇ ಬೋಧವೈರಾಗ್ಯೌ ಮುಕ್ತಿಸಾಧಕೌ ।**
**ಕಲೌ ತು ಕೇವಲಾ ಭಕ್ತಿರ್ಬ್ರಹ್ಮ ಸಾಯುಜ್ಯಕಾರಿಣೀ ॥ ೪ ॥**

**ಇತಿ ನಿಶ್ಚಿತ್ಯ ಚಿದ್ರೂಪಃ ಸದ್ರೂಪಾಂ ತ್ವಾಂ ಸಸರ್ಜ ಹ ।**
**ಪರಮಾನಂದಚಿನ್ಮೂರ್ತಿಃ ಸುಂದರೀಂ ಕೃಷ್ಣವಲ್ಲಭಾಮ್ ॥ ೫ ॥**

**ಬದ್ಧ್ವಾಂಜಲಿಂ ತ್ವಯಾ ಪೃಷ್ಟಂ ಕಿಂ ಕರೋಮೀತಿ ಚೈಕದಾ ।**
**ತ್ವಾಂ ತದಾಽಽಜ್ಞಾಪಯತ್ಕೃಷ್ಣೋ ಮದ್ಭಕ್ತಾನ್ ಪೋಷಯೇತಿ ಚ ॥ ೬ ॥**

**ಅಂಗೀಕೃತಂ ತ್ವಯಾ ತದ್ವೈ ಪ್ರಸನ್ನೋಽಭೂದ್ಧರಿಸ್ತದಾ ।**
**ಮುಕ್ತಿಂ ದಾಸೀಂ ದದೌ ತುಭ್ಯಂ ಜ್ಞಾನವೈರಾಗ್ಯಕಾವಿಮೌ ॥ ೭ ॥**

**ಪೋಷಣಂ ಸ್ವೇನ ರೂಪೇಣ ವೈಕುಂಠೇ ತ್ವಂ ಕರೋಷಿ ಚ ।**
**ಭೂಮೌ ಭಕ್ತವಿಪೋಷಾಯ ಛಾಯಾರೂಪಂ ತ್ವಯಾ ಕೃತಮ್ ॥ ೮ ॥**

**ಮುಕ್ತಿಂ ಜ್ಞಾನಂ ವಿರಕ್ತಿಂ ಚ ಸಹ ಕೃತ್ವಾ ಗತಾ ಭುವಿ ।**
**ಕೃತಾದಿದ್ವಾಪರಸ್ಯಾಂತಂ ಮಹಾನಂದೇನ ಸಂಸ್ಥಿತಾ ॥ ೯ ॥**

**ಕಲೌ ಮುಕ್ತಿಃ ಕ್ಷಯಂ ಪ್ರಾಪ್ತಾ ಪಾಖಂಡಾಮಯಪೀಡಿತಾ ।**
**ತ್ವದಾಜ್ಞಯಾ ಗತಾ ಶೀಘ್ರಂ ವೈಕುಂಠಂ ಪುನರೇವ ಸಾ ॥ ೧೦ ॥**

**ಸ್ಮೃತಾ ತ್ವಯಾಪಿ ಚಾತ್ರೈವ ಮುಕ್ತಿರಾಯಾತಿ ಯಾತಿ ಚ ।**
**ಪುತ್ರೀಕೃತ್ಯ ತ್ವಯೇಮೌ ಚ ಪಾರ್ಶ್ವೇ ಸ್ವಸ್ಯೈವ ರಕ್ಷಿತೌ ॥ ೧೧ ॥**

**ನಾರದರು ಹೇಳುತ್ತಾರೆ** – ಎಲೈ ಭಕ್ತಿಯೇ ! ನೀನು ವ್ಯರ್ಥವಾಗಿ ಏಕೆ ದುಃಖಿಸುತ್ತಿರುವೆ ? ನೀನು ಇಷ್ಟು ಚಿಂತಾತುರ ಏಕೆ ಆಗಿರುವೆ ? ಭಗವಾನ್ ಶ್ರೀಕೃಷ್ಣನ ಚರಣಕಮಲಗಳನ್ನು ಚಿಂತಿಸು. ಅವನ ಕೃಪೆಯಿಂದ ನಿನ್ನ ದುಃಖವೆಲ್ಲವೂ ದೂರವಾದೀತು. ॥ ೧ ॥ ಆ ಕೃಷ್ಣನು ಕೌರವರ ಅತ್ಯಾಚಾರದಿಂದ ದ್ರೌಪದಿಯನ್ನು ರಕ್ಷಿಸಿದ್ದನು. ಗೋಪಸುಂದರಿಯರನ್ನು ಸನಾಥಗೊಳಿಸಿದ್ದನು. ಅವನು ದೂರ ಎಲ್ಲಿಗಾದರೂ ಹೋಗಿರುವನೇನು ? ॥ ೨ ॥ ಅದರಲ್ಲಿಯೂ ನೀನು ಭಕ್ತಿಯಾಗಿರುವೆ ಹಾಗೂ ಯಾವಾಗಲೂ ಅವನಿಗೆ ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯಳಾಗಿರುವೆ. ನೀನು ಕರೆದಾಗಲಾದರೋ ಭಗವಂತನು ನೀಚರ ಮನೆಗಳಿಗೂ ಹೊರಟುಹೋಗುತ್ತಾನೆ. ॥ ೩ ॥ ಕೃತ, ತ್ರೇತಾ, ದ್ವಾಪರ – ಈ ಮೂರು ಯುಗಗಳಲ್ಲಿ ಜ್ಞಾನ, ವೈರಾಗ್ಯಗಳು ಮುಕ್ತಿಯ ಸಾಧನೆಗಳಾಗಿದ್ದವು. ಆದರೆ ಕಲಿಯುಗದಲ್ಲಾದರೋ ಕೇವಲ ಭಕ್ತಿಯೇ ಬ್ರಹ್ಮಸಾಯುಜ್ಯ (ಮೋಕ್ಷ)ವನ್ನು ಕರುಣಿಸುವಂತಹುದಾಗಿದೆ. ॥ ೪ ॥ ಇದನ್ನು ಯೋಚಿಸಿಯೇ ಪರಮಾನಂದ ಚಿನ್ಮೂರ್ತಿ ಜ್ಞಾನಸ್ವರೂಪ ಶ್ರೀಹರಿಯು ತನ್ನ ಸತ್ಸ್ವರೂಪದಿಂದಲೇ ನಿನ್ನನ್ನು ರಚಿಸಿರುವನು. ನೀನು ಸಾಕ್ಷಾತ್ ಶ್ರೀಕೃಷ್ಣಚಂದ್ರನ ಪ್ರಿಯೆಯಾಗಿದ್ದು ಪರಮ ಸುಂದರಳಾಗಿರುವೆ. ॥ ೫ ॥ ಒಮ್ಮೆ ನೀನು ಭಗವಂತನಲ್ಲಿ 'ನಾನೇನು ಮಾಡಲೀ' ಎಂದು ಕೈಜೋಡಿಸಿಕೊಂಡು ಕೇಳಿದಾಗ, ಅವನು 'ನನ್ನ ಭಕ್ತರನ್ನು ಪೋಷಿಸು' ಎಂದು ನಿನಗೆ ಆಜ್ಞಾಪಿಸಿದ್ದನು. ॥ ೬ ॥ ನೀನು ಭಗವಂತನ ಆ ಆಜ್ಞೆಯನ್ನು ಸ್ವೀಕರಿಸಿದ್ದರಿಂದ ನಿನ್ನ ಮೇಲೆ ಶ್ರೀಹರಿಯು ಬಹುವಾಗಿ ಪ್ರಸನ್ನನಾಗಿ, ನಿನ್ನ ಸೇವೆಗಾಗಿ ಮುಕ್ತಿಯನ್ನು ನಿನಗೆ ದಾಸಿಯಾಗಿ ಒಪ್ಪಿಸಿದ್ದನು ಮತ್ತು ಈ ಜ್ಞಾನ, ವೈರಾಗ್ಯರನ್ನೂ ಪುತ್ರರಾಗಿ ಕರುಣಿಸಿದ್ದನು. ॥ ೭ ॥ ನೀನು ನಿನ್ನ ಸಾಕ್ಷಾತ್ ಸ್ವರೂಪದಿಂದ ವೈಕುಂಠಧಾಮದಲ್ಲಿಯೇ ಭಕ್ತರನ್ನು ಪೋಷಿಸುತ್ತಿರುವೆ. ಭೂಲೋಕದಲ್ಲಾದರೋ ನೀನು ಅವರ ಪುಷ್ಟಿಗಾಗಿ ಕೇವಲ ಛಾಯಾರೂಪವನ್ನು ಧರಿಸಿರುವೆ. ॥ ೮ ॥

ಆಗ ನೀನು ಮುಕ್ತಿ, ಜ್ಞಾನ, ವೈರಾಗ್ಯ ಇವರೊಂದಿಗೆ ಭೂಲೋಕಕ್ಕೆ ಬಂದೆ ಹಾಗೂ ಕೃತಯುಗದಿಂದ ದ್ವಾಪರದವರೆಗೆ ಬಹಳ ಆನಂದದಿಂದ ವಾಸಿಸಿದೆ. ॥ ೯ ॥ ಕಲಿಯುಗದಲ್ಲಿ ನಿನ್ನ ದಾಸಿಯಾದ ಮುಕ್ತಿಯು ಪಾಖಂಡರೂಪೀ ರೋಗದಿಂದ ಪೀಡಿತಳಾಗಿ ಕ್ಷೀಣವಾಗತೊಡಗಿದ್ದಳು. ಇದರಿಂದ ಅವಳಾದರೋ ಕೂಡಲೇ ನಿನ್ನ ಅಪ್ಪಣೆಯಂತೆ ವೈಕುಂಠಲೋಕಕ್ಕೆ ಹೊರಟು ಹೋದಳು. ॥ ೧೦ ॥ ಈ ಲೋಕದಲ್ಲಿಯೂ ನೀನು ನೆನೆದಾಗಲೇ ಅವಳು ಬರುತ್ತಾಳೆ, ಮತ್ತೆ ಪುನಃ ಹೊರಟುಹೋಗುತ್ತಾಳೆ. ಆದರೆ ಈ ಜ್ಞಾನ ವೈರಾಗ್ಯರನ್ನು ನೀನು ಪುತ್ರರೆಂದು ಬಗೆದು ನಿನ್ನ ಬಳಿಯಲ್ಲೇ ಇರಿಸಿಕೊಂಡಿರುವೆ. ॥ ೧೧ ॥ ಈ ಕಲಿಯುಗದಲ್ಲಿ ಜನರ ಉಪೇಕ್ಷೆ

ಉಪೇಕ್ಷಾತಃ ಕಲೌ ಮಂದೌ ವೃದ್ಧೌ ಜಾತೌ ಸುತೌ ತವ ।
ತಥಾಪಿ ಚಿಂತಾಂ ಮುಂಚತ್ವಮುಪಾಯಂ ಚಿಂತಯಾಮ್ಯಹಮ್
॥ ೧೨ ॥

ಕಲಿನಾ ಸದೃಶಃ ಕೋಽಪಿ ಯುಗೋ ನಾಸ್ತಿ ವರಾನನೇ ।
ತಸ್ಮಿಂಸ್ತ್ವಾಂ ಸ್ಥಾಪಯಿಷ್ಯಾಮಿ ಗೇಹೇ ಗೇಹೇ ಜನೇ ಜನೇ
॥ ೧೩ ॥

ಅನ್ಯಧರ್ಮಾಂಸ್ತಿರಸ್ಕೃತ್ಯ ಪುರಸ್ಕೃತ್ಯ ಮಹೋತ್ಸವಾನ್ ।
ತದಾ ನಾಹಂ ಹರೇರ್ದಾಸೋ ಲೋಕೇ ತ್ವಾಂ ನ ಪ್ರವರ್ತಯೇ
॥ ೧೪ ॥

ತ್ವದನ್ವಿತಾಶ್ಚ ಯೇ ಜೀವಾ ಭವಿಷ್ಯಂತಿ ಕಲಾವಿಹ ।
ಪಾಪಿನೋಽಪಿ ಗಮಿಷ್ಯಂತಿ ನಿರ್ಭಯಂ ಕೃಷ್ಣಮಂದಿರಮ್
॥ ೧೫ ॥

ಯೇಷಾಂ ಚಿತ್ತೇ ವಸೇದ್ಭಕ್ತಿಃ ಸರ್ವದಾ ಪ್ರೇಮರೂಪಿಣೀ ।
ನ ತೇ ಪಶ್ಯಂತಿ ಕೀನಾಶಂ ಸ್ವಪ್ನೇಽಪ್ಯಮಲಮೂರ್ತಯಃ
॥ ೧೬ ॥

ನ ಪ್ರೇತೋ ನ ಪಿಶಾಚೋ ವಾ ರಾಕ್ಷಸೋ ವಾಸುರೋಽಪಿ ವಾ ।
ಭಕ್ತಿಯುಕ್ತಮನಸ್ಕಾನಾಂ ಸ್ಪರ್ಶನೇ ನ ಪ್ರಭುರ್ಭವೇತ್
॥ ೧೭ ॥

ನ ತಪೋಭಿರ್ನ ವೇದೈಶ್ಚ ನ ಜ್ಞಾನೇನಾಪಿ ಕರ್ಮಣಾ ।
ಹರಿರ್ಹಿ ಸಾಧ್ಯತೇ ಭಕ್ತ್ಯಾ ಪ್ರಮಾಣಂ ತತ್ರ ಗೋಪಿಕಾಃ
॥ ೧೮ ॥

ನೃಣಾಂ ಜನ್ಮ ಸಹಸ್ರೇಣ ಭಕ್ತೌ ಪ್ರೀತಿರ್ಹಿ ಜಾಯತೇ ।
ಕಲೌ ಭಕ್ತಿಃ ಕಲೌ ಭಕ್ತಿರ್ಭಕ್ತ್ಯಾ ಕೃಷ್ಣಃ ಪುರಃ ಸ್ಥಿತಃ
॥ ೧೯ ॥

ಭಕ್ತಿ ದ್ರೋಹಕರಾ ಯೇ ಚ ತೇ ಸೀದಂತಿ ಜಗತ್ತ್ರಯೇ ।
ದುರ್ವಾಸಾ ದುಃಖಮಾಪನ್ನಃ ಪುರಾ ಭಕ್ತವಿನಿಂದಕಃ
॥ ೨೦ ॥

ಅಲಂ ವ್ರತೈರಲಂ ತೀರ್ಥೈರಲಂ ಯೋಗೈರಲಂ ಮಖೈಃ ।
ಅಲಂ ಜ್ಞಾನಕಥಾಲಾಪೈರ್ಭಕ್ತಿರೇಕೈವ ಮುಕ್ತಿದಾ
॥ ೨೧ ॥

*ಸೂತ ಉವಾಚ*

ಇತಿ ನಾರದನಿರ್ಣೀತಂ ಸ್ವಮಾಹಾತ್ಮ್ಯಂ ನಿಶಮ್ಯ ಸಾ ।
ಸರ್ವಾಂಗ ಪುಷ್ಟಿ ಸಂಯುಕ್ತಾ ನಾರದಂ ವಾಕ್ಯಮಬ್ರವೀತ್
॥ ೨೨ ॥

*ಭಕ್ತಿರುವಾಚ*

ಅಹೋ ನಾರದ ಧನ್ಯೋಽಸಿ ಪ್ರೀತಿಸ್ತೇ ಮಯಿ ನಿಶ್ಚಲಾ ।
ನ ಕದಾಚಿದ್ವಿಮುಂಚಾಮಿ ಚಿತ್ತೇ ಸ್ಥಾಸ್ಯಾಮಿ ಸರ್ವದಾ
॥ ೨೩ ॥

ಯಿಂದಾಗಿ ನಿನ್ನ ಈ ಪುತ್ರರು ಉತ್ಸಾಹಹೀನರಾಗಿ ವೃದ್ಧರಾಗಿದ್ದಾರೆ. ಹೀಗಿದ್ದರೂ ನೀನು ಚಿಂತಿಸಬೇಡ. ನಾನು ಇವರ ನವಜೀವನದ ಉಪಾಯವನ್ನು ಯೋಚಿಸುತ್ತೇನೆ. ॥ ೧೨ ॥ ಸುಂದರೀ! ಕಲಿ ಯುಗಕ್ಕೆ ಸಮಾನವಾದ ಯುಗವೂ ಬೇರೊಂದಿಲ್ಲ. ಈ ಯುಗದಲ್ಲಿ ನಾನು ನಿನ್ನನ್ನು ಮನೆ-ಮನೆಗಳಲ್ಲಿ ಪ್ರತಿಯೋರ್ವ ಮನುಷ್ಯನ ಹೃದಯದಲ್ಲಿ ಸ್ಥಾಪಿಸುತ್ತೇನೆ. ॥ ೧೩ ॥ ನೋಡುತ್ತಿರು. ಬೇರೆ ಎಲ್ಲ ಧರ್ಮಗಳನ್ನು ಅದುಮಿ, ಭಕ್ತಿವಿಷಯವಾದ ಮಹೋತ್ಸವಗಳನ್ನು ಮುಂದೆ ಮಾಡಿ ನಾನು ಲೋಕದಲ್ಲಿ ನಿನ್ನ ಪ್ರಚಾರಮಾಡದಿದ್ದರೆ ನಾನು ಶ್ರೀಹರಿಯ ದಾಸನೇ ಅಲ್ಲ. ॥ ೧೪ ॥ ಈ ಕಲಿಯುಗದಲ್ಲಿ ನಿನ್ನಿಂದ ಯುಕ್ತರಾದ ಜೀವಿಗಳು ಪಾಪಿಗಳಾಗಿದ್ದರೂ ತಡವದೆ ಭಗವಾನ್ ಶ್ರೀಕೃಷ್ಣನ ಅಭಯಧಾಮವನ್ನು ಪಡೆದುಕೊಳ್ಳುವರು. ॥ ೧೫ ॥ ಹೃದಯದಲ್ಲಿ ನಿರಂತರ ಪ್ರೇಮ ಸ್ವರೂಪೀ ಭಕ್ತಿಯು ವಾಸಿಸುವ ಶುದ್ಧಾಂತಃಕರಣ ಪುರುಷರು ಸ್ವಪ್ನದಲ್ಲಿಯೂ ಯಮ ರಾಜನನ್ನು ನೋಡಲಾರರು. ॥ ೧೬ ॥ ಹೃದಯದಲ್ಲಿ ಭಕ್ತಿಯು ವಾಸಿಸುವವರನ್ನು ಪ್ರೇತ, ಪಿಶಾಚ, ರಾಕ್ಷಸ, ದೈತ್ಯ ಮೊದಲಾದ ವರು ಮುಟ್ಟಲೂ ಕೂಡ ಸಮರ್ಥರಾಗಲಾರರು. ॥ ೧೭ ॥ ಭಗವಂತನನ್ನು ತಪಸ್ಸು, ವೇದಾಧ್ಯಯನ, ಜ್ಞಾನ, ಕರ್ಮ ಮುಂತಾದ ಯಾವ ಸಾಧನೆಗಳಿಂದಲೂ ವಶಪಡಿಸಿಕೊಳ್ಳಲಾಗದು. ಅವನು ಕೇವಲ ಭಕ್ತಿಯಿಂದಲೇ ವಶೀಭೂತನಾಗುತ್ತಾನೆ. ಇದರಲ್ಲಿ ವ್ರಜದ ಗೋಪಿಯರೇ ಪ್ರಮಾಣರಾಗಿದ್ದಾರೆ. ॥ ೧೮ ॥ ಮನುಷ್ಯರ ಸಾವಿ ರಾರು ಜನ್ಮಗಳ ಪುಣ್ಯ-ಪ್ರಭಾವದಿಂದಲೇ ಭಕ್ತಿಯಲ್ಲಿ ಪ್ರೀತಿ ಉಂಟಾಗುತ್ತದೆ. ಕಲಿಯುಗದಲ್ಲಿ ಖಂಡಿತವಾಗಿ ಭಕ್ತಿಯೇ ಸಾರ ವಾಗಿದೆ. ಭಕ್ತಿಯಿಂದಲಾದರೋ ಸಾಕ್ಷಾತ್ ಶ್ರೀಕೃಷ್ಣಚಂದ್ರನು ಇದಿರ್ಗಡೆ ಉಪಸ್ಥಿತನಾಗುತ್ತಾನೆ. ॥ ೧೯ ॥ ಭಕ್ತಿಯೊಂದಿಗೆ ದ್ರೋಹಮಾಡುವವರು ಮೂರೂ ಲೋಕಗಳಲ್ಲಿ ದುಃಖವೇ-ದುಃಖ ವನ್ನು ಪಡೆಯುತ್ತಾರೆ. ಹಿಂದೆ ಭಕ್ತ ಅಂಬರೀಷನ ತಿರಸ್ಕಾರ ಮಾಡಿದ್ದ ರಿಂದ ದುರ್ವಾಸ ಋಷಿಯು ಬಹಳ ಕಷ್ಟಪಡಬೇಕಾ ಯಿತು. ॥ ೨೦ ॥ ವ್ರತ, ತೀರ್ಥ, ಯೋಗ, ಯಜ್ಞ, ಜ್ಞಾನಚರ್ಚೆ ಇವೆಲ್ಲ ಇನ್ನು ಸಾಕು. ಇಂತಹ ಅನೇಕ ಸಾಧನೆಗಳ ಆವಶ್ಯಕತೆ ಇನ್ನಿಲ್ಲ. ಏಕಮಾತ್ರ ಭಕ್ತಿಯೇ ಮುಕ್ತಿಯನ್ನು ಕೊಡುವಂತಹುದಾಗಿದೆ. ॥ ೨೧ ॥

**ಸೂತಪುರಾಣಿಕರು ಹೇಳುತ್ತಾರೆ** – ಹೀಗೆ ನಾರದರು ನಿರ್ಣಯಿಸಿರುವ ತನ್ನ ಮಾಹಾತ್ಮ್ಯವನ್ನು ಕೇಳಿ ಭಕ್ತಿಯ ಸರ್ವಾಂಗ-ಗಳು ಹೃಷ್ಟ-ಪುಷ್ಟವಾದುವು. ಅವಳು ನಾರದರಲ್ಲಿ ಹೇಳತೊಡ-ಗಿದಳು ॥ ೨೨ ॥

**ಭಕ್ತಿಯು ಇಂತೆಂದಳು** – ಓ ನಾರದರೇ! ನೀವು ಧನ್ಯ ರಾಗಿರುವಿರಿ. ನಿಮಗೆ ನನ್ನಲ್ಲಿ ನಿಶ್ಚಲವಾದ ಪ್ರೀತಿ ಇದೆ. ನಾನು ಯಾವಾಗಲೂ ನಿಮ್ಮ ಹೃದಯದಲ್ಲಿ ಇರುವೆನು. ಎಂದೆಂದಿಗೂ ನಿಮ್ಮನ್ನು ಬಿಟ್ಟು ಹೋಗಲಾರೆನು. ॥ ೨೩ ॥ ಸಾಧುಗಳೇ! ನೀವು ತುಂಬಾ ಕೃಪಾಳುಗಳಾಗಿದ್ದೀರಿ. ನೀವು ಕ್ಷಣಮಾತ್ರದಲ್ಲಿ ನನ್ನ ದುಃಖ ವೆಲ್ಲವನ್ನು ದೂರಮಾಡಿದಿರಿ. ಆದರೆ ನನ್ನ ಪುತ್ರರಲ್ಲಿ ಇನ್ನೂ ಚೈತನ್ಯ

ಕೃಪಾಲುನಾ ತ್ವಯಾ ಸಾಧೋ ಮದ್ಬಾಧಾ ಧ್ವಂಸಿತಾ ಕ್ಷಣಾತ್ ।
ಪುತ್ರಯೋಶ್ಚೇತನಾ ನಾಸ್ತಿ ತತೋ ಬೋಧಯ ಬೋಧಯ ॥ ೨೪ ॥

*ಸೂತ ಉವಾಚ*

ತಸ್ಯಾ ವಚಃ ಸಮಾಕರ್ಣ್ಯ ಕಾರುಣ್ಯಂ ನಾರದೋ ಗತಃ ।
ತಯೋರ್ಬೋಧನಮಾರೇಭೇ ಕರಾಗ್ರೇಣ ವಿಮರ್ದಯನ್ ॥ ೨೫ ॥

ಮುಖಂ ಸಂಯೋಜ್ಯ ಕರ್ಣಾಂತೇ ಶಬ್ದಮುಚ್ಚೈಃ ಸಮುಚ್ಚರನ್ ।
ಜ್ಞಾನ ಪ್ರಬುಧ್ಯತಾಂ ಶೀಘ್ರಂ ರೇ ವೈರಾಗ್ಯ ಪ್ರಬುಧ್ಯತಾಮ್ ॥ ೨೬ ॥

ವೇದವೇದಾಂತಘೋಷೈಶ್ಚ ಗೀತಾಪಾಠೈರ್ಮುಹುರ್ಮುಹುಃ ।
ಬೋಧ್ಯಮಾನೌ ತದಾ ತೇನ ಕಥಂಚಿಚ್ಚೋತ್ಥಿತೌ ಬಲಾತ್ ॥ ೨೭ ॥

ನೇತ್ರೈರನವಲೋಕಂತೌ ಜೃಂಭಂತೌ ಸಾಲಸಾವುಭೌ ।
ಬಕವತ್ಪಲಿತೌ ಪ್ರಾಯಃ ಶುಷ್ಕಕಾಷ್ಠಸಮಾಂಗಕೌ ॥ ೨೮ ॥

ಕ್ಷುತ್ಕ್ಷಾಮೌ ತೌ ನಿರೀಕ್ಷ್ಯೈವ ಪುನಃ ಸ್ವಾಪಪರಾಯಣೌ ।
ಋಷಿಶ್ಚಿಂತಾಪರೋ ಜಾತಃ ಕಿಂ ವಿಧೇಯಂ ಮಯೇತಿ ಚ ॥ ೨೯ ॥

ಅಹೋ ನಿದ್ರಾ ಕಥಂ ಯಾತಿ ವೃದ್ಧತ್ವಂ ಚ ಮಹತ್ತರಮ್ ।
ಚಿಂತಯನ್ನಿತಿ ಗೋವಿಂದಂ ಸ್ಮಾರಯಾಮಾಸ ಭಾರ್ಗವ ॥ ೩೦ ॥

ವ್ಯೋಮವಾಣೀ ತದೈವಾಭೂನ್ಮಾ ಋಷೇ ಖಿದ್ಯತಾಮಿತಿ ।
ಉದ್ಯಮಃ ಸಫಲಸ್ತೇಯಂ ಭವಿಷ್ಯತಿ ನ ಸಂಶಯಃ ॥ ೩೧ ॥

ಏತದರ್ಥಂ ತು ಸತ್ಕರ್ಮ ಸುರರ್ಷೇ ತ್ವಂ ಸಮಾಚರ ।
ತತ್ತೇ ಕರ್ಮಾಭಿಧಾಸ್ಯಂತಿ ಸಾಧವಃ ಸಾಧುಭೂಷಣಾಃ ॥ ೩೨ ॥

ಸತ್ಕರ್ಮಣಿ ಕೃತೇ ತಸ್ಮಿನ್ ಸನಿದ್ರಾ ವೃದ್ಧತಾನಯೋಃ ।
ಗಮಿಷ್ಯತಿ ಕ್ಷಣಾದ್ಭಕ್ತಿಃ ಸರ್ವತಃ ಪ್ರಸರಿಷ್ಯತಿ ॥ ೩೩ ॥

ಇತ್ಯಾಕಾಶವಚಃ ಸ್ಪಷ್ಟಂ ತತ್ಸರ್ವೈರಪಿ ವಿಶ್ರುತಮ್ ।
ನಾರದೋ ವಿಸ್ಮಯಂ ಲೇಭೇ ನೇದಂ ಜ್ಞಾತಮಿತಿ ಬ್ರುವನ್ ॥ ೩೪ ॥

*ನಾರದ ಉವಾಚ*

ಅನಯಾऽಕಾಶವಾಣ್ಯಾಪಿ ಗೋಪ್ಯತ್ವೇನ ನಿರೂಪಿತಮ್ ।
ಕಿಂ ವಾ ತತ್ಸಾಧನಂ ಕಾರ್ಯಂ ಯೇನ ಕಾರ್ಯಂ ಭವೇತ್ತಯೋಃ ॥ ೩೫ ॥

ಬಂದಿಲ್ಲವಲ್ಲ! ನೀವು ಇವರನ್ನು ಬೇಗನೇ ಎಚ್ಚರಿಸಿ, ಸಚೇತನರಾಗಿಸಿರಿ. ॥ ೨೪ ॥

**ಸೂತಪುರಾಣಿಕರು ಹೇಳುತ್ತಾರೆ** – ಭಕ್ತಿಯ ಈ ಮಾತುಗಳನ್ನು ಕೇಳಿ ನಾರದರಿಗೆ ತುಂಬಾ ಕರುಣೆ ಉಂಟಾಗಿ, ಅವರು ಜ್ಞಾನ, ವೈರಾಗ್ಯ ಇವರನ್ನು ಕೈಯಿಂದ ಅಲುಗಾಡಿಸುತ್ತಾ ಎಚ್ಚರಿಸತೊಡಗಿದರು. ॥ ೨೫ ॥ ಮತ್ತೆ ಅವರ ಕಿವಿಗೆ ಬಾಯಿಹಚ್ಚಿ ಜೋರಾಗಿ ಎಲೈ ಜ್ಞಾನವೇ! ಬೇಗನೇ ಎಚ್ಚರನಾಗು, ಎಲೈ ವೈರಾಗ್ಯವೇ! ಬೇಗನೇ ಎಚ್ಚರವಾಗು ಎಂದು ಹೇಳಿದರು. ॥ ೨೬ ॥ ಬಳಿಕ ಅವರು ವೇದಧ್ವನಿ, ವೇದಾಂತಘೋಷ, ಪುನಃ-ಪುನಃ ಗೀತೆಯನ್ನು ಪಠಿಸಿ ಅವರನ್ನು ಎಚ್ಚರಿಸಿದರು. ಇದರಿಂದ ಅವರು ಹೇಗಾದರೂ ಬಲವಂತವಾಗಿ ಎಚ್ಚರಗೊಂಡರು. ॥ ೨೭ ॥ ಆದರೆ ಆಲಸ್ಯದ ಕಾರಣ ಅವರಿಬ್ಬರೂ ಆಕಳಿಸುತ್ತಾ, ಕಣ್ಣುಬಿಟ್ಟು ನೋಡದಾದರು. ಅವರ ಕೂದಲು ಕೊಕ್ಕರೆಯಂತೆ ಬೆಳ್ಳಗಾಗಿದ್ದವು. ಅವರ ಅಂಗಾಂಗಗಳು ಒಣಗಿದ ಕಟ್ಟಿಗೆಯಂತಾಗಿ ನಿಸ್ತೇಜ ಹಾಗೂ ಕಠೋರವಾಗಿದ್ದವು. ॥ ೨೮ ॥ ಹೀಗೆ ಹಸಿವು-ಬಾಯಾರಿಕೆಯಿಂದ ಅತ್ಯಂತ ದುರ್ಬಲರಾಗಿದ್ದ ಕಾರಣ ಅವರು ಪುನಃ ಮಲಗುವುದನ್ನು ಕಂಡು ನಾರದರಿಗೆ ಬಹಳ ಚಿಂತೆಯಾಯಿತು. 'ಈಗ ನಾನು ಏನು ಮಾಡಬೇಕು ?' ಎಂದು ಯೋಚಿಸತೊಡಗಿದರು. ॥ ೨೯ ॥ ಇವರ ಈ ನಿದ್ದೆ ಮತ್ತು ಇದರಿಂದಲೂ ಹೆಚ್ಚಾಗಿ ಇವರ ವೃದ್ಧಾವಸ್ಥೆ ಹೇಗೆ ದೂರವಾಗಬಹುದು? ಶೌನಕರೇ! ಈ ಪ್ರಕಾರ ಚಿಂತಿಸುತ್ತಾ ಅವರು ಭಗವಂತನನ್ನು ಸ್ಮರಿಸತೊಡಗಿದರು. ॥ ೩೦ ॥ ಆಗಲೇ ಆಕಾಶವಾಣಿಯೊಂದು ನುಡಿಯಿತು – "ಓ ಮುನಿಯೇ! ದುಃಖಿಸಬೇಡ ನಿನ್ನ ಈ ಉದ್ಯೋಗವು ನಿಃಸಂದೇಹವಾಗಿ ಸಫಲವಾದೀತು. ॥ ೩೧ ॥ ದೇವರ್ಷಿಯೇ! ಇದಕ್ಕಾಗಿ ನೀನು ಒಂದು ಸತ್ಕರ್ಮವನ್ನು ಮಾಡು. ಆ ಕರ್ಮವನ್ನು ನಿನಗೆ ಸಂತಶಿರೋಮಣಿ ಮಹಾನುಭಾವರು ತಿಳಿಸುವರು. ॥ ೩೨ ॥ ಆ ಸತ್ಕರ್ಮದ ಅನುಷ್ಠಾನವನ್ನು ಮಾಡುತ್ತಲೇ ಕ್ಷಣಾರ್ಧದಲ್ಲಿ ಇವರ ನಿದ್ದೆ ಮತ್ತು ವೃದ್ಧಾವಸ್ಥೆಯು ಹೊರಟುಹೋದೀತು. ಎಲ್ಲೆಡೆ ಭಕ್ತಿಯ ಪ್ರಸಾರವಾದೀತು." ॥ ೩೩ ॥ ಈ ಆಕಾಶವಾಣಿಯು ಅಲ್ಲಿ ಎಲ್ಲರಿಗೆ ಸ್ಪಷ್ಟವಾಗಿ ಕೇಳಿಸಿತು. ಇದರಿಂದ ನಾರದರಿಗೆ ತುಂಬಾ ವಿಸ್ಮಯವಾಗಿ 'ನನಗಾದರೋ ಇದರ ಅರ್ಥ ಏನೂ ಅರಿವಾಗಲಿಲ್ಲ' ಎಂದು ಹೇಳತೊಡಗಿದರು. ॥ ೩೪ ॥

**ನಾರದರು ಹೇಳಿದರು** – ಈ ಆಕಾಶವಾಣಿಯೂ ಗುಪ್ತವಾಗಿಯೇ ನುಡಿದಿದೆ. ಯಾವ ಸಾಧನೆ ಮಾಡಿದರೆ ಇವರ ಕಾರ್ಯಸಿದ್ಧವಾದೀತೆಂಬುದನ್ನು ಇದು ಹೇಳಲಿಲ್ಲ. ॥ ೩೫ ॥ ಆ ಸಂತರು ಎಲ್ಲಿ ಸಿಗಬಲ್ಲರೋ ತಿಳಿಯದು. ಯಾವ ವಿಧದಿಂದ ಆ ಸಾಧನೆಯನ್ನು ತಿಳಿಸುವರು? ಈಗ ಆಕಾಶವಾಣಿಯು ಏನೆಲ್ಲ ಹೇಳಿತೋ ಅದಕ್ಕನುಸಾರ ನಾನು ಏನು ಮಾಡಬೇಕು ? ॥ ೩೬ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕರೇ! ಆಗ ಜ್ಞಾನ, ವೈರಾಗ್ಯರಿಬ್ಬರನ್ನು ಅಲ್ಲೇ ಬಿಟ್ಟು ನಾರದ ಮುನಿಗಳು ಅಲ್ಲಿಂದ

ಕ್ವ ಭವಿಷ್ಯಂತಿ ಸಂತಸ್ತೇ ಕಥಂ ದಾಸ್ಯಂತಿ ಸಾಧನಮ್ ।
ಮಯಾತ್ರ ಕಿಂ ಪ್ರಕರ್ತವ್ಯಂ ಯದುಕ್ತಂ ವ್ಯೋಮಭಾಷಯಾ ॥ ೩೬ ॥

*ಸೂತ ಉವಾಚ*

ತತ್ರ ದ್ವಾವಪಿ ಸಂಸ್ಥಾಪ್ಯ ನಿರ್ಗತೋ ನಾರದೋ ಮುನಿಃ ।
ತೀರ್ಥಂ ತೀರ್ಥಂ ವಿನಿಷ್ಕ್ರಮ್ಯ ಪೃಚ್ಛನ್ಮಾರ್ಗೇ ಮುನೀಶ್ವರಾನ್ ॥ ೩೭ ॥

ವೃತ್ತಾಂತಃ ಶ್ರೂಯತೇ ಸರ್ವೈಃ ಕಿಂಚಿನ್ನಿಶ್ಚಿತ್ಯ ನೋಚ್ಯತೇ ।
ಅಸಾಧ್ಯಂ ಕೇಚನ ಪ್ರೋಚುರ್ದುರ್ಜ್ಞೇಯಮಿತಿ ಚಾಪರೇ ।
ಮೂಕೀಭೂತಾಸ್ತಥಾನ್ಯೇ ತು ಕಿಯಂತಸ್ತು ಪಲಾಯಿತಾಃ ॥ ೩೮ ॥

ಹಾಹಾಕಾರೋ ಮಹಾನಾಸೀತ್ ತ್ರೈಲೋಕ್ಯೇ ವಿಸ್ಮಯಾವಹಃ ।
ವೇದವೇದಾಂತಘೋಷೈಶ್ಚ ಗೀತಾಪಾಠೈರ್ವಿಬೋಧಿತಮ್ ॥ ೩೯ ॥

ಭಕ್ತಿಜ್ಞಾನವಿರಾಗಾಣಾಂ ನೋದತಿಷ್ಠತ್ತ್ರಿಕಂ ಯದಾ ।
ಉಪಾಯೋ ನಾಪರೋಽಸ್ತೀತಿ ಕರ್ಣೇ ಕರ್ಣೇಽಜಪಂಜನಾಃ ॥ ೪೦ ॥

ಯೋಗಿನಾ ನಾರದೇನಾಪಿ ಸ್ವಯಂ ನ ಜ್ಞಾಯತೇ ತು ಯತ್ ।
ತತ್ಕಥಂ ಶಕ್ಯತೇ ವಕ್ತುಮಿತರೈರಿಹ ಮಾನುಷೈಃ ॥ ೪೧ ॥

ಏವಮೃಷಿಗಣೈಃಪೃಷ್ಟೈರ್ನಿರ್ಣೀಯೋಕ್ತಂ ದುರಾಸದಮ್ ॥ ೪೨ ॥

ತತಶ್ಚಿಂತಾತುರಃ ಸೋಽಥ ಬದರೀವನಮಾಗತಃ ।
ತಪಶ್ಚರಾಮಿ ಚಾತ್ರೇತಿ ತದರ್ಥಂ ಕೃತನಿಶ್ಚಯಃ ॥ ೪೩ ॥

ತಾವದ್ದದರ್ಶ ಪುರತಃ ಸನಕಾದೀನ್ ಮುನೀಶ್ವರಾನ್ ।
ಕೋಟಿಸೂರ್ಯಸಮಾಭಾಸಾನುವಾಚ ಮುನಿಸತ್ತಮಃ ॥ ೪೪ ॥

*ನಾರದ ಉವಾಚ*

ಇದಾನೀಂ ಭೂರಿಭಾಗ್ಯೇನ ಭವದ್ಭಿಃ ಸಂಗಮೋಽಭವತ್ ।
ಕುಮಾರಾ ಬ್ರುವತಾಂ ಶೀಘ್ರಂ ಕೃಪಾಂ ಕೃತ್ವಾ ಮಮೋಪರಿ ॥ ೪೫ ॥

ಭವಂತೋ ಯೋಗಿನಃ ಸರ್ವೇ ಬುದ್ಧಿಮಂತೋ ಬಹುಶ್ರುತಾಃ ।
ಪಂಚಹಾಯನಸಂಯುಕ್ತಾಃ ಪೂರ್ವೇಷಾಮಪಿ ಪೂರ್ವಜಾಃ ॥ ೪೬ ॥

ಸದಾ ವೈಕುಂಠನಿಲಯಾ ಹರಿಕೀರ್ತನತತ್ಪರಾಃ ।
ಲೀಲಾಮೃತರಸೋನ್ಮತ್ತಾಃ ಕಥಾಮಾತ್ರೈಕಜೀವಿನಃ ॥ ೪೭ ॥

ಹರಿಃ ಶರಣಮೇವಂ ಹಿ ನಿತ್ಯಂ ಯೇಷಾಂ ಮುಖೇ ವಚಃ ।
ಅತಃ ಕಾಲಸಮಾದಿಷ್ಟಾ ಜರಾ ಯುಷ್ಮಾನ್ನ ಬಾಧತೇ ॥ ೪೮ ॥

ಹೊರಟುಬಿಟ್ಟರು. ಪ್ರತಿಯೊಂದು ತೀರ್ಥಕ್ಷೇತ್ರಕ್ಕೆ ಹೋಗಿ, ಮಾರ್ಗದಲ್ಲಿ ಸಿಗುವ ಮುನೀಶ್ವರರಲ್ಲಿ ಆ ಸಾಧನೆಯ ಕುರಿತು ಕೇಳತೊಡಗಿದರು. ॥ ೩೭ ॥ ಅವರ ಮಾತನ್ನು ಎಲ್ಲರೂ ಕೇಳುತ್ತಿದ್ದರು. ಆದರೆ ಅದರ ವಿಷಯದಲ್ಲಿ ಯಾರೂ ನಿಶ್ಚಿತವಾದ ಉತ್ತರವನ್ನು ಕೊಡದಾದರು. ಕೆಲವರು ಅದು ಅಸಾಧ್ಯವೆಂದು ಹೇಳಿದರು. ಕೆಲವರೆಂದರು – ಇದನ್ನು ಸರಿಯಾಗಿ ತಿಳಿಸುವುದು ಕಠಿಣವಾಗಿದೆ. ಕೆಲವರು ಕೇಳಿ ಸುಮ್ಮನಾದರೆ, ಕೆಲ-ಕೆಲವರು ಭಯದಿಂದ ಸುಮ್ಮನೆ ಪಲಾಯನ ಮಾಡಿದರು. ॥ ೩೮ ॥ ತ್ರೈಲೋಕ್ಯದಲ್ಲಿ ಆಶ್ಚರ್ಯಜನಕ ಮಹಾನ್ ಹಾಹಾಕಾರವೆದ್ದಿತು. ಜನರು ಪರಸ್ಪರ ಮಾತಾಡತೊಡಗಿದರು. ಅಯ್ಯಾ! ವೇದಧ್ವನಿ, ವೇದಾಂತಘೋಷ, ಪದೇ-ಪದೇ ಗೀತಾ-ಪಾರಾಯಣ ಕೇಳಿಯೂ ಕೂಡ ಭಕ್ತಿ, ಜ್ಞಾನ, ವೈರಾಗ್ಯ ಇವು ಮೂವರು ಎಚ್ಚರಗೊಳ್ಳದಿರುವಾಗ ಬೇರೆ ಯಾವ ಉಪಾಯವು ಇಲ್ಲ. ॥ ೩೯-೪೦ ॥ ಸಾಕ್ಷಾತ್ ಯೋಗಿರಾಜ ನಾರದರಿಗೂ ತಿಳಿಯದಿರುವುದನ್ನುಬೇರೆ ಸಂಸಾರೀ ಜನರು ಹೇಗೆ ತಿಳಿಸಬಲ್ಲರು? ॥ ೪೧ ॥ ಈ ಪ್ರಕಾರ ಯಾವ-ಯಾವ ಋಷಿಗಳ ಬಳಿ ಇದರ ವಿಷಯದಲ್ಲಿ ಕೇಳಲಾಯಿತೋ ಅವರೆಲ್ಲರು 'ಇದು ದುಃಸಾಧ್ಯವಾಗಿದೆ' ಎಂದು ನಿರ್ಣಯಿಸಿ ಹೇಳಿಬಿಟ್ಟರು. ॥ ೪೨ ॥

ಆಗ ನಾರದರು ತುಂಬಾ ಚಿಂತಾತುರರಾಗಿ ಬದರೀವನಕ್ಕೆ ಬಂದರು. ಜ್ಞಾನ, ವೈರಾಗ್ಯರನ್ನು ಎಚ್ಚರಿಸಲು ನಾನು ಇಲ್ಲಿ ತಪಸ್ಸನ್ನು ಮಾಡುವೆನೆಂದು ನಿಶ್ಚಯಿಸಿದರು. ॥ ೪೩ ॥ ಆಗಲೇ ಕೋಟಿ ಸೂರ್ಯರಂತೆ ತೇಜಸ್ವೀಗಳಾದ ಸನಕಾದಿ ಮುನೀಶ್ವರರು ಅವರಿಗೆ ಇದಿರ್ಗಡೆ ಕಂಡುಬಂದರು. ಅವರನ್ನು ನೋಡಿ ಆ ಮುನಿ ಶ್ರೇಷ್ಠರಾದ ನಾರದರು ಕೇಳತೊಡಗಿದರು. ॥ ೪೪ ॥

ನಾರದರೆಂದರು – ಓ ಮಹಾತ್ಮರೇ! ಈಗ ಮಹದ್ಭಾಗ್ಯದಿಂದ ನನಗೆ ನಿಮ್ಮೊಂದಿಗೆ ಸಮಾಗಮವಾಗಿದೆ. ನೀವು ನನ್ನಮೇಲೆ ಕೃಪೆದೋರಿ ಬೇಗನೇ ಆ ಸಾಧನೆಯನ್ನು ಹೇಳಿರಿ. ॥ ೪೫ ॥ ನೀವೆಲ್ಲರೂ ಮಹಾಯೋಗಿಗಳೂ, ಬುದ್ಧಿವಂತರೂ, ವಿದ್ವಾಂಸರೂ ಆಗಿದ್ದೀರಿ. ನೀವು ನೋಡಲು ಐದುವರ್ಷದ ಬಾಲಕರಂತೆ ಕಂಡುಬಂದರೂ ನೀವು ಪೂರ್ವಜರಿಗೂ ಪೂರ್ವಜರಾಗಿದ್ದೀರಿ. ॥ ೪೬ ॥ ನೀವುಗಳು ಸದಾಕಾಲ ವೈಕುಂಠ ಧಾಮದಲ್ಲೇ ವಾಸಿಸುತ್ತೀರಿ. ನಿರಂತರ ಹರಿಕೀರ್ತನೆಯಲ್ಲೇ ತತ್ಪರರಾಗಿರುವಿರಿ. ಭಗವಲ್ಲೀಲಾಮೃತದ ರಸಾಸ್ವಾದ ಮಾಡುತ್ತಾ ಸದಾ ಅದರಲ್ಲೇ ಉನ್ಮತ್ತರಾಗಿರುವಿರಿ. ಭಗವತ್‌ಕಥೆಯೇ ನಿಮ್ಮ ಜೀವನದ ಏಕಮಾತ್ರ ಆಧಾರವಾಗಿದೆ. ॥ ೪೭ ॥ 'ಹರಿಃ ಶರಣಮ್' ಎಂಬ ವಾಕ್ಯ (ಮಂತ್ರ) ಯಾವಾಗಲೂ ನಿಮ್ಮ ಬಾಯಲ್ಲಿರುತ್ತದೆ. ಇದರಿಂದ ಕಾಲಪ್ರೇರಿತ ವೃದ್ಧಾವಸ್ಥೆಯೂ ನಿಮ್ಮನ್ನು ಬಾಧಿಸುವುದಿಲ್ಲ. ॥ ೪೮ ॥ ಹಿಂದಿನ ಕಾಲದಲ್ಲಿ ನಿಮ್ಮ ಭ್ರೂಭಂಗಮಾತ್ರದಿಂದಲೇ ಭಗವಾನ್ ವಿಷ್ಣುವಿನ ದ್ವಾರಪಾಲಕರಾದ ಜಯ-ವಿಜಯರು ಕೂಡಲೇ ಭುವಿಗೆ ತಳ್ಳಲ್ಪಟ್ಟರು. ಮತ್ತೆ ನಿಮ್ಮ ಕೃಪೆಯಿಂದಲೇ ಅವರು ಪುನಃ ವೈಕುಂಠ

ಯೇಷಾಂ ಭ್ರೂಭಂಗ ಮಾತ್ರೇಣ ದ್ವಾರಪಾಲೌ ಹರೇಃ ಪುರಾ ।
ಭೂಮೌ ನಿಪತಿತೌ ಸದ್ಯೋ ಯತ್ಕೃಪಾತಃ ಪುರಂ ಗತೌ ॥ ೪೯ ॥

ಅಹೋ ಭಾಗ್ಯಸ್ಯ ಯೋಗೇನ ದರ್ಶನಂ ಭವತಾಮಿಹ ।
ಅನುಗ್ರಹಸ್ತು ಕರ್ತವ್ಯೋ ಮಯಿ ದೀನೇ ದಯಾಪರೈಃ ॥ ೫೦ ॥

ಅಶರೀರಗಿರೋಕ್ತಂ ಯತ್ತತ್ಕಿಂ ಸಾಧನಮುಚ್ಯತಾಮ್ ।
ಅನುಷ್ಠೇಯಂ ಕಥಂ ತಾವತ್ಪ್ರಬ್ರುವಂತು ಸವಿಸ್ತರಮ್ ॥ ೫೧ ॥

ಭಕ್ತಿಜ್ಞಾನವಿರಾಗಾಣಾಂ ಸುಖಮುತ್ಪದ್ಯತೇ ಕಥಮ್ ।
ಸ್ಥಾಪನಂ ಸರ್ವವರ್ಣೇಷು ಪ್ರೇಮಪೂರ್ವಂ ಪ್ರಯತ್ನತಃ ॥ ೫೨ ॥

*ಕುಮಾರಾ ಊಚುಃ*

ಮಾ ಚಿಂತಾಂ ಕುರು ದೇವರ್ಷೇ ಹರ್ಷಂ ಚಿತ್ತೇ ಸಮಾವಹ ।
ಉಪಾಯಃ ಸುಖಸಾಧ್ಯೋಽತ್ರ ವರ್ತತೇ ಪೂರ್ವ ಏವ ಹಿ ॥ ೫೩ ॥

ಅಹೋ ನಾರದ ಧನ್ಯೋಽಸಿ ವಿರಕ್ತಾನಾಂ ಶಿರೋಮಣಿಃ ।
ಸದಾ ಶ್ರೀಕೃಷ್ಣದಾಸಾನಾಮಗ್ರಣೀರ್ಯೋಗಭಾಸ್ಕರಃ ॥ ೫೪ ॥

ತ್ವಯಿ ಚಿತ್ರಂ ನ ಮಂತವ್ಯಂ ಭಕ್ತ್ಯರ್ಥಮನುವರ್ತಿನಿ ।
ಘಟತೇ ಕೃಷ್ಣ ದಾಸಸ್ಯ ಭಕ್ತೇಃ ಸಂಸ್ಥಾಪನಾ ಸದಾ ॥ ೫೫ ॥

ಋಷಿಭಿರ್ಬಹವೋ ಲೋಕೇ ಪಂಥಾನಃ ಪ್ರಕಟೀಕೃತಾಃ ।
ಶ್ರಮಸಾಧ್ಯಾಶ್ಚ ತೇ ಸರ್ವೇ ಪ್ರಾಯಃ ಸ್ವರ್ಗಫಲಪ್ರದಾಃ ॥ ೫೬ ॥

ವೈಕುಂಠಸಾಧಕಃ ಪಂಥಾ ಸ ತು ಗೋಪ್ಯೋ ಹಿ ವರ್ತತೇ ।
ತಸ್ಯೋಪದೇಷ್ಟಾ ಪುರುಷಃ ಪ್ರಾಯೋ ಭಾಗ್ಯೇನಲಭ್ಯತೇ ॥ ೫೭ ॥

ಸತ್ಕರ್ಮ ತವ ನಿರ್ದಿಷ್ಟಂ ವ್ಯೋಮವಾಚಾ ತು ಯತ್ಪುರಾ ।
ತದುಚ್ಯತೇ ಶೃಣುಷ್ವಾದ್ಯ ಸ್ಥಿರಚಿತ್ತಃ ಪ್ರಸನ್ನಧೀಃ ॥ ೫೮ ॥

ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ತೇ ತು ಕರ್ಮವಿಸೂಚಕಾಃ ॥ ೫೯ ॥

ಸತ್ಕರ್ಮಸೂಚಕೋ ನೂನಂ ಜ್ಞಾನಯಜ್ಞಃ ಸ್ಮೃತೋ ಬುಧೈಃ ।
ಶ್ರೀಮದ್ಭಾಗವತಾಲಾಪಃ ಸ ತು ಗೀತಃ ಶುಕಾದಿಭಿಃ ॥ ೬೦ ॥

ಭಕ್ತಿಜ್ಞಾನವಿರಾಗಾಣಾಂ ತದ್ಘೋಷೇಣ ಬಲಂ ಮಹತ್ ।
ವ್ರಜಿಷ್ಯತಿ ದ್ವಯೋಃ ಕಷ್ಟಂ ಸುಖಂ ಭಕ್ತೇರ್ಭವಿಷ್ಯತಿ ॥ ೬೧ ॥

ಲೋಕವನ್ನು ಸೇರಿದರು. ॥ ೪೯ ॥ ಈಗ ನಿಮ್ಮಗಳ ದರ್ಶನವು ದೊಡ್ಡ ಭಾಗ್ಯದಿಂದಲೇ ಆಗಿದೆ. ನಾನು ಧನ್ಯನಾದೆನು. ಆದರೆ ನಾನು ತುಂಬಾ ದೀನನಾಗಿದ್ದೇನೆ ಹಾಗೂ ನೀವುಗಳು ಸ್ವಭಾವದಿಂದಲೇ ದಯಾಳುಗಳಾಗಿದ್ದೀರಿ. ಅದಕ್ಕಾಗಿ ನನ್ನ ಮೇಲೆ ನೀವು ಅವಶ್ಯವಾಗಿ ಕೃಪೆ ಮಾಡಬೇಕು. ॥ ೫೦ ॥ ಆಕಾಶವಾಣಿಯು ಹೇಳಿದ ವಿಷಯದ ಆ ಸಾಧನೆಯು ಯಾವುದು ? ನಾನು ಯಾವ ಪ್ರಕಾರದಿಂದ ಅದನ್ನು ಅನುಷ್ಠಾನ ಮಾಡಬೇಕು ? ಎಂಬುದನ್ನು ವಿಸ್ತಾರವಾಗಿ ತಿಳಿಸಿರಿ ॥ ೫೧ ॥ ಭಕ್ತಿ, ಜ್ಞಾನ, ವೈರಾಗ್ಯ ಇವರಿಗೆ ಹೇಗೆ ಸುಖ ಸಿಗಬಲ್ಲದು ? ಯಾವ ರೀತಿಯಲ್ಲಿ ಇವನ್ನು ಪ್ರೇಮಪೂರ್ವಕ ಎಲ್ಲ ವರ್ಣದವರಲ್ಲಿ ಪ್ರತಿಷ್ಠಾಪಿಸಬಹುದು ? ॥ ೫೨ ॥

**ಸನಕಾದಿಗಳು ಹೇಳಿದರು** – ದೇವ ಋಷಿಗಳೇ ! ನೀವು ಚಿಂತಿಸಬೇಡಿ. ಮನಸ್ಸಿನಲ್ಲಿ ಪ್ರಸನ್ನರಾಗಿರಿ. ಅವರ ಉದ್ಧಾರದ ಒಂದು ಸರಳವಾದ ಉಪಾಯವು ಮೊದಲಿನಿಂದಲೇ ವಿದ್ಯಮಾನ ಇದೆ. ॥ ೫೩ ॥ ನಾರದರೇ ! ನೀವು ಧನ್ಯರಾಗಿರುವಿರಿ. ನೀವಾದರೋ ವಿರಕ್ತರ ಶಿರೋಮಣಿಯಾಗಿದ್ದೀರಿ. ಶ್ರೀಕೃಷ್ಣನ ದಾಸರಿಗೆ ಶಾಶ್ವತವಾದ ಪಥಪ್ರದರ್ಶಕರಾಗಿದ್ದು ಭಕ್ತಿಯೋಗದ ಭಾಸ್ಕರರಾಗಿರುವಿರಿ. ॥ ೫೪ ॥ ನೀವು ಭಕ್ತಿಗಾಗಿ ಮಾಡುತ್ತಿರುವ ಉದ್ಯೋಗವು ನಿಮಗೆ ಇದು ಆಶ್ಚರ್ಯದ ಮಾತಲ್ಲವೆಂದು ತಿಳಿಯಬೇಕು. ಭಗವಂತನ ಭಕ್ತನಿಗಾದರೋ ಭಕ್ತಿಯನ್ನು ಚೆನ್ನಾಗಿ ಸ್ಥಾಪಿಸುವುದು ಸದಾ ಉಚಿತವೇ ಆಗಿದೆ. ॥ ೫೫ ॥ ಪ್ರಪಂಚದಲ್ಲಿ ಋಷಿಗಳು ಅನೇಕ ಮಾರ್ಗಗಳನ್ನು ಪ್ರಕಟಿಸಿರುವರು. ಆದರೆ ಅವೆಲ್ಲವೂ ಕಷ್ಟಸಾಧ್ಯವಾಗಿವೆ. ಪ್ರಾಯಶಃ ಪರಿಣಾಮದಲ್ಲಿ ಸ್ವರ್ಗವನ್ನೇ ದೊರಕಿಸಿಕೊಡುವಂತಹವುಗಳು. ॥ ೫೬ ॥ ಇಂದಿನವರೆಗೆ ಭಗವಂತನ ಪ್ರಾಪ್ತಿಯಾಗಿಸುವ ಮಾರ್ಗವು ಗುಪ್ತವೇ ಆಗಿದೆ. ಅದನ್ನು ಉಪದೇಶಿಸುವ ಪುರುಷನು ಪ್ರಾಯಶಃ ಭಾಗ್ಯದಿಂದಲೇ ದೊರಕುತ್ತಾನೆ. ॥ ೫೭ ॥ ಆಕಾಶವಾಣಿಯು ನಿಮಗೆ ಹೇಳಿದ ಸತ್ಕರ್ಮದ ಸಂಕೇತವನ್ನು ನಾವು ತಿಳಿಸುತ್ತೇವೆ. ನೀವು ಪ್ರಸನ್ನ ಸ್ಥಿರಚಿತ್ತರಾಗಿ ಕೇಳಿರಿ. ॥ ೫೮ ॥

ನಾರದರೇ ! ದ್ರವ್ಯಯಜ್ಞ, ತಪೋಯಜ್ಞ, ಯೋಗಯಜ್ಞ, ಸ್ವಾಧ್ಯಾಯರೂಪೀ ಜ್ಞಾನಯಜ್ಞ ಇವೆಲ್ಲವುಗಳಾದರೋ ಸ್ವರ್ಗಾದಿಗಳನ್ನು ದೊರಕಿಸಿಕೊಡುವ ಕರ್ಮದ ಕಡೆಗೇ ಸಂಕೇತ ಮಾಡುತ್ತವೆ. ॥ ೫೯ ॥ ಆದರೆ ಪಂಡಿತರು ಜ್ಞಾನಯಜ್ಞವನ್ನೇ ಸತ್ಕರ್ಮ (ಮುಕ್ತಿದಾಯಕ ಕರ್ಮ)ದ ಸೂಚಕವೆಂದು ಒಪ್ಪಿರುವರು. ಅದು ಶ್ರೀಮದ್ಭಾಗವತದ ಪಾರಾಯಣವೇ ಆಗಿದೆ. ಅದನ್ನು ಶುಕಾದಿ ಮಹಾನುಭಾವರು ಹಾಡಿರುವರು. ॥ ೬೦ ॥ ಅದರ ಶಬ್ದ ಕೇಳುತ್ತಲೇ ಭಕ್ತಿ, ಜ್ಞಾನ, ವೈರಾಗ್ಯ ಇವುಗಳಿಗೆ ಹೆಚ್ಚಿನ ಬಲ ದೊರೆಯಬಹುದು. ಇದರಿಂದ ಜ್ಞಾನ, ವೈರಾಗ್ಯಗಳ ಕಷ್ಟ ಅಳಿದು ಹೋಗಿ ಭಕ್ತಿಗೆ ಆನಂದ ಸಿಗಬಹುದು. ॥ ೬೧ ॥ ಸಿಂಹದ ಗರ್ಜನೆಯನ್ನು ಕೇಳುತ್ತಲೇ ನರಿಗಳು ಓಡಿಹೋಗುವಂತೆ ಶ್ರೀಮದ್ಭಾಗವತದ

ಪ್ರಲಯಂ ಹಿ ಗಮಿಷ್ಯಂತಿ ಶ್ರೀಮದ್ಭಾಗವತಧ್ವನೇಃ ।
ಕಲೇರ್ದೋಷಾ ಇಮೇ ಸರ್ವೇ ಸಿಂಹಶಬ್ದಾದ್ ವೃಕಾ ಇವ ॥ ೬೨ ॥

ಜ್ಞಾನವೈರಾಗ್ಯಸಂಯುಕ್ತಾ ಭಕ್ತಿಃ ಪ್ರೇಮರಸಾವಹಾ ।
ಪ್ರತಿಗೇಹಂ ಪ್ರತಿಜನಂ ತತಃ ಕ್ರೀಡಾಂ ಕರಿಷ್ಯತಿ ॥ ೬೩ ॥

*ನಾರದ ಉವಾಚ*

ವೇದವೇದಾಂತ ಘೋಷೈಶ್ಚ ಗೀತಾಪಾಠೈಃ ಪ್ರಬೋಧಿತಮ್ ।
ಭಕ್ತಿ ಜ್ಞಾನವಿರಾಗಾಣಾಂ ನೋದತಿಷ್ಠತ್ತ್ರಿಕಂ ಯದಾ ॥ ೬೪ ॥

ಶ್ರೀಮದ್ಭಾಗವತಾಲಾಪಾತ್ತತ್ಕಥಂ ಬೋಧಮೇಷ್ಯತಿ ।
ತತ್ಕಥಾಸು ತು ವೇದಾರ್ಥಃ ಶ್ಲೋಕೇ ಶ್ಲೋಕೇ ಪದೇ ಪದೇ ॥ ೬೫ ॥

ಛಿಂದಂತು ಸಂಶಯಂ ಹ್ಯೇನಂ ಭವಂತೋಽಮೋಘದರ್ಶನಾಃ ।
ವಿಲಂಬೋ ನಾತ್ರ ಕರ್ತವ್ಯಃ ಶರಣಾಗತವತ್ಸಲಾಃ ॥ ೬೬ ॥

*ಕುಮಾರಾ ಊಚುಃ*

ವೇದೋಪನಿಷದಾಂ ಸಾರಾಜ್ಜಾತಾ ಭಾಗವತೀ ಕಥಾ ।
ಅತ್ಯುತ್ತಮಾ ತತೋ ಭಾತಿ ಪೃಥಗ್ಭೂತಾ ಫಲಾಕೃತಿಃ ॥ ೬೭ ॥

ಆಮೂಲಾಗ್ರಂ ರಸಸ್ತಿಷ್ಠನ್ನಾಸ್ತೇ ನ ಸ್ವಾದ್ಯತೇ ಯಥಾ ।
ಸ ಭೂಯಃ ಸಂಪೃಥಗ್ಭೂತಃ ಫಲೇ ವಿಶ್ವಮನೋಹರಃ ॥ ೬೮ ॥

ಯಥಾ ದುಗ್ಧೇ ಸ್ಥಿತಂ ಸರ್ಪಿರ್ನ ಸ್ವಾದಾಯೋಪಕಲ್ಪತೇ ।
ಪೃಥಗ್ಭೂತಂ ಹಿ ತದ್ಗವ್ಯಂ ದೇವಾನಾಂ ರಸವರ್ಧನಮ್ ॥ ೬೯ ॥

ಇಕ್ಷೂಣಾಮಪಿ ಮಧ್ಯಾಂತಂ ಶರ್ಕರಾ ವ್ಯಾಪ್ಯ ತಿಷ್ಠತಿ ।
ಪೃಥಗ್ಭೂತಾ ಚ ಸಾ ಮಿಷ್ಟಾ ತಥಾ ಭಾಗವತೀ ಕಥಾ ॥ ೭೦ ॥

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।
ಭಕ್ತಿಜ್ಞಾನವಿರಾಗಾಣಾಂ ಸ್ಥಾಪನಾಯ ಪ್ರಕಾಶಿತಮ್ ॥ ೭೧ ॥

ವೇದಾಂತವೇದಸುಸ್ನಾತೇ ಗೀತಾಯಾ ಅಪಿ ಕರ್ತರಿ ।
ಪರಿತಾಪವತಿ ವ್ಯಾಸೇ ಮುಹ್ಯತ್ಯಜ್ಞಾನಸಾಗರೇ ॥ ೭೨ ॥

ತದಾ ತ್ವಯಾ ಪುರಾ ಪ್ರೋಕ್ತಂ ಚತುಃಶ್ಲೋಕಸಮನ್ವಿತಮ್ ।
ತದೀಯಶ್ರವಣಾತ್ಸದ್ಯೋ ನಿರ್ಬಾಧೋ ಬಾದರಾಯಣಃ ॥ ೭೩ ॥

ತತ್ರ ತೇ ವಿಸ್ಮಯಃ ಕೇನ ಯತಃ ಪ್ರಶ್ನಕರೋ ಭವಾನ್ ।
ಶ್ರೀಮದ್ಭಾಗವತಂ ಶ್ರಾವ್ಯಂ ಶೋಕದುಃಖವಿನಾಶನಮ್ ॥ ೭೪ ॥

ಧ್ವನಿಯಿಂದ ಕಲಿಯುಗದ ದೋಷಗಳೆಲ್ಲ ನಾಶವಾಗಿ ಹೋಗುತ್ತವೆ. ॥ ೬೨ ॥ ಆಗ ಪ್ರೇಮರಸವನ್ನು ಪ್ರವಹಿಸುವ ಭಕ್ತಿಯು ಜ್ಞಾನ, ವೈರಾಗ್ಯಗಳೊಂದಿಗೆ ಪ್ರತಿಯೊಂದು ಮನೆ ಮತ್ತು ಜನರ ಹೃದಯದಲ್ಲಿ ಕ್ರೀಡಿಸಬಹುದು. ॥ ೬೩ ॥

**ನಾರದರು ಹೇಳಿದರು** – ನಾನು ವೇದ-ವೇದಾಂತದ ಧ್ವನಿಗೈದು, ಗೀತಾಪಾರಾಯಣ ಮಾಡಿ ಅವರನ್ನು ತುಂಬಾ ಎಚ್ಚರಿಸಿದೆ. ಆದರೂ ಭಕ್ತಿ, ಜ್ಞಾನ, ವೈರಾಗ್ಯ ಇವರು ಎಚ್ಚರಗೊಳ್ಳಲಿಲ್ಲ. ॥ ೬೪ ॥ ಇಂತಹ ಸ್ಥಿತಿಯಲ್ಲಿ ಶ್ರೀಮದ್ಭಾಗವತವನ್ನು ಕೇಳುವುದರಿಂದ ಅವರು ಹೇಗೆ ಎಚ್ಚರಗೊಳ್ಳುವರು ? ಏಕೆಂದರೆ, ಆ ಕಥೆಯ ಪ್ರತಿಯೊಂದು ಶ್ಲೋಕ ಮತ್ತು ಪದಗಳಲ್ಲಿ ವೇದಗಳ ಸಾರಾಂಶವೇ ಇದೆ ತಾನೇ ! ॥ ೬೫ ॥ ನೀವುಗಳು ಶರಣಾಗತ ವತ್ಸಲರಾಗಿರುವಿರಿ. ನಿಮ್ಮ ದರ್ಶನವು ಎಂದೂ ವ್ಯರ್ಥವಾಗುವುದಿಲ್ಲ. ಅದಕ್ಕಾಗಿ ಈ ಕಾರ್ಯದಲ್ಲಿ ವಿಳಂಬಿಸದೆ ನನ್ನ ಈ ಸಂದೇಹವನ್ನು ಕಳೆಯಿರಿ. ॥ ೬೬ ॥

**ಸನಕಾದಿಗಳು ಹೇಳಿದರು** – ಶ್ರೀಮದ್ಭಾಗವತದ ಕಥೆಯು ವೇದ-ಉಪನಿಷತ್ತುಗಳ ಸಾರದಿಂದಲೇ ರಚಿತವಾಗಿದೆ. ಅದಕ್ಕಾಗಿ ಅವುಗಳಿಂದ ಬೇರೆಯಾಗಿ ಇದರ ಫಲಸ್ವರೂಪವಿರುವ ಕಾರಣ ಅದು ತುಂಬಾ ಉತ್ತಮವೆಂದು ತಿಳಿದುಬರುತ್ತದೆ. ॥ ೬೭ ॥ ಮರದ ರಸವು ಬೇರಿನಿಂದ ಹಿಡಿದು ಟೊಂಗೆಯ ತುದಿಯವರೆಗೆ ಇರುತ್ತದೆ. ಆದರೆ ಈ ಸ್ಥಿತಿಯಲ್ಲಿ ಅದನ್ನು ಆಸ್ವಾದಿಸಲಾಗುವುದಿಲ್ಲ. ಆದರೆ ಅದೇ ಬೇರೆಯಾಗಿ ಫಲದ ರೂಪದಲ್ಲಿ ಬಂದಾಗ ಜಗತ್ತಿನಲ್ಲಿ ಎಲ್ಲರಿಗೆ ಪ್ರಿಯವೆನಿಸುತ್ತದೆ. ॥ ೬೮ ॥ ಹಾಲಿನಲ್ಲಿ ತುಪ್ಪ ಇರುತ್ತದೆ. ಆದರೆ ಆಗ ಅದರ ಬೇರೆಯಾದ ರುಚಿ ಸಿಗುವುದಿಲ್ಲ. ಅದು ಹಾಲಿನಿಂದ ಬೇರೆಯಾದಾಗ ದೇವತೆಗಳಿಗೂ ಕೂಡ ಸ್ವಾದವರ್ಧಕವಾಗುತ್ತದೆ. ॥ ೬೯ ॥ ಸಿಹಿಯು ಕಬ್ಬಿನಲ್ಲಿ ತುದಿ-ಬುಡ ನಡುವೆ ಎಲ್ಲೆಡೆ ವ್ಯಾಪ್ತವಾಗಿರುತ್ತದೆ. ಆದರೆ ಬೇರೆಯಾದಾಗಲೇ ಅದರ ಸಿಹಿ ಬೇರೆಯೇ ಆಗುತ್ತದೆ. ಹೀಗೆಯೇ ಈ ಭಾಗವತದ ಕಥೆಯಾಗಿದೆ. ॥ ೭೦ ॥ ಈ ಭಾಗವತ ಪುರಾಣವು ವೇದಗಳಿಗೆ ಸಮಾನವಾಗಿದೆ. ಶ್ರೀವೇದವ್ಯಾಸ ದೇವರು ಇದನ್ನು ಭಕ್ತಿ, ಜ್ಞಾನ, ವೈರಾಗ್ಯದ ಸ್ಥಾಪನೆಗಾಗಿಯೇ ಪ್ರಕಾಶಿತಗೊಳಿಸಿದ್ದಾರೆ. ॥ ೭೧ ॥ ಹಿಂದೊಮ್ಮೆ ವೇದ-ವೇದಾಂತದ ಪಾರಂಗತರೂ, ಗೀತೆಯನ್ನು ರಚಿಸಿದವರೂ ಆದ ಭಗವಾನ್ ಶ್ರೀವೇದವ್ಯಾಸರು ಖಿನ್ನರಾಗಿ ಅಜ್ಞಾನಸಾಗರದಲ್ಲಿ ಮುಳುಗಿದ್ದಾಗ ನೀವೇ ಅವರಿಗೆ ನಾಲ್ಕು ಶ್ಲೋಕಗಳಲ್ಲಿ ಇದನ್ನು ಉಪದೇಶಿಸಿರುವಿರಿ. ಅದನ್ನು ಕೇಳುತ್ತಲೇ ಅವರ ಎಲ್ಲ ಚಿಂತೆಗಳು ದೂರವಾಗಿದ್ದವು. ॥ ೭೨-೭೩ ॥ ಮತ್ತೆ ಇದರಲ್ಲಿ ನಿಮಗೆ ಏಕೆ ಆಶ್ಚರ್ಯವಾಗುತ್ತಿದೆ ? ನೀವು ನಮ್ಮಲ್ಲಿ ಪ್ರಶ್ನಿಸುತ್ತಿರುವಿರಲ್ಲ ! ನೀವು ಅವರಿಗೆ ದುಃಖ-ಶೋಕವನ್ನು ನಾಶ ಮಾಡುವಂತಹ ಶ್ರೀಮದ್ಭಾಗವತ ಪುರಾಣವನ್ನು ಹೇಳಬೇಕು. ॥೭೪॥

*ನಾರದ ಉವಾಚ*

ಯದ್ದರ್ಶನಂ ಚ ವಿನಿಹಂತ್ಯ ಶುಭಾನಿ ಸದ್ಯಃ
ಶ್ರೇಯಸ್ತನೋತಿ ಭವದುಃಖದವಾರ್ದಿತಾನಾಮ್ ।
ನಿಃಶೇಷಶೇಷಮುಖಗೀತಕಥೈಕಪಾನಾಃ
ಪ್ರೇಮಪ್ರಕಾಶಕೃತಯೇ ಶರಣಂ ಗತೋಽಸ್ಮಿ ॥ ೭೫ ॥

**ನಾರದರು ಹೇಳಿದರು** – ಸನಕಾದಿಗಳೇ ! ನಿಮ್ಮ ದರ್ಶನವು ಜೀವಿಯ ಸಮಸ್ತ ಪಾಪಗಳನ್ನು ತತ್ಕಾಲ ನಾಶಮಾಡಿ ಬಿಡುತ್ತದೆ. ಸಾಂಸಾರಿಕ ದುಃಖರೂಪವಾದ ದಾವಾನಲದಿಂದ ಬೇಯುತ್ತಿರು-ವವರ ಮೇಲೆ ಬೇಗನೇ ಶಾಂತಿಯ ಮಳೆಗರೆಯುತ್ತದೆ. ನೀವು ನಿರಂತರ ಆದಿಶೇಷನ ಸಾವಿರ ಹೆಡೆಗಳಿಂದ ಹಾಡಲ್ಪಟ್ಟ ಭಗವತ್ ಕಥಾಮೃತವನ್ನು ಪಾನಮಾಡುತ್ತಾ ಇರುತ್ತೀರಿ. ನಾನು ಪ್ರೇಮಲಕ್ಷಣಾ ಭಕ್ತಿಯನ್ನು ಪ್ರಕಾಶಗೊಳಿಸುವ ಉದ್ದೇಶದಿಂದ ತಮ್ಮಲ್ಲಿ ಶರಣಾಗಿದ್ದೇನೆ ॥ ೭೫ ॥ ಅನೇಕ ಜನ್ಮಗಳ ಸಂಚಿತ ಪುಣ್ಯ ಪುಂಜದ ಉದಯ-ವಾದಾಗ ಮನುಷ್ಯನಿಗೆ ಸತ್ಸಂಗವು ಲಭಿಸುತ್ತದೆ. ಆಗ ಅದು ಅವನ ಅಜ್ಞಾನಜನಿತ ಮೋಹ, ಮದ ರೂಪವಾದ ಅಂಧಕಾರವನ್ನು ನಾಶಗೊಳಿಸಿ, ವಿವೇಕದ ಉದಯವಾಗುತ್ತದೆ. ॥ ೭೬ ॥

ಭಾಗ್ಯೋದಯೇನ ಬಹುಜನ್ಮಸಮರ್ಜಿತೇನ
ಸತ್ಸಂಗಮಂ ಚ ಲಭತೇ ಪುರುಷೋ ಯದಾ ವೈ ।
ಅಜ್ಞಾನಹೇತುಕೃತಮೋಹಮದಾಂಧಕಾರ-
ನಾಶಂ ವಿಧಾಯ ಹಿ ತದೋದಯತೇ ವಿವೇಕಃ ॥ ೭೬ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ ಕುಮಾರನಾರದಸಂವಾದೋ ನಾಮ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಭಕ್ತಿದೇವಿಯ ಕಷ್ಟದ ನಿವೃತ್ತಿ

*ನಾರದ ಉವಾಚ*

ಜ್ಞಾನಯಜ್ಞಂ ಕರಿಷ್ಯಾಮಿ ಶುಕಶಾಸ್ತ್ರ ಕಥೋಜ್ಜ್ವಲಮ್ ।
ಭಕ್ತಿಜ್ಞಾನವಿರಾಗಾಣಾಂ ಸ್ಥಾಪನಾರ್ಥಂ ಪ್ರಯತ್ನತಃ ॥ ೧ ॥

ಕುತ್ರ ಕಾರ್ಯೋ ಮಯಾ ಯಜ್ಞಃ ಸ್ಥಲಂ ತದ್ವಾಚ್ಯತಾಮಿಹ ।
ಮಹಿಮಾ ಶುಕಶಾಸ್ತ್ರಸ್ಯ ವಕ್ತವ್ಯೋ ವೇದಪಾರಗೈಃ ॥ ೨ ॥

ಕಿಯದ್ಭಿರ್ದಿವಸೈಃ ಶ್ರಾವ್ಯಾ ಶ್ರೀಮದ್ಭಾಗವತೀ ಕಥಾ ।
ಕೋ ವಿಧಿಸ್ತತ್ರ ಕರ್ತವ್ಯೋ ಮಮೇದಂ ಬ್ರುವತಾಮಿತಃ ॥ ೩ ॥

**ನಾರದರು ಹೇಳುತ್ತಾರೆ** - ಸನಕಾದಿಗಳೇ ! ಭಕ್ತಿ, ಜ್ಞಾನ, ವೈರಾಗ್ಯ ಇವುಗಳನ್ನು ಸ್ಥಾಪಿಸಲು ನಾನು ಪ್ರಯತ್ನಪೂರ್ವಕ ಶ್ರೀಶುಕಮುನಿಗಳು ಹೇಳಿರುವ ಭಾಗವತ ಶಾಸ್ತ್ರವನ್ನು ಕಥೆಯ ಮೂಲಕ ಉಜ್ಜ್ವಲವಾದ ಜ್ಞಾನ ಯಜ್ಞವನ್ನು ಮಾಡುವೆನು. ॥ ೧ ॥ ಈ ಯಜ್ಞವನ್ನು ನಾನು ಎಲ್ಲಿ ಮಾಡಬೇಕು ? ನೀವು ಇದಕ್ಕಾಗಿ ಯಾವುದಾದರೂ ಸ್ಥಾನವನ್ನು ತಿಳಿಸಿರಿ. ನೀವುಗಳು ವೇದಗಳಲ್ಲಿ ಪಾರಂಗತರಾಗಿರುವಿರಿ. ಆದರಿಂದ ನನಗೆ ಈ ಶುಕಶಾಸ್ತ್ರದ ಮಹಿಮೆಯನ್ನು ಹೇಳಿರಿ. ॥ ೨ ॥ ಈ ಶ್ರೀಮದ್ಭಾಗವತದ ಕಥೆಯನ್ನು ಎಷ್ಟು ದಿನಗಳಲ್ಲಿ ಹೇಳಬೇಕು ? ಅದನ್ನು ಕೇಳುವ ವಿಧಾನವೆಂತು ? ಇದನ್ನೂ ಕೂಡ ತಿಳಿಸಿರಿ. ॥ ೩ ॥

*ಕುಮಾರಾ ಊಚುಃ*

ಶೃಣು ನಾರದ ವಕ್ಷ್ಯಾಮೋ ವಿನಮ್ರಾಯ ವಿವೇಕಿನೇ ।
ಗಂಗಾದ್ವಾರಸಮೀಪೇ ತು ತಟಮಾನಂದನಾಮಕಮ್ ॥ ೪ ॥

ನಾನಾಋಷಿಗಣೈರ್ಜುಷ್ಟಂ ದೇವಸಿದ್ಧನಿಷೇವಿತಮ್ ।
ನಾನಾತರುಲತಾಕೀರ್ಣಂ ನವಕೋಮಲವಾಲುಕಮ್ ॥ ೫ ॥

ರಮ್ಯಮೇಕಾಂತದೇಶಸ್ಥಂ ಹೇಮಪದ್ಮಸುಸೌರಭಮ್ ।
ಯತ್ಸಮೀಪಸ್ಥಜೀವಾನಾಂ ವೈರಂ ಚೇತಸಿ ನ ಸ್ಥಿತಮ್ ॥ ೬ ॥

ಜ್ಞಾನಯಜ್ಞಸ್ತ್ವಯಾ ತತ್ರ ಕರ್ತವ್ಯೋ ಹ್ಯಪ್ರಯತ್ನತಃ ।
ಅಪೂರ್ವರಸರೂಪಾ ಚ ಕಥಾ ತತ್ರ ಭವಿಷ್ಯತಿ ॥ ೭ ॥

**ಸನಕಾದಿಗಳು ಹೇಳಿದರು** - ನಾರದರೇ ! ನೀವು ತುಂಬಾ ವಿನೀತರೂ, ವಿವೇಕಿಗಳೂ ಆಗಿರುವಿರಿ. ನಾವು ನಿಮಗೆ ಇದೆಲ್ಲವನ್ನು ತಿಳಿಸುತ್ತೇವೆ, ಕೇಳಿರಿ. ಹರಿದ್ವಾರದ ಬಳಿಯಲ್ಲಿ ಆನಂದವೆಂಬ ಒಂದು ಘಟ್ಟವಿದೆ. ॥ ೪ ॥ ಅಲ್ಲಿ ಅನೇಕ ಋಷಿಗಳು ವಾಸಿಸುತ್ತಾರೆ ಹಾಗೂ ದೇವತೆಗಳೂ, ಸಿದ್ಧರೂ ಕೂಡ ಅದನ್ನು ಸೇವಿಸುತ್ತಿರುವರು. ಅಲ್ಲಿ ನಾನಾರೀತಿಯ ವೃಕ್ಷ-ಲತೆಗಳು ದಟ್ಟವಾಗಿ ಬೆಳೆದಿವೆ. ಅಲ್ಲಿ ತುಂಬಾ ಕೋಮಲ ಹೊಸದಾದ ಮರಳು ಹಾಸಿದ್ದಿದೆ. ॥ ೫ ॥ ಆ ಘಟ್ಟವು ಬಹಳ ರಮ್ಯ ಮತ್ತು ಏಕಾಂತ ಪ್ರದೇಶವಾಗಿದೆ. ಅಲ್ಲಿ ಯಾವಾಗಲೂ ಸ್ವರ್ಣಕಮಲಗಳ ಸುಗಂಧ ಬರುತ್ತಿರುತ್ತದೆ. ಅದರ ಸಮೀಪದಲ್ಲಿ ವಾಸಿಸುವ ಸಿಂಹ, ಆನೆ ಮುಂತಾದ ಪರಸ್ಪರ ವಿರೋಧಿ ಜೀವಿಗಳ ಚಿತ್ತದಲ್ಲಿಯೂ ವೈರಭಾವವಿರುವುದಿಲ್ಲ. ॥ ೬ ॥ ಅಲ್ಲಿ ನೀವು ಜ್ಞಾನಯಜ್ಞವನ್ನು ಪ್ರಾರಂಭಿಸಿರಿ. ಯಾವುದೇ ವಿಶೇಷ ಪ್ರಯತ್ನವಿಲ್ಲದೆ ಆ ಜಾಗದಲ್ಲಿ ಕಥೆಯ ಅಪೂರ್ವ ರಸವು ಉದಯವಾದೀತು. ॥ ೭ ॥

ಪುರಃಸ್ಥಂ ನಿರ್ಬಲಂ ಚೈವ ಜರಾಜೀರ್ಣಕಲೇವರಮ್ ।
ತದ್ದ್ವಯಂ ಚ ಪುರಸ್ಕೃತ್ಯ ಭಕ್ತಿಸ್ತತ್ರಾಗಮಿಷ್ಯತಿ ॥ ೮ ॥

ಯತ್ರ ಭಾಗವತೀ ವಾರ್ತಾ ತತ್ರ ಭಕ್ತ್ಯಾದಿಕಂ ವ್ರಜೇತ್ ।
ಕಥಾಶಬ್ದಂ ಸಮಾಕರ್ಣ್ಯ ತತ್ತ್ರಿಕಂ ತರುಣಾಯತೇ ॥ ೯ ॥

*ಸೂತ ಉವಾಚ*

ಏವಮುಕ್ತ್ವಾ ಕುಮಾರಾಸ್ತೇ ನಾರದೇನ ಸಮಂತತಃ ।
ಗಂಗಾತಟಂ ಸಮಾಜಗ್ಮುಃ ಕಥಾಪಾನಾಯ ಸತ್ವರಾಃ ॥ ೧೦ ॥

ಯದಾ ಯಾತಾಸ್ತಟಂ ತೇ ತು ತದಾ ಕೋಲಾಹಲೋಽಪ್ಯಭೂತ್ ।
ಭೂರ್ಲೋಕೇ ದೇವಲೋಕೇ ಚ ಬ್ರಹ್ಮಲೋಕೇ ತಥೈವ ಚ ॥ ೧೧ ॥

ಶ್ರೀಭಾಗವತಪೀಯೂಷಪಾನಾಯ ರಸಲಂಪಟಾಃ ।
ಧಾವಂತೋಽಪ್ಯಾಯಯುಃ ಸರ್ವೇ ಪ್ರಥಮಂ ಯೇ ಚ ವೈಷ್ಣವಾಃ ॥ ೧೨ ॥

ಭೃಗುರ್ವಸಿಷ್ಠಶ್ಚ್ಯವನಶ್ಚ ಗೌತಮೋ
ಮೇಧಾತಿಥಿರ್ದೇವಲದೇವರಾತೌ ।
ರಾಮಸ್ತಥಾ ಗಾಧಿಸುತಶ್ಚ ಶಾಕಲೋ
ಮೃಕಂಡುಪುತ್ರಾತ್ರಿಜಪಿಪ್ಪಲಾದಾಃ ॥ ೧೩ ॥

ಯೋಗೇಶ್ವರೌ ವ್ಯಾಸಪರಾಶರೌ ಚ
ಛಾಯಾಶುಕೋ ಜಾಜಲಿಜಹ್ನುಮುಖ್ಯಾಃ ।
ಸರ್ವೇಽಪ್ಯಮೀ ಮುನಿಗಣಾಃ ಸಹಪುತ್ರಶಿಷ್ಯಾಃ
ಸ್ವಸ್ತ್ರೀಭಿರಾಯಯುರತಿಪ್ರಣಯೇನ ಯುಕ್ತಾಃ ॥ ೧೪ ॥

ವೇದಾಂತಾನಿ ಚ ವೇದಾಶ್ಚ ಮಂತ್ರಾಸ್ತಂತ್ರಾಃ ಸಮೂರ್ತಯಃ ।
ದಶಸಪ್ತಪುರಾಣಾನಿ ಷಟ್‌ಶಾಸ್ತ್ರಾಣಿ ತಥಾಯಯುಃ ॥ ೧೫ ॥

ಗಂಗಾದ್ಯಾಃ ಸರಿತಸ್ತತ್ರ ಪುಷ್ಕರಾದಿಸರಾಂಸಿ ಚ ।
ಕ್ಷೇತ್ರಾಣಿ ಚ ದಿಶಃ ಸರ್ವಾ ದಂಡಕಾದಿವನಾನಿ ಚ ॥ ೧೬ ॥

ನಗಾದಯೋ ಯಯುಸ್ತತ್ರ ದೇವಗಂಧರ್ವದಾನವಾಃ ।
ಗುರುತ್ವಾತ್ತತ್ರ ನಾಯಾತಾನ್ ಭೃಗುಃ ಸಂಬೋಧ್ಯ ಚಾನಯತ್ ॥ ೧೭ ॥

ದೀಕ್ಷಿತಾ ನಾರದೇನಾಥ ದತ್ತಮಾಸನಮುತ್ತಮಮ್ ।
ಕುಮಾರಾ ವಂದಿತಾಃ ಸರ್ವೈರ್ನಿಷೇದುಃ ಕೃಷ್ಣತತ್ಪರಾಃ ॥ ೧೮ ॥

ವೈಷ್ಣವಾಶ್ಚ ವಿರಕ್ತಾಶ್ಚ ನ್ಯಾಸಿನೋ ಬ್ರಹ್ಮಚಾರಿಣಃ ।
ಮುಖಭಾಗೇ ಸ್ಥಿತಾಸ್ತೇ ಚ ತದಗ್ರೇ ನಾರದಃ ಸ್ಥಿತಃ ॥ ೧೯ ॥

ಭಕ್ತಿಯೂ ಕೂಡ ನಿಮ್ಮ ಕಣ್ಮುಂದೆಯೇ ನಿರ್ಬಲ, ಜರಾ-ಜೀರ್ಣ ಅವಸ್ಥೆಯಲ್ಲಿರುವ ಜ್ಞಾನ, ವೈರಾಗ್ಯರನ್ನು ಕರೆದುಕೊಂಡು ಅಲ್ಲಿಗೆ ಬರುವಳು. ॥ ೮ ॥ ಏಕೆಂದರೆ, ಎಲ್ಲೇ ಆಗಲಿ ಶ್ರೀಮದ್ಭಾಗವತದ ಕಥೆ ನಡೆಯುವಲ್ಲಿಗೆ ಭಕ್ತಿಯೇ ಮೊದಲಾ-ದವರು ತಾನೇ-ತಾನಾಗಿ ಬಂದು ಬಿಡುತ್ತಾರೆ. ಅಲ್ಲಿ ಕಥೆಯ ಶಬ್ದ ಕಿವಿಗೆ ಬೀಳುತ್ತಲೇ ಅವರು ಮೂವರೂ ತರುಣರಾಗಿ ಹೋಗುವರು. ॥ ೯ ॥

**ಸೂತಪುರಾಣಿಕರು ಹೇಳುತ್ತಾರೆ** – ಹೀಗೆ ಹೇಳಿ ನಾರದ-ರೊಂದಿಗೆ ಸನಕಾದಿಗಳೂ ಕೂಡ ಶ್ರೀಮದ್ಭಾಗವತ ಕಥಾಮೃತ-ವನ್ನು ಪಾನಮಾಡಲು ಅಲ್ಲಿಂದ ಕೂಡಲೇ ಹೊರಟು ಗಂಗಾ ತೀರಕ್ಕೆ ಬಂದರು. ॥ ೧೦ ॥ ಅವರು ಗಂಗಾತೀರಕ್ಕೆ ತಲುಪುತ್ತಲೇ ಭೂಲೋಕ, ದೇವಲೋಕ, ಬ್ರಹ್ಮಲೋಕ ಹೀಗೆ ಎಲ್ಲೆಡೆ ಈ ಕಥೆಯ ಗದ್ದಲ ಉಂಟಾಯಿತು. ॥ ೧೧ ॥ ಭಗವತ್ಕಥೆಯ ರಸಿಕರಾದ ವಿಷ್ಣು-ಭಕ್ತರೆಲ್ಲರೂ ಶ್ರೀಮದ್ಭಾಗವತಾಮೃತವನ್ನು ಪಾನಮಾಡಲು ಎಲ್ಲರಿಗಿಂತ ಮುಂಚಿತವಾಗಿ ಅಲ್ಲಿಗೆ ಓಡೋಡಿ ಬರತೊಡಗಿದರು. ॥ ೧೨ ॥ ಭೃಗು, ವಸಿಷ್ಠ, ಚ್ಯವನ, ಗೌತಮ, ಮೇಧಾತಿಥಿ, ದೇವಲ, ದೇವರಾತ, ಪರಶುರಾಮ, ವಿಶ್ವಾಮಿತ್ರ, ಶಾಕಲ, ಮಾರ್ಕಂಡೇಯ, ದತ್ತಾತ್ರೇಯ, ಪಿಪ್ಪಲಾದ, ಯೋಗೇಶ್ವರರಾದ ವ್ಯಾಸರು, ಪರಾಶರ, ಛಾಯಾಶುಕ, ಜಾಜಲಿ, ಜಹ್ನು ಮುಂತಾದ ಎಲ್ಲ ಪ್ರಧಾನ-ಪ್ರಧಾನ ಮುನಿಗಣವು ತಮ್ಮ-ತಮ್ಮ ಪುತ್ರರು, ಶಿಷ್ಯರು, ಪತ್ನಿಯರೊಂದಿಗೆ ತುಂಬಾ ಪ್ರೇಮದಿಂದ ಅಲ್ಲಿಗೆ ಬಂದರು. ॥ ೧೩-೧೪ ॥ ಇವರಲ್ಲದೆ ವೇದ, ವೇದಾಂತ (ಉಪನಿಷತ್ತು), ಮಂತ್ರ, ತಂತ್ರ, ಹದಿನೇಳು ಪುರಾಣಗಳು, ಆರು ಶಾಸ್ತ್ರಗಳು ಮೂರ್ತೀಭವಿಸಿ ಅಲ್ಲಿ ಉಪಸ್ಥಿತರಾದರು. ॥ ೧೫ ॥

ಗಂಗಾದಿ ನದಿಗಳೂ, ಪುಷ್ಕರವೇ ಮುಂತಾದ ಸರೋವರಗಳೂ, ಕುರುಕ್ಷೇತ್ರಾದಿ ಸಮಸ್ತ ಕ್ಷೇತ್ರಗಳೂ, ಎಲ್ಲ ದಿಕ್ಕುಗಳೂ, ದಂಡಕವೇ ಮುಂತಾದ ವನಗಳೂ, ಹಿಮಾಲಯಾದಿ ಪರ್ವತಗಳೂ, ದೇವತೆಗಳೂ, ಗಂಧರ್ವರೂ, ದಾನವರೇ ಆದಿ ಎಲ್ಲರೂ ಕಥೆಕೇಳಲು ಹೊರಟು ಬಂದರು. ತಮ್ಮ ಗೌರವದಿಂದಾಗಿ ಬಾರದವರನ್ನು ಮಹರ್ಷಿ ಭೃಗುಗಳು ತಿಳಿಹೇಳಿ ಕರೆದುಕೊಂಡು ಬಂದರು. ॥ ೧೬-೧೭ ॥

ಆಗ ಕಥೆ ಹೇಳಲು ದೀಕ್ಷಿತರಾಗಿ ಶ್ರೀಕೃಷ್ಣಪರಾಯಣರಾದ ಸನಕಾದಿಗಳು ನಾರದರಿತ್ತ ಶ್ರೇಷ್ಠ ಆಸನದಲ್ಲಿ ವಿರಾಜಮಾನರಾದರು. ಆಗ ಎಲ್ಲ ಶ್ರೋತೃಗಳು ಅವರನ್ನು ವಂದಿಸಿದರು. ॥ ೧೮ ॥ ಶ್ರೋತೃ ಗಳಲ್ಲಿ ವೈಷ್ಣವರೂ, ವಿರಕ್ತರೂ, ಸಂನ್ಯಾಸಿಗಳೂ, ಬ್ರಹ್ಮಚಾರಿಗಳೂ ಮುಂದೆ ಕುಳಿತರು. ಅವರೆಲ್ಲರ ಮುಂದುಗಡೆ ನಾರದರು ಆಸೀನರಾದರು. ॥ ೧೯ ॥ ಒಂದು ಕಡೆ ಋಷಿಗಳು, ಒಂದುಕಡೆ ದೇವತೆಗಳು, ವೇದ, ಉಪನಿಷತ್ತುಗಳೂ ಹಾಗೂ ತೀರ್ಥಗಳೂ ಕುಳಿತರು. ಮತ್ತೊಂದೆಡೆ ಸ್ತ್ರೀಯರು

ಏಕಭಾಗೇ ಋಷಿಗಣಾಸ್ತದನ್ಯತ್ರ ದಿವೌಕಸಃ ।
ವೇದೋಪನಿಷದೋಽನ್ಯತ್ರ ತೀರ್ಥಾನ್ಯತ್ರ ಸ್ತ್ರಿಯೋಽನ್ಯತಃ ॥ ೨೦ ॥

ಜಯಶಬ್ದೋ ನಮಃಶಬ್ದಃ ಶಂಖಶಬ್ದಸ್ತಥೈವ ಚ ।
ಚೂರ್ಣಲಾಜಾಪ್ರಸೂನಾನಾಂ ನಿಕ್ಷೇಪಃ ಸುಮಹಾನಭೂತ್ ॥ ೨೧ ॥

ವಿಮಾನಾನಿ ಸಮಾರುಹ್ಯ ಕಿಯಂತೋ ದೇವನಾಯಕಾಃ ।
ಕಲ್ಪವೃಕ್ಷಪ್ರಸೂನೈಸ್ತಾನ್ ಸರ್ವಾಂಸ್ತತ್ರ ಸಮಾಕಿರನ್ ॥ ೨೨ ॥

*ಸೂತ ಉವಾಚ*

ಏವಂ ತೇಷ್ವೇಕಚಿತ್ತೇಷು ಶ್ರೀಮದ್ಭಾಗವತಸ್ಯ ಚ ।
ಮಾಹಾತ್ಮ್ಯಮೂಚಿರೇ ಸ್ಪಷ್ಟಂ ನಾರದಾಯ ಮಹಾತ್ಮನೇ ॥ ೨೩ ॥

*ಕುಮಾರಾ ಊಚುಃ*

ಅಥ ತೇ ವರ್ಣ್ಯತೇಽಸ್ಮಾಭಿರ್ಮಹಿಮಾ ಶುಕಶಾಸ್ತ್ರಜಃ ।
ಯಸ್ಯ ಶ್ರವಣಮಾತ್ರೇಣ ಮುಕ್ತಿಃ ಕರತಲೇ ಸ್ಥಿತಾ ॥ ೨೪ ॥

ಸದಾ ಸೇವ್ಯಾ ಸದಾ ಸೇವ್ಯಾ ಶ್ರೀಮದ್ಭಾಗವತೀ ಕಥಾ ।
ಯಸ್ಯಾಃ ಶ್ರವಣಮಾತ್ರೇಣ ಹರಿಶ್ಚಿತ್ತಂ ಸಮಾಶ್ರಯೇತ್ ॥ ೨೫ ॥

ಗ್ರಂಥೋಽಷ್ಟಾದಶಸಾಹಸ್ರೋ ದ್ವಾದಶಸ್ಕಂಧ ಸಮ್ಮಿತಃ ।
ಪರೀಕ್ಷಿಚ್ಛುಕಸಂವಾದಃ ಶೃಣು ಭಾಗವತಂ ಚ ತತ್ ॥ ೨೬ ॥

ತಾವತ್ಸಂಸಾರಚಕ್ರೇಽಸ್ಮಿನ್ ಭ್ರಮತೇಽಜ್ಞಾನತಃ ಪುಮಾನ್ ।
ಯಾವತ್ಕರ್ಣಗತಾ ನಾಸ್ತಿ ಶುಕಶಾಸ್ತ್ರ ಕಥಾ ಕ್ಷಣಮ್ ॥ ೨೭ ॥

ಕಿಂ ಶ್ರುತೈರ್ಬಹುಭಿಃ ಶಾಸ್ತ್ರೈಃ ಪುರಾಣೈಶ್ಚ ಭ್ರಮಾವಹೈಃ ।
ಏಕಂ ಭಾಗವತಂ ಶಾಸ್ತ್ರಂ ಮುಕ್ತಿದಾನೇನ ಗರ್ಜತಿ ॥ ೨೮ ॥

ಕಥಾ ಭಾಗವತಸ್ಯಾಪಿ ನಿತ್ಯಂ ಭವತಿ ಯದ್ಗೃಹೇ ।
ತದ್ಗೃಹಂ ತೀರ್ಥರೂಪಂ ಹಿ ವಸತಾಂ ಪಾಪನಾಶನಮ್ ॥ ೨೯ ॥

ಅಶ್ವಮೇಧಸಹಸ್ರಾಣಿ ವಾಜಪೇಯಶತಾನಿ ಚ ।
ಶುಕಶಾಸ್ತ್ರಕಥಾಯಾಶ್ಚ ಕಲಾಂ ನಾರ್ಹಂತಿ ಷೋಡಶೀಮ್ ॥ ೩೦ ॥

ತಾವತ್ಪಾಪಾನಿ ದೇಹೇಽಸ್ಮಿನ್ನಿವಸಂತಿ ತಪೋಧನಾಃ ।
ಯಾವನ್ನ ಶ್ರೂಯತೇ ಸಮ್ಯಕ್ ಶ್ರೀಮದ್ಭಾಗವತಂ ನರೈಃ ॥ ೩೧ ॥

ನ ಗಂಗಾ ನ ಗಯಾ ಕಾಶೀ ಪುಷ್ಕರಂ ನ ಪ್ರಯಾಗಕಮ್ ।
ಶುಕಶಾಸ್ತ್ರ ಕಥಾಯಾಶ್ಚ ಫಲೇನ ಸಮತಾಂ ನಯೇತ್ ॥ ೩೨ ॥

ಕುಳಿತರು. ॥ ೨೦ ॥ ಆಗ ಎಲ್ಲೆಡೆ ಜಯಕಾರ, ನಮಸ್ಕಾರ, ಶಂಖ ಧ್ವನಿ ಆಗತೊಡಗಿದವು. ಅಬೀರ ಗುಲಾಲ, ಅರಳು, ಹೂವುಗಳೂ ಇವುಗಳ ಮಳೆಯೇ ಸುರಿಯತೊಡಗಿತು. ॥ ೨೧ ॥ ಕೆಲಕೆಲ ದೇವ ಶ್ರೇಷ್ಠರಾದರೋ ವಿಮಾನಗಳನ್ನೇರಿ ಅಲ್ಲಿ ಕುಳಿತ ಎಲ್ಲ ಜನರ ಮೇಲೆ ಕಲ್ಪವೃಕ್ಷದ ಹೂವುಗಳನ್ನು ಮಳೆಗರೆದರು. ॥ ೨೨ ॥

**ಸೂತಪುರಾಣಿಕರು ಹೇಳುತ್ತಾರೆ** – ಈ ಪ್ರಕಾರ ಪೂಜೆಯು ಮುಗಿದ ಮೇಲೆ ಎಲ್ಲ ಜನರು ಏಕಾಗ್ರ ಚಿತ್ತರಾದಾಗ ಸನಕಾದಿ ಋಷಿಗಳು ಮಹಾತ್ಮಾ ನಾರದರಿಗೆ ಶ್ರೀಮದ್ಭಾಗವತದ ಮಾಹಾತ್ಮ್ಯವನ್ನು ಸ್ಪಷ್ಟಪಡಿಸುತ್ತಾ ಹೇಳತೊಡಗಿದರು. ॥ ೨೩ ॥

**ಸನಕಾದಿಗಳು ಹೇಳಿದರು** – ಈಗ ನಾವು ನಿಮಗೆ ಈ ಭಾಗವತ ಶಾಸ್ತ್ರದ ಮಹಿಮೆಯನ್ನು ಹೇಳುತ್ತೇವೆ. ಇದರ ಶ್ರವಣ ಮಾತ್ರದಿಂದ ಮುಕ್ತಿಯು ಕರಗತವಾಗುತ್ತದೆ. ॥ ೨೪ ॥ ಶ್ರೀಮದ್ಭಾಗವತ ಕಥೆಯನ್ನು ಸದಾ-ಸರ್ವದಾ ಸೇವಿಸಬೇಕು. ಆಸ್ವಾದಿಸಬೇಕು. ಇದರ ಶ್ರವಣಮಾತ್ರದಿಂದ ಶ್ರೀಹರಿಯು ಹೃದಯಲ್ಲಿ ಬಂದು ನೆಲೆಸುವನು. ॥ ೨೫ ॥ ಈ ಗ್ರಂಥದಲ್ಲಿ ಹದಿನೆಂಟು ಸಾವಿರ ಶ್ಲೋಕಗಳು ಮತ್ತು ಹನ್ನೆರಡು ಸ್ಕಂಧಗಳಿವೆ. ಶ್ರೀಶುಕಮಹಾಮುನಿಗಳ ಹಾಗೂ ಪರೀಕ್ಷಿತರ ಸಂವಾದವಿದೆ. ನೀವೆಲ್ಲ ಈ ಭಾಗವತ ಶಾಸ್ತ್ರವನ್ನು ಗಮನವಿಟ್ಟು ಕೇಳಿರಿ. ॥ ೨೬ ॥ ಒಂದು ಕ್ಷಣವಾದರೂ ಈ ಶುಕಶಾಸ್ತ್ರದ ಕಥೆಯು ಕಿವಿಗೆ ಬೀಳುವ ತನಕ ಈ ಜೀವಿಯು ಅಜ್ಞಾನವಶನಾಗಿ ಸಂಸಾರ ಚಕ್ರದಲ್ಲಿ ಅಲೆಯುತ್ತಾ ಇರುತ್ತಾನೆ. ॥ ೨೭ ॥ ಅನೇಕ ಶಾಸ್ತ್ರಗಳು, ಪುರಾಣಗಳು ಕೇಳುವುದರಿಂದ ಯಾವ ಲಾಭವಿದೆ ? ಇದರಿಂದ ವ್ಯರ್ಥವಾದ ಭ್ರಮೆಯೇ ಬೆಳೆಯುತ್ತದೆ. ಮುಕ್ತಿಕರುಣಿಸಲೋಸುಗವಾದರೋ ಏಕಮಾತ್ರ ಭಾಗವತ ಶಾಸ್ತ್ರವೇ ಸಾಕಾಗಿದೆ. ॥ ೨೮ ॥ ಪ್ರತಿದಿನವು ಶ್ರೀಮದ್ಭಾಗವತದ ಕಥೆ ನಡೆಯುವ ಮನೆಯು ತೀರ್ಥಸ್ವರೂಪವಾಗುತ್ತದೆ. ಅದರಲ್ಲಿ ವಾಸಿಸುವವರ ಎಲ್ಲ ಪಾಪಗಳು ನಾಶವಾಗಿ ಹೋಗುತ್ತವೆ. ॥ ೨೯ ॥ ಸಾವಿರಾರು ಅಶ್ವಮೇಧಗಳು, ನೂರಾರು ವಾಜಪೇಯ ಯಜ್ಞಗಳು ಈ ಶುಕಶಾಸ್ತ್ರದ ಕಥೆಯ ಹದಿನಾರನೆಯ ಒಂದು ಅಂಶವೂ ಆಗಲಾರವು. ॥ ೩೦ ॥ ತಪೋಧನರೇ ! ಜನರು ಚೆನ್ನಾಗಿ ಶ್ರೀಮದ್ಭಾಗವತದಕಥೆಯನ್ನು ಶ್ರವಣಿಸುವ ತನಕ ಅವರ ಶರೀರದಲ್ಲಿ ಪಾಪಗಳು ವಾಸಿಸುತ್ತವೆ. ॥ ೩೧ ॥ ಫಲದ ದೃಷ್ಟಿಯಿಂದ ಈ ಶುಕಶಾಸ್ತ್ರಕಥೆಗೆ ಗಂಗೆ, ಯಮುನೆ, ಕಾಶೀ, ಪುಷ್ಕರ, ಪ್ರಯಾಗ ಮುಂತಾದ ತೀರ್ಥಕ್ಷೇತ್ರಗಳು ಸಾಟಿಯಾಗಲಾರವು. ಅರ್ಥಾತ್ ಇವೆಲ್ಲಕ್ಕಿಂತ ಭಾಗವತ ಕಥೆ ಶ್ರೇಷ್ಠವಾಗಿದೆ. ॥ ೩೨ ॥

ನಿಮಗೆ ಪರಮಗತಿಯ ಇಚ್ಛೆ ಇದ್ದರೆ, ಸ್ವಮುಖದಿಂದ ಶ್ರೀಮದ್ಭಾಗವತದ ಅರ್ಧ ಅಥವಾ ಕಾಲು ಶ್ಲೋಕವನ್ನಾದರೂ

ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।
ಪಠಸ್ವ ಸ್ವಮುಖೇನೈವ ಯದೀಚ್ಛಸಿ ಪರಾಂ ಗತಿಮ್ ॥ ೩೩ ॥

ವೇದಾದಿರ್ವೇದಮಾತಾ ಚ ಪೌರುಷಂ ಸೂಕ್ತಮೇವ ಚ ।
ತ್ರಯೀ ಭಾಗವತಂ ಚೈವ ದ್ವಾದಶಾಕ್ಷರ ಏವ ಚ ॥ ೩೪ ॥

ದ್ವಾದಶಾತ್ಮಾ ಪ್ರಯಾಗಶ್ಚ ಕಾಲಃ ಸಂವತ್ಸರಾತ್ಮಕಃ ।
ಬ್ರಾಹ್ಮಣಾಶ್ಚಾಗ್ನಿಹೋತ್ರಂ ಚ ಸುರಭಿರ್ದ್ವಾದಶೀ ತಥಾ ॥ ೩೫ ॥

ತುಲಸೀ ಚ ವಸಂತಶ್ಚ ಪುರುಷೋತ್ತಮ ಏವ ಚ ।
ಏತೇಷಾಂ ತತ್ತ್ವತಃ ಪ್ರಾಜ್ಞೈರ್ನ ಪೃಥಗ್ಭಾವ ಇಷ್ಯತೇ ॥ ೩೬ ॥

ಯಶ್ಚ ಭಾಗವತಂ ಶಾಸ್ತ್ರಂ ವಾಚಯೇದರ್ಥತೋಽನಿಶಮ್ ।
ಜನ್ಮಕೋಟಿಕೃತಂ ಪಾಪಂ ನಶ್ಯತೇ ನಾತ್ರ ಸಂಶಯಃ ॥ ೩೭ ॥

ಶ್ಲೋಕಾರ್ಧಂ ಶ್ಲೋಕಪಾದಂ ವಾ ಪಠೇದ್ಭಾಗವತಂ ಚ ಯಃ ।
ನಿತ್ಯಂ ಪುಣ್ಯಮವಾಪ್ನೋತಿ ರಾಜಸೂಯಾಶ್ವಮೇಧಯೋಃ ॥ ೩೮ ॥

ಉಕ್ತಂ ಭಾಗವತಂ ನಿತ್ಯಂ ಕೃತಂ ಚ ಹರಿಚಿಂತನಮ್ ।
ತುಲಸೀಪೋಷಣಂ ಚೈವ ಧೇನೂನಾಂ ಸೇವನಂ ಸಮಮ್ ॥ ೩೯ ॥

ಅಂತಕಾಲೇ ತು ಯೇನೈವ ಶ್ರೂಯತೇ ಶುಕಶಾಸ್ತ್ರವಾಕ್ ।
ಪ್ರೀತ್ಯಾ ತಸ್ಯೈವ ವೈಕುಂಠಂ ಗೋವಿಂದೋಽಪಿ ಪ್ರಯಚ್ಛತಿ ॥ ೪೦ ॥

ಹೇಮಸಿಂಹಯುತಂ ಚೈತದ್ವೈಷ್ಣವಾಯ ದದಾತಿ ಚ ।
ಕೃಷ್ಣೇನ ಸಹ ಸಾಯುಜ್ಯಂ ಸ ಪುಮಾಂಲ್ಲಭತೇ ಧ್ರುವಮ್ ॥ ೪೧ ॥

ಆಜನ್ಮಮಾತ್ರಮಪಿ ಯೇನ ಶಠೇನ ಕಿಂಚಿ-
ಚ್ಚಿತ್ತಂ ವಿಧಾಯ ಶುಕಶಾಸ್ತ್ರ ಕಥಾ ನ ಪೀತಾ ।
ಚಾಂಡಾಲವಚ್ಚ ಖರವದ್ಬತ ತೇನ ನೀತಂ
ಮಿಥ್ಯಾ ಸ್ವಜನ್ಮ ಜನನೀಜನಿದುಃಖಭಾಜಾ ॥ ೪೨ ॥

ಜೀವಚ್ಛವೋ ನಿಗದಿತಃ ಸ ತು ಪಾಪಕರ್ಮಾ
ಯೇನ ಶ್ರುತಂ ಶುಕಕಥಾವಚನಂ ನ ಕಿಂಚಿತ್ ।
ಧಿಕ್ ತಂ ನರಂ ಪಶುಸಮಂ ಭುವಿ ಭಾರರೂಪ-
ಮೇವಂ ವದಂತಿ ದಿವಿ ದೇವಸಮಾಜಮುಖ್ಯಾಃ ॥ ೪೩ ॥

ದುರ್ಲಭೈವ ಕಥಾ ಲೋಕೇ ಶ್ರೀಮದ್ಭಾಗವತೋದ್ಭವಾ ।
ಕೋಟಿಜನ್ಮ ಸಮುತ್ಥೇನ ಪುಣ್ಯೇನೈವ ತು ಲಭ್ಯತೇ ॥ ೪೪ ॥

ತೇನ ಯೋಗನಿಧೇ ಧೀಮನ್ ಶ್ರೋತವ್ಯಾ ಸಾ ಪ್ರಯತ್ನತಃ ।
ದಿನಾನಾಂ ನಿಯಮೋ ನಾಸ್ತಿ ಸರ್ವದಾ ಶ್ರವಣಂ ಮತಮ್ ॥ ೪೫ ॥

ಪ್ರತಿದಿನ ನಿಯಮಪೂರ್ವಕ ಪಠಿಸಬೇಕು. ॥ ೩೩ ॥ ಓಂಕಾರ, ಗಾಯತ್ರೀ, ಪುರುಷಸೂಕ್ತ, ಮೂರೂವೇದಗಳು, ಶ್ರೀಮದ್ಭಾಗವತ, 'ಓಂ ನಮೋ ಭಗವತೇ ವಾಸುದೇವಾಯ' ಈ ದ್ವಾದಶಾಕ್ಷರ ಮಂತ್ರ, ದ್ವಾದಶರೂಪವುಳ್ಳ ಭಗವಾನ್ ಭಾಸ್ಕರ, ಪ್ರಯಾಗ, ಸಂವತ್ಸರರೂಪೀ ಕಾಲ, ಬ್ರಾಹ್ಮಣ, ಅಗ್ನಿಹೋತ್ರ, ಗೋವು, ದ್ವಾದಶೀ ತಿಥಿ, ತುಲಸೀ, ವಸಂತ ಋತು ಮತ್ತು ಭಗವಾನ್ ಪುರುಷೋತ್ತಮ ಇವೆಲ್ಲವುಗಳಲ್ಲಿ ಬುದ್ಧಿವಂತರು ಯಾವುದೇ ಭೇದವೆಣಿಸುವುದಿಲ್ಲ. ॥ ೩೪-೩೬ ॥ ಹಗಲು-ರಾತ್ರಿ ಅರ್ಥಸಹಿತ ಶ್ರೀಮದ್ಭಾಗವತ ಶಾಸ್ತ್ರವನ್ನು ಪಾರಾಯಣೆ ಮಾಡುವವನ ಕೋಟಿ ಜನ್ಮಗಳ ಪಾಪಗಳೂ ನಾಶವಾಗಿ ಹೋಗುತ್ತವೆ. ಇದರಲ್ಲಿ ಕಿಂಚಿತ್ತಾದರೂ ಸಂದೇಹವಿಲ್ಲ. ॥ ೩೭ ॥ ಪ್ರತಿದಿನವೂ ಭಾಗವತದ ಅರ್ಧ ಅಥವಾ ಕಾಲು ಶ್ಲೋಕವನ್ನಾದರೂ ಪಠಿಸುವವನಿಗೆ ರಾಜಸೂಯ, ಅಶ್ವಮೇಧ ಯಜ್ಞಗಳ ಫಲಗಳು ದೊರೆಯುತ್ತವೆ. ॥ ೩೮ ॥ ನಿತ್ಯವು ಭಾಗವತದ ಪಾರಾಯಣ ಮಾಡುವುದು, ಭಗವಂತನನ್ನು ಚಿಂತಿಸುವುದು, ತುಲಸೀಗೆ ನೀರೆರೆಯುವುದು, ಗೋಪೂಜೆ ಮಾಡುವುದು ಇವು ನಾಲ್ಕೂ ಸಮಾನವಾಗಿವೆ. ॥ ೩೯ ॥ ಅಂತ್ಯಸಮಯದಲ್ಲಿ ಶ್ರೀಮದ್ಭಾಗವತ ವಾಕ್ಯವನ್ನು ಕೇಳುವವನ ಮೇಲೆ ಭಗವಂತನು ಪ್ರಸನ್ನನಾಗಿ, ವೈಕುಂಠಧಾಮವನ್ನು ಕರುಣಿಸುತ್ತಾನೆ. ॥ ೪೦ ॥ ಈ ಭಾಗವತವನ್ನು ಸ್ವರ್ಣಸಿಂಹಾಸನದಲ್ಲಿಟ್ಟು ವಿಷ್ಣುಭಕ್ತನಿಗೆ ದಾನ ಮಾಡುವವನು ಖಂಡಿತವಾಗಿ ಭಗವಂತನ ಸಾಯುಜ್ಯವನ್ನು ಪಡೆಯುತ್ತಾನೆ. ॥ ೪೧ ॥ ಜೀವನದ ಆಯುಷ್ಯದಲ್ಲಿ ಚಿತ್ತವನ್ನು ಏಕಾಗ್ರ ಮಾಡಿ ಶ್ರೀಮದ್ಭಾಗವತದ ಸ್ವಲ್ಪವಾದರೂ ರಸಾಸ್ವಾದ ಮಾಡದಿರುವ ದುಷ್ಟನು ತನ್ನ ಜನ್ಮವನ್ನು ಚಾಂಡಾಲ, ಕತ್ತೆಯಂತೆ ವ್ಯರ್ಥವಾಗಿ ಕಳೆದಿರುವನು. ಅವನಾದರೋ ತನ್ನ ತಾಯಿಗೆ ಪ್ರಸವ ವೇದನೆಯನ್ನು ಕೊಡಲೆಂದೇ ಹುಟ್ಟಿರುವನು. ॥ ೪೨ ॥ ಈ ಶುಕ ಶಾಸ್ತ್ರವನ್ನು ಸ್ವಲ್ಪವೂ ಕೇಳದ ಪಾಪಾತ್ಮನು ಬದುಕಿದ್ದರೂ ಶವದಂತೆ ಇದ್ದಾನೆ. 'ಭೂಮಿಗೆ ಭಾರವಾದ ಆ ಪಶುವಿನಂತಿರುವವನಿಗೆ ಧಿಕ್ಕಾರವಿರಲಿ' ಎಂದು ಸ್ವರ್ಗದಲ್ಲಿ ಇಂದ್ರಾದಿ ಪ್ರಧಾನ ದೇವತೆಗಳು ಹೇಳುತ್ತಿರುತ್ತಾರೆ. ॥ ೪೩ ॥

ಪ್ರಪಂಚದಲ್ಲಿ ಶ್ರೀಮದ್ಭಾಗವತದ ಕಥೆಯು ದೊರೆಯುವುದು ಖಂಡಿತವಾಗಿ ಕಠಿಣವಾಗಿದೆ. ಕೋಟಿ ಜನ್ಮಗಳ ಪುಣ್ಯವು ಇದ್ದಾಗಲೇ ಇದು ಪ್ರಾಪ್ತಿಯಾಗುತ್ತದೆ. ॥ ೪೪ ॥ ನಾರದರೇ ! ನೀವು ಬಹಳ ಬುದ್ಧಿವಂತರು ಹಾಗೂ ಯೋಗನಿಧಿಗಳಾಗಿರುವಿರಿ. ನೀವು ಪ್ರಯತ್ನಪೂರ್ವಕ ಈ ಕಥೆಯನ್ನು ಶ್ರವಣಿಸಿರಿ. ಇದನ್ನು ಕೇಳಲು ಯಾವುದೇ ದಿನಗಳ ನಿಯಮವಿಲ್ಲ, ಇದನ್ನಾದರೋ ಯಾವಾಗಲೂ ಕೇಳುವುದು ಒಳ್ಳೆಯದೆ. ॥ ೪೫ ॥ ಇದನ್ನು ಸತ್ಯಭಾಷಣ ಮತ್ತು ಬ್ರಹ್ಮಚರ್ಯಪಾಲನೆಯೊಂದಿಗೆ ಯಾವಾಗಲೂ ಕೇಳುವುದು ಶ್ರೇಷ್ಠವೆಂದು ತಿಳಿಯಲಾಗಿದೆ. ಆದರೆ ಕಲಿಯುಗದಲ್ಲಿ ಹೀಗಾಗುವುದು ಕಷ್ಟವಾಗಿದೆ. ಅದಕ್ಕಾಗಿ ಶುಕಮಹಾಮುನಿಗಳು ತಿಳಿಸಿರುವ ವಿಧಿಯನ್ನು ತಿಳಿದು ಕೊಳ್ಳಬೇಕು. ॥ ೪೬ ॥

ಸತ್ಯೇನ ಬ್ರಹ್ಮಚರ್ಯೇಣ ಸರ್ವದಾ ಶ್ರವಣಂ ಮತಮ್ ।
ಅಶಕ್ಯತ್ವಾತ್ಕಲೌ ಬೋಧ್ಯೋ ವಿಶೇಷೋಽತ್ರ ಶುಕಾಜ್ಞಯಾ
॥ ೪೬ ॥

ಮನೋವೃತ್ತಿಜಯಶ್ಚೈವ ನಿಯಮಾಚರಣಂ ತಥಾ ।
ದೀಕ್ಷಾಂ ಕರ್ತುಮಶಕ್ಯತ್ವಾತ್ಸಪ್ತಾಹಶ್ರವಣಂ ಮತಮ್
॥ ೪೭ ॥

ಶ್ರದ್ಧಾತಃ ಶ್ರವಣೇ ನಿತ್ಯಂ ಮಾಘೇ ತಾವದ್ಧಿ ಯತ್ಫಲಮ್ ।
ತತ್ಫಲಂ ಶುಕದೇವೇನ ಸಪ್ತಾಹಶ್ರವಣೇ ಕೃತಮ್
॥ ೪೮ ॥

ಮನಸಶ್ಚಾಜಯಾದ್ರೋಗಾತ್ಪುಂಸಾಂ ಚೈವಾಯುಷಃ ಕ್ಷಯಾತ್ ।
ಕಲೇರ್ದೋಷಬಹುತ್ವಾಚ್ಚ ಸಪ್ತಾಹಶ್ರವಣಂ ಮತಮ್
॥ ೪೯ ॥

ಯತ್ಫಲಂ ನಾಸ್ತಿ ತಪಸಾ ನ ಯೋಗೇನ ಸಮಾಧಿನಾ ।
ಅನಾಯಾಸೇನ ತತ್ಸರ್ವಂ ಸಪ್ತಾಹಶ್ರವಣೇ ಲಭೇತ್
॥ ೫೦ ॥

ಯಜ್ಞಾದ್ಗರ್ಜತಿ ಸಪ್ತಾಹಃ ಸಪ್ತಾಹೋ ಗರ್ಜತಿ ವ್ರತಾತ್ ।
ತಪಸೋ ಗರ್ಜತಿ ಪ್ರೋಚ್ಚೈಸ್ತೀರ್ಥಾನ್ನಿತ್ಯಂ ಹಿ ಗರ್ಜತಿ
॥ ೫೧ ॥

ಯೋಗಾದ್ಗರ್ಜತಿ ಸಪ್ತಾಹೋ ಧ್ಯಾನಾಜ್ಞಾನಾಚ್ಚ ಗರ್ಜತಿ ।
ಕಿಂ ಬ್ರೂಮೋ ಗರ್ಜನಂ ತಸ್ಯ ರೇ ರೇ ಗರ್ಜತಿ ಗರ್ಜತಿ
॥ ೫೨ ॥

*ಶೌನಕ ಉವಾಚ*

ಸಾಶ್ಚರ್ಯಮೇತತ್ಕಥಿತಂ ಕಥಾನಕಂ
ಜ್ಞಾನಾದಿಧರ್ಮಾನ್ವಿಗಣಯ್ಯ ಸಾಂಪ್ರತಮ್ ।
ನಿಃಶ್ರೇಯಸೇ ಭಾಗವತಂ ಪುರಾಣಂ
ಜಾತಂ ಕುತೋ ಯೋಗವಿದಾದಿಸೂಚಕಮ್ ॥ ೫೩ ॥

*ಸೂತ ಉವಾಚ*

ಯದಾ ಕೃಷ್ಣೋ ಧರಾಂ ತ್ಯಕ್ತ್ವಾ ಸ್ವಪದಂ ಗಂತುಮುದ್ಯತಃ ।
ಏಕಾದಶಂ ಪರಿಶ್ರುತ್ಯಾಪ್ಯುದ್ಧವೋ ವಾಕ್ಯಮಬ್ರವೀತ್
॥ ೫೪ ॥

*ಉದ್ಧವ ಉವಾಚ*

ತ್ವಂ ತು ಯಾಸ್ಯಸಿ ಗೋವಿಂದ ಭಕ್ತಕಾರ್ಯಂ ವಿಧಾಯ ಚ ।
ಮಚ್ಚಿತ್ತೇ ಮಹತೀ ಚಿಂತಾ ತಾಂ ಶ್ರುತ್ವಾ ಸುಖಮಾವಹ
॥ ೫೫ ॥

ಆಗತೋಽಯಂ ಕಲಿರ್ಘೋರೋ ಭವಿಷ್ಯಂತಿ ಪುನಃ ಖಲಾಃ ।
ತತ್ಸಂಗೇನೈವ ಸಂತೋಽಪಿ ಗಮಿಷ್ಯಂತ್ಯುಗ್ರತಾಂ ಯದಾ
॥ ೫೬ ॥

ತದಾ ಭಾರವತೀ ಭೂಮಿರ್ಗೋರೂಪೇಯಂ ಕಮಾಶ್ರಯೇತ್ ।
ಅನ್ಯೋ ನ ದೃಶ್ಯತೇ ತ್ರಾತಾ ತ್ವತ್ತಃ ಕಮಲಲೋಚನ
॥ ೫೭ ॥

ಕಲಿಯುಗದಲ್ಲಿ ಅನೇಕ ದಿನಗಳವರೆಗೆ ಚಿತ್ತವೃತ್ತಿಗಳನ್ನು ವಶದಲ್ಲಿರುವುದು, ನಿಯಮಗಳಿಂದ ಬಂಧಿತನಾಗುವುದು, ಯಾವುದೇ ಪುಣ್ಯ ಕಾರ್ಯಕ್ಕಾಗಿ ದೀಕ್ಷಿತನಾಗಿರುವುದು ಕಠಿಣವಾಗಿದೆ. ಅದಕ್ಕಾಗಿ ಸಪ್ತಾಹ ಶ್ರವಣದ ವಿಧಿ ಇದೆ. ॥೪೭॥ ಶ್ರದ್ಧೆಯಿಂದ ಯಾವಾಗಲೂ ಶ್ರವಣಿಸುವುದರಿಂದ ಅಥವಾ ಮಾಘಮಾಸದಲ್ಲಿ ಶ್ರವಣಿಸುವುದರಿಂದ ಉಂಟಾಗುವ ಫಲವನ್ನು ಶ್ರೀಶುಕದೇವರು ಸಪ್ತಾಹ ಶ್ರವಣದಲ್ಲಿ ನಿರ್ಧರಿಸಿರುವರು. ॥ ೪೮ ॥ ಮನಸ್ಸಿನ ಅಸಂಯಮ, ರೋಗಗಳ ಹೆಚ್ಚಳ, ಆಯುಸ್ಸಿನ ಅಲ್ಪತೆ ಇವುಗಳ ಕಾರಣ ಹಾಗೂ ಕಲಿಯುಗದ ಅನೇಕ ದೋಷಗಳಿಂದಾಗಿಯೇ ಸಪ್ತಾಹ ಶ್ರವಣದ ವಿಧಾನವನ್ನು ಮಾಡಲಾಗಿದೆ. ॥ ೪೯ ॥ ತಪಸ್ಸು, ಯೋಗ, ಸಮಾಧಿ ಇವುಗಳಿಂದ ದೊರೆಯದಿರುವ ಫಲವು ಸರ್ವಾಂಗವಾಗಿ ಸಪ್ತಾಹ ಶ್ರವಣದಿಂದ ಸುಲಭವಾಗಿ ದೊರೆಯುತ್ತದೆ. ॥ ೫೦ ॥ ಸಪ್ತಾಹ ಶ್ರವಣವು ಯಜ್ಞದಿಂದ, ವ್ರತದಿಂದ, ತಪಸ್ಸಿನಿಂದ ಹೆಚ್ಚಿನದಾಗಿದೆ. ತೀರ್ಥ ಸೇವನೆಯಿಂದಲಾದರೋ ಸದಾ ಹೆಚ್ಚಿಗೆಯೇ ಇದೆ. ಯೋಗದಿಂದಲೂ ಮಿಗಿಲಾಗಿದೆ. ಎಲ್ಲಿಯವರೆಗೆಂದರೆ ಧ್ಯಾನ, ಜ್ಞಾನದಿಂದಲೂ ಮಿಗಿಲಾಗಿದೆ. ಅಯ್ಯಾ! ಇದರ ವಿಶೇಷತೆ ಎಲ್ಲಿಯವರೆಗೆ ಹೇಳಲಿ? ಇದಾದರೋ ಎಲ್ಲಕ್ಕಿಂತ ಶ್ರೇಷ್ಠವೇ ಆಗಿದೆ. ॥ ೫೧-೫೨ ॥

**ಶೌನಕರು ಕೇಳಿದರು** – ಸೂತರೇ! ಇದಾದರೋ ನೀವು ತುಂಬಾ ಆಶ್ಚರ್ಯದ ಮಾತನ್ನಾಡಿದಿರಿ. ಅವಶ್ಯವಾಗಿಯೇ ಈ ಭಾಗವತ ಪುರಾಣವು ಯೋಗವೇತ್ತರಾದ ಬ್ರಹ್ಮದೇವರಿಗೂ ಆದಿ ಕಾರಣನಾದ ಶ್ರೀನಾರಾಯಣನನ್ನೇ ನಿರೂಪಿಸುತ್ತದೆ. ಆದರೆ ಇದು ಮೋಕ್ಷದ ಪ್ರಾಪ್ತಿಯಲ್ಲಿ ಜ್ಞಾನಾದಿ ಎಲ್ಲ ಸಾಧನೆಗಳನ್ನು ಹಿಂದಕ್ಕೆ ಹಾಕಿ, ಈ ಯುಗದಲ್ಲಿ ಅದರಿಂದಲೂ ಹೆಚ್ಚು ಹೇಗೆ ಹಿರಿದಾಯಿತು? ॥ ೫೩ ॥

**ಸೂತಪುರಾಣಿಕರು ಹೇಳಿದರು** – ಭಗವಾನ್ ಶ್ರೀಕೃಷ್ಣನು ಈ ಧರಾತಲವನ್ನು ಬಿಟ್ಟು ತನ್ನ ನಿಜಧಾಮಕ್ಕೆ ಹೋಗುವಾಗ ಅವನ ಮುಖಾರವಿಂದದಿಂದ ಏಕಾದಶ ಸ್ಕಂಧದ ಜ್ಞಾನೋಪದೇಶವನ್ನು ಕೇಳಿದ ಉದ್ಧವನೂ ಇದನ್ನೇ ಕೇಳಿದ್ದನು. ॥ ೫೪ ॥

**ಉದ್ಧವನೆಂದನು** – ಗೋವಿಂದಾ! ಈಗ ನೀನು ಭಕ್ತರ ಕಾರ್ಯಗಳನ್ನು ಮಾಡಿ ಪರಮಧಾಮಕ್ಕೆ ತೆರಳಲು ಬಯಸುತ್ತಿರುವಿ. ಆದರೆ ನನ್ನ ಮನಸ್ಸಿನಲ್ಲಿ ಒಂದು ಹಿರಿದಾದ ಚಿಂತೆ ಇದೆ. ಅದನ್ನು ಕೇಳಿ ನೀನು ನನ್ನನ್ನು ಶಾಂತಗೊಳಿಸು. ॥ ೫೫ ॥ ಈಗ ಘೋರ ಕಲಿಕಾಲವು ಬಂದಿತೆಂದೇ ತಿಳಿ. ಅದರಿಂದ ಪ್ರಪಂಚದಲ್ಲಿ ಪುನಃ ಅನೇಕ ದುಷ್ಟರು ಪ್ರಕಟರಾಗುವರು. ಅವರ ಸಂಸರ್ಗದಿಂದ ಅನೇಕ ಸತ್ಪುರುಷರು ಉಗ್ರ ಪ್ರಕೃತಿಯವರಾದಾಗ, ಅವರ ಭಾರದಿಂದ ಕಂಗೆಟ್ಟ ಈ ಗೋರೂಪೀ ಪೃಥ್ವಿಯು ಯಾರಿಗೆ ಶರಣು ಹೋಗಬೇಕು? ಕಮಲನಯನಾ! ನನಗಾದರೋ ನಿನ್ನನ್ನು ಬಿಟ್ಟು ಇದನ್ನು ರಕ್ಷಿಸುವವರು ಬೇರೆ ಯಾರೂ ಕಾಣುವುದಿಲ್ಲ. ॥ ೫೬-೫೭ ॥

ಅತಃ ಸತ್ಸು ದಯಾಂ ಕೃತ್ವಾ ಭಕ್ತವತ್ಸಲ ಮಾ ವ್ರಜ।
ಭಕ್ತಾರ್ಥಂ ಸಗುಣೋ ಜಾತೋ ನಿರಾಕಾರೋಽಪಿ ಚಿನ್ಮಯಃ ॥ ೫೮ ॥

ತ್ವದ್ವಿಯೋಗೇನ ತೇ ಭಕ್ತಾಃ ಕಥಂ ಸ್ಥಾಸ್ಯಂತಿ ಭೂತಲೇ।
ನಿರ್ಗುಣೋಪಾಸನೇ ಕಷ್ಟಮತಃ ಕಿಂಚಿದ್ವಿಚಾರಯ ॥ ೫೯ ॥

ಇತ್ಯುದ್ಧವವಚಃ ಶ್ರುತ್ವಾ ಪ್ರಭಾಸೇಽಚಿಂತಯದ್ಧರಿಃ।
ಭಕ್ತಾವಲಂಬನಾರ್ಥಾಯ ಕಿಂ ವಿಧೇಯಂ ಮಯೇತಿ ಚ ॥ ೬೦ ॥

ಸ್ವಕೀಯಂ ಯದ್ಭವೇತ್ತೇಜಸ್ತಚ್ಚ ಭಾಗವತೇಽದಧಾತ್।
ತಿರೋಧಾಯ ಪ್ರವಿಷ್ಟೋಽಯಂ ಶ್ರೀಮದ್ಭಾಗವತಾರ್ಣವಮ್ ॥ ೬೧ ॥

ತೇನೇಯಂ ವಾಙ್ಮಯೀ ಮೂರ್ತಿಃ ಪ್ರತ್ಯಕ್ಷಾ ವರ್ತತೇ ಹರೇಃ।
ಸೇವನಾಚ್ಛ್ರವಣಾತ್ಪಾಠಾದ್ದರ್ಶನಾತ್ಪಾಪನಾಶಿನೀ ॥ ೬೨ ॥

ಸಪ್ತಾಹಶ್ರವಣಂ ತೇನ ಸರ್ವೇಭ್ಯೋಽಪ್ಯಧಿಕಂ ಕೃತಮ್।
ಸಾಧನಾನಿ ತಿರಸ್ಕೃತ್ಯ ಕಲೌ ಧರ್ಮೋಽಯಮೀರಿತಃ ॥ ೬೩ ॥

ದುಃಖದಾರಿದ್ರ್ಯದೌರ್ಭಾಗ್ಯಪಾಪಪ್ರಕ್ಷಾಲನಾಯ ಚ।
ಕಾಮಕ್ರೋಧಜಯಾರ್ಥಂ ಹಿ ಕಲೌ ಧರ್ಮೋಽಯಮೀರಿತಃ ॥ ೬೪ ॥

ಅನ್ಯಥಾ ವೈಷ್ಣವೀ ಮಾಯಾ ದೇವೈರಪಿ ಸುದುಸ್ತ್ಯಜಾ।
ಕಥಂ ತ್ಯಾಜ್ಯಾ ಭವೇತ್ಪುಂಭಿಃ ಸಪ್ತಾಹೋಽತಃ ಪ್ರಕೀರ್ತಿತಃ ॥ ೬೫ ॥

*ಸೂತ ಉವಾಚ*

ಏವಂ ನಗಾಹಶ್ರವಣೋರುಧರ್ಮೇ
ಪ್ರಕಾಶ್ಯಮಾನೇ ಋಷಿಭಿಃ ಸಭಾಯಾಮ್ ।
ಆಶ್ಚರ್ಯಮೇಕಂ ಸಮಭೂತ್ತದಾನೀಂ
ತದುಚ್ಯತೇ ಸಂಶೃಣು ಶೌನಕ ತ್ವಮ್ ॥ ೬೬ ॥

ಭಕ್ತಿಃ ಸುತೌ ತೌ ತರುಣೌ ಗೃಹಿತ್ವಾ
ಪ್ರೇಮೈಕರೂಪಾ ಸಹಸಾಽಽವಿರಾಸೀತ್ ।
ಶ್ರೀಕೃಷ್ಣ ಗೋವಿಂದ ಹರೇ ಮುರಾರೇ
ನಾಥೇತಿ ನಾಮಾನಿ ಮುಹುರ್ವದಂತೀ ॥ ೬೭ ॥

ತಾಂ ಚಾಗತಾಂ ಭಾಗವತಾರ್ಥಭೂಷಾಂ
ಸುಚಾರುವೇಷಾಂ ದದೃಶುಃ ಸದಸ್ಯಾಃ।
ಕಥಂ ಪ್ರವಿಷ್ಟಾ ಕಥಮಾಗತೇಯಂ
ಮಧ್ಯೇ ಮುನೀನಾಮಿತಿ ತರ್ಕಯಂತಃ ॥ ೬೮ ॥

ಆದಕ್ಕಾಗಿ ಓ ಭಕ್ತವತ್ಸಲಾ ! ನೀನು ಸಾಧುಗಳ ಮೇಲೆ ಕೃಪೆಮಾಡಿ ಇಲ್ಲಿಂದ ಹೋಗಬೇಡ. ಭಗವಂತಾ ! ನೀನು ನಿರಾಕಾರ, ಚಿನ್ಮಾತ್ರನಾಗಿದ್ದರೂ ಕೂಡ ಭಕ್ತರಿಗಾಗಿಯೇ ಈ ಸಗುಣ ರೂಪವನ್ನು ಧರಿಸಿರುವೆ. ॥ ೫೮ ॥ ಮತ್ತೆ ನಿನ್ನ ವಿಯೋಗವಾದಾಗ ಆ ಭಕ್ತರು ಭೂಮಿಯಲ್ಲಿ ಹೇಗೆ ಇರಬಲ್ಲರು ? ನಿರ್ಗುಣೋಪಾಸನೆಯಲ್ಲಾದರೋ ತುಂಬಾ ಕಠಿಣತೆ ಇದೆ. ಆದಕ್ಕಾಗಿ ಏನಾದರು ಬೇರೆ ಉಪಾಯ ಮಾಡು. ॥ ೫೯ ॥

ಪ್ರಭಾಸ ಕ್ಷೇತ್ರದಲ್ಲಿ ಉದ್ಧವನ ಈ ಮಾತನ್ನು ಕೇಳಿ ಭಗವಂತನು – 'ಭಕ್ತರ ಆಲಂಬನೆಗಾಗಿ ನಾನು ಯಾವ ವ್ಯವಸ್ಥೆ ಮಾಡಲೀ' ಎಂದು ಯೋಚಿಸ ತೊಡಗಿದನು. ॥ ೬೦ ॥ ಶೌನಕರೇ! ಆಗ ಭಗವಂತನು ತನ್ನ ಎಲ್ಲ ಶಕ್ತಿಯನ್ನು ಭಾಗವತದಲ್ಲಿ ಇರಿಸಿದನು. ಅವನು ಅಂತರ್ಧಾನನಾಗಿ ಈ ಭಾಗವತ ಸಮುದ್ರದಲ್ಲಿ ಪ್ರವೇಶಿಸಿದನು. ॥ ೬೧ ॥ ಆದರಿಂದ ಇದು ಭಗವಂತನ ಸಾಕ್ಷಾತ್ ಶಬ್ದಮಯ ಮೂರ್ತಿಯಾಗಿದೆ. ಇದರ ಸೇವನೆಯಿಂದ, ಶ್ರವಣ, ಪಾರಾಯಣದಿಂದ, ಅಥವಾ ದರ್ಶನದಿಂದಲೇ ಮನುಷ್ಯನ ಪಾಪಗಳೆಲ್ಲವೂ ನಾಶವಾಗಿ ಹೋಗುತ್ತವೆ. ॥ ೬೨ ॥ ಇದರಿಂದಲೇ ಇದರ ಸಪ್ತಾಹಶ್ರವಣವು ಎಲ್ಲಕ್ಕಿಂತ ಹಿರಿದೆಂದು ತಿಳಿಯಲಾಗಿದೆ. ಕಲಿಯುಗದಲ್ಲಾದರೋ ಬೇರೆ ಎಲ್ಲ ಸಾಧನೆಗಳನ್ನು ಬಿಟ್ಟು ಇದೇ ಪ್ರಧಾನ ಧರ್ಮವೆಂದು ಹೇಳಲಾಗಿದೆ. ॥ ೬೩ ॥ ಕಲಿಯುಗದಲ್ಲಿ ದುಃಖ, ದಾರಿದ್ರ್ಯ, ದುರ್ಭಾಗ್ಯ ಮತ್ತು ಪಾಪಗಳನ್ನು ಇಲ್ಲವಾಗಿಸುವ, ಕಾಮ-ಕ್ರೋಧಾದಿ ಶತ್ರುಗಳ ಮೇಲೆ ವಿಜಯ ಸಾಧಿಸುವಂತಹ ಧರ್ಮವು ಇದೊಂದೇ ಆಗಿದೆ. ॥ ೬೪ ॥ ಇದಲ್ಲದೆ ಭಗವಂತನ ಈ ವಿಷ್ಣು ಮಾಯೆಯಿಂದ ಬಿಡಿಸಿ ಕೊಳ್ಳುವುದು ದೇವತೆಗಳಿಗೂ ಕಠಿಣವಾಗಿದೆ. ಮನುಷ್ಯನಾದರೋ ಇದರಿಂದ ಹೇಗೆ ಪಾರಾಗಬಲ್ಲನು ? ಆದ್ದರಿಂದ ಮಾಯೆಯಿಂದ ಬಿಡುಗಡೆ ಹೊಂದಲು ಸಪ್ತಾಹ ಶ್ರವಣದ ವಿಧಾನ ಮಾಡಲಾಗಿದೆ. ॥ ೬೫ ॥

**ಸೂತರು ಹೇಳುತ್ತಾರೆ** – ಶೌನಕರೇ ! ಸನಕಾದಿ ಮುನೀಶ್ವರರು ಹೀಗೆ ಸಪ್ತಾಹಶ್ರವಣದ ಮಹಿಮೆಯನ್ನು ಹೊಗಳುತ್ತಿದ್ದಾಗ ಆ ಸಭೆಯಲ್ಲಿ ಒಂದು ಬಹುದೊಡ್ಡ ಆಶ್ಚರ್ಯ ನಡೆಯಿತು. ಅದನ್ನು ನಿನಗೆ ಹೇಳುತ್ತೇನೆ ಕೇಳಿರಿ. ॥ ೬೬ ॥ ಅಲ್ಲಿ ತರುಣಾವಸ್ಥೆಯನ್ನು ಹೊಂದಿದ ತನ್ನ ಇಬ್ಬರೂ ಪುತ್ರರೊಂದಿಗೆ ವಿಶುದ್ಧ ಪ್ರೇಮರೂಪೀ ಭಕ್ತಿಯು ಪದೇ-ಪದೇ 'ಶ್ರೀಕೃಷ್ಣ! ಗೋವಿಂದ! ಹರೇ! ಮುರಾರೇ! ಹೇನಾಥ! ನಾರಾಯಣ! ವಾಸುದೇವ! ಮುಂತಾದ ಭಗವನ್ನಾಮಗಳನ್ನು ಉಚ್ಚರಿಸುತ್ತಾ ಆಕಸ್ಮಾತ್ ಪ್ರಕಟಳಾದಳು. ॥ ೬೭ ॥ ಪರಮ ಸುಂದರಿಯಾದ ಭಕ್ತಿಯು ಭಾಗವತದ ಅರ್ಥಗಳನ್ನು ಆಭೂಷಣಗಳನ್ನಾಗಿ ತೊಟ್ಟು ಅಲ್ಲಿಗೆ ಬಂದಿರುವುದನ್ನು ಸದಸ್ಯರೆಲ್ಲರೂ ನೋಡಿದರು. ಮುನಿಗಳ ಆ ಸಭೆಯಲ್ಲಿ ಇವಳು ಇಲ್ಲಿಗೆ ಹೇಗೆ ಬಂದಳು ? ಹೇಗೆ ಪ್ರವಿಷ್ಟಳಾದಳು ? ಎಂದು ತರ್ಕ ವಿತರ್ಕಗಳನ್ನು ಮಾಡತೊಡಗಿದರು. ॥ ೬೮ ॥ ಆಗ ಸನಕಾದಿಗಳು ಹೇಳಿದರು – 'ಈ ಭಕ್ತಿದೇವಿಯು ಈಗಲೇ ಕಥೆಯ

ಊಚುಃ ಕುಮಾರಾ ವಚನಂ ತದಾನೀಂ
ಕಥಾರ್ಥತೋ ನಿಷ್ಪತಿತಾಧುನೇಯಮ್ ।
ಏವಂ ಗಿರಃ ಸಾ ಸಸುತಾ ನಿಶಮ್ಯ
ಸನತ್ಕುಮಾರಂ ನಿಜಗಾದ ನಮ್ರಾ ॥ ೬೯ ॥

ಅರ್ಥದಿಂದ ಮೂಡಿರುವಳು' ಅವರ ಈ ವಚನಗಳನ್ನು ಕೇಳಿ ಭಕ್ತಿಯು ತನ್ನ ಪುತ್ರರೊಂದಿಗೆ ಅತ್ಯಂತ ವಿನಮ್ರಳಾಗಿ ಸನತ್ಕುಮಾರರಲ್ಲಿ ಹೇಳಿದಳು. ॥ ೬೯ ॥

*ಭಕ್ತಿರುವಾಚ*

ಭವದ್ಭಿರದ್ಯೈವ ಕೃತಾಸ್ಮಿ ಪುಷ್ಟಾ
ಕಲಿಪ್ರಣಷ್ಟಾಪಿ ಕಥಾರಸೇನ ।
ಕ್ವಾಹಂ ತು ತಿಷ್ಠಾಮ್ಯಧುನಾ ಬ್ರುವಂತು
ಬ್ರಾಹ್ಮಾ ಇದಂ ತಾಂ ಗಿರಮೂಚಿರೇ ತೇ ॥ ೭೦ ॥

ಭಗವದ್ಭಕ್ತಿಯು ಹೇಳಿದಳು – ನಾನು ಕಲಿಯುಗದಲ್ಲಿ ನಷ್ಟಪ್ರಾಯಳಾಗಿದ್ದೆ. ತಾವು ಕಥಾಮೃತವನ್ನು ಸಿಂಪಡಿಸಿ ನನ್ನನ್ನು ಪುನಃ ಪುಷ್ಟಿಗೊಳಿಸಿರುವಿರಿ. 'ಈಗ ನಾನು ಎಲ್ಲಿರಲಿ' ಎಂಬುದನ್ನು ತಾವು ತಿಳಿಸಿರಿ. ಇದನ್ನು ಕೇಳಿ ಸನಕಾದಿಗಳು ಅವಳಲ್ಲಿ ಹೇಳಿದರು ॥ ೭೦ ॥

ಭಕ್ತೇಷು ಗೋವಿಂದ ಸ್ವರೂಪಕರ್ತ್ರೀ
ಪ್ರೇಮೈಕಧರ್ತ್ರೀ ಭವರೋಗಹನ್ತ್ರೀ ।
ಸಾ ತ್ವಂ ಚ ತಿಷ್ಠ ಸ್ವಸುಧೈರ್ಯಸಂಶ್ರಯಾ
ನಿರಂತರಂ ವೈಷ್ಣವಮಾನಸಾನಿ ॥ ೭೧ ॥

'ನೀನು ಭಕ್ತರಿಗೆ ಭಗವಂತನ ಸ್ವರೂಪವನ್ನು ಕರುಣಿಸುವವಳೂ, ಅನನ್ಯ ಪ್ರೇಮವನ್ನು ಸಂಪಾದಿಸಿ ಕೊಡುವವಳೂ, ಸಂಸಾರ ರೋಗವನ್ನು ನಿರ್ಮೂಲನ ಮಾಡುವವಳೂ ಆಗಿರುವೆ. ಆದ್ದರಿಂದ ಧೈರ್ಯವಹಿಸಿ ನೀನು ನಿತ್ಯ-ನಿರಂತರ ವಿಷ್ಣು ಭಕ್ತರ ಹೃದಯಲ್ಲೇ ವಾಸಿಸು. ॥ ೭೧ ॥ ಇಡೀ ಜಗತ್ತಿನಲ್ಲಿ ಕಲಿಯುಗದ ದೋಷಗಳು ಎಷ್ಟೇ ಪ್ರಭಾವ ಬೀರಲಿ, ಆದರೆ ಅಲ್ಲಿ ಇವುಗಳ ದೃಷ್ಟಿಯು ನಿನ್ನ ಮೇಲೆ ಬೀಳಲಾರದು' ಹೀಗೆ ಅವರ ಅಪ್ಪಣೆ ಪಡೆಯುತ್ತಲೇ ಭಕ್ತಿಯೂ ಕೂಡಲೇ ಭಗವದ್ಭಕ್ತರ ಹೃದಯಗಳಲ್ಲಿ ವಿರಾಜಮಾನಳಾದಳು. ॥ ೭೨ ॥

ತತೋಽಪಿ ದೋಷಾಃ ಕಲಿಜಾ ಇಮೇ ತ್ವಾಂ
ದ್ರಷ್ಟುಂ ನ ಶಕ್ತಾಃ ಪ್ರಭವೋಽಪಿ ಲೋಕೇ ।
ಏವಂ ತದಾಜ್ಞಾವಸರೇಽಪಿ ಭಕ್ತಿ-
ಸ್ತದಾ ನಿಷಣ್ಣಾ ಹರಿದಾಸಚಿತ್ತೇ ॥ ೭೨ ॥

ಸಕಲಭುವನಮಧ್ಯೇ ನಿರ್ಧನಾಸ್ತೇಽಪಿ ಧನ್ಯಾ
ನಿವಸತಿ ಹೃದಿ ಯೇಷಾಂ ಶ್ರೀಹರೇರ್ಭಕ್ತಿರೇಕಾ ।
ಹರಿರಪಿ ನಿಜಲೋಕಂ ಸರ್ವಥಾತೋ ವಿಹಾಯ
ಪ್ರವಿಶತಿ ಹೃದಿ ತೇಷಾಂ ಭಕ್ತಿಸೂತ್ರೋಪನದ್ಧಃ ॥ ೭೩ ॥

ಹೃದಯದಲ್ಲಿ ಏಕಮಾತ್ರ ಶ್ರೀಹರಿಯ ಭಕ್ತಿಯು ವಾಸಿಸುವವರು ಮೂರು ಲೋಕಗಳಲ್ಲಿ ನಿರ್ಧನರಾಗಿದ್ದರೂ ಪರಮಧನ್ಯರಾಗಿದ್ದಾರೆ. ಏಕೆಂದರೆ, ಈ ಭಕ್ತಿಯೆಂಬ ಹಗ್ಗದಿಂದ ಬಂಧಿತನಾಗಿ ಸಾಕ್ಷಾತ್ ಭಗವಂತನು ತನ್ನ ಪರಮಧಾಮ ವೈಕುಂಠವನ್ನು ಬಿಟ್ಟು ಬಂದು ಅವರ ಹೃದಯದಲ್ಲಿ ನೆಲೆನಿಲ್ಲುತ್ತಾನೆ. ॥ ೭೩ ॥ ಭೂಲೋಕದಲ್ಲಿ ಈ ಭಾಗವತವು ಸಾಕ್ಷಾತ್ ಪರಬ್ರಹ್ಮನ ವಿಗ್ರಹವಾಗಿದೆ. ನಾವು ಇದರ ಮಹಿಮೆಯನ್ನು ಎಷ್ಟೆಂದು ಹೇಳಲಿ ? ಇದರ ಆಶ್ರಯಪಡೆದು ಇದನ್ನು ಹೇಳುವುದರಿಂದ ಕೇಳುವವರು ಮತ್ತು ಹೇಳುವವರಿಬ್ಬರಿಗೂ ಭಗವಾನ್ ಶ್ರೀಕೃಷ್ಣನ ಸಾರೂಪ್ಯ ಪ್ರಾಪ್ತಿಯಾಗುತ್ತದೆ. ಆದ್ದರಿಂದ ಇದನ್ನು ಬಿಟ್ಟು ಬೇರೆ ಧರ್ಮಗಳಿಂದ ಏನು ಪ್ರಯೋಜನವಿದೆ ? ॥ ೭೪ ॥

ಬ್ರೂಮೋಽದ್ಯ ತೇ ಕಿಮಧಿಕಂ ಮಹಿಮಾನಮೇವಂ
ಬ್ರಹ್ಮಾತ್ಮಕಸ್ಯ ಭುವಿ ಭಾಗವತಾಭಿಧಸ್ಯ ।
ಯತ್ಸಂಶ್ರಯಾನ್ನಿಗದಿತೇ ಲಭತೇ ಸುವಕ್ತಾ
ಶ್ರೋತಾಪಿ ಕೃಷ್ಣಸಮತಾಮಲಮನ್ಯಧರ್ಮೈಃ ॥ ೭೪ ॥

*ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥*

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ ಭಕ್ತಿಕಷ್ಟನಿವರ್ತನಂ ನಾಮ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ಗೋಕರ್ಣೋಪಾಖ್ಯಾನ

*ಸೂತ ಉವಾಚ*

ಅಥ ವೈಷ್ಣವಚಿತ್ತೇಷು ದೃಷ್ಟ್ವಾ ಭಕ್ತಿಮಲೌಕಿಕೀಮ್ ।
ನಿಜಲೋಕಂ ಪರಿತ್ಯಜ್ಯ ಭಗವಾನ್ ಭಕ್ತವತ್ಸಲಃ ॥ ೧ ॥

ಸೂತಪುರಾಣಿಕರು ಹೇಳುತ್ತಾರೆ – ಮುನಿವರ್ಯರೇ ! ಆಗ ತನ್ನ ಭಕ್ತರ ಚಿತ್ತದಲ್ಲಿ ಅಲೌಕಿಕ ಭಕ್ತಿಯ ಪ್ರಾದುರ್ಭಾವವಾಗಿರುವುದನ್ನು ಕಂಡು ಭಕ್ತವತ್ಸಲ ಭಗವಂತನು ತನ್ನ ಧಾಮವನ್ನು ಬಿಟ್ಟು ಅಲ್ಲಿಗೆ ಬಂದನು. ॥ ೧ ॥ ಅವನ ಕೊರಳಲ್ಲಿ ವನಮಾಲೆಯು ಶೋಭಿಸುತ್ತಿತ್ತು. ಶ್ರೀಅಂಗವು ಸಜಲ ಮೇಘದಂತೆ ಶ್ಯಾಮಲ

ವನಮಾಲೀ ಘನಶ್ಯಾಮಃ ಪೀತವಾಸಾ ಮನೋಹರಃ ।
ಕಾಂಚೀಕಲಾಪರುಚಿರೋ ಲಸನ್ಮುಕುಟಕುಂಡಲಃ ॥ ೨ ॥

ತ್ರಿಭಂಗಲಲಿತಶ್ಚಾರುಕೌಸ್ತುಭೇನ ವಿರಾಜಿತಃ ।
ಕೋಟಿಮನ್ಮಥಲಾವಣ್ಯೋ ಹರಿಚಂದನಚರ್ಚಿತಃ ॥ ೩ ॥

ಪರಮಾನಂದಚಿನ್ಮೂರ್ತಿರ್ಮಧುರೋ ಮುರಲೀಧರಃ ।
ಆವಿವೇಶ ಸ್ವಭಕ್ತಾನಾಂ ಹೃದಯಾನ್ಯಮಲಾನಿ ಚ ॥ ೪ ॥

ವೈಕುಂಠವಾಸಿನೋ ಯೇ ಚ ವೈಷ್ಣವಾ ಉದ್ಧವಾದಯಃ ।
ತತ್ಕಥಾಶ್ರವಣಾರ್ಥಂ ತೇ ಗೂಢರೂಪೇಣ ಸಂಸ್ಥಿತಾಃ ॥ ೫ ॥

ತದಾ ಜಯಜಯಾರಾವೋ ರಸಪುಷ್ಟಿರಲೌಕಿಕೀ ।
ಚೂರ್ಣಪ್ರಸೂನವೃಷ್ಟಿಶ್ಚ ಮುಹುಃ ಶಂಖರವೋಽಪ್ಯಭೂತ್ ॥ ೬ ॥

ತತ್ಸಭಾಸಂಸ್ಥಿತಾನಾಂ ಚ ದೇಹಗೇಹಾತ್ಮ ವಿಸ್ಮೃತಿಃ ।
ದೃಷ್ಟ್ವಾ ಚ ತನ್ಮಯಾವಸ್ಥಾಂ ನಾರದೋ ವಾಕ್ಯಮಬ್ರವೀತ್ ॥ ೭ ॥

ಅಲೌಕಿಕೋಽಯಂ ಮಹಿಮಾ ಮುನೀಶ್ವರಾಃ
ಸಪ್ತಾಹಜನ್ಯೋಽದ್ಯ ವಿಲೋಕಿತೋ ಮಯಾ ।
ಮೂಢಾಃ ಶಠಾ ಯೇ ಪಶುಪಕ್ಷಿಣೋಽತ್ರ
ಸರ್ವೇಽಪಿ ನಿಷ್ಪಾಪತಮಾ ಭವಂತಿ ॥ ೮ ॥

ಅತೋ ನೃಲೋಕೇ ನನು ನಾಸ್ತಿ ಕಿಂಚಿ-
ಚ್ಚಿತ್ತಸ್ಯ ಶೋಧಾಯ ಕಲೌ ಪವಿತ್ರಮ್ ।
ಅಘೌಘವಿಧ್ವಂಸಕರಂ ತಥೈವ
ಕಥಾಸಮಾನಂ ಭುವಿ ನಾಸ್ತಿ ಚಾನ್ಯತ್ ॥ ೯ ॥

ಕೇ ಕೇ ವಿಶುದ್ಧ್ಯಂತಿ ವದಂತು ಮಹ್ಯಂ
ಸಪ್ತಾಹಯಜ್ಞೇನ ಕಥಾಮಯೇನ ।
ಕೃಪಾಲುಭಿರ್ಲೋಕಹಿತಂ ವಿಚಾರ್ಯ
ಪ್ರಕಾಶಿತಃ ಕೋಽಪಿ ನವೀನಮಾರ್ಗಃ ॥ ೧೦ ॥

ಕುಮಾರಾ ಊಚುಃ

ಯೇ ಮಾನವಾಃ ಪಾಪಕೃತಸ್ತು ಸರ್ವದಾ
ಸದಾ ದುರಾಚಾರರತಾ ವಿಮಾರ್ಗಗಾಃ ।
ಕ್ರೋಧಾಗ್ನಿದಗ್ಧಾಃ ಕುಟಿಲಾಶ್ಚ ಕಾಮಿನಃ
ಸಪ್ತಾಹಯಜ್ಞೇನ ಕಲೌ ಪುನಂತಿ ತೇ ॥ ೧೧ ॥

ಸತ್ಯೇನ ಹೀನಾಃ ಪಿತೃಮಾತೃದೂಷಕಾ-
ಸ್ತೃಷ್ಣಾಕುಲಾಶ್ಚಾಶ್ರಮಧರ್ಮವರ್ಜಿತಾಃ ।
ಯೇ ದಾಂಭಿಕಾ ಮತ್ಸರಿಣೋಽಪಿ ಹಿಂಸಕಾಃ
ಸಪ್ತಾಹಯಜ್ಞೇನ ಕಲೌ ಪುನಂತಿ ತೇ ॥ ೧೨ ॥

ವಾಗಿತ್ತು. ಮನೋಹರ ಪೀತಾಂಬರವನ್ನು ಧರಿಸಿದ್ದನು. ಕಟಿಯಲ್ಲಿ ರತ್ನಖಚಿತ ಉಡಿದಾರವಿದ್ದು, ಶಿರದಲ್ಲಿ ಮುಕುಟ, ಕಿವಿಗಳಲ್ಲಿ ಮಕರಾಕೃತಿಯ ಕುಂಡಲಗಳು ಶೋಭಿಸುತ್ತಿದ್ದವು. ॥ ೨ ॥ ಅವನ ತ್ರಿಭಂಗಿಮುದ್ರೆಯ ನಿಲುವು ಚಿತ್ತವನ್ನು ಅಪಹರಿಸುತ್ತಿತ್ತು. ವಕ್ಷಃಸ್ಥಳದಲ್ಲಿ ಕೌಸ್ತುಭ ಮಣಿಯು ವಿರಾಜಿಸುತ್ತಿತ್ತು.ಅವನ ಶ್ರೀಅಂಗಾಂಗಗಳು ಚಂದನ ಚರ್ಚಿತವಾಗಿದ್ದು ಕೋಟಿಮನ್ಮಥರ ಲಾವಣ್ಯವನ್ನು ಅಪಹರಿಸಿದಂತಿತ್ತು. ॥ ೩ ॥ ಆ ಪರಮಾನಂದ ಚಿನ್ಮೂರ್ತಿ, ಅತಿಮಧುರ ಮುರಲೀಧರನು ಇಂತಹ ಅನುಪಮ ಕಾಂತಿಯಿಂದ ತನ್ನ ಭಕ್ತರ ನಿರ್ಮಲ ಹೃದಯದಲ್ಲಿ ಆವಿರ್ಭವಿಸಿದನು. ॥ ೪ ॥ ಭಗವಂತನ ನಿತ್ಯಲೋಕ ನಿವಾಸೀ ಲೀಲಾಪರಿಕರ ಉದ್ಧವಾದಿಗಳು ಅಲ್ಲಿ ಗುಪ್ತ ರೂಪದಿಂದ ಆ ಕಥೆಯನ್ನು ಕೇಳಲು ಆಗಮಿಸಿದ್ದರು. ॥ ೫ ॥ ಪ್ರಭುವು ಪ್ರಕಟವಾಗುತ್ತಲೇ ಎಲ್ಲೆಡೆ ಜಯ ಜಯಕಾರ ಧ್ವನಿ ಮೊಳಗಿತು. ಆಗ ಭಕ್ತಿರಸದ ಅದ್ಭುತ ಪ್ರವಾಹವೇ ಹರಿಯಿತು. ಮತ್ತೆ-ಮತ್ತೆ ಅಬೀರ-ಗುಲಾಲ್ಗಳು ಹಾಗೂ ಪುಷ್ಪಗಳ ವೃಷ್ಟಿಯಾಯಿತು. ಶಂಖ ಧ್ವನಿ ಉಲಿಯಿತು. ॥ ೬ ॥ ಆ ಸಭೆಯಲ್ಲಿ ಕುಳಿತವರಿಗೆ ತಮ್ಮ ದೇಹ, ಗೇಹ ಹಾಗೂ ಆತ್ಮನ ಎಚ್ಚರ ಕೂಡ ಇರಲಿಲ್ಲ. ಅವರ ಇಂತಹ ತನ್ಮಯತೆಯನ್ನು ಕಂಡು ನಾರದರು ಹೇಳತೊಡಗಿದರು-॥ ೭ ॥

ಮುನೀಶ್ವರರೇ! ಇಂದು ಸಪ್ತಾಹ ಶ್ರವಣದ ಅಲೌಕಿಕ ಮಹಿಮೆಯನ್ನು ನಾನು ನೋಡಿದೆನು. ಇಲ್ಲಿರುವ ಮಹಾ ಮೂರ್ಖರೂ, ದುಷ್ಟರೂ, ಪಶು-ಪಕ್ಷಿಗಳೂ ಕೂಡ ಎಲ್ಲರೂ ಅತ್ಯಂತ ನಿಷ್ಪಾಪಿಗಳಾಗಿ ಹೋದರು. ॥ ೮ ॥ ಆದ್ದರಿಂದ ಕಲಿಕಾಲದಲ್ಲಿ ಚಿತ್ತದ ಶುದ್ಧಿಗಾಗಿ ಈ ಭಾಗವತ ಕಥೆಗೆ ಸಮಾನವಾಗಿ ಮರ್ತ್ಯಲೋಕದಲ್ಲಿ ಪಾಪಪುಂಜವನ್ನು ನಾಶಮಾಡುವಂತಹ ಇನ್ನೊಂದು ಪವಿತ್ರ ಸಾಧನೆ ಇಲ್ಲ ಎಂಬುದರಲ್ಲಿ ಸಂದೇಹವೇ ಇಲ್ಲ. ॥ ೯ ॥ ಮುನಿವರ್ಯರೇ! ನೀವುಗಳು ತುಂಬಾ ಕೃಪಾಳುಗಳಾಗಿದ್ದೀರಿ. ನೀವು ಜಗತ್ತಿನ ಹಿತದ ವಿಚಾರಗೈದು ನಿಶ್ಚಿತವಾದ ಹೊಸದಾದ ಮಾರ್ಗವನ್ನು ಪ್ರಕಾಶಗೊಳಿಸಿರುವಿರಿ. ಈ ಕಥಾರೂಪಿ ಸಪ್ತಾಹ ಯಜ್ಞದ ಮೂಲಕ ಜಗತ್ತಿನಲ್ಲಿ ಯಾರು-ಯಾರು ಪವಿತ್ರರಾಗಿ ಹೋಗಿದ್ದಾರೆಂಬುದನ್ನು ದಯಮಾಡಿ ತಿಳಿಸಿರಿ. ॥ ೧೦ ॥

**ಸನಕಾದಿಗಳು ಹೇಳಿದರು** - ಸದಾಕಾಲ ನಾನಾರೀತಿಯ ಪಾಪಗಳನ್ನು ಮಾಡುವವರೂ, ನಿರಂತರ ದುರಾಚಾರದಲ್ಲಿ ತತ್ಪರರಾಗಿರುವವರೂ, ಶಾಸ್ತ್ರ ವಿರುದ್ಧವಾಗಿ ನಡೆಯುವವರೂ, ಕ್ರೋಧಾಗ್ನಿಯಲ್ಲಿ ಬೇಯುತ್ತಿರುವವರೂ, ಕುಟಿಲರೂ, ಕಾಮಪರಾಯಣರೂ ಹೀಗೆ ಇವರೆಲ್ಲರೂ ಈ ಕಲಿಯುಗದಲ್ಲಿ ಸಪ್ತಾಹ ಯಜ್ಞದಿಂದ ಪವಿತ್ರರಾಗಿಹೋಗುತ್ತಾರೆ. ॥ ೧೧ ॥ ಸತ್ಯದಿಂದ ಚ್ಯುತರಾದವರೂ, ತಂದೆ-ತಾಯಿಯರನ್ನು ನಿಂದಿಸುವವರೂ, ತೃಷ್ಣೆಯಿಂದ ವ್ಯಾಕುಲರಾದವರೂ, ವರ್ಣಾಶ್ರಮಧರ್ಮದಿಂದ ರಹಿತರೂ, ಡಾಂಭಿಕರೂ, ಬೇರೆಯವರ ಉನ್ನತಿಯನ್ನು ನೋಡಿ ಮತ್ಸರಪಡುವವರೂ, ಬೇರೆಯವರಿಗೆ ದುಃಖ ಕೊಡುವವರೂ, ಇವರೆಲ್ಲರೂ ಕಲಿಯುಗದಲ್ಲಿ ಸಪ್ತಾಹ ಯಜ್ಞದಿಂದ ಪವಿತ್ರರಾಗುತ್ತಾರೆ. ॥ ೧೨ ॥

ಪಂಚೋಗ್ರಪಾಪಾಶ್ಛಲಛದ್ಮಕಾರಿಣಃ
ಕ್ರೂರಾಃ ಪಿಶಾಚಾ ಇವ ನಿರ್ದಯಾಶ್ಚ ಯೇ ।
ಬ್ರಹ್ಮಸ್ವಪುಷ್ಟಾ ವ್ಯಭಿಚಾರಕಾರಿಣಃ
ಸಪ್ತಾಹಯಜ್ಞೇನ ಕಲೌ ಪುನಂತಿ ತೇ ॥ ೧೩ ॥

ಕಾಯೇನ ವಾಚಾ ಮನಸಾಪಿ ಪಾತಕಂ
ನಿತ್ಯಂ ಪ್ರಕುರ್ವಂತಿ ಶಠಾ ಹಠೇನ ಯೇ ।
ಪರಸ್ವಪುಷ್ಟಾ ಮಲಿನಾ ದುರಾಶಯಾಃ
ಸಪ್ತಾಹಯಜ್ಞೇನ ಕಲೌ ಪುನಂತಿ ತೇ ॥ ೧೪ ॥

ಅತ್ರ ತೇ ಕೀರ್ತಯಿಷ್ಯಾಮ ಇತಿಹಾಸಂ ಪುರಾತನಮ್ ।
ಯಸ್ಯ ಶ್ರವಣಮಾತ್ರೇಣ ಪಾಪಹಾನಿಃ ಪ್ರಜಾಯತೇ ॥ ೧೫ ॥

ತುಂಗಭದ್ರಾತಟೇ ಪೂರ್ವಮಭೂತ್ತತ್ತನಮುತ್ತಮಮ್ ।
ಯತ್ರ ವರ್ಣಾಃ ಸ್ವಧರ್ಮೇಣ ಸತ್ಯಸತ್ಕರ್ಮತತ್ಪರಾಃ ॥ ೧೬ ॥

ಆತ್ಮದೇವಃ ಪುರೇ ತಸ್ಮಿನ್ ಸರ್ವವೇದವಿಶಾರದಃ ।
ಶ್ರೌತಸ್ಮಾರ್ತೇಷು ನಿಷ್ಣಾತೋ ದ್ವಿತೀಯ ಇವ ಭಾಸ್ಕರಃ ॥ ೧೭ ॥

ಭಿಕ್ಷುಕೋ ವಿತ್ತವಾಂಲ್ಲೋಕೇ ತತ್ಪ್ರಿಯಾ ಧುಂಧುಲೀ ಸ್ಮೃತಾ ।
ಸ್ವವಾಕ್ಯಸ್ಥಾಪಿಕಾ ನಿತ್ಯಂ ಸುಂದರೀ ಸುಕುಲೋದ್ಭವಾ ॥ ೧೮ ॥

ಲೋಕವಾರ್ತಾ ರತಾ ಕ್ರೂರಾ ಪ್ರಾಯಶೋ ಬಹುಜಲ್ಪಿಕಾ ।
ಶೂರಾ ಚ ಗೃಹಕೃತ್ಯೇಷು ಕೃಪಣಾ ಕಲಹಪ್ರಿಯಾ ॥ ೧೯ ॥

ಏವಂ ನಿವಸತೋಃ ಪ್ರೇಮ್ಣಾ ದಂಪತ್ಯೋ ರಮಮಾಣಯೋಃ ।
ಅರ್ಥಾಃ ಕಾಮಾಸ್ತಯೋರಾಸನ್ನ ಸುಖಾಯ ಗೃಹಾದಿಕಮ್ ॥ ೨೦ ॥

ಪಶ್ಚಾದ್ಧರ್ಮಾಃ ಸಮಾರಬ್ಧಾಸ್ತಾಭ್ಯಾಂ ಸಂತಾನಹೇತವೇ ।
ಗೋಭೂಹಿರಣ್ಯವಾಸಾಂಸಿ ದೀನೇಭ್ಯೋ ಯಚ್ಛತಃ ಸದಾ ॥ ೨೧ ॥

ಧನಾರ್ಧಂ ಧರ್ಮಮಾರ್ಗೇಣ ತಾಭ್ಯಾಂ ನೀತಂ ತಥಾಪಿ ಚ ।
ನ ಪುತ್ರೋ ನಾಪಿ ವಾ ಪುತ್ರೀ ತತಶ್ಚಿಂತಾತುರೋ ಭೃಶಮ್ ॥ ೨೨ ॥

ಏಕದಾ ಸ ದ್ವಿಜೋ ದುಃಖಾದ್ಗೃಹಂ ತ್ಯಕ್ತ್ವಾ ವನಂ ಗತಃ ।
ಮಧ್ಯಾಹ್ನೇ ತೃಷಿತೋ ಜಾತಸ್ತಟಾಕಂ ಸಮುಪೇಯಿವಾನ್ ॥ ೨೩ ॥

ಪೀತ್ವಾ ಜಲಂ ನಿಷಣ್ಣಸ್ತು ಪ್ರಜಾದುಃಖೇನ ಕರ್ಶಿತಃ ।
ಮುಹೂರ್ತಾದಪಿ ತತ್ರೈವ ಸಂನ್ಯಾಸೀ ಕಶ್ಚಿದಾಗತಃ ॥ ೨೪ ॥

ಸುರಾಪಾನ, ಬ್ರಹ್ಮಹತ್ಯೆ, ಚಿನ್ನವನ್ನು ಕದಿಯುವುದು, ಗುರುಪತ್ನೀ ಗಮನ, ವಿಶ್ವಾಸಘಾತ ಈ ಪಂಚ ಮಹಾಪಾತಕಿಗಳೂ, ಛಲ ಕಪಟಪರಾಯಣರೂ, ಕ್ರೂರರೂ, ಪಿಶಾಚಿಗಳಂತೆ ನಿರ್ದ-ಯರೂ, ಬ್ರಾಹ್ಮಣರ ಹಣವನ್ನು ಕಬಳಿಸುವವರೂ, ವ್ಯಭಿಚಾರಿಗಳೂ ಹೀಗೆ ಇವರೆಲ್ಲರೂ ಕಲಿಯುಗದಲ್ಲಿ ಸಪ್ತಾಹ ಯಜ್ಞದಿಂದ ಪವಿತ್ರರಾಗುತ್ತಾರೆ. ॥ ೧೩ ॥ ದುಷ್ಟರೂ, ಹಟದಿಂದ ಸದಾಕಾಲ ಮನಸ್ಸು, ಮಾತು, ಶರೀರದಿಂದ ಪಾಪಮಾಡುತ್ತಿರುವವರೂ, ಪರರ ಧನದಿಂದ ಪುಷ್ಟರಾದವರೂ, ಮಲಿನ ಮನಸ್ಸಿನವರೂ, ದುಷ್ಟಹೃದಯವುಳ್ಳವರೂ ಇವರೂ ಕೂಡ ಕಲಿಯುಗದಲ್ಲಿ ಸಪ್ತಾಹ ಯಜ್ಞದಿಂದ ಪವಿತ್ರರಾಗುತ್ತಾರೆ. ॥ ೧೪ ॥

ನಾರದರೇ ! ಈಗ ನಿಮಗೆ ಈ ಕುರಿತು ಒಂದು ಪ್ರಾಚೀನ ಇತಿಹಾಸವನ್ನು ಹೇಳುವೆವು. ಅದನ್ನು ಕೇಳುವುದರಿಂದ ಎಲ್ಲ ಪಾಪಗಳೂ ನಾಶವಾಗಿ ಹೋಗುತ್ತವೆ. ॥ ೧೫ ॥ ಹಿಂದೆ ತುಂಗಭದ್ರಾ ನದೀ ತೀರದಲ್ಲಿ ಒಂದು ಅನುಪಮವಾದ ನಗರವು ನೆಲೆಸಿತ್ತು. ಅದರಲ್ಲಿ ಎಲ್ಲ ವರ್ಣದವರೂ ತಮ್ಮ-ತಮ್ಮ ಧರ್ಮಗಳನ್ನು ಆಚರಿಸುತ್ತಾ ಸತ್ಯ ಮತ್ತು ಸತ್ಕರ್ಮದಲ್ಲಿ ತತ್ಪರರಾಗಿ ವಾಸಿಸುತ್ತಿದ್ದರು. ॥ ೧೬ ॥ ಆ ನಗರದಲ್ಲಿ ಸಮಸ್ತ ವೇದಗಳ ವಿಶೇಷಜ್ಞನೂ, ಶ್ರೌತ-ಸ್ಮಾರ್ತ ಕರ್ಮಗಳಲ್ಲಿ ನಿಪುಣನೂ ಆದ ಆತ್ಮದೇವನೆಂಬ ಬ್ರಾಹ್ಮಣನು ಇರುತ್ತಿದ್ದನು. ಅವನು ಸಾಕ್ಷಾತ್ ಸೂರ್ಯನಂತೆ ತೇಜಸ್ವಿಯಾಗಿದ್ದನು. ॥ ೧೭ ॥ ಅವನು ಪೌರೋಹಿತ್ಯ ವೃತ್ತಿಯಿಂದ ಜೀವಿಸುವವನಾಗಿದ್ದನು. ಮತ್ತು ಧನವಂತನಾಗಿದ್ದನು. ಅವನ ಪ್ರಿಯಪತ್ನೀ ಧುಂಧುಲಿ ಎಂಬುವಳು ಕುಲೀನಳೂ, ಸುಂದರಿಯೂ ಆಗಿದ್ದರೂ ಹಟಮಾರಿಯಾಗಿದ್ದಳು. ॥ ೧೮ ॥ ಬೇರೆಯವರ ವಿಷಯದಲ್ಲಿ ಮಾತಾಡುವುದರಲ್ಲೇ ಅವಳು ರತಳಾಗಿದ್ದು ಯಾವಾಗಲೂ ಹರಟೆಮಾಡುತ್ತಲೇ ಇರುತ್ತಿದ್ದಳು. ಕ್ರೂರಸ್ವಭಾವದವಳಾಗಿದ್ದರೂ, ಮನೆಕೆಲಸದಲ್ಲಿ ನಿಪುಣೆಯಾಗಿದ್ದಳು. ಲೋಭಿಯಾಗಿದ್ದು ಜಗಳಗಂಟಿಯಾಗಿದ್ದಳು. ॥ ೧೯ ॥ ಹೀಗೆ ಈ ಬ್ರಾಹ್ಮಣ ದಂಪತಿಗಳು ಪ್ರೇಮದಿಂದ ಮನೆಯಲ್ಲಿದ್ದು ವಿಹರಿಸುತ್ತಿದ್ದರು. ಅವರ ಬಳಿ ಧನ, ಭೋಗವಿಲಾಸದ ಸಾಮಗ್ರಿ ಬಹಳವಾಗಿತ್ತು. ಮನೆ ಸುಂದರ ವಾಗಿದ್ದರೂ ಅವರಿಗೆ ಸಂತಾನಸುಖವಿರಲಿಲ್ಲ. ॥ ೨೦ ॥ ಪ್ರಾಯ ಸಂದುಹೋಗುತ್ತಿರುವಂತೆ ಅವರು ಸಂತಾನ ಪಡೆಯಲು ಬಗೆ-ಬಗೆಯ ಪುಣ್ಯಕಾರ್ಯಗಳನ್ನು ಪ್ರಾರಂಭಿಸಿದರು. ಅವರು ದೀನ-ದುಃಖಿಗಳಿಗೆ ಗೋವು, ಸುವರ್ಣ, ಭೂಮಿ, ವಸ್ತ್ರ ಮುಂತಾದವುಗಳನ್ನು ದಾನಮಾಡಿದರು. ॥ ೨೧ ॥ ಈ ಪ್ರಕಾರ ಧರ್ಮಕಾರ್ಯದಲ್ಲಿ ಅವರ ಅರ್ಧಭಾಗ ಧನವೂ ಮುಗಿದು ಹೋದರೂ ಅವರಿಗೆ ಗಂಡು ಅಥವಾ ಹೆಣ್ಣು ಮಕ್ಕಳ ಮುಖದರ್ಶನ ಭಾಗ್ಯ ಬಂದಿಲ್ಲ. ಇದರಿಂದ ಆ ಬ್ರಾಹ್ಮಣನು ಬಹಳ ಚಿಂತಾತುರನಾದನು. ॥ ೨೨ ॥

ಒಂದು ದಿನ ಆ ಬ್ರಾಹ್ಮಣನು ತುಂಬಾ ದುಃಖಿತನಾಗಿ ಮನೆಯಿಂದ ಹೊರಟು ಕಾಡಿಗೆ ಹೋದನು. ಮಧ್ಯಾಹ್ನದ ಸಮಯ ಬಾಯಾರಿದ್ದರಿಂದ ಒಂದು ಸರೋವರದ ಬಳಿಗೆ ಬಂದನು. ॥ ೨೩ ॥ ಸಂತಾನವಿಲ್ಲದ ದುಃಖದಿಂದ ಅವನ ಶರೀರವು ಮೊದಲೇ

ದೃಷ್ಟ್ವಾ ಪೀತಜಲಂ ತಂ ತು ವಿಪ್ರೋ ಯಾತಸ್ತದಂತಿಕಮ್ ।
ನತ್ವಾ ಚ ಪಾದಯೋಸ್ತಸ್ಯ ನಿಃಶ್ವಸನ್ ಸಂಸ್ಥಿತಃ ಪುರಃ ॥ ೨೫ ॥

*ಯತಿರುವಾಚ*

ಕಥಂ ರೋದಿಷಿ ವಿಪ್ರ ತ್ವಂ ಕಾ ತೇ ಚಿಂತಾ ಬಲೀಯಸೀ ।
ವದ ತ್ವಂ ಸತ್ವರಂ ಮಹ್ಯಂ ಸ್ವಸ್ಯ ದುಃಖಸ್ಯ ಕಾರಣಮ್ ॥ ೨೬ ॥

*ಬ್ರಾಹ್ಮಣ ಉವಾಚ*

ಕಿಂ ಬ್ರವೀಮಿ ಋಷೇ ದುಃಖಂ ಪೂರ್ವಪಾಪೇನ ಸಂಚಿತಮ್ ।
ಮದೀಯಾಃ ಪೂರ್ವಜಾಸ್ತೋಯಂ ಕವೋಷ್ಣಮುಪಭುಂಜತೇ ॥ ೨೭ ॥

ಮದ್ದತ್ತಂ ನೈವ ಗೃಹ್ಣಂತಿ ಪ್ರೀತ್ಯಾ ದೇವಾ ದ್ವಿಜಾತಯಃ ।
ಪ್ರಜಾದುಃಖೇನ ಶೂನ್ಯೋಽಹಂ ಪ್ರಾಣಾಂಸ್ತ್ಯಕ್ತುಮಿಹಾಗತಃ ॥ ೨೮ ॥

ಧಿಗ್ಜೀವಿತಂ ಪ್ರಜಾಹೀನಂ ಧಿಗ್ಗೃಹಂ ಚ ಪ್ರಜಾಂ ವಿನಾ ।
ಧಿಗ್ಧನಂ ಚಾನಪತ್ಯಸ್ಯ ಧಿಕ್ಕುಲಂ ಸಂತತಿಂ ವಿನಾ ॥ ೨೯ ॥

ಪಾಲ್ಯತೇ ಯಾ ಮಯಾ ಧೇನುಃ
ಸಾ ವಂಧ್ಯಾ ಸರ್ವಥಾ ಭವೇತ್ ।
ಯೋ ಮಯಾ ರೋಪಿತೋ ವೃಕ್ಷಃ
ಸೋಽಪಿ ವಂಧ್ಯತ್ವಮಾಶ್ರಯೇತ್ ॥ ೩೦ ॥

ಯತ್ಫಲಂ ಮದ್ಗೃಹಾಯಾತಂ ತಚ್ಚ ಶೀಘ್ರಂ ವಿನಶ್ಯತಿ ।
ನಿರ್ಭಾಗ್ಯಸ್ಯಾನಪತ್ಯಸ್ಯ ಕಿಮತೋ ಜೀವಿತೇನ ಮೇ ॥ ೩೧ ॥

ಇತ್ಯುಕ್ತ್ವಾ ಸ ರುರೋದೋಚ್ಚೈಸ್ತತ್ಪಾರ್ಶ್ವಂ ದುಃಖಪೀಡಿತಃ ।
ತದಾ ತಸ್ಯ ಯತೇಶ್ಚಿತ್ತೇ ಕರುಣಾಭೂದ್ಗರೀಯಸೀ ॥ ೩೨ ॥

ತದ್ಭಾಲಾಕ್ಷರಮಾಲಾಂ ಚ ವಾಚಯಾಮಾಸ ಯೋಗವಾನ್ ।
ಸರ್ವಂ ಜ್ಞಾತ್ವಾ ಯತಿಃ ಪಶ್ಚಾದ್ವಿಪ್ರಮೂಚೇ ಸವಿಸ್ತರಮ್ ॥ ೩೩ ॥

*ಯತಿರುವಾಚ*

ಮುಂಚಾಜ್ಞಾನಂ ಪ್ರಜಾರೂಪಂ ಬಲಿಷ್ಠಾ ಕರ್ಮಣೋ ಗತಿಃ ।
ವಿವೇಕಂ ತು ಸಮಾಸಾದ್ಯ ತ್ಯಜ ಸಂಸಾರವಾಸನಾಮ್ ॥ ೩೪ ॥

ಶೃಣು ವಿಪ್ರ ಮಯಾ ತೇಽದ್ಯ ಪ್ರಾರಬ್ಧಂ ತು ವಿಲೋಕಿತಮ್ ।
ಸಪ್ತಜನ್ಮಾವಧಿ ತವ ಪುತ್ರೋ ನೈವ ಚ ನೈವ ಚ ॥ ೩೫ ॥

ಸಂತತೇಃ ಸಗರೋ ದುಃಖಮವಾಪಾಂಗಃ ಪುರಾ ತಥಾ ।
ರೇ ಮುಂಚಾದ್ಯ ಕುಟುಂಬಾಶಾಂ ಸಂನ್ಯಾಸೇ ಸರ್ವಥಾ ಸುಖಮ್ ॥ ೩೬ ॥

ಕೃಶವಾಗಿತ್ತು. ಆದರಿಂದ ಬಳಲಿದ ಅವನು ನೀರು ಕುಡಿದು ಅಲ್ಲೇ ಕುಳಿತುಬಿಟ್ಟನು. ಎರಡು ಗಳಿಗೆ ಕಳೆಯುವನಿತರಲ್ಲಿ ಓರ್ವ ಸಂನ್ಯಾಸಿಯು ಅಲ್ಲಿಗೆ ಬಂದನು. ॥ ೨೪ ॥ ಅವರು ನೀರು ಕುಡಿದಾದ ಬಳಿಕ ಬ್ರಾಹ್ಮಣನು ಅವರ ಬಳಿಗೆ ಹೋಗಿ ಚರಣಗಳಲ್ಲಿ ವಂದಿಸಿಕೊಂಡು, ಇದಿರಿಗೆ ನಿಂತು ನಿಟ್ಟುಸಿರುಬಿಡತೊಡಗಿದನು. ॥ ೨೫ ॥

ಸಂನ್ಯಾಸಿಯು ಕೇಳಿದರು -ಎಲೈ ಬ್ರಾಹ್ಮಣನೇ ! ಏಕೆ ಅಳುತ್ತಿರುವೆ ? ನಿನಗೆ ಅಂತಹ ಚಿಂತೆ ಏನಿದೆ ? ನಿನ್ನ ದುಃಖದ ಕಾರಣವನ್ನು ನನ್ನಲ್ಲಿ ಬೇಗನೇ ಹೇಳು. ॥ ೨೬ ॥

ಬ್ರಾಹ್ಮಣನು ಹೇಳಿದನು - ಸ್ವಾಮಿ ! ನಾನು ನನ್ನ ಪೂರ್ವ ಜನ್ಮದ ಪಾಪಗಳ ಸಂಚಿತ ದುಃಖವನ್ನು ಏನೆಂದು ಹೇಳಲಿ ? ಈಗ ನನ್ನ ಪಿತೃಗಳು ನಾನು ಕೊಟ್ಟ ತರ್ಪಣಾದಿಗಳ ನೀರನ್ನು ತಮ್ಮ ಚಿಂತೆಯೆಂಬ ಶ್ವಾಸದಿಂದ ಬಿಸಿಯಾಗಿಸಿಕೊಂಡು ಕುಡಿಯುತ್ತಾರೆ. ॥ ೨೭ ॥ ದೇವತೆಗಳು, ಬ್ರಾಹ್ಮಣರು ನಾನು ಕೊಟ್ಟಿರುವುದನ್ನು ಪ್ರೇಮದಿಂದ ಸ್ವೀಕರಿಸುವುದಿಲ್ಲ, ಸಂತಾನವಿಲ್ಲದ್ದರಿಂದ ನನಗೆ ಎಲ್ಲವೂ ಶೂನ್ಯದಂತೆ ಕಾಣುತ್ತದೆ. ನಾನು ಪ್ರಾಣತ್ಯಾಗ ಮಾಡಲು ಇಲ್ಲಿಗೆ ಬಂದಿರುವೆನು.॥ ೨೮ ॥ ಸಂತಾನ ಹೀನವಾದ ಜೀವನಕ್ಕೆ ಧಿಕ್ಕಾರವಿರಲಿ. ಸಂತಾನ ರಹಿತವಾದ ಮನೆ, ಧನ, ಕುಲ ಇವುಗಳಿಗೆ ಧಿಕ್ಕಾರವಿರಲಿ. ॥ ೨೯ ॥ ನಾನು ಸಾಕಿದ ಹಸವೂ ಕೂಡ ಗೊಡ್ಡಾಗುತ್ತದೆ. ನಾನು ನೆಟ್ಟಮರದಲ್ಲಿಯೂ ಹೂವು-ಹಣ್ಣು ಬಿಡುವುದಿಲ್ಲ. ॥ ೩೦ ॥ ನಮ್ಮ ಮನೆಗೆ ತಂದಿರುವ ಹಣ್ಣುಗಳೂ ಕೂಡ ಬೇಗನೇ ಕೊಳೆತುಹೋಗುತ್ತವೆ. ಇಂತಹ ಪುತ್ರಹೀನ ನಿರ್ಭಾಗ್ಯನಾಗಿರುವಾಗ ನಾನು ಬದುಕಿ ಏನು ಪ್ರಯೋಜನ ? ॥ ೩೧ ॥ ಹೀಗೆ ಹೇಳುತ್ತಾ ಆ ಬ್ರಾಹ್ಮಣನು ದುಃಖದಿಂದ ವ್ಯಾಕುಲನಾಗಿ ಆ ಸಂನ್ಯಾಸೀ ಮಹಾತ್ಮರ ಬಳಿ ಬಿಕ್ಕಿ-ಬಿಕ್ಕಿ ಅಳತೊಡಗಿದನು. ಆಗ ಆ ಯತಿಯ ಹೃದಯದಲ್ಲಿ ತುಂಬಾ ಕರುಣೆ ಉಂಟಾಯಿತು. ॥ ೩೨ ॥ ಅವರು ಯೋಗ ನಿಷ್ಠರಾಗಿದ್ದರು. ಬ್ರಾಹ್ಮಣನ ಹಣೆಯ ಬರಹವನ್ನು ಅರಿತುಕೊಂಡು ಎಲ್ಲ ವೃತ್ತಾಂತವನ್ನು ತಿಳಿದು ಕೊಂಡರು. ಮತ್ತೆ ಅವನಿಗೆ ವಿಸ್ತಾರವಾಗಿ ಹೇಳತೊಡಗಿದರು. ॥ ೩೩ ॥

ಸಂನ್ಯಾಸಿಯು ಹೇಳಿದನು - ಎಲೈ ಬ್ರಾಹ್ಮಣನೇ ! ಈ ಸಂತಾನ ಪ್ರಾಪ್ತಿಯ ಮೋಹವನ್ನು ಬಿಟ್ಟುಬಿಡು. ಕರ್ಮದ ಗತಿಯು ಪ್ರಬಲವಾಗಿದೆ. ವಿವೇಕವನ್ನು ಆಶ್ರಯಿಸಿ ಸಂಸಾರದ ವಾಸನೆ (ಇಚ್ಛೆ)ಯನ್ನು ತ್ಯಜಿಸು. ॥ ೩೪ ॥ ವಿಪ್ರವರ್ಯ ! ಕೇಳು. ನಾನು ಈಗ ನಿನ್ನ ಪ್ರಾರಬ್ಧವನ್ನು ನೋಡಿ ನಿಶ್ಚಯಿಸಿರುವೆನು. ಏಳು ಜನ್ಮಗಳವರೆಗೂ ನಿನಗೆ ಯಾವುದೇ ಸಂತಾನವು ಯಾವ ವಿಧದಿಂದಲೂ ಆಗಲಾರದು. ॥ ೩೫ ॥ ಹಿಂದಿನಕಾಲದಲ್ಲಿ ರಾಜಾ ಸಗರನಿಗೆ ಹಾಗೂ ಅಂಗರಾಜನಿಗೆ ಸಂತಾನದಿಂದಾಗಿ ದುಃಖ ಭೋಗಿಸ ಬೇಕಾಯಿತು. ಬ್ರಾಹ್ಮಣನೇ ! ಈಗ ನೀನು ಕುಟುಂಬದ ಆಸೆಯನ್ನು ಬಿಟ್ಟು ಬಿಡು. ಸಂನ್ಯಾಸದಲ್ಲೇ ಎಲ್ಲ ವಿಧವಾದ ಸುಖವಿದೆ. ॥ ೩೬ ॥

ಬ್ರಾಹ್ಮಣ ಉವಾಚ

**ವಿವೇಕೇನ ಭವೇತ್ಕಿಂ ಮೇ ಪುತ್ರಂ ದೇಹಿ ಬಲಾದಪಿ ।**
**ನೋ ಚೇತ್ತ್ಯಜಾಮ್ಯಹಂ ಪ್ರಾಣಾಂಸ್ತ್ವದಗ್ರೇ ಶೋಕಮೂರ್ಛಿತಃ ॥ ೩೭ ॥**

**ಪುತ್ರಾದಿಸುಖಹೀನೋಽಯಂ ಸಂನ್ಯಾಸಃ ಶುಷ್ಕ ಏವ ಹಿ ।**
**ಗೃಹಸ್ಥಃ ಸರಸೋ ಲೋಕೇ ಪುತ್ರಪೌತ್ರಸಮನ್ವಿತಃ ॥ ೩೮ ॥**

**ಇತಿ ವಿಪ್ರಾಗ್ರಹಂ ದೃಷ್ಟ್ವಾ ಪ್ರಾಬ್ರವೀತ್ಸ ತಪೋಧನಃ ।**
**ಚಿತ್ರಕೇತುರ್ಗತಃ ಕಷ್ಟಂ ವಿಧಿಲೇಖವಿಮಾರ್ಜನಾತ್ ॥ ೩೯ ॥**

**ನ ಯಾಸ್ಯಸಿ ಸುಖಂ ಪುತ್ರಾದ್ಯಥಾ ದೈವಹತೋದ್ಯಮಃ ।**
**ಅತೋ ಹಠೇನ ಯುಕ್ತೋಽಸಿ ಹ್ಯರ್ಥಿನಂ ಕಿಂ ವದಾಮ್ಯಹಮ್ ॥ ೪೦ ॥**

**ತಸ್ಯಾಗ್ರಹಂ ಸಮಾಲೋಕ್ಯ ಫಲಮೇಕಂ ಸ ದತ್ತವಾನ್ ।**
**ಇದಂ ಭಕ್ಷಯ ಪತ್ನ್ಯಾ ತ್ವಂ ತತಃ ಪುತ್ರೋ ಭವಿಷ್ಯತಿ ॥ ೪೧ ॥**

**ಸತ್ಯಂ ಶೌಚಂ ದಯಾ ದಾನಮೇಕಭಕ್ತಂ ತು ಭೋಜನಮ್ ।**
**ವರ್ಷಾವಧಿ ಸ್ತ್ರಿಯಾ ಕಾರ್ಯಂ ತೇನ ಪುತ್ರೋಽತಿನಿರ್ಮಲಃ ॥ ೪೨ ॥**

**ಏವಮುಕ್ತ್ವಾ ಯಯೌ ಯೋಗೀ ವಿಪ್ರಸ್ತು ಗೃಹಮಾಗತಃ ।**
**ಪತ್ನ್ಯಾಃ ಪಾಣೌ ಫಲಂ ದತ್ತ್ವಾ ಸ್ವಯಂ ಯಾತಸ್ತು ಕುತ್ರಚಿತ್ ॥ ೪೩ ॥**

**ತರುಣೀ ಕುಟಿಲಾ ತಸ್ಯ ಸಖ್ಯಗ್ರೇ ಚ ರುರೋದ ಹ ।**
**ಅಹೋ ಚಿಂತಾ ಮಮೋತ್ಪನ್ನಾ ಫಲಂ ಚಾಹಂ ನ ಭಕ್ಷಯೇ ॥ ೪೪ ॥**

**ಫಲಭಕ್ಷೇಣ ಗರ್ಭಃ ಸ್ಯಾದ್ಗರ್ಭೇಣೋದರವೃದ್ಧಿತಾ ।**
**ಸ್ವಲ್ಪಭಕ್ಷಂ ತತೋಽಶಕ್ತಿರ್ಗೃಹಕಾರ್ಯಂ ಕಥಂ ಭವೇತ್ ॥ ೪೫ ॥**

**ದೈವಾದ್‌ಧಾಟೀ ವ್ರಜೇದ್‌ಗ್ರಾಮೇ ಪಲಾಯೇದ್ಗರ್ಭಿಣೀ ಕಥಮ್ ।**
**ಶುಕವನ್ನಿವಸೇದ್ಗರ್ಭಸ್ತಂ ಕುಕ್ಷೇಃ ಕಥಮುತ್ಸೃಜೇತ್ ॥ ೪೬ ॥**

**ತಿರ್ಯಕ್ಚೇದಾಗತೋ ಗರ್ಭಸ್ತದಾ ಮೇ ಮರಣಂ ಭವೇತ್ ।**
**ಪ್ರಸೂತೌ ದಾರುಣಂ ದುಃಖಂ ಸುಕುಮಾರೀ ಕಥಂ ಸಹೇ ॥ ೪೭ ॥**

**ಮಂದಾಯಾಂ ಮಯಿ ಸರ್ವಸ್ವಂ ನನಾಂದಾ ಸಂಹರೇತ್ತದಾ ।**
**ಸತ್ಯಶೌಚಾದಿನಿಯಮೋ ದುರಾರಾಧ್ಯಃ ಸ ದೃಶ್ಯತೇ ॥ ೪೮ ॥**

**ಬ್ರಾಹ್ಮಣನೆಂದನು** – ಮಹಾತ್ಮರೇ ! ನಿಮ್ಮ ಜ್ಞಾನೋಪದೇಶದಿಂದ ನನಗೇನು ಪ್ರಯೋಜನ ? ನನಗಾದರೋ ಬಲವಂತನಾಗಿ ಓರ್ವ ಪುತ್ರನನ್ನು ಕರುಣಿಸಿರಿ. ಇಲ್ಲವಾದರೆ ನಾನು ನಿಮ್ಮ ಮುಂದೆಯೇ ಶೋಕಮೂರ್ಛಿತನಾಗಿ ಪ್ರಾಣಗಳನ್ನು ತ್ಯಜಿಸಿ ಬಿಡುತ್ತೇನೆ. ॥ ೩೭ ॥ ಹೆಂಡತಿ ಮಕ್ಕಳು ಮುಂತಾದವುಗಳು ಇಲ್ಲದ ಸಂನ್ಯಾಸವು ಸರ್ವಥಾ ನೀರಸವಾಗಿದೆ. ಜಗತ್ತಿನಲ್ಲಿ ಮಕ್ಕಳು– ಮೊಮ್ಮಕ್ಕಳು ತುಂಬಿ–ತುಳುಕುವ ಗೃಹಸ್ಥಾಶ್ರಮವೇ ಸರಸವಾಗಿದೆ. ॥ ೩೮ ॥

ಬ್ರಾಹ್ಮಣನ ಇಂತಹ ಆಗ್ರಹವನ್ನು ನೋಡಿ ಆ ತಪೋಧನರು ಹೇಳಿದರು – 'ವಿಧಾತನ ಬರಹವನ್ನು ಅಳಿಸುವ ಹಠವನ್ನು ಮಾಡಿ ರಾಜಾ ಚಿತ್ರಕೇತುವಿಗೆ ಬಹಳ ಕಷ್ಟ ಸಹಿಸ ಬೇಕಾಯಿತು. ॥ ೩೯ ॥ ದೈವವು ಯಾರ ಉದ್ಯೋಗವನ್ನು ಕೆಡಿಸಿಬಿಟ್ಟಿದೆಯೋ ಅವನಂತೆ ನೀನಗೂ ಸುಖಸಿಗಲಾರದು. ನೀನಾದರೋ ಭಾರೀ ಹಠವನ್ನು ತೊಟ್ಟಿರುವೆ ಹಾಗೂ ಅರ್ಥಿಯಾಗಿ ನನ್ನೆದುರಿಗೆ ನಿಂತಿರುವೆ. ಇಂತಹ ಸ್ಥಿತಿಯಲ್ಲಿ ನಾನೇನು ಹೇಳಲಿ ನಿನಗೆ ? ॥ ೪೦ ॥

ಇವನು ಯಾವ ವಿಧದಿಂದಲೂ ತನ್ನ ಆಗ್ರಹವನ್ನು ಬಿಡದಿರುವುದನ್ನು ನೋಡಿ ಮಹಾತ್ಮರು ಅವನಿಗೆ ಒಂದು ಫಲವನ್ನಿತ್ತು ಹೇಳಿದರು – ಇದನ್ನು ನೀನು ನಿನ್ನ ಪತ್ನಿಗೆ ತಿನ್ನಿಸು. ಇದರಿಂದ ಓರ್ವ ಪುತ್ರನಾಗುವನು. ॥ ೪೧ ॥ ನಿನ್ನ ಪತ್ನಿಯು ಒಂದು ವರ್ಷದವರೆಗೆ ಸತ್ಯ, ಶೌಚ, ದಯಾ, ದಾನ ಮತ್ತು ಒಪ್ಪೊತ್ತು ಊಟದ ನಿಯಮ ವಿರಿಸಬೇಕು. ಅವಳು ಹೀಗೆ ಮಾಡಿದರೆ ಬಹು ಶುದ್ಧಸ್ವಭಾವದ ಬಾಲಕನು ಹುಟ್ಟುವನು. ॥ ೪೨ ॥

ಹೀಗೆ ಹೇಳಿ ಆ ಯೋಗಿಗಳು ಹೊರಟುಹೋದರು. ಬ್ರಾಹ್ಮಣನೂ ತನ್ನ ಮನೆಗೆ ಮರಳಿದನು. ಮನೆಗೆ ಬಂದು ಅವನು ಆ ಫಲವನ್ನು ತನ್ನ ಪತ್ನಿಯ ಕೈಯಲ್ಲಿತ್ತು, ಸ್ವತಃ ಎಲ್ಲಿಗೋ ಹೊರಟು ಹೋದನು. ॥ ೪೩ ॥ ಅವನ ಹೆಂಡತಿಯಾದರೋ ಕುಟಿಲ ಸ್ವಭಾವದವಳಾಗಿದ್ದಳು. ಅವಳು ಅಳುತ್ತಾ ತನ್ನ ಗೆಳತಿಯಲ್ಲಿ ಹೇಳ ತೊಡಗಿದಳು – ಎಲೆಗೆ ! ನನಗಾದರೋ ಭಾರೀ ಚಿಂತೆ ಇಟ್ಟುಕೊಂಡಿದೆ. ನಾನು ಈ ಫಲವನ್ನು ತಿನ್ನುವುದಿಲ್ಲ. ॥ ೪೪ ॥ ಈ ಫಲವನ್ನು ತಿನ್ನುವುದರಿಂದ ನಾನು ಗರ್ಭವತಿಯಾಗುವೆನು. ಅದರಿಂದ ಹೊಟ್ಟೆ ಬೆಳೆದೀತು. ಮತ್ತೆ ಏನನ್ನೂ ತಿನ್ನಲು ಕುಡಿಯಲು ಆಗದು. ಇದರಿಂದ ನನ್ನ ಶಕ್ತಿಯು ಕ್ಷೀಣಿಸಿದಾಗ ಮನೆಯ ಕೆಲಸ ಹೇಗೆ ನಡೆಯುವುದು ? ॥ ೪೫ ॥ ದೈವಯೋಗದಿಂದ ಊರಿನಲ್ಲಿ ದರೋಡೆಕೋರರ ಆಕ್ರಮಣವಾದರೆ ಗರ್ಭಿಣಿ ಸ್ತ್ರೀಯು ಹೇಗೆ ಓಡಿಹೋಗಬಲ್ಲಳು ? ಶುಕದೇವರಂತೆ ಈ ಗರ್ಭವು ಹೊಟ್ಟೆಯಲ್ಲೇ ಉಳಿದು ಬಿಟ್ಟರೆ ಅದನ್ನು ಹೇಗೆ ಹೊರಗೆ ತೆಗೆಯಲಾದೀತು. ॥ ೪೬ ॥ ಎಲ್ಲಾದರು ಹೆರಿಗೆಯ ಕಾಲದಲ್ಲಿ ಅದು ಅಡ್ಡಲಾದರೆ ಮತ್ತೆ ಪ್ರಾಣವೇ ಹೊರಟು ಹೋದೀತು. ಅದಲ್ಲದೆ ಪ್ರಸವ ಕಾಲದಲ್ಲಿ ಭಯಂಕರ ನೋವು ಉಂಟಾಗುತ್ತದೆ. ಸುಕುಮಾರಿಯಾದ ನಾನು ಇದನ್ನು ಹೇಗೆ ಸಹಿಸಬಹುದು ? ॥ ೪೭ ॥ ನಾನು ದುರ್ಬಲಳಾದಾಗ ನಾದಿನಿಯು ಬಂದು ಮನೆಯ ಎಲ್ಲ ಪದಾರ್ಥಗಳನ್ನು ಸಾಗಿಸಿ ಬಿಟ್ಟಾಳು ಹಾಗೂ ಸತ್ಯ, ಶೌಚಾದಿ ನಿಯಮಗಳನ್ನು ನನ್ನಿಂದ ಪಾಲಿಸುವುದು ಕಷ್ಟವೆಂದೇ ತೋರುತ್ತದೆ. ॥ ೪೮ ॥

ಲಾಲನೇ ಪಾಲನೇ ದುಃಖಂ ಪ್ರಸೂತಾಯಾಶ್ಚ ವರ್ತತೇ ।
ವಂಧ್ಯಾ ವಾ ವಿಧವಾ ನಾರೀ ಸುಖಿನೀ ಚೇತಿ ಮೇ ಮತಿಃ ॥ ೪೯ ॥

ಏವಂ ಕುತರ್ಕಯೋಗೇನ ತತ್ಫಲಂ ನೈವ ಭಕ್ಷಿತಮ್ ।
ಪತ್ಯಾ ಪೃಷ್ಟಂ ಫಲಂ ಭುಕ್ತಂ ಭುಕ್ತಂ ಚೇತಿ ತಯೇರಿತಮ್ ॥ ೫೦ ॥

ಏಕದಾ ಭಗಿನೀ ತಸ್ಯಾಸ್ತದ್ಗೃಹಂ ಸ್ವೇಚ್ಛಯಾಗತಾ ।
ತದಗ್ರೇ ಕಥಿತಂ ಸರ್ವಂ ಚಿತ್ತೇಯಂ ಮಹತೀ ಹಿ ಮೇ ॥ ೫೧ ॥

ದುರ್ಬಲಾ ತೇನ ದುಃಖೇನ ಹ್ಯನುಜೇ ಕರವಾಣಿ ಕಿಮ್ ।
ಸಾಬ್ರವೀನ್ಮಮ ಗರ್ಭೋಽಸ್ತಿ ತಂ ದಾಸ್ಯಾಮಿ ಪ್ರಸೂತಿತಃ ॥ ೫೨ ॥

ತಾವತ್ಕಾಲಂ ಸಗರ್ಭೇವ ಗುಪ್ತಾ ತಿಷ್ಠ ಗೃಹೇ ಸುಖಮ್ ।
ವಿತ್ತಂ ತ್ವಂ ಮತ್ಪತೇರ್ಯಚ್ಛ ಸ ತೇ ದಾಸ್ಯತಿ ಬಾಲಕಮ್ ॥ ೫೩ ॥

ಷಾಣ್ಮಾಸಿಕೋ ಮೃತೋ ಬಾಲ ಇತಿ ಲೋಕೋ ವದಿಷ್ಯತಿ ।
ತಂ ಬಾಲಂ ಪೋಷಯಿಷ್ಯಾಮಿ ನಿತ್ಯಮಾಗತ್ಯ ತೇ ಗೃಹೇ ॥ ೫೪ ॥

ಫಲಮರ್ಪಯ ಧೇನ್ವೈ ತ್ವಂ ಪರೀಕ್ಷಾರ್ಥಂ ತು ಸಾಂಪ್ರತಮ್ ।
ತತ್ತದಾಚರಿತಂ ಸರ್ವಂ ತಥೈವ ಸ್ತ್ರೀಸ್ವಭಾವತಃ ॥ ೫೫ ॥

ಅಥ ಕಾಲೇನ ಸಾ ನಾರೀ ಪ್ರಸೂತಾ ಬಾಲಕಂ ತದಾ ।
ಆನೀಯ ಜನಕೋ ಬಾಲಂ ರಹಸ್ಯೇ ಧುಂದುಲೀಂ ದದೌ ॥ ೫೬ ॥

ತಯಾ ಚ ಕಥಿತಂ ಭರ್ತ್ರೇ ಪ್ರಸೂತಃ ಸುಖಮರ್ಭಕಃ ।
ಲೋಕಸ್ಯ ಸುಖಮುತ್ಪನ್ನಮಾತ್ಮದೇವಪ್ರಜೋದಯಾತ್ ॥ ೫೭ ॥

ದದೌ ದಾನಂ ದ್ವಿಜಾತಿಭ್ಯೋ ಜಾತಕರ್ಮ ವಿಧಾಯ ಚ ।
ಗೀತವಾದಿತ್ರಘೋಷೋಽಭೂತ್ತದ್ವಾರೇ ಮಂಗಲಂ ಬಹು ॥ ೫೮ ॥

ಭರ್ತುರಗ್ರೇಽಬ್ರವೀದ್ವಾಕ್ಯಂ ಸ್ತನ್ಯಂ ನಾಸ್ತಿ ಕುಚೇ ಮಮ ।
ಅನ್ಯಸ್ತನ್ಯೇನ ನಿರ್ದುಗ್ಧಾ ಕಥಂ ಪುಷ್ಣಾಮಿ ಬಾಲಕಮ್ ॥ ೫೯ ॥

ಮತ್ಸ್ವಸುಶ್ಚ ಪ್ರಸೂತಾಯಾ ಮೃತೋ ಬಾಲಸ್ತು ವರ್ತತೇ ।
ತಾಮಾಕಾರ್ಯ ಗೃಹೇ ರಕ್ಷ ಸಾ ತೇಽರ್ಭಂ ಪೋಷಯಿಷ್ಯತಿ ॥ ೬೦ ॥

ಪತಿನಾ ತತ್ಕೃತಂ ಸರ್ವಂ ಪುತ್ರರಕ್ಷಣಹೇತವೇ ।
ಪುತ್ರಸ್ಯ ಧುಂದುಕಾರೀತಿ ನಾಮ ಮಾತ್ರಾ ಪ್ರತಿಷ್ಠಿತಮ್ ॥ ೬೧ ॥

ಮಗುವನ್ನು ಹಡೆದ ಸ್ತ್ರೀಗೆ ಮಗುವಿನ ಲಾಲನೆ ಪಾಲನೆಯಲ್ಲಿ ತುಂಬಾ ಕಷ್ಟವಾಗುತ್ತದೆ. ನನ್ನ ವಿಚಾರದಲ್ಲಿ ಬಂಜೆಯರು ಅಥವಾ ವಿಧವೆಯರೇ ಸುಖಿಗಳಾಗಿದ್ದಾರೆ. ॥ ೪೯ ॥

ಮನಸ್ಸಿನಲ್ಲಿ ಇಂತಹ ನಾನಾ ಕುತರ್ಕಗಳನ್ನು ಮಾಡುತ್ತಾ ಅವಳು ಆ ಫಲವನ್ನು ತಿನ್ನಲಿಲ್ಲ. ಗಂಡನು – 'ಫಲವನ್ನು ತಿಂದೆಯಾ ?' ಎಂದು ಕೇಳಿದಾಗ ಹೌದು ತಿಂದೆ ಎಂದು ಹೇಳಿದಳು. ॥ ೫೦ ॥ ಒಂದು ದಿನ ಅವಳ ತಂಗಿಯು ತಾನಾಗಿಯೇ ಇವಳ ಮನೆಗೆ ಬಂದಿದ್ದಳು. ಇವಳು ತನ್ನ ತಂಗಿಗೆ ಎಲ್ಲ ವೃತ್ತಾಂತವನ್ನು ತಿಳಿಸುತ್ತಾ ನನ್ನ ಮನಸ್ಸಿನಲ್ಲಿ ಇದರ ಕುರಿತು ದೊಡ್ಡ ಚಿಂತೆ ಇಟ್ಟುಕೊಂಡಿದೆ ಎಂದು ಹೇಳಿದಳು. ॥ ೫೧ ॥ ನಾನು ಈ ದುಃಖದಿಂದ ಪ್ರತಿದಿನ ಸೊರಗುತ್ತಿದ್ದೇನೆ. ತಂಗೀ ! ನಾನೇನು ಮಾಡಲಿ ? ಆಗ ಅವ-ಳೆಂದಳು – 'ನನ್ನ ಹೊಟ್ಟೆಯಲ್ಲಿ ಮಗು ಬೆಳೆಯುತ್ತಿದೆ. ಹೆರಿಗೆಯಾದಾಕ್ಷಣ ಆ ಮಗುವನ್ನು ನಿನಗೆ ಕೊಡುತ್ತೇನೆ. ॥ ೫೨ ॥ ಅಲ್ಲಿಯವರೆಗೆ ನೀನು ಗರ್ಭಿಣಿಯಂತೆ ಮನೆಯಲ್ಲೇ ಅಡಗಿ ಕೊಂಡಿರು. ನೀನು ನನ್ನ ಪತಿಗೆ ಸ್ವಲ್ಪ ಹಣವನ್ನು ಕೊಟ್ಟರೆ ಅವರು ನಿನಗೆ ತನ್ನ ಮಗುವನ್ನು ಕೊಟ್ಟು ಬಿಡುವರು. ॥ ೫೩ ॥ (ನಾವು ಒಂದು ಯುಕ್ತಿಮಾಡುವೆವು) ಇವಳ ಮಗು ಆರು ತಿಂಗಳಾದಾಗ ಸತ್ತು ಹೋಯಿತು ಎಂದು ಎಲ್ಲರೂ ಹೇಳುವರು. ನಾನು ಪ್ರತಿ ದಿನ ನಿನ್ನ ಮನೆಗೆ ಬಂದು ಆ ಮಗುವಿನ ಪಾಲನೆ-ಪೋಷಣೆ ಮಾಡುತ್ತಾ ಇರುವೆನು. ॥ ೫೪ ॥ ನೀನು ಈಗ ಇದನ್ನು ಪರೀಕ್ಷಿಸಲು ಈ ಫಲವನ್ನು ಹಸುವಿಗೆ ತಿನ್ನಿಸಿ ಬಿಡು.' ಬ್ರಾಹ್ಮಣಿಯು ಸ್ತ್ರೀ ಸ್ವಭಾವಕ್ಕನುಸಾರ ತಂಗಿಯು ಹೇಳಿದಂತೆಯೇ ಎಲ್ಲವನ್ನು ಮಾಡಿದಳು. ॥ ೫೫ ॥

ಇದಾದ ಬಳಿಕ ಸಮಯಕ್ಕೆ ಸರಿಯಾಗಿ ತಂಗಿಗೆ ಮಗು ಹುಟ್ಟಿದಾಗ, ಅವಳ ಗಂಡನು ಯಾರಿಗೂ ತಿಳಿಯದಂತೆ ಅದನ್ನು ಧುಂಧುಲಿಗೆ ತಂದು ಕೊಟ್ಟನು. ॥ ೫೬ ॥ ಮತ್ತೆ ಅವಳು ಆತ್ಮದೇವನಿಗೆ – 'ನನಗೆ ಸುಖವಾಗಿ ಮಗುವು ಹುಟ್ಟಿತು' ಎಂದು ಸೂಚಿಸಿದಳು. ಹೀಗೆ ಆತ್ಮದೇವನಿಗೆ ಪುತ್ರನಾದುದನ್ನು ತಿಳಿದು ಎಲ್ಲರಿಗೂ ಬಹಳ ಸಂತೋಷವಾಯಿತು. ॥ ೫೭ ॥ ಬ್ರಾಹ್ಮಣನು ಮಗುವಿನ ಜಾತಕರ್ಮ ಸಂಸ್ಕಾರ ಗೈದು, ಬ್ರಾಹ್ಮಣರಿಗೆ ದಾನಗಳನ್ನು ಕೊಟ್ಟನು. ಮನೆಯಲ್ಲಿ ವಾದ್ಯ-ಹಾಡುಗಳು ಹಾಗೂ ಅನೇಕ ಮಾಂಗಲಿಕ ಕೃತ್ಯಗಳು ನಡೆದವು. ॥ ೫೮ ॥ ಧುಂಧುಲಿಯು ಗಂಡನ ಬಳಿ ಹೇಳಿದಳು – 'ನನ್ನ ಎದೆಯಲ್ಲಿ ಹಾಲೇ ಇಲ್ಲ, ಮತ್ತೆ ಹಸುವಿನ ಹಾಲಿನಿಂದಲೇ ಈ ಬಾಲಕನನ್ನು ಹೇಗೆ ಸಾಕಲಿ? ನನ್ನ ತಂಗಿಗೆ ಈಗ ತಾನೆ ಮಗು ಹುಟ್ಟಿತು. ಅದು ಸತ್ತು ಹೋಯಿತು. ಅವಳನ್ನು ಕರೆಸಿ ಮನೆಯಲ್ಲಿರಿಸಿಕೊಂಡರೆ ಅವಳು ನಿಮ್ಮ ಈ ಮಗುವನ್ನು ಸಾಕುವಳು'. ॥ ೫೯-೬೦ ॥ ಆಗ ಮಗುವಿನ ಪಾಲನೆಗಾಗಿ ಆತ್ಮದೇವನು ಹಾಗೇ ಮಾಡಿದನು. ತಾಯಿಯಾದ ಧುಂಧುಲಿಯು ಆ ಮಗುವಿಗೆ 'ಧುಂಧುಕಾರಿ' ಎಂದು ಹೆಸರಿಟ್ಟಳು. ॥ ೬೧ ॥

ತ್ರಿಮಾಸೇ ನಿರ್ಗತೇ ಚಾಥ ಸಾ ಧೇನುಃ ಸುಷುವೇಽರ್ಭಕಮ್ ।
ಸರ್ವಾಂಗ ಸುಂದರಂ ದಿವ್ಯಂ ನಿರ್ಮಲಂ ಕನಕಪ್ರಭಮ್ ॥ ೬೨ ॥

ದೃಷ್ಟ್ವಾ ಪ್ರಸನ್ನೋ ವಿಪ್ರಸ್ತು ಸಂಸ್ಕಾರಾನ್ ಸ್ವಯಮಾದಧೇ ।
ಮತ್ವಾಶ್ಚರ್ಯಂ ಜನಾಃ ಸರ್ವೇ ದಿದೃಕ್ಷಾರ್ಥಂ ಸಮಾಗತಾಃ ॥ ೬೩ ॥

ಭಾಗ್ಯೋದಯೋಽಧುನಾ ಜಾತ ಆತ್ಮದೇವಸ್ಯ ಪಶ್ಯತ ।
ಧೇನ್ವಾ ಬಾಲಃ ಪ್ರಸೂತಸ್ತು ದೇವರೂಪೀತಿ ಕೌತುಕಮ್ ॥ ೬೪ ॥

ನ ಜ್ಞಾತಂ ತದ್ರಹಸ್ಯಂ ತು ಕೇನಾಪಿ ವಿಧಿಯೋಗತಃ ।
ಗೋಕರ್ಣಂ ತಂ ಸುತಂ ದೃಷ್ಟ್ವಾ ಗೋಕರ್ಣಂ ನಾಮ ಚಾಕರೋತ್ ॥ ೬೫ ॥

ಕಿಯತ್ಕಾಲೇನ ತೌ ಜಾತೌ ತರುಣೌ ತನಯಾವುಭೌ ।
ಗೋಕರ್ಣಃ ಪಂಡಿತೋ ಜ್ಞಾನೀ ಧುಂಧುಕಾರೀ ಮಹಾಖಲಃ ॥ ೬೬ ॥

ಸ್ನಾನಶೌಚಕ್ರಿಯಾಹೀನೋ ದುರ್ಭಕ್ಷೀ ಕ್ರೋಧವರ್ಧಿತಃ ।
ದುಷ್ಪರಿಗ್ರಹಕರ್ತಾ ಚ ಶವಹಸ್ತೇನ ಭೋಜನಮ್ ॥ ೬೭ ॥

ಚೌರಃ ಸರ್ವಜನದ್ವೇಷೀ ಪರವೇಶ್ಮಪ್ರದೀಪಕಃ ।
ಲಾಲನಾಯಾರ್ಭಕಾನ್ ಧೃತ್ವಾ ಸದ್ಯಃ ಕೂಪೇ ನ್ಯಪಾತಯತ್ ॥ ೬೮ ॥

ಹಿಂಸಕಃ ಶಸ್ತ್ರಧಾರೀ ಚ ದೀನಾಂಧಾನಾಂ ಪ್ರಪೀಡಕಃ ।
ಚಾಂಡಾಲಾಭಿರತೋ ನಿತ್ಯಂ ಪಾಶಹಸ್ತಃ ಶ್ವ ಸಂಗತಃ ॥ ೬೯ ॥

ತೇನ ವೇಶ್ಯಾಕುಸಂಗೇನ ಪಿತ್ರ್ಯಂ ವಿತ್ತಂ ತು ನಾಶಿತಮ್ ।
ಏಕದಾ ಪಿತರೌ ತಾಡ್ಯ ಪಾತ್ರಾಣಿ ಸ್ವಯಮಾಹರತ್ ॥ ೭೦ ॥

ತತ್ಪಿತಾ ಕೃಪಣಃ ಪ್ರೋಚ್ಚೈರ್ಧನಹೀನೋ ರುರೋದ ಹ ।
ವಂಧ್ಯತ್ವಂ ತು ಸಮೀಚೀನಂ ಕುಪುತ್ರೋ ದುಃಖದಾಯಕಃ ॥ ೭೧ ॥

ಕ್ವ ತಿಷ್ಠಾಮಿ ಕ್ವ ಗಚ್ಛಾಮಿ ಕೋ ಮೇ ದುಃಖಂ ವ್ಯಪೋಹಯೇತ್ ।
ಪ್ರಾಣಾಂಸ್ತ್ಯಜಾಮಿ ದುಃಖೇನ ಹಾ ಕಷ್ಟಂ ಮಮ ಸಂಸ್ಥಿತಮ್ ॥ ೭೨ ॥

ಇದಾದ ಬಳಿಕ ಮೂರು ತಿಂಗಳು ಕಳೆದಾಗ ಆ ಹಸುವಿಗೂ ಒಂದು ಮನುಷ್ಯಾಕಾರ ಮಗು ಹುಟ್ಟಿತು. ಅದು ಸರ್ವಾಂಗ ಸುಂದರ, ದಿವ್ಯ, ನಿರ್ಮಲವಾಗಿದ್ದು ಬಂಗಾರದ ಕಾಂತಿಯಿಂದ ಒಡಗೂಡಿತ್ತು. ॥ ೬೨ ॥ ಅದನ್ನು ನೋಡಿ ಬ್ರಾಹ್ಮಣನು ಸಂತೋಷ ಗೊಂಡು ಸ್ವತಃ ತಾನೇ ಅದರ ಎಲ್ಲ ಸಂಸ್ಕಾರಗಳನ್ನು ಮಾಡಿದನು. ಈ ಸಮಾಚಾರದಿಂದ ಎಲ್ಲ ಜನರಿಗೂ ತುಂಬಾ ಆಶ್ಚರ್ಯ ವಾಯಿತು ಹಾಗೂ ಅವರೆಲ್ಲರೂ ಬಾಲಕನನ್ನು ನೋಡಲು ಬಂದರು. ॥ ೬೩ ॥ ಅಯ್ಯಾ ! ನೋಡಿದೆಯಾ ! ಈಗ ಆತ್ಮ ದೇವನ ಭಾಗ್ಯ ಹೇಗೆ ಉದಯಿಸಿತು. ಹಸುವಿನಲ್ಲಿಯೂ ಇಂತಹ ದಿವ್ಯ ಬಾಲಕನು ಹುಟ್ಟುವುದು ಎಷ್ಟು ಆಶ್ಚರ್ಯವಾಗಿದೆ ಎಂದು ತಮ್ಮ-ತಮ್ಮಲ್ಲೇ ಹೇಳಿಕೊಂಡರು.॥ ೬೪ ॥ ದೈವಯೋಗದಿಂದ ಈ ಗುಪ್ತ ರಹಸ್ಯವು ಯಾರಿಗೂ ತಿಳಿಯಲಿಲ್ಲ. ಆತ್ಮದೇವನು ಆ ಬಾಲಕನಿಗೆ ಗೋವಿನಂತೆ ಕಿವಿಗಳಿರುವುದನ್ನು ನೋಡಿ ಅವನಿಗೆ 'ಗೋಕರ್ಣ' ಎಂದು ಹೆಸರಿಟ್ಟನು. ॥ ೬೫ ॥

ಕೆಲ ಕಾಲಾಂತರದಲ್ಲಿ ಆ ಇಬ್ಬರೂ ಬಾಲಕರು ತರುಣರಾದರು. ಅದರಲ್ಲಿ ಗೋಕರ್ಣನಾದರೋ ದೊಡ್ಡ ಪಂಡಿತ ಜ್ಞಾನಿಯಾದನು. ಆದರೆ ಧುಂಧುಕಾರಿಯು ಭಾರೀ ದುಷ್ಟನಾದನು. ॥ ೬೬ ॥ ಧುಂಧುಕಾರಿಯಲ್ಲಿ ಸ್ನಾನ ಶೌಚಾದಿ ಬ್ರಾಹ್ಮಣೋಚಿತ ಆಚಾರಗಳ ಹೆಸರೇ ಇರಲಿಲ್ಲ. ಊಟ-ತಿಂಡಿಯಲ್ಲಿಯೂ ನಿಯಮವಿರಲಿಲ್ಲ. ಅವನಲ್ಲಿ ಸಿಟ್ಟು ಬಹಳವಾಗಿ ಬೆಳೆದಿತ್ತು. ಅವನು ಕೆಟ್ಟ-ಕೆಟ್ಟ ವಸ್ತುಗಳನ್ನು ಸಂಗ್ರಹಿಸುತ್ತಿದ್ದನು. ಹೆಣ ಮುಟ್ಟಿದ ಅನ್ನವನ್ನೂ ಕೂಡ ಅವನು ತಿಂದು ಬಿಡುತ್ತಿದ್ದನು. ॥ ೬೭ ॥ ಬೇರೆಯವರ ವಸ್ತು ಗಳನ್ನು ಕದಿಯುವುದು ಹಾಗೂ ಎಲ್ಲರನ್ನು ದ್ವೇಷಿಸುವುದು ಅವನ ಸ್ವಭಾವವೇ ಆಗಿ ಹೋಗಿತ್ತು. ಅಡಗಿಕೊಂಡು ಅವನು ಬೇರೆ ಯವರ ಮನೆಗಳಿಗೆ ಬೆಂಕಿ ಹಚ್ಚುತ್ತಿದ್ದನು. ಬೇರೆಯವರ ಮಕ್ಕಳನ್ನು ಆಡಿಸಲು ಎತ್ತಿಕೊಂಡು, ಅವನ್ನು ಸಟ್ಟನೆ ಬಾವಿಗೆ ಎಸೆದು ಬಿಡುತ್ತಿದ್ದನು. ॥ ೬೮ ॥ ಅವನಿಗೆ ಹಿಂಸೆಯ ಗೀಳೇ ಹತ್ತಿತ್ತು. ಯಾವಾಗಲೂ ಆಯುಧಗಳನ್ನು ಧರಿಸಿಕೊಂಡೆ ಇರುತ್ತಿದ್ದನು. ಬಡಪಾಯಿ ಕುರುಡರು, ದೀನ-ದುಃಖಿಗಳನ್ನು ವ್ಯರ್ಥವಾಗಿ ಸತಾಯಿಸುತ್ತಿದ್ದನು. ಚಾಂಡಾಲರೊಂದಿಗೆ ಅವನಿಗೆ ವಿಶೇಷ ಪ್ರೇಮವಿತ್ತು. ಸರಿ, ಕೈಯಲ್ಲಿ ಬಲೆ ಹಿಡಿದುಕೊಂಡು ನಾಯಿಗಳ ಗುಂಪಿನೊಂದಿಗೆ ಬೇಟೆಗೂ ಹೋಗುತ್ತಿದ್ದನು. ॥ ೬೯ ॥ ವೇಶ್ಯೆ ಯರ ಜಾಲದಲ್ಲಿ ಸಿಲುಕಿಕೊಂಡು ಅವನು ತನ್ನ ತಂದೆಯ ಎಲ್ಲ ಸಂಪತ್ತನ್ನು ನಾಶ ಮಾಡಿಬಿಟ್ಟನು. ಒಂದು ದಿನ ತಂದೆ-ತಾಯರನ್ನು ಹೊಡೆದು-ಬಡೆದು ಮನೆಯ ಎಲ್ಲ ಪಾತ್ರೆ-ಪಗಡೆಗಳನ್ನು ಎತ್ತಿ ಕೊಂಡು ಹೋದನು. ॥ ೭೦ ॥

ಹೀಗೆ ಎಲ್ಲ ಸಂಪತ್ತು ಕಳೆದು ಹೋದಾಗ ಅವನ ಲೋಭಿ ತಂದೆಯು ಎದೆ ಬಡಿದುಕೊಂಡು ಅಳತೊಡಗಿದನು. ಇದಕ್ಕಿಂತ ಇವನ ತಾಯಿಯು ಬಂಜೆಯಾಗಿದ್ದರೂ ಚೆನ್ನಾಗಿತ್ತು. ಕುಪುತ್ರ ನಾದರೋ ಬಹಳ ದುಃಖದಾಯಕನಾಗುತ್ತಾನೆ ಎಂದು ಹೇಳ ತೊಡಗಿದನು. ॥ ೭೧ ॥ ಅಯ್ಯೋ! ಈಗ ನಾನು ಎಲ್ಲಿರಲಿ ? ಎಲ್ಲಿಗೆ ಹೋಗಲಿ ? ನನ್ನ ಈ ಕಷ್ಟವನ್ನು ಯಾರು ಕಳೆಯುವರು ? ನನ್ನ ಮೇಲೆ ದೊಡ್ಡ ವಿಪತ್ತೇ ಬಂದೊದಗಿತಲ್ಲ! ಈ ದುಃಖದಿಂದ ನಾನು ಖಂಡಿತವಾಗಿ ಸಾಯುವೆನು. ॥ ೭೨ ॥

**ತದಾನೀಂ ತು ಸಮಾಗತ್ಯ ಗೋಕರ್ಣೋ ಜ್ಞಾನಸಂಯುತಃ ।**
**ಬೋಧಯಾಮಾಸ ಜನಕಂ ವೈರಾಗ್ಯಂ ಪರಿದರ್ಶಯನ್ ॥ ೭೩ ॥**

**ಅಸಾರಃ ಖಲು ಸಂಸಾರೋ ದುಃಖರೂಪೀ ವಿಮೋಹಕಃ ।**
**ಸುತಃ ಕಸ್ಯ ಧನಂ ಕಸ್ಯ ಸ್ನೇಹವಾನ್ ಜ್ವಲತೇಽನಿಶಮ್ ॥ ೭೪ ॥**

**ನ ಚೇಂದ್ರಸ್ಯ ಸುಖಂ ಕಿಂಚಿನ್ನ ಸುಖಂ ಚಕ್ರವರ್ತಿನಃ ।**
**ಸುಖಮಸ್ತಿ ವಿರಕ್ತಸ್ಯ ಮುನೇರೇಕಾಂತಜೀವಿನಃ ॥ ೭೫ ॥**

**ಮುಂಚಾಜ್ಞಾನಂ ಪ್ರಜಾರೂಪಂ ಮೋಹತೋ ನರಕೇ ಗತಿಃ ।**
**ನಿಪತಿಷ್ಯತಿ ದೇಹೋಽಯಂ ಸರ್ವಂ ತ್ಯಕ್ತ್ವಾ ವನಂ ವ್ರಜ ॥ ೭೬ ॥**

**ತದ್ವಾಕ್ಯಂ ತು ಸಮಾಕರ್ಣ್ಯ ಗಂತುಕಾಮಃ ಪಿತಾಬ್ರವೀತ್ ।**
**ಕಿಂ ಕರ್ತವ್ಯಂ ವನೇ ತಾತ ತತ್ತ್ವಂ ವದ ಸವಿಸ್ತರಮ್ ॥ ೭೭ ॥**

**ಅಂಧಕೂಪೇ ಸ್ನೇಹಪಾಶೇ ಬದ್ಧಃ ಪಂಗುರಹಂ ಶಠಃ ।**
**ಕರ್ಮಣಾ ಪತಿತೋ ನೂನಂ ಮಾಮುದ್ಧರ ದಯಾನಿಧೇ ॥ ೭೮ ॥**

*ಗೋಕರ್ಣ ಉವಾಚ*

**ದೇಹೇಽಸ್ಥಿಮಾಂಸರುಧಿರೇಽಭಿಮತಿಂ ತ್ಯಜ ತ್ವಂ**
**ಜಾಯಾಸುತಾದಿಷು ಸದಾ ಮಮತಾಂ ವಿಮುಂಚ ।**
**ಪಶ್ಯಾನಿಶಂ ಜಗದಿದಂ ಕ್ಷಣಭಂಗನಿಷ್ಠಂ**
**ವೈರಾಗ್ಯರಾಗರಸಿಕೋ ಭವ ಭಕ್ತಿನಿಷ್ಠಃ ॥ ೭೯ ॥**

**ಧರ್ಮಂ ಭಜಸ್ವ ಸತತಂ ತ್ಯಜ ಲೋಕಧರ್ಮಾನ್**
**ಸೇವಸ್ವ ಸಾಧುಪುರುಷಾಂಜಹಿ ಕಾಮತೃಷ್ಣಾಮ್ ।**
**ಅನ್ಯಸ್ಯ ದೋಷಗುಣಚಿಂತನಮಾಶು ಮುಕ್ತ್ವಾ**
**ಸೇವಾಕಥಾರಸಮಹೋ ನಿತರಾಂ ಪಿಬ ತ್ವಮ್ ॥ ೮೦ ॥**

**ಏವಂ ಸುತೋಕ್ತಿವಶತೋಽಪಿ ಗೃಹಂ ವಿಹಾಯ**
**ಯಾತೋ ವನಂ ಸ್ಥಿರಮತಿರ್ಗತಷಷ್ಟಿವರ್ಷಃ ।**
**ಯುಕ್ತೋ ಹರೇರನುದಿನಂ ಪರಿಚರ್ಯಯಾಸೌ**
**ಶ್ರೀಕೃಷ್ಣಮಾಪ ನಿಯತಂ ದಶಮಸ್ಯ ಪಾಠಾತ್ ॥ ೮೧ ॥**

ಆಗಲೇ ಪರಮ ಜ್ಞಾನಿಯಾದ ಗೋಕರ್ಣನು ಅಲ್ಲಿಗೆ ಬಂದನು. ಅವನು ತಂದೆಗೆ ವೈರಾಗ್ಯವನ್ನು ಉಪದೇಶಿಸಿ ಬಹಳವಾಗಿ ಸಮಜಾಯಿಸಿದನು. ॥ ೭೩ ॥ ಗೋಕರ್ಣನೆಂದನು – ಅಪ್ಪಾ! ಈ ಪ್ರಪಂಚವು ಅಸಾರವಾಗಿದೆ. ಇದು ಅತ್ಯಂತ ದುಃಖರೂಪಿಯಾಗಿದ್ದು ಮೋಹ ದಲ್ಲಿ ಕೆಡಹುವುದಾಗಿದೆ. ಯಾರು ಮಗ? ಯಾರ ಧನ? ಆಸಕ್ತಿ ಯುಳ್ಳವನು ಹಗಲು-ರಾತ್ರಿ ದೀಪದಂತೆ ಸುಡುತ್ತಿರುತ್ತಾನೆ. ॥ ೭೪ ॥ ಸುಖವಾದರೋ ಇಂದ್ರನಿಗಿಲ್ಲ, ಚಕ್ರವರ್ತಿಗೂ ಇಲ್ಲ. ಸುಖವು ಕೇವಲ ವಿರಕ್ತ ಏಕಾಂತದಲ್ಲಿರುವ ಮುನಿಗಳಿಗಿದೆ. ॥ ೭೫ ॥ ಈ ಮಗನು ನನ್ನವನಾಗಿದ್ದಾನೆ. ಈ ಅಜ್ಞಾನವನ್ನು ಬಿಟ್ಟುಬಿಡಿರಿ. ಮೋಹದಿಂದ ನರಕದ ಪ್ರಾಪ್ತಿ ಯಾಗುತ್ತದೆ. ಈ ಶರೀರವಾದರೋ ನಾಶವಾಗಿಯೇ ಆಗುವುದು. ಅದಕ್ಕಾಗಿ ಎಲ್ಲವನ್ನು ಬಿಟ್ಟು ತಪಸ್ಸಿಗಾಗಿ ಕಾಡಿಗೆ ಹೊರಟು ಹೋಗಿರಿ. ॥ ೭೬ ॥

ಗೋಕರ್ಣನ ಮಾತನ್ನು ಕೇಳಿ ಆತ್ಮದೇವನು ವನಕ್ಕೆ ಹೋಗಲು ಸಿದ್ಧನಾದನು. ಅವನೆಂದ – ಮಗು! ವನದಲ್ಲಿದ್ದು ನಾನು ಏನು ಮಾಡಬೇಕು? ಅದನ್ನು ವಿಸ್ತಾರವಾಗಿ ನನಗೆ ಹೇಳು.॥ ೭೭ ॥ ನಾನು ಬಹಳ ಮೂರ್ಖನಾಗಿದ್ದೇನೆ. ಇಂದಿನತನಕ ಕರ್ಮವಶನಾಗಿ ಸ್ನೇಹ ಪಾಶದಲ್ಲಿ ಬಂಧಿತನಾಗಿ, ಹೆಳವನಂತೆ ಈ ಮನೆಯೆಂಬ ಕತ್ತಲೆಯ ಬಾವಿಯಲ್ಲಿ ಬಿದ್ದಿರುವೆನು. ನೀನು ತುಂಬಾ ದಯಾಳುವಾಗಿರುವೆ. ಆದರಿಂದ ನನ್ನ ಉದ್ಧಾರಮಾಡು. ॥ ೭೮ ॥

**ಗೋಕರ್ಣನು ಹೇಳಿದನು** – ತಂದೆಯೇ! ಈ ಶರೀರವು ಎಲುಬು, ಮಾಂಸ, ರಕ್ತದ ಪಿಂಡವಾಗಿದೆ. ಇದನ್ನು 'ನಾನು, ಎಂಬುದನ್ನು ನೀವು ಮರೆತುಬಿಡಿರಿ. ಪತ್ನೀ-ಪುತ್ರರನ್ನು 'ನನ್ನವರು' ಎಂದು ಎಂದಿಗೂ ತಿಳಿಯಬೇಡಿರಿ. ಈ ಪ್ರಪಂಚವನ್ನು ಹಗಲು ರಾತ್ರಿ ಕ್ಷಣಭಂಗುರವೆಂದು ತಿಳಿಯಿರಿ, ಇದರಲ್ಲಿ ಯಾವ ವಸ್ತುವನ್ನು ಸ್ಥಾಯಿಯೆಂದು ತಿಳಿದು ಅನುರಾಗವನ್ನು ಇಡಬೇಡಿರಿ. ಸಾಕು, ಏಕಮಾತ್ರ ವೈರಾಗ್ಯರಸದ ರಸಿಕರಾಗಿ ಭಗವಂತನ ಭಕ್ತಿಯಲ್ಲಿ ತೊಡಗಿರಿ. ॥ ೭೯ ॥ ಭಗವದ್ಭಜನೆಯೇ ಎಲ್ಲಕ್ಕಿಂತ ದೊಡ್ಡ ಧರ್ಮವಾಗಿದೆ. ನಿರಂತರ ಅದನ್ನೆ ಆಶ್ರಯಿಸಿಕೊಂಡಿರಿ, ಉಳಿದ ಎಲ್ಲ ಲೌಕಿಕ ಧರ್ಮಗಳಿಂದ ಪರಾಙ್ಮುಖರಾಗಿರಿ. ಸದಾ ಕಾಲ ಸಾಧುಗಳ ಸೇವೆಮಾಡಿರಿ. ಭೋಗಗಳ ಲಾಲಸೆ ಹತ್ತಿರ ಸುಳಿಯಗೊಡಬೇಡಿ. ಆದಷ್ಟು ಬೇಗ ಬೇರೆಯವರ ಗುಣ ದೋಷಗಳ ವಿಚಾರ ಬಿಟ್ಟು ಏಕಮಾತ್ರ ಭಗವತ್ಸೇವೆ ಹಾಗೂ ಭಗವಂತನ ಕಥೆಗಳ ರಸಪಾನಮಾಡಿರಿ. ॥ ೮೦ ॥

ಹೀಗೆ ಪುತ್ರನ ಮಾತಿನಿಂದ ಪ್ರಭಾವಿತನಾಗಿ ಆತ್ಮದೇವನು ಮನೆಯನ್ನು ಬಿಟ್ಟು ಕಾಡಿಗೆ ತೆರಳಿದನು. ಆಗ ಅವನ ವಯಸ್ಸು ಅರವತ್ತಾಗಿದ್ದರೂ ಬುದ್ಧಿಯಲ್ಲಿ ಪೂರ್ಣವಾಗಿ ದೃಢತೆ ಇತ್ತು. ಅಲ್ಲಿ ಹಗಲು-ಇರುಳು ಭಗವಂತನ ಸೇವೆ-ಪೂಜೆ ಮಾಡುವುದರಿಂದ ಹಾಗೂ ನಿಯಮಪೂರ್ವಕ ಭಾಗವತದ ದಶಮಸ್ಕಂಧವನ್ನು ಪಾರಾಯಣೆ ಮಾಡುವುದರಿಂದ ಅವನು ಭಗವಾನ್ ಶ್ರೀಕೃಷ್ಣನನ್ನು ಪಡೆದು ಕೊಂಡನು. ॥ ೮೧ ॥

***ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥***

**ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ ವಿಪ್ರಮೋಕ್ಷೋ ನಾಮ ಚತುರ್ಥೋಽಧ್ಯಾಯಃ ॥ ೪ ॥**

# ಐದನೆಯ ಅಧ್ಯಾಯ

## ಧುಂಧುಕಾರಿಗೆ ಪ್ರೇತಯೋನಿ ಪ್ರಾಪ್ತಿ ಮತ್ತು ಅದರಿಂದ ಉದ್ಧಾರ

*ಸೂತ ಉವಾಚ*

**ಪಿತರ್ಯುಪರತೇ ತೇನ ಜನನೀ ತಾಡಿತಾ ಭೃಶಮ್ ।
ಕ್ವ ವಿತ್ತಂ ತಿಷ್ಠತಿ ಬ್ರೂಹಿ ಹನಿಷ್ಯೇ ಲತ್ತಯಾ ನ ಚೇತ್ ॥ ೧ ॥**

**ಇತಿ ತದ್ವಾಕ್ಯಸಂತ್ರಾಸಾಜ್ಜನನ್ಯಾ ಪುತ್ರದುಃಖಿತಃ ।
ಕೂಪೇ ಪಾತಃ ಕೃತೋ ರಾತ್ರೌ ತೇನ ಸಾ ನಿಧನಂ ಗತಾ ॥ ೨ ॥**

**ಗೋಕರ್ಣಸ್ತೀರ್ಥಯಾತ್ರಾರ್ಥಂ ನಿರ್ಗತೋ ಯೋಗಸಂಸ್ಥಿತಃ ।
ನ ದುಃಖಂ ನ ಸುಖಂ ತಸ್ಯ ನ ವೈರೀ ನಾಪಿ ಬಾಂಧವಃ ॥ ೩ ॥**

**ಧುಂಧುಕಾರೀ ಗೃಹೇಽತಿಷ್ಠತ್ಪಂಚಪಣ್ಯವಧೂವೃತಃ ।
ಅತ್ಯುಗ್ರಕರ್ಮಕರ್ತಾ ಚ ತತ್ಪೋಷಣವಿಮೂಢಧೀಃ ॥ ೪ ॥**

**ಏಕದಾ ಕುಲಟಾಸ್ತಾಸ್ತು ಭೂಷಣಾನ್ಯಭಿಲಿಪ್ಸವಃ ।
ತದರ್ಥಂ ನಿರ್ಗತೋ ಗೇಹಾತ್ಕಾಮಾಂಧೋ ಮೃತ್ಯುಮಸ್ಮರನ್ ॥ ೫ ॥**

**ಯತಸ್ತತಶ್ಚ ಸಂಹೃತ್ಯ ವಿತ್ತಂ ವೇಶ್ಮ ಪುನರ್ಗತಃ ।
ತಾಭ್ಯೋಽಯಚ್ಛತ್ಸುವಸ್ತ್ರಾಣಿ ಭೂಷಣಾನಿ ಕಿಯಂತಿ ಚ ॥ ೬ ॥**

**ಬಹುವಿತ್ತಚಯಂ ದೃಷ್ಟ್ವಾ ರಾತ್ರೌ ನಾರ್ಯೋ ವ್ಯಚಾರಯನ್ ।
ಚೌರ್ಯಂ ಕರೋತ್ಯಸೌ ನಿತ್ಯಮತೋ ರಾಜಾ ಗ್ರಹೀಷ್ಯತಿ ॥ ೭ ॥**

**ವಿತ್ತಂ ಹೃತ್ವಾ ಪುನಶ್ಚೈನಂ ಮಾರಯಿಷ್ಯತಿ ನಿಶ್ಚಿತಮ್ ।
ಅತೋಽರ್ಥಗುಪ್ತಯೇ ಗೂಢಮಸ್ಮಾಭಿಃ ಕಿಂ ನ ಹನ್ಯತೇ ॥ ೮ ॥**

**ನಿಹತ್ಯೈನಂ ಗೃಹೀತ್ವಾರ್ಥಂ ಯಾಸ್ಯಾಮೋ ಯತ್ರ ಕುತ್ರಚಿತ್ ।
ಇತಿ ತಾ ನಿಶ್ಚಯಂ ಕೃತ್ವಾ ಸುಪ್ತಂ ಸಂಬದ್ಧ್ಯ ರಶ್ಮಿಭಿಃ ॥ ೯ ॥**

**ಪಾಶಂ ಕಂಠೇ ನಿಧಾಯಾಸ್ಯ ತನ್ಮೃತ್ಯುಮುಪಚಕ್ರಮುಃ ।
ತ್ವರಿತಂ ನ ಮಮಾರಾಸೌ ಚಿಂತಾಯುಕ್ತಾಸ್ತದಾಭವನ್ ॥ ೧೦ ॥**

**ತಪ್ತಾಂಗಾರಸಮೂಹಾಂಶ್ಚ ತನ್ಮುಖೇ ಹಿ ವಿಚಿಕ್ಷಿಪುಃ ।
ಅಗ್ನಿಜ್ವಾಲಾತಿದುಃಖೇನ ವ್ಯಾಕುಲೋ ನಿಧನಂ ಗತಃ ॥ ೧೧ ॥**

**ಸೂತಪುರಾಣಿಕರು ಹೇಳುತ್ತಾರೆ** – ಶೌನಕರೇ ! ತಂದೆಯು ಕಾಡಿಗೆ ಹೋದ ಮೇಲೆ ಧುಂಧುಕಾರಿಯು ಒಂದು ದಿನ ತನ್ನ ತಾಯಿಗೆ ತುಂಬಾ ಹೊಡೆದು ಕೇಳಿದನು – 'ಧನವನ್ನು ಎಲ್ಲಿ ಇಟ್ಟಿರುವೆ ಹೇಳು. ಇಲ್ಲದಿದ್ದರೆ ಉರಿಯುತ್ತಿರುವ ಕಟ್ಟಿಗೆಯಿಂದ ನಿನ್ನನ್ನು ಮುಗಿಸಿ ಬಿಡುವೆನು. ॥ ೧ ॥ ಅವನು ಹೀಗೆ ಗದರಿಸಲು ಹೆದರಿ, ಮಗನ ಉಪದ್ರವದಿಂದ ದುಃಖಿತಳಾಗಿ ಅವಳು ರಾತ್ರೆ ಭಾವಿಗೆ ಹಾರಿಕೊಂಡಳು. ಹೀಗೆ ಅವಳ ಮೃತ್ಯುವಾಯಿತು. ॥ ೨ ॥ ಯೋಗನಿಷ್ಠ ಗೋಕರ್ಣನು ತೀರ್ಥಯಾತ್ರೆಗಾಗಿ ಹೊರಟು ಹೋದನು. ಅವನಿಗೆ ಈ ಘಟನೆಯಿಂದ ದುಃಖವಾಗಲೀ, ಸುಖವಾಗಲೀ ಆಗಲಿಲ್ಲ, ಏಕೆಂದರೆ ಅವನಿಗೆ ಯಾರೂ ಮಿತ್ರರು, ಶತ್ರುಗಳು ಇರಲಿಲ್ಲ. ॥ ೩ ॥

ಧುಂಧುಕಾರಿಯು ಐದು ಮಂದಿ ವೇಶ್ಯೆಯರೊಂದಿಗೆ ಮನೆಯಲ್ಲೇ ಇರತೊಡಗಿದನು. ಅವರಿಗಾಗಿ ಭೋಗ-ಸಾಮಗ್ರಿಗಳನ್ನು ಒದಗಿಸುವ ಚಿಂತೆಯಿಂದ ಅವನ ಬುದ್ಧಿಯು ನಷ್ಟವಾಯಿತು. ಅವನು ಅನೇಕ ರೀತಿಯ ಕ್ರೂರ ಕರ್ಮಗಳನ್ನು ಮಾಡತೊಡಗಿದನು. ॥ ೪ ॥ ಒಂದು ದಿನ ಆ ಕುಲಟೆಯರು ಇವನ ಬಳಿಯಲ್ಲಿ ಅನೇಕ ಒಡವೆಗಳನ್ನು ಬೇಡಿದರು. ಅವನಾದರೋ ಕಾಮದಿಂದ ಕುರುಡನಾಗಿ ಹೋಗಿದ್ದನು. ಸಾವಿನ ನೆನಪೇ ಅವನಿಗಿರಲಿಲ್ಲ, ಸರಿ, ಒಡವೆಗಳನ್ನು ಒದಗಿಸಲು ಅವನು ಮನೆಯಿಂದ ಹೊರಬಿದ್ದನು. ॥ ೫ ॥ ಅವನು ಅಲ್ಲಿ-ಇಲ್ಲಿ ಹೇರಳ ಧನವನ್ನು ಕದ್ದು ಮನೆಗೆ ಬಂದು, ಅವರಿಗೆ ಸುಂದರ ವಸ್ತ್ರ-ಒಡವೆಗಳನ್ನು ತಂದು ಕೊಟ್ಟನು. ॥ ೬ ॥ ಕಳ್ಳತನದ ಅನೇಕ ವಸ್ತುಗಳನ್ನು ನೋಡಿ ಆ ಸ್ತ್ರೀಯರು ರಾತ್ರೆ ವಿಚಾರಮಾಡಿದರು– 'ಇವನು ಪ್ರತಿದಿನ ಕಳ್ಳತನ ಮಾಡುತ್ತಾನೆ. ಅದರಿಂದ ಒಂದಲ್ಲ ಒಂದು ದಿನ ಖಂಡಿತವಾಗಿ ರಾಜನು ಇವನನ್ನು ಹಿಡಿದುಕೊಂಡು ಹೋದಾನು. ॥ ೭ ॥ ರಾಜನು ಇದೆಲ್ಲ ಸಂಪತ್ತನ್ನು ಕಸಿದುಕೊಂಡು ಇವನಿಗೆ ಪ್ರಾಣದಂಡನೆ ವಿಧಿಸುವುದು ನಿಶ್ಚಿತ. ಒಂದಲ್ಲ ಒಂದು ದಿನ ಇವನಿಗೆ ಸಾಯುವುದೇ ಇದೆಯಾದರೆ ಧನದ ರಕ್ಷಣೆಗಾಗಿ ಗುಪ್ತವಾಗಿ ಇವನನ್ನು ನಾವೇ ಏಕೆ ಕೊಲ್ಲಬಾರದು ?॥ ೮ ॥ ಇವನನ್ನು ಕೊಂದು ನಾವು ಇವನ ಸಂಪತ್ತೆಲ್ಲವನ್ನು ಎತ್ತಿಕೊಂಡು ಎಲ್ಲಾದರೂ ಹೊರಟು ಹೋಗೋಣ.' ಹೀಗೆ ನಿಶ್ಚಯಿಸಿ ಅವರು ಮಲಗಿರುವ ಧುಂಧುಕಾರಿಯನ್ನು ಹಗ್ಗದಿಂದ ಕಟ್ಟಿ, ಕತ್ತಿಗೆ ಉರುಳನ್ನು ಬಿಗಿದು ಸಾಯಿಸಲು ಪ್ರಯತ್ನಿಸಿದರು. ಇದರಿಂದ ಅವನು ಬೇಗನೇ ಸಾಯದಿದ್ದಾಗ ಅವರಿಗೆ ಭಾರೀ ಚಿಂತೆ ಇಟ್ಟಿಕೊಂಡಿತು. ॥ ೯-೧೦ ॥ ಆಗ ಅವರು ಅವನ ಬಾಯಿಯಲ್ಲಿ ಉರಿಯುವ ಕೆಂಡವನ್ನು ಸುರಿದರು. ಇದರಿಂದ ಅವನು ಬೆಂಕಿಯ ಜ್ವಾಲೆಯಿಂದ ತುಂಬಾ ನರಳುತ್ತಾ ಸತ್ತು ಹೋದನು. ॥ ೧೧ ॥ ಅವರು ಇವನ ಶರೀರವನ್ನು ಒಂದು

ತಂ ದೇಹಂ ಮುಮುಚುರ್ಗರ್ತೇ ಪ್ರಾಯಃ ಸಾಹಸಿಕಾಃ ಸ್ತ್ರಿಯಃ ।
ನ ಜ್ಞಾತಂ ತದ್ರಹಸ್ಯಂ ತು ಕೇನಾಪೀದಂ ತಥೈವ ಚ ॥ ೧೨ ॥

ಲೋಕೈಃ ಪೃಷ್ಟಾ ವದಂತಿ ಸ್ಮ ದೂರಂ ಯಾತಃ ಪ್ರಿಯೋ ಹಿ ನಃ ।
ಆಗಮಿಷ್ಯತಿ ವರ್ಷೇಽಸ್ಮಿನ್ ವಿತ್ತಲೋಭವಿಕರ್ಷಿತಃ ॥ ೧೩ ॥

ಸ್ತ್ರೀಣಾಂ ನೈವ ತು ವಿಶ್ವಾಸಂ ದುಷ್ಟಾನಾಂ ಕಾರಯೇದ್ಬುಧಃ ।
ವಿಶ್ವಾಸೇ ಯಃ ಸ್ಥಿತೋ ಮೂಢಃ ಸ ದುಃಖೈಃ ಪರಿಭೂಯತೇ ॥ ೧೪ ॥

ಸುಧಾಮಯಂ ವಚೋ ಯಾಸಾಂ ಕಾಮಿನಾಂ ರಸವರ್ಧನಮ್ ।
ಹೃದಯಂ ಕ್ಷುರಧಾರಾಭಂ ಪ್ರಿಯಃ ಕೋ ನಾಮ ಯೋಷಿತಾಮ್ ॥ ೧೫ ॥

ಸಂಹೃತ್ಯ ವಿತ್ತಂ ತಾ ಯಾತಾಃ ಕುಲಟಾ ಬಹುಭರ್ತೃಕಾಃ ।
ಧುಂಧುಕಾರೀ ಬಭೂವಾಥ ಮಹಾನ್ ಪ್ರೇತಃ ಕುಕರ್ಮತಃ ॥ ೧೬ ॥

ವಾತ್ಯಾರೂಪಧರೋ ನಿತ್ಯಂ ಧಾವನ್ ದಶದಿಶೋಽಂತರಮ್ ।
ಶೀತಾತಪಪರಿಕ್ಲಿಷ್ಟೋ ನಿರಾಹಾರಃ ಪಿಪಾಸಿತಃ ॥ ೧೭ ॥

ನ ಲೇಭೇ ಶರಣಂ ಕ್ವಾಪಿ ಹಾ ದೈವೇತಿ ಮುಹುರ್ವದನ್ ।
ಕಿಯತ್ಕಾಲೇನ ಗೋಕರ್ಣೋ ಮೃತಂ ಲೋಕಾದಬುಧ್ಯತ ॥ ೧೮ ॥

ಅನಾಥಂ ತಂ ವಿದಿತ್ವೈವ ಗಯಾಶ್ರಾದ್ಧಮಚೀಕರತ್ ।
ಯಸ್ಮಿಂಸ್ತೀರ್ಥೇ ತು ಸಂಯಾತಿ ತತ್ರ ಶ್ರಾದ್ಧಮವರ್ತಯತ್ ॥ ೧೯ ॥

ಏವಂ ಭ್ರಮನ್ ಸ ಗೋಕರ್ಣಃ ಸ್ವಪುರಂ ಸಮುಪೇಯಿವಾನ್ ।
ರಾತ್ರೌ ಗೃಹಾಂಗಣೇ ಸ್ವಪ್ತುಮಾಗತೋಽಲಕ್ಷಿತಃ ಪರೈಃ ॥ ೨೦ ॥

ತತ್ರ ಸುಪ್ತಂ ಸ ವಿಜ್ಞಾಯ ಧುಂದುಕಾರೀ ಸ್ವಬಾಂಧವಮ್ ।
ನಿಶೀಥೇ ದರ್ಶಯಾಮಾಸ ಮಹಾರೌದ್ರತರಂ ವಪುಃ ॥ ೨೧ ॥

ಸಕೃನ್ಮೇಷಃ ಸಕೃದ್ಧಸ್ತೀ ಸಕೃಚ್ಚ ಮಹಿಷೋಽಭವತ್ ।
ಸಕೃದಿಂದ್ರಃ ಸಕೃಚ್ಚಾಗ್ನಿಃ ಪುನಶ್ಚ ಪುರುಷೋಽಭವತ್ ॥ ೨೨ ॥

ವೈಪರೀತ್ಯಮಿದಂ ದೃಷ್ಟ್ವಾ ಗೋಕರ್ಣೋ ಧೈರ್ಯಸಂಯುತಃ ।
ಅಯಂ ದುರ್ಗತಿಕಃ ಕೋಽಪಿ ನಿಶ್ಚಿತ್ಯಾಥ ತಮಬ್ರವೀತ್ ॥ ೨೩ ॥

*ಗೋಕರ್ಣ ಉವಾಚ*

ಕಸ್ತ್ವಮುಗ್ರತರೋ ರಾತ್ರೌ ಕುತೋ ಯಾತೋ ದಶಾಮಿಮಾಮ್ ।
ಕಿಂ ವಾ ಪ್ರೇತಃ ಪಿಶಾಚೋ ವಾ ರಾಕ್ಷಸೋಽಸೀತಿ ಶಂಸ ನಃ ॥ ೨೪ ॥

ಹೊಂಡದಲ್ಲಿ ಹೂತು ಬಿಟ್ಟರು. ಸ್ತ್ರೀಯರು ಪ್ರಾಯಶಃ ಭಾರೀ ದುಸ್ಸಾಹಸಿಗಳಾಗುತ್ತಾರೆಂಬುದು ನಿಜವಾಗಿದೆ. ಅವರ ಈ ಕೃತ್ಯವು ಯಾರಿಗೂ ತಿಳಿಯದೇ ಹೋಯಿತು. ॥ ೧೨ ॥ ಜನರು ಕೇಳಿದಾಗ ಹೇಳುತ್ತಿದ್ದರು - ನಮ್ಮ ಪ್ರಿಯತಮನು ಹಣದ ಲೋಭದಿಂದ ಈ ಬಾರಿ ಎಲ್ಲೋ ಬಹುದೂರ ಹೋಗಿರಬೇಕು. ಇದೇ ವರ್ಷಾಂತ್ಯದಲ್ಲಿ ಬರುವನು. ॥ ೧೩ ॥ ಬುದ್ಧಿವಂತರಾದವರು ದುಷ್ಟಸ್ತ್ರೀಯರ ಮೇಲೆ ಎಂದೂ ವಿಶ್ವಾಸವಿಡಬಾರದು. ವಿಶ್ವಾಸವಿಡುವ ಮೂರ್ಖನಿಗೆ ದುಃಖಿಯಾಗಬೇಕಾಗುತ್ತದೆ. ॥ ೧೪ ॥ ಇವರ ಮಾತುಗಳಾದರೋ ಅಮೃತದಂತೆ ಕಾಮುಕರ ಹೃದಯಲ್ಲಿ ರಸವನ್ನು ಹೆಚ್ಚಿಸುತ್ತದೆ. ಆದರೆ ಅವರ ಹೃದಯ ಕತ್ತಿಯ ಅಲಗಿನಂತೆ ಹರಿತವಾಗಿರುತ್ತದೆ. ಇಂತಹ ಸ್ತ್ರೀಯರನ್ನು ಯಾರು ತಾನೇ ಪ್ರೇಮಿಸುವರು ? ॥ ೧೫ ॥

ಆ ಕುಲಟೆಯರು ಧುಂಧುಕಾರಿಯ ಸಂಪತ್ತೆಲ್ಲವನ್ನು ದೋಚಿಕೊಂಡು ಪರಾರಿಯಾದರು. ಅವರಿಗೆ ಇಂತಹ ವಿಟರು ಎಷ್ಟಿದ್ದರೋ ಯಾರು ಬಲ್ಲರು ? ಧುಂಧುಕಾರಿಯು ತನ್ನ ಕುಕರ್ಮದಿಂದಾಗಿ ಭಯಂಕರ ಪ್ರೇತವಾದನು. ॥ ೧೬ ॥ ಅವನು ಬಿರುಗಾಳಿಯಾಗಿ ಯಾವಾಗಲೂ ಹತ್ತು ದಿಕ್ಕುಗಳಲ್ಲಿ ಅಲೆಯುತ್ತಿದ್ದನು. ಬಿಸಿಲು, ಛಳಿಯಿಂದ ಭಾರಿ ಕಷ್ಟಪಡುತ್ತಾ ಹಸಿವು-ಬಾಯಾರಿಕೆಗಳಿಂದ ದುಃಖಿತನಾಗಿ ಅಯ್ಯೋ ದೈವವೇ ! ಎಂದು ಕೂಗುತ್ತಿದ್ದನು. ಆದರೆ ಅವನಿಗೆ ಎಲ್ಲಿಯೂ, ಯಾವುದೇ ಆಸರೆ ದೊರೆಯಲಿಲ್ಲ. ಕೆಲಕಾಲ ಕಳೆದ ಬಳಿಕ ಗೋಕರ್ಣನು ಜನರಬಾಯಿಂದ ಧುಂಧುಕಾರಿಯ ಮರಣದ ಸಮಾಚಾರವನ್ನು ಕೇಳಿದನು. ॥ ೧೭-೧೮ ॥ ಆಗ ಅವನು ಅವನನ್ನು ಅನಾಥನೆಂದರಿತು ಗಯೆಯಲ್ಲಿ ಅವನ ಶ್ರಾದ್ಧ ಮಾಡಿದನು. ಅವನು ಹೋದ ಎಲ್ಲ ತೀರ್ಥಗಳಲ್ಲಿಯೂ ಅವನ ಶ್ರಾದ್ಧಮಾಡುತ್ತಿದ್ದನು. ॥ ೧೯ ॥

ಹೀಗೆ ತಿರುಗುತ್ತಾ-ತಿರುಗುತ್ತಾ ಗೋಕರ್ಣನು ತನ್ನ ಊರಿಗೆ ಬಂದನು. ರಾತ್ರಿಯಲ್ಲಿ ಬೇರೆಯವರ ಕಣ್ಣು ತಪ್ಪಿಸಿ ನೇರವಾಗಿ ತನ್ನ ಮನೆಯ ಅಂಗಳದಲ್ಲಿ ಮಲಗಲು ಬಂದನು. ॥ ೨೦ ॥ ಅಲ್ಲಿ ತನ್ನ ತಮ್ಮನು ಮಲಗಿರುವುದನ್ನು ಕಂಡು ನಡುರಾತ್ರಿಯಲ್ಲಿ ಧುಂಧುಕಾರಿಯು ತನ್ನ ಭಾರೀ ವಿಕರಾಳ ರೂಪವನ್ನು ತೋರಿದನು. ॥ ೨೧ ॥ ಅವನು ಕೆಲವೊಮ್ಮೆ ಆಡು, ಕೆಲವೊಮ್ಮೆ ಆನೆ, ಕೆಲವೊಮ್ಮೆ ಕೋಣ, ಕೆಲವೊಮ್ಮೆ ಇಂದ್ರ, ಕೆಲವೊಮ್ಮೆ ಅಗ್ನಿಯಾಗಿ ತೋರುತ್ತಿದ್ದನು. ಕೊನೆಗೆ ಅವನು ಮನುಷ್ಯನ ಆಕಾರದಲ್ಲಿ ಪ್ರಕಟನಾದನು. ॥ ೨೨ ॥ ಈ ವಿಪರೀತ ಅವಸ್ಥೆಯನ್ನು ನೋಡಿ ಗೋಕರ್ಣನು ಇವನು ಯಾರೋ ದುರ್ಗತಿಯನ್ನು ಪಡೆದ ಜೀವಿಯಾಗಿದ್ದಾನೆ ಎಂದು ನಿಶ್ಚಯಿಸಿ ಅವನು ಅವನಲ್ಲಿ ಧೈರ್ಯದಿಂದ ಕೇಳಿದನು. ॥ ೨೩ ॥

**ಗೋಕರ್ಣನು ಕೇಳಿದನು** - ನೀನು ಯಾರು ? ರಾತ್ರಿಯಲ್ಲಿ ಇಂತಹ ಭಯಾನಕ ರೂಪವನ್ನು ಏಕೆ ತೋರುತ್ತಿರುವೆ ? ಇಂತಹ ಸ್ಥಿತಿಯು ನಿನಗೆ ಹೇಗೆ ಉಂಟಾಯಿತು ? ನೀನು ಪ್ರೇತವೋ, ಪಿಶಾಚಿಯೋ, ಅಥವಾ ಯಾವುದಾದರೂ ರಾಕ್ಷಸನೋ ? ನನಗೆ ಹೇಳು. ॥ ೨೪ ॥

*ಸೂತ ಉವಾಚ*

ಏವಂ ಪೃಷ್ಟಸ್ತದಾ ತೇನ ರುರೋದೋಚ್ಚೈಃ ಪುನಃ ಪುನಃ ।
ಅಶಕ್ತೋ ವಚನೋಚ್ಚಾರೇ ಸಂಜ್ಞಾಮಾತ್ರಂ ಚಕಾರ ಹ ॥ ೨೫ ॥

ತತೋಽಂಜಲೌ ಜಲಂ ಕೃತ್ವಾ ಗೋಕರ್ಣಸ್ತಮುದೈರಯತ್ ।
ತತ್ಸೇಕಹತಪಾಪೋಽಸೌ ಪ್ರವಕ್ತುಮುಪಚಕ್ರಮೇ ॥ ೨೬ ॥

*ಪ್ರೇತ ಉವಾಚ*

ಅಹಂ ಭ್ರಾತಾ ತ್ವದೀಯೋಽಸ್ಮಿ ಧುಂಧುಕಾರೀತಿ ನಾಮತಃ ।
ಸ್ವಕೀಯೇನೈವ ದೋಷೇಣ ಬ್ರಹ್ಮತ್ವಂ ನಾಶಿತಂ ಮಯಾ ॥ ೨೭ ॥

ಕರ್ಮಣೋ ನಾಸ್ತಿ ಸಂಖ್ಯಾ ಮೇ ಮಹಾಜ್ಞಾನೇ ವಿವರ್ತಿನಃ ।
ಲೋಕಾನಾಂ ಹಿಂಸಕಃ ಸೋಽಹಂ ಸ್ತ್ರೀಭಿರ್ದುಃಖೇನ ಮಾರಿತಃ ॥ ೨೮ ॥

ಅತಃ ಪ್ರೇತತ್ವಮಾಪನ್ನೋ ದುರ್ದಶಾಂ ಚ ವಹಾಮ್ಯಹಮ್ ।
ವಾತಾಹಾರೇಣ ಜೀವಾಮಿ ದೈವಾಧೀನಫಲೋದಯಾತ್ ॥ ೨೯ ॥

ಅಹೋ ಬಂಧೋ ಕೃಪಾಸಿಂಧೋ ಭ್ರಾತರ್ಮಾಮಾಶು ಮೋಚಯ ।
ಗೋಕರ್ಣೋ ವಚನಂ ಶ್ರುತ್ವಾ ತಸ್ಮೈ ವಾಕ್ಯಮಥಾಬ್ರವೀತ್ ॥ ೩೦ ॥

*ಗೋಕರ್ಣ ಉವಾಚ*

ತ್ವದರ್ಥಂ ತು ಗಯಾಪಿಂಡೋ ಮಯಾ ದತ್ತೋ ವಿಧಾನತಃ ।
ತತ್ಕಥಂ ನೈವ ಮುಕ್ತೋಽಸಿ ಮಮಾಶ್ಚರ್ಯಮಿದಂ ಮಹತ್ ॥ ೩೧ ॥

ಗಯಾಶ್ರಾದ್ಧಾನ್ನ ಮುಕ್ತಿಶ್ಚೇದುಪಾಯೋ ನಾಪರಸ್ತ್ವಿಹ ।
ಕಿಂ ವಿಧೇಯಂ ಮಯಾ ಪ್ರೇತ ತತ್ತ್ವಂ ವದ ಸವಿಸ್ತರಮ್ ॥ ೩೨ ॥

*ಪ್ರೇತ ಉವಾಚ*

ಗಯಾಶ್ರಾದ್ಧ ಶತೇನಾಪಿ ಮುಕ್ತಿರ್ಮೇ ನ ಭವಿಷ್ಯತಿ ।
ಉಪಾಯಮಪರಂ ಕಂಚಿತ್ತ್ವಂ ವಿಚಾರಯ ಸಾಂಪ್ರತಮ್ ॥ ೩೩ ॥

ಇತಿ ತದ್ವಾಕ್ಯಮಾಕರ್ಣ್ಯ ಗೋಕರ್ಣೋ ವಿಸ್ಮಯಂ ಗತಃ ।
ಶತಶ್ರಾದ್ಧೈರ್ನ ಮುಕ್ತಿಶ್ಚೇದಸಾಧ್ಯಂ ಮೋಚನಂ ತವ ॥ ೩೪ ॥

ಇದಾನೀಂ ತು ನಿಜಂ ಸ್ಥಾನಮಾತಿಷ್ಠ ಪ್ರೇತ ನಿರ್ಭಯಃ ।
ತ್ವನ್ಮುಕ್ತಿಸಾಧಕಂ ಕಿಂಚಿದಾಚರಿಷ್ಯೇ ವಿಚಾರ್ಯ ಚ ॥ ೩೫ ॥

ಧುಂಧುಕಾರೀ ನಿಜಸ್ಥಾನಂ ತೇನಾದಿಷ್ಟಸ್ತತೋ ಗತಃ ।
ಗೋಕರ್ಣಶ್ಚಿಂತಯಾಮಾಸ ತಾಂ ರಾತ್ರಿಂ ನ ತದಧ್ಯಗಾತ್ ॥ ೩೬ ॥

**ಸೂತರು ಹೇಳುತ್ತಾರೆ** – ಗೋಕರ್ಣನು ಹೀಗೆ ಕೇಳಲಾಗಿ ಅವನು ಪದೇ-ಪದೇ ಜೋರಾಗಿ ಅಳತೊಡಗಿದನು. ಅವನಲ್ಲಿ ಮಾತನಾಡಲೂ ಶಕ್ತಿ ಇರಲಿಲ್ಲ. ಅದಕ್ಕಾಗಿ ಅವನು ಕೇವಲ ಸಂಕೇತಮಾತ್ರ ಮಾಡಿದನು. ॥ ೨೫ ॥ ಆಗ ಗೋಕರ್ಣನು ಬೊಗಸೆಯಲ್ಲಿ ನೀರು ತುಂಬಿ ಅದನ್ನು ಅಭಿಮಂತ್ರಿಸಿ ಅವನ ಮೇಲೆ ಪ್ರೋಕ್ಷಿಸಿದನು. ಇದರಿಂದ ಅವನ ಪಾಪಗಳು ಸ್ವಲ್ಪ ಶಮನವಾಗಿ ಅವನು ಈ ರೀತಿ ಹೇಳತೊಡಗಿದನು. ॥ ೨೬ ॥

**ಪ್ರೇತವೆಂದಿತು** - ನಾನು ನಿನ್ನ ಸಹೋದರನಾಗಿರುವೆನು. ಧುಂಧುಕಾರಿ ಎಂದು ನನ್ನ ಹೆಸರು. ನಾನು ನನ್ನದೇ ದೋಷಗಳಿಂದ ನನ್ನ ಬ್ರಾಹ್ಮಣತ್ವವನ್ನು ನಾಶಮಾಡಿಕೊಂಡೆ. ॥ ೨೭ ॥ ನನ್ನ ಕುಕರ್ಮಗಳು ಎಣಿಸಲಾರದಷ್ಟಿವೆ. ನಾನಾದರೋ ಮಹಾನ್ ಅಜ್ಞಾನದಲ್ಲಿ ತೊಳಲಾಡುತ್ತಿದ್ದೆ. ಇದರಿಂದ ನಾನು ಜನರನ್ನು ತುಂಬಾ ಹಿಂಸಿಸಿದೆ. ಕೊನೆಗೆ ಕುಲಟೆಯರಾದ ಸ್ತ್ರೀಯರು ನನ್ನನ್ನು ನರಳಾಡಿಸಿ ಕೊಂದುಬಿಟ್ಟರು. ॥ ೨೮ ॥ ಇದರಿಂದ ಈಗ ಪ್ರೇತ ಯೋನಿ ಪಡೆದು ಈ ದುರ್ದಶೆಯನ್ನು ಅನುಭವಿಸುತ್ತಿದ್ದೇನೆ. ಈಗ ದೈವವಶಾತ್ ಕರ್ಮಫಲವು ಉದಯಿಸಿದ್ದರಿಂದ ನಾನು ಕೇವಲ ಗಾಳಿಯನ್ನು ಕುಡಿಯುತ್ತಾ ಬದುಕಿದ್ದೇನೆ. ॥ ೨೯ ॥ ಅಯ್ಯಾ ತಮ್ಮನೇ! ನೀನು ದಯಾಸಮುದ್ರನಾಗಿರುವಿ. ಈಗ ಹೇಗಾದರೂ ಬೇಗನೇ ನನ್ನನ್ನು ಈ ಪ್ರೇತಯೋನಿಯಿಂದ ಬಿಡಿಸು. ಗೋಕರ್ಣನು ಧುಂಧುಕಾರಿಯ ಎಲ್ಲ ಮಾತುಗಳನ್ನು ಕೇಳಿ ಅವನಲ್ಲಿ ಹೇಳಿದನು. ॥ ೩೦ ॥

**ಗೋಕರ್ಣನೆಂದನು** – ಸಹೋದರಾ! ನಾನು ನಿನಗಾಗಿ ವಿಧಿಪೂರ್ವಕ ಗಯೆಯಲ್ಲಿ ಪಿಂಡದಾನ ಮಾಡಿದೆ. ಆದರೂ ನೀನು ಪ್ರೇತಯೋನಿಯಿಂದ ಮುಕ್ತನಾಗಲಿಲ್ಲ ಏಕೆ ಎಂಬುದು ನನಗೆ ಆಶ್ಚರ್ಯವಾಗುತ್ತಿದೆ. ॥ ೩೧ ॥ ಗಯಾ ಶ್ರಾದ್ಧದಿಂದಲೂ ನಿನ್ನ ಮುಕ್ತಿಯಾಗದಿದ್ದಾಗ ಇದಕ್ಕೆ ಬೇರೆ ಯಾವ ಉಪಾಯವೂ ಇಲ್ಲ. ಸರಿ, ನೀನು ಎಲ್ಲ ಮಾತನ್ನು ಬಿಚ್ಚಿಹೇಳು. ಈಗ ನಾನು ಏನು ಮಾಡಬೇಕು. ? ॥ ೩೨ ॥

**ಪ್ರೇತವೆಂದಿತು** - ನೂರಾರು ಗಯಾ ಶ್ರಾದ್ಧಗಳನ್ನು ಮಾಡಿದರೂ ನನ್ನ ಮುಕ್ತಿಯು ಆಗಲಾರದು. ಈಗಲಾದರೋ ನೀನು ಇದಕ್ಕಾಗಿ ಬೇರೆ ಯಾವುದಾದರೂ ಉಪಾಯವನ್ನು ಯೋಚಿಸು. ॥ ೩೩ ॥

ಪ್ರೇತದ ಈ ಮಾತನ್ನು ಕೇಳಿ ಗೋಕರ್ಣನಿಗೆ ಬಹಳ ಆಶ್ಚರ್ಯವಾಯಿತು. ಅವನೆಂದನು ನೂರಾರು ಗಯಾ ಶ್ರಾದ್ಧಗಳಿಂದಲೂ ನಿನ್ನ ಮುಕ್ತಿಯು ಆಗದಿದ್ದರೆ, ನಿನ್ನ ಮುಕ್ತಿಯು ಅಸಂಭವವೆಂದೇ ತೋರುತ್ತದೆ. ॥ ೩೪ ॥ ಇರಲಿ, ಈಗ ನೀನು ನಿರ್ಭಯನಾಗಿ ತನ್ನ ಸ್ಥಾನದಲ್ಲಿ ಇರು. ನಾನು ವಿಚಾರಗೈದು ನಿನ್ನ ಮುಕ್ತಿಗಾಗಿ ಯಾವುದಾದರೂ ಬೇರೆ ಉಪಾಯ ಮಾಡುವೆನು. ॥ ೩೫ ॥

ಗೋಕರ್ಣನ ಅಪ್ಪಣೆ ಪಡೆದು ಧುಂಧುಕಾರಿಯು ಅಲ್ಲಿಂದ ಹೊರಟು ತನ್ನ ಸ್ಥಾನಕ್ಕೆ ಹೋದನು. ಇತ್ತ ಗೋಕರ್ಣನು ರಾತ್ರಿಯಿಡೀ ವಿಚಾರ ಮಾಡಿದರೂ ಅವನಿಗೆ ಯಾವ ಉಪಾಯವು ಹೊಳೆಯಲಿಲ್ಲ. ॥ ೩೬ ॥ ಬೆಳಿಗ್ಗೆ ಅವನು ಬಂದಿರುವುದನ್ನು

ಪ್ರಾತಸ್ತಮಾಗತಂ ದೃಷ್ಟ್ವಾ ಲೋಕಾಃ ಪ್ರೀತ್ಯಾ ಸಮಾಗತಾಃ ।
ತತ್ಸರ್ವಂ ಕಥಿತಂ ತೇನ ಯಜ್ಜಾತಂ ಚ ಯಥಾ ನಿಶಿ
॥ ೩೭ ॥

ವಿದ್ವಾಂಸೋ ಯೋಗನಿಷ್ಠಾಶ್ಚ ಜ್ಞಾನಿನೋ ಬ್ರಹ್ಮವಾದಿನಃ ।
ತನ್ಮುಕ್ತಿಂ ನೈವ ತೇಽಪಶ್ಯನ್ ಪಶ್ಯಂತಃ ಶಾಸ್ತ್ರ ಸಂಚಯಾನ್
॥ ೩೮ ॥

ತತಃ ಸರ್ವೈಃ ಸೂರ್ಯವಾಕ್ಯಂ ತನ್ಮುಕ್ತೌ ಸ್ಥಾಪಿತಂ ಪರಮ್ ।
ಗೋಕರ್ಣಃ ಸ್ತಂಭನಂ ಚಕ್ರೇ ಸೂರ್ಯವೇಗಸ್ಯ ವೈ ತದಾ
॥ ೩೯ ॥

ತುಭ್ಯಂ ನಮೋ ಜಗತ್ಸಾಕ್ಷಿನ್ ಬ್ರೂಹಿ ಮೇ ಮುಕ್ತಿಹೇತುಕಮ್ ।
ತಚ್ಛ್ರುತ್ವಾ ದೂರತಃ ಸೂರ್ಯಃ ಸ್ಫುಟಮಿತ್ಯಭ್ಯಭಾಷತ
॥ ೪೦ ॥

ಶ್ರೀಮದ್ಭಾಗವತಾನ್ಮುಕ್ತಿಃ ಸಪ್ತಾಹಂ ವಾಚನಂ ಕುರು ।
ಇತಿ ಸೂರ್ಯವಚಃ ಸರ್ವೈರ್ಧರ್ಮರೂಪಂ ತು ವಿಶ್ರುತಮ್
॥ ೪೧ ॥

ಸರ್ವೇಽಬ್ರುವನ್ ಪ್ರಯತ್ನೇನ ಕರ್ತವ್ಯಂ ಸುಕರಂ ತ್ವಿದಮ್ ।
ಗೋಕರ್ಣೋ ನಿಶ್ಚಯಂ ಕೃತ್ವಾ ವಾಚನಾರ್ಥಂ ಪ್ರವರ್ತಿತಃ
॥ ೪೨ ॥

ತತ್ರ ಸಂಶ್ರವಣಾರ್ಥಾಯ ದೇಶಗ್ರಾಮಾಜ್ಜನಾ ಯಯುಃ ।
ಪಂಗ್ವಂಧವೃದ್ಧಮಂದಾಶ್ಚ ತೇಽಪಿ ಪಾಪಕ್ಷಯಾಯ ವೈ
॥ ೪೩ ॥

ಸಮಾಜಸ್ತು ಮಹಾಂಜಾತೋ ದೇವವಿಸ್ಮಯಕಾರಕಃ ।
ಯದೈವಾಸನಮಾಸ್ಥಾಯ ಗೋಕರ್ಣೋಽಕಥಯತ್ಕಥಾಮ್
॥ ೪೪ ॥

ಸ ಪ್ರೇತೋಽಪಿ ತದಾಯಾತಃ ಸ್ಥಾನಂ ಪಶ್ಯನ್ನಿತಸ್ತತಃ ।
ಸಪ್ತಗ್ರಂಥಿಯುತಂ ತತ್ರಾಪಶ್ಯತ್ಕೀಚಕಮುಚ್ಛ್ರಿತಮ್
॥ ೪೫ ॥

ತನ್ಮೂಲಚ್ಛಿದ್ರಮಾವಿಶ್ಯ ಶ್ರವಣಾರ್ಥಂ ಸ್ಥಿತೋ ಹ್ಯಸೌ ।
ವಾತರೂಪೀ ಸ್ಥಿತಿಂ ಕರ್ತುಮಶಕ್ತೋ ವಂಶಮಾವಿಶತ್
॥ ೪೬ ॥

ವೈಷ್ಣವಂ ಬ್ರಾಹ್ಮಣಂ ಮುಖ್ಯಂ ಶ್ರೋತಾರಂ ಪರಿಕಲ್ಪ್ಯ ಸಃ ।
ಪ್ರಥಮಸ್ಕಂಧತಃ ಸ್ಪಷ್ಟಮಾಖ್ಯಾನಂ ಧೇನುಜೋಽಕರೋತ್
॥ ೪೭ ॥

ದಿನಾಂತೇ ರಕ್ಷಿತಾ ಗಾಥಾ ತದಾ ಚಿತ್ರಂ ಬಭೂವ ಹ ।
ವಂಶೈಕಗ್ರಂಥಿಭೇದೋಽಭೂತ್ಸಶಬ್ದಂ ಪಶ್ಯತಾಂ ಸತಾಮ್
॥ ೪೮ ॥

ದ್ವಿತೀಯೇಽಹ್ನಿ ತಥಾ ಸಾಯಂ ದ್ವಿತೀಯಗ್ರಂಥಿ ಭೇದನಮ್ ।
ತೃತೀಯೇಽಹ್ನಿ ತಥಾ ಸಾಯಂ ತೃತೀಯಗ್ರಂಥಿ ಭೇದನಮ್
॥ ೪೯ ॥

ನೋಡಿ ಜನರು ಪ್ರೇಮದಿಂದ ಅವನನ್ನು ಭೆಟ್ಟಿಯಾಗಲು ಬಂದರು. ಆಗ ಗೋಕರ್ಣನು ರಾತ್ರಿಯಲ್ಲಿ ನಡೆದುದೆಲ್ಲವನ್ನು ಅವರಿಗೆ ತಿಳಿಸಿದನು. ॥ ೩೭ ॥ ಅವರಲ್ಲಿದ್ದ ವಿದ್ವಾಂಸರೂ, ಯೋಗನಿಷ್ಠರೂ, ಜ್ಞಾನಿಗಳೂ, ವೇದಜ್ಞರೂ ಹೀಗೆ ಎಲ್ಲರೂ ಅನೇಕ ಶಾಸ್ತ್ರಗಳನ್ನು ತಿರುವಿಹಾಕಿದರು. ಆದರೂ ಅವನ ಮುಕ್ತಿಯ ಉಪಾಯವು ಸಿಗಲಿಲ್ಲ. ॥ ೩೮ ॥ ಕೊನೆಗೆ ಈ ವಿಷಯದಲ್ಲಿ ಭಗವಾನ್ ಭಾಸ್ಕರನು ಏನು ಆಜ್ಞೆ ಕೊಡುವನೋ ಅದನ್ನೇ ಮಾಡುವುದೆಂದು ಎಲ್ಲರೂ ನಿಶ್ಚಯಿಸಿದರು. ಗೋಕರ್ಣನು ತನ್ನ ತಪೋಬಲದಿಂದ ಸೂರ್ಯನ ಗತಿಯನ್ನು ತಡೆದುಬಿಟ್ಟನು. ॥ ೩೯ ॥ ಅವನು ಸ್ತುತಿಸಿದನು – 'ಭಗವಂತಾ! ನೀನು ಜಗತ್ಸಾಕ್ಷಿಯಾಗಿರುವೆ. ನಾನು ನಿನಗೆ ನಮಸ್ಕರಿಸುತ್ತೇನೆ. ನೀನು ದಯಮಾಡಿ ಧುಂಧುಕಾರಿಯ ಮುಕ್ತಿಯ ಸಾಧನೆಯನ್ನು ನನಗೆ ತಿಳಿಸು.' ಗೋಕರ್ಣನ ಈ ಪ್ರಾರ್ಥನೆಯನ್ನು ಕೇಳಿ ಸೂರ್ಯನಾರಾಯಣನು ದೂರದಿಂದಲೇ ಸ್ಪಷ್ಟವಾಗಿ ಇಂತೆಂದನು – 'ಶ್ರೀಮದ್ಭಾಗವತದಿಂದ ಮುಕ್ತಿಯಾಗಬಲ್ಲದು. ಅದರಿಂದ ನೀನು ಅದನ್ನು ಸಪ್ತಾಹ ವಿಧಿಯಿಂದ ಪಾರಾಯಣೆ ಮಾಡು' ಸೂರ್ಯನ ಈ ಧರ್ಮಮಯ ವಚನವನ್ನು ಅಲ್ಲಿ ನೆರೆದವರೆಲ್ಲರೂ ಕೇಳಿದರು. ॥ ೪೦-೪೧ ॥ ಆಗ ಎಲ್ಲರೂ 'ಈ ಸಾಧನೆಯು ತುಂಬಾ ಸರಳವಾಗಿದೆ. ಇದನ್ನು ಪ್ರಯತ್ನಪೂರ್ವಕ ಮಾಡು' ಎಂದು ಹೇಳಿದರು. ಆದ್ದರಿಂದ ಗೋಕರ್ಣನೂ ಹಾಗೆಯೇ ನಿಶ್ಚಯಿಸಿ ಕಥೆಯನ್ನು ಹೇಳಲು ಸಿದ್ಧನಾದನು. ॥ ೪೨ ॥

ಅನೇಕ ಊರುಗಳಿಂದ, ಗ್ರಾಮಗಳಿಂದ ಅನೇಕ ಜನರು ಕಥೆ ಕೇಳಲು ಆಗಮಿಸಿದರು. ಬಹಳಷ್ಟು ಕುಂಟರೂ, ಕುರುಡರೂ, ಮುದುಕರೂ, ಮಂದಬುದ್ಧಿಯವರೂ ಹೀಗೆ ತಮ್ಮ ಪಾಪಗಳನ್ನು ಕಳೆದುಕೊಳ್ಳುವ ಉದ್ದೇಶದಿಂದ ಅಲ್ಲಿ ಬಂದು ಸೇರಿದರು. ॥೪೩॥ ಹೀಗೆ ಅಲ್ಲಿ ನೆರೆದ ಜನಸಂದಣಿಯನ್ನು ನೋಡಿ ದೇವತೆಗಳಿಗೂ ಆಶ್ಚರ್ಯವಾಯಿತು. ಗೋಕರ್ಣನು ವ್ಯಾಸಪೀಠದಲ್ಲಿ (ವೇದಿಕೆಯಲ್ಲಿ) ಕುಳಿತು ಕಥೆ ಹೇಳಲು ತೊಡಗಿದಾಗ ಧುಂಧುಕಾರಿಯ ಪ್ರೇತವು ಅಲ್ಲಿಗೆ ಬಂದು ಕುಳಿತುಕೊಳ್ಳಲು ಅಲ್ಲಿ-ಇಲ್ಲಿ ಜಾಗ ಹುಡುಕತೊಡಗಿತು. ಅಷ್ಟರಲ್ಲಿ ಏಳು ಗಂಟುಗಳಿದ್ದ ಒಂದು ನೇರವಾದ ಬಿದಿರಿನ ಮೇಲೆ ಅದರ ದೃಷ್ಟಿ ಬಿತ್ತು. ॥ ೪೪-೪೫ ॥ ಅದರ ಕೆಳಗಿನ ರಂಧ್ರದಲ್ಲಿ ಹೊಕ್ಕು ಅದು ಕಥೆ ಕೇಳಲು ಕುಳಿತುಕೊಂಡಿತು. ಗಾಳಿಯ ರೂಪದಿಂದ ಇದ್ದ ಕಾರಣ ಅದಕ್ಕೆ ಹೊರಗೆಲ್ಲೂ ಕುಳಿತು ಕೊಳ್ಳಲಾರದೆ, ಬಿದಿರಿನಲ್ಲಿ ಹೊಕ್ಕಿತು. ॥ ೪೬ ॥

ಗೋಕರ್ಣನು ಓರ್ವ ವೈಷ್ಣವ ಬ್ರಾಹ್ಮಣನನ್ನು ಮುಖ್ಯ ಶ್ರೋತೃವಾಗಿಸಿ, ಪ್ರಥಮಸ್ಕಂಧದಿಂದಲೇ ಸ್ಪಷ್ಟವಾಗಿ, ಮಧುರ ಸ್ವರದಿಂದ ಕಥೆ ಹೇಳಲು ಪ್ರಾರಂಭಿಸಿದನು. ॥ ೪೭ ॥ ಸಾಯಂಕಾಲ ಅಂದಿನ ಕಥೆಯನ್ನು ಮುಗಿಸಿದಾಗ ಒಂದು ವಿಚಿತ್ರವಾದ ಸಂಗತಿ ನಡೆಯಿತು. ಅಲ್ಲಿ ಸಭಿಕರು ನೋಡು-ನೋಡುತ್ತಿರುವಂತೆ ಆ ಬಿದಿರಿನ ಒಂದು ಗಂಟು ಫಟಾರವೆಂದು ಶಬ್ದಮಾಡುತ್ತಾ ಒಡೆದು ಹೋಯಿತು. ॥ ೪೮ ॥ ಹೀಗೆಯೇ ಎರಡನೆ ದಿನ ಸಂಜೆ ಎರಡನೆಯ ಗಂಟು, ಮೂರನೆಯ ದಿನ ಮೂರನೆಯ ಗಂಟು ಒಡೆದು ಹೋಯಿತು. ॥ ೪೯ ॥

ಏವಂ ಸಪ್ತದಿನೈಶ್ಚೈವ ಸಪ್ತಗ್ರಂಥಿವಿಭೇದನಮ್ ।
ಕೃತ್ವಾ ಸ ದ್ವಾದಶಸ್ಕಂಧ ಶ್ರವಣಾತ್ಪ್ರೇತತಾಂ ಜಹೌ ॥ ೫೦ ॥

ದಿವ್ಯರೂಪಧರೋ ಜಾತಸ್ತುಲಸೀದಾಮಮಂಡಿತಃ ।
ಪೀತವಾಸಾ ಘನಶ್ಯಾಮೋ ಮುಕುಟೀ ಕುಂಡಲಾನ್ವಿತಃ ॥ ೫೧ ॥

ನನಾಮ ಭ್ರಾತರಂ ಸದ್ಯೋ ಗೋಕರ್ಣಮಿತಿ ಚಾಬ್ರವೀತ್ ।
ತ್ವಯಾಹಂ ಮೋಚಿತೋ ಬಂಧೋ ಕೃಪಯಾ ಪ್ರೇತಕಶ್ಮಲಾತ್ ॥ ೫೨ ॥

ಧನ್ಯಾ ಭಾಗವತೀ ವಾರ್ತಾ ಪ್ರೇತಪೀಡಾವಿನಾಶಿನೀ ।
ಸಪ್ತಾಹೋಽಪಿ ತಥಾ ಧನ್ಯಃ ಕೃಷ್ಣಲೋಕಫಲಪ್ರದಃ ॥ ೫೩ ॥

ಕಂಪಂತೇ ಸರ್ವಪಾಪಾನಿ ಸಪ್ತಾಹಶ್ರವಣೇ ಸ್ಥಿತೇ ।
ಅಸ್ಮಾಕಂ ಪ್ರಲಯಂ ಸದ್ಯಃ ಕಥಾ ಚೇಯಂ ಕರಿಷ್ಯತಿ ॥ ೫೪ ॥

ಆರ್ದ್ರಂ ಶುಷ್ಕಂ ಲಘು ಸ್ಥೂಲಂ ವಾಙ್ಮನಃಕರ್ಮಭಿಃ ಕೃತಮ್ ।
ಶ್ರವಣಂ ವಿದಹೇತ್ಪಾಪಂ ಪಾವಕಃ ಸಮಿಧೋ ಯಥಾ ॥ ೫೫ ॥

ಅಸ್ಮಿನ್ವೈ ಭಾರತೇ ವರ್ಷೇ ಸೂರಿಭಿರ್ದೇವಸಂಸದಿ ।
ಅಕಥಾಶ್ರಾವಿಣಾಂ ಪುಂಸಾಂ ನಿಷ್ಫಲಂ ಜನ್ಮ ಕೀರ್ತಿತಮ್ ॥ ೫೬ ॥

ಕಿಂ ಮೋಹತೋ ರಕ್ಷಿತೇನ ಸುಪುಷ್ಟೇನ ಬಲೀಯಸಾ ।
ಅಧ್ರುವೇಣ ಶರೀರೇಣ ಶುಕಶಾಸ್ತ್ರ ಕಥಾಂ ವಿನಾ ॥ ೫೭ ॥

ಅಸ್ಥಿಸ್ತಂಭಂ ಸ್ನಾಯುಬದ್ಧಂ ಮಾಂಸಶೋಣಿತಲೇಪಿತಮ್ ।
ಚರ್ಮಾವನದ್ಧಂ ದುರ್ಗಂಧಂ ಪಾತ್ರಂ ಮೂತ್ರಪುರೀಷಯೋಃ ॥ ೫೮ ॥

ಜರಾಶೋಕವಿಪಾಕಾರ್ತಂ ರೋಗಮಂದಿರಮಾತುರಮ್ ।
ದುಷ್ಪೂರಂ ದುರ್ಧರಂ ದುಷ್ಟಂ ಸದೋಷಂ ಕ್ಷಣಭಂಗುರಮ್ ॥ ೫೯ ॥

ಕೃಮಿವಿಡ್ಭಸ್ಮ ಸಂಜ್ಞಾಂತಂ ಶರೀರಮಿತಿ ವರ್ಣಿತಮ್ ।
ಅಸ್ಥಿರೇಣ ಸ್ಥಿರಂ ಕರ್ಮ ಕುತೋಽಯಂ ಸಾಧಯೇನ್ನ ಹಿ ॥ ೬೦ ॥

ಯತ್ಪ್ರಾತಃ ಸಂಸ್ಕೃತಂ ಚಾನ್ನಂ ಸಾಯಂ ತಚ್ಚ ವಿನಶ್ಯತಿ ।
ತದೀಯರಸಸಂಪುಷ್ಟೇ ಕಾಯೇ ಕಾ ನಾಮ ನಿತ್ಯ ತಾ ॥ ೬೧ ॥

ಈ ವಿಧವಾಗಿ ಏಳು ದಿನಗಳಲ್ಲಿ ಏಳೂ ಗಂಟುಗಳು ಒಡೆದು ಧುಂಧುಕಾರಿಯು ಹನ್ನೆರಡೂ ಸ್ಕಂಧಗಳನ್ನು ಕೇಳಿದ್ದರಿಂದ ಪವಿತ್ರನಾಗಿ, ಪ್ರೇತಯೋನಿಯಿಂದ ಮುಕ್ತನಾಗಿ, ದಿವ್ಯ ರೂಪವನ್ನು ಧರಿಸಿ ಎಲ್ಲರೆದುರಿಗೆ ಪ್ರಕಟನಾದನು. ಅವನ ಶರೀರವು ಮೇಘದಂತೆ ಶ್ಯಾಮಲವಾಗಿದ್ದು, ಪೀತಾಂಬರ, ತುಳಸೀಮಾಲೆಗಳಿಂದ ಸುಶೋಭಿತವಾಗಿತ್ತು. ತಲೆಯ ಮೇಲೆ ಮನೋಹರವಾದ ಕಿರೀಟವಿದ್ದು ಕಿವಿಗಳಲ್ಲಿ ಕಮನೀಯ ಕುಂಡಲಗಳು ಓಲಾಡುತ್ತಿದ್ದವು. ॥ ೫೦-೫೧ ॥ ಅವನು ಕೂಡಲೇ ಸಹೋದರ ಗೋಕರ್ಣನಿಗೆ ವಂದಿಸಿ ಹೇಳಿದನು- ಸೋದರಾ ! ನೀನು ಕೃಪೆಗೈದು ನನ್ನನ್ನು ಪ್ರೇತ ಯೋನಿಯ ದುಃಖದಿಂದ ಬಿಡಿಸಿದೆ. ॥ ೫೨ ॥ ಈ ಪ್ರೇತಪೀಡೆಯನ್ನು ನಾಶಗೊಳಿಸುವಂತಹ ಶ್ರೀಮದ್ಭಾಗವತ ಕಥೆಯು ಧನ್ಯವಾಗಿದೆ. ಶ್ರೀಕೃಷ್ಣಚಂದ್ರನ ಧಾಮವನ್ನು ದೊರಕಿಸುವಂತಹ ಇದರ ಸಪ್ತಾಹ ಪಾರಾಯಣವೂ ಧನ್ಯವಾಗಿದೆ. ॥ ೫೩ ॥ ಸಪ್ತಾಹ ಶ್ರವಣದ ಯೋಗವು ಒದಗಿದಾಗ ಎಲ್ಲ ಪಾಪಗಳು ನಡುಗಿ ಈಗ ಈ ಭಾಗವತದ ಕಥೆಯು ಬೇಗನೇ ನಮ್ಮನ್ನು ಮುಗಿಸಿಬಿಟ್ಟೀತು ಎಂದು ಹೆದರಿ ಓಡಿ ಹೋಗುವವು. ॥ ೫೪ ॥ ಬೆಂಕಿಯು ಒಣಗಿದ-ಹಸಿ, ದೊಡ್ಡ-ಸಣ್ಣ ಎಲ್ಲ ರೀತಿಯ ಕಟ್ಟಿಗೆಗಳನ್ನು ಸುಟ್ಟುಬಿಡುವಂತೆ ಈ ಸಪ್ತಾಹ ಶ್ರವಣವು ಮನ, ವಚನ, ಕರ್ಮಗಳ ಮೂಲಕ ಮಾಡಿದ ಎಲ್ಲ ಪ್ರಕಾರದ ಸಣ್ಣ-ದೊಡ್ಡ ಪಾಪಗಳನ್ನು ಭಸ್ಮವಾಗಿಸಿ ಬಿಡುತ್ತದೆ. ॥ ೫೫ ॥

ದೇವತೆಗಳ ಸಭೆಯಲ್ಲಿ ವಿದ್ವಾಂಸರು ಹೇಳುತ್ತಾರೆ - ಈ ಭಾರತವರ್ಷದಲ್ಲಿ ಶ್ರೀಮದ್ಭಾಗವತದ ಕಥೆಯನ್ನು ಕೇಳದವನ ಜನ್ಮವು ವ್ಯರ್ಥವೇ ಆಗಿದೆ. ॥ ೫೬ ॥ ಮೋಹದಿಂದ ಸಾಕಿ-ಸಲಹಿ ಈ ಅನಿತ್ಯ ಶರೀರವನ್ನು ಹೃಷ್ಟ-ಪುಷ್ಟ ಬಲಿಷ್ಠವಾಗಿಸಿಕೊಂಡರೂ ಶ್ರೀಮದ್ಭಾಗವತದ ಕಥೆ ಕೇಳದಿದ್ದರೆ ಏನು ಲಾಭವಾದಂತಾಯಿತು ? ॥ ೫೭ ॥ ಅಸ್ಥಿಗಳೇ ಈ ಶರೀರದ ಆಧಾರ ಸ್ತಂಭಗಳು. ನರಗಳಿಂದ ಬಿಗಿದು, ಇದರ ಮೇಲೆ ರಕ್ತ-ಮಾಂಸವನ್ನು ಮೆತ್ತಿ, ಚರ್ಮದಿಂದ ಮುಚ್ಚಲಾಗಿದೆ. ಇದರ ಪ್ರತಿಯೊಂದು ಅವಯವದಿಂದಲೂ ದುರ್ಗಂಧ ಬರುತ್ತದೆ. ಏಕೆಂದರೆ, ಇದಾದರೋ ಮಲ-ಮೂತ್ರದ ಭಂಡಾರವೇ ಆಗಿದೆ. ॥ ೫೮ ॥ ವೃದ್ಧಾವಸ್ಥೆ ಮತ್ತು ಶೋಕದ ಕಾರಣ ಪರಿಣಾಮದಲ್ಲಿ ಇದು ದುಃಖಮಯವೇ ಆಗಿದೆ. ರೋಗಗಳ ಆಗರವಾಗಿದೆ. ಇದು ಯಾವಾಗಲೂ ಒಂದಲ್ಲ-ಒಂದು ಕಾಮನೆಯಿಂದ ಪೀಡಿತವಾಗಿರುತ್ತದೆ. ಎಂದೂ ಇದರ ತೃಪ್ತಿಯಾಗುವುದಿಲ್ಲ. ಇದನ್ನು ಧರಿಸಿಕೊಂಡಿರುವುದೂ ಒಂದು ಭಾರವೆ. ಕ್ಷಣಭಂಗುರವಾದ ಇದರ ರೋಮ-ರೋಮಗಳಲ್ಲಿ ದೋಷಗಳೇ ತುಂಬಿವೆ. ॥ ೫೯ ॥ ಕೊನೆಗೆ ಇಟ್ಟರೆ ಹುಳಗಳ ರಾಶಿ, ಸುಟ್ಟರೆ ಎರಡು ಹಿಡಿ ಬೂದಿ, ಪ್ರಾಣಿಗಳು ತಿಂದರೆ ಲದ್ದಿಯಾಗಿ ಹೋಗುವ ಇದರ ಮೂರೇಗತಿಯನ್ನು ಹೇಳಿರುವರು. ಇಂತಹ ಅಸ್ಥಿರ ಶರೀರದಿಂದ ಮನುಷ್ಯನು ಅವಿನಾಶಿಯಾದ ಫಲವನ್ನು ಕೊಡುವ ಕೆಲಸವನ್ನು ಏಕೆ ಸಾಧಿಸಿಕೊಳ್ಳುವುದಿಲ್ಲ? ॥ ೬೦ ॥ ಬೆಳಿಗ್ಗೆ ಬೇಯಿಸಿದ ಅನ್ನವು ಸಂಜೆಗೆ ಕೆಟ್ಟು ಹೋಗುತ್ತದೆ. ಮತ್ತೆ ಅದೇ ರಸದಿಂದ ಪುಷ್ಟವಾದ ಶರೀರದ ನಿತ್ಯತೆ ಎಲ್ಲಿದೆ ? ॥ ೬೧ ॥

ಸಪ್ತಾಹಶ್ರವಣಾಲ್ಲೋಕೇ ಪ್ರಾಪ್ಯತೇ ನಿಕಟೇ ಹರಿಃ ।
ಅತೋ ದೋಷನಿವೃತ್ತ್ಯರ್ಥಮೇತದೇವ ಹಿ ಸಾಧನಮ್ ॥ ೬೨ ॥

ಬುದ್ಬುದಾ ಇವ ತೋಯೇಷು ಮಶಕಾ ಇವ ಜಂತುಷು ।
ಜಾಯಂತೇ ಮರಣಾಯೈವ ಕಥಾಶ್ರವಣವರ್ಜಿತಾಃ ॥ ೬೩ ॥

ಜಡಸ್ಯ ಶುಷ್ಕವಂಶಸ್ಯ ಯತ್ರ ಗ್ರಂಥಿ ವಿಭೇದನಮ್ ।
ಚಿತ್ರಂ ಕಿಮು ತದಾ ಚಿತ್ತಗ್ರಂಥಿಭೇದಃ ಕಥಾಶ್ರವಾತ್ ॥ ೬೪ ॥

ಭಿದ್ಯತೇ ಹೃದಯಗ್ರಂಥಿಚ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ಸಪ್ತಾಹಶ್ರವಣೇ ಕೃತೇ ॥ ೬೫ ॥

ಸಂಸಾರಕರ್ದಮಾಲೇಪಪ್ರಕ್ಷಾಲನಪಟೀಯಸಿ ।
ಕಥಾತೀರ್ಥೇ ಸ್ಥಿತೇ ಚಿತ್ತೇ ಮುಕ್ತಿರೇವ ಬುಧೈಃ ಸ್ಮೃತಾ ॥ ೬೬ ॥

ಏವಂ ಬ್ರುವತಿ ವೈ ತಸ್ಮಿನ್ವಿಮಾನಮಾಗಮತ್ತದಾ ।
ವೈಕುಂಠವಾಸಿಭಿರ್ಯುಕ್ತಂ ಪ್ರಸ್ಫುರದ್ದೀಪ್ತಿಮಂಡಲಮ್ ॥ ೬೭ ॥

ಸರ್ವೇಷಾಂ ಪಶ್ಯತಾಂ ಭೇಜೇ ವಿಮಾನಂ ಧುಂಧುಲೀಸುತಃ ।
ವಿಮಾನೇ ವೈಷ್ಣವಾನ್ವೀಕ್ಷ್ಯ ಗೋಕರ್ಣೋ ವಾಕ್ಯಮಬ್ರವೀತ್ ॥ ೬೮ ॥

*ಗೋಕರ್ಣ ಉವಾಚ*

ಅತ್ರೈವ ಬಹವಃ ಸಂತಿ ಶ್ರೋತಾರೋ ಮಮ ನಿರ್ಮಲಾಃ ।
ಆನೀತಾನಿ ವಿಮಾನಾನಿ ನ ತೇಷಾಂ ಯುಗಪತ್ಕುತಃ ॥ ೬೯ ॥

ಶ್ರವಣಂ ಸಮಭಾಗೇನ ಸರ್ವೇಷಾಮಿಹ ದೃಶ್ಯತೇ ।
ಫಲಭೇದಃ ಕುತೋ ಜಾತಃ ಪ್ರಬ್ರುವಂತು ಹರಿಪ್ರಿಯಾಃ ॥ ೭೦ ॥

*ಹರಿದಾಸಾ ಊಚುಃ*

ಶ್ರವಣಸ್ಯ ವಿಭೇದೇನ ಫಲಭೇದೋಽತ್ರ ಸಂಸ್ಥಿತಃ ।
ಶ್ರವಣಂ ತು ಕೃತಂ ಸರ್ವೈರ್ನ ತಥಾ ಮನನಂ ಕೃತಮ್ ।
ಫಲಭೇದಸ್ತತೋ ಜಾತೋ ಭಜನಾದಪಿ ಮಾನದ ॥ ೭೧ ॥

ಸಪ್ತರಾತ್ರಮುಪೋಷ್ಯೈವ ಪ್ರೇತೇನ ಶ್ರವಣಂ ಕೃತಮ್ ।
ಮನನಾದಿ ತಥಾ ತೇನ ಸ್ಥಿರಚಿತ್ತೇ ಕೃತಂ ಭೃಶಮ್ ॥ ೭೨ ॥

ಅದೃಢಂ ಚ ಹತಂ ಜ್ಞಾನಂ ಪ್ರಮಾದೇನ ಹತಂ ಶ್ರುತಮ್ ।
ಸಂದಿಗ್ಧೋ ಹಿ ಹತೋ ಮಂತ್ರೋ ವ್ಯಗ್ರಚಿತ್ತೋ ಹತೋ ಜಪಃ ॥ ೭೩ ॥

ಈ ಲೋಕದಲ್ಲಿ ಸಪ್ತಾಹ ಶ್ರವಣದಿಂದ ಬೇಗನೇ ಭಗವಂತನ ಪ್ರಾಪ್ತಿಯಾಗಬಲ್ಲದು. ಆದ್ದರಿಂದ ಎಲ್ಲ ಪ್ರಕಾರದ ದೋಷಗಳ ನಿವೃತ್ತಿಗಾಗಿ ಏಕಮಾತ್ರ ಸಾಧನೆ ಇದೇ ಆಗಿದೆ. ॥ ೬೨ ॥ ಭಗವಂತನ ಕಥೆಯಿಂದ ವಂಚಿತರಾದ ಜನರಾದರೋ ನೀರಿನಲ್ಲಿನ ಗುಳ್ಳೆಯಂತೆ, ಜೀವಿಗಳಲ್ಲಿ ಸೊಳ್ಳೆಗಳಂತೆ ಕೇವಲ ಸಾಯಲೆಂದೇ ಹುಟ್ಟಿರುವರು. ॥ ೬೩ ॥ ಯಾವುದರ ಪ್ರಭಾವದಿಂದ ಜಡವಾದ ಒಣಗಿದ ಬಿದಿರಿನ ಗಂಟುಗಳೇ ಒಡೆದು ಹೋಗುವಾಗ ಈ ಭಾಗವತಕಥೆಯ ಶ್ರವಣದಿಂದ ಚಿತ್ತದ ಗಂಟು ಬಿಚ್ಚಿಹೋಗುವುದು ಯಾವ ದೊಡ್ಡ ಮಾತಾಗಿದೆ ? ॥ ೬೪ ॥ ಸಪ್ತಾಹ ಶ್ರವಣದಿಂದ ಮನುಷ್ಯನ ಹೃದಯದ ಗಂಟು ಬಿಚ್ಚಲ್ಪಟ್ಟು ಸಮಸ್ತ ಸಂಶಯಗಳು ಛಿನ್ನ-ಭಿನ್ನವಾಗಿ ಹೋಗುತ್ತವೆ. ಎಲ್ಲ ಕರ್ಮಗಳು ಕ್ಷೀಣವಾಗುತ್ತವೆ. ॥ ೬೫ ॥ ಈ ಭಾಗವತಕಥಾ ರೂಪೀ ತೀರ್ಥವು ಸಂಸಾರದ ಕೆಸರನ್ನು ತೊಳೆಯಲು ಪ್ರಧಾನವಾಗಿದೆ. ಇದು ಹೃದಯದಲ್ಲಿ ನೆಲೆಸಿದಾಗ ಮನುಷ್ಯನ ಮುಕ್ತಿಯು ನಿಶ್ಚಿತವೆಂದೇ ವಿದ್ವಾಂಸರು ಹೇಳುತ್ತಾರೆ. ॥ ೬೬ ॥

ಧುಂಧುಕಾರಿಯು ಇದೆಲ್ಲವನ್ನು ಹೇಳುತ್ತಿರುವಾಗ ಅವನಿಗಾಗಿ ವೈಕುಂಠವಾಸೀ ಪಾರ್ಷದರ ಸಹಿತ ಒಂದು ದಿವ್ಯವಾದ ವಿಮಾನವು ಇಳಿದು ಬಂತು. ಎಲ್ಲೆಡೆ ಅದರ ಪ್ರಕಾಶ ಮಂಡಲಾಕಾರವಾಗಿ ಹರಡಿಕೊಂಡಿತು. ॥ ೬೭ ॥ ಎಲ್ಲರೆದುರಿಗೇ ಧುಂಧು ಕಾರಿಯು ಆ ವಿಮಾನವನ್ನು ಹತ್ತಿದನು. ಆಗ ಆ ವಿಮಾನದಲ್ಲಿ ಬಂದಿರುವ ಪಾರ್ಷದರನ್ನು ನೋಡಿ ಗೋಕರ್ಣನು ಹೀಗೆಂದನು ॥ ೬೮ ॥

**ಗೋಕರ್ಣನು ಕೇಳಿದನು** – ಓ ಭಗವಂತನ ಪ್ರಿಯ ಪಾರ್ಷದರೇ ! ಇಲ್ಲಿ ನಮ್ಮ ಅನೇಕ ಶುದ್ಧ ಹೃದಯ ಶ್ರೋತೃಗಳಿದ್ದಾರೆ. ಅವರೆಲ್ಲರಿಗಾಗಿ ನೀವು ಒಟ್ಟಿಗೆ ಅನೇಕ ವಿಮಾನಗಳನ್ನು ಏಕೆ ತರಲಿಲ್ಲ? ಇಲ್ಲಿ ಎಲ್ಲರೂ ಸಮಾನವಾಗಿ ಕಥೆ ಕೇಳಿದರು, ಇದನ್ನು ನಾವು ನೋಡುತ್ತೇವೆ. ಹಾಗಿರುವಾಗ ಫಲದಲ್ಲಿ ಈ ಪ್ರಕಾರದ ಭೇದ ಏಕಾಯಿತು ? ತಿಳಿಸಿರಿ. ॥ ೬೯-೭೦ ॥

**ಪಾರ್ಷದರಾದ ಹರಿದಾಸರೆಂದರು** – ಎಲೈ ಮಾನ್ಯವರ ! ಈ ಫಲಭೇದದ ಕಾರಣ ಇದರ ಶ್ರವಣದ ಭೇದವೇ ಆಗಿದೆ. ಶ್ರವಣವಾದರೋ ಎಲ್ಲರೂ ಮಾಡಿದರು ಸರಿಯೇ. ಆದರೆ ಇವನಂತೆ ಮನನ ಮಾಡಲಿಲ್ಲ. ಇದರಿಂದ ಒಟ್ಟಿಗೆ ಭಜನೆ ಮಾಡಿದರೂ ಅದರ ಫಲದಲ್ಲಿ ಭೇದ ಉಳಿಯಿತು. ॥ ೭೧ ॥ ಈ ಪ್ರೇತವು ಏಳು ದಿನಗಳವರೆಗೆ ನಿರಾಹಾರವಿದ್ದು ಶ್ರವಣಿಸಿತು. ಕೇಳಿದ ವಿಷಯವನ್ನು ಸ್ಥಿರಚಿತ್ತದಿಂದ ತುಂಬಾ ಮನನ-ನಿದಿಧ್ಯಾಸನವನ್ನು ಮಾಡುತ್ತಿತ್ತು. ॥ ೭೨ ॥ ದೃಢವಾಗದಿರುವ ಜ್ಞಾನವು ವ್ಯರ್ಥವೇ ಆಗುತ್ತದೆ. ಹೀಗೆಯೇ ಲಕ್ಷ್ಯಕೊಡದೇ ಇರುವುದರಿಂದ ಶ್ರವಣವು, ಸಂದೇಹದಿಂದ ಮಂತ್ರವು, ಚಿತ್ತವು ಅತ್ತ-ಇತ್ತ ಹರಿದಾಡುವುದರಿಂದ ಜಪವು ಫಲಿಸುವುದಿಲ್ಲ. ॥ ೭೩ ॥

ಅವೈಷ್ಣವೋ ಹತೋ ದೇಶೋ ಹತಂ ಶ್ರಾದ್ಧಮಪಾತ್ರಕಮ್ ।
ಹತಮಶ್ರೋತ್ರಿಯೇ ದಾನಮನಾಚಾರಂ ಹತಂ ಕುಲಮ್ ॥ ೭೪ ॥

ವಿಶ್ವಾಸೋ ಗುರುವಾಕ್ಯೇಷು ಸ್ವಸ್ಮಿಂದೀನತ್ವಭಾವನಾ ।
ಮನೋದೋಷಜಯಶ್ಚೈವ ಕಥಾಯಾಂ ನಿಶ್ಚಲಾ ಮತಿಃ ॥ ೭೫ ॥

ಏವಮಾದಿ ಕೃತಂ ಚೇತ್ಸ್ಯಾತ್ತದಾ ವೈ ಶ್ರವಣೇ ಫಲಮ್ ।
ಪುನಃ ಶ್ರವಾಂತೇ ಸರ್ವೇಷಾಂ ವೈಕುಂಠೇ ವಸತಿರ್ಧ್ರುವಮ್ ॥ ೭೬ ॥

ಗೋಕರ್ಣ ತವ ಗೋವಿಂದೋ ಗೋಲೋಕಂ ದಾಸ್ಯತಿ ಸ್ವಯಮ್ ।
ಏವಮುಕ್ತ್ವಾ ಯಯುಃ ಸರ್ವೇ ವೈಕುಂಠಂ ಹರಿಕೀರ್ತನಾಃ ॥ ೭೭ ॥

ಶ್ರಾವಣೇ ಮಾಸಿ ಗೋಕರ್ಣಃ ಕಥಾಮೂಚೇ ತಥಾ ಪುನಃ ।
ಸಪ್ತ ರಾತ್ರವತೀಂ ಭೂಯಃ ಶ್ರವಣಂ ತೈಃ ಕೃತಂ ಪುನಃ ॥ ೭೮ ॥

ಕಥಾಸಮಾಪ್ತೌ ಯಜ್ಜಾತಂ ಶ್ರೂಯತಾಂ ತಚ್ಚ ನಾರದ ॥ ೭೯ ॥

ವಿಮಾನೈಃ ಸಹ ಭಕ್ತೈಶ್ಚ ಹರಿರಾವಿರ್ಬಭೂವ ಹ ।
ಜಯಶಬ್ದಾ ನಮಃ ಶಬ್ದಾಸ್ತತ್ರಾಸನ್ ಬಹವಸ್ತದಾ ॥ ೮೦ ॥

ಪಾಂಚಜನ್ಯಧ್ವನಿಂ ಚಕ್ರೇ ಹರ್ಷಾತ್ತತ್ರ ಸ್ವಯಂ ಹರಿಃ ।
ಗೋಕರ್ಣಂ ತು ಸಮಾಲಿಂಗ್ಯಾಕರೋತ್ಸ್ವಸದೃಶಂ ಹರಿಃ ॥ ೮೧ ॥

ಶ್ರೋತೃನನ್ಯಾನ್ ಘನಶ್ಯಾಮಾನ್ ಪೀತಕೌಶೇಯವಾಸಸಃ ।
ಕಿರೀಟಿನಃ ಕುಂಡಲಿನಸ್ತಥಾ ಚಕ್ರೇ ಹರಿಃ ಕ್ಷಣಾತ್ ॥ ೮೨ ॥

ತದ್ಗ್ರಾಮೇ ಯೇ ಸ್ಥಿತಾ ಜೀವಾ ಆಶ್ವಚಾಂಡಾಲಜಾತಯಃ ।
ವಿಮಾನೇ ಸ್ಥಾಪಿತಾಸ್ತೇಽಪಿ ಗೋಕರ್ಣಕೃಪಯಾ ತದಾ ॥ ೮೩ ॥

ಪ್ರೇಷಿತಾ ಹರಿಲೋಕೇ ತೇ ಯತ್ರ ಗಚ್ಛಂತಿ ಯೋಗಿನಃ ।
ಗೋಕರ್ಣೇನ ಸ ಗೋಪಾಲೋ ಗೋಲೋಕಂ ಗೋಪವಲ್ಲಭಮ್ ।
ಕಥಾಶ್ರವಣತಃ ಪ್ರೀತೋ ನಿರ್ಯಯೌ ಭಕ್ತವತ್ಸಲಃ ॥ ೮೪ ॥

ಅಯೋಧ್ಯಾವಾಸಿನಃ ಪೂರ್ವಂ ಯಥಾ ರಾಮೇಣ ಸಂಗತಾಃ ।
ತಥಾ ಕೃಷ್ಣೇನ ತೇ ನೀತಾ ಗೋಲೋಕಂ ಯೋಗಿದುರ್ಲಭಮ್ ॥ ೮೫ ॥

ಯತ್ರ ಸೂರ್ಯಸ್ಯ ಸೋಮಸ್ಯ ಸಿದ್ಧಾನಾಂ ನ ಗತಿಃ ಕದಾ ।
ತಂ ಲೋಕಂ ಹಿ ಗತಾಸ್ತೇ ತು ಶ್ರೀಮದ್ಭಾಗವತಶ್ರವಾತ್ ॥ ೮೬ ॥

ವೈಷ್ಣವರಿಲ್ಲದ ದೇಶ, ಅಪಾತ್ರನಿಗೆ ನೀಡಿದ ಶ್ರಾದ್ಧ ಭೋಜನ, ಶೋತ್ರಿಯನಲ್ಲದವನಿಗೆ ಕೊಟ್ಟ ದಾನ, ಆಚಾರಹೀನ ಕುಲ, ಇವೆಲ್ಲವೂ ನಾಶವಾಗಿ ಹೋಗುತ್ತವೆ. ॥ ೭೪ ॥ ಗುರುವಚನದಲ್ಲಿ ವಿಶ್ವಾಸ, ದೀನತೆಯ ಭಾವ, ಮನದ ದೋಷಗಳ ಮೇಲೆ ವಿಜಯ, ಕಥೆಯಲ್ಲಿ ಏಕಾಗ್ರ ಚಿತ್ತ ಮುಂತಾದ ನಿಯಮಗಳನ್ನು ಪಾಲಿಸಿದರೆ ಶ್ರವಣದ ನಿಜವಾದ ಫಲ ಸಿಗುತ್ತದೆ. ಈ ಶ್ರೋತೃಗಳು ಪುನಃ ಶ್ರೀಮದ್ಭಾಗವತದ ಕಥೆಯನ್ನು ಕೇಳಿದರೆ ನಿಶ್ಚಯವಾಗಿಯೂ ಇವರಿಗೆಲ್ಲ ವೈಕುಂಠ ಪ್ರಾಪ್ತವಾದೀತು. ॥ ೭೫-೭೬ ॥ ಎಲೈ ಗೋಕರ್ಣನೇ! ನಿನಗಾದರೋ ಭಗವಂತನು ಸ್ವತಃ ಬಂದು ಗೋಲೋಕಧಾಮಕ್ಕೆ ಕೊಂಡುಹೋಗುವನು. ಹೀಗೆ ಹೇಳಿ ಆ ಪಾರ್ಷದರೆಲ್ಲರೂ ಹರಿಕೀರ್ತನೆ ಮಾಡುತ್ತಾ ವೈಕುಂಠ ಲೋಕಕ್ಕೆ ಹೊರಟು ಹೋದರು. ॥ ೭೭ ॥

ಶ್ರಾವಣ ಮಾಸದಲ್ಲಿ ಗೋಕರ್ಣನು ಪುನಃ ಹಾಗೆಯೇ ಸಪ್ತಾಹ ಕ್ರಮದಿಂದ ಕಥೆ ಹೇಳಿದನು. ಅದೇ ಶೋತೃಗಳು ಅದನ್ನು ಮತ್ತೆ ಕೇಳಿದರು. ॥ ೭೮ ॥ ನಾರದರೇ! ಈ ಕಥೆಯ ಸಮಾಪ್ತಿಯಲ್ಲಿ ನಡೆದುದನ್ನು ಕೇಳಿರಿ. ॥ ೭೯ ॥ ಅಲ್ಲಿ ಭಕ್ತರಿಂದ ತುಂಬಿದ ವಿಮಾನಗಳಿಂದೊಡಗೂಡಿ ಭಗವಂತನು ಪ್ರಕಟನಾದನು. ಎಲ್ಲೆಡೆ ಜಯ ಜಯಕಾರ ನಡೆದು, ನಮಸ್ಕಾರಗಳ ಧ್ವನಿಗಳು ತುಂಬಿ ಹೋದುವು. ॥ ೮೦ ॥ ಭಗವಂತನು ಹರ್ಷಿತನಾಗಿ ತನ್ನ ಪಾಂಚಜನ್ಯವನ್ನು ಊದತೊಡಗಿದನು. ಅವನು ಗೋಕರ್ಣನನ್ನು ಆಲಿಂಗಿಸಿಕೊಂಡು ತನ್ನಂತೆಯೇ ಮಾಡಿದನು. ॥ ೮೧ ॥ ಅವನು ಕ್ಷಣಾರ್ಧದಲ್ಲಿ ಬೇರೆ ಎಲ್ಲ ಶ್ರೋತೃಗಳನ್ನು ಮೇಘಶ್ಯಾಮವರ್ಣ, ರೇಶ್ಮೆ ಪೀತಾಂಬರ, ಕಿರೀಟ, ಕುಂಡಲಾದಿಗಳಿಂದ ವಿಭೂಷಿತಗೊಳಿಸಿದನು. ॥ ೮೨ ॥ ಆ ಊರಿನಲ್ಲಿದ್ದ ನಾಯಿಗಳು, ಚಾಂಡಾಲರವರೆಗಿನ ಜೀವಿಗಳೆಲ್ಲರನ್ನೂ ಗೋಕರ್ಣನ ಕೃಪೆಯಿಂದ ವಿಮಾನಗಳಲ್ಲಿ ಹತ್ತಿಸಿಕೊಳ್ಳಲಾಯಿತು. ॥ ೮೩ ॥ ಯೋಗಿಗಳು ತಲಪುವ ಭಗವದ್ಧಾಮಕ್ಕೆ ಅವರೆಲ್ಲರನ್ನು ಕಳಿಸಿಕೊಡಲಾಯಿತು. ಹೀಗೆ ಭಕ್ತವತ್ಸಲ ಭಗವಾನ್ ಶ್ರೀಕೃಷ್ಣನು ಕಥಾಶ್ರವಣದಿಂದ ಪ್ರಸನ್ನನಾಗಿ ಗೋಕರ್ಣನನ್ನು ಜೊತೆಗೆ ಕರಕೊಂಡು ಗ್ವಾಲ ಬಾಲಕರ ಪ್ರಿಯವಾದ ಗೋಲೋಕಕ್ಕೆ ಹೊರಟುಹೋದನು. ॥ ೮೪ ॥ ಹಿಂದಿನ ಕಾಲದಲ್ಲಿ ಅಯೋಧ್ಯಾವಾಸಿಗಳು ಭಗವಾನ್ ಶ್ರೀರಾಮನೊಂದಿಗೆ ಸಾಕೇತಧಾಮಕ್ಕೆ ತೆರಳಿದಂತೆ ಭಗವಾನ್ ಶ್ರೀಕೃಷ್ಣನು ಅವರೆಲ್ಲರನ್ನು ಯೋಗಿದುರ್ಲಭವಾದ ಗೋಲೋಕಧಾಮಕ್ಕೊಂಡು ಹೋದನು. ॥ ೮೫ ॥ ಯಾವ ಲೋಕದಲ್ಲಿ ಸೂರ್ಯ, ಚಂದ್ರ, ಸಿದ್ಧರೂ ಕೂಡ ಎಂದೂ ತಲುಪಲಾರರೋ, ಅಲ್ಲಿಗೆ ಅವರೆಲ್ಲರೂ ಶ್ರೀಮದ್ಭಾಗವತ ಶ್ರವಣದಿಂದ ಹೊರಟು ಹೋದರು. ॥ ೮೬ ॥

ನಾರದರೇ! ಸಪ್ತಾಹಯಜ್ಞದ ಮೂಲಕ ಕಥಾಶ್ರವಣ ಮಾಡುವುದರಿಂದ ಉಂಟಾಗುವ ಉಜ್ವಲವಾದ ಫಲವು ಸಂಚಿತ-

ಬ್ರೂಮೋಽತ್ರ ತೇ ಕಿಂ ಫಲವೃಂದಮುಜ್ಜ್ವಲಂ
ಸಪ್ತಾಹಯಜ್ಞೇನ ಕಥಾಸು ಸಂಚಿತಮ್ ।
ಕರ್ಣೇನ ಗೋಕರ್ಣಕಥಾಕ್ಷರೋ ಯೈಃ
ಪೀತಶ್ಚ ತೇ ಗರ್ಭಗತಾ ನ ಭೂಯಃ ॥ ೮೭ ॥

ವಾತಾಂಬುಪರ್ಣಾಶನದೇಹಶೋಷಣೈ-
ಸ್ತಪೋಭಿರುಗ್ರೈಶ್ಚಿರಕಾಲಸಂಚಿತೈಃ ।
ಯೋಗೈಶ್ಚ ಸಂಯಾಂತಿ ನ ತಾಂ ಗತಿಂ ವೈ
ಸಪ್ತಾಹಗಾಥಾಶ್ರವಣೇನ ಯಾಂತಿ ಯಾಮ್ ॥ ೮೮ ॥

ಇತಿಹಾಸಮಿಮಂ ಪುಣ್ಯಂ ಶಾಂಡಿಲ್ಯೋಽಪಿ ಮುನೀಶ್ವರಃ ।
ಪಠತೇ ಚಿತ್ರಕೂಟಸ್ಥೋ ಬ್ರಹ್ಮಾನಂದಪರಿಪ್ಲುತಃ ॥ ೮೯ ॥

ಆಖ್ಯಾನಮೇತತ್ಪರಮಂ ಪವಿತ್ರಂ
ಶ್ರುತಂ ಸಕೃದ್ವೈ ವಿದಹೇದಘೌಘಮ್ ।
ಶ್ರಾದ್ಧೇ ಪ್ರಯುಕ್ತಂ ಪಿತೃತೃಪ್ತಿಮಾವಹೇ-
ನ್ನಿತ್ಯಂ ಸುಪಾಠಾದಪುನರ್ಭವಂ ಚ ॥ ೯೦ ॥

ವಾಗುತ್ತದೆ. ಅದರ ವಿಷಯದಲ್ಲಿ ನಾವು ನಿಮ್ಮಲ್ಲಿ ಏನೆಂದು ಹೇಳಲಿ ? ಅಯ್ಯಾ ! ಯಾರು ತಮ್ಮ ಕರ್ಣಪುಟದಿಂದ ಗೋಕರ್ಣನ ಮೂಲಕ ಹೇಳಿದ ಭಾಗವತ ಕಥೆಯ ಒಂದು ಅಕ್ಷರವನ್ನಾದರೂ ಪಾನಮಾಡಿದ್ದರೋ ಅವರಿಗೆ ಮತ್ತೆ ಗರ್ಭವಾಸ ಉಂಟಾಗಲಿಲ್ಲ. ॥ ೮೭ ॥ ಜನರು ಗಾಳಿ, ನೀರು, ಎಲೆ ತಿಂದುಕೊಂಡು, ಶರೀರ-ವನ್ನು ಸೊರಗಿಸಿ, ಅನೇಕ ಕಾಲದವರೆಗೆ ಮಾಡಿದ ಘೋರತಪಸ್ಸಿನಿಂದ, ಯೋಗಾಭ್ಯಾಸದಿಂದ ಪಡೆಯಲಾರದ ಗತಿಯನ್ನು ಅವರು ಸಪ್ತಾಹ ಶ್ರವಣದಿಂದ ಸಹಜವಾಗಿಯೇ ಪಡೆದು ಕೊಳ್ಳುತ್ತಾರೆ. ॥ ೮೮ ॥ ಈ ಪವಿತ್ರ ಇತಿಹಾಸದ ಪಾರಾಯಣೆಯನ್ನು ಚಿತ್ರಕೂಟದಲ್ಲಿ ವಿರಾಜಮಾನ ಮುನೀಶ್ವರ ಶಾಂಡಿಲ್ಯರೂ ಬ್ರಹ್ಮಾನಂದದಲ್ಲಿ ಮಗ್ನರಾಗಿ ಮಾಡುತ್ತಿರುತ್ತಾರೆ. ॥ ೮೯ ॥ ಈ ಕಥೆಯು ತುಂಬಾ ಪವಿತ್ರವಾಗಿದೆ. ಒಮ್ಮೆ ಶ್ರವಣದಿಂದಲೇ ಸಮಸ್ತ ಪಾಪರಾಶಿಯನ್ನು ಸುಟ್ಟು ಬಿಡುತ್ತದೆ. ಇದನ್ನು ಶ್ರಾದ್ಧದಲ್ಲಿ ಪಾರಾಯಣ ಮಾಡಿದರೆ ಇದರಿಂದ ಪಿತೃಗಳಿಗೆ ತುಂಬಾ ತೃಪ್ತಿಯಾಗುತ್ತದೆ. ಪ್ರತಿದಿನವೂ ಪಾರಾಯಣ ಮಾಡುವುದರಿಂದ ಮೋಕ್ಷದ ಪ್ರಾಪ್ತಿಯಾಗುತ್ತದೆ. ॥ ೯೦ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ ಗೋಕರ್ಣಮೋಕ್ಷವರ್ಣನಂ ನಾಮ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ಸಪ್ತಾಹ ಯಜ್ಞದ ವಿಧಿ

*ಕುಮಾರಾ ಊಚುಃ*

ಅಥ ತೇ ಸಂಪ್ರವಕ್ಷ್ಯಾಮಃ ಸಪ್ತಾಹಶ್ರವಣೇ ವಿಧಿಮ್ ।
ಸಹಾಯೈರ್ವಸುಭಿಶ್ಚೈವ ಪ್ರಾಯಃ ಸಾಧ್ಯೋ ವಿಧಿಃ ಸ್ಮೃತಃ ॥ ೧ ॥

ದೈವಜ್ಞಂ ತು ಸಮಾಹೂಯ ಮುಹೂರ್ತಂ ಪೃಚ್ಛ್ಯ ಯತ್ನತಃ ।
ವಿವಾಹೇ ಯಾದೃಶಂ ವಿತ್ತಂ ತಾದೃಶಂ ಪರಿಕಲ್ಪಯೇತ್ ॥ ೨ ॥

ನಭಸ್ಯ ಆಶ್ವಿನೋರ್ಜೌ ಚ ಮಾರ್ಗಶೀರ್ಷಃ ಶುಚಿರ್ನಭಾಃ ।
ಏತೇ ಮಾಸಾಃ ಕಥಾರಂಭೇ ಶ್ರೋತೄಣಾಂ ಮೋಕ್ಷಸೂಚಕಾಃ ॥ ೩ ॥

ಮಾಸಾನಾಂ ವಿಪ್ರ ಹೇಯಾನಿ ತಾನಿ ತ್ಯಾಜ್ಯಾನಿ ಸರ್ವಥಾ ।
ಸಹಾಯಾಶ್ಚೇತರೇ ತತ್ರ ಕರ್ತವ್ಯಾಃ ಸೋದ್ಯಮಾಶ್ಚ ಯೇ ॥ ೪ ॥

ದೇಶೇ ದೇಶೇ ತಥಾ ಸೇಯಂ ವಾರ್ತಾ ಪ್ರೇಷ್ಯಾ ಪ್ರಯತ್ನತಃ ।
ಭವಿಷ್ಯತಿ ಕಥಾ ಚಾತ್ರ ಆಗಂತವ್ಯಂ ಕುಟುಂಬಿಭಿಃ ॥ ೫ ॥

**ಸನಕಾದಿಗಳು ಹೇಳುತ್ತಾರೆ** – ಓ ನಾರದರೇ ! ಈಗ ನಾವು ನಿಮಗೆ ಸಪ್ತಾಹ ಶ್ರವಣದ ವಿಧಿಯನ್ನು ಹೇಳುವೆವು. ಈ ವಿಧಿಯು ಪ್ರಾಯಶಃ ಜನರ ಸಹಾಯದಿಂದ ಮತ್ತು ಧನದಿಂದ ಸಾಧ್ಯವೆಂದು ಹೇಳಲಾಗಿದೆ. ॥ ೧ ॥ ಮೊಟ್ಟಮೊದಲಿಗೆ ಜ್ಯೋತಿಷಿಯನ್ನು ಕರೆಸಿ ಮುಹೂರ್ತವನ್ನು ಕೇಳಬೇಕು. ಬಳಿಕ ವಿವಾಹಕ್ಕಾಗಿ ಧನದ ವ್ಯವಸ್ಥೆ ಮಾಡಿಕೊಂಡಂತೆ ಪ್ರಯತ್ನಪೂರ್ವಕವಾಗಿ ಹಣದ ವ್ಯವಸ್ಥೆ ಮಾಡಿಕೊಳ್ಳಬೇಕು. ॥ ೨ ॥ ಕಥೆಯನ್ನು ಪ್ರಾರಂಭಿಸಲು ಭಾದ್ರಪದ, ಆಶ್ವೀಜ, ಕಾರ್ತಿಕ, ಮಾರ್ಗಶೀರ್ಷ, ಆಷಾಢ ಮತ್ತು ಶ್ರಾವಣ ಈ ಆರು ತಿಂಗಳು ಶ್ರೋತೃಗಳಿಗಾಗಿ ಮೋಕ್ಷದ ಪ್ರಾಪ್ತಿಯ ಕಾರಣವಾಗಿವೆ. ॥ ೩ ॥ ದೇವಮುನಿಗಳೇ ! ಈ ತಿಂಗಳಲ್ಲಿಯೂ ಭದ್ರಾ-ವ್ಯತೀಪಾತ ಮುಂತಾದ ಕುಯೋಗಗಳನ್ನು ಸರ್ವಥಾ ತ್ಯಜಿಸಬೇಕು. ಬೇರೆ ಉತ್ಸಾಹೀ ಜನರನ್ನು ತನ್ನ ಸಹಾಯಕರನ್ನಾಗಿಸಿಕೊಳ್ಳಬೇಕು. ॥ ೪ ॥ ಮತ್ತೆ 'ಇಲ್ಲಿ ಕಥೆ ನಡೆಯುವುದು, ಎಲ್ಲರೂ ಸಪರಿವಾರ ಆಗಮಿಸಬೇಕು' ಎಂದು ಎಲ್ಲ ಊರುಗಳಿಗೂ ಪ್ರಯತ್ನ ಪೂರ್ವಕವಾಗಿ ಆಮಂತ್ರಣ ಕಳಿಸಬೇಕು. ॥ ೫ ॥

ದೂರೇ ಹರಿಕಥಾಃ ಕೇಚಿ-
ದ್ದೂರೇ ಚಾಚ್ಯುತಕೀರ್ತನಾಃ ।
ಸ್ತ್ರಿಯಃ ಶೂದ್ರಾದಯೋ ಯೇ ಚ
ತೇಷಾಂ ಬೋಧೋ ಯತೋ ಭವೇತ್ ॥ ೬ ॥

ದೇಶೇ ದೇಶೇ ವಿರಕ್ತಾ ಯೇ ವೈಷ್ಣವಾಃ ಕೀರ್ತನೋತ್ಸುಕಾಃ ।
ತೇಷ್ವೇವ ಪತ್ರಂ ಪ್ರೇಷ್ಯಂ ಚ ತಲ್ಲೇಖನಮಿತೀರಿತಮ್ ॥ ೭ ॥

ಸತಾಂ ಸಮಾಜೋ ಭವಿತಾ ಸಪ್ತರಾತ್ರಂ ಸುದುರ್ಲಭಃ ।
ಅಪೂರ್ವರಸರೂಪೈವ ಕಥಾ ಚಾತ್ರ ಭವಿಷ್ಯತಿ ॥ ೮ ॥

ಶ್ರೀಭಾಗವತಪೀಯೂಷಪಾನಾಯ ರಸಲಂಪಟಾಃ ।
ಭವಂತಶ್ಚ ತಥಾ ಶೀಘ್ರಮಾಯಾತ ಪ್ರೇಮತತ್ಪರಾಃ ॥ ೯ ॥

ನಾವಕಾಶಃ ಕದಾಚಿಚ್ಚೇದ್ದಿನಮಾತ್ರಂ ತಥಾಪಿ ತು ।
ಸರ್ವಥಾಗಮನಂ ಕಾರ್ಯಂ ಕ್ಷಣೋಽತ್ರೈವ ಸುದುರ್ಲಭಃ ॥ ೧೦ ॥

ಏವಮಾಕಾರಣಂ ತೇಷಾಂ ಕರ್ತವ್ಯಂ ವಿನಯೇನ ಚ ।
ಆಗಂತುಕಾನಾಂ ಸರ್ವೇಷಾಂ ವಾಸಸ್ಥಾನಾನಿ ಕಲ್ಪಯೇತ್ ॥ ೧೧ ॥

ತೀರ್ಥೇ ವಾಪಿ ವನೇ ವಾಪಿ ಗೃಹೇ ವಾ ಶ್ರವಣಂ ಮತಮ್ ।
ವಿಶಾಲಾ ವಸುಧಾ ಯತ್ರ ಕರ್ತವ್ಯಂ ತತ್ಕಥಾಸ್ಥಲಮ್ ॥ ೧೨ ॥

ಶೋಧನಂ ಮಾರ್ಜನಂ ಭೂಮೇರ್ಲೇಪನಂ ಧಾತುಮಂಡನಮ್ ।
ಗೃಹೋಪಸ್ಕರಮುದ್ಧೃತ್ಯ ಗೃಹಕೋಣೇ ನಿವೇಶಯೇತ್ ॥ ೧೩ ॥

ಅರ್ವಾಕ್ಪಂಚಾಹತೋ ಯತ್ನಾದಾಸ್ತೀರ್ಣಾನಿ ಪ್ರಮೇಲಯೇತ್ ।
ಕರ್ತವ್ಯೋ ಮಂಡಪಃ ಪ್ರೋಚ್ಚೈಃ ಕದಲೀಖಂಡ ಮಂಡಿತಃ ॥ ೧೪ ॥

ಫಲಪುಷ್ಪದಲೈರ್ವಿಷ್ವಗ್ವಿತಾನೇನ ವಿರಾಜಿತಃ ।
ಚತುರ್ದಿಕ್ಷು ಧ್ವಜಾರೋಪೋ ಬಹುಸಂಪದ್ವಿರಾಜಿತಃ ॥ ೧೫ ॥

ಊರ್ಧ್ವಂ ಸಪ್ತೈವ ಲೋಕಾಶ್ಚ ಕಲ್ಪನೀಯಾಃ ಸವಿಸ್ತರಮ್ ।
ತೇಷು ವಿಪ್ರಾ ವಿರಕ್ತಾಶ್ಚ ಸ್ಥಾಪನೀಯಾಃ ಪ್ರಬೋಧ್ಯ ಚ ॥ ೧೬ ॥

ಪೂರ್ವಂ ತೇಷಾಮಾಸನಾನಿ ಕರ್ತವ್ಯಾನಿ ಯಥೋತ್ತರಮ್ ।
ವಕ್ತುಶ್ಚಾಪಿ ತದಾ ದಿವ್ಯಮಾಸನಂ ಪರಿಕಲ್ಪಯೇತ್ ॥ ೧೭ ॥

ಉದಙ್ಮುಖೋ ಭವೇದ್ವಕ್ತಾ ಶ್ರೋತಾ ವೈ ಪ್ರಾಙ್ಮುಖಸ್ತದಾ ।
ಪ್ರಾಙ್ಮುಖಶ್ಚೇದ್ಭವೇದ್ವಕ್ತಾ ಶ್ರೋತಾ ಚೋದಙ್ಮುಖಸ್ತದಾ ॥ ೧೮ ॥

ಭಗವತ್ಕಥೆ, ಸಂಕೀರ್ತನೆಗಳಿಂದ ದೂರವಾದ ಸ್ತ್ರೀ, ಶೂದ್ರಾದಿಗಳಿಗೂ ಕೂಡ ಸೂಚನೆ ಸಿಗುವಂತೆ ಪ್ರಯತ್ನಿಸಬೇಕು. ॥ ೬ ॥ ಊರು-ಊರುಗಳಲ್ಲಿರುವ ವಿರಕ್ತ ವೈಷ್ಣವರಿಗೆ, ಹರಿಕೀರ್ತನೆಯ ಪ್ರೇಮಿಗಳಿಗೆ ಆಮಂತ್ರಣವನ್ನು ಅವಶ್ಯವಾಗಿ ಕಳಿಸಬೇಕು. ಅದನ್ನು ಬರೆಯುವ ವಿಧಿಯನ್ನು ಈ ರೀತಿಯಾಗಿ ತಿಳಿಸಲಾಗಿದೆ. ॥ ೭ ॥ "ಮಹನೀಯರೇ ! ಇಲ್ಲಿ ಏಳು ದಿನಗಳವರೆಗೆ ಬಹಳ ದುರ್ಲಭವಾದ ಸತ್ಪುರುಷರ ಸಭೆ ಸೇರುವುದು ಮತ್ತು ಅಪೂರ್ವರಸಮಯವಾದ ಶ್ರೀಮದ್ಭಾಗವತದ ಕಥಾ ಪ್ರವಚನ ನಡೆಯುವುದು. ॥ ೮ ॥ ಶ್ರೀಮದ್ಭಾಗವತ ಕಥಾಮೃತವನ್ನು ಪಾನಮಾಡುವ ರಸಿಕಭಕ್ತರಾದ ತಾವು ಪ್ರೇಮದಿಂದ ಶೀಘ್ರವಾಗಿ ದಯಮಾಡಿಸಬೇಕು. ॥ ೯ ॥ ತಮಗೆ ಹೆಚ್ಚು ಅವಕಾಶವಿಲ್ಲದಿದ್ದರೆ ಒಂದು ದಿನವಾದರೂ ಇಲ್ಲಿಗೆ ಅವಶ್ಯವಾಗಿ ಆಗಮಿಸಬೇಕು. ಏಕೆಂದರೆ, ಇಲ್ಲಿಯ ಪ್ರತಿಕ್ಷಣವೂ ಅತ್ಯಂತ ದುರ್ಲಭವಾಗಿದೆ. ॥ ೧೦ ॥ ಹೀಗೆ ಎಲ್ಲರಿಗೂ ವಿನಯಪೂರ್ವಕವಾಗಿ ಆಮಂತ್ರಣವನ್ನು ಕಳಿಸಬೇಕು. ಬಂದವರೆಲ್ಲರಿಗೂ ವಾಸಮಾಡಲು ಯಥೋಚಿತ ಜಾಗವನ್ನು ಏರ್ಪಡಿಸಬೇಕು. ॥ ೧೧ ॥

ಕಥಾ ಶ್ರವಣವನ್ನು ಯಾವುದಾದರೂ ತೀರ್ಥಕ್ಷೇತ್ರದಲ್ಲಾಗಲೀ, ವನದಲ್ಲಾಗಲೀ, ತನ್ನ ಮನೆಯಲ್ಲೇ ಆಗಲಿ ಏರ್ಪಡಿಸುವುದು ಒಳ್ಳೆಯದೆಂದು ತಿಳಿಯಲಾಗಿದೆ. ಉದ್ದ-ಅಗಲ ವಿಶಾಲವಾಗಿರುವ ಜಾಗದಲ್ಲೇ ಕಥಾ ಸ್ಥಳವನ್ನು ಏರ್ಪಡಿಸಬೇಕು. ॥ ೧೨ ॥ ಆ ಭೂಮಿಯನ್ನು ಗುಡಿಸಿ, ಸಾರಿಸಿ, ರಂಗವಲ್ಲಿಗಳಿಂದ ಅಲಂಕರಿಸಬೇಕು. ಮನೆಯ ಸಾಮಾನುಗಳನ್ನೆಲ್ಲ ತೆಗೆದು ಒಂದು ಮೂಲೆಯಲ್ಲಿ ಇರಿಸಬೇಕು. ॥ ೧೩ ॥ ಐದು ದಿನಗಳ ಮೊದಲಿಂದಲೇ ಹಾಸುವ ಬಟ್ಟೆಗಳನ್ನು ಪ್ರಯತ್ನಪೂರ್ವಕ ಸಂಗ್ರಹಿಸಿಡಬೇಕು. ಬಾಳೆಯ ಕಂಬಗಳಿಂದ ಅಲಂಕೃತವಾದ ಒಂದು ಎತ್ತರವಾದ ಮಂಟಪವನ್ನು ಸಿದ್ಧಗೊಳಿಸಬೇಕು. ॥ ೧೪ ॥ ಅದನ್ನು ಎಲ್ಲ ಕಡೆಗಳಲ್ಲಿಯೂ ಹಣ್ಣು, ಹೂವೂ, ಪತ್ರೆ, ತಳಿರು ತೋರಣಗಳಿಂದ ಅಲಂಕರಿಸಬೇಕು. ಸುತ್ತಲೂ ಬಹುಸಂಪತ್ತಿನಿಂದ ಶೋಭಿಸುವ ಧ್ವಜ-ಪತಾಕೆಗಳಿಂದ ಸಜ್ಜುಗೊಳಿಸಬೇಕು. ॥ ೧೫ ॥ ಆ ಮಂಟಪದಲ್ಲಿ ಸ್ವಲ್ಪ ಎತ್ತರವಾದ ಜಾಗದಲ್ಲಿ ವಿಶಾಲವಾದ ಸಪ್ತ ಲೋಕಗಳ ಕಲ್ಪನೆಮಾಡಿ, ಅದರಲ್ಲಿ ವಿರಕ್ತರಾದ ಬ್ರಾಹ್ಮಣರನ್ನು ಕರೆದು ಕೂರಿಸಬೇಕು. ॥ ೧೬ ॥ ಅವರಿಗೆ ಮುಂದುಗಡೆಯಲ್ಲಿ ಯಥೋಚಿತವಾದ ಪೀಠಗಳನ್ನು ಹಾಕಿರಬೇಕು. ಅದರ ಮುಂದೆ ಪ್ರವಚನಕಾರರಿಗೂ ದಿವ್ಯವಾದ ಪೀಠವನ್ನು ವ್ಯವಸ್ಥೆ ಮಾಡಬೇಕು. ॥ ೧೭ ॥ ಪ್ರವಚನಕಾರರು ಉತ್ತರಾಭಿಮುಖರಾಗಿದ್ದರೆ ಮುಖ್ಯ ಶ್ರೋತೃವು ಪೂರ್ವಭಿಮುಖವಾಗಿ ಕುಳಿತಿರಬೇಕು. ಪ್ರವಚನಕಾರರು ಪೂರ್ವಾಭಿಮುಖರಾಗಿದ್ದರೆ ಮುಖ್ಯ ಶ್ರೋತೃವು ಉತ್ತರಾಭಿಮುಖನಾಗಿ ಕುಳಿತಿರಬೇಕು. ॥ ೧೮ ॥ ಅಥವಾ ಪೂಜ್ಯನಾದ ಪ್ರವಚನಕಾರ ಮತ್ತು ಪೂಜಕನಾದ ಶ್ರೋತೃವು ಇವರ ಮಧ್ಯೆ ಇರುವುದೇ ಪೂರ್ವದಿಕ್ಕು ಎಂದು ಭಾವಿಸಬಹುದು. ಪೂಜ್ಯನು

ಅಥವಾ ಪೂರ್ವದಿಗ್ಜ್ಞೇಯಾ ಪೂಜ್ಯಪೂಜಕಮಧ್ಯತಃ ।
ಶ್ರೋತೃಣಾಮಾಗಮೇ ಪ್ರೋಕ್ತಾ ದೇಶಕಾಲಾದಿಕೋವಿದೈಃ ॥ ೧೯ ॥

ವಿರಕ್ತೋ ವೈಷ್ಣವೋ ವಿಪ್ರೋ ವೇದಶಾಸ್ತ್ರ ವಿಶುದ್ಧಿಕೃತ್ ।
ದೃಷ್ಟಾಂತ ಕುಶಲೋ ಧೀರೋ ವಕ್ತಾ ಕಾರ್ಯೋಽತಿನಿಸ್ಪೃಹಃ ॥ ೨೦ ॥

ಅನೇಕಧರ್ಮವಿಭ್ರಾಂತಾಃ ಸ್ತ್ರೈಣಾಃ ಪಾಖಂಡವಾದಿನಃ ।
ಶುಕಶಾಸ್ತ್ರಕಥೋಚ್ಚಾರೇ ತ್ಯಾಜ್ಯಾಸ್ತೇ ಯದಿ ಪಂಡಿತಾಃ ॥ ೨೧ ॥

ವಕ್ತುಃ ಪಾರ್ಶ್ವೇ ಸಹಾಯಾರ್ಥಮನ್ಯಃ ಸ್ಥಾಪ್ಯಸ್ತಥಾವಿಧಃ ।
ಪಂಡಿತಃ ಸಂಶಯಚ್ಛೇತ್ತಾ ಲೋಕಬೋಧನತತ್ಪರಃ ॥ ೨೨ ॥

ವಕ್ತ್ರಾ ಕ್ಷೌರಂ ಪ್ರಕರ್ತವ್ಯಂ ದಿನಾದರ್ವಾಗ್ ವ್ರತಾಪ್ತಯೇ ।
ಅರುಣೋದಯೇಽಸೌ ನಿರ್ವರ್ತ್ಯ ಶೌಚಂ ಸ್ನಾನಂ ಸಮಾಚರೇತ್ ॥ ೨೩ ॥

ನಿತ್ಯಂ ಸಂಕ್ಷೇಪತಃ ಕೃತ್ವಾ ಸಂಧ್ಯಾದ್ಯಂ ಸ್ವಂ ಪ್ರಯತ್ನತಃ ।
ಕಥಾವಿಘ್ನ ವಿಘಾತಾಯ ಗಣನಾಥಂ ಪ್ರಪೂಜಯೇತ್ ॥ ೨೪ ॥

ಪಿತೄನ್ ಸಂತರ್ಪ್ಯ ಶುದ್ಧ್ಯರ್ಥಂ ಪ್ರಾಯಶ್ಚಿತ್ತಂ ಸಮಾಚರೇತ್ ।
ಮಂಡಲಂ ಚ ಪ್ರಕರ್ತವ್ಯಂ ತತ್ರ ಸ್ಥಾಪ್ಯೋ ಹರಿಸ್ತಥಾ ॥ ೨೫ ॥

ಕೃಷ್ಣಮುದ್ದಿಶ್ಯ ಮಂತ್ರೇಣ ಚರೇತ್ಪೂಜಾವಿಧಿಂ ಕ್ರಮಾತ್ ।
ಪ್ರದಕ್ಷಿಣನಮಸ್ಕಾರಾನ್ ಪೂಜಾಂತೇ ಸ್ತುತಿಮಾಚರೇತ್ ॥ ೨೬ ॥

ಸಂಸಾರಸಾಗರೇ ಮಗ್ನಂ ದೀನಂ ಮಾಂ ಕರುಣಾನಿಧೇ ।
ಕರ್ಮಮೋಹಗೃಹೀತಾಂಗಂ ಮಾಮುದ್ಧರ ಭವಾರ್ಣವಾತ್ ॥ ೨೭ ॥

ಶ್ರೀಮದ್ಭಾಗವತಸ್ಯಾಪಿ ತತಃ ಪೂಜಾ ಪ್ರಯತ್ನತಃ ।
ಕರ್ತವ್ಯಾ ವಿಧಿನಾ ಪ್ರೀತ್ಯಾ ಧೂಪದೀಪಸಮನ್ವಿತಾ ॥ ೨೮ ॥

ತತಸ್ತು ಶ್ರೀಫಲಂ ಧೃತ್ವಾ ನಮಸ್ಕಾರಂ ಸಮಾಚರೇತ್ ।
ಸ್ತುತಿಃ ಪ್ರಸನ್ನಚಿತ್ತೇನ ಕರ್ತವ್ಯಾ ಕೇವಲಂ ತದಾ ॥ ೨೯ ॥

ಶ್ರೀಮದ್ಭಾಗವತಾಖ್ಯೋಽಯಂ ಪ್ರತ್ಯಕ್ಷಃ ಕೃಷ್ಣ ಏವ ಹಿ ।
ಸ್ವೀಕೃತೋಽಸಿ ಮಯಾ ನಾಥ ಮುಕ್ತ್ಯರ್ಥಂ ಭವಸಾಗರೇ ॥ ೩೦ ॥

ಮನೋರಥೋ ಮದೀಯೋಽಯಂ ಸಫಲಃ ಸರ್ವಥಾ ತ್ವಯಾ ।
ನಿರ್ವಿಘ್ನೇನೈವ ಕರ್ತವ್ಯೋ ದಾಸೋಽಹಂ ತವ ಕೇಶವ ॥ ೩೧ ॥

ಪೂರ್ವಾಭಿಮುಖನಾಗಿ ಕುಳಿತಿರುತ್ತಾನೆ. ಆಗ ಪೂಜಕನು ಆ ಪೂಜ್ಯನಿಗೆ ಅಭಿಮುಖನಾಗಿದ್ದರೆ ಅವನಿಗೆ ಅದೇ ಪೂರ್ವದಿಕ್ಕು. ದೇಶ-ಕಾಲ ಇವುಗಳನ್ನು ಅರಿತಿರುವ ವಿದ್ವಾಂಸರು ಶ್ರೋತೃವಿಗೆ ಶಾಸ್ತ್ರದಲ್ಲಿ ಇದೇ ನಿಯಮವನ್ನು ತಿಳಿಸಿರುವರು. ॥ ೧೯ ॥ ಯಾರು ವೇದ-ಶಾಸ್ತ್ರಗಳನ್ನು ಸ್ಪಷ್ಟವಾಗಿ ವ್ಯಾಖ್ಯಾನ ಮಾಡುವುದರಲ್ಲಿ ಸಮರ್ಥನೋ, ನಾನಾ ರೀತಿಯ ದೃಷ್ಟಾಂತಗಳನ್ನು ಕೊಡಬಲ್ಲನೋ, ವಿವೇಕಿ ಹಾಗೂ ನಿಸ್ಪೃಹನೋ ಅಂತಹ ವಿರಕ್ತ, ವಿಷ್ಣುಭಕ್ತ ಬ್ರಾಹ್ಮಣನನ್ನು ಪ್ರವಚನ ಕಾರನನ್ನಾಗಿಸಬೇಕು. ॥ ೨೦ ॥ ಪಂಡಿತರೇ ಆಗಿದ್ದು ಯಾರು ಅನೇಕ ಧರ್ಮಗಳ ಬಗ್ಗೆ ಭ್ರಮೆಯನ್ನು ಹೊಂದಿರುವರೋ, ಸ್ತ್ರೀಲಂಪಟರಾಗಿರುವರೋ ಪಾಷಂಡ ಮತವನ್ನು ವಾದಿಸುತ್ತಾರೋ ಅಂತಹವರನ್ನು ಶ್ರೀಮದ್ಭಾಗವತದ ಪ್ರವಚನಕ್ಕೆ ನಿಯೋಜಿಸಬಾರದು. ॥ ೨೧ ॥ ಪ್ರವಚನಕಾರನ ಬಳಿಯಲ್ಲೇ ಅವನಿಗೆ ಸಹಾಯಕನಾದ ಅಂತಹವನೇ ಇನ್ನೊಬ್ಬ ವಿದ್ವಾಂಸನನ್ನು ನೇಮಿಸಬೇಕು. ಅವನೂ ಕೂಡ ಎಲ್ಲ ಬಗೆಯ ಸಂಶಯಗಳನ್ನು ಹೋಗಲಾಡಿಸುವುದರಲ್ಲಿ ಸಮರ್ಥನಾಗಿದ್ದು ಜನರಿಗೆ ತಿಳಿಸುವುದರಲ್ಲಿ ಕುಶಲನಾಗಿರಬೇಕು. ॥ ೨೨ ॥

ಕಥೆಯನ್ನು ಪ್ರಾರಂಭಿಸುವ ಹಿಂದಿನ ದಿನವೇ ವ್ರತಗ್ರಹಣಕ್ಕಾಗಿ ಪ್ರವಚನಕಾರನು ಕ್ಷೌರಮಾಡಿಸಿಕೊಳ್ಳಬೇಕು. ಅರುಣೋದಯ ಸಮಯದಲ್ಲಿ ಶೌಚಾನಂತರ ಸ್ನಾನಮಾಡಬೇಕು. ॥ ೨೩ ॥ ಆತನು ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಪ್ರಯತ್ನಪೂರ್ವಕ ಸಂಕ್ಷೇಪವಾಗಿ ಮುಗಿಸಿಕೊಂಡು, ಕಥೆಗೆ ಒದಗಬಹುದಾದ ವಿಘ್ನಗಳ ಪರಿಹಾರಕ್ಕಾಗಿ ಗಣಪತಿಯನ್ನು ಪೂಜಿಸಬೇಕು. ॥ ೨೪ ॥ ಅನಂತರ ಪಿತೃಗಳಿಗೆ ತರ್ಪಣ ಕೊಟ್ಟು ಹಿಂದಿನ ಪಾಪಗಳ ಶುದ್ಧಿಗಾಗಿ ಪ್ರಾಯಶ್ಚಿತ್ತಮಾಡಿಕೊಳ್ಳಬೇಕು. ಒಂದು ಮಂಡಲವನ್ನು ರಚಿಸಿ ಅದರಲ್ಲಿ ಶ್ರೀಹರಿಯನ್ನು ಪ್ರತಿಷ್ಠಾಪಿಸಬೇಕು. ॥ ೨೫ ॥ ಮತ್ತೆ ಭಗವಾನ್ ಶ್ರೀಕೃಷ್ಣನನ್ನು ಕುರಿತು ಮಂತ್ರೋಚ್ಚಾರಣಪೂರ್ವಕ ಷೋಡಶೋಪಚಾರ ಪೂಜೆಯನ್ನು ಆಚರಿಸಿ, ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಹೀಗೆ ಪ್ರಾರ್ಥಿಸಬೇಕು. ॥ ೨೬ ॥ ಓ ಕರುಣಾನಿಧೇ ! ಸಂಸಾರ ಸಾಗರದಲ್ಲಿ ಮುಳುಗಿರುವ ದೀನನು ನಾನು. ಕರ್ಮಗಳ ಮೋಹವೆಂಬ ಮೊಸಳೆಯು ನನ್ನನ್ನು ಹಿಡಿದುಕೊಂಡಿದೆ. ನೀನು ಈ ಭವಾರ್ಣವದಿಂದ ನನ್ನನ್ನು ಪಾರು ಮಾಡು. ॥ ೨೭ ॥ ಬಳಿಕ ಶ್ರೀಮದ್ಭಾಗವತಕ್ಕೂ ಧೂಪ-ದೀಪಾದಿ ಪೂಜಾಸಾಮಗ್ರಿಗಳಿಂದ ಅತ್ಯಂತ ಉತ್ಸಾಹ ಪ್ರೀತಿಪೂರ್ವಕವಾಗಿ ವಿಧಿಪೂರ್ವಕ ಪೂಜೆಮಾಡಬೇಕು. ॥ ೨೮ ॥ ಮತ್ತೆ ಆ ಪುಸ್ತಕದ ಮುಂದೆ ತೆಂಗಿನ ಕಾಯಿಯನ್ನು ಇಟ್ಟು ನಮಸ್ಕರಿಸಿ ಪ್ರಸನ್ನವಾದ ಮನಸ್ಸಿನಿಂದ ಹೀಗೆ ಸ್ತುತಿಸಬೇಕು. ॥ ೨೯ ॥ ಹೇ ನಾಥಾ ! ಶ್ರೀಮದ್ಭಾಗವತ ರೂಪದಲ್ಲಿರುವ ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನಾಗಿ ನೀನೇ ಬೆಳಗುತ್ತಿದ್ದೀಯೆ. ಭಗಸಾಗರದಿಂದ ಪಾರಾಗಲು ನಿನ್ನಲ್ಲಿ ಶರಣಾಗಿದ್ದೇನೆ. ॥ ೩೦ ॥ ನನ್ನ ಈ ಮನೋರಥವನ್ನು ಯಾವ ವಿಘ್ನಬಾಧೆಗಳು ಬಾರದಂತೆ ಸಾಂಗೋಪಾಂಗವಾಗಿ ನೆರವೇರಿಸು. ಕೇಶವಾ ! ನಾನು ನಿನ್ನ ದಾಸನಾಗಿರುವೆನು. ॥ ೩೧ ॥

ಏವಂ ದೀನವಚಃ ಪ್ರೋಚ್ಯ ವಕ್ತಾರಂ ಚಾಥ ಪೂಜಯೇತ್ ।
ಸಂಭೂಷ್ಯ ವಸ್ತ್ರಭೂಷಾಭಿಃ ಪೂಜಾಂತೇ ತಂ ಚ ಸಂಸ್ತವೇತ್ ॥ ೩೨ ॥

ಶುಕರೂಪ ಪ್ರಬೋಧಜ್ಞ ಸರ್ವಶಾಸ್ತ್ರ ವಿಶಾರದ ।
ಏತತ್ಕಥಾಪ್ರಕಾಶೇನ ಮದಜ್ಞಾನಂ ವಿನಾಶಯ ॥ ೩೩ ॥

ತದಗ್ರೇ ನಿಯಮಃ ಪಶ್ಚಾತ್ಕರ್ತವ್ಯಃ ಶ್ರೇಯಸೇ ಮುದಾ ।
ಸಪ್ತರಾತ್ರಂ ಯಥಾಶಕ್ತ್ಯಾ ಧಾರಣೀಯಃ ಸ ಏವ ಹಿ ॥ ೩೪ ॥

ವರಣಂ ಪಂಚವಿಪ್ರಾಣಾಂ ಕಥಾಭಂಗನಿವೃತ್ತಯೇ ।
ಕರ್ತವ್ಯಂ ತೈರ್ಹರೇರ್ಜಾಪ್ಯಂ ದ್ವಾದಶಾಕ್ಷರವಿದ್ಯಯಾ ॥ ೩೫ ॥

ಬ್ರಾಹ್ಮಣಾನ್ ವೈಷ್ಣವಾಂಶ್ಚಾನ್ಯಾಂಸ್ತಥಾ ಕೀರ್ತನಕಾರಿಣಃ ।
ನತ್ವಾ ಸಂಪೂಜ್ಯ ದತ್ತಾಜ್ಞಃ ಸ್ವಯಮಾಸನಮಾವಿಶೇತ್ ॥ ೩೬ ॥

ಲೋಕವಿತ್ತಧನಾಗಾರಪುತ್ರಚಿಂತಾಂ ವ್ಯುದಸ್ಯ ಚ ।
ಕಥಾಚಿತ್ತಃ ಶುದ್ಧಮತಿಃ ಸ ಲಭೇತ್ಫಲಮುತ್ತಮಮ್ ॥ ೩೭ ॥

ಆಸೂರ್ಯೋದಯಮಾರಭ್ಯ ಸಾರ್ಧತ್ರಿಪ್ರಹರಾಂತಕಮ್ ।
ವಾಚನೀಯಾ ಕಥಾ ಸಮ್ಯಗ್ಧೀರಕಂಠಂ ಸುಧೀಮತಾ ॥ ೩೮ ॥

ಕಥಾವಿರಾಮಃ ಕರ್ತವ್ಯೋ ಮಧ್ಯಾಹ್ನೇ ಘಟಿಕಾದ್ವಯಮ್ ।
ತತ್ಕಥಾಮನು ಕಾರ್ಯಂ ವೈ ಕೀರ್ತನಂ ವೈಷ್ಣವೈಸ್ತದಾ ॥ ೩೯ ॥

ಮಲಮೂತ್ರಜಯಾರ್ಥಂ ಹಿ ಲಘ್ವಾಹಾರಃ ಸುಖಾವಹಃ ।
ಹವಿಷ್ಯಾನ್ನೇನ ಕರ್ತವ್ಯೋ ಹ್ಯೇಕವಾರಂ ಕಥಾರ್ಥಿನಾ ॥ ೪೦ ॥

ಉಪೋಷ್ಯ ಸಪ್ತರಾತ್ರಂ ವೈ ಶಕ್ತಿಶ್ಚೇಚ್ಛೃಣುಯಾತ್ತದಾ ।
ಘೃತಪಾನಂ ಪಯಃಪಾನಂ ಕೃತ್ವಾ ವೈ ಶೃಣುಯಾತ್ಸುಖಮ್ ॥ ೪೧ ॥

ಫಲಾಹಾರೇಣ ವಾ ಭಾವ್ಯಮೇಕಭುಕ್ತೇನ ವಾ ಪುನಃ ।
ಸುಖಸಾಧ್ಯಂ ಭವೇದ್ಯತ್ತು ಕರ್ತವ್ಯಂ ಶ್ರವಣಾಯ ತತ್ ॥ ೪೨ ॥

ಭೋಜನಂ ತು ವರಂ ಮನ್ಯೇ ಕಥಾಶ್ರವಣಕಾರಕಮ್ ।
ನೋಪವಾಸೋ ವರಃ ಪ್ರೋಕ್ತಃ ಕಥಾವಿಘ್ನಕರೋ ಯದಿ ॥ ೪೩ ॥

ಸಪ್ತಾಹವ್ರತಿನಾಂ ಪುಂಸಾಂ ನಿಯಮಾನ್ ಶೃಣು ನಾರದ ।
ವಿಷ್ಣುದೀಕ್ಷಾವಿಹೀನಾನಾಂ ನಾಧಿಕಾರಃ ಕಥಾಶ್ರವೇ ॥ ೪೪ ॥

ಹೀಗೆ ದೈನ್ಯದ ಮಾತುಗಳನ್ನು ಹೇಳಿ ಮತ್ತೆ ಪ್ರವಚನಕಾರನನ್ನು ಪೂಜಿಸಬೇಕು. ಆತನನ್ನು ಸುಂದರ ವಸ್ತ್ರ - ಆಭರಣ ಮುಂತಾದವುಗಳಿಂದ ಅಲಂಕರಿಸಿ ಪೂಜೆಮಾಡಿ ಕೊನೆಯಲ್ಲಿ ಆತನನ್ನು ಸ್ತುತಿಸಬೇಕು. ॥ ೩೨ ॥

'ಎಲೈ ಶುಕರೂಪಿಯಾದ ಜ್ಞಾನ ಶ್ರೇಷ್ಠರೇ! ನೀವು ಉಪದೇಶ ಮಾಡುವುದರಲ್ಲಿ ಕುಶಲರಾಗಿದ್ದು, ಸರ್ವ ಶಾಸ್ತ್ರಗಳಲ್ಲಿ ಪಾರಂಗತರಾಗಿರುವಿರಿ. ದಯಮಾಡಿ ಈ ಕಥೆಯನ್ನು ಪ್ರಕಾಶಪಡಿಸಿ ನನ್ನ ಅಜ್ಞಾನವನ್ನು ದೂರಗೊಳಿಸಿರಿ' ॥ ೩೩ ॥ ಆತನ ಮುಂದೆ ಮತ್ತೆ ತನ್ನ ಶ್ರೇಯಸ್ಸಿಗಾಗಿ ಪ್ರಸನ್ನತೆಯಿಂದ ನಿಯಮ-ಗ್ರಹಣಮಾಡಿ, ಏಳು ದಿನಗಳವರೆಗೆ ಯಥಾಶಕ್ತಿಯಾಗಿ ಅದನ್ನು ಪಾಲಿಸಬೇಕು. ॥೩೪ ॥ ಕಥೆಯಲ್ಲಿ ವಿಘ್ನವು ಉಂಟಾಗದಿರಲಿ ಎಂದು ಐದು ಮಂದಿ ಬ್ರಾಹ್ಮಣರನ್ನು ವರಣಮಾಡಬೇಕು. ಅವರು ದ್ವಾದಶಾಕ್ಷರ ಮಹಾಮಂತ್ರದ ಮೂಲಕ ಭಗವಂತನ ನಾಮಗಳನ್ನು ಜಪಿಸಬೇಕು. ॥ ೩೫ ॥ ವಿಷ್ಣುಭಕ್ತರಾದ ಬ್ರಾಹ್ಮಣರನ್ನು ಇತರ ಸಂಕೀರ್ತನ ಕಾರರನ್ನು ನಮಸ್ಕರಿಸಿ, ಪೂಜಿಸಿ, ಅವರ ಅನುಮತಿಯನ್ನು ಪಡೆದು ಸ್ವತಃ ಆಸನದ ಮೇಲೆ ಕುಳಿತುಕೊಳ್ಳಬೇಕು. ॥ ೩೬ ॥ ಲೋಕಗಳು, ಸಂಪತ್ತು, ಧನ, ಮನೆ, ಪುತ್ರಾದಿಗಳ ಚಿಂತೆಯನ್ನು ಬಿಟ್ಟು ಶುದ್ಧಚಿತ್ತದಿಂದ ಕೇವಲ ಕಥೆಯಲ್ಲೇ ಲಕ್ಷ್ಯವಿಡುವವನಿಗೆ ಇದರ ಶ್ರವಣದ ಉತ್ತಮ ಫಲವು ದೊರೆಯುತ್ತದೆ. ॥ ೩೭ ॥ ಧೀಮಂತನಾದ ಪ್ರವಚನಕಾರನು ಸೂರ್ಯೋದಯದಿಂದ ಕಥೆಯನ್ನು ಪ್ರಾರಂಭಿಸಿ ಮೂರೂವರೆ ಪ್ರಹರದವರೆಗೆ ಮಧ್ಯಮ ಸ್ವರದಿಂದ ಚೆನ್ನಾಗಿ ಕಥಾವಾಚನ ಮಾಡಬೇಕು. ॥ ೩೮ ॥ ಮಧ್ಯಾಹ್ನದಲ್ಲಿ ಎರಡು ಗಳಿಗೆಯವರೆಗೆ ವಾಚನವನ್ನು ನಿಲ್ಲಿಸಬೇಕು. ಆ ಸಮಯದಲ್ಲಿ ವಿಷ್ಣು ಭಕ್ತರು ಕಥಾ ಪ್ರಸಂಗಕ್ಕನುಸಾರ ಭಗವಂತನ ಗುಣಗಳನ್ನು ಕೀರ್ತನೆ ಮಾಡುತ್ತಿರಬೇಕು. ವ್ಯರ್ಥವಾದ ಮಾತುಗಳನ್ನು ಆಡಬಾರದು. ॥ ೩೯ ॥ ಕಥಾಶ್ರವಣದ ಕಾಲದಲ್ಲಿ ಮಲ-ಮೂತ್ರಗಳ ವೇಗವನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕಾಗಿ ಅಲ್ಪಾಹಾರ ಸುಖಕರವಾಗಿರುತ್ತದೆ. ಇದಕ್ಕಾಗಿ ಶ್ರೋತೃವು ಒಪ್ಪೊತ್ತು ಹವಿಷ್ಯಾನ್ನವನ್ನು ಸ್ವೀಕರಿಸಬೇಕು. ॥ ೪೦ ॥ ಶಕ್ತಿಯಿದ್ದರೆ ಏಳು ದಿನಗಳೂ ಉಪವಾಸವಿದ್ದು ಕಥಾ ಶ್ರವಣ ಮಾಡಬೇಕು. ಅಥವಾ ಕೇವಲ ತುಪ್ಪವನ್ನೋ, ಹಾಲನ್ನೋ ಕುಡಿದು ಸುಖವಾಗಿ ಕಥೆಯನ್ನು ಶ್ರವಣಿಸಬೇಕು. ॥ ೪೧ ॥ ಅಥವಾ ಫಲಾಹಾರವೋ, ಒಪ್ಪೊತ್ತು ಭೋಜನವೋ ಮಾಡಲಿ. ಈ ಆಹಾರ ನಿಯಮದಲ್ಲಿ ಸುಲಭವಾಗಿ ಅನುಸರಿಸಲು ಸಾಧ್ಯವಾಗುವುದನ್ನು ಅನುಸರಿಸುತ್ತಾ ಕಥಾ ಶ್ರವಣಮಾಡಬೇಕು. ॥ ೪೨ ॥ ಉಪವಾಸಕ್ಕಿಂತ ಒಪ್ಪೊತ್ತು ಭೋಜನ ಮಾಡುವುದೇ ಉತ್ತಮವೆಂದು ನಾನು ತಿಳಿಯುತ್ತೇನೆ. ಅದು ಕಥಾ ಶ್ರವಣದಲ್ಲಿ ಸಹಾಯಕವಾದೀತು. ಉಪವಾಸದಿಂದ ಶ್ರವಣದಲ್ಲಿ ಅಡ್ಡಿಯುಂಟಾದರೆ ಆ ಉಪವಾಸವು ಖಂಡಿತವಾಗಿ ಉತ್ತಮವಲ್ಲ. ॥ ೪೩ ॥

ನಾರದರೇ! ನಿಯಮದಿಂದ ಸಪ್ತಾಹ ಶ್ರವಣ ಮಾಡುವವರು ಅನುಸರಿಸಬೇಕಾದ ನಿಯಮಗಳನ್ನು ಕೇಳಿರಿ. ವಿಷ್ಣುವಿನಲ್ಲಿ ಏಕಭಕ್ತಿಯ ದೀಕ್ಷೆಯಿಲ್ಲದವನಿಗೆ ಈ ಕಥಾ ಶ್ರವಣದಲ್ಲಿ ಅಧಿಕಾರವಿಲ್ಲ. ॥ ೪೪ ॥ ಕಥಾವ್ರತಿಯು ಬ್ರಹ್ಮಚರ್ಯದಿಂದ ಇರಬೇಕು. ನೆಲದ

ಬ್ರಹ್ಮಚರ್ಯಮಧಃಸುಪ್ತಿಃ ಪತ್ರಾವಲ್ಯಾಂ ಚ ಭೋಜನಮ್ ।
ಕಥಾಸಮಾಪ್ತೌ ಭುಕ್ತಿಂ ಚ ಕುರ್ಯಾನ್ನಿತ್ಯಂ ಕಥಾವ್ರತೀ ॥ ೪೫ ॥

ದ್ವಿದಲಂ ಮಧು ತೈಲಂ ಚ ಗರಿಷ್ಠಾನ್ನಂ ತಥೈವ ಚ ।
ಭಾವದುಷ್ಟಂ ಪರ್ಯುಷಿತಂ ಜಹ್ಯಾನ್ನಿತ್ಯಂ ಕಥಾವ್ರತೀ ॥ ೪೬ ॥

ಕಾಮಂ ಕ್ರೋಧಂ ಮದಂ ಮಾನಂ ಮತ್ಸರಂ ಲೋಭಮೇವ ಚ ।
ದಂಭಂ ಮೋಹಂ ತಥಾ ದ್ವೇಷಂ ದೂರಯೇಚ್ಚ ಕಥಾವ್ರತೀ ॥ ೪೭ ॥

ವೇದವೈಷ್ಣವವಿಪ್ರಾಣಾಂ ಗುರುಗೋವ್ರತಿನಾಂ ತಥಾ ।
ಸ್ತ್ರೀರಾಜಮಹತಾಂ ನಿಂದಾಂ ವರ್ಜಯೇದ್ಯಃ ಕಥಾವ್ರತೀ ॥ ೪೮ ॥

ರಜಸ್ವಲಾಂತ್ಯಜಮ್ಲೇಚ್ಛಪತಿತವ್ರಾತ್ಯಕೈಸ್ತಥಾ ।
ದ್ವಿಜದ್ವಿಡ್‌ವೇದಬಾಹ್ಯೈಶ್ಚ ನ ವದೇದ್ಯಃ ಕಥಾವ್ರತೀ ॥ ೪೯ ॥

ಸತ್ಯಂ ಶೌಚಂ ದಯಾ ಮೌನಮಾರ್ಜವಂ ವಿನಯಂ ತಥಾ ।
ಉದಾರಮಾನಸಂ ತದ್ವದೇವಂ ಕುರ್ಯಾತ್ಕಥಾವ್ರತೀ ॥ ೫೦ ॥

ದರಿದ್ರಶ್ಚ ಕ್ಷಯೀ ರೋಗೀ ನಿರ್ಭಾಗ್ಯಃ ಪಾಪಕರ್ಮವಾನ್ ।
ಅನಪತ್ಯೋ ಮೋಕ್ಷಕಾಮಃ ಶೃಣುಯಾಚ್ಚ ಕಥಾಮಿಮಾಮ್ ॥ ೫೧ ॥

ಅಪುಷ್ಪಾ ಕಾಕವಂಧ್ಯಾ ಚ ವಂಧ್ಯಾ ಯಾ ಚ ಮೃತಾರ್ಭಕಾ ।
ಸ್ರವದ್ಗರ್ಭಾ ಚ ಯಾ ನಾರೀ ತಯಾ ಶ್ರಾವ್ಯಾ ಪ್ರಯತ್ನತಃ ॥ ೫೨ ॥

ಏತೇಷು ವಿಧಿನಾ ಶ್ರಾವೇ ತದಕ್ಷಯಕರಂ ಭವೇತ್ ।
ಅತ್ಯುತ್ತಮಾ ಕಥಾ ದಿವ್ಯಾ ಕೋಟಿಯಜ್ಞಫಲಪ್ರದಾ ॥ ೫೩ ॥

ಏವಂ ಕೃತ್ವಾ ವ್ರತವಿಧಿಮುದ್ಯಾಪನಮಥಾಚರೇತ್ ।
ಜನ್ಮಾಷ್ಟಮೀವ್ರತಮಿವ ಕರ್ತವ್ಯಂ ಫಲಕಾಂಕ್ಷಿಭಿಃ ॥ ೫೪ ॥

ಅಕಿಂಚನೇಷು ಭಕ್ತೇಷು ಪ್ರಾಯೋ ನೋದ್ಯಾಪನಾಗ್ರಹಃ ।
ಶ್ರವಣೇನೈವ ಪೂತಾಸ್ತೇ ನಿಷ್ಕಾಮಾ ವೈಷ್ಣವಾ ಯತಃ ॥ ೫೫ ॥

ಏವಂ ನಗಾಹಯಜ್ಞೇಽಸ್ಮಿನ್ ಸಮಾಪ್ತೇ ಶ್ರೋತೃಭಿಸ್ತದಾ ।
ಪುಸ್ತಕಸ್ಯ ಚ ವಕ್ತುಶ್ಚ ಪೂಜಾ ಕಾರ್ಯಾತಿಭಕ್ತಿತಃ ॥ ೫೬ ॥

ಪ್ರಸಾದತುಲಸೀಮಾಲಾ ಶ್ರೋತೃಭ್ಯಶ್ಚಾಥ ದೀಯತಾಮ್ ।
ಮೃದಂಗತಾಲಲಲಿತಂ ಕರ್ತವ್ಯಂ ಕೀರ್ತನಂ ತತಃ ॥ ೫೭ ॥

ಜಯಶಬ್ದಂ ನಮಃಶಬ್ದಂ ಶಂಖಶಬ್ದಂ ಚ ಕಾರಯೇತ್ ।
ವಿಪ್ರೇಭ್ಯೋ ಯಾಚಕೇಭ್ಯಶ್ಚ ವಿತ್ತಮನ್ನಂ ಚ ದೀಯತಾಮ್ ॥ ೫೮ ॥

ಮೇಲೆ ಮಲಗಬೇಕು. ಪ್ರತಿದಿನವು ಕಥಾ ಸಮಾಪ್ತವಾದ ಮೇಲೆಯೇ ಎಲೆಯಲ್ಲಿ ಊಟ ಮಾಡಬೇಕು. ॥ ೪೫ ॥ ಅವನು ದ್ವಿದಳಧಾನ್ಯ, ಜೇನು, ತುಪ್ಪ, ಎಣ್ಣೆ, ಗರಿಷ್ಠವಾದ ಆಹಾರ, ಭಾವದುಷ್ಟ ಪದಾರ್ಥಗಳು ಹಾಗೂ ಹಳಸಿದ ಅನ್ನವನ್ನು ಸದಾ ತ್ಯಾಗ ಮಾಡಬೇಕು. ॥ ೪೬ ॥ ಕಾಮ, ಕ್ರೋಧ, ಮದ, ಮಾನ, ಮತ್ಸರ, ಲೋಭ, ಮೋಹ, ಡಾಂಭಿಕತೆ, ದ್ವೇಷ ಇವುಗಳನ್ನು ದೂರವಾಗಿಸಬೇಕು. ॥ ೪೭ ॥ ವೇದಗಳು, ವಿಷ್ಣುಭಕ್ತರು, ವಿಪ್ರರು, ಗುರುಭಕ್ತರು, ಗೋಸೇವಕರು, ಸ್ತ್ರೀಯರು, ರಾಜರು, ಮಹಾಪುರುಷರು ಇವರ ನಿಂದೆಯನ್ನು ಅವರು ಸರ್ವಥಾ ತ್ಯಜಿಸಬೇಕು. ॥ ೪೮ ॥ ರಜಸ್ವಲೆಯರು, ಚಾಂಡಾಲರು, ಮ್ಲೇಚ್ಛರು, ಪತಿತರು, ವ್ರತಭ್ರಷ್ಟರು, ಬ್ರಹ್ಮದ್ವೇಷಿಗಳು, ವೈದಿಕ ಮತಕ್ಕೆ ಹೊರಗಾದವರು ಇಂತಹವರೊಡನೆ ಮಾತನಾಡಬಾರದು. ॥ ೪೯ ॥ ಸದಾಕಾಲ ಸತ್ಯ, ಶೌಚ, ದಯೆ, ಮೌನ, ಸರಳತೆ ವಿನಯ, ಔದಾರ್ಯ ಇವುಗಳಿಂದ ವರ್ತಿಸಬೇಕು. ॥ ೫೦ ॥ ಬಡವನು, ಕ್ಷಯವೇ ಮೊದಲಾದ ರೋಗಗಳಿಂದ ಪೀಡಿತನಾದವನು, ಭಾಗ್ಯಹೀನ, ಪಾಪ ಕರ್ಮಿ, ಸಂತಾನಹೀನ, ಮುಮುಕ್ಷು, ಇವರುಗಳೂ ಕೂಡ ಈ ಕಥೆಯನ್ನು ಕೇಳಬೇಕು. ॥ ೫೧ ॥ ರಜೋದರ್ಶನ ನಿಂತು ಹೋದ ಸ್ತ್ರೀಯು, ಹುಟ್ಟಿದೊಡನೆಯೇ ಸಾಯುವ ಮಕ್ಕಳುಳ್ಳವಳು, ಗರ್ಭಸ್ರಾವ ಆಗುವವಳು, ಇವರೂ ಕೂಡ ಪ್ರಯತ್ನಪೂರ್ವಕ ಕಥೆಯನ್ನು ಕೇಳಬೇಕು. ॥ ೫೨ ॥ ಇವರೆಲ್ಲರೂ ವಿಧಿಪೂರ್ವಕ ಕಥಾ ಶ್ರವಣ ಮಾಡಿದರೆ ಅವರಿಗೆ ಅಕ್ಷಯವಾದ ಫಲವು ದೊರೆಯುತ್ತದೆ. ಈ ಅತ್ಯುತ್ತಮವಾದ ದಿವ್ಯಕಥೆಯು ಕೋಟಿಯಜ್ಞಗಳ ಫಲವನ್ನೀಯುತ್ತದೆ. ॥ ೫೩ ॥

ಈ ರೀತಿಯಲ್ಲಿ ವ್ರತದ ವಿಧಿಗಳನ್ನು ಪಾಲಿಸಿ ಕೊನೆಗೆ ವ್ರತದ ಉದ್ಯಾಪನೆಯನ್ನು ಮಾಡಬೇಕು. ಫಲಾಪೇಕ್ಷೆಯುಳ್ಳವರು ಜನ್ಮಾಷ್ಟಮಿ ವ್ರತದಂತೆ ಈ ಕಥಾವ್ರತದ ಉದ್ಯಾಪನೆ ಮಾಡಲಿ. ॥ ೫೪ ॥ ಆದರೆ ಫಲಾಪೇಕ್ಷೆಯಿಲ್ಲದ ವಿರಕ್ತ ಭಕ್ತರಿಗೆ ಈ ಉದ್ಯಾಪನೆಯು ಕಡ್ಡಾಯವಿಲ್ಲ. ಅವರು ಕಥಾ ಶ್ರವಣದಿಂದಲೇ ಪವಿತ್ರರಾಗಿರುತ್ತಾರೆ. ಏಕೆಂದರೆ, ಅವರು ನಿಷ್ಕಾಮಿಗಳಾದ ವಿಷ್ಣುಭಕ್ತರು. ॥ ೫೫ ॥

ಹೀಗೆ ಸಪ್ತಾಹಯಜ್ಞವು ಸಮಾಪ್ತವಾದಾಗ ಶ್ರೋತೃಗಳು ಶ್ರೀಮದ್ಭಾಗವತ ಪುಸ್ತಕವನ್ನು, ಪ್ರವಚನಕಾರರನ್ನೂ ಅತ್ಯಂತ ಭಕ್ತಿಯಿಂದ ಪೂಜಿಸಬೇಕು. ॥ ೫೬ ॥ ಅನಂತರ ಪ್ರವಚನಕಾರನು ಶ್ರೋತೃಗಳಿಗೆ ಪ್ರಸಾದ, ತುಳಸೀ, ಪುಷ್ಪಮಾಲೆ ಮುಂತಾದವುಗಳನ್ನು ಅನುಗ್ರಹಿಸಬೇಕು. ಎಲ್ಲರೂ ತಾಳ-ಮೃದಂಗಗಳೊಡನೆ ಇಂಪಾದ ಧ್ವನಿಯಿಂದ ಸಂಕೀರ್ತನೆ ಮಾಡಬೇಕು. ॥ ೫೭ ॥ ಜಯ ಜಯ ನಮೋ ನಮಃ ಎಂಬ ಧ್ವನಿಗಳೊಡನೆ ಶಂಖಧ್ವನಿಗೈದು ಬ್ರಾಹ್ಮಣರಿಗೂ, ಯಾಚಕರಿಗೂ ಅನ್ನದಾನ ಮಾಡಬೇಕು. ॥ ೫೮ ॥ ಶ್ರೋತೃವು ವಿರಕ್ತನಾಗಿದ್ದರೆ ಮರುದಿನ ಕರ್ಮಶಾಂತಿಗಾಗಿ ಗೀತಾ ಪಾರಾಯಣ ಮಾಡಬೇಕು. ಗೃಹಸ್ಥನಾಗಿದ್ದರೆ

ವಿರಕ್ತಶ್ಚೇದ್ಭವೇಚ್ಛ್ರೋತಾ ಗೀತಾ ವಾಚ್ಯಾ ಪರೇಽಹನಿ ।
ಗೃಹಸ್ಥಶ್ಚೇತ್ತದಾ ಹೋಮಃ ಕರ್ತವ್ಯಃ ಕರ್ಮಶಾಂತಯೇ ॥ ೫೯ ॥

ಪ್ರತಿಶ್ಲೋಕಂ ತು ಜುಹುಯಾದ್ವಿಧಿನಾ ದಶಮಸ್ಯ ಚ ।
ಪಾಯಸಂ ಮಧು ಸರ್ಪಿಶ್ಚ ತಿಲಾನ್ನಾದಿಕಸಂಯುತಮ್ ॥ ೬೦ ॥

ಅಥವಾ ಹವನಂ ಕುರ್ಯಾದ್ಗಾಯತ್ರ್ಯಾ ಸುಸಮಾಹಿತಃ ।
ತನ್ಮಯತ್ವಾತ್ಪುರಾಣಸ್ಯ ಪರಮಸ್ಯ ಚ ತತ್ತ್ವತಃ ॥ ೬೧ ॥

ಹೋಮಾಶಕ್ತೌ ಬುಧೋ ಹೌಮ್ಯಂ ದದ್ಯಾತ್ತತ್ಫಲಸಿದ್ಧಯೇ ।
ನಾನಾಚ್ಛಿದ್ರನಿರೋಧಾರ್ಥಂ ನ್ಯೂನತಾಧಿಕತಾನಯೋಃ ॥ ೬೨ ॥

ದೋಷಯೋಃ ಪ್ರಶಮಾರ್ಥಂ ಚ ಪಠೇನ್ನಾಮಸಹಸ್ರಕಮ್ ।
ತೇನ ಸ್ಯಾತ್ಸಫಲಂ ಸರ್ವಂ ನಾಸ್ತ್ಯಸ್ಮಾದಧಿಕಂ ಯತಃ ॥ ೬೩ ॥

ದ್ವಾದಶ ಬ್ರಾಹ್ಮಣಾನ್ ಪಶ್ಚಾದ್ಭೋಜಯೇನ್ಮಧುಪಾಯಸೈಃ ।
ದದ್ಯಾತ್ಸುವರ್ಣಂ ಧೇನುಂ ಚ ವ್ರತಪೂರ್ಣತ್ವಹೇತವೇ ॥ ೬೪ ॥

ಶಕ್ತೌ ಪಲತ್ರಯಮಿತಂ ಸ್ವರ್ಣಸಿಂಹಂ ವಿಧಾಯ ಚ ।
ತತ್ರಾಸ್ಯ ಪುಸ್ತಕಂ ಸ್ಥಾಪ್ಯಂ ಲಿಖಿತಂ ಲಲಿತಾಕ್ಷರಮ್ ॥ ೬೫ ॥

ಸಂಪೂಜ್ಯಾವಾಹನಾದ್ಯೈಸ್ತದುಪಚಾರೈಃ ಸದಕ್ಷಿಣಮ್ ।
ವಸ್ತ್ರಭೂಷಣಗಂಧಾದ್ಯೈಃ ಪೂಜಿತಾಯ ಯತಾತ್ಮನೇ ॥ ೬೬ ॥

ಆಚಾರ್ಯಾಯ ಸುಧೀರ್ದತ್ತ್ವಾ ಮುಕ್ತಃ ಸ್ಯಾದ್ಭವಬಂಧನೈಃ ।
ಏವಂ ಕೃತೇ ವಿಧಾನೇ ಚ ಸರ್ವಪಾಪನಿವಾರಣೇ ॥ ೬೭ ॥

ಫಲದಂ ಸ್ಯಾತ್ಪುರಾಣಂ ತು ಶ್ರೀಮದ್ಭಾಗವತಂ ಶುಭಮ್ ।
ಧರ್ಮಕಾಮಾರ್ಥಮೋಕ್ಷಾಣಾಂ ಸಾಧನಂ ಸ್ಯಾನ್ನ ಸಂಶಯಃ ॥ ೬೮ ॥

ಕುಮಾರಾ ಊಚುಃ

ಇತಿ ತೇ ಕಥಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ।
ಶ್ರೀಮದ್ಭಾಗವತೇನೈವ ಭುಕ್ತಿಮುಕ್ತೀ ಕರೇ ಸ್ಥಿತೇ ॥ ೬೯ ॥

ಸೂತ ಉವಾಚ

ಇತ್ಯುಕ್ತ್ವಾ ತೇ ಮಹಾತ್ಮಾನಃ ಪ್ರೋಚುರ್ಭಾಗವತೀಂ ಕಥಾಮ್ ।
ಸರ್ವಪಾಪಹರಾಂ ಪುಣ್ಯಾಂ ಭುಕ್ತಿಮುಕ್ತಿಪ್ರದಾಯಿನೀಮ್ ॥ ೭೦ ॥

ಶೃಣ್ವತಾಂ ಸರ್ವಭೂತಾನಾಂ ಸಪ್ತಾಹಂ ನಿಯತಾತ್ಮನಾಮ್ ।
ಯಥಾವಿಧಿ ತತೋ ದೇವಂ ತುಷ್ಟುವುಃ ಪುರುಷೋತ್ತಮಮ್ ॥ ೭೧ ॥

ಹೋಮಮಾಡಬೇಕು. ॥ ೫೯ ॥ ಆ ಹೋಮದಲ್ಲಿ ದಶಮ ಸ್ಕಂಧದ ಒಂದೊಂದು ಶ್ಲೋಕವನ್ನು ಪಠಿಸಿ ವಿಧಿಪೂರ್ವಕವಾಗಿ ಪಾಯಸ, ಜೇನು, ತುಪ್ಪ, ಎಳ್ಳು, ಅನ್ನ ಇತ್ಯಾದಿಗಳಿಂದ ಆಹುತಿ ಕೊಡಬೇಕು. ॥ ೬೦ ॥

ಅಥವಾ ಏಕಾಗ್ರಚಿತ್ತದಿಂದ ಗಾಯತ್ರೀ ಮಂತ್ರದ ಮೂಲಕ ಹೋಮಮಾಡಬೇಕು. ಏಕೆಂದರೆ ಈ ಶ್ರೀಮದ್ಭಾಗವತ ಮಹಾ-ಪುರಾಣವು ತಾತ್ತ್ವಿಕವಾಗಿ ಗಾಯತ್ರೀಸ್ವರೂಪವೇ ಆಗಿದೆ. ॥ ೬೧ ॥ ಹೋಮಮಾಡುವ ಶಕ್ತಿ ಇಲ್ಲದಿದ್ದರೆ ಹೋಮಫಲವನ್ನು ಪಡೆಯುವುದಕ್ಕಾಗಿ ಬ್ರಾಹ್ಮಣರಿಗೆ ಹೋಮದ್ರವ್ಯಗಳನ್ನು ದಾನ ಮಾಡಬೇಕು. ಸಪ್ತಾಹಶ್ರವಣದಲ್ಲಿ ಸಂಭವಿಸಬಹುದಾದ ಬಗೆ-ಬಗೆಯ ಛಿದ್ರಗಳನ್ನು ಪೂರಣಮಾಡಲು ಮತ್ತು ವಿಧಿಯಲ್ಲಿ ನ್ಯೂನಾಧಿಕ್ಯ ಆಗಿರುವ ದೋಷಗಳ ಶಾಂತಿಗಾಗಿ ವಿಷ್ಣುಸಹಸ್ರ-ನಾಮವನ್ನು ಪಾರಾಯಣಮಾಡಬೇಕು. ಅದರಿಂದ ಎಲ್ಲ ಕರ್ಮ-ಗಳು ಸಫಲವಾಗುತ್ತವೆ. ಏಕೆಂದರೆ, ಅದಕ್ಕಿಂತ ಶ್ರೇಷ್ಠವಾದ ಕರ್ಮವು ಮತ್ತೊಂದಿಲ್ಲ. ॥ ೬೨-೬೩ ॥

ಅನಂತರ ಹನ್ನೆರಡು ಮಂದಿ ಬ್ರಾಹ್ಮಣರಿಗೆ ಪಾಯಸ, ಜೇನು ತುಪ್ಪ ಮುಂತಾದವುಗಳಿಂದ ಭೋಜನ ಮಾಡಿಸಬೇಕು. ವ್ರತದ ಪೂರ್ತಿಗಾಗಿ ಗೋದಾನ-ಸುವರ್ಣದಾನಗಳನ್ನು ಮಾಡಬೇಕು. ॥ ೬೪ ॥ ಸಾಮರ್ಥ್ಯವಿದ್ದರೆ ಮೂರು ತೊಲ ಸುವರ್ಣದಿಂದ ಒಂದು ಸಿಂಹಾಸನವನ್ನು ಮಾಡಿಸಿ, ಅದರಲ್ಲಿ ಸುಂದರವಾದ ಅಕ್ಷರಗಳಿಂದ ಬರೆದ ಶ್ರೀಮದ್ಭಾಗವತ ಗ್ರಂಥವನ್ನಿಟ್ಟು, ಅದನ್ನು ಆವಾಹನಾದಿ ಷೋಡಶೋಪಚಾರ ಪೂಜೆಯನ್ನು ಸಲ್ಲಿಸಿ, ಜಿತೇಂದ್ರಿಯನಾದ ಆಚಾರ್ಯನನ್ನು ವಸ್ತ್ರ-ಭೂಷಣ-ಗಂಧಾದಿ ಗಳಿಂದ ಪೂಜಿಸಿ, ದಕ್ಷಿಣೆ ಸಹಿತ ಸಮರ್ಪಿಸಬೇಕು. ॥ ೬೫-೬೬ ॥ ಹೀಗೆ ದಾನಮಾಡಿದ ಬುದ್ಧಿವಂತನಾದ ದಾತೃವು ಭವಬಂಧನ ದಿಂದ ಬಿಡುಗಡೆ ಹೊಂದುವನು. ಈ ಸಪ್ತಾಹಪಾರಾಯಣದ ವಿಧಿಯು ಎಲ್ಲ ಪಾಪಗಳನ್ನು ಕಳೆಯುವಂತಹುದಾಗಿದೆ. ಇದನ್ನು ಈ ಪ್ರಕಾರ ಸರಿಯಾಗಿ ಪಾಲಿಸುವುದರಿಂದ ಈ ಮಂಗಲಮಯ ಭಾಗವತ ಪುರಾಣವು ಅಭೀಷ್ಟಫಲವನ್ನು ಕೊಡುತ್ತದೆ. ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಅನುಗ್ರಹಿಸುವ ಸಾಧನೆ ಇದು. ಇದರಲ್ಲಿ ಸಂದೇಹವೇ ಇಲ್ಲ. ॥ ೬೭-೬೮ ॥

**ಸನಕಾದಿಗಳು ಹೇಳುತ್ತಾರೆ** – ನಾರದರೇ! ಈ ರೀತಿಯಾಗಿ ಈ ಸಪ್ತಾಹವಿಧಿಯನ್ನು ನಿಮಗೆ ಪೂರ್ಣವಾಗಿ ತಿಳಿಸಿದ್ದೇವೆ. ಈಗ ಇನ್ನೇನು ಕೇಳ ಬಯಸುತ್ತಿರುವಿರಿ? ಈ ಶ್ರೀಮದ್ಭಾಗವತದಿಂದಲೇ ಭೋಗ ಮತ್ತು ಮೋಕ್ಷ ಎರಡೂ ಕೈವಶವಾಗುತ್ತವೆ. ॥ ೬೯ ॥

**ಸೂತ ಪುರಾಣಿಕರು ಹೇಳುತ್ತಾರೆ** – ಶೌನಕಾದಿಗಳೇ! ಹೀಗೆ ಹೇಳಿ ಮಹಾತ್ಮರಾದ ಸನಕಾದಿಗಳು ನಿಯಮಪೂರ್ವಕವಾಗಿ ಸರ್ವ ಪಾಪನಾಶಿನಿಯೂ, ಪರಮ ಪವಿತ್ರವೂ, ಭುಕ್ತಿ-ಮುಕ್ತಿ-ಪ್ರದಾಯಕವೂ ಆದ ಶ್ರೀಮದ್ಭಾಗವತ ಕಥೆಯನ್ನು ಸಪ್ತಾಹ ವಿಧಿ ಪೂರ್ವಕ ಪ್ರವಚನ ಮಾಡಿದರು. ಅನಂತರ ದೇವದೇವನಾದ ಪುರುಷೋತ್ತಮನನ್ನು ಯಥಾವಿಧಿಯಾಗಿ ಸ್ತೋತ್ರಮಾಡಿದರು. ॥ ೭೦-೭೧ ॥ ಕಥಾ ಶ್ರವಣಮಾಡಿದ ಕೊನೆಯಲ್ಲಿ ಜ್ಞಾನ, ಭಕ್ತಿ,

ತದಂತೇ ಜ್ಞಾನವೈರಾಗ್ಯಭಕ್ತೀನಾಂ ಪುಷ್ಟತಾ ಪರಾ ।
ತಾರುಣ್ಯಂ ಪರಮಂ ಚಾಭೂತ್ಸರ್ವಭೂತಮನೋಹರಮ್ ॥ ೭೨ ॥

ನಾರದಶ್ಚ ಕೃತಾರ್ಥೋಽಭೂತ್ಸಿದ್ಧೇ ಸ್ವೀಯೇ ಮನೋರಥೇ ।
ಪುಲಕೀಕೃತಸರ್ವಾಂಗಃ ಪರಮಾನಂದಸಂಭೃತಃ ॥ ೭೩ ॥

ಏವಂ ಕಥಾಂ ಸಮಾಕರ್ಣ್ಯ ನಾರದೋ ಭಗವತ್ಪ್ರಿಯಃ ।
ಪ್ರೇಮಗದ್ಗದಯಾ ವಾಚಾ ತಾನುವಾಚ ಕೃತಾಂಜಲಿಃ ॥ ೭೪ ॥

*ನಾರದ ಉವಾಚ*

ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಭವದ್ಭಿಃ ಕರುಣಾಪರೈಃ ।
ಅದ್ಯ ಮೇ ಭಗವಾಂಲ್ಲಬ್ಧಃ ಸರ್ವಪಾಪಹರೋ ಹರಿಃ ॥ ೭೫ ॥

ಶ್ರವಣಂ ಸರ್ವಧರ್ಮೇಭ್ಯೋ ವರಂ ಮನ್ಯೇ ತಪೋಧನಾಃ ।
ವೈಕುಂಠಸ್ಥೋ ಯತಃ ಕೃಷ್ಣಃ ಶ್ರವಣಾದ್ಯಸ್ಯ ಲಭ್ಯತೇ ॥ ೭೬ ॥

*ಸೂತ ಉವಾಚ*

ಏವಂ ಬ್ರುವತಿ ವೈ ತತ್ರ ನಾರದೇ ವೈಷ್ಣವೋತ್ತಮೇ ।
ಪರಿಭ್ರಮನ್ ಸಮಾಯಾತಃ ಶುಕೋ ಯೋಗೇಶ್ವರಸ್ತದಾ ॥ ೭೭ ॥

ತತ್ರಾಯಯೌ ಷೋಡಶವಾರ್ಷಿಕಸ್ತದಾ
ವ್ಯಾಸಾತ್ಮಜೋ ಜ್ಞಾನಮಹಾಬ್ಧಿಚಂದ್ರಮಾಃ ।
ಕಥಾವಸಾನೇ ನಿಜಲಾಭಪೂರ್ಣಃ
ಪ್ರೇಮ್ಣಾ ಪಠನ್ ಭಾಗವತಂ ಶನೈಃ ಶನೈಃ ॥ ೭೮ ॥

ದೃಷ್ಟ್ವಾ ಸದಸ್ಯಾಃ ಪರಮೋರುತೇಜಸಂ
ಸದ್ಯಃ ಸಮುತ್ಥಾಯ ದದುರ್ಮಹಾಸನಮ್ ।
ಪ್ರೀತ್ಯಾ ಸುರರ್ಷಿಸ್ತಮಪೂಜಯತ್ಸುಖಂ
ಸ್ಥಿತೋಽವದತ್ಸಂಶೃಣುತಾಮಲಾಂ ಗಿರಮ್ ॥ ೭೯ ॥

*ಶ್ರೀಶುಕ ಉವಾಚ*

ನಿಗಮಕಲ್ಪತರೋರ್ಗಲಿತಂ ಫಲಂ
ಶುಕ ಮುಖಾದಮೃತದ್ರವಸಂಯುತಮ್ ।
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿ ಭಾವುಕಾಃ ॥ ೮೦ ॥

ವೈರಾಗ್ಯಗಳು ಎಲ್ಲ ಭೂತಗಳಿಗೂ ಆಕರ್ಷಕವಾದ ಪುಷ್ಟಿಯನ್ನು ತಾರುಣ್ಯವನ್ನು ಪಡೆದು ಕಂಗೊಳಿಸಿದರು. ॥ ೭೨ ॥ ತನ್ನ ಮನೋರಥವು ಈಡೇರಿದ್ದರಿಂದ ನಾರದರೂ ಪರಮಾನಂದ ಪೂರ್ಣರಾಗಿ ಪುಳಕಿತರಾದರು. ॥ ೭೩ ॥ ಹೀಗೆ ಕಥೆಯನ್ನು ಶ್ರವಣಿಸಿದ ಭಗವಂತನ ಪ್ರಿಯರಾದ ನಾರದರು ಕೈ ಜೋಡಿಸಿಕೊಂಡು ಪ್ರೇಮ ಗದ್ಗದ ವಾಣಿಯಿಂದ ಸನಕಾದಿಗಳಲ್ಲಿ ಹೀಗೆ ವಿಜ್ಞಾಪಿಸಿಕೊಂಡರು. ॥ ೭೪ ॥

**ನಾರದರೆಂದರು** – ಓ ಮಹಾತ್ಮರೇ! ಕರುಣಾಪರರಾದ ನಿಮ್ಮಿಂದ ನಾನು ಧನ್ಯನಾದೆನು. ನಿಮ್ಮಿಂದ ಮಹಾನುಗ್ರಹವಾಯಿತು. ಈಗ ನನಗೆ ಸರ್ವಪಾಪಹರನಾದ ಭಗವಾನ್ ಶ್ರೀಹರಿಯ ಪ್ರಾಪ್ತಿಯಾಯಿತು. ॥ ೭೫ ॥ ತಪೋಧನರೇ! ಶ್ರೀಮದ್ಭಾಗವತ ಶ್ರವಣವನ್ನೇ ಸರ್ವಶ್ರೇಷ್ಠವಾದ ಧರ್ಮವೆಂದು ನಾನು ತಿಳಿಯುತ್ತೇನೆ. ಏಕೆಂದರೆ, ಇದರ ಶ್ರವಣದಿಂದ ವೈಕುಂಠ ನಿವಾಸಿಯಾದ ಶ್ರೀಕೃಷ್ಣನ ಪ್ರಾಪ್ತಿಯಾಗುತ್ತದೆ. ॥ ೭೬ ॥

**ಸೂತರು ಹೇಳುತ್ತಾರೆ** – ಶೌನಕರೇ! ವೈಷ್ಣವ ಶ್ರೇಷ್ಠರಾದ ನಾರದರು ಹೀಗೆ ಹೇಳುತ್ತಿರುವಂತೆಯೇ ಸುತ್ತಾಡುತ್ತಾ ಮಹಾಯೋಗೇಶ್ವರರಾದ ಶುಕಮಹಾಮುನಿಗಳು ಅಲ್ಲಿಗೆ ಬಂದರು. ॥ ೭೭ ॥ ಹದಿನಾರು ವಯಸ್ಸಿನ ಹರೆಯಲ್ಲಿದ್ದರೂ ಮಹಾಜ್ಞಾನಿಗಳಾಗಿ ಜ್ಞಾನರೂಪೀ ಮಹಾಸಮುದ್ರಕ್ಕೆ ಚಂದ್ರನಂತಿರುವ, ಆತ್ಮಲಾಭದಿಂದ ಕೃತಕೃತ್ಯರಾಗಿದ್ದ ಶ್ರೀವೇದವ್ಯಾಸರ ಸುಪುತ್ರರಾದ ಶುಕಮುನೀಂದ್ರರು ಪರಮ ಪ್ರೇಮದಿಂದ ಮೆಲ್ಲ-ಮೆಲ್ಲನೆ ಶ್ರೀಭಾಗವತವನ್ನು ಪಠಿಸುತ್ತಾ ಕಥಾ ಸಪ್ತಾಹದ ಕೊನೆಯಲ್ಲಿ ಅಲ್ಲಿಗೆ ಆಗಮಿಸಿದರು. ॥ ೭೮ ॥ ಪರಮ ತೇಜಸ್ವಿಗಳಾದ ಶುಕಮಹಾಮುನಿಗಳನ್ನು ಕಂಡು ಎಲ್ಲ ಸಭಾಸದರು ಭಕ್ತಿ ಸಂಭ್ರಮದಿಂದ ಎದ್ದು ನಿಂತು, ಅವರಿಗೆ ಉನ್ನತವಾದ ಮಹಾಸನವನ್ನು ನೀಡಿದರು. ದೇವಋಷಿಗಳಾದ ನಾರದರು ಅವರನ್ನು ಪ್ರೇಮದಿಂದ ಪೂಜಿಸಿದರು. ಅವರು ಸುಖಾಸೀನರಾಗಿ 'ನನ್ನ ನಿರ್ಮಲ ವಾಣಿಯನ್ನು ಕೇಳಿರಿ' ಎಂದು ಪ್ರಾರಂಭಿಸಿ ಅನುಗ್ರಹ ಮಾತನ್ನು ಹೇಳಿದರು. ॥ ೭೯ ॥

**ಶ್ರೀಶುಕಮಹಾಮುನಿಗಳು ಹೇಳಿದರು** – 'ಓ ರಸಿಕ ಭಾವುಕ ಜನರೇ! ಈ ಶ್ರೀಮದ್ಭಾಗವತವು ವೇದರೂಪೀ ಕಲ್ಪವೃಕ್ಷದ ಪರಿಪಕ್ವವಾದ ಫಲವಾಗಿದೆ. ಶ್ರೀಶುಕನೆಂಬ ಶುಕಪಕ್ಷಿಯ ಮುಖದ ಸಂಯೋಗದಿಂದ ಅಮೃತರಸದಿಂದ ಪರಿಪೂರ್ಣವಾಗಿದೆ. ಇದರಲ್ಲಿ ಸಿಪ್ಪೆ, ಗೊರಟು ಇಲ್ಲದೆ ರಸವೇ-ರಸವು ತುಂಬಿದೆ. ಇದು ಇದೇ ಲೋಕದಲ್ಲಿ ಸುಲಭವಾಗಿ ದೊರೆತಿದೆ. ಶರೀರದಲ್ಲಿ ಚೈತನ್ಯವಿರುವ ತನಕ ನೀವೆಲ್ಲರೂ ಇದನ್ನು ಪದೇ-ಪದೇ ಪಾನಮಾಡುತ್ತಾ ಇರಿ. ॥ ೮೦ ॥ ಈ ಶ್ರೀಮದ್ಭಾಗವತದಲ್ಲಿ ನಿಷ್ಕಪಟ, ನಿಷ್ಕಾಮ ಪರಮಧರ್ಮವು ನಿರೂಪಿತವಾಗಿದೆ. ಇದು ಪ್ರತಿಪಾದನೆ ಮಾಡುವ ವಸ್ತು ಮಾತ್ಸರ್ಯರಹಿತರಾದ ಸಜ್ಜನರಿಗೆ ವೇದ್ಯವಾದ ಪರಮಸತ್ಯವು. ಇದು ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ಮೂರು ತಾಪಗಳನ್ನು ನಿರ್ಮೂಲನ ಗೊಳಿಸುವುದು. ಪರಮ ಮಂಗಳಕರವಾದುದು. ಮಹಾಮುನಿಗಳಾದ ವೇದವ್ಯಾಸರೇ

ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ
ನಿರ್ಮತ್ಸರಾಣಾಂ ಸತಾಂ
ವೇದ್ಯಂ ವಾಸ್ತವಮತ್ರ ವಸ್ತು ಶಿವದಂ
ತಾಪತ್ರಯೋನ್ಮೂಲನಮ್ ।
ಶ್ರೀಮದ್ಭಾಗವತೇ ಮಹಾಮುನಿಕೃತೇ
ಕಿಂ ವಾ ಪರೈರೀಶ್ವರಃ
ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ
ಶುಶ್ರೂಷುಭಿಸ್ತತ್ಕ್ಷಣಾತ್ ॥ ೮೧ ॥

ಶ್ರೀಮದ್ಭಾಗವತಂ ಪುರಾಣತಿಲಕಂ
ಯದ್ವೈಷ್ಣವಾನಾಂ ಧನಂ
ಯಸ್ಮಿನ್ಪಾರಮಹಂಸ್ಯಮೇವಮಮಲಂ
ಜ್ಞಾನಂ ಪರಂ ಗೀಯತೇ ।
ಯತ್ರ ಜ್ಞಾನವಿರಾಗಭಕ್ತಿಸಹಿತಂ
ನೈಷ್ಕರ್ಮ್ಯಮಾವಿಷ್ಕೃತಂ
ತಚ್ಛೃಣ್ವನ್ ಪ್ರಪಠನ್ ವಿಚಾರಣಪರೋ
ಭಕ್ತ್ಯಾ ವಿಮುಚ್ಯೇನ್ನರಃ ॥ ೮೨ ॥

ಸ್ವರ್ಗೇ ಸತ್ಯೇ ಚ ಕೈಲಾಸೇ ವೈಕುಂಠೇ ನಾಸ್ತ್ಯಯಂ ರಸಃ ।
ಅತಃ ಪಿಬಂತು ಸದ್ಭಾಗ್ಯಾ ಮಾ ಮಾ ಮುಂಚತ ಕರ್ಹಿಚಿತ್
॥ ೮೩ ॥

*ಸೂತ ಉವಾಚ*

ಏವಂ ಬ್ರುವಾಣೇ ಸತಿ ಬಾದರಾಯಣೌ
ಮಧ್ಯೇ ಸಭಾಯಾಂ ಹರಿರಾವಿರಾಸೀತ್ ।
ಪ್ರಹ್ಲಾದಬಲ್ಯುದ್ಧವಫಾಲ್ಗುನಾದಿಭಿ -
ರ್ವೃತಃ ಸುರರ್ಷಿಸ್ತಮಪೂಜಯಚ್ಚ ತಾನ್ ॥ ೮೪ ॥

ದೃಷ್ಟ್ವಾ ಪ್ರಸನ್ನಂ ಮಹದಾಸನೇ ಹರಿಂ
ತೇ ಚಕ್ರಿರೇ ಕೀರ್ತನಮಗ್ರತಸ್ತದಾ ।
ಭವೋ ಭವಾನ್ಯಾ ಕಮಲಾಸನಸ್ತು
ತತ್ರಾಗಮತ್ಕೀರ್ತನದರ್ಶನಾಯ ॥ ೮೫ ॥

ಪ್ರಹ್ಲಾದಸ್ತಾಲಧಾರೀ ತರಲಗತಿತಯಾ
ಚೋದ್ಧವಃ ಕಾಂಸ್ಯಧಾರೀ
ವೀಣಾಧಾರೀ ಸುರರ್ಷಿಃ ಸ್ವರಕುಶಲತಯಾ
ರಾಗಕರ್ತಾರ್ಜುನೋಽಭೂತ್ ।
ಇಂದ್ರೋಽವಾದೀನ್ಮೃದಂಗಂ ಜಯಜಯಸುಕರಾಃ
ಕೀರ್ತನೇ ತೇ ಕುಮಾರಾ
ಯತ್ರಾಗ್ರೇ ಭಾವವಕ್ತಾ ಸರಸರಚನಯಾ
ವ್ಯಾಸಪುತ್ರೋ ಬಭೂವ ॥ ೮೬ ॥

ರಚಿಸಿರುವ ಇಂತಹ ಶ್ರೀಮದ್ಭಾಗವತವು ಇರುವಾಗ ಬೇರೆ ಶಾಸ್ತ್ರಗಳು, ಸಾಧನೆಗಳ ಆವಶ್ಯಕತೆ ಇರುವುದಿಲ್ಲ. ಸುಕೃತಿಗಳು ಇದನ್ನು ಕೇಳಬೇಕೆಂಬ ಇಚ್ಛೆಯನ್ನು ಪ್ರಕಟಿಸಿದರೂ ಸಾಕು, ಒಡನೆಯೇ ಭಗವಂತನು ಅವರ ಹೃದಯದಲ್ಲಿ ಬಂದು ನೆಲೆಸಿ ಅಲ್ಲಿಯೇ ಸ್ಥಾಯಿಯಾಗುತ್ತಾನೆ. ॥ ೮೧ ॥ ಈ ಶ್ರೀಮದ್ಭಾಗವತವು ಪುರಾಣಗಳಿಗೆ ಶಿರೋಮಣಿಯಾಗಿದ್ದು ವೈಷ್ಣವರಿಗೆ ಪರಮ ಧನವಾಗಿದೆ. ಇದರಲ್ಲಿ ಪರಮಹಂಸರಿಗೆ ಪ್ರಾಪ್ಯವಾಗಿರುವ ವಿಶುದ್ಧವಾದ ಜ್ಞಾನವೇ ವರ್ಣಿತವಾಗಿದೆ. ಜ್ಞಾನ, ವೈರಾಗ್ಯ, ಭಕ್ತಿಗಳಿಂದ ಕೂಡಿದ ನಿವೃತ್ತಿಮಾರ್ಗವನ್ನು ಇಲ್ಲಿ ಪ್ರಕಾಶಪಡಿಸಿದೆ. ಇದರ ಶ್ರವಣ, ಪಾರಾಯಣ, ಮನನಗಳಲ್ಲಿ ಆಸಕ್ತನಾದವನು ಮುಕ್ತನಾಗಿ ಬಿಡುತ್ತಾನೆ. ॥ ೮೨ ॥ ಈ ರಸವು ಸ್ವರ್ಗದಲ್ಲಾಗಲೀ, ಸತ್ಯಲೋಕದಲ್ಲಾಗಲೀ, ಕೈಲಾಸದಲ್ಲಾಗಲೀ, ವೈಕುಂಠದಲ್ಲಾಗಲೀ ಎಲ್ಲಿಯೂ ಇಲ್ಲ. ಆದುದರಿಂದ ಎಲೈ ಭಾಗ್ಯವಂತರಾದ ಶ್ರೋತೃಗಳೇ! ನೀವು ಇದನ್ನು ಪಾನಮಾಡಿರಿ, ಸವಿಯಿರಿ ಇದನ್ನು ಎಂದೂ ಬಿಡಬೇಡಿರಿ. ಖಂಡಿತವಾಗಿ ಬಿಡಬೇಡಿರಿ. ॥ ೮೩ ॥

**ಸೂತಪುರಾಣಿಕರು ಹೇಳುತ್ತಾರೆ** – ಬಾದರಾಯಣ ಪುತ್ರರಾದ ಶ್ರೀಶುಕರು ಹೀಗೆ ಹೇಳುತ್ತಿರುವಂತೆ ಸಭೆಯ ಮಧ್ಯದಲ್ಲಿ ಪ್ರಹ್ಲಾದ, ಬಲಿ, ಉದ್ಧವ, ಅರ್ಜುನ ಮುಂತಾದ ಪಾರ್ಷದರೊಂದಿಗೆ ಸಾಕ್ಷಾತ್ ಶ್ರೀಹರಿಯು ಪ್ರಕಟನಾದನು. ಆಗ ದೇವಋಷಿ ನಾರದರು ಭಗವಂತನನ್ನು ಹಾಗೂ ಅವನ ಭಕ್ತರನ್ನು ಯಥೋಚಿತವಾಗಿ ಪೂಜಿಸಿದರು. ॥ ೮೪ ॥ ದೊಡ್ಡ ಆಸನದಲ್ಲಿ ವಿರಾಜಮಾನನಾಗಿ ಪ್ರಸನ್ನನಾದ ಶ್ರೀಹರಿಯನ್ನು ಕಂಡು ಅವರೆಲ್ಲರೂ ಅವನ ಮುಂದೆ ಸಂಕೀರ್ತನೆಯನ್ನು ಪ್ರಾರಂಭಿಸಿದರು. ಆ ಸಂಕೀರ್ತನೆಯನ್ನು ನೋಡಲು ಪಾರ್ವತಿಸಮೇತನಾದ ಮಹಾದೇವನೂ, ಬ್ರಹ್ಮದೇವರೂ ಅಲ್ಲಿಗೆ ದಯಮಾಡಿಸಿದರು. ॥ ೮೫ ॥ ಸಂಕೀರ್ತನೆ ಪ್ರಾರಂಭವಾಯಿತು. ಅದರಲ್ಲಿ ಪಟುವಾದ ಗತಿಯುಳ್ಳ ಪ್ರಹ್ಲಾದರು ಕರತಾಳ ನುಡಿಸ ತೊಡಗಿದರು. ಉದ್ಧವರು ಕಂಚಿನ ತಾಳವನ್ನೆತ್ತಿಕೊಂಡು ನುಡಿಸಿದರು. ನಾರದರು ವೀಣೆಯನ್ನು ನುಡಿಸಿದರು. ಸ್ವರ ವಿಜ್ಞಾನ ಕುಶಲನಾದ ಅರ್ಜುನನು ರಾಗಾಲಾಪನೆ ಮಾಡತೊಡಗಿದನು. ಇಂದ್ರನು ಮೃದಂಗ ನುಡಿಸಿದನು. ಸನಕಾದಿಗಳು ನಡು-ನಡುವೆ ಜಯ-ಜಯಕಾರ ಮಾಡುತ್ತಿದ್ದರು. ಇವರೆಲ್ಲರ ಮುಂದೆ ಶುಕಮಹಾಮುನಿಗಳು ಬಗೆ-ಬಗೆಯ ರಸಮಯವಾದ ಅಂಗಭಂಗಿಗಳಿಂದ ಭಾವಗಳನ್ನು ಪ್ರದರ್ಶಿಸುತ್ತಿದ್ದರು. ॥ ೮೬ ॥ ಅವರೆಲ್ಲರ ನಡುವೆ ಪರಮ ತೇಜೋ ನಿಧಿಗಳಾದ ಭಕ್ತಿ, ಜ್ಞಾನ, ವೈರಾಗ್ಯಗಳು ನಟರಂತೆ ನರ್ತಿಸತೊಡಗಿದರು. ಇಂತಹ ಅಲೌಕಿಕವಾದ ಕೀರ್ತನವನ್ನು ನೋಡಿ ಭಗವಂತನು ತುಂಬಾ ಪ್ರಸನ್ನನಾಗಿ ಹೀಗೆ ಹೇಳತೊಡಗಿದನು. ॥ ೮೭ ॥ ನಿಮ್ಮ ಈ ಕಥಾಕೀರ್ತನದಿಂದ ನಾನು

ನನರ್ತ ಮಧ್ಯೇ ತ್ರಿಕಮೇವ ತತ್ರ
ಭಕ್ತ್ಯಾದಿಕಾನಾಂ ನಟವತ್ಸುತೇಜಸಾಮ್ ।
ಅಲೌಕಿಕಂ ಕೀರ್ತನಮೇತದೀಕ್ಷ್ಯ
ಹರಿಃ ಪ್ರಸನ್ನೋಽಪಿ ವಚೋಽಬ್ರವೀತ್ತತ್॥ ೮೭ ॥

ಮತ್ತೋ ವರಂ ಭಾವವೃತಾದ್ ವೃಣುಧ್ವಂ
ಪ್ರೀತಃ ಕಥಾಕೀರ್ತನತೋಽಸ್ಮಿ ಸಾಂಪ್ರತಮ್ ।
ಶ್ರುತ್ವೇತಿ ತದ್ವಾಕ್ಯಮತಿಪ್ರಸನ್ನಾಃ
ಪ್ರೇಮಾರ್ದ್ರಚಿತ್ತಾ ಹರಿಮೂಚಿರೇ ತೇ ॥ ೮೮ ॥

ನಗಾಹಗಾಥಾಸು ಚ ಸರ್ವಭಕ್ತೈ-
ರೇಭಿಸ್ತ್ವಯಾ ಭಾವ್ಯಮಿತಿ ಪ್ರಯತ್ನಾತ್ ।
ಮನೋರಥೋಽಯಂ ಪರಿಪೂರಣೀಯ-
ಸ್ತಥೇತಿ ಚೋಕ್ತ್ವಾಂತರಧೀಯತಾಚ್ಯುತಃ ॥ ೮೯ ॥

ತತೋಽನಮತ್ತಚ್ಚರಣೇಷು ನಾರದ-
ಸ್ತಥಾ ಶುಕಾದೀನಪಿ ತಾಪಸಾಂಶ್ಚವ ।
ಅಥ ಪ್ರಹೃಷ್ಟಾಃ ಪರಿನಷ್ಟಮೋಹಾಃ
ಸರ್ವೇ ಯಯುಃ ಪೀತಕಥಾಮೃತಾಸ್ತೇ ॥ ೯೦ ॥

ಭಕ್ತಿಃ ಸುತಾಭ್ಯಾಂ ಸಹ ರಕ್ಷಿತಾ ಸಾ
ಶಾಸ್ತ್ರೇ ಸ್ವಕೀಯೇಽಪಿ ತದಾ ಶುಕೇನ ।
ಅತೋ ಹರಿರ್ಭಾಗವತಸ್ಯ ಸೇವನಾ-
ಚ್ಚಿತ್ತಂ ಸಮಾಯಾತಿ ಹಿ ವೈಷ್ಣವಾನಾಮ್ ॥ ೯೧ ॥

ದಾರಿದ್ರ್ಯದುಃಖಜ್ವರದಾಹಿತಾನಾಂ
ಮಾಯಾಪಿಶಾಚೀಪರಿಮರ್ದಿತಾನಾಮ್ ।
ಸಂಸಾರಸಿಂಧೌ ಪರಿಪಾತಿತಾನಾಂ
ಕ್ಷೇಮಾಯ ವೈ ಭಾಗವತಂ ಪ್ರಗರ್ಜತಿ ॥ ೯೨ ॥

*ಶೌನಕ ಉವಾಚ*

ಶುಕೇನೋಕ್ತಂ ಕದಾ ರಾಜ್ಞೇ ಗೋಕರ್ಣೇನ ಕದಾ ಪುನಃ ।
ಸುರರ್ಷಯೇ ಕದಾ ಬ್ರಾಹ್ಮೈಶ್ಛಿಂಧಿ ಮೇ ಸಂಶಯಂ ತ್ವಿಮಮ್ ॥ ೯೩ ॥

*ಸೂತ ಉವಾಚ*

ಆಕೃಷ್ಣನಿರ್ಗಮಾತ್ತ್ರಿಂಶದ್ವರ್ಷಾಧಿಕಗತೇ ಕಲೌ ।
ನವಮೀತೋ ನಭಸ್ಯೇ ಚ ಕಥಾರಂಭಂ ಶುಕೋಽಕರೋತ್ ॥ ೯೪ ॥

ಪರೀಕ್ಷಿಚ್ಛ್ರವಣಾಂತೇ ಚ ಕಲೌ ವರ್ಷಶತದ್ವಯೇ ।
ಶುದ್ಧೇ ಶುಚೌ ನವಮ್ಯಾಂ ಚ ಧೇನುಜೋಽಕಥಯತ್ಕಥಾಮ್ ॥ ೯೫ ॥

ಬಹಳ ಪ್ರಸನ್ನನಾಗಿರುವೆನು. ನಿಮ್ಮ ಭಕ್ತಿ ಭಾವಕ್ಕೆ ನಾನು ವಶನಾಗಿ ಬಿಟ್ಟಿದ್ದೇನೆ. ನಿಮಗೆ ಬೇಕಾದ ವರವನ್ನು ಕೇಳಿರಿ ಭಗವಂತನ ಈ ಮಾತನ್ನು ಕೇಳಿ ಎಲ್ಲ ಜನರೂ ಸಂತಸಗೊಂಡು ಪ್ರೇಮಾರ್ದ್ರ ಚಿತ್ತದಿಂದ ಭಗವಂತನಲ್ಲಿ ಇಂತೆಂದರು. ॥ ೮೮ ॥ 'ಪ್ರಭೋ! ಮುಂದೆಯೂ ಕೂಡ ಎಲ್ಲೆಲ್ಲಿ ಸಪ್ತಾಹಕಥೆ ನಡೆಯುತ್ತದೋ ಅಲ್ಲೆಲ್ಲ ನೀನು ಈ ಪಾರ್ಷದರೊಡನೆ ಅವಶ್ಯವಾಗಿ ದಯಮಾಡಿಸಬೇಕು. ಈ ನಮ್ಮ ಮನೋರಥವನ್ನು ನೀನು ಈಡೇರಿಸಿ ಕೊಡು.'' ಎಂದು ಬೇಡಿಕೊಂಡರು. ಭಗವಂತನು 'ತಥಾಸ್ತು' ಹಾಗೆಯೇ ಆಗಲಿ ಎಂದು ಹೇಳಿ ಅಂತರ್ಧಾನನಾದನು. ॥ ೮೯ ॥

ಅನಂತರ ನಾರದ ಮಹರ್ಷಿಗಳು ಭಗವಂತನ ಹಾಗೂ ಆತನ ಪಾರ್ಷದರ ಪಾದಪದ್ಮಗಳಿಗೆ ಪ್ರಣಾಮಮಾಡಿದರು. ಮತ್ತೆ ಶುಕ ಮಹಾಮುನಿಗಳೇ ಮುಂತಾದ ತಪಸ್ವಿಗಳಿಗೂ ನಮಸ್ಕರಿಸಿದರು. ಕಥಾಮೃತವನ್ನು ಪಾನಮಾಡಿದ್ದರಿಂದ ಎಲ್ಲರಿಗೂ ಪರಮಾನಂದವುಂಟಾಯಿತು. ಅವರ ಮೋಹವೆಲ್ಲ ನಾಶವಾಯಿತು. ಮತ್ತೆ ಅವರೆಲ್ಲರೂ ತಮ್ಮ-ತಮ್ಮ ಸ್ಥಾನಗಳಿಗೆ ತೆರಳಿದರು. ॥ ೯೦ ॥ ಆಗ ಶುಕಮುನಿಗಳು ಪುತ್ರರಸಹಿತ ಭಕ್ತಿಯನ್ನು ತಮ್ಮ ಶಾಸ್ತ್ರವಾದ ಶ್ರೀಮದ್ಭಾಗವತದಲ್ಲಿ ಸ್ಥಾಪಿಸಿದರು. ಆದರಿಂದಲೇ ಭಾಗವತವನ್ನು ಸೇವಿಸಿದರೆ ಶ್ರೀಹರಿಯು ವಿಷ್ಣುಭಕ್ತರ ಹೃದಯದಲ್ಲಿ ಬಂದು ವಿರಾಜಿಸುತ್ತಾನೆ. ॥ ೯೧ ॥ ದಾರಿದ್ರ್ಯವೆಂಬ ದುಃಖಜ್ವರದ ಜ್ವಾಲೆಯಿಂದ ಬೆಂದು ಹೋದವರು, ಮಾಯಾ ಪಿಶಾಚಿಯಿಂದ ತುಳಿಯಲ್ಪಟ್ಟವರು, ಸಂಸಾರ ಸಾಗರದಲ್ಲಿ ಮುಳುಗಿರುವವರು ಇವರೆಲ್ಲರ ಶ್ರೇಯಸ್ಸನ್ನು ಮಾಡುವುದಕ್ಕಾಗಿ ಶ್ರೀಮದ್ಭಾಗವತವು ಸಿಂಹನಾದ ಮಾಡುತ್ತಿದೆ. ॥ ೯೨ ॥

**ಶೌನಕರು ಕೇಳಿದರು** – ಸೂತಪುರಾಣಿಕರೇ! ಶುಕಮುನಿಗಳು ರಾಜಾಪರೀಕ್ಷಿತನಿಗೆ, ಗೋಕರ್ಣನು ಧುಂಧುಕಾರಿಗೆ, ಸನಕಾದಿಗಳು ನಾರದರಿಗೆ ಯಾವ-ಯಾವ ಸಮಯದಲ್ಲಿ ಈ ಗ್ರಂಥವನ್ನು ಉಪದೇಶಿಸಿದರು ? ನನ್ನ ಈ ಸಂಶಯವನ್ನು ಪರಿಹರಿಸಿರಿ ॥ ೯೩ ॥

**ಸೂತಪುರಾಣಿಕರು ಹೇಳಿದರು** – ಶ್ರೀಕೃಷ್ಣ ಪರಮಾತ್ಮನು ಸ್ವಧಾಮಗಮನದ ಬಳಿಕ ಕಲಿಯುಗದ ಮೂವತ್ತು ವರ್ಷಗಳಿಂದ ಸ್ವಲ್ಪ ಹೆಚ್ಚು ಕಾಲ ಕಳೆದ ಮೇಲೆ ಭಾದ್ರಪದ ಮಾಸದ ಶುಕ್ಲ ನವಮಿಯಿಂದ ಶುಕಮಹರ್ಷಿಗಳು ಕಥಾ ಪ್ರವಚನವನ್ನು ಪರೀಕ್ಷಿದ್ರಾಜನ ಮುಂದೆ ಪ್ರಾರಂಭಿಸಿದ್ದರು. ॥ ೯೪ ॥ ರಾಜಾ ಪರೀಕ್ಷಿತನು ಕಥೆ ಕೇಳಿದ ಅನಂತರ ಕಲಿಯುಗದ ಇನ್ನೂರು ವರ್ಷಗಳು ಕಳೆದ ಮೇಲೆ ಆಷಾಢ ಶುಕ್ಲ ನವಮಿಯಿಂದ ಗೋಕರ್ಣನು ಈ ಕಥೆಯನ್ನು ಪ್ರವಚನ ಮಾಡಿದ್ದನು. ॥ ೯೫ ॥ ಅದಕ್ಕೆ ಹಿಂದೆ ಕಲಿಯುಗದ ಮೂವತ್ತು ವರ್ಷಗಳು ಕಳೆದು ಹೋದಾಗ ಕಾರ್ತೀಕ ಶುಕ್ಲ ನವಮಿಯಿಂದ ಬ್ರಹ್ಮಮಾನಸ ಪುತ್ರರಾದ ಸನಕಾದಿಗಳು ಇದನ್ನು ನಾರದರಿಗೆ ಉಪದೇಶಿಸಿದ್ದರು. ॥ ೯೬ ॥ ಪುಣ್ಯಾತ್ಮರಾದ ಶೌನಕರೇ! ನೀವು ಕೇಳಿದುದಕ್ಕೆ ನಾನು

ತಸ್ಮಾದಪಿ ಕಲೌ ಪ್ರಾಪ್ತೇ ತ್ರಿಂಶದ್ವರ್ಷಗತೇ ಸತಿ ।
ಊಚುರೂರ್ಜೇ ಸಿತೇ ಪಕ್ಷೇ ನವಮ್ಯಾಂ ಬ್ರಹ್ಮಣಃ ಸುತಾಃ ॥ ೯೬ ॥

ಇತ್ಯೇತತ್ತೇ ಸಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾನಘ ।
ಕಲೌ ಭಾಗವತೀ ವಾರ್ತಾ ಭವರೋಗವಿನಾಶಿನೀ ॥ ೯೭ ॥

ಕೃಷ್ಣಪ್ರಿಯಂ ಸಕಲಕಲ್ಮಷನಾಶನಂ ಚ
ಮುಕ್ತ್ಯೇಕಹೇತುಮಿಹ ಭಕ್ತಿವಿಲಾಸಕಾರಿ ।
ಸಂತಃ ಕಥಾನಕಮಿದಂ ಪಿಬತಾದರೇಣ
ಲೋಕೇ ಹಿ ತೀರ್ಥಪರಿಶೀಲನಸೇವಯಾ ಕಿಮ್ ॥ ೯೮ ॥

ಸ್ವಪುರುಷಮಪಿ ವೀಕ್ಷ್ಯ ಪಾಶಹಸ್ತಂ
ವದತಿ ಯಮಃ ಕಿಲ ತಸ್ಯ ಕರ್ಣಮೂಲೇ ।
ಪರಿಹರ ಭಗವತ್ಕಥಾಸು ಮತ್ತಾನ್
ಪ್ರಭುರಹಮನ್ಯನೃಣಾಂ ನ ವೈಷ್ಣವಾನಾಮ್ ॥ ೯೯ ॥

ಅಸಾರೇ ಸಂಸಾರೇ ವಿಷಯವಿಷಸಂಗಾಕುಲಧಿಯಃ
ಕ್ಷಣಾರ್ಧಂ ಕ್ಷೇಮಾರ್ಥಂ ಪಿಬತ ಶುಕಗಾಥಾತುಲಸುಧಾಮ್ ।
ಕಿಮರ್ಥಂ ವ್ಯರ್ಥಂ ಭೋ ವ್ರಜತ ಕುಪಥೇ ಕುತ್ಸಿತಕಥೇ
ಪರೀಕ್ಷಿತ್ಸಾಕ್ಷೀ ಯಚ್ಛ್ರವಣಗತಮುಕ್ತ್ಯುಕ್ತಿಕಥನೇ ॥ ೧೦೦ ॥

ರಸಪ್ರವಾಹಸಂಸ್ಥೇನ ಶ್ರೀಶುಕೇನೇರಿತಾ ಕಥಾ ।
ಕಂಠೇ ಸಂಬಧ್ಯತೇ ಯೇನ ಸ ವೈಕುಂಠಪ್ರಭುರ್ಭವೇತ್ ॥ ೧೦೧ ॥

ಇತಿ ಚ ಪರಮಗುಹ್ಯಂ ಸರ್ವಸಿದ್ಧಾಂತಸಿದ್ಧಂ
ಸಪದಿ ನಿಗದಿತಂ ತೇ ಶಾಸ್ತ್ರಪುಂಜಂ ವಿಲೋಕ್ಯ ।
ಜಗತಿ ಶುಕಕಥಾತೋ ನಿರ್ಮಲಂ ನಾಸ್ತಿ ಕಿಂಚಿತ್
ಪಿಬ ಪರಸುಖಹೇತೋರ್ದ್ವಾದಶಸ್ಕಂಧ ಸಾರಮ್ ॥ ೧೦೨ ॥

ಏತಾಂ ಯೋ ನಿಯತತಯಾ ಶೃಣೋತಿ ಭಕ್ತ್ಯಾ
ಯಶ್ಚೈನಾಂ ಕಥಯತಿ ಶುದ್ಧವೈಷ್ಣವಾಗ್ರೇ ।
ತೌ ಸಮ್ಯಗ್ವಿಧಿಕರಣಾತ್ಫಲಂ ಲಭೇತೇ
ಯಾಥಾರ್ಥ್ಯಾನ್ನಹಿ ಭುವನೇ ಕಿಮಪ್ಯಸಾಧ್ಯಮ್ ॥ ೧೦೩ ॥

ಉತ್ತರ ಕೊಟ್ಟಾಯಿತು. ಈ ಕಲಿಯುಗದಲ್ಲಿ ಶ್ರೀಮದ್ಭಾಗವತ ಕಥೆಯೇ ಭವರೋಗಕ್ಕೆ ರಾಮಬಾಣ ಔಷಧವಾಗಿದೆ. ॥ ೯೭ ॥

ಎಲೈ ಸತ್ಪುರುಷರೇ! ನೀವೆಲ್ಲ ಈ ಕಥಾಮೃತವನ್ನು ಆದರದಿಂದ ಪಾನಮಾಡಿರಿ. ಇದು ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯವಾದುದು. ಸಕಲ ಪಾಪನಾಶ ಮಾಡುವಂತಹುದು ಮುಕ್ತಿಕೊಡುವಂಥದು ಭಕ್ತಿಯ ವಿಲಾಸವನ್ನು ಹೆಚ್ಚಿಸುವಂತಹುದು. ಲೋಕದಲ್ಲಿ ಇತರ ಶ್ರೇಯಸ್ಕರ ಸಾಧನೆಗಳನ್ನು ವಿಚಾರಮಾಡುವುದರಿಂದ ತೀರ್ಥ ಗಳನ್ನು ಸೇವಿಸುವುದರಿಂದ ಏನಾದೀತು? ॥ ೯೮ ॥ ಕೈಯಲ್ಲಿ ಪಾಶವನ್ನು ಹಿಡಿದು ಕೊಂಡಿರುವ ತನ್ನ ದೂತರನ್ನು ನೋಡಿ ಯಮಧರ್ಮನು ಅವರ ಕಿವಿಯಲ್ಲಿ ಹೇಳಿದನು- ನೋಡಿ, ಶ್ರೀಭಗವಂತನ ಕಥೆಗಳಿಂದ ಉನ್ಮತ್ತರಾಗಿರುವವರಿಂದ ದೂರವಿರಿ. ಇತರರಿಗೆ ದಂಡವನ್ನು ವಿಧಿಸುವ ಶಕ್ತಿ ನನಗುಂಟು, ಆದರೆ ವಿಷ್ಣು ಭಕ್ತರ ಮೇಲೆ ನಮಗೆ ಅಧಿಕಾರ ಇಲ್ಲ. ॥ ೯೯ ॥ ಅಸಾರವಾದ ಸಂಸಾರದಲ್ಲಿ ವಿಷಯರೂಪೀ ವಿಷದ ಆಸಕ್ತಿಯ ಕಾರಣ ವ್ಯಾಕುಲವಾದ ಬುದ್ಧಿಯುಳ್ಳವರೇ! ನಿಮ್ಮ ಆತ್ಮಕಲ್ಯಾಣಕ್ಕೋಸ್ಕರ ಅರ್ಧಕ್ಷಣಕಾಲವಾದರೂ ಶುಕರು ಅನುಗ್ರಹಿಸಿದ ಶ್ರೀಭಾಗವತ ಕಥೆಯೆಂಬ ಅಮೃತವನ್ನು ಪಾನಮಾಡಿರಿ. ಎಲೈ ಜನರಿರಾ! ನಿಂದಿತವಾದ ಕಥೆಗಳಿಂದ ಕೂಡಿದ ಕರ್ಮಮಾರ್ಗದಲ್ಲಿ ವ್ಯರ್ಥ ವಾಗಿ ಏಕೆ ಅಲೆದಾಡುತ್ತಿದ್ದೀರಿ? ಈ ಕಥೆಯು ಕಿವಿಗೆ ಪ್ರವೇಶ ಮಾಡಿದ್ದರಿಂದಲೇ ಮುಕ್ತಿಯು ದೊರೆಯುವುದು. ಇದಕ್ಕೆ ರಾಜಾ ಪರೀಕ್ಷಿತನೇ ಸಾಕ್ಷಿ. ॥ ೧೦೦ ॥ ಶ್ರೀಶುಕಮಹಾ ಮುನಿಗಳು ಪ್ರೇಮರಸ ಪ್ರವಾಹದಲ್ಲಿ ಮುಳುಗಿ ಈ ಕಥೆಯನ್ನು ಉಪ ದೇಶಿಸಿದರು. ಯಾರ ಕಂಠದಿಂದ ಈ ಕಥೆಯು ಮೊಳಗುತ್ತದೋ ಅವರು ವೈಕುಂಠಕ್ಕೆ ಅಧಿಕಾರಿಗಳಾಗಿ ಬಿಡುತ್ತಾರೆ. ॥ ೧೦೧ ॥ ಶೌನಕರೇ! ನಾನು ಅನೇಕ ಶಾಸ್ತ್ರಗಳನ್ನು ನೋಡಿ ಸಿದ್ಧವಾದ ಗೋಪ್ಯವಾದ ಈ ರಹಸ್ಯವನ್ನು ನಿನಗೆ ಅರುಹಿದ್ದೇನೆ. ಇದು ಎಲ್ಲ ಶಾಸ್ತ್ರಗಳ ಸಿದ್ಧಾಂತಗಳ ಸಾರವಾಗಿದೆ. ಜಗತ್ತಿನಲ್ಲಿ ಈ ಶುಕಶಾಸ್ತ್ರ ಕ್ಕಿಂತಲೂ ಪವಿತ್ರವಾದ ವಸ್ತು ಇನ್ನೊಂದಿಲ್ಲ. ಆದ್ದರಿಂದ ನೀವೆಲ್ಲರೂ ಪರಮಾನಂದದ ಪ್ರಾಪ್ತಿಗಾಗಿ ಈ ದ್ವಾದಶಸ್ಕಂಧ ರೂಪವಾದ ರಸವನ್ನು ಪಾನಮಾಡಿರಿ, ಸವಿಯಿರಿ. ॥೧೦೨॥ ನಿಯಮಪೂರ್ವಕ ಈ ಕಥೆಯನ್ನು ಭಕ್ತಿ-ಭಾವದಿಂದ ಶ್ರವಣಿಸು ವವನು, ಶುದ್ಧಾಂತಃ ಕರಣ ಭಗವದ್ಭಕ್ತರ ಮುಂದೆ ಪ್ರವಚನ ಮಾಡುವವನು, ಹೀಗೆ ಇಬ್ಬರೂ ಶಾಸ್ತ್ರವಿಧಿಯನ್ನು ಪೂರ್ಣವಾಗಿ ಪಾಲಿಸಿದ್ದರಿಂದ ಇದರ ಪಾರಮಾರ್ಥಿಕ ಫಲವನ್ನು ಪಡೆಯುತ್ತಾರೆ. ಅವರಿಗೆ ಮೂರು ಲೋಕಗಳಲ್ಲಿಯೂ ಅಸಾಧ್ಯವಾದುದು ಯಾವುದೂ ಇರುವುದಿಲ್ಲ. ॥ ೧೦೩ ॥

ಇತಿ ಶ್ರೀಪದ್ಮಪುರಾಣೇ ಉತ್ತರಖಂಡೇ ಶ್ರೀಮದ್ಭಾಗವತಮಾಹಾತ್ಮ್ಯೇ ಶ್ರವಣವಿಧಿಕಥನಂ ನಾಮ ಷಷ್ಠೋಽಧ್ಯಾಯಃ ॥ ೬ ॥

*ಇಲ್ಲಿಗೆ ಶ್ರೀಪದ್ಮಪುರಾಣದ ಉತ್ತರಖಂಡದ ಶ್ರೀಮದ್ಭಾಗವತಮಾಹಾತ್ಮ್ಯೆಯಲ್ಲಿ ಸಪ್ತಾಹ ಶ್ರವಣವಿಧಿಯನ್ನು ಹೇಳಿದ ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥*




भगवान् व्यासका पुराण-प्रवचन
Vyāsa discourses on Purāṇas




महाप्रयाणके समय भीष्मपर भगवान्‌की कृपा

The departing Bhīṣma graced by the Lord




भगवान् नारायणके नाभि-कमलसे लोकपितामह ब्रह्माकी उत्पत्ति

**Brahmā emanates from the navel-lotus of Nārāyaṇa**



माता देवहूतिको भगवान् कपिलका तत्त्वोपदेश

**Kapila preaches knowledge to mother Devahūti**




बालक ध्रुवपर भगवान्‌का अनुग्रह

**The grace of Lord descends on Dhruva**

॥ ಓಂ ನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ಪ್ರಥಮಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಶ್ರೀಸೂತಪುರಾಣಿಕರಲ್ಲಿ ಶೌನಕಾದಿ ಋಷಿಗಳ ಪ್ರಶ್ನೆ

### ಮಂಗಲಾಚರಣೆ

**ಜನ್ಮಾದ್ಯಸ್ಯ ಯತೋಽನ್ವಯಾದಿತರತ-**
**ಶ್ಚಾರ್ಥೇಷ್ವಭಿಜ್ಞಃ ಸ್ವರಾಟ್**
**ತೇನೇ ಬ್ರಹ್ಮಹೃದಾ ಯ ಆದಿಕವಯೇ**
**ಮುಹ್ಯಂತಿ ಯತ್ಸೂರಯಃ ।**
**ತೇಜೋವಾರಿಮೃದಾಂ ಯಥಾ ವಿನಿಮಯೋ**
**ಯತ್ರ ತ್ರಿಸರ್ಗೋಽಮೃಷಾ**
**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ**
**ಸತ್ಯಂ ಪರಂ ಧೀಮಹಿ ॥ ೧ ॥**

ಪರಮ ಸತ್ಯ ಸ್ವರೂಪನಾದ ಪರಬ್ರಹ್ಮ ಪರಮಾತ್ಮನೇ! ನಿನಗೆ ನಮಸ್ಕಾರವು. ನಿನ್ನಿಂದಲೇ ಈ ಚರಾಚರ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಳಯಗಳು ಆಗುತ್ತಾ ಇರುತ್ತವೆ. ನೀನು ನಿನ್ನ ಸಂಕಲ್ಪದಿಂದಲೇ ಅನೇಕ ವಿಧದ ಪ್ರಾಣಿಗಳನ್ನು ನಿರ್ಮಾಣಮಾಡಿ ಅವರಿಗೆ ಉಪಯೋಗಿಯಾದ ವಿವಿಧ ಪದಾರ್ಥಗಳನ್ನೂ ಉಂಟುಮಾಡಿದೆ. ಅನ್ವಯರೂಪದಿಂದ ನೀನೇ ಸಮಗ್ರ ವಿಶ್ವದಲ್ಲಿ ತುಂಬಿರುವೆ. ಹಾಗೆಯೇ ವ್ಯತಿರೇಕ ಕ್ರಮದಿಂದಲೂ 'ನೇತಿ-ನೇತಿ' ಈ ಉಪನಿಷದ್ ವಾಕ್ಯಗಳಿಂದ ಸಮಸ್ತ ವಿಶ್ವದ ನಿರಾಕರಣ ಮಾಡಿದರೂ ಶೇಷವಾಗಿ ಉಳಿಯುವವನು ನೀನೇ. ಹೀಗೆ ಆದಿ-ಮಧ್ಯಾಂತಗಳಲ್ಲಿ ನೀನೇ ಇರುವೆ. **(ವಾಸುದೇವಃ ಸರ್ವಮ್)**. ನೀನು ಶುದ್ಧ ಜ್ಞಾನಸ್ವರೂಪನೂ, ಸ್ವಯಂ ಪ್ರಕಾಶನೂ ಆಗಿರುವೆ. ಚತುರ್ಮುಖ ಬ್ರಹ್ಮದೇವರಿಗೆ ನೀನೇ ತನ್ನ ಸಂಕಲ್ಪದಿಂದ ವೇದಜ್ಞಾನವನ್ನೂ ಪ್ರದಾನ ಮಾಡಿರುವೆ. ನಿನ್ನಿಂದ ಸೃಷ್ಟಿಸಲ್ಪಟ್ಟ ಈ ವಿಶ್ವನಿರ್ಮಾಣದ ಕೌಶಲ್ಯದ ಕುರಿತು ಹಾಗೂ ವೇದಗಳ ತಾತ್ಪರ್ಯವನ್ನು ಅರಿಯುವುದರಲ್ಲಿ ವಿದ್ವಾಂಸರೂ ಮೋಹಿತರಾಗುತ್ತಾರೆ. ನೀನು ವಿಶ್ವಸಂಕಲ್ಪವನ್ನು ಮಾಡಿದಾಗ ತ್ರಿಗುಣಾತ್ಮಕವಾದ ಪ್ರಕೃತಿಯಲ್ಲಿ ಕಂಪನ ಉಂಟಾಗಿ ಚರಾಚರ ಜಗತ್ತು ಉತ್ಪನ್ನವಾಯಿತು. ನೀನೇ ಇದಕ್ಕೆ ಪರಮಾಧಾರನಾಗಿರುವೆ. ನಿಜವಾಗಿ ಈ ವಿಶ್ವದ ರೂಪದಲ್ಲಿ ನೀನೇ ಆಗಿದ್ದರೂ, ಸೂರ್ಯನ ಪ್ರಖರಕಿರಣಗಳಿಂದ ಮರುಭೂಮಿಯಲ್ಲಿ ನೀರು ಮತ್ತು ನೀರಿನಲ್ಲಿ ನೆಲದ ಭ್ರಮೆ ಉಂಟಾಗುವಂತೆಯೇ, ನಿನ್ನ ಮಾಯೆಯ ಪ್ರಭಾವದಿಂದ ನಿತ್ಯವಲ್ಲದ ಸೃಷ್ಟಿಯು ಸತ್ಯದಂತೆ ಭಾಸವಾಗುತ್ತದೆ. ನಿನ್ನ ಸ್ವರೂಪವು ಮಾಯೆಯ ಪರದೆಯಿಂದಾಗಿ ಅಡಗಿರುತ್ತದೆ. ಮಾಯೆಯಾದರೋ ನಿನಗೆ ಹೆದರಿಕೊಂಡೇ ಇರುತ್ತದೆ. ಪ್ರಭೋ! ನೀನೇ ದಯೆಮಾಡಿ ಈ ಮಾಯೆಯ ಆವರಣವನ್ನು ದೂರಗೊಳಿಸಿ, ನಿನ್ನ ನಿಜಸ್ವರೂಪದ ದರ್ಶನವನ್ನು ಮಾಡಿಸು ಎಂದು ನಾವು ಪ್ರಾರ್ಥಿಸುತ್ತೇವೆ. ನಾವು ನಿನ್ನ ಸತ್ಯಸ್ವರೂಪವನ್ನು ಧ್ಯಾನಿಸುತ್ತೇವೆ. ॥ ೧ ॥




बालक ध्रुवपर भगवान्‌का अनुग्रह
The grace of Lord descends on Dhruva

॥ ಓಂ ನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ಪ್ರಥಮಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಶ್ರೀಸೂತಪುರಾಣಿಕರಲ್ಲಿ ಶೌನಕಾದಿ ಋಷಿಗಳ ಪ್ರಶ್ನೆ

### ಮಂಗಲಾಚರಣೆ

**ಜನ್ಮಾದ್ಯಸ್ಯ ಯತೋಽನ್ವಯಾದಿತರತ-**
**ಶ್ಚಾರ್ಥೇಷ್ವಭಿಜ್ಞಃ ಸ್ವರಾಟ್**
**ತೇನೇ ಬ್ರಹ್ಮಹೃದಾ ಯ ಆದಿಕವಯೇ**
**ಮುಹ್ಯಂತಿ ಯತ್ಸೂರಯಃ ।**
**ತೇಜೋವಾರಿಮೃದಾಂ ಯಥಾ ವಿನಿಮಯೋ**
**ಯತ್ರ ತ್ರಿಸರ್ಗೋಽಮೃಷಾ**
**ಧಾಮ್ನಾ ಸ್ವೇನ ಸದಾ ನಿರಸ್ತಕುಹಕಂ**
**ಸತ್ಯಂ ಪರಂ ಧೀಮಹಿ ॥ ೧ ॥**

ಪರಮ ಸತ್ಯ ಸ್ವರೂಪನಾದ ಪರಬ್ರಹ್ಮ ಪರಮಾತ್ಮನೇ! ನಿನಗೆ ನಮಸ್ಕಾರವು. ನಿನ್ನಿಂದಲೇ ಈ ಚರಾಚರ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಳಯಗಳು ಆಗುತ್ತಾ ಇರುತ್ತವೆ. ನೀನು ನಿನ್ನ ಸಂಕಲ್ಪದಿಂದಲೇ ಅನೇಕ ವಿಧದ ಪ್ರಾಣಿಗಳನ್ನು ನಿರ್ಮಾಣಮಾಡಿ ಅವರಿಗೆ ಉಪಯೋಗಿಯಾದ ವಿವಿಧ ಪದಾರ್ಥಗಳನ್ನೂ ಉಂಟುಮಾಡಿದೆ. ಅನ್ವಯರೂಪದಿಂದ ನೀನೇ ಸಮಗ್ರ ವಿಶ್ವದಲ್ಲಿ ತುಂಬಿರುವೆ. ಹಾಗೆಯೇ ವ್ಯತಿರೇಕ ಕ್ರಮದಿಂದಲೂ 'ನೇತಿ-ನೇತಿ' ಈ ಉಪನಿಷದ್ ವಾಕ್ಯಗಳಿಂದ ಸಮಸ್ತ ವಿಶ್ವದ ನಿರಾಕರಣ ಮಾಡಿದರೂ ಶೇಷವಾಗಿ ಉಳಿಯುವವನು ನೀನೇ. ಹೀಗೆ ಆದಿ-ಮಧ್ಯಾಂತಗಳಲ್ಲಿ ನೀನೇ ಇರುವೆ. **(ವಾಸುದೇವಃ ಸರ್ವಮ್).** ನೀನು ಶುದ್ಧ ಜ್ಞಾನಸ್ವರೂಪನೂ, ಸ್ವಯಂ ಪ್ರಕಾಶನೂ ಆಗಿರುವೆ. ಚತುರ್ಮುಖ ಬ್ರಹ್ಮದೇವರಿಗೆ ನೀನೇ ತನ್ನ ಸಂಕಲ್ಪದಿಂದ ವೇದಜ್ಞಾನವನ್ನೂ ಪ್ರದಾನ ಮಾಡಿರುವೆ. ನಿನ್ನಿಂದ ಸೃಷ್ಟಿಸಲ್ಪಟ್ಟ ಈ ವಿಶ್ವನಿರ್ಮಾಣದ ಕೌಶಲ್ಯದ ಕುರಿತು ಹಾಗೂ ವೇದಗಳ ತಾತ್ಪರ್ಯವನ್ನು ಅರಿಯುವುದರಲ್ಲಿ ವಿದ್ವಾಂಸರೂ ಮೋಹಿತರಾಗುತ್ತಾರೆ. ನೀನು ವಿಶ್ವಸಂಕಲ್ಪವನ್ನು ಮಾಡಿದಾಗ ತ್ರಿಗುಣಾತ್ಮಕವಾದ ಪ್ರಕೃತಿಯಲ್ಲಿ ಕಂಪನ ಉಂಟಾಗಿ ಚರಾಚರ ಜಗತ್ತು ಉತ್ಪನ್ನವಾಯಿತು. ನೀನೇ ಇದಕ್ಕೆ ಪರಮಾಧಾರನಾಗಿರುವೆ. ನಿಜವಾಗಿ ಈ ವಿಶ್ವದ ರೂಪದಲ್ಲಿ ನೀನೇ ಆಗಿದ್ದರೂ, ಸೂರ್ಯನ ಪ್ರಖರಕಿರಣಗಳಿಂದ ಮರುಭೂಮಿಯಲ್ಲಿ ನೀರು ಮತ್ತು ನೀರಿನಲ್ಲಿ ನೆಲದ ಭ್ರಮೆ ಉಂಟಾಗುವಂತೆಯೇ, ನಿನ್ನ ಮಾಯೆಯ ಪ್ರಭಾವದಿಂದ ನಿತ್ಯವಲ್ಲದ ಸೃಷ್ಟಿಯು ಸತ್ಯದಂತೆ ಭಾಸವಾಗುತ್ತದೆ. ನಿನ್ನ ಸ್ವರೂಪವು ಮಾಯೆಯ ಪರದೆಯಿಂದಾಗಿ ಅಡಗಿರುತ್ತದೆ. ಮಾಯೆಯಾದರೋ ನಿನಗೆ ಹೆದರಿಕೊಂಡೇ ಇರುತ್ತದೆ. ಪ್ರಭೋ! ನೀನೇ ದಯೆಮಾಡಿ ಈ ಮಾಯೆಯ ಆವರಣವನ್ನು ದೂರಗೊಳಿಸಿ, ನಿನ್ನ ನಿಜಸ್ವರೂಪದ ದರ್ಶನವನ್ನು ಮಾಡಿಸು ಎಂದು ನಾವು ಪ್ರಾರ್ಥಿಸುತ್ತೇವೆ. ನಾವು ನಿನ್ನ ಸತ್ಯಸ್ವರೂಪವನ್ನು ಧ್ಯಾನಿಸುತ್ತೇವೆ. ॥ ೧ ॥

ಧರ್ಮಃ ಪ್ರೋಜ್ಝಿತಕೈತವೋಽತ್ರ ಪರಮೋ
ನಿರ್ಮತ್ಸರಾಣಾಂ ಸತಾಂ
ವೇದ್ಯಂ ವಾಸ್ತವಮತ್ರ ವಸ್ತು ಶಿವದಂ
ತಾಪತ್ರಯೋನ್ಮೂಲನಮ್ ।
ಶ್ರೀಮದ್ಭಾಗವತೇ ಮಹಾಮುನಿಕೃತೇ
ಕಿಂ ವಾ ಪರೈರೀಶ್ವರಃ
ಸದ್ಯೋ ಹೃದ್ಯವರುಧ್ಯತೇಽತ್ರ ಕೃತಿಭಿಃ
ಶುಶ್ರೂಷುಭಿಸ್ತತ್ಕ್ಷಣಾತ್ ॥ ೨ ॥

ಮಹಾಮುನಿಗಳಾದ ವೇದವ್ಯಾಸದೇವರಿಂದಲೇ ನಿರ್ಮಿತವಾದ ಈ ಶ್ರೀಮದ್ಭಾಗವತ ಮಹಾಪುರಾಣದಲ್ಲಿ ಕಪಟರಹಿತವಾದ ಪರಮಧರ್ಮವು ನಿರೂಪಿವಾಗಿದೆ. ಇದರಲ್ಲಿ ಮಾತ್ಸರ್ಯರಹಿತರಾದ ಸಜ್ಜನರಿಗೆ ವೇದ್ಯವಾಗುವ ಪರಮಸತ್ಯವೇ ಪ್ರತಿಪಾದಿತವಾಗಿದೆ. ಪರಮ ಮಂಗಳಕರವಾಗಿದೆ. ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕಗಳೆಂಬ ತಾಪತ್ರಯಗಳನ್ನು ನಿರ್ಮೂಲನ ಮಾಡುವಂತಹುದು. ಇಂತಹ ಭಾಗವತ ಶಾಸ್ತ್ರವಿರುವಾಗ ಬೇರೆ ಸಾಧನೆ, ಶಾಸ್ತ್ರಗಳ ಪ್ರಯೋಜನವೇನು ? ಸುಕೃತಿಗಳು ಇದನ್ನು ಕೇಳಬೇಕೆಂದು ಇಚ್ಛಿಸಿದರೆ ಸಾಕು, ತತ್‌ಕ್ಷಣದಲ್ಲೇ ಶ್ರೀಭಗವಂತನು ಅವರ ಹೃದವನ್ನು ಪ್ರವೇಶಿಸಿ ಅಲ್ಲಿಯೇ ಉಳಿದು ಬಿಡುವನು. ॥ ೨ ॥ ರಸಿಕ ಮರ್ಮಜ್ಞ ಭಕ್ತರೇ ! ಈ ಶ್ರೀಮದ್ಭಾಗವತವು ವೇದರೂಪೀ ಕಲ್ಪವೃಕ್ಷದ ಪಕ್ವವಾದ ಫಲವು. ಇದು ಶ್ರೀಶುಕಮುನಿಯೆಂಬ ಶುಕಪಕ್ಷಿಯ ಮುಖದ ಸಂಬಧದಿಂದ ಪರಮಾನಂದಾಮೃತ ದ್ರವದಿಂದ ಪೂರ್ಣವಾದ ಈ ಹಣ್ಣು ಸಿಪ್ಪೆ, ತಿರುಳು ಮುಂತಾದವುಗಳಿಲ್ಲದೆ ಕೇವಲ ರಸರೂಪವೇ ಆಗಿದೆ. ಭೂಮಿಯಲ್ಲಿ ಸುಲಭವಾಗಿ ದೊರಕಿದ ಈ ಫಲದ ದಿವ್ಯ ಭಗವದ್ರಸವನ್ನು ದೇಹಲಯವಾಗುವವರೆಗೂ, ಸಮಾಧಿಯಲ್ಲಿ ಮನೋಲಯವಾಗುವವರೆಗೂ, ಮುಕ್ತಿಯಲ್ಲೂ ಕೂಡ ಕುಡಿಯುತ್ತಾ ಇರಿ. ॥ ೩ ॥

ನಿಗಮಕಲ್ಪತರೋರ್ಗಲಿತಂ ಫಲಂ
ಶುಕಮುಖಾದಮೃತದ್ರವಸಂಯುತಮ್ ।
ಪಿಬತ ಭಾಗವತಂ ರಸಮಾಲಯಂ
ಮುಹುರಹೋ ರಸಿಕಾ ಭುವಿ ಭಾವುಕಾಃ ॥ ೩ ॥

## ಕಥಾ ಪ್ರಾರಂಭ

ನೈಮಿಷೇಽನಿಮಿಷಕ್ಷೇತ್ರೇ ಋಷಯಃ ಶೌನಕಾದಯಃ ।
ಸತ್ರಂ ಸ್ವರ್ಗಾಯ ಲೋಕಾಯ ಸಹಸ್ರಸಮಮಾಸತ ॥ ೪ ॥

ತ ಏಕದಾ ತು ಮುನಯಃ ಪ್ರಾತರ್ಹುತಹುತಾಗ್ನಯಃ ।
ಸತ್ಕೃತಂ ಸೂತಮಾಸೀನಂ ಪಪ್ರಚ್ಛುರಿದಮಾದರಾತ್ ॥ ೫ ॥

*ಋಷಯ ಊಚುಃ*

ತ್ವಯಾ ಖಲು ಪುರಾಣಾನಿ ಸೇತಿಹಾಸಾನಿ ಚಾನಘ ।
ಆಖ್ಯಾತಾನ್ಯಪ್ಯಧೀತಾನಿ ಧರ್ಮಶಾಸ್ತ್ರಾಣಿ ಯಾನ್ಯುತ ॥ ೬ ॥

ಯಾನಿ ವೇದವಿದಾಂ ಶ್ರೇಷ್ಠೋ ಭಗವಾನ್ ಬಾದರಾಯಣಃ ।
ಅನ್ಯೇ ಚ ಮುನಯಃ ಸೂತ ಪರಾವರವಿದೋ ವಿದುಃ ॥ ೭ ॥

ವೇತ್ಥ ತ್ವಂ ಸೌಮ್ಯ ತತ್ಸರ್ವಂ ತತ್ತ್ವತಸ್ತದನುಗ್ರಹಾತ್ ।
ಬ್ರೂಯುಃ ಸ್ನಿಗ್ಧಸ್ಯ ಶಿಷ್ಯಸ್ಯ ಗುರವೋ ಗುಹ್ಯಮಪ್ಯುತ ॥ ೮ ॥

ತತ್ರ ತತ್ರಾಂಜಸಾಽಽಯುಷ್ಮನ್ ಭವತಾ ಯದ್ವಿನಿಶ್ಚಿತಮ್ ।
ಪುಂಸಾಮೇಕಾಂತತಃ ಶ್ರೇಯಸ್ತನ್ನಃ ಶಂಸಿತುಮರ್ಹಸಿ ॥ ೯ ॥

ಒಮ್ಮೆ ಶೌನಕಾದಿ ಮಹರ್ಷಿಗಳು ಶಾಶ್ವತಸುಖಮಯ ಭಗವಂತನ ಪ್ರಾಪ್ತಿಯ ಇಚ್ಛೆಯಿಂದ ದೇವತಾ ಕ್ಷೇತ್ರವಾದ ನೈಮಿಷಾರಣ್ಯದಲ್ಲಿ ಸಾವಿರಾರುವರ್ಷ ನಡೆಯಬೇಕಾದ ಒಂದು ಸತ್ರಯಾಗವನ್ನು ಕೈಗೊಂಡರು. ॥ ೪ ॥ ಒಂದು ದಿನ ಅವರೆಲ್ಲರೂ ಪ್ರಾತಃ ಕಾಲದ ಅಗ್ನಿಹೋತ್ರಾದಿ ನಿತ್ಯಕರ್ಮಗಳಿಂದ ನಿವೃತ್ತರಾಗಿ ಸೂತಪುರಾಣಿಕರನ್ನು ಪೂಜಿಸಿ, ಸತ್ಕರಿಸಿ, ಸುಖಾಸೀನದಲ್ಲಿ ಕುಳ್ಳಿರಿಸಿ ಅವರ ಬಳಿ ಹೀಗೆ ಪ್ರಶ್ನಿಸಿದರು. ॥ ೫ ॥

**ಋಷಿಗಳು ಹೇಳಿದರು** – ಪುಣ್ಯಾತ್ಮರಾದ ಸೂತ ಪುರಾಣಿಕರೇ ! ನೀವು ಎಲ್ಲ ಪುರಾಣಗಳನ್ನೂ, ಇತಿಹಾಸ, ಧರ್ಮ ಶಾಸ್ತ್ರಗಳನ್ನೂ, ವಿಧಿಪೂರ್ವಕವಾಗಿ ಅಧ್ಯಯನ ಮಾಡಿರುವಿರಿ. ಅವುಗಳನ್ನು ಚೆನ್ನಾಗಿ ವ್ಯಾಖ್ಯಾನವನ್ನೂ ಮಾಡಿರುವಿರಿ. ॥ ೬ ॥ ಭಗವಂತನ ಸಗುಣ-ನಿರ್ಗುಣ ರೂಪವನ್ನು ಬಲ್ಲವರೂ, ವೇದಜ್ಞರಲ್ಲಿ ಶ್ರೇಷ್ಠರೂ ಆದ ಭಗವಾನ್ ಬಾದರಾಯಣರು ಹಾಗೂ ಪರಮಾತ್ಮತತ್ತ್ವವನ್ನರಿತ ಇತರ ಮುನಿಗಳು ಅರಿತಿರುವುದೆಲ್ಲವನ್ನು ನೀವು ಅವರ ಅನುಗ್ರಹದಿಂದ ಯಥಾವತ್ತಾಗಿ ತಿಳಿದಿರುವಿರಿ. ಶುದ್ಧಾತ್ಮರಾದ ನೀವು ಅವರ ಪ್ರಿಯಶಿಷ್ಯರು. ಗುರುಗಳು ತಮ್ಮ ಪ್ರಿಯಶಿಷ್ಯರಿಗೆ ಎಲ್ಲ ಪರಮ ರಹಸ್ಯವನ್ನು ಹೇಳಿಬಿಡುತ್ತಾರೆ. ॥ ೭-೮ ॥ ಆಯುಷ್ಮಂತನೇ ! ಆ ಎಲ್ಲ ಶಾಸ್ತ್ರಗಳಲ್ಲಿ, ಗುರುಜನರ ಉಪದೇಶಗಳಲ್ಲಿ ಯಾವುದನ್ನು ಕಲಿಯುಗದ ಜೀವರಿಗೆ ಪರಮಶ್ರೇಯಸ್ಸಿನ ಸುಲಭಸಾಧನವೆಂದು ನೀವು ನಿಶ್ಚಯಿಸಿರುವಿರೋ ಅದನ್ನು ದಯಮಾಡಿ ನಮಗೆ ಹೇಳಿರಿ. ॥ ೯ ॥

ಪ್ರಾಯೇಣಾಲ್ಪಾಯುಷಃ ಸಭ್ಯ ಕಲಾವಸ್ಮಿನ್ಯುಗೇ ಜನಾಃ ।
ಮಂದಾಃ ಸುಮಂದಮತಯೋ ಮಂದಭಾಗ್ಯಾ ಹ್ಯುಪದ್ರುತಾಃ ॥ ೧೦ ॥

ಭೂರೀಣಿ ಭೂರಿಕರ್ಮಾಣಿ ಶ್ರೋತವ್ಯಾನಿ ವಿಭಾಗಶಃ ।
ಅತಃ ಸಾಧೋಽತ್ರ ಯತ್ಸಾರಂ ಸಮುದ್ಧೃತ್ಯ ಮನೀಷಯಾ ।
ಬ್ರೂಹಿ ನಃ ಶ್ರದ್ದಧಾನಾನಾಂ ಯೇನಾತ್ಮಾ ಸಂಪ್ರಸೀದತಿ ॥ ೧೧ ॥

ಸೂತ ಜಾನಾಸಿ ಭದ್ರಂ ತೇ ಭಗವಾನ್ ಸಾತ್ವತಾಂ ಪತಿಃ ।
ದೇವಕ್ಯಾಂ ವಸುದೇವಸ್ಯ ಜಾತೋ ಯಸ್ಯ ಚಿಕೀರ್ಷಯಾ ॥ ೧೨ ॥

ತನ್ನಃ ಶುಶ್ರೂಷಮಾಣಾನಾಮರ್ಹಸ್ಯಂಗಾನುವರ್ಣಿತುಮ್ ।
ಯಸ್ಯಾವತಾರೋ ಭೂತಾನಾಂ ಕ್ಷೇಮಾಯ ಚ ಭವಾಯ ಚ ॥ ೧೩ ॥

ಆಪನ್ನಃ ಸಂಸೃತಿಂ ಘೋರಾಂ ಯನ್ನಾಮ ವಿವಶೋ ಗೃಣನ್ ।
ತತಃ ಸದ್ಯೋ ವಿಮುಚ್ಯೇತ ಯದ್ಬಿಭೇತಿ ಸ್ವಯಂ ಭಯಮ್ ॥ ೧೪ ॥

ಯತ್ಪಾದಸಂಶ್ರಯಾಃ ಸೂತ ಮುನಯಃ ಪ್ರಶಮಾಯನಾಃ ।
ಸದ್ಯಃ ಪುನಂತ್ಯುಪಸ್ಪೃಷ್ಟಾಃ ಸ್ವರ್ಧುನ್ಯಾಪೋಽನುಸೇವಯಾ ॥ ೧೫ ॥

ಕೋ ವಾ ಭಗವತಸ್ತಸ್ಯ ಪುಣ್ಯಶ್ಲೋಕೇಡ್ಯಕರ್ಮಣಃ ।
ಶುದ್ಧಿಕಾಮೋ ನ ಶೃಣುಯಾದ್ಯಶಃ ಕಲಿಮಲಾಪಹಮ್ ॥ ೧೬ ॥

ತಸ್ಯ ಕರ್ಮಾಣ್ಯುದಾರಾಣಿ ಪರಿಗೀತಾನಿ ಸೂರಿಭಿಃ ।
ಬ್ರೂಹಿ ನಃ ಶ್ರದ್ದಧಾನಾನಾಂ ಲೀಲಯಾ ದಧತಃ ಕಲಾಃ ॥ ೧೭ ॥

ಅಥಾಖ್ಯಾಹಿ ಹರೇರ್ಧೀಮನ್ ಅವತಾರಕಥಾಃ ಶುಭಾಃ ।
ಲೀಲಾ ವಿದಧತಃ ಸ್ವೈರಮೀಶ್ವರಸ್ಯಾತ್ಮಮಾಯಯಾ ॥ ೧೮ ॥

ಓ ಸಜ್ಜನರೇ! ಈ ಕಲಿಯುಗದಲ್ಲಿ ಜನರು ಸಾಮಾನ್ಯವಾಗಿ ಅಲ್ಪಾಯುಸ್ಸುಳ್ಳವರು. ಮಂದಗಾಮಿಗಳು, ಮೂಢಬುದ್ಧಿಯುಳ್ಳವರು, ಭಾಗ್ಯಹೀನರು, ಬಗೆ-ಬಗೆಯ ಪೀಡೆಗಳಿಗೆ ತುತ್ತಾಗಿ ನರಳುತ್ತಿದ್ದಾರೆ. ॥ ೧೦ ॥ ಇಷ್ಟೇ ಅಲ್ಲ, ಸಾಧುಗಳಾದ ಸೂತ ಪುರಾಣಿಕರೇ! ಶಾಸ್ತ್ರಗಳು ಬಹಳಷ್ಟು ಇವೆ. ಆದರೆ ಅವುಗಳಲ್ಲಿ ನಿಶ್ಚಿತವಾದ ಒಂದು ಸಾಧನೆ ಯಾವುದು ಎಂಬುದು ಅರಿವಿಗೆ ಬರುವುದಿಲ್ಲ. ಅನೇಕ ಪ್ರಕಾರದ ಕರ್ಮಗಳು ಮತ್ತು ಅವುಗಳ ಸಾಧನೆಗಳ ವರ್ಣನೆಯೂ ಇದೆ. ಅವುಗಳಲ್ಲಿ ಅನೇಕ ರೀತಿಯ ಮಾತುಗಳು ಕೇಳಲು ಸಿಗುತ್ತವೆ. ತಾವು ತಮ್ಮ ಬುದ್ಧಿ-ವಿವೇಕದಿಂದ ಅವುಗಳಲ್ಲಿನ ಸಾರವಾದ ಮಾತನ್ನು ತೆಗೆದು ದಯವಿಟ್ಟು ನಮಗೆ ಹೇಳಿರಿ ಎಂದು ವಿನಂತಿಸುತ್ತೇವೆ. ಅದರಿಂದ ನಮ್ಮ ಅಂತಃಕರಣಕ್ಕೆ ಆಧ್ಯಾತ್ಮಿಕ ಶಾಂತಿ ಹಾಗೂ ಪರಮಾನಂದ ಪ್ರಾಪ್ತಿ ಉಂಟಾದೀತು. ಇದನ್ನು ತಮ್ಮಿಂದ ತಿಳಿಯುವುದರಲ್ಲಿ ನಮಗೆ ಅತ್ಯಂತ ಶ್ರದ್ಧೆಯಿದೆ. ॥ ೧೧ ॥

ನಿಮಗೆ ಮಂಗಳವಾಗಲಿ, ಸೂತಪುರಾಣಿಕರೇ! ಯದುವಂಶೀಯರ ರಕ್ಷಕನೂ, ಭಕ್ತವತ್ಸಲನೂ ಆದ ಭಗವಾನ್ ಶ್ರೀಕೃಷ್ಣನು ಏನನ್ನು ಮಾಡಬೇಕೆಂಬ ಇಚ್ಛೆಯಿಂದ ವಸುದೇವನ ಧರ್ಮಪತ್ನಿಯಾದ ದೇವಕಿಯಲ್ಲಿ ಅವತರಿಸಿದನು ? ಎಂಬುದು ನಿಮಗೆ ತಿಳಿದೇ ಇದೆ. ॥ ೧೨ ॥ ನಾವು ಅದನ್ನು ಕೇಳಬೇಕೆಂದು ಬಯಸುತ್ತಿದ್ದೇವೆ. ದಯಮಾಡಿ ತಿಳಿಸಿರಿ. ಭಗವಂತನ ಅವತಾರವು ಜೀವಿಗಳ ಪರಮಶ್ರೇಯಸ್ಸಿಗಾಗಿ ಮತ್ತು ಅವರ ಭಗವತ್ಪ್ರೇಮಮಯ ಸಮೃದ್ಧಿಗಾಗಿಯೇ ಆಗುತ್ತದೆ. ॥ ೧೩ ॥ ಈ ಘೋರವಾದ ಸಂಸಾರಚಕ್ರದಲ್ಲಿ ಸಿಕ್ಕಿಹಾಕಿಕೊಂಡಿರುವ ಜೀವನು ಆ ಭಗವಂತನ ಮಂಗಳಮಯವಾದ ನಾಮವನ್ನು ಯಾವುದೇ ಸ್ಥಿತಿಯಲ್ಲಿ ಉಚ್ಚರಿಸಿದರೂ ಅವನು ಒಡನೆಯೇ ಅದರಿಂದ ಬಿಡುಗಡೆ ಹೊಂದುತ್ತಾನೆ. ಏಕೆಂದರೆ, ಆ ಭಗವಂತನಿಗೆ ಭಯವೇ ಭಯಪಡುತ್ತದೆ. ॥ ೧೪ ॥ ಸೂತಪುರಾಣಿಕರೇ ! ಪರಮವಿರಕ್ತರೂ, ಪ್ರಶಾಂತರೂ ಆದ ಮುನಿಗಳು ಆ ಭಗವಂತನ ಚರಣಾರವಿಂದಗಳನ್ನು ಆಶ್ರಯಿಸಿ ಪವಿತ್ರರಾಗಿ, ತಮ್ಮ ಸ್ಪರ್ಶಮಾತ್ರದಿಂದ ಇತರರನ್ನು ಕೂಡಲೇ ಪವಿತ್ರರಾಗಿಸುತ್ತಾರೆ. ಗಂಗಾತೀರ್ಥವಾದರೋ ಬಹಳ ದಿನಗಳವರೆಗೆ ಸೇವಿಸಿದರೆ ಮಾತ್ರ ಪವಿತ್ರತೆಯನ್ನು ಉಂಟುಮಾಡುವುದು. ॥ ೧೫ ॥ ಪುಣ್ಯಕೀರ್ತಿಯಾದ ಸ್ತೋತ್ರಾರ್ಹವಾದ ದಿವ್ಯಲೀಲೆಗಳನ್ನು ನಡೆಸಿದಂತಹ ಭಗವಂತನ ಕಲಿಕಲ್ಮಷಹರವಾದ ಪವಿತ್ರಕೀರ್ತಿಯನ್ನು ಆತ್ಮ ಶುದ್ಧಿಯನ್ನು ಬಯಸುವವರು ಯಾರುತಾನೇ ಶ್ರವಣ ಮಾಡುವುದಿಲ್ಲ? ॥ ೧೬ ॥ ಭಗವಂತನು ಲೀಲೆಯಿಂದಲೇ ಅವತರಿಸುತ್ತಾನೆ. ನಾರದಾದಿ ಮಹಾತ್ಮರು ಅವನ ಉದಾರ ಕೀರ್ತಿಯನ್ನು ಹಾಡಿ ಹೊಗಳಿದ್ದಾರೆ. ಶ್ರದ್ಧಾಳುಗಳಾದ ನಮಗೆ ಅದನ್ನು ನೀವು ವರ್ಣಿಸಿರಿ. ॥ ೧೭ ॥

ಓ ಧೀಮಂತನೇ! ಸರ್ವಸಮರ್ಥನಾದ ಆ ಪ್ರಭುವು ತನ್ನ ಯೋಗಮಾಯೆಯಿಂದ ಸ್ವಚ್ಛೆಯಿಂದಲೇ ಈ ಲೀಲೆಗಳನ್ನು ಮಾಡುತ್ತಾನೆ. ಆ ಶ್ರೀಹರಿಯ ಮಂಗಳಮಯ ಅವತಾರ ಕಥೆಗಳನ್ನು ಈಗ ನೀವು ವರ್ಣಿಸುವವರಾಗಿರಿ. ॥ ೧೮ ॥

ವಯಂ ತು ನ ವಿತೃಪ್ಯಾಮ ಉತ್ತಮಶ್ಲೋಕವಿಕ್ರಮೇ ।
ಯಚ್ಛೃಣ್ವತಾಂ ರಸಜ್ಞಾನಾಂ ಸ್ವಾದು ಸ್ವಾದು ಪದೇ ಪದೇ ॥ ೧೯ ॥

ಪುಣ್ಯ-ಶ್ಲೋಕನಾದ ಭಗವಂತನ ದಿವ್ಯವಿಕ್ರಮ ಕಥೆಗಳನ್ನು ಎಷ್ಟು ಕೇಳಿದರೂ ನಮಗೆ ಸಾಕೆನಿಸುವುದಿಲ್ಲ. ಏಕೆಂದರೆ, ರಸಜ್ಞರಾದ ಶ್ರೋತೃಗಳಿಗೆ ಅವನ ದಿವ್ಯಲೀಲೆಗಳಲ್ಲಿ ಹೆಜ್ಜೆ-ಹೆಜ್ಜೆಗೆ ಹೊಸ-ಹೊಸ ರಸಾನುಭವ ಉಂಟಾಗುತ್ತದೆ. ॥ ೧೯ ॥

ಕೃತವಾನ್ ಕಿಲ ವೀರ್ಯಾಣಿ ಸಹ ರಾಮೇಣ ಕೇಶವಃ ।
ಅತಿಮರ್ತ್ಯಾನಿ ಭಗವಾನ್ ಗೂಢಃ ಕಪಟಮಾನುಷಃ ॥ ೨೦ ॥

ಭಗವಾನ್ ಶ್ರೀಕೃಷ್ಣನು ತನ್ನ ನಿಜಸ್ವರೂಪವನ್ನು ಮರೆಸಿಕೊಂಡು ಜನರೆದುರಿಗೆ ಮನುಷ್ಯನಂತೆ ನಟಿಸುತ್ತಿದ್ದನು. ಆದರೆ ಆ ಕೇಶವನು ಬಲರಾಮನೊಂದಿಗೆ ಕೂಡಿ ಅತಿಮಾನುಷವಾದ ಅನೇಕ ಲೀಲಾ-ಪರಾಕ್ರಮಗಳನ್ನು ಪ್ರಕಟಿಸಿದ್ದನು. ಅವುಗಳನ್ನು ನಮಗೆ ವರ್ಣಿಸಿ ಹೇಳಿರಿ.॥ ೨೦ ॥

ಕಲಿಮಾಗತಮಾಜ್ಞಾಯ ಕ್ಷೇತ್ರೇಽಸ್ಮಿನ್ ವೈಷ್ಣವೇ ವಯಮ್ ।
ಆಸೀನಾ ದೀರ್ಘಸತ್ರೇಣ ಕಥಾಯಾಂ ಸಕ್ಷಣಾ ಹರೇಃ ॥ ೨೧ ॥

ಕಲಿಯುಗವು ಬಂದಿರುವುದನ್ನು ಗಮನಿಸಿ ನಾವು ಈ ವೈಷ್ಣವಕ್ಷೇತ್ರದಲ್ಲಿ ದೀರ್ಘಕಾಲೀನ ಒಂದು ಸತ್ರದ ಸಂಕಲ್ಪ ಗೈದು ಕುಳಿತಿದ್ದೇವೆ. ಶ್ರೀಹರಿಯ ಕಥೆಯನ್ನು ಕೇಳಲು ನಮಗೆ ಬಹಳವಾದ ಉತ್ಕಂಠತೆ ಉಂಟಾಗಿದೆ ; ಅವಕಾಶವೂ ಪ್ರಾಪ್ತವಾಗಿದೆ.॥ ೨೧ ॥

ತ್ವಂ ನಃ ಸಂದರ್ಶಿತೋ ಧಾತ್ರಾ ದುಸ್ತರಂ ನಿಸ್ತಿತೀರ್ಷತಾಮ್ ।
ಕಲಿಂ ಸತ್ತ್ವಹರಂ ಪುಂಸಾಂ ಕರ್ಣಧಾರ ಇವಾರ್ಣವಮ್ ॥ ೨೨ ॥

ಈ ಕಲಿಯುಗವು ಮನುಷ್ಯರ ಅಂತಃಕರಣದ ಪಾವಿತ್ರ್ಯವನ್ನು ಶಕ್ತಿಯನ್ನು ನಾಶಮಾಡುವಂತಹುದು. ಇದನ್ನು ದಾಟಿ ಹೋಗುವುದು ತುಂಬಾ ಕಷ್ಟ. ಸಮುದ್ರವನ್ನು ದಾಟುವವನಿಗೆ ನಾವಿಕನು ಸಿಗುವಂತೆ ಇದನ್ನು ದಾಟಲು ಇಚ್ಛಿಸುವ ನಮಗೆ ಬ್ರಹ್ಮದೇವರೇ ನಿಮ್ಮನ್ನು ತೋರಿಸಿ ಕೊಟ್ಟಿರುವರು. ॥ ೨೨ ॥

ಬ್ರೂಹಿ ಯೋಗೇಶ್ವರೇ ಕೃಷ್ಣೇ ಬ್ರಹ್ಮಣ್ಯೇ ಧರ್ಮವರ್ಮಣಿ ।
ಸ್ವಾಂ ಕಾಷ್ಠಾಮಧುನೋಪೇತೇ ಧರ್ಮಃ ಕಂ ಶರಣಂ ಗತಃ ॥ ೨೩ ॥

ಧರ್ಮರಕ್ಷಕನೂ, ಬ್ರಾಹ್ಮಣಭಕ್ತನೂ, ಯೋಗೇಶ್ವರನೂ ಆದ ಭಗವಾನ್ ಶ್ರೀಕೃಷ್ಣನು ತನ್ನ ಧಾಮಕ್ಕೆ ತೆರಳಿದ ಬಳಿಕ ಧರ್ಮವು ಯಾರನ್ನು ಶರಣು ಹೊಂದಿತು ? ಇದನ್ನು ತಿಳಿಸಿರಿ. ॥ ೨೩ ॥

*ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ನೈಮಿಷೀಯೋಪಾಖ್ಯಾನೇ ಪ್ರಥಮೋಽಧ್ಯಾಯಃ ॥ ೧ ॥

# ಎರಡನೆಯ ಅಧ್ಯಾಯ

## ಭಗವತ್ಕಥೆ ಮತ್ತು ಭಗವದ್ಭಕ್ತಿಯ ಮಾಹಾತ್ಮ್ಯ

*ವ್ಯಾಸ ಉವಾಚ*

ಇತಿ ಸಂಪ್ರಶ್ನ ಸಂಹೃಷ್ಟೋ ವಿಪ್ರಾಣಾಂ ರೌಮಹರ್ಷಣಿಃ ।
ಪ್ರತಿಪೂಜ್ಯ ವಚಸ್ತೇಷಾಂ ಪ್ರವಕ್ತುಮುಪಚಕ್ರಮೇ ॥ ೧ ॥

**ಶ್ರೀವ್ಯಾಸರು ಹೇಳುತ್ತಾರೆ –** ಶೌನಕಾದಿ ಬ್ರಹ್ಮವಾದಿಗಳಾದ ಮಹರ್ಷಿಗಳ ಈ ಪ್ರಶ್ನೆಯನ್ನು ಕೇಳಿ ರೋಮಹರ್ಷಣ ಪುತ್ರರಾದ ಉಗ್ರಶ್ರವ ಪುರಾಣಿಕರಿಗೆ ಬಹಳ ಆನಂದವಾಯಿತು. ಅವರು ಋಷಿಗಳ ಈ ಮಂಗಳಮಯ ಪ್ರಶ್ನೆಯನ್ನು ಅಭಿನಂದಿಸಿ ಶ್ರೀಗುರು ದೇವತಾ ನಮಸ್ಕಾರಪೂರ್ವಕ ಹೀಗೆ ಹೇಳಲುಪಕ್ರಮಿಸಿದರು. ॥ ೧ ॥

*ಸೂತ ಉವಾಚ*

ಯಂ ಪ್ರವ್ರಜಂತಮನುಪೇತಮಪೇತಕೃತ್ಯಂ
ದ್ವೈಪಾಯನೋ ವಿರಹಕಾತರ ಆಜುಹಾವ ।
ಪುತ್ರೇತಿ ತನ್ಮಯತಯಾ ತರವೋಽಭಿನೇದು-
ಸ್ತಂ ಸರ್ವಭೂತಹೃದಯಂ ಮುನಿಮಾನತೋಽಸ್ಮಿ ॥ ೨ ॥

**ಸೂತಪುರಾಣಿಕರು ಹೇಳಿದರು –** ಸಮಸ್ತ ಪ್ರಾಣಿಗಳ ಆತ್ಮ ಸ್ವರೂಪರಾದ ಶ್ರೀಶುಕಮಹಾಮುನಿಗೆ ನಮಸ್ಕಾರವು. ಸಂಸಾರ ಸಂಬಂಧವನ್ನು ಕೂಡಿಕೊಳ್ಳದೆ ಎಲ್ಲ ಕರ್ಮಗಳಿಂದಲೂ ಬಿಡುಗಡೆಹೊಂದಿ ಕೃತಕೃತ್ಯರಾಗಿದ್ದ ಜ್ಞಾನ-ವೈರಾಗ್ಯನಿಧಿಗಳಾದ ಈ ಮಹಾತ್ಮನು ಸರ್ವಸಂಗ ಪರಿತ್ಯಾಗಮಾಡಿ ಒಬ್ಬಂಟಿಗನಾಗಿ ಮನೆಯಿಂದ ಹೊರಟುಬಿಟ್ಟಾಗ ತಂದೆಯಾದ ವೇದವ್ಯಾಸರು ಪುತ್ರವಿಯೋಗದಿಂದ ತಲ್ಲಣಿಸುತ್ತಾ ಓ ಪುತ್ರಾ! ಓ ಪುತ್ರಾ! ಎಂದು

ಯಃ ಸ್ವಾನುಭಾವಮಖಿಲಶ್ರುತಿಸಾರಮೇಕ-
ಮಧ್ಯಾತ್ಮದೀಪಮತಿತಿತೀರ್ಷತಾಂ ತಮೋಽಂಧಮ್ ।
ಸಂಸಾರಿಣಾಂ ಕರುಣಯಾಽಽಹ ಪುರಾಣಗುಹ್ಯಂ
ತಂ ವ್ಯಾಸಸೂನುಮುಪಯಾಮಿ ಗುರುಂ ಮುನೀನಾಮ್ ॥ ೩ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೪ ॥

ಮುನಯಃ ಸಾಧು ಪೃಷ್ಟೋಽಹಂ ಭವದ್ಭಿರ್ಲೋಕಮಂಗಲಮ್ ।
ಯತ್ಕೃತಃ ಕೃಷ್ಣ ಸಂಪ್ರಶ್ನೋ ಯೇನಾತ್ಮಾ ಸುಪ್ರಸೀದತಿ ॥ ೫ ॥

ಸ ವೈ ಪುಂಸಾಂ ಪರೋ ಧರ್ಮೋ ಯತೋ ಭಕ್ತಿರಧೋಕ್ಷಜೇ ।
ಅಹೈತುಕ್ಯಪ್ರತಿಹತಾ ಯಯಾಽಽತ್ಮಾ ಸಂಪ್ರಸೀದತಿ ॥ ೬ ॥

ವಾಸುದೇವೇ ಭಗವತಿ ಭಕ್ತಿಯೋಗಃ ಪ್ರಯೋಜಿತಃ ।
ಜನಯತ್ಯಾಶು ವೈರಾಗ್ಯಂ ಜ್ಞಾನಂ ಚ ಯದಹೈತುಕಮ್ ॥ ೭ ॥

ಧರ್ಮಃ ಸ್ವನುಷ್ಠಿತಃ ಪುಂಸಾಂ ವಿಷ್ವಕ್ಸೇನಕಥಾಸು ಯಃ ।
ನೋತ್ಪಾದಯೇದ್ಯದಿ ರತಿಂ ಶ್ರಮ ಏವ ಹಿ ಕೇವಲಮ್ ॥ ೮ ॥

ಧರ್ಮಸ್ಯ ಹ್ಯಾಪವರ್ಗ್ಯಸ್ಯ ನಾರ್ಥೋಽರ್ಥಾಯೋಪಕಲ್ಪತೇ ।
ನಾರ್ಥಸ್ಯ ಧರ್ಮೈಕಾಂತಸ್ಯ ಕಾಮೋ ಲಾಭಾಯ ಹಿ ಸ್ಮೃತಃ ॥ ೯ ॥

ಕೂಗತೊಡಗಿದರು. ಆಗ ಅಲ್ಲಿದ್ದ ವೃಕ್ಷಗಳೇ ತನ್ಮಯತೆಯಿಂದ ಕೂಡಿ ಅವರ ಪರವಾಗಿ 'ಭೋಃ' ಎಂದು ಓಗೊಟ್ಟವು. ಇಂತಹ ಎಲ್ಲರ ಹೃದಯದಲ್ಲಿ ವಿರಾಜಮಾನರಾಗಿ ಆತ್ಮರೂಪರಾಗಿರುವ ಗುರು ಶ್ರೀಶುಕಮಹಾಮುನಿಗೆ ನಾನು ವಂದಿಸುತ್ತೇನೆ. ॥ ೨ ॥ ಈ ಶ್ರೀಮದ್ಭಾಗವತವು ಅತ್ಯಂತ ಗೋಪನೀಯ – ರಹಸ್ಯಾತ್ಮಕ ಪುರಾಣವಾಗಿದೆ. ಇದು ಭಗವತ್‌ಸ್ವರೂಪದ ಅನುಭವ ಮಾಡಿಸುವಂತಹುದು ಹಾಗೂ ಸಮಸ್ತ ವೇದಗಳ ಸಾರವಾಗಿದೆ. ಸಂಸಾರ ಚಕ್ರದಲ್ಲಿ ಸಿಕ್ಕಿಕೊಂಡು ಘೋರ ಅಜ್ಞಾನಾಂಧಕಾರದಿಂದ ದಾಟಿ ಹೋಗಲೂ ಬಯಸುವ ಜನರಿಗಾಗಿ ಇದು ಆಧ್ಯಾತ್ಮಿಕ ತತ್ತ್ವಗಳನ್ನು ಪ್ರಕಾಶಿಸುವ ಒಂದು ಅದ್ವಿತೀಯ ದೀಪವಾಗಿದೆ. ನಿಜವಾಗಿ ಅಂತಹವರ ಮೇಲೆ ಕರುಣೆತೋರಿ ದೊಡ್ಡ-ದೊಡ್ಡ ಮುನಿಗಳಿಗೂ, ಆಚಾರ್ಯರಾದ ಶ್ರೀಶುಕಮಹರ್ಷಿಗಳು ಇದನ್ನು ವರ್ಣಿಸಿರುವರು. ನಾನು ಅವರನ್ನು ಶರಣುಹೊಂದುತ್ತೇನೆ. ॥ ೩ ॥ ಮನುಷ್ಯರಲ್ಲಿ ಸರ್ವಶ್ರೇಷ್ಠರಾದ ಭಗವದವತಾರಿಗಳಾದ ನರ-ನಾರಾಯಣ ಋಷಿಗಳನ್ನೂ, ಸರಸ್ವತೀ ದೇವಿಯನ್ನೂ, ಗುರುಗಳಾದ ವೇದವ್ಯಾಸರನ್ನೂ ನಮಸ್ಕರಿಸಿ ಅನಂತರ ಸಂಸಾರ ಮತ್ತು ಅಂತಃಕರಣದ ಸಮಸ್ತ ವಿಕಾರಗಳ ಮೇಲೆ ವಿಜಯ ಪಡೆಯುವಂತಹ ಶ್ರೀಮದ್ಭಾಗವತ ಮಹಾಪುರಾಣವನ್ನು ವಾಚನ ಮಾಡಬೇಕು. ॥ ೪ ॥

ಮಹರ್ಷಿಗಳೇ! ನೀವು ಸಮಸ್ತ ವಿಶ್ವದ ಮಂಗಳಕ್ಕಾಗಿಯೇ ಈ ಸುಂದರವಾದ ಪ್ರಶ್ನೆಯನ್ನು ಕೇಳಿರುವಿರಿ. ಏಕೆಂದರೆ, ನೀವು ಶ್ರೀಕೃಷ್ಣನ ವಿಷಯವಾಗಿ ಪ್ರಶ್ನಿಸಿರುವಿರಿ. ಇದರಿಂದ ಆತ್ಮ-ಮನೋ ಬುದ್ಧಿಗಳೆಲ್ಲವೂ ಪರಿಶುದ್ಧವಾಗಿ ಪ್ರಸನ್ನವಾಗುವುವು. ॥ ೫ ॥ ಭಗವಾನ್ ಶ್ರೀಕೃಷ್ಣನಲ್ಲಿ ಭಕ್ತಿ ಉಂಟಾಗುವಂತಹ ಧರ್ಮವೇ ಮನುಷ್ಯರಿಗೆ ಸರ್ವಶ್ರೇಷ್ಠವಾಗಿದೆ. ನಿರ್ವ್ಯಾಜವೂ, ನಿತ್ಯನಿರಂತರವೂ ಆದ ದೃಢ ಭಕ್ತಿಯಿಂದಲೇ ಹೃದಯವು ಆನಂದಸ್ವರೂಪೀ ಪರಮಾತ್ಮನ ಪ್ರಾಪ್ತಿಮಾಡಿಕೊಂಡು ಕೃತಕೃತ್ಯವಾಗುತ್ತದೆ. ॥ ೬ ॥ ಭಗವಾನ್ ಶ್ರೀಕೃಷ್ಣನಲ್ಲಿ ಭಕ್ತಿಯುಂಟಾಗುತ್ತಲೇ, ಅನನ್ಯ ಪ್ರೇಮದಿಂದ ಚಿತ್ತವು ಅದರಲ್ಲಿ ತೊಡಗಿದಾಗಲೇ ಭಗವತ್ಕೃಪೆಯಿಂದ ನಿಷ್ಕಾಮ ಜ್ಞಾನವೂ, ವೈರಾಗ್ಯವೂ ಆವಿರ್ಭವಿಸುತ್ತದೆ. ॥ ೭ ॥ ಧರ್ಮವನ್ನು ಸರಿಯಾಗಿ ಅನುಷ್ಠಾನ ಮಾಡಿದ ಮೇಲೆಯೂ ಮನುಷ್ಯನ ಹೃದಯದಲ್ಲಿ ಭಗವಂತನ ಲೀಲಾಕಥೆಗಳಲ್ಲಿ ಅನುರಾಗವು ಉದಯಿಸದಿದ್ದರೆ ಅದು ಧರ್ಮವೇ ಅಲ್ಲ, ಕೇವಲ ಶ್ರಮವಷ್ಟೇ. ॥ ೮ ॥ ಕೆಲವು ಜನರು ತಮ್ಮ ಕಾಮನೆಯನ್ನೇ ಲಕ್ಷದಲ್ಲಿಟ್ಟುಕೊಂಡು ಧರ್ಮವನ್ನು ಆಚರಿಸುತ್ತಾರೆ; ಅದುಸರಿಯಾದುದಲ್ಲ. ಕಾರಣ, ನಿಷ್ಕಾಮಭಾವದಿಂದ ಭಗವತ್ ಪ್ರೀತ್ಯರ್ಥವಾಗಿ ಮಾಡಿದ ಧರ್ಮಾಚರಣೆಯೇ ಮೋಕ್ಷಪ್ರದವಾಗಿದೆ. ಹಾಗೆಯೇ ಇನ್ನೂ ಕೆಲವರು ತಮ್ಮ ಅರ್ಥ(ಧನ)ವನ್ನು ತಮ್ಮ ಕಾಮನೆಯ ಪೂರ್ತಿಗಾಗಿ ವ್ಯಯಿಸುತ್ತಾರೆ; ಅದೂ ಸರಿಯಲ್ಲ. ಅದನ್ನು ಲೋಕಕಲ್ಯಾಣಕ್ಕಾಗಿ ಅರ್ಥಾತ್ ಇತರ ಜನರ ಸೇವೆಯಲ್ಲಿ ಭಗವತ್‌ಪ್ರೀತ್ಯರ್ಥ ಸದ್ವಿನಿಯೋಗ ಮಾಡಿದರೆ ಅದೇ ಧನವು ಮೋಕ್ಷಪ್ರದವಾಗುವುದು. ಆದ್ದರಿಂದ ಧರ್ಮಾನುಷ್ಠಾನವನ್ನು ಭಗವತ್ ಪ್ರೀತ್ಯರ್ಥವಾಗಿ ಆಚರಿಸಿ, ದ್ರವ್ಯವನ್ನು ಸತ್ಕಾರ್ಯಗಳಲ್ಲಿ, ಜನತಾ-ಜನಾರ್ದನನ ಸೇವೆಯಲ್ಲಿ ತೊಡಗಿಸಬೇಕು. ॥ ೯ ॥

ಕಾಮಸ್ಯ ನೇಂದ್ರಿಯಪ್ರೀತಿರ್ಲಾಭೋ ಜೀವೇತ ಯಾವತಾ ।
ಜೀವಸ್ಯ ತತ್ತ್ವಜಿಜ್ಞಾಸಾ ನಾರ್ಥೋ ಯಶ್ಚೇಹ ಕರ್ಮಭಿಃ ॥ ೧೦ ॥

ವದಂತಿ ತತ್ತತ್ತ್ವವಿದಸ್ತತ್ತ್ವಂ ಯಜ್ಜ್ಞಾನಮದ್ವಯಮ್ ।
ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ॥ ೧೧ ॥

ತಚ್ಛ್ರದ್ದಧಾನಾ ಮುನಯೋ ಜ್ಞಾನವೈರಾಗ್ಯಯುಕ್ತಯಾ ।
ಪಶ್ಯಂತ್ಯಾತ್ಮನಿ ಚಾತ್ಮಾನಂ ಭಕ್ತ್ಯಾ ಶ್ರುತಗೃಹೀತಯಾ ॥ ೧೨ ॥

ಅತಃ ಪುಂಭಿರ್ದ್ವಿಜಶ್ರೇಷ್ಠಾ ವರ್ಣಾಶ್ರಮವಿಭಾಗಶಃ ।
ಸ್ವನುಷ್ಠಿತಸ್ಯ ಧರ್ಮಸ್ಯ ಸಂಸಿದ್ಧಿರ್ಹರಿತೋಷಣಮ್ ॥ ೧೩ ॥

ತಸ್ಮಾದೇಕೇನ ಮನಸಾ ಭಗವಾನ್ ಸಾತ್ವತಾಂ ಪತಿಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಧ್ಯೇಯಃ ಪೂಜ್ಯಶ್ಚ ನಿತ್ಯದಾ ॥ ೧೪ ॥

ಯದನುಧ್ಯಾಸಿನಾ ಯುಕ್ತಾಃ ಕರ್ಮಗ್ರಂಥಿನಿಬಂಧನಮ್ ।
ಛಿಂದಂತಿ ಕೋವಿದಾಸ್ತಸ್ಯ ಕೋ ನ ಕುರ್ಯಾತ್ಕಥಾರತಿಮ್ ॥ ೧೫ ॥

ಶುಶ್ರೂಷೋಃ ಶ್ರದ್ದಧಾನಸ್ಯ ವಾಸುದೇವಕಥಾರುಚಿಃ ।
ಸ್ಯಾನ್ಮಹತ್ಸೇವಯಾ ವಿಪ್ರಾಃ ಪುಣ್ಯತೀರ್ಥನಿಷೇವಣಾತ್ ॥ ೧೬ ॥

ಶೃಣ್ವತಾಂ ಸ್ವಕಥಾಂ ಕೃಷ್ಣಃ ಪುಣ್ಯಶ್ರವಣಕೀರ್ತನಃ ।
ಹೃದ್ಯಂತಃಸ್ಥೋ ಹ್ಯಭದ್ರಾಣಿ ವಿಧುನೋತಿ ಸುಹೃತ್ಸತಾಮ್ ॥ ೧೭ ॥

ನಷ್ಟಪ್ರಾಯೇಷ್ವಭದ್ರೇಷು ನಿತ್ಯಂ ಭಗವದಾಶ್ರಯಾತ್ ।
ಭಗವತ್ಯುತ್ತಮಶ್ಲೋಕೇ ಭಕ್ತಿರ್ಭವತಿ ನೈಷ್ಠಿಕೀ ॥ ೧೮ ॥

ತದಾ ರಜಸ್ತಮೋಭಾವಾಃ ಕಾಮಲೋಭಾದಯಶ್ಚ ಯೇ ।
ಚೇತ ಏತೈರನಾವಿದ್ಧಂ ಸ್ಥಿತಂ ಸತ್ತ್ವೇ ಪ್ರಸೀದತಿ ॥ ೧೯ ॥

ಏವಂ ಪ್ರಸನ್ನಮನಸೋ ಭಗವದ್ಭಕ್ತಿಯೋಗತಃ ।
ಭಗವತ್ತತ್ತ್ವವಿಜ್ಞಾನಂ ಮುಕ್ತಸಂಗಸ್ಯ ಜಾಯತೇ ॥ ೨೦ ॥

ಭೋಗವಿಲಾಸದ ಫಲವು ಇಂದ್ರಿಯಗಳನ್ನು ತೃಪ್ತಪಡಿಸುವದಷ್ಟೇ ಅಲ್ಲ, ಕೇವಲ ಜೀವನ ನಿರ್ವಾಹವೇ ಅದರ ಪ್ರಯೋಜನ. ಜೀವನದ ಫಲವು ತತ್ತ್ವಜಿಜ್ಞಾಸೆಯೇ ಆಗಿದೆ. ಅನೇಕ ಕರ್ಮಗಳನ್ನಾಚರಿಸಿ ಸ್ವರ್ಗಾದಿಗಳನ್ನು ಪಡೆಯುವುದು ಜೀವನದ ಗುರಿಯಲ್ಲ. ॥ ೧೦ ॥ ಜ್ಞಾತಾ, ಜ್ಞೇಯ ಇವುಗಳ ಭೇದರಹಿತವಾದ ಅಖಂಡ ಅದ್ವಿತೀಯ ಸಚ್ಚಿದಾನಂದ ಪರಬ್ರಹ್ಮಸ್ವರೂಪದ ಅದ್ವೈತ ಜ್ಞಾನವನ್ನೇ ಜ್ಞಾನವೆಂದು ತತ್ತ್ವಜ್ಞರು ಹೇಳುತ್ತಾರೆ. ಅದನ್ನೇ ಕೆಲವರು ಬ್ರಹ್ಮವೆಂದೂ, ಕೆಲವರು ಪರಮಾತ್ಮನೆಂದೂ, ಕೆಲವರು ಭಗವಂತನೆಂದೂ ಹೇಳುತ್ತಾರೆ. ॥ ೧೧ ॥ ಆ ಪರಮಾತ್ಮತತ್ತ್ವದಲ್ಲಿ ಶ್ರದ್ಧೆಯುಳ್ಳ ಮುನಿಗಳು ಭಾಗವತ-ಶ್ರವಣದಿಂದ ಪ್ರಾಪ್ತವಾದ ಜ್ಞಾನ-ವೈರಾಗ್ಯ ಯುಕ್ತ ಭಕ್ತಿಯ ಮೂಲಕ ತಮ್ಮ ಹೃದಯದಲ್ಲಿ ಆ ಪರಮಾತ್ಮನನ್ನು ಕಂಡುಕೊಳ್ಳುತ್ತಾರೆ. ॥ ೧೨ ॥ ಶೌನಕಾದಿ ಋಷಿಗಳಿರಾ! ಆದ್ದರಿಂದ ತಮ್ಮ-ತಮ್ಮ ವರ್ಣಾಶ್ರಮಗಳನುಸಾರವಾಗಿ ಮನುಷ್ಯರು ಆಚರಿಸುವ ಧರ್ಮದ ಅನುಷ್ಠಾನದ ಪೂರ್ಣ ಸಿದ್ಧಿಯು ಭಗವಂತನು ಪ್ರಸನ್ನನಾಗುವುದರಲ್ಲೇ ಇದೆ. ॥ ೧೩ ॥ ಆದುದರಿಂದ ಏಕಾಗ್ರ ಮನಸ್ಸಿನಿಂದ ಭಕ್ತವತ್ಸಲನಾದ ಭಗವಂತನನ್ನೇ ನಿತ್ಯ-ನಿರಂತರ ಶ್ರವಣ, ಕೀರ್ತನ, ಮತ್ತು ಧ್ಯಾನದ ಮೂಲಕ ಆರಾಧಿಸಬೇಕು. ॥ ೧೪ ॥ ಕರ್ಮಗಳ ಕಗ್ಗಂಟು ಬಹಳ ಬಿಗಿಯಾದುದು. ಆದರೆ ವಿಚಾರವಂತ ಪುರುಷರು ಭಗವಂತನ ಧ್ಯಾನವೆಂಬ ಕತ್ತಿಯಿಂದ ಅದನ್ನು ಕತ್ತರಿಸಿಬಿಡುತ್ತಾರೆ. ಇಂತಹ ಭಗವಂತನ ಪುಣ್ಯಮಯ ಕಥೆಯಲ್ಲಿ ಜ್ಞಾನಿಗಳು ಪ್ರೇಮವಿರಿಸದೆ ಇರುವರೇ? ಅಂದರೆ, ಅವರು ನಿರಂತರ ಕಥಾಮೃತವನ್ನೇ ಪಾನ ಮಾಡುತ್ತಾ ಅದರಲ್ಲೇ ಮಗ್ನರಾಗಿರುತ್ತಾರೆ. ॥ ೧೫ ॥

ಶೌನಕಾದಿ ಮಹರ್ಷಿಗಳಿರಾ! ಪವಿತ್ರ ತೀರ್ಥಗಳ ಸೇವನೆಯಿಂದ ಮಹಾತ್ಮರ ಸೇವೆ ದೊರೆಯುತ್ತದೆ. ಮತ್ತೆ ಶ್ರವಣದ ಇಚ್ಛೆ, ಬಳಿಕ ಶ್ರದ್ಧೆ, ಅನಂತರ ವಾಸುದೇವನ ಕಥೆಯಲ್ಲಿ ರುಚಿ ಉಂಟಾಗುತ್ತದೆ. ॥ ೧೬ ॥ ಭಗವಾನ್ ಶ್ರೀಕೃಷ್ಣನ ಕಥೆಗಳ ಶ್ರವಣ-ಕೀರ್ತನಗಳು ಅತ್ಯಂತ ಪುಣ್ಯಕರವಾದುವು. ಅವುಗಳನ್ನು ಕೇಳುವ ಸುಕೃತಿಗಳ ಹೃದಯದೊಳಗೆ ಸತ್ಪುರುಷರ ಸುಹೃತ್ತಾಗಿರುವ ಸ್ವಾಮಿಯು ಕುಳಿತು ಅವರ ಎಲ್ಲ ಅಶುಭಗಳನ್ನು ನಾಶಮಾಡಿಬಿಡುತ್ತಾನೆ. ॥ ೧೭ ॥ ಶ್ರೀಮದ್ಭಾಗವತವನ್ನು ಅಥವಾ ಭಗವದ್ಭಕ್ತರನ್ನು ನಿರಂತರ ಸೇವಿಸುವುದರಿಂದ ಅಶುಭಗಳೆಲ್ಲವೂ ನಾಶವಾದಾಗ ಪುಣ್ಯಕೀರ್ತಿಯಾದ ಶ್ರೀಕೃಷ್ಣಪರಮಾತ್ಮನಲ್ಲಿ ಸ್ಥಿರವಾದ ಭಕ್ತಿಯುಂಟಾಗುವುದು. ॥ ೧೮ ॥ ಆಗ ರಜೋಗುಣ- ತಮೋಗುಣಗಳ ಭಾವಗಳಾದ ಕಾಮ, ಕ್ರೋಧ, ಲೋಭ ಮುಂತಾದ ಎಲ್ಲ ವಿಕಾರಗಳು ಕಳಕೊಂಡ ಚಿತ್ತವು ಸತ್ತ್ವಗುಣದಲ್ಲಿ ಸ್ಥಿತವಾಗಿ ನಿರ್ಮಲವಾಗುತ್ತದೆ. ॥ ೧೯ ॥ ಹೀಗೆ ಭಗವಂತನ ಭಕ್ತಿಯೋಗದಿಂದ ಮನಸ್ಸು ಪ್ರಸನ್ನವಾಗಿ ನಿಸ್ಸಂಗನಾದವನಿಗೆ ಶ್ರೀಭಗವತ್ತತ್ತ್ವದ ಅನುಭವ ಜ್ಞಾನವು ತಾನಾಗಿಯೇ ಉಂಟಾಗುವುದು. ॥ ೨೦ ॥ ಆತ್ಮಸ್ವರೂಪೀ ಭಗವಂತನ ಸಾಕ್ಷಾತ್ಕಾರವಾಗುತ್ತಲೇ ಹೃದಯದ

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ
॥ ೨೧ ॥

ಅತೋ ವೈ ಕವಯೋ ನಿತ್ಯಂ ಭಕ್ತಿಂ ಪರಮಯಾ ಮುದಾ ।
ವಾಸುದೇವೇ ಭಗವತಿ ಕುರ್ವಂತ್ಯಾತ್ಮಪ್ರಸಾದನೀಮ್
॥ ೨೨ ॥

ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ಗುಣಾಸ್ತೈ-
ರ್ಯುಕ್ತಃ ಪರಃ ಪುರುಷ ಏಕ ಇಹಾಸ್ಯ ಧತ್ತೇ ।
ಸ್ಥಿತ್ಯಾದಯೇ ಹರಿವಿರಿಂಚಿಹರೇತಿ ಸಂಜ್ಞಾಃ
ಶ್ರೇಯಾಂಸಿ ತತ್ರ ಖಲು ಸತ್ತ್ವತನೋರ್ನೃಣಾಂ ಸ್ಯುಃ ॥ ೨೩ ॥

ಪಾರ್ಥಿವಾದ್ದಾರುಣೋ ಧೂಮಸ್ತಸ್ಮಾದಗ್ನಿಸ್ತ್ರಯೀಮಯಃ ।
ತಮಸಸ್ತು ರಜಸ್ತಸ್ಮಾತ್ಸತ್ತ್ವಂ ಯದ್ಬ್ರಹ್ಮದರ್ಶನಮ್
॥ ೨೪ ॥

ಭೇಜಿರೇ ಮುನಯೋಽಥಾಗ್ರೇ ಭಗವಂತಮಧೋಕ್ಷಜಮ್ ।
ಸತ್ತ್ವಂ ವಿಶುದ್ಧಂ ಕ್ಷೇಮಾಯ ಕಲ್ಪಂತೇ ಯೇಽನು ತಾನಿಹ
॥ ೨೫ ॥

ಮುಮುಕ್ಷವೋ ಘೋರರೂಪಾನ್ ಹಿತ್ವಾ ಭೂತಪತೀನಥ ।
ನಾರಾಯಣಕಲಾಃ ಶಾಂತಾ ಭಜಂತಿ ಹ್ಯನಸೂಯವಃ
॥ ೨೬ ॥

ರಜಸ್ತಮಃಪ್ರಕೃತಯಃ ಸಮಶೀಲಾ ಭಜಂತಿ ವೈ ।
ಪಿತೃಭೂತಪ್ರಜೇಶಾದೀನ್ ಶ್ರಿಯೈಶ್ವರ್ಯಪ್ರಜೇಪ್ಸವಃ
॥ ೨೭ ॥

ವಾಸುದೇವಪರಾ ವೇದಾ ವಾಸುದೇವಪರಾ ಮಖಾಃ ।
ವಾಸುದೇವಪರಾ ಯೋಗಾ ವಾಸುದೇವಪರಾಃ ಕ್ರಿಯಾಃ
॥ ೨೮ ॥

ವಾಸುದೇವಪರಂ ಜ್ಞಾನಂ ವಾಸುದೇವಪರಂ ತಪಃ ।
ವಾಸುದೇವಪರೋ ಧರ್ಮೋ ವಾಸುದೇವಪರಾ ಗತಿಃ
॥ ೨೯ ॥

ಗಂಟು ಕತ್ತರಿಸಿ ಹೋಗುವುದು. ಎಲ್ಲ ಸಂಶಯಗಳೂ ಅಳಿದು ಹೋಗುತ್ತವೆ. ಅವನ ಕರ್ಮಬಂಧನಗಳೆಲ್ಲವೂ ನಶಿಸಿಹೋಗುವುವು. ॥ ೨೧ ॥ ಆದ್ದರಿಂದಲೇ ಬುದ್ಧಿವಂತರು ನಿತ್ಯ-ನಿರಂತರ ಬಹಳ ಆನಂದದಿಂದ ಭಗವಾನ್ ಶ್ರೀಕೃಷ್ಣನಲ್ಲಿ ಪ್ರೇಮಾ ಭಕ್ತಿಯನ್ನು ಆಚರಿಸುತ್ತಾ ಆಧ್ಯಾತ್ಮಿಕ ಪ್ರಸನ್ನತೆಯನ್ನು ಪಡೆದುಕೊಳ್ಳುತ್ತಾರೆ. ॥ ೨೨ ॥

ಸತ್ತ್ವ, ರಜ, ತಮ ಎಂಬ ಪ್ರಕೃತಿಯ ಮೂರು ಗುಣಗಳು. ಇವುಗಳನ್ನು ಸ್ವೀಕರಿಸಿ ಪರಮಪುರುಷನೊಬ್ಬನೇ ಈ ವಿಶ್ವದ ಸೃಷ್ಟಿ, ಸ್ಥಿತಿ, ಪ್ರಳಯ ಕಾರ್ಯಗಳನ್ನು ಮಾಡುವುದಕ್ಕಾಗಿ ಕ್ರಮವಾಗಿ ವಿಷ್ಣು, ಬ್ರಹ್ಮ ಮತ್ತು ರುದ್ರ ಎಂಬ ಹೆಸರನ್ನು ಹೊಂದುತ್ತಾನೆ. ಆದರೂ ಅವುಗಳಲ್ಲಿ ಸತ್ತ್ವಗುಣವನ್ನು ಸ್ವೀಕರಿಸುವ ಶ್ರೀಹರಿಯಿಂದಲೇ ಮನುಷ್ಯರಿಗೆ ಪರಮಶ್ರೇಯಸ್ಸು ಉಂಟಾಗುವುದು. ॥ ೨೩ ॥ ಭೂಮಿಯ ವಿಕಾರವಾದ ಕಟ್ಟಿಗೆಗಿಂತಲೂ ಅದರಿಂದುಂಟಾದ ಹೊಗೆಯು ಶ್ರೇಷ್ಠ. ಅದಕ್ಕಿಂತಲೂ ಅಗ್ನಿಯು ಶ್ರೇಷ್ಠವಾದುದು. ಏಕೆಂದರೆ, ವೇದೋಕ್ತ ಯಜ್ಞ-ಯಾಗಾದಿಗಳ ಮೂಲಕ ಅಗ್ನಿಯು ಸದ್ಗತಿ ಕೊಡುವಂತಹುದು. ಹಾಗೆಯೇ ತಮೋಗುಣಕ್ಕಿಂತ ರಜೋಗುಣವು ಶ್ರೇಷ್ಠ. ರಜೋಗುಣಕ್ಕಿಂತಲೂ ಸತ್ತ್ವಗುಣವು ಶ್ರೇಷ್ಠವಾದುದು. ಏಕೆಂದರೆ ಅದು ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾಗುವುದು. ॥ ೨೪ ॥ ಪ್ರಾಚೀನಯುಗದಲ್ಲಿ ಮಹಾತ್ಮರು ತಮ್ಮ ಶ್ರೇಯಸ್ಸಿಗಾಗಿ ಶುದ್ಧಸತ್ತ್ವಮಯನಾದ ಭಗವಾನ್ ವಿಷ್ಣುವನ್ನು ಆರಾಧಿಸುತ್ತಿದ್ದರು. ಈಗಲೂ ಆ ಋಷಿಗಳನ್ನು ಹಿಂಬಾಲಿಸುವ ಜನರು ಅವರಂತೆಯೇ ಆತ್ಮಕಲ್ಯಾಣಕ್ಕೆ ಭಾಗಿಗಳಾಗುತ್ತಾರೆ. ॥ ೨೫ ॥ ಈ ಸಂಸಾರ ಸಾಗರವನ್ನು ದಾಟಲು ಬಯಸುವವರು ಯಾರನ್ನು ನಿಂದಿಸದೆ, ಯಾರಲ್ಲಿಯೂ ದೋಷವನ್ನು ನೋಡದೆ ಘೋರರೂಪವುಳ್ಳ ತಮೋಗುಣೀ-ರಜೋಗುಣೀ ಭೈರವಾದಿ ಭೂತಪತಿಗಳನ್ನು ಉಪಾಸನೆ ಮಾಡದೆ, ಸತ್ತ್ವಗುಣೀ ಭಗವಾನ್ ವಿಷ್ಣುವನ್ನು ಮತ್ತು ಅವನ ಅಂಶಕಲಾ ಸ್ವರೂಪಗಳನ್ನೇ ಭಜಿಸುತ್ತಾರೆ. ಅವರ ಚಿತ್ತವು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಾದಿಗಳಿಂದ ರಹಿತವಾಗಿ ಪರಮ ಶಾಂತಿಯನ್ನು ಪಡೆಯುತ್ತದೆ. ॥ ೨೬ ॥ ಆದರೆ ರಜೋಗುಣೀ, ತಮೋಗುಣೀ ಸ್ವಭಾವವುಳ್ಳವರು ಧನ, ಐಶ್ವರ್ಯ, ಸಂತಾನದ ಕಾಮನೆಯಿಂದ ಭೂತಗಳು, ಪಿತೃಗಳು, ಪ್ರಜಾಪತಿಗಳು ಇವರನ್ನು ಉಪಾಸಿಸುತ್ತಾರೆ. ಏಕೆಂದರೆ, ಈ ಜನರ ಸ್ವಭಾವವೂ ಅವರಂತೇ (ಭೂತಾದಿ) ಇರುತ್ತದೆ. ॥ ೨೭ ॥ ವೇದಗಳ ತಾತ್ಪರ್ಯ ವಾಸುದೇವ ಶ್ರೀ ಕೃಷ್ಣನೇ ಆಗಿದ್ದಾನೆ. ಯಜ್ಞಗಳ ಉದ್ದೇಶವೂ ಶ್ರೀಕೃಷ್ಣನೇ ಆಗಿದ್ದಾನೆ. ಯೋಗಗಳು ಶ್ರೀಕೃಷ್ಣನಿಗಾಗಿಯೇ ಮಾಡಲಾಗುತ್ತವೆ. ಸಮಸ್ತ ಕರ್ಮಗಳ ಪರಿಸಮಾಪ್ತಿಯು ವಾಸುದೇವ ಶ್ರೀಕೃಷ್ಣನಲ್ಲೇ ಇದೆ. ॥ ೨೮ ॥ ಜ್ಞಾನದಿಂದ ವಾಸುದೇವ ಶ್ರೀಕೃಷ್ಣನ ಪ್ರಾಪ್ತಿಯೇ ಆಗುತ್ತದೆ. ತಪಸ್ಸು ಶ್ರೀಕೃಷ್ಣನ ಪ್ರಸನ್ನತೆಗಾಗಿಯೇ ಮಾಡಲಾಗುತ್ತದೆ. ಶ್ರೀಕೃಷ್ಣನಿಗಾಗಿಯೇ ಧರ್ಮಗಳ ಅನುಷ್ಠಾನ ನಡೆಯುತ್ತದೆ. ಎಲ್ಲ ಗತಿಗಳು ಶ್ರೀಕೃಷ್ಣನಲ್ಲೇ ಸೇರಿ ಹೋಗುವುವು. ॥ ೨೯ ॥ ತ್ರಿಗುಣಾ

ಸ ಏವೇದಂ ಸಸರ್ಜಾಗ್ರೇ ಭಗವಾನಾತ್ಮ ಮಾಯಯಾ ।
ಸದಸದ್ರೂಪಯಾ ಚಾಸೌ ಗುಣಮಯ್ಯಾಗುಣೋ ವಿಭುಃ
॥ ೩೦ ॥

ತಯಾ ವಿಲಸಿತೇಷ್ವೇಷು ಗುಣೇಷು ಗುಣವಾನಿವ ।
ಅಂತಃಪ್ರವಿಷ್ಟ ಆಭಾತಿ ವಿಜ್ಞಾನೇನ ವಿಜೃಂಭಿತಃ
॥ ೩೧ ॥

ಯಥಾ ಹ್ಯವಹಿತೋ ವಹ್ನಿರ್ದಾರುಷ್ವೇಕಃ ಸ್ವಯೋನಿಷು ।
ನಾನೇವ ಭಾತಿ ವಿಶ್ವಾತ್ಮಾ ಭೂತೇಷು ಚ ತಥಾ ಪುಮಾನ್
॥ ೩೨ ॥

ಅಸೌ ಗುಣಮಯೈರ್ಭಾವೈರ್ಭೂತಸೂಕ್ಷ್ಮೇಂದ್ರಿಯಾತ್ಮಭಿಃ ।
ಸ್ವನಿರ್ಮಿತೇಷು ನಿರ್ವಿಷ್ಟೋ ಭುಂಕ್ತೇ ಭೂತೇಷು ತದ್ಗುಣಾನ್
॥ ೩೩ ॥

ಭಾವಯತ್ಯೇಷ ಸತ್ತ್ವೇನ ಲೋಕಾನ್ ವೈ ಲೋಕಭಾವನಃ ।
ಲೀಲಾವತಾರಾನುರತೋ ದೇವತಿರ್ಯಙ್ನರಾದಿಷು
॥ ೩೪ ॥

ತೀತನಾದ ಭಗವಾನ್ ಶ್ರೀಕೃಷ್ಣನೇ ಹಿಂದೆ ವ್ಯಕ್ತಾವ್ಯಕ್ತ ಸ್ವರೂಪವಾದ ತ್ರಿಗುಣಾತ್ಮಕವಾದ ತನ್ನ ಮಾಯೆಯಿಂದ ಈ ಜಗತ್ತನ್ನು ಸೃಷ್ಟಿ ಮಾಡಿದನು. ॥ ೩೦ ॥ ತನ್ನ ಆ ಮಾಯಾಪ್ರಕೃತಿಯಿಂದ ವಿಕಾಸ ಗೊಂಡ ಈ ತ್ರಿಗುಣಗಳಲ್ಲಿ ಸೇರಿದ್ದರೂ ಅವನು ಗುಣಾತೀತ ನಾಗಿದ್ದು ಗುಣಯುಕ್ತನಾಗಿರುವಂತೆ ತೋರುತ್ತಾನೆ. ನಿಜವಾಗಿ ಯಾದರೋ ಅವನು ಪರಿಪೂರ್ಣ ವಿಜ್ಞಾನಾನಂದಘನನಾಗಿದ್ದಾನೆ. ॥ ೩೧ ॥ ಅಗ್ನಿಯಾದರೋ ವಸ್ತುತಃ ಒಂದೇ ಆಗಿದೆ; ಆದರೆ ಅದು ಅನೇಕ ರೀತಿಯ ಕಟ್ಟಿಗೆಗಳಲ್ಲಿರುವಾಗ ಅನೇಕವಿರುವಂತೆ ತಿಳಿಯುತ್ತದೆ. ಹಾಗೆಯೇ ಎಲ್ಲ ಆತ್ಮರೂಪೀ ಭಗವಂತನಾದರೋ ಒಬ್ಬನೇ ಇದ್ದು, ಪ್ರಾಣಿಗಳ ಅನೇಕತೆಯಿಂದಾಗಿ ಅವುಗಳ ಅಂತರ್ಯಾಮಿಯಾಗಿರುವುದರಿಂದ ಅನೇಕದಂತೆ ಕಂಡು ಬರುತ್ತಾನೆ. ॥ ೩೨ ॥ ಭಗವಂತನೇ ಸೂಕ್ಷ್ಮಭೂತ-ತನ್ಮಾತ್ರೆ, ಇಂದ್ರಿಯಗಳು ಮತ್ತು ಅಂತಃಕರಣ ಮುಂತಾದ ಗುಣಗಳ ವಿಕಾರಭೂತ ಭಾವಗಳ ಮೂಲಕ ನಾನಾ ಪ್ರಕಾರದ ಯೋನಿಗಳನ್ನು ನಿರ್ಮಿಸುತ್ತಾನೆ ಮತ್ತು ಅವುಗಳಲ್ಲಿ ಬೇರೆ-ಬೇರೆ ಜೀವಿಗಳ ರೂಪದಲ್ಲಿ ಪ್ರವೇಶಿಸಿ, ಆಯಾಯಾ ಯೋನಿಗಳನುರೂಪವಾಗಿ ವಿಷಯಗಳನ್ನು ಭೋಗಿಸುವಂತೆ ಕಾಣುತ್ತಾನೆ. ॥ ೩೩ ॥ ಅವನೇ ಸಮಸ್ತ ಲೋಕಗಳನ್ನು ರಚಿಸುತ್ತಾನೆ ಹಾಗೂ ದೇವತೆ, ಪಶು-ಪಕ್ಷಿ, ಮನುಷ್ಯಾದಿ ಯೋನಿಗಳಲ್ಲಿ ಲೀಲಾವತಾರವನ್ನು ಎತ್ತಿ ಸತ್ತ್ವಗುಣದ ಮೂಲಕ ಜೀವಿಗಳನ್ನು ಪಾಲಿಸಿ-ಪೋಷಿಸುತ್ತಾನೆ. (ಅವನ ಅವತಾರಧಾರಣದ ಲೀಲೆಗಳನ್ನು ಗಾಯನ, ಚಿಂತನೆ, ಸ್ಮರಣೆಮಾಡುತ್ತಾ ಜೀವನು ತದ್ರೂಪನಾಗುತ್ತಾನೆ. ತನ್ನ ಲಕ್ಷ್ಯವಾದ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಇದು ಭಗವಂತನ ಪರಮಾನುಗ್ರಹವಾಗಿದೆ. ಭಗವಂತನ ಎಲ್ಲ ಲೀಲೆಗಳು ಲೋಕಕಲ್ಯಾಣಕ್ಕಾಗಿಯೇ ಇರುತ್ತವೆ.) ॥ ೩೪ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ನೈಮಿಷೀಯೋಪಾಖ್ಯಾನೇ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಭಗವಂತನ ಅವತಾರಗಳ ವರ್ಣನೆ

*ಸೂತ ಉವಾಚ*

ಜಗೃಹೇ ಪೌರುಷಂ ರೂಪಂ ಭಗವಾನ್ಮಹದಾದಿಭಿಃ ।
ಸಂಭೂತಂ ಷೋಡಶಕಲಮಾದೌ ಲೋಕಸಿಸೃಕ್ಷಯಾ
॥ ೧ ॥

**ಸೂತಪುರಾಣಿಕರು ಹೇಳುತ್ತಾರೆ** – ಸೃಷ್ಟಿಯ ಆದಿಯಲ್ಲಿ ಭಗವಂತನಿಗೆ ಲೋಕಗಳನ್ನು ಸೃಷ್ಟಿಸಬೇಕೆಂಬ ಇಚ್ಛೆ ಉಂಟಾಯಿತು. ಒಡನೆಯೇ ಅವನು ಮಹತ್ತತ್ತ್ವ, ಅಹಂಕಾರ ಮತ್ತು ಪಂಚತನ್ಮಾತ್ರೆಗಳಿಂದ ನಿರ್ಮಿತವಾದ ಹತ್ತು ಇಂದ್ರಿಯಗಳು, ಮನಸ್ಸು ಪಂಚ-ಭೂತಗಳು ಹೀಗೆ ಹದಿನಾರು ಕಲೆಗಳಿಂದ ಕೂಡಿದ ವಿರಾಟ್‌ರೂಪವನ್ನು ಸ್ವೀಕರಿಸಿದನು. ॥ ೧ ॥ ಸೃಷ್ಟಿಕಾರಣವಾದ ಜಲದಲ್ಲಿ ಪವಡಿಸಿ ಯೋಗನಿದ್ರೆಯನ್ನು ಮಾಡುತ್ತಿದ್ದ ಅವನ

ಯಸ್ಯಾಂಭಸಿ ಶಯಾನಸ್ಯ ಯೋಗನಿದ್ರಾಂ ವಿತನ್ವತಃ ।
ನಾಭಿಹ್ರದಾಂಬುಜಾದಾಸೀದ್ ಬ್ರಹ್ಮಾ ವಿಶ್ವಸೃಜಾಂ ಪತಿಃ ॥ ೨ ॥

ಯಸ್ಯಾವಯವಸಂಸ್ಥಾನೈಃ ಕಲ್ಪಿತೋ ಲೋಕವಿಸ್ತರಃ ।
ತದ್ವೈ ಭಗವತೋ ರೂಪಂ ವಿಶುದ್ಧಂ ಸತ್ತ್ವಮೂರ್ಜಿತಮ್ ॥ ೩ ॥

ಪಶ್ಯನ್ತ್ಯದೋ ರೂಪಮದಭ್ರಚಕ್ಷುಷಾ
ಸಹಸ್ರಪಾದೋರುಭುಜಾನನಾದ್ಭುತಮ್ ।
ಸಹಸ್ರಮೂರ್ಧಶ್ರವಣಾಕ್ಷಿನಾಸಿಕಂ
ಸಹಸ್ರಮೌಲ್ಯಂಬರಕುಂಡಲೋಲ್ಲಸತ್ ॥ ೪ ॥

ಏತನ್ನಾನಾವತಾರಾಣಾಂ ನಿಧಾನಂ ಬೀಜಮವ್ಯಯಮ್ ।
ಯಸ್ಯಾಂಶಾಂಶೇನ ಸೃಜ್ಯಂತೇ ದೇವತಿರ್ಯಙ್ನರಾದಯಃ ॥ ೫ ॥

ಸ ಏವ ಪ್ರಥಮಂ ದೇವಃ ಕೌಮಾರಂ ಸರ್ಗಮಾಸ್ಥಿತಃ ।
ಚಚಾರ ದುಶ್ಚರಂ ಬ್ರಹ್ಮಾ ಬ್ರಹ್ಮಚರ್ಯಮಖಂಡಿತಮ್ ॥ ೬ ॥

ದ್ವಿತೀಯಂ ತು ಭವಾಯಾಸ್ಯ ರಸಾತಲಗತಾಂ ಮಹೀಮ್ ।
ಉದ್ಧರಿಷ್ಯನ್ನುಪಾದತ್ತಯಜ್ಞೇಶಃ ಸೌಕರಂ ವಪುಃ ॥ ೭ ॥

ತೃತೀಯಮೃಷಿಸರ್ಗಂ ಚ ದೇವರ್ಷಿತ್ವಮುಪೇತ್ಯ ಸಃ ।
ತಂತ್ರಂ ಸಾತ್ವತಮಾಚಷ್ಟ ನೈಷ್ಕರ್ಮ್ಯಂ ಕರ್ಮಣಾಂ ಯತಃ ॥ ೮ ॥

ತುರ್ಯೇ ಧರ್ಮಕಲಾಸರ್ಗೇ ನರನಾರಾಯಣಾವೃಷೀ ।
ಭೂತ್ವಾಽಽತ್ಮೋಪಶಮೋಪೇತಮಕರೋದ್ ದುಶ್ಚರಂ ತಪಃ ॥ ೯ ॥

ನಾಭಿಸರೋವರದಲ್ಲಿ ಹುಟ್ಟಿದ ಕಮಲದಿಂದಲೇ ಪ್ರಜಾಪತಿಗಳಿಗೆ ಅಧಿಪತಿಯಾದ ಬ್ರಹ್ಮದೇವರು ಹುಟ್ಟಿದರು. ॥ ೨ ॥ ಭಗವಂತನ ಆ ವಿರಾಟ್‌ರೂಪದ ಅಂಗ-ಉಪಾಂಗಗಳಲ್ಲಿಯೇ ಸಮಸ್ತ ಲೋಕಗಳ ಕಲ್ಪನೆ ಮಾಡಲಾಯಿತು. ಈ ಪ್ರಕಾರದಿಂದ ಈ ವಿಶ್ವಬ್ರಹ್ಮಾಂಡವು ಭಗವಂತನದೇ ಸಗುಣ ಸಾಕಾರರೂಪವಾಗಿದೆ. ಭಗವಂತನ ವಿಶುದ್ಧ ಸತ್ತ್ವಮಯ ಆ ವಿರಾಟ್‌ರೂಪವು ಪರಮಶ್ರೇಷ್ಠವಾದುದು. ॥ ೩ ॥ ಈ ಸಮಗ್ರ ವಿಶ್ವವನ್ನು ಜ್ಞಾನಿಗಳು ತಮ್ಮ ದಿವ್ಯ ಜ್ಞಾನಸಂಪನ್ನ ದೃಷ್ಟಿಯಿಂದ ಭಗವಂತನದೇ ಸ್ವರೂಪವೆಂದು ಭಾವಿಸುತ್ತಾರೆ. **'ವಾಸುದೇವಃ ಸರ್ವಮ್'** ಹೀಗೆ ಅನೇಕ ರೂಪಗಳಲ್ಲಿ ಒಬ್ಬನೇ ಭಗವಂತನನ್ನು ದರ್ಶಿಸುತ್ತಾ ಆನಂದಪಡುತ್ತಾರೆ. ಭಗವಂತನು ಎಂತಹ ಲೀಲೆಯನ್ನು ಮಾಡಿರುವನು, ಎಂದು ಅನುಭವಿಸುತ್ತಾರೆ. ಭಗವಂತನ ಆ ವಿರಾಟ್‌ರೂಪವು ಸಾವಿರಾರು ಪಾದಗಳಿಂದ, ತೊಡೆಗಳಿಂದ ತೋಳುಗಳಿಂದ ಮತ್ತು ಮುಖಗಳಿಂದ ಕೂಡಿ ಅದ್ಭುತವಾಗಿತ್ತು. ಅದರಲ್ಲಿ ಸಾವಿರಾರು ತಲೆಗಳು, ಕಿವಿಗಳು, ಕಣ್ಣುಗಳು, ಮೂಗುಗಳು ಇವುಗಳಿಂದ ವಿರಾಜಮಾನವಾಗಿ, ಸಾವಿರಾರು ಕಿರೀಟಗಳು, ವಸ್ತ್ರಗಳು, ಕುಂಡಲಗಳು ಇವುಗಳಿಂದ ಕಂಗೊಳಿಸುತ್ತಿರುವುದು. ಹಾಗೂ ಆಶ್ಚರ್ಯಮಯವಾಗಿ ನಾನಾ ವಸ್ತುಗಳನ್ನು, ಭೋಗಗಳನ್ನು ಅನುಭವಿಸುತ್ತಾನೆ. ॥ ೪ ॥ ಹೀಗೆ ಪರಮಾತ್ಮನೇ ಈ ವಿಶ್ವದ ಅವಿನಾಶಿ ಬೀಜ ಅರ್ಥಾತ್ ಕಾರಣನಾಗಿದ್ದಾನೆ. ಅವನೇ ಅನೇಕ ಅವತಾರಗಳನ್ನು ಧರಿಸುತ್ತಾನೆ. ಇದು ಅವನಿಗೆ ಒಂದು ಲೀಲೆಯೇ ಆಗಿದೆ. ಅವನ ಈ ರೂಪವು ಸಮಸ್ತ ಅವತಾರಗಳ ಗಣಿಯಾಗಿದೆ. ಅವನು ತನ್ನ ಒಂದಂಶದಿಂದಲೇ ದೇವತೆ, ತಿರ್ಯಗ್, ಮನುಷ್ಯ ಮೊದಲಾದವರನ್ನು ನಿರ್ಮಿಸುತ್ತಾನೆ. (ಅವನ ಸಂಕಲ್ಪ ಮಾತ್ರದಿಂದಲೇ ಅನಂತಕೋಟಿ ಬ್ರಹ್ಮಾಂಡಗಳು ಉಂಟಾಗುತ್ತವೆ. ಅನಂತನಾದ ಅವನನ್ನು ಯಾರಾದರೂ ಹೇಗೆ ವರ್ಣಿಸಬಲ್ಲರು ?) ॥ ೫ ॥

ಆ ಮಹಾಪ್ರಭುವೇ ಮೊದಲು 'ಕೌಮಾರ' ಎಂಬ ಸೃಷ್ಟಿಯನ್ನು ಕೈಗೊಂಡು ಸನಕ, ಸನಂದನ, ಸನಾತನ, ಸನತ್ಕುಮಾರರೆಂಬ ಬ್ರಾಹ್ಮಣರೂಪದಲ್ಲಿ ಅವತರಿಸಿ, ಅತ್ಯಂತ ಕಠಿಣವೂ, ಅಖಂಡವೂ ಆದ ಬ್ರಹ್ಮಚರ್ಯವನ್ನು ಆಚರಿಸಿದನು. ॥ ೬ ॥ ಎರಡನೆಯ ಅವತಾರವಾಗಿ ಆ ಯಜ್ಞೇಶನು ಲೋಕಕಲ್ಯಾಣಕ್ಕಾಗಿ ರಸಾತಳದಲ್ಲಿ ಹುದುಗಿದ್ದ ಭೂಮಿಯನ್ನು ಉದ್ಧರಿಸುವುದಕ್ಕಾಗಿ ವರಾಹರೂಪವನ್ನು ತಾಳಿದನು. ॥ ೭ ॥ ಋಷಿಸೃಷ್ಟಿಯಲ್ಲಿ ಅವನು ದೇವರ್ಷಿ ನಾರದರ ರೂಪದಲ್ಲಿ ಮೂರನೆಯ ಬಾರಿ ಅವತರಿಸಿ, ನಿಷ್ಕಾಮ ಕರ್ಮದ ಆಚರಣೆಯಿಂದ ಮುಕ್ತಿಯನ್ನು ಬೋಧಿಸುವ 'ನಾರದ ಪಾಂಚರಾತ್ರ' ಎಂದು ಪ್ರಸಿದ್ಧವಾಗಿರುವ ಸಾತ್ವತ ತಂತ್ರವನ್ನು ಉಪದೇಶಿಸಿದನು. ॥ ೮ ॥ ನಾಲ್ಕನೆಯದಾದ ಧರ್ಮಕಲಾ ಎಂಬ ಸೃಷ್ಟಿಯಲ್ಲಿ ಭಗವಂತನು ಧರ್ಮನ ಪತ್ನಿಯಾದ ಮೂರ್ತಿಯ ಗರ್ಭದಿಂದ ನರ-ನಾರಾಯಣ ಮಹರ್ಷಿಗಳ ರೂಪದಲ್ಲಿ ಅವತರಿಸಿದನು. ಈ ಅವತಾರದಲ್ಲಿ ಅವನು ಮನಸ್ಸು-ಇಂದ್ರಿಯಗಳ ಸಂಯಮದ ಆತ್ಮಶಾಂತಿಯೊಡನೆ ಅತಿಕಠಿಣವಾದ ತಪಸ್ಸನ್ನು ಮಾಡಿತೋರಿದನು. ॥ ೯ ॥ ಐದನೇ ಅವತಾರದಲ್ಲಿ ಸ್ವಾಮಿಯು

ಪಂಚಮಃ ಕಪಿಲೋ ನಾಮ ಸಿದ್ಧೇಶಃ ಕಾಲವಿಪ್ಲುತಮ್ ।
ಪ್ರೋವಾಚಾಸುರಯೇ ಸಾಂಖ್ಯಂ ತತ್ತ್ವಗ್ರಾಮವಿನಿರ್ಣಯಮ್ ॥ ೧೦ ॥

ಷಷ್ಠೇ ಅತ್ರೇರಪತ್ಯತ್ವಂ ವೃತಃ ಪ್ರಾಪ್ತೋಽನಸೂಯಯಾ ।
ಆನ್ವೀಕ್ಷಿಕೀಮಲರ್ಕಾಯ ಪ್ರಹ್ಲಾದಾದಿಭ್ಯ ಊಚಿವಾನ್ ॥ ೧೧ ॥

ತತಃ ಸಪ್ತಮ ಆಕೂತ್ಯಾಂ ರುಚೇರ್ಯಜ್ಞೋಽಭ್ಯಜಾಯತ ।
ಸ ಯಾಮಾದ್ಯೈಃ ಸುರಗಣೈರಪಾತ್ಸ್ವಾಯಂಭುವಾಂತರಮ್ ॥ ೧೨ ॥

ಅಷ್ಟಮೇ ಮೇರುದೇವ್ಯಾಂ ತು ನಾಭೇರ್ಜಾತ ಉರುಕ್ರಮಃ ।
ದರ್ಶಯನ್ ವರ್ತ್ಮ ಧೀರಾಣಾಂ ಸರ್ವಾಶ್ರಮನಮಸ್ಕೃತಮ್ ॥ ೧೩ ॥

ಋಷಿಭಿರ್ಯಾಚಿತೋ ಭೇಜೇ ನವಮಂ ಪಾರ್ಥಿವಂ ವಪುಃ ।
ದುಗ್ಧೇಮಾಮೋಷಧೀರ್ವಿಪ್ರಾಸ್ತೇನಾಯಂ ಸ ಉಶತ್ತಮಃ ॥ ೧೪ ॥

ರೂಪಂ ಸ ಜಗೃಹೇ ಮಾತ್ಸ್ಯಂ ಚಾಕ್ಷುಷೋದಧಿಸಂಪ್ಲವೇ ।
ನಾವ್ಯಾರೋಪ್ಯ ಮಹೀಮಯ್ಯಾಮಪಾದ್ವೈವಸ್ವತಂ ಮನುಮ್ ॥ ೧೫ ॥

ಸುರಾಸುರಾಣಾಮುದಧಿಂ ಮಥ್ನತಾಂ ಮಂದರಾಚಲಮ್ ।
ದಧ್ರೇ ಕಮಠರೂಪೇಣ ಪೃಷ್ಠ ಏಕಾದಶೇ ವಿಭುಃ ॥ ೧೬ ॥

ಧಾನ್ವಂತರಂ ದ್ವಾದಶಮಂ ತ್ರಯೋದಶಮಮೇವ ಚ ।
ಅಪಾಯಯತ್ಸುರಾನನ್ಯಾನ್ಮೋಹಿನ್ಯಾ ಮೋಹಯನ್ ಸ್ತ್ರಿಯಾ ॥ ೧೭ ॥

ಚತುರ್ದಶಂ ನಾರಸಿಂಹಂ ಬಿಭ್ರದ್ದೈತ್ಯೇಂದ್ರಮೂರ್ಜಿತಮ್ ।
ದದಾರ ಕರಜೈರ್ವಕ್ಷಸ್ಯೇರಕಾಂ ಕಟಕೃದ್ಯಥಾ ॥ ೧೮ ॥

ಸಿದ್ಧರ ಒಡೆಯನಾದ ಕಪಿಲರೂಪದಿಂದ ಅವತರಿಸಿ ಕಾಲಮಹಿಮೆಯಿಂದ ಲುಪ್ತವಾಗಿ ಹೋಗಿದ್ದ ತತ್ತ್ವಸಮೂಹಗಳ ಸ್ವರೂಪವನ್ನು ನಿರ್ಣಯಿಸುವ ಸಾಂಖ್ಯವೆಂಬ ಶಾಸ್ತ್ರವನ್ನು ವರ್ಣಿಸಿ, ಅದನ್ನು 'ಆಸುರಿ' ಎಂಬ ಬ್ರಾಹ್ಮಣನಿಗೆ ಉಪದೇಶಿಸಿದನು. ॥ ೧೦ ॥ ಅನಸೂಯೆಯು ಬೇಡಿದ ವರವನ್ನು ಈಡೇರಿಸಲು ಆರನೆಯ ಅವತಾರದಲ್ಲಿ ಭಗವಂತನು ಅತ್ರಿಪುತ್ರ ದತ್ತಾತ್ರೇಯನಾಗಿ ಅವತರಿಸಿದನು. ಇದರಲ್ಲಿ ಅವನು ಅಲರ್ಕ, ಪ್ರಹ್ಲಾದ ಮುಂತಾದವರಿಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿದನು. ॥ ೧೧ ॥ ಏಳನೆಯ ಅವತಾರ ಯಜ್ಞಾವತಾರ. ರುಚಿಯೆಂಬ ಪ್ರಜಾಪತಿಯ ಪತ್ನಿ ಆಕೂತಿಯ ಗರ್ಭದಿಂದ ಜನಿಸಿ, ತನ್ನ ಪುತ್ರರಾದ 'ಯಾಮ' ಮುಂತಾದ ದೇವತೆಗಳೊಡನೆ ಸ್ವಾಯಂಭುವ ಮನ್ವಂತರವನ್ನು ರಕ್ಷಿಸಿದನು. ॥ ೧೨ ॥ ಎಂಟನೆಯ ಬಾರಿ ಭಗವಂತನು ನಾಭಿರಾಜನ ಪತ್ನಿಯಾದ ಮೇರುದೇವಿಯಲ್ಲಿ ಋಷಭದೇವನ ರೂಪದಲ್ಲಿ ಅವತರಿಸಿ, ಎಲ್ಲ ಆಶ್ರಮಗಳಿಗೂ ವಂದನೀಯವಾಗಿರುವ ಪರಮಹಂಸ ಮಾರ್ಗವನ್ನು ಆಚರಿಸಿ, ತೋರಿಸಿಕೊಟ್ಟನು. ॥ ೧೩ ॥ ಋಷಿಗಳ ಪ್ರಾರ್ಥನೆಯಂತೆ ಅವನು ತನ್ನ ಒಂಭತ್ತನೆಯ ಅವತಾರವಾಗಿ ಪೃಥು ಮಹಾರಾಜನ ರೂಪದಲ್ಲಿ ಕಾಣಿಸಿಕೊಂಡನು. ಶೌನಕಾದಿ ಋಷಿಗಳೇ! ಈ ಅವತಾರದಲ್ಲಿ ಅವನು ಪೃಥ್ವಿಯಿಂದ ಸಮಸ್ತ ಔಷಧಿಗಳನ್ನು ಕರೆದು ಜಗತ್ತಿಗೆ ಅತ್ಯಂತ ಕಲ್ಯಾಣವನ್ನುಂಟು ಮಾಡಿದನು. ॥ ೧೪ ॥ ಚಾಕ್ಷುಷ ಮನ್ವಂತರದ ಕೊನೆಯಲ್ಲಿ ತ್ರಿಲೋಕಗಳು ಸಮುದ್ರದಲ್ಲಿ ಮುಳುಗಿಹೋಗಿದ್ದಾಗ ಆತನು ಮತ್ಸ್ಯರೂಪದಲ್ಲಿ ಹತ್ತನೆಯ ಅವತಾರವನ್ನು ಕೈಗೊಂಡನು. ಇದರಲ್ಲಿ ಭಗವಂತನು ಮುಂದಿನ ಮನ್ವಂತರದ ಅಧಿಪತಿಯಾದ ವೈವಸ್ವತಮನುವನ್ನು ಪೃಥ್ವಿರೂಪವಾದ ನೌಕೆಯಲ್ಲಿ ಕುಳ್ಳಿರಿಸಿ ಕಾಪಾಡಿದನು. ॥ ೧೫ ॥ ದೇವ-ದಾನವರು ಸಮುದ್ರವನ್ನು ಕಡೆಯುತ್ತಿದ್ದಾಗ ಭಗವಂತನು ಹನ್ನೊಂದನೆಯ ಅವತಾರವಾಗಿ 'ಕೂರ್ಮ' ರೂಪದಲ್ಲಿ ಕಾಣಿಸಿಕೊಂಡು ಮಂದರಪರ್ವತವನ್ನು ತನ್ನ ಬೆನ್ನಮೇಲೆ ಹೊತ್ತನು. ॥ ೧೬ ॥ ಹನ್ನೆರಡನೆಯ ಬಾರಿ ಧನ್ವಂತರಿ ರೂಪದಲ್ಲಿ ಅಮೃತವನ್ನೆತ್ತಿಕೊಂಡು ಸಮುದ್ರದಿಂದ ಅವತರಿಸಿದನು. ಹದಿಮೂರನೆಯ ಅವತಾರವಾಗಿ ಮೋಹಿನೀ ರೂಪದಲ್ಲಿ ಕಾಣಿಸಿಕೊಂಡು ದೈತ್ಯರನ್ನು ಮೋಹವಶರನ್ನಾಗಿ ಮಾಡಿ, ದೇವತೆಗಳಿಗೆ ಅಮೃತವನ್ನು ಉಣಿಸಿದನು. ॥ ೧೭ ॥ ಹದಿನಾಲ್ಕನೆಯ ಅವತಾರದಲ್ಲಿ ಅವನು ನರಸಿಂಹರೂಪದಲ್ಲಿ ಪ್ರಕಟನಾಗಿ ಮಹಾಬಲಶಾಲಿಯಾದ ದೈತ್ಯರಾಜ ಹಿರಣ್ಯಕಶಿಪುವಿನ ಎದೆಯನ್ನು ಚಾಪೆನೇಯುವವರು ಜೊಂಡನ್ನು ಸೀಳುವಂತೆ – ತನ್ನ ಉಗುರುಗಳಿಂದ ಅನಾಯಾಸವಾಗಿ ಸೀಳಿಹಾಕಿದನು. ॥ ೧೮ ॥ ಹದಿನೈದನೆಯ ಅವತಾರದಲ್ಲಿ ಭಗವಂತನು ವಾಮನರೂಪವನ್ನು ಧರಿಸಿ, ಸ್ವರ್ಗದ ರಾಜ್ಯವನ್ನು ದೇವತೆಗಳಿಗೆ ಹಿಂದಕ್ಕೆ ಕೊಡಿಸಲು ಚಕ್ರವರ್ತಿ ಬಲಿರಾಜನ ಯಜ್ಞಭೂಮಿಗೆ ಹೋಗಿ, ಮೂರು ಹೆಜ್ಜೆ ಭೂಮಿಯನ್ನು ಬೇಡಿ ಬಲಿಯಿಂದ ಸ್ವರ್ಗದ ರಾಜ್ಯವನ್ನು ಇಂದ್ರನಿಗೆ ದಯಪಾಲಿಸಿದನು. (ಬಲಿಚಕ್ರವರ್ತಿಯೂ, ಆತ್ಮನಿವೇದನ ಗೈದು ಭಗವಂತನ ಅಖಂಡ ಭಕ್ತಿಯನ್ನು ಪಡೆದನು.

ಪಂಚದಶಂ ವಾಮನಕಂ ಕೃತ್ವಾಗಾದಧ್ವರಂ ಬಲೇಃ ।
ಪದತ್ರಯಂ ಯಾಚಮಾನಃ ಪ್ರತ್ಯಾದಿತ್ಸುಸ್ತ್ರಿವಿಷ್ಟಪಮ್ ॥ ೧೯ ॥

ಅವತಾರೇ ಷೋಡಶಮೇ ಪಶ್ಯನ್ ಬ್ರಹ್ಮದ್ರುಹೋ ನೃಪಾನ್ ।
ತ್ರಿಃಸಪ್ತಕೃತ್ವಃ ಕುಪಿತೋ ನಿಃಕ್ಷತ್ರಾಮಕರೋನ್ಮಹೀಮ್ ॥ ೨೦ ॥

ತತಃ ಸಪ್ತದಶೇ ಜಾತಃ ಸತ್ಯವತ್ಯಾಂ ಪರಾಶರಾತ್ ।
ಚಕ್ರೇ ವೇದತರೋಃ ಶಾಖಾ ದೃಷ್ಟ್ವಾ ಪುಂಸೋಽಲ್ಪಮೇಧಸಃ ॥ ೨೧ ॥

ನರದೇವತ್ವಮಾಪನ್ನಃ ಸುರಕಾರ್ಯಚಿಕೀರ್ಷಯಾ ।
ಸಮುದ್ರನಿಗ್ರಹಾದೀನಿ ಚಕ್ರೇ ವೀರ್ಯಾಣ್ಯತಃ ಪರಮ್ ॥ ೨೨ ॥

ಏಕೋನವಿಂಶೇ ವಿಂಶತಿಮೇ ವೃಷ್ಣಿಷು ಪ್ರಾಪ್ಯ ಜನ್ಮನೀ ।
ರಾಮಕೃಷ್ಣಾವಿತಿ ಭುವೋ ಭಗವಾನಹರದ್ಭರಮ್ ॥ ೨೩ ॥

ತತಃ ಕಲೌ ಸಂಪ್ರವೃತ್ತೇ ಸಮ್ಮೋಹಾಯ ಸುರದ್ವಿಷಾಮ್ ।
ಬುದ್ಧೋ ನಾಮ್ನಾಜನಸುತಃ ಕೀಕಟೇಷು ಭವಿಷ್ಯತಿ ॥ ೨೪ ॥

ಅಥಾಸೌ ಯುಗಸಂಧ್ಯಾಯಾಂ ದಸ್ಯುಪ್ರಾಯೇಷು ರಾಜಸು ।
ಜನಿತಾ ವಿಷ್ಣು ಯಶಸೋ ನಾಮ್ನಾ ಕಲ್ಕಿರ್ಜಗತ್ಪತಿಃ ॥ ೨೫ ॥

ಅವತಾರಾ ಹ್ಯಸಂಖ್ಯೇಯಾ ಹರೇಃ ಸತ್ತ್ವನಿಧೇರ್ದ್ವಿಜಾಃ ।
ಯಥಾವಿದಾಸಿನಃ ಕುಲ್ಯಾಃ ಸರಸಃ ಸ್ಯುಃ ಸಹಸ್ರಶಃ ॥ ೨೬ ॥

ಋಷಯೋ ಮನವೋ ದೇವಾ ಮನುಪುತ್ರಾ ಮಹೌಜಸಃ ।
ಕಲಾಃ ಸರ್ವೇ ಹರೇರೇವ ಸಪ್ರಜಾಪತಯಸ್ತಥಾ ॥ ೨೭ ॥

ಹೀಗೆ ಭಕ್ತರ ಭಕ್ತನಾದ ಭಗವಂತನು ತನ್ನ ಪ್ರೇಮೀಭಕ್ತ ಬಲಿಗೆ ಎಂತಹ ಗೌರವ ಕೊಡಿಸಿದನು. '**ಪುಣ್ಯಶ್ಲೋಕೋ ಬಲೀರಾಜಾ**' ಹೀಗೆ ಅವನು ಪ್ರಸಿದ್ಧನಾದನು.) ॥ ೧೯ ॥ ಹದಿನಾರನೆಯ ಪರಶುರಾಮಾವತಾರದಲ್ಲಿ ರಾಜರು ಬ್ರಾಹ್ಮಣದ್ರೋಹಿಗಳಾಗಿರುವುದನ್ನು ನೋಡಿ ಕ್ರುದ್ಧನಾಗಿ ಅವನು ಪೃಥ್ವಿಯನ್ನು ಇಪ್ಪತ್ತೊಂದು ಬಾರಿ ದುಷ್ಟ ಕ್ಷತ್ರಿಯಶೂನ್ಯವಾಗುವಂತೆ ಮಾಡಿದನು. ॥ ೨೦ ॥ ಇದಾದ ಬಳಿಕ ಹದಿನೇಳನೆಯ ಅವತಾರದಲ್ಲಿ ಅವನು ಪರಾಶರರ ಮೂಲಕ ಸತ್ಯವತೀದೇವಿಯ ಗರ್ಭದಿಂದ ವೇದವ್ಯಾಸರೂಪದಲ್ಲಿ ಕಾಣಿಸಿಕೊಂಡನು. ಆಗ ಜನರ ಜ್ಞಾನ ಮತ್ತು ಧಾರಣಾಶಕ್ತಿಯು ಕಡಿಮೆಯಾಗಿರುವುದನ್ನು ನೋಡಿ ವೇದವೃಕ್ಷವನ್ನು ನಾನಾ ಶಾಖೆಗಳ ರೂಪದಲ್ಲಿ ವಿಂಗಡಿಸಿದನು. ॥ ೨೧ ॥ ಹದಿನೆಂಟನೆಯ ಬಾರಿ ಭಗವಂತನು ದೇವತೆಗಳ ಕಾರ್ಯವನ್ನು ನೆರವೇರಿಸಲು ರಾಜನಾಗಿ ರಾಮರೂಪದಿಂದ ಅವತರಿಸಿ, ಸೇತುಬಂಧನ, ರಾವಣವಧೆ ಮುಂತಾದ ಪರಾಕ್ರಮಪೂರ್ಣ ಅನೇಕ ಲೀಲೆಗಳನ್ನು ಮಾಡಿದನು. (ಅವುಗಳನ್ನು ಹಾಡಿಕೊಂಡು ಜನರು ಭಕ್ತಿಯನ್ನು ಪಡೆದು ಭಗವದ್ಧಾಮಕ್ಕೆ ತೆರಳುತ್ತಾರೆ.) ॥ ೨೨ ॥ ಹತ್ತೊಂಭತ್ತನೆಯ ಮತ್ತು ಇಪ್ಪತ್ತನೆಯ ಅವತಾರಗಳಲ್ಲಿ ಅವನು ಯದುವಂಶದಲ್ಲಿ ಬಲರಾಮ ಹಾಗೂ ಶ್ರೀಕೃಷ್ಣ ಎಂಬ ಹೆಸರುಗಳಿಂದ ಪ್ರಕಟಗೊಂಡು ಭೂಮಿಯ ಭಾರವನ್ನು ಇಳಿಸಿದನು. ॥ ೨೩ ॥ ಮತ್ತೆ ಕಲಿಯುಗವು ಬಂದಾಗ ಅವನು ಮಗಧ ದೇಶದಲ್ಲಿ ದೇವದ್ವೇಷಿಗಳಾದ ದೈತ್ಯರನ್ನು ಮೋಹಗೊಳಿಸುವುದಕ್ಕಾಗಿ ಅಜನ ಎಂಬುವನಲ್ಲಿ ಪುತ್ರರೂಪದಲ್ಲಿ ಬುದ್ಧಾವತಾರವನ್ನು ತಾಳುವನು. ॥ ೨೪ ॥ ಇದು ಕಳೆದು ಬಹಳ ದಿನಗಳ ಬಳಿಕ ಕಲಿಯುಗದ ಕೊನೆಯಲ್ಲಿ ರಾಜರೆಲ್ಲರೂ ಸಾಮಾನ್ಯವಾಗಿ ಲೂಟಿಗಾರರಾಗುವರು. ಆಗ ಜಗತ್ತಿನ ರಕ್ಷಕನಾದ ಭಗವಂತನು ವಿಷ್ಣುಯಶನೆಂಬ ಬ್ರಾಹ್ಮಣನ ಮನೆಯಲ್ಲಿ ಕಲ್ಕಿಯ ರೂಪದಲ್ಲಿ ಅವತಾರ ಮಾಡುವನು. * ॥ ೨೫ ॥

ಶೌನಕಾದಿ ಮಹರ್ಷಿಗಳೇ ! ಇಷ್ಟು ಮಾತ್ರವೇ ಅವನ ಅವತಾರಗಳೆಂದು ತಿಳಿಯಬೇಡಿರಿ. ವಾಸ್ತವವಾಗಿ ಭಗವಂತನ ಅವತಾರಗಳಿಗೆ ಲೆಕ್ಕವೇ ಇಲ್ಲ. ಎಂದಿಗೂ ಬತ್ತದೆ ಇರುವ ಅಗಾಧ ಸರೋವರದಿಂದ ಸಾವಿರಾರು ಕಾಲುವೆಗಳು ಹರಿದುಬರುವಂತೆ ಸತ್ತ್ವಗುಣಕ್ಕೆ ನಿಧಿಯಾದ ಶ್ರೀಹರಿಯಿಂದ ಅಸಂಖ್ಯ ಅವತಾರಗಳು ಉಂಟಾಗುತ್ತಾ ಇರುತ್ತವೆ. ॥ ೨೬ ॥ ಋಷಿಗಳು, ಮನುಗಳು, ದೇವತೆಗಳು, ಪ್ರಜಾಪತಿಗಳು, ಮನುಪುತ್ರರು ಹಾಗೂ ಮಹಾಶಕ್ತಿಶಾಲಿಗಳು ಯಾರು-ಯಾರುಂಟೋ ಇವರೆಲ್ಲರೂ ಕೂಡ ಶ್ರೀಹರಿಯ ವಿಭೂತಿಗಳೇ, ಅಂಶಗಳೇ ಆಗಿವೆ. ॥ ೨೭ ॥ ಇವೆಲ್ಲ ಅವತಾರಗಳಾದರೋ ಭಗವಂತನ ಅಂಶಾವತಾರ ಅಥವಾ ಕಲಾವತಾರಗಳು.

* ಇಲ್ಲಿ ಇಪ್ಪತ್ತೆರಡು ಅವತಾರಗಳನ್ನು ಮಾತ್ರ ಲೆಕ್ಕಿಸಿವೆ. ಆದರೆ ಭಗವಂತನ ಅವತಾರಗಳು ಇಪ್ಪತ್ತನಾಲ್ಕೆಂದು ಪ್ರಸಿದ್ಧವಾಗಿದೆ. ಹಾಗಾದರೆ ಇನ್ನುಳಿದ ಎರಡು ಅವತಾರಗಳಾವುವು? ಎಂದರೆ ಹಂಸ ಮತ್ತು ಹಯಗ್ರೀವ ಅವತಾರಗಳು. (ಕೆಲವು ವಿದ್ವಾಂಸರ ಅಭಿಪ್ರಾಯದಲ್ಲಿ ಮೇಲ್ಕಂಡ ಇಪ್ಪತ್ತೆರಡು ಅವತಾರಗಳಲ್ಲಿ ರಾಮ-ಕೃಷ್ಣರನ್ನು ಬಿಟ್ಟು ಉಳಿದ ಇಪ್ಪತ್ತು ಅವತಾರಗಳೊಡನೆ ಅವತಾರಮೂಲವಾದ ಶ್ರೀಕೃಷ್ಣಪರಮಾತ್ಮನ ಕೇಶಾವತಾರ, ಸುತಪಾ ಮತ್ತು ಪ್ರಶ್ನಿದೇವಿಯನ್ನು ಅನುಗ್ರಹಿಸಿದ ಅವತಾರ, ಬಲರಾಮಾವತಾರ ಮತ್ತು ಪರಬ್ರಹ್ಮಾವತಾರ ಎಂಬ ನಾಲ್ಕು ಅವತಾರಗಳನ್ನು ಸೇರಿಸಿ ಇಪ್ಪತ್ತನಾಲ್ಕು ಅವತಾರಗಳ ಪರಿಗಣನೆ ಮಾಡಿದ್ದಾರೆ. ಶ್ರೀಕೃಷ್ಣನು ಅವತಾರವೇ ಅಲ್ಲ. ಅವನು ಸಾಕ್ಷಾತ್ ಪರಬ್ರಹ್ಮಪರಮಾತ್ಮ ಪರವಾಸುದೇವ.)

ಏತೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮ್ ।
ಇಂದ್ರಾರಿವ್ಯಾಕುಲಂ ಲೋಕಂ ಮೃಡಯಂತಿ ಯುಗೇ ಯುಗೇ
॥ ೨೮ ॥

ಜನ್ಮ ಗುಹ್ಯಂ ಭಗವತೋ ಯ ಏತತ್ಪ್ರಯತೋ ನರಃ ।
ಸಾಯಂ ಪ್ರಾತರ್ಗೃಣನ್ ಭಕ್ತ್ಯಾ ದುಃಖಗ್ರಾಮಾದ್ವಿಮುಚ್ಯತೇ
॥ ೨೯ ॥

ಏತದ್ರೂಪಂ ಭಗವತೋ ಹ್ಯರೂಪಸ್ಯ ಚಿದಾತ್ಮನಃ ।
ಮಾಯಾಗುಣೈರ್ವಿರಚಿತಂ ಮಹದಾದಿಭಿರಾತ್ಮನಿ
॥ ೩೦ ॥

ಯಥಾ ನಭಸಿ ಮೇಘೌಘೋ ರೇಣುರ್ವಾ ಪಾರ್ಥಿವೋಽನಿಲೇ ।
ಏವಂ ದ್ರಷ್ಟರಿ ದೃಶ್ಯತ್ವಮಾರೋಪಿತಮಬುದ್ಧಿಭಿಃ
॥ ೩೧ ॥

ಅತಃ ಪರಂ ಯದವ್ಯಕ್ತಮವ್ಯೂಢಗುಣವ್ಯೂಹಿತಮ್ ।
ಅದೃಷ್ಟಾಶ್ರುತವಸ್ತುತ್ವಾತ್ ಸಜೀವೋ ಯತ್ಪುನರ್ಭವಃ
॥ ೩೨ ॥

ಯತ್ರೇಮೇ ಸದಸದ್ರೂಪೇ ಪ್ರತಿಷಿದ್ಧೇ ಸ್ವಸಂವಿದಾ ।
ಅವಿದ್ಯಯಾಽಽತ್ಮನಿ ಕೃತೇ ಇತಿ ತದ್ಬ್ರಹ್ಮದರ್ಶನಮ್
॥ ೩೩ ॥

ಯದ್ಯೇಷೋಪರತಾ ದೇವೀ ಮಾಯಾ ವೈಶಾರದೀ ಮತಿಃ ।
ಸಂಪನ್ನ ಏವೇತಿ ವಿದುರ್ಮಹಿಮ್ನಿ ಸ್ವೇ ಮಹೀಯತೇ
॥ ೩೪ ॥

ಏವಂ ಜನ್ಮಾನಿ ಕರ್ಮಾಣಿ ಹ್ಯಕರ್ತುರಜನಸ್ಯ ಚ ।
ವರ್ಣಯಂತಿ ಸ್ಮ ಕವಯೋ ವೇದಗುಹ್ಯಾನಿ ಹೃತ್ಪತೇಃ
॥ ೩೫ ॥

ಸ ವಾ ಇದಂ ವಿಶ್ವಮಮೋಘಲೀಲಃ
ಸೃಜತ್ಯವತ್ಯತ್ತಿ ನ ಸಜ್ಜತೇಽಸ್ಮಿನ್ ।
ಭೂತೇಷು ಚಾಂತರ್ಹಿತ ಆತ್ಮತಂತ್ರಃ
ಷಾಡ್ವರ್ಗಿಕಂ ಜಿಘ್ರತಿ ಷಡ್ಗುಣೇಶಃ ॥ ೩೬ ॥

ಆದರೆ ಭಗವಾನ್ ಶ್ರೀಕೃಷ್ಣನಾದರೋ ಅವತಾರಮಾಡಿದ ಸಾಕ್ಷಾದ್ಭಗವಂತನೇ ಆಗಿದ್ದಾನೆ. ದೈತ್ಯರ ಅತ್ಯಾಚಾರಗಳಿಂದ ಜನರು ಪೀಡಿತರಾದಾಗ ಯುಗ-ಯುಗಗಳಲ್ಲಿ ಅನೇಕ ರೂಪಗಳಿಂದ ಪ್ರಕಟಗೊಂಡು ಅವರನ್ನು ರಕ್ಷಿಸುವನು. ॥ ೨೮ ॥ ಭಗವಂತನ ದಿವ್ಯ ಜನ್ಮಗಳ ಈ ಕಥೆಯು ಅತ್ಯಂತ ರಹಸ್ಯಮಯ – ಗೋಪನೀಯವಾಗಿದೆ. ಏಕಾಗ್ರಚಿತ್ತದಿಂದ ಸಾಯಂಕಾಲ-ಬೆಳಿಗ್ಗೆ ಪ್ರೇಮದಿಂದ ಪಠಿಸುವವರು ಎಲ್ಲ ದುಃಖಗಳಿಂದ ಬಿಡುಗಡೆಹೊಂದುವರು. ॥ ೨೯ ॥ ಪ್ರಾಕೃತ ಸ್ವರೂಪರಹಿತ ಚಿನ್ಮಯ ಭಗವಂತನ ಈ ಸ್ಥೂಲ ಜಗದಾಕಾರವಾದ ರೂಪವು ಅವನ ಮಾಯೆಯ ಮಹತ್ತತ್ತ್ವಾದಿ ಗುಣಗಳಿಂದ ಭಗವಂತನಲ್ಲೇ ಕಲ್ಪಿತ ವಾಗಿದೆ. ॥ ೩೦ ॥ ಆಕಾಶದಲ್ಲಿ ಉಂಟಾದ ಮೋಡಗಳು ಆಕಾಶವನ್ನೇ ಮುಚ್ಚಿಬಿಡುವವು. ಗಾಳಿಯಿಂದ ಎದ್ದ ಧೂಳು ಗಾಳಿಯನ್ನೇ ಧೂಳಿಧೂಸರಿತವಾಗುತ್ತದೆ. ಹಾಗೆಯೇ ಆತ್ಮನಿಂದ ಉತ್ಪನ್ನವಾದ ದೃಶ್ಯ ಪ್ರಪಂಚವು ವಾಸ್ತವವಾಗಿ ಪರಮಾತ್ಮನ ಸಗುಣ ರೂಪವೇ ಆಗಿದೆ. ಹೀಗಿದ್ದರೂ ಅವಿವೇಕೀ ಜನರು ಎಲ್ಲರ ಸಾಕ್ಷಿಯಾದ ಆತ್ಮನಲ್ಲಿ ಸ್ಥೂಲವಾದ ದೃಶ್ಯ ಜಗತ್ತನ್ನು ಆರೋಪಿಸುತ್ತಾರೆ. ॥ ೩೧ ॥ ಈ ಸುಗುಣದಿಂದ ಅತೀತನಾದ ಪರಮಾತ್ಮನ ನಿರ್ಗುಣ ನಿರಾಕಾರ ಸ್ವರೂಪದೊಂದಿಗೆ ಗುಣಗಳ ಯಾವುದೇ ಸಂಪರ್ಕವಿಲ್ಲ ಹಾಗೂ ಅವನಿಗೆ ಕರಚರಣಾದಿ ಅವಯಗಳೂ ಇಲ್ಲ. ಜೀವನೂ ಕೂಡ ಪರಮಾತ್ಮನದೇ ಅಂಶನಾದ ವಾಸ್ತವವಾಗಿ ನಿರ್ಗುಣನೇ ಆಗಿದ್ದಾನೆ. ಆದರೆ ಮಾಯೆಯಿಂದ ಭ್ರಮಿತನಾಗಿದ್ದರಿಂದ ಅವನು ಜನ್ಮ - ಮರಣದ ಚಕ್ರದಲ್ಲಿ ಸಿಲುಕಿಕೊಳ್ಳುವನು ॥ ೩೨ ॥ ಜೀವಿಗೆ ಸ್ವಸ್ವರೂಪ ಜ್ಞಾನ ಉಂಟಾದಾಗ, ಅಜ್ಞಾನದಿಂದಾಗಿ ಪರಮಾತ್ಮನಲ್ಲಿ ಕಂಡು ಬರುತ್ತಿದ್ದ ಜಗತ್ತು ಇಲ್ಲವಾಗುತ್ತದೆ. ಜೊತೆಗೆ ಸರ್ವತ್ರ ಪರಮಾತ್ಮನ ದರ್ಶನವೇ ಆಗುತ್ತದೆ. ಈ ಸ್ಥಿತಿಯಲ್ಲಿ ಮಾಯೆ ಮತ್ತು ಅದರ ಅಂಶಭೂತ ಜಗತ್ತಿನ ಅಸ್ತಿತ್ವವೂ ಇರುವುದಿಲ್ಲ. ಜೀವನು ಸ್ವಯಂ ಬ್ರಹ್ಮಸ್ವರೂಪನಾಗುತ್ತಾನೆ. ॥ ೩೩ ॥ ಬ್ರಹ್ಮ ಸ್ವರೂಪನಾದ ಬಳಿಕ ಸಂಸಾರ ಚಕ್ರದಲ್ಲಿ ಸುತ್ತಿಸುತ್ತಿರುವ ಮಾಯೆ ನಿವೃತ್ತವಾಗುತ್ತದೆ. ಇದರಿಂದ ಜೀವನು ಪರಮಾನಂದಮಯನಾಗಿ ತನ್ನ ವಾಸ್ತವಿಕ ಸ್ವರೂಪದಲ್ಲಿ ಪ್ರತಿಷ್ಠಿತನಾಗುತ್ತಾನೆ. ॥ ೩೪ ॥ ಪರಮಾತ್ಮನು ವಾಸ್ತವವಾಗಿ ಅಜನ್ಮಾ ಹಾಗೂ ಅಕರ್ತೃನಾಗಿದ್ದರೂ ಕೂಡ ಅವನ ಜನ್ಮ – ಕರ್ಮಗಳ ರಹಸ್ಯವು ವೇದಗಳಿಗೂ ಅತ್ಯಂತ ರಹಸ್ಯ ಮಯವಾಗಿದೆ, ಅರ್ಥಾತ್ ಅಗಮ್ಯವಾಗಿದೆ ಎಂದು ತತ್ತ್ವಜ್ಞಾನಿಗಳು ಅವದನ್ನೂ ವರ್ಣಿಸುತ್ತಾರೆ. ॥ ೩೫ ॥

ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸುಗಳೆಂಬ ಈ ಆರು ಅಸಾಧಾರಣ ಗುಣಗಳಿಂದ ಸಂಪನ್ನನಾಗಿ ಅಮೋಘವಾದ ಲೀಲೆಗಳನ್ನು ನಡೆಸುವ ಆ ಭಗವಂತನೇ ಲೀಲಾಜಾಲವಾಗಿ ಈ ವಿಶ್ವವೆಲ್ಲವನ್ನೂ ಸೃಷ್ಟಿಸುತ್ತಾನೆ, ರಕ್ಷಿಸುತ್ತಾನೆ, ಸಂಹರಿಸುತ್ತಾನೆ. ಆದರೂ ಇದರಲ್ಲಿ ಅಂಟಿಕೊಳ್ಳುವುದಿಲ್ಲ. ಅವನು ಪರಮ ಸ್ವತಂತ್ರನು. ಪ್ರಾಣಿಗಳ ಹೃದಯದಲ್ಲಿ ಅಡಗಿದ್ದು ಆರು ಇಂದ್ರಿಯಗಳ ವಿಷಯಗಳನ್ನು ಅವನೇ ಅನುಭವಿಸುತ್ತಿದ್ದರೂ ಅದರಿಂದ ಲಿಪ್ತನಾಗುವುದಿಲ್ಲ. ॥ ೩೬ ॥ ಐಂದ್ರಜಾಲಿಕನು ಅಥವಾ ನಟನು

ನ ಚಾಸ್ಯ ಕಶ್ಚಿನ್ನಿಪುಣೇನ ಧಾತು-
ರವೈತಿ ಜಂತುಃ ಕುಮನೀಷ ಊತೀಃ ।
ನಾಮಾನಿ ರೂಪಾಣಿ ಮನೋವಚೋಭಿಃ
ಸಂತನ್ವತೋ ನಟಚರ್ಯಾಮಿವಾಜ್ಞಃ ॥ ೩೭ ॥

ಸ ವೇದ ಧಾತುಃ ಪದವೀಂ ಪರಸ್ಯ
ದುರಂತ ವೀರ್ಯಸ್ಯ ರಥಾಂಗಪಾಣೇಃ ।
ಯೋಽಮಾಯಯಾ ಸಂತತಯಾನುವೃತ್ತ್ಯಾ
ಭಜೇತ ತತ್ಪಾದಸರೋಜಗಂಧಮ್ ॥ ೩೮ ॥

ಅಥೇಹ ಧನ್ಯಾ ಭಗವಂತ ಇತ್ಥಂ
ಯದ್ವಾ ಸುದೇವೇಽಖಿಲಲೋಕನಾಥೇ ।
ಕುರ್ವಂತಿ ಸರ್ವಾತ್ಮಕಮಾತ್ಮಭಾವಂ
ನ ಯತ್ರ ಭೂಯಃ ಪರಿವರ್ತ ಉಗ್ರಃ ॥ ೩೯ ॥

ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।
ಉತ್ತಮಶ್ಲೋಕಚರಿತಂ ಚಕಾರ ಭಗವಾನೃಷಿಃ ॥ ೪೦ ॥

ನಿಃಶ್ರೇಯಸಾಯ ಲೋಕಸ್ಯ ಧನ್ಯಂ ಸ್ವಸ್ತ್ಯಯನಂ ಮಹತ್ ।
ತದಿದಂ ಗ್ರಾಹಯಾಮಾಸ ಸುತಮಾತ್ಮವತಾಂ ವರಮ್ ॥ ೪೧ ॥

ಸರ್ವವೇದೇತಿಹಾಸಾನಾಂ ಸಾರಂ ಸಾರಂ ಸಮುದ್ಧೃತಮ್ ।
ಸ ತು ಸಂಶ್ರಾವಯಾಮಾಸ ಮಹಾರಾಜಂ ಪರೀಕ್ಷಿತಮ್ ॥ ೪೨ ॥

ಪ್ರಾಯೋಪವಿಷ್ಟಂ ಗಂಗಾಯಾಂ ಪರೀತಂ ಪರಮರ್ಷಿಭಿಃ ।
ಕೃಷ್ಣೇ ಸ್ವಧಾಮೋಪಗತೇ ಧರ್ಮಜ್ಞಾನಾದಿಭಿಃ ಸಹ ॥ ೪೩ ॥

ಕಲೌ ನಷ್ಟದೃಶಾಮೇಷ ಪುರಾಣಾರ್ಕೋಽಧುನೋದಿತಃ ।
ತತ್ರ ಕೀರ್ತಯತೋ ವಿಪ್ರಾ ವಿಪ್ರರ್ಷೇರ್ಭೂರಿತೇಜಸಃ ॥ ೪೪ ॥

ಅಹಂ ಚಾಧ್ಯಗಮಂ ತತ್ರ ನಿವಿಷ್ಟಸ್ತದನುಗ್ರಹಾತ್ ।
ಸೋಽಹಂ ವಃ ಶ್ರಾವಯಿಷ್ಯಾಮಿ ಯಥಾಧೀತಂ ಯಥಾಮತಿ ॥ ೪೫ ॥

ತನ್ನ ಸಂಕಲ್ಪದಿಂದಲೂ, ಮಾತುಗಳಿಂದಲೂ ಮಾಡುವ ಅದ್ಭುತ ಚಮತ್ಕಾರಗಳನ್ನು ಮೂರ್ಖಮನುಷ್ಯನು ಅರಿಯಲಾರನು. ಹಾಗೆಯೇ ದುರ್ಬುದ್ಧಿಯುಳ್ಳ ಜೀವರು-ಭಗವಂತನು ತನ್ನ ಸಂಕಲ್ಪದಿಂದಲೂ, ವೇದವಚನಗಳಿಂದಲೂ ಪ್ರಕಟಪಡಿಸುವ ನಾನಾ ನಾಮಗಳನ್ನೂ, ರೂಪಗಳನ್ನೂ, ಲೀಲೆಗಳನ್ನೂ, ತಮ್ಮ ಮನಸ್ಸು ಮಾತುಗಳಿಂದಲೂ ಬುದ್ಧಿ ಸೂಕ್ಷ್ಮತೆಯಿಂದಲೂ ಅರಿಯಲಾರರು. ॥ ೩೭ ॥ ಚಕ್ರಪಾಣಿ ಭಗವಂತನ ಶಕ್ತಿ, ಪರಾಕ್ರಮಗಳು ಅನಂತ ವಾಗಿವೆ. ಅದರ ಆಳವನ್ನು ಯಾರೂ ತಿಳಿಯಲಾರರು. ಅವನು ಇಡೀ ಜಗತ್ತಿನ ನಿರ್ಮಾತೃವಾಗಿದ್ದರೂ ಅದರಿಂದ ಸರ್ವಥಾ ಅತೀತನಾಗಿದ್ದಾನೆ. ಅವನ ಸ್ವರೂಪವನ್ನು ಅಥವಾ ಅವನ ಲೀಲೆಗಳ ರಹಸ್ಯವನ್ನು – ನಿತ್ಯ ನಿರಂತರವಾಗಿ ನಿಷ್ಕಪಟ ಭಾವದಿಂದ ಅವನ ಅಡಿದಾವರೆಗಳ ಗಂಧವನ್ನು ಸೇವಿಸುವವನು – ನಿಷ್ಕಾಮವಾದ ಸೇವಾ ಭಾವದಿಂದ ಅವನ ಚರಣಗಳನ್ನು ಚಿಂತಿಸುತ್ತಿರುವ ಭಕ್ತಶ್ರೇಷ್ಠನೇ ಅರಿಯಬಲ್ಲನು. ॥ ೩೮ ॥ ಶೌನಕಾದಿ ಋಷಿಗಳಿರಾ ! ಈ ಲೋಕದಲ್ಲಿ ಪೂಜ್ಯರಾದ ನೀವೇ ಧನ್ಯರು, ಸೌಭಾಗ್ಯಶಾಲಿಗಳು. ಏಕೆಂದರೆ, ನೀವು ಅಖಿಲಲೋಕಗಳಿಗೂ ಒಡೆಯನಾದ ಆ ಪರವಾಸುದೇವನಲ್ಲೇ ಸರ್ವಪ್ರಕಾರಗಳಿಂದಲೂ, ಆತ್ಮಭಾವವನ್ನು ಸಮರ್ಪಣೆ ಮಾಡಿರುವಿರಿ. ಹೀಗೆ ಮಾಡುವವರಿಗೆ ಈ ಭಯಂಕರ ವಾದ ಸಂಸಾರದಲ್ಲಿ ಮರಳಿ ಹುಟ್ಟಬೇಕಾಗುವುದಿಲ್ಲ. ॥ ೩೯ ॥

ಭಗವಾನ್ ವೇದವ್ಯಾಸರು ವೇದಗಳಿಗೆ ಸಮಾನವಾಗಿರುವ, ಪುಣ್ಯಶ್ಲೋಕನಾದ ಪರಮಾತ್ಮನ ಚರಿತ್ರೆಯಿಂದ ಪರಿಪೂರ್ಣವಾದ ಈ ಭಾಗವತವೆಂಬ ಪುರಾಣವನ್ನು ರಚಿಸಿದರು. ॥ ೪೦ ॥ ಅವರು ಅತ್ಯಂತ ಮಹತ್ತ್ವಪೂರ್ಣವೂ, ಮಂಗಳಕರವೂ ಆದ ಈ ಧನ್ಯ ವಾದ ಗ್ರಂಥರತ್ನವನ್ನು ಲೋಕದ ಪರಮ ಕಲ್ಯಾಣಕ್ಕಾಗಿ ಆತ್ಮಜ್ಞಾನಿ ಗಳಲ್ಲಿ ಶ್ರೇಷ್ಠರಾದ ತಮ್ಮ ಪುತ್ರರಾದ ಶುಕಮಹರ್ಷಿಗಳಿಗೆ ಬೋಧಿ ಸಿದರು. ॥ ೪೧ ॥ ಇದರಲ್ಲಿ ಎಲ್ಲ ವೇದ-ಇತಿಹಾಸಗಳ ಸಾರ ಸಂಗ್ರಹಮಾಡಲಾಗಿದೆ. ಶುಕಮಹಾಮುನಿಗಳು ರಾಜಾ ಪರೀಕ್ಷಿತ ನಿಗೆ ಇದನ್ನು ಶ್ರವಣಮಾಡಿಸಿದರು. ॥ ೪೨ ॥ ಆ ಸಮಯದಲ್ಲಿ ಅವನು ಮಹರ್ಷಿಗಳಿಂದ ಸುತ್ತುವರಿಯಲ್ಪಟ್ಟು ಆಮರಣ ನಿರಶನ ವ್ರತವನ್ನು ಕೈಗೊಂಡು ಗಂಗಾತೀರದಲ್ಲಿ ಕುಳಿತಿದ್ದನು. ಭಗವಾನ್ ಶ್ರೀಕೃಷ್ಣನು ಧರ್ಮ, ಜ್ಞಾನಾದಿಗಳೊಂದಿಗೆ ತನ್ನ ಪರಮಧಾಮಕ್ಕೆ ತೆರಳಿದಾಗ ಈ ಕಲಿಯುಗದಲ್ಲಿ ಅಜ್ಞಾನರೂಪೀ ಅಂಧಕಾರದಿಂದ ಕುರುಡಾಗಿದ್ದ ಜನರಿಗಾಗಿ ಈ ಪುರಾಣರೂಪೀ ಸೂರ್ಯನು ಅಲ್ಲಿ ಪ್ರಕಟಗೊಂಡನು. ಶೌನಕಾದಿ ಮಹರ್ಷಿಗಳೇ – ಮಹಾ ತೇಜಸ್ವೀ ಶ್ರೀಶುಕಮಹಾಮುನಿಗಳು ಅಲ್ಲಿ ಈ ಪುರಾಣದ ಕಥೆ ಯನ್ನು ಹೇಳುತ್ತಿದ್ದಾಗ ನಾನೂ ಅಲ್ಲಿ ಕುಳಿತಿದ್ದೆ. ಅಲ್ಲೇ ನಾನು ಅವರ ಕೃಪಾಪೂರ್ಣ ಅನುಮತಿಯಿಂದ ಇದರ ಅಧ್ಯಯನ ಮಾಡಿದೆ. ನಾನು ಅದನ್ನು ಅಲ್ಲಿ ಹೇಗೆ ಅಧ್ಯಯನ ಮಾಡಿದ್ದೇನೋ ಹಾಗೆಯೇ ನಿಮಗೆ ಯಥಾಮತಿಯಾಗಿ ಹೇಳುವೆನು ; ಕೇಳಿರಿ. ॥ ೪೩-೪೫ ॥

*ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ನೈಮಿಷೀಯೋಪಾಖ್ಯಾನೇ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ಮಹರ್ಷಿ ವೇದವ್ಯಾಸರ ವಿಷಾದ – ಅವರ ಬಳಿಗೆ ನಾರದರ ಆಗಮನ

*ವ್ಯಾಸ ಉವಾಚ*

**ಇತಿ ಬ್ರುವಾಣಂ ಸಂಸ್ತೂಯ ಮುನೀನಾಂ ದೀರ್ಘಸತ್ರಿಣಾಮ್ ।**
**ವೃದ್ಧಃ ಕುಲಪತಿಃ ಸೂತಂ ಬಹ್ವೃಚಃ ಶೌನಕೋಽಬ್ರವೀತ್ ॥ ೧ ॥**

*ಶೌನಕ ಉವಾಚ*

**ಸೂತ ಸೂತ ಮಹಾಭಾಗ ವದ ನೋ ವದತಾಂ ವರ ।**
**ಕಥಾಂ ಭಾಗವತೀಂ ಪುಣ್ಯಾಂ ಯದಾಹ ಭಗವಾನ್ ಶುಕಃ ॥ ೨ ॥**

**ಕಸ್ಮಿನ್ ಯುಗೇ ಪ್ರವೃತ್ತೇಯಂ ಸ್ಥಾನೇ ವಾ ಕೇನ ಹೇತುನಾ ।**
**ಕುತಃ ಸಂಚೋದಿತಃ ಕೃಷ್ಣಃ ಕೃತವಾನ್ ಸಂಹಿತಾಂ ಮುನಿಃ ॥ ೩ ॥**

**ತಸ್ಯ ಪುತ್ರೋ ಮಹಾಯೋಗೀ ಸಮದೃಙ್ನಿರ್ವಿಕಲ್ಪಕಃ ।**
**ಏಕಾಂತಮತಿರುನ್ನಿದ್ರೋ ಗೂಢೋ ಮೂಢ ಇವೇಯತೇ ॥ ೪ ॥**

**ದೃಷ್ಟ್ವಾನುಯಾಂತಮೃಷಿಮಾತ್ಮಜಮಪ್ಯನಗ್ನಂ**
**ದೇವ್ಯೋ ಹ್ರಿಯಾ ಪರಿದಧುರ್ನ ಸುತಸ್ಯ ಚಿತ್ರಮ್ ।**
**ತದ್ವೀಕ್ಷ್ಯ ಪೃಚ್ಛತಿ ಮುನೌ ಜಗದುಸ್ತವಾಸ್ತಿ**
**ಸ್ತ್ರೀಪುಂಭಿದಾ ನ ತು ಸುತಸ್ಯ ವಿವಿಕ್ತದೃಷ್ಟೇಃ ॥ ೫ ॥**

**ಕಥಮಾಲಕ್ಷಿತಃ ಪೌರೈಃ ಸಂಪ್ರಾಪ್ತಃ ಕುರುಜಾಂಗಲಾನ್ ।**
**ಉನ್ಮತ್ತಮೂಕಜಡವದ್ವಿಚರನ್ ಗಜಸಾಹ್ವಯೇ ॥ ೬ ॥**

**ಕಥಂ ವಾ ಪಾಂಡವೇಯಸ್ಯ ರಾಜರ್ಷೇರ್ಮುನಿನಾ ಸಹ ।**
**ಸಂವಾದಃ ಸಮಭೂತ್ತಾತ ಯತ್ರೈಷಾ ಸಾತ್ವತೀ ಶ್ರುತಿಃ ॥ ೭ ॥**

**ಶ್ರೀವೇದವ್ಯಾಸರು ಹೇಳುತ್ತಾರೆ** – ಆ ದೀರ್ಘಕಾಲದ ಸತ್ರಯಾಗದಲ್ಲಿ ನೆರೆದಿದ್ದ ಮುನಿಗಳಲ್ಲಿ ಜ್ಞಾನದಲ್ಲೂ ವಯಸ್ಸಿನಲ್ಲೂ ವೃದ್ಧರಾದ ಋಗ್ವೇದೀ ಕುಲಪತಿ ಶೌನಕರು ಅಲ್ಲಿ ಪ್ರವಚನ ಮಾಡುತ್ತಿದ್ದ ಸೂತ ಪುರಾಣಿಕರನ್ನು ಅಭಿನಂದಿಸಿ ಹೀಗೆ ಪ್ರಾರ್ಥಿಸಿಕೊಂಡರು. ॥ ೧ ॥

**ಶೌನಕರು ಕೇಳಿದರು** – (ಅವರು ಹೆಚ್ಚಿನ ಆದರಭಾವದಿಂದ ಎರಡುಬಾರಿ ಸಂಬೋಧಿಸಿ ಹೇಳುತ್ತಾರೆ.) ಸೂತಪುರಾಣಿಕರೇ! ಸೂತರೇ! ನೀವು ಪ್ರವಚನ ಮಾಡುವವರಲ್ಲಿ ಶ್ರೇಷ್ಠರಾಗಿದ್ದು ಮಹಾಭಾಗ್ಯಶಾಲಿಗಳಾಗಿದ್ದೀರಿ. ಭಗವಾನ್ ಶ್ರೀಶುಕಮಹಾಮುನಿಗಳು ಹೇಳಿರುವ ಭಗವಂತನ ಪುಣ್ಯಮಯ ಕಥೆಯನ್ನು ದಯಮಾಡಿ ನಮಗೆ ಹೇಳಿರಿ. ॥ ೨ ॥ ಆ ಕಥೆಯು ಯಾವ ಯುಗದಲ್ಲಿ, ಯಾವ ಸ್ಥಾನದಲ್ಲಿ, ಯಾವ ಕಾರಣದಿಂದ ನಡೆದಿತ್ತು? ಯಾರ ಪ್ರೇರಣೆಯಿಂದ ಮುನಿಶ್ರೇಷ್ಠರಾದ ಶ್ರೀಕೃಷ್ಣದ್ವೈಪಾಯನರು ಈ ಪರಮಹಂಸರ ಪುರಾಣಸಂಹಿತೆಯನ್ನು ರಚಿಸಿದರು? ॥ ೩ ॥ ಅವರ ಪುತ್ರರಾದ ಶುಕಮಹಾಮುನಿಗಳು ದೊಡ್ಡ ಯೋಗಿಗಳೂ, ಸಮದೃಷ್ಟಿಯುಳ್ಳವರೂ, ಭೇದಭಾವರಹಿತರೂ, ಅಜ್ಞಾನ-ನಿದ್ದೆಯಿಂದ ಎಚ್ಚತ್ತವರೂ, ನಿರಂತರ ಏಕಮಾತ್ರ ಪರಮಾತ್ಮನಲ್ಲಿ ಸ್ಥಿತರಾಗಿರುವವರೂ ಆಗಿದ್ದಾರೆ. ತನ್ನ ಮಹಿಮೆಯನ್ನು ಪ್ರಕಟಪಡಿಸಿಕೊಳ್ಳದೆ ಮೂಢನಂತೆ ಕಂಡುಬರುತ್ತಾರೆ. ॥ ೪ ॥ ಅವರು ಪರಿವ್ರಾಜಕರಾಗಿ ಮನೆಯಿಂದ ಹೊರಟುಬಿಟ್ಟಾಗ ತಂದೆ ವೇದವ್ಯಾಸರು ಅವರನ್ನು ಅಗಲಿರಲಾರದೆ ಹಿಂಬಾಲಿಸಿದರು. ಮಾರ್ಗದಲ್ಲಿ ಆಗ ಸ್ತ್ರೀಯರು ಸ್ನಾನಮಾಡುತ್ತಿದ್ದರು. ಶುಕಮಹರ್ಷಿಯು ದಿಗಂಬರನಾಗಿ ಹೋಗುತ್ತಿದ್ದರೂ ಆ ಸ್ತ್ರೀಯರು ಬಟ್ಟೆಯನ್ನುಟ್ಟುಕೊಳ್ಳಲಿಲ್ಲ. ಆದರೆ ವಸ್ತ್ರಧರಿಸಿದ್ದ ವೃದ್ಧರಾದ ವ್ಯಾಸರನ್ನು ನೋಡಿದೊಡನೆಯೇ ಲಜ್ಜೆಯಿಂದ ಅವರು ಬಟ್ಟೆಗಳನ್ನು ಧರಿಸಿದ್ದರು. ಈ ಆಶ್ಚರ್ಯವನ್ನು ನೋಡಿ ವ್ಯಾಸರು ಆ ಸ್ತ್ರೀಯರಲ್ಲಿ ಇದರ ಕಾರಣ ಕೇಳಿದಾಗ ಅವರು ಉತ್ತರಿಸಿದರು – 'ಮಹಾತ್ಮರೇ! ನಿಮ್ಮ ದೃಷ್ಟಿಯಲ್ಲಿ ಇನ್ನೂ ಸ್ತ್ರೀ-ಪುರುಷರೆಂಬ ಭೇದವಿದೆ, ಅರ್ಥಾತ್ ದ್ವೈತಬುದ್ಧಿ ಇದೆ. ಆದರೆ ನಿಮ್ಮ ಪುತ್ರರ ಶುದ್ಧದೃಷ್ಟಿಯಲ್ಲಿ ಈ ಭೇದವು ಇಲ್ಲವಲ್ಲ! ಅವರು ಬ್ರಹ್ಮಮಯ ದೃಷ್ಟಿಯಿಂದ ಎಲ್ಲದರಲ್ಲಿ ಏಕಮಾತ್ರ ಪರಬ್ರಹ್ಮನನ್ನೇ ನೋಡುತ್ತಾರೆ.' ॥ ೫ ॥ ಇಂತಹ ಅದ್ವೈತ ದೃಷ್ಟಿಯುಳ್ಳ ಮಹಾತ್ಮನು ಹುಚ್ಚನಂತೆಯೂ, ಮೂಗನಂತೆಯೂ, ಜಡನಂತೆಯೂ ಕುರುಜಾಂಗಲ ದೇಶವನ್ನು ಸೇರಿ ಹಸ್ತಿನಾಪುರದಲ್ಲಿ ಓಡಾಡುತ್ತಿದ್ದಾಗ ಅಲ್ಲಿನ ಪುರವಾಸಿಗಳು ಇವರನ್ನು ಹೇಗೆ ಗುರುತಿಸಿದರು? ॥ ೬ ॥ ಪಾಂಡವನಂದನ ರಾಜರ್ಷಿ ಪರೀಕ್ಷಿತನಿಗೆ ಈ ಮೌನೀ ಶುಕಯೋಗಿಗಳಲ್ಲಿ ಹೇಗೆ ಸಂವಾದ ನಡೆಯಿತು? ಅವರಿಂದ ಈ ಭಾಗವತಸಂಹಿತೆ ಹೇಗೆ ಹೇಳಲ್ಪಟ್ಟಿತು? ॥ ೭ ॥ ಆ ಮಹಾಪುರುಷ ಶುಕಮಹಾಮುನಿಗಳು

ಸ ಗೋದೋಹನಮಾತ್ರಂ ಹಿ ಗೃಹೇಷು ಗೃಹಮೇಧಿನಾಮ್ ।
ಅವೇಕ್ಷತೇ ಮಹಾಭಾಗಸ್ತೀರ್ಥೀಕುರ್ವಂಸ್ತದಾಶ್ರಮಮ್ ॥ ೮ ॥

ಅಭಿಮನ್ಯುಸುತಂ ಸೂತ ಪ್ರಾಹುರ್ಭಾಗವತೋತ್ತಮಮ್ ।
ತಸ್ಯ ಜನ್ಮ ಮಹಾಶ್ಚರ್ಯಂ ಕರ್ಮಾಣಿ ಚ ಗೃಣೀಹಿ ನಃ ॥ ೯ ॥

ಸ ಸಮ್ರಾಟ್ ಕಸ್ಯ ವಾ ಹೇತೋಃ ಪಾಂಡೂನಾಂ ಮಾನವರ್ಧನಃ ।
ಪ್ರಾಯೋಪವಿಷ್ಟೋ ಗಂಗಾಯಾಮನಾದೃತ್ಯಾಧಿರಾಟ್ ಶ್ರಿಯಮ್ ॥ ೧೦ ॥

ನಮಂತಿ ಯತ್ಪಾದನಿಕೇತಮಾತ್ಮನಃ
ಶಿವಾಯ ಹಾನೀಯ ಧನಾನಿ ಶತ್ರವಃ ।
ಕಥಂ ಸ ವೀರಃ ಶ್ರಿಯಮಂಗ ದುಸ್ತ್ಯಜಾಂ
ಯುವೈಷತೋತ್ಸ್ರಷ್ಟುಮಹೋ ಸಹಾಸುಭಿಃ ॥ ೧೧ ॥

ಶಿವಾಯ ಲೋಕಸ್ಯ ಭವಾಯ ಭೂತಯೇ
ಯ ಉತ್ತಮಶ್ಲೋಕಪರಾಯಣಾ ಜನಾಃ ।
ಜೀವಂತಿ ನಾತ್ಮಾರ್ಥಮಸೌ ಪರಾಶ್ರಯಂ
ಮುಮೋಚ ನಿರ್ವಿದ್ಯ ಕುತಃ ಕಲೇವರಮ್ ॥ ೧೨ ॥

ತತ್ಸರ್ವಂ ನಃ ಸಮಾಚಕ್ಷ್ವ ಪೃಷ್ಟೋ ಯದಿಹ ಕಿಂಚನ ।
ಮನ್ಯೇ ತ್ವಾಂ ವಿಷಯೇ ವಾಚಾಂ ಸ್ನಾತಮನ್ಯತ್ರ ಛಾಂದಸಾತ್ ॥ ೧೩ ॥

*ಸೂತ ಉವಾಚ*

ದ್ವಾಪರೇ ಸಮನುಪ್ರಾಪ್ತೇ ತೃತೀಯೇ ಯುಗಪರ್ಯಯೇ ।
ಜಾತಃ ಪರಾಶರಾದ್ಯೋಗೀ ವಾಸವ್ಯಾಂ ಕಲಯಾ ಹರೇಃ ॥ ೧೪ ॥

ಸ ಕದಾಚಿತ್ಸರಸ್ವತ್ಯಾ ಉಪಸ್ಪೃಶ್ಯ ಜಲಂ ಶುಚಿಃ ।
ವಿವಿಕ್ತದೇಶ ಆಸೀನ ಉದಿತೇ ರವಿಮಂಡಲೇ ॥ ೧೫ ॥

ಪರಾವರಜ್ಞಃ ಸ ಋಷಿಃ ಕಾಲೇನಾವ್ಯಕ್ತರಂಹಸಾ ।
ಯುಗಧರ್ಮವ್ಯತಿಕರಂ ಪ್ರಾಪ್ತಂ ಭುವಿ ಯುಗೇ ಯುಗೇ ॥ ೧೬ ॥

ಭೌತಿಕಾನಾಂ ಚ ಭಾವಾನಾಂ ಶಕ್ತಿಹ್ರಾಸಂ ಚ ತತ್ಕೃತಮ್ ।
ಅಶ್ರದ್ದಧಾನಾನ್ನಿಃ ಸತ್ತ್ವಾಂದುರ್ಮೇಧಾನ್ ಹ್ರಸಿತಾಯುಷಃ ॥ ೧೭ ॥

ದುರ್ಭಗಾಂಶ್ಚ ಜನಾನ್ ವೀಕ್ಷ್ಯ ಮುನಿರ್ದಿವ್ಯೇನ ಚಕ್ಷುಷಾ ।
ಸರ್ವವರ್ಣಾಶ್ರಮಾಣಾಂ ಯದ್ದಧ್ಯೌ ಹಿತಮಮೋಘದೃಕ್ ॥ ೧೮ ॥

ಗೃಹಸ್ಥರ ಮನೆಗಳನ್ನು ತೀರ್ಥ-ಸ್ವರೂಪವನ್ನಾಗಿಸಲು ಹಸುವು ಹಾಲು ಕರೆಯುವಷ್ಟು ಹೊತ್ತು ಮಾತ್ರ ಅಲ್ಲಿ ನಿಲ್ಲುತ್ತಿದ್ದರು. ॥ ೮ ॥ ಸೂತಪುರಾಣಿಕರೇ! ಅಭಿಮನ್ಯುನಂದನ ರಾಜಾಪರೀಕ್ಷಿತನು ಪರಮಭಾಗವತೋತ್ತಮನಾಗಿದ್ದನೆಂದು ನಾವು ಕೇಳಿದ್ದೇವೆ. ಅವನ ಅತ್ಯಂತ ಆಶ್ಚರ್ಯಮಯ ಜನ್ಮ ಮತ್ತು ಕರ್ಮಗಳನ್ನೂ ಕೂಡ ವರ್ಣಿಸುವವರಾಗಿರಿ. ॥ ೯ ॥ ಅವನಾದರೋ ಪಾಂಡವ ವಂಶದ ಗೌರವವನ್ನು ಹೆಚ್ಚಿಸುವವನಾಗಿದ್ದ ಸಾಮ್ರಾಟನಾಗಿದ್ದನು. ಅವನು ಯಾವ ಕಾರಣಕ್ಕಾಗಿ ಸಾಮ್ರಾಜ್ಯ ಲಕ್ಷ್ಮೀಯನ್ನು ಪರಿತ್ಯಜಿಸಿ ಗಂಗಾ ತೀರದಲ್ಲಿ ಆಮರಣಾಂತ ನಿರಶನ ವ್ರತವನ್ನು ಕೈಗೊಂಡು ಏಕೆ ಕುಳಿತಿದ್ದನು? ॥ ೧೦ ॥ ಶತ್ರುರಾಜರು ತಮ್ಮ ಒಳಿತಿಗಾಗಿ ರಾಶಿ-ರಾಶಿಯಾದ ಧನವನ್ನು ತಂದೊಪ್ಪಿಸಿ ಆತನ ಪಾದಪೀಠಕ್ಕೆ ನಮಸ್ಕರಿಸುತ್ತಿದ್ದರು. ಇನ್ನೂ ಪ್ರಾಯದ ವಯಸ್ಸಿನಲ್ಲಿದ್ದ ಮಹಾವೀರನು. ಹೀಗಿದ್ದರೂ ತೊರೆಯಲು ಕಷ್ಟವಾದ ಅಖಂಡ ಐಶ್ವರ್ಯವನ್ನೂ, ತನ್ನ ಪ್ರಾಣವನ್ನೂ ತೊರೆದುಬಿಡಲು ಅವನು ಏಕೆ ನಿಶ್ಚಯಿಸಿದನು? ॥ ೧೧ ॥ ಭಗವಂತನಲ್ಲಿ ಆಶ್ರಿತರಾದ ಸತ್ಪುರುಷರು ಜೀವನವಿಡೀ ಪ್ರಪಂಚದ ಮಂಗಳ, ಶ್ರೇಯಸ್ಸು, ಅಭ್ಯುದಯಗಳಿಗಾಗಿಯೇ ಬಾಳುವರು. ಅವರಿಗೆ ಅದರಲ್ಲಿ ಯಾವ ಸ್ವಾರ್ಥವೂ ಇರುವುದಿಲ್ಲ. ಹೀಗೆ ಪರೋಪಕಾರಕ್ಕಾಗಿಯೇ ಮೀಸಲಾಗಿದ್ದ ತನ್ನ ಪವಿತ್ರವಾದ ದೇಹದಲ್ಲಿಯೂ ವಿರಕ್ತನಾಗಿ ಅದನ್ನು ಏಕೆ ತ್ಯಾಗ ಮಾಡಿದನು? ॥ ೧೨ ॥ ವೇದವಾಙ್ಮಯವೊಂದನ್ನು ಬಿಟ್ಟು ಉಳಿದ ಎಲ್ಲ ಶಾಸ್ತ್ರಗಳಲ್ಲಿಯೂ ನೀವು ಪಾರಂಗತರಾಗಿರುವಿ. ಸೂತಪುರಾಣಿಕರೇ! ನಮ್ಮ ಎಲ್ಲ ಪ್ರಶ್ನೆಗಳಿಗೆ ದಯಮಾಡಿ ಉತ್ತರಿಸುವವರಾಗಿರಿ. ॥ ೧೩ ॥

**ಸೂತಪುರಾಣಿಕರು ಹೇಳಿದರು** – ಮಹರ್ಷಿಗಳೇ! ಈ ಚತುರ್ಯುಗಚಕ್ರದಲ್ಲಿ ಮೂರನೆಯದಾದ ದ್ವಾಪರಯುಗದಲ್ಲಿ ಶ್ರೀಭಗವಂತನ ಕಲಾವತಾರವಾದ ಮಹಾಯೋಗಿ ವೇದವ್ಯಾಸರು ಪರಾಶರ-ಸತ್ಯವತಿಯಲ್ಲಿ ಆವಿರ್ಭವಿಸಿದರು. ॥ ೧೪ ॥ ಒಂದು ದಿನ ಅವರು ಸೂರ್ಯೋದಯದಲ್ಲಿ ಸರಸ್ವತೀ ನದಿಯ ಪವಿತ್ರವಾದ ತೀರ್ಥದಲ್ಲಿ ಸ್ನಾನಾಹ್ನಿಕಗಳನ್ನು ಪೂರೈಸಿಕೊಂಡು, ಪವಿತ್ರವಾದ ಏಕಾಂತಸ್ಥಾನದಲ್ಲಿ ಕುಳಿತಿದ್ದರು. ॥ ೧೫ ॥ ಪರಾವರತತ್ತ್ವಗಳನ್ನೂ, ಭೂತ-ಭವಿಷ್ಯಗಳನ್ನೂ ಅರಿತಿದ್ದ ಆ ಮಹರ್ಷಿಗಳು – ಕಾಲದ ವೇಗದಿಂದ ಪ್ರತಿಯೊಂದು ಯುಗಗಳಲ್ಲಿಯೂ ಧರ್ಮ-ಸಾಂಕರ್ಯವುಂಟಾಗುತ್ತಿರುವುದನ್ನು, ಇದರ ಪ್ರಭಾವದಿಂದ ಭೌತಿಕವಸ್ತುಗಳಲ್ಲಿ ಸಹಜ ಶಕ್ತಿಯು ಕುಂದುತ್ತಿರುವುದನ್ನು, ಮನುಷ್ಯರಲ್ಲಿ ಅಶ್ರದ್ಧೆ, ಸತ್ತ್ವಹೀನತೆ, ಬುದ್ಧಿಹೀನತೆ, ಅಲ್ಪಾಯು ಭಾಗ್ಯಹೀನತೆಗಳುಂಟಾಗುತ್ತಿರುವುದನ್ನು ತಮ್ಮ ದಿವ್ಯಜ್ಞಾನ ದೃಷ್ಟಿಯಿಂದ ಅರಿತುಕೊಂಡು, ಎಲ್ಲ ವರ್ಣಗಳ, ಆಶ್ರಮಗಳ ಜನರಿಗೆ ಹೇಗೆ ಹಿತವುಂಟಾದೀತು? ಎಂದು ಆಲೋಚಿಸತೊಡಗಿದರು. ॥ ೧೬-೧೮ ॥ ವೇದೋಕ್ತವಾಗಿ ನಾಲ್ಕು ಹೋತೃಗಳಿಂದ ಕೂಡಿದ ಯಜ್ಞಕರ್ಮವನ್ನು ಆಚರಿಸಿದರೆ ಜನರ ಹೃದಯ ಶುದ್ಧವಾಗುತ್ತದೆ ಎಂದು ಯೋಚಿಸಿದ ಅವರು ಯಜ್ಞಗಳನ್ನು ವಿಸ್ತಾರವಾಗಿ ಅನುಷ್ಠಾನಕ್ಕೆ ತರಲು ಸಹಾಯಕವಾಗಲೆಂದು

ಚಾತುರ್ಹೋತ್ರಂ ಕರ್ಮ ಶುದ್ಧಂ ಪ್ರಜಾನಾಂ ವೀಕ್ಷ್ಯ ವೈದಿಕಮ್ ।
ವ್ಯದಧಾದ್ಯಜ್ಞಸಂತತ್ಯೈ ವೇದಮೇಕಂ ಚತುರ್ವಿಧಮ್ ॥ ೧೯ ॥

ಋಗ್ಯಜುಃಸಾಮಾಥರ್ವಾಖ್ಯಾ ವೇದಾಶ್ಚತ್ವಾರ ಉದ್ಧೃತಾಃ ।
ಇತಿಹಾಸಪುರಾಣಂ ಚ ಪಂಚಮೋ ವೇದ ಉಚ್ಯತೇ ॥ ೨೦ ॥

ತತ್ರರ್ಗ್ವೇದಧರಃ ಪೈಲಃ ಸಾಮಗೋ ಜೈಮಿನಿಃ ಕವಿಃ ।
ವೈಶಂಪಾಯನ ಏವೈಕೋ ನಿಷ್ಣಾತೋ ಯಜುಷಾಮುತ ॥ ೨೧ ॥

ಅಥರ್ವಾಂಗಿರಸಾಮಾಸೀತ್ಸುಮಂತುರ್ದಾರುಣೋ ಮುನಿಃ ।
ಇತಿಹಾಸಪುರಾಣಾನಾಂ ಪಿತಾ ಮೇ ರೋಮಹರ್ಷಣಃ ॥ ೨೨ ॥

ತ ಏತ ಋಷಯೋ ವೇದಂ ಸ್ವಂ ಸ್ವಂ ವ್ಯಸ್ಯನ್ನನೇಕಧಾ ।
ಶಿಷ್ಯೈಃ ಪ್ರಶಿಷ್ಯೈಸ್ತಚ್ಛಿಷ್ಯೈರ್ವೇದಾಸ್ತೇ ಶಾಖಿನೋಽಭವನ್ ॥ ೨೩ ॥

ತ ಏವ ವೇದಾ ದುರ್ಮೇಧೈರ್ಧಾರ್ಯಂತೇ ಪುರುಷೈರ್ಯಥಾ ।
ಏವಂ ಚಕಾರ ಭಗವಾನ್ ವ್ಯಾಸಃ ಕೃಪಣವತ್ಸಲಃ ॥ ೨೪ ॥

ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥ ೨೫ ॥

ಏವಂ ಪ್ರವೃತ್ತಸ್ಯ ಸದಾ ಭೂತಾನಾಂ ಶ್ರೇಯಸಿ ದ್ವಿಜಾಃ ।
ಸರ್ವಾತ್ಮಕೇನಾಪಿ ಯದಾ ನಾತುಷ್ಯದ್ಧೃದಯಂ ತತಃ ॥ ೨೬ ॥

ನಾತಿಪ್ರಸೀದದ್ಧೃದಯಃ ಸರಸ್ವತ್ಯಾಸ್ತಟೇ ಶುಚೌ ।
ವಿತರ್ಕಯನ್ ವಿವಿಕ್ತಸ್ಥ ಇದಂ ಪ್ರೋವಾಚ ಧರ್ಮವಿತ್ ॥ ೨೭ ॥

ಧೃತವ್ರತೇನ ಹಿ ಮಯಾ ಛಂದಾಂಸಿ ಗುರವೋಽಗ್ನಯಃ ।
ಮಾನಿತಾ ನಿರ್ವ್ಯಲೀಕೇನ ಗೃಹೀತಂ ಚಾನುಶಾಸನಮ್ ॥ ೨೮ ॥

ಭಾರತವ್ಯಪದೇಶೇನ ಹ್ಯಾಮ್ನಾಯಾರ್ಥಶ್ಚ ದರ್ಶಿತಃ ।
ದೃಶ್ಯತೇ ಯತ್ರ ಧರ್ಮಾದಿ ಸ್ತ್ರೀಶೂದ್ರಾದಿಭಿರಪ್ಯುತ ॥ ೨೯ ॥

ತಥಾಪಿ ಬತ ಮೇ ದೈಹ್ಯೋ ಹ್ಯಾತ್ಮಾ ಚೈವಾತ್ಮನಾ ವಿಭುಃ ।
ಅಸಂಪನ್ನ ಇವಾಭಾತಿ ಬ್ರಹ್ಮವರ್ಚಸ್ಯಸತ್ತಮಃ ॥ ೩೦ ॥

ಅಖಂಡವಾಗಿದ್ದ ವೇದವನ್ನು – ಋಕ್, ಯಜುಸ್ಸು, ಸಾಮ ಮತ್ತು ಅಥರ್ವ ಎಂಬ ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಿದರು. ಇತಿಹಾಸ ಮತ್ತು ಪುರಾಣಗಳನ್ನು ಐದನೆಯ ವೇದವೆಂದು ಹೇಳಲಾಗುತ್ತದೆ. ॥ ೧೯-೨೦ ॥ ಇವುಗಳಲ್ಲಿ ಋಗ್ವೇದವನ್ನು ಪೈಲರು ಅಧ್ಯಯನ ಮಾಡಿ ಅದರ ಪ್ರವರ್ತಕರಾದರು. ಯಜುರ್ವೇದವನ್ನು ವೈಶಂಪಾಯನ ರೋರ್ವರೇ ಅಧ್ಯಯನಗೈದು ಅದರಲ್ಲಿ ಪಾರಂಗತ ರಾದರು. ವಿದ್ವಾಂಸರಾದ ಜೈಮಿನಿ ಮಹರ್ಷಿಗಳು ಸಾಮವೇದ ದಲ್ಲಿ ನಿಷ್ಣಾತರಾದರು. ॥ ೨೧ ॥ ದರುಣಪುತ್ರರಾದ ಸುಮಂತು ಮುನಿಗಳು ಅಥರ್ವವೇದದಲ್ಲಿ ಪ್ರವೀಣರಾಗಿ ಅದರ ಪ್ರವರ್ತಕ ರಾದರು. ನನ್ನ ತಂದೆಯವರಾದ ರೋಮಹರ್ಷಣರು ಇತಿಹಾಸ ಮತ್ತು ಪುರಾಣಗಳಲ್ಲಿ ಪ್ರಾವೀಣ್ಯವನ್ನು ಪಡೆದು ಪ್ರವರ್ತಕ ರಾದರು. ॥ ೨೨ ॥ ಇವರೆಲ್ಲ ಋಷಿಗಳು ತಮ್ಮ-ತಮ್ಮ ವೇದಶಾಖೆ ಗಳನ್ನು ಇನ್ನೂ ಅನೇಕ ಶಾಖೆಗಳನ್ನಾಗಿ ವಿಭಜಿಸಿದರು. ಹೀಗೆ ಶಿಷ್ಯ-ಪ್ರಶಿಷ್ಯರು ಮತ್ತು ಅವರ ಶಿಷ್ಯರ ಮೂಲಕ ವೇದಗಳಿಗೆ ಬಹು ಶಾಖೆಗಳಾದುವು. ॥ ೨೩ ॥ ದೀನವತ್ಸಲರೂ, ಪರಮ ಪೂಜ್ಯರೂ ಆದ ಭಗವಾನ್ ವೇದವ್ಯಾಸರು ಸ್ಮರಣೆ-ಧಾರಣೆಗಳ ಶಕ್ತಿಯು ಅತಿ ಕಡಿಮೆಯಾಗಿರುವ ಜನರೂ ಕೂಡ ಅವುಗಳನ್ನು ಧರಿಸಿ ಕೃತಾರ್ಥ ರಾಗುವಂತೆ ವೇದವಾಙ್ಮಯವನ್ನು ವಿಭಾಗ ಮಾಡಿದರು. ॥ ೨೪ ॥

ಸ್ತ್ರೀಯರು, ಶೂದ್ರರು, ಪತಿತದ್ವಿಜರು ವೇದಶ್ರವಣಕ್ಕೆ ಅಧಿಕಾರಿ ಗಳಲ್ಲವಾದ್ದರಿಂದ ಅವರು ಶ್ರೇಯಸ್ಕರವಾದ ವೈದಿಕ ಶಾಸ್ತ್ರೋಕ್ತ ಕರ್ಮಗಳ ಆಚರಣೆಗಳಲ್ಲಿ ತಪ್ಪುಮಾಡಿ ಬಿಡುತ್ತಾರೆ. ಈಗ ಅವ ರಿಗೂ ಕೂಡ ಇದರ ಮೂಲಕ ಶ್ರೇಯಸ್ಸು ಉಂಟಾಗಲೆಂದು ಯೋಚಿಸಿ ಪರಮಕರುಣೆಯಿಂದ ವ್ಯಾಸಮುನೀಂದ್ರರು ಮಹಾಭಾರತ ವೆಂಬ ಇತಿಹಾಸವನ್ನು ರಚಿಸಿದರು. ॥ ೨೫ ॥ ಶೌನಕಾದಿ ಮಹರ್ಷಿ ಗಳೇ! ಹೀಗೆ ಅವರು ತಮ್ಮ ಸರ್ವಶಕ್ತಿಗಳಿಂದ ಸದಾಕಾಲ ಪ್ರಾಣಿ ಗಳ ಶ್ರೇಯಸ್ಸಿಗಾಗಿಯೇ ತತ್ಪರರಾಗಿದ್ದರೂ ಕೂಡ ಅವರ ಹೃದಯಕ್ಕೆ ಪೂರ್ಣವಾದ ನೆಮ್ಮದಿ ಉಂಟಾಗಲಿಲ್ಲ. ॥ ೨೬ ॥ ಅವರ ಮನಸ್ಸು ಸ್ವಲ್ಪ ಖಿನ್ನವಾದಂತಾಯಿತು. ಸರಸ್ವತೀ ನದಿಯ ತೀರದ ಏಕಾಂತ ದಲ್ಲಿ ಕುಳಿತುಕೊಂಡು ವಿಚಾರ-ಚಿಂತನೆ ಮಾಡುತ್ತಾ ಹೀಗೆ ಹೇಳಿ ಕೊಂಡರು – ॥ ೨೭ ॥ "ನಾನು ನಿಷ್ಕಪಟಭಾವದಿಂದ ಬ್ರಹ್ಮ ಚರ್ಯಾದಿ ವ್ರತಗಳನ್ನು ಪಾಲಿಸುತ್ತಾ ವೇದಗಳನ್ನೂ, ಗುರು-ಜನ ರನ್ನೂ, ಅಗ್ನಿಯನ್ನೂ ಗೌರವದಿಂದ ಉಪಾಸನೆ ಮಾಡಿದ್ದೇನೆ. ಅವರ ಆಜ್ಞೆಯನ್ನೂ ಶಿರಸಾವಹಿಸಿದ್ದೇನೆ. ॥ ೨೮ ॥ ಮಹಾಭಾರತ ವನ್ನು ರಚಿಸುವುದರ ಮೂಲಕ ಸ್ತ್ರೀಯರು, ಶೂದ್ರಾದಿಗಳೂ ಕೂಡ ತಮ್ಮ-ತಮ್ಮ ಧರ್ಮಕರ್ಮಗಳ ಅರಿವನ್ನು ಪಡೆಯುವಂತೆ ವೇದಾರ್ಥಗಳನ್ನು ಪ್ರಕಾಶಪಡಿಸಿದ್ದೇನೆ. ॥ ೨೯ ॥ ನಾನು ಬ್ರಹ್ಮ ತೇಜದಿಂದ ಸಂಪನ್ನನೂ, ಸಮರ್ಥನೂ ಆಗಿದ್ದರೂ ನನ್ನ ದೇಹ ದಲ್ಲಿರುವ ಆತ್ಮವು ಪೂರ್ಣ ತೃಪ್ತಿಯನ್ನು ಪಡೆದಿಲ್ಲವೆಂದೇ ಅನುಭವ ವಾಗುತ್ತದೆಯಲ್ಲ! ॥ ೩೦ ॥ ಪ್ರಾಯಶಃ ನಾನು ಪರಮಹಂಸರಿಗೆ

ಕಿಂ ವಾ ಭಾಗವತಾ ಧರ್ಮಾ ನ ಪ್ರಾಯೇಣ ನಿರೂಪಿತಾಃ ।
ಪ್ರಿಯಾಃ ಪರಮಹಂಸಾನಾಂ ತ ಏವ ಹ್ಯಚ್ಯುತಪ್ರಿಯಾಃ
॥ ೩೧ ॥

ತಸ್ಯೈವಂ ಖಿಲಮಾತ್ಮಾನಂ ಮನ್ಯಮಾನಸ್ಯ ಖಿದ್ಯತಃ ।
ಕೃಷ್ಣಸ್ಯ ನಾರದೋಽಭ್ಯಾಗಾದಾಶ್ರಮಂ ಪ್ರಾಗುದಾಹೃತಮ್
॥ ೩೨ ॥

ತಮಭಿಜ್ಞಾಯ ಸಹಸಾ ಪ್ರತ್ಯುತ್ಥಾಯಾಗತಂ ಮುನಿಃ ।
ಪೂಜಯಾಮಾಸ ವಿಧಿವನ್ನಾರದಂ ಸುರಪೂಜಿತಮ್
॥ ೩೩ ॥

ಪ್ರಿಯವಾಗಿರುವ ಭಾಗವತ ಧರ್ಮಗಳನ್ನು ಪ್ರತಿಪಾದನೆ ಮಾಡಿಲ್ಲ. ಆ ಧರ್ಮಗಳು ತಾನೇ ಅಚ್ಯುತನಿಗೂ ಪ್ರಿಯವಾಗಿರುವುದು! ಇವುಗಳನ್ನು ಪ್ರಧಾನವಾಗಿ ಪ್ರತಿಪಾದನೆ ಮಾಡದೇ ಇರುವುದೇ ನನ್ನ ಅತೃಪ್ತಿಗೆ ಕಾರಣವಿರಬಹುದೇ ?" ॥ ೩೧ ॥ ಹೀಗೆ ತಮ್ಮನ್ನು ಅಪೂರ್ಣರೆಂಬಂತೆ ಭಾವಿಸಿಕೊಂಡು ಶ್ರೀಕೃಷ್ಣದ್ವೈಪಾಯನರು ಖೇದಪಡುತ್ತಿರುವಂತೆ ಆ ಆಶ್ರಮಕ್ಕೆ ದೇವಋಷಿ ನಾರದರು ದಯಮಾಡಿಸಿದರು. ॥ ೩೨ ॥ ಹೀಗೆ ಆಗಮಿಸಿದ ಅವರನ್ನು ಕಂಡೊಡನೆಯೇ ವ್ಯಾಸಮುನೀಂದ್ರರು ಸಂಭ್ರಮದಿಂದ ಎದ್ದು ನಿಂತು ದೇವತೆಗಳಿಂದಲೂ ಪೂಜಿತರಾದ ದೇವರ್ಷಿ ನಾರದರನ್ನು ವಿಧಿಪೂರ್ವಕವಾಗಿ ಪೂಜಿಸಿದರು. ॥ ೩೩ ॥

**ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ ನೈಮಿಷೀಯೋಪಾಖ್ಯಾನೇ ಚತುರ್ಥೋಽಧ್ಯಾಯಃ ॥ ೪ ॥**

# ಐದನೆಯ ಅಧ್ಯಾಯ

## ವ್ಯಾಸ-ನಾರದರ ಸಂವಾದ, ಭಗವಂತನ ಯಶ ಕೀರ್ತನೆಯ ಮಹಿಮೆ, ನಾರದರ ಪೂರ್ವಜನ್ಮ ವೃತ್ತಾಂತ

*ಸೂತ ಉವಾಚ*

ಅಥ ತಂ ಸುಖಮಾಸೀನ ಉಪಾಸೀನಂ ಬೃಹಚ್ಛ್ರವಾಃ ।
ದೇವರ್ಷಿಃ ಪ್ರಾಹ ವಿಪ್ರರ್ಷಿಂ ವೀಣಾಪಾಣಿಃ ಸ್ಮಯನ್ನಿವ
॥ ೧ ॥

*ನಾರದ ಉವಾಚ*

ಪಾರಾಶರ್ಯ ಮಹಾಭಾಗ ಭವತಃ ಕಚ್ಚಿದಾತ್ಮನಾ ।
ಪರಿತುಷ್ಯತಿ ಶಾರೀರ ಆತ್ಮಾ ಮಾನಸ ಏವ ವಾ
॥ ೨ ॥

ಜಿಜ್ಞಾಸಿತಂ ಸುಸಂಪನ್ನಮಪಿ ತೇ ಮಹದದ್ಭುತಮ್ ।
ಕೃತವಾನ್ ಭಾರತಂ ಯಸ್ತ್ವಂ ಸರ್ವಾರ್ಥಪರಿಬೃಂಹಿತಮ್
॥ ೩ ॥

ಜಿಜ್ಞಾಸಿತಮಧೀತಂ ಚ ಯತ್ತದ್ಬ್ರಹ್ಮ ಸನಾತನಮ್ ।
ತಥಾಪಿ ಶೋಚಸ್ಯಾತ್ಮಾನಮಕೃತಾರ್ಥ ಇವ ಪ್ರಭೋ
॥ ೪ ॥

*ವ್ಯಾಸ ಉವಾಚ*

ಅಸ್ತ್ಯೇವ ಮೇ ಸರ್ವಮಿದಂ ತ್ವಯೋಕ್ತಂ
ತಥಾಪಿ ನಾತ್ಮಾ ಪರಿತುಷ್ಯತೇ ಮೇ ।
ತನ್ಮೂಲಮವ್ಯಕ್ತಮಗಾಧಬೋಧಂ
ಪೃಚ್ಛಾಮಹೇ ತ್ವಾಽಽತ್ಮಭವಾತ್ಮಭೂತಮ್ ॥ ೫ ॥

**ಸೂತಪುರಾಣಿಕರು ಹೇಳುತ್ತಾರೆ** – ಅನಂತರ ಮಹಾಯಶಸ್ವಿಗಳಾದ, ವೀಣಾಪಾಣಿಗಳಾದ ದೇವಋಷಿ ನಾರದರು ನಸುನಗುತ್ತಾ ಸುಖಾಸೀನರಾಗಿ, ತಮ್ಮ ಬಳಿಯಲ್ಲಿ ಕುಳಿತುಕೊಂಡ ಬ್ರಹ್ಮರ್ಷಿ ವೇದವ್ಯಾಸರನ್ನು ಹೀಗೆ ಕೇಳಿದರು – ॥ ೧ ॥

**ನಾರದರು ಪ್ರಶ್ನಿಸಿದರು** – ಮಹಾಭಾಗರಾದ ಪರಾಶರಪುತ್ರರೇ! ನಿಮ್ಮ ಶರೀರ-ಮನಸ್ಸುಗಳು ತಮ್ಮ ಕರ್ಮಗಳಿಂದ, ಚಿಂತನದಿಂದ ಸಂತುಷ್ಟವಾಗಿವೆಯಷ್ಟೆ? ॥ ೨ ॥ ಏಕೆಂದರೆ, ನೀವು ಎಲ್ಲ ಪುರುಷಾರ್ಥಗಳಿಂದಲೂ ಪರಿಪೂರ್ಣವಾಗಿರುವ ಪರಮಾದ್ಭುತವಾದ ಮಹಾಭಾರತವನ್ನು ರಚಿಸಿರುವಿರಿ. ಇದರಿಂದ ನಿಮ್ಮ ಆಕಾಂಕ್ಷೆಯು ಪೂರ್ಣವಾಗಿ ಕೈಗೂಡಿರಬೇಕಲ್ಲ! ॥ ೩ ॥ ಇದಲ್ಲದೆ ನೀವು ಸನಾತನವಾದ ಬ್ರಹ್ಮತತ್ತ್ವವನ್ನು ಕುರಿತು ವೇದಾಂತಸೂತ್ರಗಳಲ್ಲಿ ಬಹಳಷ್ಟು ವಿಚಾರಮಾಡಿ, ಅದನ್ನು ಚೆನ್ನಾಗಿ ಅರಿತುಕೊಂಡಿರುವಿರಿ. ಹಾಗಿದ್ದರೂ ನೀವು ಓರ್ವ ಕೃತಕೃತ್ಯರಾಗದೇ ಇರುವ ಸಾಧಾರಣ ಮನುಷ್ಯನಂತೆ ಸ್ವವಿಷಯದಲ್ಲಿ ಏಕೆ ಶೋಕಿಸುತ್ತಿದ್ದೀರಿ? ॥ ೪ ॥

**ವೇದವ್ಯಾಸರು ಹೇಳಿದರು** – ನಾರದರೇ! ನೀವು ನನ್ನ ವಿಷಯದಲ್ಲಿ ಹೇಳಿರುವುದೆಲ್ಲವೂ ನಿಜವೇ. ಇದರಲ್ಲಿ ಸಂದೇಹವೇ ಇಲ್ಲ. ಆದರೂ ನನ್ನ ಹೃದಯವು ಸಂತುಷ್ಟವಾಗಿಲ್ಲ. ಇದಕ್ಕೇನು ಕಾರಣವೆಂಬುದು ತಿಳಿಯುತ್ತಿಲ್ಲ. ನಿಮ್ಮ ಜ್ಞಾನವು ಅಗಾಧವಾಗಿದೆ. ತಾವು ಸಾಕ್ಷಾತ್‌ಬ್ರಹ್ಮದೇವರ ಮಾನಸಪುತ್ರರು. ಅದಕ್ಕಾಗಿ ನಾನು ನಿಮ್ಮಲ್ಲೇ ಇದರ ಕಾರಣವನ್ನು ಕೇಳುತ್ತಿದ್ದೇನೆ. ತಾವು ಅದನ್ನು ತಿಳಿಸಬೇಕು. ॥ ೫ ॥ ದೇವರ್ಷಿಗಳೇ! ತಾವು ಎಲ್ಲ ರಹಸ್ಯಗಳನ್ನು ಬಲ್ಲವರು. ಏಕೆಂದರೆ, ಕಾರ್ಯಕಾರಣಗಳಿಗೆ ನಿಯಾಮಕನಾದ ಭಗವಂತನು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ಅದರ

ಚಾತುರ್ಹೋತ್ರಂ ಕರ್ಮ ಶುದ್ಧಂ ಪ್ರಜಾನಾಂ ವೀಕ್ಷ್ಯ ವೈದಿಕಮ್ ।
ವ್ಯದಧಾದ್ಯಜ್ಞಸಂತತ್ಯೈ ವೇದಮೇಕಂ ಚತುರ್ವಿಧಮ್ ॥ ೧೯ ॥

ಋಗ್ಯಜುಸಾಮಾಥರ್ವಾಖ್ಯಾ ವೇದಾಶ್ಚತ್ವಾರ ಉದ್ಧೃತಾಃ ।
ಇತಿಹಾಸಪುರಾಣಂ ಚ ಪಂಚಮೋ ವೇದ ಉಚ್ಯತೇ ॥ ೨೦ ॥

ತತ್ರರ್ಗ್ವೇದಧರಃ ಪೈಲಃ ಸಾಮಗೋ ಜೈಮಿನಿಃ ಕವಿಃ ।
ವೈಶಂಪಾಯನ ಏವೈಕೋ ನಿಷ್ಣಾತೋ ಯಜುಷಾಮುತ ॥ ೨೧ ॥

ಅಥರ್ವಾಂಗಿರಸಾಮಾಸೀತ್ಸುಮಂತುರ್ದಾರುಣೋ ಮುನಿಃ ।
ಇತಿಹಾಸಪುರಾಣಾನಾಂ ಪಿತಾ ಮೇ ರೋಮಹರ್ಷಣಃ ॥ ೨೨ ॥

ತ ಏತ ಋಷಯೋ ವೇದಂ ಸ್ವಂ ಸ್ವಂ ವ್ಯಸ್ಯನ್ನನೇಕಧಾ ।
ಶಿಷ್ಯೈಃ ಪ್ರಶಿಷ್ಯೈಸ್ತಚ್ಛಿಷ್ಯೈರ್ವೇದಾಸ್ತೇ ಶಾಖಿನೋಽಭವನ್ ॥ ೨೩ ॥

ತ ಏವ ವೇದಾ ದುರ್ಮೇಧೈರ್ಧಾರ್ಯಂತೇ ಪುರುಷೈರ್ಯಥಾ ।
ಏವಂ ಚಕಾರ ಭಗವಾನ್ ವ್ಯಾಸಃ ಕೃಪಣವತ್ಸಲಃ ॥ ೨೪ ॥

ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥ ೨೫ ॥

ಏವಂ ಪ್ರವೃತ್ತಸ್ಯ ಸದಾ ಭೂತಾನಾಂ ಶ್ರೇಯಸಿ ದ್ವಿಜಾಃ ।
ಸರ್ವಾತ್ಮಕೇನಾಪಿ ಯದಾ ನಾತುಷ್ಯದ್ಧೃದಯಂ ತತಃ ॥ ೨೬ ॥

ನಾತಿಪ್ರಸೀದದ್ಧೃದಯಃ ಸರಸ್ವತ್ಯಾಸ್ತಟೇ ಶುಚೌ ।
ವಿತರ್ಕಯನ್ ವಿವಿಕ್ತಸ್ಥ ಇದಂ ಪ್ರೋವಾಚ ಧರ್ಮವಿತ್ ॥ ೨೭ ॥

ಧೃತವ್ರತೇನ ಹಿ ಮಯಾ ಛಂದಾಂಸಿ ಗುರವೋಽಗ್ನಯಃ ।
ಮಾನಿತಾ ನಿರ್ವ್ಯಲೀಕೇನ ಗೃಹೀತಂ ಚಾನುಶಾಸನಮ್ ॥ ೨೮ ॥

ಭಾರತವ್ಯಪದೇಶೇನ ಹ್ಯಾಮ್ನಾಯಾರ್ಥಶ್ಚ ದರ್ಶಿತಃ ।
ದೃಶ್ಯತೇ ಯತ್ರ ಧರ್ಮಾದಿ ಸ್ತ್ರೀಶೂದ್ರಾದಿಭಿರಪ್ಯುತ ॥ ೨೯ ॥

ತಥಾಪಿ ಬತ ಮೇ ದೈಹ್ಯೋ ಹ್ಯಾತ್ಮಾ ಚೈವಾತ್ಮನಾ ವಿಭುಃ ।
ಅಸಂಪನ್ನ ಇವಾಭಾತಿ ಬ್ರಹ್ಮವರ್ಚಸ್ಯಸತ್ತಮಃ ॥ ೩೦ ॥

ಅಖಂಡವಾಗಿದ್ದ ವೇದವನ್ನು – ಋಕ್, ಯಜುಸ್ಸು, ಸಾಮ ಮತ್ತು ಅಥರ್ವ ಎಂಬ ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಿದರು. ಇತಿಹಾಸ ಮತ್ತು ಪುರಾಣಗಳನ್ನು ಐದನೆಯ ವೇದವೆಂದು ಹೇಳಲಾಗುತ್ತದೆ. ॥ ೧೯-೨೦ ॥ ಇವುಗಳಲ್ಲಿ ಋಗ್ವೇದವನ್ನು ಪೈಲರು ಅಧ್ಯಯನ ಮಾಡಿ ಅದರ ಪ್ರವರ್ತಕರಾದರು. ಯಜುರ್ವೇದವನ್ನು ವೈಶಂಪಾಯನ ರೋರ್ವರೇ ಅಧ್ಯಯನಗೈದು ಅದರಲ್ಲಿ ಪಾರಂಗತರಾದರು. ವಿದ್ವಾಂಸರಾದ ಜೈಮಿನಿ ಮಹರ್ಷಿಗಳು ಸಾಮವೇದದಲ್ಲಿ ನಿಷ್ಣಾತರಾದರು. ॥ ೨೧ ॥ ದರುಣಪುತ್ರರಾದ ಸುಮಂತು ಮುನಿಗಳು ಅಥರ್ವವೇದದಲ್ಲಿ ಪ್ರವೀಣರಾಗಿ ಅದರ ಪ್ರವರ್ತಕರಾದರು. ನನ್ನ ತಂದೆಯವರಾದ ರೋಮಹರ್ಷಣರು ಇತಿಹಾಸ ಮತ್ತು ಪುರಾಣಗಳಲ್ಲಿ ಪ್ರಾವೀಣ್ಯವನ್ನು ಪಡೆದು ಪ್ರವರ್ತಕರಾದರು. ॥ ೨೨ ॥ ಇವರೆಲ್ಲ ಋಷಿಗಳು ತಮ್ಮ-ತಮ್ಮ ವೇದಶಾಖೆಗಳನ್ನು ಇನ್ನೂ ಅನೇಕ ಶಾಖೆಗಳನ್ನಾಗಿ ವಿಭಜಿಸಿದರು. ಹೀಗೆ ಶಿಷ್ಯ-ಪ್ರಶಿಷ್ಯರು ಮತ್ತು ಅವರ ಶಿಷ್ಯರ ಮೂಲಕ ವೇದಗಳಿಗೆ ಬಹು ಶಾಖೆಗಳಾದುವು. ॥ ೨೩ ॥ ದೀನವತ್ಸಲರೂ, ಪರಮ ಪೂಜ್ಯರೂ ಆದ ಭಗವಾನ್ ವೇದವ್ಯಾಸರು ಸ್ಮರಣೆ-ಧಾರಣೆಗಳ ಶಕ್ತಿಯು ಅತಿ ಕಡಿಮೆಯಾಗಿರುವ ಜನರೂ ಕೂಡ ಅವುಗಳನ್ನು ಧರಿಸಿ ಕೃತಾರ್ಥರಾಗುವಂತೆ ವೇದವಾಙ್ಮಯವನ್ನು ವಿಭಾಗ ಮಾಡಿದರು. ॥ ೨೪ ॥

ಸ್ತ್ರೀಯರು, ಶೂದ್ರರು, ಪತಿತದ್ವಿಜರು ವೇದಶ್ರವಣಕ್ಕೆ ಅಧಿಕಾರಿಗಳಲ್ಲವಾದ್ದರಿಂದ ಅವರು ಶ್ರೇಯಸ್ಕರವಾದ ವೈದಿಕ ಶಾಸ್ತ್ರೋಕ್ತ ಕರ್ಮಗಳ ಆಚರಣೆಗಳಲ್ಲಿ ತಪ್ಪುಮಾಡಿ ಬಿಡುತ್ತಾರೆ. ಈಗ ಅವರಿಗೂ ಕೂಡ ಇದರ ಮೂಲಕ ಶ್ರೇಯಸ್ಸು ಉಂಟಾಗಲೆಂದು ಯೋಚಿಸಿ ಪರಮಕರುಣೆಯಿಂದ ವ್ಯಾಸಮುನೀಂದ್ರರು ಮಹಾಭಾರತವೆಂಬ ಇತಿಹಾಸವನ್ನು ರಚಿಸಿದರು. ॥ ೨೫ ॥ ಶೌನಕಾದಿ ಮಹರ್ಷಿಗಳೇ! ಹೀಗೆ ಅವರು ತಮ್ಮ ಸರ್ವಶಕ್ತಿಗಳಿಂದ ಸದಾಕಾಲ ಪ್ರಾಣಿಗಳ ಶ್ರೇಯಸ್ಸಿಗಾಗಿಯೇ ತತ್ಪರರಾಗಿದ್ದರೂ ಕೂಡ ಅವರ ಹೃದಯಕ್ಕೆ ಪೂರ್ಣವಾದ ನೆಮ್ಮದಿ ಉಂಟಾಗಲಿಲ್ಲ. ॥ ೨೬ ॥ ಅವರ ಮನಸ್ಸು ಸ್ವಲ್ಪ ಖಿನ್ನವಾದಂತಾಯಿತು. ಸರಸ್ವತೀ ನದಿಯ ತೀರದ ಏಕಾಂತದಲ್ಲಿ ಕುಳಿತುಕೊಂಡು ವಿಚಾರ-ಚಿಂತನೆ ಮಾಡುತ್ತಾ ಹೀಗೆ ಹೇಳಿಕೊಂಡರು – ॥ ೨೭ ॥ "ನಾನು ನಿಷ್ಕಪಟಭಾವದಿಂದ ಬ್ರಹ್ಮಚರ್ಯಾದಿ ವ್ರತಗಳನ್ನು ಪಾಲಿಸುತ್ತಾ ವೇದಗಳನ್ನೂ, ಗುರು-ಜನರನ್ನೂ, ಅಗ್ನಿಯನ್ನೂ ಗೌರವದಿಂದ ಉಪಾಸನೆ ಮಾಡಿದ್ದೇನೆ. ಅವರ ಆಜ್ಞೆಯನ್ನೂ ಶಿರಸಾವಹಿಸಿದ್ದೇನೆ. ॥ ೨೮ ॥ ಮಹಾಭಾರತವನ್ನು ರಚಿಸುವುದರ ಮೂಲಕ ಸ್ತ್ರೀಯರು, ಶೂದ್ರಾದಿಗಳೂ ಕೂಡ ತಮ್ಮ-ತಮ್ಮ ಧರ್ಮಕರ್ಮಗಳ ಅರಿವನ್ನು ಪಡೆಯುವಂತೆ ವೇದಾರ್ಥಗಳನ್ನು ಪ್ರಕಾಶಪಡಿಸಿದ್ದೇನೆ. ॥ ೨೯ ॥ ನಾನು ಬ್ರಹ್ಮತೇಜದಿಂದ ಸಂಪನ್ನನೂ, ಸಮರ್ಥನೂ ಆಗಿದ್ದರೂ ನನ್ನ ದೇಹದಲ್ಲಿರುವ ಆತ್ಮವು ಪೂರ್ಣ ತೃಪ್ತಿಯನ್ನು ಪಡೆದಿಲ್ಲವೆಂದೇ ಅನುಭವವಾಗುತ್ತದೆಯಲ್ಲ! ॥ ೩೦ ॥ ಪ್ರಾಯಶಃ ನಾನು ಪರಮಹಂಸರಿಗೆ

ಕಿಂ ವಾ ಭಾಗವತಾ ಧರ್ಮಾ ನ ಪ್ರಾಯೇಣ ನಿರೂಪಿತಾಃ ।
ಪ್ರಿಯಾಃ ಪರಮಹಂಸಾನಾಂ ತ ಏವ ಹ್ಯಚ್ಯುತಪ್ರಿಯಾಃ ॥ ೩೧ ॥

ತಸ್ಯೈವಂ ಖಿಲಮಾತ್ಮಾನಂ ಮನ್ಯಮಾನಸ್ಯ ಖಿದ್ಯತಃ ।
ಕೃಷ್ಣಸ್ಯ ನಾರದೋಽಭ್ಯಾಗಾದಾಶ್ರಮಂ ಪ್ರಾಗುದಾಹೃತಮ್ ॥ ೩೨ ॥

ತಮಭಿಜ್ಞಾಯ ಸಹಸಾ ಪ್ರತ್ಯುತ್ಥಾಯಾಗತಂ ಮುನಿಃ ।
ಪೂಜಯಾಮಾಸ ವಿಧಿವನ್ನಾರದಂ ಸುರಪೂಜಿತಮ್ ॥ ೩೩ ॥

ಪ್ರಿಯವಾಗಿರುವ ಭಾಗವತ ಧರ್ಮಗಳನ್ನು ಪ್ರತಿಪಾದನೆ ಮಾಡಿಲ್ಲ. ಆ ಧರ್ಮಗಳು ತಾನೇ ಅಚ್ಯುತನಿಗೂ ಪ್ರಿಯವಾಗಿರುವುದು! ಇವುಗಳನ್ನು ಪ್ರಧಾನವಾಗಿ ಪ್ರತಿಪಾದನೆ ಮಾಡದೇ ಇರುವುದೇ ನನ್ನ ಅತೃಪ್ತಿಗೆ ಕಾರಣವಿರಬಹುದೇ?" ॥ ೩೧ ॥ ಹೀಗೆ ತಮ್ಮನ್ನು ಅಪೂರ್ಣರೆಂಬಂತೆ ಭಾವಿಸಿಕೊಂಡು ಶ್ರೀಕೃಷ್ಣದ್ವೈಪಾಯನರು ಖೇದಪಡುತ್ತಿರುವಂತೆ ಆ ಆಶ್ರಮಕ್ಕೆ ದೇವಋಷಿ ನಾರದರು ದಯಮಾಡಿಸಿದರು. ॥ ೩೨ ॥ ಹೀಗೆ ಆಗಮಿಸಿದ ಅವರನ್ನು ಕಂಡೊಡನೆಯೇ ವ್ಯಾಸಮುನೀಂದ್ರರು ಸಂಭ್ರಮದಿಂದ ಎದ್ದು ನಿಂತು ದೇವತೆಗಳಿಂದಲೂ ಪೂಜಿತರಾದ ದೇವರ್ಷಿ ನಾರದರನ್ನು ವಿಧಿಪೂರ್ವಕವಾಗಿ ಪೂಜಿಸಿದರು. ॥ ೩೩ ॥

ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ ನೈಮಿಷೀಯೋಪಾಖ್ಯಾನೇ ಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ವ್ಯಾಸ-ನಾರದರ ಸಂವಾದ, ಭಗವಂತನ ಯಶ ಕೀರ್ತನೆಯ ಮಹಿಮೆ, ನಾರದರ ಪೂರ್ವಜನ್ಮ ವೃತ್ತಾಂತ

*ಸೂತ ಉವಾಚ*

ಅಥ ತಂ ಸುಖಮಾಸೀನ ಉಪಾಸೀನಂ ಬೃಹಚ್ಛ್ರವಾಃ ।
ದೇವರ್ಷಿಃ ಪ್ರಾಹ ವಿಪ್ರರ್ಷಿಂ ವೀಣಾಪಾಣಿಃ ಸ್ಮಯನ್ನಿವ ॥ ೧ ॥

*ನಾರದ ಉವಾಚ*

ಪಾರಾಶರ್ಯ ಮಹಾಭಾಗ ಭವತಃ ಕಚ್ಚಿದಾತ್ಮನಾ ।
ಪರಿತುಷ್ಯತಿ ಶಾರೀರ ಆತ್ಮಾ ಮಾನಸ ಏವ ವಾ ॥ ೨ ॥

ಜಿಜ್ಞಾಸಿತಂ ಸುಸಂಪನ್ನಮಪಿ ತೇ ಮಹದದ್ಭುತಮ್ ।
ಕೃತವಾನ್ ಭಾರತಂ ಯಸ್ತ್ವಂ ಸರ್ವಾರ್ಥಪರಿಬೃಂಹಿತಮ್ ॥ ೩ ॥

ಜಿಜ್ಞಾಸಿತಮಧೀತಂ ಚ ಯತ್ತದ್ಬ್ರಹ್ಮ ಸನಾತನಮ್ ।
ತಥಾಪಿ ಶೋಚಸ್ಯಾತ್ಮಾನಮಕೃತಾರ್ಥ ಇವ ಪ್ರಭೋ ॥ ೪ ॥

*ವ್ಯಾಸ ಉವಾಚ*

ಅಸ್ತ್ಯೇವ ಮೇ ಸರ್ವಮಿದಂ ತ್ವಯೋಕ್ತಂ
ತಥಾಪಿ ನಾತ್ಮಾ ಪರಿತುಷ್ಯತೇ ಮೇ ।
ತನ್ಮೂಲಮವ್ಯಕ್ತಮಗಾಧಬೋಧಂ
ಪೃಚ್ಛಾಮಹೇ ತ್ವಾಽಽತ್ಮಭವಾತ್ಮಭೂತಮ್ ॥ ೫ ॥

**ಸೂತಪುರಾಣಿಕರು ಹೇಳುತ್ತಾರೆ** – ಅನಂತರ ಮಹಾಯಶಸ್ವಿಗಳಾದ, ವೀಣಾಪಾಣಿಗಳಾದ ದೇವಋಷಿ ನಾರದರು ನಸುನಗುತ್ತಾ ಸುಖಾಸೀನರಾಗಿ, ತಮ್ಮ ಬಳಿಯಲ್ಲಿ ಕುಳಿತುಕೊಂಡ ಬ್ರಹ್ಮರ್ಷಿ ವೇದವ್ಯಾಸರನ್ನು ಹೀಗೆ ಕೇಳಿದರು – ॥ ೧ ॥

**ನಾರದರು ಪ್ರಶ್ನಿಸಿದರು** – ಮಹಾಭಾಗರಾದ ಪರಾಶರಪುತ್ರರೇ! ನಿಮ್ಮ ಶರೀರ-ಮನಸ್ಸುಗಳು ತಮ್ಮ ಕರ್ಮಗಳಿಂದ, ಚಿಂತನದಿಂದ ಸಂತುಷ್ಟವಾಗಿವೆಯಷ್ಟೆ? ॥ ೨ ॥ ಏಕೆಂದರೆ, ನೀವು ಎಲ್ಲ ಪುರುಷಾರ್ಥಗಳಿಂದಲೂ ಪರಿಪೂರ್ಣವಾಗಿರುವ ಪರಮಾದ್ಭುತವಾದ ಮಹಾಭಾರತವನ್ನು ರಚಿಸಿರುವಿರಿ. ಇದರಿಂದ ನಿಮ್ಮ ಆಕಾಂಕ್ಷೆಯು ಪೂರ್ಣವಾಗಿ ಕೈಗೂಡಿರಬೇಕಲ್ಲ! ॥ ೩ ॥ ಇದಲ್ಲದೆ ನೀವು ಸನಾತನವಾದ ಬ್ರಹ್ಮತತ್ತ್ವವನ್ನು ಕುರಿತು ವೇದಾಂತಸೂತ್ರಗಳಲ್ಲಿ ಬಹಳಷ್ಟು ವಿಚಾರಮಾಡಿ, ಅದನ್ನು ಚೆನ್ನಾಗಿ ಅರಿತುಕೊಂಡಿರುವಿರಿ. ಹಾಗಿದ್ದರೂ ನೀವು ಓರ್ವ ಕೃತಕೃತ್ಯರಾಗದೇ ಇರುವ ಸಾಧಾರಣ ಮನುಷ್ಯನಂತೆ ಸ್ವವಿಷಯದಲ್ಲಿ ಏಕೆ ಶೋಕಿಸುತ್ತಿದ್ದೀರಿ? ॥ ೪ ॥

**ವೇದವ್ಯಾಸರು ಹೇಳಿದರು** – ನಾರದರೇ! ನೀವು ನನ್ನ ವಿಷಯದಲ್ಲಿ ಹೇಳಿರುವುದೆಲ್ಲವೂ ನಿಜವೇ. ಇದರಲ್ಲಿ ಸಂದೇಹವೇ ಇಲ್ಲ. ಆದರೂ ನನ್ನ ಹೃದಯವು ಸಂತುಷ್ಟವಾಗಿಲ್ಲ. ಇದಕ್ಕೇನು ಕಾರಣವೆಂಬುದು ತಿಳಿಯುತ್ತಿಲ್ಲ. ನಿಮ್ಮ ಜ್ಞಾನವು ಅಗಾಧವಾಗಿದೆ. ತಾವು ಸಾಕ್ಷಾತ್ ಬ್ರಹ್ಮದೇವರ ಮಾನಸಪುತ್ರರು. ಅದಕ್ಕಾಗಿ ನಾನು ನಿಮ್ಮಲ್ಲೇ ಇದರ ಕಾರಣವನ್ನು ಕೇಳುತ್ತಿದ್ದೇನೆ. ತಾವು ಅದನ್ನು ತಿಳಿಸಬೇಕು. ॥ ೫ ॥ ದೇವರ್ಷಿಗಳೇ! ತಾವು ಎಲ್ಲ ರಹಸ್ಯಗಳನ್ನು ಬಲ್ಲವರು. ಏಕೆಂದರೆ, ಕಾರ್ಯಕಾರಣಗಳಿಗೆ ನಿಯಾಮಕನಾದ ಭಗವಂತನು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ಅದರ

ಚಾತುರ್ಹೋತ್ರಂ ಕರ್ಮ ಶುದ್ಧಂ ಪ್ರಜಾನಾಂ ವೀಕ್ಷ್ಯ ವೈದಿಕಮ್ ।
ವ್ಯದಧಾದ್ಯಜ್ಞಸಂತತ್ಯೈ ವೇದಮೇಕಂ ಚತುರ್ವಿಧಮ್ ॥ ೧೯ ॥

ಋಗ್ಯಜುಃಸಾಮಾಥರ್ವಾಖ್ಯಾ ವೇದಾಶ್ಚತ್ವಾರ ಉದ್ಧೃತಾಃ ।
ಇತಿಹಾಸಪುರಾಣಂ ಚ ಪಂಚಮೋ ವೇದ ಉಚ್ಯತೇ ॥ ೨೦ ॥

ತತ್ರರ್ಗ್ವೇದಧರಃ ಪೈಲಃ ಸಾಮಗೋ ಜೈಮಿನಿಃ ಕವಿಃ ।
ವೈಶಂಪಾಯನ ಏವೈಕೋ ನಿಷ್ಣಾತೋ ಯಜುಷಾಮುತ ॥ ೨೧ ॥

ಅಥರ್ವಾಂಗಿರಸಾಮಾಸೀತ್ಸುಮಂತುರ್ದಾರುಣೋ ಮುನಿಃ ।
ಇತಿಹಾಸಪುರಾಣಾನಾಂ ಪಿತಾ ಮೇ ರೋಮಹರ್ಷಣಃ ॥ ೨೨ ॥

ತ ಏತ ಋಷಯೋ ವೇದಂ ಸ್ವಂ ಸ್ವಂ ವ್ಯಸ್ಯನ್ನನೇಕಧಾ ।
ಶಿಷ್ಯೈಃ ಪ್ರಶಿಷ್ಯೈಸ್ತಚ್ಛಿಷ್ಯೈರ್ವೇದಾಸ್ತೇ ಶಾಖಿನೋಽಭವನ್ ॥ ೨೩ ॥

ತ ಏವ ವೇದಾ ದುರ್ಮೇಧೈರ್ಧಾರ್ಯಂತೇ ಪುರುಷೈರ್ಯಥಾ ।
ಏವಂ ಚಕಾರ ಭಗವಾನ್ ವ್ಯಾಸಃ ಕೃಪಣವತ್ಸಲಃ ॥ ೨೪ ॥

ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ ।
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ ॥ ೨೫ ॥

ಏವಂ ಪ್ರವೃತ್ತಸ್ಯ ಸದಾ ಭೂತಾನಾಂ ಶ್ರೇಯಸಿ ದ್ವಿಜಾಃ ।
ಸರ್ವಾತ್ಮಕೇನಾಪಿ ಯದಾ ನಾತುಷ್ಯದ್ಧೃದಯಂ ತತಃ ॥ ೨೬ ॥

ನಾತಿಪ್ರಸೀದದ್ಧೃದಯಃ ಸರಸ್ವತ್ಯಾಸ್ತಟೇ ಶುಚೌ ।
ವಿತರ್ಕಯನ್ ವಿವಿಕ್ತಸ್ಥ ಇದಂ ಪ್ರೋವಾಚ ಧರ್ಮವಿತ್ ॥ ೨೭ ॥

ಧೃತವ್ರತೇನ ಹಿ ಮಯಾ ಛಂದಾಂಸಿ ಗುರವೋಽಗ್ನಯಃ ।
ಮಾನಿತಾ ನಿರ್ವ್ಯಲೀಕೇನ ಗೃಹೀತಂ ಚಾನುಶಾಸನಮ್ ॥ ೨೮ ॥

ಭಾರತವ್ಯಪದೇಶೇನ ಹ್ಯಾಮ್ನಾಯಾರ್ಥಶ್ಚ ದರ್ಶಿತಃ ।
ದೃಶ್ಯತೇ ಯತ್ರ ಧರ್ಮಾದಿ ಸ್ತ್ರೀಶೂದ್ರಾದಿಭಿರಪ್ಯುತ ॥ ೨೯ ॥

ತಥಾಪಿ ಬತ ಮೇ ದೈಹ್ಯೋ ಹ್ಯಾತ್ಮಾ ಚೈವಾತ್ಮನಾ ವಿಭುಃ ।
ಅಸಂಪನ್ನ ಇವಾಭಾತಿ ಬ್ರಹ್ಮವರ್ಚಸ್ಯಸತ್ತಮಃ ॥ ೩೦ ॥

ಅಖಂಡವಾಗಿದ್ದ ವೇದವನ್ನು – ಋಕ್, ಯಜುಸ್ಸು, ಸಾಮ ಮತ್ತು ಅಥರ್ವ ಎಂಬ ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಿದರು. ಇತಿಹಾಸ ಮತ್ತು ಪುರಾಣಗಳನ್ನು ಐದನೆಯ ವೇದವೆಂದು ಹೇಳಲಾಗುತ್ತದೆ. ॥ ೧೯-೨೦ ॥ ಇವುಗಳಲ್ಲಿ ಋಗ್ವೇದವನ್ನು ಪೈಲರು ಅಧ್ಯಯನ ಮಾಡಿ ಅದರ ಪ್ರವರ್ತಕರಾದರು. ಯಜುರ್ವೇದವನ್ನು ವೈಶಂಪಾಯನ ರೋರ್ವರೇ ಅಧ್ಯಯನಗೈದು ಅದರಲ್ಲಿ ಪಾರಂಗತ ರಾದರು. ವಿದ್ವಾಂಸರಾದ ಜೈಮಿನಿ ಮಹರ್ಷಿಗಳು ಸಾಮವೇದ ದಲ್ಲಿ ನಿಷ್ಣಾತರಾದರು. ॥ ೨೧ ॥ ದರುಣಪುತ್ರರಾದ ಸುಮಂತು ಮುನಿಗಳು ಅಥರ್ವವೇದದಲ್ಲಿ ಪ್ರವೀಣರಾಗಿ ಅದರ ಪ್ರವರ್ತಕ ರಾದರು. ನನ್ನ ತಂದೆಯವರಾದ ರೋಮಹರ್ಷಣರು ಇತಿಹಾಸ ಮತ್ತು ಪುರಾಣಗಳಲ್ಲಿ ಪ್ರಾವೀಣ್ಯವನ್ನು ಪಡೆದು ಪ್ರವರ್ತಕ ರಾದರು. ॥ ೨೨ ॥ ಇವರೆಲ್ಲ ಋಷಿಗಳು ತಮ್ಮ-ತಮ್ಮ ವೇದಶಾಖೆ ಗಳನ್ನು ಇನ್ನೂ ಅನೇಕ ಶಾಖೆಗಳನ್ನಾಗಿ ವಿಭಜಿಸಿದರು. ಹೀಗೆ ಶಿಷ್ಯ-ಪ್ರಶಿಷ್ಯರು ಮತ್ತು ಅವರ ಶಿಷ್ಯರ ಮೂಲಕ ವೇದಗಳಿಗೆ ಬಹು ಶಾಖೆಗಳಾದುವು. ॥ ೨೩ ॥ ದೀನವತ್ಸಲರೂ, ಪರಮ ಪೂಜ್ಯರೂ ಆದ ಭಗವಾನ್ ವೇದವ್ಯಾಸರು ಸ್ಮರಣೆ-ಧಾರಣೆಗಳ ಶಕ್ತಿಯು ಅತಿ ಕಡಿಮೆಯಾಗಿರುವ ಜನರೂ ಕೂಡ ಅವುಗಳನ್ನು ಧರಿಸಿ ಕೃತಾರ್ಥ ರಾಗುವಂತೆ ವೇದವಾಙ್ಮಯವನ್ನು ವಿಭಾಗ ಮಾಡಿದರು. ॥ ೨೪ ॥

ಸ್ತ್ರೀಯರು, ಶೂದ್ರರು, ಪತಿತದ್ವಿಜರು ವೇದಶ್ರವಣಕ್ಕೆ ಅಧಿಕಾರಿ ಗಳಲ್ಲವಾದ್ದರಿಂದ ಅವರು ಶ್ರೇಯಸ್ಕರವಾದ ವೈದಿಕ ಶಾಸ್ತ್ರೋಕ್ತ ಕರ್ಮಗಳ ಆಚರಣೆಗಳಲ್ಲಿ ತಪ್ಪುಮಾಡಿ ಬಿಡುತ್ತಾರೆ. ಈಗ ಅವ ರಿಗೂ ಕೂಡ ಇದರ ಮೂಲಕ ಶ್ರೇಯಸ್ಸು ಉಂಟಾಗಲೆಂದು ಯೋಚಿಸಿ ಪರಮಕರುಣೆಯಿಂದ ವ್ಯಾಸಮುನೀಂದ್ರರು ಮಹಾಭಾರತ ವೆಂಬ ಇತಿಹಾಸವನ್ನು ರಚಿಸಿದರು. ॥ ೨೫ ॥ ಶೌನಕಾದಿ ಮಹರ್ಷಿ ಗಳೇ ! ಹೀಗೆ ಅವರು ತಮ್ಮ ಸರ್ವಶಕ್ತಿಗಳಿಂದ ಸದಾಕಾಲ ಪ್ರಾಣಿ ಗಳ ಶ್ರೇಯಸ್ಸಿಗಾಗಿಯೇ ತತ್ಪರರಾಗಿದ್ದರೂ ಕೂಡ ಅವರ ಹೃದಯಕ್ಕೆ ಪೂರ್ಣವಾದ ನೆಮ್ಮದಿ ಉಂಟಾಗಲಿಲ್ಲ. ॥ ೨೬ ॥ ಅವರ ಮನಸ್ಸು ಸ್ವಲ್ಪ ಖಿನ್ನವಾದಂತಾಯಿತು. ಸರಸ್ವತೀ ನದಿಯ ತೀರದ ಏಕಾಂತ ದಲ್ಲಿ ಕುಳಿತುಕೊಂಡು ವಿಚಾರ-ಚಿಂತನೆ ಮಾಡುತ್ತಾ ಹೀಗೆ ಹೇಳಿ ಕೊಂಡರು – ॥ ೨೭ ॥ “ನಾನು ನಿಷ್ಕಪಟಭಾವದಿಂದ ಬ್ರಹ್ಮ ಚರ್ಯಾದಿ ವ್ರತಗಳನ್ನು ಪಾಲಿಸುತ್ತಾ ವೇದಗಳನ್ನೂ, ಗುರು-ಜನ ರನ್ನೂ, ಅಗ್ನಿಯನ್ನೂ ಗೌರವದಿಂದ ಉಪಾಸನೆ ಮಾಡಿದ್ದೇನೆ. ಅವರ ಆಜ್ಞೆಯನ್ನೂ ಶಿರಸಾವಹಿಸಿದ್ದೇನೆ. ॥ ೨೮ ॥ ಮಹಾಭಾರತ ವನ್ನು ರಚಿಸುವುದರ ಮೂಲಕ ಸ್ತ್ರೀಯರು, ಶೂದ್ರಾದಿಗಳೂ ಕೂಡ ತಮ್ಮ-ತಮ್ಮ ಧರ್ಮಕರ್ಮಗಳ ಅರಿವನ್ನು ಪಡೆಯುವಂತೆ ವೇದಾರ್ಥಗಳನ್ನು ಪ್ರಕಾಶಪಡಿಸಿದ್ದೇನೆ. ॥ ೨೯ ॥ ನಾನು ಬ್ರಹ್ಮ ತೇಜದಿಂದ ಸಂಪನ್ನನೂ, ಸಮರ್ಥನೂ ಆಗಿದ್ದರೂ ನನ್ನ ದೇಹ ದಲ್ಲಿರುವ ಆತ್ಮವು ಪೂರ್ಣ ತೃಪ್ತಿಯನ್ನು ಪಡೆದಿಲ್ಲವೆಂದೇ ಅನುಭವ ವಾಗುತ್ತದೆಯಲ್ಲ ! ॥ ೩೦ ॥ ಪ್ರಾಯಶಃ ನಾನು ಪರಮಹಂಸರಿಗೆ

ಕಿಂ ವಾ ಭಾಗವತಾ ಧರ್ಮಾ ನ ಪ್ರಾಯೇಣ ನಿರೂಪಿತಾಃ ।
ಪ್ರಿಯಾಃ ಪರಮಹಂಸಾನಾಂ ತ ಏವ ಹ್ಯಚ್ಯುತಪ್ರಿಯಾಃ
॥ ೩೧ ॥

ಪ್ರಿಯವಾಗಿರುವ ಭಾಗವತ ಧರ್ಮಗಳನ್ನು ಪ್ರತಿಪಾದನೆ ಮಾಡಿಲ್ಲ. ಆ ಧರ್ಮಗಳು ತಾನೇ ಅಚ್ಯುತನಿಗೂ ಪ್ರಿಯವಾಗಿರುವುದು! ಇವುಗಳನ್ನು ಪ್ರಧಾನವಾಗಿ ಪ್ರತಿಪಾದನೆ ಮಾಡದೇ ಇರುವುದೇ ನನ್ನ ಅತೃಪ್ತಿಗೆ ಕಾರಣವಿರಬಹುದೇ?'' ॥ ೩೧ ॥

ತಸ್ಯೈವಂ ಖಿಲಮಾತ್ಮಾನಂ ಮನ್ಯಮಾನಸ್ಯ ಖಿದ್ಯತಃ ।
ಕೃಷ್ಣಸ್ಯ ನಾರದೋಽಭ್ಯಾಗಾದಾಶ್ರಮಂ ಪ್ರಾಗುದಾಹೃತಮ್
॥ ೩೨ ॥

ಹೀಗೆ ತಮ್ಮನ್ನು ಅಪೂರ್ಣರೆಂಬಂತೆ ಭಾವಿಸಿಕೊಂಡು ಶ್ರೀಕೃಷ್ಣದ್ವೈಪಾಯನರು ಖೇದಪಡುತ್ತಿರುವಂತೆ ಆ ಆಶ್ರಮಕ್ಕೆ ದೇವಋಷಿ ನಾರದರು ದಯಮಾಡಿಸಿದರು. ॥ ೩೨ ॥

ತಮಭಿಜ್ಞಾಯ ಸಹಸಾ ಪ್ರತ್ಯುತ್ಥಾಯಾಗತಂ ಮುನಿಃ ।
ಪೂಜಯಾಮಾಸ ವಿಧಿವನ್ನಾರದಂ ಸುರಪೂಜಿತಮ್
॥ ೩೩ ॥

ಹೀಗೆ ಆಗಮಿಸಿದ ಅವರನ್ನು ಕಂಡೊಡನೆಯೇ ವ್ಯಾಸಮುನೀಂದ್ರರು ಸಂಭ್ರಮದಿಂದ ಎದ್ದು ನಿಂತು ದೇವತೆಗಳಿಂದಲೂ ಪೂಜಿತರಾದ ದೇವರ್ಷಿ ನಾರದರನ್ನು ವಿಧಿಪೂರ್ವಕವಾಗಿ ಪೂಜಿಸಿದರು. ॥ ೩೩ ॥

**ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ ನೈಮಿಷೀಯೋಪಾಖ್ಯಾನೇ ಚತುರ್ಥೋಽಧ್ಯಾಯಃ ॥ ೪ ॥**

# ಐದನೆಯ ಅಧ್ಯಾಯ

## ವ್ಯಾಸ-ನಾರದರ ಸಂವಾದ, ಭಗವಂತನ ಯಶ ಕೀರ್ತನೆಯ ಮಹಿಮೆ, ನಾರದರ ಪೂರ್ವಜನ್ಮ ವೃತ್ತಾಂತ

*ಸೂತ ಉವಾಚ*

ಅಥ ತಂ ಸುಖಮಾಸೀನ ಉಪಾಸೀನಂ ಬೃಹಚ್ಛ್ರವಾಃ ।
ದೇವರ್ಷಿಃ ಪ್ರಾಹ ವಿಪ್ರರ್ಷಿಂ ವೀಣಾಪಾಣಿಃ ಸ್ಮಯನ್ನಿವ
॥ ೧ ॥

**ಸೂತಪುರಾಣಿಕರು ಹೇಳುತ್ತಾರೆ** – ಅನಂತರ ಮಹಾಯಶಸ್ವಿಗಳಾದ, ವೀಣಾಪಾಣಿಗಳಾದ ದೇವಋಷಿ ನಾರದರು ನಸುನಗುತ್ತಾ ಸುಖಾಸೀನರಾಗಿ, ತಮ್ಮ ಬಳಿಯಲ್ಲಿ ಕುಳಿತುಕೊಂಡ ಬ್ರಹ್ಮರ್ಷಿ ವೇದವ್ಯಾಸರನ್ನು ಹೀಗೆ ಕೇಳಿದರು – ॥ ೧ ॥

*ನಾರದ ಉವಾಚ*

ಪಾರಾಶರ್ಯ ಮಹಾಭಾಗ ಭವತಃ ಕಚ್ಚಿದಾತ್ಮನಾ ।
ಪರಿತುಷ್ಯತಿ ಶಾರೀರ ಆತ್ಮಾ ಮಾನಸ ಏವ ವಾ
॥ ೨ ॥

**ನಾರದರು ಪ್ರಶ್ನಿಸಿದರು** – ಮಹಾಭಾಗರಾದ ಪರಾಶರಪುತ್ರರೇ! ನಿಮ್ಮ ಶರೀರ-ಮನಸ್ಸುಗಳು ತಮ್ಮ ಕರ್ಮಗಳಿಂದ, ಚಿಂತನದಿಂದ ಸಂತುಷ್ಟವಾಗಿವೆಯಷ್ಟೆ? ॥ ೨ ॥ ಏಕೆಂದರೆ, ನೀವು ಎಲ್ಲ ಪುರುಷಾರ್ಥಗಳಿಂದಲೂ ಪರಿಪೂರ್ಣವಾಗಿರುವ ಪರಮಾದ್ಭುತವಾದ ಮಹಾಭಾರತವನ್ನು ರಚಿಸಿರುವಿರಿ. ಇದರಿಂದ ನಿಮ್ಮ ಆಕಾಂಕ್ಷೆಯು ಪೂರ್ಣವಾಗಿ ಕೈಗೂಡಿರಬೇಕಲ್ಲ! ॥ ೩ ॥

ಜಿಜ್ಞಾಸಿತಂ ಸುಸಂಪನ್ನಮಪಿ ತೇ ಮಹದದ್ಭುತಮ್ ।
ಕೃತವಾನ್ ಭಾರತಂ ಯಸ್ತ್ವಂ ಸರ್ವಾರ್ಥಪರಿಬೃಂಹಿತಮ್
॥ ೩ ॥

ಇದಲ್ಲದೆ ನೀವು ಸನಾತನವಾದ ಬ್ರಹ್ಮತತ್ತ್ವವನ್ನು ಕುರಿತು ವೇದಾಂತಸೂತ್ರಗಳಲ್ಲಿ ಬಹಳಷ್ಟು ವಿಚಾರಮಾಡಿ, ಅದನ್ನು ಚೆನ್ನಾಗಿ ಅರಿತುಕೊಂಡಿರುವಿರಿ. ಹಾಗಿದ್ದರೂ ನೀವು ಓರ್ವ ಕೃತಕೃತ್ಯರಾಗದೇ ಇರುವ ಸಾಧಾರಣ ಮನುಷ್ಯನಂತೆ ಸ್ವವಿಷಯದಲ್ಲಿ ಏಕೆ ಶೋಕಿಸುತ್ತಿದ್ದೀರಿ? ॥ ೪ ॥

ಜಿಜ್ಞಾಸಿತಮಧೀತಂ ಚ ಯತ್ತದ್ಬ್ರಹ್ಮ ಸನಾತನಮ್ ।
ತಥಾಪಿ ಶೋಚಸ್ಯಾತ್ಮಾನಮಕೃತಾರ್ಥ ಇವ ಪ್ರಭೋ
॥ ೪ ॥

*ವ್ಯಾಸ ಉವಾಚ*

ಅಸ್ತ್ಯೇವ ಮೇ ಸರ್ವಮಿದಂ ತ್ವಯೋಕ್ತಂ
ತಥಾಪಿ ನಾತ್ಮಾ ಪರಿತುಷ್ಯತೇ ಮೇ ।
ತನ್ಮೂಲಮವ್ಯಕ್ತಮಗಾಧಬೋಧಂ
ಪೃಚ್ಛಾಮಹೇ ತ್ವಾಽಽತ್ಮಭವಾತ್ಮಭೂತಮ್ ॥ ೫ ॥

**ವೇದವ್ಯಾಸರು ಹೇಳಿದರು** – ನಾರದರೇ! ನೀವು ನನ್ನ ವಿಷಯದಲ್ಲಿ ಹೇಳಿರುವುದೆಲ್ಲವೂ ನಿಜವೇ. ಇದರಲ್ಲಿ ಸಂದೇಹವೇ ಇಲ್ಲ. ಆದರೂ ನನ್ನ ಹೃದಯವು ಸಂತುಷ್ಟವಾಗಿಲ್ಲ. ಇದಕ್ಕೇನು ಕಾರಣವೆಂಬುದು ತಿಳಿಯುತ್ತಿಲ್ಲ. ನಿಮ್ಮ ಜ್ಞಾನವು ಅಗಾಧವಾಗಿದೆ. ತಾವು ಸಾಕ್ಷಾತ್ ಬ್ರಹ್ಮದೇವರ ಮಾನಸಪುತ್ರರು. ಆದ್ದರಿಂದ ನಾನು ನಿಮ್ಮಲ್ಲೇ ಇದರ ಕಾರಣವನ್ನು ಕೇಳುತ್ತಿದ್ದೇನೆ. ತಾವು ಅದನ್ನು ತಿಳಿಸಬೇಕು. ॥ ೫ ॥ ದೇವರ್ಷಿಗಳೇ! ತಾವು ಎಲ್ಲ ರಹಸ್ಯಗಳನ್ನು ಬಲ್ಲವರು. ಏಕೆಂದರೆ, ಕಾರ್ಯಕಾರಣಗಳಿಗೆ ನಿಯಾಮಕನಾದ ಭಗವಂತನು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳನ್ನು ಅದರ

ಸ ವೈ ಭವಾನ್ ವೇದ ಸಮಸ್ತಗುಹ್ಯ-
ಮುಪಾಸಿತೋ ಯತ್ಪುರುಷಃ ಪುರಾಣಃ ।
ಪರಾವರೇಶೋ ಮನಸೈವ ವಿಶ್ವಂ
ಸೃಜತ್ಯವತ್ಯತ್ತಿ ಗುಣೈರಸಂಗಃ ॥ ೬ ॥

ತ್ವಂ ಪರ್ಯಟನ್ನರ್ಕ ಇವ ತ್ರಿಲೋಕೀ-
ಮಂತಶ್ಚರೋ ವಾಯುರಿವಾತ್ಮಸಾಕ್ಷೀ ।
ಪರಾವರೇ ಬ್ರಹ್ಮಣಿ ಧರ್ಮತೋ ವ್ರತೈಃ
ಸ್ನಾತಸ್ಯ ಮೇ ನ್ಯೂನಮಲಂ ವಿಚಕ್ಷ್ವ ॥ ೭ ॥

*ಶ್ರೀನಾರದ ಉವಾಚ*

ಭವತಾನುದಿತಪ್ರಾಯಂ ಯಶೋ ಭಗವತೋಽಮಲಮ್ ।
ಯೇನೈವಾಸೌ ನ ತುಷ್ಯೇತ ಮನ್ಯೇ ತದ್ದರ್ಶನಂ ಖಿಲಮ್
॥ ೮ ॥

ಯಥಾ ಧರ್ಮಾದಯಶ್ಚಾರ್ಥಾ ಮುನಿವರ್ಯಾನುಕೀರ್ತಿತಾಃ ।
ನ ತಥಾ ವಾಸುದೇವಸ್ಯ ಮಹಿಮಾ ಹ್ಯನುವರ್ಣಿತಃ
॥ ೯ ॥

ನ ಯದ್ವಚಶ್ಚಿತ್ರಪದಂ ಹರೇರ್ಯಶೋ
ಜಗತ್ಪವಿತ್ರಂ ಪ್ರಗೃಣೀತ ಕರ್ಹಿಚಿತ್ ।
ತದ್ವಾಯಸಂ ತೀರ್ಥಮುಶಂತಿ ಮಾನಸಾ
ನ ಯತ್ರ ಹಂಸಾ ನಿರಮಂತ್ಯುಶಿಕ್ ಕ್ಷಯಾಃ ॥ ೧೦ ॥

ತದ್ವಾಗ್ವಿಸರ್ಗೋ ಜನತಾಘವಿಪ್ಲವೋ
ಯಸ್ಮಿನ್ಪ್ರತಿಶ್ಲೋಕಮಬದ್ಧವತ್ಯಪಿ ।
ನಾಮಾನ್ಯನಂತಸ್ಯ ಯಶೋಽಂಕಿತಾನಿ ಯತ್
ಶೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥ ೧೧ ॥

ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ
ನ ಶೋಭತೇ ಜ್ಞಾನಮಲಂ ನಿರಂಜನಮ್ ।
ಕುತಃ ಪುನಃ ಶಶ್ವದಭದ್ರಮೀಶ್ವರೇ
ನ ಚಾರ್ಪಿತಂ ಕರ್ಮ ಯದಪ್ಯಕಾರಣಮ್ ॥ ೧೨ ॥

ಗುಣಗಳಿಗೆ ಅಂಟಿಕೊಳ್ಳದೆಯೇ ತನ್ನ ಸಂಕಲ್ಪಮಾತ್ರದಿಂದಲೇ ಮಾಡುತ್ತಿರುವ ಪುರಾಣಪುರುಷನನ್ನು ನೀವು ಉಪಾಸಿಸಿದ್ದೀರಿ. ॥ ೬ ॥ ನೀವು ಸೂರ್ಯನಂತೆ ತ್ರಿಲೋಕಗಳಲ್ಲಿ ಸಂಚರಿಸುತ್ತಿರುವಿರಿ. ಯೋಗಬಲದಿಂದ ಪ್ರಾಣವಾಯುವಿನಂತೆ ಎಲ್ಲರ ಒಳಗಡೆಯೂ ಇದ್ದು ಅಂತಃಕರಣಗಳ ಸಾಕ್ಷಿಯಾಗಿರುವಿರಿ. ಧಾರ್ಮಿಕವಾದ ವ್ರತ-ನಿಯಮ-ನಿಷ್ಠೆಗಳಿಂದ ಪರಬ್ರಹ್ಮ ಮತ್ತು ಶಬ್ದಬ್ರಹ್ಮ ಇವೆರಡರಲ್ಲೂ ನಿಷ್ಣಾತನಾಗಿರುವ ನಾನು ಪರಮಾನಂದದಲ್ಲಿ ಮುಳುಗಿರಬೇಕಾಗಿತ್ತು. ಆದರೆ ಹೀಗೆ ನನಗೆ ಅನುಭವವೇಕೆ ಆಗುತ್ತಿಲ್ಲ! ನನ್ನಲ್ಲಿರುವ ಈ ಕೊರತೆಯನ್ನು ತಾವೇ ದಯವಿಟ್ಟು ತಿಳಿಸಿರಿ. ॥ ೭ ॥

ಶ್ರೀನಾರದರೆಂದರು – ವೇದವ್ಯಾಸರೇ ! ನೀವು ಬಹುಮಟ್ಟಿಗೆ ಶ್ರೀಭಗವಂತನ ಪರಿಶುದ್ಧವಾದ ಕೀರ್ತಿಯನ್ನು ವರ್ಣಿಸಿಲ್ಲವೆಂದೇ ತೋರುತ್ತದೆ. ಭಗವಂತನು ಸಂತೋಷಪಡುವುದು ಅವನ ಕೀರ್ತಿಯ ವರ್ಣನೆಯಿಂದಲೇ. ಅದನ್ನು ಬಿಟ್ಟು ಬೇರೆ ಯಾವ ದರ್ಶನದಿಂದಲೂ ಅವನಿಗೆ ಸಂತೋಷವಾಗುವುದಿಲ್ಲ. ಅವನಿಗೆ ಸಂತೋಷವಾಗದಿರುವ ದರ್ಶನಗಳೆಲ್ಲವೂ ಶೂನ್ಯವೆಂದೇ ನನ್ನ ಭಾವನೆ. ॥ ೮ ॥ ಮುನಿವರ್ಯರೇ ! ನೀವು ಧರ್ಮವೇ ಮುಂತಾದ ಪುರುಷಾರ್ಥಗಳನ್ನು ಎಷ್ಟು ವಿಸ್ತಾರವಾಗಿ ವರ್ಣಿಸಿರುವಿರೋ, ಅಷ್ಟು ವಿಸ್ತಾರವಾಗಿ ವಾಸುದೇವನ ಮಹಿಮೆಯನ್ನು ವರ್ಣಿಸಿಲ್ಲವಷ್ಟೆ ! ॥ ೯ ॥ ಒಂದು ಸಾಹಿತ್ಯವು ಪದ, ಅಕ್ಷರ ವಿನ್ಯಾಸ, ರಸ, ಅಲಂಕಾರ ಇವುಗಳಿಂದ ಕೂಡಿ ಅತ್ಯಂತ ಆಕರ್ಷಕವಾಗಿರಬಹುದು. ಆದರೆ ಜಗತ್ತನ್ನೇ ಪಾವನಗೊಳಿಸುವ ಪರಮಾತ್ಮನ ಕೀರ್ತಿಯನ್ನು ಎಲ್ಲಿಯೂ ಕೊಂಡಾಡದೆ ಇದ್ದರೆ ಅದು ಅಪವಿತ್ರವೇ. ಯಾವ ಜಲಾಶಯದಲ್ಲಿ ಮಾನಸ ಸರೋವರದ ಹಂಸಗಳು ವಿಹರಿಸುವುದಿಲ್ಲವೋ ಅದನ್ನು ಕಾಕತೀರ್ಥವೆಂದು ಭಾವಿಸುತ್ತಾರೆ. ಭಾವುಕರಾದ ಪರಮಹಂಸರು ರಮಿಸದೇ ಇರುವ ಸಾಹಿತ್ಯವು ಅದಕ್ಕೆ ಸಮಾನವೆನಿಸುವುದು. ॥ ೧೦ ॥ ಇದಕ್ಕೆ ಪ್ರತಿಯಾಗಿ ಯಾವುದಾದರೂ ವಾಕ್ಯರಚನೆಯಲ್ಲಿ, ಲೋಕದೃಷ್ಟಿಯಿಂದ ಪ್ರತಿಶ್ಲೋಕದಲ್ಲಿ ಅಚ್ಯುತನ ಕೀರ್ತಿಯನ್ನು ಸೂಚಿಸುವ ನಾಮಗಳಿದ್ದರೆ ಆ ವಾಣಿಯು ಜನರ ಎಲ್ಲ ಪಾಪಗಳನ್ನು ನಾಶಮಾಡಿಬಿಡುತ್ತದೆ. ಏಕೆಂದರೆ, ಸತ್ಪುರುಷರು ಇಂತಹ ವಾಣಿಯನ್ನೇ ಶ್ರವಣ, ಕೀರ್ತನ, ಗಾಯನ ಮಾಡುತ್ತಾರೆ. ॥ ೧೧ ॥ ನಾವು ಸಂಧ್ಯಾವಂದನಾದಿ ಕರ್ಮಗಳನ್ನು ಕರ್ತವ್ಯವೆಂದು ಭಾವಿಸಿಯೇ ಮಾಡುತ್ತೇವೆ. ಜೊತೆಗೆ ಕರ್ತೃತ್ವದ ಭಾವವೂ ಇರುವುದಿಲ್ಲ. ಆದರೆ ಅದೂ ಕೂಡ ಭಗವಂತನ ಭಕ್ತಿಭಾವದಿಂದ ರಹಿತವಾಗಿದ್ದರೆ ಶೋಭಿಸುವುದಿಲ್ಲ. ಇದೇ ರೀತಿಯಿಂದ ಶಾಸ್ತ್ರ ಜ್ಞಾನದಲ್ಲಿಯೂ ಕೂಡ ಭಗವಂತನ ಭಕ್ತಿಯ ಭಾವನೆಯಿಲ್ಲದಿದ್ದರೆ ಅದೂ ಕೂಡ ಶೋಭಿಸುವುದಿಲ್ಲ. ಆದ್ದರಿಂದ ತನ್ನ ಎಲ್ಲ ಕರ್ಮಗಳು ಹಾಗೂ ಶಾಸ್ತ್ರಗಳ ಅಭ್ಯಾಸವನ್ನು ಭಗವದ್ಭಕ್ತಿಯಿಂದ ಕೂಡಿಯೇ ಮಾಡಬೇಕು. ಭಕ್ತಿಯುಕ್ತ ಕರ್ಮ ಮತ್ತು ಜ್ಞಾನವು ಅನಂತ ಫಲವನ್ನು ಕೊಡುವುದಾಗಿದೆ. ಮತ್ತೆ ಕಾಮನೆಯಿಂದ ಮಾಡಲಾಗುವ ಕರ್ಮವಾದರೋ ಯಾವಾಗಲೂ ಅಶುಭವೆಂದೇ ತಿಳಿಯಲಾಗಿದೆ ; ಅದರ ಕುರಿತು ಹೇಳುವುದೇನಿದೆ ? ಹೀಗೆಯೇ

ಅಥೋ ಮಹಾಭಾಗ ಭವಾನಮೋಘದೃಕ್
ಶುಚಿಶ್ರವಾಃ ಸತ್ಯರತೋ ಧೃತವ್ರತಃ ।
ಉರುಕ್ರಮಸ್ಯಾಖಿಲಬಂಧಮುಕ್ತಯೇ
ಸಮಾಧಿನಾನುಸ್ಮರ ತದ್ವಿಚೇಷ್ಟಿತಮ್ ॥ ೧೩ ॥

ತತೋಽನ್ಯಥಾ ಕಿಂಚನ ಯದ್ವಿವಕ್ಷತಃ
ಪೃಥಗ್ದೃಶಸ್ತತ್ಕೃತರೂಪನಾಮಭಿಃ ।
ನ ಕುತ್ರಚಿತ್ ಕ್ವಾಪಿ ಚ ದುಃಸ್ಥಿತಾ ಮತಿ-
ರ್ಲಭೇತ ವಾತಾಹತನೌರಿವಾಸ್ಪದಮ್ ॥ ೧೪ ॥

ಜುಗುಪ್ಸಿತಂ ಧರ್ಮಕೃತೇಽನುಶಾಸತಃ
ಸ್ವಭಾವರಕ್ತಸ್ಯ ಮಹಾನ್ ವ್ಯತಿಕ್ರಮಃ ।
ಯದ್ವಾಕ್ಯತೋ ಧರ್ಮ ಇತೀತರಃ ಸ್ಥಿತೋ
ನ ಮನ್ಯತೇ ತಸ್ಯ ನಿವಾರಣಂ ಜನಃ ॥ ೧೫ ॥

ವಿಚಕ್ಷಣೋಽಸ್ಯಾರ್ಹತಿ ವೇದಿತುಂ ವಿಭೋ-
ರನಂತಪಾರಸ್ಯ ನಿವೃತ್ತಿತಃ ಸುಖಮ್ ।
ಪ್ರವರ್ತಮಾನಸ್ಯ ಗುಣೈರನಾತ್ಮನ-
ಸ್ತತೋ ಭವಾಂದರ್ಶಯ ಚೇಷ್ಟಿತಂ ವಿಭೋಃ ॥ ೧೬ ॥

ತ್ಯಕ್ತ್ವಾ ಸ್ವಧರ್ಮಂ ಚರಣಾಂಬುಜಂ ಹರೇ-
ರ್ಭಜನ್ನಪಕ್ವೋಽಥ ಪತೇತ್ತತೋ ಯದಿ ।
ಯತ್ರ ಕ್ವ ವಾಭದ್ರಮಭೂದಮುಷ್ಯ ಕಿಂ
ಕೋ ವಾರ್ಥ ಆಪ್ತೋಽಭಜತಾಂ ಸ್ವಧರ್ಮತಃ ॥ ೧೭ ॥

ನಿಷ್ಕಾಮಭಾವದಿಂದ ಮಾಡಿದ ಕರ್ಮವೂ ಕೂಡ ಭಗವಂತನಿಗೆ ಅರ್ಪಿಸದಿದ್ದರೆ ಶೋಭಿಸುವುದಿಲ್ಲ. ಆದ್ದರಿಂದ ಸಾಧಕನು ಮಾಡುವ ಎಲ್ಲ ಕ್ರಿಯೆಗಳನ್ನು ಭಗವಂತನ ಭಕ್ತಿಯಿಂದ ಭಾವಿತನಾಗಿ ಮಾಡಬೇಕು. ॥ ೧೨ ॥ ಮಹಾಭಾಗರೇ ! ತಾವು ಅಮೋಘವಾದ ದೃಷ್ಟಿಯುಳ್ಳವರು. ಪವಿತ್ರವಾದ ಕೀರ್ತಿಯನ್ನು ಗಳಿಸಿದವರು. ಸತ್ಯಪರಾಯಣರೂ, ದೃಢವ್ರತವುಳ್ಳವರೂ ಆಗಿದ್ದೀರಿ. ಆದುದರಿಂದ ಸಮಸ್ತ ಜೀವಿಗಳನ್ನು ಬಂಧನಮುಕ್ತ ಗೊಳಿಸಲಿಕ್ಕಾಗಿ, ಆ ಅಚಿಂತ್ಯ ಶಕ್ತಿಯುಳ್ಳ ಭಗವಂತನ ಲೀಲೆಗಳನ್ನು ಸಮಾಧಿಯಲ್ಲಿ ಅನುಸಂಧಾನ ಮಾಡಿರಿ. ॥ ೧೩ ॥ ಭಗವಂತನನ್ನು ವರ್ಣಿಸದೆ ಬೇರೆ ಯಾವುದನ್ನೋ ವರ್ಣಿಸಲು ಬಯಸುವವನು ತನ್ನ ಆ ಇಚ್ಛೆಯಿಂದ ನಿರ್ಮಿತವಾದ ಅನೇಕ ನಾಮರೂಪಗಳ ಸುಳಿಗೆ ಸಿಕ್ಕಿಹಾಕಿಕೊಳ್ಳುವನು. ಅವನ ಬುದ್ಧಿಯು ಭೇದ-ಭಾವದಿಂದ ಭರಿತವಾಗುವುದು. ಅದು ದುಃಸ್ಥಿತಿಗೆ ಒಳಗಾಗಿ ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ ಎಂದೂ, ಎಲ್ಲಿಯೂ ನೆಲೆಯನ್ನು ಕಾಣದೆ ಹೋಗುವುದು. ॥ ೧೪ ॥ ಸಂಸಾರಿಗಳಾದ ಜನರು ಸ್ವಾಭಾವಿಕವಾಗಿಯೇ ವಿಷಯಗಳಲ್ಲಿ ಆಸಕ್ತರಾಗಿರುತ್ತಾರೆ. ಧರ್ಮದ ಹೆಸರಿನಲ್ಲಿ ನೀವೇ ಅವರಿಗೆ ನಿಂದಿತ (ಪಶುಹಿಂಸಾಯುಕ್ತ) ಸಕಾಮಕರ್ಮಮಾಡಲು ಆಜ್ಞೆಯನ್ನು ಕೊಟ್ಟಿರುವಿರಿ. ಈ ಮಾತು ವಿಪರೀತವಾಯಿತು. ಏಕೆಂದರೆ, ಮೂರ್ಖ ಜನರು ನಿಮ್ಮ ವಚನಗಳಿಂದ ಹಿಂದೆ ಹೇಳಿದ ನಿಂದಿತ ಕರ್ಮವನ್ನೇ ಧರ್ಮವೆಂದು ತಿಳಿದುಕೊಂಡು 'ಇದೇ ಧರ್ಮವಾಗಿದೆ' ಹೀಗೆ ನಿಶ್ಚಯಿಸಿಕೊಂಡು, ಅದರ ನಿಷೇಧ ಮಾಡುವ ವಚನಗಳನ್ನು ಸರಿಯಾಗಿ ತಿಳಿಯುವುದಿಲ್ಲ. ॥ ೧೫ ॥ ತಾವು ವಿದ್ವಾಂಸರಾಗಿದ್ದೀರಿ. ಅನಂತವೀರ್ಯನಾದ ಭಗವಂತನ ಅಲೌಕಿಕ ಲೀಲೆಗಳ ಕುರಿತು ತಾವು ತಿಳಿದೇ ಇದ್ದೀರಿ. ಜೊತೆಗೆ ವೈರಾಗ್ಯದಿಂದ ಉಂಟಾಗುವ ಆನಂದಾನುಭವದ ಕುರಿತು ನಿಮಗೆ ಜ್ಞಾನವಿದೆ. ಆದ್ದರಿಂದ ಸ್ವರೂಪಜ್ಞಾನಕ್ಕೆ ಬಾಧಕವಾದ ಗುಣಗಳಲ್ಲೇ ಪ್ರವೃತ್ತರಾದ ಸಂಸಾರೀಜನರ ಮೇಲೆ ಕರುಣೆದೋರಿ ಭಗವಂತನ ಅಲೌಕಿಕ ಲೀಲೆಗಳ ದರ್ಶನ ಮಾಡಿಸಿರಿ. ಇದರಿಂದ ಅವರು ಭಗವಂತನ ಭಕ್ತಿಯಲ್ಲಿ ತೊಡಗಿ ತಮ್ಮ ಆತ್ಮಸ್ವರೂಪದ ಸಾಕ್ಷಾತ್ಕಾರಮಾಡಿಕೊಳ್ಳುವರು. ॥ ೧೬ ॥ ಯಾವನಾದರೂ ಮನುಷ್ಯನು ಕಾಮ್ಯಕರ್ಮಗಳ ಅನುಷ್ಠಾನವನ್ನು ಬಿಟ್ಟು ಭಗವಂತನ ಭಕ್ತಿಯನ್ನು ಆಚರಿಸುತ್ತಾ ಇರುವಾಗ, ಆ ಭಕ್ತಿಯು ಪರಿಪಕ್ವವಾಗದೆ ನಡುವಿನಲ್ಲೇ ದೇಹಪಾತವಾದರೂ ಆ ಭಕ್ತನಿಗೆ ಅಮಂಗಲವಾಗಬಲ್ಲುದೇ ? ಅರ್ಥಾತ್ – ಸದಾಕಾಲ ಅವನಿಗೆ ಶುಭವೇ ಆಗುತ್ತದೆ. ಹೀಗೆಯೇ ಯಾರಾದರೂ ಕಾಮ್ಯಕರ್ಮವನ್ನು ಅನುಷ್ಠಾನ ಮಾಡುತ್ತಾ ಭಗವಂತನಿಂದ ವಿಮುಖನಾದರೆ ಅವನಿಗೆ ಏನಾದರೂ ವಿಶೇಷ ಲಾಭವಾಗಿದೆಯೇ ? ಅರ್ಥಾತ್ – ನಿಷ್ಕಾಮ ಭಾವದಿಂದ ಭಗವಂತನ ಭಕ್ತಿಯನ್ನು ಮಾಡುವುದು ಮತ್ತು ಭಗವಂತನ ಲೀಲೆಗಳನ್ನು ಚಿಂತಿಸುವುದು ಶ್ರೇಯಸ್ಸಿನ ಉಪಾಯವಾಗಿದೆ. ಇದರಿಂದ ಭಗವಂತನ ಸ್ಮೃತಿ ನಿರಂತರ ಇರಬಲ್ಲದು ಎಂಬುದೂ ತಾವು ತಿಳಿದಿರುವಿರಿ. ಆದ್ದರಿಂದ ಜನರ ಪರಮಶ್ರೇಯಸ್ಸಿಗಾಗಿ ನೀವು ಭಗವಂತನ ಲೀಲೆಗಳನ್ನೇ ಗಾನಮಾಡಿರಿ. ಇದೇ ಲೋಕಕ್ಕೆ ಮಂಗಲಕರವಾಗಿದೆ. ॥ ೧೭ ॥

ತಸ್ಯೈವ ಹೇತೋಃ ಪ್ರಯತೇತ ಕೋವಿದೋ
ನ ಲಭ್ಯತೇ ಯದ್ಭ್ರಮತಾಮುಪರ್ಯಧಃ ।
ತಲ್ಲಭ್ಯತೇ ದುಃಖವದನ್ಯತಃ ಸುಖಂ
ಕಾಲೇನ ಸರ್ವತ್ರ ಗಭೀರರಂಹಸಾ ॥ ೧೮ ॥

ನ ವೈ ಜನೋ ಜಾತು ಕಥಂಚನಾವ್ರಜೇ-
ನ್ಮುಕುಂದಸೇವ್ಯನ್ಯವದಂಗ ಸಂಸೃತಿಮ್ ।
ಸ್ಮರನ್ಮುಕುಂದಾಙ್ಘ್ರ್ಯುಪಗೂಹನಂ ಪುನ-
ರ್ವಿಹಾತುಮಿಚ್ಛೇನ್ನ ರಸಗ್ರಹೋ ಯತಃ ॥ ೧೯ ॥

ಇದಂ ಹಿ ವಿಶ್ವಂ ಭಗವಾನಿವೇತರೋ
ಯತೋ ಜಗತ್ಸ್ಥಾನನಿರೋಧಸಂಭವಾಃ ।
ತದ್ಧಿ ಸ್ವಯಂ ವೇದ ಭವಾಂಸ್ತಥಾಪಿ ವೈ
ಪ್ರಾದೇಶಮಾತ್ರಂ ಭವತಃ ಪ್ರದರ್ಶಿತಮ್ ॥ ೨೦ ॥

ತ್ವಮಾತ್ಮನಾಽಽತ್ಮಾನಮವೇಹ್ಯಮೋಘದೃಕ್
ಪರಸ್ಯ ಪುಂಸಃ ಪರಮಾತ್ಮನಃ ಕಲಾಮ್ ।
ಅಜಂ ಪ್ರಜಾತಂ ಜಗತಃ ಶಿವಾಯ ತ-
ನ್ಮಹಾನುಭಾವಾಭ್ಯುದಯೋಽಧಿಗಣ್ಯತಾಮ್ ॥ ೨೧ ॥

ಇದಂ ಹಿ ಪುಂಸಸ್ತಪಸಃ ಶ್ರುತಸ್ಯ ವಾ
ಸ್ವಿಷ್ಟಸ್ಯ ಸೂಕ್ತಸ್ಯ ಚ ಬುದ್ಧಿದತ್ತಯೋಃ ।
ಅವಿಚ್ಯುತೋಽರ್ಥಃ ಕವಿಭಿರ್ನಿರೂಪಿತೋ
ಯದುತ್ತಮಶ್ಲೋಕಗುಣಾನುವರ್ಣನಮ್ ॥ ೨೨ ॥

ಅಹಂ ಪುರಾತೀತಭವೇಽಭವಂ ಮುನೇ
ದಾಸ್ಯಾಸ್ತು ಕಸ್ಯಾಶ್ಚನ ವೇದವಾದಿನಾಮ್ ।
ನಿರೂಪಿತೋ ಬಾಲಕ ಏವ ಯೋಗಿನಾಂ
ಶುಶ್ರೂಷಣೇ ಪ್ರಾವೃಷಿ ನಿರ್ವಿವಿಕ್ಷತಾಮ್ ॥ ೨೩ ॥

ಬ್ರಹ್ಮಲೋಕದಿಂದ ಕೆಳಗಿನ ಲೋಕಗಳವರೆಗೆ ಎಲ್ಲೇ ಸುತ್ತಾಡುತ್ತಾ ಇದ್ದರೂ ಅವರಿಗೆ ಪರಮಾನಂದದ ಸುಖವು ದೊರೆಯಲಾರದು. (ಆದರೆ, ಗೋಪಿಯರು ಭಗವಂತನನ್ನು ಪಡೆಯಲು ಅವನ ಭಜನೆಯನ್ನೇ ಮಾಡಿದರು. ಮನೆ ವಾರ್ತೆಗಳನ್ನು ಬಿಟ್ಟುಬಿಟ್ಟರು. ಭಗವಂತನಲ್ಲಿ ಅವರಿಗೆ ತದಾಕಾರ ವೃತ್ತಿಉಂಟಾಯಿತು. ಈ ವಿಧವಾಗಿ ಭಗವಂತನ ಭಜನೆ ಮಾಡುವವರೇ ಶ್ರೇಷ್ಠರಾಗಿರುತ್ತಾರೆ.) ಸಂಸಾರದ ಸುಖ-ದುಃಖಗಳಾದರೋ ಕಾಲಗತಿಯ ಪ್ರಭಾವದಿಂದ ಒಂದಾದಮೇಲೊಂದರಂತೆ ತಾನಾಗಿಯೇ ಬಂದುಹೋಗುತ್ತಾ ಇರುತ್ತವೆ. ಅವುಗಳಿಗಾಗಿ ಯಾವುದೇ ವಿಶೇಷ ಪ್ರಯತ್ನಮಾಡದೆ, ಬುದ್ಧಿವಂತರಾದವರು ಭಗವಂತನ ಭಕ್ತಿಯನ್ನು ಮಾಡಬೇಕು. ॥ ೧೮ ॥ ಮಹರ್ಷಿಗಳೇ! ಶ್ರೀಕೃಷ್ಣಪರಮಾತ್ಮನ ಪಾದಾರವಿಂದಗಳನ್ನು ಸೇವಿಸುವವನು ಎಂದಿಗೂ ಯಾವ ರೀತಿಯಲ್ಲೂ ಇತರ ಕರ್ಮಿಗಳಂತೆ ಈ ಸಂಸಾರ ಬಂಧನದಲ್ಲಿ ಬೀಳುವುದಿಲ್ಲ. ಒಂದು ಸಲ ಭಕ್ತಿರಸದ ಸವಿಯನ್ನು ಅನುಭವಿಸಿದವನು ಭಗವಂತನ ಚರಣಕಮಲಗಳ ಆಲಿಂಗನವನ್ನು ಸ್ಮರಿಸುತ್ತಾ ಮತ್ತೆ ಅದನ್ನು ಬಿಡದೆ ಪರಮಾನಂದದ ಸಾಗರದಲ್ಲೇ ಯಾವಾಗಲೂ ಮುಳುಗಿರುತ್ತಾನೆ. ॥ ೧೯ ॥ ಈ ವಿಶ್ವವು ಭಗವಂತನದೇ ಸಾಕಾರ ಸ್ವರೂಪವಾಗಿದೆ. ಎಲ್ಲ ಪ್ರಾಣಿಗಳ ರೂಪದಲ್ಲಿ ಅವನೇ ಇರುವನು. ಹೀಗಿದ್ದರೂ ಅವನು ಇದರಿಂದ ಮೇಲೆ ಅರ್ಥಾತ್ ಅತೀತನಾಗಿದ್ದಾನೆ. ಅವನಿಂದಲೇ ಈ ವಿಶ್ವದ ಉತ್ಪತ್ತಿ, ಸ್ಥಿತಿ, ಸಂಹಾರ ಲೀಲೆಯು ನಡೆಯುತ್ತಾ ಇದೆ. ನೀವಾದರೋ ಆ ಪ್ರಭುವಿನ ಕುರಿತು ಎಲ್ಲವನ್ನು ಬಲ್ಲವರಾಗಿದ್ದೀರಿ. ಹೀಗಿದ್ದರೂ ನಾನು ನಿಮಗೆ ಸಂಕೇತಮಾತ್ರ ಮಾಡಿರುವೆನು. ಆದ್ದರಿಂದ ನೀವು ಭಗವಂತನ ಲೀಲೆಗಳನ್ನು ಹಾಗೂ ಅವನ ಗುಣಗಳನ್ನು ವರ್ಣಿಸಿರಿ. ॥ ೨೦ ॥ ಮಹಾಮಹಿಮರೇ! ನಿಮ್ಮ ದೃಷ್ಟಿಯು ಅಮೋಘವಾದುದು. ನೀವು ಪರಮಪುರುಷ- ಪರಮಾತ್ಮನ ಕಲಾವತಾರವೇ ಆಗಿದ್ದೀರಿ; ಇದನ್ನು ತಾವು ಅರಿತುಕೊಳ್ಳಿ. ಜನ್ಮರಹಿತವಾಗಿದ್ದರೂ ತಾವು ಜಗತ್ತಿನ ಕಲ್ಯಾಣಕ್ಕಾಗಿ ಜನ್ಮವನ್ನು ಪಡೆದಿರುವಿರಿ. ಅದರಿಂದ ನೀವು ವಿಶೇಷವಾಗಿ ಭಗವಂತನ ಲೀಲೆಗಳನ್ನು ಕೀರ್ತನೆಮಾಡಿರಿ. ॥ ೨೧ ॥ ಪುಣ್ಯಕೀರ್ತಿಯಾದ ಶ್ರೀಭಗವಂತನ ದಿವ್ಯಗುಣಗಳನ್ನು, ಲೀಲೆಗಳನ್ನು ವರ್ಣನೆ ಮಾಡುವುದೇ-ಮನುಷ್ಯರು ಆಚರಿಸುವ ತಪಸ್ಸು, ವೇದಾಧ್ಯಯನ, ಯಜ್ಞಾನುಷ್ಠಾನ, ಸ್ವಾಧ್ಯಾಯ, ಜ್ಞಾನ ಮತ್ತು ದಾನ ಇವೆಲ್ಲಕ್ಕೂ ಪರಮ ಪ್ರಯೋಜನವೆಂದು ಜ್ಞಾನಿಗಳು ನಿರೂಪಿಸಿದ್ದಾರೆ. ॥ ೨೨ ॥

ಮಹಾಮುನಿಗಳೇ! (ಭಗವಂತನ ಗುಣಗಾನ, ಶ್ರವಣ ಮುಂತಾದವುಗಳಿಂದಲೇ ಆ ಪರಮಾತ್ಮನ ಪ್ರಾಪ್ತಿಯಾಗುತ್ತದೆ ಎಂಬುದಕ್ಕೆ ನನ್ನ ಚರಿತ್ರೆಯೇ ಒಂದು ಉದಾಹರಣೆಯಾಗಿದೆ.) ಹಿಂದಿನ ಕಲ್ಪದಲ್ಲಿ, ನನ್ನ ಹಿಂದಿನ ಜೀವನದಲ್ಲಿ ನಾನು ವೇದವಾದಿಗಳಾದ ಬ್ರಾಹ್ಮಣರ ಓರ್ವ ದಾಸಿಯ ಪುತ್ರನಾಗಿದ್ದೆನು. ಆ ಯೋಗಿಗಳು ವರ್ಷಾ ಋತುವಿನಲ್ಲಿ ಒಂದೆಡೆ ಚಾತುರ್ಮಾಸ್ಯ ಮಾಡುತ್ತಿದ್ದರು. ನಾನು ಬಾಲಕನಾಗಿರುವಾಗಲೇ ನನ್ನ ತಾಯಿಯು ಆ ಯೋಗಿಗಳ ಶುಶ್ರೂಷೆಯಲ್ಲಿ ನನ್ನನ್ನು ನೇಮಿಸಿದ್ದಳು. ॥ ೨೩ ॥

ತೇ ಮಯ್ಯುಪೇತಾಖಿಲಚಾಪಲೇಽರ್ಭಕೇ
ದಾಂತೇಽಧೃತಕ್ರೀಡನಕೇಽನುವರ್ತಿನಿ ।
ಚಕ್ರುಃ ಕೃಪಾಂ ಯದ್ಯಪಿ ತುಲ್ಯದರ್ಶನಾಃ
ಶುಶ್ರೂಷಮಾಣೇ ಮುನಯೋಽಲ್ಪಭಾಷಿಣಿ ॥ ೨೪ ॥

ಉಚ್ಛಿಷ್ಟಲೇಪಾನನುಮೋದಿತೋ ದ್ವಿಜೈಃ
ಸಕೃತ್ಸ್ಮ ಭುಂಜೇ ತದಪಾಸ್ತಕಿಲ್ಬಿಷಃ ।
ಏವಂ ಪ್ರವೃತ್ತಸ್ಯ ವಿಶುದ್ಧಚೇತಸ-
ಸ್ತದ್ಧರ್ಮ ಏವಾತ್ಮರುಚಿಃ ಪ್ರಜಾಯತೇ ॥ ೨೫ ॥

ತತ್ರಾನ್ವಹಂ ಕೃಷ್ಣಕಥಾಃ ಪ್ರಗಾಯತಾ-
ಮನುಗ್ರಹೇಣಾಶೃಣವಂ ಮನೋಹರಾಃ ।
ತಾಃ ಶ್ರದ್ಧಯಾ ಮೇಽನುಪದಂ ವಿಶೃಣ್ವತಃ
ಪ್ರಿಯಶ್ರವಸ್ಯಂಗ ಮಮಾಭವದ್ರುಚಿಃ ॥ ೨೬ ॥

ತಸ್ಮಿಂಸ್ತದಾ ಲಬ್ಧರುಚೇರ್ಮಹಾಮುನೇ
ಪ್ರಿಯಶ್ರವಸ್ಯಸ್ಖಲಿತಾ ಮತಿರ್ಮಮ ।
ಯಯಾಹಮೇತತ್ಸದಸತ್ಸ್ವ ಮಾಯಯಾ
ಪಶ್ಯೇ ಮಯಿ ಬ್ರಹ್ಮಣಿ ಕಲ್ಪಿತಂ ಪರೇ ॥ ೨೭ ॥

ಇತ್ಥಂ ಶರತ್ಪ್ರಾವೃಷಿಕಾವೃತೂ ಹರೇ-
ರ್ವಿಶೃಣ್ವತೋ ಮೇಽನುಸವಂ ಯಶೋಽಮಲಮ್ ।
ಸಂಕೀರ್ತ್ಯಮಾನಂ ಮುನಿಭಿರ್ಮಹಾತ್ಮಭಿ-
ರ್ಭಕ್ತಿಃ ಪ್ರವೃತ್ತಾತ್ಮ ರಜಸ್ತಮೋಽಪಹಾ ॥ ೨೮ ॥

ತಸ್ಯೈವಂ ಮೇಽನುರಕ್ತಸ್ಯ ಪ್ರಶ್ರಿತಸ್ಯ ಹತೈನಸಃ ।
ಶ್ರದ್ದಧಾನಸ್ಯ ಬಾಲಸ್ಯ ದಾಂತಸ್ಯಾನುಚರಸ್ಯ ಚ ॥ ೨೯ ॥

ಜ್ಞಾನಂ ಗುಹ್ಯತಮಂ ಯತ್ತತ್ಸಾಕ್ಷಾದ್ಭಗವತೋದಿತಮ್ ।
ಅನ್ವವೋಚನ್ ಗಮಿಷ್ಯಂತಃ ಕೃಪಯಾ ದೀನವತ್ಸಲಾಃ ॥ ೩೦ ॥

ಯೇನೈವಾಹಂ ಭಗವತೋ ವಾಸುದೇವಸ್ಯ ವೇಧಸಃ ।
ಮಾಯಾನುಭಾವಮವಿದಂ ಯೇನ ಗಚ್ಛಂತಿ ತತ್ಪದಮ್ ॥ ೩೧ ॥

ನಾನು ಬಾಲಕನಾಗಿದ್ದರೂ ಚಾಪಲ್ಯರಹಿತನಾಗಿದ್ದು, ಜಿತೇಂದ್ರಿಯನಾಗಿದ್ದೆ. ಆಟಗಳಲ್ಲಿ ಆಸಕ್ತಿಯಿಲ್ಲದೆ, ಮಿತಭಾಷಿಯಾಗಿದ್ದು ಅವರ ಆಜ್ಞಾನುಸಾರ ಸೇವೆ ಮಾಡುತ್ತಿದ್ದೆ. ನನ್ನ ಈ ಶೀಲ-ಸ್ವಭಾವವನ್ನು ನೋಡಿ ಸಮದರ್ಶಿಗಳಾದ ಮುನಿಗಳು ಸೇವಕನಾದ ನನ್ನಮೇಲೆ ಪರಮಾನುಗ್ರಹ ಮಾಡಿದರು. ॥ ೨೪ ॥ ನಾನು ಅವರ ಅನುಮತಿಪಡೆದು ಅವರ ಅಡಿಗೆಯ ಪಾತ್ರೆಯಲ್ಲಿ ಅಂಟಿಕೊಂಡಿದ್ದ ಪಾಕಶೇಷವನ್ನು ಪ್ರಸಾದವೆಂದು ಭಾವಿಸಿ ದಿನಕ್ಕೆ ಒಂದು ಬಾರಿ ಮಾತ್ರ ಸೇವಿಸುತ್ತಿದ್ದೆ. ಆದರಿಂದ ನನ್ನ ಪಾಪಗಳೆಲ್ಲವೂ ತೊಳೆದು ಹೋದುವು. ಹೀಗೆ ಅವರ ಸೇವೆಮಾಡುತ್ತಾ-ಮಾಡುತ್ತಾ ನನ್ನ ಹೃದಯವು ಶುದ್ಧವಾಗಿ ಆ ಯೋಗಿಗಳು ಹೇಗೆ ಭಜನೆ-ಪೂಜೆ ಮಾಡುತ್ತಿದ್ದರೋ ಅದರಲ್ಲೇ ನನಗೂ ಅಭಿರುಚಿ ಉಂಟಾಯಿತು. ॥ ೨೫ ॥ ವ್ಯಾಸಮಹರ್ಷಿಗಳೇ! ಆ ಸತ್ಸಂಗದಲ್ಲಿ ಲೀಲಾಗಾನ ಪರಾಯಣರಾದ ಮಹಾತ್ಮರ ಅನುಗ್ರಹದಿಂದ ಪ್ರತಿದಿನವು ನಾನು ಶ್ರೀಕೃಷ್ಣನ ಮನೋಹರ ಕಥೆಗಳನ್ನು ಕೇಳುತ್ತಿದ್ದೆ. ಶ್ರದ್ಧಾಪೂರ್ವಕ ಒಂದೊಂದು ಪದವನ್ನು ಶ್ರವಣಿಸುತ್ತಾ ಇರುವಾಗ ಪ್ರಿಯಕೀರ್ತಿಯುಳ್ಳ, ಸ್ತೋತ್ರಪ್ರಿಯನಾದ ಭಗವಂತನಲ್ಲಿ ನನಗೆ ಅಭಿರುಚಿ ಉಂಟಾಯಿತು. ಹೀಗೆ ಆ ಮಹಾನುಭಾವರ ಸತ್ಸಂಗದಿಂದ ನನಗೆ ಅದ್ಭುತಲಾಭವಾಯಿತು. ಇದೆಲ್ಲವೂ ಆ ಮಹಾತ್ಮರ ಅಸೀಮಕೃಪೆಯೆಂದೇ ನಾನು ಭಾವಿಸುತ್ತೇನೆ. ॥ ೨೬ ॥ ಮಹಾಮುನೇ ! ಭಗವಂತನಲ್ಲಿ ಅಭಿರುಚಿ ಉಂಟಾದಾಗ ಆ ಮನೋಹರ ಕೀರ್ತಿಯುಳ್ಳ ಪ್ರಭುವಿನಲ್ಲಿ ನನ್ನ ಬುದ್ಧಿಯು ನಿಶ್ಚಲವಾಗಿ ನೆಲೆಸಿತು. ಆ ಬುದ್ಧಿಯಿಂದ ನಾನು ಈ ಸದಸದಾತ್ಮಕವಾದ ಜಗತ್ತೆಲ್ಲವೂ ಪರಬ್ರಹ್ಮಸ್ವರೂಪೀ ನನ್ನ ಆತ್ಮನಲ್ಲೇ ಮಾಯೆಯಿಂದ ಕಲ್ಪಿತವಾಗಿರುವಂತೆ ನೋಡತೊಡಗಿದೆನು. ॥ ೨೭ ॥ ಹೀಗೆ ಶರದ್‌ಋತು ಮತ್ತು ವರ್ಷಾಋತುವಿನ ನಾಲ್ಕುತಿಂಗಳುಗಳ ಅವಧಿಯಲ್ಲಿ ಪ್ರತಿದಿನವೂ ಮೂರೂ ಹೊತ್ತು ಆ ಮಹಾತ್ಮರಾದ ಮುನಿಗಳು ಶ್ರೀಹರಿಯ ನಿರ್ಮಲವಾದ ಕೀರ್ತಿಯನ್ನು ಸಂಕೀರ್ತನ ಮಾಡುತ್ತಿದ್ದರು. ಪ್ರೇಮದಿಂದ ಪ್ರತಿಯೊಂದು ಮಾತನ್ನು ಕೇಳುತ್ತಿದ್ದ ನನ್ನ ಹೃದಯದಲ್ಲಿ ರಜೋಗುಣ, ತಮೋಗುಣಗಳನ್ನು ನಾಶಮಾಡುವಂತಹ ಭಕ್ತಿಯು ಉದಯಿಸಿತು. ॥ ೨೮॥ ನಾನು ಆ ಯೋಗಿಗಳಲ್ಲಿ ಅತ್ಯಂತ ಅನುರಕ್ತನಾಗಿದ್ದೆನು. ವಿನಯಶಾಲಿಯಾಗಿದ್ದೆನು. ಅವರ ಸೇವೆಯಿಂದ ನನ್ನ ಪಾಪಗಳೆಲ್ಲವೂ ನಾಶಹೊಂದಿದವು. ನನ್ನ ಹೃದಯದಲ್ಲಿ ಶ್ರದ್ಧೆಯೂ, ಇಂದ್ರಿಯಗಳಲ್ಲಿ ಸಂಯಮವೂ ಇದ್ದು, ಶರೀರ, ವಾಣಿ, ಮನಸ್ಸುಗಳಿಂದ ನಾನು ಅವರ ಆಜ್ಞಾಕಾರಿಯಾಗಿದ್ದೆ. ॥ ೨೯ ॥ ಆ ದೀನವತ್ಸಲರಾದ ಮಹಾತ್ಮರು ಅಲ್ಲಿಂದ ಹೊರಡುವಾಗ – ಸ್ವಯಂ ಭಗವಂತನೇ ತನ್ನ ಶ್ರೀಮುಖದಿಂದ ಉಪದೇಶಮಾಡಿದ್ದ ರಹಸ್ಯವಾದ ಜ್ಞಾನವನ್ನು ನನಗೆ ಪರಮಕೃಪೆಯಿಂದ ಉಪದೇಶಿಸಿದರು. ॥ ೩೦ ॥ ಆ ಉಪದೇಶದಿಂದಲೇ ಜಗತ್ತಿನ ನಿರ್ಮಾತೃವಾದ ಭಗವಾನ್ ಶ್ರೀಕೃಷ್ಣನ ಮಾಯೆಯ ಪ್ರಭಾವವನ್ನು ನಾನು ಅರಿಯುವಂತಾಯಿತು. ಅದನ್ನರಿತರೆ ಅವನ ಪರಮಪದದ ಪ್ರಾಪ್ತಿಯಾಗುವುದು. ಆತ್ಮಸ್ವರೂಪದ ಜ್ಞಾನ ಉಂಟಾಗುವುದು. ॥ ೩೧ ॥

ಏತತ್ಸಂಸೂಚಿತಂ ಬ್ರಹ್ಮಂಸ್ತಾಪತ್ರಯಚಿಕಿತ್ಸಿತಮ್ ।
ಯದೀಶ್ವರೇ ಭಗವತಿ ಕರ್ಮ ಬ್ರಹ್ಮಣಿ ಭಾವಿತಮ್
॥ ೩೨ ॥

ಆಮಯೋ ಯಶ್ಚ ಭೂತಾನಾಂ ಜಾಯತೇ ಯೇನ ಸುವ್ರತ ।
ತದೇವ ಹ್ಯಾಮಯಂ ದ್ರವ್ಯಂ ನ ಪುನಾತಿ ಚಿಕಿತ್ಸಿತಮ್
॥ ೩೩ ॥

ಏವಂ ನೃಣಾಂ ಕ್ರಿಯಾಯೋಗಾಃ ಸರ್ವೇ ಸಂಸೃತಿಹೇತವಃ ।
ತ ಏವಾತ್ಮವಿನಾಶಾಯ ಕಲ್ಪಂತೇ ಕಲ್ಪಿತಾಃ ಪರೇ
॥ ೩೪ ॥

ಯದತ್ರ ಕ್ರಿಯತೇ ಕರ್ಮ ಭಗವತ್ಪರಿತೋಷಣಮ್ ।
ಜ್ಞಾನಂ ಯತ್ತದಧೀನಂ ಹಿ ಭಕ್ತಿಯೋಗಸಮನ್ವಿತಮ್
॥ ೩೫ ॥

ಕುರ್ವಾಣಾ ಯತ್ರ ಕರ್ಮಾಣಿ ಭಗವಚ್ಛಿಕ್ಷಯಾಸಕೃತ್ ।
ಗೃಣಂತಿ ಗುಣನಾಮಾನಿ ಕೃಷ್ಣಸ್ಯಾನುಸ್ಮರಂತಿ ಚ
॥ ೩೬ ॥

ನಮೋ ಭಗವತೇ ತುಭ್ಯಂ ವಾಸುದೇವಾಯ ಧೀಮಹಿ ।
ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ
॥ ೩೭ ॥

ಇತಿ ಮೂರ್ತ್ಯಭಿಧಾನೇನ ಮಂತ್ರ ಮೂರ್ತಿಮಮೂರ್ತಿಕಮ್ ।
ಯಜತೇ ಯಜ್ಞಪುರುಷಂ ಸ ಸಮ್ಯಗ್ದರ್ಶನಃ ಪುಮಾನ್
॥ ೩೮ ॥

ಇಮಂ ಸ್ವನಿಗಮಂ ಬ್ರಹ್ಮನ್ನವೇತ್ಯ ಮದನುಷ್ಠಿತಮ್ ।
ಅದಾನ್ಮೇಜ್ಞಾನಮೈಶ್ವರ್ಯಂ ಸ್ವಸ್ಮಿನ್ ಭಾವಂ ಚ ಕೇಶವಃ
॥ ೩೯ ॥

ತ್ವಮಪ್ಯದಭ್ರಶ್ರುತ ವಿಶ್ರುತಂ ವಿಭೋಃ
ಸಮಾಪ್ಯತೇ ಯೇನ ವಿದಾಂ ಬುಭುತ್ಸಿತಮ್ ।
ಆಖ್ಯಾಹಿ ದುಃಖೈರ್ಮುಹುರರ್ದಿತಾತ್ಮನಾಂ
ಸಂಕ್ಲೇಶನಿರ್ವಾಣಮುಶಂತಿ ನಾನ್ಯಥಾ ॥ ೪೦ ॥

ಬ್ರಹ್ಮರ್ಷಿಗಳೇ! ಪುರುಷೋತ್ತಮನಾದ ಭಗವಾನ್ ಶ್ರೀಕೃಷ್ಣನ ಕುರಿತು ಸಮಸ್ತ ಕರ್ಮಗಳನ್ನು ಸಮರ್ಪಿಸುವುದೇ ನಮ್ಮ ತಾಪತ್ರಯಗಳನ್ನು ನಾಶಪಡಿಸುವ ದಿವ್ಯೌಷಧವು. ಈ ರಹಸ್ಯವನ್ನು ನಾನು ತಿಳಿದು ನಿಮಗೂ ಸೂಚಿಸಿದ್ದೇನೆ. ॥ ೩೨ ॥ ಸಾಧುಶಿರೋಮಣಿಗಳೇ! ಪ್ರಾಣಿಗಳಿಗೆ ಯಾವ ಪದಾರ್ಥದ ಸೇವನೆಯಿಂದ ಯಾವ ರೋಗ ಉಂಟಾಗುವುದೋ, ಅದೇ ಪದಾರ್ಥವನ್ನು ಚಿಕಿತ್ಸಾವಿಧಿಗೆ ಅನುಸಾರವಾಗಿ ಪ್ರಯೋಗಿಸಿದರೆ ಆ ರೋಗವನ್ನು ದೂರಮಾಡುವುದಲ್ಲ! ॥ ೩೩ ॥ ಹೀಗೆಯೇ ಎಲ್ಲ ಕರ್ಮಗಳು ಮನುಷ್ಯನನ್ನು ಜನ್ಮ-ಮರಣಗಳ ಸಂಸಾರಚಕ್ರದಲ್ಲಿ ಕೆಡಹುವುದಿದ್ದರೂ, ಅವುಗಳನ್ನೂ ಭಗವಂತನಿಗೆ ಸಮರ್ಪಿಸಿದಾಗ ಅವುಗಳ ಕರ್ಮತ್ವವೇ ಕಳೆದುಹೋಗುತ್ತದೆ. ಮತ್ತೆ ಆ ಕರ್ಮಗಳು ಜೀವನನ್ನು ಬಂಧಿಸಲಾರವು. ॥ ೩೪ ॥ ಆದ್ದರಿಂದ ಭಗವತ್‌ಪ್ರೀತ್ಯರ್ಥವಾಗಿ ಮಾಡಲಾಗುವ ಕರ್ಮದಿಂದ ಜ್ಞಾನ ಮತ್ತು ಭಕ್ತಿ ಎರಡೂ ಪ್ರಾಪ್ತವಾಗುತ್ತವೆ. ಆ ಜ್ಞಾನವನ್ನು ಭಕ್ತಿಯೋಗಯುಕ್ತಜ್ಞಾನ ಎಂದು ಹೇಳಲಾಗಿದೆ. ॥ ೩೫ ॥ ಆ ಭಗವದರ್ಥ ಕರ್ಮಮಾರ್ಗದಲ್ಲಿ ಭಗವಂತನ ಆಜ್ಞಾನುಸಾರವಾಗಿ ಆಚರಣವಿಟ್ಟುಕೊಂಡು ಜನರು ಪದೇ-ಪದೇ ಭಗವಾನ್ ಶ್ರೀಕೃಷ್ಣನ ಗುಣ-ನಾಮಗಳನ್ನು ಕೀರ್ತಿಸುತ್ತಾ, ಸ್ಮರಿಸುತ್ತಾ ಇರುತ್ತಾರೆ. ॥ ೩೬ ॥ ಹಾಗೂ ಆಗಾಗ ಭಗವಂತನನ್ನು ಹೀಗೆ ಸ್ತುತಿಸುತ್ತಾ ಇರುತ್ತಾರೆ – ಪ್ರಭೋ! ಭಗವಾನ್ ವಾಸುದೇವನಾದ ನಿನಗೆ ನಮಸ್ಕಾರವು. ನಾವು ನಿನ್ನನ್ನೇ ಧ್ಯಾನಿಸುತ್ತೇವೆ. ಪ್ರದ್ಯುಮ್ನನೂ, ಅನಿರುದ್ಧನೂ, ಸಂಕರ್ಷಣನೂ ಆಗಿರುವ ನಿನಗೆ ನಮೋ ನಮಃ ॥ ೩೭ ॥ ಹೀಗೆ ಭಗವಂತನ ಚತುರ್ವ್ಯೂಹಮೂರ್ತಿಗಳ ನಾಮ ಸಂಕೀರ್ತನೆಯನ್ನು ಮಾಡುತ್ತಾ, ಪ್ರಾಕೃತಮೂರ್ತಿ ರಹಿತನೂ, ಅಪ್ರಾಕೃತ ಮಂತ್ರಮೂರ್ತಿಯೂ ಆಗಿರುವ ಭಗವಾನ್ ಯಜ್ಞಪುರುಷನನ್ನು ಪೂಜೆಮಾಡುವವನೇ ಯಥಾರ್ಥ ಜ್ಞಾನಿಯು. ॥ ೩೮ ॥ ಬ್ರಹ್ಮರ್ಷಿಗಳೇ! ಹೀಗೆ ನಾನು ಭಗವಂತನ ಆಜ್ಞೆಯಂತೆ ಭಕ್ತಿಭಾವದಿಂದ ನಡೆದುಕೊಂಡೆನು. ಅವನಿಗೆ ಅರ್ಪಿತವಾಗಿ ಕರ್ಮಗಳನ್ನು ಆಚರಿಸಿದೆನು. ಇದರಿಂದ ಪ್ರಸನ್ನಗೊಂಡ ಭಗವಾನ್ ಕೇಶವನು ನನಗೆ ಆತ್ಮಜ್ಞಾನ, ಐಶ್ವರ್ಯ ಮತ್ತು ತನ್ನ ಭಾವರೂಪೀ ಪ್ರೇಮಾಭಕ್ತಿಯನ್ನು ಕರುಣಿಸಿದನು. ॥ ೩೯ ॥ ಜ್ಞಾನನಿಧಿಗಳೇ! ನಿಮ್ಮ ಜ್ಞಾನವು ಪೂರ್ಣವಾಗಿದೆ. ನೀವು ಭಗವಂತನದೇ ಕೀರ್ತಿಯನ್ನೂ, ಅವನ ಪ್ರೇಮಮಯ ದಿವ್ಯಲೀಲೆಗಳನ್ನು ವರ್ಣಿಸಿರಿ. ಅವನ ಸ್ಮರಣೆ-ಕೀರ್ತನೆ-ಚಿಂತನೆ ಮಾಡುತ್ತಾ ಇರುವುದರಿಂದ ತಿಳಿದುಕೊಳ್ಳಬೇಕಾದುದು ಯಾವುದೂ ಉಳಿಯುವುದಿಲ್ಲ. ಇದರಿಂದ ದೊಡ್ಡ-ದೊಡ್ಡ ಜ್ಞಾನಿಗಳ ಜಿಜ್ಞಾಸೆಯೂ ಪೂರ್ಣವಾಗುತ್ತದೆ. ನಾನಾ ದುಃಖಗಳಿಂದ ಮತ್ತೆ-ಮತ್ತೆ ಸಂಕಷ್ಟಕ್ಕೆ ಈಡಾಗುವವರ ದುಃಖಗಳು ಇದರಿಂದ ಶಮನವಾಗುವುವು. ಇದನ್ನು ಬಿಟ್ಟರೆ ನಮ್ಮದಿಗೆ ಬೇರೆ ಯಾವ ಉಪಾಯವೂ ಇಲ್ಲ. ॥ ೪೦ ॥

*ಐದನೆಯ ಅಧ್ಯಾಯವು ಮುಗಿಯಿತು. ॥ 5 ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ವ್ಯಾಸನಾರದಸಂವಾದೇ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ನಾರದರ ಪೂರ್ವಚರಿತ್ರೆಯು ಮುಂದುವರಿದುದು

*ಸೂತ ಉವಾಚ*

ಏವಂ ನಿಶಮ್ಯ ಭಗವಾನ್ದೇವರ್ಷೇರ್ಜನ್ಮ ಕರ್ಮ ಚ ।
ಭೂಯಃ ಪಪ್ರಚ್ಛ ತಂ ಬ್ರಹ್ಮನ್ ವ್ಯಾಸಃ ಸತ್ಯವತೀಸುತಃ ॥ ೧ ॥

*ವ್ಯಾಸ ಉವಾಚ*

ಭಿಕ್ಷುಭಿರ್ವಿಪ್ರವಸಿತೇ ವಿಜ್ಞಾನಾದೇಷ್ಟೃಭಿಸ್ತವ ।
ವರ್ತಮಾನೋ ವಯಸ್ಯಾದ್ಯೇ ತತಃ ಕಿಮಕರೋದ್ಭವಾನ್ ॥ ೨ ॥

ಸ್ವಾಯಂಭುವ ಕಯಾ ವೃತ್ತ್ಯಾ ವರ್ತಿತಂ ತೇ ಪರಂ ವಯಃ ।
ಕಥಂ ಚೇದಮುದಸ್ರಾಕ್ಷೀಃ ಕಾಲೇ ಪ್ರಾಪ್ತೇ ಕಲೇವರಮ್ ॥ ೩ ॥

ಪ್ರಾಕ್ಕಲ್ಪವಿಷಯಾಮೇತಾಂ ಸ್ಮೃತಿಂ ತೇ ಸುರಸತ್ತಮ ।
ನ ಹ್ಯೇಷ ವ್ಯವಧಾತ್ಕಾಲ ಏಷ ಸರ್ವನಿರಾಕೃತಿಃ ॥ ೪ ॥

*ನಾರದ ಉವಾಚ*

ಭಿಕ್ಷುಭಿರ್ವಿಪ್ರವಸಿತೇ ವಿಜ್ಞಾನಾದೇಷ್ಟೃಭಿರ್ಮಮ ।
ವರ್ತಮಾನೋ ವಯಸ್ಯಾದ್ಯೇ ತತ ಏತದಕಾರಷಮ್ ॥ ೫ ॥

ಏಕಾತ್ಮಜಾ ಮೇ ಜನನೀ ಯೋಷಿನ್ಮೂಢಾ ಚ ಕಿಂಕರೀ ।
ಮಯ್ಯಾತ್ಮಜೇಽನನ್ಯಗತೌ ಚಕ್ರೇ ಸ್ನೇಹಾನುಬಂಧನಮ್ ॥ ೬ ॥

ಸಾಸ್ವತಂತ್ರಾ ನ ಕಲ್ಪಾಽಽಸೀದ್ಯೋಗಕ್ಷೇಮಂ ಮಮೇಚ್ಛತೀ ।
ಈಶಸ್ಯ ಹಿ ವಶೇ ಲೋಕೋ ಯೋಷಾ ದಾರುಮಯೀ ಯಥಾ ॥ ೭ ॥

ಅಹಂ ಚ ತದ್ಬ್ರಹ್ಮಕುಲೇ ಊಷಿವಾಂಸ್ತದಪೇಕ್ಷಯಾ ।
ದಿಗ್ದೇಶಕಾಲಾವ್ಯುತ್ಪನ್ನೋ ಬಾಲಕಃ ಪಂಚಹಾಯನಃ ॥ ೮ ॥

ಏಕದಾ ನಿರ್ಗತಾಂ ಗೇಹಾದ್ದುಹಂತೀಂ ನಿಶಿ ಗಾಂ ಪಥಿ ।
ಸರ್ಪೋಽದಶತ್ಪದಾ ಸ್ಪೃಷ್ಟಃ ಕೃಪಣಾಂ ಕಾಲಚೋದಿತಃ ॥ ೯ ॥

ತದಾ ತದಹಮೀಶಸ್ಯ ಭಕ್ತಾನಾಂ ಶಮಭೀಪ್ಸತಃ ।
ಅನುಗ್ರಹಂ ಮನ್ಯಮಾನಃ ಪ್ರಾತಿಷ್ಠಂ ದಿಶಮುತ್ತರಾಮ್ ॥ ೧೦ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿಗಳೇ! ದೇವರ್ಷಿ ನಾರದರ ಜನ್ಮ-ಕರ್ಮಗಳ ವಿಷಯವನ್ನು ಕೇಳಿದ ಸತ್ಯವತಿನಂದನ ಭಗವಾನ್ ಶ್ರೀವೇದವ್ಯಾಸರು ಮತ್ತೆ ಅವರನ್ನು ಇಂತು ಪ್ರಶ್ನಿಸಿದರು. ॥ ೧ ॥

**ಶ್ರೀವೇದವ್ಯಾಸರು ಕೇಳುತ್ತಾರೆ** – ದೇವರ್ಷಿಗಳೇ! ತಮಗೆ ಜ್ಞಾನೋಪದೇಶ ಮಾಡಿದ ಯತಿಗಳು ಹೋದ ಬಳಿಕ ನೀವೇನು ಮಾಡಿದಿರಿ? ಆಗ ತಾವಿನ್ನೂ ತುಂಬಾ ಬಾಲ್ಯಾವಸ್ಥೆಯಲ್ಲಿದ್ದೀರಲ್ಲವೇ? ॥ ೨ ॥ ಸ್ವಾಯಂಭುವ! ತಮ್ಮ ಆಯುಷ್ಯದ ಉಳಿದ ಭಾಗವನ್ನು ಹೇಗೆ ಕಳೆದಿರಿ? ಮತ್ತೆ ಮೃತ್ಯುವಿನ ಸಮಯದಲ್ಲಿ ನೀವು ಯಾವ ವಿಧದಿಂದ ಶರೀರವನ್ನು ತ್ಯಜಿಸಿದಿರಿ? ॥ ೩ ॥ ದೇವರ್ಷಿ ಮುನಿಶ್ರೇಷ್ಠರೇ! ಕಾಲವಾದರೋ ಎಲ್ಲ ವಸ್ತುಗಳನ್ನು ನಾಶಮಾಡಿ ಬಿಡುತ್ತದೆ. ಹಾಗಿದ್ದರೂ ನಿಮ್ಮ ಜನ್ಮಾಂತರದ ನೆನಪನ್ನು ಅಳಿಸದೆ ಹೇಗೆ ಬಿಟ್ಟಿತು? ॥ ೪ ॥

**ನಾರದರು ಹೇಳಿದರು** – ನನಗೆ ಜ್ಞಾನೋಪದೇಶ ಮಾಡಿದ ಯೋಗಿಗಳು ಹೊರಟುಹೋದಾಗ ಇನ್ನೂ ಬಾಲ್ಯಾವಸ್ಥೆಯಲ್ಲಿದ್ದ ನಾನು ಹೇಗೆ ಜೀವನ ನಡೆಸಿದೆನೆಂಬುದನ್ನು ಕೇಳಿ – ॥ ೫ ॥ ನನ್ನ ತಾಯಿಗೆ ನಾನೊಬ್ಬನೇ ಮಗನು. ಆಕೆಯು ಹೆಂಗಸಾಗಿದ್ದು, ಜೊತೆಗೆ ತಿಳುವಳಿಕೆ ಇಲ್ಲದವಳೂ, ದಾಸಿಯೂ ಆಗಿದ್ದಳು. ನನಗೂ ಆಕೆಯನ್ನು ಬಿಟ್ಟು ಬೇರಾವ ಗತಿಯೂ ಇರಲಿಲ್ಲ. ಅವಳು ನನ್ನನ್ನು ತನ್ನ ಸ್ನೇಹಪಾಶದಿಂದ ಕಟ್ಟಿಹಾಕಿದ್ದಳು. ॥ ೬ ॥ ಅವಳು ನನ್ನ ಯೋಗ-ಕ್ಷೇಮದ ಕುರಿತು ಬಹಳ ಚಿಂತಿಸುತ್ತಿದ್ದರೂ ಪರಾಧೀನಳಾದ ಕಾರಣ ಏನನ್ನೂ ಮಾಡಲಾರದವಳಾಗಿದ್ದಳು. ಸೂತ್ರದ ಬೊಂಬೆಯು ಕುಣಿಸುವವನ ಅಧೀನವಿದ್ದು; ಅವನ ಇಚ್ಛೆಯಂತೆ ಕುಣಿಯುವ ಹಾಗೆಯೇ ಈ ಇಡೀ ಪ್ರಪಂಚವು ಈಶ್ವರನ ಅಧೀನದಲ್ಲಿದೆ. ॥ ೭ ॥ ನಾನೂ ಕೂಡ ನನ್ನ ತಾಯಿಯ ಸ್ನೇಹಬಂಧನದಲ್ಲಿ ಬಂಧಿತನಾಗಿ ಆ ಬ್ರಾಹ್ಮಣರ ವಸತಿಯಲ್ಲೇ ಇರುತ್ತಿದ್ದ. ಐದು ವರ್ಷ ವಯಸ್ಸಾದಾಗ ನನಗೆ ದಿಶೆ-ದೇಶ-ಕಾಲ ಸಂಬಂಧವಾಗಿ ಏನೂ ಅರಿವಿರಲಿಲ್ಲ. ॥ ೮ ॥ ಹೀಗಿರುವಾಗ ಒಂದು ದಿನ ರಾತ್ರಿ ನನ್ನ ತಾಯಿಯು ಹಾಲುಕರೆಯಲು ಮನೆಯಿಂದ ಹೊರಗೆ ಹೋಗುವಾಗ ದಾರಿಯಲ್ಲಿ ಆಕೆಯ ಕಾಲು ಒಂದು ಹಾವಿಗೆ ತಗುಲಿತು. ಅದು ಆ ಬಡಪಾಯಿಯನ್ನು ಕಚ್ಚಿಬಿಟ್ಟಿತು. ಇದರಲ್ಲಿ ಸರ್ಪದ್ದೇನು ತಪ್ಪಿದೆ? ಮೃತ್ಯುವಿನ ಪ್ರೇರಣೆಯೇ ಹೀಗಿತ್ತು. ॥ ೯ ॥ ಭಕ್ತರ ಮಂಗಳವನ್ನೇ ಬಯಸುವ ಭಗವಂತನು ಹೀಗೆ ಅನುಗ್ರಹವೇ ಮಾಡಿರುವನು ಎಂದು ನಾನು ತಿಳಿದು ಉತ್ತರ ದಿಕ್ಕಿನ ಕಡೆಗೆ ಹೊರಟುಬಿಟ್ಟೆನು. ॥ ೧೦ ॥ ಹೀಗೆ ಒಬ್ಬಂಟಿಗನಾಗಿ ಹೋಗುತ್ತಿದ್ದ ನನಗೆ ದಾರಿಯಲ್ಲಿ ಅನೇಕ ಧನ-ಧಾನ್ಯ ಸಂಪನ್ನದೇಶಗಳೂ, ನಗರಗಳೂ, ಗ್ರಾಮಗಳೂ, ಗೊಲ್ಲರ ದೊಡ್ಡಿಗಳೂ, ಬಗೆ-ಬಗೆಯ

ಸ್ಫೀತಾಂಜನಪದಾಂಸ್ತತ್ರ ಪುರಗ್ರಾಮವ್ರಜಾಕರಾನ್ ।
ಖೇಟಖರ್ವಟವಾಟೀಶ್ಚ ವನಾನ್ಯುಪವನಾನಿ ಚ ॥ ೧೧ ॥

ಚಿತ್ರಧಾತುವಿಚಿತ್ರಾದ್ರೀನಿಭಭಗ್ನಭುಜದ್ರುಮಾನ್ ।
ಜಲಾಶಯಾನ್ ಶಿವಜಲಾನ್ನಲಿನೀಃ ಸುರಸೇವಿತಾಃ ॥ ೧೨ ॥

ಚಿತ್ರಸ್ವನೈಃ ಪತ್ರರಥೈರ್ವಿಭ್ರಮದ್ಭ್ರಮರಶ್ರಿಯಃ ।
ನಲವೇಣುಶರಸ್ತಂಬಕುಶಕೀಚಕಗಹ್ವರಮ್ ॥ ೧೩ ॥

ಏಕ ಏವಾತಿಯಾತೋಽಹಮದ್ರಾಕ್ಷಂ ವಿಪಿನಂ ಮಹತ್ ।
ಘೋರಂ ಪ್ರತಿಭಯಾಕಾರಂ ವ್ಯಾಲೋಲೂಕಶಿವಾಜಿರಮ್ ॥ ೧೪ ॥

ಪರಿಶ್ರಾಂತೇಂದ್ರಿಯಾತ್ಮಾಹಂ ತೃಟ್ಪರೀತೋ ಬುಭುಕ್ಷಿತಃ ।
ಸ್ನಾತ್ವಾ ಪೀತ್ವಾ ಹ್ರದೇ ನದ್ಯಾ ಉಪಸ್ಪೃಷ್ಟೋ ಗತಶ್ರಮಃ ॥ ೧೫ ॥

ತಸ್ಮಿನ್ನಿರ್ಮನುಜೇಽರಣ್ಯೇ ಪಿಪ್ಪಲೋಪಸ್ಥ ಆಸ್ಥಿತಃ ।
ಆತ್ಮನಾಽಽತ್ಮಾನಮಾತ್ಮಸ್ಥಂ ಯಥಾಶ್ರುತಮಚಿಂತಯಮ್ ॥ ೧೬ ॥

ಧ್ಯಾಯತಶ್ಚರಣಾಂಭೋಜಂ ಭಾವನಿರ್ಜಿತಚೇತಸಾ ।
ಔತ್ಕಂಠ್ಯಾಶ್ರುಕಲಾಕ್ಷಸ್ಯ ಹೃದ್ಯಾಸೀನ್ಮೇ ಶನೈರ್ಹರಿಃ ॥ ೧೭ ॥

ಪ್ರೇಮಾತಿಭರನಿರ್ಭಿನ್ನಪುಲಕಾಂಗೋಽತಿನಿರ್ವೃತಃ ।
ಆನಂದಸಂಪ್ಲವೇ ಲೀನೋ ನಾಪಶ್ಯಮುಭಯಂ ಮುನೇ ॥ ೧೮ ॥

ರೂಪಂ ಭಗವತೋ ಯತ್ತನ್ಮನಃಕಾಂತಂ ಶುಚಾಪಹಮ್ ।
ಅಪಶ್ಯನ್ ಸಹಸೋತ್ತಸ್ಥೇ ವೈಕ್ಲವ್ಯಾದ್ದುರ್ಮನಾ ಇವ ॥ ೧೯ ॥

ದಿದೃಕ್ಷುಸ್ತದಹಂ ಭೂಯಃ ಪ್ರಣಿಧಾಯ ಮನೋ ಹೃದಿ ।
ವೀಕ್ಷಮಾಣೋಽಪಿ ನಾಪಶ್ಯಮವಿತೃಪ್ತ ಇವಾತುರಃ ॥ ೨೦ ॥

ಗಣಿಗಳೂ, ರೈತರ ಕೊಪ್ಪಲೂ, ನದಿಗಳೂ, ಪರ್ವತ ತಪ್ಪಲಿನ ಸಣ್ಣ ಊರುಗಳೂ, ಶಿಬಿರಗಳೂ, ದೊಡ್ಡ ಮರಗಳ ತೋಪುಗಳೂ, ಅರಣ್ಯಗಳೂ, ಉದ್ಯಾನವನಗಳೂ, ಬಣ್ಣ-ಬಣ್ಣದ ಧಾತುಗಳಿಂದ ಕಂಗೊಳಿಸುವ ವಿಚಿತ್ರವಾದ ಪರ್ವತಗಳೂ ಕಾಣಿಸಿದವು. ಕೆಲವು ಕಡೆಗಳಲ್ಲಿ ಆನೆಗಳಿಂದ ಮುರಿಯಲ್ಪಟ್ಟ ರೆಂಬೆಗಳುಳ್ಳ ಕಾಡು ಮರಗಳನ್ನೂ ನೋಡಿದೆನು. ಬಗೆ-ಬಗೆಯ ಚಿಲಿಪಿಲಿಗುಟ್ಟುವ ಪಕ್ಷಿಗಳಿಂದಲೂ, ಝೇಂಕರಿಸುವ ದುಂಬಿಗಳಿಂದಲೂ ಕೂಡಿದ, ದೇವತಾಪೂಜೆಗೆ ಉಪಯೋಗಿಯಾದ ಕಮಲಪುಷ್ಪಗಳಿಂದ ನಳನಳಿಸುತ್ತಿದ್ದ ತಣ್ಣೀರಿನಿಂದ ತುಂಬಿದ ತಾವರೆಕೊಳಗಳೂ ನನಗೆ ಸಿಕ್ಕಿದವು. ಇದೆಲ್ಲವನ್ನೂ ನೋಡುತ್ತಾ ನಾನು ಬಹಳ ದೂರ ಸಾಗಿದಾಗ ನನಗೆ ಒಂದು ಘೋರವಾದ ಗೊಂಡಾರಣ್ಯವು ಸಿಕ್ಕಿತು. ಅದರಲ್ಲಿ ಬಗೆ-ಬಗೆಯ ಜೊಂಡು ಹುಲ್ಲುಗಳು, ಬೆತ್ತಗಳೂ, ದರ್ಭೆಗಳ ಪೊದೆಗಳು, ಗಾಳಿಗೆ ಶಬ್ದಮಾಡುತ್ತಿದ್ದ ಬಿದಿರಮೆಳೆಗಳು ಇವುಗಳಿಂದ ದಟ್ಟವಾಗಿ, ಭೀಕರವಾಗಿ ಕಾಣುತ್ತಿತ್ತು. ಭಯಂಕರ ಆಕಾರದ ಹಾವುಗಳು, ಗೂಬೆ, ನರಿಗಳು ಮುಂತಾದವುಗಳ ವಾಸಸ್ಥಳವಾದ ಭಯಾನಕ ಗೊಂಡಾರಣ್ಯವನ್ನು ಕಂಡೆನು. ॥ ೧೧-೧೪ ॥ ನನ್ನ ದೇಹೇಂದ್ರಿಯಗಳು ನಡೆದು-ನಡೆದು ಬಳಲಿಹೋಗಿದ್ದವು. ಜೊತೆಗೆ ತಡೆಯಲಾರದಷ್ಟು ಹಸಿವು-ಬಾಯಾರಿಕೆಗಳು ನನ್ನನ್ನು ಬಾಧಿಸುತ್ತಿದ್ದವು. ಆಗ ಅಲ್ಲಿದ್ದ ನದಿಯೊಂದರಲ್ಲಿ ಸ್ನಾನಮಾಡಿ, ನೀರುಕುಡಿದು, ಆಚಮನಮಾಡಿ ಆಯಾಸವನ್ನು ಪರಿಹರಿಸಿಕೊಂಡೆ. ॥ ೧೫ ॥ ಅನಂತರ ಆ ನಿರ್ಜನವಾದ ಅರಣ್ಯದಲ್ಲಿ ಒಂದು ಅರಳೀಮರದ ಬುಡದಲ್ಲಿ ಕುಳಿತು ಅಂತರ್ಯಾಮಿಯಾದ ಪರಮಾತ್ಮನ ಸ್ವರೂಪವನ್ನು ಆ ಯೋಗಿಗಳಿಂದ ಕೇಳಿದ ರೀತಿಯಲ್ಲೇ ಧ್ಯಾನಮಾಡತೊಡಗಿದೆನು. ॥ ೧೬ ॥ ಭಾವಪೂರ್ಣವಾಗಿ ಏಕಾಗ್ರಚಿತ್ತದಿಂದ ಭಗವಂತನ ಪಾದಾರವಿಂದಗಳನ್ನು ಧ್ಯಾನಿಸುತ್ತಿರುವಾಗ ಆತನ ದರ್ಶನದ ಉತ್ಕಂಠತೆಯಿಂದ ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿಬಂದವು. ಆಗಲೇ ನನ್ನ ಹೃದಯದಲ್ಲಿ ಬೇಗನೆ ಶ್ರೀಹರಿಯು ಪ್ರಕಟನಾದನು. ॥ ೧೭ ॥ ಮಹರ್ಷಿಯೇ! ಆಗ ಪ್ರೇಮಭಾವದ ಉದ್ರೇಕದಿಂದ ನಾನು ರೋಮಾಂಚಿತನಾಗಿ ಅನಿರ್ವಚನೀಯವಾದ ಸುಖವನ್ನು ಅನುಭವಿಸಿದೆನು. ಆನಂದದ ಪ್ರವಾಹದಲ್ಲಿ ಮುಳುಗಿ ಹೋಗಿದ್ದ ನನಗೆ ಒಳಗೂ-ಹೊರಗೂ ಏನೂ ಕಾಣಿಸದೆ ಹೋಯಿತು. ತದಾಕಾರ ವೃತ್ತಿಯುಂಟಾಯಿತು. ॥ ೧೮ ॥ ಆಗ ಮನಸ್ಸಿಗೆ ಅತ್ಯಂತ ರಮಣೀಯವಾದ, ಸರ್ವಶೋಕಗಳನ್ನು ಹೋಗಲಾಡಿಸುವ ಶ್ರೀಭಗವಂತನ ಆ ರೂಪವು ಇದ್ದಕ್ಕಿದ್ದಂತೆ ಕಣ್ಮರೆಯಾಗಲು ನನಗೆ ಬಹಳ ಕಳವಳವುಂಟಾಯಿತು. ನಾನು ತಡೆಯಲಾರದ ಬೇಗುದಿಯಿಂದ ಥಟ್ಟನೆ ಮೇಲೆದ್ದು ನಿಂತೆ. ॥ ೧೯ ॥

ಆ ದಿವ್ಯ ಮಂಗಳರೂಪವನ್ನು ಮತ್ತೆ ದರ್ಶಿಸಬೇಕೆಂದು ಬಯಸಿದೆ. ಆದರೆ ಮನಸ್ಸನ್ನು ಹಿಂದಿನಂತೆ ಹೃದಯದಲ್ಲಿ ನೆಲೆಗೊಳಿಸಿ ಪದೇ-ಪದೇ ದರ್ಶನಕ್ಕಾಗಿ ಪ್ರಯತ್ನಿಸಿದರೂ ನಾನು ಅವನನ್ನು ನೋಡದೆ ಹೋದಾಗ ಅತೃಪ್ತನಂತೆ, ರೋಗ ಬಂದವನಂತೆ ನರಳತೊಡಗಿದೆ. ॥ ೨೦ ॥ ಹೀಗೆ ನಿರ್ಜನವಾದ ಅರಣ್ಯದಲ್ಲಿ

ಏವಂ ಯತಂತಂ ವಿಜನೇ ಮಾಮಾಹಾಗೋಚರೋ ಗಿರಾಮ್ ।
ಗಂಭೀರಶ್ಲಕ್ಷ್ಣಯಾ ವಾಚಾ ಶುಚಃ ಪ್ರಶಮಯನ್ನಿವ ॥ ೨೦ ॥

ಹಂತಾಸ್ಮಿಂಜನ್ಮನಿ ಭವಾನ್ಮಾ ಮಾಂ ದ್ರಷ್ಟುಮಿಹಾರ್ಹತಿ ।
ಅವಿಪಕ್ವಕಷಾಯಾಣಾಂ ದುರ್ದರ್ಶೋಽಹಂ ಕುಯೋಗಿನಾಮ್ ॥ ೨೧ ॥

ಸಕೃದ್ಯದ್ದರ್ಶಿತಂ ರೂಪಮೇತತ್ಕಾಮಾಯ ತೇಽನಘ ।
ಮತ್ಕಾಮಃ ಶನಕೈಃ ಸಾಧುಃ ಸರ್ವಾನ್ಮುಂಚತಿ ಹೃಚ್ಛಯಾನ್ ॥ ೨೨ ॥

ಸತ್ಸೇವಯಾಽ ದೀರ್ಘಯಾ ತೇ ಜಾತಾ ಮಯಿ ದೃಢಾ ಮತಿಃ ।
ಹಿತ್ವಾವದ್ಯಮಿಮಂ ಲೋಕಂ ಗಂತಾ ಮಜ್ಜನತಾಮಸಿ ॥ ೨೪ ॥

ಮತಿರ್ಮಯಿ ನಿಬದ್ಧೇಯಂ ನ ವಿಪದ್ಯೇತ ಕರ್ಹಿಚಿತ್ ।
ಪ್ರಜಾಸರ್ಗನಿರೋಧೇಽಪಿ ಸ್ಮೃತಿಶ್ಚ ಮದನುಗ್ರಹಾತ್ ॥ ೨೫ ॥

ಏತಾವದುಕ್ತ್ವೋಪರರಾಮ ತನ್ಮಹದ್
ಭೂತಂ ನಭೋಲಿಂಗಮಲಿಂಗಮೀಶ್ವರಮ್ ।
ಅಹಂ ಚ ತಸ್ಮೈ ಮಹತಾಂ ಮಹೀಯಸೇ
ಶೀರ್ಷ್ಣಾವನಾಮಂ ವಿದಧೇಽನುಕಂಪಿತಃ ॥ ೨೬ ॥

ನಾಮಾನ್ಯನಂತಸ್ಯ ಹತತ್ರಪಃ ಪಠನ್
ಗುಹ್ಯಾನಿ ಭದ್ರಾಣಿ ಕೃತಾನಿ ಚ ಸ್ಮರನ್ ।
ಗಾಂ ಪರ್ಯಟಂಸ್ತುಷ್ಟಮನಾ ಗತಸ್ಪೃಹಃ
ಕಾಲಂ ಪ್ರತೀಕ್ಷನ್ವಿಮದೋ ವಿಮತ್ಸರಃ ॥ ೨೭ ॥

ಏವಂ ಕೃಷ್ಣಮತೇರ್ಬ್ರಹ್ಮನ್ನಸಕ್ತಸ್ಯಾಮಲಾತ್ಮನಃ ।
ಕಾಲಃ ಪ್ರಾದುರಭೂತ್ಕಾಲೇ ತಡಿತ್ಸೌದಾಮನೀ ಯಥಾ ॥ ೨೮ ॥

ಪ್ರಯುಜ್ಯಮಾನೇ ಮಯಿ ತಾಂ ಶುದ್ಧಾಂ ಭಾಗವತೀಂ ತನುಮ್ ।
ಆರಬ್ಧಕರ್ಮನಿರ್ವಾಣೋ ನ್ಯಪತತ್ಪಾಂಚಭೌತಿಕಃ ॥ ೨೯ ॥

ಕಲ್ಪಾಂತ ಇದಮಾದಾಯ ಶಯಾನೇಽಂಭಸ್ಯುದನ್ವತಃ ।
ಶಿಶಯಿಷೋರನುಪ್ರಾಣಂ ವಿವಿಶೇಽಂತರಹಂ ವಿಭೋಃ ॥ ೩೦ ॥

ಆತನ ದರ್ಶನಕ್ಕಾಗಿ ಪುನಃ-ಪುನಃ ಪ್ರಯತ್ನಿಸುತ್ತಿದ್ದ ನನ್ನನ್ನು ಕುರಿತು ಮಾತಿಗೆ ನಿಲುಕದ ಮಹಾಪ್ರಭುವು ನನ್ನ ಶೋಕವನ್ನು ಶಮನಗೊಳಿಸಲು ಗಂಭೀರವೂ, ಮೃದುವೂ ಆದ ಮಾತಿನಿಂದ ಹೀಗೆಂದನು –॥ ೨೦ ॥ "ಅಪ್ಪಾ! ಇದೇ ಜನ್ಮದಲ್ಲಿ ನೀನು ಮತ್ತೊಮ್ಮೆ ನನ್ನ ದರ್ಶನ ಮಾಡಲಾರೆ. ಏಕೆಂದರೆ, ಮನಸ್ಸಿನ ವಾಸನೆಗಳು ಶಾಂತವಾಗದೇ ಇರುವ ಅಪಕ್ವವಾದ ಮನಸ್ಸುಳ್ಳ, ಯೋಗಿಗಳಿಗೆ ನನ್ನ ದರ್ಶನವು ಅತ್ಯಂತ ದುರ್ಲಭವು. ॥ ೨೧ ॥ ಪುಣ್ಯಾತ್ಮನಾದ ಬಾಲಕನೇ! ನಿನ್ನ ಹೃದಯದಲ್ಲಿ ನನ್ನನ್ನು ಪಡೆಯುವ ಹಂಬಲವನ್ನು ಜಾಗ್ರತವಾಗಿಸಲೆಂದೇ ನಾನು ಒಂದು ಬಾರಿ ನಿನಗೆ ನನ್ನ ರೂಪವನ್ನು ತೋರಿದ್ದೆ. ನನ್ನನ್ನು ಪಡೆಯಬೇಕೆಂಬ ಉತ್ಕಟವಾದ ಆಕಾಂಕ್ಷೆಯಿಂದ ಸಾಧಕನ ಹೃದಯದಲ್ಲಿ ಹುದುಗಿದ್ದ ಎಲ್ಲ ವಾಸನೆಗಳು ಸ್ವಲ್ಪ-ಸ್ವಲ್ಪವಾಗಿ ತೊಲಗಿಹೋಗುತ್ತವೆ. ಅನಂತರ ನನ್ನ ಪ್ರಾಪ್ತಿಯಲ್ಲಿ ವಿಳಂಬವಾಗುವುದಿಲ್ಲ. ॥ ೨೨ ॥ ನೀನು ಸ್ವಲ್ಪಕಾಲ ಮಾಡಿದ ಸಾಧು-ಸಂತರ ಸೇವೆಯಿಂದ ನಿನ್ನ ಚಿತ್ತವು ನನ್ನಲ್ಲಿ ಸ್ಥಿರಗೊಂಡಿದೆ. ಈಗ ನೀನು ಈ ಪ್ರಾಕೃತ ಶರೀರವನ್ನು ತ್ಯಜಿಸಿ ನನ್ನ ಕೃಪೆಯಿಂದ ಬೇಗನೇ ನನ್ನ ಪಾರ್ಷದನಾಗಿ ಬಿಡುವೆ. ॥ ೨೪ ॥ ನನ್ನನ್ನು ಪಡೆಯಬೇಕೆಂಬ ನಿನ್ನಲ್ಲಿ ನೆಲೆಸಿದ ಈ ದೃಢನಿಶ್ಚಯವು ಎಂದಿಗೂ ಕದಲಲಾರದು. ಸಮಸ್ತ ಸೃಷ್ಟಿಯು ಪ್ರಳಯವಾಗಿ ಹೋದರೂ ನನ್ನ ಕೃಪೆಯಿಂದ ನಿನ್ನಲ್ಲಿರುವ ನನ್ನ ಸ್ಮೃತಿಯು ಹಾಗೆಯೇ ಇರುವುದು." ॥ ೨೫ ॥ ಇಷ್ಟು ಹೇಳಿ ಆಕಾಶದಂತೆ ಅವ್ಯಕ್ತ ಸರ್ವಶಕ್ತಿಯುಳ್ಳ ಮಹಾನ್ ಪರಮಾತ್ಮನು ಮೌನವಾದನು. ನಾನೂ ಕೂಡ ಆ ಪರಮಕೃಪೆಯನ್ನು ಮನಗಂಡು ಮಹತೋಮಹಿಮನಾದ ಆ ಭಗವಂತನಿಗೆ ತಲೆಬಾಗಿ ನಮಸ್ಕರಿಸಿದೆನು. ॥ ೨೬ ॥ ಅವಾಗಿನಿಂದ ನಾನು ನಾಚಿಕೆ-ಸಂಕೋಚ ಬಿಟ್ಟು ಶ್ರೀಭಗವಂತನ ರಹಸ್ಯಮಯವೂ, ಮಂಗಳಮಯವೂ ಆದ ನಾಮಂಗಳನ್ನು, ಲೀಲೆಗಳನ್ನು ಕೀರ್ತಿಸುತ್ತಾ, ಸ್ಮರಿಸುತ್ತಾ ಭೂಮಿಯಲ್ಲಿ ಸಂಚರಿಸುತ್ತಾ, ಮದ-ಮಾತ್ಸರ್ಯ, ಆಸೆಗಳನ್ನು ತೊರೆದು ಸಂತುಷ್ಟ ಮನಸ್ಸಿನಿಂದ ಕೂಡಿ ಕಾಲವನ್ನು ಎದುರುನೋಡುತ್ತಾ ಇರತೊಡಗಿದೆನು. ॥ ೨೭ ॥

ಬ್ರಹ್ಮರ್ಷಿಗಳೇ! ಹೀಗೆ ಶ್ರೀಕೃಷ್ಣಭಾವದಿಂದ ತುಂಬಿದ ಮತಿಯುಳ್ಳವನಾಗಿ, ನಿರ್ಲಿಪ್ತನಾಗಿ, ಪರಿಶುದ್ಧವಾದ ಹೃದಯದಿಂದ ಕಾಲತಳ್ಳುತ್ತಿರುವಾಗಲೇ ವರ್ಷಾಕಾಲದಲ್ಲಿ ದಿಢೀರನೆ ಸುಳಿಯುವ ಮಿಂಚಿನಂತೆ ನಾನು ನಿರೀಕ್ಷಿಸುತ್ತಿದ್ದ ಕಾಲವು ಬಂದೇ ಬಿಟ್ಟಿತು. ॥ ೨೮ ॥ ಪರಿಶುದ್ಧವಾದ ಶ್ರೀಭಗವಂತನ ಪಾರ್ಷದ ಶರೀರವನ್ನು ಹೊಂದುವ ಸಮಯ ಬಂದೊಡನೆಯೇ ಪ್ರಾರಬ್ಧ ಕರ್ಮವು ಕಳೆದುಹೋದುದರಿಂದ ಪಾಂಚಭೌತಿಕ ಶರೀರವು ಕಳಚಿ ಬಿದ್ದುಹೋಯಿತು. ॥ ೨೯ ॥ ಆ ಕಲ್ಪದ ಕೊನೆಯಲ್ಲಿ ಭಗವಂತನಾದ ಶ್ರೀಮನ್ನಾರಾಯಣನು ಪ್ರಳಯಕಾಲದ ಸಮುದ್ರಜಲದಲ್ಲಿ ನಿದ್ರೆ ಮಾಡಲು ಸಂಕಲ್ಪಿಸಿದನು. ಆಗ ಬ್ರಹ್ಮದೇವರು ತನ್ನ ಸೃಷ್ಟಿಯನ್ನು ಉಪಸಂಹಾರಗೈದು ಪರಮಾತ್ಮನಲ್ಲಿ ಸೇರಿಕೊಳ್ಳುವಾಗ ನಾನೂ ಅವರ ಉಸಿರಿನೊಡನೆ ಉಸಿರಾಗಿ ಭಗವಂತನ ಹೃದಯವನ್ನು ಪ್ರವೇಶಿಸಿಬಿಟ್ಟೆನು. ॥ ೩೦ ॥ ಒಂದುಸಾವಿರ ಚತುರ್ಯುಗಗಳು ಕಳೆದ ಬಳಿಕ ಬ್ರಹ್ಮನು ಎಚ್ಚರಗೊಂಡು ಪುನಃ ಸೃಷ್ಟಿಯನ್ನು

ಸಹಸ್ರಯುಗಪರ್ಯಂತೇ ಉತ್ಥಾಯೇದಂ ಸಿಸೃಕ್ಷತಃ ।
ಮರೀಚಿಮಿಶ್ರಾ ಋಷಯಃ ಪ್ರಾಣೇಭ್ಯೋಽಹಂ ಚ ಜಜ್ಞಿರೇ
॥ ೩೦ ॥

ಅಂತರ್ಬಹಿಶ್ಚ ಲೋಕಾಂಸ್ತ್ರೀನ್ಪರ್ಯೇಮ್ಯಸ್ಕಂದಿತವ್ರತಃ ।
ಅನುಗ್ರಹಾನ್ಮಹಾವಿಷ್ಣೋರವಿಘಾತಗತಿಃ ಕ್ವಚಿತ್
॥ ೩೧ ॥

ದೇವದತ್ತಾಮಿಮಾಂ ವೀಣಾಂ ಸ್ವರಬ್ರಹ್ಮವಿಭೂಷಿತಾಮ್ ।
ಮೂರ್ಛಯಿತ್ವಾ ಹರಿಕಥಾಂ ಗಾಯಮಾನಶ್ಚರಾಮ್ಯಹಮ್
॥ ೩೨ ॥

ಪ್ರಗಾಯತಃ ಸ್ವವೀರ್ಯಾಣಿ ತೀರ್ಥಪಾದಃ ಪ್ರಿಯಶ್ರವಾಃ ।
ಆಹೂತ ಇವ ಮೇ ಶೀಘ್ರಂ ದರ್ಶನಂ ಯಾತಿ ಚೇತಸಿ
॥ ೩೪ ॥

ಏತದ್ಧ್ಯಾತುರಚಿತ್ತಾನಾಂ ಮಾತ್ರಾಸ್ಪರ್ಶೇಚ್ಛಯಾ ಮುಹುಃ ।
ಭವಸಿಂಧುಪ್ಲವೋ ದೃಷ್ಟೋ ಹರಿಚರ್ಯಾನುವರ್ಣನಮ್
॥ ೩೫

ಯಮಾದಿಭಿರ್ಯೋಗಪಥೈಃ ಕಾಮಲೋಭಹತೋ ಮುಹುಃ ।
ಮುಕುಂದಸೇವಯಾ ಯದ್ವತ್ತಥಾಽಽತ್ಮಾದ್ಧಾ ನ ಶಾಮ್ಯತಿ
॥ ೩೬ ॥

ಸರ್ವಂ ತದಿದಮಾಖ್ಯಾತಂ ಯತ್ಪೃಷ್ಟೋಽಹಂ ತ್ವಯಾನಘ ।
ಜನ್ಮಕರ್ಮರಹಸ್ಯಂ ಮೇ ಭವತಶ್ಚಾತ್ಮತೋಷಣಮ್
॥ ೩೭ ॥

*ಸೂತ ಉವಾಚ*

ಏವಂ ಸಂಭಾಷ್ಯ ಭಗವಾನ್ನಾರದೋ ವಾಸವೀಸುತಮ್ ।
ಆಮಂತ್ರ್ಯ ವೀಣಾಂ ರಣಯನ್ ಯಯೌ ಯಾದೃಚ್ಛಿಕೋ ಮುನಿಃ
॥ ೩೮ ॥

ಅಹೋ ದೇವರ್ಷಿರ್ಧನ್ಯೋಽಯಂ ಯತ್ಕೀರ್ತಿಂ ಶಾರ್ಙ್ಗಧನ್ವನಃ ।
ಗಾಯನ್ಮಾದ್ಯನ್ನಿದಂ ತಂತ್ರ್ಯಾ ರಮಯತ್ಯಾತುರಂ ಜಗತ್
॥ ೩೯ ॥

ಮಾಡಲು ಇಚ್ಛಿಸಿದಾಗ ಅವನ ಪ್ರಾಣಗಳ ಮೂಲಕ ಮರೀಚ್ಯಾದಿ ಋಷಿಗಳೊಂದಿಗೆ ನಾನೂ ಪ್ರಕಟಗೊಂಡೆನು. ॥ ೩೦ ॥ ಅಂದಿನಿಂದ ನಾನು ಭಗವಂತನ ಕೃಪೆಯಿಂದ ಮೂರು ಲೋಕಗಳಲ್ಲಿಯೂ ಒಳಗೂ, ಹೊರಗೂ ಯಾವ ಅಡೆ-ತಡೆಯಿಲ್ಲದೆ ಸಂಚರಿಸುತ್ತಿರುವೆನು, ಭಗವದ್ಭಜನರೂಪೀ ಜೀವನದ ನನ್ನ ವ್ರತವು ಅಖಂಡವಾಗಿ ನಡೆಯುತ್ತಾ ಇದೆ. ॥ ೩೧ ॥ ಭಗವಂತನು ಅನುಗ್ರಹಿಸಿರುವ ನಾದಬ್ರಹ್ಮನಿಂದ ಅಲಂಕೃತವಾದ ಈ 'ಮಹತೀ' ಎಂಬ ವೀಣೆಯನ್ನು ನುಡಿಸುತ್ತಾ ಶ್ರೀಹರಿಯ ದಿವ್ಯ ಲೀಲಾಕಥೆಗಳನ್ನು ಹಾಡುತ್ತಾ ಸಂಚರಿಸುತ್ತಿದ್ದೇನೆ. ॥ ೩೨ ॥ ಸ್ತೋತ್ರಪ್ರಿಯನೂ, ತೀರ್ಥಗಳಿಗೆ ಆಶ್ರಯವಾದ ಪವಿತ್ರಪಾದನೂ ಆಗಿರುವ ಶ್ರೀಭಗವಂತನ ಅದ್ಭುತವಾದ ಲೀಲಾವಿಲಾಸಗಳನ್ನು ನಾನು ಗಾನ ಮಾಡತೊಡಗಿದಾಗ ಆ ಪ್ರಭುವು ಕೂಗಿ ಕರೆಯಲ್ಪಟ್ಟವನಂತೆ – ಒಡನೆಯೇ ನನ್ನ ಹೃದಯಕ್ಕೆ ಬಂದು ದಿವ್ಯ ದರ್ಶನವನ್ನು ದಯಪಾಲಿಸುತ್ತಾನೆ. ॥ ೩೪ ॥ ನಿರಂತರ ವಿಷಯ ಭೋಗಗಳ ಕಾಮನೆಯಿಂದ ಚಿತ್ತವು ಆತುರವಾದ ಜನರಿಗಾಗಿ ಭಗವಂತನ ಲೀಲೆಗಳ ಕೀರ್ತನೆಯು ಸಂಸಾರ ಸಾಗರದಿಂದ ಪಾರಾಗಿ ಹೋಗಲು ಹಡಗಿನಂತಿದೆ. ಇದು ನನ್ನ ಅನುಭವವಾಗಿದೆ. ॥ ೩೫ ॥ ಕಾಮ-ಲೋಭಾದಿ ಏಟುಗಳಿಂದ ಪದೇ-ಪದೇ ಗಾಯಗೊಂಡ ಹೃದಯವು ಶ್ರೀಕೃಷ್ಣನ ಸೇವೆಯಿಂದ ಪ್ರತ್ಯಕ್ಷ ಶಾಂತಿಯನ್ನು ಅನುಭವಿಸುವುದು. ಯಮ-ನಿಯಮಾದಿ ಯೋಗಮಾರ್ಗದಿಂದಲೂ ಅಂತಹ ಶಾಂತಿಯು ದೊರೆಯಲಾರದು. ॥ ೩೬ ॥ ಪುಣ್ಯಾತ್ಮರೇ ನಿಮ್ಮ ಪ್ರಶ್ನೆಗಳಿಗೆ ಉತ್ತರವಾಗಿ ನನ್ನ ಜನ್ಮ-ಕರ್ಮ ಮತ್ತು ಸಾಧನೆಯ ರಹಸ್ಯಗಳನ್ನು ನಿರೂಪಿಸಿದ್ದೇನೆ. ನಿಮ್ಮ ಆತ್ಮತುಷ್ಟಿಗೆ ಉಪಾಯವನ್ನೂ ತಿಳಿಸಿರುವೆನು. ॥ ೩೭ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳೇ! ಹೀಗೆ ಪರಮಪೂಜ್ಯರಾದ ದೇವಋಷಿ ನಾರದರು ವ್ಯಾಸರೊಡನೆ ಸಂಭಾಷಣೆ ನಡೆಸಿ, ಅವರ ಅನುಮತಿಯನ್ನು ಪಡೆದುಕೊಂಡು, ವೀಣೆಯನ್ನು ನುಡಿಸುತ್ತಾ ಇಷ್ಟ ಬಂದಲ್ಲಿಗೆ ಸಂಚರಿಸಲು ಹೊರಟುಹೋದರು. ॥ ೩೮ ॥ ಆಹಾ ! ದೇವರ್ಷಿ ನಾರದರು ಎಷ್ಟು ಧನ್ಯರು !! ಯಾವಾಗಲೂ ತಮ್ಮ ದಿವ್ಯ ವೀಣೆಯ ಮೂಲಕ ಶಾರ್ಙ್ಗಪಾಣಿಯಾದ ಭಗವಂತನ ಕೀರ್ತನೆಯನ್ನು ಹಾಡುತ್ತಾ ತಾವು ಆನಂದಮಗ್ನರಾಗುವುದಲ್ಲದೆ – ತಾಪತ್ರಯಗಳಿಂದ ಬೆಂದು ಬಳಲಿದ ಜಗತ್ತನ್ನು ಆನಂದಪರವಶವನ್ನಾಗಿ ಮಾಡುತ್ತಿದ್ದಾರಲ್ಲವೇ ? ॥ ೩೯॥

*ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ವ್ಯಾಸನಾರದಸಂವಾದೇ ಷಷ್ಠೋಽಧ್ಯಾಯಃ॥ ೬ ॥

# ಏಳನೆಯ ಅಧ್ಯಾಯ

## ಶ್ರೀಮದ್ಭಾಗವತದ ರಚನೆ, ದ್ರೌಪದೀಪುತ್ರರನ್ನು ಕೊಲೆಮಾಡಿದ ಅಶ್ವತ್ಥಾಮನಿಗೆ ಶಿಕ್ಷೆ

*ಶೌನಕ ಉವಾಚ*

ನಿರ್ಗತೇನಾರದೇ ಸೂತ ಭಗವಾನ್ಬಾದರಾಯಣಃ ।
ಶ್ರುತವಾಂಸ್ತದಭಿಪ್ರೇತಂ ತತಃ ಕಿಮಕರೋದ್ವಿಭುಃ ॥ ೧ ॥

ಶೌನಕರು ಕೇಳಿದರು – ಸೂತಪುರಾಣಿಕರೇ! ಸರ್ವಜ್ಞರೂ, ಸರ್ವಶಕ್ತಿಸಂಪನ್ನರೂ ಆದ ಭಗವಾನ್ ವೇದವ್ಯಾಸರು ನಾರದರ ಅಭಿಪ್ರಾಯವನ್ನು ಅರಿತುಕೊಂಡು ಅವರು ಹೊರಟು ಹೋದ ಬಳಿಕ ಏನುಮಾಡಿದರು? ॥ ೧ ॥

*ಸೂತ ಉವಾಚ*

ಬ್ರಹ್ಮನದ್ಯಾಂ ಸರಸ್ವತ್ಯಾಮಾಶ್ರಮಃ ಪಶ್ಚಿಮೇ ತಟೇ ।
ಶಮ್ಯಾಪ್ರಾಸ ಇತಿ ಪ್ರೋಕ್ತ ಋಷೀಣಾಂ ಸತ್ರವರ್ಧನಃ ॥ ೨ ॥

ತಸ್ಮಿನ್ ಸ್ವ ಆಶ್ರಮೇ ವ್ಯಾಸೋ ಬದರೀಷಂಡಮಂಡಿತೇ ।
ಆಸೀನೋಽಪ ಉಪಸ್ಪೃಶ್ಯ ಪ್ರಣಿದಧ್ಯೌ ಮನಃ ಸ್ವಯಮ್ ॥ ೩ ॥

ಭಕ್ತಿಯೋಗೇನ ಮನಸಿ ಸಮ್ಯಕ್ ಪ್ರಣಿಹಿತೇಽಮಲೇ ।
ಅಪಶ್ಯತ್ಪುರುಷಂ ಪೂರ್ವಂ ಮಾಯಾಂ ಚ ತದಪಾಶ್ರಯಾಮ್ ॥ ೪ ॥

ಯಯಾ ಸಮ್ಮೋಹಿತೋ ಜೀವ ಆತ್ಮಾನಂ ತ್ರಿಗುಣಾತ್ಮಕಮ್ ।
ಪರೋಽಪಿ ಮನುತೇಽನರ್ಥಂ ತತ್ಕೃತಂ ಚಾಭಿಪದ್ಯತೇ ॥ ೫ ॥

ಅನರ್ಥೋಪಶಮಂ ಸಾಕ್ಷಾದ್ಭಕ್ತಿಯೋಗಮಧೋಕ್ಷಜೇ ।
ಲೋಕಸ್ಯಾಜಾನತೋ ವಿದ್ವಾಂಶ್ಚಕ್ರೇ ಸಾತ್ವತಸಂಹಿತಾಮ್ ॥ ೬ ॥

ಯಸ್ಯಾಂ ವೈ ಶ್ರೂಯಮಾಣಾಯಾಂ ಕೃಷ್ಣೇ ಪರಮಪೂರುಷೇ ।
ಭಕ್ತಿರುತ್ಪದ್ಯತೇ ಪುಂಸಃ ಶೋಕಮೋಹಭಯಾಪಹಾ ॥ ೭ ॥

ಸ ಸಂಹಿತಾಂ ಭಾಗವತೀಂ ಕೃತ್ವಾನುಕ್ರಮ್ಯ ಚಾತ್ಮಜಮ್ ।
ಶುಕಮಧ್ಯಾಪಯಾಮಾಸ ನಿವೃತ್ತಿ ನಿರತಂ ಮುನಿಃ ॥ ೮ ॥

ಸೂತಪುರಾಣಿಕರು ಹೇಳುತ್ತಾರೆ – ಶೌನಕಾದಿಗಳೇ! ಬ್ರಹ್ಮನದಿಯೆನಿಸಿದ ಸರಸ್ವತಿಯ ಪಶ್ಚಿಮತೀರದಲ್ಲಿ ಋಷಿಗಳಿಗೆ ಯಜ್ಞ-ಯಾಗಾದಿಗಳನ್ನು ನಡೆಸಲು ಅನುಕೂಲಕರವಾದ ಶಮ್ಯಾಪ್ರಾಸವೆಂಬ ಆಶ್ರಮವೊಂದುಂಟು. ॥ ೨ ॥ ಅಲ್ಲಿಯೇ ವೇದವ್ಯಾಸರ ಆಶ್ರಮವೂ ಇದೆ. ಸುತ್ತಲೂ ಬದರೀವೃಕ್ಷಗಳ ಸುಂದರ ವನವಿದೆ. ಆ ಆಶ್ರಮದಲ್ಲಿ ಕುಳಿತುಕೊಂಡು ಅವರು ಆಚಮನಮಾಡಿ ಸ್ತಿಮಿತವಾದ ಮನಸ್ಸಿನಿಂದ ಧ್ಯಾನಾರೂಢರಾದರು. ॥ ೩ ॥ ತಮ್ಮ ಏಕಾಗ್ರವೂ, ಅತಿನಿರ್ಮಲವೂ ಆದ ಮನಸ್ಸಿನಲ್ಲಿ ಅವರು ಭಕ್ತಿಯೋಗದಿಂದ ಆದಿಪುರುಷನಾದ ಭಗವಂತನನ್ನು ಮತ್ತು ಅವನನ್ನಾಶ್ರಯಿಸಿ ಅವನಿಗೆ ಅಧೀನವಾಗಿರುವ ಮಾಯೆಯನ್ನು ಸಂದರ್ಶಿಸಿದರು. ॥ ೪ ॥ ಜೀವನು ಸ್ವತಃ ತ್ರಿಗುಣಾತೀತನಾಗಿದ್ದರೂ ಈ ಮಾಯೆಯಿಂದ ಮೋಹಿತನಾಗಿ ತನ್ನನ್ನು ತ್ರಿಗುಣಾತ್ಮಕನೆಂದು ಭಾವಿಸಿಕೊಳ್ಳುವನು. ಈ ಭಾವನೆಯಿಂದಲೇ ಉಂಟಾಗುವ ಅನರ್ಥಗಳನ್ನು ಭೋಗಿಸ ಬೇಕಾಗುತ್ತದೆ. ॥ ೫ ॥ ಈ ಅನರ್ಥಗಳ ಉಪಶಮನಕ್ಕೆ ಸಾಕ್ಷಾತ್ತಾದ ಸಾಧನವೆಂದರೆ ಶ್ರೀಹರಿಯ ಭಕ್ತಿಯೋಗವೊಂದೇ. ಇದನ್ನರಿಯದೆ ತೊಳಲಾಡುತ್ತಿರುವ ಪ್ರಪಂಚದ ಜನರಿಗಾಗಿ ಜ್ಞಾನಶ್ರೇಷ್ಠರಾದ ವ್ಯಾಸರು ಈ 'ಸಾತ್ವತ ಸಂಹಿತೆ'ಯೆನಿಸಿದ ಶ್ರೀಮದ್ಭಾಗವತವನ್ನು ರಚಿಸಿದರು. ॥ ೬ ॥ ಇದರ ಶ್ರವಣಮಾತ್ರದಿಂದಲೇ ಪರಮಪುರುಷನಾದ ಶ್ರೀಕೃಷ್ಣನಲ್ಲಿ ಪರಮಭಕ್ತಿಯುಂಟಾಗುವುದು. ಅದರಿಂದ ಜೀವಿಗಳ ಶೋಕ, ಮೋಹ, ಭಯ ಇವುಗಳು ತೊಲಗಿ ಹೋಗುವವು. ॥ ೭ ॥ ಪರಮಹಂಸ ಸಂಹಿತೆಯಾದ ಈ ಭಾಗವತವನ್ನು ರಚಿಸಿ, ಪರಿ ಶೋಧಿಸಿದ ಬಳಿಕ ಅದನ್ನು ಅವರು ನಿವೃತ್ತಿಧರ್ಮಪರಾಯಣರಾಗಿದ್ದ ತಮ್ಮ ಪುತ್ರರಾದ ಶುಕ ಮಹಾಮುನಿಗಳಿಗೆ ಉಪದೇಶಿಸಿದರು. ॥ ೮ ॥

*ಶೌನಕ ಉವಾಚ*

ಸ ವೈ ನಿವೃತ್ತಿನಿರತಃ ಸರ್ವತ್ರೋಪೇಕ್ಷಕೋ ಮುನಿಃ ।
ಕಸ್ಯ ವಾ ಬೃಹತೀಮೇತಾಮಾತ್ಮಾರಾಮಃ ಸಮಭ್ಯಸತ್ ॥ ೯ ॥

ಶೌನಕರು ಕೇಳಿದರು – ಸೂತಪುರಾಣಿಕರೇ! ಶುಕಮಹಾಮುನಿಗಳಾದರೋ ನಿವೃತ್ತಿಧರ್ಮದಲ್ಲಿ ಪರಾಯಣರಾದವರು, ಪರಮಾತ್ಮನನ್ನು ಬಿಟ್ಟು ಉಳಿದೆಲ್ಲದರಲ್ಲೂ ಉದಾಸೀನರಾಗಿರುವವರು. ಸದಾ ಆತ್ಮನಲ್ಲೇ ರಮಿಸುವವರು. ಇಂತಹವರೂ ಕೂಡ ಇಷ್ಟೊಂದು ವಿಶಾಲವಾದ ಗ್ರಂಥವನ್ನು ಅಭ್ಯಾಸಮಾಡಲು ಕಾರಣ ವೇನು? ॥ ೯ ॥

*ಸೂತ ಉವಾಚ*

ಆತ್ಮಾರಾಮಾಶ್ಚ ಮುನಯೋ ನಿರ್ಗ್ರಂಥಾ ಅಪ್ಯುರುಕ್ರಮೇ ।
ಕುರ್ವಂತ್ಯಹೈತುಕೀಂ ಭಕ್ತಿಮಿತ್ಥಂಭೂತಗುಣೋ ಹರಿಃ ॥ ೧೦ ॥

ಸೂತಪುರಾಣಿಕರು ಹೇಳಿದರು – ಶೌನಕಾದಿಗಳೇ! ಇಂತಹ ಬ್ರಹ್ಮಸ್ವರೂಪರಾದ ಅವಧೂತ ಪರಮಹಂಸರೇ ವಾಸ್ತವವಾಗಿ ಪೂರ್ಣಜ್ಞಾನಿಗಳಾಗಿದ್ದಾರೆ. ಅವರಿಗೆ ಲಂಗೋಟಿಯ ಅಪೇಕ್ಷೆಯೂ ಇರುವುದಿಲ್ಲ. ಅವರಲ್ಲಿ ಅಹಂಕಾರದ ಲವಲೇಶವೂ ಇರುವುದಿಲ್ಲ. ಅವರು ಸದಾಕಾಲ ಆತ್ಮನಲ್ಲೇ ರಮಿಸುತ್ತಾ ಇರುತ್ತಾರೆ. ಭಗವಂತನಲ್ಲಿ

ಹರೇರ್ಗುಣಾಕ್ಷಿಪ್ತಮತಿರ್ಭಗವಾನ್ ಬಾದರಾಯಣಿಃ ।
ಅಧ್ಯಗಾನ್ಮಹದಾಖ್ಯಾನಂ ನಿತ್ಯಂ ವಿಷ್ಣುಜನಪ್ರಿಯಃ ॥ ೧೧ ॥

ಪರೀಕ್ಷಿತೋಽಥ ರಾಜರ್ಷೇರ್ಜನ್ಮಕರ್ಮವಿಲಾಪನಮ್ ।
ಸಂಸ್ಥಾಂ ಚ ಪಾಂಡುಪುತ್ರಾಣಾಂ ವಕ್ಷ್ಯೇ ಕೃಷ್ಣಕಥೋದಯಮ್ ॥ ೧೨ ॥

ಯದಾ ಮೃಧೇ ಕೌರವಸೃಂಜಯಾನಾಂ
ವೀರೇಷ್ವಥೋ ವೀರಗತಿಂ ಗತೇಷು ।
ವೃಕೋದರಾವಿದ್ಧಗದಾಭಿಮರ್ಶ-
ಭಗ್ನೋರುದಂಡೇ ಧೃತರಾಷ್ಟ್ರಪುತ್ರೇ ॥ ೧೩ ॥

ಭರ್ತುಃ ಪ್ರಿಯಂ ದ್ರೌಣಿರಿತಿ ಸ್ಮ ಪಶ್ಯನ್
ಕೃಷ್ಣಾಸುತಾನಾಂ ಸ್ವಪತಾಂ ಶಿರಾಂಸಿ ।
ಉಪಾಹರದ್ವಿಪ್ರಿಯಮೇವ ತಸ್ಯ ತದ್
ಜುಗುಪ್ಸಿತಂ ಕರ್ಮ ವಿಗರ್ಹಯಂತಿ ॥ ೧೪ ॥

ಮಾತಾ ಶಿಶೂನಾಂ ನಿಧನಂ ಸುತಾನಾಂ
ನಿಶಮ್ಯ ಘೋರಂ ಪರಿತಪ್ಯಮಾನಾ ।
ತದಾರುದದ್ವಾಷ್ಪಕಲಾಕುಲಾಕ್ಷೀ
ತಾಂ ಸಾಂತ್ವಯನ್ನಾಹ ಕಿರೀಟಮಾಲೀ ॥ ೧೫ ॥

ತದಾ ಶುಚಸ್ತೇ ಪ್ರಮೃಜಾಮಿ ಭದ್ರೇ
ಯದ್ಬ್ರಹ್ಮಬಂಧೋಃ ಶಿರ ಆತತಾಯಿನಃ ।
ಗಾಂಡೀವಮುಕ್ತೈರ್ವಿಶಿಖೈರುಪಾಹರೇ
ತ್ವಾಽಽಕ್ರಮ್ಯ ಯತ್ ಸ್ನಾಸ್ಯಸಿ ದಗ್ಧಪುತ್ರಾ ॥ ೧೬ ॥

ಇತಿ ಪ್ರಿಯಾಂ ವಲ್ಗುವಿಚಿತ್ರಜಲ್ಪೈಃ
ಸ ಸಾಂತ್ವಯಿತ್ವಾಚ್ಯುತಮಿತ್ರಸೂತಃ ।
ಅನ್ವಾದ್ರವದ್ದಂಶಿತ ಉಗ್ರಧನ್ವಾ
ಕಪಿಧ್ವಜೋ ಗುರುಪುತ್ರಂ ರಥೇನ ॥ ೧೭ ॥

ಹೇತುರಹಿತ ಭಕ್ತಿಯನ್ನು ಮಾಡುತ್ತಾ ಪರಮಾನಂದದ ಸಾಗರದಲ್ಲಿ ಮುಳುಗಿ ಇರುತ್ತಾರೆ. ಹೀಗಿದ್ದರೂ ಭಗವಂತನ ಗುಣಗಳು ಎಲ್ಲರನ್ನು ತನ್ನಕಡೆಗೆ ಆಕರ್ಷಿಸಿಕೊಳ್ಳುವಷ್ಟು ಮಧುರವಾಗಿವೆ. ಭಗವಂತನ ಗುಣಗಳ ವರ್ಣನೆ, ಸ್ಮರಣೆ, ಚಿಂತನೆ ಮಾಡುತ್ತಾ ಭಕ್ತರು ಆನಂದಿತರಾಗಿರುತ್ತಾರೆ. ॥ ೧೦ ॥ ಭಗವತ್ಸ್ವರೂಪ ವ್ಯಾಸ ನಂದನ ಶ್ರೀಶುಕಮಹಾಮುನಿಗಳ ಬುದ್ಧಿಯು ಭಗವಂತನ ಗುಣಗಳಿಂದ ಆಕರ್ಷಿತವಾಗಿತ್ತು. ಅದಕ್ಕಾಗಿ ಅವರು ಭಕ್ತಿ ಭಾವದಿಂದ ಕೂಡಿಕೊಂಡು ತನ್ನ ಪೂಜ್ಯ ತಂದೆಯಿಂದ ಈ ವಿಶಾಲವಾದ ಗ್ರಂಥವನ್ನು ಅಧ್ಯಯನ ಮಾಡಿದರು. ಇಂತಹ ಶುಕಮುನಿಗಳಿಗೆ ಭಗವಂತನ ಭಕ್ತರು ಅತ್ಯಂತ ಪ್ರಿಯರಾಗಿರುತ್ತಾರೆ. ಅದಕ್ಕೆಂದೇ ಪರೀಕ್ಷಿತನಿಗೆ ಈ ಭಾಗವತವನ್ನು ಉಪದೇಶಮಾಡಲು ತಾವಾಗಿಯೇ ಬಂದರು. ॥ ೧೧ ॥

ಶೌನಕರೇ! ಈಗ ನಾನು ರಾಜರ್ಷಿ ಪರೀಕ್ಷಿತನ ಜನ್ಮ-ಕರ್ಮ ಮತ್ತು ಮೋಕ್ಷಗಳ ವೃತ್ತಾಂತವನ್ನೂ, ಪಾಂಡವರ ಸ್ವರ್ಗಾರೋಹಣದ ಕಥೆಯನ್ನೂ, ಹಾಗೆಯೇ ಶ್ರೀಕೃಷ್ಣನ ಅವತಾರಕಥೆಗಳ ಉದಯವನ್ನು ಹೇಳುತ್ತೇನೆ; ಕೇಳಿರಿ. ॥ ೧೨ ॥ ಮಹಾಭಾರತ ಯುದ್ಧದಲ್ಲಿ ಕೌರವ-ಪಾಂಡವ ಎರಡೂ ಪಕ್ಷದ ವೀರರು ಸ್ವರ್ಗಸ್ಥರಾಗಿದ್ದರು. ಭೀಮಸೇನನ ಗದೆಯಿಂದ ದುರ್ಯೋಧನನ ತೊಡೆಮುರಿದುಹೋಗಿ ರಣರಂಗದಲ್ಲಿ ಬಿದ್ದಿರುವಾಗ, ಅಶ್ವತ್ಥಾಮನು ನಿದ್ದೆಮಾಡುತ್ತಿದ್ದ ದ್ರೌಪದಿಯ ಪುತ್ರರ ತಲೆಗಳನ್ನು ಕತ್ತರಿಸಿ, ಅವುಗಳನ್ನು ದುರ್ಯೋಧನನಿಗೆ ಕಾಣಿಕೆಯನ್ನಾಗಿ ಸಮರ್ಪಿಸಿದನು. ಪ್ರಭುವಾದ ದುರ್ಯೋಧನನಿಗೆ ಈ ಕಾರ್ಯವು ಪ್ರಿಯವಾದೀತೆಂದು ಅವನು ಎಣಿಸಿದ್ದನು. ಆದರೆ ಅದು ಅವನಿಗೂ ಅಪ್ರಿಯವೇ ಆಯಿತು. ಏಕೆಂದರೆ, ಇಂತಹ ನೀಚ-ಕರ್ಮವನ್ನು ಎಲ್ಲರೂ ನಿಂದಿಸುತ್ತಾರೆ. ॥ ೧೩-೧೪ ॥ ಆ ಮಕ್ಕಳ ತಾಯಿಯಾದ ದ್ರೌಪದಿಯು ತಮ್ಮ ಪುತ್ರರ ಹತ್ಯೆಯನ್ನು ನೋಡಿ ಅತ್ಯಂತ ದುಃಖಿತಳಾದಳು. ಅವಳು ಬಹಳವಾಗಿ ಸಂಕಟಪಡುತ್ತಾ ಕಣ್ಣೀರು ಸುರಿಸುತ್ತಾ ಗೋಳಾಡತೊಡಗಿದಳು. ಆಗ ಅರ್ಜುನನು ಅವಳನ್ನು ಸಂತೈಸುತ್ತಾ – ॥ ೧೫ ॥ ಭದ್ರೆ! ಆ ಕೊಲೆಗಡುಕನಾದ, ಆತತಾಯಿಯಾದ* ನೀಚ ಬ್ರಾಹ್ಮಣನ ತಲೆಯನ್ನು ಗಾಂಡೀವ ಧನುಸ್ಸಿನ ಬಾಣಗಳಿಂದ ಕತ್ತರಿಸಿ ನಿನಗೆ ಬಹುಮಾನವನ್ನಾಗಿ ತಂದುಕೊಡುವೆನು. ಪುತ್ರರ ಉತ್ತರಕ್ರಿಯೆಗಳನ್ನು ಮುಗಿಸಿದ ಬಳಿಕ ಆ ತಲೆಯನ್ನು ಕಾಲಿಂದ ಮೆಟ್ಟಿ ಅನಂತರ ಸ್ನಾನಮಾಡುವೆಯಂತೆ. ಆಗ ನಿನ್ನ ಕಣ್ಣೀರನ್ನು ಒರೆಸುವೆನು' ಎಂದು ಆಕೆಗೆ ಸಮಾಧಾನ ಹೇಳಿದನು. ॥ ೧೬ ॥ ಹೀಗೆ ಬಗೆ-ಬಗೆಯ ಮಧುರವಾದ ಮಾತುಗಳಿಂದ ಆಕೆಯನ್ನು ಸಾಂತ್ವನಮಾಡಿ ಅರ್ಜುನನು ಕವಚವನ್ನು ಧರಿಸಿ ತನ್ನ ಭಯಂಕರವಾದ ಗಾಂಡೀವಧನುಸ್ಸನ್ನು ತೆಗೆದುಕೊಂಡು, ಮಿತ್ರಶ್ರೇಷ್ಠನಾದ ಶ್ರೀಕೃಷ್ಣನನ್ನೇ ಸಾರಥಿಯನ್ನಾಗಿಸಿಕೊಂಡು, ರಥವನ್ನೇರಿ ಗುರುಪುತ್ರನಾದ ಅಶ್ವತ್ಥಾಮನನ್ನು ಬೆನ್ನಟ್ಟಿಹೋದನು. ॥ ೧೭ ॥ ಶಿಶುಹತ್ಯೆಮಾಡಿದ್ದ ಆ ಪಾತಕಿಯು

* ಬೆಂಕಿಹಚ್ಚುವವನು, ವಿಷ ಉಣಿಸುವವನು, ಕೆಟ್ಟ ಉದ್ದೇಶದಿಂದ ಶಸ್ತ್ರಧರಿಸುವವನು, ಹಣವನ್ನು ಕಸಿದುಕೊಳ್ಳುವವನು, ಭೂಮಿಯನ್ನು ಅಪಹರಿಸುವವನು, ಹೆಂಡತಿಯನ್ನು ಅಪಹರಿಸುವವನು, ಈ ಆರು ಮಂದಿಗಳನ್ನು ಆತತಾಯಿಗಳೆಂದು ಹೇಳುತ್ತಾರೆ.

ತಮಾಪತಂತಂ ಸ ವಿಲಕ್ಷ್ಯ ದೂರಾತ್
ಕುಮಾರಹೋದ್ವಿಗ್ನಮನಾ ರಥೇನ ।
ಪರಾದ್ರವತ್ಪ್ರಾಣಪರೀಪ್ಸುರುರ್ವ್ಯಾಂ
ಯಾವದ್ಗಮಂ ರುದ್ರಭಯಾದ್ಯಥಾರ್ಕಃ ॥ ೧೮ ॥

ಯದಾಶರಣಮಾತ್ಮಾನಮೈಕ್ಷತ ಶ್ರಾಂತವಾಜಿನಮ್ ।
ಅಸ್ತ್ರಂ ಬ್ರಹ್ಮಶಿರೋ ಮೇನೇ ಆತ್ಮತ್ರಾಣಂ ದ್ವಿಜಾತ್ಮಜಃ ॥ ೧೯ ॥

ಅಥೋಪಸ್ಪೃಶ್ಯ ಸಲಿಲಂ ಸಂದಧೇ ತತ್ಸಮಾಹಿತಃ ।
ಅಜಾನನ್ನುಪಸಂಹಾರಂ ಪ್ರಾಣಕೃಚ್ಛ್ರ ಉಪಸ್ಥಿತೇ ॥ ೨೦ ॥

ತತಃ ಪ್ರಾದುಷ್ಕೃತಂ ತೇಜಃ ಪ್ರಚಂಡಂ ಸರ್ವತೋದಿಶಮ್ ।
ಪ್ರಾಣಾಪದಮಭಿಪ್ರೇಕ್ಷ್ಯ ವಿಷ್ಣುಂ ಜಿಷ್ಣುರುವಾಚ ಹ ॥ ೨೧ ॥

*ಅರ್ಜುನ ಉವಾಚ*

ಕೃಷ್ಣ ಕೃಷ್ಣ ಮಹಾಬಾಹೋ ಭಕ್ತಾನಾಮಭಯಂಕರ ।
ತ್ವಮೇಕೋ ದಹ್ಯಮಾನಾನಾಮಪವರ್ಗೋऽಸಿ ಸಂಸೃತೇಃ ॥ ೨೨ ॥

ತ್ವಮಾದ್ಯಃ ಪುರುಷಃ ಸಾಕ್ಷಾದೀಶ್ವರಃ ಪ್ರಕೃತೇಃ ಪರಃ ।
ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ॥ ೨೩ ॥

ಸ ಏವ ಜೀವಲೋಕಸ್ಯ ಮಾಯಾಮೋಹಿತಚೇತಸಃ ।
ವಿಧತ್ಸೇ ಸ್ವೇನ ವೀರ್ಯೇಣ ಶ್ರೇಯೋ ಧರ್ಮಾದಿಲಕ್ಷಣಮ್ ॥ ೨೪ ॥

ತಥಾಯಂ ಚಾವತಾರಸ್ತೇ ಭುವೋ ಭಾರಜಿಹೀರ್ಷಯಾ ।
ಸ್ವಾನಾಂ ಚಾನನ್ಯಭಾವಾನಾಮನುಧ್ಯಾನಾಯ ಚಾಸಕೃತ್ ॥ ೨೫ ॥

ಕಿಮಿದಂ ಸ್ವಿತ್ಕುತೋ ವೇತಿ ದೇವದೇವ ನ ವೇದ್ಮ್ಯಹಮ್ ।
ಸರ್ವತೋಮುಖಮಾಯಾತಿ ತೇಜಃ ಪರಮದಾರುಣಮ್ ॥ ೨೬ ॥

*ಶ್ರೀಭಗವಾನುವಾಚ*

ವೇತ್ಥೇದಂ ದ್ರೋಣಪುತ್ರಸ್ಯ ಬ್ರಾಹ್ಮಮಸ್ತ್ರಂ ಪ್ರದರ್ಶಿತಮ್ ।
ನೈವಾಸೌ ವೇದ ಸಂಹಾರಂ ಪ್ರಾಣಬಾಧ ಉಪಸ್ಥಿತೇ ॥ ೨೭ ॥

ನ ಹ್ಯಸ್ಯಾನ್ಯತಮಂ ಕಿಂಚಿದಸ್ತ್ರಂ ಪ್ರತ್ಯವಕರ್ಶನಮ್ ।
ಜಹ್ಯಸ್ತ್ರತೇಜ ಉನ್ನದ್ಧಮಸ್ತ್ರಜ್ಞೋ ಹ್ಯಸ್ತ್ರತೇಜಸಾ ॥ ೨೮ ॥

ಅರ್ಜುನನು ರಥದಲ್ಲಿ ಕುಳಿತು ತನ್ನನ್ನು ಅಟ್ಟಿಸಿಕೊಂಡು ಬರುತ್ತಿರುವುದನ್ನು ದೂರದಿಂದಲೇ ನೋಡಿ, ಹೆಚ್ಚು ಭಯಗೊಂಡು ತನ್ನ ಪ್ರಾಣಗಳನ್ನು ಉಳಿಸಿಕೊಳ್ಳುವುದಕ್ಕಾಗಿ ರುದ್ರನಿಗೆ ಹೆದರಿ ಓಡಿದ ಸೂರ್ಯನಂತೆ * ಸಾಧ್ಯವಾದಷ್ಟು ದೂರ ಓಡತೊಡಗಿದನು. ॥ ೧೮ ॥ ಅಶ್ವತ್ಥಾಮನ ಕುದುರೆಗಳು ತುಂಬಾ ಬಳಲಿ ಹೋಗಿದ್ದವು. ತನಗೆ ಬೇರಾವ ಗತಿಯೂ ಇಲ್ಲವೆಂದು ತಿಳಿದು, ಬ್ರಹ್ಮಾಸ್ತ್ರವೊಂದೇ ತನ್ನನ್ನು ರಕ್ಷಿಸುವ ಏಕಮಾತ್ರ ಸಾಧನವೆಂದು ಯೋಚಿಸಿದನು. ॥ ೧೯ ॥ ಅಶ್ವತ್ಥಾಮನಿಗೆ ಬ್ರಹ್ಮಾಸ್ತ್ರವನ್ನು ಉಪಸಂಹಾರ ಮಾಡುವ ವಿಧಿಯು ತಿಳಿದಿಲ್ಲವಾದರೂ ಪ್ರಾಣಸಂಕಟವು ಒದಗಿಬಂದುದನ್ನು ಕಂಡು ಅವನು ಆಚಮನಮಾಡಿ, ಧ್ಯಾನಸ್ಥನಾಗಿ ಆ ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿದನು. ॥ ೨೦ ॥ ಆ ಅಸ್ತ್ರದಿಂದ ಎಲ್ಲೆಡೆಗಳಲ್ಲಿ ಭಯಂಕರವಾದ, ಪ್ರಚಂಡವಾದ ತೇಜಸ್ಸು ವ್ಯಾಪಿಸಿತು. ಅದರಿಂದ ತನಗೆ ಅಪಾಯ ಒದಗುತ್ತಿರುವುದನ್ನು ಕಂಡು ಅರ್ಜುನನು ರಕ್ಷಿಸುವಂತೆ ಶ್ರೀಕೃಷ್ಣಪರಮಾತ್ಮನನ್ನು ಪ್ರಾರ್ಥಿಸಿದನು. ॥ ೨೧ ॥

**ಅರ್ಜುನನು ಹೇಳಿದನು** – "ಕೃಷ್ಣಾ! ಕೃಷ್ಣಾ! ನೀನು ಸಚ್ಚಿದಾನಂದಸ್ವರೂಪೀ ಪರಮಾತ್ಮನಾಗಿರುವೆ. ಸಂಸಾರದ ಸಂತಾಪಗಳಿಂದ ಸುಟ್ಟುಹೋಗುತ್ತಿರುವ ಜೀವರನ್ನು ಉದ್ಧರಿಸುವ ಮುಕ್ತಿದಾಯಕನು ನೀನೊಬ್ಬನೇ ಆಗಿರುವೆ. ॥ ೨೨ ॥ ನೀನು ಪ್ರಕೃತಿಯನ್ನು ಮೀರಿರುವ ಆದಿಪುರುಷ ಸಾಕ್ಷಾತ್ ಪರಮೇಶ್ವರನಾಗಿರುವೆ. ಜ್ಞಾನಶಕ್ತಿಯಿಂದ ಮಾಯೆಯನ್ನು ಹೊರಹಾಕಿ ಶುದ್ಧವೂ, ಅದ್ವಿತೀಯವೂ ಆದ ಆತ್ಮಸ್ವರೂಪದಲ್ಲಿ ನೆಲೆಗೊಂಡಿರುವವನೂ ನೀನೇ ಆಗಿರುವೆ. ॥ ೨೩ ॥ ಮಾಯೆಯಿಂದ ಮೋಹಗೊಂಡಿರುವ ಜೀವರಿಗಾಗಿ ಧರ್ಮಾದಿರೂಪವಾದ ಶ್ರೇಯಸ್ಸನ್ನು ಪ್ರಭಾವಾತಿಶಯದಿಂದ ನೀನೇ ಉಂಟುಮಾಡುವವನು. ॥ ೨೪ ॥ ನಿನ್ನ ಈ ಅವತಾರವು ಭೂಮಿಯ ಭಾರವನ್ನು ಕಳೆಯಲೋಸುಗ ಮತ್ತು ಅನನ್ಯಭಾವವುಳ್ಳ ಭಕ್ತರು ನಿರಂತರವಾಗಿ ಧ್ಯಾನಮಾಡಲು ಶುಭಾಲಂಬನವನ್ನು ಕೊಡುವುದಕ್ಕಾಗಿಯೇ ಇದೆ. ॥ ೨೫ ॥ ದೇವದೇವಾ! ಅತಿಭಯಂಕರವಾಗಿ ಎಲ್ಲ ಕಡೆಗಳಲ್ಲಿ ಹರಡಿಕೊಂಡಿರುವ ತೇಜಸ್ಸೊಂದು ನನ್ನ ಕಡೆಗೆ ಬರುತ್ತಿದೆಯಲ್ಲ! ಇದು ಯಾವುದು? ಎಲ್ಲಿಂದ ಬರುತ್ತಿದೆ? ನನಗೇನೂ ತಿಳಿಯುತ್ತಿಲ್ಲವಲ್ಲ!" ॥ ೨೬ ॥

**ಶ್ರೀಭಗವಂತನು ಹೀಗೆಂದನು** – "ಅರ್ಜುನಾ! ಇದು ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರವಾಗಿದೆ. ತನಗೆ ಪ್ರಾಣಸಂಕಟ ಒದಗಿರುವುದರಿಂದ ಅವನು ಇದನ್ನು ಪ್ರಯೋಗಿಸಿದ್ದಾನೆ. ಆದರೆ ಇದನ್ನು ಉಪಸಂಹರಿಸುವುದನ್ನು ತಿಳಿಯನು. ॥ ೨೭ ॥ ಇದನ್ನು ಅಡಗಿಸುವ ಶಕ್ತಿಯು ಬೇರೆ ಯಾವುದೇ ಅಸ್ತ್ರಕ್ಕಿಲ್ಲ. ಅಸ್ತ್ರಜ್ಞನಾದ ನೀನು ಪ್ರಚಂಡವಾದ ಈ ಅಸ್ತ್ರದ ತೇಜಸ್ಸನ್ನು ಪ್ರತಿಬ್ರಹ್ಮಾಸ್ತ್ರದಿಂದಲೇ ಶಮನಗೊಳಿಸು." ॥ ೨೮ ॥

* ಶಿವಭಕ್ತ ವಿದ್ಯುನ್ಮಾಲಿ ದೈತ್ಯನನ್ನು ಸೂರ್ಯನು ಸೋಲಿಸಿದಾಗ ಸೂರ್ಯನ ಮೇಲೆ ಭಗವಾನ್ ರುದ್ರನು ತ್ರಿಶೂಲವನ್ನೆತ್ತಿಕೊಂಡು ಆವನತ್ತ ಓಡಿದನು. ಆಗ ಸೂರ್ಯನು ರುದ್ರದೇವರಿಗೆ ಹೆದರಿ ಓಡುತ್ತಾ-ಓಡುತ್ತಾ ಪೃಥ್ವಿಯಲ್ಲಿ ಕಾಶಿಗೆ ಬಂದುಬಿದ್ದನು. ಇದರಿಂದ ಅಲ್ಲಿ ಅವನಿಗೆ 'ಲೋಲಾರ್ಕ' ಎಂಬ ಹೆಸರಾಯಿತು.

*ಸೂತ ಉವಾಚ*

**ಶ್ರುತ್ವಾ ಭಗವತಾ ಪ್ರೋಕ್ತಂ ಫಾಲ್ಗುನಃ ಪರವೀರಹಾ ।**
**ಸ್ಪೃಷ್ಟ್ವಾಪಸ್ತಂ ಪರಿಕ್ರಮ್ಯ ಬ್ರಾಹ್ಮಂ ಬ್ರಾಹ್ಮಾಯ ಸಂದಧೇ ॥ ೨೯ ॥**

**ಸಂಹತ್ಯಾನ್ಯೋನ್ಯಮುಭಯೋಸ್ತೇಜಸೀ ಶರಸಂವೃತೇ ।**
**ಆವೃತ್ಯ ರೋದಸೀ ಖಂ ಚ ವವೃಧಾತೇಽರ್ಕವಹ್ನಿವತ್ ॥ ೩೦ ॥**

**ದೃಷ್ಟ್ವಾಸ್ತ್ರತೇಜಸ್ತು ತಯೋಸ್ತ್ರೀಂಲ್ಲೋಕಾನ್ಪ್ರದಹನ್ಮಹತ್ ।**
**ದಹ್ಯಮಾನಾಃ ಪ್ರಜಾಃ ಸರ್ವಾಃ ಸಾಂವರ್ತಕಮಮಂಸತ ॥ ೩೧ ॥**

**ಪ್ರಜೋಪಪ್ಲವಮಾಲಕ್ಷ್ಯ ಲೋಕವ್ಯತಿಕರಂ ಚ ತಮ್ ।**
**ಮತಂ ಚ ವಾಸುದೇವಸ್ಯ ಸಂಜಹಾರಾರ್ಜುನೋ ದ್ವಯಮ್ ॥ ೩೨ ॥**

**ತತ ಆಸಾದ್ಯ ತರಸಾ ದಾರುಣಂ ಗೌತಮೀಸುತಮ್ ।**
**ಬಬಂಧಾಮರ್ಷತಾಮ್ರಾಕ್ಷಃ ಪಶುಂ ರಶನಯಾ ಯಥಾ ॥ ೩೩ ॥**

**ಶಿಬಿರಾಯ ನಿನೀಷಂತಂ ದಾಮ್ನಾ ಬದ್ಧ್ವಾ ರಿಪುಂ ಬಲಾತ್ ।**
**ಪ್ರಾಹಾರ್ಜುನಂ ಪ್ರಕುಪಿತೋ ಭಗವಾನಮ್ಬುಜೇಕ್ಷಣಃ ॥ ೩೪ ॥**

**ಮೈನಂ ಪಾರ್ಥಾರ್ಹಸಿ ತ್ರಾತುಂ ಬ್ರಹ್ಮಬಂಧುಮಿಮಂ ಜಹಿ ।**
**ಯೋಽಸಾವನಾಗಸಃ ಸುಪ್ತಾನವಧೀನ್ನಿಶಿ ಬಾಲಕಾನ್ ॥ ೩೫ ॥**

**ಮತ್ತಂ ಪ್ರಮತ್ತಮುನ್ಮತ್ತಂ ಸುಪ್ತಂ ಬಾಲಂ ಸ್ತ್ರಿಯಂ ಜಡಮ್ ।**
**ಪ್ರಪನ್ನಂ ವಿರಥಂ ಭೀತಂ ನ ರಿಪುಂ ಹಂತಿ ಧರ್ಮವಿತ್ ॥ ೩೬ ॥**

**ಸ್ವಪ್ರಾಣಾನ್ ಯಃ ಪರಪ್ರಾಣೈಃ ಪ್ರಪುಷ್ಣಾತ್ಯಘೃಣಃ ಖಲಃ ।**
**ತದ್ವಧಸ್ತಸ್ಯ ಹಿ ಶ್ರೇಯೋ ಯದ್ದೋಷಾದ್ಯಾತ್ಯಧಃ ಪುಮಾನ್ ॥ ೩೭ ॥**

**ಪ್ರತಿಶ್ರುತಂ ಚ ಭವತಾ ಪಾಂಚಾಲ್ಯೈ ಶೃಣ್ವತೋ ಮಮ ।**
**ಆಹರಿಷ್ಯೇ ಶಿರಸ್ತಸ್ಯ ಯಸ್ತೇ ಮಾನಿನಿ ಪುತ್ರಹಾ ॥ ೩೮ ॥**

**ತದಸೌ ವಧ್ಯತಾಂ ಪಾಪ ಆತತಾಯ್ಯಾತ್ಮಬಂಧುಹಾ ।**
**ಭರ್ತುಶ್ಚ ವಿಪ್ರಿಯಂ ವೀರ ಕೃತವಾನ್ ಕುಲಪಾಂಸನಃ ॥ ೩೯ ॥**

**ಏವಂ ಪರೀಕ್ಷತಾ ಧರ್ಮಂ ಪಾರ್ಥಃ ಕೃಷ್ಣೇನ ಚೋದಿತಃ ।**
**ನೈಚ್ಛದ್ಧಂತುಂ ಗುರುಸುತಂ ಯದ್ಯಪ್ಯಾತ್ಮಹನಂ ಮಹಾನ್ ॥ ೪೦ ॥**

**ಸೂತಪುರಾಣಿಕರು ಹೇಳುತ್ತಾರೆ** – ಎಲೈ ಮಹರ್ಷಿಗಳೇ! ಶತ್ರುವೀರರನ್ನು ಸೋಲಿಸುವುದರಲ್ಲಿ ಪ್ರವೀಣನಾದ ಅರ್ಜುನನು ಶ್ರೀಭಗವಂತನ ಆ ಮಾತುಗಳನ್ನು ಕೇಳಿದೊಡನೆಯೇ ಆಚಮನ ಮಾಡಿ ಭಗವಂತನಿಗೆ ಪ್ರದಕ್ಷಿಣೆ ಬಂದು ಆ ಬ್ರಹ್ಮಾಸ್ತ್ರದ ನಿವಾರಣೆಗಾಗಿ ಪ್ರತಿಯಾದ ಬ್ರಹ್ಮಾಸ್ತ್ರವನ್ನು ಪ್ರಯೋಗ ಮಾಡಿದನು. ॥ ೨೯ ॥ ಬಾಣಗಳಿಂದ ಹೊರಹೊಮ್ಮಿದ ಆ ಎರಡು ಬ್ರಹ್ಮಾಸ್ತ್ರಗಳ ತೇಜಸ್ಸು ಒಂದಕ್ಕೊಂದು ಘರ್ಷಣೆಹೊಂದಿ ಪ್ರಳಯಕಾಲದ ಸೂರ್ಯ ಮತ್ತು ಅಗ್ನಿಗಳಂತೆ ಭೂಮ್ಯಾಕಾಶಗಳಲ್ಲೆಲ್ಲಾ ಹರಡಿ ಬೆಳೆಯತೊಡಗಿತು. ॥ ೩೦ ॥ ಆ ಇಬ್ಬರ ಬ್ರಹ್ಮಾಸ್ತ್ರಗಳ ಪ್ರಚಂಡ ತೇಜಸ್ಸಿನಿಂದ ಮೂರು ಲೋಕಗಳು ಸುಟ್ಟುಹೋಗುತ್ತಿರುವುದನ್ನು ಕಂಡು ಬೆಂದು ಹೋಗುತ್ತಿದ್ದ ಪ್ರಜೆಗಳೆಲ್ಲರೂ ಇದು ಪ್ರಳಯಕಾಲದ ಸಾಂವರ್ತಕ ಅಗ್ನಿಯೇ ಇರಬಹುದೆಂದು ಭಾವಿಸಿದರು. ॥ ೩೧ ॥ ಅದರಿಂದ ಸಂಭವಿಸುತ್ತಿದ್ದ ಪ್ರಜಾಪೀಡೆಯನ್ನು, ಲೋಕದ ವಿನಾಶವನ್ನು ಕಂಡು ಶ್ರೀಕೃಷ್ಣನ ಆಶಯವನ್ನು ಗಮನಿಸಿದ ಅರ್ಜುನನು ಆ ಎರಡೂ ಅಸ್ತ್ರಗಳನ್ನು ಉಪಸಂಹಾರ ಮಾಡಿದನು. ॥ ೩೨ ॥ ಕ್ರೋಧದಿಂದ ಕೆಂಪೇರಿದ್ದ ಕಣ್ಣುಗಳುಳ್ಳ ಅರ್ಜುನನು ದಿಢೀರನೆ ಆ ಕ್ರೂರಿಯಾದ ಅಶ್ವತ್ಥಾಮನನ್ನು ಹಿಡಿದುಕೊಂಡು ಹಗ್ಗದಿಂದ ಪಶುವನ್ನು ಕಟ್ಟಿಹಾಕುವಂತೆ ಅವನನ್ನು ಕಟ್ಟಿಹಾಕಿದನು. ॥ ೩೩ ॥ ಅರ್ಜುನನು ಅಶ್ವತ್ಥಾಮನನ್ನು ಬಲವಂತವಾಗಿ ಬಂಧಿಸಿ ತನ್ನ ಬಿಡಾರಕ್ಕೆ ಒಯ್ಯಲು ಪ್ರಯತ್ನಿಸುತ್ತಿರುವುದನ್ನು ಕಂಡು ಪುಂಡರೀಕಾಕ್ಷನಾದ ಭಗವಾನ್ ಶ್ರೀಕೃಷ್ಣನು ಕೊಂಚ ಕುಪಿತನಂತಾಗಿ ಹೀಗೆಂದನು. ॥ ೩೪ ॥

ಅರ್ಜುನಾ! ಈ ಬ್ರಾಹ್ಮಣಾಧಮನನ್ನು ಜೀವಂತವಾಗಿ ಬಿಡುವುದು ಸರಿಯಲ್ಲ. ಇವನನ್ನು ಕೊಂದೇ ಹಾಕಿಬಿಡು. ಈತನು ರಾತ್ರಿಯಲ್ಲಿ ನಿದ್ದೆಮಾಡುತ್ತಿದ್ದ ನಿರಪರಾಧಿಗಳಾದ ಬಾಲಕರನ್ನು ಕೊಂದಿರುವನು. ॥ ೩೫ ॥ ಮೈಮರೆತವನನ್ನೂ, ಅಮಲೇರಿದವನನ್ನೂ, ಹುಚ್ಚನನ್ನೂ, ಮಲಗಿದವನನ್ನೂ, ಬಾಲಕರನ್ನೂ, ಸ್ತ್ರೀಯನ್ನೂ, ವಿವೇಕ ಜ್ಞಾನಶೂನ್ಯನನ್ನೂ, ಶರಣಾಗತನನ್ನೂ, ರಥಹೀನನನ್ನೂ ಮತ್ತು ಭಯಗೊಂಡವನನ್ನೂ, ಶತ್ರುಗಳಾದರೂ ಧರ್ಮಜ್ಞನಾದ ಪುರುಷನು ಕೊಲ್ಲುವುದಿಲ್ಲ. ॥ ೩೬ ॥ ಆದರೆ ಬೇರೆಯವರನ್ನು ಕೊಂದು ತನ್ನ ಪ್ರಾಣಗಳನ್ನು ಪೋಷಿಸುವ ದುಷ್ಟ ಕ್ರೂರಿಯ ವಧೆಯು ಅವನಿಗೆ ಶ್ರೇಯಸ್ಕರವೇ. ಏಕೆಂದರೆ, ಇಂತಹ ಕೆಟ್ಟ ಕೆಲಸ ಮಾಡುತ್ತಾ ಬದುಕುತ್ತಾನಾದರೆ ಇನ್ನೂ ಹೆಚ್ಚು ಪಾಪ ವನ್ನು ಮಾಡಿ ನರಕಕ್ಕೆ ಹೋಗುತ್ತಾನೆ. ॥ ೩೭ ॥ ಇದಲ್ಲದೆ ನೀನು ನನ್ನ ಮುಂದೆ ಪಾಂಚಾಲಿಯಲ್ಲಿ – 'ಎಲೈ ಮಾನವತಿಯೇ! ನಿನ್ನ ಪುತ್ರರನ್ನು ವಧಿಸಿದವನ ತಲೆಯನ್ನು ತರಿಯುವೆ'ನೆಂಬ ಪ್ರತಿಜ್ಞೆ ಯನ್ನೂ ಮಾಡಿರುವೆ. ॥ ೩೮ ॥ ಆದುದರಿಂದ ಅರ್ಜುನಾ! ಈ ಪಾಪಿಯನ್ನು ಅವಶ್ಯವಾಗಿ ಸಂಹರಿಸಿಬಿಡು. ಈತನು ಕೊಲೆಪಾತಕಿ, ನಿಮ್ಮ ಪುತ್ರರನ್ನೇ ಕೊಂದುಹಾಕಿದವನು. 'ತನ್ನ ಸ್ವಾಮಿಗೂ ಅಪ್ರಿಯ ವನ್ನೇ ಮಾಡಿದ ಕುಲಾಂಗಾರನಿವನು. ॥ ೩೯ ॥ ಅರ್ಜುನನ ಧರ್ಮ ಬುದ್ಧಿಯನ್ನು ಪರೀಕ್ಷಿಸುವುದಕ್ಕಾಗಿ ಭಗವಾನ್ ಶ್ರೀಕೃಷ್ಣನು ಆತನಿಗೆ ಹೀಗೆ ಪ್ರೇರಣೆ ಮಾಡಿದನು. ಆದರೂ ಅರ್ಜುನನ ಹೃದಯ ಮಹಾನ್ ಆಗಿತ್ತು. ಅಶ್ವತ್ಥಾಮನು ನಮ್ಮ ಪುತ್ರರನ್ನೇ ಕೊಂದಿದ್ದರೂ, ತನ್ನನ್ನೇ ಕೊಲ್ಲಲು ಪ್ರಯತ್ನಿಸಿದರೂ ಗುರುಪುತ್ರನನ್ನು ಕೊಲ್ಲಲು ಅರ್ಜುನನು ಇಷ್ಟಪಡಲಿಲ್ಲ. ॥ ೪೦ ॥

ಅಥೋಪೇತ್ಯ ಸ್ವಶಿಬಿರಂ ಗೋವಿಂದಪ್ರಿಯಸಾರಥಿಃ ।
ನ್ಯವೇದಯತ್ತಂ ಪ್ರಿಯಾಯೈ ಶೋಚಂತ್ಯಾ ಆತ್ಮಜಾನ್ ಹತಾನ್
॥ ೪೧ ॥

ತಥಾಽಽಹೃತಂ ಪಶುವತ್ ಪಾಶಬದ್ಧ-
ಮವಾಙ್ಮುಖಂ ಕರ್ಮಜುಗುಪ್ಸಿತೇನ ।
ನಿರೀಕ್ಷ್ಯ ಕೃಷ್ಣಾಪಕೃತಂ ಗುರೋಃ ಸುತಂ
ವಾಮಸ್ವಭಾವಾ ಕೃಪಯಾ ನನಾಮ ಚ ॥ ೪೨ ॥

ಉವಾಚ ಚಾಸಹಂತ್ಯಸ್ಯ ಬಂಧನಾನಯನಂ ಸತೀ ।
ಮುಚ್ಯತಾಂ ಮುಚ್ಯತಾಮೇಷ ಬ್ರಾಹ್ಮಣೋ ನಿತರಾಂ ಗುರುಃ
॥ ೪೩ ॥

ಸರಹಸ್ಯೋ ಧನುರ್ವೇದಃ ಸವಿಸರ್ಗೋಪಸಂಯಮಃ ।
ಅಸ್ತ್ರಗ್ರಾಮಶ್ಚ ಭವತಾ ಶಿಕ್ಷಿತೋ ಯದನುಗ್ರಹಾತ್
॥ ೪೪ ॥

ಸ ಏಷ ಭಗವಾನ್ ದ್ರೋಣಃ ಪ್ರಜಾರೂಪೇಣ ವರ್ತತೇ ।
ತಸ್ಯಾತ್ಮನೋಽರ್ಧಂ ಪತ್ನ್ಯಾಸ್ತೇ ನಾನ್ವಗಾದ್ವೀರಸೂಃ ಕೃಪೀ
॥ ೪೫ ॥

ತದ್ಧರ್ಮಜ್ಞ ಮಹಾಭಾಗ ಭವದ್ಭಿರ್ಗೌರವಂ ಕುಲಮ್ ।
ವೃಜಿನಂ ನಾರ್ಹತಿ ಪ್ರಾಪ್ತುಂ ಪೂಜ್ಯಂ ವಂದ್ಯಮಭೀಕ್ಷ್ಣಶಃ
॥ ೪೬ ॥

ಮಾ ರೋದೀದಸ್ಯ ಜನನೀ ಗೌತಮೀ ಪತಿದೇವತಾ ।
ಯಥಾಹಂ ಮೃತವತ್ಸಾಽಽರ್ತಾ ರೋದಿಮ್ಯಶ್ರುಮುಖೀ ಮುಹುಃ
॥ ೪೭ ॥

ಯೈಃ ಕೋಪಿತಂ ಬ್ರಹ್ಮಕುಲಂ ರಾಜನ್ಯೈರಜಿತಾತ್ಮಭಿಃ ।
ತತ್ಕುಲಂ ಪ್ರದಹತ್ಯಾಶು ಸಾನುಬಂಧಂ ಶುಚಾರ್ಪಿತಮ್
॥ ೪೮ ॥

*ಸೂತ ಉವಾಚ*

ಧರ್ಮ್ಯಂ ನ್ಯಾಯ್ಯಂ ಸಕರುಣಂ ನಿರ್ವ್ಯಲೀಕಂ ಸಮಂ ಮಹತ್ ।
ರಾಜಾ ಧರ್ಮಸುತೋ ರಾಜ್ಞ್ಯಾಃ ಪ್ರತ್ಯನಂದದ್ವಚೋದ್ವಿಜಾಃ
॥ ೪೯ ॥

ನಕುಲಃ ಸಹದೇವಶ್ಚ ಯುಯುಧಾನೋ ಧನಂಜಯಃ ।
ಭಗವಾನ್ ದೇವಕೀಪುತ್ರೋ ಯೇ ಚಾನ್ಯೇ ಯಾಶ್ಚ ಯೋಷಿತಃ
॥ ೫೦ ॥

ತತ್ರಾಹಾಮರ್ಷಿತೋ ಭೀಮಸ್ತಸ್ಯ ಶ್ರೇಯಾನ್ವಧಃ ಸ್ಮೃತಃ ।
ನಭರ್ತುರ್ನಾತ್ಮನಶ್ಚಾರ್ಥೇ ಯೋಽಹನ್ ಸುಪ್ತಾನ್ ಶಿಶೂನ್ ವೃಥಾ
॥ ೫೧ ॥

ನಿಶಮ್ಯ ಭೀಮಗದಿತಂ ದ್ರೌಪದ್ಯಾಶ್ಚ ಚತುರ್ಭುಜಃ ।
ಆಲೋಕ್ಯ ವದನಂ ಸಖ್ಯುರಿದಮಾಹ ಹಸನ್ನಿವ
॥ ೫೨ ॥

ಅನಂತರ ಅವನು ಶ್ರೀಕೃಷ್ಣನ ಸಾರಥ್ಯದೊಂದಿಗೆ ತನ್ನ ಯುದ್ಧ ಶಿಬಿರವನ್ನು ತಲುಪಿದನು. ಅಲ್ಲಿ ತನ್ನ ಪುತ್ರರಿಗಾಗಿ ದುಃಖಿಸುತ್ತಿರುವ ಪ್ರಿಯೆಯಾದ ಪಾಂಚಾಲಿಯ ವಶಕ್ಕೆ ಅಶ್ವತ್ಥಾಮನನ್ನು ಒಪ್ಪಿಸಿದನು. ॥ ೪೧ ॥ ದ್ರೌಪದಿಯು ನೋಡಿದಳು – ಅಶ್ವತ್ಥಾಮನು ಪಶುವಿನಂತೆ ಬಂಧಿಸಲ್ಪಟ್ಟಿದ್ದನು. ನಿಂದಿತ ಕಾರ್ಯವೆಸಗಿದ್ದರಿಂದ ನಾಚಿ ತಲೆತಗ್ಗಿಸಿಕೊಂಡಿದ್ದನು. ತನಗೆ ಅನಿಷ್ಟವನ್ನು ಮಾಡಿದಂತಹ ಗುರುಪುತ್ರ ಅಶ್ವತ್ಥಾಮನು ಈ ಪ್ರಕಾರ ಅಪಮಾನಿತನಾಗಿರುವುದನ್ನು ನೋಡಿ ದ್ರೌಪದಿಯ ಕೋಮಲ ಹೃದಯವು ಕೃಪೆಯಿಂದ ತುಂಬಿಬಂದು, ಅವಳು ಅಶ್ವತ್ಥಾಮನನ್ನು ನಮಸ್ಕರಿಸಿದಳು. ॥ ೪೨ ॥ ಗುರುಪುತ್ರನನ್ನು ಹೀಗೆ ಕಟ್ಟಿಹಾಕಿ ತಂದಿರುವುದು ಆಕೆಗೆ ಸಹನೆಯಾಗದೆ ಹೇಳಿದಳು – ಇವರನ್ನು ಬಿಡುಗಡೆಮಾಡಿ, ಬಿಟ್ಟುಬಿಡಿ-ಬಿಟ್ಟುಬಿಡಿ. ಇವರು ಬ್ರಾಹ್ಮಣರು. ನಮ್ಮ ಗುರುಸ್ಥಾನದಲ್ಲಿರುವವರು. ಅತ್ಯಂತ ಪೂಜನೀಯರೂ ಆಗಿದ್ದಾರೆ. ॥ ೪೩ ॥ ಯಾರ ಅನುಗ್ರಹದಿಂದ ನೀವು ರಹಸ್ಯಸಹಿತ ಧನುರ್ವೇದವನ್ನೂ, ಪ್ರಯೋಗ-ಉಪಸಂಹಾರಸಹಿತ ಸಮಸ್ತ ಅಸ್ತ್ರಗಳನ್ನು ಪಡೆದಿರುವಿರೋ, ಆ ಭಗವಾನ್ ದ್ರೋಣಾಚಾರ್ಯರೇ ಪುತ್ರರೂಪದಿಂದ ನಿಮ್ಮ ಮುಂದೆ ನಿಂತಿದ್ದಾರೆ. ಆಚಾರ್ಯರ ಅರ್ಧಾಂಗಿನಿಯಾದ ಕೃಪಿಯು ಈ ವೀರಪುತ್ರನ ಮೇಲಿನ ಮಮತೆಯಿಂದಲೇ ಪತಿಯೊಡನೆ ಸಹಗಮನ ಮಾಡಲಾರದೆ, ಜೀವಿತವಾಗಿರುವಳು. ॥ ೪೪-೪೫ ॥ ಧರ್ಮಜ್ಞರೇ! ಮಹಾಭಾಗರೇ! ಪ್ರತಿದಿನವು ಪೂಜಾ ನಮಸ್ಕಾರಗಳಿಗೆ ಯೋಗ್ಯವಾದ ಗುರುವಂಶಕ್ಕೆ ವ್ಯಥೆಯನ್ನುಂಟು ಮಾಡುವುದು ನಿಮಗೆ ಸರಿಯಲ್ಲ. ॥ ೪೬ ॥ ನಾನು ಪುತ್ರರ ಮರಣದಿಂದ ಪೀಡಿತಳಾಗಿ ಕಣ್ಣೀರು ಹರಿಸುತ್ತಾ ಅಳುವಂತೆ ಪತಿವ್ರತೆಯಾದ ಈತನ ತಾಯಿ ಗೌತಮಿಯು ಅಳದಿರಲಿ. ॥ ೪೭ ॥ ಉಚ್ಛೃಂಖಲನಾಗಿ ತನ್ನ ಕುಕೃತ್ಯದಿಂದ ಬ್ರಾಹ್ಮಣಕುಲಕ್ಕೆ ಕೋಪವನ್ನುಂಟುಮಾಡುವ ರಾಜನನ್ನು ಕುಪಿತವಾದ ಬ್ರಾಹ್ಮಣಕುಲವು ಶೋಕಾಗ್ನಿಗೆ ತಳ್ಳಿ, ಶೀಘ್ರವಾಗಿ ಸುಟ್ಟುಬಿಡುತ್ತದೆ. ॥ ೪೮ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳಿರಾ! ಧರ್ಮ ಮತ್ತು ನ್ಯಾಯಗಳಿಗೆ ಅನುಕೂಲವಾಗಿ, ನಿಷ್ಕಪಟವಾಗಿ, ಕಾರುಣ್ಯ-ಸಮತೆಗಳಿಂದ ಕೂಡಿದ್ದ ಆ ಮಹಾರಾಣಿಯ ವಚನವನ್ನು ಧರ್ಮಪುತ್ರ ಯುಧಿಷ್ಠಿರನು ಅಭಿನಂದಿಸಿದನು. ॥ ೪೯ ॥ ಜೊತೆಗೆ ನಕುಲನೂ, ಸಹದೇವನೂ, ಸಾತ್ಯಕಿಯೂ, ಅರ್ಜುನನೂ ಹಾಗೂ ಸ್ವಯಂ ಭಗವಾನ್ ಶ್ರೀಕೃಷ್ಣನೂ ಹಾಗೆಯೇ ಅಲ್ಲಿ ಉಪಸ್ಥಿತರಾಗಿದ್ದ ಎಲ್ಲ ನರ-ನಾರಿಯರು ಅದನ್ನು ಸಮರ್ಥಿಸಿದರು. ॥ ೫೦ ॥ ಆಗ ಭೀಮಸೇನನು ಮಾತ್ರ ಕೋಪಭರಿತನಾಗಿ – ಇವನು ಮಲಗಿದ್ದ ಮಕ್ಕಳನ್ನು ತನಗಾಗಲೀ, ತನ್ನ ಒಡೆಯನಿಗಾಗಲೀ ಯಾವುದೇ ಪ್ರಯೋಜನವಿಲ್ಲದೆ ವ್ಯರ್ಥವಾಗಿ ಕೊಂದಿರುವನು. ಈತನನ್ನು ವಧಿಸುವುದೇ ಶ್ರೇಯಸ್ಕರವೆಂದು ಗುಡುಗಿದನು. ॥ ೫೧ ॥ ಆಗ ಭಗವಾನ್ ಶ್ರೀಕೃಷ್ಣನು ದ್ರೌಪದಿ ಮತ್ತು ಭೀಮಸೇನನ ಮಾತನ್ನು ಕೇಳಿ, ಅರ್ಜುನನ ಕಡೆಗೆ ನೋಡುತ್ತಾ ನಸುನಕ್ಕು ಹೀಗೆಂದನು – ॥ ೫೨ ॥

*ಶ್ರೀಕೃಷ್ಣ ಉವಾಚ*

ಬ್ರಹ್ಮಬಂಧುರ್ನ ಹಂತವ್ಯ ಆತತಾಯೀ ವಧಾರ್ಹಣಃ ।
ಮಯ್ಯೈವೋಭಯಮಾಮ್ನಾತಂ ಪರಿಪಾಹ್ಯನುಶಾಸನಮ್ ॥ ೫೩ ॥

ಕುರು ಪ್ರತಿಶ್ರುತಂ ಸತ್ಯಂ ಯತ್ತತ್ಸಾಂತ್ವಯತಾ ಪ್ರಿಯಾಮ್ ।
ಪ್ರಿಯಂ ಚ ಭೀಮಸೇನಸ್ಯ ಪಾಂಚಾಲ್ಯಾ ಮಹ್ಯಮೇವಚ ॥ ೫೪ ॥

*ಸೂತ ಉವಾಚ*

ಅರ್ಜುನಃ ಸಹಸಾಽಽಜ್ಞಾಯ ಹರೇರ್ಹಾರ್ದಮಥಾಸಿನಾ ।
ಮಣಿಂ ಜಹಾರ ಮೂರ್ಧನ್ಯಂ ದ್ವಿಜಸ್ಯ ಸಹಮೂರ್ಧಜಮ್ ॥ ೫೫ ॥

ವಿಮುಚ್ಯ ರಶನಾಬದ್ಧಂ ಬಾಲಹತ್ಯಾಹತಪ್ರಭಮ್ ।
ತೇಜಸಾ ಮಣಿನಾ ಹೀನಂ ಶಿಬಿರಾನ್ನಿರಯಾಪಯತ್ ॥ ೫೬ ॥

ವಪನಂ ದ್ರವಿಣಾದಾನಂ ಸ್ಥಾನಾನ್ನಿರ್ಯಾಪಣಂ ತಥಾ ।
ಏಷ ಹಿ ಬ್ರಹ್ಮಬಂಧೂನಾಂ ವಧೋ ನಾನ್ಯೋಽಸ್ತಿ ದೈಹಿಕಃ ॥ ೫೭ ॥

ಪುತ್ರಶೋಕಾತುರಾಃ ಸರ್ವೇ ಪಾಂಡವಾಃ ಸಹ ಕೃಷ್ಣಯಾ ।
ಸ್ವಾನಾಂ ಮೃತಾನಾಂ ಯತ್ಕೃತ್ಯಂ ಚಕ್ರುರ್ನಿರ್ಹರಣಾದಿಕಮ್ ॥ ೫೮ ॥

**ಭಗವಾನ್ ಶ್ರೀಕೃಷ್ಣನೆಂದನು** – "ಪಾರ್ಥಾ! ಬ್ರಾಹ್ಮಣನು ಪತಿತನಾಗಿದ್ದರೂ ಆತನನ್ನು ವಧಿಸಬಾರದು. ಹಾಗೆಯೇ ಆತ ತಾಯಿಯನ್ನು ಸಂಹರಿಸುವುದೇ ಸರಿ. ಈ ಎರಡು ಆಜ್ಞೆಗಳನ್ನೂ ಶಾಸ್ತ್ರದಲ್ಲಿ ನಾನೇ ಹೇಳಿರುತ್ತೇನೆ. ಅದಕ್ಕಾಗಿ ನನ್ನ ಎರಡೂ ಆಜ್ಞೆಗಳನ್ನು ಪಾಲಿಸು. ॥ ೫೩ ॥ ಪ್ರಿಯೆಯಾದ ದ್ರೌಪದಿಯನ್ನು ಸಮಾಧಾನಗೊಳಿಸುವಾಗ ನೀನು ಮಾಡಿದ ಪ್ರತಿಜ್ಞೆಯನ್ನು ನೆರವೇರಿಸು. ಜೊತೆಗೆ ಭೀಮಸೇನನಿಗೂ, ಪಾಂಚಾಲಿಗೂ, ನನಗೂ ಪ್ರಿಯವಾಗಿರುವುದನ್ನೂ ಮಾಡು." ॥ ೫೪ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿಗಳೇ! ಅರ್ಜುನನು ಭಗವಂತನ ಹೃದಯದ ಆಶಯವನ್ನು ಒಡನೆಯೇ ಗ್ರಹಿಸಿ, ತನ್ನ ಖಡ್ಗದಿಂದ ಅಶ್ವತ್ಥಾಮನ ತಲೆಯಲ್ಲಿದ್ದ ನೈಸರ್ಗಿಕ ಮಣಿಯನ್ನು ಶಿಖಾಸಹಿತ ಕೆತ್ತಿ ತೆಗೆದುಕೊಂಡನು. ॥ ೫೫ ॥ ಬಾಲಕರ ಹತ್ಯೆಯಿಂದ ಅಶ್ವತ್ಥಾಮನು ಮೊದಲೇ ಕಾಂತಿಹೀನನಾಗಿದ್ದನು. ಈಗ ಮಣಿ ಮತ್ತು ಬ್ರಹ್ಮತೇಜಸ್ಸನ್ನೂ ಕಳೆದುಕೊಂಡುಬಿಟ್ಟನು. ಇಂತಹ ಸ್ಥಿತಿಯಲ್ಲಿ ಅವನನ್ನು ಬಂಧನ ಮುಕ್ತನಾಗಿಸಿ ಶಿಬಿರದಿಂದ ಹೊರಕ್ಕೆ ಹಾಕಿದರು. ॥ ೫೬ ॥ ಶಿಖೆಸಹಿತ ತಲೆ ಬೋಳಿಸುವುದು, ಹಣ ಕಿತ್ತುಕೊಳ್ಳುವುದು, ಸ್ಥಾನಭ್ರಷ್ಟನಾಗಿಸುವುದು – ಇವು ಬ್ರಾಹ್ಮಣರಿಗೆ ವಧೆಗೆ ಸಮಾನವಾದ ಶಿಕ್ಷೆ, ಅವರಿಗೆ ಇದಕ್ಕಿಂತ ಬೇರೆ ದೈಹಿಕವಾದ ವಧೆಯನ್ನು ಮಾಡಬಾರದು. ॥ ೫೭ ॥ ಅನಂತರ ಪುತ್ರರ ಮೃತ್ಯುವಿನಿಂದ ದುಃಖದಲ್ಲಿ ಮುಳುಗಿದ್ದ ಪಾಂಡವರು ದ್ರೌಪದಿಯೊಡನೆ ಮೃತರಾಗಿದ್ದ ತಮ್ಮ ಪುತ್ರಾದಿ ಬಂಧುಗಳ ಉತ್ತರಕ್ರಿಯೆಗಳನ್ನು ಮಾಡಿದರು. ॥ ೫೮ ॥

***ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ ದ್ರೌಣಿನಿಗ್ರಹೋ ನಾಮ ಸಪ್ತಮೋಽಧ್ಯಾಯಃ ॥ ೭ ॥**

# ಎಂಟನೆಯ ಅಧ್ಯಾಯ

## ಗರ್ಭದಲ್ಲಿ ಪರೀಕ್ಷಿತನ ರಕ್ಷಣೆ, ಕುಂತಿಯು ಮಾಡಿದ ಶ್ರೀಕೃಷ್ಣನ ಸ್ತುತಿ, ಧರ್ಮರಾಜನ ಪಶ್ಚಾತ್ತಾಪ

*ಸೂತ ಉವಾಚ*

ಅಥ ತೇ ಸಂಪರೇತಾನಾಂ ಸ್ವಾನಾಮುದಕಮಿಚ್ಛತಾಮ್ ।
ದಾತುಂ ಸಕೃಷ್ಣಾ ಗಂಗಾಯಾಂ ಪುರಸ್ಕೃತ್ಯ ಯಯುಃ ಸ್ತ್ರಿಯಃ ॥ ೧ ॥

ತೇ ನಿನೀಯೋದಕಂ ಸರ್ವೇ ವಿಲಪ್ಯ ಚ ಭೃಶಂ ಪುನಃ ।
ಆಪ್ಲುತಾ ಹರಿಪಾದಾಬ್ಜ ರಜಃಪೂತಸರಿಜ್ಜಲೇ ॥ ೨ ॥

ತತ್ರಾಸೀನಂ ಕುರುಪತಿಂ ಧೃತರಾಷ್ಟ್ರಂ ಸಹಾನುಜಮ್ ।
ಗಾಂಧಾರೀಂ ಪುತ್ರಶೋಕಾರ್ತಾಂ ಪೃಥಾಂ ಕೃಷ್ಣಾಂ ಚ ಮಾಧವಃ ॥ ೩ ॥

**ಸೂತಪುರಾಣಿಕರು ಹೇಳುತ್ತಾರೆ** - ಋಷಿಗಳೇ! ಅನಂತರ ಪಾಂಡವರು-ತಿಲೋದಕವನ್ನು ಬಯಸುತ್ತಿದ್ದ ಸ್ವಜನರಿಗೆ ತರ್ಪಣವನ್ನು ಕೊಡುವುದಕ್ಕಾಗಿ ಶ್ರೀಕೃಷ್ಣನೊಡನೆ ಸ್ತ್ರೀಯರನ್ನು ಮುಂದಿಟ್ಟುಕೊಂಡು ಗಂಗಾನದಿಯ ತೀರಕ್ಕೆ ಬಂದರು. ॥ ೧ ॥ ಅಲ್ಲಿ ಅವರೆಲ್ಲರೂ ಮೃತಬಂಧುಗಳಿಗೆ ಜಲತರ್ಪಣಗಳನ್ನು ಇತ್ತು, ಅವರನ್ನು ನೆನೆದುಕೊಂಡು ವಿಲಾಪಿಸತೊಡಗಿದರು. ಬಳಿಕ ಶ್ರೀಭಗವಂತನ ಪಾದಾಬ್ಜಧೂಳಿಯಿಂದ ಪರಿಶುದ್ಧವಾದ ಗಂಗಾತೀರ್ಥದಲ್ಲಿ ಮತ್ತೊಮ್ಮೆ ಸ್ನಾನಮಾಡಿದರು. ॥೨॥ ಅಲ್ಲಿ ಕುಳಿತಿದ್ದ ಭೀಮಾರ್ಜುನಾದಿ ತಮ್ಮಂದಿರಿಂದೊಡಗೂಡಿ ಧರ್ಮರಾಜನನ್ನು ಧೃತರಾಷ್ಟ್ರನನ್ನೂ, ಪುತ್ರಶೋಕದಿಂದ ಪೀಡಿತರಾಗಿದ್ದ ಗಾಂಧಾರೀ- ಕುಂತೀ- ದ್ರೌಪದಾದೇವಿಯನ್ನು ಶ್ರೀಕೃಷ್ಣಪರಮಾತ್ಮನು ಧೌಮ್ಯಾದಿ ಮಹರ್ಷಿ

ಸಾಂತ್ವಯಾಮಾಸ ಮುನಿಭಿರ್ಹತಬಂಧೂನ್ ಶುಚಾರ್ಪಿತಾನ್ ।
ಭೂತೇಷು ಕಾಲಸ್ಯ ಗತಿಂ ದರ್ಶಯನ್ನ ಪ್ರತಿಕ್ರಿಯಾಮ್ ॥ ೪ ॥

ಸಾಧಯಿತ್ವಾಜಾತಶತ್ರೋಃ ಸ್ವಂ ರಾಜ್ಯಂ ಕಿತವೈರ್ಹೃತಮ್ ।
ಘಾತಯಿತ್ವಾಸತೋ ರಾಜ್ಞಃ ಕಚಸ್ಪರ್ಶಕ್ಷತಾಯುಷಃ ॥ ೫ ॥

ಯಾಜಯಿತ್ವಾಶ್ವಮೇಧೈಸ್ತಂ ತ್ರಿಭಿರುತ್ತಮಕಲ್ಪಕೈಃ ।
ತದ್ಯಶಃ ಪಾವನಂ ದಿಕ್ಷು ಶತಮನ್ಯೋರಿವಾತನೋತ್ ॥ ೬ ॥

ಆಮಂತ್ರ್ಯ ಪಾಂಡುಪುತ್ರಾಂಶ್ಚ ಶೈನೇಯೋದ್ಧವಸಂಯುತಃ ।
ದ್ವೈಪಾಯನಾದಿಭಿರ್ವಿಪ್ರೈಃ ಪೂಜಿತೈಃ ಪ್ರತಿಪೂಜಿತಃ ॥ ೭ ॥

ಗಂತುಂ ಕೃತಮತಿರ್ಬ್ರಹ್ಮನ್ ದ್ವಾರಕಾಂ ರಥಮಾಸ್ಥಿತಃ ।
ಉಪಲೇಭೇಽಭಿಧಾವಂತೀಮುತ್ತರಾಂ ಭಯವಿಹ್ವಲಾಮ್ ॥ ೮ ॥

*ಉತ್ತರೋವಾಚ*

ಪಾಹಿ ಪಾಹಿ ಮಹಾಯೋಗಿನ್ ದೇವದೇವ ಜಗತ್ಪತೇ ।
ನಾನ್ಯಂ ತ್ವದಭಯಂ ಪಶ್ಯೇ ಯತ್ರ ಮೃತ್ಯುಃ ಪರಸ್ಪರಮ್ ॥ ೯ ॥

ಅಭಿದ್ರವತಿ ಮಾಮೀಶ ಶರಸ್ತಪ್ತಾಯಸೋ ವಿಭೋ ।
ಕಾಮಂ ದಹತು ಮಾಂ ನಾಥ ಮಾ ಮೇ ಗರ್ಭೋ ನಿಪಾತ್ಯತಾಮ್ ॥ ೧೦ ॥

*ಸೂತ ಉವಾಚ*

ಉಪಧಾರ್ಯ ವಚಸ್ತಸ್ಯಾ ಭಗವಾನ್ಭಕ್ತವತ್ಸಲಃ ।
ಅಪಾಂಡವಮಿದಂ ಕರ್ತುಂ ದ್ರೌಣೇರಸ್ತ್ರಮಬುಧ್ಯತ ॥ ೧೧ ॥

ತರ್ಹ್ಯೇವಾಥ ಮುನಿಶ್ರೇಷ್ಠ ಪಾಂಡವಾಃ ಪಂಚ ಸಾಯಕಾನ್ ।
ಆತ್ಮನೋಽಭಿಮುಖಾಂದೀಪ್ತಾನಾಲಕ್ಷ್ಯಾಸ್ತ್ರಾಣ್ಯುಪಾದದುಃ ॥ ೧೨ ॥

ವ್ಯಸನಂ ವೀಕ್ಷ್ಯ ತತ್ತೇಷಾಮನನ್ಯವಿಷಯಾತ್ಮನಾಮ್ ।
ಸುದರ್ಶನೇನ ಸ್ವಾಸ್ತ್ರೇಣ ಸ್ವಾನಾಂ ರಕ್ಷಾಂ ವ್ಯಧಾದ್ವಿಭುಃ ॥ ೧೩ ॥

ಗಳೊಡನೆ ಸಮಾಧಾನ ಪಡಿಸಿದನು. 'ಪ್ರಪಂಚದಲ್ಲಿ ಎಲ್ಲ ಪ್ರಾಣಿಗಳು ಕಾಲಕ್ಕೆ ಅಧೀನರಾಗಿದ್ದಾರೆ. ಮೃತ್ಯುವಿನಿಂದ ಯಾರನ್ನು ಯಾರೂ ತಪ್ಪಿಸಲಾರನು.' ಎಂದು ತಿಳಿಸಿ ಬಂಧು ಮರಣದಿಂದ ಶೋಕಿಸುತ್ತಿರುವ ಅವರನ್ನು ಸಾಂತ್ವನಗೊಳಿಸಿದನು. ॥ ೩-೪ ॥

ಈ ರೀತಿ ಭಗವಾನ್ ಶ್ರೀಕೃಷ್ಣನು ಅಜಾತಶತ್ರುವಾದ ಮಹಾರಾಜ ಯುಧಿಷ್ಠಿರನಿಗೆ, ಧೂರ್ತರು ಅವನಿಂದ ಮೋಸದಿಂದ ಕಸಿದುಕೊಂಡಿದ್ದ ರಾಜ್ಯವನ್ನು ಹಿಂದಕ್ಕೆ ಕೊಡಿಸಿದನು ಮತ್ತು ದ್ರೌಪದಿಯ ಕೇಶ ಪಾಶಗಳಿಗೆ ಕೈಹಾಕಿದ, ಆಯುಸ್ಸು ಕ್ಷೀಣ ಹೊಂದಿದ್ದ ದುಷ್ಟರಾಜರನ್ನು ಸಂಹಾರ ಮಾಡಿಸಿದನು. ॥ ೫ ॥ ಜೊತೆಗೆ ಯುಧಿಷ್ಠಿರ ಮಹಾರಾಜನಿಂದ ಉತ್ತಮ ಸಾಮಗ್ರಿ ಸಂಪತ್ತು ಮತ್ತು ಉತ್ತಮ ಋತ್ವಿಜರಿಂದ ಮೂರು ಅಶ್ವಮೇಧ ಯಜ್ಞಗಳನ್ನು ಮಾಡಿಸಿದನು. ಅವನ ಕೀರ್ತಿಯು ನೂರು ಯಜ್ಞ ಮಾಡಿದ ಇಂದ್ರನ ಕೀರ್ತಿಯಂತೆ ಎಲ್ಲೆಡೆ ಹರಡುವಂತೆ ಮಾಡಿದನು. ॥ ೬ ॥ ಇದಾದ ಬಳಿಕ ಭಗವಾನ್ ಶ್ರೀಕೃಷ್ಣನು ದ್ವಾರಕೆಗೆ ಹೋಗಲು ವಿಚಾರಮಾಡಿದನು. ಅದಕ್ಕಾಗಿ ಪಾಂಡವರಿಂದ ಬೀಳ್ಕೊಂಡು, ದ್ವೈಪಾಯನ ವ್ಯಾಸರೇ ಮುಂತಾದ ಬ್ರಾಹ್ಮಣರನ್ನು ಸತ್ಕರಿಸಿ ತಾನೂ ಸತ್ಕೃತನಾದನು. ಅವನು ದ್ವಾರಕೆಗೆ ಹೊರಡಲು ಉದ್ಧವ, ಸಾತ್ಯಕಿಯರೊಡನೆ ರಥವನ್ನೇರಿದನು. ಆಗಲೇ ಅಭಿಮನ್ಯುವಿನ ಪತ್ನಿ ಉತ್ತರೆಯು ಭಯದಿಂದ ಕಳವಳಗೊಂಡು ಎದುರಿಗೆ ಓಡಿ ಬರುತ್ತಿರುವುದನ್ನು ನೋಡಿದನು. ॥ ೭-೮ ॥

**ಉತ್ತರೆಯು ಪ್ರಭುವನ್ನು ಹೀಗೆ ಪ್ರಾರ್ಥಿಸತೊಡಗಿದಳು** - 'ದೇವಾಧಿದೇವಾ! ಜಗತ್ಪತಿಯೇ! ಮಹಾಯೋಗಿಯೇ! ಕಾಪಾಡು! ಕಾಪಾಡು! ನಿನ್ನನ್ನು ಬಿಟ್ಟು ನನಗೆ ಬೇರೆಯಾರೂ ಅಭಯ ನೀಡಲಾರರು. ಏಕೆಂದರೆ, ಇಲ್ಲಿ ಎಲ್ಲರೂ ಪರಸ್ಪರ ಮೃತ್ಯುವಿಗೆ ಕಾರಣರಾಗುತ್ತಿದ್ದಾರೆ. ॥ ೯ ॥ ಪ್ರಭೋ! ನೀನು ಸರ್ವಶಕ್ತಿಯುಳ್ಳವನಾಗಿರುವೆ. ಕಾದ ಕಬ್ಬಿಣದ ಬಾಣವೊಂದು ನನ್ನನ್ನು ಅಟ್ಟಿಸಿಕೊಂಡು ಬರುತ್ತಿದೆ. ಇದು ಬೇಕಾದರೆ ನನ್ನನ್ನು ಸುಟ್ಟು ಹಾಕಲಿ. ಆದರೆ ನನ್ನ ಗರ್ಭವನ್ನು ನಾಶಪಡಿಸದಂತೆ ಅನುಗ್ರಹಿಸು ಸ್ವಾಮಿ! ॥ ೧೦ ॥

**ಸೂತಪುರಾಣಿಕರು ಹೇಳುತ್ತಿದ್ದಾರೆ** – ಭಕ್ತವತ್ಸಲ ಭಗವಾನ್ ಶ್ರೀಕೃಷ್ಣನು ಆಕೆಯ ಗೋಳಾಟವನ್ನು ಕೇಳಿದೊಡನೆಯೇ- 'ಅಶ್ವತ್ಥಾಮನು ಪಾಂಡವರ ವಂಶವನ್ನೇ ನಿರ್ಬೀಜವನ್ನಾಗಿ ಮಾಡಲು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿರುವನು' ಎಂದು ಅರಿತುಕೊಂಡನು. ॥ ೧೧ ॥ ಶೌನಕರೇ! ಅದೇ ಸಮಯದಲ್ಲಿ ಉರಿಯುತ್ತಿರುವ ಐದು ಬಾಣಗಳು ತಮ್ಮ ಕಡೆಗೆ ಬರುತ್ತಿರುವುದನ್ನು ಕಂಡು ಪಾಂಡವರು ಅದನ್ನು ಎದುರಿಸಲು ತಮ್ಮ-ತಮ್ಮ ಅಸ್ತ್ರಗಳನ್ನು ಎತ್ತಿಕೊಂಡರು. ॥ ೧೨ ॥ ತನಗೆ ಶರಣು ಬಂದಿದ್ದ ಅನನ್ಯ ಭಕ್ತರಿಗೆ ದೊಡ್ಡ ವಿಪತ್ತು ಬಂದಿರುವುದನ್ನು ಕಂಡು, ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣನು ತನ್ನ ದಿವ್ಯವಾದ ಸುದರ್ಶನದಿಂದ ಅವರನ್ನು ಕಾಪಾಡಿದನು. ॥ ೧೩ ॥

ಅಂತಃಸ್ಥಃ ಸರ್ವಭೂತಾನಾಮಾತ್ಮಾ ಯೋಗೇಶ್ವರೋ ಹರಿಃ ।
ಸ್ವಮಾಯಯಾವೃಣೋದ್ಗರ್ಭಂ ವೈರಾಟ್ಯಾಃ ಕುರುತಂತವೇ ॥ ೧೪ ॥

ಯದ್ಯಪ್ಯಸ್ತ್ರಂ ಬ್ರಹ್ಮಶಿರಸ್ತ್ವಮೋಘಂ ಚಾಪ್ರತಿಕ್ರಿಯಮ್ ।
ವೈಷ್ಣವಂ ತೇಜ ಆಸಾದ್ಯ ಸಮಶಾಮ್ಯದ್ಭೃಗೂದ್ವಹ ॥ ೧೫ ॥

ಮಾ ಮಂಸ್ಥಾ ಹ್ಯೇತದಾಶ್ಚರ್ಯಂ ಸರ್ವಾಶ್ಚರ್ಯಮಯೇಽಚ್ಯುತೇ ।
ಯ ಇದಂ ಮಾಯಯಾ ದೇವ್ಯಾ ಸೃಜತ್ಯವತಿ ಹಂತ್ಯಜಃ ॥ ೧೬ ॥

ಬ್ರಹ್ಮತೇಜೋವಿನಿರ್ಮುಕ್ತೈರಾತ್ಮಜೈಃ ಸಹ ಕೃಷ್ಣಯಾ ।
ಪ್ರಯಾಣಾಭಿಮುಖಂ ಕೃಷ್ಣಮಿದಮಾಹ ಪೃಥಾ ಸತೀ ॥ ೧೭ ॥

ಕುಂತ್ಯುವಾಚ

ನಮಸ್ಯೇ ಪುರುಷಂ ತ್ವಾಽಽದ್ಯಮೀಶ್ವರಂ ಪ್ರಕೃತೇಃ ಪರಮ್ ।
ಅಲಕ್ಷ್ಯಂ ಸರ್ವಭೂತಾನಾಮಂತರ್ಬಹಿರವಸ್ಥಿತಮ್ ॥ ೧೮ ॥

ಮಾಯಾಜವನಿಕಾಚ್ಛನ್ನಮಜ್ಞಾಧೋಕ್ಷಜಮವ್ಯಯಮ್ ।
ನ ಲಕ್ಷ್ಯಸೇ ಮೂಢದೃಶಾ ನಟೋ ನಾಟ್ಯಧರೋ ಯಥಾ ॥ ೧೯ ॥

ತಥಾ ಪರಮಹಂಸಾನಾಂ ಮುನೀನಾಮಮಲಾತ್ಮನಾಮ್ ।
ಭಕ್ತಿಯೋಗವಿಧಾನಾರ್ಥಂ ಕಥಂ ಪಶ್ಯೇಮ ಹಿ ಸ್ತ್ರಿಯಃ ॥ ೨೦ ॥

ಕೃಷ್ಣಾಯ ವಾಸುದೇವಾಯ ದೇವಕೀನಂದನಾಯ ಚ ।
ನಂದಗೋಪಕುಮಾರಾಯ ಗೋವಿಂದಾಯ ನಮೋ ನಮಃ ॥ ೨೧ ॥

ನಮಃ ಪಂಕಜನಾಭಾಯ ನಮಃ ಪಂಕಜಮಾಲಿನೇ ।
ನಮಃ ಪಂಕಜನೇತ್ರಾಯ ನಮಸ್ತೇ ಪಂಕಜಾಂಘ್ರಯೇ ॥ ೨೨ ॥

ಯಥಾ ಹೃಷೀಕೇಶ ಖಲೇನ ದೇವಕೀ
ಕಂಸೇನ ರುದ್ಧಾತಿಚಿರಂ ಶುಚಾರ್ಪಿತಾ ।
ವಿಮೋಚಿತಾಹಂ ಚ ಸಹಾತ್ಮಜಾ ವಿಭೋ
ತ್ವಯೈವ ನಾಥೇನ ಮುಹುರ್ವಿಪದ್ಗಣಾತ್ ॥ ೨೩ ॥

ಸರ್ವಪ್ರಾಣಿಗಳ ಅಂತರ್ಯಾಮಿಯಾಗಿರುವ ಯೋಗೇಶ್ವರನಾದ ಶ್ರೀಕೃಷ್ಣನು ಕುರುವಂಶದ ಕುಡಿಯನ್ನು ಉಳಿಸುವುದಕ್ಕಾಗಿ ಉತ್ತರೆಯ ಗರ್ಭವನ್ನು ತನ್ನ ಮಾಯಾಕವಚದಿಂದ ಆವರಿಸಿ ಬಿಟ್ಟನು. ॥ ೧೪ ॥ ಶೌನಕಾದಿ ಋಷಿಗಳಿರಾ! ಬ್ರಹ್ಮಶಿರೋಸ್ತ್ರವೆಂಬುದು ಅಮೋಘ ವಾದುದೇ. ಅದನ್ನು ನಿವಾರಿಸುವ ಪ್ರತ್ಯಸ್ತ್ರವಿಲ್ಲವೆಂಬುದೂ ನಿಜವೇ. ಆದರೂ ಭಗವಾನ್ ಶ್ರೀಕೃಷ್ಣನ ತೇಜದ ಇದಿರು ಅದು ಶಾಂತವಾಯಿತು. ॥ ೧೫ ॥ ಭೃಗುಕುಲತಿಲಕರೇ! ಇದೇನೋ ದೊಡ್ಡ ಅಚ್ಚರಿಯೆಂದು ತಿಳಿಯಬಾರದು. ಏಕೆಂದರೆ, ಭಗವಾನ್ ಶ್ರೀಕೃಷ್ಣನು ಸರ್ವಾಶ್ಚರ್ಯಮಯನಾದವನು. ತಾನು ಜನ್ಮರಹಿತ ನಾಗಿಯೇ ಇದ್ದು, ತನ್ನ ಮಾಯಾ ಶಕ್ತಿಯಿಂದ ಈ ಜಗತ್ತಿನ ಸೃಷ್ಟಿ ಸ್ಥಿತಿ, ಸಂಹಾರಗಳನ್ನು ಮಾಡುವ ಸರ್ವಶಕ್ತಿ ಮಯನು ಪರ ಮಾತ್ಮನು. ॥ ೧೬ ॥ ಭಗವಾನ್ ಶ್ರೀಕೃಷ್ಣನು ದ್ವಾರಕೆಗೆ ಹೊರಟಾಗ ಬ್ರಹ್ಮಾಸ್ತ್ರದ ಜ್ವಾಲೆಯಿಂದ ಮುಕ್ತರಾದ ತನ್ನ ಪುತ್ರರೊಡನೆಯೂ, ದ್ರೌಪದಿಯೊಡನೆಯೂ ಕೂಡಿ ಸಾಧ್ವಿಯಾದ ಕುಂತೀದೇವಿಯು ಹೀಗೆ ಪ್ರಾರ್ಥಿಸಿದಳು. ॥ ೧೭ ॥

**ಕುಂತಿದೇವಿಯು ಹೇಳಿದಳು** – ನೀನು ಸಮಸ್ತ ಜೀವಿಗಳ ಒಳಗೂ-ಹೊರಗೂ ಪೂರ್ಣವಾಗಿ ವ್ಯಾಪಿಸಿಕೊಂಡಿರುವೆ. ಆದರೂ ಇಂದ್ರಿಯಗಳಿಂದ ಹಾಗೂ ವೃತ್ತಿಗಳಿಂದ ನೋಡಲಾಗು ವುದಿಲ್ಲ. ಏಕೆಂದರೆ ನೀನು ಪ್ರಕೃತಿಯನ್ನು ಮೀರಿನಿಂತ ಆದಿಪುರುಷ ಪರಮೇಶ್ವರನಾಗಿರುವೆ. ನಾನು ನಿನಗೆ ನಮಸ್ಕರಿಸುತ್ತೇನೆ. ॥ ೧೮ ॥ ಇಂದ್ರಿಯಗಳಿಗೆ ಗೋಚರಿಸದೆ ಮಾಯೆಯೆಂಬ ಪರದೆಯೊಳಗೆ ತನ್ನನ್ನು ಮರೆಸಿ ಕೊಂಡಿರುವವನೂ, ಸರ್ವಜ್ಞನೂ ಆದ ನಿನ್ನನ್ನು ಅಜ್ಞಳಾದ ನಾನು ಹೇಗೆ ತಿಳಿಯಬಲ್ಲೆನು ? ವೇಷವನ್ನು ಧರಿಸಿರುವ ಚತುರನಟನಂತೆ ಅಭಿನಯಿಸುತ್ತಿರುವ ನಿನ್ನನ್ನು ಮೂಢದೃಷ್ಟಿ ಯುಳ್ಳವರು ಹೇಗೆ ತಾನೇ ಗುರುತಿಸಬಲ್ಲರು ? ॥ ೧೯ ॥ ನೀನು ಶುದ್ಧ ಹೃದಯವುಳ್ಳ ವಿಚಾರಶೀಲ ಜೀವನ್ಮುಕ್ತರಾದ ಪರಮಹಂಸರ ಹೃದಯದಲ್ಲಿ ನಿನ್ನ ಪರಾಭಕ್ತಿಯನ್ನು ಮೂಡಿಸಲು ಅವತರಿಸಿರುವೆ. ಇಂತಹ ನಿನ್ನನ್ನು ನಮ್ಮಂತಹ ಪಾಮರ ಸ್ತ್ರೀಯರು ಹೇಗೆ ತಾನೇ ಗುರುತಿಸ ಬಲ್ಲರು ? ॥ ೨೦ ॥ ಶ್ರೀಕೃಷ್ಣನಿಗೆ, ವಾಸುದೇವನಿಗೆ, ದೇವಕೀ ನಂದನನಿಗೆ, ನಂದಗೋಪಕುಮಾರನಿಗೆ, ಗೋವಿಂದನಿಗೆ, ನಮೋ ನಮಃ. ನಮ್ಮ ಅನಂತ ವಂದನೆಗಳು. ॥ ೨೧ ॥ ಪದ್ಮನಾಭ ನಿಗೆ, ಪದ್ಮಮಾಲಾಧರನಿಗೆ, ಪದ್ಮಾಕ್ಷನಿಗೆ, ಪದ್ಮಪಾದನಾಗಿರುವ ಶ್ರೀಕೃಷ್ಣಾ! ನಿನಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೨೨ ॥ ಹೃಷೀ ಕೇಶಾ ! ಪ್ರಭೋ ! ಹಿಂದೆ ದುಷ್ಟಕಂಸನಿಂದ ಸೆರೆಯಲ್ಲಿಟ್ಟದ್ದ ಚಿರಕಾಲ ಶೋಕಗ್ರಸ್ತಳಾಗಿದ್ದ ದೇವಕಿಯನ್ನು ನೀನು ಕಾಪಾಡಿ ದಂತೆಯೇ ಪುತ್ರರೊಂದಿಗೆ ನನ್ನನ್ನೂ ಕೂಡ ನೀನು ಪದೇ-ಪದೇ ವಿಪತ್ತುಗಳಿಂದ ರಕ್ಷಿಸಿರುವೆ. ನೀನೇ ನಮ್ಮ ಸ್ವಾಮಿಯಾಗಿರುವೆ. ನೀನೇ ಸರ್ವಶಕ್ತಿಯುಳ್ಳವನು. ಶ್ರೀಕೃಷ್ಣಾ! ವಿಷದಿಂದ, ಲಾಕ್ಷಾ ಗೃಹದ ಭಯಾನಕ ಬೆಂಕಿಯಿಂದ, ಹಿಡಿಂಬಾದಿ ರಾಕ್ಷಸರ ದೃಷ್ಟಿ ಯಿಂದ, ದುಷ್ಟರ ದ್ಯೂತಸಭೆಯಿಂದ, ವನವಾಸದ ವಿಪತ್ತು ಗಳಿಂದ, ಯುದ್ಧದ ಪ್ರತಿಯೊಂದು ಘಟ್ಟದಲ್ಲಿಯೂ ಮಹಾ

ವಿಷಾನ್ಮಹಾಗ್ನೇಃ ಪುರುಷಾದದರ್ಶನಾ-
ದಸತ್ಸಭಾಯಾ ವನವಾಸಕೃಚ್ಛ್ರತಃ ।
ಮೃಧೇ ಮೃಧೇಽನೇಕಮಹಾರಥಾಸ್ತ್ರತೋ
ದ್ರೌಣ್ಯಸ್ತ್ರತಶ್ಚಾಸ್ಮ ಹರೇಽಭಿರಕ್ಷಿತಾಃ ॥ ೨೪ ॥

ವಿಪದಃ ಸಂತು ನಃ ಶಶ್ವತ್ತತ್ರ ತತ್ರ ಜಗದ್ಗುರೋ ।
ಭವತೋ ದರ್ಶನಂ ಯತ್ಸ್ಯಾದಪುನರ್ಭವದರ್ಶನಮ್ ॥ ೨೫ ॥

ಜನ್ಮೈಶ್ವರ್ಯಶ್ರುತಶ್ರೀಭಿರೇಧಮಾನಮದಃ ಪುಮಾನ್ ।
ನೈವಾರ್ಹತ್ಯಭಿಧಾತುಂ ವೈ ತ್ವಾಮಕಿಂಚನಗೋಚರಮ್ ॥ ೨೬ ॥

ನಮೋಽಕಿಂಚನವಿತ್ತಾಯ ನಿವೃತ್ತಗುಣವೃತ್ತಯೇ ।
ಆತ್ಮಾರಾಮಾಯ ಶಾಂತಾಯ ಕೈವಲ್ಯಪತಯೇ ನಮಃ ॥ ೨೭ ॥

ಮನ್ಯೇ ತ್ವಾಂ ಕಾಲಮೀಶಾನಮನಾದಿನಿಧನಂ ವಿಭುಮ್ ।
ಸಮಂ ಚರಂತಂ ಸರ್ವತ್ರ ಭೂತಾನಾಂ ಯನ್ಮಿಥಃ ಕಲಿಃ ॥ ೨೮ ॥

ನ ವೇದ ಕಶ್ಚಿದ್ಭಗವಂಶ್ಚಿಕೀರ್ಷಿತಂ
ತವೇಹಮಾನಸ್ಯ ನೃಣಾಂ ವಿಡಂಬನಮ್ ।
ನ ಯಸ್ಯ ಕಶ್ಚಿದ್ದಯಿತೋಽಸ್ತಿ ಕರ್ಹಿಚಿದ್
ದ್ವೇಷ್ಯಶ್ಚ ಯಸ್ಮಿನ್ವಿಷಮಾ ಮತಿರ್ನೃಣಾಮ್ ॥ ೨೯ ॥

ಜನ್ಮ ಕರ್ಮ ಚ ವಿಶ್ವಾತ್ಮನ್ನಜಸ್ಯಾಕರ್ತುರಾತ್ಮನಃ ।
ತಿರ್ಯಙ್ನೄಷಿಷು ಯಾದಃಸು ತದತ್ಯಂತವಿಡಂಬನಮ್ ॥ ೩೦ ॥

ಗೋಪ್ಯಾದದೇ ತ್ವಯಿ ಕೃತಾಗಸಿ ದಾಮ ತಾವದ್
ಯಾ ತೇ ದಶಾಶ್ರುಕಲಿಲಾಂಜನಸಂಭ್ರಮಾಕ್ಷಮ್ ।
ವಕ್ತ್ರಂ ನಿನೀಯ ಭಯಭಾವನಯಾ ಸ್ಥಿತಸ್ಯ
ಸಾ ಮಾಂ ವಿಮೋಹಯತಿ ಭೀರಪಿ ಯದ್ಬಿಭೇತಿ ॥ ೩೧ ॥

ರಥರು ಪ್ರಯೋಗಿಸಿದ ಶಸ್ತ್ರಾಸ್ತ್ರಗಳಿಂದ ಕಾಪಾಡಿದೆ. ಹೀಗೆ ಎಷ್ಟೊಂದು ಹೇಳಲಿ? ಈಗ ಈ ಅಶ್ವತ್ಥಾಮನನ ಬ್ರಹ್ಮಾಸ್ತ್ರದಿಂದಲೂ ಕೂಡ ನೀನು ನಮ್ಮನ್ನು ಕಾಪಾಡಿರುವೆ. ॥ ೨೩-೨೪ ॥ ಜಗದ್ಗುರುವೇ! ನಮ್ಮ ಜೀವನದಲ್ಲಿ ವಿಪತ್ತುಗಳು ಪದೇ-ಪದೇ ಬರುತ್ತಿರಲಿ. ಏಕೆಂದರೆ, ವಿಪತ್ತುಗಳಲ್ಲಿಯೂ ನಿಶ್ಚಿತವಾಗಿ ನಿನ್ನ ದರ್ಶನ ಆಗುತ್ತಾ ಇರುತ್ತದೆ. ನಿನ್ನ ದರ್ಶನವಾದ ಮೇಲೆ ಮತ್ತೆ ಜನ್ಮ-ಮೃತ್ಯುವಿನ ಚಕ್ರದಲ್ಲಿ ಬೀಳಬೇಕಾಗುವುದಿಲ್ಲ. ॥ ೨೫ ॥ ನೀನು ಅಕಿಂಚನರಿಗೆ ಗೋಚರನಾಗುವವನು. ಕುಲಮದ, ಅಧಿಕಾರಮದ, ವಿದ್ಯಾಮದ, ಸಂಪತ್ತಿನಮದ-ಮುಂತಾದವುಗಳಿಂದ ಬೀಗುವ ಮನುಷ್ಯನಿಗೆ ನಿನ್ನ ನಾಮಸ್ಮರಣೆಯನ್ನು ಮಾಡುವ ಅರ್ಹತೆಯೂ ಹೇಗೆ ಉಂಟಾದೀತು? ॥ ೨೬ ॥ ನೀನು ನಿಷ್ಕಾಮ ಭಕ್ತರ ಪರಮಧನವಾಗಿರುವೆ. ತ್ರಿಗುಣಗಳನ್ನು ಅವುಗಳ ಕಾರ್ಯಗಳನ್ನು ಮೀರಿರುವವನಾಗಿರುವೆ. ಆತ್ಮಾರಾಮನೂ, ಪ್ರಶಾಂತನೂ, ಕೈವಲ್ಯ ಮೋಕ್ಷಕ್ಕೆ ಅಧಿಪತಿಯೂ ಆದ ನಿನಗೆ ನಮಸ್ಕರಿಸುತ್ತೇನೆ. ॥ ೨೭ ॥ ಅನಾದಿಯೂ, ಅನಂತನೂ, ಸರ್ವವ್ಯಾಪಕನೂ, ಎಲ್ಲರ ನಿಯಾಮಕನೂ, ಕಾಲರೂಪೀ ಪರಮೇಶ್ವರನೂ ನೀನೇ ಆಗಿರುವೆ ಎಂದು ನಾನು ತಿಳಿಯುತ್ತೇನೆ. ಪ್ರಪಂಚದ ಸಮಸ್ತ ಪ್ರಾಣಿ, ಪದಾರ್ಥಗಳು ಪರಸ್ಪರ ವೈಷಮ್ಯದಿಂದ ಘರ್ಷಣೆ ಮಾಡುತ್ತಿದ್ದರೂ ನೀನು ಎಲ್ಲದರಲ್ಲಿ ಸಮಾನರೂಪದಿಂದ ಸಂಚರಿಸುತ್ತಿರುವೆ. ॥ ೨೮ ॥ ಭಗವಂತನೇ! ನೀನು ಮನುಷ್ಯರಂತೆ ಲೀಲೆಗಳನ್ನು ಮಾಡಿದಾಗ ನೀನು ಏನು ಮಾಡಲು ಬಯಸುವೆ ಎಂಬುದು ಯಾರೂ ತಿಳಿಯಲಾರರು. ನಿನಗೆ ಎಂದಿಗೂ ಯಾರೂ ಪ್ರಿಯರು ಇಲ್ಲ, ಅಪ್ರಿಯರೂ ಇಲ್ಲ. ನಿನ್ನ ಸಂಬಂಧದಲ್ಲಿ ಜನರ ಬುದ್ಧಿಯು ವಿಷಮವಾಗಿರುತ್ತದೆ. ॥ ೨೯ ॥ ವಿಶ್ವದ ಆತ್ಮರೂಪನಾಗಿರುವವನೇ! ನೀನು ಜನ್ಮ-ಕರ್ಮರಹಿತನಾದ ಶುದ್ಧಾತ್ಮ ಸ್ವರೂಪನೇ ಆಗಿದ್ದರೂ ಲೋಕದ ವಿಡಂಬನೆಗಾಗಿ ಪಶು-ಪಕ್ಷಿ ಮುಂತಾದ ತಿರ್ಯಕ್ ಜಂತುಗಳಲ್ಲಿಯೂ, ಮನುಷ್ಯರಲ್ಲಿಯೂ, ಮುನಿಗಳಲ್ಲಿಯೂ, ಜಲಚರಾದಿ ಪ್ರಾಣಿಗಳಲ್ಲಿಯೂ ಜನ್ಮತಳೆದು ಆ ಯೋನಿಗಳಿಗೆ ಅನುರೂಪವಾದ ದಿವ್ಯ ಕರ್ಮಗಳನ್ನು ಮಾಡುತ್ತಿರುವೆ. ಇದೆಂತಹ ನಿನ್ನ ಲೀಲೆಯು? ॥ ೩೦ ॥ ನೀನು ಬಾಲ್ಯದಲ್ಲಿ ತುಂಟತನದಲ್ಲಿ ಗಡಿಗೆಯನ್ನು ಒಡೆದಾಗ ಯಶೋದೆಯು ನಿನ್ನನ್ನು ಕಟ್ಟಿಹಾಕಲು ಕೈಯಲ್ಲಿ ಹಗ್ಗವನ್ನೆತ್ತಿಕೊಂಡು ಬಂದಾಗ, ನೀನು ಹೆದರಿದವನಂತೆ ನಟಿಸುತ್ತಿರುವಾಗ ಕಣ್ಣೀರು ಸುರಿಯುತ್ತಿತ್ತು. ಕಣ್ಣಿಗೆ ಹಚ್ಚಿದ ಕಾಡಿಗೆಯೆಲ್ಲ ಗಲ್ಲಕ್ಕೆ ಮೆತ್ತಿಕೊಂಡಿತ್ತು. ಕಣ್ಣುಗಳು ಚಂಚಲವಾಗಿದ್ದವು. ಮುಖವನ್ನು ತಗ್ಗಿಸಿಕೊಂಡಿದ್ದೆ. ನಿನ್ನ ಈ ಸ್ಥಿತಿಯ-ಲೀಲೆಯ ಧ್ಯಾನ ಮಾಡುತ್ತಾ ನಾನು ಪರವಶಳಾಗಿ ಹೋಗುತ್ತೇನೆ. ಯಾರ ಕುರಿತು ಭಯವೂ ಭಯಪಡುತ್ತಿದೆಯೋ ಅಂತಹವನ ಇದು ಸ್ಥಿತಿ! ಎಂತಹ ಸೋಜಿಗವಿದು? ॥ ೩೧ ॥ ನೀನು ಜನ್ಮ ರಹಿತನಾಗಿದ್ದರೂ ಏಕೆ ಜನ್ಮತಾಳಿದೆ? ಎಂಬುದಕ್ಕೆ ಕೆಲವು ಮಹಾಪುರುಷರು ಹೀಗೆ ಹೇಳುತ್ತಾರೆ- "ಮಲಯ ಪರ್ವತದ ಕೀರ್ತಿಯನ್ನು ಹರಡುವುದಕ್ಕಾಗಿ ಅಲ್ಲಿ ಗಂಧದ ಮರಗಳು ಹುಟ್ಟು

ಕೇಚಿದಾಹುರಜಂ ಜಾತಂ ಪುಣ್ಯಶ್ಲೋಕಸ್ಯ ಕೀರ್ತಯೇ ।
ಯದೋಃ ಪ್ರಿಯಸ್ಯಾನ್ವವಾಯೇ ಮಲಯಸ್ಯೇವ ಚಂದನಮ್ ॥ ೩೨ ॥

ಅಪರೇ ವಸುದೇವಸ್ಯ ದೇವಕ್ಯಾಂ ಯಾಚಿತೋಽಭ್ಯಗಾತ್ ।
ಅಜಸ್ತ್ವಮಸ್ಯ ಕ್ಷೇಮಾಯ ವಧಾಯ ಚ ಸುರದ್ವಿಷಾಮ್ ॥ ೩೩ ॥

ಭಾರಾವತಾರಣಾಯಾನ್ಯೇ ಭುವೋ ನಾವ ಇವೋದಧೌ ।
ಸೀದಂತ್ಯಾ ಭೂರಿಭಾರೇಣ ಜಾತೋ ಹ್ಯಾತ್ಮಭುವಾರ್ಥಿತಃ ॥ ೩೪ ॥

ಭವೇಽಸ್ಮಿನ್ ಕ್ಲಿಶ್ಯಮಾನಾನಾಮವಿದ್ಯಾಕಾಮಕರ್ಮಭಿಃ ।
ಶ್ರವಣಸ್ಮರಣಾರ್ಹಾಣಿ ಕರಿಷ್ಯನ್ನಿತಿ ಕೇಚನ ॥ ೩೫ ॥

ಶೃಣ್ವಂತಿ ಗಾಯಂತಿ ಗೃಣಂತ್ಯಭೀಕ್ಷ್ಣಶಃ
ಸ್ಮರಂತಿ ನಂದಂತಿ ತವೇಹಿತಂ ಜನಾಃ ।
ತ ಏವ ಪಶ್ಯಂತ್ಯಚಿರೇಣ ತಾವಕಂ
ಭವಪ್ರವಾಹೋಪರಮಂ ಪದಾಂಬುಜಮ್ ॥ ೩೬ ॥

ಅಪ್ಯದ್ಯ ನಸ್ತ್ವಂ ಸ್ವಕೃತೇಹಿತ ಪ್ರಭೋ
ಜಿಹಾಸಸಿ ಸ್ವಿತ್ಸುಹೃದೋಽನುಜೀವಿನಃ ।
ಯೇಷಾಂ ನ ಚಾನ್ಯದ್ಭವತಃ ಪದಾಂಬುಜಾತ್
ಪರಾಯಣಂ ರಾಜಸು ಯೋಜಿತಾಂಹಸಾಮ್ ॥ ೩೭ ॥

ಕೇ ವಯಂ ನಾಮರೂಪಾಭ್ಯಾಂ ಯದುಭಿಃ ಸಹ ಪಾಂಡವಾಃ ।
ಭವತೋಽದರ್ಶನಂ ಯರ್ಹಿ ಹೃಷೀಕಾಣಾಮಿವೇಶಿತುಃ ॥ ೩೮ ॥

ನೇಯಂ ಶೋಭಿಷ್ಯತೇ ತತ್ರ ಯಥೇದಾನೀಂ ಗದಾಧರ ।
ತ್ವತ್ಪದೈರಂಕಿತಾ ಭಾತಿ ಸ್ವಲಕ್ಷಣವಿಲಕ್ಷಿತೈಃ ॥ ೩೯ ॥

ಇಮೇ ಜನಪದಾಃ ಸ್ವೃದ್ಧಾಃ ಸುಪಕ್ವೌಷಧಿವೀರುಧಃ ।
ವನಾದ್ರಿನದ್ಯುದನ್ವಂತೋ ಹ್ಯೇಧಂತೇ ತವ ವೀಕ್ಷಿತೈಃ ॥ ೪೦ ॥

ವಂತೆಯೇ ಪುಣ್ಯಶ್ಲೋಕನೂ, ಪ್ರಿಯಭಕ್ತೋತ್ತಮನೂ ಆದ ಯದು ಮಹಾರಾಜನ ಕೀರ್ತಿಯನ್ನು ವಿಸ್ತಾರಪಡಿಸಲಿಕ್ಕಾಗಿ ನೀನು ಅವನ ವಂಶದಲ್ಲಿ ಅವತರಿಸಿರುವೆ." ॥ ೩೨ ॥ ಮತ್ತೆ ಕೆಲವರು ಹೇಳುತ್ತಾರೆ- 'ಹಿಂದಿನ ಜನ್ಮದಲ್ಲಿ ಸುತಪಾ ಮತ್ತು ಪೃಶ್ನಿ ಎಂಬ ರೂಪದಲ್ಲಿದ್ದ ವಸುದೇವ-ದೇವಕಿಯರು ಪಡೆದ ವರದಂತೆ ನೀನು ಜನ್ಮರಹಿತನಾದರೂ ಅವರಲ್ಲಿ ಪುತ್ರನಾಗಿ ಅವತರಿಸಿದೆ. ದೇವತೆಗಳ ಯಾಚನೆಯಂತೆ ಈ ಲೋಕಗಳ ಕ್ಷೇಮಕ್ಕಾಗಿಯೂ, ದೈತ್ಯರ ನಾಶಕ್ಕಾಗಿಯೂ ನೀನು ಜನ್ಮತಾಳಿದೆ.' ॥ ೩೩ ॥ ಇನ್ನು ಕೆಲವರು ಹೀಗೂ ಹೇಳುತ್ತಾರೆ – 'ಈ ಭೂಮಿಯು ಅಧರ್ಮದ ಭಾರದಿಂದ ಕಡುಪೀಡಿತಳಾಗಿ ಸಮುದ್ರದ ಮಧ್ಯದಲ್ಲಿ ಮುಳುಗುತ್ತಿರುವಾಗ ಬ್ರಹ್ಮದೇವರ ಪ್ರಾರ್ಥನೆಯಂತೆ ಭೂ ಭಾರವನ್ನು ಇಳುಹಲು ನೀನು ಅವತರಿಸಿದೆ." ॥ ೩೪ ॥ 'ಈ ಸಂಸಾರದಲ್ಲಿ ಅಜ್ಞಾನ, ಕಾಮನೆ, ಅನಾದಿಕರ್ಮ ಇವುಗಳ ಕಟ್ಟಿಗೆ ಸಿಲುಕಿ ಕಷ್ಟಪಡುತ್ತಿರುವ ಜನರ ಉದ್ಧಾರಕ್ಕಾಗಿ ಅವರಿಗೆ ಶ್ರವಣ-ಸ್ಮರಣೆಗಳಿಗೆ ಶುಭಾಲಂಬನವಾಗುವ ದಿವ್ಯವಾದ ಲೀಲೆಗಳನ್ನು ನಡೆಸುವ ಉದ್ದೇಶದಿಂದ ನೀನು ಅವತರಿಸಿರುವೆ' ಎಂದು ಕೆಲವು ಮಹಾತ್ಮರು ಹೇಳುತ್ತಾರೆ. ॥ ೩೫ ॥ ನಿನ್ನ ಭಾಗ್ಯಶಾಲಿಗಳಾದ ಭಕ್ತರು ಪದೇ-ಪದೇ ನಿನ್ನ ಚರಿತ್ರವನ್ನು ಶ್ರವಣಿಸುತ್ತಾ, ಕೀರ್ತಿಸುತ್ತಾ, ಸ್ಮರಿಸುತ್ತಾ ಆನಂದಿತರಾಗಿರುತ್ತಾರೆ. ಅಂತಹವರೇ ಜನ್ಮ-ಮರಣದ ಪ್ರವಾಹವನ್ನು ಎಂದೆಂದಿಗೂ ತಡೆಗಟ್ಟುವ ನಿನ್ನ ದಿವ್ಯವಾದ ಅಡಿದಾವರೆಗಳನ್ನು ಶೀಘ್ರವಾಗಿ ಸಾಕ್ಷಾತ್ಕರಿಸಿಕೊಳ್ಳುವರು. ॥ ೩೬ ॥

ಭಕ್ತರ ಎಲ್ಲ ಇಷ್ಟಾರ್ಥಗಳನ್ನು ಈಡೇರಿಸುವ ಕಲ್ಪವೃಕ್ಷವೇ! ಪ್ರಭುವೇ! ನಿನ್ನವರಾಗಿ ನಿನ್ನ ಸಂಬಂಧಿಗಳಾಗಿ, ನಿನ್ನನ್ನೇ ಅವಲಂಬಿಸಿ ಬಾಳುತ್ತಿರುವ ನಮ್ಮನ್ನು ಈಗಲೇ ಬಿಟ್ಟು ಹೊರಟು ಹೋಗಲು ಬಯಸುವೆಯಾ ? ನಮಗೆ ನಿನ್ನ ಚರಣಾರವಿಂದಗಳಲ್ಲದೆ ಬೇರೆ ಯಾವ ಆಸರೆಯೂ ಇಲ್ಲ. ಭೂಮಿಯಲ್ಲಿರುವ ರಾಜರೆಲ್ಲರೂ ನಮಗೆ ವಿರೋಧಿಗಳಾಗಿದ್ದಾರೆ ಎಂಬುದು ನಿನಗೆ ತಿಳಿದೇ ಇದೆ. ॥ ೩೭ ॥ ಆತ್ಮನು ಎಲ್ಲ ಇಂದ್ರಿಯಗಳಿಗೆ ಧಾರಕನೂ ಪ್ರೇರಕನು. ಅವನಲ್ಲದೆ ಇಂದ್ರಿಯಗಳಿಗೆ ಶಕ್ತಿ, ಅಸ್ತಿತ್ವ ಎಲ್ಲಿಯದು ? ಹಾಗೆಯೇ ನಿನ್ನ ದಿವ್ಯದರ್ಶನವಾಗದಿದ್ದರೆ ಯದುವಂಶಿಯರ ಹಾಗೂ ಪಾಂಡವರ ನಾಮ-ರೂಪ-ಅಸ್ತಿತ್ವ, ಶಕ್ತಿ, ಇವುಗಳು ಹೇಗೆ ಇರಬಲ್ಲವು ? ॥ ೩೮ ॥ ಪ್ರಭೋ ! ಗದಾಧರ ! ನಿನ್ನ ದಿವ್ಯ ಚರಣಾರವಿಂದಗಳ ವಿಲಕ್ಷಣವಾದ ಚಿಹ್ನೆಗಳಿಂದ ಈ ಕುರುಜಾಂಗಲ ಪ್ರದೇಶವು ಎಷ್ಟು ಶೋಭಾಯಮಾನವಾಗಿದೆಯೋ, ನೀನು ಇಲ್ಲಿಂದ ಹೊರಟು ಹೋದ ಬಳಿಕ ಆ ಕಾಂತಿಯು ಇಲ್ಲವಾಗುವುದು. ॥ ೩೯ ॥ ನಿನ್ನ ಕೃಪಾಕಟಾಕ್ಷದ ಪ್ರಭಾವದಿಂದಲೇ ಈ ದೇಶವು ಪಕ್ವವಾದ ಸಮೃದ್ಧಿಗಳಿಂದ, ಧಾನ್ಯ ಮತ್ತು ಫಲಪುಷ್ಪಭರಿತವಾದ ಗಿಡ-ಮರ-ಬಳ್ಳಿಗಳ ಸಂಪತ್ತುಗಳಿಂದ ಸಮೃದ್ಧವಾಗಿದೆ. ಅರಣ್ಯ-ಗಿರಿ-ನದೀ-ಸಮುದ್ರಗಳೂ ನಿನ್ನ ದೃಷ್ಟಿಯಿಂದ ವೃದ್ಧಿಯನ್ನು ಪಡೆದಿರುವವು. ॥ ೪೦ ॥ ವಿಶ್ವೇಶ್ವರನೂ, ವಿಶ್ವಾತ್ಮನೂ, ವಿಶ್ವಮೂರ್ತಿಯೂ ಆಗಿರುವ ಪ್ರಭುವೇ ! ಸ್ವಜನರಾದ ಈ ಪಾಂಡವರಲ್ಲಿ ಹಾಗೂ

ಅಥ ವಿಶ್ವೇಶ ವಿಶ್ವಾತ್ಮನ್ವಿಶ್ವಮೂರ್ತೇ ಸ್ವಕೇಷು ಮೇ ।
ಸ್ನೇಹಪಾಶಮಿಮಂ ಛಿಂಧಿ ದೃಢಂ ಪಾಂಡುಷು ವೃಷ್ಣಿಷು ॥ ೪೧ ॥

ತ್ವಯಿ ಮೇಽನನ್ಯವಿಷಯಾ ಮತಿರ್ಮಧುಪತೇಽಸಕೃತ್ ।
ರತಿಮುದ್ವಹತಾಂ ತದ್ವದ್ಗಂಗೇವೌಘಮುದನ್ವತಿ ॥ ೪೨ ॥

ಶ್ರೀಕೃಷ್ಣ ಕೃಷ್ಣಸಖ ವೃಷ್ಣ್ಯೃಷಭಾವನಿಧ್ರುಗ್
ರಾಜನ್ಯವಂಶದಹನಾನಪವರ್ಗವೀರ್ಯ ।
ಗೋವಿಂದ ಗೋದ್ವಿಜಸುರಾರ್ತಿಹರಾವತಾರ
ಯೋಗೇಶ್ವರಾಖಿಲಗುರೋ ಭಗವನ್ನಮಸ್ತೇ ॥ ೪೩ ॥

*ಸೂತ ಉವಾಚ*

ಪೃಥಯೇತ್ಥಂ ಕಲಪದೈಃ ಪರಿಣೂತಾಖಿಲೋದಯಃ ।
ಮಂದಂ ಜಹಾಸ ವೈಕುಂಠೋ ಮೋಹಯನ್ನಿವ ಮಾಯಯಾ ॥ ೪೪ ॥

ತಾಂ ಬಾಢಮಿತ್ಯುಪಾಮಂತ್ರ್ಯ ಪ್ರವಿಶ್ಯ ಗಜಸಾಹ್ವಯಮ್ ।
ಸ್ತ್ರಿಯಶ್ಚ ಸ್ವಪುರಂ ಯಾಸ್ಯನ್ ಪ್ರೇಮ್ಣಾ ರಾಜ್ಞಾ ನಿವಾರಿತಃ ॥ ೪೫ ॥

ವ್ಯಾಸಾದ್ಯೈರೀಶ್ವರೇಹಾಜ್ಞೈಃ ಕೃಷ್ಣೇನಾದ್ಭುತಕರ್ಮಣಾ ।
ಪ್ರಬೋಧಿತೋಽಪೀತಿಹಾಸೈರ್ನಾಬುಧ್ಯತ ಶುಚಾರ್ಪಿತಃ ॥ ೪೬ ॥

ಆಹ ರಾಜಾ ಧರ್ಮಸುತಶ್ಚಿಂತಯನ್ಸುಹೃದಾಂ ವಧಮ್ ।
ಪ್ರಾಕೃತೇನಾತ್ಮನಾ ವಿಪ್ರಾಃ ಸ್ನೇಹಮೋಹವಶಂ ಗತಃ ॥ ೪೭ ॥

ಅಹೋ ಮೇ ಪಶ್ಯತಾಜ್ಞಾನಂ ಹೃದಿ ರೂಢಂ ದುರಾತ್ಮನಃ ।
ಪಾರಕ್ಯಸ್ಯೈವ ದೇಹಸ್ಯ ಬಹ್ವ್ಯೋ ಮೇಽಕ್ಷೌಹಿಣೀರ್ಹತಾಃ ॥ ೪೮ ॥

ಬಾಲದ್ವಿಜಸುಹೃನ್ಮಿತ್ರಪಿತೃಭ್ರಾತೃಗುರುದ್ರುಹಃ ।
ನ ಮೇ ಸ್ಯಾನ್ನಿರಯಾನ್ಮೋಕ್ಷೋ ಹ್ಯಪಿ ವರ್ಷಾಯುತಾಯುತೈಃ ॥ ೪೯ ॥

ಯಾದವರಲ್ಲಿ ನನಗೆ ದೃಢವಾದ ಮಮತೆ ಬೆಳೆದು ಬಿಟ್ಟಿದೆ. ಈ ಪ್ರಾಕೃತವಾದ ಸ್ನೇಹಪಾಶವನ್ನು ಕತ್ತರಿಸಿ ಹಾಕಿಬಿಡು. ॥ ೪೧ ॥ ಪರಮಾನಂದ ಸ್ವರೂಪನಾದ ಮಧು ಪತಿಯೇ! ಗಂಗೆಯ ಅಖಂಡ ಪ್ರವಾಹವು ಸಮುದ್ರದಲ್ಲೇ ಸದಾ ಹೋಗಿ ಸೇರುವಂತೆಯೇ ನನ್ನ ಬುದ್ಧಿಯೂ ಅತ್ತ-ಇತ್ತ ಎಲ್ಲಿಯೂ ಹರಿಯದೆ ನಿನ್ನಲ್ಲಿಯೇ ಪ್ರೇಮ ರಸ ಪೂರ್ಣಪ್ರವಾಹವಾಗಿ ಸದಾ ಹರಿಯುತ್ತಿರಲಿ ಹಾಗೂ ಅಲ್ಲಿಯೇ ಶಾಶ್ವತವಾಗಿ ನೆಲೆಸಲಿ. ॥ ೪೨ ॥ ಶ್ರೀಕೃಷ್ಣಾ! ಅರ್ಜುನನ ಪ್ರಿಯಮಿತ್ರನೇ! ಯದುವಂಶ ಶಿರೋಮಣಿಯೇ! ಭೂಮಿಗೆ ಭಾರವಾಗಿರುವ ರಾಜವೇಶಧಾರಿಗಳಾದ ದೈತ್ಯರ ಸಂಹಾರಕ್ಕಾಗಿ ಬೆಂಕಿಯಂತಿರುವವನೇ! ಅನಂತವೀರ್ಯನೇ! ಗೋವಿಂದಾ! ಗೋ, ದ್ವಿಜ, ದೇವತೆಗಳ ದುಃಖವನ್ನು ಹರಿಸಲು ಅವತರಿಸಿದ ಸ್ವಾಮಿಯೇ! ಯೋಗೇಶ್ವರನೇ! ಚರಾಚರದ ಗುರುವೇ! ಭಗವಂತನೇ! ನಿನಗೆ ಪದೇ-ಪದೇ ನಮಸ್ಕರಿಸುತ್ತಿದ್ದೇನೆ. ॥ ೪೩ ॥

**ಸೂತಪುರಾಣಿಕರು ಹೇಳುತ್ತಾರೆ** - ಕುಂತೀದೇವಿಯು ಹೀಗೆ ಮಧುರವಾದ ಶಬ್ದಗಳಿಂದ ಭಗವಂತನ ಹೆಚ್ಚಿನ ಲೀಲೆಗಳನ್ನು ವರ್ಣಿಸಿದಳು. ಇದನ್ನು ಕೇಳಿ ಭಗವಾನ್ ಶ್ರೀಕೃಷ್ಣನು ತನ್ನ ಮಾಯೆಯಿಂದ, ಆಕೆಯನ್ನು ಮೋಹಗೊಳಿಸುವಂತೆ ಮಧುರ ಮಂದಹಾಸವನ್ನು ಬೀರಿದನು. ॥ ೪೪ ॥ 'ಅತ್ತೆ! ಹಾಗೆಯೇ ಆಗಲಿ' ಎಂದು ಕುಂತಿಗೆ ಹೇಳಿ ಹಸ್ತಿನಾಪುರದ ಅರಮನೆಗೆ ಹಿಂದಿರುಗಿದನು. ಅಲ್ಲಿ ಸುಭದ್ರೆಯೇ ಮುಂತಾದ ಸ್ತ್ರೀಯರಿಂದ ಬೀಳ್ಕೊಂಡು ಹೊರಡಲನುವಾದಾಗ ರಾಜಾ ಯುಧಿಷ್ಠಿರನು ಪರಮಪ್ರೇಮದಿಂದ ತಡೆಗಟ್ಟಿದನು. ॥ ೪೫ ॥ ಧರ್ಮರಾಜನು ಬಂಧು-ಮಿತ್ರರ ಮರಣದಿಂದ ಅತ್ಯಂತ ಶೋಕಾಕುಲನಾಗಿದ್ದನು. ಭಗವಂತನ ಲೀಲೆಯ ಮರ್ಮವನ್ನರಿತ ವ್ಯಾಸಾದಿಮಹರ್ಷಿಗಳೂ ಹಾಗೂ ಸ್ವಯಂ ಅದ್ಭುತ ಚರಿತನಾದ ಭಗವಾನ್ ಶ್ರೀಕೃಷ್ಣನೂ ಕೂಡ ಅನೇಕ ಇತಿಹಾಸಗಳನ್ನು ಹೇಳಿ ಆತನನ್ನು ಸಾಂತ್ವನಗೊಳಿಸಲು ಪ್ರಯತ್ನಿಸಿದರೂ ಆತನಿಗೆ ಸಮಾಧಾನವಾಗಲಿಲ್ಲ, ಅವನ ಶೋಕವು ದೂರವಾಗಲಿಲ್ಲ. ॥ ೪೬ ॥ ಶೌನಕಾದಿ ಮಹರ್ಷಿಗಳೇ! ಧರ್ಮಪುತ್ರನಾದ ಮಹಾ ರಾಜಾ ಯುಧಿಷ್ಠಿರನನ್ನು ಪ್ರಾಕೃತವಾದ ಮನಸ್ಸು ಸ್ನೇಹ-ಮೋಹಗಳಲ್ಲಿ ಬಲವಾಗಿ ಬಂಧಿಸಿಬಿಟ್ಟಿತ್ತು. ಅದರಿಂದ ಪರವಶನಾದ ಆತನು ಬಂಧು-ಮಿತ್ರರ ವಧೆಯನ್ನೇ ಕುರಿತು ಚಿಂತಿಸುತ್ತಾ ಹೀಗೆಂದುಕೊಂಡನು - ಅಯ್ಯೋ! ದುರಾತ್ಮನಾದ ನನ್ನ ಹೃದಯದಲ್ಲಿ ಎಂತಹ ಅಜ್ಞಾನ ಬೇರೂರಿದೆ? ನಾಯಿ-ನರಿಗಳಿಗೆ ಆಹಾರವಾದ ಈ ಅನಾತ್ಮದೇಹಕ್ಕಾಗಿ ನಾನು ಅನೇಕ ಅಕ್ಷೌಹಿಣೀ* ಸೈನ್ಯವನ್ನು ಬಲಿಗೊಟ್ಟೆನು! ॥ ೪೭-೪೮ ॥ ನಾನು ಬಾಲಕರು, ಬ್ರಾಹ್ಮಣರು, ನೆಂಟರಿಷ್ಟರು, ತಂದೆ-ಅಣ್ಣ-ತಮ್ಮಂದಿರ ಸ್ಥಾನದಲ್ಲಿರುವವರು, ಗುರು ಜನರು-ಹೀಗೆ ಇವರಿಗೆಲ್ಲ ದ್ರೋಹ ಮಾಡಿದೆನು. ಇಂತಹ ಮಹಾಪಾಪವನ್ನು ಮಾಡಿದ ನನಗೆ ಕೋಟ್ಯಂತರ ವರ್ಷಗಳು ಕಳೆದರೂ ನರಕದಿಂದ ಬಿಡುಗಡೆಯಾಗದು. ॥ ೪೯ ॥ 'ರಾಜನು

* ಒಂದು ಅಕ್ಷೌಹಿಣಿ ಎಂದರೆ - ೨೧,೮೭೦ ರಥಗಳು, ೨೧೮೭೦ ಆನೆಗಳು, ೧,೦೯, ೩೫೦ ಕಾಲಾಳುಗಳು, ೬೫, ೬೧೦ ಕುದುರೆಸವಾರರು. ಇಷ್ಟು ಸೇನೆ ಸೇರಿದರೆ ಒಂದು ಅಕ್ಷೌಹಿಣಿ ಆಗುತ್ತದೆ.

ನೈನೋ ರಾಜ್ಞಃ ಪ್ರಜಾಭರ್ತುರ್-
ಧರ್ಮಯುದ್ಧೇ ವಧೋ ದ್ವಿಷಾಮ್ ।
ಇತಿ ಮೇ ನ ತು ಬೋಧಾಯ
ಕಲ್ಪತೇ ಶಾಸನಂ ವಚಃ ॥ ೫೦ ॥

ಸ್ತ್ರೀಣಾಂ ಮದ್ಧತಬಂಧೂನಾಂ
ದ್ರೋಹೋ ಯೋಽಸಾವಿಹೋತ್ಥಿತಃ ।
ಕರ್ಮಭಿರ್ಗೃಹಮೇಧೀಯೈರ್ನಾಹಂ
ಕಲ್ಪೋ ವ್ಯಪೋಹಿತುಮ್ ॥ ೫೧ ॥

ಯಥಾ ಪಂಕೇನ ಪಂಕಾಂಭಃ ಸುರಯಾ ವಾ ಸುರಾಕೃತಮ್ ।
ಭೂತಹತ್ಯಾಂ ತಥೈವೈಕಾಂ ನ ಯಜ್ಞೈರ್ಮಾಷ್ಟುಮರ್ಹತಿ
॥ ೫೨ ॥

ಪ್ರಜೆಗಳ ರಕ್ಷಣೆಗಾಗಿ ಧರ್ಮಯುದ್ಧದಲ್ಲಿ ಶತ್ರುಗಳನ್ನು ಕೊಂದರೆ ಅದರಿಂದ ಅವನಿಗೆ ಪಾಪತಟ್ಟದು' ಎಂಬ ಶಾಸ್ತ್ರವಚನವಿದ್ದರೂ ಇದರಿಂದ ನನಗೆ ಸಮಾಧಾನ ಆಗುತ್ತಿಲ್ಲ. ॥ ೫೦ ॥ ಈ ಯುದ್ಧದಲ್ಲಿ ನಾನು ಕೊಂದುಹಾಕಿರುವ ನೆಂಟರಿಷ್ಟರನ್ನು ಕಳೆದುಕೊಂಡು ಕೊರಗುತ್ತಿರುವ ಹೆಂಗಸರಿಗೆ ನನ್ನಿಂದಾದ ದ್ರೋಹವನ್ನು ತೊಡೆದು ಹಾಕುವುದಕ್ಕೆ ಗೃಹಸ್ಥರು ಆಚರಿಸಲು ಯೋಗ್ಯವಾದ ಯಾವ ಯಜ್ಞಯಾಗಾದಿಗಳಿಂದಲೂ ಸಾಧ್ಯವಿಲ್ಲ. ॥ ೫೧ ॥ ಕೆಸರಿನಿಂದ ಕೊಳಕಾದ ನೀರನ್ನು ಕೆಸರಿನಿಂದಲೇ ತೊಳೆಯಲಾಗುವುದಿಲ್ಲ, ಮದ್ಯದಿಂದ ಉಂಟಾದ ಅಪವಿತ್ರತೆಯನ್ನು ಮದ್ಯದಿಂದಲೇ ಹೋಗಲಾಡಿಸಲಾಗುವುದಿಲ್ಲ. ಹಾಗೆಯೇ ಪ್ರಾಣಿಹಿಂಸೆಯಿಂದಲೇ ಕೂಡಿದ ಅನೇಕ ಯಜ್ಞಗಳಿಂದಲೂ ಒಂದು ಪ್ರಾಣಿ ಹತ್ಯೆಯ ಪಾಪದ ಪ್ರಾಯಶ್ಚಿತ್ತವೂ ಆಗಲಾರದು. ಹಾಗಿರುವಾಗ ಇಷ್ಟೊಂದು ಪಾಪವನ್ನು ಹೋಗಲಾಡಿಸಬಹುದೇ ? ಹೀಗೆ ಯುಧಿಷ್ಠಿರನು ಮನಸ್ಸಿನಲ್ಲಿ ಬಹಳ ವ್ಯಥೆ ಪಡುತ್ತಿದ್ದನು. ॥ ೫೨ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಕುಂತೀಸ್ತುತಿರ್ಯುಧಿಷ್ಠಿರಾನುತಾಪೋ ನಾಮಾಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಯುಧಿಷ್ಠಿರಾದಿಗಳು ಭೀಷ್ಮರ ಬಳಿಗೆ ಹೋದುದು, ಶ್ರೀಕೃಷ್ಣಸ್ತುತಿ ಪೂರ್ವಕ ಭೀಷ್ಮ ನಿರ್ಯಾಣ

*ಸೂತ ಉವಾಚ*

ಇತಿ ಭೀತಃ ಪ್ರಜಾದ್ರೋಹಾತ್ಸರ್ವಧರ್ಮವಿವಿತ್ಸಯಾ ।
ತತೋ ವಿನಶನಂ ಪ್ರಾಗಾದ್ ಯತ್ರ ದೇವವ್ರತೋಽಪತತ್
॥ ೧ ॥

ತದಾ ತೇ ಭ್ರಾತರಃ ಸರ್ವೇ ಸದಶ್ವೈಃ ಸ್ವರ್ಣಭೂಷಿತೈಃ ।
ಅನ್ವಗಚ್ಛನ್ ರಥೈರ್ವಿಪ್ರಾ ವ್ಯಾಸಧೌಮ್ಯಾದಯಸ್ತಥಾ
॥ ೨ ॥

ಭಗವಾನಪಿ ವಿಪ್ರರ್ಷೇ ರಥೇನ ಸಧನಂಜಯಃ ।
ಸ ತೈರ್ವ್ಯರೋಚತ ನೃಪಃ ಕುಬೇರ ಇವ ಗುಹ್ಯಕೈಃ
॥ ೩ ॥

ದೃಷ್ಟ್ವಾ ನಿಪತಿತಂ ಭೂಮೌ ದಿವಶ್ಚ್ಯುತಮಿವಾಮರಮ್ ।
ಪ್ರಣೇಮುಃ ಪಾಂಡವಾ ಭೀಷ್ಮಂ ಸಾನುಗಾಃ ಸಹ ಚಕ್ರಿಣಾ
॥ ೪ ॥

ತತ್ರ ಬ್ರಹ್ಮರ್ಷಯಃ ಸರ್ವೇ ದೇವರ್ಷಯಶ್ಚ ಸತ್ತಮ ।
ರಾಜರ್ಷಯಶ್ಚ ತತ್ರಾಸನ್‌ದ್ರಷ್ಟುಂ ಭರತಪುಂಗವಮ್
॥ ೫ ॥

**ಸೂತಪುರಾಣಿಕರು ಹೇಳುತ್ತಾರೆ** – ಹೀಗೆ ತನ್ನಿಂದ ಪ್ರಜಾದ್ರೋಹವಾಯಿತೆಂದು ಹೆದರಿದ ಧರ್ಮರಾಜನು ಧರ್ಮ ರಹಸ್ಯವನ್ನು ತಿಳಿದುಕೊಳ್ಳುವ ಇಚ್ಛೆಯಿಂದ ಭೀಷ್ಮಪಿತಾಮಹರು ಶರಶಯ್ಯೆಯಲ್ಲಿ ಪವಡಿಸಿದ್ದ ಕುರುಕ್ಷೇತ್ರಕ್ಕೆ ಹೋದನು. ॥ ೧ ॥ ಆಗ ಅವನ ಒಡಹುಟ್ಟಿದವರೆಲ್ಲರೂ ಒಳ್ಳೆಯ ಅಶ್ವಗಳು ಹೂಡಲ್ಪಟ್ಟ ಸುವರ್ಣಾಲಂಕೃತವಾದ ರಥಗಳಲ್ಲಿ ಕುಳಿತುಕೊಂಡು ಯುಧಿಷ್ಠಿರನನ್ನು ಹಿಂಬಾಲಿಸಿದರು. ಅವರೊಂದಿಗೆ ವೇದವ್ಯಾಸರು, ಧೌಮ್ಯರೆ ಮುಂತಾದ ಮಹರ್ಷಿಗಳೂ ಬ್ರಾಹ್ಮಣರೂ ಹೋದರು. ॥ ೨ ॥ ಶೌನಕರೇ ! ಅರ್ಜುನನೊಡನೆ ಭಗವಾನ್ ಶ್ರೀಕೃಷ್ಣನೂ ರಥವನ್ನೇರಿ ಹೊರಟನು. ಅವರೆಲ್ಲರಿಂದೊಡಗೂಡಿದ ಮಹಾರಾಜ ಯುಧಿಷ್ಠಿರನು ಯಕ್ಷಮಂಡಲಿಯಿಂದ ಸುತ್ತುವರಿಯಲ್ಪಟ್ಟ ಕುಬೇರನಂತೆ ಕಂಗೊಳಿಸುತ್ತಿದ್ದನು. ॥ ೩ ॥ ಸ್ವರ್ಗದಿಂದ ಜಾರಿ ಬಿದ್ದ ದೇವತೆಯಂತೆ ಭೂಮಿಯಲ್ಲಿ ಪವಡಿಸಿದ್ದ ದೇವವ್ರತರಾದ ಭೀಷ್ಮರನ್ನು ಕಂಡು ಪರಿವಾರ ಸಹಿತ ಪಾಂಡವರು, ಶ್ರೀಕೃಷ್ಣ ಪರಮಾತ್ಮನಿಂದೊಡಗೂಡಿ ಅವರಿಗೆ ನಮಸ್ಕಾರ ಮಾಡಿದರು. ॥ ೪ ॥ ಶೌನಕಾದಿಗಳೇ ! ಆಗಲೇ ಭರತಕುಲತಿಲಕರಾದ ಭೀಷ್ಮ ಪಿತಾಮಹರನ್ನು ಸಂದರ್ಶಿಸಲು ಎಲ್ಲ ಬ್ರಹ್ಮರ್ಷಿಗಳೂ, ದೇವರ್ಷಿಗಳೂ, ರಾಜರ್ಷಿಗಳೂ ಅಲ್ಲಿಗೆ ಆಗಮಿಸಿದರು. ॥ ೫ ॥

ಪರ್ವತೋ ನಾರದೋ ಧೌಮ್ಯೋ ಭಗವಾನ್ಬಾದರಾಯಣಃ ।
ಬೃಹದಶ್ವೋ ಭರದ್ವಾಜಃ ಸಶಿಷ್ಯೋ ರೇಣುಕಾಸುತಃ ॥ ೬ ॥

ವಸಿಷ್ಠ ಇಂದ್ರಪ್ರಮದಸ್ತ್ರಿತೋ ಗೃತ್ಸಮದೋಽಸಿತಃ ।
ಕಕ್ಷೀವಾನ್ಗೌತಮೋಽತ್ರಿಶ್ಚ ಕೌಶಿಕೋಽಥ ಸುದರ್ಶನಃ ॥ ೭ ॥

ಅನ್ಯೇ ಚ ಮುನಯೋ ಬ್ರಹ್ಮನ್ಬ್ರಹ್ಮರಾತಾದಯೋಽಮಲಾಃ ।
ಶಿಷ್ಯೈರುಪೇತಾ ಆಜಗ್ಮುಃ ಕಶ್ಯಪಾಂಗಿರಸಾದಯಃ ॥ ೮ ॥

ತಾನ್ಸಮೇತಾನ್ ಮಹಾಭಾಗಾನುಪಲಭ್ಯ ವಸೂತ್ತಮಃ।
ಪೂಜಯಾಮಾಸ ಧರ್ಮಜ್ಞೋ ದೇಶಕಾಲವಿಭಾಗವಿತ್ ॥ ೯ ॥

ಕೃಷ್ಣಂ ಚ ತತ್ಪ್ರಭಾವಜ್ಞ ಆಸೀನಂ ಜಗದೀಶ್ವರಮ್ ।
ಹೃದಿಸ್ಥಂ ಪೂಜಯಾಮಾಸ ಮಾಯಯೋಪಾತ್ತವಿಗ್ರಹಮ್ ॥ ೧೦ ॥

ಪಾಂಡುಪುತ್ರಾನುಪಾಸೀನಾನ್ಪ್ರಶ್ರಯಪ್ರೇಮಸಂಗತಾನ್ ।
ಅಭ್ಯಾಚಷ್ಟಾನುರಾಗಾಸ್ರೈರಂಧೀಭೂತೇನ ಚಕ್ಷುಷಾ ॥ ೧೧ ॥

ಅಹೋ ಕಷ್ಟಮಹೋಽನ್ಯಾಯ್ಯಂ ಯದ್ಯೂಯಂ ಧರ್ಮನಂದನಾಃ ।
ಜೀವಿತುಂ ನಾರ್ಹಥ ಕ್ಲಿಷ್ಟಂ ವಿಪ್ರಧರ್ಮಾಚ್ಯುತಾಶ್ರಯಾಃ ॥ ೧೨ ॥

ಸಂಸ್ಥಿತೇಽತಿರಥೇ ಪಾಂಡೌ ಪೃಥಾ ಬಾಲಪ್ರಜಾವಧೂಃ ।
ಯುಷ್ಮತ್ಕೃತೇ ಬಹೂನ್ ಕ್ಲೇಶಾನ್ ಪ್ರಾಪ್ತಾ ತೋಕವತೀ ಮುಹುಃ ॥ ೧೩ ॥

ಸರ್ವಂ ಕಾಲಕೃತಂ ಮನ್ಯೇ ಭವತಾಂ ಚ ಯದಪ್ರಿಯಮ್ ।
ಸಪಾಲೋ ಯದ್ವಶೇ ಲೋಕೋ ವಾಯೋರಿವ ಘನಾವಲಿಃ ॥ ೧೪ ॥

ಯತ್ರ ಧರ್ಮಸುತೋ ರಾಜಾ ಗದಾಪಾಣಿರ್ವೃಕೋದರಃ ।
ಕೃಷ್ಣೋಽಸ್ತ್ರೀ ಗಾಂಡಿವಂ ಚಾಪಂ ಸುಹೃತ್ಕೃಷ್ಣಸ್ತತೋ ವಿಪತ್ ॥ ೧೫ ॥

ನ ಹ್ಯಸ್ಯ ಕರ್ಹಿಚಿದ್ರಾಜನ್ಪುಮಾನ್ವೇದವಿಧಿತ್ಸಿತಮ್ ।
ಯದ್ವಿಜಿಜ್ಞಾಸಯಾ ಯುಕ್ತಾ ಮುಹ್ಯಂತಿ ಕವಯೋಽಪಿ ಹಿ ॥ ೧೬ ॥

ತಸ್ಮಾದಿದಂ ದೈವತಂತ್ರಂ ವ್ಯವಸ್ಯ ಭರತರ್ಷಭ ।
ತಸ್ಯಾನುವಿಹಿತೋಽನಾಥಾ ನಾಥ ಪಾಹಿ ಪ್ರಜಾಃ ಪ್ರಭೋ ॥ ೧೭ ॥

ಪರ್ವತರೂ, ನಾರದರೂ, ಧೌಮ್ಯರೂ, ಭಗವಾನ್ ವೇದವ್ಯಾಸರೂ, ಬೃಹದಶ್ವರೂ, ಭರದ್ವಾಜರೂ, ಶಿಷ್ಯರಿಂದೊಡಗೂಡಿ ಪರಶುರಾಮರೂ, ವಸಿಷ್ಠರೂ, ಇಂದ್ರಪ್ರಮದರೂ, ತ್ರಿತರೂ, ಗೃತ್ಸಮದರೂ, ಅಸಿತರೂ, ಕಕ್ಷೀವಂತರೂ, ಗೌತಮರೂ, ಅತ್ರಿಗಳೂ, ವಿಶ್ವಾಮಿತ್ರರೂ, ಸುದರ್ಶನರೂ, ಬ್ರಹ್ಮರತರಾದ ಶುಕಮಹಾಮುನಿಗಳೂ, ಕಶ್ಯಪರೂ, ಅಂಗೀರಸರೂ ಮೊದಲಾದ ಶುಗ್ಧಾತ್ಮರಾದ ಮಹರ್ಷಿಗಳು ಶಿಷ್ಯರಸಮೇತರಾಗಿ ಅಲ್ಲಿಗೆ ಆಗಮಿಸಿದರು. ॥ ೬-೮ ॥ ದೇಶ-ಕಾಲದ ವಿಭಾಗವನ್ನು ತಿಳಿದವರಾದ, ಧರ್ಮಜ್ಞರಾದ, ವಸುದೇವತೆಯ ಅವತಾರವಾಗಿದ್ದ ಭೀಷ್ಮ ಪಿತಾಮಹರು ಅಲ್ಲಿ ನೆರೆದಿದ್ದ ಮಹಾಭಾಗ್ಯಶಾಲಿಗಳಾದ ಮುನಿಶ್ರೇಷ್ಠರೆಲ್ಲರನ್ನೂ ಸ್ವಾಗತಿಸಿ ಮನಸ್ಸಿನಿಂದ ಪೂಜಿಸಿದರು. ॥ ೯ ॥ ಹಾಗೆಯೇ ಶ್ರೀಕೃಷ್ಣನ ಪ್ರಭಾವವನ್ನು ಅರಿತಿದ್ದ ಆ ಮಹಾತ್ಮರು ಅಲ್ಲಿಯೇ ಕುಳಿತ್ತಿದ್ದ ಮಾಯಾಮಾನುಷರೂಪಧಾರಿ ಯಾಗಿದ್ದ ಹೃದಯಾಂತರ್ಯಾಮಿಯಾದ, ಜಗದೀಶ್ವರನಾದ ಭಗವಾನ್ ಶ್ರೀಕೃಷ್ಣನನ್ನು ಒಳಗೂ-ಹೊರಗೂ ಪೂಜಿಸಿದರು. ॥ ೧೦ ॥

ಪಾಂಡವರು ತುಂಬಾ ವಿನಯ, ಪ್ರೇಮದೊಂದಿಗೆ ಭೀಷ್ಮ ಪಿತಾಮಹರ ಬಳಿಯಲ್ಲಿ ಕುಳಿತರು. ಅವರನ್ನು ನೋಡಿ ಭೀಷ್ಮರ ಕಣ್ಣುಗಳು ಪ್ರೇಮಗಂಬನಿಗಳಿಂದ ತುಂಬಿ ಬಂದವು. ಪಾಂಡವರನ್ನು ನೋಡುತ್ತಾ ಹೀಗೆಂದರು. ॥ ೧೧ ॥ ಧರ್ಮ ಪುತ್ರರೇ ! ನೀವುಗಳು ಬ್ರಾಹ್ಮಣರನ್ನೂ, ಧರ್ಮವನ್ನೂ, ಮತ್ತು ಭಗವಂತನನ್ನು ಆಶ್ರಯಿಸಿದ್ದರೂ ಇಷ್ಟು ಕಷ್ಟದಿಂದ ಬದುಕ ಬೇಕಾಯಿತಲ್ಲ ! ಅಯ್ಯೋ ! ಎಂತಹ ಕಷ್ಟ, ಅನ್ಯಾಯ ನಿಮಗೆ ಒದಗಿತಲ್ಲ ಇಂತಹ ಕಷ್ಟ-ಕಾರ್ಪಣ್ಯಗಳ ಬದುಕಿಗೆ ನೀವು ತಕ್ಕವರಲ್ಲ. ॥ ೧೨ ॥ ಅತಿರಥನಾದ ಪಾಂಡುವು ಅಕಾಲದಲ್ಲಿ ಸ್ವರ್ಗಸ್ಥನಾದಾಗ ನಿಮಗಿನ್ನು ಎಳೆಯ ವಯಸ್ಸು, ಆಗ ಕುಂತಿಯು ನಿಮಗಾಗಿ ಎಷ್ಟು ಕಷ್ಟಪಡಬೇಕಾಯಿತು ! ನೀವೂ ಕೂಡ ಎಷ್ಟೊಂದು ಕಷ್ಟವನ್ನು ಅನುಭವಿಸಿದಿರಿ. ॥ ೧೩ ॥ ಮೋಡಗಳು ವಾಯುವಿನ ವಶವಿರುವಂತೆ, ಲೋಕಪಾಲರಿಂದ ಕೂಡಿದ ಇಡೀ ಜಗತ್ತೇ ಕಾಲಕ್ಕೆ ಅಧೀನವಾಗಿದೆ. ಆದ್ದರಿಂದ ನಿಮಗೆ ಜೀವನದಲ್ಲೊದಗಿದ ಆ ಅಪ್ರಿಯಘಟನೆಗಳೆಲ್ಲವೂ ಆ ಕಾಲನ ಲೀಲೆಯೇ ಆಗಿವೆ ಎಂದು ನಾನು ತಿಳಿಯುತ್ತೇನೆ. ॥ ೧೪ ॥ ಹಾಗಿಲ್ಲದಿದ್ದರೆ, ಸಾಕ್ಷಾತ್ ಧರ್ಮಪುತ್ರ ಯುಧಿಷ್ಠಿರನೇ ರಾಜನಾಗಿದ್ದಾಗ, ಗದಾಪಾಣಿಯಾದ ಭೀಮಸೇನನೂ ಮತ್ತು ಧನುರ್ಧಾರಿಯಾದ ಅರ್ಜುನನು ರಕ್ಷಕರಾಗಿರುವಾಗ, ಸಾಕ್ಷಾತ್ ಶ್ರೀಕೃಷ್ಣಪರಮಾತ್ಮನೇ ಗೆಳೆಯನಾಗಿರುವಾಗಲೂ ವಿಪತ್ತುಗಳು ಒದಗುವುದುಂಟೇ ? ॥ ೧೫ ॥ ಧರ್ಮನಂದನನೇ ! ಕಾಲರೂಪಿಯಾದ ಈ ಶ್ರೀಕೃಷ್ಣನು ಯಾವಾಗ ಏನನ್ನು ಮಾಡ ಬಯಸುತ್ತಾನೆ ಎಂಬುದನ್ನು ಯಾರೂ ಅರಿಯರು. ಅದನ್ನರಿಯಲು ಬಯಸಿ ದೊಡ್ಡ-ದೊಡ್ಡ ಜ್ಞಾನಿಗಳೂ ಕೂಡ ಆ ವಿಷಯದಲ್ಲಿ ಮೋಹಿತರಾಗುವರು. ॥ ೧೬ ॥ ಭರತಶ್ರೇಷ್ಠನೇ! ಪ್ರಪಂಚದ ಎಲ್ಲ ಘಟನೆಗಳು ಭಗವಂತನ ಇಚ್ಛೆಗೆ ಅಧೀನವಾಗಿವೆ. ಇದನ್ನರಿತು ಅದಕ್ಕನುಗುಣವಾಗಿ ನಡೆಯುತ್ತಾ ಅನಾಥರಾಗಿರುವ ಪ್ರಜೆಗಳನ್ನು ಪಾಲಿಸು. ಏಕೆಂದರೆ, ಈಗ ನೀನೇ ಇವರಿಗೆ ಒಡೆಯನಾಗಿರುವೆ, ಇದಕ್ಕೆ ಸಮರ್ಥನಾಗಿರುವೆ. ॥ ೧೭ ॥ ಈ ಶ್ರೀಕೃಷ್ಣಪರಮಾತ್ಮ

ಏಷ ವೈ ಭಗವಾನ್ಸಾಕ್ಷಾದಾದ್ಯೋ ನಾರಾಯಣಃ ಪುಮಾನ್ ।
ಮೋಹಯನ್ಮಾಯಯಾ ಲೋಕಂ ಗೂಢಶ್ಚರತಿ ವೃಷ್ಣಿಷು ॥ ೧೮ ॥

ಅಸ್ಯಾನುಭಾವಂ ಭಗವಾನ್ವೇದ ಗುಹ್ಯತಮಂ ಶಿವಃ ।
ದೇವರ್ಷಿರ್ನಾರದಃ ಸಾಕ್ಷಾದ್ಭಗವಾನ್ಕಪಿಲೋ ನೃಪ ॥ ೧೯ ॥

ಯಂ ಮನ್ಯಸೇ ಮಾತುಲೇಯಂ ಪ್ರಿಯಂ ಮಿತ್ರಂ ಸುಹೃತ್ತಮಮ್ ।
ಅಕರೋಃ ಸಚಿವಂ ದೂತಂ ಸೌಹೃದಾದಥ ಸಾರಥಿಮ್ ॥ ೨೦ ॥

ಸರ್ವಾತ್ಮನಃ ಸಮದೃಶೋ ಹ್ಯದ್ವಯಸ್ಯಾನಹಂಕೃತೇಃ ।
ತತ್ಕೃತಂ ಮತಿವೈಷಮ್ಯಂ ನಿರವದ್ಯಸ್ಯ ನ ಕ್ವಚಿತ್ ॥ ೨೧ ॥

ತಥಾಪ್ಯೇಕಾಂತಭಕ್ತೇಷು ಪಶ್ಯ ಭೂಪಾನುಕಂಪಿತಮ್ ।
ಯನ್ಮೇಽಸೂಂಸ್ತ್ಯಜತಃ ಸಾಕ್ಷಾತ್ಕೃಷ್ಣೋ ದರ್ಶನಮಾಗತಃ ॥ ೨೨ ॥

ಭಕ್ತ್ಯಾವೇಶ್ಯ ಮನೋ ಯಸ್ಮಿನ್ವಾಚಾ ಯನ್ನಾಮ ಕೀರ್ತಯನ್ ।
ತ್ಯಜನ್ಕಲೇವರಂ ಯೋಗೀ ಮುಚ್ಯತೇ ಕಾಮಕರ್ಮಭಿಃ ॥ ೨೩ ॥

ಸ ದೇವದೇವೋ ಭಗವಾನ್ಪ್ರತೀಕ್ಷತಾಂ
ಕಲೇವರಂ ಯಾವದಿದಂ ಹಿನೋಮ್ಯಹಮ್ ।
ಪ್ರಸನ್ನಹಾಸಾರುಣಲೋಚನೋಲ್ಲಸ-
ನ್ಮುಖಾಂಬುಜೋ ಧ್ಯಾನಪಥಶ್ಚತುರ್ಭುಜಃ ॥ ೨೪ ॥

*ಸೂತ ಉವಾಚ*

ಯುಧಿಷ್ಠಿರಸ್ತದಾಕರ್ಣ್ಯ ಶಯಾನಂ ಶರಪಂಜರೇ ।
ಅಪೃಚ್ಛದ್ವಿವಿಧಾನ್ ಧರ್ಮಾನೃಷೀಣಾಂ ಚಾನುಶೃಣ್ವತಾಮ್ ॥ ೨೫ ॥

ಪುರುಷಸ್ವಭಾವವಿಹಿತಾನ್ಯಥಾವರ್ಣಂ ಯಥಾಶ್ರಮಮ್ ।
ವೈರಾಗ್ಯರಾಗೋಪಾಧಿಭ್ಯಾಮಾಮ್ನಾತೋಭಯಲಕ್ಷಣಾನ್ ॥ ೨೬ ॥

ನಾದರೋ ಸಾಕ್ಷಾತ್ ಭಗವಂತನಾಗಿದ್ದಾನೆ. ಎಲ್ಲಕ್ಕೂ ಆದಿಕಾರಣನಾಗಿದ್ದು ಪರಮ ಪುರುಷ ನಾರಾಯಣನಾಗಿರುವನು. ತನ್ನ ಮಾಯೆಯಿಂದ ಜನರನ್ನು ಮೋಹಗೊಳಿಸುತ್ತಾ ಯಾದವರಲ್ಲಿ ಅಡಗಿಕೊಂಡು ಮಾನವ ರೂಪದಿಂದ ಲೀಲೆಮಾಡುತ್ತಿರುವನು. ॥ ೧೮ ॥ ಇವನ ಪ್ರಭಾವವು ಅತ್ಯಂತ ಗಹನ ಹಾಗೂ ರಹಸ್ಯಪೂರ್ಣವಾಗಿದೆ. ಯುಧಿಷ್ಠಿರಾ ! ಅದನ್ನು ಭಗವಾನ್ ಶಿವನು, ದೇವರ್ಷಿ ನಾರದರು ಮತ್ತು ಸಾಕ್ಷಾತ್ ಭಗವಂತನಾದ ಕಪಿಲ ಮಹರ್ಷಿ ಇವರುಗಳು ಮಾತ್ರವೇ ಬಲ್ಲರು. ॥ ೧೯ ॥ ನೀನು ಯಾರನ್ನು ನಿನ್ನ ಸೋದರಮಾವನ ಮಗ, ಪ್ರಿಯಮಿತ್ರ, ಶ್ರೇಷ್ಠತಮ ಆಪ್ತನೆಂದೂ ತಿಳಿದುಕೊಂಡು, ಪ್ರೇಮವಶದಿಂದ ನಿನ್ನ ಮಂತ್ರಿಯನ್ನಾಗಿಯೂ, ದೂತನನ್ನಾಗಿಯೂ, ಸಾರಥಿಯನ್ನಾಗಿಯೂ ಮಾಡಿಕೊಳ್ಳುವುದರಲ್ಲಿ ಸಂಕೋಚಪಡಲಿಲ್ಲವೋ - ಅವನು ಸಾಕ್ಷಾತ್ ಪೂರ್ಣಬ್ರಹ್ಮ ಪರಮಾತ್ಮನಾಗಿದ್ದಾನೆ. ॥ ೨೦ ॥ ಆತನು ಸರ್ವಾತ್ಮನೂ, ಸಮದರ್ಶಿಯೂ, ಅದ್ವಿತೀಯನೂ, ಅಹಂಕಾರರಹಿತನೂ, ಆದ ನಿಷ್ಪಾಪ ಪರಮಾತ್ಮನು. ಉಚ್ಚ-ನೀಚ-ಕಾರ್ಯಗಳ ಕುರಿತು ಎಂದೂ ಯಾವುದೇ ವಿಷಮತೆ ತೋರದೆ ಅವನು ಸರ್ವಾತ್ಮನಾಗಿ ಸಮದರ್ಶಿಯಾಗಿದ್ದಾನೆ. ॥ ೨೧ ॥ ಯುಧಿಷ್ಠಿರಾ ! ಹೀಗೆ ಸರ್ವತ್ರ ಸಮದರ್ಶಿಯಾಗಿದ್ದರೂ ಅವನು ತನ್ನ ಅನನ್ಯ ಪ್ರೇಮೀ ಭಕ್ತರಮೇಲೆ ಎಷ್ಟೊಂದು ಕೃಪೆ ಮಾಡುತ್ತಿರುವನು ನೋಡಿದೆಯಲ್ಲ! ನಾನು ಪ್ರಾಣತ್ಯಾಗ ಮಾಡಲು ಹೊರಟಿರುವ ಇಂತಹ ಸಮಯದಲ್ಲಿ ಈ ಭಗವಾನ್ ಶ್ರೀಕೃಷ್ಣನು ನನಗೆ ಸಾಕ್ಷಾತ್ ದರ್ಶನ ಕೊಡಲು ಬಂದಿರುವನಲ್ಲ ! ॥ ೨೨ ॥ ಭಕ್ತಿಭಾವದಿಂದ ಇವನಲ್ಲಿ ತಮ್ಮ ಮನಸ್ಸನ್ನು ತೊಡಗಿಸುತ್ತಾ, ವಾಣಿಯಿಂದ ಇವನ ನಾಮ ಸಂಕೀರ್ತನೆ ಮಾಡುತ್ತಾ, ದೇಹತ್ಯಾಗ ಮಾಡುವ ಭಗವತ್ ಪರಾಯಣ ಯೋಗೀಪುರುಷರು ಕಾಮನೆಗಳಿಂದ ಮತ್ತು ಕರ್ಮ ಬಂಧನದಿಂದ ಬಿಡುಗಡೆ ಹೊಂದುವರು. ॥ ೨೩ ॥ ಅಂತಹ ದೇವಾಧಿದೇವನಾದ ಭಗವಂತನು ತನ್ನ ಪ್ರಸನ್ನವಾದ ಮಂದಹಾಸದಿಂದಲೂ ನಸುಗೆಂಪಾದ ಕಣ್ಣುಗಳಿಂದಲೂ, ಉಲ್ಲಸಿತ ಮುಖಕಮಲದಿಂದಲೂ, ಚತುರ್ಭುಜಗಳಿಂದಲೂ ಕೂಡಿದ ಕೇವಲ ಯೋಗಿಗಳ ಧ್ಯಾನಕ್ಕೆ ಗೋಚರನಾಗುವ ಈ ಶ್ರೀಕೃಷ್ಣ ಪರಮಾತ್ಮನು ನಾನು ಶರೀರವನ್ನು ತ್ಯಜಿಸುವ ತನಕ ನನ್ನ ಕಡೆಗೆ ದೃಷ್ಟಿಯನ್ನು ಬೀರಲಿ ॥ ೨೪ ॥

ಸೂತಪುರಾಣಿಕರು ಹೇಳುತ್ತಾರೆ - ಶರಶಯ್ಯೆಯಲ್ಲಿ ಪವಡಿಸಿದ್ದ ಭೀಷ್ಮಪಿತಾಮಹರ ಮಾತನ್ನು ಕೇಳಿದ ಬಳಿಕ ಯುಧಿಷ್ಠಿರನು ನಾನಾಬಗೆಯಾದ ಧರ್ಮಗಳ ರಹಸ್ಯವನ್ನು ಅಲ್ಲಿ ನೆರೆದಿದ್ದ ಋಷಿಗಳ ಸಮ್ಮುಖದಲ್ಲಿ ಆ ಮಹಾತ್ಮರಿಂದ ಕೇಳಿಕೊಂಡನು. ॥ ೨೫ ॥ ಆಗ ತತ್ತ್ವಜ್ಞರಾದ ಭೀಷ್ಮಪಿತಾಮಹರು ವರ್ಣ ಮತ್ತು ಆಶ್ರಮಗಳಿಗೆ ಅನುಗುಣವಾಗಿ ಪುರುಷರ ಸ್ವಾಭಾವಿಕ ಧರ್ಮಗಳನ್ನೂ, ವೈರಾಗ್ಯವನ್ನು ಮತ್ತು ರಾಗದ ಕಾರಣದಿಂದ ವಿಭಿನ್ನ ರೂಪದಿಂದ ಹೇಳಿರುವ ನಿವೃತ್ತಿ ಹಾಗೂ ಪ್ರವೃತ್ತಿರೂಪೀ ದ್ವಿವಿಧ ಧರ್ಮಗಳನ್ನೂ, ದಾನಧರ್ಮಗಳನ್ನೂ, ರಾಜಧರ್ಮ, ಮೋಕ್ಷ ಧರ್ಮ, ಸ್ತ್ರೀಧರ್ಮ, ಭಗವದ್ಧರ್ಮ ಇವೆಲ್ಲವುಗಳನ್ನು ಬೇರೆ-ಬೇರೆಯಾಗಿ ಸಂಕ್ಷೇಪವಾಗಿಯೂ, ವಿಸ್ತಾರವಾಗಿಯೂ

ದಾನಧರ್ಮಾನ್‌ರಾಜಧರ್ಮಾನ್ಮೋಕ್ಷಧರ್ಮಾನ್ವಿಭಾಗಶಃ ।
ಸ್ತ್ರೀಧರ್ಮಾನ್ ಭಗವದ್ಧರ್ಮಾನ್ಸಮಾಸವ್ಯಾಸಯೋಗತಃ ॥ ೨೭ ॥

ಧರ್ಮಾರ್ಥಕಾಮಮೋಕ್ಷಾಂಶ್ಚ ಸಹೋಪಾಯಾನ್ಯಥಾ ಮುನೇ ।
ನಾನಾಖ್ಯಾನೇತಿಹಾಸೇಷು ವರ್ಣಯಾಮಾಸ ತತ್ತ್ವವಿತ್ ॥ ೨೮ ॥

ಧರ್ಮಂ ಪ್ರವದತಸ್ತಸ್ಯ ಸ ಕಾಲಃ ಪ್ರತ್ಯುಪಸ್ಥಿತಃ ।
ಯೋ ಯೋಗಿನಶ್ಛಂದಮೃತ್ಯೋರ್ವಾಂಛಿತಸ್ತೂತ್ತರಾಯಣಃ ॥ ೨೯ ॥

ತದೋಪಸಂಹೃತ್ಯ ಗಿರಃ ಸಹಸ್ರಣೀ-
ರ್ವಿಮುಕ್ತಸಂಗಂ ಮನ ಆದಿಪೂರುಷೇ ।
ಕೃಷ್ಣೇ ಲಸತ್ಪೀತಪಟೇ ಚತುರ್ಭುಜೇ
ಪುರಃಸ್ಥಿತೇಽಮೀಲಿತದೃಗ್ವ್ಯಧಾರಯತ್ ॥ ೩೦ ॥

ವಿಶುದ್ಧಯಾ ಧಾರಣಯಾ ಹತಾಶುಭ-
ಸ್ತದೀಕ್ಷಯೈವಾಶುಗತಾಯುಧವ್ಯಥಃ ।
ನಿವೃತ್ತಸರ್ವೇಂದ್ರಿಯವೃತ್ತಿವಿಭ್ರಮ-
ಸ್ತುಷ್ಟಾವ ಜನ್ಯಂ ವಿಸೃಜಂಜನಾರ್ದನಮ್ ॥ ೩೧ ॥

*ಶ್ರೀಭೀಷ್ಮ ಉವಾಚ*

ಇತಿ ಮತಿರುಪಕಲ್ಪಿತಾ ವಿತೃಷ್ಣಾ
ಭಗವತಿ ಸಾತ್ವತಪುಂಗವೇ ವಿಭೂಮ್ನಿ ।
ಸ್ವಸುಖಮುಪಗತೇ ಕ್ವಚಿದ್ವಿಹರ್ತುಂ
ಪ್ರಕೃತಿಮುಪೇಯುಷಿ ಯದ್ಭವಪ್ರವಾಹಃ ॥ ೩೨ ॥

ತ್ರಿಭುವನಕಮನಂ ತಮಾಲವರ್ಣಂ
ರವಿಕರಗೌರವರಾಂಬರಂ ದಧಾನೇ ।
ವಪುರಲಕಕುಲಾವೃತಾನನಾಬ್ಜಂ
ವಿಜಯಸಖೇ ರತಿರಸ್ತು ಮೇಽನವದ್ಯಾ ॥ ೩೩ ॥

ಯುಧಿ ತುರಗರಜೋವಿಧೂಮ್ರವಿಷ್ವಕ್
ಕಚಲುಲಿತಶ್ರಮವಾರ್ಯಲಂಕೃತಾಸ್ಯೇ ।
ಮಮ ನಿಶಿತಶರೈರ್ವಿಭಿದ್ಯಮಾನ-
ತ್ವಚಿ ವಿಲಸತ್ಕವಚೇಽಸ್ತು ಕೃಷ್ಣ ಆತ್ಮಾ ॥ ೩೪ ॥

ವರ್ಣಿಸಿದರು. ಶೌನಕರೇ ! ಇದರೊಂದಿಗೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಈ ಪುರುಷಾರ್ಥಗಳನ್ನು ಪಡೆಯುವ ಸಾಧನೆಗಳನ್ನೂ, ಅನೇಕ ಉಪಾಖ್ಯಾನಗಳನ್ನೂ ಮತ್ತು ಇತಿಹಾಸ ವನ್ನೂ ತಿಳಿಸುತ್ತಾ ವಿಭಾಗಶಃ ವರ್ಣಿಸಿದರು. ॥ ೨೬-೨೮ ॥ ಇಚ್ಛಾಮರಣಗಳಾದ ಆ ಭೀಷ್ಮಪಿತಾಮಹರು ಹೀಗೆ ಧರ್ಮವನ್ನು ಕುರಿತು ಪ್ರವಚನ ಮಾಡುತ್ತಿರುವಂತೆಯೇ ಅವರು ಭಗವತ್ಪ ರಾಯಣರಾದ ಯೋಗಿಗಳು ದೇಹತ್ಯಾಗಕ್ಕಾಗಿ ಕಾಯುವ ಪವಿತ್ರವಾದ ಉತ್ತರಾಯಣ ಕಾಲವು ಬಂದು ಬಿಟ್ಟಿತು. ॥ ೨೯ ॥ ಆಗ ಸಾವಿರಾರು ರಥಿಕರ ಮುಂದಾಳಾಗಿದ್ದ ಭೀಷ್ಮಪಿತಾಮಹರು ವಾಣಿಯನ್ನು ಸಂಯಮಗೈದು (ಮೌನವಹಿಸಿ) ಮುಂದುಗಡೆ ಕಂಗೊಳಿಸುತ್ತಿದ್ದ ಚತುರ್ಭುಜನೂ, ಪೀತಾಂಬರವಿರಾಜಿತನೂ ಆದ ಆದಿಪುರುಷನಾದ ಭಗವಾನ್ ಶ್ರೀಕೃಷ್ಣನನ್ನು ಎವೆಯಿಕ್ಕದ ಕಣ್ಣುಗಳಿಂದ ದೃಷ್ಟಿಸುತ್ತಾ, ತಮ್ಮ ಸಂಗರಹಿತವಾದ ಮನಸ್ಸನ್ನು ಅವನಲ್ಲಿ ನೆಲೆ ಗೊಳಿಸಿದರು. ॥ ೩೦ ॥ ಹೀಗೆ ಶ್ರೀಭಗವಂತನನ್ನು ದೃಢವಾಗಿ ಧರಿಸಿದ ಧಾರಣಾ ಯೋಗದಿಂದ ಅವರ ಎಲ್ಲ ಅಶುಭ ಗಳು ತೊಲಗಿಹೋಗಿ, ಅವರಿಗೆ ಶಸ್ತ್ರಾಸ್ತ್ರಗಳಿಂದ ಉಂಟಾಗಿದ್ದ ಎಲ್ಲ ನೋವುಗಳು ಅವನ ಕೃಪಾಕಟಾಕ್ಷಮಾತ್ರದಿಂದ ಒಡನೆಯೇ ಕಳೆದು ಹೋದುವು. ಈಗ ಶರೀರವನ್ನು ತ್ಯಜಿಸುವ ಸಮಯ, ಅವರು ಇಂದ್ರಿಯವ್ಯಾಪಾರಗಳ ಅಲೆದಾಟವನ್ನು ನಿಲ್ಲಿಸಿ ಪ್ರೇಮದಿಂದ ಭಗವಂತನನ್ನು ಇಂತು ಸ್ತುತಿಸಿದರು. ॥ ೩೧ ॥

ಶ್ರೀಭೀಷ್ಮಪಿತಾಮಹರು ಹೇಳುತ್ತಾರೆ - ಅನೇಕ ಸಾಧನೆಗಳ ಅನುಷ್ಠಾನಗಳಿಂದ ಅತ್ಯಂತ ಶುದ್ಧವಾದ ಹಾಗೂ ಕಾಮನಾರಹಿತ ವಾದ ಬುದ್ಧಿಯನ್ನು ಈಗ ಮೃತ್ಯುವಿನ ಸಮಯದಲ್ಲಿ ನಾನು - ಯದುಕುಲಶಿರೋಮಣಿಯೂ, ಮಹಾಮಹಿಮನೂ, ಅನಂತನೂ ಆದ ಭಗವಾನ್ ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ಸಮರ್ಪಿಸುತ್ತಿ ದ್ದೇನೆ. ಈತನು ಸದಾ ತನ್ನ ಸಹಜಾನಂದ ಸ್ವರೂಪದಲ್ಲಿ ನೆಲೆ ಗೊಂಡಿದ್ದುಕೊಂಡೇ, ತನ್ನ ಸಂಕಲ್ಪದಂತೆ ಲೀಲಾವಿಹಾರಕ್ಕಾಗಿ ಪ್ರಕೃತಿಯೊಡನೆ ಕೂಡಿದಾಗ ಈ ಸೃಷ್ಟಿ ಪರಂಪರೆಯು ನಡೆ ಯುತ್ತದೆ. ॥ ೩೨ ॥ ಹೊಂಗೆಯ ಎಲೆಗಳಂತೆ ಶ್ಯಾಮಲವರ್ಣದ ಅಂಗಕಾಂತಿಯಿಂದ ಕಂಗೊಳಿಸುವ, ಸೂರ್ಯನ ಹೊಂಗಿರಣ ಗಳಂತೆ ಹೊಳೆಯುವ ಪೀತಾಂಬರವನ್ನು ಧರಿಸಿರುವ, ಮುಖ ಕಮಲದ ಮೇಲೆ ಗುಂಗುರು-ಗುಂಗುರಾದ ಮುಂಗುರುಳುಗಳು ಜೋಲಾಡುತ್ತಿರುವ ದಿವ್ಯಮಂಗಳ ವಿಗ್ರಹವುಳ್ಳ, ತ್ರಿಭುವನೈಕ ಸುಂದರನಾದ, ಅರ್ಜುನಮಿತ್ರನಾದ ಶ್ರೀಕೃಷ್ಣನಲ್ಲಿ ನನ್ನ ನಿರುಪಾಧಿ ಕವಾದ ಪ್ರೇಮವು ನೆಲೆಗೊಳ್ಳಲಿ. ॥ ೩೩ ॥ ರಣರಂಗದಲ್ಲಿ ರಾರಾಜಿಸುತ್ತಿದ್ದ ಆತನ ಮೋಹನ ಮೂರ್ತಿಯು ನನಗೆ ನೆನ ಪಾಗುತ್ತದೆ. ಅವನ ಮುಖದ ಮೇಲೆ ಕೆದರಿ ಹೋಗಿದ್ದ ಮುಂಗು ರುಳುಗಳು ಕುದುರೆಗಳ ಕಾಲಿನಿಂದೆದ್ದ ಧೂಳಿಯಿಂದ ಧೂಸರ ವರ್ಣವಾಗಿ ಬಿಟ್ಟಿತ್ತು. ಆಯಾಸದ ಬೆವರಿನ ಹನಿಗಳು ಅಲ್ಲಲ್ಲಿ ಅಂಟಿಕೊಂಡು ಶೋಭಿಸುತ್ತಿದ್ದವು. ನನ್ನ ತೀಕ್ಷ್ಣವಾದ ಬಾಣಗಳು ಚರ್ಮದ ಮೇಲೆ ನಾಟಿ ಗಾಯಗಳನ್ನುಂಟುಮಾಡಿವೆ. ಇಷ್ಟೆಲ್ಲಾ ಇದ್ದರೂ ಕುಂದದ ಸೌಂದರ್ಯದಿಂದ ರಮಣೀಯವಾಗಿ ಕಂಗೊಳಿಸುತ್ತಿರುವ ಆ ಕವಚಧಾರಿಯಾದ ಶ್ರೀಕೃಷ್ಣನಲ್ಲಿ ನನ್ನ ಆತ್ಮವು ಸಮರ್ಪಿತವಾಗಲಿ. ॥ ೩೪ ॥ ತನ್ನ ಮಿತ್ರನಾದ ಅರ್ಜುನನ

ಸಪದಿ ಸಖಿವಚೋ ನಿಶಮ್ಯ ಮಧ್ಯೇ
ನಿಜಪರಯೋರ್ಬಲಯೋ ರಥಂ ನಿವೇಶ್ಯ ।
ಸ್ಥಿತವತಿ ಪರಸೈನಿಕಾಯುರಕ್ಷ್ಣಾ
ಹೃತವತಿ ಪಾರ್ಥಸಖೇ ರತಿರ್ಮಮಾಸ್ತು ॥ ೩೫ ॥

ವ್ಯವಹಿತಪೃತನಾಮುಖಂ ನಿರೀಕ್ಷ್ಯ
ಸ್ವಜನವಧಾದ್ವಿಮುಖಸ್ಯ ದೋಷಬುದ್ಧ್ಯಾ ।
ಕುಮತಿಮಹರದಾತ್ಮವಿದ್ಯಯಾ ಯ-
ಶ್ಚರಣರತಿಃ ಪರಮಸ್ಯ ತಸ್ಯ ಮೇಽಸ್ತು ॥ ೩೬ ॥

ಸ್ವನಿಗಮಮಪಹಾಯ ಮತ್ಪ್ರತಿಜ್ಞಾಮ್
ಋತಮಧಿಕರ್ತುಮವಪ್ಲುತೋ ರಥಸ್ಥಃ ।
ಧೃತರಥಚರಣೋಽಭ್ಯಯಾಚ್ಚಲದ್ಗು-
ರ್ಹರಿರಿವ ಹಂತುಮಿಭಂ ಗತೋತ್ತರೀಯಃ ॥ ೩೭ ॥

ಶಿತವಿಶಿಖಹತೋ ವಿಶೀರ್ಣದಂಶಃ
ಕ್ಷತಜಪರಿಪ್ಲುತ ಆತತಾಯಿನೋ ಮೇ ।
ಪ್ರಸಭಮಭಿಸಸಾರ ಮದ್ವಧಾರ್ಥಂ
ಸ ಭವತು ಮೇ ಭಗವಾನ್ಗತಿರ್ಮುಕುಂದಃ ॥ ೩೮ ॥

ವಿಜಯರಥಕುಟುಂಬ ಆತ್ತತೋತ್ರೇ
ಧೃತಹಯರಶ್ಮಿನಿ ತಚ್ಛ್ರಿಯೇಕ್ಷಣೀಯೇ ।
ಭಗವತಿ ರತಿರಸ್ತು ಮೇ ಮುಮೂರ್ಷೋ-
ರ್ಯಮಿಹ ನಿರೀಕ್ಷ್ಯ ಹತಾ ಗತಾಃ ಸರೂಪಮ್ ॥ ೩೯ ॥

ಲಲಿತಗತಿವಿಲಾಸವಲ್ಗುಹಾಸ-
ಪ್ರಣಯನಿರೀಕ್ಷಣಕಲ್ಪಿತೋರುಮಾನಾಃ ।
ಕೃತಮನುಕೃತವತ್ಯ ಉನ್ಮದಾಂಧಾಃ
ಪ್ರಕೃತಿಮಗನ್ಕಿಲ ಯಸ್ಯ ಗೋಪವಧ್ವಃ ॥ ೪೦ ॥

ಮುನಿಗಣನೃಪವರ್ಯಸಂಕುಲೇಽಂತಃ-
ಸದಸಿ ಯುಧಿಷ್ಠಿರರಾಜಸೂಯ ಏಷಾಮ್ ।
ಅರ್ಹಣಮುಪಪೇದ ಈಕ್ಷಣೀಯೋ
ಮಮ ದೃಶಿಗೋಚರ ಏಷ ಆವಿರಾತ್ಮಾ ॥ ೪೧ ॥

ಮಾತನ್ನು ಕೇಳಿ, ಒಡನೆಯೇ ಸ್ವಸೈನ್ಯ ಮತ್ತು ಶತ್ರುಸೈನ್ಯಗಳ ಮಧ್ಯದಲ್ಲಿ ರಥವನ್ನು ನಿಲ್ಲಿಸಿದವನಾಗಿ, ಕೇವಲ ತನ್ನ ದೃಷ್ಟಿಯಿಂದಲೇ ಶತ್ರುಸೈನಿಕರ ಆಯುಸ್ಸನ್ನು ಕಸಿದು ಬಿಟ್ಟಿರುವ ಪಾರ್ಥಸಖನಾದ ಭಗವಾನ್ ಶ್ರೀಕೃಷ್ಣನಲ್ಲಿ ನನಗೆ ಪರಮಪ್ರೇಮವಿರಲಿ. ॥ ೩೫ ॥ ಅರ್ಜುನನು ದೂರದಿಂದ ಕೌರವ ಸೇನೆಯ ಮುಖ್ಯಸ್ಥರಾದ ನಮ್ಮನ್ನು ನೋಡಿದಾಗ ಯುದ್ಧಮಾಡುವುದು ಪಾಪವೆಂದು ತಿಳಿದು, ಅವನು ಸ್ವಜನ ವಧೆಯಿಂದ ವಿಮುಖನಾದನು. ಆಗ ಯಾವ ಜ್ಞಾನಮೂರ್ತಿಯು ಶ್ರೀಗೀತೆಯೆಂಬ ಆತ್ಮವಿದ್ಯೆಯನ್ನು ಉಪದೇಶಿಸಿ, ಅವನ ಮೋಹವನ್ನು ಹೋಗಲಾಡಿಸಿದನೋ ಅಂತಹ ಪರಮ ಪುರುಷ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ನನ್ನ ಪ್ರೀತಿಯು ಸ್ಥಿರವಾಗಿರಲಿ. ॥ ೩೬ ॥ 'ಶ್ರೀಕೃಷ್ಣನು ಯುದ್ಧದಲ್ಲಿ ಶಸ್ತ್ರವನ್ನು ಧರಿಸುವಂತೆ ಮಾಡಿಬಿಡುತ್ತೇನೆ' ಎಂದು ನಾನು ಪ್ರತಿಜ್ಞೆ ಮಾಡಿದ್ದೆ. 'ನಾನು ಯುದ್ಧದಲ್ಲಿ ಶಸ್ತ್ರವನ್ನು ಹಿಡಿಯುವುದಿಲ್ಲ' ಎಂದು ಶ್ರೀ ಕೃಷ್ಣನು ಪ್ರತಿಜ್ಞೆ ಮಾಡಿದ್ದನು. ಆದರೆ ಭಕ್ತನಾದ ನನ್ನ ಪ್ರತಿಜ್ಞೆಯನ್ನು ನಿಜವಾಗಿಸುವುದಕ್ಕಾಗಿ ತನ್ನ ಶಪಥವನ್ನೇ ಮುರಿದು, ಸ್ವಾಮಿಯು ರಥದಿಂದ ಕೆಳಗೆ ಧುಮುಕಿ, ಸಿಂಹವು ಆನೆಯನ್ನು ಸಂಹರಿಸಲು ಅದರ ಮೇಲೆ ಎರಗುವಂತೆ, ಚಕ್ರವನ್ನೆತ್ತಿಕೊಂಡು ನನ್ನ ಮೇಲೆರಗಲು ರಭಸದಿಂದ ಧಾವಿಸಿ ಬರುತ್ತಿರುವಾಗ ಭೂಮಿಯು ನಡುಗಿತು. ಹೆಗಲಲ್ಲಿ ಹೊತ್ತ ಉತ್ತರೀಯವು ಜಾರಿ ಬಿತ್ತು. ಇಂತಹ ಶ್ರೀಕೃಷ್ಣನಲ್ಲಿ ನನ್ನ ಪ್ರೀತಿಯು ಸ್ಥಿರವಾಗಲಿ. ॥ ೩೭ ॥ ಆತತಾಯಿಯಾದ ನಾನು ತೀಕ್ಷ್ಣವಾದ ಬಾಣಗಳನ್ನು ಹೊಡೆದು ಅವನ ಕವಚವನ್ನು ತುಂಡರಿಸಿದ್ದೆ. ಆದರಿಂದ ಅವನ ಇಡೀ ಶರೀರವು ರಕ್ತದಿಂದ ತೊಯ್ದು ಹೋಗಿತ್ತು. ಅರ್ಜುನನು ತಡೆಯುತ್ತಿದ್ದರೂ ಕೇಳದೆ ನನ್ನನ್ನು ಕೊಂದೇ ಹಾಕುವೆನೆಂದು ಬಲವಂತವಾಗಿ ಯಾವಾತನು ನನ್ನನ್ನು ಅನುಗ್ರಹಿಸಲು ನನ್ನ ಕಡೆಗೆ ಓಡಿ ಬಂದನೋ, ಅಂತಹ ಭಕ್ತವತ್ಸಲನಾದ ಭಗವಾನ್ ಶ್ರೀಕೃಷ್ಣನೇ ನನಗೆ ಗತಿಯಾಗಲಿ ; ಆಶ್ರಯವಾಗಲಿ. ॥ ೩೮ ॥ ಅರ್ಜುನನ ರಥದ ಸಾರಥಿಯಾಗಿ ಒಂದು ಕೈಯಲ್ಲಿ ಚಾವಟಿಗೆಯನ್ನೂ, ಮತ್ತೊಂದು ಕೈಯಲ್ಲಿ ಕುದುರೆಗಳ ವಾಘೆಗಳನ್ನು ಹಿಡಿದುಕೊಂಡು, ಆ ವೇಷದಲ್ಲಿಯೂ ಅತ್ಯಂತ ರಮಣೀಯದರ್ಶನನಾಗಿದ್ದ ಪ್ರಭುವನ್ನು ನೋಡುತ್ತಾ ಮಹಾಭಾರತ ಯುದ್ಧದಲ್ಲಿ ಮಡಿದವರೆಲ್ಲರೂ ಆತನ ಸಾರೂಪ್ಯ ಮುಕ್ತಿಯನ್ನೇ ಪಡೆದರೋ, ಅಂತಹ ಪಾರ್ಥಸಾರಥಿ ಭಗವಾನ್ ಶ್ರೀಕೃಷ್ಣನಲ್ಲಿ ಮರಣಾಸನ್ನನಾದ ನನಗೆ ಪರಮ ಪ್ರೀತಿ ಉಂಟಾಗಲಿ. ॥ ೩೯ ॥ ಯಾರ ಹಾವ-ಭಾವಗಳಿಂದ ಕೂಡಿದ ವಿಲಾಸ, ಮಧುರವಾದ ಮಂದಹಾಸ, ಬೆಡಗು, ಬಿನ್ನಾಣ, ಪ್ರೇಮಯುಕ್ತವಾದ ಕಡೆಗಣ್ಣ ನೋಟದಿಂದ ಅತ್ಯಂತ ಸಮ್ಮಾನಿತರಾದ ಗೋಪಿಯರು ರಾಸಲೀಲೆಯಲ್ಲಿ ಅವನು ಅಂತರ್ಧಾನನಾದಾಗ ಪ್ರೇಮೋನ್ಮತ್ತರಾಗಿ ಅವನ ಆ ದಿವ್ಯಲೀಲೆಗಳನ್ನು ಅನುಕರಣೆ ಮಾಡುತ್ತಾ ತನ್ಮಯರಾಗಿ ಬಿಟ್ಟರೋ, ಅಂತಹ ಭಗವಾನ್ ಶ್ರೀಕೃಷ್ಣನಲ್ಲಿ ನನಗೆ ಪರಮ ಪ್ರೇಮವು ಉಂಟಾಗಲಿ. ॥ ೪೦ ॥ ಮಹಾಮುನಿಗಳೂ. ರಾಜಶ್ರೇಷ್ಠರೂ ನೆರೆದಿದ್ದ ಧರ್ಮರಾಜನ ರಾಜಸೂಯ ಯಜ್ಞದ ಸಭೆಯಲ್ಲಿ ಮೊಟ್ಟಮೊದಲಿಗೆ ಯಾರ ಅಗ್ರಪೂಜೆಯು ನನ್ನ ಕಣ್ಣಮುಂದೆಯೇ ನಡೆಯಿತೋ, ಅಂತಹ

ತಮಿಮಮಹಮಜಂ ಶರೀರಭಾಜಾಂ
ಹೃದಿ ಹೃದಿ ಧಿಷ್ಠಿತಮಾತ್ಮಕಲ್ಪಿತಾನಾಮ್ ।
ಪ್ರತಿದೃಶಮಿವ ನೈಕಧಾರ್ಕಮೇಕಂ
ಸಮಧಿಗತೋಽಸ್ಮಿ ವಿಧೂತಭೇದಮೋಹಃ ॥ ೪೨ ॥

ಸೂತ ಉವಾಚ

ಕೃಷ್ಣ ಏವಂ ಭಗವತಿ ಮನೋವಾಗ್ದೃಷ್ಟಿವೃತ್ತಿಭಿಃ ।
ಆತ್ಮನ್ಯಾತ್ಮಾನಮಾವೇಶ್ಯ ಸೋಽನ್ತಃಶ್ವಾಸ ಉಪಾರಮತ್ ॥ ೪೩ ॥

ಸಂಪದ್ಯಮಾನಮಾಜ್ಞಾಯ ಭೀಷ್ಮಂ ಬ್ರಹ್ಮಣಿ ನಿಷ್ಕಲೇ ।
ಸರ್ವೇ ಬಭೂವುಸ್ತೇ ತೂಷ್ಣೀಂ ವಯಾಂಸೀವ ದಿನಾತ್ಯಯೇ ॥ ೪೪ ॥

ತತ್ರ ದುಂದುಭಯೋ ನೇದುರ್ದೇವಮಾನವವಾದಿತಾಃ ।
ಶಶಂಸುಃ ಸಾಧವೋ ರಾಜ್ಞಾಂ ಖಾತ್ಪೇತುಃ ಪುಷ್ಪವೃಷ್ಟಯಃ ॥ ೪೫ ॥

ತಸ್ಯ ನಿರ್ಹರಣಾದೀನಿ ಸಂಪರೇತಸ್ಯ ಭಾರ್ಗವ ।
ಯುಧಿಷ್ಠಿರಃ ಕಾರಯಿತ್ವಾ ಮುಹೂರ್ತಂ ದುಃಖಿತೋಽಭವತ್ ॥ ೪೬ ॥

ತುಷ್ಟುವುರ್ಮುನಯೋ ಹೃಷ್ಟಾಃ ಕೃಷ್ಣಂ ತದ್ಗುಹ್ಯನಾಮಭಿಃ ।
ತತಸ್ತೇ ಕೃಷ್ಣಹೃದಯಾಃ ಸ್ವಾಶ್ರಮಾನ್ಪ್ರಯಯುಃ ಪುನಃ ॥ ೪೭ ॥

ತತೋ ಯುಧಿಷ್ಠಿರೋ ಗತ್ವಾ ಸಹಕೃಷ್ಣೋ ಗಜಾಹ್ವಯಮ್ ।
ಪಿತರಂ ಸಾಂತ್ವಯಾಮಾಸ ಗಾಂಧಾರೀಂ ಚ ತಪಸ್ವಿನೀಮ್ ॥ ೪೮ ॥

ಪಿತ್ರಾ ಚಾನುಮತೋ ರಾಜಾ ವಾಸುದೇವಾನುಮೋದಿತಃ ।
ಚಕಾರ ರಾಜ್ಯಂ ಧರ್ಮೇಣ ಪಿತೃಪೈತಾಮಹಂ ವಿಭುಃ ॥ ೪೯ ॥

ಸರ್ವರಿಗೂ ಆತ್ಮಸ್ವರೂಪನಾದ ಭಗವಾನ್ ಶ್ರೀಕೃಷ್ಣನೇ ಇಂದು ನನ್ನ ಮೃತ್ಯುಸಮಯದಲ್ಲಿ ನನ್ನೆದುರಿನಲ್ಲಿ ದರ್ಶನ ನೀಡುತ್ತಿರುವನಲ್ಲ! ಅವನಲ್ಲಿ ನನಗೆ ಅಖಂಡವಾದ ಪ್ರೇಮ ಉಂಟಾಗಲಿ. ॥ ೪೧ ॥ ಒಬ್ಬನೇ ಸೂರ್ಯನು ಬೇರೆ-ಬೇರೆ ಕಣ್ಣುಗಳಿಗೆ ಅನೇಕ ರೂಪಿಯಾಗಿ ತೋರುವಂತೆಯೇ ಅಜನ್ಮನಾದ ಭಗವಾನ್ ಶ್ರೀಕೃಷ್ಣನು ತನ್ನಿಂದಲೇ ರಚಿತವಾದ ಅನೇಕ ಶರೀರಧಾರಿಗಳ ಹೃದಯಗಳಲ್ಲಿ ಅಂತರ್ಯಾಮಿಯಾಗಿ ಅನೇಕರೂಪಗಳಂತೆ ಕಂಡು ಬರುತ್ತಿದ್ದಾನೆ. ವಾಸ್ತವವಾಗಿ ಓರ್ವನೇ ಎಲ್ಲರಲ್ಲಿ ವಿರಾಜಮಾನನಾಗಿದ್ದಾನೆ. ಅಂತಹ ಭಗವಂತನನ್ನು ನಾನು ಭೇದ-ಭ್ರಮರಹಿತನಾಗಿ ಪಡೆದುಕೊಂಡು ಏಕಾತ್ಮಭಾವವುಂಟಾದವನಾಗಿ, ಅವನ ಇದಿರಿನಲ್ಲೇ ಶರೀರತ್ಯಾಗ ಮಾಡುತ್ತಿದ್ದೇನೆ. * ॥ ೪೨ ॥

**ಸೂತಪುರಾಣಿಕರು ಹೇಳುತ್ತಾರೆ** - ಹೀಗೆ ಭೀಷ್ಮಪಿತಾಮಹರು ಆತ್ಮಸ್ವರೂಪನಾದ ಶ್ರೀಕೃಷ್ಣನಲ್ಲಿ ಮನಸ್ಸು, ವಾಣಿ, ಮಾತು, ದೃಷ್ಟಿ ಇವುಗಳ ಮೂಲಕ ತನ್ನನ್ನು ಸಮರ್ಪಿಸಿಕೊಂಡು, ಪ್ರಾಣವಾಯುವನ್ನು ಅವನಲ್ಲೇ ವಿಲೀನಗೊಳಿಸಿದರು ; ಶರೀರ ಶಾಂತವಾಯಿತು. ॥ ೪೩ ॥ ಅವರು ಹೀಗೆ ನಿಷ್ಕಲವಾದ ಬ್ರಹ್ಮನಲ್ಲಿ ಲಯಹೊಂದುತ್ತಿರುವುದನ್ನು ನೋಡಿ, ಸಂಜೆಯಾದಾಗ ಪಕ್ಷಿಗಳ ಕಲರವವು ಶಾಂತವಾಗುವಂತೆ ಎಲ್ಲ ಜನರು ಮೌನರಾದರು. ॥ ೪೪ ॥ ಆಗಲೇ ಮನುಷ್ಯರೂ, ದೇವತೆಗಳೂ ದುಂದುಭಿಯೇ ಮುಂತಾದ ವಾದ್ಯಗಳನ್ನು ಮೊಳಗಿಸಿದರು. ಸಾಧು-ಸಜ್ಜನರಾದ ರಾಜರು ಭೀಷ್ಮರನ್ನು ಪ್ರಶಂಶಿಸಿದರು. ಆಕಾಶದಿಂದ ಹೂಮಳೆ ಸುರಿಯಿತು. ॥ ೪೫ ॥ ಶೌನಕರೇ ! ನಿಷ್ಕಳಂಕವೂ, ನಿರುಪಾಧಿಕವೂ ಆದ ಬ್ರಹ್ಮನಲ್ಲಿ ಐಕ್ಯವನ್ನು ಪಡೆದ ಆ ಮಹಾತ್ಮರ ಮೃತಶರೀರಕ್ಕೆ ಅಂತ್ಯಕ್ರಿಯೆಯನ್ನು ನೆರವೇರಿಸಿ, ಧರ್ಮರಾಜನು ಸ್ವಲ್ಪಕಾಲ ಶೋಕಮಗ್ನನಾಗಿ ಕುಳಿತನು. ॥ ೪೬ ॥ ಅಲ್ಲಿ ನೆರೆದಿದ್ದ ಮುನಿಗಳೆಲ್ಲರೂ ಶ್ರೀಕೃಷ್ಣ ಪರಮಾತ್ಮನನ್ನು ಅವನ ರಹಸ್ಯಮಯ ದಿವ್ಯನಾಮಗಳಿಂದ ಸ್ತುತಿಸಿದ ಬಳಿಕ ಕೃಷ್ಣಮಯವಾದ ಹೃದಯಗಳಿಂದ ತಮ್ಮ-ತಮ್ಮ ಆಶ್ರಮಗಳಿಗೆ ತೆರಳಿದರು. ॥ ೪೭ ॥ ಅನಂತರ ಯುಧಿಷ್ಠಿರನೂ ಕೂಡ ಭಗವಾನ್ ಶ್ರೀಕೃಷ್ಣನೊಂದಿಗೆ ಹಸ್ತಿನಾಪುರಕ್ಕೆ ಬಂದು, ದೊಡ್ಡಪ್ಪನಾದ ಧೃತರಾಷ್ಟ್ರನನ್ನೂ, ತಪಸ್ವಿನಿಯಾದ ಗಾಂಧಾರಿಯನ್ನು ಸಮಾಧಾನಪಡಿಸಿದನು. ॥ ೪೮ ॥ ಮತ್ತೆ ಧೃತರಾಷ್ಟ್ರನ ಅಪ್ಪಣೆಯಂತೆ, ಭಗವಾನ್ ಶ್ರೀವಾಸುದೇವನ ಅನುಮತಿಯಿಂದ ಯುಧಿಷ್ಠಿರರಾಜನು ತನ್ನ ವಂಶಪರಂಪರೆಯಿಂದ ಬಂದ ರಾಜ್ಯವನ್ನು ಧರ್ಮದಿಂದ ಆಳತೊಡಗಿದನು. ॥ ೪೯ ॥

*ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಯುಧಿಷ್ಠಿರರಾಜ್ಯಪ್ರಲಂಭೋ ನಾಮ ನವಮೋಽಧ್ಯಾಯಃ ॥ ೯ ॥

---

* ಶರಶಯ್ಯೆಯಲ್ಲಿ ಮಲಗಿದ ಭೀಷ್ಮಪಿತಾಮಹರು ವಿಷ್ಣುಸಹಸ್ರನಾಮದ ಮೂಲಕ ಅತ್ಯಂತ ಆದರ, ಶ್ರದ್ಧೆಯಿಂದ ಭಗವಂತನನ್ನು ಸ್ತುತಿಸಿದ್ದರು. ಭಕ್ತರಲ್ಲಿ ಇದರ ಕುರಿತು ಅತ್ಯಾದರವಿದೆ. ಭಾಗವತವನ್ನು ಓದುವವರು ಈ ಭೀಷ್ಮಸ್ತುತಿಯನ್ನು ಪದೇ-ಪದೇ ಓದುತ್ತಾರೆ. ಮಹಾಭಾರತದಲ್ಲಿ ಭೀಷ್ಮರಿಂದ ಮಾಡಲ್ಪಟ್ಟ ಸ್ತುತಿಯು 'ಭೀಷ್ಮಸ್ತವರಾಜ' ಎಂಬ ಹೆಸರಿನಿಂದ ಖ್ಯಾತವಾಗಿದೆ. ಭಕ್ತರಾದವರಲ್ಲಿ ಇದರ ಕುರಿತು ಬಹಳ ಆದರವಿದೆ. ಈ ಸ್ತುತಿಗಳಲ್ಲಿ ಭಗವಂತನ ಪ್ರಭಾವ, ಲೀಲೆಗಳನ್ನು ಭೀಷ್ಮರು ಅಲೌಕಿಕವಾಗಿ ವರ್ಣಿಸಿರುವರು. ಭಕ್ತಜನರು ವಿಷ್ಣುಸಹಸ್ರನಾಮವನ್ನು ಅತ್ಯಂತ ಶ್ರದ್ಧೆಯಿಂದ ಪಠಿಸುತ್ತಾರೆ. ಸ್ತೋತ್ರವು ಶ್ಲೋಕಗಳಲ್ಲಿರುವುದರಿಂದ ಅದು ಕಂಠಸ್ಥವೂ ಆಗುತ್ತದೆ. ಆದ್ದರಿಂದ ಈ ಸ್ತೋತ್ರಗಳನ್ನು ಭಕ್ತಿ-ಶ್ರದ್ಧೆಯಿಂದ ಪಾರಾಯಣ ಮಾಡುವ ಅಭ್ಯಾಸವಿರಿಸಿಕೊಳ್ಳಬೇಕು.

# ಹತ್ತನೆಯ ಅಧ್ಯಾಯ

## ಶ್ರೀಕೃಷ್ಣನು ದ್ವಾರಕೆಗೆ ಮರಳಿದುದು

*ಶೌನಕ ಉವಾಚ*

ಹತ್ವಾ ಸ್ವರಿಕ್ಥಸ್ಪೃಧ ಆತತಾಯಿನೋ
ಯುಧಿಷ್ಠಿರೋ ಧರ್ಮಭೃತಾಂ ವರಿಷ್ಠಃ ।
ಸಹಾನುಜೈಃ ಪ್ರತ್ಯವರುದ್ಧಭೋಜನಃ
ಕಥಂ ಪ್ರವೃತ್ತಃ ಕಿಮಕಾರಷೀತ್ತತಃ ॥ ೧ ॥

*ಸೂತ ಉವಾಚ*

ವಂಶಂ ಕುರೋರ್ವಂಶದವಾಗ್ನಿನಿರ್ಹೃತಂ
ಸಂರೋಹಯಿತ್ವಾ ಭವಭಾವನೋ ಹರಿಃ ।
ನಿವೇಶಯಿತ್ವಾ ನಿಜರಾಜ್ಯ ಈಶ್ವರೋ
ಯುಧಿಷ್ಠಿರಂ ಪ್ರೀತಮನಾ ಬಭೂವ ಹ ॥ ೨ ॥

ನಿಶಮ್ಯ ಭೀಷ್ಮೋಕ್ತಮಥಾಚ್ಯುತೋಕ್ತಂ
ಪ್ರವೃತ್ತವಿಜ್ಞಾನವಿಧೂತವಿಭ್ರಮಃ ।
ಶಶಾಸ ಗಾಮಿಂದ್ರ ಇವಾಜಿತಾಶ್ರಯಃ
ಪರಿಧ್ಯುಪಾಂತಾಮನುಜಾನುವರ್ತಿತಃ ॥ ೩ ॥

ಕಾಮಂ ವವರ್ಷ ಪರ್ಜನ್ಯಃ ಸರ್ವಕಾಮದುಘಾ ಮಹೀ ।
ಸಿಷಿಚುಃ ಸ್ಮ ವ್ರಜಾನ್ಗಾವಃ ಪಯಸೋಧಸ್ವತೀರ್ಮುದಾ ॥ ೪ ॥

ನದ್ಯಃ ಸಮುದ್ರಾ ಗಿರಯಃ ಸವನಸ್ಪತಿವೀರುಧಃ ।
ಫಲಂತ್ಯೋಷಧಯಃ ಸರ್ವಾಃ ಕಾಮಮನ್ವೃತು ತಸ್ಯ ವೈ ॥ ೫ ॥

ನಾಧಯೋ ವ್ಯಾಧಯಃ ಕ್ಲೇಶಾ ದೈವಭೂತಾತ್ಮಹೇತವಃ ।
ಅಜಾತಶತ್ರಾವಭವನ್ ಜಂತೂನಾಂ ರಾಜ್ಞಿ ಕರ್ಹಿಚಿತ್ ॥ ೬ ॥

ಉಷಿತ್ವಾ ಹಾಸ್ತಿನಪುರೇ ಮಾಸಾನ್ಕತಿಪಯಾನ್ ಹರಿಃ ।
ಸುಹೃದಾಂ ಚ ವಿಶೋಕಾಯ ಸ್ವಸುಶ್ಚ ಪ್ರಿಯಕಾಮ್ಯಯಾ ॥ ೭ ॥

ಆಮಂತ್ರ್ಯ ಚಾಭ್ಯನುಜ್ಞಾತಃ ಪರಿಷ್ವಜ್ಯಾಭಿವಾದ್ಯ ತಮ್ ।
ಆರುರೋಹ ರಥಂ ಕೈಶ್ಚಿತ್ಪರಿಷ್ವಕ್ತೋಽಭಿವಾದಿತಃ ॥ ೮ ॥

**ಶೌನಕಾದಿಗಳು ಕೇಳುತ್ತಾರೆ** – ಸೂತ ಪುರಾಣಿಕರೇ! ಧಾರ್ಮಿಕ ಶಿರೋಮಣಿಯಾದ ಮಹಾರಾಜ ಯುಧಿಷ್ಠಿರನು ತನ್ನ ಪೈತೃಕಸಂಪತ್ತನ್ನು ಕಸಿದುಕೊಳ್ಳುವ ಆಸೆಯಿಂದ ತನ್ನನ್ನು ವಧಿಸಲು ಪ್ರಯತ್ನಪಟ್ಟ ಶತ್ರುಗಳನ್ನು ಸಂಹರಿಸಿ, ತನ್ನ ಸಹೋದರರೊಂದಿಗೆ ಹೇಗೆ ರಾಜ್ಯಶಾಸನವನ್ನು ಮಾಡಿದನು? ಏಕೆಂದರೆ, ಭೋಗಗಳ ಲ್ಲಾದರೋ ಅವನಿಗೆ ಪ್ರವೃತ್ತಿಯೇ ಇರಲಿಲ್ಲ. ॥ ೧ ॥

**ಸೂತಪುರಾಣಿಕರು ಹೇಳುತ್ತಾರೆ** – ಲೋಕದ ಉಜ್ಜೀವನಕ್ಕಾಗಿ ಅವತಾರಮಾಡಿದ ಶ್ರೀಹರಿಯು – ಬಿದಿರುಮೆಳೆಯಲ್ಲಿ ಪರಸ್ಪರ ಘರ್ಷಣೆಯಿಂದ ಉಂಟಾದ ಬೆಂಕಿಯು ಬಿದಿರುಮೆಳೆಯನ್ನೇ ಸುಟ್ಟುಬಿಡುವಂತೆ ಪರಸ್ಪರ ಕಲಹಾಗ್ನಿಯಿಂದ ಸುಟ್ಟು ಹೋಗಿದ್ದ ಕುರುವಂಶದ ಕುಡಿಯಾದ ಪರೀಕ್ಷಿತನನ್ನು ಬದುಕಿಸಿ, ಯುಧಿಷ್ಠಿರನನ್ನು ಅವನ ರಾಜ್ಯದಲ್ಲಿ ನೆಲೆಗೊಳಿಸಿ ತುಂಬಾ ಪ್ರಸನ್ನನಾದನು. ॥ ೨ ॥ ಭೀಷ್ಮಪಿತಾಮಹರ ಮತ್ತು ಭಗವಾನ್ ಶ್ರೀಕೃಷ್ಣನ ಉಪದೇಶ ಶ್ರವಣದಿಂದ ಧರ್ಮರಾಜನಿಗೆ ಜ್ಞಾನೋದಯವಾಗಿ, ಎಲ್ಲ ಭ್ರಾಂತಿಗಳು ಅಳಿದು ಹೋದುವು. ಶ್ರೀಭಗವಂತನ ಬೆಂಬಲದಿಂದ ಅವನು ಸಮುದ್ರ ಪರ್ಯಂತವಾದ ಭೂಮಂಡಲವನ್ನು ಇಂದ್ರನಂತೆ ಆಳತೊಡಗಿದನು. ಭೀಮಸೇನರೇ ಮುಂತಾದ ತಮ್ಮಂದಿರು ಆತನ ಆಜ್ಞೆಯಂತೆ ನಡೆಯುತ್ತಿದ್ದರು.॥ ೩ ॥ ಯುಧಿಷ್ಠಿರನ ರಾಜ್ಯದಲ್ಲಿ ಪೂರ್ಣವಾದ ಸುಭಿಕ್ಷವಿದ್ದು ಸುಖಶಾಂತಿಗಳು ನೆಲೆಸಿದ್ದವು. ಆವಶ್ಯಕತೆಗೆ ತಕ್ಕಂತೆ ಯಥೇಷ್ಟವಾಗಿ ಮಳೆಯು ಸುರಿಯುತ್ತಿತ್ತು. ಜೀವನಕ್ಕೆ ಬೇಕುಬೇಕಾದ ಎಲ್ಲ ಪದಾರ್ಥಗಳು ಹೇರಳವಾಗಿ ಭೂಮಿಯಿಂದ ಸಿಗುತ್ತಿದ್ದವು. ಆಕಳುಗಳು ಕೆಚ್ಚಲಲ್ಲಿ ಹಾಲು ಹಿಡಿಸಲಾರದೆ ಕೊಟ್ಟಿಗೆಗಳನ್ನು ಹಾಲಿನಿಂದ ನೆನೆಸುತ್ತಿದ್ದವು. ॥ ೪ ॥ ನದಿಗಳೂ, ಸಮುದ್ರಗಳೂ, ಪರ್ವತಗಳೂ, ವನಸ್ಪತಿಗಳೂ, ಔಷಧಿಗಳೂ, ಲತೆಗಳೂ ಪ್ರತಿಯೊಂದು ಋತುವಿನಲ್ಲಿಯೂ ಯಥೇಷ್ಟವಾಗಿ ತಮ್ಮ-ತಮ್ಮ ಸಂಪತ್ತನ್ನು ರಾಜನಿಗೆ ನೀಡುತ್ತಿದ್ದವು. ॥ ೫ ॥ ಅಜಾತಶತ್ರುವಾದ ಮಹಾರಾಜ ಯುಧಿಷ್ಠಿರನ ರಾಜ್ಯದಲ್ಲಿ ಯಾವ ಪ್ರಾಣಿಗೂ ಎಂದೂ ಆಧಿ-ವ್ಯಾಧಿಗಳು ಅಥವಾ ದೈವಿಕ, ಭೌತಿಕ, ಆತ್ಮಿಕವಾದ ಕ್ಲೇಶಗಳು ಆಗುತ್ತಿರಲಿಲ್ಲ. ॥ ೬ ॥

ತಮ್ಮ ಬಂಧು-ಮಿತ್ರರ ಶೋಕವನ್ನು ಹೋಗಲಾಡಿಸಲು ಮತ್ತು ತನ್ನ ತಂಗಿ ಸುಭದ್ರೆಯ ಸಂತೋಷಕ್ಕಾಗಿ ಭಗವಾನ್ ಶ್ರೀಕೃಷ್ಣನು ಹಸ್ತಿನಾವತಿಯಲ್ಲಿಯೇ ಕೆಲವು ತಿಂಗಳು ತಂಗಿದನು. ॥ ೭ ॥ ಮತ್ತೆ ಅವನು ರಾಜಾಯುಧಿಷ್ಠಿರನಿಂದ ದ್ವಾರಕೆಗೆ ಹೋಗಲು ಅನುಮತಿಯನ್ನು ಕೇಳಿದನು. ಆಗ ಧರ್ಮರಾಜನು ಶ್ರೀಕೃಷ್ಣನನ್ನು ತುಂಬು ಹೃದಯದಿಂದ ಆಲಿಂಗಿಸಿಕೊಂಡು ಬೀಳ್ಕೊಟ್ಟನು. ಭಗವಂತನು ಅವನಿಗೆ ನಮಸ್ಕರಿಸಿ ರಥವನ್ನು ಏರಿದನು. ಸಮವಯಸ್ಕರಾದ ಕೆಲವರು ಅತನನ್ನು ಅಪ್ಪಿಕೊಂಡರು. ಸಣ್ಣವರು ವಂದಿಸಿಕೊಂಡರು. ॥ ೮ ॥ ಆಗ ಸುಭದ್ರೆ, ದ್ರೌಪದೀ, ಕುಂತೀ, ಉತ್ತರೆ, ಗಾಂಧಾರೀ,

ಸುಭದ್ರಾ ದ್ರೌಪದೀ ಕುಂತೀ ವಿರಾಟತನಯಾ ತಥಾ ।
ಗಾಂಧಾರೀ ಧೃತರಾಷ್ಟ್ರಶ್ಚ ಯುಯುತ್ಸುರ್ಗೌತಮೋ ಯಮೌ ॥ ೯ ॥

ವೃಕೋದರಶ್ಚ ಧೌಮ್ಯಶ್ಚ ಸ್ತ್ರಿಯೋಮತ್ಸ್ಯಸುತಾದಯಃ ।
ನ ಸೇಹಿರೇ ವಿಮುಹ್ಯಂತೋ ವಿರಹಂ ಶಾರ್ಙ್ಗಧನ್ವನಃ ॥ ೧೦ ॥

ಸತ್ಸಂಗಾನ್ಮುಕ್ತದುಃಸಂಗೋ ಹಾತುಂ ನೋತ್ಸಹತೇ ಬುಧಃ ।
ಕೀರ್ತ್ಯಮಾನಂ ಯಶೋ ಯಸ್ಯ ಸಕೃದಾಕರ್ಣ್ಯ ರೋಚನಮ್ ॥ ೧೧ ॥

ತಸ್ಮಿನ್ನ್ಯಸ್ತಧಿಯಃ ಪಾರ್ಥಾಃ ಸಹೇರನ್ವಿರಹಂ ಕಥಮ್ ।
ದರ್ಶನಸ್ಪರ್ಶಸಂಲಾಪಶಯನಾಸನಭೋಜನೈಃ ॥ ೧೨ ॥

ಸರ್ವೇ ತೇಽನಿಮಿಷೈರಕ್ಷೈಸ್ತಮನುದ್ರುತಚೇತಸಃ ।
ವೀಕ್ಷಂತಃ ಸ್ನೇಹಸಂಬದ್ಧಾ ವಿಚೇಲುಸ್ತತ್ರ ತತ್ರ ಹ ॥ ೧೩ ॥

ನ್ಯರುಂಧನ್ನುದ್ಗಲದ್ಬಾಷ್ಪಮೌತ್ಕಂಠ್ಯಾದ್ದೇವಕೀಸುತೇ ।
ನಿರ್ಯಾತ್ಯಗಾರಾನ್ನೋಽಭದ್ರಮಿತಿ ಸ್ಯಾದ್ಬಾಂಧವಸ್ತ್ರಿಯಃ ॥ ೧೪ ॥

ಮೃದಂಗಶಂಖಭೇರ್ಯಶ್ಚ ವೀಣಾಪಣವಗೋಮುಖಾಃ ।
ಧುಂಧುರ್ಯಾನಕಘಂಟಾದ್ಯಾ ನೇದುರ್ದುಂದುಭಯಸ್ತಥಾ ॥ ೧೫ ॥

ಪ್ರಾಸಾದಶಿಖರಾರೂಢಾಃ ಕುರುನಾರ್ಯೋ ದಿದೃಕ್ಷಯಾ ।
ವವೃಷುಃ ಕುಸುಮೈಃ ಕೃಷ್ಣಂ ಪ್ರೇಮವ್ರೀಡಾಸ್ಮಿತೇಕ್ಷಣಾಃ ॥ ೧೬ ॥

ಸಿತಾತಪತ್ರಂ ಜಗ್ರಾಹ ಮುಕ್ತಾದಾಮವಿಭೂಷಿತಮ್ ।
ರತ್ನದಂಡಂ ಗುಡಾಕೇಶಃ ಪ್ರಿಯಃ ಪ್ರಿಯತಮಸ್ಯ ಹ ॥ ೧೭ ॥

ಉದ್ಧವಃ ಸಾತ್ಯಕಿಶ್ಚೈವ ವ್ಯಜನೇ ಪರಮಾದ್ಭುತೇ ।
ವಿಕೀರ್ಯಮಾಣಃ ಕುಸುಮೈ ರೇಜೇ ಮಧುಪತಿಃ ಪಥಿ ॥ ೧೮ ॥

ಅಶ್ರೂಯಂತಾಶಿಷಃ ಸತ್ಯಾಸ್ತತ್ರ ತತ್ರ ದ್ವಿಜೇರಿತಾಃ ।
ನಾನಾರೂಪಾನುರೂಪಾಶ್ಚ ನಿರ್ಗುಣಸ್ಯ ಗುಣಾತ್ಮನಃ ॥ ೧೯ ॥

ಅನ್ಯೋನ್ಯಮಾಸೀತ್ಸಂಜಲ್ಪ ಉತ್ತಮಶ್ಲೋಕಚೇತಸಾಮ್ ।
ಕೌರವೇಂದ್ರಪುರಸ್ತ್ರೀಣಾಂ ಸರ್ವಶ್ರುತಿಮನೋಹರಃ ॥ ೨೦ ॥

ಧೃತರಾಷ್ಟ್ರ, ಯುಯುತ್ಸು, ಕೃಪಾಚಾರ್ಯರು, ನಕುಲ, ಸಹದೇವ, ಭೀಮಸೇನ, ಧೌಮ್ಯರು, ಸತ್ಯವತಿ ಮುಂತಾದವರೆಲ್ಲರೂ ಶಾರ್ಙ್ಗಪಾಣಿಯಾದ ಶ್ರೀಕೃಷ್ಣನ ವಿರಹವನ್ನು ಸಹಿಸಲಾರದೆ ಮೂರ್ಛಿತರಂತಾದರು. ॥ ೯-೧೦ ॥ ಭಗವಾನ್ ಶ್ರೀಕೃಷ್ಣನ ಮಧುರವಾದ ದಿವ್ಯ ಚರಿತ್ರವನ್ನು ಒಮ್ಮೆ ಕೇಳಿದವರೂ ಕೂಡ, ಭಗವದ್ಭಕ್ತರ ಸತ್ಸಂಗದಿಂದ ದುಃಸಂಗವನ್ನು ತೊರೆದು ಆ ಹರಿಕಥಾ ಶ್ರವಣಕ್ಕಾಗಿ ಮತ್ತೆ-ಮತ್ತೆ ಹಂಬಲಿಸುತ್ತಾರೆ. ಹೀಗಿರುವಾಗ ಆ ಭಗವಂತನನ್ನು ದರ್ಶಿಸುತ್ತಾ, ಸ್ಪರ್ಶಿಸುತ್ತಾ, ಅವನೊಡನೆ ಸಂಭಾಷಿಸುತ್ತಾ, ಆಸನ-ಶಯನ-ಭೋಜನಗಳಲ್ಲಿಯೂ ಆತನೊಡನೆ ಪಾಲ್ಗೊಳ್ಳುತ್ತಾ, ಅವನಿಗೆ ಸಂಪೂರ್ಣವಾಗಿ ತಮ್ಮ ಹೃದಯವನ್ನು ಅರ್ಪಿಸಿ ಆನಂದಿಸುತ್ತಿದ್ದ ಪಾಂಡವರಿಗೆ ಅವನ ಅಗಲಿಕೆ ಸಹಿಸಲಾದೀತೇ ? ॥ ೧೧-೧೨ ॥ ಅವರ ಚಿತ್ತವು ಶ್ರೀ ಕೃಷ್ಣನಲ್ಲಿಯೇ ಲೀನವಾಗಿತ್ತು. ಎವೆಯಿಕ್ಕದ ಕಣ್ಣುಗಳಿಂದ ಅವನನ್ನೇ ನೋಡುತ್ತಾ ಅವನ ಸ್ನೇಹಕ್ಕೆ ಕಟ್ಟುಬಿದ್ದು ಅವನ ಹಿಂದೆಯೇ ಓಡಾಡುತ್ತಿದ್ದರು. ॥ ೧೩ ॥ ಭಗವಾನ್ ಶ್ರೀಕೃಷ್ಣನು ಅರಮನೆಯಿಂದ ಹೊರಡುತ್ತಲೇ ಬಂಧು-ಸ್ತ್ರೀಯರ ಕಣ್ಣುಗಳು ಪ್ರೇಮಾಶ್ರುಗಳಿಂದ ತುಂಬಿ, ಉಕ್ಕಿಬರುತ್ತಿದ್ದವು. ಆದರೆ ಅವರು ಪ್ರಯಾಣದ ಸಮಯದಲ್ಲಿ ಅಪಶಕುನವಾಗದಿರಲೆಂದು ಬಹಳ ಕಷ್ಟದಿಂದ ಅಶ್ರುಧಾರೆಯನ್ನು ತಡೆದುಕೊಂಡರು. ॥ ೧೪ ॥

ಭಗವಂತನ ಪ್ರಸ್ಥಾನದ ಸಮಯದಲ್ಲಿ ಮೃದಂಗ, ಶಂಖ, ಭೇರಿ, ವೀಣೆ, ಡೋಲು, ಕಹಳೆ, ಝಲ್ಲರಿ, ತಮಟೆ, ಘಂಟೆ ದುಂದುಭಿಗಳು ಮುಂತಾದ ಮಂಗಳ ವಾದ್ಯಗಳು ಮೊಳಗತೊಡಗಿದವು. ॥ ೧೫ ॥ ಭಗವಂತನನ್ನು ದರ್ಶಿಸುವ ಆಸೆಯಿಂದ ಕುರುವಂಶದ ಸ್ತ್ರೀಯರು ಮೇಲ್ಮಹಡಿಗಳನ್ನೇರಿ ಕಣ್ಣುಗಳಿಗೆ ಹಬ್ಬವಾದ ಶ್ರೀಭಗವಂತನೆಡೆಗೆ ಪ್ರೇಮ, ಲಜ್ಜೆಗಳಿಂದ ಕೂಡಿದ ಮಂದಹಾಸದ ನೋಟವನ್ನು ಬೀರಿ, ಅವನ ಮೇಲೆ ಹೂಮಳೆಗರೆಯತೊಡಗಿದರು. ॥ ೧೬ ॥ ಗುಂಗುರುಕೂದಲುಗಳಿಂದ ಕಂಗೊಳಿಸುತ್ತಿದ್ದ ಅರ್ಜುನನು ತನ್ನ ಪ್ರಿಯಮಿತ್ರನಾದ ಶ್ರೀಕೃಷ್ಣನ ಮೇಲೆ ಮುತ್ತಿನ ಝಲ್ಲರಿಗಳಿಂದ ಅಲಂಕೃತವಾದ, ರತ್ನಖಚಿತ ಹಿಡಿಯಿಂದ ಶೋಭಿಸುವ ಬೆಳ್ಗೊಡೆಯನ್ನು ಹಿಡಿದು ಕೊಂಡನು. ॥ ೧೭ ॥ ಉದ್ಧವ, ಸಾತ್ಯಕಿಯರು ಇಕ್ಕೆಡೆಗಳಲ್ಲಿ ಪರಮಾದ್ಭುತವಾದ ಚಾಮರಗಳನ್ನು ಬೀಸುತ್ತಿದ್ದರು. ಹೆಜ್ಜೆ-ಹೆಜ್ಜೆಗೆ ಭಗವಾನ್ ಶ್ರೀಕೃಷ್ಣನ ಮೇಲೆ ಪುರಜನರು ಪುಷ್ಪವೃಷ್ಟಿಯನ್ನು ಮಾಡುತ್ತಿದ್ದರು. ಆ ದೃಶ್ಯವು ಮನೋಹರವಾಗಿತ್ತು. ॥ ೧೮ ॥ ತ್ರಿಗುಣಾತೀತನೂ, ಅಪ್ರಾಕೃತನೂ ಅನಂತ ಕಲ್ಯಾಣಗುಣ ಪರಿಪೂರ್ಣನೂ ಆದ ಆ ಪರಮಾತ್ಮನನ್ನು ಕುರಿತು ಬ್ರಾಹ್ಮಣರು ಉಚ್ಚರಿಸುತ್ತಿದ್ದ ಸತ್ಯವಾದ ಆಶೀರ್ವಚನಗಳು ಅಲ್ಲಲ್ಲಿ ಕೇಳಿ ಬರುತ್ತಿದ್ದುವು. ಈ ಆಶೀರ್ವಚನಗಳು ಆತನ ನಿರ್ಗುಣ ಸ್ವರೂಪಕ್ಕೆ ಅನುರೂಪವಾಗಿಲ್ಲ. ಏಕೆಂದರೆ ಆತನಲ್ಲಿ ಪ್ರಾಕೃತ ಗುಣಗಳು ಇಲ್ಲವೇ ಇಲ್ಲ. ॥ ೧೯ ॥ ಪುಣ್ಯಶ್ಲೋಕನಾದ ಆ ಪರಮಪುರುಷನಲ್ಲಿ ಚಿತ್ತವೃತ್ತಿಯುಳ್ಳ ಹಸ್ತಿನಾಪುರದ ಕುಲೀನ ಸ್ತ್ರೀಯರು ಕಿವಿ, ಮನಸ್ಸನ್ನು ಸೆಳೆಯುವಂತಹ ಭಗವಂತನನ್ನು ಕೊಂಡಾಡುತ್ತಾ ಹೀಗೆ ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ॥ ೨೦ ॥

# ಹತ್ತನೆಯ ಅಧ್ಯಾಯ

## ಶ್ರೀಕೃಷ್ಣನು ದ್ವಾರಕೆಗೆ ಮರಳಿದುದು

*ಶೌನಕ ಉವಾಚ*

ಹತ್ವಾ ಸ್ವರಿಕ್ಥಸ್ಪೃಧ ಆತತಾಯಿನೋ
ಯುಧಿಷ್ಠಿರೋ ಧರ್ಮಭೃತಾಂ ವರಿಷ್ಠಃ ।
ಸಹಾನುಜೈಃ ಪ್ರತ್ಯವರುದ್ಧಭೋಜನಃ
ಕಥಂ ಪ್ರವೃತ್ತಃ ಕಿಮಕಾರಷೀತ್ತತಃ ॥ ೧ ॥

*ಸೂತ ಉವಾಚ*

ವಂಶಂ ಕುರೋರ್ವಂಶದವಾಗ್ನಿನಿರ್ಹೃತಂ
ಸಂರೋಹಯಿತ್ವಾ ಭವಭಾವನೋ ಹರಿಃ ।
ನಿವೇಶಯಿತ್ವಾ ನಿಜರಾಜ್ಯ ಈಶ್ವರೋ
ಯುಧಿಷ್ಠಿರಂ ಪ್ರೀತಮನಾ ಬಭೂವ ಹ ॥ ೨ ॥

ನಿಶಮ್ಯ ಭೀಷ್ಮೋಕ್ತಮಥಾಚ್ಯುತೋಕ್ತಂ
ಪ್ರವೃತ್ತವಿಜ್ಞಾನವಿಧೂತವಿಭ್ರಮಃ ।
ಶಶಾಸ ಗಾಮಿಂದ್ರ ಇವಾಜಿತಾಶ್ರಯಃ
ಪರಿಧ್ಯುಪಾಂತಾಮನುಜಾನುವರ್ತಿತಃ ॥ ೩ ॥

ಕಾಮಂ ವವರ್ಷ ಪರ್ಜನ್ಯಃ ಸರ್ವಕಾಮದುಘಾ ಮಹೀ ।
ಸಿಷಿಚುಃ ಸ್ಮ ವ್ರಜಾನ್ಗಾವಃ ಪಯಸೋಧಸ್ವತೀರ್ಮುದಾ ॥ ೪ ॥

ನದ್ಯಃ ಸಮುದ್ರಾ ಗಿರಯಃ ಸವನಸ್ಪತಿವೀರುಧಃ ।
ಫಲಂತ್ಯೋಷಧಯಃ ಸರ್ವಾಃ ಕಾಮಮನ್ವೃತು ತಸ್ಯ ವೈ ॥ ೫ ॥

ನಾಧಯೋ ವ್ಯಾಧಯಃ ಕ್ಲೇಶಾ ದೈವಭೂತಾತ್ಮಹೇತವಃ ।
ಅಜಾತಶತ್ರಾವಭವನ್ ಜಂತೂನಾಂ ರಾಜ್ಞಿ ಕರ್ಹಿಚಿತ್ ॥ ೬ ॥

ಉಷಿತ್ವಾ ಹಾಸ್ತಿನಪುರೇ ಮಾಸಾನ್ಕತಿಪಯಾನ್ ಹರಿಃ ।
ಸುಹೃದಾಂ ಚ ವಿಶೋಕಾಯ ಸ್ವಸುಶ್ಚ ಪ್ರಿಯಕಾಮ್ಯಯಾ ॥ ೭ ॥

ಆಮಂತ್ರ್ಯ ಚಾಭ್ಯನುಜ್ಞಾತಃ ಪರಿಷ್ವಜ್ಯಾಭಿವಾದ್ಯ ತಮ್ ।
ಆರುರೋಹ ರಥಂ ಕೈಶ್ಚಿತ್ಪರಿಷ್ವಕ್ತೋಽಭಿವಾದಿತಃ ॥ ೮ ॥

**ಶೌನಕಾದಿಗಳು ಕೇಳುತ್ತಾರೆ** – ಸೂತ ಪುರಾಣಿಕರೇ! ಧಾರ್ಮಿಕ ಶಿರೋಮಣಿಯಾದ ಮಹಾರಾಜ ಯುಧಿಷ್ಠಿರನು ತನ್ನ ಪೈತೃಕಸಂಪತ್ತನ್ನು ಕಸಿದುಕೊಳ್ಳುವ ಆಸೆಯಿಂದ ತನ್ನನ್ನು ವಧಿಸಲು ಪ್ರಯತ್ನಪಟ್ಟ ಶತ್ರುಗಳನ್ನು ಸಂಹರಿಸಿ, ತನ್ನ ಸಹೋದರರೊಂದಿಗೆ ಹೇಗೆ ರಾಜ್ಯಶಾಸನವನ್ನು ಮಾಡಿದನು? ಏಕೆಂದರೆ, ಭೋಗಗಳಲ್ಲಾದರೋ ಅವನಿಗೆ ಪ್ರವೃತ್ತಿಯೇ ಇರಲಿಲ್ಲ. ॥ ೧ ॥

**ಸೂತಪುರಾಣಿಕರು ಹೇಳುತ್ತಾರೆ** - ಲೋಕದ ಉಜ್ಜೀವನಕ್ಕಾಗಿ ಅವತಾರಮಾಡಿದ ಶ್ರೀಹರಿಯು – ಬಿದಿರುಮೇಳೆಯಲ್ಲಿ ಪರಸ್ಪರ ಘರ್ಷಣೆಯಿಂದ ಉಂಟಾದ ಬೆಂಕಿಯು ಬಿದಿರುಮೇಳೆಯನ್ನೇ ಸುಟ್ಟುಬಿಡುವಂತೆ ಪರಸ್ಪರ ಕಲಹಾಗ್ನಿಯಿಂದ ಸುಟ್ಟು ಹೋಗಿದ್ದ ಕುರುವಂಶದ ಕುಡಿಯಾದ ಪರೀಕ್ಷಿತನನ್ನು ಬದುಕಿಸಿ, ಯುಧಿಷ್ಠಿರನನ್ನು ಅವನ ರಾಜ್ಯದಲ್ಲಿ ನೆಲೆಗೊಳಿಸಿ ತುಂಬಾ ಪ್ರಸನ್ನನಾದನು. ॥ ೨ ॥ ಭೀಷ್ಮಪಿತಾಮಹರ ಮತ್ತು ಭಗವಾನ್ ಶ್ರೀಕೃಷ್ಣನ ಉಪದೇಶ ಶ್ರವಣದಿಂದ ಧರ್ಮರಾಜನಿಗೆ ಜ್ಞಾನೋದಯವಾಗಿ, ಎಲ್ಲ ಭ್ರಾಂತಿಗಳು ಅಳಿದು ಹೋದುವು. ಶ್ರೀಭಗವಂತನ ಬೆಂಬಲದಿಂದ ಅವನು ಸಮುದ್ರ ಪರ್ಯಂತವಾದ ಭೂಮಂಡಲವನ್ನು ಇಂದ್ರನಂತೆ ಆಳತೊಡಗಿದನು. ಭೀಮಸೇನರೇ ಮುಂತಾದ ತಮ್ಮಂದಿರು ಆತನ ಆಜ್ಞೆಯಂತೆ ನಡೆಯುತ್ತಿದ್ದರು.॥ ೩ ॥ ಯುಧಿಷ್ಠಿರನ ರಾಜ್ಯದಲ್ಲಿ ಪೂರ್ಣವಾದ ಸುಭಿಕ್ಷವಿದ್ದು ಸುಖಶಾಂತಿಗಳು ನೆಲೆಸಿದ್ದವು. ಆವಶ್ಯಕತೆಗೆ ತಕ್ಕಂತೆ ಯಥೇಷ್ಟವಾಗಿ ಮಳೆಯು ಸುರಿಯುತ್ತಿತ್ತು. ಜೀವನಕ್ಕೆ ಬೇಕುಬೇಕಾದ ಎಲ್ಲ ಪದಾರ್ಥಗಳು ಹೇರಳವಾಗಿ ಭೂಮಿಯಿಂದ ಸಿಗುತ್ತಿದ್ದವು. ಆಕಳುಗಳು ಕೆಚ್ಚಲಲ್ಲಿ ಹಾಲು ಹಿಡಿಸಲಾರದೆ ಕೊಟ್ಟಿಗೆಗಳನ್ನು ಹಾಲಿನಿಂದ ನೆನೆಸುತ್ತಿದ್ದವು. ॥ ೪ ॥ ನದಿಗಳೂ, ಸಮುದ್ರಗಳೂ, ಪರ್ವತಗಳೂ, ವನಸ್ಪತಿಗಳೂ, ಔಷಧಿಗಳೂ, ಲತೆಗಳೂ ಪ್ರತಿಯೊಂದು ಋತುವಿನಲ್ಲಿಯೂ ಯಥೇಷ್ಟವಾಗಿ ತಮ್ಮ-ತಮ್ಮ ಸಂಪತ್ತನ್ನು ರಾಜನಿಗೆ ನೀಡುತ್ತಿದ್ದವು. ॥ ೫ ॥ ಅಜಾತಶತ್ರುವಾದ ಮಹಾರಾಜ ಯುಧಿಷ್ಠಿರನ ರಾಜ್ಯದಲ್ಲಿ ಯಾವ ಪ್ರಾಣಿಗೂ ಎಂದೂ ಆಧಿ-ವ್ಯಾಧಿಗಳು ಅಥವಾ ದೈವಿಕ, ಭೌತಿಕ, ಆತ್ಮಿಕವಾದ ಕ್ಲೇಶಗಳು ಆಗುತ್ತಿರಲಿಲ್ಲ. ॥ ೬ ॥

ತಮ್ಮ ಬಂಧು-ಮಿತ್ರರ ಶೋಕವನ್ನು ಹೋಗಲಾಡಿಸಲು ಮತ್ತು ತನ್ನ ತಂಗಿ ಸುಭದ್ರೆಯ ಸಂತೋಷಕ್ಕಾಗಿ ಭಗವಾನ್ ಶ್ರೀಕೃಷ್ಣನು ಹಸ್ತಿನಾವತಿಯಲ್ಲಿಯೇ ಕೆಲವು ತಿಂಗಳು ತಂಗಿದನು. ॥ ೭ ॥ ಮತ್ತೆ ಅವನು ರಾಜಾಯುಧಿಷ್ಠಿರನಿಂದ ದ್ವಾರಕೆಗೆ ಹೋಗಲು ಅನುಮತಿಯನ್ನು ಕೇಳಿದನು. ಆಗ ಧರ್ಮರಾಜನು ಶ್ರೀಕೃಷ್ಣನನ್ನು ತುಂಬು ಹೃದಯದಿಂದ ಆಲಿಂಗಿಸಿಕೊಂಡು ಬೀಳ್ಕೊಟ್ಟನು. ಭಗವಂತನು ಅವನಿಗೆ ನಮಸ್ಕರಿಸಿ ರಥವನ್ನು ಏರಿದನು. ಸಮವಯಸ್ಕರಾದ ಕೆಲವರು ಆತನನ್ನು ಅಪ್ಪಿಕೊಂಡರು. ಸಣ್ಣವರು ವಂದಿಸಿಕೊಂಡರು. ॥ ೮ ॥ ಆಗ ಸುಭದ್ರೆ, ದ್ರೌಪದೀ, ಕುಂತೀ, ಉತ್ತರೆ, ಗಾಂಧಾರೀ,

ಸುಭದ್ರಾ, ದ್ರೌಪದೀ ಕುಂತೀ ವಿರಾಟತನಯಾ ತಥಾ ।
ಗಾಂಧಾರೀ ಧೃತರಾಷ್ಟ್ರಶ್ಚ ಯುಯುತ್ಸುರ್ಗೌತಮೋ ಯಮೌ
॥ ೯ ॥

ವೃಕೋದರಶ್ಚ ಧೌಮ್ಯಶ್ಚ ಸ್ತ್ರಿಯೋಮತ್ಸ್ಯಸುತಾದಯಃ ।
ನ ಸೇಹಿರೇ ವಿಮುಹ್ಯಂತೋ ವಿರಹಂ ಶಾರ್ಙ್ಗಧನ್ವನಃ
॥ ೧೦ ॥

ಸತ್ಸಂಗಾನ್ಮುಕ್ತದುಃಸಂಗೋ ಹಾತುಂ ನೋತ್ಸಹತೇ ಬುಧಃ ।
ಕೀರ್ತ್ಯಮಾನಂ ಯಶೋ ಯಸ್ಯ ಸಕೃದಾಕರ್ಣ್ಯ ರೋಚನಮ್
॥ ೧೧ ॥

ತಸ್ಮಿನ್ನ್ಯಸ್ತಧಿಯಃ ಪಾರ್ಥಾಃ ಸಹೇರನ್ವಿರಹಂ ಕಥಮ್ ।
ದರ್ಶನಸ್ಪರ್ಶಸಂಲಾಪಶಯನಾಸನಭೋಜನೈಃ
॥ ೧೨ ॥

ಸರ್ವೇ ತೇಽನಿಮಿಷೈರಕ್ಷೈಸ್ತಮನುದ್ರುತಚೇತಸಃ ।
ವೀಕ್ಷಂತಃ ಸ್ನೇಹಸಂಬದ್ಧಾ ವಿಚೇಲುಸ್ತತ್ರ ತತ್ರ ಹ
॥ ೧೩ ॥

ನ್ಯರುಂಧನ್ನುದ್ಗಲದ್ಬಾಷ್ಪಮೌತ್ಕಂಠ್ಯಾದ್ದೇವಕೀಸುತೇ ।
ನಿರ್ಯಾತ್ಯಗಾರಾನ್ನೋಽಭದ್ರಮಿತಿ ಸ್ಯಾದ್ಬಾಂಧವಸ್ತ್ರಿಯಃ
॥ ೧೪ ॥

ಮೃದಂಗಶಂಖಭೇರ್ಯಶ್ಚ ವೀಣಾಪಣವಗೋಮುಖಾಃ ।
ಧುಂಧುರ್ಯಾನಕಘಂಟಾದ್ಯಾ ನೇದುರ್ದುಂದುಭಯಸ್ತಥಾ
॥ ೧೫ ॥

ಪ್ರಾಸಾದಶಿಖರಾರೂಢಾಃ ಕುರುನಾರ್ಯೋ ದಿದೃಕ್ಷಯಾ ।
ವವೃಷುಃ ಕುಸುಮೈಃ ಕೃಷ್ಣಂ ಪ್ರೇಮವ್ರೀಡಾಸ್ಮಿತೇಕ್ಷಣಾಃ
॥ ೧೬ ॥

ಸಿತಾತಪತ್ರಂ ಜಗ್ರಾಹ ಮುಕ್ತಾದಾಮವಿಭೂಷಿತಮ್ ।
ರತ್ನದಂಡಂ ಗುಡಾಕೇಶಃ ಪ್ರಿಯಃ ಪ್ರಿಯತಮಸ್ಯ ಹ
॥ ೧೭ ॥

ಉದ್ಧವಃ ಸಾತ್ಯಕಿಶ್ಚೈವ ವ್ಯಜನೇ ಪರಮಾದ್ಭುತೇ ।
ವಿಕೀರ್ಯಮಾಣಃ ಕುಸುಮೈ ರೇಜೇ ಮಧುಪತಿಃ ಪಥಿ
॥ ೧೮ ॥

ಅಶ್ರೂಯಂತಾಶಿಷಃ ಸತ್ಯಾಸ್ತತ್ರ ತತ್ರ ದ್ವಿಜೇರಿತಾಃ ।
ನಾನಾರೂಪಾನುರೂಪಾಶ್ಚ ನಿರ್ಗುಣಸ್ಯ ಗುಣಾತ್ಮನಃ
॥ ೧೯ ॥

ಅನ್ಯೋನ್ಯಮಾಸೀತ್ಸಂಜಲ್ಪ ಉತ್ತಮಶ್ಲೋಕಚೇತಸಾಮ್ ।
ಕೌರವೇಂದ್ರಪುರಸ್ತ್ರೀಣಾಂ ಸರ್ವಶ್ರುತಿಮನೋಹರಃ
॥ ೨೦ ॥

ಧೃತರಾಷ್ಟ್ರ, ಯುಯುತ್ಸು, ಕೃಪಾಚಾರ್ಯರು, ನಕುಲ, ಸಹದೇವ, ಭೀಮಸೇನ, ಧೌಮ್ಯರು, ಸತ್ಯವತಿ ಮುಂತಾದವರೆಲ್ಲರೂ ಶಾರ್ಙ್ಗಪಾಣಿಯಾದ ಶ್ರೀಕೃಷ್ಣನ ವಿರಹವನ್ನು ಸಹಿಸಲಾರದೆ ಮೂರ್ಛಿತರಂತಾದರು. ॥ ೯-೧೦ ॥ ಭಗವಾನ್ ಶ್ರೀಕೃಷ್ಣನ ಮಧುರವಾದ ದಿವ್ಯ ಚರಿತ್ರವನ್ನು ಒಮ್ಮೆ ಕೇಳಿದವರೂ ಕೂಡ, ಭಗವದ್ಭಕ್ತರ ಸತ್ಸಂಗದಿಂದ ದುಃಸಂಗವನ್ನು ತೊರೆದು ಆ ಹರಿಕಥಾ ಶ್ರವಣಕ್ಕಾಗಿ ಮತ್ತೆ-ಮತ್ತೆ ಹಂಬಲಿಸುತ್ತಾರೆ. ಹೀಗಿರುವಾಗ ಆ ಭಗವಂತನನ್ನು ದರ್ಶಿಸುತ್ತಾ, ಸ್ಪರ್ಶಿಸುತ್ತಾ, ಅವನೊಡನೆ ಸಂಭಾಷಿಸುತ್ತಾ, ಆಸನ-ಶಯನ-ಭೋಜನಗಳಲ್ಲಿಯೂ ಆತನೊಡನೆ ಪಾಲ್ಗೊಳ್ಳುತ್ತಾ, ಅವನಿಗೆ ಸಂಪೂರ್ಣವಾಗಿ ತಮ್ಮ ಹೃದಯವನ್ನು ಅರ್ಪಿಸಿ ಆನಂದಿಸುತ್ತಿದ್ದ ಪಾಂಡವರಿಗೆ ಅವನ ಅಗಲಿಕೆ ಸಹಿಸಲಾದೀತೇ ? ॥ ೧೧-೧೨ ॥ ಅವರ ಚಿತ್ತವು ಶ್ರೀ ಕೃಷ್ಣನಲ್ಲಿಯೇ ಲೀನವಾಗಿತ್ತು. ಎವೆಯಿಕ್ಕದ ಕಣ್ಣುಗಳಿಂದ ಅವನನ್ನೇ ನೋಡುತ್ತಾ ಅವನ ಸ್ನೇಹಕ್ಕೆ ಕಟ್ಟುಬಿದ್ದು ಅವನ ಹಿಂದೆಯೇ ಓಡಾಡುತ್ತಿದ್ದರು. ॥ ೧೩ ॥ ಭಗವಾನ್ ಶ್ರೀಕೃಷ್ಣನು ಅರಮನೆಯಿಂದ ಹೊರಡುತ್ತಲೇ ಬಂಧು-ಸ್ತ್ರೀಯರ ಕಣ್ಣುಗಳು ಪ್ರೇಮಾಶ್ರುಗಳಿಂದ ತುಂಬಿ, ಉಕ್ಕಿಬರುತ್ತಿದ್ದವು. ಆದರೆ ಅವರು ಪ್ರಯಾಣದ ಸಮಯದಲ್ಲಿ ಅಪಶಕುನವಾಗದಿರಲೆಂದು ಬಹಳ ಕಷ್ಟದಿಂದ ಅಶ್ರುಧಾರೆಯನ್ನು ತಡೆದುಕೊಂಡರು. ॥ ೧೪ ॥

ಭಗವಂತನ ಪ್ರಸ್ಥಾನದ ಸಮಯದಲ್ಲಿ ಮೃದಂಗ, ಶಂಖ, ಭೇರಿ, ವೀಣೆ, ಡೋಲು, ಕಹಳೆ, ಝಲ್ಲರಿ, ತಮಟೆ, ಘಂಟೆ ದುಂದುಭಿಗಳು ಮುಂತಾದ ಮಂಗಳ ವಾದ್ಯಗಳು ಮೊಳಗತೊಡಗಿದವು. ॥ ೧೫ ॥ ಭಗವಂತನನ್ನು ದರ್ಶಿಸುವ ಆಸೆಯಿಂದ ಕುರುವಂಶದ ಸ್ತ್ರೀಯರು ಮೇಲ್ಮಹಡಿಗಳನ್ನೇರಿ ಕಣ್ಣುಗಳಿಗೆ ಹಬ್ಬವಾದ ಶ್ರೀಭಗವಂತನೆಡೆಗೆ ಪ್ರೇಮ, ಲಜ್ಜೆಗಳಿಂದ ಕೂಡಿದ ಮಂದಹಾಸದ ನೋಟವನ್ನು ಬೀರಿ, ಅವನ ಮೇಲೆ ಹೂಮಳೆಗರೆಯತೊಡಗಿದರು. ॥ ೧೬ ॥ ಗುಂಗುರುಕೂದಲುಗಳಿಂದ ಕಂಗೊಳಿಸುತ್ತಿದ್ದ ಅರ್ಜುನನು ತನ್ನ ಪ್ರಿಯಮಿತ್ರನಾದ ಶ್ರೀಕೃಷ್ಣನ ಮೇಲೆ ಮುತ್ತಿನ ಝಲ್ಲರಿಗಳಿಂದ ಅಲಂಕೃತವಾದ, ರತ್ನಖಚಿತ ಹಿಡಿಯಿಂದ ಶೋಭಿಸುವ ಬೆಳ್ಗೊಡೆಯನ್ನು ಹಿಡಿದು ಕೊಂಡನು. ॥ ೧೭ ॥ ಉದ್ಧವ, ಸಾತ್ಯಕಿಯರು ಇಕ್ಕೆಡೆಗಳಲ್ಲಿ ಪರಮಾದ್ಭುತವಾದ ಚಾಮರಗಳನ್ನು ಬೀಸುತ್ತಿದ್ದರು. ಹೆಜ್ಜೆ-ಹೆಜ್ಜೆಗೆ ಭಗವಾನ್ ಶ್ರೀಕೃಷ್ಣನ ಮೇಲೆ ಪುರಜನರು ಪುಷ್ಪವೃಷ್ಟಿಯನ್ನು ಮಾಡುತ್ತಿದ್ದರು. ಆ ದೃಶ್ಯವು ಮನೋಹರವಾಗಿತ್ತು. ॥ ೧೮ ॥ ತ್ರಿಗುಣಾತೀತನೂ, ಅಪ್ರಾಕೃತನೂ ಅನಂತ ಕಲ್ಯಾಣಗುಣ ಪರಿಪೂರ್ಣನೂ ಆದ ಆ ಪರಮಾತ್ಮನನ್ನು ಕುರಿತು ಬ್ರಾಹ್ಮಣರು ಉಚ್ಚರಿಸುತ್ತಿದ್ದ ಸತ್ಯವಾದ ಆಶೀರ್ವಚನಗಳು ಅಲ್ಲಲ್ಲಿ ಕೇಳಿ ಬರುತ್ತಿದ್ದುವು. ಈ ಆಶೀರ್ವಚನಗಳು ಆತನ ನಿರ್ಗುಣ ಸ್ವರೂಪಕ್ಕೆ ಅನುರೂಪವಾಗಿಲ್ಲ. ಏಕೆಂದರೆ ಆತನಲ್ಲಿ ಪ್ರಾಕೃತ ಗುಣಗಳು ಇಲ್ಲವೇ ಇಲ್ಲ. ॥ ೧೯ ॥ ಪುಣ್ಯಶ್ಲೋಕನಾದ ಆ ಪರಮಪುರುಷನಲ್ಲಿ ಚಿತ್ತವೃತ್ತಿಯುಳ್ಳ ಹಸ್ತಿನಾಪುರದ ಕುಲೀನ ಸ್ತ್ರೀಯರು ಕಿವಿ, ಮನಸ್ಸನ್ನು ಸೆಳೆಯುವಂತಹ ಭಗವಂತನನ್ನು ಕೊಂಡಾಡುತ್ತಾ ಹೀಗೆ ಪರಸ್ಪರ ಮಾತನಾಡಿಕೊಳ್ಳುತ್ತಿದ್ದರು. ॥ ೨೦ ॥

ಸ ವೈ ಕಿಲಾಯಂ ಪುರುಷಃ ಪುರಾತನೋ
ಯ ಏಕ ಆಸೀದವಿಶೇಷ ಆತ್ಮನಿ ।
ಅಗ್ರೇ ಗುಣೇಭ್ಯೋ ಜಗದಾತ್ಮನೀಶ್ವರೇ
ನಿಮೀಲಿತಾತ್ಮನ್ನಿಶಿ ಸುಪ್ತಶಕ್ತಿಷು ॥ ೨೧ ॥

ಸ ಏವ ಭೂಯೋ ನಿಜವೀರ್ಯಚೋದಿತಾಂ
ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಮ್ ।
ಅನಾಮರೂಪಾತ್ಮನಿ ರೂಪನಾಮನೀ
ವಿಧಿತ್ಸಮಾನೋಽನುಸಸಾರ ಶಾಸ್ತ್ರಕೃತ್ ॥ ೨೨ ॥

ಸ ವಾ ಅಯಂ ಯತ್ಪದಮತ್ರ ಸೂರಯೋ
ಜಿತೇಂದ್ರಿಯಾ ನಿರ್ಜಿತಮಾತರಿಶ್ವನಃ ।
ಪಶ್ಯಂತಿ ಭಕ್ತ್ಯುತ್ಕಲಿತಾಮಲಾತ್ಮನಾ
ನನ್ವೇಷ ಸತ್ತ್ವಂ ಪರಿಮಾರ್ಷ್ಟುಮರ್ಹತಿ ॥ ೨೩ ॥

ಸ ವಾ ಅಯಂ ಸಖ್ಯನುಗೀತಸತ್ಕಥೋ
ವೇದೇಷು ಗುಹ್ಯೇಷು ಚ ಗುಹ್ಯವಾದಿಭಿಃ ।
ಯ ಏಕ ಈಶೋ ಜಗದಾತ್ಮಲೀಲಯಾ
ಸೃಜತ್ಯವತ್ಯತ್ತಿ ನ ತತ್ರ ಸಜ್ಜತೇ ॥ ೨೪ ॥

ಯದಾ ಹ್ಯಧರ್ಮೇಣ ತಮೋಧಿಯೋ ನೃಪಾ
ಜೀವಂತಿ ತತ್ರೈಷ ಹಿ ಸತ್ತ್ವತಃ ಕಿಲ ।
ಧತ್ತೇ ಭಗಂ ಸತ್ಯಮೃತಂ ದಯಾಂ ಯಶೋ
ಭವಾಯ ರೂಪಾಣಿ ದಧದ್ಯುಗೇ ಯುಗೇ ॥ ೨೫ ॥

ಅಹೋ ಅಲಂ ಶ್ಲಾಘ್ಯತಮಂ ಯದೋಃ ಕುಲಂ
ಅಹೋ ಅಲಂ ಪುಣ್ಯತಮಂ ಮಧೋರ್ವನಮ್ ।
ಯದೇಷ ಪುಂಸಾಮೃಷಭಃ ಶ್ರಿಯಃ ಪತಿಃ
ಸ್ವಜನ್ಮನಾ ಸಂಕ್ರಮಣೇನ ಚಾಂಚತಿ ॥ ೨೬ ॥

ಅಹೋ ಬತ ಸ್ವರ್ಯಶಸಸ್ತಿರಸ್ಕರೀ
ಕುಶಸ್ಥಲೀ ಪುಣ್ಯ ಯಶಸ್ಕರೀ ಭುವಃ ।
ಪಶ್ಯಂತಿ ನಿತ್ಯಂ ಯದನುಗ್ರಹೇಷಿತಂ
ಸ್ಮಿತಾವಲೋಕಂ ಸ್ವಪತಿಂ ಸ್ಮ ಯತ್ಪ್ರಜಾಃ ॥ ೨೭ ॥

ನೂನಂ ವ್ರತಸ್ನಾನಹುತಾದಿನೇಶ್ವರಃ
ಸಮರ್ಚಿತೋ ಹ್ಯಸ್ಯ ಗೃಹೀತಪಾಣಿಭಿಃ ।
ಪಿಬಂತಿ ಯಾಃ ಸಖ್ಯಧರಾಮೃತಂ ಮುಹು-
ರ್ವ್ರಜಸ್ತ್ರಿಯಃ ಸಮ್ಮುಮುಹುರ್ಯದಾಶಯಾಃ ॥ ೨೮ ॥

ಸಖಿಯರೇ ! ಈತನೇ ಆ ಪುರಾಣಪುರುಷನಾದ ಶ್ರೀವಿಷ್ಣುವಲ್ಲವೇ ? ತ್ರಿಗುಣಗಳು ಅಭಿವ್ಯಕ್ತವಾಗುವುದಕ್ಕೆ ಮೊದಲು ಮಹಾಪ್ರಳಯದ ಸಮಯದಲ್ಲಿ ಎಲ್ಲವೂ ತನ್ನಲ್ಲಿ ಉಪಸಂಹಾರ ಹೊಂದಿದಾಗ ಜಗದಾತ್ಮಾ ಈಶ್ವರನಲ್ಲಿ ಎಲ್ಲ ಜೀವರೂ, ಮಾಯಾ ಶಕ್ತಿಗಳೂ ಸುಪ್ತವಾಗಿದ್ದ ಸಮಯದಲ್ಲಿ, ತನ್ನ ನಿರ್ವಿಶೇಷವಾದ ಆತ್ಮ ಸ್ವರೂಪ ದಲ್ಲಿ ಏಕಾಕಿಯಾಗಿ ನೆಲೆಗೊಂಡಿದ್ದ ನಾರಾಯಣನು ಈತನೇ ಅಲ್ಲವೆ ? ॥೨೧॥ ಈತನೇ ವೇದಾದಿ ಶಾಸ್ತ್ರಗಳ ಪ್ರವರ್ತಕನಾದ ಭಗವಂತನು. ನಾಮ ರೂಪರಹಿತನಾಗಿದ್ದ ಆತ್ಮನಿಗೆ ನಾಮ-ರೂಪಗಳನ್ನು ಕೊಡುವ ಇಚ್ಛೆಯಿಂದ ತನ್ನ ಪರಮಾದ್ಭುತವಾದ ವೀರ್ಯದಿಂದ ಪ್ರೇರಿತವಾಗಿ ಸೃಷ್ಟಿಯಲ್ಲಿ ಪ್ರವರ್ತಿಸಲು ತೊಡಗಿದ ಪ್ರಕೃತಿಯನ್ನು ಅನುಸರಣೆ ಮಾಡಿದನು. ತನ್ನ ಅಂಶರಾದ ಜೀವರನ್ನು ಮೋಹಗೊಳಿಸುವ ಶಕ್ತಿಯನ್ನು ಪ್ರಕೃತಿಗೆ ಕೊಟ್ಟು, ಅದಕ್ಕೆ ಅಧಿಷ್ಠಾನವಾಗಿ ತಾನೇ ನಿಂತು, ಈ ಪ್ರಪಂಚವು ಮುಂದುವರೆಯುವಂತೆ ಮಾಡಿದನು. ॥೨೨॥ ಜಿತೇಂದ್ರಿಯರಾಗಿ ಪ್ರಾಣಗಳನ್ನು ವಶಪಡಿಸಿಕೊಂಡಿರುವ ಯೋಗಿಗಳು ಭಕ್ತಿಯಿಂದ ಅರಳಿದ ನಿರ್ಮಲವಾದ ಹೃದಯದಲ್ಲಿ ಸಾಕ್ಷಾತ್ಕರಿಸಿಕೊಳ್ಳುವಂತಹ ಸಾಕ್ಷಾತ್ ಪರಬ್ರಹ್ಮ ಪರಮಾತ್ಮನೇ ಈತನು. ವಾಸ್ತವವಾಗಿ ಇವನ ಭಕ್ತಿಯಿಂದಲೇ ಅಂತಃ ಕರಣವು ಪೂರ್ಣ ಶುದ್ಧವಾಗುವಂತೆ, ಯೋಗಾದಿಗಳಿಂದ ಆಗುವುದಿಲ್ಲ. ॥ ೨೩ ॥ ಸಖೀ! ರಹಸ್ಯಾರ್ಥಗಳನ್ನು ಹೊರಗೆಡಹುವ ವೇದ ವ್ಯಾಸಾದಿ ಜ್ಞಾನಶ್ರೇಷ್ಠರು ವೇದಗಳ ಮೂಲಕವೂ, ಇತರ ರಹಸ್ಯ ಗ್ರಂಥಗಳ ಮೂಲಕವೂ ಗಾನ ಮಾಡಿರುವುದು ಈತನ ಮಹಿಮೆ ಯನ್ನೇ. ಏಕೈಕ ಪರಮೇಶ್ವರನಾಗಿ ತನ್ನ ಲೀಲಾಮಾತ್ರದಿಂದ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ನಡೆಸುತ್ತಿದ್ದರೂ ಅವುಗಳ ಲೇಪವು ಕಿಂಚಿತ್ತಾದರೂ ಇಲ್ಲದೆ ಶುದ್ಧವಾಗಿ ಬೆಳಗುತ್ತಿರುವ ಪ್ರಭುವು ಈತನೇ. ॥ ೨೪ ॥ ಪ್ರಜೆಗಳಿಗೆ ರಕ್ಷಣೆಯನ್ನೂ, ಸುಖ-ಶಾಂತಿಗಳನ್ನು ಕೊಡಬೇಕಾದ ರಾಜರೇ ತಾಮಸಬುದ್ಧಿಯುಳ್ಳವರಾಗಿ ಅಧರ್ಮ ದಿಂದ ಜೀವಿಸತೊಡಗಿದಾಗ, ಈತನೇ ಜಗತ್ತಿನ ಕ್ಷೇಮಕ್ಕಾಗಿ ಸತ್ತ್ವ ಗುಣವನ್ನು ಸ್ವೀಕರಿಸಿ, ಐಶ್ವರ್ಯ, ಸತ್ಯ, ಋತ, ದಯೆ, ಯಶಸ್ಸು ಗಳನ್ನು ಪಾಲಿಸಲು ಯುಗ-ಯುಗಗಳಲ್ಲಿಯೂ ಅವತರಿಸುವನು. ॥ ೨೫ ॥ ಆಹಾ ! ಈ ಯದುವಂಶವು ಎಷ್ಟು ಪ್ರಶಂಸನೀಯವಾಗಿದೆ ! ಏಕೆಂದರೆ, ಶ್ರಿಯಃಪತಿಯಾದ ಪುರುಷೋತ್ತಮ ಶ್ರೀಕೃಷ್ಣನೇ ಈ ವಂಶದಲ್ಲಿ ಅವತರಿಸಿ ಈ ವಂಶವನ್ನು ಗೌರವಿಸಿದನು. ಹಾಗೆಯೇ ಈ ಮಧುರಾಮಂಡಲವೂ ಅತ್ಯಂತ ಪವಿತ್ರವಾದುದು. ತನ್ನ ಶೈಶವ ಬಾಲ್ಯದಲ್ಲಿ ಭಗವಂತನು ಸಂಚರಿಸುತ್ತಾ ಅದನ್ನು ಸುಶೋಭಿತ ಗೊಳಿಸಿದನು. ॥ ೨೬ ॥ ಎಂತಹ ಆಶ್ಚರ್ಯ ! ಈ ದ್ವಾರಕಾ ನಗರವೂ ಕೂಡ ತನ್ನ ಕೀರ್ತಿಯಿಂದ ಸ್ವರ್ಗದ ಯಶಸ್ಸನ್ನು ಮೀರಿಸಿ ಭೂಲೋಕದ ಪವಿತ್ರ ಕೀರ್ತಿಯನ್ನು ಹೆಚ್ಚಿಸಿದೆಯಲ್ಲ! ಈ ನಗರದ ಪ್ರಜೆಗಳೆಲ್ಲರೂ ಈತನ ಅನುಗ್ರಹ ಪೂರ್ಣವಾದ ಮಂದಹಾಸದಿಂದ ಕೂಡಿದ ಕೃಪಾದೃಷ್ಟಿಗೆ ಪಾತ್ರರಾಗಿ ಈ ಪ್ರಭುವನ್ನು ಸದಾ ಕಣ್ಣಾರೆ ನೋಡುತ್ತಾ ಧನ್ಯರಾಗುತ್ತಿದ್ದಾರಲ್ಲ! ॥ ೨೭ ॥ ಗೆಳತಿಯೇ ! ನಿಜವಾಗಿ ಈತನ ಕೈ ಹಿಡಿದ ನಾರೀಮಣಿಯರು ಎಷ್ಟು ಜನ್ಮಗಳಲ್ಲಿ ವ್ರತ, ಸ್ನಾನ, ಹೋಮಾದಿಗಳನ್ನು ಆಚರಿಸಿ ಭಗವಂತನನ್ನು ಪೂಜಿಸಿ, ಮೆಚ್ಚಿಸಿರಬೇಕು ! ಅದಕ್ಕೇ ಗೋಕುಲದ ಹೆಂಗಳೆಯರು ಪದೇ-ಪದೇ ಈತನ ಅಧರಾಮೃತವನ್ನು ಪಾನಮಾಡುತ್ತಾ, ಈತನ ಸ್ಮರಣ ಮಾತ್ರದಿಂದಲೇ ಆನಂದದಿಂದ ಮೂರ್ಛಿತರಾಗುತ್ತಿರುತ್ತಾರೆ. ॥ ೨೮ ॥

ಯಾ ವೀರ್ಯಶುಲ್ಕೇನ ಹೃತಾಃ ಸ್ವಯಂವರೇ
ಪ್ರಮಥ್ಯ ಚೈದ್ಯಪ್ರಮುಖಾನ್ ಹಿ ಶುಷ್ಮಿಣಃ ।
ಪ್ರದ್ಯುಮ್ನ ಸಾಂಬಾಂಬಸುತಾದಯೋಽಪರಾ
ಯಾಶ್ಚಾಹೃತಾ ಭೌಮವಧೇ ಸಹಸ್ರಶಃ ॥ ೨೯ ॥

ಏತಾಃ ಪರಂ ಸ್ತ್ರೀತ್ವ ಮಪಾಸ್ತಪೇಶಲಂ
ನಿರಸ್ತಶೌಚಂ ಬತ ಸಾಧು ಕುರ್ವತೇ ।
ಯಾಸಾಂ ಗೃಹಾತ್ಪುಷ್ಕರಲೋಚನಃ ಪತಿ-
ರ್ನ ಜಾತ್ವಪೈತ್ಯಾಹೃತಿಭಿರ್ಹೃದಿ ಸ್ಪೃಶನ್ ॥ ೩೦ ॥

ಏವಂ ವಿಧಾ ಗದಂತೀನಾಂ ಸ ಗಿರಃ ಪುರಯೋಷಿತಾಮ್ ।
ನಿರೀಕ್ಷಣೇನಾಭಿನಂದನ್ಸಸ್ಮಿತೇನ ಯಯೌ ಹರಿಃ ॥ ೩೧ ॥

ಅಜಾತಶತ್ರುಃ ಪೃತನಾಂ ಗೋಪೀಥಾಯ ಮಧುದ್ವಿಷಃ ।
ಪರೇಭ್ಯಃ ಶಂಕಿತಃ ಸ್ನೇಹಾತ್ಪ್ರಾಯುಂಕ್ತ ಚತುರಂಗಿಣೀಮ್ ॥ ೩೨ ॥

ಅಥ ದೂರಾಗತಾನ್ ಶೌರಿಃ ಕೌರವಾನ್ವಿರಹಾತುರಾನ್ ।
ಸಂನಿವರ್ತ್ಯ ದೃಢಂ ಸ್ನಿಗ್ಧಾನ್ಪ್ರಾಯಾತ್ಸ್ವನಗರೀಂ ಪ್ರಿಯೈಃ ॥ ೩೩ ॥

ಕುರುಜಾಂಗಲಪಾಂಚಾಲಾನ್ ಶೂರಸೇನಾನ್ಸಯಾಮುನಾನ್ ।
ಬ್ರಹ್ಮಾವರ್ತಂ ಕುರುಕ್ಷೇತ್ರಂ ಮತ್ಸ್ಯಾನ್ಸಾರಸ್ವತಾನಥ ॥ ೩೪ ॥

ಮರುಧನ್ವಮತಿಕ್ರಮ್ಯ ಸೌವೀರಾಭೀರಯೋಃ ಪರಾನ್ ।
ಆನರ್ತಾನ್ಭಾರ್ಗವೋಪಾಗಾಚ್ಛ್ರಾಂತವಾಹೋ ಮನಾಗ್ವಿಭುಃ ॥ ೩೫ ॥

ತತ್ರ ತತ್ರ ಹ ತತ್ರತ್ಯೈರ್ಹರಿಃ ಪ್ರತ್ಯುದ್ಯತಾರ್ಹಣಃ ।
ಸಾಯಂ ಭೇಜೇ ದಿಶಂ ಪಶ್ಚಾದ್ಗವಿಷ್ಠೋ ಗಾಂ ಗತಸ್ತದಾ ॥ ೩೬ ॥

ಬಲಿಷ್ಠರಾದ ಶಿಶುಪಾಲನೇ ಮುಂತಾದವರನ್ನು ನಿಗ್ರಹಿಸಿ ಸ್ವಯಂವರದಲ್ಲಿ ವೀರ್ಯಶುಲ್ಕವಾಗಿ ಸ್ವೀಕರಿಸಿರುವ ರುಕ್ಮಿಣೀ, ಜಾಂಬವತೀ, ಮಿತ್ರವಿಂದೆಯರೆ ಮೊದಲಾದವರು-ಪ್ರದ್ಯುಮ್ನ, ಸಾಂಬ, ಅಂಬ ಇವರ ವೀರಮಾತೆಯರಾದ ಅಷ್ಟಮಹಿಷಿಯರು, ಭೌಮಾಸುರನನ್ನು ಸಂಹರಿಸಿ ಸೆರೆಯಿಂದ ಬಿಡಿಸಿ ಸ್ವೀಕರಿಸಿರುವ ಸಾವಿರಾರು ಸ್ತ್ರೀಯರೆಲ್ಲರೂ ಹೆಣ್ಣು ಜನ್ಮವೆಂಬುದು ಕರ್ಮಾನುಷ್ಠಾನಕ್ಕೆ ಅನರ್ಹವೂ, ಅಸ್ವತಂತ್ರವೂ ಅಶುದ್ಧವೂ ಎಂದೆನಿಸಿದರೂ ಈ ಜಗತ್ತಿನ ಸ್ತ್ರೀಜಾತಿಗೇ ಪಾವಿತ್ರ್ಯವನ್ನೂ, ಪ್ರಕಾಶವನ್ನು ಇವನಿಂದ ತಂದು ಕೊಟ್ಟಿರಲ್ಲವೇ ! ಇವರ ಮಹಿಮೆಯನ್ನು ಯಾರೇ ಎಷ್ಟೇ ವರ್ಣಿಸಲಿ ! ಇವರ ಸ್ವಾಮಿ ಸಾಕ್ಷಾತ್ ಕಮಲನಯನ ಭಗವಾನ್ ಶ್ರೀಕೃಷ್ಣನೇ ಆಗಿದ್ದಾನಲ್ಲ! ನಾನಾ ಪ್ರಕಾರದ ಪ್ರಿಯ ಚೇಷ್ಟೆಗಳನ್ನು ಹಾಗೂ ಪಾರಿಜಾತಾದಿ ಪ್ರಿಯ ವಸ್ತುಗಳನ್ನು ಪಡೆಯುತ್ತಾ, ಇವನ ಹೃದಯದಲ್ಲಿ ಪ್ರೇಮಾ ನಂದವನ್ನು ಅಭಿವೃದ್ಧಿ ಪಡಿಸುತ್ತಾ ಎಂದಿಗೂ ಒಂದು ಕ್ಷಣ ವಾದರೂ ಇವನನ್ನು ಬಿಟ್ಟು ಬೇರೆಡೆಗೆ ಹೋಗದಿರುವ ಭಾಗ್ಯವತಿ ಯರು ಅವರು. ॥ ೨೯-೩೦ ॥

ಹಸ್ತಿನಾವತಿಯ ರಮಣಿಯರು ಹೀಗೆ ಮಾತನಾಡಿಕೊಳ್ಳುತ್ತಿದ್ದಾಗ ಭಗವಾನ್ ಶ್ರೀಕೃಷ್ಣನು ಮಂದಹಾಸದಿಂದಲೂ, ಪ್ರೇಮಪೂರ್ಣವಾದ ನೋಟದಿಂದಲೂ ಅವರನ್ನು ಅಭಿನಂದಿಸುತ್ತಾ ಅಲ್ಲಿಂದ ಮುಂದಕ್ಕೆ ನಡೆದನು. ॥ ೩೧ ॥ ಅಜಾತಶತ್ರುವಾದ ಯುಧಿಷ್ಠಿರನು ಭಗವಂತನಾದ ಶ್ರೀಕೃಷ್ಣನ ರಕ್ಷಣೆಗೆಂದು ಆನೆ, ಕುದುರೆ, ರಥ, ಕಾಲಾಳು ಇವುಗಳಿಂದ ಕೂಡಿದ ಚತುರಂಗ ಸೇನೆಯನ್ನು ಕಳಿಸಿಕೊಟ್ಟನು. ಮಾರ್ಗದಲ್ಲಿ ಯಾರಾದರು ಶತ್ರುಗಳು ಆಕ್ರಮಣ ಮಾಡಬಹುದೆಂಬ ತನ್ನ ಅತಿ ಸ್ನೇಹದಿಂದ ಶಂಕಿಸುತ್ತಾ ಅವನು ಹಾಗೆ ಮಾಡಿದನು. ॥ ೩೨ ॥ ಪರಮ ಪ್ರೇಮವಶರಾಗಿ ಆತನ ಅಗಲಿಕೆಯನ್ನು ಸಹಿಸದೆ ಬಹುದೂರವರೆಗೆ ತನ್ನನ್ನೇ ಅನುಸರಿಸಿ ಬಂದ ಕುರುವಂಶೀಯರಾದ ಪಾಂಡವರನ್ನು ಭಗವಾನ್ ಶ್ರೀಕೃಷ್ಣನು ತುಂಬಾ ಆಗ್ರಹದಿಂದ ಹಿಂದಿರುಗಿಸಿ, ಸಾತ್ಯಕಿ, ಉದ್ಧವರೇ ಮುಂತಾದ ಗೆಳೆಯರೊಂದಿಗೆ ದ್ವಾರಕೆಗೆ ಪ್ರಯಾಣ ಬೆಳೆಸಿದನು. ॥ ೩೩ ॥ ಶೌನಕರೇ ! ಕುರುಜಾಂಗಲ, ಪಾಂಚಾಲ, ಶೂರಸೇನ, ಯಮುನೆಯ ದಡದಲ್ಲಿರುವ ಸ್ಥಳಗಳನ್ನು ಬ್ರಹ್ಮಾವರ್ತ, ಕುರುಕ್ಷೇತ್ರ, ಮತ್ಸ್ಯ, ಸಾರಸ್ವತ, ಮರುಧನ್ವ ದೇಶಗಳನ್ನೂ ದಾಟಿ, ಸೌವೀರ ಮತ್ತು ಆಭೀರ ದೇಶಗಳ ಪಶ್ಚಿಮದಲ್ಲಿರುವ ಆನರ್ತ ದೇಶಕ್ಕೆ ಮಹಾಪ್ರಭುವು ದಯಮಾಡಿಸಿದನು. ಈ ವೇಳೆಗಾಗಲೇ ಬಹುದೂರ ಪ್ರಯಾಣ ಮಾಡಿದ್ದರಿಂದ ಆತನ ರಥದ ಕುದುರೆಗಳು ಬಳಲಿದ್ದವು. ॥ ೩೪-೩೫ ॥ ಮಾರ್ಗ ಮಧ್ಯದಲ್ಲಿ ಜನರು ಆತನಿಗೆ ಕಾಣಿಕೆಗಳನ್ನು ತಂದೊಪ್ಪಿಸಿ ಗೌರವ ಸೂಚಿಸುತ್ತಿದ್ದರು. ಸಾಯಂಕಾಲವಾಗುತ್ತಲೇ ಸ್ವಾಮಿಯು ರಥದಿಂದ ಕೆಳಗಿಳಿದು ಸಂಧ್ಯಾವಂದನೆ ಮಾಡಿದನು. ಇದು ಅವನ ದಿನಚರ್ಯೆ ಆಗಿತ್ತು. ಆಗಲೇ ಸೂರ್ಯಾಸ್ತವಾಗಿ ಇವರೆಲ್ಲರೂ ದ್ವಾರಕೆಯ ಗಡಿಗೆ ತಲುಪಿದರು. ॥ ೩೬ ॥

*ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಶ್ರೀಕೃಷ್ಣದ್ವಾರಕಾಗಮನಂ ನಾಮ ದಶಮೋಽಧ್ಯಾಯಃ ॥ ೧೦ ॥

# ಹನ್ನೊಂದನೆಯ ಅಧ್ಯಾಯ

## ದ್ವಾರಕೆಯಲ್ಲಿ ಶ್ರೀಕೃಷ್ಣನಿಗೆ ರಾಜೋಚಿತ ಸ್ವಾಗತ

*ಸೂತ ಉವಾಚ*

ಆನರ್ತಾನ್ಸ ಉಪವ್ರಜ್ಯ ಸ್ವೃದ್ಧಾಂಜನಪದಾನ್ ಸ್ವಕಾನ್ ।
ದಧ್ಮೌ ದರವರಂ ತೇಷಾಂ ವಿಷಾದಂ ಶಮಯನ್ನಿವ ॥ ೧ ॥

ಸ ಉಚ್ಚಕಾಶೇ ಧವಲೋದರೋ ದರೋಽ-
ಪ್ಯುರುಕ್ರಮಸ್ಯಾಧರಶೋಣಶೋಣಿಮಾ ।
ದಾಧ್ಮಾಯಮಾನಃ ಕರಕಂಜಸಂಪುಟೇ
ಯಥಾಬ್ಜಷಂಡೇ ಕಲಹಂಸ ಉತ್ಸ್ವನಃ ॥ ೨ ॥

ತಮುಪಶ್ರುತ್ಯ ನಿನದಂ ಜಗದ್ಭಯಭಯಾವಹಮ್ ।
ಪ್ರತ್ಯುದ್ಯಯುಃ ಪ್ರಜಾಃ ಸರ್ವಾ ಭರ್ತೃದರ್ಶನಲಾಲಸಾಃ ॥ ೩ ॥

ತತ್ರೋಪನೀತಬಲಯೋ ರವೇರ್ದೀಪಮಿವಾದೃತಾಃ ।
ಆತ್ಮಾರಾಮಂ ಪೂರ್ಣಕಾಮಂ ನಿಜಲಾಭೇನ ನಿತ್ಯದಾ ॥ ೪ ॥

ಪ್ರೀತ್ಯುತ್ಫುಲ್ಲಮುಖಾಃ ಪ್ರೋಚುರ್ಹರ್ಷಗದ್ಗದಯಾ ಗಿರಾ ।
ಪಿತರಂ ಸರ್ವಸುಹೃದಮವಿತಾರಮಿವಾರ್ಭಕಾಃ ॥ ೫ ॥

ನತಾಃ ಸ್ಮ ತೇ ನಾಥ ಸದಾಂಘ್ರಿಪಂಕಜಂ
ವಿರಿಂಚವೈರಿಂಚ್ಯಸುರೇಂದ್ರವಂದಿತಮ್ ।
ಪರಾಯಣಂ ಕ್ಷೇಮಮಿಹೇಚ್ಛತಾಂ ಪರಂ
ನ ಯತ್ರ ಕಾಲಃ ಪ್ರಭವೇತ್ಪರಃ ಪ್ರಭುಃ ॥ ೬ ॥

ಭವಾಯ ನಸ್ತ್ವಂ ಭವ ವಿಶ್ವಭಾವನ
ತ್ವಮೇವ ಮಾತಾಥ ಸುಹೃತ್ಪತಿಃ ಪಿತಾ ।
ತ್ವಂ ಸದ್ಗುರುರ್ನಃ ಪರಮಂ ಚ ದೈವತಂ
ಯಸ್ಯಾನುವೃತ್ತ್ಯಾ ಕೃತಿನೋ ಬಭೂವಿಮ ॥ ೭ ॥

ಅಹೋ ಸನಾಥಾ ಭವತಾ ಸ್ಮ ಯದ್ವಯಂ
ತ್ರೈವಿಷ್ಟಪಾನಾಮಪಿ ದೂರದರ್ಶನಮ್ ।
ಪ್ರೇಮಸ್ಮಿತಸ್ನಿಗ್ಧನಿರೀಕ್ಷಣಾನನಂ
ಪಶ್ಯೇಮ ರೂಪಂ ತವ ಸರ್ವಸೌಭಗಮ್ ॥ ೮ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿಗಳೇ! ಭಗವಾನ್ ಶ್ರೀಕೃಷ್ಣನು ತನ್ನ ಸಮೃದ್ಧವಾದ ಆನರ್ತದೇಶಕ್ಕೆ ತಲುಪಿ ಅಲ್ಲಿ ತನ್ನ ಶ್ರೇಷ್ಠವಾದ ಪಾಂಚಜನ್ಯ ಶಂಖವನ್ನೂದಿದನು. ಆ ದಿವ್ಯ ಶಂಖ ಧ್ವನಿಯನ್ನು ಕೇಳಿದೊಡನೆಯೇ ಅಲ್ಲಿಯ ಜನರ ವಿರಹ ವೇದನೆ ಉಪಶಮನವಾದಂತಾಯಿತು. ॥ ೧ ॥ ಭಗವಂತನು ತನ್ನ ಕರಕಮಲದಲ್ಲಿ ಹಿಡಿದು ಊದುತ್ತಿದ್ದ ಆ ಶುಭ್ರವಾದ ಶಂಖಕ್ಕೆ ಆತನ ಕೆಂದುಟಿಯ ಸಂಬಂಧದಿಂದ ಕೆಂಪುಬಣ್ಣವು ಬಂದು ಅದು ಕೆಂದಾವರೆಯ ಸರೋವರದಲ್ಲಿ ವಿಹರಿಸುತ್ತಾ ಮಧುರಧ್ವನಿ ಮಾಡುವ ರಾಜಹಂಸದಂತೆ ಶೋಭಿಸುತ್ತಿತ್ತು. ॥ ೨ ॥ ಜಗತ್ತಿನ ಸಕಲ ಭಯಗಳನ್ನು ಹೋಗಲಾಡಿಸುವ ಆ ಶಂಖನಾದವನ್ನು ಕೇಳಿದ ಪ್ರಜಾಜನರೆಲ್ಲರೂ ತಮ್ಮ ಪ್ರಭುವಾದ ಶ್ರೀಕೃಷ್ಣನ ದರ್ಶನದ ಲಾಲಸೆಯಿಂದ ಅವನನ್ನು ಇದಿರ್ಗೊಳ್ಳಲು ನಗರದ ಹೊರಭಾಗಕ್ಕೆ ಬಂದರು. ॥ ೩ ॥ ಸೂರ್ಯನು ಸ್ವಯಂ ಪ್ರಕಾಶನಾಗಿ ತೇಜೋನಿಧಿಯಾಗಿದ್ದರೂ ಭಕ್ತಜನರು ಪ್ರೀತ್ಯಾದರಗಳಿಂದ ಅವನಿಗೆ ದೀಪ ದಾನ ಮಾಡುವಂತೆ ಆ ಪ್ರಜಾಜನರು ಆತ್ಮಾರಾಮನಾಗಿ, ಆತ್ಮಲಾಭದಿಂದಲೇ ನಿತ್ಯಸಂತುಷ್ಟನಾದ ಭಗವಾನ್ ಶ್ರೀಕೃಷ್ಣನಿಗೆ ಬಗೆ-ಬಗೆಯ ಕಾಣಿಕೆಗಳನ್ನು ಅರ್ಪಿಸುತ್ತಾ ಸ್ವಾಗತಿಸಿದರು.॥ ೪ ॥ ಎಲ್ಲರ ಮುಖ-ಕಮಲಗಳು ಪ್ರೇಮದಿಂದ ಅರಳಿದವು. ಅವರೆಲ್ಲರೂ ಹರ್ಷಗದ್ಗದ ವಾಣಿಯಿಂದ ಎಲ್ಲರ ಸುಹೃದನೂ, ಸಂರಕ್ಷನೂ ಆದ ಭಗವಾನ್ ಶ್ರೀಕೃಷ್ಣನನ್ನು ಸಣ್ಣ ಬಾಲಕರು ತೊದಲು ಮಾತಿನಿಂದ ತಂದೆಯ ಬಳಿ ಮಾತಾಡುವಂತೆ ಸ್ತುತಿಸಲು ತೊಡಗಿದರು. ॥ ೫ ॥ "ಪ್ರಭೋ! ನಿನ್ನ ಚರಣಕಮಲಗಳಿಗೆ ಸದಾ ನಮ್ಮ ನಮಸ್ಕಾರಗಳು. ಬ್ರಹದೇವರು, ಬ್ರಹ್ಮಪುತ್ರರಾದ ಸನಕಾದಿಗಳು, ಇಂದ್ರನೇ ಮೊದಲಾದವರೂ ಕೂಡ ವಂದಿಸುವ ಪಾದಾರವಿಂದಗಳಿವು. ಸಮಸ್ತ ಜಗತ್ತಿನ ಮೇಲೂ ಪ್ರಭುತ್ವವನ್ನು ನಡೆಸುವ ಕಾಲನ ಪ್ರಭಾವಕ್ಕು ಒಳಪಡದೆ, ಪರಮ ಶ್ರೇಯಸ್ಸನ್ನು ಬಯಸುವವರಿಗೆ ಪರಮಾಶ್ರಯವಾಗಿರುವ ಪವಿತ್ರ ಪಾದಗಳಿಗೆ ವಂದನೆಗಳು. ॥ ೬ ॥ ವಿಶ್ವಭಾವನನೇ! ಜಗದ್ರಕ್ಷಕನೇ! ನೀನೇ ನಮ್ಮ ತಂದೆ, ತಾಯಿ, ಸುಹೃದ್, ಒಡೆಯನಾಗಿರುವೆ. ನೀನೇ ನಮಗೆ ಸದ್ಗುರು ಮತ್ತು ಪರಮ ಆರಾಧ್ಯನಾಗಿರುವೆ. ನಿನ್ನ ಚರಣಗಳ ಸೇವೆಯಿಂದ ನಾವು ಕೃತಾರ್ಥರಾಗಿದ್ದೇವೆ. ನೀನೇ ನಮ್ಮ ಶ್ರೇಯಸ್ಸನ್ನು ಮಾಡುವವನಾಗು. ॥ ೭ ॥ ಆಹಾ! ನಿನ್ನ ಸರ್ವಸೌಂದರ್ಯ ಸಾರವಾದ ರೂಪದ ದರ್ಶನ ಪಡೆದು, ನಿನ್ನನ್ನು ಒಡೆಯನಾಗಿ ಪಡೆದು ಅನಾಥರಾದ ನಾವು ಸನಾಥರಾದೆವು. ದೇವತೆಗಳಿಗೂ ದುರ್ಲಭವಾದ ಪ್ರೇಮಭರಿತವಾಗಿರುವ ಮಂದಹಾಸದಿಂದಲೂ, ಸ್ನೇಹಪೂರ್ಣವಾದ ನೋಟದಿಂದಲೂ ಕಂಗೊಳಿಸುವ ನಿನ್ನ ಮುಖಕಮಲವನ್ನು ನಾವು ಸದಾ ದರ್ಶಿಸುತ್ತಿದ್ದೇವಲ್ಲ! ॥ ೮ ॥

ಯರ್ಹ್ಯಂಬುಜಾಕ್ಷಾಪಸಸಾರ ಭೋ ಭವಾನ್
ಕುರೂನ್ಮಧೂನ್ವಾಥ ಸುಹೃದ್ದಿದೃಕ್ಷಯಾ ।
ತತ್ರಾಬ್ದ ಕೋಟಿಪ್ರತಿಮಃ ಕ್ಷಣೋ ಭವೇದ್
ರವಿಂ ವಿನಾಕ್ಷ್ಣೋರಿವ ನಸ್ತವಾಚ್ಯುತ ॥ ೯ ॥

ಇತಿ ಚೋದೀರಿತಾ ವಾಚಃ ಪ್ರಜಾನಾಂ ಭಕ್ತವತ್ಸಲಃ ।
ಶೃಣ್ವಾನೋಽನುಗ್ರಹಂ ದೃಷ್ಟ್ಯಾ ವಿತನ್ವನ್ಪ್ರಾವಿಶತ್ಪುರೀಮ್ ॥ ೧೦ ॥

ಮಧುಭೋಜದಶಾರ್ಹಾರ್ಹಕುಕುರಾಂಧಕವೃಷ್ಣಿಭಿಃ ।
ಆತ್ಮತುಲ್ಯ ಬಲೈರ್ಗುಪ್ತಾಂ ನಾಗೈರ್ಭೋಗವತೀಮಿವ ॥ ೧೧ ॥

ಸರ್ವರ್ತುಸರ್ವವಿಭವಪುಣ್ಯವೃಕ್ಷಲತಾಶ್ರಮೈಃ ।
ಉದ್ಯಾನೋಪವನಾರಾಮೈರ್ವೃತಪದ್ಮಾಕರಶ್ರಿಯಮ್ ॥ ೧೨ ॥

ಗೋಪುರದ್ವಾರಮಾರ್ಗೇಷು ಕೃತಕೌತುಕತೋರಣಾಮ್ ।
ಚಿತ್ರಧ್ವಜಪತಾಕಾಗ್ರೈರಂತಃ ಪ್ರತಿಹತಾತಪಾಮ್ ॥ ೧೩ ॥

ಸಮ್ಮಾರ್ಜಿತಮಹಾಮಾರ್ಗರಥ್ಯಾಪಣಕಚತ್ವರಾಮ್ ।
ಸಿಕ್ತಾಂ ಗಂಧಜಲೈರುಪ್ತಾಂ ಫಲಪುಷ್ಪಾಕ್ಷತಾಂಕುರೈಃ ॥ ೧೪ ॥

ದ್ವಾರಿ ದ್ವಾರಿ ಗೃಹಾಣಾಂ ಚ ದಧ್ಯಕ್ಷತಫಲೇಕ್ಷುಭಿಃ ।
ಅಲಂಕೃತಾಂ ಪೂರ್ಣಕುಂಭೈರ್ಬಲಿಭಿರ್ಧೂಪದೀಪಕೈಃ ॥ ೧೫ ॥

ನಿಶಮ್ಯ ಪ್ರೇಷ್ಠಮಾಯಾಂತಂ ವಸುದೇವೋ ಮಹಾಮನಾಃ ।
ಅಕ್ರೂರಶ್ಚೋಗ್ರಸೇನಶ್ಚ ರಾಮಶ್ಚಾದ್ಭುತವಿಕ್ರಮಃ ॥ ೧೬ ॥

ಪ್ರದ್ಯುಮ್ನಶ್ಚಾರುದೇಷ್ಣಶ್ಚ ಸಾಂಬೋ ಜಾಂಬವತೀಸುತಃ ।
ಪ್ರಹರ್ಷವೇಗೋಚ್ಛ್ವಶಿತಶಯನಾಸನಭೋಜನಾಃ ॥ ೧೭ ॥

ವಾರಣೇಂದ್ರಂ ಪುರಸ್ಕೃತ್ಯ ಬ್ರಾಹ್ಮಣೈಃ ಸಸುಮಂಗಲೈಃ ।
ಶಂಖತೂರ್ಯನಿನಾದೇನ ಬ್ರಹ್ಮಘೋಷೇಣ ಚಾದೃತಾಃ ।
ಪ್ರತ್ಯುಜ್ಜಗ್ಮೂ ರಥೈರ್ಹೃಷ್ಟಾಃ ಪ್ರಣಯಾಗತಸಾಧ್ವಸಾಃ ॥ ೧೮ ॥

ವಾರಮುಖ್ಯಾಶ್ಚ ಶತಶೋ ಯಾನೈಸ್ತದ್ದರ್ಶನೋತ್ಸುಕಾಃ ।
ಲಸತ್ಕುಂಡಲನಿರ್ಭಾತಕಪೋಲವದನಶ್ರಿಯಃ ॥ ೧೯ ॥

ಪುಂಡರೀಕಾಕ್ಷನೇ ! ಅಚ್ಯುತನೇ ! ನೀನು ಪ್ರೀತಿಯ ನೆಂಟರಿಷ್ಟರನ್ನು ನೋಡುವುದಕ್ಕೆಂದು ಹಸ್ತಿನಾವತಿಗೋ, ಮಥುರೆಗೋ (ವ್ರಜ ಮಂಡಲ) ಹೋರಟು ಹೋದರೆ ಆಗ ನೀನಿಲ್ಲದೆ ಸೂರ್ಯನ ಬೆಳಕನ್ನು ಕಾಣದ ಕಣ್ಣುಗಳಂತೆ ಒಂದೊಂದು ಕ್ಷಣವನ್ನು ಕೋಟಿ-ಕೋಟಿ ವರ್ಷಗಳಂತೆ ಕಳೆಯ ಬೇಕಾಗುವುದು." ॥ ೯ ॥ ಭಕ್ತವತ್ಸಲ ಭಗವಾನ್ ಶ್ರೀಕೃಷ್ಣನು ಪ್ರಜೆಗಳ ಇಂತಹ ಸವಿಮಾತುಗಳನ್ನು ಕೇಳಿ, ತನ್ನ ಕೃಪಾದೃಷ್ಟಿಯಿಂದ ಅವರ ಮೇಲೆ ಅನುಗ್ರಹದ ಮಳೆಗರೆಯುತ್ತಾ ದ್ವಾರಕೆಯನ್ನು ಪ್ರವೇಶಿಸಿದನು. ॥ ೧೦ ॥

ನಾಗಗಳು ಪಾತಾಳದ ಭೋಗವತಿ ನಗರಿಯನ್ನು ರಕ್ಷಿಸುವಂತೆ, ಎಣೆಯಿಲ್ಲದ ಪರಾಕ್ರಮವುಳ್ಳ ಮಧು, ಭೋಜ, ದಾಶಾರ್ಹ, ಅರ್ಹ, ಕುಕುರ, ಅಂಧಕ, ವೃಷ್ಣಿವಂಶೀಯರು ಭಗವಂತನ ಆ ದ್ವಾರಕೆಯನ್ನು ಸಂರಕ್ಷಿಸುತ್ತಿದ್ದರು. ಭಗವಂತನಿಂದಲೇ ಅವರಿಗೆ ಈ ಶಕ್ತಿಯು ಪ್ರಾಪ್ತವಾಗಿತ್ತು. ॥ ೧೧ ॥ ಆ ದ್ವಾರಕಾಪುರಿಯು ಎಲ್ಲ ಋತುಗಳಲ್ಲಿಯೂ ಸಮಸ್ತ ವೈಭವ ಸಂಪನ್ನವಾಗಿದ್ದು, ಪವಿತ್ರ ವೃಕ್ಷ ಲತಾ ಕುಂಜಗಳಿಂದ ಕೂಡಿತ್ತು. ಅಲ್ಲಲ್ಲಿ ಫಲಗಳಿಂದ ತುಂಬಿದ ಉದ್ಯಾನಗಳೂ, ಹೂದೋಟಗಳೂ, ಕ್ರೀಡಾವನಗಳಿದ್ದು, ನಡು-ನಡುವೆ ತಾವರೆಕೊಳಗಳಿಂದ ನಗರದ ಶೋಭೆ ಹೆಚ್ಚಿಸುತ್ತಿದ್ದವು. ॥ ೧೨ ॥ ನಗರದ ಮಹಾದ್ವಾರಗಳೂ, ರಾಜಮಾರ್ಗಗಳೂ ರಮಣೀಯವಾದ ತಳಿರು-ತೋರಣಗಳಿಂದ ಸಿಂಗರಿಸಲ್ಪಟ್ಟಿತ್ತು. ಊರೊಳಗೆ ಬಿಸಿಲು ಬೀಳದಂತೆ ಚಪ್ಪರಗಳನ್ನಿಟ್ಟು, ಚಿತ್ರ-ವಿಚಿತ್ರವಾದ ಧ್ವಜ-ಪತಾಕೆಗಳು ಕಂಗೊಳಿಸುತ್ತಿದ್ದವು. ॥ ೧೩ ॥ ರಾಜಮಾರ್ಗಗಳೂ, ರಥ ಬೀದಿಗಳೂ, ಅಂಗಡೀ ಬೀದಿಗಳೂ, ಅಂಗಳಗಳೂ ಗುಡಿಸಿ-ಸಾರಿಸಿ, ರಂಗವಲ್ಲಿಯನ್ನಿಟ್ಟು ಸುಗಂಧ ದ್ರವ್ಯಗಳನ್ನು ಸಿಂಪಡಿಸಿ ಅಲಂಕರಿಸಿದ್ದರು. ಭಗವಂತನ ಸ್ವಾಗತಕ್ಕಾಗಿ ಎರಚಿದ ಫಲ-ಪುಷ್ಪ ಅಕ್ಷತೆ, ಚಿಗುರುಗಳು ಎಲ್ಲ ಕಡೆ ಚೆಲ್ಲಲ್ಪಟ್ಟಿದ್ದವು. ॥ ೧೪ ॥ ಪ್ರತಿಯೊಂದು ಮನೆಯ ಬಾಗಿಲಲ್ಲಿಯೂ ಮೊಸರು, ಅಕ್ಷತೆ, ಹಣ್ಣುಗಳು, ಕಬ್ಬು, ಜಲಪೂರಿತ ಕಲಶಗಳು, ಕಾಣಿಕೆ ಮೊದಲಾದ ವಸ್ತುಗಳೂ, ಧೂಪದೀಪ ಮುಂತಾದ ಪೂಜಾ ದ್ರವ್ಯಗಳನ್ನು ಇರಿಸಿ ಅಲಂಕರಿಸಿದ್ದರು. ॥ ೧೫ ॥

ತಮ್ಮ ಪ್ರಿಯತಮ ಭಗವಾನ್ ಶ್ರೀಕೃಷ್ಣನು ಬಂದಿರುವನೆಂದು ಕೇಳಿದೊಡನೆಯೇ ಮಹಾತ್ಮನಾದ ವಸುದೇವ, ಅಕ್ರೂರ, ಉಗ್ರಸೇನ, ಅದ್ಭುತ ಪರಾಕ್ರಮವುಳ್ಳ ಬಲರಾಮ, ಪ್ರದ್ಯುಮ್ನ, ಚಾರುದೇಷ್ಣ ಜಾಂಬವತಿನಂದನ ಸಾಂಬ ಇವರೆಲ್ಲರೂ ಉಕ್ಕಿ ಬಂದ ತಮ್ಮ ಸಂತೋಷದ ಭರದಲ್ಲಿ ನಿದ್ರೆ, ವಿಶ್ರಾಂತಿ, ಭೋಜನಗಳೇ ಮುಂತಾದ ದಿನನಿತ್ಯ ಕರ್ಮಗಳನ್ನು ಮರೆತು, ಪಟ್ಟದಾನೆಯನ್ನು ಮುಂದಿಟ್ಟುಕೊಂಡು, ಮಂಗಳದ್ರವ್ಯಯುಕ್ತರಾದ ಬ್ರಾಹ್ಮಣರೊಡನೆ ಶಂಖವನ್ನೂ, ಕೊಂಬು, ಕಹಳೆ ಮುಂತಾದ ಮಂಗಳ ವಾದ್ಯಗಳನ್ನು ಮೊಳಗಿಸುತ್ತಾ, ವೇದಘೋಷಗಳೊಡನೆ ರಥವನ್ನೇರಿ ಹೊರಟು ಆದರ ಬುದ್ಧಿಯಿಂದ ಭಗವಂತನನ್ನು ಇದಿರುಗೊಂಡರು. ॥ ೧೬-೧೮ ॥ ಹಾಗೆಯೇ ಭಗವಾನ್ ಶ್ರೀಕೃಷ್ಣನ ದರ್ಶನಕ್ಕಾಗಿ ಮುಂಗುರುಗಳಿಂದ ಅಲಂಕೃತವಾದ, ಕರ್ಣಕುಂಡಲ ಕಾಂತಿಯಿಂದ ಶೋಭಿಸುವ ಸುಂದರ ವದನಾರವಿಂದದಿಂದ ಕೂಡಿದ ಸಾವಿರಾರು ವಾರಾಂಗನೆಯರು ಪಲ್ಲಕ್ಕಿಗಳನ್ನೇರಿ ಭಗವಂತನನ್ನು ಇದಿರ್ಗೊಳ್ಳಲು ಹೊರಟರು. ॥ ೧೯ ॥

ನಟನರ್ತಕಗಂಧರ್ವಾಃ ಸೂತಮಾಗಧವಂದಿನಃ ।
ಗಾಯಂತಿ ಚೋತ್ತಮಶ್ಲೋಕಚರಿತಾನ್ಯದ್ಭುತಾನಿ ಚ ॥ ೨೦ ॥

ಭಗವಾಂಸ್ತತ್ರ ಬಂಧೂನಾಂ ಪೌರಾಣಾಮನುವರ್ತಿನಾಮ್ ।
ಯಥಾವಿಧ್ಯುಪಸಂಗಮ್ಯ ಸರ್ವೇಷಾಂ ಮಾನಮಾದಧೇ ॥ ೨೧ ॥

ಪ್ರಹ್ವಾಭಿವಾದನಾಶ್ಲೇಷಕರಸ್ಪರ್ಶಸ್ಮಿತೇಕ್ಷಣೈಃ ।
ಆಶ್ವಾಸ್ಯ ಚಾಶ್ವಪಾಕೇಭ್ಯೋ ವರೈಶ್ಚಾಭಿಮತೈರ್ವಿಭುಃ ॥ ೨೨ ॥

ಸ್ವಯಂ ಚ ಗುರುಭಿರ್ವಿಪ್ರೈಃ ಸದಾರೈಃ ಸ್ಥವಿರೈರಪಿ ।
ಆಶೀರ್ಭಿರ್ಯುಜ್ಯಮಾನೋಽನ್ಯೈರ್ವಂದಿಭಿಶ್ಚಾವಿಶತ್ಪುರಮ್ ॥ ೨೩ ॥

ರಾಜಮಾರ್ಗಂ ಗತೇ ಕೃಷ್ಣೇ ದ್ವಾರಕಾಯಾಃ ಕುಲಸ್ತ್ರಿಯಃ ।
ಹರ್ಮ್ಯಾಣ್ಯಾರುರುಹುರ್ವಿಪ್ರ ತದೀಕ್ಷಣಮಹೋತ್ಸವಾಃ ॥ ೨೪ ॥

ನಿತ್ಯಂ ನಿರೀಕ್ಷಮಾಣಾನಾಂ ಯದಪಿ ದ್ವಾರಕೌಕಸಾಮ್ ।
ನೈವ ತೃಪ್ಯಂತಿ ಹಿ ದೃಶಃ ಶ್ರಿಯೋ ಧಾಮಾಂಗಮಚ್ಯುತಮ್ ॥ ೨೫ ॥

ಶ್ರಿಯೋ ನಿವಾಸೋ ಯಸ್ಯೋರಃ ಪಾನಪಾತ್ರಂ ಮುಖಂ ದೃಶಾಮ್ ।
ಬಾಹವೋ ಲೋಕಪಾಲಾನಾಂ ಸಾರಂಗಾಣಾಂ ಪದಾಂಬುಜಮ್ ॥ ೨೬ ॥

ಸಿತಾತಪತ್ರವ್ಯಜನೈರುಪಸ್ಕೃತಃ ಪ್ರಸೂನವರ್ಷೈರಭಿವರ್ಷಿತಃ ಪಥಿ ।
ಪಿಶಂಗವಾಸಾ ವನಮಾಲಯಾ ಬಭೌ ಘನೋ ಯಥಾರ್ಕೋಡುಪಚಾಪವೈದ್ಯುತೈಃ ॥ ೨೭ ॥

ಪ್ರವಿಷ್ಟಸ್ತು ಗೃಹಂ ಪಿತ್ರೋಃ ಪರಿಷ್ವಕ್ತಃ ಸ್ವಮಾತೃಭಿಃ ।
ವವಂದೇ ಶಿರಸಾ ಸಪ್ತ ದೇವಕೀಪ್ರಮುಖಾ ಮುದಾ ॥ ೨೮ ॥

ರಸಾಭಿನಯ ಸಮರ್ಥರಾದ ನಟರೂ, ನರ್ತಕರೂ, ಗಾಯಕರೂ ಪೌರಾಣಿಕರೂ, ಸೂತ-ವಂದಿಮಾಗಧರೂ ಭಗವಾನ್ ಶ್ರೀಕೃಷ್ಣನ ದಿವ್ಯಾದ್ಭುತವಾದ ಕಥೆಗಳನ್ನು ಹಾಡುತ್ತಾ ಹೊರಟರು. ॥ ೨೦ ॥

ಭಗವಾನ್ ಶ್ರೀಕೃಷ್ಣನು ನೆಂಟರಿಷ್ಟರನ್ನೂ, ನಾಗರಿಕರನ್ನೂ ಸೇವಕರನ್ನು ಅವರವರ ಯೋಗ್ಯತೆಗೆ ತಕ್ಕಂತೆ ಬೇರೆ-ಬೇರೆಯಾಗಿ ಸಂಧಿಸಿ, ಎಲ್ಲರನ್ನೂ ಸನ್ಮಾನಿಸಿದನು. ॥ ೨೧ ॥ ಕೆಲವರಿಗೆ ತಲೆಬಾಗಿ ವಂದಿಸಿ, ಕೆಲವರನ್ನು ಮಾತಿನಿಂದ ಅಭಿನಂದಿಸಿ, ಕೆಲವರನ್ನು ಅಪ್ಪಿಕೊಂಡು, ಕೆಲವರ ಕೈಕುಲುಕಿ, ಕೆಲವರನ್ನು ಕಂಡು ಮುಗುಳ್ನಗೆ ಬೀರಿ, ಇನ್ನು ಕೆಲವರನ್ನು ನೋಟದಿಂದಲೇ ಗೌರವಿಸಿದನು. ಪ್ರಭುವು ಪ್ರತಿಯೊಬ್ಬರಿಗೂ ಬೇಕಾದ ವರಗಳನ್ನು ಕೊಟ್ಟು ಅನುಗ್ರಹಿಸಿದನು. ಹೀಗೆ ಚಾಂಡಾಲರವರೆಗಿನ ಎಲ್ಲ ವರ್ಗದ ಜನರನ್ನು ಸಂತೋಷಗೊಳಿಸಿ, ಗುರು ಜನರಿಂದ, ವೃದ್ಧರಾದ ಸಪತ್ನೀಕ ಬ್ರಾಹ್ಮಣರಿಂದ ಹಾಗೂ ಇತರರಿಂದಲೂ ಆಶೀರ್ವಾದಗಳನ್ನು ಪಡೆದು, ಹೊಗಳುಭಟರಿಂದ ಬಿರುದಾವಳಿಗಳನ್ನು ಕೇಳುತ್ತಾ, ಎಲ್ಲರಿಂದೊಡಗೂಡಿ ಭಗವಾನ್ ಶ್ರೀಕೃಷ್ಣನು ನಗರವನ್ನು ಪ್ರವೇಶಿಸಿದನು. ॥ ೨೨-೨೩ ॥

ಶೌನಕರೇ! ಭಗವಂತನು ರಾಜಮಾರ್ಗದಲ್ಲಿ ಹೋಗುತ್ತಿದ್ದಾಗ ದ್ವಾರಕಾನಗರದ ಕುಲಸ್ತ್ರೀಯರು ಅವನ ದರ್ಶನವನ್ನೇ ಪರಮಾನಂದಮಹೋತ್ಸವವನ್ನಾಗಿ ಭಾವಿಸಿ ತಮ್ಮ-ತಮ್ಮ ಮನೆಯ ಉಪ್ಪರಿಗೆಗಳನ್ನು ಏರಿದರು. ॥ ೨೪ ॥ ಭಗವಂತನ ದಿವ್ಯ ಮಂಗಳ ವಿಗ್ರಹದ ಶೋಭೆಯನ್ನು ಏನೆಂದು ಹೇಳೋಣ? ಅವನ ವಕ್ಷಃಸ್ಥಳವೂ ಮೂರ್ತಿಮಂತ ಸೌಂದರ್ಯಲಕ್ಷ್ಮಿಯ ನಿವಾಸ ಸ್ಥಾನವೇ ಆಗಿತ್ತು. ಅವನ ಮುಖಾರವಿಂದವು ಕಣ್ಣುಗಳಿಂದ ಪಾನ ಮಾಡಲು ಸೌಂದರ್ಯಸುಧೆಯಿಂದ ತುಂಬಿದ ಪಾತ್ರೆಯೋ ಪಾದಿಯಲ್ಲಿತ್ತು. ಅವನ ಭುಜಗಳಾದರೋ ಲೋಕಪಾಲಕರಿಗೆ ಶಕ್ತಿಯನ್ನು ತುಂಬುವಂತಿದ್ದವು. ಅವನ ಚರಣಕಮಲಗಳು ಭಕ್ತರೆಂಬ ಪರಮಹಂಸರ ಆಶ್ರಯಸ್ಥಾನವಾಗಿದ್ದವು. ಅವನ ಒಂದೊಂದು ಅವಯವಗಳು ಕಾಂತಿಯ ತೌರುಮನೆಯಂತಿದ್ದು ಅಂತಹ ಭಗವಂತನ ಕಾಂತಿಯನ್ನು ಸದಾ ನೋಡುತ್ತಿದ್ದರೂ ದ್ವಾರಕಾ ವಾಸಿಗಳಿಗೆ ಕ್ಷಣಕಾಲವೂ ತೃಪ್ತಿಯುಂಟಾಗುತ್ತಿರಲಿಲ್ಲ. ॥ ೨೫-೨೬ ॥ ದ್ವಾರಕೆಯ ರಾಜಪಥದಲ್ಲಿ ಹೋಗುತ್ತಿದ್ದ ಶ್ರೀಕೃಷ್ಣನ ಮೇಲೆ ಬೆಳ್ಗೊಡೆಯನ್ನು ಹಿಡಿದಿದ್ದು ಇಕ್ಕಡೆಗಳಲ್ಲಿಯೂ ಚಾಮರಗಳನ್ನು ಬೀಸುತ್ತಿದ್ದರು. ಎಲ್ಲೆಡೆಗಳಿಂದ ಪುಷ್ಪವೃಷ್ಟಿಯಾಗುತ್ತಿತ್ತು. ಮಿಂಚಿನಂತೆ ಹೊಳೆಯುತ್ತಿದ್ದ ಪೀತಾಂಬರವನ್ನೂ, ಸೊಬಗು-ಸುವಾಸನೆಗಳಿಂದ ಕೂಡಿದ ವನ ಮಾಲೆಯನ್ನು ಧರಿಸಿದ್ದನು. ಹೀಗೆ ಎಲ್ಲ ಅಲಂಕಾರ-ವೈಭವಗಳಿಂದ ಕೂಡಿದ್ದ ಶ್ಯಾಮಲಮೂರ್ತಿಯಾದ ಸ್ವಾಮಿಯು ಏಕಕಾಲದಲ್ಲಿ ಸೂರ್ಯ, ಚಂದ್ರ, ಕಾಮನಬಿಲ್ಲು, ಮಿಂಚು, ಇವೆಲ್ಲವುಗಳಿಂದ ಶೋಭಿಸುವ ನೀಲಮೇಘದಂತೆ ಶೋಭಿಸುತ್ತಿದ್ದನು. ॥ ೨೭ ॥

ಭಗವಂತನು ಮೊಟ್ಟಮೊದಲು ತನ್ನ ತಂದೆ-ತಾಯಿಯರಿದ್ದ ಅರಮನೆಯನ್ನು ಪ್ರವೇಶಿಸಿ, ಅಲ್ಲಿ ಅವನು ಪರಮಾನಂದದಿಂದ ದೇವಕಿಯೇ ಮೊದಲಾದ ಏಳು ಮಂದಿ ತಾಯಂದಿರನ್ನು ಅವರ

ತಾಃ ಪುತ್ರಮಂಕಮಾರೋಪ್ಯ ಸ್ನೇಹಸ್ನುತಪಯೋಧರಾಃ ।
ಹರ್ಷವಿಹ್ವಲಿತಾತ್ಮಾನಃ ಸಿಷಿಚುರ್ನೇತ್ರಜೈರ್ಜಲೈಃ ॥ ೨೯ ॥

ಚರಣಗಳಲ್ಲಿ ಶಿರವನ್ನಿಟ್ಟು ನಮಸ್ಕರಿಸಿದನು. ಆಗ ಆ ಎಲ್ಲ ಮಾತೆಯರೂ ಆತನನ್ನು ಆಲಿಂಗಿಸಿಕೊಂಡು ತೊಡೆಯ ಮೇಲೆ ಕುಳ್ಳಿರಿಸಿಕೊಂಡರು. ಪ್ರೀತಿ ವಾತ್ಸಲ್ಯದ ಕಾರಣ ಅವರ ಸ್ತನಗಳಿಂದ ಹಾಲಿನ ಧಾರೆಯೇ ಹರಿಯತೊಡಗಿತು. ಅವರ ಹೃದಯ ಹರ್ಷವಿಹ್ವಲವಾಗಿ ಆನಂದ ಬಾಷ್ಪಗಳಿಂದ ಶ್ರೀಕೃಷ್ಣನಿಗೆ ಅಭಿಷೇಕಮಾಡಿದರು. ॥ ೨೮-೨೯ ॥ ಎಲ್ಲ ತಾಯಂದಿರ ಅಪ್ಪಣೆ ಪಡೆದು ಅವನು ಸಮಸ್ತ ಭೋಗಸಾಮಗ್ರಿಗಳಿಂದ ಸಂಪನ್ನವಾದ, ಸರ್ವೋತ್ತಮವಾಗಿದ್ದ ತನ್ನ ಅರಮನೆಯನ್ನು ಹೊಕ್ಕನು. ಅಲ್ಲಿ ಅವನ ಹದಿನಾರುಸಾವಿರ ಪತ್ನಿಯರಿಗೂ ಬೇರೆ-ಬೇರೆ ಭವನಗಳಿದ್ದವು. ॥ ೩೦ ॥ ಬಹಳ ದಿನಗಳ ಪ್ರವಾಸದ ಬಳಿಕ ಅರಮನೆಗೆ ಹಿಂದಿರುಗಿದ ಪ್ರಾಣನಾಥನನ್ನು ಕಂಡು ರಾಣಿಯರ ಹೃದಯಗಳು ಆನಂದೋತ್ಸಾಹಗಳಿಂದ ತುಂಬಿಬಂದುವು. ಆತನು ತಮ್ಮ ಬಳಿಗೆ ಬಂದಿರುವುದನ್ನು ನೋಡಿದ ಕೂಡಲೇ ಎಲ್ಲರೂ ಒಮ್ಮಿಂದೊಮ್ಮೆಗೆ ಧ್ಯಾನದಿಂದ ವಿಮುಖರಾಗಿ ಎದ್ದು ನಿಂತರು. ಅವರು ತಮ್ಮ-ತಮ್ಮ ಆಸನಗಳನ್ನು ಬಿಟ್ಟದ್ದಲ್ಲದೆ ವಿರಹಿಣೀ ಸ್ತ್ರೀಯರ ಅಲಂಕಾರ ತ್ಯಾಗವೇ ಮುಂತಾದ ವ್ರತಗಳನ್ನೂ* ತ್ಯಜಿಸಿದರು. ಆಗ ಅವರ ಮುಖ, ನೇತ್ರಗಳಲ್ಲಿ ಲಜ್ಜೆಯು ಆವರಿಸಿ ಬಿಟ್ಟಿತು. ॥ ೩೧ ॥ ಶ್ರೀಭಗವಂತನ ಕುರಿತು ಅವರ ಭಾವವು ತುಂಬಾ ಗಂಭೀರವಾಗಿತ್ತು. ಅವರು ಮೊದಲಿಗೆ ಮನಸ್ಸಿನಿಂದಲೂ, ಬಳಿಕ ಪ್ರೇಮಪೂರ್ಣ ನೋಟದಿಂದಲೂ, ಅನಂತರ ಮಕ್ಕಳನೆಪದಿಂದ ಶರೀರದಿಂದಲೂ ಪ್ರಾಣಕಾಂತನನ್ನು ಆಲಿಂಗಿಸಿಕೊಂಡರು. ಶೌನಕರೇ! ಆಗ ಅವರ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ತುಂಬಿ ಬಂದಿದ್ದರೂ ಸಂಕೋಚದಿಂದ ಅವರು ಎಷ್ಟೇ ತಡೆದರೂ ವಿವಶತೆಯ ಕಾರಣ ಕೊನೆಗೆ ಹರಿದೇ ಬಿಟ್ಟವು. ॥ ೩೨ ॥ ಸರ್ವವ್ಯಾಪಕನೂ, ಅನಂತ ಶಕ್ತಿಪರಿಪೂರ್ಣನೂ ಆದ ಭಗವಾನ್ ಶ್ರೀಕೃಷ್ಣನು ಏಕಾಂತದಲ್ಲಿ ಯಾವಾಗಲೂ ಅವರ ಬಳಿಯಲ್ಲೇ ಇದ್ದರೂ, ಅವನ ಚರಣಕಮಲಗಳು ಅವರಿಗೆ ಹೆಜ್ಜೆ-ಹೆಜ್ಜೆಗೆ ಹೊಸ-ಹೊಸದಾಗಿಯೇ ಕಾಣುತ್ತಿದ್ದವು. ಸ್ವಭಾವದಿಂದಲೇ ಚಂಚಲಳಾದ ಲಕ್ಷ್ಮೀದೇವಿಯು ಯಾರನ್ನು ಒಂದು ಕ್ಷಣವಾದರೂ ಬಿಟ್ಟಿರುವುದಿಲ್ಲವೋ ಅಂತಹವನ ಸನ್ನಿಧಿಯಿಂದ ಯಾವ ಸ್ತ್ರೀಯು ತೃಪ್ತಳಾಗಬಲ್ಲಳು? ॥ ೩೩ ॥

ಅಥಾವಿಶತ್ಸ್ವಭವನಂ ಸರ್ವಕಾಮಮನುತ್ತಮಮ್ ।
ಪ್ರಾಸಾದಾ ಯತ್ರ ಪತ್ನೀನಾಂ ಸಹಸ್ರಾಣಿ ಚ ಷೋಡಶ ॥ ೩೦ ॥

ಪತ್ನ್ಯಃ ಪತಿಂ ಪ್ರೋಷ್ಯ ಗೃಹಾನುಪಾಗತಂ
ವಿಲೋಕ್ಯ ಸಂಜಾತಮನೋಮಹೋತ್ಸವಾಃ ।
ಉತ್ತಸ್ಥು ರಾರಾತ್ಸಹಸಾಽಽಸನಾಶಯಾತ್
ಸಾಕಂ ವ್ರತೈರ್ವ್ರೀಡಿತಲೋಚನಾನನಾಃ ॥ ೩೧ ॥

ತಮಾತ್ಮಜೈರ್ದೃಷ್ಟಿ ಭಿರಂತರಾತ್ಮನಾ
ದುರಂತಭಾವಾಃ ಪರಿರೇಭಿರೇ ಪತಿಮ್ ।
ನಿರುದ್ಧಮಪ್ಯಾಸ್ರವದಂಬು ನೇತ್ರಯೋ-
ರ್ವಿಲಜ್ಜತೀನಾಂ ಭೃಗುವರ್ಯ ವೈಕ್ಲವಾತ್ ॥ ೩೨ ॥

ಯದ್ಯಪ್ಯಸೌ ಪಾರ್ಶ್ವಗತೋ ರಹೋಗತ-
ಸ್ತಥಾಪಿ ತಸ್ಯಾಂಘ್ರಿಯುಗಂ ನವಂ ನವಮ್ ।
ಪದೇ ಪದೇ ಕಾ ವಿರಮೇತ ತತ್ಪದಾ-
ಚ್ಚಲಾಪಿ ಯಚ್ಛ್ರೀರ್ನ ಜಹಾತಿ ಕರ್ಹಿಚಿತ್ ॥ ೩೩ ॥

ಏವಂ ನೃಪಾಣಾಂ ಕ್ಷಿತಿಭಾರಜನ್ಮನಾ-
ಮಕ್ಷೌಹಿಣೀಭಿಃ ಪರಿವೃತ್ತತೇಜಸಾಮ್ ।
ವಿಧಾಯ ವೈರಂ ಶ್ವಸನೋ ಯಥಾನಲಂ
ಮಿಥೋ ವಧೇನೋಪರತೋ ನಿರಾಯುಧಃ ॥ ೩೪ ॥

ವಾಯುವು ಬಿದಿರುಗಳ ಘರ್ಷಣೆಯಿಂದ ದಾವಾನಲವನ್ನು ಉಂಟುಮಾಡಿ, ಅವನ್ನೇ ಸುಟ್ಟು ಬಿಡುವಂತೆಯೇ, ಭೂಮಿಗೆ ಭಾರವಾದ, ಬಲಿಷ್ಠ ರಾಜರಲ್ಲಿ ಪರಸ್ಪರ ವೈರಾಗ್ನಿಯನ್ನು ಉಂಟುಮಾಡಿ ಸ್ವತಃ ಶಸ್ತ್ರಧರಿಸದೆಯೇ ಭಗವಾನ್ ಶ್ರೀಕೃಷ್ಣನು ಅವರನ್ನು, ಅನೇಕ ಅಕ್ಷೌಹಿಣೀ ಸೇನೆ ಸಹಿತ ಒಬ್ಬರಿಂದೊಬ್ಬರನ್ನು ಕೊಲ್ಲಿಸಿಬಿಟ್ಟನು. ಬಳಿಕವೇ ತಾನು ವಿರಮಿಸಿದನು. ॥ ೩೪ ॥

---

* ಪತಿಯು ವಿದೇಶಕ್ಕೆ ಹೋಗಿದ್ದಾಗ ಪತ್ನೀಯಾದವಳು ಈ ನಿಯಮಗಳನ್ನು ಪಾಲಿಸಬೇಕು –
ಕ್ರೀಡಾಂ ಶರೀರಸಂಸ್ಕಾರಂ ಸಮಾಜೋತ್ಸವದರ್ಶನಮ್ । ಹಾಸ್ಯಂ ಪರಗೃಹೇ ಯಾನಂ ತ್ಯಜೇತ್ ಪ್ರೋಷಿತಭರ್ತೃಕಾ ॥ *(ಯಾಜ್ಞವಲ್ಕ್ಯ ಸ್ಮೃತಿ)*
ಪತಿಯು ವಿದೇಶವಾಸಕ್ಕೆ ಹೋಗಿದ್ದಾಗ ಪತ್ನಿಯು ಆಟ-ಪಾಟಗಳಲ್ಲಿ ಭಾಗವಹಿಸಬಾರದು. ಅಲಂಕಾರಾದಿ ಶರೀರ ಸಂಸ್ಕಾರ ಮಾಡಿಕೊಳ್ಳಬಾರದು. ಸಾಮಾಜಿಕ ಉತ್ಸವಾದಿಗಳಲ್ಲಿ ಭಾಗವಹಿಸಬಾರದು. ಹಾಸ್ಯ-ವಿನೋದಗಳಲ್ಲಿ ಭಾಗವಹಿಸಬಾರದು. ಪರಗೃಹಕ್ಕೆ ಹೋಗಬಾರದು. ಈ ಐದನ್ನು ತ್ಯಜಿಸಬೇಕು.

ಸ ಏಷ ನರಲೋಕೇಽಸ್ಮಿನ್ನವತೀರ್ಣಃ ಸ್ವಮಾಯಯಾ ।
ರೇಮೇ ಸ್ತ್ರೀರತ್ನಕೂಟಸ್ಥೋ ಭಗವಾನ್ ಪ್ರಾಕೃತೋ ಯಥಾ ॥ ೩೫ ॥

ಉದ್ದಾಮಭಾವಪಿಶುನಾಮಲವಲ್ಗುಹಾಸ-
ವ್ರೀಡಾವಲೋಕನಿಹತೋಮದನೋಽಪಿ ಯಾಸಾಮ್ ।
ಸಮ್ಮುಹ್ಯ ಚಾಪಮಜಹಾತ್ಪ್ರಮದೋತ್ತಮಾಸ್ತಾ
ಯಸ್ಯೇಂದ್ರಿಯಂ ವಿಮಥಿತುಂ ಕುಹಕೈರ್ನ ಶೇಕುಃ ॥ ೩೬ ॥

ತಮಯಂ ಮನ್ಯತೇ ಲೋಕೋ ಹ್ಯಸಂಗಮಪಿ ಸಂಗಿನಮ್ ।
ಆತ್ಮೌಪಮ್ಯೇನ ಮನುಜಂ ವ್ಯಾಪೃಣ್ವಾನಂ ಯತೋಽಬುಧಃ ॥ ೩೭ ॥

ಏತದೀಶನಮೀಶಸ್ಯ ಪ್ರಕೃತಿಸ್ಥೋಽಪಿ ತದ್ಗುಣೈಃ ।
ನ ಯುಜ್ಯತೇ ಸದಾತ್ಮಸ್ಥೈರ್ಯಥಾ ಬುದ್ಧಿಸ್ತದಾಶ್ರಯಾ ॥ ೩೮ ॥

ತಂ ಮೇನಿರೇಽಬಲಾ ಮೂಢಾಃ ಸ್ತ್ರೈಣಂ ಚಾನುವ್ರತಂ ರಹಃ ।
ಅಪ್ರಮಾಣವಿದೋ ಭರ್ತುರೀಶ್ವರಂ ಮತಯೋ ಯಥಾ ॥ ೩೯ ॥

ಸಾಕ್ಷಾತ್ ಪರಮೇಶ್ವರನೇ ತನ್ನ ಲೀಲೆಯಿಂದ ಈ ಮರ್ತ್ಯಲೋಕದಲ್ಲಿ ಅವತರಿಸಿದ್ದನು. ಸಾವಿರಾರು ರಮಣಿಯರ ಮಧ್ಯದಲ್ಲಿದ್ದು ಅವನು ಸಾಧಾರಣ ಮನುಷ್ಯರಂತೆ ಕ್ರೀಡಿಸಿದನು. ॥ ೩೫ ॥ ಯಾವ ಮೋಹನಾಂಗಿಯರ ಗಂಭೀರವಾದ ಭಾವವನ್ನು ಸೂಚಿಸುವ ಮಧುರ ಮಂದಹಾಸಗಳಿಗೂ, ಲಜ್ಜೆಯಿಂದೊಡಗೂಡ ಕಡೆಗಣ್ಣ ನೋಟಗಳಿಗೂ ಸೋತು ತ್ರಿಲೋಕವಿಜಯಿಯಾದ ಮನ್ಮಥನೂ ಕೂಡ ತನ್ನ ಪಂಚ ಬಾಣಗಳನ್ನು ಧನುಷ್ಯವನ್ನು ಪರಿತ್ಯಜಿಸಿದನೋ, ಅಂತಹ ಕಮನೀಯರಾದ ಕಾಮಿನಿಯರು ತಮ್ಮ ಕಾಮವಿಲಾಸಗಳಿಂದ ಯಾರ ಮನಸ್ಸಿನಲ್ಲಿ ಸ್ವಲ್ಪವೂ ಕ್ಷೋಭೆಯನ್ನು ಉಂಟು ಮಾಡಲು ಅಸಮರ್ಥರಾದರೋ, ಅಂತಹ ನಿರ್ಲಿಪ್ತನಾದ ಶ್ರೀಕೃಷ್ಣನನ್ನು ಸಾಂಸಾರಿಕ ಜನರು ತಮ್ಮಂತೆಯೇ ಕರ್ಮ ಮಾಡುತ್ತಿರುವುದನ್ನು ನೋಡಿ, ಇವನು ಆಸಕ್ತ ಪುರುಷನೆಂದು ತಿಳಿಯುವುದು ಅವರ ಮೂರ್ಖತೆಯೇ ಆಗಿದೆ. ॥ ೩೬-೩೭ ॥ ಭಗವಂತನು ಪ್ರಕೃತಿಯಲ್ಲಿ ಸ್ಥಿತನಾಗಿದ್ದು ಕೊಂಡರೂ ಅದರ ಗುಣಗಳಿಂದ ಲಿಪ್ತನಾಗದಿರುವುದೇ ಅಲ್ಲವೇ ಅವನ ಈಶ್ವರತ್ವವು. ಆತನ ಶಕ್ತಿಯ ಅಗ್ಗಳಿಕೆ. ಭಗವಂತನಲ್ಲಿ ಶರಣಾದ ಭಕ್ತರ ಬುದ್ಧಿಯೂ ಕೂಡ ತನ್ನಲ್ಲಿರುವ ಪ್ರಾಕೃತಗುಣಗಳಿಂದ ಲಿಪ್ತ ವಾಗುವುದಿಲ್ಲ. ॥ ೩೮ ॥ ಬುದ್ಧಿಗಳು ಬುದ್ಧ್ಯತೀತನಾದ ಪರಮಾತ್ಮ ನನ್ನು ಹೇಗೆ ಅರಿಯಲಾರದೋ, ಹಾಗೆಯೇ ಆ ಸ್ತ್ರೀಯರೂ ಕೂಡ ಭಗವಂತನ ದೈವತ್ವವನ್ನರಿಯದ ಮೂಢರು. ತಮ್ಮ ಪತಿಯಾದ ಶ್ರೀಕೃಷ್ಣನ ನಿಜಸ್ವರೂಪವನ್ನು ಅರಿಯಲಾರದೇ ಆತನನ್ನು ಸ್ತ್ರೀಯರಿಗೆ ಅಧೀನನಾಗಿ ಅವರೊಡನೆ ಕಲೆತು-ವಿಹರಿಸುವ ದುರ್ಬಲ ಪ್ರಕೃತಿಯವನೆಂದು ಭಾವಿಸುತ್ತಿದ್ದರು. ॥ ೩೯ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಶ್ರೀಕೃಷ್ಣದ್ವಾರಕಾಪ್ರವೇಶೋ ನಾಮೈಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ಪರೀಕ್ಷಿದ್ರಾಜನ ಜನನ

*ಶೌನಕ ಉವಾಚ*

ಅಶ್ವತ್ಥಾಮ್ನೋಪಸೃಷ್ಟೇನ ಬ್ರಹ್ಮಶೀರ್ಷ್ಣೋರುತೇಜಸಾ ।
ಉತ್ತರಾಯಾ ಹತೋ ಗರ್ಭ ಈಶೇನಾಜೀವಿತಃ ಪುನಃ ॥ ೧ ॥

ತಸ್ಯ ಜನ್ಮ ಮಹಾಬುದ್ಧೇಃ ಕರ್ಮಾಣಿ ಚ ಮಹಾತ್ಮನಃ ।
ನಿಧನಂ ಚ ಯಥೈವಾಸೀತ್ಸ ಪ್ರೇತ್ಯ ಗತವಾನ್ ಯಥಾ ॥ ೨ ॥

ತದಿದಂ ಶ್ರೋತುಮಿಚ್ಛಾಮೋ ಗದಿತುಂ ಯದಿ ಮನ್ಯಸೇ ।
ಬ್ರೂಹಿ ನಃ ಶ್ರದ್ದಧಾನಾನಾಂ ಯಸ್ಯ ಜ್ಞಾನಮದಾಚ್ಛುಕಃ ॥ ೩ ॥

**ಶೌನಕರು ಕೇಳುತ್ತಿದ್ದಾರೆ** – ಸೂತಪುರಾಣಿಕರೇ ! ಅಶ್ವತ್ಥಾಮನು ಪ್ರಯೋಗಿಸಿದ ಪರಮ ತೇಜಸ್ವೀ ಬ್ರಹ್ಮಶಿರೋಸ್ತ್ರದಿಂದ ಉತ್ತರೆಯ ಗರ್ಭವನ್ನು ನಾಶಪಡಿಸಿದ್ದನು. ಆದರೆ ಭಗವಂತನು ಅವನನ್ನು ಪುನಃ ಬದುಕಿಸಿದ್ದನು ಎಂದು ನಾವು ಕೇಳಿದ್ದೇವೆ. ॥ ೧ ॥ ಆ ಗರ್ಭದಿಂದ ಹುಟ್ಟಿದ ಮಹಾಜ್ಞಾನಿಯೂ, ಮಹಾತ್ಮನೂ ಆದ ಪರೀಕ್ಷಿದ್ರಾಜನಿಗೆ ಶುಕಮಹಾಮುನಿಗಳು ಜ್ಞಾನೋಪದೇಶ ಮಾಡಿದ್ದರಲ್ಲ! ಅವನ ಜನ್ಮ, ಕರ್ಮ, ಮೃತ್ಯು, ಅನಂತರ ಅವನಿಗೆ ಪ್ರಾಪ್ತವಾದ ಗತಿ ಹೀಗೆಲ್ಲವನ್ನೂ ನಿಮಗೆ ಸರಿಯೆನಿಸಿದರೆ ನಮಗೆ ತಿಳಿಸಿರಿ. ನಾವುಗಳು ಶ್ರದ್ಧೆಯಿಂದ ಕೇಳ ಬಯಸುತ್ತೇವೆ. ॥ ೨-೩ ॥

**ಸೂತಪುರಾಣಿಕರೆಂದರು** – ಶೌನಕಾದಿಗಳೇ ! ಧರ್ಮರಾಜಾ ಯುಧಿಷ್ಠಿರನು ಪ್ರಜೆಗಳನ್ನು ಸಂತೋಷಪಡಿಸುತ್ತಾ, ತಂದೆಯಂತೆ ಅವರನ್ನು ಪಾಲಿಸುತ್ತಿದ್ದನು. ಭಗವಾನ್ ಶ್ರೀಕೃಷ್ಣನ ಪಾದಾರವಿಂದ

ಸೂತ ಉವಾಚ

**ಅಪೀಪಲದ್ಧರ್ಮರಾಜಃ ಪಿತೃವದ್ರಂಜಯನ್ಪ್ರಜಾಃ ।**
**ನಿಃಸ್ಪೃಹಃ ಸರ್ವಕಾಮೇಭ್ಯಃ ಕೃಷ್ಣಪಾದಾಬ್ಜ ಸೇವಯಾ ॥ ೪ ॥**

**ಸಂಪದಃ ಕ್ರತವೋ ಲೋಕಾ ಮಹಿಷೀ ಭ್ರಾತರೋ ಮಹೀ ।**
**ಜಂಬೂದ್ವೀಪಾಧಿಪತ್ಯಂ ಚ ಯಶಶ್ಚ ತ್ರಿದಿವಂ ಗತಮ್ ॥ ೫ ॥**

**ಕಿಂ ತೇ ಕಾಮಾಃ ಸುರಸ್ಪಾರ್ಹಾ ಮುಕುಂದಮನಸೋ ದ್ವಿಜಾಃ ।**
**ಅಧಿಜಹ್ರುರ್ಮುದಂ ರಾಜ್ಞಃ ಕ್ಷುಧಿತಸ್ಯ ಯಥೇತರೇ ॥ ೬ ॥**

**ಮಾತುರ್ಗರ್ಭಗತೋ ವೀರಃ ಸ ತದಾ ಭೃಗುನಂದನ ।**
**ದದರ್ಶ ಪುರುಷಂ ಕಂಚಿದ್ದಹ್ಯಮಾನೋಽಸ್ತ್ರ ತೇಜಸಾ ॥ ೭ ॥**

**ಅಂಗುಷ್ಠಮಾತ್ರಮಮಲಂ ಸ್ಫುರತ್ಪುರಟಮೌಲಿನಮ್ ।**
**ಅಪೀಚ್ಯದರ್ಶನಂ ಶ್ಯಾಮಂ ತಡಿದ್ವಾಸಸಮಚ್ಯುತಮ್ ॥ ೮ ॥**

**ಶ್ರೀಮದ್ದೀರ್ಘಚತುರ್ಬಾಹುಂ ತಪ್ತಕಾಂಚನಕುಂಡಲಮ್ ।**
**ಕ್ಷತಜಾಕ್ಷಂ ಗದಾಪಾಣಿಮಾತ್ಮನಃ ಸರ್ವತೋದಿಶಮ್ ।**
**ಪರಿಭ್ರಮಂತಮುಲ್ಕಾಭಾಂ ಭ್ರಾಮಯಂತಂ ಗದಾಂ ಮುಹುಃ ॥ ೯ ॥**

**ಅಸ್ತ್ರತೇಜಃ ಸ್ವಗದಯಾ ನೀಹಾರಮಿವ ಗೋಪತಿಃ ।**
**ವಿಧಮಂತಂ ಸಂನಿಕರ್ಷೇ ಪರ್ಯೈಕ್ಷತ ಕ ಇತ್ಯಸೌ ॥ ೧೦ ॥**

**ವಿಧೂಯ ತದಮೇಯಾತ್ಮಾ ಭಗವಾನ್ ಧರ್ಮಗುಬ್ವಿಭುಃ ।**
**ಮಿಷತೋ ದಶಮಾಸ್ಯಸ್ಯ ತತ್ರೈವಾಂತರ್ದಧೇ ಹರಿಃ ॥ ೧೧ ॥**

**ತತಃ ಸರ್ವಗುಣೋದರ್ಕೇ ಸಾನುಕೂಲಗ್ರಹೋದಯೇ ।**
**ಜಜ್ಞೇ ವಂಶಧರಃ ಪಾಂಡೋರ್ಭೂಯಃ ಪಾಂಡುರಿವೌಜಸಾ ॥ ೧೨ ॥**

**ತಸ್ಯ ಪ್ರೀತಮನಾ ರಾಜಾ ವಿಪ್ರೈರ್ಧೌಮ್ಯಕೃಪಾದಿಭಿಃ ।**
**ಜಾತಕಂ ಕಾರಯಾಮಾಸ ವಾಚಯಿತ್ವಾ ಚ ಮಂಗಲಮ್ ॥ ೧೩ ॥**

ಗಳ ಸೇವನೆಯಿಂದ ಅವನು ಸಮಸ್ತ ಭೋಗಗಳಿಂದ ನಿಃಸ್ಪೃಹನಾಗಿದ್ದನು. ॥ ೪ ॥

ಶೌನಕಾದ್ಯರೇ ! ಧರ್ಮನಂದನನು ಅತುಳ ಸಂಪತ್ತಿನಿಂದ, ದೊಡ್ಡ-ದೊಡ್ಡ ಯಜ್ಞಗಳನ್ನು ಮಾಡಿ ಶ್ರೇಷ್ಠವಾದ ಲೋಕಗಳನ್ನು ಗಳಿಸಿದ್ದನು. ಅವನಿಗೆ ರಾಣಿಯರೂ, ಒಡಹುಟ್ಟಿದವರೂ ಅನುಕೂಲರಾಗಿದ್ದರು. ಇಡೀ ಜಂಬೂದ್ವೀಪಕ್ಕೆ ಒಡೆಯನಾಗಿದ್ದು ಅವನ ಕೀರ್ತಿಯು ಸ್ವರ್ಗವನ್ನೂ ವ್ಯಾಪಿಸಿತ್ತು. ॥ ೫ ॥ ದೇವತೆಗಳೂ ಆಸೆ ಪಡಬಹುದಾದ ಭೋಗಸಮೃದ್ಧಿಯನ್ನು ಅವನು ಹೊಂದಿದ್ದನು. ಆದರೂ ಹಸಿದಿರುವ ಮನುಷ್ಯನಿಗೆ ಭೋಜನವಲ್ಲದೆ ಬೇರೆ ಯಾವುದೂ ರುಚಿಸದಂತೆಯೇ, ಅವನಿಗೆ ಭಗವಂತನಲ್ಲದೆ ಬೇರೆ ಯಾವ ಸುಖಸಂಪತ್ತು ರುಚಿಸುತ್ತಿರಲಿಲ್ಲ.॥ ೬ ॥

ಎಲೈ ಭಾರ್ಗವರೇ ! ಉತ್ತರೆಯ ಗರ್ಭದಲ್ಲಿದ್ದ ವೀರಶಿಶು ಪರೀಕ್ಷಿತ್ತು ಅಶ್ವತ್ಥಾಮನ ಬ್ರಹ್ಮಾಸ್ತ್ರದ ತೇಜದಿಂದ ಸುಡುತ್ತಿರುವಾಗ, ಅದು ತನ್ನ ಕಣ್ಣಮುಂದೆ ಒಂದು ಜ್ಯೋತಿರ್ಮಯ ಪುರುಷನನ್ನು ಕಂಡಿತು. ॥ ೭ ॥ ಆ ಪುರುಷನು ಅಂಗುಷ್ಠಮಾತ್ರದಷ್ಟಿದ್ದರೂ ಅವನ ತೇಜಸ್ಸು ಅತ್ಯದ್ಭುತವಾಗಿದ್ದು ನಿರ್ಮಲವಾಗಿತ್ತು. ಅವನು ಸುಂದರ ಶ್ಯಾಮಲ ಶರೀರಿಯಾಗಿದ್ದು, ಮಿಂಚಿನಂತೆ ಹೊಳೆಯುವ ಪೀತಾಂಬರವನ್ನು ಧರಿಸಿದ್ದನು. ತಲೆಯಲ್ಲಿ ಥಳ-ಥಳಿಸುವ ಸ್ವರ್ಣ ಕಿರೀಟವಿತ್ತು. ಆ ನಿರ್ವಿಕಾರ ಪುರುಷನಿಗೆ ಅತಿ ಸುಂದರವಾದ ನೀಳವಾಗಿದ್ದ ನಾಲ್ಕು ತೋಳುಗಳಿದ್ದವು. ಅವನ ಕಿವಿಗಳಲ್ಲಿ ಪುಟವಿಟ್ಟ ಚಿನ್ನದ ಸುಂದರ ಕುಂಡಲಗಳು ಹೊಳೆಯುತ್ತಿದ್ದವು. ಕಣ್ಣುಗಳು ರಕ್ತದಂತೆ ಕೆಂಪಾಗಿದ್ದವು. ಕೈಯಲ್ಲಿ ಧರಿಸಿದ ಉರಿಯುವ ಕೊಳ್ಳಿಯಂತಿರುವ ಗದೆಯನ್ನು ಮತ್ತೆ-ಮತ್ತೆ ತಿರುಹುತ್ತಿದ್ದನು. ॥ ೮-೯ ॥ ಸೂರ್ಯನು ತನ್ನ ಕಿರಣಗಳಿಂದ ಮಂಜನ್ನು ಹೊಡೆದೋಡಿಸುವಂತೆ, ಅವನು ಆ ಗದೆಯಿಂದ ಬ್ರಹ್ಮಾಸ್ತ್ರದ ತೇಜವನ್ನು ಬಡಿದಟ್ಟುತ್ತಿದ್ದನು. ತನ್ನ ಸಮಿಪದಲ್ಲಿದ್ದ ಆ ಪುರುಷನನ್ನು ನೋಡಿ ಆ ಗರ್ಭಸ್ಥ ಶಿಶುವು 'ಇವನಾರು ?' ಎಂದು ಯೋಚಿಸ ತೊಡಗಿತು. ॥ ೧೦ ॥ ಹೀಗೆ ಗರ್ಭಸ್ಥ ಶಿಶುವು ನೋಡುತ್ತಿರುವಂತೆಯೇ ಧರ್ಮರಕ್ಷಕ ಅಪ್ರಮೇಯ ಭಗವಾನ್ ಶ್ರೀಕೃಷ್ಣನು ಬ್ರಹ್ಮಾಸ್ತ್ರದ ತೇಜಸ್ಸನ್ನು ಶಮನಗೊಳಿಸಿ ಅಲ್ಲಿಯೇ ಅಂತರ್ಧಾನ ಹೊಂದಿದನು. ॥ ೧೧ ॥

ಅನಂತರ ಎಲ್ಲ ಗ್ರಹಗಳೂ ಅನುಕೂಲವಾಗಿ, ಎಲ್ಲ ಸದ್ಗುಣಗಳೂ ಕುಡಿ ಸುಫಲಪ್ರದವಾದವಾಗಿದ್ದ ಶುಭ ಸಮಯದಲ್ಲಿ ಪಾಂಡುವಿನ ವಂಶದ ಕುಡಿಯಾದ ಸುಪುತ್ರನ ಜನನವಾಯಿತು. ಆ ಶಿಶುವು ತನ್ನ ತೇಜಸ್ಸಿನಿಂದ ಪಾಂಡುರಾಜನೇ ಮರಳಿ ಹುಟ್ಟಿ ಬಂದಂತೆ ಬೆಳಗುತ್ತಿತ್ತು. ॥ ೧೨ ॥ ಮೊಮ್ಮಗನು ಹುಟ್ಟಿದ ಸಮಾಚಾರವನ್ನು ಕೇಳಿ ಯುಧಿಷ್ಠಿರನ ಮನಸ್ಸಿಗೆ ಬಹಳ ಸಂತೋಷವಾಯಿತು. ಅವನು ಧೌಮ್ಯ-ಕೃಪಾಚಾರ್ಯರೇ ಮುಂತಾದ ಬ್ರಾಹ್ಮಣರಿಂದ ಮಗುವಿಗೆ ಮಂಗಳ ವಾಚನಮಾಡಿಸಿ, ಜಾತಕರ್ಮ ಸಂಸ್ಕಾರವನ್ನು ನೆರವೇರಿಸಿದನು. ॥ ೧೩ ॥ ದಾನಕ್ಕೆ ಯೋಗ್ಯ

ಹಿರಣ್ಯಂ ಗಾಂ ಮಹೀಂ ಗ್ರಾಮಾನ್ಹಸ್ತ್ಯಶ್ವಾನ್ನೃಪತಿರ್ವರಾನ್ ।
ಪ್ರಾದಾತ್ಸ್ವನ್ನಂ ಚ ವಿಪ್ರೇಭ್ಯಃ ಪ್ರಜಾತೀರ್ಥೇ ಸ ತೀರ್ಥವಿತ್ ॥ ೧೪ ॥

ತಮೂಚುರ್ಬ್ರಾಹ್ಮಣಾಸ್ತುಷ್ಟಾ ರಾಜಾನಂ ಪ್ರಶ್ರಯಾನ್ವಿತಮ್ ।
ಏಷ ಹ್ಯಸ್ಮಿನ್ಪ್ರಜಾತಂತೌ ಪುರೂಣಾಂ ಪೌರವರ್ಷಭ ॥ ೧೫ ॥

ದೈವೇನಾಪ್ರತಿಘಾತೇನ ಶುಕ್ಲೇ ಸಂಸ್ಥಾಮುಪೇಯುಷಿ ।
ರಾತೋ ವೋಽನುಗ್ರಹಾರ್ಥಾಯ ವಿಷ್ಣುನಾ ಪ್ರಭವಿಷ್ಣುನಾ ॥ ೧೬ ॥

ತಸ್ಮಾನ್ನಾಮ್ನಾ ವಿಷ್ಣುರಾತ ಇತಿ ಲೋಕೇ ಬೃಹಚ್ಛ್ರವಾಃ ।
ಭವಿಷ್ಯತಿ ನ ಸಂದೇಹೋ ಮಹಾಭಾಗವತೋ ಮಹಾನ್ ॥ ೧೭ ॥

*ಯುಧಿಷ್ಠಿರ ಉವಾಚ*

ಅಪ್ಯೇಷ ವಂಶ್ಯಾನ್ರಾಜರ್ಷೀನ್ಪುಣ್ಯಶ್ಲೋಕಾನ್ಮಹಾತ್ಮನಃ ।
ಅನುವರ್ತಿತಾ ಸ್ವಿದ್ಯಶಸಾ ಸಾಧುವಾದೇನ ಸತ್ತಮಾಃ ॥ ೧೮ ॥

*ಬ್ರಾಹ್ಮಣಾ ಊಚುಃ*

ಪಾರ್ಥ ಪ್ರಜಾವಿತಾ ಸಾಕ್ಷಾದಿಕ್ಷ್ವಾಕುರಿವ ಮಾನವಃ ।
ಬ್ರಹ್ಮಣ್ಯಃ ಸತ್ಯಸಂಧಶ್ಚ ರಾಮೋ ದಾಶರಥಿರ್ಯಥಾ ॥ ೧೯ ॥

ಏಷ ದಾತಾ ಶರಣ್ಯಶ್ಚ ಯಥಾ ಹ್ಯೌಶೀನರಃ ಶಿಬಿಃ ।
ಯಶೋ ವಿತನಿತಾ ಸ್ವಾನಾಂ ದೌಷ್ಯಂತಿರಿವ ಯಜ್ವನಾಮ್ ॥ ೨೦ ॥

ಧನ್ವಿನಾಮಗ್ರಣೀರೇಷ ತುಲ್ಯಶ್ಚಾರ್ಜುನಯೋರ್ದ್ವಯೋಃ ।
ಹುತಾಶ ಇವ ದುರ್ಧರ್ಷಃ ಸಮುದ್ರ ಇವ ದುಸ್ತರಃ ॥ ೨೧ ॥

ಮೃಗೇಂದ್ರ ಇವ ವಿಕ್ರಾಂತೋ ನಿಷೇವ್ಯೋ ಹಿಮವಾನಿವ ।
ತಿತಿಕ್ಷುರ್ವಸುಧೇವಾಸೌ ಸಹಿಷ್ಣುಃ ಪಿತರಾವಿವ ॥ ೨೨ ॥

ಪಿತಾಮಹಸಮಃ ಸಾಮ್ಯೇ ಪ್ರಸಾದೇ ಗಿರಿಶೋಪಮಃ ।
ಆಶ್ರಯಃ ಸರ್ವಭೂತಾನಾಂ ಯಥಾ ದೇವೋ ರಮಾಶ್ರಯಃ ॥ ೨೩ ॥

ವಾದ ದೇಶ-ಕಾಲ-ಪಾತ್ರಗಳಾವುವು ಎಂಬುದನ್ನರಿತಿದ್ದ ಮಹಾರಾಜ ಯುಧಿಷ್ಠಿರನು ಪ್ರಜಾತೀರ್ಥ* ಎಂಬ ಸಮಯದಲ್ಲಿ, ಅರ್ಥಾತ್-ಹೊಕ್ಕಳು ಬಳ್ಳಿ ಕತ್ತರಿಸುವ ಮೊದಲೇ ಬ್ರಾಹ್ಮಣರಿಗೆ, ಸುವರ್ಣ, ಗೋ, ಭೂಮಿ, ಗ್ರಾಮಗಳನ್ನು ಉತ್ತಮ ಜಾತಿಯ ಆನೆ-ಕುದುರೆಗಳನ್ನು ದಾನಮಾಡಿ ಮೃಷ್ಟಾನ್ನ ಭೋಜನವನ್ನು ಮಾಡಿಸಿದನು. ॥ ೧೪ ॥ ಇವುಗಳಿಂದ ಸಂತೋಷಗೊಂಡ ಬ್ರಾಹ್ಮಣರು ಅತ್ಯಂತ ವಿನಯಶಾಲಿಯಾದ ಯುಧಿಷ್ಠಿರನಲ್ಲಿ ಹೀಗೆಂದರು "ಪುರುವಂಶ ಶಿರೋಮಣಿಯೇ! ನಿವಾರಿಸಲು ಅಸಾಧ್ಯವಾದ ಕಾಲದ ಗತಿಯಂತೆ ಪವಿತ್ರವಾದ ಈ ಕುರುವಂಶವು ಇನ್ನೇನು ವಿನಾಶಹೊಂದಿ ಬಿಡುವುದೋ ಎನ್ನುವಷ್ಟರಲ್ಲಿ ಸರ್ವಸಮರ್ಥನಾದ ಭಗವಾನ್ ಶ್ರೀಮಹಾವಿಷ್ಣುವು ನಿಮ್ಮ ಮೇಲೆ ಕೃಪೆಗೈದು ನಿಮಗೆ ಈ ಬಾಲಕನನ್ನು ದಯಪಾಲಿಸಿ ಅವನನ್ನು ಸಂರಕ್ಷಿಸಿದ್ದಾನೆ. ॥ ೧೫-೧೬ ॥ ಆದ್ದರಿಂದ ಇವನಿಗೆ 'ವಿಷ್ಣುರಾತ' (ವಿಷ್ಣುವಿನಿಂದ ರಕ್ಷಿಸಲ್ಪಟ್ಟವನು) ಎಂಬ ಹೆಸರಾಗುವುದು. ನಿಃಸಂದೇಹವಾಗಿ ಈ ಬಾಲಕನು ಲೋಕದಲ್ಲಿ ಮಹಾ ಯಶಸ್ವಿಯೂ, ಪರಮ ಭಗವದ್ಭಕ್ತನೂ ಆದ ಮಹಾಪುರುಷನಾಗುವನು. ॥ ೧೭ ॥

**ಯುಧಿಷ್ಠಿರನೆಂದನು** – ಪೂಜ್ಯರೇ ! ಈ ಬಾಲಕನು ತನ್ನ ಉಜ್ವಲವಾದ ಕೀರ್ತಿಯಿಂದ ನಮ್ಮ ವಂಶದ ಪುಣ್ಯಶ್ಲೋಕರಾದ ಮಹಾತ್ಮರಾದ ರಾಜರ್ಷಿಗಳನ್ನು ಅನುಸರಿಸುತ್ತಾನಷ್ಟೇ ? ಎಂದು ಕೇಳಿದನು. ॥ ೧೮ ॥

**ಬ್ರಾಹ್ಮಣರೆಂದರು** - ಎಲೈ ಕುಂತೀನಂದನನೇ! ಇವನು ಮನು ಪುತ್ರನಾದ ಇಕ್ಷ್ವಾಕುಮಹಾರಾಜನಂತೆ ತನ್ನ ಪ್ರಜೆಗಳನ್ನು ಪಾಲಿಸುವನು. ಹಾಗೂ ದಶರಥನಂದನ ಭಗವಾನ್ ಶ್ರೀರಾಮನಂತೆ ಬ್ರಾಹ್ಮಣ ಭಕ್ತನೂ, ಸತ್ಯ ಪ್ರತಿಜ್ಞನೂ ಆಗುವನು. ॥ ೧೯ ॥ ಇವನು ಉಶೀನರ ಅರಸನಾದ ಶಿಬಿಯಂತೆ ದಾನಕೊಡುವವನೂ, ಶರಣಾಗತವತ್ಸಲನೂ ಆಗುವನು. ಯಜ್ಞಗಳನ್ನಾಚರಿಸುವವರಲ್ಲಿ ದುಷ್ಯಂತ ಪುತ್ರ ಭರತನಂತೆ ಆಗಿ ತನ್ನ ವಂಶದ ಕೀರ್ತಿಯನ್ನು ಹರಡುವನು. ॥ ೨೦ ॥ ಧನುರ್ಧಾರಿಗಳಲ್ಲಿ ಕಾರ್ತವೀರ್ಯಾರ್ಜುನನಿಗೂ, ತನ್ನ ತಾತನಾದ ಅರ್ಜುನನಿಗೂ ಸಮಾನವಾಗಿ ಅಗ್ರಗಣ್ಯನಾಗುವನು. ಅಗ್ನಿಯಂತೆ ಎದುರಿಸಲು ಅಶಕ್ಯವಾದ ಪ್ರತಾಪವುಳ್ಳವನೂ, ಸಮುದ್ರದಂತೆ ಅತಿಕ್ರಮಿಸಲು ಅಸಾಧ್ಯನೂ ಆಗುವನು. ॥ ೨೧ ॥ ಸಿಂಹದಂತೆ ಮಹಾಪರಾಕ್ರಮಿಯೂ, ಹಿಮಾಲಯದಂತೆ ಸರ್ವರಿಗೂ ಆಶ್ರಯನೂ, ಪೃಥ್ವಿಯಂತೆ ಕ್ಷಮಾಗುಣಶಾಲಿಯೂ, ಪ್ರಜೆಗಳ ವಿಷಯದಲ್ಲಿ ತಂದೆ-ತಾಯಿಯರಂತೆ ಸಹನಶೀಲನೂ ಆಗುವನು. ॥ ೨೨ ॥ ಇವನು ಸಮಭಾವದಲ್ಲಿ ಬ್ರಹ್ಮದೇವರಿಗೂ, ಅನುಗ್ರಹ ಮಾಡುವುದರಲ್ಲಿ ಈಶ್ವರನಿಗೂ, ಸರ್ವಪ್ರಾಣಿಗಳನ್ನು ಆಸರೆಯನ್ನಿತ್ತು ರಕ್ಷಿಸುವುದರಲ್ಲಿ ಲಕ್ಷ್ಮೀಪತಿಗೂ ಸಮಾನನಾಗುವನು. ॥ ೨೩ ॥ ಸಮಸ್ತ ಶ್ರೇಷ್ಠ

* ಹೊಕ್ಕಳುಬಳ್ಳಿ ಕತ್ತರಿಸುವುದಕ್ಕೆ ಮೊದಲು ಸೂತಕವಿರುವುದಿಲ್ಲ. '**ಯಾವನ್ನ ಛಿದ್ಯತೇ ನಾಳಂ ತಾವನ್ನಾಪ್ನೋತಿ ಸೂತಕಮ್ । ಛಿನ್ನೇ ನಾಳೇ ತತಃ ಪಶ್ಚಾತ್ ಸೂತಕಂ ತು ವಿಧೀಯತೇ ॥**
ಈ ಸಮಯಕ್ಕೆ ಪ್ರಜಾತೀರ್ಥವೆಂದು ಹೇಳುತ್ತಾರೆ. ಈ ಸಮಯದಲ್ಲಿ ಕೊಡುವ ದಾನದ ಫಲವು ಅಕ್ಷಯವಾಗುತ್ತದೆ ಎಂದು ಸ್ಮೃತಿಗಳು ಹೇಳುತ್ತವೆ. "ಪುತ್ರೇ ಜಾತೇ ವ್ಯತೀಪಾತೇ ದತ್ತಂ ಭವತಿ ಚಾಕ್ಷಯಮ್ " – ಎಂದರೆ ಪುತ್ರೋತ್ಪತ್ತಿ ಮತ್ತು ವ್ಯತೀಪಾತದ ಸಮಯದಲ್ಲಿ ಕೊಟ್ಟ ದಾನವು ಅಕ್ಷಯವಾಗುತ್ತದೆ.

ಸರ್ವಸದ್ಗುಣಮಾಹಾತ್ಮ್ಯೇ ಏಷ ಕೃಷ್ಣಮನುವ್ರತಃ ।
ರಂತಿದೇವ ಇವೋದಾರೋ ಯಯಾತಿರಿವ ಧಾರ್ಮಿಕಃ ॥ ೨೪ ॥

ಧೃತ್ಯಾ ಬಲಿಸಮಃ ಕೃಷ್ಣೇ ಪ್ರಹ್ಲಾದ ಇವ ಸದ್ಗ್ರಹಃ ।
ಆಹರ್ತೈಷೋಽಶ್ವಮೇಧಾನಾಂ ವೃದ್ಧಾನಾಂ ಪರ್ಯುಪಾಸಕಃ ॥ ೨೫ ॥

ರಾಜರ್ಷೀಣಾಂ ಜನಯಿತಾ ಶಾಸ್ತಾ ಚೋತ್ಪಥಗಾಮಿನಾಮ್ ।
ನಿಗ್ರಹೀತಾ ಕಲೇರೇಷ ಭುವೋ ಧರ್ಮಸ್ಯ ಕಾರಣಾತ್ ॥ ೨೬ ॥

ತಕ್ಷಕಾದಾತ್ಮನೋ ಮೃತ್ಯುಂ ದ್ವಿಜಪುತ್ರೋಪಸರ್ಜಿತಾತ್ ।
ಪ್ರಪತ್ಸ್ಯತ ಉಪಶ್ರುತ್ಯ ಮುಕ್ತಸಂಗಃ ಪದಂ ಹರೇಃ ॥ ೨೭ ॥

ಜಿಜ್ಞಾಸಿತಾತ್ಮಯಾಥಾತ್ಮ್ಯೋ ಮುನೇರ್ವ್ಯಾಸಸುತಾದಸೌ ।
ಹಿತ್ವೇದಂ ನೃಪ ಗಂಗಾಯಾಂ ಯಾಸ್ಯತ್ಯದ್ಧಾಕುತೋಭಯಮ್ ॥ ೨೮ ॥

ಇತಿ ರಾಜ್ಞ ಉಪಾದಿಶ್ಯ ವಿಪ್ರಾ ಜಾತಕಕೋವಿದಾಃ ।
ಲಬ್ಧಾಪಚಿತಯಃ ಸರ್ವೇ ಪ್ರತಿಜಗ್ಮುಃ ಸ್ವಕಾನ್ ಗೃಹಾನ್ ॥ ೨೯ ॥

ಸ ಏಷ ಲೋಕೇ ವಿಖ್ಯಾತಃ ಪರೀಕ್ಷಿದಿತಿ ಯತ್ಪ್ರಭುಃ ।
ಗರ್ಭೇ ದೃಷ್ಟಮನುಧ್ಯಾಯನ್ಪರೀಕ್ಷೇತ ನರೇಷ್ವಿಹ ॥ ೩೦ ॥

ಸ ರಾಜಪುತ್ರೋ ವವೃಧೇ ಆಶು ಶುಕ್ಲ ಇವೋಡುಪಃ ।
ಆಪೂರ್ಯಮಾಣಃ ಪಿತೃಭಿಃ ಕಾಷ್ಠಾಭಿರಿವ ಸೋಽನ್ವಹಮ್ ॥ ೩೧ ॥

ಯಕ್ಷ್ಯಮಾಣೋಽಶ್ವಮೇಧೇನ ಜ್ಞಾತಿದ್ರೋಹಜಿಹಾಸಯಾ ।
ರಾಜಾ ಲಬ್ಧಧನೋ ದಧ್ಯಾವನ್ಯತ್ರ ಕರದಂಡಯೋಃ ॥ ೩೨ ॥

ತದಭಿಪ್ರೇತಮಾಲಕ್ಷ್ಯ ಭ್ರಾತರೋಽಚ್ಯುತಚೋದಿತಾಃ ।
ಧನಂ ಪ್ರಹೀಣಮಾಜಹ್ರುರುದೀಚ್ಯಾಂ ದಿಶಿ ಭೂರಿಶಃ ॥ ೩೩ ॥

ತೇನ ಸಂಭೃತಸಂಭಾರೋ ಧರ್ಮಪುತ್ರೋ ಯುಧಿಷ್ಠಿರಃ ।
ವಾಜಿಮೇಧೈಸ್ತ್ರಿಭಿರ್ಭೀತೋ ಯಜ್ಞೈಃ ಸಮಯಜದ್ಧರಿಮ್ ॥ ೩೪ ॥

ಗುಣಗಳ ಮಹಾತ್ಮ್ಯವನ್ನು ಹೊಂದಿರುವ ವಿಷಯದಲ್ಲಿ ಶ್ರೀಕೃಷ್ಣ ಪರಮಾತ್ಮನನ್ನು ಅನುಸರಿಸುವನು. ರಂತಿದೇವನಂತೆ ಉದಾರನೂ, ಯಯಾತಿಯಂತೆ ಧಾರ್ಮಿಕನೂ ಆಗುವನು. ॥ ೨೪ ॥ ಧೈರ್ಯದಲ್ಲಿ ಬಲಿಚಕ್ರವರ್ತಿಯಂತೆಯೂ, ಭಗವಾನ್ ಶ್ರೀಕೃಷ್ಣನ ಭಕ್ತಿಯ ನಿಷ್ಠೆಯಲ್ಲಿ ಪ್ರಹ್ಲಾದನಂತೆಯೂ ಆಗುವನು. ಇವನು ಅನೇಕ ಅಶ್ವಮೇಧ ಯಜ್ಞಗಳನ್ನು ಮಾಡುವನು. ಗುರು-ಹಿರಿಯರ ಸೇವೆಯನ್ನು ನಿಷ್ಠೆಯಿಂದ ಮಾಡುವನು. ॥ ೨೫ ॥ ಇವನ ವಂಶದಲ್ಲಿ ರಾಜರ್ಷಿಗಳು ಜನಿಸುವರು. ಮರ್ಯಾದೆ ಮೀರಿ ನಡೆಯುವವರನ್ನು ಈತನು ದಂಡಿಸುವನು. ಭೂಮಿಯಲ್ಲಿ ಧರ್ಮವನ್ನು ಸ್ಥಾಪಿಸಲಿಕ್ಕಾಗಿ ಕಲಿಯುಗವನ್ನು ನಿಗ್ರಹಿಸುವನು. ॥ ೨೬ ॥ ಕೊನೆಗೆ ಬ್ರಾಹ್ಮಣಪುತ್ರನ ಶಾಪದಿಂದ ತನಗೆ ತಕ್ಷಕನಿಂದ ಸಾವು ಒದಗುವುದೆಂಬುದನ್ನು ತಿಳಿದು ಸರ್ವಸಂಗಪರಿತ್ಯಾಗ ಮಾಡಿ ಶ್ರೀಹರಿಗೆ ಶರಣಾಗುವನು. ॥ ೨೭ ॥ ಕೊನೆಗೆ ವ್ಯಾಸಪುತ್ರರಾದ ಶುಕಮಹಾಮುನಿಗಳಿಂದ ಆತ್ಮಸ್ವರೂಪದ ಯಥಾರ್ಥಜ್ಞಾನವನ್ನು ಪಡೆದು ಗಂಗಾತೀರದಲ್ಲಿ ದೇಹತ್ಯಾಗಮಾಡಿ ನಿಶ್ಚಯವಾಗಿಯೂ ಅಭಯಪದವನ್ನು ಅರ್ಥಾತ್ ಭಗವದ್ಧಾಮವನ್ನು ಪಡೆಯುವನು. ॥ ೨೮ ॥

ಜ್ಯೋತಿಷ್ಯಶಾಸ್ತ್ರದಲ್ಲಿ ಪ್ರವೀಣರಾದ ಬ್ರಾಹ್ಮಣರು ಧರ್ಮರಾಜನಿಗೆ ಆ ಬಾಲಕನ ಭವಿಷ್ಯವನ್ನು ತಿಳಿಸಿ, ಯಥೋಚಿತ ಸಂಭಾವನೆಯನ್ನು ಪಡೆದು ತಮ್ಮ-ತಮ್ಮ ಮನೆಗಳಿಗೆ ತೆರಳಿದರು. ॥ ೨೯ ॥ ಆ ರಾಜಕುಮಾರನೇ ಮುಂದೆ 'ಪರೀಕ್ಷಿತ' ಎಂಬ ಹೆಸರಿನಿಂದ ವಿಖ್ಯಾತನಾದನು. ತಾನು ತಾಯಿಯ ಗರ್ಭದಲ್ಲಿದ್ದಾಗ ಸಂದರ್ಶಿಸಿದ್ದ ಪರಮಪುರುಷನನ್ನೇ ಸ್ಮರಿಸುತ್ತಾ - ಅವನು ಯಾರಾಗಿರಬಹುದು ? ಎಲ್ಲಿರಬಹುದು ? ಎಂದು ಪರೀಕ್ಷಿಸುತ್ತಿದ್ದುದರಿಂದ ಅವನಿಗೆ ಆ ಹೆಸರು ಅನ್ವರ್ಥಕವಾಯಿತು.॥ ೩೦ ॥ ಆ ರಾಜಕುಮಾರನು ತನ್ನ ಗುರು-ಹಿರಿಯರಿಂದ ಪೋಷಿಸಲ್ಪಡುತ್ತಾ ಶುಕ್ಲಪಕ್ಷದಲ್ಲಿ ತನ್ನ ಕಲೆಗಳಿಂದ ವೃದ್ಧಿಸುವ ಚಂದ್ರನಂತೆ ಶೀಘ್ರದಲ್ಲೇ ಬೆಳೆದು ದೊಡ್ಡವನಾದನು. ॥ ೩೧ ॥

ಆಗಲೇ ರಾಜಾ ಯುಧಿಷ್ಠಿರನಿಗೆ ಸ್ವಜನ ಸಂಹಾರದ ಪ್ರಾಯಶ್ಚಿತ್ತವಾಗಿ ಅಶ್ವಮೇಧವನ್ನು ಮಾಡುವ ಮನಸ್ಸಾಯಿತು. ಆದರೆ ಅದಕ್ಕಾಗಿ ಪ್ರಜೆಗಳಿಂದ ಕಂದಾಯ ಮತ್ತು ದಂಡಗಳ ರೂಪದಲ್ಲಿ ದೊರೆಯುತ್ತಿದ್ದ ಧನವನ್ನು ಬಿಟ್ಟು ಬೇರಾವ ಧನವೂ ಇಲ್ಲದಿರುವುದರಿಂದ ಅವನು ಚಿಂತಾಕ್ರಾಂತನಾದನು. ॥ ೩೨ ॥ ಆಗ ಅವನ ಅಭಿಪ್ರಾಯವನ್ನರಿತ ಭಗವಾನ್ ಶ್ರೀಕೃಷ್ಣನ ಪ್ರೇರಣೆಯಂತೆ ಅವನ ಸೋದರರು ಉತ್ತರದಿಕ್ಕಿಗೆ ಹೋಗಿ ಮರುತ್ತರಾಜನೂ, * ಬ್ರಾಹ್ಮಣರೂ ಹಿಂದೆ ಬಿಟ್ಟುಹೋದ ಹೇರಳವಾದ ಧನವನ್ನು ತಂದರು. ॥ ೩೩ ॥ ಅದರಿಂದ ಯಜ್ಞದ್ರವ್ಯಗಳನ್ನು ಸಂಪಾದಿಸಿ ಧರ್ಮಭೀರುವಾದ ಧರ್ಮರಾಜನು ಮೂರು ಅಶ್ವಮೇಧ ಯಜ್ಞಗಳ ಮೂಲಕ ಭಗವಂತನನ್ನು ಆರಾಧಿಸಿದನು. ॥ ೩೪ ॥ ಯುಧಿಷ್ಠಿರನ

* ಹಿಂದೆ ಮಹಾರಾಜಾ ಮರುತ್ತನು ಒಂದು ಅದ್ಭುತವಾದ ಯಜ್ಞವನ್ನು ಮಾಡಿದ್ದನು. ಅದರಲ್ಲವನು ಉಪಯೋಗಿಸಿದ್ದ ಎಲ್ಲ ಪಾತ್ರೆಗಳು ಸುವರ್ಣಮಯವೇ ಆಗಿದ್ದವು. ಯಜ್ಞವು ಮುಗಿದ ನಂತರ ಅವನು ಪಾತ್ರೆಗಳನ್ನು ಉತ್ತರದಿಕ್ಕಿನಲ್ಲಿ ಎಸೆದುಬಿಟ್ಟಿದ್ದನು. ಅವನು ಆಗ ಬ್ರಾಹ್ಮಣರಿಗೆ ದಾನಮಾಡಿದ ಧನವೂ ಎಷ್ಟು ಹೆಚ್ಚಾಗಿತ್ತೆಂದರೆ, ಅವರದನ್ನು ಕೊಂಡೊಯ್ಯಲು ಸಾಧ್ಯವಾಗದೇ ಆ ಉತ್ತರದಿಕ್ಕಿನಲ್ಲೇ ಬಿಟ್ಟುಹೋದರು. ಇತರರು ಬಿಟ್ಟುಹೋದ ಹಣದ ಮೇಲೆ ರಾಜನಿಗೆ ಪೂರ್ಣ ಅಧಿಕಾರವಿರುವುದರಿಂದ ಭಗವಂತನು ಆ ಹಣವನ್ನು ತರಿಸಿ, ಧರ್ಮರಾಜನ ಯಜ್ಞ ಮಾಡಿಸಿದನು.

ಆಹೂತೋ ಭಗವಾನ್ರಾಜ್ಞಾ ಯಾಜಯಿತ್ವಾ ದ್ವಿಜೈರ್ನೃಪಮ್ ।
ಉವಾಸ ಕತಿಚಿನ್ಮಾಸಾನ್ಸುಹೃದಾಂ ಪ್ರಿಯಕಾಮ್ಯಯಾ ॥ ೩೫ ॥

ಆಹ್ವಾನದಂತೆ ಅಲ್ಲಿಗೆ ದಯಮಾಡಿಸಿದ ಭಗವಂತನು ಬ್ರಾಹ್ಮಣರ ಮೂಲಕ ಅವನ ಯಜ್ಞವನ್ನು ಸಾಂಗವಾಗಿ ನಡೆಯಿಸಿ, ಸುಹೃದರಾದ ಪಾಂಡವರ ಸಂತೋಷಕ್ಕಾಗಿ ಕೆಲವು ತಿಂಗಳು ಅಲ್ಲೇ ಉಳಿದನು. ॥ ೩೫ ॥ ಶೌನಕರೇ! ಅನಂತರ ಬಂಧುಸಹಿತ ಧರ್ಮರಾಜನ ಮತ್ತು ದ್ರೌಪದಿಯ ಅನುಮತಿಯನ್ನು ಪಡೆದು, ಅರ್ಜುನ ನೊಂದಿಗೆ, ಯಾದವರಿಂದ ಸುತ್ತುವರಿಯಲ್ಪಟ್ಟು ಭಗವಾನ್ ಶ್ರೀಕೃಷ್ಣನು ದ್ವಾರಕೆಯ ಕುರಿತು ಪ್ರಯಾಣ ಬೆಳೆಸಿದನು. ॥ ೩೬ ॥

ತತೋ ರಾಜ್ಞಾಭ್ಯನುಜ್ಞಾತಃ ಕೃಷ್ಣಯಾ ಸಹ ಬಂಧುಭಿಃ ।
ಯಯೌ ದ್ವಾರವತೀಂ ಬ್ರಹ್ಮನ್ಸಾರ್ಜುನೋ ಯದುಭಿರ್ವೃತಃ ॥ ೩೬ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಪರೀಕ್ಷಿಜ್ಜನ್ಮಾದ್ಯುತ್ಕರ್ಷೋ ನಾಮ ದ್ವಾದಶೋಽಧ್ಯಾಯಃ ॥ ೧೨ ॥

# ಹದಿಮೂರನೆಯ ಅಧ್ಯಾಯ

## ವಿದುರನ ಉಪದೇಶದಂತೆ ಧೃತರಾಷ್ಟ್ರ ಮತ್ತು ಗಾಂಧಾರಿಯ ವನಗಮನ

*ಸೂತ ಉವಾಚ*

ವಿದುರಸ್ತೀರ್ಥಯಾತ್ರಾಯಾಂ ಮೈತ್ರೇಯಾದಾತ್ಮನೋ ಗತಿಮ್ ।
ಜ್ಞಾತ್ವಾಗಾದ್ಧಾಸ್ತಿನಪುರಂ ತಯಾವಾಪ್ತವಿವಿತ್ಸಿತಃ ॥ ೧ ॥

ಯಾವತಃ ಕೃತವಾನ್ ಪ್ರಶ್ನಾನ್ ಕ್ಷತ್ತಾ ಕೌಷಾರವಾಗ್ರತಃ ।
ಜಾತೈಕಭಕ್ತಿರ್ಗೋವಿಂದೇ ತೇಭ್ಯಶ್ಚೋಪರರಾಮ ಹ ॥ ೨ ॥

ತಂ ಬಂಧುಮಾಗತಂ ದೃಷ್ಟ್ವಾ ಧರ್ಮಪುತ್ರಃ ಸಹಾನುಜಃ ।
ಧೃತರಾಷ್ಟ್ರೋ ಯುಯುತ್ಸುಶ್ಚ ಸೂತಃ ಶಾರದ್ವತಃ ಪೃಥಾ ॥ ೩ ॥

ಗಾಂಧಾರೀ ದ್ರೌಪದೀ ಬ್ರಹ್ಮನ್ಸುಭದ್ರಾ ಚೋತ್ತರಾ ಕೃಪೀ ।
ಅನ್ಯಾಶ್ಚ ಜಾಮಯಃ ಪಾಂಡೋರ್ಜ್ಞಾತಯಃ ಸಸುತಾಃ ಸ್ತ್ರಿಯಃ ॥ ೪ ॥

ಪ್ರತ್ಯುಜ್ಜಗ್ಮುಃ ಪ್ರಹರ್ಷೇಣ ಪ್ರಾಣಂ ತನ್ವ ಇವಾಗತಮ್ ।
ಅಭಿಸಂಗಮ್ಯ ವಿಧಿವತ್ಪರಿಷ್ವಂಗಾಭಿವಾದನೈಃ ॥ ೫ ॥

ಮುಮುಚುಃ ಪ್ರೇಮಬಾಷ್ಪೌಘಂ ವಿರಹೌತ್ಕಂಠ್ಯಕಾತರಾಃ ।
ರಾಜಾ ತಮರ್ಹಯಾಂಚಕ್ರೇ ಕೃತಾಸನಪರಿಗ್ರಹಮ್ ॥ ೬ ॥

ತಂ ಭುಕ್ತವಂತಂ ವಿಶ್ರಾಂತಮಾಸೀನಂ ಸುಖಮಾಸನೇ ।
ಪ್ರಶ್ರಯಾವನತೋ ರಾಜಾ ಪ್ರಾಹ ತೇಷಾಂ ಚ ಶೃಣ್ವತಾಮ್ ॥ ೭ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಮಹರ್ಷಿಗಳೇ! ಮಹಾತ್ಮನಾದ ವಿದುರನು ತೀರ್ಥಯಾತ್ರೆಯ ಸಮಯದಲ್ಲಿ ಮೈತ್ರೇಯ ಮಹರ್ಷಿಗಳಿಂದ ಆತ್ಮಜ್ಞಾನವನ್ನು ಪಡೆದುಕೊಂಡು ಹಸ್ತಿನಾವತಿಗೆ ಮರಳಿದನು. ಆತ್ಮಜ್ಞಾನದಿಂದ ತಿಳಿಯಬೇಕಾದ ಅವನ ಅರಿವು ಪೂರ್ಣವಾಗಿತ್ತು. ॥ ೧ ॥ ಗೋವಿಂದನಲ್ಲಿ ಅನನ್ಯ ಭಕ್ತಿಯನ್ನು ಹೊಂದಿದ್ದ ಅವನು ಮೊದಲೇ ಕೃತಕೃತ್ಯನಾಗಿದ್ದನು. ಮೈತ್ರೇಯರು ಅವನು ಕೇಳಿದ್ದ ಎಲ್ಲ ಪ್ರಶ್ನೆಗಳಿಗೆ ಉತ್ತರವನ್ನು ನೀಡಿದ್ದರು. ಅವರ ಉತ್ತರವನ್ನು ಕೇಳಿ ಮತ್ತೆ ಯಾವ ಪ್ರಶ್ನೆಯನ್ನು ಮಾಡದೆ ಅವನು ಶಾಂತನಾಗಿದ್ದನು. ॥ ೨ ॥ ಶೌನಕರೇ! ಆಪ್ತಬಂಧುವಾದ ಚಿಕ್ಕಪ್ಪ ವಿದುರನು ಬಂದಿರುವುದನ್ನು ನೋಡಿದೊಡನೆ ಸೋದರಸಹಿತನಾದ ಧರ್ಮರಾಜ, ಧೃತರಾಷ್ಟ್ರ, ಯುಯುತ್ಸು, ಸಂಜಯ, ಕೃಪಾಚಾರ್ಯರು, ಕುಂತೀ, ಗಾಂಧಾರೀ, ದ್ರೌಪದೀ, ಸುಭದ್ರೆ, ಉತ್ತರೆ, ಕೃಪಿ ಹಾಗೂ ಪಾಂಡವ ಪರಿವಾರದ ಬೇರೆ ಎಲ್ಲ ನರ-ನಾರಿಯರೂ ಜ್ಞಾತಿಗಳೂ, ತಮ್ಮ ಪುತ್ರರೊಂದಿಗೆ ಇತರ ಸ್ತ್ರೀಯರೂ ಅತ್ಯಂತ ಸಂತೋಷದಿಂದ ಮೃತ ಶರೀರಕ್ಕೆ ಚೈತನ್ಯ ಉಂಟಾಗುವಂತೆ ಅವನನ್ನು ಎದುರುಗೊಂಡರು. ಆತನನ್ನು ಸ್ವಾಗತಿಸಿ, ಯಥೋಚಿತವಾಗಿ ಆಲಿಂಗನ, ನಮಸ್ಕಾರಗಳೊಡನೆ ಬರಮಾಡಿಕೊಂಡರು. ಅವನ ಅಗಲಿಕೆಯಿಂದ ಉಂಟಾಗಿದ್ದ ದುಃಖದಿಂದ ಕಳವಳಗೊಂಡಿದ್ದ ಅವರೆಲ್ಲರೂ ಆನಂದಬಾಷ್ಪಗಳನ್ನು ಹರಿಸಿದರು. ಯುಧಿಷ್ಠಿರನು ಅವನನ್ನು ಆಸನದಲ್ಲಿ ಕುಳ್ಳಿರಿಸಿ ಯಥೋಚಿತವಾಗಿ ಸತ್ಕರಿಸಿದನು. ॥ ೩-೬ ॥ ಅವನು ಭೋಜನ ಮಾಡಿ ವಿಶ್ರಾಂತಿ ಪಡೆದು ಸುಖವಾಗಿ ಕುಳಿತಿದ್ದ ಸಮಯದಲ್ಲಿ ವಿನಯದಿಂದ ತಲೆಬಾಗಿ ಅಲ್ಲಿರುವವರಿಗೆಲ್ಲ ಕೇಳಿಸುವಂತೆ ಅವರಲ್ಲಿ ಇಂತು ಪ್ರಶ್ನಿಸಿದನು. ॥ ೭ ॥

**ಯುಧಿಷ್ಠಿರನೆಂದನು** – "ಚಿಕ್ಕಪ್ಪಾ! ಕೌರವರು ನಮ್ಮ ಮೇಲೆ ಪ್ರಯೋಗಮಾಡಿದ ವಿಷ, ಅರಗಿನ ಮನೆಯ ಅಗ್ನಿಪ್ರಕರಣ

*ಯುಧಿಷ್ಠಿರ ಉವಾಚ*

**ಅಪಿ ಸ್ಮರಥ ನೋ ಯುಷ್ಮತ್ಪಕ್ಷಚ್ಛಾಯಾಸಮೇಧಿತಾನ್ ।**
**ವಿಪದ್ಗಣಾದ್ವಿಷಾಗ್ನ್ಯಾದೇರ್ಮೋಚಿತಾ ಯತ್ಸಮಾತೃಕಾಃ ॥ ೮ ॥**

**ಕಯಾ ವೃತ್ತ್ಯಾ ವರ್ತಿತಂ ವಶ್ಚರದ್ಭಿಃ ಕ್ಷಿತಿಮಂಡಲಮ್ ।**
**ತೀರ್ಥಾನಿ ಕ್ಷೇತ್ರಮುಖ್ಯಾನಿ ಸೇವಿತಾನೀಹ ಭೂತಲೇ ॥ ೯ ॥**

**ಭವದ್ವಿಧಾ ಭಾಗವತಾಸ್ತೀರ್ಥಭೂತಾಃ ಸ್ವಯಂ ವಿಭೋ ।**
**ತೀರ್ಥೀಕುರ್ವಂತಿ ತೀರ್ಥಾನಿ ಸ್ವಾಂತಃಸ್ಥೇನ ಗದಾಭೃತಾ ॥ ೧೦ ॥**

**ಅಪಿ ನಃ ಸುಹೃದಸ್ತಾತ ಬಾಂಧವಾಃ ಕೃಷ್ಣದೇವತಾಃ ।**
**ದೃಷ್ಟಾಃ ಶ್ರುತಾ ವಾ ಯದವಃ ಸ್ವಪುರ್ಯಾಂ ಸುಖಮಾಸತೇ ॥ ೧೧ ॥**

**ಇತ್ಯುಕ್ತೋ ಧರ್ಮರಾಜೇನ ಸರ್ವಂ ತತ್ಸಮವರ್ಣಯತ್ ।**
**ಯಥಾನುಭೂತಂ ಕ್ರಮಶೋ ವಿನಾ ಯದುಕುಲಕ್ಷಯಮ್ ॥ ೧೨ ॥**

**ನನ್ವಪ್ರಿಯಂ ದುರ್ವಿಷಹಂ ನೃಣಾಂ ಸ್ವಯಮುಪಸ್ಥಿತಮ್ ।**
**ನಾವೇದಯತ್ ಸಕರುಣೋ ದುಃಖಿತಾಂದ್ರಷ್ಟುಮಕ್ಷಮಃ ॥ ೧೩ ॥**

**ಕಂಚಿತ್ಕಾಲಮಥಾವಾತ್ಸೀತ್ಸತ್ಕೃತೋ ದೇವವತ್ಸುಖಮ್ ।**
**ಭ್ರಾತುರ್ಜ್ಯೇಷ್ಠಸ್ಯ ಶ್ರೇಯಸ್ಕೃತ್ಸರ್ವೇಷಾಂ ಪ್ರೀತಿಮಾವಹನ್ ॥ ೧೪ ॥**

**ಅಬಿಭ್ರದರ್ಯಮಾ ದಂಡಂ ಯಥಾವದಘಕಾರಿಷು ।**
**ಯಾವದ್ದಧಾರ ಶೂದ್ರತ್ವಂ ಶಾಪಾದ್ವರ್ಷಶತಂ ಯಮಃ ॥ ೧೫ ॥**

ಮುಂತಾದ ವಿಪತ್‌ಪರಂಪರೆಯಿಂದ ಪಕ್ಷಿಗಳು ತಮ್ಮ ಮೊಟ್ಟೆಗಳನ್ನು ರೆಕ್ಕೆಗಳೊಳಗೆ ಇಟ್ಟುಕೊಂಡು ರಕ್ಷಿಸಿ, ಕಾವುಕೊಟ್ಟು ಬೆಳೆಸುವಂತೆ ನಮ್ಮನ್ನೂ ನಮ್ಮ ತಾಯಿಯನ್ನೂ ಕಾಪಾಡಿದಿರಿ. ಹೀಗೆ ನಿಮ್ಮ ಪ್ರೀತಿ – ಅಭಿಮಾನಗಳ ನೆರಳಿನಲ್ಲೇ ಬೆಳೆದು ದೊಡ್ಡವರಾದ ನಮ್ಮನು ನೆನಪುಮಾಡಿಕೊಳ್ಳುತ್ತಿದ್ದಿರಷ್ಟೇ ! ॥ ೮ ॥ ತೀರ್ಥಯಾತ್ರೆಯ ಸಮಯದಲ್ಲಿ ನೀವು ಭೂಮಿಯಲ್ಲಿ ಸಂಚರಿಸುತ್ತಾ ಹೇಗೆ ಜೀವನ ನಿರ್ವಹಿಸಿದಿರಿ ? ಯಾವ-ಯಾವ ಮುಖ್ಯವಾದ ಕ್ಷೇತ್ರಗಳಿಗೂ, ತೀರ್ಥಗಳಿಗೂ ಹೋಗಿ ಸೇವಿಸಿದಿರಿ ? ॥ ೯ ॥ ಪೂಜ್ಯರೇ ! ಭಗವಂತನ ಪ್ರಿಯಭಕ್ತರಾದ ನಿಮ್ಮಂತಹವರು ಸ್ವಯಂ ತೀರ್ಥ ಸ್ವರೂಪರೇ ಆಗಿದ್ದೀರಿ. ತಮ್ಮ ಹೃದಯದಲ್ಲಿ ವಿರಾಜಮಾನನಾದ ಭಗವಂತನ ಮೂಲಕ ತೀರ್ಥಗಳನ್ನೂ ಮಹಾತೀರ್ಥವಾಗಿಸುವವರು ನೀವು. ಏಕೆಂದರೆ, ನಿಮ್ಮಂತಹ ಸಂತರು ಗದಾಧಾರಿ ಭಗವಂತನನ್ನು ತಮ್ಮ ಹೃದಯದಲ್ಲಿ ಧರಿಸಿಕೊಂಡಿರುವಿರಿ. ॥ ೧೦ ॥ ಚಿಕ್ಕಪ್ಪನವರೇ ! ನೀವು ತೀರ್ಥಯಾತ್ರೆ ಮಾಡುತ್ತಾ ದ್ವಾರಕೆಗೂ ಅವಶ್ಯವಾಗಿ ಹೋಗಿರ ಬಹುದು. ಅಲ್ಲಿ ನಮ್ಮ ಸುಹೃದರೂ ಹಾಗೂ ಬಂಧುಗಳಾದ ಯಾದವರು, ಅವರ ಏಕಮಾತ್ರ ಆರಾಧ್ಯದೇವನಾದ ಶ್ರೀಕೃಷ್ಣನು ತಮ್ಮ ನಗರದಲ್ಲಿ ಸುಖವಾಗಿದ್ದಾರಲ್ಲ? ತಾವು ಹೋಗಿ ನೋಡದಿದ್ದರೂ ಅವಶ್ಯವಾಗಿ ಸಮಾಚಾರ ಕೇಳಿರಬಹುದು'' ಎಂದು ಕೇಳಿದನು. ॥ ೧೧ ॥

ಯುಧಿಷ್ಠಿರನು ಇಂತು ಕೇಳಲಾಗಿ ವಿದುರನು ತಾನು ಕಂಡು, ಕೇಳಿ, ಅನುಭವಿಸಿದಂತೆಯೇ ಎಲ್ಲ ವಿಷಯಗಳನ್ನು ಕ್ರಮವಾಗಿ ವರ್ಣಿಸಿದನು. ಕೇವಲ ಯದುವಂಶೀಯರ ವಿನಾಶದ ಮಾತನ್ನು ಮಾತ್ರ ಹೇಳಲಿಲ್ಲ. ॥ ೧೨ ॥ ಕರುಣಾಪೂರ್ಣ ಹೃದಯನಾದ ವಿದುರನು – ಯಾದವರ ಸಂಹಾರದ ಮಾತನ್ನು ಕೇಳಿ ಪಾಂಡವರಿಗೆ ಅತೀವ ಕಷ್ಟವಾದೀತು ಹಾಗೂ ಪಾಂಡವರನ್ನು ದುಃಖಿತರನ್ನಾಗಿ ನೋಡಲು ಬಯಸುತ್ತಿರಲಿಲ್ಲ. ಅದಕ್ಕಾಗಿ ಅವನು ಈ ಅಪ್ರಿಯ, ಅಸಹ್ಯ ಘಟನೆಯನ್ನು ಪಾಂಡವರಿಗೆ ಹೇಳಲಿಲ್ಲ. ಏಕೆಂದರೆ, ಅದಾದರೋ ತಾನಾಗಿ ತಿಳಿದುಬರುವ ವಿಚಾರವಷ್ಟೇ. ॥ ೧೩ ॥

ಪಾಂಡವರು ವಿದುರನನ್ನು ದೇವರಂತೆ ಸೇವೆ-ಸತ್ಕಾರ ಮಾಡುತ್ತಿದ್ದರು. ಅವರು ಕೆಲದಿನಗಳವರೆಗೆ ಹಿರಿಯಣ್ಣ ಧೃತರಾಷ್ಟ್ರನ ಶ್ರೇಯಸ್ಸನ್ನು ಬಯಸುತ್ತಾ ಸುಖವಾಗಿ ಹಸ್ತಿನಾಪುರದಲ್ಲೇ ಇದ್ದರು. ॥ ೧೪ ॥ ವಿದುರನಾದರೋ ಸಾಕ್ಷಾತ್ ಯಮಧರ್ಮನೇ ಆಗಿದ್ದರು. ಮಾಂಡವ್ಯ ಋಷಿಯ ಶಾಪದಿಂದ ಇವರು ನೂರು ವರ್ಷಗಳವರೆಗೆ ಶೂದ್ರರಂತೆ ಇದ್ದರು.* ಅಲ್ಲಿಯವರೆಗೂ ಯಮನ ತಂದೆಯಾದ ಸೂರ್ಯದೇವನೇ ಪಾಪಿಗಳಿಗೆ ದಂಡನೆಯನ್ನು ವಿಧಿಸುವ ಅಧಿಕಾರವನ್ನು ನಿರ್ವಹಿಸುತ್ತಿದ್ದನು. ॥ ೧೫ ॥

* ಹಿಂದೊಮ್ಮೆ ಧ್ಯಾನಾಸಕ್ತರಾಗಿದ್ದ ಮಾಂಡವ್ಯ ಮಹರ್ಷಿಗಳ ಆಶ್ರಮದಲ್ಲಿ ಕೆಲವು ಕಳ್ಳರು ರಾಜಭಟರ ಕೈಗೆ ಸಿಕ್ಕಿಬಿದ್ದರು. ಕಳ್ಳರ ಕೆಲಸದಲ್ಲಿ ಮಾಂಡವ್ಯ ಮಹರ್ಷಿಗಳದೂ ಪಾತ್ರವಿರಬೇಕೆಂದು ಭಾವಿಸಿ ರಾಜನು ಮಾಂಡವ್ಯರಿಗೆ ಶೂಲಕ್ಕೇರಿಸುವ ದಂಡವನ್ನು ವಿಧಿಸಿದನು. ತನ್ನ ತಪ್ಪನ್ನು ತಿಳಿದೊಡನೆ ರಾಜನು ಮಹರ್ಷಿಗಳನ್ನು ಶೂಲದಿಂದ ಇಳಿಸಿ, ಅವರ ಕ್ಷಮಾಪಣೆಯನ್ನು ಯಾಚಿಸಿದನು. ಮಾಂಡವ್ಯರು ಯಮಧರ್ಮನ ಬಳಿಗೆ ಹೋಗಿ ನನಗೆ ಯಾವ ಪಾಪಕ್ಕಾಗಿ ಈ ದಂಡನೆಯು ಒದಗಿತೆಂದು ಪ್ರಶ್ನಿಸಲು, ಅವನು ''ನೀವು ಬಾಲ್ಯದಲ್ಲಿ ಒಂದು ಚಿಟ್ಟೆಯನ್ನು ದರ್ಭಾಗ್ರದಿಂದ ಚುಚ್ಚಿದ್ದಕ್ಕಾಗಿ ನಿಮಗಿಂದು ಈ ಶಿಕ್ಷೆ ಒದಗಿತು'' ಎಂದು ಉತ್ತರಿಸಿದರು. ಆಗ ಮಹರ್ಷಿಗಳು ಕ್ರುದ್ಧರಾಗಿ 'ನಾನು ಬಾಲ್ಯದಲ್ಲಿ ಅರಿಯದೆ ಅಪರಾಧ ಮಾಡಿರಬಹುದು. ಅದೂ ಅಲ್ಲದೆ ಆ ಸಣ್ಣ ಅಪರಾಧಕ್ಕೆ ಇಷ್ಟೊಂದು ಕಠೋರವಾದ ಶಿಕ್ಷೆಯನ್ನು ವಿಧಿಸಿದ್ದರಿಂದ ನೀನು ಇಲ್ಲಿರಲು ಯೋಗ್ಯನಲ್ಲ. ನೂರು ವರ್ಷಗಳ ಕಾಲ ಶೂದ್ರಯೋನಿಯಲ್ಲಿರು' ಎಂದು ಯಮನಿಗೆ ಶಪಿಸಿದರು. ಮಾಂಡವ್ಯರ ಈ ಶಾಪದಿಂದ ಯಮಧರ್ಮನು ವಿದುರನ ರೂಪದಲ್ಲಿ ಅವತರಿಸಿದ್ದನು.

ಆಹೂತೋ ಭಗವಾನ್ರಾಜ್ಞಾ ಯಾಜಯಿತ್ವಾ ದ್ವಿಜೈರ್ನೃಪಮ್ ।
ಉವಾಸ ಕತಿಚಿನ್ಮಾಸಾನ್ಸುಹೃದಾಂ ಪ್ರಿಯಕಾಮ್ಯಯಾ ॥ ೩೫ ॥

ಆಹ್ವಾನದಂತೆ ಅಲ್ಲಿಗೆ ದಯಮಾಡಿಸಿದ ಭಗವಂತನು ಬ್ರಾಹ್ಮಣರ ಮೂಲಕ ಅವನ ಯಜ್ಞವನ್ನು ಸಾಂಗವಾಗಿ ನಡೆಯಿಸಿ, ಸುಹೃದರಾದ ಪಾಂಡವರ ಸಂತೋಷಕ್ಕಾಗಿ ಕೆಲವು ತಿಂಗಳು ಅಲ್ಲೇ ಉಳಿದನು. ॥ ೩೫ ॥ ಶೌನಕರೇ ! ಅನಂತರ ಬಂಧುಸಹಿತ ಧರ್ಮರಾಜನ ಮತ್ತು ದ್ರೌಪದಿಯ ಅನುಮತಿಯನ್ನು ಪಡೆದು, ಅರ್ಜುನ ನೊಂದಿಗೆ, ಯಾದವರಿಂದ ಸುತ್ತುವರಿಯಲ್ಪಟ್ಟು ಭಗವಾನ್ ಶ್ರೀಕೃಷ್ಣನು ದ್ವಾರಕೆಯ ಕುರಿತು ಪ್ರಯಾಣ ಬೆಳೆಸಿದನು. ॥ ೩೬ ॥

ತತೋ ರಾಜ್ಞಾಭ್ಯನುಜ್ಞಾತಃ ಕೃಷ್ಣಯಾ ಸಹ ಬಂಧುಭಿಃ ।
ಯಯೌ ದ್ವಾರವತೀಂ ಬ್ರಹ್ಮನ್ಸಾರ್ಜುನೋ ಯದುಭಿರ್ವೃತಃ ॥ ೩೬ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಪರೀಕ್ಷಿಜ್ಜನ್ಮಾದ್ಯುತ್ಕರ್ಷೋ ನಾಮ ದ್ವಾದಶೋಽಧ್ಯಾಯಃ ॥ ೧೨ ॥

# ಹದಿಮೂರನೆಯ ಅಧ್ಯಾಯ

## ವಿದುರನ ಉಪದೇಶದಂತೆ ಧೃತರಾಷ್ಟ್ರ ಮತ್ತು ಗಾಂಧಾರಿಯ ವನಗಮನ

*ಸೂತ ಉವಾಚ*

ವಿದುರಸ್ತೀರ್ಥಯಾತ್ರಾಯಾಂ ಮೈತ್ರೇಯಾದಾತ್ಮನೋ ಗತಿಮ್ ।
ಜ್ಞಾತ್ವಾಗಾದ್ಧಾಸ್ತಿನಪುರಂ ತಯಾವಾಪ್ತವಿವಿತ್ಸಿತಃ ॥ ೧ ॥

ಯಾವತಃ ಕೃತವಾನ್ ಪ್ರಶ್ನಾನ್ ಕ್ಷತ್ತಾ ಕೌಷಾರವಾಗ್ರತಃ ।
ಜಾತೈಕಭಕ್ತಿರ್ಗೋವಿಂದೇ ತೇಭ್ಯಶ್ಚೋಪರರಾಮ ಹ ॥ ೨ ॥

ತಂ ಬಂಧುಮಾಗತಂ ದೃಷ್ಟ್ವಾ ಧರ್ಮಪುತ್ರಃ ಸಹಾನುಜಃ ।
ಧೃತರಾಷ್ಟ್ರೋ ಯುಯುತ್ಸುಶ್ಚ ಸೂತಃ ಶಾರದ್ವತಃ ಪೃಥಾ ॥ ೩ ॥

ಗಾಂಧಾರೀ ದ್ರೌಪದೀ ಬ್ರಹ್ಮನ್ಸುಭದ್ರಾ ಚೋತ್ತರಾ ಕೃಪೀ ।
ಅನ್ಯಾಶ್ಚಜಾಮಯಃ ಪಾಂಡೋರ್ಜ್ಞಾತಯಃ ಸಸುತಾಃ ಸ್ತ್ರಿಯಃ ॥ ೪ ॥

ಪ್ರತ್ಯುಜ್ಜಗ್ಮುಃ ಪ್ರಹರ್ಷೇಣ ಪ್ರಾಣಂ ತನ್ವ ಇವಾಗತಮ್ ।
ಅಭಿಸಂಗಮ್ಯ ವಿಧಿವತ್ಪರಿಷ್ವಂಗಾಭಿವಾದನೈಃ ॥ ೫ ॥

ಮುಮುಚುಃ ಪ್ರೇಮಬಾಷ್ಪೌಘಂ ವಿರಹೌತ್ಕಂಠ್ಯಕಾತರಾಃ ।
ರಾಜಾ ತಮರ್ಹಯಾಂಚಕ್ರೇ ಕೃತಾಸನಪರಿಗ್ರಹಮ್ ॥ ೬ ॥

ತಂ ಭುಕ್ತವಂತಂ ವಿಶ್ರಾಂತಮಾಸೀನಂ ಸುಖಮಾಸನೇ ।
ಪ್ರಶ್ರಯಾವನತೋ ರಾಜಾ ಪ್ರಾಹ ತೇಷಾಂ ಚ ಶೃಣ್ವತಾಮ್ ॥ ೭ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಮಹರ್ಷಿಗಳೇ ! ಮಹಾತ್ಮನಾದ ವಿದುರನು ತೀರ್ಥಯಾತ್ರೆಯ ಸಮಯದಲ್ಲಿ ಮೈತ್ರೇಯ ಮಹರ್ಷಿಗಳಿಂದ ಆತ್ಮಜ್ಞಾನವನ್ನು ಪಡೆದುಕೊಂಡು ಹಸ್ತಿನಾವತಿಗೆ ಮರಳಿದನು. ಆತ್ಮಜ್ಞಾನದಿಂದ ತಿಳಿಯಬೇಕಾದ ಅವನ ಅರಿವು ಪೂರ್ಣವಾಗಿತ್ತು. ॥ ೧ ॥ ಗೋವಿಂದನಲ್ಲಿ ಅನನ್ಯ ಭಕ್ತಿಯನ್ನು ಹೊಂದಿದ್ದ ಅವನು ಮೊದಲೇ ಕೃತಕೃತ್ಯನಾಗಿದ್ದನು. ಮೈತ್ರೇಯರು ಅವನು ಕೇಳಿದ್ದ ಎಲ್ಲ ಪ್ರಶ್ನೆಗಳಿಗೆ ಉತ್ತರವನ್ನು ನೀಡಿದ್ದರು. ಅವರ ಉತ್ತರವನ್ನು ಕೇಳಿ ಮತ್ತೆ ಯಾವ ಪ್ರಶ್ನೆಯನ್ನು ಮಾಡದೆ ಅವನು ಶಾಂತನಾಗಿದ್ದನು. ॥ ೨ ॥ ಶೌನಕರೇ ! ಆಪ್ತಬಂಧುವಾದ ಚಿಕ್ಕಪ್ಪ ವಿದುರನು ಬಂದಿರುವುದನ್ನು ನೋಡಿದೊಡನೆ ಸೋದರಸಹಿತನಾದ ಧರ್ಮರಾಜ, ಧೃತರಾಷ್ಟ್ರ, ಯುಯುತ್ಸು, ಸಂಜಯ, ಕೃಪಾಚಾರ್ಯರು, ಕುಂತೀ, ಗಾಂಧಾರೀ, ದ್ರೌಪದೀ, ಸುಭದ್ರೆ, ಉತ್ತರೆ, ಕೃಪಿ ಹಾಗೂ ಪಾಂಡವ ಪರಿವಾರದ ಬೇರೆ ಎಲ್ಲ ನರ-ನಾರಿಯರೂ ಜ್ಞಾತಿಗಳೂ, ತಮ್ಮ ಪುತ್ರರೊಂದಿಗೆ ಇತರ ಸ್ತ್ರೀಯರೂ ಅತ್ಯಂತ ಸಂತೋಷದಿಂದ ಮೃತ ಶರೀರಕ್ಕೆ ಚೈತನ್ಯ ಉಂಟಾಗುವಂತೆ ಅವನನ್ನು ಎದುರುಗೊಂಡರು. ಆತನನ್ನು ಸ್ವಾಗತಿಸಿ, ಯಥೋಚಿತವಾಗಿ ಆಲಿಂಗನ, ನಮಸ್ಕಾರಗಳೊಡನೆ ಬರಮಾಡಿಕೊಂಡರು. ಅವನ ಅಗಲಿಕೆಯಿಂದ ಉಂಟಾಗಿದ್ದ ದುಃಖದಿಂದ ಕಳವಳಗೊಂಡಿದ್ದ ಅವರೆಲ್ಲರೂ ಆನಂದಬಾಷ್ಪಗಳನ್ನು ಹರಿಸಿದರು. ಯುಧಿಷ್ಠಿರನು ಅವನನ್ನು ಆಸನದಲ್ಲಿ ಕುಳ್ಳಿರಿಸಿ ಯಥೋಚಿತವಾಗಿ ಸತ್ಕರಿಸಿದನು. ॥ ೩-೬ ॥ ಅವನು ಭೋಜನ ಮಾಡಿ ವಿಶ್ರಾಂತಿ ಪಡೆದು ಸುಖವಾಗಿ ಕುಳಿತಿದ್ದ ಸಮಯದಲ್ಲಿ ವಿನಯದಿಂದ ತಲೆಬಾಗಿ ಅಲ್ಲಿರುವವರಿಗೆಲ್ಲ ಕೇಳಿಸುವಂತೆ ಅವರಲ್ಲಿ ಇಂತು ಪ್ರಶ್ನಿಸಿದನು. ॥ ೭ ॥

**ಯುಧಿಷ್ಠಿರನೆಂದನು** – "ಚಿಕ್ಕಪ್ಪಾ ! ಕೌರವರು ನಮ್ಮ ಮೇಲೆ ಪ್ರಯೋಗಮಾಡಿದ ವಿಷ, ಅರಗಿನ ಮನೆಯ ಅಗ್ನಿಪ್ರಕರಣ

ಯುಧಿಷ್ಠಿರ ಉವಾಚ

ಅಪಿ ಸ್ಮರಥ ನೋ ಯುಷ್ಮತ್ಪಕ್ಷಚ್ಛಾಯಾಸಮೇಧಿತಾನ್ ।
ವಿಪದ್ಗಣಾದ್ವಿಷಾಗ್ನ್ಯಾದೇರ್ಮೋಚಿತಾ ಯತ್ಸಮಾತೃಕಾಃ ॥ ೮ ॥

ಕಯಾ ವೃತ್ತ್ಯಾ ವರ್ತಿತಂ ವಶ್ಚರದ್ಭಿಃ ಕ್ಷಿತಿಮಂಡಲಮ್ ।
ತೀರ್ಥಾನಿ ಕ್ಷೇತ್ರಮುಖ್ಯಾನಿ ಸೇವಿತಾನೀಹ ಭೂತಲೇ ॥ ೯ ॥

ಭವದ್ವಿಧಾ ಭಾಗವತಾಸ್ತೀರ್ಥಭೂತಾಃ ಸ್ವಯಂ ವಿಭೋ ।
ತೀರ್ಥೀಕುರ್ವಂತಿ ತೀರ್ಥಾನಿ ಸ್ವಾಂತಃಸ್ಥೇನ ಗದಾಭೃತಾ ॥ ೧೦ ॥

ಅಪಿ ನಃ ಸುಹೃದಸ್ತಾತ ಬಾಂಧವಾಃ ಕೃಷ್ಣದೇವತಾಃ ।
ದೃಷ್ಟಾಃ ಶ್ರುತಾ ವಾ ಯದವಃ ಸ್ವಪುರ್ಯಾಂ ಸುಖಮಾಸತೇ ॥ ೧೧ ॥

ಇತ್ಯುಕ್ತೋ ಧರ್ಮರಾಜೇನ ಸರ್ವಂ ತತ್ಸಮವರ್ಣಯತ್ ।
ಯಥಾನುಭೂತಂ ಕ್ರಮಶೋ ವಿನಾ ಯದುಕುಲಕ್ಷಯಮ್ ॥ ೧೨ ॥

ನನ್ವಪ್ರಿಯಂ ದುರ್ವಿಷಹಂ ನೃಣಾಂ ಸ್ವಯಮುಪಸ್ಥಿತಮ್ ।
ನಾವೇದಯತ್ ಸಕರುಣೋ ದುಃಖಿತಾಂದ್ರಷ್ಟುಮಕ್ಷಮಃ ॥ ೧೩ ॥

ಕಂಚಿತ್ಕಾಲಮಥಾವಾತ್ಸೀತ್ಸತ್ಕೃತೋ ದೇವವತ್ಸುಖಮ್ ।
ಭ್ರಾತುರ್ಜ್ಯೇಷ್ಠಸ್ಯ ಶ್ರೇಯಸ್ಕೃತ್ಸರ್ವೇಷಾಂ ಪ್ರೀತಿಮಾವಹನ್ ॥ ೧೪ ॥

ಅಬಿಭ್ರದರ್ಯಮಾ ದಂಡಂ ಯಥಾವದಘಕಾರಿಷು ।
ಯಾವದ್ದಧಾರ ಶೂದ್ರತ್ವಂ ಶಾಪಾದ್ವರ್ಷಶತಂ ಯಮಃ ॥ ೧೫ ॥

ಮುಂತಾದ ವಿಪತ್‌ಪರಂಪರೆಯಿಂದ ಪಕ್ಷಿಗಳು ತಮ್ಮ ಮೊಟ್ಟೆಗಳನ್ನು ರೆಕ್ಕೆಗಳೊಳಗೆ ಇಟ್ಟುಕೊಂಡು ರಕ್ಷಿಸಿ, ಕಾವುಕೊಟ್ಟು ಬೆಳೆಸುವಂತೆ ನಮ್ಮನ್ನೂ ನಮ್ಮ ತಾಯಿಯನ್ನೂ ಕಾಪಾಡಿದಿರಿ. ಹೀಗೆ ನಿಮ್ಮ ಪ್ರೀತಿ – ಅಭಿಮಾನಗಳ ನೆರಳಿನಲ್ಲೇ ಬೆಳೆದು ದೊಡ್ಡವರಾದ ನಮ್ಮನ್ನು ನೆನಪುಮಾಡಿಕೊಳ್ಳುತ್ತಿದ್ದಿರಷ್ಟೇ ! ॥ ೮ ॥ ತೀರ್ಥ ಯಾತ್ರೆಯ ಸಮಯದಲ್ಲಿ ನೀವು ಭೂಮಿಯಲ್ಲಿ ಸಂಚರಿಸುತ್ತಾ ಹೇಗೆ ಜೀವನ ನಿರ್ವಹಿಸಿದಿರಿ ? ಯಾವ-ಯಾವ ಮುಖ್ಯವಾದ ಕ್ಷೇತ್ರಗಳಿಗೂ, ತೀರ್ಥಗಳಿಗೂ ಹೋಗಿ ಸೇವಿಸಿದಿರಿ ? ॥ ೯ ॥ ಪೂಜ್ಯರೇ ! ಭಗವಂತನ ಪ್ರಿಯಭಕ್ತರಾದ ನಿಮ್ಮಂತಹವರು ಸ್ವಯಂ ತೀರ್ಥ ಸ್ವರೂಪರೇ ಆಗಿದ್ದೀರಿ. ತಮ್ಮ ಹೃದಯದಲ್ಲಿ ವಿರಾಜ ಮಾನನಾದ ಭಗವಂತನ ಮೂಲಕ ತೀರ್ಥಗಳನ್ನೂ ಮಹಾತೀರ್ಥ ವಾಗಿಸುವವರು ನೀವು. ಏಕೆಂದರೆ, ನಿಮ್ಮಂತಹ ಸಂತರು ಗದಾ ಧಾರಿ ಭಗವಂತನನ್ನು ತಮ್ಮ ಹೃದಯದಲ್ಲಿ ಧರಿಸಿಕೊಂಡಿ ರುವಿರಿ. ॥ ೧೦ ॥ ಚಿಕ್ಕಪ್ಪನವರೇ ! ನೀವು ತೀರ್ಥಯಾತ್ರೆ ಮಾಡುತ್ತಾ ದ್ವಾರಕೆಗೂ ಅವಶ್ಯವಾಗಿ ಹೋಗಿರ ಬಹುದು. ಅಲ್ಲಿ ನಮ್ಮ ಸುಹೃದರೂ ಹಾಗೂ ಬಂಧುಗಳಾದ ಯಾದವರು, ಅವರ ಏಕಮಾತ್ರ ಆರಾಧ್ಯದೇವನಾದ ಶ್ರೀಕೃಷ್ಣನು ತಮ್ಮ ನಗರದಲ್ಲಿ ಸುಖವಾಗಿದ್ದಾರಲ್ಲ? ತಾವು ಹೋಗಿ ನೋಡದಿದ್ದರೂ ಅವಶ್ಯ ವಾಗಿ ಸಮಾಚಾರ ಕೇಳಿರಬಹುದು" ಎಂದು ಕೇಳಿದನು. ॥ ೧೧ ॥

ಯುಧಿಷ್ಠಿರನು ಇಂತು ಕೇಳಲಾಗಿ ವಿದುರನು ತಾನು ಕಂಡು, ಕೇಳಿ, ಅನುಭವಿಸಿದಂತೆಯೇ ಎಲ್ಲ ವಿಷಯಗಳನ್ನು ಕ್ರಮವಾಗಿ ವರ್ಣಿಸಿದನು. ಕೇವಲ ಯದುವಂಶೀಯರ ವಿನಾಶದ ಮಾತನ್ನು ಮಾತ್ರ ಹೇಳಲಿಲ್ಲ. ॥ ೧೨ ॥ ಕರುಣಾಪೂರ್ಣ ಹೃದಯನಾದ ವಿದುರನು – ಯಾದವರ ಸಂಹಾರದ ಮಾತನ್ನು ಕೇಳಿ ಪಾಂಡವ ರಿಗೆ ಅತೀವ ಕಷ್ಟವಾದೀತು ಹಾಗೂ ಪಾಂಡವರನ್ನು ದುಃಖಿತರನ್ನಾಗಿ ನೋಡಲು ಬಯಸುತ್ತಿರಲಿಲ್ಲ. ಅದಕ್ಕಾಗಿ ಅವನು ಈ ಅಪ್ರಿಯ, ಅಸಹ್ಯ ಘಟನೆಯನ್ನು ಪಾಂಡವರಿಗೆ ಹೇಳಲಿಲ್ಲ. ಏಕೆಂದರೆ, ಅದಾದರೋ ತಾನಾಗಿ ತಿಳಿದುಬರುವ ವಿಚಾರವಷ್ಟೇ. ॥ ೧೩ ॥

ಪಾಂಡವರು ವಿದುರನನ್ನು ದೇವರಂತೆ ಸೇವೆ-ಸತ್ಕಾರ ಮಾಡು ತ್ತಿದ್ದರು. ಅವರು ಕೆಲದಿನಗಳವರೆಗೆ ಹಿರಿಯಣ್ಣ ಧೃತರಾಷ್ಟ್ರನ ಶ್ರೇಯಸ್ಸನ್ನು ಬಯಸುತ್ತಾ ಸುಖವಾಗಿ ಹಸ್ತಿನಾಪುರದಲ್ಲೇ ಇದ್ದರು. ॥ ೧೪ ॥ ವಿದುರನಾದರೋ ಸಾಕ್ಷಾತ್ ಯಮಧರ್ಮನೇ ಆಗಿದ್ದರು. ಮಾಂಡವ್ಯ ಋಷಿಯ ಶಾಪದಿಂದ ಇವರು ನೂರು ವರ್ಷಗಳವರೆಗೆ ಶೂದ್ರರಂತೆ ಇದ್ದರು.* ಅಲ್ಲಿಯವರೆಗೂ ಯಮನ ತಂದೆಯಾದ ಸೂರ್ಯದೇವನೇ ಪಾಪಿಗಳಿಗೆ ದಂಡನೆ ಯನ್ನು ವಿಧಿಸುವ ಅಧಿಕಾರವನ್ನು ನಿರ್ವಹಿಸುತ್ತಿದ್ದನು. ॥ ೧೫ ॥

* ಹಿಂದೊಮ್ಮೆ ಧ್ಯಾನಾಸಕ್ತರಾಗಿದ್ದ ಮಾಂಡವ್ಯ ಮಹರ್ಷಿಗಳ ಆಶ್ರಮದಲ್ಲಿ ಕೆಲವು ಕಳ್ಳರು ರಾಜಭಟರ ಕೈಗೆ ಸಿಕ್ಕಿಬಿದ್ದರು. ಕಳ್ಳರ ಕೆಲಸದಲ್ಲಿ ಮಾಂಡವ್ಯ ಮಹರ್ಷಿಗಳದೂ ಪಾತ್ರವಿರಬೇಕೆಂದು ಭಾವಿಸಿ ರಾಜನು ಮಾಂಡವ್ಯರಿಗೆ ಶೂಲಕ್ಕೇರಿಸುವ ದಂಡವನ್ನು ವಿಧಿಸಿದನು. ತನ್ನ ತಪ್ಪನ್ನು ತಿಳಿದೊಡನೆ ರಾಜನು ಮಹರ್ಷಿಗಳನ್ನು ಶೂಲದಿಂದ ಇಳಿಸಿ, ಅವರ ಕ್ಷಮಾಪಣೆಯನ್ನು ಯಾಚಿಸಿದನು. ಮಾಂಡವ್ಯರು ಯಮಧರ್ಮನ ಬಳಿಗೆ ಹೋಗಿ ನನಗೆ ಯಾವ ಪಾಪಕ್ಕಾಗಿ ಈ ದಂಡನೆಯು ಒದಗಿತೆಂದು ಪ್ರಶ್ನಿಸಲು, ಅವನು "ನೀವು ಬಾಲ್ಯದಲ್ಲಿ ಒಂದು ಚಿಟ್ಟೆಯನ್ನು ದರ್ಭಾಗ್ರದಿಂದ ಚುಚ್ಚಿದ್ದಕ್ಕಾಗಿ ನಿಮಗಿಂದು ಈ ಶಿಕ್ಷೆ ಒದಗಿತು" ಎಂದು ಉತ್ತರಿಸಿದರು. ಆಗ ಮಹರ್ಷಿಗಳು ಕ್ರುದ್ಧರಾಗಿ 'ನಾನು ಬಾಲ್ಯದಲ್ಲಿ ಅರಿಯದೆ ಅಪರಾಧ ಮಾಡಿರಬಹುದು. ಅದೂ ಅಲ್ಲದೆ ಆ ಸಣ್ಣ ಅಪರಾಧಕ್ಕೆ ಇಷ್ಟೊಂದು ಕಠೋರವಾದ ಶಿಕ್ಷೆಯನ್ನು ವಿಧಿಸಿದ್ದರಿಂದ ನೀನು ಇಲ್ಲಿರಲು ಯೋಗ್ಯನಲ್ಲ. ನೂರು ವರ್ಷಗಳ ಕಾಲ ಶೂದ್ರಯೋನಿಯಲ್ಲಿರು' ಎಂದು ಯಮನಿಗೆ ಶಪಿಸಿದರು. ಮಾಂಡವ್ಯರ ಈ ಶಾಪದಿಂದ ಯಮಧರ್ಮನು ವಿದುರನ ರೂಪದಲ್ಲಿ ಅವತರಿಸಿದ್ದನು.

ಯುಧಿಷ್ಠಿರೋ ಲಬ್ಧರಾಜ್ಯೋದೃಷ್ಟ್ವಾ ಪೌತ್ರಂ ಕುಲಂಧರಮ್ ।
ಭ್ರಾತೃಭಿರ್ಲೋಕಪಾಲಾಭೈರ್ಮುಮುದೇ ಪರಯಾ ಶ್ರಿಯಾ ॥ ೧೬ ॥

ಏವಂ ಗೃಹೇಷು ಸಕ್ತಾನಾಂ ಪ್ರಮತ್ತಾನಾಂ ತದೀಹಯಾ ।
ಅತ್ಯಕ್ರಾಮದವಿಜ್ಞಾತಃ ಕಾಲಃ ಪರಮದುಸ್ತರಃ ॥ ೧೭ ॥

ವಿದುರಸ್ತದಭಿಪ್ರೇತ್ಯ ಧೃತರಾಷ್ಟ್ರಮಭಾಷತ ।
ರಾಜನ್ನಿರ್ಗಮ್ಯತಾಂ ಶೀಘ್ರಂ ಪಶ್ಯೇದಂ ಭಯಮಾಗತಮ್ ॥ ೧೮ ॥

ಪ್ರತಿಕ್ರಿಯಾ ನ ಯಸ್ಯೇಹ ಕುತಶ್ಚಿತ್ಕರ್ಹಿಚಿತ್ಪ್ರಭೋ ।
ಸ ಏವ ಭಗವಾನ್ಕಾಲಃ ಸರ್ವೇಷಾಂ ನಃ ಸಮಾಗತಃ ॥ ೧೯ ॥

ಯೇನ ಚೈವಾಭಿಪನ್ನೋಽಯಂ ಪ್ರಾಣೈಃ ಪ್ರಿಯತಮೈರಪಿ ।
ಜನಃ ಸದ್ಯೋ ವಿಯುಜ್ಯೇತ ಕಿಮುತಾನ್ಯೈರ್ಧನಾದಿಭಿಃ ॥ ೨೦ ॥

ಪಿತೃಭ್ರಾತೃಸುಹೃತ್ಪುತ್ರಾ ಹತಾಸ್ತೇ ವಿಗತಂ ವಯಃ ।
ಆತ್ಮಾ ಚ ಜರಯಾ ಗ್ರಸ್ತಃ ಪರಗೇಹಮುಪಾಸಸೇ ॥ ೨೧ ॥

ಅಹೋ ಮಹೀಯಸೀ ಜಂತೋರ್ಜೀವಿತಾಶಾ ಯಯಾ ಭವಾನ್ ।
ಭೀಮಾಪವರ್ಜಿತಂ ಪಿಂಡ ಮಾದತ್ತೇ ಗೃಹಪಾಲವತ್ ॥ ೨೨ ॥

ಅಗ್ನಿರ್ನಿಸೃಷ್ಟೋ ದತ್ತಶ್ಚ ಗರೋ ದಾರಾಶ್ಚ ದೂಷಿತಾಃ ।
ಹೃತಂ ಕ್ಷೇತ್ರಂ ಧನಂ ಯೇಷಾಂ ತದ್ದತ್ತೈರಸುಭಿಃ ಕಿಯತ್ ॥ ೨೩ ॥

ತಸ್ಯಾಪಿ ತವ ದೇಹೋಽಯಂ ಕೃಪಣಸ್ಯ ಜಿಜೀವಿಷೋಃ ।
ಪರೈತ್ಯನಿಚ್ಛತೋ ಜೀರ್ಣೋ ಜರಯಾ ವಾಸಸೀ ಇವ ॥ ೨೪ ॥

ಗತಸ್ವಾರ್ಥಮಿಮಂ ದೇಹಂ ವಿರಕ್ತೋ ಮುಕ್ತಬಂಧನಃ ।
ಅವಿಜ್ಞಾತಗತಿರ್ಜಹ್ಯಾತ್ಸ ವೈ ಧೀರ ಉದಾಹೃತಃ ॥ ೨೫ ॥

ಯಃ ಸ್ವಕಾತ್ಪರತೋ ವೇಹ ಜಾತನಿರ್ವೇದ ಆತ್ಮವಾನ್ ।
ಹೃದಿ ಕೃತ್ವಾ ಹರಿಂ ಗೇಹಾತ್ಪ್ರವ್ರಜೇತ್ಸ ನರೋತ್ತಮಃ ॥ ೨೬ ॥

ರಾಜ್ಯವು ಮರಳಿ ಪ್ರಾಪ್ತವಾಗಿ ಲೋಕಪಾಲಕರಂತೆ ತನ್ನ ಸಹೋದರರೊಂದಿಗೆ ರಾಜಾ ಯುಧಿಷ್ಠಿರನು ವಂಶದ ಕುಡಿಯಾದ ಪರೀಕ್ಷಿತನನ್ನು ನೋಡುತ್ತಾ ತಮ್ಮ ಅತುಲ ಸಂಪತ್ತಿನಿಂದ ಆನಂದವಾಗಿ ಇರತೊಡಗಿದನು. ॥ ೧೬ ॥ ಹೀಗೆ ಗೃಹಸ್ಥ ಜೀವನದ ಕಾರ್ಯಗಳಲ್ಲಿ ಆಸಕ್ತರಾಗಿ ಮೈಮರೆತಿದ್ದ ಪಾಂಡವರಿಗೆ, ಅವರು ನೋಡುತ್ತಿದ್ದಂತೆಯೇ ಯಾವುದನ್ನು ಯಾರೂ ಅತಿಕ್ರಮಿಸಲಾರರೋ ಅಂತಹ ದುಸ್ತರ ಕಾಲವು ಹತ್ತಿರ ಬಂದೇ ಬಿಟ್ಟಿತು. ॥ ೧೭ ॥

ಆಗ ಕಾಲದ ಗತಿಯನ್ನು ಪರಿಶೀಲಿಸಿದ ವಿದುರನು ಅಣ್ಣನಾದ ಧೃತರಾಷ್ಟ್ರನ ಬಳಿಗೆ ಹೋಗಿ ಹೇಳಿದನು – "ಮಹಾರಾಜಾ! ಭಯಂಕರವಾದ ಕಾಲವು ಬಂದುಬಿಟ್ಟಿದೆ. ಆದುದರಿಂದ ನೀನು ಶೀಘ್ರವಾಗಿ ಇಲ್ಲಿಂದ ಹೊರಟುಬಿಡು. ॥ ೧೮ ॥ ಪ್ರಭೋ! ಯಾರಿಂದಲೂ ಪರಿಹರಿಸಲಾರದ, ತಡೆಯಲಾರದ, ಬದಲಾಯಿಸಲಾರದ ಆ ಸರ್ವಸಮರ್ಥವಾದ ಕಾಲವು ನಮ್ಮೆಲ್ಲರ ತಲೆಯ ಮೇಲೆ ಸುತ್ತುತ್ತಿದೆ. ॥ ೧೯ ॥ ಕಾಲಕ್ಕೆ ವಶೀಭೂತನಾದ ಜೀವನು ತನಗೆ ಪ್ರಿಯವಾಗಿರುವ ಪ್ರಾಣಗಳನ್ನು ನೋಡು– ನೋಡುತ್ತಲೇ ತೊರೆಯಬೇಕಾಗಿರುವಾಗ ಇನ್ನು ಹಣ, ಜನ ಮುಂತಾದ ವಸ್ತುಗಳ ಬಗ್ಗೆ ಹೇಳುವುದೇನಿದೆ? ॥ ೨೦ ॥ ನಿಮ್ಮ ಚಿಕ್ಕಪ್ಪ ದೊಡ್ಡಪ್ಪ ತಂದೆ, ಸಹೋದರ, ಸಂಬಂಧಿಗಳು, ಪುತ್ರರು ಹೀಗೆ ಎಲ್ಲರೂ ಹತರಾದರು. ನೀವೂ ಮುದುಕರಾಗಿ ವಯಸ್ಸು ಸಂದು ಹೋಯಿತು. ಬೇರೆಯವರ ಮನೆಯಲ್ಲಿ ವಾಸಿಸುತ್ತಿದ್ದೀಯೆ. ॥ ೨೧ ॥ ಅಬ್ಬಾ! ಈ ಪ್ರಾಣಗಳಿಗೆ ಹೇಗಾದರೂ ಬದುಕಿರಬೇಕೆಂಬ ಆಸೆ ಎಷ್ಟು ಪ್ರಬಲವಾಗಿದೆ! ಅದರಿಂದಲೇ ನೀನು ಭೀಮಸೇನನು ಅಸಡ್ಡೆಯಿಂದ ಹಾಕಿದ ಕೂಳನ್ನು ತಿನ್ನುತ್ತಾ ನಾಯಿಯಂತೆ ಬದುಕಿದ್ದೀಯೆ. ॥ ೨೨ ॥ ಯಾರನ್ನು ನೀನು ಬೆಂಕಿಯಿಂದ ಸುಡಬೇಕೆಂದು ಬಯಸಿದೆಯೋ, ವಿಷವನ್ನಿಕ್ಕಿ ಸಾಯಿಸಲು ಇಚ್ಛಿಸಿದೆಯೋ, ತುಂಬಿದ ಸಭೆಯಲ್ಲಿ ಯಾರ ಪತ್ನಿಗೆ ಅಪಮಾನ ಮಾಡಿದೆಯೋ, ಯಾರ ಭೂಮಿಯನ್ನು ಕಿತ್ತುಕೊಂಡೆಯೋ, ಅವರೇ ಇಂದು ಹಾಕಿದ ಕೂಳಿನಿಂದ ಬದುಕಿರುವ ಪ್ರಾಣಗಳಿಗೆ ಗೌರವವಿದೆಯೇ ? ॥ ೨೩ ॥ ಇಷ್ಟಿದ್ದರೂ ನೀನು ಬದುಕಬೇಕೆಂದು ಬಯಸುವೆಯಲ್ಲ! ನಿನ್ನ ಅಜ್ಞಾನ ಮೇರೆ ಮೀರಿಹೋಗಿದೆ. ಆದರೆ ನೀನು ಬಯಸುವುದರಿಂದ ಏನಾದೀತು? ಹಳೆಯ ಬಟ್ಟೆಯಂತೆ ಮುದಿತನದಿಂದ ಈ ಶರೀರವು ಬಯಸದೆಯೇ ಕ್ಷೀಣಿಸಿದೆ. ॥ ೨೪ ॥ ಈಗ ಈ ಶರೀರದಿಂದ ನಿನ್ನ ಯಾವುದೇ ಸ್ವಾರ್ಥವು ಸಾಧಿಸಲಾರದು. ಇದರಲ್ಲಿ ಇನ್ನು ಸಿಕ್ಕಿ ಮೋಸಹೋಗಬೇಡ. ಇದರ ಮಮತೆಯನ್ನು ಕತ್ತರಿಸಿಬಿಡು. ಪ್ರಪಂಚದ ಸಂಬಂಧಿಗಳಿಂದ ವಿರಕ್ತನಾಗಿ ಯಾರಿಗೂ ತಿಳಿಯದಂತೆ ತನ್ನ ಶರೀರವನ್ನು ತ್ಯಜಿಸುವವನು ಧೀರನು. ॥ ೨೫ ॥ ತನ್ನ ಅರಿವಿನಿಂದಾಗಲೀ, ಬೇರೆಯವರ ಸಲಹೆಯಿಂದಾಗಲಿ, ಈ ಸಂಸಾರವು ದುಃಖರೂಪವೆಂದು ತಿಳಿದು ಇದರಿಂದ ವಿರಕ್ತನಾಗುವವನು, ತನ್ನ ಅಂತಃಕರಣವನ್ನೂ ವಶಪಡಿಸಿಕೊಂಡು ಹೃದಯದಲ್ಲಿ ಭಗವಂತನನ್ನು ಧರಿಸಿ ಸಂನ್ಯಾಸಿಯಾಗಿ ಮನೆಬಿಟ್ಟು ಹೊರಡುವವನು ಮನುಷ್ಯರಲ್ಲಿ ಉತ್ತಮನು. ॥ ೨೬ ॥

ಅಥೋದೀಚೀಂ ದಿಶಂ ಯಾತು ಸ್ವೈರಜ್ಞಾತಗತಿರ್ಭವಾನ್ ।
ಇತೋಽರ್ವಾಕ್ಪ್ರಾಯಶಃ ಕಾಲಃ ಪುಂಸಾಂ ಗುಣವಿಕರ್ಷಣಃ
॥ ೨೭ ॥

ಏವಂ ರಾಜಾ ವಿದುರೇಣಾನುಜೇನ
ಪ್ರಜ್ಞಾಚಕ್ಷುರ್ಬೋಧಿತ ಆಜಮೀಢಃ ।
ಛಿತ್ತ್ವಾ ಸ್ವೇಷು ಸ್ನೇಹಪಾಶಾಂದ್ರಢಿಮ್ನೋ
ನಿಶ್ಚಕ್ರಾಮ ಭ್ರಾತೃಸಂದರ್ಶಿತಾಧ್ವಾ ॥ ೨೮ ॥

ಪತಿಂ ಪ್ರಯಾಂತಂ ಸುಬಲಸ್ಯ ಪುತ್ರೀ
ಪತಿವ್ರತಾ ಚಾನುಜಗಾಮ ಸಾಧ್ವೀ ।
ಹಿಮಾಲಯಂ ನ್ಯಸ್ತದಂಡಪ್ರಹರ್ಷಂ
ಮನಸ್ವಿನಾಮಿವ ಸತ್ಸಂಪ್ರಹಾರಃ ॥ ೨೯ ॥

ಅಜಾತಶತ್ರುಃ ಕೃತಮೈತ್ರೋ ಹುತಾಗ್ನಿ-
ರ್ವಿಪ್ರಾನ್ನತ್ವಾ ತಿಲಗೋಭೂಮಿರುಕ್ಮೈಃ ।
ಗೃಹಂ ಪ್ರವಿಷ್ಟೋ ಗುರುವಂದನಾಯ
ನ ಚಾಪಶ್ಯತ್ಪಿತರೌ ಸೌಬಲೀಂ ಚ ॥ ೩೦ ॥

ತತ್ರ ಸಂಜಯಮಾಸೀನಂ ಪಪ್ರಚ್ಛೋದ್ವಿಗ್ನಮಾನಸಃ ।
ಗಾವಲ್ಗಣೇ ಕ್ವ ನಸ್ತಾತೋ ವೃದ್ಧೋ ಹೀನಶ್ಚ ನೇತ್ರಯೋಃ
॥ ೩೧ ॥

ಅಂಬಾ ಚ ಹತಪುತ್ರಾರ್ತಾ ಪಿತೃವ್ಯಃ ಕ್ವ ಗತಃ ಸುಹೃತ್ ।
ಅಪಿ ಮಯ್ಯಕೃತಪ್ರಜ್ಞೇ ಹತಬಂಧುಃ ಸ ಭಾರ್ಯಯಾ ।
ಆಶಂಸಮಾನಃ ಶಮಲಂ ಗಂಗಾಯಾಂ ದುಃಖಿತೋಽಪತತ್
॥ ೩೨ ॥

ಪಿತುರ್ಯುಪರತೇ ಪಾಂಡೌ ಸರ್ವಾನ್ನಃ ಸುಹೃದಃ ಶಿಶೂನ್ ।
ಅರಕ್ಷತಾಂ ವ್ಯಸನತಃ ಪಿತೃವ್ಯೌ ಕ್ವ ಗತಾವಿತಃ
॥ ೩೩ ॥

*ಸೂತ ಉವಾಚ*

ಕೃಪಯಾ ಸ್ನೇಹವೈಕ್ಲವ್ಯಾತ್ಸೂತೋ ವಿರಹಕರ್ಶಿತಃ ।
ಆತ್ಮೇಶ್ವರಮಚಕ್ಷಾಣೋ ನ ಪ್ರತ್ಯಾಹಾತಿಪೀಡಿತಃ
॥ ೩೪ ॥

ವಿಮೃಜ್ಯಾಶ್ರೂಣಿ ಪಾಣಿಭ್ಯಾಂ ವಿಷ್ಟಭ್ಯಾತ್ಮಾನಮಾತ್ಮನಾ ।
ಅಜಾತಶತ್ರುಂ ಪ್ರತ್ಯೂಚೇ ಪ್ರಭೋಃ ಪಾದಾವನುಸ್ಮರನ್
॥ ೩೫ ॥

*ಸಂಜಯ ಉವಾಚ*

ನಾಹಂ ವೇದ ವ್ಯವಸಿತಂ ಪಿತ್ರೋರ್ವಃ ಕುಲನಂದನ ।
ಗಾಂಧಾರ್ಯಾ ವಾ ಮಹಾಬಾಹೋ ಮುಷಿತೋಽಸ್ಮಿ ಮಹಾತ್ಮಭಿಃ
॥ ೩೬ ॥

ಮುಂದೆ ಬರಲಿರುವ ಕಾಲವು ಪ್ರಾಯಶಃ ಮನುಷ್ಯರ ಗುಣಗಳ ಮಟ್ಟವನ್ನಿಳಿಸುವುದೇ ಆಗಿದೆ. ಅದಕ್ಕಾಗಿ ನೀನು ತನ್ನ ಕುಟುಂಬದವರಿಗೆ ತಿಳಿಯದೆ ಉತ್ತರಾಖಂಡಕ್ಕೆ ಹೊರಟುಹೋಗು." ॥ ೨೭ ॥ ತಮ್ಮನಾದ ವಿದುರನು ಧೃತರಾಷ್ಟ್ರನಿಗೆ ಹೀಗೆ ತಿಳಿಸಿದಾಗ ಅವನ ಜ್ಞಾನದ ಕಣ್ಣು ತೆರೆಯಿತು. ಅವನು ಬಂಧು-ಬಾಂಧವ, ಮಿತ್ರರಲ್ಲಿಟ್ಟಿದ್ದ ದೃಢವಾದ ಸ್ನೇಹಪಾಶವನ್ನು ಕತ್ತರಿಸಿ ತಮ್ಮನು ತೋರಿದ ಮಾರ್ಗವನ್ನನುಸರಿಸಿ ಹೊರಟು ಬಿಟ್ಟನು. ॥ ೨೮ ॥ ಶೂರನಿಗೆ ಧರ್ಮಯುದ್ಧದಲ್ಲಿ ಬೀಳುವ ಏಟುಗಳು ಸಂತೋಷವುಂಟು ಮಾಡುವಂತೆ, ಪತಿಯು ಸಂನ್ಯಾಸಿಗಳಿಗೆ ಪರಮಸುಖದಾಯಕ ಹಿಮಾಲಯದ ಯಾತ್ರೆಯನ್ನು ಕೈಗೊಂಡಿರುವುದನ್ನು ನೋಡಿ ಪತಿವ್ರತೆಯಾದ ಸುಬಲ ನಂದಿನೀ ಗಾಂಧಾರಿಯು ಪತಿಯನ್ನನುಸರಿಸಿ ಹೊರಟುಬಿಟ್ಟಳು. ॥ ೨೯ ॥

ಅಜಾತಶತ್ರುವಾದ ಯುಧಿಷ್ಠಿರನು ಪ್ರಾತಃಕಾಲ ಸಂಧ್ಯಾವಂದನೆ, ಅಗ್ನಿಹೋತ್ರಾದಿ ನಿತ್ಯಕರ್ಮಗಳನ್ನು ಪೂರೈಸಿ, ಬ್ರಾಹ್ಮಣರಿಗೆ ನಮಸ್ಕರಿಸಿ, ಅವರಿಗೆ ಎಳ್ಳು, ಗೋವು, ಭೂಮಿ, ಸುವರ್ಣ ಮುಂತಾದವುಗಳನ್ನು ದಾನಮಾಡಿದನು. ಅನಂತರ ಗುರು-ಹಿರಿಯರಿಗೆ ವಂದಿಸುವುದಕ್ಕಾಗಿ ಅರಮನೆಗೆ ಹೋಗಲು, ಅಲ್ಲಿ ಅವನಿಗೆ ಧೃತರಾಷ್ಟ್ರ, ವಿದುರ, ಗಾಂಧಾರಿಯರ ದರ್ಶನವಾಗಲಿಲ್ಲ. ॥ ೩೦ ॥ ಯುಧಿಷ್ಠಿರನು ಕಳವಳಗೊಂಡು ಅಲ್ಲೇ ಕುಳಿತಿದ್ದ ಸಂಜಯನನ್ನು – "ಸಂಜಯಾ! ವೃದ್ಧರೂ, ಅಂಧರೂ ಆದ ದೊಡ್ಡಪ್ಪ ಧೃತರಾಷ್ಟ್ರರೆಲ್ಲಿ? ॥ ೩೧ ॥ ಪುತ್ರಶೋಕದಿಂದ ಪೀಡಿತಳಾಗಿ ಕೊರಗುತ್ತಿದ್ದ ದೊಡ್ಡಮ್ಮ ಗಾಂಧಾರಿಯವರು, ಪರಮ ಹಿತೈಷಿಗಳಾದ ಚಿಕ್ಕಪ್ಪ ವಿದುರರು ಎಲ್ಲಿಗೆ ಹೋದರು? ದೊಡ್ಡಪ್ಪನವರು ತನ್ನ ಪುತ್ರರ-ಬಂಧುಗಳ ಮರಣದಿಂದ ದುಃಖಿಗಳಾಗಿದ್ದರು. ಮಂದಬುದ್ಧಿಯಾದ ನನ್ನಲ್ಲಿ ಎಲ್ಲಾದರೂ ತಪ್ಪನ್ನು ಶಂಕಿಸಿ ಅವರು ತಾಯಿ ಗಾಂಧಾರಿಯೊಂದಿಗೆ ಗಂಗಾನದಿಯಲ್ಲೇನಾದರೂ ಧುಮುಕಿಬಿಟ್ಟರೇ ? ॥ ೩೨ ॥ ನಮ್ಮ ತಂದೆ ಪಾಂಡುವು ಸ್ವರ್ಗಸ್ಥರಾದಾಗ ನಾವುಗಳು ಇನ್ನೂ ಸಣ್ಣ ಮಕ್ಕಳಾಗಿದ್ದೆವು. ಆಗ ಈ ದೊಡ್ಡಪ್ಪ-ಚಿಕ್ಕಪ್ಪ ಇವರುಗಳೇ ನಮ್ಮನ್ನು ನಾನಾ ದುಃಖಗಳಿಂದ ಪಾರುಗೊಳಿಸಿ, ಪ್ರೀತಿಯಿಂದ ಕಾಪಾಡಿದ್ದರು. ಅಯ್ಯೋ! ಅವರು ಈಗ ಎಲ್ಲಿಗೆ ಹೋದರೋ ತಿಳಿಯದಲ್ಲಾ !" ಎಂದು ಕೇಳಿದನು. ॥ ೩೩ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕರೇ ! ಸಂಜಯನು ತನ್ನ ಪ್ರಭುವಾದ ಧೃತರಾಷ್ಟ್ರನನ್ನು ಕಾಣದೆ ಕರುಣೆ-ಸ್ನೇಹಗಳಿಂದ ಕುಗ್ಗಿ ಅಗಲಿಕೆಯ ದುಃಖದಿಂದ ಕೊರಗುತ್ತಾ ಯುಧಿಷ್ಠಿರನಿಗೆ ಯಾವ ಉತ್ತರವನ್ನೂ ಕೊಡದಾದನು. ॥ ೩೪ ॥ ಅನಂತರ ಕೈಗಳಿಂದ ಕಣ್ಣೀರಧಾರೆಯನ್ನು ಒರೆಸಿಕೊಂಡು, ಸ್ವಲ್ಪ-ಸ್ವಲ್ಪವಾಗಿ ತನಗೆ ತಾನೇ ಸಮಾಧಾನ ತಂದುಕೊಂಡು ತನ್ನ ಪ್ರಭುವಿನ ಪಾದಗಳನ್ನು ಸ್ಮರಿಸುತ್ತಾ ಯುಧಿಷ್ಠಿರನ ಬಳಿ ಇಂತೆಂದನು – ॥ ೩೫ ॥

**ಸಂಜಯ ಹೇಳಿದನು** – ಕುರುಕುಲನಂದನನೇ ! ನಿಮ್ಮ ದೊಡ್ಡಪ್ಪ-ದೊಡ್ಡಮ್ಮನವರ ಸಂಕಲ್ಪವೇನಿತ್ತೋ ! ಅವರೇನು ನಿಶ್ಚಯಿಸಿದ್ದರೋ ? ನನಗೇನೂ ತಿಳಿಯದು. ಮಹಾಬಾಹುವೇ ! ಆ ಮಹಾತ್ಮರು ನನಗೆ ಮೋಸಮಾಡಿ ಹೊರಟುಹೋದರು. ॥ ೩೬ ॥

ಅಥಾಜಗಾಮ ಭಗವಾನ್ನಾರದಃ ಸಹತುಂಬುರುಃ ।
ಪ್ರತ್ಯುತ್ಥಾಯಾಭಿವಾದ್ಯಾಹ ಸಾನುಜೋಽಭ್ಯರ್ಚಯನ್ನಿವ ॥ ೩೭ ॥

*ಯುಧಿಷ್ಠಿರ ಉವಾಚ*

ನಾಹಂ ವೇದ ಗತಿಂ ಪಿತ್ರೋರ್ಭಗವನ್ ಕ್ವ ಗತಾವಿತಃ ।
ಅಂಬಾ ವಾ ಹತಪುತ್ರಾರ್ತಾ ಕ್ವ ಗತಾ ಚ ತಪಸ್ವಿನೀ ॥ ೩೮ ॥

ಕರ್ಣಧಾರ ಇವಾಪಾರೇ ಭಗವಾನ್ಪಾರದರ್ಶಕಃ ।
ಅಥಾಬಭಾಷೇ ಭಗವಾನ್ನಾರದೋ ಮುನಿಸತ್ತಮಃ ॥ ೩೯ ॥

ಮಾ ಕಂಚನ ಶುಚೋ ರಾಜನ್ಯದೀಶ್ವರವಶಂ ಜಗತ್ ।
ಲೋಕಾಃ ಸಪಾಲಾ ಯಸ್ಯೇಮೇ ವಹಂತಿ ಬಲಿಮೀಶಿತುಃ ।
ಸ ಸಂಯುನಕ್ತಿ ಭೂತಾನಿ ಸ ಏವ ವಿಯುನಕ್ತಿ ಚ ॥ ೪೦ ॥

ಯಥಾ ಗಾವೋ ನಸಿ ಪ್ರೋತಾಸ್ತಂತ್ಯಾಂ ಬದ್ಧಾಃ ಸ್ವದಾಮಭಿಃ ।
ವಾಕ್ತಂತ್ಯಾಂ ನಾಮಭಿರ್ಬದ್ಧಾ ವಹಂತಿ ಬಲಿಮೀಶಿತುಃ ॥ ೪೧ ॥

ಯಥಾ ಕ್ರೀಡೋಪಸ್ಕರಾಣಾಂ ಸಂಯೋಗವಿಗಮಾವಿಹ ।
ಇಚ್ಛಯಾ ಕ್ರೀಡಿತುಃ ಸ್ಯಾತಾಂ ತಥೈವೇಶೇಚ್ಛಯಾ ನೃಣಾಮ್ ॥ ೪೨ ॥

ಯನ್ಮನ್ಯಸೇ ಧ್ರುವಂ ಲೋಕಮಧ್ರುವಂ ವಾ ನ ಚೋಭಯಮ್ ।
ಸರ್ವಥಾ ನ ಹಿ ಶೋಚ್ಯಾಸ್ತೇ ಸ್ನೇಹಾದನ್ಯತ್ರ ಮೋಹಜಾತ್ ॥ ೪೩ ॥

ತಸ್ಮಾಜ್ಜಹ್ಯಂಗ ವೈಕ್ಲವ್ಯಮಜ್ಞಾನಕೃತಮಾತ್ಮನಃ ।
ಕಥಂ ತ್ವನಾಥಾಃ ಕೃಪಣಾ ವರ್ತೇರಂಸ್ತೇ ಚ ಮಾಂ ವಿನಾ ॥ ೪೪ ॥

ಕಾಲಕರ್ಮಗುಣಾಧೀನೋ ದೇಹೋಽಯಂ ಪಾಂಚಭೌತಿಕಃ ।
ಕಥಮನ್ಯಾಂಸ್ತು ಗೋಪಾಯೇತ್ಸರ್ಪಗ್ರಸ್ತೋ ಯಥಾ ಪರಮ್ ॥ ೪೫ ॥

ಅಹಸ್ತಾನಿ ಸಹಸ್ತಾನಾಮಪದಾನಿ ಚತುಷ್ಪದಾಮ್ ।
ಫಲ್ಗೂನಿ ತತ್ರ ಮಹತಾಂ ಜೀವೋ ಜೀವಸ್ಯ ಜೀವನಮ್ ॥ ೪೬ ॥

ಸಂಜಯನು ಹೀಗೆ ಹೇಳುತ್ತಿರುವಂತೆಯೇ ತುಂಬುರು ಸಮೇತ ಪೂಜ್ಯರಾದ ದೇವರ್ಷಿನಾರದರು ಅಲ್ಲಿಗೆ ಆಗಮಿಸಿದರು. ಮಹಾರಾಜಾ ಧರ್ಮನಂದನನು ತಮ್ಮಂದಿರೊಂದಿಗೆ ಎದ್ದು ಅವರನ್ನು ವಂದಿಸಿ, ಯಥೋಚಿತವಾಗಿ ಪೂಜಿಸಿ, ಕೈಜೋಡಿಸಿ ಕೊಂಡು ಇಂತೆಂದನು – ॥ ೩೭ ॥

ಯುಧಿಷ್ಠಿರನೆಂದ – 'ಪೂಜ್ಯರೇ! ನಮ್ಮ ದೊಡ್ಡಪ್ಪ-ಚಿಕ್ಕಪ್ಪ ಇವರುಗಳ ಸಮಾಚಾರವಾಗಲೀ, ಅವರಿಬ್ಬರ ಹಾಗೂ ಪುತ್ರಶೋಕದಿಂದ ವ್ಯಾಕುಲಳಾದ ತಪಸ್ವಿನೀ ತಾಯಿ ಗಾಂಧಾರಿಯೂ ಇಲ್ಲಿಂದ ಎಲ್ಲಿಗೆ ಹೋದರೋ ಎಂಬ ಸಮಾಚಾರ ನನಗೆ ತಿಳಿಯದಾಗಿದೆ. ॥ ೩೮ ॥ ಮಹಾತ್ಮರೇ! ಅಪಾರವಾದ ಸಮುದ್ರದಲ್ಲಿ ದಡಮುಟ್ಟಿಸುವ ನಾವಿಕನಂತೆ ನೀವು ನಮ್ಮ ಭಾಗ್ಯೋದಯದಿಂದಲೇ ಇಲ್ಲಿಗೆ ಆಗಮಿಸಿದ್ದೀರಿ.' ಆಗ ಭಗವಂತನ ಪರಮಭಕ್ತರಾದ ನಾರದ ಮಹರ್ಷಿಗಳು ಇಂತೆಂದರು ॥ ೩೯ ॥

ಧರ್ಮರಾಜಾ! ನೀನು ಯಾರ ವಿಷಯದಲ್ಲಿಯೂ ಶೋಕಿಸಬಾರದು. ಏಕೆಂದರೆ, ಜಗತ್ತೆಲ್ಲವೂ ಈಶ್ವರಾಧೀನವಾಗಿದೆ. ಸಮಸ್ತ ಲೋಕಗಳೂ, ಲೋಕಪಾಲರೂ ಈ ಮಹಾಪ್ರಭುವಿನ ಆಣತಿಯಂತೆ ನಡೆಯುತ್ತವೆ. ಅವನೇ ಎಲ್ಲ ಪ್ರಾಣಿಗಳನ್ನು ಅವುಗಳ ಕರ್ಮಗಳಿಗೆ ಅನುಗುಣವಾಗಿ ಕೆಲವೊಮ್ಮೆ ಕೂಡಿಸುವನು. ಕೆಲವೊಮ್ಮೆ ಅಗಲಿಸುವನು. ॥ ೪೦ ॥ ಎತ್ತುಗಳು ಮೂಗಿನಲ್ಲಿ ಪೋಣಿಸಿದ ಮೂಗುದಾರಗಳಿಂದಲೂ, ಇತರ ದಪ್ಪಹಗ್ಗಗಳಿಂದ ಕಟ್ಟುಬಿದ್ದು ಅಲುಗಾಡಲೂ ಸ್ವಾತಂತ್ರ್ಯವಿಲ್ಲದೆ ತಮ್ಮ ಯಜಮಾನನ ಅಪ್ಪಣೆಯಂತೆ ನಡೆಯುವಂತೆಯೇ, ಮನುಷ್ಯನು ನಾಮ-ರೂಪಗಳೆಂಬ ಪಾಶಗಳಿಂದ, ಮಾತುಗಳೆಂಬ ತಂತುವಿನಲ್ಲಿ ಬಿಗಿಯಲ್ಪಟ್ಟು ಭಗವಂತನ ಆಜ್ಞೆಯಂತೆ ಅನುಸರಿಸುವರು. ॥ ೪೧ ॥ ಈ ಲೋಕದಲ್ಲಿ ಆಟಗಾರನ ಇಷ್ಟದಂತೆ ಆಟಿಕೆಗಳು ಒಂದಾಗುತ್ತವೆ, ಬೇರ್ಪಡುತ್ತವೆ. ಹಾಗೆಯೇ ಭಗವಂತನ ಇಚ್ಛೆಯಿಂದಲೇ ಮನುಷ್ಯರ ಸೇರುವಿಕೆ, ಅಗಲುವಿಕೆ ಇವೆಲ್ಲಾ ಉಂಟಾಗುತ್ತಾ ಇರುತ್ತದೆ. ॥ ೪೨ ॥ ನೀವುಗಳು ಜೀವರೂಪದಿಂದ ನಿತ್ಯ ಅಥವಾ ದೇಹರೂಪದಿಂದ ಅನಿತ್ಯ, ಇಲ್ಲವೇ ಜಡರೂಪದಿಂದ ಅನಿತ್ಯ, ಚೇತನರೂಪದಿಂದ ನಿತ್ಯ, ಅಥವಾ ಶುದ್ಧಬ್ರಹ್ಮರೂಪದಲ್ಲಿ ನಿತ್ಯ-ಅನಿತ್ಯ ಏನನ್ನೂ ಭಾವಿಸದಿದ್ದರೂ, ಯಾವುದೇ ಅವಸ್ಥೆಯಲ್ಲಿಯೂ ಮೋಹಜನ್ಯ ಆಸಕ್ತಿಯಲ್ಲದೆ ಶೋಕಿಸಲು ಯಾವ ಕಾರಣವೂ ಇಲ್ಲ. ॥ ೪೩ ॥ ಆದುದರಿಂದ ಧರ್ಮನಂದನಾ! 'ಅನಾಥರೂ, ದೀನರೂ ಆಗಿರುವ ಅವರು ನನ್ನನ್ನು ಬಿಟ್ಟು ಹೇಗೆ ತಾನೇ ಬದುಕಿಯಾರು?' ಎಂಬ ಮನಸ್ಸಿನ ಕೊರಗನ್ನು ಬಿಡು. ಅದು ಅಜ್ಞಾನಮೂಲವಾಗಿದೆ. ॥ ೪೪ ॥ ಈ ಪಾಂಚಭೌತಿಕ ಶರೀರವು ಕಾಲ, ಕರ್ಮ, ಗುಣಗಳ ವಶದಲ್ಲಿದೆ. ಹೆಬ್ಬಾವಿನ ಬಾಯಲ್ಲಿ ಸಿಕ್ಕಿಬಿದ್ದಿರುವ ಮನುಷ್ಯನಂತೆ ಈ ಪರಾಧೀನ ಶರೀರವು ಬೇರೆಯವರನ್ನು ಹೇಗೆ ಕಾಪಾಡಬಲ್ಲದು ? ॥ ೪೫ ॥ ಲೋಕದಲ್ಲಿ ಕೈಗಳಿಲ್ಲದ ಪ್ರಾಣಿಗಳು ಕೈಗಳುಳ್ಳ ಪ್ರಾಣಿಗಳ ಆಹಾರವು. ನಾಲ್ಕು ಕಾಲುಗಳುಳ್ಳ ಪ್ರಾಣಿಗಳಿಗೆ ಕಾಲುಗಳಿಲ್ಲದವು (ತೃಣಾದಿ) ಮತ್ತು ಅವುಗಳಲ್ಲಿಯೂ ಸಣ್ಣಜೀವಿಗಲು ದೊಡ್ಡ ಜೀವಿಗಳ ಆಹಾರವಾಗಿದೆ. ॥ ೪೬ ॥

ತದಿದಂ ಭಗವಾನ್ರಾಜನ್ನೇಕ ಆತ್ಮಾಽಽತ್ಮನಾಂ ಸ್ವದೃಕ್ ।
ಅಂತರೋಽನಂತರೋ ಭಾತಿ ಪಶ್ಯ ತಂ ಮಾಯಯೋರುಧಾ ॥ ೪೭ ॥

ಸೋಽಯಮದ್ಯ ಮಹಾರಾಜ
ಭಗವಾನ್ ಭೂತಭಾವನಃ ।
ಕಾಲರೂಪೋಽವತೀರ್ಣೋಽ-
ಸ್ಯಾಮಭಾವಾಯ ಸುರದ್ವಿಷಾಮ್ ॥ ೪೮ ॥

ನಿಷ್ಪಾದಿತಂ ದೇವಕೃತ್ಯಮವಶೇಷಂ ಪ್ರತೀಕ್ಷತೇ ।
ತಾವದ್ಯೂಯಮವೇಕ್ಷಧ್ವಂ ಭವೇದ್ಯಾವದಿಹೇಶ್ವರಃ ॥ ೪೯ ॥

ಧೃತರಾಷ್ಟ್ರಃ ಸಹ ಭ್ರಾತ್ರಾ ಗಾಂಧಾರ್ಯಾ ಚ ಸ್ವಭಾರ್ಯಯಾ ।
ದಕ್ಷಿಣೇನ ಹಿಮವತ ಋಷೀಣಾಮಾಶ್ರಮಂ ಗತಃ ॥ ೫೦ ॥

ಸ್ರೋತೋಭಿಃ ಸಪ್ತಭಿರ್ಯಾ ವೈ ಸ್ವರ್ಧುನೀ ಸಪ್ತಧಾ ವ್ಯಧಾತ್ ।
ಸಪ್ತಾನಾಂ ಪ್ರೀತಯೇ ನಾನಾ ಸಪ್ತಸ್ರೋತಃ ಪ್ರಚಕ್ಷತೇ ॥ ೫೧ ॥

ಸ್ನಾತ್ವಾನುಸವನಂ ತಸ್ಮಿನ್ಹುತ್ವಾ ಚಾಗ್ನೀನ್ಯಥಾವಿಧಿ ।
ಅಬ್ಭಕ್ಷ ಉಪಶಾಂತಾತ್ಮಾ ಸ ಆಸ್ತೇ ವಿಗತೈಷಣಃ ॥ ೫೨ ॥

ಜಿತಾಸನೋ ಜಿತಶ್ವಾಸಃ ಪ್ರತ್ಯಾಹೃತಷಡಿಂದ್ರಿಯಃ ।
ಹರಿಭಾವನಯಾ ಧ್ವಸ್ತರಜಃಸತ್ತ್ವ ತಮೋಮಲಃ ॥ ೫೩ ॥

ವಿಜ್ಞಾನಾತ್ಮನಿ ಸಂಯೋಜ್ಯ ಕ್ಷೇತ್ರಜ್ಞೇ ಪ್ರವಿಲಾಪ್ಯ ತಮ್ ।
ಬ್ರಹ್ಮಣ್ಯಾತ್ಮಾನಮಾಧಾರೇ ಘಟಾಂಬರಮಿವಾಂಬರೇ ॥ ೫೪ ॥

ಧ್ವಸ್ತಮಾಯಾಗುಣೋದರ್ಕೋ ನಿರುದ್ಧ ಕರಣಾಶಯಃ ।
ನಿವರ್ತಿತಾಖಿಲಾಹಾರ ಆಸ್ತೇ ಸ್ಥಾಣುರಿವಾಚಲಃ ।
ತಸ್ಯಾಂತರಾಯೋ ಮೈವಾಭೂಃ ಸಂನ್ಯಸ್ತಾಖಿಲಕರ್ಮಣಃ ॥ ೫೫ ॥

ಸ ವಾ ಅದ್ಯತನಾದ್ರಾಜನ್ಪರತಃ ಪಂಚಮೇಽಹನಿ ।
ಕಲೇವರಂ ಹಾಸ್ಯತಿ ಸ್ವಂ ತಚ್ಚ ಭಸ್ಮೀಭವಿಷ್ಯತಿ ॥ ೫೬ ॥

ಮಹಾರಾಜಾ ! ಈ ಸಮಸ್ತ ರೂಪಗಳಲ್ಲಿ ಜೀವಿಗಳ ಒಳ-ಹೊರಗೆ ಅವನೊಬ್ಬನೇ ಸ್ವಯಂಪ್ರಕಾಶ ಭಗವಂತನು ಸಮಸ್ತ ಆತ್ಮಗಳ ಆತ್ಮನಾಗಿರುವನು. ಮಾಯೆಯಿಂದಾಗಿ ಅನೇಕ ಪ್ರಕಾರದಿಂದ ಪ್ರಕಟನಾಗುತ್ತಿದ್ದಾನೆ. ನೀನು ಕೇವಲ ಅವನನ್ನೇ ನೋಡು. ॥ ೪೭ ॥ ಮಹಾರಾಜನೇ! ಸರ್ವಭೂತಗಳನ್ನು ಸೃಷ್ಟಿಸಿ, ರಕ್ಷಿಸುವ ಭೂತ ಭಾವನನಾದ ಕಾಲರೂಪಿಯಾದ ಆ ಭಗವಂತನೇ ಈಗ ದೇವ ದ್ರೋಹಿಗಳನ್ನು ಸಂಹರಿಸುವುದಕ್ಕಾಗಿ ಶ್ರೀಕೃಷ್ಣನ ರೂಪದಲ್ಲಿ ಅವತರಿಸಿರುವನು. ॥ ೪೮ ॥ ಈಗ ಅವನು ದೇವತೆಗಳ ಕಾರ್ಯವನ್ನು ಪೂರ್ಣಗೊಳಿಸಿರುವನು. ಇನ್ನು ಸ್ವಲ್ಪವೇ ಕೆಲಸ ಬಾಕಿ ಇರುವುದರಿಂದ ಅವನು ನಿಂತಿರುವನು. ಆ ಪ್ರಭುವು ಇಲ್ಲಿ ಇರುವ ತನಕ ನೀವುಗಳೂ ಅವನ ಪ್ರತೀಕ್ಷೆಮಾಡುತ್ತಾ ಕಾಲಕಳೆಯುತ್ತಾ ಇರಿ. ॥ ೪೯ ॥

ಧರ್ಮನಂದನಾ ! ನಿಮ್ಮ ದೊಡ್ಡಪ್ಪನು ತಮ್ಮನೊಡನೆ ಹಾಗೂ ಪತ್ನಿಯೊಡನೆ ಈಗಾಗಲೇ ಹಿಮಾಲಯದ ದಕ್ಷಿಣಭಾಗದಲ್ಲಿ ದೇವ ಗಂಗೆಯು ಸಪ್ತರ್ಷಿಗಳಿಗೆ ಸಂತೋಷವನ್ನುಂಟುಮಾಡಲು ಏಳು ಧಾರೆಯಾಗಿ ವಿಭಾಗಗೊಂಡವಳಾಗಿ ಹರಿಯುವ 'ಸಪ್ತಸ್ರೋತ' (ಸಪ್ತರ್ಷಿಧಾಮ) ಎಂದು ಪ್ರಸಿದ್ಧವಾದ ಜಾಗದಲ್ಲಿ ಋಷಿಗಳ ಆಶ್ರಮಕ್ಕೆ ಹೊರಟುಹೋಗಿದ್ದಾನೆ. ॥ ೫೦-೫೧ ॥ ಅವನು ಅಲ್ಲಿ ತ್ರಿಕಾಲಸ್ನಾನ ಮಾಡಿ, ವಿಧಿಪೂರ್ವಕ ಅಗ್ನಿಹೋತ್ರವನ್ನು ಆಚರಿಸುತ್ತಾ, ಕೇವಲ ಜಲಾಹಾರಿಯಾಗಿ, ಪ್ರಶಾಂತನಾಗಿ ಸರ್ವಕಾಮನೆಗಳನ್ನೂ ತೊರೆದು ವಾಸಿಸುತ್ತಿದ್ದಾನೆ. ॥ ೫೨ ॥ ಅವನೀಗ ಆಸನ ಜಯವನ್ನು ಸಾಧಿಸಿ, ಪ್ರಾಣವಾಯುವನ್ನು ಹತೋಟಿಗೆ ತಂದುಕೊಂಡು, ತನ್ನ ಆರೂ ಇಂದ್ರಿಯಗಳನ್ನು ತಮ್ಮ ವಿಷಯಗಳಿಂದ ಹಿಂದಕ್ಕೆಳೆದುಕೊಂಡು ಭಗವಂತನ ಧಾರಣೆಯಿಂದ ತಮೋಗುಣ, ರಜೋಗುಣ ಮತ್ತು ಸತ್ತ್ವಗುಣ ಇವುಗಳ ಮಲಗಳನ್ನು ಕಳೆದುಕೊಂಡಿರುವನು. ॥ ೫೩ ॥ ಅವನು ಅಹಂಕಾರವನ್ನು ಬುದ್ಧ್ಯಾತ್ಮನಲ್ಲಿಯೂ, ಬುದ್ಧ್ಯಾತ್ಮನನ್ನು ಕ್ಷೇತ್ರಜ್ಞನಾದ ಜೀವಾತ್ಮನಲ್ಲಿಯೂ ಆ ಜೀವಾತ್ಮನನ್ನು ಘಟಾಕಾಶವು ಮಹಾಕಾಶದಲ್ಲಿ ಲೀನವಾಗುವಂತೆ ಸರ್ವಾಧಿಷ್ಠಾನವಾದ ಬ್ರಹ್ಮನಲ್ಲಿ ಒಂದಾಗಿಸಿ ಬಿಟ್ಟಿರುವನು. ಅವನು ತನ್ನ ಸಮಸ್ತ ಇಂದ್ರಿಯಗಳನ್ನೂ ಮನಸ್ಸನ್ನೂ ತಡೆದು ವಿಷಯಗಳನ್ನು ಹೊರಗಿನಿಂದಲೇ ತಡೆಗಟ್ಟಿರುವನು. ಮಾಯೆಯ ಗುಣಗಳಿಂದ ಉಂಟಾಗುವ ಪರಿಣಾಮಗಳನ್ನು ಸರ್ವಥಾ ಇಲ್ಲವಾಗಿಸಿದ್ದಾನೆ. ಸಮಸ್ತ ಕರ್ಮಗಳನ್ನು ಸಂನ್ಯಾಸಮಾಡಿ ಈಗ ನೆಟ್ಟಕಂಬದಂತೆ ನಿಶ್ಚಲವಾಗಿ ಕುಳಿತಿರುವನು. ಆದ್ದರಿಂದ ನೀನು ಅವನ ಶ್ರೇಯಸ್ಸಿನಲ್ಲಿ ಅಡ್ಡಿಯಾಗಬೇಡ. * ॥ ೫೪-೫೫ ॥ ಧರ್ಮರಾಜಾ ! ಇಂದಿನಿಂದ ಐದನೆಯ ದಿನ ಧೃತರಾಷ್ಟ್ರನು ತನ್ನ ಶರೀರವನ್ನು ತ್ಯಜಿಸಿಬಿಡುವನು. ಆ ದೇಹವು ಒಡನೆಯೇ ಸುಟ್ಟು ಬೂದಿಯಾಗುವುದು. ॥ ೫೬ ॥ ಗಾರ್ಹಪತ್ಯಾದಿ ಅಗ್ನಿಗಳ ಮೂಲಕ ಪರ್ಣಕುಟಿಯೊಂದಿಗೆ ಸುಡುತ್ತಿರುವ ತನ್ನ ಪತಿಯ

* ದೇವರ್ಷಿ ನಾರದರು ತ್ರಿಕಾಲದರ್ಶಿಗಳು. ಅವರು ಧೃತರಾಷ್ಟ್ರನ ಭವಿಷ್ಯ ಜೀವನವನ್ನು ವರ್ತಮಾನದಂತೆ, ಪ್ರತ್ಯಕ್ಷ ನೋಡುವವನಂತೆ ವರ್ಣಿಸುತ್ತಿದ್ದಾರೆ. ಧೃತರಾಷ್ಟ್ರನು ಹಿಂದಿನ ರಾತ್ರಿಯಲ್ಲೇ ಹಸ್ತಿನಾವತಿಯಿಂದ ಹೊರಟುಹೋಗಿದ್ದನು. ಆದ್ದರಿಂದ ಈ ವರ್ಣನೆಯು ಭವಿಷ್ಯದೆಂದು ತಿಳಿದುಕೊಳ್ಳಬೇಕು.

ಅಥಾಜಗಾಮ ಭಗವಾನ್ನಾರದಃ ಸಹತುಂಬುರುಃ ।
ಪ್ರತ್ಯುತ್ಥಾಯಾಭಿವಾದ್ಯಾಹ ಸಾನುಜೋಽಭ್ಯರ್ಚಯನ್ನಿವ
॥ ೩೭ ॥

*ಯುಧಿಷ್ಠಿರ ಉವಾಚ*

ನಾಹಂ ವೇದ ಗತಿಂ ಪಿತ್ರೋರ್ಭಗವನ್ ಕ್ವ ಗತಾವಿತಃ ।
ಅಂಬಾ ವಾ ಹತಪುತ್ರಾರ್ತಾ ಕ್ವ ಗತಾ ಚ ತಪಸ್ವಿನೀ
॥ ೩೮ ॥

ಕರ್ಣಧಾರ ಇವಾಪಾರೇ ಭಗವಾನ್ಪಾರದರ್ಶಕಃ ।
ಅಥಾಬಭಾಷೇ ಭಗವಾನ್ನಾರದೋ ಮುನಿಸತ್ತಮಃ
॥ ೩೯ ॥

ಮಾ ಕಂಚನ ಶುಚೋ ರಾಜನ್ಯದೀಶ್ವರವಶಂ ಜಗತ್ ।
ಲೋಕಾಃ ಸಪಾಲಾ ಯಸ್ಯೇಮೇ ವಹಂತಿ ಬಲಿಮೀಶಿತುಃ ।
ಸ ಸಂಯುನಕ್ತಿ ಭೂತಾನಿ ಸ ಏವ ವಿಯುನಕ್ತಿ ಚ
॥ ೪೦ ॥

ಯಥಾ ಗಾವೋ ನಸಿ ಪ್ರೋತಾಸ್ತಂತ್ಯಾಂ ಬದ್ಧಾಃ ಸ್ವದಾಮಭಿಃ ।
ವಾಕ್ತಂತ್ಯಾಂ ನಾಮಭಿರ್ಬದ್ಧಾ ವಹಂತಿ ಬಲಿಮೀಶಿತುಃ
॥ ೪೧ ॥

ಯಥಾ ಕ್ರೀಡೋಪಸ್ಕರಾಣಾಂ ಸಂಯೋಗವಿಗಮಾವಿಹ ।
ಇಚ್ಛಯಾ ಕ್ರೀಡಿತುಃ ಸ್ಯಾತಾಂ ತಥೈವೇಶೇಚ್ಛಯಾ ನೃಣಾಮ್
॥ ೪೨ ॥

ಯನ್ಮನ್ಯಸೇ ಧ್ರುವಂ ಲೋಕಮಧ್ರುವಂ ವಾ ನ ಚೋಭಯಮ್ ।
ಸರ್ವಥಾ ನ ಹಿ ಶೋಚ್ಯಾಸ್ತೇ ಸ್ನೇಹಾದನ್ಯತ್ರ ಮೋಹಜಾತ್
॥ ೪೩ ॥

ತಸ್ಮಾಜ್ಜಹ್ಯಂಗ ವೈಕ್ಲವ್ಯಮಜ್ಞಾನಕೃತಮಾತ್ಮನಃ ।
ಕಥಂ ತ್ವನಾಥಾಃ ಕೃಪಣಾ ವರ್ತೇರಂಸ್ತೇ ಚ ಮಾಂ ವಿನಾ
॥ ೪೪ ॥

ಕಾಲಕರ್ಮಗುಣಾಧೀನೋ ದೇಹೋಽಯಂ ಪಾಂಚಭೌತಿಕಃ ।
ಕಥಮನ್ಯಾಂಸ್ತು ಗೋಪಾಯೇತ್ಸರ್ಪಗ್ರಸ್ತೋ ಯಥಾ ಪರಮ್
॥ ೪೫ ॥

ಅಹಸ್ತಾನಿ ಸಹಸ್ತಾನಾಮಪದಾನಿ ಚತುಷ್ಪದಾಮ್ ।
ಫಲ್ಗೂನಿ ತತ್ರ ಮಹತಾಂ ಜೀವೋ ಜೀವಸ್ಯ ಜೀವನಮ್
॥ ೪೬ ॥

ಸಂಜಯನು ಹೀಗೆ ಹೇಳುತ್ತಿರುವಂತೆಯೇ ತುಂಬುರು ಸಮೇತ ಪೂಜ್ಯರಾದ ದೇವರ್ಷಿನಾರದರು ಅಲ್ಲಿಗೆ ಆಗಮಿಸಿದರು. ಮಹಾರಾಜಾ ಧರ್ಮನಂದನನು ತಮ್ಮಂದಿರೊಂದಿಗೆ ಎದ್ದು ಅವರನ್ನು ವಂದಿಸಿ, ಯಥೋಚಿತವಾಗಿ ಪೂಜಿಸಿ, ಕೈಜೋಡಿಸಿ ಕೊಂಡು ಇಂತೆಂದನು – ॥ ೩೭ ॥

**ಯುಧಿಷ್ಠಿರನೆಂದ** – 'ಪೂಜ್ಯರೇ! ನಮ್ಮ ದೊಡ್ಡಪ್ಪ-ಚಿಕ್ಕಪ್ಪ ಇವರುಗಳ ಸಮಾಚಾರವಾಗಲೀ, ಅವರಿಬ್ಬರ ಹಾಗೂ ಪುತ್ರಶೋಕದಿಂದ ವ್ಯಾಕುಲಳಾದ ತಪಸ್ವಿನೀ ತಾಯಿ ಗಾಂಧಾರಿಯೂ ಇಲ್ಲಿಂದ ಎಲ್ಲಿಗೆ ಹೋದರೋ ಎಂಬ ಸಮಾಚಾರ ನನಗೆ ತಿಳಿಯದಾಗಿದೆ. ॥ ೩೮ ॥ ಮಹಾತ್ಮರೇ! ಅಪಾರವಾದ ಸಮುದ್ರದಲ್ಲಿ ದಡಮುಟ್ಟಿಸುವ ನಾವಿಕನಂತೆ ನೀವು ನಮ್ಮ ಭಾಗ್ಯೋದಯದಿಂದಲೇ ಇಲ್ಲಿಗೆ ಆಗಮಿಸಿದ್ದೀರಿ.' ಆಗ ಭಗವಂತನ ಪರಮಭಕ್ತರಾದ ನಾರದ ಮಹರ್ಷಿಗಳು ಇಂತೆಂದರು ॥ ೩೯ ॥

ಧರ್ಮರಾಜಾ! ನೀನು ಯಾರ ವಿಷಯದಲ್ಲಿಯೂ ಶೋಕಿಸಬಾರದು. ಏಕೆಂದರೆ, ಜಗತ್ತೆಲ್ಲವೂ ಈಶ್ವರಾಧೀನವಾಗಿದೆ. ಸಮಸ್ತ ಲೋಕಗಳೂ, ಲೋಕಪಾಲರೂ ಈ ಮಹಾಪ್ರಭುವಿನ ಆಣತಿಯಂತೆ ನಡೆಯುತ್ತವೆ. ಅವನೇ ಎಲ್ಲ ಪ್ರಾಣಿಗಳನ್ನು ಅವುಗಳ ಕರ್ಮಗಳಿಗೆ ಅನುಗುಣವಾಗಿ ಕೆಲವೊಮ್ಮೆ ಕೂಡಿಸುವನು. ಕೆಲವೊಮ್ಮೆ ಅಗಲಿಸುವನು. ॥ ೪೦ ॥ ಎತ್ತುಗಳು ಮೂಗಿನಲ್ಲಿ ಪೋಣಿಸಿದ ಮೂಗುದಾರಗಳಿಂದಲೂ, ಇತರ ದಪ್ಪಹಗ್ಗಗಳಿಂದ ಕಟ್ಟುಬಿದ್ದು ಅಲುಗಾಡಲೂ ಸ್ವಾತಂತ್ರ್ಯವಿಲ್ಲದೆ ತಮ್ಮ ಯಜಮಾನನ ಅಪ್ಪಣೆಯಂತೆ ನಡೆಯುವಂತೆಯೇ, ಮನುಷ್ಯನು ನಾಮ-ರೂಪಗಳೆಂಬ ಪಾಶಗಳಿಂದ, ಮಾತುಗಳೆಂಬ ತಂತುವಿನಲ್ಲಿ ಬಿಗಿಯಲ್ಪಟ್ಟು ಭಗವಂತನ ಆಜ್ಞೆಯಂತೆ ಅನುಸರಿಸುವರು. ॥ ೪೧ ॥ ಈ ಲೋಕದಲ್ಲಿ ಆಟಗಾರನ ಇಷ್ಟದಂತೆ ಆಟಿಕೆಗಳು ಒಂದಾಗುತ್ತವೆ, ಬೇರ್ಪಡುತ್ತವೆ. ಹಾಗೆಯೇ ಭಗವಂತನ ಇಚ್ಛೆಯಿಂದಲೇ ಮನುಷ್ಯರ ಸೇರುವಿಕೆ, ಅಗಲುವಿಕೆ ಇವೆಲ್ಲಾ ಉಂಟಾಗುತ್ತಾ ಇರುತ್ತದೆ. ॥ ೪೨ ॥ ನೀವುಗಳು ಜೀವರೂಪದಿಂದ ನಿತ್ಯ ಅಥವಾ ದೇಹರೂಪದಿಂದ ಅನಿತ್ಯ, ಇಲ್ಲವೇ ಜಡರೂಪದಿಂದ ಅನಿತ್ಯ, ಚೇತನರೂಪದಿಂದ ನಿತ್ಯ, ಅಥವಾ ಶುದ್ಧಬ್ರಹ್ಮರೂಪದಲ್ಲಿ ನಿತ್ಯ-ಅನಿತ್ಯ ಏನನ್ನೂ ಭಾವಿಸದಿದ್ದರೂ, ಯಾವುದೇ ಅವಸ್ಥೆಯಲ್ಲಿಯೂ ಮೋಹಜನ್ಯ ಆಸಕ್ತಿಯಲ್ಲದೆ ಶೋಕಿಸಲು ಯಾವ ಕಾರಣವೂ ಇಲ್ಲ. ॥ ೪೩ ॥ ಆದುದರಿಂದ ಧರ್ಮನಂದನಾ! 'ಅನಾಥರೂ, ದೀನರೂ ಆಗಿರುವ ಅವರು ನನ್ನನ್ನು ಬಿಟ್ಟು ಹೇಗೆ ತಾನೇ ಬದುಕಿಯಾರು?' ಎಂಬ ಮನಸ್ಸಿನ ಕೊರಗನ್ನು ಬಿಡು. ಅದು ಅಜ್ಞಾನಮೂಲವಾಗಿದೆ. ॥ ೪೪ ॥ ಈ ಪಾಂಚಭೌತಿಕ ಶರೀರವು ಕಾಲ, ಕರ್ಮ, ಗುಣಗಳ ವಶದಲ್ಲಿದೆ. ಹೆಬ್ಬಾವಿನ ಬಾಯಲ್ಲಿ ಸಿಕ್ಕಿಬಿದ್ದಿರುವ ಮನುಷ್ಯನಂತೆ ಈ ಪರಾಧೀನ ಶರೀರವು ಬೇರೆಯವರನ್ನು ಹೇಗೆ ಕಾಪಾಡಬಲ್ಲದು ? ॥ ೪೫ ॥ ಲೋಕದಲ್ಲಿ ಕೈಗಳಿಲ್ಲದ ಪ್ರಾಣಿಗಳು ಕೈಗಳುಳ್ಳ ಪ್ರಾಣಿಗಳ ಆಹಾರವು. ನಾಲ್ಕು ಕಾಲುಗಳುಳ್ಳ ಪ್ರಾಣಿಗಳಿಗೆ ಕಾಲುಗಳಿಲ್ಲದವು (ತೃಣಾದಿ) ಮತ್ತು ಅವುಗಳಲ್ಲಿಯೂ ಸಣ್ಣಜೀವಿಗಳು ದೊಡ್ಡ ಜೀವಿಗಳ ಆಹಾರವಾಗಿದೆ. ॥ ೪೬ ॥

ತದಿದಂ ಭಗವಾನ್ರಾಜನ್ನೇಕ ಆತ್ಮಾಽಽತ್ಮನಾಂ ಸ್ವದೃಕ್ ।
ಅಂತರೋಽನಂತರೋ ಭಾತಿ ಪಶ್ಯ ತಂ ಮಾಯಯೋರುಧಾ ॥ ೪೭ ॥

ಸೋಽಯಮದ್ಯ ಮಹಾರಾಜ ಭಗವಾನ್ ಭೂತಭಾವನಃ ।
ಕಾಲರೂಪೋಽವತೀರ್ಣೋಽಸ್ಯಾಮಭಾವಾಯ ಸುರದ್ವಿಷಾಮ್ ॥ ೪೮ ॥

ನಿಷ್ಪಾದಿತಂ ದೇವಕೃತ್ಯಮವಶೇಷಂ ಪ್ರತೀಕ್ಷತೇ ।
ತಾವದ್ಯೂಯಮವೇಕ್ಷಧ್ವಂ ಭವೇದ್ಯಾವದಿಹೇಶ್ವರಃ ॥ ೪೯ ॥

ಧೃತರಾಷ್ಟ್ರಃ ಸಹ ಭ್ರಾತ್ರಾ ಗಾಂಧಾರ್ಯಾ ಚ ಸ್ವಭಾರ್ಯಯಾ ।
ದಕ್ಷಿಣೇನ ಹಿಮವತ ಋಷೀಣಾಮಾಶ್ರಮಂ ಗತಃ ॥ ೫೦ ॥

ಸ್ರೋತೋಭಿಃ ಸಪ್ತಭಿರ್ಯಾ ವೈ ಸ್ವರ್ಧುನೀ ಸಪ್ತಧಾ ವ್ಯಧಾತ್ ।
ಸಪ್ತಾನಾಂ ಪ್ರೀತಯೇ ನಾನಾ ಸಪ್ತಸ್ರೋತಃ ಪ್ರಚಕ್ಷತೇ ॥ ೫೧ ॥

ಸ್ನಾತ್ವಾನುಸವನಂ ತಸ್ಮಿನ್ಹುತ್ವಾ ಚಾಗ್ನೀನ್ಯಥಾವಿಧಿ ।
ಅಬ್ಭಕ್ಷ ಉಪಶಾಂತಾತ್ಮಾ ಸ ಆಸ್ತೇ ವಿಗತೈಷಣಃ ॥ ೫೨ ॥

ಜಿತಾಸನೋ ಜಿತಶ್ವಾಸಃ ಪ್ರತ್ಯಾಹೃತಷಡಿಂದ್ರಿಯಃ ।
ಹರಿಭಾವನಯಾ ಧ್ವಸ್ತರಜಃಸತ್ತ್ವತಮೋಮಲಃ ॥ ೫೩ ॥

ವಿಜ್ಞಾನಾತ್ಮನಿ ಸಂಯೋಜ್ಯ ಕ್ಷೇತ್ರಜ್ಞೇ ಪ್ರವಿಲಾಪ್ಯ ತಮ್ ।
ಬ್ರಹ್ಮಣ್ಯಾತ್ಮಾನಮಾಧಾರೇ ಘಟಾಂಬರಮಿವಾಂಬರೇ ॥ ೫೪ ॥

ಧ್ವಸ್ತಮಾಯಾಗುಣೋದರ್ಕೋ ನಿರುದ್ಧ ಕರಣಾಶಯಃ ।
ನಿವರ್ತಿತಾಖಿಲಾಹಾರ ಆಸ್ತೇ ಸ್ಥಾಣುರಿವಾಚಲಃ ।
ತಸ್ಯಾಂತರಾಯೋ ಮೈವಾಭೂಃ ಸಂನ್ಯಸ್ತಾಖಿಲಕರ್ಮಣಃ ॥ ೫೫ ॥

ಸ ವಾ ಅದ್ಯತನಾದ್ರಾಜನ್ಪರತಃ ಪಂಚಮೇಽಹನಿ ।
ಕಲೇವರಂ ಹಾಸ್ಯತಿ ಸ್ವಂ ತಚ್ಚ ಭಸ್ಮೀಭವಿಷ್ಯತಿ ॥ ೫೭ ॥

ಮಹಾರಾಜಾ ! ಈ ಸಮಸ್ತ ರೂಪಗಳಲ್ಲಿ ಜೀವಿಗಳ ಒಳ-ಹೊರಗೆ ಅವನೊಬ್ಬನೇ ಸ್ವಯಂಪ್ರಕಾಶ ಭಗವಂತನು ಸಮಸ್ತ ಆತ್ಮಗಳ ಆತ್ಮನಾಗಿರುವನು. ಮಾಯೆಯಿಂದಾಗಿ ಅನೇಕ ಪ್ರಕಾರದಿಂದ ಪ್ರಕಟನಾಗುತ್ತಿದ್ದಾನೆ. ನೀನು ಕೇವಲ ಅವನನ್ನೇ ನೋಡು. ॥ ೪೭ ॥ ಮಹಾರಾಜನೇ! ಸರ್ವಭೂತಗಳನ್ನು ಸೃಷ್ಟಿಸಿ, ರಕ್ಷಿಸುವ ಭೂತ ಭಾವನನಾದ ಕಾಲರೂಪಿಯಾದ ಆ ಭಗವಂತನೇ ಈಗ ದೇವ ದ್ರೋಹಿಗಳನ್ನು ಸಂಹರಿಸುವುದಕ್ಕಾಗಿ ಶ್ರೀಕೃಷ್ಣನ ರೂಪದಲ್ಲಿ ಅವತರಿಸಿರುವನು. ॥ ೪೮ ॥ ಈಗ ಅವನು ದೇವತೆಗಳ ಕಾರ್ಯವನ್ನು ಪೂರ್ಣಗೊಳಿಸಿರುವನು. ಇನ್ನು ಸ್ವಲ್ಪವೇ ಕೆಲಸ ಬಾಕಿ ಇರುವುದರಿಂದ ಅವನು ನಿಂತಿರುವನು. ಆ ಪ್ರಭುವು ಇಲ್ಲಿ ಇರುವ ತನಕ ನೀವುಗಳೂ ಅವನ ಪ್ರತೀಕ್ಷೆಮಾಡುತ್ತಾ ಕಾಲಕಳೆಯುತ್ತಾ ಇರಿ. ॥ ೪೯ ॥

ಧರ್ಮನಂದನಾ ! ನಿಮ್ಮ ದೊಡ್ಡಪ್ಪನು ತಮ್ಮನೊಡನೆ ಹಾಗೂ ಪತ್ನಿಯೊಡನೆ ಈಗಾಗಲೇ ಹಿಮಾಲಯದ ದಕ್ಷಿಣಭಾಗದಲ್ಲಿ ದೇವ ಗಂಗೆಯು ಸಪ್ತರ್ಷಿಗಳಿಗೆ ಸಂತೋಷವನ್ನುಂಟುಮಾಡಲು ಏಳು ಧಾರೆಯಾಗಿ ವಿಭಾಗಗೊಂಡವಳಾಗಿ ಹರಿಯುವ 'ಸಪ್ತಸ್ರೋತ' (ಸಪ್ತರ್ಷಿಧಾಮ) ಎಂದು ಪ್ರಸಿದ್ಧವಾದ ಜಾಗದಲ್ಲಿ ಋಷಿಗಳ ಆಶ್ರಮಕ್ಕೆ ಹೊರಟುಹೋಗಿದ್ದಾನೆ. ॥ ೫೦-೫೧ ॥ ಅವನು ಅಲ್ಲಿ ತ್ರಿಕಾಲಸ್ನಾನ ಮಾಡಿ, ವಿಧಿಪೂರ್ವಕ ಅಗ್ನಿಹೋತ್ರವನ್ನು ಆಚರಿಸುತ್ತಾ, ಕೇವಲ ಜಲಾಹಾರಿಯಾಗಿ, ಪ್ರಶಾಂತನಾಗಿ ಸರ್ವಕಾಮನೆಗಳನ್ನೂ ತೊರೆದು ವಾಸಿಸುತ್ತಿದ್ದಾನೆ. ॥ ೫೨ ॥ ಅವನೀಗ ಆಸನ ಜಯವನ್ನು ಸಾಧಿಸಿ, ಪ್ರಾಣವಾಯುವನ್ನು ಹತೋಟಿಗೆ ತಂದುಕೊಂಡು, ತನ್ನ ಆರೂ ಇಂದ್ರಿಯಗಳನ್ನು ತಮ್ಮ ವಿಷಯಗಳಿಂದ ಹಿಂದಕ್ಕೆಳೆದುಕೊಂಡು ಭಗವಂತನ ಧಾರಣೆಯಿಂದ ತಮೋಗುಣ, ರಜೋಗುಣ ಮತ್ತು ಸತ್ತ್ವಗುಣ ಇವುಗಳ ಮಲಗಳನ್ನು ಕಳೆದುಕೊಂಡಿರುವನು. ॥ ೫೩ ॥ ಅವನು ಅಹಂಕಾರವನ್ನು ಬುದ್ಧ್ಯಾತ್ಮನಲ್ಲಿಯೂ, ಬುದ್ಧ್ಯಾತ್ಮನನ್ನು ಕ್ಷೇತ್ರಜ್ಞನಾದ ಜೀವಾತ್ಮನಲ್ಲಿಯೂ ಆ ಜೀವಾತ್ಮನನ್ನು ಘಟಾಕಾಶವು ಮಹಾಕಾಶದಲ್ಲಿ ಲೀನವಾಗುವಂತೆ ಸರ್ವಾಧಿಷ್ಠಾನವಾದ ಬ್ರಹ್ಮನಲ್ಲಿ ಒಂದಾಗಿಸಿ ಬಿಟ್ಟಿರುವನು. ಅವನು ತನ್ನ ಸಮಸ್ತ ಇಂದ್ರಿಯಗಳನ್ನೂ ಮನಸ್ಸನ್ನೂ ತಡೆದು ವಿಷಯಗಳನ್ನು ಹೊರಗಿನಿಂದಲೇ ತಡೆಗಟ್ಟಿರುವನು. ಮಾಯೆಯ ಗುಣಗಳಿಂದ ಉಂಟಾಗುವ ಪರಿಣಾಮಗಳನ್ನು ಸರ್ವಥಾ ಇಲ್ಲವಾಗಿಸಿದ್ದಾನೆ. ಸಮಸ್ತ ಕರ್ಮಗಳನ್ನು ಸಂನ್ಯಾಸಮಾಡಿ ಈಗ ನೆಟ್ಟಕಂಬದಂತೆ ನಿಶ್ಚಲವಾಗಿ ಕುಳಿತಿರುವನು. ಆದ್ದರಿಂದ ನೀನು ಅವನ ಶ್ರೇಯಸ್ಸಿನಲ್ಲಿ ಅಡ್ಡಿಯಾಗಬೇಡ. * ॥ ೫೪-೫೫ ॥ ಧರ್ಮರಾಜಾ ! ಇಂದಿನಿಂದ ಐದನೆಯ ದಿನ ಧೃತರಾಷ್ಟ್ರನು ತನ್ನ ಶರೀರವನ್ನು ತ್ಯಜಿಸಿಬಿಡುವನು. ಆ ದೇಹವು ಒಡನೆಯೇ ಸುಟ್ಟು ಬೂದಿಯಾಗುವುದು. ॥ ೫೭ ॥ ಗಾರ್ಹಪತ್ಯಾದಿ ಅಗ್ನಿಗಳ ಮೂಲಕ ಪರ್ಣಕುಟಿಯೊಂದಿಗೆ ಸುಡುತ್ತಿರುವ ತನ್ನ ಪತಿಯ

* ದೇವರ್ಷಿ ನಾರದರು ತ್ರಿಕಾಲದರ್ಶಿಗಳು. ಅವರು ಧೃತರಾಷ್ಟ್ರನ ಭವಿಷ್ಯ ಜೀವನವನ್ನು ವರ್ತಮಾನದಂತೆ, ಪ್ರತ್ಯಕ್ಷ ನೋಡುವವನಂತೆ ವರ್ಣಿಸುತ್ತಿದ್ದಾರೆ. ಧೃತರಾಷ್ಟ್ರನು ಹಿಂದಿನ ರಾತ್ರಿಯಲ್ಲೇ ಹಸ್ತಿನಾವತಿಯಿಂದ ಹೊರಟುಹೋಗಿದ್ದನು. ಆದ್ದರಿಂದ ಈ ವರ್ಣನೆಯು ಭವಿಷ್ಯದೆಂದು ತಿಳಿದುಕೊಳ್ಳಬೇಕು.

ದಹ್ಯಮಾನೇಽಗ್ನಿಭಿರ್ದೇಹೇ ಪತ್ಯುಃ ಪತ್ನೀ ಸಹೋಟಜೇ।
ಬಹಿಃ ಸ್ಥಿತಾ ಪತಿಂ ಸಾಧ್ವೀ ತಮಗ್ನಿಮನುವೇಕ್ಷ್ಯತಿ ॥ ೫೭ ॥

ವಿದುರಸ್ತು ತದಾಶ್ಚರ್ಯಂ ನಿಶಾಮ್ಯ ಕುರುನಂದನ।
ಹರ್ಷಶೋಕಯುತಸ್ತಸ್ಮಾದ್ಗಂತಾ ತೀರ್ಥನಿಷೇವಕಃ ॥ ೫೮ ॥

ಇತ್ಯುಕ್ತ್ವಾಥಾರುಹತ್ಸ್ವರ್ಗಂ ನಾರದಃ ಸಹತುಂಬುರುಃ।
ಯುಧಿಷ್ಠಿರೋ ವಚಸ್ತಸ್ಯ ಹೃದಿ ಕೃತ್ವಾಜಹಾಚ್ಛುಚಃ ॥ ೫೯ ॥

ಮೃತದೇಹವನ್ನು ಕಂಡು ಹೊರಗೆ ನಿಂತಿರುವ ಪತಿವ್ರತೆಯಾದ ಗಾಂಧಾರಿಯು ಪತಿಯನ್ನು ಅನುಸರಿಸಿ ಆ ಅಗ್ನಿಯನ್ನು ಪ್ರವೇಶಿಸುವಳು. ॥ ೫೭ ॥ ಧರ್ಮರಾಜಾ! ತನ್ನ ಅಣ್ಣನ ಆಶ್ಚರ್ಯಮಯ ಮೋಕ್ಷವನ್ನು ನೋಡಿದ ವಿದುರನು ಹರ್ಷಿತನಾಗಿ, ವಿಯೋಗವನ್ನು ಸಹಿಸದೆ ದುಃಖಿತನಾಗುತ್ತಾ, ಅಲ್ಲಿಂದ ತೀರ್ಥ ಯಾತ್ರೆಗಾಗಿ ಹೊರಟುಹೋಗುವನು. ॥ ೫೮ ॥ ದೇವಋಷಿ ನಾರದರು ಹೀಗೆ ಹೇಳಿ ತುಂಬುರುವಿನೊಡನೆ ಸ್ವರ್ಗಲೋಕಕ್ಕೆ ಹೊರಟುಹೋದರು. ಯುಧಿಷ್ಠಿರನು ಅವರ ಉಪದೇಶಗಳನ್ನು ಹೃದಯಂಗಮವಾಗಿಸಿಕೊಂಡು ಶೋಕ-ಮೋಹಗಳನ್ನು ತೊರೆದು ಬಿಟ್ಟನು. ॥ ೫೯ ॥

*ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ ತ್ರಯೋದಶೋಽಧ್ಯಾಯಃ ॥ ೧೩ ॥**

# ಹದಿನಾಲ್ಕನೆಯ ಅಧ್ಯಾಯ

## ಅಪಶಕುನಗಳನ್ನು ಕಂಡು ಯುಧಿಷ್ಠಿರನ ಆಶಂಕೆ, ಅರ್ಜುನನು ದ್ವಾರಕೆಯಿಂದ ಮರಳಿದುದು–

*ಸೂತ ಉವಾಚ*

ಸಂಪ್ರಸ್ಥಿತೇ ದ್ವಾರಕಾಯಾಂ ಜಿಷ್ಣೌ ಬಂಧುದಿದೃಕ್ಷಯಾ।
ಜ್ಞಾತುಂ ಚ ಪುಣ್ಯಶ್ಲೋಕಸ್ಯ ಕೃಷ್ಣಸ್ಯ ಚ ವಿಚೇಷ್ಟಿತಮ್ ॥ ೧ ॥

ವ್ಯತೀತಾಃ ಕತಿಚಿನ್ಮಾಸಾಸ್ತದಾ ನಾಯಾತ್ತತೋಽರ್ಜುನಃ।
ದದರ್ಶ ಘೋರರೂಪಾಣಿ ನಿಮಿತ್ತಾನಿ ಕುರೂದ್ವಹಃ ॥ ೨ ॥

ಕಾಲಸ್ಯ ಚ ಗತಿಂ ರೌದ್ರಾಂ ವಿಪರ್ಯಸ್ತರ್ತುಧರ್ಮಿಣಃ।
ಪಾಪೀಯಸೀಂ ನೃಣಾಂ ವಾರ್ತಾಂ ಕ್ರೋಧಲೋಭಾನೃತಾತ್ಮನಾಮ್ ॥ ೩ ॥

ಜಿಹ್ಮಪ್ರಾಯಂ ವ್ಯವಹೃತಂ ಶಾಠ್ಯಮಿಶ್ರಂ ಚ ಸೌಹೃದಮ್।
ಪಿತೃಮಾತೃಸುಹೃದ್ಭ್ರಾತೃದಂಪತೀನಾಂ ಚ ಕಲ್ಕನಮ್ ॥ ೪ ॥

ನಿಮಿತ್ತಾನ್ಯತ್ಯರಿಷ್ಟಾನಿ ಕಾಲೇ ತ್ವನುಗತೇ ನೃಣಾಮ್।
ಲೋಭಾದ್ಯಧರ್ಮಪ್ರಕೃತಿಂ ದೃಷ್ಟ್ವೋವಾಚಾನುಜಂ ನೃಪಃ ॥ ೫ ॥

*ಯುಧಿಷ್ಠಿರ ಉವಾಚ*

ಸಂಪ್ರೇಷಿತೋ ದ್ವಾರಕಾಯಾಂ ಜಿಷ್ಣುರ್ಬಂಧುದಿದೃಕ್ಷಯಾ।
ಜ್ಞಾತುಂ ಚ ಪುಣ್ಯಶ್ಲೋಕಸ್ಯ ಕೃಷ್ಣಸ್ಯ ಚ ವಿಚೇಷ್ಟಿತಮ್ ॥ ೬ ॥

**ಸೂತಪುರಾಣಿಕರು ಹೇಳುತ್ತಾರೆ** – ಎಲೈ ಶೌನಕಾದಿಗಳೇ! ದ್ವಾರಕೆಯಲ್ಲಿದ್ದ ನೆಂಟರಿಷ್ಟರನ್ನು ನೋಡಿಬರುವ ಬಯಕೆಯಿಂದಲೂ, ಪುಣ್ಯಕೀರ್ತಿಯಾದ ಭಗವಾನ್ ಶ್ರೀಕೃಷ್ಣನ ದಿವ್ಯಚೇಷ್ಟಿತಗಳನ್ನು ವಿಶೇಷವಾಗಿ ತಿಳಿಯುವ ಅಪೇಕ್ಷೆಯಿಂದಲೂ ಅರ್ಜುನನು ದ್ವಾರಕೆಗೆ ಹೋಗಿದ್ದನು. ॥ ೧ ॥ ಅನೇಕ ತಿಂಗಳುಗಳು ಕಳೆದು ಹೋದರೂ ಅರ್ಜುನನು ಹಿಂದಿರುಗದಿದ್ದಾಗ, ಧರ್ಮರಾಜ ಯುಧಿಷ್ಠಿರನಿಗೆ ಭೀಕರವಾದ ಅಪಶಕುನಗಳು ಕಾಣಿಸತೊಡಗಿದವು. ॥ ೨ ॥ ಋತುಗಳ ಧರ್ಮಗಳು ಅದಲು-ಬದಲಾಗುವ ಭೀಕರವಾದ ಕಾಲದ ನಡೆಯನ್ನು ಅವನು ಕಂಡನು. ಜನರು ಜೀವನದಲ್ಲಿ ಕ್ರೋಧ, ದುರಾಸೆ, ಅಸತ್ಯಗಳಿಂದ ತುಂಬಿದವರಾಗಿ ತಮ್ಮ ಜೀವನ ನಿರ್ವಹಣೆಗಾಗಿ ಪಾಪದಿಂದ ತುಂಬಿದ ವ್ಯಾಪಾರ ಮಾಡತೊಡಗಿರುವರು. ॥ ೩ ॥ ಕಪಟ ವ್ಯವಹಾರ ಮಾಡುವುದೂ, ಕೃತ್ರಿಮವಾದ ಸ್ನೇಹವನ್ನು ತೋರುವುದೂ, ತಂದೆ-ತಾಯಿ, ಹತ್ತಿರದ ನೆಂಟರು, ಅಣ್ಣಾ-ತಮ್ಮಂದಿರು, ಪತಿ-ಪತ್ನಿಯರು ಪರಸ್ಪರ ಜಗಳಗಂಟರಾಗುವುದನ್ನು ಕಂಡನು. ॥ ೪ ॥ ಕಲಿಕಾಲವು ಬಂದಿದ್ದರಿಂದ ಜನರ ಸ್ವಭಾವವೇ ಲೋಭ, ದಂಭವೇ ಮುಂತಾದ ಅಧರ್ಮಗಳಿಂದ ಕೂಡಿರುವುದನ್ನು ನೋಡಿದನು. ಪ್ರಕೃತಿಯಲ್ಲಿಯೂ ಅತ್ಯಂತ ಅರಿಷ್ಟಸೂಚಕ ಅಪಶಕುನಗಳು ಆಗತೊಡಗಿದವು. ಇದೆಲ್ಲವನ್ನು ನೋಡಿದ ಧರ್ಮರಾಯನು ತಮ್ಮನಾದ ಭೀಮಸೇನನನಲ್ಲಿ ಹೀಗೆ ಹೇಳಿದನು – ॥ ೫ ॥

**ಯುಧಿಷ್ಠಿರನೆಂದ** – "ಭೀಮಸೇನ! 'ಬಂಧುಗಳ ಯೋಗ-ಕ್ಷೇಮಗಳನ್ನು ವಿಚಾರಿಸಿಕೊಂಡು, ಪುಣ್ಯಕೀರ್ತಿಯಾದ ಶ್ರೀಕೃಷ್ಣನು ಯಾವ ಲೀಲೆಗಳನ್ನು ಮಾಡುತ್ತಿದ್ದಾನೆಂಬುದನ್ನು ತಿಳಿದು ಬಾ' – ಎಂದು ನಾವು ಅರ್ಜುನನನ್ನು ದ್ವಾರಕೆಗೆ ಕಳುಹಿಸಿದ್ದೆವು. ॥ ೬ ॥

**ಗತಾಃ ಸಪ್ತಾಧುನಾ ಮಾಸಾ ಭೀಮಸೇನ ತವಾನುಜಃ ।**
**ನಾಯಾತಿ ಕಸ್ಯ ವಾ ಹೇತೋರ್ನಾಹಂ ವೇದೇದಮಂಜಸಾ ॥ ೭ ॥**

**ಅಪಿ ದೇವರ್ಷಿಣಾಽಽದಿಷ್ಟಃ ಸ ಕಾಲೋಽಯಮುಪಸ್ಥಿತಃ ।**
**ಯದಾತ್ಮನೋಽಽಂಗಮಾಕ್ರೀಡಂ ಭಗವಾನುತ್ಸಿಸೃಕ್ಷತಿ ॥ ೮ ॥**

**ಯಸ್ಮಾನ್ನಃ ಸಂಪದೋ ರಾಜ್ಯಂ ದಾರಾಃ ಪ್ರಾಣಾಃ ಕುಲಂ ಪ್ರಜಾಃ ।**
**ಆಸನ್ಸಪತ್ನವಿಜಯೋ ಲೋಕಾಶ್ಚ ಯದನುಗ್ರಹಾತ್ ॥ ೯ ॥**

**ಪಶ್ಯೋತ್ಪಾತಾನ್ನರವ್ಯಾಘ್ರ ದಿವ್ಯಾನ್ಭೌಮಾನ್ಸದೈಹಿಕಾನ್ ।**
**ದಾರುಣಾನ್ಶಂಸತೋಽದೂರಾದ್ಭಯಂ ನೋ ಬುದ್ಧಿಮೋಹನಮ್ ॥ ೧೦ ॥**

**ಊರ್ವಕ್ಷಿಬಾಹವೋ ಮಹ್ಯಂ ಸ್ಫುರಂತ್ಯಂಗ ಪುನಃ ಪುನಃ ।**
**ವೇಪಥುಶ್ಚಾಪಿ ಹೃದಯೇ ಆರಾದ್ದಾಸ್ಯಂತಿ ವಿಪ್ರಿಯಮ್ ॥ ೧೧ ॥**

**ಶಿವೈಷೋದ್ಯಂತಮಾದಿತ್ಯಮಭಿರೌತ್ಯನಲಾನನಾ ।**
**ಮಾಮಂಗ ಸಾರಮೇಯೋಽಯಮಭಿರೇಭತ್ಯಭೀರುವತ್ ॥ ೧೨ ॥**

**ಶಸ್ತಾಃ ಕುರ್ವಂತಿ ಮಾಂ ಸವ್ಯಂ ದಕ್ಷಿಣಂ ಪಶವೋಽಪರೇ ।**
**ವಾಹಾಂಶ್ಚ ಪುರುಷವ್ಯಾಘ್ರ ಲಕ್ಷಯೇ ರುದತೋ ಮಮ ॥ ೧೩ ॥**

**ಮೃತ್ಯುದೂತಃ ಕಪೋತೋಽಯಮುಲೂಕಃ ಕಂಪಯನ್ಮನಃ ।**
**ಪ್ರತ್ಯುಲೂಕಶ್ಚ ಕುಹ್ವಾನೈರನಿದ್ರೌ ಶೂನ್ಯಮಿಚ್ಛತಃ ॥ ೧೪ ॥**

**ಧೂಮ್ರಾದಿಶಃ ಪರಿಧಯಃ ಕಂಪತೇ ಭೂಃ ಸಹಾದ್ರಿಭಿಃ ।**
**ನಿರ್ಘಾತಶ್ಚ ಮಹಾಂಸ್ತಾತ ಸಾಕಂ ಚ ಸ್ತನಯಿತ್ನುಭಿಃ ॥ ೧೫ ॥**

**ವಾಯುರ್ವಾತಿ ಖರಸ್ಪರ್ಶೋ ರಜಸಾ ವಿಸೃಜಂಸ್ತಮಃ ।**
**ಅಸೃಗ್ ವರ್ಷಂತಿ ಜಲದಾ ಬೀಭತ್ಸಮಿವ ಸರ್ವತಃ ॥ ೧೬ ॥**

ಅವನು ಅಲ್ಲಿಗೆ ಹೋಗಿ ಇಂದಿಗೆ ಏಳು ತಿಂಗಳುಗಳು ಕಳೆದುವು. ಇಷ್ಟು ಸಮಯವಾದರೂ ಅವನೇಕೆ ಹಿಂದಿರುಗಿಲ್ಲವೆಂಬುದು ಸರಿಯಾಗಿ ತಿಳಿಯುತ್ತಿಲ್ಲವಲ್ಲಾ! ॥ ೭ ॥ ಭಗವಂತನಾದ ಶ್ರೀಕೃಷ್ಣ ಪರಮಾತ್ಮನು ತನ್ನ ಮನುಷ್ಯಲೀಲೆಗಳಿಗೆ ಆಧಾರವಾಗಿರುವ ಮಾನುಷದೇಹವನ್ನು ಉಪಸಂಹಾರ ಮಾಡಿಕೊಳ್ಳಲು ಬಯಸುವ ಕಾಲ ಬರುತ್ತಿದೆಯೆಂದು ದೇವರ್ಷಿ ನಾರದರು ಸೂಚಿಸಿದ್ದರು. ಆ ಕಾಲವು ಬಂದುಬಿಟ್ಟಿಲ್ಲ ತಾನೇ! ॥ ೮ ॥ ಯಾವನ ಅನುಗ್ರಹದಿಂದಲೇ ನನಗೆ ಸಂಪತ್ತು, ರಾಜ್ಯ, ಪತ್ನೀ, ಪ್ರಾಣ, ಕುಲ, ಪ್ರಜೆಗಳು, ಶತ್ರುವಿಜಯ ಇವೆಲ್ಲವೂ ದೊರೆತವೋ, ಆ ಸ್ವಾಮಿಯು ತನ್ನ ದೇಹವನ್ನು ಉಪಸಂಹಾರಮಾಡಿಕೊಳ್ಳುವ ಸಮಯವು ಬಂದಿಲ್ಲ ತಾನೇ ? ॥ ೯ ॥ ನರೋತ್ತಮನೇ! ಆಕಾಶದಲ್ಲಿ ಉಲ್ಕಾಪಾತವೇ ಮುಂತಾದವುಗಳು, ಭೂಮಿಯಲ್ಲಿ ಭೂಕಂಪವೇ ಮುಂತಾದವುಗಳು, ಶರೀರದಲ್ಲಿ ರೋಗಗಳೇ ಮುಂತಾದ ಅಪಶಕುನಗಳೂ ಕಾಣಿಸುತ್ತಿರುವುದನ್ನು ನೋಡು. ಇವು ಶೀಘ್ರದಲ್ಲಿಯೇ ನಮ್ಮ ಬುದ್ಧಿಗೆ ಮೋಹವನ್ನುಂಟುಮಾಡುವ ಯಾವುದೋ ಉತ್ಪಾತ ವುಂಟಾಗುವುದೆಂಬುದನ್ನು ಸೂಚಿಸುತ್ತವೆ. ॥ ೧೦ ॥ ಪ್ರಿಯ ಭೀಮಸೇನಾ! ನನ್ನ ಎಡತೊಡೆ, ಎಡಗಣ್ಣು ಮತ್ತು ಎಡತೋಳುಗಳು ಮತ್ತೆ-ಮತ್ತೆ ಅದುರುತ್ತಿದ್ದು ಹೃದಯವೂ ನಡುಗುತ್ತಿದೆ. ಅತ್ಯಲ್ಪ ಕಾಲದಲ್ಲಿಯೇ ಯಾವುದೋ ಅಪ್ರಿಯವಾದ ಸಮಾಚಾರ ಬರಲಿದೆಯೆಂಬುದನ್ನು ಇವು ಹೇಳುತ್ತಿವೆ. ॥ ೧೧ ॥ ನೋಡು! ಆ ಹೆಣ್ಣು ನರಿಯು ಉದಯವಾಗುತ್ತಲೇ ಸೂರ್ಯನ ಕಡೆಗೆ ನೋಡುತ್ತಾ ಊಳಿಡುತ್ತಿದೆ. ಅದರ ಬಾಯಿಂದ ಬೆಂಕಿಯ ಜ್ವಾಲೆಯೂ ಬರುತ್ತಿದೆಯಲ್ಲಾ! ಆ ನಾಯಿಯು ತನಗಾವ ಭಯವೂ ಇಲ್ಲವೇನೋ ಎಂಬಂತೆ ನನ್ನ ಕಡೆ ನೋಡಿ ಬೊಗುಳುತ್ತಿದೆ. ॥ ೧೨ ॥ ಓ ಪುರುಷಶ್ರೇಷ್ಠನೇ! ಹಸುವೇ ಮುಂತಾದ ಉತ್ತಮ ಪಶುಗಳು ನನ್ನನ್ನು ತಮ್ಮ ಎಡಗಡೆಗೆ ಬಿಟ್ಟುಕೊಂಡು ಅಪ್ರದಕ್ಷಿಣಾಕಾರವಾಗಿಯೂ, ಕತ್ತೆಯೇ ಮುಂತಾದ ಅಶುಭವಾದ ಪ್ರಾಣಿಗಳು ನನ್ನನ್ನು ತಮ್ಮ ಬಲಗಡೆಗೆ ಬಿಟ್ಟುಕೊಂಡು ಪ್ರದಕ್ಷಿಣಾಕಾರವಾಗಿಯೂ ಸುತ್ತುತ್ತಿವೆ. ನನ್ನ ಕುದುರೆಯೇ ಮುಂತಾದ ವಾಹನಗಳು ಅಳುತ್ತಿರುವಂತೆ ನನಗೆ ಕಾಣಿಸುತ್ತಿದೆ. ॥ ೧೩ ॥ ಮೃತ್ಯುವಿನ ದೂತರಂತಿರುವ ಪಾರಿವಾಳ, ಗೂಬೆ ಮತ್ತು ಗೂಬೆಯ ಶತ್ರುಗಳಾದ ಕಾಗೆಗಳು ರಾತ್ರಿಯ ವೇಳೆಯಲ್ಲಿ ಕರ್ಣಕಠೋರವಾದ ಶಬ್ದಗಳಿಂದ ನನ್ನ ಮನಸ್ಸನ್ನು ನಡುಗಿಸುತ್ತಾ ಶೂನ್ಯವಾಗಿಸಲು ಬಯಸುತ್ತಿವೆ. ಸ್ವತಃ ತಾವೂ ಸುಖವಾಗಿ ನಿದ್ರಿಸುವುದಿಲ್ಲ ಹಾಗೂ ಬೇರೆಯವರ ನಿದ್ದೆಯನ್ನೂ ಹಾಳುಮಾಡುತ್ತಿವೆ. ॥ ೧೪ ॥ ದಿಕ್ಕುಗಳು ಹೊಗೆಯು ತುಂಬಿದಂತೆ ಕಂದುಬಣ್ಣವನ್ನು ತಾಳಿವೆ. ಸೂರ್ಯ ಮತ್ತು ಚಂದ್ರರ ಸುತ್ತಲೂ ಮಂಡಲಗಳು ಬಾರಿ-ಬಾರಿಗೂ ಕಾಣಿಸಿಕೊಳ್ಳುತ್ತಿವೆ. ಭೂಮಿಯು ಪರ್ವತಸಹಿತವಾಗಿ ನಡುಗುತ್ತಿದೆ. ಮೋಡಗಳು ಜೋರಾಗಿ ಗುಡುಗುತ್ತಿದ್ದು ಮಿಂಚು-ಸಿಡಿಲುಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಿವೆ. ॥ ೧೫ ॥ ಶರೀರವನ್ನು ಕೊರೆಯುವ ಬಿರುಗಾಳಿಯು ಧೂಳಿನಿಂದ ಕಗ್ಗತ್ತಲೆಯನ್ನು ಹರಡುತ್ತಾ ಬೀಸುತ್ತಿದೆ. ಮೇಘಗಳು ಎಲ್ಲೆಡೆಗಳಲ್ಲೂ ಭೀಕರದೃಶ್ಯವನ್ನುಂಟು ಮಾಡುತ್ತಾ ರಕ್ತವನ್ನು ಸುರಿಸುತ್ತಿವೆ. ॥ ೧೬ ॥ ಸೂರ್ಯ-ಚಂದ್ರರ

ಸೂರ್ಯಂ ಹತಪ್ರಭಂ ಪಶ್ಯ ಗ್ರಹಮರ್ದಂ ಮಿಥೋ ದಿವಿ ।
ಸಸಂಕುಲೈರ್ಭೂತಗಣೈರ್ಜ್ವಲಿತೇ ಇವ ರೋದಸೀ ॥ ೧೭ ॥

ನದ್ಯೋ ನದಾಶ್ಚ ಕ್ಷುಭಿತಾಃ ಸರಾಂಸಿ ಚ ಮನಾಂಸಿ ಚ ।
ನ ಜ್ವಲತ್ಯಗ್ನಿರಾಜ್ಯೇನ ಕಾಲೋಽಯಂ ಕಿಂ ವಿಧಾಸ್ಯತಿ ॥ ೧೮ ॥

ನ ಪಿಬಂತಿ ಸ್ತನಂ ವತ್ಸಾ ನ ದುಹ್ಯಂತಿ ಚ ಮಾತರಃ ।
ರುದಂತ್ಯಶ್ರುಮುಖಾ ಗಾವೋ ನ ಹೃಷ್ಯಂತ್ಯೃಷಭಾ ವ್ರಜೇ ॥ ೧೯ ॥

ದೈವತಾನಿ ರುದಂತೀವ ಸ್ವಿದ್ಯಂತಿ ಹ್ಯುಚ್ಚಲಂತಿ ಚ ।
ಇಮೇ ಜನಪದಾ ಗ್ರಾಮಾಃ ಪುರೋದ್ಯಾನಾಕರಾಶ್ರಮಾಃ ।
ಭ್ರಷ್ಟಶ್ರಿಯೋ ನಿರಾನಂದಾಃ ಕಿಮಘಂ ದರ್ಶಯಂತಿ ನಃ ॥ ೨೦ ॥

ಮನ್ಯ ಏತೈರ್ಮಹೋತ್ಪಾತೈರ್ನೂನಂ ಭಗವತಃ ಪದೈಃ ।
ಅನನ್ಯಪುರುಷಶ್ರೀಭಿರ್ಹೀನಾ ಭೂರ್ಹತಸೌಭಗಾ ॥ ೨೧ ॥

ಇತಿ ಚಿಂತಯತಸ್ತಸ್ಯ ದೃಷ್ಟಾರಿಷ್ಟೇನ ಚೇತಸಾ ।
ರಾಜ್ಞಃ ಪ್ರತ್ಯಾಗಮದ್ಬ್ರಹ್ಮನ್ ಯದುಪುರ್ಯಾಃ ಕಪಿಧ್ವಜಃ ॥ ೨೨ ॥

ತಂ ಪಾದಯೋರ್ನಿಪತಿತಮಯಥಾಪೂರ್ವಮಾತುರಮ್ ।
ಅಧೋವದನಮಬ್ಬಿಂದೂನ್ಸೃಜಂತಂ ನಯನಾಬ್ಜಯೋಃ ॥ ೨೩ ॥

ವಿಲೋಕ್ಯೋದ್ವಿಗ್ನಹೃದಯೋ ವಿಚ್ಛಾಯಮನುಜಂ ನೃಪಃ ।
ಪೃಚ್ಛತಿ ಸ್ಮ ಸುಹೃನ್ಮಧ್ಯೇ ಸಂಸ್ಮರನ್ನಾರದೇರಿತಮ್ ॥ ೨೪ ॥

*ಯುಧಿಷ್ಠಿರ ಉವಾಚ*

ಕಚ್ಚಿದಾನರ್ತಪುರ್ಯಾಂ ನಃ ಸ್ವಜನಾಃ ಸುಖಮಾಸತೇ ।
ಮಧುಭೋಜದಶಾರ್ಹಾರ್ಹಸಾತ್ವತಾಂಧಕವೃಷ್ಣಯಃ ॥ ೨೫ ॥

ಶೂರೋ ಮಾತಾಮಹಃ ಕಚ್ಚಿತ್ಸ್ವಸ್ತ್ಯಾಸ್ತೇ ವಾಥ ಮಾರಿಷಃ ।
ಮಾತುಲಃ ಸಾನುಜಃ ಕಚ್ಚಿತ್ಕುಶಲ್ಯಾನಕದುಂದುಭಿಃ ॥ ೨೬ ॥

ಸಪ್ತಸ್ವಸಾರಸ್ತತ್ಪತ್ನ್ಯೋ ಮಾತುಲಾನ್ಯಃ ಸಹಾತ್ಮಜಾಃ ।
ಆಸತೇ ಸಸ್ನುಷಾಃ ಕ್ಷೇಮಂ ದೇವಕೀಪ್ರಮುಖಾಃ ಸ್ವಯಮ್ ॥ ೨೭ ॥

ಪ್ರಭೆಗಳು ಮಂಕಾಗಿಬಿಟ್ಟಿವೆ. ಆಕಾಶದಲ್ಲಿ ಗ್ರಹಗಳು ಒಂದಕ್ಕೊಂದು ಘರ್ಷಣೆ ಹೊಂದುತ್ತಿವೆ. ಭೂತಗಣಗಳು ಒಟ್ಟಾಗಿ ಗುಂಪುಗೂಡಿ ಭೂಮಿ-ಆಕಾಶಗಳಲ್ಲಿ ಬೆಂಕಿಹಚ್ಚಿರುವಂತೆ ಕಾಣುತ್ತಿದೆಯಲ್ಲಾ! ॥ ೧೭ ॥ ನದಿಗಳೂ, ನದಗಳೂ, ಸರೋವರಗಳೂ, ಮತ್ತು ಅಂತೆಯೇ ಜನರ ಮನಸ್ಸುಗಳೂ ಕಲಕಿಹೋಗುತ್ತಿವೆ. ತುಪ್ಪದ ಧಾರೆಯನ್ನು ಸುರಿದರೂ ಅಗ್ನಿಯು ಉರಿಯುತ್ತಿಲ್ಲ. ಈ ಎಲ್ಲ ಅಶುಭಲಕ್ಷಣಗಳಿಂದ ಕೂಡಿದ ಕಾಲವು ಏನು ಫಲವನ್ನು ತರುತ್ತದೆಯೋ ಕಾಣೆ. ॥ ೧೮ ॥ ಎಳೆಯ ಕರುಗಳು ತಾಯಿಯ ಹಾಲನ್ನೂ ಕುಡಿಯುತ್ತಿಲ್ಲ; ಆಕಳುಗಳೂ ಅವುಗಳಿಗೆ ಹಾಲನ್ನು ಕೊಡುತ್ತಿಲ್ಲ. ಗೋಶಾಲೆಯಲ್ಲಿ ಗೋವುಗಳು ಕಣ್ಣೀರುಗರೆಯುತ್ತಿವೆ. ಹಾಗೆಯೇ ಕೊಟ್ಟಿಗೆಯಲ್ಲಿ ಎತ್ತುಗಳೂ ಸಂತೋಷಪಡುತ್ತಿಲ್ಲ. ॥ ೧೯ ॥ ದೇವತಾಮೂರ್ತಿಗಳು ಅಳುತ್ತಿವೆಯೋ ಎಂಬಂತಿವೆ. ಬೆವರು ಸುರಿಸುತ್ತಿದ್ದು ಅಲುಗಾಡುತ್ತಿರುವಂತೆಯೂ ಕಾಣುತ್ತಿವೆ. ಈ ದೇಶಗಳೂ ಹಳ್ಳಿಗಳೂ, ಪಟ್ಟಣಗಳೂ ಉದ್ಯಾನವನಗಳೂ, ಗಣಿಗಳೂ ಮತ್ತು ಆಶ್ರಮಗಳೂ ಕಾಂತಿಹೀನವಾಗಿ ಆನಂದರಹಿತವಾಗಿವೆ. ಇವೆಲ್ಲಾ ಯಾವ ಕಷ್ಟವನ್ನು ಸೂಚಿಸುತ್ತವೆಯೋ ತಿಳಿಯದಾಗಿದೆ. ॥ ೨೦ ॥ ಈ ದೊಡ್ಡ-ದೊಡ್ಡ ಉತ್ಪಾತಗಳನ್ನು ನೋಡಿದರೆ ಭೂದೇವಿಯು ಅಸಾಧಾರಣವಾದ ದಿವ್ಯಲಕ್ಷಣಗಳಿಂದ ಅಲಂಕೃತವಾದ ಶ್ರೀಭಗವಂತನ ಅಡಿದಾವರೆಗಳನ್ನಗಲಿ ತನ್ನ ಎಲ್ಲ ಸೌಭಾಗ್ಯಗಳನ್ನೂ ಕಳೆದುಕೊಂಡು ಬಿಟ್ಟಿರುವಳೋ ಏನೋ!" ॥ ೨೧ ॥

ಶೌನಕರೇ! ಮಹಾರಾಜ ಯುಧಿಷ್ಠಿರನು ಆ ಭಯಂಕರವಾದ ಉತ್ಪಾತಗಳನ್ನು ನೋಡಿ ಮನಸ್ಸಿನಲ್ಲಿ ಚಿಂತೆಪಡುತ್ತಿರುವಾಗಲೇ ಅರ್ಜುನನು ದ್ವಾರಕೆಯಿಂದ ಹಿಂದಿರುಗಿ ಬಂದನು. ಬಂದೊಡನೆಯೇ ಕಾಲಿಗೆ ಬಿದ್ದು ನಮಸ್ಕಾರ ಮಾಡಿದ ಅರ್ಜುನನು ಹಿಂದೆಂದೂ ಕಾಣದ ರೀತಿಯಲ್ಲಿ ಮಹಾದುಃಖದಿಂದ ಮುಖವನ್ನು ತಗ್ಗಿಸಿಕೊಂಡು ಕಣ್ಣೀರುಸುರಿಸುತ್ತಾ ಕಳೆಗುಂದಿರುವುದನ್ನು ಕಂಡು ಧರ್ಮರಾಜನಿಗೆ ಮಿತಿಮೀರಿದ ಗಾಬರಿಯುಂಟಾಯಿತು. ಆತನು ನಾರದರು ಹೇಳಿದ್ದ ಮಾತನ್ನೇ ಸ್ಮರಿಸುತ್ತಾ ಅಲ್ಲಿ ನೆರೆದಿದ್ದ ಬಂಧು-ಮಿತ್ರರ ಮಧ್ಯದಲ್ಲಿಯೇ ಅರ್ಜುನನನ್ನು ಹೀಗೆ ಪ್ರಶ್ನಿಸಿದನು. ॥ ೨೨-೨೪ ॥

**ಯುಧಿಷ್ಠಿರನು ಹೇಳಿದನು** – "ಅರ್ಜುನಾ! ದ್ವಾರಕಾನಗರಿಯಲ್ಲಿ ನಮ್ಮ ನೆಂಟರಿಷ್ಟರಾದ ಮಧು, ಭೋಜ, ದಶಾರ್ಹ, ಆರ್ಹ, ಸಾತ್ವತ, ಅಂಧಕ ಮತ್ತು ವೃಷ್ಣಿಗಳೆಂಬ ಯಾದವರೆಲ್ಲಾ ಸುಖವಾಗಿದ್ದಾರಷ್ಟೇ! ॥ ೨೫ ॥ ನಮ್ಮ ಮಾನ್ಯ ಮಾತಾಮಹನಾದ ಶೂರಸೇನಮಹಾರಾಜನು ಕುಶಲವಾಗಿದ್ದಾನೆಯೇ? ಸೋದರಮಾವನಾದ ವಸುದೇವನೂ ಮತ್ತು ಅವನ ತಮ್ಮನೂ ಕ್ಷೇಮವೇ? ॥ ೨೬ ॥ ಅವನ ಪತ್ನಿಯರೂ, ನಮ್ಮ ಸೋದರತ್ತೆಯರೂ ಆದ ದೇವಕಿಯೇ ಮುಂತಾದ ಏಳುಮಂದಿ ಸೋದರಿಯರೂ ತಮ್ಮ ಪುತ್ರರೊಡನೆಯೂ, ಸೊಸೆಗಳೊಡನೆಯೂ ಸೌಖ್ಯವಾಗಿದ್ದಾರೆಯೇ? ॥ ೨೭ ॥ ದುಷ್ಟನಾಗಿದ್ದ ಕಂಸನ ತಂದೆ ಉಗ್ರಸೇನ ಮಹಾರಾಜನು ತನ್ನ ತಮ್ಮ ದೇವಕನೊಡನೆ ಕುಶಲವಾಗಿದ್ದಾನೆಯೇ? ಹಾಗೆಯೇ

ಕಚ್ಚಿದ್ರಾಜಾಽಽಹುಕೋ ಜೀವತ್ಯಸತ್ಪುತ್ರೋಽಸ್ಯ ಚಾನುಜಃ ।
ಹೃದೀಕಃ ಸಸುತೋಽಕ್ರೂರೋ ಜಯಂತಗದಸಾರಣಾಃ ॥ ೨೮ ॥

ಆಸತೇ ಕುಶಲಂ ಕಚ್ಚಿದ್ಯೇ ಚ ಶತ್ರುಜಿದಾದಯಃ ।
ಕಚ್ಚಿದಾಸ್ತೇ ಸುಖಂ ರಾಮೋ ಭಗವಾನ್ಸಾತ್ವತಾಂ ಪ್ರಭುಃ ॥ ೨೯ ॥

ಪ್ರದ್ಯುಮ್ನಃ ಸರ್ವವೃಷ್ಣೀನಾಂ ಸುಖಮಾಸ್ತೇ ಮಹಾರಥಃ ।
ಗಂಭೀರರಯೋಽನಿರುದ್ಧೋ ವರ್ಧತೇ ಭಗವಾನುತ ॥ ೩೦ ॥

ಸುಷೇಣಶ್ಚಾರುದೇಷ್ಣಶ್ಚ ಸಾಂಬೋ ಜಾಂಬವತೀಸುತಃ ।
ಅನ್ಯೇ ಚ ಕಾರ್ಷ್ಣಿಪ್ರವರಾಃ ಸಪುತ್ರಾ ಋಷಭಾದಯಃ ॥ ೩೧ ॥

ತಥೈವಾನುಚರಾಃ ಶೌರೇಃ ಶ್ರುತದೇವೋದ್ಧವಾದಯಃ ।
ಸುನಂದನಂದ ಶೀರ್ಷಣ್ಯಾ ಯೇ ಚಾನ್ಯೇ ಸಾತ್ವತರ್ಷಭಾಃ ॥ ೩೨ ॥

ಅಪಿ ಸ್ವಸ್ತ್ಯಾಸತೇ ಸರ್ವೇ ರಾಮಕೃಷ್ಣಭುಜಾಶ್ರಯಾಃ ।
ಅಪಿ ಸ್ಮರಂತಿ ಕುಶಲಮಸ್ಮಾಕಂ ಬದ್ಧಸೌಹೃದಾಃ ॥ ೩೩ ॥

ಭಗವಾನಪಿ ಗೋವಿಂದೋ ಬ್ರಹ್ಮಣ್ಯೋ ಭಕ್ತವತ್ಸಲಃ ।
ಕಚ್ಚಿತ್ಪುರೇ ಸುಧರ್ಮಾಯಾಂ ಸುಖಮಾಸ್ತೇ ಸುಹೃದ್ವೃತಃ ॥ ೩೪ ॥

ಮಂಗಲಾಯ ಚ ಲೋಕಾನಾಂ
ಕ್ಷೇಮಾಯ ಚ ಭವಾಯ ಚ ।
ಆಸ್ತೇ ಯದುಕುಲಾಂಭೋಧಾ-
ವಾದ್ಯೋಽನಂತಸಖಃ ಪುಮಾನ್ ॥ ೩೫ ॥

ಯದ್ಬಾಹುದಂಡಗುಪ್ತಾಯಾಂ ಸ್ವಪುರ್ಯಾಂ ಯದವೋಽರ್ಚಿತಾಃ ।
ಕ್ರೀಡಂತಿ ಪರಮಾನಂದಂ ಮಹಾಪೌರುಷಿಕಾ ಇವ ॥ ೩೬ ॥

ಯತ್ಪಾದಶುಶ್ರೂಷಣಮುಖ್ಯಕರ್ಮಣಾ
ಸತ್ಯಾದಯೋ ದ್ವ್ಯಷ್ಟ ಸಹಸ್ರಯೋಷಿತಃ ।
ನಿರ್ಜಿತ್ಯ ಸಂಖ್ಯೇ ತ್ರಿದಶಾಂಸ್ತದಾಶಿಷೋ
ಹರಂತಿ ವಜ್ರಾಯುಧವಲ್ಲಭೋಚಿತಾಃ ॥ ೩೭ ॥

ಯದ್ಬಾಹುದಂಡಾಭ್ಯುದಯಾನುಜೀವಿನೋ
ಯದುಪ್ರವೀರಾ ಹ್ಯಕುತೋಭಯಾ ಮುಹುಃ ।
ಅಧಿಕ್ರಮಂತ್ಯಂಘ್ರಿಭಿರಾಹೃತಾಂ ಬಲಾತ್
ಸಭಾಂ ಸುಧರ್ಮಾಂ ಸುರಸತ್ತಮೋಚಿತಾಮ್ ॥ ೩೮ ॥

ಕಚ್ಚಿತ್ತೇಽನಾಮಯಂ ತಾತ ಭ್ರಷ್ಟತೇಜಾ ವಿಭಾಸಿ ಮೇ ।
ಅಲಬ್ಧಮಾನೋಽವಜ್ಞಾತಃ ಕಿಂ ವಾ ತಾತ ಚಿರೋಷಿತಃ ॥ ೩೯ ॥

ಹೃದೀಕ, ಅವನ ಪುತ್ರನಾದ ಕೃತವರ್ಮಾ, ಅಕ್ರೂರ, ಜಯಂತ, ಗದ, ಸಾರಣ ಮತ್ತು ಶತ್ರುಜಿತ್ ಮುಂತಾದ ಯಾದವವೀರರು ಕ್ಷೇಮವಾಗಿದ್ದಾರಷ್ಟೇ? ಯಾದವರ ಪ್ರಭುವಾದ, ಪೂಜ್ಯನಾದ ಬಲರಾಮದೇವನೂ ಸುಖವಾಗಿದ್ದಾನೆಯೇ ? ॥ ೨೮-೨೯ ॥ ಯದುವಂಶದ ಸರ್ವಶ್ರೇಷ್ಠಮಹಾರಥಿಯಾದ ಪ್ರದ್ಯುಮ್ನನು ಸುಖವಾಗಿದ್ದಾನೆಯೇ ? ಯುದ್ಧದಲ್ಲಿ ಗಂಭೀರವಾದ ವೇಗ-ಚಟುವಟಿಕೆಗಳುಳ್ಳ ಪೂಜ್ಯನಾದ ಅನಿರುದ್ಧನು ಆನಂದವಾಗಿದ್ದಾನೆಯೇ ? ॥ ೩೦ ॥ ಸುಷೇಣ, ಚಾರುದೇಷ್ಣ, ಜಾಂಬವತೀ ಪುತ್ರನಾದ ಸಾಂಬ ಮತ್ತು ಋಷಭರೇ ಮುಂತಾದ ಶ್ರೀಕೃಷ್ಣನ ಇತರ ಪುತ್ರರೂ, ಅವರ ಪುತ್ರರೂ ಎಲ್ಲರೂ ಕುಶಲರಾಗಿರುವರಷ್ಟೇ ? ॥ ೩೧ ॥ ಭಗವಾನ್ ಶ್ರೀಕೃಷ್ಣನ ಸೇವಕರಾಗಿರುವ ಶ್ರುತದೇವ, ಉದ್ಧವರೇ ಮುಂತಾದ ಯಾದವ ಶ್ರೇಷ್ಠರೂ, ನಂದ-ಸುನಂದರೇ ಮುಂತಾದವರೂ, ಪೂಜ್ಯರಾದ ಶ್ರೀಬಲರಾಮ ಮತ್ತು ಶ್ರೀಕೃಷ್ಣ ದೇವರ ಬಾಹುಬಲದಿಂದ ಸಂರಕ್ಷಿತರಾಗಿರುವ ಇತರರೂ ಎಲ್ಲರೂ ಸೌಖ್ಯವಾಗಿದ್ದಾರೆಯೇ ? ನಮ್ಮಲ್ಲಿ ಪ್ರೀತಿ-ವಿಶ್ವಾಸಗಳುಳ್ಳ ಇವರೆಲ್ಲರೂ ಆಗಾಗ್ಗೆ ನಮ್ಮ ಯೋಗ-ಕ್ಷೇಮಗಳನ್ನು ನೆನಪುಮಾಡಿಕೊಳ್ಳುತ್ತಿದ್ದಾರೆಯೇ ? ॥ ೩೨-೩೩ ॥

ಭಕ್ತವತ್ಸಲನೂ, ಬ್ರಾಹ್ಮಣರಿಗೆ ಪ್ರಿಯನೂ, ಆದ ಭಗವಾನ್ ಶ್ರೀಕೃಷ್ಣನು ತಮ್ಮ ಸ್ವಜನರೊಂದಿಗೆ ದ್ವಾರಕೆಯ ಸುಧರ್ಮಾಸಭೆಯಲ್ಲಿ ಸುಖವಾಗಿ ಇರುವನಷ್ಟೇ ? ॥ ೩೪ ॥ ಆ ಆದಿಪುರುಷನು ಬಲರಾಮನೊಂದಿಗೆ ಲೋಕದ ಮಂಗಳಕ್ಕೋಸ್ಕರವಾಗಿಯೂ ಕ್ಷೇಮಕ್ಕೋಸ್ಕರವಾಗಿಯೂ ಯದುವಂಶವೆಂಬ ಕ್ಷೀರಸಾಗರದಲ್ಲಿ ಅವತರಿಸಿರುವನು. ಅವನ ಬಾಹುಬಲದಿಂದಲೇ ಸುರಕ್ಷಿತವಾದ ತಮ್ಮ ದ್ವಾರಕಾಪುರಿಯಲ್ಲಿ ಯದುವಂಶೀಯರು ಲೋಕದಲ್ಲಿ ಸಂಭಾವಿತರಾಗಿ ಮಹಾಪುರುಷ ನಾರಾಯಣನ ಪಾರ್ಷದರಂತೆ ಸುಖ-ಶಾಂತಿಗಳಿಂದ ವಿಹರಿಸುತ್ತಿರುವರಲ್ಲ ? ॥ ೩೫-೩೬ ॥ ಸತ್ಯಭಾಮೆಯೇ ಮುಂತಾದ ಹದಿನಾರುಸಾವಿರಮಂದಿ ರಾಣಿಯರೂ ಮುಖ್ಯವಾಗಿ ಭಗವಂತನ ಚರಣಸೇವೆಯಲ್ಲೇ ನಿರತರಾಗಿದ್ದು ಇಂದ್ರಾದಿದೇವತೆಗಳನ್ನು ಯುದ್ಧದಲ್ಲಿ ಸೋಲಿಸಿ, ಶಚೀದೇವಿಯ ಭೋಗಕ್ಕೆ ಯೋಗ್ಯವಾದ ಪಾರಿಜಾತವೇ ಮುಂತಾದ ತಮ್ಮ ಇಷ್ಟವಾದ ವಸ್ತುಗಳನ್ನು ಅವನಿಂದ ಪಡೆದು ಅನುಭವಿಸುತ್ತಿದ್ದಾರಲ್ಲ ? ॥ ೩೭ ॥ ಯದುವಂಶೀಯ ವೀರರು ಶ್ರೀಕೃಷ್ಣನ ಬಾಹುದಂಡಗಳ ಪ್ರಭಾವದಿಂದ ಸುರಕ್ಷಿತವಾಗಿ, ನಿರ್ಭಯರಾಗಿ, ಬಲಪೂರ್ವಕವಾಗಿ ತಂದಿರುವ ದೇವಶ್ರೇಷ್ಠರಿಗೆ ಮಾತ್ರವೇ ಭೋಗ್ಯವಾದ ಸುಧರ್ಮಸಭೆಯನ್ನು ತಮ್ಮ ಚರಣಗಳಿಂದ ಆಕ್ರಮಿಸುವರಲ್ಲ ! ॥ ೩೮ ॥

ಅಯ್ಯಾ ಅರ್ಜುನಾ ! ನೀನು ದೇಹಾರೋಗ್ಯದಿಂದ ಚೆನ್ನಾಗಿದ್ದೀಯಲ್ಲ ? ನೀನು ತುಂಬಾ ಕಳೆಗುಂದಿರುವವನಂತೆ ಕಾಣಿಸುತ್ತಿದ್ದೀಯಲ್ಲ ? ಅಲ್ಲಿ ಬಹಳ ದಿನಗಳವರೆಗೆ ನಿಂತರೆ ನಿನಗೆ ತಕ್ಕ ಮಾನ-ಮರ್ಯಾದೆಗಳಲ್ಲಿ ಏನಾದರೂ ಕೊರತೆ ಉಂಟಾಗಲಿಲ್ಲವಲ್ಲ ? ಯಾರಾದರೂ ನಿನಗೆ ಅಪಮಾನ ಮಾಡಲಿಲ್ಲವಲ್ಲ ? ॥ ೩೯ ॥

ಕಚ್ಚಿನ್ನಾಭಿಹತೋऽಭಾವೈಃ ಶಬ್ದಾದಿಭಿರಮಂಗಲೈಃ ।
ನ ದತ್ತಮುಕ್ತಮರ್ಥಿಭ್ಯ ಆಶಯಾ ಯತ್ಪ್ರತಿಶ್ರುತಮ್ ॥ ೪೦ ॥

ಕಚ್ಚಿತ್ತ್ವಂ ಬ್ರಾಹ್ಮಣಂ ಬಾಲಂ ಗಾಂ ವೃದ್ಧಂ ರೋಗಿಣಂ ಸ್ತ್ರಿಯಮ್ ।
ಶರಣೋಪಸೃತಂ ಸತ್ತ್ವಂ ನಾತ್ಯಾಕ್ಷೀಃ ಶರಣಪ್ರದಃ ॥ ೪೧ ॥

ಕಚ್ಚಿತ್ತ್ವಂ ನಾಗಮೋऽಗಮ್ಯಾಂ ಗಮ್ಯಾಂ ವಾಸತ್ಕೃತಾಂ ಸ್ತ್ರಿಯಮ್ ।
ಪರಾಜಿತೋ ವಾಥ ಭವಾನ್ನೋತ್ತಮೈರ್ನಾಸಮೈಃ ಪಥಿ ॥ ೪೨ ॥

ಅಪಿ ಸ್ವಿತ್ಪರ್ಯಭುಂಕ್ಥಾಸ್ತ್ವಂ ಸಂಭೋಜ್ಯಾನ್ವೃದ್ಧ ಬಾಲಕಾನ್ ।
ಜುಗುಪ್ಸಿತಂ ಕರ್ಮ ಕಿಂಚಿತ್ಕೃತವಾನ್ನ ಯದಕ್ಷಮಮ್ ॥ ೪೩ ॥

ಕಚ್ಚಿತ್ಪ್ರೇಷ್ಠತಮೇನಾಥ ಹೃದಯೇನಾತ್ಮಬಂಧುನಾ ।
ಶೂನ್ಯೋऽಸ್ಮಿ ರಹಿತೋ ನಿತ್ಯಂ ಮನ್ಯಸೇ ತೇऽನ್ಯಥಾ ನ ರುಕ್ ॥ ೪೪ ॥

ದುರ್ಭಾವಪೂರ್ಣವಾದ ಅಮಂಗಳವಾದ ಮಾತುಗಳನ್ನಾಡಿ ಯಾರಾದರೂ ನಿನ್ನ ಮನಸ್ಸನ್ನು ನೋಯಿಸಿದರೇ ? ಅಥವಾ ಆಸೆಯಿಂದ ಬಯಸಿ ಬಂದವರಿಗೆ ಮಾಡಿದ ವಾಗ್ದಾನವನ್ನಾಗಲೀ, ನೀನಾಗಿಯೇ ಕೊಡುವುದಾಗಿ ಹೇಳಿದ್ದ ಪ್ರತಿಜ್ಞಾವಚನವನ್ನಾಗಲೀ ನಡೆಸಿಕೊಡದೆ ಹೋದೆಯಾ ? ॥ ೪೦ ॥ ಶರಣು ಬಂದವರನ್ನು ಕೈಬಿಡದೇ ಕಾಪಾಡುವ ಸ್ವಭಾವ ನಿನ್ನದು. ನಿನ್ನಲ್ಲಿ ಶರಣಾಗತರಾದ ಬ್ರಾಹ್ಮಣನನ್ನಾಗಲೀ, ಮಗುವನ್ನಾಗಲೀ, ಗೋವನ್ನಾಗಲೀ, ವೃದ್ಧನನ್ನಾಗಲೀ, ರೋಗಿಯನ್ನಾಗಲೀ, ಅಬಲೆಯಾದ ಸ್ತ್ರೀಯನ್ನಾಗಲಿ, ಅಥವಾ ಬೇರೆ ಯಾವುದೇ ಪ್ರಾಣಿಯನ್ನಾಗಲೀ ಕಾಪಾಡದೆ ಕೈಬಿಡಲಿಲ್ಲ ತಾನೇ ? ॥ ೪೧ ॥ ನೀನು ಸೇರಬಾರದ ಹೆಂಗಸಿನೊಂದಿಗೆ ಸೇರಿ ರಮಿಸಲಿಲ್ಲ ತಾನೇ ? ಅಥವಾ ಸೇರಲು ಯೋಗ್ಯಳಾಗಿದ್ದರೂ ಆಕೆಯನ್ನು ಸತ್ಕರಿಸದೆ ಆಕೆಯೊಡನೆ ಸೇರಿ ರಮಿಸಲಿಲ್ಲ ತಾನೇ ? ದಾರಿಯಲ್ಲಿ ನಿನ್ನಿಂದ ಕೆಳಮಟ್ಟದವರಿಂದಾಗಲೀ, ಸಮಾನರಾದವರಿಂದಾಗಲೀ ಯುದ್ಧದಲ್ಲಿ ಸೋಲಲಿಲ್ಲ ತಾನೇ ? ॥ ೪೨ ॥ ಅಥವಾ ಮೊದಲು ಊಟಮಾಡಲು ಅರ್ಹರಾದ ಬಾಲಕರನ್ನಾಗಲೀ, ಮುದುಕರನ್ನಾಗಲೀ ಬಿಟ್ಟು ನೀನು ಒಬ್ಬನೇ ಅವರಿಗಿಂತ ಮೊದಲು ಊಟಮಾಡಿಲ್ಲ ತಾನೇ ? ನಿನಗೆ ಯೋಗ್ಯವಲ್ಲದ ನಿಂದಿತವಾದ ಯಾವ ಕೆಲಸವನ್ನೂ ನೀನು ಮಾಡಿಲ್ಲ ಎಂಬುದರ ಕುರಿತು ನನಗೆ ವಿಶ್ವಾಸವಿದೆ. ॥ ೪೩॥ ಅಥವಾ ಅತ್ಯಂತ ಪ್ರಿಯತಮನೂ, ಅಭಿನ್ನಹೃದಯನೂ, ಪರಮ ಸುಹೃತ್ತನೂ ಆದ ಭಗವಾನ್ ಶ್ರೀಕೃಷ್ಣನಿಂದ ನೀನು ಅಗಲಿದ ಕಾರಣದಿಂದ 'ಇನ್ನು ನಾನು ಎಂದೆಂದಿಗೂ ಶೂನ್ಯನೇ' ಎಂದು ಭಾವಿಸುತ್ತಾ ಈ ರೀತಿಯಾಗಿರುವೆಯಾ ? ಇದಾವುದೂ ಇಲ್ಲದಿದ್ದರೆ ನಿನಗೆ ಇಂತಹ ಮನೋವ್ಯಥೆ ಉಂಟಾಗುವುದಕ್ಕೆ ಬೇರಾವ ಕಾರಣವೂ ಇರಲಾರದು. ॥ ೪೪ ॥

*ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ ಯುಧಿಷ್ಠಿರವಿತರ್ಕೋ ನಾಮ ಚತುರ್ದಶೋऽಧ್ಯಾಯಃ ॥ ೧೪ ॥**

# ಹದಿನೈದನೆಯ ಅಧ್ಯಾಯ

## ಶ್ರೀಕೃಷ್ಣನ ವಿರಹದಿಂದ ವ್ಯಥೆಗೊಂಡ ಪಾಂಡವರು ಪರೀಕ್ಷಿತನಿಗೆ ಪಟ್ಟಗಟ್ಟಿ ಸ್ವರ್ಗಕ್ಕೆ ತೆರಳಿದುದು –

*ಸೂತ ಉವಾಚ*

ಏವಂ ಕೃಷ್ಣಸಖಃ ಕೃಷ್ಣೋ ಭ್ರಾತ್ರಾ ರಾಜ್ಞಾ ವಿಕಲ್ಪಿತಃ ।
ನಾನಾಶಂಕಾಸ್ಪದಂ ರೂಪಂ ಕೃಷ್ಣವಿಶ್ಲೇಷಕರ್ಶಿತಃ ॥ ೧ ॥

ಶೋಕೇನ ಶುಷ್ಯದ್ವದನಹೃತ್ಸರೋಜೋ ಹತಪ್ರಭಃ ।
ವಿಭುಂ ತಮೇವಾನುಧ್ಯಾಯನ್ನಾಶಕ್ನೋತ್ಪ್ರತಿಭಾಷಿತುಮ್ ॥ ೨ ॥

ಸೂತಪುರಾಣಿಕರು ಹೇಳುತ್ತಾರೆ – ಎಲೈ ಶೌನಕಾದಿ ಮಹರ್ಷಿಗಳೇ ! ಭಗವಾನ್ ಶ್ರೀಕೃಷ್ಣನ ನೆಚ್ಚಿನ ಗೆಳೆಯನಾದ ಅರ್ಜುನನು ಮೊದಲೇ ಶ್ರೀಕೃಷ್ಣವಿರಹದಿಂದ ಕೃಶನಾಗಿದ್ದನು. ಆತನ ವಿಷಾದಗ್ರಸ್ತವಾದ ಮುಖಮುದ್ರೆಯನ್ನು ನೋಡಿ ಯುಧಿಷ್ಠಿರನು ಅನೇಕ ಪ್ರಕಾರದ ಆಶಂಕೆಗಳನ್ನು ಪಡುತ್ತಾ ಪ್ರಶ್ನೆಗಳ ಮಳೆಯನ್ನೇ ಸುರಿಸಿದ್ದನು. ॥ ೧ ॥ ಅರ್ಜುನನ ಮುಖಕಮಲ ಮತ್ತು ಹೃದಯಕಮಲಗಳು ದುಃಖದಿಂದ ಬಾಡಿಹೋಗಿದ್ದವು. ಅವನು ಭಗವಾನ್ ಶ್ರೀಕೃಷ್ಣನ ಧ್ಯಾನದಲ್ಲಿ ಮುಳುಗಿ ಹೋಗಿದ್ದರಿಂದ ಅಣ್ಣನ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಡದಾದನು.॥ ೨ ॥

ಕೃಚ್ಛ್ರೇಣ ಸಂಸ್ತಭ್ಯ ಶುಚಃ ಪಾಣಿನಾಽಽಮೃಜ್ಯ ನೇತ್ರಯೋಃ ।
ಪರೋಕ್ಷೇಣ ಸಮುನ್ನದ್ಧಪ್ರಣಯೌತ್ಕಂಠ್ಯಕಾತರಃ ॥ ೩ ॥

ಸಖ್ಯಂ ಮೈತ್ರೀಂ ಸೌಹೃದಂ ಚ ಸಾರಥ್ಯಾದಿಷು ಸಂಸ್ಮರನ್ ।
ನೃಪಮಗ್ರಜಮಿತ್ಯಾಹ ಬಾಷ್ಪಗದ್ಗದಯಾ ಗಿರಾ ॥ ೪ ॥

ಅರ್ಜುನ ಉವಾಚ

ವಂಚಿತೋಽಹಂ ಮಹಾರಾಜ ಹರಿಣಾ ಬಂಧುರೂಪಿಣಾ ।
ಯೇನ ಮೇಽಪಹೃತಂ ತೇಜೋ ದೇವವಿಸ್ಮಾಪನಂ ಮಹತ್ ॥ ೫ ॥

ಯಸ್ಯ ಕ್ಷಣವಿಯೋಗೇನ ಲೋಕೋ ಹ್ಯಪ್ರಿಯದರ್ಶನಃ ।
ಉಕ್ಥೇನ ರಹಿತೋ ಹ್ಯೇಷ ಮೃತಕಃ ಪ್ರೋಚ್ಯತೇ ಯಥಾ ॥ ೬ ॥

ಯತ್ಸಂಶ್ರಯಾದ್ದ್ರುಪದಗೇಹಮುಪಾಗತಾನಾಂ
ರಾಜ್ಞಾಂ ಸ್ವಯಂವರಮುಖೇ ಸ್ಮರದುರ್ಮದಾನಾಮ್ ।
ತೇಜೋ ಹೃತಂ ಖಲು ಮಯಾಭಿಹತಶ್ಚ ಮತ್ಸ್ಯಃ
ಸಜ್ಜೀಕೃತೇನ ಧನುಷಾಧಿಗತಾ ಚ ಕೃಷ್ಣಾ ॥ ೭ ॥

ಯತ್ಸನ್ನಿಧಾವಹಮುಖಾಂಡವಮಗ್ನಯೇಽದಾ-
ಮಿಂದ್ರಂ ಚ ಸಾಮರಗಣಂ ತರಸಾ ವಿಜಿತ್ಯ ।
ಲಬ್ಧಾ ಸಭಾ ಮಯಕೃತಾದ್ಭುತಶಿಲ್ಪಮಾಯಾ
ದಿಗ್ಭ್ಯೋಽಹರನ್ನೃಪತಯೋ ಬಲಿಮಧ್ವರೇ ತೇ ॥ ೮ ॥

ಯತ್ತೇಜಸಾ ನೃಪಶಿರೋಂಘ್ರಿಮಹನ್ಮಖಾರ್ಥೇ
ಆರ್ಯೋಽನುಜಸ್ತವ ಗಜಾಯುತಸತ್ತ್ವವೀರ್ಯಃ ।
ತೇನಾಹೃತಾಃ ಪ್ರಮಥನಾಥಮಖಾಯ ಭೂಪಾ
ಯನ್ಮೋಚಿತಾಸ್ತದನಯನ್ಬಲಿಮಧ್ವರೇ ತೇ ॥ ೯ ॥

ಪತ್ನ್ಯಾಸ್ತವಾಧಿಮಖಕ್ಲೃಪ್ತಮಹಾಭಿಷೇಕ-
ಶ್ಲಾಘಿಷ್ಠಚಾರುಕಬರಂ ಕಿತವೈಃ ಸಭಾಯಾಮ್ ।
ಸ್ಪೃಷ್ಟಂ ವಿಕೀರ್ಯ ಪದಯೋಃ ಪತಿತಾಶ್ರುಮುಖ್ಯಾ
ಯಸ್ತತ್ ಸ್ತ್ರಿಯೋಽಕೃತ ಹತೇಶವಿಮುಕ್ತಕೇಶಾಃ ॥ ೧೦ ॥

ಶ್ರೀಕೃಷ್ಣನಲ್ಲಿದ್ದ ಪರಮಪ್ರೇಮಕ್ಕೆ ಪರವಶನಾಗಿ ಆತನ ಅಗಲಿಕೆಯನ್ನು ತಾಳಲಾರದೆ ಕಂಗೆಟ್ಟು ತತ್ತರಿಸಿ ಹೋಗಿದ್ದನು. ಹೇಗೋ ಉಮ್ಮಳಿಸಿ ಬರುತ್ತಿದ್ದ ದುಃಖವನ್ನು ಕಷ್ಟದಿಂದ ತಡೆದುಕೊಂಡು ಕಣ್ಣುಗಳಿಂದ ಸುರಿಯುತ್ತಿದ್ದ ಜಲಧಾರೆಯನ್ನು ಕೈಯಿಂದ ಒರೆಸಿಕೊಂಡು, ಸಾರಥ್ಯವೇ ಮುಂತಾದ ಕಾರ್ಯಗಳ ಸಮಯದಲ್ಲಿ ಶ್ರೀಭಗವಂತನು ತನ್ನಲ್ಲಿ ತೋರುತ್ತಿದ್ದ ಸ್ನೇಹ, ಸಲಿಗೆ, ಹೃದಯೈಕ್ಯ ಚಿಂತನೆಗಳನ್ನು ಬಾರಿ-ಬಾರಿಗೂ ನೆನೆಯುತ್ತಾ ಬಾಷ್ಪದಿಂದ ಗದ್ಗದವಾಗಿದ್ದ ಧ್ವನಿಯಿಂದ ಅಣ್ಣನಾದ ಧರ್ಮರಾಜನಿಗೆ ಹೀಗೆ ಉತ್ತರಿಸಿದನು – ॥ ೩-೪ ॥

**ಅರ್ಜುನನು ಹೇಳಿದನು** - ಮಹಾರಾಜಾ! ಬಂಧುವಿನ ರೂಪವನ್ನು ಧರಿಸಿ ಬಂದ ಶ್ರೀಹರಿಯು ನನಗೆ ಮೋಸಮಾಡಿದನು. ದೊಡ್ಡ-ದೊಡ್ಡ ದೇವತೆಗಳನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತಿದ್ದ ನನ್ನ ತೇಜಸ್ಸು-ಪರಾಕ್ರಮಗಳನ್ನು ಕಿತ್ತುಕೊಂಡನು. ॥ ೫ ॥ ಪ್ರಾಣವು ಹೋದೊಡನೆಯೇ ಈ ದೇಹವು ಶವದ ರೂಪವನ್ನು ತಾಳಿ ಅಸಹ್ಯವಾಗಿಬಿಡುವಂತೆ, ಅವನ ಕ್ಷಣಮಾತ್ರದ ವಿಯೋಗದಿಂದ ಈ ಜಗತ್ತು ಅಪ್ರಿಯವಾಗಿ ಕಾಣತೊಡಗುತ್ತದೆ. ॥ ೬ ॥ ಯಾರ ಆಸರೆಯಿಂದ ದ್ರೌಪದೀಸ್ವಯಂವರಕ್ಕೆ ದ್ರುಪದನಲ್ಲಿಗೆ ಬಂದ ಕಾಮೋನ್ಮತ್ತ ರಾಜರುಗಳ ತೇಜಸ್ಸನ್ನು ನಾನು ಕಸಿದುಕೊಳ್ಳುತ್ತಾ ಧನುಷ್ಯಕ್ಕೆ ಬಾಣಹೂಡಿ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಪಡೆದೆನೋ, ಆ ಮಹಾಪುರುಷನು ನನಗೆ ಮೋಸ ಮಾಡಿದನು. ॥ ೭ ॥ ಅವನ ಸಾನ್ನಿಧ್ಯ ಬಲದಿಂದಲೇ ನಾನು ಸಮಸ್ತ ದೇವತೆಗಳೊಂದಿಗೆ ದೇವೇಂದ್ರನನ್ನು ಸೋಲಿಸಿ ಅಗ್ನಿ ದೇವನ ತೃಪ್ತಿಗಾಗಿ ಖಾಂಡವವನವನ್ನು ಸಮರ್ಪಿಸಿದೆನೋ, ದಾನವ ಶಿಲ್ಪಿಯಾದ ಮಯನ ಅದ್ಭುತ ಕಲಾಕೌಶಲ್ಯದಿಂದ ಕೂಡಿದ ಸಭೆಯನ್ನು ಸಂಪಾದಿಸಿದೆನೋ, ನಾನಾ ದಿಕ್ಕುಗಳಿಂದ ಆಗಮಿಸಿದ ಅರಸರು ನಿನಗೆ ಯಜ್ಞದಲ್ಲಿ ಹೇರಳವಾಗಿ ಕಾಣಿಕೆಗಳನ್ನು ಅರ್ಪಿಸಿದರೋ, ಆ ತೇಜೋ ಮೂರ್ತಿಯಿಂದ ನಾನು ವಂಚಿತನಾದೆನು. ॥ ೮ ॥ ಹತ್ತು ಸಾವಿರ ಆನೆಗಳ ಬಲ-ಪರಾಕ್ರಮಗಳಿಂದ ಸಂಪನ್ನನಾದ, ನಿನ್ನ ತಮ್ಮನಾದ ಆರ್ಯಭೀಮಸೇನನು ರಾಜರ ತಲೆಗಳನ್ನು ತಿರಸ್ಕಾರದಿಂದ ಮೆಟ್ಟಿದ್ದ ಜರಾಸಂಧನನ್ನು ಯಾರ ಶಕ್ತಿಯಿಂದ ಸಂಹರಿಸಿ ಆತನು ಭೈರವಯಜ್ಞದಲ್ಲಿ ಬಲಿಯನ್ನಾಗಿ ಅರ್ಪಿಸಲು ಸಂಕಲ್ಪಿಸಿದ್ದ ರಾಜರೆಲ್ಲರನ್ನು ಬಂಧನಮುಕ್ತಗೊಳಿಸಿ, ಅವರೆಲ್ಲರೂ ನಿನ್ನ ಯಜ್ಞದಲ್ಲಿ ಅಪಾರವಾದ ಕಪ್ಪ-ಕಾಣಿಕೆಗಳನ್ನು ಕೊಡುವಂತೆ ಮಾಡಿದನೋ, ಆ ಶಕ್ತಿ ಧರನು ನನ್ನನ್ನು ತೊರೆದುಹೋದನು. ॥ ೯ ॥ ರಾಜಸೂಯ ಯಜ್ಞದ ಅಭಿಷೇಕಜಲದಿಂದ ಪವಿತ್ರವಾಗಿದ್ದ ದ್ರೌಪದಿಯ ಸಿರಿಮುಡಿಯನ್ನು ದುರಾತ್ಮರು ತುಂಬಿದ ಸಭೆಯಲ್ಲಿ ಮುಟ್ಟುವ ಸಾಹಸವನ್ನು ಮಾಡಿದಾಗ ಆಕೆಯು ಕೆದರಿದ ತಲೆಗೂದಲುಗಳಿಂದ ತುಂಬಿದ ಕಣ್ಣೀರಿನಿಂದ ಶ್ರೀಕೃಷ್ಣನ ಚರಣಗಳಲ್ಲಿ ಬಿದ್ದು ಬೇಡಿಕೊಂಡಾಗ, ಅವನು ಅವರಮುಂದೆ ಘೋರ ಅಪಮಾನದ ಪ್ರತೀಕಾರ ಮಾಡುವ ಪ್ರತಿಜ್ಞೆಯನ್ನು ಮಾಡಿ ಆ ಧೂರ್ತರ ಸ್ತ್ರೀಯರನ್ನು ವಿಧವೆಯರನ್ನಾಗಿ ಮಾಡಿ ತಮ್ಮ ಮುಡಿಯನ್ನು ತಾವೇ ಬಿಚ್ಚುಕೊಳ್ಳುವಂತೆ ಮಾಡಿದ ಆ ಸತ್ಯ ಸಂಕಲ್ಪನೂ, ಸಮರ್ಥನೂ ಆದ ಸ್ವಾಮಿಯು ನನ್ನನ್ನು ತೊರೆದು ಹೋದನು. ॥ ೧೦ ॥ ದುಷ್ಟ

ಯೋ ನೋ ಜುಗೋಪ ವನ ಏತ್ಯ ದುರಂತಕೃಚ್ಛ್ರಾದ್
ದುರ್ವಾಸಸೋಽರಿವಿಹಿತಾದಯುತಾಗ್ರಭುಗ್ಯಃ ।
ಶಾಕಾನ್ನಶಿಷ್ಟಮುಪಯುಜ್ಯ ಯತಸ್ತ್ರಿಲೋಕೀಂ
ತೃಪ್ತಾಮಮಂಸ್ತ ಸಲಿಲೇ ವಿನಿಮಗ್ನಸಂಘಃ ॥ ೧೧ ॥

ದುರ್ಯೋಧನನಿಂದ ಪ್ರೇರಿತರಾದ ದುರ್ವಾಸ ಮಹರ್ಷಿಗಳು ತಮ್ಮ ಹತ್ತು ಸಾವಿರ ಶಿಷ್ಯರೊಡನೆ ಭೋಜನಮಾಡಲು ಅಕಾಲದಲ್ಲಿ ಅತಿಥಿಯಾಗಿ ಬಂದಾಗ ಯಾವ ಆಪದ್ಬಾಂಧವನು ಅರಣ್ಯಕ್ಕೆ ಬಂದು ದ್ರೌಪದಿಯು ತಿಂದು ಉಳಿದಿದ್ದ ಸೊಪ್ಪಿನ ಚೂರನ್ನು ತಿಂದು ತೃಪ್ತಿಯಾಯಿತೆಂದು ಹೇಳಿದನೋ, ಸ್ನಾನಕ್ಕೆಂದು ನೀರಿನಲ್ಲಿ ಮುಳುಗಿದ್ದ ಮಹರ್ಷಿಗಳ ಗುಂಪು ಶ್ರೀಕೃಷ್ಣನ ತೃಪ್ತಿಯಿಂದ ಮೂರುಲೋಕಕ್ಕೂ ತೃಪ್ತಿಯಾಗಿದೆ ಎಂದು ನುಡಿಯುವಂತೆ ಮಾಡಿ ಅವರ ಶಾಪದಿಂದ ನಮ್ಮನ್ನು ಸಂರಕ್ಷಿಸಿದನೋ, ಆ ಸ್ವಾಮಿಯು ನಮ್ಮನ್ನು ವಂಚಿಸಿ ಹೋದನು. ॥ ೧೧ ॥ ಯಾವಾತನ ಪ್ರತಾಪದಿಂದ ಯುದ್ಧದಲ್ಲಿ ಪಾರ್ವತೀಸಹಿತ ಪರಮೇಶ್ವರನು ಆಶ್ಚರ್ಯಗೊಂಡು ಪಾಶುಪತಾಸ್ತ್ರವನ್ನು ನನಗೆ ಕರುಣಿಸಿದ್ದನೋ, ಇತರ ದೇವತೆಗಳೂ ತಮ್ಮ-ತಮ್ಮ ಅಸ್ತ್ರಗಳನ್ನು ದಯಪಾಲಿಸಿದರೋ, ನಾನು ಸಶರೀರನಾಗಿಯೇ ಮಹೇಂದ್ರನ ಸಭೆಗೆ ಹೋಗಿ ಆತನ ಅರ್ಧಾಸನದಲ್ಲಿ ಕುಳಿತುಕೊಳ್ಳುವ ಗೌರವ ಪಡೆದೆನೋ ಆತನಿಂದ ನಾನು ವಂಚಿತನಾದೆ. ॥ ೧೨ ॥ ಅಣ್ಣಾ! ನಾನು ಆಗ ಸ್ವರ್ಗದಲ್ಲಿ ವಿಹರಿಸುತ್ತಿದ್ದಾಗ ಯಾರ ಅನುಗ್ರಹದಿಂದ ಪ್ರಭಾವಿತವಾದ ಗಾಂಡೀವ ಧನುಸ್ಸನ್ನು ಹಿಡಿದುಕೊಂಡಿದ್ದ ನನ್ನ ಎರಡೂ ತೋಳುಗಳನ್ನು ಇಂದ್ರಸಹಿತರಾದ ದೇವತೆಗಳೆಲ್ಲರೂ ನಿವಾತಕವಚರೇ ಮುಂತಾದ ದೈತ್ಯರನ್ನು ಕೊಲ್ಲಲು ಆಶ್ರಯಿಸಿದ್ದರೋ ಆ ಪುರುಷೋತ್ತಮ ಶ್ರೀಕೃಷ್ಣನು ಇಂದು ನನಗೆ ಮೋಸಮಾಡಿದನು. ॥ ೧೩ ॥

ಯತ್ತೇಜಸಾಥ ಭಗವಾನ್ಯುಧಿ ಶೂಲಪಾಣಿ-
ರ್ವಿಸ್ಮಾಪಿತಃ ಸಗಿರಿಜೋಽಸ್ತ್ರಮದಾನ್ನಿಜಂ ಮೇ ।
ಅನ್ಯೇಽಪಿ ಚಾಹಮಮುನೈವ ಕಲೇವರೇಣ
ಪ್ರಾಪ್ತೋ ಮಹೇಂದ್ರಭವನೇ ಮಹದಾಸನಾರ್ಧಮ್ ॥ ೧೨ ॥

ತತ್ರೈವ ಮೇ ವಿಹರತೋ ಭುಜದಂಡಯುಗ್ಮಂ
ಗಾಂಡೀವಲಕ್ಷಣಮರಾತಿವಧಾಯ ದೇವಾಃ ।
ಸೇಂದ್ರಾಃ ಶ್ರಿತಾ ಯದನುಭಾವಿತಮಾಜಮೀಢ
ತೇನಾಹಮದ್ಯ ಮುಷಿತಃ ಪುರುಷೇಣ ಭೂಮ್ನಾ ॥ ೧೩ ॥

ಯದ್ಬಾಂಧವಃ ಕುರುಬಲಾಬ್ಧಿಮನಂತಪಾರ-
ಮೇಕೋ ರಥೇನ ತತರೇಽಹಮತಾರ್ಯಸತ್ತ್ವಮ್ ।
ಪ್ರತ್ಯಾಹೃತಂ ಬಹು ಧನಂ ಚ ಮಯಾ ಪರೇಷಾಂ
ತೇಜಾಸ್ಪದಂ ಮಣಿಮಯಂ ಚ ಹೃತಂ ಶಿರೋಭ್ಯಃ ॥ ೧೪ ॥

ಜಯಿಸಲಸಾಧ್ಯವಾದ ಸತ್ತ್ವದಿಂದ ಕೂಡಿದ್ದ ಅಪಾರವಾದ ಕೌರವಸೇನಾ ಸಾಗರವನ್ನು ನಾನು ಯಾರ ಬಂಧುತ್ವದ ಬಲದಿಂದ ಏಕಾಕಿಯಾಗಿಯೇ ರಥದಿಂದ ದಾಟಿದೆನೋ, ಯಾವಾತನ ಸಹಾಯದಿಂದಲೇ ನಾನು ಶತ್ರುಗಳಿಂದ ರಾಜಾ ವಿರಾಟನ ಎಲ್ಲ ಗೋಸಂಪತ್ತನ್ನು ಹಿಂದಕ್ಕೆ ಮರಳಿಸಿಕೊಟ್ಟು, ಜೊತೆಗೆ ಅವರ ಹೊಳೆಯುವ ಮಣಿಮಯ ಕಿರೀಟ ಹಾಗೂ ಅಲಂಕಾರಗಳನ್ನು ಕಿತ್ತುಕೊಂಡೆನೋ, ಅಂತಹ ಶಕ್ತಿನಿಧಿಯಾದ ಪ್ರಭುವು ಕಣ್ಮರೆಯಾದನು. ॥ ೧೪ ॥ ರಾಜೇಂದ್ರನೇ ! ಅಗಣಿತ ಸಂಖ್ಯೆಯಲ್ಲಿದ್ದ ರಾಜರ ರಥಗಳಿಂದ ಕೂಡಿದ್ದ ಭೀಷ್ಮ, ಕರ್ಣ, ದ್ರೋಣ, ಶಲ್ಯ ಹಾಗೂ ಇತರ ರಾಜರುಗಳ ಮುಂದೆ ಸಂಚರಿಸುತ್ತಾ ಯಾರು ಆ ಅತಿರಥ, ಮಹಾರಥರ ಮನಸ್ಸು, ಆಯುಸ್ಸು, ಶಕ್ತಿ ಇವುಗಳನ್ನು ದೃಷ್ಟಿಮಾತ್ರದಿಂದಲೇ ಅಪಹರಿಸಿದ್ದನೋ ಆ ಯಾದವಪತಿಯು ಮರೆಯಾದನು. ॥ ೧೫ ॥ ಯಾರ ಬಾಹುಗಳ ನೆರಳಿನಲ್ಲಿ ಸುರಕ್ಷಿತನಾಗಿದ್ದ ನನ್ನ ಮೇಲೆ ಆಚಾರ್ಯ ದ್ರೋಣರು, ಪಿತಾಮಹ ಭೀಷ್ಮರು, ಕರ್ಣ, ಭೂರಿಶ್ರವ, ಸುಶರ್ಮಾ, ಶಲ್ಯ, ಜಯದ್ರಥ, ಬಾಹ್ಲಿಕ ಮುಂತಾದವರು ಪ್ರಯೋಗಿಸಿದ್ದ ಅಮೋಘವಾದ ಅಸ್ತ್ರಗಳು ನನ್ನನ್ನು ಮುಟ್ಟಲಾರದೆ, ಹಿರಣ್ಯಕಶಿಪು ಮುಂತಾದ ದೈತ್ಯರ ಅಸ್ತ್ರ-ಶಸ್ತ್ರಗಳು ಭಗವದ್ಭಕ್ತ ಪ್ರಹ್ಲಾದನಿಗೆ ಮುಟ್ಟಲಾರದೆ ವಿಫಲವಾದಂತೆ ವಿಫಲವಾಗಿಸಿದನೋ ಅಂತಹ ಅನಂತ ಶಕ್ತಿನಿಧಿಯೂ ಆಶ್ರಿತರಕ್ಷಕನೂ ಆದ ಪ್ರಭುವು ತನ್ನನ್ನು ಉಪಸಂಹಾರ ಮಾಡಿಕೊಂಡನು. ॥ ೧೬ ॥ ಶ್ರೇಷ್ಠರಾದ ಸಾಧು-ಸಜ್ಜನರು ಸಂಸಾರದಿಂದ ಮುಕ್ತರಾಗಲು ಯಾರ ಚರಣಕಮಲಗಳನ್ನು ಭಜಿಸುತ್ತಾರೋ, ಅಂತಹ ಭಕ್ತಜನರಿಗೆ ತನ್ನನ್ನೇ ಪೂರ್ಣವಾಗಿ ಕೊಟ್ಟುಕೊಂಡು

ಯೋ ಭೀಷ್ಮಕರ್ಣಗುರುಶಲ್ಯಚಮೂಷ್ವದಭ್ರ-
ರಾಜನ್ಯವರ್ಯರಥಮಂಡಲಮಂಡಿತಾಸು ।
ಅಗ್ರೇಚರೋ ಮಮ ವಿಭೋ ರಥಯೂಥಪಾನಾ-
ಮಾಯುರ್ಮನಾಂಸಿ ಚ ದೃಶಾ ಸಹ ಓಜ ಆರ್ಚ್ಛತ್ ॥ ೧೫ ॥

ಯದ್ದೋಃಷು ಮಾ ಪ್ರಣಿಹಿತಂ ಗುರುಭೀಷ್ಮಕರ್ಣ-
ನಪ್ತೃತ್ರಿಗರ್ತಶಲ್ಯಸೈಂಧವಬಾಹ್ಲಿಕಾದ್ಯೈಃ ।
ಅಸ್ತ್ರಾಣ್ಯಮೋಘಮಹಿಮಾನಿ ನಿರೂಪಿತಾನಿ
ನೋಪಸ್ಪೃಶುರ್ನೃಹರಿದಾಸಮಿವಾಸುರಾಣಿ ॥ ೧೬ ॥

ಸೌತ್ಯೇ ವೃತಃ ಕುಮತಿನಾಽಽತ್ಮದ ಈಶ್ವರೋ ಮೇ
ಯತ್ಪಾದಪದ್ಮಮಭವಾಯ ಭಜಂತಿ ಭವ್ಯಾಃ ।
ಮಾಂ ಶ್ರಾಂತವಾಹಮರಯೋ ರಥಿನೋ ಭುವಿಷ್ಠಂ
ನ ಪ್ರಾಹರನ್ಯದನುಭಾವನಿರಸ್ತಚಿತ್ತಾಃ ॥ ೧೭ ॥

ನರ್ಮಾಣ್ಯುದಾರರುಚಿರಸ್ಮಿತಶೋಭಿತಾನಿ
ಹೇ ಪಾರ್ಥ ಹೇಽರ್ಜುನ ಸಖೇ ಕುರುನಂದನೇತಿ ।
ಸಂಜಲ್ಪಿತಾನಿ ನರದೇವ ಹೃದಿಸ್ಪೃಶಾನಿ
ಸ್ಮರ್ತುರ್ಲುಠಂತಿ ಹೃದಯಂ ಮಮ ಮಾಧವಸ್ಯ ॥ ೧೮ ॥

ಶಯ್ಯಾಸನಾಟನವಿಕತ್ಥ ನಭೋಜನಾದಿ-
ಷ್ವೈಕ್ಯಾದ್ವಯಸ್ಯ ಋತವಾನಿತಿ ವಿಪ್ರಲಬ್ಧಃ ।
ಸಖ್ಯುಃ ಸಖೇವ ಪಿತೃ ವತ್ತನಯಸ್ಯ ಸರ್ವಂ
ಸೇಹೇ ಮಹಾನ್ಮಹಿತಯಾ ಕುಮತೇರಘಂ ಮೇ ॥ ೧೯ ॥

ಸೋಽಹಂ ನೃಪೇಂದ್ರ ರಹಿತಃ ಪುರುಷೋತ್ತಮೇನ
ಸಖ್ಯಾ ಪ್ರಿಯೇಣ ಸುಹೃದಾ ಹೃದಯೇನ ಶೂನ್ಯಃ ।
ಅಧ್ವನ್ಯುರುಕ್ರಮಪರಿಗ್ರಹಮಂಗ ರಕ್ಷನ್
ಗೋಪೈರಸದ್ಭಿರಬಲೇವ ವಿನಿರ್ಜಿತೋಽಸ್ಮಿ ॥ ೨೦ ॥

ತದ್ವೈ ಧನುಸ್ತ ಇಷವಃ ಸ ರಥೋ ಹಯಾಸ್ತೇ
ಸೋಽಹಂ ರಥೀ ನೃಪತಯೋ ಯತ ಆನಮಂತಿ ।
ಸರ್ವಂ ಕ್ಷಣೇನ ತದಭೂದಸದೀಶರಿಕ್ತಂ
ಭಸ್ಮನ್ಹುತಂ ಕುಹಕರಾದ್ಧಮಿವೋಪ್ತಮೂಷ್ಯಾಮ್ ॥ ೨೧ ॥

ರಾಜಂಸ್ತ್ವಯಾಭಿಪೃಷ್ಟಾನಾಂ ಸುಹೃದಾಂ ನಃ ಸುಹೃತ್ಪುರೇ ।
ವಿಪ್ರಶಾಪವಿಮೂಢಾನಾಂ ನಿಘ್ನತಾಂ ಮುಷ್ಟಿಭಿರ್ಮಿಥಃ
॥ ೨೨ ॥

ವಾರುಣೀಂ ಮದಿರಾಂ ಪೀತ್ವಾ ಮದೋನ್ಮಥಿತಚೇತಸಾಮ್ ।
ಅಜಾನತಾಮಿವಾನ್ಯೋಽನ್ಯಂ ಚತುಃಪಂಚಾವಶೇಷಿತಾಃ
॥ ೨೩ ॥

ಬಿಡುವನೋ, ಆ ಭಗವಂತನನ್ನು ಕುಬುದ್ಧಿಯಿಂದ ನಾನು 'ಯುದ್ಧದಲ್ಲಿ ಸಾರಥಿಯಾಗು' ಎಂದು ಅತ್ಯಲ್ಪ ಕೆಲಸಕ್ಕಾಗಿ ಕೇಳಿ ಬಳಸಿಕೊಂಡುಬಿಟ್ಟೆನಲ್ಲ? ಅಯ್ಯೋ! ನನ್ನ ಕುದುರೆಗಳು ಬಳಲಿದ ಸಮಯದಲ್ಲಿ ನಾನು ರಥದಿಂದ ಕೆಳಗಿಳಿದು ನಿಂತಿರುವಾಗಲೂ ಕೂಡ ಮಹಾರಥಿಗಳಾದ ಶತ್ರುಗಳು ಕೂಡ ನನ್ನ ಮೇಲೆ ಬಾಣ ಪ್ರಯೋಗಿಸಲು ಸಮರ್ಥರಾಗಲಿಲ್ಲ, ಏಕೆಂದರೆ, ಶ್ರೀಕೃಷ್ಣನ ಪ್ರಭಾವದಿಂದ ಅವರ ಬುದ್ಧಿಯು ಅಪಹರಿಸಲ್ಪಟ್ಟಿತ್ತು. ॥ ೧೭ ॥ ಅಣ್ಣಾ! ಆಟದ ಸಮಯದಲ್ಲಿ ಆತನು ಹೇಳುತ್ತಿದ್ದ – 'ಪಾರ್ಥಾ! ಅರ್ಜುನಾ! ಸಖನೇ! ಕುರುನಂದನಾ!' ಇವೇ ಮುಂತಾದ ಉದಾರವಾದ, ರಮಣೀಯವಾದ, ನಸುನಗೆಗೂಡಿದ, ಹೃದಯ ಸ್ಪರ್ಶಿಯಾದ ಮಾತುಗಳು ಸ್ಮರಣೆಗೆ ಬಂದು ನನ್ನ ಹೃದಯವು ಸೂರೆಗೊಳ್ಳುತ್ತಿದೆ. ಓರ್ವ ಸಾಮಾನ್ಯ ವ್ಯಕ್ತಿಯು ಸತ್ತುಹೋದಾಗ ಮನುಷ್ಯನು ಎಷ್ಟು ದುಃಖಿತನಾಗುತ್ತಾನೆಂಬುದು ನಿನಗೆ ತಿಳಿದೇ ಇದೆ. ಹೀಗಿರುವಾಗ ನಮ್ಮ ಸರ್ವಸ್ವನಾದ ಪ್ರಭುವು ಈಗಿಲ್ಲ ದಿರುವಾಗ ಎಷ್ಟು ದುಃಖವಾಗಬೇಡ? ॥ ೧೮ ॥ ಮಲಗುವಾಗ, ಕುಳಿತುಕೊಳ್ಳುವಾಗ, ತಿರುಗಾಡುವಾಗ, ಆತ್ಮಶ್ಲಾಘನೆಮಾಡಿಕೊಳ್ಳು ವಾಗ, ಭೋಜನ ಮಾಡುವಾಗ, ನಾವಿಬ್ಬರೂ ಜೊತೆಯಲ್ಲಿರು ವಾಗ ಹೃದಯೈಕ್ಯವಿದ್ದುದರಿಂದ 'ಮಿತ್ರಾ! ನೀನೇ ತುಂಬಾ ದೊಡ್ಡವನೋ?' ಎಂದು ನಾನು ತಿರಸ್ಕಾರದ ಮಾತುಗಳನ್ನಾಡಿ ದರೂ, ಅವನು ಮಹಾಮಹಿಮನಾಗಿದ್ದುದರಿಂದ – ಮಿತ್ರನ ತಪ್ಪನ್ನು ಮಿತ್ರನೂ, ಮಗನ ಅಪರಾಧವನ್ನು ತಂದೆಯೂ ಸಹಿಸಿ ಕೊಳ್ಳುವಂತೆ ದುರ್ಬುದ್ಧಿಯಾದ ನನ್ನ ಎಲ್ಲ ಅಪರಾಧಗಳನ್ನೂ ಸಹಿಸಿಕೊಂಡಿದ್ದನೋ ಅಂತಹ ಕರುಣಾಮೂರ್ತಿಯು ಕಣ್ಮರೆ ಯಾದನು. ॥ ೧೯ ॥ ರಾಜೇಂದ್ರ! ಮಿತ್ರಶ್ರೇಷ್ಠನೂ, ಪ್ರಿಯಮಿತ್ರನೂ, ಸುಹೃದನೂ ಆದ ಆ ಪುರುಷೋತ್ತಮನನ್ನು ಕಳೆದುಕೊಂಡು ಶೂನ್ಯ ಹೃದಯನಾಗಿ ನಾನು ಆ ಭಗವಂತನ ಪತ್ನಿಯರನ್ನು ದ್ವಾರಕೆ ಯಿಂದ ಜೋಪಾನವಾಗಿ ತರುತ್ತಿದ್ದಾಗ ಮಾರ್ಗಮಧ್ಯದಲ್ಲಿ ಕೆಲವು ಕೀಳುಮಟ್ಟದ ಗೊಲ್ಲರು ನನ್ನನ್ನು ಒಂದು ಅಬಲೆಯಂತೆ ಸೋಲಿಸಿಬಿಟ್ಟರು. ಆ ಸ್ತ್ರೀಯರನ್ನು ಸಂರಕ್ಷಿಸಲಾರದೆ ಹೋದೆನು. ॥ ೨೦ ॥ ಯಾವುದರ ಮುಂದೆ ದೊಡ್ಡ-ದೊಡ್ಡ ರಾಜರೂ ತಲೆ ತಗ್ಗಿಸುತ್ತಿದ್ದರೋ ಅದೇ ಗಾಂಡೀವ ಧನುಸ್ಸು, ಅದೇ ಬಾಣಗಳು, ಅದೇ ರಥ, ಅದೇ ಕುದುರೆಗಳು, ಅತಿರಥಿಯಾದ ನಾನೂ ಆ ಹಿಂದಿನವನೇ. ಆದರೆ ಶ್ರೀಕೃಷ್ಣನನ್ನು ಕಳಕೊಂಡಿದ್ದರಿಂದ ಅವೆಲ್ಲವೂ ಕ್ಷಣಮಾತ್ರದಲ್ಲಿ-ಬೂದಿಯಲ್ಲಿ ಮಾಡಿದ ಹೋಮದಂತೆ, ನೀಚನಿಗೆ ಮಾಡಿದ ಸೇವೆಯಂತೆ, ಮರುಭೂಮಿಯಲ್ಲಿ ಬಿತ್ತಿದ ಬೀಜದಂತೆ ವ್ಯರ್ಥವಾಗಿ ಹೋದುವು. ॥ ೨೧ ॥

ಮಹಾರಾಜನೇ! ದ್ವಾರಕಾವಾಸಿಗಳಾದ ನಮ್ಮ ಸುಹೃದ್-ಸಂಬಂಧಿಗಳ ಕುರಿತು ನೀನು ಕುಶಲಪ್ರಶ್ನೆಮಾಡಿದ್ದೆ. ಆ ಯಾದ ವರೆಲ್ಲರೂ ಬ್ರಾಹ್ಮಣರ ಶಾಪದಿಂದ ಬುದ್ಧಿಯನ್ನೂ ಕಳಕೊಂಡು 'ವಾರುಣೀ' ಎಂಬ ಮದ್ಯವನ್ನು ಕುಡಿದು ಮದೋನ್ಮತ್ತರಾಗಿ ಅಪರಿಚಿತರಂತೆ ಒಬ್ಬರು ಮತ್ತೊಬ್ಬರನ್ನು ಮುಷ್ಟಿಗಳಿಂದಲೂ, ಶಸ್ತ್ರ ಗಳಿಂದಲೂ ಪರಸ್ಪರ ಹೊಡೆದಾಡಿಕೊಂಡು ಸತ್ತುಹೋದರು. ಅವರಲ್ಲಿ ಕೇವಲ ನಾಲ್ಕೈದು ಮಂದಿ ಮಾತ್ರ ಉಳಿದಿರುವರು. ॥ ೨೨-೨೩ ॥ ಪ್ರಪಂಚದ ಪ್ರಾಣಿಗಳು ಪರಸ್ಪರ ಪಾಲನೆ-

ಪ್ರಾಯೇಣೈತದ್ ಭಗವತ ಈಶ್ವರಸ್ಯ ವಿಚೇಷ್ಟಿತಮ್ ।
ಮಿಥೋ ನಿಘ್ನಂತಿ ಭೂತಾನಿ ಭಾವಯಂತಿ ಚ ಯನ್ಮಿಥಃ
॥ ೨೪ ॥

ಜಲೌಕಸಾಂ ಜಲೇ ಯದ್ವನ್ಮಹಾಂತೋಽದಂತ್ಯಣೀಯಸಃ ।
ದುರ್ಬಲಾನ್ ಬಲಿನೋ ರಾಜನ್ಮಹಾಂತೋ ಬಲಿನೋ ಮಿಥಃ
॥ ೨೫ ॥

ಏವಂ ಬಲಿಷ್ಠೈರ್ಯದುಭಿರ್ಮಹದ್ಭಿರಿತರಾನ್ವಿಭುಃ ।
ಯದೂನ್ಯದುಭಿರನ್ಯೋನ್ಯಂ ಭೂಭಾರಾನ್ಸಂಜಹಾರ ಹ
॥ ೨೬ ॥

ದೇಶಕಾಲಾರ್ಥಯುಕ್ತಾನಿ ಹೃತ್ತಾಪೋಪಶಮಾನಿ ಚ ।
ಹರಂತಿ ಸ್ಮರತಶ್ಚಿತ್ತಂ ಗೋವಿಂದಾಭಿಹಿತಾನಿ ಮೇ
॥ ೨೭ ॥

*ಸೂತ ಉವಾಚ*

ಏವಂ ಚಿಂತಯತೋ ಜಿಷ್ಣೋಃ ಕೃಷ್ಣಪಾದಸರೋರುಹಮ್ ।
ಸೌಹಾರ್ದೇನಾತಿಗಾಢೇನ ಶಾಂತಾಽಽಸೀದ್ವಿಮಲಾ ಮತಿಃ
॥ ೨೮ ॥

ವಾಸುದೇವಾಂಘ್ರ್ಯನುಧ್ಯಾನಪರಿಬೃಂಹಿತರಂಹಸಾ ।
ಭಕ್ತ್ಯಾ ನಿರ್ಮಥಿತಾಶೇಷಕಷಾಯಧಿಷಣೋಽರ್ಜುನಃ
॥ ೨೯ ॥

ಗೀತಂ ಭಗವತಾ ಜ್ಞಾನಂ ಯತ್ತತ್ಸಂಗ್ರಾಮಮೂರ್ಧನಿ ।
ಕಾಲಕರ್ಮತಮೋರುದ್ಧಂ ಪುನರಧ್ಯಗಮದ್ವಿಭುಃ
॥ ೩೦ ॥

ವಿಶೋಕೋ ಬ್ರಹ್ಮಸಂಪತ್ತ್ಯಾ ಸಂಛಿನ್ನದ್ವೈತಸಂಶಯಃ ।
ಲೀನಪ್ರಕೃತಿನೈರ್ಗುಣ್ಯಾದಲಿಂಗತ್ವಾದಸಂಭವಃ
॥ ೩೧ ॥

ನಿಶಮ್ಯ ಭಗವನ್ಮಾರ್ಗಂ ಸಂಸ್ಥಾಂ ಯದುಕುಲಸ್ಯ ಚ ।
ಸ್ವಃಪಥಾಯ ಮತಿಂ ಚಕ್ರೇ ನಿಭೃತಾತ್ಮಾ ಯುಧಿಷ್ಠಿರಃ
॥ ೩೨ ॥

ಪೃಥಾಪ್ಯನುಶ್ರುತ್ಯ ಧನಂಜಯೋದಿತಂ
ನಾಶಂ ಯದೂನಾಂ ಭಗವದ್ಗತಿಂ ಚ ತಾಮ್ ।
ಏಕಾಂತಭಕ್ತ್ಯಾ ಭಗವತ್ಯಧೋಕ್ಷಜೇ
ನಿವೇಶಿತಾತ್ಮೋಪರರಾಮ ಸಂಸೃತೇಃ
॥ ೩೩ ॥

ಯಯಾಹರದ್ಭುವೋ ಭಾರಂ ತಾಂ ತನುಂ ವಿಜಹಾವಜಃ ।
ಕಂಟಕಂ ಕಂಟಕೇನೇವ ದ್ವಯಂ ಚಾಪೀಶಿತುಃ ಸಮಮ್
॥ ೩೪ ॥

ಪೋಷಣೆಯನ್ನೂ ಮಾಡುತ್ತವೆ, ಪರಸ್ಪರ ಹೊಡೆದಾಡಿ ಸತ್ತೂ ಹೋಗುತ್ತಾರೆ. ನಿಜವಾಗಿ ಇದು ಸರ್ವಶಕ್ತಿಶಾಲಿಯಾದ ಭಗವಂತನ ಲೀಲೆಯೇ ಆಗಿದೆ. ॥ ೨೪ ॥ ನೀರಿನಲ್ಲಿ ಬದುಕುವ ಮೀನು ಮುಂತಾದ ಜಲಚರ ಪ್ರಾಣಿಗಳಲ್ಲಿ ದೊಡ್ಡದು-ಚಿಕ್ಕದನ್ನು ನುಂಗಿಹಾಕುವಂತೆ, ಜನರಲ್ಲಿಯೂ ಬಲಶಾಲಿಗಳು ದುರ್ಬಲರನ್ನು ಕೊಂದುಹಾಕುತ್ತಾರೆ. ಇಬ್ಬರೂ ಬಲಶಾಲಿಗಳಾಗಿದ್ದರೆ ಪರಸ್ಪರವಾಗಿ ಹೊಡೆದಾಡಿಕೊಂಡು ಸಾಯುತ್ತಾರೆ. ಹೀಗೆಯೇ ಭಗವಂತನು ಮಹಾಬಲಿಷ್ಠರಾಗಿದ್ದ ಯಾದವರ ಮೂಲಕ ಇತರ ರಾಜರನ್ನು ಸಂಹಾರಮಾಡಿಸಿ, ಕೊನೆಗೆ ಆ ಯದುವಂಶೀಯರಲ್ಲೇ ಒಬ್ಬರು ಮತ್ತೊಬ್ಬರನ್ನು ಕೊಂದುಹಾಕುವಂತೆ ಮಾಡಿ ಪೂರ್ಣವಾಗಿ ಭೂಭಾರವನ್ನು ಇಳಿಸಿದನು. ॥ ೨೫-೨೬ ॥ ಭಗವಾನ್ ಶ್ರೀಕೃಷ್ಣನು ನನಗೆ ಮಾಡಿದ ಉಪದೇಶವು ಸಮಯ, ಸನ್ನಿವೇಶ, ಸಂದರ್ಭ, ಉದ್ದೇಶಗಳಿಗೆ ಅನುಗುಣವಾಗಿ ಹೃದಯದ ಸಂತಾಪವನ್ನು ಶಾಂತಗೊಳಿಸುವಂತಿತ್ತು. ಅದು ಸ್ಮರಣೆಗೆ ಬಂದು ನನ್ನ ಚಿತ್ತವು ಸೂರೆಗೊಳ್ಳುತ್ತದೆ." ॥ ೨೭ ॥

**ಸೂತಪುರಾಣಿಕರು ಹೇಳುತ್ತಾರೆ** – ಹೀಗೆ ಭಗವಾನ್ ಶ್ರೀಕೃಷ್ಣನ ಅಡಿದಾವರೆಗಳನ್ನು ಪ್ರಗಾಢವಾದ ಭಕ್ತಿಯಿಂದ ಸ್ಮರಿಸುತ್ತಿರುವಂತೆಯೇ ಅರ್ಜುನನ ಬುದ್ಧಿಯು ತಿಳಿಯಾಗಿ, ಪ್ರಶಾಂತವಾಗಿಬಿಟ್ಟಿತು. ॥ ೨೮ ॥ ಭಗವಾನ್ ಶ್ರೀಕೃಷ್ಣನ ಚರಣಕಮಲಗಳನ್ನು ಹಗಲಿರುಳು ಚಿಂತಿಸುವುದರಿಂದ ಅವನಲ್ಲಿ ಪ್ರೇಮಾಭಕ್ತಿಯು ಹೆಚ್ಚಾಗಿ ಬೆಳೆಯಿತು. ಭಕ್ತಿಯ ಆವೇಶವು ಅವನ ಹೃದಯವನ್ನು ಮಥಿಸಿ, ಅದರಿಂದ ಎಲ್ಲ ವಿಕಾರಗಳನ್ನೂ ತೊಳೆದುಹಾಕಿತು. ॥ ೨೯ ॥ ಯುದ್ಧದ ಪ್ರಾರಂಭದಲ್ಲಿ ಭಗವಂತನು ಅವನಿಗೆ ಮಾಡಿದ ಗೀತೋಪದೇಶದ ಜ್ಞಾನವು-ಕಾಲ, ಕರ್ಮ, ತಮೋಗುಣಗಳ ಪ್ರಭಾವದಿಂದ ಅಲ್ಲಿಯವರೆಗೆ ಮರೆಯಾಗಿದ್ದು, ಈಗ ಮತ್ತೆ ಪುನಃ ಅವನ ಸ್ಮೃತಿಪಥವನ್ನು ಬೆಳಗಿತು. ॥ ೩೦ ॥ ಬ್ರಹ್ಮಜ್ಞಾನದ ಪ್ರಾಪ್ತಿಯಿಂದ ಮಾಯೆಯ ಆವರಣವು ಕಳಚಿಬಿತ್ತು. ತ್ರಿಗುಣಾತೀತ ಅವಸ್ಥೆಯು ಅವನಿಗೆ ಉಂಟಾಯಿತು. ದ್ವೈತದ ಸಂಶಯವು ನಿವೃತ್ತವಾಯಿತು. ಸೂಕ್ಷ್ಮಶರೀರ (ಲಿಂಗಶರೀರ) ಭಂಗವಾಯಿತು. ಅವನು ಶೋಕ ಹಾಗೂ ಹುಟ್ಟು-ಸಾವುಗಳ ಚಕ್ರದಿಂದ ಪೂರ್ಣವಾಗಿ ಬಿಡುಗಡೆಹೊಂದಿದನು. ॥ ೩೧ ॥

ಶ್ರೀಭಗವಂತನು ಸ್ವಧಾಮಕ್ಕೆ ತೆರಳಿದ ವೃತ್ತಾಂತವನ್ನು ಹಾಗೂ ಯದುಕುಲ ಸಂಹಾರದ ಸಮಾಚಾರವನ್ನು ಕೇಳಿ ಯುಧಿಷ್ಠಿರನು ನಿಶ್ಚಲಬುದ್ಧಿಯಿಂದ ಸ್ವರ್ಗಾರೋಹಣವನ್ನು ನಿಶ್ಚಯಿಸಿದನು. ॥ ೩೨ ॥ ಕುಂತೀದೇವಿಯೂ ಕೂಡ ಯದುವಂಶದ ಕ್ಷಯವನ್ನು ಮತ್ತು ಭಗವಂತನ ಸ್ವಧಾಮಗಮನವನ್ನು ಕೇಳಿ ಅನನ್ಯ ಭಕ್ತಿಯಿಂದ ತನ್ನ ಹೃದಯವನ್ನು ಭಗವಾನ್ ಶ್ರೀಕೃಷ್ಣನಲ್ಲಿ ತೊಡಗಿಸಿ ಸಂಸಾರಬಂಧನದಿಂದ ಎಂದೆಂದಿಗೂ ಬಿಡುಗಡೆಹೊಂದಿದಳು. ॥ ೩೩ ॥ ಜನ್ಮರಹಿತನಾದ ಭಗವಂತನು – 'ಮುಳ್ಳಿನಿಂದಲೇ ಮುಳ್ಳನ್ನು ತೆಗೆದು, ಕೊನೆಗೆ ಎರಡನ್ನೂ ಎಸೆದುಬಿಡುವಂತೆ 'ಲೋಕದೃಷ್ಟಿಯಲ್ಲಿ ಯಾವ ಯಾದವ ಶರೀರವನ್ನು ಪ್ರಕಟಪಡಿಸಿ ಅದರಿಂದ ಭೂಭಾರವನ್ನು ಇಳಿಸಿದನೋ, ಆ ಶರೀರವನ್ನೂ ತ್ಯಜಿಸಿಬಿಟ್ಟನು. ಭಗವಂತನ ದೃಷ್ಟಿಯಲ್ಲಿ ಅವೆರಡೂ ಸಮಾನವೇ ಆಗಿವೆಯಷ್ಟೆ! ॥ ೩೪ ॥ ಓರ್ವ ನಟನಂತೆ ಮತ್ಸ್ಯಾದಿ ಅವತಾರ ಶರೀರಗಳನ್ನು

ಯಥಾ ಮತ್ಸ್ಯಾದಿರೂಪಾಣಿ ಧತ್ತೇಜಹ್ಯಾದ್ಯಥಾ ನಟಃ ।
ಭೂಭಾರಃ ಕ್ಷಪಿತೋ ಯೇನ ಜಹೌ ತಚ್ಚ ಕಲೇವರಮ್
॥ ೩೫ ॥

ಯದಾ ಮುಕುಂದೋ ಭಗವಾನಿಮಾಂ ಮಹೀಂ
ಜಹೌ ಸ್ವತನ್ವಾ ಶ್ರವಣೀಯಸತ್ಕಥಃ ।
ತದಾಹರೇವಾಪ್ರತಿಬುದ್ಧಚೇತಸಾ-
ಮಧರ್ಮಹೇತುಃ ಕಲಿರನ್ವವರ್ತತ ॥ ೩೬ ॥

ಯುಧಿಷ್ಠಿರಸ್ತತ್ಪರಿಸರ್ಪಣಂ ಬುಧಃ
ಪುರೇ ಚ ರಾಷ್ಟ್ರೇ ಚ ಗೃಹೇ ತಥಾತ್ಮನಿ ।
ವಿಭಾವ್ಯ ಲೋಭಾನೃತಜಿಹ್ಮಹಿಂಸನಾ-
ದ್ಯಧರ್ಮಚಕ್ರಂ ಗಮನಾಯ ಪರ್ಯಧಾತ್ ॥ ೩೭ ॥

ಸ್ವರಾಟ್ ಪೌತ್ರಂ ವಿನಯಿನಮಾತ್ಮನಃ ಸುಸಮಂ ಗುಣೈಃ ।
ತೋಯನೀವ್ಯಾಃ ಪತಿಂ ಭೂಮೇರಭ್ಯಷಿಂಚದ್ಗಜಾಹ್ವಯೇ
॥ ೩೮ ॥

ಮಥುರಾಯಾಂ ತಥಾ ವಜ್ರಂ ಶೂರಸೇನಪತಿಂ ತತಃ ।
ಪ್ರಾಜಾಪತ್ಯಾಂ ನಿರೂಪ್ಯೇಷ್ಟಿ ಮಗ್ನೀನಪಿಬದೀಶ್ವರಃ
॥ ೩೯ ॥

ವಿಸೃಜ್ಯ ತತ್ರ ತತ್ಸರ್ವಂ ದುಕೂಲವಲಯಾದಿಕಮ್ ।
ನಿರ್ಮಮೋ ನಿರಹಂಕಾರಃ ಸಂಛಿನ್ನಾಶೇಷಬಂಧನಃ
॥ ೪೦ ॥

ವಾಚಂ ಜುಹಾವ ಮನಸಿ ತತ್ಪ್ರಾಣ ಇತರೇ ಚ ತಮ್ ।
ಮೃತ್ಯಾವಪಾನಂ ಸೋತ್ಸರ್ಗಂ ತಂ ಪಂಚತ್ವೇ ಹ್ಯಜೋಹವೀತ್
॥ ೪೧ ॥

ತ್ರಿತ್ವೇ ಹುತ್ವಾಥ ಪಂಚತ್ವಂ ತಚ್ಚೈಕತ್ವೇಽಜುಹೋನ್ಮುನಿಃ ।
ಸರ್ವಮಾತ್ಮನ್ಯಜುಹವೀದ್ ಬ್ರಹ್ಮಣ್ಯಾತ್ಮಾನಮವ್ಯಯೇ
॥ ೪೨ ॥

ಚೀರವಾಸಾ ನಿರಾಹಾರೋ ಬಂಧವಾಙ್ಮುಕ್ತಮೂರ್ಧಜಃ ।
ದರ್ಶಯನ್ನಾತ್ಮನೋ ರೂಪಂ ಜಡೋನ್ಮತ್ತಪಿಶಾಚವತ್
॥ ೪೩ ॥

ಅನವೇಕ್ಷಮಾಣೋ ನಿರಗಾದಶೃಣ್ವನ್ ಬಧಿರೋ ಯಥಾ ।
ಉದೀಚೀಂ ಪ್ರವಿವೇಶಾಶಾಂ ಗತಪೂರ್ವಾಂ ಮಹಾತ್ಮಭಿಃ ।
ಹೃದಿ ಬ್ರಹ್ಮ ಪರಂ ಧ್ಯಾಯನ್ನಾವರ್ತೇತ ಯತೋ ಗತಃ
॥ ೪೪ ॥

ಸ್ವೀಕರಿಸುವ ಭಗವಂತನು ಭೂಭಾರವನ್ನಿಳುಹಲು ಯಾದವ ದೇಹದಿಂದ ಭೂಮಿಗೆ ಇಳಿದಿದ್ದನೋ, ಆ ಶರೀರವನ್ನೂ ಮರೆಮಾಡಿದನು. ॥ ೩೫ ॥ ಶ್ರವಣಮಂಗಳವಾದ ದಿವ್ಯಲೀಲೆಗಳನ್ನು ಯಾವ ದೇಹದಿಂದ ನಡೆಸಿದ್ದನೋ, ಆ ದೇಹವನ್ನು ಭಗವಂತನು ಭೂಮಿಯಲ್ಲಿ ತ್ಯಜಿಸಿದ ದಿನದಿಂದಲೇ ಅವಿವೇಕಿಗಳನ್ನು ಅಧರ್ಮದಲ್ಲಿ ಸಿಲುಕಿಸುವಂತಹ ಕಲಿಯುಗವು ಪ್ರಾರಂಭವಾಯಿತು. ॥ ೩೬ ॥ ವಿವೇಕಿಯಾದ ಧರ್ಮರಾಜನು – ತನ್ನ ರಾಜಧಾನಿಯಲ್ಲಿಯೂ, ರಾಷ್ಟ್ರದಲ್ಲಿಯೂ, ಮನೆ-ಮನೆಗಳಲ್ಲಿಯೂ, ಮನಸ್ಸಿನಲ್ಲಿಯೂ ದುರಾಸೆ, ಅಸತ್ಯ, ಕಾಪಟ್ಯ, ಹಿಂಸೆ ಮುಂತಾದ ಅಧರ್ಮ ಚಕ್ರವನ್ನು ನಡೆಸುವ ಕಲಿಪುರುಷನ ಆಕ್ರಮಣವನ್ನೂ ವಿಸ್ತಾರವನ್ನೂ ಗಮನಿಸಿದಾಗ ಮಹಾಪ್ರಸ್ಥಾನವನ್ನು ನಿಶ್ಚಯಿಸಿದನು. ॥ ೩೭ ॥ ಆ ಸಾರ್ವಭೌಮನು ವಿನಯಸಂಪನ್ನನಾಗಿದ್ದ ಗುಣಸಂಪತ್ತಿನಿಂದ ತನ್ನನ್ನೇ ಸರಿಹೋಲುತ್ತಿದ್ದ ಮೊಮ್ಮಗನಾದ ಪರೀಕ್ಷಿತನನ್ನು ಸಮುದ್ರಪರ್ಯಂತವಾದ ಭೂಮಿಯ ಸಾಮ್ರಾಜ್ಯಪದವಿಯಲ್ಲಿ ಕುಳ್ಳಿರಿಸಿ ಹಸ್ತಿನಾವತಿಯಲ್ಲಿ ಪಟ್ಟಾಭಿಷೇಕ ಮಾಡಿದನು. ॥ ೩೮ ॥ ಹಾಗೆಯೇ ಆ ಪ್ರಭುವು ಮಥುರೆಯಲ್ಲಿ ಶೂರಸೇನ ದೇಶದ ಅಧಿಪತಿಯಾಗಿ ಅನಿರುದ್ಧನ ಪುತ್ರನಾದ ವಜ್ರನಾಭನಿಗೆ ಪಟ್ಟಕಟ್ಟಿದನು. ಅನಂತರ ತಾನು ಪ್ರಾಜಾಪತ್ಯವೆಂಬ ಇಷ್ಟಿಯನ್ನು ಮಾಡಿ ಆಹವನೀಯವೇ ಮುಂತಾದ ಅಗ್ನಿಗಳನ್ನು ತನ್ನಲ್ಲಿಯೇ ಲಯಗೊಳಿಸಿಕೊಂಡು ಗೃಹಸ್ಥಾಶ್ರಮದಿಂದ ಮುಕ್ತನಾಗಿ ಸಂನ್ಯಾಸವನ್ನು ಸ್ವೀಕರಿಸಿದನು. ॥ ೩೯ ॥ ಯುಧಿಷ್ಠಿರನು ತನ್ನ ಅಮೂಲ್ಯವಾದ ವಸ್ತ್ರ-ಆಭೂಷಣಗಳನೆಲ್ಲ ಅಲ್ಲಿಯೇ ತ್ಯಜಿಸಿ, ಅಹಂಕಾರ- ಮಮಕಾರಗಳನ್ನು ತೊರೆದು ಎಲ್ಲ ಸಾಂಸಾರಿಕ ಬಂಧನಗಳನ್ನು ಕತ್ತರಿಸಿ ಹಾಕಿದನು. ॥ ೪೦ ॥ ಅವನು ದೃಢಭಾವನೆಯಿಂದ ವಾಣಿಯನ್ನು ಮನಸ್ಸಿನಲ್ಲಿಯೂ, ಮನಸ್ಸನ್ನು ಪ್ರಾಣದಲ್ಲಿಯೂ, ಪ್ರಾಣವನ್ನು ಅಪಾನದಲ್ಲಿಯೂ, ಅಪಾನವನ್ನು ಅದರ ಕ್ರಿಯೆಗಳೊಂದಿಗೆ ಮೃತ್ಯುವಿನಲ್ಲಿ ಹಾಗೂ ಮೃತ್ಯುವನ್ನು ಪಂಚಭೂತ ಶರೀರದಲ್ಲಿ ಲೀನಗೊಳಿಸಿಕೊಂಡನು. ॥ ೪೧ ॥ ಹೀಗೆ ಶರೀರವನ್ನು ಮೃತ್ಯುರೂಪೀ ಎಂದು ಅನುಭವಿಸುತ್ತಾ ಅವನು ಅದನ್ನು ತ್ರಿಗುಣಗಳ ಸಮುದಾಯದಲ್ಲಿ ವಿಲಯಗೊಳಿಸಿ, ತ್ರಿಗುಣಗಳನ್ನು ಮೂಲಪ್ರಕೃತಿಯಲ್ಲಿಯೂ, ಸರ್ವಕಾರಣರೂಪೀ ಪ್ರಕೃತಿಯನ್ನು ಆತ್ಮನಲ್ಲಿಯೂ, ಆತ್ಮವನ್ನು ಅವಿನಾಶೀ ಬ್ರಹ್ಮನಲ್ಲಿ ವಿಲೀನಗೊಳಿಸಿದನು. ಆಗ ಅವನಿಗೆ ಈ ದೃಶ್ಯಪ್ರಪಂಚವೆಲ್ಲವೂ ಬ್ರಹ್ಮಸ್ವರೂಪವಾಗಿದೆ ಎಂಬ ಅನುಭವ ಆಗತೊಡಗಿತು. ॥ ೪೨ ॥ ಅನಂತರ ಅವನು ನಾರುಮಡಿಯನ್ನುಟ್ಟು, ಅನ್ನ-ಪಾನಾದಿಗಳನ್ನು ತ್ಯಜಿಸಿ, ಮೌನವಹಿಸಿದನು. ಕೂದಲುಗಳನ್ನು ಬಿಚ್ಚಿ ಕೆದರಿಕೊಂಡು ಜಡನಂತೆಯೂ, ಪಿಶಾಚಿಯಂತೆಯೂ ರೂಪ, ವೇಷ, ಕೃತಿಗಳಿಂದ ಕಾಣಿಸಿಕೊಳ್ಳತೊಡಗಿದನು. ॥ ೪೩ ॥ ಮತ್ತೆ ಅವನು ಕುರುಡನಂತೆ ಯಾವುದನ್ನೂ ನೋಡದೆ, ಕಿವುಡನಂತೆ ಯಾವುದನ್ನೂ ಕೇಳದೆ ಮನೆಯಿಂದ ಹೊರಟುಬಿಟ್ಟನು. ಯಾವುದನ್ನು ಪಡೆದ ಬಳಿಕ ಮತ್ತೆ ಸಂಸಾರಕ್ಕೆ ಮರಳುವಿಕೆ ಇರುವುದಿಲ್ಲವೋ ಅಂತಹ ಪರಬ್ರಹ್ಮನನ್ನು ಧ್ಯಾನಿಸುತ್ತಾ, ಮಹಾತ್ಮರೆಲ್ಲರೂ ಮಹಾಪ್ರಸ್ಥಾನ ಮಾಡಿದ ಉತ್ತರದಿಕ್ಕಿನ ಕಡೆಗೆ ಹೊರಟನು. ॥ ೪೪ ॥ ಈಗ ಪೃಥ್ವಿಯಲ್ಲಿ ಎಲ್ಲ ಜನರನ್ನು ಅಧರ್ಮದ ಸಹಾ

ಸರ್ವೇ ತಮನು ನಿರ್ಜಗ್ಮುರ್ಭ್ರಾತರಃ ಕೃತನಿಶ್ಚಯಾಃ।
ಕಲಿನಾಧರ್ಮಮಿತ್ರೇಣ ದೃಷ್ಟ್ವಾ ಸ್ಪೃಷ್ಟಾಃ ಪ್ರಜಾ ಭುವಿ ॥ ೪೫ ॥

ತೇ ಸಾಧುಕೃತಸರ್ವಾರ್ಥಾ ಜ್ಞಾತ್ವಾತ್ಯಂತಿಕಮಾತ್ಮನಃ।
ಮನಸಾ ಧಾರಯಾಮಾಸುರ್ವೈಕುಂಠಚರಣಾಂಬುಜಮ್ ॥ ೪೬ ॥

ತದ್ಧ್ಯಾನೋದ್ರಿಕ್ತಯಾ ಭಕ್ತ್ಯಾ ವಿಶುದ್ಧಧಿಷಣಾಃ ಪರೇ।
ತಸ್ಮಿನ್ನಾರಾಯಣಪದೇ ಏಕಾಂತ ಮತಯೋ ಗತಿಮ್ ॥ ೪೭ ॥

ಅವಾಪುರ್ದುರವಾಪಾಂ ತೇ ಅಸದ್ಭಿರ್ವಿಷಯಾತ್ಮಭಿಃ।
ವಿಧೂತಕಲ್ಮಷಾಸ್ಥಾನೇ ವಿರಜೇನಾತ್ಮನೈವ ಹಿ ॥ ೪೮ ॥

ವಿದುರೋಽಪಿ ಪರಿತ್ಯಜ್ಯ ಪ್ರಭಾಸೇ ದೇಹಮಾತ್ಮವಾನ್।
ಕೃಷ್ಣಾವೇಶೇನ ತಚ್ಚಿತ್ತಃ ಪಿತೃಭಿಃ ಸ್ವಕ್ಷಯಂ ಯಯೌ ॥ ೪೯ ॥

ದ್ರೌಪದೀ ಚ ತದಾಽಽಜ್ಞಾಯ ಪತೀನಾಮನಪೇಕ್ಷತಾಮ್।
ವಾಸುದೇವೇ ಭಗವತಿ ಹ್ಯೇಕಾಂತಮತಿರಾಪ ತಮ್ ॥ ೫೦ ॥

ಯಃ ಶ್ರದ್ಧಯೈತದ್ಭಗವತ್ಪ್ರಿಯಾಣಾಂ
ಪಾಂಡೋಃ ಸುತಾನಾಮಿತಿ ಸಂಪ್ರಯಾಣಮ್।
ಶೃಣೋತ್ಯಲಂ ಸ್ವಸ್ತ್ಯಯನಂ ಪವಿತ್ರಂ
ಲಬ್ಧ್ವಾ ಹರೌ ಭಕ್ತಿಮುಪೈತಿ ಸಿದ್ಧಿಮ್ ॥ ೫೧ ॥

ಯಕ ಕಲಿಯುಗವು ಪ್ರಭಾವಿತಗೊಳಿಸಿದೆ ಎಂದು ಭೀಮಸೇನ, ಅರ್ಜುನನೇ ಮೊದಲಾದ ಧರ್ಮಜನ ತಮ್ಮಂದಿರು ನೋಡಿ, ಆ ಶ್ರೀಕೃಷ್ಣಪರಮಾತ್ಮನ ಚರಣಗಳ ಪ್ರಾಪ್ತಿಯ ದೃಢನಿಶ್ಚಯಗೈದು ತಮ್ಮ ಅಣ್ಣನೊಡನೆ ಹಿಂದೆ-ಹಿಂದೆ ನಡೆದುಬಿಟ್ಟರು. ॥ ೪೫ ॥ ಅವರೆಲ್ಲರೂ ಜೀವನದ ಎಲ್ಲ ಲಾಭಗಳನ್ನು ಚೆನ್ನಾಗಿ ಪಡೆದು ಕೊಂಡಿದ್ದರು. ಇನ್ನು ನಮಗೆ ಭಗವಾನ್ ಶ್ರೀಕೃಷ್ಣನ ಚರಣ ಕಮಲಗಳೇ ಪರಮಪುರುಷಾರ್ಥವೆಂದು ನಿಶ್ಚಯಿಸಿಕೊಂಡು ಅವರು ಅವನ್ನು ಹೃದಯದಲ್ಲಿ ಧರಿಸಿಕೊಂಡರು. ॥ ೪೬ ॥ ಪಾಂಡವರ ಹೃದಯದಲ್ಲಿ ಭಗವಾನ್ ಶ್ರೀಕೃಷ್ಣನ ಚರಣಕಮಲಗಳ ಧ್ಯಾನದಿಂದ ಭಕ್ತಿಭಾವವು ಉಕ್ಕಿಬಂತು. ಅವರ ಬುದ್ಧಿಗಳು ಪೂರ್ಣ ರೂಪದಿಂದ ಶುದ್ಧವಾಗಿ ಪುಣ್ಯಾತ್ಮರು ಸ್ಥಿರವಾಗಿ ನೆಲೆಸುವ ಆ ಭಗವಾನ್ ಶ್ರೀಕೃಷ್ಣನ ಸರ್ವೋತ್ತಮವಾದ ಸ್ವರೂಪದಲ್ಲಿ ಅನನ್ಯ ಭಾವದಿಂದ ಸ್ಥಿರವಾದುವು. ಫಲಸ್ವರೂಪವಾಗಿ ವಿಷಯಾಸಕ್ತ ದುಷ್ಟ ಜನರು ಎಂದೂ ಪಡೆಯಲಾರದ ಗತಿಯನ್ನು ವಿಶುದ್ಧ ಅಂತಃಕರಣದಿಂದ ಅವರು ಪಡೆದುಕೊಂಡರು. ॥ ೪೭-೪೮ ॥ ಸಂಯಮಿ ಹಾಗೂ ಶ್ರೀಕೃಷ್ಣನ ಪ್ರೇಮದಿಂದ ಮುಗ್ಧನಾದ ಭಗವನ್ಮಯ ವಿದುರನೂ ಕೂಡ ತನ್ನ ಶರೀರವನ್ನು ಪ್ರಭಾಸಕ್ಷೇತ್ರದಲ್ಲಿ ತ್ಯಜಿಸಿಬಿಟ್ಟನು. ಆಗ ಅವನನ್ನು ಕರೆದುಕೊಂಡು ಹೋಗಲು ಬಂದ ಪಿತೃಗಳೊಂದಿಗೆ ಅವನು ತನ್ನ ಲೋಕ (ಯಮಲೋಕ)ಕ್ಕೆ ಹೊರಟು ಹೋದನು. ॥ ೪೯ ॥ ಈಗ ಪಾಂಡವರು ನಿರಪೇಕ್ಷರಾಗಿದ್ದಾರೆಂದು ದ್ರೌಪದಿಯು ಗಮನಿಸಿ, ಅವಳು ಅನನ್ಯ ಭಕ್ತಿಯಿಂದ ಭಗವಾನ್ ಶ್ರೀಕೃಷ್ಣನನ್ನೇ ಚಿಂತಿಸುತ್ತಾ, ಅವನನ್ನು ಪಡೆದುಕೊಂಡಳು. ॥ ೫೦ ॥

ಪರಮಪವಿತ್ರವೂ, ಮಂಗಳಕರವೂ ಆದ ಭಗವಂತನ ಪ್ರಿಯ ಭಕ್ತರಾದ ಪಾಂಡವರ ಮಹಾಪ್ರಯಾಣದ ಈ ಕಥೆಯನ್ನು ಶ್ರದ್ಧೆಯಿಂದ ಕೇಳುವವನು ನಿಶ್ಚಯವಾಗಿ ಭಗವಂತನ ಭಕ್ತಿ ಮತ್ತು ಮುಕ್ತಿಗಳನ್ನು ಪಡೆದುಕೊಳ್ಳುವನು. ॥ ೫೧ ॥

*ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಪಾಂಡವಸ್ವರ್ಗಾರೋಹಣಂ ನಾಮ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ಪರೀಕ್ಷಿದ್ರಾಜನ ದಿಗ್ವಿಜಯ ಮತ್ತು ಧರ್ಮ-ಪೃಥ್ವೀ ಸಂವಾದ

*ಸೂತ ಉವಾಚ*

ತತಃ ಪರೀಕ್ಷಿದ್ದ್ವಿಜವರ್ಯಶಿಕ್ಷಯಾ
ಮಹೀಂ ಮಹಾಭಾಗವತಃ ಶಶಾಸ ಹ।
ಯಥಾ ಹಿ ಸೂತ್ಯಾಮಭಿಜಾತಕೋವಿದಾಃ
ಸಮಾದಿಶನ್ವಿಪ್ರ ಮಹದ್ಗುಣಸ್ತಥಾ ॥ ೧ ॥

ಸೂತಪುರಾಣಿಕರು ಹೇಳುತ್ತಾರೆ – ಬ್ರಾಹ್ಮಣೋತ್ತಮರಾದ ಶೌನಕರೇ! ಪಾಂಡವರ ಮಹಾಪ್ರಸ್ಥಾನದ ಬಳಿಕ ಪರಮ ಭಾಗವತೋತ್ತಮನಾದ ಪರೀಕ್ಷಿದ್ರಾಜನು ಬ್ರಾಹ್ಮಣಶ್ರೇಷ್ಠರ ಉಪದೇಶದಂತೆ ಭೂಮಿಯನ್ನು ಆಳತೊಡಗಿದನು. ಆತನ ಜನ್ಮಸಮಯದಲ್ಲಿ ಜ್ಯೋತಿರ್ವಿದ್ವಾಂಸರು ಅವನ ಸಂಬಂಧವಾಗಿ ಹೇಳಿದ್ದ ಶ್ರೇಷ್ಠ ಗುಣಗಳೆಲ್ಲವೂ ಅವನಲ್ಲಿ ಪೂರ್ಣವಾಗಿ ಕಂಡು ಬಂದವು. ॥ ೧ ॥

ಸ ಉತ್ತರಸ್ಯ ತನಯಾಮುಪಯೇಮ ಇರಾವತೀಮ್ ।
ಜನಮೇಜಯಾದೀಂಶ್ಚತುರಸ್ತಸ್ಯಾಮುತ್ಪಾದಯತ್ಸುತಾನ್ ॥ ೨ ॥

ಆಜಹಾರಾಶ್ವಮೇಧಾಂಸ್ತ್ರೀನ್ ಗಂಗಾಯಾಂ ಭೂರಿದಕ್ಷಿಣಾನ್ ।
ಶಾರದ್ವತಂ ಗುರುಂ ಕೃತ್ವಾ ದೇವಾ ಯತ್ರಾಕ್ಷಿಗೋಚರಾಃ ॥ ೩ ॥

ನಿಜಗ್ರಾಹೌಜಸಾ ವೀರಃ ಕಲಿಂ ದಿಗ್ವಿಜಯೇ ಕ್ವಚಿತ್ ।
ನೃಪಲಿಂಗಧರಂ ಶೂದ್ರಂ ಘ್ನಂತಂ ಗೋಮಿಥುನಂ ಪದಾ ॥ ೪ ॥

*ಶೌನಕ ಉವಾಚ*

ಕಸ್ಯ ಹೇತೋರ್ನಿಜಗ್ರಾಹ ಕಲಿಂ ದಿಗ್ವಿಜಯೇ ನೃಪಃ ।
ನೃದೇವಚಿಹ್ನಧೃಕ್‌ಶೂದ್ರಕೋऽಸೌ ಗಾಂ ಯಃ ಪದಾಹನತ್ ॥ ೫ ॥

ತತ್ಕಥ್ಯತಾಂ ಮಹಾಭಾಗ ಯದಿ ಕೃಷ್ಣಕಥಾಶ್ರಯಮ್ ।
ಅಥವಾಸ್ಯ ಪದಾಂಭೋಜಮಕರಂದಲಿಹಾಂ ಸತಾಮ್ ।
ಕಿಮನ್ಯೈರಸದಾಲಾಪೈರಾಯುಷೋ ಯದಸದ್ವ್ಯಯಃ ॥ ೬ ॥

ಕ್ಷುದ್ರಾಯುಷಾಂ ನೃಣಾಮಂಗ ಮರ್ತ್ಯಾನಾಮೃತಮಿಚ್ಛತಾಮ್ ।
ಇಹೋಪಹೂತೋ ಭಗವಾನ್ಮೃತ್ಯುಃ ಶಾಮಿತ್ರಕರ್ಮಣಿ ॥ ೭ ॥

ನ ಕಶ್ಚಿನ್ಮ್ರಿಯತೇ ತಾವದ್ಯಾವದಾಸ್ತ ಇಹಾಂತಕಃ ।
ಏತದರ್ಥಂ ಹಿ ಭಗವಾನಾಹೂತಃ ಪರಮರ್ಷಿಭಿಃ ।
ಅಹೋ ನೃಲೋಕೇ ಪೀಯೇತ ಹರಿಲೀಲಾಮೃತಂ ವಚಃ ॥ ೮ ॥

ಮಂದಸ್ಯ ಮಂದಪ್ರಜ್ಞಸ್ಯ ವಯೋ ಮಂದಾಯುಷಶ್ಚ ವೈ ।
ನಿದ್ರಯಾ ಹ್ರಿಯತೇ ನಕ್ತಂ ದಿವಾ ಚ ವ್ಯರ್ಥಕರ್ಮಭಿಃ ॥ ೯ ॥

*ಸೂತ ಉವಾಚ*

ಯದಾ ಪರೀಕ್ಷಿತ್ಕುರುಜಾಂಗಲೇऽವಸತ್
ಕಲಿಂ ಪ್ರವಿಷ್ಟಂ ನಿಜಚಕ್ರವರ್ತಿತೇ ।
ನಿಶಮ್ಯ ವಾರ್ತಾಮನತಿಪ್ರಿಯಾಂ ತತಃ
ಶರಾಸನಂ ಸಂಯುಗಶೌಂಡಿರಾದದೇ ॥ ೧೦ ॥

ಅವನು ತನ್ನ ಸೋದರಮಾವನಾದ ಉತ್ತರನ ಪುತ್ರೀ 'ಇರಾವತಿ' ಎಂಬುವಳೊಡನೆ ವಿವಾಹವಾದನು. ಆಕೆಯಲ್ಲಿ ಜನಮೇಜಯನೇ ಮೊದಲಾದ ನಾಲ್ಕು ಪುತ್ರರನ್ನು ಪಡೆದನು. ॥ ೨ ॥ ಕೃಪಾಚಾರ್ಯರನ್ನು ಆಚಾರ್ಯನನ್ನಾಗಿ ಕೊಂಡು ಗಂಗಾತೀರದಲ್ಲಿ ಮೂರು ಅಶ್ವಮೇಧಯಜ್ಞಗಳನ್ನು ಮಾಡಿದನು. ಆ ಎಲ್ಲ ಯಜ್ಞಗಳಲ್ಲಿಯೂ ಬ್ರಾಹ್ಮಣರಿಗೆ ಹೇರಳವಾಗಿ ದಕ್ಷಿಣೆ ಕೊಡಲಾಯಿತು. ಆ ಯಾಗಗಳಲ್ಲಿ ದೇವತೆಗಳು ಪ್ರತ್ಯಕ್ಷವಾಗಿ ಬಂದು ತಮ್ಮ-ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸುತ್ತಿದ್ದರು. ॥ ೩ ॥ ಒಮ್ಮೆ ಅವನು ದಿಗ್ವಿಜಯ ಮಾಡುತ್ತಿದ್ದಾಗ ಒಂದೆಡೆಯಲ್ಲಿ ಶೂದ್ರನ ರೂಪದಲ್ಲಿ ಕಲಿಯುಗವು ರಾಜವೇಷವನ್ನು ತೊಟ್ಟು ಒಂದು ಗೋವು ಮತ್ತು ಒಂದು ಎತ್ತು ಈ ಜೋಡಿಯನ್ನು ಕಾಲಿನಿಂದ ಒದೆಯುತ್ತಿರುವುದನ್ನು ನೋಡಿದನು. ಆಗ ಪರೀಕ್ಷಿತನು ಅವನನ್ನು ಪರಾಕ್ರಮದಿಂದ ನಿಗ್ರಹಿಸಿದನು. ॥ ೪ ॥

**ಶೌನಕರು ಕೇಳಿದರು** – ಸೂತಪುರಾಣಿಕರೇ! 'ಪರೀಕ್ಷಿದ್ರಾಜನು ದಿಗ್ವಿಜಯದ ಸಮಯದಲ್ಲಿ ಕಲಿಪುರುಷನನ್ನು ಶಿಕ್ಷಿಸಿ, ಏಕೆ ಬಿಟ್ಟುಬಿಟ್ಟನು? ಕೊಲ್ಲಲಿಲ್ಲವೇಕೆ? ಏಕೆಂದರೆ, ಗೋವನ್ನು ಕಾಲಿನಿಂದ ಒದ್ದವನು ರಾಜನವೇಷ ತೊಟ್ಟುಕೊಂಡಿದ್ದರೂ ಅವನು ಅಧಮನಾದ ಶೂದ್ರನೇ ಆಗಿದ್ದನು. ಈ ಪ್ರಸಂಗವು ಭಗವಾನ್ ಶ್ರೀಕೃಷ್ಣನ ಲೀಲೆಗಳಿಗೆ ಸಂಬಂಧಪಟ್ಟಿದ್ದರೆ, ಅಥವಾ ಭಗವಂತನ ಚರಣಕಮಲಗಳ ಮಕರಂದವನ್ನು ಪಾನಮಾಡುವ ರಸಿಕ ಮಹಾನುಭಾವರೊಂದಿಗೆ ಸಂಬಂಧ ಇರುವುದಾದರೆ ಅವಶ್ಯವಾಗಿ ಹೇಳಿರಿ. ಬೇರೆ ವ್ಯರ್ಥವಾದ ಮಾತುಗಳಿಂದೇನಾಗಬೇಕು? ಅದರಲ್ಲಿ ಆಯುಸ್ಸು ವ್ಯರ್ಥವಾಗಿ ನಷ್ಟವಾಗುತ್ತದೆ. ॥ ೫-೬ ॥ ಪೂಜ್ಯ ಸೂತರೇ! ಕೆಲವರಿಗೆ ಮೋಕ್ಷವನ್ನು ಪಡೆಯುವ ಇಚ್ಛೆ ಇದ್ದರೂ, ಅವರು ಅಲ್ಪಾಯುಸ್ಸುಳ್ಳವರಾಗಿ ಕಾಲನಿಗೆ ಕವಳವಾಗುತ್ತಾರೆ. ಅಂತಹವರ ಶ್ರೇಯಸ್ಸಿಗಾಗಿಯೇ ಋತ್ವಿಜರು ಭಗವಾನ್ ಯಮದೇವರನ್ನು ಇಲ್ಲಿಗೆ ಆಹ್ವಾನಿಸಿ, ಶಾಮಿತ್ರಕರ್ಮದಲ್ಲಿ ನೇಮಿಸಿಬಿಟ್ಟಿದ್ದಾರೆ. ॥ ೭ ॥ ಯಮರಾಜನು ಇಲ್ಲಿ ಈ ಕರ್ಮದಲ್ಲಿ ನಿಯುಕ್ತನಾಗಿರುವವರೆಗೆ ಯಾರ ಮೃತ್ಯುವೂ ಆಗಲಾರದು. ಮೃತ್ಯುವಿನಿಂದ ಗ್ರಸ್ತರಾದ ಮರ್ತ್ಯಲೋಕದ ಜೀವಿಗಳೂ ಕೂಡ ಭಗವಂತನ ಅಮೃತತುಲ್ಯ ಲೀಲಾ-ಕಥೆಗಳನ್ನು ಪಾನಮಾಡ ಬಹುದು ಎಂದು ಮಹರ್ಷಿಗಳು ಭಗವಾನ್ ಯಮನನ್ನು ಇಲ್ಲಿ ಕರೆಸಿದ್ದಾರೆ. ॥ ೮ ॥ ಈ ಯುಗದಲ್ಲಿ ಮನುಷ್ಯರಿಗೆ ಆಯುಸ್ಸು ಕಡಿಮೆ, ಜೊತೆಗೆ ತಿಳಿವಳಿಕೆಯೂ ಅಲ್ಪವೇ. ಇಂತಹ ಸ್ಥಿತಿಯಲ್ಲಿ ಜಗತ್ತಿನ ಮಂದಭಾಗ್ಯರಾದ ವಿಷಯೀ ಜನರ ಆಯುಸ್ಸು – ನಿದ್ದೆ ಯಲ್ಲಿ ರಾತ್ರಿಯು, ವ್ಯರ್ಥಕರ್ಮಗಳಲ್ಲಿ ಹಗಲು ಹೀಗೆ ವ್ಯರ್ಥವಾಗಿಯೇ ಕಳೆದುಹೋಗುತ್ತಿದೆ. ॥ ೯ ॥

**ಸೂತಪುರಾಣಿಕರು ಹೇಳಿದರು** – ಶೌನಕರೇ! ರಾಜಾ ಪರೀಕ್ಷಿತನು ಕುರುಜಾಂಗಲ ದೇಶದಲ್ಲಿ ಚಕ್ರವರ್ತಿಯಾಗಿದ್ದಾಗ ತನ್ನ ಚಕ್ರಾಧಿಪತ್ಯಕ್ಕೆ ಒಳಪಟ್ಟ ದೇಶದಲ್ಲಿ ಕಲಿಪುರುಷನು ಪ್ರವೇಶಿಸಿರುವನೆಂದು ಕೇಳಿದನು. ಆ ಅಪ್ರಿಯ ಸಮಾಚಾರವನ್ನು ಕೇಳಿ ಆತನಿಗೆ ದುಃಖವಾಯಿತಾದರೂ, ಆ ದುಷ್ಟನಾದ ಕಲಿಯೊಡನೆ ಯುದ್ಧಮಾಡಿ ಅವನನ್ನು ನಿಗ್ರಹಿಸುವ ಅವಕಾಶ ಸಿಕ್ಕಿತಲ್ಲ ಎಂದು ಸಮಾಧಾನಪಟ್ಟು, ಆ ಯುದ್ಧವೀರನು ಕೈಯಲ್ಲಿ ಧನುಸ್ಸನ್ನೆತ್ತಿಕೊಂಡನು. ॥ ೧೦ ॥ ಚೆನ್ನಾಗಿ ಸಿಂಗರಿಸಲ್ಪಟ್ಟಿದ್ದ ಸಿಂಹಧ್ವಜದಿಂದ ಕೂಡಿದ

ಸ್ವಲಂಕೃತಂ ಶ್ಯಾಮತುರಂಗಯೋಜಿತಂ
ರಥಂ ಮೃಗೇಂದ್ರಧ್ವಜಮಾಶ್ರಿತಃ ಪುರಾತ್ ।
ವೃತೋ ರಥಾಶ್ವದ್ವಿಪಪತ್ತಿಯುಕ್ತಯಾ
ಸ್ವಸೇನಯಾ ದಿಗ್ವಿಜಯಾಯ ನಿರ್ಗತಃ ॥ ೧೧ ॥

ಭದ್ರಾಶ್ವಂ ಕೇತುಮಾಲಂ ಚ ಭಾರತಂ ಚೋತ್ತರಾನ್ ಕುರೂನ್ ।
ಕಿಂಪುರುಷಾದೀನಿ ವರ್ಷಾಣಿ ವಿಜಿತ್ಯ ಜಗೃಹೇ ಬಲಿಮ್ ॥ ೧೨ ॥

ತತ್ರ ತತ್ರೋಪಶೃಣ್ವಾನಃ ಸ್ವಪೂರ್ವೇಷಾಂ ಮಹಾತ್ಮನಾಮ್ ।
ಪ್ರಗೀಯಮಾಣಂ ಚ ಯಶಃ ಕೃಷ್ಣಮಾಹಾತ್ಮ್ಯಸೂಚಕಮ್ ॥ ೧೩ ॥

ಆತ್ಮಾನಂ ಚ ಪರಿತ್ರಾತಮಶ್ವತ್ಥಾಮ್ನೋಽಸ್ತ್ರ ತೇಜಸಃ ।
ಸ್ನೇಹಂ ಚ ವೃಷ್ಣಿ ಪಾರ್ಥಾನಾಂ ತೇಷಾಂ ಭಕ್ತಿಂ ಚ ಕೇಶವೇ ॥ ೧೪ ॥

ತೇಭ್ಯಃ ಪರಮಸಂತುಷ್ಟಃ ಪ್ರೀತ್ಯುಜ್ಜೃಂಭಿತಲೋಚನಃ ।
ಮಹಾಧನಾನಿ ವಾಸಾಂಸಿ ದದೌ ಹಾರಾನ್ಮಹಾಮನಾಃ ॥ ೧೫ ॥

ಸಾರಥ್ಯ ಪಾರಷದಸೇವನಸಖ್ಯ ದೌತ್ಯ-
ವೀರಾಸನಾನುಗಮನಸ್ತವನಪ್ರಣಾಮಾನ್ ।
ಸ್ನಿಗ್ಧೇಷು ಪಾಂಡುಷು ಜಗತ್ಪ್ರಣತಿಂ ಚ ವಿಷ್ಣೋ-
ರ್ಭಕ್ತಿಂ ಕರೋತಿ ನೃಪತಿಶ್ಚರಣಾರವಿಂದೇ ॥ ೧೬ ॥

ತಸ್ಯೈವಂ ವರ್ತಮಾನಸ್ಯ ಪೂರ್ವೇಷಾಂ ವೃತ್ತಿಮನ್ವಹಮ್ ।
ನಾತಿದೂರೇ ಕಿಲಾಶ್ಚರ್ಯಂ ಯದಾಸೀತ್ತನ್ನಿಬೋಧ ಮೇ ॥ ೧೭ ॥

ಧರ್ಮಃ ಪದೈಕೇನ ಚರನ್ವಿಚ್ಛಾಯಾಮುಪಲಭ್ಯ ಗಾಮ್ ।
ಪೃಚ್ಛತಿ ಸ್ಮಾಶ್ರುವದನಾಂ ವಿವತ್ಸಾಮಿವ ಮಾತರಮ್ ॥ ೧೮ ॥

ಧರ್ಮ ಉವಾಚ

ಕಚ್ಚಿದ್ಭದ್ರೇಽನಾಮಯಮಾತ್ಮನಸ್ತೇ
ವಿಚ್ಛಾಯಾಸಿ ಮ್ಲಾಯತೇಷನ್ಮುಖೇನ ।
ಆಲಕ್ಷಯೇ ಭವತೀಮಂತರಾಧಿಂ
ದೂರೇ ಬಂಧುಂ ಶೋಚಸಿ ಕಂಚನಾಂಬ ॥ ೧೯ ॥

ಶ್ಯಾಮಲವರ್ಣದ ಕುದುರೆಗಳನ್ನು ಹೂಡಿದ್ದ ರಥವನ್ನೇರಿ, ರಥಾಶ್ವಗಜಪದಾತಿಗಳೆಂಬ ಚತುರಂಗಬಲವನ್ನು ಕೂಡಿಕೊಂಡು ದಿಗ್ವಿಜಯಕ್ಕಾಗಿ ನಗರದಿಂದ ಹೊರವಂಟನು. ॥ ೧೧ ॥ ಅವನು ಭದ್ರಾಶ್ವ ಕೇತುಮಾಲ, ಭಾರತ, ಉತ್ತರ ಕುರು, ಕಿಂಪುರುಷವರ್ಷ ಮುಂತಾದ ಪ್ರದೇಶಗಳನ್ನೆಲ್ಲ ಜಯಿಸಿ, ಅಲ್ಲಿಯ ರಾಜರಿಂದ ಕಪ್ಪ-ಕಾಣಿಕೆಗಳನ್ನು ಪಡೆದುಕೊಂಡನು. ॥ ೧೨ ॥ ಆ ದೇಶಗಳಲ್ಲಿ ಸಂಚರಿಸುತ್ತಿದ್ದಾಗ ಎಲ್ಲೆಡೆಗಳಲ್ಲಿಯೂ ಅವನಿಗೆ ತನ್ನ ವಂಶದ ಪೂರ್ವಜರಾದ ಮಹಾಪುರುಷರ ಕೀರ್ತಿಯು ಕಿವಿಗೆ ಬೀಳುತ್ತಿತ್ತು. ಅಲ್ಲದೆ ಆ ಕೀರ್ತಿಗಾನದಿಂದ ಪದೇ-ಪದೇ ಭಗವಾನ್ ಶ್ರೀಕೃಷ್ಣನ ಮಹಿಮೆಯೂ ಪ್ರಕಟವಾಗುತಿತ್ತು. ॥ ೧೩ ॥ ಇದರೊಂದಿಗೆ ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರ ತೇಜಸ್ಸಿನಿಂದ ಭಗವಾನ್ ಶ್ರೀಕೃಷ್ಣನು ತನ್ನನ್ನು ಕಾಪಾಡಿದ ವೃತ್ತಾಂತ, ಪಾಂಡವರಿಗೆ ಭಗವಾನ್ ಶ್ರೀಕೃಷ್ಣನಲ್ಲಿದ್ದ ಭಕ್ತಿ ಮತ್ತು ಯಾದವರಿಗೂ ಪಾಂಡವರಿಗೂ ಇದ್ದ ಸ್ನೇಹಸಂಬಂಧ – ಇವುಗಳ ಸಮಾಚಾರವು ಕಿವಿಗೆ ಬೀಳುತ್ತಿತ್ತು. ॥ ೧೪ ॥ ಅಂತಹ ಚರಿತ್ರವನ್ನು ತನಗೆ ಹೇಳುತ್ತಿದ್ದ ಜನರ ವಿಷಯದಲ್ಲಿ ಅವನಿಗೆ ತುಂಬಾ ಪ್ರಸನ್ನತೆ ಉಂಟಾಗಿ, ಕಣ್ಣುಗಳು ಪ್ರೇಮದಿಂದ ಅರಳುತ್ತಿದ್ದವು. ಪರಮೋದಾರಿಯಾದ ಅವನು ಅವರಿಗೆ ಬಹುಮೂಲ್ಯವಾದ ವಸ್ತ್ರ-ರತ್ನಹಾರಗಳನ್ನು ಬಹುಮಾನ ವಾಗಿ ನೀಡುತ್ತಿದ್ದನು. ॥ ೧೫ ॥ ಭಗವಾನ್ ಶ್ರೀಕೃಷ್ಣನು ಪ್ರೇಮ ಪರವಶನಾಗಿ ಪಾಂಡವರಿಗೆ ಸಾರಥ್ಯವನ್ನು ಮಾಡಿದ, ಅವರ ಸಭಾಸದನಾದ, ಇಷ್ಟಾನುಸಾರವಾಗಿ ಅವರ ಇತರ ಸೇವೆಗಳನ್ನೂ ಮಾಡಿದ, ಸ್ನೇಹಿತನಾಗಿದ್ದುದಲ್ಲದೆ ದೂತನ ಕೆಲಸವನ್ನು ಮಾಡಿದನು. ವೀರಾಸನದಲ್ಲಿ ಕುಳಿತಿದ್ದು ಖಡ್ಗಧಾರಿಯಾಗಿ ಕಾವಲು ಕಾಯುತ್ತಿದ್ದ, ಅನುಸರಣೆಮಾಡಿ ಹೊಗಳುತ್ತಿದ್ದ, ನಮಸ್ಕರಿಸುತ್ತಿದ್ದ ಆ ಪ್ರಿಯತಮರಾದ ಪಾಂಡವರಿಗೆ ಇಡೀ ಜಗತ್ತೇ ತಲೆವಾಗುವಂತೆ ಮಾಡಿದ – ಇವೇ ಮುಂತಾದ ವಿಷಯಗಳನ್ನು ಕೇಳಿ, ಆತನಿಗೆ ಭಗವಾನ್ ಶ್ರೀಕೃಷ್ಣನ ಚರಣಕಮಲಗಳಲ್ಲಿ ಭಕ್ತಿಯು ಇನ್ನೂ ಹೆಚ್ಚುತ್ತಿತ್ತು. ॥ ೧೬ ॥ ಹೀಗೆ ಅವನು ಪ್ರತಿದಿನವೂ ಪಾಂಡವರ ಆಚರಣೆಗಳನ್ನು ಅನುಸರಿಸುತ್ತಾ ದಿಗ್ವಿಜಯ ಮಾಡುತ್ತಿದ್ದನು. ಆಗಲೇ ಒಂದು ದಿನ ಅವನ ಶಿಬಿರದಿಂದ ಸ್ವಲ್ಪ ದೂರದಲ್ಲಿಯೇ ಒಂದು ಆಶ್ಚರ್ಯಕರವಾದ ಘಟನೆಯು ನಡೆಯಿತು. ಅದನ್ನು ನಾನು ನಿಮಗೆ ಹೇಳುತ್ತೇನೆ. ॥ ೧೭॥ ಧರ್ಮವು ಒಂದು ವೃಷಭ ರೂಪವನ್ನು ಧರಿಸಿ ಒಂಟಿಕಾಲಿನಿಂದ ಸಂಚರಿಸುತ್ತಿತ್ತು. ದಾರಿಯಲ್ಲಿ ಅದಕ್ಕೆ ಧೇನುವಿನ ರೂಪವನ್ನು ತಾಳಿದ್ದ ಭೂದೇವಿಯ ಭೇಟಿ ಯಾಯಿತು. ಆ ಧೇನುವು ಮಗುವನ್ನು ಕಳಕೊಂಡ ತಾಯಿಯಂತೆ ಕಣ್ಣೀರಿಡುತ್ತಾ ಕಳೆಗುಂದಿ ಕಳವಳಗೊಳ್ಳುತ್ತಿರುವುದನ್ನು ಕಂಡು ಧರ್ಮ ವೃಷಭವು ಆಕೆಯನ್ನು ಕೇಳತೊಡಗಿತು. ॥ ೧೮ ॥

ಧರ್ಮವು ಹೇಳಿತು – ಮಂಗಳಾಂಗಿಯೇ! ನಿನ್ನ ಮುಖವು ಸ್ವಲ್ಪ ಮಲಿನವಾಗಿರುವಂತೆ ಕಾಣುತ್ತಿದ್ದು ನೀನು ಕಳೆಗುಂದಿರುವೆ. ನಿನಗೆ ಯಾವುದೋ ದುಃಖವಿರಬೇಕೆಂದು ತೋರುತ್ತದೆ. ನಿನ್ನ ನೆಂಟರಿಷ್ಟರು ಯಾರಾದರೂ ದೂರ ದೇಶಕ್ಕೆ ಹೋಗಿದ್ದು ಅವರ ಬಗೆಗೆ ಚಿಂತಿಸುತ್ತಿದ್ದೀಯೇನಮ್ಮಾ? ॥ ೧೯ ॥ 'ಈತನಿಗೆ ಮೂರು ಕಾಲುಗಳು ಮುರಿದುಹೋಗಿ ಒಂಟಿಕಾಲಿನಿಂದ ನಡೆಯುವ ಸ್ಥಿತಿ ಬಂದಿದೆಯಲ್ಲ' ಎಂದು ನನ್ನ ಬಗೆಗೇನಾದರೂ ಚಿಂತಿಸುತ್ತಿಲ್ಲವಲ್ಲ!

ಪಾದೈರ್ನ್ಯೂನಂ ಶೋಚಸಿ ಮೈಕಪಾದ-
ಮಾತ್ಮಾನಂ ವಾ ವೃಷಲೈರ್ಭೋಕ್ಷ್ಯಮಾಣಮ್ ।
ಆಹೋ ಸುರಾದೀನ್ ಹೃತಯಜ್ಞಭಾಗಾನ್
ಪ್ರಜಾ ಉತಸ್ವಿನ್ನಘವತ್ಯವರ್ಷತಿ ॥ ೨೦ ॥

ಅರಕ್ಷ್ಯಮಾಣಾಃ ಸ್ತ್ರಿಯ ಉರ್ವಿ ಬಾಲಾನ್
ಶೋಚಸ್ಯಥೋ ಪುರುಷಾದೈರಿವಾರ್ತಾನ್ ।
ವಾಚಂ ದೇವೀಂ ಬ್ರಹ್ಮಕುಲೇ ಕುಕರ್ಮ-
ಣ್ಯಬ್ರಹ್ಮಣ್ಯೇ ರಾಜಕುಲೇ ಕುಲಾಗ್ರ್ಯಾನ್ ॥ ೨೧ ॥

ಕಿಂ ಕ್ಷತ್ರಬಂಧೂನ್ಕಲಿನೋಪಸೃಷ್ಟಾನ್
ರಾಷ್ಟ್ರಾಣಿ ವಾ ತೈರವರೋಪಿತಾನಿ ।
ಇತಸ್ತತೋ ವಾಶನಪಾನವಾಸಃ
ಸ್ನಾನವ್ಯವಾಯೋನ್ಮುಖಜೀವಲೋಕಮ್ ॥ ೨೨ ॥

ಯದ್ವಾಂಬ ತೇ ಭೂರಿಭರಾವತಾರ-
ಕೃತಾವತಾರಸ್ಯ ಹರೇರ್ಧರಿತ್ರಿ ।
ಅಂತರ್ಹಿತಸ್ಯ ಸ್ಮರತೀ ವಿಸೃಷ್ಟಾ
ಕರ್ಮಾಣಿ ನಿರ್ವಾಣವಿಲಂಬಿತಾನಿ ॥ ೨೩ ॥

ಇದಂ ಮಮಾಚಕ್ಷ್ವ ತವಾಧಿಮೂಲಂ
ವಸುಂಧರೇ ಯೇನ ವಿಕರ್ಶಿತಾಸಿ ।
ಕಾಲೇನ ವಾ ತೇ ಬಲಿನಾಂ ಬಲೀಯಸಾ
ಸುರಾರ್ಚಿತಂ ಕಿಂ ಹೃತಮಂಬ ಸೌಭಗಮ್ ॥ ೨೪ ॥

*ಧರಣ್ಯುವಾಚ*

ಭವಾನ್ಹಿ ವೇದ ತತ್ಸರ್ವಂ ಯನ್ಮಾಂ ಧರ್ಮಾನುಪೃಚ್ಛಸಿ ।
ಚತುರ್ಭಿರ್ವರ್ತಸೇ ಯೇನ ಪಾದೈರ್ಲೋಕಸುಖಾವಹೈಃ ॥ ೨೫ ॥

ಸತ್ಯಂ ಶೌಚಂ ದಯಾ ಕ್ಷಾಂತಿಸ್ತ್ಯಾಗಃ ಸಂತೋಷ ಆರ್ಜವಮ್ ।
ಶಮೋ ದಮಸ್ತಪಃ ಸಾಮ್ಯಂ ತಿತಿಕ್ಷೋಪರತಿಃ ಶ್ರುತಮ್ ॥ ೨೬ ॥

ಜ್ಞಾನಂ ವಿರಕ್ತಿರೈಶ್ವರ್ಯಂ ಶೌರ್ಯಂ ತೇಜೋ ಬಲಂ ಸ್ಮೃತಿಃ ।
ಸ್ವಾತಂತ್ರ್ಯಂ ಕೌಶಲಂ ಕಾಂತಿರ್ಧೈರ್ಯಂ ಮಾರ್ದವಮೇವ ಚ ॥ ೨೭ ॥

ಅಥವಾ 'ಧರ್ಮನಾಶಕರು ನನ್ನನ್ನು ಆಳುತ್ತಿದ್ದಾರಲ್ಲ!' ಎಂದು ನಿನ್ನ ಕುರಿತು ದುಃಖಪಡುತ್ತಿದ್ದೀಯಾ ? 'ದೇವತೆಗಳಿಗೆ ಯಜ್ಞದ ಹವಿರ್ಭಾಗಗಳು ದೊರಕುತ್ತಿಲ್ಲ' ಎಂದು ಅವರ ಬಗೆಗೆ ಶೋಕವೇ? ಅಥವಾ ಸಕಾಲದಲ್ಲಿ ಮಳೆ-ಬೆಳೆಗಳಿಲ್ಲದೆ ಕಷ್ಟಪಡುತ್ತಿರುವ ಪ್ರಜೆಗಳ ಕುರಿತು ದುಃಖಪಡುತ್ತಿರುವೆಯಾ? ॥ ೨೦॥ ರಾಕ್ಷಸರಂತಿರುವ ದುಷ್ಟರಿಂದ ಪೀಡಿತರಾಗಿ ರಕ್ಷಣೆಯಿಲ್ಲದ ಹೆಂಗಸರ ಕುರಿತಾಗಲೀ, ಪೀಡೆಗೊಳಗಾಗಿರುವ ಬಾಲಕರ ವಿಷಯದಲ್ಲಾಗಲೀ ನಿನಗೆ ದುಃಖವಾಗುತ್ತಿದೆಯಾ? ವಿದ್ಯಾದೇವಿಯು ಕುಕರ್ಮಿಗಳಾದ ಬ್ರಾಹ್ಮಣರ ಕೈಗೆ ಸಿಕ್ಕಿ, ದುರವಸ್ಥೆಗೆ ಒಳಗಾಗಿರುವುದನ್ನೋ, ಅಥವಾ ಬ್ರಾಹ್ಮಣರು ಬ್ರಹ್ಮದ್ರೋಹಿಗಳಾದ ರಾಜರನ್ನು ಸೇವಿಸುತ್ತಿರುವುದನ್ನೋ ನೋಡಿ ನೀನು ಕಳವಳಪಡುತ್ತಿರುವೆಯಾ ? ॥ ೨೧ ॥ 'ಈಗಿನ ಕಾಲದಲ್ಲಿ ರಾಜರು ಹೆಸರಿಗೆ ಮಾತ್ರ ರಾಜರಾಗಿದ್ದು ಕಲಿಯಿಂದ ಪ್ರಭಾವಿತರಾಗಿ ರಾಷ್ಟ್ರಗಳನ್ನು ನಾಶಪಡಿಸುತ್ತಿದ್ದಾರಲ್ಲ!' ಎಂದು ಆ ಕ್ಷತ್ರಿಯಾಧಮರ ವಿಷಯದಲ್ಲಿ ನೀನು ಶೋಕಿಸುತ್ತಿರುವೆಯಾ ? ಅಥವಾ ಕಂಡ-ಕಂಡಲ್ಲಿ ತಿನ್ನುವುದು, ಕುಡಿಯುವುದು, ಉಡುವುದು, ಸ್ನಾನಮಾಡುವುದು, ಭೋಗಿಸುವುದು ಮುಂತಾದವುಗಳಲ್ಲಿ ಶಾಸ್ತ್ರೀಯ ನಿಯಮಗಳನ್ನು ಪಾಲಿಸದೆ ಸ್ವೇಚ್ಛಾಚಾರಿಗಳಾದ ಜನರ ಕುರಿತು ಚಿಂತೆಪಡುತ್ತಿರುವೆಯಾ ? ॥ ೨೨ ॥ ಭೂದೇವಿಯೇ ! ನಿನ್ನ ಮೇಲೆ ಬಿದ್ದಿರುವ ಅತ್ಯಧಿಕ ಅಧರ್ಮದ ಭಾರವನ್ನು ಇಳಿಸುವುದಕ್ಕಾಗಿ ಅವತರಿಸಿ ಈಗ ತನ್ನನ್ನು ಉಪಸಂಹಾರಮಾಡಿಕೊಂಡಿರುವ ಭಗವಾನ್ ಶ್ರೀಕೃಷ್ಣನ ಮೋಕ್ಷಾಲಂಬನವಾದ ದಿವ್ಯ ಲೀಲೆಗಳನ್ನು ನೆನೆಸಿಕೊಂಡು 'ಅಂತಹ ಸ್ವಾಮಿಯು ಕಣ್ಮರೆಯಾದನಲ್ಲ!' ಎಂದು ಶೋಕಿಸುತ್ತಿರುವೆಯಾ ? ॥ ೨೩ ॥ ದೇವಿ ! ನೀನಾದರೋ ಧನ-ರತ್ನಗಳ ಗಣಿಯಾಗಿರುವೆ. ಏತಕ್ಕೆ ಇಷ್ಟು ಕೃಶಳಾಗಿ ಕೊರಗುತ್ತಿದ್ದೀಯೇ ? ಬಲಶಾಲಿಗಳಲ್ಲಿ ಅತ್ಯಂತ ಬಲಿಷ್ಠನಾದ ಕಾಲನು ದೇವತೆಗಳಿಗೂ ಪೂಜ್ಯಳಾಗಿರುವ ನಿನ್ನ ಸೌಭಾಗ್ಯವನ್ನು ಅಪಹರಿಸಿದ್ದಾನೆಯೇ ? ನನಗೆ ತಿಳಿಸು. ॥ ೨೪ ॥

**ಪೃಥ್ವಿಯು ಹೇಳತೊಡಗಿದಳು** – ಧರ್ಮದೇವನೇ! ನೀನು ನನ್ನಲ್ಲಿ ಕೇಳಿರುವ ಎಲ್ಲ ಪ್ರಶ್ನೆಗಳ ಉತ್ತರಗಳು ನಿನಗೆ ತಿಳಿದೇ ಇದೆ. ಯಾರ ಅವಲಂಬನೆಯಿಂದ ನೀನು ಲೋಕಗಳಿಗೆ ಸುಖವನ್ನುಂಟು ಮಾಡುವ ನಿನ್ನ ನಾಲ್ಕು ಚರಣಗಳಿಂದಲೂ ನಡೆಯುತ್ತಿದ್ದೆಯೋ, ಅಂತಹ ಭಗವಂತನ ಅವತಾರವು ಸಮಾಪ್ತಿಯಾಯಿತಲ್ಲಾ! ಎಂದು ಶೋಕಪಡುತ್ತಿದ್ದೇನೆ. ಸತ್ಯ, ಶುಚಿತ್ವ, ದಯೆ, ಕ್ಷಮೆ, ತ್ಯಾಗ, ಸಂತೋಷ, ಸರಳತೆ, ಒಳ-ಹೊರ ಇಂದ್ರಿಯಗಳ ನಿಗ್ರಹ, ತಪಸ್ಸು, ಸಮತೆ, ಸೈರಣೆ, ಉಪರತಿ, ಶಾಸ್ತ್ರವಿಚಾರ, ಜ್ಞಾನ, ವೈರಾಗ್ಯ, ಐಶ್ವರ್ಯ, ಪರಾಕ್ರಮ, ತೇಜಸ್ಸು, ಬಲ, ಸ್ಮೃತಿ, ಸ್ವಾತಂತ್ರ್ಯ, ಕೌಶಲ, ಕಾಂತಿ, ಧೈರ್ಯ, ಕೋಮಲತೆ, ನಿರ್ಭಯತ್ವ, ವಿನಯ, ಶೀಲ, ಸಾಹಸ, ಉತ್ಸಾಹ, ಬಲ, ಸೌಭಾಗ್ಯ, ಗಾಂಭೀರ್ಯ, ಸ್ಥಿರತ್ವ, ಆಸ್ತಿಕತೆ, ಕೀರ್ತಿ, ಗೌರವ, ನಿರಹಂಕಾರತೆ ಮುಂತಾದ ಈ ಮೂವತ್ತೊಂಭತ್ತು ಅಪ್ರಾಕೃತ ಗುಣಗಳು ಹಾಗೂ ಮಹತ್ವಾಕಾಂಕ್ಷೀ ಮಹಾಪುರುಷರು ಅಪೇಕ್ಷಿಸುವ (ಶರಣಾಗತ ವತ್ಸಲತೆ) ದಿವ್ಯಗುಣಗಳು ಮತ್ತು ಇನ್ನೂ ಅನಂತಕಲ್ಯಾಣಗುಣಗಳು ಕೊಂಚವೂ ಕ್ಷೀಣಿಸದೇ ಯಾವನಲ್ಲಿ ಸದಾ ನೆಲೆಗೊಂಡಿರುವವೋ, ಅಂತಹ ಶ್ರೀನಿವಾಸನಾದ ಶ್ರೀಕೃಷ್ಣನು

ಪ್ರಾಗಲ್ಭ್ಯಂ ಪ್ರಶ್ರಯಃ ಶೀಲಂ ಸಹ ಓಜೋ ಬಲಂ ಭಗಃ ।
ಗಾಂಭೀರ್ಯಂ ಸ್ಥೈರ್ಯಮಾಸ್ತಿಕ್ಯಂ ಕೀರ್ತಿರ್ಮಾನೋಽನಹಂಕೃತಿಃ ॥ ೨೮ ॥

ಏತೇ ಚಾನ್ಯೇ ಚ ಭಗವನ್ನಿತ್ಯಾ ಯತ್ರ ಮಹಾಗುಣಾಃ ।
ಪ್ರಾರ್ಥ್ಯಾ ಮಹತ್ತ್ವಮಿಚ್ಛದ್ಭಿರ್ನ ವಿಯಂತಿ ಸ್ಮ ಕರ್ಹಿಚಿತ್ ॥ ೨೯ ॥

ತೇನಾಹಂ ಗುಣಪಾತ್ರೇಣ ಶ್ರೀನಿವಾಸೇನ ಸಾಂಪ್ರತಮ್ ।
ಶೋಚಾಮಿ ರಹಿತಂ ಲೋಕಂ ಪಾಪ್ಮನಾ ಕಲಿನೇಕ್ಷಿತಮ್ ॥ ೩೦ ॥

ಆತ್ಮಾನಂ ಚಾನುಶೋಚಾಮಿ ಭವಂತಂ ಚಾಮರೋತ್ತಮಮ್ ।
ದೇವಾನ್ ಪಿತೄನೃಷೀನ್ ಸಾಧೂನ್ ಸರ್ವಾನ್ ವರ್ಣಾಂಸ್ತಥಾಽಽಶ್ರಮಾನ್ ॥ ೩೧ ॥

ಬ್ರಹ್ಮಾದಯೋ ಬಹುತಿಥಂ ಯದಪಾಂಗಮೋಕ್ಷ-
ಕಾಮಾಸ್ತಪಃ ಸಮಚರನ್ ಭಗವತ್ಪ್ರಪನ್ನಾಃ ।
ಸಾ ಶ್ರೀಃ ಸ್ವವಾಸಮರವಿಂದವನಂ ವಿಹಾಯ
ಯತ್ಪಾದಸೌಭಗಮಲಂ ಭಜತೇಽನುರಕ್ತಾ ॥ ೩೨ ॥

ತಸ್ಯಾಹಮಬ್ಜ ಕುಲಿಶಾಂಕುಶಕೇತುಕೇತೈಃ
ಶ್ರೀಮತ್ಪದೈರ್ಭಗವತಃ ಸಮಲಂಕೃತಾಂಗೀ ।
ತ್ರೀನತ್ಯರೋಚ ಉಪಲಭ್ಯ ತತೋ ವಿಭೂತಿಂ
ಲೋಕಾನ್ಸಮಾಂ ವ್ಯಸೃಜದುತ್ಸ್ಮಯತೀಂ ತದಂತೇ ॥ ೩೩ ॥

ಯೋ ವೈ ಮಮಾತಿಭರಮಾಸುರವಂಶರಾಜ್ಞಾ-
ಮಕ್ಷೌಹಿಣೀಶತಮಪಾನುದದಾತ್ಮತಂತ್ರಃ ।
ತ್ವಾಂ ದುಃಸ್ಥಮೂನಪದಮಾತ್ಮ ನಿ ಪೌರುಷೇಣ
ಸಂಪಾದಯನ್ಯದುಷು ರಮ್ಯಮಬಿಭ್ರದಂಗಮ್ ॥ ೩೪ ॥

ಕಾ ವಾ ಸಹೇತ ವಿರಹಂ ಪುರುಷೋತ್ತಮಸ್ಯ
ಪ್ರೇಮಾವಲೋಕರುಚಿರಸ್ಮಿತವಲ್ಗುಜಲ್ಪೈಃ ।
ಸ್ಥೈರ್ಯಂ ಸಮಾನಮಹರನ್ಮಧುಮಾನಿನೀನಾಂ
ರೋಮೋತ್ಸವೋ ಮಮ ಯದಂಘ್ರಿವಿಟಂಕಿತಾಯಾಃ ॥ ೩೫ ॥

ತನ್ನ ಲೀಲೆಯನ್ನು ಉಪ ಸಂಹಾರ ಮಾಡಿಕೊಂಡುಬಿಟ್ಟನಲ್ಲ! ಹಾಗೂ ಈ ಜಗತ್ತು ಪಾಪಮಯನಾದ ಕಲಿಯ ಕೆಟ್ಟದೃಷ್ಟಿಗೆ ಲಕ್ಷ್ಯವಾಗಿ ಬಿಟ್ಟಿತಲ್ಲ! ಎಂದು ನಾನು ಶೋಕಗ್ರಸ್ತಳಾಗಿದ್ದೇನೆ. ॥ ೨೫-೩೦ ॥ ಹಾಗೆಯೇ ಶೋಚನೀಯ ಸ್ಥಿತಿಯಲ್ಲಿರುವ ನನ್ನ ಕುರಿತು, ದೇವಶ್ರೇಷ್ಠನಾದ ನಿನ್ನ ಕುರಿತು, ಆಶ್ರಯಹೀನರಾದ ದೇವತೆಗಳ ಕುರಿತೂ, ಪಿತೃಗಳೂ, ಋಷಿಗಳೂ, ಸಾಧು-ಸಜ್ಜನರೂ, ಎಲ್ಲ ವರ್ಣಗಳೂ, ಆಶ್ರಮಗಳೂ ಇವುಗಳ ಕುರಿತಾಗಿಯೂ ದುಃಖಪಡುತ್ತಿದ್ದೇನೆ. ॥ ೩೧ ॥ ಯಾವಾಕೆಯ ಕೃಪಾ ಕಟಾಕ್ಷವನ್ನು ಪಡೆಯುವುದಕ್ಕಾಗಿ ಬ್ರಹ್ಮನೇ ಮುಂತಾದ ದೇವತೆಗಳು ಭಗವಂತನಲ್ಲಿ ಶರಣಾಗಿ ಬಹುಕಾಲದವರೆಗೆ ತಪಸ್ಸನ್ನಾಚರಿಸುತ್ತಿದ್ದರೋ, ಅಂತಹ ಲಕ್ಷ್ಮೀದೇವಿಯೂ ತನ್ನ ನಿವಾಸ ಸ್ಥಾನವಾಗಿರುವ ಕಮಲವನ್ನು ಬಿಟ್ಟು ಪರಮಪ್ರೇಮದಿಂದ ಯಾವಾತನ ಚರಣಕಮಲಗಳ ಸೊಬಗನ್ನು ಸೇವಿಸುತ್ತಿರುವಳೋ, ಅಂತಹ ಭಗವಂತನ ಕಮಲ, ವಜ್ರಾಯುಧ, ಅಂಕುಶ, ಧ್ವಜಗಳೇ ಮುಂತಾದ ದಿವ್ಯ ಚಿಹ್ನೆಗಳಿಂದ ಕೂಡಿದ ಶ್ರೀಪಾದಪದ್ಮಗಳ ವಿನ್ಯಾಸದಿಂದ ಅಲಂಕೃತಳಾಗಿ ಮಹಾವೈಭವವನ್ನು ಪಡೆದು, ಮೂರು ಲೋಕಗಳನ್ನೂ ಮೀರಿಸಿದ ಕಾಂತಿಯಿಂದ ಗರ್ವಪಡುತ್ತಾ ಮೆರೆಯುತ್ತಿದ್ದ ನನ್ನನ್ನು ಆ ಭಗವಂತನು ಕೈಬಿಟ್ಟುಹೋದನಲ್ಲ! ॥ ೩೨-೩೩ ॥

ನೀನು ನಿನ್ನ ಮೂರು ಚರಣಗಳು ಊನವಾಗಿ ಹೋದದ್ದರಿಂದ ಮನಸ್ಸಿನಲ್ಲೇ ಬೇಯುತ್ತಿದ್ದೆ; ಆದ್ದರಿಂದ ತನ್ನ ಪುರುಷಾರ್ಥದಿಂದ ನಿನ್ನನ್ನು ತನ್ನೊಳಗೆಯೇ ಪುನಃ ಎಲ್ಲ ಅಂಗಗಳಿಂದ ಪೂರ್ಣ ಹಾಗೂ ಸ್ವಸ್ಥಮಾಡುವುದಕ್ಕಾಗಿ ಆ ಅತ್ಯಂತ ರಮಣೀಯ ಶ್ಯಾಮಸುಂದರ ವಿಗ್ರಹನು ಯದುವಂಶದಲ್ಲಿ ಅವತರಿಸಿ, ಸಾವಿರಾರು ಅಕ್ಷೌಹಿಣೀ ಸೇನೆಯ ರೂಪದಿಂದಿದ್ದ ಅಸುರವಂಶೀ ರಾಜರನ್ನು ನಾಶಮಾಡಿ ನನ್ನ ಭಾರೀ ದೊಡ್ಡ ಭಾರವನ್ನು ಇಳಿಸಿದನು. ಏಕೆಂದರೆ ಅವನು ಪರಮ ಸ್ವತಂತ್ರನಾಗಿದ್ದನು. ॥ ೩೪ ॥ ಅಂತಹ ಆ ಕೃಪಾಳು ದಯಾನಿಧಾನ ಭಗವಾನ್ ಪುರುಷೋತ್ತಮ ಶ್ಯಾಮಸುಂದರನ ವಿರಹವನ್ನು ಯಾರು ತಾನೇ ಸಹಿಸಬಲ್ಲನು ? ಅವನು ನನ್ನ ಮೇಲೆ ನಡೆದಾಡುತ್ತಿದ್ದಾಗ ನನಗೆ ರೋಮಾಂಚವಾಗುತ್ತಿತ್ತು. ಅವನ ಚರಣಗಳ ದಿವ್ಯ ಚಿಹ್ನೆಗಳು ನನ್ನ ಮೇಲೆ ಅಂಕಿತವಾಗುವಾಗ ನಾನು ಅತ್ಯಂತ ಶೋಭಿತಳಾಗುತ್ತಿದ್ದೆ. ಈಗ ಅವನು ಇಲ್ಲದುದರಿಂದ ನನಗೆ ಬಹಳ ದುಃಖವಾಗುತ್ತಾ ಇದೆ. ಹೀಗೆಯೇ ದ್ವಾರಕೆಯಲ್ಲಿ ಹದಿನಾರು ಸಾವಿರಕ್ಕಿಂತಲೂ ಹೆಚ್ಚಾಗಿಯೇ ಇದ್ದ ಸ್ತ್ರೀಯರೆಲ್ಲರೂ ಶ್ರೀಕೃಷ್ಣನನ್ನು ತಮ್ಮ ಪ್ರೇಮಕಟಾಕ್ಷದಿಂದ, ರುಚಿರ ಹಾಸ್ಯಪೂರ್ಣ ದೃಷ್ಟಿಯಿಂದ ಮತ್ತು ಮಧುರ ಭಾಷಣದಿಂದ ಪ್ರಸನ್ನಗೊಳಿಸುತ್ತಿದ್ದರು. ಭಗವಂತನೂ ಕೂಡ ಅವರನ್ನು ಹಾಗೆಯೇ ಆನಂದಗೊಳಿಸುತ್ತಿದ್ದನು. ಎಲ್ಲರ ಮನೆಗಳಲ್ಲಿ ಬೇರೆ-ಬೇರೆ ರೂಪಗಳನ್ನು ಧರಿಸಿ ಇರುತ್ತಿದ್ದನು. ಇದರಿಂದ ಅವನ ರಾಣಿಯರಿಗೆ – ನಾವು ಶ್ರೀಕೃಷ್ಣನನ್ನು ಪ್ರೇಮಿಸುವಷ್ಟೇ ಅವನೂ ನಮ್ಮನ್ನು ಪ್ರೇಮಿಸುತ್ತಿರುವನು ಮತ್ತು ನಮ್ಮಲ್ಲಿ ಮತ್ತು ಶ್ರೀಕೃಷ್ಣನಲ್ಲಿ ಪರಸ್ಪರ ಪ್ರೇಮದ ಸಮಾನತೆ ಇದೆ ಎಂದು ತಿಳಿದು ಗರ್ವಪಡುತ್ತಿದ್ದರು. ಭಗವಂತನು ಅವರ ಗರ್ವವನ್ನೂ ಕೂಡ ನಾಶಪಡಿಸಲಿಕ್ಕಾಗಿ ಅವನು ತನ್ನ ಶ್ರೀವಿಗ್ರಹವನ್ನು ಈಗ ಅಂತರ್ಧಾನಗೊಳಿಸಿರುವನು. ॥ ೩೫ ॥

ತಯೋರೇವಂ ಕಥಯತೋಃ ಪೃಥಿವೀಧರ್ಮಯೋಸ್ತದಾ ।
ಪರೀಕ್ಷಿನ್ನಾಮ ರಾಜರ್ಷಿಃ ಪ್ರಾಪ್ತಃ ಪ್ರಾಚೀಂ ಸರಸ್ವತೀಮ್ ॥ ೩೬ ॥

ಹೀಗೆ ಧರ್ಮವೂ, ಪೃಥ್ವಿಯೂ ಪರಸ್ಪರವಾಗಿ ಮಾತನಾಡುತ್ತಿದ್ದಾಗ ಆ ಕಾಲಕ್ಕೆ ಸರಿಯಾಗಿ ರಾಜರ್ಷಿಶ್ರೇಷ್ಠನಾದ ಪರೀಕ್ಷಿದ್ರಾಜನು ಸರಸ್ವತೀ ನದಿಯ ಪೂರ್ವತೀರಕ್ಕೆ ಬಂದು ತಲುಪಿದನು. ॥ ೩೬ ॥

*ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಪೃಥ್ವೀಧರ್ಮಸಂವಾದೋ ನಾಮ ಷೋಡಶೋಽಧ್ಯಾಯಃ ॥ ೧೬ ॥

# ಹದಿನೇಳನೆಯ ಅಧ್ಯಾಯ

## ಪರೀಕ್ಷಿದ್ರಾಜನು ಕಲಿಪುರುಷನನ್ನು ನಿಗ್ರಹಿಸಿದುದು

*ಸೂತ ಉವಾಚ*

ತತ್ರ ಗೋಮಿಥುನಂ ರಾಜಾ ಹನ್ಯಮಾನಮನಾಥವತ್ ।
ದಂಡಹಸ್ತಂ ಚ ವೃಷಲಂ ದದೃಶೇ ನೃಪಲಾಂಛನಮ್ ॥ ೧ ॥

ವೃಷಂ ಮೃಣಾಲಧವಲಂ ಮೇಹಂತಮಿವ ಬಿಭ್ಯತಮ್ ।
ವೇಪಮಾನಂ ಪದೈಕೇನ ಸೀದಂತಂ ಶೂದ್ರತಾಡಿತಮ್ ॥ ೨ ॥

ಗಾಂ ಚ ಧರ್ಮದುಘಾಂ ದೀನಾಂ ಭೃಶಂ ಶೂದ್ರಪದಾಹತಾಮ್ ।
ವಿವತ್ಸಾಂ ಸಾಶ್ರುವದನಾಂ ಕ್ಷಾಮಾಂ ಯವಸಮಿಚ್ಛತೀಮ್ ॥ ೩ ॥

ಪಪ್ರಚ್ಛ ರಥಮಾರೂಢಃ ಕಾರ್ತಸ್ವರಪರಿಚ್ಛದಮ್ ।
ಮೇಘಗಂಭೀರಯಾ ವಾಚಾ ಸಮಾರೋಪಿತಕಾರ್ಮುಕಃ ॥ ೪ ॥

ಕಸ್ತ್ವಂ ಮಚ್ಛರಣೇ ಲೋಕೇ ಬಲಾದ್ಧಂಸ್ಯಬಲಾನ್ಬಲೀ ।
ನರದೇವೋಽಸಿ ವೇಷೇಣ ನಟವತ್ಕರ್ಮಣಾದ್ವಿಜಃ ॥ ೫ ॥

ಕಸ್ತ್ವಂ ಕೃಷ್ಣೇ ಗತೇ ದೂರಂ ಸಹ ಗಾಂಡೀವಧನ್ವನಾ ।
ಶೋಚ್ಯೋಽಸ್ಯಶೋಚ್ಯಾನ್ರಹಸಿ ಪ್ರಹರನ್ವಧಮರ್ಹಸಿ ॥ ೬ ॥

ತ್ವಂ ವಾ ಮೃಣಾಲಧವಲಃ ಪಾದೈರ್ನ್ಯೂನಃ ಪದಾ ಚರನ್ ।
ವೃಷರೂಪೇಣ ಕಿಂ ಕಶ್ಚಿದ್ದೇವೋ ನಃ ಪರಿಖೇದಯನ್ ॥ ೭ ॥

ನ ಜಾತು ಕೌರವೇಂದ್ರಾಣಾಂ ದೋರ್ದಂಡಪರಿರಂಭಿತೇ ।
ಭೂತಲೇಽನುಪತಂತ್ಯಸ್ಮಿನ್ ವಿನಾ ತೇ ಪ್ರಾಣಿನಾಂ ಶುಚಃ ॥ ೮ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕರೇ! ಪರೀಕ್ಷಿದ್ರಾಜನು ಅಲ್ಲಿಗೆ ಬಂದು ನೋಡುತ್ತಾನೆ – ಒಬ್ಬ ಶೂದ್ರನು ರಾಜವೇಷಧಾರಿಯಾಗಿ ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು ಅನಾಥರಂತೆ ಇರುವ ಒಂದು ಹಸು, ಎತ್ತು ಜೋಡಿಯನ್ನು ಹೊಡೆಯುತ್ತಿದ್ದನು. ॥ ೧ ॥ ತಾವರೆಯ ದಂಟಿನಂತಿದ್ದ ಆ ಎತ್ತು ಒಂಟಿಕಾಲಿನ ಮೇಲೆ ನಿಂತು ಗಡ-ಗಡ ನಡುಗುತ್ತಾ ಆ ಘಾತುಕನ ಏಟಿನಿಂದ ಪೀಡಿತವಾಗಿ ಮೂತ್ರವಿಸರ್ಜನೆ ಮಾಡುತ್ತಿತ್ತು. ॥ ೨ ॥ ಹಸುವು ಧರ್ಮೋಪಯೋಗಿ ಹಾಲು, ತುಪ್ಪ ಮುಂತಾದ ಹವಿಸ್ಸು ಪದಾರ್ಥಗಳನ್ನು ಕೊಡುತ್ತದೆ. ಅದರ ಗೋಮಯವೂ ಧಾರ್ಮಿಕ ಕಾರ್ಯಗಳಲ್ಲಿ ಉಪಯೋಗಕ್ಕೆ ಬರುತ್ತದೆ. ಇಂತಹ ಹಸುವು ಪದೇ-ಪದೇ ಶೂದ್ರನ ಒದೆಯನ್ನು ತಿನ್ನುತ್ತಾ ಅತ್ಯಂತ ದೀನಳಾಗಿದ್ದಳು. ಮೊದಲೇ ಬಡಕಲಾಗಿದ್ದು ಕರುವೂ ಅದರ ಬಳಿಯಲ್ಲಿ ಇರಲಿಲ್ಲ, ಅದಕ್ಕೆ ಹಸಿವು ಬಾಧಿಸುತ್ತಿತ್ತು. ಕಣ್ಣುಗಳಿಂದ ನೀರು ಹರಿಯುತ್ತಿತ್ತು. ॥ ೩ ॥ ಸ್ವರ್ಣಾಲಂಕೃತ ರಥದಲ್ಲಿ ಕುಳಿತಿದ್ದ ರಾಜಾ ಪರೀಕ್ಷಿತನು ತನ್ನ ಧನುಸ್ಸಿಗೆ ಬಾಣಹೂಡಿ ಮೇಘಗಂಭೀರವಾದ ವಾಣಿಯಿಂದ ಹೀಗೆ ಪ್ರಶ್ನಿಸಿದನು. ॥ ೪ ॥ ಎಲವೋ! ನೀನಾರು? ಬಲಶಾಲಿಯಾಗಿದ್ದುಕೊಂಡು ನನ್ನ ರಾಜ್ಯದಲ್ಲಿ ನನ್ನ ರಕ್ಷಣೆಯಲ್ಲಿರುವ ಈ ದುರ್ಬಲ ಪ್ರಾಣಿಗಳನ್ನು ಬಲಾತ್ಕಾರವಾಗಿ ಏಕೆ ಹೊಡೆಯುತ್ತಿರುವೆ? ನಟನಂತೆ ರಾಜನ ವೇಷವನ್ನು ಧರಿಸಿದ್ದೀಯಾ, ಆದರೆ ಕರ್ಮದಿಂದ ಶೂದ್ರನಂತೆ ಕಂಡು ಬರುವೆಯಲ್ಲ! ॥ ೫ ॥ ಗಾಂಡೀವ ಧನುರ್ಧರನಾದ ಅರ್ಜುನನೊಡನೆ ಭಗವಾನ್ ಶ್ರೀಕೃಷ್ಣನೂ ಪರಂಧಾಮಕ್ಕೆ ತೆರಳಿದ ಬಳಿಕ ನಿರಪರಾಧಿಗಳನ್ನು ಇಂತಹ ಏಕಾಂತಸ್ಥಳದಲ್ಲಿ ಹಿಂಸೆಪಡಿಸುವ ನೀನು ಅಪರಾಧಿಯೇ ಆಗಿದ್ದು ಮರಣದಂಡನೆಗೆ ಅರ್ಹನಾಗಿರುವೆ. ॥ ೬ ॥ ರಾಜನು ಆ ವೃಷಭರೂಪೀ ಧರ್ಮನಲ್ಲಿ ಪ್ರಶ್ನಿಸಿದನು – ಕಮಲದ ದಂಟಿನಂತೆ ಶುಭ್ರವಾದ ಬಣ್ಣದಿಂದ ಕಂಗೊಳಿಸುತ್ತಿರುವ ನೀನಾರು? ಮೂರು ಕಾಲುಗಳನ್ನು ಕಳೆದುಕೊಂಡು ಒಂಟಿಕಾಲಿನಿಂದಲೇ ನಡೆಯುತ್ತಿದ್ದು ನಮ್ಮನ್ನು ಖೇದಗೊಳಿಸುತ್ತಿರುವ ಯಾವನಾದರೂ ದೇವತೆಯಾಗಿರುವೆಯಾ? ॥ ೭ ॥ ಪುರುವಂಶದ ಅರಸರ ಬಾಹುದಂಡದಿಂದ ಸಂರಕ್ಷಿತವಾದ ಈ ಭೂಮಂಡಲದಲ್ಲಿ ನಿನ್ನನ್ನು ಹೊರತುಪಡಿಸಿ ಬೇರೆ ಯಾವ ಪ್ರಾಣಿಯೂ ದುಃಖದಿಂದ ಕಣ್ಣೀರು ಹರಿಸುವುದಿಲ್ಲ. ॥ ೮ ॥ ಎಲೈ

ಮಾ ಸೌರಭೇಯಾನುಶುಚೋ ವ್ಯೇತು ತೇ ವೃಷಲಾದ್ಭಯಮ್ ।
ಮಾ ರೋದೀರಂಬ ಭದ್ರಂ ತೇ ಖಲಾನಾಂ ಮಯಿ ಶಾಸ್ತರಿ ॥ ೯ ॥

ಯಸ್ಯ ರಾಷ್ಟ್ರೇ ಪ್ರಜಾಃ ಸರ್ವಾಸ್ತ್ರಸ್ಯಂತೇ ಸಾಧ್ವ್ಯಸಾಧುಭಿಃ ।
ತಸ್ಯ ಮತ್ತಸ್ಯ ನಶ್ಯಂತಿ ಕೀರ್ತಿರಾಯುರ್ಭಗೋ ಗತಿಃ ॥ ೧೦ ॥

ಏಷ ರಾಜ್ಞಾಂ ಪರೋ ಧರ್ಮೋ ಹ್ಯಾರ್ತಾನಾಮಾರ್ತಿನಿಗ್ರಹಃ ।
ಅತ ಏನಂ ವಧಿಷ್ಯಾಮಿ ಭೂತದ್ರುಹಮಸತ್ತಮಮ್ ॥ ೧೧ ॥

ಕೋಽವೃಶ್ಚತ್ತವ ಪಾದಾಂಸ್ತ್ರೀನ್ಸೌರಭೇಯ ಚತುಷ್ಪದ ।
ಮಾ ಭೂವಂಸ್ತ್ವಾದೃಶಾ ರಾಷ್ಟ್ರೇ ರಾಜ್ಞಾಂ ಕೃಷ್ಣಾನುವರ್ತಿನಾಮ್ ॥ ೧೨ ॥

ಆಖ್ಯಾಹಿ ವೃಷ ಭದ್ರಂ ವಃ ಸಾಧೂನಾಮಕೃತಾಗಸಾಮ್ ।
ಆತ್ಮವೈರೂಪ್ಯಕರ್ತಾರಂ ಪಾರ್ಥಾನಾಂ ಕೀರ್ತಿದೂಷಣಮ್ ॥ ೧೩ ॥

ಜನೇಽನಾಗಸ್ಯಘಂ ಯುಂಜನ್ಸರ್ವತೋಽಸ್ಯ ಚ ಮದ್ಭಯಮ್ ।
ಸಾಧೂನಾಂ ಭದ್ರಮೇವ ಸ್ಯಾದಸಾಧುದಮನೇ ಕೃತೇ ॥ ೧೪ ॥

ಅನಾಗಸ್ಸ್ವಿಹ ಭೂತೇಷು ಯ ಆಗಸ್ಕೃನ್ನಿರಂಕುಶಃ ।
ಆಹರ್ತಾಸ್ಮಿ ಭುಜಂ ಸಾಕ್ಷಾದಮರ್ತ್ಯಸ್ಯಾಪಿ ಸಾಂಗದಮ್ ॥ ೧೫ ॥

ರಾಜ್ಞೋ ಹಿ ಪರಮೋ ಧರ್ಮಃ ಸ್ವಧರ್ಮಸ್ಥಾನುಪಾಲನಮ್ ।
ಶಾಸತೋಽನ್ಯಾನ್ ಯಥಾಶಾಸ್ತ್ರಮನಾಪದ್ಯುತ್ಪಥಾನಿಹ ॥ ೧೬ ॥

*ಧರ್ಮ ಉವಾಚ*

ಏತದ್ವಃ ಪಾಂಡವೇಯಾನಾಂ ಯುಕ್ತಮಾರ್ತಾಭಯಂ ವಚಃ ।
ಯೇಷಾಂ ಗುಣಗಣೈಃ ಕೃಷ್ಣೋ ದೌತ್ಯಾದೌ ಭಗವಾನ್ಕೃತಃ ॥ ೧೭ ॥

ನ ವಯಂ ಕ್ಲೇಶಬೀಜಾನಿ ಯತಃ ಸ್ಯುಃ ಪುರುಷರ್ಷಭ ।
ಪುರುಷಂ ತಂ ವಿಜಾನೀಮೋ ವಾಕ್ಯಭೇದವಿಮೋಹಿತಾಃ ॥ ೧೮ ॥

ಕೇಚಿದ್ವಿಕಲ್ಪವಸನಾ ಆಹುರಾತ್ಮಾನಮಾತ್ಮನಃ ।
ದೈವಮನ್ಯೇ ಪರೇ ಕರ್ಮ ಸ್ವಭಾವಮಪರೇ ಪ್ರಭುಮ್ ॥ ೧೯ ॥

ವೃಷಭವೇ ! ಈಗ ನೀನು ದುಃಖಪಡದೆ ಈ ಧರ್ಮಘಾತುಕನಿಂದ ನಿರ್ಭಯನಾಗಿರು. ಅಮ್ಮಾ ಗೋಮಾತೇ ! ದುಷ್ಟರಿಗೆ ಶಾಸನ ಮಾಡುವಂತಹ ನಾನೇ ಇಲ್ಲಿರುವಾಗ ನೀನು ಅಳಬೇಡ. ನಿನಗೆ ಮಂಗಳವಾಗಲಿ. ॥ ೯ ॥ ದೇವೀ ! ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳು ದುಷ್ಟರ ಉಪದ್ರವದಿಂದ ಹೆದರುತ್ತಾರೋ, ಅಂತಹ ಮೈಮರೆತ ರಾಜನ ಕೀರ್ತಿ, ಐಶ್ವರ್ಯ, ಆಯುಸ್ಸು ಮತ್ತು ಪರಲೋಕಗಳು ನಾಶವಾಗುತ್ತವೆ. ॥ ೧೦ ॥ ಪೀಡಿತರ ದುಃಖವನ್ನು ದೂರ ಮಾಡುವುದೇ ರಾಜರ ಪರಮಧರ್ಮವಾಗಿದೆ. ಈ ಮಹಾ ದುಷ್ಟನೂ, ಪ್ರಾಣಿಗಳನ್ನು ಪೀಡಿಸುವವನೂ ಆದ ಇವನನ್ನು ನಾನು ಈಗಲೇ ಕೊಂದುಬಿಡುವೆನು. ॥ ೧೧ ॥ ಎಲೈ ವೃಷಭವೇ! ನೀನು ನಾಲ್ಕು ಕಾಲುಗಳುಳ್ಳ ಪ್ರಾಣಿಯು. ನಿನ್ನ ಮೂರು ಕಾಲುಗಳನ್ನು ಯಾರು ಮುರಿದು ಹಾಕಿದರು ? ಶ್ರೀಕೃಷ್ಣನ ಅನುಯಾಯಿಗಳಾಗಿರುವ ರಾಜರ ಆಳ್ವಿಕೆಗೆ ಒಳಪಟ್ಟ ರಾಜ್ಯಗಳಲ್ಲಿ ಎಂದೂ ಯಾರೂ ನಿನ್ನಂತೆ ದುಃಖಿಗಳಾಗಕೂಡದು. ॥ ೧೨ ॥ ವೃಷಭೋತ್ತಮಾ ! ನಿನಗೆ ಮಂಗಳವಾಗಲೀ, ನಿನ್ನಂತಹ ನಿರಪರಾಧೀ ಸಾಧುವಿನ ಅಂಗಭಂಗವನ್ನಾಗಿ ಮಾಡಿ, ಪಾಂಡವರ ಕೀರ್ತಿಗೆ ಕಳಂಕ ತಂದಿರುವ ಆ ದುಷ್ಟನು ಯಾರು? ॥ ೧೩ ॥ ನಿರಪರಾಧಿಗಳಾದ ಪ್ರಾಣಿಗಳನ್ನು ಹಿಂಸಿಸುವವನು ಎಲ್ಲೇ ಇದ್ದರೂ ಆತನು ನನಗೆ ಭಯಪಡುತ್ತಲೇ ಇರಬೇಕಾಗುವುದು. ದುಷ್ಟರನ್ನು ದಮನ ಮಾಡಿದಾಗಲೇ ಸಾಧುಗಳಿಗೆ ಶ್ರೇಯಸ್ಸಾಗುವುದಲ್ಲವೇ ? ॥ ೧೪ ॥ ನಿರಂಕುಶನಾಗಿ ನಡೆಯುತ್ತಾ ನಿರಪರಾಧಿಗಳಾದ ಪ್ರಾಣಿಗಳಿಗೆ ಹಿಂಸೆಕೊಡುವವನು ದೇವಪುರುಷನೇ ಆಗಿದ್ದರೂ ನಾನು ಆತನ ತೋಳ್ಬಳೆಗಳಿಂದಲಂಕೃತವಾದ ಭುಜವನ್ನು ಕತ್ತರಿಸಿ ಹಾಕುವೆನು. ॥ ೧೫ ॥ ಆಪತ್ಕಾಲವೊಂದನ್ನು ಬಿಟ್ಟು ಬೇರೆ ಸಮಯಗಳಲ್ಲಿ ಮರ್ಯಾದೆ ಮೀರಿ ವರ್ತಿಸುವವರನ್ನು ಶಾಸ್ತ್ರಾನುಸಾರವಾಗಿ ದಂಡಿಸುತ್ತಾ, ತಮ್ಮ ಧರ್ಮದಲ್ಲಿರುವವರನ್ನು ಕಾಪಾಡುತ್ತಾ ಇರುವುದೇ ರಾಜರ ಪರಮಧರ್ಮವಾಗಿದೆ. ॥ ೧೬ ॥

**ಧರ್ಮವೃಷಭವು ಹೇಳಿತು** – ಮಹಾರಾಜನೇ ! ಕಲ್ಯಾಣಗುಣಗಳನ್ನು ಮೆಚ್ಚಿ ಭಗವಂತನಾದ ಶ್ರೀಕೃಷ್ಣನು ದೌತ್ಯವೇ ಮುಂತಾದ ಸೇವೆಯನ್ನು ಮಾಡಿದಂತಹ ಮಹಾತ್ಮರಾದ ಪಾಂಡವರ ವಂಶಜನಾದ ನೀನು ದುಃಖಿತರಿಗೆ ಈ ರೀತಿ ಆಶ್ವಾಸನೆಯನ್ನೀಯುವುದು ಯುಕ್ತವೇ ಆಗಿದೆ. ॥ ೧೭ ॥ ಪುರುಷಶ್ರೇಷ್ಠನೇ ! ಶಾಸ್ತ್ರಗಳಲ್ಲಿ ಹೇಳಿರುವ ಬಗೆ-ಬಗೆಯ ಮಾತುಗಳು ನಮ್ಮನ್ನು ಮೋಹಗೊಳಿಸುವುದರಿಂದ ನಮ್ಮ ಈ ಕ್ಲೇಶಕ್ಕೆ ಯಾರು ಕಾರಣನೆಂಬುದು ನಮಗೆ ತಿಳಿಯುತ್ತಿಲ್ಲ. ॥ ೧೮ ॥ ಯಾವುದೇ ದೈವವನ್ನು ಸ್ವೀಕರಿಸದವರು ತಾವೇ-ತಮ್ಮನ್ನು ತಮ್ಮ ದುಃಖದ ಕಾರಣವೆಂದು ಹೇಳುತ್ತಾರೆ. ಕೆಲವರು ಪ್ರಾರಬ್ಧವನ್ನು ಕಾರಣವೆಂದು ಹೇಳಿದರೆ, ಕೆಲವರು ಕರ್ಮವನ್ನು ಕಾರಣವೆಂದು ಹೇಳುತ್ತಾರೆ. ಕೆಲವರು ಸ್ವಭಾವವನ್ನು, ಕೆಲವರು ಈಶ್ವರನನ್ನು ದುಃಖಗಳ ಕಾರಣವೆಂದು ಹೇಳುತ್ತಾರೆ. ॥ ೧೯ ॥ ಯಾವ ತರ್ಕ-ವಿತರ್ಕಗಳಿಗೂ ನಿಲುಕದೆ, ಯಾವ ಮಾತಿಗೂ ಗೋಚರವಾಗದೆ ಇರುವ ಯಾವುದೋ ಒಂದು ವಸ್ತುವಿನಿಂದಲೇ ಎಲ್ಲವೂ ನಡೆಯುವುದು – ಎಂದು ಕೆಲವರು ನಿರ್ಧರಿಸುತ್ತಾರೆ. ರಾಜರ್ಷಿಯೇ ! ಇವುಗಳಲ್ಲಿ

**ಅಪ್ರತರ್ಕ್ಯಾದನಿರ್ದೇಶ್ಯಾದಿತಿ ಕೇಷ್ವಪಿ ನಿಶ್ಚಯಃ ।**
**ಅತ್ರಾನುರೂಪಂ ರಾಜರ್ಷೇ ವಿಮೃಶಸ್ವಮನೀಷಯಾ ॥ ೨೦ ॥**

ಯಾವುದು ಸರಿ – ಎಂಬುದನ್ನು ನಿನ್ನ ಬುದ್ಧಿಯಿಂದ ವಿಮರ್ಶೆ ಮಾಡಿಹೇಳು. ನನಗಂತೂ ಈ ವಿಷಯದಲ್ಲಿ ಏನೂತಿಳಿದಿಲ್ಲ. ॥ ೨೦ ॥

*ಸೂತ ಉವಾಚ*

**ಏವಂ ಧರ್ಮೇ ಪ್ರವದತಿ ಸ ಸಮ್ರಾಡ್ ದ್ವಿಜಸತ್ತಮ ।**
**ಸಮಾಹಿತೇನ ಮನಸಾ ವಿಖೇದಃ ಪರ್ಯಚಷ್ಟ ತಮ್ ॥ ೨೧ ॥**

**ಸೂತಪುರಾಣಿಕರು ಹೇಳುತ್ತಾರೆ** – ಋಷಿಶ್ರೇಷ್ಠ ಶೌನಕರೇ! ಧರ್ಮಪುರುಷನ ಈ ಧರ್ಮಪ್ರವಚನವನ್ನು ಕೇಳಿ ಚಕ್ರವರ್ತಿಯು ಪ್ರಸನ್ನನಾಗಿ ಖೇದರಹಿತನಾದನು. ॥ ೨೧ ॥

*ರಾಜೋವಾಚ*

**ಧರ್ಮಂ ಬ್ರವೀಷಿ ಧರ್ಮಜ್ಞ ಧರ್ಮೋಽಸಿ ವೃಷರೂಪಧೃಕ್ ।**
**ಯದಧರ್ಮಕೃತಃ ಸ್ಥಾನಂ ಸೂಚಕಸ್ಯಾಪಿ ತದ್ಭವೇತ್ ॥ ೨೨ ॥**

**ಅಥವಾ ದೇವಮಾಯಾಯಾ ನೂನಂ ಗತಿರಗೋಚರಾ ।**
**ಚೇತಸೋ ವಚಸಶ್ಚಾಪಿ ಭೂತಾನಾಮಿತಿ ನಿಶ್ಚಯಃ ॥ ೨೩ ॥**

**ತಪಃ ಶೌಚಂ ದಯಾ ಸತ್ಯಮಿತಿ ಪಾದಾಃ ಕೃತೇ ಕೃತಾಃ ।**
**ಅಧರ್ಮಾಂಶೈಸ್ತ್ರಯೋ ಭಗ್ನಾಃ ಸ್ಮಯಸಂಗಮದೈಸ್ತವ ॥ ೨೪ ॥**

**ಇದಾನೀಂ ಧರ್ಮ ಪಾದಸ್ತೇ ಸತ್ಯಂ ನಿರ್ವರ್ತಯೇದ್ಯತಃ ।**
**ತಂ ಜಿಘೃಕ್ಷತ್ಯಧರ್ಮೋಽಯಮನೃತೇನೈಧಿತಃ ಕಲಿಃ ॥ ೨೫ ॥**

**ಇಯಂ ಚ ಭೂರ್ಭಗವತಾ ನ್ಯಾಸಿತೋರುಭರಾ ಸತೀ ।**
**ಶ್ರೀಮದ್ಭಿಸ್ತತ್ಪದನ್ಯಾಸೈಃ ಸರ್ವತಃ ಕೃತಕೌತುಕಾ ॥ ೨೬ ॥**

**ಶೋಚತ್ಯಶ್ರುಕಲಾ ಸಾಧ್ವೀ ದುರ್ಭಗೇವೋಜ್ಝಿತಾಧುನಾ ।**
**ಅಬ್ರಹ್ಮಣ್ಯಾ ನೃಪವ್ಯಾಜಾಃ ಶೂದ್ರಾ ಭೋಕ್ಷ್ಯಂತಿ ಮಾಮಿತಿ ॥ ೨೭ ॥**

**ಪರೀಕ್ಷಿದ್ರಾಜನು ಹೇಳಿದನು** – ಧರ್ಮಜ್ಞನಾದ ವೃಷಭವೇ! ನೀನು ಧರ್ಮದ ಉಪದೇಶವನ್ನು ಕೊಡುತ್ತಿರುವುದನ್ನು ನೋಡಿ ಖಂಡಿತವಾಗಿಯೂ ನೀನು ವೃಷಭರೂಪದಲ್ಲಿರುವ ಧರ್ಮವೇ ಆಗಿರುವೆ. (ನೀನು ನಿನಗೆ ದುಃಖ ಕೊಡುವವನ ಹೆಸರನ್ನು ಏಕೆ ಹೇಳಲಿಲ್ಲ ಎಂದರೆ–) ಅಧರ್ಮವನ್ನು ಆಚರಿಸಿದವನಿಗೆ ದೊರೆಯುವ ನರಕಾದಿ ಸ್ಥಾನಗಳು ಆತನ ಹೆಸರನ್ನು ಸೂಚಿಸುವವನಿಗೂ ದೊರೆಯುತ್ತವೆ. ॥ ೨೨ ॥ ಅಥವಾ 'ಪರಮಾತ್ಮನ ಮಾಯೆಯ ಸ್ವರೂಪವನ್ನೂ, ಗತಿಯನ್ನೂ ಪ್ರಾಣಿಗಳ ಮನಸ್ಸಿನಿಂದಾಗಲೀ, ಮಾತಿನಿಂದಾಗಲೀ ನಿರೂಪಿಸುವುದು ಶಕ್ಯವೇ ಇಲ್ಲ' ಎಂಬುದೇ ನಿಶ್ಚಿತ ಸಿದ್ಧಾಂತವಾಗಿದೆ. ॥ ೨೩ ॥ "ಧರ್ಮದೇವನೇ! ಕೃತಯುಗದಲ್ಲಿ ನಿನಗೆ ತಪಸ್ಸು, ಪವಿತ್ರತೆ, ದಯೆ, ಸತ್ಯ ಎಂಬ ನಾಲ್ಕು ಪಾದಗಳು ಇದ್ದವು. ಅವುಗಳಲ್ಲಿ ಈಗ ಮೂರುಪಾದಗಳು ಅಧರ್ಮದ ಅಂಶಗಳಾದ ಅಹಂಕಾರ, ಆಸಕ್ತಿ, ಮದ ಇವುಗಳಿಂದ ಮುರಿದುಹೋದುವು. ॥ ೨೪ ॥ ಈ ನಾಲ್ಕನೆಯ ಪಾದವಾದ 'ಸತ್ಯ'ವೆಂಬುದು ಮಾತ್ರ ಉಳಿದಿದೆ. ಅದರ ಬಲದಿಂದಲೇ ನೀನು ಬದುಕಿರುವೆ. ಅಸತ್ಯದಿಂದ ಪೋಷಿತವಾದ ಅಧರ್ಮರೂಪವಾದ ಕಲಿಯುಗವು ಆ ಪಾದವನ್ನು ನುಂಗಿಹಾಕಲು ಪ್ರಯತ್ನಿಸುತ್ತಿದೆ. ॥ ೨೫ ॥ ಈ ಗೋಮಾತೆಯು ಸಾಕ್ಷಾತ್ ಭೂಮಿತಾಯಿಯಾಗಿದ್ದು ಶ್ರೀಕೃಷ್ಣಪರಮಾತ್ಮನು ಈಕೆಯ ಮೇಲಿದ್ದ ಮಹಾಭಾರವನ್ನು ಇಳಿಸಿ ಈಕೆಗೆ ಆನಂದವನ್ನುಂಟುಮಾಡಿದ್ದನು. ಆತನ ಸೌಂದರ್ಯನಿಧಿಯಾದ ಚರಣಚಿಹ್ನೆಗಳಿಂದ ಈಕೆಗೆ ಎಲ್ಲೆಡೆಗಳಲ್ಲಿಯೂ ಅಲಂಕಾರ, ಆನಂದೋತ್ಸವಗಳು ಸಂಪನ್ನವಾಗಿದ್ದವು. ॥ ೨೬ ॥ ಈಗ ಆತನ ಅಗಲಿಕೆಯಿಂದ ಈ ಸಾಧ್ವಿಯು ದುರ್ಭಾಗ್ಯವತಿಯಂತೆ ಕಣ್ಣೀರುಸುರಿಸುತ್ತಾ – ಅಯ್ಯೋ! ಇನ್ನು ಮುಂದೆ ಬ್ರಾಹ್ಮಣದ್ರೋಹಿಗಳಾದ ಶೂದ್ರರು ರಾಜವೇಷಧಾರಿಗಳಾಗಿ ನನ್ನನ್ನು ಆಳುವರಲ್ಲ!' ಎಂದು ಚಿಂತೆ ಪಡುತ್ತಿದ್ದಾಳೆ." ॥ ೨೭ ॥

**ಇತಿ ಧರ್ಮಂ ಮಹೀಂ ಚೈವ ಸಾಂತ್ವಯಿತ್ವಾ ಮಹಾರಥಃ ।**
**ನಿಶಾತಮಾದದೇ ಖಡ್ಗಂ ಕಲಯೇಽಧರ್ಮಹೇತವೇ ॥ ೨೮ ॥**

**ತಂ ಜಿಘಾಂಸುಮಭಿಪ್ರೇತ್ಯ ವಿಹಾಯ ನೃಪಲಾಂಛನಮ್ ।**
**ತತ್ಪಾದಮೂಲಂ ಶಿರಸಾ ಸಮಗಾದ್ಭಯವಿಹ್ವಲಃ ॥ ೨೯ ॥**

**ಪತಿತಂ ಪಾದಯೋರ್ವೀಕ್ಷ್ಯ ಕೃಪಯಾ ದೀನವತ್ಸಲಃ ।**
**ಶರಣ್ಯೋ ನಾವಧೀಚ್ಛ್ಲೋಕ್ಯ ಆಹ ಚೇದಂ ಹಸನ್ನಿವ ॥ ೩೦ ॥**

ಮಹಾರಥಿಯಾದ ಪರೀಕ್ಷಿದ್ರಾಜನು ಹೀಗೆ ಧರ್ಮದೇವನನ್ನೂ, ಭೂದೇವಿಯನ್ನೂ ಸಮಾಧಾನಪಡಿಸಿದನು. ಅನಂತರ ಅಧರ್ಮಕ್ಕೆ ಕಾರಣನಾಗಿರುವ ಕಲಿಪುರುಷನನ್ನು ಕೊಲ್ಲುವುದಕ್ಕಾಗಿ ತೀಕ್ಷ್ಣವಾದ ಖಡ್ಗವನ್ನೆತ್ತಿದನು. ॥ ೨೮ ॥ ಪರೀಕ್ಷಿದ್ರಾಜನು ತನ್ನನ್ನು ಈಗ ಸಂಹರಿಸಲು ಬಯಸುತ್ತಿರುವನೆಂದು ತಿಳಿದ ಕಲಿಪುರುಷನು ಒಡನೆಯೇ ತನ್ನ ರಾಜವೇಷವನ್ನು ಕಳಚಿಹಾಕಿ ಭಯದಿಂದ ಕಳವಳಗೊಂಡು, ತಲೆಯನ್ನು ಆತನ ಪಾದಗಳಲ್ಲಿ ಇರಿಸಿ ಆತನಲ್ಲಿ ಶರಣಾದನು. ॥ ೨೯ ॥ ಪರೀಕ್ಷಿತನಾದರೋ ಮಹಾಯಶಸ್ವಿಯೂ, ದೀನವತ್ಸಲನೂ, ಶರಣಾಗತರಕ್ಷಕನೂ ಆಗಿದ್ದುದರಿಂದ ಕಲಿ ಪುರುಷನು ತನ್ನ ಕಾಲಿಗೆ ಬಿದ್ದಿರುವುದನ್ನು ನೋಡಿ, ಅವನನ್ನು ಸಾಯಿಸದೆ ಕರುಣೆ ತೋರಿದನು. ಅವನು ಕಿರುನಗೆಯನ್ನು ಬೀರುತ್ತಾ ಕಲಿಪುರುಷನಲ್ಲಿ ಇಂತೆಂದನು. ॥ ೩೦ ॥

*ರಾಜೋವಾಚ*

ನ ತೇ ಗುಡಾಕೇಶಯಶೋಧರಾಣಾಂ
ಬದ್ಧಾಂಜಲೇರ್ವೈ ಭಯಮಸ್ತಿ ಕಿಂಚಿತ್ ।
ನ ವರ್ತಿತವ್ಯಂ ಭವತಾ ಕಥಂಚನ
ಕ್ಷೇತ್ರೇ ಮದೀಯೆ ತ್ವಮಧರ್ಮಬಂಧುಃ ॥ ೩೧ ॥

ತ್ವಾಂ ವರ್ತಮಾನಂ ನರದೇವದೇಹೇ-
ಷ್ವನುಪ್ರವೃತ್ತೋಽಯಮಧರ್ಮಪೂಗಃ ।
ಲೋಭೋಽನೃತಂ ಚೌರ್ಯಮನಾರ್ಯಮಂಹೋ
ಜ್ಯೇಷ್ಠಾ ಚ ಮಾಯಾ ಕಲಹಶ್ಚ ದಂಭಃ ॥ ೩೨ ॥

ನ ವರ್ತಿತವ್ಯಂ ತದಧರ್ಮಬಂಧೋ
ಧರ್ಮೇಣ ಸತ್ಯೇನ ಚ ವರ್ತಿತವ್ಯೇ ।
ಬ್ರಹ್ಮಾವರ್ತೇ ಯತ್ರ ಯಜಂತಿ ಯಜ್ಞೈ-
ರ್ಯಜ್ಞೇಶ್ವರಂ ಯಜ್ಞವಿತಾನವಿಜ್ಞಾಃ ॥ ೩೩ ॥

ಯಸ್ಮಿನ್ಹರಿರ್ಭಗವಾನಿಜ್ಯಮಾನ
ಇಜ್ಯಾಮೂರ್ತಿರ್ಯಜತಾಂ ಶಂ ತನೋತಿ ।
ಕಾಮಾನಮೋಘಾನ್ ಸ್ಥಿರಜಂಗಮಾನಾ-
ಮಂತರ್ಬಹಿರ್ವಾಯುರಿವೈಷ ಆತ್ಮಾ ॥ ೩೪ ॥

*ಸೂತ ಉವಾಚ*

ಪರೀಕ್ಷಿತೈವಮಾದಿಷ್ಟಃ ಸ ಕಲಿರ್ಜಾತವೇಪಥುಃ ।
ತಮುದ್ಯತಾಸಿಮಾಹೇದಂ ದಂಡಪಾಣಿಮಿವೋದ್ಯತಮ್ ॥ ೩೫ ॥

*ಕಲಿರುವಾಚ*

ಯತ್ರ ಕ್ವಚನ ವತ್ಸ್ಯಾಮಿ ಸಾರ್ವಭೌಮ ತವಾಜ್ಞಯಾ ।
ಲಕ್ಷಯೇ ತತ್ರ ತತ್ರಾಪಿ ತ್ವಾಮಾತ್ತೇಷುಶರಾಸನಮ್ ॥ ೩೬ ॥

ತನ್ಮೇ ಧರ್ಮಭೃತಾಂ ಶ್ರೇಷ್ಠ ಸ್ಥಾನಂ ನಿರ್ದೇಷ್ಟುಮರ್ಹಸಿ ।
ಯತ್ರೈವ ನಿಯತೋ ವತ್ಸ್ಯ ಆತಿಷ್ಠಂಸ್ತೇಽನುಶಾಸನಮ್ ॥ ೩೭ ॥

*ಸೂತ ಉವಾಚ*

ಅಭ್ಯರ್ಥಿತಸ್ತದಾ ತಸ್ಮೈ ಸ್ಥಾನಾನಿ ಕಲಯೇ ದದೌ ।
ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ ॥ ೩೮ ॥

ಪುನಶ್ಚ ಯಾಚಮಾನಾಯ ಜಾತರೂಪಮದಾತ್ಪ್ರಭುಃ ।
ತತೋಽನೃತಂ ಮದಂ ಕಾಮಂ ರಜೋ ವೈರಂ ಚ ಪಂಚಮಮ್ ॥ ೩೯ ॥

ಅಮೂನಿ ಪಂಚ ಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ ।
ಔತ್ತರೇಯೇಣ ದತ್ತಾನಿ ನ್ಯವಸತ್ತನ್ನಿದೇಶಕೃತ್ ॥ ೪೦ ॥

**ಪರೀಕ್ಷಿದ್ರಾಜನು ಹೇಳಿದನು** – 'ನೀನು ಕೈಜೋಡಿಸಿಕೊಂಡು ಶರಣಾಗತನಾಗಿದ್ದೀಯೆ. ಆದ್ದರಿಂದ ಅರ್ಜುನನ ಯಶಸ್ವೀ ವಂಶದಲ್ಲಿ ಜನಿಸಿದ ವೀರರಿಂದ ನಿನಗೆ ಯಾವ ಭಯವೂ ಇಲ್ಲ. ಆದರೆ ನೀನು ಅಧರ್ಮಕ್ಕೆ ಸಹಾಯಕನಾಗಿರುವುದರಿಂದ ನನ್ನ ರಾಜ್ಯದಲ್ಲಿ ಖಂಡಿತವಾಗಿ ಇರಕೂಡದು. ॥ ೩೧ ॥ ನೀನು ರಾಜರ ಶರೀರಗಳಲ್ಲಿ ಇರುವುದರಿಂದಲೇ ಲೋಭ, ಅಸತ್ಯ, ಕಳ್ಳತನ, ದುಷ್ಟತನ, ಸ್ವಧರ್ಮತ್ಯಾಗ, ದಾರಿದ್ರ್ಯ, ಕಪಟ, ಕಲಹ, ದಂಭ ಮತ್ತು ಇತರ ಪಾಪಗಳು ಬೆಳೆಯುತ್ತಿವೆ. ॥ ೩೨ ॥ ಆದುದರಿಂದ ಎಲೈ ಅಧರ್ಮದ ಮಿತ್ರನೇ! ನೀನು ಈ ಬ್ರಹ್ಮಾವರ್ತದೇಶದಲ್ಲಿ ಒಂದು ಕ್ಷಣವೂ ಇರಬಾರದು. ಏಕೆಂದರೆ, ಇದು ಸತ್ಯ, ಧರ್ಮಗಳ ನಿವಾಸಸ್ಥಾನವಾಗಿದೆ. ಈ ಕ್ಷೇತ್ರದಲ್ಲಿ ಯಜ್ಞವಿಧಿ ಯನ್ನರಿತ ಮಹಾತ್ಮರು ಯಜ್ಞದ ಮೂಲಕ ಯಜ್ಞಪುರುಷನಾದ ಭಗವಂತನನ್ನು ಆರಾಧಿಸುತ್ತಾರೆ. ॥ ೩೩ ॥ ಈ ದೇಶದಲ್ಲಿ ಭಗವಂತನಾದ ಶ್ರೀಹರಿಯು ಯಜ್ಞರೂಪದಲ್ಲಿ ವಾಸಿಸುತ್ತಿರುವನು. ಯಜ್ಞಗಳ ಮೂಲಕ ಪೂಜೆಯನ್ನು ಸ್ವೀಕರಿಸಿ, ಯಜ್ಞ ಮಾಡುವವರಿಗೆ ಸನ್ಮಂಗಳವನ್ನು ಉಂಟುಮಾಡುತ್ತಾನೆ. ಸರ್ವಾತ್ಮನಾಗಿರುವ ಆ ಸ್ವಾಮಿಯು ವಾಯುವಿನಂತೆ ಸಮಸ್ತ ಚರಾಚರ ಪ್ರಾಣಿಗಳ ಒಳ-ಹೊರಗೂ ಏಕರಸವಾಗಿ ತುಂಬಿದ್ದು ಅವರ ಕಾಮನೆಗಳನ್ನು ಪೂರ್ಣಗೊಳಿಸುತ್ತಾನೆ. ॥ ೩೪ ॥

**ಸೂತಪುರಾಣಿಕರು ಹೇಳುತ್ತಾರೆ** – ಪರೀಕ್ಷಿದ್ರಾಜನ ಆಜ್ಞೆಯನ್ನು ಕೇಳಿ ಕಲಿಪುರುಷನು ನಡುಗತೊಡಗಿದನು. ಯಮರಾಜನಂತೆ ಕೊಲ್ಲಲು ಖಡ್ಗವನ್ನೆತ್ತಿಕೊಂಡು ನಿಂತಿದ್ದ ಪರೀಕ್ಷಿತನಲ್ಲಿ ಕಲಿಯು ಹೀಗೆ ವಿನಂತಿಸಿಕೊಂಡನು – ॥ ೩೫ ॥

**ಕಲಿಪುರುಷನು ಹೇಳಿದನು** – ಸಾರ್ವಭೌಮನೇ! ನಿನ್ನ ಆಜ್ಞೆಯಂತೆ ನಾನು ಎಲ್ಲೇ ಇರಲು ಬಯಸಿದರೂ ಅಲ್ಲೆಲ್ಲಾ ಧನುಸ್ಸಿನಲ್ಲಿ ಬಾಣವನ್ನು ಹೂಡಿ ನಿಂತಿರುವ ನಿನ್ನ ಮೂರ್ತಿಯೇ ಕಾಣುತ್ತಿರುತ್ತದೆ. ॥ ೩೬ ॥ ಧಾರ್ಮಿಕ ಶಿರೋಮಣಿಯೇ! ನಾನು ನಿನ್ನ ಆಜ್ಞೆಯನ್ನು ಪಾಲಿಸುತ್ತಾ ನಿಯತವಾಗಿ ವಾಸಿಸಬಹುದಾದ ಸ್ಥಾನವು ಯಾವುದೆಂಬುದನ್ನು ದಯಮಾಡಿ ನಿರ್ದೇಶಿಸು. ॥ ೩೭ ॥

**ಸೂತಪುರಾಣಿಕರು ಹೇಳುತ್ತಾರೆ** – ಕಲಿಪುರುಷನ ಈ ಪ್ರಾರ್ಥನೆಯನ್ನು ಸ್ವೀಕರಿಸಿ ರಾಜಾ ಪರೀಕ್ಷಿತನು ಆತನಿಗೆ ಸ್ಥಿರವಾಗಿ ವಾಸಮಾಡಲು – ಜೂಜು, ಮದ್ಯಪಾನ, ಅಧಾರ್ಮಿಕವಾದ ಸ್ತ್ರೀಸಂಗ, ಮತ್ತು ಹಿಂಸೆ ಎಂಬ ನಾಲ್ಕು ಜಾಗಗಳನ್ನು ನಿರ್ದೇಶಿಸಿದನು. ಈ ನಾಲ್ಕು ಸ್ಥಾನಗಳಲ್ಲಿ ಕ್ರಮವಾಗಿ ಅಸತ್ಯ, ಮದ, ಆಸಕ್ತಿ, ನಿರ್ದಯತೆ ಎಂಬ ನಾಲ್ಕು ಬಗೆಯ ಅಧರ್ಮಗಳು ವಾಸಿಸುತ್ತವೆ. ॥ ೩೮ ॥ ಇವುಗಳಲ್ಲದೆ ಇನ್ನು ಕೆಲವು ಸ್ಥಾನಗಳನ್ನು ತನ್ನ ವಾಸಕ್ಕಾಗಿ ದಯಪಾಲಿಸಬೇಕೆಂದು ಕಲಿಪುರುಷನು ಕೇಳಿದಾಗ, ಸಮರ್ಥನಾದ ಪರೀಕ್ಷಿದ್ರಾಜನು ಅವನಿಗೆ ವಾಸಕ್ಕಾಗಿ ಇನ್ನೊಂದು ಸ್ಥಾನ 'ಸುವರ್ಣ' (ಚಿನ್ನ) ವನ್ನು ನಿರ್ದೇಶಿಸಿದನು. ಹೀಗೆ ಕಲಿ ಪುರುಷನಿಗೆ ಅಸತ್ಯ, ಮದ, ಕಾಮ, ವೈರ ಮತ್ತು ರಜೋಗುಣ ಎಂಬ ಐದು ಸ್ಥಾನಗಳಾದವು. ॥ ೩೯ ॥ ಪರೀಕ್ಷಿದ್ರಾಜನು ತನಗೆ ಕೊಟ್ಟ ಆ ಐದು ಸ್ಥಾನಗಳಲ್ಲೇ ಕಲಿಯು, ಅವನ ಅಪ್ಪಣೆಯನ್ನು ಪಾಲಿಸುತ್ತಾ ವಾಸಿಸತೊಡಗಿದನು. ॥ ೪೦ ॥ ಆದ್ದರಿಂದ ಆತ್ಮಕಲ್ಯಾಣ

ಅರ್ಥೈತಾನಿ ನ ಸೇವೇತ ಬುಭೂಷುಃ ಪುರುಷಃ ಕ್ವಚಿತ್ ।
ವಿಶೇಷತೋ ಧರ್ಮಶೀಲೋ ರಾಜಾ ಲೋಕಪತಿರ್ಗುರುಃ ॥ ೪೧ ॥

ವೃಷಸ್ಯ ನಷ್ಟಾಂಸ್ತ್ರೀನ್ಪಾದಾಂಸ್ತಪಃ ಶೌಚಂ ದಯಾಮಿತಿ ।
ಪ್ರತಿಸಂದಧ ಆಶ್ವಾಸ್ಯ ಮಹೀಂ ಚ ಸಮವರ್ಧಯತ್ ॥ ೪೨ ॥

ಸ ಏಷ ಏತರ್ಹ್ಯಧ್ಯಾಸ್ತ ಆಸನಂ ಪಾರ್ಥಿವೋಚಿತಮ್ ।
ಪಿತಾಮಹೇನೋಪನ್ಯಸ್ತಂ ರಾಜ್ಞಾರಣ್ಯಂ ವಿವಿಕ್ಷತಾ ॥ ೪೩ ॥

ಆಸ್ತೇಽಧುನಾ ಸ ರಾಜರ್ಷಿಃ ಕೌರವೇಂದ್ರಃ ಶ್ರಿಯೋಲ್ಲಸನ್ ।
ಗಜಾಹ್ವಯೇ ಮಹಾಭಾಗಶ್ಚಕ್ರವರ್ತೀ ಬೃಹಚ್ಛ್ರವಾಃ ॥ ೪೪ ॥

ಇತ್ಥಂಭೂತಾನುಭಾವೋಽಯಮಭಿಮನ್ಯುಸುತೋ ನೃಪಃ ।
ಯಸ್ಯ ಪಾಲಯತಃ ಕ್ಷೋಣೀಂ ಯೂಯಂ ಸತ್ರಾಯ ದೀಕ್ಷಿತಾಃ ॥ ೪೫ ॥

ವನ್ನು ಬಯಸುವ ಪುರುಷನು ಈ ಐದು ಸ್ಥಾನಗಳನ್ನು ಎಂದಿಗೂ ಸೇವಿಸಬಾರದು. ವಿಶೇಷವಾಗಿ ಧರ್ಮಶೀಲರಾದ ರಾಜರು, ಪ್ರಜಾನಾಯಕರು, ಧರ್ಮೋಪದೇಶಮಾಡುವ ಗುರುಜನರು ತುಂಬಾ ಎಚ್ಚರಿಕೆಯಿಂದ ಇವುಗಳನ್ನು ತ್ಯಜಿಸಬೇಕು. ॥ ೪೧ ॥ ಅನಂತರ ಪರೀಕ್ಷಿದ್ರಾಜನು ವೃಷಭರೂಪದಲ್ಲಿದ್ದ ಧರ್ಮಕ್ಕೆ, ತಪಸ್ಸು, ಶೌಚ, ದಯೆ ಎಂಬ ಮೂರು ಪಾದಗಳನ್ನು ಜೋಡಿಸಿ ಕೊಟ್ಟು ಸಮಾಧಾನಪಡಿಸಿದನು. ಭೂದೇವಿಯನ್ನು ಸಮಾಧಾನಗೊಳಿಸಿ ಆಕೆಯನ್ನು ಸಲಹಿದನು. ॥ ೪೨ ॥ ಆ ಪರೀಕ್ಷಿದ್ರಾಜನೇ ತನ್ನ ಪಿತಾಮಹನು ಅರಣ್ಯಕ್ಕೆ ತೆರಳುವಾಗ ತನಗೆ ಕೊಟ್ಟ ರಾಜಸಿಂಹಾಸನದ ಮೇಲೆ ಈಗಲೂ ಬೆಳಗುತ್ತಿದ್ದಾನೆ. ॥ ೪೩ ॥ ಪರಮ ಯಶಸ್ವಿಯೂ, ಸೌಭಾಗ್ಯಸಂಪನ್ನನೂ ಆದ ಆ ಚಕ್ರವರ್ತಿ ರಾಜರ್ಷಿಯು ಹಸ್ತಿನಾವತಿಯಲ್ಲಿ ಕೌರವಕುಲದ ರಾಜ್ಯಲಕ್ಷ್ಮಿಯಿಂದ ರಾರಾಜಿಸುತ್ತಿದ್ದಾನೆ. ॥ ೪೪ ॥ ಅಭಿಮನ್ಯುನಂದನ ರಾಜಾ ಪರೀಕ್ಷಿತನ ಪ್ರಭಾವ ಹೀಗಿದೆ. ಆ ಮಹಾನುಭಾವನು ರಾಜ್ಯವನ್ನಾಳುವ ಸಮಯದಲ್ಲಿಯೇ ನೀವು ದೀರ್ಘಕಾಲ ನಡೆಯುವ ಈ ಸತ್ರಯಾಗದಲ್ಲಿ ದೀಕ್ಷಿತರಾಗಿರುವಿರಿ. * ॥ ೪೫ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಕಲಿನಿಗ್ರಹೋ ನಾಮ ಸಪ್ತದಶೋಽಧ್ಯಾಯಃ ॥ ೧೭ ॥

# ಹದಿನೆಂಟನೆಯ ಅಧ್ಯಾಯ

## ಪರೀಕ್ಷಿದ್ರಾಜನಿಗೆ ಶೃಂಗೀ ಋಷಿಯ ಶಾಪ ಒದಗಿದುದು

*ಸೂತ ಉವಾಚ*

ಯೋ ವೈ ದ್ರೌಣ್ಯಸ್ತ್ರವಿಪ್ಲುಷ್ಟೋ ನ ಮಾತುರುದರೇ ಮೃತಃ ।
ಅನುಗ್ರಹಾದ್ ಭಗವತಃ ಕೃಷ್ಣಸ್ಯಾದ್ಭುತಕರ್ಮಣಃ ॥ ೧ ॥

ಬ್ರಹ್ಮಕೋಪೋತ್ಥಿತಾದ್ಯಸ್ತು ತಕ್ಷಕಾತ್ಪ್ರಾಣವಿಪ್ಲವಾತ್ ।
ನ ಸಮ್ಮುಮೋಹೋರುಭಯಾದ್ಭಗವತ್ಯರ್ಪಿತಾಶಯಃ ॥ ೨ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿಗಳೇ ! ಅದ್ಭುತ ಕರ್ಮಗಳುಳ್ಳ ಶ್ರೀಕೃಷ್ಣಪರಮಾತ್ಮನ ಕೃಪೆಯಿಂದ ರಾಜಾ ಪರೀಕ್ಷಿತನು ತನ್ನ ತಾಯಿಯ ಗರ್ಭದಲ್ಲಿ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ದಹಿಸುತ್ತಿದ್ದರೂ ಸಾಯದೆ ಉಳಿದುಕೊಂಡನು. ॥ ೧ ॥ ಬ್ರಾಹ್ಮಣ ಶಾಪದಿಂದ ಪ್ರೇರಿತನಾಗಿ ತಕ್ಷಕನು ಕಚ್ಚಲು ಬಂದಾಗಲೂ ಆತನು ಪ್ರಾಣನಾಶವಾಗುವುದೆಂಬ ಭಯದಿಂದ ಮೋಹಕ್ಕೆ ಒಳಗಾಗಲಿಲ್ಲ. ಏಕೆಂದರೆ, ಅವನು ತನ್ನ ಚಿತ್ತವನ್ನು ಭಗವಾನ್ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಸಮರ್ಪಣೆಮಾಡಿಬಿಟ್ಟಿದ್ದನು. ॥ ೨ ॥ ಅವನು ಸರ್ವಸಂಗ ಪರಿತ್ಯಾಗಮಾಡಿ ಗಂಗಾತೀರಕ್ಕೆ ಹೋಗಿ ಶ್ರೀಶುಕಮಹಾಮುನಿಗಳಿಂದ ಉಪದೇಶ ಪಡೆದು ಭಗವಂತನ ಸ್ವರೂಪ

* ೪೩ರಿಂದ ೪೫ರವರೆಗಿನ ಶ್ಲೋಕಗಳಲ್ಲಿ ಪರೀಕ್ಷಿದ್ರಾಜನನ್ನು ವರ್ತಮಾನದಂತೆ ವರ್ಣಿಸಲಾಗಿದೆ. "ವರ್ತಮಾನಸಾಮೀಪ್ಯೇ ವರ್ತಮಾನವದ್ವಾ" (ಪಾ-ಸೂ-೩/೩/೧೩೧) ಎಂಬ ಪಾಣಿನಿಯ ಸೂತ್ರದಂತೆ ವರ್ತಮಾನದ ನಿಕಟವರ್ತಿ ಭೂತ ಮತ್ತು ನಿಕಟವರ್ತಿ ಭವಿಷ್ಯತ್ತಿಗಾಗಿ ವರ್ತಮಾನದ ಪ್ರಯೋಗ ಮಾಡಬಹುದು. ಶ್ರೀವಲ್ಲಭಾಚಾರ್ಯರು ತಮ್ಮ ಟೀಕೆಯಲ್ಲಿ ಬರೆದಿರುವರು – ಆಗ ಪರೀಕ್ಷಿದ್ರಾಜನು ಭೌತಿಕವಾಗಿ ಮೃತನಾಗಿದ್ದರೂ, ಆತನ ಕೀರ್ತಿ ಹಾಗೂ ಪ್ರಭಾವಗಳು ವರ್ತಮಾನದಂತೆ ವಿದ್ಯಮಾನವಾಗಿದ್ದವು. ಅವನ ಕುರಿತು ಅತ್ಯಂತ ಶ್ರದ್ಧೆಯನ್ನು ಉಂಟುಮಾಡಲು ಅವನ ಅಂತರವನ್ನು ಇಲ್ಲಿ ಇಲ್ಲವಾಗಿಸಿದೆ. ಅವನಿಗೆ ಭಗವಂತನ ಸಾಯುಜ್ಯ ಪ್ರಾಪ್ತವಾಗಿತ್ತು. ಇದಕ್ಕಾಗಿಯೂ ಸೂತಪುರಾಣಿಕರು ಆತನನ್ನು ತಮ್ಮ ಎದುರಿಗೆ ನೋಡುತ್ತಿದ್ದರು. ಕೇವಲ ಅವರಿಗೆ ಮಾತ್ರವಲ್ಲ ಅಲ್ಲಿದ್ದ ಎಲ್ಲರಿಗೂ ಹಾಗೆಯೇ ಅನುಭವವಾಗುತ್ತಿತ್ತು. "ಆತ್ಮಾ ವೈ ಪುತ್ರನಾಮಾಸಿ" ಎಂಬ ಶ್ರುತಿಗನುಸಾರ ಜನಮೇಜಯನ ರೂಪದಲ್ಲಿಯೂ ಅವನೇ ರಾಜಸಿಂಹಾಸನದಲ್ಲಿ ಕುಳಿತಿದ್ದನು. ಇವೆಲ್ಲ ಕಾರಣಗಳಿಂದ ವರ್ತಮಾನದಂತೆ ಅವನ ವರ್ಣನೆಯು ಕಥಾರಸವನ್ನು ಪುಷ್ಟಗೊಳಿಸುತ್ತದೆ.

ರಾಜೋವಾಚ

ನ ತೇ ಗುಡಾಕೇಶಯಶೋಧರಾಣಾಂ
ಬದ್ಧಾಂಜಲೇರ್ವೈ ಭಯಮಸ್ತಿ ಕಿಂಚಿತ್ ।
ನ ವರ್ತಿತವ್ಯಂ ಭವತಾ ಕಥಂಚನ
ಕ್ಷೇತ್ರೇ ಮದೀಯೆ ತ್ವಮಧರ್ಮಬಂಧುಃ ॥ ೩೧ ॥

ತ್ವಾಂ ವರ್ತಮಾನಂ ನರದೇವದೇಹೇ-
ಷ್ವನುಪ್ರವೃತ್ತೋಽಯಮಧರ್ಮಪೂಗಃ ।
ಲೋಭೋಽನೃತಂ ಚೌರ್ಯಮನಾರ್ಯಮಂಹೋ
ಜ್ಯೇಷ್ಠಾ ಚ ಮಾಯಾ ಕಲಹಶ್ಚ ದಂಭಃ ॥ ೩೨ ॥

ನ ವರ್ತಿತವ್ಯಂ ತದಧರ್ಮಬಂಧೋ
ಧರ್ಮೇಣ ಸತ್ಯೇನ ಚ ವರ್ತಿತವ್ಯೇ ।
ಬ್ರಹ್ಮಾವರ್ತೇ ಯತ್ರ ಯಜಂತಿ ಯಜ್ಞೈ-
ರ್ಯಜ್ಞೇಶ್ವರಂ ಯಜ್ಞವಿತಾನವಿಜ್ಞಾಃ ॥ ೩೩ ॥

ಯಸ್ಮಿನ್ಹರಿರ್ಭಗವಾನಿಜ್ಯಮಾನ
ಇಜ್ಯಾಮೂರ್ತಿರ್ಯಜತಾಂ ಶಂ ತನೋತಿ ।
ಕಾಮಾನಮೋಘಾನ್ ಸ್ಥಿರಜಂಗಮಾನಾ-
ಮಂತರ್ಬಹಿರ್ವಾಯುರಿವೈಷ ಆತ್ಮಾ ॥ ೩೪ ॥

ಸೂತ ಉವಾಚ

ಪರೀಕ್ಷಿತೈವಮಾದಿಷ್ಟಃ ಸ ಕಲಿರ್ಜಾತವೇಪಥುಃ ।
ತಮುದ್ಯತಾಸಿಮಾಹೇದಂ ದಂಡಪಾಣಿಮಿವೋದ್ಯತಮ್ ॥ ೩೫ ॥

ಕಲಿರುವಾಚ

ಯತ್ರ ಕ್ವಚನ ವತ್ಸ್ಯಾಮಿ ಸಾರ್ವಭೌಮ ತವಾಜ್ಞಯಾ ।
ಲಕ್ಷಯೇ ತತ್ರ ತತ್ರಾಪಿ ತ್ವಾಮಾತ್ತೇಷುಶರಾಸನಮ್ ॥ ೩೬ ॥

ತನ್ಮೇ ಧರ್ಮಭೃತಾಂ ಶ್ರೇಷ್ಠ ಸ್ಥಾನಂ ನಿರ್ದೇಷ್ಟುಮರ್ಹಸಿ ।
ಯತ್ರೈವ ನಿಯತೋ ವತ್ಸ್ಯ ಆತಿಷ್ಠಂಸ್ತೇಽನುಶಾಸನಮ್ ॥ ೩೭ ॥

ಸೂತ ಉವಾಚ

ಅಭ್ಯರ್ಥಿತಸ್ತದಾ ತಸ್ಮೈ ಸ್ಥಾನಾನಿ ಕಲಯೇ ದದೌ ।
ದ್ಯೂತಂ ಪಾನಂ ಸ್ತ್ರಿಯಃ ಸೂನಾ ಯತ್ರಾಧರ್ಮಶ್ಚತುರ್ವಿಧಃ ॥ ೩೮ ॥

ಪುನಶ್ಚ ಯಾಚಮಾನಾಯ ಜಾತರೂಪಮದಾತ್ಪ್ರಭುಃ ।
ತತೋಽನೃತಂ ಮದಂ ಕಾಮಂ ರಜೋ ವೈರಂ ಚ ಪಂಚಮಮ್ ॥ ೩೯ ॥

ಅಮೂನಿ ಪಂಚ ಸ್ಥಾನಾನಿ ಹ್ಯಧರ್ಮಪ್ರಭವಃ ಕಲಿಃ ।
ಔತ್ತರೇಯೇಣ ದತ್ತಾನಿ ನ್ಯವಸತ್ತನ್ನಿದೇಶಕೃತ್ ॥ ೪೦ ॥

**ಪರೀಕ್ಷಿದ್ರಾಜನು ಹೇಳಿದನು** – 'ನೀನು ಕೈಜೋಡಿಸಿಕೊಂಡು ಶರಣಾಗತನಾಗಿದ್ದೀಯೆ. ಆದ್ದರಿಂದ ಅರ್ಜುನನ ಯಶಸ್ವೀ ವಂಶದಲ್ಲಿ ಜನಿಸಿದ ವೀರರಿಂದ ನಿನಗೆ ಯಾವ ಭಯವೂ ಇಲ್ಲ. ಆದರೆ ನೀನು ಅಧರ್ಮಕ್ಕೆ ಸಹಾಯಕನಾಗಿರುವುದರಿಂದ ನನ್ನ ರಾಜ್ಯದಲ್ಲಿ ಖಂಡಿತವಾಗಿ ಇರಕೂಡದು. ॥ ೩೧ ॥ ನೀನು ರಾಜರ ಶರೀರಗಳಲ್ಲಿ ಇರುವುದರಿಂದಲೇ ಲೋಭ, ಅಸತ್ಯ, ಕಳ್ಳತನ, ದುಷ್ಟತನ, ಸ್ವಧರ್ಮತ್ಯಾಗ, ದಾರಿದ್ರ್ಯ, ಕಪಟ, ಕಲಹ, ದಂಭ ಮತ್ತು ಇತರ ಪಾಪಗಳು ಬೆಳೆಯುತ್ತಿವೆ. ॥ ೩೨ ॥ ಆದುದರಿಂದ ಎಲೈ ಅಧರ್ಮದ ಮಿತ್ರನೇ! ನೀನು ಈ ಬ್ರಹ್ಮಾವರ್ತದೇಶದಲ್ಲಿ ಒಂದು ಕ್ಷಣವೂ ಇರಬಾರದು. ಏಕೆಂದರೆ, ಇದು ಸತ್ಯ, ಧರ್ಮಗಳ ನಿವಾಸಸ್ಥಾನವಾಗಿದೆ. ಈ ಕ್ಷೇತ್ರದಲ್ಲಿ ಯಜ್ಞವಿಧಿಯನ್ನರಿತ ಮಹಾತ್ಮರು ಯಜ್ಞದ ಮೂಲಕ ಯಜ್ಞಪುರುಷನಾದ ಭಗವಂತನನ್ನು ಆರಾಧಿಸುತ್ತಾರೆ. ॥ ೩೩ ॥ ಈ ದೇಶದಲ್ಲಿ ಭಗವಂತನಾದ ಶ್ರೀಹರಿಯು ಯಜ್ಞರೂಪದಲ್ಲಿ ವಾಸಿಸುತ್ತಿರುವನು. ಯಜ್ಞಗಳ ಮೂಲಕ ಪೂಜೆಯನ್ನು ಸ್ವೀಕರಿಸಿ, ಯಜ್ಞ ಮಾಡುವವರಿಗೆ ಸನ್ಮಂಗಳವನ್ನು ಉಂಟುಮಾಡುತ್ತಾನೆ. ಸರ್ವಾತ್ಮನಾಗಿರುವ ಆ ಸ್ವಾಮಿಯು ವಾಯುವಿನಂತೆ ಸಮಸ್ತ ಚರಾಚರ ಪ್ರಾಣಿಗಳ ಒಳ-ಹೊರಗೂ ಏಕರಸವಾಗಿ ತುಂಬಿದ್ದು ಅವರ ಕಾಮನೆಗಳನ್ನು ಪೂರ್ಣಗೊಳಿಸುತ್ತಾನೆ. ॥ ೩೪ ॥

**ಸೂತಪುರಾಣಿಕರು ಹೇಳುತ್ತಾರೆ** – ಪರೀಕ್ಷಿದ್ರಾಜನ ಆಜ್ಞೆಯನ್ನು ಕೇಳಿ ಕಲಿಪುರುಷನು ನಡುಗತೊಡಗಿದನು. ಯಮರಾಜನಂತೆ ಕೊಲ್ಲಲು ಖಡ್ಗವನ್ನೆತ್ತಿಕೊಂಡು ನಿಂತಿದ್ದ ಪರೀಕ್ಷಿತನಲ್ಲಿ ಕಲಿಯು ಹೀಗೆ ವಿನಂತಿಸಿಕೊಂಡನು – ॥ ೩೫ ॥

**ಕಲಿಪುರುಷನು ಹೇಳಿದನು** – ಸಾರ್ವಭೌಮನೇ! ನಿನ್ನ ಆಜ್ಞೆಯಂತೆ ನಾನು ಎಲ್ಲೇ ಇರಲು ಬಯಸಿದರೂ ಅಲ್ಲೆಲ್ಲಾ ಧನುಸ್ಸಿನಲ್ಲಿ ಬಾಣವನ್ನು ಹೂಡಿ ನಿಂತಿರುವ ನಿನ್ನ ಮೂರ್ತಿಯೇ ಕಾಣುತ್ತಿರುತ್ತದೆ. ॥ ೩೬ ॥ ಧಾರ್ಮಿಕ ಶಿರೋಮಣಿಯೇ! ನಾನು ನಿನ್ನ ಆಜ್ಞೆಯನ್ನು ಪಾಲಿಸುತ್ತಾ ನಿಯತವಾಗಿ ವಾಸಿಸಬಹುದಾದ ಸ್ಥಾನವು ಯಾವುದೆಂಬುದನ್ನು ದಯಮಾಡಿ ನಿರ್ದೇಶಿಸು. ॥ ೩೭ ॥

**ಸೂತಪುರಾಣಿಕರು ಹೇಳುತ್ತಾರೆ** – ಕಲಿಪುರುಷನ ಈ ಪ್ರಾರ್ಥನೆಯನ್ನು ಸ್ವೀಕರಿಸಿ ರಾಜಾ ಪರೀಕ್ಷಿತನು ಆತನಿಗೆ ಸ್ಥಿರವಾಗಿ ವಾಸಮಾಡಲು – ಜೂಜು, ಮದ್ಯಪಾನ, ಅಧಾರ್ಮಿಕವಾದ ಸ್ತ್ರೀಸಂಗ, ಮತ್ತು ಹಿಂಸೆ ಎಂಬ ನಾಲ್ಕು ಜಾಗಗಳನ್ನು ನಿರ್ದೇಶಿಸಿದನು. ಈ ನಾಲ್ಕು ಸ್ಥಾನಗಳಲ್ಲಿ ಕ್ರಮವಾಗಿ ಅಸತ್ಯ, ಮದ, ಆಸಕ್ತಿ, ನಿರ್ದಯತೆ ಎಂಬ ನಾಲ್ಕು ಬಗೆಯ ಅಧರ್ಮಗಳು ವಾಸಿಸುತ್ತವೆ. ॥ ೩೮ ॥ ಇವುಗಳಲ್ಲದೆ ಇನ್ನು ಕೆಲವು ಸ್ಥಾನಗಳನ್ನು ತನ್ನ ವಾಸಕ್ಕಾಗಿ ದಯಪಾಲಿಸಬೇಕೆಂದು ಕಲಿಪುರುಷನು ಕೇಳಿದಾಗ, ಸಮರ್ಥನಾದ ಪರೀಕ್ಷಿದ್ರಾಜನು ಅವನಿಗೆ ವಾಸಕ್ಕಾಗಿ ಇನ್ನೊಂದು ಸ್ಥಾನ 'ಸುವರ್ಣ' (ಚಿನ್ನ) ವನ್ನು ನಿರ್ದೇಶಿಸಿದನು. ಹೀಗೆ ಕಲಿಪುರುಷನಿಗೆ ಅಸತ್ಯ, ಮದ, ಕಾಮ, ವೈರ ಮತ್ತು ರಜೋಗುಣ ಎಂಬ ಐದು ಸ್ಥಾನಗಳಾದವು. ॥ ೩೯ ॥ ಪರೀಕ್ಷಿದ್ರಾಜನು ತನಗೆ ಕೊಟ್ಟ ಆ ಐದು ಸ್ಥಾನಗಳಲ್ಲೇ ಕಲಿಯು, ಅವನ ಅಪ್ಪಣೆಯನ್ನು ಪಾಲಿಸುತ್ತಾ ವಾಸಿಸತೊಡಗಿದನು. ॥ ೪೦ ॥ ಆದ್ದರಿಂದ ಆತ್ಮಕಲ್ಯಾಣ

ಅಥೈತಾನಿ ನ ಸೇವೇತ ಬುಭೂಷುಃ ಪುರುಷಃ ಕ್ವಚಿತ್ ।
ವಿಶೇಷತೋ ಧರ್ಮಶೀಲೋ ರಾಜಾ ಲೋಕಪತಿರ್ಗುರುಃ
॥ ೪೧ ॥

ವನ್ನು ಬಯಸುವ ಪುರುಷನು ಈ ಐದು ಸ್ಥಾನಗಳನ್ನು ಎಂದಿಗೂ ಸೇವಿಸಬಾರದು. ವಿಶೇಷವಾಗಿ ಧರ್ಮಶೀಲರಾದ ರಾಜರು, ಪ್ರಜಾನಾಯಕರು, ಧರ್ಮೋಪದೇಶಮಾಡುವ ಗುರುಜನರು ತುಂಬಾ ಎಚ್ಚರಿಕೆಯಿಂದ ಇವುಗಳನ್ನು ತ್ಯಜಿಸಬೇಕು. ॥ ೪೧ ॥

ವೃಷಸ್ಯ ನಷ್ಟಾಂಸ್ತ್ರೀನ್ಪಾದಾಂಸ್ತಪಃ ಶೌಚಂ ದಯಾಮಿತಿ ।
ಪ್ರತಿಸಂದಧ ಆಶ್ವಾಸ್ಯ ಮಹೀಂ ಚ ಸಮವರ್ಧಯತ್
॥ ೪೨ ॥

ಅನಂತರ ಪರೀಕ್ಷಿದ್ರಾಜನು ವೃಷಭರೂಪದಲ್ಲಿದ್ದ ಧರ್ಮಕ್ಕೆ, ತಪಸ್ಸು, ಶೌಚ, ದಯೆ ಎಂಬ ಮೂರು ಪಾದಗಳನ್ನು ಜೋಡಿಸಿ ಕೊಟ್ಟು, ಸಮಾಧಾನಪಡಿಸಿದನು. ಭೂದೇವಿಯನ್ನು ಸಮಾಧಾನಗೊಳಿಸಿ ಆಕೆಯನ್ನು ಸಲಹಿದನು. ॥ ೪೨ ॥

ಸ ಏಷ ಏತರ್ಹ್ಯಧ್ಯಾಸ್ತ ಆಸನಂ ಪಾರ್ಥಿವೋಚಿತಮ್ ।
ಪಿತಾಮಹೇನೋಪನ್ಯಸ್ತಂ ರಾಜ್ಞಾರಣ್ಯಂ ವಿವಿಕ್ಷತಾ
॥ ೪೩ ॥

ಆ ಪರೀಕ್ಷಿದ್ರಾಜನೇ ತನ್ನ ಪಿತಾಮಹನು ಅರಣ್ಯಕ್ಕೆ ತೆರಳುವಾಗ ತನಗೆ ಕೊಟ್ಟ ರಾಜಸಿಂಹಾಸನದ ಮೇಲೆ ಈಗಲೂ ಬೆಳಗುತ್ತಿದ್ದಾನೆ. ॥ ೪೩ ॥

ಆಸ್ತೇಽಧುನಾ ಸ ರಾಜರ್ಷಿಃ ಕೌರವೇಂದ್ರಃ ಶ್ರಿಯೋಲ್ಲಸನ್ ।
ಗಜಾಹ್ವಯೇ ಮಹಾಭಾಗಶ್ಚಕ್ರವರ್ತೀ ಬೃಹಚ್ಛ್ರವಾಃ
॥ ೪೪ ॥

ಪರಮ ಯಶಸ್ವಿಯೂ, ಸೌಭಾಗ್ಯಸಂಪನ್ನನೂ ಆದ ಆ ಚಕ್ರವರ್ತಿ ರಾಜರ್ಷಿಯು ಹಸ್ತಿನಾವತಿಯಲ್ಲಿ ಕೌರವಕುಲದ ರಾಜ್ಯಲಕ್ಷ್ಮಿಯಿಂದ ರಾರಾಜಿಸುತ್ತಿದ್ದಾನೆ. ॥ ೪೪ ॥

ಇತ್ಥಂಭೂತಾನುಭಾವೋಽಯಮಭಿಮನ್ಯುಸುತೋ ನೃಪಃ ।
ಯಸ್ಯ ಪಾಲಯತಃ ಕ್ಷೋಣೀಂ ಯೂಯಂ ಸತ್ರಾಯ ದೀಕ್ಷಿತಾಃ
॥ ೪೫ ॥

ಅಭಿಮನ್ಯುನಂದನ ರಾಜಾ ಪರೀಕ್ಷಿತನ ಪ್ರಭಾವ ಹೀಗಿದೆ. ಆ ಮಹಾನುಭಾವನು ರಾಜ್ಯವನ್ನಾಳುವ ಸಮಯದಲ್ಲಿಯೇ ನೀವು ದೀರ್ಘಕಾಲ ನಡೆಯುವ ಈ ಸತ್ರಯಾಗದಲ್ಲಿ ದೀಕ್ಷಿತರಾಗಿರುವಿರಿ. * ॥ ೪೫ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ಕಲಿನಿಗ್ರಹೋ ನಾಮ ಸಪ್ತದಶೋಽಧ್ಯಾಯಃ ॥ ೧೭ ॥

# ಹದಿನೆಂಟನೆಯ ಅಧ್ಯಾಯ

## ಪರೀಕ್ಷಿದ್ರಾಜನಿಗೆ ಶೃಂಗೀ ಋಷಿಯ ಶಾಪ ಒದಗಿದುದು

*ಸೂತ ಉವಾಚ*

ಯೋ ವೈ ದ್ರೌಣ್ಯಸ್ತ್ರವಿಪ್ಲುಷ್ಟೋ ನ ಮಾತುರುದರೇ ಮೃತಃ ।
ಅನುಗ್ರಹಾದ್ ಭಗವತಃ ಕೃಷ್ಣಸ್ಯಾದ್ಭುತಕರ್ಮಣಃ
॥ ೧ ॥

**ಸೂತಪುರಾಣಿಕರು ಹೇಳುತ್ತಾರೆ –** ಶೌನಕಾದಿಗಳೇ ! ಅದ್ಭುತ ಕರ್ಮಗಳುಳ್ಳ ಶ್ರೀಕೃಷ್ಣಪರಮಾತ್ಮನ ಕೃಪೆಯಿಂದ ರಾಜಾ ಪರೀಕ್ಷಿತನು ತನ್ನ ತಾಯಿಯ ಗರ್ಭದಲ್ಲಿ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ದಹಿಸುತ್ತಿದ್ದರೂ ಸಾಯದೆ ಉಳಿದುಕೊಂಡನು. ॥ ೧ ॥

ಬ್ರಹ್ಮಕೋಪೋತ್ಥಿತಾದ್ಯಸ್ತು ತಕ್ಷಕಾತ್ಪ್ರಾಣವಿಪ್ಲವಾತ್ ।
ನ ಸಮ್ಮುಮೋಹೋರುಭಯಾದ್ಭಗವತ್ಯರ್ಪಿತಾಶಯಃ
॥ ೨ ॥

ಬ್ರಾಹ್ಮಣ ಶಾಪದಿಂದ ಪ್ರೇರಿತನಾಗಿ ತಕ್ಷಕನು ಕಚ್ಚಲು ಬಂದಾಗಲೂ ಆತನು ಪ್ರಾಣನಾಶವಾಗುವುದೆಂಬ ಭಯದಿಂದ ಮೋಹಕ್ಕೆ ಒಳಗಾಗಲಿಲ್ಲ, ಏಕೆಂದರೆ, ಅವನು ತನ್ನ ಚಿತ್ತವನ್ನು ಭಗವಾನ್ ಶ್ರೀಕೃಷ್ಣನ ಪಾದಾರವಿಂದಗಳಲ್ಲಿ ಸಮರ್ಪಣೆಮಾಡಿಬಿಟ್ಟಿದ್ದನು. ॥ ೨ ॥ ಅವನು ಸರ್ವಸಂಗ ಪರಿತ್ಯಾಗಮಾಡಿ ಗಂಗಾತೀರಕ್ಕೆ ಹೋಗಿ ಶ್ರೀಶುಕಮಹಾಮುನಿಗಳಿಂದ ಉಪದೇಶ ಪಡೆದು ಭಗವಂತನ ಸ್ವರೂಪ

* ೪೩ರಿಂದ ೪೫ರವರೆಗಿನ ಶ್ಲೋಕಗಳಲ್ಲಿ ಪರೀಕ್ಷಿದ್ರಾಜನನ್ನು ವರ್ತಮಾನದಂತೆ ವರ್ಣಿಸಲಾಗಿದೆ. **"ವರ್ತಮಾನಸಾಮೀಪ್ಯೇ ವರ್ತಮಾನವದ್ವಾ"** (ಪಾ-ಸೂ-೩/೩/೧೩೧) ಎಂಬ ಪಾಣಿನಿಯ ಸೂತ್ರದಂತೆ ವರ್ತಮಾನದ ನಿಕಟವರ್ತಿ ಭೂತ ಮತ್ತು ನಿಕಟವರ್ತಿ ಭವಿಷ್ಯತ್ತಿಗಾಗಿ ವರ್ತಮಾನದ ಪ್ರಯೋಗ ಮಾಡಬಹುದು. ಶ್ರೀವಲ್ಲಭಾಚಾರ್ಯರು ತಮ್ಮ ಟೀಕೆಯಲ್ಲಿ ಬರೆದಿರುವರು – ಆಗ ಪರೀಕ್ಷಿದ್ರಾಜನು ಭೌತಿಕವಾಗಿ ಮೃತನಾಗಿದ್ದರೂ, ಆತನ ಕೀರ್ತಿ ಹಾಗೂ ಪ್ರಭಾವಗಳು ವರ್ತಮಾನದಂತೆ ವಿದ್ಯಮಾನವಾಗಿದ್ದವು. ಅವನ ಕುರಿತು ಅತ್ಯಂತ ಶ್ರದ್ಧೆಯನ್ನು ಉಂಟುಮಾಡಲು ಅವನ ಅಂತರವನ್ನು ಇಲ್ಲಿ ಇಲ್ಲವಾಗಿಸಿದೆ. ಅವನಿಗೆ ಭಗವಂತನ ಸಾಯುಜ್ಯ ಪ್ರಾಪ್ತವಾಗಿತ್ತು. ಇದಕ್ಕಾಗಿಯೂ ಸೂತಪುರಾಣಿಕರು ಆತನನ್ನು ತಮ್ಮ ಎದುರಿಗೆ ನೋಡುತ್ತಿದ್ದರು. ಕೇವಲ ಅವರಿಗೆ ಮಾತ್ರವಲ್ಲ ಅಲ್ಲಿದ್ದ ಎಲ್ಲರಿಗೂ ಹಾಗೆಯೇ ಅನುಭವವಾಗುತ್ತಿತ್ತು. **"ಆತ್ಮಾ ವೈ ಪುತ್ರನಾಮಾಸಿ"** ಎಂಬ ಶ್ರುತಿಗನುಸಾರ ಜನಮೇಜಯನ ರೂಪದಲ್ಲಿಯೂ ಅವನೇ ರಾಜಸಿಂಹಾಸನದಲ್ಲಿ ಕುಳಿತಿದ್ದನು. ಇವೆಲ್ಲ ಕಾರಣಗಳಿಂದ ವರ್ತಮಾನದಂತೆ ಅವನ ವರ್ಣನೆಯು ಕಥಾರಸವನ್ನು ಪುಷ್ಟಗೊಳಿಸುತ್ತದೆ.

ಉತ್ಸೃಜ್ಯ ಸರ್ವತಃ ಸಂಗಂ ವಿಜ್ಞಾತಾಜಿತಸಂಸ್ಥಿತಿಃ ।
ವೈಯಾಸಕೇರ್ಜಹೌ ಶಿಷ್ಯೋ ಗಂಗಾಯಾಂ ಸ್ವಂ ಕಲೇವರಮ್ ॥ ೩ ॥

ನೋತ್ತಮಶ್ಲೋಕವಾರ್ತಾನಾಂ ಜುಷತಾಂ ತತ್ಕಥಾಮೃತಮ್ ।
ಸ್ಯಾತ್ಸಂಭ್ರಮೋಽನ್ತಕಾಲೇಽಪಿ ಸ್ಮರತಾಂ ತತ್ಪದಾಂಬುಜಮ್ ॥ ೪ ॥

ತಾವತ್ಕಲಿರ್ನ ಪ್ರಭವೇತ್ ಪ್ರವಿಷ್ಟೋಽಪೀಹ ಸರ್ವತಃ ।
ಯಾವದೀಶೋ ಮಹಾನುರ್ವ್ಯಾಮಾಭಿಮನ್ಯವ ಏಕರಾಟ್ ॥ ೫ ॥

ಯಸ್ಮಿನ್ನಹನಿ ಯರ್ಹ್ಯೇವ ಭಗವಾನುತ್ಸಸರ್ಜಗಾಮ್ ।
ತದೈವೇಹಾನುವೃತ್ತೋಽಸಾವಧರ್ಮಪ್ರಭವಃ ಕಲಿಃ ॥ ೬ ॥

ನಾನುದ್ವೇಷ್ಟಿ ಕಲಿಂ ಸಮ್ರಾಟ್ಸಾರಂಗ ಇವ ಸಾರಭುಕ್ ।
ಕುಶಲಾನ್ಯಾಶು ಸಿದ್ಧ್ಯಂತಿ ನೇತರಾಣಿ ಕೃತಾನಿ ಯತ್ ॥ ೭ ॥

ಕಿಂ ನು ಬಾಲೇಷು ಶೂರೇಣ ಕಲಿನಾ ಧೀರಭೀರುಣಾ ।
ಅಪ್ರಮತ್ತಃ ಪ್ರಮತ್ತೇಷು ಯೋ ವೃಕೋ ನೃಷು ವರ್ತತೇ ॥ ೮ ॥

ಉಪವರ್ಣಿತಮೇತದ್ವಃ ಪುಣ್ಯಂ ಪಾರೀಕ್ಷಿತಂ ಮಯಾ ।
ವಾಸುದೇವಕಥೋಪೇತಮಾಖ್ಯಾನಂ ಯದಪೃಚ್ಛತ ॥ ೯ ॥

ಯಾ ಯಾಃ ಕಥಾ ಭಗವತಃ ಕಥನೀಯೋರುಕರ್ಮಣಃ ।
ಗುಣಕರ್ಮಾಶ್ರಯಾಃ ಪುಂಭಿಃ ಸಂಸೇವ್ಯಾಸ್ತಾ ಬುಭೂಷುಭಿಃ ॥ ೧೦ ॥

*ಋಷಯ ಊಚುಃ*

ಸೂತ ಜೀವ ಸಮಾಃ ಸೌಮ್ಯ ಶಾಶ್ವತೀರ್ವಿಶದಂ ಯಶಃ ।
ಯಸ್ತ್ವಂ ಶಂಸಸಿ ಕೃಷ್ಣಸ್ಯ ಮರ್ತ್ಯಾನಾಮಮೃತಂ ಹಿ ನಃ ॥ ೧೧ ॥

ಕರ್ಮಣ್ಯಸ್ಮಿನ್ನನಾಶ್ವಾಸೇ ಧೂಮಧೂಮ್ರಾತ್ಮನಾಂ ಭವಾನ್ ।
ಆಪಾಯಯತಿ ಗೋವಿಂದಪಾದಪದ್ಮಾಸವಂ ಮಧು ॥ ೧೨ ॥

ತುಲಯಾಮ ಲವೇನಾಪಿ ನ ಸ್ವರ್ಗಂ ನಾಪುನರ್ಭವಮ್ ।
ಭಗವತ್ಸಂಗಿ ಸಂಗಸ್ಯ ಮರ್ತ್ಯಾನಾಂ ಕಿಮುತಾಶಿಷಃ ॥ ೧೩ ॥

ವನ್ನರಿತುಕೊಂಡು ತನ್ನ ಶರೀರವನ್ನು ತ್ಯಜಿಸಿಬಿಟ್ಟನು. ॥ ೩ ॥ ಭಗವಾನ್ ಶ್ರೀಕೃಷ್ಣನ ಲೀಲಾಕಥೆಗಳನ್ನು ಹೇಳುತ್ತ ಕೇಳುತ್ತ ಆ ಕಥಾಮೃತವನ್ನು ಸೇವಿಸುತ್ತಾ, ಅವನ ಪಾದಾರವಿಂದಗಳನ್ನು ಸ್ಮರಿಸುತ್ತಾ ಇರುವ ಸುಕೃತಿಗಳಿಗೆ ಪ್ರಾಣಾಂತ್ಯಕಾಲದಲ್ಲಿಯೂ ಗಾಬರಿ, ಗಲಿಬಿಲಿಗಳು ಉಂಟಾಗುವುದಿಲ್ಲ. ॥ ೪ ॥ ಪೃಥ್ವಿಯಲ್ಲಿ ಅಭಿಮನ್ಯು ನಂದನ ಪರೀಕ್ಷಿದ್ರಾಜನು ಚಕ್ರವರ್ತಿಯಾಗಿದ್ದವರೆಗೆ ಎಲ್ಲೆಡೆ ಕಲಿಯು ವ್ಯಾಪ್ತನಾಗಿದ್ದರೂ ಅವನ ಆಟವೇನೂ ನಡೆಯಲಿಲ್ಲ. ॥ ೫ ॥ ಶ್ರೀಕೃಷ್ಣನು ಯಾವದಿನ, ಯಾವ ಕ್ಷಣದಲ್ಲಿ ಭೂಲೋಕವನ್ನು ತ್ಯಜಿಸಿದನೋ, ಆಗಿನಿಂದಲೇ ಅಧರ್ಮದ ಮೂಲಕಾರಣವಾದ ಕಲಿಯು ಪ್ರವೇಶಮಾಡಿಬಿಟ್ಟಿದ್ದಾದರೂ ಪರೀಕ್ಷಿತನು ಅದನ್ನು ಹತೋಟಿಯಲ್ಲಿ ಇಟ್ಟುಕೊಂಡಿದ್ದನು. ॥ ೬ ॥ ಪರೀಕ್ಷಿದ್ರಾಜನು ದುಂಬಿಯಂತೆ ಸಾರವನ್ನು ಗ್ರಹಿಸುವ ಸ್ವಭಾವವುಳ್ಳವನಾಗಿದ್ದುದರಿಂದಲೇ, ಅವನಿಗೆ ಕಲಿಯುಗದ ಮೇಲೆ ಯಾವ ದ್ವೇಷವೂ ಇರಲಿಲ್ಲ. ಏಕೆಂದರೆ, ಇದರಲ್ಲಿ ಮಹಾನ್ ಗುಣವೊಂದಿದೆ. ಪುಣ್ಯಕರ್ಮಗಳಾದರೋ ಸಂಕಲ್ಪಮಾತ್ರದಿಂದಲೇ ಫಲಕಾರಿಯಾಗುತ್ತವೆ ; ಆದರೆ ಪಾಪಕರ್ಮದ ಫಲವು ಶರೀರದಿಂದ ಮಾಡಿದಾಗಲೇ ಸಿಗುವುದು. ಸಂಕಲ್ಪಮಾತ್ರದಿಂದಲ್ಲ. ॥ ೭ ॥ ಈ ಕಲಿಯು ತೋಳದಂತೆ. ತೋಳವು ಬಾಲಕರ ಮೇಲೆ ಪರಾಕ್ರಮ ತೋರಿದರೂ ಧೈರ್ಯವುಳ್ಳ ಶೂರ-ವೀರರಿಗೆ ಭಯಪಡುತ್ತದೆ. ಹಾಗೆಯೇ ಕಲಿಪುರುಷನು ಪ್ರಮಾದಿ ಜನರನ್ನು ತನ್ನ ವಶಪಡಿಸಿಕೊಳ್ಳುವುದರಲ್ಲಿ ಸದಾ ಎಚ್ಚರವಾಗಿರುತ್ತಾನೆ. ॥ ೮ ॥ ಶೌನಕಾದಿ ಋಷಿಗಳೇ ! ನೀವು ಕೇಳಿದಂತೆ ಶ್ರೀಭಗವಂತನ ಕಥೆಯಿಂದ ಕೂಡಿದ ಪವಿತ್ರವಾದ ಪರೀಕ್ಷಿದ್ರಾಜನ ಕಥೆಯನ್ನು ನಿಮಗೆ ವರ್ಣಿಸಿದೆ. ॥ ೯ ॥ ಕೀರ್ತಿಸಲು ಯೋಗ್ಯವಾದ, ಆಶ್ಚರ್ಯಕರವಾದ, ನಾನಾ ದಿವ್ಯಲೀಲೆಗಳನ್ನು ನಡೆಸಿದ ಭಗವಾನ್ ಶ್ರೀಕೃಷ್ಣನ ದಿವ್ಯಗುಣಗಳನ್ನೂ, ದಿವ್ಯಕರ್ಮಗಳನ್ನೂ ಹೇಳುವ ಯಾವ-ಯಾವ ದಿವ್ಯಕಥೆಗಳುಂಟೋ ಅವೆಲ್ಲವನ್ನೂ ಶ್ರೇಯಸ್ಸನ್ನು ಬಯಸುವ ಪುರುಷರು ಸೇವಿಸಬೇಕು. ॥ ೧೦ ॥

**ಋಷಿಗಳು ಕೇಳಿದರು** – ಸೌಮ್ಯ ಸ್ವಭಾವವುಳ್ಳ ಸೂತ ಪುರಾಣಿಕರೇ ! ನೀವು ಶಾಶ್ವತಕಾಲದವರೆಗೆ ಜೀವಿಸಿರಿ. ಏಕೆಂದರೆ, ಮೃತ್ಯುವಿನ ಪ್ರವಾಹದಲ್ಲಿ ಬಿದ್ದಿರುವ ನಮಗೆ ನೀವು ಭಗವಾನ್ ಶ್ರೀಕೃಷ್ಣನ ಅಮೃತಮಯವಾದ ಧವಳಕೀರ್ತಿಯನ್ನು ಶ್ರವಣಮಾಡಿಸುತ್ತಿರುವಿರಿ. ॥ ೧೧ ॥ ಬಹಳಕಾಲ ಯಜ್ಞವನ್ನು ಮಾಡುತ್ತಾ-ಮಾಡುತ್ತಾ ಅದರ ಹೊಗೆಯಿಂದ ನಮ್ಮ ಶರೀರಗಳು ಬೂದು ಬಣ್ಣಕ್ಕೆ ತಿರುಗಿತು. ಆದರೂ ಆ ಕರ್ಮಗಳ ಫಲವು ದೊರೆಯುವುದೆಂಬ ವಿಶ್ವಾಸವಿಲ್ಲ. ನೀವಾದರೋ ಈಗಲೇ ನಮಗೆ ಭಗವಾನ್ ಶ್ರೀಕೃಷ್ಣಚಂದ್ರನ ಚರಣಕಮಲಗಳ ದಿವ್ಯೋನ್ಮಾದಕರವಾದ ಮಕರಂದವನ್ನು ಪಾನಮಾಡಿಸಿ ತೃಪ್ತಿಯನ್ನುಂಟುಮಾಡುತ್ತಿದ್ದೀರಿ. ಇದರಿಂದ ನಮಗೆ ಆಧ್ಯಾತ್ಮಿಕ ಶಾಂತಿಯು ಪ್ರತ್ಯಕ್ಷವಾಗಿ ಅನುಭವಕ್ಕೆ ಬಂದಿದೆ. ॥ ೧೨ ॥ ಭಗವದ್ಭಕ್ತರ ಲವಕಾಲ ಮಾತ್ರ ಸತ್ಸಂಗದಿಂದ ಉಂಟಾದ ಸೌಖ್ಯವನ್ನು ಸ್ವರ್ಗವಾಗಲೀ, ಮೋಕ್ಷವಾಗಲೀ ಹೋಲಿಸಲಾಗುವುದಿಲ್ಲ. ಹಾಗಿರುವಾಗ ತುಚ್ಛವಾದ ಮಾನುಷಭೋಗಗಳ ವಿಷಯದಲ್ಲಿ ಹೇಳುವುದೇನಿದೆ ? ॥ ೧೩ ॥ ಮಹನೀಯರಾದ

ಕೋ ನಾಮ ತೃಪ್ಯೇದ್ ರಸವಿತ್ಕಥಾಯಾಂ
ಮಹತ್ತಮೈಕಾಂತಪರಾಯಣಸ್ಯ ।
ನಾಂತಂ ಗುಣಾನಾಮಗುಣಸ್ಯ ಜಗ್ಮು-
ರ್ಯೋಗೇಶ್ವರಾ ಯೇ ಭವಪಾದ್ಮಮುಖ್ಯಾಃ ॥ ೧೪ ॥

ತನ್ನೋ ಭವಾನ್ವೈ ಭಗವತ್ಪ್ರಧಾನೋ
ಮಹತ್ತಮೈಕಾಂತ ಪರಾಯಣಸ್ಯ ।
ಹರೇರುದಾರಂ ಚರಿತಂ ವಿಶುದ್ಧಂ
ಶುಶ್ರೂಷತಾಂ ನೋ ವಿತನೋತು ವಿದ್ವನ್ ॥ ೧೫ ॥

ಸ ವೈ ಮಹಾಭಾಗವತಃ ಪರೀಕ್ಷಿದ್
ಯೇನಾಪವರ್ಗಾಖ್ಯಮದಭ್ರಬುದ್ಧಿಃ ।
ಜ್ಞಾನೇನ ವೈಯಾಸಕಿಶಬ್ದಿತೇನ
ಭೇಜೇ ಖಗೇಂದ್ರಧ್ವಜಪಾದಮೂಲಮ್ ॥ ೧೬ ॥

ತನ್ನಃ ಪರಂ ಪುಣ್ಯ ಮಸಂವೃತಾರ್ಥ-
ಮಾಖ್ಯಾನಮತ್ಯದ್ಭುತಯೋಗನಿಷ್ಠಮ್ ।
ಆಖ್ಯಾಹ್ಯನಂತಾಚರಿತೋಪಪನ್ನಂ
ಪಾರೀಕ್ಷಿತಂ ಭಾಗವತಾಭಿರಾಮಮ್ ॥ ೧೭ ॥

*ಸೂತ ಉವಾಚ*

ಅಹೋ ವಯಂ ಜನ್ಮಭೃತೋಽದ್ಯ ಹಾಸ್ಮ
ವೃದ್ಧಾನುವೃತ್ತ್ಯಾಪಿ ವಿಲೋಮಜಾತಾಃ ।
ದೌಷ್ಕುಲ್ಯಮಾಧಿಂ ವಿಧುನೋತಿ ಶೀಘ್ರಂ
ಮಹತ್ತಮಾನಾಮಭಿಧಾನಯೋಗಃ ॥ ೧೮ ॥

ಕುತಃ ಪುನರ್ಗೃಣತೋ ನಾಮ ತಸ್ಯ
ಮಹತ್ತಮೈಕಾಂತಪರಾಯಣಸ್ಯ ।
ಯೋಽನಂತ ಶಕ್ತಿರ್ಭಗವಾನನಂತೋ
ಮಹದ್ಗುಣತ್ವಾದ್ಯಮನಂತ ಮಾಹುಃ ॥ ೧೯ ॥

ಏತಾವತಾಲಂ ನನು ಸೂಚಿತೇನ
ಗುಣೈರಸಾಮ್ಯಾನತಿಶಾಯನಸ್ಯ ।
ಹಿತ್ವೇತರಾನ್ಪ್ರಾರ್ಥಯತೋ ವಿಭೂತಿ-
ರ್ಯಸ್ಯಾಂಘ್ರಿರೇಣುಂ ಜುಷತೇಽನಭೀಪ್ಸೋಃ ॥ ೨೦ ॥

ಏಕಮಾತ್ರ ಜೀವನ ಸರ್ವಸ್ವನಾದ ಶ್ರೀಕೃಷ್ಣನ ಲೀಲಾಕಥೆಗಳಿಂದ ತೃಪ್ತನಾಗದಿರುವ ರಸಮರ್ಮಜ್ಞನು ಯಾರಿರಬಹುದು! ಸಮಸ್ತ ಪ್ರಾಕೃತ ಗುಣಗಳಿಂದ ಅತೀತನಾದ ಭಗವಂತನ ಅಚಿಂತ್ಯ, ಅನಂತ ಕಲ್ಯಾಣಗುಣಗಳ ಪಾರವನ್ನು ಬ್ರಹ್ಮರುದ್ರಾದಿ ದೊಡ್ಡ-ದೊಡ್ಡ ಯೋಗೇಶ್ವರರೂ ಕಾಣಲಾರರು. ॥ ೧೪ ॥ ಎಲೈ ಜ್ಞಾನ ಶಿರೋಮಣಿಯೇ! ಭಗವಂತನನ್ನೇ ಜೀವನದ ಧ್ರುವತಾರೆ ಯನ್ನಾಗಿ ಭಾವಿಸಿರುವ ನೀವು ಸತ್ಪುರುಷರ ಏಕಮಾತ್ರ ಆಶ್ರಯ ನಾದ ಶ್ರೀಭಗವಂತನ ಉದಾರವೂ, ಪರಿಶುದ್ಧವೂ ಆದ ಚರಿತ್ರ ವನ್ನು ಇನ್ನೂ ವಿಸ್ತಾರವಾಗಿ ವರ್ಣಿಸಿ ಹೇಳಿರಿ. ॥ ೧೫ ॥ ಭಗವಂತನ ಪರಮಪ್ರೇಮಿ ಮಹಾಬುದ್ಧಿವಂತನಾದ ಪರೀಕ್ಷಿತನು ಶ್ರೀಶುಕ ಮಹಾಮುನಿಗಳಿಂದ ಕೇಳಲ್ಪಟ್ಟ ಜ್ಞಾನದಿಂದ ಮೋಕ್ಷಸ್ವರೂಪೀ ಭಗವಂತನ ಚರಣಕಮಲಗಳನ್ನು ಪಡೆದುಕೊಂಡನು. ಆ ಜ್ಞಾನ ವನ್ನು ಹಾಗೂ ಪರೀಕ್ಷಿತನ ಪರಮ ಪವಿತ್ರ ಆಖ್ಯಾನವನ್ನು ದಯವಿಟ್ಟು ವರ್ಣಿಸಿರಿ. ಏಕೆಂದರೆ, ಅದರಲ್ಲಿ ಯಾವ ಮಾತು ಮರೆಯಾಗಿರಲಿಕ್ಕಿಲ್ಲ ಮತ್ತು ಭಗವತ್ ಪ್ರೇಮದ ಅದ್ಭುತ ಯೋಗ ನಿಷ್ಠೆಯ ನಿರೂಪಣೆಯೂ ಇರಬಹುದು. ಅದರಲ್ಲಿ ಹೆಜ್ಜೆ-ಹೆಜ್ಜೆಗೆ ಭಗವಾನ್ ಶ್ರೀಕೃಷ್ಣನ ದಿವ್ಯಲೀಲೆಗಳ ವರ್ಣನೆ ಇರಬಹುದು. ಭಗವಂತನ ಪ್ರಿಯ ಭಕ್ತರಿಗೆ ಅಂತಹ ಪ್ರಸಂಗವನ್ನು ಕೇಳುವುದರಲ್ಲಿ ಬಹಳ ರಸ ದೊರೆಯುತ್ತದೆ. ॥ ೧೬-೧೭ ॥

**ಸೂತಪುರಾಣಿಕರು ಹೇಳುತ್ತಾರೆ** – ಆಹಾ! ವಿಲೋಮಜಾತಿ ಯಾದ* ಸೂತಕುಲದಲ್ಲಿ ಹುಟ್ಟಿದ್ದರೂ ಮಹಾತ್ಮರ ಸೇವೆ ಮಾಡಿದ ಕಾರಣ ಇಂದು ನಮ್ಮ ಜನ್ಮ ಸಫಲವಾಯಿತು. ಏಕೆಂದರೆ, ಮಹಾತ್ಮ ರೊಡನೆ ಸಂಭಾಷಿಸುವುದರಿಂದಲೇ ದುಷ್ಕುಲದಲ್ಲಿ ಹುಟ್ಟಿದ ಮನೋವ್ಯಥೆಯು ಬೇಗನೆ ತೊಲಗಿಹೋಗುತ್ತದೆ. ॥ ೧೮ ॥ ಮತ್ತೆ ಸತ್ಪುರುಷರ ಏಕಮಾತ್ರ ಆಶ್ರಯನಾದ ಭಗವಂತನ ನಾಮವನ್ನು ಕೊಂಡಾಡುವವರ ಬಗ್ಗೆ ಹೇಳುವುದೇನಿದೆ? ಭಗವಂತನ ಶಕ್ತಿಯು ಅನಂತವಾಗಿದೆ, ಅವನು ಸ್ವಯಂ ಅನಂತನಾಗಿದ್ದಾನೆ. ವಾಸ್ತವ ವಾಗಿ ಅವನ ಗುಣಗಳ ಅನಂತತೆಯಿಂದಲೇ ಅವನನ್ನು ಅನಂತ ನೆಂದು ಹೇಳುತ್ತಾರೆ. ॥ ೧೯ ॥ ಭಗವಂತನ ಗುಣಗಳ ಸಮತೆ ಯನ್ನೂ ಕೂಡ ಯಾರೂ ಮಾಡಲಾರರೆಂದಾಗ, ಅವನಿಗಿಂತ ಹೆಚ್ಚಿ ನವರಾದರೋ ಹೇಗೆ ಆಗಬಲ್ಲರು? "ಲಕ್ಷ್ಮೀದೇವಿಯು ತನ್ನನ್ನು ಪಡೆದುಕೊಳ್ಳುವ ಇಚ್ಛೆಯಿಂದ ಪ್ರಾರ್ಥಿಸುವ ಬ್ರಹ್ಮಾದಿ ದೇವತೆ ಗಳನ್ನು ಕಣ್ಣೆತ್ತಿಯೂ ನೋಡದೆ, ಭಗವಂತನು ಬಯಸದಿದ್ದರೂ ಅವನ ಚರಣರಜವನ್ನು ಸೇವಿಸುತ್ತಿರುವಳಲ್ಲ! ಅವನ ಗುಣಗಳ ವಿಶೇಷತೆಯನ್ನು ತಿಳಿಸುವುದಕ್ಕಾಗಿ ಇಷ್ಟು ಹೇಳುವುದು ಸಾಕಾಗಿದೆ. ॥ ೨೦ ॥ ಬ್ರಹ್ಮದೇವರು ಯಾರ ಶ್ರೀಪಾದಪದ್ಮಗಳನ್ನು ತೊಳೆದಾಗ ಅವನ ಪಾದನಖದಿಂದ ಉದ್ಭವಿಸಿದ ತೀರ್ಥವೇ ಗಂಗೆಯಾಗಿ ಪ್ರವಹಿಸಿತೋ, ಅದು ಶಿವನನ್ನು ಮತ್ತು ಇಡೀ ಜಗತ್ತನ್ನು ಪವಿತ್ರಗೊಳಿಸುತ್ತದೆ. ಇಂತಹ ಸ್ಥಿತಿಯಿರುವಾಗ ತ್ರಿಭುವನ ದಲ್ಲಿ ಶ್ರೀಕೃಷ್ಣ ನಲ್ಲದೆ ಬೇರೆ ಯಾರು 'ಭಗವಾನ್' ಎಂಬ ಶಬ್ದಕ್ಕೆ

* ಉಚ್ಚ-ವರ್ಣದ ಸ್ತ್ರೀಯಲ್ಲಿ ನಿಮ್ನ ವರ್ಣದ ಪುರುಷನಿಂದ ಹುಟ್ಟಿದ ಸಂತಾನವು 'ವಿಲೋಮಜಾತ' ಎನಿಸುತ್ತದೆ. ಸೂತಜಾತಿಯ ಉತ್ಪತ್ತಿಯೂ ಹೀಗೆಯೇ ಬ್ರಾಹ್ಮಣ ತಾಯಿ, ಕ್ಷತ್ರಿಯ ತಂದೆ ಇವರಿಂದ ಉಂಟಾದ್ದರಿಂದ ಅದನ್ನು ಶಾಸ್ತ್ರಗಳಲ್ಲಿ 'ವಿಲೋಮಜಾತಿ' ಎಂದು ತಿಳಿಯಲಾಗಿದೆ.

ಅಥಾಪಿ ಯತ್ಪಾದನಖಾವಸೃಷ್ಟಂ
ಜಗದ್ವಿರಿಂಚೋಪಹೃತಾರ್ಹಣಾಂಭಃ ।
ಸೇಶಂ ಪುನಾತ್ಯನ್ಯತಮೋ ಮುಕುಂದಾತ್
ಕೋ ನಾಮ ಲೋಕೇ ಭಗವತ್ಪದಾರ್ಥಃ ॥ ೨೧ ॥

ಯತ್ರಾನುರಕ್ತಾಃ ಸಹಸೈವ ಧೀರಾ
ವ್ಯಪೋಹ್ಯ ದೇಹಾದಿಷು ಸಂಗಮೂಢಮ್ ।
ವ್ರಜಂತಿ ತತ್ಪಾರಮಹಂಸ್ಯಮಂತ್ಯಂ
ಯಸ್ಮಿನ್ನಹಿಂಸೋಪಶಮಃ ಸ್ವಧರ್ಮಃ ॥ ೨೨ ॥

ಅಹಂ ಹಿ ಪೃಷ್ಟೋಽರ್ಯಮಣೋ ಭವದ್ಭಿ-
ರಾಚಕ್ಷ ಆತ್ಮಾವಗಮೋಽತ್ರ ಯಾವಾನ್ ।
ನಭಃ ಪತಂತ್ಯಾತ್ಮ ಸಮಂ ಪತತ್ತ್ರಿಣ-
ಸ್ತಥಾ ಸಮಂ ವಿಷ್ಣುಗತಿಂ ವಿಪಶ್ಚಿತಃ ॥ ೨೩ ॥

ಏಕದಾ ಧನುರುದ್ಯಮ್ಯ ವಿಚರನ್ಮೃಗಯಾಂ ವನೇ ।
ಮೃಗಾನನುಗತಃ ಶ್ರಾಂತಃ ಕ್ಷುಧಿತಸ್ತೃಷಿತೋ ಭೃಶಮ್ ॥ ೨೪ ॥

ಜಲಾಶಯಮಚಕ್ಷಾಣಃ ಪ್ರವಿವೇಶ ತಮಾಶ್ರಮಮ್ ।
ದದರ್ಶ ಮುನಿಮಾಸೀನಂ ಶಾಂತಂ ಮೀಲಿತಲೋಚನಮ್ ॥ ೨೫ ॥

ಪ್ರತಿರುದ್ಧೇಂದ್ರಿಯಪ್ರಾಣಮನೋಬುದ್ಧಿ ಮುಪಾರತಮ್ ।
ಸ್ಥಾನತ್ರಯಾತ್ಪರಂ ಪ್ರಾಪ್ತಂ ಬ್ರಹ್ಮಭೂತಮವಿಕ್ರಿಯಮ್ ॥ ೨೬ ॥

ವಿಪ್ರಕೀರ್ಣಜಟಾಚ್ಛನ್ನಂ ರೌರವೇಣಾಜಿನೇನ ಚ ।
ವಿಶುಷ್ಯತ್ತಾಲುರುದಕಂ ತಥಾಭೂತಮಯಾಚತ ॥ ೨೭ ॥

ಅಲಬ್ಧ ತೃಣಭೂಮ್ಯಾದಿರಸಂಪ್ರಾಪ್ತಾರ್ಘ್ಯಸೂನೃತಃ ।
ಅವಜ್ಞಾತಮಿವಾತ್ಮಾನಂ ಮನ್ಯಮಾನಶ್ಚುಕೋಪ ಹ ॥ ೨೮ ॥

ಅಭೂತಪೂರ್ವಃ ಸಹಸಾಕ್ಷುತ್ತೃಡ್ ಭ್ಯಾಮರ್ದಿತಾತ್ಮನಃ ।
ಬ್ರಾಹ್ಮಣಂ ಪ್ರತ್ಯಭೂದ್ಬ್ರಹ್ಮನ್ಮತ್ಸರೋ ಮನ್ಯುರೇವ ಚ ॥ ೨೯ ॥

ಸ ತು ಬ್ರಹ್ಮಋಷೇರಂಸೇ ಗತಾಸುಮುರಗಂ ರುಷಾ ।
ವಿನಿರ್ಗಚ್ಛಂಧನುಷ್ಕೋಟ್ಯಾ ನಿಧಾಯ ಪುರಮಾಗಮತ್ ॥ ೩೦ ॥

ಏಷ ಕಿಂ ನಿಭೃತಾಶೇಷಕರಣೋ ಮೀಲಿತೇಕ್ಷಣಃ ।
ಮೃಷಾ ಸಮಾಧಿರಾಹೋಸ್ವಿತ್ಕಿಂ ನು ಸ್ಯಾತ್ಕ್ಷತ್ರಬಂಧುಭಿಃ ॥ ೩೧ ॥

ಸಂಪೂರ್ಣವಾಗಿ ಅನ್ವರ್ಥ ವಿಷಯನಾಗಬಲ್ಲನು ? ॥ ೨೧ ॥ ಭಗವಂತನಲ್ಲಿ ಪರಮಪ್ರೇಮ ವನ್ನು ಪಡೆದ ಧೀರರು ಶರೀರ ಮುಂತಾದವುಗಳಲ್ಲಿ ನೆಟ್ಟಿದ್ದ ಆಸಕ್ತಿಯನ್ನು ಕೂಡಲೇ ತೊರೆದು ಅಹಿಂಸೆ ಮತ್ತು ಉಪಶಾಂತಿ ಗಳನ್ನೇ ತನ್ನ ಧರ್ಮವನ್ನಾಗಿ ಹೊಂದಿರುವ, ಜೀವನದ ಕಟ್ಟಕಡೆಯ ಆಶ್ರಯವಾದ ಪರಮಹಂಸ ಧರ್ಮವನ್ನು ಯಾವನ ನಿರಂತರ ಧ್ಯಾನಕ್ಕೋಸ್ಕರ ಹೊಂದುತ್ತಾರೋ ಅಂತಹ ಮುಕುಂದನು ತಾನೇ 'ಭಗವಾನ್' ಶಬ್ದಕ್ಕೆ ಪೂರ್ಣವಾದ ಅರ್ಥವಾಗುತ್ತಾನೆ. ॥ ೨೨ ॥ ಎಲೈ, ಸೂರ್ಯಸದೃಶರಾದ ಮಹಾತ್ಮರೇ! ನೀವು ನನ್ನಲ್ಲಿ ಕೇಳ ಬೇಕೆಂದಿರುವ ವಿಷಯದ ಬಗೆಗೆ ನನಗೆ ತಿಳಿದಷ್ಟನ್ನು ಪ್ರಾಮಾಣಿಕ ವಾಗಿ ಹೇಳುತ್ತೇನೆ. ಪಕ್ಷಿಗಳಿಗೆ ತಮ್ಮ-ತಮ್ಮ ಶಕ್ತಿಗೆ ತಕ್ಕಂತೆ ಆಕಾಶದಲ್ಲಿ ಹಾರಲು ಸಾಧ್ಯವಿರುವಂತೆಯೇ ವಿದ್ವಾಂಸರಿಗೂ ಕೂಡ ಶ್ರೀಭಗವಂತನ ಮಹಿಮೆಯನ್ನು ತಮ್ಮ ಶಕ್ತಿಗನುಗುಣ ವಾಗಿಯೇ ತಿಳಿದು ವರ್ಣಿಸಲು ಸಾಧ್ಯವಾಗುತ್ತದೆ. ॥ ೨೩ ॥

ಒಂದು ದಿನ ಆ ಪರೀಕ್ಷಿದ್ರಾಜನು ಬಿಲ್ಲನ್ನೆತ್ತಿಕೊಂಡು ಬೇಟೆ ಯಾಡಲು ಕಾಡಿಗೆ ಹೋದನು. ಮೃಗಗಳ ಹಿಂದೆ ಓಡುತ್ತಾ-ಓಡುತ್ತಾ ಬಳಲಿ, ಅವನಿಗೆ ಹಸಿವು-ಬಾಯಾರಿಕೆಗಳು ಉಂಟಾದವು. ॥ ೨೪ ॥ ನೀರು ಕುಡಿಯಲು ಯಾವುದೇ ಜಲಾಶಯವೂ ಕಾಣಿಸ ದಿರಲು ಆತನು ಹತ್ತಿರದ ಒಂದು ಋಷ್ಯಾಶ್ರಮವನ್ನು ಹೊಕ್ಕನು. ಅಲ್ಲಿ ಕಣ್ಣುಮುಚ್ಚಿಕೊಂಡು ಧ್ಯಾನಸ್ಥರಾಗಿ ಶಾಂತಭಾವದಿಂದ ಕುಳಿತಿದ್ದ ಓರ್ವ ಮುನಿಯನ್ನು ಕಂಡನು. ॥ ೨೫ ॥ ಅವರು ಇಂದ್ರಿಯ, ಪ್ರಾಣ, ಮನಸ್ಸು, ಬುದ್ಧಿಗಳೆಲ್ಲವನ್ನು ತಡೆಗಟ್ಟಿ ಸಂಸಾ ರಾತೀತ ಸ್ಥಿತಿಯಲ್ಲಿದ್ದರು. ಜಾಗ್ರತ್, ಸ್ವಪ್ನ, ಸುಷುಪ್ತಿ ಮೂರೂ ಸ್ಥಿತಿಯನ್ನು ದಾಟಿ ನಿರ್ವಿಕಾರ ಬ್ರಹ್ಮರೂಪೀ ತುರೀಯಾವಸ್ಥೆಯಲ್ಲಿ ಸ್ಥಿತರಾಗಿದ್ದರು. ॥ ೨೬ ॥ ಕೆದರಿದ ಜಟೆಗಳಿಂದ ಅವರ ದೇಹ ಮುಚ್ಚಿಹೋಗಿತ್ತು. ಅವರು ಕೃಷ್ಣಾಜಿನವನ್ನು ಹೊದ್ದಿದ್ದರು. ಅಂತಹ ಸಮಾಧಿಸ್ಥ ಮುನಿಗಳಲ್ಲಿ ನಾಲಿಗೆ-ಗಂಟಲು ಒಣಗಿಹೋಗಿದ್ದ ರಾಜನು ನೀರನ್ನು ಕೇಳಿದನು. ॥ ೨೭ ॥ ಆದರೆ ಅವನಿಗೆ ಅಲ್ಲಿ ಕುಳಿತುಕೊಳ್ಳಲು ಹುಲ್ಲಿನ ಆಸನವೂ ದೊರೆಯಲಿಲ್ಲ, ಭೂಮಿ ಯಲ್ಲಿ ಕುಳಿತುಕೊಳ್ಳಲೂ ಕೂಡ ಯಾರೂ ಹೇಳಲಿಲ್ಲ. ಅರ್ಘ್ಯವೇ ಮುಂತಾದ ಉಪಚಾರವಾಗಲೀ, ಕಡೆಗೆ ಒಂದು ಸವಿಮಾತಾದರೂ ದೊರೆಯದಿದ್ದಾಗ, ತನಗೆ ಅಪಮಾನವಾಯಿತೆಂದು ಭಾವಿಸಿ ಆತನು ಬಹಳ ಕೋಪಗೊಂಡನು. ॥ ೨೮ ॥ ಶೌನಕರೇ ! ಹಸಿವು-ಬಾಯಾರಿಕೆಯಿಂದ ಪೀಡಿತನಾಗಿದ್ದ ಅವನಿಗೆ ಇದ್ದಕ್ಕಿದ್ದಂತೆ ಆ ಬ್ರಾಹ್ಮಣನ ಮೇಲೆ ಅಸೂಯೆಯೂ, ಕ್ರೋಧವೂ ಉಂಟಾದವು. ಅವನ ಜೀವನದಲ್ಲಿ ಮೊಟ್ಟಮೊದಲನೆಯದಾಗಿ ಇಂತಹ ಘಟನೆ ಯಾಗಿತ್ತು. ॥ ೨೯ ॥ ಅಲ್ಲಿಂದ ಮರಳುವಾಗ ಅವನು ಸಿಟ್ಟಿನಿಂದ ಒಂದು ಸತ್ತುಹೋಗಿದ್ದ ಹಾವನ್ನು ಧನುಸ್ಸಿನ ತುದಿಯಿಂದ ಎತ್ತಿ ಆ ಬ್ರಹ್ಮರ್ಷಿಯ ಕೊರಳಿಗೆ ಹಾಕಿ, ತನ್ನ ರಾಜಧಾನಿಗೆ ಹಿಂತಿರುಗಿ ದನು. ॥ ೩೦ ॥ ಈ ಮುನಿಯು ನಿಜವಾಗಿ ಕಣ್ಣುಮುಚ್ಚಿ ತನ್ನೆಲ್ಲ ಇಂದ್ರಿಯಗಳನ್ನು ತಡೆಗಟ್ಟಿ ಸಮಾಧಿಯಲ್ಲಿದ್ದನೋ, ಅಥವಾ 'ಈ ರಾಜನಿಂದ ತನಗೇನಾಗಬೇಕು' ಎಂದು ತಾತ್ಸಾರದಿಂದ ಸಮಾಧಿ

ತಸ್ಯ ಪುತ್ರೋऽತಿತೇಜಸ್ವೀ ವಿಹರನ್‌ಬಾಲಕೋऽರ್ಭಕೈಃ ।
ರಾಜ್ಞಾಘಂ ಪ್ರಾಪಿತಂ ತಾತಂ ಶ್ರುತ್ವಾ ತತ್ರೇದಮಬ್ರವೀತ್
॥ ೩೨ ॥

ಅಹೋ ಅಧರ್ಮಃ ಪಾಲಾನಾಂ ಪೀವ್ನಾಂ ಬಲಿಭುಜಾಮಿವ ।
ಸ್ವಾಮಿನ್ಯಘಂ ಯದ್ದಾಸಾನಾಂ ದ್ವಾರಪಾನಾಂ ಶುನಾಮಿವ
॥ ೩೩ ॥

ಬ್ರಾಹ್ಮಣೈಃ ಕ್ಷತ್ರಬಂಧುರ್ಹಿ ದ್ವಾರಪಾಲೋ ನಿರೂಪಿತಃ ।
ಸ ಕಥಂ ತದ್ಗೃಹೇ ದ್ವಾಃಸ್ಥಃ ಸಭಾಂಡಂ ಭೋಕ್ತುಮರ್ಹತಿ
॥ ೩೪ ॥

ಕೃಷ್ಣೇ ಗತೇ ಭಗವತಿ ಶಾಸ್ತರ್ಯುತ್ಪಥಗಾಮಿನಾಮ್ ।
ತದ್ಭಿನ್ನಸೇತೂನದ್ಯಾಹಂ ಶಾಸ್ಮಿ ಪಶ್ಯತ ಮೇ ಬಲಮ್
॥ ೩೫ ॥

ಇತ್ಯುಕ್ತ್ವಾ ರೋಷತಾಮ್ರಾಕ್ಷೋ ವಯಸ್ಯಾನೃಷಿ ಬಾಲಕಃ ।
ಕೌಶಿಕ್ಯಾಪ ಉಪಸ್ಪೃಶ್ಯ ವಾಗ್ವಜ್ರಂ ವಿಸಸರ್ಜ ಹ
॥ ೩೬ ॥

ಇತಿ ಲಂಘಿತಮರ್ಯಾದಂ ತಕ್ಷಕಃ ಸಪ್ತಮೇऽಹನಿ ।
ದಂಕ್ಷ್ಯತಿ ಸ್ಮ ಕುಲಾಂಗಾರಂ ಚೋದಿತೋ ಮೇ ಪಿತೃದ್ರುಹಮ್
॥ ೩೭ ॥

ತತೋऽಭ್ಯೇತ್ಯಾಶ್ರಮಂ ಬಾಲೋ ಗಲೇ ಸರ್ಪಕಲೇವರಮ್ ।
ಪಿತರಂ ವೀಕ್ಷ್ಯ ದುಃಖಾರ್ತೋ ಮುಕ್ತಕಂಠೋ ರುರೋದ ಹ
॥ ೩೮ ॥

ಸ ವಾ ಆಂಗಿರಸೋ ಬ್ರಹ್ಮನ್ ಶ್ರುತ್ವಾ ಸುತವಿಲಾಪನಮ್ ।
ಉನ್ಮಿಲ್ಯ ಶನಕೈರ್ನೇತ್ರೇ ದೃಷ್ಟ್ವಾ ಸ್ವಾಂಸೇ ಮೃತೋರಗಮ್
॥ ೩೯ ॥

ವಿಸೃಜ್ಯ ಪುತ್ರಂ ಪಪ್ರಚ್ಛ ವತ್ಸ ಕಸ್ಮಾದ್ಧಿ ರೋದಿಷಿ ।
ಕೇನ ವಾ ತೇऽಪಕೃತಮಿತ್ಯುಕ್ತಃ ಸ ನ್ಯವೇದಯತ್
॥ ೪೦ ॥

ನಿಶಮ್ಯ ಶಪ್ತಮತದರ್ಹಂ ನರೇಂದ್ರಂ
ಸ ಬ್ರಾಹ್ಮಣೋ ನಾತ್ಮಜಮಭ್ಯನಂದತ್ ।
ಅಹೋ ಬತಾಂಹೋ ಮಹದದ್ಯ ತೇ ಕೃತ-
ಮಲ್ಪೀಯಸಿ ದ್ರೋಹ ಉರುರ್ದಮೋ ಧೃತಃ ॥ ೪೧ ॥

ನ ವೈ ನೃಭಿರ್ನರದೇವಂ ಪರಾಖ್ಯಂ
ಸಮ್ಮಾತುಮರ್ಹಸ್ಯವಿಪಕ್ವಬುದ್ಧೇ ।
ಯತ್ತೇಜಸಾ ದುರ್ವಿಷಹೇಣ ಗುಪ್ತಾ
ವಿಂದಂತಿ ಭದ್ರಾಣ್ಯಕುತೋಭಯಾಃ ಪ್ರಜಾಃ ॥ ೪೨ ॥

ಯನ್ನು ನಟಿಸುತ್ತಿದ್ದನೋ ? ಮುಂತಾಗಿ ಆಲೋಚಿಸುತ್ತಾ ಆತನು ಹೊರಟು ಹೋದನು. ॥ ೩೧ ॥

ಆ ಮಹಾಮುನಿಯ ಹೆಸರು ಶಮೀಕ. ಅವರ ಪುತ್ರ 'ಶೃಂಗೀ' ಎಂಬುವನು ಮಹಾತೇಜಸ್ವಿಯಾಗಿದ್ದನು. ಇತರ ಋಷಿಕುಮಾರರೊಡನೆ ಆಟವಾಡುತ್ತಿದ್ದಾಗ ಅವನಿಗೆ-ರಾಜನು ತನ್ನ ತಂದೆಯ ವಿಷಯದಲ್ಲಿ ಕೆಟ್ಟವ್ಯವಹಾರ ಮಾಡಿದ್ದು ತಿಳಿಯಿತು. ಆಗ ಅವನು ಕಿಡಿ-ಕಿಡಿಯಾಗಿ ಹೀಗೆಂದನು –॥ ೩೨ ॥ 'ಛೇ! ಎಂತಹ ಅಧರ್ಮವಾಯಿತು ! ಬೀದಿಯಲ್ಲಿ ಹಾಕಿದ ಬಲಿಯನ್ನವನ್ನು ತಿಂದು ಬದುಕುವ ಕಾಗೆಯಂತೆಯೂ, ಬಾಗಿಲನ್ನು ಕಾಯುವ ನಾಯಿಯಂತೆಯೂ, ದಾಸರಂತೆಯೂ ಇರಬೇಕಾಗಿದ್ದ ಈ ಕ್ಷತ್ರಿಯಾಧಮರು ಕೊಬ್ಬಿ ಹೀಗೆ ಸ್ವಾಮಿದ್ರೋಹ ಮಾಡುವುದೇ ? ॥ ೩೩ ॥ ಇಂತಹ ಕ್ಷತ್ರಿಯರನ್ನು ಬ್ರಾಹ್ಮಣರು ಬಾಗಿಲು ಕಾಯುವ ಕೆಲಸಕ್ಕೆ ನೇಮಿಸಿರುವರು. ಅವರು ಬಾಗಿಲಲ್ಲೇ ಇರಬೇಕೆ ಹೊರತು ಒಳಗೆ ನುಗ್ಗಿ ಪಾತ್ರೆಯಲ್ಲಿರುವ ಅನ್ನವನ್ನು ತಿನ್ನಲು ಹೇಗೆ ಅರ್ಹರಾದಾರು ? ॥ ೩೪ ॥ ದುರ್ಮಾರ್ಗದಲ್ಲಿ ನಡೆಯುವವರನ್ನು ಶಿಕ್ಷಿಸುತ್ತಿದ್ದ ಭಗವಾನ್ ಶ್ರೀಕೃಷ್ಣನು ಪರಂಧಾಮವನ್ನು ಹೊಂದಿದ ಬಳಿಕ ಎಲ್ಲೆಮೀರಿ ನಡೆಯುತ್ತಿರುವ ಇವರಿಗೆ ನಾನೇ ಶಿಕ್ಷೆಯನ್ನು ವಿಧಿಸುತ್ತೇನೆ. ನನ್ನ ತಪೋಬಲವನ್ನಾದರೂ ನೋಡಲಿ.'' ॥ ೩೫ ॥ ತನ್ನ ಸಂಗಡಿಗರೊಂದಿಗೆ ಹೀಗೆ ನುಡಿದು ಆ ಮುನಿಕುಮಾರನು ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳವನಾಗಿ ಕೌಶಿಕೀ ನದಿಯ ನೀರಿನಲ್ಲಿ ಆಚಮನಮಾಡಿ ತನ್ನ ಮಾತೆಂಬ ವಜ್ರವನ್ನು ಹೀಗೆ ಪ್ರಯೋಗಿಸಿದನು. ॥ ೩೬ ॥ 'ಕುಲಗೆಡುಕನಾದ ಆ ಪರೀಕ್ಷಿದ್ರಾಜನು ನನ್ನ ಪೂಜ್ಯನಾದ ತಂದೆಗೆ ಅಪಮಾನಮಾಡಿ, ಮೇರೆ ಮೀರಿ ನಡೆದಿದ್ದಾನೆ. ಆದ್ದರಿಂದ ನನ್ನ ಪ್ರೇರಣೆಯಂತೆ ಇಂದಿನಿಂದ ಏಳನೆಯ ದಿನ ತಕ್ಷಕ ಸರ್ಪವು ಅವನನ್ನು ಕಚ್ಚಿಬಿಡಲಿ.' ॥ ೩೭ ॥

ಹೀಗೆ ಶಾಪಕೊಟ್ಟ ಬಳಿಕ ಆ ಬಾಲಕನು ತನ್ನ ಆಶ್ರಮಕ್ಕೆ ಬಂದು, ತನ್ನ ತಂದೆಯ ಕೊರಳಿನಲ್ಲಿ ಸತ್ತ ಹಾವನ್ನು ಕಂಡು ಗಟ್ಟಿಯಾಗಿ ಅಳತೊಡಗಿದನು. ॥ ೩೮ ॥ ಎಲೈ ಶೌನಕರೇ ! ಆ ಆಂಗೀರಸ ಗೋತ್ರದ ಮುನಿವರ್ಯ ಶಮೀಕರು ಪುತ್ರನ ಅಳುವಿನ ಧ್ವನಿಯನ್ನು ಕೇಳಿ, ಎಚ್ಚರಗೊಂಡು ಮೆಲ್ಲನೆ ಕಣ್ಣುತೆರೆದು ನೋಡಿದಾಗ ತನ್ನ ಕೊರಳಿನಲ್ಲಿ ನೇತಾಡುತ್ತಿದ್ದ ಸತ್ತ ಹಾವನ್ನು ನೋಡಿದನು. ॥ ೩೯ ॥ ಅದನ್ನು ಕಿತ್ತೆಸೆದು ತನ್ನ ಪುತ್ರನಲ್ಲಿ ಕೇಳಿದರು – ಮಗೂ! ನೀನು ಏಕೆ ಅಳುತ್ತಿರುವೆ ? ಯಾರು ನಿನಗೆ ಅಪಕಾರ ಮಾಡಿದರು ? ಎಂದು ಕೇಳಲಾಗಿ – ಶೃಂಗಿಯು ಎಲ್ಲ ವೃತ್ತಾಂತವನ್ನು ಅರುಹಿದನು. ॥ ೪೦ ॥ ರಾಜನಿಗೆ ಶಾಪಕೊಟ್ಟ ಸಮಾಚಾರ ಕೇಳಿ ಆ ಬ್ರಹ್ಮರ್ಷಿಯು ತನ್ನ ಪುತ್ರನನ್ನು ಅಭಿನಂದಿಸಲಿಲ್ಲ. ಅವರ ದೃಷ್ಟಿಯಲ್ಲಿ ಪರೀಕ್ಷಿತನು ಶಾಪಕ್ಕೆ ಯೋಗ್ಯನಾಗಿರಲಿಲ್ಲ. ಅಯ್ಯೋ ! ಎಂತಹ ಪಾಪಕಾರ್ಯವನ್ನು ಮಾಡಿದೆ ? ಮೂರ್ಖಬಾಲಕನೇ ! ಒಂದು ಸಣ್ಣ ಅಪರಾಧಕ್ಕಾಗಿ ನೀನು ಎಷ್ಟು ದೊಡ್ಡ ದಂಡವನ್ನು ವಿಧಿಸಿದೆ ? ॥ ೪೧ ॥ ಎಲೈ ದುಡುಕುಬುದ್ಧಿಯವನೇ ! ನಿನ್ನ ಬುದ್ಧಿಯು ಪರಿಪಕ್ವವಾಗಿಲ್ಲ. ಆ ರಾಜನಾದರೋ ಮಹಾವಿಷ್ಣು ಸ್ವರೂಪನು. ಅವನನ್ನು ಸಾಮಾನ್ಯ ಮನುಷ್ಯನೆಂದು ತಿಳಿಯಬಾರದು. ತಡೆಯಲಸಾಧ್ಯವಾದ ಆತನ ತೇಜಸ್ಸಿನಿಂದಲೇ ಈ

ಅಲಕ್ಷ್ಯಮಾಣೇ ನರದೇವನಾಮ್ನಿ
ರಥಾಂಗಪಾಣಾವಯಮಂಗ ಲೋಕಃ ।
ತದಾ ಹಿ ಚೌರಪ್ರಚುರೋ ವಿನಂಕ್ಷ್ಯ-
ತ್ಯರಕ್ಷ್ಯಮಾಣೋಽವಿವರೂಥವತ್ಕ್ಷಣಾತ್ ॥ ೪೩ ॥

ತದದ್ಯ ನಃ ಪಾಪಮುಪೈತ್ಯನನ್ವಯಂ
ಯನ್ನಷ್ಟನಾಥಸ್ಯ ವಸೋರ್ವಿಲುಂಪಕಾತ್ ।
ಪರಸ್ಪರಂ ಘ್ನಂತಿ ಶಪಂತಿ ವೃಂಜತೇ
ಪಶೂನ ಸ್ತ್ರಿಯೋಽರ್ಥಾನ್ಪುರುದಸ್ಯವೋ ಜನಾಃ ॥ ೪೪ ॥

ತದಾಽಽರ್ಯಧರ್ಮಶ್ಚ ವಿಲೀಯತೇ ನೃಣಾಂ
ವರ್ಣಾಶ್ರಮಾಚಾರಯುತಸ್ತ್ರಯೀಮಯಃ ।
ತತೋಽರ್ಥಕಾಮಾಭಿನಿವೇಶಿತಾತ್ಮನಾಂ
ಶುನಾಂ ಕಪೀನಾಮಿವ ವರ್ಣಸಂಕರಃ ॥ ೪೫ ॥

ಧರ್ಮಪಾಲೋ ನರಪತಿಃ ಸ ತು ಸಮ್ರಾಡ್ ಬೃಹಚ್ಛ್ರವಾಃ ।
ಸಾಕ್ಷಾನ್ಮಹಾಭಾಗವತೋ ರಾಜರ್ಷಿರ್ಹಯಮೇಧಯಾಟ್ ।
ಕ್ಷುತ್ತೃಟ್‌ಶ್ರಮಯುತೋ ದೀನೋ ನೈವಾಸ್ಮಚ್ಛಾಪಮರ್ಹತಿ ॥ ೪೬ ॥

ಅಪಾಪೇಷು ಸ್ವಭೃತ್ಯೇಷು ಬಾಲೇನಾಪಕ್ವಬುದ್ಧಿನಾ ।
ಪಾಪಂ ಕೃತಂ ತದ್ಭಗವಾನ್ಸರ್ವಾತ್ಮಾ ಕ್ಷಂತುಮರ್ಹತಿ ॥ ೪೭ ॥

ತಿರಸ್ಕೃತಾ ವಿಪ್ರಲಬ್ಧಾಃ ಶಪ್ತಾಃ ಕ್ಷಿಪ್ತಾ ಹತಾ ಅಪಿ ।
ನಾಸ್ಯ ತತ್ಪ್ರತಿಕುರ್ವಂತಿ ತದ್ಭಕ್ತಾಃ ಪ್ರಭವೋಽಪಿ ಹಿ ॥ ೪೮ ॥

ಇತಿ ಪುತ್ರಕೃತಾಘೇನ ಸೋಽನುತಪ್ತೋ ಮಹಾಮುನಿಃ ।
ಸ್ವಯಂ ವಿಪ್ರಕೃತೋ ರಾಜ್ಞಾ ನೈವಾಘಂ ತದಚಿಂತಯತ್ ॥ ೪೯ ॥

ಪ್ರಾಯಶಃ ಸಾಧವೋ ಲೋಕೇ
ಪರೈರ್ದ್ವಂದ್ವೇಷು ಯೋಜಿತಾಃ ।
ನ ವ್ಯಥಂತಿ ನ ಹೃಷ್ಯಂತಿ
ಯತ ಆತ್ಮಾಽಗುಣಾಶ್ರಯಃ ॥ ೫೦ ॥

ಪ್ರಜೆಗಳೆಲ್ಲರೂ ಸುರಕ್ಷಿತರಾಗಿ, ನಿರ್ಭಯದಿಂದ, ನೆಮ್ಮದಿಯಾಗಿ ಬದುಕುತ್ತಿದ್ದಾರೆ. ॥ ೪೨ ॥ ಯಾವಾಗ ರಾಜನ ರೂಪವನ್ನು ಧರಿಸಿ ಭಗವಂತನು ಭೂಮಿಯಲ್ಲಿ ಕಾಣಿಸಿಕೊಳ್ಳುವುದಿಲ್ಲವೋ, ಆಗ ಕಳ್ಳ-ಕಾಕರು ಹೆಚ್ಚಿ ಕಾವಲಿಲ್ಲದ ಕುರಿಮಂದೆಯಂತೆ ಈ ಲೋಕವು ಕ್ಷಣಮಾತ್ರದಲ್ಲಿ ನಶಿಸಿಹೋದೀತು. ॥ ೪೩ ॥ ದೈವಸ್ವರೂಪೀ ರಾಜನನ್ನು ಕಳಕೊಂಡರೆ ಲೋಕಕ್ಕೆ ಮಹಾ ಅನರ್ಥ ವೊದಗುವುದು. ಲೂಟಿ, ದರೋಡೆಗಳೂ, ಪರಸ್ಪರ ಹೊಡೆದಾಟ-ಬಡಿದಾಟಗಳೂ, ಬೈಗುಳಗಳು ಹೆಚ್ಚುತ್ತವೆ. ದನ-ಕರುಗಳೇ ಮುಂತಾದ ಪಶುಗಳೂ, ಹೆಂಗಸರೂ, ಧನ-ಕನಕಾದಿ ಸಂಪತ್ತುಗಳೂ ಕೊಳ್ಳೆ ಹೋಗುತ್ತವೆ. ॥ ೪೪ ॥ ಆಗ ವರ್ಣಾಶ್ರಮಗಳಿಂದ ಕೂಡಿದ ಆರ್ಯಧರ್ಮವು ಲೋಪವಾಗುವುದು. ಹಣದಲೋಭ ಮತ್ತು ಕಾಮವಾಸನೆಗಳಿಗೆ ಒಳಗಾಗಿ ಜನರು ನಾಯಿ, ಕಪಿಗಳು ಸೇರು ವಿಕೆಯಂತೆ ಉಚ್ಛೃಂಖಲರಾಗಿ ವರ್ಣಸಂಕರ ಉಂಟಾಗುವುದು. ॥ ೪೫ ॥ ಚಕ್ರವರ್ತಿ ಪರೀಕ್ಷಿದ್ರಾಜನಾದರೋ ಮಹಾಯಶಸ್ವೀ, ಧರ್ಮಧುರಂಧರನಾಗಿದ್ದಾನೆ. ಅವನು ಅನೇಕ ಅಶ್ವಮೇಧಯಜ್ಞ ಗಳನ್ನು ಆಚರಿಸಿರುವನು. ಭಗವಂತನ ಪ್ರಿಯಭಕ್ತನಾದ ರಾಜರ್ಷಿ ಯಾದ ಅವನು ಹಸಿವು-ಬಾಯಾರಿಕೆಯಿಂದ ಬಳಲಿದವನಾಗಿ ನಮ್ಮ ಆಶ್ರಮಕ್ಕೆ ಬಂದಿದ್ದನು. ಅವನು ಖಂಡಿತವಾಗಿಯೂ ನಮ್ಮ ಶಾಪಕ್ಕೆ ಯೋಗ್ಯನಾಗಿರಲಿಲ್ಲ. ॥ ೪೬ ॥ ತಿಳಿವಳಿಕೆಯಿಲ್ಲದ ಈ ಬಾಲಕನು ನಮ್ಮ ಸೇವೆಮಾಡುತ್ತಿದ್ದ ನಿಷ್ಪಾಪಿಯಾದ ರಾಜನಿಗೆ ಅಪರಾಧವನ್ನೆಸಗಿದ್ದಾನೆ. ಸರ್ವಾತ್ಮನಾದ ಭಗವಂತನು ಕೃಪೆಯಿಟ್ಟು ಇವನನ್ನು ಕ್ಷಮಿಸಲಿ. ॥ ೪೭ ॥ ಭಗವಂತನ ಭಕ್ತರಲ್ಲಿ ಶಕ್ತಿಯಿದ್ದರೂ ಅವರು ಸೇಡುತೀರಿಸಿಕೊಳ್ಳಲು ಹೋಗುವುದಿಲ್ಲ. ಇತರರಿಂದ ತಮಗೆ ಅಪಮಾನ, ಮೋಸ, ಬೈಗುಳ, ಆಕ್ಷೇಪಣೆ, ಹೊಡೆದಾಟ, ಬಡಿದಾಟ ಮುಂತಾದವುಗಳಾದರೂ ಅವುಗಳನ್ನು ಸಹಿಸಿ ಕೊಳ್ಳುತ್ತಾರೆ. ॥ ೪೮ ॥ ಶಮೀಕ ಮಹರ್ಷಿಗಳಿಗೆ ತನ್ನ ಪುತ್ರನು ಮಾಡಿದ ಅಪರಾಧಕ್ಕಾಗಿ ತುಂಬಾ ಪಶ್ಚಾತ್ತಾಪವಾಯಿತು. ಪರೀಕ್ಷಿದ್ರಾಜನು ತಮಗೆ ಮಾಡಿದ್ದ ಅಪಮಾನವನ್ನಾದರೋ ಅವರು ಮನಸ್ಸಿಗೆ ಹಚ್ಚಿಕೊಳ್ಳಲೇ ಇಲ್ಲ. ॥ ೪೯ ॥ ಸಾಧು-ಸಂತರ ಸ್ವಭಾವವೇ ಹೀಗೆ. ಜಗತ್ತಿನಲ್ಲಿ ಇತರರು ಅವರನ್ನು ನಿಂದಾ-ಸ್ತುತಿ ಮುಂತಾದ ದ್ವಂದ್ವಗಳಿಗೆ ಈಡುಮಾಡಿದರೂ ಅವರು ಸಾಮಾನ್ಯ ವಾಗಿ ಹರ್ಷಿತರಾಗುವುದಿಲ್ಲ, ವ್ಯಥೆಪಡುವುದಿಲ್ಲ. ಏಕೆಂದರೆ, ಅವರು ಆತ್ಮಸ್ವರೂಪವನ್ನರಿತು ಅದರಲ್ಲಿ ನೆಲೆಸಿರುತ್ತಾರೆ. ಆತ್ಮನು ತ್ರಿಗುಣಾತೀತನಲ್ಲವೇ ? ॥ ೫೦ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ
ವಿಪ್ರಶಾಪೋಪಲಂಭನಂ ನಾಮಾಷ್ಟಾದಶೋಽಧ್ಯಾಯಃ ॥ ೧೮ ॥

# ಹತ್ತೊಂಭತ್ತನೆಯ ಅಧ್ಯಾಯ

## ಪರೀಕ್ಷಿದ್ರಾಜನ ಪ್ರಾಯೋಪವೇಶ, ಶುಕಮಹಾಮುನಿಯ ಆಗಮನ–

*ಸೂತ ಉವಾಚ*

ಮಹೀಪತಿಸ್ತ್ವಥ ತತ್ಕರ್ಮ ಗರ್ಹ್ಯಂ
ವಿಚಿಂತಯನ್ನಾತ್ಮಕೃತಂ ಸುದುರ್ಮನಾಃ ।
ಅಹೋ ಮಯಾ ನೀಚಮನಾರ್ಯವತ್ಕೃತಂ
ನಿರಾಗಸಿ ಬ್ರಹ್ಮಣಿ ಗೂಢತೇಜಸಿ ॥ ೧ ॥

ಧ್ರುವಂ ತತೋ ಮೇ ಕೃತದೇವಹೇಲನಾ-
ದ್ದುರತ್ಯಯಂ ವ್ಯಸನಂ ನಾತಿದೀರ್ಘಾತ್ ।
ತದಸ್ತು ಕಾಮಂ ತ್ವಘನಿಷ್ಕೃತಾಯ ಮೇ
ಯಥಾ ನ ಕುರ್ಯಾಂ ಪುನರೇವಮದ್ಧಾ ॥ ೨ ॥

ಅದ್ಯೈವ ರಾಜ್ಯಂ ಬಲಮೃದ್ಧಕೋಶಂ
ಪ್ರಕೋಪಿತಬ್ರಹ್ಮಕುಲಾನಲೋ ಮೇ ।
ದಹತ್ವಭದ್ರಸ್ಯ ಪುನರ್ನ ಮೇಽಭೂತ್
ಪಾಪೀಯಸೀ ಧೀರ್ದ್ವಿಜದೇವಗೋಭ್ಯಃ ॥ ೩ ॥

ಸ ಚಿಂತಯನ್ನಿತ್ಥಮಥಾಶೃಣೋದ್ಯಥಾ
ಮುನೇಃ ಸುತೋಕ್ತೋ ನಿರ್ಋತಿಸ್ತಕ್ಷಕಾಖ್ಯಃ ।
ಸ ಸಾಧು ಮೇನೇ ನ ಚಿರೇಣ ತಕ್ಷಕಾ-
ನಲಂ ಪ್ರಸಕ್ತಸ್ಯ ವಿರಕ್ತಿಕಾರಣಮ್ ॥ ೪ ॥

ಅಥೋ ವಿಹಾಯೇಮಮಮುಂ ಚ ಲೋಕಂ
ವಿಮರ್ಶಿತೌ ಹೇಯತಯಾ ಪುರಸ್ತಾತ್ ।
ಕೃಷ್ಣಾಂಘ್ರಿಸೇವಾಮಧಿಮನ್ಯಮಾನ
ಉಪಾವಿಶತ್ಪ್ರಾಯಮಮರ್ತ್ಯನದ್ಯಾಮ್ ॥ ೫ ॥

ಯಾ ವೈ ಲಸಚ್ಛ್ರೀತುಲಸೀವಿಮಿಶ್ರ-
ಕೃಷ್ಣಾಂಘ್ರಿರೇಣ್ವಭ್ಯಧಿಕಾಂಬುನೇತ್ರೀ ।
ಪುನಾತಿ ಲೋಕಾನುಭಯತ್ರ ಸೇಶಾನ್
ಕಸ್ತಾಂ ನ ಸೇವೇತ ಮರಿಷ್ಯಮಾಣಃ ॥ ೬ ॥

ಇತಿ ವ್ಯವಚ್ಛಿದ್ಯ ಸ ಪಾಂಡವೇಯಃ
ಪ್ರಾಯೋಪವೇಶಂ ಪ್ರತಿ ವಿಷ್ಣುಪದ್ಯಾಮ್ ।
ದಧ್ಯೌ ಮುಕುಂದಾಂಘ್ರಿಮನನ್ಯಭಾವೋ
ಮುನಿವ್ರತೋ ಮುಕ್ತಸಮಸ್ತಸಂಗಃ ॥ ೭ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿಗಳೇ! ರಾಜಧಾನಿಗೆ ಬಂದ ರಾಜಾಪರೀಕ್ಷಿತನಿಗೆ ತನ್ನ ಆ ನಿಂದನೀಯ ಕರ್ಮಕ್ಕಾಗಿ ಭಾರೀ ಪಶ್ಚಾತ್ತಾಪವಾಯಿತು. ಅವನಿಗೆ ತುಂಬಾ ಬೇಸರವಾಗಿ ಅಂದುಕೊಂಡನು – ಅಯ್ಯೋ! ನಾನು ನಿರಪರಾಧಿಯೂ, ಗೂಢವಾದ ಬ್ರಹ್ಮತೇಜಸ್ಸಿನಿಂದ ತುಂಬಿದ್ದ ಮಹಾತ್ಮನೂ ಆದ ಬ್ರಾಹ್ಮಣನೊಂದಿಗೆ ಅನಾರ್ಯನಂತೆ ನೀಚ ಕಾರ್ಯವನ್ನು ಎಸಗಿಬಿಟ್ಟೆನಲ್ಲ! ॥ ೧ ॥ ಹೀಗೆ ದೈವಾಪಚಾರವನ್ನು ಮಾಡಿದ್ದರಿಂದ ಅತಿಶೀಘ್ರವಾಗಿ ದಾಟಲಶಕ್ಯವಾದ ಅತಿದೊಡ್ಡ ವಿಪತ್ತು ನಿಶ್ಚಯವಾಗಿಯೂ ಒದಗುವುದು. ನಾನೂ ಅದನ್ನೇ ಬಯಸುತ್ತೇನೆ. ಏಕೆಂದರೆ, ಅದರಿಂದ ನನ್ನ ಪಾಪದ ಪ್ರಾಯಶ್ಚಿತ್ತವಾದೀತು. ಮತ್ತೆ ಎಂದಿಗೂ ಇಂತಹ ಕಾರ್ಯವನ್ನು ಮಾಡುವ ದುಸ್ಸಾಹಸವಾಗಲಾರದು. ॥ ೨ ॥ ಬ್ರಾಹ್ಮಣರ ಕ್ರೋಧಾಗ್ನಿಯು ಇಂದೇ ನನ್ನ ರಾಜ್ಯ, ಸೇನೆ, ತುಂಬಿದ ಭಂಡಾರ ಇವೆಲ್ಲವನ್ನು ಸುಟ್ಟುಹಾಕಲಿ. ಮುಂದೆಂದಿಗೂ ದುಷ್ಟನಾದ ನನ್ನಲ್ಲಿ ಬ್ರಾಹ್ಮಣರು, ದೇವತೆಗಳು, ಗೋವುಗಳು ಇವರ ಕುರಿತು ಇಂತಹ ಪಾಪಬುದ್ಧಿಯು ಉಂಟಾಗದಿರಲಿ. ॥ ೩ ॥ ಅವನು ಹೀಗೆ ಚಿಂತಿಸುತ್ತಿರುವಾಗಲೇ ಶಮೀಕ ಮಹರ್ಷಿಗಳು 'ಗೌರಮುಖ'ನೆಂಬ ಶಿಷ್ಯನ ಮೂಲಕ ಹೇಳಿಕಳಿಸಿದರು – "ಋಷಿಪುತ್ರನಾದ ಶೃಂಗಿಯ ಶಾಪದಿಂದ ಪ್ರೇರಿತನಾದ ತಕ್ಷಕನು ಇಂದಿನಿಂದ ಏಳನೆಯ ದಿನ ಮೃತ್ಯುವಿಗೆ ಕಾರಣನಾಗುವನು' ಎಂಬ ಸಮಾಚಾರವು ಅವನ ಕಿವಿಗೆ ಬಿತ್ತು. ಅದನ್ನು ಕೇಳಿ ರಾಜನು – 'ಆ ತಕ್ಷಕನೆಂಬ ಬೆಂಕಿಯು ರಾಜಕಾರ್ಯಗಳಲ್ಲಿ ಮತ್ತು ಭೋಗಗಳಲ್ಲಿ ಆಸಕ್ತನಾಗಿರುವ ನನಗೆ ವೈರಾಗ್ಯಕ್ಕೆ ಕಾರಣವಾಯಿತು' ಎಂದು ಭಾವಿಸಿಕೊಂಡನು. ॥ ೪ ॥ ಅನಂತರ ಅವನು ರಾಜ್ಯವಾಳುತ್ತಿರುವಾಗಲೇ ಈ ಲೋಕ ಮತ್ತು ಪರಲೋಕಗಳ ಭೋಗಗಳನ್ನು ತುಚ್ಛವೂ, ತ್ಯಾಜ್ಯವೂ ಎಂದು ತಿಳಿದಿದ್ದನು. ಈಗ ಅವನ್ನು ಸ್ವರೂಪತಃ ತ್ಯಾಗಗೈದು ಭಗವಾನ್ ಶ್ರೀಕೃಷ್ಣನ ಚರಣಕಮಲಗಳ ಸೇವೆಯನ್ನೇ ಪರಮೋತ್ತಮವಾದುದು ಎಂದು ನಿಶ್ಚಯಿಸಿ, ದೇವನದಿ ಗಂಗೆಯ ದಡದಲ್ಲಿ ಕುಳಿತು ಪ್ರಾಯೋಪವೇಶ ವ್ರತವನ್ನು ಕೈಗೊಂಡನು. ॥ ೫ ॥ ಯಾವ ದೇವನದಿಯು ಘಮ-ಘಮಿಸುತ್ತಿರುವ ತುಲಸೀದಳಗಳು ಬೆರೆತ ಶ್ರೀಕೃಷ್ಣನ ಪಾದಧೂಳಿಯಿಂದ ಪರಮ ಪವಿತ್ರವಾಗಿರುವ ಜಲದಿಂದ ಪ್ರವಹಿಸುತ್ತಾ ಲೋಕಪಾಲರ ಸಹಿತವಾದ ಸಮಸ್ತ ಲೋಕಗಳನ್ನು ಒಳಗೂ-ಹೊರಗೂ ಪಾವನಗೊಳಿಸುತ್ತಿದೆಯೋ, ಅಂತಹ ಲೋಕಪಾವನೆಯಾದ ಗಂಗೆಯನ್ನು ಮರಣಕಾಲದಲ್ಲಿ ಯಾರು ತಾನೇ ಸೇವಿಸಲಾರನು ? ॥ ೬ ॥

ಹೀಗೆ ಪಾಂಡವಕುಲತಿಲಕನು ಗಂಗಾನದಿಯ ತೀರದಲ್ಲಿ ಆಮರಣಾಂತ ಉಪವಾಸದ ನಿಶ್ಚಯಗೈದು ಸರ್ವಸಂಗ ಪರಿತ್ಯಾಗ ಮಾಡಿ ಮುನಿಧರ್ಮವನ್ನು ಹಿಡಿದು, ಅನನ್ಯಭಾವದಿಂದ ಶ್ರೀಕೃಷ್ಣನ ಚರಣಾರವಿಂದಗಳನ್ನು ಧ್ಯಾನಿಸತೊಡಗಿದನು. ॥ ೭ ॥ ಆಗಲೇ

ತತ್ರೋಪಜಗ್ಮುರ್ಭುವನಂ ಪುನಾನಾ
ಮಹಾನುಭಾವಾ ಮುನಯಃ ಸಶಿಷ್ಯಾಃ ।
ಪ್ರಾಯೇಣ ತೀರ್ಥಾಭಿಗಮಾಪದೇಶೈಃ
ಸ್ವಯಂ ಹಿ ತೀರ್ಥಾನಿ ಪುನಂತಿ ಸಂತಃ ॥ ೮ ॥

ಅತ್ರಿರ್ವಸಿಷ್ಠಶ್ಚ್ಯವನಃ ಶರದ್ವಾ-
ನರಿಷ್ಟನೇಮಿರ್ಭೃಗುರಂಗಿರಾಶ್ಚ ।
ಪರಾಶರೋ ಗಾಧಿಸುತೋಽಥ ರಾಮ
ಉತಥ್ಯ ಇಂದ್ರಪ್ರಮದೇಧ್ಮವಾಹೌ ॥ ೯ ॥

ಮೇಧಾತಿಥಿರ್ದೇವಲ ಆರ್ಷ್ಟಿಷೇಣೋ
ಭಾರದ್ವಾಜೋ ಗೌತಮಃ ಪಿಪ್ಪಲಾದಃ ।
ಮೈತ್ರೇಯ ಔರ್ವಃ ಕವಷಃ ಕುಂಭಯೋನಿ-
ರ್ದ್ವೈಪಾಯನೋ ಭಗವಾನ್ನಾರದಶ್ಚ ॥ ೧೦ ॥

ಅನ್ಯೇ ಚ ದೇವರ್ಷಿಬ್ರಹ್ಮರ್ಷಿವರ್ಯಾ
ರಾಜರ್ಷಿವರ್ಯಾ ಅರುಣಾದಯಶ್ಚ ।
ನಾನಾರ್ಷೇಯಪ್ರವರಾನ್ಸಮೇತಾ-
ನಭ್ಯರ್ಚ್ಯ ರಾಜಾ ಶಿರಸಾ ವವಂದೇ ॥ ೧೧ ॥

ಸುಖೋಪವಿಷ್ಟೇಷ್ವಥ ತೇಷು ಭೂಯಃ
ಕೃತಪ್ರಣಾಮಃ ಸ್ವಚಿಕೀರ್ಷಿತಂ ಯತ್ ।
ವಿಜ್ಞಾಪಯಾಮಾಸ ವಿವಿಕ್ತಚೇತಾ
ಉಪಸ್ಥಿತೋಽಗ್ರೇಽಭಿಗೃಹೀತಪಾಣಿಃ ॥ ೧೨ ॥

ರಾಜೋವಾಚ

ಅಹೋ ವಯಂ ಧನ್ಯತಮಾ ನೃಪಾಣಾಂ
ಮಹತ್ತಮಾನುಗ್ರಹಣೀಯಶೀಲಾಃ ।
ರಾಜ್ಞಾಂ ಕುಲಂ ಬ್ರಾಹ್ಮಣಪಾದಶೌಚಾದ್
ದೂರಾದ್ವಿ ಸೃಷ್ಟಂ ಬತ ಗರ್ಹ್ಯಕರ್ಮ ॥ ೧೩ ॥

ತಸ್ಯೈವ ಮೇಽಘಸ್ಯ ಪರಾವರೇಶೋ
ವ್ಯಾಸಕ್ತಚಿತ್ತಸ್ಯ ಗೃಹೇಷ್ವಭೀಕ್ಷ್ಣಮ್ ।
ನಿರ್ವೇದಮೂಲೋ ದ್ವಿಜಶಾಪರೂಪೋ
ಯತ್ರ ಪ್ರಸಕ್ತೋ ಭಯಮಾಶು ಧತ್ತೇ ॥ ೧೪ ॥

ತಂ ಮೋಪಯಾತಂ ಪ್ರತಿಯಂತು ವಿಪ್ರಾ
ಗಂಗಾ ಚ ದೇವೀ ಧೃತಚಿತ್ತಮೀಶೇ ।
ದ್ವಿಜೋಪಸೃಷ್ಟಃ ಕುಹಕಸ್ತಕ್ಷಕೋ ವಾ
ದಶತ್ವಲಂ ಗಾಯತ ವಿಷ್ಣುಗಾಥಾಃ ॥ ೧೫ ॥

ಪುನಶ್ಚ ಭೂಯಾದ್ಭಗವತ್ಯನಂತೇ
ರತಿಃ ಪ್ರಸಂಗಶ್ಚ ತದಾಶ್ರಯೇಷು ।
ಮಹತ್ಸು ಯಾಂ ಯಾಮುಪಯಾಮಿ ಸೃಷ್ಟಿಂ
ಮೈತ್ರ್ಯಸ್ತು ಸರ್ವತ್ರ ನಮೋ ದ್ವಿಜೇಭ್ಯಃ ॥ ೧೬ ॥

ತ್ರಿಲೋಕಗಳನ್ನು ಪವಿತ್ರಗೊಳಿಸುವ ಮಹಾನುಭಾವರಾದ ಅನೇಕ ಮಹರ್ಷಿಗಳು ಶಿಷ್ಯಸಮೇತರಾಗಿ ಅಲ್ಲಿಗೆ ಆಗಮಿಸಿದರು. ಸಾಧು-ಸಂತರು ಪ್ರಾಯಶಃ ತೀರ್ಥಯಾತ್ರೆಯ ನೆಪದಲ್ಲಿ ಆ ತೀರ್ಥಸ್ಥಾನಗಳನ್ನು ಪವಿತ್ರಮಾಡುತ್ತಾರೆ. ॥ ೮ ॥ ಆಗ ಅಲ್ಲಿಗೆ – ಅತ್ರಿ, ವಸಿಷ್ಠ ಚ್ಯವನ, ಶರದ್ವಾನ್, ಅರಿಷ್ಟನೇಮಿ, ಭೃಗು, ಅಂಗಿರಾ, ಪರಾಶರ, ವಿಶ್ವಾಮಿತ್ರ, ಪರಶುರಾಮ, ಉತಥ್ಯ, ಇಂದ್ರಪ್ರಮದ, ಇಧ್ಮವಾಹ, ಮೇಧಾತಿಥಿ, ದೇವಲ, ಆರ್ಷ್ಟಿಷೇಣ, ಭಾರದ್ವಾಜ, ಗೌತಮ, ಪಿಪ್ಪಲಾದ, ಮೈತ್ರೇಯ, ಔರ್ವ, ಕವಷ, ಅಗಸ್ತ್ಯ ಭಗವಾನ್ ವ್ಯಾಸರು, ದೇವರ್ಷಿ ನಾರದರು ಹಾಗೂ ಇವರಲ್ಲದೆ ಇನ್ನೂ ಅನೇಕ ಶ್ರೇಷ್ಠ ದೇವರ್ಷಿಗಳು, ಮಹರ್ಷಿಗಳು, ಅರುಣಾದಿ ರಾಜರ್ಷಿಯರು ಆಗಮಿಸಿದರು. ಹೀಗೆ ನಾನಾ ಗೋತ್ರದ ಮುಖ್ಯ-ಮುಖ್ಯ ಋಷಿಗಳನ್ನು ಒಂದೆಡೆ ನೋಡಿದ ಪರೀಕ್ಷಿದ್ರಾಜನು ಎಲ್ಲರಿಗೂ – ಯಥಾಯೋಗ್ಯ ಸತ್ಕಾರಗೈದು, ಅವರ ಚರಣಗಳಲ್ಲಿ ಶಿರವನ್ನಿಟ್ಟು ಸಾಷ್ಟಾಂಗ ನಮಸ್ಕಾರಮಾಡಿದನು. ॥ ೯-೧೧ ॥ ಅನಂತರ ಅವರೆಲ್ಲರೂ ಸುಖಾಸೀನರಾಗಿ ಕುಳಿತುಕೊಳ್ಳಲು ಮಹಾರಾಜಾ ಪರೀಕ್ಷಿತನು ಪುನಃ ಅವರನ್ನು ವಂದಿಸಿ, ಅವರ ಮುಂದೆ ಕೈಜೋಡಿಸಿಕೊಂಡು ನಿಂತು, ಶುದ್ಧವಾದ ಮನಸ್ಸಿನಿಂದ ತಾನು ಮುಂದೆ ಕೈಗೊಳ್ಳಬೇಕೆಂದಿದ್ದ ಕಾರ್ಯನಿಶ್ಚಯವನ್ನು ಹೀಗೆ ವಿಜ್ಞಾಪನೆ ಮಾಡಿ ಕೊಂಡನು. ॥ ೧೨ ॥

**ಪರೀಕ್ಷಿದ್ರಾಜನು ಹೇಳಿದನು** – ಆಹಾ! ಎಂತಹ ಧನ್ಯತೆ! ತಮ್ಮಂತಹ ಶ್ರೇಷ್ಠತಮರಾದ ಮಹಾತ್ಮರ ಅನುಗ್ರಹಕ್ಕೆ ಪಾತ್ರನಾದ ನಾನೇ ರಾಜರಲ್ಲಿ ಅತಿ ಧನ್ಯನು. ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರ ಪಾದತೀರ್ಥದಿಂದ ಪರಿಶುದ್ಧರಾಗದೆ ದೂರರಾದ ರಾಜರ ಕುಲವು ನೀಚಕರ್ಮಕ್ಕೆ ತುತ್ತಾಗುವುದು. ಇದು ಎಷ್ಟು ದುಃಖದ ಸಂಗತಿಯಾಗಿದೆ. ॥ ೧೩ ॥ ನಾನೂ ಅಪರಾಧೀ ರಾಜನೇ ಆಗಿದ್ದೇನೆ. ನಿರಂತರ ದೇಹ-ಗೇಹಗಳಲ್ಲೇ ಆಸಕ್ತನಾದ ಕಾರಣ ನಾನೂ ಪಾಪರೂಪವೇ ಆಗಿದ್ದೇನೆ. ಇದರಿಂದ ಸಾಕ್ಷಾತ್ ಭಗವಂತನೇ ಬ್ರಾಹ್ಮಣರ ಶಾಪರೂಪದಿಂದ ನನ್ನ ಮೇಲೆ ಕೃಪೆಮಾಡಲು ಆಗಮಿಸಿದ್ದಾನೆ. ಈ ಶಾಪವು ವೈರಾಗ್ಯವನ್ನುಂಟು ಮಾಡುವುದಾಗಿದೆ. ಏಕೆಂದರೆ, ಇಂತಹ ಶಾಪದಿಂದ ಸಂಸಾರಾಸಕ್ತ ಪುರುಷರು ಭಯಗೊಂಡು ವಿರಕ್ತರಾಗುತ್ತಿರುತ್ತಾರೆ. ॥ ೧೪ ॥ ಎಲೈ ಬ್ರಾಹ್ಮಣಶ್ರೇಷ್ಠರೇ! ಹೀಗೆ ಭಗವಂತನಲ್ಲಿ ನೆಟ್ಟ ಮನಸ್ಸುಳ್ಳ ನಾನು ನಿಮ್ಮಲ್ಲಿ ಶರಣಾಗಿದ್ದೇನೆಂದು ತಿಳಿಯಿರಿ. ಗಂಗಾಮಾತೆಯೂ ಹಾಗೇ ತಿಳಿಯಲಿ, ಬ್ರಾಹ್ಮಣನಿಂದ ಪ್ರೇರಿತನಾಗಿ ಬರುವ ವಂಚಕನಾದ ತಕ್ಷಕನೇ ಬಂದು ನನ್ನನ್ನು ಕಚ್ಚಿದರೂ ಸರಿಯೇ. ನೀವು ಮಾತ್ರ ಬಿಡದೇ ನನ್ನ ಮುಂದೆ ಶ್ರೀವಿಷ್ಣುವಿನ ಕೀರ್ತನೆಗಳನ್ನು ಹಾಡುತ್ತಿರಿ. ॥ ೧೫ ॥ ಕರ್ಮವಶದಿಂದ ಮುಂದೆ ನಾನು ಎಷ್ಟುಬಾರಿ ಹುಟ್ಟಿದರೂ ಆ ಎಲ್ಲ ಜನ್ಮಗಳಲ್ಲಿಯೂ ನನಗೆ ಶ್ರೀಭಗವಂತನಲ್ಲೇ ಭಕ್ತಿಯು ನೆಲಸಲಿ. ಆತನನ್ನು ಆಶ್ರಯಿಸಿದ ಮಹಾತ್ಮರ ಸಂಗವು ದೊರೆಯುತ್ತಿರಲಿ. ಎಲ್ಲರಲ್ಲಿಯೂ ಸ್ನೇಹಭಾವವಿರುವಂತೆ ನೀವು ಆಶೀರ್ವದಿಸಿರಿ. ಬ್ರಾಹ್ಮಣಶ್ರೇಷ್ಠರಾದ ನಿಮ್ಮೆಲ್ಲರಿಗೂ ನಮೋ ನಮಃ ॥ ೧೬ ॥

ಇತಿ ಸ್ಮ ರಾಜಾಧ್ಯವಸಾಯಯುಕ್ತಃ
ಪ್ರಾಚೀನಮೂಲೇಷು ಕುಶೇಷು ಧೀರಃ ।
ಉದಙ್ಮುಖೋ ದಕ್ಷಿಣಕೂಲ ಆಸ್ತೇ
ಸಮುದ್ರಪತ್ನ್ಯಾಃ ಸ್ವ ಸುತನ್ಯಸ್ತಭಾರಃ ॥ ೧೭ ॥

ಏವಂ ಚ ತಸ್ಮಿನ್ನರದೇವದೇವೇ
ಪ್ರಾಯೋಪವಿಷ್ಟೇ ದಿವಿ ದೇವಸಂಘಾಃ ।
ಪ್ರಶಸ್ಯ ಭೂಮೌ ವ್ಯಕಿರನ್ಪ್ರಸೂನೈ-
ರ್ಮುದಾ ಮುಹುರ್ದುಂದುಭಯಶ್ಚ ನೇದುಃ ॥ ೧೮ ॥

ಮಹರ್ಷಯೋ ವೈ ಸಮುಪಾಗತಾ ಯೇ
ಪ್ರಶಸ್ಯ ಸಾಧ್ವಿತ್ಯನುಮೋದಮಾನಾಃ ।
ಊಚುಃ ಪ್ರಜಾನುಗ್ರಹಶೀಲಸಾರಾ
ಯದುತ್ತಮಶ್ಲೋಕಗುಣಾಭಿರೂಪಮ್ ॥ ೧೯ ॥

ನ ವಾ ಇದಂ ರಾಜರ್ಷಿವರ್ಯ ಚಿತ್ರಂ
ಭವತ್ಸು ಕೃಷ್ಣಂ ಸಮನುವ್ರತೇಷು ।
ಯೇಽಧ್ಯಾಸನಂ ರಾಜಕಿರೀಟಜುಷ್ಟಂ
ಸದ್ಯೋ ಜಹುರ್ಭಗವತ್ಪಾರ್ಶ್ವಕಾಮಾಃ ॥ ೨೦ ॥

ಸರ್ವೇ ವಯಂ ತಾವದಿಹಾಸ್ಮಹೇಽದ್ಯ
ಕಲೇವರಂ ಯಾವದಸೌ ವಿಹಾಯ ।
ಲೋಕಂ ಪರಂ ವಿರಜಸ್ಕಂ ವಿಶೋಕಂ
ಯಾಸ್ಯತ್ಯಯಂ ಭಾಗವತಪ್ರಧಾನಃ ॥ ೨೦ ॥

ಆಶ್ರುತ್ಯ ತದೃಷಿಗಣವಚಃ ಪರೀಕ್ಷಿತ್
ಸಮಂ ಮಧುಚ್ಯುದ್ಗುರು ಚಾವ್ಯಲೀಕಮ್ ।
ಆಭಾಷತೈನಾನಭಿನಂದ್ಯ ಯುಕ್ತಾನ್
ಶುಶ್ರೂಷಮಾಣಶ್ಚರಿತಾನಿ ವಿಷ್ಣೋಃ ॥ ೨೨ ॥

ಸಮಾಗತಾಃ ಸರ್ವತ ಏವ ಸರ್ವೇ
ವೇದಾ ಯಥಾ ಮೂರ್ತಿಧರಾಸ್ತ್ರಿಪೃಷ್ಠೇ ।
ನೇಹಾಥವಾಮುತ್ರ ಚ ಕಶ್ಚನಾರ್ಥ
ಋತೇ ಪರಾನುಗ್ರಹಮಾತ್ಮಶೀಲಮ್ ॥ ೨೩ ॥

ತತಶ್ಚ ವಃ ಪೃಚ್ಛ್ಯಮಿಮಂ ವಿಪೃಚ್ಛೇ
ವಿಶ್ರಭ್ಯ ವಿಪ್ರಾ ಇತಿಕೃತ್ಯತಾಯಾಮ್ ।
ಸರ್ವಾತ್ಮನಾ ಮ್ರಿಯಮಾಣೈಶ್ಚ ಕೃತ್ಯಂ
ಶುದ್ಧಂ ಚ ತತ್ರಾಮೃಶತಾಭಿಯುಕ್ತಾಃ ॥ ೨೪ ॥

ಹೀಗೆ ದೃಢನಿಶ್ಚಯಮಾಡಿದ ಧೀರನಾದ ಆ ರಾಜೇಂದ್ರನು ರಾಜ್ಯಭಾರವನ್ನು ಪುತ್ರನಾದ ಜನಮೇಜಯನಿಗೆ ಒಪ್ಪಿಸಿ, ಗಂಗಾ ನದಿಯ ದಕ್ಷಿಣತೀರದಲ್ಲಿ ಪೂರ್ವಾಗ್ರವಾಗಿ ಹಾಸಿದ ದರ್ಭೆಗಳ ಮೇಲೆ ಉತ್ತರಾಭಿಮುಖವಾಗಿ ಕುಳಿತು ಕೊಂಡನು. ॥ ೧೭ ॥ ಏಕಛತ್ರ ಚಕ್ರವರ್ತಿ ಪರೀಕ್ಷಿತನು ಹೀಗೆ ಪ್ರಾಯೋಪವೇಶವ್ರತವನ್ನು ಕೈಗೊಂಡು ಕುಳಿತುಕೊಂಡಾಗ, ದೇವಲೋಕದಲ್ಲಿದ್ದ ದೇವತೆಗಳು ಆತನನ್ನು ಆನಂದದಿಂದ ಪ್ರಶಂಸಿಸುತ್ತಾ ಭೂಮಿಯ ಮೇಲೆ ಹೂಮಳೆಯನ್ನು ಸುರಿಸಿದರು. ದೇವದುಂದುಭಿಗಳು ಮತ್ತೆ-ಮತ್ತೆ ಮೊಳಗತೊಡಗಿದವು. ॥ ೧೮ ॥ ಹಾಗೆಯೇ ಅಲ್ಲಿ ನೆರೆದಿದ್ದ ಮಹರ್ಷಿಗಳೆಲ್ಲರೂ ಭಲೇ! ಭಲೇ! ಎಂದು ಹೇಳಿ ಪರೀಕ್ಷಿತನ ನಿಶ್ಚಯವನ್ನು ಪ್ರಶಂಸಿಸಿದರು ಹಾಗೂ ಅನುಮೋದಿಸಿದರು. ಋಷಿಗಳಾದರೋ ಸ್ವಭಾವದಿಂದಲೇ ಜನರಮೇಲೆ ಅನುಗ್ರಹದ ಮಳೆಗರೆಯುತ್ತಾರೆ. ಇಷ್ಟೇ ಅಲ್ಲ ಅವರ ಎಲ್ಲ ಶಕ್ತಿಯೂ ಲೋಕಕ್ಕೆ ಕೃಪೆದೋರಲೆಂದೇ ಇರುತ್ತದೆ. ಆ ಮಹಾತ್ಮರು ಭಗವಾನ್ ಶ್ರೀಕೃಷ್ಣನ ಗುಣಗಳಿಂದ ಪ್ರಭಾವಿತನಾದ ಪರೀಕ್ಷಿತನಿಗೆ ಅನುಗುಣ ವಾಗಿ ಮಾತನ್ನಾಡಿದರು. ॥ ೧೯ ॥ 'ರಾಜರ್ಷಿಶ್ರೇಷ್ಠನೇ! ಭಗವಾನ್ ಶ್ರೀಕೃಷ್ಣನ ಸೇವಕನೂ, ಅನುಯಾಯಿಯೂ, ಪಾಂಡುವಂಶೀ ಯನೂ ಆದ ನಿನಗೆ ಇದು ಆಶ್ಚರ್ಯದ ಮಾತಲ್ಲ. ಏಕೆಂದರೆ, ನೀವೆಲ್ಲ ಭಗವಂತನ ಸನ್ನಿಧಿಯನ್ನು ಪಡೆಯಲಿಕ್ಕಾಗಿ ಸಮಸ್ತ ಸಾಮಂತರಾಜರ ಕಿರೀಟಗಳಿಂದ ಸೇವಿಸಲ್ಪಡುತ್ತಿದ್ದ ರಾಜಸಿಂಹಾಸನ ವನ್ನು ಕ್ಷಣಾರ್ಧದಲ್ಲಿ ತ್ಯಜಿಸಿಬಿಟ್ಟಿರಿ. ॥ ೨೦ ॥ "ಈ ಪರಮ ಭಾಗವತೋತ್ತಮನಾದ ಪರೀಕ್ಷಿದ್ರಾಜನು ತನ್ನ ನಶ್ವರವಾದ ದೇಹವನ್ನು ತ್ಯಜಿಸಿ, ಮಾಯಾದೋಷದಿಂದಲೂ, ಶೋಕ ದಿಂದಲೂ ರಹಿತನಾಗಿ ಭಗವದ್ಧಾಮವನ್ನು ಹೊಂದುವವರೆಗೂ ಇಲ್ಲಿಯೇ ಇರೋಣ' ಎಂದು ಅವರು ನಿಶ್ಚಯಿಸಿದರು. ॥ ೨೧ ॥

ಮಹಾಯೋಗಿಗಳಾದ ಆ ಮಹರ್ಷಿಗಳ ಮಧುರವೂ, ಗಂಭೀರವೂ, ಸತ್ಯವೂ, ಸಮವೂ ಆದ ಆ ಮಾತುಗಳನ್ನು ಕೇಳಿ, ಪರೀಕ್ಷಿದ್ರಾಜನು ಅವರನ್ನು ಅಭಿನಂದಿಸಿ ಶ್ರೀಭಗವಂತನ ಮನೋಹರವಾದ ಚರಿತ್ರವನ್ನು ಕೇಳುವ ಇಚ್ಛೆಯಿಂದ ಋಷಿಗಳನ್ನು ಇಂತು ಪ್ರಶ್ನಿಸಿದನು. ॥ ೨೨ ॥ ಎಲೈ ಮಹಾತ್ಮರೇ! ಎಲ್ಲ ಕಡೆ ಗಳಿಂದಲೂ ಇಲ್ಲಿಗೆ ದಯಮಾಡಿಸಿರುವ ತಾವು ಸತ್ಯಲೋಕ ದಲ್ಲಿರುವ ಸಾಕಾರವಾದ ವೇದಗಳಿಗೆ ಸಮಾನರಾಗಿದ್ದೀರಿ. ಇತರರ ಮೇಲೆ ಅನುಗ್ರಹ ತೋರುವುದು ನಿಮ್ಮ ಸಹಜ ಸ್ವಭಾವವೇ ಆಗಿದ್ದು, ನಿಮಗೆ ಇದನ್ನು ಬಿಟ್ಟು ಇಹಲೋಕದಲ್ಲಿ ಅಥವಾ ಪರಲೋಕದಲ್ಲಿ ಬೇರೆ ಯಾವ ಸ್ವಾರ್ಥವೂ ಇಲ್ಲ. ॥ ೨೩ ॥ ಬ್ರಾಹ್ಮಣಶ್ರೇಷ್ಠರೇ! ನಿಮ್ಮ ಮೇಲೆ ಪೂರ್ಣವಾದ ನಂಬಿಕೆಯನ್ನಿಟ್ಟು ನಾನು ನನ್ನ ಕರ್ತವ್ಯದ ಬಗ್ಗೆ ಎರಡು ಪ್ರಶ್ನೆಗಳನ್ನು ಕೇಳುತ್ತೇನೆ. ವಿದ್ವಾಂಸರಾದ ನೀವೆಲ್ಲರೂ ಪರಸ್ಪರವಾಗಿ ವಿಚಾರಮಾಡಿ ತಿಳಿಸಿರಿ. ಎಲ್ಲರೂ ಎಲ್ಲ ಅವಸ್ಥೆಗಳಲ್ಲಿಯೂ ಮತ್ತು ವಿಶೇಷವಾಗಿ ಮರಣ ಸಮಯವು ಹತ್ತಿರವಾಗಿರುವಾಗಲು ಅಂತಃಕರಣ ಹಾಗೂ ಶರೀರ ದಿಂದ ಮಾಡಬೇಕಾದ ಶುದ್ಧಕರ್ಮವು ಯಾವುದು ? * ॥ ೨೪ ॥

* ಇಲ್ಲಿ ರಾಜನು ಮಹರ್ಷಿಗಳಲ್ಲಿ ಎರಡು ಪ್ರಶ್ನೆಗಳನ್ನು ಕೇಳಿರುವನು – (೧) ಜೀವನು ಸದಾಕಾಲ ಮಾಡಬೇಕಾದ ಕರ್ತವ್ಯವೇನು? (೨) ಸ್ವಲ್ಪಕಾಲದಲ್ಲೇ ಮರಣಹೊಂದಲಿರುವವರು ಮಾಡಬೇಕಾದ ಕರ್ತವ್ಯಗಳೇನು? ಇದೇ ಎರಡು ಪ್ರಶ್ನೆಗಳನ್ನು ಅವನು ಶುಕಮಹಾಮುನಿಗಳಲ್ಲಿಯೂ ಕೇಳುವನು. ಆ ಎರಡು ಪ್ರಶ್ನೆಗಳ ಉತ್ತರವನ್ನೇ ಎರಡನೇ ಸ್ಕಂಧದಿಂದ ಹನ್ನೆರಡನೇ ಸ್ಕಂಧದವರೆಗೆ ವಿಸ್ತಾರವಾಗಿ ನೀಡಲಾಗಿದೆ.

ತತ್ರಾಭವದ್ಭಗವಾನ್ವ್ಯಾಸಪುತ್ರೋ
ಯದೃಚ್ಛಯಾ ಗಾಮಟಮಾನೋಽನಪೇಕ್ಷಃ ।
ಅಲಕ್ಷ್ಯಲಿಂಗೋ ನಿಜಲಾಭತುಷ್ಟೋ
ವೃತಶ್ಚ ಬಾಲೈರವಧೂತವೇಷಃ ॥ ೨೫ ॥

ತಂ ದ್ವ್ಯಷ್ಟವರ್ಷಂ ಸುಕುಮಾರಪಾದ-
ಕರೋರುಬಾಹ್ವಂಸಕಪೋಲಗಾತ್ರಮ್ ।
ಚಾರ್ವಾಯತಾಕ್ಷೋನ್ನಸತುಲ್ಯಕರ್ಣ-
ಸುಭ್ರ್ವಾನನಂ ಕಂಬು ಸುಜಾತಕಂಠಮ್ ॥ ೨೬ ॥

ನಿಗೂಢಜತ್ರುಂ ಪೃಥುತುಂಗವಕ್ಷಸ-
ಮಾವರ್ತನಾಭಿಂ ವಲಿವಲ್ಗೂದರಂ ಚ ।
ದಿಗಂಬರಂ ವಕ್ತ್ರವಿಕೀರ್ಣಕೇಶಂ
ಪ್ರಲಂಬಬಾಹುಂ ಸ್ವಮರೋತ್ತಮಾಭಮ್ ॥ ೨೭ ॥

ಶ್ಯಾಮಂ ಸದಾಪೀಚ್ಯವಯೋಽಂಗಲಕ್ಷ್ಮ್ಯಾ
ಸ್ತ್ರೀಣಾಂ ಮನೋಜ್ಞಂ ರುಚಿರಸ್ಮಿತೇನ ।
ಪ್ರತ್ಯುತ್ಥಿತಾಸ್ತೇ ಮುನಯಃ ಸ್ವಾಸನೇಭ್ಯ-
ಸ್ತಲ್ಲಕ್ಷಣಜ್ಞಾ ಅಪಿ ಗೂಢವರ್ಚಸಮ್ ॥ ೨೮ ॥

ಸ ವಿಷ್ಣುರಾತೋಽತಿಥಯ ಆಗತಾಯ
ತಸ್ಮೈ ಸಪರ್ಯಾಂ ಶಿರಸಾಜಹಾರ ।
ತತೋ ನಿವೃತ್ತಾ ಹ್ಯಬುಧಾಃ ಸ್ತ್ರಿಯೋಽರ್ಭಕಾ
ಮಹಾಸನೇ ಸೋಪವಿವೇಶ ಪೂಜಿತಃ ॥ ೨೯ ॥

ಸ ಸಂವೃತಸ್ತತ್ರ ಮಹಾನ್ಮಹೀಯಸಾಂ
ಬ್ರಹ್ಮರ್ಷಿರಾಜರ್ಷಿದೇವರ್ಷಿಸಂಘೈಃ ।
ವ್ಯರೋಚತಾಲಂ ಭಗವಾನ್ಯಥೇಂದು-
ರ್ಗ್ರಹರ್ಕ್ಷತಾರಾನಿಕರೈಃ ಪರೀತಃ ॥ ೩೦ ॥

ಪ್ರಶಾಂತಮಾಸೀನಮಕುಂಠಮೇಧಸಂ
ಮುನಿಂ ನೃಪೋ ಭಾಗವತೋಽಭ್ಯುಪೇತ್ಯ ।
ಪ್ರಣಮ್ಯ ಮೂರ್ಧ್ನಾವಹಿತಃ ಕೃತಾಂಜಲಿ-
ರ್ನತ್ವಾ ಗಿರಾ ಸೂನೃತಯಾನ್ವಪೃಚ್ಛತ್ ॥ ೩೧ ॥

*ಪರೀಕ್ಷಿದುವಾಚ*

ಅಹೋ ಅದ್ಯ ವಯಂ ಬ್ರಹ್ಮನ್ಸತ್ಸೇವ್ಯಾಃ ಕ್ಷತ್ರಬಂಧವಃ ।
ಕೃಪಯಾತಿಥಿರೂಪೇಣ ಭವದ್ಭಿಸ್ತೀರ್ಥಕಾಃ ಕೃತಾಃ ॥ ೩೨ ॥

ಆದೇ ಸಮಯಕ್ಕೆ ಸರಿಯಾಗಿ ಭೂಮಿಯಲ್ಲಿ ಸ್ವಚ್ಛಂದವಾಗಿ ಸಂಚಾರಮಾಡುತ್ತಿದ್ದ ವಿರಕ್ತಶಿಖಾಮಣಿಗಳಾದ ವ್ಯಾಸಪುತ್ರ ಭಗವಾನ್ ಶ್ರೀಶುಕಮಹಾಮುನಿಗಳು ಅಲ್ಲಿ ಕಾಣಿಸಿಕೊಂಡರು. ಆ ಮಹಾತ್ಮರಾದರೋ ಪರಮಾತ್ಮನ ಲಾಭದಿಂದ ಸದಾ ಸಂತುಷ್ಟರಾಗಿದ್ದರು. ವರ್ಣ ಅಥವಾ ಆಶ್ರಮಗಳಿಗೆ ಸಂಬಂಧಪಟ್ಟ ಯಾವ ಹೊರ ಚಿಹ್ನೆಗಳೂ ಇಲ್ಲದೆ ಅವಧೂತವೇಷದಲ್ಲಿದ್ದರು. ಹುಡುಗರೂ, ಹೆಂಗಸರೂ ಅವರ ಸುತ್ತಲೂ ನೆರೆದಿದ್ದರು. ॥ ೨೫ ॥ ಹದಿನಾರು ವರ್ಷ ತಾರುಣ್ಯದ ಅವರು ಚೆಲುವಿನ ಗಣಿಯಾಗಿದ್ದರು. ಅವರ ಕೈ-ಕಾಲುಗಳು, ಮೊಣಕಾಲುಗಳು, ಭುಜಗಳು, ಕೆನ್ನೆಗಳು ಹಾಗೂ ಉಳಿದ ಎಲ್ಲ ಅಂಗಗಳು ಸುಕುಮಾರವಾಗಿದ್ದವು. ಅಂದ-ಚೆಂದಗಳಿಂದ ಕೂಡಿದ ವಿಶಾಲವಾದ ನೇತ್ರಗಳು, ಎತ್ತರವಾದ ಮೂಗು, ಸಮವಾದ ಕಿವಿಗಳು, ರಮಣೀಯವಾದ ಹುಬ್ಬುಗಳಿಂದ ಕಂಗೊಳಿಸುವ ಮುಖ, ಶಂಖದಂತೆ ಸುಂದರವಾದ ಕಂಠ, ಮುಚ್ಚಿದ ಹೆಗಲುಸಂದುಗಳು, ವಿಶಾಲವೂ-ಉನ್ನತವೂ ಆದ ಎದೆ, ಸುಳಿಯನ್ನು ಹೋಲುವ ಹೊಕ್ಕಳು, ತ್ರಿವಳಿಗಳಿಂದ ಕೂಡಿದ ಉದರ ಪ್ರದೇಶ, ಉದ್ದವಾದ ತೋಳುಗಳು ಮತ್ತು ಮುಖದ ಮೇಲೆ ಕೆದರಿ ಹರಡಿದ್ದ ಕೂದಲುಗಳಿಂದ ಮನಮೋಹಕವಾದ ಮೂರ್ತಿಯಾಗಿ, ದಿಗಂಬರರಾಗಿ, ಅವರು ದೇವೋತ್ತಮರಂತೆ ರಾರಾಜಿಸುತ್ತಿದ್ದರು. ॥ ೨೬-೨೭ ॥ ಶ್ಯಾಮಲವಾದ ಶರೀರಕಾಂತಿ, ರೂಪ-ಲಾವಣ್ಯ ಮತ್ತು ಮಧುರ ಮಂದಹಾಸಗಳಿಂದ ಸ್ತ್ರೀಯರ ಕಣ್ಮನಗಳನ್ನು ಸದಾ ಸೆಳೆಯುತ್ತಿದ್ದರು. ತಮ್ಮ ಬ್ರಹ್ಮತೇಜಸ್ಸನ್ನು ಅಡಗಿಸಿಟ್ಟುಕೊಂಡಿದ್ದರೂ, ಅದರ ಲಕ್ಷಣಗಳನ್ನರಿತ ಮುನಿಗಳು ಅವರನ್ನು ಗುರುತಿಸಿದರು. ಒಡನೆಯೇ ಎಲ್ಲರೂ ತಮ್ಮ-ತಮ್ಮ ಆಸನಗಳನ್ನು ಬಿಟ್ಟು ಅವರನ್ನು ಗೌರವಿಸಲು ಎದ್ದುನಿಂತರು. ॥ ೨೮ ॥

ವಿಷ್ಣುರಾತ ಪರೀಕ್ಷಿದ್ರಾಜನು ಅತಿಥಿಯಾಗಿ ದಯಮಾಡಿಸಿದ್ದ ಅವರಿಗೆ ತಲೆಬಾಗಿ ನಮಸ್ಕರಿಸಿ ಪೂಜಿಸಿದನು. ಅವರ ಸ್ವರೂಪವನ್ನು ಅರಿಯದ ಬಾಲಕರು, ಸ್ತ್ರೀಯರೂ ಅವರ ಈ ಮಹಿಮೆಯನ್ನು ನೋಡಿ ಹಿಂದಿರುಗಿ ಹೊರಟುಹೋದರು. ಆಗ ಎಲ್ಲರಿಂದ ಸನ್ಮಾನಿತರಾದ ಶ್ರೀಶುಕಮಹಾಮುನಿಗಳು ಶ್ರೇಷ್ಠವಾದ ಆಸನದಲ್ಲಿ ಮಂಡಿಸಿದರು. ॥ ೨೯ ॥ ಬ್ರಹ್ಮರ್ಷಿಗಳೂ, ರಾಜರ್ಷಿಗಳೂ ಇವರ ಸಮೂಹದಿಂದ ಆವೃತರಾದ ಮಹಾತೇಜಸ್ವಿಗಳೂ, ಅತಿಪೂಜ್ಯರೂ, ಆದ ಶುಕಮಹಾಮುನಿಗಳು ಗ್ರಹ-ನಕ್ಷತ್ರ ತಾರಾಮಂಡಲಗಳಿಂದ ಸುತ್ತುವರಿಯಲ್ಪಟ್ಟ ಭಗವಾನ್ ಚಂದ್ರನಂತೆ ಶೋಭಾಯಮಾನರಾಗಿದ್ದರು. ॥ ೩೦ ॥ ಪ್ರಶಾಂತರಾಗಿ ಕುಳಿತಿದ್ದ ಅದ್ಭುತ ಮೇಧಾಸಂಪನ್ನರಾದ ಆ ಶುಕಮಹಾಮುನಿಗಳ ಬಳಿಗೆ ಪರಮಭಾಗವತೋತ್ತಮನಾದ ಆ ರಾಜರ್ಷಿಯು ಬಂದು ಸಾವಧಾನವಾಗಿ ಅವರಿಗೆ ತಲೆಬಾಗಿ ನಮಸ್ಕಾರ ಮಾಡಿ ಸತ್ಯವೂ ಪ್ರಿಯವೂ ಆದ ವಾಣಿಯಿಂದ ಅವರಲ್ಲಿ ಹೀಗೆ ಅರಿಕೆಮಾಡಿಕೊಂಡನು. ॥ ೩೧ ॥

ಪರೀಕ್ಷಿದ್ರಾಜನು ಹೇಳಿದನು – ಬ್ರಹ್ಮಪವಿತ್ತಮರಾದ ಮುನಿವರ್ಯರೇ! ಆಹಾ! ಈಗ ನಾವು ಧನ್ಯರಾದೆವು. ಕ್ಷತ್ರಿಯಾಧಮರಾದ ನಾವೂ ಕೂಡ ಈಗ ಸತ್ಸಂಗಕ್ಕೆ ಅಧಿಕಾರಿಗಳಾದೆವು.

ಯೇಷಾಂ ಸಂಸ್ಮರಣಾತ್ಪುಂಸಾಂ ಸದ್ಯಃ ಶುದ್ಧ್ಯಂತಿ ವೈ ಗೃಹಾಃ ।
ಕಿಂ ಪುನರ್ದರ್ಶನಸ್ಪರ್ಶಪಾದ ಶೌಚಾಸನಾದಿಭಿಃ
॥ ೩೩ ॥

ಸಾಂನ್ನಿಧ್ಯಾತ್ತೇ ಮಹಾಯೋಗಿನ್ಪಾತಕಾನಿ ಮಹಾಂತ್ಯಪಿ ।
ಸದ್ಯೋ ನಶ್ಯಂತಿ ವೈ ಪುಂಸಾಂ ವಿಷ್ಣೋರಿವ ಸುರೇತರಾಃ
॥ ೩೪ ॥

ಅಪಿ ಮೇ ಭಗವಾನ್ ಪ್ರೀತಃ ಕೃಷ್ಣಃ ಪಾಂಡುಸುತಪ್ರಿಯಃ ।
ಪೈತೃಷ್ವಸೇಯಪ್ರೀತ್ಯರ್ಥಂ ತದ್ಗೋತ್ರಸ್ಯಾತ್ತಬಾಂಧವಃ
॥ ೩೫ ॥

ಅನ್ಯಥಾ ತೇಽವ್ಯಕ್ತಗತೇರ್ದರ್ಶನಂ ನಃ ಕಥಂ ನೃಣಾಮ್ ।
ನಿತರಾಂ ಮ್ರಿಯಮಾಣಾನಾಂ ಸಂಸಿದ್ಧಸ್ಯ ವನೀಯಸಃ
॥ ೩೬॥

ಅತಃ ಪೃಚ್ಛಾಮಿ ಸಂಸಿದ್ಧಿಂ ಯೋಗಿನಾಂ ಪರಮಂ ಗುರುಮ್ ।
ಪುರುಷಸ್ಯೇಹ ಯತ್ಕಾರ್ಯಂ ಮ್ರಿಯಮಾಣಸ್ಯ ಸರ್ವಥಾ
॥ ೩೭॥

ಯಚ್ಛ್ರೋತವ್ಯಮಥೋ ಜಪ್ಯಂ ಯತ್ಕರ್ತವ್ಯಂ ನೃಭಿಃ ಪ್ರಭೋ ।
ಸ್ಮರ್ತವ್ಯಂ ಭಜನೀಯಂ ವಾ ಬ್ರೂಹಿ ಯದ್ವಾ ವಿಪರ್ಯಯಮ್
॥ ೩೮ ॥

ನೂನಂ ಭಗವತೋ ಬ್ರಹ್ಮನ್ ಗೃಹೇಷು ಗೃಹಮೇಧಿನಾಮ್ ।
ನ ಲಕ್ಷ್ಯತೇ ಹ್ಯವಸ್ಥಾನಮಪಿ ಗೋದೋಹನಂ ಕ್ವಚಿತ್
॥ ೩೯ ॥

*ಸೂತ ಉವಾಚ*

ಏವಮಾಭಾಷಿತಃ ಪೃಷ್ಟಃ ಸ ರಾಜ್ಞಾ ಶ್ಲಕ್ಷ್ಣಯಾ ಗಿರಾ ।
ಪ್ರತ್ಯಭಾಷತ ಧರ್ಮಜ್ಞೋ ಭಗವಾನ್ಬಾದರಾಯಣಿಃ
॥ ೪೦ ॥

ಸಾಧು-ಸಜ್ಜನರ ಸಮಾಜದಲ್ಲಿ ಸೇರಿಕೊಂಡೆವು. ತಾವು ಕೃಪೆಯಿಟ್ಟು ಅತಿಥಿಗಳಾಗಿ ಇಲ್ಲಿಗೆ ಬಂದು ನಮ್ಮನ್ನೆಲ್ಲರನ್ನೂ ತೀರ್ಥದಂತೆ ಪವಿತ್ರರನ್ನಾಗಿ ಮಾಡಿದಿರಿ. ॥ ೩೨ ॥ ನಿಮ್ಮಂತಹವರ ಸ್ಮರಣ ಮಾತ್ರದಿಂದಲೇ ಗೃಹಸ್ಥರ ಮನೆಗಳು ಪವಿತ್ರವಾಗುವುವು. ಹೀಗಿರುವಾಗ ನಿಮ್ಮ ನೇರವಾದ ದರ್ಶನ, ಸ್ಪರ್ಶನ, ಪಾದಪ್ರಕ್ಷಾಳನ, ಆಸನ ಸಮರ್ಪಣೆ ಮುಂತಾದವುಗಳ ಅವಕಾಶ ಸಿಕ್ಕಿದಾಗ ಹೇಳುವುದೇನಿದೆ ? ॥ ೩೩ ॥ ಮಹಾಯೋಗಿಗಳೇ ! ಮಹಾವಿಷ್ಣುವಿನ ಮುಂದೆ ದೈತ್ಯರು ನಾಶಹೊಂದುವಂತೆ – ತಮ್ಮ ಸಾನ್ನಿಧ್ಯಮಾತ್ರದಿಂದಲೇ ಮಹಾಪಾತಕಗಳೂ ಕೂಡ ಒಡನೆಯೇ ಧ್ವಂಸವಾಗಿಬಿಡುತ್ತವೆ. ॥ ೩೪ ॥ ಪಾಂಡವರಿಗೆ ಮಿತ್ರನಾದ ಭಗವಾನ್ ಶ್ರೀಕೃಷ್ಣನು ನಿಜವಾಗಿಯೂ ನನ್ನ ಮೇಲೆ ಅತ್ಯಂತ ಪ್ರಸನ್ನನಾಗಿರುವನು. ತನ್ನ ಸೋದರತ್ತೆಯ ಮಕ್ಕಳಿಗೆ ಪ್ರಿಯವನ್ನುಂಟುಮಾಡಿದ ಭಗವಂತನು ಪಾಂಡವರ ವಂಶದಲ್ಲಿ ಹುಟ್ಟಿದ ನನ್ನ ಮೇಲೂ ಆತ್ಮೀಯವಾದ ವ್ಯವಹಾರವನ್ನು ಮಾಡಿರುವನು. ॥ ೩೫ ॥ ಭಗವಾನ್ ಶ್ರೀಕೃಷ್ಣನ ಕರುಣೆಯಿಲ್ಲದಿದ್ದರೆ ತಮ್ಮಂತಹ ಏಕಾಂತ ಜೀವಿಗಳೂ, ಗೂಢಸಂಚಾರಿಗಳೂ ಆದ ಮಹಾತ್ಮರೂ ತಾವಾಗಿಯೇ ದಯಮಾಡಿಸಿ ಮರಣವು ಸಮೀಪಿಸುವ ನಮ್ಮಂತಹ ಪ್ರಾಕೃತ ಮನುಷ್ಯರಿಗೆ ದರ್ಶನಕೊಡುತ್ತಿದ್ದರೇ ? ॥ ೩೬ ॥ ತಾವಾದರೋ ಯೋಗಿಗಳಿಗೂ ಪರಮಗುರುಗಳಾಗಿದ್ದೀರಿ. ಆದ್ದರಿಂದ 'ಸರ್ವಥಾ ಮರಣಾಸನ್ನನಾದ ಪುರುಷನು ಏನು ಮಾಡಬೇಕು ?' ಈ ಕುರಿತು ಸಿದ್ಧಿಯ ಸ್ವರೂಪ ಮತ್ತು ಸಾಧನೆಯ ಸಂಬಂಧವಾಗಿ ನಿಮ್ಮಲ್ಲಿ ಪ್ರಶ್ನಿಸುತ್ತಿದ್ದೇನೆ. ॥ ೩೭ ॥ ಮಹಾತ್ಮರೇ ! ಮನುಷ್ಯನಾದವನು ಏನು ಮಾಡಬೇಕು ? ಯಾವುದನ್ನು ಶ್ರವಣಿಸಬೇಕು, ಯಾರ ಜಪ, ಯಾರ ಸ್ಮರಣೆ, ಯಾರ ಭಜನೆ ಮಾಡಬೇಕು ? ಹಾಗೂ ಯಾವುದನ್ನು ತ್ಯಜಿಸಬೇಕು ? ॥ ೩೮ ॥ ಬ್ರಹ್ಮತೇಜೋಮಯರಾದ ಪೂಜ್ಯರೇ ! ತಮ್ಮ ದರ್ಶನವು ಅತ್ಯಂತ ದುರ್ಲಭವಾದುದು. ಏಕೆಂದರೆ ತಾವು ಗೃಹಸ್ಥರ ಮನೆಗಳಲ್ಲಾಗಲೀ, ಅಥವಾ ಬೇರೆಡೆಗಳಲ್ಲಾಗಲೀ, ಹಸುವು ಹಾಲು ಕರೆವಷ್ಟು ಹೊತ್ತು ಸಹ ನಿಲ್ಲುವುದನ್ನು ಪ್ರಾಯಶಃ ನೋಡಲು ಶಕ್ಯವಿಲ್ಲ. ॥ ೩೯ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕರೇ ! ಆ ಸಾರ್ವಭೌಮನು ಹೀಗೆ ಅತಿಮಧುರವಾದ ವಾಣಿಯಿಂದ ಸಂಭಾಷಿಸಿ, ಪ್ರಶ್ನೆಮಾಡಲು, ಸಕಲಧರ್ಮಗಳ ಮರ್ಮವನ್ನು ಅರಿತಿದ್ದ ವ್ಯಾಸನಂದನರಾದ ಭಗವಾನ್ ಶುಕಮಹಾಮುನಿಗಳು ಆತನಿಗೆ ಹೀಗೆ ಉತ್ತರಿಸತೊಡಗಿದರು. ॥ ೪೦ ॥

***ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ ಶುಕಾಗಮನಂ ನಾಮೈಕೋನವಿಂಶೋಽಧ್ಯಾಯಃ ॥ ೧೯ ॥**

ಮೊದಲನೆಯ ಸ್ಕಂಧವು ಸಂಪೂರ್ಣವಾಯಿತು.

॥ ಶ್ರೀರಾಧಾಕೃಷ್ಣಾಭ್ಯಾಂ ನಮಃ ॥

# ಶ್ರೀಮದ್ಭಾಗವತಮಹಾಪುರಾಣ

## ದ್ವಿತೀಯ ಸ್ಕಂಧ



ಯಸ್ಯಾವತಾರಕರ್ಮಾಣಿ ಗಾಯಂತಿ ಹ್ಯಸ್ಮದಾದಯಃ ।
ನ ಯಂ ವಿದಂತಿ ತತ್ತ್ವೇನ ತಸ್ಮೈ ಭಗವತೇ ನಮಃ ॥

॥ ಓಂ ನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ದ್ವಿತೀಯಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಧ್ಯಾನವಿಧಿ ಮತ್ತು ಶ್ರೀಭಗವಂತನ ವಿರಾಟ್‌ಸ್ವರೂಪದ ವರ್ಣನೆ

*ಶ್ರೀಶುಕ ಉವಾಚ*

**ವರೀಯಾನೇಷ ತೇ ಪ್ರಶ್ನಃ ಕೃತೋ ಲೋಕಹಿತೋ ನೃಪ ।
ಆತ್ಮವಿತ್ಸಮ್ಮತಃ ಪುಂಸಾಂ ಶ್ರೋತವ್ಯಾದಿಷು ಯಃ ಪರಃ ॥ ೧ ॥**

**ಶ್ರೋತವ್ಯಾದೀನಿ ರಾಜೇಂದ್ರ ನೃಣಾಂ ಸಂತಿ ಸಹಸ್ರಶಃ ।
ಅಪಶ್ಯತಾಮಾತ್ಮತತ್ತ್ವಂ ಗೃಹೇಷು ಗೃಹಮೇಧಿನಾಮ್ ॥ ೨ ॥**

**ನಿದ್ರಯಾ ಹ್ರಿಯತೇ ನಕ್ತಂ ವ್ಯವಾಯೇನ ಚ ವಾ ವಯಃ ।
ದಿವಾ ಚಾರ್ಥೇಹಯಾ ರಾಜನ್ಕುಟುಂಬ ಭರಣೇನ ವಾ ॥ ೩ ॥**

**ದೇಹಾಪತ್ಯಕಲತ್ರಾದಿಷ್ವಾತ್ಮಸೈನ್ಯೇಷ್ವಸತ್ಸ್ವಪಿ ।
ತೇಷಾಂ ಪ್ರಮತ್ತೋ ನಿಧನಂ ಪಶ್ಯನ್ನಪಿ ನ ಪಶ್ಯತಿ ॥ ೪ ॥**

**ತಸ್ಮಾದ್ಭಾರತ ಸರ್ವಾತ್ಮಾ ಭಗವಾನೀಶ್ವರೋ ಹರಿಃ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯಶ್ಚೇಚ್ಛತಾಭಯಮ್ ॥ ೫ ॥**

**ಏತಾವಾನ್ ಸಾಂಖ್ಯ ಯೋಗಾಭ್ಯಾಂ ಸ್ವಧರ್ಮಪರಿನಿಷ್ಠಯಾ ।
ಜನ್ಮಲಾಭಃ ಪರಃ ಪುಂಸಾಮಂತೇ ನಾರಾಯಣಸ್ಮೃತಿಃ ॥ ೬ ॥**

**ಪ್ರಾಯೇಣ ಮುನಯೋ ರಾಜನ್ನಿವೃತ್ತಾ ವಿಧಿಷೇಧತಃ ।
ನೈರ್ಗುಣ್ಯಸ್ಥಾ ರಮಂತೇ ಸ್ಮ ಗುಣಾನುಕಥನೇ ಹರೇಃ ॥ ೭ ॥**

**ಶ್ರೀಶುಕಮಹಾಮುನಿಗಳು ಹೇಳಿದರು** – "ಪರೀಕ್ಷಿದ್ರಾಜನೇ! ನೀನು ಲೋಕಹಿತಕ್ಕಾಗಿ ಕೇಳಿರುವ ಪ್ರಶ್ನೆಯು ತುಂಬಾ ಶ್ರೇಷ್ಠವಾದುದು. ಮನುಷ್ಯರ ಶ್ರವಣ, ಕೀರ್ತನ, ಸ್ಮರಣೆ ಮುಂತಾದವುಗಳು ಏನೇನುಂಟೋ, ಅವುಗಳಲ್ಲಿ ಅತ್ಯಂತ ಉತ್ತಮವಾದುದು ಇದು. ಆತ್ಮಜ್ಞಾನಿಗಳಿಗೆ ಸಮ್ಮತವಾದುದು ಈ ಪ್ರಶ್ನೆ ॥ ೧ ॥ ರಾಜೇಂದ್ರನೇ! ಆತ್ಮತತ್ತ್ವವನ್ನರಿಯದೆ ಮನೆಯ ಕೆಲಸ-ಕಾರ್ಯಗಳಲ್ಲಿಯೇ ಮಗ್ನರಾದ ಗೃಹಸ್ಥರಿಗೆ ಕೇಳಲು, ಯೋಚಿಸಲು, ಮಾಡಲು ಸಾವಿರಾರು ವಿಷಯಗಳಿರುತ್ತವೆ. ॥ ೨ ॥ ಅವರ ಆಯುಸ್ಸೆಲ್ಲಾ ಇವುಗಳಲ್ಲೇ ಕಳೆದುಹೋಗುತ್ತದೆ. ಅವರ ರಾತ್ರಿಯು ನಿದ್ದೆಯಲ್ಲೋ, ಸ್ತ್ರೀಪ್ರಸಂಗದಲ್ಲೋ ಕಳೆದುಹೋದರೆ ಹಗಲು ಹಣ ಸಂಪಾದನೆಯ ಹಗರಣಗಳಲ್ಲಿ, ಕುಟುಂಬ ಪೋಷಣೆಯಲ್ಲಿ ಕಳೆದುಹೋಗುತ್ತದೆ. ॥ ೩ ॥ ಸಂಸಾರದಲ್ಲಿ ಮನುಷ್ಯನಿಗೆ ಅತ್ಯಂತ ಘನಿಷ್ಠ ಸಂಬಂಧವೆಂದು ಹೇಳಲಾಗುವ ಶರೀರ, ಪತ್ನೀ, ಪುತ್ರ ಮುಂತಾದವುಗಳು ಏನೆಲ್ಲ ಇದೆಯೋ, ಅವೆಲ್ಲ ಅಸತ್ಪದಾರ್ಥಗಳು. ಆದರೆ ಜೀವಿಯು ಹಗಲು-ಇರುಳು ಅವೆಲ್ಲವೂ ಸಾವಿಗೆ ಈಡಾಗುವುದನ್ನು ನೋಡುತ್ತಾ ಇದ್ದರೂ ಎಚ್ಚರವಾಗದಷ್ಟು ಮೋಹದಲ್ಲಿ ಹುಚ್ಚನಾಗಿರುತ್ತಾನೆ. ॥ ೪ ॥ ಅದಕ್ಕಾಗಿ ಪರೀಕ್ಷಿತನೇ! ಅಭಯಪದವನ್ನು ಪಡೆಯಲಿಚ್ಛಿಸುವವನಾದರೋ ಸರ್ವಾತ್ಮಾ ಸರ್ವಶಕ್ತಿಯುಳ್ಳ ಭಗವಾನ್ ಶ್ರೀಕೃಷ್ಣನ ಲೀಲೆಗಳನ್ನೇ ಶ್ರವಣ, ಕೀರ್ತನ, ಸ್ಮರಣೆ ಮಾಡಬೇಕು. ಹೀಗೆ ಮಾಡುವುದರಿಂದ ಅವನಿಗೆ ಭಗವಂತನಲ್ಲಿ ತದಾಕಾರ ವೃತ್ತಿಯುಂಟಾಗಿ ಸುಲಭವಾಗಿ ಪರಮಾತ್ಮನ ಪ್ರಾಪ್ತಿಯುಂಟಾಗುತ್ತದೆ. ॥ ೫ ॥ ಜ್ಞಾನಯೋಗದಿಂದಾಗಲೀ, ಭಕ್ತಿಯೋಗದಿಂದಾಗಲೀ, ಸ್ವಧರ್ಮ ನಿಷ್ಠೆಯಿಂದಾಗಲೀ ಹೇಗಾದರೂ ಅಂತ್ಯಕಾಲದಲ್ಲಿ ನಾರಾಯಣ ಸ್ಮರಣೆ ಉಂಟಾಗುವಂತೆ ಮಾಡಿಕೊಳ್ಳುವುದೇ ಮನುಷ್ಯ ಜೀವನದ ಪರಮಲಾಭವಾಗಿದೆ. ಆದ್ದರಿಂದ ಮೇಲೆ ಹೇಳಿದ ಈ ಮೂರರಲ್ಲಿ, ಯಾವುದೇ ಯೋಗದ ಮೂಲಕ ತನ್ನನ್ನು ಭಗವಂತನಲ್ಲಿ ತೊಡಗಿಸಿಕೊಳ್ಳಬೇಕು. ॥ ೬ ॥ ಪರೀಕ್ಷಿದ್ರಾಜನೇ! ನಿರ್ಗುಣ ಬ್ರಹ್ಮನಲ್ಲಿ ನೆಲೆಗೊಂಡಿರುವ, ವಿಧಿ-ನಿಷೇಧಗಳನ್ನು ಮೀರಿರುವ ದೊಡ್ಡ-ದೊಡ್ಡ ಋಷಿ-ಮುನಿಗಳೂ ಕೂಡ ಪ್ರಾಯಶಃ ಭಗವಂತನ ಅನಂತಕಲ್ಯಾಣಗುಣಗಳನ್ನು ವರ್ಣಿಸುವುದರಲ್ಲೇ ರಮಿಸುತ್ತಿರುತ್ತಾರೆ. **(ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ । ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥)** (ಭಗವದ್ಗೀತೆ ೧೦/೯) ॥ ೭ ॥

**ಇದಂ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।**
**ಅಧೀತವಾನ್ದ್ವಾಪರಾದೌ ಪಿತುರ್ದ್ವೈಪಾಯನಾದಹಮ್ ॥ ೮ ॥**

**ಪರಿನಿಷ್ಠಿತೋಽಪಿ ನೈರ್ಗುಣ್ಯ ಉತ್ತಮಶ್ಲೋಕಲೀಲಯಾ ।**
**ಗೃಹೀತಚೇತಾ ರಾಜರ್ಷೇ ಆಖ್ಯಾನಂ ಯದಧೀತವಾನ್ ॥ ೯ ॥**

**ತದಹಂ ತೇಽಭಿಧಾಸ್ಯಾಮಿ ಮಹಾಪೌರುಷಿಕೋ ಭವಾನ್ ।**
**ಯಸ್ಯ ಶ್ರದ್ದಧತಾಮಾಶು ಸ್ಯಾನ್ಮುಕುಂದೇ ಮತಿಃ ಸತೀ ॥ ೧೦ ॥**

**ಏತನ್ನಿರ್ವಿದ್ಯಮಾನಾನಾಮಿಚ್ಛತಾಮಕುತೋಭಯಮ್ ।**
**ಯೋಗಿನಾಂ ನೃಪ ನಿರ್ಣೀತಂ ಹರೇರ್ನಾಮಾನುಕೀರ್ತನಮ್ ॥ ೧೧ ॥**

**ಕಿಂ ಪ್ರಮತ್ತಸ್ಯ ಬಹುಭಿಃ ಪರೋಕ್ಷೈರ್ಹಾಯನೈರಿಹ ।**
**ವರಂ ಮುಹೂರ್ತಂ ವಿದಿತಂ ಘಟೇತ ಶ್ರೇಯಸೇ ಯತಃ ॥ ೧೨ ॥**

**ಖಟ್ವಾಂಗೋ ನಾಮ ರಾಜರ್ಷಿರ್ಜ್ಞಾತ್ವೇಯತ್ತಾಮಿಹಾಯುಷಃ ।**
**ಮುಹೂರ್ತಾತ್ಸರ್ವಮುತ್ಸೃಜ್ಯ ಗತವಾನಭಯಂ ಹರಿಮ್ ॥ ೧೩ ॥**

ಅಂತಹ ಮಹಾಮಹಿಮೆಯ ದಿವ್ಯ ಪ್ರಬಂಧವಾಗಿ ವೇದ ಸದೃಶವೂ, ಬ್ರಹ್ಮರೂಪವೂ ಆಗಿರುವ ಈ ಭಾಗವತವೆಂಬ ಮಹಾ ಪುರಾಣವನ್ನು ನಾನು ದ್ವಾಪರಯುಗದ ಪ್ರಾರಂಭದಲ್ಲಿ ನನ್ನ ತೀರ್ಥರೂಪರಾದ ಶ್ರೀಕೃಷ್ಣದ್ವೈಪಾಯನರಿಂದ ಅಧ್ಯಯನ ಮಾಡಿದೆ. ॥ ೮ ॥ ರಾಜರ್ಷಿಯೇ ! ನಾನು ನಿರ್ಗುಣಸ್ವರೂಪನಾದ ಪರಮಾತ್ಮನಲ್ಲಿ ನಿಷ್ಠೆಯುಳ್ಳವನು. ಆದರೂ ಪುಣ್ಯಕೀರ್ತಿಯಾದ ಭಗವಾನ್ ಶ್ರೀಕೃಷ್ಣನ ಮಧುರಲೀಲೆಗಳು ಬಲವಂತವಾಗಿ ನನ್ನ ಮನಸ್ಸನ್ನು ಸೂರೆಗೊಂಡವು. ಆದ್ದರಿಂದ ನಾನು ಈ ಪುರಾಣವನ್ನು ಅಧ್ಯಯನ ಮಾಡಿದೆ.* ॥ ೯ ॥ ನೀನು ಭಗವಂತನ ಪರಮಭಕ್ತನಾದ್ದರಿಂದ ನಿನಗೆ ಇದನ್ನು ನಾನು ಹೇಳುತ್ತೇನೆ. ಇದರಲ್ಲಿ ಶ್ರದ್ಧೆಯನ್ನಿಡುವವರ ಚಿತ್ತವೃತ್ತಿಗಳು ಶುದ್ಧವಾಗಿ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ಅನನ್ಯ ಭಕ್ತಿಯಿಂದ ಬೇಗನೇ ತೊಡಗಿಕೊಳ್ಳುವವು. ॥ ೧೦ ॥ ಎಲೈ ರಾಜನೇ ! ಲೋಕ-ಪರಲೋಕದ ಯಾವುದೇ ವಸ್ತುವನ್ನು ಬಯಸುವವರಿಗೆ, ಸಂಸಾರದಲ್ಲಿ ದುಃಖಗಳನ್ನನುಭವಿಸಿ ವೈರಾಗ್ಯ ಹೊಂದಿದವರಿಗೆ, ನಿರ್ಭಯವಾದ ಮೋಕ್ಷಪದವನ್ನು ಪಡೆಯಲು ಬಯಸುವ ಸಾಧಕರಿಗೆ ಹಾಗೂ ಯೋಗಸಂಪನ್ನ ಸಿದ್ಧ ಜ್ಞಾನಿಗಳಿಗೂ ಕೂಡ ಭಗವನ್ನಾಮಕೀರ್ತನರೂಪವಾದ ಈ ಪುರಾಣವು ಶ್ರೇಯಸ್ಕರವೆಂದು ಸಮಸ್ತ ಶಾಸ್ತ್ರಗಳಲ್ಲಿ ನಿಶ್ಚಯಿಸಲ್ಪಟ್ಟಿದೆ. ॥ ೧೧ ॥ ತಮ್ಮ ಶ್ರೇಯಸ್ಸಾಧನೆಯಲ್ಲಿ ಎಚ್ಚರವಿಲ್ಲದವರು ಎಷ್ಟೇ ವರ್ಷಗಳು ಬದುಕಿದ್ದರೂ ಏನು ಲಾಭ ? ಅವರಿಗರಿವಿಲ್ಲದಂತೆಯೇ ಅವರ ಆಯುಸ್ಸು ವ್ಯರ್ಥವಾಗಿ ಕಳೆದುಹೋಗುವುದು. ಶ್ರೇಯಸ್ಸಾಧನೆಯ ವಿಷಯದಲ್ಲಿ ಸಾವಧಾನವಾಗಿದ್ದು, ಜ್ಞಾನಪೂರ್ವಕವಾಗಿ ಒಂದು ಮುಹೂರ್ತ ಕಾಲ ಬದುಕಿದ್ದರೂ ಅದು ಸಫಲವೇ ಆಗುವುದು. ಏಕೆಂದರೆ, ಜೀವನು ಬಯಸಿದರೆ ತನ್ನ ಶ್ರೇಯಸ್ಸನ್ನು ಒಂದೇ ಗಳಿಗೆಯಲ್ಲಿ ಮಾಡಿಕೊಳ್ಳಬಲ್ಲನು. ॥ ೧೨ ॥ ರಾಜರ್ಷಿ ಖಟ್ವಾಂಗನು ತನ್ನ ಆಯುಸ್ಸಿನ ಸಮಾಪ್ತಿಯ ಸಮಯವನ್ನರಿತು ಎರಡೇ ಘಳಿಗೆಯಲ್ಲಿ ಸರ್ವಸಂಗಪರಿತ್ಯಾಗಿಯಾಗಿ ಭಗವಂತನ ಅಭಯಪದವನ್ನು ಪಡೆದುಕೊಂಡನು. ॥ ೧೩ ॥ ಪರೀಕ್ಷಿದ್ರಾಜನೇ !

* ಈ ಭಾಗವತ ಪುರಾಣವನ್ನು ತನ್ನ ಪುತ್ರನಾದ ಶುಕಮುನಿಗೆ ಉಪದೇಶಿಸಬೇಕೆಂಬ ಇಚ್ಛೆಯು ವ್ಯಾಸರಲ್ಲಿ ಪ್ರಬಲವಾಗಿತ್ತು. ಆದರೆ ಅವನಾದರೋ ಪೂರ್ಣ ವೈರಾಗ್ಯವುಳ್ಳವನಾಗಿದ್ದನು. ಯಾವುದೇ ಮಮತೆ ಅವನಿಗೆ ಎಲ್ಲಿಯೂ ಇರಲಿಲ್ಲ. ಒಮ್ಮೆ ವೇದವ್ಯಾಸರ ಶಿಷ್ಯರು ಭಾಗವತದ ಶ್ಲೋಕಗಳನ್ನು ಹಾಡುತ್ತಿದ್ದರು. ಅದನ್ನು ಶುಕಮುನಿಯು ಕೇಳಿದರು –

**ಅಹೋ ಬಕೀ ಯಂ ಸ್ತನಕಾಲಕೂಟಂ ಜಿಘಾಂಸಯಾ ಪಾಯಯದಪ್ಯಸಾಧ್ವೀ । ಲೇಭೇ ಗತಿಂ ಧಾತ್ರ್ಯುಚಿತಾಂ ತತೋಽನ್ಯಂ ಕಂ ವಾ ದಯಾಲುಂ ಶರಣಂ ವ್ರಜೇಮ ॥** *(ಭಾಗವತ ೩/೨/೨೩)*

**ಬರ್ಹಾಪೀಡಂ ನಟವರವಪುಃ ಕರ್ಣಯೋಃ ಕರ್ಣಿಕಾರಂ ಬಿಭ್ರದ್ ವಾಸಃ ಕನಕಕಪಿಶಂ ವೈಜಯಂತೀಂ ಚ ಮಾಲಾಮ್ ।**
**ರಂಧ್ರಾನ್ ವೇಣೋರಧರ ಸುಧಯಾ ಪೂರಯನ್ ಗೋಪವೃಂದೈಃ ವೃಂದಾರಣ್ಯಂ ಸ್ವಪದರಮಣಂ ಪ್ರಾವಿಶದ್ ಗೀತಕೀರ್ತಿಃ ॥**

*(ಭಾಗವತ ೧೦/೨೧/೫)*

ಈ ಎರಡು ಶ್ಲೋಕಗಳು ಕೇಳುತ್ತಲೇ ಶುಕರು ಭಗವಂತನ ಲೀಲಾಮೃತದಲ್ಲಿ ಮುಳುಗಿಹೋದರು ಹಾಗೂ ಈ ಗ್ರಂಥದ ಕಡೆಗೆ ಸೆಳೆಯಲ್ಪಟ್ಟರು. ಮತ್ತೆ ಪೂಜ್ಯರಾದ ತಂದೆಯಿಂದ ಈ ಗ್ರಂಥವನ್ನು ಪೂರ್ಣವಾಗಿ ಅಧ್ಯಯನಮಾಡಿದರು.

ಈ ಭಾಗವತ ಗ್ರಂಥರತ್ನದ ಭಾವಗಳನ್ನು ತಿಳಿದು-ಅರಿತುಕೊಂಡು ಮನನ-ಚಿಂತನೆ ಮಾಡುವುದರಿಂದ ಭಗವಂತನ ಕುರಿತು ಭಕ್ತಿಯು ಬೆಳೆಯುತ್ತಾ ಹೋಗುತ್ತದೆ. ಭಕ್ತನ ಉದ್ಧಾರದಲ್ಲಿ ಯಾವುದೇ ಶಂಕೆ ಇರುವುದಿಲ್ಲ. ಏಕೆಂದರೆ, ಭಕ್ತನ ಉದ್ಧಾರವನ್ನು ಸಾಕ್ಷಾತ್ ಭಗವಂತನೇ ಮಾಡುತ್ತಾನೆ. ಹೀಗೆ ಗೀತೆಯಲ್ಲಿ ಭಗವಂತನೇ ಹೇಳಿರುವನು –

**ತೇಷಾ ಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ । ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥** *(ಭಗವದ್ಗೀತೆ ೧೨/೭)*

ಆದ್ದರಿಂದ ಭಾಗವತದ ಮುಖ್ಯ-ಮುಖ್ಯ ಶ್ಲೋಕಗಳನ್ನು ಪದೇ-ಪದೇ ಓದುತ್ತಾ ಇರುವ ಅಭ್ಯಾಸವಿರಿಸಿಕೊಳ್ಳಬೇಕು. ಇದರಿಂದ ಭಗವತ್ಪ್ರಾಪ್ತಿಯಲ್ಲಿ ಬಹಳ ಸಹಾಯವಾಗುತ್ತದೆ. ಹೊಸ-ಹೊಸ ಭಾವಗಳು ಉಂಟಾಗುತ್ತವೆ. ಭಗವಂತನ ವಿಶೇಷಕೃಪೆಯ ಅನುಭವವಾಗತೊಡಗುತ್ತದೆ.

ತವಾಪ್ಯೇತರ್ಹಿ ಕೌರವ್ಯ ಸಪ್ತಾಹಂ ಜೀವಿತಾವಧಿಃ ।
ಉಪಕಲ್ಪಯ ತತ್ಸರ್ವಂ ತಾವದ್ಯತ್ಸಾಂಪರಾಯಿಕಮ್ ॥ ೧೪ ॥

ಅಂತಕಾಲೇ ತು ಪುರುಷ ಆಗತೇ ಗತಸಾಧ್ವಸಃ ।
ಛಿಂದ್ಯಾದಸಂಗಶಸ್ತ್ರೇಣ ಸ್ಪೃಹಾಂ ದೇಹೇಽನು ಯೇ ಚ ತಮ್ ॥ ೧೫ ॥

ಗೃಹಾತ್ಪ್ರವ್ರಜಿತೋ ಧೀರಃ ಪುಣ್ಯತೀರ್ಥಜಲಾಪ್ಲುತಃ ।
ಶುಚೌ ವಿವಿಕ್ತ ಆಸೀನೋ ವಿಧಿವತ್ಕಲ್ಪಿತಾಸನೇ ॥ ೧೬ ॥

ಅಭ್ಯಸೇನ್ಮನಸಾ ಶುದ್ಧಂ ತ್ರಿವೃದ್ಬ್ರಹ್ಮಾಕ್ಷರಂ ಪರಮ್ ।
ಮನೋ ಯಚ್ಛೇಜ್ಜಿತಶ್ವಾಸೋ ಬ್ರಹ್ಮಬೀಜಮವಿಸ್ಮರನ್ ॥ ೧೭ ॥

ನಿಯಚ್ಛೇದ್ವಿಷಯೇಭ್ಯೋಽಕ್ಷಾನ್ಮನಸಾ ಬುದ್ಧಿಸಾರಥಿಃ ।
ಮನಃ ಕರ್ಮಭಿರಾಕ್ಷಿಪ್ತಂ ಶುಭಾರ್ಥೇ ಧಾರಯೇದ್ಧಿಯಾ ॥ ೧೮ ॥

ತತ್ರೈಕಾವಯವಂ ಧ್ಯಾಯೇದವ್ಯುಚ್ಛಿನ್ನೇನ ಚೇತಸಾ ।
ಮನೋ ನಿರ್ವಿಷಯಂ ಯುಕ್ತ್ವಾ ತತಃ ಕಿಂಚನ ನ ಸ್ಮರೇತ್ ।
ಪದಂ ತತ್ಪರಮಂ ವಿಷ್ಣೋರ್ಮನೋ ಯತ್ರ ಪ್ರಸೀದತಿ ॥ ೧೯ ॥

ರಜಸ್ತಮೋಭ್ಯಾಮಾಕ್ಷಿಪ್ತಂ ವಿಮೂಢಂ ಮನ ಆತ್ಮನಃ ।
ಯಚ್ಛೇದ್ಧಾರಣಯಾ ಧೀರೋ ಹಂತಿ ಯಾ ತತ್ಕೃತಂ ಮಲಮ್ ॥ ೨೦ ॥

ಈಗಲಾದರೋ ನಿನ್ನ ಜೀವನದ ಅವಧಿ ಏಳುದಿನಗಳಿವೆ. ಅಷ್ಟರೊಳಗೆ ನೀನು ನಿನ್ನ ಪರಲೋಕವನ್ನು ಸುಧಾರಿಸಿ ಪರಮಪದವನ್ನು ಪಡೆಯುವಂತಹ ಉಪಾಯವನ್ನು ಮಾಡು. ॥ ೧೪ ॥

ಅಂತ್ಯಕಾಲ ಬಂದಾಗ ಮನುಷ್ಯನು ಏನು ಮಾಡಬೇಕು ? ಎಂದು ಕೇಳಿರುವೆಯಲ್ಲ? ಆಗ ಅವನು ಗಾಬರಿಗೊಳ್ಳಬಾರದು. ನಿರ್ಭಯನಾಗಿದ್ದು ವೈರಾಗ್ಯವೆಂಬ ಶಸ್ತ್ರದಿಂದ ಶರೀರದಲ್ಲಿ ಹಾಗೂ ಅದಕ್ಕೆ ಸಂಬಂಧಪಟ್ಟವರ ಕುರಿತೂ ಇರುವ ಮಮತೆಯನ್ನು ಕಡಿದುಹಾಕಬೇಕು. ಎಲ್ಲ ರೀತಿಯ ಸ್ಪೃಹೆಯನ್ನು ತ್ಯಾಗಮಾಡಿ ಏಕಮಾತ್ರ ಪರಮಾತ್ಮನಲ್ಲೇ ಮನಸ್ಸನ್ನು ತೊಡಗಿಸ ಬೇಕು. ॥ ೧೫ ॥ ಧೈರ್ಯವಾಗಿ ಮನೆಯನ್ನು ಬಿಟ್ಟು ಪುಣ್ಯತೀರ್ಥದಲ್ಲಿ ಸ್ನಾನಮಾಡಿ, ಪವಿತ್ರವೂ, ಏಕಾಂತವೂ ಆದ ಸ್ಥಾನದಲ್ಲಿ ವಿಧಿಪೂರ್ವಕ ಆಸನವನ್ನು ಹಾಕಿ ಕುಳಿತುಕೊಳ್ಳಬೇಕು. ಹಾಗೂ ಧ್ಯಾನದಲ್ಲಿ ಮಗ್ನನಾಗಬೇಕು. ॥ ೧೬ ॥ ಅನಂತರ ಅಕಾರ, ಉಕಾರ, ಮಕಾರಗಳೆಂಬ ಮೂರು ಮಾತ್ರೆಗಳಿಂದ ಕೂಡಿದ ಪರಮಪವಿತ್ರವಾದ ಓಂಕಾರವನ್ನು ಮನಸ್ಸಿನಲ್ಲೇ ಜಪಿಸಬೇಕು. ಪ್ರಾಣವಾಯುವನ್ನು ವಶಪಡಿಸಿಕೊಂಡು ಬ್ರಹ್ಮಬೀಜ ಪ್ರಣವವನ್ನು ಕಿಂಚಿತ್ತಾದರೂ ಮರೆಯದೆ ಮನಸ್ಸನ್ನು ನಿಗ್ರಹ ಮಾಡಿ ನಿರಂತರವಾಗಿ ಪರಮಾತ್ಮನ ನಾಮಜಪವನ್ನು ಮಾಡಬೇಕು. ॥ ೧೭ ॥ ಶುದ್ಧಬುದ್ಧಿಯ ಸಹಾಯದಿಂದ ಮನಸ್ಸಿನ ಮೂಲಕ ಇಂದ್ರಿಯಗಳನ್ನು ವಿಷಯಗಳಿಂದ ಹಿಮ್ಮೆಟ್ಟಿಸಬೇಕು. ಕರ್ಮದ ವಾಸನೆಯಿಂದ ಉಂಟಾದ ಚಂಚಲ ಮನಸ್ಸನ್ನು ವಿಚಾರದ ಮೂಲಕ ಸಮಜಾಯಿಸಿ ಮನಸ್ಸಿನ ಅಮನೀ* ಭಾವವನ್ನು ಹೊಂದಬೇಕು. ಮನಸ್ಸು ಶಾಂತವಾಗುತ್ತಲೇ ಬುದ್ಧಿಯ ಸಹಾಯದಿಂದ ಪರಮಾತ್ಮನ ಸ್ವರೂಪವನ್ನು ಚಿಂತಿಸುವ ಅಭ್ಯಾಸಮಾಡಬೇಕು. ಹೀಗೆ ಪುನಃ ಪುನಃ ಅಭ್ಯಾಸ ಮಾಡುತ್ತಿರುವುದರಿಂದ ಮನಸ್ಸು ಪರಮಾತ್ಮನ ಚಿಂತನದಲ್ಲಿ ತೊಡಗುತ್ತದೆ ಹಾಗೂ ಭಗವದ್ಭಕ್ತಿಯ ಪ್ರಭಾವದಿಂದ ಶುದ್ಧ ಬುದ್ಧಿಯಲ್ಲಿ ಪರಬ್ರಹ್ಮ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ. ॥ ೧೮ ॥ ಆ ದಿವ್ಯ ಮಂಗಳವಿಗ್ರಹದಲ್ಲಿ ಯಾವುದಾದರೂ ಒಂದು ಅವಯವವನ್ನು ಸ್ಥಿರವಾದ ಚಿತ್ತದಿಂದ ಚೆನ್ನಾಗಿ ಧ್ಯಾನಿಸಬೇಕು. ಹೀಗೆ ಒಂದೊಂದೇ ಅವಯವವನ್ನು ಧ್ಯಾನಮಾಡುತ್ತಾ-ಮಾಡುತ್ತಾ ವಿಷಯವಾಸನಾ ರಹಿತವಾದ ಮನಸ್ಸನ್ನು ಮತ್ತೆ ಯಾವ ವಿಷಯದ ಕುರಿತು ಚಿಂತಿಸದಂತೆ ಪೂರ್ಣವಾಗಿ ಭಗವಂತನಲ್ಲಿ ತಲ್ಲೀನಗೊಳಿಸಬೇಕು. ಅದೇ ವಿಷ್ಣುವಿನ ಪರಮಪದವು. ಅದನ್ನು ಪಡೆದರೇನೇ ಮನಸ್ಸು ಪರಮಾನಂದಭರಿತವಾಗಿ ಪ್ರಸನ್ನವಾಗುವುದು. ॥ ೧೯ ॥ ಹಾಗೆ ಭಗವಂತನ ಧ್ಯಾನಮಾಡುವಾಗ ಮನಸ್ಸು ರಜೋಗುಣದಿಂದ ಚಂಚಲವಾದರೆ, ಅಥವಾ ತಮೋಗುಣದಿಂದ ಮೂಢವಾದರೆ ಆಗ ಗಾಬರಿಪಡಬಾರದು. ಧೈರ್ಯದೊಂದಿಗೆ ಯೋಗಧಾರಣೆಯಿಂದ ಅದನ್ನು ವಶಪಡಿಸಿಕೊಳ್ಳಬೇಕು. ಅದರಿಂದ ಅವನ ಮಲ,

* ಅಮನೀಭಾವದ ತಾತ್ಪರ್ಯ – ಮನಸ್ಸಿಗೆ ಪದೇ-ಪದೇ ಕೇಳಿರಿ, ಎಲೈ ಮನಸ್ಸೆ ನಿನಗೇನು ಬೇಕು ? ನನಗೇನೂ ಬೇಡ ಎಂಬ ಉತ್ತರ ಹೇಳಬೇಕು. ಹೀಗೆ ಮೇಲಿಂದ ಮೇಲೆ ಕೇಳುತ್ತಾ ಇರುವುದರಿಂದ ಮನಸ್ಸಿನ ಸಂಕಲ್ಪ-ವಿಕಲ್ಪಗಳ ವೃತ್ತಿಗಳು ನಿಧಾನವಾಗಿ ನಿಂತುಹೋಗುತ್ತದೆ. ಇದಕ್ಕೆ ಅಮನೀಭಾವವೆಂದು ಹೇಳುತ್ತಾರೆ. ಮನಸ್ಸೇ ಇಂದ್ರಿಯಗಳನ್ನು ಕ್ಷುಬ್ಧಗೊಳಿಸುತ್ತದೆ. ಅದೇ ಅಮನೀಭಾವ ಪಡೆದಿದ್ದರಿಂದ ಇತರ ಇಂದ್ರಿಯಗಳ ಮೇಲೆ ಸುಲಭವಾಗಿ ಹತೋಟಿ ಬಂದುಬಿಡುತ್ತದೆ.

**ಯಸ್ಯಾಂ ಸಂಧಾರ್ಯಮಾಣಾಯಾಂ ಯೋಗಿನೋ ಭಕ್ತಿಲಕ್ಷಣಃ ।**
**ಆಶು ಸಂಪದ್ಯತೇ ಯೋಗ ಆಶ್ರಯಂ ಭದ್ರಮೀಕ್ಷತಃ ॥ ೨೧ ॥**

ರಾಜೋವಾಚ

**ಯಥಾ ಸಂಧಾರ್ಯತೇ ಬ್ರಹ್ಮನ್ ಧಾರಣಾ ಯತ್ರ ಸಮ್ಮತಾ ।**
**ಯಾದೃಶೀ ವಾ ಹರೇದಾಶು ಪುರುಷಸ್ಯ ಮನೋಮಲಮ್ ॥ ೨೨ ॥**

ಶ್ರೀಶುಕ ಉವಾಚ

**ಜಿತಾಸನೋ ಜಿತಶ್ವಾಸೋ ಜಿತಸಂಗೋ ಜಿತೇಂದ್ರಿಯಃ ।**
**ಸ್ಥೂಲೇ ಭಗವತೋ ರೂಪೇ ಮನಃ ಸಂಧಾರಯೇದ್ಧಿಯಾ ॥ ೨೩ ॥**

**ವಿಶೇಷಸ್ತಸ್ಯ ದೇಹೋಽಯಂ ಸ್ಥವಿಷ್ಠಶ್ಚ ಸ್ಥವೀಯಸಾಮ್ ।**
**ಯತ್ರೇದಂ ದೃಶ್ಯತೇ ವಿಶ್ವಂ ಭೂತಂ ಭವ್ಯಂ ಭವಚ್ಚ ಸತ್ ॥ ೨೪ ॥**

**ಅಂಡಕೋಶೇ ಶರೀರೇಽಸ್ಮಿನ್ಸಪ್ತಾವರಣಸಂಯುತೇ ।**
**ವೈರಾಜಃ ಪುರುಷೋ ಯೋಽಸೌ ಭಗವಾನ್ ಧಾರಣಾಶ್ರಯಃ ॥ ೨೫ ॥**

**ಪಾತಾಲಮೇತಸ್ಯ ಹಿ ಪಾದಮೂಲಂ**
**ಪಠಂತಿ ಪಾರ್ಷ್ಣಿಪ್ರಪದೇ ರಸಾತಲಮ್ ।**
**ಮಹಾತಲಂ ವಿಶ್ವಸೃಜೋಽಥ ಗುಲ್ಫೌ**
**ತಲಾತಲಂ ವೈ ಪುರುಷಸ್ಯ ಜಂಘೇ ॥ ೨೬ ॥**

**ದ್ವೇ ಜಾನುನೀ ಸುತಲಂ ವಿಶ್ವಮೂರ್ತೇ-**
**ರೂರುದ್ವಯಂ ವಿತಲಂ ಚಾತಲಂ ಚ ।**
**ಮಹೀತಲಂ ತಜ್ಜಘನಂ ಮಹೀಪತೇ**
**ನಭಸ್ತಲಂ ನಾಭಿಸರೋ ಗೃಣಂತಿ ॥ ೨೭ ॥**

ವಿಕ್ಷೇಪ, ಆವರಣರೂಪವಾದ ಮೂರೂ ಮಲಗಳು ತೊರೆದು ಮನಸ್ಸು ನಿರ್ಮಲವಾಗುವುದು. ಆಗ ಪರಮಾತ್ಮನ ಚಿಂತನೆಯು ಸಹಜವಾಗಿ ಆಗತೊಡಗುತ್ತದೆ. ॥ ೨೦ ॥ ಧಾರಣೆಯಿಂದ ಸ್ಥಿರನಾದ ಯೋಗಿಯು ಧ್ಯಾನದಿಂದ ತನ್ನ ಪರಮ ಮಂಗಲಮಯ ಆಶ್ರಯನಾದ ಭಗವಂತನನ್ನು ನೋಡುತ್ತಿದ್ದರೆ ಶೀಘ್ರವಾಗಿ ಅವನಿಗೆ ಭಕ್ತಿಯೋಗವು ಸಿದ್ಧಿಸುವುದು." ॥ ೨೧ ॥

**ಪರೀಕ್ಷಿತನು ಕೇಳಿದನು** – ಬ್ರಹ್ಮರ್ಷಿಯೇ! ಈ ಧಾರಣೆಯನ್ನು ಯಾವ ಸಾಧನೆಯಿಂದ, ಯಾವ ವಸ್ತುವಿನಲ್ಲಿ ಹೇಗೆ ಮಾಡಲಾಗುತ್ತದೆ. ಮನುಷ್ಯನ ಮನೋಮಲವನ್ನು ಶೀಘ್ರವಾಗಿ ನಾಶಪಡಿಸುವ ಈ ಧಾರಣೆಯ ಸ್ವರೂಪವೇನು? ದಯಮಾಡಿ ಅಪ್ಪಣೆ ಕೊಡಿಸಬೇಕು. ॥ ೨೨ ॥

**ಶ್ರೀಶುಕಯೋಗಿಗಳು ಹೇಳುತ್ತಾರೆ** – ಮಹಾರಾಜಾ! ಮೊಟ್ಟ ಮೊದಲಿಗೆ ಆಸನವನ್ನು ಸ್ಥಿರಗೊಳಿಸಬೇಕು. ಮತ್ತೆ ಪ್ರಾಣಾಯಾಮದ ಮೂಲಕ ಇಂದ್ರಿಯಗಳನ್ನು ಜಯಿಸಿ, ಎಲ್ಲಿಯೂ ಆಸಕ್ತಿಯನ್ನು ಇಡಬಾರದು. ಹೀಗಾದ ಬಳಿಕ ಇರುವ ದೃಶ್ಯವರ್ಗವನ್ನು ಭಗವಂತನದೇ ಸ್ಥೂಲ ವಿರಾಟ್ ಶರೀರವೆಂದು ಭಾವಿಸಿ, ಇದನ್ನೇ ಬ್ರಹ್ಮವೆಂದು ತಿಳಿಯಬೇಕು. ಸಮಗ್ರ ವಿಶ್ವವು ಇದೇ ನಿರ್ಗುಣ-ನಿರಾಕಾರ ಪರಮಾತ್ಮನ ಸಗುಣ-ಸಾಕಾರ ವಿಗ್ರಹವಾಗಿದೆ ಎಂದು ಧಾರಣೆ ಮಾಡಬೇಕು. ಹೀಗೆ ಭಾವಿಸಿ ಸರ್ವತ್ರ ಬ್ರಹ್ಮನನ್ನೇ ನೋಡಬೇಕು. ॥ ೨೩॥ ವಿಶೇಷ ರೂಪದಿಂದ ಕಂಡುಬರುವ ಹಿಂದೆ ಇದ್ದ, ಈಗ ಇರುವ, ಮುಂದೆ ಇರಬಹುದಾದ ಈ ವಿಶ್ವವು ಅತ್ಯಂತ ದೊಡ್ಡದಾದ ಪರಮಾತ್ಮನ ಸ್ಥೂಲದೇಹವಾಗಿದೆ ಎಂದು ಭಾವಿಸಬೇಕು. ಎಲ್ಲ ಕಾಲಗಳಲ್ಲಿ ಇರುವ ಇದೊಂದು ಪರಮಾತ್ಮನ ಸ್ಥೂಲ ರೂಪವಾಗಿದೆ. ಆ ನಿರ್ಗುಣ-ನಿರಾಕಾರ ಪರಬ್ರಹ್ಮ ಪರಮಾತ್ಮನು ತನ್ನ ಸಂಕಲ್ಪದಿಂದಲೇ ತನ್ನಲ್ಲೇ ಸೃಷ್ಟಿಯನ್ನು ನಿರ್ಮಿಸಿದನು ಮತ್ತು ಅವನೇ ಈ ರೂಪನಾಗಿ ಅನೇಕ ರೂಪಗಳಲ್ಲಿ ಪ್ರಕಾಶಿತನಾಗುತ್ತಿದ್ದಾನೆ ಎಂದು ಭಾವಿಸಬೇಕು. ಹೀಗೆ ಭಾವಿಸಿ ಸರ್ವತ್ರ ಬ್ರಹ್ಮವೊಂದನ್ನೇ ನೋಡಬೇಕು. ॥ ೨೪ ॥ ಜಲ, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ ಮತ್ತು ಪ್ರಕೃತಿ ಹೀಗೆ ಏಳು ಆವರಣಗಳಿಂದ ಸುತ್ತುವರಿಯಲ್ಪಟ್ಟ ಈ ಬ್ರಹ್ಮಾಂಡವೆಂಬ ಶರೀರದಲ್ಲಿ ಇರುವ ವಿರಾಟ್‌ಪುರುಷನನ್ನು ವೈರಾಜನೆಂಬ ಹೆಸರಿನಿಂದ ಹೇಳಲಾಗಿದೆ. (**'ವಿವಿಧಂ ರಾಜತೇ ಶೋಭತೇ ಇತಿ ವಿರಾಟ್'** ಅರ್ಥಾತ್ ಆ ಪರಮಾತ್ಮನೇ ಅನೇಕ ರೂಪಗಳಲ್ಲಿ ವಿಲಸಿತನಾಗಿದ್ದಾನೆ.) ಈ ಭಾವನೆಯಿಂದ ಈ ವಿಶ್ವವನ್ನು ಭಗವಂತನದೇ ಸ್ಥೂಲ ವಿರಾಟ್‌ರೂಪವೆಂದು ತಿಳಿದು ಸರ್ವತ್ರ ಭಗವಂತನನ್ನೇ ಈ ಪ್ರಕಾರದಿಂದ ಧಾರಣೆ ಮಾಡಬೇಕು. ॥ ೨೫ ॥ ತತ್ತ್ವಜ್ಞರಾದವರು ಅವನನ್ನು ಹೀಗೆ ವರ್ಣಿಸುತ್ತಾರೆ – ಪಾತಾಳವು ಆ ವಿರಾಟ್ ಪುರುಷನ ಪಾದಮೂಲವು. ಆತನ ಹಿಮ್ಮಡಿ ಮತ್ತು ತುದಿಗಾಲುಗಳು ರಸಾತಲವು. ಆತನ ಎರಡೂ ಹರಡುಗಳು ಮಹಾತಲ ಲೋಕವು. ತಲಾತಲವು ಆ ವಿರಾಟ್‌ಪುರುಷನ ಮೊಣಕಾಲುಗಳು. ॥ ೨೬ ॥ ಆ ವಿಶ್ವಮೂರ್ತಿಯ ಎರಡು ಮಂಡಿಗಳೇ ಸುತಲ ಲೋಕವು. ವಿತಲ ಮತ್ತು ಅತಲಲೋಕಗಳು ಅವನ ಎರಡು ತೊಡೆಗಳು. ಭೂತಲವು ಸೊಂಟದ ಮುಂಭಾಗವಾಗಿದೆ. ಮಹಾರಾಜಾ! ಆತನ ಹೊಕ್ಕುಳೇ ಭುವರ್ಲೋಕ (ಅಂತರಿಕ್ಷ). ॥ ೨೭ ॥ ಆದಿ

ಉರಃಸ್ಥಲಂ ಜ್ಯೋತಿರನೀಕಮಸ್ಯ
ಗ್ರೀವಾ ಮಹರ್ವದನಂ ವೈ ಜನೋಽಸ್ಯ ।
ತಪೋ ರರಾಟೀಂ ವಿದುರಾದಿಪುಂಸಃ
ಸತ್ಯಂ ತು ಶೀರ್ಷಾಣಿ ಸಹಸ್ರಶೀರ್ಷ್ಣಃ ॥ ೨೮ ॥

ಇಂದ್ರಾದಯೋ ಬಾಹವ ಆಹುರುಸ್ರಾಃ
ಕರ್ಣೌ ದಿಶಃ ಶ್ರೋತ್ರಮಮುಷ್ಯ ಶಬ್ದಃ ।
ನಾಸತ್ಯದಸ್ರೌ ಪರಮಸ್ಯ ನಾಸೇ
ಘ್ರಾಣೋಽಸ್ಯ ಗಂಧೋ ಮುಖಮಗ್ನಿರಿದ್ಧಃ ॥ ೨೯ ॥

ದ್ಯೌ ರಕ್ಷಿಣೀ ಚಕ್ಷುರಭೂತ್ಪತಂಗಃ
ಪಕ್ಷ್ಮಾಣಿ ವಿಷ್ಣೋರಹನೀ ಉಭೇ ಚ ।
ತದ್ಭ್ರೂವಿಜೃಂಭಃ ಪರಮೇಷ್ಠಿಧಿಷ್ಣ್ಯ-
ಮಾಪೋಽಸ್ಯ ತಾಲೂ ರಸ ಏವ ಜಿಹ್ವಾ ॥ ೩೦ ॥

ಛಂದಾಂಸ್ಯನಂತಸ್ಯ ಶಿರೋ ಗೃಣಂತಿ
ದಂಷ್ಟ್ರಾ ಯಮಃ ಸ್ನೇಹಕಲಾ ದ್ವಿಜಾನಿ ।
ಹಾಸೋ ಜನೋನ್ಮಾದಕರೀ ಚ ಮಾಯಾ
ದುರಂತಸರ್ಗೋ ಯದಪಾಂಗಮೋಕ್ಷಃ ॥ ೩೧ ॥

ವ್ರೀಡೋತ್ತರೋಷ್ಠೋಽಧರ ಏವ ಲೋಭೋ
ಧರ್ಮಃ ಸ್ತನೋಽಧರ್ಮಪಥೋಽಸ್ಯ ಪೃಷ್ಠಮ್ ।
ಕಸ್ತಸ್ಯ ಮೇಢ್ರಂ ವೃಷಣೌ ಚ ಮಿತ್ರೌ
ಕುಕ್ಷಿಃ ಸಮುದ್ರಾ ಗಿರಯೋಽಸ್ಥಿಸಂಘಾಃ ॥ ೩೨ ॥

ನದ್ಯೋಽಸ್ಯ ನಾಡ್ಯೋಽಥ ತನೂರುಹಾಣಿ
ಮಹೀರುಹಾ ವಿಶ್ವತನೋರ್ನೃಪೇಂದ್ರ ।
ಅನಂತ ವೀರ್ಯಃ ಶ್ವಸಿತಂ ಮಾತರಿಶ್ವಾ
ಗತಿರ್ವಯಃ ಕರ್ಮ ಗುಣಪ್ರವಾಹಃ ॥ ೩೩ ॥

ಈಶಸ್ಯ ಕೇಶಾನ್ವಿದುರಂಬುವಾಹಾನ್
ವಾಸಸ್ತು ಸಂಧ್ಯಾಂ ಕುರುವರ್ಯ ಭೂಮ್ನಃ ।
ಅವ್ಯಕ್ತ ಮಾಹುರ್ಹೃದಯಂ ಮನಶ್ಚ
ಸ ಚಂದ್ರಮಾಃ ಸರ್ವವಿಕಾರಕೋಶಃ ॥ ೩೪ ॥

ವಿಜ್ಞಾನಶಕ್ತಿಂ ಮಹಿಮಾಮನಂತಿ
ಸರ್ವಾತ್ಮನೋಽಂತಃಕರಣಂ ಗಿರಿತ್ರಮ್ ।
ಅಶ್ವಾಶ್ವತರ್ಯುಷ್ಟ್ರ ಗಜಾ ನಖಾನಿ
ಸರ್ವೇ ಮೃಗಾಃ ಪಶವಃ ಶ್ರೋಣಿದೇಶೇ ॥ ೩೫ ॥

ವಯಾಂಸಿ ತದ್ವ್ಯಾಕರಣಂ ವಿಚಿತ್ರಂ
ಮನುರ್ಮನೀಷಾ ಮನುಜೋ ನಿವಾಸಃ ।
ಗಂಧರ್ವವಿದ್ಯಾಧರಚಾರಣಾಪ್ಸರಃ-
ಸ್ವರಸ್ಮೃತೀರಸುರಾನೀಕವೀರ್ಯಃ ॥ ೩೬ ॥

ಪುರುಷನಾದ ಆ ಪರಮಾತ್ಮನ ಎದೆಯನ್ನು ಸ್ವರ್ಗಲೋಕವೆಂದೂ, ಕತ್ತನ್ನು ಮಹರ್ಲೋಕವೆಂದೂ, ಮುಖವನ್ನು ಜನೋಲೋಕವೆಂದೂ, ಹಣೆಯನ್ನು ತಪೋಲೋಕವೆಂದೂ ಹೇಳುತ್ತಾರೆ. ಆ ಸಾವಿರ ತಲೆಗಳುಳ್ಳ ಪುರುಷನ ಶಿರಸ್ಸುಗಳ ಸಮೂಹವೇ ಸತ್ಯಲೋಕವು. ॥ ೨೮ ॥ ಇಂದ್ರಾದಿ ದೇವತೆಗಳು ಆತನ ಭುಜಗಳು, ಆತನಿಗೆ ದಿಕ್ಕುಗಳೇ ಕಿವಿಗಳು. ಶಬ್ದವೇ ಶ್ರವಣೇಂದ್ರಿಯಗಳು. ಅಶ್ವಿನೀದೇವತೆಗಳೇ ಪರಮಪುರುಷನ ಮೂಗುಹೊಳ್ಳೆಗಳು. ಗಂಧವು ಆತನ ಘ್ರಾಣೇಂದ್ರಿಯವು. ಉರಿಯುತ್ತಿರುವ ಅಗ್ನಿಯೇ ಆತನ ಮುಖ. ॥ ೨೯ ॥ ದ್ಯುಲೋಕವು ಆ ಮಹಾವಿಷ್ಣುವಿನ ನೇತ್ರಗಳು. ಅವುಗಳಲ್ಲಿ ನೋಡುವ ಶಕ್ತಿಯೇ ಸೂರ್ಯನು. ಎರಡು ರೆಪ್ಪೆಗಳೇ ಹಗಲು-ರಾತ್ರಿಗಳು. ಆತನ ಹುಬ್ಬುಗಳ ವಿಲಾಸವೇ ಬ್ರಹ್ಮಲೋಕವು. ನೀರು ಆತನ ದವಡೆಗಳು. ರಸವೇ ಆತನ ನಾಲಿಗೆಯೆಂದು ತಿಳಿಯಬೇಕು. ॥ ೩೦ ॥ ವೇದಗಳನ್ನು ಆ ಅನಂತನ ಬ್ರಹ್ಮರಂಧ್ರಸ್ಥಾನವೆಂದು ಹೇಳುತ್ತಾರೆ. ಆತನ ಕೋರೆದಾಡೆಯು ಯಮರಾಜನು. ಎಲ್ಲ ಬಗೆಯ ಸ್ನೇಹರೂಪವಾದ ಕಲೆಗಳು ಅರ್ಥಾತ್ ಪ್ರೇಮ ಮತ್ತು ಮುಕ್ತಿಯ ವಿತರಣಕೇಂದ್ರವೇ ಆತನ ದಂತಗಳು ಮತ್ತು ಜಗತ್ತನ್ನು ಮೋಹಗೊಳಿಸುವ ಮಾಯೆಯು ಆತನ ಮುಗುಳ್ನಗೆಯು. ಈ ಅನಂತವಾದ ಸೃಷ್ಟಿಯು ಆತನ ಕಡೆಗಣ್ಣನೋಟವು. ॥ ೩೧ ॥ ಲಜ್ಜೆಯು ಅವನ ಮೇಲ್ತುಟಿ, ಆತನ ಕೆಳದುಟಿಯೇ ಲೋಭವು. ಧರ್ಮವು ಸ್ತನಗಳು, ಅಧರ್ಮವು ಬೆನ್ನು, ಪ್ರಜಾಪತಿಯೇ ಆತನ ಜನನೇಂದ್ರಿಯವು. ಮಿತ್ರಾವರುಣರೇ ವೃಷಣಗಳು. ಸಮುದ್ರಗಳು ಆತನ ಹೊಟ್ಟೆ, ಪರ್ವತಗಳು ಮೂಳೆಗಳು. ॥ ೩೨ ॥ ರಾಜೇಂದ್ರನೇ! ವಿಶ್ವಮೂರ್ತಿಯಾದ ಆ ವಿರಾಟಪುರುಷನ ನಾಡಿಗಳೇ ನದಿಗಳು. ಮೈಗೂದಲುಗಳೇ ವೃಕ್ಷಗಳು. ಅನಂತಬಲಸಂಪನ್ನನಾದ ವಾಯುವೇ ಆತನ ಉಸಿರು. ಕಾಲವು ಅವನ ನಡಿಗೆ, ಗುಣಗಳ ಹರಿದಾಟವೇ ಅವನ ಕರ್ಮವು. ॥ ೩೩ ॥ ಪರೀಕ್ಷಿತನೇ! ಮೋಡಗಳನ್ನು ಅವನ ಕೇಶಗಳೆಂದು ಹೇಳುತ್ತಾರೆ. ಸಂಧ್ಯೆಯು ಆ ಅನಂತನ ವಸ್ತ್ರವು. ಅವ್ಯಕ್ತ(ಮೂಲಪ್ರಕೃತಿ)ವನ್ನು ಅವನ ಹೃದಯವೆಂದು ಹೇಳುತ್ತಾರೆ. ಎಲ್ಲ ವಿಕಾರಗಳ ಕೋಶವಾದ ಮನಸ್ಸೇ ಚಂದ್ರನು. ॥ ೩೪॥ ಮಹತ್ತತ್ತ್ವವನ್ನು ಆ ಸರ್ವಾತ್ಮಕನಾದ ಸ್ವಾಮಿಯ ಚಿತ್ತವೆನ್ನುತ್ತಾರೆ. ರುದ್ರದೇವರನ್ನು ಅಹಂಕಾರವೆನ್ನುತ್ತಾರೆ. ಕುದುರೆ, ಹೇಸರಗತ್ತೆ, ಒಂಟೆ, ಆನೆಗಳು ಅವನ ಉಗುರುಗಳು. ಅರಣ್ಯವಾಸಿಗಳಾದ ಎಲ್ಲ ಮೃಗಗಳೂ ಆತನ ನಡುವಿನಲ್ಲಿವೆ. ॥ ೩೫ ॥ ಬಗೆ-ಬಗೆಯ ಪಕ್ಷಿಗಳು ಆತನ ಅದ್ಭುತವಾದ ರಚನಾಕೌಶಲ್ಯ, ಸ್ವಾಯಂಭುವ ಮನುವೇ ಆತನ ಬುದ್ಧಿಯು. ಮನುವಿನ ಸಂತಾನವಾದ ಮನುಷ್ಯರೇ ಅವನ ವಾಸಸ್ಥಾನ. ಗಂಧರ್ವರು, ವಿದ್ಯಾಧರರು, ಚಾರಣರು, ಅಪ್ಸರಾಸ್ತ್ರೀಯರು ಅವನ ಷಡ್ಜವೇ ಮುಂತಾದ ಸಪ್ತಸ್ವರಗಳ ಸ್ಮೃತಿಗಳು. ದೈತ್ಯರ ಸೇನೆಯೇ ಆತನ ವೀರ್ಯವು. ॥ ೩೬ ॥ ಆತನಿಗೆ ಬ್ರಾಹ್ಮಣರು ಮುಖ, ಕ್ಷತ್ರಿಯರು ಭುಜಗಳು, ವೈಶ್ಯರು ತೊಡೆಗಳು, ಶೂದ್ರರು ಕಾಲುಗಳು. ಇಂದ್ರ, ವರುಣ, ಕುಬೇರ ಮುಂತಾದ ದೇವತೆಗಳನ್ನು ಉದ್ದೇಶಿಸಿ ಯಜ್ಞಮಾಡುತ್ತಾರೆ. ಆ ದೇವತಾರೂಪನೂ ಅವನೇ. ದೇವತೆಗಳಿಂದ ಸಂಪನ್ನವಾಗುವ ಯಜ್ಞ

ಬ್ರಹ್ಮಾನನಂ ಕ್ಷತ್ರಭುಜೋ ಮಹಾತ್ಮಾ
ವಿಡೂರುರಂಘ್ರಿಶ್ರಿತಕೃಷ್ಣವರ್ಣಃ ।
ನಾನಾಭಿಧಾಭೀಜ್ಯಗಣೋಪಪನ್ನೋ
ದ್ರವ್ಯಾತ್ಮಕಃ ಕರ್ಮ ವಿತಾನಯೋಗಃ ॥ ೩೭ ॥

ಇಯಾನಸಾವೀಶ್ವರವಿಗ್ರಹಸ್ಯ
ಯಃ ಸನ್ನಿವೇಶಃ ಕಥಿತೋ ಮಯಾ ತೇ ।
ಸಂಧಾರ್ಯತೇಽಸ್ಮಿನ್ವಪುಷಿ ಸ್ಥವಿಷ್ಠೇ
ಮನಃ ಸ್ವಬುದ್ಧ್ಯಾ ನ ಯತೋಽಸ್ತಿ ಕಿಂಚಿತ್ ॥ ೩೮ ॥

ಸ ಸರ್ವಧೀವೃತ್ತ್ಯನುಭೂತಸರ್ವ
ಆತ್ಮಾ ಯಥಾ ಸ್ವಪ್ನಜನೇಕ್ಷಿತೈಕಃ ।
ತಂ ಸತ್ಯಮಾನಂದನಿಧಿಂ ಭಜೇತ
ನಾನ್ಯತ್ರ ಸಜ್ಜೇದ್ಯತ ಆತ್ಮಪಾತಃ ॥ ೩೯ ॥

ಕ್ರಿಯೆಯೂ ಅವನೇ. ಯಜ್ಞಗಳಿಂದ ದೊರೆಯುವ ವಸ್ತುವೂ ಪರಮಾತ್ಮನೇ. (ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್। ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥) (ಭಗವದ್ಗೀತೆ ೪/೨೪). ॥ ೩೭॥ ಪ್ರಿಯ ಪರೀಕ್ಷಿತನೇ! ಭಗವಂತನ ಈ ವಿರಾಟ್‌ಸ್ವರೂಪವನ್ನು ನಾನು ನಿನಗೆ ವರ್ಣಿಸಿದೆ. ಈ ವಿರಾಟ್ ಬ್ರಹ್ಮಾಂಡವು ಆ ಪರಮಾತ್ಮನದೇ ಸ್ಥೂಲರೂಪವಾಗಿದೆ. ಇದರಲ್ಲಿ ಬೇರೆ-ಬೇರೆಯಾಗಿ ಭಗವಂತನ ಅವಯವಗಳನ್ನು ಕಲ್ಪಿಸಿ, ಭಗವಂತನ ಸಗುಣರೂಪವನ್ನು ನೋಡಬೇಕು. ಅವನ ವಿಶ್ವ ನಿರ್ಮಾಣದ ಕಲಾಕೌಶಲ್ಯವನ್ನು ಅರಿಯುತ್ತಾ ಭಗವಂತನ ಆಶ್ಚರ್ಯಮಯ ಲೀಲೆಗಳನ್ನು ದರ್ಶಿಸುತ್ತಾ ಚಿಂತಿಸಬೇಕು. ಹೀಗೆ ಚಿಂತಿಸುತ್ತಾ-ಚಿಂತಿಸುತ್ತಾ ಬುದ್ಧಿಯ ಮೂಲಕ ಮನಸ್ಸಿನಲ್ಲಿ – ಪರಮಾತ್ಮನೊಬ್ಬನಲ್ಲದೆ ಬೇರೆ ಏನೂ ಇಲ್ಲ ಎಂಬ ನಿಶ್ಚಯವನ್ನು ಧರಿಸಿಕೊಳ್ಳಬೇಕು. ಅವನೇ ಲೀಲೆಯಿಂದ ಇಷ್ಟು ರೂಪಗಳನ್ನು ತನ್ನಲ್ಲಿ ಕಲ್ಪಿಸಿರುವನು. ॥ ೩೮ ॥

ಆ ಪರಮಾತ್ಮನೇ ಸಮಸ್ತ ಪ್ರಾಣಿಗಳ ಬುದ್ಧಿಯೇ ಮುಂತಾದ ವೃತ್ತಿಗಳಿಂದ ಎಲ್ಲ ಪದಾರ್ಥಗಳನ್ನು ಹಾಗೂ ವಿಷಯಗಳನ್ನು ಅನುಭವಿಸುತ್ತಾನೆ. ಅವನೇ ಎಲ್ಲರ ಆತ್ಮನಾಗಿದ್ದಾನೆ. ಅವನು ಏಕನೂ, ಅದ್ವಿತೀಯನೂ ಆಗಿರುವನು. ಸ್ವಪ್ನವನ್ನು ಕಾಣುವವನು ತನ್ನೊಳಗೆಯೇ ಸ್ವಪ್ನಜಗತ್ತಿನಲ್ಲಿ ತಾನೂ ಸೇರಿ ಎಲ್ಲರೀತಿಯ ಪದಾರ್ಥಗಳನ್ನು ಕಲ್ಪಿಸುತ್ತಾನೆ. ಹಾಗೆಯೇ ಪರಮಾತ್ಮನೂ ಈ ಜಗತ್ತನ್ನು ತನ್ನಲ್ಲಿ ಕಲ್ಪಿಸಿಕೊಳ್ಳುವನು. ಪರಮಾತ್ಮನು ವಾಸ್ತವವಾಗಿ ಸತ್ಯಸ್ವರೂಪನಾಗಿದ್ದಾನೆ. ಆನಂದದ ಅಪಾರ ಸಮುದ್ರನಾಗಿದ್ದಾನೆ. ಅವನನ್ನೇ ಭಜಿಸಬೇಕು. ಸಾಂಸಾರಿಕ ವಿಷಯಗಳಲ್ಲಿ ರಮಿಸ ಬಾರದು. ಏಕೆಂದರೆ, ಅದರಲ್ಲಿನ ಆಸಕ್ತಿಯೇ ಪತನದ ಕಾರಣವಾಗಿದೆ. ಭಗವಂತನ ಭಕ್ತಿ ಮಾಡುವುದರಲ್ಲೇ ಜೀವಿಯ ಕಲ್ಯಾಣವಿದೆ. ॥ ೩೯ ॥

*ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ಮಹಾಪುರುಷಸಂಸ್ಥಾನುವರ್ಣನಂ ನಾಮ ಪ್ರಥಮೋಽಧ್ಯಾಯಃ ॥ ೧ ॥**

# ಎರಡನೆಯ ಅಧ್ಯಾಯ

## ಶ್ರೀಭಗವಂತನ ಸ್ಥೂಲ ಮತ್ತು ಸೂಕ್ಷ್ಮರೂಪಗಳ ಧಾರಣಾಯೋಗ ಹಾಗೂ ಕ್ರಮಮುಕ್ತಿ ಮತ್ತು ಸದ್ಯೋಮುಕ್ತಿಯ ವರ್ಣನೆ

*ಶ್ರೀಶುಕ ಉವಾಚ*

ಏವಂ ಪುರಾ ಧಾರಣಯಾತ್ಮಯೋನಿ-
ರ್ನಷ್ಟಾಂ ಸ್ಮೃತಿಂ ಪ್ರತ್ಯವರುಧ್ಯ ತುಷ್ಟಾತ್ ।
ತಥಾ ಸಸರ್ಜೇದಮಮೋಘದೃಷ್ಟಿ-
ರ್ಯಥಾಪ್ಯಯಾತ್ಪ್ರಾಗ್ವ್ಯವಸಾಯಬುದ್ಧಿಃ ॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – "ಬ್ರಹ್ಮದೇವರು ಸೃಷ್ಟಿಯ ಪ್ರಾರಂಭದಲ್ಲಿ ಇದೇ ಧಾರಣಾಯೋಗದ ಮೂಲಕವೇ ಶ್ರೀಭಗವಂತನನ್ನು ಪ್ರಸನ್ನಗೊಳಿಸಿ ಅವನ ಅನುಗ್ರಹದಿಂದ – ಹಿಂದೆ ಪ್ರಳಯಕಾಲದಲ್ಲಿ ಲುಪ್ತವಾಗಿದ್ದ ಸೃಷ್ಟಿವಿಷಯಕ ಜ್ಞಾನವನ್ನು ಪಡೆದುಕೊಂಡರು. ಅದರಿಂದಲೇ ಅಮೋಘವೂ, ನಿಶ್ಚಯಾತ್ಮಿಕವೂ ಆದ ಬುದ್ಧಿಯನ್ನು ಪಡೆದು ಈ ಜಗತ್ತನ್ನು ಮೊದಲಿದ್ದಂತೆ ಸೃಷ್ಟಿ ಮಾಡಿದರು. ॥ ೧ ॥ ಬಗೆ-ಬಗೆಯ ಫಲಗಳ ಪ್ರಲೋಭನೆಗಳಿಗೆ

ಶಾಬ್ದಸ್ಯ ಹಿ ಬ್ರಹ್ಮಣ ಏಷ ಪಂಥಾ
ಯನ್ನಾಮಭಿರ್ಧ್ಯಾಯತಿ ಧೀರಪಾರ್ಥೈಃ ।
ಪರಿಭ್ರಮಂಸ್ತತ್ರ ನ ವಿಂದತೇಽರ್ಥಾನ್
ಮಾಯಾಮಯೇ ವಾಸನಯಾ ಶಯಾನಃ ॥ ೨ ॥

ಅತಃ ಕವಿರ್ನಾಮಸು ಯಾವದರ್ಥಃ
ಸ್ಯಾದಪ್ರಮತ್ತೋ ವ್ಯವಸಾಯಬುದ್ಧಿಃ ।
ಸಿದ್ಧೇಽನ್ಯಥಾರ್ಥೇ ನ ಯತೇತ ತತ್ರ
ಪರಿಶ್ರಮಂ ತತ್ರ ಸಮೀಕ್ಷಮಾಣಃ ॥ ೩ ॥

ಸತ್ಯಾಂ ಕ್ಷಿತೌ ಕಿಂ ಕಶಿಪೋಃ ಪ್ರಯಾಸೈ-
ರ್ಬಾಹೌ ಸ್ವಸಿದ್ಧೇ ಹ್ಯುಪಬರ್ಹಣೈಃ ಕಿಮ್ ।
ಸತ್ಯಂಜಲೌ ಕಿಂ ಪುರುಧಾನ್ನ ಪಾತ್ರ್ಯಾ
ದಿಗ್ವಲ್ಕಲಾದೌ ಸತಿ ಕಿಂ ದುಕೂಲೈಃ ॥ ೪ ॥

ಚೀರಾಣಿ ಕಿಂ ಪಥಿ ನ ಸಂತಿ ದಿಶಂತಿ ಭಿಕ್ಷಾಂ
ನೈವಾಂಘ್ರಿಪಾಃ ಪರಭೃತಃ ಸರಿತೋಽಪ್ಯಶುಷ್ಯನ್ ।
ರುದ್ಧಾ ಗುಹಾಃ ಕಿಮಜಿತೋಽವತಿ ನೋಪಸನ್ನಾನ್
ಕಸ್ಮಾದ್ಭಜಂತಿ ಕವಯೋ ಧನದುರ್ಮದಾಂಧಾನ್ ॥ ೫ ॥

ಏವಂ ಸ್ವಚಿತ್ತೇ ಸ್ವತ ಏವ ಸಿದ್ಧ
ಆತ್ಮಾ ಪ್ರಿಯೋಽರ್ಥೋ ಭಗವಾನನಂತಃ ।
ತಂ ನಿರ್ವೃತೋ ನಿಯತಾರ್ಥೋ ಭಜೇತ
ಸಂಸಾರಹೇತೂಪರಮಶ್ಚ ಯತ್ರ ॥ ೬ ॥

ಕಸ್ತಾಂ ತ್ವನಾದೃತ್ಯ ಪರಾನುಚಿಂತಾಮ್
ಋತೇ ಪಶೂನಸತೀಂ ನಾಮ ಯುಂಜ್ಯಾತ್ ।
ಪಶ್ಯಂಜನಂ ಪತಿತಂ ವೈತರಣ್ಯಾಂ
ಸ್ವಕರ್ಮಜಾನ್ಪರಿತಾಪಾಂಜುಷಾಣಮ್ ॥ ೭ ॥

ಒಳಗಾಗದೆ ವಿರಕ್ತನಾಗಿ ಶ್ರೀಭಗವಂತನಲ್ಲಿ ಧಾರಣಾಯೋಗವನ್ನು ಅವಲಂಬಿಸಬೇಕು. ವೇದಗಳು ಅತ್ಯಂತ ಆಕರ್ಷಕ ಶೈಲಿಯಲ್ಲಿ ಕರ್ಮಫಲಗಳನ್ನು ನಿರ್ದೇಶಿಸುತ್ತವೆ. ಸಾಮಾನ್ಯ ಜನರು ಅವುಗಳಿಂದ ಮರುಳಾಗುತ್ತಾರೆ. ಅವರ ಬುದ್ಧಿಯು ಸ್ವರ್ಗವೇ ಮುಂತಾದ ನಿರರ್ಥಕ ನಾಮಗಳಲ್ಲಿ ಸಿಲುಕಿ ಸುಖವಾಸನೆಯ ಕನಸು ಕಾಣುತ್ತಾ ಅಲೆದಾಡುತ್ತಿರುತ್ತಾರೆ. ಆದರೆ ಮಾಯಾಮಯ ಲೋಕಗಳಲ್ಲಿ ನಿಜವಾದ ಸುಖ ದೊರೆಯುವುದಿಲ್ಲ. ॥ ೨ ॥ ಆದ್ದರಿಂದ ವಿವೇಕಿಯು ಈ ಬಗೆ-ಬಗೆಯ ನಾಮಗಳುಳ್ಳ ಪದಾರ್ಥಗಳೊಡನೆ ಪ್ರಯೋಜನಕ್ಕೆ ಬೇಕಾದಷ್ಟೇ ವ್ಯವಹಾರ ಇಟ್ಟುಕೊಳ್ಳಬೇಕು. ಅವುಗಳು ನಿಸ್ಸಾರವೇ ಆಗಿವೆ ಎಂಬ ನಿಶ್ಚಯವನ್ನು ಬುದ್ಧಿಯಲ್ಲಿರಿಸಿಕೊಳ್ಳಬೇಕು. ಒಂದು ಕ್ಷಣವಾದರೂ ಎಚ್ಚರ ತಪ್ಪಬಾರದು. ಸಾಂಸಾರಿಕ ಪದಾರ್ಥಗಳು ಪ್ರಾರಬ್ಧವಶದಿಂದ ಪ್ರಯತ್ನವಿಲ್ಲದೆಯೇ ದೊರಕುವುದಾದರೆ, ಅವುಗಳನ್ನು ಗಳಿಸುವ ಪರಿಶ್ರಮವು ವ್ಯರ್ಥವೆಂದೇ ತಿಳಿದು ಅವುಗಳಿಗಾಗಿ ಪ್ರಯತ್ನಿಸಬಾರದು. ॥ ೩ ॥ ಭೂಮಿಯ ಮೇಲೆ ಮಲಗುವುದರಿಂದಲೇ ಸುಖನಿದ್ರೆ, ಆಯಾಸ ಪರಿಹಾರವಾಗುವುದಿದ್ದರೆ ಮಂಚಕ್ಕಾಗಿ ಏಕೆ ಪ್ರಯತ್ನಮಾಡಬೇಕು ? ದೇವರ ಅನುಗ್ರಹದಿಂದ ತಾನಾಗಿ ದೊರೆತ ತೋಳುಗಳು ಇರುವಾಗ ತಲೆದಿಂಬುಗಳು ಏಕೆ ಬೇಕು ? ಬೊಗಸೆಯಿಂದಲೇ ಆಹಾರವನ್ನು ಸ್ವೀಕರಿಸುವ ಕೆಲಸ ಸಾಗುವುದಾದರೆ ಅನೇಕ ಪಾತ್ರೆಗಳನ್ನು ಒಟ್ಟುಗೂಡಿಸುವುದೇಕೆ ? ನಾರುಮಡಿಯನ್ನೇ ಉಟ್ಟುಕೊಂಡು ಅಥವಾ ದಿಗಂಬರನಾಗಿಯೇ ಇದ್ದುಕೊಂಡು ಜೀವನ ನಿರ್ವಹಿಸುವುದು ಸಾಧ್ಯವಾಗುವಾಗ ಪಟ್ಟೆವಸ್ತ್ರಗಳು ಏಕೆ ಬೇಕು ? ॥ ೪ ॥ ಉಟ್ಟುಕೊಳ್ಳಲು ಮಾರ್ಗದಲ್ಲಿ ಚಿಂದಿಬಟ್ಟೆಗಳು ದೊರೆಯುವುದಿಲ್ಲವೇ ? ಹಸಿವಾದಾಗ ಪರೋಪಕಾರಕ್ಕಾಗಿಯೇ ಇರುವ ವೃಕ್ಷಗಳು ಹೂವು-ಹಣ್ಣುಗಳ ಭಿಕ್ಷೆ ನೀಡುವುದಿಲ್ಲವೇ ? ಬಾಯಾರಿದವರಿಗೆ ನದಿಗಳು ಒಣಗಿಹೋಗಿವೆಯೇ ? ವಸತಿಗೆ ಜಾಗ ಬೇಕಾದಾಗ ಗುಹೆಗಳ ಬಾಗಿಲುಗಳು ಮುಚ್ಚಿ ಹೋಗಿವೆಯೇ ? ಎಲ್ಲಕ್ಕೂ ಮಿಗಿಲಾಗಿ ಶ್ರೀಭಗವಂತನೇ ಶರಣುಬಂದವರನ್ನು ರಕ್ಷಿಸುವುದಿಲ್ಲವೇ ? ಹೀಗಿದ್ದರೂ ವಿವೇಕಿಗಳು ಅಹಂಕಾರದ ಅಮಲಿನಲ್ಲಿರುವ ಶ್ರೀಮಂತರನ್ನು ಏಕೆ ಸೇವಿಸಬೇಕು ? ॥ ೫ ॥ ಹೀಗೆ ವಿರಕ್ತನಾದ ಮೇಲೆ ನಮ್ಮ ಹೃದಯದಲ್ಲೇ ಸರ್ವದಾ ಸ್ವತಃ ಸಿದ್ಧನಾಗಿ ನಮ್ಮ ಆತ್ಮಸ್ವರೂಪನೇ ಆಗಿ, ಪರಮಪ್ರಿಯತಮನಾಗಿರುವ ಪರಮಸತ್ಯಸ್ವರೂಪನಾದ ಪರಮಾತ್ಮ ಅನಂತನು ಬೆಳಗುತ್ತಿದ್ದಾನೆ ಎಂದು ನಿಶ್ಚಯಿಸಿ ಪರಮಪ್ರೇಮದಿಂದಲೂ, ಆನಂದದಿಂದಲೂ ಆತನನ್ನೇ ಭಜಿಸಬೇಕು. ಏಕೆಂದರೆ, ಆತನ ಭಜನೆಯಿಂದಲೇ ಸಂಸಾರಕ್ಕೆ ಕಾರಣವಾದ ಅಜ್ಞಾನವು ತೊಲಗುವುದು. ॥ ೬ ॥ ಪಶುಗಳ ಮಾತೇನೋ ಬೇರೆಯಾಗಿದೆ. ಆದರೆ ಈ ಸಂಸಾರವೆಂಬ ವೈತರಣೀ ನದಿಯಲ್ಲಿ ಜನರು ಬಿದ್ದು, ತಮ್ಮ ಕರ್ಮಗಳ ಫಲವಾದ ದುಃಖಗಳನ್ನು ಅನುಭವಿಸುತ್ತಿರುವುದನ್ನು ನೋಡಿಯೂ ಕೂಡ ಶ್ರೀಭಗವಂತನ ಮಂಗಳಮಯವಾದ ಧ್ಯಾನವನ್ನು ಮಾಡದೆ, ಅಸತ್ ವಿಷಯ ಭೋಗಗಳಲ್ಲೇ ತನ್ನ ಚಿತ್ತವನ್ನು ಅಲೆಯಲು ಬಿಡುವವನು ಮನುಷ್ಯನೇ ಅಲ್ಲ. ॥ ೭ ॥

ಕೇಚಿತ್ಸ್ವದೇಹಾಂತರ್ಹೃದಯಾವಕಾಶೇ
ಪ್ರಾದೇಶಮಾತ್ರಂ ಪುರುಷಂ ವಸಂತಮ್ ।
ಚತುರ್ಭುಜಂ ಕಂಜರಥಾಂಗ ಶಂಖ-
ಗದಾಧರಂ ಧಾರಣಯಾ ಸ್ಮರಂತಿ ॥ ೮ ॥

ಪ್ರಸನ್ನವಕ್ತ್ರಂ ನಲಿನಾಯತೇಕ್ಷಣಂ
ಕದಂಬಕಿಂಜಲ್ಕಪಿಶಂಗವಾಸಸಮ್ ।
ಲಸನ್ಮಹಾರತ್ನ ಹಿರಣ್ಮಯಾಂಗದಂ
ಸ್ಫುರನ್ಮಹಾರತ್ನ ಕಿರೀಟಕುಂಡಲಮ್ ॥ ೯ ॥

ಉನ್ನಿದ್ರಹೃತ್ಪಂಕಜಕರ್ಣಿಕಾಲಯೇ
ಯೋಗೇಶ್ವರಾಸ್ಥಾಪಿತಪಾದಪಲ್ಲವಮ್ ।
ಶ್ರೀಲಕ್ಷ್ಮಣಂ ಕೌಸ್ತುಭರತ್ನ ಕಂಧರ-
ಮಮ್ಲಾನಲಕ್ಷ್ಮ್ಯಾ ವನಮಾಲಯಾಽಽಚಿತಮ್ ॥೧೦॥

ವಿಭೂಷಿತಂ ಮೇಖಲಯಾಂಗುಲೀಯಕೈ-
ರ್ಮಹಾಧನೈರ್ನೂಪುರಕಂಕಣಾದಿಭಿಃ ।
ಸ್ನಿಗ್ಧಾ ಮಲಾಕುಂಚಿತನೀಲಕುಂತಲೈ-
ರ್ವಿರೋಚಮಾನಾನನಹಾಸಪೇಶಲಮ್ ॥೧೧॥

ಅದೀನಲೀಲಾಹಸಿತೇಕ್ಷಣೋಲ್ಲಸತ್
ಭ್ರೂಭಂಗಸಂಸೂಚಿತಭೂರ್ಯನುಗ್ರಹಮ್ ।
ಈಕ್ಷೇತ ಚಿಂತಾಮಯಮೇನಮೀಶ್ವರಂ
ಯಾವನ್ಮನೋ ಧಾರಣಯಾವತಿಷ್ಠತೇ ॥೧೨॥

ಏಕೈಕಶೋಽಂಗಾನಿ ಧಿಯಾನುಭಾವಯೇತ್
ಪಾದಾದಿ ಯಾವದ್ಧಸಿತಂ ಗದಾಭೃತಃ ।
ಜಿತಂ ಜಿತಂ ಸ್ಥಾನಮಪೋಹ್ಯ ಧಾರಯೇತ್
ಪರಂ ಪರಂ ಶುದ್ಧ್ಯತಿ ಧೀರ್ಯಥಾ ಯಥಾ ॥೧೩॥

ರಾಜೇಂದ್ರಾ! ಸ್ಥೂಲವಾದ ಭಗವದ್ರೂಪದಲ್ಲಿ ಮಾಡುವ ಯೋಗಧಾರಣೆಯನ್ನು ಹಿಂದೆ ಹೇಳಿದೆನು. ಕೆಲವು ಸಾಧಕರು ತಮ್ಮ ಶರೀರದೊಳಗೆ ಹೃದಯಾಕಾಶದಲ್ಲಿ ಬೆಳಗುತ್ತಿರುವ ಭಗವಂತನ ಚೋಟುದ್ದದ ರೂಪದಲ್ಲಿ ಯೋಗಧಾರಣೆಯನ್ನು ಮಾಡುತ್ತಾರೆ. ಅವರು ಹೀಗೆ ಧ್ಯಾನಿಸುತ್ತಾರೆ – ನಮ್ಮ ಹೃದಯ ಪ್ರದೇಶದಲ್ಲಿ ಇರುವ ಆ ಭಗವಂತನು ನಾಲ್ಕುಭುಜಗಳುಳ್ಳವನಾಗಿದ್ದು ಅವುಗಳಲ್ಲಿ ಪಾಂಚಜನ್ಯ ಶಂಖ, ಸುದರ್ಶನ ಚಕ್ರ, ಕೌಮೋದಕೀ ಗದೆ, ಲೀಲಾಪದ್ಮಗಳನ್ನು ಧರಿಸಿದ್ದಾನೆ. ॥ ೮ ॥ ಆತನ ಪ್ರಸನ್ನವಾದ ಮುಖಕಮಲ, ಕಮಲದಂತೆ ವಿಶಾಲವೂ, ಕೋಮಲವೂ ಆದ ಕಣ್ಣುಗಳು, ಕದಂಬ ಪುಷ್ಪದ ಕೇಸರದಂತೆ ಕಂಗೊಳಿಸುವ ಪೀತಾಂಬರದ ಉಡಿಗೆ, ತೋಳುಗಳಲ್ಲಿ ಶ್ರೇಷ್ಠವಾದ ರತ್ನಗಳಿಂದ ಘಟಿತ ಭುಜಕೀರ್ತಿಗಳು ಕಂಗೊಳಿಸುತ್ತಿವೆ. ತಲೆ ಮತ್ತು ಕಿವಿಗಳಲ್ಲಿ ಅಮೂಲ್ಯರತ್ನಗಳಿಂದ ಥಳ-ಥಳಿಸುತ್ತಿರುವ ಕಿರೀಟ-ಕುಂಡಲಗಳು ಬೆಳಗುತ್ತಿವೆ. ॥ ೯ ॥ ಯೋಗೇಶ್ವರರು ತಮ್ಮ ಅರಳಿದ ಹೃದಯ ಕಮಲದ ಕರ್ಣಿಕೆಯಲ್ಲಿ ಆತನ ಚರಣಗಳನ್ನು ಸ್ಥಾಪಿಸಿಕೊಂಡಿರುತ್ತಾರೆ. ಅವನ ಹೃದಯದ ಮೇಲೆ ಶ್ರೀವತ್ಸಚಿಹ್ನೆ ಕಂಗೊಳಿಸುತ್ತಿದೆ. ಕುತ್ತಿಗೆಯಲ್ಲಿ ಕೌಸ್ತುಭಮಣಿಯ ಶೋಭೆ, ವಕ್ಷಃಸ್ಥಳದಲ್ಲಿ ಎಂದಿಗೂ ಬಾಡದಿರುವ ವನಮಾಲೆಯೂ ಅಲಂಕೃತವಾಗಿದೆ. ॥ ೧೦ ॥ ನಡುವಿನಲ್ಲಿ ಕಟಿಸೂತ್ರ, ಕೈ ಬೆರಳುಗಳಲ್ಲಿ ಉಜ್ವಲವಾದ ಉಂಗುರಗಳು, ಕಾಲುಗಳಲ್ಲಿ ಕಾಲಂದುಗೆ, ಕೈಯಲ್ಲಿ ಕಂಕಣ ಮುಂತಾದ ಆಭರಣಗಳನ್ನು ಧರಿಸಿರುವನು. ನಯವಾದ, ನಿರ್ಮಲವಾದ, ನೀಲವರ್ಣದ ಗುಂಗುರು ಕೂದಲುಗಳ ಕಮನೀಯವಾದ ಕೇಶರಾಶಿ. ಅವನ ಮುಖಕಮಲವು ಮಂದ-ಮಂದ ಮುಗುಳ್ನಗೆಯಿಂದ ಅರಳಿನಿಂತಿದೆ. ॥ ೧೧ ॥ ಸುಂದರವಾದ ಲೀಲೆಯ ನಗೆನೋಟದಿಂದ ಬೆಳಗುತ್ತಾ ಭಕ್ತರಮೇಲೆ ಅನುಗ್ರಹದ ಮಳೆಯನ್ನು ಕರೆಯುತ್ತಿರುವ ಹುಬ್ಬುಗಳು. ಇಂತಹ ಸೌಂದರ್ಯ, ಲಾವಣ್ಯಪೂರ್ಣವಾದ ದಿವ್ಯ ಮಂಗಳವಿಗ್ರಹದಲ್ಲಿ ಮನಸ್ಸು ಧಾರಣಾಯೋಗದಿಂದ ಸ್ಥಿರವಾಗುವವರೆಗೂ ಪದೇ-ಪದೇ ಈ ಚಿಂತನಸ್ವರೂಪ ಭಗವಂತನನ್ನು ನೋಡುತ್ತಾ ಇರಲು ಪ್ರಯತ್ನಿಸಬೇಕು. ಮತ್ತೆ-ಮತ್ತೆ ಚಿಂತಿಸುತ್ತಾ ಇರುವಾಗ ಮನಸ್ಸಿನಲ್ಲಿ ಧಾರಣೆಯು ಸ್ಥಿರವಾಗುವುದು. ಬಳಿಕ ಭಗವಂತನ ಧ್ಯಾನವು ಭಗವತ್ಕೃಪೆಯಿಂದ ತಾನೇ-ತಾನಾಗಿ ನಡೆಯುತ್ತಾ ಇರುತ್ತದೆ. ॥ ೧೨ ॥ ಹೀಗೆ ನಿಶ್ಚಯಾತ್ಮಿಕಾ ಬುದ್ಧಿಯಿಂದ ಭಗವಂತನ ಚರಣಕಮಲಗಳಿಂದ ಹಿಡಿದು ಮುಗುಳ್ನಗೆಯಿಂದ ಕೂಡಿದ ಮುಖಕಮಲದವರೆವಿಗೂ ಒಂದೊಂದು ಅವಯವವನ್ನು ಬುದ್ಧಿಯಿಂದ ಧರಿಸಬೇಕು. ಬುದ್ಧಿಯು ಶುದ್ಧವಾದಂತೆಲ್ಲ ಚಿತ್ತವು ಅವನಲ್ಲಿ ಸ್ಥಿರವಾಗುತ್ತಾ ಹೋಗುತ್ತದೆ. ಒಂದೊಂದು ಅಂಗದಲ್ಲಿ ಧ್ಯಾನವು ಸ್ಥಿರವಾದ ನಂತರ ಅದನ್ನು ಬಿಟ್ಟು ಮತ್ತೊಂದು ಅಂಗವನ್ನು ಧ್ಯಾನಿಸತೊಡಗಬೇಕು. ಹೀಗೆ ಧ್ಯಾನ ಮಾಡುವುದರಿಂದ ಬುದ್ಧಿಯು ಶುದ್ಧವಾಗಿ, ಚಿತ್ತವು ಭಗವಂತನಲ್ಲಿ ಸ್ಥಿರವಾಗಿ ಹೋಗುತ್ತದೆ. ॥ ೧೩ ॥ ಈ ಪರಮಾತ್ಮನೇ ನಿರ್ಗುಣಬ್ರಹ್ಮವಾಗಿದ್ದಾನೆ ಹಾಗೂ ಅವನೇ ಲೀಲೆಯಿಂದ ಈ ಸಗುಣರೂಪವನ್ನು ಧರಿಸಿರುವನು. ಹೀಗೆ ಪರಾತ್ಪರನೂ, ಸಾಕ್ಷಿರೂಪನೂ ಆದ ಜಗತ್ಪತಿಯಲ್ಲಿ ಭಕ್ತಿಯೋಗಸಮಾಧಿ ಉಂಟಾಗುವ

ಯಾವನ್ನ ಜಾಯೇತ ಪರಾವರೇಽಸ್ಮಿನ್
ವಿಶ್ವೇಶ್ವರೇ ದ್ರಷ್ಟರಿ ಭಕ್ತಿಯೋಗಃ ।
ತಾವತ್ ಸ್ಥವೀಯಃ ಪುರುಷಸ್ಯ ರೂಪಂ
ಕ್ರಿಯಾವಸಾನೇ ಪ್ರಯತಃ ಸ್ಮರೇತ ॥ ೧೪ ॥

ಸ್ಥಿರಂ ಸುಖಂ ಚಾಸನಮಾಶ್ರಿತೋ ಯತಿ-
ರ್ಯದಾ ಜಿಹಾಸುರಿಮಮಂಗ ಲೋಕಮ್ ।
ಕಾಲೇ ಚ ದೇಶೇ ಚ ಮನೋ ನ ಸಜ್ಜಯೇತ್
ಪ್ರಾಣಾನ್ನಿ ಯಚ್ಛೇನ್ಮನಸಾ ಜಿತಾಸುಃ ॥ ೧೫ ॥

ಮನಃ ಸ್ವಬುದ್ಧ್ಯಾಮಲಯಾ ನಿಯಮ್ಯ
ಕ್ಷೇತ್ರಜ್ಞ ಏತಾಂ ನಿನಯೇತ್ತಮಾತ್ಮನಿ ।
ಆತ್ಮಾನಮಾತ್ಮನ್ಯವರುಧ್ಯ ಧೀರೋ
ಲಬ್ಧೋಪಶಾಂತಿರ್ವಿರಮೇತ ಕೃತ್ಯಾತ್ ॥ ೧೬ ॥

ನ ಯತ್ರ ಕಾಲೋಽನಿಮಿಷಾಂ ಪರಃ ಪ್ರಭುಃ
ಕುತೋ ನು ದೇವಾ ಜಗತಾಂ ಯ ಈಶಿರೇ ।
ನ ಯತ್ರ ಸತ್ತ್ವಂ ನ ರಜಸ್ತಮಶ್ಚ
ನ ವೈ ವಿಕಾರೋ ನ ಮಹಾನ್ಪ್ರಧಾನಮ್ ॥ ೧೭ ॥

ಪರಂ ಪದಂ ವೈಷ್ಣವಮಾಮನಂತಿ ತದ್
ಯನ್ನೇತಿ ನೇತೀತ್ಯತದುತ್ಸಿಸೃಕ್ಷವಃ ।
ವಿಸೃಜ್ಯ ದೌರಾತ್ಮ್ಯಮನನ್ಯಸೌಹೃದಾ
ಹೃದೋಪಗುಹ್ಯಾರ್ಹಪದಂ ಪದೇ ಪದೇ ॥ ೧೮ ॥

ಇತ್ಥಂ ಮುನಿಸ್ತೂಪರಮೇದ್ವ್ಯವಸ್ಥಿತೋ
ವಿಜ್ಞಾನದೃಗ್ವೀರ್ಯಸುರಂಧಿತಾಶಯಃ ।
ಸ್ವಪಾರ್ಷ್ಣಿನಾಽಽಪೀಡ್ಯ ಗುದಂ ತತೋಽನಿಲಂ
ಸ್ಥಾನೇಷು ಷಟ್ಸೂನ್ನಮಯೇಜ್ಜಿತಕ್ಲಮಃ ॥ ೧೯ ॥

ವರೆಗೂ ನಿತ್ಯ-ನೈಮಿತ್ತಿಕ ಕರ್ಮಾಚರಣೆಯ ನಂತರ ಏಕಾಗ್ರತೆಯಿಂದ ಮೇಲೆ ಹೇಳಿದ ಶ್ರೀಭಗವಂತನ ಸ್ಥೂಲರೂಪವನ್ನು ಧ್ಯಾನಿಸುತ್ತಾ ಇರಬೇಕು. ॥ ೧೪ ॥

ಆಸನವು ಸ್ಥಿರವಾಗಿ ಬಹಳಹೊತ್ತು ಸುಖವಾಗಿ ಕುಳಿತುಕೊಳ್ಳುವಂತಾಗಬೇಕು. ಇಂದ್ರಿಯಗಳನ್ನು ನಿಗ್ರಹಿಸಿ, ಯೋಗಿಯು ಈ ಲೋಕವನ್ನು ತ್ಯಜಿಸಿ ಭಗವಂತನ ವೈಕುಂಠಲೋಕಕ್ಕೆ ಹೋಗಬೇಕೆಂದು ಬಯಸಿದಾಗ, ಯಾವುದೇ ಕಾಲದಲ್ಲಿ ಅಥವಾ ದೇಶದಲ್ಲಿ ಮನಸ್ಸನ್ನು ಹೋಗಗೊಡದೆ ಕೇವಲ ಪ್ರಾಣಾಯಾಮದ ಮೂಲಕ ಇಂದ್ರಿಯಗಳನ್ನು ವಶಪಡಿಸಿಕೊಳ್ಳಬೇಕು. ಮತ್ತೆ ಕೇವಲ ಭಗವಂತನನ್ನೇ ಚಿಂತಿಸಬೇಕು. ॥ ೧೫ ॥ ಅನಂತರ ಶುದ್ಧವಾದ ಬುದ್ಧಿಯಿಂದ ಮನಸ್ಸನ್ನು ಸಂಯಮ ಗೊಳಿಸಿ, ಮನಸ್ಸಿನೊಡನೆ ಬುದ್ಧಿಯನ್ನು ಕ್ಷೇತ್ರಜ್ಞನಲ್ಲಿಯೂ, ಕ್ಷೇತ್ರಜ್ಞನನ್ನು ಅಂತರಾತ್ಮನಲ್ಲಿಯೂ, ಆ ಅಂತರಾತ್ಮನನ್ನು ಪರಮಾತ್ಮನಲ್ಲಿಯೂ ಲಯಗೊಳಿಸಿ, ಆ ಧೀರಪುರುಷನು ಪರಮಶಾಂತಿಪೂರ್ಣವಾದ ಸ್ಥಿತಿಯಲ್ಲಿ ನೆಲೆಗೊಳ್ಳಬೇಕು. ಆಮೇಲೆ ಅವನಿಗೆ ಯಾವ ಕರ್ತವ್ಯವೂ ಇರುವುದಿಲ್ಲ. (**ಆತ್ಮ ಸಂಸ್ಥಂ ಮನಃಕೃತ್ವಾ ನ ಕಿಂಚಿದಪಿ ಚಿಂತಯೇತ್ - ಗೀತಾ ೬**) ॥ ೧೬ ॥ ಈ ಸ್ಥಿತಿಯಲ್ಲಿ ಸತ್ತ್ವ ಗುಣವೂ ಇರುವುದಿಲ್ಲ. ಅಂದಬಳಿಕ ರಜೋಗುಣ - ತಮೋಗುಣಗಳ ಪ್ರಸಂಗವಾದರೂ ಎಲ್ಲಿ ಬಂದೀತು ? ಅಹಂಕಾರ, ಮಹತ್ತತ್ತ್ವ, ಪ್ರಕೃತಿಯ ಕೂಡ ಅಸ್ತಿತ್ವ ಅಲ್ಲಿರುವುದಿಲ್ಲ. ಆ ಸ್ಥಿತಿಯಲ್ಲಿ ದೇವತೆಗಳ ನಿಯಾಮಕ ಕಾಲನ ಬೇಳೆಯೂ ಬೇಯದಿರುವಾಗ ದೇವತೆಗಳಾಗಲೀ, ಅವರಿಗೆ ಅಧೀನರಾಗಿರುವ ಇತರ ಪ್ರಾಣಿಗಳಾದರೋ ಹೇಗೆ ಇರಬಲ್ಲರು ? ॥ ೧೭ ॥ ಪರಮಾತ್ಮನಿಂದ ಭಿನ್ನವಾದ ಸಮಸ್ತವನ್ನು ತ್ಯಾಗಮಾಡಲು ಬಯಸುವ ಯೋಗಿಗಳು '**ನೇತಿ-ನೇತಿ**' 'ಇದೂ ಅಲ್ಲ! ಇದೂ ಅಲ್ಲ!' ಎಂಬ ಭಾವನೆಯಿಂದ ಉಳಿದ ಎಲ್ಲದರಲ್ಲೂ ಆತ್ಮಬುದ್ಧಿ ಯನ್ನು ತ್ಯಾಗಗೈದು ಪರಮಾತ್ಮ ಸ್ವರೂಪವನ್ನು ಹೃದಯದಿಂದ ಪದೇ-ಪದೇ ಆಲಿಂಗಿಸಿಕೊಳ್ಳುತ್ತಾ ಅನನ್ಯ ಪ್ರೇಮದಿಂದ ಪರಿಪೂರ್ಣರಾಗುವರೋ – ಅದೇ ಭಗವಾನ್ ವಿಷ್ಣುವಿನ ಪರಮಪದವಾಗಿದೆ. ಈ ವಿಷಯದಲ್ಲಿ ಎಲ್ಲ ಶಾಸ್ತ್ರಗಳ ಸಮ್ಮತಿ ಇದೆ. ॥ ೧೮ ॥ *

ಜ್ಞಾನದೃಷ್ಟಿಯ ಬಲದಿಂದ ಚಿತ್ತದ ವಾಸನೆಯನ್ನು ಕಳೆದುಕೊಂಡ ಬ್ರಹ್ಮನಿಷ್ಠನಾದ ಯೋಗಿಯು ಈ ರೀತಿಯಲ್ಲಿ ತನ್ನ ಶರೀರವನ್ನು ತ್ಯಜಿಸಬೇಕು. ಮೊದಲು ಹಿಮ್ಮಡಿಯಿಂದ ತನ್ನ ಗುದವನ್ನು ಒತ್ತಿಕೊಂಡು ಸ್ಥಿರನಾಗಬೇಕು. ಮತ್ತೆ ಗಾಬರಿಯಿಲ್ಲದೆ ಪ್ರಾಣವಾಯುವನ್ನು ಷಟ್-ಚಕ್ರಭೇದನ ಕ್ರಮದಿಂದ ಅನಾಯಾಸವಾಗಿ ಮೇಲಕ್ಕೆ ತೆಗೆದುಕೊಂಡು ಹೋಗಬೇಕು. ॥ ೧೯ ॥ ಪ್ರಶಸ್ತವಾದ ಮನಸ್ಸುಳ್ಳಯೋಗಿಯು ನಾಭಿಚಕ್ರವಾದ ಮಣಿಪೂರದಲ್ಲಿರುವ

* ಶ್ಲೋಕ ೮ರಿಂದ ೧೮ರ ತನಕದ ಪ್ರಸಂಗವು ಸದ್ಯೋಮುಕ್ತಿಯದಾಗಿದೆ. ಇದರಲ್ಲಿ ಭಗವಂತನ ಸ್ವರೂಪವನ್ನು ಎಲ್ಲ ಸಮಯದಲ್ಲಿ ಧ್ಯಾನಿಸಬೇಕು. ಧ್ಯಾನದ ಮೂಲಕ ಧಾರಣೆಯನ್ನು ಮಾಡಬೇಕು. ಅದರಿಂದಾಗಿ ಅದರಲ್ಲಿ ಚಿರಂತನ ಸ್ಥಿತಿ ಉಂಟಾಗುತ್ತದೆ. ಇದರಿಂದ ಭಕ್ತಿಯೋಗವು ದೃಢವಾಗುತ್ತದೆ. ಭಕ್ತನ ಉದ್ಧಾರವನ್ನು ಸಾಕ್ಷಾತ್ ಭಗವಂತನೇ ಮಾಡುತ್ತಾನೆ. ಭಕ್ತನ ಹೊಣೆಗಾರಿಕೆಯು ಭಗವಂತನ ಮೇಲೆ ಬರುತ್ತದೆ. ಆದ್ದರಿಂದ ಭಕ್ತಿಯಲ್ಲಿ ಸದ್ಯೋಮುಕ್ತಿಯನ್ನು ಹೇಳಲಾಗಿದೆ. ಇನ್ನು ಶ್ಲೋಕ ೧೯ರಿಂದ ೩೧ರತನಕ ಜ್ಞಾನಮಾರ್ಗದ ಪ್ರಸಂಗ ನಡೆಯುತ್ತದೆ. ಈಗ ಯೋಗಾಭ್ಯಾಸದಿಂದ ಸಿಗುವ ಕ್ರಮಮುಕ್ತಿಯ ಪ್ರಸಂಗವನ್ನು ಪ್ರಾರಂಭಿಸುತ್ತಾರೆ.

ನಾಭ್ಯಾಂ ಸ್ಥಿತಂ ಹೃದ್ಯಧಿರೋಪ್ಯ ತಸ್ಮಾ-
ದುದಾನಗತ್ಯೋರಸಿ ತಂ ನಯೇನ್ಮುನಿಃ ।
ತತೋಽನುಸಂಧಾಯ ಧಿಯಾ ಮನಸ್ವೀ
ಸ್ವತಾಲುಮೂಲಂ ಶನಕೈರ್ನಯೇತ ॥ ೨೦ ॥

ತಸ್ಮಾದ್ಭ್ರುವೋರಂತರಮುನ್ನಯೇತ
ನಿರುದ್ಧಸಪ್ತಾಯತನೋಽನಪೇಕ್ಷಃ ।
ಸ್ಥಿತ್ವಾ ಮುಹೂರ್ತಾರ್ಧಮಕುಂಠದೃಷ್ಟಿ-
ರ್ನಿರ್ಭಿದ್ಯ ಮೂರ್ಧನ್ವಿಸೃಜೇತ್ಪರಂ ಗತಃ ॥ ೨೧ ॥

ಯದಿ ಪ್ರಯಾಸ್ಯನ್ನೃಪ ಪಾರಮೇಷ್ಠ್ಯಂ
ವೈಹಾಯಸಾನಾಮುತ ಯದ್ವಿಹಾರಮ್ ।
ಅಷ್ಟಾಧಿಪತ್ಯಂ ಗುಣಸನ್ನಿವಾಯೇ
ಸಹೈವ ಗಚ್ಛೇನ್ಮನಸೇಂದ್ರಿಯೈಶ್ಚ ॥ ೨೨ ॥

ಯೋಗೇಶ್ವರಾಣಾಂ ಗತಿಮಾಹುರಂತ-
ರ್ಬಹಿಸ್ತ್ರಿಲೋಕ್ಯಾಃ ಪವನಾಂತರಾತ್ಮನಾಮ್ ।
ನ ಕರ್ಮಭಿಸ್ತಾಂ ಗತಿಮಾಪ್ನುವಂತಿ
ವಿದ್ಯಾ ತಪೋಯೋಗಸಮಾಧಿಭಾಜಾಮ್ ॥ ೨೩ ॥

ವೈಶ್ವಾನರಂ ಯಾತಿ ವಿಹಾಯಸಾ ಗತಃ
ಸುಷುಮ್ಣಯಾ ಬ್ರಹ್ಮಪಥೇನ ಶೋಚಿಷಾ ।
ವಿಧೂತಕಲ್ಕೋಽಥ ಹರೇರುದಸ್ತಾತ್
ಪ್ರಯಾತಿ ಚಕ್ರಂ ನೃಪ ಶೈಶುಮಾರಮ್ ॥ ೨೪ ॥

ತದ್ವಿಶ್ವನಾಭಿಂ ತ್ವತಿವರ್ತ್ಯ ವಿಷ್ಣೋ-
ರಣೀಯಸಾ ವಿರಜೇನಾತ್ಮನೈಕಃ ।
ನಮಸ್ಕೃತಂ ಬ್ರಹ್ಮವಿದಾಮುಪೈತಿ
ಕಲ್ಪಾಯುಷೋ ಯದ್ವಿಬುಧಾ ರಮಂತೇ ॥ ೨೫ ॥

ವಾಯುವನ್ನು ಹೃದಯಚಕ್ರವಾದ ಅನಾಹತಚಕ್ರಕ್ಕೂ, ಅಲ್ಲಿಂದ ಉದಾನವಾಯುವಿನ ಮೂಲಕ ವಕ್ಷಸ್ಥಳದ ಮೇಲಿರುವ ವಿಶುದ್ಧ ಚಕ್ರಕ್ಕೂ, ಮತ್ತೆ ಆ ವಾಯುವನ್ನು ಮೆಲ್ಲ-ಮೆಲ್ಲನೆ ತಾಲು ಮೂಲಕ್ಕೂ (ಅಂದರೆ ವಿಶುದ್ಧ ಚಕ್ರದ ತುದಿಗೆ) ಆಜ್ಞಾಚಕ್ರಕ್ಕೆ ಹತ್ತಿಸಬೇಕು. ॥ ೨೦ ॥ ಅನಂತರ ಎರಡು ಕಣ್ಣುಗಳು, ಎರಡು ಕಿವಿಗಳು, ಮೂಗುಹೊಳ್ಳೆಗಳು ಮತ್ತು ಬಾಯಿ ಎಂಬ ಈ ಏಳು ರಂಧ್ರಗಳನ್ನು ಮುಚ್ಚಿಕೊಂಡು ಆ ತಾಲುಮೂಲದಲ್ಲಿರುವ ವಾಯುವನ್ನು ಹುಬ್ಬುಗಳ ಮಧ್ಯದಲ್ಲಿರುವ ಆಜ್ಞಾಚಕ್ರಕ್ಕೆ ಕೊಂಡೊಯ್ಯಬೇಕು. ಯಾವುದೇ ಲೋಕಕ್ಕೆ ಹೋಗುವ ಇಚ್ಛೆ ಇಲ್ಲದಿದ್ದರೆ ಅರ್ಧಗಳಿಗೆ ಕಾಲ ಆ ವಾಯುವನ್ನು ಅಲ್ಲಿಯೇ ತಡೆದು ಸ್ಥಿರವಾದ ಲಕ್ಷ್ಯದೊಡನೆ ಅದನ್ನು ಸಹಸ್ರಾರಕ್ಕೆ ಕೊಂಡೊಯ್ದು ಪರಮಾತ್ಮನಲ್ಲಿ ನೆಲೆಗೊಳಿಸಬೇಕು. ಅನಂತರ ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಶರೀರ-ಇಂದ್ರಿಯಾದಿಗಳನ್ನು ತ್ಯಜಿಸಿ ಬ್ರಹ್ಮನಲ್ಲಿ ಲೀನವಾಗಬೇಕು. ಇಂತಹ ಯೋಗಿಯು 'ಸರ್ವಂ ಖಲು ಇದಂ ಬ್ರಹ್ಮ' ಹೀಗೆ ಭಾವಿಸಿಕೊಂಡು ಸರ್ವತ್ರ ಒಂದೇ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ಹೀಗೆ ಬ್ರಹ್ಮನಲ್ಲಿ ಸ್ಥಿರವಾದ ಬಳಿಕ ಪರಮಪದವನ್ನು ಪಡೆದುಕೊಳ್ಳುವರು. ॥ ೨೧ ॥

ಪರೀಕ್ಷಿತನೇ! ಯೋಗಿಗೆ ಬ್ರಹ್ಮಲೋಕಕ್ಕೆ ಹೋಗುವ ಇಚ್ಛೆಯಾಗಲೀ, ಎಂಟುಸಿದ್ಧಿಗಳನ್ನು ಪಡೆದು ಆಕಾಶದಲ್ಲಿ ಸಂಚರಿಸುವ ಸಿದ್ಧರೊಡನೆ ವಿಹರಿಸುವ ಅಥವಾ ತ್ರಿಗುಣಮಯವಾದ ಬ್ರಹ್ಮಾಂಡದ ಯಾವುದೇ ಜಾಗದಲ್ಲಿ ಸಂಚರಿಸುವ ಇಚ್ಛೆಯಾಗಲೀ, ಇದ್ದ ಪಕ್ಷದಲ್ಲಿ ಆತನು ಮನಸ್ಸನ್ನು ಮತ್ತು ಇಂದ್ರಿಯಗಳನ್ನು ಜೊತೆಯಲ್ಲೇ ತೆಗೆದುಕೊಂಡು ಶರೀರದಿಂದ ಹೊರಹೊರಡಬೇಕು. ॥ ೨೨ ॥ ಯೋಗಿಗಳ ಶರೀರವು ವಾಯುವಿನಂತೆ ಸೂಕ್ಷ್ಮವಾಗಿರುತ್ತದೆ. ಉಪಾಸನೆ, ತಪಸ್ಸು, ಯೋಗ, ಸಮಾಧಿಗಳನ್ನು ಸೇವನೆ ಮಾಡಿದ ಯೋಗಿಗಳಿಗೆ, ಮೂರೂ ಲೋಕಗಳ ಒಳಗೆ-ಹೊರಗೆ, ಎಲ್ಲೆಡೆಗಳಲ್ಲಿ ಸ್ವಚ್ಛಂದವಾಗಿ ಸಂಚರಿಸುವ ಅಧಿಕಾರ ಇರುತ್ತದೆ. ಕೇವಲ ವರ್ಣಾಶ್ರಮ ಧರ್ಮವನ್ನು ಪಾಲಿಸುವವರಿಗೆ ಈ ರೀತಿ ಅಡೆ-ತಡೆಯಿಲ್ಲದೆ ಸಂಚರಿಸಲಾಗುವುದಿಲ್ಲ. ॥ ೨೩ ॥ ಪರೀಕ್ಷಿತನೇ ! ಯೋಗಿಯು ಜ್ಯೋತಿರ್ಮಯ ಮಾರ್ಗ ಸುಷುಮ್ನೆಯ ಮೂಲಕ ಬ್ರಹ್ಮಲೋಕಕ್ಕೆ ಹೋಗುವಾಗ ಅವನು ಮೊದಲು ಆಕಾಶಮಾರ್ಗದಿಂದ ಅಗ್ನಿಲೋಕಕ್ಕೆ ಹೋಗುತ್ತಾನೆ. ಆಗ ಅವನಲ್ಲಿ ಉಳಿದಿರುವ ದೋಷಗಳೂ ಸುಟ್ಟುಹೋಗುತ್ತವೆ. ಅನಂತರ ಅವನು ಅಲ್ಲಿಂದ ಮೇಲಕ್ಕೆ ಮಹಾವಿಷ್ಣುವಿನ ಶಿಂಶುಮಾರವೆಂಬ ಜ್ಯೋತಿರ್ಮಯ ಚಕ್ರವನ್ನು ತಲುಪುತ್ತಾನೆ. ॥ ೨೪ ॥ ಭಗವಾನ್ ಶ್ರೀವಿಷ್ಣುವಿನ ಈ ಶಿಂಶುಮಾರಚಕ್ರವು ವಿಶ್ವಬ್ರಹ್ಮಾಂಡಕ್ಕೆ ಸುತ್ತುವ ಕೇಂದ್ರವಾದ ನಾಭಿಯಂತಿದೆ. ಮಹಾಯೋಗಿಯು ಅದನ್ನು ದಾಟಿ ಅತ್ಯಂತ ಸೂಕ್ಷ್ಮವೂ, ನಿರ್ಮಲವೂ ಆದ ಶರೀರದಿಂದ ಒಂಟಿಯಾಗಿಯೇ ಮಹರ್ಲೋಕಕ್ಕೆ ಹೋಗುತ್ತಾನೆ. ಆ ಮಹರ್ಲೋಕವು ಬ್ರಹ್ಮಜ್ಞಾನಿಗಳಿಂದಲೂ ನಮಸ್ಕರಿಸಲ್ಪಡುವ ಸ್ಥಾನ ಮತ್ತು ಒಂದು ಕಲ್ಪದವರೆಗೆ ಬದುಕುವ ದೇವತೆಗಳು ಅಲ್ಲಿ ವಿಹರಿಸುತ್ತಾ ಇರುತ್ತಾರೆ. ॥ ೨೫ ॥

ಅಥೋ ಅನಂತಸ್ಯ ಮುಖಾನಲೇನ
ದಂದಹ್ಯಮಾನಂ ಸ ನಿರೀಕ್ಷ್ಯ ವಿಶ್ವಮ್ ।
ನಿರ್ಯಾತಿ ಸಿದ್ಧೇಶ್ವರಜುಷ್ಟಧಿಷ್ಣ್ಯಂ
ಯದ್ದ್ವೈಪರಾರ್ಧ್ಯಂ ತದು ಪಾರಮೇಷ್ಠ್ಯಮ್ ॥ ೨೬ ॥

ನ ಯತ್ರ ಶೋಕೋ ನ ಜರಾ ನ ಮೃತ್ಯು-
ರ್ನಾರ್ತಿರ್ನ ಚೋದ್ವೇಗ ಋತೇ ಕುತಶ್ಚಿತ್ ।
ಯಚ್ಚಿತ್ತತೋದಃ ಕೃಪಯಾನಿದಂವಿದಾಂ
ದುರಂತದುಃಖಪ್ರಭವಾನುದರ್ಶನಾತ್ ॥ ೨೭ ॥

ತತೋ ವಿಶೇಷಂ ಪ್ರತಿಪದ್ಯ ನಿರ್ಭಯ-
ಸ್ತೇನಾತ್ಮನಾಪೋಽನಲಮೂರ್ತಿರತ್ವರನ್ ।
ಜ್ಯೋತಿರ್ಮಯೋ ವಾಯುಮುಪೇತ್ಯ ಕಾಲೇ
ವಾಯ್ವಾತ್ಮನಾ ಖಂ ಬೃಹದಾತ್ಮಲಿಂಗಮ್ ॥ ೨೮ ॥

ಘ್ರಾಣೇನ ಗಂಧಂ ರಸನೇನ ವೈ ರಸಂ
ರೂಪಂ ತು ದೃಷ್ಟ್ಯಾ ಶ್ವಸನಂ ತ್ವಚೈವ ।
ಶ್ರೋತ್ರೇಣ ಚೋಪೇತ್ಯ ನಭೋಗುಣತ್ವಂ
ಪ್ರಾಣೇನ ಚಾಕೂತಿಮುಪೈತಿ ಯೋಗೀ ॥ ೨೯ ॥

ಸ ಭೂತಸೂಕ್ಷ್ಮೇಂದ್ರಿಯಸಂನಿಕರ್ಷಂ
ಮನೋಮಯಂ ದೇವಮಯಂ ವಿಕಾರ್ಯಮ್ ।
ಸಂಸಾದ್ಯ ಗತ್ಯಾ ಸಹ ತೇನ ಯಾತಿ
ವಿಜ್ಞಾನತತ್ತ್ವಂ ಗುಣಸಂನಿರೋಧಮ್ ॥ ೩೦ ॥

ತೇನಾತ್ಮನಾಽಽತ್ಮಾನಮುಪೈತಿ ಶಾಂತ-
ಮಾನಂದಮಾನಂದ ಮಯೋಽವಸಾನೇ ।
ಏತಾಂ ಗತಿಂ ಭಾಗವತೀಂ ಗತೋ ಯಃ
ಸ ವೈ ಪುನರ್ನೇಹ ವಿಷಜ್ಜತೇಽಂಗ ॥ ೩೧ ॥

ಏತೇ ಸೃತೀ ತೇ ನೃಪ ವೇದಗೀತೇ
ತ್ವಯಾಭಿಪೃಷ್ಟೇ ಹ ಸನಾತನೇ ಚ ।
ಯೇ ವೈ ಪುರಾ ಬ್ರಹ್ಮಣ ಆಹ ಪೃಷ್ಟ
ಆರಾಧಿತೋ ಭಗವಾನ್ ವಾಸುದೇವಃ ॥ ೩೨ ॥

ಅನಂತರ ಆ ಯೋಗಿಯು ಪ್ರಳಯ ಸಮಯದಲ್ಲಿ ಕೆಳಗಿನ ಲೋಕಗಳು ಆದಿಶೇಷನ ಮುಖದಿಂದ ಹೊರಡುವ ಬೆಂಕಿಯಿಂದ ಸುಟ್ಟುಹೋಗುವುದನ್ನು ನೋಡಿ ಬ್ರಹ್ಮಲೋಕಕ್ಕೆ ಹೊರಟುಹೋಗುತ್ತಾನೆ. ಆ ಬ್ರಹ್ಮಲೋಕವು ದೊಡ್ಡ-ದೊಡ್ಡ ಸಿದ್ಧೇಶ್ವರರು ವಿಮಾನದಲ್ಲಿ ವಿಹರಿಸುವ ದಿವ್ಯ ಸ್ಥಾನ. ಈ ಲೋಕದ ಆಯುಸ್ಸು ಬ್ರಹ್ಮನ ಆಯುಸ್ಸಿನಷ್ಟು ಎರಡು ಪರಾರ್ಧವಿರುತ್ತದೆ. ॥ ೨೬ ॥ ಅಲ್ಲಿ ಶೋಕ-ಮೋಹಗಳಿಲ್ಲ, ಮುಪ್ಪಾಗಲೀ, ಮರಣವಾಗಲೀ ಇಲ್ಲ, ಯಾರಿಂದಲೂ ಯಾವುದೇ ಬಗೆಯ ಉದ್ವೇಗವಾಗಲೀ, ಭಯವಾಗಲೀ, ಇರಲು ಸಾಧ್ಯವೇ ಇಲ್ಲ. ಅಲ್ಲಿ ದುಃಖ ಇರುವುದಾದರೆ – ಪರಮಪದಕ್ಕೆ ಹೋಗದೆ ಇರುವ ಜನರು ಅನುಭವಿಸುವ ಹುಟ್ಟು-ಸಾವುಗಳ ಅತಿಘೋರವಾದ ಸಂಕಟವನ್ನು ಕಂಡು ದಯೆಯಿಂದ ಅಲ್ಲಿಯ ಜನರ ಮನಸ್ಸಿಗೆ ನೋವಾಗುತ್ತಾ ಇರುತ್ತದೆ. ॥ ೨೭ ॥ ಸತ್ಯಲೋಕವನ್ನು ತಲುಪಿದ ಬಳಿಕ ಆ ಯೋಗಿಯು ನಿರ್ಭಯನಾಗಿ ತನ್ನ ಸೂಕ್ಷ್ಮಶರೀರವನ್ನು ಪೃಥ್ವಿತತ್ತ್ವದಲ್ಲಿ ಸೇರಿಸಿಬಿಟ್ಟು ಆತುರವಿಲ್ಲದೆ ಏಳು ಆವರಣಗಳನ್ನು ಭೇದಿಸುತ್ತಾನೆ. ಪೃಥ್ವಿರೂಪದಿಂದ ಜಲವನ್ನೂ ಮತ್ತು ಜಲರೂಪದಿಂದ ತೇಜೋರೂಪವಾದ ಆವರಣಗಳನ್ನು ತಲುಪಿ ಅವನು ಜ್ಯೋತಿರೂಪದಿಂದ ವಾಯುರೂಪವಾದ ಆವರಣಕ್ಕೆ ಬರುವನು. ಅಲ್ಲಿಂದ ಸಕಾಲದಲ್ಲಿ ಬ್ರಹ್ಮನ ಅನಂತತೆಯ ಅರಿವನ್ನುಂಟುಮಾಡುವ ಆಕಾಶ ರೂಪದ ಆವರಣವನ್ನು ಹೊಂದುತ್ತಾನೆ. ಈ ಆಕಾಶವು ಬೃಹತ್ ಆತ್ಮನ ಚಿಹ್ನೆಯಾಗಿದೆ. ॥ ೨೮॥ ಈ ಪ್ರಕಾರವಾಗಿ ಸ್ಥೂಲವಾದ ಆವರಣಗಳನ್ನು ದಾಟಿಹೋಗುವ ಸಮಯದಲ್ಲಿ ಆತನ ಇಂದ್ರಿಯಗಳೂ ಕೂಡ ತಮ್ಮ-ತಮ್ಮ ಸೂಕ್ಷ್ಮವಾದ ಅಧಿಷ್ಠಾನದಲ್ಲಿ ಲೀನವಾಗುತ್ತಾ ಹೋಗುತ್ತವೆ. ಘ್ರಾಣೇಂದ್ರಿಯವು ಗಂಧತನ್ಮಾತ್ರೆಯಲ್ಲಿಯೂ, ರಸನೇಂದ್ರಿಯವು ರಸತನ್ಮಾತ್ರೆಯಲ್ಲಿಯೂ, ನೇತ್ರವು ರೂಪತನ್ಮಾತ್ರೆಯಲ್ಲಿಯೂ, ತ್ವಚೆಯು ಸ್ಪರ್ಶತನ್ಮಾತ್ರೆಯಲ್ಲಿಯೂ, ಶ್ರೋತ್ರವು ಶಬ್ದತನ್ಮಾತ್ರೆಯಲ್ಲಿಯೂ, ಮತ್ತು ಕರ್ಮೇಂದ್ರಿಗಳು ತಮ್ಮ-ತಮ್ಮ ಕ್ರಿಯಾಶಕ್ತಿಯಲ್ಲಿಯೂ ಸೇರಿಕೊಂಡು ತಮ್ಮ-ತಮ್ಮ ಸೂಕ್ಷ್ಮಸ್ವರೂಪವನ್ನು ಹೊಂದುತ್ತವೆ. ॥ ೨೯ ॥ ಈ ರೀತಿ ಯೋಗಿಯು ಪಂಚಭೂತಗಳ ಸ್ಥೂಲ-ಸೂಕ್ಷ್ಮ ಆವರಣಗಳನ್ನು ದಾಟಿ ಅಹಂಕಾರ ತತ್ತ್ವದಲ್ಲಿ ಪ್ರವೇಶಿಸುತ್ತಾನೆ. ಅಲ್ಲಿ ಸೂಕ್ಷ್ಮ ಭೂತಗಳನ್ನು ತಾಮಸ ಅಹಂಕಾರದಲ್ಲಿಯೂ, ಇಂದ್ರಿಯಗಳನ್ನು ರಾಜಸ ಅಹಂಕಾರದಲ್ಲಿಯೂ, ಮನಸ್ಸು ಇಂದ್ರಿಯಗಳ ಅಧಿಷ್ಠಾತೃ ದೇವತೆಗಳನ್ನು ಸಾತ್ತ್ವಿಕ ಅಹಂಕಾರದಲ್ಲಿಯೂ ಲಯಗೊಳಿಸುತ್ತಾನೆ. ಅನಂತರ ಅಹಂಕಾರ ಸಹಿತ ಲಯರೂಪವಾದ ಗತಿಯ ಮೂಲಕ ಮಹತ್ತತ್ತ್ವದಲ್ಲಿ ಪ್ರವೇಶಿಸಿ, ಕೊನೆಗೆ ಸಮಸ್ತ ಗುಣಗಳ ಲಯಸ್ಥಾನವಾದ ಪ್ರಕೃತಿರೂಪವಾದ ಆವರಣದಲ್ಲಿ ಹೋಗಿ ಸೇರಿಕೊಳ್ಳುತ್ತಾನೆ. ॥ ೩೦ ॥ ಮಹಾರಾಜಾ ! ಮಹಾಪ್ರಳಯದ ಸಮಯದಲ್ಲಿ ಪ್ರಕೃತಿರೂಪವಾದ ಆವರಣವು ಲಯಹೊಂದಿದಾಗ ಆ ಯೋಗಿಯು ತಾನೂ ಆನಂದಸ್ವರೂಪನಾಗಿ, ಆವರಣರಹಿತನಾಗಿ, ಪರಮಾನಂದ ಸ್ವರೂಪನೂ, ಪ್ರಶಾಂತನೂ ಆಗಿರುವ ಪರಮಾತ್ಮನನ್ನು ಹೊಂದಿಬಿಡುತ್ತಾನೆ. ಈ ಭಗವನ್ಮಯ ಗತಿಯನ್ನು ಪಡೆದವನು ಮತ್ತೆ ಈ ಸಂಸಾರಕ್ಕೆ ಹಿಂದಿರುಗಬೇಕಾಗುವುದಿಲ್ಲ. ॥ ೩೧ ॥ ಪರೀಕ್ಷಿದ್ರಾಜನೇ ! ನಿನ್ನ ಪ್ರಶ್ನೆಗೆ ಉತ್ತರ

ನ ಹ್ಯತೋಽನ್ಯಃ ಶಿವಃ ಪಂಥಾ ವಿಶತಃ ಸಂಸೃತಾವಿಹ ।
ವಾಸುದೇವೇ ಭಗವತಿ ಭಕ್ತಿಯೋಗೋ ಯತೋ ಭವೇತ್ ॥ ೩೩ ॥

ಭಗವಾನ್ ಬ್ರಹ್ಮ ಕಾರ್ತ್ಸ್ನ್ಯೇನ ತ್ರಿರನ್ವೀಕ್ಷ್ಯ ಮನೀಷಯಾ ।
ತದಧ್ಯವಸ್ಯತ್ ಕೂಟಸ್ಥೋ ರತಿರಾತ್ಮನ್ಯತೋ ಭವೇತ್ ॥ ೩೪ ॥

ಭಗವಾನ್ಸರ್ವಭೂತೇಷು ಲಕ್ಷಿತಃ ಸ್ವಾತ್ಮನಾ ಹರಿಃ ।
ದೃಶ್ಯೈರ್ಬುದ್ಧ್ಯಾದಿಭಿರ್ದ್ರಷ್ಟಾ ಲಕ್ಷಣೈರನುಮಾಪಕೈಃ ॥ ೩೫ ॥

ತಸ್ಮಾತ್ಸರ್ವಾತ್ಮನಾ ರಾಜನ್ ಹರಿಃ ಸರ್ವತ್ರ ಸರ್ವದಾ ।
ಶ್ರೋತವ್ಯಃ ಕೀರ್ತಿತವ್ಯಶ್ಚ ಸ್ಮರ್ತವ್ಯೋ ಭಗವಾನ್ನೃಣಾಮ್ ॥ ೩೬ ॥

ಪಿಬಂತಿ ಯೇ ಭಗವತ ಆತ್ಮನಃ ಸತಾಂ
ಕಥಾಮೃತಂ ಶ್ರವಣಪುಟೇಷು ಸಂಭೃತಮ್ ।
ಪುನಂತಿ ತೇ ವಿಷಯವಿದೂಷಿತಾಶಯಂ
ವ್ರಜಂತಿ ತಚ್ಚರಣಸರೋರುಹಾಂತಿಕಮ್ ॥ ೩೭ ॥

ವಾಗಿ ನಾನು ವೇದಗಳು ಹೇಳುವ ಸನಾತನವಾದ ಎರಡು ಮಾರ್ಗಗಳನ್ನು ವರ್ಣಿಸಿದ್ದೇನೆ. ಮೊದಲನೆಯದು ಸದ್ಯೋಮುಕ್ತಿ, ಎರಡನೆಯದು ಕ್ರಮಮುಕ್ತಿ. ಹಿಂದೆ ಬ್ರಹ್ಮದೇವರು ಆರಾಧಿಸಿ ಪ್ರಶ್ನೆಮಾಡಿದಾಗ ಭಗವಾನ್ ವಾಸುದೇವನು ಆತನಿಗೆ ಉತ್ತರವನ್ನಾಗಿ ಇದನ್ನೇ ಹೇಳಿದ್ದನು. ॥ ೩೨ ॥

ಸಂಸಾರಚಕ್ರದಲ್ಲಿ ಬಿದ್ದಿರುವ ಮನುಷ್ಯನಿಗೆ ಯಾವ ಸಾಧನೆಯಿಂದ ಭಗವಾನ್ ಶ್ರೀಕೃಷ್ಣನಲ್ಲಿ ಅನನ್ಯ ಪ್ರೇಮಮಯ ಭಕ್ತಿಯು ಪ್ರಾಪ್ತವಾಗುತ್ತದೋ, ಅದಲ್ಲದೆ ಬೇರೆ ಯಾವುದೂ ಶ್ರೇಯಸ್ಕರವಾದ ಮಾರ್ಗವಿಲ್ಲ. ॥ ೩೩ ॥ ಪೂಜ್ಯರಾದ ಬ್ರಹ್ಮದೇವರು ಏಕಾಗ್ರಚಿತ್ತದಿಂದ ಎಲ್ಲ ವೇದಗಳನ್ನು ಮೂರುಬಾರಿ ಪರಿಶೀಲನೆ ಮಾಡಿ ಯಾವುದರಿಂದ ಸರ್ವಾತ್ಮಕನಾದ ಭಗವಾನ್ ಶ್ರೀಕೃಷ್ಣನಲ್ಲಿ ಅನನ್ಯ ಪ್ರೇಮ ಉಂಟಾಗುವುದೋ, ಅದೇ ಸರ್ವಶ್ರೇಷ್ಠವಾದ ಧರ್ಮವಾಗಿದೆ ಎಂದು ಬುದ್ಧಿಯಿಂದ ನಿಶ್ಚಯ ಮಾಡಿದರು. ॥ ೩೪ ॥ ಸಮಸ್ತ ಚರಾಚರ ಪ್ರಾಣಿಗಳಲ್ಲಿ ಅವುಗಳ ಆತ್ಮರೂಪದಲ್ಲಿ ಭಗವಾನ್ ಶ್ರೀಕೃಷ್ಣನೇ ಲಕ್ಷಿತನಾಗಿದ್ದಾನೆ. ಏಕೆಂದರೆ, ಇವೆಲ್ಲಕ್ಕೂ ಸಾಕ್ಷಿಯಾಗಿರುವ ಏಕಮಾತ್ರ ದ್ರಷ್ಟಾ ಆತನೇ. ದೃಶ್ಯಪದಾರ್ಥಗಳಾದ ಬುದ್ಧಿ ಮುಂತಾದವುಗಳು ತರ್ಕದಿಂದ ಆತನಲ್ಲಿಗೆ ಒಯ್ಯುವ ಲಕ್ಷಣಗಳೇ ಆಗಿವೆ. ॥ ೩೫ ॥ ಪರೀಕ್ಷಿತನೇ! ಅದಕ್ಕಾಗಿ ಮನುಷ್ಯನು ಎಲ್ಲ ಹೊತ್ತಿನಲ್ಲಿ, ಎಲ್ಲ ಅವಸ್ಥೆಗಳಲ್ಲಿ ತನ್ನ ಸಮಸ್ತ ಶಕ್ತಿಯಿಂದ ತನ್ನೊಳಗೆ ಇರುವ ಭಗವಾನ್ ಶ್ರೀಹರಿಯ ಕುರಿತಾದ ಶ್ರವಣ, ಕೀರ್ತನೆ, ಸ್ಮರಣೆಗಳನ್ನು ಮಾಡಬೇಕು. ಮನುಷ್ಯರ ಶ್ರೇಯಸ್ಸಿಗಾಗಿ ಇದೇ ಸರ್ವಶ್ರೇಷ್ಠ ಉಪಾಯವಾಗಿದೆ. ॥ ೩೬ ॥ ರಾಜನೇ! ಸಂತ-ಸತ್ಪುರುಷರು ಆತ್ಮಸ್ವರೂಪೀ ಭಗವಂತನ ಕಥಾಮೃತವನ್ನು ಹಂಚುತ್ತಲೇ ಇರುತ್ತಾರೆ. ಯಾರು ತಮ್ಮ ಕಿವಿಗಳೆಂಬ ದೊನ್ನೆಯಲ್ಲಿ ತುಂಬಿ ಕೊಂಡು ಅದನ್ನು ಪಾನಮಾಡುತ್ತಾರೋ, ಅವರ ಹೃದಯದಿಂದ ವಿಷಯಗಳ ಕಾಲುಷ್ಯವು ಹೊರಟುಹೋಗುತ್ತದೆ. ಅವರು ಶುದ್ಧರಾಗಿ ಭಗವಾನ್ ಶ್ರೀಕೃಷ್ಣನ ಚರಣಕಮಲಗಳ ಸಾನ್ನಿಧ್ಯವನ್ನು ಹೊಂದುತ್ತಾರೆ. ಆದ್ದರಿಂದ ಭಗವಂತನ ಭಕ್ತಿಯನ್ನೇ ಮಾಡಬೇಕು. ॥ ೩೭ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ
ಪುರುಷಸಂಸ್ಥಾವರ್ಣನಂ ನಾಮ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಕಾಮನೆಗಳಿಗೆ ತಕ್ಕಂತೆ ಬೇರೆ-ಬೇರೆ ದೇವತೆಗಳ ಉಪಾಸನೆ ಮತ್ತು ಭಗವದ್ಭಕ್ತಿಯ ಪ್ರಧಾನತೆಯ ನಿರೂಪಣೆ

*ಶ್ರೀಶುಕ ಉವಾಚ*

ಏವಮೇತನ್ನಿಗದಿತಂ ಪೃಷ್ಟವಾನ್ಯದ್ಭವಾನ್ ಮಮ ।
ನೃಣಾಂ ಯನ್ಮ್ರಿಯಮಾಣಾನಾಂ ಮನುಷ್ಯೇಷು ಮನೀಷಿಣಾಮ್ ॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಮರಣಕಾಲವು ಸಮೀಪಿಸಿದಾಗ ಬುದ್ಧಿವಂತನಾದ ಮನುಷ್ಯನು ಏನು ಮಾಡಬೇಕು ? ಎಂದು ನೀನು ಪ್ರಶ್ನಿಸಿದುದಕ್ಕೆ ನಾನು ಉತ್ತರ ಹೇಳಿಯಾಯಿತು. ॥ ೧ ॥ ಲೌಕಿಕವನ್ನು ಬಯಸುವವರು ಯಾವ-ಯಾವ ದೇವತೆಯಲ್ಲಿ ಏನೇನನ್ನು ಬೇಡಬೇಕೆಂಬುದನ್ನು ಈಗ ಹೇಳುತ್ತೇನೆ

ಬ್ರಹ್ಮವರ್ಚಸಕಾಮಸ್ತು ಯಜೇತ ಬ್ರಹ್ಮಣಸ್ಪತಿಮ್ ।
ಇಂದ್ರಮಿಂದ್ರಿಯಕಾಮಸ್ತು ಪ್ರಜಾಕಾಮಃ ಪ್ರಜಾಪತೀನ್ ॥ ೨ ॥

ದೇವೀಂ ಮಾಯಾಂ ತು ಶ್ರೀಕಾಮ
ಸ್ತೇಜಸ್ಕಾಮೋ ವಿಭಾವಸುಮ್ ।
ವಸುಕಾಮೋ ವಸೂನ್ ರುದ್ರಾನ್
ವೀರ್ಯಕಾಮೋಽಥ ವೀರ್ಯವಾನ್ ॥ ೩ ॥

ಅನ್ನಾದ್ಯಕಾಮಸ್ತ್ವದಿತಿಂ ಸ್ವರ್ಗಕಾಮೋಽದಿತೇಃ ಸುತಾನ್ ।
ವಿಶ್ವಾನ್ ದೇವಾನ್ರಾಜ್ಯಕಾಮಃ ಸಾಧ್ಯಾನ್ಸಂಸಾಧಕೋ ವಿಶಾಮ್ ॥ ೪ ॥

ಆಯುಷ್ಕಾಮೋಽಶ್ವಿನೌ ದೇವೌ ಪುಷ್ಟಿಕಾಮ ಇಲಾಂ ಯಜೇತ್ ।
ಪ್ರತಿಷ್ಠಾಕಾಮಃ ಪುರುಷೋ ರೋದಸೀ ಲೋಕಮಾತರೌ ॥ ೫ ॥

ರೂಪಾಭಿಕಾಮೋ ಗಂಧರ್ವಾನ್ ಸ್ತ್ರೀಕಾಮೋಽಪ್ಸರಉರ್ವಶೀಮ್ ।
ಆಧಿಪತ್ಯಕಾಮಃ ಸರ್ವೇಷಾಂ ಯಜೇತ ಪರಮೇಷ್ಠಿನಮ್ ॥ ೬ ॥

ಯಜ್ಞಂ ಯಜೇದ್ಯಶಸ್ಕಾಮಃ ಕೋಶಕಾಮಃ ಪ್ರಚೇತಸಮ್ ।
ವಿದ್ಯಾಕಾಮಸ್ತು ಗಿರಿಶಂ ದಾಂಪತ್ಯಾರ್ಥ ಉಮಾಂ ಸತೀಮ್ ॥ ೭ ॥

ಧರ್ಮಾರ್ಥ ಉತ್ತಮಶ್ಲೋಕಂ ತಂತುಂ ತನ್ವನ್ ಪಿತೄನ್ಯಜೇತ್ ।
ರಕ್ಷಾಕಾಮಃ ಪುಣ್ಯಜನಾನೋಜಸ್ಕಾಮೋ ಮರುದ್ಗಣಾನ್ ॥ ೮ ॥

ರಾಜ್ಯಕಾಮೋ ಮನೂನ್ದೇವಾನ್ನಿರ್ಋತಿಂ ತ್ವಭಿಚರನ್ಯಜೇತ್ ।
ಕಾಮಕಾಮೋ ಯಜೇತ್ಸೋಮಂ ಅಕಾಮಃ ಪುರುಷಂ ಪರಮ್ ॥ ೯ ॥

ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ ।
ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಮ್ ॥ ೧೦ ॥

ಏತಾವಾನೇವ ಯಜತಾಮಿಹ ನಿಃಶ್ರೇಯಸೋದಯಃ ।
ಭಗವತ್ಯಚಲೋ ಭಾವೋ ಯದ್ ಭಾಗವತಸಂಗತಃ ॥ ೧೧ ॥

ಜ್ಞಾನಂ ಯದಾಪ್ರತಿನಿವೃತ್ತ ಗುಣೋರ್ಮಿಚಕ್ರ-
ಮಾತ್ಮಪ್ರಸಾದ ಉತ ಯತ್ರ ಗುಣೇಷ್ವಸಂಗಃ ।
ಕೈವಲ್ಯ ಸಮ್ಮತಪಥಸ್ತ್ವಥ ಭಕ್ತಿಯೋಗಃ
ಕೋ ನಿರ್ವೃತೋ ಹರಿಕಥಾಸು ರತಿಂ ನ ಕುರ್ಯಾತ್ ॥ ೧೨ ॥

ಬ್ರಹ್ಮವರ್ಚಸ್ಸನ್ನು ಬಯಸುವವನು ಬ್ರಹ್ಮಣಸ್ಪತಿಯನ್ನೂ, ಇಂದ್ರಿಯಗಳ ವಿಶೇಷಶಕ್ತಿಯನ್ನು ಇಚ್ಛಿಸುವವನು ಇಂದ್ರನನ್ನೂ, ಸಂತಾನದ ಅಪೇಕ್ಷೆ ಉಳ್ಳವರು ಪ್ರಜಾಪತಿಗಳನ್ನು ಉಪಾಸಿಸಬೇಕು. ॥ ೨ ॥ ಸಂಪತ್ತಿಗಾಗಿ ಶ್ರೀದೇವಿಯನ್ನೂ, ತೇಜಸ್ಸಿಗಾಗಿ ಅಗ್ನಿಯನ್ನೂ, ಧನಕ್ಕಾಗಿ ವಸುಗಳನ್ನೂ, ವೀರ್ಯವನ್ನು ಬಯಸುವವರು ರುದ್ರನನ್ನೂ ಉಪಾಸನೆಮಾಡಬೇಕು. ॥ ೩ ॥ ಹೇರಳವಾದ ಅನ್ನವನ್ನು ಪಡೆಯಲು ಅದಿತಿದೇವಿಯನ್ನೂ, ಸ್ವರ್ಗಕಾಮನೆಗಾಗಿ ಅದಿತಿಯ ಪುತ್ರರಾದ ದೇವತೆಗಳನ್ನೂ, ರಾಜ್ಯದ ಅಭಿಲಾಷೆಯುಳ್ಳವನು ವಿಶ್ವೇದೇವತೆಗಳನ್ನೂ, ಪ್ರಜೆಗಳನ್ನು ತನಗೆ ಅನುಕೂಲರನ್ನಾಗಿ ಮಾಡಿಕೊಳ್ಳಲು ಸಾಧ್ಯದೇವತೆಗಳನ್ನು ಆರಾಧಿಸಬೇಕು. ॥ ೪ ॥ ಆಯುಸ್ಸನ್ನು ಇಚ್ಛಿಸುವವನು ಅಶ್ವಿನೀಕುಮಾರರನ್ನೂ, ಪುಷ್ಟಿಗಾಗಿ ಪೃಥ್ವಿಯನ್ನೂ, ಪ್ರತಿಷ್ಠೆಯನ್ನು ಬಯಸುವವರು ಲೋಕದ ತಂದೆ-ತಾಯಿಗಳಾದ ದ್ಯಾವಾ-ಪೃಥ್ವಿಗಳನ್ನು ಆರಾಧಿಸಬೇಕು. ॥ ೫ ॥ ಸೌಂದರ್ಯಕ್ಕಾಗಿ ಗಂಧರ್ವರನ್ನೂ, ಪತ್ನಿಯ ಆಸೆಯಿದ್ದರೆ ಊರ್ವಶಿ ಎಂಬ ಅಪ್ಸರೆಯನ್ನೂ, ಎಲ್ಲರಿಗೂ ಅಧಿಪತಿ ಯಾಗಬೇಕೆಂಬ ಆಸೆಯಿದ್ದರೆ ಪರಮೇಷ್ಠಿ ಬ್ರಹ್ಮದೇವರನ್ನೂ ಉಪಾಸಿಸಬೇಕು. ॥ ೬ ॥ ಯಶಸ್ಸಿಗಾಗಿ ಯಜ್ಞಪುರುಷನನ್ನೂ, ಕೋಶದ ಆಸೆಯುಳ್ಳವನು ವರುಣನನ್ನೂ, ವಿದ್ಯಾಕಾಮನೆಗಾಗಿ ಶಂಕರನನ್ನೂ, ದಾಂಪತ್ಯಪ್ರೇಮ ಬಯಸುವವರು ಉಮಾದೇವಿಯನ್ನು ಪೂಜಿಸಬೇಕು. ॥ ೭ ॥ ಧರ್ಮವನ್ನು ಸಂಪಾದಿಸಲು ಉತ್ತಮಶ್ಲೋಕನಾದ ವಿಷ್ಣುವನ್ನೂ, ವಂಶಪರಂಪರೆಯನ್ನು ಬಯಸುವವನು ಪಿತೃಗಳನ್ನೂ, ಪೀಡೆಗಳ ರಕ್ಷಣೆಗಾಗಿ ಯಕ್ಷರನ್ನೂ, ಬಲಶಾಲಿಯಾಗಲು ಮರುದ್ದೇವತೆಗಳನ್ನೂ ಪೂಜಿಸಬೇಕು. ॥ ೮ ॥ ರಾಜ್ಯಕಾಮನೆಯುಳ್ಳವನು ಮನ್ವಂತರಗಳಿಗೆ ಒಡೆಯರಾದ ಮನುಗಳನ್ನೂ, ಅಭಿಚಾರಿಕ ಕರ್ಮಗಳಿಗಾಗಿ ನಿರ್ಋತಿಯನ್ನೂ, ಕಾಮಭೋಗಗಳಿಗೆ ಚಂದ್ರನನ್ನೂ, ನಿಷ್ಕಾಮಭಾವವನ್ನು ಪಡೆಯುವ ಆಸೆಯುಳ್ಳವರು ಪರಮಪುರುಷ ಶ್ರೀಮನ್ನಾರಾಯಣನನ್ನೂ ಆರಾಧಿಸಬೇಕು. ॥ ೯ ॥ ಉದಾರವಾದ ಮನಸ್ಸುಳ್ಳ ಬುದ್ಧಿವಂತನಾದ ಮನುಷ್ಯನು ನಿಷ್ಕಾಮನಾಗಿರಲೀ, ಸಕಾಮನಾಗಿರಲೀ, ಅಥವಾ ಮೋಕ್ಷಕಾಮನಾಗಿರಲೀ, ಅವನು ತೀವ್ರವಾದ ಭಕ್ತಿಯೋಗದಿಂದ ಆ ಭಗವಂತನಾದ ಶ್ರೀಪುರುಷೋತ್ತಮನನ್ನೇ ಆರಾಧಿಸಬೇಕು. ॥ ೧೦ ॥ ಭಗವಂತನ ಪ್ರೇಮೀಭಕ್ತರ ಸಂಗಮಾಡಿ, ಭಗವಂತನಲ್ಲಿ ಅವಿಚಲವಾದ ಭಕ್ತಿಯನ್ನು ಪಡೆದು ಕೊಳ್ಳುವುದರಲ್ಲೇ ಎಲ್ಲ ಸಾಧಕರಿಗೆ ಎಲ್ಲಕ್ಕಿಂತ ದೊಡ್ಡದಾದ ಹಿತವಿದೆ. ॥ ೧೧ ॥ ಇಂತಹ ಸತ್ಪುರುಷರ ಸತ್ಸಂಗದಲ್ಲಿ ನಡೆಯುವ ಭಗವಂತನ ಲೀಲಾ-ಕಥೆಗಳಿಂದ ಸಂಸಾರಸಾಗರದ ತ್ರಿಗುಣಮಯ ಅಲೆಗಳ ಹೊಡೆತಗಳು ಶಾಂತವಾಗಿ, ಹೃದಯವು ಶುದ್ಧವಾಗಿ ಆನಂದದ ಅನುಭವವಾಗುವಂತಹ ದುರ್ಲಭಜ್ಞಾನದ ಪ್ರಾಪ್ತಿಯಾಗುತ್ತದೆ. ಇದರಿಂದ ಇಂದ್ರಿಯಗಳಲ್ಲಿ ಆಸಕ್ತಿಯು ಉಳಿಯದೆ ಕೈವಲ್ಯ ಮೋಕ್ಷಕ್ಕೆ ಸರ್ವಸಮ್ಮತವಾದ ಭಕ್ತಿಯೋಗವು ಪ್ರಾಪ್ತವಾಗುತ್ತದೆ. ಶ್ರೀಭಗವಂತನ ರಸಮಯವಾದ ಹರಿಕಥೆಗಳ ರುಚಿಹತ್ತಿದ ಬಳಿಕ ಯಾರಿಗೆ ತಾನೇ ಅದರಲ್ಲಿ ಭಕ್ತಿಯುಂಟಾಗುವುದಿಲ್ಲ? ॥ ೧೨ ॥

*ಶೌನಕ ಉವಾಚ*

ಇತ್ಯಭಿವ್ಯಾಹೃತಂ ರಾಜಾ ನಿಶಮ್ಯ ಭರತರ್ಷಭಃ ।
ಕಿಮನ್ಯತ್ಪೃಷ್ಟವಾನ್ಭೂಯೋ ವೈಯಾಸಕಿಮೃಷಿಂ ಕವಿಮ್ ॥ ೧೩ ॥

ಏತಚ್ಛುಶ್ರೂಷತಾಂ ವಿದ್ವನ್ಸೂತ ನೋಽರ್ಹಸಿ ಭಾಷಿತುಮ್ ।
ಕಥಾ ಹರಿಕಥೋದರ್ಕಾಃ ಸತಾಂ ಸ್ಯುಃ ಸದಸಿ ಧ್ರುವಮ್ ॥ ೧೪ ॥

ಸ ವೈ ಭಾಗವತೋ ರಾಜಾ ಪಾಂಡವೇಯೋ ಮಹಾರಥಃ ।
ಬಾಲಕ್ರೀಡನಕೈಃ ಕ್ರೀಡನ್ ಕೃಷ್ಣಕ್ರೀಡಾಂ ಯ ಆದದೇ ॥ ೧೫ ॥

ವೈಯಾಸಕಿಶ್ಚ ಭಗವಾನ್ ವಾಸುದೇವಪರಾಯಣಃ।
ಉರುಗಾಯಗುಣೋದಾರಾಃ ಸತಾಂ ಸ್ಯುರ್ಹಿ ಸಮಾಗಮೇ ॥ ೧೬ ॥

ಆಯುರ್ಹರತಿ ವೈ ಪುಂಸಾಂ ಉದ್ಯನ್ನಸ್ತಂ ಚ ಯನ್ನಸೌ ।
ತಸ್ಯರ್ತೇ ಯತ್ಕ್ಷಣೋ ನೀತ ಉತ್ತಮಶ್ಲೋಕವಾರ್ತಯಾ ॥ ೧೭ ॥

ತರವಃ ಕಿಂ ನ ಜೀವಂತಿ ಭಸ್ತ್ರಾಃ ಕಿಂ ನ ಶ್ವಸಂತ್ಯುತ ।
ನ ಖಾದಂತಿ ನ ಮೇಹಂತಿ ಕಿಂ ಗ್ರಾಮಪಶವೋಽಪರೇ ॥ ೧೮ ॥

ಶ್ವವಿಡ್ವರಾಹೋಷ್ಟ್ರಖರೈಃ ಸಂಸ್ತುತಃ ಪುರುಷಃ ಪಶುಃ ।
ನ ಯತ್ಕರ್ಣಪಥೋಪೇತೋ ಜಾತು ನಾಮ ಗದಾಗ್ರಜಃ ॥ ೧೯ ॥

ಬಿಲೇ ಬತೋರುಕ್ರಮವಿಕ್ರಮಾನ್ ಯೇ
ನ ಶೃಣ್ವತಃ ಕರ್ಣಪುಟೇ ನರಸ್ಯ ।
ಜಿಹ್ವಾಸತೀ ದಾರ್ದುರಿಕೇವ ಸೂತ
ನ ಚೋಪಗಾಯತ್ಯುರುಗಾಯಗಾಥಾಃ ॥ ೨೦ ॥

ಭಾರಃ ಪರಂ ಪಟ್ಟ ಕಿರೀಟಜುಷ್ಟ-
ಮಪ್ಯುತ್ತಮಾಂಗಂ ನ ನಮೇನ್ಮುಕುಂದಮ್ ।
ಶಾವೌ ಕರೌ ನೋ ಕುರುತಃ ಸಪರ್ಯಾಂ
ಹರೇರ್ಲಸತ್ಕಾಂಚನಕಂಕಣೌ ವಾ ॥ ೨೧ ॥

ಬರ್ಹಾಯಿತೇ ತೇ ನಯನೇ ನರಾಣಾಂ
ಲಿಂಗಾನಿ ವಿಷ್ಣೋರ್ನ ನಿರೀಕ್ಷತೋ ಯೇ ।
ಪಾದೌ ನೃಣಾಂ ತೌ ದ್ರುಮಜನ್ಮಭಾಜೌ
ಕ್ಷೇತ್ರಾಣಿ ನಾನುವ್ರಜತೋ ಹರೇರ್ಯೌ ॥ ೨೨ ॥

**ಶೌನಕರು ಕೇಳುತ್ತಾರೆ** – ಸೂತಪುರಾಣಿಕರೇ ! ಶುಕಮಹಾಮುನಿಗಳು ಹೇಳಿದ ಮಾತನ್ನು ಕೇಳಿದ ಭರತಕುಲತಿಲಕನಾದ ಪರೀಕ್ಷಿದ್ರಾಜನು ಜ್ಞಾನಿಶ್ರೇಷ್ಠರೂ, ವರ್ಣನಕಲಾನಿಪುಣರೂ ಆದ ವ್ಯಾಸಪುತ್ರರನ್ನು ಮತ್ತೇನು ಪ್ರಶ್ನಿಸಿದರು ? ॥ ೧೩ ॥ ಮಹಾತ್ಮರಾದ ಸೂತರೇ ! ನೀವಾದರೋ ಎಲ್ಲವನ್ನೂ ಬಲ್ಲವರಾಗಿದ್ದೀರಿ. ಸತ್ಪುರುಷರು ಸೇರಿದ ಸಭೆಯಲ್ಲಿ ಭಗವಂತನ ಕಥಾಮೃತದ ಆಸ್ವಾದನೆಯಲ್ಲೇ ಪರ್ಯವಸಾನ ಹೊಂದುವ ಮಾತುಗಳೇ ನಡೆಯುವುವು ತಾನೇ ? ನಾವುಗಳು ಅದನ್ನು ಪ್ರೇಮದಿಂದ ಕೇಳಲಿಚ್ಛಿಸುವೆವು. ನೀವು ದಯವಿಟ್ಟು ಹೇಳುವವರಾಗಿರಿ. ॥ ೧೪ ॥ ಪಾಂಡವಕುಲ ನಂದನನಾದ ಮಹಾರಥೀ ಪರೀಕ್ಷಿದ್ರಾಜನು ಪರಮ ಭಾಗವತೋತ್ತಮನಾಗಿದ್ದನು. ಬಾಲ್ಯದಲ್ಲಿ ಆಟವಾಡುವಾಗಲೂ ಶ್ರೀಕೃಷ್ಣನ ಸಂಬಂಧವಾದ ಆಟಗಳಿಂದಲೇ ಹೆಚ್ಚಿನ ರಸವನ್ನು ಅನುಭವಿಸುತ್ತಿದ್ದನು. ॥ ೧೫ ॥ ಭಗವನ್ಮಯ ಶ್ರೀಶುಕಮಹಾಮುನಿಗಳೂ ಕೂಡ ಹುಟ್ಟಿದಂದಿನಿಂದಲೇ ಭಗವತ್ಪರಾಯಣರಾಗಿದ್ದರು. ಇಂತಹ ಸತ್ಪುರುಷರ ಸಮಾಗಮವಾದಾಗ ಭಗವಂತನ ಮಂಗಳಮಯ ಗುಣಗಳ ದಿವ್ಯ ಚರ್ಚೆಯೇ ಅವಶ್ಯವಾಗಿ ನಡೆದಿರಬೇಕು. ॥ ೧೬ ॥ ಮನುಷ್ಯರ ಜೀವನದಲ್ಲಿ ಭಗವಾನ್ ಶ್ರೀಕೃಷ್ಣನ ಅನಂತಕಲ್ಯಾಣ ಗುಣಗಳ ಗಾನ-ಶ್ರವಣದಲ್ಲಿ ಕಳೆಯುವ ಕಾಲವೇ ಸಾರ್ಥಕವಾದ ಕಾಲವು. ಬೇರೆ ರೀತಿಯಲ್ಲಿ ಕಳೆದ ಆಯುಸ್ಸು ವ್ಯರ್ಥವೇ ಸರಿ. ಭಗವಾನ್ ಭಾಸ್ಕರನು ಪ್ರತಿದಿನವೂ ಉದಯಾಸ್ತದಿಂದ ಅವರ ಆಯುಸ್ಸನ್ನು ಕಸಿದುಕೊಳ್ಳುವನು. ॥ ೧೭ ॥ ವೃಕ್ಷಗಳು ಜೀವಿಸುತ್ತಿಲ್ಲವೇ ? ಕಮ್ಮಾರನ ಚರ್ಮದ ತಿದಿಯು ಉಸಿರಾಡುವುದಿಲ್ಲವೇ ? ಗ್ರಾಮದ ಸಾಕುಪ್ರಾಣಿಗಳು ಮನುಷ್ಯರಂತೆ ತಿಂದುಂಡು ಬದುಕುವುದಿಲ್ಲವೇ ? ಶ್ರೀಕೃಷ್ಣನ ಕಥಾ ಮೃತವು ಯಾವಾಗಲೂ ಕಿವಿಗೆ ಬೀಳದಿರುವ ನರಪಶುವು – ನಾಯಿ, ಹಂದಿ, ಒಂಟೆ, ಕತ್ತೆಗಳಿಗಿಂತಲೂ ನೀಚವೆಂದು ತಿಳಿಯಬೇಕು. ॥ ೧೮-೧೯ ॥

ಸೂತಪುರಾಣಿಕರೇ ! ಭಗವಾನ್ ಶ್ರೀಕೃಷ್ಣನ ದಿವ್ಯಕಥೆಯನ್ನು ಕೇಳದೆ ಇರುವ ಮನುಷ್ಯನ ಕಿವಿಗಳು ಇಲಿಗಳ ಬಿಲದಂತೆ ಯಲ್ಲವೇ ? ಹಾಗೆಯೇ ಆ ಭಗವಂತನ ಲೀಲಾ-ಕಥೆಗಳನ್ನು ಹಾಡದವನ ನಾಲಿಗೆಯು ಕಪ್ಪೆಗಳ ನಾಲಿಗೆಗೆ ಸಮಾನವಲ್ಲವೇ ? ॥ ೨೦ ॥ ಭಗವಾನ್ ಮುಕುಂದನ ಚರಣಗಳಿಗೆ ಎರಗದಿರುವ ತಲೆಯು ರೇಶ್ಮೆಯ ರುಮಾಲು, ರತ್ನಕಿರೀಟಗಳಿಂದ ಕೂಡಿದ್ದರೂ ಕೇವಲ ಹೊರೆಯೆಂದೇ ಭಾವಿಸಬೇಕು. ಶ್ರೀಭಗವಂತನ ಸೇವೆ-ಪೂಜೆಗಳನ್ನು ಮಾಡದ ಕೈಗಳು ಥಳ-ಥಳಿಸುವ ಚಿನ್ನದ ಕಂಕಣಗಳಿಂದ ಕೂಡಿದ್ದರೂ ಹೆಣದ ಕೈಗಳಂತೆ ಆಗಿವೆ. ॥ ೨೧ ॥ ಭಗವಂತನ ಸ್ಮರಣೆ ಕೊಡಿಸುವಂತಹ ಮೂರ್ತಿ, ತೀರ್ಥ, ನದಿಗಳನ್ನು ದರ್ಶಿಸದೇ ಇರುವ ಕಣ್ಣುಗಳು ನವಿಲುಗರಿಯ ಕಣ್ಣುಗಳಂತೆ ಇವೆ. ಭಗವಂತನ ದಿವ್ಯ ಕ್ಷೇತ್ರಗಳಿಗೆ ಹೋಗದಿರುವ ಕಾಲುಗಳು ಮರಗಾಲುಗಳೇ ಸರಿ. ಅಥವಾ ವೃಕ್ಷಜಾತಿಯ ಜೀವಿಗಳಿಗೆ ಸಮಾನವಾದ ಕಾಲುಗಳು. ವೃಕ್ಷಗಳಲ್ಲಿ ಚೈತನ್ಯವಿದ್ದರೂ ಅವು ನಡೆಯಲಾರವು. ॥ ೨೨ ॥

ಜೀವಚ್ಛವೋ ಭಾಗವತಾಂಘ್ರಿರೇಣುಂ
ನ ಜಾತು ಮರ್ತ್ಯೋಽಭಿಲಭೇತ ಯಸ್ತು ।
ಶ್ರೀವಿಷ್ಣುಪದ್ಯಾ ಮನುಜಸ್ತುಲಸ್ಯಾಃ
ಶ್ವಸಂಛವೋ ಯಸ್ತು ನ ವೇದ ಗಂಧಮ್ ॥ ೨೩ ॥

ಭಗವದ್ಭಕ್ತರಾದ ಸಂತರ ಚರಣಧೂಳಿಯನ್ನು ಎಂದೂ ತಲೆಯಮೇಲೆ ಮುಡಿದುಕೊಳ್ಳದ ಮನುಷ್ಯನು ಬದುಕಿ ದ್ದರೂ ಶವಕ್ಕೆ ಸಮಾನನು. ಶ್ರೀಕೃಷ್ಣನ ಚರಣಗಳಿಗೆ ಅರ್ಪಿಸಿದ ತುಳಸಿಯನ್ನು ಆಘ್ರಾಣಿಸದ ಮನುಷ್ಯನು ಉಸಿರಾಡುತ್ತಿದ್ದರೂ ಹೆಣದಂತೆಯೇ ಆಗಿದ್ದಾನೆ. ॥ ೨೩ ॥

ತದಶ್ಮಸಾರಂ ಹೃದಯಂ ಬತೇದಂ
ಯದ್ಗೃಹ್ಯಮಾಣೈರ್ಹರಿನಾಮಧೇಯೈಃ ।
ನ ವಿಕ್ರಿಯೇತಾಥ ಯದಾ ವಿಕಾರೋ
ನೇತ್ರೇ ಜಲಂ ಗಾತ್ರರುಹೇಷು ಹರ್ಷಃ ॥ ೨೪ ॥

ಸೂತಪುರಾಣಿಕರೇ! ಭಗವಾನ್ ಶ್ರೀಹರಿಯ ದಿವ್ಯನಾಮಗಳ ಶ್ರವಣ-ಸಂಕೀರ್ತನೆಗಳು ನಡೆಯುತ್ತಿದ್ದರೂ ಯಾರ ಹೃದಯವು ಕರಗುವುದಿಲ್ಲವೋ ಅದರ ಪರಿಣಾಮವಾಗಿ ಕಣ್ಣುಗಳಲ್ಲಿ ಆನಂದಬಾಷ್ಪಗಳು ಒಸರುವುದಿಲ್ಲವೋ, ಹರ್ಷದ ರೋಮಾಂಚನ ಉಂಟಾಗುವುದಿಲ್ಲವೋ, ಅದು ವಾಸ್ತವ ಹೃದಯವಾಗಿರದೆ ಕಬ್ಬಿಣದ ತುಂಡೇ ಆಗಿದೆ ॥ ೨೪ ॥

ಅಥಾಭಿಧೇಹ್ಯಂಗ ಮನೋಽನುಕೂಲಂ
ಪ್ರಭಾಷಸೇ ಭಾಗವತಪ್ರಧಾನಃ ।
ಯದಾಹ ವೈಯಾಸಕಿರಾತ್ಮವಿದ್ಯಾ-
ವಿಶಾರದೋ ನೃಪತಿಂ ಸಾಧು ಪೃಷ್ಟಃ ॥ ೨೫ ॥

ಮಹಾತ್ಮರೇ! ನಿಮ್ಮ ಮಧುರವಾದ ವಾಣಿಯು ಮನಸ್ಸಿಗೆ ರಮಣೀಯವಾಗಿ, ಅತ್ಯಂತ ಹಿತಕರವಾಗಿದೆ. ಪರೀಕ್ಷಿದ್ರಾಜನು ಶ್ರದ್ಧಾ-ಭಕ್ತಿಗಳಿಂದ ಕೇಳಿದ ಪ್ರಶ್ನೆಗಳಿಗೆ ಭಗವಂತನ ಪರಮಭಕ್ತರಾದ ಆತ್ಮವಿದ್ಯಾ ವಿಶಾರದರಾದ ಶ್ರೀಶುಕಮಹಾಮುನಿಗಳು ಏನು ಅಪ್ಪಣೆ ಕೊಡಿಸಿದರೋ ಅದನ್ನು ನಮಗೆ ದಯಮಾಡಿ ಹೇಳುವವರಾಗಿರಿ. ॥ ೨೫ ॥

ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ಸೃಷ್ಟಿವಿಷಯಕ ರಾಜನ ಪ್ರಶ್ನೆ – ಶ್ರೀಶುಕಮಹಾಮುನಿಗಳ ಕಥಾರಂಭ

*ಸೂತ ಉವಾಚ*

ವೈಯಾಸಕೇರಿತಿ ವಚಸ್ತತ್ತ್ವನಿಶ್ಚಯಮಾತ್ಮನಃ ।
ಉಪಧಾರ್ಯ ಮತಿಂ ಕೃಷ್ಣೇ ಔತ್ತರೇಯಃ ಸತೀಂ ವ್ಯಧಾತ್ ॥ ೧ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಮಹರ್ಷಿಗಳೇ! ಪರಮಾತ್ಮತತ್ತ್ವದ ಬಗೆಗೆ ನಿಶ್ಚಯವನ್ನುಂಟು ಮಾಡುವ ಶ್ರೀಶುಕಮಹಾಮುನಿಗಳ ಉಪದೇಶವನ್ನು ಕೇಳಿದೊಡನೆಯೇ, ಪರೀಕ್ಷಿದ್ರಾಜನು ತನ್ನ ಪರಿಶುದ್ಧವಾದ ಬುದ್ಧಿಯನ್ನು ಅನನ್ಯಭಾವದಿಂದ ಭಗವಾನ್ ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ಸಮರ್ಪಿಸಿಬಿಟ್ಟನು. ॥ ೧ ॥

ಆತ್ಮಜಾಯಾಸುತಾಗಾರಪಶುದ್ರವಿಣಬಂಧುಷು ।
ರಾಜ್ಯೇ ಚಾವಿಕಲೇ ನಿತ್ಯಂ ವಿರೂಢಾಂ ಮಮತಾಂ ಜಹೌ ॥ ೨ ॥

ಶರೀರ, ಪತ್ನೀ, ಪುತ್ರರು, ಅರಮನೆ, ಪಶು, ಧನ, ಬಂಧು-ಮಿತ್ರರು ಮತ್ತು ನಿಷ್ಕಂಟಕರಾಜ್ಯ ಇವುಗಳಲ್ಲಿ ಉಂಟಾಗಿದ್ದ ದೃಢವಾದ ಮಮತೆಯನ್ನು ಅವನು ಒಂದೇ ಕ್ಷಣದಲ್ಲಿ ತ್ಯಜಿಸಿಬಿಟ್ಟನು. ॥ ೨ ॥

ಪಪ್ರಚ್ಛ ಚೇಮಮೇವಾರ್ಥಂ ಯನ್ಮಾಂ ಪೃಚ್ಛಥ ಸತ್ತಮಾಃ ।
ಕೃಷ್ಣಾನುಭಾವಶ್ರವಣೇ ಶ್ರದ್ದಧಾನೋ ಮಹಾಮನಾಃ ॥ ೩ ॥

ಸಂಸ್ಥಾಂ ವಿಜ್ಞಾಯ ಸಂನ್ಯಸ್ಯ ಕರ್ಮ ತ್ರೈವರ್ಗಿಕಂ ಚ ಯತ್ ।
ವಾಸುದೇವೇ ಭಗವತಿ ಆತ್ಮಭಾವಂ ದೃಢಂ ಗತಃ ॥ ೪ ॥

ಎಲೈ ಮುನಿಶ್ರೇಷ್ಠರೇ! ಮಹಾತ್ಮನಾದ ಪರೀಕ್ಷಿದ್ರಾಜನು ತನ್ನ ಮೃತ್ಯುವಿನ ನಿಶ್ಚಿತ ಸಮಯವನ್ನು ಅರಿತಿದ್ದನು. ಅದಕ್ಕಾಗಿ ಅವನು ಧರ್ಮ, ಅರ್ಥ, ಕಾಮ ಇವುಗಳಿಗೆ ಸಂಬಂಧಿಸಿದ ಎಲ್ಲ ಕರ್ಮಗಳನ್ನು ಸಂನ್ಯಾಸ ಮಾಡಿದನು. ಬಳಿಕ ಭಗವಾನ್ ಶ್ರೀಕೃಷ್ಣನಲ್ಲಿ ಆತ್ಮಭಾವವನ್ನು ಹೊಂದಿ, ಪೂರ್ಣಶ್ರದ್ಧೆಯಿಂದ ಭಗವಾನ್ ಶ್ರೀಕೃಷ್ಣನ ಮಹಿಮೆಯನ್ನು ಕೇಳಲು ಅವನು ಶ್ರೀಶುಕಮುನಿಗಳಲ್ಲಿ ಪ್ರಶ್ನೆಯನ್ನು ಮಾಡಿದನು. ಅದನ್ನೇ ನೀವುಗಳೂ ನನ್ನಲ್ಲಿ ಕೇಳುತ್ತಿದ್ದೀರಲ್ಲ! ॥ ೩-೪ ॥

*ರಾಜೋವಾಚ*

ಸಮೀಚೀನಂ ವಚೋ ಬ್ರಹ್ಮನ್ಸರ್ವಜ್ಞಸ್ಯ ತವಾನಘ ।
ತಮೋ ವಿಶೀರ್ಯತೇ ಮಹ್ಯಂ ಹರೇಃ ಕಥಯತಃ ಕಥಾಮ್ ॥ ೫ ॥

ಭೂಯ ಏವ ವಿವಿತ್ಸಾಮಿ ಭಗವಾನಾತ್ಮಮಾಯಯಾ ।
ಯಥೇದಂ ಸೃಜತೇ ವಿಶ್ವಂ ದುರ್ವಿಭಾವ್ಯಮಧೀಶ್ವರೈಃ ॥ ೬ ॥

ಯಥಾ ಗೋಪಾಯತಿ ವಿಭುರ್ಯಥಾ ಸಂಯಚ್ಛತೇ ಪುನಃ ।
ಯಾಂ ಯಾಂ ಶಕ್ತಿಮುಪಾಶ್ರಿತ್ಯ ಪುರುಶಕ್ತಿಃ ಪರಃ ಪುಮಾನ್ ।
ಆತ್ಮಾನಂ ಕ್ರೀಡಯನ್ಕ್ರೀಡನ್ಕರೋತಿ ವಿಕರೋತಿ ಚ ॥ ೭ ॥

ನೂನಂ ಭಗವತೋ ಬ್ರಹ್ಮನ್ ಹರೇರದ್ಭುತಕರ್ಮಣಃ ।
ದುರ್ವಿಭಾವ್ಯಮಿವಾಭಾತಿ ಕವಿಭಿಶ್ಚಾಪಿ ಚೇಷ್ಟಿತಮ್ ॥ ೮ ॥

ಯಥಾ ಗುಣಾಂಸ್ತು ಪ್ರಕೃತೇರ್ಯುಗಪತ್ಕ್ರಮಶೋऽಪಿ ವಾ ।
ಬಿಭರ್ತಿ ಭೂರಿಶಸ್ತ್ವೇಕಃ ಕುರ್ವನ್ ಕರ್ಮಾಣಿ ಜನ್ಮಭಿಃ ॥ ೯ ॥

ವಿಚಿಕಿತ್ಸಿತಮೇತನ್ಮೇ ಬ್ರವೀತು ಭಗವಾನ್ಯಥಾ ।
ಶಾಬ್ದೇ ಬ್ರಹ್ಮಣಿ ನಿಷ್ಣಾತಃ ಪರಸ್ಮಿಂಶ್ಚ ಭವಾನ್ಖಲು ॥ ೧೦ ॥

*ಸೂತ ಉವಾಚ*

ಇತ್ಯುಪಾಮಂತ್ರಿತೋ ರಾಜ್ಞಾ ಗುಣಾನುಕಥನೇ ಹರೇಃ ।
ಹೃಷೀಕೇಶಮನುಸ್ಮೃತ್ಯ ಪ್ರತಿವಕ್ತುಂ ಪ್ರಚಕ್ರಮೇ ॥ ೧೧ ॥

*ಶ್ರೀಶುಕ ಉವಾಚ*

ನಮಃ ಪರಸ್ಮೈ ಪುರುಷಾಯ ಭೂಯಸೇ
ಸದುದ್ಭವಸ್ಥಾನನಿರೋಧಲೀಲಯಾ ।
ಗೃಹೀತಶಕ್ತಿತ್ರಿತಯಾಯ ದೇಹಿನಾ-
ಮಂತರ್ಭವಾಯಾನುಪಲಕ್ಷ್ಯವರ್ತ್ಮನೇ ॥ ೧೨ ॥

**ಪರೀಕ್ಷಿದ್ರಾಜನು ಕೇಳಿದನು** – ಬ್ರಹ್ಮರ್ಷಿಗಳೇ ! ಸರ್ವಜ್ಞರೂ, ಪರಮಪವಿತ್ರರೂ ಆದ ಮಹಾತ್ಮರೇ ! ತಮ್ಮ ಮಾತು ಅತ್ಯಂತ ಶ್ರೇಷ್ಠ ಹಾಗೂ ಸಮುಚಿತವಾಗಿದೆ. ತಾವು ಶ್ರೀಭಗವಂತನ ಕಥೆಯನ್ನು ಹೇಳುತ್ತಿರುವಂತೆ ನನ್ನ ಅಜ್ಞಾನದ ತೆರೆಯೂ ಕಳಚಿಕೊಳ್ಳುತ್ತಿದೆ. ಜ್ಞಾನದ ಬೆಳಕನ್ನು ಕಾಣುತ್ತಿದ್ದೇನೆ. ॥ ೫ ॥ ಶ್ರೀಭಗವಂತನು ತನ್ನ ಮಾಯೆಯಿಂದ ಈ ಜಗತ್ತನ್ನು ಹೇಗೆ ಸೃಷ್ಟಿಮಾಡುತ್ತಾನೆ ಎಂಬುದನ್ನು ಇನ್ನೂ ವಿಸ್ತಾರವಾಗಿ ತಿಳಿಯಬಯಸುತ್ತೇನೆ. ಈ ಸೃಷ್ಟಿಯು ಅತ್ಯಂತ ರಹಸ್ಯಮಯವಾಗಿದೆ. ಬ್ರಹ್ಮಾದಿ ದೇವತೆಗಳಿಗೂ ಇದನ್ನು ತಿಳಿಯಲು ಕಷ್ಟವಾಗಿದೆ. ॥ ೬॥ ಭಗವಂತನು ಈ ವಿಶ್ವವನ್ನು ಹೇಗೆ ರಕ್ಷಿಸುತ್ತಾನೆ ? ಮತ್ತೆ ಹೇಗೆ ಸಂಹರಿಸುತ್ತಾನೆ ? ಅನಂತ ಶಕ್ತಿಯುಳ್ಳ ಆ ಪರಮಾತ್ಮನು ಯಾವ-ಯಾವ ಶಕ್ತಿಗಳನ್ನು ಆಶ್ರಯಿಸಿ ಈ ಸೃಷ್ಟಿ ಸ್ಥಿತಿ, ಲಯರೂಪಗಳಲ್ಲಿ ತಾನೇ ಆಟಿಕೆಗಳಾಗಿ ಆಟವಾಡುತ್ತಾನೆ ? ಮಕ್ಕಳು ಆಟಕ್ಕಾಗಿ ಮಣ್ಣಿನಿಂದ ಮನೆಗಳನ್ನು ಕಟ್ಟುವಂತೆ ಈ ಬ್ರಹ್ಮಾಂಡಗಳನ್ನು ರಚಿಸಿ, ಅವುಗಳನ್ನು ನಾಶಪಡಿಸುವ ಆಟವನ್ನು ಹೇಗೆ ಆಡುತ್ತಾನೆ ? ಹೀಗೆ ಮಾಡುವಾಗಲೂ ಅವನಲ್ಲಿ ಯಾವುದೇ ಆಸಕ್ತಿ ಇರುವುದಿಲ್ಲವಲ್ಲ! ಅವನು ಇದರಿಂದ ಅಸಂಗನಾಗಿಯೇ ಇರುವನಲ್ಲ! ॥ ೭ ॥ ಭಗವಾನ್ ಶ್ರೀಹರಿಯ ಲೀಲೆಗಳು ನಿಜವಾಗಿಯೂ ಅದ್ಭುತ-ಅಚಿಂತ್ಯವಾಗಿವೆ. ಅವನ ಲೀಲೆಗಳ ರಹಸ್ಯವನ್ನು ತಿಳಿಯುವುದು ಮಹಾಜ್ಞಾನಿಗಳಿಗೂ ಅತ್ಯಂತ ಕಷ್ಟವೇ ಸರಿ. ॥ ೮ ॥ ಒಬ್ಬಂಟಿಗನೇ ಆದ ಭಗವಂತನು ಅನೇಕ ಕರ್ಮಗಳನ್ನು ಮಾಡಲು ಪುರುಷರೂಪದಿಂದ ಪ್ರಕೃತಿಯ ಭಿನ್ನ-ಭಿನ್ನವಾದ ಗುಣಗಳನ್ನು ಒಟ್ಟಿಗೆ ಧರಿಸುತ್ತಾನೋ ? ಅಥವಾ ಅನೇಕ ಅವತಾರಗಳನ್ನು ತಾಳಿ ಅವುಗಳನ್ನು ಕ್ರಮಶಃ ಧರಿಸಿಕೊಳ್ಳುತ್ತಾನೋ ? ॥ ೯ ॥ ಪೂಜ್ಯರಾದ ನೀವು ಶಬ್ದಬ್ರಹ್ಮ ವೇದ ಮತ್ತು ಪರಬ್ರಹ್ಮ ಪರಮಾತ್ಮತತ್ತ್ವ ಇವೆರಡೂ ವಿಷಯಗಳಲ್ಲಿ ನಿಷ್ಣಾತರಾದವರು. ಆದ್ದರಿಂದ ನನ್ನ ಸಂದೇಹವನ್ನು ದಯಮಾಡಿ ನಿವಾರಣೆ ಮಾಡಬೇಕು. ॥ ೧೦ ॥

**ಸೂತಪುರಾಣಿಕರು ಹೇಳುತ್ತಾರೆ** – ರಾಜಾಪರೀಕ್ಷಿತನು ಭಗವಂತನ ಗುಣಗಳನ್ನು ವರ್ಣಿಸಲಿಕ್ಕಾಗಿ ಈ ರೀತಿ ಪ್ರಾರ್ಥಿಸಿದಾಗ ಶುಕಮುನಿಗಳು ಭಗವಾನ್ ಶ್ರೀಕೃಷ್ಣನನ್ನು ಮತ್ತೆ-ಮತ್ತೆ ಸ್ಮರಿಸುತ್ತಾ ತನ್ನ ಪ್ರವಚನವನ್ನು ಪ್ರಾರಂಭಿಸಿದರು. ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಆ ಭಗವಾನ್ ಪುರುಷೋತ್ತಮನ ಚರಣಕಮಲಗಳಲ್ಲಿ ನನ್ನ ಕೋಟಿ, ಕೋಟಿ ಪ್ರಣಾಮಗಳು. ಅವನು ವಿಶ್ವದ ಸೃಷ್ಟಿ ಸ್ಥಿತಿ, ಪ್ರಳಯ ಇವುಗಳ ಲೀಲೆಯನ್ನು ನಡೆಸಲು ಸತ್ತ್ವ, ರಜ, ತಮೋಗುಣರೂಪವಾದ ಮೂರು ಶಕ್ತಿಗಳನ್ನು ಸ್ವೀಕರಿಸಿ, ಬ್ರಹ್ಮ ವಿಷ್ಣು ಮಹೇಶ್ವರರ ರೂಪಗಳನ್ನು ಧರಿಸಿಕೊಳ್ಳುವನು. ಅವನು ಸಮಸ್ತ ಚರಾಚರಪ್ರಾಣಿಗಳ ಹೃದಯದಲ್ಲಿ ಅಂತರ್ಯಾಮಿಯಾಗಿ ವಿರಾಜಿಸುತ್ತಿದ್ದಾನೆ. ಅವನನ್ನು ಪಡೆಯುವ ಮಾರ್ಗವು ಬುದ್ಧಿಯ ವಿಷಯವಲ್ಲ, ಅವನು ಸ್ವತಃ ಅನಂತನಾಗಿದ್ದು ಅವನ ಮಹಿಮೆಯೂ ಅನಂತವಾಗಿದೆ. ॥ ೧೨ ॥ ಸಾಧು-ಸಂತರ ದುಃಖಗಳನ್ನು ಹೋಗಲಾಡಿಸಿ ಅವರಿಗೆ ತನ್ನ ಪ್ರೇಮವನ್ನು ಕರುಣಿಸುವವನೂ, ದುಷ್ಟರನ್ನು ದಮನಗೈದು

ಭೂಯೋ ನಮಃ ಸದ್ವೃಜಿನಚ್ಛಿದೇऽಸತಾ-
ಮಸಂಭವಾಯಾಖಿಲಸತ್ತ್ವ ಮೂರ್ತಯೇ ।
ಪುಂಸಾಂ ಪುನಃ ಪಾರಮಹಂಸ್ಯ ಆಶ್ರಮೇ
ವ್ಯವಸ್ಥಿತಾನಾಮನುಮೃಗ್ಯದಾಶುಷೇ ॥ ೧೩ ॥

ನಮೋ ನಮಸ್ತೇऽಸ್ತ್ವೃಷಭಾಯ ಸಾತ್ವತಾಂ
ವಿದೂರಕಾಷ್ಠಾಯ ಮುಹುಃ ಕುಯೋಗಿನಾಮ್ ।
ನಿರಸ್ತಸಾಮ್ಯಾತಿಶಯೇನ ರಾಧಸಾ
ಸ್ವಧಾಮನಿ ಬ್ರಹ್ಮಣಿ ರಂಸ್ಯತೇ ನಮಃ ॥ ೧೪ ॥

ಯತ್ಕೀರ್ತನಂ ಯತ್ಸ್ಮರಣಂ ಯದೀಕ್ಷಣಂ
ಯದ್ವಂದನಂ ಯಚ್ಛ್ರವಣಂ ಯದರ್ಹಣಮ್ ।
ಲೋಕಸ್ಯ ಸದ್ಯೋ ವಿಧುನೋತಿ ಕಲ್ಮಷಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥ ೧೫ ॥

ವಿಚಕ್ಷಣಾ ಯಚ್ಚರಣೋಪಸಾದನಾತ್
ಸಂಗಂ ವ್ಯುದಸ್ಯೋಭಯತೋऽನ್ತರಾತ್ಮನಃ ।
ವಿಂದಂತಿ ಹಿ ಬ್ರಹ್ಮಗತಿಂ ಗತಕ್ಲಮಾ-
ಸ್ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥ ೧೬ ॥

ತಪಸ್ವಿನೋ ದಾನಪರಾ ಯಶಸ್ವಿನೋ
ಮನಸ್ವಿನೋ ಮಂತ್ರವಿದಃ ಸುಮಂಗಲಾಃ ।
ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥ ೧೭ ॥

ಕಿರಾತಹೂಣಾಂಧ್ರಪುಲಿಂದಪುಲ್ಕಸಾ
ಆಭೀರಕಂಕಾಯವನಾಃ ಖಸಾದಯಃ ।
ಯೇऽನ್ಯೇ ಚ ಪಾಪಾ ಯದುಪಾಶ್ರಯಾಶ್ರಯಾಃ
ಶುದ್ಧ್ಯಂತಿ ತಸ್ಮೈ ಪ್ರಭವಿಷ್ಣವೇ ನಮಃ ॥ ೧೮ ॥

ಸ ಏಷ ಆತ್ಮಾऽऽತ್ಮವತಾಮಧೀಶ್ವರ-
ಸ್ತ್ರಯೀಮಯೋ ಧರ್ಮಮಯಸ್ತಪೋಮಯಃ ।
ಗತವ್ಯಲೀಕೈರಜಶಂಕರಾದಿಭಿ-
ರ್ವಿತರ್ಕ್ಯಲಿಂಗೋ ಭಗವಾನ್ಪ್ರಸೀದತಾಮ್ ॥ ೧೯ ॥

ಅವರಿಗೆ ಮುಕ್ತಿಯನ್ನು ಕೊಡುವವನೂ, ಪರಮಹಂಸಾಶ್ರಮದಲ್ಲಿ ಇರುವವರ ಅಭೀಷ್ಟವಾದ ವಸ್ತುವನ್ನು ಅನುಗ್ರಹಿಸುವವನೂ, ಸರ್ವಸಮನಾಗಿದ್ದು ಸರ್ವರಿಗೂ ಕಲ್ಯಾಣವನ್ನುಂಟುಮಾಡುವವನೂ ಆದ ಆ ಪರಮಾತ್ಮನಿಗೆ ಪುನಃ ಪುನಃ ನಮಸ್ಕರಿಸುತ್ತೇನೆ. ॥ ೧೩ ॥ ಅವನು ಬಹಳ ಭಕ್ತವತ್ಸಲನಾಗಿರುವನು. ಹಟದಿಂದ ಭಕ್ತಿಹೀನ ಸಾಧನೆ ಮಾಡುವವರು ಅವನ ನೆರಳನ್ನೂ ಮುಟ್ಟಲಾರರು. ಅವನಂತೆ ಯಾರಿಗೂ ಐಶ್ವರ್ಯ ಇಲ್ಲದಿರುವಾಗ ಅವನಿಗಿಂತ ಹೆಚ್ಚಿಗೆ ಹೇಗಿದ್ದೀತು? ಇಂತಹ ಐಶ್ವರ್ಯದಿಂದ ಕೂಡಿದವನಾಗಿ ನಿರಂತರವಾಗಿ ಬ್ರಹ್ಮಸ್ವರೂಪವಾದ ತನ್ನ ಧಾಮದಲ್ಲಿ ವಿಹರಿಸುತ್ತಿರುವ ಆ ಭಗವಾನ್ ಶ್ರೀಕೃಷ್ಣನಿಗೆ ಪದೇ-ಪದೇ ನಮಸ್ಕಾರಗಳು. ॥ ೧೪ ॥ ಯಾರ ಕೀರ್ತನೆ, ಸ್ಮರಣೆ, ದರ್ಶನ, ವಂದನೆ, ಶ್ರವಣ, ಪೂಜೆಗಳು ಜೀವರ ಪಾಪಗಳನ್ನು ತತ್‌ಕ್ಷಣದಲ್ಲೇ ನಾಶಮಾಡುತ್ತವೆಯೋ, ಅಂತಹ ಪುಣ್ಯಕೀರ್ತಿಯಾದ ಭಗವಾನ್ ಶ್ರೀಕೃಷ್ಣನಿಗೆ ನಮೋ ನಮಃ ॥ ೧೫ ॥ ವಿವೇಕಿಗಳು ಯಾರ ಚರಣಕಮಲಗಳಲ್ಲಿ ಶರಣಾಗತರಾಗಿ ತಮ್ಮ ಹೃದಯದಿಂದ ಇಹಲೋಕ-ಪರಲೋಕಗಳ ಆಸಕ್ತಿಯನ್ನು ಕಿತ್ತೊಗೆಯುವರೋ, ಯಾವುದೇ ಪರಿಶ್ರಮವಿಲ್ಲದೆ ಬ್ರಹ್ಮಪದವನ್ನು ಪಡೆದುಕೊಳ್ಳುವರೋ, ಆ ಮಂಗಳಕೀರ್ತಿಯಾದ ಭಗವಾನ್ ಶ್ರೀಕೃಷ್ಣನಿಗೆ ಅನೇಕ ಬಾರಿ ನಮಸ್ಕಾರಗಳು. ॥ ೧೬ ॥ ಎಷ್ಟೇ ದೊಡ್ಡ ತಪಸ್ವಿಗಳಾಗಲೀ, ದಾನಿಗಳಾಗಲೀ, ಯಶಸ್ವಿಗಳಾಗಲೀ, ಪ್ರಶಸ್ತಮನಸ್ಸುಳ್ಳವರಾಗಲೀ, ಮಂತ್ರಜ್ಞರಾಗಲೀ, ಸದಾಚಾರಿಗಳಾಗಲೀ – ತಮ್ಮ ಸಾಧನೆಯನ್ನು ಹಾಗೂ ತಮ್ಮನ್ನೂ ಆತನ ಚರಣಾರವಿಂದಗಳಲ್ಲಿ ಸಮರ್ಪಣೆಮಾಡದೆ ಹೋದರೆ ಅವರಿಗೆ ಶ್ರೇಯಸ್ಸು ದೊರೆಯಲಾರದು. ಅಂತಹ ಕಲ್ಯಾಣಕೀರ್ತಿಯುಳ್ಳ ಭಗವಂತನಿಗೆ ಕೋಟಿ-ಕೋಟಿ ನಮಸ್ಕಾರಗಳು. ॥ ೧೭ ॥ ಕಿರಾತರಾಗಲೀ, ಹೂಣರಾಗಲೀ, ಆಂಧ್ರರಾಗಲೀ, ಪುಲಿಂದರಾಗಲೀ, ಪುಲ್ಕಸರಾಗಲೀ, ಆಭೀರರಾಗಲೀ, ಕಂಕರಾಗಲೀ, ಯವನರಾಗಲೀ, ಖಸರಾಗಲೀ, ಇತರ ಯಾವುದೇ ಜಾತಿಯವರೇ ಆಗಲೀ, ಎಂತಹ ಪಾಪಿಷ್ಠನೇ ಆಗಲೀ, ಯಾರ ಶರಣಾಗತ ಭಕ್ತರಲ್ಲಿ ಶರಣಾದರೆ ಪವಿತ್ರರಾಗುವರೋ, ಅಂತಹ ಸರ್ವಶಕ್ತಿಯುಳ್ಳ ಭಗವಂತನಿಗೆ ನಮಸ್ಕಾರವು. ॥ ೧೮ ॥ ಆತ್ಮಜ್ಞಾನಿಗಳ ಆತ್ಮಸ್ವರೂಪನಾಗಿಯೂ, ಭಕ್ತರಿಗೆ ಸ್ವಾಮಿಯಾಗಿಯೂ, ಕರ್ಮಕಾಂಡಿಗಳಿಗೆ ವೇದಮೂರ್ತಿಯಾಗಿಯೂ, ಧಾರ್ಮಿಕರಿಗೆ ಧರ್ಮಸ್ವರೂಪನೂ ಆಗಿ, ತಪಸ್ವಿಗಳಿಗೆ ತಪಸ್ಸ್ವರೂಪಿಯಾಗಿ, ಅವನೇ ಆಗಿದ್ದಾನೆ. ಬ್ರಹ್ಮರುದ್ರಾದಿ ದೇವತೆಗಳೂ ಕೂಡ ತಮ್ಮ ಶುದ್ಧ ಹೃದಯದಿಂದ ಅವನ ಸ್ವರೂಪವನ್ನೇ ಚಿಂತಿಸುತ್ತಾ ಆಶ್ಚರ್ಯಚಕಿತರಾಗಿ ನೋಡುತ್ತಾ ಇರುತ್ತಾರೆ. ಅಂತಹ ಆ ಭಗವಂತನು ನನ್ನ ಮೇಲೆ ಅನುಗ್ರಹದ ಮಳೆಗರೆಯಲಿ. ॥ ೧೯ ॥ ಶ್ರೀದೇವಿಯ ಪತಿಯೂ, ಯಜ್ಞಗಳ ಅಧಿಪತಿಯೂ, ಪ್ರಜಾಪತಿಯೂ, ಬುದ್ಧಿಗಳ ಒಡೆಯನೂ, ಸರ್ವಲೋಕ ಪತಿಯೂ, ಧರಾಧಿಪತಿಯೂ, ಯದುಕುಲದಲ್ಲಿ ಅವತರಿಸಿ ಅಂಧಕ, ವೃಷ್ಣಿ ಸಾತ್ವತರೇ ಮುಂತಾದ ಯಾದವರ ರಕ್ಷಕನೂ, ಪರಮಗತಿಯೂ ಆಗಿ ಬೆಳಗಿದ ಭಕ್ತವತ್ಸಲನೂ,

ಶ್ರಿಯಃ ಪತಿರ್ಯಜ್ಞಪತಿಃ ಪ್ರಜಾಪತಿ-
ರ್ಧಿಯಾಂ ಪತಿರ್ಲೋಕಪತಿರ್ಧರಾಪತಿಃ ।
ಪತಿರ್ಗತಿಶ್ಚಾಂಧಕವೃಷ್ಣಿ ಸಾತ್ವತಾಂ
ಪ್ರಸೀದತಾಂ ಮೇ ಭಗವಾನ್ಸತಾಂ ಪತಿಃ ॥ ೨೦ ॥

ಯದಂಘ್ರ್ಯಭಿಧ್ಯಾನಸಮಾಧಿಧೌತಯಾ
ಧಿಯಾನುಪಶ್ಯಂತಿ ಹಿ ತತ್ತ್ವ ಮಾತ್ಮನಃ ।
ವದಂತಿ ಚೈತತ್ಕವಯೋ ಯಥಾರುಚಂ
ಸ ಮೇ ಮುಕುಂದೋ ಭಗವಾನ್ಪ್ರಸೀದತಾಮ್ ॥ ೨೧ ॥

ಪ್ರಚೋದಿತಾ ಯೇನ ಪುರಾ ಸರಸ್ವತೀ
ವಿತನ್ವತಾಜಸ್ಯ ಸತೀಂ ಸ್ಮೃತಿಂ ಹೃದಿ ।
ಸ್ವಲಕ್ಷಣಾ ಪ್ರಾದುರಭೂತ್ಕಿಲಾಸ್ಯತಃ
ಸ ಮೇ ಋಷೀಣಾಮೃಷಭಃ ಪ್ರಸೀದತಾಮ್ ॥ ೨೨ ॥

ಭೂತೈರ್ಮಹದ್ಭಿರ್ಯ ಇಮಾಃ ಪುರೋ ವಿಭು-
ರ್ನಿರ್ಮಾಯ ಶೇತೇ ಯದಮೂಷು ಪೂರುಷಃ ।
ಭುಂಕ್ತೇ ಗುಣಾನ್ ಷೋಡಶ ಷೋಡಶಾತ್ಮಕಃ
ಸೋಽಲಂಕೃಷೀಷ್ಟ ಭಗವಾನ್ವಚಾಂಸಿ ಮೇ ॥ ೨೩ ॥

ನಮಸ್ತಸ್ಮೈ ಭಗವತೇ ವಾಸುದೇವಾಯ ವೇಧಸೇ ।
ಪಪುರ್ಜ್ಞಾನಮಯಂ ಸೌಮ್ಯಾ ಯನ್ಮುಖಾಂಬುರುಹಾಸವಮ್
॥ ೨೪ ॥

ಏತದೇವಾತ್ಮಭೂ ರಾಜನ್ ನಾರದಾಯ ವಿಪೃಚ್ಛತೇ ।
ವೇದಗರ್ಭೋಽಭ್ಯಧಾತ್ಸಾಕ್ಷಾದ್ ಯದಾಹ ಹರಿರಾತ್ಮನಃ
॥ ೨೫ ॥

ಸಾಧು-ಸಂತರ ಸರ್ವಸ್ವನೂ ಆದ ಶ್ರೀಕೃಷ್ಣನು ನನ್ನ ಮೇಲೆ ಪ್ರಸನ್ನನಾಗಲೀ. ॥ ೨೦ ॥ ಜ್ಞಾನಿಗಳು ಯಾವನ ಪಾದಾರವಿಂದಗಳ ಧ್ಯಾನಸಮಾಧಿಯಿಂದಲೇ ಶುದ್ಧವಾದ ಬುದ್ಧಿಯಿಂದ ಆತ್ಮತತ್ತ್ವವನ್ನು ಸಾಕ್ಷಾತ್ಕರಿಸಿಕೊಳ್ಳುವರೋ, ತಮ್ಮ ಬುದ್ಧಿ ಮತ್ತು ಅಭಿರುಚಿಗನುಗುಣವಾಗಿ ಯಾರ ಸ್ವರೂಪವನ್ನು ವರ್ಣಿಸುತ್ತಾರೋ, ಅಂತಹ ಭಕ್ತಿ, ಮುಕ್ತಿ, ಸ್ತೋತ್ರಶಕ್ತಿ ಪ್ರದಾತನಾದ ಭಗವಾನ್ ಶ್ರೀಕೃಷ್ಣನು ನನಗೆ ಅನುಗ್ರಹಿಸಲಿ. ॥ ೨೧ ॥ ಸೃಷ್ಟಿ ಸಮಯದಲ್ಲಿ ಯಾರು ಬ್ರಹ್ಮದೇವರ ಹೃದಯದಲ್ಲಿ ಸ್ಮೃತಿಯನ್ನು ಜಾಗ್ರತಗೊಳಿಸಲು ಜ್ಞಾನದ ಅಧಿಷ್ಠಾತ್ರಿಯಾದ ಸರಸ್ವತಿಯನ್ನು ಪ್ರೇರಣೆ ಮಾಡಿದನೋ, ಆ ಬ್ರಹ್ಮನ ಮುಖದಿಂದ ಶಿಕ್ಷಾ, ವ್ಯಾಕರಣಾದಿ ಆರು ಅಂಗಗಳಿಂದ ಕೂಡಿದ ವೇದಸರಸ್ವತಿಯನ್ನು ಪ್ರಕಟಗೊಳಿಸಿದನೋ, ಅಂತಹ ಜ್ಞಾನಿಗಳಲ್ಲಿ ಶ್ರೇಷ್ಠನಾದ ಭಗವಂತನು ನನಗೆ ಪ್ರಸನ್ನನಾಗಲಿ. ॥ ೨೨ ॥ ಭಗವಂತನೇ ಪಂಚಭೂತಗಳಿಂದ ಈ ಶರೀರಗಳನ್ನು ನಿರ್ಮಾಣಗೈದು ಇವುಗಳಲ್ಲಿ ಜೀವರೂಪದಿಂದ ಮಲಗಿರುತ್ತಾನೆ. ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಪ್ರಾಣಗಳು, ಒಂದು ಮನಸ್ಸು ಹೀಗೆ ಹದಿನಾರು ಕಲೆಗಳಿಂದ ಕೂಡಿಕೊಂಡು ಇವುಗಳ ಮೂಲಕ ಹದಿನಾರು ವಿಷಯಗಳನ್ನು ಭೋಗಿಸುತ್ತಾನೆ. ಆ ಸರ್ವಭೂತಮಯನಾದ ಭಗವಂತನು ತನ್ನ ಗುಣಗಳಿಂದ ನನ್ನ ವಾಣಿಯನ್ನು ಅಲಂಕರಿಸಲಿ. ॥ ೨೩ ॥ ಆ ವಾಸುದೇವನ ಅವತಾರವಾದ, ಸರ್ವಜ್ಞರಾದ, ಭಗವಾನ್ ವೇದವ್ಯಾಸರಿಗೆ ನಮಸ್ಕಾರಗಳು. ಆ ಮಹಾನುಭಾವರ ಮುಖಕಮಲದಿಂದ ಮಕರಂದದಂತೆ ಹರಿಯುತ್ತಿರುವ ಜ್ಞಾನ ಸುಧೆಯನ್ನೇ ಅಲ್ಲವೇ ಸಾಧು-ಸತ್ಪುರುಷರು ಸದಾ ಪಾನಮಾಡುತ್ತಿರುವುದು ! ॥ ೨೪ ॥

ಓ ರಾಜೇಂದ್ರನೇ ! ಇದನ್ನು ಸಾಕ್ಷಾತ್ ಶ್ರೀಮನ್ನಾರಾಯಣನು ಬ್ರಹ್ಮದೇವರಿಗೆ ಉಪದೇಶಮಾಡಿದ್ದನು. ತಮ್ಮನ್ನು ಪ್ರಶ್ನೆಮಾಡಿದ ನಾರದರಿಗೆ ಬ್ರಹ್ಮದೇವರು ಅದನ್ನು ಉಪದೇಶಿಸಿದರು. ಅದನ್ನೇ ನಾನು ನಿನಗೆ ಈಗ ಉಪದೇಶಿಸುತ್ತಿದ್ದೇನೆ. ॥ ೨೫ ॥

*ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ಸೃಷ್ಟಿಯ ವರ್ಣನೆ

*ನಾರದ ಉವಾಚ*

ದೇವದೇವ ನಮಸ್ತೇಽಸ್ತು ಭೂತಭಾವನ ಪೂರ್ವಜ ।
ತದ್ವಿಜಾನೀಹಿ ಯಜ್ಜ್ಞಾನಮಾತ್ಮತತ್ತ್ವನಿದರ್ಶನಮ್
॥ ೧ ॥

ಯದ್ರೂಪಂ ಯದಧಿಷ್ಠಾನಂ ಯತಃ ಸೃಷ್ಟಮಿದಂ ಪ್ರಭೋ ।
ಯತ್ಸಂಸ್ಥಂ ಯತ್ಪರಂ ಯಚ್ಚ ತತ್ತತ್ತ್ವಂ ವದ ತತ್ತ್ವತಃ
॥ ೨ ॥

ನಾರದರು ಕೇಳುತ್ತಾರೆ – ದೇವ ದೇವನೇ ! ಚತುರ್ಮುಖನೇ! ನಿನಗೆ ನಮಸ್ಕಾರವು. ನೀನು ಎಲ್ಲ ಭೂತಗಳನ್ನೂ ಸೃಷ್ಟಿಸಿದವನು. ಎಲ್ಲರಿಗೂ ಮೊದಲಿಗನು. ಆತ್ಮತತ್ತ್ವದ ಸಾಕ್ಷಾತ್ಕಾರವು ಆಗುವಂತಹ ಆ ಜ್ಞಾನವನ್ನು ನನಗೆ ಅನುಗ್ರಹಿಸು. ॥ ೧ ॥ ಪ್ರಭೋ ! ಈ ಜಗತ್ತಿನ ಸ್ವರೂಪವೇನು ? ಲಕ್ಷಣವೇನು ? ಇದರ ಆಧಾರ ಯಾವುದು ? ಇದನ್ನು ಯಾರು ಸೃಷ್ಟಿಸಿದರು ? ಯಾವುದರಲ್ಲಿ ಇದು ಲಯ ಹೊಂದುತ್ತದೆ ? ಇದು ಯಾರಿಗೆ ಅಧೀನವಾಗಿದೆ ? ವಾಸ್ತವವಾಗಿ ಈ ಜಗತ್ತು ಅಂದರೇನು ? ಇದರ ತತ್ತ್ವವನ್ನು ನನಗೆ ತಿಳಿಸು. ॥ ೨ ॥ ನಿನಗೆ ಇದೆಲ್ಲವೂ ತಿಳಿದಿದೆ, ಏಕೆಂದರೆ,

ಸರ್ವಂ ಹ್ಯೇತದ್ಭವಾನ್ವೇದ ಭೂತಭವ್ಯಭವತ್ಪ್ರಭುಃ ।
ಕರಾಮಲಕವದ್ ವಿಶ್ವಂ ವಿಜ್ಞಾನಾವಸಿತಂ ತವ ॥ ೩ ॥

ಯದ್ವಿಜ್ಞಾನೋ ಯದಾಧಾರೋ ಯತ್ಪರಸ್ತ್ವಂ ಯದಾತ್ಮಕಃ ।
ಏಕಃ ಸೃಜಸಿ ಭೂತಾನಿ ಭೂತೈರೇವಾತ್ಮ ಮಾಯಯಾ ॥ ೪ ॥

ಆತ್ಮನ್ ಭಾವಯಸೇ ತಾನಿ ನ ಪರಾಭಾವಯನ್ಸ್ವಯಮ್ ।
ಆತ್ಮಶಕ್ತಿಮವಷ್ಟಭ್ಯ ಊರ್ಣನಾಭಿರಿವಾಕ್ಲಮಃ ॥ ೫ ॥

ನಾಹಂ ವೇದ ಪರಂ ಹ್ಯಸ್ಮಿನ್ನಾಪರಂ ನ ಸಮಂ ವಿಭೋ ।
ನಾಮರೂಪಗುಣೈರ್ಭಾವ್ಯಂ ಸದಸತ್ಕಿಂಚಿದನ್ಯತಃ ॥ ೬ ॥

ಸ ಭವಾನಚರದ್ಘೋರಂ ಯತ್ತಪಃ ಸುಸಮಾಹಿತಃ ।
ತೇನ ಖೇದಯಸೇ ನಸ್ತ್ವಂ ಪರಾಶಂಕಾಂ ಪ್ರಯಚ್ಛಸಿ ॥ ೭ ॥

ಏತನ್ಮೇ ಪೃಚ್ಛತಃ ಸರ್ವಂ ಸರ್ವಜ್ಞ ಸಕಲೇಶ್ವರ ।
ವಿಜಾನೀಹಿ ಯಥೈವೇದಮಹಂ ಬುಧ್ಯೇಽನುಶಾಸಿತಃ ॥ ೮ ॥

ಬ್ರಹ್ಮೋವಾಚ

ಸಮ್ಯಕ್ಕಾರುಣಿಕಸ್ಯೇದಂ ವತ್ಸ ತೇ ವಿಚಿಕಿತ್ಸಿತಮ್ ।
ಯದಹಂ ಚೋದಿತಃ ಸೌಮ್ಯ ಭಗವದ್ವೀರ್ಯದರ್ಶನೇ ॥ ೯ ॥

ನಾನೃತಂ ತವ ತಚ್ಚಾಪಿ ಯಥಾ ಮಾಂ ಪ್ರಬ್ರವೀಷಿ ಭೋಃ ।
ಅವಿಜ್ಞಾಯ ಪರಂ ಮತ್ತ ಏತಾವತ್ತ್ವಂ ಯತೋ ಹಿ ಮೇ ॥ ೧೦ ॥

ಯೇನ ಸ್ವರೋಚಿಷಾ ವಿಶ್ವಂ ರೋಚಿತಂ ರೋಚಯಾಮ್ಯಹಮ್ ।
ಯಥಾರ್ಕೋಽಗ್ನಿರ್ಯಥಾ ಸೋಮೋ ಯಥರ್ಕ್ಷಗ್ರಹತಾರಕಾಃ ॥ ೧೧ ॥

ತಸ್ಮೈ ನಮೋ ಭಗವತೇ ವಾಸುದೇವಾಯ ಧೀಮಹಿ ।
ಯನ್ಮಾಯಯಾ ದುರ್ಜಯಯಾ ಮಾಂ ಬ್ರುವಂತಿ ಜಗದ್ಗುರುಮ್ ॥ ೧೨ ॥

ವಿಲಜ್ಜಮಾನಯಾ ಯಸ್ಯ ಸ್ಥಾತುಮೀಕ್ಷಾಪಥೇಽಮುಯಾ ।
ವಿಮೋಹಿತಾ ವಿಕತ್ಥಂತೇ ಮಮಾಹಮಿತಿ ದುರ್ಧಿಯಃ ॥ ೧೩ ॥

ನೀನು ಭೂತ, ಭವಿಷ್ಯ, ವರ್ತಮಾನ ಇವುಗಳಿಗೆ ಅಧಿಪತಿಯಾಗಿರುವೆ. ನೀನು ಸರ್ವಜ್ಞನು. ವಿಶ್ವವೆಲ್ಲವೂ ಅಂಗೈನೆಲ್ಲಿಯಂತೆ ಸ್ಪಷ್ಟವಾಗಿ ನಿನ್ನ ಅರಿವಿಗೆ ಗೋಚರವಾಗಿದೆ. ॥ ೩ ॥ ನಿನಗೆ ಈ ಜ್ಞಾನವು ಎಲ್ಲಿಂದ ಬಂದಿತು? ನೀನು ಯಾರ ಆಧಾರದಲ್ಲಿ ಇದ್ದೀಯೇ? ನಿನ್ನ ಸ್ವಾಮಿ ಯಾರು? ಸ್ವರೂಪವೇನು? ಮಾಯಾ ಶಕ್ತಿಯಿಂದ ನೀನೊಬ್ಬನೇ ಪಂಚಭೂತಗಳಿಂದ ಪ್ರಾಣಿಗಳನ್ನು ಸೃಷ್ಟಿಸುತ್ತಿರುವೆಯಲ್ಲ! ಇದೆಂತಹ ಆಶ್ಚರ್ಯದ ಸಂಗತಿಯಾಗಿದೆ! ॥ ೪ ॥ ಜೇಡರಹುಳವು ಅನಾಯಾಸವಾಗಿ ತನ್ನ ಮುಖದಿಂದಲೇ ಬಲೆಯನ್ನು ಹೊರಪಡಿಸಿ ಅದರಲ್ಲಿ ಆಡುತ್ತಿರುವಂತೆ, ನೀನು ನಿನ್ನ ಶಕ್ತಿಯನ್ನೇ ಆಶ್ರಯಿಸಿ ನಿರಾಯಾಸವಾಗಿ ಪ್ರಾಣಿಗಳನ್ನೂ ನಿನ್ನಲ್ಲಿಯೇ ಸೃಷ್ಟಿಸಿಕೊಂಡರೂ ನಿನ್ನಲ್ಲಿ ಯಾವುದೇ ವಿಕಾರಗಳಾಗುವುದಿಲ್ಲ. ॥ ೫ ॥ ಜಗತ್ತಿನಲ್ಲಿ ನಾಮ, ರೂಪ, ಗುಣಗಳಿಂದ ತಿಳಿಯಲಾಗುವ ಎಲ್ಲದರಲ್ಲಿಯೂ ನೀನಲ್ಲದೆ ಬೇರೆಯವರಿಂದ ಉತ್ಪನ್ನವಾದಂತಹ ಸತ್, ಅಸತ್, ಉತ್ತಮ, ಮಧ್ಯಮ, ಅಧಮ ಮುಂತಾದ ಯಾವ ವಸ್ತುವೂ ಕಂಡುಬರುವುದಿಲ್ಲ. ಅಂದರೆ ಎಲ್ಲವು ನಿನ್ನಿಂದಲೇ ಸೃಷ್ಟಿಸಲ್ಪಟ್ಟಿದೆ. ॥ ೬ ॥ ಹೀಗೆ ಎಲ್ಲರ ಒಡೆಯನಾಗಿಯೂ ನೀನು ಏಕಾಗ್ರಚಿತ್ತದಿಂದ ಮಾಡಿದ ಘೋರ ತಪಸ್ಸಿನಿಂದ ನನಗೆ ಮೋಹದೊಂದಿಗೆ 'ನಿನ್ನಿಂದಲೂ ದೊಡ್ಡವನು ಯಾರಾದರೂ ಇರಬಹುದೇ?' ಎಂಬ ಶಂಕೆಯೂ ಆಗುತ್ತಿದೆ. ॥ ೭ ॥ ತಂದೆಯೇ! ನೀನು ಸರ್ವಜ್ಞನೂ ಸರ್ವೇಶ್ವರನೂ ಆಗಿರುವೆ. ನಾನು ಕೇಳುತ್ತಿರುವುದನ್ನು ನನಗೆ ಚೆನ್ನಾಗಿ ಮನವರಿಕೆಯಾಗುವಂತೆ ದಯಮಾಡಿ ತಿಳಿಸುವವರಾಗಿರಿ. ॥ ೮ ॥

**ಬ್ರಹ್ಮದೇವರು ಹೇಳಿದರು** – ಮಗು ನಾರದಾ! ನೀನು ಜೀವಿಗಳ ಮೇಲೆ ಕರುಣೆಯಿಟ್ಟು ಈ ಒಳ್ಳೆಯ ಪ್ರಶ್ನೆಯನ್ನು ಕೇಳಿರುವೆ. ಏಕೆಂದರೆ, ಇದರಿಂದ ಭಗವಂತನ ಗುಣಗಳನ್ನು ವರ್ಣಿಸುವ ಪ್ರೇರಣೆಯು ನನಗುಂಟಾಗಿದೆ. ॥ ೯ ॥ ನೀನು ನನ್ನ ಕುರಿತು ಹೇಳಿದುದೆಲ್ಲವೂ ಸತ್ಯವೇ. ಏಕೆಂದರೆ, ನನಗಿಂತಲೂ ಶ್ರೇಷ್ಠವಾಗಿರುವ ಪರತತ್ತ್ವದ ಅರಿವು ಉಂಟಾಗುವವರೆಗೂ ನೀನು ಹೇಳಿದ ಎಲ್ಲ ಪ್ರಭಾವಗಳೂ ನನ್ನಲ್ಲಿ ಇರುವಂತೆ ಕಂಡುಬರುತ್ತದೆ. ವಾಸ್ತವವಾಗಿ ಸಮಗ್ರಶಕ್ತಿಯು ಪರಮಪಿತಾ ಪರಮಾತ್ಮನದ್ದೇ ಆಗಿದೆ. ಅವನ ಪ್ರಭಾವದಿಂದಲೇ ಈ ಸೃಷ್ಟಿಕ್ರಮವು ನಡೆಯುತ್ತಾ ಇದೆ. ॥ ೧೦ ॥ ಸೂರ್ಯ, ಚಂದ್ರ, ಅಗ್ನಿ, ಗ್ರಹ, ನಕ್ಷತ್ರ, ತಾರೆಗಳು ಆ ಪರಮಾತ್ಮನ ಪ್ರಕಾಶದಿಂದಲೇ ಜಗತ್ತಿನಲ್ಲಿ ಪ್ರಕಾಶಿತವಾಗುವಂತೆಯೇ, ನಾನೂ ಕೂಡ ಅದೇ ಸ್ವಯಂಪ್ರಕಾಶ ಭಗವಂತನ ಚಿನ್ಮಯ ಪ್ರಕಾಶದಿಂದ ಪ್ರಕಾಶಿತನಾಗಿ ಪ್ರಪಂಚವನ್ನು ಬೆಳಗುತ್ತಿರುವೆನು. ಅರ್ಥಾತ್ – ಜಗತ್ತನ್ನು ರಚಿಸುತ್ತಿರುವೆನು. ॥ ೧೧ ॥ ಯಾರ ದುರ್ಜಯ ಮಾಯೆಯಿಂದ ಮೋಹಿತರಾಗಿ ಜನರು ನನ್ನನ್ನೇ ಜಗದ್ಗುರು ಎಂದು ಹೇಳುತ್ತಾರೋ, ಆ ಮಾಯಾಧೀಶನಾದ ಭಗವಾನ್ ವಾಸುದೇವನನ್ನು ನಾನು ಧ್ಯಾನಿಸುತ್ತಾ, ವಂದಿಸುತ್ತೇನೆ. ವಾಸ್ತವವಾಗಿ ಜಗದ್ಗುರು ಭಗವಾನ್ ಶ್ರೀಕೃಷ್ಣನೇ ಆಗಿರುವನು (**ಕೃಷ್ಣಂ ವಂದೇ ಜಗದ್ಗುರುಮ್**). ॥ ೧೨ ॥ ಆ ಮಾಯೆಯಾದರೋ ಅವನ ಕಣ್ಣುಮುಂದೆ ನಿಲ್ಲಲಾರದೆ ನಾಚಿ ದೂರದಿಂದಲೇ ಓಡಿಹೋಗುತ್ತದೆ. ಆದರೆ ಜಗತ್ತಿನಲ್ಲಿರುವ ಅಜ್ಞಾನಿಗಳು ಆ ಮಾಯೆಯಿಂದ ಮೋಹಿತರಾಗಿ 'ನಾನು, ನನ್ನದು' ಹೀಗೆ ಹರಟುತ್ತಾ ಇರುತ್ತಾರೆ. ॥ ೧೩ ॥

ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ವಾಸುದೇವಾತ್ಪರೋ ಬ್ರಹ್ಮನ್ನಚಾನ್ಯೋಽರ್ಥೋಽಸ್ತಿ ತತ್ತ್ವತಃ ॥ ೧೪ ॥

ನಾರದಾ! ದ್ರವ್ಯವಾಗಲೀ, ಕರ್ಮವಾಗಲೀ, ಕಾಲವಾಗಲೀ, ಸ್ವಭಾವವಾಗಲೀ, ಜೀವವೇ ಆಗಲಿ ಯಾವುದೂ ವಾಸ್ತವವಾಗಿ ಆ ವಾಸುದೇವನಿಂದ ಬೇರೆಯಾದ ಯಾವ ಪದಾರ್ಥವೂ ಇಲ್ಲ. ॥ ೧೪ ॥

ನಾರಾಯಣಪರಾ ವೇದಾ ದೇವಾ ನಾರಾಯಣಾಂಗಜಾಃ ।
ನಾರಾಯಣಪರಾ ಲೋಕಾ ನಾರಾಯಣಪರಾ ಮಖಾಃ ॥ ೧೫ ॥

ನಾರಾಯಣನೇ ವೇದಗಳಿಗೆ ತಾತ್ಪರ್ಯವು. ಆ ವೇದಗಳಲ್ಲಿ ಸ್ತುತಿಸಲ್ಪಡುವ ದೇವತೆಗಲೂ ನಾರಾಯಣನ ಅಂಗದಿಂದ ಹುಟ್ಟಿದವರೇ. ಎಲ್ಲ ಯಜ್ಞಗಳಿಂದ ಆರಾಧಿಸಲ್ಪಡುವವನೂ ನಾರಾಯಣನೇ. ಆ ಯಜ್ಞಗಳಿಂದ ಹೊಂದುವ ಲೋಕಗಳೂ ನಾರಾಯಣನನ್ನೇ ಆಶ್ರಯಿಸಿವೆ. ॥ ೧೫ ॥

ನಾರಾಯಣಪರೋ ಯೋಗೋ ನಾರಾಯಣಪರಂ ತಪಃ ।
ನಾರಾಯಣಪರಂ ಜ್ಞಾನಂ ನಾರಾಯಣಪರಾ ಗತಿಃ ॥ ೧೬ ॥

ಎಲ್ಲ ಯೋಗಗಳಿಗೆ ಲಕ್ಷ್ಯನಾಗಿರುವವನು ನಾರಾಯಣನೇ. ಎಲ್ಲ ತಪಸ್ಸುಗಳು ನಾರಾಯಣನಿಗಾಗಿಯೇ ಮಾಡಲಾಗುತ್ತವೆ. ಜ್ಞಾನಗಮ್ಯನೂ ನಾರಾಯಣನೇ. ಎಲ್ಲಕ್ಕೂ ಪರಮಗತಿಯು ಆ ನಾರಾಯಣನೇ. ॥ ೧೬ ॥

ತಸ್ಯಾಪಿ ದ್ರಷ್ಟುರೀಶಸ್ಯ ಕೂಟಸ್ಥಸ್ಯಾಖಿಲಾತ್ಮನಃ ।
ಸೃಜ್ಯಂ ಸೃಜಾಮಿ ಸೃಷ್ಟೋಽಹಮೀಕ್ಷಯೈವಾಭಿಚೋದಿತಃ ॥ ೧೭ ॥

ಅವನು ದೃಷ್ಟಾ ಆಗಿದ್ದರೂ ಈಶ್ವರನಾಗಿದ್ದಾನೆ, ಒಡೆಯನಾಗಿದ್ದಾನೆ. ಕೂಟಸ್ಥ ನಿರ್ವಿಕಾರನಾಗಿದ್ದರೂ ಸರ್ವಸ್ವರೂಪನಾಗಿದ್ದಾನೆ. ಅವನೇ ನನ್ನನ್ನು ಸೃಷ್ಟಿಸಿದವನು. ಅವನ ದೃಷ್ಟಿಯಿಂದಲೇ ಪ್ರೇರಿತನಾಗಿ, ನಾನು ಅವನ ಇಚ್ಛೆಗನುಗುಣವಾಗಿ ಸೃಷ್ಟಿಯನ್ನು ರಚಿಸುತ್ತೇನೆ. ॥ ೧೭ ॥

ಸತ್ತ್ವಂ ರಜಸ್ತಮ ಇತಿ ನಿರ್ಗುಣಸ್ಯ ಗುಣಾಸ್ತ್ರಯಃ ।
ಸ್ಥಿತಿಸರ್ಗನಿರೋಧೇಷು ಗೃಹೀತಾ ಮಾಯಯಾ ವಿಭೋಃ ॥ ೧೮ ॥

ಆ ಪರಮಾತ್ಮನು ಗುಣಾತೀತನು. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡಲಿಕ್ಕಾಗಿ ಸತ್ತ್ವ, ರಜ, ತಮೋಗುಣಗಳೆಂಬ ಮೂರು ಗುಣಗಳನ್ನು ತನ್ನ ಮಾಯಾಶಕ್ತಿಯಿಂದ ಸ್ವೀಕರಿಸುತ್ತಾನೆ. ॥ ೧೮ ॥

ಕಾರ್ಯಕಾರಣಕರ್ತೃತ್ವೇ ದ್ರವ್ಯಜ್ಞಾನಕ್ರಿಯಾಶ್ರಯಾಃ ।
ಬಧ್ನಂತಿ ನಿತ್ಯದಾ ಮುಕ್ತಂ ಮಾಯಿನಂ ಪುರುಷಂ ಗುಣಾಃ ॥ ೧೯ ॥

ಆ ಮೂರು ಗುಣಗಳೇ ದ್ರವ್ಯ, ಜ್ಞಾನ, ಕ್ರಿಯೆ ಇವುಗಳ ಆಶ್ರಯಪಡೆದು, ಸ್ವರೂಪತಃ ನಿತ್ಯಮುಕ್ತನೂ, ಮಾಯಾತೀತನೂ ಆದ ಪುರುಷನು ಮಾಯೆಯಲ್ಲಿ ಸ್ಥಿತನಾದಾಗ ಕಾರ್ಯ, ಕಾರಣ, ಕರ್ತೃತ್ವ ಇವುಗಳ ಅಭಿಮಾನದಿಂದ ಬಂಧಿತನಾಗುತ್ತಾನೆ. ॥ ೧೯ ॥

ಸ ಏಷ ಭಗವಾಂಲ್ಲಿಂಗೈಸ್ತ್ರಿಭಿರೇಭಿರಧೋಕ್ಷಜಃ ।
ಸ್ವಲಕ್ಷಿತಗತಿರ್ಬ್ರಹ್ಮನ್ ಸರ್ವೇಷಾಂ ಮಮ ಚೇಶ್ವರಃ ॥ ೨೦ ॥

ನಾರದಾ ! ಇಂದ್ರಿಯಾತೀತ ಆ ಭಗವಂತನೇ ತ್ರಿಗುಣಗಳ ಆವರಣಗಳಿಂದ ತನ್ನ ಸ್ವರೂಪವನ್ನು ಚೆನ್ನಾಗಿ ಮರೆಮಾಡಿ ಕೊಳ್ಳುವನು. ಇದರಿಂದ ಜನರು ಅವನನ್ನು ತಿಳಿಯಲಾರರು. ಇಡೀ ಜಗತ್ತಿಗೂ ಮತ್ತು ನನಗೂ ಅವನೇ ಏಕಮಾತ್ರ ಸ್ವಾಮಿಯಾಗಿದ್ದಾನೆ. ॥ ೨೦ ॥

ಕಾಲಂ ಕರ್ಮ ಸ್ವಭಾವಂ ಚ ಮಾಯೇಶೋ ಮಾಯಯಾ ಸ್ವಯಾ ।
ಆತ್ಮನ್ಯದೃಚ್ಛಯಾ ಪ್ರಾಪ್ತಂ ವಿಬುಭೂಷುರುಪಾದದೇ ॥ ೨೧ ॥

ಮಾಯಾಧೀಶನಾದ ಆ ಭಗವಂತನಿಗೆ 'ಬಹು ಸ್ಯಾಂ ಪ್ರಜಾಯೇಯ' (ತಾನೇ ಅನೇಕನಾಗಬೇಕು) ಎಂಬ ಇಚ್ಛೆಯು ಉಂಟಾದಾಗ ತನ್ನ ಮಾಯೆಯಿಂದ ತನ್ನ ಸ್ವರೂಪದಲ್ಲಿ ಬಂದು ಸೇರಿದ ಕಾಲ, ಕರ್ಮ, ಸ್ವಭಾವ ಇವುಗಳನ್ನು ಸ್ವೀಕರಿಸಿದನು. ॥ ೨೧ ॥

ಕಾಲಾದ್ಗುಣವ್ಯತಿಕರಃ ಪರಿಣಾಮಃ ಸ್ವಭಾವತಃ ।
ಕರ್ಮಣೋ ಜನ್ಮ ಮಹತಃ ಪುರುಷಾಧಿಷ್ಠಿತಾದಭೂತ್ ॥ ೨೨ ॥

ಭಗವಂತನ ಶಕ್ತಿಯಿಂದಲೇ ಕಾಲವು ತ್ರಿಗುಣಗಳಲ್ಲಿ ಕ್ಷೋಭೆಯನ್ನುಂಟುಮಾಡಿತು. ಸ್ವಭಾವವು ಅವುಗಳನ್ನು ರೂಪಾಂತರ ಮಾಡಿತು. ಕರ್ಮವು ಮಹತ್ತತ್ತ್ವಕ್ಕೆ ಜನ್ಮನೀಡಿತು. ॥ ೨೨ ॥

ಮಹತಸ್ತು ವಿಕುರ್ವಾಣಾದ್ರಜಃ ಸತ್ತ್ವೋಪಬೃಂಹಿತಾತ್ ।
ತಮಃಪ್ರಧಾನಸ್ತ್ವಭವದ್ ದ್ರವ್ಯಜ್ಞಾನಕ್ರಿಯಾತ್ಮಕಃ ॥ ೨೩ ॥

ರಜೋಗುಣ ಮತ್ತು ಸತ್ತ್ವಗುಣಗಳು ವೃದ್ಧಿಗೊಂಡಾಗ ಮಹತ್ತತ್ತ್ವದಲ್ಲಿ ಯಾವ ಯಾವ ವಿಕಾರ ಉಂಟಾಯಿತೋ, ಅದರಿಂದ ಜ್ಞಾನ, ಕ್ರಿಯೆ, ದ್ರವ್ಯರೂಪವಾಗಿ ತಮಃಪ್ರಧಾನವಾದ ವಿಕಾರ ವುಂಟಾಯಿತು. ॥ ೨೩ ॥

ಸೋಽಹಂಕಾರ ಇತಿ ಪ್ರೋಕ್ತೋ ವಿಕುರ್ವನ್ಸಮಭೂತ್ತ್ರಿಧಾ ।
ವೈಕಾರಿಕಸ್ತೈಜಸಶ್ಚ ತಾಮಸಶ್ಚೇತಿ ಯದ್ಭಿದಾ ।
ದ್ರವ್ಯಶಕ್ತಿಃ ಕ್ರಿಯಾಶಕ್ತಿರ್ಜ್ಞಾನಶಕ್ತಿರಿತಿ ಪ್ರಭೋ ॥ ೨೪ ॥

ಆ ವಿಕಾರವೇ ಅಹಂಕಾರವು. ಅದು ವಿಕಾರಗೊಂಡು ವೈಕಾರಿಕಾಹಂಕಾರ, ತೈಜಸಾಹಂಕಾರ, ತಾಮಸಾಹಂಕಾರ ಎಂಬ ಮೂರು ಬಗೆಯಾಯಿತು. ನಾರದಾ ! ಅವು ಕ್ರಮವಾಗಿ ಜ್ಞಾನಶಕ್ತಿ, ಕ್ರಿಯಾಶಕ್ತಿ, ದ್ರವ್ಯಶಕ್ತಿ ಪ್ರಧಾನವಾಗಿವೆ. ॥ ೨೪ ॥ ಪಂಚಭೂತಗಳಿಗೆ ಕಾರಣರೂಪವಾದ ತಾಮಸಾಹಂಕಾರದಲ್ಲಿ ವಿಕಾರ ಉಂಟಾದಾಗ ಅದರಿಂದ ಆಕಾಶವು ಉತ್ಪನ್ನವಾಯಿತು. ಆಕಾಶದ ತನ್ಮಾತ್ರೆ ಮತ್ತು ಗುಣ ಶಬ್ದವಾಗಿದೆ. ಈ

ತಾಮಸಾದಪಿ ಭೂತಾದೇರ್ವಿಕುರ್ವಾಣಾದಭೂನ್ನಭಃ ।
ತಸ್ಯ ಮಾತ್ರಾಗುಣಃ ಶಬ್ದೋ ಲಿಂಗಂ ಯದ್ದ್ರಷ್ಟೃದೃಶ್ಯಯೋಃ ॥ ೨೫ ॥

ನಭಸೋಽಥ ವಿಕುರ್ವಾಣಾದಭೂತ್ ಸ್ಪರ್ಶಗುಣೋಽನಿಲಃ ।
ಪರಾನ್ವಯಾಚ್ಛಬ್ದವಾಂಶ್ಚ ಪ್ರಾಣ ಓಜಃ ಸಹೋ ಬಲಮ್ ॥ ೨೬ ॥

ವಾಯೋರಪಿ ವಿಕುರ್ವಾಣಾತ್ಕಾಲಕರ್ಮಸ್ವಭಾವತಃ ।
ಉದಪದ್ಯತ ತೇಜೋ ವೈ ರೂಪವತ್ ಸ್ಪರ್ಶಶಬ್ದವತ್ ॥ ೨೭ ॥

ತೇಜಸಸ್ತು ವಿಕುರ್ವಾಣಾದಾಸೀದಂಭೋ ರಸಾತ್ಮಕಮ್ ।
ರೂಪವತ್ ಸ್ಪರ್ಶವಚ್ಚಾಂಭೋ ಘೋಷವಚ್ಚ ಪರಾನ್ವಯಾತ್ ॥ ೨೮ ॥

ವಿಶೇಷಸ್ತು ವಿಕುರ್ವಾಣಾದಂಭಸೋ ಗಂಧವಾನಭೂತ್ ।
ಪರಾನ್ವಯಾದ್ ರಸಸ್ಪರ್ಶಶಬ್ದರೂಪಗುಣಾನ್ವಿತಃ ॥ ೨೯ ॥

ವೈಕಾರಿಕಾನ್ಮನೋ ಜಜ್ಞೇ ದೇವಾ ವೈಕಾರಿಕಾ ದಶ ।
ದಿಗ್ವಾತಾರ್ಕಪ್ರಚೇತೋಽಶ್ವಿ ವಹ್ನೀಂದ್ರೋಪೇಂದ್ರಮಿತ್ರಕಾಃ ॥ ೩೦ ॥

ತೈಜಸಾತ್ತು ವಿಕುರ್ವಾಣಾದಿಂದ್ರಿಯಾಣಿ ದಶಾಭವನ್ ।
ಜ್ಞಾನಶಕ್ತಿಃ ಕ್ರಿಯಾಶಕ್ತಿರ್ಬುದ್ಧಿಃ ಪ್ರಾಣಶ್ಚ ತೈಜಸೌ ।
ಶ್ರೋತ್ರಂ ತ್ವಗ್ಘ್ರಾಣ ದೃಗ್ಜಿಹ್ವಾವಾಗ್ದೋರ್ಮೇಢ್ರಾಂಘ್ರಿಪಾಯವಃ ॥ ೩೧ ॥

ಯದೈತೇಽಸಂಗತಾ ಭಾವಾ ಭೂತೇಂದ್ರಿಯಮನೋಗುಣಾಃ ।
ಯದಾಯತನನಿರ್ಮಾಣೇ ನ ಶೇಕುರ್ಬ್ರಹ್ಮವಿತ್ತಮ ॥ ೩೨ ॥

ತದಾ ಸಂಹತ್ಯ ಚಾನ್ಯೋನ್ಯಂ ಭಗವಚ್ಛಕ್ತಿ ಚೋದಿತಾಃ ।
ಸದಸತ್ತ್ವಮುಪಾದಾಯ ಚೋಭಯಂ ಸಸೃಜುರ್ಹ್ಯದಃ ॥ ೩೩ ॥

ವರ್ಷಪೂಗಸಹಸ್ರಾಂತೇ ತದಂಡಮುದಕೇಶಯಮ್ ।
ಕಾಲಕರ್ಮಸ್ವಭಾವಸ್ಥೋ ಜೀವೋಽಜೀವಮಜೀವಯತ್ ॥ ೩೪ ॥

ಸ ಏವ ಪುರುಷಸ್ತಸ್ಮಾದಂಡಂ ನಿರ್ಭಿದ್ಯ ನಿರ್ಗತಃ ।
ಸಹಸ್ರೋರ್ವಂಘ್ರಿಬಾಹ್ವಕ್ಷಃ ಸಹಸ್ರಾನನಶೀರ್ಷವಾನ್ ॥ ೩೫ ॥

ಶಬ್ದದ ಮೂಲಕವೇ ದ್ರಷ್ಟಾ, ದೃಶ್ಯದ ಬೋಧ ಉಂಟಾಗುವುದು. ॥ ೨೫ ॥ ಆಕಾಶದಲ್ಲಿ ವಿಕಾರ ಉಂಟಾದಾಗ ಅದರಿಂದ ವಾಯುವಿನ ಉತ್ಪತ್ತಿಯಾಯಿತು. ಅದರ ಗುಣ ಸ್ಪರ್ಶ. ಇದಲ್ಲದೆ ತನ್ನ ಕಾರಣದ ಗುಣವಾದ ಶಬ್ದವೂ ವಾಯುವಿನಲ್ಲಿರುತ್ತದೆ. ಇಂದ್ರಿಯಗಳಲ್ಲಿರುವ ಸ್ಫೂರ್ತಿ, ಶರೀರದಲ್ಲಿರುವ ಜೀವನಶಕ್ತಿ, ಓಜಸ್ಸು, ಬಲಗಳೂ ಇದರ ರೂಪವೇ ಆಗಿದೆ. ॥ ೨೬ ॥ ಕಾಲ, ಕರ್ಮ, ಸ್ವಭಾವಗಳಿಂದ ವಾಯುವಿನಲ್ಲೂ ವಿಕಾರ ಉಂಟಾಯಿತು. ಅದರಿಂದ ತೇಜಸ್ಸಿನ ಉತ್ಪತ್ತಿಯಾಯಿತು. ಇದರ ಪ್ರಧಾನಗುಣ ರೂಪವು. ಇದರ ಜೊತೆಯಲ್ಲಿ ತನ್ನ ಕಾರಣಗಳಾದ ಆಕಾಶ, ವಾಯುಗಳ ಗುಣಗಳಾದ ಶಬ್ದ ಸ್ಪರ್ಶಗಳೂ ತೇಜಸ್ಸಿನಲ್ಲಿರುತ್ತವೆ. ॥ ೨೭ ॥ ತೇಜಸ್ಸಿನ ವಿಕಾರದಿಂದ ಜಲದ ಉತ್ಪತ್ತಿಯಾಯಿತು. ಇದರ ಗುಣ ರಸ. ತನ್ನ ಕಾರಣ ತತ್ತ್ವಗಳ ಗುಣ ಶಬ್ದ ಸ್ಪರ್ಶ, ರೂಪ ಇವುಗಳೂ ಜಲದಲ್ಲಿರುತ್ತವೆ. ॥ ೨೮ ॥ ಜಲದ ವಿಕಾರದಿಂದ ಪೃಥ್ವಿಯ ಉತ್ಪತ್ತಿಯಾಯಿತು. ಇದರ ಗುಣ ಗಂಧ. 'ಕಾರಣದ ಗುಣಗಳು ಕಾರ್ಯದಲ್ಲಿ ಬರುತ್ತವೆ.' ಈ ನ್ಯಾಯದಿಂದ ಶಬ್ದ, ಸ್ಪರ್ಶ, ರೂಪ, ರಸ – ಈ ನಾಲ್ಕೂ ಗುಣಗಳನ್ನು ಪೃಥ್ವಿಯು ಹೊಂದಿರುತ್ತದೆ. ॥ ೨೯ ॥ ವೈಕಾರಿಕ ಅಹಂಕಾರದಿಂದ ಮನಸ್ಸು ಮತ್ತು ಇಂದ್ರಿಯಗಳ ಅಧಿಷ್ಠಾತೃಗಳಾದ ಹತ್ತು ದೇವತೆಗಳ ಉತ್ಪತ್ತಿಯಾಯಿತು. ದಿಕ್ಕುಗಳು, ವಾಯು, ಸೂರ್ಯ, ವರುಣ, ಅಶ್ವಿನೀದೇವತೆಗಳು, ಅಗ್ನಿ, ಇಂದ್ರ, ಉಪೇಂದ್ರ, ಮಿತ್ರ, ಪ್ರಜಾಪತಿ ಇವರೇ ಆ ಹತ್ತು ದೇವತೆಗಳು. ॥ ೩೦ ॥ ತೈಜಸ ಅರ್ಥಾತ್ – ರಾಜಸ ಅಹಂಕಾರದಿಂದ ಶ್ರೋತ್ರ, ತ್ವಕ್, ನೇತ್ರ, ಜಿಹ್ವೆ ಮತ್ತು ಘ್ರಾಣ – ಈ ಐದು ಜ್ಞಾನೇಂದ್ರಿಯಗಳೂ ಹಾಗೂ ವಾಣಿ, ಹಸ್ತ, ಪಾದ, ಗುದ, ಜನನೇಂದ್ರಿಯ – ಐದು ಕರ್ಮೇಂದ್ರಿಯಗಳೂ ಉತ್ಪನ್ನವಾದುವು. ಜೊತೆಗೆ ಜ್ಞಾನಶಕ್ತಿರೂಪವಾದ ಬುದ್ಧಿಯೂ, ಕ್ರಿಯಾಶಕ್ತಿ ರೂಪವಾದ ಪ್ರಾಣವೂ ತೈಜಸಾಹಂಕಾರದಿಂದಲೇ ಉಂಟಾದುವು. ॥ ೩೧ ॥

ಬ್ರಾಹ್ಮಣಶ್ರೇಷ್ಠ ನಾರದಾ ! ಈ ಪಂಚಭೂತಗಳೂ, ಇಂದ್ರಿಯಗಳೂ, ಮನಸ್ಸೂ, ತ್ರಿಗುಣಗಳೂ ಪರಸ್ಪರ ಸೇರದೆ ಪ್ರತ್ಯೇಕವಾಗಿದ್ದಾಗ ಅವುಗಳಿಗೆ ತಮ್ಮ ವಾಸಕ್ಕಾಗಿ ಭೋಗಗಳ ಸಾಧನರೂಪಿ ಶರೀರದ ರಚನೆಯನ್ನು ಮಾಡದಾದವು. ॥ ೩೨ ॥ ಭಗವಂತನು ತನ್ನ ಶಕ್ತಿಯಿಂದ ಇವನ್ನು ಪ್ರೇರೇಪಿಸಿದಾಗ ಇವು ಪರಸ್ಪರ ಒಂದರೊಡನೆ ಒಂದು ಬೆರತು ಕಾರ್ಯಕಾರಣ ಭಾವವನ್ನು ಪಡೆದು ಕ್ರಮವಾಗಿ ವ್ಯಷ್ಟಿ ಮತ್ತು ಸಮಷ್ಟಿರೂಪವಾದ ಪಿಂಡಾಂಡ ಹಾಗೂ ಬ್ರಹ್ಮಾಂಡ ಎರಡನ್ನೂ ರಚಿಸಿದವು. ॥ ೩೩ ॥ ಆ ಬ್ರಹ್ಮಾಂಡ ರೂಪವಾದ ಅಂಡವು ಒಂದು ಸಾವಿರ ವರ್ಷಕಾಲ ನಿರ್ಜೀವವಾಗಿ ನೀರಿನಲ್ಲಿ ಬಿದ್ದಿತ್ತು. ಮತ್ತೆ ಕಾಲ, ಕರ್ಮ, ಸ್ವಭಾವಗಳನ್ನು ಸ್ವೀಕರಿಸಿದ ಭಗವಂತನು ಅದನ್ನು ಜೀವಂತಗೊಳಿಸಿದನು. ಅರ್ಥಾತ್ – ಜೀವರೂಪದಿಂದ ಅದರಲ್ಲಿ ಪ್ರವೇಶಿಸಿದನು. ॥ ೩೪ ॥ ಆ ಅಂಡವನ್ನು ಒಡೆದುಕೊಂಡು ಅದರಿಂದ ಹೊರಟು ಬಂದವನೇ ಸಾವಿರತೊಡೆ, ಸಾವಿರಪಾದ, ಸಾವಿರಭುಜ, ಸಾವಿರ ನೇತ್ರ, ಸಾವಿರಮುಖ, ಸಾವಿರ ತಲೆಗಳುಳ್ಳ ವಿರಾಟ್‌ಪುರುಷನು. ॥ ೩೫ ॥ ವಿದ್ವಾಂಸರು ಉಪಾಸನೆಗೋಸ್ಕರ ಆ ವಿರಾಟ್ ಪುರುಷನ

ಯಸ್ಯೇಹಾವಯವೈರ್ಲೋಕಾನ್ಕಲ್ಪಯಂತಿ ಮನೀಷಿಣಃ ।
ಕಟ್ಯಾದಿಭಿರಧಃ ಸಪ್ತ ಸಪ್ತೋರ್ಧ್ವಂ ಜಘನಾದಿಭಿಃ ॥ ೩೬ ॥

ಪುರುಷಸ್ಯ ಮುಖಂ ಬ್ರಹ್ಮ ಕ್ಷತ್ರಮೇತಸ್ಯ ಬಾಹವಃ ।
ಊರ್ವೋರ್ವೈಶ್ಯೋ ಭಗವತಃ ಪದ್ಭ್ಯಾಂ ಶೂದ್ರೋಽಭ್ಯಜಾಯತ ॥ ೩೭ ॥

ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕೋಽಸ್ಯ ನಾಭಿತಃ ।
ಹೃದಾ ಸ್ವರ್ಲೋಕ ಉರಸಾ ಮಹರ್ಲೋಕೋ ಮಹಾತ್ಮನಃ ॥ ೩೮ ॥

ಗ್ರೀವಾಯಾಂ ಜನಲೋಕಶ್ಚ ತಪೋಲೋಕಃ ಸ್ತನದ್ವಯಾತ್ ।
ಮೂರ್ಧಭಿಃ ಸತ್ಯಲೋಕಸ್ತು ಬ್ರಹ್ಮಲೋಕಃ ಸನಾತನಃ ॥ ೩೯ ॥

ತತ್ಕಟ್ಯಾಂ ಚಾತಲಂ ಕ್ಲೃಪ್ತಮೂರುಭ್ಯಾಂ ವಿತಲಂ ವಿಭೋಃ ।
ಜಾನುಭ್ಯಾಂ ಸುತಲಂ ಶುದ್ಧಂ ಜಂಘಾಭ್ಯಾಂ ತು ತಲಾತಲಮ್ ॥ ೪೦ ॥

ಮಹಾತಲಂ ತು ಗುಲ್ಫಾಭ್ಯಾಂ ಪ್ರಪದಾಭ್ಯಾಂ ರಸಾತಲಮ್ ।
ಪಾತಾಲಂ ಪಾದತಲತ ಇತಿ ಲೋಕಮಯಃ ಪುಮಾನ್ ॥ ೪೧ ॥

ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕೋಽಸ್ಯ ನಾಭಿತಃ ।
ಸ್ವರ್ಲೋಕಃ ಕಲ್ಪಿತೋ ಮೂರ್ಧ್ನಾ ಇತಿ ವಾ ಲೋಕಕಲ್ಪನಾ ॥ ೪೨ ॥

ಅಂಗಗಳಲ್ಲೇ ಸಮಸ್ತ ಲೋಕಗಳನ್ನೂ, ಅವುಗಳಲ್ಲಿರುವ ವಸ್ತುಗಳನ್ನೂ ಕಲ್ಪಿಸಿಕೊಳ್ಳುತ್ತಾರೆ. ಆತನ ನಡುವಿನಿಂದ ಕೆಳಗಿನ ಅಂಗಗಳಲ್ಲಿ ಏಳು ಪಾತಾಳಗಳನ್ನೂ, ಸೊಂಟದ ಮೇಲಿರುವ ಅಂಗಗಳಲ್ಲಿ ಏಳು ಸ್ವರ್ಗಗಳನ್ನೂ ಕಲ್ಪಿಸಿಕೊಳ್ಳುತ್ತಾರೆ. ॥ ೩೬ ॥ ಬ್ರಾಹ್ಮಣರು ಈ ವಿರಾಟ್‌ಪುರುಷನ ಬಾಯಿಯಿಂದಲೂ, ಭುಜಗಳಿಂದ ಕ್ಷತ್ರಿಯರೂ, ವೈಶ್ಯರು ಆ ಭಗವಂತನ ತೊಡೆಗಳಿಂದಲೂ, ಶೂದ್ರರು ಪಾದಗಳಿಂದಲೂ ಜನಿಸಿದರು. ॥ ೩೭ ॥ ಕಾಲಿನಿಂದ ಓಡಿದು ಕಟಿಯವರೆಗೆ ಏಳೂ ಪಾತಾಳಗಳೂ ಮತ್ತು ಭೂಲೋಕವು ಕಲ್ಪಿತವಾಗುತ್ತದೆ. ಆತನ ನಾಭಿಯಲ್ಲಿ ಭುವರ್ಲೋಕವನ್ನೂ, ಹೃದಯದಲ್ಲಿ ಸ್ವರ್ಲೋಕವನ್ನೂ, ವಕ್ಷಃಸ್ಥಳದಲ್ಲಿ ಮಹರ್ಲೋಕವನ್ನೂ ಕಲ್ಪಿಸಲಾಗಿದೆ. ॥ ೩೮ ॥ ಕತ್ತಿನಲ್ಲಿ ಜನೋಲೋಕವೂ, ಎರಡು ಸ್ತನಗಳಲ್ಲಿ ತಪೋಲೋಕವೂ, ಮಸ್ತಕದಲ್ಲಿ ನನ್ನ ನಿತ್ಯನಿವಾಸಸ್ಥಾನವಾದ ಸತ್ಯಲೋಕವೂ ಭಾವಿತವಾಗಿದೆ. ॥ ೩೯ ॥ ಆ ವಿರಾಟ್‌ಪುರುಷನ ನಡುವಿನಲ್ಲಿ ಅತಲ ಲೋಕವೂ, ತೊಡೆಯಲ್ಲಿ ವಿತಲವೂ, ಮಂಡಿಗಳಲ್ಲಿ ಪವಿತ್ರವಾದ ಸುತಲಲೋಕವೂ, ಮೊಣಕಾಲುಗಳಲ್ಲಿ ತಲಾತಲಲೋಕವೂ ಕಲ್ಪಿತವಾಗಿದೆ. ॥ ೪೦ ॥ ಕಾಲಿನ ಹರಡುಗಳಲ್ಲಿ ಮಹಾತಲವೂ, ಪಾದಾಗ್ರದಲ್ಲಿ ರಸಾತಲವೂ, ಅಂಗಾಲಿನಲ್ಲಿ ಪಾತಾಳವನ್ನೂ ಭಾವಿಸುತ್ತಾರೆ. ಹೀಗೆ ವಿರಾಟ್‌ಪುರುಷನು ಸರ್ವಲೋಕಮಯನಾಗಿದ್ದಾನೆ. ॥ ೪೧ ॥ ಅಥವಾ ಆ ವಿರಾಟ್‌ಪುರುಷನ ಅಂಗಗಳಲ್ಲಿ, ಪಾದಗಳಲ್ಲಿ ಭೂಲೋಕ, ನಾಭಿಯಲ್ಲಿ ಭುವರ್ಲೋಕ, ಶಿರಸ್ಸಿನಲ್ಲಿ ಸ್ವರ್ಲೋಕಗಳನ್ನೂ ಕಲ್ಪಿಸಬಹುದು. ॥ ೪೨ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ವಿರಾಟ್‌ಸ್ವರೂಪದ ವಿಭೂತಿಗಳ ವರ್ಣನೆ

ಬ್ರಹ್ಮೋವಾಚ

ವಾಚಾಂ ವಹ್ನೇರ್ಮುಖಂ ಕ್ಷೇತ್ರಂ ಛಂದಸಾಂ ಸಪ್ತ ಧಾತವಃ ।
ಹವ್ಯಕವ್ಯಾಮೃತಾನ್ನಾನಾಂ ಜಿಹ್ವಾ ಸರ್ವರಸಸ್ಯ ಚ ॥ ೧ ॥

ಸರ್ವಾಸೂನಾಂ ಚ ವಾಯೋಶ್ಚ ತನ್ನಾಸೇ ಪರಮಾಯನೇ ।
ಅಶ್ವಿನೋರೋಷಧೀನಾಂ ಚ ಘ್ರಾಣೋ ಮೋದಪ್ರಮೋದಯೋಃ ॥ ೨ ॥

**ಬ್ರಹ್ಮದೇವರು ಹೇಳುತ್ತಾರೆ** – ದೇವರ್ಷಿನಾರದನೇ! ಆ ವಿರಾಟ್‌ಪುರುಷನ ಮುಖದಿಂದ ವಾಣಿಯೂ, ವಾಣಿಯ ಅಧಿಷ್ಠಾತೃ ದೇವತೆ ಅಗ್ನಿಯೂ ಉತ್ಪತ್ತಿಯಾದುವು. ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ – ಎಂಬ ಏಳು ಛಂದಸ್ಸುಗಳು ಆತನ ಏಳು ಧಾತುಗಳಿಂದ ಉದ್ಭವಿಸಿದವು. ಮನುಷ್ಯರು, ಪಿತೃದೇವತೆಗಳು ಮತ್ತು ದೇವತೆಗಳು ಇವರುಗಳಿಗೆ ಭೋಜ್ಯವಾಗಿರುವ ಅಮೃತಮಯ ಅನ್ನವೂ ಎಲ್ಲ ಪ್ರಕಾರದ ಸರಗಳೂ, ರಸನೇಂದ್ರಿಯ ಹಾಗೂ ಅದರ ಅಧಿಷ್ಠಾತೃ ದೇವತೆ ವರುಣನು ಆತನ ನಾಲಿಗೆಯಿಂದ ಉತ್ಪನ್ನನಾದನು. ॥ ೧ ॥ ಅವನ ಮೂಗಿನ ಹೊಳ್ಳೆಗಳಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ– ಈ ಐದು ಪ್ರಾಣಗಳೂ, ಅವುಗಳ ದೇವತೆಯಾದ ಪ್ರಾಣ ದೇವರೂ (ವಾಯು) ಮತ್ತು ಘ್ರಾಣೇಂದ್ರಿಯದಿಂದ ಅಶ್ವಿನೀ ಕುಮಾರರೂ, ಸಮಸ್ತ ಔಷಧಿಗಳೂ ಹಾಗೂ ಸಾಮಾನ್ಯ ಹಾಗೂ ವಿಶೇಷ ಗಂಧಗಳೂ ಉತ್ಪನ್ನವಾದುವು. ॥ ೨ ॥ ಅವನ ನೇತ್ರೇಂದ್ರಿಯವು ರೂಪ

ರೂಪಾಣಾಂ ತೇಜಸಾಂ ಚಕ್ಷುರ್ದಿವಃ ಸೂರ್ಯಸ್ಯ ಚಾಕ್ಷಿಣೀ ।
ಕರ್ಣೌ ದಿಶಾಂ ಚ ತೀರ್ಥಾನಾಂ ಶ್ರೋತ್ರಮಾಕಾಶಶಬ್ದಯೋಃ ।
ತದ್ಗಾತ್ರಂ ವಸ್ತು ಸಾರಾಣಾಂ ಸೌಭಗಸ್ಯ ಚ ಭಾಜನಮ್
॥ ೩ ॥

ತ್ವಗಸ್ಯ ಸ್ಪರ್ಶವಾಯೋಶ್ಚ ಸರ್ವಮೇಧಸ್ಯ ಚೈವ ಹಿ ।
ರೋಮಾಣ್ಯುದ್ಭಿಜ್ಜಜಾತೀನಾಂ ಯೈರ್ವಾ ಯಜ್ಞಸ್ತು ಸಂಭೃತಃ
॥ ೪ ॥

ಕೇಶಶ್ಮಶ್ರುನಖಾನ್ಯಸ್ಯ ಶಿಲಾಲೋಹಾಭ್ರವಿದ್ಯುತಾಮ್ ।
ಬಾಹವೋ ಲೋಕಪಾಲಾನಾಂ ಪ್ರಾಯಶಃ ಕ್ಷೇಮಕರ್ಮಣಾಮ್
॥ ೫ ॥

ವಿಕ್ರಮೋ ಭೂರ್ಭುವಃ ಸ್ವಶ್ಚ ಕ್ಷೇಮಸ್ಯ ಶರಣಸ್ಯ ಚ ।
ಸರ್ವಕಾಮವರಸ್ಯಾಪಿ ಹರೇಶ್ಚರಣ ಆಸ್ಪದಮ್
॥ ೬ ॥

ಅಪಾಂ ವೀರ್ಯಸ್ಯ ಸರ್ಗಸ್ಯ ಪರ್ಜನ್ಯಸ್ಯ ಪ್ರಜಾಪತೇಃ ।
ಪುಂಸಃ ಶಿಶ್ನ ಉಪಸ್ಥಸ್ತು ಪ್ರಜಾತ್ಯಾನಂದನಿರ್ವೃತೇಃ
॥ ೭ ॥

ಪಾಯುರ್ಯಮಸ್ಯ ಮಿತ್ರಸ್ಯ ಪರಿಮೋಕ್ಷಸ್ಯ ನಾರದ ।
ಹಿಂಸಾಯಾ ನಿರ್ಋತೇರ್ಮೃತ್ಯೋರ್ನಿರಯಸ್ಯ ಗುದಃ ಸ್ಮೃತಃ
॥ ೮ ॥

ಪರಾಭೂತೇರಧರ್ಮಸ್ಯ ತಮಸಶ್ಚಾಪಿ ಪಶ್ಚಿಮಃ ।
ನಾಡ್ಯೋ ನದನದೀನಾಂ ತು ಗೋತ್ರಾಣಾಮಸ್ಥಿಸಂಹತಿಃ
॥ ೯ ॥

ಅವ್ಯಕ್ತರಸಸಿಂಧೂನಾಂ ಭೂತಾನಾಂ ನಿಧನಸ್ಯ ಚ ।
ಉದರಂ ವಿದಿತಂ ಪುಂಸೋ ಹೃದಯಂ ಮನಸಃ ಪದಮ್
॥ ೧೦ ॥

ಧರ್ಮಸ್ಯ ಮಮ ತುಭ್ಯಂ ಚ ಕುಮಾರಾಣಾಂ ಭವಸ್ಯ ಚ ।
ವಿಜ್ಞಾನಸ್ಯ ಚ ಸತ್ತ್ವಸ್ಯ ಪರಸ್ಯಾತ್ಮಾ ಪರಾಯಣಮ್
॥ ೧೧ ॥

ಅಹಂ ಭವಾನ್ಭವಶ್ಚೈವ ತ ಇಮೇ ಮುನಯೋಽಗ್ರಜಾಃ ।
ಸುರಾಸುರನರಾ ನಾಗಾಃ ಖಗಾ ಮೃಗಸರೀಸೃಪಾಃ
॥ ೧೨ ॥

ಮತ್ತು ತೇಜಸ್ಸುಗಳಿಗೂ ಹಾಗೂ ನೇತ್ರಗೋಳಕವು ಸ್ವರ್ಗಕ್ಕೂ, ಸೂರ್ಯನಿಗೂ ಜನ್ಮಸ್ಥಾನವಾಗಿದೆ. ಸಮಸ್ತ ದಿಕ್ಕುಗಳು ಮತ್ತು ಪವಿತ್ರಗೊಳಿಸುವ ತೀರ್ಥಗಳೂ ಕಿವಿಗಳಿಂದಲೂ ಹಾಗೂ ಆಕಾಶ-ಶಬ್ದಗಳು ಆತನ ಶ್ರೋತ್ರೇಂದ್ರಿಯದಿಂದಲೂ ಹೊರಹೊಮ್ಮಿದವು. ಆತನ ಶರೀರವು ಪ್ರಪಂಚದ ಎಲ್ಲ ವಸ್ತುಗಳ ಸಾರ, ಸೌಂದರ್ಯದ ಕೋಶವಾಗಿದೆ. ॥ ೩ ॥ ಸಮಸ್ತ ಯಜ್ಞಗಳೂ ಸ್ಪರ್ಶ ಮತ್ತು ವಾಯುವೂ ಆತನ ತ್ವಗಿಂದ್ರಿಯದಿಂದ ಉದ್ಭವಿಸಿದವು. ಅವನ ರೋಮಗಳು ಎಲ್ಲ ಉದ್ಭಿಜ್ಜ-ವೃಕ್ಷಗಳಿಗೆ ಅಥವಾ ಯಜ್ಞೋಪಯೋಗೀ ಅರಳಿ, ಅತ್ತಿ, ಕಗ್ಗಲಿ, ಮುತ್ತುಗ ಮುಂತಾದ ವನಸ್ಪತಿಗಳಿಗೆ ಉತ್ಪತ್ತಿಸ್ಥಾನವು. ॥ ೪ ॥ ಅವನ ರೋಮ – ಗಡ್ಡ – ಮೀಸೆ ಮತ್ತು ಉಗುರುಗಳಿಂದ ಮೇಘ, ಮಿಂಚು, ಶಿಲೆ, ಕಬ್ಬಿಣ ಮುಂತಾದ ಧಾತುಗಳೂ ಹಾಗೂ ಅವನ ಭುಜಗಳಿಂದ ಜಗತ್ತನ್ನು ರಕ್ಷಿಸುವ ಲೋಕಪಾಲರು ಪ್ರಕಟರಾದರು. ॥ ೫ ॥ ಅವನು ನಡೆದಾಡುವುದು ಭೂಃ, ಭುವಃ ಸುವಃ ಮೂರೂ ಲೋಕಗಳಿಗೆ ಆಶ್ರಯವು. ಶರಣಾಗತರ ರಕ್ಷಣೆ, ಭಯನಿವಾರಣೆ ಮತ್ತು ಸಮಸ್ತ ಇಷ್ಟಾರ್ಥಗಳ ಈಡೇರಿಕೆಗಳಿಗೂ ಆ ಶ್ರೀಹರಿಯ ಚರಣಕಮಲಗಳೇ ಆಶ್ರಯವು. ॥ ೬ ॥ ಆ ವಿರಾಟ್ ಪುರುಷನ ಲಿಂಗವು ಜಲ, ವೀರ್ಯ, ಸೃಷ್ಟಿ ಮೇಘ ಮತ್ತು ಪ್ರಜಾಪತಿದೇವತೆಗೆ ಆಧಾರವು. ಅವನ ಜನನೇಂದ್ರಿಯವು ಸಂತಾನೋತ್ಪತ್ತಿಗೆ ಸುಖದ ಸ್ಥಾನವು ॥ ೭ ॥ ನಾರದಾ ! ಆ ವಿರಾಟ್‌ಪುರುಷನ ಪಾಯು-ಇಂದ್ರಿಯವು ಯಮನಿಗೂ, ಮಿತ್ರನಿಗೂ ಮಲವಿಸರ್ಜನೆಗೂ ಆಶ್ರಯವಾಗಿದೆ ಮತ್ತು ಗುದದ್ವಾರವು ಹಿಂಸೆಗೂ, ಮೃತ್ಯುದೇವತೆಗೂ, ನರಕಕ್ಕೂ ಉತ್ಪತ್ತಿಸ್ಥಾನವು. ॥ ೮ ॥ ಆತನ ಬೆನ್ನಿನಿಂದ ಪರಾಜಯ, ಅಧರ್ಮ, ಅಜ್ಞಾನಗಳೂ, ನಾಡಿಗಳಿಂದ ನದೀ-ನದಗಳೂ, ಮೂಳೆಗಳಿಂದ ಪರ್ವತಗಳೂ ನಿರ್ಮಾಣವಾದುವು. ॥ ೯ ॥ ಅವ್ಯಕ್ತ ಅರ್ಥಾತ್ – ಮೂಲಪ್ರಕೃತಿ, ರಸವೆಂಬ ಧಾತು, ಸಮುದ್ರಗಳೂ, ಸಮಸ್ತ ಪ್ರಾಣಗಳೂ ಮತ್ತು ಅವುಗಳ ಮೃತ್ಯುವೂ ಅವನ ಉದರದಲ್ಲಿ ಅಡಗಿದೆ. ಅವನ ಹೃದಯವೇ ಮನಸ್ಸಿನ ಜನ್ಮಭೂಮಿಯು. ॥ ೧೦ ॥ ನಾರದಾ ! ಧರ್ಮಕ್ಕೂ, ನನಗೂ, ನಿನಗೂ, ಸನಕಾದಿಗಳಿಗೂ, ಶಂಕರನಿಗೂ, ವಿಜ್ಞಾನಕ್ಕೂ, ಅಂತಃಕರಣಕ್ಕೂ, ಹೀಗೆ ಎಲ್ಲಕ್ಕೂ ಉದ್ಗಮಸ್ಥಾನ ಪರಮಾತ್ಮನೇ ಆಗಿದ್ದಾನೆ. ಅವನೇ ಎಲ್ಲರ ಆತ್ಮನಾಗಿರುವನು. ॥ ೧೧ ॥ ಹೆಚ್ಚೇನು ಹೇಳಲಿ ! ನಾನೂ, ನೀನೂ, ನಿನ್ನ ಅಣ್ಣಂದಿರಾದ ಸನಕಾದಿಗಳೂ, ದೇವಾಸುರ-ಮನುಷ್ಯರೂ ನಾಗ-ಪಕ್ಷಿ-ಮೃಗಗಳೂ, ತೆವಳುವ ಪ್ರಾಣಿಗಳೂ, ಗಂಧರ್ವರೂ, ಅಪ್ಸರೆಯರೂ, ಯಕ್ಷರೂ, ರಾಕ್ಷಸರೂ, ಭೂತ-ಪ್ರೇತಗಳೂ, ಸರ್ಪಗಳೂ, ಪಶುಗಳೂ, ಪಿತೃದೇವತೆಗಳೂ, ಸಿದ್ಧರೂ, ವಿದ್ಯಾಧರರೂ, ಚಾರಣರೂ, ವೃಕ್ಷಗಳೂ, ಆಕಾಶ-ನೀರು-ನೆಲಗಳಲ್ಲಿ ವಾಸಿಸುವ ಇತರ ನಾನಾಜೀವಿಗಳೂ, ಗ್ರಹ-ನಕ್ಷತ್ರಗಳೂ, ಬಾಲವುಳ್ಳ ತಾರೆಗಳೂ, ಚುಕ್ಕೆಗಳೂ, ತಾರೆಗಳೂ, ಮಿಂಚು-ಮೋಡಗಳೂ ಇವೆಲ್ಲವೂ ಆ ವಿರಾಟ್‌ಪುರುಷನ ಅವಯವಗಳು. ಭೂತ-ಭವಿಷ್ಯ-ವರ್ತಮಾನಗಳಿಗೆ ಸೇರಿದ ಎಲ್ಲವೂ ಆತನೇ. ಇವೆಲ್ಲವನ್ನು ಎಲ್ಲೆಡೆ

ಗಂಧರ್ವಾಪ್ಸರಸೋ ಯಕ್ಷಾ ರಕ್ಷೋಭೂತಗಣೋರಗಾಃ ।
ಪಶವಃ ಪಿತರಃ ಸಿದ್ಧಾ ವಿದ್ಯಾಧ್ರಾಶ್ಚಾರಣಾ ದ್ರುಮಾಃ
॥ ೧೩ ॥

ಅನ್ಯೇ ಚ ವಿವಿಧಾ ಜೀವಾ ಜಲಸ್ಥಲನಭೌಕಸಃ ।
ಗ್ರಹರ್ಕ್ಷಕೇತವಸ್ತಾರಾಸ್ತಡಿತಃ ಸ್ತನಯಿತ್ನವಃ
॥ ೧೪ ॥

ಸರ್ವಂ ಪುರುಷ ಏವೇದಂ ಭೂತಂ ಭವ್ಯಂ ಭವಚ್ಚ ಯತ್ ।
ತೇನೇದಮಾವೃತಂ ವಿಶ್ವಂ ವಿತಸ್ತಿಮಧಿತಿಷ್ಠತಿ
॥ ೧೫ ॥

ಸ್ವಧಿಷ್ಣ್ಯಂ ಪ್ರತಪನ್ಪ್ರಾಣೋ ಬಹಿಶ್ಚ ಪ್ರತಪತ್ಯಸೌ ।
ಏವಂ ವಿರಾಜಂ ಪ್ರತಪಂಸ್ತಪತ್ಯಂತರ್ಬಹಿಃ ಪುಮಾನ್
॥ ೧೬ ॥

ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।
ಮಹಿಮೈಷ ತತೋ ಬ್ರಹ್ಮನ್ಪುರುಷಸ್ಯ ದುರತ್ಯಯಃ
॥ ೧೭ ॥

ಪಾದೇಷು ಸರ್ವಭೂತಾನಿ
ಪುಂಸಃ ಸ್ಥಿತಿಪದೋ ವಿದುಃ ।
ಅಮೃತಂ ಕ್ಷೇಮಮಭಯಂ
ತ್ರಿಮೂರ್ಧ್ನೋಽಧಾಯಿ ಮೂರ್ಧಸು ॥ ೧೮ ॥

ಪಾದಾಸ್ತ್ರಯೋ ಬಹಿಶ್ಚಾಸನ್ನಪ್ರಜಾನಾಂ ಯ ಆಶ್ರಮಾಃ ।
ಅಂತಸ್ತ್ರಿಲೋಕ್ಯಾಸ್ತ್ವಪರೋ ಗೃಹಮೇಧೋಽಬೃಹದ್ವ್ರತಃ
॥ ೧೯ ॥

ಸೃತೀ ವಿಚಕ್ರಮೇ ವಿಷ್ವಙ್ ಸಾಶನಾನಶನೇ ಉಭೇ ।
ಯದವಿದ್ಯಾ ಚ ವಿದ್ಯಾ ಚ ಪುರುಷಸ್ತೂಭಯಾಶ್ರಯಃ
॥ ೨೦ ॥

ಗಳಿಂದಲೂ ಆವರಿಸಿ ತುಂಬಿರುವನಲ್ಲದೆ ಹತ್ತು ಅಂಗುಲಗಳಷ್ಟು* ಮೇಲೆ ಇದನ್ನು ಮೀರಿಯೂ ಇದ್ದಾನೆ. ॥ ೧೨-೧೫ ॥ ಪ್ರಾಣವೆಂಬ ಸೂರ್ಯನು ತನ್ನ ಮಂಡಲವನ್ನು ಪ್ರಕಾಶಿಸುತ್ತಾ, ಒಳಗೂ, ಹೊರಗೂ ವಿಶ್ವದ ಎಲ್ಲೆಡೆ ಪ್ರಕಾಶವನ್ನು ಹರಡುತ್ತಾನೆ. ಹಾಗೆಯೇ ಪುರಾಣಪುರುಷ ಪರಮಾತ್ಮನೂ ಕೂಡ ಸಮಗ್ರ ವಿರಾಟ್ ಪುರುಷನನ್ನು (ಬ್ರಹ್ಮಾಂಡವನ್ನು) ಪ್ರಕಾಶಿಸುತ್ತಾ, ಅದರ ಒಳಗೆ-ಹೊರಗೆ ಎಲ್ಲೆಡೆಗಳಲ್ಲಿಯೂ ಪ್ರಕಾಶಿತನಾಗಿದ್ದಾನೆ. ॥ ೧೬ ॥ ಮುನಿವರ್ಯಾ ! ಮನುಷ್ಯನ ಕ್ರಿಯೆ ಮತ್ತು ಸಂಕಲ್ಪದಿಂದ ಏನೆಲ್ಲ ಉಂಟಾಗುತ್ತದೋ, ಅದಕ್ಕಿಂತಲೂ ಆ ಪರಮಾತ್ಮನು ಮೀರಿಇದ್ದು ಅಮೃತ ಹಾಗೂ ಅಭಯಪದ (ಮೋಕ್ಷಪದ)ದ ಸ್ವಾಮಿಯಾಗಿರುವನು. ಅವನ ಮಹಿಮೆಯ ಪಾರವನ್ನು ಯಾರೂ ಹೊಂದಲಾರರು. ॥ ೧೭ ॥ ಸಮಸ್ತ ಲೋಕಗಳು ಭಗವಂತನ ಒಂದು ಪಾದ (ಅಂಶ) ಮಾತ್ರವಾಗಿದೆ ಹಾಗೂ ಅವನ ಅಂಶಮಾತ್ರ ಸ್ಥಿತಿಪದದಲ್ಲಿ ಸಮಸ್ತ ಪ್ರಾಣಿಗಳು ವಾಸಿಸುತ್ತವೆ. ವಿರಾಟಪುರುಷನ ಮೂರ್ಧ್ನಿಯಲ್ಲಿ ಮೂರು ಲೋಕಗಳಿವೆ. ಅವುಗಳಲ್ಲಿನ ಜನೋಲೋಕದಲ್ಲಿ ಅಮೃತ ತಪೋಲೋಕದಲ್ಲಿ ಕ್ಷೇಮ ಮತ್ತು ಸತ್ಯಲೋಕದಲ್ಲಿ ಅಭಯಪದವಿದೆ. ಈ ಮೂರೂ ಲೋಕಗಳು ವಿರಾಟ್ ಪುರುಷನ ಮೂರ್ಧ್ನಿಯಲ್ಲಿ ಇರುವುದರಿಂದ ಅವನನ್ನು ತ್ರಿಮೂರ್ಧಾ ಎಂದು ಹೇಳಲಾಗಿದೆ. ॥ ೧೮ ॥

ಜನೋಲೋಕ, ತಪೋಲೋಕ, ಸತ್ಯಲೋಕ ಇವುಗಳಲ್ಲಿ ಅವಿವಾಹಿತರೂ, ಬ್ರಹ್ಮಚಾರಿಗಳೂ, ವಾನಪ್ರಸ್ಥರೂ, ಸಂನ್ಯಾಸಿಗಳೂ ವಾಸಿಸುತ್ತಾರೆ. ಇದು ಅವನ ಹೊರಗಿನ ಪಾದವಾಗಿದೆ. ದೀರ್ಘಕಾಲೀನ ಬ್ರಹ್ಮಚರ್ಯರಹಿತರಾದ ಗೃಹಸ್ಥರು ಭೂಲೋಕ, ಭುವರ್ಲೋಕ, ಸ್ವರ್ಲೋಕಗಳೊಳಗೇ ವಾಸಿಸುತ್ತಾರೆ. ಇದು ಅವನ ಒಳಗಿನ ಪಾದವಾಗಿದೆ. ಭಗವಂತನ ಹತ್ತು ಅಂಗುಲದಲ್ಲೇ ಇದೆಲ್ಲ ಪ್ರಪಂಚವಿದೆ. ಆದರೆ ಭಗವಂತನು ಅವೆಲ್ಲಕ್ಕಿಂತ ಅತೀತನಾಗಿದ್ದಾನೆ. ॥ ೧೯ ॥ ಭಗವಂತನು ಮನುಷ್ಯರಿಗಾಗಿ ಎರಡು ಮಾರ್ಗವನ್ನು ಹೇಳಿರುವನು. ಅವುಗಳಲ್ಲಿ ಅವನು ಯಾವುದರಲ್ಲಿಯೂ ನಡೆಯಬಲ್ಲನು. ಒಂದು ಸ+ಅಶನ, ಅರ್ಥಾತ್ ಸಕಾಮ ಅನುಷ್ಠಾನ. ಇನ್ನೊಂದು ಅನ+ಅಶನ, ಅರ್ಥಾತ್ ನಿಷ್ಕಾಮ ಅನುಷ್ಠಾನ. ಇದರಲ್ಲಿ ಸಕಾಮ ಮಾರ್ಗವನ್ನು ಅವಿದ್ಯೆ ಮತ್ತು ನಿಷ್ಕಾಮ ಮಾರ್ಗವನ್ನು ವಿದ್ಯೆ ಎಂದು ಹೇಳಲಾಗಿದೆ. ನಿಷ್ಕಾಮಕರ್ಮದಲ್ಲಿ ಪರಮಾತ್ಮನ ಉಪಾಸನಾ ಪದ್ಧತಿಯಿಂದ ಕ್ರಿಯೆ ನಡೆಯುತ್ತದೆ. ಸಕಾಮದಲ್ಲಿ ಕರ್ಮಗಳು ವಿಸ್ತಾರವಾಗಿವೆ. ಅವು ಅವಿದ್ಯಾ ಮೂಲಕವಾಗಿವೆ. ಕ್ಷೇತ್ರಜ್ಞ ಜೀವಾತ್ಮನು ಎರಡರಲ್ಲಿನ ಯಾವುದೇ ಮಾರ್ಗವನ್ನು

* ದಶಾಂಗುಲ ಇದೊಂದು ಉಪಲಕ್ಷಣವಾಗಿದೆ. ಹೆಬ್ಬೆರಳು ಮತ್ತು ತೋರುಬೆರಳು ಚಾಚಿದಾಗ ಅದರ ಮಧ್ಯಭಾಗವನ್ನು ಪ್ರಾದೇಶಮಾತ್ರವೆಂಬ ಸಂಜ್ಞೆ ಇದೆ. ಇದೇ ಸಾಮಾನ್ಯ ೧೦ ಅಂಗುಲವೆಂದು ತಿಳಿಯಲಾಗಿದೆ. ಇದಲ್ಲದೇ ದಶಾಂಗುಲ ನ್ಯಾಯವೆಂದೂ ಹೇಳಲಾಗಿದೆ – ಬ್ರಹ್ಮಾಂಡದ ಏಳು ಆವರಣಗಳನ್ನು ವರ್ಣಿಸುವಾಗ ವೇದಾಂತ ಪ್ರಕ್ರಿಯೆಯಲ್ಲಿ ಹೀಗೆ ತಿಳಿಯಲಾಗಿದೆ – ಪೃಥ್ವಿಗಿಂತ ಹತ್ತುಪಟ್ಟು ಜಲವಿದೆ. ಜಲದ ಹತ್ತುಪಟ್ಟು ಅಗ್ನಿಯೂ, ಅಗ್ನಿಗಿಂತ ಹತ್ತುಪಟ್ಟು ವಾಯುವೂ, ವಾಯುವಿನಿಂದ ಹತ್ತುಪಟ್ಟು ಆಕಾಶವೂ, ಆಕಾಶಕ್ಕಿಂತ ಹತ್ತುಪಟ್ಟು ಅಹಂಕಾರವೂ, ಅಹಂಕಾರಕ್ಕಿಂತ ಹತ್ತುಪಟ್ಟು ಮಹತ್ತತ್ತ್ವವೂ, ಮಹತ್ತತ್ತ್ವಕ್ಕಿಂತ ಹತ್ತು ಪಟ್ಟು ಮೂಲಪ್ರಕೃತಿ ದೊಡ್ಡದಾಗಿದೆ. ಆ ಪ್ರಕೃತಿಯು ಭಗವಂತನ ಕೇವಲ ಒಂದು ಪಾದದಲ್ಲಿದೆ. ಈ ಪ್ರಕಾರ ಭಗವಂತನ ಮಹತ್ವ ಪ್ರಕಟಿಸಲಾಗಿದೆ. ಇದು ದಶಾಂಗುಲ-ನ್ಯಾಯವೆಂದು ಹೇಳಲಾಗಿದೆ.
ಹತ್ತು ಅಂಗುಲಗಳಿಗೂ ಮೀರಿದ್ದಾನೆ – ಎಂದರೆ ಈ ವಿಶ್ವಕ್ಕಿಂತಲೂ ತುಂಬಾ ಮೇಲಿರುವವನು. ಎಲ್ಲವನ್ನೂ ತುಂಬಿ ಮೀರಿರುವನು – ಎಂದು ಆಧಿಕ್ಯದಲ್ಲಿ ಮಾತ್ರವೇ ತಾತ್ಪರ್ಯ. ಅಪರಿಚ್ಛಿನ್ನನಾದ ಅವನು ಕೇವಲ ಹತ್ತು ಅಂಗುಲಗಳಷ್ಟು ದೊಡ್ಡವನು ಎಂದರೆ ಪರಿಮಾಣದ ನಿರ್ದೇಶವಲ್ಲ (ಶ್ರೀಧರೀಯ).

ಯಸ್ಮಾದಂಡಂ ವಿರಾಡ್ ಜಜ್ಞೇ ಭೂತೇಂದ್ರಿಯಗುಣಾತ್ಮಕಃ ।
ತದ್ದ್ರವ್ಯಮತ್ಯಗಾದ್ವಿಶ್ವಂ ಗೋಭಿಃ ಸೂರ್ಯ ಇವಾತಪನ್ ॥ ೨೧ ॥

ಯದಾಸ್ಯ ನಾಭ್ಯಾನ್ನಲಿನಾದಹಮಾಸಂ ಮಹಾತ್ಮನಃ ।
ನಾವಿದಂ ಯಜ್ಞಸಂಭಾರಾನ್ಪುರುಷಾವಯವಾದೃತೇ ॥ ೨೨ ॥

ತೇಷು ಯಜ್ಞಸ್ಯ ಪಶವಃ ಸವನಸ್ಪತಯಃ ಕುಶಾಃ ।
ಇದಂ ಚ ದೇವಯಜನಂ ಕಾಲಶ್ಚೋರುಗುಣಾನ್ವಿತಃ ॥ ೨೩ ॥

ವಸ್ತೂನ್ಯೋಷಧಯಃ ಸ್ನೇಹಾ ರಸಲೋಹಮೃದೋ ಜಲಮ್ ।
ಋಚೋ ಯಜೂಂಷಿ ಸಾಮಾನಿ ಚಾತುರ್ಹೋತ್ರಂ ಚ ಸತ್ತಮ ॥ ೨೪ ॥

ನಾಮಧೇಯಾನಿ ಮಂತ್ರಾಶ್ಚ ದಕ್ಷಿಣಾಶ್ಚ ವ್ರತಾನಿ ಚ ।
ದೇವತಾನುಕ್ರಮಃ ಕಲ್ಪಃ ಸಂಕಲ್ಪಸ್ತಂತ್ರಮೇವ ಚ ॥ ೨೫ ॥

ಗತಯೋ ಮತಯಃ ಶ್ರದ್ಧಾ ಪ್ರಾಯಶ್ಚಿತ್ತಂ ಸಮರ್ಪಣಮ್ ।
ಪುರುಷಾವಯವೈರೇತೇ ಸಂಭಾರಾಃ ಸಂಭೃತಾ ಮಯಾ ॥ ೨೬ ॥

ಇತಿ ಸಂಭೃತಸಂಭಾರಃ ಪುರುಷಾವಯವೈರಹಮ್ ।
ತಮೇವ ಪುರುಷಂ ಯಜ್ಞಂ ತೇನೈವಾಯಜಮೀಶ್ವರಮ್ ॥ ೨೭ ॥

ತತಸ್ತೇ ಭ್ರಾತರ ಇಮೇ ಪ್ರಜಾನಾಂ ಪತಯೋ ನವ ।
ಅಯಜನ್ ವ್ಯಕ್ತಮವ್ಯಕ್ತಂ ಪುರುಷಂ ಸುಸಮಾಹಿತಾಃ ॥ ೨೮ ॥

ತತಶ್ಚ ಮನವಃ ಕಾಲೇ ಈಜಿರೇ ಋಷಯೋಽಪರೇ ।
ಪಿತರೋ ವಿಬುಧಾ ದೈತ್ಯಾ ಮನುಷ್ಯಾಃ ಕ್ರತುಭಿರ್ವಿಭುಮ್ ॥ ೨೯ ॥

ನಾರಾಯಣೇ ಭಗವತಿ ತದಿದಂ ವಿಶ್ವಮಾಹಿತಮ್ ।
ಗೃಹೀತಮಾಯೋರುಗುಣಃ ಸರ್ಗಾದಾವಗುಣಃ ಸ್ವತಃ ॥ ೩೦ ॥

ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ ।
ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃಕ್ ॥ ೩೧ ॥

ಹಿಡಿಯಬಲ್ಲನು. ಎರಡೂ ಮಾರ್ಗಗಳ ಆಧಾರ ಈ ವಿರಾಟ್ ಪುರುಷ ಪರಮಾತ್ಮನೇ ಆಗಿದ್ದಾನೆ ॥ ೨೦ ॥ ಏಕೆಂದರೆ, ಆ ವಿರಾಟ್ ಪುರುಷನಿಂದಲೇ ಭೂತಗಳು, ಇಂದ್ರಿಯಗಳು, ಗುಣಗಳುಳ್ಳ ಈ ಬ್ರಹ್ಮಾಂಡವೂ ಉತ್ಪನ್ನವಾಗಿದೆ. ಆ ಪುರಾಣಪುರುಷ ಪರಮಾತ್ಮನು ಸಮಸ್ತ ವಸ್ತುಗಳಿಂದ ಅತೀತನಾಗಿದ್ದಾನೆ. ಸೂರ್ಯನು ಬೆಳಗುತ್ತಾ ತನ್ನ ಕಿರಣಗಳಿಂದ ವಿಶ್ವವೆಲ್ಲವನ್ನು ಪ್ರಕಾಶಿಸುತ್ತಿದ್ದು, ವಿಶ್ವದಿಂದ ಬೇರೆಯೇ ಆಗಿದ್ದಾನೆ. ಹಾಗೆಯೇ ಪರಮಾತ್ಮನು ಸಮಗ್ರ ವಿಶ್ವವನ್ನು ನಿರ್ಮಿಸಿ, ಅದನ್ನು ಪ್ರಕಾಶಿಸುತ್ತಿರುವನು. ಆದರೆ ಅವನು ಇದರಿಂದ ಅತೀತನೇ ಆಗಿದ್ದಾನೆ. ॥ ೨೧ ॥

ಮಹಾತ್ಮನಾದ ಆ ವಿರಾಟ್ ಪುರುಷನ ನಾಭಿಕಮಲದಿಂದ ನಾನು ಜನಿಸಿದಾಗ ನನಗೆ ಯಜ್ಞಮಾಡುವುದಕ್ಕೆ ಆ ಪುರುಷನ ಅಂಗಗಳನ್ನು ಬಿಟ್ಟು ಬೇರೆ ಯಾವ ಸಾಮಗ್ರಿಯೂ ದೊರೆಯಲಿಲ್ಲ ॥ ೨೨ ॥ ಆಗ ನಾನು ಅವನ ಅಂಗಗಳಲ್ಲೇ ಯಜ್ಞದ ಪಶು, ಯೂಪ ಸ್ತಂಭ, ಕುಶ, ಯಜ್ಞಭೂಮಿ, ಯಜ್ಞಕ್ಕೆ ಯೋಗ್ಯವಾದ ಉತ್ತಮ ಕಾಲವನ್ನು ಕಲ್ಪಿಸಿಕೊಂಡೆನು. ॥ ೨೩ ॥ ಋಷಿಶ್ರೇಷ್ಠನೇ ! ಯಜ್ಞಕ್ಕೆ ಆವಶ್ಯಕವಾದ ಪಾತ್ರೆ ಮುಂತಾದ ವಸ್ತುಗಳು, ಗೋಧಿ, ಅಕ್ಕಿ ಮುಂತಾದ ಓಷಧಿಗಳು, ತುಪ್ಪವೇ ಮುಂತಾದ ಜಿಡ್ಡು ಪದಾರ್ಥಗಳು, ಆರು ರಸಗಳು, ಕಬ್ಬಿಣ, ಮಣ್ಣು, ನೀರು, ಋಕ್ಕು, ಯಜುಸ್ಸು, ಸಾಮಗಳು, ಚಾತುರ್ಹೋತ್ರ, ಯಜ್ಞಗಳ ನಾಮಧೇಯಗಳು, ಮಂತ್ರಗಳು, ದಕ್ಷಿಣೆ, ವ್ರತ, ದೇವತೆಗಳ ಹೆಸರುಗಳು, ಕಲ್ಪಗ್ರಂಥಗಳು, ಸಂಕಲ್ಪ, ತಂತ್ರ, ಗತಿ, ಮತಿ, ಶ್ರದ್ಧೆ, ಪ್ರಾಯಶ್ಚಿತ್ತ ಮತ್ತು ಸಮರ್ಪಣೆ ಗಳೆಂಬ – ಈ ಎಲ್ಲ ಯಜ್ಞಸಾಮಗ್ರಿಗಳನ್ನು ಆ ಪುರುಷನ ಅಂಗಗಳಿಂದಲೇ ಸಂಗ್ರಹಿಸಿದೆನು. ॥ ೨೪-೨೬ ॥ ಹೀಗೆ ಆ ವಿರಾಟ್‌ಪುರುಷನ ಅಂಗಗಳಿಂದಲೇ ಸಂಗ್ರಹಿಸಿದ ಎಲ್ಲ ಸಾಮಗ್ರಿಗಳಿಂದ ನಾನು ಆ ಯಜ್ಞರೂಪಿಯಾದ ಪರಮಾತ್ಮನನ್ನು ಯಜ್ಞದ ಮೂಲಕ ಪೂಜಿಸಿದೆನು. ॥ ೨೭ ॥ ಅನಂತರ ನಿನ್ನ ಸೋದರರಾದ ಒಂಭತ್ತು ಮಂದಿ ಪ್ರಜಾಪತಿಗಳೂ ಏಕಾಗ್ರಚಿತ್ತದಿಂದ ವ್ಯಕ್ತ ಮತ್ತು ಅವ್ಯಕ್ತ ಸ್ವರೂಪನಾದ, ವಿರಾಟ್ ಮತ್ತು ಅಂತರ್ಯಾಮಿರೂಪನಾದ ಆ ಪುರುಷನನ್ನು ಆರಾಧಿಸಿದರು. ॥ ೨೮ ॥ ಇದಾದ ಬಳಿಕ ಆಗಾಗ ಮನುಗಳು, ಋಷಿಗಳು, ಪಿತೃಗಳು, ದೇವತೆಗಳು, ದೈತ್ಯರು, ಮನುಷ್ಯರು ಯಜ್ಞಗಳ ಮೂಲಕ ಆ ಭಗವಂತನ ಆರಾಧನೆಯನ್ನು ಮಾಡಿದರು. ॥ ೨೯ ॥ ನಾರದಾ ! ಈ ಇಡೀ ವಿಶ್ವವು ಆ ಭಗವಂತನಾದ ನಾರಾಯಣನಲ್ಲಿಯೇ ನೆಲೆಗೊಂಡಿದೆ. ಸ್ವಯಂ ಗುಣಾತೀತನಾಗಿದ್ದರೂ ಸೃಷ್ಟಿಯ ಪ್ರಾರಂಭದಲ್ಲಿ ತನ್ನ ಮಾಯಾಶಕ್ತಿಯಿಂದ ತ್ರಿಗುಣಗಳನ್ನು ಸ್ವೇಚ್ಛೆಯಿಂದ ಸ್ವೀಕರಿಸುವನು. ॥ ೩೦ ॥ ಅವನ ಪ್ರೇರಣೆಯಿಂದಲೇ ನಾನು ಈ ವಿಶ್ವವನ್ನು ರಚಿಸುತ್ತೇನೆ. ಅವನಿಗೆ ಅಧೀನನಾಗಿಯೇ ರುದ್ರನು ಇದನ್ನು ಸಂಹರಿಸುತ್ತಾನೆ. ಅವನು ಸ್ವತಃ ವಿಷ್ಣುರೂಪದಿಂದ ಇದನ್ನು ಪಾಲಿಸುತ್ತಾನೆ. ಏಕೆಂದರೆ, ಅವನೇ ಸತ್ತ್ವ, ರಜ, ತಮಸ್ಸು ಎಂಬ ಮೂರು ಶಕ್ತಿಗಳನ್ನು ಸ್ವೀಕರಿಸಿರುವನು. ॥ ೩೧ ॥ ಮಗು ! ನೀನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟಿರುವೆನು. ಒಟ್ಟಿನಲ್ಲಿ ಹೇಳುವುದಾದರೆ ಆ ಭಗವಂತನನ್ನು

ಇತಿ ತೇಽಭಿಹಿತಂ ತಾತ ಯಥೇದಮನುಪೃಚ್ಛಸಿ ।
ನಾನ್ಯದ್ಭಗವತಃ ಕಿಂಚಿದ್ಭಾವ್ಯಂ ಸದಸದಾತ್ಮಕಮ್ ॥ ೩೨ ॥

ಬಿಟ್ಟು ಸದ್ರೂಪವಾಗಲೀ, ಅಸದ್ರೂಪವಾಗಲೀ, ಕಾರ್ಯ-ಕಾರಣವಾಗಲೀ ಯಾವ ವಸ್ತುವೂ ಇಲ್ಲ ಎಂದು ತಿಳಿ.* ॥ ೩೨ ॥

ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ
ನ ವೈ ಕ್ವಚಿನ್ಮೇ ಮನಸೋ ಮೃಷಾ ಗತಿಃ ।
ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ
ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ ॥ ೩೩ ॥

ಸೋಽಹಂ ಸಮಾಮ್ನಾಯಮಯಸ್ತಪೋಮಯಃ
ಪ್ರಜಾಪತೀನಾಮಭಿವಂದಿತಃ ಪತಿಃ ।
ಆಸ್ಥಾಯ ಯೋಗಂ ನಿಪುಣಂ ಸಮಾಹಿತ-
ಸ್ತಂ ನಾಧ್ಯಗಚ್ಛಂ ಯತ ಆತ್ಮಸಂಭವಃ ॥ ೩೪ ॥

ನತೋಽಸ್ಮ್ಯಹಂ ತಚ್ಚರಣಂ ಸಮೀಯುಷಾಂ
ಭವಚ್ಛಿದಂ ಸ್ವಸ್ತ್ಯಯನಂ ಸುಮಂಗಲಮ್ ।
ಯೋ ಹ್ಯಾತ್ಮಮಾಯಾವಿಭವಂ ಸ್ಮ ಪರ್ಯಗಾದ್
ಯಥಾ ನಭಃ ಸ್ವಾಂತಮಥಾಪರೇ ಕುತಃ ॥ ೩೫ ॥

ನಾಹಂ ನ ಯೂಯಂ ಯದೃತಾಂ ಗತಿಂ ವಿದು-
ರ್ನ ವಾಮದೇವಃ ಕಿಮುತಾಪರೇ ಸುರಾಃ ।
ತನ್ಮಾಯಯಾ ಮೋಹಿತಬುದ್ಧಯಸ್ತ್ವಿದಂ
ವಿನಿರ್ಮಿತಂ ಚಾತ್ಮಸಮಂ ವಿಚಕ್ಷ್ಮಹೇ ॥ ೩೬ ॥

ಯಸ್ಯಾವತಾರಕರ್ಮಾಣಿ ಗಾಯಂತಿ ಹ್ಯಸ್ಮದಾದಯಃ ।
ನ ಯಂ ವಿದಂತಿ ತತ್ತ್ವೇನ ತಸ್ಮೈ ಭಗವತೇ ನಮಃ ॥ ೩೭ ॥

ಪ್ರಿಯ ನಾರದನೇ! ನಾನು ಪ್ರೇಮಪೂರ್ಣ ಹೃದಯದಿಂದ ಭಗವಂತನ ಸ್ಮರಣೆಯಲ್ಲಿ ಮಗ್ನನಾಗಿರುತ್ತೇನೆ. ಇದರಿಂದಲೇ ನನ್ನ ಮಾತು ಎಂದಿಗೂ ಸುಳ್ಳಾಗುವುದು ಕಂಡುಬರುವುದಿಲ್ಲ, ನನ್ನ ಮನಸ್ಸಿನ ಸಂಕಲ್ಪವು ಎಂದೂ ಅಸತ್ಯವಾಗುವುದಿಲ್ಲ, ನನ್ನ ಇಂದ್ರಿಯಗಳು ಎಂದಿಗೂ ಮರ್ಯಾದೆ ಮೀರಿ ದುರ್ಮಾರ್ಗದಲ್ಲಿ ಪ್ರವರ್ತಿಸುವುದಿಲ್ಲ. ॥ ೩೩ ॥ ನಾನು ವೇದಮಯನಾಗಿದ್ದೇನೆ. ತಪೋಮಯನಾಗಿದ್ದೇನೆ; ದೊಡ್ಡ-ದೊಡ್ಡ ಪ್ರಜಾಪತಿಗಳಿಂದಲೂ ನಮಸ್ಕರಿಸಲ್ಪಡುತ್ತಿರುವ ಪ್ರಜಾಪತಿ ಸಾರ್ವಭೌಮನಾಗಿದ್ದೇನೆ. ಆದರೆ ಇಂತಹ ನನಗೂ ಸಂಪೂರ್ಣ ಯೋಗನಿಷ್ಠೆಯನ್ನು ಆಚರಿಸಿದಾಗಲೂ ನನ್ನ ಮೂಲಕಾರಣನಾದ ಆ ಪರಮಾತ್ಮನ ಸ್ವರೂಪವನ್ನು ತಿಳಿಯಲು ಮೊದಲು ಸಾಧ್ಯವಾಗಲಿಲ್ಲ. ॥ ೩೪ ॥ (ಏಕೆಂದರೆ, ಅವನಾದರೋ ಏಕಮಾತ್ರ ಭಕ್ತಿಯಿಂದಲೇ ದೊರೆಯುವನು.) ನಾನಾದರೋ ಪರಮ ಮಂಗಲಮಯನಾದ ಹಾಗೂ ಶರಣುಬಂದ ಭಕ್ತರ ಭವಬಂಧನವನ್ನು ಧ್ವಂಸಮಾಡುವ ಕ್ಷೇಮಪ್ರದನಾದ ಭಗವಂತನ ಚರಣಗಳಿಗೇ ನಮಸ್ಕರಿಸುತ್ತೇನೆ. ಅವನಲ್ಲಿ ಶರಣಾಗಿದ್ದೇನೆ. ಅನಂತ ಅಪಾರ ಆಕಾಶಕ್ಕೆ ಮೇರೆಯೇ ಇಲ್ಲದಿರುವಂತೆ ಭಗವಂತನ ಅನಂತ ಮಹಿಮೆಗೆ ಪಾರವಿಲ್ಲ. ಆತನ ಮಾಯೆಯ ವೈಭವವು ಅಪಾರವಾದುದು, ಅನಂತವಾದುದು. ಆಕಾಶವು ತನ್ನ ಅನಂತತೆಯನ್ನು ತಾನು ತಿಳಿಯದಂತೆಯೇ ಅವನೂ ಕೂಡ ತನ್ನ ಮಹಿಮೆಯ ವಿಸ್ತಾರವನ್ನು ಅರಿಯನು. ಹೀಗಿರುವಾಗ ಇತರರು ಹೇಗೆ ಅರಿಯಬಲ್ಲರು? ॥ ೩೫ ॥ ನಾನು, ನನ್ನ ಮಕ್ಕಳಾದ ನೀವೂ, ದೇವದೇವನಾದ ವಾಮದೇವನೂ ಅವನ ಸತ್ಯಸ್ವರೂಪವನ್ನು ತಿಳಿಯೆವು. ಹೀಗಿರುವಾಗ ಇತರ ದೇವತೆಗಳು ಹೇಗೆ ಅರಿಯಬಲ್ಲರು? ಆತನ ಮಾಯೆಯಿಂದ ಮೋಹಿತರಾದ ನಾವು ಆತನನ್ನು ತಿಳಿಯುವುದಿರಲಿ, – ಆತನು ನಿರ್ಮಿಸಿದ ಜಗತ್ತಿನ ಸ್ವರೂಪವನ್ನು ಸರಿಯಾಗಿ ತಿಳಿಯಲಾರೆವು. ನಮ್ಮ-ನಮ್ಮ ಬುದ್ಧಿಯ ಮಟ್ಟಕ್ಕೆ ತಕ್ಕಂತೆ ಅದನ್ನು ವರ್ಣಿಸುತ್ತಿದ್ದೇವೆ. ವಾಸ್ತವವಾಗಿ ಆ ತತ್ತ್ವವನ್ನು ವಾಣಿ ಮತ್ತು ಬುದ್ಧಿಯ ಮೂಲಕ ವರ್ಣಿಸಲಾಗುವುದಿಲ್ಲ. ॥ ೩೬ ॥** ನಾವು ಕೇವಲ ಆತನ ಅವತಾರಗಳನ್ನು ಮಾತ್ರ ಗಾನಮಾಡ ಬಲ್ಲೆವೇ ಹೊರತು, ಅವನ ತತ್ತ್ವವನ್ನು ತಿಳಿಯಲಾರೆವು. ಅಂತಹ ಭಗವಂತನ ಶ್ರೀಚರಣಗಳಲ್ಲಿ ನಾನು ನಮಸ್ಕರಿಸುತ್ತೇನೆ. ॥ ೩೭ ॥

* ಗೀತೆಯಲ್ಲಿ ಭಗವಂತನು ಹೇಳಿರುವನು –
**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ । ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥** *(ಭಗವದ್ಗೀತೆ ೭/೭)*
ಹೇ ಧನಂಜಯನೇ! ನನಗಿಂತ ಭಿನ್ನವಾದ ಯಾವುದೇ ಪರಮ ಕಾರಣವು ಇಲ್ಲವಾಗಿದೆ. ಈ ಸಂಪೂರ್ಣ ಜಗತ್ತು ಸೂತ್ರದಲ್ಲಿ ನೂಲಿನ ಮಣಿಗಳಂತೆ ನನ್ನಲ್ಲಿ ಪೋಣಿಸಲ್ಪಟ್ಟಿದೆ.

** ಕುರುಡರು ಆನೆಯನ್ನು ಕಂಡ ಇದೊಂದು ದೃಷ್ಟಾಂತ – ಒಮ್ಮೆ ಮೂರುಜನ ಕುರುಡರು ಒಟ್ಟಿಗೆ ಹೋಗುತ್ತಿದ್ದರು. ಅವರಿಗೆ ದಾರಿಯಲ್ಲಿ ಒಂದು ಆನೆ ಸಿಕ್ಕಿತು. ಒಬ್ಬನು ಆನೆಯ ಕಾಲನ್ನು ಮುಟ್ಟಿ ಹೇಳಿದನು – ಆನೆಯೆಂದರೆ ಕಂಭವಾಗಿದೆ. ಇನ್ನೊಬ್ಬನು ಕಿವಿಯನ್ನು ಮುಟ್ಟಿ – ಆನೆಯೆಂದರೆ ಮೊರವಾಗಿದೆ ಎಂದು ಹೇಳಿದನು. ಮೂರನೆಯವನು ಆನೆಯ ಸೊಂಡಿಲನ್ನು ಮುಟ್ಟಿ – ಆನೆಯೆಂದರೆ ದೊಡ್ಡ ಹೆಬ್ಬಾವಿನಂತಿದೆ ಎಂದು ಹೇಳಿದನು. ಆನೆಯ ವಿಷಯದಲ್ಲಿ ಮೂವರೂ ಕುರುಡರು ತಮ್ಮ-ತಮ್ಮ ಬುದ್ಧಿಗನುಸಾರವಾದ ಅಭಿಪ್ರಾಯವಿರುವಂತೆಯೇ, ಆ ಪರಬ್ರಹ್ಮ ಪರಮಾತ್ಮನ ವಿಷಯದಲ್ಲಿ ಬೇರೆ-ಬೇರೆ ಮಾನ್ಯತೆಯ ಭೇದವಿರುತ್ತದೆ. ನಿಜವಾಗಿ ಆ ತತ್ತ್ವವನ್ನು ಮಾತಿನಿಂದ ವರ್ಣಿಸಲು ಆಗುವುದೇ ಇಲ್ಲ.

ಸ ಏಷ ಆದ್ಯಃ ಪುರುಷಃ ಕಲ್ಪೇ ಕಲ್ಪೇ ಸೃಜತ್ಯಜಃ ।
ಆತ್ಮಾಽಽತ್ಮನ್ಯಾತ್ಮನಾಽಽತ್ಮಾನಂ ಸಂಯಚ್ಛತಿ ಚ ಪಾತಿ ಚ ॥ ೩೮ ॥

ವಿಶುದ್ಧಂ ಕೇವಲಂ ಜ್ಞಾನಂ ಪ್ರತ್ಯಕ್ ಸಮ್ಯಗವಸ್ಥಿತಮ್ ।
ಸತ್ಯಂ ಪೂರ್ಣಮನಾದ್ಯಂತಂ ನಿರ್ಗುಣಂ ನಿತ್ಯಮದ್ವಯಮ್ ॥ ೩೯ ॥

ಋಷೇ ವಿದಂತಿ ಮುನಯಃ ಪ್ರಶಾಂತಾತ್ಮೇಂದ್ರಿಯಾಶಯಾಃ ।
ಯದಾ ತದೇವಾಸತ್ತರ್ಕೈಸ್ತಿರೋಧೀಯೇತ ವಿಪ್ಲುತಮ್ ॥ ೪೦ ॥

ಆದ್ಯೋಽವತಾರಃ ಪುರುಷಃ ಪರಸ್ಯ
ಕಾಲಃ ಸ್ವಭಾವಃ ಸದಸನ್ಮನಶ್ಚ ।
ದ್ರವ್ಯಂ ವಿಕಾರೋ ಗುಣ ಇಂದ್ರಿಯಾಣಿ
ವಿರಾಟ್ ಸ್ವರಾಟ್ ಸ್ಥಾಸ್ನು ಚರಿಷ್ಣು ಭೂಮ್ನಃ ॥ ೪೧ ॥

ಅಹಂ ಭವೋ ಯಜ್ಞ ಇಮೇ ಪ್ರಜೇಶಾ
ದಕ್ಷಾದಯೋ ಯೇ ಭವದಾದಯಶ್ಚ ।
ಸ್ವರ್ಲೋಕಪಾಲಾಃ ಖಗಲೋಕಪಾಲಾ
ನೃಲೋಕಪಾಲಾಸ್ತಲಲೋಕಪಾಲಾಃ ॥ ೪೨ ॥

ಗಂಧರ್ವವಿದ್ಯಾಧರಚಾರಣೇಶಾ
ಯೇ ಯಕ್ಷರಕ್ಷೋರಗನಾಗನಾಥಾಃ ।
ಯೇ ವಾ ಋಷೀಣಾಮೃಷಭಾಃ ಪಿತೄಣಾಂ
ದೈತ್ಯೇಂದ್ರ ಸಿದ್ಧೇಶ್ವರದಾನವೇಂದ್ರಾಃ ।
ಅನ್ಯೇ ಚ ಯೇ ಪ್ರೇತಪಿಶಾಚಭೂತ -
ಕೂಷ್ಮಾಂಡಯಾದೋಮೃಗಪಕ್ಷ್ಯಧೀಶಾಃ ॥ ೪೩ ॥

ಯತ್ಕಿಂ ಚ ಲೋಕೇ ಭಗವನ್ಮಹಸ್ವ-
ದೋಜಃಸಹಸ್ವದ್ಬಲವತ್ ಕ್ಷಮಾವತ್ ।
ಶ್ರೀಹ್ರೀವಿಭೂತ್ಯಾತ್ಮವದದ್ಭುತಾರ್ಣಂ
ತತ್ತ್ವಂ ಪರಂ ರೂಪವದಸ್ವರೂಪಮ್ ॥ ೪೪ ॥

ಪ್ರಾಧಾನ್ಯತೋ ಯಾನೃಷ ಆಮನಂತಿ
ಲೀಲಾವತಾರಾನ್ಪುರುಷಸ್ಯ ಭೂಮ್ನಃ ।
ಆಪೀಯತಾಂ ಕರ್ಣಕಷಾಯಶೋಷಾ-
ನನುಕ್ರಮಿಷ್ಯೇ ತ ಇಮಾನ್ಸುಪೇಶಾನ್ ॥ ೪೫ ॥

ಆತನು ಜನ್ಮರಹಿತನಾದ ಆದಿಪುರುಷನು. ಪ್ರತಿಯೊಂದು ಕಲ್ಪದಲ್ಲಿಯೂ ತನ್ನನ್ನು-ತಾನೇ ಸೃಷ್ಟಿಸಿಕೊಂಡು, ರಕ್ಷಿಸಿಕೊಳ್ಳುತ್ತಾ, ಉಪ ಸಂಹಾರವನ್ನೂ ಮಾಡಿಕೊಳ್ಳುತ್ತಾನೆ. ॥ ೩೮ ॥ ಅವನು ಮಾಯಾಲೇಶವಿಲ್ಲದ ಶುದ್ಧಜ್ಞಾನ ಸ್ವರೂಪನು. ಅಂತರಾತ್ಮನಾದ ಆತ್ಮನಾಗಿ ಬೆಳಗುತ್ತಿರುವವನೂ, ಸತ್ಯವೂ, ಪರಿಪೂರ್ಣನೂ, ಆದ್ಯಂತರಹಿತನೂ, ಗುಣಾತೀತನೂ, ನಿತ್ಯನೂ, ಅದ್ವಿತೀಯನೂ ಆದ ಪರಮಾತ್ಮನೇ ಅವನು. ॥ ೩೯ ॥ ಮಹರ್ಷಿಯೇ! ಮಹಾತ್ಮರು ತಮ್ಮ ಅಂತಃಕರಣ, ಇಂದ್ರಿಯಗಳು ಮತ್ತು ಶರೀರವನ್ನು ಪ್ರಶಾಂತ ಗೊಳಿಸಿಕೊಂಡಾಗ ಅವನ ಸಾಕ್ಷಾತ್ಕಾರವಾಗುತ್ತದೆ. ಆದರೆ ಕೆಟ್ಟ ತರ್ಕಗಳ ಮುಸುಕು ಹಾಕಿಕೊಂಡಾಗ ಅವನು ಮರೆಯಾಗುತ್ತಾನೆ. ॥ ೪೦ ॥

ಪರಮಾತ್ಮನ ಮೊದಲನೆಯ ಅವತಾರವೇ ಈ ವಿರಾಟ್ ಪುರುಷನದು. ಕಾಲ, ಸ್ವಭಾವ, ಕಾರ್ಯ, ಕಾರಣ, ಮನಸ್ಸು, ಪಂಚ-ಭೂತಗಳು, ಅಹಂಕಾರ, ತ್ರಿಗುಣಗಳು, ಇಂದ್ರಿಯಗಳು, ಬ್ರಹ್ಮಾಂಡಶರೀರ, ಅದರ ಅಭಿಮಾನಿ ದೇವತೆ, ಸ್ಥಾವರ-ಜಂಗಮ ಜೀವರು – ಇವೆಲ್ಲವೂ ಆ ಭಗವಾನ್ ಅನಂತನದೇ ರೂಪಗಳಾಗಿವೆ. ಇವೆಲ್ಲ ರೂಪಗಳಲ್ಲಿದ್ದರೂ ವಾಸ್ತವವಾಗಿ ಅವನು ಒಬ್ಬನೇ ಆಗಿದ್ದಾನೆ. ಅವನ ಮಹಿಮೆಗೆ ಪಾರವಿಲ್ಲ, ಆದ್ದರಿಂದ ಅನಂತನಾಗಿದ್ದಾನೆ, ಸರ್ವವ್ಯಾಪಿಯೂ, ಭೂಮನೂ ಅರ್ಥಾತ್ ಮಹತ್ತಾಗಿದ್ದಾನೆ. ॥ ೪೧ ॥ ನಾನು, ಶಂಕರನು, ಯಜ್ಞಪುರುಷನಾದ ವಿಷ್ಣು, ದಕ್ಷನೇ ಮುಂತಾದ ಪ್ರಜಾಪತಿಗಳು, ನೀನು ಮತ್ತು ನಿನ್ನಂತಹ ದಿವ್ಯ ಮಹರ್ಷಿಗಳು, ಸ್ವರ್ಗಾಧಿಪತಿಗಳು, ದಿವ್ಯಪಕ್ಷಿಗಳ ಅಧಿಪತಿಗಳು, ನರಪತಿಗಳು, ಪಾತಾಳವೇ ಮುಂತಾದ ಕೆಳಗಿನ ಲೋಕಗಳ ಪಾಲಕರು, ಗಂಧರ್ವ-ವಿದ್ಯಾಧರ-ಚಾರಣರ ಅಧಿನಾಯಕರು, ಯಕ್ಷ-ರಾಕ್ಷಸ-ಸರ್ಪ-ನಾಗಜಾತಿಗಳ ನಾಯ ಕರು, ಮಹರ್ಷಿಗಳು, ಪಿತೃಪತಿಗಳು, ದೈತ್ಯೇಂದ್ರರು, ಸಿದ್ಧೇಶ್ವರರು, ದಾನವ ಅರಸುಗಳು ಮತ್ತು ಭೂತ-ಪ್ರೇತ-ಪಿಶಾಚ-ಕೂಷ್ಮಾಂಡ, ಜಲಜಂತುಗಳು, ಮೃಗಗಳು, ಪಕ್ಷಿಗಳ ಒಡೆಯರು, ಐಶ್ವರ್ಯ, ತೇಜಸ್ಸು, ಇಂದ್ರಿಯಬಲ, ಮನೋಬಲ, ಶರೀರಬಲ ಅಥವಾ ಕ್ಷಮೆಯಿಂದ ಸಂಪನ್ನನಾಗಿರುವ ಎಲ್ಲ ವಸ್ತುಗಳು ಅಥವಾ ವಿಶೇಷವಾದ ಸೌಂದರ್ಯ, ಲಜ್ಜೆ ವೈಭವ ಮತ್ತು ವಿಭೂತಿಗಳಿಂದ ಬೆಳಗುತ್ತಿರುವ, ಅದ್ಭುತವಾದ ರೂಪ-ಸಂಪತ್ತುಗಳಿಂದ ಖ್ಯಾತವಾದುವುಗಳೂ, ರೂಪರಹಿತನಾಗಿ ಅತಿಶಯವನ್ನು ಪಡೆದಿರುವವರೂ, ಮುಂತಾದ ಎಲ್ಲರೂ, ಎಲ್ಲವೂ ಆ ಪರಮತತ್ತ್ವಮಯ ಭಗವತ್ಸ್ವರೂಪಗಳೇ ಆಗಿವೆ. ॥ ೪೨-೪೪ ॥ ನಾರದನೇ! ಇವುಗಳಲ್ಲದೆ ಆ ಪರಮಪುರುಷನ ಪರಮ ಪವಿತ್ರವಾದ ಮತ್ತು ಪ್ರಧಾನವಾದ ಅನೇಕ ಲೀಲಾವತಾರಗಳು ಶಾಸ್ತ್ರಗಳಲ್ಲಿ ವರ್ಣಿತವಾಗಿವೆ. ಅವು ಕಿವಿಗಳಿಗೆ ಇಂಪಾಗಿ ಕಿವಿಗಳ ಕೊಳೆಯನ್ನು ತೊಳೆದು ಹಾಕುವ ದಿವ್ಯಚರಿತ್ರಗಳು. ಅವುಗಳನ್ನು ಕ್ರಮವಾಗಿ ನಾನು ವರ್ಣಿಸುತ್ತೇನೆ ; ಸಾವಧಾನವಾಗಿ ಶ್ರವಣಿಸು.'' ॥ ೪೫ ॥

*ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ಷಷ್ಠೋಽಧ್ಯಾಯಃ ॥ ೬ ॥

# ಏಳನೆಯ ಅಧ್ಯಾಯ

## ಭಗವಂತನ ಲೀಲಾವತಾರಗಳ ಕಥೆ

ಬ್ರಹ್ಮೋವಾಚ

ಯತ್ರೋದ್ಯತಃ ಕ್ಷಿತಿತಲೋದ್ಧರಣಾಯ ಬಿಭ್ರತ್
ಕ್ರೌಡೀಂ ತನುಂ ಸಕಲಯಜ್ಞಮಯೀಮನಂತಃ ।
ಅಂತರ್ಮಹಾರ್ಣವ ಉಪಾಗತಮಾದಿದೈತ್ಯಂ
ತಂ ದಂಷ್ಟ್ರಯಾದ್ರಿಮಿವ ವಜ್ರಧರೋ ದದಾರ ॥ ೧ ॥

ಬ್ರಹ್ಮದೇವರು ಹೇಳುತ್ತಾರೆ – ಎಲೈ ನಾರದನೇ! ''ಪ್ರಳಯ ಜಲದಲ್ಲಿ ಮುಳುಗಿಹೋಗಿದ್ದ ಭೂಮಿಯನ್ನು ಉದ್ಧರಿಸಲು ಅನಂತನಾದ ಶ್ರೀಭಗವಂತನು ಸಮಸ್ತ ಯಜ್ಞಮಯವಾದ ವರಾಹ ದೇಹವನ್ನು ಕೈಗೊಂಡನು. ಆ ಅವತಾರದಲ್ಲಿ ಅವನು ಸಮುದ್ರ ದೊಳಗೆಯೇ ತನ್ನನ್ನು ಎದುರಿಸಲು ಬಂದ ಆದಿದೈತ್ಯ ಹಿರಣ್ಯಾಕ್ಷನನ್ನು – ಇಂದ್ರನು ವಜ್ರಾಯುಧದಿಂದ ಪರ್ವತವನ್ನು ಭೇದಿಸಿದಂತೆ, ತನ್ನ ಕೋರೆದಾಡೆಗಳಿಂದ ಸೀಳಿಹಾಕಿದನು. ॥ ೧ ॥

ಜಾತೋ ರುಚೇರಜನಯತ್ ಸುಯಮಾನ್ ಸುಯಜ್ಞ
ಆಕೂತಿಸೂನುರಮರಾನಥ ದಕ್ಷಿಣಾಯಾಮ್ ।
ಲೋಕತ್ರಯಸ್ಯ ಮಹತೀಮಹರದ್ಯದಾಽಽರ್ತಿಂ
ಸ್ವಾಯಂಭುವೇನ ಮನುನಾ ಹರಿರಿತ್ಯನೂಕ್ತಃ ॥ ೨ ॥

ಅನಂತರ ಅದೇ ಪ್ರಭುವು ರುಚಿಯೆಂಬ ಪ್ರಜಾಪತಿಯ ಪತ್ನಿಯಾದ ಆಕೂತಿಯ ಗರ್ಭದಲ್ಲಿ 'ಸುಯಜ್ಞ' ರೂಪದಲ್ಲಿ ಅವತರಿಸಿದನು. ಆ ಅವತಾರದಲ್ಲಿ ಅವನು 'ದಕ್ಷಿಣಾ' ಎಂಬ ತನ್ನ ಧರ್ಮಪತ್ನಿಯಲ್ಲಿ 'ಸುಯಮ'ರೆಂಬ ದೇವತೆಗಳನ್ನು ಪುತ್ರರನ್ನಾಗಿ ಪಡೆದು, ಮೂರು ಲೋಕಗಳಿಗೂ ಒದಗಿದ್ದ ಮಹಾಪೀಡೆಯನ್ನು ಪರಿಹರಿಸಿದ್ದರಿಂದ ಸ್ವಾಯಂಭುವ ಮನುವು ಈತನನ್ನು 'ಹರಿಃ' ಎಂಬ ನಾಮದಿಂದ ಕರೆದನು. ॥ ೨ ॥

ಜಜ್ಞೇ ಚ ಕರ್ದಮಗೃಹೇ ದ್ವಿಜ ದೇವಹೂತ್ಯಾಂ
ಸ್ತ್ರೀಭಿಃ ಸಮಂ ನವಭಿರಾತ್ಮ ಗತಿಂ ಸ್ವಮಾತ್ರೇ ।
ಊಚೇ ಯಯಾಽಽತ್ಮಶಮಲಂ ಗುಣಸಂಗಪಂಕ-
ಮಸ್ಮಿನ್ ವಿಧೂಯ ಕಪಿಲಸ್ಯ ಗತಿಂ ಪ್ರಪೇದೇ ॥ ೩ ॥

ನಾರದಾ ! ಕರ್ದಮ ಪ್ರಜಾಪತಿಯ ಮನೆಯಲ್ಲಿ ದೇವಹೂತಿ ದೇವಿಯ ಗರ್ಭದಲ್ಲಿ ಒಂಭತ್ತು ಮಂದಿ ಸೋದರಿಯರೊಡನೆ ಭಗವಂತನು 'ಕಪಿಲ'ನೆಂಬ ಹೆಸರಿನಿಂದ ಅವತರಿಸಿದನು. ಅವನು ತನ್ನ ತಾಯಿ ದೇವಹೂತಿಗೆ ಆತ್ಮಜ್ಞಾನವನ್ನು ಉಪದೇಶಮಾಡಿದನು. ಅದರಿಂದ ಆಕೆಯು ತನ್ನಲ್ಲಿ ತ್ರಿಗುಣಗಳ ಆಸಕ್ತಿಯಿಂದ ಉಂಟಾಗಿದ್ದ ಹೃದಯದ ಎಲ್ಲ ಕಲ್ಮಷವನ್ನು ಅದೇ ಜನ್ಮದಲ್ಲಿ ತೊಳೆದು ಕೊಂಡು ಕಪಿಲನ ನಿಜಸ್ವರೂಪವಾದ ಮುಕ್ತಿಯನ್ನು ಪಡೆದು ಕೊಂಡಳು. ॥ ೩ ॥

ಅತ್ರೇರಪತ್ಯಮಭಿಕಾಂಕ್ಷತ ಆಹ ತುಷ್ಟೋ
ದತ್ತೋ ಮಯಾಹಮಿತಿ ಯದ್ಭಗವಾನ್ಸ ದತ್ತಃ ।
ಯತ್ಪಾದಪಂಕಜಪರಾಗಪವಿತ್ರದೇಹಾ
ಯೋಗರ್ದ್ಧಿಮಾಪುರುಭಯೀಂ ಯದುಹೈಹಯಾದ್ಯಾಃ ॥ ೪ ॥

ಅತ್ರಿಮಹರ್ಷಿಯು ಪುತ್ರಾರ್ಥಿಯಾಗಿ ತಪಸ್ಸುಮಾಡಿದಾಗ ಆತನಲ್ಲಿ ಪ್ರಸನ್ನನಾದ ಭಗವಂತನು – 'ನಾನು ನನ್ನನ್ನೇ ನಿನಗೆ ಪುತ್ರ ನಾಗಿ ಕೊಟ್ಟುಕೊಂಡಿದ್ದೇನೆ; ನಿನಗೆ ಪುತ್ರರೂಪದಲ್ಲಿ ದತ್ತನಾಗಿದ್ದೇನೆ' ಎಂದು ವರಕೊಟ್ಟಿದ್ದರಿಂದ ಅವರಲ್ಲಿ ಅವತರಿಸಿದ ಭಗವಂತನು 'ದತ್ತ' (ದತ್ತಾತ್ರೇಯ) ಎಂಬ ನಾಮದಿಂದಲೇ ಖ್ಯಾತನಾದನು. ಅವನ ಚರಣಕಮಲಗಳ ಪರಾಗದಿಂದ ತಮ್ಮ ಶರೀರವನ್ನು ಪವಿತ್ರಗೊಳಿಸಿಕೊಂಡು ಯದುರಾಜನು ಮತ್ತು ಸಹಸ್ರಾರ್ಜುನರೇ ಮುಂತಾದವರು ಭೋಗ ಮತ್ತು ಯೋಗಗಳೆಂಬ ಎರಡೂ ಯೋಗಸಿದ್ಧಿಗಳನ್ನು ಪಡೆದು ಕೃತಾರ್ಥರಾದರು. ॥ ೪ ॥

ತಪ್ತಂ ತಪೋ ವಿವಿಧಲೋಕಸಿಸೃಕ್ಷಯಾ ಮೇ
ಆದೌ ಸನಾತ್ಸ್ವತಪಸಃ ಸ ಚತುಃಸನೋಽಭೂತ್ ।
ಪ್ರಾಕ್ಕಲ್ಪಸಂಪ್ಲವವಿನಷ್ಟಮಿಹಾತ್ಮತತ್ತ್ವಂ
ಸಮ್ಯಗ್ಜಗಾದ ಮುನಯೋ ಯದಚಕ್ಷತಾತ್ಮನ್ ॥ ೫ ॥

ನಾರದನೇ ! ಸೃಷ್ಟಿಯ ಪ್ರಾರಂಭದಲ್ಲಿ ನಾನು ಬಗೆ-ಬಗೆಯ ಲೋಕಗಳನ್ನು ಸೃಷ್ಟಿಸಬೇಕೆಂಬ ಬಯಕೆಯಿಂದ ತಪಸ್ಸುಮಾಡಿದೆನು. ನನ್ನ ಆ ಅಖಂಡ ತಪಸ್ಸಿನಿಂದ ಪ್ರಸನ್ನನಾದ ಸ್ವಾಮಿಯು 'ತಪಸ್ಸು' ಎಂಬ ಅರ್ಥವನ್ನು ಹೇಳುವ 'ಸನ' ಎಂಬ ಹೆಸರಿನಿಂದ ಕೂಡಿ ಸನಕ, ಸನಂದನ, ಸನಾತನ, ಸನತ್ಕುಮಾರ ಎಂಬ ನಾಲ್ಕು ರೂಪಗಳಲ್ಲಿ ಅವತರಿಸಿದನು. ಈ ಅವತಾರದಲ್ಲಿ ಅವನು ಪ್ರಳಯ ದಿಂದಾಗಿ ಹಿಂದಿನ ಕಲ್ಪದಲ್ಲಿ ಮರೆತುಹೋಗಿದ್ದ ಆತ್ಮತತ್ತ್ವವನ್ನು

ಮುನಿಗಳಿಗೆ ಚೆನ್ನಾಗಿ ಉಪದೇಶಮಾಡಿದನು. ಅದರಿಂದ ಅವರು ಆಗಲೇ ಪರಮತತ್ತ್ವವನು ತಮ್ಮ ಹೃದಯದಲ್ಲಿ ಸಾಕ್ಷಾತ್ಕರಿಸಿಕೊಂಡರು. ॥ ೫ ॥

ಧರ್ಮಸ್ಯ ದಕ್ಷದುಹಿತರ್ಯಜನಿಷ್ಟ ಮೂರ್ತ್ಯಾಂ
ನಾರಾಯಣೋ ನರ ಇತಿ ಸ್ವತಪಃಪ್ರಭಾವಃ ।
ದೃಷ್ಟ್ವಾऽऽತ್ಮನೋ ಭಗವತೋ ನಿಯಮಾವಲೋಪಂ
ದೇವ್ಯಸ್ತ್ವನಂಗಪೃತನಾ ಘಟಿತುಂ ನ ಶೇಕುಃ ॥ ೬ ॥

ಧರ್ಮನ ಪತ್ನೀ ದಕ್ಷಕನ್ಯೆಯಾದ 'ಮೂರ್ತಿ' ಎಂಬಾಕೆಯ ಗರ್ಭದಲ್ಲಿ ಅವನು ನರ-ನಾರಾಯಣರೂಪದಲ್ಲಿ ಅವತರಿಸಿದನು. ಪರಮಾದ್ಭುತವಾದ ತಪಃಪ್ರಭಾವವನ್ನು ಪ್ರಕಟಿಸಿದ ಅವತಾರವಿದು. ಇಂದ್ರನ ಪ್ರೇರಣೆಯಿಂದ ಆತನ ತಪೋಭಂಗ ಮಾಡಬೇಕೆಂದು ಬಂದ ಮನ್ಮಥನ ಸೇನೆಯಾದ ಅಪ್ಸರಸ್ತ್ರೀಯರು ತಾವೇ ಆಶಾಭಂಗಹೊಂದಿ, ಅವರ ಉದ್ದೇಶವು ಈಡೇರಲಿಲ್ಲ. ಕೊನೆಗೆ ಅವರು ಭಗವಂತನಲ್ಲಿ ಕ್ಷಮೆಯನ್ನು ಯಾಚಿಸಿದರು. ॥ ೬ ॥

ಕಾಮಂ ದಹಂತಿ ಕೃತಿನೋ ನನು ರೋಷದೃಷ್ಟ್ಯಾ
ರೋಷಂ ದಹಂತಮುತ ತೇ ನ ದಹಂತ್ಯಸಹ್ಯಮ್ ।
ಸೋऽಯಂ ಯದಂತರಮಲಂ ಪ್ರವಿಶನ್ಬಿಭೇತಿ
ಕಾಮಃ ಕಥಂ ನು ಪುನರಸ್ಯ ಮನಃ ಶ್ರಯೇತ ॥ ೭ ॥

ನಾರದಾ ! ಶಂಕರನೇ ಮೊದಲಾದ ಮಹಾನುಭಾವರು ಮನ್ಮಥನು ತಮ್ಮ ತಪಸ್ಸನ್ನು ಕೆಡಿಸಲು ಬಂದಾಗ ರೋಷದೃಷ್ಟಿಯಿಂದ ಆತನನ್ನು ಸುಟ್ಟುಬಿಡುತ್ತಾರೆ. ಆದರೆ ಅವರು ತಮ್ಮನ್ನೇ ಸುಡುತ್ತಿರುವ, ಸಹಿಸಲು ಅಸಾಧ್ಯವಾದ ಕ್ರೋಧವನ್ನು ಸುಟ್ಟುಹಾಕಲು ಅಶಕ್ತರಾಗುತ್ತಾರೆ. ಆದರೆ ಅದೇ ಕ್ರೋಧವು ನರ-ನಾರಾಯಣರ ನಿರ್ಮಲವಾದ ಮನಸ್ಸನ್ನು ಪ್ರವೇಶಿಸಲು ಅಂಜುತ್ತದೆ. ಹೀಗಿರುವಾಗ ಕಾಮವು ಅಲ್ಲಿಗೆ ಹೇಗೆ ತಾನೇ ಪ್ರವೇಶಮಾಡೀತು ? ಆ ನರ-ನಾರಾಯಣರೂಪೀ ಭಗವಂತನು ಕಲ್ಪದ ಪ್ರಾರಂಭದಿಂದಲೇ ಲೋಕಕಲ್ಯಾಣಕ್ಕಾಗಿ ಕಠಿಣ ತಪಸ್ಸನ್ನು ಮಾಡುತ್ತಿದ್ದಾನೆ. ॥ ೭ ॥

ವಿದ್ಧಃ ಸಪತ್ನ್ಯುದಿತಪತ್ರಿಭಿರಂತಿ ರಾಜ್ಞೋ
ಬಾಲೋऽಪಿ ಸನ್ನುಪಗತಸ್ತಪಸೇ ವನಾನಿ ।
ತಸ್ಮಾ ಅದಾದ್ಧ್ರುವಗತಿಂ ಗೃಣತೇ ಪ್ರಸನ್ನೋ
ದಿವ್ಯಾಃ ಸ್ತುವಂತಿ ಮುನಯೋ ಯದುಪರ್ಯಧಸ್ತಾತ್ ॥ ೮ ॥

ತಂದೆಯಾದ ಉತ್ತಾನಪಾದ ರಾಜನಬಳಿಯಲ್ಲಿ ಕುಳಿತಿದ್ದ ಐದುವರ್ಷದ ಬಾಲಕ ಧ್ರುವನನ್ನು ಆತನ ಮಲತಾಯಿ ಸುರುಚಿಯು ವಾಗ್ಬಾಣಗಳಿಂದ ಘಾಸಿಪಡಿಸಿದಳು. ಇಷ್ಟು ಸಣ್ಣ ವಯಸ್ಸಿನವನಾದರೂ, ಅದನ್ನು ಸಹಿಸದೆ ಅರಮನೆಯನ್ನು ಬಿಟ್ಟು ತಪಸ್ಸನ್ನಾಚರಿಸಲು ಕಾಡಿಗೆ ಹೋದನು. ದೃಢಭಕ್ತಿಯಿಂದ ತನ್ನನ್ನು ಪ್ರಾರ್ಥಿಸಿದ ಅವನಿಗೆ ಒಲಿದು, ಭಗವಂತನು ಪ್ರಕಟನಾಗಿ ಧ್ರುವನಿಗೆ – ದಿವ್ಯ ಸಪ್ತರ್ಷಿಗಳು ಮೇಲೂ ಕೆಳಗೂ ಪ್ರದಕ್ಷಿಣೆಮಾಡುತ್ತಾ ಸ್ತುತಿಸುತ್ತಿರುವ ಅತ್ಯುನ್ನತವಾದ ಧ್ರುವಪದವನ್ನೇ ಕರುಣಿಸಿದನು. ॥ ೮ ॥

ಯದ್ವೇನಮುತ್ಪಥಗತಂ ದ್ವಿಜವಾಕ್ಯವಜ್ರ-
ವಿಪ್ಲುಷ್ಟ ಪೌರುಷಭಗಂ ನಿರಯೇ ಪತಂತಮ್ ।
ತ್ರಾತ್ವಾರ್ಥಿತೋ ಜಗತಿ ಪುತ್ರಪದಂ ಚ ಲೇಭೇ
ದುಗ್ಧಾ ವಸೂನಿ ವಸುಧಾ ಸಕಲಾನಿ ಯೇನ ॥ ೯ ॥

ವೇನರಾಜನು ಅತ್ಯಂತ ದುರ್ಮಾರ್ಗವನ್ನು ಹಿಡಿದಾಗ ಬ್ರಾಹ್ಮಣರ ಹುಂಕಾರರೂಪೀ ವಜ್ರದಿಂದ ಆತನ ಐಶ್ವರ್ಯ, ಪೌರುಷ ಸುಟ್ಟುಹೋಯಿತು. ಅವನು ನರಕಕ್ಕೆ ಬೀಳತೊಡಗಿದನು. ಮಹಾತ್ಮರು ಶ್ರೀಭಗವಂತನನ್ನು ಪ್ರಾರ್ಥಿಸಿ ಆತನ ಶರೀರವನ್ನು ಕಡೆದರು. ಆಗ ಅಲ್ಲಿ ಪೃಥುಮಹಾರಾಜನ ರೂಪದಲ್ಲಿ ಆತನಿಗೆ ಪುತ್ರನಾಗಿ ಭಗವಂತನು ಅವತರಿಸಿ ವೇನನನ್ನು ನರಕದಿಂದ ಉದ್ಧರಿಸಿದನು. ಹೀಗೆ 'ಪುತ್ರ' ಶಬ್ದವನ್ನು ಸಾರ್ಥಕಪಡಿಸಿದನು. ಅದೇ ಅವತಾರದಲ್ಲಿ ಪೃಥ್ವಿಯನ್ನು ಹಸುವಾಗಿಸಿ ಅವಳಿಂದ ಜಗತ್ತಿಗಾಗಿ ಸಮಸ್ತ ಔಷಧ-ಅನ್ನವನ್ನು ಕರೆದುಕೊಳ್ಳುವಂತೆ ಮಾಡಿ ಕರುಣಿಸಿದನು. ಎಲ್ಲ ವಸುಸಂಪತ್ತನ್ನೂ ಧರಿಸಿದ್ದರಿಂದ 'ವಸುಂಧರಾ' ಎಂಬ ಹೆಸರೂ ಭೂಮಿಗೆ ಆಗ ಅನ್ವರ್ಥವಾಯಿತು. ॥ ೯ ॥

ನಾಭೇರಸಾವೃಷಭ ಆಸ ಸುದೇವಿಸೂನುಃ
ಯೋ ವೈ ಚಚಾರ ಸಮದೃಗ್ಜಡಯೋಗಚರ್ಯಾಮ್ ।
ಯತ್ಪಾರಮಹಂಸ್ಯಮೃಷಯಃ ಪದಮಾಮನಂತಿ
ಸ್ವಸ್ಥಃ ಪ್ರಶಾಂತ ಕರಣಃ ಪರಿಮುಕ್ತಸಂಗಃ ॥೧೦॥

ನಾಭಿರಾಜನ ಪತ್ನಿಯಾದ ಸುದೇವಿಯ ಗರ್ಭದಲ್ಲಿ ಭಗವಂತನು ಋಷಭದೇವನ ರೂಪದಲ್ಲಿ ಅವತರಿಸಿದನು. ಈ ಋಷಭಾವತಾರದಲ್ಲಿ ಸ್ವಾಮಿಯು ಸರ್ವಸಂಗಪರಿತ್ಯಾಗಮಾಡಿ, ಇಂದ್ರಿಯ-ಮನಸ್ಸುಗಳನ್ನು ಪ್ರಶಾಂತಗೊಳಿಸಿಕೊಂಡು, ಸ್ವಸ್ವರೂಪದಲ್ಲಿ ನೆಲೆಗೊಂಡು, ಸಮದರ್ಶಿಯಾಗಿ ಯೋಗದ ಪರಾಕಾಷ್ಠೆಯಲ್ಲಿದ್ದು

ಜಡನಂತೆ ಲೋಕಕ್ಕೆ ಕಾಣಿಸಿಕೊಂಡನು. ಈ ಸ್ಥಿತಿ ಮತ್ತು ಆಚರಣೆಗಳನ್ನೇ ಮಹರ್ಷಿಗಳು ಪರಮಹಂಸಪದ, ಅವಧೂತಚರ್ಯೆ ಎಂದು ಕರೆಯುತ್ತಾರೆ. ॥ ೧೦ ॥

ಸತ್ರೇ ಮಮಾಸ ಭಗವಾನ್ ಹಯಶೀರಷಾಥೋ
ಸಾಕ್ಷಾತ್ ಸ ಯಜ್ಞಪುರುಷಸ್ತಪನೀಯವರ್ಣಃ ।
ಛಂದೋಮಯೋ ಮಖಮಯೋಽಖಿಲದೇವತಾತ್ಮಾ
ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ ॥೧೧॥

ಆ ಯಜ್ಞಪುರುಷನಾದ ವಿಷ್ಣುವೇ ನಾನು ಮಾಡಿದ ಯಜ್ಞದಲ್ಲಿ ಚಿನ್ನದಂತೆ ಹೊಳೆಯುವ ದೇಹಕಾಂತಿಯಿಂದ ಬೆಳಗುತ್ತಿದ್ದ ಕುದುರೆಯ ಮುಖವುಳ್ಳ 'ಹಯಗ್ರೀವ' ರೂಪದಲ್ಲಿ ಅವತರಿಸಿದನು. ಭಗವಂತನ ಆ ದಿವ್ಯಮಂಗಳ ವಿಗ್ರಹವು ವೇದಮಯ, ಯಜ್ಞಮಯ ಮತ್ತು ಸರ್ವ ದೇವಮಯವಾದುದು. ಆತನ ನಿಶ್ವಾಸ ರೂಪದಲ್ಲಿ ವೇದವಾಣಿಯು ಪ್ರಕಟಗೊಂಡಿತು. ॥ ೧೧ ॥

ಮತ್ಸ್ಯೋ ಯುಗಾಂತ ಸಮಯೇ ಮನುನೋಪಲಬ್ಧಃ
ಕ್ಷೋಣೀಮಯೋ ನಿಖಿಲಜೀವನಿಕಾಯಕೇತಃ ।
ವಿಸ್ರಂಸಿತಾನುರುಭಯೇ ಸಲಿಲೇ ಮುಖಾನ್ಮೇ
ಆದಾಯ ತತ್ರ ವಿಜಹಾರ ಹ ವೇದಮಾರ್ಗಾನ್ ॥೧೨॥

ಚಾಕ್ಷುಷ ಮನ್ವಂತರದ ಕೊನೆಯ ಪ್ರಳಯಕಾಲದಲ್ಲಿ ಭಗವಂತನು ಮತ್ಸ್ಯರೂಪದಿಂದ ಸತ್ಯವ್ರತ ಮನುವಿಗೆ ಪ್ರತ್ಯಕ್ಷನಾದನು. ಆ ಸಮಯದಲ್ಲಿ ಪೃಥ್ವಿರೂಪೀ ನೌಕೆಗೆ ಈತನ ದೇಹವು ಆಶ್ರಯವಾಗಲು ತನ್ಮೂಲಕ ಅವನು ಸಮಸ್ತ ಜೀವಿಗಳಿಗೂ ಆಶ್ರಯನಾದನು. ಭಯಂಕರವಾದ ಆ ಪ್ರಳಯಜಲದಲ್ಲಿ ನನ್ನ ಮುಖದಿಂದ ಜಾರಿಬಿದ್ದ ವೇದಗಳನ್ನು ಎತ್ತಿಕೊಂಡು, ಅದರಲ್ಲೇ ವಿಹರಿಸುತ್ತಿದ್ದನು. ॥ ೧೨ ॥

ಕ್ಷೀರೋದಧಾವಮರದಾನವಯೂಥಪಾನಾ-
ಮುನ್ಮಥ್ನತಾಮಮೃತಲಬ್ಧಯ ಆದಿದೇವಃ ।
ಪೃಷ್ಠೇನ ಕಚ್ಛಪವಪುರ್ವಿದಧಾರ ಗೋತ್ರಂ
ನಿದ್ರಾಕ್ಷಣೋಽದ್ರಿಪರಿವರ್ತಕಷಾಣಕಂಡೂಃ ॥ ೧೩ ॥

ದೇವಮುಖ್ಯರೂ ಮತ್ತು ದಾನವಮುಖ್ಯರೂ ಸೇರಿಕೊಂಡು ಅಮೃತವನ್ನು ಪಡೆಯುವುದಕ್ಕಾಗಿ ಕ್ಷೀರಸಮುದ್ರವನ್ನು ಕಡೆಯುತ್ತಿದ್ದಾಗ ಆ ಆದಿದೇವನು ಲಕ್ಷಯೋಜನ ವಿಸ್ತಾರವುಳ್ಳ ಕಚ್ಛಪ (ಆಮೆ) ರೂಪವನ್ನು ತಾಳಿ ತನ್ನ ಬೆನ್ನಮೇಲೆ ಮಂದರಾಚಲವನ್ನು ಹೊತ್ತುಕೊಂಡನು. ಆಗ ಸುತ್ತುತ್ತಿದ್ದ ಪರ್ವತದ ಉಜ್ಜುವಿಕೆಯಿಂದ ಬೆನ್ನನವೆಯು ಸ್ವಲ್ಪ ಕಡಿಮೆಯಾಗಿ ಸ್ವಾಮಿಗೆ ಕ್ಷಣಕಾಲ ಸುಖನಿದ್ದೆಗೆ ಅವಕಾಶವಾಯಿತು. ॥ ೧೩ ॥

ತ್ರೈವಿಷ್ಟಪೋರುಭಯಹಾ ಸ ನೃಸಿಂಹರೂಪಂ
ಕೃತ್ವಾ ಭ್ರಮದ್ಭ್ರುಕುಟಿದಂಷ್ಟ್ರ ಕರಾಲವಕ್ತ್ರಮ್ ।
ದೈತ್ಯೇಂದ್ರಮಾಶು ಗದಯಾಭಿಪತಂತಮಾರಾತ್
ಊರೌ ನಿಪಾತ್ಯ ವಿದದಾರ ನಖೈಃ ಸ್ಫುರಂತಮ್ ॥ ೧೪ ॥

ದೇವತೆಗಳ ಹಾಗೂ ಮೂರುಲೋಕಗಳ ಮಹಾಭಯವನ್ನು ಹೋಗಲಾಡಿಸಲು ಆ ದೇವದೇವನು ಅದುರುತ್ತಿರುವ ಹುಬ್ಬುಗಳಿಂದಲೂ, ತೀಕ್ಷ್ಣವಾದ ಕೋರೆದಾಡೆಗಳಿಂದಲೂ, ಗಂಟುಹಾಕಿಕೊಂಡ ಮುಖದಿಂದ ಕೂಡಿ ಕಡುಭಯಂಕರವಾದ ನರಸಿಂಹ ರೂಪವನ್ನು ಧರಿಸಿದನು. ಆಗ ಗದೆಯನ್ನು ಎತ್ತಿಕೊಂಡು ತನ್ನ ಮೇಲೆ ಎರಗಿ ಬಂದ ದೈತ್ಯೇಂದ್ರನಾದ ಹಿರಣ್ಯಕಶಿಪುವನ್ನು ಬರಸೆಳೆದುಕೊಂಡು ತನ್ನ ತೊಡೆಯಮೇಲೆ ಮಲಗಿಸಿಕೊಂಡು ಆತನನ್ನು ತನ್ನ ಹರಿತವಾದ ಉಗುರುಗಳಿಂದ ಸೀಳಿಹಾಕಿದನು. ॥ ೧೪ ॥

ಅಂತಃ ಸರಸ್ಯುರುಬಲೇನ ಪದೇ ಗೃಹೀತೋ
ಗ್ರಾಹೇಣ ಯೂಥಪತಿರಂಬುಜಹಸ್ತ ಆರ್ತಃ ।
ಆಹೇದಮಾದಿಪುರುಷಾಖಿಲಲೋಕನಾಥ
ತೀರ್ಥಶ್ರವಃ ಶ್ರವಣಮಂಗಲನಾಮಧೇಯ ॥೧೫॥

ಒಂದು ಭಾರೀ ದೊಡ್ಡ ಸರೋವರದಲ್ಲಿ ಮಹಾಬಲಶಾಲಿಯಾದ ಗಜರಾಜನ ಕಾಲನ್ನು ಒಂದು ಮೊಸಳೆಯು ಬಲವಾಗಿ ಹಿಡಿದುಕೊಂಡಿತು. ಗಜರಾಜನು ಅದರೊಡನೆ ಸೆಣಸಾಡುತ್ತಾ ಸೋತು ಆಯಾಸಗೊಂಡು, ಗಾಬರಿಯಾದಾಗ, ಆ ಗಜರಾಜನು ಸೊಂಡಿಲಿನಲ್ಲಿ ಕಮಲವೊಂದನ್ನು ಮೇಲೆತ್ತಿ ಹಿಡಿದುಕೊಂಡು – 'ಓ ಆದಿಪುರುಷನೇ! ಸಕಲ ಲೋಕಗಳ ಸ್ವಾಮಿಯೇ! ಪುಣ್ಯಕೀರ್ತಿಯೇ! ಶ್ರವಣಮಂಗಳವಾದ ನಾಮಧೇಯವುಳ್ಳ ನಾರಾಯಣನೇ! ಎಂದು ಕೂಗಿಡಲು – ಒಡನೆಯೇ ಆ ಕೂಗನ್ನು ಕೇಳಿದ ಅನಂತಶಕ್ತಿಯಾದ ಶ್ರೀಹರಿಯು ಅಲ್ಲಿಗೆ ಚಕ್ರಪಾಣಿಯಾಗಿ, ಪಕ್ಷಿರಾಜ ಗರುಡನ ಬೆನ್ನೇರಿ ಬಂದು ತನ್ನ ಚಕ್ರದಿಂದ ನಕ್ರದ

ಶ್ರುತ್ವಾ ಹರಿಸ್ತಮರಣಾರ್ಥಿನಮಪ್ರಮೇಯ-
ಶ್ಚಕ್ರಾಯುಧಃ ಪತಗರಾಜಭುಜಾಧಿರೂಢಃ ।
ಚಕ್ರೇಣ ನಕ್ರವದನಂ ವಿನಿಪಾಟ್ಯ ತಸ್ಮಾ-
ದ್ಧಸ್ತೇ ಪ್ರಗೃಹ್ಯ ಭಗವಾನ್ಕೃಪಯೋಜ್ಜಹಾರ ॥ ೧೬ ॥

ಬಾಯನ್ನು ಸೀಳಿಹಾಕಿ ಆ ಗಜೇಂದ್ರನನ್ನು ಕರುಣೆಯಿಂದ ಕೈ ಹಿಡಿದು ಕಾಪಾಡಿದನು ಮತ್ತು ಅದಕ್ಕೆ ಮುಕ್ತಿಯನ್ನು ಕರುಣಿಸಿದನು. ॥ ೧೫-೧೬ ॥

ಜ್ಯಾಯಾನ್ಗುಣೈರವರಜೋಽಪ್ಯದಿತೇಃ ಸುತಾನಾಂ
ಲೋಕಾನ್ವಿಚಕ್ರಮ ಇಮಾನ್ಯದಥಾಧಿಯಜ್ಞಃ ।
ಕ್ಷ್ಮಾಂ ವಾಮನೇನ ಜಗೃಹೇ ತ್ರಿಪದಚ್ಛಲೇನ
ಯಾಂಚಾಮೃತೇ ಪಥಿ ಚರನ್ಪ್ರಭುಭಿರ್ನ ಚಾಲ್ಯಃ ॥ ೧೭ ॥

ನಾರ್ಥೋ ಬಲೇರಯಮುರುಕ್ರಮಪಾದಶೌಚ-
ಮಾಪಃ ಶಿಖಾಧೃತವತೋ ವಿಬುಧಾಧಿಪತ್ಯಮ್ ।
ಯೋ ವೈ ಪ್ರತಿಶ್ರುತಮೃತೇ ನ ಚಿಕೀರ್ಷದನ್ಯ-
ದಾತ್ಮಾನಮಂಗ ಶಿರಸಾ ಹರಯೇಽಭಿಮೇನೇ ॥ ೧೮ ॥

ಅದಿತಿಯ ಪುತ್ರರಲ್ಲಿ ಅತ್ಯಂತ ಕಿರಿಯವನಾದರೂ ಗುಣಗಳಲ್ಲಿ ಎಲ್ಲರಿಗಿಂತಲೂ ಹಿರಿಯನಾದ ದೇವದೇವನವನು. ವಾಮನ ಮೂರ್ತಿಯಾಗಿ ಬಲಿಚಕ್ರವರ್ತಿಯಿಂದ ತನ್ನ ಮೂರು ಹೆಜ್ಜೆಗಳ ಅಳತೆಯಷ್ಟು ಭೂಮಿಯನ್ನು ಬೇಡಿ ತೆಗೆದುಕೊಳ್ಳುವ ನೆಪಹೂಡಿ ತ್ರಿವಿಕ್ರಮನಾಗಿ ಬೆಳೆದು, ಮೂರು ಹೆಜ್ಜೆಗಳಿಂದ ತ್ರಿಲೋಕಗಳನ್ನು ಅಳೆದು ಆಕ್ರಮಿಸಿಬಿಟ್ಟನು. ಭಗವಂತನು ಆತನಿಂದ ಭೂಮಿಯನ್ನು ಬೇಡಿಯೇ ಪಡೆದನೇಕೆಂದರೆ – ಬಲಿಯು ಎಂದಿಗೂ ಸನ್ಮಾರ್ಗವನ್ನು ಬಿಟ್ಟವನಲ್ಲ, ಅಂತಹ ಸಜ್ಜನ ಶಿರೋಮಣಿಗಳನ್ನು ಅವರ ಸ್ಥಾನದಿಂದ, ಐಶ್ವರ್ಯದಿಂದ ಕದಲಿಸಬೇಕಾದರೆ ಎಂತಹ ಸಮರ್ಥರಿಗಾದರೂ ಯಾಚನೆಯೊಂದೇ ಉಪಾಯ. ಬೇರಾವ ಉಪಾಯವೂ ಇಲ್ಲ– ಎಂಬ ತತ್ತ್ವವನ್ನು ಆ ಮೂಲಕ ಸ್ವಾಮಿಯು ತೋರಿಸಿದನು. ವಾಸ್ತವವಾಗಿ ಬಲೀಂದ್ರನಿಗೆ ಇಂದ್ರಪದವಿಯಿಂದ ಯಾವ ಪುರುಷಾರ್ಥವೂ ಆಗಬೇಕಾಗಿರಲಿಲ್ಲ, ಏಕೆಂದರೆ, ಅವನು ಸಾಕ್ಷಾತ್ ತ್ರಿವಿಕ್ರಮಸ್ವಾಮಿಯ ಶ್ರೀಪಾದಪದ್ಮತೀರ್ಥವನ್ನೇ ಶಿರಸ್ಸಿನಲ್ಲಿ ಧರಿಸಿ ಧನ್ಯನಾಗಿದ್ದನು.* ಅವನ ಸತ್ಯನಿಷ್ಠೆ ಎಂತಹುದು! ವಟು ವಾಮನನಿಗೆ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಕೊಡುವುದಾಗಿ ತಾನು ಮಾಡಿದ್ದ ವಾಗ್ದಾನವನ್ನು ಗುರುಗಳಾದ ಶುಕ್ರಾಚಾರ್ಯರು ತಡೆದರೂ ತನ್ನ ಮಾತಿಗೆ ವಿರುದ್ಧವಾಗಿ ನಡೆಯಲಿಲ್ಲ. ಭಗವಂತನಿಗೆ ಮೂರನೆಯ ಹೆಜ್ಜೆಯ ಜಾಗವನ್ನು ಕೊಡುವುದಕ್ಕಾಗಿ ಆತನ ಪಾದವನ್ನು ತನ್ನ ಶಿರಸ್ಸಿನಲ್ಲಿರಿಸಿಕೊಂಡು ತನ್ನನ್ನೇ ಪೂರ್ಣವಾಗಿ ಆತ್ಮಸಮರ್ಪಣೆ ಮಾಡಿದ ಮಹಾತ್ಮನವನು.** ॥ ೧೭-೧೮ ॥

ನಾರದನೇ! ನಿನ್ನ ಭಕ್ತಿ-ಭಾವಕ್ಕೆ ಒಲಿದ ಆ ಭಗವಂತನು ಹಂಸರೂಪಿಯಾಗಿ ನಿನಗೆ ಯೋಗಜ್ಞಾನ ಮತ್ತು ಆತ್ಮತತ್ತ್ವವನ್ನು ಪ್ರಕಾಶ

* ಬಲಿಚಕ್ರವರ್ತಿಯ ಮಹಾರಾಣಿ ವಿಂಧ್ಯಾವಳಿಯು ಸ್ವರ್ಣಕಲಶದಲ್ಲಿ ಕುಂಕುಮ-ಚಂದನಮಿಶ್ರಿತ ಜಲವನ್ನು ತೆಗೆದುಕೊಂಡು ಬಂದಳು. ಚಕ್ರವರ್ತಿ ಬಲಿಯು ಬಹಳ ಭಕ್ತಿ-ಶ್ರದ್ಧೆಯಿಂದ ಭಗವಂತನ ಪುಟ್ಟದಾದ ಸುಕೋಮಲ ಚರಣಕಮಲಗಳನ್ನು ಹರ್ಷಾತಿರೇಕದಿಂದ ಅಶ್ರುಪೂರಿತ ನಯನಗಳಿಂದ ಭಾವವಿಹ್ವಲನಾಗಿ ತೊಳೆದನು. ಆ ಚರಣೋದಕವನ್ನು ಪತ್ನಿಯೊಂದಿಗೆ ತಾನು ಪಾನಮಾಡಿ, ಅರಮನೆಯಲ್ಲೆಲ್ಲ ಸಿಂಪಡಿಸಿದನು.

** ಬಲಿ ಚಕ್ರವರ್ತಿಯು ಆತ್ಮನಿವೇದನೆ ಮಾಡಿದರೆ, ಭಕ್ತರ-ಭಕ್ತನಾದ ಭಗವಂತನೂ ಕೂಡ ತನ್ನನ್ನೇ ಆತನಿಗೆ ಕೊಟ್ಟುಕೊಂಡು, ಅವನ ಬಾಗಿಲನ್ನು ಕಾದನು. ಭಗವದ್ಗೀತೆಯಲ್ಲಿ ಭಗವಂತನು ಹೇಳಿರುವನು –

**ಯೇ ಯಥಾಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ । ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

*(ಭಗವದ್ಗೀತೆ ೪/೧೧)*

ಹೇ ಅರ್ಜುನನೇ! ಯಾವ ಭಕ್ತರು ನನ್ನನ್ನು ಯಾವ ಭಾವದಿಂದ ಭಜಿಸುತ್ತಾರೋ ಅವರನ್ನು ನಾನು ಕೂಡ ಅದೇ ಭಾವದಿಂದ ಭಜಿಸುತ್ತೇನೆ; ಏಕೆಂದರೆ ಮನುಷ್ಯರೆಲ್ಲರೂ ಎಲ್ಲ ಪ್ರಕಾರದಿಂದ ನನ್ನ ಮಾರ್ಗವನ್ನೇ ಅನುಸರಿಸುತ್ತಾರೆ.

ಇದೊಂದು ಉಪಾಖ್ಯಾನವನ್ನು ಮಹಾತ್ಮರು ಹೇಳುತ್ತಾರೆ – ಭಗವಂತನು ಬಲಿಯ ಮನೆಯಲ್ಲಿ ದ್ವಾರಪಾಲಕನಾದನು. ಅತ್ತ ಲಕ್ಷ್ಮಿಯು ನೋಡುತ್ತಾಳೆ – ನನ್ನ ಸ್ವಾಮಿಯು ಬಲಿಯ ಬಳಿಗೆ ವಾಮನನಾಗಿ ಹೋಗಿ ಭೂಮಿಯನ್ನು ಬೇಡಿದನು. ಆದರಿಂದ ಈಗ ಅವನಿಗೆ ಸೇವಕನಾಗಬೇಕಾಯಿತು. ಹೀಗಿರುವಾಗ ಲಕ್ಷ್ಮೀದೇವಿಯೂ ಬಲಿಯಬಳಿಗೆ ಬಂದಳು. ಆಕೆಯ ಪತಿಯು ಮೂರು ಅಡಿ ಭೂಮಿಯನ್ನು ಬೇಡಿದ್ದನು. ಆದರೆ ಈಕೆಯು ಇನ್ನೊಂದು ರೀತಿಯಿಂದ ಅದ್ಭುತವಾಗಿರುವಂತಹುದನ್ನು ಯಾಚಿಸಿದಳು. ಲಕ್ಷ್ಮಿಯು ಬಲಿಯ ಬಳಿ ಹೇಳಿದಳು – 'ನನಗೆ ಯಾರೂ ಅಣ್ಣ-ತಮ್ಮಂದಿರು ಇಲ್ಲ, ನೀನು ನನಗೆ ಅಣ್ಣನಾಗು. ಬಲಿಯು ಒಪ್ಪಿ, ಲಕ್ಷ್ಮಿಗೆ ಅಣ್ಣನಾದನು; ಲಕ್ಷ್ಮಿಯು ತಂಗಿಯಾದಳು. ಆಕೆಯು ಬಲಿಯ ಅರಮನೆಯಲ್ಲೇ ವಾಸಿಸಿದಳು. ರಕ್ಷಾಬಂಧನದ ದಿನ ಬಂತು. ತಂಗಿ ಹೇಳಿದಳು ಅಣ್ಣಾ! ಇಂದು ನಾನು ನಿನಗೆ ರಾಖಿ ಕಟ್ಟುವೆನು. ಇದರಿಂದ ತಂಗಿಯು ಅಣ್ಣನ ಕ್ಷೇಮವನ್ನು ಬಯಸುತ್ತಾಳೆ. ಬಲಿ ಹೇಳಿದ – ಸರಿ, ಹಾಗಾದರೆ ರಾಖಿಕಟ್ಟು. ಲಕ್ಷ್ಮಿಯು ಪ್ರೇಮದಿಂದ ಅಣ್ಣನಿಗೆ ರಾಖಿಯನ್ನು ಕಟ್ಟಿದಳು ಹಾಗೂ ಉಡುಗೊರೆಯನ್ನು ಕೇಳಿದಳು. ಏನು ಕೊಡಲಿ? ಲಕ್ಷ್ಮೀ ಹೇಳಿದಳು – ನನ್ನ ಸ್ವಾಮಿಯು ನಿನ್ನಲ್ಲಿ ದ್ವಾರಪಾಲಕನಾಗಿದ್ದಾರೆ. ನಾನು ಅವರನ್ನು ಕರಕೊಂಡು ಹೋಗಲೆಂದೇ ಬಂದಿರುವೆನು. ಭಗವಂತನು ಸರ್ವವ್ಯಾಪಕನು. ಅವನು ಬಲಿಚಕ್ರವರ್ತಿಯ ಬಳಿಯೂ ಇದ್ದಾನೆ.

(ಮುಂದಿನ ಪುಟಕ್ಕೆ)

ತುಭ್ಯಂ ಚ ನಾರದ ಭೃಶಂ ಭಗವಾನ್ವಿವೃದ್ಧ-
ಭಾವೇನ ಸಾಧುಪರಿತುಷ್ಟ ಉವಾಚ ಯೋಗಮ್ ।
ಜ್ಞಾನಂ ಚ ಭಾಗವತಮಾತ್ಮಸತತ್ತ್ವದೀಪಂ
ಯದ್ವಾಸುದೇವಶರಣಾ ವಿದುರಂಜಸೈವ ॥೧೯॥

ಪಡಿಸುವ ಭಾಗವತ ಧರ್ಮವನ್ನು ಉಪದೇಶಮಾಡಿದ್ದನಷ್ಟೆ! ಆ ಧರ್ಮವು ಶ್ರೀವಾಸುದೇವನಲ್ಲಿ ಶರಣಾಗತರಾದ ಭಕ್ತರಿಗೆ ಮಾತ್ರ ಸುಲಭವಾಗಿ ದೊರೆಯುವಂತಹುದು. ॥ ೧೯ ॥

ಚಕ್ರಂ ಚ ದಿಕ್ಷ್ವವಿಹತಂ ದಶಸು ಸ್ವತೇಜೋ
ಮನ್ವಂತರೇಷು ಮನುವಂಶಧರೋ ಬಿಭರ್ತಿ ।
ದುಷ್ಟೇಷು ರಾಜಸು ದಮಂ ವ್ಯದಧಾತ್ಸ್ವಕೀರ್ತಿಂ
ಸತ್ಯೇ ತ್ರಿಪೃಷ್ಠ ಉಶತೀಂ ಪ್ರಥಯಂಶ್ಚರಿತ್ರೈಃ ॥೨೦॥

ಅದೇ ಭಗವಂತನು ಸ್ವಾಯಂಭುವ ಮುಂತಾದ ಮನ್ವಂತರಗಳಲ್ಲಿ ಮನುವಿನ ರೂಪದಲ್ಲಿ ಅವತರಿಸಿ ಹತ್ತು ದಿಕ್ಕುಗಳಲ್ಲಿಯೂ ಸುದರ್ಶನಚಕ್ರಕ್ಕೆ ಸಮಾನವಾದ ತನ್ನ ತೇಜಸ್ಸಿನಿಂದ ಯಾವ ಅಡೆ-ತಡೆ ಇಲ್ಲದೆ ನಿಷ್ಕಂಟಕ ರಾಜ್ಯಭಾರ ಮಾಡುತ್ತಾನೆ. ಆತನ ಪುಣ್ಯಚರಿತ್ರೆಯ ಕೀರ್ತಿಯು ಮೂರು ಲೋಕಗಳ ಮೇಲಿರುವ ಸತ್ಯಲೋಕದವರೆಗೂ ಹರಡುತ್ತದೆ. ತನ್ನ ಆ ರೂಪದಲ್ಲಿ ಅವನು ಕಾಲ-ಕಾಲಗಳಲ್ಲಿ ಭೂಮಿಗೆ ಭಾರವಾಗುವ ದುಷ್ಟರಾಜರ ನಿಗ್ರಹವನ್ನೂ ಮಾಡುವನು. ॥ ೨೦ ॥

ಧನ್ವಂತರಿಶ್ಚ ಭಗವಾನ್ ಸ್ವಯಮೇವ ಕೀರ್ತಿ-
ರ್ನಾಮ್ನಾ ನೃಣಾಂ ಪುರುರುಜಾಂ ರುಜ ಆಶು ಹಂತಿ ।
ಯಜ್ಞೇ ಚ ಭಾಗಮಮೃತಾಯುರವಾವರುಂಧ
ಆಯುಶ್ಚ ವೇದಮನುಶಾಸ್ತ್ಯವತೀರ್ಯ ಲೋಕೇ ॥೨೧॥

ಧನ್ಯಕೀರ್ತಿಯಾದ ಭಗವಾನ್ ಧನ್ವಂತರಿಯೂ ಅವನ ಅವತಾರವೇ. ಆತನು ತನ್ನ ನಾಮದಿಂದಲೇ ದೊಡ್ಡ-ದೊಡ್ಡ ರೋಗಿಗಳ ರೋಗಗಳನ್ನು ಶೀಘ್ರದಲ್ಲೇ ನಾಶಪಡಿಸುವನು. ದೇವತೆಗಳಿಗೆ ಅಮೃತವನ್ನು ಪಾನಮಾಡಿಸಿ ಅವರನ್ನು ಅಮರರನ್ನಾಗಿಸಿದನು. ದೈತ್ಯರು ಅಪಹರಿಸಿದ ಅವರ ಯಜ್ಞಭಾಗವನ್ನು ಮರಳಿಕೊಡಿಸಿದನು. ಈ ಲೋಕದಲ್ಲಿ ಅವತಾರಮಾಡಿ ಆಯುರ್ವೇದವನ್ನು ಪ್ರವರ್ತನೆ ಮಾಡಿದನು. ॥ ೨೧ ॥

ಕ್ಷತ್ರಂ ಕ್ಷಯಾಯ ವಿಧಿನೋಪಭೃತಂ ಮಹಾತ್ಮಾ
ಬ್ರಹ್ಮಧ್ರುಗುಜ್ಝಿತಪಥಂ ನರಕಾರ್ತಿಲಿಪ್ಸು ।
ಉದ್ಧಂತ್ಯ ಸಾವವನಿಕಂಟಕಮುಗ್ರವೀರ್ಯ-
ತ್ರಿಃಸಪ್ತಕೃತ್ವ ಉರುಧಾರಪರಶ್ವಧೇನ ॥೨೨॥

ಬ್ರಹ್ಮದ್ರೋಹಿಗಳಾಗಿ, ಆರ್ಯ ಮರ್ಯಾದೆಯನ್ನು ಉಲ್ಲಂಘಿಸುವ, ನರಕಕ್ಕೆ ಯೋಗ್ಯರಾದ ದುಷ್ಟಕ್ಷತ್ರಿಯರು ಪ್ರಪಂಚದಲ್ಲಿ ಹೆಚ್ಚಾದಾಗ, ಭಗವಂತನು ಮಹಾಪರಾಕ್ರಮಿ ಪರಶುರಾಮನ ರೂಪದಲ್ಲಿ ಅವತಾರಮಾಡಿ ಹರಿತವಾದ ತನ್ನ ಗಂಡುಗೊಡಲಿಯಿಂದ ಇಪ್ಪತ್ತೊಂದು ಬಾರಿ ಅವರನ್ನು ಸಂಹರಿಸುತ್ತಾನೆ. ॥ ೨೨ ॥

ಅಸ್ಮತ್ಪ್ರಸಾದಸುಮುಖಃ ಕಲಯಾ ಕಲೇಶ
ಇಕ್ಷ್ವಾಕುವಂಶ ಅವತೀರ್ಯ ಗುರೋರ್ನಿದೇಶೇ ।
ತಿಷ್ಠನ್ವನಂ ಸದಯಿತಾನುಜ ಆವಿವೇಶ
ಯಸ್ಮಿನ್ವಿರುಧ್ಯ ದಶಕಂಧರ ಆರ್ತಿಮಾರ್ಚ್ಛತ್ ॥೨೩॥

ಪರಿಪೂರ್ಣನಾದ ಭಗವಂತನು ನಮ್ಮನ್ನು ಅನುಗ್ರಹಿಸುವುದಕ್ಕಾಗಿ ತನ್ನ ಅಂಶಕಲೆಗಳಾದ ಭರತ-ಲಕ್ಷ್ಮಣ- ಶತ್ರುಘ್ನರೊಡನೆ ಶ್ರೀರಾಮಚಂದ್ರನ ರೂಪದಲ್ಲಿ ಇಕ್ಷ್ವಾಕುವಂಶದಲ್ಲಿ ಅವತರಿಸಿದನು. ಈ ಅವತಾರದಲ್ಲಿ ಅವನು ತನ್ನ ತಂದೆಯ ಆಜ್ಞೆಯನ್ನು ಪಾಲಿಸಲಿಕ್ಕಾಗಿ ತನ್ನ ಪತ್ನೀ ಮತ್ತು ತಮ್ಮನೊಡನೆ ಅರಣ್ಯದಲ್ಲಿ ವಾಸಿಸಿದನು. ಆಗಲೇ ಅವನಲ್ಲಿ ವಿರೋಧ ಬೆಳೆಸಿಕೊಂಡ ದುಷ್ಟ ದಶಾನನನು ಅವನ ಕೈಯಿಂದ ಹತನಾದನು. ॥ ೨೩ ॥ ತ್ರಿಪುರಾಸುರರ ವಿಮಾನವನ್ನು ಸುಟ್ಟುಹಾಕಲು ಬಯಸಿದ ರುದ್ರನಂತೆ ಕ್ರುದ್ಧನಾಗಿ ಶ್ರೀರಾಮನು ಶತ್ರುನಗರಿಯನ್ನು ಧ್ವಂಸಮಾಡುವುದಕ್ಕಾಗಿ ಸಮುದ್ರತೀರಕ್ಕೆ ಬಂದಾಗ ಸೀತಾವಿಯೋಗದಿಂದ ವೃದ್ಧಿಗೊಂಡ ಕ್ರೋಧಾಗ್ನಿಯಿಂದ ಕೆಂಪೇರಿದ ಆತನ ದೃಷ್ಟಿಮಾತ್ರದಿಂದಲೇ ಸಮುದ್ರದಲ್ಲಿರುವ ಮೀನು, ಮೊಸಳೆ, ಸರ್ಪಗಳೇ ಮುಂತಾದ ಜಲಚರಗಳು ಉರಿದುಹೋಗಲು ತೊಡಗುತ್ತವೆ. ಆಗ

ಬಲಿರಾಜನ ಹೆಸರು ಮತ್ತು ಕೀರ್ತಿ ಮೂರು ಲೋಕಗಳಲ್ಲಿಯೂ ವ್ಯಾಪಿಸಿದೆ. ಅವನ ಹೆಸರು ಪುಣ್ಯಶ್ಲೋಕರಲ್ಲಿ ಹಾಗೂ ಚಿರಂಜೀವಿಗಳಲ್ಲಿ ಹೇಳುತ್ತಾರೆ. ಇವನು ಅತ್ಯಂತ ಉದಾರನೂ, ಭಕ್ತಿಯಲ್ಲಿ ಅಗ್ರೇಸರನಾಗಿದ್ದಾನೆ. ಪ್ರಹ್ಲಾದನ ಮೊಮ್ಮಗನಾಗಿದ್ದು ಭಗವಂತನ ಕೃಪೆಗೆ ಪಾತ್ರನಾಗಿದ್ದಾನೆ. ಅವನ ಕುರಿತು ಹೇಳಿದಷ್ಟು ಕಡಿಮೆಯೇ. ಇಲ್ಲಿ ಭಕ್ತ ಮತ್ತು ಭಗವಂತನ ಪ್ರೇಮವನ್ನು ಬಹಳ ಸಂಕ್ಷೇಪವಾಗಿ – ಆನಂದಸಾಗರದಲ್ಲಿ ಒಂದು ಮುಳುಗುಹಾಕಿದಂತೆ ಬರೆಯಲಾಗಿದೆ. ಬಲಿಚಕ್ರವರ್ತಿಯ ಪ್ರಸಂಗಬಂದಾಗ ಶ್ರೀಶುಕಮಹಾಮುನಿಗಳ ಹೃದಯ ತುಂಬಿಬರುತ್ತದೆ. ಇದೇ ಕಾರಣದಿಂದ – ಬಲಿಯು ಆತ್ಮನಿವೇದನ ಮಾಡಿರುವನು ಎಂದು ಅವರು ಹೇಳಿರುವರು. ಇದೇ ಅವನಿಗಾಗಿ ದೊಡ್ಡ ಗೌರವ ಮತ್ತು ಪುರುಷಾರ್ಥದ ಮಾತಾಗಿದೆ ಎಂದು ವಿಶೇಷವಾಗಿ ಗಮನಕೊಡಬೇಕು.

ಯಸ್ಮಾ ಅದಾದುದಧಿರೂಢಭಯಾಂಗವೇಪೋ
ಮಾರ್ಗಂ ಸಪದ್ಯರಿಪುರಂ ಹರವದ್ ದಿಧಕ್ಷೋಃ ।
ದೂರೇಸುಹೃನ್ಮಥಿತರೋಷಸುಶೋಣದೃಷ್ಟ್ಯಾ
ತಾತಪ್ಯಮಾನಮಕರೋರಗನಕ್ರಚಕ್ರಃ ॥ ೨೪ ॥

ವಕ್ಷಃಸ್ಥಲಸ್ಪರ್ಶರುಗ್ಣಮಹೇಂದ್ರವಾಹ-
ದಂತೈರ್ವಿಡಂಬಿತಕಕುಬ್ಜುಷ ಊಢಹಾಸಮ್ ।
ಸದ್ಯೋಽಸುಭಿಃ ಸಹ ವಿನೇಷ್ಯತಿ ದಾರಹರ್ತು-
ರ್ವಿಸ್ಫೂರ್ಜಿತೈರ್ಧನುಷ ಉಚ್ಚರತೋಽಧಿಸೈನ್ಯೇ ॥ ೨೫ ॥

ಭೂಮೇಃ ಸುರೇತರವರೂಥವಿಮರ್ದಿತಾಯಾಃ
ಕ್ಲೇಶವ್ಯಯಾಯ ಕಲಯಾ ಸಿತಕೃಷ್ಣಕೇಶಃ ।
ಜಾತಃ ಕರಿಷ್ಯತಿ ಜನಾನುಪಲಕ್ಷ್ಯಮಾರ್ಗಃ
ಕರ್ಮಾಣಿ ಚಾತ್ಮಮಹಿಮೋಪನಿಬಂಧನಾನಿ ॥ ೨೬ ॥

ತೋಕೇನ ಜೀವಹರಣಂ ಯದುಲೂಕಿಕಾಯಾ-
ಸ್ತ್ರೈಮಾಸಿಕಸ್ಯ ಚ ಪದಾ ಶಕಟೋಽಪವೃತ್ತಃ ।
ಯದ್ ರಿಂಗತಾಂತರಗತೇನ ದಿವಿಸ್ಪೃಶೋರ್ವಾ
ಉನ್ಮೂಲನಂ ತ್ವಿತರಥಾರ್ಜುನಯೋರ್ನ ಭಾವ್ಯಮ್ ॥ ೨೭ ॥

ಸಮುದ್ರರಾಜನು ಗಡ-ಗಡನೆ ನಡುಗುತ್ತಾ, ಒಡನೆಯೇ ಒಡೆಯನಿಗೆ ದಾರಿಮಾಡಿಕೊಡುತ್ತಾನೆ. ॥ ೨೪ ॥ ರಾವಣನು ಅತಿಪರಾಕ್ರಮಿ ಯಾಗಿ ದುರಹಂಕಾರದಿಂದ ಬೀಗಿ ಮೆರೆಯುತ್ತಿದ್ದನು. ಆತನು ಇಂದ್ರನೊಡನೆ ಯುದ್ಧಮಾಡುತ್ತಿದ್ದಾಗ ಇಂದ್ರನ ವಾಹನ ಐರಾವತದ ದಂತಗಳು ಅವನ ಕಠೋರವಾದ ಎದೆಗೆ ತಗುಲಿ ಚೂರು-ಚೂರಾಗಿ ನಾಲ್ಕೂ ದಿಕ್ಕುಗಳಲ್ಲಿ ಹರಡಿಕೊಂಡು ದಿಕ್ಕುಗಳೆಲ್ಲ ಬೆಳ್ಳಗಾಗಿದ್ದವು. ದಿಗ್ವಿಜಯೀ ರಾವಣನು ದುರಹಂಕಾರದಿಂದ ಉಬ್ಬಿ ನಗುತ್ತಿದ್ದನು. ಆದರೆ ಆ ರಾವಣನೇ ಶ್ರೀರಾಮ ದೇವರ ಪತ್ನಿಯಾದ ಸೀತಾದೇವಿಯನ್ನು ಅಪಹರಿಸಿ ರಣರಂಗದಲ್ಲಿ ಗರ್ವದಿಂದ ಅವನನ್ನು ಎದುರಿಸಲು ಬಂದಾಗ ಶ್ರೀರಾಮನ ಧನುಷ್ಟಂಕಾರದಿಂದಲೇ ಅವನ ಅಹಂಕಾರವು ಪ್ರಾಣಗಳೊಡನೆ ವಿಲೀನವಾಗಿತ್ತು. ॥ ೨೫ ॥

ದೈತ್ಯರ ದಂಡುಗಳು ಭೂದೇವಿಯನ್ನು ಮೆಟ್ಟಿ ತುಳಿದುಹಾಕತೊಡಗಿದಾಗ ಆಕೆಯ ಭಾರವನ್ನು ಇಳಿಸುವುದಕ್ಕಾಗಿ ಭಗವಂತನು ತನ್ನ ಬಿಳಿಯ ಮತ್ತು ಕಪ್ಪು ಕೇಶಗಳಿಂದ ಬಲರಾಮ ಹಾಗೂ ಶ್ರೀಕೃಷ್ಣರ ರೂಪಗಳಲ್ಲಿ ಕಲಾವತಾರವನ್ನು ಸ್ವೀಕರಿಸುವನು.* ಇವರಿಬ್ಬರೂ ಆನಂದದ ನಿಧಿಗಳಾಗಿದ್ದಾರೆ. ಆ ಅವತಾರದಲ್ಲಿ ತನ್ನ ಮಹಿಮೆಯನ್ನು ಪ್ರಕಟಪಡಿಸುವಂತಹ ಅನೇಕ ಅದ್ಭುತವಾದ ಕರ್ಮಗಳನ್ನು ಮಾಡುವನು. ಲೋಕದ ಜನರು ಆ ಲೀಲೆಗಳ ರಹಸ್ಯವನ್ನು ಸ್ವಲ್ಪವೂ ತಿಳಿದುಕೊಳ್ಳಲಾರರು. ಅವನ ಅದ್ಭುತ ಚರಿತ್ರವೇ ಅವನ ಮಹಿಮೆಯನ್ನು ಮತ್ತು ಅವನ ಭಗವತ್ತತೆಯನ್ನು ಪ್ರಕಟಪಡಿಸೀತು. ॥ ೨೬ ॥ ಪುಟ್ಟ ಮಗುವಿರುವಾಗಲೇ ಪೂತನಾ ರಾಕ್ಷಸಿಯ ಪ್ರಾಣಗಳನ್ನಪಹರಿಸಿದ್ದು, ಹುಟ್ಟಿದ ಮೂರನೇ ತಿಂಗಳಲ್ಲೇ ತನ್ನ ಕಾಲಿನಿಂದ ದೊಡ್ಡ ಗಾಡಿಯನ್ನು ತಲೆಕೆಳಗು ಮಾಡಿದ್ದು, ಅಂಬೆಗಾಲು ಹಾಕುತ್ತಿದ್ದಾಗ ಆಕಾಶಕ್ಕೆ ಬೆಳೆದ ಯಮಳಾರ್ಜುನ ವೃಕ್ಷಗಳ ನಡುವೆ ಪ್ರವೇಶಿಸಿ, ಅದನ್ನು ಬೇರುಸಹಿತ ಕಿತ್ತುಹಾಕಿದ್ದು – ಇಂತಹ ಪರಮಾದ್ಭುತಕಾರ್ಯಗಳನ್ನು ಭಗವಂತನಲ್ಲದೆ ಬೇರೆ ಯಾರೂ ಮಾಡಲಾರರು. ॥ ೨೭ ॥ ನಂದಗೋಕುಲದಲ್ಲಿ ಕಾಳಿಯ ನಾಗನ ವಿಷದಿಂದ ದೂಷಿತವಾಗಿದ್ದ ಯಮುನಾನದಿಯ ನೀರನ್ನು ಕುಡಿದು ಹಸು-ಕರುಗಳೂ ಗೋಪಾಲಕರೂ ಸತ್ತುಹೋಗುವರು. ಆಗ

* 'ಸಿತಕೃಷ್ಣಕೇಶಃ' 'ಸಿತ' ಅಂದರೆ ಗೌರವರ್ಣ, 'ಕೃಷ್ಣ' ಅರ್ಥಾತ್ ಶ್ಯಾಮವರ್ಣ ಮತ್ತು ಕೇಶ, ಅರ್ಥಾತ್ – ಕಂ-ಸುಖಮ್, ಈಶಃ = ನಿಧಿಃ ಅರ್ಥಾತ್ – ಈ ಬಲರಾಮಕೃಷ್ಣರು ಇಬ್ಬರೂ ಆನಂದದ ನಿಧಿಗಳಾಗಿದ್ದಾರೆ. ಇವರನ್ನು ನೋಡಿದವನು ಆನಂದದಲ್ಲಿ ಮುಳುಗಿ ಇವರನ್ನೇ ನೋಡುತ್ತಾ ಇರುತ್ತಾನೆ. ಮಹಾಭಾರತ ಯುದ್ಧದಲ್ಲಿ ಶ್ರೀಕೃಷ್ಣನು ಶತ್ರುಗಳನ್ನು ನೋಡಿಯೇ ಅವರ ಆಯುಸ್ಸನ್ನು ಅಪಹರಿಸಿದನು. ಭಗವಾನ್ ಶ್ರೀರಾಮ ಮತ್ತು ಶ್ರೀಕೃಷ್ಣ ಎರಡೂ ಅವತಾರಗಳೂ ಸೌಂದರ್ಯ-ಮಾಧುರ್ಯಗಳ ನಿಧಿಯಾಗಿವೆ. ಪಶು-ಪಕ್ಷಿ, ಮನುಷ್ಯ, ದೇವತೆ, ಅಸುರರು ಮುಂತಾದವರು ಯಾರೇ ಇವರ ರೂಪವನ್ನು ನೋಡಿದಾಗ, ಅವರ ಚಿತ್ತವನ್ನು ಇವರು ಕಸಿದುಕೊಳ್ಳುವರು. ಮತ್ತೆ ಅವರ ಚಿತ್ತ ಅವರಬಳಿ ಇರುವುದಿಲ್ಲ.

ಭಗವಾನ್ ಶ್ರೀಕೃಷ್ಣನು ಮುರಳಿಯನ್ನು ನುಡಿಸಿದಾಗ ಹಸುಗಳು ತಮ್ಮ ಕಿವಿಗಳನ್ನು ನಿಮಿರಿಕೊಂಡು ಅದನ್ನು ಆಸ್ವಾದಿಸುತ್ತವೆ. ನವಿಲುಗಳು ಕುಣಿಯತೊಡಗುತ್ತವೆ. ಸಾರಸ-ಹಂಸಗಳೇ ಮುಂತಾದ ಪಕ್ಷಿಗಳು ಸರೋವರದಲ್ಲಿ ರೆಪ್ಪೆ ಮಿಟುಕಿಸದೆ ಇವನನ್ನೇ ನೋಡುತ್ತವೆ. ಗೋಪಿಯರ ಕೆಲಸ-ಕಾರ್ಯಗಳು ನಿಂತುಹೋದುವು. ಅವರೆಲ್ಲರೂ ಇವನ ಚಿಂತನದಲ್ಲೇ ಮುಳುಗಿರುತ್ತಿದ್ದರು. ಭಗವಾನ್ ಶ್ರೀರಾಮನಿಗಾಗಿಯೂ – ಮಹಾರಾಜ ಜನಕನ ದೂತನು ದಶರಥನಲ್ಲಿ ಹೇಳುತ್ತಾನೆ – "**ದೇವ ದೇಖಿ ತವ ಬಾಲಕ ದೋಊ, ಅಬ ನ ಆಂಖಿ ತರ ಆವತ ಕೋಊ ॥**" *(ರಾ.ಚ.ಮಾ.)* ಅರ್ಥಾತ್ ಈಗ ಬೇರೆ ಏನೂ ಕಾಣಸದಷ್ಟು ಅವನು ಕಣ್ಣುಗಳಲ್ಲಿ ತುಂಬಿಹೋದನು. ಚಿಂತನೆಯಲ್ಲಿ ಅವನೇ ನೆಲೆಸಿದನು. ಭಗವಂತನ ಸೌಂದರ್ಯದ ಒಂದು ಬಿಂದುವಿನಿಂದ ಇಡೀ ವಿಶ್ವವು ತೃಪ್ತವಾಗುತ್ತಾ ಇದೆ. ಅವನಾದರೋ ಸೌಂದರ್ಯ-ಮಾಧುರ್ಯದ ಆಳವಾದ ಸಾಗರನಾಗಿದ್ದಾನೆ. ಭಗವಂತನಿಗೆ ಬೆಣ್ಣೆಕಳ್ಳ ಎಂಬುದೊಂದು ಹೆಸರಿದೆ. ಇದಾದರೋ ಬೆಣ್ಣೆಯ ಕುರಿತು ಲೋಕಪ್ರಸಿದ್ಧಿಯಲ್ಲಿ ಅನೇಕ ಅರ್ಥಗಳಿವೆ. ಆದರೆ ಸಂತರು ಇದೂ ಒಂದು ಅರ್ಥವನ್ನು ಹೇಳುತ್ತಾರೆ – ಬೆಣ್ಣೆ ಅಂದರೆ ಹೃದಯ ಅಂದರೆ ಚಿತ್ತ-ಚಿತ್ತವನ್ನು ಅಪಹರಿಸುವುದರಲ್ಲಿ ಅಗ್ರಗಣ್ಯನಾಗಿದ್ದಾನೆ. ಚಿತ್ತವನ್ನು ಕದ್ದು ಅವನ ಜನ್ಮ-ಮೃತ್ಯುಗಳನ್ನೇ ನಾಶಮಾಡಿಬಿಡುತ್ತಾನೆ.

ಯದ್ವೈ ವ್ರಜೇ ವ್ರಜಪಶೂನ್ವಿಷತೋಯಪೀಥಾನ್
ಪಾಲಾಂಸ್ತ್ವಜೀವಯದನುಗ್ರಹದೃಷ್ಟಿವೃಷ್ಟ್ಯಾ ।
ತಚ್ಛುದ್ಧಯೇಽತಿವಿಷವೀರ್ಯವಿಲೋಲಜಿಹ್ವ-
ಮುಚ್ಚಾಟಯಿಷ್ಯದುರಗಂ ವಿಹರನ್ ಹ್ರದಿನ್ಯಾಮ್ ॥೨೮॥

ತತ್ಕರ್ಮ ದಿವ್ಯಮಿವ ಯನ್ನಿಶಿ ನಿಃಶಯಾನಂ
ದಾವಾಗ್ನಿನಾ ಶುಚಿವನೇ ಪರಿದಹ್ಯಮಾನೇ ।
ಉನ್ನೇಷ್ಯತಿ ವ್ರಜಮತೋಽವಸಿತಾಂತಕಾಲಂ
ನೇತ್ರೇ ಪಿಧಾಯ್ಯ ಸಬಲೋಽನಧಿಗಮ್ಯವೀರ್ಯಃ ॥೨೯॥

ಗೃಹ್ಣೀತ ಯದ್ಯದುಪಬಂಧಮಮುಷ್ಯ ಮಾತಾ
ಶುಲ್ಬಂ ಸುತಸ್ಯ ನ ತು ತತ್ತದಮುಷ್ಯ ಮಾತಿ ।
ಯಜ್ಜೃಂಭತೋಽಸ್ಯ ವದನೇ ಭುವನಾನಿ ಗೋಪೀ
ಸಂವೀಕ್ಷ್ಯ ಶಂಕಿತಮನಾಃ ಪ್ರತಿಬೋಧಿತಾಽಽಸೀತ್ ॥೩೦॥

ನಂದಂ ಚ ಮೋಕ್ಷ್ಯತಿ ಭಯಾದ್ವರುಣಸ್ಯ ಪಾಶಾ-
ದ್ಗೋಪಾನ್ಬಿಲೇಷು ಪಿಹಿತಾನ್ಮಯಸೂನುನಾ ಚ ।
ಅಹ್ನ್ಯಾಪೃತಂ ನಿಶಿ ಶಯಾನಮತಿಶ್ರಮೇಣ
ಲೋಕಂ ವಿಕುಂಠಮುಪನೇಷ್ಯತಿ ಗೋಕುಲಂ ಸ್ಮ ॥೩೧॥

ಗೋಪೈರ್ಮಖೇ ಪ್ರತಿಹತೇ ವ್ರಜವಿಪ್ಲವಾಯ
ದೇವೇಽಭಿವರ್ಷತಿ ಪಶೂನ್ ಕೃಪಯಾ ರಿರಕ್ಷುಃ ।
ಧರ್ತೋಚ್ಛಿಲೀಂಧ್ರಮಿವ ಸಪ್ತ ದಿನಾನಿ ಸಪ್ತ-
ವರ್ಷೋ ಮಹೀಧ್ರಮನಘೈಕಕರೇ ಸಲೀಲಮ್ ॥೩೨॥

ಕ್ರೀಡನ್ವನೇ ನಿಶಿ ನಿಶಾಕರರಶ್ಮಿಗೌರ್ಯಾಂ
ರಾಸೋನ್ಮುಖಃ ಕಲಪದಾಯತಮೂರ್ಛಿತೇನ ।
ಉದ್ದೀಪಿತಸ್ಮರರುಜಾಂ ವ್ರಜಭೃದ್ವಧೂನಾಂ
ಹರ್ತುರ್ಹರಿಷ್ಯತಿ ಶಿರೋ ಧನದಾನುಗಸ್ಯ ॥೩೩॥

ಅವನು ತನ್ನ ಅಮೃತಮಯ ಅನುಗ್ರಹದೃಷ್ಟಿಯಿಂದಲೇ ಅವರೆಲ್ಲರನ್ನು ಬದುಕಿಸುವನು ಮತ್ತು ಯಮುನಾಜಲವನ್ನು ಶುದ್ಧಪಡಿಸುವುದಕ್ಕಾಗಿ ಆ ಮಡುವಿನಲ್ಲಿ ಧುಮುಕಿ ಅಲ್ಲಿ ವಿಹರಿಸಿ, ವಿಷದ ಶಕ್ತಿಯಿಂದ ನಾಲಿಗೆಗಳನ್ನು ಅಲ್ಲಾಡಿಸುತ್ತಿದ್ದ ಕಾಳಿಯ ನಾಗನನ್ನು ಅಲ್ಲಿಂದ ಓಡಿಸಿದ್ದು ಇದು ಮನುಷ್ಯಕೃತ್ಯವೇ ? ॥ ೨೮ ॥ ಅಂದೇ ರಾತ್ರಿ ಎಲ್ಲರೂ ಯಮುನಾನದಿಯ ತೀರದಲ್ಲಿ ಮಲಗಿ ನಿದ್ರಿಸುತ್ತಿರುವಾಗ ಬೇಸಗೆಯ ಕಾಲವಾದ್ದರಿಂದ ಹತ್ತಿರದ ಕಾಡಿನ ಕಾಡ್ಗಿಚ್ಚಿನಿಂದ ಉರಿದುಹೋಗತೊಡಗಿದಾಗ ಬಲರಾಮದೇವ ರೊಡನೆ ಶ್ರೀಕೃಷ್ಣನು ಅಲ್ಲಿಗೆ ಹೋಗಿ ಪ್ರಾಣಾಪಾಯಕ್ಕೆ ಸಿಕ್ಕಿದ ಗೋವಳರನ್ನು – 'ಎಲ್ಲರೂ ಕಣ್ಣುಮುಚ್ಚಿಕೊಳ್ಳಿ' ಎಂದು ಹೇಳಿ ಅವರನ್ನು ಕಿಚ್ಚಿನಿಂದ ಪಾರಾಗಿಸಿದನು. ಎಂತಹ ಅಲೌಕಿಕ ಲೀಲೆ ಇದು! ಅವನ ಶಕ್ತಿಯನ್ನು ವಾಸ್ತವವಾಗಿ ಚಿಂತಿಸುವುದಕ್ಕಾದರೂ ಸಾಧ್ಯವೇ ? ॥ ೨೯॥ ತಾಯಿ ಯಶೋದೆಯು ಶ್ರೀಕೃಷ್ಣನನ್ನು ಕಟ್ಟಿಹಾಕಲು ಯಾವ-ಯಾವುದೋ ಹಗ್ಗವನ್ನು ತಂದರೂ ಅದು ಆತನ ಹೊಟ್ಟೆಗೆ ಸುತ್ತಲು ಸಾಕಾಗದೆ ಎರಡು ಅಂಗುಲಗಳು ಕಡಿಮೆಯೇ ಆಗುವುದು. ಅವಳು ಕಟ್ಟಲಾಗದೆ ಇದ್ದಾಗ, ಅವನು ಆಕೆಯ ಮೇಲೆ ಕೃಪೆದೋರಿ ಸ್ವತಃ ಬಂಧನಕ್ಕೆ ಒಳಗಾದನು. ಇದರಿಂದ ಅವನಿಗೆ 'ದಾಮೋದರ' ಎಂಬ ಹೆಸರಾಯಿತು. ಅವನು ಆಕಳಿಸುವಾಗ ಆತನ ಬಾಯೊಳಗೆ ಹದಿನಾಲ್ಕು ಲೋಕಗಳನ್ನೂ ಕಂಡು ಆಕೆಯು ಅತ್ಯಂತ ಭಯಗ್ರಸ್ತಳಾದಾಗ ಭಗವಂತನೇ ತನ್ನ ಸಂಕಲ್ಪದಿಂದ ತನ್ನ ಜ್ಞಾನವನ್ನು ಕರುಣಿಸಿದಾಗ, ತಾಯಿಯು ಅವನ ಪ್ರಭಾವವನ್ನು ಅರಿತು ಸಮಾಧಾನಗೊಳ್ಳುವಳು. ॥ ೩೦ ॥ ಅವನು ತಂದೆ – ನಂದಗೋಪನನ್ನು ಹೆಬ್ಬಾವಿನ ಭಯದಿಂದಲೂ, ವರುಣದೇವರ ಪಾಶದಿಂದಲೂ ಬಿಡಿಸುವನು. ಮಯಾಸುರನ ಪುತ್ರ ವ್ಯೋಮಾಸುರನು ಗೋಪಬಾಲಕರನ್ನು ಪರ್ವತದ ಗುಹೆಯಲ್ಲಿ ಬಚ್ಚಿಟ್ಟು ಸೆರೆಯಲ್ಲಿಟ್ಟಾಗ, ಅವರನ್ನು ಬಿಡುಗಡೆ ಮಾಡಿ ಕಾಪಾಡುವನು. ಗೋಕುಲದ ಜನರು ಹಗಲು ದುಡಿಯುತ್ತಾ, ರಾತ್ರೆ ನಿದ್ರಿಸುತ್ತಾ ಯಾವ ಸಾಧನೆಯನ್ನೂ ಮಾಡದಿದ್ದರೂ ಅವರನ್ನು ತನ್ನ ಪರಮಧಾಮವಾದ ವೈಕುಂಠಕ್ಕೆ ಕೊಂಡುಹೋಗುವನು. ॥ ೩೧ ॥ ಪುಣ್ಯಾತ್ಮನಾದ ನಾರದನೇ ! ಶ್ರೀಕೃಷ್ಣನ ಸಲಹೆಯಂತೆ ಗೋಪಾಲಕರು ಇಂದ್ರಯಜ್ಞವನ್ನು ನಿಲ್ಲಿಸಿದಾಗ, ಕ್ರುದ್ಧನಾದ ಇಂದ್ರನು ಇಡೀ ಗೋಕುಲವನ್ನು ಧ್ವಂಸಮಾಡಲಿಕ್ಕಾಗಿ ಭಯಂಕರ ಮಳೆಗರೆಯಲು, ಆ ಗೋವುಗಳನ್ನೂ, ಗೋವಳರನ್ನೂ ಕರುಣೆಯಿಂದ ರಕ್ಷಿಸಲು – ಇನ್ನೂ ಏಳು ವರ್ಷವಯಸ್ಸಿನಲ್ಲಿ ಅವನು ಏಳು ದಿವಸಗಳ ಕಾಲ ಗೋವರ್ಧನ ಪರ್ವತವನ್ನು ನಾಯಿಕೊಡೆಯಂತೆ ಲೀಲಾಜಾಲವಾಗಿ ಒಂದೇ ಬೆರಳಿಂದ ಎತ್ತಿ ಹಿಡಿದುಕೊಂಡಿದ್ದು ಅದರ ಆಸರೆಯಲ್ಲಿ ಅವರನ್ನೆಲ್ಲಾ ಕಾಪಾಡುವನು. ॥ ೩೨ ॥

ವೃಂದಾವನದ ಸುತ್ತಲೂ ಶುಭ್ರವಾದ ಬೆಳದಿಂಗಳು ಹರಡಿರುವ ರಮಣೀಯವಾದ ರಾತ್ರಿಯಲ್ಲಿ ರಾಸಕ್ರೀಡೆ ಯನ್ನಾಡುವ ಇಚ್ಛೆಯಿಂದ ಸ್ವಾಮಿಯು ಕೊಳಲಿನಿಂದ ಸಂಗೀತಸುಧೆಯನ್ನು ವರ್ಷಿಸತೊಡಗುವಾಗ ಪ್ರೇಮಪರವಶರಾಗಿ ಅಲ್ಲಿಗೆ ಬರುವ ಗೋಪಿಕೆಯರನ್ನು ಕುಬೇರನ ಸೇವಕನಾದ ಶಂಖಚೂಡನು

ಅಪಹರಿಸುವಾಗ ಶ್ರೀಕೃಷ್ಣನು ಅವನ ಶಿರಚ್ಛೇದನಮಾಡಿ ಅವರನ್ನು ರಕ್ಷಿಸುವನು. ॥ ೩೩ ॥

ಯೇ ಚ ಪ್ರಲಂಬಖರದರ್ದುರಕೇಶ್ಯರಿಷ್ಟ-
ಮಲ್ಲೇಭಕಂಸಯವನಾಃ ಕುಜಪೌಂಡ್ರಕಾದ್ಯಾಃ ।
ಅನ್ಯೇ ಚ ಶಾಲ್ವಕಪಿಬಲ್ವಲದಂತವಕ್ತ್ರ-
ಸಪ್ತೋಕ್ಷಶಂಬರವಿದೂರಥರುಕ್ಮಿಮುಖ್ಯಾಃ ॥ ೩೪ ॥

ಯೇ ವಾ ಮೃಧೇ ಸಮಿತಿಶಾಲಿನ ಆತ್ತಚಾಪಾಃ
ಕಾಂಬೋಜಮತ್ಸ್ಯಕುರುಕೈಕಯಸೃಂಜಯಾದ್ಯಾಃ ।
ಯಾಸ್ಯಂತ್ಯದರ್ಶನಮಲಂ ಬಲಪಾರ್ಥಭೀಮ-
ವ್ಯಾಜಾಹ್ವಯೇನ ಹರಿಣಾ ನಿಲಯಂ ತದೀಯಮ್ ॥ ೩೫ ॥

ಇನ್ನೂ – ಪ್ರಲಂಬಾಸುರ, ಧೇನುಕಾಸುರ, ಬಕಾಸುರ, ಕೇಶೀ, ಅರಿಷ್ಟಾಸುರ ಮುಂತಾದ ಅನೇಕ ದೈತ್ಯರನ್ನೂ, ಚಾಣೂರ ಮುಂತಾದ ಮಲ್ಲರನ್ನೂ, ಕುವಲಯಾ ಪೀಡವೆಂಬ ಆನೆಯನ್ನೂ, ಕಂಸ, ಕಾಲಯವನ, ನರಕಾಸುರ, ಪೌಂಡ್ರಕದೇಶದ ಮಿಥ್ಯಾವಾಸುದೇವ, ಶಾಲ್ವ, ದ್ವಿವಿದನೆಂಬ ವಾನರ, ಬಲ್ವಲ, ದಂತವಕ್ತ್ರ, ನಗ್ನಜಿತರಾಜನ ಏಳು ಕೊಬ್ಬಿದ ಗೂಳಿಗಳನ್ನೂ, ಶಂಬರಾಸುರ, ವಿದೂರಥ, ರುಕ್ಮಿ ಮುಂತಾದವರನ್ನೂ, ಬಿಲ್ಲು-ಬಾಣಗಳನ್ನು ಧರಿಸಿ ಯುದ್ಧರಂಗಕ್ಕೆ ಬರುವ ಕಾಂಭೋಜ, ಮತ್ಸ್ಯ, ಕುರು, ಕೈಕಯ, ಸೃಂಜಯ ಮೊದಲಾದ ದೇಶಗಳ ರಾಜರನ್ನೂ ಆತನು ಸಂಹರಿಸುವನು. ಕೆಲವರನ್ನು ತಾನೇ ಕೊಂದು, ಕೆಲವರನ್ನು ಬಲರಾಮ, ಭೀಮಸೇನ, ಅರ್ಜುನನೇ ಮುಂತಾದವರಿಂದ ಸಂಹಾರಮಾಡಿಸುವನು. ಇವರೆಲ್ಲರೂ ಭಗವಂತನ ಧಾಮವನ್ನೇ ಸೇರಿಕೊಳ್ಳುವರು. ॥ ೩೪-೩೫ ॥

ಕಾಲೇನ ಮೀಲಿತಧಿಯಾಮವಮೃಶ್ಯ ನೄಣಾಂ
ಸ್ತೋಕಾಯುಷಾಂ ಸ್ವನಿಗಮೋ ಬತ ದೂರಪಾರಃ ।
ಆವಿರ್ಹಿತಸ್ತ್ವನುಯುಗಂ ಸ ಹಿ ಸತ್ಯವತ್ಯಾಂ
ವೇದದ್ರುಮಂ ವಿಟಪಶೋ ವಿಭಜಿಷ್ಯತಿ ಸ್ಮ ॥ ೩೬ ॥

ಕಾಲದ ಪ್ರಭಾವದಿಂದ ಮನುಷ್ಯರ ಬುದ್ಧಿಶಕ್ತಿಯು, ಆಯುಸ್ಸೂ ಕಡಿಮೆಯಾದಾಗ, ಇವರಿಗೆ ತತ್ತ್ವವನ್ನು ಹೇಳುವ ಇಡೀ ನನ್ನ ವೇದವಾಣಿಯನ್ನು ತಿಳಿಯುವ ಸಾಮರ್ಥ್ಯ ಇರದಿದ್ದಾಗ, ಕರುಣಾಳುವಾದ ಪ್ರಭುವು ಪ್ರತಿಯೊಂದು ಕಲ್ಪದಲ್ಲಿಯೂ ಸತ್ಯವತಿಯ ಗರ್ಭದಿಂದ ಭಗವಾನ್ ವೇದವ್ಯಾಸರ ರೂಪದಲ್ಲಿ ಪ್ರಗಟಗೊಂಡು, ವೇದ ವೃಕ್ಷವನ್ನು ನಾನಾ ಶಾಖೆಗಳ ರೂಪದಲ್ಲಿ ವಿಭಾಗ ಮಾಡುವನು. ॥ ೩೬ ॥

ದೇವದ್ವಿಷಾಂ ನಿಗಮವರ್ತ್ಮನಿ ನಿಷ್ಠಿತಾನಾಂ
ಪೂರ್ಭಿರ್ಮಯೇನ ವಿಹಿತಾಭಿರದೃಶ್ಯತೂರ್ಭಿಃ ।
ಲೋಕಾನ್ ಘ್ನತಾಂ ಮತಿವಿಮೋಹಮತಿಪ್ರಲೋಭಂ
ವೇಷಂ ವಿಧಾಯ ಬಹು ಭಾಷ್ಯತ ಔಪಧರ್ಮ್ಯಮ್ ॥ ೩೭ ॥

ದೇವಶತ್ರುಗಳಾದ ದೈತ್ಯರು ವೇದಮಾರ್ಗದ ಆಸರೆಯನ್ನು ಪಡೆದು ಮಯಾಸುರನು ರಚಿಸಿದ ಅದೃಶ್ಯವಾದ ವೇಗವುಳ್ಳ ಪುರಗಳಲ್ಲಿ ವಾಸಿಸುತ್ತಾ ಮನುಷ್ಯರನ್ನು ಹಿಂಸಿಸತೊಡಗಿದಾಗ, ಈ ಭಗವಂತನು ಜನರ ಮನಸ್ಸಿನಲ್ಲಿ ಮೋಹವನ್ನೂ ಪ್ರಲೋಭನೆಯನ್ನು ಉಂಟು ಮಾಡುವ ವೇಷವನ್ನು ಧರಿಸಿ ಬುದ್ಧದೇವರ ರೂಪದಲ್ಲಿ ಬಹಳಷ್ಟು ಉಪಧರ್ಮಗಳನ್ನು ಉಪದೇಶ ಮಾಡುವನು. ಏಕೆಂದರೆ, ಜನರ ಕಲ್ಯಾಣಮಾಡುವುದೇ ಭಗವಂತನ ಕಾರ್ಯವಲ್ಲವೇ ! ॥ ೩೭ ॥

ಯರ್ಹ್ಯಾಲಯೇಷ್ವಪಿ ಸತಾಂ ನ ಹರೇಃ ಕಥಾಃ ಸ್ಯುಃ
ಪಾಖಂಡಿನೋ ದ್ವಿಜಜನಾ ವೃಷಲಾ ನೃದೇವಾಃ ।
ಸ್ವಾಹಾ ಸ್ವಧಾ ವಷಡಿತಿ ಸ್ಮ ಗಿರೋ ನ ಯತ್ರ
ಶಾಸ್ತಾ ಭವಿಷ್ಯತಿ ಕಲೇರ್ಭಗವಾನ್ಯುಗಾಂತೇ ॥ ೩೮ ॥

ಕಲಿಯುಗದ ಕೊನೆಯಲ್ಲಿ ಸತ್ಪುರುಷರ ಮನೆಗಳಲ್ಲಿಯೂ ಶ್ರೀಹರಿಕಥೆಯ ಶ್ರವಣ-ಕೀರ್ತನ-ಉತ್ಸವಾದಿಗಳು ನಡೆಸಲು ಅವಕಾಶವಿಲ್ಲದಂತಾದೀತು. ಪಾಷಂಡಿಗಳೂ, ಧರ್ಮಘಾತುಕರು, ಶೂದ್ರರು ರಾಜರಾಗಿ ಬಿಡುವರು. ದೇವತೆಗಳನ್ನೂ, ಪಿತೃಗಳನ್ನೂ ಕುರಿತು ಮಾಡುವ ಯಜ್ಞ ಮತ್ತು ಶ್ರಾದ್ಧಗಳ ಸದ್ದೂ ಇರುವುದಿಲ್ಲ, ಸ್ವಾಹಾ, ಸ್ವಧಾ, ವಷಟ್‌ಕಾರಗಳು ಕಿವಿಗೆ ಬೀಳುವುದಿಲ್ಲ. ಇಂತಹ ಸಮಯದಲ್ಲಿ ಕಲಿಯುಗವನ್ನು ಶಿಕ್ಷಿಸಲಿಕ್ಕಾಗಿ ಭಗವಂತನು ಕಲ್ಕಿರೂಪದಲ್ಲಿ ಅವತರಿಸುವನು. ॥ ೩೮ ॥

ಸರ್ಗೇ ತಪೋಽಹಮೃಷಯೋ ನವ ಯೇ ಪ್ರಜೇಶಾಃ
ಸ್ಥಾನೇ ಚ ಧರ್ಮಮಖಮನ್ವಮರಾವನೀಶಾಃ ।
ಅಂತೇ ತ್ವಧರ್ಮಹರಮನ್ಯುವಶಾಸುರಾದ್ಯಾ
ಮಾಯಾವಿಭೂತಯ ಇಮಾಃ ಪುರುಶಕ್ತಿಭಾಜಃ ॥ ೩೯ ॥

ಪ್ರಪಂಚದ ಸೃಷ್ಟಿಯ ಸಮಯಬಂದಾಗ ತಪಸ್ಸಿನ ರೂಪದಲ್ಲೂ, ನನ್ನ ರೂಪದಲ್ಲೂ, ಮರೀಚಿಯೇ ಮುಂತಾದ ಮಹರ್ಷಿಗಳ ಮತ್ತು ಒಂಭತ್ತು ಪ್ರಜಾಪತಿಗಳ ರೂಪದಲ್ಲಿಯೂ, ಹಾಗೆಯೇ ರಕ್ಷಣೆಯ ಸಮಯ ಬಂದಾಗ ಧರ್ಮ, ವಿಷ್ಣು, ಮನು, ದೇವತೆಗಳೂ ಮತ್ತು ರಾಜರುಗಳೂ ಇವರ ರೂಪದಲ್ಲೂ, ವಿನಾಶಕಾಲ ಬಂದಾಗ ಅಧರ್ಮ, ರುದ್ರದೇವರು, ಕ್ರೋಧವಶವೆಂಬ ಸರ್ಪಗಳೂ, ದೈತ್ಯರೂ – ಮುಂತಾದ ರೂಪದಲ್ಲೂ ಸರ್ವಶಕ್ತಿ ಸಂಪನ್ನ

ಯದ್ವೈ ವ್ರಜೇ ವ್ರಜಪಶೂನ್ವಿಷತೋಯಪೀಥಾನ್
ಪಾಲಾಂಸ್ತ್ವಜೀವಯದನುಗ್ರಹದೃಷ್ಟಿವೃಷ್ಟ್ಯಾ ।
ತಚ್ಛುದ್ಧಯೇಽತಿವಿಷವೀರ್ಯವಿಲೋಲಜಿಹ್ವ-
ಮುಚ್ಚಾಟಯಿಷ್ಯದುರಗಂ ವಿಹರನ್ ಹ್ರದಿನ್ಯಾಮ್ ॥೨೮॥

ತತ್ಕರ್ಮ ದಿವ್ಯಮಿವ ಯನ್ನಿಶಿ ನಿಃಶಯಾನಂ
ದಾವಾಗ್ನಿನಾ ಶುಚಿವನೇ ಪರಿದಹ್ಯಮಾನೇ ।
ಉನ್ನೇಷ್ಯತಿ ವ್ರಜಮತೋಽವಸಿತಾಂತಕಾಲಂ
ನೇತ್ರೇ ಪಿಧಾಪ್ಯ ಸಬಲೋಽನಧಿಗಮ್ಯವೀರ್ಯಃ ॥೨೯॥

ಗೃಹ್ಣೀತ ಯದ್ಯದುಪಬಂಧಮಮುಷ್ಯ ಮಾತಾ
ಶುಲ್ಬಂ ಸುತಸ್ಯ ನ ತು ತತ್ತದಮುಷ್ಯ ಮಾತಿ ।
ಯಜ್ಜೃಂಭತೋಽಸ್ಯ ವದನೇ ಭುವನಾನಿ ಗೋಪೀ
ಸಂವೀಕ್ಷ್ಯ ಶಂಕಿತಮನಾಃ ಪ್ರತಿಬೋಧಿತಾಽಽಸೀತ್ ॥೩೦॥

ನಂದಂ ಚ ಮೋಕ್ಷ್ಯತಿ ಭಯಾದ್ವರುಣಸ್ಯ ಪಾಶಾ-
ದ್ಗೋಪಾನ್ಬಿಲೇಷು ಪಿಹಿತಾನ್ಮಯಸೂನುನಾ ಚ ।
ಅಹ್ನ್ಯಾಪೃತಂ ನಿಶಿ ಶಯಾನಮತಿಶ್ರಮೇಣ
ಲೋಕಂ ವಿಕುಂಠಮುಪನೇಷ್ಯತಿ ಗೋಕುಲಂ ಸ್ಮ ॥೩೧॥

ಗೋಪೈರ್ಮಖೇ ಪ್ರತಿಹತೇ ವ್ರಜವಿಪ್ಲವಾಯ
ದೇವೇಽಭಿವರ್ಷತಿ ಪಶೂನ್ ಕೃಪಯಾ ರಿರಕ್ಷುಃ ।
ಧರ್ತೋಚ್ಛಿಲೀಂಧ್ರಮಿವ ಸಪ್ತ ದಿನಾನಿ ಸಪ್ತ-
ವರ್ಷೋ ಮಹೀಧ್ರಮನಘೈಕಕರೇ ಸಲೀಲಮ್ ॥೩೨॥

ಕ್ರೀಡನ್ವನೇ ನಿಶಿ ನಿಶಾಕರರಶ್ಮಿಗೌರ್ಯಾಂ
ರಾಸೋನ್ಮುಖಃ ಕಲಪದಾಯತಮೂರ್ಛಿತೇನ ।
ಉದ್ದೀಪಿತಸ್ಮರರುಜಾಂ ವ್ರಜಭೃದ್ವಧೂನಾಂ
ಹರ್ತುರ್ಹರಿಷ್ಯತಿ ಶಿರೋ ಧನದಾನುಗಸ್ಯ ॥೩೩॥

ಅವನು ತನ್ನ ಅಮೃತಮಯ ಅನುಗ್ರಹದೃಷ್ಟಿಯಿಂದಲೇ ಅವರೆಲ್ಲರನ್ನು ಬದುಕಿಸುವನು ಮತ್ತು ಯಮುನಾಜಲವನ್ನು ಶುದ್ಧಪಡಿಸುವುದಕ್ಕಾಗಿ ಆ ಮಡುವಿನಲ್ಲಿ ಧುಮುಕಿ ಅಲ್ಲಿ ವಿಹರಿಸಿ, ವಿಷದ ಶಕ್ತಿಯಿಂದ ನಾಲಿಗೆಗಳನ್ನು ಅಲ್ಲಾಡಿಸುತ್ತಿದ್ದ ಕಾಳಿಯ ನಾಗನನ್ನು ಅಲ್ಲಿಂದ ಓಡಿಸಿದ್ದು ಇದು ಮನುಷ್ಯಕೃತ್ಯವೇ? ॥ ೨೮ ॥ ಅಂದೇ ರಾತ್ರಿ ಎಲ್ಲರೂ ಯಮುನಾನದಿಯ ತೀರದಲ್ಲಿ ಮಲಗಿ ನಿದ್ರಿಸುತ್ತಿರುವಾಗ ಬೇಸಗೆಯ ಕಾಲವಾದ್ದರಿಂದ ಹತ್ತಿರದ ಕಾಡಿನ ಕಾಡ್ಗಿಚ್ಚಿನಿಂದ ಉರಿದುಹೋಗತೊಡಗಿದಾಗ ಬಲರಾಮದೇವ ರೊಡನೆ ಶ್ರೀಕೃಷ್ಣನು ಅಲ್ಲಿಗೆ ಹೋಗಿ ಪ್ರಾಣಾಪಾಯಕ್ಕೆ ಸಿಕ್ಕಿದ ಗೋವಳರನ್ನು – 'ಎಲ್ಲರೂ ಕಣ್ಣುಮುಚ್ಚಿಕೊಳ್ಳಿ' ಎಂದು ಹೇಳಿ ಅವರನ್ನು ಕಿಚ್ಚಿನಿಂದ ಪಾರಾಗಿಸಿದನು. ಎಂತಹ ಅಲೌಕಿಕ ಲೀಲೆ ಇದು! ಅವನ ಶಕ್ತಿಯನ್ನು ವಾಸ್ತವವಾಗಿ ಚಿಂತಿಸುವುದಕ್ಕಾದರೂ ಸಾಧ್ಯವೇ? ॥ ೨೯॥ ತಾಯಿ ಯಶೋದೆಯು ಶ್ರೀಕೃಷ್ಣನನ್ನು ಕಟ್ಟಿ ಹಾಕಲು ಯಾವ-ಯಾವುದೋ ಹಗ್ಗವನ್ನು ತಂದರೂ ಅದು ಆತನ ಹೊಟ್ಟೆಗೆ ಸುತ್ತಲು ಸಾಕಾಗದೆ ಎರಡು ಅಂಗುಲಗಳು ಕಡಿಮೆಯೇ ಆಗುವುದು. ಅವಳು ಕಟ್ಟಲಾಗದೆ ಇದ್ದಾಗ, ಅವನು ಆಕೆಯ ಮೇಲೆ ಕೃಪೆದೋರಿ ಸ್ವತಃ ಬಂಧನಕ್ಕೆ ಒಳಗಾದನು. ಇದರಿಂದ ಅವನಿಗೆ 'ದಾಮೋದರ' ಎಂಬ ಹೆಸರಾಯಿತು. ಅವನು ಆಕಳಿಸುವಾಗ ಆತನ ಬಾಯೊಳಗೆ ಹದಿನಾಲ್ಕು ಲೋಕಗಳನ್ನೂ ಕಂಡು ಆಕೆಯು ಅತ್ಯಂತ ಭಯಗ್ರಸ್ತಳಾದಾಗ ಭಗವಂತನೇ ತನ್ನ ಸಂಕಲ್ಪದಿಂದ ತನ್ನ ಜ್ಞಾನವನ್ನು ಕರುಣಿಸಿದಾಗ, ತಾಯಿಯು ಅವನ ಪ್ರಭಾವವನ್ನು ಅರಿತು ಸಮಾಧಾನಗೊಳ್ಳುವಳು. ॥ ೩೦ ॥ ಅವನು ತಂದೆ – ನಂದಗೋಪನನ್ನು ಹೆಬ್ಬಾವಿನ ಭಯದಿಂದಲೂ, ವರುಣದೇವರ ಪಾಶದಿಂದಲೂ ಬಿಡಿಸುವನು. ಮಯಾಸುರನ ಪುತ್ರ ವ್ಯೋಮಾಸುರನು ಗೋಪಬಾಲಕರನ್ನು ಪರ್ವತದ ಗುಹೆಯಲ್ಲಿ ಬಚ್ಚಿಟ್ಟು ಸೆರೆಯಲ್ಲಿಟ್ಟಾಗ, ಅವರನ್ನು ಬಿಡುಗಡೆ ಮಾಡಿ ಕಾಪಾಡುವನು. ಗೋಕುಲದ ಜನರು ಹಗಲು ದುಡಿಯುತ್ತಾ, ರಾತ್ರೆ ನಿದ್ರಿಸುತ್ತಾ ಯಾವ ಸಾಧನೆಯನ್ನೂ ಮಾಡದಿದ್ದರೂ ಅವರನ್ನು ತನ್ನ ಪರಮಧಾಮವಾದ ವೈಕುಂಠಕ್ಕೆ ಕೊಂಡುಹೋಗುವನು. ॥ ೩೧ ॥ ಪುಣ್ಯಾತ್ಮನಾದ ನಾರದನೇ! ಶ್ರೀಕೃಷ್ಣನ ಸಲಹೆಯಂತೆ ಗೋಪಾಲಕರು ಇಂದ್ರಯಜ್ಞವನ್ನು ನಿಲ್ಲಿಸಿದಾಗ, ಕ್ರುದ್ಧನಾದ ಇಂದ್ರನು ಇಡೀ ಗೋಕುಲವನ್ನು ಧ್ವಂಸಮಾಡಲಿಕ್ಕಾಗಿ ಭಯಂಕರ ಮಳೆಗರೆಯಲು, ಆ ಗೋವುಗಳನ್ನೂ, ಗೋವಳರನ್ನೂ ಕರುಣೆಯಿಂದ ರಕ್ಷಿಸಲು – ಇನ್ನೂ ಏಳು ವರ್ಷವಯಸ್ಸಿನಲ್ಲಿ ಅವನು ಏಳು ದಿವಸಗಳ ಕಾಲ ಗೋವರ್ಧನ ಪರ್ವತವನ್ನು ನಾಯಿಕೊಡೆಯಂತೆ ಲೀಲಾಜಾಲವಾಗಿ ಒಂದೇ ಬೆರಳಿಂದ ಎತ್ತಿ ಹಿಡಿದುಕೊಂಡಿದ್ದು ಅದರ ಆಸರೆಯಲ್ಲಿ ಅವರನ್ನೆಲ್ಲಾ ಕಾಪಾಡುವನು. ॥ ೩೨ ॥

ವೃಂದಾವನದ ಸುತ್ತಲೂ ಶುಭ್ರವಾದ ಬೆಳದಿಂಗಳು ಹರಡಿರುವ ರಮಣೀಯವಾದ ರಾತ್ರಿಯಲ್ಲಿ ರಾಸಕ್ರೀಡೆ ಯನ್ನಾಡುವ ಇಚ್ಛೆಯಿಂದ ಸ್ವಾಮಿಯು ಕೊಳಲಿನಿಂದ ಸಂಗೀತಸುಧೆಯನ್ನು ವರ್ಷಿಸತೊಡಗುವಾಗ ಪ್ರೇಮಪರವಶರಾಗಿ ಅಲ್ಲಿಗೆ ಬರುವ ಗೋಪಿಕೆಯರನ್ನು ಕುಬೇರನ ಸೇವಕನಾದ ಶಂಖಚೂಡನು

ಯೇ ಚ ಪ್ರಲಂಬಖರದರ್ದುರಕೇಶ್ಯರಿಷ್ಟ-
ಮಲ್ಲೇಭಕಂಸಯವನಾಃ ಕುಜಪೌಂಡ್ರಕಾದ್ಯಾಃ ।
ಅನ್ಯೇ ಚ ಶಾಲ್ವಕಪಿಬಲ್ವಲದಂತವಕ್ತ್ರ-
ಸಪ್ತೋಕ್ಷಶಂಬರವಿದೂರಥರುಕ್ಮಿಮುಖ್ಯಾಃ ॥ ೩೪ ॥

ಯೇ ವಾ ಮೃಧೇ ಸಮಿತಿಶಾಲಿನ ಆತ್ತಚಾಪಾಃ
ಕಾಂಬೋಜಮತ್ಸ್ಯಕುರುಕೈಕಯಸೃಂಜಯಾದ್ಯಾಃ ।
ಯಾಸ್ಯಂತ್ಯದರ್ಶನಮಲಂ ಬಲಪಾರ್ಥಭೀಮ-
ವ್ಯಾಜಾಹ್ವಯೇನ ಹರಿಣಾ ನಿಲಯಂ ತದೀಯಮ್ ॥ ೩೫ ॥

ಕಾಲೇನ ಮೀಲಿತಧಿಯಾಮವಮೃಶ್ಯ ನೃಣಾಂ
ಸ್ತೋಕಾಯುಷಾಂ ಸ್ವನಿಗಮೋ ಬತ ದೂರಪಾರಃ ।
ಆವಿರ್ಹಿತಸ್ತ್ವನುಯುಗಂ ಸ ಹಿ ಸತ್ಯವತ್ಯಾಂ
ವೇದದ್ರುಮಂ ವಿಟಪಶೋ ವಿಭಜಿಷ್ಯತಿ ಸ್ಮ ॥ ೩೬ ॥

ದೇವದ್ವಿಷಾಂ ನಿಗಮವರ್ತ್ಮನಿ ನಿಷ್ಠಿತಾನಾಂ
ಪೂರ್ಭಿರ್ಮಯೇನ ವಿಹಿತಾಭಿರದೃಶ್ಯತೂರ್ಭಿಃ ।
ಲೋಕಾನ್ ಘ್ನತಾಂ ಮತಿವಿಮೋಹಮತಿಪ್ರಲೋಭಂ
ವೇಷಂ ವಿಧಾಯ ಬಹು ಭಾಷ್ಯತ ಔಪಧರ್ಮ್ಯಮ್ ॥ ೩೭ ॥

ಯರ್ಹ್ಯಾಲಯೇಷ್ವಪಿ ಸತಾಂ ನ ಹರೇಃ ಕಥಾಃ ಸ್ಯುಃ
ಪಾಖಂಡಿನೋ ದ್ವಿಜಜನಾ ವೃಷಲಾ ನೃದೇವಾಃ ।
ಸ್ವಾಹಾ ಸ್ವಧಾ ವಷಡಿತಿ ಸ್ಮ ಗಿರೋ ನ ಯತ್ರ
ಶಾಸ್ತಾ ಭವಿಷ್ಯತಿ ಕಲೇರ್ಭಗವಾನ್ಯುಗಾಂತೇ ॥ ೩೮ ॥

ಸರ್ಗೇ ತಪೋಽಹಮೃಷಯೋ ನವ ಯೇ ಪ್ರಜೇಶಾಃ
ಸ್ಥಾನೇ ಚ ಧರ್ಮಮಖಮನ್ವಮರಾವನೀಶಾಃ ।
ಅಂತೇ ತ್ವಧರ್ಮಹರಮನ್ಯುವಶಾಸುರಾದ್ಯಾ
ಮಾಯಾವಿಭೂತಯ ಇಮಾಃ ಪುರುಶಕ್ತಿಭಾಜಃ ॥ ೩೯ ॥

ಅಪಹರಿಸುವಾಗ ಶ್ರೀಕೃಷ್ಣನು ಅವನ ಶಿರಚ್ಛೇದನಮಾಡಿ ಅವರನ್ನು ರಕ್ಷಿಸುವನು. ॥ ೩೩ ॥ ಇನ್ನೂ – ಪ್ರಲಂಬಾಸುರ, ಧೇನುಕಾಸುರ, ಬಕಾಸುರ, ಕೇಶೀ, ಅರಿಷ್ಟಾಸುರ ಮುಂತಾದ ಅನೇಕ ದೈತ್ಯರನ್ನೂ, ಚಾಣೂರ ಮುಂತಾದ ಮಲ್ಲರನ್ನೂ, ಕುವಲಯಾ ಪೀಡವೆಂಬ ಆನೆಯನ್ನೂ, ಕಂಸ, ಕಾಲಯವನ, ನರಕಾಸುರ, ಪೌಂಡ್ರಕದೇಶದ ಮಿಥ್ಯಾವಾಸುದೇವ, ಶಾಲ್ವ, ದ್ವಿವಿದನೆಂಬ ವಾನರ, ಬಲ್ವಲ, ದಂತವಕ್ತ್ರ, ನಗ್ನಜಿತರಾಜನ ಏಳು ಕೊಬ್ಬಿದ ಗೂಳಿಗಳನ್ನೂ, ಶಂಬರಾಸುರ, ವಿದೂರಥ, ರುಕ್ಮಿ ಮುಂತಾದವರನ್ನೂ, ಬಿಲ್ಲು-ಬಾಣಗಳನ್ನು ಧರಿಸಿ ಯುದ್ಧರಂಗಕ್ಕೆ ಬರುವ ಕಾಂಭೋಜ, ಮತ್ಸ್ಯ, ಕುರು, ಕೈಕಯ, ಸೃಂಜಯ ಮೊದಲಾದ ದೇಶಗಳ ರಾಜರನ್ನೂ ಆತನು ಸಂಹರಿಸುವನು. ಕೆಲವರನ್ನು ತಾನೇ ಕೊಂದು, ಕೆಲವರನ್ನು ಬಲರಾಮ, ಭೀಮಸೇನ, ಅರ್ಜುನನೇ ಮುಂತಾದವರಿಂದ ಸಂಹಾರಮಾಡಿಸುವನು. ಇವರೆಲ್ಲರೂ ಭಗವಂತನ ಧಾಮವನ್ನೇ ಸೇರಿಕೊಳ್ಳುವರು. ॥ ೩೪-೩೫ ॥

ಕಾಲದ ಪ್ರಭಾವದಿಂದ ಮನುಷ್ಯರ ಬುದ್ಧಿಶಕ್ತಿಯು, ಆಯುಸ್ಸೂ ಕಡಿಮೆಯಾದಾಗ, ಇವರಿಗೆ ತತ್ತ್ವವನ್ನು ಹೇಳುವ ಇಡೀ ನನ್ನ ವೇದವಾಣಿಯನ್ನು ತಿಳಿಯುವ ಸಾಮರ್ಥ್ಯ ಇರದಿದ್ದಾಗ, ಕರುಣಾಳುವಾದ ಪ್ರಭುವು ಪ್ರತಿಯೊಂದು ಕಲ್ಪದಲ್ಲಿಯೂ ಸತ್ಯವತಿಯ ಗರ್ಭದಿಂದ ಭಗವಾನ್ ವೇದವ್ಯಾಸರ ರೂಪದಲ್ಲಿ ಪ್ರಗಟಗೊಂಡು, ವೇದ ವೃಕ್ಷವನ್ನು ನಾನಾ ಶಾಖೆಗಳ ರೂಪದಲ್ಲಿ ವಿಭಾಗ ಮಾಡುವನು. ॥ ೩೬ ॥

ದೇವಶತ್ರುಗಳಾದ ದೈತ್ಯರು ವೇದಮಾರ್ಗದ ಆಸರೆಯನ್ನು ಪಡೆದು ಮಯಾಸುರನು ರಚಿಸಿದ ಅದೃಶ್ಯವಾದ ವೇಗವುಳ್ಳ ಪುರಗಳಲ್ಲಿ ವಾಸಿಸುತ್ತಾ ಮನುಷ್ಯರನ್ನು ಹಿಂಸಿಸತೊಡಗಿದಾಗ, ಈ ಭಗವಂತನು ಜನರ ಮನಸ್ಸಿನಲ್ಲಿ ಮೋಹವನ್ನೂ ಪ್ರಲೋಭನೆಯನ್ನು ಉಂಟು ಮಾಡುವ ವೇಷವನ್ನು ಧರಿಸಿ ಬುದ್ಧದೇವರ ರೂಪದಲ್ಲಿ ಬಹಳಷ್ಟು ಉಪಧರ್ಮಗಳನ್ನು ಉಪದೇಶ ಮಾಡುವನು. ಏಕೆಂದರೆ, ಜನರ ಕಲ್ಯಾಣಮಾಡುವುದೇ ಭಗವಂತನ ಕಾರ್ಯವಲ್ಲವೇ ! ॥ ೩೭ ॥

ಕಲಿಯುಗದ ಕೊನೆಯಲ್ಲಿ ಸತ್ಪುರುಷರ ಮನೆಗಳಲ್ಲಿಯೂ ಶ್ರೀಹರಿಕಥೆಯ ಶ್ರವಣ-ಕೀರ್ತನ-ಉತ್ಸವಾದಿಗಳು ನಡೆಸಲು ಅವಕಾಶವಿಲ್ಲದಂತಾದೀತು. ಪಾಷಂಡಿಗಳೂ, ಧರ್ಮಘಾತುಕರು, ಶೂದ್ರರು ರಾಜರಾಗಿ ಬಿಡುವರು. ದೇವತೆಗಳನ್ನೂ, ಪಿತೃಗಳನ್ನೂ ಕುರಿತು ಮಾಡುವ ಯಜ್ಞಮತ್ತು ಶ್ರಾದ್ಧಗಳ ಸದ್ದೂ ಇರುವುದಿಲ್ಲ, ಸ್ವಾಹಾ, ಸ್ವಧಾ, ವಷಟ್‌ಕಾರಗಳು ಕಿವಿಗೆ ಬೀಳುವುದಿಲ್ಲ. ಇಂತಹ ಸಮಯದಲ್ಲಿ ಕಲಿಯುಗವನ್ನು ಶಿಕ್ಷಿಸಲಿಕ್ಕಾಗಿ ಭಗವಂತನು ಕಲ್ಕಿರೂಪದಲ್ಲಿ ಅವತರಿಸುವನು. ॥ ೩೮ ॥

ಪ್ರಪಂಚದ ಸೃಷ್ಟಿಯ ಸಮಯಬಂದಾಗ ತಪಸ್ಸಿನ ರೂಪದಲ್ಲೂ, ನನ್ನ ರೂಪದಲ್ಲೂ, ಮರೀಚಿಯೇ ಮುಂತಾದ ಮಹರ್ಷಿಗಳ ಮತ್ತು ಒಂಭತ್ತು ಪ್ರಜಾಪತಿಗಳ ರೂಪದಲ್ಲಿಯೂ, ಹಾಗೆಯೇ ರಕ್ಷಣೆಯ ಸಮಯ ಬಂದಾಗ ಧರ್ಮ, ವಿಷ್ಣು ಮನು, ದೇವತೆಗಳೂ ಮತ್ತು ರಾಜರುಗಳೂ ಇವರ ರೂಪದಲ್ಲೂ, ವಿನಾಶಕಾಲ ಬಂದಾಗ ಅಧರ್ಮ, ರುದ್ರದೇವರು, ಕ್ರೋಧವಶವೆಂಬ ಸರ್ಪಗಳೂ, ದೈತ್ಯರೂ – ಮುಂತಾದ ರೂಪದಲ್ಲೂ ಸರ್ವಶಕ್ತಿ ಸಂಪನ್ನ

ವಿಷ್ಣೋರ್ನು ವೀರ್ಯಗಣನಾಂ ಕತಮೋಽರ್ಹತೀಹ
ಯಃ ಪಾರ್ಥಿವಾನ್ಯಪಿ ಕವಿರ್ವಿಮಮೇ ರಜಾಂಸಿ ।
ಚಸ್ಕಂಭ ಯಃ ಸ್ವರಂಹಸಾಸ್ಖಲತಾ ತ್ರಿಪೃಷ್ಠಂ
ಯಸ್ಮಾತ್ರಿಸಾಮ್ಯಸದನಾದುರುಕಂಪಯಾನಮ್ ॥ ೪೦ ॥

ನಾಂತಂ ವಿದಾಮ್ಯಹಮಮೀ ಮುನಯೋಽಗ್ರಜಾಸ್ತೇ
ಮಾಯಾಬಲಸ್ಯ ಪುರುಷಸ್ಯ ಕುತೋಽಪರೇ ಯೇ ।
ಗಾಯನ್ ಗುಣಾನ್ ದಶಶತಾನನ ಆದಿದೇವಃ
ಶೇಷೋಽಧುನಾಪಿ ಸಮವಸ್ಯತಿ ನಾಸ್ಯ ಪಾರಮ್ ॥ ೪೧ ॥

ಯೇಷಾಂ ಸ ಏವ ಭಗವಾಂದಯಯೇದನಂತಃ
ಸರ್ವಾತ್ಮನಾಽಽಶ್ರಿತಪದೋ ಯದಿ ನಿರ್ವ್ಯಲೀಕಮ್ ।
ತೇ ದುಸ್ತರಾಮತಿತರಂತಿ ಚ ದೇವಮಾಯಾಂ
ನೈಷಾಂ ಮಮಾಹಮಿತಿ ಧೀಃ ಶ್ವಶೃಗಾಲಭಕ್ಷ್ಯೇ ॥ ೪೨ ॥

ವೇದಾಹಮಂಗ ಪರಮಸ್ಯ ಹಿ ಯೋಗಮಾಯಾಂ
ಯೂಯಂ ಭವಶ್ಚ ಭಗವಾನಥ ದೈತ್ಯವರ್ಯಃ ।
ಪತ್ನೀ ಮನೋಃ ಸ ಚ ಮನುಶ್ಚ ತದಾತ್ಮಜಾಶ್ಚ
ಪ್ರಾಚೀನಬರ್ಹಿರ್ಋಭುರಂಗ ಉತ ಧ್ರುವಶ್ಚ ॥ ೪೩ ॥

ಇಕ್ಷ್ವಾಕುರೈಲಮುಚುಕುಂದವಿದೇಹಗಾಧಿ-
ರಘ್ವಂಬರೀಷಸಗರಾ ಗಯನಾಹುಷಾದ್ಯಾಃ ।
ಮಾಂಧಾತ್ರಲರ್ಕಶತಧನ್ವನುರಂತಿದೇವಾ
ದೇವವ್ರತೋ ಬಲಿರಮೂರ್ತರಯೋ ದಿಲೀಪಃ ॥ ೪೪ ॥

ಸೌಭರ್ಯುತಂಕ ಶಿಬಿದೇವಲಪಿಪ್ಪಲಾದ-
ಸಾರಸ್ವತೋದ್ಧವಪರಾಶರಭೂರಿಷೇಣಾಃ ।
ಯೇಽನ್ಯೇ ವಿಭೀಷಣಹನೂಮದುಪೇಂದ್ರದತ್ತ-
ಪಾರ್ಥಾರ್ಷ್ಟಿಷೇಣವಿದುರಶ್ರುತದೇವವರ್ಯಾಃ ॥ ೪೫ ॥

ನಾದ ಶ್ರೀಭಗವಂತನ ವಿಚಿತ್ರವಾದ ಮಾಯಾವಿಭೂತಿಗಳು ಪ್ರಕಟಗೊಳ್ಳುವವು. ॥ ೩೯ ॥ ಭಗವಂತನ ಶಕ್ತಿಗಳು ಅನಂತವಾದುವು. ತನ್ನ ಪ್ರತಿಭೆಯಿಂದ ಭೂಮಿಯಲ್ಲಿರುವ ಒಂದೊಂದು ಧೂಳಿನ ಕಣಗಳನ್ನು ಎಣಿಸಿಬಿಟ್ಟರೂ, ಮಹಾವಿಷ್ಣುವಿನ ಶಕ್ತಿಗಳನ್ನು ಯಾವಾತನು ಎಣಿಸಿ ಮುಗಿಸಿಯಾನು ? ಯಾರಿಗೆ ತಾನೇ ಅಂತಹ ಶಕ್ತಿ ಇದ್ದೀತು ? ಈ ಅನಂತ ಶಕ್ತಿಸಂಪನ್ನನಾದ ಪ್ರಭುವು ತ್ರಿವಿಕ್ರಮಾವತಾರದಲ್ಲಿ ತ್ರಿಲೋಕಗಳನ್ನೂ ಅಳೆಯುತ್ತಿದ್ದಾಗ ಈತನ ಚರಣಗಳ ಅದ್ಭುತವಾದ ವೇಗದಿಂದ ಪ್ರಕೃತಿಯಿಂದ ಪ್ರಾರಂಭವಾಗಿ ಸತ್ಯಲೋಕದವರೆಗೆ ಇಡೀ ಬ್ರಹ್ಮಾಂಡವೇ ನಡುಗತೊಡಗಿದಾಗ ಈತನೇ ತನ್ನ ಶಕ್ತಿಯಿಂದ ಅದನ್ನು ಸ್ಥಿರಗೊಳಿಸಿದನು. ॥ ೪೦ ॥ ಸಮಸ್ತ ಸೃಷ್ಟಿಯ ರಚನೆಯನ್ನೂ, ಸಂಹಾರವನ್ನೂ ಮಾಡುವ ಮಾಯೆಯು ಈತನ ಒಂದು ಶಕ್ತಿಯು. ಇಂತಹ ಅನಂತ ಶಕ್ತಿಗಳಿಗೆ ಆಶ್ರಯನಾಗಿರುವ ಈತನ ಸ್ವರೂಪವನ್ನು ನಾನು ಅರಿಯೆನು. ನಿನ್ನ ಅಣ್ಣಂದಿರಾದ ಸನಕಾದಿಗಳೂ ಅರಿಯರು. ಇನ್ನು ಇತರರ ವಿಷಯದಲ್ಲಿ ಹೇಳುವುದೇನಿದೆ ? ಆದಿದೇವನಾದ ಆದಿಶೇಷಸ್ವಾಮಿಯು ತನ್ನ ಸಾವಿರ ಬಾಯಿಗಳಿಂದ ಇವನ ಗುಣಗಳನ್ನು ಹಿಂದಿನಿಂದಲೂ ಹಾಡುತ್ತಾ ಬಂದರೂ, ಇಂದಿಗೂ ಅವುಗಳ ದಡಕಾಣಲಾಗಲಿಲ್ಲ. ॥ ೪೧ ॥ ನಿಷ್ಕಪಟಭಾವದಿಂದ ತಮ್ಮ ಸರ್ವಸ್ವವನ್ನೂ ಮತ್ತು ತಮ್ಮನ್ನೂ ಅವನ ಚರಣಕಮಲಗಳಲ್ಲಿ ಸಮರ್ಪಿಸಿಕೊಳ್ಳುವವರ ಮೇಲೆಯೇ ಆ ಅನಂತ ಭಗವಂತನು ದಯೆಯನ್ನು ಹರಿಸುತ್ತಾನೆ. ಅವನ ದಯೆಗೆ ಪಾತ್ರರಾದರೇ ಅವನ ದುಸ್ತರವಾದ ಮಾಯೆಯ ಸ್ವರೂಪವನ್ನು ಅರಿತು ಅದನ್ನು ದಾಟಿ ಹೋಗುತ್ತಾರೆ. ಇಂತಹ ಸುಕೃತಿಗಳಿಗೆ ನರಿ-ನಾಯಿಗಳಿಗೆ ಆಹಾರವಾಗುವ ತಮ್ಮ ಹಾಗೂ ತಮ್ಮ ಪುತ್ರಾದಿಗಳ ಶರೀರದಲ್ಲಿ 'ನಾನು-ನನ್ನದು' ಎಂಬ ಅಹಂಭಾವವಿರುವುದಿಲ್ಲ. ॥ ೪೨ ॥ ಪ್ರಿಯ ನಾರದನೇ ! ಈ ಪರಮಪುರುಷನ ಯೋಗಮಾಯೆಯನ್ನು ನಾನು ಬಲ್ಲೆನು. ಹಾಗೆಯೇ ನೀನೂ, ನಿನ್ನ ಅಣ್ಣಂದಿರಾದ ಸನಕಾದಿಗಳೂ, ಭಗವಾನ್ ಶಂಕರನೂ, ದೈತ್ಯಕುಲಭೂಷಣನಾದ ಪ್ರಹ್ಲಾದನೂ, ಶತರೂಪಾ, ಮನು, ಮನುಪುತ್ರ ಪ್ರಿಯವ್ರತ ಮುಂತಾದವರೂ, ಪ್ರಾಚೀನ ಬರ್ಹಿ, ಋಭು, ಅಂಗ ಮತ್ತು ಧ್ರುವ ಇವರೆಲ್ಲ ಬಲ್ಲರು. ॥ ೪೩ ॥ ಇವರಲ್ಲದೆ ಇಕ್ಷ್ವಾಕು, ಪುರೂರವ, ಮುಚುಕುಂದ, ಜನಕ, ಗಾಧಿ, ರಘು, ಅಂಬರೀಷ, ಸಗರ, ಗಯ, ಯಯಾತಿ ಮುಂತಾದವರೂ, ಮಾಂಧಾತಾ, ಅಲರ್ಕ, ಶತಧನ್ವಾ, ಅನು, ರಂತಿದೇವ, ಭೀಷ್ಮ, ಬಲಿ, ಅಮೂರ್ತ್ತರಯ, ದಿಲೀಪ, ಸೌಭರಿ, ಉತ್ತಂಕ, ಶಿಬಿ, ದೇವಲ, ಪಿಪ್ಪಲಾದ, ಸಾರಸ್ವತ, ಉದ್ಧವ, ಪರಾಶರ, ಭೂರಿಷೇಣ, ಹಾಗೂ ವಿಭೀಷಣ, ಹನುಮಂತ, ಶುಕಮುನಿ, ಅರ್ಜುನ, ಆರ್ಷ್ಟಿಷೇಣ, ವಿದುರ, ಶ್ರುತದೇವ ಮುಂತಾದ ಮಹಾತ್ಮರೂ ತಿಳಿದಿದ್ದಾರೆ. ॥ ೪೪-೪೫ ॥ ಭಗವಂತನ ಪರಾಕ್ರಮವು ಅತ್ಯಂತ ಅದ್ಭುತವಾದುದು. ಆ ಪ್ರಭುವಿಗೆ ಶರಣಾದವರು ಅವನ ಭಕ್ತರೇ ಆಗಿಹೋಗುವರು. ಅವರ ಶೀಲ-ಸ್ವಭಾವಗಳು, ಆಚರಣೆಗಳೂ ಸತ್ಪುರುಷರಂತೆ ಆಗಿ ಹೋಗುವವು. ಅವರು ಬೇಕಾದರೆ, ಸ್ತ್ರೀ, ಶೂದ್ರ, ಹೂಣ ಭಿಲ್ಲರು ಜಾತಿಯ ಮನುಷ್ಯರೇ ಆಗಿರಲಿ, ಬೇಕಾದರೆ ಪಶು-ಪಕ್ಷಿ ಮುಂತಾದ ಯಾವುದೇ ಯೋನಿಯವ

ತೇ ವೈ ವಿದಂತ್ಯತಿತರಂತಿ ಚ ದೇವಮಾಯಾಂ
ಸ್ತ್ರೀಶೂದ್ರಹೂಣಶಬರಾ ಅಪಿ ಪಾಪಜೀವಾಃ ।
ಯದ್ಯದ್ಭುತಕ್ರಮಪರಾಯಣಶೀಲಶಿಕ್ಷಾ-
ಸ್ತಿರ್ಯಗ್ಜನಾ ಅಪಿ ಕಿಮು ಶ್ರುತಧಾರಣಾ ಯೇ ॥ ೪೬ ॥

ರಾಗಲೀ, ಅವರೆಲ್ಲರೂ ಭಗವಂತನ ಶರಣಾಗತಿಯ ಬಲದಲ್ಲಿ ದಾಟಲಶಕ್ಯವಾದ ಆ ದೇವಮಾಯೆಯನ್ನು ದಾಟಿಹೋಗುತ್ತಾರೆ. ಎಂದಾಗ ವೈದಿಕ ಸದಾಚಾರಿಗಳು ದಾಟಿಹೋಗುವರು ಎಂದು ಹೇಳಬೇಕಾದುದೇ ಇಲ್ಲ. ॥ ೪೬ ॥

ಶಶ್ವತ್ಪ್ರಶಾಂತಮಭಯಂ ಪ್ರತಿಬೋಧಮಾತ್ರಂ
ಶುದ್ಧಂ ಸಮಂ ಸದಸತಃ ಪರಮಾತ್ಮತತ್ತ್ವಮ್ ।
ಶಬ್ದೋ ನ ಯತ್ರ ಪುರುಕಾರಕವಾನ್ಕ್ರಿಯಾರ್ಥೋ
ಮಾಯಾ ಪರೈತ್ಯಭಿಮುಖೇ ಚ ವಿಲಜ್ಜಮಾನಾ ॥ ೪೭ ॥

ನಾರದನೇ ! ಪರಮಾತ್ಮತತ್ತ್ವವು ಶಾಶ್ವತವೂ, ಪ್ರಶಾಂತವೂ, ಅಭಯವೂ, ಜ್ಞಾನೈಕಸ್ವರೂಪವೂ ಆಗಿರುವುದು. ಅವನಲ್ಲಿ ಮಾಯೆಯ ಮಲವಾಗಲೀ, ಅದರಿಂದ ರಚಿತವಾದ ವಿಷಮತೆಗಳಾಗಲೀ ಇಲ್ಲ. ಅವನು ಸತ್-ಅಸತ್ ಎರಡನ್ನೂ ಮೀರಿದವನು. ಯಾವುದೇ ವೈದಿಕ ಅಥವಾ ಲೌಕಿಕ ಶಬ್ದಗಳು ಅವನವರೆಗೆ ತಲುಪಲಾರವು. ನಾನಾ ಸಾಧನಗಳಿಂದ ಸಂಪನ್ನವಾಗುವ ಕರ್ಮಗಳ ಫಲಗಳೂ ಅವನವರೆಗೆ ತಲುಪಲಾರವು. ಹೆಚ್ಚೇನು, ಸ್ವಯಂ ಮಾಯೆಯೂ ಕೂಡ ಅವನ ಎದುರು ನಿಲ್ಲಲಾರಳು. ನಾಚಿ ಓಡಿಹೋಗುತ್ತಾಳೆ. ॥ ೪೭ ॥ ಮಹಾತ್ಮರು-ಶೋಕರಹಿತ ಆನಂದ ಸ್ವರೂಪ ಬ್ರಹ್ಮನ ರೂಪದಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳುವರೋ ಅದೇ ಪರಮಪುರುಷ ಭಗವಂತನ ಪರಮಪದವಾಗಿದೆ. ಸಂಯಮಿಗಳು ಅದರಲ್ಲೇ ತಮ್ಮ ಮನಸ್ಸನ್ನು ಸೇರಿಸಿ ಸ್ಥಿರರಾಗುತ್ತಾರೆ. ಜ್ಞಾನ-ಆನಂದಗಳ ಅಕ್ಷಯನಿಧಿಯಾಗಿರುವ ಆತನಲ್ಲೇ ನೆಲೆಸಿರುವಂತಹವರಿಗೆ ಸುಖಪ್ರಾಪ್ತಿಗಾಗಿ ಬೇರೆ ಜ್ಞಾನಸಾಧನಗಳೇಕೇ ? ಜಲಕ್ಕೆ ಆಧಾರನಾಗಿರುವ ಮೇಘರೂಪಿಯಾದ ಇಂದ್ರನಿಗೆ ನೀರಿಗೋಸ್ಕರ ಬಾವಿಯನ್ನು ತೋಡುವ ಗುದ್ದಲಿಯ ಆವಶ್ಯಕತೆ ಇಲ್ಲವಷ್ಟೆ! ನೀರು ಬೇಕಾದಾಗ ಸ್ವತಃ ಅವನು ಇತರರಿಗೂ ಮಳೆ ಸುರಿಸಿ ನೀರು ಕೊಡಬಲ್ಲನು. ಹಾಗೆಯೇ ಭಗವಂತನನ್ನು ಪ್ರಾಪ್ತ ಮಾಡಿಕೊಂಡ ಮಹಾಪುರುಷರೂ ಕೂಡ ತಮ್ಮ ಪ್ರಭಾವದಿಂದ ಬೇರೆಯವರಿಗೂ ಭಗವತ್ಪ್ರಾಪ್ತಿಯ ಮಾರ್ಗವನ್ನು ಸುಗಮಗೊಳಿಸುತ್ತಾರೆ. ॥ ೪೮ ॥ ಜಗತ್ತಿನಲ್ಲಿರುವ ಶ್ರೇಯಸ್ಕರ ಸಾಧನೆಗಳೆಲ್ಲಕ್ಕೂ ಪ್ರಭುವೇ ಒಡೆಯನಾಗಿದ್ದಾನೆ. ಅವನೇ ಈ ಜೀವಿಯ ಭಾವ ಮತ್ತು ಸ್ವಭಾವಕ್ಕನುಸಾರವಾಗಿ ಶಾಸ್ತ್ರಗಳ ಮೂಲಕ ಅವನ ಕರ್ಮಗಳನ್ನು ವಿಧಿಸುತ್ತಾನೆ. ಸತ್ಕರ್ಮಗಳ ಪ್ರಸಿದ್ಧಿಯೂ ಭಗವಂತನಿಂದಲೇ ಆಗುತ್ತದೆ. ವಾಸ್ತವವಾಗಿ ಜೀವನೂ ಅಜನ್ಮಾ, ಶಾಶ್ವತನಾಗಿದ್ದಾನೆ. ಶರೀರ ನಾಶವಾದರೂ ಜೀವಿಯ ನಾಶವಾಗುವುದಿಲ್ಲ. * ಈ ಸ್ಥೂಲ ದೇಹವಾದರೋ ಪಂಚಭೂತಗಳಿಂದ ಉಂಟಾಗಿದೆ. ಈ ಶರೀರವು ತಮ್ಮ-ತಮ್ಮ ಐದು ಭೂತಗಳಲ್ಲಿ ಸೇರಿಹೋದಾಗ ದೇಹರೂಪದಿಂದ ಇರುವ ಉಪಾಧಿಯು ತಮ್ಮ-ತಮ್ಮ ತತ್ತ್ವಗಳಲ್ಲಿ ಸೇರಿಹೋಗುತ್ತದೆ. ಆದರೆ ಘಟಾಕಾಶವು ಮಹಾಕಾಶದಲ್ಲಿ ಅಖಂಡ ರೂಪವಾಗಿ ಇರುತ್ತದೆ. ಘಟಕ್ಕೆ ಇದ್ದ ಉಪಾಧಿಯು ಕೇವಲ ನಾಶವಾಯಿತು. ಇದರಿಂದ ಮಹಾಕಾಶದಲ್ಲಿ ಯಾವುದೇ ಅಂತರ ಬೀಳುವುದಿಲ್ಲ. ಹಾಗೆಯೇ ದೇಹದ ಉಪಾಧಿಯು ಇಲ್ಲವಾದಾಗಲೂ ಆತ್ಮನು ಪರಮಾತ್ಮನಲ್ಲಿ ಒಂದಾಗಿ ಹೋಗುತ್ತಾನೆ. ॥ ೪೯ ॥

ತದ್ವೈ ಪದಂ ಭಗವತಃ ಪರಮಸ್ಯ ಪುಂಸೋ
ಬ್ರಹ್ಮೇತಿ ಯದ್ವಿದುರಜಸ್ರಸುಖಂ ವಿಶೋಕಮ್ ।
ಸಧ್ರ್ಯಙ್ನಿಯಮ್ಯ ಯತಯೋ ಯಮಕರ್ತಹೇತಿಂ
ಜಹ್ಯುಃ ಸ್ವರಾಡಿವ ನಿಪಾನಖನಿತ್ರಮಿಂದ್ರಃ ॥ ೪೮ ॥

ಸ ಶ್ರೇಯಸಾಮಪಿ ವಿಭುರ್ಭಗವಾನ್ಯತೋಽಸ್ಯ
ಭಾವಸ್ವಭಾವವಿಹಿತಸ್ಯ ಸತಃ ಪ್ರಸಿದ್ಧಿಃ ।
ದೇಹೇ ಸ್ವಧಾತುವಿಗಮೇಽನುವಿಶೀರ್ಯಮಾಣೇ
ವ್ಯೋಮೇವ ತತ್ರ ಪುರುಷೋ ನ ವಿಶೀರ್ಯತೇಽಜಃ ॥ ೪೯ ॥

* ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ । ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ (ಶ್ರೀಮದ್ಭಗವದ್ಗೀತೆ ೨/೧೮)

ಸೋಽಯಂ ತೇಽಭಿಹಿತಸ್ತಾತ ಭಗವಾನ್ವಿಶ್ವಭಾವನಃ ।
ಸಮಾಸೇನ ಹರೇರ್ನಾನ್ಯದನ್ಯಸ್ಮಾತ್ ಸದಸಚ್ಚ ಯತ್ ॥ ೫೦ ॥

ಇದಂ ಭಾಗವತಂ ನಾಮ ಯನ್ಮೇ ಭಗವತೋದಿತಮ್ ।
ಸಂಗ್ರಹೋಽಯಂ ವಿಭೂತೀನಾಂ ತ್ವಮೇತದ್ವಿಪುಲೀಕುರು ॥ ೫೧ ॥

ಯಥಾ ಹರೌ ಭಗವತಿ ನೃಣಾಂ ಭಕ್ತಿರ್ಭವಿಷ್ಯತಿ ।
ಸರ್ವಾತ್ಮನ್ಯಖಿಲಾಧಾರೇ ಇತಿ ಸಂಕಲ್ಪ್ಯ ವರ್ಣಯ ॥ ೫೨ ॥

ಮಾಯಾಂ ವರ್ಣಯತೋಽಮುಷ್ಯ ಈಶ್ವರಸ್ಯಾನುಮೋದತಃ ।
ಶೃಣ್ವತಃ ಶ್ರದ್ಧಯಾ ನಿತ್ಯಂ ಮಾಯಯಾಽಽತ್ಮಾ ನ ಮುಹ್ಯತಿ ॥ ೫೩ ॥

ಮಗೂ ನಾರದನೇ! ಸಂಕಲ್ಪ ಮಾತ್ರದಿಂದಲೇ ವಿಶ್ವವನ್ನು ರಚಿಸುವ ಭಗವಂತನಾದ ಶ್ರೀಹರಿಯನ್ನು ಕುರಿತು ಹೀಗೆ ಸಂಕ್ಷೇಪವಾಗಿ ನಾನು ವರ್ಣಿಸಿರುವೆನು. ಒಟ್ಟಿನಲ್ಲಿ ಹೇಳುವುದಾದರೆ ಸತ್ ಆಗಲೀ, ಅಸತ್ ಆಗಲೀ, ಕಾರ್ಯ-ಕಾರಣವಾಗಿರಲೀ ಯಾವುದೂ ಆತನಿಂದ ಭಿನ್ನವಾಗಿಲ್ಲ. ಆದರೂ ಅವನು ಅವುಗಳಿಂದ ಪ್ರತ್ಯೇಕವಾಗಿಯೇ ಇದ್ದಾನೆ. ॥ ೫೦ ॥ ಭಗವಂತನು ನನಗೆ ಉಪದೇಶಿಸಿದ ಆ ಭಾಗವತವು ಇದೇ ಆಗಿದೆ. ಇದರಲ್ಲಿ ಭಗವಂತನ ವಿಭೂತಿಗಳ ಸಂಕ್ಷಿಪ್ತ ವರ್ಣನೆಯಿದೆ. ನೀನು ಇದನ್ನು ವಿಸ್ತಾರಗೊಳಿಸು. ॥ ೫೧ ॥ ಸರ್ವಾತ್ಮಕನೂ, ಸರ್ವಕ್ಕೂ ಆಧಾರನೂ ಆಗಿರುವ ಭಗವಂತನಾದ ಶ್ರೀಹರಿಯಲ್ಲಿ ಮನುಷ್ಯರಿಗೆ ಭಕ್ತಿಯುಂಟಾಗುವಂತೆ ಸಂಕಲ್ಪಮಾಡಿ ಅದನ್ನು ವರ್ಣಿಸು. ॥ ೫೨ ॥ ಭಗವಂತನ ಅಚಿಂತ್ಯವಾದ ಈ ಮಾಯಾಶಕ್ತಿಯನ್ನು ವರ್ಣಿಸುವವನೂ, ಇತರರು ವರ್ಣಿಸುವಾಗ ಅದನ್ನು ಶ್ರವಣಿಸಿ, ಅನುಮೋದನ ಮಾಡುವವನೂ ಆದ ಪುರುಷನ ಚಿತ್ತವು ಎಂದಿಗೂ ಮಾಯೆಯಿಂದ ಮೋಹಗೊಳ್ಳುವುದಿಲ್ಲ. ॥ ೫೩ ॥

*ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ಬ್ರಹ್ಮನಾರದಸಂವಾದೇ ಸಪ್ತಮೋಽಧ್ಯಾಯಃ ॥ ೭ ॥

# ಎಂಟನೆಯ ಅಧ್ಯಾಯ

## ಪರೀಕ್ಷಿದ್ರಾಜನು ಮಾಡಿದ ವಿವಿಧ ಪ್ರಶ್ನೆಗಳು

*ರಾಜೋವಾಚ*

ಬ್ರಹ್ಮಣಾ ಚೋದಿತೋ ಬ್ರಹ್ಮನ್ಗುಣಾಖ್ಯಾನೇಽಗುಣಸ್ಯ ಚ ।
ಯಸ್ಮೈ ಯಸ್ಮೈ ಯಥಾ ಪ್ರಾಹ ನಾರದೋ ದೇವದರ್ಶನಃ ॥ ೧ ॥

ಏತದ್ವೇದಿತುಮಿಚ್ಛಾಮಿ ತತ್ತ್ವಂ ವೇದವಿದಾಂ ವರ ।
ಹರೇರದ್ಭುತವೀರ್ಯಸ್ಯ ಕಥಾ ಲೋಕಸುಮಂಗಲಾಃ ॥ ೨ ॥

ಕಥಯಸ್ವ ಮಹಾಭಾಗ ಯಥಾಹಮಖಿಲಾತ್ಮನಿ ।
ಕೃಷ್ಣೇ ನಿವೇಶ್ಯ ನಿಃಸಂಗಂ ಮನಸ್ತ್ಯಕ್ಷ್ಯೇ ಕಲೇವರಮ್ ॥ ೩ ॥

ಶೃಣ್ವತಃ ಶ್ರದ್ಧಯಾ ನಿತ್ಯಂ ಗೃಣತಶ್ಚ ಸ್ವಚೇಷ್ಟಿತಮ್ ।
ಕಾಲೇನ ನಾತಿದೀರ್ಘೇಣ ಭಗವಾನ್ವಿಶತೇ ಹೃದಿ ॥ ೪ ॥

ಪರೀಕ್ಷಿದ್ರಾಜನು ಹೇಳಿದನು – ಬ್ರಾಹ್ಮಣೋತ್ತಮರೇ! ದೇವಋಷಿ ನಾರದರು ದೇವಸಾಕ್ಷಾತ್ಕಾರ ಸಂಪನ್ನರು. ಅವರ ದರ್ಶನ ದೇವರ ದರ್ಶನಕ್ಕೆ ಸಮವಾದುದು. ಆ ಮಹಾತ್ಮರಿಗೆ ಬ್ರಹ್ಮದೇವರು – "ವತ್ಸಾ! ನಾರದಾ! ಗುಣಾತೀತನಾದ ಪರಮಾತ್ಮನ ಕಲ್ಯಾಣಗುಣಗಳನ್ನು ಲೋಕಕ್ಕೆ ವರ್ಣನೆಮಾಡು" ಎಂದು ಪ್ರೇರಣೆ ಮಾಡಿದುದಾಗಿ ಹೇಳಿದಿರಿ. ॥ ೧ ॥ ಅವರು – ಯಾರಿಗೆ ಹಾಗೂ ಯಾವ ರೂಪದಲ್ಲಿ ಉಪದೇಶ ಮಾಡಿದರು? ಎಂಬುದನ್ನು ತಿಳಿಸಿರಿ. ಅದ್ಭುತವಾದ ಶಕ್ತಿಗಳಿಗೆ ಆಶ್ರಯನಾಗಿರುವ ಭಗವಂತನ ಕಥೆಗಳು ಲೋಕಕ್ಕೆ ಪರಮಮಂಗಳವನ್ನು ಉಂಟು ಮಾಡುವವು. ಆತನ ವಿಷಯವಾಗಿಯೂ ತಿಳಿಸಿರಿ. ॥ ೨ ॥ ಶುಕಮಹಾತ್ಮರೇ! ತಾವು ವೇದಜ್ಞರಲ್ಲಿಯೂ ಶ್ರೇಷ್ಠರಾದವರು. ಸಂಗರಹಿತವಾದ ನನ್ನ ಮನಸ್ಸು ಸರ್ವಾತ್ಮಕವಾದ ಶ್ರೀಕೃಷ್ಣನಲ್ಲಿ ತನ್ಮಯವಾಗಿಸಿ ಶರೀರವನ್ನು ಬಿಡಬೇಕೆಂದಿರುವ ನನಗೆ ಭಗವದ್ವಿಷಯವನ್ನು ವರ್ಣಿಸಿರಿ. ॥ ೩ ॥ ಭಗವಂತನ ದಿವ್ಯಲೀಲೆಗಳನ್ನು ದಿನ-ದಿನವೂ ಶ್ರದ್ಧೆಯಿಂದ ಶ್ರವಣಿಸುವವರ, ಸಂಕೀರ್ತನೆ ಮಾಡುವವರ ಹೃದಯದಲ್ಲಿ ಅವನು ಶೀಘ್ರವಾಗಿ ಪ್ರವೇಶಿಸಿ ಅಲ್ಲೇ ಪ್ರಗಟನಾಗುತ್ತಾನೆ. ॥ ೪ ॥ ಭಗವಾನ್ ಶ್ರೀಕೃಷ್ಣನು ಕಿವಿಗಳ ರಂಧ್ರಗಳ ಮೂಲಕ ಭಕ್ತರ ಭಾವಮಯ ಹೃದಯಕಮಲವನ್ನು

ಪ್ರವಿಷ್ಟಃ ಕರ್ಣರಂಧ್ರೇಣ ಸ್ವಾನಾಂ ಭಾವಸರೋರುಹಮ್ ।
ಧುನೋತಿ ಶಮಲಂ ಕೃಷ್ಣಃ ಸಲಿಲಸ್ಯ ಯಥಾ ಶರತ್ ॥ ೫ ॥

ಧೌತಾತ್ಮಾ ಪುರುಷಃ ಕೃಷ್ಣಪಾದಮೂಲಂ ನ ಮುಂಚತಿ ।
ಮುಕ್ತಸರ್ವಪರಿಕ್ಲೇಶಃ ಪಾಂಥಃ ಸ್ವಶರಣಂ ಯಥಾ ॥ ೬ ॥

ಯದಧಾತುಮತೋ ಬ್ರಹ್ಮನ್ ದೇಹಾರಂಭೋಽಸ್ಯ ಧಾತುಭಿಃ ।
ಯದೃಚ್ಛಯಾ ಹೇತುನಾ ವಾ ಭವಂತೋ ಜಾನತೇ ಯಥಾ ॥ ೭ ॥

ಆಸೀದ್ ಯದುದರಾತ್ಪದ್ಮಂ ಲೋಕಸಂಸ್ಥಾನಲಕ್ಷಣಮ್ ।
ಯಾವಾನಯಂ ವೈ ಪುರುಷ ಇಯತ್ತಾವಯವೈಃ ಪೃಥಕ್ ।
ತಾವಾನಸಾವಿತಿ ಪ್ರೋಕ್ತಃ ಸಂಸ್ಥಾವಯವವಾನಿವ ॥ ೮ ॥

ಅಜಃ ಸೃಜತಿ ಭೂತಾನಿ ಭೂತಾತ್ಮಾ ಯದನುಗ್ರಹಾತ್ ।
ದದೃಶೇ ಯೇನ ತದ್ರೂಪಂ ನಾಭಿಪದ್ಮ ಸಮುದ್ಭವಃ ॥ ೯ ॥

ಸ ಚಾಪಿ ಯತ್ರ ಪುರುಷೋ ವಿಶ್ವಸ್ಥಿತ್ಯುದ್ಭವಾಪ್ಯಯಃ ।
ಮುಕ್ತ್ವಾಽಽತ್ಮಮಾಯಾಂ ಮಾಯೇಶಃ ಶೇತೇ ಸರ್ವಗುಹಾಶಯಃ ॥ ೧೦ ॥

ಪುರುಷಾವಯವೈರ್ಲೋಕಾಃ ಸಪಾಲಾಃ ಪೂರ್ವಕಲ್ಪಿತಾಃ ।
ಲೋಕೈರಮುಷ್ಯಾವಯವಾಃ ಸಪಾಲೈರಿತಿ ಶುಶ್ರುಮ ॥ ೧೧ ॥

ಯಾವಾನ್ಕಲ್ಪೋ ವಿಕಲ್ಪೋ ವಾ ಯಥಾ ಕಾಲೋಽನುಮೀಯತೇ ।
ಭೂತಭವ್ಯಭವಚ್ಛಬ್ದ ಆಯುರ್ಮಾನಂ ಚ ಯತ್ ಸತಃ ॥ ೧೨ ॥

ಕಾಲಸ್ಯಾನುಗತಿರ್ಯಾ ತು ಲಕ್ಷ್ಯತೇಽಣ್ವೀ ಬೃಹತ್ಯಪಿ ।
ಯಾವತ್ಯಃ ಕರ್ಮಗತಯೋ ಯಾದೃಶೀರ್ದ್ವಿಜಸತ್ತಮ ॥ ೧೩ ॥

ಪ್ರವೇಶಿಸಿ ಅಲ್ಲಿ ಬೆಳಗುತ್ತಾನೆ. ಶರದೃತುವು ಬಗ್ಗಡವಾದ ನೀರಿನ ಕೆಸರು-ಕೊಳೆಯನ್ನು ಹೋಗಲಾಡಿಸುವಂತೆ ಭಕ್ತರ ಮನಸ್ಸಿನ ಕಶ್ಮಲವನ್ನು ಹೋಗಲಾಡಿಸುತ್ತಾನೆ. ॥ ೫ ॥ ದಾರಿಯಲ್ಲಿ ಒದಗಿದ ಎಲ್ಲ ಕಷ್ಟ-ಕಾರ್ಪಣ್ಯಗಳನ್ನೂ ದಾಟಿ ಮನೆಗೆ ಹಿಂದಿರುಗಿದವನು ಹೇಗೆ ತನ್ನ ಮನೆಯನ್ನು ಬಿಟ್ಟುಹೋಗುವುದಿಲ್ಲವೋ - ಹಾಗೆಯೇ ಭಗವಂತನ ಪ್ರವೇಶದಿಂದ ಹೃದಯಶುದ್ಧಿಯನ್ನು ಪಡೆದ ಸುಕೃತಿಯು ಶ್ರೀಕೃಷ್ಣಪರಮಾತ್ಮನ ಚರಣಕಮಲಗಳನ್ನು ಕ್ಷಣಕಾಲವೂ ತೊರೆಯುವುದಿಲ್ಲ. ॥ ೬ ॥

ಪೂಜ್ಯರೇ! ಜೀವಕ್ಕೆ ಪಂಚಭೂತಗಳ ಸಂಬಂಧವು ಕಿಂಚಿತ್ತೂ ಇಲ್ಲ. ಆದರೂ ಆತನ ಶರೀರವು ಪಂಚ-ಭೂತಗಳಿಂದಲೇ ನಿರ್ಮಿತವಾಗುವುದು. ಇದು ಸ್ವಾಭಾವಿಕವಾಗಿಯೇ ಹೀಗೆ ಆಗುವುದೋ ಅಥವಾ ಯಾವುದಾದರೂ ಕಾರಣಕ್ಕೆ ವಶವಾಗಿ ಹೀಗೆ ಆಗುವುದೋ? ಈ ರಹಸ್ಯವು ತಮಗೆ ತಿಳಿದೇ ಇದೆ. ॥ ೭ ॥ ಭಗವಂತನ ನಾಭಿಯಿಂದ ಒಂದು ಕಮಲವು ಉಂಟಾಯಿತು ಮತ್ತು ಅದರಿಂದ ಲೋಕಗಳ ಸೃಷ್ಟಿಯಾಯಿತು ಎಂದು ತಾವು ಹೇಳಿದಿರಿ. ಈ ಜೀವಿಯು ತನ್ನ ಸೀಮಿತ ಅವಯವಗಳಿಂದ ಪರಿಚ್ಛಿನ್ನವಿರುವಂತೆಯೇ ಪರಮಾತ್ಮನನ್ನೂ ಕೂಡ ಸೀಮಿತ ಅವಯವಗಳಿಂದ ಪರಿಚ್ಛಿನ್ನದಂತೆ ನೀವು ವರ್ಣಿಸಿದಿರಿ. ಇದು ಹೇಗೆ ಹೊಂದುತ್ತದೆ? ॥ ೮ ॥ ಯಾರ ಕೃಪೆಯಿಂದ ಸರ್ವಭೂತಮಯ ಬ್ರಹ್ಮದೇವರು ಪ್ರಾಣಿಗಳನ್ನು ಸೃಷ್ಟಿಸುತ್ತಾರೋ, ಯಾರ ನಾಭಿಕಮಲದಿಂದಲೇ ಹುಟ್ಟಿದರೋ ಆತನ ಕೃಪೆಯಿಂದಲೇ ಬ್ರಹ್ಮದೇವರಿಗೆ ಆತನ ರೂಪವನ್ನು ಸಂದರ್ಶಿಸಲು ಸಾಧ್ಯವಾಯಿತೇ? ಅಂತಹ ವಿಶ್ವದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನೂ, ಸರ್ವಾಂತರ್ಯಾಮಿಯೂ, ಮಾಯೆಗೆ ಅಧಿಪತಿಯೂ ಆದ ಪರಮಪುರುಷ ಪರಮಾತ್ಮನೂ ಕೂಡ ತನ್ನ ಮಾಯೆಯನ್ನು ತ್ಯಜಿಸಿ ಯಾವುದರಲ್ಲಿ, ಯಾವ ರೂಪದಿಂದ ಮಲಗುತ್ತಾನೆ? ॥ ೯-೧೦ ॥ ವಿರಾಟ್‌ಪುರುಷನ ಅಂಗಗಳಿಂದ ಲೋಕಗಳೂ ಮತ್ತು ಲೋಕಪಾಲರೂ ಉಂಟಾದರೆಂದು ಮೊದಲು ಹೇಳಿದಿರಿ, ಅನಂತರ ಆತನ ಅಂಗಗಳನ್ನು ಲೋಕಗಳ ಮತ್ತು ಲೋಕಪಾಲಕರ ರೂಪದಲ್ಲಿ ಕಲ್ಪಿಸಿಕೊಳ್ಳಬೇಕೆಂದೂ ಉಪದೇಶಿಸಿದಿರಿ. ಇವೆರಡೂ ಮಾತುಗಳ ತಾತ್ಪರ್ಯವೇನು? ॥ ೧೧ ॥

ಮಹಾಕಲ್ಪಗಳು ಮತ್ತು ಅವುಗಳೊಳಗಿನ ಅವಾಂತರ ಕಲ್ಪಗಳು ಎಷ್ಟು? ಭೂತ, ಭವಿಷ್ಯ, ವರ್ತಮಾನ ಕಾಲಗಳ ಅನುಮಾನ ಹೇಗೆ ಮಾಡಲಾಗುತ್ತದೆ? ಸ್ಥೂಲ ದೇಹಾಭಿಮಾನಿಗಳಾದ ಜೀವರ ಆಯುಸ್ಸಿನ ಅಳತೆ ಎಷ್ಟು? ॥ ೧೨ ॥ ಬ್ರಾಹ್ಮಣಶ್ರೇಷ್ಠರೇ! ಕಾಲದ ಸೂಕ್ಷ್ಮಗತಿಗಳಾದ ತ್ರುಟಿ ಮುಂತಾದುವನ್ನೂ, ಸ್ಥೂಲಗತಿಗಳಾದ ವರ್ಷವೇ ಮುಂತಾದವುಗಳನ್ನೂ ತಿಳಿಯುವುದು ಹೇಗೆ? ಬಗೆ-ಬಗೆಯಾದ ಕರ್ಮಗಳಿಗೆ ತಕ್ಕಂತೆ ಜೀವಿಗಳಿಗೆ ಎಷ್ಟು ಗತಿಗಳು ಮತ್ತು ಎಂತಹ ಗತಿಗಳೂ ಆಗುತ್ತವೆ? ॥ ೧೩ ॥ ದೇವತೆಗಳು, ಮನುಷ್ಯರು ಮುಂತಾದ ಯೋನಿಗಳು, ಸತ್ತ್ವ, ರಜ, ತಮೋ

ಯಸ್ಮಿನ್ಕರ್ಮಸಮಾವಾಯೋ ಯಥಾ ಯೇನೋಪಗೃಹ್ಯತೇ ।
ಗುಣಾನಾಂ ಗುಣಿನಾಂ ಚೈವ ಪರಿಣಾಮಮಭೀಪ್ಸತಾಮ್ ॥ ೧೪ ॥

ಭೂಪಾತಾಲಕಕುಬ್ವ್ಯೋಮಗ್ರಹನಕ್ಷತ್ರಭೂಭೃತಾಮ್ ।
ಸರಿತ್ಸಮುದ್ರದ್ವೀಪಾನಾಂ ಸಂಭವಶ್ಚೈತದೋಕಸಾಮ್ ॥ ೧೫ ॥

ಪ್ರಮಾಣಮಂಡಕೋಶಸ್ಯ ಬಾಹ್ಯಾಭ್ಯಂತರಭೇದತಃ ।
ಮಹತಾಂ ಚಾನುಚರಿತಂ ವರ್ಣಾಶ್ರಮವಿನಿಶ್ಚಯಃ ॥ ೧೬ ॥

ಯುಗಾನಿ ಯುಗಮಾನಂ ಚ ಧರ್ಮೋ ಯಶ್ಚ ಯುಗೇ ಯುಗೇ ।
ಅವತಾರಾನುಚರಿತಂ ಯದಾಶ್ಚರ್ಯತಮಂ ಹರೇಃ ॥ ೧೭ ॥

ನೃಣಾಂ ಸಾಧಾರಣೋ ಧರ್ಮಃ ಸವಿಶೇಷಶ್ಚ ಯಾದೃಶಃ ।
ಶ್ರೇಣೀನಾಂ ರಾಜರ್ಷೀಣಾಂ ಚ ಧರ್ಮಃ ಕೃಚ್ಛ್ರೇಷು ಜೀವತಾಮ್ ॥ ೧೮ ॥

ತತ್ತ್ವಾನಾಂ ಪರಿಸಂಖ್ಯಾನಂ ಲಕ್ಷಣಂ ಹೇತುಲಕ್ಷಣಮ್ ।
ಪುರುಷಾರಾಧನವಿಧಿರ್ಯೋಗಸ್ಯಾಧ್ಯಾತ್ಮಿಕಸ್ಯ ಚ ॥ ೧೯ ॥

ಯೋಗೇಶ್ವರೈಶ್ವರ್ಯಗತಿರ್ಲಿಂಗಭಂಗಸ್ತು ಯೋಗಿನಾಮ್ ।
ವೇದೋಪವೇದಧರ್ಮಾಣಾಮಿತಿಹಾಸಪುರಾಣಯೋಃ ॥ ೨೦ ॥

ಸಂಪ್ಲವಃ ಸರ್ವಭೂತಾನಾಂ ವಿಕ್ರಮಃ ಪ್ರತಿಸಂಕ್ರಮಃ ।
ಇಷ್ಟಾಪೂರ್ತಸ್ಯ ಕಾಮ್ಯಾನಾಂ ತ್ರಿವರ್ಗಸ್ಯ ಚ ಯೋ ವಿಧಿಃ ॥ ೨೧ ॥

ಯಶ್ಚಾನುಶಾಯಿನಾಂ ಸರ್ಗಃ ಪಾಖಂಡಸ್ಯ ಚ ಸಂಭವಃ ।
ಆತ್ಮನೋ ಬಂಧಮೋಕ್ಷೌ ಚ ವ್ಯವಸ್ಥಾನಂ ಸ್ವರೂಪತಃ ॥ ೨೨ ॥

ಯಥಾಽಽತ್ಮತಂತ್ರೋ ಭಗವಾನ್ವಿಕ್ರೀಡತ್ಯಾತ್ಮಮಾಯಯಾ ।
ವಿಸೃಜ್ಯ ವಾ ಯಥಾ ಮಾಯಾಮುದಾಸ್ತೇ ಸಾಕ್ಷಿವದ್ವಿಭುಃ ॥ ೨೩ ॥

ಸರ್ವಮೇತಚ್ಚ ಭಗವನ್ ಪೃಚ್ಛತೋ ಮೇಽನುಪೂರ್ವಶಃ ।
ತತ್ತ್ವತೋಽರ್ಹಸ್ಯುದಾಹರ್ತುಂ ಪ್ರಪನ್ನಾಯ ಮಹಾಮುನೇ ॥ ೨೪ ॥

ಗುಣಗಳ ಫಲವಾಗಿಯೇ ದೊರೆಯುತ್ತವೆ. ಅವುಗಳನ್ನು ಬಯಸುವ ಜೀವಿಗಳು ಯಾವ-ಯಾವ ಯೋನಿಯನ್ನು ಪಡೆಯಲಿಕ್ಕಾಗಿ ಯಾವ-ಯಾವ ಪ್ರಕಾರದಿಂದ ಯಾವ-ಯಾವ ಕರ್ಮಗಳನ್ನು ಸ್ವೀಕರಿಸುತ್ತಾರೆ ? ॥ ೧೪ ॥ ಪೃಥ್ವಿ, ಪಾತಾಳ, ದಿಕ್ಕುಗಳು, ಆಕಾಶ, ಗ್ರಹ, ನಕ್ಷತ್ರ, ಪರ್ವತ, ನದೀ, ಸಮುದ್ರ, ದ್ವೀಪಗಳು ಮತ್ತು ಅವುಗಳಲ್ಲಿ ವಾಸಿಸುವ ಜೀವರ ಉತ್ಪತ್ತಿಯು ಹೇಗಾಗುತ್ತದೆ ? ॥ ೧೫ ॥ ಬ್ರಹ್ಮಾಂಡದ ಪರಿಮಾಣವೇನು ? ಅದರ ಒಳಗಿನ-ಹೊರಗಿನ ಪರಿಮಾಣವೆಷ್ಟು? ಜೊತೆಗೆ ಮಹಾಪುರುಷರ ಚರಿತ್ರೆ, ವರ್ಣಾಶ್ರಮಗಳ ಭೇದಗಳೂ ಮತ್ತು ಅವುಗಳ ಧರ್ಮವನ್ನು ನಿರೂಪಣೆ ಮಾಡಿರಿ. ॥ ೧೬ ॥ ಯುಗಗಳ ಭೇದ, ಅವುಗಳ ಪರಿಮಾಣ, ಅವುಗಳ ಬೇರೆ-ಬೇರೆ ಧರ್ಮಗಳು, ಹಾಗೂ ಭಗವಂತನ ನಾನಾ ಅವತಾರಗಳ ಪರಮಾಶ್ಚರ್ಯಮಯ ಚರಿತ್ರೆಗಳನ್ನು ಹೇಳಿರಿ. ॥ ೧೭ ॥ ಮನುಷ್ಯರ ಸಾಧಾರಣ ಮತ್ತು ವಿಶೇಷ ಧರ್ಮಗಳು ಯಾವು-ಯಾವವು ? ಬೇರೆ-ಬೇರೆ ವ್ಯವಸಾಯವುಳ್ಳ ಜನರ, ರಾಜರ್ಷಿಗಳ ಮತ್ತು ವಿಪತ್ತುಗಳಿಗೆ ಸಿಲುಕಿದ ಜನರ ಧರ್ಮಗಳನ್ನೂ ಉಪದೇಶಿಸಿರಿ. ॥ ೧೮ ॥ ತತ್ತ್ವಗಳ ಸಂಖ್ಯೆ ಎಷ್ಟು? ಅವುಗಳ ಸ್ವರೂಪ ಹಾಗೂ ಲಕ್ಷಣಗಳಾವವು? ಭಗವಂತನ ಆರಾಧನೆಯ ಮತ್ತು ಆಧ್ಯಾತ್ಮಯೋಗದ ವಿಧಾನವೇನು ? ॥ ೧೯ ॥ ಯೋಗೇಶ್ವರರಿಗೆ ಯಾವ-ಯಾವ ಸಿದ್ಧಿಗಳು ದೊರಕುತ್ತವೆ ? ಅವರಿಗೆ ಕಡೆಯಲ್ಲಿ ಯಾವ ಗತಿ ಸಿಗುತ್ತದೆ? ಯೋಗಿಗಳ ಲಿಂಗ ಶರೀರಗಳ ಭಂಗ ಹೇಗೆ ಆಗುತ್ತದೆ? ವೇದ, ಉಪವೇದ, ಧರ್ಮಶಾಸ್ತ್ರ, ಇತಿಹಾಸ ಮತ್ತು ಪುರಾಣಗಳ ಸ್ವರೂಪ ಹಾಗೂ ತಾತ್ಪರ್ಯವೇನು ? ॥ ೨೦ ॥ ಸಮಸ್ತ ಪ್ರಾಣಿಗಳ ಉತ್ಪತ್ತಿ, ಸ್ಥಿತಿ, ಪ್ರಳಯ ಹೇಗಾಗುತ್ತದೆ ? ಯಜ್ಞಯಾಗಾದಿ ವೈದಿಕ ಇಷ್ಟಕರ್ಮಗಳೂ, ಬಾವಿ ತೋಡಿಸುವುದೇ ಮುಂತಾದ ಪೂರ್ತಕರ್ಮಗಳೂ, ಕಾಮ್ಯಕರ್ಮಗಳೂ ಹಾಗೂ ಧರ್ಮ, ಅರ್ಥ, ಕಾಮ ಇವುಗಳನ್ನು ಸಾಧಿಸುವ ವಿಧಿಯೇನು ? ॥ ೨೧ ॥ ಪ್ರಳಯ ಕಾಲದ ಪ್ರಕೃತಿಯಲ್ಲಿ ಲೀನವಾಗಿದ್ದ ಜೀವರ ಉತ್ಪತ್ತಿ ಹೇಗಾಗುತ್ತದೆ ? ಪಾಷಂಡದ ಉತ್ಪತ್ತಿ ಹೇಗಾಗುತ್ತದೆ ? ಆತ್ಮನ ಬಂಧ-ಮೋಕ್ಷಗಳ ಸ್ವರೂಪವೇನು ? ಅವನು ತನ್ನ ಸ್ವರೂಪದಲ್ಲಿ ಹೇಗೆ ನೆಲೆಗೊಳ್ಳುವನು ? ॥ ೨೨ ॥ ಭಗವಂತನಾದರೋ ಪರಮ ಸ್ವತಂತ್ರನಾಗಿದ್ದಾನೆ. ಅವನು ತನ್ನ ಮಾಯೆಯೊಡನೆ ಹೇಗೆ ಕ್ರೀಡಿಸುತ್ತಾನೆ ಮತ್ತು ಅದನ್ನು ಬಿಟ್ಟು ಸಾಕ್ಷಿಯಂತೆ ಉದಾಸೀನ ಹೇಗಾಗುತ್ತಾನೆ ? ॥ ೨೩ ॥ ಪೂಜ್ಯರಾದ ಮಹಾಮುನಿಗಳೇ ! ಶರಣಾಗತನಾಗಿರುವ ನಾನು ತಮ್ಮಲ್ಲಿ ಅರಿಕೆಮಾಡಿಕೊಂಡಿರುವ ಈ ಎಲ್ಲ ಪ್ರಶ್ನೆಗಳಿಗೂ ಕ್ರಮವಾಗಿ ಉತ್ತರಿಸುವ ಕೃಪೆಮಾಡಬೇಕು. ತಾತ್ತ್ವಿಕವಾಗಿ ಅವುಗಳನ್ನು ನಿರೂಪಣೆ ಮಾಡಿರಿ. ॥ ೨೪ ॥ ಈ ವಿಷಯದಲ್ಲಿ ತಾವಾದರೋ ಸ್ವಯಂಭುವಾದ ಬ್ರಹ್ಮದೇವರಂತೆ ಪರಮಪ್ರಮಾಣರಾಗಿರುವಿರಿ. ಇತರರು ತಮ್ಮ ಪೂರ್ವಪರಂಪರೆಯಿಂದ ಕೇಳಿ ಬಂದಂತೆ

ಅತ್ರ ಪ್ರಮಾಣಂ ಹಿ ಭವಾನ್ಪರಮೇಷ್ಠೀ ಯಥಾಽಽತ್ಮ ಭೂಃ ।
ಪರೇ ಚೇಹಾನುತಿಷ್ಠಂತಿ ಪೂರ್ವೇಷಾಂ ಪೂರ್ವಜೈಃ ಕೃತಮ್ ॥ ೨೫ ॥

ನ ಮೇಽಸವಃ ಪರಾಯಂತಿ ಬ್ರಹ್ಮನ್ನನಶನಾದಮೀ ।
ಪಿಬತೋಽಚ್ಯುತಪೀಯೂಷಮನ್ಯತ್ರ ಕುಪಿತಾದ್ದ್ವಿಜಾತ್ ॥ ೨೬ ॥

*ಸೂತ ಉವಾಚ*

ಸ ಉಪಾಮಂತ್ರಿತೋ ರಾಜ್ಞಾ ಕಥಾಯಾಮಿತಿ ಸತ್ಪತೇಃ ।
ಬ್ರಹ್ಮರಾತೋ ಭೃಶಂ ಪ್ರೀತೋ ವಿಷ್ಣುರಾತೇನ ಸಂಸದಿ ॥ ೨೭ ॥

ಪ್ರಾಹ ಭಾಗವತಂ ನಾಮ ಪುರಾಣಂ ಬ್ರಹ್ಮಸಮ್ಮಿತಮ್ ।
ಬ್ರಹ್ಮಣೇ ಭಗವತ್ಪ್ರೋಕ್ತಂ ಬ್ರಹ್ಮಕಲ್ಪ ಉಪಾಗತೇ ॥ ೨೮ ॥

ಯದ್ಯತ್ಪರೀಕ್ಷಿದೃಷಭಃ ಪಾಂಡೂನಾಮನುಪೃಚ್ಛತಿ ।
ಆನುಪೂರ್ವ್ಯೇಣ ತತ್ಸರ್ವಮಾಖ್ಯಾತುಮುಪಚಕ್ರಮೇ ॥ ೨೯ ॥

ಅನುಷ್ಠಾನ ಮಾಡುವರು. ॥ ೨೫ ॥ ಪರಮ ಪೂಜ್ಯರೇ! ನನ್ನ ಹಸಿವು-ಬಾಯಾರಿಕೆಗಳ ಬಗ್ಗೆ ಚಿಂತಿಸದಿರಿ. ಕ್ರುದ್ಧನಾದ ಬ್ರಾಹ್ಮಣನ ಶಾಪವಲ್ಲದೆ ನನ್ನ ಪ್ರಾಣಗಳು ಹೋಗಲಾರವು. ಏಕೆಂದರೆ, ನಾನು ತಮ್ಮ ಮುಖಾರವಿಂದದಿಂದ ಸೂಸುತ್ತಿರುವ ಭಗವಂತನ ಅಮೃತಮಯ ಲೀಲಾಕಥೆಗಳನ್ನು ಪಾನ ಮಾಡುತ್ತಿದ್ದೇನೆ. ॥ ೨೬ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳೇ! ವಿಷ್ಣುರಾತ ಪರೀಕ್ಷಿದ್ರಾಜನು ಸಂತ-ಸತ್ಪುರುಷರ ಸಭೆಯಲ್ಲಿ ಭಗವಂತನ ಲೀಲಾಕಥೆಯನ್ನು ಕೇಳಲು ಹೀಗೆ ಪ್ರಾರ್ಥಿಸಿದಾಗ, ಬ್ರಹ್ಮರಾತ ಶ್ರೀಶುಕಮಹಾಮುನಿಗಳಿಗೆ ಬಹಳ ಸಂತೋಷವಾಯಿತು. ॥ ೨೭ ॥ ಅವರು ಅವನಿಗೆ ಬ್ರಹ್ಮಕಲ್ಪದ ಪ್ರಾರಂಭದಲ್ಲಿ ಸ್ವಯಂ ಭಗವಂತನೇ ಬ್ರಹ್ಮದೇವರಿಗೆ ಕರುಣಿಸಿದ್ದ ವೇದತುಲ್ಯವಾದ ಶ್ರೀಮದ್ಭಾಗವತಮಹಾಪುರಾಣವನ್ನು ಹೇಳಿದರು. ॥ ೨೮ ॥

ಪಾಂಡವಕುಲತಿಲಕನಾದ ಪರೀಕ್ಷಿತನು ಯಾವ-ಯಾವ ಪ್ರಶ್ನೆಗಳನ್ನು ತಮ್ಮ ಮುಂದೆ ಇಟ್ಟಿದ್ದನೋ ಅವೆಲ್ಲವುಗಳಿಗೆ ಶ್ರೀಶುಕಮುನಿಗಳು ಕ್ರಮವಾಗಿ ಉತ್ತರಿಸತೊಡಗಿದರು. ॥ ೨೯ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ಪ್ರಶ್ನವಿಧಿರ್ನಾಮಾಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಬ್ರಹ್ಮದೇವರು ಭಗವದ್ಧಾಮವನ್ನು ದರ್ಶಿಸಿದುದು, ಅವರಿಗೆ ಭಗವಂತನಿಂದ ಚತುಃಶ್ಲೋಕೀ ಭಾಗವತದ ಉಪದೇಶ

*ಶ್ರೀಶುಕ ಉವಾಚ*

ಆತ್ಮಮಾಯಾಮೃತೇ ರಾಜನ್ ಪರಸ್ಯಾನುಭವಾತ್ಮನಃ ।
ನ ಘಟೇತಾರ್ಥಸಂಬಂಧಃ ಸ್ವಪ್ನದ್ರಷ್ಟುರಿವಾಂಜಸಾ ॥ ೧ ॥

ಬಹುರೂಪ ಇವಾಭಾತಿ ಮಾಯಯಾ ಬಹುರೂಪಯಾ ।
ರಮಮಾಣೋ ಗುಣೇಷ್ವಸ್ಯಾ ಮಮಾಹಮಿತಿ ಮನ್ಯತೇ ॥ ೨ ॥

ಯರ್ಹಿ ವಾವ ಮಹಿಮ್ನಿ ಸ್ವೇ ಪರಸ್ಮಿನ್ಕಾಲಮಾಯಯೋಃ ।
ರಮೇತ ಗತಸಮ್ಮೋಹಸ್ತ್ಯಕ್ತ್ವೋದಾಸ್ತೇ ತದೋಭಯಮ್ ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರಾ! ಸ್ವಪ್ನದಲ್ಲಿ ನೋಡಲಾಗುವ ಪದಾರ್ಥಗಳೊಂದಿಗೆ ಅದನ್ನು ನೋಡುವವನಿಗೆ ಯಾವ ಸಂಬಂಧವೂ ಇರುವುದಿಲ್ಲ. ಹಾಗೆಯೇ ದೇಹಾತೀತನಾಗಿ ಅನುಭವಸ್ವರೂಪನಾದ ಆತ್ಮನಿಗೆ ದೃಶ್ಯ ಪದಾರ್ಥಗಳೊಡನೆ ಯಾವ ಸಂಬಂಧವೂ ಇರುವುದಿಲ್ಲ. ಮಾಯೆಯ ಕಾರಣದಿಂದಲೇ ಸಂಬಂಧವಿರುವಂತೆ ಅನಿಸುತ್ತದೆ. ॥ ೧ ॥ ಮಾಯೆಯು ಬಹುರೂಪವುಳ್ಳದ್ದು. ಅದರಿಂದ ಆತ್ಮನು ವಿವಿಧ ರೂಪಗಳುಳ್ಳವನಂತೆ ಕಂಡುಬರುತ್ತಾನೆ. ಮಾಯಾ ಗುಣಗಳಲ್ಲಿ ರಮಿಸತೊಡಗಿದಾಗ 'ಇದು ನಾನು, ಇದು ನನ್ನದು' ಹೀಗೆ ತಿಳಿಯತೊಡಗುತ್ತಾನೆ. ॥ ೨ ॥ ವಾಸ್ತವವಾಗಿ ಜೀವಿಯ ಸ್ವರೂಪವು ನಿರ್ಗುಣ-ನಿರಾಕಾರವಾಗಿದೆ. (ಸ್ಫಟಿಕ ಮಣಿಯು ಪೂರ್ಣ ಶುಭ್ರವಾಗಿದ್ದು ಅದರ ಬಳಿಯಲ್ಲಿ ಇಟ್ಟ ವಸ್ತುವಿನ ಬಣ್ಣ ಅದರಲ್ಲಿ ಕಂಡುಬರುತ್ತದೆ. ಹಾಗೆಯೇ ಜೀವನು ತನ್ನ ಮಹಿಮೆಯಲ್ಲಿ

ಆತ್ಮತತ್ತ್ವವಿಶುದ್ಧ್ಯರ್ಥಂ ಯದಾಹ ಭಗವಾನೃತಮ್ ।
ಬ್ರಹ್ಮಣೇ ದರ್ಶಯನ್ ರೂಪಮವ್ಯಲೀಕವ್ರತಾದೃತಃ
॥ ೪ ॥

ಸ ಆದಿದೇವೋ ಜಗತಾಂ ಪರೋ ಗುರುಃ
ಸ್ವಧಿಷ್ಣ್ಯಮಾಸ್ಥಾಯ ಸಿಸೃಕ್ಷಯೈಕ್ಷತ ।
ತಾಂ ನಾಧ್ಯಗಚ್ಛದ್ದೃಶಮತ್ರಸಮ್ಮತಾಂ
ಪ್ರಪಂಚನಿರ್ಮಾಣವಿಧಿರ್ಯಯಾ ಭವೇತ್ ॥ ೫ ॥

ಸ ಚಿಂತಯನ್ ದ್ವ್ಯಕ್ಷರಮೇಕದಾಂಭ-
ಸ್ಯುಪಾಶೃಣೋದ್ದ್ವಿರ್ಗದಿತಂ ವಚೋ ವಿಭುಃ ।
ಸ್ಪರ್ಶೇಷು ಯತ್ ಷೋಡಶಮೇಕವಿಂಶಂ
ನಿಷ್ಕಿಂಚನಾನಾಂ ನೃಪ ಯದ್ಧನಂ ವಿದುಃ ॥ ೬ ॥

ನಿಶಮ್ಯ ತದ್ವಕ್ತೃದಿದೃಕ್ಷಯಾ ದಿಶೋ
ವಿಲೋಕ್ಯ ತತ್ರಾನ್ಯದಪಶ್ಯಮಾನಃ ।
ಸ್ವಧಿಷ್ಣ್ಯಮಾಸ್ಥಾಯ ವಿಮೃಶ್ಯ ತದ್ಧಿತಂ
ತಪಸ್ಯುಪಾದಿಷ್ಟ ಇವಾದಧೇ ಮನಃ ॥ ೭ ॥

ದಿವ್ಯಂ ಸಹಸ್ರಾಬ್ದಮಮೋಘದರ್ಶನೋ
ಜಿತಾನಿಲಾತ್ಮಾ ವಿಜಿತೋಭಯೇಂದ್ರಿಯಃ ।
ಅತಪ್ಯತ ಸ್ಮಾಖಿಲಲೋಕತಾಪನಂ
ತಪಸ್ತಪೀಯಾಂಸ್ತಪತಾಂ ಸಮಾಹಿತಃ ॥ ೮ ॥

ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ
ಸಂದರ್ಶಯಾಮಾಸ ಪರಂ ನ ಯತ್ಪರಮ್ ।
ವ್ಯಪೇತಸಂಕ್ಲೇಶವಿಮೋಹಸಾಧ್ವಸಂ
ಸ್ವದೃಷ್ಟವದ್ಭಿರ್ವಿಬುಧೈರಭಿಷ್ಟುತಮ್ ॥ ೯ ॥

ಸ್ಥಿತನಾಗಿದ್ದಾಗ ಅವನ ಮೇಲೆ ಕಾಲ ಮತ್ತು ಮಾಯೆಯ ಪ್ರಭಾವ ಬೀಳುವುದಿಲ್ಲ.) ಮೋಹವನ್ನು ತ್ಯಜಿಸಿ 'ನಾನು-ನನ್ನದು' ಇವೆರಡನ್ನೂ ಬಿಟ್ಟುಬಿಡುತ್ತಾನೆ. ಪೂರ್ಣವಾಗಿ ಉದಾಸೀನನಾಗುತ್ತಾನೆ. ಆಗ ಅವನು ತನ್ನ ಆತ್ಮನಲ್ಲೇ ರಮಮಾಣನಾಗುತ್ತಾನೆ. ॥ ೩ ॥ ಆತ್ಮತತ್ತ್ವದ ಜ್ಞಾನಕ್ಕಾಗಿ ಬ್ರಹ್ಮದೇವರು ನಿಷ್ಕಪಟವಾದ ತಪಸ್ಸನ್ನಾಚರಿಸಿದಾಗ ಪ್ರಸನ್ನನಾದ ಭಗವಂತನು ಆತನಿಗೆ ತನ್ನ ಸ್ವರೂಪದ ದರ್ಶನಮಾಡಿಸಿ, ಆತ್ಮತತ್ತ್ವದ ಜ್ಞಾನಕ್ಕಾಗಿ ಅವರಿಗೆ ಪರಮ ಸತ್ಯವನ್ನು ಉಪದೇಶಮಾಡಿದನು. ಅಯ್ಯಾ ! ಅದನ್ನು ನಾನು ನಿನಗೆ ಹೇಳುತ್ತೇನೆ. ॥ ೪ ॥

ಮೂರೂ ಲೋಕಗಳ ಪರಮಗುರುಗಳಾದ ಆದಿದೇವ ಬ್ರಹ್ಮದೇವರು ತಮ್ಮ ಜನ್ಮಸ್ಥಾನವಾದ ಕಮಲದ ಮೇಲೆ ಕುಳಿತುಕೊಂಡು ಸೃಷ್ಟಿಮಾಡಬೇಕೆಂಬ ಇಚ್ಛೆಯಿಂದ ವಿಚಾರ ಮಾಡತೊಡಗಿದರು. ಆದರೆ ಸೃಷ್ಟಿಯನ್ನು ಮಾಡುವುದಕ್ಕೆ ಬೇಕಾದ ದೃಷ್ಟಿಯಾಗಲೀ, ವಿಧಾನವಾಗಲೀ ಅವರಿಗೆ ದೊರಕಲಿಲ್ಲ. ॥ ೫ ॥ ಪರೀಕ್ಷಿತನೇ ! ಒಂದು ದಿನ ಅವರು ಹೀಗೆ ಚಿಂತಿಸುತ್ತಿರುವಾಗ ಪ್ರಳಯಸಮುದ್ರದಿಂದ ಎರಡು ಅಕ್ಷರಗಳು ಎರಡು ಬಾರಿ ಕೇಳಿಬಂತು. ಅದು ವ್ಯಂಜನಗಳಲ್ಲಿರುವ ಹದಿನಾರನೆಯ ಮತ್ತು ಇಪ್ಪತ್ತೊಂದನೆಯ ವರ್ಣಗಳ ಸೇರುವಿಕೆಯಿಂದಾದ 'ತಪ' ಎಂಬುದು. ಈ ತಪಸ್ಸನ್ನೇ ತ್ಯಾಗಿಗಳ ಧನವೆಂದು ಮಹಾತ್ಮರು ಹೇಳುತ್ತಾರೆ. ॥ ೬ ॥ ಆ ಪದವನ್ನು ಕೇಳಿದ ಬ್ರಹ್ಮದೇವರು ಇದನ್ನು ಯಾರು ಹೇಳಿದರು ? ಎಂದು ಸುತ್ತಲೂ ನೋಡಿದನು. ಆದರೆ ಯಾರೊಬ್ಬರೂ ಕಾಣಲಿಲ್ಲ. ಆಗ ಅವರು ತಮ್ಮ ಕಮಲಾಸನದಲ್ಲಿ ಕುಳಿತು – 'ಹೇಗೂ ನನಗೆ ತಪಸ್ಸು ಮಾಡಬೇಕೆಂಬ ಆಜ್ಞೆಯು ನೇರವಾಗಿ ಬಂದಿದೆ. ಅದನ್ನು ಮಾಡುವುದೇ ಹಿತವೆಂದು ನಿಶ್ಚಯಿಸಿ ಮನಸ್ಸನ್ನು ತಪಸ್ಸಿನಲ್ಲಿ ತೊಡಗಿಸಿದರು. ॥ ೭ ॥ ಬ್ರಹ್ಮದೇವರು ಎಲ್ಲ ತಪಸ್ವಿಗಳಲ್ಲಿಯೂ ದೊಡ್ಡ ತಪಸ್ವಿಗಳಾಗಿದ್ದಾರೆ. ಅವರ ಜ್ಞಾನವು ಅಮೋಘವಾಗಿದೆ. ಅವರು ಆಗ ಒಂದು ಸಾವಿರ ದಿವ್ಯವರ್ಷಗಳವರೆಗೆ ಏಕಾಗ್ರವಾದ ಚಿತ್ತದಿಂದ ತಮ್ಮ ಪ್ರಾಣ, ಮನಸ್ಸು, ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳನ್ನು ವಶಪಡಿಸಿಕೊಂಡು – ಸಮಸ್ತ ಲೋಕಗಳನ್ನು ಪ್ರಕಾಶಗೊಳಿಸುವ ಸಾಮರ್ಥ್ಯವನ್ನು ಪಡೆಯುವ ಅದ್ಭುತವಾದ ತಪಸ್ಸನ್ನು ಆಚರಿಸಿದರು. ॥ ೮ ॥

ಅವರ ತಪಸ್ಸಿನಿಂದ ಪ್ರಸನ್ನನಾದ ಶ್ರೀಭಗವಂತನು ಅವರಿಗೆ ಎಲ್ಲಕ್ಕಿಂತ ಶ್ರೇಷ್ಠವೂ, ಅದಕ್ಕಿಂತ ಮಿಗಿಲಾಗಿ ಇನ್ನೊಂದು ಇಲ್ಲದಿರುವ ತನ್ನ ಸರ್ವಶ್ರೇಷ್ಠವಾದ ಲೋಕವನ್ನು ತೋರಿದನು. ಆ ಲೋಕದಲ್ಲಿ ಯಾವುದೇ ರೀತಿಯ ಕ್ಲೇಶ, ಮೋಹ, ಭಯ ಇವುಗಳಿಲ್ಲ. ಅದರ ಸಂದರ್ಶನದ ಸೌಭಾಗ್ಯ ಎಂದಾದರೂ ಒಂದು ಬಾರಿ ದೊರೆತರೂ ದೇವತೆಗಳು ಅದನ್ನು ಪದೇ-ಪದೇ ಸ್ತುತಿಸುತ್ತಾರೆ. ॥ ೯ ॥ ಅಲ್ಲಿ ರಜೋಗುಣ, ತಮೋಗುಣ ಮತ್ತು ಇವುಗಳಿಂದ ಮಿಶ್ರವಾದ ಸತ್ತ್ವಗುಣವೂ ಇಲ್ಲ. ಅಲ್ಲಿ ಕಾಲದ ಬೇಳೆ ಬೇಯುವುದಿಲ್ಲ. ಮಾಯೆಯು ಹೆಜ್ಜೆಯಿಡುವುದಿಲ್ಲ. ಹಾಗಿರುವಾಗ ಮಾಯೆಯ

ಪ್ರವರ್ತತೇ ಯತ್ರ ರಜಸ್ತಮಸ್ತಯೋಃ
ಸತ್ತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।
ನ ಯತ್ರ ಮಾಯಾ ಕಿಮುತಾಪರೇ ಹರೇ-
ರನುವ್ರತಾ ಯತ್ರ ಸುರಾಸುರಾರ್ಚಿತಾಃ ॥ ೧೦ ॥

ಶ್ಯಾಮಾವದಾತಾಃ ಶತಪತ್ರಲೋಚನಾಃ
ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।
ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ-
ಪ್ರವೇಕನಿಷ್ಕಾಭರಣಾಃ ಸುವರ್ಚಸಃ ।
ಪ್ರವಾಲವೈದೂರ್ಯಮೃಣಾಲವರ್ಚಸಃ
ಪರಿಸ್ಫುರತ್ಕುಂಡಲಮೌಲಿಮಾಲಿನಃ ॥ ೧೧ ॥

ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ
ಲಸದ್ವಿಮಾನಾವಲಿಭಿರ್ಮಹಾತ್ಮನಾಮ್ ।
ವಿದ್ಯೋತಮಾನಃ ಪ್ರಮದೋತ್ತಮಾದ್ಯುಭಿಃ
ಸವಿದ್ಯುದಭ್ರಾವಲಿಭಿರ್ಯಥಾ ನಭಃ ॥ ೧೨ ॥

ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ
ಕರೋತಿ ಮಾನಂ ಬಹುಧಾ ವಿಭೂತಿಭಿಃ ।
ಪ್ರೇಂಖಂ ಶ್ರಿತಾ ಯಾ ಕುಸುಮಾಕರಾನುಗೈ-
ರ್ವಿಗೀಯಮಾನಾ ಪ್ರಿಯಕರ್ಮ ಗಾಯತೀ ॥ ೧೩ ॥

ದದರ್ಶ ತತ್ರಾಖಿಲಸಾತ್ವತಾಂ ಪತಿಂ
ಶ್ರಿಯಃ ಪತಿಂ ಯಜ್ಞಪತಿಂ ಜಗತ್ಪತಿಮ್ ।
ಸುನಂದನಂದಪ್ರಬಲಾರ್ಹಣಾದಿಭಿಃ
ಸ್ವಪಾರ್ಷದಮುಖ್ಯೈಃ ಪರಿಸೇವಿತಂ ವಿಭುಮ್ ॥ ೧೪ ॥

ಭೃತ್ಯಪ್ರಸಾದಾಭಿಮುಖಂ ದೃಗಾಸವಂ
ಪ್ರಸನ್ನಹಾಸಾರುಣಲೋಚನಾನನಮ್ ।
ಕಿರೀಟಿನಂ ಕುಂಡಲಿನಂ ಚತುರ್ಭುಜಂ
ಪೀತಾಂಬರಂ ವಕ್ಷಸಿ ಲಕ್ಷಿತಂ ಶ್ರಿಯಾ ॥ ೧೫ ॥

ಸಂತಾನಗಳು ಹೇಗೆ ಪ್ರವೇಶಿಸಿಯಾವು? ಅಲ್ಲಿ ದೇವತೆಗಳಿಂದಲೂ, ದೈತ್ಯರಿಂದಲೂ ಆರಾಧಿಸಲ್ಪಡುತ್ತಿರುವ ಭಗವಂತನ ಪಾರ್ಷದರು ವಾಸಿಸುತ್ತಾರೆ. ॥ ೧೦ ॥ ಅವರ ಶರೀರಗಳು ಉಜ್ವಲವಾದ ಕಾಂತಿಯಿಂದೊಡಗೂಡಿ ಶ್ಯಾಮಲವರ್ಣದಿಂದಲೂ, ಕಮಲದಂತೆ ಕೋಮಲವಾದ ಕಣ್ಣುಗಳಿಂದಲೂ, ಪೀತಾಂಬರದಿಂದಲೂ ಶೋಭಿಸುತ್ತಿವೆ. ಅವರ ಒಂದೊಂದು ಅಂಗದಿಂದಲೂ ಸೌಂದರ್ಯಾಮೃತವು ಹೊರಸೂಸುತ್ತಿದೆ. ಅವರು ಕೋಮಲ ಮೂರ್ತಿಗಳಾಗಿದ್ದು ಎಲ್ಲರಿಗೂ ಚತುರ್ಭುಜಗಳಿವೆ. ಅವರು ಮಹಾ ತೇಜಸ್ವಿಗಳಾಗಿದ್ದು ರತ್ನಖಚಿತವಾದ ಚಿನ್ನದ ಪ್ರಭೆಯಿಂದ ಹೊಳೆಯುವ ಭೂಷಣಗಳನ್ನು ಧರಿಸಿದ್ದಾರೆ. ಹವಳ, ವೈಡೂರ್ಯಮಣಿ ಮತ್ತು ಕಮಲದ ಉಜ್ವಲವಾದ ತಂತುವಿಗೆ ಸಮಾನವಾದ ಕಾಂತಿಯಿಂದ ಥಳ-ಥಳಿಸುತ್ತಿದ್ದಾರೆ. ಅವರ ಕಿವಿಗಳಲ್ಲಿ ಕುಂಡಲಗಳೂ, ಶಿರಸ್ಸಿನಲ್ಲಿ ಕಿರೀಟವೂ, ಕಂಠದಲ್ಲಿ ದಿವ್ಯಮಾಲೆಗಳೂ ರಾರಾಜಿಸುತ್ತಿವೆ. ॥ ೧೧ ॥ ಮಿಂಚಿನಿಂದ ಕೂಡಿದ ಮೋಡಗಳಿಂದ ಶೋಭಿಸುವ ಆಕಾಶದಂತೆಯೇ ಆ ಲೋಕವು ಕಮನೀಯ ಕಾಮಿನಿಯರ ಕಾಂತಿಯಿಂದ ಕೂಡಿದ, ಮಹಾತ್ಮರ ದಿವ್ಯ ತೇಜೋಮಯ ವಿಮಾನಗಳಿಂದ ಎಲ್ಲ ಕಡೆಗಳಲ್ಲಿಯೂ ಶೋಭಾಯಮಾನವಾಗಿದೆ. ॥ ೧೨ ॥ ಆ ವೈಕುಂಠಲೋಕದಲ್ಲಿ ದಿವ್ಯ, ರೂಪ-ಲಾವಣ್ಯ ಸಂಪನ್ನೆಯಾದ ಮಹಾಲಕ್ಷ್ಮಿಯು ತನ್ನ ಬಗೆ-ಬಗೆಯ ವಿಭೂತಿಗಳ ಮೂಲಕ ಭಗವಂತನ ಶ್ರೀಚರಣಕಮಲಗಳನ್ನು ನಾನಾ ಪ್ರಕಾರದಿಂದ ಸೇವೆ ಮಾಡುತ್ತಾ ಇದ್ದಾಳೆ. ಕೆಲವೊಮ್ಮೆ ಅವಳು ಉಯ್ಯಾಲೆಯ ಮೇಲೆ ಕುಳಿತು ತನ್ನ ಪ್ರಿಯತಮನಾದ ಭಗವಂತನ ಲೀಲೆಗಳನ್ನು ಗಾಯನ ಮಾಡತೊಡಗುವಳು. ಆಗ ಆಕೆಯ ಸೌಂದರ್ಯ-ಸುವಾಸನೆಗಳಿಂದ ಉನ್ಮತ್ತರಾದ ಭಕ್ತರೂಪಿಗಳಾದ ದುಂಬಿಗಳು ತಾವೂ ಶ್ರೀಲಕ್ಷ್ಮೀದೇವಿಯ ಗುಣಗಳನ್ನು ಗಾನ ಮಾಡತೊಡಗುತ್ತವೆ. ॥ ೧೩ ॥

ಆ ದಿವ್ಯಲೋಕದಲ್ಲಿ ಸಮಸ್ತಭಕ್ತರ ಸಂರಕ್ಷಕನೂ, ಲಕ್ಷ್ಮೀಪತಿಯೂ, ಯಜ್ಞಪತಿಯೂ, ವಿಶ್ವಪತಿಯೂ ಆದ ಭಗವಂತನು ವಿರಾಜಿಸುತ್ತಿರುವುದನ್ನು ಬ್ರಹ್ಮದೇವರು ನೋಡಿದರು. ನಂದ, ಸುನಂದ, ಪ್ರಬಲ, ಅರ್ಹಣ ಮುಂತಾದ ಪಾರ್ಷದ ಮುಖ್ಯರು ಆ ಪ್ರಭುವನ್ನು ಸೇವಿಸುತ್ತಿದ್ದರು. ॥ ೧೪ ॥ ಮಹಾಪ್ರಭುವಿನ ಮುಖಕಮಲವು ಭಕ್ತರಿಗೆ ಅನುಗ್ರಹತೋರುವ ಮಧುರವಾದ ಮುಗುಳ್ನಗೆಯಿಂದ ರಮಣೀಯವಾಗಿದೆ. ಕಣ್ಣುಗಳಲ್ಲಿ ಸುಂದರವಾದ ಕೆಂಪು ಬಣ್ಣದ ಕಾಂತಿ, ಕಡುಮೋಹಕವಾದ, ಮಧುರವಾದ ಕಡೆಗಣ್ಣಿನೋಟ – ಇವು ಕೂಡಲೇ ಪ್ರೇಮೀ ಭಕ್ತರಿಗೆ ತನ್ನ ಸರ್ವಸ್ವವನ್ನೂ ಕೊಟ್ಟುಬಿಡುತ್ತವೋ ಎಂಬಂತೆ ಕಾಣುತ್ತಿದೆ. ತಲೆಯಲ್ಲಿ ಕಿರೀಟವೂ, ಕಿವಿಗಳಲ್ಲಿ ಕುಂಡಲಗಳೂ, ಮೈಮೇಲೆ ಪೀತಾಂಬರವೂ ಹೊಳೆಯುತ್ತಿದೆ. ವಕ್ಷಸ್ಥಳದಲ್ಲಿ ಒಂದು ಸ್ವರ್ಣರೇಖೆಯಂತೆ ಶ್ರೀಲಕ್ಷ್ಮೀದೇವಿಯು ವಿರಾಜಿಸುತ್ತಿದ್ದಾಳೆ. ಭಗವಂತನಿಗೆ ಅಂದವಾದ ನಾಲ್ಕು ಭುಜಗಳಿವೆ. ॥ ೧೫ ॥ ಪ್ರಭುವು ಅಮೂಲ್ಯವೂ, ಸರ್ವೋ

ಅಧ್ಯರ್ಹಣೀಯಾಸನಮಾಸ್ಥಿತಂ ಪರಂ
ವೃತಂ ಚತುಃಷೋಡಶಪಂಚ ಶಕ್ತಿಭಿಃ ।
ಯುಕ್ತಂ ಭಗೈಃ ಸ್ವೈರಿತರತ್ರ ಚಾಧ್ರುವೈಃ
ಸ್ವ ಏವ ಧಾಮನ್ ರಮಮಾಣಮೀಶ್ವರಮ್ ॥ ೧೬ ॥

ತದ್ದರ್ಶನಾಹ್ಲಾದಪರಿಪ್ಲುತಾಂತರೋ
ಹೃಷ್ಯತ್ತನುಃ ಪ್ರೇಮಭರಾಶ್ರುಲೋಚನಃ ।
ನನಾಮ ಪಾದಂಬುಜಮಸ್ಯ ವಿಶ್ವಸೃಗ್
ಯತ್ ಪಾರಮಹಂಸ್ಯೇನ ಪಥಾಧಿಗಮ್ಯತೇ ॥ ೧೭ ॥

ತಂ ಪ್ರೀಯಮಾಣಂ ಸಮುಪಸ್ಥಿತಂ ತದಾ
ಪ್ರಜಾವಿಸರ್ಗೇ ನಿಜಶಾಸನಾರ್ಹಣಮ್ ।
ಬಭಾಷ ಈಷತ್ ಸ್ಮಿತಶೋಚಿಷಾ ಗಿರಾ
ಪ್ರಿಯಃ ಪ್ರಿಯಂ ಪ್ರೀತಮನಾಃ ಕರೇ ಸ್ಪೃಶನ್ ॥ ೧೮ ॥

*ಶ್ರೀಭಗವಾನುವಾಚ*

ತ್ವಯಾಹಂ ತೋಷಿತಃ ಸಮ್ಯಗ್ವೇದಗರ್ಭ ಸಿಸೃಕ್ಷಯಾ ।
ಚಿರಂ ಭೃತೇನ ತಪಸಾ ದುಸ್ತೋಷಃ ಕೂಟಯೋಗಿನಾಮ್ ॥ ೧೯ ॥

ವರಂ ವರಯ ಭದ್ರಂ ತೇ ವರೇಶಂ ಮಾಭಿವಾಂಛಿತಮ್ ।
ಬ್ರಹ್ಮನ್ ಶ್ರೇಯಃ ಪರಿಶ್ರಾಮಃ ಪುಂಸೋ ಮದ್ದರ್ಶನಾವಧಿಃ ॥ ೨೦ ॥

ಮನೀಷಿತಾನುಭಾವೋಽಯಂ ಮಮ ಲೋಕಾವಲೋಕನಮ್ ।
ಯದುಪಶ್ರುತ್ಯ ರಹಸಿ ಚಕರ್ಥ ಪರಮಂ ತಪಃ ॥ ೨೧ ॥

ಪ್ರತ್ಯಾದಿಷ್ಟಂ ಮಯಾ ತತ್ರ ತ್ವಯಿ ಕರ್ಮವಿಮೋಹಿತೇ ।
ತಪೋ ಮೇ ಹೃದಯಂ ಸಾಕ್ಷಾದಾತ್ಮಾಹಂ ತಪಸೋಽನಘ ॥ ೨೨ ॥

ಸೃಜಾಮಿ ತಪಸೈವೇದಂ ಗ್ರಸಾಮಿ ತಪಸಾ ಪುನಃ ।
ಬಿಭರ್ಮಿ ತಪಸಾ ವಿಶ್ವಂ ವೀರ್ಯಂ ಮೇ ದುಶ್ಚರಂ ತಪಃ ॥ ೨೩ ॥

ತ್ತಮವೂ ಆದ ಆಸನದಲ್ಲಿ ಬೆಳಗುತ್ತಿದ್ದಾನೆ. ಪುರುಷ, ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಮನಸ್ಸು, ಹತ್ತು ಇಂದ್ರಿಯಗಳು, ಪಂಚ ತನ್ಮಾತ್ರೆಗಳು, ಪಂಚಭೂತಗಳು – ಹೀಗೆ ಇಪ್ಪತ್ತೈದು ಶಕ್ತಿಗಳು ಮೂರ್ತೀಭವಿಸಿ ಆತನ ನಾಲ್ಕೂ ಕಡೆಗಳಲ್ಲಿ ನಿಂತುಕೊಂಡಿವೆ. ಸಮಗ್ರವಾದ ಐಶ್ವರ್ಯ, ಧರ್ಮ, ಕೀರ್ತಿ, ಶ್ರೀ, ಜ್ಞಾನ ಮತ್ತು ವೈರಾಗ್ಯ ಎಂಬ ನಿತ್ಯಸಿದ್ಧವಾದ ಸ್ವರೂಪ ಶಕ್ತಿಗಳಿಂದ ಸ್ವಾಮಿಯು ಕೂಡಿಕೊಂಡಿರುತ್ತಾನೆ. ಅವನನ್ನು ಬಿಟ್ಟು ಬೇರೆ ಯಾವುದ ರಲ್ಲಿಯೂ ಕೂಡ ಅವು ನಿತ್ಯವಾಗಿ ಇರುವುದಿಲ್ಲ. ಸರ್ವೇಶ್ವರನಾದ ಆ ಪ್ರಭುವು ಸದಾಕಾಲ ತನ್ನ ಆನಂದಮಯ ಸ್ವರೂಪದಲ್ಲೇ ನಿರಂತರವಾಗಿ ಮುಳುಗಿರುತ್ತಾನೆ. ॥ ೧೬ ॥ ಆತನನ್ನು ನೋಡಿ ದೊಡನೆಯೇ ಬ್ರಹ್ಮದೇವರ ಹೃದಯವು ಉಕ್ಕೇರುವ ಆನಂದ ದಿಂದ ತುಂಬಿಹೋಯಿತು. ದೇಹವು ರೋಮಾಂಚಿತವಾಗಿ, ಕಣ್ಣು ಗಳಲ್ಲಿ ಆನಂದಾಶ್ರುಗಳು ಚಿಮ್ಮಿಬಂದವು. ಪರಮಹಂಸರಿಗೆ ನಿವೃತ್ತಿ ಮಾರ್ಗದಿಂದಲೇ ದೊರೆಯುವ ಭಗವಂತನ ಶ್ರೀಪಾದಪದ್ಮಗಳಿಗೆ ಬ್ರಹ್ಮದೇವರು ಮತ್ತೊಮ್ಮೆ ತಲೆಬಾಗಿ ನಮಸ್ಕರಿಸಿದರು. ॥ ೧೭ ॥ ಬ್ರಹ್ಮದೇವರಿಗೆ ಪ್ರಿಯನಾದ ಆ ಭಗವಂತನು ತನ್ನ ಪ್ರಿಯಪುತ್ರನು ಪ್ರಜಾಸೃಷ್ಟಿಮಾಡಲು ತನ್ನ ಶಾಸನವನ್ನು ಸ್ವೀಕರಿಸುವುದಕ್ಕೆ ಯೋಗ್ಯ ನೆಂದು ತಿಳಿದು, ಅತ್ಯಂತ ಪ್ರಸನ್ನನಾಗಿ ಪ್ರೀತಿತುಂಬಿದ ಮನಸ್ಸಿನಿಂದ ಆತನನ್ನು ಕೈಯಿಂದ ನೇವರಿಸುತ್ತಾ ಮೃದುವಾದ ಮಂದಹಾಸ ದಿಂದ ಶೋಭಿಸುತ್ತಿರುವ ಮಾತಿನಿಂದ ಹೀಗೆಂದನು – ॥ ೧೮ ॥

**ಶ್ರೀಭಗವಂತನು ನುಡಿದನು** – ಬ್ರಹ್ಮನೇ ! ನಿನ್ನ ಹೃದಯ ದಲ್ಲಾದರೋ ಸಮಸ್ತ ವೇದಗಳ ಜ್ಞಾನವು ತುಂಬಿದೆ. ನೀನು ಸೃಷ್ಟಿರಚನೆಯ ಇಚ್ಛೆಯಿಂದ ಚಿರಕಾಲ ತಪಸ್ಸುಮಾಡಿ ನನ್ನನ್ನು ಚೆನ್ನಾಗಿ ಸಂತೋಷಪಡಿಸಿರುವೆ. ಮನಸ್ಸಿನಲ್ಲಿ ಕಪಟವನ್ನಿಟ್ಟುಕೊಂಡು ಯೋಗ ಸಾಧನೆ ಮಾಡುವವರು ಎಂದಿಗೂ ನನ್ನನ್ನು ಪ್ರಸನ್ನಗೊಳಿಸಲಾರರು. ॥ ೧೯ ॥ ಬ್ರಹ್ಮನೇ ! ನಿನಗೆ ಮಂಗಳವಾಗಲಿ. ನಿನಗೆ ಇಷ್ಟವಾದ ವರವನ್ನು ಬೇಡಿಕೋ. ಬೇಡಿದ ವಸ್ತುಗಳನ್ನು ಕೊಡುವ ಸಾಮರ್ಥ್ಯ ನನಗಿದೆ. ನನ್ನ ದರ್ಶನವಾಗುವವರೆಗೆ ಮನುಷ್ಯರಿಗೆ ತಪಸ್ಸೇ ಮುಂತಾದ ಸಾಧನೆಗಳ ಪರಿಶ್ರಮವಿರುತ್ತದೆ. ನನ್ನ ದರ್ಶನವಾದಾಗ ಅದೇ ಪರಿಶ್ರಮಗಳ ಫಲವೆಂದು ತಿಳಿ. ಬಳಿಕ ಯಾವುದೇ ಪರಿಶ್ರಮಗಳು ಇರುವುದಿಲ್ಲ. ಏಕೆಂದರೆ, ಜೀವರ ಸಮಸ್ತ ಶ್ರೇಯಸ್ಸಿನ ಸಾಧನೆಗಳ ವಿಶ್ರಾಮ–ಪರ್ಯವಸಾನ ನನ್ನ ದರ್ಶನದಲ್ಲೇ ಇದೆ. ॥ ೨೦ ॥ ನೀನು ನನ್ನನ್ನು ನೋಡದೆಯೇ ನನ್ನ ವಾಣಿಯನ್ನು ಕೇಳಿ, ಇಷ್ಟು ತೀವ್ರವಾದ ತಪಸ್ಸನ್ನು ಆಚರಿಸಿದೆ. ಆದರಿಂದಲೇ ನಿನಗೆ ನನ್ನ ಇಚ್ಛೆಯಿಂದ ನನ್ನ ಲೋಕದ ದರ್ಶನವಾಯಿತು. ॥ ೨೧ ॥ ಆಗ ನೀನು ಸೃಷ್ಟಿರಚನೆಯ ಕಾರ್ಯದಲ್ಲಿ ಕಿಂಕರ್ತವ್ಯ ಮೂಢ ನಾಗಿದ್ದೆ. ಇದರಿಂದಲೇ ನಿನಗೆ ನಾನೇ ತಪಸ್ಸನ್ನಾಚರಿಸಲು ಅಪ್ಪಣೆ ಕೊಟ್ಟಿದ್ದೆ. ಪಾಪರಹಿತನೇ ! ತಪಸ್ಸು ನನ್ನ ಹೃದಯವಾಗಿದೆ. ನಾನೇ ತಪಸ್ಸಿನ ಆತ್ಮಾ ಆಗಿದ್ದೇನೆ. ॥ ೨೨ ॥ ನಾನು ತಪಸ್ಸಿನಿಂದಲೇ ಈ ಜಗತ್ತನ್ನು ಸೃಷ್ಟಿಸುತ್ತೇನೆ. ತಪಸ್ಸಿನಿಂದಲೇ ಇದನ್ನು ಧರಿಸಿ–

ಬ್ರಹ್ಮೋವಾಚ

ಭಗವನ್ ಸರ್ವಭೂತಾನಾಮಧ್ಯಕ್ಷೋಽವಸ್ಥಿತೋ ಗುಹಾಮ್ ।
ವೇದ ಹ್ಯಪ್ರತಿರುದ್ಧೇನ ಪ್ರಜ್ಞಾನೇನ ಚಿಕೀರ್ಷಿತಮ್ ॥ ೨೪ ॥

ತಥಾಪಿ ನಾಥಮಾನಸ್ಯ ನಾಥ ನಾಥಯ ನಾಥಿತಮ್ ।
ಪರಾವರೇ ಯಥಾ ರೂಪೇ ಜಾನೀಯಾಂ ತೇ ತ್ವರೂಪಿಣಃ ॥ ೨೫ ॥

ಯಥಾಽಽತ್ಮ ಮಾಯಾಯೋಗೇನ ನಾನಾಶಕ್ತ್ಯುಪಬೃಂಹಿತಮ್ ।
ವಿಲುಂಪನ್ ವಿಸೃಜನ್ ಗೃಹ್ಣನ್ ಬಿಭ್ರದಾತ್ಮಾನಮಾತ್ಮನಾ ॥ ೨೬ ॥

ಕ್ರೀಡಸ್ಯಮೋಘಸಂಕಲ್ಪ ಊರ್ಣನಾಭಿರ್ಯಥೋರ್ಣುತೇ ।
ತಥಾ ತದ್ವಿಷಯಾಂ ಧೇಹಿ ಮನೀಷಾಂ ಮಯಿ ಮಾಧವ ॥ ೨೭ ॥

ಭಗವಚ್ಛಿಕ್ಷಿತಮಹಂ ಕರವಾಣಿ ಹ್ಯತಂದ್ರಿತಃ ।
ನೇಹಮಾನಃ ಪ್ರಜಾಸರ್ಗಂ ಬಧ್ಯೇಯಂ ಯದನುಗ್ರಹಾತ್ ॥ ೨೮ ॥

ಯಾವತ್ಸಖಾ ಸಖ್ಯುರಿವೇಶ ತೇ ಕೃತಃ
ಪ್ರಜಾವಿಸರ್ಗೇ ವಿಭಜಾಮಿ ಭೋ ಜನಮ್ ।
ಅವಿಕ್ಲವಸ್ತೇ ಪರಿಕರ್ಮಣಿ ಸ್ಥಿತೋ
ಮಾ ಮೇ ಸಮುನ್ನದ್ಧ ಮದೋಽಜಮಾನಿನಃ ॥ ೨೯ ॥

ಶ್ರೀಭಗವಾನುವಾಚ

ಜ್ಞಾನಂ ಪರಮಗುಹ್ಯಂ ಮೇ ಯದ್ವಿಜ್ಞಾನಸಮನ್ವಿತಮ್ ।
ಸರಹಸ್ಯಂ ತದಂಗಂ ಚ ಗೃಹಾಣ ಗದಿತಂ ಮಯಾ ॥ ೩೦ ॥

ಯಾವಾನಹಂ ಯಥಾಭಾವೋ ಯದ್ರೂಪಗುಣಕರ್ಮಕಃ ।
ತಥೈವ ತತ್ತ್ವವಿಜ್ಞಾನಮಸ್ತು ತೇ ಮದನುಗ್ರಹಾತ್ ॥ ೩೦ ॥

ಪಾಲಿಸುತ್ತೇನೆ. ಮತ್ತೆ ತಪಸ್ಸಿನಿಂದಲೇ ನನ್ನಲ್ಲಿ ಲೀನಗೊಳಿಸಿಕೊಳ್ಳುತ್ತೇನೆ. ತಪಸ್ಸೇ ನನ್ನ ಒಂದು ದಾಟಲಶಕ್ಯವಾದ ಶಕ್ತಿಯಾಗಿದೆ. ॥ ೨೩ ॥

**ಬ್ರಹ್ಮದೇವರು ಹೇಳಿದರು** – ಭಗವಂತನೇ ! ನೀನೇ ಸಮಸ್ತ ಪ್ರಾಣಿಗಳ ಅಂತಃಕರಣದಲ್ಲಿ ಸಾಕ್ಷೀರೂಪದಿಂದ ವಿರಾಜಿಸುತ್ತಿರುವೆ. ನಾನು ಏನು ಮಾಡಲು ಬಯಸುತ್ತಿರುವೆ ಎಂಬುದನ್ನು ನೀನು ನಿನ್ನ ಅಪ್ರತಿಹತವಾದ ಜ್ಞಾನದಿಂದ ತಿಳಿದೇ ಇದ್ದೀಯೆ. ॥ ೨೪ ॥ ಮಹಾಪ್ರಭೂ ! ರೂಪರಹಿತವಾಗಿರುವ ನಿನ್ನ ಪರರೂಪ ಮತ್ತು ಅಪರರೂಪ (ಸಗುಣ-ನಿರ್ಗುಣ) ಗಳೆರಡನ್ನೂ ತಿಳಿಯಬೇಕೆಂಬ ನನ್ನ ಬೇಡಿಕೆಯನ್ನು ಈಡೇರಿಸಲು ಪ್ರಾರ್ಥಿಸುತ್ತೇನೆ. ॥ ೨೫ ॥ ನೀನು ಮಾಯೆಗೆ ಸ್ವಾಮಿಯಾಗಿರುವೆ. ಸತ್ಯಸಂಕಲ್ಪನು. ಜೇಡರ ಹುಳವು ತನ್ನ ಬಾಯಿಂದ ಬಲೆಯನ್ನು ಹೆಣೆದು ಅದರಲ್ಲಿ ಆಟ ವಾಡುತ್ತಾ ಕೊನೆಗೆ ಅದನ್ನು ತನ್ನಲ್ಲಿಯೇ ಲಯಗೊಳಿಸಿಕೊಳ್ಳುವಂತೆ, ನೀನೂ ನಿನ್ನ ಮಾಯಾಶಕ್ತಿಯಿಂದ ನಾನಾಶಕ್ತಿಸಂಪನ್ನವಾದ ಈ ಜಗತ್ತಿನ ಸೃಷ್ಟಿ ಸ್ಥಿತಿ, ಲಯಗಳನ್ನು ಮಾಡಲಿಕ್ಕಾಗಿ ನಿನ್ನನ್ನೇ ಅನೇಕ ರೂಪಗಳನ್ನಾಗಿಸಿಕೊಂಡು ಕ್ರೀಡಿಸುತ್ತಿರುವೆ. ಇದನ್ನು ನೀನು ಹೇಗೆ ಮಾಡುವೆ ? ಎಂಬ ಮರ್ಮವನ್ನು ತಿಳಿಯಬಲ್ಲ ಜ್ಞಾನವನ್ನು ನನಗೆ ದಯಪಾಲಿಸು. ॥ ೨೬-೨೭ ॥ ನಾನು ಎಚ್ಚರವಾಗಿದ್ದು ನಿನ್ನ ಆಜ್ಞೆಯನ್ನು ಪಾಲನೆಮಾಡುವಂತೆಯೂ, ಸೃಷ್ಟಿಯನ್ನು ಮಾಡುವಾಗಲೂ ಕರ್ತೃತ್ವದ ಅಭಿಮಾನದಿಂದ ಬಂಧಿತನಾಗದಂತೆ ನನ್ನ ಮೇಲೆ ಕೃಪೆಮಾಡು. ॥ ೨೮ ॥ ಪ್ರಭೋ ! ನೀನು ಪರಮಪ್ರೀತಿಯಿಂದ ನನ್ನ ಕೈಯನ್ನು ಹಿಡಿದುಕೊಂಡು ನನ್ನನ್ನು ಮಿತ್ರನಂತೆ ಸ್ವೀಕರಿಸಿರುವೆ. ಆದ್ದರಿಂದ ನಾನು ಈ ಸೃಷ್ಟಿರಚನೆಯೆಂಬ ನಿನ್ನ ಸೇವೆಯನ್ನು ಮಾಡುವಾಗಲೂ, ಎಚ್ಚರಿಕೆಯಿಂದ ಹಿಂದಿನ ಕಲ್ಪದ ಗುಣ-ಕರ್ಮಗಳಿಗೆ ತಕ್ಕಂತೆ ಜೀವಿಗಳನ್ನು ವಿಭಾಜಿಸುವಾಗಲೂ ಎಲ್ಲಾದರೂ ನನ್ನ ಜನ್ಮ-ಕರ್ಮಗಳಿಂದ ಸ್ವತಂತ್ರನೆಂದು ತಿಳಿದುಕೊಂಡು ಅಭಿಮಾನಕ್ಕೆ ಒಳಗಾಗದಂತೆ ಅನುಗ್ರಹಿಸು. ॥ ೨೯ ॥

**ಭಗವಂತನು ಹೇಳಿದನು** – ವಿರಂಚಿಯೇ ! ನನ್ನ ಪರಮ ಗೋಪನೀಯ, ವಿಜ್ಞಾನಸಹಿತ ಜ್ಞಾನದ ಕುರಿತು ನಿನಗೆ ನಾನು ಹೇಳುತ್ತಿದ್ದೇನೆ. ಅದರ ರಹಸ್ಯ ಮತ್ತು ಅಂಗಗಳ ಸಹಿತ ವರ್ಣಿಸುವೆನು. ಸಾವಧಾನವಾಗಿ ಕೇಳು. ॥ ೩೦ ॥ ನನ್ನ ವಿಸ್ತಾರವೆಷ್ಟು ? ನನ್ನ ಲಕ್ಷಣವೇನು ? ನನಗೆ ಯಾವ-ಯಾವ ರೂಪಗಳೂ, ಗುಣಗಳೂ, ಕರ್ಮಗಳೂ ಇವೆಯೋ ಅವೆಲ್ಲದರ ತಾತ್ತ್ವಿಕ ವಾದ ಜ್ಞಾನವು ನಿನಗೆ ನನ್ನ ಅನುಗ್ರಹದಿಂದ ಉಂಟಾಗಲೀ. ॥ ೩೧ ॥

ಸೃಷ್ಟಿಗೆ ಮೊದಲು ಕೇವಲ ನಾನೇ ಇದ್ದೆ. ನಾನಲ್ಲದೆ ಸ್ಥೂಲವಾಗಲೀ, ಸೂಕ್ಷ್ಮವಾಗಲೀ, ಎರಡರ ಕಾರಣವಾದ ಅಜ್ಞಾನವಾಗಲೀ ಇರಲಿಲ್ಲ. ಸೃಷ್ಟಿಯು ಉಂಟಾದ ಮೇಲೆ ಏನೆಲ್ಲ ಈ ದೃಶ್ಯವರ್ಗವಿದೆಯೋ ಅದೆಲ್ಲವೂ ನಾನೇ ಆಗಿದ್ದೇನೆ. 'ಸತ್ (ಅಕ್ಷರ)' 'ಅಸತ್ (ಕ್ಷರ)' ಅದರಿಂದ ಆಚೆ (ಪುರುಷೋತ್ತಮ) ಇರುವುದೆಲ್ಲವೂ ನಾನೇ ಆಗಿದ್ದೇನೆ. ಇವೆಲ್ಲದರ ನಾಶವಾದ ಬಳಿಕವೂ ಉಳಿಯುವುದೆಲ್ಲವೂ ನಾನೇ ಆಗಿದ್ದೇನೆ. ॥ ೩೨ ॥ ಪರಮಾತ್ಮನ

ಅಹಮೇವಾಸಮೇವಾಗ್ರೇ ನಾನ್ಯದ್ ಯತ್ಸದಸತ್ಪರಮ್ ।
ಪಶ್ಚಾದಹಂ ಯದೇತಚ್ಚ ಯೋಽವಶಿಷ್ಯೇತ ಸೋಽಸ್ಮ್ಯಹಮ್ ॥ ೩೨ ॥

ಋತೇಽರ್ಥಂ ಯತ್ಪ್ರತೀಯೇತ ನ ಪ್ರತೀಯೇತ ಚಾತ್ಮನಿ ।
ತದ್ವಿದ್ಯಾದಾತ್ಮನೋ ಮಾಯಾಂ ಯಥಾಭಾಸೋ ಯಥಾ ತಮಃ ॥ ೩೩ ॥

ಯಥಾ ಮಹಾಂತಿ ಭೂತಾನಿ ಭೂತೇಷೂಚ್ಚಾವಚೇಷ್ವನು ।
ಪ್ರವಿಷ್ಟಾನ್ಯಪ್ರವಿಷ್ಟಾನಿ ತಥಾ ತೇಷು ನ ತೇಷ್ವಹಮ್ ॥ ೩೪ ॥

ಏತಾವದೇವ ಜಿಜ್ಞಾಸ್ಯಂ ತತ್ತ್ವಜಿಜ್ಞಾಸುನಾಽಽತ್ಮನಃ ।
ಅನ್ವಯವ್ಯತಿರೇಕಾಭ್ಯಾಂ ಯತ್ ಸ್ಯಾತ್ಸರ್ವತ್ರ ಸರ್ವದಾ ॥ ೩೫ ॥

ಏತನ್ಮತಂ ಸಮಾತಿಷ್ಠ ಪರಮೇಣ ಸಮಾಧಿನಾ ।
ಭವಾನ್ಕಲ್ಪವಿಕಲ್ಪೇಷು ನ ವಿಮುಹ್ಯತಿ ಕರ್ಹಿಚಿತ್ ॥ ೩೬ ॥

*ಶ್ರೀಶುಕ ಉವಾಚ*

ಸಂಪ್ರದಿಶ್ಯೈವಮಜನೋ ಜನಾನಾಂ ಪರಮೇಷ್ಠಿನಮ್ ।
ಪಶ್ಯತಸ್ತಸ್ಯ ತದ್ರೂಪಮಾತ್ಮನೋ ನ್ಯರುಣದ್ಧರಿಃ ॥ ೩೭ ॥

ಅಂತರ್ಹಿತೇಂದ್ರಿಯಾರ್ಥಾಯ ಹರಯೇ ವಿಹಿತಾಂಜಲಿಃ ।
ಸರ್ವಭೂತಮಯೋ ವಿಶ್ವಂ ಸಸರ್ಜೇದಂ ಸ ಪೂರ್ವವತ್ ॥ ೩೮ ॥

ಪ್ರಜಾಪತಿರ್ಧರ್ಮಪತಿರೇಕದಾ ನಿಯಮಾನ್ ಯಮಾನ್ ।
ಭದ್ರಂ ಪ್ರಜಾನಾಮನ್ವಿಚ್ಛನ್ನಾತಿಷ್ಠತ್ಸ್ವಾರ್ಥಕಾಮ್ಯಯಾ ॥ ೩೯ ॥

ಸತ್ತೆಯಲ್ಲದೆ ಕಂಡುಬರುವುದೆಲ್ಲವೂ ಮಾಯೆಯ ಆಟವಾಗಿದೆ. ಹಾಗೆಯೇ ಆತ್ಮತತ್ತ್ವದ ದರ್ಶನವಾದಾಗ ಮಾಯೆಯು ಕಂಡು ಬರುವುದಿಲ್ಲ. ಆದರೆ ಮಾಯೆಯಾದರೋ ಇಲ್ಲವೇ ಇಲ್ಲ. ಏಕೆಂದರೆ, ವಿದ್ಯೆ ಮತ್ತು ಅವಿದ್ಯೆಗಳೆಂಬ ಎರಡೂ ಭಗವಂತನ ಶಕ್ತಿಗಳಾಗಿವೆ. ತಮ ಅರ್ಥಾತ್ ರಾಹುಗ್ರಹದ ಗಣನೆ ನವಗ್ರಹರಲ್ಲಿ ಆಗುತ್ತದೆ, ಆದರೆ ಅದು ಆಕಾಶದಲ್ಲಿ ಕಾಣುವುದಿಲ್ಲ. ಹಾಗೆಯೇ ಈ ವಿಶ್ವವು ವಾಸ್ತವವಾಗಿ ಇಲ್ಲದಿದ್ದರೂ ಕಂಡುಬರುತ್ತದೆ. ಆದ್ದರಿಂದ ಇದೇ ನನ್ನ ಮಾಯೆ ಎಂದು ತಿಳಿ. ಅದಕ್ಕಾಗಿ ಪರಮಾತ್ಮತತ್ತ್ವದ ಅನುಭೂತಿಯನ್ನು ಪಡೆಯಲು ವಿದ್ಯೆಯ ಮೂಲಕ ಅವಿದ್ಯೆಯನ್ನು ನಿರಾಕರಿಸಬೇಕು. ॥ ೩೩ ॥ ಹೇಗೆ ಪ್ರಾಣಿಗಳ ಸಣ್ಣ-ದೊಡ್ಡ ಶರೀರಗಳಲ್ಲಿ (ಆಕಾಶಾದಿ) ಪಂಚಭೂತಗಳು ಸೇರಿಕೊಂಡಿವೆ ಮತ್ತು ಸೇರಿಕೊಂಡೂ ಇಲ್ಲ. ಹಾಗೆಯೇ ಅವುಗಳಲ್ಲಿ (ಪ್ರಾಣಿಗಳಲ್ಲಿ) ನಾನು ಸೇರಿಕೊಂಡಿದ್ದರೂ ನಿಜವಾಗಿ ಅವುಗಳಲ್ಲಿ ನಾನು ಸೇರಿಕೊಂಡಿಲ್ಲ. ॥ ೩೪ ॥ ಪರಮಾತ್ಮನ ತತ್ತ್ವವನ್ನು ತಿಳಿಯುವ ಇಚ್ಛೆಯುಳ್ಳವನಿಗೆ ವಿಧಿರೂಪದಿಂದ – ಅರ್ಥಾತ್ 'ಪರಮಾತ್ಮನು ಹೀಗಿದ್ದಾನೆ, ಹಾಗಿದ್ದಾನೆ' ಈ ಭಾವದಿಂದ ಹಾಗೂ ನಿಷೇಧ ರೂಪದಿಂದ ಅರ್ಥಾತ್ 'ಪರಮಾತ್ಮನು ಹೀಗೂ ಇಲ್ಲ, ಹಾಗೂ ಇಲ್ಲ' ಈ ಭಾವದಿಂದ ಪರಮಾತ್ಮನು ಎಲ್ಲ ದೇಶಗಳಲ್ಲಿ, ಎಲ್ಲ ಕಾಲಗಳಲ್ಲಿ ಇದ್ದಾನೆ ಇಷ್ಟೇ ತಿಳಿಯುವ ಆವಶ್ಯಕತೆ ಇದೆ. ॥ ೩೫ ॥ ಬ್ರಹ್ಮನೇ! ನೀನು ಅವಿಚಲ ಸಮಾಧಿಯ ಮೂಲಕ ನನ್ನ ಈ ಸಿದ್ಧಾಂತದಲ್ಲಿ ಪೂರ್ಣನಿಷ್ಠೆಯನ್ನಿಡು. ಇದರಿಂದ ನಿನಗೆ ಕಲ್ಪ-ಕಲ್ಪಾಂತರಗಳಲ್ಲಿ ವಿವಿಧ ಪ್ರಕಾರದ ಸೃಷ್ಟಿಯನ್ನು ಮಾಡುತ್ತಿದ್ದರೂ ನೀನು ಎಂದೂ ಮೋಹಿತನಾಗಲಾರೆ. (ಆದ್ದರಿಂದ ಸಾಧಕನು ಸಚ್ಚಿದಾನಂದಘನ ಪರಮಾತ್ಮನೊಬ್ಬನೇ ಎಲ್ಲ ದೇಶಗಳಲ್ಲಿ, ಎಲ್ಲ ಕಾಲಗಳಲ್ಲಿ ಇದ್ದಾನೆ. ಅವನಿಂದ ಬೇರೆಯಾದುದು ಯಾವುದೂ ಇಲ್ಲ ಎಂಬುದನ್ನು ನಿಶ್ಚಯಿಸಿಕೊಳ್ಳಬೇಕು. ಹೀಗೆ ಮಾಡುವುದರಿಂದ ಅವನು ಶೋಕ, ಮೋಹ ಮುಂತಾದ ವಿಕಾರಗಳಿಂದ ಮತ್ತು ಅವಿದ್ಯೆಯೇ ಮೊದಲಾದ ಕ್ಲೇಶಗಳಿಂದ ಮುಕ್ತನಾಗಿ ಪರಮ ಶಾಂತಿಸ್ವರೂಪನಾದ ಪರಮಾತ್ಮನನ್ನು ಪಡೆದುಕೊಳ್ಳಬಲ್ಲನು.) ॥ ೩೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಜನ್ಮರಹಿತವಾದ ಶ್ರೀಮನ್ನಾರಾಯಣನು ಜನರಲ್ಲಿ, ಉತ್ತಮಾಧಿಪತ್ಯವನ್ನು ಪಡೆದ ಬ್ರಹ್ಮದೇವರಿಗೆ ಹೀಗೆ ಉಪದೇಶಮಾಡಿ ಅವರು ನೋಡುತ್ತಿರುವಂತೆಯೇ ಅಂತರ್ಧಾನಹೊಂದಿದನು. ॥ ೩೭ ॥ ಬ್ರಹ್ಮದೇವರು ತನ್ನ ಕಣ್ಮುಂದೆಯೇ ಅದೃಶ್ಯನಾದ ಭಗವಂತನಿಗೆ ಕೈಜೋಡಿಸಿ ನಮಸ್ಕಾರಮಾಡಿ, ಆತನ ಅನುಗ್ರಹದಿಂದ ಹಿಂದಿನ ಕಲ್ಪದಲ್ಲಿ ಇದ್ದ ಹಾಗೆ ಪುನಃ ಈ ವಿಶ್ವವನ್ನು ಸೃಷ್ಟಿಮಾಡಿದರು. ॥ ೩೮ ॥ ಒಮ್ಮೆ ಧರ್ಮಪತಿಗಳಾದ ಆ ಪ್ರಜಾಪತಿ ಬ್ರಹ್ಮದೇವರು ಎಲ್ಲ ಪ್ರಜೆಗಳಿಗೆ ಕಲ್ಯಾಣವು ಉಂಟಾಗಲೆಂಬ ಸ್ವಾರ್ಥವನ್ನು ಸಾಧಿಸಲು ವಿಧಿಪೂರ್ವಕವಾಗಿ ಯಮ-ನಿಯಮಗಳನ್ನು ಆಚರಿಸಿದರು. ॥ ೩೯ ॥ ಆಗಲೇ ಅವರ ಪ್ರಿಯಪುತ್ರನಾದ ದೇವರ್ಷಿ ನಾರದರು ಮಾಯಾಪತಿ

ತಂ ನಾರದಃ ಪ್ರಿಯತಮೋ ರಿಕ್ಥಾದಾನಾಮನುವ್ರತಃ ।
ಶುಶ್ರೂಷಮಾಣಃ ಶೀಲೇನ ಪ್ರಶ್ರಯೇಣ ದಮೇನ ಚ ॥ ೪೦ ॥

ಮಾಯಾಂ ವಿವಿದಿಷನ್ವಿಷ್ಣೋರ್ಮಾಯೇಶಸ್ಯ ಮಹಾಮುನಿಃ ।
ಮಹಾಭಾಗವತೋ ರಾಜನ್ಪಿತರಂ ಪರ್ಯತೋಷಯತ್ ॥ ೪೧ ॥

ತುಷ್ಟಂ ನಿಶಾಮ್ಯ ಪಿತರಂ ಲೋಕಾನಾಂ ಪ್ರಪಿತಾಮಹಮ್ ।
ದೇವರ್ಷಿಃ ಪರಿಪಪ್ರಚ್ಛ ಭವಾನ್ಯನ್ಮಾನುಪೃಚ್ಛತಿ ॥ ೪೨ ॥

ತಸ್ಮಾ ಇದಂ ಭಾಗವತಂ ಪುರಾಣಂ ದಶಲಕ್ಷಣಮ್ ।
ಪ್ರೋಕ್ತಂ ಭಗವತಾ ಪ್ರಾಹ ಪ್ರೀತಃ ಪುತ್ರಾಯ ಭೂತಕೃತ್ ॥ ೪೩ ॥

ನಾರದಃ ಪ್ರಾಹ ಮುನಯೇ ಸರಸ್ವತ್ಯಾಸ್ತಟೇ ನೃಪ ।
ಧ್ಯಾಯತೇ ಬ್ರಹ್ಮ ಪರಮಂ ವ್ಯಾಸಾಯಾಮಿತತೇಜಸೇ ॥ ೪೪ ॥

ಯದುತಾಹಂ ತ್ವಯಾ ಪೃಷ್ಟೋ ವೈರಾಜಾತ್ಪುರುಷಾದಿದಮ್ ।
ಯಥಾಸೀತ್ತದುಪಾಖ್ಯಾಸ್ಯೇ ಪ್ರಶ್ನಾನನ್ಯಾಂಶ್ಚ ಕೃತ್ಸ್ನಶಃ ॥ ೪೫ ॥

ಭಗವಂತನ ಮಾಯೆಯ ತತ್ತ್ವವನ್ನು ಅರಿಯುವ ಇಚ್ಛೆಯಿಂದ ಜಿತೇಂದ್ರಿಯನಾಗಿ, ಸದಾಚಾರ ಸಂಪನ್ನನಾಗಿ ಅವರ ಸೇವೆ ಮಾಡುತ್ತಿದ್ದನು. ಪರಮ ಭಾಗವತೋತ್ತಮನಾದ ನಾರದ ಮಹರ್ಷಿಯು ಹೀಗೆ ಬಹುಕಾಲ ಸೇವಿಸುತ್ತಾ ಬ್ರಹ್ಮದೇವರನ್ನು ಸಂತೋಷಪಡಿಸಿದನು. ॥ ೪೦-೪೧ ॥ ಪರೀಕ್ಷಿದ್ರಾಜನೇ ! ಲೋಕಪಿತಾಮಹರಾದ ಬ್ರಹ್ಮದೇವರು ಪ್ರಸನ್ನ ರಾಗಿರುವುದನ್ನು ನೋಡಿ ನಾರದಮುನಿಯು – ನೀನು ಈಗ ನನ್ನಲ್ಲಿ ಪ್ರಶ್ನಿಸಿದಂತೆ, ಅದೇ ವಿಷಯವನ್ನು ಕುರಿತು ಪ್ರಶ್ನಿಸಿದನು. ॥ ೪೨ ॥ ಅವನ ಪ್ರಶ್ನೆಯಿಂದ ಇನ್ನೂ ಸಂತುಷ್ಟರಾಗಿ ಬ್ರಹ್ಮದೇವರು ತನಗೆ ಭಗವಂತನು ಉಪದೇಶಿಸಿದ್ದ ಹತ್ತು ಲಕ್ಷಣಗಳಿಂದ ಕೂಡಿದ ಶ್ರೀಮದ್ಭಾಗವತ ಪುರಾಣವನ್ನು ತನ್ನ ಪ್ರಿಯಪುತ್ರನಿಗೆ ಉಪದೇಶಿಸಿದರು. ॥ ೪೩ ॥ ಪರೀಕ್ಷಿತನೇ ! ಅನಂತರ ನಾರದಮಹರ್ಷಿಯು – ಸರಸ್ವತೀನದಿಯ ತೀರದಲ್ಲಿ ಕುಳಿತು ಪರಬ್ರಹ್ಮವನ್ನು ಧ್ಯಾನಿಸುತ್ತಿದ್ದ ಮಹಾತೇಜಸ್ವಿಗಳಾದ ವ್ಯಾಸಮುನಿಗಳಿಗೆ ಅದನ್ನು ಹಾಗೆಯೇ ಉಪದೇಶಮಾಡಿದರು. ವ್ಯಾಸಮಹಾಮುನಿಗಳು ಅದನ್ನು ನನಗೆ ಉಪದೇಶಿಸಿದರು. ॥ ೪೪ ॥ ನೀನು ನನ್ನಲ್ಲಿ – ವಿರಾಟ್‌ಪುರುಷ ನಿಂದ ಈ ಜಗತ್ತಿನ ಉತ್ಪತ್ತಿ ಹೇಗಾಯಿತು ? ಎಂದು ಪ್ರಶ್ನಿಸಿದೆಯಲ್ಲ! ಆ ಪ್ರಶ್ನೆಗೂ ಹಾಗೂ ನೀನು ಕೇಳಿದ ಇತರ ಪ್ರಶ್ನೆಗಳಿಗೂ ಈ ಭಾಗವತ ಪುರಾಣದ ರೂಪದಲ್ಲಿ ನಾನು ಉತ್ತರಿಸುವೆನು. ॥ ೪೫ ॥

*ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ
ದ್ವಿತೀಯಸ್ಕಂಧೇ ನವಮೋಽಧ್ಯಾಯಃ ॥ ೯ ॥

# ಹತ್ತನೆಯ ಅಧ್ಯಾಯ

## ಶ್ರೀಮದ್ಭಾಗವತದ ಹತ್ತು ಲಕ್ಷಣಗಳು

*ಶ್ರೀಶುಕ ಉವಾಚ*

ಅತ್ರ ಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ ।
ಮನ್ವಂತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ ॥ ೧ ॥

ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹ ಲಕ್ಷಣಮ್ ।
ವರ್ಣಯಂತಿ ಮಹಾತ್ಮಾನಃ ಶ್ರುತೇನಾರ್ಥೇನ ಚಾಂಜಸಾ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ ! ಈ ಶ್ರೀಮದ್ಭಾಗವತದಲ್ಲಿ ಸರ್ಗ, ವಿಸರ್ಗ, ಸ್ಥಾನ, ಪೋಷಣ, ಊತಿ, ಮನ್ವಂತರ, ಈಶಾನುಕಥಾ, ನಿರೋಧ, ಮುಕ್ತಿ ಮತ್ತು ಆಶ್ರಯ ಎಂಬ ಹತ್ತು ವಿಷಯಗಳ ವರ್ಣನೆ ಇದೆ. ॥ ೧ ॥ ಇದರಲ್ಲಿ ಹತ್ತನೆಯದಾದ 'ಆಶ್ರಯತತ್ತ್ವ'ವನ್ನು ಸರಿಯಾಗಿ ನಿಶ್ಚಯಿಸಲಿಕ್ಕಾಗಿ ಕೆಲವೆಡೆ ಶ್ರುತಿಗಳಿಂದ, ಕೆಲವೆಡೆ ತಾತ್ಪರ್ಯದಿಂದ, ಕೆಲವೆಡೆ ಎರಡರ ಅನುಕೂಲವಾದ ಅನುಭವದಿಂದ ಮಹಾತ್ಮರು ಉಳಿದ ಒಂಭತ್ತು ವಿಷಯಗಳನ್ನು ಸುಗಮವಾಗಿ ವರ್ಣಿಸಿರುವರು. ॥ ೨ ॥ ಈಶ್ವರನ ಪ್ರೇರಣೆಯಿಂದ ಗುಣಗಳಲ್ಲಿ ಕ್ಷೋಭೆ ಉಂಟಾಗಿ ರೂಪಾಂತರವಾದಾಗ ಉತ್ಪತ್ತಿಯಾದ ಆಕಾಶಾದಿ ಪಂಚಭೂತ

ಭೂತಮಾತ್ರೇಂದ್ರಿಯಧಿಯಾಂ ಜನ್ಮ ಸರ್ಗ ಉದಾಹೃತಃ ।
ಬ್ರಹ್ಮಣೋ ಗುಣವೈಷಮ್ಯಾದ್ವಿಸರ್ಗಃ ಪೌರುಷಃ ಸ್ಮೃತಃ ॥ ೩ ॥

ಸ್ಥಿತಿರ್ವೈಕುಂಠವಿಜಯಃ ಪೋಷಣಂ ತದನುಗ್ರಹಃ ।
ಮನ್ವಂತರಾಣಿ ಸದ್ಧರ್ಮ ಊತಯಃ ಕರ್ಮವಾಸನಾಃ ॥ ೪ ॥

ಅವತಾರಾನುಚರಿತಂ ಹರೇಶ್ಚಾಸ್ಯಾನುವರ್ತಿನಾಮ್ ।
ಸತಾಮೀಶಕಥಾಃ ಪ್ರೋಕ್ತಾ ನಾನಾಖ್ಯಾನೋಪಬೃಂಹಿತಾಃ ॥ ೫ ॥

ನಿರೋಧೋऽಸ್ಯಾನುಶಯನಮಾತ್ಮನಃ ಸಹ ಶಕ್ತಿಭಿಃ ।
ಮುಕ್ತಿರ್ಹಿತ್ವಾ ನ್ಯಥಾ ರೂಪಂ ಸ್ವರೂಪೇಣ ವ್ಯವಸ್ಥಿತಿಃ ॥ ೬ ॥

ಆಭಾಸಶ್ಚ ನಿರೋಧಶ್ಚ ಯತಶ್ಚಾಧ್ಯವಸೀಯತೇ ।
ಸ ಆಶ್ರಯಃ ಪರಂ ಬ್ರಹ್ಮ ಪರಮಾತ್ಮೇತಿ ಶಬ್ದ್ಯತೇ ॥ ೭ ॥

ಯೋऽಧ್ಯಾತ್ಮಿಕೋऽಯಂ ಪುರುಷಃ ಸೋऽಸಾವೇವಾಧಿದೈವಿಕಃ ।
ಯಸ್ತತ್ರೋಭಯವಿಚ್ಛೇದಃ ಪುರುಷೋ ಹ್ಯಾಧಿಭೌತಿಕಃ ॥ ೮ ॥

ಗಳೂ, ಶಬ್ದಾದಿ ತನ್ಮಾತ್ರೆಗಳೂ, ಇಂದ್ರಿಯಗಳೂ, ಅಹಂಕಾರ ಮತ್ತು ಮಹತ್ತತ್ತ್ವ ಇವುಗಳ ಉತ್ಪತ್ತಿಯನ್ನು 'ಸರ್ಗ' ಎಂದು ಕರೆಯುತ್ತಾರೆ. (ಗುಣಗಳ ಸಾಮ್ಯಾವಸ್ಥೆ ಇರುವತನಕ ಏನೂ ಆಗುವುದಿಲ್ಲ) ಪ್ರಕೃತಿಯಲ್ಲಿ ಗೊಂದಲ ಉಂಟಾದಾಗಲೇ ಸೃಷ್ಟಿ ಯಾಗುತ್ತದೆ. ಇದನ್ನೇ ಸರ್ಗವೆಂದು ಹೇಳುತ್ತಾರೆ. ಆ ವಿರಾಟ್ ಪುರುಷನಿಂದ ಉತ್ಪನ್ನರಾದ ಬ್ರಹ್ಮದೇವರಿಂದ ನಿರ್ಮಾಣಗೊಂಡ ವಿಭಿನ್ನ ಚರಾಚರ ಸೃಷ್ಟಿಯನ್ನು 'ವಿಸರ್ಗ ಎಂದು ಹೇಳುವರು. ॥ ೩ ॥ ಈ ವಿಶ್ವದ ಉತ್ಪತ್ತಿ, ಸ್ಥಿತಿ, ಸಂಹಾರ ಇವು ಮೂರೂ ಲೀಲಾ ರೂಪವಾಗಿ ಭಗವಂತನಿಂದ ಕ್ರಮವಾಗಿ ನಡೆಯುತ್ತಾ ಇರುತ್ತದೆ. ಈ ಮೂರರಲ್ಲಿ (ಸ್ಥಿತಿ) ಪಾಲಿಸುವುದು, ಜಗತ್ತಿನ ಸ್ಥಿತಿಯು ಇರುವುದಕ್ಕಾಗಿಯೇ ಭಗವಾನ್ ವಿಷ್ಣುವಿನ ಮೂಲಕವೇ ಇದರ ಪೋಷಣೆ ನಡೆಯುತ್ತದೆ. ಇದರಿಂದ ಭಗವಂತನ ಕೃಪೆ ಮತ್ತು ಅವನ ಶ್ರೇಷ್ಠತೆ ಸಿದ್ಧವಾಗುತ್ತದೆ. ಅದಕ್ಕಾಗಿ ಈ ವಿಶ್ವವನ್ನು ಪಾಲನೆ-ಸಂರಕ್ಷಿಸುವುದು 'ಸ್ಥಿತಿ' ಎಂದು ಹೇಳಲಾಗಿದೆ. ಜೊತೆಗೆ ಭಗವಂತನಿಂದ ಸುರಕ್ಷಿತವಾದ ಸೃಷ್ಟಿಯಲ್ಲಿ ಭಕ್ತರನ್ನು ಪೋಷಿಸುವುದನ್ನು 'ಪೋಷಣ' ಎಂದು ಹೇಳುತ್ತಾರೆ. ಪ್ರಜಾಪಾಲನೆರೂಪವಾದ ಶುದ್ಧ ಕರ್ಮವನ್ನು ಅನುಷ್ಠಾನಮಾಡುವ ಮನ್ವಂತರಗಳ ಅಧಿಪತಿಗಳ ಸದ್ಧರ್ಮವನ್ನು 'ಮನ್ವಂತರ' ಎಂದು ಹೇಳಲಾಗಿದೆ. ಕರ್ಮ ಬಂಧನದಲ್ಲಿ ತೊಡಗಿಸುವ ಜೀವಿಗಳ ಕರ್ಮವಾಸನೆಯನ್ನು 'ಊತಿ' ಎಂಬುದಾಗಿ ಹೇಳಿದೆ. ॥ ೪ ॥ ಬಗೆ-ಬಗೆಯ ಉಪಾಖ್ಯಾನಗಳಿಂದ ಶ್ರೀಭಗವಂತನ ಅವತಾರ ಕಥೆಗಳನ್ನು ಮತ್ತು ಅವನ ಭಕ್ತರ ಚರಿತ್ರೆಗಳನ್ನು 'ಈಶಾನುಕಥಾ' ಎಂದು ಕರೆಯುತ್ತಾರೆ. ಇದನ್ನು ಹಾಡಿ-ಶ್ರವಣಿಸಿ ಜೀವನು ಬ್ರಹ್ಮಸ್ವರೂಪವನ್ನು ಪಡೆದುಕೊಳ್ಳುವನು. ॥ ೫ ॥ ಭಗವಂತನು ಯೋಗನಿದ್ರೆಯಲ್ಲಿ ಮಲಗಿರುವಾಗ ಜೀವನು ತನ್ನ ಉಪಾಧಿಗಳೊಡನೆ ಆತನಲ್ಲಿ ಲಯಹೊಂದುವುದೇ 'ನಿರೋಧ'ವಾಗಿದೆ. ಅಜ್ಞಾನ ಕಲ್ಪಿತ ಕರ್ತೃತ್ವ, ಭೋಕ್ತೃತ್ವ ಮುಂತಾದ ಅನಾತ್ಮಭಾವವನ್ನು ಪರಿತ್ಯಜಿಸಿ ತನ್ನ ವಾಸ್ತವಿಕ ಸ್ವರೂಪವಾದ ಪರಮಾತ್ಮನಲ್ಲಿ ನೆಲೆಗೊಳ್ಳುವುದೇ 'ಮುಕ್ತಿ'ಯಾಗಿದೆ. ॥ ೬ ॥ ಪರೀಕ್ಷಿದ್ರಾಜನೇ ! ಈ ಚರಾಚರ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳು ಯಾವ ತತ್ತ್ವದಿಂದ ಪ್ರಕಾಶಿತವಾಗುತ್ತವೆಯೋ ಆ ಪರಬ್ರಹ್ಮವೇ 'ಆಶ್ರಯ' ಎನಿಸುತ್ತದೆ. ಅದನ್ನೇ ಪರಮಾತ್ಮನೆಂದು ಶಾಸ್ತ್ರಗಳು ಕರೆಯುತ್ತವೆ. ಆ ಪರಬ್ರಹ್ಮನೇ ಎಲ್ಲರ ಆಶ್ರಯವಾಗಿದ್ದಾನೆ. ಈ ಆಶ್ರಯತತ್ತ್ವವನ್ನು ತಿಳಿಯಲಿಕ್ಕಾಗಿಯೇ ಇತರ ಒಂಭತ್ತು ತತ್ತ್ವಗಳನ್ನು ನಿರೂಪಿಸಲಾಗಿದೆ. ॥ ೭ ॥ ಯಾವ ಪುರುಷನು ಆಧ್ಯಾತ್ಮಿಕ (ಜೀವ)ನೆಂದು ಹೇಳಲಾಗಿದೆಯೋ ಅವನನ್ನೇ ಅಧಿದೈವ (ಇಂದ್ರಿಯಗಳ ದೇವತೆಗಳು) ಎಂದೂ ಹೇಳುತ್ತಾರೆ. ಹೀಗೆಯೇ ವಾಸ್ತವವಾಗಿ ನೋಡಿದರೆ ಆಧಿಭೌತಿಕವೂ ಅವನೇ ಆಗಿದ್ದಾನೆ. ಆದರೆ ಪಾಂಚಭೌತಿಕ ಸ್ಥೂಲದೇಹದ ಕುರಿತು ಆತ್ಮಬುದ್ಧಿ ಉಂಟಾದ ಕಾರಣ ಜೀವನು ಈ ದೇಹವನ್ನು ಬೇರೆ ಎಂದು ತಿಳಿಯುತ್ತಾನೆ. ಆಧ್ಯಾತ್ಮಿಕ ಹಾಗೂ

ಏಕಮೇಕತರಾಭಾವೇ ಯದಾ ನೋಪಲಭಾಮಹೇ ।
ತ್ರಿತಯಂ ತತ್ರ ಯೋ ವೇದ ಸ ಆತ್ಮಾ ಸ್ವಾಶ್ರಯಾಶ್ರಯಃ ॥ ೯ ॥

ಪುರುಷೋಽಂಡಂ ವಿನಿರ್ಭಿದ್ಯ ಯದಾಸೌ ಸ ವಿನಿರ್ಗತಃ ।
ಆತ್ಮನೋಽಯನಮನ್ವಿಚ್ಛನ್ನ ಪೋಽಸ್ರಾಕ್ಷೀಚ್ಛುಚಿಃ ಶುಚೀಃ ॥ ೧೦ ॥

ತಾಸ್ವವಾತ್ಸೀತ್ ಸ್ವಸೃಷ್ಟಾಸು ಸಹಸ್ರಪರಿವತ್ಸರಾನ್ ।
ತೇನ ನಾರಾಯಣೋ ನಾಮ ಯದಾಪಃ ಪುರುಷೋದ್ಭವಾಃ ॥ ೧೧ ॥

ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥ ೧೨ ॥

ಏಕೋ ನಾನಾತ್ವಮನ್ವಿಚ್ಛನ್ ಯೋಗತಲ್ಪಾತ್ಸಮುತ್ಥಿತಃ ।
ವೀರ್ಯಂ ಹಿರಣ್ಮಯಂ ದೇವೋ ಮಾಯಯಾ ವ್ಯಸೃಜತ್ತ್ರಿಧಾ ॥ ೧೩ ॥

ಅಧಿದೈವಮಥಾಧ್ಯಾತ್ಮಮಧಿಭೂತಮಿತಿ ಪ್ರಭುಃ ।
ಯಥೈಕಂ ಪೌರುಷಂ ವೀರ್ಯಂ ತ್ರಿಧಾಭಿದ್ಯತ ತಚ್ಛೃಣು ॥ ೧೪ ॥

ಆಧಿದೈವಿಕಗಳನ್ನು ಬೇರೆ ಎಂದು ತಿಳಿಯುತ್ತಾನೆ. ಏಕೆಂದರೆ, ಈ ಮೂರರಲ್ಲಿ ಯಾವುದೇ ಒಂದು ಇಲ್ಲದಿದ್ದರೆ ಒಂದು ಮತ್ತೊಂದರ ಜ್ಞಾನ ಉಂಟಾಗುವುದಿಲ್ಲ. (ಉದಾಹರಣೆಗಾಗಿ – ಜೀವಾತ್ಮನೇ ಇಲ್ಲದಿದ್ದರೆ ಆಧಿದೈವಿಕ ಮತ್ತು ಆಧಿಭೌತಿಕ ಎರಡನ್ನೂ ತಿಳಿಯಲಾಗುವುದಿಲ್ಲ. ಇದೇ ಪ್ರಕಾರ ಇಂದ್ರಿಯಗಳ ದೇವತೆಗಳು ಇಲ್ಲದಿದ್ದರೂ ನಾವು ಉಳಿದ ಎರಡನ್ನು ತಿಳಿಯಲಾರೆವು. ಹಾಗೆಯೇ ಶರೀರ ಇಲ್ಲದಿದ್ದರೂ ನಾವು ಅವೆರಡನ್ನು ತಿಳಿಯಲಾರೆವು. ಮೂರೂ ಸೇರಿಯೇ ಒಂದು- ಮತ್ತೊಂದನ್ನು ತಿಳಿಯಲಾಗುತ್ತದೆ.) ಈ ಮೂರನ್ನೂ ತಿಳಿಯುವವನೇ ಪರಮಾತ್ಮನು. ಇವು ಮೂರೂ ಪರಮಾತ್ಮನದೇ ಸ್ವರೂಪವಾಗಿವೆ. ಓರ್ವ ಪರ ಮಾತ್ಮನಲ್ಲದೆ ಏನೂ ಇಲ್ಲ. ಅವನ ಆಶ್ರಯದಲ್ಲೇ ಎಲ್ಲವೂ ಇದೆ. ಆದ್ದರಿಂದ ಪರಮಾತ್ಮನನ್ನೇ ಆಶ್ರಯತತ್ತ್ವವೆಂದು ಹೇಳಲಾಗಿದೆ. ॥ ೮-೯ ॥

ಹಿಂದೆ ಹೇಳಿದ ವಿರಾಟ್‌ಪುರುಷನು ಬ್ರಹ್ಮಾಂಡವನ್ನು ಭೇದಿಸಿ ಹೊರಟಾಗ ಅವನು ತನಗೆ ನೆಲಸುವುದಕ್ಕೆ ಸ್ಥಾನವನ್ನು ಹುಡುಕತೊಡಗಿದನು. ಅದಕ್ಕಾಗಿ ಶುದ್ಧಸಂಕಲ್ಪನಾದ ಆ ಪುರುಷರೂಪನು ಪರಿಶುದ್ಧವಾದ 'ಜಲ'ವನ್ನು ಸೃಷ್ಟಿಸಿದನು. ॥ ೧೦ ॥ ವಿರಾಟ್ ಪುರುಷರೂಪನಾದ 'ನರ'ನಿಂದ ಉತ್ಪನ್ನವಾದ್ದರಿಂದ ಜಲಕ್ಕೆ 'ನಾರ' ಎಂದು ಹೆಸರಾಯಿತು. ತಾನೇ ನಿರ್ಮಿಸಿದ ಆ ನಾರವನ್ನು ನೆಲೆಯನ್ನಾಗಿ ಮಾಡಿಕೊಂಡು ಅದರಲ್ಲಿ ಆತನು ಸಾವಿರಾರು ವರ್ಷಗಳವರೆವಿಗೂ ಪವಡಿಸಿದ್ದರಿಂದ ಅವನು 'ನಾರಾಯಣ' ಎನಿಸಿದನು. ॥ ೧೧ ॥ ಭಗವಂತನಾದ ಆ ನಾರಾಯಣನ ಅನುಗ್ರಹದಿಂದಲೇ ದ್ರವ್ಯ, ಕರ್ಮ, ಕಾಲ, ಸ್ವಭಾವ ಮತ್ತು ಜೀವ ಮುಂತಾದವುಗಳು ತಮ್ಮ-ತಮ್ಮ ಕಾರ್ಯಗಳನ್ನು ನಡೆಸುತ್ತವೆ. ಆತನು ಉಪೇಕ್ಷೆ ಮಾಡಿದರೆ ಅವುಗಳಿಗೆ ಅಸ್ತಿತ್ವವೇ ಇಲ್ಲ. (ಮಹತ್ತಿನಿಂದ ಪೃಥ್ವಿವರೆಗಿನ ದ್ರವ್ಯಗಳು, ಪ್ರಾಣಿಗಳಿಗೆ ಜನ್ಮಾದಿಗಳಿಗೆ ಕಾರಣವಾದ ಕರ್ಮ, ಸತ್ವಾದಿಗುಣಗಳ ಬದಲಾವಣೆಗೆ ಕಾರಣವಾದ ಕಾಲ, ಪ್ರಕೃತಿಯ ಪರಿಣಾಮಹೊಂದುವಿಕೆಯೇ ಮುಂತಾದ ಸ್ವಭಾವ, ಸುಖ-ದುಃಖಾದಿಗಳನ್ನು ಅನುಭವಿಸುವ ಜೀವ-ಇವೆಲ್ಲದರ ಅಸ್ತಿತ್ವವು ಆ ನಾರಾಯಣನಿಂದಲೇ.) ॥ ೧೨ ॥ ಆ ಅದ್ವಿತೀಯ ಭಗವಾನ್ ನಾರಾಯಣನು ಯೋಗನಿದ್ರೆಯಿಂದ ಎಚ್ಚೆತ್ತು ತಾನು ಅನೇಕವಾಗಬೇಕೆಂದು ಸಂಕಲ್ಪಿಸಿದಾಗ, ತನ್ನ ಮಾಯೆಯಿಂದ ಅಖಿಲಬ್ರಹ್ಮಾಂಡದ ಬೀಜಸ್ವರೂಪ ತನ್ನ ಸುವರ್ಣಮಯ ವೀರ್ಯವನ್ನು ಅಧಿದೈವ, ಅಧ್ಯಾತ್ಮ ಅಧಿಭೂತ ಎಂಬ ಮೂರು ಭಾಗವಾಗಿ ವಿಂಗಡಿಸಿದನು. (ಅವುಗಳಲ್ಲಿ ದಿಕ್ಕು ಮುಂತಾದ ಅಭಿಮಾನಿ ದೇವತೆಗಳಿಂದ ಕೂಡಿದ ಹನ್ನೊಂದು ಇಂದ್ರಿಯಗಳ ಅಧಿಷ್ಠಾತೃ ದೇವತೆಗಳು ಅಧಿದೈವವೆಂದೂ, ಜೀವನು ಅಧ್ಯಾತ್ಮನೆಂದೂ, ಪೃಥ್ವಿಯೇ ಮುಂತಾದವುಗಳಲ್ಲಿರುವ ಗಂಧವೇ ಮುಂತಾದ ಗುಣಗಳು ಅಧಿಭೂತವೆಂದೂ ಕರೆಯಲ್ಪಡುವವು.) ವಿರಾಟ್‌ಪುರುಷನ ಒಂದೇ ವೀರ್ಯವು ಹೀಗೆ ಮೂರು ವಿಭಾಗವಾಗಿ ವಿಭಜಿಸಲ್ಪಟ್ಟಿತು. ಮುಂದೇನಾಯಿತೆಂಬುದನ್ನು ಹೇಳುತ್ತೇನೆ, ಕೇಳು. ॥ ೧೩-೧೪ ॥

ಅಂತಃಶರೀರ ಆಕಾಶಾತ್ ಪುರುಷಸ್ಯ ವಿಚೇಷ್ಟತಃ ।
ಓಜಃ ಸಹೋ ಬಲಂ ಜಜ್ಞೇ ತತಃ ಪ್ರಾಣೋ ಮಹಾನಸುಃ
॥ ೧೫ ॥

ಅನು ಪ್ರಾಣಂತಿ ಯಂ ಪ್ರಾಣಾಃ ಪ್ರಾಣಂತಂ ಸರ್ವಜಂತುಷು ।
ಅಪಾನಂತಮಪಾನಂತಿ ನರದೇವಮಿವಾನುಗಾಃ
॥ ೧೬ ॥

ಪ್ರಾಣೇನ ಕ್ಷಿಪತಾ ಕ್ಷುತ್ತೃಡಂತರಾ ಜಾಯತೇ ಪ್ರಭೋಃ ।
ಪಿಪಾಸತೋ ಜಕ್ಷತಶ್ಚ ಪ್ರಾಙ್ಮುಖಂ ನಿರಭಿದ್ಯತ
॥ ೧೭ ॥

ಮುಖತಸ್ತಾಲು ನಿರ್ಭಿನ್ನಂ ಜಿಹ್ವಾ ತತ್ರೋಪಜಾಯತೇ ।
ತತೋ ನಾನಾರಸೋ ಜಜ್ಞೇ ಜಿಹ್ವಯಾ ಯೋಽಧಿಗಮ್ಯತೇ
॥ ೧೮ ॥

ವಿವಕ್ಷೋರ್ಮುಖತೋ ಭೂಮ್ನೋ
ವಹ್ನಿರ್ವಾಗ್ ವ್ಯಾಹೃತಂ ತಯೋಃ ।
ಜಲೇ ವೈ ತಸ್ಯ ಸುಚಿರಂ
ನಿರೋಧಃ ಸಮಜಾಯತ ॥ ೧೯ ॥

ನಾಸಿಕೇ ನಿರಭಿದ್ಯೇತಾಂ ದೋಧೂಯತಿ ನಭಸ್ವತಿ ।
ತತ್ರ ವಾಯುರ್ಗಂಧವಹೋ ಘ್ರಾಣೋ ನಸಿ ಜಿಘೃಕ್ಷತಃ
॥ ೨೦ ॥

ಯದಾಽಽತ್ಮನಿ ನಿರಾಲೋಕಮಾತ್ಮಾನಂ ಚ ದಿದೃಕ್ಷತಃ ।
ನಿರ್ಭಿನ್ನೇ ಹ್ಯಕ್ಷಿಣೀ ತಸ್ಯ ಜ್ಯೋತಿಶ್ಚಕ್ಷುರ್ಗುಣಗ್ರಹಃ
॥ ೨೧ ॥

ಬೋಧ್ಯಮಾನಸ್ಯ ಋಷಿಭಿರಾತ್ಮನಸ್ತಜ್ಜಿಘೃಕ್ಷತಃ ।
ಕರ್ಣೌ ಚ ನಿರಭಿದ್ಯೇತಾಂ ದಿಶಃ ಶ್ರೋತ್ರಂ ಗುಣಗ್ರಹಃ
॥ ೨೨ ॥

ವಸ್ತುನೋ ಮೃದುಕಾಠಿನ್ಯಲಘುಗುರ್ವೋಷ್ಣಶೀತತಾಮ್ ।
ಜಿಘೃಕ್ಷತಸ್ತ್ವಙ್ನಿರ್ಭಿನ್ನಾ ತಸ್ಯಾಂ ರೋಮಮಹೀರುಹಾಃ ।
ತತ್ರ ಚಾಂತರ್ಬಹಿರ್ವಾತಸ್ತ್ವಚಾ ಲಬ್ಧಗುಣೋ ವೃತಃ
॥ ೨೩ ॥

ಆ ವಿರಾಟ್‌ಪುರುಷನು ಕ್ರಿಯಾಶಕ್ತಿಯಿಂದ ದೇಹವನ್ನು ಅಲ್ಲಾಡಿಸಿದಾಗ, ಆ ದೇಹದಲ್ಲಿದ್ದ ಆಕಾಶದಿಂದ ಇಂದ್ರಿಯಶಕ್ತಿ, ಮನಶ್ಶಕ್ತಿ, ಶರೀರಶಕ್ತಿಗಳು ಉಂಟಾದುವು. ಅವುಗಳಿಂದ ಅವೆಲ್ಲದರ ಪ್ರಭುವಾದ ಸೂತ್ರಾತ್ಮಕವಾದ ಮಹಾಪ್ರಾಣನು ಹುಟ್ಟಿದನು. ॥ ೧೫ ॥ ಸೇವಕರು ತಮ್ಮ ಪ್ರಭುವಿನ ಹಿಂದೆ-ಹಿಂದೆಯೇ ನಡೆಯುವಂತೆ ಶರೀರದಲ್ಲಿ ಎಲ್ಲ ಇಂದ್ರಿಯಗಳು ಪ್ರಾಣದ ಹಿಂದೆ-ಹಿಂದೆ ನಡೆಯುತ್ತವೆ. ಎಲ್ಲರ ಶರೀರಗಳಲ್ಲಿ ಪ್ರಾಣವು ಬಲಯುಕ್ತವಾಗಿದ್ದರೆ, ಇಂದ್ರಿಯಗಳಿಗೆ ಬಲ. ಅದು ಬಲಹೀನವಾದರೆ ಇಂದ್ರಿಯಗಳೂ ಬಲಹೀನರಾಗುತ್ತವೆ. ॥ ೧೬ ॥ ಪ್ರಾಣವಾಯುವು ವೇಗವಾಗಿ ಬಂದು-ಹೋಗತೊಡಗಿದಾಗ ವಿರಾಟ್ ಪುರುಷನಿಗೆ ಹಸಿವು-ಬಾಯಾರಿಕೆಯ ಅನುಭವವಾಯಿತು. ಆಹಾರ-ಪಾನೀಯಗಳ ಇಚ್ಛೆ ಉಂಟಾಗುತ್ತಲೇ ಮೊಟ್ಟಮೊದಲಿಗೆ ಅವನ ಶರೀರದಲ್ಲಿ ಬಾಯಿ ಪ್ರಕಟವಾಯಿತು. ॥ ೧೭ ॥ ಅದರಿಂದ ಅಣ್ಣಾಲಿಗೆಯೂ, ಅನಂತರ ರಸನೇಂದ್ರಿಯ (ನಾಲಿಗೆ) ಪ್ರಕಟವಾದುವು. ಇದಾದ ಬಳಿಕ ನಾಲಿಗೆಯು ಗ್ರಹಿಸುವ ಅನೇಕ ಪ್ರಕಾರದ ರಸಗಳು ಉತ್ಪನ್ನವಾದುವು. ॥ ೧೮॥ ಅವನಿಗೆ ಮಾತಾಡಲು ಇಚ್ಛೆ ಉಂಟಾದಾಗ ವಾಕ್ ಇಂದ್ರಿಯ, ಅದರ ಅಧಿಷ್ಠಾನ ದೇವತೆ ಅಗ್ನಿ ಮತ್ತು ಅದರ ವಿಷಯ ಮಾತಾಡುವುದು – ಇವು ಮೂರೂ ಪ್ರಕಟವಾದುವು. ಬಳಿಕ ಬಹಳ ದಿವಸಗಳವರೆಗೆ ಆ ಜಲದಲ್ಲೇ ಇದ್ದುಬಿಟ್ಟನು. ॥ ೧೯ ॥ ಶ್ವಾಸದ ವೇಗದಿಂದ 'ಮೂಗಿನ ಹೊಳ್ಳೆಗಳು' ಪ್ರಕಟವಾದುವು. ಅವನಿಗೆ ಮೂಸುವ ಇಚ್ಛೆಯಾದಾಗ ಮೂಗು ಘ್ರಾಣೇಂದ್ರಿಯವೂ, ಗಂಧವನ್ನು ಹರಡುವಂತಹ ಅದರ ದೇವತೆ ವಾಯುದೇವರೂ ಪ್ರಕಟಗೊಂಡರು. ॥ ೨೦ ॥ ಮೊದಲು ಆತನ ದೇಹದಲ್ಲಿ ಪ್ರಕಾಶವಿರಲಿಲ್ಲ. ಮತ್ತೆ ಅವನಿಗೆ ತನ್ನನ್ನು ಇತರರನ್ನೂ ನೋಡಬೇಕೆಂಬ ಇಚ್ಛೆ ಉಂಟಾದಾಗ ಕಣ್ಣುಗುಡ್ಡೆಗಳೂ, ಅದರ ಅಭಿಮಾನಿ ಸೂರ್ಯನು ಮತ್ತು ನೇತ್ರೇಂದ್ರಿಯವು ಪ್ರಕಟವಾಯಿತು. ಇದರಿಂದಲೇ ರೂಪದ ಗ್ರಹಣ ಸಾಧ್ಯವಾಯಿತು. ॥ ೨೧ ॥ ಅನಂತರ ವೇದರೂಪೀ ಋಷಿಗಳು ವಿರಾಟ್‌ಪುರುಷನನ್ನು ಸ್ತೋತ್ರಗಳಿಂದ ಎಚ್ಚರಿಸತೊಡಗಿದಾಗ ಅವನಿಗೆ ಕೇಳಬೇಕೆಂಬ ಇಚ್ಛೆಯಾಯಿತು. ಆಗಲೇ ಕಿವಿಗಳು, ಅದರ ಅಭಿಮಾನಿದೇವತೆಗಳು ದಿಕ್ಕುಗಳು ಮತ್ತು ಶ್ರೋತ್ರೇಂದ್ರಿಯವು ಪ್ರಕಟವಾಯಿತು. ॥ ೨೨ ॥ ಬಳಿಕ ಅವನು ವಸ್ತುಗಳ ಮೃದುತ್ವ, ಕಾಠಿನ್ಯ, ಲಘುತ್ವ, ಗುರುತ್ವ, ಉಷ್ಣತೆ, ಶೈತ್ಯ ಮುಂತಾದವುಗಳನ್ನು ಅರಿಯಲು ಬಯಸಿದಾಗ ಅವನ ಶರೀರದಲ್ಲಿ ಚರ್ಮ ಪ್ರಕಟವಾಯಿತು. ಪೃಥ್ವಿಯಿಂದ ಮರಗಳು ಹುಟ್ಟುವಂತೆ ಆ ಚರ್ಮದಿಂದ ರೋಮಗಳೂ ಮತ್ತು ಅದರ ಒಳಗೂ-ಹೊರಗೂ ವ್ಯಾಪಿಸಿರುವ ವಾಯುವು ಪ್ರಕಟವಾಯಿತು. ಸ್ಪರ್ಶವನ್ನು ಗ್ರಹಿಸುವ ತ್ವಗ್‌ಇಂದ್ರಿಯವೂ ಜೊತೆ-ಜೊತೆಯಲ್ಲೇ ಶರೀರದಲ್ಲಿ ಎಲ್ಲ ಕಡೆಗಳಲ್ಲಿ ಬಂದು ಸುತ್ತಿಕೊಂಡಿತು. ಅದರಿಂದ ಅವನಿಗೆ ಸ್ಪರ್ಶದ ಅನುಭವವಾಗತೊಡಗಿತು. ॥ ೨೩ ॥ ಅವನಿಗೆ

ಹಸ್ತೌ ರುರುಹತುಸ್ತಸ್ಯ ನಾನಾಕರ್ಮಚಿಕೀರ್ಷಯಾ ।
ತಯೋಸ್ತು ಬಲಮಿಂದ್ರಶ್ಚ ಆದಾನಮುಭಯಾಶ್ರಯಮ್ ॥ ೨೪ ॥

ನಾನಾಕರ್ಮಗಳನ್ನು ಮಾಡಬೇಕೆಂಬ ಇಚ್ಛೆ ಉಂಟಾದಾಗ ಅವನ ಕೈಗಳು ಮೂಡಿದವು. ಆ ಕೈಗಳಲ್ಲಿ ಪದಾರ್ಥಗಳನ್ನು ಗ್ರಹಣ ಮಾಡುವ ಶಕ್ತಿಯಾದ ಹಸ್ತೇಂದ್ರಿಯವೂ ಅದರ ಅಭಿಮಾನಿ ದೇವತೆಯಾದ ಇಂದ್ರನೂ ಪ್ರಕಟನಾದನು. ಆ ಇಬ್ಬರ ಆಶ್ರಯದಿಂದ ತೆಗೆದುಕೊಳ್ಳುವ – ಹಿಡಿದುಕೊಳ್ಳುವ ಕರ್ಮವೂ ಪ್ರಕಟವಾಯಿತು. ॥ ೨೪ ॥

ಗತಿಂ ಜಿಗೀಷತಃ ಪಾದೌ ರುರುಹಾತೇಽಭಿಕಾಮಿಕಾಮ್ ।
ಪದ್ಭ್ಯಾಂ ಯಜ್ಞಃ ಸ್ವಯಂ ಹವ್ಯಂ ಕರ್ಮಭಿಃ ಕ್ರಿಯತೇ ನೃಭಿಃ ॥ ೨೫ ॥

ಅವನಿಗೆ ಬಯಸಿದಲ್ಲಿಗೆ ಹೋಗಬೇಕೆಂಬ ಇಚ್ಛೆಯುಂಟಾದಾಗ ಅವನ ಶರೀರದಲ್ಲಿ ಕಾಲುಗಳು ಮೂಡಿದವು. ಚರಣಗಳ ಜೊತೆಗೆ ಚರಣೇಂದ್ರಿಯದ ಅಧಿಷ್ಠಾನ ದೇವತೆಯಾದ ಯಜ್ಞಪುರುಷ ಭಗವಾನ್ ವಿಷ್ಣುವು ಕಾಣಿಸಿಕೊಂಡನು. ಆ ಚರಣಗಳಲ್ಲಿ ನಡಿಗೆಯೆಂಬ ಕರ್ಮವು ಪ್ರಕಟವಾಯಿತು. ಮನುಷ್ಯನು ಇದೇ ಚರಣೇಂದ್ರಿಯದಿಂದ ನಡೆಯುತ್ತಾ ಯಜ್ಞಸಾಮಗ್ರಿಯನ್ನು ಸಂಗ್ರಹಿಸುತ್ತಾನೆ. ॥ ೨೫ ॥

ನಿರಭಿದ್ಯತ ಶಿಶ್ನೋ ವೈ ಪ್ರಜಾನಂದಾಮೃತಾರ್ಥಿನಃ ।
ಉಪಸ್ಥ ಆಸೀತ್ಕಾಮಾನಾಂ ಪ್ರಿಯಂ ತದುಭಯಾಶ್ರಯಮ್ ॥ ೨೬ ॥

ಅನಂತರ ಅವನಿಗೆ ಸಂತಾನ, ರತಿಸುಖ, ಸಂತತಿಯಿಂದುಂಟಾಗುವ ಸ್ವರ್ಗಾದಿಭೋಗಗಳನ್ನು ಅನುಭವಿಸ ಬೇಕೆಂಬ ಬಯಕೆ ಉಂಟಾದಾಗ ವಿರಾಟ್ ಪುರುಷನ ಶರೀರದಲ್ಲಿ ಲಿಂಗದ ಉತ್ಪತ್ತಿಯಾಯಿತು. ಅದರಲ್ಲಿ ಉಪಸ್ಥೇಂದ್ರಿಯವೂ ಅದರ ಅಭಿಮಾನಿದೇವತೆ ಪ್ರಜಾಪತಿಯು ಹಾಗೂ ಇವೆರಡನ್ನು ಆಶ್ರಯಿಸಿರುವ ಕಾಮಸುಖವು ಉಂಟಾಯಿತು. ॥ ೨೬ ॥

ಉತ್ಸಿಸೃಕ್ಷೋರ್ಧಾತುಮಲಂ ನಿರಭಿದ್ಯತ ವೈ ಗುದಮ್ ।
ತತಃ ಪಾಯುಸ್ತತೋ ಮಿತ್ರ ಉತ್ಸರ್ಗ ಉಭಯಾಶ್ರಯಃ ॥ ೨೭ ॥

ಆತನಿಗೆ ಮಲತ್ಯಾಗದ ಇಚ್ಛೆಯಾದಾಗ ಗುದದ್ವಾರ ಪ್ರಕಟವಾಯಿತು. ಅನಂತರ ಅದರಲ್ಲಿ ಪಾಯು-ಇಂದ್ರಿಯ ಮತ್ತು ಮಿತ್ರದೇವತೆಯೂ ಉತ್ಪನ್ನರಾದರು. ಇವೆರಡರಿಂದಲೇ ಮಲತ್ಯಾಗದ ಕ್ರಿಯೆಯು ನಡೆಯುವುದು. ॥ ೨೭ ॥

ಆಸಿಸೃಪ್ಸೋಃ ಪುರಃ ಪುರ್ಯಾ ನಾಭಿದ್ವಾರಮಪಾನತಃ ।
ತತ್ರಾಪಾನಸ್ತತೋ ಮೃತ್ಯುಃ ಪೃಥಕ್ತ್ವಮುಭಯಾಶ್ರಯಮ್ ॥ ೨೮ ॥

ಬಳಿಕ ವಿರಾಟ್‌ಪುರುಷನಿಗೆ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಹೋಗಬೇಕೆಂಬ ಅಭಿಲಾಷೆ ಉಂಟಾಗಲು, ಆಗ ಹೊಕ್ಕಳಿನ ದ್ವಾರವು ಪ್ರಕಟವಾಯಿತು. ಅದರಿಂದ ಅಪಾನವೂ, ಮೃತ್ಯುದೇವತೆಯೂ ಪ್ರಕಟಗೊಂಡರು. ಅವರಿಬ್ಬರ ಆಶ್ರಯದಿಂದಲೇ ಪ್ರಾಣಾಪಾನಗಳ ಅಗಲಿಕೆ ಅಂದರೆ ಮೃತ್ಯುವು ಆಗುವುದು. ॥ ೨೮ ॥

ಆದಿತ್ಸೋರನ್ನಪಾನಾನಾಮಾಸನ್ ಕುಕ್ಷ್ಯಂತ್ರನಾಡಯಃ ।
ನದ್ಯಃ ಸಮುದ್ರಾಶ್ಚ ತಯೋಸ್ತುಷ್ಟಿಃ ಪುಷ್ಟಿಸ್ತದಾಶ್ರಯೇ ॥ ೨೯ ॥

ವಿರಾಟ್‌ಪುರುಷನಿಗೆ ಅನ್ನ-ಪಾನೀಯಗಳನ್ನು ಸ್ವೀಕರಿಸಬೇಕೆಂಬ ಇಚ್ಛೆಯುಂಟಾದಾಗ ಹೊಟ್ಟೆಯೆಂಬ ಇಂದ್ರಿಯಸ್ಥಾನವು, ಕರುಳು-ನರಗಳೆಂಬ ಇಂದ್ರಿಯಗಳು ಉಂಟಾದುವು. ಜೊತೆಗೇ ಹೊಟ್ಟೆಯ ದೇವತೆ ಸಮುದ್ರವೂ, ನಾಡಿಗಳ ದೇವತೆ ನದಿಗಳೂ ಹಾಗೂ ತುಷ್ಟಿ ಮತ್ತು ಪುಷ್ಟಿ ಇವೆರಡೂ, ಅವುಗಳ ಆಶ್ರಿತ ವಿಷಯಗಳೂ ಉತ್ಪನ್ನವಾದುವು. ॥ ೨೯ ॥

ನಿದಿಧ್ಯಾಸೋರಾತ್ಮಮಾಯಾಂ ಹೃದಯಂ ನಿರಭಿದ್ಯತ ।
ತತೋ ಮನಸ್ತತಶ್ಚಂದ್ರಃ ಸಂಕಲ್ಪಃ ಕಾಮ ಏವ ಚ ॥ ೩೦ ॥

ಬಳಿಕ ಆ ವಿರಾಟ್ ಪುರುಷನು ತನ್ನ ಮಾಯಾಶಕ್ತಿಯನ್ನು ಕುರಿತು ವಿಚಾರಮಾಡಲು ಬಯಸಿದಾಗ ಹೃದಯವೆಂಬ ಇಂದ್ರಿಯವುಂಟಾಯಿತು. ಅದರಿಂದ ಮನಸ್ಸೆಂಬ ಇಂದ್ರಿಯವೂ, ಅದರ ದೇವತೆಯಾದ ಚಂದ್ರನೂ ಮತ್ತು ವಿಷಯ ಕಾಮನೆ-ಸಂಕಲ್ಪಗಳೆಂಬ ವಿಷಯಗಳೂ ಉತ್ಪನ್ನವಾದುವು. (ಹೀಗೆ ಸಮಷ್ಟಿರೂಪವಾದ ವಿರಾಟ್‌ಪುರುಷನಿಂದ ಆಧ್ಯಾತ್ಮಿಕ, ಅಧಿದೈವಿಕ, ಆಧಿಭೌತಿಕಗಳೆಂಬ ಭೇದಾನುಸಾರ ವ್ಯಷ್ಟಿರೂಪವಾಗಿ ಅವಯವಗಳು ಉಂಟಾದುವು. ಇನ್ನು ಅವುಗಳ ಅಂಶಗಳ ಉತ್ಪತ್ತಿಯನ್ನು ಹೇಳುವೆನು ಕೇಳು.) ॥ ೩೦ ॥ ಆ

ತ್ವಕ್ಚರ್ಮಮಾಂಸರುಧಿರಮೇದೋಮಜ್ಜಾಸ್ಥಿಧಾತವಃ ।
ಭೂಮ್ಯಪ್ತೇಜೋಮಯಾಃ ಸಪ್ತ
ಪ್ರಾಣೋ ವ್ಯೋಮಾಂಬುವಾಯುಭಿಃ ॥ ೩೧ ॥

ಗುಣಾತ್ಮಕಾನೀಂದ್ರಿಯಾಣಿ ಭೂತಾದಿಪ್ರಭವಾ ಗುಣಾಃ ।
ಮನಃ ಸರ್ವವಿಕಾರಾತ್ಮಾ ಬುದ್ಧಿರ್ವಿಜ್ಞಾನರೂಪಿಣೀ
॥ ೩೨ ॥

ಏತದ್ಭಗವತೋ ರೂಪಂ ಸ್ಥೂಲಂ ತೇ ವ್ಯಾಹೃತಂ ಮಯಾ ।
ಮಹ್ಯಾದಿಭಿಶ್ಚಾವರಣೈರಷ್ಟಭಿರ್ಬಹಿರಾವೃತಮ್
॥ ೩೩ ॥

ಅತಃ ಪರಂ ಸೂಕ್ಷ್ಮತಮಮವ್ಯಕ್ತಂ ನಿರ್ವಿಶೇಷಣಮ್ ।
ಅನಾದಿಮಧ್ಯನಿಧನಂ ನಿತ್ಯಂ ವಾಙ್ಮನಸಃ ಪರಮ್
॥ ೩೪ ॥

ಅಮುನೀ ಭಗವದ್ರೂಪೇ ಮಯಾ ತೇ ಅನುವರ್ಣಿತೇ ।
ಉಭೇ ಅಪಿ ನ ಗೃಹ್ಣಂತಿ ಮಾಯಾಸೃಷ್ಟೇ ವಿಪಶ್ಚಿತಃ
॥ ೩೫ ॥

ಸ ವಾಚ್ಯವಾಚಕತಯಾ ಭಗವಾನ್ ಬ್ರಹ್ಮರೂಪಧೃಕ್ ।
ನಾಮರೂಪಕ್ರಿಯಾ ಧತ್ತೇ ಸಕರ್ಮಾಕರ್ಮಕಃ ಪರಃ
॥ ೩೬ ॥

ಪ್ರಜಾಪತೀನ್ಮನೂನ್ ದೇವಾನೃಷೀನ್ ಪಿತೃಗಣಾನ್ಪೃಥಕ್ ।
ಸಿದ್ಧಚಾರಣಗಂಧರ್ವಾನ್ ವಿದ್ಯಾಧ್ರಾಸುರಗುಹ್ಯಕಾನ್
॥ ೩೭ ॥

ಕಿನ್ನರಾಪ್ಸರಸೋ ನಾಗಾನ್ ಸರ್ಪಾನ್ ಕಿಂಪುರುಷೋರಗಾನ್ ।
ಮಾತೄ ರಕ್ಷಃಪಿಶಾಚಾಂಶ್ಚ ಪ್ರೇತಭೂತವಿನಾಯಕಾನ್
॥ ೩೮ ॥

ಕೂಷ್ಮಾಂಡೋನ್ಮಾದವೇತಾಲಾನ್ಯಾತುಧಾನಾನ್ಗ್ರಹಾನಪಿ ।
ಖಗಾನ್ಮೃಗಾನ್ಪಶೂನ್ವೃಕ್ಷಾನ್ಗಿರೀನ್ನೃಪ ಸರೀಸೃಪಾನ್
॥ ೩೯ ॥

ದ್ವಿವಿಧಾಶ್ಚತುರ್ವಿಧಾ ಯೇಽನ್ಯೇ ಜಲಸ್ಥಲನಭೌಕಸಃ ।
ಕುಶಲಾಕುಶಲಾ ಮಿಶ್ರಾಃ ಕರ್ಮಣಾಂ ಗತಯಸ್ತ್ವಿಮಾಃ
॥ ೪೦ ॥

ವಿರಾಟ್‌ಪುರುಷನ ಶರೀರದಲ್ಲಿ ಪೃಥ್ವಿ, ಜಲ, ತೇಜಸ್ಸುಗಳಿಂದ ತ್ವಕ್, ಚರ್ಮ, ಮಾಂಸ, ರಕ್ತ, ಮೇದಸ್ಸು ಮಜ್ಜೆ ಅಸ್ಥಿಗಳೆಂಬ ಏಳು ಧಾತುಗಳು ಪ್ರಕಟಗೊಂಡವು. ಹಾಗೆಯೇ ಆಕಾಶ, ಜಲ, ವಾಯುಗಳಿಂದ ಪ್ರಾಣಗಳ ಉತ್ಪತ್ತಿಯೂ ಆಯಿತು. ॥ ೩೧ ॥ ಶ್ರೋತ್ರಾದಿ ಎಲ್ಲ ಇಂದ್ರಿಯಗಳು ಶಬ್ದಾದಿ ವಿಷಯಗಳನ್ನು ಗ್ರಹಣ ಮಾಡುವಂತಹ ಆ ವಿಷಯಗಳು ಅಹಂಕಾರದಿಂದ ಉತ್ಪನ್ನ ವಾಗಿವೆ. ಮನಸ್ಸು-ಕಾಮ, ಸಂಕಲ್ಪ ವಿಕಲ್ಪ ಮುಂತಾದ ಎಲ್ಲ ವಿಕಾರಗಳ ಉತ್ಪತ್ತಿ ಸ್ಥಾನವಾಗಿದೆ. ಬುದ್ಧಿಯು ಸಮಸ್ತ ಪದಾರ್ಥ ಗಳ ಅರಿವನ್ನು ಉಂಟುಮಾಡುತ್ತದೆ. ॥ ೩೨ ॥ ಹೀಗೆ ಭಗವಂತನ ಈ ಸ್ಥೂಲರೂಪವನ್ನು ನಿನಗೆ ವರ್ಣಿಸಿರುವೆನು. ಇದು ಹೊರಗಡೆ ಯಿಂದ ಪೃಥಿವೀ, ಜಲ, ತೇಜಸ್ಸು ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ ಮತ್ತು ಪ್ರಕೃತಿ ಈ ಎಂಟು ಆವರಣಗಳಿಂದ ಸುತ್ತು ವರಿದಿದೆ. ॥ ೩೩ ॥ ಈ ಸ್ಥೂಲರೂಪಕ್ಕಿಂತ ಪರವಾದ, ಉತ್ತಮ ವಾದ ಭಗವಂತನ ಸೂಕ್ಷ್ಮರೂಪವಿದೆ. ಇದು ಅವ್ಯಕ್ತವೂ, ನಿರ್ವಿ ಶೇಷವೂ, ಆದಿ-ಮಧ್ಯಾಂತರರಹಿತವೂ, ನಿತ್ಯವೂ ಆದುದು. ಮಾತು-ಮನಸ್ಸುಗಳಿಗೆ ಅಗೋಚರವಾದುದು. ॥ ೩೪ ॥

ನಾನು ನಿನಗೆ ಈವರೆಗೆ ವರ್ಣಿಸಿದ ಭಗವಂತನ ಸ್ಥೂಲ-ಸೂಕ್ಷ್ಮ ವ್ಯಕ್ತ-ಅವ್ಯಕ್ತಗಳೆರಡೂ ಮಾಯೆಯಿಂದ ರಚಿತವಾಗಿವೆ. ಅದರಿಂದ ವಿದ್ವಾಂಸರಾದವರು ಇವೆರಡನ್ನೂ ಸ್ವೀಕರಿಸುವುದಿಲ್ಲ. ॥ ೩೫ ॥ (ಇನ್ನು ಭಗವಂತನ ಗುಣ ಕರ್ಮಗಳನ್ನು ಹೇಳುತ್ತೇನೆ –) ನಿಜವಾಗಿ ಭಗವಂತನು ನಿಷ್ಕ್ರಿಯನಾಗಿದ್ದಾನೆ. ತನ್ನ ಶಕ್ತಿ (ಸಂಕಲ್ಪ) ಯಿಂದಲೇ ಸಕ್ರಿಯನಾಗುತ್ತಾನೆ. ಮತ್ತೆ ಅವನೇ ಬ್ರಹ್ಮನ ಅಥವಾ ವಿರಾಟ್ ರೂಪವನ್ನು ಧರಿಸಿ, ವಾಚ್ಯ-ವಾಚಕ, ಶಬ್ದ ಮತ್ತು ಅದರ ಅರ್ಥ ಇವುಗಳ ರೂಪದಲ್ಲಿ ಪ್ರಕಟನಾಗುತ್ತಾನೆ. ಬಳಿಕ ಅನೇಕ ನಾಮ, ರೂಪ, ಕ್ರಿಯೆಗಳನ್ನು ಸ್ವೀಕರಿಸುತ್ತಾನೆ. ವಾಸ್ತವವಾಗಿ ಅವನು ಪರಬ್ರಹ್ಮನಾಗಿದ್ದಾನೆ. ನಿರ್ಗುಣ, ನಿರಾಕಾರ, ಭಗವಂತ ನಾಗಿದ್ದಾನೆ. ॥ ೩೬ ॥ ಪರೀಕ್ಷಿದ್ರಾಜನೇ! ಮರೀಚಿಯೇ ಮುಂತಾದ ನವಪ್ರಜಾಪತಿಗಳೂ, ಸ್ವಾಯಂಭುವನೇ ಆದಿ ಹದಿನಾಲ್ಕು ಮನು ಗಳೂ, ಇಂದ್ರಾದಿದೇವತೆಗಳೂ, ಋಷಿಗಳೂ, ಪಿತೃಗಳೂ, ಸಿದ್ಧರೂ, ಚಾರಣರೂ, ಗಂಧರ್ವರೂ, ವಿದ್ಯಾಧರರೂ, ಅಸುರರೂ, ಯಕ್ಷರೂ, ಕಿನ್ನರರೂ, ಅಪ್ಸರೆಯರೂ, ನಾಗರೂ, ಸರ್ಪಗಳೂ, ಕಿಂ ಪುರುಷರೂ, ಉರಗರೂ, ಮಾತೃಕೆಯರೂ, ರಾಕ್ಷಸರೂ, ಪಿಶಾಚಿ ಗಳೂ, ಪ್ರೇತಗಳೂ, ಭೂತಗಳೂ, ವಿನಾಯಕರೂ, ಕೂಷ್ಮಾಂಡರೂ, ಉನ್ಮಾದರೂ, ಬೇತಾಳರೂ, ಯಾತುಧಾನರೂ, ಗ್ರಹರೂ, ಪಕ್ಷಿಗಳೂ, ಮೃಗಗಳೂ, ಪಶುಗಳೂ, ವೃಕ್ಷಗಳೂ, ಪರ್ವತಗಳೂ, ಸರೀಸೃಪ ಗಳೂ ಮುಂತಾದ ಪ್ರಪಂಚದಲ್ಲಿರುವ ನಾಮ-ರೂಪಗಳೆಲ್ಲವೂ ಭಗವಂತನದೇ ಆಗಿವೆ. ॥ ೩೭-೩೯ ॥ ಜಗತ್ತಿನಲ್ಲಿ ಸ್ಥಾವರ- ಜಂಗಮವೆಂಬ ಇಬ್ಬಗೆಯ ಹಾಗೂ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜವೆಂಬ ಭೇದದಿಂದ ನಾಲ್ಕು ಪ್ರಕಾರದ ಜಲಚರ,

ಸತ್ತ್ವಂ ರಜಸ್ತಮ ಇತಿ ತಿಸ್ರಃ ಸುರನೃನಾರಕಾಃ ।
ತತ್ರಾಪ್ಯೇಕೈಕಶೋ ರಾಜನ್ ಭಿದ್ಯಂತೇ ಗತಯಸ್ತ್ರಿಧಾ ।
ಯದೈಕೈಕತರೋಽನ್ಯಾಭ್ಯಾಂ ಸ್ವಭಾವ ಉಪಹನ್ಯತೇ ॥ ೪೧ ॥

ಸ ಏವೇದಂ ಜಗದ್ಧಾತಾ ಭಗವಾಂಧರ್ಮರೂಪಧೃಕ್ ।
ಪುಷ್ಣಾತಿ ಸ್ಥಾಪಯನ್ ವಿಶ್ವಂ ತಿರ್ಯಙ್ನರಸುರಾತ್ಮಭಿಃ ॥ ೪೨ ॥

ತತಃ ಕಾಲಾಗ್ನಿ ರುದ್ರಾತ್ಮಾ ಯತ್ಸೃಷ್ಟಮಿದಮಾತ್ಮನಃ ।
ಸಂನಿಯಚ್ಛತಿ ಕಾಲೇನ ಘನಾನೀಕಮಿವಾನಿಲಃ ॥ ೪೩ ॥

ಇತ್ಥಂಭಾವೇನ ಕಥಿತೋ ಭಗವಾನ್ ಭಗವತ್ತಮಃ ।
ನೇತ್ಥಂಭಾವೇನ ಹಿ ಪರಂ ದ್ರಷ್ಟುಮರ್ಹಂತಿ ಸೂರಯಃ ॥ ೪೪ ॥

ನಾಸ್ಯ ಕರ್ಮಣಿ ಜನ್ಮಾದೌ ಪರಸ್ಯಾನುವಿಧೀಯತೇ ।
ಕರ್ತೃತ್ವಪ್ರತಿಷೇಧಾರ್ಥಂ ಮಾಯಯಾರೋಪಿತಂ ಹಿ ತತ್ ॥ ೪೫ ॥

ಅಯಂ ತು ಬ್ರಹ್ಮಣಃ ಕಲ್ಪಃ ಸವಿಕಲ್ಪ ಉದಾಹೃತಃ ।
ವಿಧಿಃ ಸಾಧಾರಣೋ ಯತ್ರ ಸರ್ಗಾಃ ಪ್ರಾಕೃತವೈಕೃತಾಃ ॥ ೪೬ ॥

ಪರಿಮಾಣಂ ಚ ಕಾಲಸ್ಯ ಕಲ್ಪಲಕ್ಷಣವಿಗ್ರಹಮ್ ।
ಯಥಾ ಪುರಸ್ತಾದ್ವ್ಯಾಖ್ಯಾಸ್ಯೇ ಪಾದ್ಮಂ ಕಲ್ಪಮಥೋ ಶೃಣು ॥ ೪೭ ॥

*ಶೌನಕ ಉವಾಚ*

ಯದಾಹ ನೋ ಭವಾನ್ಸೂತ ಕ್ಷತ್ತಾ ಭಾಗವತೋತ್ತಮಃ ।
ಚಚಾರ ತೀರ್ಥಾನಿ ಭುವಸ್ತ್ಯಕ್ತ್ವಾ ಬಂಧೂನ್ಸುದುಸ್ತ್ಯಜಾನ್ ॥ ೪೮ ॥

ಸ್ಥಳಚರ, ನಭಚರ ಎಷ್ಟು ಪ್ರಾಣಿಗಳಿವೆಯೋ ಅವೆಲ್ಲವುಗಳ ಶುಭ-ಅಶುಭ ಮತ್ತು ಮಿಶ್ರಿತ ಕರ್ಮಗಳನುಸಾರ ಗತಿಯುಂಟಾಗುತ್ತದೆ. ॥ ೪೦ ॥ ಸತ್ತ್ವಗುಣದ ಪ್ರಧಾನತೆಯಿಂದ ದೇವತಾ ಯೋನಿಯೂ, ರಜೋಗುಣದ ಪ್ರಧಾನತೆಯಿಂದ ಮನುಷ್ಯ ಯೋನಿಯೂ, ತಮೋಗುಣದ ಪ್ರಧಾನತೆಯಿಂದ ನಾರಕೀಯ ಯೋನಿಗಳೂ ದೊರೆಯುತ್ತವೆ. ಈ ಗುಣಗಳಲ್ಲಿಯೂ ಒಂದು ಗುಣವು ಇನ್ನೆರಡು ಗುಣಗಳಿಂದ ಆಕ್ರಮಿಸಲ್ಪಟ್ಟಾಗ ಪ್ರತಿಯೊಂದರ ಮೂರು-ಮೂರು ಭೇದಗಳಾಗುವವು. ॥ ೪೧ ॥ ಆ ಭಗವಂತನೇ ಧರ್ಮಮಯ ವಿಷ್ಣುರೂಪವನ್ನು ಸ್ವೀಕರಿಸಿ, ದೇವತೆ, ಮನುಷ್ಯ, ಪಶು-ಪಕ್ಷಿ ಮುಂತಾದ ರೂಪಗಳಲ್ಲಿ ಅವತರಿಸಿ ವಿಶ್ವದ ಪಾಲನೆ- ಪೋಷಣೆಗಳನ್ನು ಮಾಡುತ್ತಾನೆ. ॥ ೪೨ ॥ ಪ್ರಳಯ ಸಮಯ ಬಂದಾಗ ಆ ಭಗವಂತನೇ ಕಾಲಾಗ್ನಿಸ್ವರೂಪೀ ರುದ್ರನ ರೂಪವನ್ನು ಸ್ವೀಕರಿಸಿ – ವಾಯುವು ಮೇಘಮಾಲೆಯನ್ನು ತನ್ನಲ್ಲಿ ಲಯಗೊಳಿಸಿಕೊಳ್ಳುವಂತೆ ತಾನೇ ಸೃಷ್ಟಿಸಿದ ವಿಶ್ವವನ್ನು ಉಪಸಂಹಾರಮಾಡಿಕೊಂಡುಬಿಡುತ್ತಾನೆ. ॥ ೪೩ ॥

ಪರೀಕ್ಷಿದ್ರಾಜನೇ! ಅಚಿಂತ್ಯ ಐಶ್ವರ್ಯವುಳ್ಳ ಭಗವಂತನನ್ನು ಭಾಗವತೋತ್ತಮರು ಇದೇ ರೀತಿಯಲ್ಲಿ ವರ್ಣಿಸಿರುವರು. ಆದರೆ ತತ್ತ್ವಜ್ಞಾನಿಗಳು ಮಾತ್ರ ಕೇವಲ ಸೃಷ್ಟಿ ಸ್ಥಿತಿ, ಲಯಗಳನ್ನು ಮಾಡುವಷ್ಟೇ ರೂಪದಲ್ಲಿ ಅವನನ್ನು ಸಂದರ್ಶಿಸಲು ಬಯಸುವುದಿಲ್ಲ. ಏಕೆಂದರೆ ಅವನಾದರೋ ಇದರಿಂದ ಅತೀತನೂ ಆಗಿದ್ದಾನೆ, ಗುಣಾತೀತನಾಗಿದ್ದಾನೆ, ಎಲ್ಲಕ್ಕಿಂತ ಮಹತ್ತಾಗಿದ್ದಾನೆ ಎಂದು ತಿಳಿಯುತ್ತಾರೆ. ॥ ೪೪ ॥ ಸೃಷ್ಟಿರಚನಾದಿ ಕರ್ಮಗಳನ್ನು ಹೇಳಿ ಪೂರ್ಣ ಪರಮಾತ್ಮನಲ್ಲಿ ಕರ್ಮ ಅಥವಾ ಕರ್ತೃತ್ವದ ಸಂಬಂಧವನ್ನು ಆರೋಪಿಸಿ ನಿರೂಪಿಸಲಿಲ್ಲ, ಆದಾದರೋ ಮಾಯೆಯಿಂದ ಆರೋಪಿತನಾದ ಕಾರಣ ಕರ್ತೃತ್ವದ ನಿಷೇಧಮಾಡಲೆಂದೇ ನಿರೂಪಿಸಲಾಗಿದೆ. ॥ ೪೫ ॥ ಇದನ್ನು ನಾನು ಬ್ರಹ್ಮದೇವರ ಮಹಾಕಲ್ಪದ ಅವಾಂತರ ಕಲ್ಪಗಳೊಡನೆ ವರ್ಣಿಸುವೆನು. ಎಲ್ಲ ಕಲ್ಪಗಳಲ್ಲಿ ಸೃಷ್ಟಿಯೂ ಒಂದೇ ರೀತಿ ಇರುತ್ತದೆ. ಆದರೆ ಇಷ್ಟು ಭಾಗದಲ್ಲಿ ಮಾತ್ರ ವ್ಯತ್ಯಾಸ ವಿರುತ್ತದೆ – ಮಹಾಕಲ್ಪದ ಪ್ರಾರಂಭದಲ್ಲಿ ಪ್ರಕೃತಿಯಿಂದ ಕ್ರಮವಾಗಿ ಮಹತ್ತತ್ತ್ವಾದಿಗಳ ಉತ್ಪತ್ತಿಯಾಗುತ್ತದೆ ಮತ್ತು ಕಲ್ಪಗಳ ಪ್ರಾರಂಭ ದಲ್ಲಿ ಪ್ರಾಕೃತ ಸೃಷ್ಟಿಯಾದರೋ ಹಾಗೆಯೇ ಇರುತ್ತದೆ. ಚರಾಚರ ಪ್ರಾಣಿಗಳ ವೈಕೃತಿಕ ಸೃಷ್ಟಿಯು ಹೊಸದಾಗಿ ಆಗುತ್ತದೆ. ॥ ೪೬ ॥ ರಾಜೇಂದ್ರಾ! ಕಾಲದ ಪರಿಮಾಣ, ಕಲ್ಪ ಮತ್ತು ಅದರ ಅಂತರ್ಗತ ಮನ್ವಂತರಗಳ ವರ್ಣನೆ ಮುಂದೆ ಮಾಡಲಾಗುವುದು. ಈಗ ನೀನು ಪಾದ್ಮಕಲ್ಪದ ವರ್ಣನೆಯನ್ನು ಸಾವಧಾನವಾಗಿ ಕೇಳು. ॥ ೪೭ ॥

**ಶೌನಕರು ಕೇಳಿದರು** – ಸೂತಪುರಾಣಿಕರೇ! ಭಗವಂತನ ಪರಮಭಕ್ತ ವಿದುರನು ತೊರೆಯಲು ಕಷ್ಟಸಾಧ್ಯರಾದ ಬಂಧುಗಳನ್ನು ತೊರೆದು ತೀರ್ಥಯಾತ್ರೆ ಮಾಡುತ್ತಿದ್ದನು ಎಂದು ನೀವು

**ಕುತ್ರ ಕೌಷಾರವೇಸ್ತಸ್ಯ ಸಂವಾದೋಽಧ್ಯಾತ್ಮ ಸಂಶ್ರಿತಃ ।**
**ಯದ್ವಾ ಸ ಭಗವಾಂಸ್ತಸ್ಮೈ ಪೃಷ್ಟಸ್ತತ್ತ್ವ ಮುವಾಚ ಹ ॥ ೪೯ ॥**

**ಬ್ರೂಹಿ ನಸ್ತದಿದಂ ಸೌಮ್ಯ ವಿದುರಸ್ಯ ವಿಚೇಷ್ಟಿತಮ್ ।**
**ಬಂಧು ತ್ಯಾಗನಿಮಿತ್ತಂ ಚ ತಥೈವಾಗತವಾನ್ಪುನಃ ॥ ೫೦ ॥**

*ಸೂತ ಉವಾಚ*

**ರಾಜ್ಞಾ ಪರೀಕ್ಷಿತಾ ಪೃಷ್ಟೋ ಯದವೋಚನ್ಮಹಾಮುನಿಃ ।**
**ತದ್ವೋಽಭಿಧಾಸ್ಯೇ ಶೃಣುತ ರಾಜ್ಞಃ ಪ್ರಶ್ನಾನುಸಾರತಃ ॥ ೫೧ ॥**

ನಮಗೆ ಹೇಳಿರುವಿರಿ. ॥ ೪೮ ॥ ಆ ಯಾತ್ರೆಯಲ್ಲಿ ಮೈತ್ರೇಯ ಋಷಿಗಳೊಂದಿಗೆ ಅಧ್ಯಾತ್ಮಿಕ ವಿಷಯವಾಗಿ ಸಂಭಾಷಣೆ ನಡೆಯಿತು. ಅವನು ಪ್ರಶ್ನಿಸಿದಾಗ ಮೈತ್ರೇಯರು ಯಾವ ತತ್ತ್ವವನ್ನು ಉಪದೇಶಿಸಿದರು ? ॥ ೪೯ ॥ ಸೂತಪುರಾಣಿಕರೇ ! ನಿಮ್ಮ ಸ್ವಭಾವವು ತುಂಬಾ ಸೌಮ್ಯವಾಗಿದೆ. ನೀವು ವಿದುರನ ಆ ಚರಿತ್ರೆಯನ್ನು ನಮಗೆ ಹೇಳಿರಿ. ಅವರು ಬಂಧು-ಮಿತ್ರರನ್ನು ಏಕೆ ಬಿಟ್ಟು ಹೋದರು ? ಮತ್ತೆ ಪುನಃ ಅವರ ಬಳಿಗೆ ಏಕೆ ಮರಳಿದರು ? ॥ ೫೦ ॥

**ಸೂತಪುರಾಣಿಕರು ಹೇಳಿದರು** – ಶೌನಕಾದಿ ಮಹರ್ಷಿಗಳೇ! ರಾಜಾ ಪರೀಕ್ಷಿತನೂ ಇದೇ ಮಾತನ್ನು ಕೇಳಿದ್ದನು. ಅವನ ಪ್ರಶ್ನೆಗಳ ಉತ್ತರದಲ್ಲಿ ಶ್ರೀಶುಕಮಹಾಮುನಿಗಳು ಹೇಳಿದುದನ್ನೇ ನಾನು ನಿಮಗೆ ಹೇಳುವೆನು. ಸಾವಧಾನವಾಗಿ ಕೇಳಿರಿ. ॥ ೫೧ ॥

***ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಿತೀಯಸ್ಕಂಧೇ ಪುರುಷಸಂಸ್ಥಾನುವರ್ಣನಂ ನಾಮ ದಶಮೋಽಧ್ಯಾಯಃ ॥ ೧೦ ॥**

**ಎರಡನೆಯ ಸ್ಕಂಧವು ಸಂಪೂರ್ಣವಾಯಿತು.**



|| ಓಂ ನಮೋಭಗವತೇ ವಾಸುದೇವಾಯ ||

# ಶ್ರೀಮದ್ಭಾಗವತಮಹಾಪುರಾಣಮ್

## ತೃತೀಯಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಉದ್ಧವ ವಿದುರರ ಸಮಾಗಮ – ಸಂಭಾಷಣೆ

*ಶ್ರೀಶುಕ ಉವಾಚ*

ಏವಮೇತತ್ಪುರಾ ಪೃಷ್ಟೋ ಮೈತ್ರೇಯೋ ಭಗವಾನ್ಕಿಲ ।
ಕ್ಷತ್ತ್ರಾ ವನಂ ಪ್ರವಿಷ್ಟೇನ ತ್ಯಕ್ತ್ವಾ ಸ್ವಗೃಹಮೃದ್ಧಿಮತ್ ॥ ೧ ॥

ಯದ್ವಾ ಅಯಂ ಮನ್ತ್ರಕೃದ್ವೋ ಭಗವಾನಖಿಲೇಶ್ವರಃ ।
ಪೌರವೇಂದ್ರಗೃಹಂ ಹಿತ್ವಾ ಪ್ರವಿವೇಶಾತ್ಮಸಾತ್ಕೃತಮ್ ॥ ೨ ॥

*ರಾಜೋವಾಚ*

ಕುತ್ರ ಕ್ಷತ್ತುರ್ಭಗವತಾ ಮೈತ್ರೇಯೇಣಾಸ ಸಂಗಮಃ ।
ಕದಾ ವಾ ಸಹ ಸಂವಾದ ಏತದ್ವರ್ಣಯ ನಃ ಪ್ರಭೋ ॥ ೩ ॥

ನ ಹ್ಯಲ್ಪಾರ್ಥೋದಯಸ್ತಸ್ಯ ವಿದುರಸ್ಯಾಮಲಾತ್ಮನಃ ।
ತಸ್ಮಿನ್ವರೀಯಸಿ ಪ್ರಶ್ನಃ ಸಾಧುವಾದೋಪಬೃಂಹಿತಃ ॥ ೪ ॥

*ಸೂತ ಉವಾಚ*

ಸ ಏವಮೃಷಿವರ್ಯೋಽಯಂ ಪೃಷ್ಟೋ ರಾಜ್ಞಾ ಪರೀಕ್ಷಿತಾ ।
ಪ್ರತ್ಯಾಹ ತಂ ಸುಬಹುವಿತ್ ಪ್ರೀತಾತ್ಮಾ ಶ್ರೂಯತಾಮಿತಿ ॥ ೫ ॥

*ಶ್ರೀಶುಕ ಉವಾಚ*

ಯದಾ ತು ರಾಜಾ ಸ್ವಸುತಾನಸಾಧೂನ್
ಪುಷ್ಣನ್ನಧರ್ಮೇಣ ವಿನಷ್ಟ ದೃಷ್ಟಿಃ ।
ಭ್ರಾತುರ್ಯವಿಷ್ಠಸ್ಯ ಸುತಾನ್ವಿಬಂಧೂನ್
ಪ್ರವೇಶ್ಯ ಲಾಕ್ಷಾಭವನೇ ದದಾಹ ॥ ೬ ॥

ಯದಾ ಸಭಾಯಾಂ ಕುರುದೇವದೇವ್ಯಾಃ
ಕೇಶಾಭಿಮರ್ಶಂ ಸುತಕರ್ಮ ಗರ್ಹ್ಯಮ್ ।
ನ ವಾರಯಾಮಾಸ ನೃಪಃ ಸ್ನುಷಾಯಾಃ
ಸ್ವಾಸ್ರೈರ್ಹರಂತ್ಯಾಃ ಕುಚಕುಂಕುಮಾನಿ ॥ ೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ನೀನು ಕೇಳಿರುವ ಮಾತನ್ನೇ ಹಿಂದೆ ತನ್ನ ಸುಖ-ಸಮೃದ್ಧಿಯಿಂದ ಕೂಡಿದ ಮನೆಯನ್ನು ತ್ಯಜಿಸಿ ಕಾಡಿಗೆ ಹೋಗಿರುವ ವಿದುರನು ಮೈತ್ರೇಯರಲ್ಲಿ ಕೇಳಿದ್ದನು. ॥ ೧ ॥ ಸರ್ವೇಶ್ವರನಾದ ಭಗವಾನ್ ಶ್ರೀಕೃಷ್ಣನು ಪಾಂಡವರ ದೂತನಾಗಿ ಹಸ್ತಿನಾವತಿಗೆ ಹೋಗಿದ್ದಾಗ, ದುರ್ಯೋಧನನ ಅರಮನೆಯನ್ನು ಬಿಟ್ಟು ಭಕ್ತಶ್ರೇಷ್ಠನಾದ ವಿದುರನನ್ನು ತನ್ನವನೆಂದೇ ತಿಳಿದು, ಅವನು ಕರೆಯದೆಯೇ ಆತನ ಮನೆಗೆ ಹೋಗಿದ್ದನು. ॥ ೨ ॥

**ಪರೀಕ್ಷಿದ್ರಾಜನು ಕೇಳಿದನು** – "ಮಹಾತ್ಮರೇ! ಭಗವಾನ್ ಮೈತ್ರೇಯರೊಂದಿಗೆ ವಿದುರನ ಸಮಾಗಮ ಎಲ್ಲಿ ಆಯಿತು? ಯಾವಾಗ ಆಗಿತ್ತು? ಎಂಬುದನ್ನು ತಿಳಿಸುವ ಕೃಪೆಮಾಡಿರಿ. ॥ ೩ ॥ ಪ್ರಶ್ನೆ ಮಾಡಿದವನು ಮಹಾತ್ಮನಾದ ವಿದುರನು. ಉತ್ತರ ಹೇಳಿದವರು ಮಹಾನುಭಾವರಾದ ಮೈತ್ರೇಯರು. ಅಂದ ಮೇಲೆ ಅದು ಅಲ್ಪ ಪ್ರಯೋಜನವುಳ್ಳ ಪ್ರಶ್ನೆಯಾಗಿರಲಾರದು. ಅತ್ಯಂತ ಮಹತ್ವಪೂರ್ಣವಾದ, ಪುರುಷಾರ್ಥಗಳನ್ನು ಕೈಗೂಡಿಸುವ ಪ್ರಶ್ನೆಯೇ ಆಗಿರಬೇಕು. ಭಗವಂತನ ಸಚ್ಚರಿತ್ರೆಗಳಿಂದ ಕೂಡಿರಬೇಕು. ಮಹಾತ್ಮರ ಶ್ಲಾಘನೆಗೆ ಪಾತ್ರವಾಗಿರಬೇಕು. ॥ ೪ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕರೇ! ಸರ್ವಜ್ಞರಾದ ಶುಕಮಹಾಮುನಿಗಳು ರಾಜನ ಪ್ರಶ್ನೆಯನ್ನು ಕೇಳಿ ಸಂತೋಷಗೊಂಡು ಆತನಿಗೆ ಹೇಳತೊಡಗಿದರು. ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ದೃಷ್ಟಿಹೀನನಾದ ಕುರುರಾಜ ಧೃತರಾಷ್ಟ್ರನು ಅನ್ಯಾಯದಿಂದ ದುಷ್ಟರಾಗಿದ್ದ ತನ್ನ ಮಕ್ಕಳನ್ನು ಪಾಲನೆ-ಪೋಷಣೆ ಮಾಡುತ್ತಾ, ತಮ್ಮನ ಮಕ್ಕಳಾಗಿದ್ದ, ಅನಾಥರಾಗಿದ್ದ ಪಾಂಡವರನ್ನು ಅರಗಿನಾಲಯಕ್ಕೆ ಕಳಿಸಿ ಬೆಂಕಿ ಹಚ್ಚಿಸಿದ್ದನು. ॥ ೬ ॥ ತನ್ನ ಸೊಸೆಯಾಗಿದ್ದ ಮಹಾರಾಜಾ ಯುಧಿಷ್ಠಿರನ ಧರ್ಮಪತ್ನಿಯಾದ ದ್ರೌಪದಿಯ ತುರುಬನ್ನು ದುಷ್ಟ ದುಃಶಾಸನನು ತುಂಬಿದ ಸಭೆಯಲ್ಲಿ ಎಳೆದಾಗ ಆಕೆಯ ಕಣ್ಣುಗಳಿಂದ ಹರಿದ ಕಂಬನಿಧಾರೆಯು ಆಕೆಯ ಎದೆಗೆ ಹಚ್ಚಿಕೊಂಡಿದ್ದ ಕುಂಕುಮಕೇಸರಿಯು ತೊಳೆದುಹೋಗುತ್ತಿತ್ತು. ಆದರೂ ಧೃತರಾಷ್ಟ್ರನು ನೀಚನಾಗಿದ್ದ ತನ್ನ ಪುತ್ರನನ್ನು ಕುಮಾರ್ಗದಿಂದ ತಡೆಯಲಿಲ್ಲ. ॥ ೭ ॥ ಸತ್ಯಸಂಧನೂ, ಸಾಧುವೂ ಆಗಿದ್ದ ಧರ್ಮನಂದನನನ್ನು ದುರುಳ ದುರ್ಯೋಧನನು ಕಪಟ ದ್ಯೂತದಲ್ಲಿ ಗೆದ್ದು ಕಾಡಿಗೆ ಅಟ್ಟಿದನು. ಅವನು ಅಲ್ಲಿ ಹನ್ನೆರಡು ವರ್ಷದ

ದ್ಯೂತೇ ತ್ವಧರ್ಮೇಣ ಜಿತಸ್ಯ ಸಾಧೋಃ
ಸತ್ಯಾವಲಂಬಸ್ಯ ವನಾಗತಸ್ಯ ।
ನ ಯಾಚತೋऽದಾತ್ಸಮಯೇನ ದಾಯಂ
ತಮೋ ಜುಷಾಣೋ ಯದಜಾತಶತ್ರೋಃ ॥ ೮ ॥

ಯದಾ ಚ ಪಾರ್ಥಪ್ರಹಿತಃ ಸಭಾಯಾಂ
ಜಗದ್ಗುರುರ್ಯಾನಿ ಜಗಾದ ಕೃಷ್ಣಃ ।
ನ ತಾನಿ ಪುಂಸಾಮಮೃತಾಯನಾನಿ
ರಾಜೋರು ಮೇನೇ ಕ್ಷತಪುಣ್ಯಲೇಶಃ ॥ ೯ ॥

ಯದೋಪಹೂತೋ ಭವನಂ ಪ್ರವಿಷ್ಟೋ
ಮಂತ್ರಾಯ ಪೃಷ್ಟಃ ಕಿಲ ಪೂರ್ವಜೇನ ।
ಅಥಾಹ ತನ್ಮಂತ್ರದೃಶಾಂ ವರೀಯಾನ್
ಯನ್ಮಂತ್ರಿಣೋ ವೈದುರಿಕಂ ವದಂತಿ ॥ ೧೦ ॥

ಅಜಾತಶತ್ರೋಃ ಪ್ರತಿಯಚ್ಛ ದಾಯಂ
ತಿತಿಕ್ಷತೋ ದುರ್ವಿಷಹಂ ತವಾಗಃ ।
ಸಹಾನುಜೋ ಯತ್ರ ವೃಕೋದರಾಹಿಃ
ಶ್ವಸನ್ರುಷಾ ಯತ್ತ್ವಮಲಂ ಬಿಭೇಷಿ ॥ ೧೧ ॥

ಪಾರ್ಥಾಂಸ್ತು ದೇವೋ ಭಗವಾನ್ ಮುಕುಂದೋ
ಗೃಹೀತವಾನ್ ಸಕ್ಷಿತಿದೇವದೇವಃ ।
ಆಸ್ತೇ ಸ್ವಪುರ್ಯಾಂ ಯದುದೇವದೇವೋ
ವಿನಿರ್ಜಿತಾಶೇಷನೃದೇವದೇವಃ ॥ ೧೨ ॥

ಸ ಏಷ ದೋಷಃ ಪುರುಷದ್ವಿಡಾಸ್ತೇ
ಗೃಹಾನ್ ಪ್ರವಿಷ್ಟೋ ಯಮಪತ್ಯಮತ್ಯಾ ।
ಪುಷ್ಣಾಸಿ ಕೃಷ್ಣಾದ್ವಿಮುಖೋ ಗತಶ್ರೀಃ
ತ್ಯಜಾಶ್ವಶೈವಂ ಕುಲಕೌಶಲಾಯ ॥ ೧೩ ॥

ಇತ್ಯೂಚಿವಾಂಸ್ತತ್ರ ಸುಯೋಧನೇನ
ಪ್ರವೃದ್ಧಕೋಪಸ್ಫುರಿತಾಧರೇಣ ।
ಅಸತ್ಕೃತಃ ಸತ್ ಸ್ಪೃಹಣೀಯಶೀಲಃ
ಕ್ಷತ್ತಾ ಸಕರ್ಣಾನುಜ ಸೌಬಲೇನ ॥ ೧೪ ॥

ಕ ಏನಮತ್ರೋಪಜುಹಾವ ಜಿಹ್ಮಂ
ದಾಸ್ಯಾಃ ಸುತಂ ಯದ್ಬಲಿನೈವ ಪುಷ್ಟಃ ।
ತಸ್ಮಿನ್ಪ್ರತೀಪಃ ಪರಕೃತ್ಯ ಆಸ್ತೇ
ನಿರ್ವಾಸ್ಯತಾಮಾಶು ಪುರಾಚ್ಛ್ವಸಾನಃ ॥ ೧೫ ॥

ವನವಾಸವನ್ನೂ, ಒಂದು ವರ್ಷದ ಅಜ್ಞಾತವಾಸವನ್ನೂ ಮುಗಿಸಿ ಬಂದು ನ್ಯಾಯೋಚಿತವಾದ ತನ್ನ ಭಾಗದ ರಾಜ್ಯವನ್ನು ಕೇಳಿ ಕೊಂಡರೂ ಮೋಹಾಂಧನಾಗಿ ಅಜಾತಶತ್ರುವಾದ ಧರ್ಮರಾಜನಿಗೆ ಕೊಡದೆ ತಿರಸ್ಕರಿಸಿದನು. ॥ ೮ ॥ ಧರ್ಮರಾಜನಿಂದ ಕಳುಹಿಸ ಲ್ಪಟ್ಟ ಜಗದ್ಗುರು ಭಗವಾನ್ ಶ್ರೀಕೃಷ್ಣನು ಕೌರವರ ಸಭೆಯಲ್ಲಿ – ಭೀಷ್ಮಾದಿ ಸತ್ಪುರುಷರಿಗೆ ಅಮೃತದಂತಿರುವ ಮಧುರ ಹಿತವಚನ ವನ್ನು ಹೇಳಿದನು. ಆದರೆ ಎಲ್ಲ ಪುಣ್ಯವನ್ನು ಕಳಕೊಂಡಿದ್ದ ಕುರುರಾಜನು ಅವನ್ನು ಆದರಿಸಲಿಲ್ಲ. ॥ ೯ ॥ ಮಂತ್ರಾಲೋಚನೆ-ಸಲಹೆಗಾಗಿ ವಿದುರನನ್ನು ಧೃತರಾಷ್ಟ್ರನು ಬರಮಾಡಿಕೊಂಡಾಗ, ಅವನು ಅರಮನೆಗೆ ಹೋದನು. ಅಣ್ಣ ಧೃತರಾಷ್ಟ್ರನು ಕೇಳಿದಾಗ ಮಂತ್ರಿಗಳಲ್ಲಿ ಶ್ರೇಷ್ಠನಾದ ಮಹಾತ್ಮಾ ವಿದುರನು ನೀಡಿದ ಮಂತ್ರಾಲೋಚನೆಯ ನೀತಿಗಳನ್ನು ನೀತಿಶಾಸ್ತ್ರಜ್ಞರು 'ವಿದುರನೀತಿ' ಎಂದು ಕರೆಯುತ್ತಾರೆ. ॥ ೧೦ ॥

ವಿದುರನೆಂದನು – ಅಣ್ಣಯ್ಯ ! ಅಜಾತ ಶತ್ರುವಾದ, ಮಹಾತ್ಮ ನಾದ ಯುಧಿಷ್ಠಿರನಿಗೆ ನೀನು ಆತನ ಹಕ್ಕಿನ ರಾಜ್ಯವನ್ನು ಕೊಟ್ಟು ಬಿಡು. ಅವನು ಸಹಿಸಲು ಯೋಗ್ಯವಲ್ಲದ ಅಪರಾಧಗಳನ್ನೂ ಸಹಿಸಿಕೊಂಡಿರುವನು. ಭೀಮಸೇನನೆಂಬ ಕಾಲಸರ್ಪಕ್ಕೆ ನೀನೂ ಗಡ-ಗಡ ನಡುಗುತ್ತಿರುವೆ. ಅವನು ತನ್ನ ತಮ್ಮಂದಿರೊಡನೆ ಸೇಡು ತೀರಿಸಿಕೊಳ್ಳಲು ಕ್ರೋಧಾವೇಶದಿಂದ ಬುಸುಗುಟ್ಟುತ್ತಿರುವನು. ॥ ೧೧ ॥ ಬ್ರಾಹ್ಮಣರಿಗೂ, ದೇವತೆಗಳಿಗೂ ಆರಾಧ್ಯದೈವನಾದ ಭಗವಾನ್ ಶ್ರೀಕೃಷ್ಣನು ಪಾಂಡವರನ್ನು ತನ್ನವರನ್ನಾಗಿಸಿ ಕೊಂಡು ಕಾಪಾಡುತ್ತಿದ್ದಾನೆ. ಯಾದವವೀರರೆಲ್ಲರ ಆರಾಧ್ಯದೇವನಾದ ಅವನು ಈಗ ತನ್ನ ರಾಜಧಾನಿ ದ್ವಾರಕೆಯಲ್ಲೇ ಇದ್ದಾನೆ. ಆದ್ದರಿಂದ ನೀನು ಪಾಂಡವರೊಂದಿಗೆ ವಿರೋಧವನ್ನು ಕಟ್ಟಿಕೊಳ್ಳಬೇಡ. ಅವನು ಭೂಮಿಯಲ್ಲಿರುವ ರಾಜಾಧಿರಾಜರೆಲ್ಲರನ್ನೂ ಸೋಲಿಸಿರುವ ಅಜಿತನಾದ ಸ್ವಾಮಿಯು. ॥ ೧೨ ॥ ಯಾವನನ್ನು ತನ್ನ ಪುತ್ರನೆಂದು ತಿಳಿದು, ಆತನ ಮಾತುಗಳಿಗೆಲ್ಲ ಹೂಂಗುಟ್ಟುತ್ತಾ ಪೋಷಿಸುತ್ತಿ ರುವೆಯೋ ಆ ದುರ್ಯೋಧನನಾದರೋ ದೋಷಗಳೇ ಮೂರ್ತಿ ಭವಿಸಿ ನಿನ್ನ ಅರಮನೆಯನ್ನು ಹೊಕ್ಕು ಕುಳಿತಿರುವನು. ಸರ್ವಭೂತ ಸುಹೃದನಾದ ಭಗವಾನ್ ಶ್ರೀಕೃಷ್ಣನಲ್ಲಿ ದ್ವೇಷಬುದ್ಧಿಯಿಂದ ಕೂಡಿ ರುವ ಆತನನ್ನು ಪೋಷಿಸುತ್ತಿರುವ ನೀನು ನಿನ್ನ ಭಾಗ್ಯವನ್ನು ಕಳೆದು ಕೊಂಡು ಬಿಟ್ಟಿರುವೆ ಆದ್ದರಿಂದ ನೀನು ನಿನ್ನ ಕುಲದ ಕುಶಲವನ್ನು ಬಯಸುವೆಯಾದರೆ ಈ ದುಷ್ಟನನ್ನು ಕೂಡಲೇ ತೊರೆದುಬಿಡು. ॥ ೧೩ ॥

ಸತ್ಪುರುಷರಿಗೆ ಪ್ರಿಯವಾದ ಶೀಲಸ್ವಭಾವವುಳ್ಳ ವಿದುರನ ಆ ಮಾತನ್ನು ಕೇಳಿ – ಕರ್ಣ, ದುಃಶಾಸನ, ಶಕುನಿ ಇವರುಗಳಿಂದ ಕೂಡಿದ ದುರ್ಯೋಧನನು ಕ್ರೋಧದಿಂದ ಕಿಡಿ-ಕಿಡಿಯಾದನು. ಸಿಟ್ಟಿನಿಂದ ಅವನ ತುಟಿಗಳು ಅದುರುತ್ತಿದ್ದವು. ಅವನು ವಿದುರ ನನ್ನು ತಿರಸ್ಕರಿಸುತ್ತಾ – "ಈ ವಕ್ರಬುದ್ಧಿಯ ದಾಸೀಪುತ್ರನನ್ನು ಇಲ್ಲಿಗೆ ಕರೆಸಿದವರಾರು ? ನಮ್ಮ ಮನೆಯ ಕೂಳನ್ನೇ ತಿಂದು-ಬೆಳೆದು, ನಮಗೆ ವಿರೋಧಿಯಾಗಿ, ಶತ್ರುಗಳಿಗೆ ಹಿತವನ್ನು ಬಯಸು ತ್ತಿರುವ ಕೃತಘ್ನನೀತನು. ಇವನನ್ನು ಕೊಲ್ಲದೆ ನಮ್ಮ ನಗರದಿಂದ ಹೊರಗೆ ಹಾಕಿರಿ. ॥ ೧೪-೧೫ ॥ ಕಿವಿಗಳಿಗೆ ಶೂಲದಂತಿರುವ

ಸ ಇತ್ಥಮತ್ಯುಲ್ಬಣಕರ್ಣಬಾಣ್ಯೈ-
ರ್ಭ್ರಾತುಃ ಪುರೋ ಮರ್ಮಸು ತಾಡಿತೋಽಪಿ ।
ಸ್ವಯಂ ಧನುರ್ದ್ವಾರಿ ನಿಧಾಯ ಮಾಯಾಂ
ಗತವ್ಯಥೋಽಯಾದುರು ಮಾನಯಾನಃ ॥ ೧೬ ॥

ಸ ನಿರ್ಗತಃ ಕೌರವಪುಣ್ಯಲಬ್ಧೋ
ಗಜಾಹ್ವಯಾತ್ತೀರ್ಥಪದಃ ಪದಾನಿ ।
ಅನ್ವಾಕ್ರಮತ್ಪುಣ್ಯಚಿಕೀರ್ಷಯೋರ್ವ್ಯಾಂ
ಸ್ವಧಿಷ್ಠಿತೋ ಯಾನಿ ಸಹಸ್ರಮೂರ್ತಿಃ ॥ ೧೭ ॥

ಪುರೇಷು ಪುಣ್ಯೋಪವನಾದ್ರಿಕುಂಜೇ-
ಷ್ವಪಂಕತೋಯೇಷು ಸರಿತ್ಸರಸ್ಸು ।
ಅನಂತಲಿಂಗೈಃ ಸಮಲಂಕೃತೇಷು
ಚಚಾರ ತೀರ್ಥಾಯತನೇಷ್ವನನ್ಯಃ ॥ ೧೮ ॥

ಗಾಂ ಪರ್ಯಟನ್ಮೇಧ್ಯವಿವಿಕ್ತವೃತ್ತಿಃ
ಸದಾಪ್ಲುತೋಽಧಃಶಯನೋಽವಧೂತಃ ।
ಅಲಕ್ಷಿತಃ ಸ್ವೈರವಧೂತವೇಷೋ
ವ್ರತಾನಿ ಚೇರೆ ಹರಿತೋಷಣಾನಿ ॥ ೧೯ ॥

ಇತ್ಥಂ ವ್ರಜನ್ಭಾರತಮೇವ ವರ್ಷಂ
ಕಾಲೇನ ಯಾವದ್ಗತವಾನ್ ಪ್ರಭಾಸಮ್ ।
ತಾವಚ್ಛಶಾಸ ಕ್ಷಿತಿಮೇಕಚಕ್ರಾ-
ಮೇಕಾತಪತ್ರಾಮಜಿತೇನ ಪಾರ್ಥಃ ॥ ೨೦ ॥

ತತ್ರಾಥ ಶುಶ್ರಾವ ಸುಹೃದ್ವಿನಷ್ಟಿಂ
ವನಂ ಯಥಾ ವೇಣುಜವಹ್ನಿಸಂಶ್ರಯಮ್ ।
ಸಂಸ್ಪರ್ಧಯಾ ದಗ್ಧಮಥಾನುಶೋಚನ್
ಸರಸ್ವತೀಂ ಪ್ರತ್ಯಗಿಯಾಯ ತೂಷ್ಣೀಮ್ ॥ ೨೧ ॥

ತಸ್ಯಾಂ ತ್ರಿತಸ್ಯೋಶನಸೋ ಮನೋಶ್ಚ
ಪೃಥೋರಥಾಗ್ನೇರಸಿತಸ್ಯ ವಾಯೋಃ ।
ತೀರ್ಥಂ ಸುದಾಸಸ್ಯ ಗವಾಂ ಗುಹಸ್ಯ
ಯಚ್ಛ್ರಾದ್ಧದೇವಸ್ಯ ಸ ಆಸಿಷೇವೇ ॥ ೨೨ ॥

ಅನ್ಯಾನಿ ಚೇಹ ದ್ವಿಜದೇವದೇವೈಃ
ಕೃತಾನಿ ನಾನಾಯತನಾನಿ ವಿಷ್ಣೋಃ ।
ಪ್ರತ್ಯಂಗ ಮುಖ್ಯಾಂಕಿತಮಂದಿರಾಣಿ
ಯದ್ದರ್ಶನಾತ್ಕೃಷ್ಣಮನುಸ್ಮರಂತಿ ॥ ೨೩ ॥

ಮರ್ಮಭೇದಕವಾದ ಮಾತುಗಳನ್ನು ವಿದುರನು ಅಣ್ಣನ ಎದುರಿನಲ್ಲೇ ಕೇಳಬೇಕಾಯಿತು. ಆದರೆ ಮಂತ್ರಿ ಶ್ರೇಷ್ಠನಾದ ವಿದುರನು ಆ ಯೋಗಿರಾಜನು ಅವುಗಳಿಂದ ಬೇಸರಗೊಳ್ಳದೆ 'ಭಗವಂತನ ಮಾಯೆಯು ಪ್ರಬಲವಾದುದು' ಎಂದು ಭಾವಿಸಿ, ತನ್ನ ಬಲಿಷ್ಠವಾದ ಧನುಸ್ಸನ್ನು ರಾಜದ್ವಾರದಲ್ಲಿ ಬಿಟ್ಟು ಹಸ್ತಿನಾವತಿಯಿಂದ ಹೊರಟುಹೋದನು. ॥ ೧೬ ॥ ಕೌರವರಿಗೆ ವಿದುರನಂತಹ ಮಹಾತ್ಮನು ಅವರ ಪುಣ್ಯಪುಂಜದ ಫಲವಾಗಿಯೇ ದೊರಕಿದ್ದನು. ಅವನು ಹೊರಡಲು ಕೌರವರ ಭಾಗ್ಯವೇ ಅವನೊಡನೆ ಹೋದಂತಾಯಿತು. ಆ ಮಹಾತ್ಮನು ಪುಣ್ಯಸಂಪಾದನೆಗಾಗಿ ಭೂಮಂಡಲದಲ್ಲಿ ಶ್ರೀಹರಿ, ಬ್ರಹ್ಮ, ರುದ್ರ, ಅನಂತ ಮುಂತಾದ ಅನೇಕ ರೂಪಗಳಲ್ಲಿ ವಿರಾಜಮಾನನಾದ ತೀರ್ಥಪಾದನಾದ ಭಗವಂತನ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸ ತೊಡಗಿದನು. ॥ ೧೭॥ ಭಗವಂತನ ದಿವ್ಯಮಂಗಳವಿಗ್ರಹಗಳು ಕಂಗೊಳಿಸುವ ಪುಣ್ಯತೀರ್ಥಕ್ಷೇತ್ರಗಳಲ್ಲಿಯೂ, ನಗರಗಳಲ್ಲೂ, ಪವಿತ್ರ ವನಗಳಲ್ಲೂ, ಪರ್ವತಗಳಲ್ಲೂ, ನಿಕುಂಜಗಳಲ್ಲೂ, ನಿರ್ಮಲಜಲದಿಂದ ತುಂಬಿದ ನದೀ, ಸರೋವರಗಳಲ್ಲೂ ಏಕಾಕಿಯಾಗಿಯೇ ಸಂಚರಿಸುತ್ತಿದ್ದನು. ॥ ೧೮ ॥ ಬಂಧು-ಮಿತ್ರಾದಿಗಳು ತನ್ನನ್ನು ಗುರುತಿಸದಿರಲೆಂದು ಅವಧೂತ ವೇಶದಲ್ಲೇ ಸಂಚರಿಸುತ್ತಿದ್ದನು. ಶರೀರಕ್ಕೆ ಅಲಂಕಾರ ಮಾಡಿಕೊಳ್ಳದೆ, ಶುದ್ಧವಾದ ಸಾತ್ವಿಕ ಆಹಾರವನ್ನೇ ಭಗವತ್ಪ್ರಸಾದವೆಂದು ಸ್ವೀಕರಿಸುತ್ತಿದ್ದನು. ಬರೀನೆಲದಲ್ಲಿ ಮಲಗುತ್ತಾ, ತೀರ್ಥಗಳಲ್ಲಿ ಸ್ನಾನಮಾಡುತ್ತಾ, ಶ್ರೀಭಗವಂತನನ್ನು ಸಂತೋಷಪಡಿಸುವಂತಹ ವ್ರತಗಳನ್ನು ಆಚರಿಸುತ್ತಾ ಶುದ್ಧವಾದ ವೃತ್ತಿಯಿಂದ ಜೀವನ ನಿರ್ವಹಿಸುತ್ತಿದ್ದನು. ॥ ೧೯॥

ಹೀಗೆ ವಿದುರನು ಭರತವರ್ಷದಲ್ಲೆಲ್ಲ ಸಂಚರಿಸುತ್ತಾ ಪ್ರಭಾಸ ಕ್ಷೇತ್ರಕ್ಕೆ ಬಂದನು. ಆ ವೇಳೆಗೆ ಭಗವಾನ್ ಶ್ರೀಕೃಷ್ಣನ ಸಹಾಯದಿಂದ ಯುಧಿಷ್ಠಿರನು ಅಖಂಡ ಭೂಮಂಡಲದ ಏಕಛತ್ರಾಧಿಪತಿಯಾಗಿ ರಾಜ್ಯವಾಳುತ್ತಿದ್ದನು. ॥ ೨೦ ॥ ಬಿದಿರುಮೆಳೆಗಳು ಪರಸ್ಪರ ಘರ್ಷಣೆಯಿಂದ ಇಡೀ ಬಿದಿರಿನಕಾಡು ಸುಟ್ಟು ಬೂದಿಯಾಗುವಂತೆ – ತನ್ನ ಬಂಧು-ಮಿತ್ರರು ತಮ್ಮ ಅಂತಃಕಲಹದಿಂದ ಪರಸ್ಪರ ಹೊಡೆದಾಡಿ ನಾಶವಾದ ಸಮಾಚಾರವು ಆತನಿಗೆ ಅಲ್ಲೇ ತಿಳಿಯಿತು.. ಇದನ್ನು ಕೇಳಿ ದುಃಖಿಸುತ್ತಾ ಮೌನವಾಗಿ ಸರಸ್ವತೀ ನದೀ ತೀರಕ್ಕೆ ತಲುಪಿದರು. ॥ ೨೧ ॥ ಅಲ್ಲಿ ಅವನು – ತ್ರಿತ, ಉಶನಾ, ಮನು, ಪೃಥು, ಅಗ್ನಿ, ಅಸಿತ, ವಾಯು, ಸುದಾಸ, ಗೌ, ಗುಹ, ಶ್ರಾದ್ಧದೇವ ಎಂಬ ಹೆಸರುಗಳಿಂದ ಪ್ರಸಿದ್ಧವಾದ ಹನ್ನೊಂದು ತೀರ್ಥಗಳನ್ನು ಸೇವಿಸಿದನು. ॥ ೨೨ ॥ ಅವುಗಳನ್ನಲ್ಲದೆ ಭೂಮಿಯಲ್ಲಿ ಬ್ರಾಹ್ಮಣರಿಂದಲೂ, ದೇವತೆಗಳಿಂದಲೂ ಸ್ಥಾಪಿತವಾದ ಇನ್ನೂ ಅನೇಕ ಭಗವಾನ್ ವಿಷ್ಣುವಿನ ಮಂದಿರಗಳನ್ನು ದರ್ಶಿಸಿದನು. ಅವುಗಳ ಶಿಖರದಲ್ಲಿ ಭಗವಂತನ ಪ್ರಧಾನ ಆಯುಧಶ್ರೇಷ್ಠ ಸುದರ್ಶನ ಚಕ್ರದಿಂದ ಅಲಂಕೃತವಾಗಿದ್ದು ದರ್ಶನಮಾತ್ರದಿಂದಲೇ ಶ್ರೀಕೃಷ್ಣನ ಸ್ಮರಣೆಯಾಗುವಂತಹ ದಿವ್ಯಮಂದಿರಗಳನ್ನೂ ಸೇವಿಸಿದನು. ॥ ೨೩ ॥ ಅಲ್ಲಿಂದ ಹೊರಟು ಅವನು ಧನ-ಧಾನ್ಯಗಳಿಂದ ಸಮೃದ್ಧವಾಗಿದ್ದ ಸೌರಾಷ್ಟ್ರ, ಸೌವೀರ, ಮತ್ಸ್ಯ, ಕುರುಜಾಂಗಲವೇ ಮುಂತಾದ ದೇಶಗಳಲ್ಲಿ ಸಂಚರಿ

ತತಸ್ತ್ವತಿವ್ರಜ್ಯ ಸುರಾಷ್ಟ್ರಮೃದ್ಧಂ
ಸೌವೀರಮತ್ಸ್ಯಾನ್ಕುರುಜಾಂಗಲಾಂಶ್ಚ ।
ಕಾಲೇನ ತಾವದ್ಯಮುನಾಮುಪೇತ್ಯ
ತತ್ರೋದ್ಧವಂ ಭಾಗವತಂ ದದರ್ಶ ॥ ೨೪ ॥

ಸ ವಾಸುದೇವಾನುಚರಂ ಪ್ರಶಾಂತಂ
ಬೃಹಸ್ಪತೇಃ ಪ್ರಾಕ್ ತನಯಂ ಪ್ರತೀತಮ್ ।
ಆಲಿಂಗ್ಯ ಗಾಢಂ ಪ್ರಣಯೇನ ಭದ್ರಂ
ಸ್ವಾನಾಮಪೃಚ್ಛದ್ಭಗವತ್ಪ್ರಜಾನಾಮ್ ॥ ೨೫ ॥

ಕಚ್ಚಿತ್ಪುರಾಣೌ ಪುರುಷೌ ಸ್ವನಾಭ್ಯ-
ಪಾದ್ಮಾನುವೃತ್ತ್ಯೇಹ ಕಿಲಾವತೀರ್ಣೌ ।
ಆಸಾತ ಉರ್ವ್ಯಾಃ ಕುಶಲಂ ವಿಧಾಯ
ಕೃತಕ್ಷಣೌ ಕುಶಲಂ ಶೂರಗೇಹೇ ॥ ೨೬ ॥

ಕಚ್ಚಿತ್ಕುರೂಣಾಂ ಪರಮಃ ಸುಹೃನ್ನೋ
ಭಾಮಃ ಸ ಆಸ್ತೇ ಸುಖಮಂಗ ಶೌರಿಃ ।
ಯೋ ವೈ ಸ್ವಸೄಣಾಂ ಪಿತೃವದ್ದದಾತಿ
ವರಾನ್ವದಾನ್ಯೋ ವರತರ್ಪಣೇನ ॥ ೨೭ ॥

ಕಚ್ಚಿದ್ವರೂಥಾಧಿಪತಿರ್ಯದೂನಾಂ
ಪ್ರದ್ಯುಮ್ನ ಆಸ್ತೇ ಸುಖಮಂಗ ವೀರಃ ।
ಯಂ ರುಕ್ಮಿಣೀ ಭಗವತೋಽಭಿಲೇಭೇ
ಆರಾಧ್ಯ ವಿಪ್ರಾನ್ ಸ್ಮರಮಾದಿಸರ್ಗೇ ॥ ೨೮ ॥

ಕಚ್ಚಿತ್ಸುಖಂ ಸಾತ್ವತವೃಷ್ಣಿ ಭೋಜ-
ದಾಶಾರ್ಹಕಾಣಾಮಧಿಪಃ ಸ ಆಸ್ತೇ ।
ಯಮಭ್ಯಷಿಂಚಚ್ಛತಪತ್ರನೇತ್ರೋ
ನೃಪಾಸನಾಶಾಂ ಪರಿಹೃತ್ಯ ದೂರಾತ್ ॥ ೨೯ ॥

ಕಚ್ಚಿದ್ಧರೇಃ ಸೌಮ್ಯ ಸುತಃ ಸದೃಕ್ಷ
ಆಸ್ತೇಽಗ್ರಣೀ ರಥಿನಾಂ ಸಾಧು ಸಾಂಬಃ ।
ಅಸೂತ ಯಂ ಜಾಂಬವತೀ ವ್ರತಾಢ್ಯಾ
ದೇವಂ ಗುಹಂ ಯೋಽಂಬಿಕಯಾ ಧೃತೋಽಗ್ರೇ ॥ ೩೦ ॥

ಕ್ಷೇಮಂ ಸ ಕಚ್ಚಿದ್ಯುಯುಧಾನ ಆಸ್ತೇ
ಯಃ ಫಾಲ್ಗುನಾಲ್ಲಬ್ಧ ಧನೂರಹಸ್ಯಃ ।
ಲೇಭೇಽಂಜ ಸಾಧೋಕ್ಷಜಸೇವಯೈವ
ಗತಿಂ ತದೀಯಾಂ ಯತಿಭಿರ್ದುರಾಪಾಮ್ ॥ ೩೧ ॥

ಸುತ್ತಾ ಕೆಲದಿನಗಳಲ್ಲಿ ಯಮುನಾನದೀ ತೀರಕ್ಕೆ ಹೋದಾಗ ಅಲ್ಲಿ ಆತನಿಗೆ ಪರಮಭಾಗವತೋತ್ತಮ ಉದ್ಧವನ ಸಂದರ್ಶನ ವಾಯಿತು. ॥ ೨೪ ॥ ಆ ಉದ್ಧವನಾದರೋ ಭಗವಂತನಾದ ವಾಸುದೇವನ ಪ್ರಖ್ಯಾತ ಸೇವಕನು. ಪ್ರಶಾಂತವಾದ ಸ್ವಭಾವವುಳ್ಳವನು. ಹಿಂದೆ ಬೃಹಸ್ಪತಿಯವರ ಶಿಷ್ಯನೆಂಬ ಪ್ರಸಿದ್ಧಿಯುಳ್ಳ ನೀತಿಶಾಸ್ತ್ರವಿಶಾರದನು. ವಿದುರನು ಅವರನ್ನು ನೋಡುತ್ತಲೇ ಪ್ರೀತಿಯಿಂದ ಗಾಢವಾಗಿ ಆಲಿಂಗಿಸಿಕೊಂಡನು. ಮತ್ತೆ ಭಗವಂತನಾದ ಶ್ರೀಕೃಷ್ಣನ ಮತ್ತು ಅವನ ಆಶ್ರಿತರಾದ ತನ್ನ ಸ್ವಜನರ ಕುರಿತು ಕ್ಷೇಮ-ಸಮಾಚಾರ ಕೇಳಿದನು. ॥ ೨೫ ॥

ಉದ್ಧವನೇ! ವಸುದೇವನ ಮನೆಯಲ್ಲಿ ಪುರಾಣಪುರುಷರಾದ ಶ್ರೀಕೃಷ್ಣ-ಬಲರಾಮರು ಕುಶಲರಾಗಿದ್ದಾರಲ್ಲ? ತನ್ನ ನಾಭಿಕಮಲ ದಿಂದ ಹುಟ್ಟಿದ ಬ್ರಹ್ಮದೇವರ ಪ್ರಾರ್ಥನೆಯಂತೆ ಈ ಭುವಿಯಲ್ಲಿ ಅವತರಿಸಿ, ಭೂಭಾರವನ್ನು ಇಳುಹಿ, ಅದರ ಕ್ಷೇಮವನ್ನು ಸಾಧಿಸಿ ತಾವೂ ಆನಂದವಾಗಿ ಕ್ಷೇಮವಾಗಿದ್ದಾರಲ್ಲ? ॥ ೨೬ ॥ ಕುರುವಂಶಿ ಗಳಾದ ನಮಗೆ ಪರಮ ಸ್ನೇಹಿತನಾಗಿರುವ ಶೂರಸೇನನ ಪುತ್ರನಾದ ಪೂಜ್ಯ ವಸುದೇವನು ಕುಶಲನಾಗಿದ್ದಾನೆಯೇ? ತಂದೆಯಂತೆ ಕೊಡುಗೈಯುಳ್ಳವನಾಗಿ ತನ್ನ ಸೋದರಿಯರಿಗೂ, ಅವರ ಪತಿ ಗಳಿಗೂ ತೃಪ್ತಿಯುಂಟಾಗುವಂತೆ ಅವರು ಬಯಸಿದ ಬಳುವಳಿ ಗಳನ್ನು ಧಾರಾಳವಾಗಿ ಕೊಡುತ್ತಿದ್ದ ವಸುದೇವನು ಸೌಖ್ಯವೇ? ॥ ೨೭ ॥ ಪ್ರಿಯ ಉದ್ಧವನೇ! ಯಾದವರ ಸೇನಾಪತಿಯಾದ ಮಹಾವೀರನಾದ ಪ್ರದ್ಯುಮ್ನನು ಸುಖವಾಗಿದ್ದಾನಷ್ಟೇ? ರುಕ್ಮಿಣೀ ದೇವಿಯು ಬ್ರಾಹ್ಮಣರನ್ನು ಆರಾಧಿಸಿ, ಪೂರ್ವಜನ್ಮದಲ್ಲಿ ಮನ್ಮಥ ನಾಗಿದ್ದವನನ್ನು ಭಗವಂತನಿಂದ ಸತ್ಪುತ್ರನಾಗಿ ಪಡೆದ ಆ ಪ್ರದ್ಯು ಮ್ನನ ಕುಶಲವನ್ನು ವಿಚಾರಿಸುತ್ತಿದ್ದೇನೆ. ॥ ೨೮ ॥ ಸಾತ್ವತ, ವೃಷ್ಣಿ ಭೋಜ, ದಾಶಾರ್ಹ ಮೊದಲಾದ ಯದುವಂಶೀಯರ ಅಧಿಪತಿ ಯಾದ ಉಗ್ರಸೇನ ಮಹಾರಾಜರು ಕ್ಷೇಮವಾಗಿರುವರೇ? ಸಿಂಹಾಸನದ ಆಸೆಯನ್ನು ಸರ್ವಥಾ ತ್ಯಾಗಮಾಡಿದ್ದ ಅವರನ್ನು ಕಮಲನಯನ ಭಗವಾನ್ ಶ್ರೀಕೃಷ್ಣನು ಪುನಃ ರಾಜಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕಮಾಡಿದ್ದನಲ್ಲ? ॥ ೨೯ ॥ ತನ್ನ ತಂದೆ ಯಾದ ಶ್ರೀಕೃಷ್ಣನಿಗೆ ಸಮಾನನಾದ, ಸಮಸ್ತ ರಥಿಗಳಿಗೂ ಅಗ್ರಗಣ್ಯ ನಾಗಿರುವ ಸಾಂಬನು ಕುಶಲವಷ್ಟೇ? ಇವನು ಮೊದಲು ಪಾರ್ವತೀ ದೇವಿಗೆ ಪುತ್ರನಾಗಿದ್ದ ಕುಮಾರಸ್ವಾಮಿಯಾಗಿದ್ದನು. ಜಾಂಬ ವತಿಯು ಅನೇಕ ವ್ರತಗಳನ್ನಾಚರಿಸಿ ಆತನನ್ನು ಪುತ್ರನನ್ನಾಗಿ ಪಡೆದು ಕೊಂಡಿದ್ದಳು. ॥ ೩೦ ॥ ಅರ್ಜುನನಿಂದ ಸರಹಸ್ಯವಾದ ಧನು ರ್ವಿದ್ಯೆಯ ಶಿಕ್ಷಣವನ್ನು ಪಡೆದ ವೀರಾಧಿವೀರನಾದ ಯುಯುಧಾ ನನು (ಸಾತ್ಯಕಿ) ಸೌಖ್ಯವಷ್ಟೇ? ಮಹಾಯೋಗಿಗಳಿಗೂ ದುರ್ಲಭ ವಾದ ಭಾಗವತಯೋಗದ ಸಿದ್ಧಿಯನ್ನು ಶ್ರೀಕೃಷ್ಣನ ಸೇವೆಯಿಂದಲೇ ಅನಾಯಾಸವಾಗಿ ಪಡೆದುಕೊಂಡಿದ್ದ ಸುಕೃತಿಯವನು. ॥ ೩೧ ॥ ಭಗವಂತನ ಶರಣಾಗತನೂ, ನಿರ್ಮಲ ಭಕ್ತಿನಿಧಿಯೂ ವಿದ್ವನ್ಮ ಣಿಯೂ ಆದ ಅಕ್ರೂರನು ಕ್ಷೇಮವಿದ್ದಾನೆಯೇ? ನಂದ ಗೋಕುಲಕ್ಕೆ ಹೋಗುತ್ತಿದ್ದಾಗ ಅಲ್ಲಿನ ಭೂಮಿಯ ರಜದಲ್ಲಿ ಶ್ರೀಕೃಷ್ಣ ಪರಮಾತ್ಮನ ಅಂಕಿತವಾದ ಪದಚಿಹ್ನೆಗಳನ್ನು ಕಂಡು ಪ್ರೇಮ ಪರವಶನಾಗಿ ಉರುಳುಸೇವೆ ಮಾಡಿದ ಭಾಗವತೋತ್ತಮ

ಕಚ್ಚಿದ್ಬುಧಃ ಸ್ವಸ್ತ್ಯನಮೀವ ಆಸ್ತೇ
ಶ್ವಫಲ್ಕಪುತ್ರೋ ಭಗವತ್ಪ್ರಪನ್ನಃ ।
ಯಃ ಕೃಷ್ಣ ಪಾದಾಂಕಿತಮಾರ್ಗಪಾಂಸು-
ಷ್ವಚೇಷ್ಟತ ಪ್ರೇಮವಿಭಿನ್ನಧೈರ್ಯಃ ॥ ೩೨ ॥

ಕಚ್ಚಿಚ್ಛಿವಂ ದೇವಕಭೋಜಪುತ್ರ್ಯಾ
ವಿಷ್ಣುಪ್ರಜಾಯಾ ಇವ ದೇವಮಾತುಃ ।
ಯಾ ವೈ ಸ್ವಗರ್ಭೇಣ ದಧಾರ ದೇವಂ
ತ್ರಯೀ ಯಥಾ ಯಜ್ಞ ವಿತಾನಮರ್ಥಮ್ ॥ ೩೩ ॥

ಅಪಿಸ್ವಿದಾಸ್ತೇ ಭಗವಾನ್ಸುಖಂ ವೋ
ಯಃ ಸಾತ್ವತಾಂ ಕಾಮದುಘೋಽನಿರುದ್ಧಃ ।
ಯಮಾಮನಂತಿ ಸ್ಮ ಹ ಶಬ್ದಯೋನಿಂ
ಮನೋಮಯಂ ಸತ್ತ್ವತುರೀಯತತ್ತ್ವಮ್ ॥ ೩೪ ॥

ಅಪಿಸ್ವಿದನ್ಯೇ ಚ ನಿಜಾತ್ಮದೈವ-
ಮನನ್ಯವೃತ್ತ್ಯಾ ಸಮನುವ್ರತಾ ಯೇ ।
ಹೃದೀಕಸತ್ಯಾತ್ಮಜಚಾರುದೇಷ್ಣ-
ಗದಾದಯಃ ಸ್ವಸ್ತಿ ಚರಂತಿ ಸೌಮ್ಯ ॥ ೩೫ ॥

ಅಪಿ ಸ್ವದೋರ್ಭ್ಯಾಂ ವಿಜಯಾಚ್ಯುತಾಭ್ಯಾಂ
ಧರ್ಮೇಣ ಧರ್ಮಃ ಪರಿಪಾತಿ ಸೇತುಮ್ ।
ದುರ್ಯೋಧನೋಽತಪ್ಯತ ಯತ್ಸಭಾಯಾಂ
ಸಾಮ್ರಾಜ್ಯಲಕ್ಷ್ಮ್ಯಾ ವಿಜಯಾನುವೃತ್ತ್ಯಾ ॥ ೩೬ ॥

ಕಿಂ ವಾ ಕೃತಾಘೇಷ್ವಘಮತ್ಯಮರ್ಷೀ
ಭೀಮೋಽಹಿವದ್ದೀರ್ಘತಮಂ ವ್ಯಮುಂಚತ್ ।
ಯಸ್ಯಾಂಘ್ರಿಪಾತಂ ರಣಭೂರ್ನ ಸೇಹೇ
ಮಾರ್ಗಂ ಗದಾಯಾಶ್ಚರತೋ ವಿಚಿತ್ರಮ್ ॥ ೩೭ ॥

ಕಚ್ಚಿದ್ಯಶೋಧಾ ರಥಯೂಥಪಾನಾಂ
ಗಾಂಡೀವಧನ್ವೋಪರತಾರಿರಾಸ್ತೇ ।
ಅಲಕ್ಷಿತೋ ಯಚ್ಛರಕೂಟಗೂಢೋ
ಮಾಯಾಕಿರಾತೋ ಗಿರಿಶಸ್ತುತೋಷ ॥ ೩೮ ॥

ಯಮಾವುತಸ್ವಿತ್ತನಯೋ ಪೃಥಾಯಾಃ
ಪಾರ್ಥೈರ್ವೃತೌ ಪಕ್ಷ್ಮಭಿರಕ್ಷಿಣೀವ ।
ರೇಮಾತ ಉದ್ದಾಯ ಮೃಧೇ ಸ್ವರಿಕ್ಥಂ
ಪರಾತ್ಸುಪರ್ಣಾವಿವ ವಜ್ರಿವಕ್ತ್ರಾತ್ ॥ ೩೯ ॥

ಅಹೋ ಪೃಥಾಪಿ ಧ್ರಿಯತೇಽರ್ಭಕಾರ್ಥೇ
ರಾಜರ್ಷಿವರ್ಯೇಣ ವಿನಾಪಿ ತೇನ ।
ಯಸ್ತ್ವೇಕವೀರೋಽಧಿರಥೋ ವಿಜಿಗ್ಯೇ
ಧನುರ್ದ್ವಿತೀಯಃ ಕಕುಭಶ್ಚತಸ್ರಃ ॥ ೪೦ ॥

ನವನು. ॥ ೩೨ ॥ ಭೋಜ ವಂಶಜಳಾದ ದೇವಕನ ಸುಪುತ್ರೀ ದೇವಕೀದೇವಿಯು ಕುಶಲವಷ್ಟೇ ? ಆಕೆಯು ದೇವಮಾತೆಯಾದ ಅದಿತಿಯಂತೆ ಸಾಕ್ಷಾತ್ ಮಹಾವಿಷ್ಣುವಿನ ಮಾತೆಯಾದ ಮಹಾಭಾಗ್ಯ ಶಾಲಿನಿಯು. 'ತ್ರಯೀ' ಎನಿಸಿದ ವೇದವಿದ್ಯೆಯು ತನ್ನ ಮಂತ್ರ ಗಳಲ್ಲಿ ಯಜ್ಞವಿಸ್ತಾರರೂಪವಾದ ಅರ್ಥವನ್ನು ಧರಿಸುವಂತೆ, ತನ್ನ ಗರ್ಭದಲ್ಲಿ ಭಗವಾನ್ ಶ್ರೀಕೃಷ್ಣನನ್ನು ಧರಿಸಿದ್ದ ಸುಕೃತಶಾಲಿನಿ. ॥ ೩೩ ॥ ಭಕ್ತಜನರ ಎಲ್ಲ ಕಾಮನೆಗಳನ್ನು ಈಡೇರಿಸುವ ಭಗವಾನ್ ಅನಿರುದ್ಧನು ಕ್ಷೇಮವಿದ್ದಾನೆಯೇ ? ಆತನನ್ನು ವೇದಗಳ ಆದಿ ಕಾರಣನೆಂದೂ, ವೇದವೇದ್ಯನೆಂದೂ, ಅಂತಃಕರಣದ ನಾಲ್ಕನೆಯ ಅಂಶವಾದ ಮನದ ಅಧಿಷ್ಠಾತೃವೆಂದೂ ಶಾಸ್ತ್ರಗಳು ಸಾರುತ್ತಿವೆ. ॥ ೩೪ ॥ ಎಲೈ ಸೌಮ್ಯನೇ ! ತಮ್ಮ ಆತ್ಮದೈವತನಾದ ಭಗವಾನ್ ಶ್ರೀಕೃಷ್ಣನನ್ನು ಅನನ್ಯ ಭಾವದಿಂದ ಅನುಸರಿಸುತ್ತಿರುವ ಹೃದೀಕ, ಸತ್ಯಭಾಮಾಪುತ್ರ ಚಾರುದೇಷ್ಣ, ಗದನೇ ಮುಂತಾದವರೆಲ್ಲರೂ ಕುಶಲವಾಗಿದ್ದಾರಷ್ಟೇ ? ॥ ೩೫ ॥

ಮಹಾರಾಜ ಯುಧಿಷ್ಠಿರನು ಅರ್ಜುನ ಮತ್ತು ಶ್ರೀಕೃಷ್ಣರೆಂಬ ತನ್ನೆರಡು ಭುಜಗಳ ಬಲದಿಂದ ಧರ್ಮಪೂರ್ವಕ ಧರ್ಮಸೇತು ವನ್ನು ಕಾಪಾಡುತ್ತಿದ್ದಾನಲ್ಲ? ಮಯನಿರ್ಮಿತವಾದ ಮಹಾಸಭೆ ಯಲ್ಲಿ ಆತನ ರಾಜ್ಯವೈಭವವನ್ನೂ, ಐಶ್ವರ್ಯವನ್ನೂ ನೋಡಿದ ದುರ್ಯೋಧನನು ಅಸೂಯಾಸಂತಾಪಕ್ಕೆ ಒಳಗಾಗಿದ್ದನು. ॥ ೩೬ ॥ ಅಪರಾಧಿಗಳ ವಿಷಯದಲ್ಲಿ ಕಡುಕೋಪವುಳ್ಳ ಭೀಮ ಸೇನನು ಸರ್ಪದಂತೆ ಅತಿದೀರ್ಘ ಕಾಲದಿಂದ ಇಟ್ಟುಕೊಂಡಿದ್ದ ರೋಷವನ್ನು ಬಿಟ್ಟು ಬಿಟ್ಟಿದ್ದಾನೆಯೇ ? ಅವನು ಗದಾಯುದ್ಧದಲ್ಲಿ ಅದ್ಭುತವಾಗಿ ಗದೆಯನ್ನು ತಿರುಹುತ್ತಾ ಓಡಾಡುತ್ತಿರುವಾಗ ಆತನ ಪಾದಗಳ ಭಾರವನ್ನು ಯುದ್ಧಭೂಮಿಗೆ ಸಹಿಸಲಾಗುತ್ತಿರಲಿಲ್ಲ. ॥ ೩೭ ॥ ಯಾವನ ಬಾಣಗಳ ರಾಶಿಯಲ್ಲಿ ಮರೆಯಾಗಿ ಕಣ್ಣಿಗೇ ಕಾಣಿಸದೇ ಹೋಗಿದ್ದ ಮಾಯಾಕಿರಾತವೇಷಧಾರೀ ಶಿವನು ಸುಪ್ರಸನ್ನನಾಗಿದ್ದನೋ, ಅಂತಹ ಅತಿರಥಿಯೂ, ರಥಿಗಳ ಮತ್ತು ಸೇನಾಪತಿಗಳ ಕೀರ್ತಿಯನ್ನು ವೃದ್ಧಿಪಡಿಸುವವನೂ ಆದ ಗಾಂಡೀವ ಧಾರಿಯಾದ ಅರ್ಜುನನು ಕ್ಷೇಮವಾಗಿದ್ದಾನೆಯೇ ? ಈಗಲಂತೂ ಆತನ ಸಕಲಶತ್ರುಗಳೂ ಶಾಂತರಾಗಿ ಬಿಟ್ಟಿರಬೇಕಲ್ಲ? ॥ ೩೮ ॥ ಕಣ್ಣುಗಳು ರೆಪ್ಪೆಗಳಿಂದ ರಕ್ಷಿತವಾಗಿರುವಂತೆ, ಕುಂತೀಪುತ್ರರಿಂದ ಸದಾ ರಕ್ಷಿತರಾದ ಮತ್ತು ಕುಂತೀದೇವಿಯೂ ಮುದ್ದಿನಿಂದ ಸಾಕಿದ ಮಾದ್ರಿಯ ಅವಳಿ ಮಕ್ಕಳಾದ ನಕುಲ-ಸಹದೇವರು ಕ್ಷೇಮವಾಗಿ ದ್ದಾರೆಯೇ ? ಮಹಾಪರಾಕ್ರಮಿಗಳಾದ ಅವರಿಬ್ಬರು ಗರುಡನು ಇಂದ್ರನ ಮುಖದಿಂದ ಅಮೃತವನ್ನು ಕಿತ್ತುಕೊಂಡಂತೆ, ಯುದ್ಧದಲ್ಲಿ ಶತ್ರುವಿನಿಂದ ರಾಜ್ಯವನ್ನು ಕಿತ್ತುಕೊಂಡಿರುವರು. ॥ ೩೯ ॥ ಅಯ್ಯೋ ! ಕುಂತಿಯಾದರೋ ರಾಜರ್ಷಿಶ್ರೇಷ್ಠನಾದ ಪಾಂಡುವಿನ ಅಗಲಿಕೆಯಿಂದ ಮೃತಪ್ರಾಯಳಾಗಿದ್ದರೂ, ಈ ಪುತ್ರರಿಗಾಗಿ ತನ್ನ ಪ್ರಾಣಗಳನ್ನು ಉಳಿಸಿಕೊಂಡಳು. ರಥಿಗಳಲ್ಲಿ ಶ್ರೇಷ್ಠನಾಗಿದ್ದ ಪಾಂಡುವೂ ಅನುಪಮ ವೀರನು. ಒಂದೇ ಧನುಸ್ಸಿನಿಂದ ಒಬ್ಬಂಟಿಗನಾಗಿಯೇ ನಾಲ್ಕೂ ದಿಕ್ಕುಗಳನ್ನು ಗೆದ್ದು ಬಂದಿದ್ದನು. ಅಂತಹ ವೀರನ ಪತ್ನಿ ಕುಂತಿಯು ಕ್ಷೇಮದಿಂದಿರುವಳೇ ? ॥ ೪೦ ॥ ಎಲೈ ಸೌಮ್ಯನೇ ! ಅಧಃಪತನ ಹೊಂದಿದ ಧೃತರಾಷ್ಟ್ರ

ಸೌಮ್ಯಾನುಶೋಚೇತಮಧಃಪತಂತಂ
ಭ್ರಾತ್ರೇ ಪರೇತಾಯ ವಿದುದ್ರುಹೇ ಯಃ ।
ನಿರ್ಯಾಪಿತೋ ಯೇನ ಸುಹೃತ್ಸ್ವಪುರ್ಯಾ
ಅಹಂ ಸ್ವಪುತ್ರಾನ್ಸಮನುವ್ರತೇನ ॥ ೪೧ ॥

ನಿಗಾಗಿ ನನಗೆ ಮತ್ತೆ-ಮತ್ತೆ ದುಃಖವುಂಟಾಗುತ್ತದೆ. ಅವನು ಪಾಂಡವರ ರೂಪದಲ್ಲಿ ಸ್ವರ್ಗಸ್ಥನಾದ ತನ್ನ ತಮ್ಮ ಪಾಂಡುವಿನೊಂದಿಗೂ ದ್ರೋಹವೆಸಗಿರುವನು. ದುಷ್ಟರಾದ ತನ್ನ ಪುತ್ರರ ಎಲ್ಲ ಕೆಲಸದಲ್ಲಿಯೂ ಹೂಂಗುಟ್ಟುತ್ತಾ, ಹಿತಚಿಂತಕನಾದ ನನ್ನನ್ನು ನಗರಿಯಿಂದ ಹೊರಹಾಕಿಸಿದ್ದನು. ॥ ೪೧ ॥ ಅಯ್ಯಾ ! ಆದರೆ ಈ ಕುರಿತು ನನಗೆ ದುಃಖವಾಗಲೀ, ಆಶ್ಚರ್ಯವಾಗಲೀ ಇಲ್ಲ. ಜಗತ್ತನ್ನು ಸೃಷ್ಟಿಸಿ, ಧರಿಸಿಕೊಂಡಿರುವ ಭಗವಾನ್ ಶ್ರೀಕೃಷ್ಣನೇ ಮನುಷ್ಯರಂತೆ ಲೀಲೆಗಳನ್ನು ನಡೆಸಿ ಜನರ ಮನೋವೃತ್ತಿಗಳನ್ನು ಭ್ರಮಿಸಿಬಿಟ್ಟಿರುವನು ಎಂಬುದು ನನಗೆ ತಿಳಿದಿದೆ. ಆದ್ದರಿಂದ ನಾನು ಆತನ ಕೃಪೆಯಿಂದ ಅವನ ಮಹಿಮೆಗಳನ್ನು ನೋಡುತ್ತಾ, ಬೇರೆಯವರ ದೃಷ್ಟಿಯಿಂದ ದೂರವುಳಿದು ಆನಂದವಾಗಿ ಸಂಚರಿಸುತ್ತಿರುವೆನು.

ಸೋಽಹಂ ಹರೇರ್ಮರ್ತ್ಯವಿಡಂಬನೇನ
ದೃಶೋ ನೃಣಾಂ ಚಾಲಯತೋ ವಿಧಾತುಃ ।
ನಾನ್ಯೋಪಲಕ್ಷ್ಯಃ ಪದವೀಂ ಪ್ರಸಾದಾ-
ಚ್ಚರಾಮಿ ಪಶ್ಯನ್ ಗತವಿಸ್ಮಯೋಽತ್ರ ॥ ೪೨ ॥

॥ ೪೨ ॥ ಕೌರವರು ತನ್ನಲ್ಲಿ ತುಂಬಾ ಅಪರಾಧಗಳನ್ನು ಮಾಡಿದ್ದರೂ ಭಗವಂತನು ಅವರನ್ನು ಒಡನೆಯೇ ಶಿಕ್ಷಿಸದೆ - ಧನಮದ, ವಿದ್ಯಾಮದ, ಜಾತಿಮದಗಳೆಂಬ ಮೂರು ಮದಗಳಿಂದ ಕೊಬ್ಬಿ ಕುರುಡರಾಗಿ ದುರ್ಮಾರ್ಗವನ್ನು ಹಿಡಿದು, ತಮ್ಮ ಸೈನ್ಯಗಳಿಂದ ಮತ್ತೆ-ಮತ್ತೆ ಭೂಮಿಯನ್ನು ನಡುಗಿಸುತ್ತಿದ್ದ ದುಷ್ಟರಾಜರನ್ನೂ ಅವರೊಡನೆ ನಾಶಮಾಡಿ, ಶರಣಾಗತರ ದುಃಖವನ್ನು ದೂರಮಾಡಿದನು.

ನೂನಂ ನೃಪಾಣಾಂ ತ್ರಿಮದೋತ್ಪಥಾನಾಂ
ಮಹೀಂ ಮುಹುಶ್ಚಾಲಯತಾಂ ಚಮೂಭಿಃ ।
ವಧಾತ್ಪ್ರಪನ್ನಾರ್ತಿಜಿಹೀರ್ಷಯೇಶೋಽ-
ಪ್ಯುಪೈಕ್ಷತಾಘಂ ಭಗವಾನ್ಕುರೂಣಾಮ್ ॥ ೪೩ ॥

॥ ೪೩ ॥ ಉದ್ಧವನೇ ! ಭಗವಾನ್ ಶ್ರೀಕೃಷ್ಣನು ಜನ್ಮ-ಕರ್ಮಗಳಿಂದ ರಹಿತನಾಗಿದ್ದರೂ ದುಷ್ಟರ ನಾಶವನ್ನು ಮಾಡುವುದಕ್ಕಾಗಿ ಮತ್ತು ಭಕ್ತ ಜನರನ್ನು ತನ್ನ ಕಡೆಗೆ ಆಕರ್ಷಿತಗೊಳಿಸಲು ಅವನ ದಿವ್ಯ ಜನ್ಮ-ಕರ್ಮಗಳಾಗುತ್ತವೆ. ಇಲ್ಲದಿದ್ದರೆ, ಭಗವಂತನ ಮಾತೇನು ! ಗುಣಾತೀತರಾದ ಬೇರೆ ಜನರೂ ಕೂಡ ಈ ಕರ್ಮಾಧೀನ ದೇಹದ ಬಂಧನದಲ್ಲಿ ಬೀಳಲು ಬಯಸುವಂತಹವರು ಯಾರಿದ್ದಾರೆ ?

ಅಜಸ್ಯ ಜನ್ಮೋತ್ಪಥನಾಶನಾಯ
ಕರ್ಮಾಣ್ಯಕರ್ತುರ್ಗ್ರಹಣಾಯ ಪುಂಸಾಮ್ ।
ನನ್ವನ್ಯಥಾ ಕೋಽರ್ಹತಿ ದೇಹಯೋಗಂ
ಪರೋ ಗುಣಾನಾಮುತ ಕರ್ಮತಂತ್ರಮ್ ॥ ೪೪ ॥

॥ ೪೪ ॥ ಆದ್ದರಿಂದ ಎಲೈ ಮಿತ್ರನೇ ! ಜನ್ಮರಹಿತನಾಗಿದ್ದರೂ ತನ್ನಲ್ಲಿ ಶರಣುಬಂದ ಸಮಸ್ತ ಲೋಕ ಪಾಲಕರಿಗೂ ಮತ್ತು ತನ್ನ ಅನುಶಾಸನಕ್ಕೆ ವಿಧೇಯರಾಗಿ ನಡೆಯುವ ಭಕ್ತರಿಗೂ ಪ್ರಿಯವನ್ನುಂಟು ಮಾಡುವುದಕ್ಕಾಗಿ ಯದುಕುಲದಲ್ಲಿ ಸ್ವೇಚ್ಛೆಯಿಂದ ಅವತರಿಸಿದ ಪವಿತ್ರ ಕೀರ್ತಿಯುಳ್ಳ ಶ್ರೀಕೃಷ್ಣನ ಸಮಾಚಾರವನ್ನು ನನಗೆ ತಿಳಿಸು. ॥ ೪೫ ॥

ತಸ್ಯ ಪ್ರಪನ್ನಾಖಿಲಲೋಕಪಾನಾ-
ಮವಸ್ಥಿತಾನಾಮನುಶಾಸನೇ ಸ್ವೇ ।
ಅರ್ಥಾಯ ಜಾತಸ್ಯ ಯದುಷ್ವಜಸ್ಯ
ವಾರ್ತಾಂ ಸಖೇ ಕೀರ್ತಯ ತೀರ್ಥಕೀರ್ತೇಃ ॥ ೪೫ ॥

***ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ವಿದುರೋದ್ಧವಸಂವಾದೇ ಪ್ರಥಮೋಽಧ್ಯಾಯಃ ॥ ೧ ॥**

# ಎರಡನೆಯ ಅಧ್ಯಾಯ

## ಉದ್ಧವನು ವಿದುರನಿಗೆ ಭಗವಂತನ ಬಾಲಲೀಲೆಗಳನ್ನು ವರ್ಣಿಸಿದುದು

*ಶ್ರೀಶುಕ ಉವಾಚ*

**ಇತಿ ಭಾಗವತಃ ಪೃಷ್ಟಃ ಕ್ಷತ್ತ್ರಾ ವಾರ್ತಾಂ ಪ್ರಿಯಾಶ್ರಯಾಮ್ ।**
**ಪ್ರತಿವಕ್ತುಂ ನ ಚೋತ್ಸೇಹ ಔತ್ಕಂಠ್ಯಾತ್ಸ್ಮಾರಿತೇಶ್ವರಃ ॥ ೧ ॥**

ಶ್ರೀಶುಕಮಹಾಮುನಿಗಳು ಹೇಳಿದರು – ಮಹಾರಾಜನೇ ! ಹೀಗೆ ವಿದುರನು ಪ್ರಿಯತಮನಾದ ಶ್ರೀಕೃಷ್ಣನಿಗೆ ಸಂಬಂಧಿಸಿದ ಮಾತುಗಳನ್ನು ಕೇಳಿದಾಗ ಭಾಗವತಶ್ರೇಷ್ಠನಾದ ಉದ್ಧವನಿಗೆ ಭಗವಂತನ ಸ್ಮರಣೆಯಿಂದ ಹೃದಯವು ತುಂಬಿಬಂತು. ಭಗವಂತನ ವಿರಹ ವ್ಯಥೆಯಿಂದ ಕೊಂಚಕಾಲ ಯಾವ ಉತ್ತರವನ್ನೂ ಕೊಡದಾದನು.॥ ೧ ॥

ಯಃ ಪಂಚಹಾಯನೋ ಮಾತ್ರಾ ಪ್ರಾತರಾಶಾಯ ಯಾಚಿತಃ ।
ತನ್ನೈಚ್ಛದ್ರಚಯನ್ ಯಸ್ಯ ಸಪರ್ಯಾಂ ಬಾಲಲೀಲಯಾ ॥ ೨ ॥

ಸ ಕಥಂ ಸೇವಯಾ ತಸ್ಯ ಕಾಲೇನ ಜರಸಂ ಗತಃ ।
ಪೃಷ್ಟೋ ವಾರ್ತಾಂ ಪ್ರತಿಬ್ರೂಯಾದ್ಭರ್ತುಃ ಪಾದಾವನುಸ್ಮರನ್ ॥ ೩ ॥

ಸ ಮುಹೂರ್ತಮಭೂತ್ತೂಷ್ಣೀಂ ಕೃಷ್ಣಾಂಘ್ರಿಸುಧಯಾ ಭೃಶಮ್ ।
ತೀವ್ರೇಣ ಭಕ್ತಿಯೋಗೇನ ನಿಮಗ್ನಃ ಸಾಧು ನಿರ್ವೃತಃ ॥ ೪ ॥

ಪುಲಕೋದ್ಭಿನ್ನ ಸರ್ವಾಂಗೋ ಮುಂಚನ್ಮೀಲದ್ದೃಶಾ ಶುಚಃ ।
ಪೂರ್ಣಾರ್ಥೋ ಲಕ್ಷಿತಸ್ತೇನ ಸ್ನೇಹಪ್ರಸರಸಂಪ್ಲುತಃ ॥ ೫ ॥

ಶನಕೈರ್ಭಗವಲ್ಲೋಕಾನ್ನೃಲೋಕಂ ಪುನರಾಗತಃ ।
ವಿಮೃಜ್ಯ ನೇತ್ರೇ ವಿದುರಂ ಪ್ರತ್ಯಾಹೋದ್ಧವ ಉತ್ಸ್ಮಯನ್ ॥ ೬ ॥

*ಉದ್ಧವ ಉವಾಚ*

ಕೃಷ್ಣದ್ಯುಮಣಿನಿಮ್ಲೋಚೇ ಗೀರ್ಣೇಷ್ವಜಗರೇಣ ಹ ।
ಕಿಂ ನು ನಃ ಕುಶಲಂ ಬ್ರೂಯಾಂ ಗತಶ್ರೀಷು ಗೃಹೇಷ್ವಹಮ್ ॥ ೭ ॥

ದುರ್ಭಗೋ ಬತ ಲೋಕೋಽಯಂ ಯದವೋ ನಿತರಾಮಪಿ ।
ಯೇ ಸಂವಸಂತೋ ನ ವಿದುರ್ಹರಿಂ ಮೀನಾ ಇವೋಡುಪಮ್ ॥ ೮ ॥

ಇಂಗಿತಜ್ಞಾಃ ಪುರುಪ್ರೌಢಾ ಏಕಾರಾಮಾಶ್ಚ ಸಾತ್ವತಾಃ ।
ಸಾತ್ವತಾಮೃಷಭಂ ಸರ್ವೇ ಭೂತಾವಾಸಮಮಂಸತ ॥ ೯ ॥

ದೇವಸ್ಯ ಮಾಯಯಾ ಸ್ಪೃಷ್ಟಾ ಯೇ ಚಾನ್ಯದಸದಾಶ್ರಿತಾಃ ।
ಭ್ರಾಮ್ಯತೇ ಧೀರ್ನ ತದ್ವಾಕ್ಯೈರಾತ್ಮನ್ಯುಪ್ತಾತ್ಮನೋ ಹರೌ ॥ ೧೦ ॥

ಅವನು ಐದು ವರ್ಷದ ಬಾಲಕನಾಗಿದ್ದಾಗ ಆಟ-ಪಾಠಗಳಲ್ಲಿ ಇರುವಾಗಲೂ ಶ್ರೀಕೃಷ್ಣನಲ್ಲೇ ತನ್ಮಯನಾಗುತ್ತಿದ್ದನು. ಆಟವಾಡುತ್ತಾ ಅವನು ಶ್ರೀಕೃಷ್ಣನ ಪೂಜೆಯಲ್ಲಿ ನಿರತನಾಗಿದ್ದಾಗ ತಾಯಿಯು ಊಟಕ್ಕಾಗಿ ಕರೆದಾಗಲೂ ಅದನ್ನು ಬಿಟ್ಟು ಹೋಗಲು ಬಯಸು ತ್ತಿರಲಿಲ್ಲ. ॥ ೨ ॥ ಈಗಲಾದರೋ ಶ್ರೀಕೃಷ್ಣನ ಸೇವೆಯಲ್ಲೇ ದೀರ್ಘ ಕಾಲ ತೊಡಗಿ ಮುದುಕನಾಗಿದ್ದನು. ಆದ್ದರಿಂದ ವಿದುರನು ಕೇಳಿದ್ದ ರಿಂದ ಅವನಿಗೆ ತನ್ನ ಪ್ರಿಯಪ್ರಭುವಿನ ಚರಣಕಮಲಗಳ ಸ್ಮರಣೆ ಉಂಟಾಗಿ ಹೃದಯವು ಭಾರವಾಗುವುದು ಸಹಜವೇ ? ಆ ಸ್ಥಿತಿ ಯಲ್ಲಿ ಆತನಿಗೆ ಪ್ರತ್ಯುತ್ತರ ಕೊಡಲು ಹೇಗೆ ಸಾಧ್ಯವಾದೀತು ? ॥ ೩ ॥ ಅವನು ಶ್ರೀಕೃಷ್ಣಪಾದಾರವಿಂದಗಳ ಧ್ಯಾನಾಮೃತಪಾನದಿಂದ ಆನಂದಭರಿತನಾಗಿ ಎರಡು ಘಳಿಗೆ ಕಾಲ ಏನೂ ಮಾತನಾಡಲಾರದೆ ಸುಮ್ಮನಿದ್ದುಬಿಟ್ಟನು. ಆತನು ತೀವ್ರವಾದ ಭಕ್ತಿ ಯೋಗದಲ್ಲಿ ಮುಳುಗಿ ಹೋಗಿದ್ದನು. ॥ ೪ ॥ ಅವನ ಶರೀರವೆಲ್ಲ ರೋಮಾಂಚವಾಯಿತು. ಮುಚ್ಚಿದ ಕಣ್ಣುಗಳಿಂದ ಆನಂದಾಶ್ರುಗಳು ಹರಿಯತೊಡಗಿದವು. ಹೀಗೆ ಭಕ್ತಿಪ್ರವಾಹದಲ್ಲಿ ಮಗ್ನನಾಗಿದ್ದ ಉದ್ಧವನನ್ನು ನೋಡಿ ಆತನು ಕೃತಕೃತ್ಯನಾದ ಸುಕೃತಿಯೆಂದು ವಿದುರನು ತಿಳಿದನು. ॥ ೫ ॥ ಕೊಂಚ ಕಾಲಾನಂತರ ಉದ್ಧವನು ಭಗವಂತನ ಪ್ರೇಮಧಾಮದಿಂದ ಕೆಳಗಿಳಿದು ಮನುಷ್ಯಲೋಕಕ್ಕೆ ಹಿಂದಿರುಗಿ ಕಣ್ಣುಗಳನ್ನು ಒರೆಸಿಕೊಂಡು ಭಗವಲ್ಲೀಲೆಗಳ ಸ್ಮರಣೆ ಉಂಟಾಗಿ ಮುಗುಳ್ನಗುತ್ತಾ ವಿದುರನಲ್ಲಿ ಹೀಗೆ ಹೇಳತೊಡಗಿದನು. ॥ ೬ ॥

**ಉದ್ಧವನು ಹೇಳಿದನು** – ಎಲೈ ವಿದುರನೇ ! ಶ್ರೀಕೃಷ್ಣನೆಂಬ ಸೂರ್ಯನು ಅಸ್ತಮಾನವಾದ್ದರಿಂದ ನಮ್ಮ ಮನೆಗಳನ್ನೂ ಕಾಲ ರೂಪೀ ಹೆಬ್ಬಾವು ನುಂಗಿಬಿಟ್ಟಿದೆ. ಅವು ಶ್ರೀಹೀನವಾಗಿವೆ. ಈಗ ನಾನು ಅವುಗಳ ಕುಶಲ ಸಮಾಚಾರ ಏನೆಂದು ಹೇಳಲಿ ? ॥ ೭ ॥ ಎಂತಹ ದುರದೃಷ್ಟ! ಈ ಲೋಕವೇ ಭಾಗ್ಯಹೀನವಾಗಿ ಬಿಟ್ಟಿತು. ಅದರಲ್ಲೂ ಯಾದವರು ವಿಶೇಷವಾಗಿ ನಿರ್ಭಾಗ್ಯರಾದರು. ಅವರು ನಿರಂತರ ಭಗವಂತನ ಜೊತೆಯಲ್ಲೇ ಇರುತ್ತಿದ್ದರೂ – ಅಮೃತಮಯ ಚಂದ್ರಬಿಂಬವು ಸಮುದ್ರದಲ್ಲೇ ಇದ್ದರೂ ಅದನ್ನು ಮೀನುಗಳು ಗುರುತಿಸದಂತೆ ಯಾದವರು ಭಗವಂತನನ್ನು ಗುರು ತಿಸದೆ ಹೋದರು. ॥ ೮ ॥ ಯಾದವರು ಇಂಗಿತಜ್ಞರೂ, ಮಹಾ ಬುದ್ಧಿ ಶಾಲಿಗಳೂ ಆಗಿದ್ದರು. ಶ್ರೀಕೃಷ್ಣ ಪರಮಾತ್ಮನೊಂದಿಗೆ ಒಂದೇ ಜಾಗದಲ್ಲಿದ್ದು ಅವನೊಡನೆ ವಾಸಿಸುತ್ತಿದ್ದರೂ ಅವರೆಲ್ಲರೂ ಸಮಸ್ತ ವಿಶ್ವದ ಆಶ್ರಯನೂ, ಸರ್ವಾಂತರ್ಯಾಮಿಯೂ ಆದ ಶ್ರೀಕೃಷ್ಣನನ್ನು ಓರ್ವ ಯಾದವ ಶ್ರೇಷ್ಠನೆಂದೇ ತಿಳಿದಿದ್ದರು. ॥ ೯ ॥ ಆದರೆ ಭಗವಂತನ ಮಾಯೆಯಿಂದ ಮೋಹಿತರಾದ ಈ ಯಾದವರು ಮತ್ತು ಇವನಲ್ಲಿ ವ್ಯರ್ಥವಾಗಿ ವೈರವನ್ನು ಕಟ್ಟಿಕೊಂಡ ಶಿಶುಪಾಲಾದಿಗಳ ಅಮಂಗಳಕರ, ನಿಂದಾಸೂಚಕವಾಕ್ಯಗಳಿಂದ ಭಗ ವಂತನಲ್ಲಿ ಮನಸ್ಸಮಾಧಿಯನ್ನು ಹೊಂದಿದ ಮಹಾತ್ಮರ ಬುದ್ಧಿಯು ಭ್ರಮಿತವಾಗುತ್ತಿರಲಿಲ್ಲ. ॥ ೧೦ ॥ ಎಂದೂ ತಪಸ್ಸನ್ನೇ ಮಾಡದ ಜನರಿಗೂ ಕೂಡ ಇಷ್ಟು ದಿನ ದರ್ಶನಕೊಟ್ಟು ಈಗ ಅವರ ದರ್ಶನ ಲಾಲಸೆಯನ್ನು ತೃಪ್ತಿಪಡಿಸದೆಯೇ ಆ ಭಗವಾನ್ ಶ್ರೀಕೃಷ್ಣನು ತನ್ನ ತ್ರಿಭುವನಮೋಹನ ದಿವ್ಯವಿಗ್ರಹವನ್ನು ಅಡಗಿಸಿ ಅಂತರ್ಧಾನ

ಪ್ರದರ್ಶ್ಯಾತಪ್ತತಪಸಾಮವಿತೃಪ್ತದೃಶಾಂ ನೃಣಾಮ್ ।
ಆದಾಯಾಂತರಧಾದ್ಯಸ್ತು ಸ್ವಬಿಂಬಂ ಲೋಕಲೋಚನಮ್ ॥ ೧೧ ॥

ಯನ್ಮರ್ತ್ಯಲೀಲೌಪಯಿಕಂ ಸ್ವಯೋಗ-
ಮಾಯಾಬಲಂ ದರ್ಶಯತಾ ಗೃಹೀತಮ್ ।
ವಿಸ್ಮಾಪನಂ ಸ್ವಸ್ಯ ಚ ಸೌಭಗರ್ದ್ಧೇಃ
ಪರಂ ಪದಂ ಭೂಷಣಭೂಷಣಾಂಗಮ್ ॥ ೧೨ ॥

ಯದ್ಧರ್ಮಸೂನೋರ್ಬತ ರಾಜಸೂಯೇ
ನಿರೀಕ್ಷ್ಯ ದೃಕ್ಸ್ವಸ್ತ್ಯಯನಂ ತ್ರಿಲೋಕಃ ।
ಕಾರ್ತ್ಸ್ನ್ಯೇನ ಚಾದ್ಯೇಹ ಗತಂ ವಿಧಾತು-
ರರ್ವಾಕ್ಸೃತೌ ಕೌಶಲಮಿತ್ಯಮನ್ಯತ ॥ ೧೩ ॥

ಯಸ್ಯಾನುರಾಗಪ್ಲುತಹಾಸರಾಸ-
ಲೀಲಾವಲೋಕಪ್ರತಿಲಬ್ಧಮಾನಾಃ ।
ವ್ರಜಸ್ತ್ರಿಯೋ ದೃಗ್ಭಿರನುಪ್ರವೃತ್ತ-
ಧಿಯೋಽವತಸ್ಥುಃ ಕಿಲ ಕೃತ್ಯಶೇಷಾಃ ॥ ೧೪ ॥

ಸ್ವಶಾಂತರೂಪೇಷ್ವಿತರೈಃ ಸ್ವರೂಪೈ-
ರಭ್ಯರ್ದ್ಯಮಾನೇಷ್ವನುಕಂಪಿತಾತ್ಮಾ ।
ಪರಾವರೇಶೋ ಮಹದಂಶಯುಕ್ತೋ
ಹ್ಯಜೋಽಪಿ ಜಾತೋ ಭಗವಾನ್ಯಥಾಗ್ನಿಃ ॥ ೧೫ ॥

ಮಾಂ ಖೇದಯತ್ಯೇತದಜಸ್ಯ ಜನ್ಮ-
ವಿಡಂಬನಂ ಯದ್ವಸುದೇವಗೇಹೇ ।
ವ್ರಜೇ ಚ ವಾಸೋಽರಿಭಯಾದಿವ ಸ್ವಯಂ
ಪುರಾದ್ವ್ಯವಾತ್ಸೀದ್ಯದನಂತವೀರ್ಯಃ ॥ ೧೬ ॥

ದುನೋತಿ ಚೇತಃ ಸ್ಮರತೋ ಮಮೈತದ್
ಯದಾಹ ಪಾದಾವಭಿವಂದ್ಯ ಪಿತ್ರೋಃ ।
ತಾತಾಂಬ ಕಂಸಾದುರುಶಂಕಿತಾನಾಂ
ಪ್ರಸೀದತಂ ನೋಽಕೃತನಿಷ್ಕೃತೀನಾಮ್ ॥ ೧೭ ॥

ಕೋ ವಾ ಅಮುಷ್ಯಾಂಘ್ರಿ ಸರೋಜರೇಣುಂ
ವಿಸ್ಮರ್ತುಮೀಶೀತ ಪುಮಾನ್ವಿಜಿಘ್ರನ್ ।
ಯೋ ವಿಸ್ಫುರದ್ಭ್ರೂವಿಟಪೇನ ಭೂಮೇ-
ರ್ಭಾರಂ ಕೃತಾಂತೇನ ತಿರಶ್ಚಕಾರ ॥ ೧೮ ॥

ನಾದನು. ಹೀಗೆ ಅವನು ಅವರ ಕಣ್ಣನ್ನೇ ಕಿತ್ತುಕೊಂಡು ಬಿಟ್ಟಿರುವನು. ॥ ೧೧ ॥ ತನ್ನ ಯೋಗಮಾಯೆಯ ಪ್ರಭಾವವನ್ನು ತೋರ್ಪಡಿಸುತ್ತಾ ಮನುಷ್ಯಲೀಲೆಗ ತಕ್ಕಂತೆ ಆತನು ಸ್ವೀಕರಿಸಿದ್ದ ಆ ಶ್ರೀಮೂರ್ತಿಯ ಸೊಬಗನ್ನು ಹೇಗೆ ವರ್ಣಿಸೋಣ! ಅದು ಸೌಂದರ್ಯ-ಸೌಭಾಗ್ಯಗಳ ಪರಮ ನೆಲೆಯೇ ಆಗಿತ್ತು. ಅವನಿಂದ ಆಭೂಷಣಗಳೂ ವಿಭೂಷಿತವಾಗುತ್ತಿದ್ದವು. ಜಗತ್ತಿಗೆ ಮಾತ್ರವಲ್ಲದೆ ಸ್ವಯಂ ಭಗವಂತನಿಗೇ ಆಶ್ಚರ್ಯವನ್ನುಂಟು ಮಾಡುವುದಾಗಿತ್ತು. ॥ ೧೨ ॥

ಧರ್ಮರಾಜನ ರಾಜಸೂಯಯಜ್ಞದ ಸಮಯದಲ್ಲಿ ಕಣ್ಣುಗಳಿಗೆ ಹಬ್ಬವಾಗಿದ್ದ ಆ ಭಗವಂತನ ಶ್ರೀಮೂರ್ತಿಯನ್ನು ಕಂಡು ಮೂರು ಲೋಕದ ಜನರೂ – 'ಬ್ರಹ್ಮದೇವರು ಮನುಷ್ಯಸೃಷ್ಟಿಯ ರಚನೆಯಲ್ಲಿರುವ ಎಲ್ಲ ಜಾಣ್ಮೆಯನ್ನು ಈ ರೂಪದಲ್ಲೇ ಸೇರಿಸಿಬಿಟ್ಟಿರುವನು' ಎಂದು ಭಾವಿಸಿದ್ದರು. ॥ ೧೩ ॥ ಆ ಶ್ರೀಕೃಷ್ಣನ ಅನುರಾಗಪೂರ್ಣವಾದ ಹಾಸ್ಯ ಮತ್ತು ವಿನೋದಮಯವಾದ ಕಣ್ನೋಟಗಳಿಂದ ಸಮ್ಮಾನಿತರಾದ ಗೋಕುಲದ ಸ್ತ್ರೀಯರ ಕಣ್ಣುಗಳು ಅವನಲ್ಲೇ ನೆಟ್ಟಿರುತ್ತಿದ್ದವು ಮತ್ತು ಮನೋಲಯವನ್ನು ಹೊಂದಿ ಮನೆಯ ಕೆಲಸಗಳನ್ನು ನಿಲ್ಲಿಸಿ ಬೊಂಬೆಗಳಂತೆ ಸ್ತಬ್ಧರಾಗಿ ನಿಂತುಬಿಡುತ್ತಿದ್ದರು. ॥ ೧೪ ॥ ಚರಾಚರ ಜಗತ್ತಿನ ಮತ್ತು ಪ್ರಕೃತಿಯ ಒಡೆಯನಾದ ಭಗವಂತನು ಸೌಮ್ಯಸ್ವರೂಪಿಗಳಾದ ಮಹಾತ್ಮರೂ, ದೇವತೆಗಳೂ ಮುಂತಾದವರು ಘೋರರೂಪಿಗಳಾದ ಅಸುರರಿಂದ ಪೀಡಿಸಲ್ಪಡುತ್ತಿರುವುದನ್ನು ಕಂಡು ಕರುಣಾಪೂರಿತನಾಗಿ, ಜನ್ಮರಹಿತನಾಗಿದ್ದರೂ ತನ್ನ ಅಂಶವಾದ ಬಲರಾಮನೊಂದಿಗೆ ಕಟ್ಟಿಗೆಯಲ್ಲಿ ಬೆಂಕಿಯು ಆವಿರ್ಭವಿಸುವಂತೆ ಪ್ರಕಟನಾದನು. ॥ ೧೫ ॥ ಜನ್ಮರಹಿತನಾಗಿದ್ದರೂ ಆ ಮಹಾಪ್ರಭುವು ವಸುದೇವನ ಮನೆಯಲ್ಲಿ ಜನ್ಮತಳೆದು ಲೀಲೆಗಳನ್ನು ತೋರುವುದೂ, ಸಮಸ್ತ ಭೂತಗಳಿಗೂ ಅಭಯಪ್ರದನಾಗಿದ್ದರೂ ಕಂಸನಿಗೆ ಭಯಗೊಂಡವನಂತೆ ವೃಂದಾವನಕ್ಕೆ ಹೋಗಿ ಅಡಗಿರುವುದು, ಅನಂತ ಪರಾಕ್ರಮಿಯಾಗಿದ್ದರೂ ಕಾಲಯವನನಿಗೆ ಭಯಗೊಂಡವನಂತೆ ಮಥುರಾನಗರಿಯನ್ನು ಬಿಟ್ಟು ಓಡಿಹೋಗುವುದೂ – ಇವೆಲ್ಲ ಭಗವಂತನ ಲೀಲೆಗಳು ನೆನಪಿಗೆ ಬಂದು ಮನಸ್ಸು ಕಳವಳಗೊಳ್ಳುತ್ತದೆ. ॥ ೧೬॥ ಮೂರು ಲೋಕಗಳಿಗೂ ತಂದೆಯಾಗಿದ್ದರೂ ವಸುದೇವ-ದೇವಕಿಯರ ಚರಣಗಳಿಗೆ ಎರಗಿ 'ಅಪ್ಪಾ! ಅಮ್ಮಾ! ಕಂಸನ ಭಯಕ್ಕೆ ಒಳಗಾಗಿ ನಾವು ನಿಮಗೆ ಯಾವ ಸೇವೆಯನ್ನೂ ಮಾಡಲಾಗಲಿಲ್ಲ. ನಮ್ಮ ಅಪರಾಧವನ್ನು ಮನ್ನಿಸಿ ಪ್ರಸನ್ನರಾಗಬೇಕು' ಎಂದು ಬೇಡಿಕೊಂಡನು. ಶ್ರೀಕೃಷ್ಣನ ಈ ಮಾತುಗಳು ನೆನಪಾದಾಗ ಇಂದೂ ಕೂಡ ನನ್ನ ಚಿತ್ತವು ಅತ್ಯಂತ ವ್ಯಥಿತವಾಗುತ್ತದೆ. ॥ ೧೭ ॥ ಕಾಲಸ್ವರೂಪವಾದ ತನ್ನ ಭ್ರುಕುಟಿವಿಲಾಸದಿಂದಲೇ ಭೂಮಿಯ ಸಮಸ್ತ ಭಾರವನ್ನು ಇಳಿಸಿದ ಆ ಪರಮಪುರುಷ ಶ್ರೀಕೃಷ್ಣನ ಪಾದಪದ್ಮಗಳ ಪರಾಗವನ್ನು ಸೇವಿಸುವ ಯಾವನು ತಾನೇ ಆತನನ್ನು ಮರೆಯುವನು ? ॥ ೧೮ ॥ ಶಿಶುಪಾಲನಾದರೋ ಶ್ರೀಕೃಷ್ಣನಲ್ಲಿ ಬದ್ಧದ್ವೇಷ ಹೊಂದಿದ್ದರೂ, ಅವನು ಯೋಗಿಗಳು ಯೋಗಸಾಧನೆಯಿಂದ ಪಡೆಯಲು ಬಯಸುತ್ತಿರುವ ಪರಮ ಸಿದ್ಧಿಯನ್ನು ಪಡೆದುದನ್ನು ನೀವು ರಾಜಸೂಯ

ದೃಷ್ಟ್ವಾ ಭವದ್ಭಿರ್ನನು ರಾಜಸೂಯೇ
ಚೈದ್ಯಸ್ಯ ಕೃಷ್ಣಂ ದ್ವಿಷತೋಽಪಿ ಸಿದ್ಧಿಃ ।
ಯಾಂ ಯೋಗಿನಃ ಸಂಸ್ಪೃಹಯಂತಿ ಸಮ್ಯಗ್
ಯೋಗೇನ ಕಸ್ತದ್ವಿರಹಂ ಸಹೇತ ॥ ೧೯ ॥

ತಥೈವ ಚಾನ್ಯೇ ನರಲೋಕವೀರಾ
ಯ ಆಹವೇ ಕೃಷ್ಣ ಮುಖಾರವಿಂದಮ್ ।
ನೇತ್ರೈಃ ಪಿಬಂತೋ ನಯನಾಭಿರಾಮಂ
ಪಾರ್ಥಾಸ್ತ್ರ ಪೂತಾಃ ಪದಮಾಪುರಸ್ಯ ॥ ೨೦ ॥

ಸ್ವಯಂ ತ್ವ ಸಾಮ್ಯಾತಿಶಯಸ್ತ್ರ್ಯಧೀಶಃ
ಸ್ವಾರಾಜ್ಯಲಕ್ಷ್ಮ್ಯಾಪ್ತಸಮಸ್ತಕಾಮಃ ।
ಬಲಿಂ ಹರದ್ಭಿಶ್ಚಿರಲೋಕಪಾಲೈಃ
ಕಿರೀಟಕೋಟ್ಯೇಡಿತಪಾದಪೀಠಃ ॥ ೨೧ ॥

ತತ್ತಸ್ಯ ಕೈಂಕರ್ಯಮಲಂ ಭೃತಾನ್ನೋ
ವಿಗ್ಲಾಪಯತ್ಯಂಗ ಯದುಗ್ರಸೇನಮ್ ।
ತಿಷ್ಠನ್ನಿಷಣ್ಣಂ ಪರಮೇಷ್ಠಿಧಿಷ್ಣ್ಯೇ
ನ್ಯಬೋಧಯದ್ದೇವ ನಿಧಾರಯೇತಿ ॥ ೨೨ ॥

ಅಹೋ ಬಕೀ ಯಂ ಸ್ತನಕಾಲಕೂಟಂ
ಜಿಘಾಂಸಯಾಪಾಯಯದಪ್ಯಸಾಧ್ವೀ ।
ಲೇಭೇ ಗತಿಂ ಧಾತ್ರ್ಯುಚಿತಾಂ ತತೋಽನ್ಯಂ
ಕಂ ವಾ ದಯಾಲುಂ ಶರಣಂ ವ್ರಜೇಮ ॥ ೨೩ ॥

ಮನ್ಯೇಽಸುರಾನ್ಭಾಗವತಾಂಸ್ತ್ರ್ಯಧೀಶೇ
ಸಂರಂಭಮಾರ್ಗಾಭಿನಿವಿಷ್ಟಚಿತ್ತಾನ್ ।
ಯೇ ಸಂಯುಗೇಽಚಕ್ಷತ ತಾರ್ಕ್ಷ್ಯಪುತ್ರ-
ಮಂಸೇ ಸುನಾಭಾಯುಧಮಾಪತಂತಮ್ ॥ ೨೪ ॥

ವಸುದೇವಸ್ಯ ದೇವಕ್ಯಾಂ ಜಾತೋ ಭೋಜೇಂದ್ರಬಂಧನೇ ।
ಚಿಕೀರ್ಷುರ್ಭಗವಾನಸ್ಯಾಃ ಶಮಜೇನಾಭಿಯಾಚಿತಃ ॥ ೨೫ ॥

ತತೋ ನಂದವ್ರಜಮಿತಃ ಪಿತ್ರಾ ಕಂಸಾದ್ವಿಬಿಭ್ಯತಾ ।
ಏಕಾದಶ ಸಮಾಸ್ತತ್ರ ಗೂಢಾರ್ಚಿಃ ಸಬಲೋಽವಸತ್ ॥ ೨೬ ॥

ಪರೀತೋ ವತ್ಸಪೈರ್ವತ್ಸಾಂಶ್ಚಾರಯನ್ ವ್ಯಹರದ್ವಿಭುಃ ।
ಯಮುನೋಪವನೇ ಕೂಜದ್ದ್ವಿಜಸಂಕುಲಿತಾಂಘ್ರಿಪೇ ॥ ೨೭ ॥

ಯಜ್ಞದಲ್ಲಿ ಪ್ರತ್ಯಕ್ಷವಾಗಿ ನೋಡಿರುವಿರಿ. ಅಂತಹವನ ವಿರಹವನ್ನು ಯಾರು ತಾನೇ ಸಹಿಸಬಲ್ಲರು ? ॥ ೧೯ ॥ ಶಿಶುಪಾಲನಂತೆ ಮಹಾಭಾರತ ಯುದ್ಧದಲ್ಲಿ ಅರ್ಜುನನ ಬಾಣಗಳಿಗೆ ತುತ್ತಾಗಿ ಕಣ್ಣುಗಳಿಗೆ ಹಬ್ಬವಾಗಿದ್ದ ಶ್ರೀಕೃಷ್ಣನ ಮುಖಾರವಿಂದವನ್ನು ನೋಡುತ್ತಾ ಪ್ರಾಣತ್ಯಾಗಮಾಡಿದ ಎಲ್ಲರೂ ಪವಿತ್ರರಾಗಿ ಪರಂಧಾಮವನ್ನು ಪಡೆದುಕೊಂಡರು. ॥ ೨೦ ॥ ಸಾಕ್ಷಾತ್ ಭಗವಾನ್ ಶ್ರೀಕೃಷ್ಣನು ಮೂರು ಲೋಕಗಳಿಗೆ ಒಡೆಯನು. ಅವನಿಗೆ ಸಮಾನರಾದವರು ಯಾರೂ ಇಲ್ಲ, ಹಾಗಿರುವಾಗ ಅವನಿಗಿಂತ ಮಿಗಿಲಾದವರು ಯಾರಿದ್ದಾರೆ ? ಇಂದ್ರಾದಿ ಅಸಂಖ್ಯ ಲೋಕಪಾಲರು ನಾನಾ ರೀತಿಯ ಕಾಣಿಕೆಗಳನ್ನು ತಂದು-ತಂದು ಒಪ್ಪಿಸಿ, ತಮ್ಮ ಕಿರೀಟಗಳ ತುದಿಯಿಂದ ಅವನು ಕಾಲನ್ನಿಡುವ ಪಾದಪೀಠಕ್ಕೆ ಮಣಿಯುತ್ತಿದ್ದರು. ॥ ೨೧ ॥ ವಿದುರನೇ ! ಅದೇ ಭಗವಾನ್ ಶ್ರೀಕೃಷ್ಣನು ರಾಜಸಿಂಹಾಸನದ ಮೇಲೆ ಕುಳಿತಿರುವ ಉಗ್ರಸೇನನ ಮುಂದೆ ನಿಂತು 'ಜೀಯಾ ! ನಮ್ಮ ಅರಿಕೆಯನ್ನು ಲಾಲಿಸಬೇಕು' ಎಂದು ಬಿನ್ನಹಮಾಡುತ್ತಿದ್ದನು. ಅವನ ಸೇವಾ ಭಾವವು ನೆನಪಾಗುತ್ತಲೇ ನಮ್ಮಂತಹ ಸೇವಕರ ಚಿತ್ತವು ಅತ್ಯಂತ ಕಳವಳಗೊಳ್ಳುತ್ತದೆ. ॥ ೨೨ ॥ ಪಾಪಿಷ್ಠೆಯಾದ ಪೂತನಿಯು ತನ್ನ ಸ್ತನಗಳಲ್ಲಿ ವಿಷವನ್ನು ತುಂಬಿಕೊಂಡು ಶ್ರೀಕೃಷ್ಣನನ್ನು ಕೊಲ್ಲಬೇಕೆಂಬ ಅಭಿಲಾಷೆಯಿಂದ ಅವನಿಗೆ ಸ್ತನ್ಯವನ್ನು ಕುಡಿಸಿದ್ದಳು. ಅವಳಿಗೂ ಕೂಡ ಭಗವಂತನು ನಿಜವಾದ ದಾದಿಗೆ ಸಿಕ್ಕಬೇಕಾದ ಸದ್ಗತಿಯನ್ನು ಕರುಣಿಸಿದನು. ಶರಣುಹೊಂದುವುದಕ್ಕೆ ಯೋಗ್ಯವಾದ ಕರು ಣಾಳುವು ಆತನಲ್ಲದೆ ಮತ್ತೆ ಯಾರಿದ್ದಾರೆ ? ॥ ೨೩ ॥ ಈ ಅಸುರ ರನ್ನೂ ನಾನು ಭಗವದ್ಭಕ್ತರೆಂದೇ ಪರಿಗಣಿಸುತ್ತೇನೆ. ಏಕೆಂದರೆ, ವೈರಜನಿತ ಕ್ರೋಧದ ಕಾರಣ ಅವರ ಚಿತ್ತವು ಸದಾಕಾಲ ಶ್ರೀಕೃಷ್ಣ ನಲ್ಲೇ ತೊಡಗಿರುತ್ತಿತ್ತು ಮತ್ತು ರಣರಂಗದಲ್ಲಿ ಗರುಡನು ಹೆಗಲಲ್ಲಿ ಹೊತ್ತುಕೊಂಡಿದ್ದ ಸುದರ್ಶನ ಚಕ್ರಧಾರಿಯಾದ ಶತ್ರುಗಳ ಮೇಲೆ ಎರಗುತ್ತಿರುವ ಶ್ರೀ ಭಗವಂತನ ದರ್ಶನವೂ ಆಗುತ್ತಿತ್ತು. ॥ ೨೪ ॥

ಬ್ರಹ್ಮದೇವರ ಪ್ರಾರ್ಥನೆಯಂತೆ ಭೂಭಾರವನ್ನು ಇಳುಹಿ, ಅಕೆಯನ್ನು ಸುಖಿಯಾಗಿಸಲಿಕ್ಕಾಗಿ ಭಗವಂತನು ಕಂಸನ ಕಾರಾ ಗೃಹದಲ್ಲಿ ವಸುದೇವ-ದೇವಕಿಯರಲ್ಲಿ ಅವತರಿಸಿದ್ದನು. ॥ ೨೫ ॥ ಆಗ ಕಂಸನಿಗೆ ಭಯಪಟ್ಟು ತಂದೆ ವಸುದೇವನು ಆತನನ್ನು ನಂದ ಗೋಕುಲಕ್ಕೆ ಕೊಂಡೊಯ್ದು ಇರಿಸಿದನು. ಅಲ್ಲಿ ಆತನು ಬಲರಾಮ ನೊಂದಿಗೆ ತನ್ನ ಪ್ರಭಾವವು ಹೊರಗೆ ಯಾರಿಗೂ ತಿಳಿಯದಂತೆ ಅಡಗಿಕೊಂಡು ಹನ್ನೊಂದು ವರ್ಷ ವಾಸವಾಗಿದ್ದನು. ॥ ೨೬ ॥ ಹಕ್ಕಿಗಳ ಹಿಂಡು ಕಲ-ಕಲ ನಿನಾದ ಮಾಡುತ್ತಾ ಸುಖವಾಗಿ ವಾಸಿಸುತ್ತಿದ್ದ ಯಮುನಾತೀರದ ಉದ್ಯಾನವನದಲ್ಲಿ ಕರುಗಳನ್ನು ಮೇಯಿಸುತ್ತಾ ಭಗವಾನ್ ಶ್ರೀಕೃಷ್ಣನು ಗೊಲ್ಲಬಾಲಕರೊಡನೆ ಕ್ರೀಡಿಸುತ್ತಿದ್ದನು. ॥ ೨೭ ॥ ಗೋಕುಲನಿವಾಸಿಗಳ ದೃಷ್ಟಿಯನ್ನು ಸೆಳೆಯು ವಂತಹ ನಾನಾ ಬಾಲಲೀಲೆಗಳನ್ನು ಅಲ್ಲಿ ಪ್ರಭುವು ಪ್ರಕಟಿಸಿದನು. ಕೆಲವೊಮ್ಮೆ ಅಳುವಂತೆಯೂ, ಕೆಲವು ವೇಳೆ ನಗುವಂತೆಯೂ ಕಾಣಿಸಿ ಕೊಂಡರೆ, ಕೆಲವೊಮ್ಮೆ ಸಿಂಹದ ಮರಿಯಂತೆ ಮುಗ್ಧದೃಷ್ಟಿ

ಕೌಮಾರೀಂ ದರ್ಶಯಂಶ್ಚೇಷ್ಟಾಂ
ಪ್ರೇಕ್ಷಣೀಯಾಂ ವ್ರಜೌಕಸಾಮ್ ।
ರುದನ್ನಿವ ಹಸನ್ಮುಗ್ಧ-
ಬಾಲಸಿಂಹಾವಲೋಕನಃ ॥ ೨೮ ॥

ಸ ಏವ ಗೋಧನಂ ಲಕ್ಷ್ಮ್ಯಾ ನಿಕೇತಂ ಸಿತಗೋವೃಷಮ್ ।
ಚಾರಯನ್ನನುಗಾನ್ ಗೋಪಾನ್ರಣದ್ವೇಣುರರೀರಮತ್ ॥ ೨೯ ॥

ಪ್ರಯುಕ್ತಾನ್ಭೋಜರಾಜೇನ ಮಾಯಿನಃ ಕಾಮರೂಪಿಣಃ ।
ಲೀಲಯಾ ವ್ಯನುದತ್ತಾಂಸ್ತಾನ್ ಬಾಲಃ ಕ್ರೀಡನಕಾನಿವ ॥ ೩೦ ॥

ವಿಪನ್ನಾನ್ವಿಷಪಾನೇನ ನಿಗೃಹ್ಯ ಭುಜಗಾಧಿಪಮ್ ।
ಉತ್ಥಾಪ್ಯಾಪಾಯಯದ್ಗಾವಸ್ತತ್ತೋಯಂ ಪ್ರಕೃತಿಸ್ಥಿತಮ್ ॥ ೩೧ ॥

ಅಯಾಜಯದ್ಗೋಸವೇನ ಗೋಪರಾಜಂ ದ್ವಿಜೋತ್ತಮೈಃ ।
ವಿತ್ತಸ್ಯ ಚೋರುಭಾರಸ್ಯ ಚಿಕೀರ್ಷನ್ಸದ್ವ್ಯಯಂ ವಿಭುಃ ॥ ೩೨ ॥

ವರ್ಷತೀಂದ್ರೇ ವ್ರಜಃ ಕೋಪಾದ್ಭಗ್ನಮಾನೇಽತಿವಿಹ್ವಲಃ ।
ಗೋತ್ರಲೀಲಾತಪತ್ರೇಣ ತ್ರಾತೋ ಭದ್ರಾನುಗೃಹ್ಣತಾ ॥ ೩೩ ॥

ಶರಚ್ಛಶಿಕರೈರ್ಮೃಷ್ಟಂ ಮಾನಯನ್ರಜನೀಮುಖಮ್ ।
ಗಾಯನ್ಕಲಪದಂ ರೇಮೇ ಸ್ತ್ರೀಣಾಂ ಮಂಡಲಮಂಡನಃ ॥ ೩೪ ॥

ಯಿಂದ ನೋಡುತ್ತಿದ್ದನು. ॥ ೨೮ ॥ ಸ್ವಲ್ಪ ದೊಡ್ಡವನಾದಾಗ ಬಿಳಿಯ ಎತ್ತುಗಳನ್ನೂ, ನಾನಾಬಣ್ಣದ ಹಸುಗಳನ್ನೂ ಮೇಯಿಸುತ್ತಾ ಕೊಳಲನ್ನೂದಿ ಅದರ ಇಂಚರದಿಂದ ಗೋವಳರನ್ನೂ ಸಂತೋಷ ಪಡಿಸುತ್ತಿದ್ದನು. ॥ ೨೯ ॥ ಆ ಸಮಯದಲ್ಲಿ ಕಂಸನು ಆತನನ್ನು ಕೊಂದು ಬಿಡಬೇಕೆಂದು ಮಾಯಾವಿಗಳೂ, ಕಾಮರೂಪಿಗಳೂ ಆದ ಅನೇಕ ರಾಕ್ಷಸರನ್ನು ಕಳಿಸಿದಾಗ ಹುಡುಗರು ಆಟದ ಸಾಮಾನು ಮುರಿದು ಹಾಕುವಂತೆ ಭಗವಂತನು ಅವರನ್ನು ಕೊಂದುಬಿಟ್ಟನು. ॥ ೩೦ ॥ ಕಾಳಿಂಗನಾಗನನ್ನು ಮರ್ದನಮಾಡಿ, ವಿಷಮಿಶ್ರಿತವಾದ ನೀರನ್ನು ಕುಡಿದು ವಿಪತ್ತಿಗೆ ಒಳಗಾಗಿದ್ದ ಗೋವುಗಳನ್ನೂ, ಗೋವಳರನ್ನೂ ಬದುಕಿಸಿ, ಆ ಮಡುವಿನ ನೀರನ್ನು ಶುದ್ಧಗೊಳಿಸಿ ಕುಡಿಯಲು ಯೋಗ್ಯವನ್ನಾಗಿ ಮಾಡಿದನು. ॥ ೩೧ ॥ ಗೋಪರಾಜನಾದ ನಂದಗೋಪನಲ್ಲಿದ್ದ ಹೇರಳವಾದ ಹಣದ ಸದ್ವಿನಿಯೋಗವಾಗಲೆಂದು ಭಗವಾನ್ ಶ್ರೀಕೃಷ್ಣನು ಅವನಿಂದ ಶ್ರೇಷ್ಠ ಬ್ರಾಹ್ಮಣರ ಮೂಲಕ ಗೋವರ್ಧನ ಪೂಜಾರೂಪೀ ಗೋಯಜ್ಞವನ್ನು ಮಾಡಿಸಿದನು. ॥ ೩೨ ॥ ಅದರಿಂದ ತನಗೆ ಮಾನಭಂಗವಾಯಿತೆಂದು ಭಾವಿಸಿ ಕಡು ಕೋಪಗೊಂಡ ಇಂದ್ರನು ಗೋಕುಲವನ್ನು ಧ್ವಂಸಮಾಡಿಬಿಡಲು ಭಯಂಕರವಾದ ಜಡಿಮಳೆಯನ್ನು ಸುರಿಸತೊಡಗಲು – ಭಗವಂತನು ಕರುಣಾಪೂರ್ಣನಾಗಿ ಗೋವರ್ಧನ ಪರ್ವತವನ್ನು ಲೀಲಾಜಾಲವಾಗಿ ಕೊಡೆಯಂತೆ ಎತ್ತಿಹಿಡಿದು ಅತ್ಯಂತ ಭಯಗೊಂಡ ಗೋವುಗಳನ್ನೂ, ಗೋಪಾಲಕರನ್ನೂ ಸಂರಕ್ಷಿಸಿದನು. ॥ ೩೩ ॥ ಸಾಯಂಕಾಲದಲ್ಲಿ ಇಡೀ ನಂದಗೋಕುಲದಲ್ಲಿ ಶರತ್ಕಾಲದ ಬೆಳದಿಂಗಳು ಚೆಲ್ಲುತ್ತಿರಲು ಆಗ ಶ್ರೀಕೃಷ್ಣನು ಅದನ್ನು ಸಂಭಾವಿಸುತ್ತಾ, ಮುರಳೀಗಾನಮಾಡುತ್ತಾ ಗೋಪಸ್ತ್ರೀ ಸಮೂಹದೊಡನೆ ರಾಸಕ್ರೀಡೆಯಾಡಿದನು. ॥ ೩೪ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ವಿದುರೋದ್ಧವಸಂವಾದೇ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಭಗವಂತನ ಇನ್ನೂ ಲೀಲಾಚರಿತ್ರೆಗಳ ವರ್ಣನೆ

*ಉದ್ಧವ ಉವಾಚ*

ತತಃ ಸ ಆಗತ್ಯ ಪುರಂ ಸ್ವಪಿತ್ರೋಃ
ಚಿಕೀರ್ಷಯಾ ಶಂ ಬಲದೇವಸಂಯುತಃ ।
ನಿಪಾತ್ಯ ತುಂಗಾದ್ರಿಪುಯೂಥನಾಥಂ
ಹತಂ ವ್ಯಕರ್ಷದ್ವ್ಯಸುಮೋಜಸೋರ್ವ್ಯಾಮ್ ॥ ೧ ॥

ಉದ್ಧವನು ಹೇಳುತ್ತಿರುವನು – ವಿದುರಾ! ಅನಂತರ ಶ್ರೀಕೃಷ್ಣಪರಮಾತ್ಮನು ತನ್ನ ತಂದೆ-ತಾಯಿಯರಿಗೆ ಸುಖವನ್ನು ನೀಡಲೋಸ್ಕರ ಬಲರಾಮದೇವನೊಡನೆ ಮಥುರೆಗೆ ಆಗಮಿಸಿ, ಶತ್ರುಸಮುದಾಯದ ಒಡೆಯನಾದ ಕಲಿಕಂಸನನ್ನು ಅವನ ಉನ್ನತ ಸಿಂಹಾಸನದಿಂದ ಕೆಡವಿ ಕೊಂದು ಅವನ ಶವವನ್ನು ನೆಲದ ಮೇಲೆ ಎಳೆದುಹಾಕಿದನು. ॥ ೧ ॥ ಸಾಂದೀಪನಿಮುನಿಯ ಬಳಿಗೆ ವಿದ್ಯಾಭ್ಯಾಸಕ್ಕಾಗಿ ತೆರಳಿ, ಅವರು ಒಂದು ಬಾರಿ ಹೇಳಿಕೊಟ್ಟ

ಸಾಂದೀಪನೇಃ ಸಕೃತ್ಪ್ರೋಕ್ತಂ ಬ್ರಹ್ಮಾಧೀತ್ಯ ಸವಿಸ್ತರಮ್ ।
ತಸ್ಮೈ ಪ್ರಾದಾದ್ವರಂ ಪುತ್ರಂ ಮೃತಂ ಪಂಚಜನೋದರಾತ್
॥ ೨ ॥

ಸಮಾಹುತಾ ಭೀಷ್ಮಕಕನ್ಯಯಾ ಯೇ
ಶ್ರಿಯಃ ಸವರ್ಣೇನ ಬುಭೂಷಯೈಷಾಮ್ ।
ಗಾಂಧರ್ವವೃತ್ತ್ಯಾ ಮಿಷತಾಂ ಸ್ವಭಾಗಂ
ಜಹ್ರೇ ಪದಂ ಮೂರ್ಧ್ನಿ ದಧತ್ಸುಪರ್ಣಃ ॥ ೩ ॥

ಕಕುದ್ಮತೋಽವಿದ್ಧನಸೋ ದಮಿತ್ವಾ
ಸ್ವಯಂವರೇ ನಾಗ್ನಜಿತೀಮುವಾಹ ।
ತದ್ಭಗ್ನ ಮಾನಾನಪಿ ಗೃಧ್ಯತೋಽಜ್ಞಾನ್
ಜಘ್ನೇಽಕ್ಷತಃ ಶಸ್ತ್ರಭೃತಃ ಸ್ವಶಸ್ತ್ರೈಃ ॥ ೪ ॥

ಪ್ರಿಯಂ ಪ್ರಭುರ್ಗ್ರಾಮ್ಯ ಇವ ಪ್ರಿಯಾಯಾ
ವಿಧಿತ್ಸುರಾರ್ಚ್ಛದ್ ದ್ಯುತರುಂ ಯದರ್ಥೇ ।
ವಜ್ರ್ಯಾದ್ರವತ್ತಂ ಸಗಣೋ ರುಷಾಂಧಃ
ಕ್ರೀಡಾಮೃಗೋ ನೂನಮಯಂ ವಧೂನಾಮ್ ॥ ೫ ॥

ಸುತಂ ಮೃಧೇ ಖಂ ವಪುಷಾ ಗ್ರಸಂತಂ
ದೃಷ್ಟ್ವಾ ಸುನಾಭೋನ್ಮಥಿತಂ ಧರಿತ್ರ್ಯಾ ।
ಆಮಂತ್ರಿತಸ್ತತ್ತನಯಾಯ ಶೇಷಂ
ದತ್ತ್ವಾ ತದಂತಃಪುರಮಾವಿವೇಶ ॥ ೬ ॥

ತತ್ರಾಹೃತಾಸ್ತಾ ನರದೇವಕನ್ಯಾಃ
ಕುಜೇನ ದೃಷ್ಟ್ವಾ ಹರಿಮಾರ್ತಬಂಧುಮ್ ।
ಉತ್ಥಾಯ ಸದ್ಯೋ ಜಗೃಹುಃ ಪ್ರಹರ್ಷ-
ವ್ರೀಡಾನುರಾಗಪ್ರಹಿತಾವಲೋಕೈಃ ॥ ೭ ॥

ಆಸಾಂ ಮುಹೂರ್ತ ಏಕಸ್ಮಿನ್ನಾನಾಗಾರೇಷು ಯೋಷಿತಾಮ್ ।
ಸವಿಧಂ ಜಗೃಹೇ ಪಾಣೀನನುರೂಪಃ ಸ್ವಮಾಯಯಾ
॥ ೮ ॥

ತಾಸ್ವಪತ್ಯಾನ್ಯಜನಯದಾತ್ಮತುಲ್ಯಾನಿ ಸರ್ವತಃ ।
ಏಕೈಕಸ್ಯಾಂ ದಶ ದಶ ಪ್ರಕೃತೇರ್ವಿಬುಭೂಷಯಾ
॥ ೯ ॥

ಮಾತ್ರದಿಂದಲೇ ವೇದ-ವೇದಾಂಗಾದಿಗಳೆಲ್ಲವನ್ನೂ ಪೂರ್ಣವಾಗಿ ಕಲಿತು, ಗುರುದಕ್ಷಿಣೆಯ ರೂಪದಲ್ಲಿ ಅವರ ಮೃತನಾಗಿದ್ದ ಪುತ್ರನನ್ನು ಪಂಚಜನನೆಂಬ ರಾಕ್ಷಸನ ಹೊಟ್ಟೆಯನ್ನು ಸೀಳಿ (ಯಮಪುರಿಯಿಂದ) ತಂದುಕೊಟ್ಟನು. ॥ ೨ ॥ ಲಕ್ಷ್ಮೀದೇವಿಗೆ ಸಮಾನಳಾಗಿದ್ದ ಭೀಷ್ಮಕನ ಪುತ್ರಿ ರುಕ್ಮಿಣಿಯ ಸೌಂದರ್ಯದಿಂದ ಆಕೃಷ್ಟರಾಗಿ ಆಕೆಯನ್ನು ವಿವಾಹವಾಗಲೆಂದು ಶಿಶುಪಾಲನು ಮತ್ತು ಆತನ ಸಹಾಯಕರು ಸ್ವಯಂವರದ ಕರೆಗೆ ಓಗೊಟ್ಟು ಸಭೆಗೆ ಬಂದಿದ್ದರು. ಶ್ರೀಕೃಷ್ಣನು ಅವರೆಲ್ಲರ ತಲೆಯನ್ನು ಮೆಟ್ಟಿ ಅವರ ಕಣ್ಣೆದುರಿಗೇ ತನ್ನ ನಿತ್ಯಸಂಗಾತಿಯನ್ನು ಗಾಂಧರ್ವವಿಧಿಯಿಂದ ವಿವಾಹಮಾಡಿಕೊಳ್ಳಲೋಸುಗ ಗರುಡನು ಅಮೃತಕಲಶವನ್ನು ಜಯಿಸಿ ತಂದಂತೆ ಆಕೆಯನ್ನು ಜಯಿಸಿತಂದನು. ॥ ೩ ॥ ಮೂಗುದಾರ ಪೋಣಿಸಲ್ಪಡದೇ ಇದ್ದ ಏಳು ಕೊಬ್ಬಿದ ಗೂಳಿಗಳನ್ನು ಹಿಡಿದು ಅವುಗಳಿಗೆ ಮೂಗುದಾರ ಹಾಕಿ ಅವುಗಳ ಕೊಬ್ಬನ್ನು ಅಡಗಿಸಿ ವೀರ್ಯಶುಲ್ಕೆಯಾಗಿದ್ದ ನಾಗ್ನಜಿತಿ (ಸತ್ಯೆ)ಯನ್ನು ಅವನು ವಿವಾಹವಾದನು. ತಮಗೆ ಮಾನಭಂಗವಾಯಿತೆಂದು ತಿಳಿದ ಮೂರ್ಖರಾಜರು ಶಸ್ತ್ರಗಳನ್ನೆತ್ತಿಕೊಂಡು ರಾಜಕುಮಾರಿಯನ್ನು ಕಸಿದುಕೊಳ್ಳಲು ಬಯಸಿದಾಗ ಭಗವಾನ್ ಶ್ರೀಕೃಷ್ಣನು ಸ್ವತಃ ಗಾಯಗೊಳ್ಳದೆ ಅವರನ್ನೆಲ್ಲ ಶಸ್ತ್ರಗಳಿಂದ ಕೊಂದುಹಾಕಿದನು. ॥ ೪ ॥ ಭಗವಂತನು ವಿಷಯೀ ಪುರುಷನಂತೆ ಲೀಲೆಮಾಡುತ್ತಾ ತನ್ನ ಪ್ರಾಣಪ್ರಿಯಳಾದ ಸತ್ಯಭಾಮಾದೇವಿಯನ್ನು ಸಂತೋಷಪಡಿಸಲಿಕ್ಕಾಗಿ ಸ್ವರ್ಗದಿಂದ ಪಾರಿಜಾತವೃಕ್ಷವನ್ನು ಕಿತ್ತುತಂದನು. ನಿಶ್ಚಯವಾಗಿಯೂ ತನ್ನ ಪತ್ನೀಯರ ಕ್ರೀಡಾಮೃಗದಂತೆ ವಶನಾದ ದೇವೇಂದ್ರನೇ ಕ್ರೋಧದಿಂದ ಕುರುಡಾಗಿ ಆ ಸಮಯ ತನ್ನ ಸೈನಿಕರೊಂದಿಗೆ ಕೃಷ್ಣನ್ನು ಎದುರಿಸುವ ಸಾಹಸಮಾಡಿದ್ದನು. ॥ ೫ ॥ ತನ್ನ ರಾಕ್ಷಸಾಕಾರದಿಂದ ಆಕಾಶವನ್ನೇ ನುಂಗುವಂತಿದ್ದ ಆ ಭೂದೇವಿಯ ಪುತ್ರನಾದ ಭೌಮಾಸುರನನ್ನು ಭಗವಂತನು ಯುದ್ಧದಲ್ಲಿ ಸಂಹಾರ ಮಾಡಿದನು. ಆಗ ಭೂದೇವಿಯ ಪ್ರಾರ್ಥನೆಯನ್ನು ಮನ್ನಿಸಿ ಆತನು ಭೌಮಾಸುರನ ಪುತ್ರನಾದ ಭಗದತ್ತನಿಗೆ ಆತನ ರಾಜ್ಯವನ್ನು ಕೊಟ್ಟು ಅವನ ಅಂತಃಪುರವನ್ನು ಪ್ರವೇಶಿಸಿದನು. ॥ ೬ ॥ ಅಲ್ಲಿ ಭೌಮಾಸುರನಿಂದ ಅಪಹರಿಸಿ ತರಲ್ಪಟ್ಟಿದ್ದ ಅನೇಕ ರಾಜಕುಮಾರಿಯರಿದ್ದರು. ಅವರು ದೀನಬಂಧು ಶ್ರೀಕೃಷ್ಣನನ್ನು ನೋಡಿದೊಡನೆಯೇ ಎದ್ದುನಿಂತು ಹರ್ಷ, ಲಜ್ಜೆ ಮತ್ತು ಪ್ರೇಮಪೂರ್ಣ ನೋಟಗಳಿಂದ ಒಡನೆಯೇ ಆತನನ್ನು ತಮ್ಮ ಪತಿಯನ್ನಾಗಿ ವರಿಸಿಬಿಟ್ಟರು. ॥ ೭ ॥

ಆಗ ಭಗವಂತನು ತನ್ನ ನಿಜಶಕ್ತಿ ಯೋಗಮಾಯೆಯಿಂದ ಆ ಎಲ್ಲ ಲಲನಾಮಣಿಗಳಿಗೂ ಅನುರೂಪವಾಗಿ ಅಷ್ಟೇ ರೂಪಗಳನ್ನು ತಾಳಿ ಬೇರೆ-ಬೇರೆ ಅರಮನೆಗಳಲ್ಲಿ ಒಂದೇ ಮುಹೂರ್ತದಲ್ಲಿ ವಿಧಿಪೂರ್ವಕವಾಗಿ ಪಾಣಿಗ್ರಹಣ ಮಾಡಿಕೊಂಡನು. ॥ ೮ ॥ ತನ್ನ ಲೀಲೆಯನ್ನು ವಿಸ್ತರಿಸಲಿಕ್ಕಾಗಿ ಅವನು ಅವರಲ್ಲಿ ಪ್ರತಿಯೊಬ್ಬಳ ಗರ್ಭದಿಂದ ಸರ್ವಗುಣಗಳಿಂದ ತನ್ನನ್ನೇ ಹೋಲುವಂತಹ ಹತ್ತು-ಹತ್ತು ಪುತ್ರರನ್ನು ಪಡೆದನು. ॥ ೯ ॥ ಕಾಲಯವನ, ಜರಾಸಂಧ, ಶಾಲ್ವರೇ ಮುಂತಾದವರು ತಮ್ಮ-ತಮ್ಮ ಸೇನೆಗಳೊಂದಿಗೆ ಮಥುರೆಯನ್ನೂ-ದ್ವಾರಕೆಯನ್ನೂ ಮುತ್ತಿದಾಗ ಭಗವಂತನು ಮುಚುಕುಂದ,

ಕಾಲಮಾಗಧಶಾಲ್ವಾದೀನನೀಕೈಃ ರುಂಧತಃ ಪುರಮ್ ।
ಅಜೀಘನತ್ಸ್ವಯಂ ದಿವ್ಯಂ ಸ್ವಪುಂಸಾಂ ತೇಜ ಆದಿಶತ್
॥ ೧೦ ॥

ಶಂಬರಂ ದ್ವಿವಿದಂ ಬಾಣಂ ಮುರಂ ಬಲ್ವಲಮೇವ ಚ ।
ಅನ್ಯಾಂಶ್ಚ ದಂತವಕ್ತ್ರಾದೀನವಧೀತ್ಕಾಂಶ್ಚ ಘಾತಯತ್
॥ ೧೧ ॥

ಅಥ ತೇ ಭ್ರಾತೃಪುತ್ರಾಣಾಂ ಪಕ್ಷಯೋಃ ಪತಿತಾನ್ನೃಪಾನ್ ।
ಚಚಾಲ ಭೂಃ ಕುರುಕ್ಷೇತ್ರಂ ಯೇಷಾಮಾಪತತಾಂ ಬಲೈಃ
॥ ೧೨ ॥

ಸ ಕರ್ಣದುಃಶಾಸನಸೌಬಲಾನಾಂ
ಕುಮಂತ್ರಪಾಕೇನ ಹತಶ್ರಿಯಾಯುಷಮ್ ।
ಸುಯೋಧನಂ ಸಾನುಚರಂ ಶಯಾನಂ
ಭಗ್ನೋರುಮುರ್ವ್ಯಾಂ ನ ನನಂದ ಪಶ್ಯನ್ ॥ ೧೩ ॥

ಕಿಯಾನ್ಭುವೋಽಯಂ ಕ್ಷಪಿತೋರುಭಾರೋ
ಯದ್ದ್ರೋಣಭೀಷ್ಮಾರ್ಜುನಭೀಮಮೂಲೈಃ ।
ಅಷ್ಟಾದಶಾಕ್ಷೌಹಿಣಿಕೋ ಮದಂಶೈ-
ರಾಸ್ತೇ ಬಲಂ ದುರ್ವಿಷಹಂ ಯದೂನಾಮ್ ॥ ೧೪ ॥

ಮಿಥೋ ಯದೈಷಾಂ ಭವಿತಾ ವಿವಾದೋ
ಮಧ್ವಾಮದಾತಾಮ್ರವಿಲೋಚನಾನಾಮ್ ।
ನೈಷಾಂ ವಧೋಪಾಯ ಇಯಾನತೋಽನ್ಯೋ
ಮಯ್ಯುದ್ಯತೇಽಂತರ್ದಧತೇ ಸ್ವಯಂ ಸ್ಮ ॥ ೧೫ ॥

ಏವಂ ಸಂಚಿಂತ್ಯ ಭಗವಾನ್ಸ್ವರಾಜ್ಯೇ ಸ್ಥಾಪ್ಯ ಧರ್ಮಜಮ್ ।
ನಂದಯಾಮಾಸ ಸುಹೃದಃ ಸಾಧೂನಾಂ ವರ್ತ್ಮ ದರ್ಶಯನ್
॥ ೧೬ ॥

ಉತ್ತರಾಯಾಂ ಧೃತಃ ಪೂರೋರ್ವಂಶಃ ಸಾಧ್ವಭಿಮನ್ಯುನಾ ।
ಸ ವೈ ದ್ರೌಣ್ಯಸ್ತ್ರಸಂಛಿನ್ನಃ ಪುನರ್ಭಗವತಾ ಧೃತಃ
॥ ೧೭ ॥

ಅಯಾಜಯದ್ಧರ್ಮಸುತಮಶ್ವಮೇಧೈಸ್ತ್ರಿಭಿರ್ವಿಭುಃ ।
ಸೋಽಪಿ ಕ್ಷ್ಮಾಮನುಜೈ ರಕ್ಷನ್ ರೇಮೇ ಕೃಷ್ಣಮನುವ್ರತಃ
॥ ೧೮ ॥

ಭಗವಾನಪಿ ವಿಶ್ವಾತ್ಮಾ ಲೋಕವೇದಪಥಾನುಗಃ ।
ಕಾಮಾನ್ಸಿಷೇವೇ ದ್ವಾರ್ವತ್ಯಾಮಸಕ್ತಃ ಸಾಂಖ್ಯಮಾಸ್ಥಿತಃ
॥ ೧೯ ॥

ಭೀಮಸೇನರೇ ಮುಂತಾದ ಸ್ವಜನರಿಗೆ ತನ್ನ ಅಲೌಕಿಕ ಶಕ್ತಿ ಯನ್ನು ಅನುಗ್ರಹಿಸಿ ಅವರ ಮೂಲಕ ತಾನೇ ಅವರನ್ನು ಕೊಲ್ಲಿಸಿದನು. ॥ ೧೦ ॥ ಶಂಬರ, ದ್ವಿವಿದ, ಬಾಣಾಸುರ, ಮುರ, ಬಲ್ವಲ, ದಂತವಕ್ತ್ರಾದಿಗಳಲ್ಲಿಯೂ ಕೆಲವರನ್ನು ತಾನೇ ನಿಗ್ರಹಿಸಿ, ಮತ್ತೆ ಕೆಲವರನ್ನು ಬೇರೆಯವರಿಂದ ಕೊಲ್ಲಿಸಿದನು. ॥ ೧೧ ॥ ಅನಂತರ ಭಗವಂತನು ನಿನ್ನ ಅಣ್ಣ ಧೃತರಾಷ್ಟ್ರ ಮತ್ತು ಪಾಂಡುಪುತ್ರರ ಪಕ್ಷ ವಹಿಸಿ ಯುದ್ಧಕ್ಕೆ ಬಂದ ರಾಜರನ್ನು ಸಂಹಾರಮಾಡಿಸಿದನು. ಆ ರಾಜರ ಸೇನೆಗಳಾದರೋ ಕುರುಕ್ಷೇತ್ರಕ್ಕೆ ಯುದ್ಧಕ್ಕಾಗಿ ಬಂದು ನೆರೆದಾಗ ಇಡೀ ಭೂಮಿಯೇ ನಡುಗಿಹೋಗುವಷ್ಟು ವಿಶಾಲವಾಗಿದ್ದುವು. ॥ ೧೨ ॥ ದುರ್ಯೋಧನನು ಕರ್ಣ, ದುಃಶಾಸನ, ಶಕುನಿ ಇವರ ದುರಾಲೋಚನೆಗೆ ಒಳಗಾಗಿ ತನ್ನ ಆಯುಸ್ಸು, ಸಂಪತ್ತು, ಕಾಂತಿಯನ್ನು ಕಳೆದುಕೊಂಡು, ಭೀಮಸೇನನ ಗದಾಘಾತದಿಂದ ತೊಡೆಗಳು ಮುರಿದು ಪರಿವಾರಸಮೇತನಾಗಿ ನೆಲದ ಮೇಲೆ ಬಿದ್ದಿರುವುದನ್ನು ನೋಡಿದರೂ ಆತನಿಗೆ ಪೂರ್ತಿಯಾಗಿ ಸಂತೋಷ ಉಂಟಾಗಲಿಲ್ಲ. ಏಕೆಂದರೆ, ದ್ರೋಣ, ಭೀಷ್ಮ, ಅರ್ಜುನ, ಭೀಮಸೇನ ಇವರುಗಳ ಮೂಲಕ ಹದಿನೆಂಟು ಅಕ್ಷೌಹಿಣೀ ಸೈನ್ಯವು ಸಂಹರಿಸಲ್ಪಟ್ಟರೂ ಭೂಮಿಯ ಭಾರವೇನೋ ಇಳಿದಂತಾಯಿತು. ಆದರೂ ಕೂಡ ನನ್ನ ಅಂಶಭೂತರಾದ ಪ್ರದ್ಯುಮ್ನನೇ ಮುಂತಾದವರ ಬಲದಿಂದ ಕೊಬ್ಬಿಹೋಗಿರುವ ಯಾದವರ ಸಹಿಸಲಸದಳವಾದ ಬಲವು ಇನ್ನೂ ಉಳಿದಿದೆಯಲ್ಲ! ಎಂದು ಚಿಂತಿಸಿದನು. ॥ ೧೩-೧೪ ॥ 'ಮುಂದೆ ಈ ಯಾದವರು ಮದ್ಯಪಾನದಿಂದ ಮತ್ತೇರಿ ಕಣ್ಣುಗಳು ಕೆಂಪಾಗಿ ಪರಸ್ಪರ ಹೊಡೆದಾಡಿ ನಾಶಹೊಂದಬೇಕು. ಇವರನ್ನು ಸಂಹರಿಸಲು ಬೇರೆ ಉಪಾಯವೇ ಇಲ್ಲ. ಆದ್ದರಿಂದ ಹೀಗೆ ಆಗುವಂತೆ ನಾನು ಸಂಕಲ್ಪಿಸಿದರೆ ಅವರು ತಾವಾಗಿಯೇ ಕಾದಾಡಿ ಮಡಿಯುವರು' ಎಂದು ಯೋಜನೆ ಮಾಡಿದರು. ॥ ೧೫ ॥

ಭಗವಂತನು ಹೀಗೆ ಯೋಚಿಸಿ ಯುಧಿಷ್ಠಿರನಿಗೆ ಅವನ ರಾಜ್ಯದಲ್ಲಿ ಪಟ್ಟಾಭಿಷೇಕಮಾಡಿಸಿ ಅವರನ್ನು ನೆಲೆಗೊಳಿಸಿದನು. ಬಂಧುಗಳಿಗೂ-ಮಿತ್ರರಿಗೂ ಸತ್ಪುರುಷರ ಮಾರ್ಗವನ್ನು ತೋರಿ ಆನಂದಿತರನ್ನಾಗಿಸಿದನು. ॥ ೧೬ ॥ ಉತ್ತರೆಯ ಗರ್ಭದಲ್ಲಿ ಅಭಿಮನ್ಯುವು ಪುರುವಂಶದ ಕುಡಿಯನ್ನು ಸ್ಥಾಪಿಸಿದ್ದನು. ಅದೂ ಕೂಡ ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ನಾಶವಾಗುವುದರಲ್ಲಿತ್ತು. ಆದರೆ ಭಗವಂತನು ಅದನ್ನು ಬದುಕಿಸಿದನು. ॥ ೧೭ ॥ ಯುಧಿಷ್ಠಿರನಿಂದ ಭಗವಂತನು ಮೂರು ಅಶ್ವಮೇಧ ಯಜ್ಞಗಳನ್ನು ಮಾಡಿಸಿದನು. ಧರ್ಮನಂದನನೂ ಶ್ರೀಕೃಷ್ಣನನ್ನು ಅನುವರ್ತಿಸುತ್ತಾ ತನ್ನ ತಮ್ಮಂದಿರೊಡನೆ ಪೃಥ್ವಿಯನ್ನು ರಕ್ಷಿಸುತ್ತಾ, ರಾಜ್ಯ ಭಾರಗಳನ್ನು ನಿರ್ವಹಿಸುತ್ತಾ ಆನಂದದಿಂದ ಇರತೊಡಗಿದನು. ॥ ೧೮ ॥

ಆಮೇಲೆ ವಿಶ್ವಾತ್ಮನಾದ ಭಗವಂತನು ದ್ವಾರಕೆಯಲ್ಲಿದ್ದುಕೊಂಡು ಲೋಕ ಮತ್ತು ವೇದಗಳ ಮರ್ಯಾದೆಗಳನ್ನು ಪಾಲಿಸುತ್ತಾ ಸಾಂಖ್ಯಯೋಗಗಳಿಗೆ ಅನುಗುಣವಾಗಿ ನಿರ್ಲಿಪ್ತಭಾವದಿಂದ ಎಲ್ಲ ಭೋಗಗಳನ್ನು ಅನುಭವಿಸಿದನು. ॥ ೧೯ ॥ ತನ್ನ ಮಧುರ ಮುಗುಳ್ನಗೆ, ಸ್ನೇಹಪೂರ್ಣವಾದ ಕಟಾಕ್ಷ, ಅಮೃತಸದೃಶ

ಸ್ನಿಗ್ಧಸ್ಮಿತಾವಲೋಕೇನ ವಾಚಾ ಪೀಯೂಷಕಲ್ಪಯಾ ।
ಚರಿತ್ರೇಣಾನವದ್ಯೇನ ಶ್ರೀನಿಕೇತೇನ ಚಾತ್ಮನಾ
॥ ೨೦ ॥

ಇಮಂ ಲೋಕಮಮುಂ ಚೈವ ರಮಯನ್ಸುತರಾಂ ಯದೂನ್ ।
ರೇಮೇ ಕ್ಷಣದಯಾ ದತ್ತಕ್ಷಣಸ್ತ್ರೀಕ್ಷಣಸೌಹೃದಃ
॥ ೨೧ ॥

ತಸ್ಯೈವಂ ರಮಮಾಣಸ್ಯ ಸಂವತ್ಸರಗಣಾನ್ಬಹೂನ್ ।
ಗೃಹಮೇಧೇಷು ಯೋಗೇಷು ವಿರಾಗಃ ಸಮಜಾಯತ
॥ ೨೨ ॥

ದೈವಾಧೀನೇಷು ಕಾಮೇಷು ದೈವಾಧೀನಃ ಸ್ವಯಂ ಪುಮಾನ್ ।
ಕೋ ವಿಸ್ರಂಭೇತ ಯೋಗೇನ ಯೋಗೇಶ್ವರಮನುವ್ರತಃ
॥ ೨೩ ॥

ಪುರ್ಯಾಂ ಕದಾಚಿತ್ಕ್ರೀಡದ್ಭಿರ್ಯದುಭೋಜಕುಮಾರಕೈಃ ।
ಕೋಪಿತಾ ಮುನಯಃ ಶೇಪುರ್ಭಗವನ್ಮತಕೋವಿದಾಃ
॥ ೨೪ ॥

ತತಃ ಕತಿಪಯೈರ್ಮಾಸೈರ್ವೃಷ್ಣಿ ಭೋಜಾಂಧಕಾದಯಃ ।
ಯಯುಃ ಪ್ರಭಾಸಂ ಸಂಹೃಷ್ಟಾ ರಥೈರ್ದೇವವಿಮೋಹಿತಾಃ
॥ ೨೫ ॥

ತತ್ರ ಸ್ನಾತ್ವಾ ಪಿತೄನ್ದೇವಾನೃಷೀಂಶ್ಚೈವ ತದಂಭಸಾ ।
ತರ್ಪಯಿತ್ವಾಥ ವಿಪ್ರೇಭ್ಯೋ ಗಾವೋ ಬಹುಗುಣಾ ದದುಃ
॥ ೨೬ ॥

ಹಿರಣ್ಯಂ ರಜತಂ ಶಯ್ಯಾಂ ವಾಸಾಂಸ್ಯಜಿನಕಂಬಲಾನ್ ।
ಯಾನಂ ರಥಾನಿಭಾನ್ ಕನ್ಯಾ ಧರಾಂ ವೃತ್ತಿಕರೀಮಪಿ
॥ ೨೭ ॥

ಅನ್ನಂ ಚೋರುರಸಂ ತೇಭ್ಯೋ ದತ್ತ್ವಾ ಭಗವದರ್ಪಣಮ್ ।
ಗೋವಿಪ್ರಾರ್ಥಾಸವಃ ಶೂರಾಃ ಪ್ರಣೇಮುರ್ಭುವಿ ಮೂರ್ಧಭಿಃ
॥ ೨೮ ॥

ವಾದ ವಾಣಿ, ನಿರ್ಮಲ ನಡತೆ ಮತ್ತು ಸೌಂದರ್ಯ-ಕಾಂತಿಗಳಿಗೆ ನೆಲೆಮನೆಯಾದ ತನ್ನ ದಿವ್ಯ ಮಂಗಳ ವಿಗ್ರಹದಿಂದ ಇಹಲೋಕ-ಪರಲೋಕಗಳನ್ನು ಹಾಗೂ ವಿಶೇಷವಾಗಿ ಯಾದವರನ್ನು ಸಂತೋಷಪಡಿಸುತ್ತಿದ್ದನು. ರಾತ್ರಿಯಲ್ಲಿ ತನ್ನ ಸ್ತ್ರೀಜನರಿಗೆ ಕೊಂಚಕಾಲ ಸುಖವನ್ನು ತೋರುತ್ತಾ ಸಮಯೋಚಿತ ವಿಹಾರದಿಂದ ಅವರನ್ನೂ ಸಂತೋಷಪಡಿಸುತ್ತಿದ್ದನು. ॥ ೨೦-೨೧ ॥ ಹೀಗೆ ಅನೇಕ ವರ್ಷಗಳವರೆಗೆ ವಿಹರಿಸುತ್ತಾ ಅವನಿಗೆ ಗೃಹಸ್ಥಾಶ್ರಮಕ್ಕೆ ಸಂಬಂಧಪಟ್ಟ ಭೋಗ-ಸಾಮಗ್ರಿಗಳಲ್ಲಿ ವೈರಾಗ್ಯ ಉಂಟಾಯಿತು. ॥ ೨೨ ॥ ಈ ಭೋಗ-ಸಾಮಗ್ರಿಗಳು ಈಶ್ವರಾಧೀನವಾಗಿವೆ ಮತ್ತು ಜೀವಿಯೂ ಕೂಡ ಭಗವಂತನ ಅಧೀನನೇ. ಯೋಗೇಶ್ವರ ಭಗವಾನ್ ಶ್ರೀಕೃಷ್ಣನಿಗೇ ಅವುಗಳಲ್ಲಿ ವೈರಾಗ್ಯವುಂಟಾದಾಗ ಭಕ್ತಿಯೋಗದಿಂದ ಅವನನ್ನು ಅನುಸರಿಸುವ ಭಕ್ತನಿಗಾದರೋ ಈ ಭೋಗಗಳಲ್ಲಿ ವಿಶ್ವಾಸವು ಹೇಗೆ ಉಂಟಾದೀತು ? ॥ ೨೩ ॥

ಒಮ್ಮೆ ದ್ವಾರಕೆಯಲ್ಲಿ ಆಟವಾಡುತ್ತಿದ್ದ ಯಾದವ ಮತ್ತು ಭೋಜವಂಶದ ಬಾಲಕರು ಕೆಲವು ಮುನೀಶ್ವರರನ್ನು ಚುಡಾಯಿಸಿದರು. ಯಾದವ ಕುಲವನ್ನು ಸಂಹಾರಮಾಡುವುದೇ ಭಗವಂತನಿಗೆ ಇಷ್ಟವೆಂಬುದನ್ನು ತಿಳಿದಿದ್ದ ಆ ಮಹರ್ಷಿಗಳು ಆ ಕುಮಾರರಿಗೆ ಶಾಪವನ್ನು ಕೊಟ್ಟರು. ॥ ೨೪ ॥ ಆದಾದ ಕೆಲವು ತಿಂಗಳುಗಳ ಬಳಿಕ ಮುಂದೆ ಒದಗುವ ದುರದೃಷ್ಟಕ್ಕೆ ಅಧೀನರಾದ ವೃಷ್ಣಿ ಭೋಜ, ಅಂಧಕರೇ ಮುಂತಾದ ಯಾದವರು ಸಂತೋಷದಿಂದ ರಥಗಳನ್ನೇರಿ ಪ್ರಭಾಸಕ್ಷೇತ್ರಕ್ಕೆ ಹೋದರು. ॥ ೨೫ ॥ ಅಲ್ಲಿ ಅವರು ಸ್ನಾನಾದಿಗಳನ್ನು ಮಾಡಿ ತೀರ್ಥೋದಕದಿಂದ ಪಿತೃಗಳಿಗೂ, ದೇವತೆಗಳಿಗೂ, ಋಷಿಗಳಿಗೂ ತರ್ಪಣವನ್ನು ಕೊಟ್ಟು ಬ್ರಾಹ್ಮಣರಿಗೆ ಉತ್ತಮವಾದ ಗೋವುಗಳನ್ನು ದಾನಮಾಡಿದರು. ॥ ೨೬ ॥ ಅವರು ಚಿನ್ನ, ಬೆಳ್ಳಿ, ಹಾಸಿಗೆ, ಬಟ್ಟೆ, ಮೃಗಚರ್ಮ, ಕಂಬಳೀ, ರಥ, ಆನೆ, ಕನ್ಯೆಯರು ಮತ್ತು ಜೀವನೋಪಾಯವಾಗುವ ಭೂಮಿ ಹಾಗೂ ಬಗೆ-ಬಗೆಯ ರಸಭರಿತವಾದ ಅನ್ನವನ್ನೂ, ಭಗವದರ್ಪಣ ಬುದ್ಧಿಯಿಂದ ಬ್ರಾಹ್ಮಣರಿಗೆ ದಾನಮಾಡಿದರು. ಗೋ-ಬ್ರಾಹ್ಮಣರ ಸಂರಕ್ಷಣೆಗಾಗಿಯೇ ಜೀವಿಸುತ್ತಿದ್ದ ಆ ವೀರರು ಭೂಮಿಯಲ್ಲಿ ತಲೆಯನ್ನು ಚಾಚಿ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ॥ ೨೭-೨೮ ॥

*ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ವಿದುರೋದ್ಧವಸಂವಾದೇ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ಉದ್ಧವನೊಡನೆ ಸಂಭಾಷಣೆ ವಿದುರನು ಮೈತ್ರೇಯರ ಬಳಿಗೆ ತೆರಳಿದುದು

*ಉದ್ಧವ ಉವಾಚ*

ಅಥ ತೇ ತದನುಜ್ಞಾತಾ ಭುಕ್ತ್ವಾ ಪೀತ್ವಾ ಚ ವಾರುಣೀಮ್ ।
ತಯಾ ವಿಭ್ರಂಶಿತಜ್ಞಾನಾ ದುರುಕ್ತೈರ್ಮರ್ಮ ಪಸ್ಪೃಶುಃ
॥ ೧ ॥

ಉದ್ಧವನು ಹೇಳುತ್ತಿದ್ದಾನೆ – ಓ ಮಹಾತ್ಮನೇ! ಮತ್ತೆ ಬ್ರಾಹ್ಮಣರ ಅಪ್ಪಣೆಪಡೆದು ಯಾದವರು ಭೋಜನ ಮಾಡಿದರು. ಮತ್ತೆ ವಾರುಣೀ ಎಂಬ ಮದ್ಯವನ್ನು ಕುಡಿದು, ಅದರಿಂದ ಜ್ಞಾನಗೆಟ್ಟು ದುರ್ವಚನಗಳನ್ನಾಡುತ್ತಾ ಪರಸ್ಪರ ಹೃದಯಕ್ಕೆ ನೋವನ್ನುಂಟುಮಾಡುವ ಮಾತುಗಳನ್ನಾಡತೊಡಗಿದರು. ॥ ೧ ॥

ತೇಷಾಂ ಮೈರೇಯದೋಷೇಣ ವಿಷಮೀಕೃತಚೇತಸಾಮ್ ।
ನಿಮ್ಲೋಚತಿ ರವಾವಾಸೀದ್ವೇಣೂನಾಮಿವ ಮರ್ದನಮ್ ॥ ೨ ॥

ಭಗವಾನ್ ಸ್ವಾತ್ಮಮಾಯಾಯಾ ಗತಿಂ ತಾಮವಲೋಕ್ಯ ಸಃ ।
ಸರಸ್ವತೀಮುಪಸ್ಪೃಶ್ಯ ವೃಕ್ಷಮೂಲಮುಪಾವಿಶತ್ ॥ ೩ ॥

ಅಹಂ ಚೋಕ್ತೋ ಭಗವತಾ ಪ್ರಪನ್ನಾರ್ತಿಹರೇಣ ಹ ।
ಬದರೀಂ ತ್ವಂ ಪ್ರಯಾಹೀತಿ ಸ್ವಕುಲಂ ಸಂಜಿಹೀರ್ಷುಣಾ ॥ ೪ ॥

ಅಥಾಪಿ ತದಭಿಪ್ರೇತಂ ಜಾನನ್ನಹಮರಿಂದಮ ।
ಪೃಷ್ಠತೋಽನ್ವಗಮಂ ಭರ್ತುಃ ಪಾದವಿಶ್ಲೇಷಣಾಕ್ಷಮಃ ॥ ೫ ॥

ಅದ್ರಾಕ್ಷಮೇಕಮಾಸೀನಂ ವಿಚಿನ್ವಂದಯಿತಂ ಪತಿಮ್ ।
ಶ್ರೀನಿಕೇತಂ ಸರಸ್ವತ್ಯಾಂ ಕೃತಕೇತಮಕೇತನಮ್ ॥ ೬ ॥

ಶ್ಯಾಮಾವದಾತಂ ವಿರಜಂ ಪ್ರಶಾಂತಾರುಣಲೋಚನಮ್ ।
ದೋರ್ಭಿಶ್ಚತುರ್ಭಿರ್ವಿದಿತಂ ಪೀತಕೌಶಾಂಬರೇಣ ಚ ॥ ೭ ॥

ವಾಮ ಊರಾವಧಿಶ್ರಿತ್ಯ ದಕ್ಷಿಣಾಂಘ್ರಿಸರೋರುಹಮ್ ।
ಅಪಾಶ್ರಿತಾರ್ಭಕಾಶ್ವತ್ಥಮಕೃಶಂ ತ್ಯಕ್ತಪಿಪ್ಪಲಮ್ ॥ ೮ ॥

ತಸ್ಮಿನ್ಮಹಾಭಾಗವತೋ ದ್ವೈಪಾಯನಸುಹೃತ್ಸಖಾ ।
ಲೋಕಾನನುಚರನ್ ಸಿದ್ಧ ಆಸಸಾದ ಯದೃಚ್ಛಯಾ ॥ ೯ ॥

ತಸ್ಯಾನುರಕ್ತಸ್ಯ ಮುನೇರ್ಮುಕುಂದಃ
ಪ್ರಮೋದಭಾವಾನತಕಂಧರಸ್ಯ ।
ಆಶೃಣ್ವತೋ ಮಾಮನುರಾಗಹಾಸ-
ಸಮೀಕ್ಷಯಾ ವಿಶ್ರಮಯನ್ನುವಾಚ ॥ ೧೦ ॥

*ಶ್ರೀಭಗವಾನುವಾಚ*

ವೇದಾಹಮಂತರ್ಮನಸೀಪ್ಸಿತಂ ತೇ
ದದಾಮಿ ಯತ್ತದ್ ದುರವಾಪಮನ್ಯೈಃ ।
ಸತ್ರೇ ಪುರಾ ವಿಶ್ವಸೃಜಾಂ ವಸೂನಾಂ
ಮತ್ಸಿದ್ಧಿಕಾಮೇನ ವಸೋ ತ್ವಯೇಷ್ಟಃ ॥ ೧೧ ॥

ಮದಿರೆಯ ಮತ್ತಿನಿಂದ ಅವರ ಬುದ್ಧಿಯು ಕೆಟ್ಟುಹೋಗಿ ಬಿದಿರುಗಳ ಪರಸ್ಪರ ಘರ್ಷಣೆಯಿಂದ ಬೆಂಕಿಹತ್ತಿಕೊಳ್ಳುವಂತೆ ಸೂರ್ಯಾಸ್ತವಾಗುತ್ತಿದ್ದಂತೆ ಅವರಲ್ಲಿ ಹೊಡೆದಾಟ-ಬಡಿದಾಟ ಪ್ರಾರಂಭವಾಯಿತು. ॥ ೨ ॥ ಭಗವಂತನು ತನ್ನ ಮಾಯೆಯ ವಿಚಿತ್ರವಾದ ಆ ಗತಿಯನ್ನು ನೋಡಿ ಸರಸ್ವತಿನದಿಯ ಜಲದಿಂದ ಆಚಮನಗೈದು ಒಂದು ಅಶ್ವತ್ಥವೃಕ್ಷದ ಬುಡದಲ್ಲಿ ಕುಳಿತುಬಿಟ್ಟನು. ॥ ೩ ॥ ಆಶ್ರಿತರ ದುಃಖವನ್ನು ದೂರಮಾಡುವಂತಹ ಭಗವಾನ್ ಶ್ರೀಕೃಷ್ಣನು ತನ್ನ ಕುಲವನ್ನು ಉಪಸಂಹಾರ ಮಾಡಬೇಕೆಂದು ಸಂಕಲ್ಪಿಸಿ, ನನಗೆ ಬದರಿಕಾಶ್ರಮಕ್ಕೆ ಹೋಗಬೇಕೆಂದು ಮೊದಲೇ ಅಪ್ಪಣೆ ಮಾಡಿದ್ದನು. ॥ ೪ ॥ ವಿದುರನೇ ! ಆತನ ಆಶಯವು ನನಗೆ ತಿಳಿದಿದ್ದರೂ ನಾನು ಸ್ವಾಮಿಯ ಚರಣಾರವಿಂದಗಳ ಅಗಲಿಕೆಯನ್ನು ಸಹಿಸಲಾರದೆ ಆತನನ್ನೇ ಹುಡುಕುತ್ತಾ ಪ್ರಭಾಸಕ್ಷೇತ್ರಕ್ಕೆ ಹಿಂಬಾಲಿಸಿದೆನು. ॥ ೫ ॥ ಅಲ್ಲಿ ಎಲ್ಲರಿಗೂ ಆಶ್ರಯನಾಗಿ ಯಾರ ಆಶ್ರಯಕ್ಕೂ ಒಳಗಾಗದೆ ಇರುವ ಪ್ರಿಯತಮ ಶ್ರೀಲಕ್ಷ್ಮೀನಿವಾಸನಾದ ಮಹಾಪ್ರಭುವು ಸರಸ್ವತೀನದಿಯ ತೀರದಲ್ಲಿ ಒಬ್ಬಂಟಿಗನಾಗಿ ಕುಳಿತಿರುವುದನ್ನು ನಾನು ನೋಡಿದೆನು. ॥ ೬ ॥ ಶ್ಯಾಮಲವರ್ಣದಿಂದ ಕಂಗೊಳಿಸುತ್ತಿರುವ ಶುದ್ಧವಾದ ಸತ್ತ್ವಮಯನಾದ ಸುಂದರ ಶ್ರೀಮೂರ್ತಿ, ಪ್ರಸನ್ನವಾಗಿ ಕೆಂಬಣ್ಣದಿಂದ ಹೊಳೆಯುತ್ತಿರುವ ನೇತ್ರಕಮಲಗಳು, ಶೋಭಾಯಮಾನವಾದ ಚತುರ್ಭುಜಗಳು, ಥಳ-ಥಳಿಸುತ್ತಿರುವ ರೇಷ್ಮೆಯ ಪೀತಾಂಬರ ಇವುಗಳಿಂದ ಕೂಡಿದ ಆತನನ್ನು ದೂರದಿಂದಲೇ ನಾನು ಗುರುತಿಸಿದೆನು. ॥ ೭ ॥ ಸ್ವಾಮಿಯು ಒಂದು ಸಣ್ಣ ಅರಳೀಮರವನ್ನು ಒರಗಿಕೊಂಡು ಎಡತೊಡೆಯಮೇಲೆ ಬಲಗಾಲನ್ನು ಇರಿಸಿ ಸುಖಾಸೀನನಾಗಿದ್ದನು. ಆಹಾರತ್ಯಾಗ ಮಾಡಿದ್ದರೂ ಅವನು ಆನಂದದಿಂದ ಪುಷ್ಟನಾಗಿಯೇ ಪ್ರಕಾಶಿಸುತ್ತಿದ್ದನು. ॥ ೮ ॥ ಇಂತಹ ಭಗವದ್ರೂಪವನ್ನು ನಾನು ಕಣ್ಣಾರೆ ನೋಡುತ್ತಿರುವಂತೆ ವೇದವ್ಯಾಸರ ಪ್ರಿಯಮಿತ್ರರೂ, ಪರಮಭಾಗವತರೂ, ಸಿದ್ಧರೂ ಆಗಿದ್ದ ಮೈತ್ರೇಯ ಮಹರ್ಷಿಗಳು ಅಲ್ಲಿಗೆ ಆಕಸ್ಮಿಕವಾಗಿ ಬಂದು ಸೇರಿದರು. ॥ ೯ ॥ ಮೈತ್ರೇಯರಾದರೋ ಭಗವಂತನ ಅನುರಾಗೀ ಭಕ್ತರಾಗಿದ್ದರು. ಆನಂದ ಮತ್ತು ಭಕ್ತಿಭಾವದಿಂದ ಅವರ ಕತ್ತು ಬಾಗಿತ್ತು. ಶ್ರೀಹರಿಯು ಅವರ ಎದುರಿಗೇ ತನ್ನ ಮಂದಹಾಸ ಶೋಭಿತವಾದ ಕಟಾಕ್ಷದಿಂದ ನನ್ನನ್ನು ಆನಂದಗೊಳಿಸುತ್ತಾ ಇಂತೆಂದನು – ॥ ೧೦ ॥

ಶ್ರೀಭಗವಂತನು ಹೇಳಿದನು – ನಿನ್ನ ಆಂತರಿಕ ಅಭಿಲಾಷೆ ಏನೆಂಬುದನ್ನು ನಾನು ಬಲ್ಲೆನು. ಆದ್ದರಿಂದ ಇತರರಿಗೆ ಅತ್ಯಂತ ದುರ್ಲಭವಾದ ಸಾಧನೆಯೊಂದನ್ನು ನಿನಗೆ ಕೊಡುವೆನು. ಉದ್ಧವಾ ! ನೀನು ಹಿಂದಿನ ಜನ್ಮದಲ್ಲಿ ವಸುದೇವತೆಯಾಗಿದ್ದೆ, ಪ್ರಜಾಪತಿಗಳೂ ಮತ್ತು ವಸುದೇವತೆಗಳೂ ಕೂಡಿ ಯಜ್ಞದಿಂದ ನನ್ನನ್ನು ಪಡೆಯುವ ಇಚ್ಛೆಯಿಂದ ನೀವು ನನ್ನನ್ನು ಆರಾಧಿಸಿದ್ದೀರಿ. ॥ ೧೧ ॥ ಎಲೈ ಸಾಧುಶ್ರೇಷ್ಠನೇ ! ಪ್ರಪಂಚದಲ್ಲಿ ನಿನಗೆ ಇದೇ ಅಂತಿಮ ಜನ್ಮವಾಗಿದೆ. ಏಕೆಂದರೆ, ಇದರಲ್ಲಿ ನೀನು ನನ್ನ ಅನುಗ್ರಹವನ್ನು ಪಡೆದುಕೊಂಡಿರುವೆ. ಈಗ ನಾನು ಮರ್ತ್ಯಲೋಕವನ್ನು ಬಿಟ್ಟು ನನ್ನ ಸ್ವಧಾಮಕ್ಕೆ ತೆರಳಲು ನಿಶ್ಚಯಿಸಿರುವೆನು. ಇಂತಹ ಸಮಯದಲ್ಲಿ ನೀನು ಏಕಾಂತದಲ್ಲಿ ಅನನ್ಯಭಕ್ತಿಯಿಂದ ನನ್ನ ದರ್ಶನ ಪಡೆದೆ.

ಸ ಏಷ ಸಾಧೋ ಚರಮೋ ಭವಾನಾ-
ಮಾಸಾದಿತಸ್ತೇ ಮದನುಗ್ರಹೋ ಯತ್ ।
ಯನ್ಮಾಂ ನೃಲೋಕಾನ್ ರಹ ಉತ್ಸೃಜಂತಂ
ದಿಷ್ಟ್ಯಾ ದದೃಶ್ವಾನ್ ವಿಶದಾನುವೃತ್ತ್ಯಾ ॥ ೧೨ ॥

ಪುರಾ ಮಯಾ ಪ್ರೋಕ್ತಮಜಾಯ ನಾಭ್ಯೇ
ಪದ್ಮೇ ನಿಷಣ್ಣಾಯ ಮಮಾದಿಸರ್ಗೇ ।
ಜ್ಞಾನಂ ಪರಂ ಮನ್ಮಹಿಮಾವಭಾಸಂ
ಯತ್ಸೂರಯೋ ಭಾಗವತಂ ವದಂತಿ ॥ ೧೩ ॥

ಇತ್ಯಾದೃತೋಕ್ತಃ ಪರಮಸ್ಯ ಪುಂಸಃ
ಪ್ರತಿಕ್ಷಣಾನುಗ್ರಹಭಾಜನೋಽಹಮ್ ।
ಸ್ನೇಹೋತ್ಥರೋಮಾ ಸ್ಖಲಿತಾಕ್ಷರಸ್ತಂ
ಮುಂಚನ್ ಶುಚಃ ಪ್ರಾಂಜಲಿರಾಬಭಾಷೇ ॥ ೧೪ ॥

ಕೋ ನ್ವೀಶ ತೇ ಪಾದಸರೋಜಭಾಜಾಂ
ಸುದುರ್ಲಭೋಽರ್ಥೇಷು ಚತುರ್ಷ್ವಪೀಹ ।
ತಥಾಪಿ ನಾಹಂ ಪ್ರವೃಣೋಮಿ ಭೂಮನ್
ಭವತ್ಪದಾಂಭೋಜನಿಷೇವಣೋತ್ಸುಕಃ ॥ ೧೫ ॥

ಕರ್ಮಾಣ್ಯನೀಹಸ್ಯ ಭವೋಽಭವಸ್ಯ ತೇ
ದುರ್ಗಾಶ್ರಯೋಽಥಾರಿಭಯಾತ್ಪಲಾಯನಮ್ ।
ಕಾಲಾತ್ಮನೋ ಯತ್ಪ್ರಮದಾಯುತಾಶ್ರಯಃ
ಸ್ವಾತ್ಮನ್ರತೇಃ ಖಿದ್ಯತಿ ಧೀರ್ವಿದಾಮಿಹ ॥ ೧೬ ॥

ಮಂತ್ರೇಷು ಮಾಂ ವಾ ಉಪಹೂಯ ಯತ್ತ್ವ-
ಮಕುಂಠಿತಾಖಂಡಸದಾತ್ಮಬೋಧಃ ।
ಪೃಚ್ಛೇಃ ಪ್ರಭೋ ಮುಗ್ಧ ಇವಾಪ್ರಮತ್ತಃ
ತನ್ನೋ ಮನೋ ಮೋಹಯತೀವ ದೇವ ॥ ೧೭ ॥

ಜ್ಞಾನಂ ಪರಂ ಸ್ವಾತ್ಮರಹಃಪ್ರಕಾಶಂ
ಪ್ರೋವಾಚ ಕಸ್ಮೈ ಭಗವಾನ್ ಸಮಗ್ರಮ್ ।
ಅಪಿ ಕ್ಷಮಂ ನೋ ಗ್ರಹಣಾಯ ಭರ್ತ-
ರ್ವದಾಂಜಸಾ ಯದ್ ವೃಜಿನಂ ತರೇಮ ॥ ೧೮ ॥

ಇತ್ಯಾವೇದಿತಹಾರ್ದಾಯ ಮಹ್ಯಂ ಸ ಭಗವಾನ್ಪರಃ ।
ಆದಿದೇಶಾರವಿಂದಾಕ್ಷ ಆತ್ಮನಃ ಪರಮಾಂ ಸ್ಥಿತಿಮ್ ॥ ೧೯ ॥

ಸ ಏವಮಾರಾಧಿತಪಾದತೀರ್ಥಾ-
ದಧೀತತತ್ತ್ವಾತ್ಮವಿಬೋಧಮಾರ್ಗಃ ।
ಪ್ರಣಮ್ಯ ಪಾದೌ ಪರಿವೃತ್ಯ ದೇವ-
ಮಿಹಾಗತೋಽಹಂ ವಿರಹಾತುರಾತ್ಮಾ ॥ ೨೦ ॥

ಇದು ನಿನ್ನ ಮಹದ್ಭಾಗ್ಯವೇ ಸರಿ. ॥ ೧೨ ॥ ಹಿಂದೆ ಪದ್ಮಕಲ್ಪದ ಪ್ರಾರಂಭದಲ್ಲಿ ನಾನು ಕಮಲಭವನಾದ ಬ್ರಹ್ಮನಿಗೆ ನನ್ನ ಮಹಿಮೆಯನ್ನು ಪ್ರಕಟಪಡಿಸುವಂತಹ ಶ್ರೇಷ್ಠತಮವಾದ ಜ್ಞಾನವನ್ನು ಉಪದೇಶ ಮಾಡಿದ್ದೆನು. ಅದನ್ನು ಜ್ಞಾನಿಗಳು 'ಭಾಗವತ' ಎಂದು ಕರೆಯುತ್ತಾರೆ. ನಿನಗೂ ಅದನ್ನೇ ಅನುಗ್ರಹಿಸುತ್ತೇನೆ. ॥ ೧೩ ॥

ವಿದುರನೇ! ಪರಮಪುರುಷನು ನನಗೆ ಹೀಗೆ ಅಪ್ಪಣೆ ಕೊಡಿಸಿದನು. ಆತನ ಕೃಪಾರಸವು ಪ್ರತಿಕ್ಷಣದಲ್ಲೂ ನನ್ನ ಮೇಲೆ ಹರಿದುಬರುತ್ತಿತ್ತು. ಆತನ ಪ್ರೀತ್ಯಾದರಪೂರ್ಣವಾದ ಮಾತುಗಳನ್ನು ಕೇಳಿ ನಾನು ಸ್ನೇಹವಶನಾಗಿ ರೋಮಾಂಚಿತನಾದೆ. ನನ್ನ ವಾಣಿ ಗದ್ಗದವಾಯಿತು. ಕಣ್ಣುಗಳಿಂದ ಆನಂದಾಶ್ರುಗಳು ಹರಿಯತೊಡಗಿದವು. ಕೈ ಜೋಡಿಸಿಕೊಂಡು ನಾನು ಅವನಲ್ಲಿ ಹೀಗೆ ಬಿನ್ನೈಸಿಕೊಂಡೆನು. ॥ ೧೪ ॥ ಸ್ವಾಮಿ! ನಿನ್ನ ಚರಣಕಮಲಗಳನ್ನು ಸೇವಿಸುವ ಮನುಷ್ಯನಿಗೆ ಈ ಜಗತ್ತಿನಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಯಾವುದೂ ದುರ್ಲಭವಲ್ಲ. ಆದರೆ ನನಗೆ ಅವುಗಳ ಯಾವುದೇ ಇಚ್ಛೆಯಿಲ್ಲ. ನಾನಾದರೋ ಕೇವಲ ನಿನ್ನ ಚರಣಕಮಲಗಳ ಸೇವೆಗಾಗಿಯೇ ಕಾತರನಾಗಿರುತ್ತೇನೆ. ॥ ೧೫ ॥ ಪ್ರಭೋ! ನೀನು ನಿಸ್ಪೃಹನಾಗಿದ್ದರೂ ಕರ್ಮಗಳನ್ನು ಆಚರಿಸುತ್ತಿರುವೆ. ಜನ್ಮರಹಿತನಾದರೂ ಜನ್ಮತಾಳುತ್ತಿರುವೆ. ಕಾಲಾತ್ಮನೇ ಆಗಿದ್ದರೂ ಶತ್ರುವಿಗೆ ಹೆದರಿದವನಂತೆ ಪಲಾಯನಮಾಡಿ ಕೋಟೆಯಲ್ಲಿ ಅಡಗಿಕೊಳ್ಳುವೆ. ಸ್ವಾತ್ಮಾರಾಮನಾಗಿದ್ದರೂ ಹದಿನಾರುಸಾವಿರ ಸ್ತ್ರೀಯರೊಡನೆ ಕ್ರೀಡಿಸುವೆ. ನಿನ್ನ ಈ ವಿಚಿತ್ರ ಚರಿತ್ರವನ್ನು ನೋಡಿ ವಿದ್ವಾಂಸರ ಬುದ್ಧಿಯೂ ಭ್ರಮಿತವಾಗುತ್ತದೆ. ॥ ೧೬ ॥ ಸರ್ವಜ್ಞನಾಗಿ ಸದಾ ಅಕುಂಠಿತವಾದ ಅಖಂಡಜ್ಞಾನವನ್ನು ಹೊಂದಿದ್ದರೂ ನೀನು ಸಾಮಾನ್ಯ ಮನುಷ್ಯನಂತೆ ಕಾರ್ಯಾಲೋಚನೆಯಲ್ಲಿ ನನ್ನನ್ನು ಕರೆಸಿ ಸಲಹೆ ಕೇಳುತ್ತಿದ್ದೆ. ಈ ಲೀಲೆಯು ನನ್ನ ಮನಸ್ಸಿಗೆ ಭ್ರಾಂತಿಯನ್ನುಂಟು ಮಾಡುತ್ತಿದೆ. ॥ ೧೭ ॥ ಸ್ವಾಮೀ! ನಿನ್ನ ಸ್ವರೂಪದ ಗೂಢರಹಸ್ಯವನ್ನು ಪ್ರಕಾಶಪಡಿಸುವ ಶ್ರೇಷ್ಠತಮವಾದ ಯಾವ ಜ್ಞಾನವನ್ನು ಬ್ರಹ್ಮದೇವರಿಗೆ ಉಪದೇಶಿಸಿರುವೆಯೋ, ಅದನ್ನು ಗ್ರಹಿಸುವ ಯೋಗ್ಯತೆ ನನಗಿದ್ದರೆ ಉಪದೇಶಿಸು. ಅದರಿಂದ ಸಂಸಾರ ಬಂಧನಗಳನ್ನು ಕಳೆದುಕೊಂಡು ಕೃತಾರ್ಥನಾಗುವೆನು. ॥ ೧೮ ॥

ಹೀಗೆ ನಾನು ನನ್ನ ಹೃದಯದ ಭಾವವನ್ನು ಅರಿಕೆ ಮಾಡಿಕೊಳ್ಳಲು ಆ ಪರಮಪುರುಷನಾದ ಪುಂಡರೀಕಾಕ್ಷನು ನನಗೆ ತನ್ನ ಸ್ವರೂಪದ ಪರಮಸ್ಥಿತಿಯನ್ನು ಉಪದೇಶಿಸಿದನು. ॥ ೧೯ ॥ ಆ ತೀರ್ಥಪಾದನಾದ ಪರಮಗುರು ಶ್ರೀಕೃಷ್ಣನಿಂದ ಹೀಗೆ ಆತ್ಮತತ್ತ್ವಜ್ಞಾನ ಪಡೆಯುವ ಸಾಧನೆಯನ್ನು ತಿಳಿದುಕೊಂಡು, ಆತನ ಅಡಿದಾವರೆಗಳಿಗೆ ಮಣಿದು, ಪ್ರದಕ್ಷಿಣೆಮಾಡಿ ನಾನು ಇಲ್ಲಿಗೆ ಬಂದಿರುವೆನು. ಆತನ ಅಗಲುವಿಕೆಯಿಂದ ನನ್ನ ಚಿತ್ತವು ತುಂಬಾ ಕಳವಳದಿಂದ ತುಂಬಿದೆ. ॥ ೨೦ ॥ ಆ ಭಗವಂತನ ದರ್ಶನವೆಂಬ ಆನಂದವನ್ನು ಅನುಭವಿಸಿದ್ದ ನಾನು ಈಗ ಆತನ ಅಗಲಿಕೆಯ ದುಃಖವನ್ನೂ ಅನುಭವಿಸುತ್ತಿದ್ದೇನೆ. ಇನ್ನು ನಾನು ಅವನ ಅಪ್ಪಣೆಯಂತೆ ಆತನಿಗೆ ಪ್ರಿಯವಾದ ಬದರಿಕಾಶ್ರಮಕ್ಕೆ ಹೋಗುತ್ತೇನೆ. ಭಗವಾನ್ ನಾರಾಯಣ ಮತ್ತು ನರ ಇವರಿಬ್ಬರು ಋಷಿಗಳು

**ಸೋಽಹಂ ತದ್ದರ್ಶನಾಹ್ಲಾದವಿಯೋಗಾರ್ತಿಯುತಃ ಪ್ರಭೋ ।**
**ಗಮಿಷ್ಯೇ ದಯಿತಂ ತಸ್ಯ ಬದರ್ಯಾಶ್ರಮಮಂಡಲಮ್ ॥ ೨೧ ॥**

**ಯತ್ರ ನಾರಾಯಣೋ ದೇವೋ ನರಶ್ಚ ಭಗವಾನೃಷಿಃ ।**
**ಮೃದು ತೀವ್ರಂ ತಪೋ ದೀರ್ಘಂ ತೇಪಾತೇ ಲೋಕಭಾವನೌ ॥ ೨೨ ॥**

*ಶ್ರೀಶುಕ ಉವಾಚ*

**ಇತ್ಯುದ್ಧವಾದುಪಾಕರ್ಣ್ಯ ಸುಹೃದಾಂ ದುಃಸಹಂ ವಧಮ್ ।**
**ಜ್ಞಾನೇನಾಶಮಯತ್ಕ್ಷತ್ತಾ ಶೋಕಮುತ್ಪತಿತಂ ಬುಧಃ ॥ ೨೩ ॥**

**ಸ ತಂ ಮಹಾಭಾಗವತಂ ವ್ರಜಂತಂ ಕೌರವರ್ಷಭಃ ।**
**ವಿಶ್ರಂಭಾದಭ್ಯಧತ್ತೇದಂ ಮುಖ್ಯಂ ಕೃಷ್ಣಪರಿಗ್ರಹೇ ॥ ೨೪ ॥**

*ವಿದುರ ಉವಾಚ*

**ಜ್ಞಾನಂ ಪರಂ ಸ್ವಾತ್ಮರಹಃಪ್ರಕಾಶಂ**
**ಯದಾಹ ಯೋಗೇಶ್ವರ ಈಶ್ವರಸ್ತೇ ।**
**ವಕ್ತುಂ ಭವಾನ್ನೋಽರ್ಹತಿ ಯದ್ಧಿ ವಿಷ್ಣೋ-**
**ರ್ಭೃತ್ಯಾಃ ಸ್ವಭೃತ್ಯಾರ್ಥಕೃತಶ್ಚರಂತಿ ॥ ೨೫ ॥**

*ಉದ್ಧವ ಉವಾಚ*

**ನನು ತೇ ತತ್ತ್ವಸಂರಾಧ್ಯ ಋಷಿಃ ಕೌಷಾರವೋಽಂತಿ ಮೇ ।**
**ಸಾಕ್ಷಾದ್ಭಗವತಾಽಽದಿಷ್ಟೋ ಮರ್ತ್ಯಲೋಕಂ ಜಿಹಾಸತಾ ॥ ೨೬ ॥**

*ಶ್ರೀಶುಕ ಉವಾಚ*

**ಇತಿ ಸಹ ವಿದುರೇಣ ವಿಶ್ವಮೂರ್ತೇ-**
**ರ್ಗುಣಕಥಯಾ ಸುಧಯಾ ಪ್ಲಾವಿತೋರುತಾಪಃ ।**
**ಕ್ಷಣಮಿವ ಪುಲಿನೇ ಯಮಸ್ವಸುಸ್ತಾಂ**
**ಸಮುಷಿತ ಔಪಗವಿರ್ನಿಶಾಂ ತತೋಽಗಾತ್ ॥ ೨೭ ॥**

*ರಾಜೋವಾಚ*

**ನಿಧನಮುಪಗತೇಷು ವೃಷ್ಣಿಭೋಜೇ-**
**ಷ್ವಧಿರಥಯೂಥಪಯೂಥಪೇಷು ಮುಖ್ಯಃ ।**
**ಸ ತು ಕಥಮವಶಿಷ್ಟ ಉದ್ಧವೋ ಯದ್**
**ಹರಿರಪಿ ತತ್ಯಜ ಆಕೃತಿಂ ತ್ರ್ಯಧೀಶಃ॥ ೨೮ ॥**

*ಶ್ರೀಶುಕ ಉವಾಚ*

**ಬ್ರಹ್ಮಶಾಪಾಪದೇಶೇನ ಕಾಲೇನಾಮೋಘವಾಂಛಿತಃ ।**
**ಸಂಹೃತ್ಯ ಸ್ವಕುಲಂ ನೂನಂ ತ್ಯಕ್ಷ್ಯನ್ ದೇಹಮಚಿಂತಯತ್ ॥ ೨೯ ॥**

ಲೋಕಾನುಗ್ರಹ ಮಾಡುವುದಕ್ಕಾಗಿ ಕಠಿಣ ತಪಸನ್ನಾಚರಿಸುತ್ತಿದ್ದಾರೆ. ॥ ೨೧-೨೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಮಹರಾಜಾ! ಹೀಗೆ ಉದ್ಧವನ ಬಾಯಿಂದ ಪ್ರಿಯಬಂಧುಗಳ ವಿನಾಶದ ಸಹಿಸಲಾರದ ಸಮಾಚಾರವನ್ನು ಕೇಳಿ ಪರಮಜ್ಞಾನೀ ವಿದುರನಿಗೆ ಉಂಟಾದ ಶೋಕವನ್ನು ಅವನು ಜ್ಞಾನದ ಮೂಲಕ ಶಾಂತವಾಗಿಸಿಕೊಂಡನು. ॥ ೨೩ ॥ ಭಗವಾನ್ ಶ್ರೀಕೃಷ್ಣನ ಭಕ್ತ ಪರಿವಾರದಲ್ಲಿ ಮುಖ್ಯನಾಗಿದ್ದ ಆ ಭಾಗವತೋತ್ತಮನು ಬದರಿಕಾಶ್ರಮದ ಕಡೆಗೆ ಹೊರಟಾಗ ಕುರುಶ್ರೇಷ್ಠ ವಿದುರನು ಶ್ರದ್ಧಾಪೂರ್ವಕವಾಗಿ ಅವನಲ್ಲಿ ಕೇಳಿದನು. ॥ ೨೪ ॥

**ವಿದುರನೆಂದನು** – ಎಲೈ ಉದ್ಧವನೇ! ಯೋಗೇಶ್ವರ ಭಗವಾನ್ ಶ್ರೀಕೃಷ್ಣನು ತನ್ನ ಸ್ವರೂಪದ ಗೂಢವಾದ ರಹಸ್ಯವನ್ನು ಪ್ರಕಟಗೊಳಿಸುವಂತಹ ಯಾವ ಪರಮ ಜ್ಞಾನವನ್ನು ನಿನಗೆ ಹೇಳಿದನೋ, ಅದನ್ನು ನಮಗೂ ಹೇಳಿರಿ. ಏಕೆಂದರೆ ಭಗವಂತನ ಸೇವಕರಾದರೋ ತಮ್ಮ ಸೇವಕರ ಕಾರ್ಯವನ್ನು ಸಿದ್ಧಗೊಳಿಸುವುದಕ್ಕಾಗಿಯೇ ಸಂಚರಿಸುತ್ತಿರುತ್ತಾರೆ. ॥ ೨೫ ॥

**ಉದ್ಧವನು ಹೇಳಿದನು** – ಮಹಾತ್ಮನೇ! ಮೈತ್ರೇಯ ಮಹರ್ಷಿಗಳ ಸೇವೆ ಮಾಡಿಯೇ ನೀನು ಆ ತತ್ತ್ವಜ್ಞಾನವನ್ನು ಪಡೆಯಬೇಕು. ಈ ಮರ್ತ್ಯಲೋಕವನ್ನು ಬಿಡುವ ಮುನ್ನ ಭಗವಂತನೇ ಆ ತತ್ತ್ವಜ್ಞಾನವನ್ನು ನಿನಗೆ ಉಪದೇಶಮಾಡಬೇಕೆಂದು ಅವರಿಗೆ ನನ್ನೆದುರಿಗೇ ಅಪ್ಪಣೆ ಮಾಡಿರುವನು ॥ ೨೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಹೀಗೆ ವಿದುರನೊಡನೆ ವಿಶ್ವಮೂರ್ತಿಯಾದ ಶ್ರೀಕೃಷ್ಣಪರಮಾತ್ಮನ ಗುಣಗಳ ಸಂಕೀರ್ತನೆ ಮಾಡಿದ್ದರಿಂದ ಉದ್ಧವನ ಆ ಮಹಾವಿಯೋಗ ಸಂತಾಪವು ಆ ಕಥಾಮೃತದಿಂದ ಶಮನಗೊಂಡಿತು. ಯಮುನಾನದೀ ತೀರದಲ್ಲಿ ಆ ರಾತ್ರಿಯು ಅವನಿಗೆ ಒಂದು ಕ್ಷಣದಂತೆ ಕಳೆದುಹೋಯಿತು. ಮತ್ತೆ ಬೆಳಗಾಗುತ್ತಲೇ ಅವನು ಅಲ್ಲಿಂದ ಹೊರಟುಬಿಟ್ಟನು. ॥ ೨೭ ॥

**ರಾಜಾಪರೀಕ್ಷಿತನು ಕೇಳಿದನು** – ಪೂಜ್ಯರೇ! ವೃಷ್ಣಿವಂಶ ಮತ್ತು ಭೋಜವಂಶಗಳ ಮಹಾರಥಿಗಳೂ, ನಾಯಕ-ಮಹಾನಾಯಕರೆಲ್ಲರೂ ನಾಶಹೊಂದಿಬಿಟ್ಟರು. ಮೂರುಲೋಕಗಳ ಒಡೆಯನಾದ ಶ್ರೀಹರಿಯೂ ಕೂಡ ತನ್ನ ರೂಪವನ್ನು ಮರೆಮಾಡಬೇಕಾಯಿತು. ಹೀಗಿರುವಾಗ ಆ ಯಾದವವಂಶದ ನಾಯಕರಲ್ಲೊಬ್ಬನಾದ ಉದ್ಧವನು ಮಾತ್ರ ಹೇಗೆ ಉಳಿದುಕೊಂಡನು ? ॥ ೨೮ ॥

**ಶ್ರೀಶುಕಮಹರ್ಷಿಗಳು ಹೇಳುತ್ತಾರೆ** – ರಾಜನೇ! ತನ್ನ ಇಚ್ಛೆಯು ಎಂದೂ ವ್ಯರ್ಥವಾಗದಿರುವ ಆ ಶ್ರೀಹರಿಯು ಬ್ರಾಹ್ಮಣರ ಶಾಪರೂಪೀಕಾಲದ ನೆಪದಿಂದ ತನ್ನ ಕುಲವನ್ನು ಸಂಹಾರಮಾಡಿಸಿ, ತನ್ನ ಲೀಲಾ ಸಂವರಣ ಮಾಡುವ ಸಮಯದಲ್ಲಿ ಹೀಗೆ ಯೋಚಿಸಿದನು. ॥ ೨೯ ॥ 'ಈಗ ನಾನು ಈ ಲೋಕವನ್ನು ಬಿಟ್ಟು ಹೊರಟುಹೋದ ಬಳಿಕ ನನ್ನ ಜ್ಞಾನವನ್ನು ಗ್ರಹಿಸಲು ಯೋಗ್ಯನಾದ ಅಧಿಕಾರಿಯೆಂದರೆ ಸಂಯಮಿಗಳಲ್ಲಿ ಶ್ರೇಷ್ಠನಾದ ಉದ್ಧವ

ಅಸ್ಮಾಲ್ಲೋಕಾದುಪರತೇ ಮಯಿ ಜ್ಞಾನಂ ಮದಾಶ್ರಯಮ್ ।
ಅರ್ಹತ್ಯುದ್ಧವ ಏವಾದ್ಧಾ ಸಂಪ್ರತ್ಯಾತ್ಮವತಾಂ ವರಃ ॥ ೩೦ ॥

ನೋದ್ಧವೋಽಣ್ವಪಿ ಮನ್ನ್ಯೂನೋ ಯದ್ಗುಣೈರ್ನಾರ್ದಿತಃ ಪ್ರಭುಃ ।
ಅತೋ ಮದ್ವಯುನಂ ಲೋಕಂ ಗ್ರಾಹಯನ್ನಿಹ ತಿಷ್ಠತು ॥ ೩೧ ॥

ಏವಂ ತ್ರಿಲೋಕಗುರುಣಾ ಸಂದಿಷ್ಟಃ ಶಬ್ದಯೋನಿನಾ ।
ಬದರ್ಯಾಶ್ರಮಮಾಸಾದ್ಯ ಹರಿಮೀಜೇ ಸಮಾಧಿನಾ ॥ ೩೨ ॥

ವಿದುರೋಽಪ್ಯುದ್ಧವಾಚ್ಛ್ರುತ್ವಾ ಕೃಷ್ಣಸ್ಯ ಪರಮಾತ್ಮನಃ ।
ಕ್ರೀಡಯೋಪಾತ್ತದೇಹಸ್ಯ ಕರ್ಮಾಣಿ ಶ್ಲಾಘಿತಾನಿ ಚ ॥ ೩೩ ॥

ದೇಹನ್ಯಾಸಂ ಚ ತಸ್ಯೈವಂ ಧೀರಾಣಾಂ ಧೈರ್ಯವರ್ಧನಮ್ ।
ಅನ್ಯೇಷಾಂ ದುಷ್ಕರತರಂ ಪಶೂನಾಂ ವಿಕ್ಲವಾತ್ಮನಾಮ್ ॥ ೩೪ ॥

ಆತ್ಮಾನಂ ಚ ಕುರುಶ್ರೇಷ್ಠ ಕೃಷ್ಣೇನ ಮನಸೇಕ್ಷಿತಮ್ ।
ಧ್ಯಾಯನ್ ಗತೇ ಭಾಗವತೇ ರುರೋದ ಪ್ರೇಮವಿಹ್ವಲಃ ॥ ೩೫ ॥

ಕಾಲಿಂದ್ಯಾಃ ಕತಿಭಿಃ ಸಿದ್ಧ ಅಹೋಭಿರ್ಭರತರ್ಷಭ ।
ಪ್ರಾಪದ್ಯತ ಸ್ವಃಸರಿತಂ ಯತ್ರ ಮಿತ್ರಾಸುತೋ ಮುನಿಃ ॥ ೩೬ ॥

ನೊಬ್ಬನೇ! ॥ ೩೦ ॥ ಈತನು ನನಗಿಂತ ಅಣುಮಾತ್ರವೂ ಕಡಿಮೆಯವನಲ್ಲ, ಏಕೆಂದರೆ, ಇವನು ವಿಷಯಗಳ ಬಾಧೆಗೆ ಎಂದಿಗೂ ತುತ್ತಾದವನಲ್ಲ. ಆದ್ದರಿಂದ ಈತನು ಜನರಿಗೆ ನನ್ನ ಜ್ಞಾನದ ಬಗೆಗೆ ತಿಳುವಳಿಕೆ ನೀಡುತ್ತಾ ಇಲ್ಲಿಯೇ ಇರಲಿ.' ॥ ೩೧ ॥ ವೇದಗಳಿಗೆ ಮೂಲಕಾರಣನಾದ ಮತ್ತು ವೇದೈಕವೇದ್ಯನಾದ ಜಗದ್ಗುರು ಶ್ರೀಕೃಷ್ಣನಿಂದ ಹೀಗೆ ಆಜ್ಞಪ್ತಪಡೆದ ಮಹಾತ್ಮನಾದ ಉದ್ಧವನು ಬದರಿಕಾಶ್ರಮಕ್ಕೆ ಹೋಗಿ ಸಮಾಧಿಯೋಗದಿಂದ ಶ್ರೀಹರಿಯನ್ನು ಆರಾಧಿಸತೊಡಗಿದನು. ॥ ೩೨ ॥ ಕುರುಶ್ರೇಷ್ಠ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಲೀಲೆಯಿಂದಲೇ ತನ್ನ ದಿವ್ಯ ಮಂಗಳ ವಿಗ್ರಹವನ್ನು ಈ ಲೋಕದಲ್ಲಿ ಪ್ರಕಟಿಸಿದ್ದನು. ಅದನ್ನು ಮರೆಸಿಕೊಂಡದ್ದೂ ಲೀಲಾಮಾತ್ರವೇ. ಆತನು ಅಂತರ್ಧಾನಹೊಂದಿದ ಈ ಘಟನೆಯು ಧೀರ ಪುರುಷರಿಗೆ ಧೈರ್ಯವನ್ನೂ, ಉತ್ಸಾಹವನ್ನೂ ತುಂಬುತ್ತದೆ. ಆದರೆ ಪಶುಸಮಾನರಾದ ಹೇಡಿಗಳಿಗೆ ಅತ್ಯಂತ ದುಷ್ಕರವಾಗಿದೆ. ಪರಮ ಭಾಗವತೋತ್ತಮನಾದ ಉದ್ಧವನ ಬಾಯಿಂದ ಭಗವಂತನ ಶ್ರೇಷ್ಠವಾದ ಕರ್ಮಗಳನ್ನೂ, ಅಂತರ್ಧಾನಹೊಂದಿದ ವೃತ್ತಾಂತವನ್ನೂ ವಿದುರನು ಹೀಗೆ ಕೇಳಿದನು. ಹಾಗೆಯೇ ಪರಂಧಾಮ ಹೊಂದುವ ಸಮಯದಲ್ಲಿ ಸ್ವಾಮಿಯು ತನ್ನನ್ನು ನೆನೆಸಿಕೊಂಡನು ಎಂದು ಕೇಳಿ ವಿದುರನು – ಉದ್ಧವನು ಹೊರಟುಹೋದ ಬಳಿಕ ಪ್ರೇಮಪರವಶನಾಗಿ ರೋದಿಸತೊಡಗಿದನು. ॥ ೩೩-೩೫ ॥ ಅನಂತರ ಆ ಸಾಧುಶಿರೋಮಣಿಯು ಯಮುನಾನದಿಯ ತೀರದಿಂದ ಹೊರಟು, ಕೆಲವು ದಿನಗಳಲ್ಲೇ ಶ್ರೀಮೈತ್ರೇಯ ಮಹರ್ಷಿಗಳು ತಂಗಿದ್ದ ಗಂಗಾನದೀತೀರವನ್ನು ತಲುಪಿದನು. ॥ ೩೬ ॥

*ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ವಿದುರೋದ್ಧವಸಂವಾದೇ ಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ವಿದುರನ ಪ್ರಶ್ನೆ– ಮೈತ್ರೇಯರಿಂದ ಸೃಷ್ಟಿಕ್ರಮದ ವರ್ಣನೆ

*ಶ್ರೀಶುಕ ಉವಾಚ*

ದ್ವಾರಿ ದ್ಯುನದ್ಯಾ ಋಷಭಃ ಕುರೂಣಾಂ
ಮೈತ್ರೇಯಮಾಸೀನಮಗಾಧಬೋಧಮ್ ।
ಕ್ಷತ್ತೋಪಸೃತ್ಯಾಚ್ಯುತಭಾವಶುದ್ಧಃ
ಪಪ್ರಚ್ಛ ಸೌಶೀಲ್ಯಗುಣಾಭಿತೃಪ್ತಃ ॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಮಹರಾಜನೇ! ಶ್ರೀಕೃಷ್ಣನ ಧ್ಯಾನದಿಂದ ನಿರ್ಮಲಚಿತ್ತನಾದ ಕುರುಶ್ರೇಷ್ಠ ವಿದುರನು ಶ್ರೀಹರಿದ್ವಾರ ಕ್ಷೇತ್ರದಲ್ಲಿ ಇರುವ ಅಗಾಧ ಜ್ಞಾನಿಗಳಾದ ಮೈತ್ರೇಯ ಮಹರ್ಷಿಗಳ ಬಳಿಗೆ ಹೋದನು. ಆ ಮಹಾತ್ಮರ ಸೌಶೀಲ್ಯಾದಿ ಗುಣಗಳಿಂದ ಸಂತೃಪ್ತನಾಗಿ ಅವರಲ್ಲಿ ಹೀಗೆ ಅರಿಕೆಮಾಡಿಕೊಂಡನು. ॥ ೧ ॥

*ವಿದುರ ಉವಾಚ*

**ಸುಖಾಯ ಕರ್ಮಾಣಿ ಕರೋತಿ ಲೋಕೋ**
**ನ ತೈಃ ಸುಖಂ ವಾನ್ಯದುಪಾರಮಂ ವಾ ।**
**ವಿಂದೇತ ಭೂಯಸ್ತತ ಏವ ದುಃಖಂ**
**ಯದತ್ರ ಯುಕ್ತಂ ಭಗವಾನ್ ವದೇನ್ನಃ ॥ ೨ ॥**

**ಜನಸ್ಯ ಕೃಷ್ಣಾದ್ವಿಮುಖಸ್ಯ ದೈವಾ-**
**ದಧರ್ಮಶೀಲಸ್ಯ ಸುದುಃಖಿತಸ್ಯ ।**
**ಅನುಗ್ರಹಾಯೇಹ ಚರಂತಿ ನೂನಂ**
**ಭೂತಾನಿ ಭವ್ಯಾನಿ ಜನಾರ್ದನಸ್ಯ ॥ ೩ ॥**

**ತತ್ಸಾಧುವರ್ಯಾದಿಶ ವರ್ತ್ಮ ಶಂ ನಃ**
**ಸಂರಾಧಿತೋ ಭಗವಾನ್ಯೇನ ಪುಂಸಾಮ್ ।**
**ಹೃದಿ ಸ್ಥಿತೋ ಯಚ್ಛತಿ ಭಕ್ತಿಪೂತೇ**
**ಜ್ಞಾನಂ ಸತತ್ತ್ವಾಧಿಗಮಂ ಪುರಾಣಮ್ ॥ ೪ ॥**

**ಕರೋತಿ ಕರ್ಮಾಣಿ ಕೃತಾವತಾರೋ**
**ಯಾನ್ಯಾತ್ಮತಂತ್ರೋ ಭಗವಾಂಸ್ತ್ರ್ಯಧೀಶಃ ।**
**ಯಥಾ ಸಸರ್ಜಾಗ್ರ ಇದಂ ನಿರೀಹಃ**
**ಸಂಸ್ಥಾಪ್ಯ ವೃತ್ತಿಂ ಜಗತೋ ವಿಧತ್ತೇ ॥ ೫ ॥**

**ಯಥಾ ಪುನಃ ಸ್ವೇ ಖ ಇದಂ ನಿವೇಶ್ಯ**
**ಶೇತೇ ಗುಹಾಯಾಂ ಸ ನಿವೃತ್ತವೃತ್ತಿಃ ।**
**ಯೋಗೇಶ್ವರಾಧೀಶ್ವರ ಏಕ ಏತ-**
**ದನುಪ್ರವಿಷ್ಟೋ ಬಹುಧಾ ಯಥಾಸೀತ್ ॥ ೬ ॥**

**ಕ್ರೀಡನ್ವಿಧತ್ತೇ ದ್ವಿಜಗೋಸುರಾಣಾಂ**
**ಕ್ಷೇಮಾಯ ಕರ್ಮಾಣ್ಯವತಾರಭೇದೈಃ ।**
**ಮನೋ ನ ತೃಪ್ಯತ್ಯಪಿ ಶೃಣ್ವತಾಂ ನಃ**
**ಸುಶ್ಲೋಕಮೌಲೇಶ್ಚರಿತಾಮೃತಾನಿ ॥ ೭ ॥**

**ಯೈಸ್ತತ್ತ್ವಭೇದೈರಧಿಲೋಕನಾಥೋ**
**ಲೋಕಾನಲೋಕಾನ್ಸಹಲೋಕಪಾಲಾನ್ ।**
**ಅಚೀಕ್ಲೃಪದ್ಯತ್ರ ಹಿ ಸರ್ವಸತ್ತ್ವ-**
**ನಿಕಾಯಭೇದೋಽಧಿಕೃತಃ ಪ್ರತೀತಃ ॥ ೮ ॥**

**ಯೇನ ಪ್ರಜಾನಾಮುತ ಆತ್ಮಕರ್ಮ-**
**ರೂಪಾಭಿಧಾನಾಂ ಚ ಭಿದಾಂ ವ್ಯಧತ್ತ ।**
**ನಾರಾಯಣೋ ವಿಶ್ವಸೃಡಾತ್ಮಯೋನಿ-**
**ರೇತಚ್ಚ ನೋ ವರ್ಣಯ ವಿಪ್ರವರ್ಯ ॥ ೯ ॥**

**ವಿದುರನು ಹೇಳಿದನು** – ಓ ಮಹಾತ್ಮರೇ! ಪ್ರಪಂಚದಲ್ಲಿ ಎಲ್ಲ ಜನರೂ ಸುಖವನ್ನು ಪಡೆಯಬೇಕೆಂಬ ಆಸೆಯಿಂದ ಕರ್ಮ ಮಾಡುತ್ತಾರೆ. ಆದರೆ ಅದರಿಂದ ಅವರಿಗೆ ಸುಖಸಿಗುವುದಿಲ್ಲ, ದುಃಖ ದೂರವಾಗುವುದಿಲ್ಲ. ಅಷ್ಟೇ ಅಲ್ಲ, ಅದರಿಂದ ಅವರಿಗೆ ದುಃಖವೇ ಹೆಚ್ಚುತ್ತದೆ. ಆದ್ದರಿಂದ ಇದರ ಬಗೆಗೆ ಜನರು ಏನು ಮಾಡಬೇಕು? ಸುಖವನ್ನೇ ಪಡೆಯುವ ದಾರಿ ಯಾವುದು? ಎಂಬುದನ್ನು ದಯವಿಟ್ಟು ತಿಳಿಸಿರಿ. ॥ ೨ ॥ ದುರದೃಷ್ಟವಶದಿಂದ ಭಗವಾನ್ ಶ್ರೀಕೃಷ್ಣನಿಂದ ವಿಮುಖರಾಗಿ, ಅಧರ್ಮದಲ್ಲಿ ಆಸಕ್ತರಾಗಿ, ಅತಿ ದುಃಖಪಡುತ್ತಿರುವವರ ಮೇಲೆ ಕೃಪೆಯನ್ನು ತೋರಲೆಂದೇ ನಿಮ್ಮಂತಹ ಭಾಗ್ಯಶಾಲಿ ಭಗವದ್ಭಕ್ತರು ಪ್ರಪಂಚದಲ್ಲಿ ಸಂಚಾರಮಾಡುತ್ತಿರುವುದು. ॥ ೩ ॥ ಸಾಧುಶ್ರೇಷ್ಠರೇ! ಭಗವಂತನನ್ನು ಹೇಗೆ ಆರಾಧಿಸಿದರೆ ಅವನು ಭಕ್ತರ ಭಕ್ತಿಶುದ್ಧವಾದ ಹೃದಯದಲ್ಲಿ ಬಂದು ನೆಲೆಸಿ, ತನ್ನ ಸ್ವರೂಪದ ಅಪರೋಕ್ಷಾನುಭವವನ್ನು ಮಾಡುವ ಸನಾತನ ಜ್ಞಾನವನ್ನು ಅನುಗ್ರಹಿಸುತ್ತಾನೋ ಅಂತಹ ಶಾಂತಿಪ್ರದವಾದ ಸನಾತನವಾದ ಜ್ಞಾನವನ್ನು ತಾವು ನನಗೆ ಉಪದೇಶಿಸಿರಿ. ॥ ೪ ॥ ತ್ರಿಲೋಕಗಳಿಗೆ ಒಡೆಯನಾಗಿ ಪರಮಸ್ವತಂತ್ರನಾಗಿರುವ ಶ್ರೀಹರಿಯು ಅವತಾರಮಾಡಿ ಯಾವ-ಯಾವ ಲೀಲೆಗಳನ್ನು ಮಾಡುವನು? ಪೂರ್ಣಕಾಮನಾಗಿ ಕರ್ತೃತ್ವಲೇಪವಿಲ್ಲದ ಆ ಸ್ವಾಮಿಯು ಕಲ್ಪದ ಪ್ರಾರಂಭದಲ್ಲಿ ಈ ಜಗತ್ತನ್ನು ಹೇಗೆ ನಿರ್ಮಿಸಿದನು? ತಾನು ಸೃಷ್ಟಿಸಿದ ಜೀವಿಗಳನ್ನು ನೆಲೆಗೊಳಿಸಿ ಅವುಗಳಿಗೆ ಜೀವನೋಪಾಯವನ್ನು ಹೇಗೆ ಕಲ್ಪಿಸಿದನು? ಮತ್ತೆ ಅವನು ತನ್ನ ಈ ಕಾರ್ಯವನ್ನು ತೊರೆದು ಜಗತ್ತೆಲ್ಲವನ್ನು ತನ್ನ ಹೃದಯಾಕಾಶದಲ್ಲಿ ವಿಲೀನಗೊಳಿಸಿಕೊಂಡು ಯೋಗಮಾಯೆಯನ್ನು ಆಶ್ರಯಿಸಿ ಹೇಗೆ ಶಯನಿಸುತ್ತಾನೆ. ಆ ಯೋಗೇಶ್ವರ ಪ್ರಭುವು ಒಬ್ಬನೇ ಆಗಿದ್ದರೂ ಈ ಬ್ರಹ್ಮಾಂಡದಲ್ಲಿ ಅಂತರ್ಯಾಮಿಯಾಗಿ ಒಳಹೊಕ್ಕು ಅನೇಕ ರೂಪಗಳಲ್ಲಿ, ಹೇಗೆ ಪ್ರಕಟಗೊಳ್ಳುತ್ತಾನೆ? ಈ ಎಲ್ಲ ರಹಸ್ಯವನ್ನು ನನಗೆ ತಿಳಿಸಿರಿ. ॥ ೫-೬ ॥ ಬ್ರಾಹ್ಮಣರು, ಗೋವುಗಳು, ದೇವತೆಗಳು ಇವರೆಲ್ಲರಿಗೆ ಕ್ಷೇಮವನ್ನುಂಟು ಮಾಡುವುದಕ್ಕಾಗಿ ಅನೇಕ ಅವತಾರಗಳನ್ನು ಧರಿಸಿಕೊಂಡು ಲೀಲೆಯಿಂದಲೇ ಮಾಡುವ ನಾನಾ ಪ್ರಕಾರದ ದಿವ್ಯ ಕರ್ಮಗಳನ್ನು ನಮಗೆ ತಿಳಿಸೋಣವಾಗಲಿ. ಪುಣ್ಯಕೀರ್ತಿಶಾಲಿಗಳ ಚೂಡಾಮಣಿಯಾಗಿರುವ ಶ್ರೀಹರಿಯ ಲೀಲಾಕಥಾಮೃತವನ್ನು ಎಷ್ಟು ಪಾನಮಾಡಿದರೂ ನಮ್ಮ ಮನಸ್ಸಿಗೆ ತೃಪ್ತಿ ಯಾಗುವುದಿಲ್ಲ. ॥ ೭ ॥ ಸಮಸ್ತ ಲೋಕಾಧಿಪತಿಗಳ ಒಡೆಯನಾದ ಶ್ರೀಹರಿಯು ಈ ಲೋಕಗಳನ್ನು, ಲೋಕಪಾಲರನ್ನು ಮತ್ತು ಲೋಕಗಳ ಹೊರಗಿನ ಭಾಗಗಳನ್ನೂ, ಅದರಲ್ಲಿ ಈ ಎಲ್ಲ ರೀತಿಯ ಪ್ರಾಣಿಗಳ ಅಧಿಕಾರಾನುಸಾರ ಬೇರೆ-ಬೇರೆಯಾಗಿ ಕಂಡುಬರುವ ಭೇದಗಳು ಯಾವ ತತ್ತ್ವದಿಂದ ರಚಿಸಿರುವನು? ಇದನ್ನೂ ನನಗೆ ಹೇಳಿರಿ. ॥ ೮ ॥ ಮುನಿ ಶ್ರೇಷ್ಠರೇ! ಸ್ವಯಂಭುವೂ, ಸರ್ವ ಕಾರಣನೂ ಆದ ಶ್ರೀಮನ್ನಾರಾಯಣನು ತನ್ನ ಪ್ರಜೆಗಳ ಸ್ವಭಾವ, ಕರ್ಮ, ರೂಪ ಮತ್ತು ನಾಮಭೇದಗಳನ್ನು ಹೇಗೆ ರಚನೆ ಮಾಡುವನು? ಪೂಜ್ಯರೇ! ವ್ಯಾಸಮಹರ್ಷಿಗಳಿಂದ ನಾನು ಎಲ್ಲ ವರ್ಣಾಶ್ರಮಧರ್ಮಗಳನ್ನು ಹಲವು ಬಾರಿ ಕೇಳಿರುವೆನು. ಆದರೆ

ಪರಾವರೇಷಾಂ ಭಗವನ್ ವ್ರತಾನಿ
ಶ್ರುತಾನಿ ಮೇ ವ್ಯಾಸಮುಖಾದಭೀಕ್ಷ್ಣಮ್ ।
ಅತೃಪ್ನುಮ ಕ್ಷುಲ್ಲಸುಖಾವಹಾನಾಂ
ತೇಷಾಮೃತೇ ಕೃಷ್ಣ ಕಥಾಮೃತೌಘಾತ್ ॥ ೧೦ ॥

ಕಸ್ತೃಪ್ನುಯಾತ್ತೀರ್ಥಪದೋಽಭಿಧಾನಾತ್
ಸತ್ರೇಷು ವಃ ಸೂರಿಭಿರೀಡ್ಯಮಾನಾತ್ ।
ಯಃ ಕರ್ಣನಾಡೀಂ ಪುರುಷಸ್ಯ ಯಾತೋ
ಭವಪ್ರದಾಂ ಗೇಹರತಿಂ ಛಿನತ್ತಿ ॥ ೧೧ ॥

ಮುನಿರ್ವಿವಕ್ಷುರ್ಭಗವದ್ಗುಣಾನಾಂ
ಸಖಾಪಿ ತೇ ಭಾರತಮಾಹ ಕೃಷ್ಣಃ ।
ಯಸ್ಮಿನ್ನೃಣಾಂ ಗ್ರಾಮ್ಯ ಸುಖಾನುವಾದೈ-
ರ್ಮತಿರ್ಗೃಹೀತಾ ನು ಹರೇಃ ಕಥಾಯಾಮ್ ॥ ೧೨ ॥

ಸಾ ಶ್ರದ್ದಧಾನಸ್ಯ ವಿವರ್ಧಮಾನಾ
ವಿರಕ್ತಿಮನ್ಯತ್ರ ಕರೋತಿ ಪುಂಸಃ ।
ಹರೇಃ ಪದಾನುಸ್ಮೃತಿನಿರ್ವೃತಸ್ಯ
ಸಮಸ್ತದುಃಖಾತ್ಯಯಮಾಶು ಧತ್ತೇ ॥ ೧೩ ॥

ತಾಂಛೋಚ್ಯಶೋಚ್ಯಾನವಿದೋಽನುಶೋಚೇ
ಹರೇಃ ಕಥಾಯಾಂ ವಿಮುಖಾನಘೇನ ।
ಕ್ಷಿಣೋತಿ ದೇವೋಽನಿಮಿಷಸ್ತು ಯೇಷಾ-
ಮಾಯುರ್ವೃಥಾವಾದಗತಿಸ್ಮೃತೀನಾಮ್ ॥ ೧೪ ॥

ತದಸ್ಯ ಕೌಷಾರವ ಶರ್ಮದಾತು-
ರ್ಹರೇಃ ಕಥಾಮೇವ ಕಥಾಸು ಸಾರಮ್ ।
ಉದ್ಧೃತ್ಯ ಪುಷ್ಪೇಭ್ಯ ಇವಾರ್ತಬಂಧೋ
ಶಿವಾಯ ನಃ ಕೀರ್ತಯ ತೀರ್ಥಕೀರ್ತೇಃ ॥ ೧೫ ॥

ಸ ವಿಶ್ವಜನ್ಮಸ್ಥಿತಿಸಂಯಮಾರ್ಥೇ
ಕೃತಾವತಾರಃ ಪ್ರಗೃಹೀತಶಕ್ತಿಃ ।
ಚಕಾರ ಕರ್ಮಾಣ್ಯತಿಪೂರುಷಾಣಿ
ಯಾನೀಶ್ವರಃ ಕೀರ್ತಯ ತಾನಿ ಮಹ್ಯಮ್ ॥ ೧೬ ॥

*ಶ್ರೀಶುಕ ಉವಾಚ*

ಸ ಏವಂ ಭಗವಾನ್ಪೃಷ್ಟಃ ಕ್ಷತ್ತ್ರಾ ಕೌಷಾರವಿರ್ಮುನಿಃ ।
ಪುಂಸಾಂ ನಿಃಶ್ರೇಯಸಾರ್ಥೇನ ತಮಾಹ ಬಹು ಮಾನಯನ್
॥ ೧೭ ॥

*ಮೈತ್ರೇಯ ಉವಾಚ*

ಸಾಧು ಪೃಷ್ಟಂ ತ್ವಯಾ ಸಾಧೋ ಲೋಕಾನ್ಸಾಧ್ವನುಗೃಹ್ಣತಾ ।
ಕೀರ್ತಿಂ ವಿತನ್ವತಾ ಲೋಕೇ ಆತ್ಮನೋಽಧೋಕ್ಷಜಾತ್ಮನಃ
॥ ೧೮ ॥

ಈಗ ಶ್ರೀಕೃಷ್ಣಕಥಾಮೃತ ಪ್ರವಾಹವನ್ನು ಬಿಟ್ಟು ಕ್ಷಣಿಕ ಸುಖವನ್ನು ಉಂಟುಮಾಡುವ ಬೇರಾವ ಧರ್ಮಗಳನ್ನು ಕೇಳಿದರೂ ಮನಸ್ಸಿಗೆ ತೃಪ್ತಿಯಾಗುವುದಿಲ್ಲ. ॥ ೯-೧೦ ॥ ಆದರೆ ಆ ಭಗವತ್‌ಕಥಾಮೃತವು ಮನುಷ್ಯರ ಕಿವಿಗಳ ರಂಧ್ರಗಳ ಮೂಲಕ ಪ್ರವೇಶಿಸುತ್ತಲೇ ಸಂಸಾರದ ಬಂಧನಕ್ಕೆ ಕಾರಣವಾದ ವಿಷಯಾಸಕ್ತಿಯನ್ನು ತೊಡೆದು ಹಾಕುವುದು. ನಾರದಾದಿ ಮಹಾತ್ಮರೂ ಕೂಡ ನಿಮ್ಮಂತಹ ಸಾಧುಗಳ ಸಮಾಜದಲ್ಲಿ ಕೀರ್ತಿಸುತ್ತಿರುತ್ತಾರೆ. ತೀರ್ಥ ಪಾದನಾದ ಶ್ರೀಹರಿಯ ಅಂತಹ ಕಥಾಮೃತವನ್ನಾದರೋ, ಎಷ್ಟು ಕೇಳಿದರೂ ಸಾಕೆನಿಸುವುದಿಲ್ಲ. ॥ ೧೧ ॥ ಪೂಜ್ಯರೇ! ನಿಮ್ಮ ಗೆಳೆಯರಾದ ಮುನಿಶ್ರೇಷ್ಠ ಕೃಷ್ಣದ್ವೈಪಾಯನರು ಶ್ರೀಭಗವಂತನ ಗುಣಗಳನ್ನು ವರ್ಣಿಸುವುದಕ್ಕಾಗಿಯೇ ಮಹಾಭಾರತವನ್ನು ರಚಿಸಿರುವರು. ಅದರಲ್ಲಿ ಅವರು ವಿಷಯಸುಖಗಳ ಉಲ್ಲೇಖ ಮಾಡುತ್ತಾ, ಅವುಗಳ ಮೂಲಕ ಮನುಷ್ಯರ ಬುದ್ಧಿಯು ಶ್ರೀಕೃಷ್ಣನಲ್ಲಿ ತೊಡಗಿಸಲು ಪ್ರಯತ್ನಿಸಿರುವರು. ॥ ೧೨ ॥ ಈ ಭಗವತ್ಕಥೆಯ ರುಚಿಯು ಶ್ರದ್ಧೆಯುಳ್ಳ ಮನುಷ್ಯನ ಹೃದಯದಲ್ಲಿ ಬೆಳೆಯ ತೊಡಗಿದಾಗ ಬೇರೆ ವಿಷಯಗಳಿಂದ ಅವನನ್ನು ವಿರಕ್ತನನ್ನಾಗಿ ಸುತ್ತದೆ. ಅವನು ಭಗವಚ್ಚರಣಗಳ ನಿರಂತರ ಚಿಂತನೆಯಿಂದ ಆನಂದಮಗ್ನನಾಗಿ, ಅವನ ಎಲ್ಲ ದುಃಖಗಳು ಆಗಲೇ ಕೊನೆಗೊಳ್ಳುತ್ತವೆ. ॥ ೧೩ ॥ ಆದರೆ ಅಜ್ಞಾನಿಗಳು ತಮ್ಮ ಪೂರ್ವ ಪಾಪಗಳಿಂದ ಶ್ರೀಹರಿಯ ಕಥೆಗೆ ವಿಮುಖರಾದ ಆ ಬಡಪಾಯಿ ಜೀವಿಗಳ ಕುರಿತು ಕರುಣೆಯೇ ಉಂಟಾಗುತ್ತದೆ. ಅಯ್ಯೋ! ಭಗವತ್ಸ್ವರೂಪೀ ಕಾಲಪುರುಷನು ಅವರ ಅಮೂಲ್ಯ ಜೀವನವನ್ನು ಕತ್ತರಿಸುತ್ತಿದ್ದರೂ ಅವರು ತಮ್ಮ ಮಾತು, ಮನಸ್ಸು, ದೇಹಗಳನ್ನು ವ್ಯರ್ಥವಾದ ವಾದವಿವಾದದಲ್ಲಿ, ವ್ಯರ್ಥಚೇಷ್ಟೆಗಳಲ್ಲಿ, ವ್ಯರ್ಥ ಚಿಂತನೆಯಲ್ಲಿ ತೊಡಗಿಸಿರುತ್ತಾರೆ. ॥ ೧೪ ॥ ಮುನಿವರೇಣ್ಯರೇ! ತಾವು ದೀನಬಂಧುಗಳೂ, ದಯಾಳುಗಳೂ ಆಗಿರುವಿರಿ. ದುಂಬಿಯು ನಾನಾಪುಷ್ಪಗಳಿಂದ ರಸವನ್ನು ಶೋಧಿಸಿ ತೆಗೆಯುವಂತೆ ತಾವು ಈ ಲೌಕಿಕ ಕಥೆಗಳಿಂದ ಅವುಗಳ ಸಾರಭೂತವಾಗಿರುವ ಪರಮ ಪವಿತ್ರವೂ, ಮಂಗಳಕರವೂ ಆದ ಕಥೆಗಳನ್ನು ನಮ್ಮ ಶ್ರೇಯಸ್ಸಿಗಾಗಿ ಸಂಗ್ರಹಿಸಿ ಹೇಳಿರಿ. ॥ ೧೫ ॥ ಸರ್ವೇಶ್ವರನಾದ ಭಗವಂತನು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗಾಗಿ ತನ್ನ ಮಾಯಾಶಕ್ತಿಯನ್ನು ಸ್ವೀಕರಿಸಿ ರಾಮ-ಕೃಷ್ಣಾದಿ ಅನೇಕ ಅವತಾರಗಳ ಮೂಲಕ ಮಾಡಿದ ಅಲೌಕಿಕ ಲೀಲೆಗಳೆಲ್ಲವನ್ನು ನನಗೆ ಹೇಳಿರಿ. ॥ ೧೬ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಮಹಾತ್ಮನಾದ ವಿದುರನು ಸಮಸ್ತ ಜೀವಿಗಳ ಶ್ರೇಯಸ್ಸಿಗಾಗಿ ಮೈತ್ರೇಯರಲ್ಲಿ ಹೀಗೆ ಪ್ರಶ್ನಿಸಿದಾಗ, ಅವನ ಸದಾಶಯವನ್ನೂ, ಸೌಜನ್ಯವನ್ನೂ, ಭಕ್ತಿ-ಜ್ಞಾನ-ವೈರಾಗ್ಯ ಮಹಿಮೆಯನ್ನೂ ಅಭಿನಂದಿಸುತ್ತಾ ಮಹರ್ಷಿ ಮೈತ್ರೇಯರು ಹೀಗೆ ಉತ್ತರಿಸಿದರು. ॥ ೧೭ ॥

ಶ್ರೀಮೈತ್ರೇಯರು ಹೇಳತೊಡಗಿದರು – ಓ ಸಾಧು ಶ್ರೇಷ್ಠನೇ! ಲೋಕಾನುಗ್ರಹಕ್ಕಾಗಿ ನೀನು ತುಂಬಾ ಒಳ್ಳೆಯ ಪ್ರಶ್ನೆಯನ್ನೇ ಕೇಳಿರುವೆ. ನಿನ್ನ ಮನಸ್ಸು ಸದಾ ಶ್ರೀಭಗವಂತನಲ್ಲೇ

ನೈತಚ್ಚಿತ್ರಂ ತ್ವಯಿ ಕ್ಷತ್ತರ್ಬಾದರಾಯಣವೀರ್ಯಜೇ ।
ಗೃಹೀತೋऽನನ್ಯಭಾವೇನ ಯತ್ತ್ವಯಾ ಹರಿರೀಶ್ವರಃ
॥ ೧೯ ॥

ಮಾಂಡವ್ಯಶಾಪಾದ್ಭಗವಾನ್ಪ್ರಜಾಸಂಯಮನೋ ಯಮಃ ।
ಭ್ರಾತುಃ ಕ್ಷೇತ್ರೇ ಭುಜಿಷ್ಯಾಯಾಂ ಜಾತಃ ಸತ್ಯವತೀಸುತಾತ್
॥ ೨೦ ॥

ಭವಾನ್ಭಗವತೋ ನಿತ್ಯಂ ಸಮ್ಮತಃ ಸಾನುಗಸ್ಯ ಚ ।
ಯಸ್ಯ ಜ್ಞಾನೋಪದೇಶಾಯ ಮಾऽऽದಿಶದ್ಭಗವಾನ್ ವ್ರಜನ್
॥ ೨೧ ॥

ಅಥ ತೇ ಭಗವಲ್ಲೀಲಾ ಯೋಗಮಾಯೋಪಬೃಂಹಿತಾಃ ।
ವಿಶ್ವಸ್ಥಿತ್ಯುದ್ಭವಾಂತಾರ್ಥಾ ವರ್ಣಯಾಮ್ಯನುಪೂರ್ವಶಃ
॥ ೨೨ ॥

ಭಗವಾನೇಕ ಆಸೇದಮಗ್ರ ಆತ್ಮಾऽऽತ್ಮನಾಂ ವಿಭುಃ ।
ಆತ್ಮೇಚ್ಛಾನುಗತಾವಾತ್ಮಾ ನಾನಾಮತ್ಯುಪಲಕ್ಷಣಃ
॥ ೨೩ ॥

ಸ ವಾ ಏಷ ತದಾ ದ್ರಷ್ಟಾ ನಾಪಶ್ಯದ್ದೃಶ್ಯಮೇಕರಾಟ್ ।
ಮೇನೇऽಸಂತಮಿವಾತ್ಮಾನಂ ಸುಪ್ತಶಕ್ತಿರಸುಪ್ತದೃಕ್
॥ ೨೪ ॥

ಸಾ ವಾ ಏತಸ್ಯ ಸಂದ್ರಷ್ಟುಃ ಶಕ್ತಿಃ ಸದಸದಾತ್ಮಿಕಾ ।
ಮಾಯಾ ನಾಮ ಮಹಾಭಾಗ ಯಯೇದಂ ನಿರ್ಮಮೇ ವಿಭುಃ
॥ ೨೫ ॥

ಕಾಲವೃತ್ತ್ಯಾ ತು ಮಾಯಾಯಾಂ ಗುಣಮಯ್ಯಾಮಧೋಕ್ಷಜಃ ।
ಪುರುಷೇಣಾತ್ಮಭೂತೇನ ವೀರ್ಯಮಾಧತ್ತ ವೀರ್ಯವಾನ್
॥ ೨೬ ॥

ತತೋऽಭವನ್ಮಹತ್ತತ್ತ್ವಮವ್ಯಕ್ತಾತ್ಕಾಲಚೋದಿತಾತ್ ।
ವಿಜ್ಞಾನಾತ್ಮಾऽऽತ್ಮದೇಹಸ್ಥಂ ವಿಶ್ವಂ ವ್ಯಂಜಂಸ್ತಮೋನುದಃ
॥ ೨೭ ॥

ಸೋऽಪ್ಯಂಶಗುಣಕಾಲಾತ್ಮಾ ಭಗವದ್ದೃಷ್ಟಿಗೋಚರಃ ।
ಆತ್ಮಾನಂ ವ್ಯಕರೋದಾತ್ಮಾ ವಿಶ್ವಸ್ಯಾಸ್ಯ ಸಿಸೃಕ್ಷಯಾ
॥ ೨೮ ॥

ತೊಡಗಿದೆ. ಆದರೂ ನೀನು ಹೀಗೆ ಪ್ರಶ್ನಿಸಿದ್ದರಿಂದ ನಿನ್ನ ಕೀರ್ತಿಯು ಜಗತ್ತಿನಲ್ಲಿ ಹರಡುವುದು. ॥ ೧೮ ॥ ಅನನ್ಯ ಭಾವದಿಂದ ಸರ್ವೇಶ್ವರನಾದ ಶ್ರೀಹರಿಯನ್ನು ಹಿಡಿದಿಟ್ಟುಕೊಂಡಿರುವ ಭಕ್ತಶ್ರೇಷ್ಠನು ನೀನು. ಬಾದರಾಯಣರ ಔರಸಪುತ್ರರಾಗಿರುವ ನಿನ್ನಲ್ಲಿ ಇಂತಹ ಮಹಿಮೆ ಇರುವುದು ಆಶ್ಚರ್ಯವೇನೂ ಅಲ್ಲ. ॥ ೧೯ ॥ ನೀನು ದುಷ್ಟ ಜೀವಿಗಳಿಗೆ ದಂಡನೆಯನ್ನು ಕೊಡುವ ಪೂಜ್ಯನಾದ ಯಮಧರ್ಮನೇ ಆಗಿರುವೆ. ಮಾಂಡವ್ಯ ಋಷಿಗಳ ಶಾಪದಿಂದ ಶ್ರೀವೇದವ್ಯಾಸರಿಂದ ಅವರ ತಮ್ಮನಾದ ವಿಚಿತ್ರವೀರ್ಯನ ದಾಸಿಯ ಗರ್ಭದಲ್ಲಿ ಜನ್ಮತಳೆದಿರುವೆ. ॥ ೨೦ ॥ ನೀನು ಸದಾ ಭಗವಂತನಿಗೂ ಆತನ ಭಕ್ತರಿಗೂ ಅತ್ಯಂತ ಪ್ರಿಯನಾದವನು. ಅದಕ್ಕಾಗಿ ಭಗವಂತನು ಪರಂಧಾಮಕ್ಕೆ ತೆರಳುವಾಗ ನಿನಗೆ ಜ್ಞಾನೋಪದೇಶ ಮಾಡಬೇಕೆಂದು ನನಗೆ ಅಪ್ಪಣೆ ಮಾಡಿದನು. ॥ ೨೧ ॥ ಅದರಂತೆ ಈಗ ನಾನು ನಿನಗೆ ಭಗವಂತನು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳ ಕಾರ್ಯಕ್ಕಾಗಿ ತನ್ನ ಯೋಗಮಾಯೆಯ ಮೂಲಕ ವಿಸ್ತಾರಗೊಂಡ ಅವನ ವಿವಿಧವಾದ ಲೀಲೆಗಳನ್ನು ಕ್ರಮವಾಗಿ ವರ್ಣಿಸುತ್ತೇನೆ. ॥ ೨೨ ॥ ಈ ಜಗತ್ತಿನ ಸೃಷ್ಟಿಗೆ ಮೊದಲು ಎಲ್ಲ ಆತ್ಮಗಳಿಗೂ ಆತ್ಮನಾಗಿರುವ ಪೂರ್ಣಪರಮಾತ್ಮನೊಬ್ಬನೇ ಇದ್ದನು. ದೃಷ್ಟಾನೂ ಇರಲಿಲ್ಲ, ದೃಶ್ಯವೂ ಇರಲಿಲ್ಲ, ಸೃಷ್ಟಿಕಾಲದಲ್ಲಿ ಕಂಡುಬರುವ ವೃತ್ತಿಗಳ ಅನೇಕ ಭೇದಗಳೂ, ಅನೇಕತೆಗಳೂ ಅಲ್ಲಿರಲಿಲ್ಲ. ಆತನು ತನ್ನ ಇಚ್ಛೆಯಿಂದ ತಾನೊಬ್ಬನೇ ತಾನೇ-ತಾನಾಗಿದ್ದನು. ॥ ೨೩ ॥ ಅವನೇ ದೃಷ್ಟಾ ಆಗಿ ನೋಡತೊಡಗಿದರೆ ಅವನಿಗೆ ದೃಶ್ಯವಾವುದೂ ಕಂಡುಬರಲಿಲ್ಲ. ಏಕೆಂದರೆ ಆಗ ಅವನೇ ಅದ್ವಿತೀಯ ರೂಪದಲ್ಲಿದ್ದನು. ಇಂತಹ ಸ್ಥಿತಿಯಲ್ಲಿ ಅಪೂರ್ಣನಂತೆ ಎಂದು ಅವನಿಗೆ ನಿಸಿತು. ಆದರೆ ವಾಸ್ತವವಾಗಿ ಅವನು ಅಸತ್ತಾಗಿರಲಿಲ್ಲ. ಏಕೆಂದರೆ ಅವನ ಶಕ್ತಿಗಳು ಸುಪ್ತವಾಗಿದ್ದವು. ಆತನ ಜ್ಞಾನವೇನೂ ಲುಪ್ತವಾಗಿ ಇರಲಿಲ್ಲ. ॥ ೨೪ ॥ ಈ ದ್ರಷ್ಟಾ ಮತ್ತು ದೃಶ್ಯದ ಅನುಸಂಧಾನ ಮಾಡುವಂತಹ ಶಕ್ತಿಯೇ ಕಾರ್ಯಕಾರಣರೂಪೀ ಮಾಯೆಯು. ಓ ಮಹಾತ್ಮಾ! ಈ ಭಾವಾಭಾವರೂಪೀ ಅನಿರ್ವಚನೀಯ ಮಾಯೆಯ ಮೂಲಕವೇ ಭಗವಂತನು ಈ ವಿಶ್ವವನ್ನು ಸೃಷ್ಟಿಸಿದನು. ॥ ೨೫ ॥ ಕಾಲಶಕ್ತಿಯಿಂದ ಈ ತ್ರಿಗುಣಮಯ ಮಾಯೆಯಲ್ಲಿ ಕ್ಷೋಭೆಯುಂಟಾದಾಗ ಆ ಇಂದ್ರಿಯಾತೀತನಾದ ಚಿನ್ಮಯ ಪರಮಾತ್ಮನು ತನ್ನ ಅಂಶ ಪುರುಷರೂಪದಿಂದ ಅದರಲ್ಲಿ ಚಿದಾಭಾಸರೂಪೀ ಬೀಜವನ್ನು ಸ್ಥಾಪಿಸಿದನು. ॥ ೨೬ ॥ ಆಗ ಕಾಲದ ಪ್ರೇರಣೆಯಿಂದ ಆ ಅವ್ಯಕ್ತಮಾಯೆಯಿಂದ ಮಹತ್ತತ್ತ್ವ ಪ್ರಕಟವಾಯಿತು. ಅದು ತನ್ನಲ್ಲಿ ಸೂಕ್ಷ್ಮವಾಗಿ ಅಡಗಿದ್ದ ಪ್ರಪಂಚವನ್ನು ಪ್ರಕಾಶಗೊಳಿಸುವ ತತ್ತ್ವವು. ಅಜ್ಞಾನವನ್ನು ನಾಶಪಡಿಸುವುದರಿಂದ ಅದು 'ವಿಜ್ಞಾನಾತ್ಮಾ' ಎಂದೂ ಕರೆಯಲ್ಪಡುತ್ತದೆ. ॥ ೨೭ ॥ ಅನಂತರ ಭಗವಂತನ ಅಂಶ, ಗುಣ ಮತ್ತು ಕಾಲದ ಅಧೀನ ಆ ಮಹತ್ತತ್ತ್ವ ಭಗವಂತನ ದೃಷ್ಟಿಗೆ ಬಿದ್ದು, ಈ ವಿಶ್ವವನ್ನು ರಚಿಸುವುದಕ್ಕಾಗಿ ರೂಪಾಂತರಗೊಳಿಸಿಕೊಂಡಿತು. ॥ ೨೮ ॥ ಮಹತ್ತತ್ತ್ವವು ವಿಕಾರಗೊಂಡಾಗ ಅಹಂಕಾರ ತತ್ತ್ವವು ಉತ್ಪನ್ನಗೊಂಡಿತು. ಅದು ಕಾರ್ಯ (ಅಧಿಭೂತ), ಕಾರಣ (ಅಧ್ಯಾತ್ಮ),

ಮಹತ್ತತ್ತ್ವಾದ್ವಿಕುರ್ವಾಣಾದಹಂತತ್ತ್ವಂ ವ್ಯಜಾಯತ ।
ಕಾರ್ಯಕಾರಣಕರ್ತ್ರಾತ್ಮಾ ಭೂತೇಂದ್ರಿಯಮನೋಮಯಃ ॥ ೨೯ ॥

ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧಾ ।
ಅಹಂತತ್ತ್ವಾದ್ವಿಕುರ್ವಾಣಾನ್ಮನೋ ವೈಕಾರಿಕಾದಭೂತ್ ।
ವೈಕಾರಿಕಾಶ್ಚ ಯೇ ದೇವಾ ಅರ್ಥಾಭಿವ್ಯಂಜನಂ ಯತಃ ॥ ೩೦ ॥

ತೈಜಸಾನೀಂದ್ರಿಯಾಣ್ಯೇವ ಜ್ಞಾನಕರ್ಮಮಯಾನಿ ಚ ।
ತಾಮಸೋ ಭೂತಸೂಕ್ಷ್ಮಾದಿರ್ಯತಃ ಖಂ ಲಿಂಗಮಾತ್ಮನಃ ॥ ೩೧ ॥

ಕಾಲಮಾಯಾಂಶಯೋಗೇನ ಭಗವದ್ವೀಕ್ಷಿತಂ ನಭಃ ।
ನಭಸೋಽನುಸೃತಂ ಸ್ಪರ್ಶಂ ವಿಕುರ್ವನ್ನಿರ್ಮಮೇಽನಿಲಮ್ ॥ ೩೨ ॥

ಅನಿಲೋಽಪಿ ವಿಕುರ್ವಾಣೋ ನಭಸೋರುಬಲಾನ್ವಿತಃ ।
ಸಸರ್ಜ ರೂಪತನ್ಮಾತ್ರಂ ಜ್ಯೋತಿರ್ಲೋಕಸ್ಯ ಲೋಚನಮ್ ॥ ೩೩ ॥

ಅನಿಲೇನಾನ್ವಿತಂ ಜ್ಯೋತಿರ್ವಿಕುರ್ವತ್ಪರವೀಕ್ಷಿತಮ್ ।
ಆಧತ್ತಾಂಭೋ ರಸಮಯಂ ಕಾಲಮಾಯಾಂಶಯೋಗತಃ ॥ ೩೪ ॥

ಜ್ಯೋತಿಷಾಂಭೋಽನುಸಂಸೃಷ್ಟಂ ವಿಕುರ್ವದ್ಬ್ರಹ್ಮವೀಕ್ಷಿತಮ್ ।
ಮಹೀಂ ಗಂಧಗುಣಾಮಾಧಾತ್ಕಾಲಮಾಯಾಂಶಯೋಗತಃ ॥ ೩೫ ॥

ಭೂತಾನಾಂ ನಭಆದೀನಾಂ ಯದ್ಯದ್ಭವ್ಯಾವರಾವರಮ್ ।
ತೇಷಾಂ ಪರಾನುಸಂಸರ್ಗಾದ್ಯಥಾಸಂಖ್ಯಂ ಗುಣಾನ್ವಿದುಃ ॥ ೩೬ ॥

ಏತೇ ದೇವಾಃ ಕಲಾ ವಿಷ್ಣೋಃ
ಕಾಲಮಾಯಾಂಶಲಿಂಗಿನಃ ।
ನಾನಾತ್ವಾತ್ಸ್ವಕ್ರಿಯಾನೀಶಾಃ
ಪ್ರೋಚುಃ ಪ್ರಾಂಜಲಯೋ ವಿಭುಮ್ ॥ ೩೭ ॥

*ದೇವಾ ಊಚುಃ*

ನಮಾಮ ತೇ ದೇವ ಪದಾರವಿಂದಂ
ಪ್ರಪನ್ನ ತಾಪೋಪಶಮಾತಪತ್ರಮ್ ।
ಯನ್ಮೂಲಕೇತಾ ಯತಯೋಽಂಜಸೋರು
ಸಂಸಾರದುಃಖಂ ಬಹಿರುತ್ಕ್ಷಿಪಂತಿ ॥ ೩೮ ॥

ಧಾತರ್ಯದಸ್ಮಿನ್ಭವ ಈಶ ಜೀವಾ-
ಸ್ತಾಪತ್ರಯೇಣೋಪಹತಾ ನ ಶರ್ಮ ।
ಆತ್ಮನ್ಲ್ಲಭಂತೇ ಭಗವಂಸ್ತವಾಂಘ್ರಿ-
ಚ್ಛಾಯಾಂ ಸವಿದ್ಯಾಮತ ಆಶ್ರಯೇಮ ॥ ೩೯ ॥

ಕರ್ತೃ (ಅಧಿದೈವ) ಎಂಬ ಮೂರು ರೂಪಗಳಿಂದ ಕ್ರಮವಾಗಿ ಭೂತ, ಇಂದ್ರಿಯ ಮತ್ತು ಮನಸ್ಸಿನ ಕಾರಣವಾಗಿದೆ. ॥ ೨೯ ॥ ಆ ಅಹಂಕಾರವು ವೈಕಾರಿಕ (ಸಾತ್ತ್ವಿಕ) ತೈಜಸ (ರಾಜಸ) ಮತ್ತು ತಾಮಸ ಎಂಬ ಭೇದದಿಂದ ಮೂರು ಪ್ರಕಾರದ್ದಾಗಿದೆ. ಅವುಗಳಲ್ಲಿ ಸಾತ್ತ್ವಿಕ ಅಹಂಕಾರದಿಂದ ಮನಸ್ಸು ಮತ್ತು ಯಾವುದರಿಂದ ವಿಷಯಗಳ ಜ್ಞಾನ ಉಂಟಾಗುತ್ತದೋ ಆ ಇಂದ್ರಿಯಗಳ ಅಧಿಷ್ಠಾನ ದೇವತೆಗಳು ಉಂಟಾದವು. ॥ ೩೦ ॥ ತೈಜಸ ಅಹಂಕಾರದಿಂದ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳಾದುವು. ತಾಮಸಾಹಂಕಾರದಿಂದ ಸೂಕ್ಷ್ಮ ಭೂತಗಳ ಕಾರಣ ಶಬ್ದ ತನ್ಮಾತ್ರೆಯು ಉಂಟಾಯಿತು. ಅದರಿಂದ (ಪರಮಾತ್ಮನಿಗೆ ದೃಷ್ಟಾಂತವಾಗಿ ಹೇಳಲ್ಪಟ್ಟಿರುವ) ಆಕಾಶದ ತತ್ತ್ವವು ಹುಟ್ಟಿತು. ॥ ೩೧ ॥ ಭಗವಂತನ ದೃಷ್ಟಿಯು ಆಕಾಶದ ಮೇಲೆ ಬೀಳಲು ಅದರಿಂದ ಮತ್ತೆ ಕಾಲ, ಮಾಯೆ, ಚಿದಂಶಗಳ ಯೋಗದಿಂದ ಸ್ಪರ್ಶತನ್ಮಾತ್ರೆಯು ಉಂಟಾಯಿತು. ಅದು ವಿಕಾರಗೊಂಡಾಗ ವಾಯುವು ಉತ್ಪನ್ನವಾಯಿತು. ॥ ೩೨ ॥ ಮಹಾಬಲಶಾಲಿಯಾದ ವಾಯುವು ಆಕಾಶದೊಡನೆ ವಿಕಾರಗೊಂಡಾಗ ರೂಪತನ್ಮಾತ್ರೆಯು ಉಂಟಾಯಿತು. ಅದರಿಂದ ಜಗತ್ತಿಗೆ ಪ್ರಕಾಶವನ್ನು ನೀಡುವ ತೇಜಸ್ಸು ಉತ್ಪನ್ನವಾಯಿತು. ॥ ೩೩ ॥ ಮತ್ತೆ ಪರಮಾತ್ಮನ ದೃಷ್ಟಿಗೆ ಪಾತ್ರವಾಗಿ ವಾಯುಸಹಿತ ತೇಜಸ್ಸು, ಕಾಲ, ಮಾಯೆ, ಮತ್ತು ಚಿದಂಶಗಳ ಯೋಗದಿಂದ ವಿಕಾರಗೊಂಡು ರಸತನ್ಮಾತ್ರೆಯ ಕಾರ್ಯವಾದ ಜಲತತ್ತ್ವವನ್ನು ನಿರ್ಮಾಣಮಾಡಿತು. ॥ ೩೪ ॥ ಅನಂತರ ಜಲವು ತೇಜಸ್ಸಿನೊಡನೆ ಸೇರಿ ಬ್ರಹ್ಮನ ದೃಷ್ಟಿಪಾತದಿಂದ ಕಾಲ, ಮಾಯೆ ಮತ್ತು ಚಿದಂಶಗಳ ಯೋಗದಿಂದ ಗಂಧಗುಣವುಳ್ಳ ಪೃಥ್ವಿಯನ್ನು ಉಂಟುಮಾಡಿತು. ॥ ೩೫ ॥ ವಿದುರನೇ ! ಆಕಾಶವೇ ಮುಂತಾದ ಪಂಚಭೂತಗಳಲ್ಲಿ ಉತ್ತರೋತ್ತರ ಭೂತಗಳಲ್ಲಿ ಕ್ರಮವಾಗಿ ಅವುಗಳ ಹಿಂದು-ಹಿಂದಿನ ಭೂತಗಳ ಗುಣಗಳೂ ಅನುವರ್ತಿಸುತ್ತವೆಯೆಂದು ತಿಳಿಯಬೇಕು. ॥ ೩೬ ॥ ಆ ಮಹತ್ತತ್ತ್ವಾದಿಗಳಿಗೆ ಅಭಿಮಾನಿಗಳಾಗಿ ವಿಕಾರ, ವಿಕ್ಷೇಪ, ಮತ್ತು ಚೇತನಾಂಶ ವಿಶಿಷ್ಟರಾದ ದೇವಗಣಗಳೆಲ್ಲ ಶ್ರೀಭಗವಂತನ ಅಂಶಗಳೇ ಆಗಿದ್ದಾರೆ. ಆದರೆ ಬೇರೆ-ಬೇರೆಯಾಗಿ ಇರುವ ಕಾರಣ ವಿಶ್ವರಚನೆಯೆಂಬ ತಮ್ಮ ಕಾರ್ಯಗಳನ್ನು ಮಾಡಲು ವಿಫಲರಾದಾಗ ಅವರು ಕೈಮುಗಿದು ಭಗವಂತನನ್ನು ಹೀಗೆ ಪ್ರಾರ್ಥಿಸಿದರು. ॥ ೩೭ ॥

**ದೇವತೆಗಳು ಹೇಳುತ್ತಾರೆ** – ಓ ದೇವದೇವಾ ! ನಿನ್ನ ಪಾದಾರವಿಂದಗಳಿಗೆ ವಂದಿಸುತ್ತಿದ್ದೇವೆ. ಅವು ಶರಣುಬಂದ ಜೀವಿಗಳ ತಾಪವನ್ನು ಹೋಗಲಾಡಿಸುವುದಕ್ಕೆ ಕೊಡೆಗಳಂತಿವೆ. ಅವುಗಳ ಆಸರೆ ಪಡೆದರೆ ಯತಿಗಳು ಅನಂತ ಸಂಸಾರದುಃಖವನ್ನು ಸುಲಭವಾಗಿ ದೂರಕ್ಕೆ ಎಸೆದು ಬಿಡುತ್ತಾರೆ. ॥ ೩೮ ॥ ಓ ಸೃಷ್ಟಿಕರ್ತಾ ಜಗದೀಶ್ವರನೇ ! ಈ ಸಂಸಾರದಲ್ಲಿ ತಾಪತ್ರಯದಿಂದ ದುಃಖಿತರಾಗಿರುವ ಕಾರಣ ಜೀವಿಗಳಿಗೆ ಸ್ವಲ್ಪವೂ ಶಾಂತಿ ಸಿಗುತ್ತಿಲ್ಲ. ಆದ್ದರಿಂದ ನಾವು ನಿನ್ನ ಚರಣಗಳ ಜ್ಞಾನಮಯ ಛಾಯೆಯ ಆಶ್ರಯವನ್ನು ಪಡೆಯುತ್ತೇವೆ. ॥ ೩೯ ॥ ಮುನಿಗಳು ಏಕಾಂತದಲ್ಲಿ

ಮಾರ್ಗಂತಿ ಯತ್ತೇ ಮುಖಪದ್ಮನೀಡೈಃ
ಛಂದಃ ಸುಪರ್ಣೈರ್ಋಷಯೋ ವಿವಿಕ್ತೇ ।
ಯಸ್ಯಾಘಮರ್ಷೋದಸರಿದ್ವರಾಯಾಃ
ಪದಂ ಪದಂ ತೀರ್ಥಪದಃ ಪ್ರಪನ್ನಾಃ ॥ ೪೦ ॥

ಯಚ್ಛ್ರದ್ಧಯಾ ಶ್ರುತವತ್ಯಾ ಚ ಭಕ್ತ್ಯಾ
ಸಂಮೃಜ್ಯಮಾನೇ ಹೃದಯೇಽವಧಾಯ ।
ಜ್ಞಾನೇನ ವೈರಾಗ್ಯಬಲೇನ ಧೀರಾ
ವ್ರಜೇಮ ತತ್ತೇಽಂಘ್ರಿಸರೋಜಪೀಠಮ್ ॥ ೪೧ ॥

ವಿಶ್ವಸ್ಯ ಜನ್ಮಸ್ಥಿತಿಸಂಯಮಾರ್ಥೇ
ಕೃತಾವತಾರಸ್ಯ ಪದಾಂಬುಜಂ ತೇ ।
ವ್ರಜೇಮ ಸರ್ವೇ ಶರಣಂ ಯದೀಶ
ಸ್ಮೃತಂ ಪ್ರಯಚ್ಛತ್ಯಭಯಂ ಸ್ವಪುಂಸಾಮ್ ॥ ೪೨ ॥

ಯತ್ಸಾನುಬಂಧೇಽಸತಿ ದೇಹಗೇಹೇ
ಮಮಾಹಮಿತ್ಯೂಢದುರಾಗ್ರಹಾಣಾಮ್ ।
ಪುಂಸಾಂ ಸುದೂರಂ ವಸತೋಽಪಿ ಪುರ್ಯಾಂ
ಭಜೇಮ ತತ್ತೇ ಭಗವನ್ಪದಾಬ್ಜಮ್ ॥ ೪೩ ॥

ತಾನ್ ವೈಹ್ಯಸದ್ವೃತ್ತಿಭಿರಕ್ಷಿಭಿರ್ಯೇ
ಪರಾಹೃತಾಂತರ್ಮನಸಃ ಪರೇಶ ।
ಅಥೋ ನ ಪಶ್ಯಂತ್ಯುರುಗಾಯ ನೂನಂ
ಯೇ ತೇ ಪದನ್ಯಾಸವಿಲಾಸಲಕ್ಷ್ಮ್ಯಾಃ ॥ ೪೪ ॥

ಪಾನೇನ ತೇ ದೇವ ಕಥಾಸುಧಾಯಾಃ
ಪ್ರವೃದ್ಧಭಕ್ತ್ಯಾ ವಿಶದಾಶಯಾ ಯೇ ।
ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ
ಯಥಾಂಜಸಾನ್ವೀಯುರಕುಂಠಧಿಷ್ಣ್ಯಮ್ ॥ ೪೫ ॥

ತಥಾಪರೇ ಚಾತ್ಮಸಮಾಧಿಯೋಗ-
ಬಲೇನ ಜಿತ್ವಾ ಪ್ರಕೃತಿಂ ಬಲಿಷ್ಠಾಮ್ ।
ತ್ವಾಮೇವ ಧೀರಾಃ ಪುರುಷಂ ವಿಶಂತಿ
ತೇಷಾಂ ಶ್ರಮಃ ಸ್ಯಾನ್ನ ತು ಸೇವಯಾ ತೇ ॥ ೪೬ ॥

ತತ್ತೇ ವಯಂ ಲೋಕಸಿಸೃಕ್ಷಯಾಽಽದ್ಯ
ತ್ವಯಾನುಸೃಷ್ಟಾಸ್ತ್ರಿಭಿರಾತ್ಮಭಿಃ ಸ್ಮ ।
ಸರ್ವೇ ವಿಯುಕ್ತಾಃ ಸ್ವವಿಹಾರತಂತ್ರಂ
ನ ಶಕ್ನುಮಸ್ತತ್ಪ್ರತಿಹರ್ತವೇ ತೇ ॥ ೪೭ ॥

ಕುರಿತು ನಿನ್ನ ಮುಖಕಮಲದ ಆಶ್ರಯದಲ್ಲಿರುವ ವೇದಮಂತ್ರಗಳೆಂಬ ಪಕ್ಷಿಗಳ ಸಹಾಯದಿಂದ ಯಾವುದನ್ನು ಅರಸುತ್ತಿರುವರೋ ಮತ್ತು ಯಾವುದು ಸಮಸ್ತ ಪಾಪಗಳನ್ನೂ ನಾಶಗೊಳಿಸುವ ದೇವನದಿಯಾದ ಗಂಗೆಯ ಉತ್ಪತ್ತಿಸ್ಥಾನವಾಗಿದೆಯೋ ಅಂತಹ ನಿನ್ನ ಪರಮಪಾವನವಾದ ಪಾದಪದ್ಮಗಳನ್ನು ನಾವು ಆಶ್ರಯಿಸುತ್ತೇವೆ. ॥ ೪೦ ॥ ಧೀರರಾದ ಯೋಗೀಶ್ವರರು ಯಾವುದನ್ನು ಶ್ರದ್ಧೆ ಮತ್ತು ಶ್ರವಣ-ಕೀರ್ತನರೂಪವಾದ ಭಕ್ತಿಯಿಂದ ಶುದ್ಧವಾದ ತಮ್ಮ ಅಂತಃಕರಣದಲ್ಲಿ ಧರಿಸಿಕೊಂಡು ಜ್ಞಾನವೈರಾಗ್ಯಗಳ ಬಲದಿಂದ ಮುಕ್ತಿಯನ್ನು ಪಡೆಯುತ್ತಾರೋ ಅಂತಹ ನಿನ್ನ ಪಾದಗಳ ಪೀಠವನ್ನು ನಾವು ಆಶ್ರಯಿಸುತ್ತೇವೆ. ॥ ೪೧ ॥ ಪ್ರಭೋ! ನೀನು ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳಿಗಾಗಿಯೇ ಅವತರಿಸುತ್ತೀಯೆ. ಆದುದರಿಂದ ನಾವೆಲ್ಲರೂ ಸ್ಮರಿಸುವ ಭಕ್ತರಿಗೆ ಅಭಯವನ್ನೀಯುವ ನಿನ್ನ ಆ ಅಡಿದಾವರೆಗಳನ್ನು ಶರಣುಹೊಂದುತ್ತೇವೆ. ॥ ೪೨ ॥ ನೀನು ಸಮಸ್ತ ಮನುಷ್ಯರ ಹೃದಯಗಳಲ್ಲಿ ಅಂತರ್ಯಾಮಿಯಾಗಿ ವಾಸ ಮಾಡುತ್ತಿದ್ದರೂ ಯಾರು ಮನೆ-ಮಡದಿ-ಮಕ್ಕಳು-ದೇಹ ಮುಂತಾದವುಗಳಲ್ಲಿ ಹಾಗೂ ಅವುಗಳೊಂದಿಗೆ ಸಂಬಂಧವಿರಿಸುವ ಬೇರೆ ತುಚ್ಛ ಪದಾರ್ಥಗಳಲ್ಲಿ 'ನಾನು, ನನ್ನದು' ಎಂಬ ದುರಾಗ್ರಹವಿರಿಸಿಕೊಂಡವರಿಗೆ ಅತ್ಯಂತದೂರವಾದ ನಿನ್ನ ಚರಣಾರವಿಂದಗಳನ್ನು ನಾವು ಭಜಿಸುತ್ತೇವೆ. ॥ ೪೩ ॥ ಪರಮ ಯಶಸ್ವೀ ಪರಮೇಶ್ವರನೇ! ಇಂದ್ರಿಯಗಳ ವಿಷಯಗಳಿಗೆ ಅಭಿಮುಖವಾಗಿರುವುದರಿಂದ ಯಾರ ಮನಸ್ಸು ಸದಾ ಹೊರಗಡೆಯೇ ಅಲೆಯುತ್ತಿರುವುದೋ, ಅಂತಹ ಪಾಮರ ಜನರು ನಿನ್ನ ಶ್ರೀಪಾದ ವಿನ್ಯಾಸದ ಕಾಂತಿಯನ್ನು ವಿಶೇಷವಾಗಿ ಅರಿತಿರುವ ಭಕ್ತಜನರ ದರ್ಶನವನ್ನು ಪಡೆಯುವುದಿಲ್ಲ. ಆದರಿಂದ ಅವರು ನಿನ್ನ ಚರಣಾರವಿಂದಗಳಿಂದ ದೂರವಾಗಿದ್ದಾರೆ. ॥ ೪೪ ॥ ಪ್ರಭೋ! ನಿನ್ನ ಕಥಾಮೃತಪಾನದಿಂದ ಉಕ್ಕಿಬರುವ ಭಕ್ತಿಯಿಂದ ಯಾರ ಅಂತಃಕರಣವು ನಿರ್ಮಲವಾಗಿ ಬಿಟ್ಟಿದೆಯೋ, ಅಂತಹವರು ವೈರಾಗ್ಯಸಾರವಾದ ಆತ್ಮಜ್ಞಾನವನ್ನು ಪಡೆದು ಆಯಾಸವಿಲ್ಲದೆಯೇ ವೈಕುಂಠಧಾಮವನ್ನು ಹೊಂದಿಬಿಡುವರು. ॥ ೪೫ ॥ ಅಂತೆಯೇ ಕೆಲವು ಧೀರರು ಚಿತ್ತವೃತ್ತಿ ನಿರೋಧರೂಪವಾದ ಸಮಾಧಿಯ ಬಲದಿಂದ ನಿನ್ನ ಪ್ರಬಲ ಮಾಯೆಯನ್ನು ದಾಟಿ ನಿನ್ನಲ್ಲಿ ಲೀನರಾಗುತ್ತಾರೆ. ಆದರೆ ಅವರಿಗೆ ತುಂಬಾ ಶ್ರಮವಿರುತ್ತದೆ. ನಿನ್ನ ಭಕ್ತಿಮಾರ್ಗದಲ್ಲಾದರೋ ಯಾವ ಕಷ್ಟವೂ ಇಲ್ಲ. ॥ ೪೬ ॥

ಓ ಆದಿದೇವನೇ! ಪ್ರಪಂಚದ ಸೃಷ್ಟಿಗಾಗಿ ನೀನು ನಮ್ಮನ್ನು ತ್ರಿಗುಣಮಯರನ್ನಾಗಿ ಸೃಷ್ಟಿಸಿರುವೆ. ಆದರೆ ನಮ್ಮೆಲ್ಲರ ಸ್ವಭಾವವು ಬೇರೆ-ಬೇರೆಯಾದ್ದರಿಂದ ಪರಸ್ಪರ ಸಾಮ್ಯವಿಲ್ಲ. ಆದ್ದರಿಂದ ನಾವು ಒಟ್ಟಿಗೆ ಸೇರಿ ನಿನ್ನ ಕ್ರೀಡೆಗಾಗಿ ಲೋಕಸೃಷ್ಟಿಯನ್ನು ಮಾಡಿ ನಿನಗೆ ಸಮರ್ಪಿಸಲು ಅಸಮರ್ಥರಾಗಿದ್ದೇವೆ. ॥ ೪೭ ॥ ಆದ್ದರಿಂದ ಜನ್ಮರಹಿತನಾದ ಭಗವಂತನೇ! ಯಾವುದರಿಂದ ನಾವು ಬ್ರಹ್ಮಾಂಡವನ್ನು ರಚಿಸಿ ನಿನಗೆ ಸಮಸ್ತ ಪೂಜೆಗಳನ್ನು ಸಮರ್ಪಿಸಲು ಸಮರ್ಥರಾಗುವೆವು ? ಅನ್ನವನ್ನೂ ಪಡೆದು ಜೀವಿಸುವೆವು ? ಮತ್ತು ಈ ಸಮಸ್ತ ಜೀವಿಗಳೂ ಕೂಡ ಎಲ್ಲ ವಿಘ್ನಗಳಿಂದಲೂ ದೂರವಾಗಿದ್ದು

ಯಾವದ್ಬಲಿಂ ತೇಽಜ ಹರಾಮ ಕಾಲೇ
ಯಥಾ ವಯಂ ಚಾನ್ನಮದಾಮ ಯತ್ರ ।
ಯಥೋಭಯೇಷಾಂ ತ ಇಮೇ ಹಿ ಲೋಕಾ
ಬಲಿಂ ಹರಂತೋಽನ್ನ ಮದಂತ್ಯನೂಹಾಃ ॥ ೪೮ ॥

ತ್ವಂ ನಃ ಸುರಾಣಾಮಸಿ ಸಾನ್ವಯಾನಾಂ
ಕೂಟಸ್ಥ ಆದ್ಯಃ ಪುರುಷಃ ಪುರಾಣಃ ।
ತ್ವಂ ದೇವ ಶಕ್ತ್ಯಾಂ ಗುಣಕರ್ಮಯೋನೌ
ರೇತಸ್ತ್ವಜಾಯಾಂ ಕವಿಮಾದಧೇಽಜಃ ॥ ೪೯ ॥

ತತೋ ವಯಂ ಸತ್ಪ್ರಮುಖಾ ಯದರ್ಥೇ
ಬಭೂವಿಮಾತ್ಮನ್ಕರವಾಮ ಕಿಂ ತೇ ।
ತ್ವಂ ನಃ ಸ್ವಚಕ್ಷುಃ ಪರಿದೇಹಿ ಶಕ್ತ್ಯಾ
ದೇವ ಕ್ರಿಯಾರ್ಥೇ ಯದನುಗ್ರಹಾಣಾಮ್ ॥ ೫೦ ॥

ನಮಗೂ ಹಾಗೂ ನಿನಗೂ ಸೇವೆಗಳನ್ನೂ ಸಮರ್ಪಿಸುತ್ತಾ ತಮ್ಮ-ತಮ್ಮ ಆಹಾರಗಳನ್ನು ಸೇವಿಸಲು ಸಮರ್ಥವಾದಾವು ? ಅಂತಹ ಯಾವುದಾದರೂ ಉಪಾಯವನ್ನು ಮಾಡು. ॥ ೪೮ ॥ ಓ ಭಗವಂತಾ ! ವಿಕಾರರಹಿತನಾದ ಪುರಾಣಪುರುಷನಾದ ನೀನೇ ಇತರ ಕಾರ್ಯವರ್ಗಗಳಿಂದೊಡಗೂಡಿದ ದೇವತೆಗಳಾದ ನಮಗೆಲ್ಲರಿಗೂ ಆದಿಕಾರಣನಾಗಿರುವೆ. ಜನ್ಮರಹಿತನಾದ ನೀನು ಹೀಗೆ ಸತ್ತ್ವಾದಿಗುಣ ಮತ್ತು ಜನ್ಮಾದಿಕರ್ಮಗಳ ಕಾರಣರೂಪೀ ಮಾಯಾಶಕ್ತಿಯಲ್ಲಿ ಚಿದಂಶರೂಪವಾದ ವೀರ್ಯವನ್ನು ಸ್ಥಾಪಿಸಿದ್ದೆ. ॥ ೪೯ ॥ ಓ ಪರಮಾತ್ಮಾ ! ಮಹತ್ತತ್ತ್ವಾದಿರೂಪೀ ದೇವಗಣ ಗಳಿಂದ ನಾವು ಯಾವ ಕಾರ್ಯಕ್ಕಾಗಿ ಸೃಷ್ಟಿಸಲ್ಪಟ್ಟಿರುವೆವೋ, ಇದರ ಸಂಬಂಧವಾಗಿ ನಾವು ಏನು ಮಾಡಬೇಕು ? ದೇವಾ ! ನಮ್ಮ ಮೇಲೆ ನೀನೇ ಅನುಗ್ರಹ ಬೀರುವಂತಹವನು. ಆದಕ್ಕಾಗಿ ಬ್ರಹ್ಮಾಂಡ ರಚನೆಗಾಗಿ ನೀನು ನಮಗೆ ನಿನ್ನ ಅದ್ಭುತವಾದ ಕ್ರಿಯಾ ಶಕ್ತಿಗಳೊಡನೆ ನಿನ್ನ ದಿವ್ಯವಾದ ಜ್ಞಾನಶಕ್ತಿಯನ್ನು ಕರುಣಿಸು. ॥ ೫೦ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಪಂಚಮೋಽಧ್ಯಾಯಃ ॥ ೫ ॥**

# ಆರನೆಯ ಅಧ್ಯಾಯ

## ವಿರಾಟ್‌ಶರೀರದ ಉತ್ಪತ್ತಿ

*ಋಷಿರುವಾಚ*

ಇತಿ ತಾಸಾಂ ಸ್ವಶಕ್ತೀನಾಂ ಸತೀನಾಮಸಮೇತ್ಯ ಸಃ ।
ಪ್ರಸುಪ್ತಲೋಕತಂತ್ರಾಣಾಂ ನಿಶಾಮ್ಯ ಗತಿಮೀಶ್ವರಃ ॥ ೧ ॥

ಕಾಲಸಂಜ್ಞಾಂ ತದಾ ದೇವೀಂ ಬಿಭ್ರಚ್ಛಕ್ತಿಮುರುಕ್ರಮಃ ।
ತ್ರಯೋವಿಂಶತಿತತ್ತ್ವಾನಾಂ ಗಣಂ ಯುಗಪದಾವಿಶತ್ ॥ ೨ ॥

ಸೋಽನುಪ್ರವಿಷ್ಟೋ ಭಗವಾಂಶ್ಚೇಷ್ಟಾರೂಪೇಣ ತಂ ಗಣಮ್ ।
ಭಿನ್ನಂ ಸಂಯೋಜಯಾಮಾಸ ಸುಪ್ತಂ ಕರ್ಮ ಪ್ರಬೋಧಯನ್ ॥ ೩ ॥

ಪ್ರಬುದ್ಧ ಕರ್ಮಾ ದೈವೇನ ತ್ರಯೋವಿಂಶತಿಕೋ ಗಣಃ ।
ಪ್ರೇರಿತೋಽಜನಯತ್ಸ್ವಾಭಿರ್ಮಾತ್ರಾಭಿರಧಿಪೂರುಷಮ್ ॥ ೪ ॥

ಪರೇಣ ವಿಶತಾ ಸ್ವಸ್ಮಿನ್ಮಾತ್ರಯಾ ವಿಶ್ವಸೃಗ್ಗಣಃ ।
ಚುಕ್ಷೋಭಾನ್ಯೋನ್ಯಮಾಸಾದ್ಯ ಯಸ್ಮಿಲ್ಲೋಕಾಶ್ಚರಾಚರಾಃ ॥ ೫ ॥

ಮೈತ್ರೇಯ ಮಹರ್ಷಿಗಳು ಹೇಳಿದರು – ಮಹಾತ್ಮನಾದ ವಿದುರನೇ ! ತನ್ನ ಮಹತ್ತತ್ತ್ವವೇ ಮುಂತಾದ ಶಕ್ತಿಗಳು ಹೀಗೆ ಒಂದಕ್ಕೊಂದು ಸೇರದೆ ಬೇರೆಯಾಗಿದ್ದ ಕಾರಣ ಸೃಷ್ಟಿಕಾರ್ಯವನ್ನು ಮುಂದರಿಸಲು ಅಸಮರ್ಥವಾಗಿದ್ದುದನ್ನು ಕಂಡು ಆ ಸರ್ವಶಕ್ತನಾದ ಭಗವಂತನು ಕಾಲಶಕ್ತಿಯನ್ನು ಸ್ವೀಕರಿಸಿ ಮಹತ್ತತ್ತ್ವ, ಅಹಂಕಾರ, ಪಂಚಭೂತ, ಪಂಚತನ್ಮಾತ್ರೆಗಳು, ಮನಸ್ಸು ಸಹಿತ ಹನ್ನೊಂದು ಇಂದ್ರಿಯಗಳು ಈ ಇಪ್ಪತ್ತಮೂರು ತತ್ತ್ವಗಳ ಸಮುದಾಯವನ್ನು ಒಟ್ಟಿಗೆ ಒಳಹೊಕ್ಕನು. ॥ ೧-೨ ॥ ಹೀಗೆ ಒಳಹೊಕ್ಕು ಮಹಾಪ್ರಭುವು ಪ್ರಸುಪ್ತವಾಗಿದ್ದ ಜೀವಿಗಳ ಅದೃಷ್ಟ ಕರ್ಮಗಳನ್ನು ಎಚ್ಚರಗೊಳಿಸಿ ಮತ್ತೆ ಪರಸ್ಪರ ದೂರವಾಗಿದ್ದ ಆ ತತ್ತ್ವಸಮೂಹವನ್ನು ತನ್ನ ಕ್ರಿಯಾಶಕ್ತಿಯ ಮೂಲಕ ಒಂದುಗೂಡಿಸಿದನು. ॥ ೩ ॥ ಹೀಗೆ ಭಗವಂತನು ಅದೃಷ್ಟವನ್ನು ಕಾರ್ಯೋನ್ಮುಖಗೊಳಿಸಿದಾಗ ಆ ಇಪ್ಪತ್ತಮೂರು ತತ್ತ್ವಗಳ ಸಮೂಹವು ಭಗವಂತನ ಪ್ರೇರಣೆಯಿಂದ ತಮ್ಮ ಅಂಶಗಳಿಂದ ಅಧಿಪುರುಷ-ವಿರಾಟ್‌ಪುರುಷನನ್ನು ಸೃಷ್ಟಿಸಿದವು. ॥ ೪ ॥ ಅರ್ಥಾತ್-ಭಗವಂತನು ಅಂಶರೂಪದಿಂದ ತನ್ನ ಆ ಶರೀರದಲ್ಲಿ ಪ್ರವೇಶಿಸಿದಾಗ ಆ ವಿಶ್ವರಚನೆ ಮಾಡುವ ಮಹತ್ತತ್ತ್ವಾದಿ ಸಮುದಾಯವು ಒಂದರೊಳಗೆ ಒಂದು ಬೆರೆತು ಪರಿಣಾಮಹೊಂದಿತು. ಈ ತತ್ತ್ವಗಳ ಪರಿಣಾಮವೇ ವಿರಾಟ್ ಪುರುಷನಾಗಿದ್ದಾನೆ. ಅದರಲ್ಲೇ ಚರಾಚರ ಜಗತ್ತು ಇರುವುದು. ॥ ೫ ॥ ಆ ಹಿರಣ್ಮಯನಾದ ವಿರಾಟ್‌ಪುರುಷನು ಸಮಸ್ತ ಜೀವ

ಹಿರಣ್ಮಯಃ ಸ ಪುರುಷಃ ಸಹಸ್ರಪರಿವತ್ಸರಾನ್ ।
ಆಂಡಕೋಶ ಉವಾಸಾಪ್ಸು ಸರ್ವಸತ್ತ್ವೋಪಬೃಂಹಿತಃ ॥ ೬ ॥

ಸ ವೈ ವಿಶ್ವಸೃಜಾಂ ಗರ್ಭೋ ದೇವಕರ್ಮಾತ್ಮಶಕ್ತಿಮಾನ್ ।
ವಿಬಭಾಜಾತ್ಮನಾಽಽತ್ಮಾನಮೇಕಧಾ ದಶಧಾ ತ್ರಿಧಾ ॥ ೭ ॥

ಏಷ ಹ್ಯಶೇಷಸತ್ತ್ವಾನಾಮಾತ್ಮಾಂಶಃ ಪರಮಾತ್ಮನಃ ।
ಆದ್ಯೋಽವತಾರೋ ಯತ್ರಾಸೌ ಭೂತಗ್ರಾಮೋ ವಿಭಾವ್ಯತೇ ॥ ೮ ॥

ಸಾಧ್ಯಾತ್ಮಃ ಸಾಧಿದೈವಶ್ಚ ಸಾಧಿಭೂತ ಇತಿ ತ್ರಿಧಾ ।
ವಿರಾಟ್ ಪ್ರಾಣೋ ದಶವಿಧ ಏಕಧಾ ಹೃದಯೇನ ಚ ॥ ೯ ॥

ಸ್ಮರನ್ ವಿಶ್ವಸೃಜಾಮೀಶೋ ವಿಜ್ಞಾಪಿತಮಧೋಕ್ಷಜಃ।
ವಿರಾಜಮತಪತ್ ಸ್ವೇನ ತೇಜಸೈಷಾಂ ವಿವೃತ್ತಯೇ ॥ ೧೦ ॥

ಅಥ ತಸ್ಯಾಭಿತಪ್ತಸ್ಯ ಕತಿ ಚಾಯತನಾನಿ ಹ ।
ನಿರಭಿದ್ಯಂತ ದೇವಾನಾಂ ತಾನಿ ಮೇ ಗದತಃ ಶೃಣು ॥ ೧೧ ॥

ತಸ್ಯಾಗ್ನಿರಾಸ್ಯಂ ನಿರ್ಭಿನ್ನಂ ಲೋಕಪಾಲೋಽವಿಶತ್ಪದಮ್ ।
ವಾಚಾ ಸ್ವಾಂಶೇನ ವಕ್ತವ್ಯಂ ಯಯಾಸೌ ಪ್ರತಿಪದ್ಯತೇ ॥ ೧೨ ॥

ನಿರ್ಭಿನ್ನಂ ತಾಲು ವರುಣೋ ಲೋಕಪಾಲೋಽವಿಶದ್ಧರೇಃ ।
ಜಿಹ್ವಯಾಂಶೇನ ಚ ರಸಂ ಯಯಾಸೌ ಪ್ರತಿಪದ್ಯತೇ ॥ ೧೩ ॥

ನಿರ್ಭಿನ್ನೇ ಅಶ್ವಿನೌ ನಾಸೇ ವಿಷ್ಣೋರಾವಿಶತಾಂ ಪದಮ್ ।
ಘ್ರಾಣೇನಾಂಶೇನ ಗಂಧಸ್ಯ ಪ್ರತಿಪತ್ತಿರ್ಯತೋ ಭವೇತ್ ॥ ೧೪ ॥

ನಿರ್ಭಿನ್ನೇ ಅಕ್ಷಿಣೀ ತ್ವಷ್ಟಾ ಲೋಕಪಾಲೋಽವಿಶದ್ವಿಭೋಃ ।
ಚಕ್ಷುಷಾಂಶೇನ ರೂಪಾಣಾಂ ಪ್ರತಿಪತ್ತಿರ್ಯತೋ ಭವೇತ್ ॥ ೧೫ ॥

ನಿರ್ಭಿನ್ನಾನ್ಯಸ್ಯ ಚರ್ಮಾಣಿ ಲೋಕಪಾಲೋಽನಿಲೋಽವಿಶತ್ ।
ಪ್ರಾಣೇನಾಂಶೇನ ಸಂಸ್ಪರ್ಶಂ ಯೇನಾಸೌ ಪ್ರತಿಪದ್ಯತೇ ॥ ೧೬ ॥

ರಾಶಿಗಳನ್ನು ತನ್ನಲ್ಲಿರಿಸಿಕೊಂಡು ಜಲರಾಶಿಯ ಮಧ್ಯದಲ್ಲಿರುವ ಬ್ರಹ್ಮಾಂಡವೆಂಬ ಕೋಶದಲ್ಲಿ ಒಂದು ಸಾವಿರ ದಿವ್ಯವರ್ಷಗಳವರೆಗೆ ವಾಸಿಸುತ್ತಿದ್ದನು. ॥ ೬ ॥ ಅನಂತರ ಭಗವಂತನ ಜ್ಞಾನ, ಕ್ರಿಯೆ ಮತ್ತು ಆತ್ಮಶಕ್ತಿಗಳಿಂದ ಸಂಪನ್ನನಾದ ಆ ತತ್ತ್ವಗರ್ಭನಾದ ವಿರಾಟ್‌ಪುರುಷನು ತನ್ನನ್ನು ತಾನೇ ವಿಭಾಗ ಮಾಡಿಕೊಂಡನು. ಒಂದು ಹೃದಯರೂಪವಾಗಿಯೂ, ಹತ್ತುಪ್ರಾಣಗಳ ರೂಪವಾಗಿಯೂ, ಆಧ್ಯಾತ್ಮಿಕ, ಆಧಿದೈವಿಕ, ಆದಿಭೌತಿಕಗಳೆಂಬ ಮೂರು ರೀತಿಯಾಗಿ ವಿಭಾಗಿಸಿ ಕೊಂಡನು. ॥ ೭ ॥ ಈ ವಿರಾಟ್ ಪುರುಷನೇ ಪ್ರಥಮ ಜೀವನಾದ ಕಾರಣ ಸಮಸ್ತ ಜೀವರ ಆತ್ಮಾ ಜೀವರೂಪನಾದ್ದರಿಂದ ಪರಮಾತ್ಮನ ಅಂಶ ಮತ್ತು ಶ್ರೀಭಗವಂತನ ಮೊದಲನೆಯ ಅಭಿವ್ಯಕ್ತಿ ಆಗಿರುವುದರಿಂದ ಅವನ ಮೊದಲನೆಯ ಅವತಾರವಾಗಿದೆ. ಈ ಸಮಸ್ತ ಭೂತ ಸಮುದಾಯವು ಇದರಲ್ಲೇ ಪ್ರಕಾಶಗೊಳ್ಳುವುದು. ॥ ೮ ॥ ಇವನು ಆಧಾತ್ಮ, ಅಧಿಭೂತ, ಅಧಿದೈವರೂಪದಿಂದ ಮೂರು ಬಗೆಯಾಗಿಯೂ, ಪ್ರಾಣರೂಪದಿಂದ ಹತ್ತು ಬಗೆಯಾಗಿಯೂ, ಹೃದಯ ರೂಪದಿಂದ ಒಂದು* ಬಗೆಯಾಗಿಯೂ ಇರುವನೆಂದು ತಿಳಿಯಬೇಕು. ॥ ೯ ॥

ಮತ್ತೆ ವಿಶ್ವರಚನೆಯನ್ನು ಮಾಡುವ ಮಹತ್ತತ್ತ್ವಾದಿಗಳ ಅಧಿಪತಿಯಾದ ಶ್ರೀಭಗವಂತನು ಆ ತತ್ತ್ವಗಳ ಪ್ರಾರ್ಥನೆಯನ್ನು ನೆನೆದು ಅವುಗಳ ವೃತ್ತಿಗಳನ್ನು ಎಚ್ಚರಿಸಲಿಕ್ಕಾಗಿ ತನ್ನ ಚೈತನ್ಯ ರೂಪವಾದ ತೇಜಸ್ಸಿನಿಂದ ಆ ವಿರಾಟ್‌ಪುರುಷನನ್ನು ಪ್ರಕಾಶಿತಗೊಳಿಸಿ, ಎಚ್ಚರಿಸಿದನು. ॥ ೧೦ ॥ ಆತನು ಎಚ್ಚರಗೊಂಡೊಡನೆಯೇ ದೇವತೆಗಳಿಗೋಸ್ಕರ ಎಷ್ಟು ಸ್ಥಾನಗಳು ಪ್ರಕಟಗೊಂಡವು ಎಂಬುದನ್ನು ಹೇಳುತ್ತೇನೆ, ಕೇಳು. ॥ ೧೧ ॥ ಮೊಟ್ಟಮೊದಲಿಗೆ ಆ ವಿರಾಟ್ ಪುರುಷನ ಮುಖವು ಪ್ರಕಟವಾಯಿತು. ಅದರಲ್ಲಿ ಲೋಕಪಾಲನಾದ ಅಗ್ನಿಯು ತನ್ನ ಅಂಶವಾದ ವಾಗಿಂದ್ರಿಯದೊಡನೆ ಪ್ರವೇಶ ಮಾಡಿದನು. ಅದರಿಂದಲೇ ಈ ಜೀವವು ಮಾತನಾಡುತ್ತಾನೆ. ॥ ೧೨ ॥ ಮತ್ತೆ ವಿರಾಟ್‌ಪುರುಷನ ದವಡೆ ಉತ್ಪನ್ನವಾಯಿತು. ಅದರಲ್ಲಿ ಲೋಕಪಾಲನಾದ ವರುಣನು ತನ್ನ ಅಂಶ ರಸನೇಂದ್ರಿಯ ಸಹಿತ ಸ್ಥಿತನಾದನು. ಅದರಿಂದ ಜೀವವು ರಸಗಳನ್ನು ಗ್ರಹಿಸುತ್ತದೆ. ॥ ೧೩ ॥ ಇದಾದ ಬಳಿಕ ಆ ವಿರಾಟ್‌ಪುರುಷನ ಮೂಗು ಹೊಳ್ಳೆಗಳು ಪ್ರಕಟವಾದುವು. ಇಬ್ಬರು ಅಶ್ವಿನೀಕುಮಾರರು ತಮ್ಮ ಅಂಶವಾದ ಘ್ರಾಣೇಂದ್ರಿಯದೊಡನೆ ಅವುಗಳನ್ನು ಹೊಕ್ಕರು. ಅದರಿಂದ ಜೀವಿಯು ವಾಸನೆಯನ್ನು ಗ್ರಹಿಸುತ್ತದೆ. ॥ ೧೪ ॥ ಹೀಗೆಯೇ ಆ ವಿರಾಟ್‌ಪುರುಷನ ದೇಹದಲ್ಲಿ ಕಣ್ಣುಗಳು ಪ್ರಕಟಗೊಂಡಾಗ, ಅವುಗಳಲ್ಲಿ ತಮ್ಮ ಅಂಶನೇತ್ರೇಂದ್ರಿಯಸಹಿತ ಲೋಕಪತಿ ಸೂರ್ಯನು ಪ್ರವೇಶಿಸಿದನು. ಆ ನೇತ್ರೇಂದ್ರಿಯದಿಂದ ಜೀವನಿಗೆ ವಿವಿಧ ರೂಪಗಳ ಅರಿವು ಉಂಟಾಗುತ್ತದೆ. ॥ ೧೫ ॥ ಮತ್ತೆ ಆ ವಿರಾಟ್‌ಪುರುಷನಲ್ಲಿ ತ್ವಚೆ, ತೊಗಲು ಉತ್ಪನ್ನವಾಯಿತು. ಅದರಲ್ಲಿ ತನ್ನ ಅಂಶ ತ್ವಗಿಂದ್ರಿಯಸಹಿತ ಲೋಕಪಾಲನಾದ

* ಹತ್ತು ಇಂದ್ರಿಯಗಳೊಡನೆ ಮನಸ್ಸು ಅಧ್ಯಾತ್ಮವಾಗಿದೆ, ಇಂದ್ರಿಯಾದಿಗಳ ವಿಷಯಗಳು ಅಧಿಭೂತ, ಇಂದ್ರಿಯಗಳ ಅಧಿಷ್ಠಾತೃ ದೇವತೆಗಳು ಅಧಿದೈವವಾಗಿದೆ. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ಪ್ರಾಣಗಳು, ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯಗಳೆಂಬ ಐದು ಉಪಪ್ರಾಣಗಳು, ಹೀಗೆ ಒಟ್ಟಿಗೆ ಹತ್ತು ಪ್ರಾಣಗಳು.

ಕರ್ಣಾವಸ್ಯ ವಿನಿರ್ಭಿನ್ನೌ ಧಿಷ್ಣ್ಯಂ ಸ್ವಂ ವಿವಿಶುರ್ದಿಶಃ ।
ಶ್ರೋತ್ರೇಣಾಂಶೇನ ಶಬ್ದಸ್ಯ ಸಿದ್ಧಿಂ ಯೇನ ಪ್ರಪದ್ಯತೇ ॥ ೧೭ ॥

ತ್ವಚಮಸ್ಯ ವಿನಿರ್ಭಿನ್ನಾಂ ವಿವಿಶುರ್ಧಿಷ್ಣ್ಯಮೋಷಧೀಃ ।
ಅಂಶೇನ ರೋಮಭಿಃ ಕಂಡೂಂ ಯೈರಸೌ ಪ್ರತಿಪದ್ಯತೇ ॥ ೧೮ ॥

ಮೇಢ್ರಂ ತಸ್ಯ ವಿನಿರ್ಭಿನ್ನಂ ಸ್ವಧಿಷ್ಣ್ಯಂ ಕ ಉಪಾವಿಶತ್ ।
ರೇತಸಾಂಶೇನ ಯೇನಾಸಾವಾನಂದಂ ಪ್ರತಿಪದ್ಯತೇ ॥ ೧೯ ॥

ಗುದಂ ಪುಂಸೋ ವಿನಿರ್ಭಿನ್ನಂ ಮಿತ್ರೋ ಲೋಕೇಶ ಆವಿಶತ್ ।
ಪಾಯುನಾಂಶೇನ ಯೇನಾಸೌ ವಿಸರ್ಗಂ ಪ್ರತಿಪದ್ಯತೇ ॥ ೨೦ ॥

ಹಸ್ತಾವಸ್ಯ ವಿನಿರ್ಭಿನ್ನಾವಿಂದ್ರಃ ಸ್ವರ್ಪತಿರಾವಿಶತ್ ।
ವಾರ್ತಯಾಂಶೇನ ಪುರುಷೋ ಯಯಾ ವೃತ್ತಿಂ ಪ್ರಪದ್ಯತೇ ॥ ೨೧ ॥

ಪಾದಾವಸ್ಯ ವಿನಿರ್ಭಿನ್ನೌ ಲೋಕೇಶೋ ವಿಷ್ಣುರಾವಿಶತ್ ।
ಗತ್ಯಾ ಸ್ವಾಂಶೇನ ಪುರುಷೋ ಯಯಾ ಪ್ರಾಪ್ಯಂ ಪ್ರಪದ್ಯತೇ ॥ ೨೨ ॥

ಬುದ್ಧಿಂ ಚಾಸ್ಯ ವಿನಿರ್ಭಿನ್ನಾಂ ವಾಗೀಶೋ ಧೀಷ್ಣ್ಯಮಾವಿಶತ್ ।
ಬೋಧೇನಾಂಶೇನ ಬೋದ್ಧವ್ಯಂ ಪ್ರತಿಪತ್ತಿರ್ಯತೋ ಭವೇತ್ ॥ ೨೩ ॥

ಹೃದಯಂ ಚಾಸ್ಯ ನಿರ್ಭಿನ್ನಂ ಚಂದ್ರಮಾ ಧಿಷ್ಣ್ಯಮಾವಿಶತ್ ।
ಮನಸಾಂಶೇನ ಯೇನಾಸೌ ವಿಕ್ರಿಯಾಂ ಪ್ರತಿಪದ್ಯತೇ ॥ ೨೪ ॥

ಆತ್ಮಾನಂ ಚಾಸ್ಯ ನಿರ್ಭಿನ್ನಮಭಿಮಾನೋಽವಿಶತ್ಪದಮ್ ।
ಕರ್ಮಣಾಂಶೇನ ಯೇನಾಸೌ ಕರ್ತವ್ಯಂ ಪ್ರತಿಪದ್ಯತೇ ॥ ೨೫ ॥

ಸತ್ತ್ವಂ ಚಾಸ್ಯ ವಿನಿರ್ಭಿನ್ನಂ ಮಹಾಂಧಿಷ್ಣ್ಯಮುಪಾವಿಶತ್ ।
ಚಿತ್ತೇನಾಂಶೇನ ಯೇನಾಸೌ ವಿಜ್ಞಾನಂ ಪ್ರತಿಪದ್ಯತೇ ॥ ೨೬ ॥

ಶೀರ್ಷ್ಣೋಽಸ್ಯ ದ್ಯೌರ್ಧರಾ ಪದ್ಭ್ಯಾಂ ಖಂ ನಾಭೇರುದಪದ್ಯತ ।
ಗುಣಾನಾಂ ವೃತ್ತಯೋ ಯೇಷು ಪ್ರತೀಯಂತೇ ಸುರಾದಯಃ ॥ ೨೭ ॥

ವಾಯುವು ಒಳಹೊಕ್ಕನು. ಆ ತ್ವಗಿಂದ್ರಿಯದಿಂದ ಜೀವಿಯು ಸ್ಪರ್ಶವನ್ನು ಅನುಭವಿಸುವನು. ॥ ೧೬ ॥ ಆ ವಿರಾಟ್‌ಪುರುಷನಲ್ಲಿ ಕಿವಿಯ ಬಿಲಗಳು ಪ್ರಕಟವಾದಾಗ ಅದರಲ್ಲಿ ತನ್ನ ಅಂಶ ಶ್ರವಣೇಂದ್ರಿಯಸಹಿತ ದಿಕ್ಕುಗಳು ಪ್ರವೇಶಿಸಿದವು. ಆ ಶ್ರವಣೇಂದ್ರಿಯದಿಂದ ಜೀವಿಗೆ ಶಬ್ದದ ಜ್ಞಾನ ಉಂಟಾಗುತ್ತದೆ. ॥ ೧೭ ॥ ಮತ್ತೆ ವಿರಾಟ್‌ಪುರುಷನಲ್ಲಿ ಚರ್ಮವು ಉತ್ಪನ್ನವಾಯಿತು. ಅದರಲ್ಲಿ ತನ್ನ ಅಂಶ ರೋಮಗಳೊಡನೆ ಔಷಧಿಗಳು ಸ್ಥಿತವಾದುವು. ಆ ರೋಮಗಳಿಂದಲೇ ಜೀವಿಗಳಿಗೆ ತುರಿಕೆ ಮುಂತಾದವುಗಳ ಅನುಭವವಾಗುವುದು. ॥ ೧೮ ॥ ಈಗ ಆ ವಿರಾಟ್‌ಪುರುಷನ ಶ್ರೀವಿಗ್ರಹದಲ್ಲಿ ಲಿಂಗವು ಉತ್ಪನ್ನವಾಯಿತು. ತನ್ನ ಆಶ್ರಯವಾದ ಅದನ್ನು ಪ್ರಜಾಪತಿಯು ತನ್ನ ಅಂಶವಾದ ವೀರ್ಯದೊಡನೆ ಪ್ರವೇಶಿಸಿದನು. ಇದರಿಂದ ಜೀವವು ಆನಂದವನ್ನು ಅನುಭವಿಸುವನು. ॥ ೧೯ ॥ ಮತ್ತೆ ವಿರಾಟ್‌ಪುರುಷನಲ್ಲಿ ಗುದವು ಪ್ರಕಟಗೊಳ್ಳಲು ಲೋಕಪಾಲ ಮಿತ್ರನು ತನ್ನ ಅಂಶ ಪಾಯು-ಇಂದ್ರಿಯದೊಡನೆ ಅದರಲ್ಲಿ ಹೊಕ್ಕನು. ಈ ಇಂದ್ರಿಯದಿಂದಲೇ ಜೀವನು ಮಲತ್ಯಾಗ ಮಾಡುವನು. ॥ ೨೦ ॥ ಇದಾದನಂತರ ಅವನಲ್ಲಿ ಕೈಗಳು ಮೂಡಿದುವು. ಆಗ ದೇವರಾಜ ಇಂದ್ರನು ತನ್ನ ಅಂಶ ಗ್ರಹಣತ್ಯಾಗರೂಪವಾದ ಶಕ್ತಿಯೊಡನೆ ಅವುಗಳಲ್ಲಿ ಪ್ರವೇಶ ಮಾಡಿದನು. ಈ ಶಕ್ತಿಯಿಂದಲೇ ಜೀವವು ತನ್ನ ಕೊಡುವಿಕೆ, ಪಡೆಯುವಿಕೆ, ಹಿಡಿದುಕೊಳ್ಳುವಿಕೆ ಎಂಬ ತನ್ನ ಜೀವನೋಪಾಯವನ್ನು ಸಾಧಿಸುವುದು. ॥ ೨೧ ॥ ಇವನಲ್ಲಿ ಚರಣಗಳು ಉತ್ಪನ್ನವಾದಾಗ ಲೋಕೇಶ್ವರನಾದ, ವಿಷ್ಣುವು ತನ್ನ ಶಕ್ತಿಯಾದ ಗತಿಯೊಡನೆ ಅದನ್ನು ಪ್ರವೇಶಿಸಿದನು. ಆ ಗಮನ ಶಕ್ತಿಯಿಂದಲೇ ಜೀವವು ತನ್ನ ಗಮ್ಯಸ್ಥಾನಕ್ಕೆ ತಲುಪುವುದು. ॥ ೨೨ ॥ ಆಮೇಲೆ ಆ ದೇಹದಲ್ಲಿ ಬುದ್ಧಿಯು ಉತ್ಪನ್ನವಾಗಲು ವಾಗೀಶನಾದ ಬೃಹಸ್ಪತಿಯು ತನ್ನ ಅಂಶವಾದ ಬುದ್ಧಿಶಕ್ತಿಯೊಡನೆ ಅದರಲ್ಲಿ ಪ್ರವೇಶಿಸಿದನು. ಈ ಬುದ್ಧಿಶಕ್ತಿಯಿಂದಲೇ ಜೀವವು ತಿಳಿಯಬೇಕಾದ ವಿಷಯಗಳನ್ನು ತಿಳಿದುಕೊಳ್ಳುವುದು. ॥ ೨೩ ॥ ಮತ್ತೆ ಇದರಲ್ಲಿ ಹೃದಯವು ಪ್ರಕಟಗೊಂಡಿತು. ಅದರಲ್ಲಿ ತನ್ನ ಅಂಶವಾದ ಮನಸ್ಸಿನೊಡನೆ ಚಂದ್ರನು ನೆಲೆಗೊಂಡನು. ಈ ಮನಶ್ಶಕ್ತಿಯಿಂದಲೇ ಜೀವವು ಸಂಕಲ್ಪ-ವಿಕಲ್ಪಾದಿ ವಿಕಾರಗಳನ್ನು ಹೊಂದುವನು. ॥ ೨೪ ॥ ಇದಾದ ಬಳಿಕ ವಿರಾಟ್‌ಪುರುಷನಲ್ಲಿ ಅಹಂಕಾರ ಉತ್ಪನ್ನವಾಯಿತು. ತನಗೆ ಆಶ್ರಯವಾದ ಇದರೊಳಗೆ ತನ್ನ ಕ್ರಿಯಾಶಕ್ತಿ ಸಹಿತ ಅದರ ಅಭಿಮಾನಿಯಾದ ರುದ್ರದೇವರು ಪ್ರವೇಶ ಮಾಡಿದರು. ಇದರಿಂದ ಜೀವನು ತನ್ನ ಕರ್ತವ್ಯವನ್ನು ಸ್ವೀಕರಿಸುತ್ತಾನೆ. ॥ ೨೫ ॥ ಈಗ ಇದರಲ್ಲಿ ಚಿತ್ತವು ಪ್ರಕಟಗೊಂಡಿತು. ಅದರಲ್ಲಿ ಚಿತ್‌ಶಕ್ತಿಯೊಡನೆ ಮಹತ್ತತ್ತ್ವವು (ಬ್ರಹ್ಮಾ) ಸ್ಥಿತವಾಯಿತು. ಈ ಚಿತ್ತಶಕ್ತಿಯಿಂದಲೇ ಜೀವವು ವಿಜ್ಞಾನ (ಚೈತನ್ಯ)ವನ್ನು ಪಡೆಯುವುದು. ॥ ೨೬ ॥ ಈ ವಿರಾಟ್ ಪುರುಷನ ತಲೆಯಿಂದ ಸ್ವರ್ಗಲೋಕ, ಕಾಲುಗಳಿಂದ ಪೃಥ್ವಿ ಮತ್ತು ನಾಭಿಯಿಂದ ಅಂತರಿಕ್ಷ (ಆಕಾಶ) ಉತ್ಪನ್ನವಾಯಿತು. ಇವುಗಳಲ್ಲಿ ಕ್ರಮವಾಗಿ ಸತ್ತ್ವ, ರಜ, ತಮ ಈ ಮೂರು ಗುಣಗಳ ಪರಿಣಾಮಸ್ವರೂಪೀ ದೇವತೆಗಳು, ಮನುಷ್ಯರು, ಪ್ರೇತಾದಿಗಳು ಕಂಡುಬರುತ್ತವೆ. ॥ ೨೭ ॥ ಇವು

ಆತ್ಯಂತಿಕೇನ ಸತ್ತ್ವೇನ ದಿವಂ ದೇವಾಃ ಪ್ರಪೇದಿರೇ ।
ಧರಾಂ ರಜಃಸ್ವಭಾವೇನ ಪಣಯೋ ಯೇ ಚ ತಾನನು ॥ ೨೮ ॥
ತಾರ್ತೀಯೇನ ಸ್ವಭಾವೇನ ಭಗವನ್ನಾಭಿಮಾಶ್ರಿತಾಃ ।
ಉಭಯೋರಂತರಂ ವ್ಯೋಮ ಯೇ ರುದ್ರಪಾರ್ಷದಾಂ ಗಣಾಃ ॥ ೨೯ ॥

ಮುಖತೋಽವರ್ತತ ಬ್ರಹ್ಮ ಪುರುಷಸ್ಯ ಕುರೂದ್ವಹ ।
ಯಸ್ತೂನ್ಮುಖತ್ವಾದ್ವರ್ಣಾನಾಂ ಮುಖ್ಯೋಽಭೂದ್ಬ್ರಾಹ್ಮಣೋ ಗುರುಃ ॥ ೩೦ ॥
ಬಾಹುಭ್ಯೋಽವರ್ತತ ಕ್ಷತ್ರಂ ಕ್ಷತ್ರಿಯಸ್ತದನುವ್ರತಃ ।
ಯೋ ಜಾತಸ್ತ್ರಾಯತೇ ವರ್ಣಾನ್ಪೌರುಷಃ ಕಂಟಕಕ್ಷತಾತ್ ॥ ೩೧ ॥
ವಿಶೋಽವರ್ತಂತ ತಸ್ಯೋರ್ವೋರ್ಲೋಕವೃತ್ತಿಕರೀರ್ವಿಭೋಃ ।
ವೈಶ್ಯಸ್ತದುದ್ಭವೋ ವಾರ್ತಾಂ ನೃಣಾಂ ಯಃ ಸಮವರ್ತಯತ್ ॥ ೩೨ ॥
ಪದ್ಭ್ಯಾಂ ಭಗವತೋ ಜಜ್ಞೇ ಶುಶ್ರೂಷಾ ಧರ್ಮಸಿದ್ಧಯೇ ।
ತಸ್ಯಾಂ ಜಾತಃ ಪುರಾ ಶೂದ್ರೋ ಯದ್ವೃತ್ತ್ಯಾ ತುಷ್ಯತೇ ಹರಿಃ ॥ ೩೩ ॥
ಏತೇ ವರ್ಣಾಃ ಸ್ವಧರ್ಮೇಣ ಯಜಂತಿ ಸ್ವಗುರುಂ ಹರಿಮ್ ।
ಶ್ರದ್ಧಯಾಽಽತ್ಮವಿಶುದ್ಧ್ಯರ್ಥಂ ಯಜ್ಜಾತಾಃ ಸಹ ವೃತ್ತಿಭಿಃ ॥ ೩೪ ॥
ಏತತ್ಕ್ಷತ್ತರ್ಭಗವತೋ ದೈವಕರ್ಮಾತ್ಮರೂಪಿಣಃ ।
ಕಃ ಶ್ರದ್ದಧ್ಯಾದುಪಾಕರ್ತುಂ ಯೋಗಮಾಯಾಬಲೋದಯಮ್ ॥ ೩೫ ॥
ಅಥಾಪಿ ಕೀರ್ತಯಾಮ್ಯಂಗ ಯಥಾಮತಿ ಯಥಾಶ್ರುತಮ್ ।
ಕೀರ್ತಿಂ ಹರೇಃ ಸ್ವಾಂ ಸತ್ಕರ್ತುಂ ಗಿರಮನ್ಯಾಭಿಧಾಸತೀಮ್ ॥ ೩೬ ॥

ಏಕಾಂತಲಾಭಂ ವಚಸೋ ನು ಪುಂಸಾಂ ಸುಶ್ಲೋಕಮೌಲೇರ್ಗುಣವಾದಮಾಹುಃ ।
ಶ್ರುತೇಶ್ಚ ವಿದ್ವದ್ಭಿರುಪಾಕೃತಾಯಾಂ ಕಥಾಸುಧಾಯಾಮುಪಸಂಪ್ರಯೋಗಮ್ ॥ ೩೭ ॥

ಗಳಲ್ಲಿ ದೇವತೆಗಳು ಸತ್ತ್ವಗುಣದ ಹೆಚ್ಚಳದಿಂದ ಸ್ವರ್ಗಲೋಕದಲ್ಲಿಯೂ, ಮನುಷ್ಯ ಮತ್ತು ಅವನ ಉಪಯೋಗೀ ಹಸುವೇ ಮುಂತಾದ ಜೀವಿಗಳು ರಜೋಗುಣದ ಪ್ರಧಾನತೆಯಿಂದಾಗಿ ಪೃಥ್ವಿಯಲ್ಲಿಯೂ, ತಾಮಸ ಸ್ವಭಾವವುಳ್ಳ ರುದ್ರನ ಪಾರ್ಷದರು (ಭೂತ-ಪ್ರೇತಾದಿಗಳು) ಎರಡರ ನಡುವಿನಲ್ಲಿ ಇರುವ ಭಗವಂತನ ನಾಭಿಯ ಸ್ಥಾನದಲ್ಲಿ ಅಂತರಿಕ್ಷ ಲೋಕದಲ್ಲಿಯೂ ವಾಸಮಾಡುತ್ತವೆ. ॥ ೨೮-೨೯ ॥

ಮಹಾತ್ಮನಾದ ವಿದುರನೇ! ವೇದಗಳೂ ಮತ್ತು ಬ್ರಾಹ್ಮಣರೂ ಭಗವಂತನ ಮುಖದಿಂದ ಪ್ರಕಟಗೊಂಡಿದ್ದರಿಂದಲೇ ಬ್ರಾಹ್ಮಣರು ಸಕಲವರ್ಣಗಳಲ್ಲೂ ಶ್ರೇಷ್ಠರು ಹಾಗೂ ಸರ್ವವರ್ಣಗಳಿಗೂ ಗುರುವೆನಿಸಿದರು. ॥ ೩೦ ॥ ಆತನ ಭುಜಗಳಿಂದ ಕ್ಷತ್ರಿಯ ವೃತ್ತಿಯೂ ಮತ್ತು ಅದನ್ನು ಅವಲಂಬಿಸಿರುವ ಕ್ಷತ್ರಿಯವರ್ಣವೂ ಉತ್ಪನ್ನವಾಯಿತು. ವಿರಾಟ್‌ಪುರುಷನ ಅಂಶವಾಗಿ ಜನಿಸಿದ ಕಾರಣ ಇವರು ಎಲ್ಲ ವರ್ಣಗಳನ್ನು ಶತ್ರುಗಳು, ಕಳ್ಳ-ಕಾಕರರೇ ಮುಂತಾದ ಉಪದ್ರವಗಳಿಂದ ರಕ್ಷಣೆ ಮಾಡುತ್ತಾರೆ. ॥ ೩೧ ॥ ಶ್ರೀಭಗವಂತನ ಎರಡು ತೊಡೆಗಳಿಂದ ಎಲ್ಲ ಜನರ ನಿರ್ವಾಹ ಮಾಡುವಂತಹ ವೈಶ್ಯವೃತ್ತಿ ಉತ್ಪನ್ನವಾಯಿತು ಮತ್ತು ಅವುಗಳಿಂದಲೇ ವೈಶ್ಯವರ್ಣದ ಪ್ರಾದುರ್ಭಾವವಾಯಿತು. ಈ ವರ್ಣವು ತನ್ನ ವೃತ್ತಿಯಿಂದ ಎಲ್ಲ ಜೀವಿಗಳ ಜೀವನ ನಿರ್ವಾಹ ನಡೆಸುತ್ತದೆ. ॥ ೩೨ ॥ ಮತ್ತೆ ಎಲ್ಲ ಧರ್ಮಗಳ ಸಿದ್ಧಿಗಾಗಿ ಭಗವಂತನ ಚರಣಗಳಿಂದ ಸೇವಾವೃತ್ತಿ ಪ್ರಕಟವಾಯಿತು ಮತ್ತು ಅವುಗಳಿಂದಲೇ ಮೊಟ್ಟಮೊದಲು ಆ ವೃತ್ತಿಯ ಅಧಿಕಾರಿ ಶೂದ್ರವರ್ಣವೂ ಪ್ರಕಟಗೊಂಡಿತು. ಅವರ ವೃತ್ತಿಯಿಂದಲೇ ಶ್ರೀಹರಿಯು ಪ್ರಸನ್ನನಾಗುತ್ತಾನೆ.* ॥ ೩೩ ॥ ಈ ನಾಲ್ಕೂ ವರ್ಣಗಳೂ ಕೂಡ ತಮ್ಮ-ತಮ್ಮ ವೃತ್ತಿಗಳೊಡನೆ ಯಾರಿಂದ ಹುಟ್ಟಿದವೋ ಆ ಪರಮಗುರುವಾದ ಶ್ರೀಹರಿಯನ್ನು ಚಿತ್ತಶುದ್ಧಿಗಾಗಿ ತಮ್ಮ-ತಮ್ಮ ಧರ್ಮಗಳಿಂದ ಶ್ರದ್ಧಾಪೂರ್ವಕ ಆರಾಧಿಸುತ್ತವೆ. ॥ ೩೪ ॥ ವಿದುರನೇ! ಈ ವಿರಾಟ್‌ಪುರುಷನು ಕಾಲ, ಕರ್ಮ, ಸ್ವಭಾವ ಶಕ್ತಿಗಳಿಂದ ಕೂಡಿ ಭಗವಂತನ ಯೋಗಮಾಯೆಯ ಪ್ರಭಾವವನ್ನು ಪ್ರಕಟಪಡಿಸುವವನು. ಈತನ ಸ್ವರೂಪವನ್ನು ಪೂರ್ಣವಾಗಿ ವರ್ಣಿಸಲು ಯಾರಿಗೆ ತಾನೇ ಸಾಧ್ಯ? ॥ ೩೫ ॥ ಪ್ರಿಯ ವಿದುರನೇ! ಆದರೂ ಇತರ ವ್ಯಾವಹಾರಿಕ ಚರ್ಚೆಗಳಿಂದ ಕಲುಷಗೊಂಡಿರುವ ನನ್ನ ವಾಣಿಯನ್ನು ಪವಿತ್ರಗೊಳಿಸಲು, ನನ್ನ ಬುದ್ಧಿಗೂ, ಶ್ರೀಗುರುಗಳ ಬಾಯಿಂದ ಕೇಳಿರುವುದಕ್ಕೂ, ಅನುಗುಣವಾಗಿ ಶ್ರೀಹರಿಯ ಸುಕೀರ್ತಿಯನ್ನು ವರ್ಣಿಸುತ್ತೇನೆ. ॥ ೩೬ ॥ ಪುಣ್ಯಕೀರ್ತಿ ಶಿರೋಮಣಿಯಾದ ಶ್ರೀಹರಿಯ ಗುಣಗಾನಮಾಡುವುದೇ ಮನುಷ್ಯರ ವಾಣಿಗೆ ಹಾಗೂ ವಿದ್ವಾಂಸರ ಬಾಯಿಂದ ಭಗವಂತನ ಕಥಾಮೃತವನ್ನು ಪಾನ ಮಾಡುವುದೇ ಅವರ ಕಿವಿಗಳಿಗೆ ಪರಮಲಾಭವಾಗಿದೆ ಎಂದು

* "ತಸ್ಯಾಂ ಜಾತಃ ಪುರಾ ಶೂದ್ರೋ ಯದ್ವೃತ್ತ್ಯಾ ತುಷ್ಯತೇ ಹರಿಃ ॥" ಎಲ್ಲ ಧರ್ಮಗಳ ಸಿದ್ಧಿಗೂ ಮೂಲಭೂತವಾದುದು ಸೇವೆ. ಸೇವೆಯಿಲ್ಲದೆ ಯಾವ ಧರ್ಮವೂ ಈಡೇರುವುದಿಲ್ಲ. ಆದ್ದರಿಂದ ಎಲ್ಲ ಧರ್ಮಗಳಿಗೂ ಮೂಲವಾದ ಸೇವೆಯೇ ವೃತ್ತಿಯಾಗಿರುವ ಶೂದ್ರನು ಎಲ್ಲ ವರ್ಣಗಳಲ್ಲೂ ಶ್ರೇಷ್ಠನೇ. ಬ್ರಾಹ್ಮಣನ ಧರ್ಮವಿರುವುದು ಮೋಕ್ಷಕ್ಕಾಗಿ. ಕ್ಷತ್ರಿಯರ ಧರ್ಮವಿರುವುದು ಭೋಗಕ್ಕೋಸ್ಕರವಾಗಿ. ವೈಶ್ಯಧರ್ಮವಿರುವುದು ಹಣಸಂಪಾದನೆಗಾಗಿ. ಹೀಗೆ ಮೊದಲನೆ ಮೂರು ವರ್ಣಗಳ ಧರ್ಮಗಳು ಇತರ ಪುರುಷಾರ್ಥಗಳಿಗಿದ್ದರೆ, ಶೂದ್ರನಧರ್ಮ ತನ್ನ ಪುರುಷಾರ್ಥಕ್ಕಾಗಿ ಇದೆ. ಆದ್ದರಿಂದ ಇವನ ವೃತ್ತಿಯಿಂದಲೇ ಶ್ರೀಭಗವಂತನು ಪ್ರಸನ್ನನಾಗುವನು.

ಆತ್ಮನೋಽವಸಿತೋ ವತ್ಸ ಮಹಿಮಾ ಕವಿನಾಽಽದಿನಾ ।
ಸಂವತ್ಸರಸಹಸ್ರಾಂತೇ ಧಿಯಾ ಯೋಗವಿಪಕ್ವಯಾ ॥ ೩೮ ॥

ಅತೋ ಭಗವತೋ ಮಾಯಾ ಮಾಯಿನಾಮಪಿ ಮೋಹಿನೀ ।
ಯತ್ಸ್ವಯಂ ಚಾತ್ಮವರ್ತ್ಮಾತ್ಮಾ ನ ವೇದ ಕಿಮುತಾಪರೇ ॥ ೩೯ ॥

ಯತೋಽಪ್ರಾಪ್ಯ ನ್ಯವರ್ತಂತ ವಾಚಶ್ಚ ಮನಸಾ ಸಹ ।
ಅಹಂ ಚಾನ್ಯ ಇಮೇ ದೇವಾಸ್ತಸ್ಮೈ ಭಗವತೇ ನಮಃ ॥ ೪೦ ॥

ಮಹಾಪುರುಷರ ಸಿದ್ಧಾಂತವಾಗಿದೆ. ॥ ೩೭ ॥ ವತ್ಸ ವಿದುರಾ! ನಾವು ಮಾತ್ರವಲ್ಲ; ಆದಿಕವಿಯಾದ ಶ್ರೀಬ್ರಹ್ಮದೇವರೂ ಕೂಡ ಒಂದು ಸಾವಿರ ದಿವ್ಯವರ್ಷಗಳವರೆಗೆ ತಮ್ಮ ಯೋಗದಿಂದ ಪರಿಪಕ್ವವಾದ ಬುದ್ಧಿಯಿಂದ ವಿಚಾರಮಾಡಿದರೂ ಅಪ್ರಮೇಯನಾದ ಆತನ ಮಹಿಮೆಯ ಪಾರವನ್ನು ಕಾಣಲಾರದೇ ಹೋದನು. ॥ ೩೮ ॥ ಭಗವಂತನ ಮಾಯೆಯು ದೊಡ್ಡ-ದೊಡ್ಡ ಮಾಯಾವಿಗಳನ್ನೂ ಮರುಳುಗೊಳಿಸುವ ಸಾಮರ್ಥ್ಯವುಳ್ಳದ್ದು. ಅಘಟಿತ ಘಟನಾಸಾಮರ್ಥ್ಯವುಳ್ಳ ಅದರ ಭ್ರಾಮಕಗತಿಯು ಅನಂತವಾಗಿದೆ. ಆದ್ದರಿಂದ ಸ್ವಯಂ ಭಗವಂತನೇ ಅದರ ಆಳ ತಿಳಿಯದೆ ಹೋದನು. ಮತ್ತೆ ಇತರರ ಮಾತಾದರೂ ಏನು? ॥ ೩೯ ॥ ಯಾವುದನ್ನು ಮುಟ್ಟಲಾರದೆ ಮನಸ್ಸು ಮಾತಿನೊಡನೆ ಹಿಂದಿರುಗಿ ಬಿಡುವುದೋ, ಯಾವುದರ ಪಾರವನ್ನು (ಕೊನೆಯನ್ನು) ಕಾಣುವ ವಿಷಯದಲ್ಲಿ ಬ್ರಹ್ಮ-ರುದ್ರಾದಿ ಇತರ ದೇವತೆಗಳೂ ಸಮರ್ಥರಾಗದೇ ಹೋದರೋ ಆ ಭಗವಂತನಿಗೆ ನಮ್ಮ ನಮಸ್ಕಾರಗಳು. ॥ ೪೦ ॥

**ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಷಷ್ಠೋಽಧ್ಯಾಯಃ ॥ ೬ ॥**

# ಏಳನೆಯ ಅಧ್ಯಾಯ

## ಮೈತ್ರೇಯ - ವಿದುರರ ಸಂವಾದ

*ಶ್ರೀಶುಕ ಉವಾಚ*

ಏವಂ ಬ್ರುವಾಣಂ ಮೈತ್ರೇಯಂ ದ್ವೈಪಾಯನಸುತೋ ಬುಧಃ ।
ಪ್ರೀಣಯನ್ನಿವ ಭಾರತ್ಯಾ ವಿದುರಃ ಪ್ರತ್ಯಭಾಷತ ॥ ೧ ॥

*ವಿದುರ ಉವಾಚ*

ಬ್ರಹ್ಮನ್ಕಥಂ ಭಗವತಶ್ಚಿನ್ಮಾತ್ರಸ್ಯಾವಿಕಾರಿಣಃ ।
ಲೀಲಯಾ ಚಾಪಿ ಯುಜ್ಯೇರನ್ನಿರ್ಗುಣಸ್ಯ ಗುಣಾಃ ಕ್ರಿಯಾಃ ॥ ೨ ॥

ಕ್ರೀಡಾಯಾಮುದ್ಯಮೋಽರ್ಭಸ್ಯ ಕಾಮಶ್ಚಿಕ್ರೀಡಿಷಾನ್ಯತಃ ।
ಸ್ವತಸ್ತೃಪ್ತಸ್ಯ ಚ ಕಥಂ ನಿವೃತ್ತಸ್ಯ ಸದಾನ್ಯತಃ ॥ ೩ ॥

ಅಸ್ರಾಕ್ಷೀದ್ಭಗವಾನ್ವಿಶ್ವಂ ಗುಣಮಯ್ಯಾತ್ಮಮಾಯಯಾ ।
ತಯಾ ಸಂಸ್ಥಾಪಯತ್ಯೇತದ್ಭೂಯಃ ಪ್ರತ್ಯಪಿಧಾಸ್ಯತಿ ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಮೈತ್ರೇಯರ ಇಂತಹ ನಿರೂಪಣೆಯನ್ನು ಕೇಳಿ ವ್ಯಾಸಪುತ್ರನಾದ ವಿದುರನು ತನ್ನ ಮಧುರವಾಣಿಯಿಂದ ಅವರನ್ನು ಸಂತೋಷಪಡಿಸುತ್ತಾ ಹೀಗೆ ವಿಜ್ಞಾಪಿಸಿಕೊಂಡನು – ॥ ೧ ॥

**ವಿದುರನು ಕೇಳಿದನು** – ಬ್ರಾಹ್ಮಣಶ್ರೇಷ್ಠರೇ! ಶ್ರೀಭಗವಂತನಾದರೋ ಕೇವಲ ಜ್ಞಾನಸ್ವರೂಪನು, ನಿರ್ವಿಕಾರನು ಮತ್ತು ಸತ್ತ್ವಾದಿ ತ್ರಿಗುಣರಹಿತನು. ಆತನಿಗೆ ಲೀಲಾರ್ಥವಾಗಿಯಾದರೂ ಗುಣಗಳೊಡನೆ, ಕ್ರಿಯೆಗಳೊಡನೆ ಸಂಬಂಧ ಹೇಗೆ ಉಂಟಾಗುವುದು? ॥ ೨ ॥ ಬಾಲಕರಲ್ಲಾದರೋ ಕಾಮನೆ ಹಾಗೂ ಬೇರೆಯವರೊಡನೆ ಆಡಬೇಕೆಂಬ ಇಚ್ಛೆ ಇರುತ್ತದೆ. ಅದರಿಂದ ಅವರು ಆಟಕ್ಕಾಗಿ ಪ್ರಯತ್ನಿಸುತ್ತಾರೆ. ಆದರೆ ಭಗವಂತನಾದರೋ ಸ್ವತಃ ನಿತ್ಯತೃಪ್ತನು, ಪೂರ್ಣಕಾಮನು, ಸದಾ ನಿರ್ಲಿಪ್ತನು. ಹೀಗಿರುವಾಗ ಅವನು ಕ್ರೀಡಿಸಲಿಕ್ಕಾಗಿಯೇ ಏಕೆ ಸಂಕಲ್ಪಮಾಡುವನು? ॥ ೩ ॥ ಭಗವಂತನು ತನ್ನ ತ್ರಿಗುಣಮಯಿ ಮಾಯೆಯಿಂದ ಜಗತ್ತನ್ನು ರಚಿಸಿರುವನು. ಅದರಿಂದಲೇ ಇದನ್ನು ಪಾಲಿಸುತ್ತಿರುವನು. ಕೊನೆಗೆ ಅದರಿಂದಲೇ ಸಂಹಾರ ಮಾಡುವನು. ॥ ೪ ॥ ಭಗವಂತನ ಜ್ಞಾನಕ್ಕೆ ದೇಶ-ಕಾಲ-ಅವಸ್ಥೆಗಳಿಂದಾಗಲೀ, ತನ್ನಿಂದಾಗಲೀ, ಬೇರೆ ನಿಮಿತ್ತದಿಂದಾಗಲೀ ಎಂದಿಗೂ ಲೋಪವಿಲ್ಲ. ಹಾಗಿರುವಾಗ ಅವನಿಗೆ ಮಾಯೆಯೊಡನೆ ಸಂಯೋಗವಾದರೂ ಹೇಗೆ

**ದೇಶತಃ ಕಾಲತೋ ಯೋಽಸಾವವಸ್ಥಾತಃ ಸ್ವತೋಽನ್ಯತಃ ।**
**ಅವಿಲುಪ್ತಾವಬೋಧಾತ್ಮಾ ಸ ಯುಜ್ಯೇತಾಜಯಾ ಕಥಮ್ ॥ ೫ ॥**

**ಭಗವಾನೇಕ ಏವೈಷ ಸರ್ವಕ್ಷೇತ್ರೇಷ್ವವಸ್ಥಿತಃ ।**
**ಅಮುಷ್ಯ ದುರ್ಭಗತ್ವಂ ವಾ ಕ್ಲೇಶೋ ವಾ ಕರ್ಮಭಿಃ ಕುತಃ ॥ ೬ ॥**

**ಏತಸ್ಮಿನ್ಮೇ ಮನೋ ವಿದ್ವನ್ ಖಿದ್ಯತೇಽಜ್ಞಾನಸಂಕಟೇ ।**
**ತನ್ನಃ ಪರಾಣುದ ವಿಭೋ ಕಶ್ಮಲಂ ಮಾನಸಂ ಮಹತ್ ॥ ೭ ॥**

*ಶ್ರೀಶುಕ ಉವಾಚ*

**ಸ ಇತ್ಥಂ ಚೋದಿತಃ ಕ್ಷತ್ತ್ರಾ ತತ್ತ್ವಜಿಜ್ಞಾಸುನಾ ಮುನಿಃ ।**
**ಪ್ರತ್ಯಾಹ ಭಗವಚ್ಚಿತ್ತಃ ಸ್ಮಯನ್ನಿವ ಗತಸ್ಮಯಃ ॥ ೮ ॥**

*ಮೈತ್ರೇಯ ಉವಾಚ*

**ಸೇಯಂ ಭಗವತೋ ಮಾಯಾ ಯನ್ನಯೇನ ವಿರುಧ್ಯತೇ ।**
**ಈಶ್ವರಸ್ಯ ವಿಮುಕ್ತಸ್ಯ ಕಾರ್ಪಣ್ಯಮುತ ಬಂಧನಮ್ ॥ ೯ ॥**

**ಯದರ್ಥೇನ ವಿನಾಮುಷ್ಯ ಪುಂಸ ಆತ್ಮವಿಪರ್ಯಯಃ ।**
**ಪ್ರತೀಯತ ಉಪದ್ರಷ್ಟುಃ ಸ್ವಶಿರಶ್ಛೇದನಾದಿಕಃ ॥ ೧೦ ॥**

**ಯಥಾ ಜಲೇ ಚಂದ್ರಮಸಃ ಕಂಪಾದಿಸ್ತತ್ಕೃತೋ ಗುಣಃ ।**
**ದೃಶ್ಯತೇಽಸನ್ನಪಿ ದ್ರಷ್ಟುರಾತ್ಮನೋಽನಾತ್ಮನೋ ಗುಣಃ ॥ ೧೧ ॥**

**ಸ ವೈ ನಿವೃತ್ತಿಧರ್ಮೇಣ ವಾಸುದೇವಾನುಕಂಪಯಾ ।**
**ಭಗವದ್ಭಕ್ತಿಯೋಗೇನ ತಿರೋಧತ್ತೇ ಶನೈರಿಹ ॥ ೧೨ ॥**

**ಯದೇಂದ್ರಿಯೋಪರಾಮೋಽಥ ದ್ರಷ್ಟ್ರಾತ್ಮನಿ ಪರೇ ಹರೌ ।**
**ವಿಲೀಯಂತೇ ತದಾ ಕ್ಲೇಶಾಃ ಸಂಸುಪ್ತಸ್ಯೇವ ಕೃತ್ಸ್ನಶಃ ॥ ೧೩ ॥**

**ಅಶೇಷಸಂಕ್ಲೇಶಶಮಂ ವಿಧತ್ತೇ**
**ಗುಣಾನುವಾದಶ್ರವಣಂ ಮುರಾರೇಃ ।**
**ಕುತಃ ಪುನಸ್ತಚ್ಚರಣಾರವಿಂದ-**
**ಪರಾಗಸೇವಾರತಿರಾತ್ಮಲಬ್ಧಾ ॥ ೧೪ ॥**

*ವಿದುರ ಉವಾಚ*

**ಸಂಛಿನ್ನಃ ಸಂಶಯೋ ಮಹ್ಯಂ ತವ ಸೂಕ್ತಾಸಿನಾ ವಿಭೋ ।**
**ಉಭಯತ್ರಾಪಿ ಭಗವನ್ಮನೋ ಮೇ ಸಂಪ್ರಧಾವತಿ ॥ ೧೫ ॥**

ಉಂಟಾಯಿತು ? ॥ ೫ ॥ ಭಗವಂತನೊಬ್ಬನೇ ಸಮಸ್ತ ಕ್ಷೇತ್ರಗಳಲ್ಲಿಯೂ ಸಾಕ್ಷಿರೂಪದಿಂದ ಇರುತ್ತಾನೆ. ಮತ್ತೆ ಅವನಿಗೆ ದುರ್ಭಾಗ್ಯವಾಗಲೀ, ಯಾವುದಾದರೂ ಕರ್ಮದಿಂದುಂಟಾದ ಕ್ಲೇಶವಾಗಲೀ ಹೇಗಾಗಬಲ್ಲದು ? ॥ ೬ ॥ ಮಹಾತ್ಮರೇ! ಈ ಅಜ್ಞಾನ ಸಂಕಟದಲ್ಲಿ ಬಿದ್ದು ನನ್ನ ಮನಸ್ಸು ಖಿನ್ನವಾಗುತ್ತಿದೆ. ತಾವು ಕೃಪೆಮಾಡಿ ನನ್ನ ಮನಸ್ಸಿನ ಈ ಅಜ್ಞಾನಮೋಹವನ್ನು ನಿವಾರಣೆ ಮಾಡಬೇಕೆಂದು ಕೇಳಿ ಕೊಳ್ಳುತ್ತೇನೆ. ॥ ೭ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ರಾಜನೇ! ತತ್ತ್ವ ಜಿಜ್ಞಾಸುವಾದ ವಿದುರನ ಈ ಪ್ರಶ್ನೆಯನ್ನು ಕೇಳಿ ಅಹಂಕಾರರಹಿತ ರಾದ ಶ್ರೀಮೈತ್ರೇಯರು ಭಗವಂತನನ್ನು ಸ್ಮರಿಸುತ್ತಾ ಮುಗುಳ್ನಕ್ಕು ಹೀಗೆ ಉತ್ತರಿಸಿದರು. ॥ ೮ ॥

ಶ್ರೀಮೈತ್ರೇಯರು ಹೇಳುತ್ತಾರೆ – ವಿದುರನೇ! ಎಲ್ಲರ ಸ್ವಾಮಿಯೂ, ನಿತ್ಯಮುಕ್ತನೂ ಆದ ಪರಮಾತ್ಮನಿಗೆ ದೀನತೆ, ಬಂಧನ ಉಂಟಾಗುವುದೆಂದರೆ ಅವಶ್ಯವಾಗಿ ಯುಕ್ತಿಗೆ ವಿರುದ್ಧ ವಾಗಿದೆ. ಆದರೆ ವಸ್ತುತಃ ಇದೇ ಭಗವಂತನ ಮಾಯೆ ಯಾಗಿದೆ. ॥ ೯ ॥ ಸ್ವಪ್ನವನ್ನು ಕಾಣುವವನಿಗೆ ತನ್ನ ತಲೆಯೇ ಕತ್ತರಿಸಿದಂತೆ ಅನುಭವ ಉಂಟಾಗಬಹುದು. ಆದರೆ ನಿಜವಾಗಿ ಏನೂ ಆಗಿರುವುದಿಲ್ಲ. ಆದರೂ ಅಜ್ಞಾನದಿಂದ ಅವನು ಸತ್ಯ ವೆಂದೇ ತಿಳಿದು ಗಾಬರಿಪಡುವಂತೆ ಈ ಜೀವನಿಗೆ ಬಂಧನಾದಿಗಳು ಯಾವುದೂ ಇಲ್ಲದಿದ್ದರೂ ಅಜ್ಞಾನವಶದಿಂದ ಹಾಗೇ ಇರುವಂತೆ ಕಂಡುಬರುತ್ತದೆ. ॥ ೧೦ ॥ ಈ ಬಂಧನವೇ ಮುಂತಾದ ತೋರಿಕೆ ಗಳು ಈಶ್ವರನಲ್ಲಿ ಏಕೆ ಆಗುವುದಿಲ್ಲ? ಅಂದರೆ – ನೀರಿನಲ್ಲಿ ಬಿದ್ದ ಚಂದ್ರನ ಬಿಂಬವು ಅಲ್ಲಾಡಿದಂತೆ ಕಂಡುಬಂದರೂ ಆಕಾಶ ದಲ್ಲಿರುವ ಚಂದ್ರನಲ್ಲಿ ಕಂಪನವಿರುವುದಿಲ್ಲ, ಹಾಗೆಯೇ ದೇಹಾಭಿ ಮಾನೀ ಜೀವನಲ್ಲೇ ದೇಹಾದಿ ಮಿಥ್ಯಾಧರ್ಮಗಳ ತೋರಿಕೆ ಕಂಡುಬರುತ್ತದೆ. ಪರಮಾತ್ಮನಲ್ಲಿ ಇಲ್ಲ. ॥ ೧೧ ॥ ನಿಷ್ಕಾಮ ಭಾವದಿಂದ ಧರ್ಮಗಳನ್ನು ಆಚರಿಸಿದಾಗ ಭಗವತ್ಕೃಪೆಯಿಂದ ಪ್ರಾಪ್ತವಾದ ಭಕ್ತಿಯೋಗದ ಮೂಲಕ ಈ ಮಿಥ್ಯಾಪ್ರತೀತಿಗಳು ನಿಧಾನವಾಗಿ ತೊಲಗಿಹೋಗುತ್ತವೆ. ॥ ೧೨ ॥ ಸಮಸ್ತ ಇಂದ್ರಿಯ ಗಳು ವಿಷಯಗಳಿಂದ ಹಿಮ್ಮೆಟ್ಟಿ ಸಾಕ್ಷಿಸ್ವರೂಪವಾದ ಶ್ರೀಹರಿಯಲ್ಲಿ ನಿಶ್ಚಲವಾಗಿ ನೆಲೆಗೊಂಡಾಗ ಗಾಢನಿದ್ದೆಯಲ್ಲಿ ಮಲಗಿದ ಮನುಷ್ಯ ನಂತೆ ಜೀವಿಯ ರಾಗ-ದ್ವೇಷಾದಿ ಎಲ್ಲ ಕ್ಲೇಶಗಳು ಪೂರ್ಣವಾಗಿ ನಾಶಹೊಂದುವವು. ॥ ೧೩ ॥ ಶ್ರೀಕೃಷ್ಣಪರಮಾತ್ಮನ ಗುಣಗಳ ವರ್ಣನೆಯನ್ನೂ, ಶ್ರವಣವನ್ನೂ ಮಾಡುತ್ತಿದ್ದರೆ ಸಮಸ್ತ ದುಃಖ ರಾಶಿಯೂ ಶಾಂತವಾಗಿ ಬಿಡುವುದು. ಹೀಗಿರುವಾಗ ನಮ್ಮ ಹೃದಯದಲ್ಲಿ ಅವನ ಪಾದಾರವಿಂದಗಳ ಧೂಳನ್ನು ಸೇವಿಸ ಬೇಕೆಂಬ ಪರಮಪ್ರೇಮವು ಜಾಗ್ರತಗೊಂಡರೆ ಮತ್ತೆ ಹೇಳುವು ದೇನಿದೆ ? ॥ ೧೪ ॥

ವಿದುರನೆಂದನು – ಮಹಾತ್ಮರೇ! ನನ್ನ ಪ್ರಶ್ನೆಗೆ ಉತ್ತರವಾಗಿ ತಾವು ಹೇಳಿದ ಸೂಕ್ತಿಯೆಂಬ ಖಡ್ಗದಿಂದ ನನ್ನ ಸಂದೇಹವು ಸಮೂಲವಾಗಿ ಕತ್ತರಿಸಿಹೋಯಿತು. ಈಗ ನನ್ನ ಮನಸ್ಸು ಪರ ಮಾತ್ಮನ ಸ್ವತಂತ್ರತೆ ಮತ್ತು ಜೀವಿಯ ಪರತಂತ್ರತೆ ಎಂಬ ಎರಡು

ಸಾದ್ವೇತದ್ವ್ಯಾಹೃತಂ ವಿದ್ವನ್ನಾತ್ಮಮಾಯಾಯನಂ ಹರೇಃ ।
ಆಭಾತ್ಯಪಾರ್ಥಂ ನಿರ್ಮೂಲಂ ವಿಶ್ವಮೂಲಂ ನ ಯದ್ಬಹಿಃ
॥ ೧೬ ॥

ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇಃ ಪರಂ ಗತಃ ।
ತಾವುಭೌ ಸುಖಮೇಧೇತೇ ಕ್ಲಿಶ್ಯತ್ಯಂತರಿತೋ ಜನಃ
॥ ೧೭ ॥

ಅರ್ಥಾಭಾವಂ ವಿನಿಶ್ಚಿತ್ಯ ಪ್ರತೀತಸ್ಯಾಪಿ ನಾತ್ಮನಃ ।
ತಾಂ ಚಾಪಿ ಯುಷ್ಮಚ್ಚರಣಸೇವಯಾಹಂ ಪರಾಣುದೇ
॥ ೧೮ ॥

ಯತ್ಸೇವಯಾ ಭಗವತಃ ಕೂಟಸ್ಥಸ್ಯ ಮಧುದ್ವಿಷಃ ।
ರತಿರಾಸೋ ಭವೇತ್ತೀವ್ರಃ ಪಾದಯೋರ್ವ್ಯಸನಾರ್ದನಃ
॥ ೧೯ ॥

ದುರಾಪಾ ಹ್ಯಲ್ಪತಪಸಃ ಸೇವಾ ವೈಕುಂಠ ವರ್ತ್ಮಸು ।
ಯತ್ರೋಪಗೀಯತೇ ನಿತ್ಯಂ ದೇವದೇವೋ ಜನಾರ್ದನಃ
॥ ೨೦ ॥

ಸೃಷ್ಟ್ವಾಗ್ರೇ ಮಹದಾದೀನಿ ಸವಿಕಾರಾಣ್ಯನುಕ್ರಮಾತ್ ।
ತೇಭ್ಯೋ ವಿರಾಜಮುದ್ಧೃತ್ಯ ತಮನು ಪ್ರಾವಿಶದ್ವಿಭುಃ
॥ ೨೧ ॥

ಯಮಾಹುರಾದ್ಯಂ ಪುರುಷಂ ಸಹಸ್ರಾಂಘ್ರ್ಯೂರುಬಾಹುಕಮ್ ।
ಯತ್ರ ವಿಶ್ವ ಇಮೇ ಲೋಕಾಃ ಸವಿಕಾಶಂ ಸಮಾಸತೇ
॥ ೨೨ ॥

ಯಸ್ಮಿಂದಶವಿಧಃ ಪ್ರಾಣಃ ಸೇಂದ್ರಿಯಾರ್ಥೇಂದ್ರಿಯಸ್ತ್ರಿವೃತ್ ।
ತ್ವಯೇರಿತೋ ಯತೋ ವರ್ಣಾಸ್ತದ್ವಿಭೂತೀರ್ವದಸ್ವ ನಃ
॥ ೨೩ ॥

ಯತ್ರ ಪುತ್ರೈಶ್ಚ ಪೌತ್ರೈಶ್ಚ ನಪ್ತೃಭಿಃ ಸಹ ಗೋತ್ರಜೈಃ ।
ಪ್ರಜಾ ವಿಚಿತ್ರಾಕೃತಯ ಆಸನ್ಯಾಭಿರಿದಂ ತತಮ್
॥ ೨೪ ॥

ವಿಷಯಗಳನ್ನು ಚೆನ್ನಾಗಿ ತಿಳಿದುಕೊಂಡಿದೆ. ॥ ೧೫ ॥ ಜ್ಞಾನಿ ಶ್ರೇಷ್ಠರೇ! 'ಜೀವಿಯಲ್ಲಿ ಕಂಡುಬರುವ ಕ್ಲೇಶಾದಿಗಳ ಆಧಾರ ಕೇವಲ ಭಗವಂತನ ಮಾಯೆಯೇ ಆಗಿದೆ' ಎಂದು ತಾವು ತಿಳಿಸಿದುದು ಸರಿಯಾಗಿಯೇ ಇದೆ. ಆ ಕ್ಲೇಶವು ಮಿಥ್ಯಾ ಹಾಗೂ ಆಧಾರರಹಿತವಾಗಿದೆ. ಏಕೆಂದರೆ, ಈ ವಿಶ್ವದ ಮೂಲಕಾರಣವು ಮಾಯೆಯಲ್ಲದೆ ಬೇರೆ ಏನೂ ಇಲ್ಲ. ॥ ೧೬ ॥ ಈ ಪ್ರಪಂಚದಲ್ಲಿ ಎರಡು ವರ್ಗದ ಜನರೇ ಸುಖವಾಗಿರುತ್ತಾರೆ – (೧) ಏನೂ ಅರಿಯದ (ಅಜ್ಞಾನದಿಂದ ಕೂಡಿದ) ಕಡುಮೂರ್ಖರು. (೨) ಬುದ್ಧಿ ಮುಂತಾದವುಗಳಿಂದ ಮೀರಿರುವ ಶ್ರೀಭಗವಂತನನ್ನು ಹೊಂದಿದವರು. ನಡುವಿನ ಶ್ರೇಣಿಯ ಜನರು ಸಂಶಯಗಳಿಗೆ ವಶರಾಗಿ ದುಃಖಪಡುತ್ತಿರುತ್ತಾರೆ. ॥ ೧೭ ॥ ಪೂಜ್ಯರೇ! ಈ ಅನಾತ್ಮ ವಸ್ತುಗಳು ವಾಸ್ತವವಾಗಿ ಇಲ್ಲವೇ ಇಲ್ಲ, ಕೇವಲ ಕಂಡುಬರುತ್ತವಷ್ಟೆ ಎಂಬ ನಿಶ್ಚಯವು ನಿಮ್ಮ ಕೃಪೆಯಿಂದ ನನಗೆ ಉಂಟಾಯಿತು. ಈಗ ನಿಮ್ಮ ಚರಣಗಳ ಸೇವೆಯ ಪ್ರಭಾವದಿಂದ ಆ ಪ್ರತೀತಿಗಳನ್ನು ಹೋಗಲಾಡಿಸಿಕೊಳ್ಳುವೆನು. ॥ ೧೮ ॥ ಈ ತಮ್ಮ ಚರಣಗಳ ಸೇವೆಯಿಂದ ನಿತ್ಯಸಿದ್ಧ ಭಗವಾನ್ ಮಧುಸೂದನನ ಚರಣಕಮಲದಲ್ಲಿ ಉತ್ಕಟಪ್ರೇಮ ಮತ್ತು ಆನಂದದ ವೃದ್ಧಿ ಯಾಗುತ್ತದೆ. ಅದು ಹುಟ್ಟು ಸಾವುಗಳನ್ನು ನಾಶಮಾಡಿ ಬಿಡುತ್ತದೆ. ॥ ೧೯ ॥ ಭಗವದ್ಭಕ್ತರಾದ ಮಹಾತ್ಮರೇ ಭಗವತ್ ಪ್ರಾಪ್ತಿಯ ಸಾಕ್ಷಾತ್ ಮಾರ್ಗವಾಗಿದ್ದಾರೆ. ಅವರಲ್ಲಿ ಸದಾಕಾಲ ದೇವದೇವನಾದ ಶ್ರೀಹರಿಯ ಗುಣಗಾನವಾಗುತ್ತಾ ಇರುತ್ತದೆ. ಅಂತಹ ಮಹಾತ್ಮರ ಸೇವಾಭಾಗ್ಯವು ಅಲ್ಪಪುಣ್ಯವುಳ್ಳವರಿಗೆ ದೊರಕ ಲಾರದು. ॥ ೨೦ ॥

ಪೂಜ್ಯರೇ! ಸೃಷ್ಟಿಯ ಪ್ರಾರಂಭದಲ್ಲಿ ಭಗವಂತನು ಕ್ರಮವಾಗಿ ಮಹತ್ತು ಮುಂತಾದ ತತ್ತ್ವಗಳನ್ನು ಹಾಗೂ ಅದರ ವಿಕಾರಗಳನ್ನು ರಚಿಸಿ ಮತ್ತೆ ಅವುಗಳ ಅಂಶಗಳಿಂದ ವಿರಾಟ್‌ಪುರುಷನನ್ನು ನಿರ್ಮಿಸಿದನು. ಅನಂತರ ತಾನೇ ಅದರಲ್ಲಿ ಪ್ರವೇಶಿಸಿದನು ಎಂದು ತಾವು ತಿಳಿಸಿದಿರಿ. ॥ ೨೧ ॥ ಆ ವಿರಾಟ್‌ಪುರುಷನಿಗೆ ಸಾವಿರಾರು ಕಾಲುಗಳು, ಮೊಣಕಾಲುಗಳೂ, ಬಾಹುಗಳು ಇವೆ. ಆತನನ್ನೇ ವೇದಗಳು ಆದಿಪುರುಷನೆಂದು ಕರೆಯುತ್ತವೆ. ವಿಸ್ತಾರಗೊಂಡ ಈ ಸಮಸ್ತಲೋಕಗಳು ಆತನಲ್ಲಿಯೇ ಅಡಕವಾಗಿವೆ. ॥ ೨೨ ॥ ಇಂದ್ರಿಯ ವಿಷಯಗಳಿಂದಲೂ, ತ್ರಿಗುಣಗಳಿಂದಲೂ ಕೂಡಿದ ಇಂದ್ರಿಯಬಲ, ಮನೋಬಲ, ಶಾರೀರಿಕಬಲಗಳೊಂದಿಗೆ ಹತ್ತು ವಿಧವಾದ ಪ್ರಾಣಗಳೂ ಆತನಲ್ಲಿಯೇ ಸೇರಿಕೊಂಡಿವೆ. ಬ್ರಾಹ್ಮಣಾದಿ ವರ್ಣಗಳೂ ಆತನಿಂದಲೇ ಹುಟ್ಟಿದವು ಎಂಬು ದನ್ನೂ ವರ್ಣಿಸಿದಿರಿ. ಈಗ ನನಗೆ ಆ ಪರಮಾತ್ಮನ ಬ್ರಹ್ಮಾದಿ ವಿಭೂತಿಗಳನ್ನು ತಿಳಿಸಿರಿ. ಈ ಇಡೀ ಬ್ರಹ್ಮಾಂಡವನ್ನು ತುಂಬಿ ಕೊಂಡಿರುವ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳೇ ಮುಂತಾದ ಬಂಧುಗಳೊಡನೆ ಕೂಡಿದ ಎಲ್ಲ ಪ್ರಜೆಗಳೂ ಆ ವಿಭೂತಿ ಯಿಂದಲೇ ಉಂಟಾದವರಲ್ಲವೇ! ॥ ೨೩-೨೪ ॥ ಆ ವಿರಾಟ್ ಪುರುಷನು ಬ್ರಹ್ಮಾದಿ ಪ್ರಜಾಪತಿಗಳಿಗೂ ಪ್ರಭುವು. ಅವನು ಯಾವ-ಯಾವ ಪ್ರಜಾಪತಿಗಳನ್ನು ಸೃಷ್ಟಿಸಿದನು? ಸೃಷ್ಟಿ ಉಪಸೃಷ್ಟಿ ಮತ್ತು ಮನ್ವಂತರಾಧಿಪತಿಗಳನ್ನು ಯಾವ ಕ್ರಮದಿಂದ

ಪ್ರಜಾಪತೀನಾಂ ಸ ಪತಿಶ್ಚಕ್ಲೃಪೇ ಕಾನ್ ಪ್ರಜಾಪತೀನ್ ।
ಸರ್ಗಾಂಶ್ಚೈವಾನುಸರ್ಗಾಂಶ್ಚ ಮನೂನ್ಮನ್ವಂತರಾಧಿಪಾನ್ ॥ ೨೫ ॥

ಏತೇಷಾಮಪಿ ವಂಶಾಂಶ್ಚ ವಂಶಾನುಚರಿತಾನಿ ಚ ।
ಉಪರ್ಯಧಶ್ಚ ಯೇ ಲೋಕಾ ಭೂಮೇರ್ಮಿತ್ರಾತ್ಮಜಾಸತೇ ॥ ೨೬ ॥

ತೇಷಾಂ ಸಂಸ್ಥಾಂ ಪ್ರಮಾಣಂ ಚ ಭೂರ್ಲೋಕಸ್ಯ ಚ ವರ್ಣಯ ।
ತಿರ್ಯಙ್ಮಾನುಷದೇವಾನಾಂ ಸರೀಸೃಪಪತತ್ತ್ರಿಣಾಮ್ ।
ವದ ನಃ ಸರ್ಗಸಂವ್ಯೂಹಂ ಗಾರ್ಭಸ್ವೇದದ್ವಿಜೋದ್ಭಿದಾಮ್ ॥ ೨೭ ॥

ಗುಣಾವತಾರೈರ್ವಿಶ್ವಸ್ಯ ಸರ್ಗಸ್ಥಿತ್ಯಪ್ಯಯಾಶ್ರಯಮ್ ।
ಸೃಜತಃ ಶ್ರೀನಿವಾಸಸ್ಯ ವ್ಯಾಚಕ್ಷ್ವೋದಾರವಿಕ್ರಮಮ್ ॥ ೨೮ ॥

ವರ್ಣಾಶ್ರಮವಿಭಾಗಾಂಶ್ಚ ರೂಪಶೀಲಸ್ವಭಾವತಃ ।
ಋಷೀಣಾಂ ಜನ್ಮಕರ್ಮಾದಿ ವೇದಸ್ಯ ಚ ವಿಕರ್ಷಣಮ್ ॥ ೨೯ ॥

ಯಜ್ಞಸ್ಯ ಚ ವಿತಾನಾನಿ ಯೋಗಸ್ಯ ಚ ಪಥಃ ಪ್ರಭೋ ।
ನೈಷ್ಕರ್ಮ್ಯಸ್ಯ ಚ ಸಾಙ್ಖ್ಯಸ್ಯ ತಂತ್ರಂ ವಾ ಭಗವತ್ಸ್ಮೃತಮ್ ॥ ೩೦ ॥

ಪಾಖಂಡಪಥವೈಷಮ್ಯಂ ಪ್ರತಿಲೋಮನಿವೇಶನಮ್ ।
ಜೀವಸ್ಯ ಗತಯೋ ಯಾಶ್ಚ ಯಾವತೀರ್ಗುಣಕರ್ಮಜಾಃ ॥ ೩೧ ॥

ಧರ್ಮಾರ್ಥಕಾಮಮೋಕ್ಷಾಣಾಂ ನಿಮಿತ್ತಾನ್ಯವಿರೋಧತಃ ।
ವಾರ್ತಾಯಾ ದಂಡ ನೀತೇಶ್ಚ ಶ್ರುತಸ್ಯ ಚ ವಿಧಿಂ ಪೃಥಕ್ ॥ ೩೨ ॥

ಶ್ರಾದ್ಧಸ್ಯ ಚ ವಿಧಿಂ ಬ್ರಹ್ಮನ್ ಪಿತೄಣಾಂ ಸರ್ಗಮೇವ ಚ ।
ಗ್ರಹನಕ್ಷತ್ರತಾರಾಣಾಂ ಕಾಲಾವಯವಸಂಸ್ಥಿತಿಮ್ ॥ ೩೩ ॥

ದಾನಸ್ಯ ತಪಸೋ ವಾಪಿ ಯಚ್ಚೇಷ್ಟಾಪೂರ್ತಯೋಃ ಫಲಮ್ ।
ಪ್ರವಾಸಸ್ಥಸ್ಯ ಯೋ ಧರ್ಮೋ ಯಶ್ಚ ಪುಂಸ ಉತಾಪದಿ ॥ ೩೪ ॥

ಯೇನ ವಾ ಭಗವಾಂಸ್ತುಷ್ಯೇದ್ಧರ್ಮಯೋನಿರ್ಜನಾರ್ದನಃ ।
ಸಂಪ್ರಸೀದತಿ ವಾ ಯೇಷಾಮೇತದಾಖ್ಯಾಹಿ ಚಾನಘ ॥ ೩೫ ॥

ಅನುವ್ರತಾನಾಂ ಶಿಷ್ಯಾಣಾಂ ಪುತ್ರಾಣಾಂ ಚ ದ್ವಿಜೋತ್ತಮ ।
ಅನಾಪೃಷ್ಟಮಪಿ ಬ್ರೂಯುರ್ಗುರವೋ ದೀನವತ್ಸಲಾಃ ॥ ೩೬ ॥

ಸೃಷ್ಟಿಸಿದನು ? ॥ ೨೫ ॥ ಮೈತ್ರೇಯರೇ! ಆ ಮನುಗಳ ವಂಶಗಳನ್ನೂ, ಆ ವಂಶಗಳಿಗೆ ಸೇರಿದ ರಾಜರ ಚರಿತ್ರೆಗಳನ್ನೂ ವರ್ಣಿಸಿರಿ. ಭೂಮಿಗೆ ಮೇಲೆ ಯಾವ ಲೋಕಗಳಿವೆ ? ಕೆಳಗೆ ಯಾವ ಲೋಕಗಳಿವೆ ? ಭೂಲೋಕದ ವಿಸ್ತಾರವೇನು ? ಸ್ಥಿತಿಯೇನು ? ಎಂಬುದನ್ನೂ ವಿವರಿಸಿರಿ. ತಿರ್ಯಕ್, ಮನುಷ್ಯರು, ದೇವತೆಗಳು, ತೆವಳುವ ಪ್ರಾಣಿಗಳು, ಪಕ್ಷಿಗಳು, ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜ ಈ ನಾಲ್ಕು ಪ್ರಕಾರದ ಪ್ರಾಣಿಗಳ ಉತ್ಪತ್ತಿ ಕ್ರಮವನ್ನೂ ತಿಳಿಸಿರಿ. ॥ ೨೬–೨೭ ॥ ಶ್ರೀಹರಿಯು ಸೃಷ್ಟಿಮಾಡುವಾಗ ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರಕ್ಕಾಗಿ ತನ್ನ ಗುಣಾವತಾರವಾದ ಬ್ರಹ್ಮಾ ವಿಷ್ಣು ಮಹೇಶ್ವರ ರೂಪಗಳಲ್ಲಿಯೂ, ಇತರ ಅವತಾರ ರೂಪಗಳಲ್ಲಿಯೂ ಯಾವ ಮಂಗಳಕರವಾದ ಲೀಲೆಗಳನ್ನು ಮಾಡಿದನು ? ಎಂಬುದನ್ನು ವರ್ಣಿಸಿರಿ. ॥ ೨೮ ॥ ವೇಷ, ಆಚಾರ, ಸ್ವಭಾವಗಳಿಗೆ ಅನುಸಾರವಾಗಿ ವರ್ಣಾಶ್ರಮಗಳ ವಿಭಾಗ, ಋಷಿಗಳ ಜನ್ಮ-ಕರ್ಮಾದಿಗಳೂ, ವೇದಗಳ ವಿಭಾಗ, ಯಜ್ಞಗಳ ವಿಸ್ತಾರ, ಯೋಗದ ಮಾರ್ಗ, ಜ್ಞಾನಮಾರ್ಗ ಮತ್ತು ಅದಕ್ಕೆ ಸಾಧನವಾದ ಸಾಂಖ್ಯಮಾರ್ಗ ಹಾಗೂ ಶ್ರೀಭಗವಂತನು ಉಪದೇಶಿಸಿದ ನಾರದ ಪಾಂಚರಾತ್ರಾದಿ ತಂತ್ರಶಾಸ್ತ್ರಗಳನ್ನೂ, ವಿಭಿನ್ನ ಪಾಷಂಡ ಮತಗಳ ಮಾರ್ಗಭೇದಗಳನ್ನೂ, ಅದರ ಪ್ರಚಾರದಿಂದ ಉಂಟಾಗುವ ವೈಷಮ್ಯವನ್ನೂ, ಪ್ರತಿಲೋಮ ವರ್ಣಗಳ ಸೃಷ್ಟಿ ಸ್ಥಿತಿಗಳನ್ನೂ, ಬೇರೆ-ಬೇರೆ ಗುಣಗಳಿಂದಲೂ – ಕರ್ಮಗಳಿಂದಲೂ ಜೀವರಿಗೆ ಉಂಟಾಗುವ ಬಗೆ-ಬಗೆಯಗತಿಯನ್ನೂ ನಿರೂಪಿಸಿರಿ. ॥ ೨೯–೩೧ ॥

ಮಹಾತ್ಮರೇ ! ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ, ಪರಸ್ಪರ ವಿರೋಧ ಬರದಂತೆ ಸಾಧಿಸುವ ಮಾರ್ಗಗಳನ್ನೂ, ವಾಣಿಜ್ಯ, ದಂಡನೀತಿ ಮತ್ತು ಶಾಸ್ತ್ರಶ್ರವಣದ ವಿಧಿಗಳನ್ನೂ, ಶ್ರಾದ್ಧದ ವಿಧಿಯನ್ನೂ, ಪಿತೃದೇವತೆಗಳ ಸೃಷ್ಟಿಯನ್ನೂ, ಹಾಗೆಯೇ ಕಾಲಚಕ್ರದಲ್ಲಿ ಗ್ರಹ, ನಕ್ಷತ್ರ, ತಾರಾಗಣಗಳ ಸ್ಥಿತಿಗಳನ್ನೂ, ಬೇರೆ-ಬೇರೆಯಾಗಿ ವರ್ಣಿಸಿರಿ. ॥ ೩೨–೩೩ ॥ ದಾನ, ತಪಸ್ಸು ಇಷ್ಟಾ- ಪೂರ್ತಕರ್ಮಗಳ ಫಲವೇನು? ಪ್ರವಾಸ ಹಾಗೂ ಆಪತ್ಕಾಲದಲ್ಲಿ ಮನುಷ್ಯನು ಯಾವ ಧರ್ಮವನ್ನು ಆಚರಿಸಬೇಕು ? ॥ ೩೪ ॥ ಪುಣ್ಯಾತ್ಮರಾದ ಮೈತ್ರೇಯರೇ ! ಧರ್ಮಕ್ಕೆ ಮೂಲ ಕಾರಣನಾದ ಭಗವಾನ್ ಜನಾರ್ದನನು ಯಾವ ಆಚರಣೆಗಳಿಂದ ಸಂತುಷ್ಟನಾಗುತ್ತಾನೆ ? ಯಾರ ಮೇಲೆ ಅನುಗ್ರಹ ತೋರುವನು ? ಎಂಬುದನ್ನೂ ವರ್ಣಿಸಿರಿ. ॥ ೩೫ ॥ ದ್ವಿಜಶ್ರೇಷ್ಠರೇ ! ದೀನವತ್ಸಲರಾದ ಗುರುಗಳು, ತಮಗೆ ವಿಧೇಯರಾಗಿರುವ ಶಿಷ್ಯರಿಗೂ ಮತ್ತು ಪುತ್ರರಿಗೂ ಕೇಳದೆಯೇ ಹಿತೋಪದೇಶ ಮಾಡುತ್ತಾರೆ. ॥ ೩೬ ॥ ಪೂಜ್ಯರೇ ! ಮಹದಾದಿ ತತ್ತ್ವಗಳ ಪ್ರಳಯಗಳು ಎಷ್ಟು ಪ್ರಕಾರಗಳಾಗಿವೆ ? ಶ್ರೀಭಗವಂತನು ಯೋಗನಿದ್ರೆಯಲ್ಲಿರುವಾಗ ಅವುಗಳಲ್ಲಿ ಯಾವ-ಯಾವ ತತ್ತ್ವಗಳು ಅವನ ಸೇವೆ ಮಾಡುತ್ತವೆ ? ಯಾವ-ಯಾವ ತತ್ತ್ವಗಳು ಅವನಲ್ಲಿ ಲಯ

ತತ್ತ್ವಾನಾಂ ಭಗವಂಸ್ತೇಷಾಂ ಕತಿಧಾ ಪ್ರತಿಸಂಕ್ರಮಃ ।
ತತ್ರೇಮಂ ಕ ಉಪಾಸೀರನ್ ಕ ಉ ಸ್ವಿದನುಶೇರತೇ ॥ ೩೭ ॥

ಪುರುಷಸ್ಯ ಚ ಸಂಸ್ಥಾನಂ ಸ್ವರೂಪಂ ವಾ ಪರಸ್ಯ ಚ ।
ಜ್ಞಾನಂ ಚ ನೈಗಮಂ ಯತ್ತದ್ಗುರುಶಿಷ್ಯಪ್ರಯೋಜನಮ್ ॥ ೩೮ ॥

ನಿಮಿತ್ತಾನಿ ಚ ತಸ್ಯೇಹ ಪ್ರೋಕ್ತಾನ್ಯನಘ ಸೂರಿಭಿಃ ।
ಸ್ವತೋ ಜ್ಞಾನಂ ಕುತಃ ಪುಂಸಾಂ ಭಕ್ತಿರ್ವೈರಾಗ್ಯಮೇವ ವಾ ॥ ೩೯ ॥

ಏತಾನ್ಮೇ ಪೃಚ್ಛತಃ ಪ್ರಶ್ನಾನ್ ಹರೇಃ ಕರ್ಮವಿವಿತ್ಸಯಾ।
ಬ್ರೂಹಿ ಮೇಽಜ್ಞಸ್ಯ ಮಿತ್ರತ್ವಾದಜಯಾ ನಷ್ಟಚಕ್ಷುಷಃ ॥ ೪೦ ॥

ಸರ್ವೇ ವೇದಾಶ್ಚ ಯಜ್ಞಾಶ್ಚ ತಪೋ ದಾನಾನಿ ಚಾನಘ ।
ಜೀವಾಭಯಪ್ರದಾನಸ್ಯ ನ ಕುರ್ವೀರನ್ ಕಲಾಮಪಿ ॥ ೪೧ ॥

*ಶ್ರೀಶುಕ ಉವಾಚ*

ಸ ಇತ್ಥಮಾಪೃಷ್ಟ ಪುರಾಣಕಲ್ಪಃ
ಕುರುಪ್ರಧಾನೇನ ಮುನಿಪ್ರಧಾನಃ ।
ಪ್ರವೃದ್ಧಹರ್ಷೋ ಭಗವತ್ಕಥಾಯಾಂ
ಸಂಚೋದಿತಸ್ತಂ ಪ್ರಹಸನ್ನಿವಾಹ ॥ ೪೨ ॥

ಹೊಂದುತ್ತವೆ? ॥ ೩೭ ॥ ಜೀವದ ತತ್ತ್ವವೇನು? ಪರಮ ಪುರುಷನ ಸ್ವರೂಪವೇನು? ಉಪನಿಷತ್ ಪ್ರತಿಪಾದಿತ ಜ್ಞಾನದ ಸ್ವರೂಪ ಮತ್ತು ಗುರು-ಶಿಷ್ಯರ ಪಾರಸ್ಪರಿಕ ಪ್ರಯೋಜನವೇನು? ॥ ೩೮ ॥ ಪುಣ್ಯಾತ್ಮರೇ! ಆ ಜ್ಞಾನದ ಪ್ರಾಪ್ತಿಗಾಗಿ ವಿದ್ವಾಂಸರು ಯಾವ-ಯಾವ ಉಪಾಯಗಳನ್ನು ಹೇಳಿರುವರು? ಏಕೆಂದರೆ, ಮನುಷ್ಯರಿಗೆ ಜ್ಞಾನ, ಭಕ್ತಿ, ವೈರಾಗ್ಯಗಳು ತಾವೇ-ತಾವಾಗಿ ಉಂಟಾಗಲಾರದಷ್ಟೇ? ॥ ೩೯ ॥ ಬ್ರಾಹ್ಮಣ ಶ್ರೇಷ್ಠರೇ! ಮಾಯಾ-ಮೋಹದಿಂದಾಗಿ ನನ್ನ ವಿಚಾರದೃಷ್ಟಿಯು ನಷ್ಟವಾಗಿ ಬಿಟ್ಟಿದೆ. ನಾನು ಅಜ್ಞನಾಗಿದ್ದೇನೆ. ತಾವೋ ನನ್ನ ಪರಮ ಹಿತೈಷಿಗಳು. ಆದ್ದರಿಂದ ಶ್ರೀಹರಿಲೀಲೆಯ ಜ್ಞಾನವನ್ನು ಪಡೆಯುವ ಇಚ್ಛೆಯಿಂದ ನಾನು ಕೇಳಿರುವ ಪ್ರಶ್ನೆಗಳಿಗೆ ಉತ್ತರವನ್ನು ದಯಪಾಲಿಸಿರಿ. ॥ ೪೦ ॥ ಪುಣ್ಯಾತ್ಮರಾದ ಮೈತ್ರೇಯರೇ! ಸಮಸ್ತ ವೇದಗಳ ಅಧ್ಯಯನ, ಯಜ್ಞ, ತಪಸ್ಸು, ದಾನಾದಿಗಳಿಂದ ಉಂಟಾಗುವ ಪುಣ್ಯವು – ಭಗವತ್ತತ್ತ್ವದ ಉಪದೇಶದಿಂದ ಜೀವಿಯನ್ನು ಜನ್ಮ-ಮೃತ್ಯು ಭಯದಿಂದ ಬಿಡಿಸಿ ಅವನನ್ನು ನಿರ್ಭಯನನ್ನಾಗಿಸುವುದರಲ್ಲಿ ಉಂಟಾಗುವ ಪುಣ್ಯದ ಹದಿನಾರನೆಯ ಒಂದು ಭಾಗಕ್ಕೂ ಸಾಟಿಯಾಗಲಾರದು. ॥ ೪೧ ॥

**ಶ್ರೀಶುಕಮಹರ್ಷಿಗಳು ಹೇಳುತ್ತಾರೆ** – ಎಲೈ ರಾಜೇಂದ್ರಾ! ಕುರುಶ್ರೇಷ್ಠನಾದ ವಿದುರನು ಹೀಗೆ ಪುರಾಣದ ವಿಷಯದಲ್ಲಿ ಪ್ರಶ್ನೆ ಮಾಡಿದಾಗ, ಮುನಿಶ್ರೇಷ್ಠರಾದ ಮೈತ್ರೇಯರಿಗೆ ತುಂಬಾ ಸಂತೋಷವಾಯಿತು. ಶ್ರೀಭಗವಂತನ ಕಥೆಯನ್ನು ಹೇಳಲು ಪ್ರೇರಣೆ ಬಂದದ್ದರಿಂದ ಹರ್ಷಗೊಂಡು ನಸುನಗುತ್ತಾ ಆತನಿಗೆ ಹೀಗೆ ಹೇಳತೊಡಗಿದರು. ॥ ೪೨ ॥

***ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಸಪ್ತಮೋಽಧ್ಯಾಯಃ ॥ ೭ ॥**

# ಎಂಟನೆಯ ಅಧ್ಯಾಯ

## ಬ್ರಹ್ಮದೇವರ ಉತ್ಪತ್ತಿ

*ಮೈತ್ರೇಯ ಉವಾಚ*

ಸತ್ಸೇವನೀಯೋ ಬತ ಪೂರುವಂಶೋ
ಯಲ್ಲೋಕಪಾಲೋ ಭಗವತ್ಪ್ರಧಾನಃ ।
ಬಭೂವಿಥೇಹಾಜಿತಕೀರ್ತಿಮಾಲಾಂ
ಪದೇ ಪದೇ ನೂತನಯಸ್ಯಭೀಕ್ಷ್ಣಮ್ ॥ ೧ ॥

ಸೋಽಹಂ ನೃಣಾಂ ಕ್ಷುಲ್ಲಸುಖಾಯ ದುಃಖಂ
ಮಹದ್ಗತಾನಾಂ ವಿರಮಾಯ ತಸ್ಯ ।
ಪ್ರವರ್ತಯೇ ಭಾಗವತಂ ಪುರಾಣಂ
ಯದಾಹ ಸಾಕ್ಷಾದ್ಭಗವಾನೃಷಿಭ್ಯಃ ॥ ೨ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ನೀನು ಭಗವದ್ಭಕ್ತರಲ್ಲಿ ಪ್ರಧಾನನೂ, ಲೋಕಪಾಲಕನೂ ಆ ಯಮಧರ್ಮನೇ ಆಗಿರುವಿ. ನೀನು ಪುರುವಂಶದಲ್ಲಿ ಹುಟ್ಟಿದ್ದರಿಂದ ಆ ವಂಶವು ಸಾಧು-ಸತ್ಪುರುಷರಿಗೆ ಸೇವ್ಯವಾಗಿ ಬಿಟ್ಟಿದೆ. ಎಂತಹ ಧನ್ಯನು ನೀನು ! ಶ್ರೀಹರಿಯ ಕೀರ್ತಿಮಯ ಮಾಲೆಯನ್ನು ಪ್ರತಿಯೊಂದು ಪದದಲ್ಲಿಯೂ ನಿರಂತರವಾಗಿ ಹೊಸದಾಗಿಸುತ್ತಿದ್ದೀಯೆ. ॥ ೧ ॥ ಈಗ ನಾನು ಕ್ಷುದ್ರವಾದ ವಿಷಯಸುಖದ ಕಾಮನೆಯಿಂದ ಮಹಾದುಃಖವನ್ನು ಅನುಭವಿಸುತ್ತಿರುವ ಜನರ ದುಃಖವನ್ನು ತೊಲಗಿಸುವುದಕ್ಕಾಗಿ ಶ್ರೀಮದ್ಭಾಗವತ ಮಹಾ ಪುರಾಣವನ್ನು ಪ್ರಾರಂಭಿಸುತ್ತೇನೆ. ಇದನ್ನು ಸ್ವಯಂ ಸಂಕರ್ಷಣ ಭಗವಂತನು ಸನಕಾದಿ ಮಹರ್ಷಿಗಳಿಗೆ ಉಪದೇಶಿಸಿದ್ದನು. ॥ ೨ ॥

ಆಸೀನಮುರ್ವ್ಯಾಂ ಭಗವಂತಮಾದ್ಯಂ
ಸಂಕರ್ಷಣಂ ದೇವಮಕುಂಠಸತ್ತ್ವಮ್ ।
ವಿವಿತ್ಸವಸ್ತತ್ತ್ವಮತಃ ಪರಸ್ಯ
ಕುಮಾರಮುಖ್ಯಾ ಮುನಯೋಽನ್ವಪೃಚ್ಛನ್ ॥ ೩ ॥

ಸ್ವಮೇವ ಧಿಷ್ಣ್ಯಂ ಬಹು ಮಾನಯಂತಂ
ಯಂ ವಾಸುದೇವಾಭಿಧಮಾಮನಂತಿ ।
ಪ್ರತ್ಯಗ್ಧೃತಾಕ್ಷಾಂಬುಜಕೋಶಮೀಷ-
ದುನ್ಮೀಲಯಂತಂ ವಿಬುಧೋದಯಾಯ ॥ ೪ ॥

ಸ್ವರ್ಧುನ್ಯುದಾರ್ದ್ರೈಃ ಸ್ವಜಟಾಕಲಾಪೈ-
ರುಪಸ್ಪೃಶಂತಶ್ಚರಣೋಪಧಾನಮ್ ।
ಪದ್ಮಂ ಯದರ್ಚಂತ್ಯಹಿರಾಜಕನ್ಯಾಃ
ಸಪ್ರೇಮನಾನಾಬಲಿಭಿರ್ವರಾರ್ಥಾಃ ॥ ೫ ॥

ಮುಹುರ್ಗೃಣಂತೋ ವಚಸಾನುರಾಗ-
ಸ್ಖಲತ್ಪದೇನಾಸ್ಯ ಕೃತಾನಿ ತಜ್ಜ್ಞಾಃ ।
ಕಿರೀಟಸಾಹಸ್ರಮಣಿಪ್ರವೇಕ-
ಪ್ರದ್ಯೋತಿತೋದ್ದಾಮಫಣಾಸಹಸ್ರಮ್ ॥ ೬ ॥

ಪ್ರೋಕ್ತಂ ಕಿಲೈತದ್ಭಗವತ್ತಮೇನ
ನಿವೃತ್ತಿಧರ್ಮಾಭಿರತಾಯ ತೇನ ।
ಸನತ್ಕುಮಾರಾಯ ಸ ಚಾಹ ಪೃಷ್ಟಃ
ಸಾಂಖ್ಯಾಯನಾಯಾಂಗ ಧೃತವ್ರತಾಯ ॥ ೭ ॥

ಸಾಂಖ್ಯಾಯನಃ ಪಾರಮಹಂಸ್ಯಮುಖ್ಯೋ
ವಿವಕ್ಷಮಾಣೋ ಭಗವದ್ವಿಭೂತೀಃ ।
ಜಗಾದ ಸೋಽಸ್ಮದ್ಗುರವೇಽನ್ವಿತಾಯ
ಪರಾಶರಾಯಾಥ ಬೃಹಸ್ಪತೇಶ್ಚ ॥ ೮ ॥

ಪ್ರೋವಾಚ ಮಹ್ಯಂ ಸ ದಯಾಲುರುಕ್ತೋ
ಮುನಿಃ ಪುಲಸ್ತ್ಯೇನ ಪುರಾಣಮಾದ್ಯಮ್ ।
ಸೋಽಹಂ ತವೈತತ್ಕಥಯಾಮಿ ವತ್ಸ
ಶ್ರದ್ಧಾಲವೇ ನಿತ್ಯಮನುವ್ರತಾಯ ॥ ೯ ॥

ಉದಾಪ್ಲುತಂ ವಿಶ್ವಮಿದಂ ತದಾಽಽಸೀದ್
ಯನ್ನಿದ್ರಯಾಮೀಲಿತದೃಙ್ ನ್ಯಮೀಲಯತ್ ।
ಅಹೀಂದ್ರತಲ್ಪೇಽಧಿಶಯಾನ ಏಕಃ
ಕೃತಕ್ಷಣಃ ಸ್ವಾತ್ಮರತೌ ನಿರೀಹಃ ॥ ೧೦ ॥

ಅಖಂಡ ಜ್ಞಾನಸಂಪನ್ನ ಆದಿದೇವ ಭಗವಾನ್ ಸಂಕರ್ಷಣನು ಪಾತಾಳದಲ್ಲಿ ವಿರಾಜಮಾನನಾಗಿದ್ದನು. ಸನತ್ಕುಮಾರಾದಿ ಋಷಿಗಳು ಅವನಿಂದ ಪರಮಪುರುಷೋತ್ತಮ ಪರಬ್ರಹ್ಮತತ್ತ್ವವನ್ನು ತಿಳಿಯಲಿಕ್ಕಾಗಿ ಪ್ರಶ್ನಿಸಿದರು. ॥ ೩ ॥ ಸ್ವಾಮಿ ಸಂಕರ್ಷಣನು ಆಗ ತನಗೆ ಆಶ್ರಯನಾಗಿರುವ ಹಾಗೂ ವೇದಗಳು ಯಾರನ್ನು ವಾಸುದೇವನೆಂದು ನಿರೂಪಿಸುವವೋ ಆ ಪರಮಾತ್ಮನನ್ನೇ ಮನಸ್ಸಿನಲ್ಲಿ ಆರಾಧಿಸುತ್ತಿದ್ದನು. ಧ್ಯಾನದಲ್ಲಿ ಮುಳುಗಿದ್ದ ಆತನ ಕಮಲಸದೃಶವಾದ ಕಣ್ಣುಗಳು ಮುಚ್ಚಿದ್ದವು. ಋಷಿಗಳ ಪ್ರಶ್ನೆಯನ್ನು ಕೇಳಿ ಸನತ್ಕುಮಾರಾದಿ ಜ್ಞಾನಿಗಳ ಆನಂದಕ್ಕಾಗಿ ಅರೆತೆರೆದ ಕಣ್ಣುಗಳಿಂದ ಅವರನ್ನು ನೋಡಿದನು. ॥ ೪ ॥

ಸನಕಾದಿ ಮಹರ್ಷಿಗಳು ಮಂದಾಕಿನಿಯ ಜಲದಿಂದ ಒದ್ದೆಯಾದ ತಮ್ಮ ಜಟೆಗಳಿಂದ ಆ ಆದಿಶೇಷ ಸ್ವಾಮಿಯ ಪಾದಪೀಠರೂಪವಾದ ಪದ್ಮವನ್ನು ಮುಟ್ಟಿ ನಮಸ್ಕರಿಸಿದರು. ನಾಗರಾಜಕುಮಾರಿಯರು ತಮ್ಮ ಅಭೀಷ್ಟ ವರವನ್ನು ಪಡೆಯಲಿಕ್ಕಾಗಿ ಪ್ರೇಮದಿಂದ ಬಗೆ-ಬಗೆಯಾದ ಕಾಣಿಕೆಗಳನ್ನು ಸಮರ್ಪಿಸುತ್ತಾ ಪೂಜಿಸುತ್ತಿದ್ದ ಪವಿತ್ರವಾದ ಪದ್ಮಪೀಠವದು. ॥ ೫ ॥ ಅವನ ಲೀಲೆಗಳ ಮರ್ಮವನ್ನು ತಿಳಿದಿದ್ದ ಶ್ರೇಷ್ಠಮಹರ್ಷಿಗಳು ಪ್ರೇಮದಿಂದ ಗದ್ಗದವಾಣಿಯಿಂದ ಅವನ ದಿವ್ಯ ಲೀಲೆಗಳನ್ನು ಮತ್ತೆ-ಮತ್ತೆ ಹಾಡಿ ಹೊಗಳುತ್ತಿದ್ದರು. ಹರಡಿಕೊಂಡು ಮೇಲಕ್ಕೆ ಎತ್ತಿದ ಸ್ವಾಮಿಯ ಸಾವಿರ ಹೆಡೆಗಳು, ಕಿರೀಟಗಳ ಸಾವಿರಾರು ರತ್ನಶ್ರೇಷ್ಠಗಳಿಂದ ಹೊರ ಹೊಮ್ಮುತ್ತಿದ್ದ ಕಿರಣಗಳಿಂದ ಥಳ-ಥಳಿಸುತ್ತಿದ್ದುವು. ॥ ೬ ॥ ಸಂಕರ್ಷಣ ಭಗವಂತನು ನಿವೃತ್ತಿಪರಾಯಣರಾದ ಸನತ್ಕುಮಾರರಿಗೆ ಈ ಶ್ರೀಮದ್ಭಾಗವತವನ್ನು ಉಪದೇಶಿಸಿದ್ದನೆಂಬುದು ಪ್ರಸಿದ್ಧವಾಗಿದೆ. ಅನಂತರ ಆ ಮಹರ್ಷಿವರ್ಯರು ತಮ್ಮನ್ನು ಪ್ರಶ್ನೆಮಾಡಿದ ವ್ರತನಿಷ್ಠರಾದ ಸಾಂಖ್ಯಾಯನ ಮುನಿಗಳಿಗೆ ಅದನ್ನು ಉಪದೇಶ ಮಾಡಿದರು. ॥ ೭ ॥ ಪರಮಹಂಸರಲ್ಲಿ ಶ್ರೇಷ್ಠರಾದ ಶ್ರೀಸಾಂಖ್ಯಾಯನರಿಗೆ ಶ್ರೀಭಗವಂತನ ವಿಭೂತಿಗಳನ್ನು ವರ್ಣಿಸಬೇಕೆಂಬ ಇಚ್ಛೆಯುಂಟಾದಾಗ ಅವರು ಇದನ್ನು ತಮ್ಮ ಆಪ್ತರೂ, ವಿಧೇಯರೂ, ಶಿಷ್ಯರೂ ಆದ ನಮ್ಮ ಪರಮಗುರುಗಳಾದ ಪರಾಶರರಿಗೂ ಮತ್ತು ಬೃಹಸ್ಪತಿಗೂ ಉಪದೇಶಿಸಿದರು. ॥ ೮ ॥ ಇದಾದ ಬಳಿಕ ಪರಮ ದಯಾಳುಗಳಾದ ಪರಾಶರರು ಪುಲಸ್ತ್ಯ ಮುನಿಗಳಿಂದ ಆಶೀರ್ವಾದ ಪಡೆದು ಆ ಆದಿಪುರಾಣವನ್ನು ನನಗೆ ಉಪದೇಶಮಾಡಿದರು. ವತ್ಸಾ! ನೀನು ಶ್ರದ್ಧಾಳುವೂ, ನಿಷ್ಠೆಯಿಂದ ಅನುಸರಿಸುತ್ತಿರುವ ಭಕ್ತನೂ ಆಗಿರುವುದರಿಂದ ಈಗ ಅದೇ ಪುರಾಣವನ್ನು ನಾನು ನಿನಗೆ ಉಪದೇಶಿಸುತ್ತೇನೆ. ॥ ೯ ॥

ಸೃಷ್ಟಿಯ ಮೊದಲು ಈ ಜಗತ್ತೆಲ್ಲವೂ ನೀರಿನಲ್ಲಿ ಮುಳುಗಿ ಹೋಗಿತ್ತು. ಆಗ ಶ್ರೀಮನ್ನಾರಾಯಣನೊಬ್ಬನೇ ಶೇಷತಲ್ಪದಲ್ಲಿ ಪವಡಿಸಿದ್ದನು. ಯೋಗನಿದ್ರೆಯಲ್ಲಿ ಕಣ್ಣುಮುಚ್ಚಿಕೊಂಡಿದ್ದರೂ ಆತನ ಜ್ಞಾನಶಕ್ತಿಯು ಮಾತ್ರ ಸಂಪೂರ್ಣವಾಗಿ ಎಚ್ಚರವಾಗಿಯೇ ಇತ್ತು. ಆತನು ಆತ್ಮಾನಂದದಲ್ಲೇ ಮಗ್ನನಾಗಿದ್ದನು. ಯಾವ ಸಂಕಲ್ಪವೂ, ಕ್ರಿಯೆಯೂ ಇಲ್ಲದೆ ಸ್ವಾಮಿಯು ತಾನೇ-ತಾನಾಗಿ ಜಲದಲ್ಲಿ ಮಲಗಿದ್ದನು. ॥ ೧೦ ॥

ಆಗ ಕಟ್ಟಿಗೆಯಲ್ಲಿ ಅಡಗಿರುವ ಬೆಂಕಿಯಂತೆ-ಸಕಲ ಭೂತಗಳೂ ಆತನ ದೇಹದಲ್ಲಿ ಸೂಕ್ಷ್ಮರೂಪದಲ್ಲಿ ಅಡಗಿ ಕೊಂಡಿದ್ದವು.

ಸೋಽನ್ತಃಶರೀರೇಽರ್ಪಿತಭೂತಸೂಕ್ಷ್ಮಃ
ಕಾಲಾತ್ಮಿಕಾಂ ಶಕ್ತಿಮುದೀರಯಾಣಃ ।
ಉವಾಸ ತಸ್ಮಿನ್ಸಲಿಲೇ ಪದೇ ಸ್ವೇ
ಯಥಾನಲೋ ದಾರುಣಿ ರುದ್ಧವೀರ್ಯಃ ॥ ೧೧ ॥

ಚತುರ್ಯುಗಾನಾಂ ಚ ಸಹಸ್ರಮಪ್ಸು
ಸ್ವಪನ್ಸ್ವಯೋದೀರಿತಯಾ ಸ್ವಶಕ್ತ್ಯಾ ।
ಕಾಲಾಖ್ಯಯಾಽಽಸಾದಿತಕರ್ಮತಂತ್ರೋ
ಲೋಕಾನಪೀತಾನ್ ದದೃಶೇ ಸ್ವದೇಹೇ ॥ ೧೨ ॥

ತಸ್ಯಾರ್ಥಸೂಕ್ಷ್ಮಾಭಿನಿವಿಷ್ಟದೃಷ್ಟೇ-
ರಂತರ್ಗತೋಽರ್ಥೋ ರಜಸಾ ತನೀಯಾನ್ ।
ಗುಣೇನ ಕಾಲಾನುಗತೇನ ವಿದ್ಧಃ
ಸೂಷ್ಯಂಸ್ತದಾಭಿದ್ಯತ ನಾಭಿದೇಶಾತ್ ॥ ೧೩ ॥

ಸ ಪದ್ಮಕೋಶಃ ಸಹಸೋದತಿಷ್ಠತ್
ಕಾಲೇನ ಕರ್ಮಪ್ರತಿಬೋಧನೇನ ।
ಸ್ವರೋಚಿಷಾ ತತ್ಸಲಿಲಂ ವಿಶಾಲಂ
ವಿದ್ಯೋತಯನ್ನರ್ಕ ಇವಾತ್ಮಯೋನಿಃ ॥ ೧೪ ॥

ತಲ್ಲೋಕಪದ್ಮಂ ಸ ಉ ಏವ ವಿಷ್ಣುಃ
ಪ್ರಾವೀವಿಶತ್ಸರ್ವಗುಣಾವಭಾಸಮ್ ।
ತಸ್ಮಿನ್ಸ್ವಯಂ ವೇದಮಯೋ ವಿಧಾತಾ
ಸ್ವಯಂಭುವಂ ಯಂ ಸ್ಮ ವದಂತಿ ಸೋಽಭೂತ್ ॥ ೧೫ ॥

ತಸ್ಯಾಂ ಸ ಚಾಮ್ಭೋರುಹಕರ್ಣಿಕಾಯಾ-
ಮವಸ್ಥಿತೋ ಲೋಕಮಪಶ್ಯಮಾನಃ ।
ಪರಿಕ್ರಮನ್ ವ್ಯೋಮ್ನಿ ವಿವೃತ್ತನೇತ್ರ-
ಶ್ಚತ್ವಾರಿ ಲೇಭೇಽನುದಿಶಂ ಮುಖಾನಿ ॥ ೧೬ ॥

ತಸ್ಮಾದ್ಯುಗಾಂತಶ್ವಸನಾವಘೂರ್ಣ-
ಜಲೋರ್ಮಿಚಕ್ರಾತ್ಸಲಿಲಾದ್ವಿರೂಢಮ್ ।
ಉಪಾಶ್ರಿತಃ ಕಂಜಮು ಲೋಕತತ್ತ್ವಂ
ನಾತ್ಮಾನಮದ್ಧಾವಿದದಾದಿದೇವಃ ॥ ೧೭ ॥

ಕ ಏಷ ಯೋಽಸಾವಹಮಬ್ಜಪೃಷ್ಠ
ಏತತ್ಕುತೋ ವಾಬ್ಜಮನನ್ಯದಪ್ಸು ।
ಅಸ್ತಿ ಹ್ಯಧಸ್ತಾದಿಹ ಕಿಂಚನೈತ-
ದಧಿಷ್ಠಿತಂ ಯತ್ರ ಸತಾ ನು ಭಾವ್ಯಮ್ ॥ ೧೮ ॥

ಸ ಇತ್ಥಮುದ್ವೀಕ್ಷ್ಯ ತದಬ್ಜನಾಲ-
ನಾಡೀಭಿರಂತರ್ಜಲಮಾವಿವೇಶ ।
ನಾರ್ವಾಗ್ಗತಸ್ತತ್ಖರನಾಲನಾಲ-
ನಾಭಿಂ ವಿಚಿನ್ವಂಸ್ತದವಿಂದತಾಜಃ ॥ ೧೯ ॥

ಎಲ್ಲ ಶಕ್ತಿಗಳನ್ನೂ ಲಯಗೊಳಿಸಿ ಕೊಂಡಿದ್ದರೂ ಸೃಷ್ಟಿಕಾಲ ಬಂದಾಗ ತನ್ನನ್ನು ಎಚ್ಚರಿಸಲು ಕಾಲಶಕ್ತಿಯೊಂದನ್ನು ಮಾತ್ರ ಅವನು ಎಚ್ಚರವಾಗಿ ಇರಿಸಿಕೊಂಡಿದ್ದನು. ॥ ೧೧ ॥ ಹೀಗೆ ಸ್ವಾಮಿಯು ತನ್ನ ಸ್ವರೂಪವಾದ ಚಿತ್‌ಶಕ್ತಿಯೊಂದಿಗೆ ಒಂದು ಸಾವಿರ ಚತುರ್ಯುಗಗಳವರೆಗೆ ನೀರಿನಲ್ಲಿ ಪವಡಿಸಿದಾಗ ಆತನಿಂದಲೇ ನೇಮಿಸಲ್ಪಟ್ಟ ಕಾಲಶಕ್ತಿಯು ಅವನನ್ನು ಜೀವಿಗಳ ಕರ್ಮಗಳನ್ನು ಪ್ರವೃತ್ತಿಗಾಗಿ ಪ್ರೇರೇಪಿಸಿದಾಗ ಅವನು ತನ್ನ ಶರೀರದಲ್ಲಿ ಲೀನವಾದ ಅನಂತ ಲೋಕಗಳನ್ನು ನೋಡಿದನು. ॥ ೧೨ ॥ ಸೂಕ್ಷ್ಮರೂಪದಲ್ಲಿರುವ ಲಿಂಗಶರೀರಾದಿಗಳಲ್ಲಿ ಭಗವಂತನ ದೃಷ್ಟಿಯು ಬೀಳಲು ಆಗ ಆತನ ಮನೋಗತವಾದ ಅರ್ಥವು ಕಾಲಶಕ್ತಿಯನ್ನು ಆಶ್ರಯಿಸಿದ ರಜೋಗುಣದಿಂದ ಪ್ರೇರಣೆಗೊಂಡು ಸೃಷ್ಟಿರಚನೆಗಾಗಿ ಅವನ ನಾಭಿಸ್ಥಾನದಿಂದ ಹೊರಗೆ ಉದ್ಭವಿಸಿತು. ॥ ೧೩ ॥ ಕರ್ಮಶಕ್ತಿಯನ್ನು ಎಚ್ಚರಗೊಳಿಸುವ ಕಾಲದ ಮೂಲಕ ಮಹಾವಿಷ್ಣುವಿನ ನಾಭಿಯಿಂದ ಪ್ರಕಟಗೊಂಡ ಆ ಸೂಕ್ಷ್ಮತತ್ತ್ವವು ಕಮಲದ ಮೊಗ್ಗಿನ ರೂಪದಲ್ಲಿ ಒಡನೆಯೇ ಮೇಲಕ್ಕೆದ್ದು ಸೂರ್ಯಸದೃಶವಾದ ತನ್ನ ತೇಜಸ್ಸಿನಿಂದ ಆ ಅಪಾರವಾದ ಜಲರಾಶಿಯನ್ನು ಪ್ರಕಾಶಗೊಳಿಸಿತು. ॥ ೧೪ ॥ ಸಮಸ್ತ ಗುಣಗಳಿಗೂ ಪ್ರಕಾಶಕವಾದ ಆ ಸರ್ವಜಗದ್ರೂಪವಾದ ಕಮಲವನ್ನು ಭಗವಂತನು ಅಂತರ್ಯಾಮಿರೂಪದಲ್ಲಿ ಪ್ರವೇಶಿಸಿದನು. ಆಗ ಸರ್ವವೇದಮಯರಾಗಿ ಸೃಷ್ಟಿಕರ್ತರಾಗಿ 'ಸ್ವಯಂಭೂ' ಎಂದು ಜ್ಞಾನಿಗಳಿಂದ ಕರೆಯಲ್ಪಡುವ ಬ್ರಹ್ಮದೇವರು ಅದರಿಂದ ಹುಟ್ಟಿಕೊಂಡರು. ॥ ೧೫ ॥ ಆ ಕಮಲದ ಕರ್ಣಿಕೆಯ ಮಧ್ಯದಲ್ಲಿ ಕುಳಿತಿದ್ದ ಬ್ರಹ್ಮದೇವರಿಗೆ ಯಾವ ಲೋಕವೂ ಕಾಣದಿರಲು ಅವರು ಆಕಾಶದಲ್ಲಿ ಕಣ್ಣನ್ನರಳಿಸಿಕೊಂಡು ನಾಲ್ಕೂ ಕಡೆಗೆ ಹೊರಳಿಸಿದಾಗ ಅವರಿಗೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಮುಖಗಳು ಪ್ರಕಟಗೊಂಡವು. ॥ ೧೬ ॥ ಆಗ ಪ್ರಳಯಕಾಲದ ಪ್ರಚಂಡವಾಯುವಿನ ಹೊಡೆತಗಳಿಂದ ಚಿಮ್ಮುತ್ತಿದ್ದ ಜಲರಾಶಿಯಿಂದ ಉದ್ಭವಿಸಿದ ಕಮಲದ ಮೇಲೆ ವಿರಾಜಮಾನರಾದ ಆ ಆದಿಬ್ರಹ್ಮದೇವರಿಗೆ ತಾನು ಯಾರು? ಮತ್ತು ಆ ಲೋಕತತ್ತ್ವರೂಪೀ ಕಮಲದ ರಹಸ್ಯವು ಏನೂ ತಿಳಿಯಲಿಲ್ಲ. ॥ ೧೭ ॥

ಈ ಕಮಲದ ಕರ್ಣಿಕೆಯಲ್ಲಿ ಕುಳಿತಿರುವ ನಾನು ಯಾರು? ಈ ಪದ್ಮವು ನೀರಿನಲ್ಲಿ ಹುಟ್ಟಲು ಕಾರಣವೇನು? ಹಾಗಾದರೆ ಇದರ ಕೆಳಗಡೆ ಇದಕ್ಕೆ ಆಧಾರವಾಗಿರುವ ಯಾವುದೋ ಒಂದು ವಸ್ತು ಇರಲೇಬೇಕಲ್ಲವೇ? ಎಂದು ಅವರು ಆಲೋಚನೆ ಮಾಡಿದರು. ॥ ೧೮ ॥

ಹೀಗೆ ಆಲೋಚಿಸಿದ ಅವರು ಆ ಕಮಲನಾಳದ ಸೂಕ್ಷ್ಮ ರಂಧ್ರಗಳ ಮೂಲಕವಾಗಿ ಆ ನೀರಿನಲ್ಲಿ ಒಳಹೊಕ್ಕು ಅದರ ತಳವನ್ನು ಹುಡುಕಿದರು. ಹಾಗೇ ಹುಡುಕುತ್ತಾ ಆ ನಾಳದ ನಾಭಿಪ್ರದೇಶದ ಒಳಗೆ ಬಂದರೂ ಅವರಿಗೆ ಅದರ ಆಧಾರವು ದೊರೆಯದೆ ಹೋಯಿತು. ॥ ೧೯ ॥

ವಿದುರನೇ! ಹೀಗೆ ಅಪಾರವಾದ ಕಗ್ಗತ್ತಲೆಯಲ್ಲಿ ತನ್ನ ಉತ್ಪತ್ತಿಸ್ಥಾನವನ್ನು ಹುಡುಕುತ್ತಿರಲು ಬ್ರಹ್ಮದೇವರಿಗೆ ಬಹಳ ಕಾಲವು ಕಳೆದು ಹೋಯಿತು. ಆ ಸಮಯವೇ ಪ್ರಾಣಿಗಳಿಗೆ ಭಯವನ್ನುಂಟು

ತಮಸ್ಯಪಾರೇ ವಿದುರಾತ್ಮಸರ್ಗಂ
ವಿಚಿನ್ವತೋಽಭೂತ್ಸುಮಹಾಂಸ್ತ್ರಿಣೇಮಿಃ ।
ಯೋ ದೇಹಭಾಜಾಂ ಭಯಮೀರಯಾಣಃ
ಪರಿಕ್ಷಿಣೋತ್ಯಾಯುರಜಸ್ಯ ಹೇತಿಃ ॥ ೨೦ ॥

ತತೋ ನಿವೃತ್ತೋಽಪ್ರತಿಲಬ್ಧಕಾಮಃ
ಸ್ವಧಿಷ್ಣ್ಯಮಾಸಾದ್ಯ ಪುನಃ ಸ ದೇವಃ ।
ಶನೈರ್ಜಿತಶ್ವಾಸನಿವೃತ್ತಚಿತ್ತೋ
ನ್ಯಷೀದದಾರೂಢಸಮಾಧಿಯೋಗಃ ॥ ೨೧ ॥

ಕಾಲೇನ ಸೋಽಜಃ ಪುರುಷಾಯುಷಾಭಿ-
ಪ್ರವೃತ್ತಯೋಗೇನ ವಿರೂಢಬೋಧಃ ।
ಸ್ವಯಂ ತದಂತರ್ಹೃದಯೇಽವಭಾತ-
ಮಪಶ್ಯತಾಪಶ್ಯತ ಯನ್ನ ಪೂರ್ವಮ್ ॥ ೨೨ ॥

ಮೃಣಾಲಗೌರಾಯತಶೇಷಭೋಗ-
ಪರ್ಯಂಕ ಏಕಂ ಪುರುಷಂ ಶಯಾನಮ್ ।
ಫಣಾತಪತ್ರಾಯುತಮೂರ್ಧರತ್ನ-
ದ್ಯುಭಿರ್ಹತಧ್ವಾಂತಯುಗಾಂತತೋಯೇ ॥ ೨೩ ॥

ಪ್ರೇಕ್ಷಾಂ ಕ್ಷಿಪಂತಂ ಹರಿತೋಪಲಾದ್ರೇಃ
ಸಂಧ್ಯಾಭ್ರನೀವೇರುರುರುಕ್ಮಮೂರ್ಧ್ನಃ ।
ರತ್ನೋದಧಾರೌಷಧಿಸೌಮನಸ್ಯ
ವನಸ್ರಜೋ ವೇಣುಭುಜಾಂಘ್ರಿಪಾಂಘ್ರೇಃ ॥ ೨೪ ॥

ಆಯಾಮತೋ ವಿಸ್ತರತಃ ಸ್ವಮಾನ-
ದೇಹೇನ ಲೋಕತ್ರಯಸಂಗ್ರಹೇಣ ।
ವಿಚಿತ್ರದಿವ್ಯಾಭರಣಾಂಶುಕಾನಾಂ
ಕೃತಶ್ರಿಯಾಪಾಶ್ರಿತವೇಷದೇಹಮ್ ॥ ೨೫ ॥

ಪುಂಸಾಂ ಸ್ವಕಾಮಾಯ ವಿವಿಕ್ತಮಾರ್ಗೈ-
ರಭ್ಯರ್ಚ್ಯತಾಂ ಕಾಮದುಘಾಂಘ್ರಿಪದ್ಮಮ್ ।
ಪ್ರದರ್ಶಯಂತಂ ಕೃಪಯಾ ನಖೇಂದು-
ಮಯೂಖಭಿನ್ನಾಂಗುಲಿಚಾರುಪತ್ರಮ್ ॥ ೨೬ ॥

ಮಾಡುತ್ತಾ ಅವರ ಆಯುಸ್ಸನ್ನು ಕ್ಷೀಣಗೊಳಿಸುತ್ತಿರುವ ಶ್ರೀಭಗವಂತನ ಕಾಲಚಕ್ರವೆಂದು ತಿಳಿ. ॥ ೨೦ ॥ ಹೀಗೆ ಎಷ್ಟು ಹುಡುಕಿದರೂ ತನ್ನ ನೆಲೆಯು ಸಿಕ್ಕದಿರಲು ಬ್ರಹ್ಮದೇವರು ವಿಫಲ ಮನೋರಥರಾಗಿ ಅಲ್ಲಿಂದ ಹಿಂದಿರುಗಿ ತಮಗೆ ಆಧಾರವಾಗಿದ್ದ ಕಮಲದ ಮೇಲೆ ಕುಳಿತು ನಿಧಾನವಾಗಿ ಪ್ರಾಣವಾಯುವನ್ನು ಜಯಿಸಿ ಚಿತ್ತದ ಸಂಕಲ್ಪ-ವಿಕಲ್ಪಗಳನ್ನು ತೊರೆದು ಸಮಾಧಿಸ್ಥರಾದರು. ॥ ೨೧ ॥ ಹೀಗೆ ಬ್ರಹ್ಮದೇವರಿಗೆ ಪುರುಷನ ಪೂರ್ಣಾಯುಷ್ಯವಾದ ದಿವ್ಯವಾದ ನೂರು ವರ್ಷಗಳ ಕಾಲದವರೆಗೆ ಯೋಗಾಭ್ಯಾಸ ಮಾಡಿದ್ದರಿಂದ ಜ್ಞಾನೋದಯವಾಗಲು ಆ ಹಿಂದೆ ಎಷ್ಟು ಹುಡುಕಿದರೂ ಕಾಣದಿರುವ ಆ ಸ್ಥಾನವು ತಮ್ಮ ಅಂತಃಕರಣದಲ್ಲೇ ಬೆಳಗುತ್ತಿರುವುದನ್ನು ಅವರು ನೋಡಿದರು. ॥ ೨೨ ॥ ಎಂತಹ ದಿವ್ಯದರ್ಶನವದು! ಆ ಪ್ರಳಯಜಲದಲ್ಲಿ ಕಮಲನಾಳದಂತೆ ಬೆಳ್ಳಗೆ ಹೊಳೆಯುತ್ತಿದ್ದ ವಿಶಾಲವಾದ ಆದಿ ಶೇಷನ ದಿವ್ಯದೇಹವೆಂಬ ಹಾಸಿಗೆಯಮೇಲೆ ಭಗವಾನ್ ಪುರುಷೋತ್ತಮನು ಒಬ್ಬಂಟಿಗನಾಗಿ ಪವಡಿಸಿದ್ದಾನೆ. ಆದಿಶೇಷನ ಹತ್ತು ಸಾವಿರ ಹೆಡೆಗಳು ಕೊಡೆಯಂತೆ ಮೇಲಕ್ಕೆ ಬಿಚ್ಚಿಕೊಂಡು ಹರಡಿ ಕೊಂಡಿವೆ. ಆತನ ಹೆಡೆಗಳ ಮೇಲೆ ಕಿರೀಟಗಳು ಕಂಗೊಳಿಸುತ್ತಿದ್ದು ಅದರಲ್ಲಿ ಕೆತ್ತಿದ್ದ ನವರತ್ನಗಳ ಕಾಂತಿಯಿಂದ ನಾಲ್ಕೂ ದಿಕ್ಕುಗಳ ಕತ್ತಲೆಯೂ ತೊಲಗಿಹೋಗಿದೆ. ॥ ೨೩ ॥ ಶ್ರೀಭಗವಂತನು ತನ್ನ ಶರೀರದ ಶ್ಯಾಮಲಕಾಂತಿಯಿಂದ ನೀಲಮರಕತಮಣಿಪರ್ವತದ ಕಾಂತಿಯನ್ನು ನಾಚಿಸುತ್ತಿದ್ದಾನೆ. ಆತನ ನಡುವಿನ ಪೀತಾಂಬರವು ಪರ್ವತದ ತಪ್ಪಲಿನಲ್ಲಿ ಹರಡಿರುವ ಸಂಧ್ಯಾಕಾಲದ ಹೊಂಬಣ್ಣದ ಮೋಡದ ಕಾಂತಿಯನ್ನು ಮಲಿನಗೊಳಿಸುತ್ತಿದೆ. ಆತನ ತಲೆಯ ಮೇಲೆ ಜಗ-ಜಗಿಸುತ್ತಿರುವ ಸ್ವರ್ಣಕಿರೀಟವು ಸ್ವರ್ಣಪರ್ವತದ ಶಿಖರಗಳ ಗರ್ವವನ್ನು ಭಂಜಿಸುತ್ತಿದೆ. ಅವನು ಧರಿಸಿದ ವನಮಾಲೆಯು ಪರ್ವತದ ರತ್ನಗಳ, ಜಲಪಾತದ, ಔಷಧಿಗಳ, ಪುಷ್ಪಗಳ ಶೋಭೆಯನ್ನು ಪರಾಜಯಗೊಳಿಸುತ್ತಿದೆ. ಆತನ ಭುಜ ದಂಡವು ಪರ್ವತದಲ್ಲಿ ಬೆಳೆದ ವೇಣುದಂಡವನ್ನೂ, ಚರಣಗಳು ಅಲ್ಲಿ ಕಂಗೊಳಿಸುತ್ತಿರುವ ಇತರ ವೃಕ್ಷಗಳನ್ನೂ ತಿರಸ್ಕರಿಸುತ್ತವೆ. ॥ ೨೪ ॥ ಆತನ ದಿವ್ಯ ಮಂಗಳ ವಿಗ್ರಹವು ಮೂರು ಲೋಕಗಳನ್ನೂ ಒಳಗೊಳ್ಳುವ ಉದ್ದಗಲಗಳಿಂದ ಕೂಡಿ ತನ್ನ ಕಾಂತಿಯಿಂದ ಬಗೆ-ಬಗೆಯ ದಿವ್ಯ ವಸ್ತ್ರಾಭರಣಗಳಿಗೆ ಕಾಂತಿಯನ್ನು ತುಂಬುತ್ತಿದ್ದರೂ ಪೀತಾಂಬರಾದಿ ತನ್ನ ವೇಷ-ಭೂಷಣಗಳಿಂದ ಸುಸಜ್ಜಿತವಾಗಿದೆ. ॥ ೨೫ ॥ ಶ್ರೀಭಗವಂತನು ತನ್ನ ಇಷ್ಟಾರ್ಥಗಳ ಸಿದ್ಧಿಗಾಗಿ ನಾನಾಮಾರ್ಗಗಳಿಂದ ಆರಾಧಿಸುತ್ತಿರುವ ಭಕ್ತಜನರಿಗೆ ಪರಮ ಕರುಣೆಯಿಂದ ಅವರ ಎಲ್ಲ ಇಷ್ಟಗಳಿಗೂ ಕಲ್ಪತರುವಿನಂತಿರುವ ತನ್ನ ಪಾದಾರವಿಂದಗಳ ದರ್ಶನವನ್ನು ದಯಪಾಲಿಸುತ್ತಿರುವನು. ಆ ದಿವ್ಯ ಪಾದಪದ್ಮಗಳ ಎಸಳುಗಳು ಕಾಲುಗುರುಗಳೆಂಬ ತಿಂಗಳು ಬೆಳಕಿನ ಕಾಂತಿಯಿಂದ ಬಿಡಿ-ಬಿಡಿಯಾಗಿ ಕಂಗೊಳಿಸುತ್ತಿವೆ. ॥ ೨೬ ॥

ಸ್ವಾಮಿಯ – ಸುಂದರವಾದ ಮೂಗು, ಚೆಲುವಾದ ಹುಬ್ಬುಗಳು, ಕಿವಿಗಳಲ್ಲಿ ಹೊಳೆಯುತ್ತಿರುವ ಕುಂಡಲಗಳ ಕಾಂತಿ, ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಗಳ ಸೊಬಗು ಹಾಗೂ

ಮುಖೇನ ಲೋಕಾರ್ತಿಹರಸ್ಮಿತೇನ
ಪರಿಸ್ಫುರತ್ಕುಂಡಲಮಂಡಿತೇನ ।
ಶೋಣಾಯಿತೇನಾಧರಬಿಂಬಭಾಸಾ
ಪ್ರತ್ಯರ್ಹಯಂತಂ ಸುನಸೇನ ಸುಭ್ರ್ವಾ ॥ ೨೭ ॥

ಕದಂಬಕಿಂಜಲ್ಕಪಿಶಂಗವಾಸಸಾ
ಸ್ವಲಂಕೃತಂ ಮೇಖಲಯಾ ನಿತಂಬೇ ।
ಹಾರೇಣ ಚಾನಂತಧನೇನ ವತ್ಸ
ಶ್ರೀವತ್ಸವಕ್ಷಃಸ್ಥಲವಲ್ಲಭೇನ ॥ ೨೮ ॥

ಪರಾರ್ಧ್ಯಕೇಯೂರಮಣಿಪ್ರವೇಕ-
ಪರ್ಯಸ್ತದೋರ್ದಂಡಸಹಸ್ರಶಾಖಮ್ ।
ಅವ್ಯಕ್ತಮೂಲಂ ಭುವನಾಂಘ್ರಿಪೇಂದ್ರ-
ಮಹೀಂದ್ರಭೋಗೈರಧಿವೀತವಲ್ಶಮ್ ॥ ೨೯ ॥

ಚರಾಚರೌಕೋ ಭಗವನ್ಮಹೀಧ್ರ-
ಮಹೀಂದ್ರಬಂಧುಂ ಸಲಿಲೋಪಗೂಢಮ್ ।
ಕಿರೀಟಸಾಹಸ್ರಹಿರಣ್ಯಶೃಂಗ-
ಮಾವಿರ್ಭವತ್ಕೌಸ್ತುಭರತ್ನಗರ್ಭಮ್ ॥ ೩೦ ॥

ನಿವೀತಮಾಮ್ನಾಯಮಧುವ್ರತಶ್ರಿಯಾ
ಸ್ವಕೀರ್ತಿಮಯ್ಯಾ ವನಮಾಲಯಾ ಹರಿಮ್ ।
ಸೂರ್ಯೇಂದುವಾಯ್ವಗ್ನ್ಯಗಮಂ ತ್ರಿಧಾಮಭಿಃ
ಪರಿಕ್ರಮತ್ಪ್ರಾಧನಿಕೈರ್ದುರಾಸದಮ್ ॥ ೩೧ ॥

ತರ್ಹ್ಯೇವ ತನ್ನಾಭಿಸರಃಸರೋಜ-
ಮಾತ್ಮಾನಮಂಭಃ ಶ್ವಸನಂ ವಿಯಚ್ಚ ।
ದದರ್ಶ ದೇವೋ ಜಗತೋ ವಿಧಾತಾ
ನಾತಃ ಪರಂ ಲೋಕವಿಸರ್ಗದೃಷ್ಟಿಃ ॥ ೩೨ ॥

ಸ ಕರ್ಮಬೀಜಂ ರಜಸೋಪರಕ್ತಃ
ಪ್ರಜಾಃ ಸಿಸೃಕ್ಷನ್ನಿಯದೇವ ದೃಷ್ಟ್ವಾ ।
ಅಸ್ತೌದ್ವಿಸರ್ಗಾಭಿಮುಖಸ್ತಮೀಡ್ಯ-
ಮವ್ಯಕ್ತವರ್ತ್ಮನ್ಯಭಿವೇಶಿತಾತ್ಮಾ ॥ ೩೩ ॥

ಸಕಲ ಲೋಕಗಳ ಪೀಡೆಗಳನ್ನು ಪರಿಹರಿಸುವ ಮಂದಹಾಸದಿಂದ ಶೋಭಿಸುತ್ತಿರುವ ಮುಖಾರವಿಂದದಿಂದ ಉಪಾಸಕರನ್ನು ಸಂಭಾವಿಸಿ ಅಭಿವಂದನೆ ಮಾಡುತ್ತಿದ್ದಾನೆ. ॥ ೨೭ ॥ ವತ್ಸಾ! ಆತನ ಸೊಂಟದಲ್ಲಿ ಕದಂಬ ಕುಸುಮದ ಕೇಸರದಂತೆ ಹೊಂಬಣ್ಣದಿಂದ ಹೊಳೆಯುತ್ತಿರುವ ಉಡಿಗೆ ಮತ್ತು ಚಿನ್ನದ ಉಡಿದಾರಗಳೂ, ವಕ್ಷಸ್ಥಳದಲ್ಲಿ ಅಮೂಲ್ಯವಾದ ಹಾರಗಳೂ, ಹೊಂಬಣ್ಣದ ರೇಖೆಗಳುಳ್ಳ ಶ್ರೀವತ್ಸಲಾಂಛನವು ಅಪೂರ್ವವಾದ ಕಾಂತಿಯಿಂದ ಶೋಭಿಸುತ್ತಿವೆ. ॥ ೨೮ ॥ ಶ್ರೀಭಗವಂತನು ಆಳವಾಗಿ ಅವ್ಯಕ್ತವಾದ ಬೇರುಗಳುಳ್ಳ ಮಹಾಚಂದನವೃಕ್ಷದ ಬೆಡಗನ್ನು ಬೀರುತ್ತಿದ್ದಾನೆ. ಅಮೂಲ್ಯವಾದ ಕಂಕಣ ಕೇಯೂರಗಳಿಂದಲೂ, ಪರಮೋತ್ಕೃಷ್ಟವಾದ ಮಣಿಗಳಿಂದಲೂ ಮೆರೆಯುತ್ತಿರುವ ಆತನ ವಿಶಾಲವಾದ ಭುಜದಂಡಗಳೇ ಆ ವೃಕ್ಷದ ಸಾವಿರಾರು ಶಾಖೆಗಳು. ಶ್ರೀದೇಹವನ್ನು ಬಳಸಿರುವ ಆದಿಶೇಷನ ದೇಹವೇ ವೃಕ್ಷವನ್ನು ಸುತ್ತಿಕೊಂಡಿರುವ ಮಹಾಸರ್ಪಗಳು. ॥ ೨೯ ॥ ಮಹಾ ಜಲರಾಶಿಯಲ್ಲಿ ಶೇಷದೇವರಿಗೆ ಆಶ್ರಯನಾಗಿರುವ ಆದಿದೇವ ಶ್ರೀಮನ್ನಾ ರಾಯಣನು ನೀರಿನಿಂದ ಆವೃತವಾಗಿರುವ ಪರ್ವತರಾಜನಂತೆ ರಾರಾಜಿಸುತ್ತಿದ್ದಾನೆ. ಗಿರಿಯು ನಾನಾ ಜೀವರುಗಳಿಗೆ ಆಸರೆಯಾಗಿರುವಂತೆ ಆತನು ಚರಾಚರ ಜೀವಿಗಳಿಗೆಲ್ಲ ಆಶ್ರಯನಾಗಿದ್ದಾನೆ. ಶೇಷದೇವರ ಹೆಡೆಗಳಲ್ಲಿ ಬೆಳಗುತ್ತಿರುವ ಸಹಸ್ರಾರು ಕಿರೀಟಗಳೇ ಪರ್ವತದ ಹೊನ್ನಿನಂತೆ ಹೊಳೆಯುವ ಶಿಖರಗಳು. ಆತನ ವಕ್ಷಃಸ್ಥಳದಲ್ಲಿ ಬೆಳಗುತ್ತಿರುವ ಕೌಸ್ತುಭಮಣಿಯೇ ಪರ್ವತಗರ್ಭದಲ್ಲಿ ಪ್ರಕಟಗೊಂಡ ಮಹಾರತ್ನ. ॥ ೩೦ ॥ ಪ್ರಭುವಿನ ಕಂಠದಲ್ಲಿ ವೇದಗಳೆಂಬ ದುಂಬಿಗಳು ಉಲಿಯುತ್ತಿರುವ ಕೀರ್ತಿರೂಪವಾದ ವನಮಾಲೆಯು ಮೆರೆಯುತ್ತಿದೆ. ಸೂರ್ಯ, ಚಂದ್ರ, ವಾಯು, ಅಗ್ನಿಗಳೇ ಮುಂತಾದ ದೇವತೆಗಳೂ ಅವನ ಬಳಿಗೆ ತಲುಪಲಾರರು. ಮೂರು ಲೋಕಗಳಲ್ಲಿಯೂ ಅಡೆ-ತಡೆಗಳಿಲ್ಲದೇ ಸಂಚರಿಸುವ ಸುದರ್ಶನ ಚಕ್ರವೇ ಮುಂತಾದ ಆಯುಧಗಳೂ ಆತನ ಸುತ್ತಲೂ ಓಡಾಡುತ್ತಿವೆ. ಇದರಿಂದಾಗಿ ಅವನ ಬಳಿಗೆ ತಲುಪುವುದು ಕಠಿಣವಾಗಿದೆ. ॥ ೩೧ ॥

ಆಗ ವಿಶ್ವರಚನೆಯ ಇಚ್ಛೆಯುಳ್ಳ ಲೋಕವಿಧಾತಾ ಬ್ರಹ್ಮದೇವರಿಗೆ ಶ್ರೀಭಗವಂತನ ನಾಭಿಸರೋವರದಿಂದ ಪ್ರಕಟಗೊಂಡ ಕಮಲ, ಜಲ, ಆಕಾಶ, ವಾಯು ಮತ್ತು ತನ್ನ ಶರೀರ – ಎಂಬ ಐದು ಪದಾರ್ಥಗಳು ಕಾಣಿಸಿದವು. ಸೃಷ್ಟಿಯನ್ನು ರಚಿಸಲು ಈ ಐದಲ್ಲದೆ ಬೇರಾವ ಪದಾರ್ಥಗಳೂ ಅವರಿಗೆ ಕಾಣಿಸಲಿಲ್ಲ. ॥ ೩೨ ॥ ರಜೋಗುಣದಿಂದ ವ್ಯಾಪ್ತರಾದ ಬ್ರಹ್ಮದೇವರು ಪ್ರಜೆಯನ್ನು ರಚಿಸಲು ಬಯಸುತ್ತಿದ್ದರು. ಸೃಷ್ಟಿಯ ಕಾರಣರೂಪೀ ಈ ಐದು ಪದಾರ್ಥಗಳನ್ನು ನೋಡಿದಾಗ ಲೋಕರಚನೆಗಾಗಿ ಉತ್ಸುಕರಾದ ಕಾರಣ ಬ್ರಹ್ಮದೇವರು ಅಚಿಂತ್ಯಗತಿಯಾದ ಶ್ರೀಹರಿಯಲ್ಲಿ ಚಿತ್ತವನ್ನು ತೊಡಗಿಸಿ ಆ ಪರಮಪೂಜನೀಯ ಪ್ರಭುವನ್ನು ಸ್ತುತಿಸತೊಡಗಿದರು. ॥ ೩೩ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಅಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಬ್ರಹ್ಮದೇವರು ಮಾಡಿದ ಭಗವತ್‌ಸ್ತೋತ್ರ

ಬ್ರಹ್ಮೋವಾಚ

ಜ್ಞಾತೋಽಸಿ ಮೇಽದ್ಯ ಸುಚಿರಾನ್ನನು ದೇಹಭಾಜಾಂ
ನ ಜ್ಞಾಯತೇ ಭಗವತೋ ಗತಿರಿತ್ಯವದ್ಯಮ್ ।
ನಾನ್ಯತ್ತ್ವದಸ್ತಿ ಭಗವನ್ನಪಿ ತನ್ನ ಶುದ್ಧಂ
ಮಾಯಾಗುಣವ್ಯತಿಕರಾದ್ಯದುರುರ್ವಿಭಾಸಿ ॥ ೧ ॥

ಶ್ರೀಬ್ರಹ್ಮದೇವರು ಹೇಳಿದರು – ಲೋಕೇಶ್ವರನೇ! ಬಹು ಕಾಲದ ನಂತರ ನಿನ್ನ ದರ್ಶನವನ್ನು ಪಡೆದು ನಾನು ಧನ್ಯನಾದೆನು. ನಿನ್ನ ಈ ದಿವ್ಯಸ್ವರೂಪವನ್ನು ದೇಹಧಾರಿಗಳಾದ ಜೀವರು ತಿಳಿಯದೇ ಹೋದರಲ್ಲ! ಎಂತಹ ದೌರ್ಭಾಗ್ಯ! ಓ ಭಗವಂತಾ! ನೀನಲ್ಲದೆ ಬೇರೆ ಯಾವ ವಸ್ತುವೂ ಇಲ್ಲವೇ ಇಲ್ಲ. ಕಂಡುಬರುವ ವಸ್ತುವು ಸ್ವರೂಪತಃ ಸತ್ಯವಾದುದಲ್ಲ. ಏಕೆಂದರೆ, ಮಾಯೆಯ ಗುಣಗಳು ಕ್ಷೋಭಿತವಾದ ಕಾರಣ ಕೇವಲ ನೀನೇ ಅನೇಕ ರೂಪಗಳಲ್ಲಿ ಕಂಡು ಬರುವೆ. ॥ ೧ ॥

ರೂಪಂ ಯದೇತದವಬೋಧರಸೋದಯೇನ
ಶಶ್ವನ್ನಿವೃತ್ತತಮಸಃ ಸದನುಗ್ರಹಾಯ ।
ಆದೌ ಗೃಹೀತಮವತಾರಶತೈಕಬೀಜಂ
ಯನ್ನಾಭಿಪದ್ಮಭವನಾದಹಮಾವಿರಾಸಮ್ ॥ ೨ ॥

ಓ ಭಗವಂತನೇ! ನೀನು ಸದಾ ಜ್ಞಾನಪ್ರಕಾಶದಿಂದ ಬೆಳಗುತ್ತಿರುವವನು. ಆದ್ದರಿಂದ ಅಜ್ಞಾನವು ನಿನ್ನಿಂದ ಸದಾ ದೂರವಾಗಿರುತ್ತದೆ. ಯಾವ ನಾಭಿಕಮಲದಿಂದ ನಾನು ಜನಿಸಿದ್ದೇನೋ ಅಂತಹ ನಿನ್ನ ಈ ದಿವ್ಯ ದೇಹವು ನೂರಾರು ಅವತಾರಗಳಿಗೆ ಮೂಲ ಕಾರಣವಾದುದು. ಸತ್ಪುರುಷರ ಮೇಲೆ ಕೃಪೆದೋರಿ ಅವರನ್ನು ಅನುಗ್ರಹಿಸುವುದಕ್ಕಾಗಿ ಈ ಮೊಟ್ಟಮೊದಲನೆಯ ಅವತಾರವನ್ನು ತಾಳಿರುವೆ. ॥ ೨ ॥

ನಾತಃ ಪರಂ ಪರಮ ಯದ್ಭವತಃ ಸ್ವರೂಪ-
ಮಾನಂದಮಾತ್ರಮವಿಕಲ್ಪಮವಿದ್ಧವರ್ಚಃ ।
ಪಶ್ಯಾಮಿ ವಿಶ್ವಸೃಜಮೇಕಮವಿಶ್ವಮಾತ್ಮನ್
ಭೂತೇಂದ್ರಿಯಾತ್ಮಕಮದಸ್ತ ಉಪಾಶ್ರಿತೋಽಸ್ಮಿ ॥ ೩ ॥

ಪರಮಾತ್ಮಾ! ನಿನ್ನ ಆನಂದೈಕಮಯವೂ, ಭೇದರಹಿತವೂ, ಅಖಂಡತೇಜೋಮಯವೂ ಆದ ಸ್ವರೂಪವನ್ನು ನಾನು ಈ ದಿವ್ಯರೂಪದಿಂದ ಭಿನ್ನವೆಂದು ತಿಳಿಯುವುದಿಲ್ಲ. ಆದುದರಿಂದ ನಾನು ವಿಶ್ವದ ರಚನೆ ಮಾಡುವವನಾದರೂ ವಿಶ್ವಾತೀತವಾಗಿರುವ, ಅದ್ವಿತೀಯವಾಗಿರುವ ಸಮಸ್ತ ಭೂತಗಳಿಗೂ, ಇಂದ್ರಿಯಗಳಿಗೂ ಅಧಿಷ್ಠಾನವಾಗಿರುವ ಈ ದಿವ್ಯರೂಪವನ್ನು ಶರಣು ಹೊಂದುತ್ತೇನೆ. ॥ ೩ ॥

ತದ್ವಾ ಇದಂ ಭುವನಮಂಗಲ ಮಂಗಲಾಯ
ಧ್ಯಾನೇ ಸ್ಮ ನೋ ದರ್ಶಿತಂ ತ ಉಪಾಸಕಾನಾಮ್ ।
ತಸ್ಮೈ ನಮೋ ಭಗವತೇಽನುವಿಧೇಮ ತುಭ್ಯಂ
ಯೋಽನಾದೃತೋ ನರಕಭಾಗ್ಭಿರಸತ್ಪ್ರಸಂಗೈಃ ॥ ೪ ॥

ಜಗತ್‌ಕಲ್ಯಾಣಮೂರ್ತಿಯೇ! ನಿನ್ನ ಉಪಾಸಕನಾಗಿರುವ ನನ್ನ ಹಿತಕ್ಕೋಸ್ಕರವೇ ಧ್ಯಾನದಲ್ಲಿ ನನಗೆ ಈ ನಿನ್ನ ದಿವ್ಯರೂಪವನ್ನು ತೋರಿಸಿರುವೆ. ಪಾಪಾತ್ಮರೂ ವಿಷಯಾಸಕ್ತರೂ ಆದ ಜೀವಿಗಳು ಮಾತ್ರವೇ ಇದನ್ನು ತಿರಸ್ಕರಿಸುತ್ತಾರೆ. ನಾನಾದರೋ ನಿನ್ನನ್ನು ಈ ದಿವ್ಯ ರೂಪದಲ್ಲಿಯೇ ನೋಡುತ್ತಾ ಮತ್ತೆ-ಮತ್ತೆ ನಮಸ್ಕರಿಸುತ್ತೇನೆ. ॥ ೪ ॥

ಯೇ ತು ತ್ವದೀಯಚರಣಾಂಬುಜಕೋಶಗಂಧಂ
ಜಿಘ್ರಂತಿ ಕರ್ಣವಿವರೈಃ ಶ್ರುತಿವಾತನೀತಮ್ ।
ಭಕ್ತ್ಯಾ ಗೃಹೀತಚರಣಃ ಪರಯಾ ಚ ತೇಷಾಂ
ನಾಪೈಷಿ ನಾಥ ಹೃದಯಾಂಬುರುಹಾತ್ಸ್ವಪುಂಸಾಮ್ ॥ ೫ ॥

ನನ್ನ ಸ್ವಾಮಿಯೇ! ವೇದಗಳೆಂಬ ವಾಯುವಿನಿಂದ ತಂದಿರುವ ನಿನ್ನ ಪಾದಗಳೆಂಬ ಕಮಲಕೋಶದ ಕಂಪನ್ನು ತಮ್ಮ ಕಿವಿಗಳಿಂದ ಸುಕೃತಿಗಳು ಸ್ವೀಕರಿಸುತ್ತಾರೆ. ಅಂತಹ ಭಕ್ತೋತ್ತಮರ ಹೃದಯಕಮಲದಿಂದ ಎಂದಿಗೂ ನೀನು ದೂರವಾಗುವುದಿಲ್ಲ. ಏಕೆಂದರೆ ಅವರು ತಮ್ಮ ಪರಾಭಕ್ತಿಯೆಂಬ ಹಗ್ಗದಿಂದ ನಿನ್ನ ಪಾದಪದ್ಮಗಳನ್ನು ಕಟ್ಟಿಹಾಕಿಕೊಂಡಿರುವರು. ॥ ೫ ॥

ತಾವದ್ಭಯಂ ದ್ರವಿಣಗೇಹಸುಹೃನ್ನಿಮಿತ್ತಂ
ಶೋಕಃ ಸ್ಪೃಹಾ ಪರಿಭವೋ ವಿಪುಲಶ್ಚ ಲೋಭಃ ।
ತಾವನ್ಮಮೇತ್ಯ ಸದವಗ್ರಹ ಆರ್ತಿಮೂಲಂ
ಯಾವನ್ನ ತೇಽಂಘ್ರಿಮಭಯಂ ಪ್ರವೃಣೀತ ಲೋಕಃ ॥ ೬ ॥

ಪರಮಾತ್ಮನೇ! ಮನುಷ್ಯನು ಅಭಯಪ್ರದವಾದ ನಿನ್ನ ಚರಣಾರವಿಂದಗಳ ಆಸರೆಯನ್ನು ಪಡೆಯುವವರೆಗೆ ಅವನಿಗೆ ಧನ, ಮನೆ, ಬಂಧುಗಳ ಕಾರಣದಿಂದ ಉಂಟಾಗುವ ಭಯ, ಶೋಕ, ದುರಾಸೆ, ದೈನ್ಯ, ಕಡುಲೋಭ ಮುಂತಾದವುಗಳು ತೊಂದರೆ ಕೊಡುತ್ತಾ ಇರುತ್ತವೆ ಮತ್ತು ದುಃಖಕ್ಕೆ ಏಕಮಾತ್ರ ಕಾರಣವಾದ ಅಹಂಕಾರ-ಮಮಕಾರಗಳ ದುರಾಗ್ರಹವು ಇರುತ್ತದೆ. ॥ ೬ ॥

ದೈವೇನ ತೇ ಹತಧಿಯೋ ಭವತಃ ಪ್ರಸಂಗಾ-
ತ್ಸರ್ವಾಶುಭೋಪಶಮನಾದ್ವಿಮುಖೇಂದ್ರಿಯಾ ಯೇ।
ಕುರ್ವಂತಿ ಕಾಮಸುಖಲೇಶಲವಾಯ ದೀನಾ
ಲೋಭಾಭಿಭೂತಮನಸೋಽಕುಶಲಾನಿ ಶಶ್ವತ್ ॥ ೭ ॥

ದೇವದೇವನೇ! ಮೂರ್ಖರು ಎಲ್ಲ ಅಮಂಗಳಗಳನ್ನು ನಾಶ ಪಡಿಸುವ ನಿನ್ನ ಶ್ರವಣ-ಕೀರ್ತನೆ ಮುಂತಾದ ಸತ್‌ಪ್ರಸಂಗಗಳಿಂದ ಇಂದ್ರಿಯಗಳನ್ನು ಬೇರೆಡೆ ಸೆಳೆದು ಅಣುಮಾತ್ರವಾದ ವಿಷಯ ಸುಖಗಳನ್ನೇ ಬಯಸುತ್ತಾ, ದೀನರಾಗಿ, ಮನಸ್ಸಿನಲ್ಲಿ ಆಸೆಪಡುತ್ತಾ ದುಷ್ಟಕರ್ಮಗಳಲ್ಲಿ ತೊಡಗುತ್ತಾರೆ. ಅದೃಷ್ಟದಿಂದ ವಿವೇಕವನ್ನು ಕಳೆದುಕೊಂಡ ಅಂತಹವರು ನಿಜವಾಗಿ ಬಡಪಾಯಿಗಳು. ॥ ೭ ॥

ಕ್ಷುತ್ತೃಟ್‌ತ್ರಿಧಾತುಭಿರಿಮಾ ಮುಹುರರ್ದ್ಯಮಾನಾಃ
ಶೀತೋಷ್ಣವಾತವರ್ಷೈರಿತರೇತರಾಚ್ಚ ।
ಕಾಮಾಗ್ನಿನಾಚ್ಯುತ ರುಷಾ ಚ ಸುದುರ್ಭರೇಣ
ಸಂಪಶ್ಯತೋ ಮನ ಉರುಕ್ರಮ ಸೀದತೇ ಮೇ ॥ ೮ ॥

ಓ ಅಚ್ಯುತಾ! ತ್ರಿವಿಕ್ರಮ! ಈ ಜನರು ಹಸಿವು, ಬಾಯಾರಿಕೆ, ವಾತ, ಪಿತ್ತ, ಕಫ, ಚಳಿ, ಸೆಕೆ, ಗಾಳಿ-ಮಳೆಗಳಿಂದಲೂ, ಪರಸ್ಪರ ಒಬ್ಬರಿಂದೊಬ್ಬರು ಹಾಗೂ ಕಾಮಾಗ್ನಿಯಿಂದಲೂ, ಸಹಿಸಲಸದಳವಾದ ಕ್ರೋಧವೆಂಬ ಅಗ್ನಿಯಿಂದಲೂ ಮತ್ತೆ-ಮತ್ತೆ ಕಷ್ಟಪಡುತ್ತಿರುವುದನ್ನು ನೋಡಿ ನನ್ನ ಮನಸ್ಸಿಗೆ ತುಂಬಾ ವಿಷಾದವಾಗುತ್ತದೆ. ॥ ೮ ॥

ಯಾವತ್ಪೃಥಕ್ತ್ವಮಿದಮಾತ್ಮನ ಇಂದ್ರಿಯಾರ್ಥ-
ಮಾಯಾಬಲಂ ಭಗವತೋ ಜನ ಈಶ ಪಶ್ಯೇತ್ ।
ತಾವನ್ನ ಸಂಸೃತಿರಸೌ ಪ್ರತಿಸಂಕ್ರಮೇತ
ವ್ಯರ್ಥಾಪಿ ದುಃಖನಿವಹಂ ವಹತೀ ಕ್ರಿಯಾರ್ಥಾ ॥ ೯ ॥

ಎಲೈ ಪ್ರಭುವೇ! ಮನುಷ್ಯನು ಎಲ್ಲಿಯವರೆಗೆ ಇಂದ್ರಿಯ ಮತ್ತು ಅವುಗಳ ವಿಷಯರೂಪವಾದ ಮಾಯೆಯ ಪ್ರಭಾವದಿಂದ ನಿನ್ನಿಂದ ತನ್ನನ್ನು ಬೇರೆಯಾಗಿ ನೋಡುತ್ತಾನೋ, ಅಲ್ಲಿಯವರೆಗೂ ಆತನಿಗೆ ಈ ಸಂಸಾರಚಕ್ರದಿಂದ ಬಿಡುಗಡೆಯಾಗುವುದಿಲ್ಲ. ಈ ಜಗತ್ತು ಮಿಥ್ಯೆಯಾಗಿದ್ದರೂ ಕರ್ಮಫಲವನ್ನು ಭೋಗಿಸುವ ಕ್ಷೇತ್ರವಾದ್ದರಿಂದ ಅವನನ್ನು ನಾನಾಪ್ರಕಾರದ ದುಃಖಗಳಲ್ಲಿ ಸಿಕ್ಕಿಸುತ್ತಾ ಇರುತ್ತದೆ. ॥ ೯ ॥

ಅಹ್ನ್ಯಾಪೃತಾರ್ತಕರಣಾ ನಿಶಿ ನಿಃಶಯಾನಾ
ನಾನಾಮನೋರಥಧಿಯಾ ಕ್ಷಣಭಗ್ನನಿದ್ರಾಃ ।
ದೈವಾಹತಾರ್ಥರಚನಾ ಋಷಯೋಽಪಿ ದೇವ
ಯುಷ್ಮತ್ಪ್ರಸಂಗವಿಮುಖಾ ಇಹ ಸಂಸರಂತಿ ॥ ೧೦ ॥

ದೇವಾ! ಅಜ್ಞರಾದ ಇತರರ ಮಾತಿರಲಿ – ಋಷಿ-ಮುನಿಗಳೂ ಕೂಡ ನಿನ್ನ ಕಥಾಪ್ರಸಂಗಕ್ಕೆ ವಿಮುಖರಾದರೆ ಸಂಸಾರ ಬಂಧನಕ್ಕೆ ಒಳಗಾಗಬೇಕಾಗುತ್ತದೆ. ಅವರು ಹಗಲಿನಲ್ಲಿ ಬಗೆ-ಬಗೆಯ ವಿಷಯವ್ಯಾಪಾರಗಳಲ್ಲಿ ಆಸಕ್ತರಾಗಿರುವುದರಿಂದ ಅವರ ಚಿತ್ತವು ವಿಕ್ಷಿಪ್ತವಾಗಿರುತ್ತದೆ. ರಾತ್ರಿಯಲ್ಲಿ ಅವರು ಪ್ರಜ್ಞೆಯಿಲ್ಲದೆ ನಿದ್ದೆಯಲ್ಲಿ ಬಿದ್ದುಕೊಂಡಿರುತ್ತಾರೆ. ಅಂತಹ ಸಮಯದಲ್ಲೂ ಅವರು ನಾನಾರೀತಿಯ ಮನೋರಥಗಳಿಂದ ಪೀಡಿತರಾಗಿ ಕ್ಷಣ-ಕ್ಷಣಕ್ಕೂ ನಿದ್ರಾಭಂಗವನ್ನು ಹೊಂದುತ್ತಾರೆ. ದೈವವಶದಿಂದ ಅವರ ಅರ್ಥಸಿದ್ಧಿಯ ಉದ್ಯೋಗಗಳೆಲ್ಲವೂ ವಿಫಲವಾಗುತ್ತಾ ಇರುತ್ತವೆ. ॥ ೧೦ ॥

ತ್ವಂ ಭಾವಯೋಗಪರಿಭಾವಿತಹೃತ್ಸರೋಜ
ಆಸ್ಸೇ ಶ್ರುತೇಕ್ಷಿತಪಥೋ ನನು ನಾಥ ಪುಂಸಾಮ್ ।
ಯದ್ಯದ್ಧಿಯಾ ತ ಉರುಗಾಯ ವಿಭಾವಯಂತಿ
ತತ್ತದ್ವಪುಃ ಪ್ರಣಯಸೇ ಸದನುಗ್ರಹಾಯ ॥ ೧೧ ॥

ಸ್ವಾಮಿ! ಶ್ರವಣ ಮನನಾದಿಗಳಿಂದ ನಿನ್ನ ಮಾರ್ಗವನ್ನು ತಿಳಿದು, ಅನನ್ಯವಾದ ಭಕ್ತಿಯೋಗದಿಂದ ಮನಸ್ಸನ್ನು ಪರಿಶುದ್ಧಗೊಳಿಸಿಕೊಂಡಿರುವವರ ಹೃದಯಕಮಲದಲ್ಲಿ ನೀನು ವಾಸ ಮಾಡುತ್ತಿರುವೆ. ಪುಣ್ಯಕೀರ್ತಿಯಾದ ಪ್ರಭುವೇ! ನಿನ್ನ ಭಕ್ತಜನರು ಯಾವ-ಯಾವ ಭಾವನೆಯಿಂದ ನಿನ್ನನ್ನು ಚಿಂತನೆಮಾಡುತ್ತಾರೋ, ಅವರನ್ನು ಅನುಗ್ರಹಿಸಲಿಕ್ಕಾಗಿ ನೀನು ಆಯಾ ರೂಪವನ್ನೇ ಧರಿಸುತ್ತೀಯೆ. ॥ ೧೧ ॥

ನಾತಿಪ್ರಸೀದತಿ ತಥೋಪಚಿತೋಪಚಾರೈ-
ರಾರಾಧಿತಃ ಸುರಗಣೈರ್ಹೃದಿ ಬದ್ಧಕಾಮೈಃ ।
ಯತ್ಸರ್ವಭೂತದಯಯಾಸದಲಭ್ಯಯೈಕೋ
ನಾನಾಜನೇಷ್ವವಹಿತಃ ಸುಹೃದಂತರಾತ್ಮಾ ॥ ೧೨ ॥

ಭಗವಂತಾ! ನೀನು ಅದ್ವಿತೀಯನಾಗಿದ್ದು ಸಮಸ್ತ ಪ್ರಾಣಿಗಳ ಅಂತಃಕರಣದಲ್ಲಿ ಸ್ಥಿತನಾಗಿ ಅವರ ಪರಮಹಿತಕಾರಿ ಅಂತರಾತ್ಮನಾಗಿರುವೆ. ದುರ್ಜನರಿಗೆ ಅಸಾಧ್ಯವಾಗಿರುವ 'ಭೂತದಯೆ'ಯಿಂದ ನೀನು ಎಷ್ಟು ಪ್ರಸನ್ನನಾಗುವೆಯೋ, ಅಷ್ಟು ನಾನಾ ಕಾಮನೆಗಳಿಂದ ಬಗೆ-ಬಗೆಯ ಉಪಚಾರಗಳ ಮೂಲಕ ನಿನ್ನನ್ನು ಆರಾಧಿಸುವ ದೇವತೆಗಳ ಪೂಜೆಯಿಂದಲೂ ಪ್ರಸನ್ನನಾಗುವುದಿಲ್ಲ. ॥ ೧೨ ॥ ನಿನಗೆ ಸಮರ್ಪಿಸಲ್ಪಟ್ಟ ಕರ್ಮಗಳಿಗೆ ಎಂದೂ ನಾಶವಿಲ್ಲ. ಅವು ಅಕ್ಷಯವಾಗುತ್ತವೆ. ಆದುದರಿಂದ ಯಜ್ಞ, ದಾನ, ಕಠಿಣ ತಪಸ್ಸು, ವ್ರತಾದಿಗಳು ಮುಂತಾದ ನಾನಾ ಪ್ರಕಾರದ

ಪುಂಸಾಮತೋ ವಿವಿಧಕರ್ಮಭಿರಧ್ವರಾದ್ಯೈ-
ರ್ದಾನೇನ ಚೋಗ್ರತಪಸಾ ವ್ರತಚರ್ಯಯಾ ಚ।
ಆರಾಧನಂ ಭಗವತಸ್ತವ ಸತ್ಕ್ರಿಯಾರ್ಥೋ
ಧರ್ಮೋಽರ್ಪಿತಃ ಕರ್ಹಿಚಿದ್ಧ್ರಿಯತೇ ನ ಯತ್ರ ॥ ೧೩ ॥

ಶಶ್ವತ್ಸ್ವರೂಪಮಹಸೈವ ನಿಪೀತಭೇದ-
ಮೋಹಾಯ ಬೋಧಧಿಷಣಾಯ ನಮಃ ಪರಸ್ಮೈ ।
ವಿಶ್ವೋದ್ಭವಸ್ಥಿತಿಲಯೇಷು ನಿಮಿತ್ತಲೀಲಾ-
ರಾಸಾಯ ತೇ ನಮ ಇದಂ ಚಕೃಮೇಶ್ವರಾಯ ॥ ೧೪ ॥

ಯಸ್ಯಾವತಾರಗುಣಕರ್ಮವಿಡಂಬನಾನಿ
ನಾಮಾನಿ ಯೇಽಸುವಿಗಮೇ ವಿವಶಾ ಗೃಣಂತಿ ।
ತೇ ನೈಕಜನ್ಮಶಮಲಂ ಸಹಸೈವ ಹಿತ್ವಾ
ಸಂಯಾಂತ್ಯಪಾವೃತಮೃತಂ ತಮಜಂ ಪ್ರಪದ್ಯೇ ॥ ೧೫ ॥

ಯೋ ವಾ ಅಹಂ ಚ ಗಿರಿಶಶ್ಚ ವಿಭುಃ ಸ್ವಯಂ ಚ
ಸ್ಥಿತ್ಯುದ್ಭವಪ್ರಲಯಹೇತವ ಆತ್ಮಮೂಲಮ್ ।
ಭಿತ್ತ್ವಾ ತ್ರಿಪಾದ್ವವೃಧ ಏಕ ಉರುಪ್ರರೋಹ-
ಸ್ತಸ್ಮೈ ನಮೋ ಭಗವತೇ ಭುವನದ್ರುಮಾಯ ॥ ೧೬ ॥

ಲೋಕೋ ವಿಕರ್ಮನಿರತಃ ಕುಶಲೇ ಪ್ರಮತ್ತಃ
ಕರ್ಮಣ್ಯಯಂ ತ್ವದುದಿತೇ ಭವದರ್ಚನೇ ಸ್ವೇ ।
ಯಸ್ತಾವದಸ್ಯ ಬಲವಾನಿಹ ಜೀವಿತಾಶಾಂ
ಸದ್ಯಶ್ಛಿನತ್ತ್ಯನಿಮಿಷಾಯ ನಮೋಽಸ್ತು ತಸ್ಮೈ ॥ ೧೭ ॥

ಯಸ್ಮಾದ್ಬಿಭೇಮ್ಯಹಮಪಿ ದ್ವಿಪರಾರ್ಧಧಿಷ್ಣ್ಯ-
ಮಧ್ಯಾಸಿತಃ ಸಕಲಲೋಕನಮಸ್ಕೃತಂ ಯತ್ ।
ತೇಪೇ ತಪೋ ಬಹುಸವೋಽವರುರುತ್ಸಮಾನ-
ಸ್ತಸ್ಮೈ ನಮೋ ಭಗವತೇಽಧಿಮಖಾಯ ತುಭ್ಯಮ್ ॥ ೧೮ ॥

ಕರ್ಮಗಳ ಮೂಲಕ ನಿನ್ನ ಪ್ರಸನ್ನತೆಯನ್ನು ಪಡೆಯುವುದೇ ಸರ್ವೋತ್ತಮವಾದ ಕರ್ಮಫಲವು. ಏಕೆಂದರೆ, ನಿನ್ನ ಪ್ರಸನ್ನತೆ ಯುಂಟಾದ ಬಳಿಕ ಯಾವ ಫಲವು ತಾನೇ ದುರ್ಲಭ ವಾದುದು ? ॥ ೧೩ ॥ ನೀನು ಸದಾ ನಿನ್ನ ಸ್ವರೂಪ ಪ್ರಕಾಶ ದಿಂದಲೇ ಪ್ರಾಣಿಗಳ ಭೇದಭ್ರಮವಾದ ಅಂಧಕಾರವನ್ನು ನಾಶ ಮಾಡುತ್ತಾ ಇರುತ್ತೀಯೆ. ವಿದ್ಯೆಯೆಂಬ ಜ್ಞಾನಸ್ವರೂಪನೂ, ಜ್ಞಾನಕ್ಕೆ ಅಧಿಷ್ಠಾನವಾಗಿರುವ ಸಾಕ್ಷಾತ್ ಪರಮಪುರುಷನೂ ಆದ ನಿನಗೆ ನಾನು ವಂದಿಸುತ್ತೇನೆ. ಜಗತ್ತಿನ ಸೃಷ್ಟಿ ಸ್ಥಿತಿ, ಲಯಗಳ ನಿಮಿತ್ತ ವಾಗಿ ನಡೆಯುವ ಮಾಯಾಲೀಲೆಯು ನಿನ್ನ ಆಟವೇ ಆಗಿದೆ. ಇಂತಹ ಪ್ರಭುವಾದ ನಿನಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೧೪ ॥ ಮರಣಕಾಲದಲ್ಲಿ ನಿನ್ನ ಅವತಾರ, ಗುಣ ಮತ್ತು ಕರ್ಮ ಗಳನ್ನು ಸೂಚಿಸುವ – ವಾಸುದೇವಾ, ದೇವಕೀನಂದನಾ, ಜನಾರ್ದನಾ, ಮುರಾರಿ ಹೀಗೆ ಇನ್ನೂ ದಿವ್ಯನಾಮಗಳನ್ನು ಆಕಸ್ಮಿಕ ವಾಗಿಯೋ, ವಿವಶತೆ ಯಿಂದಲೋ ಉಚ್ಚರಿಸುವ ಜನರು ಅನೇಕ ಜನ್ಮಗಳ ಪಾಪಗಳನ್ನು ಒಡನೆಯೇ ಕಳಕೊಂಡು ಮಾಯೆಯೇ ಮುಂತಾದ ಆವರಣರಹಿತವಾದ ಬ್ರಹ್ಮಪದವನ್ನು ಪಡೆಯುವರು. ಅಂತಹ ಅಜನೂ, ನಿತ್ಯನೂ, ಶಾಶ್ವತನೂ ಆದ ನಿನ್ನನ್ನು ಶರಣುಹೊಂದುತ್ತೇನೆ. ॥ ೧೫ ॥ ಭಗವಂತನೇ ! ವಿಶ್ವವೃಕ್ಷನಾಗಿ ವಿರಾಜಿಸುತ್ತಿರುವ ನಿನಗೆ ನಮಸ್ಕಾರವು. ಜಗತ್ತಿನ ಸೃಷ್ಟಿ ಸ್ಥಿತಿ, ಲಯಗಳಿಗೆ ಕಾರಣರಾದ ನಾನೂ, ಸ್ವಯಂ ನೀನು ಮತ್ತು ರುದ್ರನು ಎಂಬ ತ್ರಿಮೂರ್ತಿಗಳು ಆ ವೃಕ್ಷದ ಮೂರು ಪ್ರಧಾನ ಶಾಖೆಗಳು. ಪ್ರಜಾಪತಿಗಳು, ಮನುಗಳು ಮುಂತಾದವರು ಕಿರು ಕೊಂಬೆಗಳು. ಇದರ ಮೂಲವಾದರೋ ನೀನೇ ಆಗಿದ್ದೀಯೆ. ಹೀಗೆ ಮೂಲಪ್ರಕೃತಿಯನ್ನು ಸ್ವೀಕರಿಸಿ, ತ್ರಿಗುಣಾತ್ಮಕವಾಗಿ ವಿಭಾಗಿಸಿ ಕೊಂಡು ವಿಸ್ತಾರವಾಗಿ ಹಬ್ಬಿರುವ ವಿಶ್ವವೃಕ್ಷರೂಪನಾದ ನಿನಗೆ ನಮೋ ನಮಃ ॥ ೧೬॥ ಪ್ರಭೋ ! ಭಗವಂತನ ಆರಾಧನೆಯೇ ಜನರಿಗೆ ಶ್ರೇಯಸ್ಕರವಾದ ಸ್ವಧರ್ಮವೆಂದು ನೀನು ತಿಳಿಸಿರುವೆ. ಆದರೂ ಅವರು ಈ ವಿಷಯದಲ್ಲಿ ಉದಾಸೀನರಾಗಿ ಸದಾ ನಿಷಿದ್ಧವಾದ ಕರ್ಮಗಳಲ್ಲಿಯೇ ತೊಡಗಿರುತ್ತಾರೆ. ಹೀಗೆ ಪ್ರಮಾದೀ ಜೀವರ ಬದುಕುವ ಆಸೆಯನ್ನು ಸದಾ ಸಾವಧಾನ ವಾಗಿದ್ದುಕೊಂಡು ಶೀಘ್ರವಾಗಿ ಕತ್ತರಿಸಿ ಹಾಕುತ್ತಿರುವ ಮಹಾಬಲ ಶಾಲಿಯಾದ ಕಾಲವೂ ನಿನ್ನ ರೂಪವೇ ಆಗಿದೆ. ಆ ಮಹಾಕಾಲ ನಾದ ನಿನಗೆ ನಮಸ್ಕಾರಗಳು. ॥ ೧೭ ॥ ಎರಡು ಪರಾರ್ಧಗಳ ಆಯುಸ್ಸು ಇದ್ದು ಸಮಸ್ತ ಲೋಕಗಳಿಂದಲೂ ನಮಸ್ಕೃತನಾಗಿ, ಸತ್ಯಲೋಕಕ್ಕೆ ಒಡೆಯನಾಗಿದ್ದರೂ ನಾನು ನಿನ್ನ ಆ ಕಾಲರೂಪಕ್ಕೆ ಹೆದರುತ್ತೇನೆ. ಅದರಿಂದ ಬದುಕುಳಿಯಲು ಮತ್ತು ನಿನ್ನನ್ನು ಹೊಂದುವುದಕ್ಕಾಗಿ ನಾನು ಇಷ್ಟುಕಾಲ ತಪಸ್ಸನ್ನಾಚರಿಸಿದ್ದೇನೆ. ಅಧಿ ಯಜ್ಞರೂಪದಲ್ಲಿ ಈ ತಪಸ್ಸಿಗೆ ಸಾಕ್ಷಿಯಾಗಿರುವ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೧೮ ॥ ಸ್ವಾಮೀ ! ನೀನು ಪೂರ್ಣಕಾಮನು. ಯಾವ ವಿಷಯ ಸುಖದ ಇಚ್ಛೆ ಇಲ್ಲದಿದ್ದರೂ ನೀನೇ ನಿರ್ಮಿಸಿದ ಧರ್ಮಸೇತುವನ್ನು ಸಂರಕ್ಷಿಸುವುದಕ್ಕಾಗಿ, ಪಶು, ಪಕ್ಷಿ, ಮನುಷ್ಯ, ದೇವತೆ ಮುಂತಾದ ಜೀವಯೋನಿಗಳಲ್ಲಿ ಸ್ವೇಚ್ಛೆಯಿಂದ ಶರೀರ

ತಿರ್ಯಙ್ಮನುಷ್ಯವಿಬುಧಾದಿಷು ಜೀವಯೋನಿ-
ಷ್ವಾತ್ಮೇಚ್ಛಯಾಽಽತ್ಮಕೃತಸೇತುಪರೀಪ್ಸಯಾ ಯಃ ।
ರೇಮೇ ನಿರಸ್ತರತಿರಪ್ಯವರುದ್ಧದೇಹ-
ಸ್ತಸ್ಮೈ ನಮೋ ಭಗವತೇ ಪುರುಷೋತ್ತಮಾಯ ॥ ೧೯ ॥

ಯೋಽವಿದ್ಯಯಾನುಪಹತೋಽಪಿ ದಶಾರ್ಧವೃತ್ತ್ಯಾ
ನಿದ್ರಾಮುವಾಹ ಜಠರೀಕೃತಲೋಕಯಾತ್ರಃ ।
ಅಂತರ್ಜಲೇಽಹಿಕಶಿಪುಸ್ಪರ್ಶಾನುಕೂಲಾಂ
ಭೀಮೋರ್ಮಿಮಾಲಿನಿ ಜನಸ್ಯ ಸುಖಂ ವಿವೃಣ್ವನ್ ॥ ೨೦ ॥

ಯನ್ನಾಭಿಪದ್ಮಭವನಾದಹಮಾಸಮೀಡ್ಯ
ಲೋಕತ್ರಯೋಪಕರಣೋ ಯದನುಗ್ರಹೇಣ ।
ತಸ್ಮೈ ನಮಸ್ತ ಉದರಸ್ಥಭವಾಯ ಯೋಗ-
ನಿದ್ರಾವಸಾನವಿಕಸನ್ನಲಿನೇಕ್ಷಣಾಯ ॥ ೨೧ ॥

ಸೋಽಯಂ ಸಮಸ್ತಜಗತಾಂ ಸುಹೃದೇಕ ಆತ್ಮಾ
ಸತ್ತ್ವೇನ ಯನ್ಮೃಡಯತೇ ಭಗವಾನ್ಭಗೇನ ।
ತೇನೈವ ಮೇ ದೃಶಮನುಸ್ಪೃಶತಾದ್ಯಥಾಹಂ
ಸ್ರಕ್ಷ್ಯಾಮಿ ಪೂರ್ವವದಿದಂ ಪ್ರಣತಪ್ರಿಯೋಽಸೌ ॥ ೨೨ ॥

ಏಷ ಪ್ರಪನ್ನವರದೋ ರಮಯಾಽಽತ್ಮಶಕ್ತ್ಯಾ
ಯದ್ಯತ್ಕರಿಷ್ಯತಿ ಗೃಹೀತಗುಣಾವತಾರಃ ।
ತಸ್ಮಿನ್ ಸ್ವವಿಕ್ರಮಮಿದಂ ಸೃಜತೋಽಪಿ ಚೇತೋ
ಯುಂಜೀತ ಕರ್ಮಶಮಲಂ ಚ ಯಥಾ ವಿಜಹ್ಯಾಮ್ ॥ ೨೩ ॥

ನಾಭಿಹ್ರದಾದಿಹ ಸತೋಽಮ್ಭಸಿ ಯಸ್ಯ ಪುಂಸೋ
ವಿಜ್ಞಾನಶಕ್ತಿರಹಮಾಸಮನಂತಶಕ್ತೇಃ ।
ರೂಪಂ ವಿಚಿತ್ರಮಿದಮಸ್ಯ ವಿವೃಣ್ವತೋ ಮೇ
ಮಾ ರೀರಿಷೀಷ್ಟ ನಿಗಮಸ್ಯ ಗಿರಾಂ ವಿಸರ್ಗಃ ॥ ೨೪ ॥

ಸೋಽಸಾವದಭ್ರಕರುಣೋ ಭಗವಾನ್ವಿವೃದ್ಧ-
ಪ್ರೇಮಸ್ಮಿತೇನ ನಯನಾಂಬುರುಹಂ ವಿಜೃಮ್ಭನ್ ।
ಉತ್ಥಾಯ ವಿಶ್ವವಿಜಯಾಯ ಚ ನೋ ವಿಷಾದಂ
ಮಾಧ್ವ್ಯಾ ಗಿರಾಪನಯತಾತ್ಪುರುಷಃ ಪುರಾಣಃ ॥ ೨೫ ॥

*ಮೈತ್ರೇಯ ಉವಾಚ*

ಸ್ವಸಂಭವಂ ನಿಶಾಮ್ಯೈವಂ ತಪೋವಿದ್ಯಾಸಮಾಧಿಭಿಃ ।
ಯಾವನ್ಮನೋವಚಃ ಸ್ತುತ್ವಾ ವಿರರಾಮ ಸ ಖಿನ್ನವತ್ ॥ ೨೬ ॥

ಗಳನ್ನು ಧರಿಸಿ ಅನೇಕ ಲೀಲೆಗಳನ್ನು ನಡೆಸಿದ್ದೀಯೆ. ಅಂತಹ ಪುರುಷೋತ್ತಮ ಭಗವಂತನಾದ ನಿನಗೆ ನಮಸ್ಕಾರವು. ॥ ೧೯ ॥ ಪ್ರಭೋ ! ನೀನು ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ ಮತ್ತು ಅಭಿನಿವೇಶ – ಈ ಅಜ್ಞಾನಕ್ಕೆ ಕಾರಣವಾದ ಐದು ಕ್ಲೇಶಗಳಿಗೆ ಸ್ವಲ್ಪವೂ ವಶಪಡದವನು. ಆದರೂ ಇಡೀ ವಿಶ್ವವನ್ನು ಉದರದಲ್ಲಿ ಅಡಗಿಸಿಕೊಂಡು ಭಯಂಕರವಾದ ಅಲೆಗಳ ಮಾಲೆಗಳಿಂದ ಕ್ಷೋಭೆಗೊಂಡ ಪ್ರಳಯ ಜಲರಾಶಿಯಲ್ಲಿ ಆದಿಶೇಷನೆಂಬ ಕೋಮಲವಾದ ಹಾಸಿಗೆಯಲ್ಲಿ ಪವಡಿಸಿದ್ದೀಯೆ. ಹಿಂದಿನ ಕಲ್ಪದ ಕರ್ಮಪರಂಪರೆಯಿಂದ ಬಳಲಿದ ಅನಂತ ಜೀವರುಗಳಿಗೆ ವಿಶ್ರಾಂತಿ ಕೊಡುವುದಕ್ಕಾಗಿಯೇ ಈ ನಿನ್ನ ಶಯನಲೀಲೆಯಾಗಿದೆ. ॥ ೨೦ ॥ ಸ್ವಾಮಿಯೇ ! ನಿನ್ನ ನಾಭಿಕಮಲರೂಪೀ ಭವನದಲ್ಲಿ ನಾನು ಜನಿಸಿದ್ದೇನೆ. ಈ ಸಮಸ್ತ ವಿಶ್ವವು ನಿನ್ನ ಉದರದಲ್ಲಿ ಅಡಗಿದೆ. ನಿನ್ನ ಅನುಗ್ರಹದಿಂದಲೇ ನಾನು ಮೂರು ಲೋಕಗಳನ್ನು ಸೃಷ್ಟಿಮಾಡಿ ಉಪಕರಿಸುವ ಸಾಮರ್ಥ್ಯವನ್ನು ಪಡೆದಿರುವೆನು. ಈಗ ಯೋಗನಿದ್ರೆಯು ಮುಗಿದುಹೋದ ವೇಳೆಯಲ್ಲಿ ಅರಳುತ್ತಿರುವ ತಾವರೆಯಂತಹ ಕಣ್ಣುಗಳಿಂದ ಕಂಗೊಳಿಸುತ್ತಿರುವ ನಿನಗೆ ನಮಸ್ಕಾರಗಳು. ॥ ೨೧ ॥ ನೀನು ಸಮಸ್ತ ಜಗತ್ತಿನ ಏಕಮಾತ್ರ ಸುಹೃದನೂ, ಆತ್ಮನೂ, ಶರಣ್ಯನೂ ಭಕ್ತಪ್ರಿಯನೂ ಆಗಿರುವ ನಿನಗೆ ನಮಸ್ಕಾರವು. ಹಿಂದಿನ ಕಲ್ಪದಲ್ಲಿ ಇದ್ದಹಾಗೆ ಈ ಜಗತ್ತನ್ನು ಸೃಷ್ಟಿಸಲು ಬಯಸಿದ್ದೇನೆ. ಅದಕ್ಕೆ ಬೇಕಾದ ಬುದ್ಧಿಯನ್ನು ಅನುಗ್ರಹಿಸು. ಯಾವ ಜ್ಞಾನ ಮತ್ತು ಐಶ್ವರ್ಯಗಳಿಂದ ವಿಶ್ವಕ್ಕೆ ಆನಂದವನ್ನು ತುಂಬುತ್ತಿರುವೆಯೋ, ಅದು ನನ್ನ ಬುದ್ಧಿಯಲ್ಲಿ ಸೇರಿಕೊಳ್ಳುವಂತೆ ಮಾಡು. ॥ ೨೨ ॥ ಶ್ರೀಪತಿಯೇ ! ಭಕ್ತವಾಂಛಾ ಕಲ್ಪತರುವೇ ? ನಿನ್ನ ಶಕ್ತಿಸ್ವರೂಪಳೇ ಆದ ಶ್ರೀಲಕ್ಷ್ಮೀದೇವಿಯಿಂದೊಡಗೂಡಿ ಅನೇಕ ಗುಣಾವತಾರಗಳನ್ನು ಮಾಡಿ, ಹಲವಾರು ಅದ್ಭುತ ಕರ್ಮಗಳಲ್ಲೇ ನಾನು ಮಾಡುತ್ತಿರುವ ಈ ಜಗತ್ಸೃಷ್ಟಿಯ ಉದ್ಯಮವೂ ಒಂದಾಗಿದೆ. ಆದ್ದರಿಂದ ಈ ಸೃಷ್ಟಿಸಮಯದಲ್ಲಿ ನನ್ನ ಚಿತ್ತಕ್ಕೆ ಪ್ರೇರಣೆಯನ್ನು ನೀಡು ; ಅದಕ್ಕೆ ಶಕ್ತಿಯನ್ನು ತುಂಬು. ಅದರಿಂದ ನಾನು ಸೃಷ್ಟಿರಚನಾ ವಿಷಯದಲ್ಲಿ ಅಭಿಮಾನರೂಪೀ ಕಶ್ಮಲದಿಂದ ದೂರವುಳಿಯುವಂತಾಗಲಿ. ॥ ೨೩ ॥ ಈ ಪ್ರಳಯ ಜಲರಾಶಿಯಲ್ಲಿ ಮಲಗಿದ ಅನಂತಶಕ್ತಿಯಾದ ನಿನ್ನ ನಾಭಿಕಮಲದಿಂದ ಜನಿಸಿರುವ ನಾನು ನಿನ್ನ ವಿಜ್ಞಾನಶಕ್ತಿಯೇ ಆಗಿದ್ದೇನೆ. ಮಹತ್ತತ್ತ್ವದ ಅಭಿಮಾನಿದೇವತೆಯೇ ಆಗಿದ್ದೇನೆ. ಆದುದರಿಂದ ಜಗತ್ತಿನ ವಿಚಿತ್ರರೂಪವನ್ನು ವಿಸ್ತರಿಸುವಾಗ ನನ್ನ ವೇದವಾಣಿಯ ಉಚ್ಚಾರಣೆಯು ಲುಪ್ತವಾಗದಂತೆ ಅನುಗ್ರಹಿಸು. ॥ ೨೪ ॥ ನೀನು ಪರಮ ಕರುಣಾಪೂರ್ಣನಾದ ಪುರಾಣಪುರುಷನು. ಪ್ರೇಮಪ್ರವಾಹವನ್ನು ಸೂಸುವ ಕಿರುನಗೆಯಿಂದ ಶೋಭಿಸುತ್ತಿರುವ ಕಮಲಸದೃಶವಾದ ಕಣ್ಣುಗಳನ್ನು ತೆರೆದು ವಿಶ್ವಸೃಷ್ಟಿಯ ವಿಜಯಕ್ಕಾಗಿ ಎದ್ದು ಸವಿನುಡಿಗಳಿಂದ ನನ್ನ ವಿಷಾದವನ್ನು ತೊಡೆದುಹಾಕಿಬಿಡು. ॥ ೨೫ ॥

ಶ್ರೀಮೈತ್ರೇಯರು ಹೇಳುತ್ತಾರೆ – ವಿದುರನೇ ! ಬ್ರಹ್ಮದೇವರು ಹೀಗೆ ತಪಸ್ಸು ಜ್ಞಾನ, ವಿದ್ಯೆ ಮತ್ತು ಸಮಾಧಿಯ ಮೂಲಕ ತನ್ನ

ಅಥಾಭಿಪ್ರೇತಮನ್ವೀಕ್ಷ್ಯ ಬ್ರಹ್ಮಣೋ ಮಧುಸೂದನಃ ।
ವಿಷಣ್ಣಚೇತಸಂ ತೇನ ಕಲ್ಪವ್ಯತಿಕರಾಂಭಸಾ ॥ ೨೭ ॥

ಲೋಕಸಂಸ್ಥಾನವಿಜ್ಞಾನ ಆತ್ಮನಃ ಪರಿಖಿದ್ಯತಃ ।
ತಮಾಹಾಗಾಧಯಾ ವಾಚಾ ಕಶ್ಮಲಂ ಶಮಯನ್ನಿವ ॥ ೨೮ ॥

*ಶ್ರೀಭಗವಾನುವಾಚ*

ಮಾ ವೇದಗರ್ಭ ಗಾಸ್ತಂದ್ರೀಂ ಸರ್ಗ ಉದ್ಯಮಮಾವಹ ।
ತನ್ಮಯಾಽಽಪಾದಿತಂ ಹ್ಯಗ್ರೇ ಯನ್ಮಾಂ ಪ್ರಾರ್ಥಯತೇ ಭವಾನ್ ॥ ೨೯ ॥

ಭೂಯಸ್ತ್ವಂ ತಪ ಆತಿಷ್ಠ ವಿದ್ಯಾಂ ಚೈವ ಮದಾಶ್ರಯಾಮ್ ।
ತಾಭ್ಯಾಮಂತರ್ಹೃದಿ ಬ್ರಹ್ಮನ್ ಲೋಕಾಂದ್ರಕ್ಷ್ಯಸ್ಯಪಾವೃತಾನ್ ॥ ೩೦ ॥

ತತ ಆತ್ಮನಿ ಲೋಕೇ ಚ ಭಕ್ತಿಯುಕ್ತಃ ಸಮಾಹಿತಃ ।
ದ್ರಷ್ಟಾಸಿ ಮಾಂ ತತಂ ಬ್ರಹ್ಮನ್ಮಯಿ ಲೋಕಾಂಸ್ತ್ವಮಾತ್ಮನಃ ॥ ೩೧ ॥

ಯದಾ ತು ಸರ್ವಭೂತೇಷು ದಾರುಷ್ವಗ್ನಿಮಿವ ಸ್ಥಿತಮ್ ।
ಪ್ರತಿಚಕ್ಷೀತ ಮಾಂ ಲೋಕೋ ಜಹ್ಯಾತ್ತರ್ಹ್ಯೇವ ಕಶ್ಮಲಮ್ ॥ ೩೨ ॥

ಯದಾ ರಹಿತಮಾತ್ಮಾನಂ ಭೂತೇಂದ್ರಿಯಗುಣಾಶಯೈಃ ।
ಸ್ವರೂಪೇಣ ಮಯೋಪೇತಂ ಪಶ್ಯನ್ ಸ್ವಾರಾಜ್ಯಮೃಚ್ಛತಿ ॥ ೩೩ ॥

ನಾನಾಕರ್ಮವಿತಾನೇನ ಪ್ರಜಾ ಬಹ್ವೀಃ ಸಿಸೃಕ್ಷತಃ ।
ನಾತ್ಮಾವಸೀದತ್ಯಸ್ಮಿಂಸ್ತೇ ವರ್ಷೀಯಾನ್ಮದನುಗ್ರಹಃ ॥ ೩೪ ॥

ಋಷಿಮಾದ್ಯಂ ನ ಬಧ್ನಾತಿ ಪಾಪೀಯಾಂಸ್ತ್ವಾಂ ರಜೋಗುಣಃ ।
ಯನ್ಮನೋ ಮಯಿ ನಿರ್ಬದ್ಧಂ ಪ್ರಜಾಃ ಸಂಸೃಜತೋಽಪಿ ತೇ ॥ ೩೫ ॥

ಜ್ಞಾತೋಽಹಂ ಭವತಾ ತ್ವದ್ಯ ದುರ್ವಿಜ್ಞೇಯೋಽಪಿ ದೇಹಿನಾಮ್ ।
ಯನ್ಮಾಂ ತ್ವಂ ಮನ್ಯಸೇಽಯುಕ್ತಂ ಭೂತೇಂದ್ರಿಯಗುಣಾತ್ಮಭಿಃ ॥ ೩೬ ॥

ತುಭ್ಯಂ ಮದ್ವಿಚಿಕಿತ್ಸಾಯಾಮಾತ್ಮಾ ಮೇ ದರ್ಶಿತೋಽಬಹಿಃ ।
ನಾಲೇನ ಸಲಿಲೇ ಮೂಲಂ ಪುಷ್ಕರಸ್ಯ ವಿಚಿನ್ವತಃ ॥ ೩೭ ॥

ಉತ್ಪತ್ತಿಸ್ಥಾನವಾದ ಶ್ರೀನಾರಾಯಣನನ್ನು ಕಂಡು, ತಮ್ಮ ಮನಸ್ಸು ಮತ್ತು ಮಾತುಗಳ ಶಕ್ತ್ಯನುಸಾರ ಆತನನ್ನು ಸ್ತುತಿಸಿ, ಆಯಾಸಗೊಂಡವರಂತೆ ಮೌನವನ್ನು ತಳೆದರು. ॥ ೨೬ ॥ ಬ್ರಹ್ಮನು ಈ ಪ್ರಳಯ ಜಲರಾಶಿಯಿಂದ ತುಂಬಾ ಗಾಬರಿಗೊಂಡಿರುವನು. ಸೃಷ್ಟಿಯ ವಿಷಯದಲ್ಲಿ ನಿಶ್ಚಯವಾದ ವಿಚಾರವು ಹೊಳೆಯದೇ ಅವನ ಚಿತ್ತಕ್ಕೆ ತುಂಬಾ ಕಳವಳ ಉಂಟಾಗಿದೆ ಎಂಬುದಾಗಿ ಭಗವಾನ್ ಮಧುಸೂದನನು ನೋಡಿದನು. ಅವನ ಆಶಯವನ್ನು ಅರಿತು ಭಗವಂತನು ತನ್ನ ಗಂಭೀರವಾದ ವಾಣಿಯಿಂದ ಆತನ ಖೇದವನ್ನು ಶಮನಗೊಳಿಸುತ್ತಾ ಹೇಳತೊಡಗಿದನು. ॥ ೨೭-೨೮ ॥

**ಶ್ರೀಭಗವಂತನು ಹೇಳಿದನು** – ವತ್ಸ ವೇದಗರ್ಭನೇ ! ನೀನು ವಿಷಾದಕ್ಕೆ ವಶನಾಗಿ ಆಲಸ್ಯವನ್ನು ಹೊಂದಬೇಡ. ಸೃಷ್ಟಿ ವಿಷಯದಲ್ಲಿ ತತ್ಪರನಾಗು. ನೀನು ನನ್ನಿಂದ ಬಯಸುವ ಜ್ಞಾನವನ್ನಾದರೋ ನಿನಗೆ ಈ ಮೊದಲೇ ಕೊಟ್ಟದ್ದಾಗಿದೆ. ॥ ೨೯ ॥ ನೀನು ಮತ್ತೊಮ್ಮೆ ತಪಸ್ಸನ್ನಾಚರಿಸು ಮತ್ತು ಭಾಗವತ ಜ್ಞಾನದ ಅನುಷ್ಠಾನ ಮಾಡು. ಅದರ ಮೂಲಕ ನೀನು ಎಲ್ಲ ಲೋಕಗಳನ್ನು ಸ್ಪಷ್ಟವಾಗಿ ನಿನ್ನ ಅಂತಃಕರಣದಲ್ಲಿ ನೋಡುವೆಯಂತೆ. ॥ ೩೦ ॥ ಮತ್ತೆ ಭಕ್ತಿಯುಕ್ತನಾಗಿ, ಏಕಾಗ್ರಚಿತ್ತನಾಗಿ ನೀನು ನನ್ನಲ್ಲೇ ಸಮಸ್ತಲೋಕಗಳನ್ನು ಮತ್ತು ವ್ಯಾಪ್ತವಾಗಿರುವುದನ್ನು ನೋಡುವೆ ಹಾಗೂ ನಿನ್ನಲ್ಲೇ ಸಮಸ್ತ ಲೋಕಗಳೂ ಮತ್ತು ನಾನೂ ವ್ಯಾಪಿಸಿರುವುದನ್ನೂ ನೋಡುವೆ. ॥ ೩೧ ॥ ಕಟ್ಟಿಗೆಯಲ್ಲಿ ಬೆಂಕಿಯು ಅಡಗಿ ವ್ಯಾಪಿಸಿಕೊಂಡಿರುವಂತೆ ನಾನು ಸಮಸ್ತ ಭೂತಗಳಲ್ಲಿಯೂ ಅಡಗಿ ವ್ಯಾಪಿಸಿಕೊಂಡಿರುವುದನ್ನು ಸಾಕ್ಷಾತ್ಕರಿಸಿಕೊಂಡಾಗಲೇ ಜೀವಿಯು ಅಜ್ಞಾನ ರೂಪವಾದ ಕಶ್ಮಲದಿಂದ ಮುಕ್ತನಾಗುವನು. ॥ ೩೨ ॥ ಅವನು ತನ್ನನ್ನು–ಭೂತಗಳು, ಇಂದ್ರಿಯಗಳು, ಗುಣಗಳು, ಅಂತಃಕರಣ ಇವುಗಳಿಂದ ರಹಿತನಾಗಿ ಸ್ವಸ್ವರೂಪದಿಂದ ನನ್ನಿಂದ ಅಭಿನ್ನನೆಂದು ನೋಡಿದಾಗ ಮೋಕ್ಷವನ್ನು ಪಡೆಯುವನು. ॥ ೩೩ ॥ ಬ್ರಹ್ಮನೇ ! ನಿನ್ನ ಮೇಲೆ ನನ್ನ ಪೂರ್ಣವಾದ ಅನುಗ್ರಹವಿದೆ. ಆದುದರಿಂದ ನಾನಾ ಪ್ರಕಾರದ ಕರ್ಮಸಂಸ್ಕಾರಗಳಿಗೆ ಅನುಗುಣವಾಗಿ ಅನೇಕ ಪ್ರಕಾರಗಳಾದ ಜೀವರನ್ನು ಸೃಷ್ಟಿಸಲು ಬಯಸಿದರೂ ನಿನ್ನ ಮನಸ್ಸು ಕೊಂಚವೂ ಮೋಹಿತವಾಗಲಾರದು. ॥ ೩೪ ॥ ನೀನು ಮಂತ್ರದ್ರಷ್ಟಾರರಲ್ಲಿ ಮೊದಲಿಗನಾಗಿ ಆದಿಋಷಿಯಾಗಿರುವೆ. ಪ್ರಜೆಗಳನ್ನು ಸೃಷ್ಟಿಮಾಡುತ್ತಿರುವಾಗಲೂ ನಿನ್ನ ಮನಸ್ಸು ನನ್ನಲ್ಲೇ ನೆಟ್ಟಿರುವುದರಿಂದ ಪಾಪಿಷ್ಠವಾದ ರಜೋಗುಣವು ನಿನ್ನನ್ನು ಬಂಧಿಸಲಾರದು. ॥ ೩೫ ॥ ವತ್ಸ! ಭೂತಗಳು, ಇಂದ್ರಿಯಗಳು, ಗುಣಗಳು, ಅಂತಃಕರಣ – ಇವುಗಳಿಂದ ನಾನು ರಹಿತನಾಗಿರುವೆನೆಂದು ನೀನು ತಿಳಿದುಕೊಂಡಿರುವೆ. ಆದ್ದರಿಂದ ಸಾಮಾನ್ಯ ದೇಹಿಗಳಿಗೆ ತಿಳಿಯಲು ಅತಿ ಕಷ್ಟವಾಗಿರುವ ನನ್ನ ನಿಜಸ್ವರೂಪವನ್ನು ನೀನು ತಿಳಿದುಕೊಂಡುಬಿಟ್ಟಿರುವೆ. ॥ ೩೬ ॥ 'ನನಗೆ ಯಾವುದಾದರೂ ಆಶ್ರಯವಿದೆಯೋ, ಇಲ್ಲವೋ' ಎಂಬ ಸಂದೇಹದಿಂದ ನೀನು ಕಮಲನಾಳದ ಮೂಲಕ ಜಲದಲ್ಲಿ ಪ್ರವೇಶಿಸಿ ಅದರ ಮೂಲವನ್ನು ಹುಡುಕುತ್ತಿದ್ದೆ. ಅದಕ್ಕಾಗಿ ನಾನು ನಿನಗೆ ನನ್ನ ಸ್ವರೂಪವನ್ನು ನಿನ್ನ ಅಂತಃಕರಣದಲ್ಲೇ ತೋರಿಸಿರುವೆನು. ॥ ೩೭ ॥

ಯಚ್ಚಕರ್ಥಾಂಗಮತ್ಸ್ತೋತ್ರಂ ಮತ್ಕಥಾಭ್ಯುದಯಾಂಕಿತಮ್ ।
ಯದ್ವಾ ತಪಸಿ ತೇ ನಿಷ್ಠಾ ಸ ಏಷ ಮದನುಗ್ರಹಃ ॥ ೩೮ ॥

ಪ್ರೀತೋಽಹಮಸ್ತು ಭದ್ರಂ ತೇ ಲೋಕಾನಾಂ ವಿಜಯೇಚ್ಛಯಾ ।
ಯದಸ್ತೌಷೀರ್ಗುಣಮಯಂ ನಿರ್ಗುಣಂ ಮಾನುವರ್ಣಯನ್ ॥ ೩೯ ॥

ಯ ಏತೇನ ಪುಮಾನ್ನಿತ್ಯಂ ಸ್ತುತ್ವಾ ಸ್ತೋತ್ರೇಣ ಮಾಂ ಭಜೇತ್ ।
ತಸ್ಯಾಶು ಸಂಪ್ರಸೀದೇಯಂ ಸರ್ವಕಾಮವರೇಶ್ವರಃ ॥ ೪೦ ॥

ಪೂರ್ತೇನ ತಪಸಾ ಯಜ್ಞೈರ್ದಾನೈರ್ಯೋಗಸಮಾಧಿನಾ ।
ರಾದ್ಧಂ ನಿಃಶ್ರೇಯಸಂ ಪುಂಸಾಂ ಮತ್ಪ್ರೀತಿಸ್ತತ್ತ್ವವಿನ್ಮತಮ್ ॥ ೪೧ ॥

ಅಹಮಾತ್ಮಾಽಽತ್ಮನಾಂ ಧಾತಃ ಪ್ರೇಷ್ಠಃ ಸಂಪ್ರೇಯಸಾಮಪಿ ।
ಅತೋ ಮಯಿ ರತಿಂ ಕುರ್ಯಾದ್ದೇಹಾದಿರ್ಯತ್ಕೃತೇ ಪ್ರಿಯಃ ॥ ೪೨ ॥

ಸರ್ವವೇದಮಯೇನೇದಮಾತ್ಮನಾತ್ಮಾತ್ಮಯೋನಿನಾ ।
ಪ್ರಜಾಃ ಸೃಜ ಯಥಾಪೂರ್ವಂ ಯಾಶ್ಚ ಮಯ್ಯನುಶೇರತೇ ॥ ೪೩ ॥

*ಮೈತ್ರೇಯ ಉವಾಚ*

ತಸ್ಮಾ ಏವಂ ಜಗತ್ಸ್ರಷ್ಟ್ರೇ ಪ್ರಧಾನಪುರುಷೇಶ್ವರಃ ।
ವ್ಯಜ್ಯೇದಂ ಸ್ವೇನ ರೂಪೇಣ ಕಂಜನಾಭಸ್ತಿರೋದಧೇ ॥ ೪೪ ॥

ಪ್ರಿಯಪುತ್ರನೇ! ನೀನು ಮಾಡಿರುವ ನನ್ನ ಕಥಾವೈಭವದಿಂದ ಕೂಡಿದ ಸ್ತುತಿ ಮತ್ತು ನಿನಗಿರುವ ತಪೋನಿಷ್ಠೆ – ಇವೂ ನನ್ನ ಅನುಗ್ರಹದಿಂದಲೇ ಉಂಟಾಗಿದೆ. ॥ ೩೮ ॥ ಲೋಕಗಳನ್ನು ಸೃಷ್ಟಿಸುವ ಇಚ್ಛೆಯಿಂದ ನೀನು ನನ್ನನ್ನು ಸಗುಣನಾಗಿಯೂ, ನಿರ್ಗುಣನಾಗಿಯೂ ವರ್ಣಿಸಿ ಸ್ತೋತ್ರ ಮಾಡಿರುವುದರಿಂದ ನಾನು ಅತ್ಯಂತ ಸಂತುಷ್ಟನಾಗಿರುವೆನು. ನಿನಗೆ ಮಂಗಳವಾಗಲಿ. ॥ ೩೯ ॥ ಸ್ವಯಂಭುವೇ! ಸಮಸ್ತ ಮನೋರಥಗಳನ್ನು ಈಡೇರಿಸುವ ಸಾಮರ್ಥ್ಯವುಳ್ಳ ಈಶ್ವರನು ನಾನು. ನೀನು ಮಾಡಿದ ಈ ಸ್ತೋತ್ರದ ಮೂಲಕ ಪ್ರತಿದಿನವೂ ನನ್ನನ್ನು ಭಜಿಸುವವನಿಗೆ ನಾನು ಬೇಗನೇ ಪ್ರಸನ್ನನಾಗುತ್ತೇನೆ. ॥ ೪೦ ॥ ಕೆರೆ-ಬಾವಿ ಮುಂತಾದುವುಗಳನ್ನು ತೋಡಿಸುವ ಪೂರ್ತ, ತಪಸ್ಸು, ಯಜ್ಞ, ಯೋಗ, ಸಮಾಧಿ ಮುಂತಾದ ಸಾಧನೆಗಳಿಂದ ದೊರೆಯುವ ಪರಮ ಮಂಗಳ ಮಯ ಫಲವು ನನ್ನ (ಭಗವಂತನ) ಪ್ರಸನ್ನತೆಯೇ ಆಗಿದೆ ಎಂದು ತತ್ತ್ವಜ್ಞಾನಿಗಳ ಅಭಿಪ್ರಾಯವಾಗಿದೆ. ॥ ೪೧ ॥ ವಿಧಾತನೇ! ನಾನು ಎಲ್ಲ ಆತ್ಮಗಳಿಗೂ ಆತ್ಮನಾಗಿರುವೆನು. ಪತ್ನೀ, ಪುತ್ರಾದಿ ಪ್ರಿಯವಸ್ತುಗಳಿಂದಲೂ ಪ್ರಿಯನಾದವನು. ದೇಹಿಗಳಿಗೆ ದೇಹಾದಿಗಳು ನನಗೋಸ್ಕರವೇ ಪ್ರಿಯವಾಗಿವೆ. ಆದುದರಿಂದ ಪ್ರಿಯಕ್ಕೂ ಪ್ರಿಯತಮನಾಗಿರುವ ನನ್ನನ್ನೇ ಪ್ರೇಮಿಸಬೇಕು. ॥ ೪೨ ॥ ಬ್ರಹ್ಮನೇ! ಮೂರು ಲೋಕಗಳನ್ನು ಮತ್ತು ಈಗ ನನ್ನಲ್ಲಿ ಲೀನವಾದ ಪ್ರಜೆಗಳನ್ನು ಹಿಂದಿನ ಕಲ್ಪದಲ್ಲಿ ಅವು ಹೇಗಿದ್ದವೋ ಹಾಗೆಯೇ-ನನ್ನಿಂದ ಉತ್ಪನ್ನವಾದ ನಿನ್ನ ಸರ್ವವೇದಮಯ ಸ್ವರೂಪದಿಂದ ಸ್ವತಃ ರಚಿಸು. ॥ ೪೩ ॥

**ಮೈತ್ರೇಯರು ಹೇಳುತ್ತಾರೆ** – ಪ್ರಕೃತಿ ಮತ್ತು ಪುರುಷರಿಗೂ ಪ್ರಭುವಾದ ಭಗವಾನ್ ಪದ್ಮನಾಭನು ಸೃಷ್ಟಿಕರ್ತರಾದ ಬ್ರಹ್ಮದೇವರಿಗೆ ಹೀಗೆ ಜಗತ್ತಿನ ಸೃಷ್ಟಿಕ್ರಮವನ್ನು ವ್ಯಕ್ತಪಡಿಸಿ, ಜಯವಾಗಲೀ ಎಂದು ಆಶೀರ್ವದಿಸಿ ತನ್ನ ನಿಜರೂಪವನ್ನು ಕಣ್ಮರೆಯಾಗಿಸಿದನು. ॥ ೪೪ ॥

***ಒಂಬತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ನವಮೋಽಧ್ಯಾಯಃ ॥ ೯ ॥**

# ಹತ್ತನೆಯ ಅಧ್ಯಾಯ

## ಹತ್ತುಬಗೆಯ ಸೃಷ್ಟಿಯ ವರ್ಣನೆ

*ವಿದುರ ಉವಾಚ*

ಅಂತರ್ಹಿತೇ ಭಗವತಿ ಬ್ರಹ್ಮಾ ಲೋಕಪಿತಾಮಹಃ ।
ಪ್ರಜಾಃ ಸಸರ್ಜ ಕತಿಧಾ ದೈಹಿಕೀರ್ಮಾನಸೀರ್ವಿಭುಃ ॥ ೧ ॥

ಯೇ ಚ ಮೇ ಭಗವನ್ಪೃಷ್ಟಾಸ್ತ್ವಯ್ಯರ್ಥಾ ಬಹುವಿತ್ತಮ ।
ತಾನ್ವದಸ್ವಾನುಪೂರ್ವ್ಯೇಣ ಛಿಂಧಿ ನಃ ಸರ್ವಸಂಶಯಾನ್ ॥ ೨ ॥

ವಿದುರನು ಕೇಳಿದನು – ಮುನಿವರ್ಯರಾದ ಮೈತ್ರೇಯರೇ! ಭಗವಾನ್ ನಾರಾಯಣನು ಅಂತರ್ಧಾನನಾದ ಮೇಲೆ ಸರ್ವಲೋಕಪಿತಾಮಹರಾದ ಬ್ರಹ್ಮದೇವರು ತಮ್ಮ ದೇಹದಿಂದ ಮತ್ತು ಮನಸ್ಸಿನಿಂದ ಎಷ್ಟು ಬಗೆಯ ಸೃಷ್ಟಿಗಳನ್ನು ಉತ್ಪನ್ನಮಾಡಿದರು? ॥ ೧ ॥ ಪೂಜ್ಯರೇ! ಇದಲ್ಲದೆ ನಾನು ತಮ್ಮಲ್ಲಿ ಕೇಳಿಕೊಂಡ ಎಲ್ಲ ಪ್ರಶ್ನೆಗಳಿಗೆ ಕ್ರಮವಾಗಿ ಉತ್ತರ ದಯಪಾಲಿಸಿ ನನ್ನ ಎಲ್ಲ ಸಂಶಯಗಳನ್ನು ಪರಿಹರಿಸಿರಿ. ತಾವು ಜ್ಞಾನಿಗಳಲ್ಲೇ ಅತ್ಯಂತ ಶ್ರೇಷ್ಠರಾಗಿರುವಿರಿ. ॥ ೨ ॥

*ಸೂತ ಉವಾಚ*

ಏವಂ ಸಂಚೋದಿತಸ್ತೇನ ಕ್ಷತ್ತ್ರಾ ಕೌಷಾರವೋ ಮುನಿಃ ।
ಪ್ರೀತಃ ಪ್ರತ್ಯಾಹ ತಾನ್ಪ್ರಶ್ನಾನ್ ಹೃದಿಸ್ಥಾನಥ ಭಾರ್ಗವ ॥ ೩ ॥

*ಮೈತ್ರೇಯ ಉವಾಚ*

ವಿರಿಂಚೋಽಪಿ ತಥಾ ಚಕ್ರೇ ದಿವ್ಯಂ ವರ್ಷಶತಂ ತಪಃ ।
ಆತ್ಮನ್ಯಾತ್ಮಾನಮಾವೇಶ್ಯ ಯದಾಹ ಭಗವಾನಜಃ ॥ ೪ ॥

ತದ್ವಿಲೋಕ್ಯಾಬ್ಜಸಂಭೂತೋ ವಾಯುನಾ ಯದಧಿಷ್ಠಿತಃ ।
ಪದ್ಮಮಂಭಶ್ಚ ತತ್ಕಾಲಕೃತವೀರ್ಯೇಣ ಕಂಪಿತಮ್ ॥ ೫ ॥

ತಪಸಾ ಹ್ಯೇಧಮಾನೇನ ವಿದ್ಯಯಾ ಚಾತ್ಮಸಂಸ್ಥಯಾ ।
ವಿವೃದ್ಧವಿಜ್ಞಾನಬಲೋ ನ್ಯಪಾದ್ವಾಯುಂ ಸಹಾಂಭಸಾ ॥ ೬ ॥

ತದ್ವಿಲೋಕ್ಯ ವಿಯದ್ವ್ಯಾಪಿ ಪುಷ್ಕರಂ ಯದಧಿಷ್ಠಿತಮ್ ।
ಅನೇನ ಲೋಕಾನ್ಪ್ರಾಗ್ಲೀನಾನ್ಕಲ್ಪಿತಾಸ್ಮೀತ್ಯಚಿಂತಯತ್ ॥ ೭ ॥

ಪದ್ಮಕೋಶಂ ತದಾಽಽವಿಶ್ಯ ಭಗವತ್ಕರ್ಮಚೋದಿತಃ ।
ಏಕಂ ವ್ಯಭಾಂಕ್ಷೀದುರುಧಾ ತ್ರಿಧಾ ಭಾವ್ಯಂ ದ್ವಿಸಪ್ತಧಾ ॥ ೮ ॥

ಏತಾವಾನ್‌ಜೀವಲೋಕಸ್ಯ ಸಂಸ್ಥಾಭೇದಃ ಸಮಾಹೃತಃ ।
ಧರ್ಮಸ್ಯ ಹ್ಯನಿಮಿತ್ತಸ್ಯ ವಿಪಾಕಃ ಪರಮೇಷ್ಠ್ಯಸೌ ॥ ೯ ॥

*ವಿದುರ ಉವಾಚ*

ಯದಾತ್ಥ ಬಹುರೂಪಸ್ಯ ಹರೇರದ್ಭುತಕರ್ಮಣಃ ।
ಕಾಲಾಖ್ಯಂ ಲಕ್ಷಣಂ ಬ್ರಹ್ಮನ್ಯಥಾ ವರ್ಣಯ ನಃ ಪ್ರಭೋ ॥ ೧೦ ॥

*ಮೈತ್ರೇಯ ಉವಾಚ*

ಗುಣವ್ಯತಿಕರಾಕಾರೋ ನಿರ್ವಿಶೇಷೋಽಪ್ರತಿಷ್ಠಿತಃ ।
ಪುರುಷಸ್ತದುಪಾದಾನಮಾತ್ಮಾನಂ ಲೀಲಯಾಸೃಜತ್ ॥ ೧೧ ॥

ವಿಶ್ವಂ ವೈ ಬ್ರಹ್ಮತನ್ಮಾತ್ರಂ ಸಂಸ್ಥಿತಂ ವಿಷ್ಣುಮಾಯಯಾ ।
ಈಶ್ವರೇಣ ಪರಿಚ್ಛಿನ್ನಂ ಕಾಲೇನಾವ್ಯಕ್ತಮೂರ್ತಿನಾ ॥ ೧೨ ॥

ಯಥೇದಾನೀಂ ತಥಾಗ್ರೇ ಚ ಪಶ್ಚಾದಪ್ಯೇತದೀದೃಶಮ್ ।
ಸರ್ಗೋ ನವವಿಧಸ್ತಸ್ಯ ಪ್ರಾಕೃತೋ ವೈಕೃತಸ್ತು ಯಃ ॥ ೧೩ ॥

**ಸೂತಪುರಾಣಿಕರು ಹೇಳಿದರು** – ಶೌನಕಾದಿ ಋಷಿಗಳೇ! ವಿದುರನು ಹೀಗೆ ಕೇಳಿದಾಗ ಮುನಿವರ್ಯ ಮೈತ್ರೇಯರು ಬಹಳ ಪ್ರಸನ್ನರಾಗಿ ತಮ್ಮ ಹೃದಯದಲ್ಲಿದ್ದ ಆ ಪ್ರಶ್ನೆಗಳಿಗೆ ಹೀಗೆ ಉತ್ತರಿಸ ತೊಡಗಿದರು. ॥ ೩ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಅಯ್ಯಾ, ವಿದುರನೇ! ಜನ್ಮ ರಹಿತನಾದ ಭಗವಾನ್ ಶ್ರೀಹರಿಯು ಹೇಳಿದಂತೆಯೇ ಬ್ರಹ್ಮ ದೇವರು ತಮ್ಮ ಚಿತ್ತವನ್ನು ಆತ್ಮಭೂತನಾದ ಶ್ರೀನಾರಾಯಣನಲ್ಲಿ ತೊಡಗಿಸಿ ನೂರು ದಿವ್ಯವರ್ಷಗಳವರೆಗೆ ತಪಸ್ಸನ್ನಾಚರಿಸಿದರು. ॥ ೪ ॥ ಆಗ ಪ್ರಳಯಕಾಲದ ಮಹಾವಾಯುವಿನ ಬಡಿತಗಳಿಂದ ಅವರು ಕುಳಿತಿದ್ದ ಕಮಲವು ಹಾಗೂ ಸುತ್ತಲೂ ಇದ್ದ ಜಲರಾಶಿಯೂ ಅಲ್ಲಾಡುತ್ತಿರುವುದು ಅವರಿಗೆ ಗೋಚರಿಸಿತು. ॥ ೫ ॥ ಪ್ರಬಲ ವಾದ ತಪಸ್ಸಿನಿಂದ ಮತ್ತು ಹೃದಯದಲ್ಲಿ ಸ್ಥಿತವಾದ ಆತ್ಮಜ್ಞಾನ ದಿಂದ ಅವರ ವಿಜ್ಞಾನ-ಬಲವು ವೃದ್ಧಿಸಿತು. ಅವುಗಳ ಬಲದಿಂದ ಅವರು ಆ ಜಲರಾಶಿಯನ್ನೂ, ವಾಯುವನ್ನೂ ಕುಡಿದು ಬಿಟ್ಟರು. ॥ ೬ ॥ ಮತ್ತೆ ತಾನು ಕುಳಿತಿದ್ದ ಆಕಾಶವ್ಯಾಪಿ ಮಹಾ ಕಮಲವನ್ನು ನೋಡಿ ಅವರು – 'ಹಿಂದಿನ ಕಲ್ಪದಲ್ಲಿ ಲೀನವಾದ ಲೋಕಗಳನ್ನು ನಾನು ಈ ಕಮಲದಿಂದಲೇ ಸೃಷ್ಟಿಸುವೆನು' ಎಂದು ಯೋಚಿಸಿದರು. ॥ ೭ ॥ ಶ್ರೀಭಗವಂತನಿಂದ ಸೃಷ್ಟಿಕಾರ್ಯವನ್ನು ಮಾಡಲು ನೇಮಕಗೊಂಡಿದ್ದ ಆ ಬ್ರಹ್ಮದೇವರು ಆ ಕಮಲ ಕೋಶದಲ್ಲಿ ಪ್ರವೇಶಿಸಿ ಒಂದೊಂದನ್ನೇ ಭೂಃ, ಭುವಃ, ಸುವಃ ಎಂಬ ಮೂರು ಭಾಗಗಳನ್ನಾಗಿ ವಿಂಗಡಿಸಿದರು. ಆ ಕಮಲವು ಅತ್ಯಂತ ದೊಡ್ಡದಾಗಿದ್ದು ಅದನ್ನು ಹದಿನಾಲ್ಕು ಲೋಕಗಳನ್ನಾಗಿ ಅಥವಾ ಅದಕ್ಕಿಂತಲೂ ಹೆಚ್ಚು ಲೋಕಗಳನ್ನಾಗಿ ವಿಭಾಗಮಾಡ ಬಹುದಾಗಿತ್ತು. ॥ ೮ ॥ ಜೀವಿಗಳ ಭೋಗಸ್ಥಾನವಾಗಿ ಇವೇ ಮೂರು ಲೋಕಗಳು ಶಾಸ್ತ್ರಗಳಲ್ಲಿ ವರ್ಣಿತವಾಗಿವೆ. ನಿಷ್ಕಾಮ ಕರ್ಮ ಮಾಡುವವರಿಗಾದರೋ ಮಹಃ, ತಪಃ, ಜನಃ ಮತ್ತು ಸತ್ಯಲೋಕ ರೂಪವಾದ ಬ್ರಹ್ಮಲೋಕ ಇವುಗಳು ದೊರೆಯುತ್ತವೆ. ॥ ೯ ॥

**ವಿದುರನು ಕೇಳಿದನು** – ಬ್ರಾಹ್ಮಣೋತ್ತಮರೇ! ತಾವು ಅದ್ಭುತಕರ್ಮನಾದ ಶ್ರೀಹರಿಯ ಕಾಲವೆಂಬ ಶಕ್ತಿಯ ಮಾತನ್ನು ಹೇಳಿದಿರಿ, ಸ್ವಾಮಿ! ದಯವಿಟ್ಟು ಅದನ್ನು ನನಗೆ ವಿಸ್ತಾರವಾಗಿ ವರ್ಣಿಸಬೇಕು. ॥ ೧೦ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರಾ! ವಿಷಯ ಗಳು ರೂಪಾಂತರ ಹೊಂದುವುದೇ ಕಾಲದ ಆಕಾರವು. ಅದು ಸ್ವತಃ ನಿರ್ವಿಶೇಷವೂ, ಅನಾದಿಯೂ, ಅನಂತವೂ ಆಗಿದೆ. ಅದನ್ನೇ ನಿಮಿತ್ತವಾಗಿಸಿಕೊಂಡು ಶ್ರೀಭಗವಂತನು ಲೀಲಾಜಾಲವಾಗಿ ತನ್ನನ್ನೇ ಸೃಷ್ಟಿಯರೂಪದಲ್ಲಿ ಪ್ರಕಟಪಡಿಸಿಕೊಳ್ಳುವನು. ॥ ೧೧ ॥ ಮೊದಲು ಈ ವಿಶ್ವವೆಲ್ಲವೂ ಭಗವಂತನ ಮಾಯೆಯಲ್ಲಿ ಲೀನ ವಾಗಿ ಬ್ರಹ್ಮರೂಪದಲ್ಲೇ ಇತ್ತು. ಅದನ್ನೇ ಅವ್ಯಕ್ತಮೂರ್ತಿಯಾದ ಕಾಲದ ಮೂಲಕ ಭಗವಂತನು ಪುನಃ ಪ್ರತ್ಯೇಕವಾಗಿ ಪ್ರಕಟ ಪಡಿಸಿದನು. ॥ ೧೨ ॥ ಈ ಜಗತ್ತು ಈಗಿರುವಂತೆ ಹಿಂದೆಯೂ ಇತ್ತು ಮತ್ತು ಮುಂದೆಯೂ ಹೀಗೇ ಇರುವುದು. ಇದರ ಸೃಷ್ಟಿಯು ಒಂಭತ್ತು ಪ್ರಕಾರದಿಂದಿರುವುದು ಮತ್ತು ಪ್ರಾಕೃತ-ವೈಕೃತ ಭೇದದಿಂದ ಹತ್ತನೆಯದಾದ ಒಂದು ಸೃಷ್ಟಿಯೂ ಇದೆ. ॥ ೧೩ ॥

ಕಾಲದ್ರವ್ಯಗುಣೈರಸ್ಯ ತ್ರಿವಿಧಃ ಪ್ರತಿಸಂಕ್ರಮಃ ।
ಆದ್ಯಸ್ತು ಮಹತಃ ಸರ್ಗೋ ಗುಣವೈಷಮ್ಯಮಾತ್ಮನಃ ॥ ೧೪ ॥

ದ್ವಿತೀಯಸ್ತ್ವಹಮೋ ಯತ್ರ ದ್ರವ್ಯಜ್ಞಾನಕ್ರಿಯೋದಯಃ ।
ಭೂತಸರ್ಗಸ್ತೃತೀಯಸ್ತು ತನ್ಮಾತ್ರೋ ದ್ರವ್ಯಶಕ್ತಿಮಾನ್ ॥ ೧೫ ॥

ಚತುರ್ಥ ಐಂದ್ರಿಯಃ ಸರ್ಗೋ ಯಸ್ತು ಜ್ಞಾನಕ್ರಿಯಾತ್ಮಕಃ ।
ವೈಕಾರಿಕೋ ದೇವಸರ್ಗಃ ಪಂಚಮೋ ಯನ್ಮಯಂ ಮನಃ ॥ ೧೬ ॥

ಷಷ್ಠಸ್ತು ತಮಸಃ ಸರ್ಗೋ ಯಸ್ತ್ವಬುದ್ಧಿಕೃತಃ ಪ್ರಭೋ ।
ಷಡಿಮೇ ಪ್ರಾಕೃತಾಃ ಸರ್ಗಾ ವೈಕೃತಾನಪಿ ಮೇ ಶೃಣು ॥ ೧೭ ॥

ರಜೋಭಾಜೋ ಭಗವತೋ ಲೀಲೇಯಂ ಹರಿಮೇಧಸಃ ।
ಸಪ್ತಮೋ ಮುಖ್ಯಸರ್ಗಸ್ತು ಷಡ್ವಿಧಸ್ತಸ್ಥುಷಾಂ ಚ ಯಃ ॥ ೧೮ ॥

ವನಸ್ಪತ್ಯೋಷಧಿಲತಾತ್ವಕ್ಸಾರಾ ವೀರುಧೋ ದ್ರುಮಾಃ ।
ಉತ್ಸ್ರೋತಸಸ್ತಮಃ ಪ್ರಾಯಾ ಅಂತಃಸ್ಪರ್ಶಾ ವಿಶೇಷಿಣಃ ॥ ೧೯ ॥

ತಿರಶ್ಚಾಮಷ್ಟಮಃ ಸರ್ಗಃ ಸೋಽಷ್ಟಾವಿಂಶದ್ವಿಧೋ ಮತಃ ।
ಅವಿದೋ ಭೂರಿತಮಸೋ ಘ್ರಾಣಜ್ಞಾ ಹೃದ್ಯವೇದಿನಃ ॥ ೨೦ ॥

ಇದರ ಪ್ರಳಯವು, ಕಾಲ, ದ್ರವ್ಯ, ಗುಣ ಇವುಗಳ ಮೂಲಕ ಮೂರು ಪ್ರಕಾರದಿಂದ ಆಗುತ್ತದೆ. ಈಗ ಇವುಗಳಲ್ಲಿ ಮೊದಲಿಗೆ ಹತ್ತು ಪ್ರಕಾರದ ಸೃಷ್ಟಿಯನ್ನು ವರ್ಣಿಸುತ್ತೇನೆ ; ಕೇಳು – ಮೊದಲನೆಯದು ಮಹತ್ತತ್ತ್ವದ ಸೃಷ್ಟಿ. ಭಗವಂತನ ಪ್ರೇರಣೆಯಿಂದ ಸತ್ತ್ವಾದಿ ಗುಣಗಳಲ್ಲಿ ವಿಷಮತೆ ಉಂಟಾಗುವುದೇ ಇದರ ಸ್ವರೂಪವಾಗಿದೆ. ॥ ೧೪ ॥ ಎರಡನೆಯ ಸೃಷ್ಟಿ ಅಹಂಕಾರದ್ದು. ಇದರಿಂದ ಪೃಥ್ವಿಯೇ ಮುಂತಾದ ಪಂಚಭೂತಗಳು, ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ಉತ್ಪತ್ತಿ ಆಗುತ್ತದೆ. ಭೂತ ಸೃಷ್ಟಿಯೇ ಮೂರನೆಯದು. ಇದರಲ್ಲಿ ಪಂಚಮಹಾಭೂತಗಳನ್ನು ಉಂಟುಮಾಡುವ ತನ್ಮಾತ್ರವರ್ಗ ಇರುವುದು. ॥ ೧೫ ॥ ನಾಲ್ಕನೆಯದು ಇಂದ್ರಿಯಗಳ ಸೃಷ್ಟಿಯು. ಇದು ಜ್ಞಾನ ಮತ್ತು ಕ್ರಿಯಾಶಕ್ತಿಯಿಂದ ಸಂಪನ್ನವಾಗುವುದು. ಐದನೆಯದಾದ ಸೃಷ್ಟಿಯು ಸಾತ್ವಿಕಾಹಂಕಾರದಿಂದ ಉತ್ಪನ್ನವಾಗಿ ಇಂದ್ರಿಯಗಳಿಗೆ ಅಧಿಷ್ಠಾತೃ ದೇವತೆಗಳದ್ದಾಗಿದೆ. ಮನಸ್ಸು ಇದೇ ಸೃಷ್ಟಿಯಲ್ಲಿ ಅಂತರ್ಗತವಾಗಿದೆ. ॥ ೧೬ ॥ ಅವಿದ್ಯೆಯ ಸೃಷ್ಟಿಯು ಆರನೆಯದು. ಇದರಲ್ಲಿ ತಾಮಿಸ್ರ, ಅಂಧತಾಮಿಸ್ರ, ತಮ, ಮೋಹ ಮತ್ತು ಮಹಾಮೋಹ – ಎಂಬ ಐದು ಗಂಟುಗಳು ಇರುವುವು. ಇದು ಜೀವಿಗಳ ಬುದ್ಧಿಯನ್ನು ಆವರಣ ಮತ್ತು ವಿಕ್ಷೇಪಗೊಳಿಸುವಂತಹುದು. ಇವು ಆರು ಪ್ರಾಕೃತ ಸೃಷ್ಟಿಗಳು ಇನ್ನು ವೈಕೃತ ಸೃಷ್ಟಿಗಳನ್ನು ವರ್ಣಿಸುವೆನು, ಕೇಳು. ॥ ೧೭ ॥

ಚಿಂತನೆ ಮಾಡುವವರ ಸಮಸ್ತ ದುಃಖಗಳನ್ನು ಪರಿಹರಿಸುವ ಭಗವಾನ್ ಶ್ರೀಹರಿಯದೇ ಇವೆಲ್ಲಾ ಲೀಲೆಗಳು. ಅವನೇ ಬ್ರಹ್ಮದೇವರ ರೂಪದಲ್ಲಿ ರಜೋಗುಣವನ್ನು ಸ್ವೀಕರಿಸಿ ಜಗತ್ತನ್ನು ರಚಿಸುವನು. ಆರು ಪ್ರಕಾರದ ಪ್ರಾಕೃತ ಸೃಷ್ಟಿಯ ಬಳಿಕ, ವೈಕೃತಿಕ ಸೃಷ್ಟಿಯಲ್ಲಿ ಪ್ರಧಾನವಾದ ಸ್ಥಾವರ ಸೃಷ್ಟಿಯೇ ಏಳನೇಯದು. ಅದು ಆರು ವಿಭಾಗವಾಗಿರುವುದು. ॥ ೧೮ ॥ ವನಸ್ಪತಿಗಳು, ಓಷಧಿಗಳು, ಲತೆಗಳು, ಬಿದಿರು ಮುಂತಾದ ತ್ವಕ್‌ಸಾರಗಳು, ವೀರುಧಗಳು ಮತ್ತು ದ್ರುಮಗಳೇ ಆ ಆರು ಬಗೆಗಳು.* ಇವು ಕೆಳಭಾಗದಿಂದ (ಬೇರಿನಿಂದ) ಮೇಲ್ಗಡೆಗೆ ಆಹಾರಸಂಚಾರ ಹೊಂದಿರುತ್ತವೆ. ಸಾಮಾನ್ಯವಾಗಿ ಇವುಗಳಲ್ಲಿ ಜ್ಞಾನಶಕ್ತಿಯು ಪ್ರಕಟವಾಗಿರುವುದಿಲ್ಲ. ಇವು ಒಳಗಿಂದೊಳಗೆ ಕೇವಲ ಸ್ಪರ್ಶದ ಅನುಭವ ಮಾಡುತ್ತವೆ. ಇವುಗಳ ಪ್ರತಿಯೊಂದರಲ್ಲಿಯೂ ಯಾವುದೋ ವಿಶೇಷಗುಣವಿರುತ್ತದೆ. ॥ ೧೯ ॥ ಎಂಟನೆಯ ಸೃಷ್ಟಿಯು ತಿರ್ಯಕ್ (ಪಶು-ಪಕ್ಷಿ) ಯೋನಿಗಳದ್ದಾಗಿದೆ. ಆ ಸೃಷ್ಟಿಯಲ್ಲಿ ಇಪ್ಪತ್ತೆಂಟು ಜಾತಿಯ ಪ್ರಾಣಿಗಳು ಜನಿಸಿದವು. ಇವುಗಳಿಗೆ ಇಂದು-ನಾಳೆ ಎಂಬ ಕಾಲಜ್ಞಾನವಿರುವುದಿಲ್ಲ. ತಮೋಗುಣದ ಹೆಚ್ಚಳದಿಂದ ಇವು ಕೇವಲ ತಿಂದು-ಕುಡಿಯುವುದು, ಮೈಥುನ, ಮಲಗುವುದು ಇಷ್ಟನ್ನೇ ತಿಳಿಯುವುವು. ಇವುಗಳಿಗೆ ಮೂಸಿ

* ಹೂವಿಲ್ಲದೆ ಫಲಿಸುವ ಅರಳಿ, ಅತ್ತಿ, ಹಲಸು, ಆಲ ಮುಂತಾದವುಗಳು ವನಸ್ಪತಿಗಳು. ಹೂಬಿಟ್ಟು ಫಲಕೊಡುವ ಜವೆ, ಭತ್ತ, ಹೆಸರು ಮುಂತಾದವುಗಳು ಓಷಧಿಗಳು. ಇವುಗಳು ಫಲಪಕ್ವವಾದ ಮೇಲೆ ನಾಶಹೊಂದುತ್ತವೆ. ಆಶ್ರಯ ವೃಕ್ಷಾದಿಗಳಿಗೆ ಹಬ್ಬಿ ಮೇಲಕ್ಕೆ ಬೆಳೆಯುವ ಮಲ್ಲಿಗೆ ಮುಂತಾದ ಬಳ್ಳಿಗಳೇ ಲತೆಗಳು. ಕಠೋರವಾದ ಸಿಪ್ಪೆಯನ್ನು ಹೊಂದಿರುವ ಬಿದಿರು ಮುಂತಾದವುಗಳು ತ್ವಕ್ಸಾರಗಳು. ಗಟ್ಟಿಯಾಗಿ ಕುರುಚಲಾಗಿರುವುದರಿಂದ ಮೇಲಕ್ಕೆ ಹತ್ತದೆ ನೆಲದ ಮೇಲೆಯೇ ಹರಡಿಕೊಳ್ಳುವ ಬಳ್ಳಿಗಳು ವೀರುಧಗಳೆನಿಸುತ್ತವೆ. ಉದಾ :- ಕರ್ಬೂಜ, ಕಲ್ಲಂಗಡಿ ಮುಂತಾದವುಗಳು. ಮೊದಲು ಹೂವುಬಿಟ್ಟು ನಂತರ ಹೂವಿನ ಜಾಗದಲ್ಲೇ ಹಣ್ಣುಗಳು ಬಿಡುವ ಮಾವು ನೇರಳೆ, ತೆಂಗು ಮುಂತಾದವುಗಳೇ ದ್ರುಮಗಳು.

ಗೌರಜೋ ಮಹಿಷಃ ಕೃಷ್ಣ ಸೂಕರೋ ಗವಯೋ ರುರುಃ ।
ದ್ವಿಶಫಾಃ ಪಶವಶ್ಚೇಮೇ ಅವಿರುಷ್ಟ್ರಶ್ಚ ಸತ್ತಮ ॥ ೨೦ ॥

ಖರೋಽಶ್ವೋಽಶ್ವತರೋ ಗೌರಃ ಶರಭಶ್ಚಮರೀ ತಥಾ ।
ಏತೇ ಚೈಕಶಫಾಃ ಕ್ಷತ್ತಃ ಶೃಣು ಪಂಚನಖಾನ್ಪಶೂನ್ ॥ ೨೧ ॥

ಶ್ವಾ ಸೃಗಾಲೋ ವೃಕೋ ವ್ಯಾಘ್ರೋ ಮಾರ್ಜಾರಃ ಶಶಶಲ್ಲಕೌ ।
ಸಿಂಹಃ ಕಪಿರ್ಗಜಃ ಕೂರ್ಮೋ ಗೋಧಾ ಚ ಮಕರಾದಯಃ ॥ ೨೨ ॥

ಕಂಕಗೃಧ್ರವಟಶ್ಯೇನಭಾಸಭಲ್ಲೂಕಬರ್ಹಿಣಃ ।
ಹಂಸಸಾರಸಚಕ್ರಾಹ್ವಕಾಕೋಲೂಕಾದಯಃ ಖಗಾಃ ॥ ೨೪ ॥

ಅರ್ವಾಕ್ಸ್ರೋತಸ್ತು ನವಮಃ ಕ್ಷತ್ತರೇಕವಿಧೋ ನೃಣಾಮ್ ।
ರಜೋಽಧಿಕಾಃ ಕರ್ಮಪರಾ ದುಃಖೇ ಚ ಸುಖಮಾನಿನಃ ॥ ೨೫ ॥

ವೈಕೃತಾಸ್ತ್ರಯ ಏವೈತೇ ದೇವಸರ್ಗಶ್ಚ ಸತ್ತಮ ।
ವೈಕಾರಿಕಸ್ತು ಯಃ ಪ್ರೋಕ್ತಃ ಕೌಮಾರಸ್ತೂಭಯಾತ್ಮಕಃ ॥ ೨೬ ॥

ದೇವಸರ್ಗಶ್ಚಾಷ್ಟವಿಧೋ ವಿಬುಧಾಃ ಪಿತರೋಽಸುರಾಃ ।
ಗಂಧರ್ವಾಪ್ಸರಸಃ ಸಿದ್ಧಾ ಯಕ್ಷರಕ್ಷಾಂಸಿ ಚಾರಣಾಃ ॥ ೨೭ ॥

ಭೂತಪ್ರೇತಪಿಶಾಚಾಶ್ಚ ವಿದ್ಯಾಧ್ರಾಃ ಕಿನ್ನರಾದಯಃ ।
ದಶೈತೇ ವಿದುರಾಖ್ಯಾತಾಃ ಸರ್ಗಾಸ್ತೇ ವಿಶ್ವಸೃಕ್ಕೃತಾಃ ॥ ೨೮ ॥

ಅತಃ ಪರಂ ಪ್ರವಕ್ಷ್ಯಾಮಿ ವಂಶಾನ್ಮನ್ವಂತರಾಣಿ ಚ ।
ಏವಂ ರಜಃಪ್ಲುತಃ ಸ್ರಷ್ಟಾ ಕಲ್ಪಾದಿಷ್ವಾತ್ಮಭೂರ್ಹರಿಃ ।
ಸೃಜತ್ಯಮೋಘಸಂಕಲ್ಪ ಆತ್ಮೈವಾತ್ಮಾನಮಾತ್ಮನಾ ॥ ೨೯ ॥

ನೋಡಿಯೇ ವಸ್ತುವಿನ ಜ್ಞಾನವಾಗುತ್ತದೆ. ಇವುಗಳ ಹೃದಯದಲ್ಲಿ ವಿಚಾರಶಕ್ತಿ ಅಥವಾ ದೂರದರ್ಶಿತ್ವ ಇರುವುದಿಲ್ಲ. ॥ ೨೦ ॥ ಸಾಧುಶ್ರೇಷ್ಠನೇ ! ಈ ತಿರ್ಯಕ್ ಪ್ರಾಣಿಗಳಲ್ಲಿ – ಹಸು, ಆಡು, ಕೋಣ, ಜಿಂಕೆ, ಹಂದಿ ಗವಯ (ನೀಲಗೋವು) ರುರು ಎಂಬ ಮೃಗ, ಟಗರು, ಒಂಟೆ – ಇವುಗಳನ್ನು 'ದ್ವಿಶಫ' (ಎರಡು ಗೊರಸುಗಳುಳ್ಳವುಗಳು) ಎಂದು ಕರೆಯುತ್ತಾರೆ. ॥ ೨೦ ॥ ಕತ್ತೆ, ಕುದುರೆ, ಹೇಸರುಗತ್ತೆ, ಗೌರಮೃಗ, ಶರಭ ಮತ್ತು ಚಮರೀಮೃಗ – ಈ ಆರು ಜಾತಿಯ ಪ್ರಾಣಿಗಳು ' ಏಕ ಶಫ' (ಒಂದು ಗೊರಸು ಉಳ್ಳವುಗಳು) ಎನಿಸುತ್ತವೆ. ಇನ್ನು ಐದು ಉಗುರುಗಳುಳ್ಳ ಪಶು-ಪಕ್ಷಿಗಳ ಹೆಸರನ್ನು ಹೇಳುವೆನು ; ಕೇಳು. ॥ ೨೧ ॥ ನಾಯಿ, ನರಿ, ತೋಳ, ಹುಲಿ, ಬೆಕ್ಕು, ಮೊಲ, ಮುಳ್ಳು ಹಂದಿ, ಸಿಂಹ, ಕಪಿ, ಆನೆ, ಆಮೆ, ಉಡ, ಮೊಸಳೆ ಮುಂತಾದ ಪ್ರಾಣಿಗಳು 'ಪಂಚನಖ' ಗಳಾಗಿವೆ. ॥ ೨೩॥ ಕಂಕ, ಗೃಧ್ರ, ಬಕ, ಗಿಡುಗ, ಭಾಸ, ನವಿಲು, ಹಂಸ, ಸಾರಸ, ಚಕ್ರವಾಕ, ಕಾಗೆ, ಗೂಬೆ ಮುಂತಾದವುಗಳು ಹಾರುವ ಪಕ್ಷಿಗಳೆಂದು ಕರೆಸಿಕೊಳ್ಳುವುವು. ॥ ೨೪ ॥ ವಿದುರನೇ ! ಒಂಭತ್ತನೆಯ ಸೃಷ್ಟಿಯು ಮನುಷ್ಯರದ್ದು. ಇದು ಒಂದೇ ಪ್ರಕಾರದ್ದಾಗಿದೆ. ಇವರಲ್ಲಿ ಆಹಾರದ ಸ್ರೋತವು ಮೇಲಿನಿಂದ (ಬಾಯಿಯಿಂದ) ಕೆಳಕ್ಕೆ ಹರಿಯುತ್ತದೆ. ಮನುಷ್ಯರು ರಜೋಗುಣ ಪ್ರಧಾನವಾಗಿದ್ದು ಕರ್ಮಪರಾಯಣ ಮತ್ತು ದುಃಖರೂಪೀ ವಿಷಯಗಳಲ್ಲೇ ಸುಖವನ್ನು ಭಾವಿಸುವರು. ॥ ೨೫ ॥ ಸ್ಥಾವರ, ಪಶು-ಪಕ್ಷಿ, ಮನುಷ್ಯ – ಈ ಮೂರು ಬಗೆಯ ಸೃಷ್ಟಿಗಳೂ ಮತ್ತು ಮುಂದೆ ಹೇಳಲಾಗುವ ದೇವಸೃಷ್ಟಿಯೂ ವೈಕೃತ ಸೃಷ್ಟಿಯೇ ಆಗಿದೆ. ಮಹತ್ತತ್ತ್ವಾದಿರೂಪವಾದ ವೈಕಾರಿಕ ದೇವ ಸರ್ಗದ ಗಣನೆಯನ್ನು ಮೊದಲು ಪ್ರಾಕೃತ ಸೃಷ್ಟಿಯಲ್ಲಿ ಮಾಡಲಾಗಿದೆ. ಇವಲ್ಲದೆ ಸನತ್ಕುಮಾರಾದಿ ಋಷಿಗಳ ಕೌಮಾರ ಸರ್ಗವು ಪ್ರಾಕೃತ-ವೈಕಾರಿಕ ಎರಡೂ ಪ್ರಕಾರಗಳಿಂದ ಇದೆ. ॥ ೨೬ ॥ ದೇವತೆಗಳು, ಪಿತೃಗಳು, ಅಸುರರು, ಗಂಧರ್ವರು, ಅಪ್ಸರೆಯರು, ಯಕ್ಷ-ರಾಕ್ಷಸರು, ಸಿದ್ಧರು, ಚಾರಣ – ವಿದ್ಯಾಧರರು, ಭೂತ- ಪ್ರೇತ-ಪಿಶಾಚಗಳು, ಕಿನ್ನರ – ಕಿಂಪುರುಷ – ಅಶ್ವಮುಖ ಮುಂತಾದ ಭೇದಗಳಿಂದ ದೇವಸೃಷ್ಟಿಯು ಎಂಟು ಪ್ರಕಾರದ್ದಾಗಿದೆ ವಿದುರನೇ! ಹೀಗೆ ಜಗತ್ಕರ್ತಾ ಶ್ರೀಬ್ರಹ್ಮ ದೇವರಿಂದ ರಚಿತವಾದ ಈ ಹತ್ತು ಬಗೆಯ ಸೃಷ್ಟಿಯನ್ನು ನಾನು ನಿನಗೆ ಹೇಳಿದೆನು. ॥ ೨೭-೨೮ ॥ ಇನ್ನು ಮುಂದೆ ನಾನು ವಂಶ ಮತ್ತು ಮನ್ವಂತರಾದಿಗಳನ್ನು ವರ್ಣಿಸುವೆನು. ಹೀಗೆ ಸೃಷ್ಟಿಕರ್ತ ನಾದ ಸತ್ಯಸಂಕಲ್ಪನಾದ ಶ್ರೀಹರಿಯೇ ಬ್ರಹ್ಮದೇವರ ರೂಪದಲ್ಲಿ ಪ್ರತಿಕಲ್ಪದ ಪ್ರಾರಂಭ ದಲ್ಲಿಯೂ ರಜೋಗುಣದಿಂದ ವ್ಯಾಪಿಸಲ್ಪಟ್ಟು ತಾನೇ ಜಗದ್ರೂಪದಲ್ಲಿ ತನ್ನನ್ನೇ ಸೃಷ್ಟಿಸಿಕೊಳ್ಳುವನು. ॥ ೨೯ ॥

*ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ದಶಮೋಽಧ್ಯಾಯಃ ॥ ೧೦ ॥

# ಹನ್ನೊಂದನೆಯ ಅಧ್ಯಾಯ

## ಮನ್ವಂತರವೇ ಮುಂತಾದ ಕಾಲವಿಭಾಗದ ವರ್ಣನೆ

*ಮೈತ್ರೇಯ ಉವಾಚ*

**ಚರಮಃ ಸದ್ವಿಶೇಷಾಣಾಮನೇಕೋಽಸಂಯುತಃ ಸದಾ ।**
**ಪರಮಾಣುಃ ಸ ವಿಜ್ಞೇಯೋ ನೃಣಾಮೈಕ್ಯಭ್ರಮೋ ಯತಃ ॥ ೧ ॥**

**ಸತ ಏವ ಪದಾರ್ಥಸ್ಯ ಸ್ವರೂಪಾವಸ್ಥಿತಸ್ಯ ಯತ್ ।**
**ಕೈವಲ್ಯಂ ಪರಮಮಹಾನವಿಶೇಷೋ ನಿರಂತರಃ ॥ ೨ ॥**

**ಏವಂ ಕಾಲೋಽಪ್ಯನುಮಿತಃ ಸೌಕ್ಷ್ಮ್ಯೇ ಸ್ಥೌಲ್ಯೇ ಚ ಸತ್ತಮ ।**
**ಸಂಸ್ಥಾನಭುಕ್ತ್ಯಾ ಭಗವಾನವ್ಯಕ್ತೋ ವ್ಯಕ್ತಭುಗ್ವಿಭುಃ ॥ ೩ ॥**

**ಸ ಕಾಲಃ ಪರಮಾಣುರ್ವೈ ಯೋ ಭುಂಕ್ತೇ ಪರಮಾಣುತಾಮ್ ।**
**ಸತೋಽವಿಶೇಷಭುಗ್ಯಸ್ತು ಸ ಕಾಲಃ ಪರಮೋ ಮಹಾನ್ ॥ ೪ ॥**

**ಅಣುರ್ದ್ವೌ ಪರಮಾಣೂ ಸ್ಯಾತ್ತ್ರಸರೇಣುಸ್ತ್ರಯಃ ಸ್ಮೃತಃ ।**
**ಜಾಲಾರ್ಕರಶ್ಮ್ಯವಗತಃ ಖಮೇವಾನುಪತನ್ನಗಾತ್ ॥ ೫ ॥**

**ತ್ರಸರೇಣುತ್ರಿಕಂ ಭುಂಕ್ತೇ ಯಃ ಕಾಲಃ ಸ ತ್ರುಟಿಃ ಸ್ಮೃತಃ ।**
**ಶತಭಾಗಸ್ತು ವೇಧಃ ಸ್ಯಾತ್ತೈಸ್ತ್ರಿಭಿಸ್ತು ಲವಃ ಸ್ಮೃತಃ ॥ ೬ ॥**

**ನಿಮೇಷಸ್ತ್ರಿಲವೋ ಜ್ಞೇಯ ಆಮ್ನಾತಸ್ತೇ ತ್ರಯಃ ಕ್ಷಣಃ ।**
**ಕ್ಷಣಾನ್ಪಂಚ ವಿದುಃ ಕಾಷ್ಠಾಂ ಲಘು ತಾ ದಶ ಪಂಚ ಚ ॥ ೭ ॥**

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಈಗ ನಿನಗೆ ಕಾಲದ ವಿಶೇಷ ಸ್ವರೂಪಗಳನ್ನು ವರ್ಣಿಸುವೆನು; ಕೇಳು. ಅವುಗಳಲ್ಲಿ ಮೊದಲನೆಯದು ಪರಮಾಣುವು. ಈ ಪರಮಾಣು ಪೃಥ್ವಿಯೇ ಮುಂತಾದ ಕಾರ್ಯವರ್ಗದ ಸೂಕ್ಷ್ಮತಮವಾದ ಅಂಶ. ಇನ್ನು ಮುಂದೆ ವಿಭಾಗಮಾಡಲಾಗದಿರುವ ಅಂಶ. ಬದಲಾವಣೆ ಹೊಂದದೆ ಇರುವ ಮತ್ತು ಇತರ ಪರಮಾಣುಗಳೊಡನೆ ಸಂಯೋಗವನ್ನು ಹೊಂದಲಾರದ ಅಂಶ. ಇಂತಹ ಅನೇಕ ಪರಮಾಣುಗಳು ಪರಸ್ಪರವಾಗಿ ಕೂಡಿರುವಾಗಲೇ ಮನುಷ್ಯರಿಗೆ ಭ್ರಮೆಯಿಂದ ಪರಮಾಣುಸಮುದಾಯ ರೂಪವಾದ ಒಂದು ಅವಯವ ಇದೆ ಎಂದು ತೋರಿಬರುತ್ತದೆ. ॥ ೧ ॥ ಈ ಪರಮಾಣುವು ಯಾವುದರ ಸೂಕ್ಷ್ಮತಮವಾದ ಅಂಶವಾಗಿದೆಯೋ – ಅಂತಹ ಪೃಥ್ವ್ಯಾದಿ ಕಾರ್ಯಗಳ ಏಕತೆಯೇ, ಸಮುದಾಯವೇ, ಸಮಗ್ರರೂಪವೇ ಪರಮ ಮಹತ್ತು ಎನಿಸುವುದು. ಆಗ ಅದರಲ್ಲಿ ಪ್ರಳಯವೇ ಮುಂತಾದ ಅವಸ್ಥಾಭೇದಗಳ ಸ್ಫೂರ್ತಿ ಇರುವುದಿಲ್ಲ. ಹೊಸಕಾಲ, ಹಳೆಯಕಾಲ ಇತ್ಯಾದಿ ಕಾಲಭೇದಗಳು ತಿಳಿದುಬರುವುದಿಲ್ಲ. ಘಟ-ಪಟಾದಿ ವಸ್ತುಭೇದಗಳ ಕಲ್ಪನೆಯೂ ತೋರುವುದಿಲ್ಲ. ॥ ೨ ॥ ಸಾಧುಶ್ರೇಷ್ಠನೇ! ಹೀಗೆ ವಸ್ತುವಿನ ಸೂಕ್ಷ್ಮತಮ ಮತ್ತು ಮಹತ್ತಮ ಸ್ವರೂಪವನ್ನು ತಿಳಿಸಿದೆನಲ್ಲ! ಇದರಂತೆಯೇ ಪರಮಾಣು ಮುಂತಾದ ಅವಸ್ಥೆಗಳಲ್ಲಿ ವ್ಯಾಪ್ತವಾಗಿ ಪದಾರ್ಥಗಳನ್ನು ಭೋಗಿಸುವಂತಹವನೂ, ಸೃಷ್ಟ್ಯಾದಿಗಳಲ್ಲಿ ಸಮರ್ಥನೂ, ಅವ್ಯಕ್ತಸ್ವರೂಪನೂ ಆದ ಭಗವಾನ್ ಕಾಲನ ಸೂಕ್ಷ್ಮತೆ ಮತ್ತು ಸ್ಥೂಲತೆಯ ಅನುಮಾನ ಮಾಡಬಹುದಾಗಿದೆ. ॥ ೩ ॥ ಪ್ರಪಂಚದಲ್ಲಿ ಪರಮಾಣುವಿನಂತಹ ಸೂಕ್ಷ್ಮವಾದ ಅವಸ್ಥೆಯಲ್ಲಿ ವ್ಯಾಪಕವಾಗಿರುವ ಕಾಲವನ್ನು ಸೂಕ್ಷ್ಮತಮ ಕಾಲವೆಂದು ಅರಿಯಬೇಕು. ಸೃಷ್ಟಿಯಿಂದಾರಂಭಿಸಿ ಪ್ರಳಯದವರೆಗೆ ಅದರ ಎಲ್ಲ ಅವಸ್ಥೆಗಳನ್ನು ಅನುಭವಿಸುವ ಕಾಲವೇ ಪರಮ ಮಹತ್ಕಾಲವು. ॥ ೪ ॥

ಎರಡು ಪರಮಾಣುಗಳು ಸೇರಿ ಒಂದು 'ಅಣು'ವಾಗುತ್ತದೆ. ಮೂರು ಅಣುಗಳು ಸೇರಿ ಒಂದು 'ತ್ರಸರೇಣು' ಆಗುವುದು. ಇದು ಕಿಟಕಿಯ ಮೂಲಕ ಬರುವ ಸೂರ್ಯಕಿರಣದಲ್ಲಿ ಆಕಾಶದಲ್ಲಿ ಹಾರಿಹೋಗುತ್ತಾ ಭೂಮಿಗಿಳಿಯುವ ಕಣಗಳಂತೆ ಕಾಣುತ್ತದೆ. ॥ ೫ ॥ ಇಂತಹ ಮೂರು ತ್ರಸರೇಣುಗಳನ್ನು ದಾಟಲು ಸೂರ್ಯನಿಗೆ ತಗಲುವ ಸಮಯವನ್ನು 'ತ್ರುಟಿ' ಎಂದು ಹೇಳುತ್ತಾರೆ. ತ್ರುಟಿಯ ನೂರುಪಟ್ಟು ಕಾಲವು 'ವೇಧ' ಎಂತಲೂ, ಮೂರು ವೇಧಗಳು ಒಂದು 'ಲವ' ಎಂದೂ ಹೇಳುತ್ತಾರೆ. ॥ ೬ ॥ ಮೂರು 'ಲವ'ಗಳಿಗೆ ಒಂದು 'ನಿಮೇಷ' ಮತ್ತು ಮೂರು ನಿಮೇಷಗಳಿಗೆ ಒಂದು 'ಕ್ಷಣ'ವೆಂತಲೂ, ಐದು ಕ್ಷಣಗಳಿಗೆ ಒಂದು 'ಕಾಷ್ಠಾ' ವೆಂತಲೂ, ಹದಿನೈದು ಕಾಷ್ಠಾಗಳಿಗೆ ಒಂದು 'ಲಘು' ಎಂತಲೂ ಹೇಳುತ್ತಾರೆ. ॥ ೭ ॥ ಹದಿನೈದು ಲಘುಗಳಿಗೆ ಒಂದು 'ನಾಡಿಕಾ' (ದಂಡ). ಎನ್ನುತ್ತಾರೆ. ಎರಡು ನಾಡಿಕೆಗಳ ಕಾಲವನ್ನು ಒಂದು 'ಮುಹೂರ್ತ'

ಲಘೂನಿ ವೈ ಸಮಾಮ್ನಾತಾ ದಶ ಪಂಚ ಚ ನಾಡಿಕಾ ।
ತೇ ದ್ವೇ ಮುಹೂರ್ತಃ ಪ್ರಹರಃ ಷಡ್ಯಾಮಃ ಸಪ್ತ ವಾ ನೃಣಾಮ್ ॥ ೮ ॥

ದ್ವಾದಶಾರ್ಧಪಲೋನ್ಮಾನಂ ಚತುರ್ಭಿಶ್ಚತುರಂಗುಲೈಃ ।
ಸ್ವರ್ಣಮಾಷೈಃ ಕೃತಚ್ಛಿದ್ರಂ ಯಾವತ್ಪ್ರಸ್ಥಜಲಪ್ಲುತಮ್ ॥ ೯ ॥

ಯಾಮಾಶ್ಚತ್ವಾರಶ್ಚತ್ವಾರೋ ಮರ್ತ್ಯಾನಾಮಹನೀ ಉಭೇ ।
ಪಕ್ಷಃ ಪಂಚದಶಾಹಾನಿ ಶುಕ್ಲಃ ಕೃಷ್ಣಶ್ಚ ಮಾನದ ॥ ೧೦ ॥

ತಯೋಃ ಸಮುಚ್ಚಯೋ ಮಾಸಃ ಪಿತೄಣಾಂ ತದಹರ್ನಿಶಮ್ ।
ದ್ವೌ ತಾವೃತುಃ ಷಡಯನಂ ದಕ್ಷಿಣಂ ಚೋತ್ತರಂ ದಿವಿ ॥ ೧೧ ॥

ಅಯನೇ ಚಾಹನೀ ಪ್ರಾಹುರ್ವತ್ಸರೋ ದ್ವಾದಶ ಸ್ಮೃತಃ ।
ಸಂವತ್ಸರಶತಂ ನೃಣಾಂ ಪರಮಾಯುರ್ನಿರೂಪಿತಮ್ ॥ ೧೨ ॥

ಗ್ರಹರ್ಕ್ಷತಾರಾಚಕ್ರಸ್ಥಃ ಪರಮಾಣ್ವಾದಿನಾ ಜಗತ್ ।
ಸಂವತ್ಸರಾವಸಾನೇನ ಪರ್ಯೇತ್ಯನಿಮಿಷೋ ವಿಭುಃ ॥ ೧೩ ॥

ಸಂವತ್ಸರಃ ಪರಿವತ್ಸರ ಇಡಾವತ್ಸರ ಏವ ಚ ।
ಅನುವತ್ಸರೋ ವತ್ಸರಶ್ಚ ವಿದುರೈವಂ ಪ್ರಭಾಷ್ಯತೇ ॥ ೧೪ ॥

ಎನ್ನುತ್ತಾರೆ. ದಿವಸವು ಕುಗ್ಗುವುದು ಮತ್ತು ಹಿಗ್ಗುವುದು ಇದಕ್ಕನುಸಾರ ಆರು ಅಥವಾ ಏಳು ನಾಡಿಕೆಗಳ ಕಾಲವು ಒಂದು 'ಪ್ರಹರ' ಎನಿಸುತ್ತದೆ. (ಇದರಲ್ಲಿ ಹಗಲು ಮತ್ತು ರಾತ್ರಿಗಳ ಸಂಧಿಕಾಲದಲ್ಲಿ ಬರುವ ಎರಡು ಮುಹೂರ್ತಗಳು ಲೆಕ್ಕಕ್ಕೆ ಬರುವುದಿಲ್ಲ) ಮನುಷ್ಯರ ಹಗಲು ಅಥವಾ ರಾತ್ರಿಯ ನಾಲ್ಕನೆಯ ಒಂದು ಭಾಗವಾಗಿರುವ ಇದನ್ನು 'ಯಾಮ' ಎಂದೂ ಹೇಳುತ್ತಾರೆ. ॥ ೮ ॥ ಇಪ್ಪತ್ತು ಗುಲಗುಂಜಿ ತೂಕವುಳ್ಳ ಚಿನ್ನದಿಂದ ನಾಲ್ಕು ಅಂಗುಲ ಪ್ರಮಾಣದ ಸೂಜಿಯನ್ನು ಮಾಡಿ, ಅದರಿಂದ ಆರು ಪಲಗಳ ತೂಕವುಳ್ಳ ತಾಮ್ರದ ಪಾತ್ರೆಯ ಕೆಳಗಡೆಯಲ್ಲಿ ರಂಧ್ರವನ್ನು ಕೊರೆದು, ಅದನ್ನು ಒಂದು ಸೇರು ನೀರುಳ್ಳ ಮತ್ತೊಂದು ಪಾತ್ರೆಯಲ್ಲಿ ಇಡಬೇಕು. ಆಗ ಕೆಳಗಿನ ರಂಧ್ರದಿಂದ ನೀರು ಮೇಲಕ್ಕೆ ಉಕ್ಕಿ ಆ ಪಾತ್ರೆಯು ಮುಳುಗಿಹೋಗುವ ಅಷ್ಟು ಕಾಲವನ್ನು 'ನಾಡಿಕಾ' ಎಂದು ಹೇಳುತ್ತಾರೆ. ॥ ೯ ॥ ವಿದುರನೇ! ಮೇಲೆ ಹೇಳಿದ ನಾಲ್ಕು ಯಾಮಗಳು ಹಗಲೆಂತಲೂ, ನಾಲ್ಕು ಯಾಮಗಳು ರಾತ್ರಿಯೆಂತಲೂ ಮನುಷ್ಯಮಾನದ ಪ್ರಕಾರ ತಿಳಿಯಬೇಕು. ಇಂತಹ ಹದಿನೈದು ಹಗಲು-ರಾತ್ರಿಗಳು ಸೇರಿದರೆ ಒಂದು 'ಪಕ್ಷ'ವಾಗುತ್ತದೆ. ಈ ಪಕ್ಷಗಳಲ್ಲಿ 'ಶುಕ್ಲ', 'ಕೃಷ್ಣ' ಎಂಬ ಎರಡು ವಿಭಾಗಗಳಿವೆ. ॥ ೧೦ ॥ ಇವೆರಡೂ ಪಕ್ಷಗಳು ಸೇರಿದರೆ ಮನುಷ್ಯರ ಒಂದು 'ಮಾಸ'ವಾಗುತ್ತದೆ. ಪಿತೃಗಳಿಗೆ ಒಂದು ದಿನ (ಹಗಲಿರುಳು)ವಾಗುತ್ತದೆ. ಎರಡು ತಿಂಗಳುಗಳ ಒಂದು 'ಋತು' ಮತ್ತು ಆರು ತಿಂಗಳ ಒಂದು ಅಯನವಾಗುತ್ತದೆ. ಅಯನಗಳಲ್ಲಿ ಉತ್ತರಾಯಣ ಮತ್ತು ದಕ್ಷಿಣಾಯನ ಎಂಬ ಎರಡು ಭೇದಗಳುಂಟು. ॥ ೧೧ ॥ ಇವೆರಡು ಅಯನಗಳು ಸೇರಿದರೆ ದೇವತೆಗಳ ಒಂದು ದಿವಸ (ಅಹೋರಾತ್ರಿ)ವಾಗುತ್ತದೆ. ಮನುಷ್ಯ ಮಾನದಲ್ಲಿ ಹನ್ನೆರಡು ತಿಂಗಳುಗಳಿಗೆ ಒಂದು ವರ್ಷವು. ಇಂತಹ ನೂರು ವರ್ಷಗಳೇ ಮನುಷ್ಯನ ಪರಮಾಯುಸ್ಸು ಎಂದು ಹೇಳಲಾಗಿದೆ. ॥ ೧೨ ॥ ಚಂದ್ರನೇ ಮೊದಲಾದ ಗ್ರಹರು, ಅಶ್ವಿನ್ಯಾದಿ ನಕ್ಷತ್ರಗಳು, ಸಮಸ್ತ ತಾರಾಮಂಡಲದ ಅಧಿಷ್ಠಾತೃನಾದ ಕಾಲಸ್ವರೂಪೀ ಭಗವಾನ್ ಸೂರ್ಯನು ಪರಮಾಣುವಿನಿಂದ ಹಿಡಿದು ಸಂವತ್ಸರಪರ್ಯಂತವಾದ ಕಾಲದಲ್ಲಿ ದ್ವಾದಶ ರಾಶಿರೂಪೀ ಸಮಸ್ತ ಭುವನಕೋಶವನ್ನು ನಿರಂತರ ಪ್ರದಕ್ಷಿಣೆ ಮಾಡುತ್ತಾ ಇರುತ್ತಾನೆ. ॥ ೧೩ ॥ ಸೂರ್ಯ, ಬೃಹಸ್ಪತಿ, ಸವನ, ಚಂದ್ರ, ನಕ್ಷತ್ರ ಸಂಬಂಧೀ ತಿಂಗಳುಗಳ ಭೇದದಿಂದ ಈ ವರ್ಷವನ್ನು ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ ಮತ್ತು ವತ್ಸರ ಹೀಗೆ ಹೇಳಲಾಗುತ್ತದೆ. ॥ ೧೪ ॥ ವಿದುರನೇ! ಈ ಐದು ವಿಧವಾದ ವರ್ಷಗಳನ್ನೂ ಪ್ರವರ್ತಿಸುತ್ತಿರುವ ಭಗವಾನ್ ಸೂರ್ಯನನ್ನು ನೀವು ಉಪಚಾರಾದಿಗಳನ್ನು ಸಮರ್ಪಿಸಿ ಪೂಜೆಮಾಡಿರಿ. ಈ ಸೂರ್ಯದೇವನು ಪಂಚಭೂತಗಳಲ್ಲಿ ತೇಜಃಸ್ವರೂಪನಾಗಿದ್ದಾನೆ. ತನ್ನ ಕಾಲಶಕ್ತಿಯಿಂದ ಬೀಜವೇ ಮುಂತಾದ ಪದಾರ್ಥಗಳನ್ನು ಮೊಳಕೆಯಾಗುವ ಶಕ್ತಿಯನ್ನು ಅನೇಕ ಪ್ರಕಾರದಿಂದ ಕಾರ್ಯೋನ್ಮುಖಗೊಳಿಸುತ್ತಾನೆ. ಇವನು ಪುರುಷರ ಮೋಹನಿವೃತ್ತಿಗಾಗಿ ಅವರ ಆಯುಸ್ಸನ್ನು ಕ್ಷಯಗೊಳಿಸುತ್ತಾ ಆಕಾಶದಲ್ಲಿ ವಿಚರಿಸುತ್ತಾ ಇರು

ಯಃ ಸೃಜ್ಯಶಕ್ತಿಮುರುಧೋಚ್ಛ್ವಸಯನ್ ಸ್ವಶಕ್ತ್ಯಾ
ಪುಂಸೋಽಭ್ರಮಾಯ ದಿವಿ ಧಾವತಿ ಭೂತಭೇದಃ ।
ಕಾಲಾಖ್ಯಯಾ ಗುಣಮಯಂ ಕ್ರತುಭಿರ್ವಿತನ್ವಂ-
ಸ್ತಸ್ಮೈ ಬಲಿಂ ಹರತ ವತ್ಸರಪಂಚಕಾಯ ॥ ೧೫ ॥

ವಿದುರ ಉವಾಚ

ಪಿತೃದೇವಮನುಷ್ಯಾಣಾಮಾಯುಃ ಪರಮಿದಂ ಸ್ಮೃತಮ್ ।
ಪರೇಷಾಂ ಗತಿಮಾಚಕ್ಷ್ವ ಯೇ ಸ್ಯುಃ ಕಲ್ಪಾದ್ಬಹಿರ್ವಿದಃ ॥ ೧೬ ॥

ಭಗವಾನ್ ವೇದ ಕಾಲಸ್ಯ ಗತಿಂ ಭಗವತೋ ನನು ।
ವಿಶ್ವಂ ವಿಚಕ್ಷತೇ ಧೀರಾ ಯೋಗರಾದ್ಧೇನ ಚಕ್ಷುಷಾ ॥ ೧೭ ॥

ಮೈತ್ರೇಯ ಉವಾಚ

ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಮ್ ।
ದಿವ್ಯೈರ್ದ್ವಾದಶಭಿರ್ವರ್ಷೈಃ ಸಾವಧಾನಂ ನಿರೂಪಿತಮ್ ॥ ೧೮ ॥

ಚತ್ವಾರಿ ತ್ರೀಣಿ ದ್ವೇ ಚೈಕಂ ಕೃತಾದಿಷು ಯಥಾಕ್ರಮಮ್ ।
ಸಂಖ್ಯಾತಾನಿ ಸಹಸ್ರಾಣಿ ದ್ವಿಗುಣಾನಿ ಶತಾನಿ ಚ ॥ ೧೯ ॥

ಸಂಧ್ಯಾಂ ಶಯೋರಂತರೇಣ ಯಃ ಕಾಲಃ ಶತಸಂಖ್ಯಯೋಃ ।
ತಮೇವಾಹುರ್ಯುಗಂ ತಜ್ಜ್ಞಾ ಯತ್ರ ಧರ್ಮೋ ವಿಧೀಯತೇ ॥ ೨೦ ॥

ಧರ್ಮಶ್ಚತುಷ್ಪಾನ್ಮನುಜಾನ್ ಕೃತೇ ಸಮನುವರ್ತತೇ ।
ಸ ಏವಾನ್ಯೇಷ್ವಧರ್ಮೇಣ ವ್ಯೇತಿ ಪಾದೇನ ವರ್ಧತಾ ॥ ೨೧ ॥

ತ್ರಿಲೋಕ್ಯಾ ಯುಗಸಾಹಸ್ರಂ ಬಹಿರಾಬ್ರಹ್ಮಣೋ ದಿನಮ್ ।
ತಾವತ್ಯೇವ ನಿಶಾ ತಾತ ಯನ್ನಿಮೀಲತಿ ವಿಶ್ವಸೃಕ್ ॥ ೨೨ ॥

...ತ್ತಾನೆ. ಇವನೇ ಸಕಾಮ ಪುರುಷರಿಗೆ ಯಜ್ಞಾದಿ ಕರ್ಮಗಳಿಂದ ಪ್ರಾಪ್ತವಾಗುವ ಸ್ವರ್ಗಾದಿ ಮಂಗಲಮಯ ಫಲಗಳನ್ನು ವಿಸ್ತರಿಸುತ್ತಾನೆ. ॥ ೧೫ ॥

**ವಿದುರನೆಂದನು** – ಮುನಿವರ್ಯರೇ! ತಾವು ದೇವತೆಗಳ, ಪಿತೃಗಳ, ಮನುಷ್ಯರ ಪರಮಾಯುಷ್ಯವನ್ನು ವರ್ಣಿಸಿದಿರಿ. ಇನ್ನು ಮೂರು ಲೋಕಗಳ ಹೊರಗಿದ್ದು ಕಲ್ಪಕಾಲಕ್ಕಿಂತಲೂ ಹೆಚ್ಚು ಕಾಲದ ವರೆಗೆ ಇರುವ ಜ್ಞಾನಿಶ್ರೇಷ್ಠರಾದ ಸನಕಾದಿಮುನಿಗಳ ಆಯುಸ್ಸು ಎಷ್ಟೆಂಬುದನ್ನು ತಿಳಿಸಿರಿ. ॥ ೧೬ ॥ ನೀವು ಭಗವಂತನ ಕಾಲಗತಿಯನ್ನು ಚೆನ್ನಾಗಿ ತಿಳಿದಿರುವಿರಿ. ಏಕೆಂದರೆ, ಧೀರರಾದ ಜ್ಞಾನಿಗಳು ತಮ್ಮ ಯೋಗಸಿದ್ಧವಾದ ದೃಷ್ಟಿಯಿಂದ ಇಡೀ ವಿಶ್ವವನ್ನೇ ನೋಡಬಲ್ಲರು. ॥ ೧೭ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ ಎಂಬ ಈ ನಾಲ್ಕು ಯುಗಗಳು ತಮ್ಮ ಸಂಧ್ಯಾಕಾಲ ಮತ್ತು ಸಂಧ್ಯಾಂಶಗಳೊಡನೆ ಕೂಡಿ ದೇವತೆಗಳ ಹನ್ನೆರಡುಸಾವಿರ ವರ್ಷಗಳವರೆಗೆ ಇರುತ್ತವೆ ಎಂದು ಹೇಳಲಾಗಿದೆ. ॥ ೧೮ ॥ ಈ ಕೃತಯುಗವೇ ಮುಂತಾದ ನಾಲ್ಕು ಯುಗಗಳಲ್ಲಿ ಕ್ರಮವಾಗಿ ನಾಲ್ಕು, ಮೂರು, ಎರಡು ಮತ್ತು ಒಂದು ಸಾವಿರ ದಿವ್ಯವರ್ಷಗಳಿರುತ್ತವೆ. ಪ್ರತಿಯೊಂದರಲ್ಲಿಯೂ ಎಷ್ಟೆಷ್ಟು ಸಾವಿರ ವರ್ಷಗಳಿರುತ್ತವೋ ಅವಕ್ಕೆ, ಎರಡರಷ್ಟು ನೂರು ವರ್ಷಗಳು ಅವುಗಳ ಸಂಧ್ಯಾಕಾಲ ಮತ್ತು ಸಂಧ್ಯಾಂಶಗಳಲ್ಲಿ ಇರುತ್ತವೆ.* ॥ ೧೯ ॥ ಯುಗದ ಪ್ರಾರಂಭದಲ್ಲಿ ಸಂಧ್ಯೆ ಮತ್ತು ಅಂತ್ಯದಲ್ಲಿ ಸಂಧ್ಯಾಂಶವಿರುತ್ತದೆ. ಇದರ ವರ್ಷ ಗಣನೆಯು ನೂರಾರು ಸಂಖ್ಯೆಯಲ್ಲಿರುತ್ತವೆ. ಇದರ ನಡುವಿನ ಕಾಲವನ್ನು ಕಾಲದ ಜ್ಞಾನವುಳ್ಳವರು ಯುಗವೆಂದು ಹೇಳಿರುವರು. ಪ್ರತಿಯೊಂದು ಯುಗದಲ್ಲಿಯೂ ಒಂದೊಂದು ವಿಶೇಷಧರ್ಮದ ವಿಧಾನ ಮಾಡಲಾಗಿದೆ. ॥ ೨೦ ॥ ಕೃತಯುಗದ ಮನುಷ್ಯರಲ್ಲಿ ಧರ್ಮವು ತನ್ನ ನಾಲ್ಕು ಪಾದಗಳಿಂದಲೂ ಕೂಡಿರುತ್ತದೆ. ಇತರ ಯುಗಗಳಲ್ಲಿ ಕ್ರಮವಾಗಿ ಅಧರ್ಮವು ವೃದ್ಧಿಹೊಂದುವುದರಿಂದ ಧರ್ಮದ ಒಂದೊಂದು ಚರಣವು ಕ್ಷೀಣವಾಗುತ್ತದೆ. ॥ ೨೧ ॥ ಪ್ರಿಯ ವಿದುರನೇ! ಈ ತ್ರೈಲೋಕ್ಯದ ಹೊರಗೆ ಮಹರ್ಲೋಕದಿಂದ ಬ್ರಹ್ಮಲೋಕದವರೆಗೂ ಇರುವ ಲೋಕಗಳಲ್ಲಿ ಒಂದು ಸಾವಿರ ಚತುರ್ಯುಗದ ಒಂದು ಹಗಲು ಮತ್ತು ಇಷ್ಟೇ ದೊಡ್ಡ ರಾತ್ರೆಯು ಇರುತ್ತದೆ. ಆ ರಾತ್ರಿಭಾಗದಲ್ಲಿ ಜಗತ್ಕರ್ತೃವಾದ ಬ್ರಹ್ಮದೇವರು ಶಯನಿಸುತ್ತಾರೆ. ॥ ೨೨ ॥ ಆ ರಾತ್ರಿಯು ಮುಗಿಯುತ್ತಲೇ ಈ ಲೋಕದ ಕಲ್ಪವು ಪ್ರಾರಂಭವಾಗುತ್ತದೆ. ಅಂದರೆ ಬ್ರಹ್ಮದೇವರು ಮತ್ತೆ ಸೃಷ್ಟಿಯನ್ನು ಪ್ರಾರಂಭಿಸುತ್ತಾರೆ. ಬ್ರಹ್ಮದೇವರ

* ಕೃತಯುಗದಲ್ಲಿ ೪,೦೦೦ ದಿವ್ಯವರ್ಷಗಳು ಯುಗದ್ದು ಮತ್ತು ೮೦೦ ಸಂಧ್ಯಾ ಹಾಗೂ ಸಂಧ್ಯಾಂಶದ ಒಟ್ಟು ೪,೮೦೦ ದಿವ್ಯವರ್ಷಗಳು. ಹಾಗೆಯೇ ತ್ರೇತಾಯುಗದಲ್ಲಿ ೩,೬೦೦ ದಿವ್ಯವರ್ಷಗಳು (೩,೦೦೦ + ೬೦೦). ದ್ವಾಪರಯುಗದಲ್ಲಿ ೨,೪೦೦ ದಿವ್ಯವರ್ಷಗಳು (೨೦೦೦ + ೪೦೦). ಕಲಿಯುಗದಲ್ಲಿ ೧,೨೦೦ ದಿವ್ಯವರ್ಷಗಳು (೧,೦೦೦ + ೨೦೦) ಇರುತ್ತವೆ. ಮನುಷ್ಯರ ಒಂದು ವರ್ಷವು ದೇವತೆಗಳ ಒಂದು ದಿನ. ಆದ್ದರಿಂದ ದೇವತೆಗಳ ಒಂದು ವರ್ಷ ಮನುಷ್ಯರ ೩೬೦ ವರ್ಷಗಳಿಗೆ ಸರಿಯಾದುದು. ಇದೇ ರೀತಿ ಮನುಷ್ಯಮಾನದಂತೆ ಕಲಿಯುಗದಲ್ಲಿ ೪,೩೨,೦೦೦ ವರ್ಷಗಳು. ಇದಕ್ಕೆ ಎರಡರಷ್ಟು ದ್ವಾಪರಯುಗದಲ್ಲೂ, ಮೂರರಷ್ಟು ತ್ರೇತಾಯುಗದಲ್ಲೂ, ನಾಲ್ಕರಷ್ಟು ಕೃತಯುಗಲ್ಲೂ ವರ್ಷಗಳು ಆಗುತ್ತವೆಯೆಂದು ತಿಳಿಯಬೇಕು.

ನಿಶಾವಸಾನ ಆರಬ್ಧೋ ಲೋಕಕಲ್ಪೋಽನುವರ್ತತೇ।
ಯಾವದ್ದಿನಂ ಭಗವತೋ ಮನೂನ್ಭುಂಜಂಶ್ಚತುರ್ದಶ ॥ ೨೩ ॥

ಸ್ವಂ ಸ್ವಂ ಕಾಲಂ ಮನುರ್ಭುಂಕ್ತೇ ಸಾಧಿಕಾಂ ಹ್ಯೇಕಸಪ್ತತಿಮ್ ।
ಮನ್ವಂತರೇಷು ಮನವಸ್ತದ್ವಂಶ್ಯಾ ಋಷಯಃ ಸುರಾಃ ।
ಭವಂತಿ ಚೈವ ಯುಗಪತ್ಸುರೇಶಾಶ್ಚಾನು ಯೇ ಚ ತಾನ್ ॥ ೨೪ ॥

ಏಷ ದೈನಂದಿನಃ ಸರ್ಗೋ ಬ್ರಾಹ್ಮಸ್ತ್ರೈಲೋಕ್ಯವರ್ತನಃ ।
ತಿರ್ಯಙ್ನೃಪಿತೃದೇವಾನಾಂ ಸಂಭವೋ ಯತ್ರ ಕರ್ಮಭಿಃ ॥ ೨೫ ॥

ಮನ್ವಂತರೇಷು ಭಗವಾನ್ ಬಿಭ್ರತ್ಸತ್ತ್ವಂ ಸ್ವಮೂರ್ತಿಭಿಃ ।
ಮನ್ವಾದಿಭಿರಿದಂ ವಿಶ್ವಮವತ್ಯುದಿತಪೌರುಷಃ ॥ ೨೬ ॥

ತಮೋಮಾತ್ರಾಮುಪಾದಾಯ ಪ್ರತಿಸಂರುದ್ಧವಿಕ್ರಮಃ ।
ಕಾಲೇನಾನುಗತಾಶೇಷ ಆಸ್ತೇ ತೂಷ್ಣೀಂ ದಿನಾತ್ಯಯೇ ॥ ೨೭ ॥

ತಮೇವಾನ್ವಪಿಧೀಯಂತೇ ಲೋಕಾ ಭೂರಾದಯಸ್ತ್ರಯಃ ।
ನಿಶಾಯಾಮನುವೃತ್ತಾಯಾಂ ನಿರ್ಮುಕ್ತಶಶಿಭಾಸ್ಕರಮ್ ॥ ೨೮ ॥

ತ್ರಿಲೋಕ್ಯಾಂ ದಹ್ಯಮಾನಾಯಾಂ ಶಕ್ತ್ಯಾ ಸಂಕರ್ಷಣಾಗ್ನಿನಾ ।
ಯಾಂತ್ಯೂಷ್ಮಣಾ ಮಹರ್ಲೋಕಾಜ್ಜನಂ ಭೃಗ್ವಾದಯೋಽರ್ದಿತಾಃ ॥ ೨೯ ॥

ತಾವತ್ತ್ರಿಭುವನಂ ಸದ್ಯಃ ಕಲ್ಪಾಂತೈಧಿತಸಿಂಧವಃ ।
ಪ್ಲಾವಯಂತ್ಯುತ್ಕಟಾಟೋಪಚಂಡವಾತೇರಿತೋರ್ಮಯಃ ॥ ೩೦ ॥

ಅಂತಃ ಸ ತಸ್ಮಿನ್ ಸಲಿಲ ಆಸ್ತೇಽನಂತಾಸನೋ ಹರಿಃ ।
ಯೋಗನಿದ್ರಾನಿಮೀಲಾಕ್ಷಃ ಸ್ತೂಯಮಾನೋ ಜನಾಲಯೈಃ ॥ ೩೧ ॥

ಏವಂ ವಿಧೈರಹೋರಾತ್ರೈಃ ಕಾಲಗತ್ಯೋಪಲಕ್ಷಿತೈಃ ।
ಅಪಕ್ಷಿತಮಿವಾಸ್ಯಾಪಿ ಪರಮಾಯುರ್ವಯಃಶತಮ್ ॥ ೩೨ ॥

ಯದರ್ಧಮಾಯುಷಸ್ತಸ್ಯ ಪರಾರ್ಧಮಭಿಧೀಯತೇ ।
ಪೂರ್ವಃ ಪರಾರ್ಧೋಽಪಕ್ರಾಂತೋ ಹ್ಯಪರೋಽದ್ಯ ಪ್ರವರ್ತತೇ ॥ ೩೩ ॥

ಪೂರ್ವಸ್ಯಾದೌ ಪರಾರ್ಧಸ್ಯ ಬ್ರಾಹ್ಮೋ ನಾಮ ಮಹಾನಭೂತ್ ।
ಕಲ್ಪೋ ಯತ್ರಾಭವದ್ಬ್ರಹ್ಮಾ ಶಬ್ದಬ್ರಹ್ಮೇತಿ ಯಂ ವಿದುಃ ॥ ೩೪ ॥

ದಿನವಿರುವವರೆಗೆ ಇದೇ ಕ್ರಮ ನಡೆಯುತ್ತಾ ಇರುತ್ತದೆ. ಈ ಒಂದು ಕಲ್ಪದಲ್ಲಿ ಹದಿನಾಲ್ಕು ಮನುಗಳು ಆಗಿಹೋಗುತ್ತಾರೆ. ॥ ೨೩ ॥ ಪ್ರತಿಯೊಬ್ಬ ಮನುವೂ ದೇವಮಾನದ (ಚತುರ್ಯುಗ) ಎಪ್ಪತ್ತೊಂದು ಯುಗಗಳವರೆಗೆ ಮತ್ತು ಸ್ವಲ್ಪ ಹೆಚ್ಚುಕಾಲ ತನ್ನ ಅಧಿಕಾರವನ್ನು ನಡೆಸುತ್ತಾನೆ. ಪ್ರತಿಯೊಂದು ಮನ್ವಂತರದಲ್ಲಿಯೂ ಬೇರೆ-ಬೇರೆ ಮನುವಂಶಗಳ ರಾಜರೂ, ಸಪ್ತರ್ಷಿಗಳೂ, ದೇವತಾಗಣಗಳೂ, ಇಂದ್ರರೂ ಮತ್ತು ಅವರ ಅನುಯಾಯಿಗಳಾದ ಗಂಧರ್ವಾದಿಗಳೂ ಒಟ್ಟಿಗೆ ಇದ್ದು ತಮ್ಮ ಅಧಿಕಾರಗಳನ್ನು ಅನುಭವಿಸುತ್ತಾರೆ. ॥ ೨೪ ॥ ಇದು ಬ್ರಹ್ಮದೇವರ ದಿನಂಪ್ರತಿಯ ಸೃಷ್ಟಿಯ ವಿಚಾರ. ಇದರಲ್ಲಿಯೇ ಮೂರು ಲೋಕಗಳ ರಚನೆಯೂ ಆಗುವುದು. ಅದರಲ್ಲಿ ತಮ್ಮ-ತಮ್ಮ ಕರ್ಮಾನುಸಾರ ಪಶು-ಪಕ್ಷಿ ಮನುಷ್ಯ, ಪಿತೃಗಳು, ದೇವತೆಗಳು ಇವರುಗಳ ಉತ್ಪತ್ತಿಯಾಗುತ್ತದೆ. ॥ ೨೫ ॥ ಈ ಮನ್ವಂತರಗಳಲ್ಲಿ ಭಗವಂತನು ಸತ್ತ್ವಗುಣವನ್ನಾಶ್ರಯಿಸಿ ತನ್ನ ಮನುವೇ ಮುಂತಾದ ಮೂರ್ತಿಗಳ ಮೂಲಕ ಪೌರುಷವನ್ನು ಪ್ರಕಟಿಸುತ್ತಾ ಈ ವಿಶ್ವವನ್ನು ಪಾಲಿಸುತ್ತಾನೆ. ॥ ೨೬ ॥ ಕಾಲಕ್ರಮದಲ್ಲಿ ತಮ್ಮ ಹಗಲು ಮುಗಿದೊಡನೆಯೇ ಬ್ರಹ್ಮದೇವರು ತಮೋಗುಣದ ಸಂಪರ್ಕಹೊಂದಿ, ತಮ್ಮ ಸೃಷ್ಟಿರಚನಾರೂಪೀ ಪೌರುಷವನ್ನು ಸ್ಥಗಿತಗೊಳಿಸಿ ನಿಶ್ಚೇಷ್ಟಿತರಾಗುತ್ತಾರೆ. ॥ ೨೭ ॥ ಆಗ ಇಡೀ ವಿಶ್ವವು ಅವರಲ್ಲೇ ಲೀನವಾಗುತ್ತದೆ. ಸೂರ್ಯ-ಚಂದ್ರರೇ ಇಲ್ಲದ ಪ್ರಳಯರಾತ್ರಿಯು ಬರುವುದು. ಭೂಃ, ಭುವಃ, ಸುವಃ ಎಂಬ ಮೂರು ಲೋಕಗಳೂ ಆ ಬ್ರಹ್ಮದೇವರ ಶರೀರದಲ್ಲಿ ಅಡಗಿಕೊಳ್ಳುವುವು. ॥ ೨೮ ॥ ಆಗಲೇ ಮೂರು ಲೋಕಗಳೂ ಆದಿಶೇಷದೇವರ ಬಾಯಿಯಿಂದ ಹೊರಬರುವ ಅಗ್ನಿರೂಪೀ ಭಗವಂತನ ಶಕ್ತಿಯಿಂದ ಸುಡಲು ತೊಡಗುವುದು. ಅದರ ಬೇಗೆಯನ್ನು ತಾಳಲಾರದೆ ಭೃಗುವೇ ಮುಂತಾದ ಮುನೀಶ್ವರರು ಮಹರ್ಲೋಕದಿಂದ ಜನೋಲೋಕಕ್ಕೆ ಹೋಗಿಬಿಡುವರು. ॥ ೨೯ ॥ ಅಷ್ಟರಲ್ಲಿ ಸಪ್ತ ಸಮುದ್ರಗಳೂ ಪ್ರಳಯಕಾಲದ ಪ್ರಚಂಡಮಾರುತದಿಂದ ಉಕ್ಕೇರಿ ಮಹಾತರಂಗಗಳಿಂದ ತ್ರೈಲೋಕ್ಯವನ್ನೂ ಮುಳುಗಿಸಿಬಿಡುವುವು. ॥ ೩೦ ॥ ಆಗ ಆ ಪ್ರಳಯಜಲದಲ್ಲಿ ಶ್ರೀಭಗವಂತನು ಶೇಷಶಾಯಿಯಾಗಿ ಯೋಗನಿದ್ರೆಯಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡು ಪವಡಿಸುವನು. ಆ ಸಮಯದಲ್ಲಿ ಜನೋಲೋಕದಲ್ಲಿರುವ ಮುನಿಗಳು ಆತನನ್ನು ಸ್ತುತಿಸುತ್ತಿರುವರು. ॥ ೩೧ ॥ ಹೀಗೆ ಕಾಲಗತಿಗೆ ಒಳಪಟ್ಟಿರುವ ಇಂತಹ ಹಗಲು-ರಾತ್ರಿಗಳಿಂದಲೇ ಬ್ರಹ್ಮದೇವರ ಪೂರ್ಣಾಯುಸ್ಸಾಗಿರುವ ನೂರು ವರ್ಷಗಳು ಕಳೆದಂತಾಗುವುದು. ॥ ೩೨ ॥

ಬ್ರಹ್ಮದೇವರ ಆಯುಸ್ಸಿನ ಅರ್ಧಭಾಗಕ್ಕೆ (ಅಂದರೆ ಅವರ ೫೦ ವರ್ಷಗಳ ಕಾಲಕ್ಕೆ) ಒಂದು 'ಪರಾರ್ಧ'ವೆಂದು ಹೇಳುತ್ತಾರೆ. ಇಷ್ಟರವರೆಗೆ ಮೊದಲನೆಯ ಪರಾರ್ಧವು ಮುಗಿದು, ಎರಡನೆಯ ಪರಾರ್ಧವು ನಡೆಯುತ್ತಿದೆ. ॥ ೩೩ ॥ ಹಿಂದಿನ ಪರಾರ್ಧದ ಪ್ರಾರಂಭದಲ್ಲಿ ಮೊಟ್ಟ ಮೊದಲು 'ಬ್ರಾಹ್ಮ'ವೆಂಬ ಮಹಾಕಲ್ಪವಿತ್ತು. ಅದರಲ್ಲೇ ಬ್ರಹ್ಮದೇವರ ಉತ್ಪತ್ತಿಯಾಗಿತ್ತು. ಜ್ಞಾನಿಗಳು ಅವರನ್ನು ಶಬ್ದಬ್ರಹ್ಮವೆಂದು ಹೇಳುತ್ತಾರೆ. ॥ ೩೪ ॥ ಅದೇ ಪರಾರ್ಧದ ಕಡೆಯ ಭಾಗದ ಕಲ್ಪವನ್ನು 'ಪಾದ್ಮಕಲ್ಪ' ವೆನ್ನುತ್ತಾರೆ. ಇದರಲ್ಲಿ ಭಗವಂತನ

ತಸ್ಯೈವ ಚಾಂತೇ ಕಲ್ಪೋಽಭೂದ್ಯಂ ಪಾದ್ಮಮಭಿಚಕ್ಷತೇ ।
ಯದ್ಧರೇರ್ನಾಭಿಸರಸ ಆಸೀಲ್ಲೋಕಸರೋರುಹಮ್ ॥ ೩೫ ॥

ನಾಭಿಸರೋವರದಿಂದ ಸರ್ವಲೋಕಮಯ ಕಮಲವು ಪ್ರಕಟವಾಗಿತ್ತು. ॥ ೩೫ ॥ ಭರತರ್ಷಭನೇ! ಈಗ ನಡೆಯುತ್ತಿರುವ ಕಲ್ಪವನ್ನು ಎರಡನೇ ಪರಾರ್ಧದ ಪ್ರಾರಂಭದ್ದೆಂದು ಹೇಳಲಾಗುತ್ತದೆ. ಇದರಲ್ಲಿ ಶ್ರೀಭಗವಂತನು ವರಾಹರೂಪವನ್ನು ಸ್ವೀಕರಿಸಿದ್ದರಿಂದ ಇದನ್ನು 'ವಾರಾಹಕಲ್ಪ'ವೆಂದು ಕರೆಯುತ್ತಾರೆ. ॥ ೩೬ ॥ ಈ ಎರಡು ಪರಾರ್ಧಗಳು ಅವ್ಯಕ್ತನೂ, ಅನಂತನೂ, ಅನಾದಿಯೂ, ವಿಶ್ವಾತ್ಮನೂ ಆಗಿರುವ ಶ್ರೀಹರಿಗೆ ಒಂದು 'ನಿಮೇಷ' ಕಾಲಮಾತ್ರ ಆಗುವುದು. ॥ ೩೭ ॥ ಪರಮಾಣುವಿನಿಂದ ಹಿಡಿದು ಎರಡು ಪರಾರ್ಧಕಾಲ ಪರ್ಯಂತ ಹಬ್ಬಿರುವ ಈ ಮಹಾಕಾಲವು ಸರ್ವಸಮರ್ಥವಾಗಿದ್ದರೂ, ಸರ್ವಾತ್ಮನಾಗಿರುವ ಶ್ರೀಹರಿಯ ಮೇಲೆ ಯಾವ ಅಧಿಕಾರವನ್ನೂ ನಡೆಸಲಾರದು. ದೇಹಾದಿಗಳಲ್ಲಿ ಅಭಿಮಾನವನ್ನಿಟ್ಟಿರುವ ಜೀವಿಗಳ ಮೇಲೆ ಮಾತ್ರವೇ ಅದರ ಶಾಸನವು ನಡೆಯುವುದು. ॥ ೩೮ ॥

ಅಯಂ ತು ಕಥಿತಃ ಕಲ್ಪೋ ದ್ವಿತೀಯಸ್ಯಾಪಿ ಭಾರತ ।
ವಾರಾಹ ಇತಿ ವಿಖ್ಯಾತೋ ಯತ್ರಾಸೀತ್ಸೂಕರೋ ಹರಿಃ ॥ ೩೬ ॥

ಕಾಲೋಽಯಂ ದ್ವಿಪರಾರ್ಧಾಖ್ಯೋ ನಿಮೇಷ ಉಪಚರ್ಯತೇ ।
ಅವ್ಯಾಕೃತಸ್ಯಾನಂತಸ್ಯ ಅನಾದೇರ್ಜಗದಾತ್ಮನಃ ॥ ೩೭ ॥

ಕಾಲೋಽಯಂ ಪರಮಾಣ್ವಾದಿರ್ದ್ವಿಪರಾರ್ಧಾಂತ ಈಶ್ವರಃ ।
ನೈವೇಶಿತುಂ ಪ್ರಭುರ್ಭೂಮ್ನ ಈಶ್ವರೋ ಧಾಮಮಾನಿನಾಮ್ ॥ ೩೮ ॥

ವಿಕಾರೈಃ ಸಹಿತೋ ಯುಕ್ತೈರ್ವಿಶೇಷಾದಿಭಿರಾವೃತಃ ।
ಆಂಡಕೋಶೋ ಬಹಿರಯಂ ಪಂಚಾಶತ್ಕೋಟಿವಿಸ್ತೃತಃ ॥ ೩೯ ॥

ದಶೋತ್ತರಾಧಿಕೈರ್ಯತ್ರ ಪ್ರವಿಷ್ಟಃ ಪರಮಾಣುವತ್ ।
ಲಕ್ಷ್ಯತೇಽಂತರ್ಗತಾಶ್ಚಾನ್ಯೇ ಕೋಟಿಶೋ ಹ್ಯಂಡರಾಶಯಃ ॥ ೪೦ ॥

ತದಾಹುರಕ್ಷರಂ ಬ್ರಹ್ಮ ಸರ್ವಕಾರಣಕಾರಣಮ್ ।
ವಿಷ್ಣೋರ್ಧಾಮ ಪರಂ ಸಾಕ್ಷಾತ್ಪುರುಷಸ್ಯ ಮಹಾತ್ಮನಃ ॥ ೪೧ ॥

ಪ್ರಕೃತಿ, ಮಹತ್ತತ್ತ್ವ, ಅಹಂಕಾರ ಮತ್ತು ಪಂಚ ತನ್ಮಾತ್ರೆಗಳು – ಈ ಎಂಟು ಪ್ರಕೃತಿಗಳಿಂದೊಡಗೂಡಿದ ಹತ್ತು ಇಂದ್ರಿಯಗಳೂ, ಮನಸ್ಸು ಹಾಗೂ ಪಂಚಭೂತಗಳು ಎಂಬ ಈ ಹದಿನಾರು ವಿಕಾರಗಳು ಸೇರಿ ನಿರ್ಮಿತವಾಗಿರುವ ಈ ಬ್ರಹ್ಮಾಂಡಕೋಶವು ಒಳಗಡೆಯಿಂದ ಐವತ್ತು ಕೋಟಿ ಯೋಜನಗಳಷ್ಟು ವಿಸ್ತಾರವಾಗಿದೆ ಮತ್ತು ಇದರ ಹೊರಗಡೆ ನಾಲ್ಕೂ ಕಡೆಗಳಲ್ಲಿಯೂ ಏಳು ಆವರಣಗಳುಂಟು. ಆ ಆವರಣಗಳು ಇದಕ್ಕಿಂತಲೂ ಒಂದು ತುಂಬಾ ದೊಡ್ಡವು. ಅವುಗಳಲ್ಲಿ ಮುಂದು-ಮುಂದಿನದು ಹಿಂದು-ಹಿಂದಿನದಕ್ಕಿಂತಲೂ ಹತ್ತರಷ್ಟು ವಿಸ್ತಾರವಾಗಿದೆ. ಆದರೆ ಇಷ್ಟು ಮಹಾವಿಸ್ತಾರವಾಗಿರುವ ಇವೆಲ್ಲವೂ ಯಾರಲ್ಲಿ ಪರಮಾಣುಗಳಂತೆ ಕಾಣುತ್ತಿವೆಯೋ ಮತ್ತು ಇಂತಹ ಕೋಟಿ-ಕೋಟಿ ಬ್ರಹ್ಮಾಂಡರಾಶಿಗಳು ಯಾರಲ್ಲಿ ಅಡಗಿ ವೆಯೋ, ಅಂತಹ ಪ್ರಧಾನವೇ (ಪ್ರಕೃತಿಯೇ) ಮುಂತಾದ ಸಮಸ್ತ ಕಾರಣಗಳಿಗೂ ಮಹಾಕಾರಣನಾಗಿರುವವನೇ ಅಕ್ಷರಬ್ರಹ್ಮನೆನಿಸಿದ ಪುರಾಣಪುರುಷನಾದ ಸಾಕ್ಷಾತ್ ಪರಮಾತ್ಮನಾದ ಭಗವಾನ್ ಶ್ರೀಮಹಾವಿಷ್ಣುವಿನ ಶ್ರೇಷ್ಠಸ್ವರೂಪವಾಗಿದೆ. ॥ ೩೯-೪೧ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಏಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ಸೃಷ್ಟಿಯ ವಿಸ್ತಾರ

*ಮೈತ್ರೇಯ ಉವಾಚ*

ಇತಿ ತೇ ವರ್ಣಿತಃ ಕ್ಷತ್ತಃ ಕಾಲಾಖ್ಯಃ ಪರಮಾತ್ಮನಃ ।
ಮಹಿಮಾ ವೇದಗರ್ಭೋಽಥ ಯಥಾಸ್ರಾಕ್ಷೀನ್ನಿಬೋಧ ಮೇ ॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಮಹಾತ್ಮನಾದ ವಿದುರನೇ! ಇಲ್ಲಿಯವರೆಗೆ ನಾನು ನಿನಗೆ ಭಗವಂತನ ಕಾಲರೂಪವಾದ ಮಹಿಮೆಯನ್ನು ಹೇಳಿದೆನು. ಈಗ ಬ್ರಹ್ಮದೇವರು ಜಗತ್ತನ್ನು ಹೇಗೆ ಸೃಷ್ಟಿಸಿದರೆಂಬುದನ್ನು ಹೇಳುತ್ತೇನೆ; ಕೇಳು. ॥ ೧ ॥ ಮೊಟ್ಟ ಮೊದಲಿಗೆ ಅವರು ಅಜ್ಞಾನದ ಐದು ವೃತ್ತಿಗಳಾದ ತಮಸ್ಸು

ಸಸರ್ಜಾಗ್ರೇಽಂಧತಾಮಿಸ್ರಮಥ ತಾಮಿಸ್ರಮಾದಿಕೃತ್ ।
ಮಹಾಮೋಹಂ ಚ ಮೋಹಂ ಚ ತಮಶ್ಚಾಜ್ಞಾನವೃತ್ತಯಃ ॥ ೨ ॥

ದೃಷ್ಟ್ವಾ ಪಾಪೀಯಸೀಂ ಸೃಷ್ಟಿಂ ನಾತ್ಮಾನಂ ಬಹ್ವಮನ್ಯತ ।
ಭಗವದ್ಧ್ಯಾನಪೂತೇನ ಮನಸಾನ್ಯಾಂ ತತೋಽಸೃಜತ್ ॥ ೩ ॥

ಸನಕಂ ಚ ಸನಂದಂ ಚ ಸನಾತನಮಥಾತ್ಮಭೂಃ ।
ಸನತ್ಕುಮಾರಂ ಚ ಮುನೀನ್ನಿಷ್ಕ್ರಿಯಾನೂರ್ಧ್ವರೇತಸಃ ॥ ೪ ॥

ತಾನ್ಬಭಾಷೇ ಸ್ವಭೂಃ ಪುತ್ರಾನ್ಪ್ರಜಾಃ ಸೃಜತ ಪುತ್ರಕಾಃ ।
ತನ್ನೈಚ್ಛನ್ಮೋಕ್ಷಧರ್ಮಾಣೋ ವಾಸುದೇವಪರಾಯಣಾಃ ॥ ೫ ॥

ಸೋಽವಧ್ಯಾತಃ ಸುತೈರೇವಂ ಪ್ರತ್ಯಾಖ್ಯಾತಾನುಶಾಸನೈಃ ।
ಕ್ರೋಧಂ ದುರ್ವಿಷಹಂ ಜಾತಂ ನಿಯಂತುಮುಪಚಕ್ರಮೇ ॥ ೬ ॥

ಧಿಯಾ ನಿಗೃಹ್ಯಮಾಣೋಽಪಿ ಭ್ರುವೋರ್ಮಧ್ಯಾತ್ಪ್ರಜಾಪತೇಃ ।
ಸದ್ಯೋಽಜಾಯತ ತನ್ಮನ್ಯುಃ ಕುಮಾರೋ ನೀಲಲೋಹಿತಃ ॥ ೭ ॥

ಸ ವೈ ರುರೋದ ದೇವಾನಾಂ ಪೂರ್ವಜೋ ಭಗವಾನ್ಭವಃ ।
ನಾಮಾನಿ ಕುರು ಮೇ ಧಾತಃ ಸ್ಥಾನಾನಿ ಚ ಜಗದ್ಗುರೋ ॥ ೮ ॥

ಇತಿ ತಸ್ಯ ವಚಃ ಪಾದ್ಮೋ ಭಗವಾನ್ಪರಿಪಾಲಯನ್ ।
ಅಭ್ಯಧಾದ್ಭದ್ರಯಾ ವಾಚಾ ಮಾ ರೋದೀಸ್ತತ್ಕರೋಮಿ ತೇ ॥ ೯ ॥

ಯದರೋದೀಃ ಸುರಶ್ರೇಷ್ಠ ಸೋದ್ವೇಗ ಇವ ಬಾಲಕಃ ।
ತತಸ್ತ್ವಾಮಭಿಧಾಸ್ಯಂತಿ ನಾಮ್ನಾ ರುದ್ರ ಇತಿ ಪ್ರಜಾಃ ॥ ೧೦ ॥

ಹೃದಿಂದ್ರಿಯಾಣ್ಯಸುರ್ವ್ಯೋಮ ವಾಯುರಗ್ನಿರ್ಜಲಂ ಮಹೀ ।
ಸೂರ್ಯಶ್ಚಂದ್ರಸ್ತಪಶ್ಚೈವ ಸ್ಥಾನಾನ್ಯಗ್ರೇ ಕೃತಾನಿ ಮೇ ॥ ೧೧ ॥

ಮನ್ಯುರ್ಮನುರ್ಮಹಿನಸೋ ಮಹಾನ್‌ಶಿವ ಋತಧ್ವಜಃ ।
ಉಗ್ರರೇತಾ ಭವಃ ಕಾಲೋ ವಾಮದೇವೋ ಧೃತವ್ರತಃ ॥ ೧೨ ॥

ಧೀರ್ವೃತ್ತಿರುಶನೋಮಾ ಚ ನಿಯುತ್ಸರ್ಪಿರಿಲಾಂಬಿಕಾ ।
ಇರಾವತೀ ಸುಧಾ ದೀಕ್ಷಾ ರುದ್ರಾಣ್ಯೋ ರುದ್ರ ತೇ ಸ್ತ್ರಿಯಃ ॥ ೧೩ ॥

ಗೃಹಾಣೈತಾನಿ ನಾಮಾನಿ ಸ್ಥಾನಾನಿ ಚ ಸಯೋಷಣಃ ।
ಏಭಿಃ ಸೃಜ ಪ್ರಜಾ ಬಹ್ವೀಃ ಪ್ರಜಾನಾಮಸಿ ಯತ್ಪತಿಃ ॥ ೧೪ ॥

(ಅವಿದ್ಯೆ), ಮೋಹ (ಅಸ್ಮಿತೆ), ಮಹಾಮೋಹ (ರಾಗ), ತಾಮಿಸ್ರ (ದ್ವೇಷ) ಮತ್ತು ಅಂಧತಾಮಿಸ್ರ (ಅಭಿನಿವೇಶ) ಇವುಗಳನ್ನು ಸೃಷ್ಟಿಸಿದರು. ॥ ೨ ॥ ಆದರೆ ಈ ಅತ್ಯಂತ ಪಾಪಮಯ ಸೃಷ್ಟಿಯನ್ನು ನೋಡಿ ಅವರಿಗೆ ಸಂತೋಷವಾಗಲಿಲ್ಲ. ಆಗ ಅವರು ತಮ್ಮ ಮನಸ್ಸನ್ನು ಪರಮಾತ್ಮನ ಧ್ಯಾನದಿಂದ ಪವಿತ್ರವಾಗಿಸಿಕೊಂಡು ಬೇರೊಂದು ಸೃಷ್ಟಿಯನ್ನು ಮಾಡಿದರು. ॥ ೩ ॥ ಈ ಬಾರಿ ಅವರು ಸನಕ, ಸನಂದನ, ಸನಾತನ ಮತ್ತು ಸನತ್ಕುಮಾರ – ಎಂಬ ನಾಲ್ಕುಮಂದಿ ನಿವೃತ್ತಿಧರ್ಮಪರಾಯಣರಾದ ಊರ್ಧ್ವರೇತಸ್ಕರಾದ ಮುನಿಶ್ರೇಷ್ಠರನ್ನು ಸೃಷ್ಟಿಸಿದರು. ॥ ೪ ॥ ತಮ್ಮ ಆ ಪುತ್ರರಿಗೆ ಸ್ವಯಂಭೂ ಬ್ರಹ್ಮದೇವರು – 'ಪುತ್ರರೇ! ನೀವು ಸೃಷ್ಟಿಯನ್ನು ಮಾಡಿರಿ' ಎಂದು ಹೇಳಿದರು. ಆದರೆ ಅವರು ಹುಟ್ಟಿನಿಂದಲೇ ಮೋಕ್ಷಧರ್ಮವುಳ್ಳವರೂ, ನಿವೃತ್ತಿಮಾರ್ಗನಿಷ್ಠರೂ, ವಾಸುದೇವ ಪರಾಯಣರೂ ಆಗಿದ್ದರಿಂದ ಪ್ರವೃತ್ತಿಧರ್ಮರೂಪವಾದ ಸೃಷ್ಟಿಯನ್ನು ಮಾಡಲು ಇಷ್ಟಪಡಲಿಲ್ಲ. ॥ ೫ ॥ ನನ್ನ ಪುತ್ರರು ಹೀಗೆ ತನ್ನ ಅಪ್ಪಣೆಯನ್ನು ಮೀರಿ ತಿರಸ್ಕಾರ ಮಾಡಿದುದನ್ನು ನೋಡಿ ಬ್ರಹ್ಮದೇವರಿಗೆ ಸಹಿಸಲಾರದಷ್ಟು ಕ್ರೋಧವುಂಟಾಯಿತು. ಅವರು ಅದನ್ನು ತಡೆದುಕೊಳ್ಳಲು ಪ್ರಯತ್ನಮಾಡಿದರು. ॥ ೬ ॥ ಆದರೆ ಬುದ್ಧಿಯಿಂದ ಅದನ್ನು ತಡೆದರೂ ಕೂಡ ಆ ಕ್ರೋಧವು ಪ್ರಜಾಪತಿಯ ಹುಬ್ಬುಗಳ ಮಧ್ಯದಿಂದ ನೀಲಿ ಮತ್ತು ಕೆಂಪುಬಣ್ಣದ ಓರ್ವ ಬಾಲಕನ ರೂಪದಲ್ಲಿ ಪ್ರಕಟಗೊಂಡಿತು. ॥ ೭ ॥ ಆ ಬಾಲಕನೇ ದೇವತೆಗಳಿಗೆಲ್ಲ ಮೊದಲು ಹುಟ್ಟಿದ ಭಗವಾನ್ ರುದ್ರದೇವರು. ಆತನು ಅಳುತ್ತಾ-ಅಳುತ್ತಾ – 'ಓ ಜಗದ್ಗುರೋ, ಸೃಷ್ಟಿಕರ್ತನೇ! ನನಗೆ ಹೆಸರನ್ನೂ, ವಾಸಸ್ಥಾನವನ್ನೂ ತಿಳಿಸುವವನಾಗು ಎಂದು ಕೇಳತೊಡಗಿದನು. ॥ ೮ ॥

ಆಗ ಪದ್ಮಸಂಭವ ಭಗವಾನ್ ಬ್ರಹ್ಮದೇವರು ಆ ಬಾಲಕನ ಪ್ರಾರ್ಥನೆಯನ್ನು ಈಡೇರಿಸಲು ಮಧುರವಾದ ವಾಣಿಯಿಂದ – ಮಗೂ! ಅಳಬೇಡ, ನಿನ್ನ ಇಚ್ಛೆಯನ್ನು ಪೂರೈಸುತ್ತೇನೆ ಎಂದು ಹೇಳಿದರು. ॥ ೯ ॥ ದೇವಶ್ರೇಷ್ಠನೇ! ನೀನು ಹುಟ್ಟಿದೊಡನೆಯೇ ಬಾಲಕನಂತೆ ಅಳತೊಡಗಿದೆ. ಆದ್ದರಿಂದ ಜನರು ನಿನ್ನನ್ನು 'ರುದ್ರ' ನೆಂಬ ಹೆಸರಿನಿಂದ ಕರೆಯುವರು. ॥ ೧೦ ॥ ನಿನಗೆ ವಾಸಿಸಲು ಹೃದಯ, ಇಂದ್ರಿಯ, ಪ್ರಾಣ, ಆಕಾಶ, ವಾಯು, ಅಗ್ನಿ, ಜಲ, ಪೃಥಿವಿ, ಸೂರ್ಯ, ಚಂದ್ರ ಮತ್ತು ತಪಸ್ಸು ಈ ಸ್ಥಾನಗಳನ್ನು ಮೊದಲೇ ರಚಿಸಿರುವೆನು. ॥ ೧೧ ॥ ನೀನು – ಮನ್ಯು, ಮನು, ಮಹಿನಸ, ಮಹಾನ್, ಶಿವ, ಋತಧ್ವಜ, ಉಗ್ರರೇತಸ, ಭವ, ಕಾಲ, ವಾಮದೇವ, ಧೃತವ್ರತ – ಈ ಹೆಸರುಗಳಿಂದ ಖ್ಯಾತನಾಗುವೆ. ॥ ೧೨ ॥ ರುದ್ರದೇವನೇ! ಧೀ, ವೃತ್ತಿ, ಉಶನಾ, ಉಮಾ, ನಿಯುತ್, ಸರ್ಪಿ, ಇಳಾ, ಅಂಬಿಕಾ, ಇರಾವತೀ, ಸುಧಾ ಮತ್ತು ದೀಕ್ಷಾ – ಎಂಬ ಹನ್ನೊಂದು ಮಂದಿ ರುದ್ರಾಣಿಯರು ನಿನ್ನ ಪತ್ನಿಯರಾಗುವರು. ॥ ೧೩ ॥ ಈ ಹೆಸರುಗಳನ್ನೂ, ಸ್ಥಾನಗಳನ್ನೂ, ಪತ್ನಿಯರನ್ನೂ ಸ್ವೀಕರಿಸಿ ಇವರ ಮೂಲಕ ಬಹುಮಂದಿ ಪ್ರಜೆಗಳನ್ನು ಸೃಷ್ಟಿಸು. ಏಕೆಂದರೆ, ನೀನು ಪ್ರಜಾಪತಿಯಾಗಿರುವೆ, ಎಂದು ಆತನಿಗೆ ಹೇಳಿದರು. ॥ ೧೪ ॥

ಇತ್ಯಾದಿಷ್ಟಃ ಸ ಗುರುಣಾ ಭಗವಾನ್ನೀಲಲೋಹಿತಃ ।
ಸತ್ತ್ವಾಕೃತಿಸ್ವಭಾವೇನ ಸಸರ್ಜಾತ್ಮಸಮಾಃ ಪ್ರಜಾಃ ॥ ೧೫ ॥

ರುದ್ರಾಣಾಂ ರುದ್ರಸೃಷ್ಟಾನಾಂ ಸಮಂತಾದ್ಗ್ರಸತಾಂ ಜಗತ್ ।
ನಿಶಾಮ್ಯಾ ಸಂಖ್ಯಶೋ ಯೂಥಾನ್ ಪ್ರಜಾಪತಿರಶಂಕತ ॥ ೧೬ ॥

ಅಲಂ ಪ್ರಜಾಭಿಃ ಸೃಷ್ಟಾಭಿರೀದೃಶೀಭಿಃ ಸುರೋತ್ತಮ ।
ಮಯಾ ಸಹ ದಹಂತೀಭಿರ್ದಿಶಶ್ಚಕ್ಷುರ್ಭಿರುಲ್ಬಣೈಃ ॥ ೧೭ ॥

ತಪ ಆತಿಷ್ಠ ಭದ್ರಂ ತೇ ಸರ್ವಭೂತಸುಖಾವಹಮ್ ।
ತಪಸೈವ ಯಥಾಪೂರ್ವಂ ಸ್ರಷ್ಟಾ ವಿಶ್ವಮಿದಂ ಭವಾನ್ ॥ ೧೮ ॥

ತಪಸೈವ ಪರಂ ಜ್ಯೋತಿರ್ಭಗವಂತಮಧೋಕ್ಷಜಮ್ ।
ಸರ್ವಭೂತಗುಹಾವಾಸಮಂಜಸಾ ವಿಂದತೇ ಪುಮಾನ್ ॥ ೧೯ ॥

*ಮೈತ್ರೇಯ ಉವಾಚ*

ಏವಮಾತ್ಮಭುವಾಽಽದಿಷ್ಟಃ ಪರಿಕ್ರಮ್ಯ ಗಿರಾಂ ಪತಿಮ್ ।
ಬಾಢಮಿತ್ಯಮುಮಾಮಂತ್ರ್ಯ ವಿವೇಶ ತಪಸೇ ವನಮ್ ॥ ೨೦ ॥

ಅಥಾಭಿಧ್ಯಾಯತಃ ಸರ್ಗಂ ದಶ ಪುತ್ರಾಃ ಪ್ರಜಜ್ಞಿರೇ ।
ಭಗವಚ್ಛಕ್ತಿಯುಕ್ತಸ್ಯ ಲೋಕಸಂತಾನಹೇತವಃ ॥ ೨೧ ॥

ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ।
ಭೃಗುರ್ವಸಿಷ್ಠೋ ದಕ್ಷಶ್ಚ ದಶಮಸ್ತತ್ರ ನಾರದಃ ॥ ೨೨ ॥

ಉತ್ಸಂಗಾನ್ನಾರದೋ ಜಜ್ಞೇ ದಕ್ಷೋಽಂಗುಷ್ಠಾತ್ಸ್ವಯಂಭುವಃ ।
ಪ್ರಾಣಾದ್ವಸಿಷ್ಠಃ ಸಂಜಾತೋ ಭೃಗುಸ್ತ್ವಚಿ ಕರಾತ್ಕ್ರತುಃ ॥ ೨೩ ॥

ಪುಲಹೋ ನಾಭಿತೋ ಜಜ್ಞೇ ಪುಲಸ್ತ್ಯಃ ಕರ್ಣಯೋರ್ಋಷಿಃ ।
ಅಂಗಿರಾ ಮುಖತೋಽಕ್ಷ್ಣೋಽತ್ರಿರ್ಮರೀಚಿರ್ಮನಸೋಽಭವತ್ ॥ ೨೪ ॥

ಧರ್ಮಃ ಸ್ತನಾದ್ದಕ್ಷಿಣತೋ ಯತ್ರ ನಾರಾಯಣಃ ಸ್ವಯಮ್ ।
ಅಧರ್ಮಃ ಪೃಷ್ಠತೋ ಯಸ್ಮಾನ್ಮೃತ್ಯುರ್ಲೋಕಭಯಂಕರಃ ॥ ೨೫ ॥

ಹೃದಿ ಕಾಮೋ ಭ್ರುವಃ ಕ್ರೋಧೋ ಲೋಭಶ್ಚಾಧರದಚ್ಛದಾತ್ ।
ಆಸ್ಯಾದ್ವಾಕ್ಸಿಂಧವೋ ಮೇಢ್ರಾನ್ನಿರ್ಋತಿಃ ಪಾಯೋರಘಾಶ್ರಯಃ ॥ ೨೬ ॥

ಲೋಕಪಿತಾ ಬ್ರಹ್ಮದೇವರಿಂದ ಹೀಗೆ ಅಪ್ಪಣೆಪಡೆದು ಭಗವಾನ್ ನೀಲಲೋಹಿತ ರುದ್ರದೇವರು ಬಲ, ಆಕಾರ ಮತ್ತು ಸ್ವಭಾವಗಳೆಲ್ಲ ದರಲ್ಲಿಯೂ ತನ್ನಂತೇ ಇರುವ ಪ್ರಜೆಗಳನ್ನು ಸೃಷ್ಟಿಸತೊಡಗಿದರು. ॥ ೧೫ ॥ ಭಗವಾನ್ ರುದ್ರನಿಂದ ಉತ್ಪನ್ನರಾದ ಈ ಅಸಂಖ್ಯ ರುದ್ರರು ಗುಂಪುಗಳನ್ನು ಮಾಡಿಕೊಂಡು ಜಗತ್ತನ್ನು ಭಕ್ಷಿಸತೊಡಗಿದರು. ಅದನ್ನು ನೋಡಿ ಬ್ರಹ್ಮದೇವರಿಗೆ ತುಂಬಾ ಭಯ-ಶಂಕೆಗಳು ಉಂಟಾದುವು. ॥ ೧೬ ॥ ಆಗ ಅವರು ರುದ್ರನನ್ನು ಕುರಿತು– "ದೇವಶ್ರೇಷ್ಠನೇ! ನಿನ್ನ ಪ್ರಜೆಗಳಾದರೋ ತಮ್ಮ ಭಯಂಕರ ದೃಷ್ಟಿಗಳಿಂದ ನನ್ನನ್ನೂ ಹಾಗೂ ಎಲ್ಲ ದಿಕ್ಕುಗಳನ್ನೂ ಸುಟ್ಟುಹಾಕಲು ತೊಡಗಿದ್ದಾರೆ. ಆದ್ದರಿಂದ ಇಂತಹ ಸೃಷ್ಟಿಯನ್ನು ಮುಂದೆ ಮಾಡಬೇಡ" ಎಂದು ಹೇಳಿದರು. ॥ ೧೭ ॥ ನಿನಗೆ ಮಂಗಳವಾಗಲೀ, ಈಗ ನೀನು ಸಮಸ್ತ ಪ್ರಾಣಿಗಳಿಗೆ ಸುಖವನ್ನುಂಟುಮಾಡುವುದಕ್ಕಾಗಿ ತಪಸ್ಸನ್ನಾಚರಿಸು. ಮತ್ತೆ ಆ ತಪಸ್ಸಿನ ಪ್ರಭಾವದಿಂದಲೇ ನೀನು ಹಿಂದಿನಂತೆ ಈ ವಿಶ್ವವನ್ನು ಸೃಷ್ಟಿಸುವೆಯಂತೆ. ॥ ೧೮ ॥ ತಪಸ್ಸಿನ ಮೂಲಕವೇ ಇಂದ್ರಿಯಾತೀತನೂ, ಸರ್ವಾಂತರ್ಯಾಮಿಯೂ, ಜ್ಯೋತಿ ಸ್ವರೂಪನೂ ಆದ ಶ್ರೀಹರಿಯನ್ನು ಮನುಷ್ಯನು ಸುಲಭವಾಗಿ ಹೊಂದಬಲ್ಲನು. ॥ ೧೯ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಬ್ರಹ್ಮದೇವರ ಅಪ್ಪಣೆಯಂತೆ ರುದ್ರದೇವರು – 'ಹಾಗೆಯೇ ಆಗಲಿ' ಎಂದು ಹೇಳಿ, ಅವರಿಗೆ ಪ್ರದಕ್ಷಿಣೆ ಮಾಡಿ, ಅವರಿಂದ ಅನುಮತಿಯನ್ನು ಪಡೆದು ತಪಸ್ಸನ್ನಾಚರಿಸಲು ವನಕ್ಕೆ ತೆರಳಿದರು. ॥ ೨೦ ॥

ಅನಂತರ ಭಗವಂತನ ಶಕ್ತಿಯಿಂದ ಸಂಪನ್ನರಾದ ಬ್ರಹ್ಮದೇವರು ಸೃಷ್ಟಿಯನ್ನು ಮಾಡಲು ಸಂಕಲ್ಪಿಸಿದಾಗ ಅವರಿಗೆ ಹತ್ತು ಮಂದಿ ಪುತ್ರರು ಜನಿಸಿದರು. ಅವರಿಂದಲೇ ಲೋಕದಲ್ಲಿ ಬಹುಮಟ್ಟಿಗೆ ಪ್ರಜಾವೃದ್ಧಿಯಾದದ್ದು. ॥ ೨೧ ॥ ಮರೀಚಿ, ಅತ್ರಿ, ಅಂಗಿರಾ, ಪುಲಸ್ತ್ಯ ಪುಲಹ, ಕ್ರತು, ಭೃಗು, ವಸಿಷ್ಠ, ದಕ್ಷ ಮತ್ತು ನಾರದರು – ಇವರೇ ಆ ಹತ್ತು ಮಂದಿ ಪುತ್ರಶ್ರೇಷ್ಠರು. ॥ ೨೨ ॥ ಇವರಲ್ಲಿ ನಾರದರು ಬ್ರಹ್ಮದೇವರ ತೊಡೆಯಿಂದಲೂ, ದಕ್ಷನು ಅಂಗುಷ್ಠದಿಂದಲೂ, ವಸಿಷ್ಠರು ಪ್ರಾಣದಿಂದಲೂ, ಭೃಗು ತ್ವಚೆಯಿಂದಲೂ, ಕ್ರತು ಕೈಯಿಂದಲೂ, ಪುಲಹ ನಾಭಿಯಿಂದಲೂ, ಪುಲಸ್ತ್ಯರು ಕಿವಿಯಿಂದಲೂ, ಅಂಗಿರಾ ಬಾಯಿಯಿಂದಲೂ, ಅತ್ರಿಯು ನೇತ್ರಗಳಿಂದಲೂ, ಮರೀಚಿಯು ಮನದಿಂದಲೂ ಉತ್ಪನ್ನರಾದರು. ॥ ೨೩-೨೪ ॥ ಮತ್ತೆ ಬ್ರಹ್ಮದೇವರ ಬಲಗಡೆಯ ಸ್ತನದಿಂದ 'ಧರ್ಮ'ವು ಉತ್ಪನ್ನವಾಯಿತು. ಅವನ ಪತ್ನೀ ಮೂರ್ತಿಯಿಂದ ಸ್ವಯಂ ನಾರಾಯಣನು ಅವತರಿಸಿದನು. ಬ್ರಹ್ಮದೇವರ ಬೆನ್ನಿನಿಂದ ಅಧರ್ಮದ ಜನ್ಮವಾಯಿತು ಮತ್ತು ಅವನಿಂದ ಜಗತ್ತಿಗೆ ಭಯವನ್ನುಂಟುಮಾಡುವ ಮೃತ್ಯುವು ಜನಿಸಿದನು. ॥ ೨೫ ॥ ಹೀಗೆಯೇ ಬ್ರಹ್ಮದೇವರ ಹೃದಯದಿಂದ ಕಾಮವು, ಹುಬ್ಬುಗಳಿಂದ ಕ್ರೋಧವೂ, ಕೆಳಗಿನ ತುಟಿಯಿಂದ ಲೋಭವೂ, ಬಾಯಿಯಿಂದ ಮಾತಿಗೆ ಅಧಿಷ್ಠಾತ್ರಿ ದೇವತೆಯಾದ ಸರಸ್ವತಿಯೂ, ಲಿಂಗದಿಂದ ಸಮುದ್ರವೂ, ಗುದದಿಂದ ರಾಕ್ಷಸಾಧಿಪತಿಯೂ, ಪಾಪಗಳಿಗೆ ನಿವಾಸಸ್ಥಾನವಾದ ನಿರ್ಋತಿಯೂ ಉದ್ಭವಿಸಿದರು. ॥ ೨೬ ॥

ಛಾಯಾಯಾಃ ಕರ್ದಮೋ ಜಜ್ಞೇ ದೇವಹೂತ್ಯಾಃ ಪತಿಃ ಪ್ರಭುಃ ।
ಮನಸೋ ದೇಹತಶ್ಚೇದಂ ಜಜ್ಞೇ ವಿಶ್ವಕೃತೋ ಜಗತ್ ॥ ೨೭ ॥

ವಾಚಂ ದುಹಿತರಂ ತನ್ವೀಂ ಸ್ವಯಂಭೂರ್ಹರತೀಂ ಮನಃ ।
ಅಕಾಮಾಂ ಚಕಮೇ ಕ್ಷತ್ತಃ ಸಕಾಮ ಇತಿ ನಃ ಶ್ರುತಮ್ ॥ ೨೮ ॥

ತಮಧರ್ಮೇ ಕೃತಮತಿಂ ವಿಲೋಕ್ಯ ಪಿತರಂ ಸುತಾಃ ।
ಮರೀಚಿಮುಖ್ಯಾ ಮುನಯೋ ವಿಶ್ರಮ್ಭಾತ್ಪ್ರತ್ಯಬೋಧಯನ್ ॥ ೨೯ ॥

ನೈತತ್ಪೂರ್ವೈಃ ಕೃತಂ ತ್ವದ್ಯ ನ ಕರಿಷ್ಯಂತಿ ಚಾಪರೇ ।
ಯತ್ತ್ವಂ ದುಹಿತರಂ ಗಚ್ಛೇರನಿಗೃಹ್ಯಾಂಗಜಂ ಪ್ರಭುಃ ॥ ೩೦ ॥

ತೇಜೀಯಸಾಮಪಿ ಹ್ಯೇತನ್ನ ಸುಶ್ಲೋಕ್ಯಂ ಜಗದ್ಗುರೋ ।
ಯದ್ವೃತ್ತಮನುತಿಷ್ಠನ್ವೈ ಲೋಕಃ ಕ್ಷೇಮಾಯ ಕಲ್ಪತೇ ॥ ೩೧ ॥

ತಸ್ಮೈ ನಮೋ ಭಗವತೇ ಯ ಇದಂ ಸ್ವೇನ ರೋಚಿಷಾ ।
ಆತ್ಮಸ್ಥಂ ವ್ಯಂಜಯಾಮಾಸ ಸ ಧರ್ಮಂ ಪಾತುಮರ್ಹತಿ ॥ ೩೨ ॥

ಸ ಇತ್ಥಂ ಗೃಣತಃ ಪುತ್ರಾನ್ಪುರೋ ದೃಷ್ಟ್ವಾ ಪ್ರಜಾಪತೀನ್ ।
ಪ್ರಜಾಪತಿಪತಿಸ್ತನ್ವಂ ತತ್ಯಾಜ ವ್ರೀಡಿತಸ್ತದಾ ।
ತಾಂ ದಿಶೋ ಜಗೃಹುರ್ಘೋರಾಂ ನೀಹಾರಂ ಯದ್ವಿದುಸ್ತಮಃ ॥ ೩೩ ॥

ಕದಾಚಿದ್ಧ್ಯಾಯತಃ ಸ್ರಷ್ಟುರ್ವೇದಾ ಆಸಂಶ್ಚತುರ್ಮುಖಾತ್ ।
ಕಥಂ ಸ್ರಕ್ಷ್ಯಾಮ್ಯಹಂ ಲೋಕಾನ್ಸಮವೇತಾನ್ಯಥಾ ಪುರಾ ॥ ೩೪ ॥

ಚಾತುರ್ಹೋತ್ರಂ ಕರ್ಮತಂತ್ರಮುಪವೇದನಯೈಃ ಸಹ ।
ಧರ್ಮಸ್ಯ ಪಾದಾಶ್ಚತ್ವಾರಸ್ತಥೈವಾಶ್ರಮವೃತ್ತಯಃ ॥ ೩೫ ॥

*ವಿದುರ ಉವಾಚ*

ಸ ವೈ ವಿಶ್ವಸೃಜಾಮೀಶೋ ವೇದಾದೀನ್ಮುಖತೋಽಸೃಜತ್ ।
ಯದ್ಯದ್ಯೇನಾಸೃಜದ್ದೇವಸ್ತನ್ಮೇ ಬ್ರೂಹಿ ತಪೋಧನ ॥ ೩೬ ॥

ನೆರಳಿನಿಂದ ದೇವಹೂತಿಯ ಪತಿಪೂಜ್ಯರಾದ ಕರ್ದಮರೂ ಜನಿಸಿದರು. ಹೀಗೆ ಈ ಇಡೀ ಜಗತ್ತು ಸೃಷ್ಟಿಕರ್ತರಾದ ಬ್ರಹ್ಮದೇವರ ಶರೀರ ಮತ್ತು ಮನಸ್ಸುಗಳಿಂದ ಉಂಟಾಗಿದೆ. ॥ ೨೭ ॥

ಮಹಾತ್ಮನಾದ ವಿದುರನೇ! ಬ್ರಹ್ಮದೇವರ ಕನ್ಯೆಯಾದ ಸರಸ್ವತಿಯು ಅತ್ಯಂತ ಸುಕುಮಾರಿಯೂ, ಸುಂದರಿಯೂ ಆಗಿದ್ದಳು. ಆಕೆಗೆ ಕಾಮವಿಲ್ಲದಿದ್ದರೂ ಬ್ರಹ್ಮದೇವರು ಆಕೆಯನ್ನು ಕಾಮಿಸಿದರು – ಎಂದು ನಾವು ಕೇಳಿದ್ದೇವೆ. ॥ ೨೮॥ ಬ್ರಹ್ಮದೇವರು ಇಂತಹ ಅಧರ್ಮಮಯವಾದ ಸಂಕಲ್ಪ ಮಾಡಿದ್ದನ್ನು ಕಂಡು ಅವರ ಪುತ್ರರಾದ ಮರೀಚಿಗಳೇ ಮುಂತಾದ ಮಹರ್ಷಿಗಳು ಅವರಿಗೆ ವಿಶ್ವಾಸಪೂರ್ವಕ ತಿಳಿಹೇಳಿದರು– ॥ ೨೯ ॥ ತೀರ್ಥರೂಪರೇ! ತಾವು ಸಮರ್ಥರು. ಮನಸ್ಸಿನಲ್ಲಿ ಉಂಟಾಗಿರುವ ಈ ಕಾಮದ ವೇಗವನ್ನು ತಡೆಯುವ ಶಕ್ತಿ ಇದ್ದರೂ ತಾವು ಅದನ್ನು ತಡೆಗಟ್ಟದೆ ಪುತ್ರೀಗಮನವನ್ನು ಮಾಡಲು ಸಂಕಲ್ಪಿಸಿದ್ದೀರಲ್ಲ! ಇಂತಹ ಪಾಪವನ್ನು ಹಿಂದಿನ ಯಾವ ಬ್ರಹ್ಮದೇವರೂ ಮಾಡಿಲ್ಲ; ಮುಂದಿನವರೂ ಮಾಡಲಾರರು. ॥ ೩೦ ॥ ಜಗದ್ಗುರುವೇ! ನಿಮ್ಮಂತಹ ತೇಜಸ್ವೀ ಪುರುಷರಿಗೆ ಇಂತಹ ಕೆಲಸ ಶೋಭಿಸುವುದಿಲ್ಲ. ಏಕೆಂದರೆ, ನಿಮ್ಮಂತಹವರ ಆಚರಣೆಗಳನ್ನು ಅನುಸರಿಸುವುದರಿಂದಲೇ ಜಗತ್ತಿನ ಕಲ್ಯಾಣವಾಗುತ್ತದೆ. ॥ ೩೧ ॥ ಯಾರು ತನ್ನಲ್ಲಿ ವಿಲೀನಗೊಂಡಿರುವ ಈ ಜಗತ್ತನ್ನು ಸ್ವಪ್ರಕಾಶದಿಂದಲೇ ಪ್ರಕಟಪಡಿಸುವನೋ ಆ ಪರಮಾತ್ಮನಿಗೆ ನಮೋ ನಮಃ. ಈ ಸಮಯದಲ್ಲಿ ಆತನೇ ಧರ್ಮವನ್ನು ರಕ್ಷಿಸಬಲ್ಲನು. ॥ ೩೨ ॥ ತನ್ನ ಪುತ್ರರಾದ ಮರೀಚಿಗಳೇ ಮುಂತಾದ ಪ್ರಜಾಪತಿಗಳು ತಮ್ಮ ಮುಂದೆ ಹೀಗೆ ಹೇಳುತ್ತಿರುವುದನ್ನು ನೋಡಿ ಪ್ರಜಾಪತಿಗಳಿಗೂ ಪತಿಯಾದ ಬ್ರಹ್ಮದೇವರಿಗೆ ತುಂಬಾ ನಾಚಿಕೆಯುಂಟಾಗಿ, ಅವರು ಒಡನೆಯೇ ಆ ದೇಹವನ್ನು ತೊರೆದುಬಿಟ್ಟರು. ಹೀಗೆ ಅವರು ತೊರೆದ ಘೋರವಾದ ಶರೀರವನ್ನು ದಿಕ್ಕುಗಳು ಸ್ವೀಕರಿಸಿದವು. ಅದೇ ಮಂಜು ಆಯಿತು. ಅದನ್ನು ಅಂಧಕಾರವೆಂದೂ ಹೇಳುತ್ತಾರೆ. ॥ ೩೩ ॥

ಒಮ್ಮೆ ಬ್ರಹ್ಮದೇವರು – 'ನಾನು ಎಲ್ಲ ಲೋಕಗಳನ್ನು ಹಿಂದೆ ಇದ್ದಂತೆಯೇ ವ್ಯವಸ್ಥಿತವಾದ ರೂಪದಲ್ಲಿ ಸೃಷ್ಟಿಮಾಡಬೇಕು' ಎಂದು ಯೋಚಿಸುತ್ತಿದ್ದರು. ಆಗ ಅವರ ನಾಲ್ಕು ಮುಖಗಳಿಂದ ನಾಲ್ಕು ವೇದಗಳು ಪ್ರಕಟಗೊಂಡವು. ॥ ೩೪ ॥ ಇವುಗಳಲ್ಲದೆ ಉಪವೇದಗಳು, ನ್ಯಾಯಶಾಸ್ತ್ರ, ಅಧ್ವರ್ಯು, ಉದ್ಗಾತೃ, ಹೋತೃ ಮತ್ತು ಬ್ರಹ್ಮ ಎಂಬ ನಾಲ್ಕು ಮಂದಿ ಋತ್ವಿಕ್ಕುಗಳ ಕರ್ಮಗಳು, ಯಜ್ಞಗಳ ವಿಸ್ತಾರ, ಧರ್ಮದ ನಾಲ್ಕು ಪಾದಗಳು, ನಾಲ್ಕು ಆಶ್ರಮಗಳು ಹಾಗೂ ಅವುಗಳ ವೃತ್ತಿಗಳು ಹೀಗೆ ಎಲ್ಲವೂ ಬ್ರಹ್ಮದೇವರ ಮುಖಗಳಿಂದ ಉದ್ಭವಿಸಿದವು. ॥ ೩೫ ॥

ವಿದುರನು ಕೇಳಿದನು – 'ತಪೋಧನರೇ! ಸೃಷ್ಟಿಕರ್ತರಾದ ಪ್ರಜಾಪತಿಗಳಿಗೂ ಪ್ರಭುವಾದ ಬ್ರಹ್ಮದೇವರು ತಮ್ಮ ಮುಖಗಳಿಂದ ಈ ವೇದಾದಿಗಳನ್ನು ಹೊರಹೊಮ್ಮಿಸಿದಾಗ ಅವರು ಯಾವ-ಯಾವ ಮುಖದಿಂದ ಯಾವ-ಯಾವ ವಸ್ತುಗಳನ್ನು ನಿರ್ಮಾಣಮಾಡಿದರು? ಎಂಬುದನ್ನು ದಯವಿಟ್ಟು ನನಗೆ ತಿಳಿಸುವರಾಗಿ' ಎಂದು ವಿಜ್ಞಾಪಿಸಿಕೊಂಡನು. ॥ ೩೬ ॥

ಮೈತ್ರೇಯ ಉವಾಚ

**ಋಗ್ಯಜುಃಸಾಮಾಥರ್ವಾಖ್ಯಾನ್ವೇದಾನ್ಪೂರ್ವಾದಿಭಿರ್ಮುಖೈಃ ।**
**ಶಸ್ತ್ರಮಿಜ್ಯಾಂ ಸ್ತುತಿಸ್ತೋಮಂ ಪ್ರಾಯಶ್ಚಿತ್ತಂ ವ್ಯಧಾತ್ಕ್ರಮಾತ್ ॥ ೩೭ ॥**

**ಆಯುರ್ವೇದಂ ಧನುರ್ವೇದಂ ಗಾಂಧರ್ವಂ ವೇದಮಾತ್ಮನಃ ।**
**ಸ್ಥಾಪತ್ಯಂ ಚಾಸೃಜದ್ವೇದಂ ಕ್ರಮಾತ್ಪೂರ್ವಾದಿಭಿರ್ಮುಖೈಃ ॥ ೩೮ ॥**

**ಇತಿಹಾಸಪುರಾಣಾನಿ ಪಂಚಮಂ ವೇದಮೀಶ್ವರಃ ।**
**ಸರ್ವೇಭ್ಯ ಏವ ವಕ್ತ್ರೇಭ್ಯಃ ಸಸೃಜೇ ಸರ್ವದರ್ಶನಃ ॥ ೩೯ ॥**

**ಷೋಡಶ್ಯುಕ್ಥೌ ಪೂರ್ವವಕ್ತ್ರಾತ್ಪುರೀಷ್ಯಗ್ನಿಷ್ಟುತಾವಥ ।**
**ಆಪ್ತೋರ್ಯಾಮಾತಿರಾತ್ರೌ ಚ ವಾಜಪೇಯಂ ಸಗೋಸವಮ್ ॥ ೪೦ ॥**

**ವಿದ್ಯಾ ದಾನಂ ತಪಃ ಸತ್ಯಂ ಧರ್ಮಸ್ಯೇತಿ ಪದಾನಿ ಚ ।**
**ಆಶ್ರಮಾಂಶ್ಚ ಯಥಾಸಂಖ್ಯಮಸೃಜತ್ಸಹ ವೃತ್ತಿಭಿಃ ॥ ೪೧ ॥**

**ಸಾವಿತ್ರಂ ಪ್ರಾಜಾಪತ್ಯಂ ಚ ಬ್ರಾಹ್ಮಂ ಚಾಥ ಬೃಹತ್ತಥಾ ।**
**ವಾರ್ತಾಸಂಚಯಶಾಲೀನಶಿಲೋಂಛ ಇತಿ ವೈ ಗೃಹೇ ॥ ೪೨ ॥**

**ವೈಖಾನಸಾ ವಾಲಖಿಲ್ಯೌದುಂಬರಾಃ ಫೇನಪಾ ವನೇ ।**
**ನ್ಯಾಸೇ ಕುಟೀಚಕಃ ಪೂರ್ವಂ ಬಹ್ವೋದೋ ಹಂಸನಿಷ್ಕ್ರಿಯೌ ॥ ೪೩ ॥**

**ಶ್ರೀಮೈತ್ರೇಯರು ಹೇಳುತ್ತಾರೆ** – 'ಎಲೈ ವಿದುರನೇ! ಬ್ರಹ್ಮದೇವರು ತಮ್ಮ ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ – ಈ ದಿಕ್ಕುಗಳ ಮುಖಗಳಿಂದ ಕ್ರಮವಾಗಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳನ್ನು ಪ್ರಕಟಪಡಿಸಿದರು. ಇದೇ ಕ್ರಮದಲ್ಲೇ ಹೋತೃವಿನ ಕರ್ಮವಾದ ಶಸ್ತ್ರವನ್ನೂ, ಅಧ್ವರ್ಯುವಿನ ಕರ್ಮವಾದ ಇಜ್ಯೆಯನ್ನೂ, ಉದ್ಗಾತೃವಿನ ಕರ್ಮವಾದ ಸ್ತುತಿ-ಸ್ತೋಮವನ್ನು ಮತ್ತು ಬ್ರಹ್ಮನ ಕರ್ಮವಾದ ಪ್ರಾಯಶ್ಚಿತ್ತವನ್ನೂ ಹೊರಹೊಮ್ಮಿಸಿದರು. ॥ ೩೭ ॥ ಹೀಗೆಯೇ ಆಯುರ್ವೇದ (ಚಿಕಿತ್ಸಾಶಾಸ್ತ್ರ), ಧನುರ್ವೇದ (ಶಸ್ತ್ರವಿದ್ಯೆ), ಗಾಂಧರ್ವವೇದ (ಸಂಗೀತಶಾಸ್ತ್ರ) ಮತ್ತು ಸ್ಥಾಪತ್ಯವೇದ (ಶಿಲ್ಪವಿದ್ಯೆ) ಈ ನಾಲ್ಕು ಉಪವೇದಗಳನ್ನು ಕ್ರಮವಾಗಿ ಪೂರ್ವಾದಿ ದಿಕ್ಕುಗಳ ಮುಖಗಳಿಂದಲೇ ನಿರ್ಮಾಣಮಾಡಿದರು. ॥ ೩೮ ॥ ಮತ್ತೆ ಸರ್ವಜ್ಞರಾದ ಆ ಬ್ರಹ್ಮದೇವರು ಇತಿಹಾಸ ಪುರಾಣರೂಪವಾದ ಐದನೆಯ ವೇದವನ್ನೂ ಎಲ್ಲ ಮುಖಗಳಿಂದ ನಿರ್ಮಿಸಿದರು. ॥ ೩೯ ॥ ಅದೇ ಕ್ರಮದಲ್ಲಿ ಷೋಡಶೀ ಮತ್ತು ಉಕ್ಥ, ಚಯನ ಮತ್ತು ಅಗ್ನಿಷ್ಟೋಮ, ಆಪ್ತೋರ್ಯಾಮ ಮತ್ತು ಅತಿರಾತ್ರ, ವಾಜಪೇಯ ಮತ್ತು ಗೋಸವ ಎಂಬ ಎರಡೆರಡು ಯಾಗಗಳೂ ಪೂರ್ವಾದಿ ಮುಖಗಳಿಂದ ಉತ್ಪನ್ನ ವಾದುವು. ॥ ೪೦ ॥ ವಿದ್ಯಾ, ದಾನ, ತಪಸ್ಸು, ಸತ್ಯ ಎಂಬ ಧರ್ಮದ ನಾಲ್ಕು ಪಾದಗಳನ್ನೂ, ವೃತ್ತಿಗಳ ಸಹಿತ ನಾಲ್ಕು ಆಶ್ರಮಗಳನ್ನೂ, ಇದೇ ಕ್ರಮದಲ್ಲಿ ಪ್ರಕಟಪಡಿಸಿದನು. ॥ ೪೧ ॥ ಸಾವಿತ್ರ,* ಪ್ರಾಜಾಪತ್ಯ,[1] ಬ್ರಾಹ್ಮ[2] ಮತ್ತು ಬೃಹತ್[3] – ಈ ನಾಲ್ಕು ವೃತ್ತಿಗಳು ಬ್ರಹ್ಮಚಾರಿಯದಾಗಿವೆ. ವಾರ್ತಾ,[4] ಸಂಚಯ,[5] ಶಾಲೀನ[6] ಮತ್ತು ಶಿಲೋಂಛ[7] – ಇವು ನಾಲ್ಕು ವೃತ್ತಿಗಳು ಗೃಹಸ್ಥರಿಗೆ ಸಂಬಂಧಪಟ್ಟವುಗಳು. ॥ ೪೨ ॥ ಇದೇ ರೀತಿಯಲ್ಲಿ ವಾನಪ್ರಸ್ಥರಲ್ಲಿ ವೃತ್ತಿಭೇದಕ್ಕನುಸಾರವಾಗಿ ವೈಖಾನಸ,[8] ವಾಲಖಿಲ್ಯ,[9] ಔದುಂಬರ,[10] ಮತ್ತು ಫೇನಪ[11] – ಇವು ನಾಲ್ಕು ವಾನಪ್ರಸ್ಥಿಯರ ಹಾಗೂ ಕುಟೀಚಕ,[12] ಬಹೂದಕ,[13] ಹಂಸ[14] ಮತ್ತು ನಿಷ್ಕ್ರಿಯ (ಪರಮಹಂಸ)[15] – ಇವು ನಾಲ್ಕು ಸನ್ಯಾಸಿಗಳ ಭೇದವಾಗಿವೆ. ॥ ೪೩ ॥ ಇದೇ ಕ್ರಮದಲ್ಲಿ ಆನ್ವೀಕ್ಷಿಕೀ,[16] ತ್ರಯೀ,[17] ವಾರ್ತಾ[18] ಮತ್ತು ದಂಡನೀತಿ[19] – ಈ ನಾಲ್ಕು ವಿದ್ಯೆಗಳೂ ಹಾಗೂ ನಾಲ್ಕು ವ್ಯಾಹೃತಿಗಳೂ[20] ಕೂಡ ಬ್ರಹ್ಮದೇವನ

* ಉಪನಯನ ಸಂಸ್ಕಾರವಾದ ನಂತರ ಗಾಯತ್ರಿಯ ಅಧ್ಯಯನಕ್ಕಾಗಿ ಆಚರಿಸುವ ನಾಲ್ಕು ದಿನಗಳ ವ್ರತ. ೧. ಒಂದು ವರ್ಷದ ಬ್ರಹ್ಮಚರ್ಯವ್ರತ. ೨. ವೇದಾಧ್ಯಯನ ಮುಗಿಯುವವರೆಗೆ ಪಾಲಿಸುವ ಬ್ರಹ್ಮಚರ್ಯವ್ರತ. ೩. ಜೀವಮಾನಪರ್ಯಂತ ಬ್ರಹ್ಮಚರ್ಯಪಾಲನೆ. ೪. ಕೃಷಿಯೇ ಮುಂತಾದ ಶಾಸ್ತ್ರವಿಹಿತ ವೃತ್ತಿಗಳು. ೫. ಯಾಗಾದಿಗಳನ್ನು ಮಾಡುವುದು. ೬. ಅಯಾಚಿತ ವೃತ್ತಿ. ೭. ಧಾನ್ಯದ ಕಣದಲ್ಲಿ ಅಥವಾ ಧಾನ್ಯದ ಅಂಗಡಿಯ ಬಳಿ ಬಿದ್ದ ಕಾಳುಗಳನ್ನು ಆರಿಸಿತಂದು ಅದರಿಂದ ಜೀವನ ನಿರ್ವಾಹ ಮಾಡುವುದು. ೮. ಉಳುಮೆಯಿಲ್ಲದ ಭೂಮಿಯಲ್ಲಿ ಬೆಳೆದ ಧಾನ್ಯದಿಂದ ಜೀವನ ನಿರ್ವಹಣೆ. ೯. ಹೊಸಧಾನ್ಯವು ದೊರೆತಾಕ್ಷಣ ಹಿಂದೆ ಸಂಗ್ರಹಿಸಲ್ಪಟ್ಟ ಧಾನ್ಯವನ್ನು ದಾನಮಾಡಿಬಿಡುವುದು. ೧೦. ಪ್ರಾತಃಕಾಲದಲ್ಲಿ ಎದ್ದಾಗ ಮುಖವು ಯಾವ ದಿಕ್ಕಿಗೆ ಇರುತ್ತದೋ, ಅದೇ ದಿಕ್ಕಿನಿಂದ ಹಣ್ಣು ಮುಂತಾದವುಗಳನ್ನು ತಂದು ಜೀವನ ನಿರ್ವಹಿಸುವುದು. ೧೧. ತಾನಾಗಿಯೇ ಉದುರಿಬಿದ್ದ ಹಣ್ಣುಗಳಿಂದ ಜೀವನ ನಿರ್ವಹಣೆ. ೧೨. ಕುಟಿಯನ್ನು ನಿರ್ಮಿಸಿಕೊಂಡು ಒಂದೇ ಕಡೆಯಲ್ಲಿದ್ದು ಆಶ್ರಮಧರ್ಮಗಳನ್ನು ನಡೆಸುತ್ತಾ ಇರುವುದು. ೧೩. ಕರ್ಮದ ಕಡೆಗೆ ಗೌಣದೃಷ್ಟಿಯನ್ನಿರಿಸಿ ಜ್ಞಾನವನ್ನೇ ಪ್ರಧಾನವೆಂದು ತಿಳಿಯುವವರು. ೧೪. ಜ್ಞಾನಾಭ್ಯಾಸಿ. ೧೫. ಜೀವನ್ಮುಕ್ತ ಜ್ಞಾನೀ. ೧೬. ಮೋಕ್ಷವನ್ನು ಕೊಡುವ ಆತ್ಮವಿದ್ಯೆ. ೧೭. ಸ್ವರ್ಗಾದಿ ಫಲಗಳನ್ನು ಕೊಡುವ ಕರ್ಮವಿದ್ಯೆ. ೧೮. ಕೃಷಿ-ವ್ಯಾಪಾರಾದಿ ಸಂಬಂಧೀ ವಿದ್ಯೆ. ೧೯. ರಾಜನೀತಿ. ೨೦. ಭೂಃ, ಭುವಃ, ಸುವಃ – ಇವು ಮೂರು ಮತ್ತು ನಾಲ್ಕನೆಯದು ಮಹಃ ಸೇರಿ ನಾಲ್ಕು ವ್ಯಾಹೃತಿಗಳು. ಆಶ್ವಲಾಯನರು ತಮ್ಮ ಗೃಹ್ಯಸೂತ್ರದಲ್ಲಿ ತಿಳಿಸಿದಂತೆ – '**ಏವಂ ವ್ಯಾಹೃತಯಃ ಪ್ರೋಕ್ತಾ ವ್ಯಸ್ತಾಃ ಸಮಸ್ತಾಃ ।**' ಅಥವಾ ಭೂಃ, ಭುವಃ, ಸುವಃ, ಮಹಃ ಇವು ನಾಲ್ಕು ವ್ಯಾಹೃತಿಗಳು – ಶ್ರುತಿ ಹೇಳುತ್ತದೆ – '**ಭೂರ್ಭುವಃ, ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾ ಮಹಸ್ಮೈತಾಂ ಚತುರ್ಥೀಂ ಮಾಹಾಚಮಸ್ಯಃ ಪ್ರವೇದಯತೇ ಮಹ ಇತಿ ।**' (ತೈತ್ತರೀಯ ಉಪನಿಷತ್ತು).

ಆನ್ವೀಕ್ಷಿಕೀ ತ್ರಯೀ ವಾರ್ತಾ ದಂಡನೀತಿಸ್ತಥೈವ ಚ ।
ಏವಂ ವ್ಯಾಹೃತಯಶ್ಚಾಸನ್ಪ್ರಣವೋ ಹ್ಯಸ್ಯ ದಹ್ರತಃ ॥ ೪೪ ॥

ತಸ್ಯೋಷ್ಣಿಗಾಸೀಲ್ಲೋಮಭ್ಯೋ ಗಾಯತ್ರೀ ಚ ತ್ವಚೋ ವಿಭೋಃ ।
ತ್ರಿಷ್ಟುಮ್ಮಾಂಸಾತ್ಸ್ನುತೋಽನುಷ್ಟುಬ್ಜಗತ್ಯಸ್ಥ್ನಃ ಪ್ರಜಾಪತೇಃ ॥ ೪೫ ॥

ಮಜ್ಜಾಯಾಃ ಪಂಕ್ತಿರುತ್ಪನ್ನಾ ಬೃಹತೀ ಪ್ರಾಣತೋಽಭವತ್ ।
ಸ್ಪರ್ಶಸ್ತಸ್ಯಾಭವಜ್ಜೀವಃ ಸ್ವರೋ ದೇಹ ಉದಾಹೃತಃ ॥ ೪೬ ॥

ಊಷ್ಮಾಣಮಿಂದ್ರಿಯಾಣ್ಯಾಹುರಂತಃಸ್ಥಾ ಬಲಮಾತ್ಮನಃ ।
ಸ್ವರಾಃ ಸಪ್ತ ವಿಹಾರೇಣ ಭವಂತಿ ಸ್ಮ ಪ್ರಜಾಪತೇಃ ॥ ೪೭ ॥

ಶಬ್ದಬ್ರಹ್ಮಾತ್ಮನಸ್ತಸ್ಯ ವ್ಯಕ್ತಾವ್ಯಕ್ತಾತ್ಮನಃ ಪರಃ ।
ಬ್ರಹ್ಮಾವಭಾತಿ ವಿತತೋ ನಾನಾಶಕ್ತ್ಯುಪಬೃಂಹಿತಃ ॥ ೪೮ ॥

ತತೋಽಪರಾಮುಪಾದಾಯ ಸ ಸರ್ಗಾಯ ಮನೋ ದಧೇ ।
ಋಷೀಣಾಂ ಭೂರಿವೀರ್ಯಾಣಾಮಪಿ ಸರ್ಗಮವಿಸ್ತೃತಮ್ ॥ ೪೯ ॥

ಜ್ಞಾತ್ವಾ ತದ್ಧೃದಯೇ ಭೂಯಶ್ಚಿಂತಯಾಮಾಸ ಕೌರವ ।
ಅಹೋ ಅದ್ಭುತಮೇತನ್ಮೇ ವ್ಯಾಪೃತಸ್ಯಾಪಿ ನಿತ್ಯದಾ ॥ ೫೦ ॥

ನ ಹ್ಯೇಧಂತೇ ಪ್ರಜಾ ನೂನಂ ದೈವಮತ್ರ ವಿಘಾತಕಮ್ ।
ಏವಂ ಯುಕ್ತಕೃತಸ್ತಸ್ಯ ದೈವಂ ಚಾವೇಕ್ಷತಸ್ತದಾ ॥ ೫೧ ॥

ಕಸ್ಯ ರೂಪಮಭೂದ್ದ್ವೇಧಾ ಯತ್ಕಾಯಮಭಿಚಕ್ಷತೇ ।
ತಾಭ್ಯಾಂ ರೂಪವಿಭಾಗಾಭ್ಯಾಂ ಮಿಥುನಂ ಸಮಪದ್ಯತ ॥ ೫೨ ॥

ಯಸ್ತು ತತ್ರ ಪುಮಾನ್ಸೋಽಭೂನ್ಮನುಃ ಸ್ವಾಯಂಭುವಃ ಸ್ವರಾಟ್ ।
ಸ್ತ್ರೀ ಯಾಽಽಸೀಚ್ಛತರೂಪಾಖ್ಯಾ ಮಹಿಷ್ಯಸ್ಯ ಮಹಾತ್ಮನಃ ॥ ೫೩ ॥

ತದಾ ಮಿಥುನಧರ್ಮೇಣ ಪ್ರಜಾ ಹ್ಯೇಧಾಂಬಭೂವಿರೇ ।
ಸ ಚಾಪಿ ಶತರೂಪಾಯಾಂ ಪಂಚಾಪತ್ಯಾನ್ಯಜೀಜನತ್ ॥ ೫೪ ॥

ನಾಲ್ಕು ಮುಖಗಳಿಂದ ಉತ್ಪನ್ನವಾದುವು. ಅವರ ಹೃದಯಾಕಾಶದಿಂದ ಓಂಕಾರವು ಪ್ರಕಟಗೊಂಡಿತು. ॥ ೪೪ ॥ ಬ್ರಹ್ಮದೇವರ ರೋಮಗಳಿಂದ ಉಷ್ಣಿಕ್, ತ್ವಚೆಯಿಂದ ಗಾಯತ್ರಿ, ಮಾಂಸದಿಂದ ತ್ರಿಷ್ಟುಪ್, ಸ್ನಾಯುಗಳಿಂದ ಅನುಷ್ಟುಪ್, ಅಸ್ಥಿಗಳಿಂದ ಜಗತಿ, ಮಜ್ಜೆಯಿಂದ ಪಂಕ್ತಿ ಮತ್ತು ಪ್ರಾಣಗಳಿಂದ ಬೃಹತಿ – ಎಂಬ ಛಂದಗಳು ಉತ್ಪನ್ನವಾದುವು. ಹೀಗೆಯೇ ಅವರ ಜೀವ ಸ್ಪರ್ಶವರ್ಣ (ಕವರ್ಗಾದಿ ಪಂಚವರ್ಗ) ಮತ್ತು ದೇಹ ಸ್ವರವರ್ಣ (ಅಕಾರಾದಿ) ಗಳೆಂದು ಕರೆಯಲ್ಪಟ್ಟವು. ॥ ೪೫-೪೬ ॥ ಅವರ ಇಂದ್ರಿಯಗಳನ್ನು ಊಷ್ಮವರ್ಣ (ಶ, ಷ, ಸ, ಹ) ಮತ್ತು ಬಲವನ್ನು ಅಂತಸ್ಥವರ್ಣ (ಯ, ರ, ಲ, ವ) ಎಂದು ಹೇಳುತ್ತಾರೆ. ಅವರ ಕ್ರೀಡೆಯಿಂದ ನಿಷಾದ, ಋಷಭ, ಗಾಂಧಾರ, ಷಡ್ಜ, ಮಧ್ಯಮ, ಧೈವತ, ಪಂಚಮ – ಇವು ಏಳು ಸ್ವರಗಳು ಉಂಟಾದುವು. ॥ ೪೭ ॥ ಅಯ್ಯಾ ವಿದುರಾ! ಬ್ರಹ್ಮದೇವರು ಶಬ್ದಬ್ರಹ್ಮಸ್ವರೂಪರಾಗಿ, ವೈಖರೀ ರೂಪದಿಂದ ವ್ಯಕ್ತರಾಗಿಯೂ, ಪರಾರೂಪ (ಓಂಕಾರ) ದಿಂದ ಅವ್ಯಕ್ತರಾಗಿಯೂ ಇದ್ದಾರೆ ಮತ್ತು ಆ ಶಬ್ದಬ್ರಹ್ಮನ ಮೇಲಿರುವ ಹಾಗೂ ಎಲ್ಲೆಡೆಗಳಲ್ಲಿಯೂ ಪರಿಪೂರ್ಣವಾಗಿರುವ ಪರಬ್ರಹ್ಮವು ಅನೇಕ ಪ್ರಕಾರದ ಶಕ್ತಿಗಳಿಂದ ಕೂಡಿ ಇಂದ್ರಾದಿ ದೇವತಾರೂಪಗಳಿಂದ ಬೆಳಗುತ್ತಿದೆ. ॥ ೪೮ ॥

ಎಲೈ ವಿದುರನೇ! ಬ್ರಹ್ಮದೇವರು ಕಾಮಾಸಕ್ತವಾದ ತಮ್ಮ ಮೊದಲನೆಯ ದೇಹವನ್ನು ತ್ಯಜಿಸಿದ ನಂತರ ಬೇರೊಂದು ಶರೀರವನ್ನು ಧರಿಸಿ ವಿಶ್ವವನ್ನು ವಿಸ್ತರಿಸಬೇಕೆಂದು ಯೋಚಿಸಿದರು. ಮರೀಚಿಗಳೇ ಮುಂತಾದ ಮಹಾಶಕ್ತಿಸಂಪನ್ನರಾದ ಋಷಿಗಳಿಂದಲೂ ಕೂಡ ಸೃಷ್ಟಿಯ ವಿಸ್ತಾರವು ಹೆಚ್ಚಾಗಿ ಆಗದೇ ಇದ್ದುದನ್ನು ಕಂಡು ಅವರು ತಮ್ಮ ಮನಸ್ಸಿನಲ್ಲಿ – 'ಏನಿದು ಎಂತಹ ಆಶ್ಚರ್ಯ! ನಾನು ನಿರಂತರವಾಗಿ ಪ್ರಯತ್ನಮಾಡಿದರೂ ಪ್ರಜಾವೃದ್ಧಿಯು ಆಗುತ್ತಿಲ್ಲವಲ್ಲ! ದೈವವೇ ಇದಕ್ಕೆ ಏನೋ ವಿಘ್ನವನ್ನು ತಂದೊಡ್ಡುತ್ತಿದೆ ಎಂದು ಕಾಣುತ್ತದೆ' ಎಂದು ಚಿಂತೆಗೊಳಗಾದರು. ಮಾಡಬೇಕಾದ ಯುಕ್ತವಾದ ಕಾರ್ಯಗಳನ್ನು ಮಾಡುತ್ತಿದ್ದ ಬ್ರಹ್ಮದೇವರು ಹೀಗೆ ದೈವದ ಕುರಿತು ವಿಚಾರಮಾಡುತ್ತಿದ್ದಾಗ ಅಕಸ್ಮಾತ್ತಾಗಿ ಅವರ ಶರೀರದಲ್ಲಿ ಎರಡು ಭಾಗಗಳು ಉಂಟಾದುವು. 'ಕ' ಎಂಬುದು ಬ್ರಹ್ಮದೇವರ ಹೆಸರು. ಅದರಿಂದ ವಿಭಾಗಗೊಂಡಿದ್ದರಿಂದ 'ಕಾಯ' ಎಂದು ಶರೀರಕ್ಕೆ ಹೆಸರಾಯಿತು. ಹೀಗೆ ಒಡೆದ ಅವರ ಶರೀರದ ಎರಡು ಭಾಗಗಳಿಂದ ಒಂದು ಸ್ತ್ರೀ-ಪುರುಷರ ಜೋಡಿ ಪ್ರಕಟವಾಯಿತು. ॥ ೪೯-೫೨ ॥ ಅವುಗಳಲ್ಲಿ ಪುರುಷಭಾಗವು ಸಾಮ್ರಾಟ್ ಸ್ವಾಯಂಭುವ ಮನುವಾಯಿತು. ಸ್ತ್ರೀಭಾಗವು ಅವನ ಸಾಮ್ರಾಜ್ಞೀ ಶತರೂಪಾದೇವಿಯಾಯಿತು. ॥ ೫೩ ॥ ಅಂದಿನಿಂದ ಮಿಥುನಧರ್ಮ (ಸ್ತ್ರೀ-ಪುರುಷ ಸಂಭೋಗ)ದಿಂದ ಪ್ರಜೆಯ ವೃದ್ಧಿಯಾಗತೊಡಗಿತು. ಮಹಾರಾಜ ಸ್ವಾಯಂಭುವ ಮನುವು ಶತರೂಪಾದೇವಿಯಲ್ಲಿ ಐದು ಸಂತಾನಗಳನ್ನು ಪಡೆದನು. ॥ ೫೪ ॥ ಸಾಧು ಶಿರೋಮಣಿಯಾದ ವಿದುರನೇ! ಅವರಲ್ಲಿ ಪ್ರಿಯವ್ರತ

ಪ್ರಿಯವ್ರತೋತ್ತಾನಪಾದೌ ತಿಸ್ರಃ ಕನ್ಯಾಶ್ಚ ಭಾರತ ।
ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ಸತ್ತಮ ॥ ೫೫ ॥

ಮತ್ತು ಉತ್ತಾನಪಾದರೆಂಬ ಇಬ್ಬರು ಪುತ್ರರು ಹಾಗೂ ಆಕೂತಿ, ದೇವಹೂತಿ, ಪ್ರಸೂತಿ ಎಂಬ ಮೂವರು ಪುತ್ರಿಯರು. ॥ ೫೫ ॥

ಆಕೂತಿಂ ರುಚಯೇ ಪ್ರಾದಾತ್ಕರ್ದಮಾಯ ತು ಮಧ್ಯಮಾಮ್ ।
ದಕ್ಷಾಯಾದಾತ್ಪ್ರಸೂತಿಂ ಚ ಯತ ಆಪೂರಿತಂ ಜಗತ್ ॥ ೫೬ ॥

ಮನುವು ಅವರಲ್ಲಿ ಆಕೂತಿಯನ್ನು ರುಚಿ ಎಂಬ ಪ್ರಜಾಪತಿಗೂ, ಮಧ್ಯದ ಮಗಳಾದ ದೇವಹೂತಿಯನ್ನು ಕರ್ದಮ ಪ್ರಜಾಪತಿಗೂ, ಪ್ರಸೂತಿಯನ್ನು ದಕ್ಷಪ್ರಜಾಪತಿಗೂ ಕೊಟ್ಟು ವಿವಾಹಮಾಡಿದರು. ಆ ಮೂರು ಪುತ್ರಿಯರ ಸಂತಾನದಿಂದ ಇಡೀ ಜಗತ್ತೇ ತುಂಬಿ ಹೋಯಿತು. ॥ ೫೬ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ದ್ವಾದಶೋಽಧ್ಯಾಯಃ ॥ ೧೨ ॥**

# ಹದಿಮೂರನೆಯ ಅಧ್ಯಾಯ

## ವರಾಹಾವತಾರದ ಕಥೆ

*ಶ್ರೀಶುಕ ಉವಾಚ*

ನಿಶಾಮ್ಯ ವಾಚಂ ವದತೋ ಮುನೇಃ ಪುಣ್ಯತಮಾಂ ನೃಪ ।
ಭೂಯಃ ಪಪ್ರಚ್ಛ ಕೌರವ್ಯೋ ವಾಸುದೇವಕಥಾದೃತಃ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಮುನಿವರ್ಯ ಶ್ರೀಮೈತ್ರೇಯರ ಮುಖದಿಂದ ಈ ಪರಮ ಪುಣ್ಯಪ್ರದ ಕಥೆಯನ್ನು ಕೇಳಿ ವಿದುರನು ಪುನಃ ಕೇಳಿದನು ; ಏಕೆಂದರೆ ಭಗವಂತನ ಲೀಲಾಕಥೆಗಳಲ್ಲಿ ಅವರಿಗೆ ಅತ್ಯಂತ ಅನುರಾಗ ಉಂಟಾಗಿತ್ತು. ॥ ೧ ॥

*ವಿದುರ ಉವಾಚ*

ಸ ವೈ ಸ್ವಾಯಂಭುವಃ ಸಮ್ರಾಟ್ ಪ್ರಿಯಃ ಪುತ್ರಃ ಸ್ವಯಂಭುವಃ ।
ಪ್ರತಿಲಭ್ಯ ಪ್ರಿಯಾಂ ಪತ್ನೀಂ ಕಿಂ ಚಕಾರ ತತೋ ಮುನೇ ॥ ೨ ॥

**ವಿದುರನು ಕೇಳಿದನು** – ಮುನೀಂದ್ರರೇ! ಬ್ರಹ್ಮದೇವರ ಪ್ರಿಯಪುತ್ರನಾದ ಆ ಸಾಮ್ರಾಟ ಸ್ವಾಯಂಭುವ ಮನುವು ಪ್ರಿಯ ಪತ್ನಿಯಾದ ಶತರೂಪಾದೇವಿಯನ್ನು ಪಡೆದ ಬಳಿಕ ಏನು ಮಾಡಿದನು? ॥ ೨ ॥ ತಾವು ಸಾಧುವರೇಣ್ಯರಾಗಿರುವಿರಿ. ಆದಿ ರಾಜನಾದ ರಾಜರ್ಷಿ ಸ್ವಾಯಂಭುವ ಮನುವಿನ ಪವಿತ್ರ ಚರಿತ್ರೆಯನ್ನು ಹೇಳಿರಿ. ಅವನು ಭಗವಾನ್ ಶ್ರೀವಿಷ್ಣುವಿನ ಶರಣು ಹೊಂದಿದ ಭಕ್ತಾಗ್ರೇಸರನು. ಆದುದರಿಂದ ಅವರ ಚರಿತ್ರೆ ಕೇಳಲು ನನಗೆ ಬಹಳ ಶ್ರದ್ಧೆ ಉಂಟಾಗಿದೆ. ॥ ೩ ॥ ಯಾರ ಹೃದಯದಲ್ಲಿ ಮುಕುಂದನ ಚರಣಾರವಿಂದಗಳು ವಿರಾಜಿಸುತ್ತವೋ, ಅಂತಹ ಭಕ್ತಶ್ರೇಷ್ಠರ ಗುಣಗಳನ್ನು ಶ್ರವಣಮಾಡುವುದೇ ಬಹುಕಾಲ ಶ್ರಮದಿಂದ ಮಾಡಿದ ಶಾಸ್ತ್ರಾಭ್ಯಾಸದ ಪರಮ ಪ್ರಯೋಜನವೆಂದು ಜ್ಞಾನಿಗಳು ಹೇಳುತ್ತಾರೆ. ॥ ೪ ॥

ಚರಿತಂ ತಸ್ಯ ರಾಜರ್ಷೇರಾದಿರಾಜಸ್ಯ ಸತ್ತಮ ।
ಬ್ರೂಹಿ ಮೇ ಶ್ರದ್ದಧಾನಾಯ ವಿಷ್ವಕ್ಸೇನಾಶ್ರಯೋ ಹ್ಯಸೌ ॥ ೩ ॥

ಶ್ರುತಸ್ಯ ಪುಂಸಾಂ ಸುಚಿರಶ್ರಮಸ್ಯ
ನನ್ವಂಜಸಾ ಸೂರಿಭಿರೀಡಿತೋಽರ್ಥಃ ।
ಯತ್ತದ್ಗುಣಾನುಶ್ರವಣಂ ಮುಕುಂದ-
ಪಾದಾರವಿಂದಂ ಹೃದಯೇಷು ಯೇಷಾಮ್ ॥ ೪ ॥

*ಶ್ರೀಶುಕ ಉವಾಚ*

ಇತಿ ಬ್ರುವಾಣಂ ವಿದುರಂ ವಿನೀತಂ
ಸಹಸ್ರಶೀರ್ಷ್ಣಶ್ಚರಣೋಪಧಾನಮ್ ।
ಪ್ರಹೃಷ್ಟ ರೋಮಾ ಭಗವತ್ಕಥಾಯಾಂ
ಪ್ರಣೀಯಮಾನೋ ಮುನಿರಭ್ಯಚಷ್ಟ ॥ ೫ ॥

**ಶ್ರೀಶುಕಮಹರ್ಷಿಗಳು ಹೇಳುತ್ತಾರೆ** – ಎಲೈ ರಾಜೇಂದ್ರಾ! ಸಹಸ್ರಶೀರ್ಷನಾದ ಶ್ರೀಹರಿಯ ಚರಣಾಶ್ರಿತ ಭಕ್ತನಾದ ವಿದುರನು ಹೀಗೆ ಅತ್ಯಂತ ವಿಧೇಯನಾಗಿ ಪ್ರಾರ್ಥಿಸಿದಾಗ, ಭಗವತ್ಕಥಾ ನಿರೂಪಣೆ ಮಾಡಲು ಪ್ರೇರಿತರಾದ ಶ್ರೀಮೈತ್ರೇಯರು ರೋಮಾಂಚಿತರಾಗಿ ಹೇಳತೊಡಗಿದರು. ॥ ೫ ॥

*ಮೈತ್ರೇಯ ಉವಾಚ*

ಯದಾ ಸ್ವಭಾರ್ಯಯಾ ಸಾಕಂ ಜಾತಃ ಸ್ವಾಯಂಭುವೋ ಮನುಃ ।
ಪ್ರಾಂಜಲಿಃ ಪ್ರಣತಶ್ಚೇದಂ ವೇದಗರ್ಭಮಭಾಷತ ॥ ೬ ॥

**ಶ್ರೀಮೈತ್ರೇಯರು ನುಡಿದರು** – ವಿದುರನೇ! ಪತ್ನಿಯೊಡನೆ ಜನಿಸಿದ ಸ್ವಾಯಂಭುವ ಮನುವು ಬ್ರಹ್ಮದೇವರಲ್ಲಿ ವಿನಯದಿಂದ ಕೈಜೋಡಿಸಿಕೊಂಡು ಹೇಳಿದನು – ॥ ೬ ॥

ತ್ವಮೇಕಃ ಸರ್ವಭೂತಾನಾಂ ಜನ್ಮಕೃದ್ವೃತ್ತಿದಃ ಪಿತಾ ।
ಅಥಾಪಿ ನಃ ಪ್ರಜಾನಾಂ ತೇ ಶುಶ್ರೂಷಾ ಕೇನ ವಾ ಭವೇತ್ ॥ ೭ ॥

ತದ್ವಿಧೇಹಿ ನಮಸ್ತುಭ್ಯಂ ಕರ್ಮಸ್ವಿಡ್ಯಾತ್ಮಶಕ್ತಿಷು ।
ಯತ್ಕೃತ್ವೇಹ ಯಶೋ ವಿಷ್ವಗಮುತ್ರ ಚ ಭವೇದ್ಗತಿಃ ॥ ೮ ॥

ಬ್ರಹ್ಮೋವಾಚ

ಪ್ರೀತಸ್ತುಭ್ಯಮಹಂ ತಾತ ಸ್ವಸ್ತಿ ಸ್ತಾದ್ವಾಂ ಕ್ಷಿತೀಶ್ವರ ।
ಯನ್ನಿರ್ವ್ಯಲೀಕೇನ ಹೃದಾ ಶಾಧಿ ಮೇತ್ಯಾತ್ಮನಾರ್ಪಿತಮ್ ॥ ೯ ॥

ಏತಾವತ್ಯಾತ್ಮಜೈರ್ವೀರ ಕಾರ್ಯಾ ಹ್ಯಪಚಿತಿರ್ಗುರೌ ।
ಶಕ್ತ್ಯಾಪ್ರಮತ್ತೈರ್ಗೃಹ್ಯೇತ ಸಾದರಂ ಗತಮತ್ಸರೈಃ ॥ ೧೦ ॥

ಸ ತ್ವಮಸ್ಯಾಮಪತ್ಯಾನಿ ಸದೃಶಾನ್ಯಾತ್ಮನೋ ಗುಣೈಃ ।
ಉತ್ಪಾದ್ಯ ಶಾಸ ಧರ್ಮೇಣ ಗಾಂ ಯಜ್ಞೈಃ ಪುರುಷಂ ಯಜ ॥ ೧೧ ॥

ಪರಂ ಶುಶ್ರೂಷಣಂ ಮಹ್ಯಂ ಸ್ಯಾತ್ಪ್ರಜಾರಕ್ಷಯಾ ನೃಪ ।
ಭಗವಾಂಸ್ತೇ ಪ್ರಜಾಭರ್ತುರ್ಹೃಷೀಕೇಶೋಽನುತುಷ್ಯತಿ ॥ ೧೨ ॥

ಯೇಷಾಂ ನ ತುಷ್ಟೋ ಭಗವಾನ್ಯಜ್ಞಲಿಂಗೋ ಜನಾರ್ದನಃ ।
ತೇಷಾಂ ಶ್ರಮೋ ಹ್ಯಪಾರ್ಥಾಯ ಯದಾತ್ಮಾ ನಾದೃತಃ ಸ್ವಯಮ್ ॥ ೧೩ ॥

ಮನುರುವಾಚ

ಆದೇಶೇಽಹಂ ಭಗವತೋ ವರ್ತೇಯಾಮೀವಸೂದನ ।
ಸ್ಥಾನಂ ತ್ವಿಹಾನುಜಾನೀಹಿ ಪ್ರಜಾನಾಂ ಮಮ ಚ ಪ್ರಭೋ ॥ ೧೪ ॥

ಯದೋಕಃ ಸರ್ವಸತ್ತ್ವಾನಾಂ ಮಹೀ ಮಗ್ನಾ ಮಹಾಂಭಸಿ ।
ಅಸ್ಯಾ ಉದ್ಧರಣೇ ಯತ್ನೋ ದೇವ ದೇವ್ಯಾ ವಿಧೀಯತಾಮ್ ॥ ೧೫ ॥

ಮೈತ್ರೇಯ ಉವಾಚ

ಪರಮೇಷ್ಠೀ ತ್ವಪಾಂ ಮಧ್ಯೇ ತಥಾ ಸನ್ನಾಮವೇಕ್ಷ್ಯ ಗಾಮ್ ।
ಕಥಮೇನಾಂ ಸಮುನ್ನೇಷ್ಯ ಇತಿ ದಧ್ಯೌ ಧಿಯಾ ಚಿರಮ್ ॥ ೧೬ ॥

ತೀರ್ಥರೂಪರೇ! ಸಮಸ್ತ ಪ್ರಾಣಿಗಳಿಗೆ ಜನ್ಮನೀಡುವ ಮತ್ತು ಅವುಗಳಿಗೆ ಜೀವಿಕೆಯನ್ನು ಕಲ್ಪಿಸಿಕೊಡುವ ತಂದೆ ತಾವೇ ಆಗಿದ್ದೀರಿ. ಆದರೂ ತಮ್ಮ ಸಂತಾನವಾದ ನಾವು ಏನು ಮಾಡಿದರೆ ತಮ್ಮ ಸೇವೆಯಾಗುವುದು? ಎಂಬುದನ್ನು ಅಪ್ಪಣೆ ಕೊಡಿಸಿರಿ. ॥ ೭ ॥ ಪೂಜ್ಯಪಾದರೇ! ತಮಗೆ ನಮೋ ನಮಃ. "ಯಾವುದನ್ನು ಮಾಡಿದರೆ ನಮಗೆ ಈ ಲೋಕದಲ್ಲಿ ಒಳ್ಳೆಯ ಯಶಸ್ಸು ಹಾಗೂ ಪರಲೋಕದಲ್ಲಿ ಸದ್ಗತಿ ಉಂಟಾಗುವಂತಹ, ನಾವು ಮಾಡಲು ಶಕ್ಯವಾಗಿರುವ ಕಾರ್ಯವನ್ನು ನಮಗೆ ಅಪ್ಪಣೆ ನೀಡಿರಿ" ಎಂದು ಬೇಡಿಕೊಂಡರು. ॥ ೮ ॥

**ಶ್ರೀಬ್ರಹ್ಮದೇವರು ಹೇಳಿದರು** – ಅಯ್ಯಾ! ಭೂಮೀಶ್ವರನೇ! ನಿಮ್ಮಿಬ್ಬರ ವಿಷಯದಲ್ಲಿ ನಾನು ಬಹಳ ಪ್ರಸನ್ನನಾಗಿದ್ದೇನೆ. ನಿಮಗೆ ಮಂಗಳವಾಗಲಿ. ಏಕೆಂದರೆ, ನಿಷ್ಕಪಟ ಭಾವದಿಂದ ನೀನು 'ನನಗೆ ಆಜ್ಞೆ ಮಾಡಿರಿ' ಎಂದು ಹೇಳಿ ಆತ್ಮಸಮರ್ಪಣ ಮಾಡಿರುವಿ. ॥ ೯ ॥ ವೀರವರನೇ! ಪುತ್ರರಾದವರು ತಮ್ಮ ತಂದೆಯನ್ನು ಹೀಗೆಯೇ ಪೂಜಿಸಬೇಕು. ಬೇರೆಯವರ ಕುರಿತು ಮಾತ್ಸರ್ಯ ಭಾವವನ್ನಿರಿಸದೆ ತಂದೆಯ ಆಜ್ಞೆಯನ್ನು ಆದರಪೂರ್ವಕವಾಗಿ ಸ್ವೀಕರಿಸಿ, ಎಚ್ಚರಿಕೆಯಿಂದ ಅದನ್ನು ಯಥಾಶಕ್ತಿ ನಡೆಸಿಕೊಡುವುದೇ ಅವರಿಗೆ ಉಚಿತವಾದ ಕರ್ತವ್ಯವಾಗಿದೆ. ॥ ೧೦ ॥ ನೀನು ನಿನ್ನ ಪತ್ನಿಯಾದ ಈ ಶತರೂಪೆಯಿಂದ ತನಗೆ ಸಮಾನರಾಗಿರುವ ಸದ್ಗುಣೀ ಸಂತಾನವನ್ನು ಪಡೆದು, ಧರ್ಮದಿಂದ ಪೃಥ್ವಿಯನ್ನು ಪಾಲಿಸುತ್ತಾ, ಯಜ್ಞಗಳ ಮೂಲಕ ಶ್ರೀಹರಿಯನ್ನು ಆರಾಧಿಸುತ್ತಾ ಇರು. ॥ ೧೧ ॥ ರಾಜನೇ! ನಿನ್ನ ಪ್ರಜಾಪಾಲನೆಯಿಂದ ನನ್ನ ದೊಡ್ಡದಾದ ಸೇವೆಯಾದಂತಾದೀತು ಮತ್ತು ನೀನು ಪ್ರಜೆಗಳನ್ನು ಪಾಲಿಸುವುದನ್ನು ನೋಡಿ ಭಗವಾನ್ ಶ್ರೀಹರಿಯು ಪ್ರಸನ್ನ ನಾಗು ವನು. ಯಜ್ಞಮೂರ್ತಿಯಾದ ಭಗವಾನ್ ಜನಾರ್ದನನು ಪ್ರಸನ್ನನಾಗದಿರುವವರ ಶ್ರಮವೆಲ್ಲ ವ್ಯರ್ಥವೇ ಸರಿ. ಏಕೆಂದರೆ, ಅವರು ತಮ್ಮ ಆತ್ಮವನ್ನೇ ಅನಾದರ ಮಾಡಿಕೊಂಡಂತೆ ಆಗುತ್ತದೆ. ॥ ೧೨-೧೩ ॥

**ಮನುಮಹಾರಾಜನೆಂದ** – ಪಾಪವಿನಾಶಕ ಪಿತನೇ! ಪೂಜ್ಯರಾದ ತಮ್ಮ ಅಣತಿಯನ್ನು ನಾನು ಶಿರಸಾವಹಿಸಿ ಪಾಲಿಸುತ್ತೇನೆ. ಆದರೆ ತಾವು ಈ ಜಗತ್ತಿನಲ್ಲಿ ನಮಗೂ, ನನ್ನ ಭಾವೀ ಪ್ರಜೆಗಳಿಗೆ ಇರಲು ಸ್ಥಾನವನ್ನು ಅನುಗ್ರಹಿಸಿಕೊಡಬೇಕು. ॥ ೧೪ ॥ ದೇವಾ! ಸಮಸ್ತ ಜೀವಿಗಳಿಗೂ ನಿವಾಸಸ್ಥಾನವಾದ ಪೃಥಿವಿಯು ಈಗ ಪ್ರಳಯಜಲದಲ್ಲಿ ಮುಳುಗಿಹೋಗಿದೆ. ಆ ಭೂಮಿಯನ್ನು ಮೇಲಕ್ಕೆತ್ತಲು ತಾವು ಪ್ರಯತ್ನಿಸಬೇಕು, ಎಂದು ಪ್ರಾರ್ಥಿಸಿಕೊಂಡನು. ॥ ೧೫ ॥

**ಶ್ರೀಮೈತ್ರೇಯರು ಹೇಳುತ್ತಿದ್ದಾರೆ** – ವಿದುರಾ! ಭೂಮಿಯು ಹೀಗೆ ಆಳವಾದ ನೀರಿನಲ್ಲಿ ಮುಳುಗಿ ಹೋಗಿರುವುದನ್ನು ಕಂಡು – 'ಇದನ್ನು ಹೇಗೆ ಮೇಲಕ್ಕೆ ಎತ್ತುವುದು?' ಎಂದು ಬ್ರಹ್ಮದೇವರು ಬಹಳ ಹೊತ್ತು ಚಿಂತಿಸತೊಡಗಿದರು. ॥ ೧೬ ॥ ನಾನು ಲೋಕಸೃಷ್ಟಿಯಲ್ಲಿ ತೊಡಗಿದ್ದಾಗ ಭೂಮಿಯು ನೀರಿನಲ್ಲಿ ಮುಳುಗಿ ರಸಾತಳಕ್ಕೆ ಹೋಯಿತು. ಸೃಷ್ಟಿಯನ್ನು ಮಾಡಲು ನೇಮಕಗೊಂಡಿರುವ

ಸೃಜತೋ ಮೇ ಕ್ಷಿತಿರ್ವಾರ್ಭಿಃ ಪ್ಲಾವ್ಯಮಾನಾ ರಸಾಂ ಗತಾ ।
ಅಥಾತ್ರ ಕಿಮನುಷ್ಠೇಯಮಸ್ಮಾಭಿಃ ಸರ್ಗಯೋಜಿತೈಃ ।
ಯಸ್ಯಾಹಂ ಹೃದಯಾದಾಸಂ ಸ ಈಶೋ ವಿದಧಾತು ಮೇ ॥ ೧೭ ॥

ಇತ್ಯಭಿಧ್ಯಾಯತೋ ನಾಸಾವಿವರಾತ್ಸಹಸಾನಘ ।
ವರಾಹತೋಕೋ ನಿರಗಾದಂಗುಷ್ಠಪರಿಮಾಣಕಃ ॥ ೧೮ ॥

ತಸ್ಯಾಭಿಪಶ್ಯತಃ ಖಸ್ಥಃ ಕ್ಷಣೇನ ಕಿಲ ಭಾರತ ।
ಗಜಮಾತ್ರಃ ಪ್ರವವೃಧೇ ತದದ್ಭುತಮಭೂನ್ಮಹತ್ ॥ ೧೯ ॥

ಮರೀಚಿಪ್ರಮುಖೈರ್ವಿಪ್ರೈಃ ಕುಮಾರೈರ್ಮನುನಾ ಸಹ ।
ದೃಷ್ಟ್ವಾ ತತ್ಸೌಕರಂ ರೂಪಂ ತರ್ಕಯಾಮಾಸ ಚಿತ್ರಧಾ ॥ ೨೦ ॥

ಕಿಮೇತತ್ಸೌಕರವ್ಯಾಜಂ ಸತ್ತ್ವಂ ದಿವ್ಯಮವಸ್ಥಿತಮ್ ।
ಅಹೋ ಬತಾಶ್ಚರ್ಯಮಿದಂ ನಾಸಾಯಾ ಮೇ ವಿನಿಸ್ಸೃತಮ್ ॥ ೨೧ ॥

ದೃಷ್ಟೋಽಂಗುಷ್ಠ ಶಿರೋಮಾತ್ರಃ ಕ್ಷಣಾದ್ಗಂಡ ಶಿಲಾಸಮಃ ।
ಅಪಿ ಸ್ವಿದ್ಭಗವಾನೇಷ ಯಜ್ಞೋ ಮೇ ಖೇದಯನ್ಮನಃ ॥ ೨೨ ॥

ಇತಿ ಮೀಮಾಂಸತಸ್ತಸ್ಯ ಬ್ರಹ್ಮಣಃ ಸಹ ಸೂನುಭಿಃ ।
ಭಗವಾನ್ಯಜ್ಞ ಪುರುಷೋ ಜಗರ್ಜಾಗೇಂದ್ರಸನ್ನಿಭಃ ॥ ೨೩ ॥

ಬ್ರಹ್ಮಾಣಂ ಹರ್ಷಯಾಮಾಸ ಹರಿಸ್ತಾಂಶ್ಚ ದ್ವಿಜೋತ್ತಮಾನ್ ।
ಸ್ವಗರ್ಜಿತೇನ ಕಕುಭಃ ಪ್ರತಿಸ್ವನಯತಾ ವಿಭುಃ ॥ ೨೪ ॥

ನಿಶಮ್ಯ ತೇ ಘರ್ಘರಿತಂ ಸ್ವಖೇದ-
ಕ್ಷಯಿಷ್ಣು ಮಾಯಾಮಯಸೂಕರಸ್ಯ ।
ಜನಸ್ತಪಃಸತ್ಯನಿವಾಸಿನಸ್ತೇ
ತ್ರಿಭಿಃ ಪವಿತ್ರೈರ್ಮುನಯೋಽಗೃಣನ್ ಸ್ಮ ॥ ೨೫ ॥

ತೇಷಾಂ ಸತಾಂ ವೇದವಿತಾನಮೂರ್ತಿ-
ರ್ಬ್ರಹ್ಮಾವಧಾರ್ಯಾತ್ಮಗುಣಾನುವಾದಮ್ ।
ವಿನದ್ಯ ಭೂಯೋ ವಿಬುಧೋದಯಾಯ
ಗಜೇಂದ್ರಲೀಲೋ ಜಲಮಾವಿವೇಶ ॥ ೨೬ ॥

ಉತ್ಕ್ಷಿಪ್ತವಾಲಃ ಖಚರಃ ಕಠೋರಃ
ಸಟಾ ವಿಧುನ್ವನ್ ಖರರೋಮಶತ್ವಕ್ ।
ಖುರಾಹತಾಭ್ರಃ ಸಿತದಂಷ್ಟ್ರ ಈಕ್ಷಾ-
ಜ್ಯೋತಿರ್ಬಭಾಸೇ ಭಗವಾನ್ಮಹೀಧ್ರಃ ॥ ೨೭ ॥

ನಾನು ಈಗ ಏನು ಮಾಡುವುದು ? 'ಯಾರ ಸಂಕಲ್ಪದಿಂದ ನಾನು ಜನಿಸಿದೆನೋ, ಆ ಸರ್ವೇಶ್ವರನೇ ನನ್ನ ಈ ಕೆಲಸ ವನ್ನು ನಡೆಸಿಕೊಡಬೇಕು' ಎಂದು ಅವರು ಯೋಚಿಸಿದರು. ॥ ೧೭ ॥

ಪುಣ್ಯಾತ್ಮನಾದ ವಿದುರನೇ! ಬ್ರಹ್ಮದೇವರು ಹೀಗೆ ಚಿಂತಿಸು ತ್ತಿರುವಂತೆಯೇ ಅವರ ಮೂಗಿನ ಹೊಳ್ಳೆಯಿಂದ ಇದ್ದಕ್ಕಿದ್ದಂತೆ ಹೆಬ್ಬೆರಳಿನ ಗಾತ್ರದ ಒಂದು ಹಂದಿಯ ಮರಿಯು ಹೊರಬಂತು. ॥ ೧೮ ॥ ಆಶ್ಚರ್ಯವೋ ಆಶ್ಚರ್ಯ! ಆಕಾಶದಲ್ಲಿ ನಿಂತುಕೊಂಡ ಆ ಹಂದಿಯ ಮರಿಯು ಬ್ರಹ್ಮದೇವರು ನೋಡು-ನೋಡುತ್ತಿರು ವಂತೆಯೇ ಒಂದು ಕ್ಷಣದಲ್ಲಿ ದೊಡ್ಡ ಆನೆಯ ಗಾತ್ರಕ್ಕೆ ಸಮವಾಗಿ ಬೆಳೆದುಬಿಟ್ಟಿತು. ॥ ೧೯ ॥ ಆ ಬೃಹದಾಕಾರದ ವರಾಹಮೂರ್ತಿ ಯನ್ನು ಕಂಡು, ಮರೀಚಿಗಳೇ ಮುಂತಾದ ಮುನಿಗಳು, ಸನಕಾದಿ ಗಳು, ಸ್ವಾಯಂಭುವ ಮನುವು ಮುಂತಾದವರ ಜತೆಗೂಡಿ ಬ್ರಹ್ಮ ದೇವರು ಬಗೆ-ಬಗೆಯಾಗಿ ತರ್ಕಿಸತೊಡಗಿದರು. ॥ ೨೦ ॥ 'ಅಬ್ಬಾ! ಹಂದಿಯ ರೂಪದಲ್ಲಿ ಇಲ್ಲಿ ಪ್ರಕಟವಾಗಿರುವ ಈ ದಿವ್ಯ ಪ್ರಾಣಿಯು ಯಾವುದು ? ಎಂತಹ ಆಶ್ಚರ್ಯ ! ಇದು ಈಗತಾನೇ ನನ್ನ ಮೂಗಿನಿಂದ ಹೊರಬಂದಿತಲ್ಲ! ॥ ೨೧ ॥ ಮೊದಲು ಒಂದು ಹೆಬ್ಬೆರಳಿನ ತುದಿಯಷ್ಟು ಗಾತ್ರವಿದ್ದು ಈಗ ಒಂದು ಕ್ಷಣದಲ್ಲಿ ಭಾರೀದೊಡ್ಡ ಬಂಡೆಯಷ್ಟು ಬೆಳೆದುಬಿಟ್ಟಿದೆಯಲ್ಲ! ನಿಜವಾಗಿ ಯಜ್ಞಮೂರ್ತಿಯಾದ ಶ್ರೀಭಗವಂತನೇ ನಮ್ಮ ಮನಸ್ಸನ್ನು ಹೀಗೆ ಮರುಳುಗೊಳಿಸುತ್ತಿರಬೇಕು !' ಎಂದು ಚಿಂತಿಸಿದರು. ॥ ೨೨ ॥ ಬ್ರಹ್ಮದೇವರು ಮತ್ತು ಅವರ ಪುತ್ರರು ಹೀಗೆ ಯೋಚಿಸುತ್ತಿರು ವಂತೆಯೇ ಭಗವಾನ್ ಯಜ್ಞಪುರುಷನು ಮಹಾಪರ್ವತಾಕಾರ ವನ್ನು ತಳೆದು ಗರ್ಜಿಸತೊಡಗಿದನು. ॥ ೨೩॥ ಸರ್ವಶಕ್ತನಾದ ಶ್ರೀಹರಿಯು ತನ್ನ ಗರ್ಜನೆಯಿಂದ ಎಲ್ಲ ದಿಕ್ಕುಗಳನ್ನು ಪ್ರತಿಧ್ವನಿ ಸುವಂತೆ ಮಾಡಿ ಬ್ರಹ್ಮದೇವರನ್ನು ಮತ್ತು ಬ್ರಾಹ್ಮಣಶ್ರೇಷ್ಠರನ್ನು ಸಂತೋಷಗೊಳಿಸಿದನು. ॥ ೨೪॥ ತಮ್ಮ ಖೇದವನ್ನು ನಿವಾರಿಸು ತ್ತಿದ್ದ ಆ ಮಾಯಾವರಾಹನ ಘುರ್ಘುರ ಧ್ವನಿಯನ್ನು ಕೇಳಿ ಜನೋಲೋಕ, ತಪೋಲೋಕ ಮತ್ತು ಸತ್ಯಲೋಕ ನಿವಾಸಿಗಳಾದ ಮುನಿಗಳು ಮೂರು ವೇದಗಳ ಪವಿತ್ರವಾದ ಮಂತ್ರಗಳಿಂದ ಅವನನ್ನು ಸ್ತುತಿಸತೊಡಗಿದರು. ॥ ೨೫ ॥ ಭಗವಂತನು ವೇದ ಯಜ್ಞಸ್ವರೂಪನಲ್ಲವೇ ! ವೇದಮಂತ್ರಸಮೂಹ ಪ್ರತಿಪಾದ್ಯ ನಲ್ಲವೇ ! ಆ ಮುನೀಶ್ವರರು ಮಾಡಿದ ಸ್ತುತಿಯನ್ನು ವೇದರೂಪ ವೆಂದು ತಿಳಿದು ಭಗವಂತನಿಗೆ ತುಂಬಾ ಸಂತೋಷವಾಯಿತು. ಮತ್ತೆ ಪುನಃ ಒಮ್ಮೆ ಗರ್ಜಿಸಿ ದೇವತೆಗಳ ಹಿತಕ್ಕಾಗಿ ಗಜರಾಜನಂತೆ ಕ್ರೀಡಿಸುತ್ತಾ ಜಲರಾಶಿಯನ್ನು ಪ್ರವೇಶಿಸಿಬಿಟ್ಟನು. ॥ ೨೬ ॥ ಆ ವರಾಹರೂಪನಾದ ಭಗವಂತನು ಮೊದಲು ಬಾಲವನ್ನು ಮೇಲಕ್ಕೆತ್ತಿ ಅತಿವೇಗದಿಂದ ಆಕಾಶಕ್ಕೆ ಜಿಗಿದು, ಕುತ್ತಿಗೆಯ ಕೂದಲುಗಳನ್ನು ಕೆದರಿಕೊಂಡು, ಗೊರಸುಗಳ ಒಡೆತದಿಂದ ಮೋಡಗಳನ್ನು ಚದು ರಿಸತೊಡಗಿದನು. ಕಠೋರವಾದ ದೇಹ, ತೊಗಲಿನ ಮೇಲೆ ಕೆದರಿದ್ದ ಒರಟಾದ ಮೈಗೂದಲುಗಳು, ಬಿಳುಪಾದ ಕೋರೆದಾಡೆ, ಕಣ್ಣುಗಳು ಕಾರುತ್ತಿದ್ದ ತೇಜಸ್ಸು – ಇವುಗಳಿಂದ ಮೆರೆಯುತ್ತಿದ್ದ ಮಹಾವರಾಹದ ಶೋಭೆ ಅವರ್ಣನೀಯವಾಗಿತ್ತು. ॥ ೨೭ ॥

ಘ್ರಾಣೇನ ಪೃಥ್ವ್ಯಾಃ ಪದವೀಂ ವಿಜಿಘ್ರನ್
ಕ್ರೋಡಾಪದೇಶಃ ಸ್ವಯಮಧ್ವರಾಂಗಃ ।
ಕರಾಲದಂಷ್ಟ್ರೋಽಪ್ಯಕರಾಲದೃಗ್ಭ್ಯಾ-
ಮುದ್ವೀಕ್ಷ್ಯ ವಿಪ್ರಾನ್ಗೃಣತೋಽವಿಶತ್ಕಮ್ ॥ ೨೮ ॥

ಸ ವಜ್ರಕೂಟಾಂಗ ನಿಪಾತವೇಗ-
ವಿಶೀರ್ಣಕುಕ್ಷಿಃ ಸ್ತನಯನ್ನುದನ್ವಾನ್ ।
ಉತ್ಸೃಷ್ಟದೀರ್ಘೋರ್ಮಿಭುಜೈರಿವಾರ್ತ-
ಶ್ಚುಕ್ರೋಶ ಯಜ್ಞೇಶ್ವರ ಪಾಹಿ ಮೇತಿ ॥ ೨೯ ॥

ಖುರೈಃ ಕ್ಷುರಪ್ರೈರ್ದರಯಂಸ್ತದಾಽಽಪ
ಉತ್ಪಾರಪಾರಂ ತ್ರಿಪರೂ ರಸಾಯಾಮ್ ।
ದದರ್ಶ ಗಾಂ ತತ್ರ ಸುಷುಪ್ಸುರಗ್ರೇ
ಯಾಂ ಜೀವಧಾನೀಂ ಸ್ವಯಮಭ್ಯಧತ್ತ ॥ ೩೦ ॥

ಸ್ವದಂಷ್ಟ್ರಯೋದ್ಧೃತ್ಯ ಮಹೀಂ ನಿಮಗ್ನಾಂ
ಸ ಉತ್ಥಿತಃ ಸಂರುರುಚೇ ರಸಾಯಾಃ ।
ತತ್ರಾಪಿ ದೈತ್ಯಂ ಗದಯಾಽಽಪತಂತ
ಸುನಾಭಸಂದೀಪಿತತೀವ್ರಮನ್ಯುಃ ॥ ೩೧ ॥

ಜಘಾನ ರುಂಧಾನಮಸಹ್ಯವಿಕ್ರಮಂ
ಸ ಲೀಲಯೇಭಂ ಮೃಗರಾಡಿವಾಂಭಸಿ ।
ತದ್ರಕ್ತಪಂಕಾಂಕಿತಗಂಡತುಂಡೋ
ಯಥಾ ಗಜೇಂದ್ರೋ ಜಗತೀಂ ವಿಭಿಂದನ್ ॥ ೩೨ ॥

ತಮಾಲನೀಲಂ ಸಿತದಂತಕೋಟ್ಯಾ
ಕ್ಷ್ಮಾಮುತ್ಕ್ಷಿಪಂತಂ ಗಜಲೀಲಯಾಂಗ ।
ಪ್ರಜ್ಞಾಯ ಬದ್ಧಾಂಜಲಯೋಽನುವಾಕೈ-
ರ್ವಿರಿಂಚಿಮುಖ್ಯಾ ಉಪತಸ್ಥುರೀಶಮ್ ॥ ೩೩ ॥

*ಋಷಯ ಊಚುಃ*

ಜಿತಂ ಜಿತಂ ತೇಽಜಿತ ಯಜ್ಞಭಾವನ
ತ್ರಯೀಂ ತನುಂ ಸ್ವಾಂ ಪರಿಧುನ್ವತೇ ನಮಃ ।
ಯದ್ರೋಮಗರ್ತೇಷು ನಿಲಿಲ್ಯುರಧ್ವರಾ-
ಸ್ತಸ್ಮೈ ನಮಃ ಕಾರಣಸೂಕರಾಯ ತೇ ॥ ೩೪ ॥

ಭಗವಂತನು ಸ್ವಯಂ ಯಜ್ಞಪುರುಷನಾಗಿದ್ದರೂ ಸೂಕರರೂಪವನ್ನು ಧರಿಸಿದ್ದರಿಂದ ತನ್ನ ಮೂಗಿನಿಂದ ಭೂಮಿಯ ಮಾರ್ಗವನ್ನು ಮೂಸಿ-ಮೂಸಿ ನೋಡುತ್ತಿದ್ದನು. ಅವನ ಕೋರೆದಾಡೆಗಳು ತುಂಬಾ ಭೀಕರವಾಗಿದ್ದುವು, ಕಠೋರವಾಗಿದ್ದುವು. ಆದರೂ ತನ್ನನ್ನು ಸ್ತುತಿಸುತ್ತಿದ್ದ ಋಷಿಗಳ ವಿಷಯದಲ್ಲಿ ಅವನ ದೃಷ್ಟಿಯು ಪ್ರಸನ್ನವಾಗಿದ್ದು, ತನ್ನ ಸೌಮ್ಯವಾದ ದೃಷ್ಟಿಪಾತದಿಂದ ಅವರನ್ನು ದಿಟ್ಟಿಸುತ್ತಾ, ಅನುಗ್ರಹಿಸುತ್ತಾ ಜಲದಲ್ಲಿ ಪ್ರವೇಶಮಾಡಿಬಿಟ್ಟನು. ॥ ೨೮ ॥ ವಜ್ರಮಯವಾದ ಪರ್ವತದ ಶಿಖರದಂತೆ ಕಠೋರವಾಗಿದ್ದ ಅವನ ಶ್ರೀದೇಹವು ನೀರಿನಲ್ಲಿ ಬಿದ್ದೊಡನೆಯೇ ಅದರ ರಭಸದಿಂದ ಸಮುದ್ರದ ಹೊಟ್ಟೆಯು ಒಡೆದುಹೋದಂತಾಗಿ ಗುಡುಗು-ಸಿಡಿಲುಗಳಂತೆ ಭಯಂಕರ ಶಬ್ದವುಂಟಾಯಿತು. ಸಮುದ್ರವು ತನ್ನ ಉಕ್ಕೇರಿದ ತರಂಗಗಳೆಂಬ ಭುಜಗಳನ್ನು ಮೇಲಕ್ಕೆತ್ತಿಕೊಂಡು ಆರ್ತಸ್ವರದಿಂದ ಓ ಯಜ್ಞೇಶ್ವರನೇ! ನನ್ನನ್ನು ಕಾಪಾಡು! ಕಾಪಾಡು! ಎಂದು ಮೊರೆಯಿಡುತ್ತದೋ ಎಂಬಂತೆ ಕಾಣುತ್ತಿತ್ತು. ॥ ೨೯ ॥ ಆಗ ಭಗವಾನ್ ಯಜ್ಞವರಾಹನು ಬಾಣ ಸದೃಶವಾಗಿದ್ದ ಚೂಪಾದ ತನ್ನ ಗೊರಸುಗಳಿಂದ ಜಲವನ್ನು ಸೀಳುತ್ತಾ ಆ ಜಲರಾಶಿಯ ಆಚೆಯ ದಡವನ್ನು (ತಳಭಾಗವನ್ನು) ತಲುಪಿದನು. ಅಲ್ಲಿ ರಸಾತಳದಲ್ಲಿ ಅವನು ಪ್ರಳಯಸಮಯದಲ್ಲಿ ತಾನು ಪವಡಿಸಲು ತೊಡಗಿದಾಗ ತನ್ನ ಹೊಟ್ಟೆಯಲ್ಲಿ ಹಿಂದೆ ಲಯಗೊಳಿಸಿಕೊಂಡಿದ್ದ ಮತ್ತು ಸಮಸ್ತ ಜೀವರಾಶಿಗಳಿಗೂ ಆಶ್ರಯವಾಗಿರುವ ಭೂಮಿಯು ಇರುವುದನ್ನು ನೋಡಿದನು. ॥ ೩೦ ॥

ಮತ್ತೆ ಭಗವಂತನು ನೀರಿನಲ್ಲಿ ಮುಳುಗಿಹೋಗಿದ್ದ ಆ ಭೂಮಿಯನ್ನು ತನ್ನ ಕೋರೆದಾಡೆಗಳಿಂದ ಎತ್ತಿಕೊಂಡು ಪಾತಾಳದಿಂದ ಮೇಲಕ್ಕೆ ಎದ್ದುಬಂದನು. ಆಗ ಆತನ ಕಾಂತಿಯು ಅತ್ಯಂತ ದರ್ಶನೀಯವಾಗಿತ್ತು. ನೀರಿನಿಂದ ಮೇಲಕ್ಕೆ ಎದ್ದು ಬರುತ್ತಿರುವಾಗ ತನ್ನನ್ನು ಎದುರಿಸಿ ಗದೆಯಿಂದ ಆಕ್ರಮಣಮಾಡಿದ ಹಿರಣ್ಯಾಕ್ಷನ ಮೇಲೆ ಸ್ವಾಮಿಗೆ ಸುದರ್ಶನಚಕ್ರದಿಂದ ಉದ್ದೀಪನಗೊಂಡಂತೆ ತೀಕ್ಷ್ಣವಾದ ಕ್ರೋಧವು ಕೆರಳಿತು. ಆ ಅಸುರನು ಮಹಾಪರಾಕ್ರಮಿಯಾಗಿದ್ದರೂ ಸಿಂಹವು ಆನೆಯನ್ನು ಕೊಂದುಬಿಡುವಂತೆ ಸ್ವಾಮಿಯು ಆತನನ್ನು ಲೀಲಾಜಾಲವಾಗಿ ಜಲದಲ್ಲೇ ಸಂಹರಿಸಿಬಿಟ್ಟನು. ಆಗ ಭಗವಂತನ ಗಂಡಸ್ಥಳ ಮತ್ತು ಮುಖವೂ ದೈತ್ಯನ ರಕ್ತದಿಂದ ನೆನೆದು ಕೆಂಪಾಗಿದ್ದರಿಂದ ಆತನು ಕೆಂಪುಮಣ್ಣಿನಲ್ಲಿ ಮಣ್ಣುಸೀಳುವ ಆಟವನ್ನಾಡಿ ಬಂದ ಗಜರಾಜನಂತೆ ರಾರಾಜಿಸುತ್ತಿದ್ದನು. ॥ ೩೧-೩೨ ॥ ಅಯ್ಯಾ! ಗಜರಾಜನು ತನ್ನ ದಂತಗಳ ಮೇಲೆ ಕಮಲಪುಷ್ಪವನ್ನು ಎತ್ತಿ ಧರಿಸಿದಂತೆ ಸ್ವಾಮಿಯು ತನ್ನ ಬಿಳಿಯ ದಂತಗಳ ತುದಿಯಲ್ಲಿ ಭೂಮಿಯನ್ನು ಎತ್ತಿ ಹಿಡಿದಿದ್ದನು. ಆತನ ದಿವ್ಯದೇಹವು ಹೊಂಗೆಯ ಮರದಂತೆ ಶ್ಯಾಮಲವರ್ಣದಿಂದ ಕಂಗೊಳಿಸುತ್ತಿತ್ತು. ಆಗ ಬ್ರಹ್ಮದೇವರೂ, ಮರೀಚಿಗಳೇ ಮುಂತಾದ ಮಹರ್ಷಿಗಳು ಈತನು ಭಗವಂತನೇ ಆಗಿದ್ದಾನೆಂದು ಗುರುತಿಸಿ, ಕೈಜೋಡಿಸಿಕೊಂಡು ವೇದಾರ್ಥಗರ್ಭಿತವಾದ ವಾಕ್ಯಗಳಿಂದ ಆತನನ್ನು ಹೀಗೆ ಸ್ತೋತ್ರಮಾಡತೊಡಗಿದರು. ॥ ೩೩ ॥

**ಋಷಿಗಳು ಹೇಳುತ್ತಾರೆ** – ಅಜಿತಮೂರ್ತಿಯಾದ ಭಗವಂತಾ! ನಿನಗೆ ಜಯವಾಗಲಿ! ಜಯವಾಗಲಿ! ಎಲ್ಲರನ್ನೂ ಜಯಿಸಿದವನೂ, ಯಾರಿಗೂ ಸೋಲದವನೂ ನೀನು.

ರೂಪಂ ತವೈತನ್ನನು ದುಷ್ಕೃತಾತ್ಮನಾಂ
ದುರ್ದರ್ಶನಂ ದೇವ ಯದಧ್ವರಾತ್ಮಕಮ್ ।
ಛಂದಾಂಸಿ ಯಸ್ಯ ತ್ವಚಿ ಬರ್ಹಿರೋಮ-
ಸ್ವಾಜ್ಯಂ ದೃಶಿ ತ್ವಂಘ್ರಿಷು ಚಾತುರ್ಹೋತ್ರಮ್ ॥ ೩೫ ॥

ಸ್ರುಕ್ತುಂಡ ಆಸೀತ್ಸ್ರುವ ಈಶ ನಾಸಯೋ-
ರಿಡೋದರೇ ಚಮಸಾಃ ಕರ್ಣರಂಧ್ರೇ ।
ಪ್ರಾಶಿತ್ರಮಾಸ್ಯೇ ಗ್ರಸನೇ ಗ್ರಹಾಸ್ತು ತೇ
ಯಚ್ಚರ್ವಣಂ ತೇ ಭಗವನ್ನಗ್ನಿಹೋತ್ರಮ್ ॥ ೩೬ ॥

ದೀಕ್ಷಾನುಜನ್ಮೋಪಸದಃ ಶಿರೋಧರಂ
ತ್ವಂ ಪ್ರಾಯಣೀಯೋದಯನೀಯದಂಷ್ಟ್ರಃ ।
ಜಿಹ್ವಾ ಪ್ರವರ್ಗ್ಯಸ್ತವ ಶೀರ್ಷಕಂ ಕ್ರತೋಃ
ಸಭ್ಯಾವಸಥ್ಯಂ ಚಿತಯೋಽಸವೋ ಹಿ ತೇ ॥ ೩೭ ॥

ಸೋಮಸ್ತು ರೇತಃ ಸವನಾನ್ಯವಸ್ಥಿತಿಃ
ಸಂಸ್ಥಾವಿಭೇದಾಸ್ತವ ದೇವ ಧಾತವಃ ।
ಸತ್ರಾಣಿ ಸರ್ವಾಣಿ ಶರೀರಸಂಧಿ-
ಸ್ತ್ವಂ ಸರ್ವಯಜ್ಞಕ್ರತುರಿಷ್ಟಿಬಂಧನಃ ॥ ೩೮ ॥

ನಮೋ ನಮಸ್ತೇಽಖಿಲಮಂತ್ರ ದೇವತಾ-
ದ್ರವ್ಯಾಯ ಸರ್ವಕ್ರತವೇ ಕ್ರಿಯಾತ್ಮನೇ ।
ವೈರಾಗ್ಯಭಕ್ತ್ಯಾತ್ಮಜಯಾನುಭಾವಿತ-
ಜ್ಞಾನಾಯ ವಿದ್ಯಾಗುರವೇ ನಮೋ ನಮಃ ॥ ೩೯ ॥

ಓ ಯಜ್ಞಪತಿಯೇ! ಮೂರುವೇದಗಳ ರೂಪವಾದ ದಿವ್ಯ ಮಂಗಳ ವಿಗ್ರಹವನ್ನು ಓಲಾಡಿಸುತ್ತಾ ಕಂಗೊಳಿಸುವ ನಿನಗೆ ನಮಸ್ಕಾರವು. ಸಮಸ್ತ ಯಜ್ಞಗಳು ನಿನ್ನ ರೋಮಕೂಪದಲ್ಲಿ ಅಡಗಿವೆ. ನೀನು ಪೃಥಿವಿಯನ್ನು ಉದ್ಧಾರಮಾಡಲಿಕ್ಕಾಗಿಯೇ ಈ ಸೂಕರ ರೂಪವನ್ನು ಧರಿಸಿರುವೆ. ನಿನಗೆ ನಮಸ್ಕಾರವು. ॥ ೩೪ ॥ ದೇವಾ! ದುರಾಚಾರಿಗಳಿಗೆ ನಿನ್ನ ಈ ದಿವ್ಯಮೂರ್ತಿಯ ದರ್ಶನ ವಾಗುವುದು ಬಹಳ ಕಷ್ಟವು. ಏಕೆಂದರೆ, ಇದು ಯಜ್ಞರೂಪವೇ ಆಗಿದೆ. ಇದರ ತೊಗಲಿನಲ್ಲಿ ಗಾಯತ್ರಿಯೇ ಮುಂತಾದ ಛಂದಸ್ಸುಗಳೂ, ರೋಮಾ ವಳಿಯಲ್ಲಿ ದರ್ಭೆಗಳೂ, ನೇತ್ರಗಳಲ್ಲಿ (ಯಜ್ಞದ ಹವಿಸ್ಸಾದ) ತುಪ್ಪವೂ,. ನಾಲ್ಕು ಚರಣಗಳಲ್ಲಿ ಅಧ್ವರ್ಯು, ಉದ್ಗಾತೃ, ಹೋತೃ ಮತ್ತು ಬ್ರಹ್ಮಾ – ಎಂಬ ನಾಲ್ಕು ಋತ್ವಿಜರೂ ಅಡಗಿದ್ದಾರೆ. ॥ ೩೫ ॥ ಈಶ್ವರನೇ! ನಿನ್ನ ಮುಖದ ಅಗ್ರಭಾಗದಲ್ಲಿ 'ಸ್ರುಕ್' ಇದೆ. ಮೂಗಿನ ಹೊಳ್ಳೆಗಳಲ್ಲಿ 'ಸ್ರುವಾ' ಇದೆ. ಉದರದಲ್ಲಿ 'ಇಡಾ' ಎಂಬ ಯಜ್ಞದ ಭಕ್ಷಣಪಾತ್ರೆಯಿದೆ. ಕಿವಿಗಳಲ್ಲಿ 'ಚಮಸ'ವಿದೆ. ಮುಖದಲ್ಲಿ 'ಪ್ರಾಶಿತ್ರ' (ಬ್ರಹ್ಮಭಾಗಪಾತ್ರೆ) ಇದೆ. ಕಂಠದ ರಂಧ್ರದಲ್ಲಿ 'ಗ್ರಹ' (ಸೋಮಪಾತ್ರೆ) ಎಂಬ ಯಜ್ಞಪಾತ್ರೆಯಿದೆ. ಭಗವಂತನೇ! ನಿನ್ನ ಅಗಿಯುವಿಕೆಯು ಅಗ್ನಿಹೋತ್ರವಾಗಿದೆ. ॥ ೩೬ ॥ ಆಗಾಗ ಅವತರಿಸುವುದು ಯಜ್ಞಸ್ವರೂಪನಾದ ನಿನ್ನ 'ದೀಕ್ಷಣೀಯ' ಎಂಬ ಇಷ್ಟಿಯಾಗಿದೆ. ನಿನ್ನ ಕುತ್ತಿಗೆಯೇ 'ಉಪಸದ' ಎಂಬ ಮೂರು ಇಷ್ಟಿಗಳ ರೂಪವಾಗಿದೆ. ಎರಡು ದಾಡೆಗಳು 'ಪ್ರಾಯ ಣೀಯ' (ದೀಕ್ಷಾನಂತರದ ಇಷ್ಟಿ) ಮತ್ತು 'ಉದಯನೀಯ' (ಯಜ್ಞಸಮಾಪ್ತಿ ಇಷ್ಟಿ) ಇಷ್ಟಿಗಳಾಗಿವೆ. ನಿನ್ನ ನಾಲಿಗೆಯು 'ಪ್ರವರ್ಗ್ಯ'ವು. (ಪ್ರತಿಯೊಂದು ಉಪಸದಕ್ಕೂ ಹಿಂದೆ ಮಾಡಲ್ಪಡುವ ಮಹಾವೀರ ಎಂಬ ಕರ್ಮವು.) ನಿನ್ನ ಶಿರಸ್ಸು 'ಸಭ್ಯ' (ಹೋಮ ರಹಿತವಾದ) ಎಂಬ ಅಗ್ನಿಯು. 'ಆವಸಥ್ಯ' ಎಂಬ ಔಪಾಸನಾಗ್ನಿಯೂ ಮತ್ತು ಪ್ರಾಣಚಿತಿಯೂ (ಇಷ್ಟಕಾಚಯನ) ನಿನ್ನ ಪ್ರಾಣಗಳು. ॥ ೩೭ ॥ ದೇವಾ! ನಿನ್ನ ವೀರ್ಯವೇ ಸೋಮವು. ಕೂರುವಿಕೆಯು ಪ್ರಾತಃ ಸವನವೇ ಮುಂತಾದ ಮೂರು ಸವನಗಳು. ನಿನ್ನ ಏಳು ಧಾತುಗಳೇ – ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ ಮತ್ತು ಅಪ್ತೋರ್ಯಾಮಗಳೆಂಬ ಏಳು ಸಂಸ್ಥೆಗಳು ಮತ್ತು ನಿನ್ನ ಶರೀರದ ಸಂಧಿಭಾಗಗಳೇ ಸಂಪೂರ್ಣವಾದ ದ್ವಾದಶಾಹವೇ ಮುಂತಾದ ಸತ್ರಗಳು. ಹೀಗೆ ನೀನು ಸಂಪೂರ್ಣ ಯಜ್ಞವೂ (ಅಂದರೆ ಸೋಮರಹಿತಯಜ್ಞ) ಮತ್ತು ಕ್ರತುವೂ (ಸೋಮ ಸಹಿತ ಯಜ್ಞ) ಎರಡೂ ಆಗಿರುವೆ. ಯಜ್ಞಾನುಷ್ಠಾನ ರೂಪವಾದ ಇಷ್ಟಿಗಳು ನಿನ್ನ ಅಂಗಗಳನ್ನು ಒಟ್ಟಿಗೆ ಸೇರಿಸಿರುವ ಮಾಂಸಪೇಶಿಗಳಾಗಿವೆ. ॥ ೩೮ ॥ ಸಮಸ್ತ ಮಂತ್ರ ಸ್ವರೂಪನೂ, ದೇವತಾ ಸ್ವರೂಪನೂ, ದ್ರವ್ಯ ಸ್ವರೂಪನೂ, ಯಜ್ಞ ಸ್ವರೂಪನೂ, ಕರ್ಮ ಸ್ವರೂಪನೂ ಆಗಿರುವ ನಿನಗೆ ನಮೋ ನಮಃ. ವೈರಾಗ್ಯ, ಭಕ್ತಿ ಮತ್ತು ಚಿತ್ತದ ಏಕಾಗ್ರತೆಯಿಂದ ಯಾವ ಜ್ಞಾನವು ಅನುಭವಕ್ಕೆ ಬರುವುದೋ, ಅದು ನಿನ್ನ ಸ್ವರೂಪವೇ ಆಗಿದೆ. ನೀನೇ ಎಲ್ಲರ ವಿದ್ಯಾಗುರುವು ಆಗಿರುವೆ. ಅಂತಹ ನಿನಗೆ ಮತ್ತೆ-ಮತ್ತೆ ಪ್ರಣಾಮಗಳು. ॥ ೩೯ ॥ ಭೂದೇವಿಯನ್ನು ಧರಿಸಿಕೊಂಡಿರುವ ಭಗವಂತನೇ! ನೀನು ಕೋರೆದಾಡೆಗಳ ತುದಿಯಲ್ಲಿ ಇರಿಸಿ ಕೊಂಡಿರುವ

ದಂಷ್ಟ್ರಾಗ್ರಕೋಟ್ಯಾ ಭಗವಂಸ್ತ್ವಯಾ ಧೃತಾ
ವಿರಾಜತೇ ಭೂಧರ ಭೂಃ ಸಭೂಧರಾ ।
ಯಥಾ ವನಾನ್ನಿಃಸರತೋ ದತಾ ಧೃತಾ
ಮತಂಗಜೇಂದ್ರಸ್ಯ ಸಪತ್ರಪದ್ಮಿನೀ ॥ ೪೦ ॥

ತ್ರಯೀಮಯಂ ರೂಪಮಿದಂ ಚ ಸೌಕರಂ
ಭೂಮಂಡಲೇನಾಥ ದತಾ ಧೃತೇನ ತೇ ।
ಚಕಾಸ್ತಿ ಶೃಂಗೋಢಘನೇನ ಭೂಯಸಾ
ಕುಲಾಚಲೇಂದ್ರಸ್ಯ ಯಥೈವ ವಿಭ್ರಮಃ ॥ ೪೧ ॥

ಸಂಸ್ಥಾಪಯೈನಾಂ ಜಗತಾಂ ಸತಸ್ಥುಷಾಂ
ಲೋಕಾಯ ಪತ್ನೀಮಸಿ ಮಾತರಂ ಪಿತಾ ।
ವಿಧೇಮ ಚಾಸ್ಯೈ ನಮಸಾ ಸಹ ತ್ವಯಾ
ಯಸ್ಯಾಂ ಸ್ವತೇಜೋಽಗ್ನಿಮಿವಾರಣಾವಧಾಃ ॥ ೪೨ ॥

ಕಃ ಶ್ರದ್ದಧೀತಾನ್ಯತಮಸ್ತವ ಪ್ರಭೋ
ರಸಾಂ ಗತಾಯಾ ಭುವ ಉದ್ವಿಬರ್ಹಣಮ್ ।
ನ ವಿಸ್ಮಯೋಽಸೌ ತ್ವಯಿ ವಿಶ್ವವಿಸ್ಮಯೇ
ಯೋ ಮಾಯಯೇದಂ ಸಸೃಜೇಽತಿವಿಸ್ಮಯಮ್ ॥ ೪೩ ॥

ವಿಧುನ್ವತಾ ವೇದಮಯಂ ನಿಜಂ ವಪು-
ರ್ಜನಸ್ತಪಃ ಸತ್ಯನಿವಾಸಿನೋ ವಯಮ್ ।
ಸಟಾಶಿಖೋದ್ಧೂತಶಿವಾಂಬುಬಿಂದುಭಿ-
ರ್ವಿಮೃಜ್ಯಮಾನಾ ಭೃಶಮೀಶ ಪಾವಿತಾಃ ॥ ೪೪ ॥

ಸ ವೈ ಬತ ಭ್ರಷ್ಟಮತಿಸ್ತವೈಷ ತೇ
ಯಃ ಕರ್ಮಣಾಂ ಪಾರಮಪಾರಕರ್ಮಣಃ ।
ಯದ್ಯೋಗಮಾಯಾಗುಣಯೋಗಮೋಹಿತಂ
ವಿಶ್ವಂ ಸಮಸ್ತಂ ಭಗವನ್ವಿಧೇಹಿ ಶಮ್ ॥ ೪೫ ॥

ಮೈತ್ರೇಯ ಉವಾಚ

ಇತ್ಯುಪಸ್ಥೀಯಮಾನಸ್ತೈರ್ಮುನಿಭಿರ್ಬ್ರಹ್ಮವಾದಿಭಿಃ ।
ಸಲಿಲೇ ಸ್ವಖುರಾಕ್ರಾಂತ ಉಪಾಧತ್ತಾವಿತಾವನಿಮ್ ॥ ೪೬ ॥

ಸ ಇತ್ಥಂ ಭಗವಾನುರ್ವೀಂ ವಿಷ್ವಕ್ಸೇನಃ ಪ್ರಜಾಪತಿಃ ।
ರಸಾಯಾ ಲೀಲಯೋನ್ನೀತಾಮಪ್ಸು ನ್ಯಸ್ಯ ಯಯೌ ಹರಿಃ ॥ ೪೭ ॥

ಯ ಏವಮೇತಾಂ ಹರಿಮೇಧಸೋ ಹರೇಃ
ಕಥಾಂ ಸುಭದ್ರಾಂ ಕಥನೀಯಮಾಯಿನಃ ।
ಶೃಣ್ವೀತ ಭಕ್ತ್ಯಾ ಶ್ರವಯೇತ ವೋಶತೀಂ
ಜನಾರ್ದನೋಽಸ್ಯಾಶು ಹೃದಿ ಪ್ರಸೀದತಿ ॥ ೪೮ ॥

ಪರ್ವತಗಳಿಂದ ಅಲಂಕೃತವಾದ ಈ ಭೂಗೋಳವು ಜಲಾಶಯದಿಂದ ಹೊರಬರುತ್ತಿರುವ ಮದಗಜದ ದಂತಾಗ್ರದಲ್ಲಿ ದಳಗಳ ಸಹಿತ ಕಮಲದಂತೆ ಬೆಳಗುತ್ತಿದೆ. ॥ ೪೦ ॥ ಕೋರೆಹಲ್ಲುಗಳ ಮೇಲೆ ಭೂಮಂಡಲವನ್ನು ಧರಿಸಿಕೊಂಡಿರುವ ನಿನ್ನ ಈ ವೇದಮಯವಾದ ವರಾಹ ಶ್ರೀವಿಗ್ರಹವು ತನ್ನ ಶಿಖರದ ಮೇಲೆ ಮೇಘಮಾಲೆಯನ್ನು ಧರಿಸಿಕೊಂಡಿರುವ ಮಹಾಕುಲಪರ್ವತದಂತೆ ಕಂಗೊಳಿಸುತ್ತಿದೆ. ॥ ೪೧ ॥ ಸ್ವಾಮಿ! ಚರಾಚರ ಜೀವಿಗಳು ಸುಖವಾಗಿ ವಾಸಿಸಲು ನಿನ್ನ ಪತ್ನಿಯಾದ ಈ ಭೂಮಾತೆಯನ್ನು ಜಲದ ಮೇಲೆ ನೆಲೆಗೊಳಿಸುವವನಾಗು. ಜಗತ್ತಿನ ತಂದೆ ನೀನಾಗಿರುವೆ. ಅರಣಿಯಲ್ಲಿ ಅಗ್ನಿಯನ್ನು ಸ್ಥಾಪಿಸುವಂತೆ ನೀನು ಇದರಲ್ಲಿ ಧಾರಣಾಶಕ್ತಿರೂಪವಾದ ನಿನ್ನ ತೇಜಸ್ಸನ್ನು ಸ್ಥಾಪಿಸಿದ್ದೀಯೇ. ಇಂತಹ ನಿನಗೂ ಮತ್ತು ಈ ಭೂಮಾತೆಗೂ ಭೂರಿ-ಭೂರಿ ನಮಸ್ಕಾರಗಳು. ॥ ೪೨ ॥ ಪ್ರಭೋ! ರಸಾತಳದಲ್ಲಿ ಮುಳುಗಿ ಹೋಗಿದ್ದ ಪೃಥಿವಿಯನ್ನು ಮೇಲಕ್ಕೆ ಎತ್ತುವ ಸಾಹಸವನ್ನು ಮಾಡಲು ನೀನಲ್ಲದೆ ಬೇರೆ ಯಾರಿಗೆ ಶಕ್ಯವಿದೆ. ಆದರೆ ನೀನು ಆಶ್ಚರ್ಯಗಳ ನಿಧಿಯು. ಇದು ನಿನಗೆ ದೊಡ್ಡ ಆಶ್ಚರ್ಯದ ಕೆಲಸವೇನೂ ಅಲ್ಲ. ಮಾಯಾಬಲದಿಂದ ಈ ಅತ್ಯಾಶ್ಚರ್ಯಮಯವಾದ ವಿಶ್ವವನ್ನು ರಚಿಸಿದವನು ನೀನೇ ಅಲ್ಲವೇ! ॥ ೪೩ ॥ ನೀನು ನಿನ್ನ ವೇದಮಯವಾದ ದಿವ್ಯಮಂಗಳ ವಿಗ್ರಹವನ್ನು ಅಲುಗಾಡಿಸಿದಾಗ ನಿನ್ನ ಕುತ್ತಿಗೆಯ ಕೂದಲುಗಳಿಂದ ಸಿಡಿದ ಶೀತಲ ಜಲಬಿಂದುಗಳು ನಮ್ಮ ಮೇಲೆ ಬೀಳುತ್ತಿವೆ. ಅದರಲ್ಲಿ ನೆನೆದ ಜನೋಲೋಕ, ತಪೋಲೋಕ, ಸತ್ಯ ಲೋಕಗಳ ನಿವಾಸಿಗಳಾದ ನಾವೆಲ್ಲರೂ ಪವಿತ್ರರಾಗಿ ಬಿಟ್ಟಿದ್ದೇವೆ. ॥ ೪೪ ॥ ಅಪಾರವಾದ ಕರ್ಮಗಳುಳ್ಳವನು ನೀನು. ನಿನ್ನ ಕರ್ಮಗಳ ಪಾರ(ಕೊನೆ)ವನ್ನು ಹೊಂದಲು ಬಯಸುವವನು ಬುದ್ಧಿ ಗೆಟ್ಟವನೆಂದೇ ಹೇಳಬೇಕಷ್ಟೆ. ನಿನ್ನ ಯೋಗಮಾಯೆಯ ಗುಣಗಳ ಯೋಗದಿಂದಲೇ ಈ ಇಡೀ ಜಗತ್ತು ಮೋಹಿತವಾಗಿದೆ. ಭಗವಂತನೇ! ಈ ಜಗತ್ತಿಗೆ ಮಂಗಳವನ್ನುಂಟು ಮಾಡು. ॥ ೪೫ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಆ ಬ್ರಹ್ಮವಾದಿಗಳಾದ ಮುನಿಗಳು ಹೀಗೆ ಸ್ತುತಿಸುತ್ತಿರಲಾಗಿ ಸರ್ವರಕ್ಷಕನಾದ ವರಾಹಮೂರ್ತಿ ಭಗವಂತನು ತನ್ನ ಗೊರಸುಗಳಿಂದ ನೀರನ್ನು ಸ್ತಂಭನಮಾಡಿ ಅದರ ಮೇಲೆ ಭೂದೇವಿಯನ್ನು ನೆಲೆಗೊಳಿಸಿದನು. ॥ ೪೬ ॥ ಹೀಗೆ ರಸಾತಳದಿಂದ ಲೀಲಾಜಾಲವಾಗಿ ಎತ್ತಿತಂದಿರುವ ಭೂಮಿಯನ್ನು ಜಲದ ಮೇಲೆ ಇರಿಸಿ ವಿಷ್ವಕ್ಸೇನನೂ, ಪ್ರಜಾಪತಿಯೂ ಆದ ಭಗವಾನ್ ಶ್ರೀಹರಿಯು ಅಂತರ್ಧಾನಹೊಂದಿದನು. ॥ ೪೭ ॥

ಎಲೈ ವಿದುರನೇ! ಶ್ರೀಭಗವಂತನ ಲೀಲಾಮಯವಾದ ಚರಿತ್ರೆಗಳು ಕೀರ್ತಿಸಲು ಯೋಗ್ಯವಾಗಿದೆ. ಅವುಗಳಲ್ಲೇ ತೊಡಗಿದ ಬುದ್ಧಿಯು ಎಲ್ಲ ರೀತಿಯ ಪಾಪ-ತಾಪಗಳನ್ನು ದೂರಮಾಡುತ್ತದೆ. ಮಂಗಳಮನೋಹರವಾದ ಈ ಕಥೆಯನ್ನು ಭಕ್ತಿಭಾವದಿಂದ ಕೇಳುವ ಅಥವಾ ಹೇಳುವ ಮನುಷ್ಯನ ವಿಷಯದಲ್ಲಿ ಭಕ್ತವತ್ಸಲನಾದ ಭಗವಂತನು ಅಂತರಂಗದಲ್ಲಿ ಬಹುಬೇಗನೇ ಪ್ರಸನ್ನನಾಗುವನು. ॥ ೪೮ ॥ ಶ್ರೀಭಗವಂತನಾದರೋ ಎಲ್ಲ ಕಾಮನೆಗಳನ್ನೂ

ತಸ್ಮಿನ್ಪ್ರಸನ್ನೇ ಸಕಲಾಶಿಷಾಂ ಪ್ರಭೌ
ಕಿಂ ದುರ್ಲಭಂ ತಾಭಿರಲಂ ಲವಾತ್ಮಭಿಃ ।
ಅನನ್ಯದೃಷ್ಟ್ಯಾ ಭಜತಾಂ ಗುಹಾಶಯಃ
ಸ್ವಯಂ ವಿಧತ್ತೇ ಸ್ವಗತಿಂ ಪರಃ ಪರಾಮ್ ॥ ೪೯ ॥

ಕೋ ನಾಮ ಲೋಕೇ ಪುರುಷಾರ್ಥಸಾರವಿತ್
ಪುರಾಕಥಾನಾಂ ಭಗವತ್ಕಥಾಸುಧಾಮ್ ।
ಆಪೀಯ ಕರ್ಣಾಂಜಲಿಭಿರ್ಭವಾಪಹಾ-
ಮಹೋ ವಿರಜ್ಯೇತ ವಿನಾ ನರೇತರಮ್ ॥ ೫೦ ॥

ಈಡೇರಿಸುವ ಸಾಮರ್ಥ್ಯವುಳ್ಳವನು. ಅವನು ಪ್ರಸನ್ನವಾದರೆ ಪ್ರಪಂಚದಲ್ಲಿ ಯಾವುದು ತಾನೇ ದುರ್ಲಭವಿದೆ? ಅದರೆ ಆ ಕ್ಷುದ್ರವಾದ ಬಯಕೆಗಳ ಆವಶ್ಯಕತೆಯಾದರೂ ಏನಿದೆ? ಅನನ್ಯ ಭಾವದಿಂದ ಅವನನ್ನು ಭಜಿಸುವವರಿಗೆ ಅಂತರ್ಯಾಮಿ ಪರಮಾತ್ಮನು ಸ್ವತಃ ತನ್ನ ಪರಮಪದವನ್ನು ಕೊಟ್ಟುಬಿಡುತ್ತಾನೆ. ॥ ೪೯ ॥ ಸಂಸಾರ ಬಂಧನವನ್ನು ಬಿಡಿಸುವ ಶ್ರೀಭಗವಂತನ ಪ್ರಾಚೀನ ಕಥೆಗಳಲ್ಲಿನ ಕಥಾಮೃತವನ್ನು ಒಮ್ಮೆ ಕರ್ಣಪುಟದಿಂದ ಪಾನಮಾಡಿದರೂ ಪುರುಷಾರ್ಥಗಳ ಸಾರವನ್ನು ಬಲ್ಲ ಮನುಷ್ಯರಿಗೆ ಅದರಲ್ಲಿ ಬೇಸರ ಉಂಟಾಗುವುದಿಲ್ಲ. ಹಾಗೇ ಬೇಸರ ಉಂಟಾದರೆ ಆತನು ಮನುಷ್ಯನೇ ಅಲ್ಲ. ॥ ೫೦ ॥

**ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ವರಾಹಪ್ರಾದುರ್ಭಾವಾನುವರ್ಣನೇ ತ್ರಯೋದಶೋಽಧ್ಯಾಯಃ ॥ ೧೩ ॥**

# ಹದಿನಾಲ್ಕನೆಯ ಅಧ್ಯಾಯ

## ದಿತಿ-ಕಶ್ಯಪರ ಸಂವಾದ

*ಶ್ರೀಶುಕ ಉವಾಚ*

ನಿಶಮ್ಯ ಕೌಷಾರವಿಣೋಪವರ್ಣಿತಾಂ
ಹರೇಃ ಕಥಾಂ ಕಾರಣಸೂಕರಾತ್ಮನಃ ।
ಪುನಃ ಸ ಪಪ್ರಚ್ಛ ತಮುದ್ಯತಾಂಜಲಿ-
ರ್ನ ಚಾತಿತೃಪ್ತೋ ವಿದುರೋ ಧೃತವ್ರತಃ ॥ ೧ ॥

*ವಿದುರ ಉವಾಚ*

ತೇನೈವ ತು ಮುನಿಶ್ರೇಷ್ಠ ಹರಿಣಾ ಯಜ್ಞಮೂರ್ತಿನಾ ।
ಆದಿದೈತ್ಯೋ ಹಿರಣ್ಯಾಕ್ಷೋ ಹತ ಇತ್ಯನುಶುಶ್ರುಮ ॥ ೨ ॥

ತಸ್ಯ ಚೋದ್ಧರತಃ ಕ್ಷೋಣೀಂ ಸ್ವದಂಷ್ಟ್ರಾಗ್ರೇಣ ಲೀಲಯಾ ।
ದೈತ್ಯರಾಜಸ್ಯ ಚ ಬ್ರಹ್ಮನ್ಕಸ್ಮಾದ್ಧೇತೋರಭೂನ್ಮೃಧಃ ॥ ೩ ॥

*ಮೈತ್ರೇಯ ಉವಾಚ*

ಸಾಧು ವೀರ ತ್ವಯಾ ಪೃಷ್ಟಮವತಾರಕಥಾಂ ಹರೇಃ ।
ಯತ್ತ್ವಂ ಪೃಚ್ಛಸಿ ಮರ್ತ್ಯಾನಾಂ ಮೃತ್ಯುಪಾಶವಿಶಾತನೀಮ್ ॥ ೪ ॥

ಯಯೋತ್ತಾನಪದಃ ಪುತ್ರೋ
ಮುನಿನಾ ಗೀತಯಾರ್ಭಕಃ ।
ಮೃತ್ಯೋಃ ಕೃತ್ವೈವ ಮೂರ್ಧ್ನ್ಯಂಘ್ರಿ-
ಮಾರುರೋಹ ಹರೇಃ ಪದಮ್ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಭಕ್ತಿವ್ರತಧಾರಿಯಾದ ವಿದುರನು ಮೈತ್ರೇಯ ಮಹರ್ಷಿಗಳಿಂದ ಸೃಷ್ಟಿಕಾರಣಕ್ಕಾಗಿ ಯಜ್ಞವರಾಹನಾದ ಶ್ರೀಹರಿಯ ಅಮೃತಮಯ ಕಥೆಯನ್ನು ಕೇಳಿ ಸಂತೋಷಗೊಂಡರೂ ಪೂರ್ಣ ತೃಪ್ತಿಯುಂಟಾಗಲಿಲ್ಲ. ಆದ್ದರಿಂದ ಅವನು ಕೈಜೋಡಿಸಿಕೊಂಡು ಪುನಃ ವಿನಂತಿಸಿಕೊಂಡನು. ॥ ೧ ॥

**ವಿದುರನು ಕೇಳಿದನು** – 'ಮುನಿಶ್ರೇಷ್ಠರೇ! ಯಜ್ಞವರಾಹ ರೂಪಿಯಾದ ಆ ಭಗವಂತನಿಂದಲೇ ಆದಿದೈತ್ಯನಾದ ಹಿರಣ್ಯಾಕ್ಷನು ಸಂಹರಿಸಲ್ಪಟ್ಟನು' ಎಂದು ಈಗತಾನೇ ನಿಮ್ಮಿಂದ ಕೇಳಿದೆನು. ॥ ೨ ॥ ಆ ಭಗವಂತನು ಲೀಲಾಜಾಲವಾಗಿ ತನ್ನ ಕೋರೆ ದಾಡೆಗಳ ಮೇಲೆ ಭೂಮಿಯನ್ನು ಇರಿಸಿಕೊಂಡು ನೀರಿನಿಂದ ಮೇಲಕ್ಕೆ ಬರುವಾಗ ಅವನಿಗೂ ದೈತ್ಯನಾದ ಹಿರಣ್ಯಾಕ್ಷನಿಗೂ ಏತಕ್ಕಾಗಿ ಯುದ್ಧವಾಯಿತು? ದಯಮಾಡಿ ಇದನ್ನು ತಿಳಿಸುವವರಾಗಿರಿ. ॥ ೩ ॥

**ಶ್ರೀಮೈತ್ರೇಯರು ಹೇಳತೊಡಗಿದರು** – ಎಲೈ ವಿದುರನೇ! ನೀನು ತುಂಬಾ ಒಳ್ಳೆಯ ಪ್ರಶ್ನೆಯನ್ನೇ ಕೇಳಿದೆ. ಮನುಷ್ಯರನ್ನು ಮೃತ್ಯುಪಾಶದಿಂದ ಪಾರಾಗಿಸುವ ಶ್ರೀಹರಿಯ ಅವತಾರಕಥೆಯ ಬಗ್ಗೆಯೇ ಕೇಳುತ್ತಿರುವೆ. ॥ ೪ ॥ ನೋಡು! ಉತ್ತಾನಪಾದನ ಪುತ್ರನಾದ ಧ್ರುವನು ಪುಟ್ಟಬಾಲಕನಾಗಿರುವಾಗಲೇ ಶ್ರೀನಾರದ ಮಹರ್ಷಿಗಳು ಹೇಳಿದ ಹರಿಕಥೆಯ ಪ್ರಭಾವದಿಂದಲೇ ಅವನು ಮೃತ್ಯುವಿನ ತಲೆಯನ್ನು ಮೆಟ್ಟಿ ಭಗವಂತನ ಪರಮಪದಕ್ಕೆ ಆರೂಢನಾದುದು. ॥ ೫ ॥ ಹಿಂದೆ ಒಮ್ಮೆ ಶ್ರೀವರಾಹರೂಪನಾದ ಭಗವಂತನಿಗೂ-ಹಿರಣ್ಯಾಕ್ಷನಿಗೂ ನಡೆದ ಯುದ್ಧದ ವಿಷಯದಲ್ಲಿ ದೇವತೆಗಳು ದೇವಾಧಿದೇವ ಬ್ರಹ್ಮದೇವರ ಬಳಿ ಪ್ರಶ್ನಿಸಿದಾಗ, ಅವರು ಈ

ದಂಷ್ಟ್ರಾಗ್ರಕೋಟ್ಯಾ ಭಗವಂಸ್ತ್ವಯಾ ಧೃತಾ
ವಿರಾಜತೇ ಭೂಧರ ಭೂಃ ಸಭೂಧರಾ ।
ಯಥಾ ವನಾನ್ನಿಃಸರತೋ ದತಾ ಧೃತಾ
ಮತಂಗಜೇಂದ್ರಸ್ಯ ಸಪತ್ರಪದ್ಮಿನೀ ॥ ೪೦ ॥

ತ್ರಯೀಮಯಂ ರೂಪಮಿದಂ ಚ ಸೌಕರಂ
ಭೂಮಂಡಲೇನಾಥ ದತಾ ಧೃತೇನ ತೇ ।
ಚಕಾಸ್ತಿ ಶೃಂಗೋಢಘನೇನ ಭೂಯಸಾ
ಕುಲಾಚಲೇಂದ್ರಸ್ಯ ಯಥೈವ ವಿಭ್ರಮಃ ॥ ೪೧ ॥

ಸಂಸ್ಥಾಪಯೈನಾಂ ಜಗತಾಂ ಸತಸ್ಥುಷಾಂ
ಲೋಕಾಯ ಪತ್ನೀಮಸಿ ಮಾತರಂ ಪಿತಾ ।
ವಿಧೇಮ ಚಾಸ್ಯೈ ನಮಸಾ ಸಹ ತ್ವಯಾ
ಯಸ್ಯಾಂ ಸ್ವತೇಜೋಽಗ್ನಿಮಿವಾರಣಾವಧಾಃ ॥ ೪೨ ॥

ಕಃ ಶ್ರದ್ದಧೀತಾನ್ಯತಮಸ್ತವ ಪ್ರಭೋ
ರಸಾಂ ಗತಾಯಾ ಭುವ ಉದ್ವಿಬರ್ಹಣಮ್ ।
ನ ವಿಸ್ಮಯೋಽಸೌ ತ್ವಯಿ ವಿಶ್ವವಿಸ್ಮಯೇ
ಯೋ ಮಾಯಯೇದಂ ಸಸೃಜೇಽತಿವಿಸ್ಮಯಮ್ ॥ ೪೩ ॥

ವಿಧುನ್ವತಾ ವೇದಮಯಂ ನಿಜಂ ವಪು-
ರ್ಜನಸ್ತಪಃ ಸತ್ಯನಿವಾಸಿನೋ ವಯಮ್ ।
ಸಟಾಶಿಖೋದ್ಧೂತಶಿವಾಂಬುಬಿಂದುಭಿ-
ರ್ವಿಮೃಜ್ಯಮಾನಾ ಭೃಶಮೀಶ ಪಾವಿತಾಃ ॥ ೪೪ ॥

ಸ ವೈ ಬತ ಭ್ರಷ್ಟಮತಿಸ್ತವೈಷ ತೇ
ಯಃ ಕರ್ಮಣಾಂ ಪಾರಮಪಾರಕರ್ಮಣಃ ।
ಯದ್ಯೋಗಮಾಯಾಗುಣಯೋಗಮೋಹಿತಂ
ವಿಶ್ವಂ ಸಮಸ್ತಂ ಭಗವನ್ವಿಧೇಹಿ ಶಮ್ ॥ ೪೫ ॥

*ಮೈತ್ರೇಯ ಉವಾಚ*

ಇತ್ಯುಪಸ್ಥೀಯಮಾನಸ್ತೈರ್ಮುನಿಭಿರ್ಬ್ರಹ್ಮವಾದಿಭಿಃ ।
ಸಲಿಲೇ ಸ್ವಖುರಾಕ್ರಾಂತ ಉಪಾಧತ್ತಾವಿತಾವನಿಮ್ ॥ ೪೬ ॥

ಸ ಇತ್ಥಂ ಭಗವಾನುರ್ವೀಂ ವಿಷ್ವಕ್ಸೇನಃ ಪ್ರಜಾಪತಿಃ ।
ರಸಾಯಾ ಲೀಲಯೋನ್ನೀತಾಮಪ್ಸು ನ್ಯಸ್ಯ ಯಯೌ ಹರಿಃ ॥ ೪೭ ॥

ಯ ಏವಮೇತಾಂ ಹರಿಮೇಧಸೋ ಹರೇಃ
ಕಥಾಂ ಸುಭದ್ರಾಂ ಕಥನೀಯಮಾಯಿನಃ ।
ಶೃಣ್ವೀತ ಭಕ್ತ್ಯಾ ಶ್ರವಯೇತ ವೋಶತೀಂ
ಜನಾರ್ದನೋಽಸ್ಯಾಶು ಹೃದಿ ಪ್ರಸೀದತಿ ॥ ೪೮ ॥

ಪರ್ವತಗಳಿಂದ ಅಲಂಕೃತವಾದ ಈ ಭೂಗೋಳವು ಜಲಾಶಯದಿಂದ ಹೊರಬರುತ್ತಿರುವ ಮದಗಜದ ದಂತಾಗ್ರದಲ್ಲಿ ದಳಗಳ ಸಹಿತ ಕಮಲದಂತೆ ಬೆಳಗುತ್ತಿದೆ. ॥ ೪೦ ॥ ಕೋರೆಹಲ್ಲು ಗಳ ಮೇಲೆ ಭೂಮಂಡಲವನ್ನು ಧರಿಸಿಕೊಂಡಿರುವ ನಿನ್ನ ಈ ವೇದಮಯವಾದ ವರಾಹ ಶ್ರೀವಿಗ್ರಹವು ತನ್ನ ಶಿಖರದ ಮೇಲೆ ಮೇಘಮಾಲೆಯನ್ನು ಧರಿಸಿಕೊಂಡಿರುವ ಮಹಾಕುಲಪರ್ವತದಂತೆ ಕಂಗೊಳಿಸುತ್ತಿದೆ. ॥ ೪೧ ॥ ಸ್ವಾಮಿ ! ಚರಾಚರ ಜೀವಿಗಳು ಸುಖವಾಗಿ ವಾಸಿಸಲು ನಿನ್ನ ಪತ್ನಿಯಾದ ಈ ಭೂಮಾತೆಯನ್ನು ಜಲದ ಮೇಲೆ ನೆಲೆಗೊಳಿಸುವವನಾಗು. ಜಗತ್ತಿನ ತಂದೆ ನೀನಾಗಿರುವೆ. ಅರಣಿಯಲ್ಲಿ ಅಗ್ನಿಯನ್ನು ಸ್ಥಾಪಿಸುವಂತೆ ನೀನು ಇದರಲ್ಲಿ ಧಾರಣಾಶಕ್ತಿರೂಪವಾದ ನಿನ್ನ ತೇಜಸ್ಸನ್ನು ಸ್ಥಾಪಿಸಿದ್ದೀಯೇ. ಇಂತಹ ನಿನಗೂ ಮತ್ತು ಈ ಭೂಮಾತೆಗೂ ಭೂರಿ-ಭೂರಿ ನಮಸ್ಕಾರಗಳು. ॥ ೪೨ ॥ ಪ್ರಭೋ ! ರಸಾತಳದಲ್ಲಿ ಮುಳುಗಿಹೋಗಿದ್ದ ಪೃಥಿವಿಯನ್ನು ಮೇಲಕ್ಕೆ ಎತ್ತುವ ಸಾಹಸವನ್ನು ಮಾಡಲು ನೀನಲ್ಲದೆ ಬೇರೆ ಯಾರಿಗೆ ಶಕ್ಯವಿದೆ. ಆದರೆ ನೀನು ಆಶ್ಚರ್ಯಗಳ ನಿಧಿಯು. ಇದು ನಿನಗೆ ದೊಡ್ಡ ಆಶ್ಚರ್ಯದ ಕೆಲಸವೇನೂ ಅಲ್ಲ. ಮಾಯಾಬಲದಿಂದ ಈ ಅತ್ಯಾಶ್ಚರ್ಯಮಯವಾದ ವಿಶ್ವವನ್ನು ರಚಿಸಿದವನು ನೀನೇ ಅಲ್ಲವೇ ! ॥ ೪೩ ॥ ನೀನು ನಿನ್ನ ವೇದಮಯವಾದ ದಿವ್ಯಮಂಗಳ ವಿಗ್ರಹವನ್ನು ಅಲುಗಾಡಿಸಿದಾಗ ನಿನ್ನ ಕುತ್ತಿಗೆಯ ಕೂದಲುಗಳಿಂದ ಸಿಡಿದ ಶೀತಲ ಜಲಬಿಂದುಗಳು ನಮ್ಮ ಮೇಲೆ ಬೀಳುತ್ತಿವೆ. ಅದರಲ್ಲಿ ನೆನೆದ ಜನೋಲೋಕ, ತಪೋಲೋಕ, ಸತ್ಯ ಲೋಕಗಳ ನಿವಾಸಿಗಳಾದ ನಾವೆಲ್ಲರೂ ಪವಿತ್ರರಾಗಿ ಬಿಟ್ಟಿದ್ದೇವೆ. ॥ ೪೪ ॥ ಅಪಾರವಾದ ಕರ್ಮಗಳುಳ್ಳವನು ನೀನು. ನಿನ್ನ ಕರ್ಮಗಳ ಪಾರ(ಕೊನೆ)ವನ್ನು ಹೊಂದಲು ಬಯಸುವವನು ಬುದ್ಧಿ ಗೆಟ್ಟವನೆಂದೇ ಹೇಳಬೇಕಷ್ಟೆ. ನಿನ್ನ ಯೋಗಮಾಯೆಯ ಗುಣಗಳ ಯೋಗದಿಂದಲೇ ಈ ಇಡೀ ಜಗತ್ತು ಮೋಹಿತವಾಗಿದೆ. ಭಗವಂತನೇ ! ಈ ಜಗತ್ತಿಗೆ ಮಂಗಳವನ್ನುಂಟು ಮಾಡು. ॥ ೪೫ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ ! ಆ ಬ್ರಹ್ಮವಾದಿಗಳಾದ ಮುನಿಗಳು ಹೀಗೆ ಸ್ತುತಿಸುತ್ತಿರಲಾಗಿ ಸರ್ವರಕ್ಷಕನಾದ ವರಾಹಮೂರ್ತಿ ಭಗವಂತನು ತನ್ನ ಗೊರಸುಗಳಿಂದ ನೀರನ್ನು ಸ್ತಂಭನಮಾಡಿ ಅದರ ಮೇಲೆ ಭೂದೇವಿಯನ್ನು ನೆಲೆಗೊಳಿಸಿದನು. ॥ ೪೬ ॥ ಹೀಗೆ ರಸಾತಳದಿಂದ ಲೀಲಾಜಾಲವಾಗಿ ಎತ್ತಿತಂದಿರುವ ಭೂಮಿಯನ್ನು ಜಲದ ಮೇಲೆ ಇರಿಸಿ ವಿಷ್ವಕ್ಸೇನನೂ, ಪ್ರಜಾಪತಿಯೂ ಆದ ಭಗವಾನ್ ಶ್ರೀಹರಿಯು ಅಂತರ್ಧಾನಹೊಂದಿದನು. ॥ ೪೭ ॥

ಎಲೈ ವಿದುರನೇ ! ಶ್ರೀಭಗವಂತನ ಲೀಲಾಮಯವಾದ ಚರಿತ್ರೆಗಳು ಕೀರ್ತಿಸಲು ಯೋಗ್ಯವಾಗಿದೆ. ಅವುಗಳಲ್ಲೇ ತೊಡಗಿದ ಬುದ್ಧಿಯು ಎಲ್ಲ ರೀತಿಯ ಪಾಪ-ತಾಪಗಳನ್ನು ದೂರಮಾಡುತ್ತದೆ. ಮಂಗಳಮನೋಹರವಾದ ಈ ಕಥೆಯನ್ನು ಭಕ್ತಿಭಾವದಿಂದ ಕೇಳುವ ಅಥವಾ ಹೇಳುವ ಮನುಷ್ಯನ ವಿಷಯದಲ್ಲಿ ಭಕ್ತವತ್ಸಲನಾದ ಭಗವಂತನು ಅಂತರಂಗದಲ್ಲಿ ಬಹುಬೇಗನೇ ಪ್ರಸನ್ನನಾಗುವನು. ॥ ೪೮ ॥ ಶ್ರೀಭಗವಂತನಾದರೋ ಎಲ್ಲ ಕಾಮನೆಗಳನ್ನೂ

ತಸ್ಮಿನ್ಪ್ರಸನ್ನೇ ಸಕಲಾಶಿಷಾಂ ಪ್ರಭೌ
ಕಿಂ ದುರ್ಲಭಂ ತಾಭಿರಲಂ ಲವಾತ್ಮಭಿಃ ।
ಅನನ್ಯದೃಷ್ಟ್ಯಾ ಭಜತಾಂ ಗುಹಾಶಯಃ
ಸ್ವಯಂ ವಿಧತ್ತೇ ಸ್ವಗತಿಂ ಪರಃ ಪರಾಮ್ ॥ ೪೯ ॥

ಕೋ ನಾಮ ಲೋಕೇ ಪುರುಷಾರ್ಥಸಾರವಿತ್
ಪುರಾಕಥಾನಾಂ ಭಗವತ್ಕಥಾಸುಧಾಮ್ ।
ಆಪೀಯ ಕರ್ಣಾಂಜಲಿಭಿರ್ಭವಾಪಹಾ-
ಮಹೋ ವಿರಜ್ಯೇತ ವಿನಾ ನರೇತರಮ್ ॥ ೫೦ ॥

ಈಡೇರಿಸುವ ಸಾಮರ್ಥ್ಯವುಳ್ಳವನು. ಅವನು ಪ್ರಸನ್ನವಾದರೆ ಪ್ರಪಂಚದಲ್ಲಿ ಯಾವುದು ತಾನೇ ದುರ್ಲಭವಿದೆ? ಅದರೆ ಆ ಕ್ಷುದ್ರವಾದ ಬಯಕೆಗಳ ಆವಶ್ಯಕತೆಯಾದರೂ ಏನಿದೆ? ಅನನ್ಯ ಭಾವದಿಂದ ಅವನನ್ನು ಭಜಿಸುವವರಿಗೆ ಅಂತರ್ಯಾಮಿ ಪರಮಾತ್ಮನು ಸ್ವತಃ ತನ್ನ ಪರಮಪದವನ್ನು ಕೊಟ್ಟುಬಿಡುತ್ತಾನೆ. ॥ ೪೯ ॥ ಸಂಸಾರ ಬಂಧನವನ್ನು ಬಿಡಿಸುವ ಶ್ರೀಭಗವಂತನ ಪ್ರಾಚೀನ ಕಥೆಗಳಲ್ಲಿನ ಕಥಾಮೃತವನ್ನು ಒಮ್ಮೆ ಕರ್ಣಪುಟದಿಂದ ಪಾನಮಾಡಿದರೂ ಪುರುಷಾರ್ಥಗಳ ಸಾರವನ್ನು ಬಲ್ಲ ಮನುಷ್ಯರಿಗೆ ಅದರಲ್ಲಿ ಬೇಸರ ಉಂಟಾಗುವುದಿಲ್ಲ. ಹಾಗೇ ಬೇಸರ ಉಂಟಾದರೆ ಆತನು ಮನುಷ್ಯನೇ ಅಲ್ಲ. ॥ ೫೦ ॥

*ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ವರಾಹಪ್ರಾದುರ್ಭಾವಾನುವರ್ಣನೇ ತ್ರಯೋದಶೋಽಧ್ಯಾಯಃ ॥ ೧೩ ॥

# ಹದಿನಾಲ್ಕನೆಯ ಅಧ್ಯಾಯ

## ದಿತಿ-ಕಶ್ಯಪರ ಸಂವಾದ

*ಶ್ರೀಶುಕ ಉವಾಚ*

ನಿಶಮ್ಯ ಕೌಷಾರವಿಣೋಪವರ್ಣಿತಾಂ
ಹರೇಃ ಕಥಾಂ ಕಾರಣಸೂಕರಾತ್ಮನಃ ।
ಪುನಃ ಸ ಪಪ್ರಚ್ಛ ತಮುದ್ಯತಾಂಜಲಿ-
ರ್ನ ಚಾತಿತೃಪ್ತೋ ವಿದುರೋ ಧೃತವ್ರತಃ ॥ ೧ ॥

*ವಿದುರ ಉವಾಚ*

ತೇನೈವ ತು ಮುನಿಶ್ರೇಷ್ಠ ಹರಿಣಾ ಯಜ್ಞಮೂರ್ತಿನಾ ।
ಆದಿದೈತ್ಯೋ ಹಿರಣ್ಯಾಕ್ಷೋ ಹತ ಇತ್ಯನುಶುಶ್ರುಮ ॥ ೨ ॥

ತಸ್ಯ ಚೋದ್ಧರತಃ ಕ್ಷೋಣೀಂ ಸ್ವದಂಷ್ಟ್ರಾಗ್ರೇಣ ಲೀಲಯಾ ।
ದೈತ್ಯರಾಜಸ್ಯ ಚ ಬ್ರಹ್ಮನ್ಕಸ್ಮಾದ್ಧೇತೋರಭೂನ್ಮೃಧಃ ॥ ೩ ॥

*ಮೈತ್ರೇಯ ಉವಾಚ*

ಸಾಧು ವೀರ ತ್ವಯಾ ಪೃಷ್ಟಮವತಾರಕಥಾಂ ಹರೇಃ ।
ಯತ್ತ್ವಂ ಪೃಚ್ಛಸಿ ಮರ್ತ್ಯಾನಾಂ ಮೃತ್ಯುಪಾಶವಿಶಾತನೀಮ್ ॥ ೪ ॥

ಯಯೋತ್ತಾನಪದಃ ಪುತ್ರೋ
ಮುನಿನಾ ಗೀತಯಾರ್ಭಕಃ ।
ಮೃತ್ಯೋಃ ಕೃತ್ವೈವ ಮೂರ್ಧ್ನ್ಯಂಘ್ರಿ-
ಮಾರುರೋಹ ಹರೇಃ ಪದಮ್ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಭಕ್ತಿವ್ರತಧಾರಿಯಾದ ವಿದುರನು ಮೈತ್ರೇಯ ಮಹರ್ಷಿಗಳಿಂದ ಸೃಷ್ಟಿಕಾರಣಕ್ಕಾಗಿ ಯಜ್ಞವರಾಹನಾದ ಶ್ರೀಹರಿಯ ಅಮೃತಮಯ ಕಥೆಯನ್ನು ಕೇಳಿ ಸಂತೋಷಗೊಂಡರೂ ಪೂರ್ಣ ತೃಪ್ತಿಯುಂಟಾಗಲಿಲ್ಲ. ಆದ್ದರಿಂದ ಅವನು ಕೈಜೋಡಿಸಿಕೊಂಡು ಪುನಃ ವಿನಂತಿಸಿಕೊಂಡನು. ॥ ೧ ॥

**ವಿದುರನು ಕೇಳಿದನು** – 'ಮುನಿಶ್ರೇಷ್ಠರೇ! ಯಜ್ಞವರಾಹ ರೂಪಿಯಾದ ಆ ಭಗವಂತನಿಂದಲೇ ಆದಿದೈತ್ಯನಾದ ಹಿರಣ್ಯಾಕ್ಷನು ಸಂಹರಿಸಲ್ಪಟ್ಟನು' ಎಂದು ಈಗತಾನೇ ನಿಮ್ಮಿಂದ ಕೇಳಿದೆನು. ॥ ೨ ॥ ಆ ಭಗವಂತನು ಲೀಲಾಜಾಲವಾಗಿ ತನ್ನ ಕೋರೆ ದಾಡೆಗಳ ಮೇಲೆ ಭೂಮಿಯನ್ನು ಇರಿಸಿಕೊಂಡು ನೀರಿನಿಂದ ಮೇಲಕ್ಕೆ ಬರುವಾಗ ಅವನಿಗೂ ದೈತ್ಯನಾದ ಹಿರಣ್ಯಾಕ್ಷನಿಗೂ ಏತಕ್ಕಾಗಿ ಯುದ್ಧವಾಯಿತು? ದಯಮಾಡಿ ಇದನ್ನು ತಿಳಿಸುವವರಾಗಿರಿ. ॥ ೩ ॥

**ಶ್ರೀಮೈತ್ರೇಯರು ಹೇಳತೊಡಗಿದರು** – ಎಲೈ ವಿದುರನೇ! ನೀನು ತುಂಬಾ ಒಳ್ಳೆಯ ಪ್ರಶ್ನೆಯನ್ನೇ ಕೇಳಿದೆ. ಮನುಷ್ಯರನ್ನು ಮೃತ್ಯುಪಾಶದಿಂದ ಪಾರಾಗಿಸುವ ಶ್ರೀಹರಿಯ ಅವತಾರಕಥೆಯ ಬಗ್ಗೆಯೇ ಕೇಳುತ್ತಿರುವೆ. ॥ ೪ ॥ ನೋಡು! ಉತ್ತಾನಪಾದನ ಪುತ್ರನಾದ ಧ್ರುವನು ಪುಟ್ಟಬಾಲಕನಾಗಿರುವಾಗಲೇ ಶ್ರೀನಾರದ ಮಹರ್ಷಿಗಳು ಹೇಳಿದ ಹರಿಕಥೆಯ ಪ್ರಭಾವದಿಂದಲೇ ಅವನು ಮೃತ್ಯುವಿನ ತಲೆಯನ್ನು ಮೆಟ್ಟಿ ಭಗವಂತನ ಪರಮಪದಕ್ಕೆ ಆರೂಢನಾದುದು. ॥ ೫ ॥ ಹಿಂದೆ ಒಮ್ಮೆ ಶ್ರೀವರಾಹರೂಪನಾದ ಭಗವಂತನಿಗೂ-ಹಿರಣ್ಯಾಕ್ಷನಿಗೂ ನಡೆದ ಯುದ್ಧದ ವಿಷಯದಲ್ಲಿ ದೇವತೆಗಳು ದೇವಾಧಿದೇವ ಬ್ರಹ್ಮದೇವರ ಬಳಿ ಪ್ರಶ್ನಿಸಿದಾಗ, ಅವರು ಈ

ಅಥಾತ್ರಾಪೀತಿಹಾಸೋಽಯಂ ಶ್ರುತೋ ಮೇ ವರ್ಣಿತಃ ಪುರಾ ।
ಬ್ರಹ್ಮಣಾ ದೇವದೇವೇನ ದೇವಾನಾಮನುಪೃಚ್ಛತಾಮ್ ॥ ೬ ॥

ದಿತಿರ್ದಾಕ್ಷಾಯಣೀ ಕ್ಷತ್ತರ್ಮಾರೀಚಂ ಕಶ್ಯಪಂ ಪತಿಮ್ ।
ಅಪತ್ಯಕಾಮಾ ಚಕಮೇ ಸಂಧ್ಯಾಯಾಂ ಹೃಚ್ಛಯಾರ್ದಿತಾ ॥ ೭ ॥

ಇಷ್ಟ್ವಾಗ್ನಿಜಿಹ್ವಂ ಪಯಸಾ ಪುರುಷಂ ಯಜುಷಾಂ ಪತಿಮ್ ।
ನಿಮ್ಲೋಚತ್ಯರ್ಕ ಆಸೀನಮಗ್ನ್ಯಗಾರೇ ಸಮಾಹಿತಮ್ ॥ ೮ ॥

ದಿತಿರುವಾಚ

ಏಷ ಮಾಂ ತ್ವತ್ಕೃತೇ ವಿದ್ವನ್ಕಾಮ ಆತ್ತಶರಾಸನಃ ।
ದುನೋತಿ ದೀನಾಂ ವಿಕ್ರಮ್ಯ ರಂಭಾಮಿವ ಮತಂಗಜಃ ॥ ೯ ॥

ತದ್ಭವಾನ್‌ದಹ್ಯಮಾನಾಯಾಂ ಸಪತ್ನೀನಾಂ ಸಮೃದ್ಧಿಭಿಃ ।
ಪ್ರಜಾವತೀನಾಂ ಭದ್ರಂ ತೇ ಮಯ್ಯಾಯುಂಕ್ತಾಮನುಗ್ರಹಮ್ ॥ ೧೦ ॥

ಭರ್ತರ್ಯಾಪ್ತೋರುಮಾನಾನಾಂ ಲೋಕಾನಾವಿಶತೇ ಯಶಃ ।
ಪತಿರ್ಭವದ್ವಿಧೋ ಯಾಸಾಂ ಪ್ರಜಯಾ ನನು ಜಾಯತೇ ॥ ೧೧ ॥

ಪುರಾ ಪಿತಾ ನೋ ಭಗವಾನ್ ದಕ್ಷೋ ದುಹಿತೃವತ್ಸಲಃ ।
ಕಂ ವೃಣೀತ ವರಂ ವತ್ಸಾ ಇತ್ಯಪೃಚ್ಛತ ನಃ ಪೃಥಕ್ ॥ ೧೨ ॥

ಸ ವಿದಿತ್ವಾಽಽತ್ಮಜಾನಾಂ ನೋ ಭಾವಂ ಸಂತಾನಭಾವನಃ ।
ತ್ರಯೋದಶಾದದಾತ್ತಾಸಾಂ ಯಾಸ್ತೇ ಶೀಲಮನುವ್ರತಾಃ ॥ ೧೩ ॥

ಅಥ ಮೇ ಕುರು ಕಲ್ಯಾಣ ಕಾಮಂ ಕಂಜವಿಲೋಚನ ।
ಆರ್ತೋಪಸರ್ಪಣಂ ಭೂಮನ್ನಮೋಘಂ ಹಿ ಮಹೀಯಸಿ ॥ ೧೪ ॥

ಇತಿ ತಾಂ ವೀರ ಮಾರೀಚಃ ಕೃಪಣಾಂ ಬಹುಭಾಷಿಣೀಮ್ ।
ಪ್ರತ್ಯಾಹಾನುನಯನ್ವಾಚಾ ಪ್ರವೃದ್ಧಾನಂಗಕಶ್ಮಲಾಮ್ ॥ ೧೫ ॥

ಏಷ ತೇಽಹಂ ವಿಧಾಸ್ಯಾಮಿ ಪ್ರಿಯಂ ಭೀರು ಯದಿಚ್ಛಸಿ ।
ತಸ್ಯಾಃ ಕಾಮಂ ನ ಕಃ ಕುರ್ಯಾತ್ಸಿದ್ಧಿಸ್ತ್ರೈವರ್ಗಿಕೀ ಯತಃ ॥ ೧೬ ॥

ಸರ್ವಾಶ್ರಮಾನುಪಾದಾಯ ಸ್ವಾಶ್ರಮೇಣ ಕಲತ್ರವಾನ್ ।
ವ್ಯಸನಾರ್ಣವಮತ್ಯೇತಿ ಜಲಯಾನೈರ್ಯಥಾರ್ಣವಮ್ ॥ ೧೭ ॥

ಇತಿಹಾಸವನ್ನು ವರ್ಣಿಸಿದ್ದರು. ನಾನೂ ಪರಂಪರೆಯಿಂದ ಕೇಳಿದ್ದೇನೆ. ॥ ೬ ॥

ವಿದುರನೇ! ಹಿಂದೊಮ್ಮೆ ದಕ್ಷಪ್ರಜಾಪತಿಯ ಪುತ್ರಿಯಾದ ದಿತಿಯು ಪುತ್ರಪ್ರಾಪ್ತಿಯ ಬಯಕೆಯಿಂದ ಕಾಮಾತುರಳಾಗಿ ಪತಿಯಾದ, ಮರೀಚಿ ಪುತ್ರರಾದ ಕಶ್ಯಪಮಹರ್ಷಿಯ ಬಳಿಗೆ ಸಾಯಂ ಸಂಧ್ಯಾಸಮಯದಲ್ಲಿ ಹೋಗಿ ಪ್ರಾರ್ಥಿಸಿದಳು. ॥ ೭ ॥ ಕಶ್ಯಪರು ಆಗ ಕ್ಷೀರದ ಆಹುತಿಗಳಿಂದ ಅಗ್ನಿಜಿಹ್ವ ಭಗವಾನ್ ಯಜ್ಞಪತಿಯನ್ನು ಆರಾಧನೆಮಾಡಿ ಸೂರ್ಯಾಸ್ತದ ಸಮಯವನ್ನು ಗಮನಿಸಿ ಅಗ್ನಿಶಾಲೆಯಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದರು. ॥ ೮ ॥

**ದಿತಿಯು ಹೇಳಿದಳು** – ಜ್ಞಾನಿಶ್ರೇಷ್ಠರೇ! ಮದಭರಿತ ಆನೆಯು ಬಾಳೆಯ ಗಿಡವನ್ನು ಹೊಸಕಿ ಹಾಕುವಂತೆಯೇ ಈ ಪ್ರಸಿದ್ಧ ಬಿಲ್ಲುಗಾರನಾದ ಮನ್ಮಥನು ಅಬಲೆಯಾಗಿರುವ ನನ್ನನ್ನು ನಿಮ್ಮ ವಿಷಯದಲ್ಲಿ ಹುರಿದುಂಬಿಸಿ ಸತಾಯಿಸುತ್ತಿದ್ದಾನೆ. ॥ ೯ ॥ ನನ್ನ ಸವತಿಯರು ಪುತ್ರವತಿಯಾಗಿ ಸಮೃದ್ಧರಾಗಿರುವುದನ್ನು ನೋಡಿ ನನ್ನ ಮನಸ್ಸು ಅಸೂಯೆಯಿಂದ ಉರಿಯುತ್ತಿದೆ. ಆದ್ದರಿಂದ ನೀವು ನನ್ನ ಮೇಲೆ ಕೃಪೆದೋರಿರಿ. ನಿಮಗೆ ಮಂಗಳವಾಗಲಿ. ॥ ೧೦ ॥ ನಿಮ್ಮಂತಹ ಪತಿಯು ನನ್ನಲ್ಲಿ ಗರ್ಭವನ್ನಿರಿಸಿ ಪುತ್ರರೂಪದಿಂದ ಜನಿಸಿದರೆತಾನೇ, ಸ್ತ್ರೀಯರಿಗೆ ಪತಿಯು ಸನ್ಮಾನ ಮಾಡಿದಂತಾಗುತ್ತದೆ. ಅವಳ ಕೀರ್ತಿಯೇ ಪ್ರಪಂಚದಲ್ಲಿ ಹರಡುತ್ತದಲ್ಲ! ॥ ೧೧ ॥ ನಮ್ಮ ತಂದೆಯಾದ ದಕ್ಷಪ್ರಜಾಪತಿಗೆ ಪುತ್ರಿಯರ ಮೇಲೆ ಬಹಳ ಸ್ನೇಹವಿತ್ತು. ಅವನು ನಮ್ಮನ್ನು ಒಬ್ಬೊಬ್ಬರನ್ನಾಗಿ ಕರೆದು – 'ನೀನು ಯಾರನ್ನು ಪತಿಯನ್ನಾಗಿ ವರಿಸುತ್ತಿಯೇ ?' ಎಂದು ಕೇಳಿದನು. ॥ ೧೨ ॥ ಅವರು ತಮ್ಮ ಸಂತಾನದ ಬಗೆಗೆ ಎಲ್ಲ ರೀತಿಯಿಂದ ಗಮನವಿಡುತ್ತಿದ್ದರು. ಆದ್ದರಿಂದ ನಮ್ಮ ಅಭಿಪ್ರಾಯವನ್ನು ತಿಳಿದು ಅವನು – ನಿಮಗೆ ಗುಣಸ್ವಭಾವದಿಂದ ಅನುರೂಪರಾದ ಹದಿಮೂರು ಮಂದಿ ಪುತ್ರಿಯರಾದ ನಮ್ಮನ್ನು ನಿಮ್ಮೊಂದಿಗೆ ವಿವಾಹಮಾಡಿ ಕೊಟ್ಟನು. ॥ ೧೩ ॥ ಆದ್ದರಿಂದ ಮಂಗಳ ಮೂರ್ತಿಯೇ! ಕಮಲನಯನನೇ! ನನ್ನ ಇಷ್ಟಾರ್ಥವನ್ನು ಈಡೇರಿಸಿ ಕೊಡಿರಿ. ಏಕೆಂದರೆ, ಮಹಾತ್ಮರೇ! ನಿಮ್ಮಂತಹ ಮಹಾಪುರುಷರ ಬಳಿಗೆ ಬಂದ ದೀನಜನರ ಇಷ್ಟಾರ್ಥವು ಕೈಗೂಡದಿರುವುದಿಲ್ಲ. ॥ ೧೪ ॥

ವಿದುರನೇ! ಹೀಗೆ ಕಾಮನವೇಗದಿಂದ ಅತ್ಯಂತ ಪೀಡಿತಳಾದ ದಿತಿಯು ದೈನ್ಯದಿಂದ ಅಂಗಲಾಚಿ ಬಹಳವಾಗಿ ಬೇಡಿಕೊಳ್ಳುತ್ತಿರುವ ಪತ್ನಿಯನ್ನು ಸವಿಮಾತುಗಳಿಂದ ಸಂತೈಸುತ್ತಾ ಕಶ್ಯಪರು ಹೇಳಿದರು – ॥ ೧೫ ॥ ಎಲೈ ಭೀರುವೇ! ನಿನ್ನ ಬಯಕೆಯಂತೆ ನಿನಗೆ ಪ್ರಿಯವಾದುದನ್ನು ಅವಶ್ಯವಾಗಿ ಮಾಡುವೆನು. ಧರ್ಮ, ಅರ್ಥ, ಕಾಮ ಎಂಬ ಮೂರು ಪುರುಷಾರ್ಥಗಳ ಸಿದ್ಧಿಗೆ ಸಾಧನವಾಗಿರುವ ಪತ್ನಿಯ ಕಾಮನೆಯನ್ನು ಯಾವ ಪತಿಯು ತಾನೇ ಪೂರೈಸುವುದಿಲ್ಲ? ॥ ೧೬ ॥ ಮನುಷ್ಯನು ಹಡಗನ್ನು ಹತ್ತಿ ಸಮುದ್ರವನ್ನು ದಾಟುವಂತೆ – ಗೃಹಸ್ಥಾಶ್ರಮಿಯು ಇತರ ಆಶ್ರಮಗಳಿಗೂ ಆಶ್ರಯ ನೀಡುತ್ತಾ ತನ್ನ ಪತ್ನಿಯಿಂದೊಡಗೂಡಿ ಆಶ್ರಮಧರ್ಮಗಳ ಮೂಲಕ ಸ್ವಯಂ ದುಃಖಸಾಗರವನ್ನು ದಾಟಿಬಿಡುವನು. ॥ ೧೭ ॥ ಎಲೈ ಮಾನಿನಿಯೇ! ತ್ರಿವಿಧ ಪುರುಷಾರ್ಥದ

ಯಾಮಾಹುರಾತ್ಮನೋ ಹ್ಯರ್ಧಂ ಶ್ರೇಯಸ್ಕಾಮಸ್ಯ ಮಾನಿನಿ ।
ಯಸ್ಯಾಂ ಸ್ವಧುರಮಧ್ಯಸ್ಯ ಪುಮಾಂಶ್ಚರತಿ ವಿಜ್ವರಃ ॥ ೧೮ ॥

ಯಾಮಾಶ್ರಿತ್ಯೇಂದ್ರಿಯಾರಾತೀನ್ ದುರ್ಜಯಾನಿತರಾಶ್ರಮೈಃ ।
ವಯಂ ಜಯೇಮ ಹೇಲಾಭಿರ್ದಸ್ಯೂನ್ ದುರ್ಗಪತಿರ್ಯಥಾ ॥ ೧೯ ॥

ನ ವಯಂ ಪ್ರಭವಸ್ತಾಂ ತ್ವಾಮನುಕರ್ತುಂ ಗೃಹೇಶ್ವರಿ ।
ಅಪ್ಯಾಯುಷಾ ವಾ ಕಾರ್ತ್ಸ್ನ್ಯೇನ ಯೇ ಚಾನ್ಯೇ ಗುಣಗೃಧ್ನವಃ ॥ ೨೦ ॥

ಅಥಾಪಿ ಕಾಮಮೇತಂ ತೇ ಪ್ರಜಾತ್ಯೈ ಕರವಾಣ್ಯಲಮ್ ।
ಯಥಾ ಮಾಂ ನಾತಿವೋಚಂತಿ ಮುಹೂರ್ತಂ ಪ್ರತಿಪಾಲಯ ॥ ೨೧ ॥

ಏಷಾ ಘೋರತಮಾ ವೇಲಾ ಘೋರಾಣಾಂ ಘೋರದರ್ಶನಾ ।
ಚರಂತಿ ಯಸ್ಯಾಂ ಭೂತಾನಿ ಭೂತೇಶಾನುಚರಾಣಿ ಹ ॥ ೨೨ ॥

ಏತಸ್ಯಾಂ ಸಾಧ್ವಿ ಸಂಧ್ಯಾಯಾಂ ಭಗವಾನ್ಭೂತಭಾವನಃ ।
ಪರೀತೋ ಭೂತಪರ್ಷದ್ಭಿರ್ವೃಷೇಣಾಟತಿ ಭೂತರಾಟ್ ॥ ೨೩ ॥

ಶ್ಮಶಾನಚಕ್ರಾನಿಲಧೂಲಿಧೂಮ್ರ-
ವಿಕೀರ್ಣವಿದ್ಯೋತಜಟಾಕಲಾಪಃ ।
ಭಸ್ಮಾವಗುಂಠಾಮಲರುಕ್ಮದೇಹೋ
ದೇವಸ್ತ್ರಿಭಿಃ ಪಶ್ಯತಿ ದೇವರಸ್ತೇ ॥ ೨೪ ॥

ನ ಯಸ್ಯ ಲೋಕೇ ಸ್ವಜನಃ ಪರೋ ವಾ
ನಾತ್ಯಾದೃತೋ ನೋತ ಕಶ್ಚಿದ್ವಿಗರ್ಹ್ಯಃ ।
ವಯಂ ವ್ರತೈರ್ಯಚ್ಚರಣಾಪವಿದ್ಧಾ-
ಮಾಶಾಸ್ಮಹೇಽಜಾಂ ಬತ ಭುಕ್ತಭೋಗಾಮ್ ॥ ೨೫ ॥

ಯಸ್ಯಾನವದ್ಯಾಚರಿತಂ ಮನೀಷಿಣೋ
ಗೃಣಂತ್ಯವಿದ್ಯಾಪಟಲಂ ಬಿಭಿತ್ಸವಃ ।
ನಿರಸ್ತಸಾಮ್ಯಾತಿಶಯೋಽಪಿ ಯತ್ಸ್ವಯಂ
ಪಿಶಾಚಚರ್ಯಾಮಚರದ್ಗತಿಃ ಸತಾಮ್ ॥ ೨೬ ॥

ಬಯಸಿಕೆಯುಳ್ಳ ಪುರುಷನಿಗೆ ಪತ್ನಿಯು ಶರೀರದ ಅರ್ಧಭಾಗವೇ ಆಗಿದ್ದಾಳೆ ಎಂದು ಹೇಳಲಾಗಿದೆ. ಅವಳ ಮೇಲೆ ತನ್ನ ಆಶ್ರಮದ ಭಾರವನ್ನು ಇರಿಸಿ ಗೃಹಸ್ಥನು ನಿಶ್ಚಿಂತವಾಗಿ ಸಂಚರಿಸುತ್ತಾನೆ. ॥ ೧೮ ॥ ಇತರ ಆಶ್ರಮಗಳಲ್ಲಿರುವವರಿಗೆ ಇಂದ್ರಿಯಗಳೆಂಬ ಶತ್ರುವನ್ನು ಗೆಲ್ಲುವುದು ಕಷ್ಟ. ಆದರೆ ಕೋಟೆ-ಕೊತ್ತಲಗಳ ಆಶ್ರಯದಲ್ಲಿರುವ ದುರ್ಗಪತಿಯು ಲೂಟಿಮಾಡುವ ಕಳ್ಳ-ಕಾಕರನ್ನು ಸುಲಭವಾಗಿ ನಿಗ್ರಹಿಸುತ್ತಾನೆ. ಹಾಗೆಯೇ ನಾವು ಪತ್ನಿಯ ಆಶ್ರಯದಿಂದ ಈ ಇಂದ್ರಿಯಗಳೆಂಬ ಶತ್ರುಗಳನ್ನು ಸುಲಭವಾಗಿ ಗೆದ್ದುಕೊಳ್ಳುವೆವು. ॥ ೧೯ ॥ ಎಲೈ ಗೃಹೇಶ್ವರಿಯೇ! ನಿನ್ನಂತಹ ಪತ್ನಿಯರು ಮಾಡುವ ಉಪಕಾರವನ್ನು ನಾನಾಗಲೀ ಅಥವಾ ಇತರ ಯಾರೇ ಗುಣಗ್ರಾಹೀ ಪುರುಷನಾಗಲೀ ತನ್ನ ಇಡೀ ಆಯುಷ್ಯದಲ್ಲಿ ಅಥವಾ ಜನ್ಮಾಂತರದಲ್ಲಿಯೂ ಪೂರ್ಣವಾಗಿ ತೀರಿಸಲಾರನು. ॥ ೨೦ ॥ ಆದರೂ ಸಂತಾನವನ್ನು ಪಡೆಯಬೇಕೆಂಬ ನಿನ್ನ ಇಚ್ಛೆಯನ್ನು ನಾನು ಅವಶ್ಯವಾಗಿ ಈಡೇರಿಸುವೆನು. ಆದರೆ ನೀನು ಮುಹೂರ್ತಕಾಲ ಕಾಯಬೇಕು. ಹೀಗಾದರೆ ನಾನು ಲೋಕನಿಂದೆಗೆ ಗುರಿಯಾಗುವುದಿಲ್ಲ. ॥ ೨೧ ॥ ಈ ಸಂಧ್ಯಾಸಮಯವು ಅತ್ಯಂತ ಘೋರವಾದಕಾಲ. ರಾಕ್ಷಸಾದಿ ಘೋರಜೀವಿಗಳು ವಿಹರಿಸುವ ಕಾಲವು. ಇದು ಭಗವಾನ್ ಭೂತನಾಥನ ಗಣಗಳಾದ ಭೂತಬೇತಾಳಾದಿಗಳು ಓಡಾಡುತ್ತಿರುವ ಭೀಕರವಾದ ಸಮಯ. ॥ ೨೨ ॥ ಎಲೈ ಸಾಧ್ವಿಯೇ ! ಈ ಸಂಧ್ಯಾಕಾಲದಲ್ಲಿ ಭಗವಾನ್ ಭೂತಪತಿಯಾದ ರುದ್ರದೇವರು ವೃಷಭವನ್ನೇರಿ ತನ್ನ ಗಣಗಳೊಡನೆ ಸಂಚರಿಸುತ್ತಾ ಇರುತ್ತಾನೆ. ॥ ೨೩ ॥ ಆತನ ಜಡೆಗಳು ಸ್ಮಶಾನದಲ್ಲಿ ಬೀಸುವ ಬಿರುಗಾಳಿಯಿಂದ ಕೆದರಿ ಧೂಳಿನಿಂದ ಧೂಸರಿತವಾಗಿವೆ. ಅವನು ಬಂಗಾರದಂತೆ ಹೊಳೆಯುತ್ತಿರುವ ತನ್ನ ದೇಹಕ್ಕೆಲ್ಲಾ ವಿಭೂತಿಯನ್ನು ಹಚ್ಚಿಕೊಂಡಿರುವನು. ಇಂತಹ ಪೂಜ್ಯನಾದ ಸತೀರಮಣನಾದ ನಿನ್ನ ಭಾವನು ತನ್ನ ಸೂರ್ಯ, ಚಂದ್ರ, ಅಗ್ನಿ ಎಂಬ ಮೂರು ಕಣ್ಣುಗಳಿಂದ ಎಲ್ಲರನ್ನೂ ನೋಡುತ್ತಿರುತ್ತಾನೆ. ॥ ೨೪ ॥ ಅವನಿಗೆ ಪ್ರಪಂಚದಲ್ಲಿ ಯಾರೂ ತನ್ನವರು-ಬೇರೆಯವರು, ಬೇಕಾದವರು-ಬೇಡವಾದವರು, ಆದರಣೀಯರು- ನಿಂದನೀಯರು ಎಂಬ ಭೇದವಿಲ್ಲ. ನಾವಾದರೋ ಅನೇಕ ವ್ರತಗಳನ್ನು ಆಚರಿಸುತ್ತಾ, ಆತನು ಭೋಗಿಸಿ ಕಾಲಿನಿಂದ ಒದ್ದು ತಳ್ಳಿರುವ ಮಾಯೆಯನ್ನೇ ಸ್ವೀಕರಿಸಲು ಬಯಸುತ್ತಿರುವವರು. ॥ ೨೫ ॥ ವಿವೇಕಿಗಳಾದ ಜನರು ಅವಿದ್ಯೆಯ ಆವರಣವನ್ನು ಭೇದಿಸುವ ಇಚ್ಛೆಯಿಂದ ಅವನ ನಿರ್ಮಲವಾದ ಚರಿತ್ರವನ್ನು ಹಾಡುತ್ತಿರುತ್ತಾರೆ. ಅವನಿಗಿಂತ ಮಿಗಿಲಾದವರಿರಲಿ, ಅವನಿಗೆ ಸಮಾನರಾದವರೂ ಯಾರೂ ಇಲ್ಲ. ಸತ್ಪುರುಷರು ಮಾತ್ರವೇ ಆತನನ್ನು ತಲುಪಬಲ್ಲರು. ಇಷ್ಟೆಲ್ಲ ಇದ್ದರೂ ಅವನು ಪಿಶಾಚದಂತೆ ಆಚರಣೆಯನ್ನು ತೋರುತ್ತಾನೆ. ಇದು ಲೋಕವಿಡಂಬನೆಗಾಗಿಯೇ ಇದೆ. ॥ ೨೬ ॥ ಈ ಶರೀರವು ನರಿ-ನಾಯಿಗಳ ಆಹಾರವಾಗುವುದು. ಅವಿವೇಕಿಗಳು ಇದನ್ನೇ ಆತ್ಮವೆಂದು ಭ್ರಮಿಸಿ ಇದನ್ನು ವಸ್ತ್ರ

ಹಸಂತಿ ಯಸ್ಯಾಚರಿತಂ ಹಿ ದುರ್ಭಗಾಃ
ಸ್ವಾತ್ಮನ್‌ರತಸ್ಯಾವಿದುಷಃ ಸಮೀಹಿತಮ್ ।
ಯೈರ್ವಸ್ತ್ರಮಾಲ್ಯಾಭರಣಾನುಲೇಪನೈಃ
ಶ್ವಭೋಜನಂ ಸ್ವಾತ್ಮತಯೋಪಲಾಲಿತಮ್ ॥ ೨೭ ॥

ಬ್ರಹ್ಮಾದಯೋ ಯತ್ಕೃತಸೇತುಪಾಲಾ
ಯತ್ಕಾರಣಂ ವಿಶ್ವಮಿದಂ ಚ ಮಾಯಾ ।
ಆಜ್ಞಾಕರೀ ತಸ್ಯ ಪಿಶಾಚಚರ್ಯಾ
ಅಹೋ ವಿಭೂಮ್ನಶ್ಚರಿತಂ ವಿಡಂಬನಮ್ ॥ ೨೮ ॥

ಮೈತ್ರೇಯ ಉವಾಚ

ಸೈವಂ ಸಂವಿದಿತೇ ಭರ್ತ್ರಾ ಮನ್ಮಥೋನ್ಮಥಿತೇಂದ್ರಿಯಾ ।
ಜಗ್ರಾಹ ವಾಸೋ ಬ್ರಹ್ಮರ್ಷೇರ್ವೃಷಲೀವ ಗತತ್ರಪಾ ॥ ೨೯ ॥

ಸ ವಿದಿತ್ವಾಥ ಭಾರ್ಯಾಯಾಸ್ತಂ ನಿರ್ಬಂಧಂ ವಿಕರ್ಮಣಿ ।
ನತ್ವಾ ದಿಷ್ಟಾಯ ರಹಸಿ ತಯಾಥೋಪವಿವೇಶ ಹ ॥ ೩೦ ॥

ಅಥೋಪಸ್ಪೃಶ್ಯ ಸಲಿಲಂ ಪ್ರಾಣಾನಾಯಮ್ಯ ವಾಗ್ಯತಃ ।
ಧ್ಯಾಯನ್‌ಜಜಾಪ ವಿರಜಂ ಬ್ರಹ್ಮ ಜ್ಯೋತಿಃ ಸನಾತನಮ್ ॥ ೩೧ ॥

ದಿತಿಸ್ತು ವ್ರೀಡಿತಾ ತೇನ ಕರ್ಮಾವದ್ಯೇನ ಭಾರತ ।
ಉಪಸಂಗಮ್ಯ ವಿಪ್ರರ್ಷಿಮಧೋಮುಖ್ಯಭ್ಯಭಾಷತ ॥ ೩೨ ॥

ದಿತಿರುವಾಚ

ಮಾ ಮೇ ಗರ್ಭಮಿದಂ ಬ್ರಹ್ಮನ್ಭೂತಾನಾಮೃಷಭೋಽವಧೀತ್ ।
ರುದ್ರಃ ಪತಿರ್ಹಿ ಭೂತಾನಾಂ ಯಸ್ಯಾಕರವಮಂಹಸಮ್ ॥ ೩೩ ॥

ನಮೋ ರುದ್ರಾಯ ಮಹತೇ ದೇವಾಯೋಗ್ರಾಯ ಮೀಢುಷೇ ।
ಶಿವಾಯ ನ್ಯಸ್ತದಂಡಾಯ ಧೃತದಂಡಾಯ ಮನ್ಯವೇ ॥ ೩೪ ॥

ಸ ನಃ ಪ್ರಸೀದತಾಂ ಭಾಮೋ ಭಗವಾನುರ್ವನುಗ್ರಹಃ ।
ವ್ಯಾಧಸ್ಯಾಪ್ಯನುಕಂಪ್ಯಾನಾಂ ಸ್ತ್ರೀಣಾಂ ದೇವಃ ಸತೀಪತಿಃ ॥ ೩೫ ॥

ಮೈತ್ರೇಯ ಉವಾಚ

ಸ್ವಸರ್ಗಸ್ಯಾಶಿಷಂ ಲೋಕ್ಯಾಮಾಶಾಸಾನಾಂ ಪ್ರವೇಪತೀಮ್ ।
ನಿವೃತ್ತಸಂಧ್ಯಾನಿಯಮೋ ಭಾರ್ಯಾಮಾಹ ಪ್ರಜಾಪತಿಃ ॥ ೩೬ ॥

ಒಡವೆ, ಗಂಧ, ಮಾಲೆ ಇವುಗಳಿಂದ ಅಲಂಕರಿಸುತ್ತಿರುತ್ತಾರೆ. ಇಂತಹ ದುರದೃಷ್ಟಶಾಲಿಗಳು ಆತ್ಮಾರಾಮನಾಗಿರುವ ಭಗವಾನ್ ಶಂಕರನ ಆಚರಣೆಗಳಿಗೆ ನಗುತ್ತಿರುತ್ತಾರೆ. ॥ ೨೭ ॥ ನಮ್ಮ ವಿಷಯ ಹಾಗಿರಲಿ. ಬ್ರಹ್ಮಾದಿ ಲೋಕಪಾಲರೂ ಕೂಡ ಆತನು ಕಟ್ಟಿರುವ, ನಿರ್ದೇಶಿಸಿರುವ ಧರ್ಮಮರ್ಯಾದೆಯನ್ನೇ ಅನುಸರಿಸುತ್ತಾರೆ. ಅವನೇ ಈ ವಿಶ್ವದ ಅಧಿಷ್ಠಾನನಾಗಿದ್ದಾನೆ. ಈ ಮಾಯೆಯೂ ಅವನ ಆಜ್ಞೆಯನ್ನು ಪಾಲಿಸುವಳು. ಹೀಗಿದ್ದರೂ ಆತನು ಪ್ರೇತಗಳಂತೆ ನಡೆದುಕೊಳ್ಳುತ್ತಾನೆ. ಅಬ್ಬಾ! ಎಂತಹ ಅದ್ಭುತ ಲೀಲೆಯಿದು! ಜಗದ್ವ್ಯಾಪಕನಾದ ಪ್ರಭುವು ಮಾಡುತ್ತಿರುವ ಈ ಲೀಲೆಗಳು ಸ್ವಲ್ಪವೂ ಅರ್ಥವಾಗುವುದಿಲ್ಲ. ॥ ೨೮ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಪತಿಯು ಈ ಪ್ರಕಾರ ತಿಳಿವಳಿಕೆ ನೀಡಿದರೂ ಕಾಮಾತುರಳಾದ ದಿತಿಯು ವೇಶ್ಯೆಯಂತೆ ನಾಚಿಕೆಬಿಟ್ಟು ಬ್ರಹ್ಮರ್ಷಿ ಕಶ್ಯಪರ ವಸ್ತ್ರವನ್ನು ಹಿಡಿದುಕೊಂಡಳು. ॥ ೨೯ ॥ ಆಗ ಕಶ್ಯಪರು ಭಾರ್ಯೆಯ ನಿಂದಿತವಾದ ಕರ್ಮದಲ್ಲಿರುವ ಆಗ್ರಹವನ್ನು ಕಂಡು 'ದೈವೇಚ್ಛೆ ಇದ್ದಂತಾಗಲಿ' ಎಂದು ದೈವಕ್ಕೆ ಕೈಮುಗಿದು ಏಕಾಂತದಲ್ಲಿ ಆಕೆಯೊಡನೆ ಸಮಾಗಮ ಮಾಡಿದರು. ॥ ೩೦ ॥ ಅನಂತರ ಸ್ನಾನ ಮಾಡಿ ಮೌನಿಯಾಗಿ, ಪ್ರಾಣಾಯಾಮಮಾಡಿ ಪರಿಶುದ್ಧವೂ, ಜ್ಯೋತಿರ್ಮಯವೂ, ಸನಾತನವೂ ಆದ ಪರಬ್ರಹ್ಮವನ್ನು ಧ್ಯಾನಿಸುತ್ತಾ, ಅವನನ್ನೇ ಕುರಿತು ಜಪ ಮಾಡತೊಡಗಿದರು. ॥ ೩೧ ॥ ವಿದುರನೇ! ದಿತಿಗೂ ತಾನು ಮಾಡಿದ ನಿಂದ್ಯವಾದ ಕರ್ಮದ ಬಗ್ಗೆ ತುಂಬಾ ನಾಚಿಕೆಯಾಗಿ, ಆಕೆಯು ಬ್ರಹ್ಮರ್ಷಿಯ ಬಳಿಗೆ ಬಂದು ತಲೆತಗ್ಗಿಸಿಕೊಂಡು ಹೀಗೆ ಹೇಳತೊಡಗಿದಳು. ॥ ೩೨ ॥

**ದಿತಿಯು ಹೇಳುತ್ತಾಳೆ** – ಓ ಬ್ರಹ್ಮರ್ಷಿಯೇ! ಭಗವಾನ್ ರುದ್ರನು ಭೂತಗಳ ಸ್ವಾಮಿಯು. ಆತನ ಕುರಿತು ನಾನು ಅಪರಾಧವನ್ನೆಸಗಿದ್ದೇನೆ. ಆದರೂ ಆ ಭೂತಶ್ರೇಷ್ಠನಾದ ದೇವನು ನನ್ನ ಗರ್ಭವನ್ನು ನಾಶಮಾಡದಿರಲಿ. ॥ ೩೩ ॥ ಮಹಾದೇವನಾದ ರುದ್ರನಿಗೆ ನಮಸ್ಕಾರವು. ಉಗ್ರನಾಗಿದ್ದರೂ ಭಕ್ತರ ಇಷ್ಟಾರ್ಥಗಳನ್ನು ಈಡೇರಿಸುವ ಶಿವನಿಗೆ ನಮಸ್ಕಾರವು. ಸತ್ಪುರುಷರ ವಿಷಯದಲ್ಲಿ ದಂಡವನ್ನು ಬಳಸದೆ, ದುಷ್ಟರ ವಿಷಯದಲ್ಲಿಯೇ ದಂಡಪಾಣಿಯಾದ ಕ್ರೋಧಮೂರ್ತಿಗೆ ನಮೋ ನಮಃ ॥ ೩೪ ॥ ಹೆಂಗಸರಾದ ನಮ್ಮ ಮೇಲಾದರೋ ಪ್ರಾಣಹಿಂಸೆಮಾಡುವ ಬೇಡರೂ ಕೂಡ ದಯೆ ತೋರಿಸುವರು. ಹೀಗಿರುವಾಗ ಪರಮ ಕರುಣಾಳುವೂ, ಸತೀಪತಿಯೂ ನನಗೆ ಭಾವನೂ ಆಗಿರುವ ಶಂಕರನು ನನ್ನ ಮೇಲೆ ಪ್ರಸನ್ನನಾಗಲೀ. ॥ ೩೫ ॥

**ಶ್ರೀಮೈತ್ರೇಯರು ಹೇಳಿದರು** – ಎಲೈ ವಿದುರನೇ! ಪ್ರಜಾಪತಿ ಕಶ್ಯಪರು ಸಾಯಂ ಸಂಧ್ಯಾವಂದನಾದಿಗಳನ್ನು ಮುಗಿಸಿಕೊಂಡು ದಿತಿಯನ್ನು ಗಮನಿಸಿದರು. ಆಕೆಯು ಗಡ-ಗಡನೆ ನಡುಗುತ್ತಾ ತನ್ನ ಸಂತಾನದ ಲೌಕಿಕ ಮತ್ತು ಪಾರಲೌಕಿಕ ಉನ್ನತಿಗಾಗಿ ಪ್ರಾರ್ಥಿಸುತ್ತಿದ್ದಳು. ಆಗ ಕಶ್ಯಪರು ಆವಳಿಗೆ ಹೇಳಿದರು – ॥ ೩೬ ॥

*ಕಶ್ಯಪ ಉವಾಚ*

ಅಪ್ರಾಯತ್ಯಾದಾತ್ಮನಸ್ತೇ ದೋಷಾನ್ಮೌಹೂರ್ತಿಕಾದುತ ।
ಮನ್ನಿದೇಶಾತಿಚಾರೇಣ ದೇವಾನಾಂ ಚಾತಿಹೇಲನಾತ್ ॥ ೩೭ ॥

ಭವಿಷ್ಯತಸ್ತವಾಭದ್ರಾವಭದ್ರೇ ಜಾತರಾಧಮೌ ।
ಲೋಕಾನ್ಸಪಾಲಾಂಸ್ತ್ರೀಂಶ್ಚಂಡಿ ಮುಹುರಾಕ್ರಂದಯಿಷ್ಯತಃ ॥ ೩೮ ॥

ಪ್ರಾಣಿನಾಂ ಹನ್ಯಮಾನಾನಾಂ ದೀನಾನಾಮಕೃತಾಗಸಾಮ್ ।
ಸ್ತ್ರೀಣಾಂ ನಿಗೃಹ್ಯಮಾಣಾನಾಂ ಕೋಪಿತೇಷು ಮಹಾತ್ಮಸು ॥ ೩೯ ॥

ತದಾ ವಿಶ್ವೇಶ್ವರಃ ಕ್ರುದ್ಧೋ ಭಗವಾಲ್ಲೋಕಭಾವನಃ ।
ಹನಿಷ್ಯತ್ಯವತೀರ್ಯಾಸೌ ಯಥಾದ್ರೀನ್ ಶತಪರ್ವಧೃಕ್ ॥ ೪೦ ॥

*ದಿತಿರುವಾಚ*

ವಧಂ ಭಗವತಾ ಸಾಕ್ಷಾತ್ಸುನಾಭೋದಾರಬಾಹುನಾ ।
ಆಶಾಸೇ ಪುತ್ರಯೋರ್ಮಹ್ಯಂ ಮಾ ಕ್ರುದ್ಧಾದ್ಬ್ರಾಹ್ಮಣಾದ್ವಿಭೋ ॥ ೪೧ ॥

ನ ಬ್ರಹ್ಮದಂಡದಗ್ಧಸ್ಯ ನ ಭೂತಭಯದಸ್ಯ ಚ ।
ನಾರಕಾಶ್ಚಾನುಗೃಹ್ಣಂತಿ ಯಾಂ ಯಾಂ ಯೋನಿಮಸೌ ಗತಃ ॥ ೪೨ ॥

*ಕಶ್ಯಪ ಉವಾಚ*

ಕೃತಶೋಕಾನುತಾಪೇನ ಸದ್ಯಃ ಪ್ರತ್ಯವಮರ್ಶನಾತ್ ।
ಭಗವತ್ಯುರುಮಾನಾಚ್ಚ ಭವೇ ಮಯ್ಯಪಿ ಚಾದರಾತ್ ॥ ೪೩ ॥

ಪುತ್ರಸ್ಯೈವ ತು ಪುತ್ರಾಣಾಂ ಭವಿತೈಕಃ ಸತಾಂ ಮತಃ ।
ಗಾಸ್ಯಂತಿ ಯದ್ಯಶಃ ಶುದ್ಧಂ ಭಗವದ್ಯಶಸಾ ಸಮಮ್ ॥ ೪೪ ॥

ಯೋಗೈರ್ಹೇಮೇವ ದುರ್ವರ್ಣಂ ಭಾವಯಿಷ್ಯಂತಿ ಸಾಧವಃ ।
ನಿರ್ವೈರಾದಿಭಿರಾತ್ಮಾನಂ ಯಚ್ಛೀಲಮನುವರ್ತಿತುಮ್ ॥ ೪೫ ॥

ಯತ್ಪ್ರಸಾದಾದಿದಂ ವಿಶ್ವಂ ಪ್ರಸೀದತಿ ಯದಾತ್ಮಕಮ್ ।
ಸ ಸ್ವದೃಗ್ಭಗವಾನ್ಯಸ್ಯ ತೋಷ್ಯತೇಽನನ್ಯಯಾ ದೃಶಾ ॥ ೪೬ ॥

**ಕಶ್ಯಪರು ಇಂತೆಂದರು** – 'ನಿನ್ನ ಚಿತ್ತವು ದುಷ್ಕಾಮದಿಂದ ಕಲುಷಿತವಾಗಿತ್ತು. ನೀನು ಸಮಾಗಮ ಮಾಡಿದ ಸಮಯವೂ ಅಶುಭವಾಗಿತ್ತು. ನೀನು ನನ್ನ ಮಾತನ್ನೂ ಗೌರವಿಸಲಿಲ್ಲ. ದೇವತೆಗಳಿಗೂ ಅಪಚಾರವೆಸಗಿದೆ. ॥ ೩೭ ॥ ಎಲೈ ಅಮಂಗಳ ವಾದ ಚಂಡಿಯೇ! ನಿನ್ನ ಗರ್ಭದಿಂದ ಅಮಂಗಳರೂ, ಅಧ ಮರೂ ಆದ ಇಬ್ಬರು ಪುತ್ರರು ಹುಟ್ಟುವರು. ಅವರು ತಮ್ಮ ಅತ್ಯಾಚಾರದಿಂದ ಸಮಸ್ತ ಲೋಕವನ್ನೂ, ಲೋಕಪಾಲಕರನ್ನೂ ಪದೇ-ಪದೇ ಅಳುವಂತೆ ಮಾಡುವರು. ॥ ೩೮ ॥ ಅವರ ಕೈಯಿಂದ ನೂರಾರು ನಿರಪರಾಧಿಗಳೂ, ದೀನರೂ ಆದ ಪ್ರಾಣಿ ಗಳು ಕೊಲ್ಲಲ್ಪಡುವುವು. ಸ್ತ್ರೀಯರ ಮೇಲೆ ಅತ್ಯಾಚಾರ ನಡೆ ಯುವುದು. ಮಹಾತ್ಮರನ್ನು ಕ್ಷುಬ್ಧಗೊಳಿಸಲಾಗುವುದು. ಆಗ ಸರ್ವ ಲೋಕರಕ್ಷಕ ನಾದ ಜಗದೀಶ್ವರನು ಕ್ರುದ್ಧನಾಗಿ ಭುವಿಯಲ್ಲಿ ಅವತರಿಸಿ – ಇಂದ್ರನು ಪರ್ವತಗಳನ್ನು ನಿಗ್ರಹಿಸಿದಂತೆ ಅವರನ್ನು ವಧಿಸುವನು. ॥ ೩೯-೪೦ ॥

**ದಿತಿಯು ಪ್ರಾರ್ಥಿಸಿಕೊಂಡಳು** – ಸ್ವಾಮಿ! ನನ್ನ ಪುತ್ರರು ಕುಪಿತರಾದ ಬ್ರಾಹ್ಮಣರ ಶಾಪದಿಂದ ಸಾಯದೇ, ಭಗವಾನ್ ಸಾಕ್ಷಾತ್ ಚಕ್ರಪಾಣಿ ನಾರಾಯಣನ ಕೈಯಿಂದಲೇ ಮರಣ ಹೊಂದುವುದಾದರೆ ನನಗೂ ಸಮ್ಮತವೇ. ॥ ೪೧ ॥ ಯಾವ ಜೀವಿಯು ಬ್ರಾಹ್ಮಣರ ಶಾಪದಿಂದ ಸುಟ್ಟುಹೋದವನು ಅಥವಾ ಪ್ರಾಣಿಗಳನ್ನು ಭಯಪಡಿಸುವವನು ಯಾವುದೇ ಯೋನಿಯಲ್ಲಿ ಹುಟ್ಟಿದರೂ ಅವನ ಮೇಲೆ ನಾರಕೀಯ ಜೀವಿಗಳೂ ಕೂಡ ದಯಮಾಡುವುದಿಲ್ಲ. ॥ ೪೨ ॥

**ಕಶ್ಯಪರು ಹೇಳಿದರು** – ದೇವಿ! ನೀನು ಗೈದ ಪಾಪದ ಬಗೆಗೆ ಶೋಕವನ್ನೂ, ಪಶ್ಚಾತ್ತಾಪವನ್ನೂ ತೋರಿದ್ದೀಯೆ. ನಿನಗೆ ಉಚಿತ- ಅನುಚಿತ ಇದರ ವಿವೇಕವು ಒಡನೆಯೇ ಉಂಟಾಗಿದೆ. ಇದಲ್ಲದೆ ಭಗವಂತನಾದ ವಿಷ್ಣುವಿನಲ್ಲಿಯೂ, ಶಂಭುವಿನಲ್ಲಿಯೂ ಗೌರವ ವನ್ನೂ, ನನ್ನಲ್ಲಿ ಆದರವನ್ನೂ ತೋರಿಸಿರುವೆ. ಆದ್ದರಿಂದ ನಿನ್ನಲ್ಲಿ ಹುಟ್ಟುವ ಇಬ್ಬರು ಪುತ್ರರಲ್ಲಿ ಒಬ್ಬನಿಗೆ ನಾಲ್ವರು ಪುತ್ರರಾಗುವರು. ಅವರಲ್ಲಿ ಒಬ್ಬನು ಮಾತ್ರ ಸಾಧು-ಸಜ್ಜನ ಶಿರೋಮಣಿ ಯಾಗುವನು. ಸತ್ಪುರುಷರ ಗೌರವಕ್ಕೆ ಪಾತ್ರನಾಗಿ, ಆತನ ಪವಿತ್ರವಾದ ಕೀರ್ತಿಯನ್ನು ಭಕ್ತರು ಭಗವಂತನ ಗುಣ ಕೀರ್ತನೆಯೊಡನೆ ಸೇರಿಸಿ ಹಾಡುವರು. ॥ ೪೩-೪೪ ॥ ಬಣ್ಣಗೆಟ್ಟ ಚಿನ್ನವನ್ನು ಪದೇ-ಪದೇ ಪುಟಕ್ಕಿಟ್ಟು ಶುದ್ಧಗೊಳಿಸಿದಂತೆಯೇ, ಸಜ್ಜನರು ಆತನ ಆಚರಣೆಗಳನ್ನು ಅನುಸರಿಸುವುದಕ್ಕಾಗಿ ನಿರ್ವೈ ರತೆ ಮುಂತಾದ ಉಪಾಯಗಳಿಂದ ತಮ್ಮ ಅಂತಃಕರಣವನ್ನು ಶೋಧಿಸಿಕೊಳ್ಳುವರು. ॥ ೪೫ ॥ ಯಾರ ಕೃಪೆಯಿಂದ ಅವನ ಸ್ವರೂಪಭೂತವಾದ ಈ ಜಗತ್ತು ಆನಂದಿತವಾಗುತ್ತದೋ ಆ ಸ್ವಯಂ ಪ್ರಕಾಶ ಭಗವಂತನೂ ಕೂಡ ಆತನ ಅನನ್ಯ ಭಕ್ತಿಯಿಂದ ಸಂತುಷ್ಟನಾಗುವನು. ॥ ೪೬ ॥ ದಿತಿಯೇ! ಆ ಬಾಲಕನು ದೊಡ್ಡ ಭಗವದ್ಭಕ್ತನೂ, ಉದಾರ ಹೃದಯನೂ, ಪ್ರಭಾವಶಾಲಿಯೂ, ಮಹಾಪುರುಷರಿಗೂ ಪೂಜ್ಯನೂ ಆಗುವನು. ಪ್ರೌಢವಾದ ಭಕ್ತಿ

ಸ ವೈ ಮಹಾಭಾಗವತೋ ಮಹಾತ್ಮಾ
ಮಹಾನುಭಾವೋ ಮಹತಾಂ ಮಹಿಷ್ಠಃ ।
ಪ್ರವೃದ್ಧಭಕ್ತ್ಯಾ ಹ್ಯನುಭಾವಿತಾಶಯೇ
ನಿವೇಶ್ಯ ವೈಕುಂಠಮಿಮಂ ವಿಹಾಸ್ಯತಿ ॥ ೪೭ ॥

ಅಲಂಪಟಃ ಶೀಲಧರೋ ಗುಣಾಕರೋ
ಹೃಷ್ಟಃ ಪರರ್ಧ್ಯಾ ವ್ಯಥಿತೋ ದುಃಖಿತೇಷು ।
ಅಭೂತಶತ್ರುರ್ಜಗತಃ ಶೋಕಹರ್ತಾ
ನೈದಾಘಿಕಂ ತಾಪಮಿವೋಡುರಾಜಃ ॥ ೪೮ ॥

ಅಂತರ್ಬಹಿಶ್ಚಾಮಲಮಬ್ಜನೇತ್ರಂ
ಸ್ವಪೂರುಷೇಚ್ಛಾನುಗೃಹೀತರೂಪಮ್ ।
ಪೌತ್ರಸ್ತವ ಶ್ರೀಲಲನಾಲಲಾಮಂ
ದ್ರಷ್ಟಾ ಸ್ಫುರತ್ಕುಂಡಲಮಂಡಿತಾನನಮ್ ॥ ೪೯ ॥

*ಮೈತ್ರೇಯ ಉವಾಚ*

ಶ್ರುತ್ವಾ ಭಾಗವತಂ ಪೌತ್ರಮಮೋದತ ದಿತಿರ್ಭೃಶಮ್ ।
ಪುತ್ರಯೋಶ್ಚ ವಧಂ ಕೃಷ್ಣಾದ್ವಿದಿತ್ವಾಽಽಸೀನ್ಮಹಾಮನಾಃ ॥ ೫೦ ॥

ಭಾವದಿಂದ ವಿಶುದ್ಧ ಮತ್ತು ಭಗವದ್ಭಾವದಿಂದ ತುಂಬಿದ ಅಂತಃಕರಣದಲ್ಲಿ ಶ್ರೀಭಗವಂತನನ್ನು ನೆಲೆಗೊಳಿಸಿಕೊಂಡು ದೇಹಾಭಿಮಾನವನ್ನು ತ್ಯಜಿಸುವನು. ॥ ೪೭ ॥

ಅವನು ವಿಷಯಗಳಲ್ಲಿ ಅಲಂಪಟನೂ, ಗುಣಶೀಲ ಸಂಪನ್ನನೂ, ಗುಣಗಳ ಗಣಿಯೂ, ಮತ್ತೊಬ್ಬರ ಸಮೃದ್ಧಿಯಲ್ಲಿ ಸುಖಿಯೂ, ದುಃಖದಲ್ಲಿ ದುಃಖಿಯೂ ಆಗುವನು. ಅವನಿಗೆ ಯಾರೂ ಶತ್ರುಗಳೇ ಇರುವುದಿಲ್ಲ. ಚಂದ್ರನು ಬೇಸಿಗೆಯ ತಾಪವನ್ನು ಕಳೆಯುವಂತೆ ಆತನು ಜಗತ್ತಿನ ಶೋಕವನ್ನು ಹೋಗಲಾಡಿಸುವನು. ॥ ೪೮ ॥ ಯಾರು ಈ ಪ್ರಪಂಚದ ಒಳ-ಹೊರಗೆ ಎಲ್ಲೆಡೆ ವಿರಾಜಮಾನನಾಗಿದ್ದಾನೋ, ತಮ್ಮ ಭಕ್ತರ ಬಯಕೆಗೆ ತಕ್ಕಂತೆ ಆಗಾಗ ತನ್ನ ಮಂಗಳವಿಗ್ರಹವನ್ನು ಪ್ರಕಟಪಡಿಸುವನೋ, ಥಳ-ಥಳಿಸುತ್ತಿರುವ ಕುಂಡಲಗಳಿಂದ ಶೋಭಿಸುವ ಮುಖಮಂಡಲದಿಂದ ಕಂಗೊಳಿಸುತ್ತಿದ್ದಾನೆಯೋ, ಅಂತಹ ಶ್ರೀಲಕ್ಷ್ಮೀದೇವಿಗೂ ಸಮೃದ್ಧಿಯನ್ನು ತುಂಬುತ್ತಿರುವ ಕಮಲಾಕ್ಷನಾದ ಶ್ರೀಹರಿಯನ್ನು ನಿನ್ನ ಮೊಮ್ಮಗನು ಪ್ರತ್ಯಕ್ಷವಾಗಿ ದರ್ಶಿಸುವನು. ॥ ೪೯ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ ! ತನ್ನ ಪೌತ್ರನು ಪರಮ ಭಾಗವತನಾಗುವನೆಂದು ಕೇಳಿ ದಿತಿಗೆ ತುಂಬಾ ಸಂತೋಷವಾಯಿತು. ತನ್ನ ಪುತ್ರರು ಸಾಕ್ಷಾತ್ ಶ್ರೀಹರಿಯಿಂದ ಸಂಹರಿಸಲ್ಪಡುವರು ಎಂಬುದನ್ನು ಕೇಳಿ ಇನ್ನೂ ಉತ್ಸಾಹವುಂಟಾಯಿತು. ॥ ೫೦ ॥

***ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ದಿತಿ-ಕಶ್ಯಪಸಂವಾದೇ ಚತುರ್ದಶೋಽಧ್ಯಾಯಃ ॥ ೧೪ ॥**

# ಹದಿನೈದನೆಯ ಅಧ್ಯಾಯ

## ಜಯ - ವಿಜಯರಿಗೆ ಸನಕಾದಿಗಳ ಶಾಪ

*ಮೈತ್ರೇಯ ಉವಾಚ*

ಪ್ರಾಜಾಪತ್ಯಂ ತು ತತ್ತೇಜ ಪರತೇಜೋಹನಂ ದಿತಿಃ ।
ದಧಾರ ವರ್ಷಾಣಿ ಶತಂ ಶಂಕಮಾನಾ ಸುರಾರ್ದನಾತ್ ॥ ೧ ॥

ಲೋಕೇ ತೇನ ಹತಾಲೋಕೇ ಲೋಕಪಾಲಾ ಹತೌಜಸಃ ।
ನ್ಯವೇದಯನ್ವಿಶ್ವಸೃಜೇ ಧ್ವಾಂತವ್ಯತಿಕರಂ ದಿಶಾಮ್ ॥ ೨ ॥

*ದೇವಾ ಊಚುಃ*

ತಮ ಏತದ್ವಿಭೋ ವೇತ್ಥ ಸಂವಿಗ್ನಾ ಯದ್ವಯಂ ಭೃಶಮ್ ।
ನ ಹ್ಯವ್ಯಕ್ತಂ ಭಗವತಃ ಕಾಲೇನಾಸ್ಪೃಷ್ಟವರ್ತ್ಮನಃ ॥ ೩ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ ! ದಿತಿದೇವಿಯು ತನ್ನ ಪುತ್ರರಿಂದ ದೇವತೆಗಳಿಗೆ ಸಂಕಷ್ಟವುಂಟಾಗುವುದು ಎಂದು ಶಂಕಿಸಿ, ಇತರರ ತೇಜಸ್ಸನ್ನು ಧ್ವಂಸಮಾಡುವ ಕಶ್ಯಪರ ಮಹಾತೇಜಸ್ಸನ್ನು (ಗರ್ಭವನ್ನು) ನೂರುವರ್ಷಕಾಲ ತನ್ನ ಹೊಟ್ಟೆಯಲ್ಲೇ ಇರಿಸಿಕೊಂಡಳು. ॥ ೧ ॥ ಆ ಗರ್ಭಸ್ಥ ತೇಜದಿಂದಲೇ ಲೋಕದಲ್ಲಿ ಸೂರ್ಯಾದಿಗಳ ಪ್ರಕಾಶವು ಕ್ಷೀಣವಾಗತೊಡಗಿತು ಮತ್ತು ಇಂದ್ರಾದಿ ಲೋಕಪಾಲರೂ ತೇಜೋಹೀನರಾದರು. ಆಗ ಅವರೆಲ್ಲರೂ ಬ್ರಹ್ಮದೇವರ ಬಳಿಗೆ ಹೋಗಿ ಎಲ್ಲ ದಿಕ್ಕುಗಳಲ್ಲಿಯೂ ಕತ್ತಲೆ ಕವಿದು ಅವ್ಯವಸ್ಥೆ ಉಂಟಾಗಿದೆ ಎಂಬುದನ್ನು ಹೇಳಿಕೊಂಡರು. ॥ ೨ ॥

ಇಂದ್ರಾದಿ ದೇವತೆಗಳು ಪ್ರಾರ್ಥಿಸಿಕೊಂಡರು – ಪೂಜ್ಯರೇ ! ತಾವು ಸರ್ವಜ್ಞರು. ಕಾಲವು ತಮ್ಮ ಜ್ಞಾನಶಕ್ತಿಯನ್ನು ಕುಂಠಿತಗೊಳಿಸಲಾರದು. ಆದ್ದರಿಂದ ತಮಗೆ ಅರಿವಿರದ ವಿಷಯ ಯಾವುದೂ ಇಲ್ಲ. ಈ ಅಂಧಕಾರದ ವಿಷಯವೂ ತಮಗೆ ತಿಳಿದೇ

ದೇವದೇವ ಜಗದ್ಧಾತರ್ಲೋಕನಾಥಶಿಖಾಮಣೇ ।
ಪರೇಷಾಮಪರೇಷಾಂ ತ್ವಂ ಭೂತಾನಾಮಸಿ ಭಾವವಿತ್ ॥ ೪ ॥

ನಮೋ ವಿಜ್ಞಾನವೀರ್ಯಾಯ ಮಾಯಯೇದಮುಪೇಯುಷೇ ।
ಗೃಹೀತಗುಣಭೇದಾಯ ನಮಸ್ತೇಽವ್ಯಕ್ತಯೋನಯೇ ॥ ೫ ॥

ಯೇ ತ್ವಾನನ್ಯೇನ ಭಾವೇನ ಭಾವಯಂತ್ಯಾತ್ಮಭಾವನಮ್ ।
ಆತ್ಮನಿ ಪ್ರೋತಭುವನಂ ಪರಂ ಸದಸದಾತ್ಮಕಮ್ ॥ ೬ ॥

ತೇಷಾಂ ಸುಪಕ್ವಯೋಗಾನಾಂ ಜಿತಶ್ವಾಸೇಂದ್ರಿಯಾತ್ಮನಾಮ್ ।
ಲಬ್ಧಯುಷ್ಮತ್ಪ್ರಸಾದಾನಾಂ ನ ಕುತಶ್ಚಿತ್ಪರಾಭವಃ ॥ ೭ ॥

ಯಸ್ಯ ವಾಚಾ ಪ್ರಜಾಃ ಸರ್ವಾ ಗಾವಸ್ತಂತ್ಯೇವ ಯಂತ್ರಿತಾಃ ।
ಹರಂತಿ ಬಲಿಮಾಯತ್ತಾಸ್ತಸ್ಮೈ ಮುಖ್ಯಾಯ ತೇ ನಮಃ ॥ ೮ ॥

ಸ ತ್ವಂ ವಿಧತ್ಸ್ವ ಶಂ ಭೂಮಂಸ್ತಮಸಾ ಲುಪ್ತಕರ್ಮಣಾಮ್ ।
ಅದಭ್ರದಯಯಾ ದೃಷ್ಟ್ಯಾ ಆಪನ್ನಾನರ್ಹಸೀಕ್ಷಿತುಮ್ ॥ ೯ ॥

ಏಷ ದೇವ ದಿತೇರ್ಗರ್ಭ ಓಜಃ ಕಾಶ್ಯಪಮರ್ಪಿತಮ್ ।
ದಿಶಸ್ತಿಮಿರಯನ್ಸರ್ವಾ ವರ್ಧತೇಽಗ್ನಿರಿವೈಧಸಿ ॥ ೧೦ ॥

ಮೈತ್ರೇಯ ಉವಾಚ

ಸ ಪ್ರಹಸ್ಯ ಮಹಾಬಾಹೋ ಭಗವಾನ್ ಶಬ್ದಗೋಚರಃ ।
ಪ್ರತ್ಯಾಚಷ್ಟಾತ್ಮಭೂರ್ದೇವಾನ್ ಪ್ರೀಣನ್ರುಚಿರಯಾ ಗಿರಾ ॥ ೧೧ ॥

ಬ್ರಹ್ಮೋವಾಚ

ಮಾನಸಾ ಮೇ ಸುತಾ ಯುಷ್ಮತ್ಪೂರ್ವಜಾಃ ಸನಕಾದಯಃ ।
ಚೇರುರ್ವಿಹಾಯಸಾ ಲೋಕಾನ್ಲೋಕೇಷು ವಿಗತಸ್ಪೃಹಾಃ ॥ ೧೨ ॥

ತ ಏಕದಾ ಭಗವತೋ ವೈಕುಂಠಸ್ಯಾಮಲಾತ್ಮನಃ ।
ಯಯುರ್ವೈಕುಂಠನಿಲಯಂ ಸರ್ವಲೋಕನಮಸ್ಕೃತಮ್ ॥ ೧೩ ॥

ಇದೆ. ನಾವಂತೂ ಇದರಿಂದ ತುಂಬಾ ಭಯಗೊಂಡಿರುವೆವು. ॥ ೩ ॥ ದೇವಾಧಿದೇವಾ! ನೀವು ಜಗತ್ತನ್ನು ಸೃಷ್ಟಿಸಿದವರು, ಸಮಸ್ತ ಲೋಕಪಾಲಕರ ಮುಕುಟಮಣಿಗಳಾಗಿದ್ದೀರಿ. ನೀವು ಚಿಕ್ಕ-ದೊಡ್ಡ ಎಲ್ಲ ಜೀವಿಗಳ ಭಾವವನ್ನು ತಿಳಿದಿರುವಿರಿ. ॥ ೪ ॥ ದೇವಾ! ತಾವು ವಿಜ್ಞಾನ ಬಲ ಸಂಪನ್ನರು. ಮಾಯೆಯಿಂದಲೇ ಈ ಚತುರ್ಮುಖ ರೂಪವನ್ನೂ ಮತ್ತು ರಜೋಗುಣವನ್ನು ಸ್ವೀಕರಿಸಿರುವಿರಿ. ತಮ್ಮ ಉತ್ಪತ್ತಿಗೆ ನಿಜವಾದ ಕಾರಣವನ್ನು ಯಾರೂ ತಿಳಿಯಲಾರರು. ಇಂತಹ ಅಪ್ರಮೇಯಮಹಿಮರಾದ ತಮಗೆ ನಮೋ ನಮಃ ॥ ೫ ॥ ಸಮಸ್ತ ಭುವನಗಳು ತಮ್ಮಲ್ಲಿ ಅಡಗಿವೆ. ಕಾರ್ಯ-ಕಾರಣ ರೂಪವಾದ ಸರ್ವಜಗತ್ತು ತಮ್ಮ ಶರೀರವೇ ಆಗಿದೆ. ಆದರೂ ತಾವು ವಾಸ್ತವವಾಗಿ ಈ ಜಗತ್ತನ್ನು ಮೀರಿದವರು. ಸಮಸ್ತ ಜೀವಿಗಳಿಗೂ ಉತ್ಪತ್ತಿಸ್ಥಾನವಾಗಿರುವ ತಮ್ಮನ್ನು ಅನನ್ಯ ಭಾವದಿಂದ ಧ್ಯಾನಮಾಡುವ ಸಿದ್ಧಯೋಗಿಗಳಿಗೆ ಯಾರಿಂದಲೂ ಪರಾಭವ ವುಂಟಾಗುವುದಿಲ್ಲ. ಏಕೆಂದರೆ ಅವರು ನಿಮ್ಮ ಕರುಣಾಕಟಾಕ್ಷ ದಿಂದ ಕೃತಕೃತ್ಯರಾಗಿ ಬಿಡುವರು. ಅವರು ಪ್ರಾಣ, ಇಂದ್ರಿಯ, ಮನಸ್ಸುಗಳನ್ನು ಜಯಿಸಿಬಿಟ್ಟಿರುವುದರಿಂದ ಅವರ ಯೋಗವು ಪರಿಪಕ್ವವಾಗಿ ಬಿಟ್ಟಿರುವುದು. ॥ ೬-೭ ॥ ಎತ್ತುಗಳು ಮೂಗು ದಾರಕ್ಕೆ ಕಟ್ಟುಬಿದ್ದು ಕೆಲಸಮಾಡುವಂತೆ - ಎಲ್ಲ ಪ್ರಜೆಗಳೂ ತಮ್ಮ ವೇದವಾಣಿಯಿಂದ ಬದ್ಧರಾಗಿ, ತಮಗೆ ಅಧೀನರಾಗಿ ನಿಯಮ ಪೂರ್ವಕವಾಗಿ ಕರ್ಮಾನುಷ್ಠಾನಮಾಡಿ ತಮಗೆ ಪೂಜೆಯನ್ನು ಸಮ ರ್ಪಿಸುತ್ತಾರೆ. ಎಲ್ಲರನ್ನೂ ನಿಯಮಿಸುವ ಮುಖ್ಯಪ್ರಾಣರೇ ತಾವು. ಇಂತಹ ಸರ್ವನಿಯಾಮಕರಾದ ತಮಗೆ ನಮಸ್ಕಾರವು. ॥ ೮ ॥ ಬೃಹತ್ಸ್ವರೂಪರಾದ ದೇವರೇ! ಈ ಕಗ್ಗತ್ತಲೆಯಿಂದ ಹಗಲು ರಾತ್ರಿಗಳ ವಿಭಾಗವೇ ಅಸ್ಪಷ್ಟವಾಗಿ ಲೋಕದ ಎಲ್ಲ ಕರ್ಮಗಳು ಲುಪ್ತವಾಗುತ್ತಿವೆ. ಇದರಿಂದ ಎಲ್ಲ ಜನರೂ ದುಃಖಕ್ಕೆ ಗುರಿ ಯಾಗಿದ್ದಾರೆ. ಅವರ ಕಲ್ಯಾಣವನ್ನುಂಟುಮಾಡು. ಶರಣಾಗತ ರಾಗಿರುವ ನಮ್ಮನ್ನು ದಯಾದೃಷ್ಟಿಯಿಂದ ದಿಟ್ಟಿಸಿರಿ. ॥ ೯ ॥ ದೇವಾ! ಬೆಂಕಿಯು ಕಟ್ಟಿಗೆಯಲ್ಲಿ ಸೇರಿ ಹೆಚ್ಚುವಂತೆ ಕಶ್ಯಪರ ವೀರ್ಯದಿಂದ ಸ್ಥಾಪಿತವಾದ ಈ ದಿತಿಯ ಗರ್ಭವು ಎಲ್ಲ ದಿಕ್ಕು ಗಳನ್ನೂ ಅಂಧಕಾರಮಯವನ್ನಾಗಿ ಮಾಡುತ್ತಾ ಕ್ರಮೇಣ ಬೆಳೆಯುತ್ತಿದೆ. ॥ ೧೦ ॥

ಶ್ರೀಮೈತ್ರೇಯರು ಹೇಳುತ್ತಾರೆ - ಮಹಾಬಾಹುವೇ! ದೇವತೆಗಳ ಪ್ರಾರ್ಥನೆಯನ್ನು ಕೇಳಿ ಬ್ರಹ್ಮದೇವರು ನಸುನಕ್ಕು ತಮ್ಮ ಮಧುರವಾದ ವಾಣಿಯಿಂದ ಅವರನ್ನು ಸಂತೋಷಪಡಿಸಿ ಹೀಗೆ ಹೇಳತೊಡಗಿದರು - ॥ ೧೧ ॥

ಶ್ರೀಬ್ರಹ್ಮದೇವರೆಂದರು - ಎಲೈ ದೇವತೆಗಳಿರಾ! ನಿಮ್ಮ ಪೂರ್ವಜರೂ, ನನ್ನ ಮಾನಸಪುತ್ರರೂ ಆದ ಸನಕಾದಿಗಳು ಪರಮ ವೈರಾಗ್ಯ ಸಂಪನ್ನರಾಗಿ, ಲೋಕಗಳ ಆಸಕ್ತಿಯನ್ನು ತೊರೆದು ಸಮಸ್ತ ಲೋಕಗಳಲ್ಲಿಯೂ ಆಕಾಶಮಾರ್ಗದಿಂದ ಸಂಚರಿಸುತ್ತಿದ್ದರು. ॥ ೧೨ ॥ ಒಮ್ಮೆ ಅವರು ಶುದ್ಧಸತ್ತ್ವಮಯವಾಗಿ ಸಮಸ್ತಲೋಕಗಳಿಗೂ ಮೇಲೆ ವಿರಾಜಿಸುತ್ತಿರುವ ವೈಕುಂಠಧಾಮಕ್ಕೆ ಹೋದರು. ॥ ೧೩ ॥

ವಸಂತಿ ಯತ್ರ ಪುರುಷಾಃ ಸರ್ವೇ ವೈಕುಂಠ ಮೂರ್ತಯಃ ।
ಯೇಽನಿಮಿತ್ತನಿಮಿತ್ತೇನ ಧರ್ಮೇಣಾರಾಧಯನ್ ಹರಿಮ್
॥ ೧೪ ॥

ಯತ್ರ ಚಾದ್ಯಃ ಪುಮಾನಾಸ್ತೇ ಭಗವಾನ್ ಶಬ್ದಗೋಚರಃ ।
ಸತ್ತ್ವಂ ವಿಷ್ಟಭ್ಯ ವಿರಜಂ ಸ್ವಾನಾಂ ನೋ ಮೃಡಯನ್ವೃಷಃ
॥ ೧೫ ॥

ಯತ್ರ ನೈಃಶ್ರೇಯಸಂ ನಾಮ ವನಂ ಕಾಮದುಘೈರ್ದ್ರುಮೈಃ ।
ಸರ್ವರ್ತುಶ್ರೀಭಿರ್ವಿಭ್ರಾಜತ್ಕೈವಲ್ಯಮಿವ ಮೂರ್ತಿಮತ್
॥ ೧೬ ॥

ವೈಮಾನಿಕಾಃ ಸಲಲನಾಶ್ಚರಿತಾನಿ ಯತ್ರ
ಗಾಯಂತಿ ಲೋಕಶಮಲಕ್ಷಪಣಾನಿ ಭರ್ತುಃ ।
ಅಂತರ್ಜಲೇಽನುವಿಕಸನ್ಮಧುಮಾಧವೀನಾಂ
ಗಂಧೇನ ಖಂಡಿ ತಧಿಯೋಽಪ್ಯನಿಲಂ ಕ್ಷಿಪಂತಃ ॥ ೧೭ ॥

ಪಾರಾವತಾನ್ಯಭೃತಸಾರಸಚಕ್ರವಾಕ-
ದಾತ್ಯೂಹಹಂಸಶುಕತಿತ್ತಿರಿಬರ್ಹಿಣಾಂ ಯಃ ।
ಕೋಲಾಹಲೋ ವಿರಮತೇಽಚಿರಮಾತ್ರಮುಚ್ಚೈ-
ರ್ಭೃಂಗಾಧಿಪೇ ಹರಿಕಥಾಮಿವ ಗಾಯಮಾನೇ ॥ ೧೮ ॥

ಮಂದಾರಕುಂದಕುರವೋತ್ಪಲಚಂಪಕಾರ್ಣ-
ಪುನ್ನಾಗನಾಗಬಕುಲಾಂಬುಜಪಾರಿಜಾತಾಃ ।
ಗಂಧೇಽರ್ಚಿತೇ ತುಲಸಿಕಾಭರಣೇನ ತಸ್ಯಾ
ಯಸ್ಮಿಂಸ್ತಪಃ ಸುಮನಸೋ ಬಹು ಮಾನಯಂತಿ ॥ ೧೯ ॥

ಯತ್ಸಂಕುಲಂ ಹರಿಪದಾನತಿಮಾತ್ರ ದೃಷ್ಟೈ-
ರ್ವೈದೂರ್ಯಮಾರಕತಹೇಮಮಯೈರ್ವಿಮಾನೈಃ ।
ಯೇಷಾಂ ಬೃಹತ್ಕಟಿತಟಾಃ ಸ್ಮಿತಶೋಭಿಮುಖ್ಯಃ
ಕೃಷ್ಣಾತ್ಮನಾಂ ನ ರಜ ಆದಧುರುತ್ಸ್ಮಯಾದ್ಯೈಃ ॥ ೨೦ ॥

ಅಲ್ಲಿ ಇರುವವರೆಲ್ಲರೂ ವಿಷ್ಣುರೂಪಿಗಳೇ ಆಗಿದ್ದಾರೆ. ಬೇರೆ ಎಲ್ಲ ರೀತಿಯ ಕಾಮನೆಗಳನ್ನು ತ್ಯಜಿಸಿ ಕೇವಲ ಭಗವಚ್ಚರಣಗಳ ಶರಣಾಗತಿಯನ್ನು ಪಡೆಯಲಿಕ್ಕಾಗಿಯೇ ತಮ್ಮ ಧರ್ಮದ ಮೂಲಕ ಶ್ರೀಮಹಾವಿಷ್ಣುವನ್ನು ಆರಾಧನೆ ಮಾಡುವವರಿಗೆ ಮಾತ್ರ ಆ ಲೋಕವು ಪ್ರಾಪ್ತವಾಗುತ್ತದೆ. ॥ ೧೪ ॥ ಅಲ್ಲಿ ವೇದ-ವೇದಾಂತ ಪ್ರತಿಪಾದ್ಯನಾಗಿರುವ ಧರ್ಮಮೂರ್ತಿಯಾದ ಶ್ರೀಆದಿನಾರಾಯಣನು ನಮ್ಮಂತಹ ಭಕ್ತರಿಗೆ ಸುಖವನ್ನು ಕೊಡುವುದಕ್ಕಾಗಿಯೇ ಶುದ್ಧಸತ್ತ್ವಮಯ ಸ್ವರೂಪವನ್ನು ಧರಿಸಿಕೊಂಡು ಯಾವಾಗಲೂ ವಿರಾಜಮಾನನಾಗಿದ್ದಾನೆ. ॥ ೧೫ ॥ ಆ ವೈಕುಂಠದಲ್ಲಿ ಮೂರ್ತಿವತ್ತಾದ ಕೈವಲ್ಯದಂತೆಯೇ ಕಂಗೊಳಿಸುವ 'ನೈಃಶ್ರೇಯಸ' ಎಂಬ ದಿವ್ಯೋದ್ಯಾನವು ಕಂಡುಬರುವುದು. ಅದು ಎಲ್ಲ ರೀತಿಯ ಕಾಮನೆಗಳನ್ನು ಪೂರ್ಣಗೊಳಿಸುವ ವೃಕ್ಷಗಳಿಂದ ಸುಶೋಭಿತವಾಗಿದ್ದು ಎಲ್ಲ ಸಮಯದಲ್ಲಿ ಆರು ಋತುಗಳ ಶೋಭೆಯಿಂದ ಸಂಪನ್ನವಾಗಿದೆ. ॥ ೧೬ ॥

ಅಲ್ಲಿ ವಿಮಾನಗಳಲ್ಲಿ ಸಂಚರಿಸುವ ಗಂಧರ್ವರು – ಜನರ ಸರ್ವಪಾಪಗಳನ್ನು ಸುಟ್ಟುರುಹುವಂತಹ ತಮ್ಮ ಒಡೆಯನ ಪವಿತ್ರ ಲೀಲೆಗಳನ್ನು ತಮ್ಮ ಮನದನ್ನೆಯರೊಡನೆ ಹಾಡುತ್ತಾ ಇರುತ್ತಾರೆ. ಆ ಸಮಯದಲ್ಲಿ ಸರೋವರಗಳಲ್ಲಿ ಅರಳಿರುವ ಮಕರಂದದಿಂದ ತುಂಬಿದ ವಸಂತಸಮಯದ ಮಾಧವೀಲತೆಗಳ ಸುಮಧುರವಾದ ಗಂಧವು ಅವರ ಚಿತ್ತವನ್ನು ತನ್ನೆಡೆಗೆ ಸೆಳೆದುಕೊಳ್ಳಲು ಬಯಸುತ್ತದೆ. ಆದರೆ ಅವರು ಅದರ ಕಡೆಗೆ ಗಮನವೇ ಕೊಡದೆ, ಬದಲಿಗೆ ಆ ಕಂಪನ್ನು ಹೊತ್ತುತರುವ ಮಂದಾನಿಲವನ್ನೇ ಆಕ್ಷೇಪಿಸುತ್ತಾರೆ. ॥ ೧೭ ॥ ದುಂಬಿಗಳ ರಾಜನು ತಾರಸ್ವರದಿಂದ ಝೇಂಕರಿಸುತ್ತಾ ಶ್ರೀಹರಿಕಥೆಯನ್ನು ಗಾನಮಾಡುತ್ತಿರುವುದೋ, ಎಂಬಂತೆ ಕಂಡುಬಂದಾಗ ಪಾರಿವಾಳ, ಕೋಗಿಲೆ, ಸಾರಸ, ಚಕ್ರವಾಕ, ಚಾತಕ, ಹಂಸ, ಗಿಳಿ, ತಿತ್ತಿರಿ ಮತ್ತು ನವಿಲುಗಳ ಕೋಲಾಹಲ ಶಬ್ದವು – ತಾವೂ ಆ ಕೀರ್ತನೆಯ ಆನಂದದಲ್ಲಿ ಮೈಮರೆತಿರುವೆಯೋ ಎಂಬಂತೆ ಕೊಂಚ ಕಾಲ ನಿಂತುಹೋಗುವುದು. ॥ ೧೮ ॥ ಆ ದಿವ್ಯವನದಲ್ಲಿರುವ ಮಂದಾರ, ಮಲ್ಲಿಗೆ, ಕುರವಕ, ನೈದಿಲೆ, ಸಂಪಿಗೆ, ಪುನ್ನಾಗ, ನಾಗಕೇಸರ, ಬಕುಳ, ಅಂಬುಜ, ಪಾರಿಜಾತ ಮುಂತಾದ ಪುಷ್ಪಗಳು ತುಳಸಿಗಿಂತಲೂ ಹೆಚ್ಚು ಸುವಾಸನೆ ಇದ್ದರೂ – ಶ್ರೀಹರಿಯು ತುಳಸಿಯಿಂದ ವಿಶೇಷವಾಗಿ ತನ್ನ ಶರೀರವನ್ನು ಅಲಂಕರಿಸಿಕೊಂಡು, ತುಳಸಿಯ ಕಂಪನ್ನೇ ಹೆಚ್ಚಾಗಿ ಆಘ್ರಾಣಿಸಿ ಗೌರವಿಸುತ್ತಾನೆ – ಎಂಬುದನ್ನು ಕಂಡು ಅವು ಆ ತುಳಸಿಯ ತಪಸ್ಸನ್ನು ಅತಿಶಯವಾಗಿ ಕೊಂಡಾಡುತ್ತವೆ. ॥ ೧೯ ॥ ಆ ದಿವ್ಯಲೋಕವು ವೈಡೂರ್ಯ, ಮರಕತಮಣಿ ಮತ್ತು ಸುವರ್ಣದಿಂದ ನಿರ್ಮಿತವಾದ ವಿಮಾನಗಳಿಂದ ತುಂಬಿಹೋಗಿದೆ. ಇವು ಕರ್ಮಫಲವಾಗಿ ದೊರೆಯುವುದಿಲ್ಲ. ಶ್ರೀಹರಿಯ ಪಾದಪದ್ಮಗಳನ್ನು ಆರಾಧಿಸುವುದರಿಂದ ಮಾತ್ರವೇ ದೊರೆಯುವ ದಿವ್ಯ ವಿಮಾನಗಳು. ಇವುಗಳಲ್ಲಿ ಕುಳಿತಿರುವ ಭಗವದ್ಭಕ್ತ ಶಿರೋಮಣಿಗಳು ಶ್ರೀಕೃಷ್ಣನಲ್ಲಿ ನೆಟ್ಟ ಚಿತ್ತವುಳ್ಳವರಾಗಿ ತದ್ಗತಪ್ರಾಣರಾಗಿರುತ್ತಾರೆ. ದೊಡ್ಡ ನಿತಂಬವುಳ್ಳವರಾಗಿ ಕಿರುನಗೆಯನ್ನು ಸೂಸುತ್ತಿರುವ ಸುಂದರಿಯರೂ ಇವರ ಮನಸ್ಸಿನಲ್ಲಿ ಕಾಮವಿಕಾರವನ್ನೂ ಉಂಟುಮಾಡಲಾರರು. ॥ ೨೦ ॥

ಶ್ರೀ ರೂಪಿಣೀ ಕ್ವಣಯತೀ ಚರಣಾರವಿಂದಂ
ಲೀಲಾಂಬುಜೇನ ಹರಿಸದ್ಮನಿ ಮುಕ್ತದೋಷಾ ।
ಸಂಲಕ್ಷ್ಯತೇ ಸ್ಫಟಿಕಕುಡ್ಯ ಉಪೇತಹೇಮ್ನಿ
ಸಮ್ಮಾರ್ಜತೀವ ಯದನುಗ್ರಹಣೇಽನ್ಯಯತ್ನಃ ॥ ೨೦ ॥

ವಾಪೀಷು ವಿದ್ರುಮತಟಾಸ್ವಮಲಾಮೃತಾಪ್ಸು
ಪ್ರೇಷ್ಯಾನ್ವಿತಾ ನಿಜವನೇ ತುಲಸೀಭಿರೀಶಮ್ ।
ಅಭ್ಯರ್ಚತೀ ಸ್ವಲಕಮುನ್ನಸಮೀಕ್ಷ್ಯ ವಕ್ತ್ರ-
ಮುಚ್ಛೇಷಿತಂ ಭಗವತೇಽತ್ಯಮತಾಂಗ ಯಚ್ಛ್ರೀಃ ॥ ೨೧ ॥

ಯನ್ನ ವ್ರಜಂತ್ಯಘಭಿದೋ ರಚನಾನುವಾದಾ-
ಚ್ಛೃಣ್ವಂತಿ ಯೇಽನ್ಯವಿಷಯಾಃ ಕುಕಥಾ ಮತಿಘ್ನೀಃ ।
ಯಾಸ್ತು ಶ್ರುತಾ ಹತಭಗೈರ್ನೃಭಿರಾತ್ತಸಾರಾ-
ಸ್ತಾಂಸ್ತಾನ್ ಕ್ಷಿಪಂತ್ಯಶರಣೇಷು ತಮಃಸು ಹಂತ ॥ ೨೨ ॥

ಯೇಽಭ್ಯರ್ಥಿತಾಮಪಿ ಚ ನೋ ನೃಗತಿಂ ಪ್ರಪನ್ನಾ
ಜ್ಞಾನಂ ಚ ತತ್ತ್ವವಿಷಯಂ ಸಹಧರ್ಮ ಯತ್ರ ।
ನಾರಾಧನಂ ಭಗವತೋ ವಿತರಂತ್ಯಮುಷ್ಯ
ಸಮ್ಮೋಹಿತಾ ವಿತತಯಾ ಬತ ಮಾಯಯಾ ತೇ ॥ ೨೩ ॥

ಯಚ್ಚ ವ್ರಜಂತ್ಯನಿಮಿಷಾಮೃಷಭಾನುವೃತ್ತ್ಯಾ
ದೂರೇಯಮಾ ಹ್ಯುಪರಿ ನಃ ಸ್ಪೃಹಣೀಯಶೀಲಾಃ ।
ಭರ್ತುರ್ಮಿಥಃ ಸುಯಶಸಃ ಕಥನಾನುರಾಗ-
ವೈಕ್ಲವ್ಯಬಾಷ್ಪಕಲಯಾ ಪುಲಕೀಕೃತಾಂಗಾಃ ॥ ೨೪ ॥

ತದ್ವಿಶ್ವಗುರ್ವಧಿಕೃತಂ ಭುವನೈಕವಂದ್ಯಂ
ದಿವ್ಯಂ ವಿಚಿತ್ರವಿಬುಧಾಗ್ರ್ಯವಿಮಾನಶೋಚಿಃ ।
ಆಪುಃ ಪರಾಂ ಮುದಮಪೂರ್ವಮುಪೇತ್ಯ ಯೋಗ-
ಮಾಯಾಬಲೇನ ಮುನಯಸ್ತದಥೋ ವಿಕುಂಠಮ್ ॥ ೨೫ ॥

ಯಾವ ಮಹಾದೇವಿಯ ಕೃಪೆಯನ್ನು ಪಡೆಯಲು ದೇವತೆಗಳೂ ಕೂಡ ಪ್ರಯತ್ನಿಸುತ್ತಿರುವರೋ, ಆ ಚೆಲುವಿನ ಗಣಿಯಾದ ಶ್ರೀಲಕ್ಷ್ಮೀದೇವಿಯು ಶ್ರೀಹರಿಯ ಭವನದಲ್ಲಿ ತನ್ನ ಚಾಂಚಲ್ಯವೆಂಬ ದೋಷವನ್ನು ತೊರೆದು ನಿತ್ಯವಾಸಮಾಡುತ್ತಿರುವಳು. ಆ ದೇವ ದೇವಿಯು ಕಾಲಂದುಗೆಗಳ ಕಿರುಗೆಜ್ಜೆಗಳಿಂದ ಶಬ್ದಮಾಡುವ ಹೆಜ್ಜೆಗಳನ್ನಿಡುತ್ತಾ, ಲೀಲಾಕಮಲವನ್ನು ತಿರುಗಿಸುವಾಗ ಆ ಕನಕ ಭವನದ ಸ್ಫಟಿಕಮಯವಾದ ಗೋಡೆಗಳಲ್ಲಿ ಆಕೆಯ ಪ್ರತಿಬಿಂಬವು ಬಿದ್ದು, ಆಕೆಯು ಅವುಗಳನ್ನು ಗುಡಿಸುತ್ತಿರುವಳೋ ಎಂಬಂತೆ ಕಾಣುತ್ತದೆ. ॥ ೨೦ ॥ ಪ್ರಿಯ ದೇವತೆಗಳಿರಾ ! ಆ ದಿವ್ಯಲೋಕದಲ್ಲಿ ಅವಳು ದಾಸಿಯರಿಂದೊಡಗೂಡಿ ತನ್ನ ಕ್ರೀಡಾವನದಲ್ಲಿ ತುಳಸೀ ದಳಗಳಿಂದ ತನ್ನ ಹೃದಯವಲ್ಲಭನಾದ ಶ್ರೀಹರಿಯನ್ನು ಪೂಜಿಸುತ್ತಿರುವಾಗ, ಅಲ್ಲಿಯ ಹವಳದ ಮೆಟ್ಟಲುಗಳಿಂದಲೂ, ನಿರ್ಮಲ ಜಲದಿಂದ ತುಂಬಿದ ಸರೋವರದಲ್ಲಿ ಸುಂದರವಾದ ಮುಂಗುರುಳುಗಳಿಂದಲೂ, ಉನ್ನತವಾದ ಮೂಗಿನಿಂದಲೂ ಮೆರೆಯುವ ತನ್ನ ಮುಖಕಮಲದ ಪ್ರತಿಬಿಂಬವನ್ನು ಆ ಜಲದಲ್ಲಿ ನೋಡಿಕೊಂಡು – 'ಇದು ಶ್ರೀಭಗವಂತನಿಂದ ಆದರಿಸಲ್ಪಟ್ಟಿದ್ದು' ಎಂಬ ಸೌಭಾಗ್ಯದಿಂದ ಆನಂದಪರವಶಳಾಗುತ್ತಾಳೆ. ॥ ೨೧ ॥ ಪಾಪಗಳನ್ನು ಲೋಪಗೊಳಿಸುವ ಭಗವಂತನ ಲೀಲಾ ಕಥೆಗಳನ್ನು ಬಿಟ್ಟು, ಬುದ್ಧಿಯನ್ನು ನಾಶಗೊಳಿಸುವಂತಹ ಅರ್ಥ-ಕಾಮಸಂಬಂಧೀ ಇತರ ನಿಂದಿತ ಕಥೆಗಳನ್ನು ಕೇಳುವ ದುಷ್ಕರ್ಮಿಗಳು ಈ ಲೋಕವನ್ನು ಕನಸಿನಲ್ಲಿಯೂ ಪಡೆಯಲಾರರು. ಅಯ್ಯೋ ! ಆ ನಿಸ್ಸಾರವಾದ ಕಥೆಗಳನ್ನು ಕೇಳುವ ದುರ್ಭಾಗ್ಯಶಾಲಿಗಳನ್ನೂ, ತಮ್ಮ ಪುಣ್ಯಗಳನ್ನು ಕಳಕೊಂಡವರನ್ನೂ, ಆಶ್ರಯರಹಿತವಾದ ಘೋರನರಕದಲ್ಲಿ ಅವಳು ಕೆಡಹುವಳು. ॥ ೨೨ ॥ ಆಹಾ ! ಈ ನರಜನ್ಮವು ಎಷ್ಟು ಶ್ರೇಷ್ಠವಾದುದು ! ದೇವತೆಗಳೂ ಬಯಸುವಂತಹ ಮಹಿಮೆಯುಳ್ಳದ್ದು. ತತ್ತ್ವಜ್ಞಾನ ಮತ್ತು ಧರ್ಮವನ್ನು ಇದರಲ್ಲೇ ಪಡೆಯಲಾಗುತ್ತದೆ. ಇಂತಹ ಜನ್ಮ ಪಡೆದಿದ್ದರೂ ಭಗವಂತನನ್ನು ಆರಾಧಿಸದಿರುವವರು ನಿಜವಾಗಿ ಎಲ್ಲೆಡೆ ಹರಡಿಕೊಂಡಿರುವ ಅವನ ಮಾಯೆಯಿಂದ ಮೋಹಿತರಾಗುತ್ತಾರೆ. ॥ ೨೩ ॥ ದೇವಾಧಿದೇವ ಶ್ರೀಹರಿಯನ್ನೇ ನಿರಂತರವಾಗಿ ಚಿಂತಿಸುವುದರಿಂದ ಯಮರಾಜನೂ ಅವರಿಂದ ದೂರವುಳಿಯುತ್ತಾನೆ. ಅವರು ಭಗವಂತನ ದಿವ್ಯಕೀರ್ತಿಯನ್ನು ಪರಸ್ಪರವಾಗಿ ಚರ್ಚಿಸುವುದರಿಂದ ಪ್ರೇಮವಿಹ್ವಲರಾಗಿ ಅವರ ಕಣ್ಣುಗಳಿಂದ ನಿರಂತರ ಆನಂದದ ಅಶ್ರುಧಾರೆಗಳು ಹರಿಯುತ್ತಾ ಇರುತ್ತವೆ. ಶರೀರ ರೋಮಾಂಚನಗೊಳ್ಳುವುದು. ಇಂತಹವರ ಶೀಲ-ಸ್ವಭಾವಗಳನ್ನು ನಾವೂ ಕೂಡ ಬಯಸುತ್ತೇವೆ. ಈ ಪರಮ ಭಾಗವತೋತ್ತಮರು ಮಾತ್ರವೇ ನಮ್ಮ ಲೋಕಗಳಿಗೂ ಮೇಲೆ ಬೆಳಗುತ್ತಿರುವ ವೈಕುಂಠಧಾಮಕ್ಕೆ ಹೋಗುವರು. ॥ ೨೪ ॥ ವಿಶ್ವಗುರುವಾದ ಶ್ರೀಹರಿಗೆ ನಿವಾಸಸ್ಥಾನವಾಗಿ, ಸಮಸ್ತ ಲೋಕಗಳಿಗೂ ವಂದನೀಯವಾಗಿ, ಶ್ರೇಷ್ಠತಮರಾದ ದೇವತೆಗಳ ವಿವಿಧ ವಿಮಾನಗಳಿಂದ ವಿಭೂಷಿತವಾದ, ಪರಮ ದಿವ್ಯವೂ, ಪರಮಾದ್ಭುತವೂ ಆದ ಆ ವೈಕುಂಠಧಾಮವನ್ನು – ತಮ್ಮ ಯೋಗಬಲದಿಂದ ಸನಕಾದಿ ಮುನಿಗಳು ಸೇರಿ ಪರಮಾನಂದವನ್ನು ಅನುಭವಿಸಿದರು. ॥ ೨೫ ॥

ತಸ್ಮಿನ್ನತೀತ್ಯ ಮುನಯಃ ಷಡಸಜ್ಜ ಮಾನಾಃ
ಕಕ್ಷಾಃ ಸಮಾನವಯಸಾವಥ ಸಪ್ತಮಾಯಾಮ್ ।
ದೇವಾವಚಕ್ಷತ ಗೃಹೀತಗದೌ ಪರಾರ್ಧ್ಯ-
ಕೇಯೂರಕುಂಡಲಕಿರೀಟವಿಟಂಕವೇಷೌ ॥ ೨೭ ॥

ಶ್ರೀಭಗವಂತನನ್ನು ಕಾಣಬೇಕೆಂಬ ತವಕದಿಂದ ಅವರು ಬೇರೆ ದರ್ಶನೀಯ ವಸ್ತುಗಳನ್ನು ಉಪೇಕ್ಷೈಯುತ್ತಾ ಆ ವೈಕುಂಠ ಧಾಮದ ಆರು ಮಂಡಪಗಳನ್ನು ದಾಟಿ ಏಳನೆಯ ಮಂಡಪಕ್ಕೆ ತಲುಪಿದರು. ಆಗ ಅವರು ಅಲ್ಲಿ ಸಮವಯಸ್ಸಿನವರಾಗಿದ್ದು ದಿವ್ಯಾಭರಣಗಳಿಂದ ಸಂಪನ್ನರಾಗಿದ್ದ ಇಬ್ಬರು ದಿವ್ಯ ಪುರುಷರನ್ನು ಕಂಡರು. ಆ ದೇವಶ್ರೇಷ್ಠರು ಗದಾಪಾಣಿಗಳಾಗಿದ್ದು, ಅಮೂಲ್ಯ ವಾದ ಕೇಯೂರ, ಕಟಕ, ಕುಂಡಲ, ಕಿರೀಟಗಳಿಂದ ಅಲಂಕೃತ ರಾಗಿದ್ದರು. ॥ ೨೭॥ ಶ್ಯಾಮಲವರ್ಣದಿಂದೊಪ್ಪುತ್ತಿದ್ದ ನಾಲ್ಕು ನೀಳ ವಾದ ಭುಜಗಳ ನಡುವೆ ಮದವೇರಿದ ದುಂಬಿಗಳು ಗುಂಜಾರವ ಮಾಡುತ್ತಿದ್ದ ವನಮಾಲೆ ಶೋಭಿಸುತ್ತಿತ್ತು. ಅವರು ಹುಬ್ಬುಗಂಟು ಹಾಕಿಕೊಂಡಿದ್ದರು. ಮೂಗಿನಹೊಳ್ಳೆಗಳು ಅರಳಿ, ಕಣ್ಣುಗಳು ಕೆಂಪೇರಿ, ಮುಖದ ಮೇಲೆ ದುಗುಡದ ಛಾಯೆ ಕಾಣಿಸುತ್ತಿತ್ತು. ॥ ೨೮ ॥

ಮತ್ತದ್ವಿರೇಫವನಮಾಲಿಕಯಾ ನಿವೀತೌ
ವಿನ್ಯಸ್ತಯಾಸಿತಚತುಷ್ಟಯಬಾಹುಮಧ್ಯೇ ।
ವಕ್ತ್ರಂ ಭ್ರುವಾ ಕುಟಿಲಯಾ ಸ್ಫುಟನಿರ್ಗಮಾಭ್ಯಾಂ
ರಕ್ತೇಕ್ಷಣೇನ ಚ ಮನಾಗ್ರಭಸಂ ದಧಾನೌ ॥ ೨೮ ॥

ಅವರು ಹೀಗೆ ನೋಡುತ್ತಿದ್ದರೂ ಆ ಮಹರ್ಷಿಗಳು ಅವರಲ್ಲಿ ಯಾವ ವಿಚಾರವನ್ನೂ ಮಾಡದೆ ಈ ಹಿಂದೆ ಸುವರ್ಣ ಮತ್ತು ವಜ್ರಮಯವಾದ ಬಾಗಿಲುಗಳಿಂದ ಕೂಡಿದ ಆರು ಮಂಡಪಗಳನ್ನು ದಾಟಿ ಬಂದ ಹಾಗೆಯೇ ಏಳನೆಯ ಬಾಗಿಲಿ ನೊಳಗೂ ನುಗ್ಗಿದರು. ಏಕೆಂದರೆ, ಅವರ ದೃಷ್ಟಿ ಸರ್ವತ್ರ ಸಮಾನ ವಾಗಿತ್ತು. ಅವರು ನಿಃಶಂಕರಾಗಿ ಎಲ್ಲ ಕಡೆಗಳಲ್ಲಿ ಯಾವ ಅಡೆ-ತಡೆ ಇಲ್ಲದೆ ಸಂಚಾರಮಾಡುವ ಪ್ರಭಾವ ಹೊಂದಿದ್ದರು. ॥ ೨೯॥

ದ್ವಾರ್ಯೇತಯೋರ್ನಿವಿವಿಶುರ್ಮಿಷತೋರಪೃಷ್ಟ್ವಾ
ಪೂರ್ವಾ ಯಥಾ ಪುರಟವಜ್ರ ಕಪಾಟಿಕಾ ಯಾಃ ।
ಸರ್ವತ್ರ ತೇಽವಿಷಮಯಾ ಮುನಯಃ ಸ್ವದೃಷ್ಟ್ಯಾ
ಯೇ ಸಂಚರಂತ್ಯವಿಹತಾ ವಿಗತಾಭಿಶಂಕಾಃ ॥ ೨೯ ॥

ಆ ನಾಲ್ವರು ಕುಮಾರರರೂ ಪೂರ್ಣತತ್ತ್ವಜ್ಞಾನಿಗಳಾಗಿದ್ದು ಬ್ರಹ್ಮ ದೇವರ ಸೃಷ್ಟಿಯಲ್ಲಿ ವಯಸ್ಸಿನಲ್ಲಿ ಎಲ್ಲರಿಗಿಂತಲೂ ದೊಡ್ಡವರಾಗಿ ದ್ದರೂ ನೋಡಲು ಐದು ವರ್ಷದ ಬಾಲಕರಂತೆ ಕಂಡು ಬರುತ್ತಿದ್ದರು. ದಿವ್ಯ ದಿಗಂಬರವೃತ್ತಿಯಿಂದ ಬೆತ್ತಲೆಯಾಗಿದ್ದರು. ಅವರು ಹೀಗೆ ಯಾವ ಸಂಕೋಚವೂ ಇಲ್ಲದೆ ಒಳಗೆ ಹೋಗುತ್ತಿರುವುದನ್ನು ಕಂಡು ಆ ದ್ವಾರಪಾಲಕರು ಭಗವಂತನ ಶೀಲ - ಸ್ವಭಾವಗಳಿಗೆ ವಿರುದ್ಧವಾದ ಭಾವನೆಯಿಂದ ಆ ಮಹಾತ್ಮರ ತೇಜಸ್ಸನ್ನು ಕಡೆ ಗಣಿಸಿ, ಹಾಸ್ಯಮಾಡುತ್ತಾ ತಮ್ಮ ಕೈಯಲ್ಲಿದ್ದ ಬೆತ್ತವನ್ನು ಮುಂದೆ ಚಾಚಿ ತಡೆದರು. ಆ ಮಹಾತ್ಮರು ಅಂತಹ ಅವಮಾನಕ್ಕೆ ಖಂಡಿತ ವಾಗಿಯೂ ಯೋಗ್ಯರಾದವರಲ್ಲ. ॥ ೩೦ ॥

ತಾನ್ವೀಕ್ಷ್ಯ ವಾತರಶನಾಂಶ್ಚತುರಃ ಕುಮಾರಾನ್
ವೃದ್ಧಾನ್ದಶಾರ್ಧವಯಸೋ ವಿದಿತಾತ್ಮತತ್ತ್ವಾನ್ ।
ವೇತ್ರೇಣ ಚಾಸ್ಖಲಯತಾಮತದರ್ಹಣಾಂಸ್ತೌ
ತೇಜೋ ವಿಹಸ್ಯ ಭಗವತ್ಪ್ರತಿಕೂಲಶೀಲೌ ॥ ೩೦ ॥

ದ್ವಾರಪಾಲಕರು ವೈಕುಂಠವಾಸಿಯರಾದ ದೇವತೆಗಳ ಎದುರಿನಲ್ಲೇ ಸರ್ವಶ್ರೇಷ್ಠ ಪೂಜಾರ್ಹರಾದ ಆ ಕುಮಾರರನ್ನು ತಡೆದಾಗ ತಮ್ಮ ಪ್ರಿಯತಮ ಪ್ರಭುವಿನ ದರ್ಶನದಲ್ಲಿ ವಿಘ್ನವು ಉಂಟಾದ್ದರಿಂದ ಅವರ ಕಣ್ಣುಗಳು ಕೊಂಚ ಕೆಂಪಾಗಿ ಅವರು ಇಂತೆಂದರು. ॥ ೩೧॥

ತಾಭ್ಯಾಂ ಮಿಷತ್ಸ್ವನಿಮಿಷೇಷು ನಿಷಿಧ್ಯಮಾನಾಃ
ಸ್ವರ್ಹತ್ತಮಾ ಹ್ಯಪಿ ಹರೇಃ ಪ್ರತಿಹಾರಪಾಭ್ಯಾಮ್ ।
ಊಚುಃ ಸುಹೃತ್ತಮದಿದೃಕ್ಷಿತಭಂಗ ಈಷತ್
ಕಾಮಾನುಜೇನ ಸಹಸಾ ತ ಉಪಪ್ಲುತಾಕ್ಷಾಃ ॥ ೩೧ ॥

**ಮುನಿಗಳು ಹೇಳಿದರು** - ಎಲೈ ದ್ವಾರಪಾಲಕರೇ! ಭಗವಂತನ ಕೈಂಕರ್ಯಮಾಡಿದ ಪುಣ್ಯಪ್ರಭಾವದಿಂದ ಈ ಲೋಕಕ್ಕೆ ಬಂದು ಇಲ್ಲಿ ವಾಸಮಾಡುವವರಾದರೋ ಆ ಭಗವಂತ ನಂತೆಯೇ ಸಮದರ್ಶಿಗಳಾಗಿರುತ್ತಾರೆ. ನೀವಿಬ್ಬರೂ ಅವರಲ್ಲಿಯೇ ಸೇರಿದವರು. ಆದರೆ ನಿಮ್ಮ ಸ್ವಭಾವದಲ್ಲಿ ಈ ವಿಷಮತೆ ಏಕೆ ಕಂಡು ಬರುತ್ತದೆ? ಭಗವಂತನಾದರೋ ಪರಮ ಶಾಂತಮೂರ್ತಿಯು. ಆತನಿಗೆ ಯಾರಲ್ಲಿಯೂ ವಿರೋಧವಿಲ್ಲ. ಆದ್ದರಿಂದ ಇಲ್ಲಿಗೆ ಬರುವ ಅಥವಾ ಇಲ್ಲಿರುವ ಯಾರ ಮೇಲೆಯೂ ಶಂಕೆಪಡಲು ಅವಕಾಶವಿಲ್ಲ. ಇಲ್ಲಿರುವವರು ಯಾರೂ ಕಪಟಿಗಳಲ್ಲ. ನೀವು ಕಪಟಿಗಳಾಗಿರುವುದರಿಂದ ಇತರರನ್ನೂ ನಿಮ್ಮಂತೆಯೇ ಭಾವಿಸಿ ಶಂಕೆಪಡುತ್ತೀರಿ. ॥ ೩೨ ॥

*ಮುನಯ ಊಚುಃ*

ಕೋ ವಾಮಿಹೈತ್ಯ ಭಗವತ್ಪರಿಚರ್ಯಯೋಚ್ಚೈ-
ಸ್ತದ್ಧರ್ಮಿಣಾಂ ನಿವಸತಾಂ ವಿಷಮಃ ಸ್ವಭಾವಃ ।
ತಸ್ಮಿನ್ಪ್ರಶಾಂತಪುರುಷೇ ಗತವಿಗ್ರಹೇ ವಾಂ
ಕೋ ವಾಽಽತ್ಮವತ್ಕುಹಕಯೋಃ ಪರಿಶಂಕನೀಯಃ ॥ ೩೨ ॥

ನ ಹ್ಯಂತರಂ ಭಗವತೀಹ ಸಮಸ್ತಕುಕ್ಷಾ-
ವಾತ್ಮಾನಮಾತ್ಮನಿ ನಭೋ ನಭಸೀವ ಧೀರಾಃ ।
ಪಶ್ಯಂತಿ ಯತ್ರ ಯುವಯೋಃ ಸುರಲಿಂಗಿನೋಃ ಕಿಂ
ವ್ಯುತ್ಪಾದಿತಂ ಹ್ಯುದರಭೇದಿ ಭಯಂ ಯತೋಽಸ್ಯ ॥ ೩೩ ॥

ಭಗವಂತನ ಉದರದಲ್ಲಿ ಸಕಲ ಬ್ರಹ್ಮಾಂಡವೂ ಅಡಗಿದೆ. ಇಲ್ಲಿ ವಾಸಮಾಡುವ ಧೀಮಂತರು ಆ ಸರ್ವಾತ್ಮನಾದ ಶ್ರೀಹರಿಗೂ – ತಮಗೂ ಯಾವ ಅಂತರವನ್ನೂ ನೋಡುವುದಿಲ್ಲ, ಮಹಾಕಾಶದಲ್ಲಿ ಘಟಾಕಾಶದಂತೆ ಅವನಲ್ಲಿ ತಮ್ಮ ಅಂತರ್ಭಾವವನ್ನು ನೋಡುತ್ತಾರೆ. ನೀವಾದರೋ ದೇವ ರೂಪಧಾರಿಗಳು. ಹಾಗಿರುವಾಗಲೂ ಭಗವಂತನೊಂದಿಗೆ ಭೇದ ಭಾವಗ ಕಾರಣದಿಂದ ಉಂಟಾಗುವ ಭಯದ ಕಲ್ಪನೆ ನೀವು ಮಾಡಿಕೊಂಡಂತೆ ಕಂಡುಬರುತ್ತದೆ. ॥ ೩೩ ॥ ನೀವಾದರೋ ವೈಕುಂಠಪತಿಯಾದ ಶ್ರೀಭಗವಂತನಿಗೆ ಪಾರ್ಷದರಾಗಿದ್ದರೂ ನಿಮ್ಮ ಬುದ್ಧಿಯು ಮಂದವಾಗಿದೆ. ಆದ್ದರಿಂದಲೇ ನಿಮಗೆ ಒಳ್ಳೆಯ ದಾಗಲೆಂದು ನಾವು ನಿಮ್ಮ ಅಪರಾಧಕ್ಕೆ ತಕ್ಕ ದಂಡವನ್ನು ವಿಧಿಸಲು ಯೋಚಿಸಿದ್ದೇವೆ. ನೀವು ನಿಮ್ಮ ಭೇದದೃಷ್ಟಿಯ ದೋಷದಿಂದಾಗಿ ಈ ವೈಕುಂಠಧಾಮವನ್ನು ಬಿಟ್ಟು ಕಾಮ, ಕ್ರೋಧ, ಲೋಭಗಳೆಂಬ ಶತ್ರುಗಳು ವಾಸಮಾಡುತ್ತಿರುವ ಪಾಪಿಷ್ಠವಾದ ಯೋನಿಯಲ್ಲಿ ಹುಟ್ಟಿರಿ. ॥ ೩೪ ॥

ತದ್ವಾಮಮುಷ್ಯ ಪರಮಸ್ಯ ವಿಕುಂಠಭರ್ತುಃ
ಕರ್ತುಂ ಪ್ರಕೃಷ್ಟಮಿಹ ಧೀಮಹಿ ಮಂದಧೀಭ್ಯಾಮ್ ।
ಲೋಕಾನಿತೋ ವ್ರಜತಮಂತರಭಾವದೃಷ್ಟ್ಯಾ
ಪಾಪೀಯಸಸ್ತ್ರಯ ಇಮೇ ರಿಪವೋಽಸ್ಯ ಯತ್ರ ॥ ೩೪ ॥

ಸನಕಾದಿ ಮಹರ್ಷಿಗಳ ಈ ಕಠೋರವಾದ ಮಾತನ್ನು ಕೇಳಿ ಜಯ-ವಿಜಯರು ಭಯಗೊಂಡರು. ಏಕೆಂದರೆ ಬ್ರಾಹ್ಮಣರ ಶಾಪವನ್ನು ಯಾವುದೇ ಅಸ್ತ್ರ-ಶಸ್ತ್ರಸಮೂಹಗಳಿಂದ ನಿವಾರಿಸಲು ಅಸಾಧ್ಯವಾದುದು. ಅವರು ಒಡನೆಯೇ ಅತಿದೈನ್ಯದಿಂದ ಆ ಮಹರ್ಷಿಗಳ ಪಾದಗಳನ್ನು ಹಿಡಿದುಕೊಂಡು ನೆಲದಲ್ಲಿ ಉರುಳಿ ದರು. ನಮ್ಮ ಸ್ವಾಮಿ ಶ್ರೀಹರಿಯೂ ಬ್ರಾಹ್ಮಣರಿಗೆ ತುಂಬಾ ಭಯ ಪಡುತ್ತಾನೆ ಎಂಬುದು ಅವರಿಗೆ ತಿಳಿದಿತ್ತು. ॥ ೩೫ ॥ ಮತ್ತೆ ಅವರು ಅತಿದೈನ್ಯದಿಂದ – "ಎಲೈ ಮಹಾತ್ಮರೇ! ನಾವು ಖಂಡಿತವಾಗಿ ಅಪರಾಧಿಗಳಾಗಿದ್ದೇವೆ. ಆದ್ದರಿಂದ ತಾವು ವಿಧಿಸಿದ ದಂಡವು ಉಚಿತವೇ ಆಗಿದೆ; ಅದು ನಮಗೆ ಸಿಗಲೇಬೇಕು. ನಾವು ಭಗವಂತನ ಅಭಿಪ್ರಾಯವನ್ನು ತಿಳಿಯದೆ ಆತನ ಆಜ್ಞೆಯನ್ನು ಉಲ್ಲಂಘಿಸಿದ್ದೇವೆ. ಇದರಿಂದ ಉಂಟಾದ ಪಾಪವು ನೀವು ವಿಧಿಸಿರುವ ದಂಡದಿಂದಾಗಿ ಪೂರ್ಣವಾಗಿ ತೊಳೆದುಹೋಗು ವುದು. ಆದರೆ ನಮ್ಮ ದುರ್ದಶೆ ಕಂಡು ತಮಗೆ ಕನಿಕರ ಉಂಟಾಗಿ ಸ್ವಲ್ಪವಾದರೂ ಅನುತಾಪ ಉಂಟಾದರೆ – ನಾವು ಆ ಅಧಮ ಯೋನಿಯಲ್ಲಿ ಹುಟ್ಟಿದರೂ ನಮಗೆ ಭಗವಂತನ ಸ್ಮೃತಿಯನ್ನು ನಾಶಮಾಡುವಂತಹ ಮೋಹವು ಆವರಿಸದಿರುವಂತೆ ಅನು ಗ್ರಹಿಸಿರಿ" ಎಂದು ಪ್ರಾರ್ಥಿಸಿದರು. ॥ ೩೬ ॥

ತೇಷಾಮಿತೀರಿತಮುಭಾವವಧಾರ್ಯ ಘೋರಂ
ತಂ ಬ್ರಹ್ಮದಂಡಮನಿವಾರಣಮಸ್ತ್ರಪೂಗೈಃ ।
ಸದ್ಯೋ ಹರೇರನುಚರಾವುರು ಬಿಭ್ಯತಸ್ತತ್
ಪಾದಗ್ರಹಾವಪತತಾಮತಿಕಾತರೇಣ ॥ ೩೫ ॥

ಭೂಯಾದಘೋನಿ ಭಗವದ್ಭಿರಕಾರಿ ದಂಡೋ
ಯೋ ನೌ ಹರೇತ ಸುರಹೇಲನಮಪ್ಯಶೇಷಮ್ ।
ಮಾ ವೋಽನುತಾಪಕಲಯಾ ಭಗವತ್ಸ್ಮೃತಿಘ್ನೋ
ಮೋಹೋ ಭವೇದಿಹ ತು ನೌ ವ್ರಜತೋರಧೋಽಧಃ ॥ ೩೬ ॥

ತನ್ನ ಪಾರ್ಷದರು ಸನಕಾದಿಗಳಿಗೆ ಅಪಚಾರ ಮಾಡಿದ್ದಾರೆ ಎಂಬುದನ್ನು ತಿಳಿದು ಸಾಧುಜನಹೃದಯನಿವಾಸಿಯಾದ ಭಗವಾನ್ ಪದ್ಮನಾಭನು ಶ್ರೀದೇವಿಸಮೇತನಾಗಿ ಅಲ್ಲಿಗೆ ದಯಮಾಡಿಸಿದನು. ಪರಮಹಂಸಮಹಾಮುನಿಗಳು ಸಮಾಧಿಯೋಗದಲ್ಲಿ ಅರಸಿ ದರೂ ಸುಲಭವಾಗಿ ಸಿಗದಿರುವ ಪಾದಾರವಿಂದಗಳುಳ್ಳ ಪ್ರಭುವು ಕಾಲ್ನಡಿಗೆಯಿಂದಲೇ ಅಲ್ಲಿಗೆ ಬಂದನು. ॥ ೩೭ ॥ ತಮ್ಮ ಸಮಾಧಿಗೆ ವಿಷಯನಾಗಿರುವ ಭಗವಾನ್ ಶ್ರೀವೈಕುಂಠನಾಥನು ಪ್ರತ್ಯಕ್ಷವಾಗಿ ಮುಂದೆಯೇ ಇರುವುದನ್ನು ಸನಕಾದಿಗಳು ನೋಡಿದರು. ಅವ ನೊಂದಿಗೆ ಪಾರ್ಷದರು ಛತ್ರ-ಚಾಮರಾದಿಗಳನ್ನು ಹಿಡಿದು ಕೊಂಡು ಪ್ರಭುವನ್ನು ಹಿಂಬಾಲಿಸುತ್ತಿದ್ದರು. ಇಕ್ಕೆಲಗಳಲ್ಲಿಯೂ

ಏವಂ ತದೈವ ಭಗವಾನರವಿಂದನಾಭಃ
ಸ್ವಾನಾಂ ವಿಬುಧ್ಯ ಸದತಿಕ್ರಮಮಾರ್ಯಹೃದ್ಯಃ ।
ತಸ್ಮಿನ್ ಯಯೌ ಪರಮಹಂಸಮಹಾಮುನೀನಾ-
ಮನ್ವೇಷಣೀಯಚರಣೌ ಚಲಯನ್ಸಹಶ್ರೀಃ ॥ ೩೭ ॥

ತಂ ತ್ವಾಗತಂ ಪ್ರತಿಹೃತೌಪಯಿಕಂ ಸ್ವಪುಂಭಿ-
ಸ್ತೇಽಚಕ್ಷತಾಕ್ಷವಿಷಯಂ ಸ್ವಸಮಾಧಿಭಾಗ್ಯಮ್ ।
ಹಂಸಶ್ರಿಯೋರ್ವ್ಯಜನಯೋಃ ಶಿವವಾಯುಲೋಲ-
ಚ್ಛುಭ್ರಾತಪತ್ರಶಶಿಕೇಸರಶೀಕರಾಂಬುಮ್ ॥ ೩೮ ॥

ರಾಜಹಂಸಗಳ ರೆಕ್ಕೆಗಳಂತಿರುವ ಚಾಮರಗಳಿಂದ ಗಾಳಿ ಬೀಸುತ್ತಿದ್ದರು. ಆ ಶೀತಲ ಮಂದಗಾಳಿಯಿಂದ ಅವನ ಶ್ವೇತಛತ್ರದಲ್ಲಿ ಅಲಂಕರಿಸಿರುವ ಮುತ್ತಿನ ಜಾಲರಿಗಳು ಅಲ್ಲಾಡುತ್ತಾ ಚಂದ್ರನ ಕಿರಣಗಳಿಂದ ಅಮೃತದ ಬಿಂದುಗಳೇ ಉದುರುತ್ತಿವೆಯೋ ಎಂಬಂತೆ ಶೋಭಿಸುತ್ತಿದ್ದವು. ॥ ೩೮ ॥

ಕೃತ್ಸ್ನಪ್ರಸಾದಸುಮುಖಂ ಸ್ಪೃಹಣೀಯಧಾಮ
ಸ್ನೇಹಾವಲೋಕಕಲಯಾ ಹೃದಿ ಸಂಸ್ಪೃಶಂತಮ್ ।
ಶ್ಯಾಮೇ ಪೃಥಾವುರಸಿ ಶೋಭಿತಯಾ ಶ್ರಿಯಾ ಸ್ವ-
ಶ್ಚೂಡಾಮಣಿಂ ಸುಭಗಯಂತಮಿವಾತ್ಮಧಿಷ್ಣ್ಯಮ್ ॥ ೩೯ ॥

ಪೂರ್ಣವಾದ ಅನುಗ್ರಹವನ್ನು ಸೂಸುತ್ತಿರುವ ಪ್ರಸನ್ನವಾದ ಮುಖಮುದ್ರೆಯಿಂದಲೂ, ಕಮನೀಯವಾದ ಕಾಂತಿಯಿಂದಲೂ ಸ್ನೇಹದ ಮಳೆಗರೆಯುವ ಸವಿನೋಟದಿಂದಲೂ, ಕಣ್ಮನಗಳನ್ನೂ ಸೂರೆಗೊಳ್ಳುತ್ತಾ – ತನ್ನ ವಿಶಾಲವಾದ ಶ್ಯಾಮಲವಕ್ಷಃಸ್ಥಳದಲ್ಲಿ ವಿರಾಜಿಸುತ್ತಿರುವ ಶ್ರೀಲಕ್ಷ್ಮೀದೇವಿಯೊಂದಿಗೆ ಶೋಭಿಸುತ್ತಾ, ದಿವ್ಯಲೋಕಗಳಿಗೂ ಶಿರೋಭೂಷಣವಾಗಿರುವ ವೈಕುಂಠಧಾಮವನ್ನು ಬೆಳಗುತ್ತಿರುವನು. ॥ ೩೯ ॥

ಪೀತಾಂಶುಕೇ ಪೃಥುನಿತಂಬಿನಿ ವಿಸ್ಫುರಂತ್ಯಾ
ಕಾಂಚ್ಯಾಲಿಭಿರ್ವಿರುತಯಾ ವನಮಾಲಯಾ ಚ ।
ವಲ್ಗುಪ್ರಕೋಷ್ಠವಲಯಂ ವಿನತಾಸುತಾಂಸೇ
ವಿನ್ಯಸ್ತಹಸ್ತಮಿತರೇಣ ಧುನಾನಮಬ್ಜಮ್ ॥ ೪೦ ॥

ವಿಶಾಲವಾದ ನಿತಂಬದಲ್ಲಿ ಪ್ರಕಾಶಿಸುತ್ತಿರುವ ಪೀತಾಂಬರ, ಅದರ ಮೇಲೆ ಥಳ-ಥಳಿಸುತ್ತಿರುವ ರತ್ನಖಚಿತವಾದ ಕಟಿಸೂತ್ರ, ಕಂಠದಲ್ಲಿ ಉಲಿಯುತ್ತಿರುವ ದುಂಬಿಯ ಹಿಂಡುಗಳಿಂದ ದರ್ಶನೀಯವಾದ ವನಮಾಲೆಯ ಸಿರಿ ಮತ್ತು ಮಣಿಕಟ್ಟುಗಳಲ್ಲಿ ಮನೋಹರವಾದ ಕೈಬಳೆಗಳ ಬೆಡಗು. ಒಂದು ಕರಕಮಲವನ್ನು ಗರುಡನ ಹೆಗಲಮೇಲಿರಿಸಿ, ಮತ್ತೊಂದರಿಂದ ಲೀಲಾಕಮಲವನ್ನು ತಿರುಗಿಸುತ್ತಿರುವನು. ॥ ೪೦ ॥

ವಿದ್ಯುತ್ಕ್ಷಿಪನ್ಮಕರಕುಂಡಲಮಂಡನಾರ್ಹ-
ಗಂಡಸ್ಥಲೋನ್ನಸಮುಖಂ ಮಣಿಮತ್ಕಿರೀಟಮ್ ।
ದೋರ್ದಂಡಷಂಡವಿವರೇ ಹರತಾ ಪರಾರ್ಧ್ಯ-
ಹಾರೇಣ ಕಂಧರಗತೇನ ಚ ಕೌಸ್ತುಭೇನ ॥ ೪೧ ॥

ಮಿಂಚಿನ ಪ್ರಭೆಯನ್ನು ನಾಚಿಸುವ ಅವನ ಸುಂದರ ಕಪೋಲಗಳು ಆತನು ಧರಿಸಿದ್ದ ಮಕರಕುಂಡಲಗಳ ಕಾಂತಿಯನ್ನು ಹೆಚ್ಚಿಸುತ್ತಿವೆ. ನೀಳವಾದ ಮನೋಹರ ಮೂಗು, ಪರಮ ಸುಂದರವಾದ ಮುಖಾರವಿಂದ, ತಲೆಯಲ್ಲಿ ಮಣಿಮಯವಾದ ಕಿರೀಟವು ಮೆರೆಯುತ್ತಿದೆ. ನಾಲ್ಕು ಭುಜಗಳ ನಡುವೆ ಕಂಠದಲ್ಲಿ ಅಮೂಲ್ಯವಾದ ಹಾರಗಳೂ, ವಕ್ಷಃಸ್ಥಳದಲ್ಲಿ ಕೌಸ್ತುಭಮಣಿಯೂ ಜಗ-ಜಗಿಸುತ್ತಿವೆ. ॥ ೪೧ ॥

ಅತ್ರೋಪಸೃಷ್ಟಮಿತಿ ಚೋತ್ಸ್ಮಿತಮಿಂದಿರಾಯಾಃ
ಸ್ವಾನಾಂ ಧಿಯಾ ವಿರಚಿತಂ ಬಹುಸೌಷ್ಠವಾಢ್ಯಮ್ ।
ಮಹ್ಯಂ ಭವಸ್ಯ ಭವತಾಂ ಚ ಭಜಂತಮಂಗಂ
ನೇಮುರ್ನಿರೀಕ್ಷ್ಯ ನವಿತೃಪ್ತದೃಶೋ ಮುದಾ ಕೈಃ ॥ ೪೨ ॥

ಭಗವಂತನ ಶ್ರೀವಿಗ್ರಹವು ಸೌಂದರ್ಯದ ನೆಲೆಯಾಗಿದೆ. ಶ್ರೀದೇವಿಯ ಸೌಂದರ್ಯದ ಅಭಿಮಾನವನ್ನೂ ಕರಗಿಸಿಬಿಡುತ್ತದೋ ಎಂದು ಭಕ್ತರಿಗೆ ಅನ್ನಿಸುವಂತಿದೆ. ಬ್ರಹ್ಮದೇವರು ಹೇಳುತ್ತಾರೆ – ದೇವತೆಗಳಿರಾ! ಹೀಗೆ ನನಗಾಗಿಯೂ, ಶಿವನಿಗಾಗಿಯೂ ಮತ್ತು ನಿಮಗೋಸ್ಕರವೂ ಸುಂದರ ವಿಗ್ರಹವನ್ನು ಧರಿಸುವಂತಹ ಶ್ರೀಹರಿಯನ್ನು ನೋಡಿ ಸನಕಾದಿ ಮುನೀಶ್ವರರು ಅವನಿಗೆ ತಲೆಬಾಗಿ ನಮಸ್ಕರಿಸಿದರು. ಆಗ ಅವನ ಅದ್ಭುತ ಸೌಂದರ್ಯವನ್ನು ಎಷ್ಟು ನೋಡುತ್ತಿದ್ದರೂ ಅವರಿಗೆ ತೃಪ್ತಿಯುಂಟಾಗುತ್ತಿರಲಿಲ್ಲ. ॥ ೪೨ ॥

ತಸ್ಯಾರವಿಂದನಯನಸ್ಯ ಪದಾರವಿಂದ-
ಕಿಂಜಲ್ಕಮಿಶ್ರತುಲಸೀಮಕರಂದವಾಯುಃ ।
ಅಂತರ್ಗತಃ ಸ್ವವಿವರೇಣ ಚಕಾರ ತೇಷಾಂ
ಸಂಕ್ಷೋಭಮಕ್ಷರಜುಷಾಮಪಿ ಚಿತ್ತ ತನ್ವೋಃ ॥ ೪೩ ॥

ಸನಕಾದಿ ಮುನೀಶ್ವರರು ನಿರಂತರ ಬ್ರಹ್ಮಾನಂದದಲ್ಲಿ ಮುಳುಗಿರುತ್ತಿದ್ದರು. ಆದರೆ ಆ ಭಗವಾನ್ ಪುಂಡರೀಕಾಕ್ಷನ ಚರಣಾರವಿಂದಗಳ ಮಕರಂದದೊಡನೆ ಬೆರೆತ ತುಳಸೀ ಮಂಜರಿಯ ಗಂಧದಿಂದ ಸುವಾಸಿತವಾದ ವಾಯುವು ಮೂಗಿನ ಹೊಳ್ಳೆಗಳ ಮೂಲಕ ಅಂತಃಕರಣವನ್ನು ಪ್ರವೇಶಿಸಿದೊಡನೆಯೇ ಅವರ ದೇಹ-ಮನಸ್ಸುಗಳು ಆನಂದದಿಂದ ಕಲಕಿಹೋದುವು. ॥ ೪೩ ॥ ಶ್ರೀಭಗವಂತನ ಮುಖವು ನೀಲಕಮಲದಂತೆ ಕಂಗೊಳಿಸುತ್ತಿತ್ತು.

ತೇ ವಾ ಅಮುಷ್ಯ ವದನಾಸಿತಪದ್ಮಕೋಶ-
ಮುದ್ವೀಕ್ಷ್ಯ ಸುಂದರತರಾಧರಕುಂದಹಾಸಮ್ ।
ಲಬ್ಧಾಶಿಷಃ ಪುನರವೇಕ್ಷ್ಯ ತದೀಯಮಂಘ್ರಿ-
ದ್ವಂದ್ವಂ ನಖಾರುಣಮಣಿಶ್ರಯಣಂ ನಿದಧ್ಯುಃ ॥ ೪೪ ॥

ಪುಂಸಾಂ ಗತಿಂ ಮೃಗಯತಾಮಿಹ ಯೋಗಮಾರ್ಗೈ-
ರ್ಧ್ಯಾನಾಸ್ಪದಂ ಬಹು ಮತಂ ನಯನಾಭಿರಾಮಮ್ ।
ಪೌಂಸ್ನಂ ವಪುರ್ದರ್ಶಯಾನಮನನ್ಯಸಿದ್ಧೈ-
ರೌತ್ಪತ್ತಿಕೈಃ ಸಮಗೃಣನ್ಯುತಮಷ್ಟಭೋಗೈಃ ॥ ೪೫ ॥

ಕುಮಾರಾ ಊಚುಃ

ಯೋಽಂತರ್ಹಿತೋ ಹೃದಿ ಗತೋಽಪಿ ದುರಾತ್ಮನಾಂ ತ್ವಂ
ಸೋಽದ್ಯೈವ ನೋ ನಯನಮೂಲಮನಂತ ರಾದ್ಧಃ ।
ಯರ್ಹ್ಯೇವ ಕರ್ಣವಿವರೇಣ ಗುಹಾಂ ಗತೋ ನಃ
ಪಿತ್ರಾನುವರ್ಣಿತರಹಾ ಭವದುದ್ಭವೇನ ॥ ೪೬ ॥

ತಂ ತ್ವಾಂ ವಿದಾಮ ಭಗವನ್ಪರಮಾತ್ಮತತ್ತ್ವಂ
ಸತ್ತ್ವೇನ ಸಂಪ್ರತಿ ರತಿಂ ರಚಯಂತಮೇಷಾಮ್ ।
ಯತ್ತೇಽನುತಾಪವಿದಿತೈರ್ದೃಢಭಕ್ತಿಯೋಗೈ-
ರುದ್ಗ್ರಂಥಯೋ ಹೃದಿ ವಿದುರ್ಮುನಯೋ ವಿರಾಗಾಃ ॥ ೪೭ ॥

ನಾತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಂ
ಕಿಂತ್ವನ್ಯದರ್ಪಿತಭಯಂ ಭ್ರುವ ಉನ್ನಯೈಸ್ತೇ ।
ಯೇಽಂಗತ್ವದಂಘ್ರಿಶರಣಾ ಭವತಃ ಕಥಾಯಾಃ
ಕೀರ್ತನ್ಯತೀರ್ಥಯಶಸಃ ಕುಶಲಾ ರಸಜ್ಞಾಃ ॥ ೪೮ ॥

ಅತಿ ಸುಂದರವಾದ ತುಟಿಗಳಿಂದಲೂ, ಮಲ್ಲಿಗೆಯ ಮೊಗ್ಗಿನಂತೆ ಮನೋಹರವಾದ ಮಂದಹಾಸದಿಂದಲೂ ಅದರ ಕಾಂತಿಯು ಹೆಚ್ಚಾಗಿತ್ತು. ಮುನೀಂದ್ರರು ಅದರ ದರ್ಶನವಡೆದು ಕೃತಕೃತ್ಯರಾಗಿ ಬಿಟ್ಟರು. ಅನಂತರ ಪದ್ಮರಾಗಮಣಿಯಂತೆ ಕೆಂಪಗೆ ಹೊಳೆಯುತ್ತಿದ್ದ ಉಗುರುಗಳಿಂದ ಕಂಗೊಳಿಸುವ ಆತನ ಚರಣಕಮಲಗಳನ್ನು ಅವರು ಧ್ಯಾನಿಸತೊಡಗಿದರು. ॥ ೪೪ ॥ ಯೋಗಮಾರ್ಗದ ಮೂಲಕ ಮೋಕ್ಷಪದವನ್ನು ಅರಸುವ ಪುರುಷರಿಗೆ ಧ್ಯಾನಕ್ಕೆ ವಿಷಯನಾದ, ಅತ್ಯಂತ ಆದರಣೀಯನಾಗಿ ಕಣ್ಣುಗಳಿಗೆ ಆನಂದಸುಧೆಯನ್ನು ಉಕ್ಕೇರಿಸುವ ತನ್ನ ಪುರುಷರೂಪವನ್ನು ಪ್ರಕಟಿಸುವ ಪರಮಪುರುಷನನ್ನು ಕಂಡು – ಆ ಮುನೀಂದ್ರರು ಇತರ ಸಾಧನೆಗಳಿಂದ ಸಿದ್ಧವಾಗದೇ ಇರುವ ಸ್ವಾಭಾವಿಕವಾದ ಅಷ್ಟಸಿದ್ಧಿಗಳಿಂದ ಸಂಪನ್ನನಾಗಿರುವ ಅಂತಹ ಶ್ರೀಹರಿಯನ್ನು ಸ್ತೋತ್ರಮಾಡತೊಡಗಿದರು. ॥ ೪೫ ॥

**ಸನಕಾದಿ ಮುನಿಗಳು ಹೇಳುತ್ತಾರೆ** – ಓ ಅನಂತನೇ! ನೀನು ಅಂತರ್ಯಾಮಿರೂಪದಿಂದ ದುಷ್ಟಚಿತ್ತವುಳ್ಳವರ ಹೃದಯದಲ್ಲಿ ಸ್ಥಿತನಾಗಿದ್ದರೂ ಅವರ ದೃಷ್ಟಿಗೆ ಮರೆಯಾಗಿಯೇ ಇರುತ್ತಿರುವೆ. ಅಂತಹ ನೀನು ಇಂದು ನಮ್ಮ ಕಣ್ಣುಗಳ ಮುಂದೆ ಪ್ರತ್ಯಕ್ಷವಾಗಿ ಬೆಳಗುತ್ತಿರುವೆ. ಸ್ವಾಮಿ! ನಿನ್ನಿಂದ ಉತ್ಪನ್ನರಾದ ನಮ್ಮ ತಂದೆ ಬ್ರಹ್ಮದೇವರು ನಿನ್ನ ರಹಸ್ಯವನ್ನು ಹೇಳಿದ ಸಮಯದಲ್ಲೇ ಕಿವಿದೆರೆಗಳ ಮೂಲಕ ನೀನು ಬುದ್ಧಿಯೊಳಗೆ ಪ್ರವೇಶಿಸಿ ಅಲ್ಲಿ ಬೆಳಗತೊಡಗಿದ್ದೆ. ಆದರೆ ನಿನ್ನನ್ನು ಕಣ್ಣೆದುರಿಗೇ ನೋಡುವ ಸೌಭಾಗ್ಯವು ಈಗ ತಾನೇ ನಮಗೆ ಒದಗಿಬಂದಿದೆ. ॥ ೪೬ ॥ ಭಗವಂತನೇ! ನಿನ್ನನ್ನು ಸಾಕ್ಷಾತ್ ಪರತತ್ತ್ವವೆಂದೇ ನಾವು ಬಲ್ಲೆವು. ಅಂತಹ ನೀನು ಈಗ ನಿನ್ನ ವಿಶುದ್ಧಸತ್ತ್ವಮಯವಾದ ಶ್ರೀವಿಗ್ರಹದಿಂದ ನಿನ್ನ ಈ ಭಕ್ತರನ್ನು ಆನಂದಗೊಳಿಸುತ್ತಿದ್ದೀಯೇ. ನಿನ್ನ ಈ ಸಗುಣವೂ-ಸಾಕಾರವೂ ಆದ ಮೂರ್ತಿಯನ್ನು ರಾಗ-ದ್ವೇಷರಹಿತರಾದ ಮುನಿಗಳು ನಿನ್ನ ಕೃಪಾದೃಷ್ಟಿಯಿಂದ ದೊರಕಿದ ದೃಢವಾದ ಭಕ್ತಿಯೋಗದ ಮೂಲಕ ತಮ್ಮ ಹೃದಯಗಳಲ್ಲಿ ಪಡೆದುಕೊಳ್ಳುವರು. ॥ ೪೭ ॥ ಸ್ವಾಮಿ! ನಿನ್ನ ಸತ್ಕೀರ್ತಿಯು ಅತ್ಯಂತ ಕೀರ್ತನೀಯವೂ, ಸಾಂಸಾರಿಕ ದುಃಖಗಳನ್ನು ನಿವೃತ್ತಿಮಾಡುವಂತಹುದು. ನಿನ್ನ ಚರಣಾರವಿಂದಗಳಲ್ಲಿ ಶರಣಾಗತರಾಗಿ ನಿನ್ನ ಕಥೆಗಳಲ್ಲಿಯೇ ರಸಾನುಭಾವವನ್ನು ಪಡೆಯುವ ಕುಶಲರಾದ ಮಹಾತ್ಮರು ನಿನ್ನ ಪರಮಪ್ರಸಾದವಾದ ಮೋಕ್ಷಪದವನ್ನೂ ಕೂಡ ಪರಮವೆಂದು ಎಣಿಸುವುದಿಲ್ಲ. ಹೀಗಿರುವಾಗ ನೀನು ಸ್ವಲ್ಪ ಹುಬ್ಬುಗಂಟಿಕ್ಕಿ ಹಾಕಿಕೊಂಡರೆ ಸಾಕು, ಅದರಿಂದ ಇಂದ್ರಪದವಿಯೇ ಭಯಕ್ಕೆ ಒಳಗಾಗುವಾಗ ಇತರ ಭೋಗಗಳ ವಿಷಯದಲ್ಲಿ ಹೇಳುವುದೇನಿದೆ? ॥ ೪೮ ॥ ಭಗವಂತಾ! ನಮ್ಮ ಚಿತ್ತವು ದುಂಬಿಗಳಂತೆ ನಿನ್ನ ಅಡಿದಾವರೆಗಳಲ್ಲೇ ರಮಿಸುತ್ತಿದ್ದರೆ, ಹಾಗೆಯೇ ನಮ್ಮ ವಾಣಿಯು ತುಳಸಿಯಂತೆ ನಿನ್ನ ಚರಣ ಸಂಬಂಧದಿಂದಲೇ ಶೋಭಿಸುತ್ತಿದ್ದರೆ, ನಮ್ಮ ಕಿವಿಗಳು ನಿನ್ನ ಪುಣ್ಯಮಯ ಕೀರ್ತಿಯ ಸುಧೆಯಿಂದಲೇ ಪರಿಪೂರ್ಣವಾಗುತ್ತಿದ್ದರೆ, ನಮಗೆ ಎಲ್ಲಿದ್ದರೂ ಭಯವಿಲ್ಲ. ನಮ್ಮ ಪಾಪಗಳ ಕಾರಣ

ಕಾಮಂ ಭವಃ ಸ್ವವೃಜಿನೈರ್ನಿರಯೇಷು ನಃ ಸ್ತಾ-
ಚ್ಚೇತೋಽಲಿವದ್ಯದಿ ನು ತೇ ಪದಯೋ ರಮೇತ ।
ವಾಚಶ್ಚ ನಸ್ತುಲಸಿವದ್ಯದಿ ತೇಽಂಘ್ರಿಶೋಭಾಃ
ಪೂರ್ಯೇತ ತೇ ಗುಣಗಣೈರ್ಯದಿ ಕರ್ಣರಂಧ್ರಃ ॥ ೪೯ ॥

ದಿಂದ ನರಕವೇ ಮುಂತಾದ ದುರ್ಗತಿಗಳಲ್ಲಿದ್ದರೂ ನಮಗೆ ಚಿಂತೆಯಿಲ್ಲ. ॥ ೪೯ ॥

ಪ್ರಾದುಶ್ಚಕರ್ಥ ಯದಿದಂ ಪುರುಹೂತ ರೂಪಂ
ತೇನೇಶ ನಿರ್ವೃತಿಮವಾಪುರಲಂ ದೃಶೋ ನಃ ।
ತಸ್ಮಾ ಇದಂ ಭಗವತೇ ನಮ ಇದ್ವಿಧೇಮ
ಯೋಽನಾತ್ಮನಾಂ ದುರುದಯೋ ಭಗವಾನ್ಪ್ರತೀತಃ ॥ ೫೦ ॥

ವಿಶಾಲವಾದ ಕಣ್ಣುಳ್ಳ ಪರಮಪುರುಷನೇ! ನಮ್ಮ ಮುಂದೆ ನೀನು ಪ್ರಕಟಪಡಿಸಿದ ಈ ಸುಂದರ ರೂಪವು ಕಣ್ಣುಗಳಿಗೆ ಪರಮಾನಂದವನ್ನು ನೀಡಿವೆ. ನಾರಾಯಣಾ! ವಿಷಯಾಸಕ್ತ ಜಿತೇಂದ್ರಿಯರಲ್ಲದ ಜೀವಿಗಳಿಗೆ ಇದನ್ನು ಕಾಣುವುದು ಅತ್ಯಂತ ಕಠಿಣವಾಗಿದೆ. ನೀನು ಸಾಕ್ಷಾತ್ ಭಗವಂತನಾಗಿರುವೆ. ಈ ಪ್ರಕಾರ ಸ್ಪಷ್ಟವಾಗಿ ನಮ್ಮ ಕಣ್ಣುಮುಂದೆ ಪ್ರಕಟನಾಗಿರುವ ನಿನಗೆ ನಾವು ನಮಸ್ಕರಿಸುತ್ತೇವೆ. ॥ ೫೦ ॥

*ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಜಯವಿಜಯಯೋಃ ಸನಕಾದಿಶಾಪೋ ನಾಮ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ಜಯ - ವಿಜಯರು ವೈಕುಂಠದಿಂದ ಚ್ಯುತರಾದುದು

*ಬ್ರಹ್ಮೋವಾಚ*

ಇತಿ ತದ್ಗೃಣತಾಂ ತೇಷಾಂ ಮುನೀನಾಂ ಯೋಗಧರ್ಮಿಣಾಮ್ ।
ಪ್ರತಿನಂದ್ಯ ಜಗಾದೇದಂ ವಿಕುಂಠನಿಲಯೋ ವಿಭುಃ ॥ ೧ ॥

ಬ್ರಹ್ಮದೇವರು ಹೇಳುತ್ತಾರೆ – ಎಲೈ ದೇವತೆಗಳಿರಾ! ಯೋಗನಿಷ್ಠರಾದ ಸನಕಾದಿ ಮುನಿಗಳು ಹೀಗೆ ಸ್ತುತಿಸಿದಾಗ ವೈಕುಂಠಪತಿಯಾದ ಶ್ರೀಹರಿಯು ಅವರನ್ನು ಪ್ರಶಂಸಿಸುತ್ತಾ ಇಂತೆಂದನು. ॥ ೧ ॥

*ಶ್ರೀಭಗವಾನುವಾಚ*

ಏತೌ ತೌ ಪಾರ್ಷದೌ ಮಹ್ಯಂ ಜಯೋ ವಿಜಯ ಏವ ಚ ।
ಕದರ್ಥೀಕೃತ್ಯ ಮಾಂ ಯದ್ವೋ ಬಹ್ವಕ್ರಾತಾಮತಿಕ್ರಮಮ್ ॥ ೨ ॥

ಯಸ್ತ್ವೇತಯೋರ್ಧೃತೋ ದಂಡೋ ಭವದ್ಭಿರ್ಮಾಮನುವ್ರತೈಃ ।
ಸ ಏವಾನುಮತೋಽಸ್ಮಾಭಿರ್ಮುನಯೋ ದೇವಹೇಲನಾತ್ ॥ ೩ ॥

ತದ್ವಃ ಪ್ರಸಾದಯಾಮ್ಯದ್ಯ ಬ್ರಹ್ಮ ದೈವಂ ಪರಂ ಹಿ ಮೇ ।
ತದ್ಧೀತ್ಯಾತ್ಮಕೃತಂ ಮನ್ಯೇ ಯತ್ಸ್ವಪುಂಭಿರಸತ್ಕೃತಾಃ ॥ ೪ ॥

ಯನ್ನಾಮಾನಿ ಚ ಗೃಹ್ಣಾತಿ ಲೋಕೋ ಭೃತ್ಯೇ ಕೃತಾಗಸಿ ।
ಸೋಽಸಾಧುವಾದಸ್ತತ್ಕೀರ್ತಿಂ ಹಂತಿ ತ್ವಚಮಿವಾಮಯಃ ॥ ೫ ॥

ಯಸ್ಯಾಮೃತಾಮಲಯಶಃ ಶ್ರವಣಾವಗಾಹಃ
ಸದ್ಯಃ ಪುನಾತಿ ಜಗದಾಶ್ವಪಚಾದ್ವಿಕುಂಠಃ ।
ಸೋಽಹಂ ಭವದ್ಭ್ಯ ಉಪಲಬ್ಧಸುತೀರ್ಥಕೀರ್ತಿ-
ಶ್ಛಿಂದ್ಯಾಂ ಸ್ವಬಾಹುಮಪಿ ವಃ ಪ್ರತಿಕೂಲವೃತ್ತಿಮ್ ॥ ೬ ॥

ಶ್ರೀಭಗವಂತನು ಹೇಳಿದನು – ಮುನಿವರ್ಯರೇ! ಈ ಜಯ-ವಿಜಯರು ನನ್ನ ಪಾರ್ಷದರಾಗಿದ್ದಾರೆ. ಇವರು ನನ್ನನ್ನೂ ಲೆಕ್ಕಿಸದೆ ನಿಮಗೆ ಬಹಳ ದೊಡ್ಡ ಅಪರಾಧ ಮಾಡಿದ್ದಾರೆ. ॥ ೨ ॥ ನೀವು ನನಗೆ ಏಕಾಂತ ಭಕ್ತರು. ಆದ್ದರಿಂದ ಹೀಗೆ ನನಗೆ ಅಪಚಾರ ಮಾಡಿದ್ದಕ್ಕೆ, ನೀವು ಇವರಿಗೆ ವಿಧಿಸಿದ ದಂಡನೆಯು ನನಗೆ ಸಮ್ಮತವೇ ಆಗಿದೆ. ॥ ೩ ॥ ಬ್ರಾಹ್ಮಣರು ನನಗೆ ಪರಮಾರಾಧ್ಯರು. ನನ್ನ ಅನುಚರರರಾದ ಇವರಿಂದ ನಿಮಗಾದ ತಿರಸ್ಕಾರವನ್ನು ನನಗೆ ಆಗಿರುವ ತಿರಸ್ಕಾರವೆಂದೇ ತಿಳಿಯುತ್ತೇನೆ. ಆದ್ದರಿಂದ ನಾನು ನಿಮ್ಮಲ್ಲಿ ಪ್ರಸನ್ನತೆಯನ್ನು ಬಯಸುತ್ತೇನೆ. ॥ ೪ ॥ ಸೇವಕರು ಅಪರಾಧವನ್ನು ಮಾಡಿದರೆ ಜನರು ಅದಕ್ಕೆ ಯಜಮಾನರ ಹೆಸರನ್ನೇ ಹೇಳುತ್ತಾರೆ. ಚರ್ಮರೋಗವು ತ್ವಚೆಯನ್ನು ಕೆಡಿಸುವಂತೆ, ಸೇವಕರು ಮಾಡುವ ಅಪರಾಧವು ಒಡೆಯನ ಕೀರ್ತಿಯನ್ನು ಕಳಂಕಿತವಾಗಿಸುತ್ತದೆ. ॥ ೫ ॥ ನನ್ನ ನಿರ್ಮಲವಾದ ಕೀರ್ತಿ ಸುಧೆಯಲ್ಲಿ ಸ್ನಾನಮಾಡಿದರೆ ಚಾಂಡಾಲವರೆಗಿನ ಇಡೀ ಜಗತ್ತು ಪವಿತ್ರವಾಗುತ್ತದೆ. ಅದಕ್ಕಾಗಿ ನಾನು 'ವಿಕುಂಠ'ನೆಂದು ಕರೆಯಲ್ಪಡುತ್ತೇನೆ. ಆದರೆ ಈ ಪವಿತ್ರಕೀರ್ತಿಯು ನಿಮ್ಮಿಂದಲೇ ಬಂದಿರುವುದು. ಆದ್ದರಿಂದ ನಿಮಗೆ ಪ್ರತಿಕೂಲವಾಗಿ ನಡೆದುಕೊಂಡರೆ, ಅದು ನನ್ನ ಭುಜವೇ ಆಗಿದ್ದರೂ ಅದನ್ನು ನಾನು ಕೂಡಲೇ ಕತ್ತರಿಸಿಬಿಡುವೆನು. ॥ ೬ ॥

ಯತ್ಸೇವಯಾ ಚರಣಪದ್ಮಪವಿತ್ರರೇಣುಂ
ಸದ್ಯಃಕ್ಷತಾಖಿಲಮಲಂ ಪ್ರತಿಲಬ್ಧಶೀಲಮ್ ।
ನ ಶ್ರೀರ್ವಿರಕ್ತಮಪಿ ಮಾಂ ವಿಜಹಾತಿ ಯಸ್ಯಾಃ
ಪ್ರೇಕ್ಷಾಲವಾರ್ಥ ಇತರೇ ನಿಯಮಾನ್ವಹಂತಿ ॥ ೭ ॥

ನಿಮ್ಮಂತಹವರ ಸೇವೆ ಮಾಡಿದ್ದರಿಂದಲೇ ನನ್ನ ಪಾದಧೂಳಿಗೆ ಎಲ್ಲ ಪಾಪಗಳನ್ನು ಒಡನೆಯೇ ನಾಶಪಡಿಸುವ ಪಾವಿತ್ರ್ಯ ವುಂಟಾಗಿದೆ. ಯಾರ ಲೇಶಮಾತ್ರವಾದ ಕೃಪಾಕಟಾಕ್ಷಕ್ಕಾಗಿ ಬ್ರಹ್ಮಾದಿ ದೇವತೆಗಳೂ ಬಗೆ-ಬಗೆಯ ನಿಯಮಗಳನ್ನೂ, ವ್ರತ ಗಳನ್ನೂ ಆಚರಿಸುತ್ತಾರೋ, ಅಂತಹ ಲಕ್ಷ್ಮೀದೇವಿಯು ನಾನು ಉದಾಸೀನ ಮಾಡಿದರೂ ನನ್ನನ್ನು ಒಂದು ಕ್ಷಣಕಾಲವು ಬಿಡದೆ ಇರುವ ಲೋಕೋತ್ತರವಾದ ಶೀಲಸ್ವಭಾವವು ನನಗೆ ದೊರೆತುದು ನಿಮ್ಮ ಸೇವೆಯಿಂದಲೇ. ॥ ೭ ॥

ನಾಹಂ ತಥಾದ್ಮಿ ಯಜಮಾನಹವಿರ್ವಿತಾನೇ
ಶ್ಚ್ಯೋತದ್ಘೃತಪ್ಲುತಮದನ್ ಹುತಭುಙ್ಮುಖೇನ ।
ಯದ್ಬ್ರಾಹ್ಮಣಸ್ಯ ಮುಖತಶ್ಚರತೋಽನುಘಾಸಂ
ತುಷ್ಟಸ್ಯ ಮಯ್ಯವಹಿತೈರ್ನಿಜಕರ್ಮಪಾಕೈಃ ॥ ೮ ॥

ತಮ್ಮ ಸಮಸ್ತ ಕರ್ಮಫಲವನ್ನು ನನಗೆ ಸಮರ್ಪಿಸಿ ಸದಾ ಸಂತುಷ್ಟರಾಗಿರುವ ನಿಷ್ಕಾಮರಾದ ಬ್ರಾಹ್ಮಣರು ಪ್ರತಿಯೊಂದು ತುತ್ತಿನಲ್ಲಿಯೂ ತೃಪ್ತಿಯನ್ನು ಅನು ಭವಿಸುತ್ತಾ, ತುಪ್ಪದಲ್ಲಿ ನೆನೆದಿರುವ ಬಗೆ-ಬಗೆಯ ಪಕ್ವಾನ್ನಗಳನ್ನು ಭುಂಜಿಸುವಾಗ ಅವರ ಬಾಯಿಯ ಮೂಲಕ ನಾನು ತೃಪ್ತ ನಾಗುವಂತೆ, ಯಜ್ಞದಲ್ಲಿ ಅಗ್ನಿಮುಖದಲ್ಲಿ ಯಜಮಾನನು ಅರ್ಪಿಸಿದ ಆಹುತಿಯನ್ನು ಸ್ವೀಕರಿಸುವುದರಿಂದಲೂ ನಾನು ತೃಪ್ತ ನಾಗುವುದಿಲ್ಲ. ॥ ೮ ॥

ಯೇಷಾಂ ಬಿಭರ್ಮ್ಯಹಮಖಂಡವಿಕುಂಠಯೋಗ-
ಮಾಯಾವಿಭೂತಿರಮಲಾಂಘ್ರಿರಜಃ ಕಿರೀಟೈಃ ।
ವಿಪ್ರಾಂಸ್ತು ಕೋ ನ ವಿಷಹೇತ ಯದರ್ಹಣಾಂಭಃ
ಸದ್ಯಃ ಪುನಾತಿ ಸಹಚಂದ್ರಲಲಾಮಲೋಕಾನ್ ॥ ೯ ॥

ಅಖಂಡವಾದ ಯೋಗಮಾಯೆಯೂ, ಅಸೀಮ ಐಶ್ವರ್ಯವೂ ನನಗೆ ಅಧೀನವಾಗಿದೆ. ನನ್ನ ಪಾದೋದಕ ವಾದ ಗಂಗೆಯು ಚಂದ್ರಶೇಖರ ಭಗವಾನ್ ಶಿವನ ಸಹಿತ ಸಮಸ್ತ ಲೋಕಗಳನ್ನು ಪವಿತ್ರಗೊಳಿಸುತ್ತದೆ. ಇಂತಹ ಪರಮ ಪವಿತ್ರನೂ, ಪರಮೇಶ್ವರನೂ ಆಗಿದ್ದರೂ ನಾನು ಯಾರ ಪವಿತ್ರವಾದ ಪಾದ ರಜವನ್ನು ನನ್ನ ಕಿರೀಟದಲ್ಲಿ ಧರಿಸಿಕೊಂಡಿರುವೆನೋ, ಅಂತಹ ಬ್ರಾಹ್ಮಣರ ಕರ್ಮವನ್ನು ಯಾರು ತಾನೇ ಸಹಿಸುವುದಿಲ್ಲ? ॥ ೯ ॥

ಯೇ ಮೇ ತನೂರ್ದ್ವಿಜವರಾನ್ದುಹತೀರ್ಮದೀಯಾ
ಭೂತಾನ್ಯಲಬ್ಧಶರಣಾನಿ ಚ ಭೇದಬುದ್ಧ್ಯಾ ।
ದ್ರಕ್ಷ್ಯಂತ್ಯಘಕ್ಷತದೃಶೋ ಹ್ಯಹಿಮನ್ಯವಸ್ತಾನ್
ಗೃಧ್ರಾ ರುಷಾ ಮಮ ಕುಷಂತ್ಯಧಿದಂಡನೇತುಃ ॥ ೧೦ ॥

ಬ್ರಾಹ್ಮಣರು, ಹಾಲುಕರೆಯುವ ಹಸುಗಳು, ಅನಾಥ ಪ್ರಾಣಿಗಳು ನನ್ನ ಶರೀರಗಳೇ ಆಗಿವೆ. ಪಾಪಗಳಿಂದ ವಿವೇಕ ದೃಷ್ಟಿಯನ್ನು ಕಳೆದುಕೊಂಡು ಈ ಮೂವರನ್ನು ನನ್ನಿಂದ ಬೇರೆ ಎಂದು ತಿಳಿಯುವವರು ಯಮನಿಗೆ ಅತಿಥಿಗಳಾಗುವರು. ಕಾಳಸರ್ಪ ದಂತೆ ಕ್ರೂರಿಗಳಾದ ಅವರನ್ನು ಯಮನ ದೂತರೆಂಬ ಹದ್ದುಗಳು ಅತ್ಯಂತ ಕ್ರೋಧಗೊಂಡು ತಮ್ಮ ಕೊಕ್ಕುಗಳಿಂದ ಕುಕ್ಕಿಹಾಕುತ್ತವೆ. ॥ ೧೦ ॥

ಯೇ ಬ್ರಾಹ್ಮಣಾನ್ಮಯಿ ಧಿಯಾ ಕ್ಷಿಪತೋಽರ್ಚಯಂತ-
ಸ್ತುಷ್ಯದ್ಧೃದಃ ಸ್ಮಿತಸುಧೋಕ್ಷಿತಪದ್ಮವಕ್ತ್ರಾಃ ।
ವಾಣ್ಯಾನುರಾಗಕಲಯಾಽಽತ್ಮಜವದ್ಗೃಣಂತಃ
ಸಂಬೋಧಯಂತ್ಯಹಮಿವಾಹಮುಪಾಹೃತಸ್ತೈಃ ॥ ೧೧ ॥

ಬ್ರಾಹ್ಮಣರು ತಿರಸ್ಕಾರಪೂರ್ವಕವಾಗಿ ಕಟುವಾಗಿ ನುಡಿ ದರೂ ಅವರಲ್ಲಿ 'ಪರಮಾತ್ಮನಾದ ನಾನೇ ಆ ಬ್ರಾಹ್ಮಣರು' ಎಂದು ಭಾವಿಸಿ, ಪ್ರಸನ್ನವಾದ ಚಿತ್ತದಿಂದ ಮತ್ತು ಅಮೃತಮಯವಾದ ಕಿರುನಗೆಯಿಂದ ಕೂಡಿದ ಪ್ರಸನ್ನವಾದ ಮುಖಕಮಲದಿಂದ ಯಾರು ಅವರನ್ನು ಆದರಿಸುತ್ತಾರೋ ಹಾಗೂ ಮುನಿಸಿಕೊಂಡ ತಂದೆಯನ್ನು ಮಗನೂ ಮತ್ತು ನಿಮ್ಮನ್ನು ನಾನು ಭಾವಿಸುವಂತೆ ಪ್ರೇಮಪೂರ್ಣ ಮಾತುಗಳಿಂದ ಪ್ರಾರ್ಥನೆ ಮಾಡುತ್ತಾ ಅವರನ್ನು ಶಾಂತಗೊಳಿಸುತ್ತಾರೋ – ಅಂತಹವರು ನನ್ನನ್ನು ವಶಪಡಿಸಿ ಕೊಳ್ಳುವರು. ॥ ೧೧ ॥

ತನ್ಮೇ ಸ್ವಭರ್ತುರವಸಾಯಮಲಕ್ಷಮಾಣೌ
ಯುಷ್ಮದ್ವ್ಯತಿಕ್ರಮಗತಿಂ ಪ್ರತಿಪದ್ಯ ಸದ್ಯಃ ।
ಭೂಯೋ ಮಮಾಂತಿಕಮಿತಾಂ ತದನುಗ್ರಹೋ ಮೇ
ಯತ್ಕಲ್ಪತಾಮಚಿರತೋ ಭೃತಯೋರ್ವಿವಾಸಃ ॥ ೧೨ ॥

ನನ್ನ ಈ ಸೇವಕರು ನನ್ನ ಅಭಿಪ್ರಾಯವನ್ನು ಅರಿಯದೆಯೇ ನಿಮಗೆ ಅವಮಾನಮಾಡಿದ್ದಾರೆ. ಅದಕ್ಕಾಗಿ ಒತ್ತಾಯದಿಂದ ನೀವು ಈ ಜಯ-ವಿಜಯರ ಲೋಕಭ್ರಂಶದ ಅವಧಿಯು ಬೇಗನೇ ಮುಗಿದು, ಅವರು ತಮ್ಮ ಅಪರಾಧಕ್ಕನು ರೂಪವಾದ ಅಧಮಗತಿಯನ್ನು ಹೊಂದಿ ಶೀಘ್ರವೇ ನನ್ನ ಬಳಿಗೆ ಹಿಂದಿರುಗುವಂತೆ ಕೃಪೆ ತೋರಬೇಕು. ॥ ೧೨ ॥

ಬ್ರಹ್ಮೋವಾಚ

ಅಥ ತಸ್ಯೋಶತೀಂ ದೇವೀಮೃಷಿಕುಲ್ಯಾಂ ಸರಸ್ವತೀಮ್ ।
ನಾಸ್ವಾದ್ಯ ಮನ್ಯುದಷ್ಟಾನಾಂ ತೇಷಾಮಾತ್ಮಾಪ್ಯತೃಪ್ಯತ ॥ ೧೩ ॥

ಸತೀಂ ವ್ಯಾದಾಯ ಶೃಣ್ವಂತೋ ಲಘ್ವೀಂ ಗುರ್ವರ್ಥಗಹ್ವರಾಮ್ ।
ವಿಗಾಹ್ಯಾಗಾಧಗಂಭೀರಾಂ ನ ವಿದುಸ್ತಚ್ಚಿಕೀರ್ಷಿತಮ್ ॥ ೧೪ ॥

ತೇ ಯೋಗಮಾಯಯಾಽಽರಬ್ಧಪಾರಮೇಷ್ಠ್ಯಮಹೋದಯಮ್ ।
ಪ್ರೋಚುಃ ಪ್ರಾಂಜಲಯೋ ವಿಪ್ರಾಃ ಪ್ರಹೃಷ್ಟಾಃ ಕ್ಷುಭಿತತ್ವಚಃ ॥ ೧೫ ॥

ಋಷಯ ಊಚುಃ

ನ ವಯಂ ಭಗವನ್ ವಿದ್ಮಸ್ತವ ದೇವ ಚಿಕೀರ್ಷಿತಮ್ ।
ಕೃತೋ ಮೇಽನುಗ್ರಹಶ್ಚೇತಿ ಯದಧ್ಯಕ್ಷಃ ಪ್ರಭಾಷಸೇ ॥ ೧೬ ॥

ಬ್ರಹ್ಮಣ್ಯಸ್ಯ ಪರಂ ದೈವಂ ಬ್ರಾಹ್ಮಣಾಃ ಕಿಲ ತೇ ಪ್ರಭೋ ।
ವಿಪ್ರಾಣಾಂ ದೇವದೇವಾನಾಂ ಭಗವಾನಾತ್ಮದೈವತಮ್ ॥ ೧೭ ॥

ತ್ವತ್ತಃ ಸನಾತನೋ ಧರ್ಮೋ ರಕ್ಷ್ಯತೇ ತನುಭಿಸ್ತವ ।
ಧರ್ಮಸ್ಯ ಪರಮೋ ಗುಹ್ಯೋ ನಿರ್ವಿಕಾರೋ ಭವಾನ್ಮತಃ ॥ ೧೮ ॥

ತರಂತಿ ಹ್ಯಂಜಸಾ ಮೃತ್ಯುಂ ನಿವೃತ್ತಾ ಯದನುಗ್ರಹಾತ್ ।
ಯೋಗಿನಃ ಸ ಭವಾನ್ಕಿಂಸ್ವಿದನುಗೃಹ್ಯೇತ ಯತ್ಪರೈಃ ॥ ೧೯ ॥

ಯಂ ವೈ ವಿಭೂತಿರುಪಯಾತ್ಯನುವೇಲಮನ್ಯೈ-
ರರ್ಥಾರ್ಥಿಭಿಃ ಸ್ವಶಿರಸಾ ಧೃತಪಾದರೇಣುಃ ।
ಧನ್ಯಾರ್ಪಿತಾಂಘ್ರಿತುಲಸೀನವದಾಮಧಾಮ್ನೋ
ಲೋಕಂ ಮಧುವ್ರತಪತೇರಿವ ಕಾಮಯಾನಾ ॥ ೨೦ ॥

**ಶ್ರೀಬ್ರಹ್ಮದೇವರು ಹೇಳುತ್ತಾರೆ** – ದೇವತೆಗಳಿರಾ! ಸನಕಾದಿ ಮುನಿಗಳು ಕ್ರೋಧವೆಂಬ ಸರ್ಪದಿಂದ ಕಚ್ಚಲ್ಪಟ್ಟಿದ್ದರೂ ಅವರ ಕ್ರೋಧವು ಆಗಲೇ ಶಾಂತವಾಗಿತ್ತು. ಈಗ ಅಂತಃಕರಣವನ್ನು ಪ್ರಕಾಶಪಡಿಸುವ ಭಗವಂತನ ಅಮೃತಮಯವಾದ ಮಧುರವಾಣಿಯನ್ನು ಎಷ್ಟು ಕೇಳಿದರೂ ಅವರ ಚಿತ್ತಕ್ಕೆ ತೃಪ್ತಿಯಾಗಲಿಲ್ಲ. ॥ ೧೩ ॥ ಭಗವಂತನ ವಾಣಿಯು ಅತ್ಯಂತ ಸತ್ಯವೂ, ಸುಮನೋಹರವೂ ಆಗಿತ್ತು. ಕಡಿಮೆ ಅಕ್ಷರಗಳಿಂದ ಕೂಡಿದ್ದು ಅರ್ಥಗರ್ಭಿತವೂ, ಸಾರಭೂತವೂ, ಅರ್ಥೈಸಲು ಬಹು ಕಷ್ಟವೂ, ಗಂಭೀರವೂ ಆಗಿತ್ತು. ಬಹಳ ಸಾವಧಾನವಾಗಿ ಕೇಳಿ, ವಿಚಾರಮಾಡಿದರೂ ಭಗವಂತನು ಏನು ಹೇಳಲು ಬಯಸುತ್ತಿರುವನು ಎಂಬುದು ತಿಳಿದು ಬರುತ್ತಿರಲಿಲ್ಲ. ॥ ೧೪ ॥ ಭಗವಂತನ ಅದ್ಭುತವಾದ ಔದಾರ್ಯವನ್ನು ಕಂಡು ಅವರು ಆನಂದಿತರಾಗಿ, ಅವರ ಅಂಗಾಂಗಗಳೆಲ್ಲವೂ ರೋಮಾಂಚಿತವಾದುವು. ಯೋಗಮಾಯೆಯ ಪ್ರಭಾವದಿಂದ ತನ್ನ ಪರಮೈಶ್ವರ್ಯದ ಪ್ರಭಾವವನ್ನು ಪ್ರಕಟಪಡಿಸುವಂತಹ ಪ್ರಭುವಿನ ಮುಂದೆ ಕೈಜೋಡಿಸಿಕೊಂಡು ಅವರು ವಿಜ್ಞಾಪಿಸಿಕೊಂಡರು. ॥ ೧೫ ॥

**ಸನಕಾದಿ ಮುನಿಗಳು ಹೇಳಿದರು** – ಸ್ವಯಂಪ್ರಕಾಶವಾದ ಪರಮಾತ್ಮನೇ! ನೀನು ಸರ್ವೇಶ್ವರನೂ, ಲೋಕಾಧ್ಯಕ್ಷನೂ ಆಗಿದ್ದರೂ ನಮ್ಮನ್ನು ಕುರಿತು – 'ನೀವು ನನ್ನಲ್ಲಿ ತುಂಬಾ ಅನುಗ್ರಹ ಮಾಡಿದಿರಿ' ಎಂದು ಹೇಳಿದೆಯಲ್ಲ! ಇದರ ಅಭಿಪ್ರಾಯ ವೇನೆಂದು ನಮಗೆ ತಿಳಿಯಲಿಲ್ಲ. ॥ ೧೬ ॥ ಪ್ರಭುವೇ! ನೀನು ಬ್ರಾಹ್ಮಣರಿಗೂ, ದೇವತೆಗಳಿಗೂ ದೇವತೆಯಾಗಿದ್ದು, ಬ್ರಹ್ಮಾದಿಗಳಿಗೂ ಆತ್ಮನೂ, ಆರಾಧ್ಯದೈವವೂ ಆಗಿರುವೆ. ಬ್ರಾಹ್ಮಣರ ಪರಮಹಿತಕಾರಿಯಾಗಿರುವೆ. ಇಂತಹ ನೀನು 'ಬ್ರಾಹ್ಮಣರೇ ನನಗೆ ಪರಮದೈವ'ರೆಂದು ಹೇಳಿರುವುದು ಕೇವಲ ಲೋಕ ಶಿಕ್ಷಣಕ್ಕಾಗಿಯೇ ಇದೆ. (ಜನರು ಬ್ರಾಹ್ಮಣರನ್ನು ಗೌರವಿಸಬೇಕೆಂಬ ಆದರ್ಶವನ್ನು ತೋರಲು ಹೀಗೆ ಹೇಳಿರುವೆ ಎಂದು ನಾವು ಭಾವಿಸುತ್ತೇವೆ.) ॥ ೧೭ ॥ ಸನಾತನ ಧರ್ಮವು ನಿನ್ನಿಂದಲೇ ಉಂಟಾಗಿದೆ. ನಿನ್ನ ಹಲವು ಅವತಾರಗಳ ಮೂಲಕ ಆಗಾಗ ಆ ಧರ್ಮಸೇತುವನ್ನು ರಕ್ಷಿಸುವವನೂ ನೀನೇ. ನಿರ್ವಿಕಾರ ಸ್ವರೂಪನೂ, ಧರ್ಮದ ಪರಮರಹಸ್ಯವೂ ನೀನೇ ಆಗಿರುವೆ ಎಂದು ಶಾಸ್ತ್ರಗಳು ಸಾರುತ್ತಿವೆ. ॥ ೧೮ ॥ ನಿವೃತ್ತಿಧರ್ಮವನ್ನು ಸಾಧಿಸುವ ಯೋಗಿಗಳು ನಿನ್ನ ಅನುಗ್ರಹದಿಂದಲೇ ಮೃತ್ಯುರೂಪವಾದ ಸಂಸಾರಸಾಗರವನ್ನು ಸಹಜವಾಗಿ ದಾಟಿ ದಡವನ್ನು ಕಾಣುವರು. ಹೀಗಿರುವಾಗ ನಿನಗೆ ಇತರರು ಕೃಪೆಮಾಡುವುದು ಎಂದರೇನು ? ॥ ೧೯ ॥ ಐಶ್ವರ್ಯವೇ ಮುಂತಾದ ಪ್ರಯೋಜನಕ್ಕಾಗಿ ಉಪಾಸಿಸುವ ಅರ್ಥಾರ್ಥಿ ಭಕ್ತರು ಶ್ರೀಲಕ್ಷ್ಮೀದೇವಿಯ ಪಾದಧೂಳಿಯನ್ನು ತಮ್ಮ ತಲೆಯಲ್ಲಿ ಮುಡಿದುಕೊಳ್ಳುತ್ತಾರೆ. ಆದರೆ ಆ ದೇವಿಯೇ ನಿರಂತರವಾಗಿ ನಿನ್ನ ಸೇವೆಯಲ್ಲಿ ಆಸಕ್ತಳಾಗಿರುತ್ತಾಳೆ. ಭಾಗ್ಯಶಾಲಿಗಳಾದ ಭಕ್ತರು ನಿನ್ನ ಪಾದಾರವಿಂದಗಳಲ್ಲಿ ಸಮರ್ಪಿಸುವ ನವ-ನವೀನ ತುಳಸೀ ಮಾಲೆಯ ಮೇಲೆ ಝೇಂಕರಿಸುತ್ತಿರುವ ದುಂಬಿಗಳಂತೆ ಆಕೆಯೂ ಕೂಡ ನಿನ್ನ ಪಾದಪದ್ಮಗಳನ್ನೇ ತನ್ನ ನಿವಾಸಸ್ಥಾನವನ್ನಾಗಿ ಮಾಡಿ

ಯಸ್ತಾಂ ವಿವಿಕ್ತಚರಿತೈರನುವರ್ತಮಾನಾಂ
ನಾತ್ಯಾದ್ರಿಯತ್ಪರಮಭಾಗವತಪ್ರಸಂಗಃ ।
ಸ ತ್ವಂ ದ್ವಿಜಾನುಪಥಪುಣ್ಯರಜಃಪುನೀತಃ
ಶ್ರೀವತ್ಸಲಕ್ಷ್ಮ ಕಿಮಗಾ ಭಗಭಾಜನಸ್ತ್ವಮ್ ॥ ೨೧ ॥

ಧರ್ಮಸ್ಯ ತೇ ಭಗವತಸ್ತ್ರಿಯುಗ ತ್ರಿಭಿಃ ಸ್ವೈಃ
ಪದ್ಭಿಶ್ಚರಾಚರಮಿದಂ ದ್ವಿಜದೇವತಾರ್ಥಮ್ ।
ನೂನಂ ಭೃತಂ ತದಭಿಘಾತಿ ರಜಸ್ತಮಶ್ಚ
ಸತ್ತ್ವೇನ ನೋ ವರದಯಾ ತನುವಾ ನಿರಸ್ಯ ॥ ೨೨ ॥

ನ ತ್ವಂ ದ್ವಿಜೋತ್ತಮಕುಲಂ ಯದಿಹಾತ್ಮಗೋಪಂ
ಗೋಪ್ತಾ ವೃಷಃ ಸ್ವರ್ಹಣೇನ ಸಸೂನೃತೇನ ।
ತರ್ಹ್ಯೇವ ನಂಕ್ಷ್ಯತಿ ಶಿವಸ್ತವ ದೇವ ಪಂಥಾ
ಲೋಕೋಽಗ್ರಹೀಷ್ಯದೃಷಭಸ್ಯ ಹಿ ತತ್ಪ್ರಮಾಣಮ್ ॥ ೨೩ ॥

ತತ್ತೇಽನಭೀಷ್ಟಮಿವ ಸತ್ತ್ವನಿಧೇರ್ವಿಧಿತ್ಸೋಃ
ಕ್ಷೇಮಂ ಜನಾಯ ನಿಜಶಕ್ತಿಭಿರುದ್ಧೃತಾರೇಃ ।
ನೈತಾವತಾ ತ್ರ್ಯಧಿಪತೇರ್ಬತ ವಿಶ್ವಭರ್ತು-
ಸ್ತೇಜಃ ಕ್ಷತಂ ತ್ವವನತಸ್ಯ ಸ ತೇ ವಿನೋದಃ ॥ ೨೪ ॥

ಯಂ ವಾನಯೋರ್ದಮಮಧೀಶ ಭವಾನ್ವಿಧತ್ತೇ
ವೃತ್ತಿಂ ನು ವಾ ತದನುಮನ್ಮಹಿ ನಿರ್ವ್ಯಲೀಕಮ್ ।
ಅಸ್ಮಾಸು ವಾ ಯ ಉಚಿತೋ ಧ್ರಿಯತಾಂ ಸ ದಂಡೋ
ಯೇಽನಾಗಸೌ ವಯಮಯುಂಕ್ಷ್ಮಹಿ ಕಿಲ್ಬಿಷೇಣ ॥ ೨೫ ॥

*ಶ್ರೀಭಗವಾನುವಾಚ*

ಏತೌ ಸುರೇತರಗತಿಂ ಪ್ರತಿಪದ್ಯ ಸದ್ಯಃ
ಸಂರಂಭಸಂಭೃತಸಮಾಧ್ಯನುಬದ್ಧಯೋಗೌ ।
ಭೂಯಃ ಸಕಾಶಮುಪಯಾಸ್ಯತ ಆಶು ಯೋ ವಃ
ಶಾಪೋ ಮಯ್ಯೈವ ನಿಮಿತ್ತಸ್ತದವೈತ ವಿಪ್ರಾಃ ॥ ೨೬ ॥

ಕೊಳ್ಳಲು ಬಯಸುತ್ತಾಳೆ. (ಸವತಿ ಯಾಗಿರುವ ತುಳಸೀದೇವಿಗೆ ಒದಗಿದ ಸೌಭಾಗ್ಯವು ತನಗೂ ಬರಲಿ ಎಂದು ತಾನೂ ನಿನ್ನ ಚರಣಗಳಲ್ಲೇ ಇದ್ದು ಅವುಗಳನ್ನು ಸೇವಿಸಲು ಇಷ್ಟಪಡುತ್ತಿರುವಳು.) ॥ ೨೦ ॥ ಆದರೆ ತನ್ನ ಪವಿತ್ರ ಚರಿತ್ರಗಳಿಂದ ನಿರಂತರ ತತ್ಪರಳಾಗಿರುವ ಆ ಲಕ್ಷ್ಮೀದೇವಿಯನ್ನೂ ಕೂಡ ಹೆಚ್ಚಾಗಿ ಆದರಿಸದೆ ನೀನು ನಿನ್ನ ಭಕ್ತರಮೇಲೆಯೇ ವಿಶೇಷವಾದ ಪ್ರೀತಿಯನ್ನು ತೋಽಸುತ್ತೀಯೇ. ಹೀಗಿರುವಾಗ ಎಲ್ಲೆಲ್ಲಿಯೋ ಸಂಚರಿಸುವ ಬ್ರಾಹ್ಮಣರ ಪಾದಗಳಿಗೆ ತಗುಲಿದ ಪುಣ್ಯವಾದ ಮಾರ್ಗದ ಧೂಳಿಯಾಗಲೀ, ಶ್ರೀವತ್ಸಲಾಂಛನವಾಗಲೀ ನಿನ್ನನ್ನು ಪವಿತ್ರಗೊಳಿಸಿಯಾವೇ ? ಅವುಗಳಿಂದ ನಿನ್ನ ಕಾಂತಿಯು ಹೆಚ್ಚೀತೇ ? ॥ ೨೧ ॥

ಭಗವಂತನೇ ! ನೀನು ಸಾಕ್ಷಾತ್ ಧರ್ಮಸ್ವರೂಪಿಯಾಗಿರುವೆ. ನೀನೇ ಕೃತ, ತ್ರೇತ, ದ್ವಾಪರವೆಂದು ಮೂರು ಯುಗಗಳಲ್ಲಿಯೂ ಪ್ರತ್ಯಕ್ಷವಾಗಿ ಇರುವವನು. ತಪಸ್ಸು, ಶೌಚ, ದಾನಗಳೆಂಬ ಮೂರು ಚರಣಗಳಿಂದ ದೇವತೆಗಳ ಮತ್ತು ಬ್ರಾಹ್ಮಣರ ಹಿತಕ್ಕಾಗಿ ಚರಾಚರ ಜಗತ್ತನ್ನು ರಕ್ಷಿಸುತ್ತಿರುವವನು. ಶುದ್ಧ ಸತ್ತ್ವಮಯವೂ, ವರಪ್ರದವೂ ಆದ ನಿನ್ನ ಶ್ರೀಮೂರ್ತಿಯಿಂದ ನಮ್ಮಲ್ಲಿರುವ ಧರ್ಮವಿರೋಧಿಗಳಾದ ರಜೋಗುಣ-ತಮೋಗುಣಗಳನ್ನು ದೂರಮಾಡು ಸ್ವಾಮಿ. ॥ ೨೨ ॥ ದೇವಾ ! ಈ ಬ್ರಾಹ್ಮಣಕುಲವನ್ನು ನೀನು ಅವಶ್ಯವಾಗಿ ರಕ್ಷಿಸಬೇಕು. ನೀನು ಸಾಕ್ಷಾತ್ ಧರ್ಮ ರೂಪಿಯೇ ಆಗಿದ್ದರೂ ನಿನ್ನ ಸುಮಧುರವಾಣಿಯಿಂದಲೂ, ಪೂಜಾದಿಗಳಿಂದಲೂ ಈ ಉತ್ತಮ ಕುಲವನ್ನು ರಕ್ಷಿಸದೇ ಇದ್ದರೆ ನೀನು ನಿಯತಮಾಡಿರುವ ಮಂಗಳಕರವಾದ ಮಾರ್ಗವು ನಷ್ಟವಾಗಿ ಬಿಡುವುದು. ಏಕೆಂದರೆ, ಶ್ರೇಷ್ಠರಾದ ಪುರುಷರು ಆಚರಿಸುವುದನ್ನೇ ಜನರು ಪ್ರಮಾಣವೆಂದು ಭಾವಿಸಿ ಅನುಸರಿಸುತ್ತಾರೆ. ॥ ೨೩ ॥ ಪ್ರಭೋ ! ನೀನು ಸತ್ತ್ವಗುಣದ ಗಣಿಯಾಗಿದ್ದು, ಸಮಸ್ತ ಜೀವಿಗಳಿಗೆ ಕಲ್ಯಾಣವನ್ನುಂಟುಮಾಡುವುದರಲ್ಲಿ ತತ್ಪರನಾಗಿದ್ದೀಯೇ. ಧರ್ಮಕ್ಕೆ ದ್ರೋಹಿಗಳಾದವರನ್ನು ನಿನ್ನ ಶಕ್ತಿ ಹಾಗೂ ವಿಭೂತಿಗಳಾದ ರಾಜರೇ ಮುಂತಾದವರ ಮೂಲಕ ಸಂಹಾರ ಮಾಡಿಸುತ್ತೀಯೇ. ವೇದಮಾರ್ಗವು ನಾಶ ಹೊಂದುವುದು ನಿನಗೆ ಎಳ್ಳಷ್ಟೂ ಇಷ್ಟವಿಲ್ಲ. ನೀನು ಮೂರು ಲೋಕಗಳಿಗೆ ಒಡೆಯನೂ, ಜಗದ್ರಕ್ಷಕನೂ ಆಗಿದ್ದರೂ ಬ್ರಾಹ್ಮಣರ ವಿಷಯದಲ್ಲಿ ಇಷ್ಟೊಂದು ವಿನಯದಿಂದ ನಡೆದುಕೊಳ್ಳುತ್ತೀಯೆ ! ಆದರೆ ಇದರಿಂದ ನಿನ್ನ ತೇಜಸ್ಸಿಗೆ ಯಾವ ಕೊರತೆಯೂ ಇಲ್ಲ. ಏಕೆಂದರೆ, ಇದು ನಿನ್ನ ಲೀಲಾವಿಲಾಸವಲ್ಲವೇ ! ॥ ೨೪ ॥ ಸರ್ವೇಶ್ವರನೇ ! ನೀನು ಈ ಜಯ-ವಿಜಯರಿಗೆ ಉಚಿತವೆನಿಸಿದ ಶಿಕ್ಷೆಯನ್ನು ಕೊಡಬಹುದು ಅಥವಾ ಪುರಸ್ಕಾರರೂಪವಾಗಿ ಅವರ ವೃತ್ತಿಯನ್ನು ವೃದ್ಧಿಪಡಿಸಬಹುದು. ನೀನು ಏನು ಮಾಡಿದರೂ ನಮಗೆ ಸಮ್ಮತವೇ. ಅಥವಾ ನಿನ್ನ ನಿರಪರಾಧಿಗಳಾದ ಅನುಚರರಿಗೆ ಶಾಪಕೊಟ್ಟಿದ್ದಕ್ಕಾಗಿ ನೀನು ನಮಗೆ ತಕ್ಕ ಶಿಕ್ಷೆಯನ್ನು ವಿಧಿಸಬಹುದು. ಅದನ್ನೂ ಕೂಡ ನಾವು ಹರ್ಷದಿಂದ ಸ್ವೀಕರಿಸುತ್ತೇವೆ. ॥ ೨೫ ॥

**ಶ್ರೀಭಗವಂತನೆಂದನು** – ಬ್ರಾಹ್ಮಣೋತ್ತಮರೇ ! ನೀವು ಇವರಿಗೆ ಕೊಟ್ಟಿರುವ ಶಾಪವು ನನ್ನ ಪ್ರೇರಣೆಯಿಂದಲೇ ಎಂದು ತಿಳಿಯಿರಿ.

ಬ್ರಹ್ಮೋವಾಚ

ಅಥ ತೇ ಮುನಯೋ ದೃಷ್ಟ್ವಾ ನಯನಾನಂದಭಾಜನಮ್ ।
ವೈಕುಂಠಂ ತದಧಿಷ್ಠಾನಂ ವಿಕುಂಠಂ ಚ ಸ್ವಯಂಪ್ರಭಮ್ ॥ ೨೭ ॥

ಭಗವಂತಂ ಪರಿಕ್ರಮ್ಯ ಪ್ರಣಿಪತ್ಯಾನುಮಾನ್ಯ ಚ ।
ಪ್ರತಿಜಗ್ಮುಃ ಪ್ರಮುದಿತಾಃ ಶಂಸಂತೋ ವೈಷ್ಣವೀಂ ಶ್ರಿಯಮ್ ॥ ೨೮ ॥

ಭಗವಾನನುಗಾವಾಹ ಯಾತಂ ಮಾ ಭೈಷ್ಟಮಸ್ತು ಶಮ್ ।
ಬ್ರಹ್ಮತೇಜಃ ಸಮರ್ಥೋಽಪಿ ಹಂತುಂ ನೇಚ್ಛೇ ಮತಂ ತು ಮೇ ॥ ೨೯ ॥

ಏತತ್ಪುರೈವ ನಿರ್ದಿಷ್ಟಂ ರಮಯಾ ಕ್ರುದ್ಧಯಾ ಯದಾ ।
ಪುರಾಪವಾರಿತಾ ದ್ವಾರಿ ವಿಶಂತೀ ಮಯ್ಯುಪಾರತೇ ॥ ೩೦ ॥

ಮಯಿ ಸಂರಂಭಯೋಗೇನ ನಿಸ್ತೀರ್ಯ ಬ್ರಹ್ಮಹೇಲನಮ್ ।
ಪ್ರತ್ಯೇಷ್ಯತಂ ನಿಕಾಶಂ ಮೇ ಕಾಲೇನಾಲ್ಪೀಯಸಾ ಪುನಃ ॥ ೩೧ ॥

ದ್ವಾಃಸ್ಥಾವಾದಿಶ್ಯ ಭಗವಾನ್ ವಿಮಾನಶ್ರೇಣಿಭೂಷಣಮ್ ।
ಸರ್ವಾತಿಶಯಯಾ ಲಕ್ಷ್ಮ್ಯಾ ಜುಷ್ಟಂ ಸ್ವಂ ಧಿಷ್ಣ್ಯಮಾವಿಶತ್ ॥ ೩೨ ॥

ತೌ ತು ಗೀರ್ವಾಣಋಷಭೌ ದುಸ್ತರಾದ್ಧರಿಲೋಕತಃ ।
ಹತಶ್ರಿಯೌ ಬ್ರಹ್ಮಶಾಪಾದಭೂತಾಂ ವಿಗತಸ್ಮಯೌ ॥ ೩೩ ॥

ತದಾ ವಿಕುಂಠಧಿಷಣಾತ್ತಯೋರ್ನಿಪತಮಾನಯೋಃ ।
ಹಾಹಾಕಾರೋ ಮಹಾನಾಸೀದ್ವಿಮಾನಾಗ್ರ್ಯೇಷು ಪುತ್ರಕಾಃ ॥ ೩೪ ॥

ತಾವೇವ ಹ್ಯಧುನಾ ಪ್ರಾಪ್ತೌ ಪಾರ್ಷದಪ್ರವರೌ ಹರೇಃ ।
ದಿತೇರ್ಜಠರನಿರ್ವಿಷ್ಟಂ ಕಾಶ್ಯಪಂ ತೇಜ ಉಲ್ಬಣಮ್ ॥ ೩೫ ॥

ತಯೋರಸುರಯೋರದ್ಯ ತೇಜಸಾ ಯಮಯೋರ್ಹಿ ವಃ ।
ಆಕ್ಷಿಪ್ತಂ ತೇಜ ಏತರ್ಹಿ ಭಗವಾಂಸ್ತದ್ವಿಧಿತ್ಸತಿ ॥ ೩೬ ॥

ವಿಶ್ವಸ್ಯ ಯಃ ಸ್ಥಿತಿಲಯೋದ್ಭವಹೇತುರಾದ್ಯೋ
ಯೋಗೇಶ್ವರೈರಪಿ ದುರತ್ಯಯಯೋಗಮಾಯಃ ।
ಕ್ಷೇಮಂ ವಿಧಾಸ್ಯತಿ ಸ ನೋ ಭಗವಾಂಸ್ತ್ರ್ಯಧೀಶ-
ಸ್ತತ್ರಾಸ್ಮದೀಯವಿಮೃಶೇನ ಕಿಯಾನಿಹಾರ್ಥಃ ॥ ೩೭ ॥

ಈಗ ಇವರು ಒಡನೆಯೇ ನಿಮ್ಮ ಶಾಪಕ್ಕನುಸಾರವಾಗಿ ದೈತ್ಯ ಯೋನಿಯನ್ನು ಪಡೆದು, ಕ್ರೋಧಾವೇಷದಿಂದ ಹೆಚ್ಚಿನ ಏಕಾಗ್ರತೆಯನ್ನು ಸುದೃಢ ಯೋಗಸಂಪನ್ನರಾಗಿ ಮತ್ತೆ ಬೇಗನೇ ನನ್ನ ಬಳಿಗೆ ಹಿಂತಿರುಗುವವರು, ಎಂದು ಅಪ್ಪಣೆಕೊಟ್ಟನು. ॥ ೨೬ ॥

**ಶ್ರೀಬ್ರಹ್ಮದೇವರು ಹೇಳುತ್ತಾರೆ** – ಎಲೈ ದೇವತೆಗಳಿರಾ! ಅನಂತರ ಆ ಮುನೀಂದ್ರರು ಕಣ್ಣುಗಳಿಗೆ ಹಬ್ಬವಾಗಿರುವ ಭಗವಾನ್ ವಿಷ್ಣುವನ್ನು ಹಾಗೂ ಸ್ವಯಂಪ್ರಕಾಶವಾದ ವೈಕುಂಠ ಧಾಮವನ್ನು ದರ್ಶಿಸಿ, ಸ್ವಾಮಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿ ಆತನ ಅಪ್ಪಣೆ ಪಡೆದು, ಭಗವಂತನ ಮಹಿಮೆಯನ್ನು ಕೊಂಡಾಡುತ್ತಾ ಪರಮಾನಂದಭರಿತರಾಗಿ ಅಲ್ಲಿಂದ ಹಿಂದಿರುಗಿದರು. ॥ ೨೭-೨೮ ॥ ಅನಂತರ ಭಗವಂತನು ತನ್ನ ಅನುಚರರಿಗೆ – 'ಹೋಗಿ, ಭಯಪಡಬೇಡಿರಿ. ನಿಮಗೆ ಮಂಗಳವಾಗಲಿ. ನಾನು ಸರ್ವಸಮರ್ಥನಾಗಿದ್ದರೂ, ಬ್ರಹ್ಮತೇಜಸ್ಸನ್ನು ಅಳಿಸಲು ಬಯಸುವುದಿಲ್ಲ. ಇದೇ ನನ್ನ ಅಭಿಪ್ರಾಯವೂ ಆಗಿದೆ. ॥ ೨೯ ॥ ಹಿಂದೊಮ್ಮೆ ನಾನು ಯೋಗನಿದ್ರೆಯಲ್ಲಿ ವಿಶ್ರಮಿಸಿದ್ದಾಗ ಒಳಗೆ ಪ್ರವೇಶಿಸುತ್ತಿದ್ದ ಲಕ್ಷ್ಮೀದೇವಿಯನ್ನು ನೀವು ತಡೆದಿದ್ದೀರಿ. ಆಗ ಅವಳೂ ನಿಮಗೆ ಹೀಗೆಯೇ ಶಾಪ ಕೊಟ್ಟಿದ್ದಳು. ॥ ೩೦ ॥ ಈಗ ನೀವು ದೈತ್ಯಯೋನಿಯಲ್ಲಿದ್ದು, ನನ್ನ ಬಗೆಗೆ ಕ್ರೋಧಾಕಾರವಾದ ವೃತ್ತಿಯಿಂದ ಏಕಾಗ್ರತೆಯನ್ನು ಪಡೆದು, ಅದರಿಂದ ಈ ವಿಪ್ರಶಾಪದ ಪಾಪದಿಂದ ಬಿಡುಗಡೆಹೊಂದಿ, ಸ್ವಲ್ಪ ಸಮಯದಲ್ಲೇ ನನ್ನ ಬಳಿಗೆ ಮರಳಿ ಬರುವಿರಿ ಎಂದು ಹೇಳಿದನು. ॥ ೩೧ ॥ ಶ್ರೀಭಗವಂತನು ದ್ವಾರಪಾಲಕರಿಗೆ ಹೀಗೆ ಅಪ್ಪಣೆಯನ್ನಿತ್ತು, ವಿಮಾನಗಳ ಸಾಲುಗಳಿಂದ ಅಲಂಕೃತವಾಗಿ ಸರ್ವಾತಿಶಯ ಶ್ರೀಸಮೃದ್ಧಿಯಿಂದ ಕೂಡಿದ ತನ್ನ ಧಾಮವನ್ನು ಒಳಹೊಕ್ಕನು. ॥ ೩೨ ॥ ದೇವಶ್ರೇಷ್ಠರಾದ ಆ ಜಯ-ವಿಜಯರಾದರೋ ಉಲ್ಲಂಘಿಸಲಸದಳವಾದ ಬ್ರಾಹ್ಮಣರ ಶಾಪದ ಫಲವಾಗಿ ಭಗವದ್ಧಾಮದಲ್ಲೇ ದೈವೀಸಂಪತ್ತನ್ನು ಕಳಕೊಂಡರು. ಅವರ ಗರ್ವವೆಲ್ಲ ಕರಗಿಹೋಯಿತು. ॥ ೩೩ ॥ ಅವರು ವೈಕುಂಠ ಲೋಕದಿಂದ ಬೀಳತೊಡಗಿದಾಗ ಶ್ರೇಷ್ಠವಾದ ವಿಮಾನಗಳಲ್ಲಿ ಕುಳಿತ್ತಿದ್ದ ವೈಕುಂಠವಾಸಿಗಳು ಹಾಹಾಕಾರ ಮಾಡತೊಡಗಿದರು. ॥ ೩೪ ॥ ಎಲೈ ದೇವತೆಗಳಿರಾ! ಈಗ ದಿತಿಯ ಗರ್ಭದಲ್ಲಿ ಬೆಳಗುತ್ತಿರುವ ಕಶ್ಯಪರ ಉಗ್ರವಾದ ತೇಜಸ್ಸಿನಲ್ಲಿ ಭಗವಂತನ ಆ ಪಾರ್ಷದರಾದ ಜಯ-ವಿಜಯರು ಪ್ರವೇಶಿಸಿರುವರು. ॥ ೩೫ ॥ ಆ ಇಬ್ಬರ ತೇಜಸ್ಸಿನಿಂದಲೇ ನಿಮ್ಮೆಲ್ಲರ ತೇಜಸ್ಸು ಕಳೆಗುಂದಿದೆ. ಭಗವಂತನ ವಿಧಾನದಂತೆಯೇ ಹೀಗೆಲ್ಲಾ ಆಗಿದೆ. ॥ ೩೬ ॥ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಯಾರು ಕಾರಣನಾಗಿದ್ದಾನೋ, ಯಾರ ಯೋಗ ಮಾಯೆಯನ್ನು ದೊಡ್ಡ-ದೊಡ್ಡ ಯೋಗಿಗಳೂ ಕಷ್ಟಪಟ್ಟು ದಾಟುವರೋ, ತ್ರಿಗುಣಗಳಿಗೆ ನಿಯಾಮಕನಾದ ಆ ಶ್ರೀಹರಿಯೇ ನಮಗೆ ಕ್ಷೇಮವನ್ನುಂಟು ಮಾಡುವನು. ಈ ವಿಷಯದಲ್ಲಿ ನಾವು ಹೆಚ್ಚು ವಿಚಾರ ಮಾಡುವುದರಿಂದ ಏನು ಪ್ರಯೋಜನ? 'ಪರಮಾತ್ಮನೇ! ನಿನಗೆ ಶರಣು' ಎಂದು ಬ್ರಹ್ಮದೇವರು ದೇವತೆಗಳನ್ನು ಸಂತೈಸಿದರು. ॥ ೩೭ ॥

*ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಷೋಡಶೋಽಧ್ಯಾಯಃ ॥ ೧೬ ॥

# ಹದಿನೇಳನೆಯ ಅಧ್ಯಾಯ

## ಹಿರಣ್ಯಾಕ್ಷ-ಹಿರಣ್ಯಕಶಿಪುಗಳ ಜನನ – ಹಿರಣ್ಯಾಕ್ಷನ ದಿಗ್ವಿಜಯ

ಮೈತ್ರೇಯ ಉವಾಚ

ನಿಶಮ್ಯಾತ್ಮಭುವಾ ಗೀತಂ ಕಾರಣಂ ಶಂಕಯೋಜ್ಝಿತಾಃ ।
ತತಃ ಸರ್ವೇ ನ್ಯವರ್ತಂತ ತ್ರಿದಿವಾಯ ದಿವೌಕಸಃ ॥ ೧ ॥

ದಿತಿಸ್ತು ಭರ್ತುರಾದೇಶಾದಪತ್ಯಪರಿಶಂಕಿನೀ ।
ಪೂರ್ಣೇ ವರ್ಷಶತೇ ಸಾಧ್ವೀ ಪುತ್ರೌ ಪ್ರಸುಷುವೇ ಯಮೌ ॥ ೨ ॥

ಉತ್ಪಾತಾ ಬಹವಸ್ತತ್ರ ನಿಪೇತುರ್ಜಾಯಮಾನಯೋಃ ।
ದಿವಿ ಭುವ್ಯಂತರಿಕ್ಷೇ ಚ ಲೋಕಸ್ಯೋರುಭಯಾವಹಾಃ ॥ ೩ ॥

ಸಹಾಚಲಾ ಭುವಶ್ಚೇಲುರ್ದಿಶಃ ಸರ್ವಾಃ ಪ್ರಜಜ್ವಲುಃ ।
ಸೋಲ್ಕಾಶ್ಚಾಶನಯಃ ಪೇತುಃ ಕೇತವಶ್ಚಾರ್ತಿಹೇತವಃ ॥ ೪ ॥

ವವೌ ವಾಯುಃ ಸುದುಸ್ಪರ್ಶಃ ಫೂತ್ಕಾರಾನೀರಯನ್ಮುಹುಃ ।
ಉನ್ಮೂಲಯನ್ನಗಪತೀನ್ವಾತ್ಯಾನೀಕೋ ರಜೋಧ್ವಜಃ ॥ ೫ ॥

ಉದ್ಧಸತ್ತಡಿದಂಭೋದಘಟಯಾ ನಷ್ಟಭಾಗಣೇ ।
ವ್ಯೋಮ್ನಿ ಪ್ರವಿಷ್ಟತಮಸಾ ನ ಸ್ಮ ವ್ಯಾದೃಶ್ಯತೇ ಪದಮ್ ॥ ೬ ॥

ಚುಕ್ರೋಶ ವಿಮನಾ ವಾರ್ಧಿರುದೂರ್ಮಿಃ ಕ್ಷುಭಿತೋದರಃ ।
ಸೋದಪಾನಾಶ್ಚ ಸರಿತಶ್ಚುಕ್ಷುಭುಃ ಶುಷ್ಕಪಂಕಜಾಃ ॥ ೭ ॥

ಮುಹುಃ ಪರಿಧಯೋಽಭೂವನ್ಸರಾಹ್ವೋಃ ಶಶಿಸೂರ್ಯಯೋಃ ।
ನಿರ್ಘಾತಾ ರಥನಿರ್ಹ್ರಾದಾ ವಿವರೇಭ್ಯಃ ಪ್ರಜಜ್ಞಿರೇ ॥ ೮ ॥

ಅಂತರ್ಗ್ರಾಮೇಷು ಮುಖತೋ ವಮಂತ್ಯೋ ವಹ್ನಿಮುಲ್ಬಣಮ್ ।
ಸೃಗಾಲೋಲೂಕಟಂಕಾರೈಃ ಪ್ರಣೇದುರಶಿವಂ ಶಿವಾಃ ॥ ೯ ॥

ಸಂಗೀತವದ್ರೋದನವದುನ್ನಮಯ್ಯ ಶಿರೋಧರಾಮ್ ।
ವ್ಯಮುಂಚನ್ವಿವಿಧಾ ವಾಚೋ ಗ್ರಾಮಸಿಂಹಾಸ್ತತಸ್ತತಃ ॥ ೧೦ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಅಯ್ಯಾ ವಿದುರನೇ! ಬ್ರಹ್ಮದೇವರ ಮಾತಿನಿಂದ ಅಂಧಕಾರದ ಕಾರಣವನ್ನು ತಿಳಿದುಕೊಂಡ ದೇವತೆಗಳ ಶಂಕೆ ದೂರವಾಯಿತು. ಅವರೆಲ್ಲರೂ ಸ್ವರ್ಗಕ್ಕೆ ಹಿಂದಿರುಗಿದರು. ॥ ೧ ॥

ಇತ್ತ ದಿತಿಗೆ ಪತಿಯ ಮಾತಿನಂತೆ ಪುತ್ರರಿಂದ ಲೋಕಕ್ಕೆ ಉಪದ್ರವವು ಉಂಟಾಗಬಹುದೆಂಬ ಶಂಕೆ ಇದ್ದೇ ಇತ್ತು. ಆದ್ದರಿಂದ ಆ ಸಾಧ್ವಿಯು ಪೂರಾ ನೂರು ವರ್ಷಗಳು ಕಳೆದಾಗ ಇಬ್ಬರು ಅವಳಿ ಮಕ್ಕಳನ್ನು ಹಡೆದಳು. ॥ ೨ ॥

ಆ ಪುತ್ರರು ಹುಟ್ಟಿದಾಗ ಸ್ವರ್ಗದಲ್ಲಿ, ಭೂಮಿಯಲ್ಲಿ ಮತ್ತು ಅಂತರಿಕ್ಷಗಳಲ್ಲೂ ಅನೇಕ ಉತ್ಪಾತಗಳಾಗತೊಡಗಿದವು. ಅದರಿಂದ ಜನರು ಅತ್ಯಂತ ಭಯಗೊಂಡರು. ॥ ೩ ॥ ಅಲ್ಲಲ್ಲಿ ಭೂಮಿಯೂ, ಪರ್ವತಗಳೂ ನಡುಗ ತೊಡಗಿದವು. ಎಲ್ಲ ದಿಕ್ಕುಗಳಲ್ಲಿಯೂ ಅಗ್ನಿಜ್ವಾಲೆಗಳು ಉರಿಯಹತ್ತಿದವು. ಎಲ್ಲೆಡೆ ಉಲ್ಕೆಗಳು ಉದುರಿದವು. ಸಿಡಿಲು ಬಡಿಯ ತೊಡಗಿತು. ಆಕಾಶದಲ್ಲಿ ಅನಿಷ್ಟಸೂಚಕ ಧೂಮಕೇತುಗಳು ಕಾಣಿಸಿಕೊಂಡವು. ॥ ೪ ॥ ಸೊಯ್ಯನೇ ಶಬ್ದ ಮಾಡುತ್ತಾ ಸೋಂಕಿದವರಿಗೆ ಸಂಕಷ್ಟವನ್ನುಂಟುಮಾಡುತ್ತಾ, ದೊಡ್ಡ-ದೊಡ್ಡ ಮರಗಳನ್ನು ಬುಡಮೇಲಾಗಿಸುತ್ತಾ ಅಸಹ್ಯವಾದ ಬಿರುಗಾಳಿ ಬೀಸತೊಡಗಿತು. ಆಗ ಸುಳಿಗಾಳಿಯು ಸೇನೆಯಂತೆಯೂ, ಧೂಳೀಪಟಲವು ಧ್ವಜದಂತೆಯೂ ಕಂಡುಬರುತ್ತಿತ್ತು. ॥ ೫ ॥ ಕೋಲ್ಮಿಂಚು ಮತ್ತೆ-ಮತ್ತೆ ಸುಳಿಯುತ್ತಾ ವಿಕಟವಾಗಿ ನಗುತ್ತಿದೆಯೋ ಎಂಬಂತಿತ್ತು. ಆಕಾಶದಲ್ಲಿ ಸೂರ್ಯ, ಚಂದ್ರ, ನಕ್ಷತ್ರಗಳು ಯಾವುದೂ ಕಾಣಸದಷ್ಟು ದಟ್ಟವಾಗಿ ಮೋಡಗಳು ಮುಸುಕಿದವು. ಇದರಿಂದ ಎಲ್ಲೆಡೆ ಏನೂ ಕಾಣಿಸದಷ್ಟು ಗಾಢಾಂಧಕಾರವು ಮುಸುಕಿತು. ॥ ೬ ॥ ಸಮುದ್ರವು ಗಟ್ಟಿಯಾಗಿ ಗೋಳಿಡುತ್ತದೋ ಎಂಬಂತೆ ಭೋರ್ಗರೆಯುತ್ತಿತ್ತು. ಆಕಾಶದೆತ್ತರಕ್ಕೆ ಏಳುವ ರುದ್ರತೆರೆಗಳಿಂದ ಅದರಲ್ಲಿನ ಜಲಚರಗಳೆಲ್ಲವೂ ತಳಮಳಗೊಂಡವು. ನದಿಗಳು, ಕೆರೆ, ಕುಂಟೆ-ಕೊಳಗಳಲ್ಲಿ ನೀರು ಬತ್ತಿಹೋಗಿ ಅದರಲ್ಲಿದ್ದ ಕಮಲಗಳು ಒಣಗಿ ಹೋದುವು. ॥ ೭ ॥ ಸೂರ್ಯ-ಚಂದ್ರರಿಗೆ ಮತ್ತೆ-ಮತ್ತೆ ಗ್ರಹಣ ಹಿಡಿಯುತ್ತಿತ್ತು. ಅವರ ಸುತ್ತಲೂ ಅಮಂಗಳಸೂಚಕವಾದ ಪರಿವೇಷವೆಂಬ ಮಂಡಲಗಳು ಆವಿರ್ಭವಿಸಿದವು. ಆಕಾಶದಲ್ಲಿ ಮೋಡಗಳೇ ಇಲ್ಲದ ಗರ್ಜನೆಗಳೂ, ಪರ್ವತ ಗುಹೆಗಳಲ್ಲಿ ಘುರ್ಘುರ ಧ್ವನಿಗಳೂ ಅಕಾರಣವಾಗಿ ಕೇಳತೊಡಗಿದವು. ॥ ೮ ॥ ಹಳ್ಳಿಗಳಲ್ಲಿ – ಊರೊಳಗೆ ನರಿಗಳೂ, ಗೂಬೆಗಳೂ ಭಯಾನಕವಾಗಿ ಕೂಗಿಕೊಳ್ಳುತ್ತಿರಲು ಹೆಣ್ಣುನರಿಗಳು ಬಾಯಿಂದ ಭೀಕರವಾಗಿ ಬೆಂಕಿಯನ್ನುಗುಳುತ್ತಾ ಅಮಂಗಳವಾಗಿ ಊಳಿಡತೊಡಗಿದವು. ॥ ೯ ॥ ಅಲ್ಲಲ್ಲಿ ನಾಯಿಗಳು ಕತ್ತನ್ನೆತ್ತಿಕೊಂಡು ಕೆಲವೊಮ್ಮೆ ಹಾಡುವಂತೆಯೂ, ಕೆಲವೊಮ್ಮೆ ಅಳುವಂತೆಯೂ ಕರ್ಕಶವಾಗಿ ಕೂಗಿಡುತ್ತಿದ್ದವು. ॥ ೧೦ ॥ ಕತ್ತೆಗಳ ಹಿಂಡುಗಳು ತಮ್ಮ ಗೊರಸುಗಳಿಂದ ನೆಲವನ್ನು ಗೆಬರುತ್ತಾ ವಿಕಟವಾಗಿ ಅರಚುತ್ತಾ, ಮತ್ತೇರಿ ರಭಸದಿಂದ ಕಂಡ-ಕಂಡಲ್ಲಿಗೆ

ಖರಾಶ್ಚ ಕರ್ಕಶೈಃ ಕ್ಷತ್ತಃ ಖುರೈರ್ಘ್ನಂತೋ ಧರಾತಲಮ್ ।
ಖಾರ್ಕಾರರಭಸಾ ಮತ್ತಾಃ ಪರ್ಯಧಾವನ್ವರೂಥಶಃ ॥ ೧೧ ॥

ರುದಂತೋ ರಾಸಭತ್ರಸ್ತಾ ನೀಡಾದುದಪತನ್ಖಗಾಃ ।
ಘೋಷೇಽರಣ್ಯೇ ಚ ಪಶವಃ ಶಕೃನ್ಮೂತ್ರಮಕುರ್ವತ ॥ ೧೨ ॥

ಗಾವೋಽತ್ರಸನ್ನಸೃಗ್ ದೋಹಾಸ್ತೋಯದಾಃ ಪೂಯವರ್ಷಿಣಃ।
ವ್ಯರುದನ್‌ದೇವಲಿಂಗಾನಿ ದ್ರುಮಾಃ ಪೇತುರ್ವಿನಾನಿಲಮ್ ॥ ೧೩ ॥

ಗ್ರಹಾನ್ಪುಣ್ಯತಮಾನನ್ಯೇ ಭಗಣಾಂಶ್ಚಾಪಿ ದೀಪಿತಾಃ ।
ಅತಿಚೇರುರ್ವಕ್ರಗತ್ಯಾ ಯುಯುಧುಶ್ಚ ಪರಸ್ಪರಮ್ ॥ ೧೪ ॥

ದೃಷ್ಟ್ವಾನ್ಯಾಂಶ್ಚ ಮಹೋತ್ಪಾತಾನತತ್ತತ್ತ್ವವಿದಃ ಪ್ರಜಾಃ ।
ಬ್ರಹ್ಮಪುತ್ರಾನೃತೇ ಭೀತಾ ಮೇನಿರೇ ವಿಶ್ವಸಂಪ್ಲವಮ್ ॥ ೧೫ ॥

ತಾವಾದಿದೈತ್ಯೌ ಸಹಸಾ ವ್ಯಜ್ಯಮಾನಾತ್ಮಪೌರುಷೌ ।
ವವೃಧಾತೇಽಶ್ಮಸಾರೇಣ ಕಾಯೇನಾದ್ರಿಪತೀ ಇವ ॥ ೧೬ ॥

ದಿವಿಸ್ಪೃಶೌ ಹೇಮಕಿರೀಟಕೋಟಿಭಿ-
ರ್ನಿರುದ್ಧ ಕಾಷ್ಠೌ ಸ್ಫುರದಂಗದಾಭುಜೌ ।
ಗಾಂ ಕಂಪಯಂತೌ ಚರಣೈಃ ಪದೇ ಪದೇ
ಕಟ್ಯಾ ಸುಕಾಂಚ್ಯಾರ್ಕಮತೀತ್ಯ ತಸ್ಥತುಃ ॥ ೧೭ ॥

ಪ್ರಜಾಪತಿರ್ನಾಮ ತಯೋರಕಾರ್ಷೀದ್
ಯಃ ಪ್ರಾಕ್‌ಸ್ವ ದೇಹಾದ್ಯಮಯೋರಜಾಯತ ।
ತಂ ವೈ ಹಿರಣ್ಯಕಶಿಪುಂ ವಿದುಃ ಪ್ರಜಾ
ಯಂ ತಂ ಹಿರಣ್ಯಾಕ್ಷಮಸೂತ ಸಾಗ್ರತಃ ॥ ೧೮ ॥

ಚಕ್ರೇ ಹಿರಣ್ಯಕಶಿಪುರ್ದೋರ್ಭ್ಯಾಂ ಬ್ರಹ್ಮವರೇಣ ಚ ।
ವಶೇ ಸಪಾಲಾಲ್ಲೋಕಾಂಸ್ತ್ರೀನಕುತೋಮೃತ್ಯುರುದ್ಧತಃ ॥ ೧೯ ॥

ಹಿರಣ್ಯಾಕ್ಷೋಽನುಜಸ್ತಸ್ಯ ಪ್ರಿಯಃ ಪ್ರೀತಿಕೃದನ್ವಹಮ್ ।
ಗದಾಪಾಣಿರ್ದಿವಂ ಯಾತೋ ಯುಯುತ್ಸುರ್ಮೃಗಯನ್ರಣಮ್ ॥ ೨೦ ॥

ತಂ ವೀಕ್ಷ್ಯ ದುಃಸಹಜವಂ ರಣತ್ಕಾಂಚನನೂಪುರಮ್ ।
ವೈಜಯಂತ್ಯಾ ಸ್ರಜಾ ಜುಷ್ಟಮಂಸನ್ಯಸ್ತಮಹಾಗದಮ್ ॥ ೨೧ ॥

ಓಡತೊಡಗಿದವು. ॥ ೧೧॥ ಆ ಕತ್ತೆಗಳ ಕೆಟ್ಟ ಶಬ್ದಕ್ಕೆ ಹೆದರಿದ ಹಕ್ಕಿಗಳು ಅಳುವಿನ ಧ್ವನಿಮಾಡುತ್ತಾ ಗೂಡುಗಳಿಂದ ಹೊರಕ್ಕೆ ಹಾರಿದವು. ದೊಡ್ಡಿಗಳಲ್ಲಿ ಕಟ್ಟಹಾಕಿದ ಮತ್ತು ಕಾಡಿನಲ್ಲಿ ಮೇಯುತ್ತಿದ್ದ ಹಸುಗಳು, ಹೋರಿಗಳು ಮುಂತಾದ ಪಶುಗಳು ಅಂಜಿಕೆಯಿಂದ ಮಲ-ಮೂತ್ರ ವಿಸರ್ಜಿಸ ತೊಡಗಿವು. ॥ ೧೨ ॥ ಆಕಳುಗಳು ಭಯಗೊಂಡು ಹಾಲಿನ ಬದಲಿಗೆ ತಮ್ಮ ಕೆಚ್ಚಲುಗಳಿಂದ ರಕ್ತವನ್ನೇ ಸುರಿಸಿದವು. ಮೋಡಗಳು ಕೀವಿನ ಮಳೆ ಗರೆದವು. ದೇವತಾ ಮೂರ್ತಿಗಳ ಕಣ್ಣುಗಳಿಂದ ಕಣ್ಣೀರು ಸುರಿಯ ತೊಡಗಿತು. ಬಿರುಗಾಳಿ ಬೀಸದೆಯೇ ಮರಗಳು ನೆಲಕ್ಕುರುಳುತ್ತಿದ್ದವು. ॥ ೧೩ ॥

ಶನಿ, ರಾಹು ಮುಂತಾದ ಕ್ರೂರ ಗ್ರಹರು ಪ್ರಬಲರಾಗಿ ಚಂದ್ರ, ಬೃಹಸ್ಪತಿ ಮುಂತಾದ ಶುಭಗ್ರಹರನ್ನು ಮತ್ತು ನಕ್ಷತ್ರಗಳನ್ನೂ ಅತಿಕ್ರಮಿಸಿ ವಕ್ರಗತಿಯಲ್ಲಿ ಚಲಿಸಿ ಪರಸ್ಪರವಾಗಿ ಯುದ್ಧ ಮಾಡತೊಡಗಿದವು. ॥ ೧೪ ॥ ಇಂತಹ ಇನ್ನೂ ಅನೇಕ ಉತ್ಪಾತಗಳನ್ನು ಕಂಡು ಸನಕಾದಿಗಳನ್ನು ಬಿಟ್ಟು ಉಳಿದೆಲ್ಲ ಜೀವಿಗಳು ಗಾಬರಿಗೊಂಡವು. ಈ ಉತ್ಪಾತಗಳ ಮರ್ಮವನ್ನರಿಯದೆ – 'ಇನ್ನೇನು ಜಗತ್ತಿನ ಪ್ರಳಯವೇ ಆಗಿಬಿಡುವುದು' ಎಂದು ಭಾವಿಸಿದರು. ॥ ೧೫ ॥

ಆದಿ ದೈತ್ಯರಾದ ಅವರಿಬ್ಬರೂ ಹುಟ್ಟುತ್ತಲೇ ತಮ್ಮ ಭಯಂಕರವಾದ ಪೌರುಷವನ್ನು ಪ್ರಕಟಪಡಿಸುತ್ತಾ ಬಹುಬೇಗನೇ ಉಕ್ಕಿನಂತಹ ತಮ್ಮ ಕಠೋರ ಶರೀರಗಳೊಂದಿಗೆ ಮಹಾ ಪರ್ವತದಂತೆ ಬೆಳೆದರು. ॥ ೧೬ ॥ ಅವರ ಸುವರ್ಣಮಯ ಕಿರೀಟಗಳ ತುದಿಯು ಸ್ವರ್ಗವನ್ನು ಮುಟ್ಟುವಷ್ಟು ಅವರು ಎತ್ತರವಾಗಿದ್ದು ಅವರ ವಿಶಾಲ ದೇಹಗಳಿಂದ ಎಲ್ಲ ದಿಕ್ಕುಗಳು ಮುಚ್ಚಿಹೋಗಿದ್ದವು. ರತ್ನಖಚಿತವಾದ ತೋಳ್ಬಳೆಗಳು ಭುಜಗಳಲ್ಲಿ ಹೊಳೆಯುತ್ತಿದ್ದವು. ಅವರು ನೆಲದ ಮೇಲೆ ಒಂದೊಂದು ಹೆಜ್ಜೆಯನ್ನಿರಿಸಿದರೂ ಭೂಮಿಯು ನಡುಗುತ್ತಿತ್ತು. ಅವರು ನಿಂತರೆಂದರೆ ಥಳ-ಥಳಿಸುವ ನಡುದಾರದ ಪ್ರಕಾಶದಿಂದ ಸೂರ್ಯನನ್ನೂ ತಿರಸ್ಕರಿಸುವಂತಿತ್ತು. ॥ ೧೭ ॥ ಹಾಗೆ ಹುಟ್ಟಿದ ಅವಳಿಮಕ್ಕಳಿಗೆ ಪ್ರಜಾಪತಿ ಕಶ್ಯಪರು ನಾಮಕರಣ ಮಾಡಿದರು. ಅವರಲ್ಲಿ ತಮ್ಮ ವೀರ್ಯದಿಂದ ದಿತಿಯಗರ್ಭದಲ್ಲಿ ಮೊದಲು ಸ್ಥಾಪಿಸಲ್ಪಟ್ಟ ಪುತ್ರನಿಗೆ 'ಹಿರಣ್ಯಕಶಿಪು' ಎಂದು ಹೆಸರಿಸಿದರು. ದಿತಿಯ ಹೊಟ್ಟೆಯಿಂದ ಮೊದಲಿಗೆ ಹೊರಬಂದ ಪುತ್ರನು 'ಹಿರಣ್ಯಾಕ್ಷ' ಎಂಬ ಹೆಸರಿನಿಂದ ಖ್ಯಾತನಾದನು. ॥ ೧೮ ॥

ಹಿರಿಯವನಾದ ಹಿರಣ್ಯಕಶಿಪುವು ಬ್ರಹ್ಮದೇವರ ವರದಿಂದ ತನಗೆ ಯಾರಿಂದಲೂ ಮೃತ್ಯುವಿಲ್ಲವೆಂದು ಭಾವಿಸಿ ಅಹಂಕಾರದಿಂದ ಕೊಬ್ಬಿಹೋದನು. ತನ್ನ ಭುಜಬಲದಿಂದ ಲೋಕಪಾಲರ ಸಹಿತ ಮೂರೂ ಲೋಕಗಳನ್ನು ವಶಪಡಿಸಿಕೊಂಡನು. ॥ ೧೯ ॥ ಆತನಿಗೆ ತಮ್ಮನಾದ ಹಿರಣ್ಯಾಕ್ಷನ ಮೇಲೆ ತುಂಬುಪ್ರೀತಿ. ಹಿರಣ್ಯಾಕ್ಷನೂ ತನ್ನಣ್ಣನನ್ನು ಬಹುವಾಗಿ ಪ್ರೀತಿಸುತ್ತಾ ಅವನಿಗೆ ಪ್ರಿಯವಾಗುವಂತೆ ನಡೆದುಕೊಳ್ಳುತ್ತಿದ್ದನು. ಒಂದು ದಿನ ಆ ಹಿರಣ್ಯಾಕ್ಷನು ಕೈಯಲ್ಲಿ ಗದೆಯನ್ನೆತ್ತಿಕೊಂಡು ಯುದ್ಧಕ್ಕಾಗಿ ಹಂಬಲಿಸುತ್ತಾ ಸ್ವರ್ಗಲೋಕಕ್ಕೆ ಹೋದನು. ॥ ೨೦ ॥ ಆತನ ರೂಪ, ಪರಾಕ್ರಮ ಮತ್ತು ವೇಗಗಳು ಎಲ್ಲರನ್ನು ಭಯಪಡಿಸುವಂತಿತ್ತು. ಕಾಲುಗಳಲ್ಲಿ ಚಿನ್ನದ ಕಾಲಂದುಗೆಗಳು ಝಣ-ಝಣಿಸುತ್ತಿದ್ದವು. ಕತ್ತಿನಲ್ಲಿ ವಿಜಯಸೂಚಕವಾದ ಮಾಲೆ ಧರಿಸಿದ್ದನು. ಹೆಗಲಮೇಲೆ ವಿಶಾಲವಾದ ಗದೆಯು ಮೆರೆಯುತ್ತಿತ್ತು. ॥ ೨೧ ॥

ಮನೋವೀರ್ಯವರೋತ್ಸಿಕ್ತಮಸೃಣ್ಯಮಕುತೋಭಯಮ್ ।
ಭೀತಾ ನಿಲಿಲ್ಯಿರೇ ದೇವಾಸ್ತಾರ್ಕ್ಷ್ಯತ್ರಸ್ತಾ ಇವಾಹಯಃ ॥ ೨೨ ॥

ಸ ವೈ ತಿರೋಹಿತಾನ್‌ದೃಷ್ಟ್ವಾ ಮಹಸಾ ಸ್ವೇನ ದೈತ್ಯರಾಟ್ ।
ಸೇಂದ್ರಾನ್ ದೇವಗಣಾನ್ ಕ್ಷೀಬಾನಪಶ್ಯನ್ ವ್ಯನದದ್ಭೃಶಮ್ ॥ ೨೩ ॥

ತತೋ ನಿವೃತ್ತಃ ಕ್ರೀಡಿಷ್ಯನ್ಗಂಭೀರಂ ಭೀಮನಿಃಸ್ವನಮ್ ।
ವಿಜಗಾಹೇ ಮಹಾಸತ್ತ್ವೋ ವಾರ್ಧಿಂ ಮತ್ತ ಇವ ದ್ವಿಪಃ ॥ ೨೪ ॥

ತಸ್ಮಿನ್ಪ್ರವಿಷ್ಟೇ ವರುಣಸ್ಯ ಸೈನಿಕಾ
ಯಾದೋಗಣಾಃ ಸನ್ನಧಿಯಃ ಸಸಾಧ್ವಸಾಃ ।
ಅಹನ್ಯಮಾನಾ ಅಪಿ ತಸ್ಯ ವರ್ಚಸಾ
ಪ್ರಧರ್ಷಿತಾ ದೂರತರಂ ಪ್ರದುದ್ರುವುಃ ॥ ೨೫ ॥

ಸ ವರ್ಷಪೂಗಾನುದಧೌ ಮಹಾಬಲ-
ಶ್ಚರನ್ಮಹೋರ್ಮೀಂಛ್ವಸನೇರಿತಾನ್ಮುಹುಃ ।
ಮೌರ್ವ್ಯಾಭಿಜಘ್ನೇ ಗದಯಾ ವಿಭಾವರೀ-
ಮಾಸೇದಿವಾಂಸ್ತಾತ ಪುರೀಂ ಪ್ರಚೇತಸಃ ॥ ೨೬ ॥

ತತ್ರೋಪಲಭ್ಯಾಸುರಲೋಕಪಾಲಕಂ
ಯಾದೋಗಣಾನಾಮೃಷಭಂ ಪ್ರಚೇತಸಮ್ ।
ಸ್ಮಯನ್ಪ್ರಲಬ್ಧುಂ ಪ್ರಣಿಪತ್ಯ ನೀಚವ-
ಜ್ಜಗಾದ ಮೇ ದೇಹ್ಯಧಿರಾಜ ಸಂಯುಗಮ್ ॥ ೨೭ ॥

ತ್ವಂ ಲೋಕಪಾಲೋಽಧಿಪತಿರ್ಬೃಹಚ್ಛ್ರವಾ
ವೀರ್ಯಾಪಹೋ ದುರ್ಮದವೀರಮಾನಿನಾಮ್ ।
ವಿಜಿತ್ಯ ಲೋಕೇಽಖಿಲದೈತ್ಯದಾನವಾನ್
ಯದ್ರಾಜಸೂಯೇನ ಪುರಾಯಜತ್ಪ್ರಭೋ ॥ ೨೮ ॥

ಸ ಏವಮುತ್ಸಿಕ್ತಮದೇನ ವಿದ್ವಿಷಾ
ದೃಢಂ ಪ್ರಲಬ್ಧೋ ಭಗವಾನಪಾಂ ಪತಿಃ ।
ರೋಷಂ ಸಮುತ್ಥಂ ಶಮಯನ್ಸ್ವಯಾ ಧಿಯಾ
ವ್ಯವೋಚದಂಗೋಪಶಮಂ ಗತಾ ವಯಮ್ ॥ ೨೯ ॥

ಪಶ್ಯಾಮಿ ನಾನ್ಯಂ ಪುರುಷಾತ್ಪುರಾತನಾದ್
ಯಃ ಸಂಯುಗೇ ತ್ವಾಂ ರಣಮಾರ್ಗಕೋವಿದಮ್ ।
ಆರಾಧಯಿಷ್ಯತ್ಯಸುರರ್ಷಭೇಹಿ ತಂ
ಮನಸ್ವಿನೋ ಯಂ ಗೃಣತೇ ಭವಾದೃಶಾಃ ॥ ೩೦ ॥

ಮನೋಬಲ, ದೇಹಬಲ ಮತ್ತು ಬ್ರಹ್ಮದೇವರಿಂದ ಪಡೆದ ವರ ಬಲಗಳಿಂದ ಆತನು ಉನ್ಮತ್ತನಾಗಿದ್ದನು. ಆದ್ದರಿಂದ ಅವನು ನಿರಂಕುಶನಾಗಿ, ಯಾರಿಗೂ ಹೆದರದೆ ವರ್ತಿಸುತ್ತಿದ್ದನು. ಆತನನ್ನು ಕಂಡೊಡನೆ ದೇವತೆಗಳು - ಗರುಡನನ್ನು ಕಂಡ ಸರ್ಪಗಳಂತೆ ಭಯಗ್ರಸ್ತರಾಗಿ ಎಲ್ಲೆಲ್ಲೋ ಅವಿತುಕೊಂಡರು. ॥ ೨೨ ॥ ತನ್ನ ದುರಿಗೆ ಮಹಾ ಸತ್ತ್ವಶಾಲಿಗಳಾದ ಇಂದ್ರಾದಿ ದೇವತೆಗಳೂ ತನ್ನ ತೇಜಸ್ಸಿಗೆ ಅಂಜಿ ಹೇಡಿಗಳಾಗಿ ಅವಿತುಕೊಂಡಿರುವುದನ್ನು ಕಂಡ ಆ ದೈತ್ಯರಾಜ ಹಿರಣ್ಯಾಕ್ಷನು ಮತ್ತೆ-ಮತ್ತೆ ಭಯಂಕರವಾಗಿ ಗರ್ಜಿಸ ತೊಡಗಿದನು. ॥ ೨೩ ॥ ಮತ್ತೆ ಆ ಮಹಾಬಲಶಾಲಿಯಾದ ದೈತ್ಯನು ಅಲ್ಲಿಂದ ಹಿಂದಿರುಗಿ ಜಲಕ್ರೀಡೆಯನ್ನಾಡಬೇಕೆಂದು ಬಯಸಿ ಮದ್ದಾನೆಯಂತೆ ತರಂಗಮಾಲೆಗಳಿಂದ ಭೀಕರವಾಗಿ ಗರ್ಜಿಸುತ್ತಿದ್ದ ಗಂಭೀರವಾದ ಸಮುದ್ರದೊಳಗೆ ನುಗ್ಗಿದನು. ॥ ೨೪ ॥

ಅವನು ಸಮುದ್ರದೊಳಗೆ ಹೆಜ್ಜೆಯಿಡುತ್ತಲೇ ಅಲ್ಲಿದ್ದ ವರುಣನ ಸೈನಿಕರಾದ ಜಲಚರ ಜೀವಿಗಳೆಲ್ಲವೂ ತಬ್ಬಿಬ್ಬಾಗಿ, ಆತನು ತಮ್ಮನ್ನು ಏನೂ ಮಾಡದಿದ್ದರೂ ಆತನ ತೇಜಸ್ಸಿನಿಂದಲೇ ಹೆದರಿ ದೂರಕ್ಕೆ ಓಡಿಹೋದವು. ॥ ೨೫ ॥ ಆ ಮಹಾಬಲಶಾಲಿಯಾದ ದೈತ್ಯನು ಅನೇಕ ವರ್ಷಗಳ ಕಾಲ ಆ ಕಡಲಿನಲ್ಲೇ ವಿಹರಿಸುತ್ತಿದ್ದನು. ಅಲ್ಲಿಯೂ ತನಗೆ ಯಾರೂ ಎದುರಾಳಿಯು ಸಿಗದಿರುವಾಗ ಆತನು ವಾಯು ವೇಗದಿಂದ ಮೇಲಕ್ಕೆ ಏಳುತ್ತಿದ್ದ ಪ್ರಚಂಡವಾದ ತರಂಗಗಳನ್ನೇ ತನ್ನ ಉಕ್ಕಿನ ಗದೆಯಿಂದ ಅಪ್ಪಳಿಸುತ್ತಿದ್ದನು. ಹೀಗೆಯೇ ಸುತ್ತಾಡುತ್ತಾ ಆತನು ವರುಣದೇವರ ರಾಜಧಾನಿಯಾದ ವಿಭಾವರೀಪುರಿಯನ್ನು ತಲುಪಿದನು. ॥ ೨೬ ॥ ಅಲ್ಲಿ ಅವನು ಪಾತಾಳಲೋಕದ ಅಧಿಪತಿಯೂ, ಜಲಚರಗಳ ಒಡೆಯನೂ ಆದ ವರುಣನನ್ನು ನೋಡಿ, ಅವನನ್ನು ಗೇಲಿ-ಕುಚೋದ್ಯಗಳನ್ನು ಮಾಡುತ್ತಾ, ನೀಚ- ಮನುಷ್ಯನಂತೆ ಅವನಿಗೆ ನಮಸ್ಕರಿಸಿದನು. ಮತ್ತೆ ಹುಸಿನಗೆಯಿಂದ ವ್ಯಂಗವಾಗಿ – ಮಹಾರಾಜಾ ! ನನಗೆ ಯುದ್ಧ ಭಿಕ್ಷೆಯನ್ನು ಕೊಡಿರಿ ಎಂದು ನುಡಿದನು. ॥ ೨೭ ॥ ಪ್ರಭುಗಳೇ ! ನೀವಾದರೋ ಲೋಕಪಾಲರು, ರಾಜಾಧಿರಾಜರು, ಮಹಾ ಕೀರ್ತಿಶಾಲಿಗಳು. ತಮ್ಮನ್ನು ಮಹಾವೀರರೆಂದು ತಿಳಿದುಕೊಂಡಿದ್ದವರ ಮದವನ್ನು ಮರ್ದನ ಮಾಡಿದವರು ನೀವು. ಮೊದಲೊಮ್ಮೆ ಲೋಕದ ಎಲ್ಲ ದೈತ್ಯ-ದಾನವರನ್ನು ಸೋಲಿಸಿ ರಾಜಸೂಯ ಯಜ್ಞವನ್ನೂ ಮಾಡಿದ್ದೀರಿ. ॥ ೨೮ ॥

ಆ ಮದೋನ್ಮತ್ತ ಶತ್ರುವಿನ ಇಂತಹ ಹೀಯಾಳಿಕೆಯ ಮಾತನ್ನು ಕೇಳಿ ವರುಣನಿಗೆ ಮಿತಿಮೀರಿದ ಕೋಪವುಂಟಾದರೂ, ಅವನು ತನ್ನ ಬುದ್ಧಿಬಲದಿಂದ ಉಮ್ಮಳಿಸಿದ ಕ್ರೋಧವನ್ನು ನುಂಗಿಕೊಂಡು ಅವನಿಗೆ ಇಂತೆಂದನು – ಅಯ್ಯಾ ವೀರಾಗ್ರಣಿಯೇ ! ಈಗ ನನಗೆ ಯುದ್ಧದ ಯಾವುದೇ ಅಭಿಲಾಷೆಯು ಉಳಿಯಲಿಲ್ಲ. ॥ ೨೯ ॥ ನಿನ್ನಂತಹ ರಣಕುಶಲಿಯನ್ನು ಯುದ್ಧದಲ್ಲಿ ಸಂತೋಷಪಡಿಸಲು ಪುರಾಣಪುರುಷೋತ್ತಮನಾದ ಭಗವಂತನಲ್ಲದೆ ಬೇರೆ ಯಾರೂ ಕಂಡುಬರುವುದಿಲ್ಲ. ದೈತ್ಯರಾಜನೇ ! ನೀನು ಆತನ ಬಳಿಗೆ ಹೋಗು. ಅವನೇ ನಿನ್ನ ಇಷ್ಟಾರ್ಥವನ್ನು ಈಡೇರಿಸುವನು. ನಿನ್ನಂತಹ ವೀರಾಗ್ರಣಿಗಳು ಆತನ ಪರಾಕ್ರಮವನ್ನೇ ಹಾಡಿ ಹೊಗಳುತ್ತಾರೆ. ॥ ೩೦ ॥

ತಂ ವೀರಮಾರಾದಭಿಪದ್ಯ ವಿಸ್ಮಯಃ
ಶಯಿಷ್ಯಸೇ ವೀರಶಯೇ ಶ್ವಭಿರ್ವೃತಃ ।
ಯಸ್ತ್ವದ್ವಿಧಾನಾಮಸತಾಂ ಪ್ರಶಾಂತಯೇ
ರೂಪಾಣಿ ಧತ್ತೇ ಸದನುಗ್ರಹೇಚ್ಛಯಾ ॥ ೩೧ ॥

ಆತನು ಮಹಾವೀರಾಧಿವೀರನು. ಅವನ ಬಳಿಗೆ ಹೋದೊಡನೆಯೇ ನಿನ್ನ ಗರ್ವವು ಇಳಿದುಹೋಗಿ, ನೀನು ನಾಯಿಗಳಿಂದ ಸುತ್ತುವರಿಯಲ್ಪಟ್ಟು ವೀರಶಯ್ಯೆಯಲ್ಲಿ ಮಲಗುವೆ. ಆವನು ನಿನ್ನಂತಹ ದುಷ್ಟರನ್ನು ನಿಗ್ರಹಿಸಿ, ಸತ್ಪುರುಷರನ್ನು ಸಲಹುವುದಕ್ಕಾಗಿ ನಾನಾ ರೂಪಗಳನ್ನು ಧರಿಸುತ್ತಾ ಇರುತ್ತಾನೆ. ॥ ೩೧ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಹಿರಣ್ಯಾಕ್ಷದಿಗ್ವಿಜಯೇ ಸಪ್ತದಶೋಽಧ್ಯಾಯಃ ॥ ೧೭ ॥

# ಹದಿನೆಂಟನೆಯ ಅಧ್ಯಾಯ

## ಹಿರಣ್ಯಾಕ್ಷನೊಡನೆ ಭಗವಾನ್ ಶ್ರೀವರಾಹದೇವರ ಯುದ್ಧ

ಮೈತ್ರೇಯ ಉವಾಚ

ತದೇವಮಾಕರ್ಣ್ಯ ಜಲೇಶಭಾಷಿತಂ
ಮಹಾಮನಾಸ್ತದ್ವಿಗಣಯ್ಯ ದುರ್ಮದಃ ।
ಹರೇರ್ವಿದಿತ್ವಾ ಗತಿಮಂಗ ನಾರದಾದ್
ರಸಾತಲಂ ನಿರ್ವಿವಿಶೇ ತ್ವರಾನ್ವಿತಃ ॥ ೧ ॥

ದದರ್ಶ ತತ್ರಾಭಿಜಿತಂ ಧರಾಧರಂ
ಪ್ರೋನ್ನೀಯಮಾನಾವನಿಮಗ್ರದಂಷ್ಟ್ರಯಾ ।
ಮುಷ್ಣಂತಮಕ್ಷ್ಣಾ ಸ್ವರುಚೋಽರುಣಶ್ರಿಯಾ
ಜಹಾಸ ಚಾಹೋ ವನಗೋಚರೋ ಮೃಗಃ ॥ ೨ ॥

ಆಹೈನಮೇಹ್ಯಜ್ಞ ಮಹೀಂ ವಿಮುಂಚ ನೋ
ರಸೌಕಸಾಂ ವಿಶ್ವಸೃಜೇಯಮರ್ಪಿತಾ ।
ನ ಸ್ವಸ್ತಿ ಯಾಸ್ಯಸ್ಯನಯಾ ಮಮೇಕ್ಷತಃ
ಸುರಾಧಮಾಸಾದಿತಸೂಕರಾಕೃತೇ ॥ ೩ ॥

ತ್ವಂ ನಃ ಸಪತ್ನೈರಭವಾಯ ಕಿಂ ಭೃತೋ
ಯೋ ಮಾಯಯಾ ಹಂತ್ಯ ಸುರಾನ್ಪರೋಕ್ಷಜಿತ್ ।
ತ್ವಾಂ ಯೋಗಮಾಯಾಬಲಮಲ್ಪಪೌರುಷಂ
ಸಂಸ್ಥಾಪ್ಯ ಮೂಢ ಪ್ರಮೃಜೇ ಸುಹೃಚ್ಛುಚಃ ॥ ೪ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಮಹಾತ್ಮನಾದ ವಿದುರನೇ! 'ಶ್ರೀಹರಿಯು ನಿನ್ನನ್ನು ಯುದ್ಧದಲ್ಲಿ ಕೊಲ್ಲುವನು' ಎಂಬ ವರುಣದೇವರ ಮಾತನ್ನು ಕೇಳಿ ಆ ಉನ್ಮತ್ತನಾದ ಹಿರಣ್ಯಾಕ್ಷನಿಗೆ ಸ್ವಲ್ಪವೂ ಅಂಜಿಕೆಯಾಗಲಿಲ್ಲ. ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ತನಗೆ ತಕ್ಕ ಶತ್ರುವಾದ ಆ ಹರಿಯು ಎಲ್ಲಿದ್ದಾನೆ ಎಂದು ಒಡನೆಯೇ ನಾರದರಿಂದ ತಿಳಿದುಕೊಂಡು ರಭಸದಿಂದ ರಸಾತಳವನ್ನು ಹೊಕ್ಕನು. ॥ ೧ ॥ ಅಲ್ಲಿ ಅವನು ವಿಶ್ವವಿಜಯಿಯಾದ ಆ ವರಾಹಭಗವಂತನು ಭೂಮಿಯನ್ನು ತನ್ನ ಕೋರೆದಾಡೆಗಳ ಮೇಲಿರಿಸಿಕೊಂಡು ಮೇಲಕ್ಕೆ ಬರುತ್ತಿರುವುದನ್ನು ಕಂಡನು. ಅವನು ತನ್ನ ಕೆಂಗಣ್ಣಿನ ಕಾಂತಿಯಿಂದ ಪರರ ತೇಜಸ್ಸನ್ನು ಕಸಿದುಕೊಳ್ಳುತ್ತಾ ಮುನ್ನಡೆಯುತ್ತಿದ್ದಾನೆ. ಆತನನ್ನು ನೋಡಿದೊಡನೆಯೇ ದೈತ್ಯನು ಘೊಳ್ಳನೆ ನಕ್ಕು – 'ಅರೇ ! ಈ ಕಾಡಿನ ಪಶುವು ಇಲ್ಲಿಗೆ ಎಲ್ಲಿಂದ ಬಂತು ?' ಎಂದು ಅಪಹಾಸ್ಯ ಮಾಡಿದನು. ॥ ೨ ॥ ಎಲವೋ ಮೂಢನೇ ! ಇತ್ತ ಬಾ. ಈ ಭೂಮಿಯನ್ನು ಬಿಟ್ಟುಬಿಡು. ಇದನ್ನು ವಿಶ್ವಕರ್ತನಾದ ಬ್ರಹ್ಮನು ರಸಾತಳದಲ್ಲಿ ವಾಸಿಸುವ ನಮ್ಮ ವಶಕ್ಕೆ ಒಪ್ಪಿಸಿರುವನು. ಎಲೈ ಹಂದಿಯ ರೂಪವನ್ನಾಂತ ಸುರಾಧಮನೇ! ನನ್ನ ಕಣ್ಣು ಎದುರಿಗೆ ಇದನ್ನು ಎತ್ತಿಕೊಂಡು ನೆಮ್ಮದಿಯಾಗಿ ಹೋಗಲಾರೆ. ॥ ೩ ॥ ನೀನು ಮಾಯೆಯಿಂದ ಅಡಗಿಕೊಂಡೇ ದೈತ್ಯರನ್ನು ಜಯಿಸಿಕೊಂಡು ಬಿಡುವೆ. ಹೀಗೆ ಮೋಸದಿಂದ ನಮ್ಮನ್ನು ಕೊಲ್ಲುವುದಕ್ಕಾಗಿಯೇ ನಿನ್ನನ್ನು ನಮ್ಮ ಶತ್ರುಗಳು ಸಾಕಿದ್ದಾರೋ ? ನಿನ್ನ ಬಲವಾದರೋ ಯೋಗಮಾಯೆ ಒಂದೇ ಆಗಿದೆ. ಅದನ್ನು ಬಿಟ್ಟು ನಿನ್ನಲ್ಲಿ ಬೇರೆ ಪೌರುಷವೇನಿದೆ ? ಇಂದು ನಿನ್ನನ್ನು ಮುಗಿಸಿ ನನ್ನ ಬಂಧುಗಳ ದುಃಖವನ್ನು ದೂರಮಾಡುವೆನು. ॥ ೪ ॥ ಇಂದು ನಾನು ಬೀಸುವ ಗದೆಯ ಏಟಿನಿಂದ ನಿನ್ನ ತಲೆಯು ಒಡೆದುಹೋಗಿ ನೀನು

ತ್ವಯಿ ಸಂಸ್ಥಿತೇ ಗದಯಾ ಶೀರ್ಣಶೀರ್ಷ-
ಣ್ಯಸ್ಮದ್ಭುಜಚ್ಯುತಯಾ ಯೇ ಚ ತುಭ್ಯಮ್ ।
ಬಲಿಂ ಹರಂತ್ಯೃಷಯೋ ಯೇ ಚ ದೇವಾಃ
ಸ್ವಯಂ ಸರ್ವೇ ನ ಭವಿಷ್ಯಂತ್ಯಮೂಲಾಃ ॥ ೫ ॥

ಸತ್ತು ಹೋದಾಗ ನಿನ್ನನ್ನು ಆರಾಧಿಸುತ್ತಿರುವ ದೇವತೆಗಳೂ, ಋಷಿಗಳೂ ಬೇರುಕಿತ್ತ ಮರದಂತೆ ತಾವಾಗಿಯೇ ನಾಶವಾಗಿ ಹೋಗುವರು. ॥ ೫ ॥

ಸ ತುದ್ಯ ಮಾನೋಽರಿದುರುಕ್ತ ತೋಮರೈ-
ರ್ದಂಷ್ಟ್ರಾಗ್ರಗಾಂ ಗಾಮುಪಲಕ್ಷ್ಯ ಭೀತಾಮ್ ।
ತೋದಂ ಮೃಷನ್ನಿರಗಾದಂಬುಮಧ್ಯಾದ್
ಗ್ರಾಹಾಹತಃ ಸಕರೇಣುರ್ಯಥೇಭಃ ॥ ೬ ॥

ಹಿರಣ್ಯಾಕ್ಷನು ಭಗವಂತನನ್ನು ದುರ್ವಚನಗಳೆಂಬ ಬಾಣ ಗಳಿಂದ ನೋಯಿಸುತ್ತಿದ್ದರೂ, ಕೋರೆಹಲ್ಲುಗಳ ತುದಿಯಲ್ಲಿದ್ದ ಭೂದೇವಿಯು ಅಸುರನ ಬೆದರಿಕೆಯಿಂದ ಭಯಗೊಂಡಿರುವುದನ್ನು ಮನಗಂಡು, ಶತ್ರುವಿನ ವಾಗ್ಬಾಣಗಳನ್ನು ಸ್ವಾಮಿಯು ಸಹಿಸಿಕೊಂಡು – ಮೊಸಳೆಯ ಏಟುತಿಂದ ಗಜರಾಜನು ತನ್ನ ಹೆಣ್ಣಾನೆಯೊಡನೆ ಹೊರಬರುವಂತೆ ನೀರಿನಿಂದ ಹೊರಬರುತ್ತಿದ್ದನು. ॥ ೬ ॥ ಹೀಗೆ ತನ್ನ ಹೀಯಾಳಿಕೆಗೆ ಯಾವ ಉತ್ತರವನ್ನೂ ಕೊಡದೇ ಶ್ರೀವರಾಹಮೂರ್ತಿಯು ನೀರಿನಿಂದ ಹೊರಗೆ ಹೊಗುತ್ತಿರುವುದನ್ನು ಕಂಡಾಗ ಹಳದಿಯ ತಲೆಗೂದಲು ಮತ್ತು ತೀಕ್ಷ್ಣವಾದ ಕೋರೆಹಲ್ಲುಗಳಿಂದ ಕೂಡಿದ್ದ ಆ ದೈತ್ಯನು ಮೊಸಳೆಯು ಆನೆಯನ್ನು ಅಟ್ಟಿಸಿಕೊಂಡು ಹೋಗುವಂತೆ ಆತನನ್ನು ಹಿಂಬಾಲಿಸಿ ಸಿಡಿಲಿನಂತೆ ಅಬ್ಬರಿಸುತ್ತಾ – ಎಲವೋ! ಹೇಡಿಯಂತೆ ಹೀಗೆ ಓಡಿಹೋಗುವುದರಲ್ಲಿ ನಿನಗೆ ನಾಚಿಕೆಯಾಗುವುದಿಲ್ಲವೇ ? ನಾಚಿಕೆಗೆಟ್ಟ ನೀಚರಿಗೆ ನಿಂದ್ಯವಾದುದು ಏನಿದೆ? ಎಂದು ನುಡಿದನು. ॥ ೭ ॥ ಶ್ರೀಭಗವಂತನು ಭೂಮಿಯನ್ನು ನೀರಿನಿಂದ ಮೇಲಕ್ಕೆತ್ತಿ ತಂದು ಯೋಗ್ಯಜಾಗದಲ್ಲಿ ಇರಿಸಿ, ಅದರಲ್ಲಿ ತನ್ನ ಆಧಾರಶಕ್ತಿಯನ್ನು ತುಂಬಿದನು. ಆಗ ಹಿರಣ್ಯಾಕ್ಷನು ನೋಡುತ್ತಿರುವಂತೆಯೇ ಸೃಷ್ಟಿಕರ್ತನಾದ ಬ್ರಹ್ಮದೇವರು ಅವನನ್ನು ಸ್ತುತಿಸಿದರು; ದೇವತೆಗಳು ಪುಷ್ಪವೃಷ್ಟಿಗರೆದರು. ॥ ೮ ॥ ಆಗ ಚಿನ್ನದ ಆಭರಣಗಳನ್ನೂ, ಅದ್ಭುತವಾದ ಕವಚವನ್ನೂ ಧರಿಸಿ, ಕೈಯಲ್ಲಿ ಭಾರೀಗದೆಯನ್ನು ಹಿಡಿದುಕೊಂಡು ತನ್ನನ್ನು ಕಟುವಾಕ್ಯಗಳಿಂದ ನಿರಂತರವಾಗಿ ನೋಯಿಸುತ್ತಿದ್ದ ಆ ದೈತ್ಯನನ್ನು ಕುರಿತು – ಶ್ರೀಹರಿಯು ಉಕ್ಕೇರಿದ ಕೋಪದಿಂದ ನಗುತ್ತಾ ಇಂತೆಂದನು – ॥ ೯ ॥

ತಂ ನಿಃಸರಂತಂ ಸಲಿಲಾದನುದ್ರುತೋ
ಹಿರಣ್ಯಕೇಶೋ ದ್ವಿರದಂ ಯಥಾ ಝಷಃ ।
ಕರಾಲದಂಷ್ಟ್ರೋಽಶನಿನಿಃಸ್ವನೋಽಬ್ರವೀತ್
ಗತಹ್ರಿಯಾಂ ಕಿಂ ತ್ವ ಸತಾಂ ವಿಗರ್ಹಿತಮ್ ॥ ೭ ॥

ಸ ಗಾಮುದಸ್ತಾತ್ಸಲಿಲಸ್ಯ ಗೋಚರೇ
ವಿನ್ಯಸ್ಯ ತಸ್ಯಾಮದಧಾತ್ಸ್ವಸತ್ತ್ವಮ್ ।
ಅಭಿಷ್ಟುತೋ ವಿಶ್ವಸೃಜಾ ಪ್ರಸೂನೈ-
ರಾಪೂರ್ಯಮಾಣೋ ವಿಬುಧೈಃ ಪಶ್ಯತೋಽರೇಃ ॥ ೮ ॥

ಪರಾನುಷಕ್ತಂ ತಪನೀಯೋಪಕಲ್ಪಂ
ಮಹಾಗದಂ ಕಾಂಚನಚಿತ್ರದಂಶಮ್ ।
ಮರ್ಮಾಣ್ಯಭೀಕ್ಷ್ಣಂ ಪ್ರತುದಂತಂ ದುರುಕ್ತೈಃ
ಪ್ರಚಂಡ ಮನ್ಯುಃ ಪ್ರಹಸಂಸ್ತಂ ಬಭಾಷೇ ॥ ೯ ॥

*ಶ್ರೀಭಗವಾನುವಾಚ*

ಸತ್ಯಂ ವಯಂ ಭೋ ವನಗೋಚರಾ ಮೃಗಾ
ಯುಷ್ಮದ್ವಿಧಾನ್ಮೃಗಯೇ ಗ್ರಾಮಸಿಂಹಾನ್ ।
ನ ಮೃತ್ಯುಪಾಶೈಃ ಪ್ರತಿಮುಕ್ತಸ್ಯ ವೀರಾ
ವಿಕತ್ಥನಂ ತವ ಗೃಹ್ಣಂತ್ಯಭದ್ರ ॥ ೧೦ ॥

**ಶ್ರೀಭಗವಂತನು ಹೇಳುತ್ತಾನೆ** – ಎಲವೋ ದೈತ್ಯನೇ! ನೀನು ಹೇಳಿದಂತೆ ನಾವು ಕಾಡಿನ ಮೃಗವು ಆಗಿರುವುದು ನಿಜವೇ ಆಗಿದೆ. ನಿನ್ನಂತಹ ಗ್ರಾಮಸಿಂಹ (ನಾಯಿ)ಗಳನ್ನು ಹುಡುಕುತ್ತಾ ತಿರುಗುತ್ತಿರುತ್ತೇವೆ. ದುಷ್ಟನೇ! ಮೃತ್ಯುಪಾಶದಲ್ಲಿ ಸಿಲುಕಿಕೊಂಡಿರುವ ನಿನ್ನಂತಹ ನಿರ್ಭಾಗ್ಯ ಜೀವಿಗಳ ಆತ್ಮಪ್ರಶಂಸೆಯ ಕಡೆಗೆ ವೀರಪುರುಷರು ಗಮನವೀಯುವುದಿಲ್ಲ. ॥ ೧೦ ॥ 'ರಸಾತಲ ನಿವಾಸಿಗಳ ನಿಕ್ಷೇಪದ ಸಂಪತ್ತನ್ನು ಕಸಿದುಕೊಂಡು ನಾಚಿಕೆಗೆಟ್ಟು ನಿನ್ನ ಗದೆಯ ಭಯದಿಂದ ಇಲ್ಲಿಗೆ ಓಡಿಬಂದಿದ್ದೇವೆ' ಎಂದು ನೀನು ಹೇಳಿರುವುದು ನಿಜವೇ! ನಿನ್ನಂತಹ ಅದ್ವಿತೀಯನಾದ ವೀರನ ಮುಂದೆ ಯುದ್ಧದಲ್ಲಿ ಸೆಣಸುವ ಸಾಮರ್ಥ್ಯವು ನಮಗೆಲ್ಲಿದೆ! ಆದರೂ ಹೇಗೋ ನಿನ್ನ ಮುಂದೆ ನಿಂತಿರುವೆನು. ನಿನ್ನಂತಹ ಬಲಶಾಲಿಗಳೊಡನೆ ವೈರವನ್ನು ಕಟ್ಟಿಕೊಂಡು ಹೋಗುವುದಾದರೂ ಎಲ್ಲಿಗೆ ? ॥ ೧೧ ॥

ಏತೇ ವಯಂ ನ್ಯಾಸಹರಾ ರಸೌಕಸಾಂ
ಗತಹ್ರಿಯೋ ಗದಯಾ ದ್ರಾವಿತಾಸ್ತೇ ।
ತಿಷ್ಠಾಮಹೇಽಥಾಪಿ ಕಥಂಚಿದಾಜೌ
ಸ್ಥೇಯಂ ಕ್ವ ಯಾಮೋ ಬಲಿನೋತ್ಪಾದ್ಯ ವೈರಮ್ ॥ ೧೧ ॥

ತ್ವಂ ಪದ್ರಥಾನಾಂ ಕಿಲ ಯೂಥಪಾಧಿಪೋ
ಘಟಸ್ವ ನೋಽಸ್ವಸ್ತಯ ಆಶ್ವನೂಹಃ ।
ಸಂಸ್ಥಾಪ್ಯ ಚಾಸ್ಮಾನ್ಪ್ರಮೃಜಾಶ್ರು ಸ್ವಕಾನಾಂ
ಯಃ ಸ್ವಾಂ ಪ್ರತಿಜ್ಞಾಂ ನಾತಿಪಿಪರ್ತ್ಯಸಭ್ಯಃ ॥ ೧೨ ॥

ಪದಾತಿಗಳಾದ ಯೋಧವೀರರಲ್ಲಿ ನೀನು ಮಹಾ ನಾಯಕನಾಗಿರುವೆ. ಆದ್ದರಿಂದ ಈಗ ಯಾವ ಶಂಕೆಯೂ ಇಲ್ಲದೆ ನಮಗೆ ಅನಿಷ್ಟವನ್ನು ಮಾಡಲು ಪ್ರಯತ್ನಿಸು. ನನ್ನನ್ನು ಕೊಂದು ನಿನ್ನ ನೆಂಟರಿಷ್ಟರ ಕಣ್ಣೀರನ್ನು ಒರೆಸುವವನಾಗು. ಇನ್ನು ತಡಮಾಡ ಬೇಡ. ಮಾಡಿದ ಪ್ರತಿಜ್ಞೆಯನ್ನು ನೆರವೇರಿಸದವನು ಅಸಭ್ಯನು. ಸತ್ಪುರುಷರಲ್ಲಿ ಸೇರಿ ಕುಳಿತುಕೊಳ್ಳಲು ಯೋಗ್ಯನಲ್ಲ. ॥ ೧೨ ॥

ಮೈತ್ರೇಯ ಉವಾಚ

ಸೋಽಧಿಕ್ಷಿಪ್ತೋ ಭಗವತಾ ಪ್ರಲಬ್ಧಶ್ಚ ರುಷಾ ಭೃಶಮ್ ।
ಆಜಹಾರೋಲ್ಬಣಂ ಕ್ರೋಧಂ ಕ್ರೀಡ್ಯಮಾನೋಽಹಿರಾಡಿವ ॥ ೧೩ ॥

ಸೃಜನ್ನಮರ್ಷಿತಃ ಶ್ವಾಸಾನ್ಮನ್ಯುಪ್ರಚಲಿತೇಂದ್ರಿಯಃ ।
ಆಸಾದ್ಯ ತರಸಾ ದೈತ್ಯೋ ಗದಯಾಭ್ಯಹನದ್ಧರಿಮ್ ॥ ೧೪ ॥

ಭಗವಾಂಸ್ತು ಗದಾವೇಗಂ ವಿಸೃಷ್ಟಂ ರಿಪುಣೋರಸಿ ।
ಅವಂಚಯತ್ತಿರಶ್ಚೀನೋ ಯೋಗಾರೂಢ ಇವಾಂತಕಮ್ ॥ ೧೫ ॥

ಶ್ರೀಮೈತ್ರೇಯರು ಹೇಳುತ್ತಾರೆ – ವಿದುರನೇ! ಶ್ರೀಭಗವಂತನು ಕ್ರೋಧದಿಂದ ಹೀಗೆ ಆ ದೈತ್ಯನನ್ನು ತಿರಸ್ಕರಿಸಿ, ಅಪಹಾಸ್ಯಮಾಡಿದಾಗ, ಅವನು – ಕಾಲಿನಿಂದ ಮೆಟ್ಟಿ ಆಟವಾಡಿಸಲ್ಪಟ್ಟ ಕಾಳಿಂಗಸರ್ಪದಂತೆ ಕೆರಳಿ ಕ್ರೋಧದಿಂದ ಭುಗಿಲೆದ್ದನು. ॥ ೧೩ ॥ ಅವನು ಸಿಟ್ಟಿನಿಂದ ಸಿಡಿ-ಮಿಡಿಗೊಂಡು ನಿಟ್ಟುಸಿರು ಬಿಡತೊಡಗಿದನು. ಆತನ ಇಂದ್ರಿಯಗಳು ಪ್ರಕ್ಷುಬ್ಧವಾದುವು. ಒಡನೆಯೇ ಆತನು ಹೌಹಾರಿ ಹರಿಯ ಮೇಲೆ ಗದೆಯನ್ನು ಪ್ರಯೋಗಿಸಿದನು. ॥ ೧೪ ॥ ಆದರೆ ಭಗವಂತನು ತನ್ನ ಎದೆಯ ಮೇಲೆ ಪ್ರಯೋಗಿಸಿದ ಶತ್ರುವಿನ ಗದಾಘಾತವನ್ನು – ಯೋಗಸಿದ್ಧ ಪುರುಷನು ಮೃತ್ಯುವಿನ ಆಕ್ರಮಣದಿಂದ ತನ್ನನ್ನು ರಕ್ಷಿಸಿಕೊಂಡಂತೆ ವ್ಯರ್ಥವಾಗಿಸಿದನು. ॥ ೧೫ ॥

ಪುನರ್ಗದಾಂ ಸ್ವಾಮಾದಾಯ ಭ್ರಾಮಯಂತಮಭೀಕ್ಷ್ಣಶಃ ।
ಅಭ್ಯಧಾವದ್ಧರಿಃ ಕ್ರುದ್ಧಃ ಸಂರಂಭಾದ್ದಷ್ಟದಚ್ಛದಮ್ ॥ ೧೬ ॥

ತತಶ್ಚ ಗದಯಾರಾತಿಂ ದಕ್ಷಿಣಸ್ಯಾಂ ಭ್ರುವಿ ಪ್ರಭುಃ ।
ಆಜಘ್ನೇ ಸ ತು ತಾಂ ಸೌಮ್ಯ ಗದಯಾ ಕೋವಿದೋಽಹನತ್ ॥ ೧೭ ॥

ಮತ್ತೆ ದೈತ್ಯನು ಕ್ರೋಧದಿಂದ ತುಟಿಯನ್ನು ಕಚ್ಚಿಕೊಳ್ಳುತ್ತಾ ತನ್ನ ಗದೆಯನ್ನು ಮತ್ತೆ-ಮತ್ತೆ ತಿರುಗಿಸತೊಡಗಿದಾಗ ಶ್ರೀಹರಿಯು ಕೋಪಗೊಂಡು ಆತನ ಮೇಲೆ ಥಂಗನೆ ಹಾರಿದನು. ॥ ೧೬॥ ಸಾಧುಶ್ರೇಷ್ಠನಾದ ವಿದುರಾ ! ಆಗ ಪ್ರಭುವು ಶತ್ರುವಿನ ಬಲಹುಬ್ಬಿನ ಮೇಲೆ ಗದೆಯಿಂದ ಬೀಸಿ ಹೊಡೆಯಲು ಗದಾಯುದ್ಧದಲ್ಲಿ ಕುಶಲನಾದ ಹಿರಣ್ಯಾಕ್ಷನು ಅದನ್ನು ಮಧ್ಯದಲ್ಲಿಯೇ ತನ್ನ ಗದೆಯಿಂದ ತಡೆದನು. ॥ ೧೭ ॥

ಏವಂ ಗದಾಭ್ಯಾಂ ಗುರ್ವೀಭ್ಯಾಂ ಹರ್ಯಕ್ಷೋ ಹರಿರೇವ ಚ ।
ಜಿಗೀಷಯಾ ಸುಸಂರಬ್ಧಾ ವನ್ಯೋನ್ಯಮಭಿಜಘ್ನತುಃ ॥ ೧೮ ॥

ತಯೋಃ ಸ್ಪೃಧೋಸ್ತಿಗ್ಮಗದಾಹತಾಂಗಯೋಃ
ಕ್ಷತಾಸ್ರವಘ್ರಾಣವಿವೃದ್ಧಮನ್ವ್ಯೋಃ ।
ವಿಚಿತ್ರಮಾರ್ಗಾಂಶ್ಚ ರತೋರ್ಜಿಗೀಷಯಾ
ವ್ಯಭಾದಿಲಾಯಾಮಿವ ಶುಷ್ಮಿಣೋರ್ಮೃಧಃ ॥ ೧೯ ॥

ಹೀಗೆ ಶ್ರೀಹರಿಯು ಮತ್ತು ಹಿರಣ್ಯಾಕ್ಷನು ಒಬ್ಬರನ್ನೊಬ್ಬರು ಜಯಿಸುವ ಇಚ್ಛೆಯಿಂದ ಅತ್ಯಂತ ಕ್ರುದ್ಧರಾಗಿ ಪರಸ್ಪರ ಭಾರವಾದ ಗದೆಗಳಿಂದ ಪ್ರಹರಿಸತೊಡಗಿದರು. ॥ ೧೮ ॥ ಇಬ್ಬರಲ್ಲಿಯೂ ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಸ್ಪರ್ಧೆಯುಂಟಾಯಿತು. ಇಬ್ಬರ ಅಂಗಗಳೂ ಗದೆಗಳ ಏಟುಗಳಿಂದ ಗಾಯಗೊಂಡು ಅವುಗಳಿಂದ ಸುರಿಯುತ್ತಿದ್ದ ರಕ್ತದ ವಾಸನೆಯಿಂದ ಇಬ್ಬರಿಗೂ ಕ್ರೋಧವು ಉಕ್ಕೇರಿಸುತ್ತಿತ್ತು. ಇಬ್ಬರೂ ಬಗೆ-ಬಗೆಯ ವರಸೆಗಳನ್ನು ತೋರಿಸತೊಡಗಿದರು. ಹಸುವಿಗೋಸ್ಕರ ಸೆಣಸುವ ಎರಡು ಹೋರಿಗಳಂತೆ ಭೂಮಿಗೋಸ್ಕರವಾಗಿ ಇಬ್ಬರೂ ಭಯಂಕರವಾಗಿ ಯುದ್ಧಮಾಡತೊಡಗಿದರು. ॥ ೧೯ ॥

ದೈತ್ಯಸ್ಯ ಯಜ್ಞಾವಯವಸ್ಯ ಮಾಯಾ-
ಗೃಹೀತವಾರಾಹತನೋರ್ಮಹಾತ್ಮನಃ ।
ಕೌರವ್ಯ ಮಹ್ಯಾಂ ದ್ವಿಷತೋರ್ವಿಮರ್ದನಂ
ದಿದೃಕ್ಷುರಾಗಾದೃಷಿಭಿರ್ವೃತಃ ಸ್ವರಾಟ್ ॥ ೨೦ ॥

ವಿದುರನೇ ! ಹೀಗೆ ಹಿರಣ್ಯಾಕ್ಷನಿಗೂ – ಮಾಯೆಯಿಂದ ವರಾಹರೂಪವನ್ನಾಂತ ಯಜ್ಞಮೂರ್ತಿಯಾದ ಭಗವಂತನಿಗೂ ಭೂದೇವಿಯನ್ನು ಗೆಲ್ಲಬೇಕೆಂಬ ಹಗೆತನದಿಂದ ಯುದ್ಧವಾಗುತ್ತಿರಲು, ಅದನ್ನು ನೋಡಲು ಋಷಿಗಳೊಡನೆ ಬ್ರಹ್ಮದೇವರು ಅಲ್ಲಿಗೆ ಬಂದರು. ॥ ೨೦ ॥

ಆಸನ್ನ ಶೌಂಡೀರಮಪೇತಸಾಧ್ವಸಂ
ಕೃತಪ್ರತೀಕಾರಮಹಾರ್ಯವಿಕ್ರಮಮ್ ।
ವಿಲಕ್ಷ್ಯ ದೈತ್ಯಂ ಭಗವಾನ್ಸಹಸ್ರಣೀ-
ರ್ಜಗಾದ ನಾರಾಯಣಮಾದಿಸೂಕರಮ್ ॥ ೨೧ ॥

ಬ್ರಹ್ಮೋವಾಚ

ಏಷ ತೇ ದೇವ ದೇವಾನಾ-
ಮಂಘ್ರಿಮೂಲಮುಪೇಯುಷಾಮ್ ।
ವಿಪ್ರಾಣಾಂ ಸೌರಭೇಯೀಣಾಂ-
ಭೂತಾನಾಮಪ್ಯನಾಗಸಾಮ್ ॥ ೨೨ ॥

ಆಗಸ್ಕೃದ್ಭಯಕೃದ್ದುಷ್ಕೃದಸ್ಮದ್ರಾದ್ಧವರೋಽಸುರಃ ।
ಅನ್ವೇಷನ್ನಪ್ರತಿರಥೋ ಲೋಕಾನಟತಿ ಕಂಟಕಃ
॥ ೨೩ ॥

ಮೈನಂ ಮಾಯಾವಿನಂ ದೃಪ್ತಂ ನಿರಂಕುಶಮಸತ್ತಮಮ್ ।
ಆಕ್ರೀಡ ಬಾಲವದ್ದೇವ ಯಥಾಽಽಶೀವಿಷಮುತ್ಥಿತಮ್
॥ ೨೪ ॥

ನ ಯಾವದೇಶ ವರ್ಧೇತ ಸ್ವಾಂ ವೇಲಾಂ ಪ್ರಾಪ್ಯ ದಾರುಣಃ ।
ಸ್ವಾಂ ದೇವ ಮಾಯಾಮಾಸ್ಥಾಯ ತಾವಜ್ಜಹ್ಯಘಮಚ್ಯುತ
॥ ೨೫ ॥

ಏಷಾ ಘೋರತಮಾ ಸಂಧ್ಯಾ ಲೋಕಚ್ಛಮ್ಬಟ್ಕರೀ ಪ್ರಭೋ ।
ಉಪಸರ್ಪತಿ ಸರ್ವಾತ್ಮನ್ಸುರಾಣಾಂ ಜಯಮಾವಹ
॥ ೨೬ ॥

ಅಧುನೈಷೋಽಭಿಜಿನ್ನಾಮ ಯೋಗೋ
ಮೌಹೂರ್ತಿಕೋ ಹ್ಯಗಾತ್ ।
ಶಿವಾಯ ನಸ್ತ್ವಂ ಸುಹೃದಾ-
ಮಾಶು ನಿಸ್ತರ ದುಸ್ತರಮ್ ॥ ೨೭ ॥

ದಿಷ್ಟ್ಯಾ ತ್ವಾಂ ವಿಹಿತಂ ಮೃತ್ಯುಮಯಮಾಸಾದಿತಃ ಸ್ವಯಮ್ ।
ವಿಕ್ರಮ್ಯೈನಂ ಮೃಧೇ ಹತ್ವಾ ಲೋಕಾನಾಧೇಹಿ ಶರ್ಮಣಿ
॥ ೨೮ ॥

ಅವರ ಸುತ್ತಲೂ ಸಾವಿರಾರು ಋಷಿಗಳು ನೆರೆದಿದ್ದರು. 'ಈ ದೈತ್ಯನು ಭಾರೀ ಶೂರನಾಗಿದ್ದಾನೆ, ಇವನಲ್ಲಿ ಭಯವೆಂಬುದೇ ಇಲ್ಲ, ಆಕ್ರಮಣಮಾಡುವುದರಲ್ಲಿ ಸಮರ್ಥನಾಗಿದ್ದಾನೆ. ಈತನ ಪರಾಕ್ರಮವನ್ನು ನುಚ್ಚುನೂರುಮಾಡುವುದು ಅತಿ ಕಠಿಣವಾದ ಕಾರ್ಯವಾಗಿದೆ' ಎಂಬುದನ್ನು ಗಮನಿಸಿ ಬ್ರಹ್ಮದೇವರು ಆದಿ ವರಾಹರೂಪಿಯಾದ ನಾರಾಯಣನಲ್ಲಿ ಹೀಗೆ ಬಿನ್ನವಿಸಿಕೊಂಡರು. ॥ ೨೧ ॥

ಶ್ರೀಬ್ರಹ್ಮದೇವರೆಂದರು – ಸ್ವಾಮಿಯೇ ! ಈ ದುಷ್ಟ ದೈತ್ಯನು ನನ್ನಿಂದ ವರವನ್ನು ಪಡೆದು ತುಂಬಾ ಪ್ರಬಲನಾಗಿಬಿಟ್ಟಿರುವನು. ಈಗ ಈತನು ನಿನ್ನಲ್ಲಿ ಶರಣಾಗತರಾಗಿರುವ ಗೋವುಗಳಿಗೂ, ಬ್ರಾಹ್ಮಣರಿಗೂ, ದೇವತೆಗಳಿಗೂ ಹಾಗೂ ನಿರಪರಾಧಿ ಜೀವಿಗಳಿಗೂ ತೊಂದರೆಯನ್ನುಂಟುಮಾಡುತ್ತಾ ದುಃಖವನ್ನು - ಭಯವನ್ನು ತುಂಬುತ್ತಿದ್ದಾನೆ. ತನಗೆ ಸಾಟಿಯಾದ ಬೇರೊಬ್ಬ ಯೋಧನು ಇಲ್ಲವಾದ್ದರಿಂದ ಈ ಲೋಕಕಂಟಕನು ತನ್ನನ್ನು ಎದುರಿಸಿ ಯುದ್ಧ ಮಾಡುವ ವೀರನನ್ನು ಹುಡುಕುತ್ತಾ ಎಲ್ಲ ಲೋಕಗಳಲ್ಲಿಯೂ ಸಂಚರಿಸುತ್ತಿದ್ದಾನೆ. ॥ ೨೨-೨೩ ॥ ಈ ದುಷ್ಟನು ಅತಿಮಾಯಾವಿಯೂ, ದುರಹಂಕಾರಿಯೂ, ನಿರಂಕುಶನೂ ಆಗಿದ್ದಾನೆ ಮಗುವು ಕೋಪಗೊಂಡ ಹಾವಿನೊಡನೆ ಆಟವಾಡುವಂತೆ ನೀನು ಈತನೊಡನೆ ಹುಡುಗಾಟಮಾಡಬೇಡ. ॥ ೨೪ ॥ ಓ ದೇವದೇವನೇ ! ಅಚ್ಯುತಾ ! ಈ ದಾರುಣ ದೈತ್ಯನಿಗೆ ಬಲವನ್ನು ವೃದ್ಧಿಪಡಿಸುವ ಸಮಯವು ಬಂದು ಈತನು ಹೆಚ್ಚು ಬಲಶಾಲಿಯಾಗುವುದರೊಳಗೆ ನೀನು ನಿನ್ನ ಯೋಗಮಾಯೆಯನ್ನು ಸ್ವೀಕರಿಸಿ ಈ ಪಾಪಿಯನ್ನು ಸಂಹರಿಸಿಬಿಡು. ॥ ೨೫ ॥

ಪ್ರಭುವೇ ! ಇದೋ ಲೋಕವನ್ನು ಸಂಹಾರಮಾಡುವ ಭಯಂಕರವಾದ ಸಂಧ್ಯಾಕಾಲವು ಬರುವುದರಲ್ಲಿದೆ. ಅಷ್ಟರೊಳಗೆ ಈತನನ್ನು ಸಂಹಾರಮಾಡಿ ದೇವತೆಗಳಿಗೆ ವಿಜಯವನ್ನು ದಯಪಾಲಿಸು. ॥ ೨೬ ॥ ಈಗ ಅಭಿಜಿತ್ ಎಂಬ ಮಂಗಳಮಯವಾದ ಮುಹೂರ್ತದ ಯೋಗವೂ ಬಂದಿದೆ. ಆದ್ದರಿಂದ ನಿನ್ನ ಸುಹೃದರಾದ ನಮ್ಮ ಕಲ್ಯಾಣಕ್ಕಾಗಿ ಈ ದುರ್ಜಯ ದೈತ್ಯನನ್ನು ಬೇಗನೇ ಸಂಹರಿಸಿಬಿಡು. ॥ ೨೭ ॥ ಪ್ರಭೋ ! ತನ್ನ ಮೃತ್ಯುವಾಗಿ ವಿಧಾಯಕನಾಗಿರುವ ನಿನ್ನ ಬಳಿಗೆ ನಮ್ಮೆಲ್ಲರ ಸೌಭಾಗ್ಯದಿಂದ ಈತನೇ ಬಂದು ಸೇರಿದ್ದಾನೆ. ಈಗ ನೀನು ಯುದ್ಧದಲ್ಲಿ ಪರಾಕ್ರಮದಿಂದ ಈತನನ್ನು ಕೊಂದು ಲೋಕಗಳಿಗೆ ಶಾಂತಿಯನ್ನು ಉಂಟುಮಾಡು. ॥ ೨೮ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಹಿರಣ್ಯಾಕ್ಷವಧೇಽಷ್ಟಾದಶೋಽಧ್ಯಾಯಃ ॥ ೧೮ ॥

# ಹತ್ತೊಂಭತ್ತನೆಯ ಅಧ್ಯಾಯ

## ಹಿರಣ್ಯಾಕ್ಷನ ವಧೆ

ಮೈತ್ರೇಯ ಉವಾಚ

ಅವಧಾರ್ಯ ವಿರಿಂಚಸ್ಯ ನಿರ್ವ್ಯಲೀಕಾಮೃತಂ ವಚಃ ।
ಪ್ರಹಸ್ಯ ಪ್ರೇಮಗರ್ಭೇಣ ತದಪಾಂಗೇನ ಸೋಽಗ್ರಹೀತ್ ॥ ೧ ॥

ತತಃ ಸಪತ್ನಂ ಮುಖತಶ್ಚರಂತಮಕುತೋಭಯಮ್ ।
ಜಘಾನೋತ್ಪತ್ಯ ಗದಯಾ ಹನಾವಸುರಮಕ್ಷಜಃ ॥ ೨ ॥

ಸಾ ಹತಾ ತೇನ ಗದಯಾ ವಿಹತಾ ಭಗವತ್ಕರಾತ್ ।
ವಿಘೂರ್ಣಿತಾಪತದ್ರೇಜೇ ತದದ್ಭುತಮಿವಾಭವತ್ ॥ ೩ ॥

ಸ ತದಾ ಲಬ್ಧ ತೀರ್ಥೋಽಪಿ ನ ಬಬಾಧೇ ನಿರಾಯುಧಮ್ ।
ಮಾನಯನ್ ಸ ಮೃಧೇ ಧರ್ಮಂ ವಿಷ್ವಕ್ಸೇನಂ ಪ್ರಕೋಪಯನ್ ॥ ೪ ॥

ಗದಾಯಾಮಪವಿದ್ಧಾಯಾಂ ಹಾಹಾಕಾರೇ ವಿನಿರ್ಗತೇ ।
ಮಾನಯಾಮಾಸ ತದ್ಧರ್ಮಂ ಸುನಾಭಂ ಚಾಸ್ಮರದ್ವಿಭುಃ ॥ ೫ ॥

ತಂ ವ್ಯಗ್ರಚಕ್ರಂ ದಿತಿಪುತ್ರಾಧಮೇನ
ಸ್ವಪಾರ್ಷದಮುಖ್ಯೇನ ವಿಷಜ್ಜಮಾನಮ್ ।
ಚಿತ್ರಾ ವಾಚೋಽತದ್ವಿದಾಂ ಖೇಚರಾಣಾಂ
ತತ್ರಾಸ್ಮಾಸನ್ ಸ್ವಸ್ತಿ ತೇಽಮುಂ ಜಹೀತಿ ॥ ೬ ॥

ಸ ತಂ ನಿಶಾಮ್ಯಾತ್ತರಥಾಂಗಮಗ್ರತೋ
ವ್ಯವಸ್ಥಿತಂ ಪದ್ಮಪಲಾಶಲೋಚನಮ್ ।
ವಿಲೋಕ್ಯ ಚಾಮರ್ಷಪರಿಪ್ಲುತೇಂದ್ರಿಯೋ
ರುಷಾ ಸ್ವದಂತಚ್ಛದಮಾದಶಚ್ಛ್ವಸನ್ ॥ ೭ ॥

ಕರಾಲದಂಷ್ಟ್ರಶ್ಚಕ್ಷುರ್ಭ್ಯಾಂ ಸಂಚಕ್ಷಾಣೋ ದಹನ್ನಿವ ।
ಅಭಿಪ್ಲುತ್ಯ ಸ್ವಗದಯಾ ಹತೋಽಸೀತ್ಯಾಹನದ್ಧರಿಮ್ ॥ ೮ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಬ್ರಹ್ಮದೇವರು ನುಡಿದ ನಿಷ್ಕಪಟವೂ, ಅಮೃತಮಯವೂ ಆದ ವಿಜ್ಞಾಪನೆಯನ್ನು ಕೇಳಿ ಭಗವಂತನು ಅವನ ಮುಗ್ಧತನಕ್ಕಾಗಿ ನಸುನಕ್ಕು ತನ್ನ ಪ್ರೇಮಪೂರಿತವಾದ ಕಡೆಗಣ್ಣ ನೋಟದಿಂದ ಅವನ ಪ್ರಾರ್ಥನೆಯನ್ನು ಸ್ವೀಕರಿಸಿದನು. ॥ ೧ ॥ ಮತ್ತೆ ಅವನು ತನ್ನ ಮುಂದೆ ನಿರ್ಭಯನಾಗಿ ಸಂಚರಿಸುತ್ತಿದ್ದ ಶತ್ರುವಿನ ಮೇಲೆ ದಿಢೀರನೆ ಎರಗಿ ಆತನ ದವಡೆಯ ಮೇಲೆ ಗದೆಯನ್ನು ಬೀಸಿದನು. ಆದರೆ ಹಿರಣ್ಯಾಕ್ಷನ ಗದೆಗೆ ಢಿಕ್ಕಿಹೊಡೆದು ಆ ಗದೆಯು ಭಗವಂತನ ಕೈಯಿಂದ ಜಾರಿ ಸುತ್ತುಹೊಡೆಯುತ್ತಾ ನೆಲದಲ್ಲಿ ಉರುಳಿ ಕಂಗೊಳಿಸಿತು. ಆದರೆ ಅದು ತುಂಬಾ ಅದ್ಭುತವಾದ ಘಟನೆಯಂತೆ ಎಂದು ಎಲ್ಲರಿಗೆ ಅನಿಸಿತು. ॥ ೨-೩ ॥ ಆಗ ಶತ್ರುವಿನ ಮೇಲೆ ಆಕ್ರಮಣ ಮಾಡಲು ಒಳ್ಳೆಯ ಅವಕಾಶವಿದ್ದರೂ – ಶತ್ರುವು ಆಯುಧರಹಿತನಾಗಿರುವುದನ್ನು ಕಂಡು ಹಿರಣ್ಯಾಕ್ಷನು ಯುದ್ಧಧರ್ಮವನ್ನು ಪಾಲಿಸುತ್ತಾ ಅವನ ಮೇಲೆ ಆಕ್ರಮಣ ಮಾಡಲಿಲ್ಲ, ಭಗವಂತನ ಕ್ರೋಧವನ್ನು ಹೆಚ್ಚಿಸಲೆಂದೇ ಅವನು ಹೀಗೆ ಮಾಡಿದನು. ॥ ೪॥ ಗದೆಯು ಕೆಳಗೆ ಉರುಳಿ ಜನರು ಅದಕ್ಕಾಗಿ ಹಾಹಾಕಾರ ಮಾಡಿ ಸುಮ್ಮನಾಗಲು, ಪ್ರಭುವು ಆತನ ಧರ್ಮಬುದ್ಧಿಯನ್ನು ಪ್ರಶಂಸೆಮಾಡಿ ತನ್ನ ಸುದರ್ಶನಚಕ್ರವನ್ನು ಸ್ಮರಿಸಿದನು. ॥ ೫ ॥

ಸುದರ್ಶನ ಚಕ್ರವು ಒಡನೆಯೇ ಅಲ್ಲಿ ಕಾಣಿಸಿಕೊಂಡು ಭಗವಂತನ ಕರದಲ್ಲಿ ತಿರುಗತೊಡಗಿತು. ಆದರೆ ಭಗವಂತನು ತನ್ನ ಮುಖ್ಯಪಾರ್ಷದನಾಗಿದ್ದ ದೈತ್ಯಾಧಮ ಹಿರಣ್ಯಾಕ್ಷನೊಡನೆ ವಿಶೇಷ ವಾಗಿ ಕ್ರೀಡಿಸತೊಡಗಿದನು. ಆಗ ಆತನ ಪ್ರಭಾವವನ್ನರಿಯದ ದೇವತೆಗಳು – 'ಪ್ರಭೋ ! ನಿನಗೆ ಜಯವಾಗಲೀ. ಈತನನ್ನು ಇನ್ನು ಆಟವಾಡಿಸಬೇಡ. ಶೀಘ್ರವಾಗಿ ಸಂಹರಿಸಿಬಿಡು' ಎಂದು ವಿಚಿತ್ರ ವಾಗಿ ಪ್ರಾರ್ಥಿಸುತ್ತಿರುವುದು ಸ್ವಾಮಿಗೆ ಕೇಳಿಸಿತು. ॥ ೬ ॥ ಕಮಲಾಕ್ಷನಾದ ಶ್ರೀಹರಿಯು ತನ್ನೆದುರಿಗೆ ಸುದರ್ಶನಚಕ್ರಧಾರಿ ಯಾಗಿ ನಿಂತಿರುವುದನ್ನು ನೋಡಿ ಆ ದೈತ್ಯರಾಜನ ಸಕಲೇಂದ್ರಿ ಯಗಳು ತಳಮಳಗೊಂಡವು. ಅವನು ನಿಟ್ಟುಸಿರುಬಿಡುತ್ತಾ ಹಲ್ಲುಗಳಿಂದ ತುಟಿಯನ್ನು ಕಚ್ಚಿಕೊಳ್ಳತೊಡಗಿದನು. ॥ ೭ ॥ ಆಗ ತೀಕ್ಷ್ಣವಾದ ಕೋರೆಹಲ್ಲುಗಳುಳ್ಳ ದೈತ್ಯನು ಭಗವಂತನನ್ನು ಭಸ್ಮ ಮಾಡಿಬಿಡುವನೋ ಎಂಬಂತೆ ದುರುಗುಟ್ಟಿ ನೋಡತೊಡಗಿದನು. ಅವನು ಥಟ್ಟನೆ ಜಿಗಿದು 'ಎಲವೋ ! ಈಗ ನೀನು ಉಳಿಯಲಾರೆ' ಎಂದು ಗರ್ಜಿಸುತ್ತಾ ಶ್ರೀಹರಿಯ ಮೇಲೆ ಬಲವಾಗಿ ಗದೆಯನ್ನು ಪ್ರಯೋಗಿಸಿದನು. ॥ ೮ ॥

ಪದಾ ಸವ್ಯೇನ ತಾಂ ಸಾಧೋ ಭಗವಾನ್ಯಜ್ಞಸೂಕರಃ।
ಲೀಲಯಾ ಮಿಷತಃ ಶತ್ರೋಃ ಪ್ರಾಹರದ್ವಾತರಂಹಸಮ್ ॥ ೯ ॥

ಆಹ ಚಾಯುಧಮಾಧತ್ಸ್ವ ಘಟಸ್ವ ತ್ವಂ ಜಿಗೀಷಸಿ।
ಇತ್ಯುಕ್ತಃ ಸ ತದಾ ಭೂಯಸ್ತಾಡಯನ್ವ್ಯನದದ್ಭೃಶಮ್ ॥ ೧೦ ॥

ತಾಂ ಸ ಆಪತತೀಂ ವೀಕ್ಷ್ಯ ಭಗವಾನ್ ಸಮವಸ್ಥಿತಃ।
ಜಗ್ರಾಹ ಲೀಲಯಾ ಪ್ರಾಪ್ತಾಂ ಗರುತ್ಮಾನಿವ ಪನ್ನಗೀಮ್ ॥ ೧೧ ॥

ಸ್ವಪೌರುಷೇ ಪ್ರತಿಹತೇ ಹತಮಾನೋ ಮಹಾಸುರಃ।
ನೈಚ್ಛದ್ಗದಾಂ ದೀಯಮಾನಾಂ ಹರಿಣಾ ವಿಗತಪ್ರಭಃ ॥ ೧೨ ॥

ಜಗ್ರಾಹ ತ್ರಿಶಿಖಂ ಶೂಲಂ ಜ್ವಲಜ್ಜ್ವಲನಲೋಲುಪಮ್।
ಯಜ್ಞಾಯ ಧೃತರೂಪಾಯ ವಿಪ್ರಾಯಾಭಿಚರನ್ಯಥಾ ॥ ೧೩ ॥

ತದೋಜಸಾ ದೈತ್ಯಮಹಾಭಟಾರ್ಪಿತಂ
ಚಕಾಸದಂತಃ ಖ ಉದೀರ್ಣದೀಧಿತಿ।
ಚಕ್ರೇಣ ಚಿಚ್ಛೇದ ನಿಶಾತನೇಮಿನಾ
ಹರಿರ್ಯಥಾ ತಾರ್ಕ್ಷ್ಯಪತತ್ರಮುಜ್ಝಿತಮ್ ॥ ೧೪ ॥

ವೃಕ್ಣೇ ಸ್ವಶೂಲೇ ಬಹುಧಾರಿಣಾ ಹರೇಃ
ಪ್ರತ್ಯೇತ್ಯ ವಿಸ್ತೀರ್ಣಮುರೋ ವಿಭೂತಿಮತ್।
ಪ್ರವೃದ್ಧರೋಷಃ ಸ ಕಠೋರಮುಷ್ಟಿನಾ
ನದನ್ಪ್ರಹೃತ್ಯಾಂತರಧೀಯತಾಸುರಃ ॥ ೧೫ ॥

ತೇನೇತ್ಥಮಾಹತಃ ಕ್ಷತ್ತರ್ಭಗವಾನಾದಿಸೂಕರಃ।
ನಾಕಂಪತ ಮನಾಕ್ಕ್ವಾಪಿ ಸ್ರಜಾ ಹತ ಇವ ದ್ವಿಪಃ ॥ ೧೬ ॥

ಅಥೋರುಧಾಸೃಜನ್ಮಾಯಾಂ
ಯೋಗಮಾಯೇಶ್ವರೇ ಹರೌ।
ಯಾಂ ವಿಲೋಕ್ಯ ಪ್ರಜಾಸ್ತ್ರಸ್ತಾ
ಮೇನಿರೇಽಸ್ಯೋಪಸಂಯಮಮ್ ॥ ೧೭ ॥

ಸಾಧುಶ್ರೇಷ್ಠ ವಿದುರನೇ! ಯಜ್ಞಮೂರ್ತಿಯಾದ ಭಗವಾನ್ ವರಾಹಸ್ವಾಮಿಯು ಶತ್ರುವು ನೋಡುತ್ತಿರುವಂತೆ ತನ್ನ ಎಡಗಾಲಿನಿಂದ ಆ ಗದೆಯನ್ನು ಲೀಲಾಜಾಲವಾಗಿ ಕೆಳಕ್ಕೆ ಉರುಳಿಸಿ 'ಎಲೈ ದೈತ್ಯನೇ! ನೀನು ನನ್ನನ್ನು ಗೆಲ್ಲಲು ಬಯಸು ತ್ತೀಯೆ. ಆದ್ದರಿಂದ ನಿನ್ನ ಶಸ್ತ್ರವನ್ನು ಎತ್ತಿಕೊಂಡು ಮತ್ತೊಂದುಬಾರಿ ಆಕ್ರಮಣಮಾಡುವವನಾಗು' ಎಂದು ಆತನಿಗೆ ಹೇಳಿದನು. ಭಗವಂತನು ಹೇಳಿದುದನ್ನು ಕೇಳಿ ಆತನು ಮತ್ತೆ ಗದೆಯನ್ನು ಪ್ರಯೋಗಿಸಿ ಭಯಂಕರವಾಗಿ ಗರ್ಜಿಸಿದನು. ॥ ೯-೧೦ ॥ ಗದೆಯು ತನ್ನತ್ತ ಬರುತ್ತಿರುವುದನ್ನು ಕಂಡು ಭಗವಂತನು – ಗರುಡನು ಹೆಣ್ಣು ಸರ್ಪವನ್ನು ಹಿಡಿಯುವಂತೆ ನಿಂತಲ್ಲೇ ಅದನ್ನು ಅನಾಯಾಸವಾಗಿ ಹಿಡಿದುಕೊಂಡನು. ॥ ೧೧ ॥

ತನ್ನ ಪ್ರಯತ್ನವು ವ್ಯರ್ಥವಾದುದನ್ನು ಕಂಡು ಆ ಮಹಾದೈತ್ಯನ ಗರ್ವವು ಇಳಿದು, ತೇಜಸ್ಸು ನಷ್ಟವಾಗಿ ಹೋಯಿತು. ಈ ಸಲ ಭಗವಂತನು ಗದೆಯನ್ನು ಕೊಡಲು ಬಂದಾಗ ಆತನು ಅದನ್ನು ಪಡೆಯಲು ಬಯಸಲಿಲ್ಲ. ॥ ೧೨ ॥ ಆದರೆ ಯಾರಾದರೂ ಬ್ರಾಹ್ಮಣನ ಮೇಲೆ ನಿಷ್ಫಲವಾದ ಅಭಿಚಾರವನ್ನು ಪ್ರಯೋಗಿಸುವಂತೆ ಅವನು ಯಜ್ಞಪುರುಷನ ಮೇಲೆ ಪ್ರಯೋಗಿಸಲಿಕ್ಕಾಗಿ ಉರಿಯುವ ಬೆಂಕಿಯಂತಿದ್ದ ತ್ರಿಶೂಲವನ್ನು ಕೈಗೆತ್ತಿಕೊಂಡನು. ॥ ೧೩ ॥ ಮಹಾಬಲಶಾಲಿಯಾದ ಹಿರಣ್ಯಾಕ್ಷನು ಬಲಪೂರ್ವಕವಾಗಿ ಅತ್ಯಂತ ರಭಸದಿಂದ ಪ್ರಯೋಗಿಸಿದ ತೇಜಸ್ವೀಯಾದ ಆ ತ್ರಿಶೂಲವು ಆಕಾಶದಲ್ಲಿ ಥಳ-ಥಳಿಸತೊಡಗಿತು. ಭಗವಂತನು ಅದನ್ನು ತನ್ನ ತೀಕ್ಷ್ಣಧಾರೆವುಳ್ಳ ಸುದರ್ಶನಚಕ್ರದಿಂದ – ಇಂದ್ರನು ಗರುಡನ ಗರಿಯನ್ನು ಕತ್ತರಿಸಿದಂತೆ * ಕತ್ತರಿಸಿಹಾಕಿದನು. ॥ ೧೪ ॥ ಭಗವಂತನ ಚಕ್ರದಿಂದ ನುಚ್ಚುನೂರಾದ ತನ್ನ ತ್ರಿಶೂಲವನ್ನು ಕಂಡು ದೈತ್ಯನಿಗೆ ಮಿತಿಮೀರಿದ ಕ್ರೋಧವುಂಟಾಯಿತು. ಆಗ ಅವನು ಭಗವಂತನ ಬಳಿಗೆ ಬಂದು ತನ್ನ ಕಠೋರವಾದ ಮುಷ್ಟಿಯಿಂದ ಶ್ರೀವತ್ಸಚಿಹ್ನೆಯಿಂದ ಬೆಳಗುತ್ತಿದ್ದ ಆತನ ಎದೆಗೆ ಬಲವಾಗಿ ಗುದ್ದಿ ಜೋರಾಗಿ ಗರ್ಜಿಸಿ ಕಣ್ಮರೆಯಾಗಿಬಿಟ್ಟನು. ॥ ೧೫ ॥

ವಿದುರನೇ! ಗಜರಾಜನ ಮೇಲೆ ಹೂವಿನ ಹಾರದ ಏಟು ಏನೂ ಪರಿಣಾಮ ಬೀರದಂತೆ, ದೈತ್ಯನು ಈ ಏಟು ಹೊಡೆದರೂ ಭಗವಾನ್ ಆದಿವರಾಹನು ಸ್ವಲ್ಪವೂ ವಿಚಲಿತನಾಗಲಿಲ್ಲ. ॥ ೧೬ ॥ ಆಗ ಆ ಮಹಾ ಮಾಯಾವಿಯಾದ ದೈತ್ಯನು ಮಾಯೆಗೆ ಅಧಿಪತಿಯಾದ ಶ್ರೀಹರಿಯ ಮೇಲೆ ಅನೇಕ ರೀತಿಯ ಮಾಯೆಗಳನ್ನು ಪ್ರಯೋಗಿಸತೊಡಗಿದನು. ಅದನ್ನು ಕಂಡು ಎಲ್ಲ ಪ್ರಜೆಗಳು ಭಯಗೊಂಡು ಈಗಲೇ ಜಗತ್ತಿನ ಪ್ರಳಯವಾಗುವುದೋ ಎಂದು ತಿಳಿದರು. ॥ ೧೭ ॥

* ಒಮ್ಮೆ ಗರುಡದೇವನು ತನ್ನ ತಾಯಿಯಾದ ವಿನತಾದೇವಿಯನ್ನು ಸರ್ಪಗಳ ತಾಯಿ ಕದ್ರುವಿನ ದಾಸ್ಯದಿಂದ ಬಿಡಿಸಲೋಸುಗ ಸ್ವರ್ಗದಿಂದ ಅಮೃತವನ್ನು ತರಲು ಹೋದಾಗ ಇಂದ್ರನು ಗರುಡನ ಮೇಲೆ ತನ್ನ ವಜ್ರಾಯುಧವನ್ನು ಪ್ರಯೋಗಿಸಿದನು. ದೇವೇಂದ್ರನ ವಜ್ರವು ಎಂದೂ ವ್ಯರ್ಥವಾಗುವುದಿಲ್ಲ. ಆ ದಿವ್ಯಾಯುಧಕ್ಕೆ ಗೌರವ ತೋರಲು ಗರುಡದೇವರು ತನ್ನ ರೆಕ್ಕೆಯ ಒಂದು ಗರಿಯನ್ನು ಅದಕ್ಕೆ ಲಕ್ಷ್ಯವಾಗಿ ಕೊಟ್ಟರು. ಅದನ್ನು ಮಾತ್ರ ಕತ್ತರಿಸಿತ್ತು ವಜ್ರಾಯುಧವು.

ಪ್ರವವುರ್ವಾಯವಶ್ಚಂಡಾಸ್ತಮಃ ಪಾಂಸವಮೈರಯನ್ ।
ದಿಗ್ಭ್ಯೋ ನಿಪೇತುರ್ಗ್ರಾವಾಣಃ ಕ್ಷೇಪಣೈಃ ಪ್ರಹಿತಾ ಇವ
॥ ೧೮ ॥

ದ್ಯೌರ್ನಷ್ಟ ಭಗಣಾಭ್ರೌಘೈಃ ಸವಿದ್ಯುತ್ಸ್ತನಯಿತ್ನುಭಿಃ ।
ವರ್ಷದ್ಭಿಃ ಪೂಯಕೇಶಾಸೃಗ್ವಿಣ್ಮೂತ್ರಾಸ್ಥೀನಿ ಚಾಸಕೃತ್
॥ ೧೯ ॥

ಗಿರಯಃ ಪ್ರತ್ಯದೃಶ್ಯಂತ ನಾನಾಯುಧಮುಚೋಽನಘ ।
ದಿಗ್ವಾಸಸೋ ಯಾತುಧಾನ್ಯಃ ಶೂಲಿನ್ಯೋ ಮುಕ್ತಮೂರ್ಧಜಾಃ
॥ ೨೦ ॥

ಬಹುಭಿರ್ಯಕ್ಷರಕ್ಷೋಭಿಃ ಪತ್ತ್ಯಶ್ವರಥಕುಂಜರೈಃ ।
ಆತತಾಯಿಭಿರುತ್ಸೃಷ್ಟಾ ಹಿಂಸ್ರಾ ವಾಚೋಽತಿವೈಶಸಾಃ
॥ ೨೧ ॥

ಪ್ರಾದುಷ್ಕೃತಾನಾಂ ಮಾಯಾನಾಮಾಸುರೀಣಾಂ ವಿನಾಶಯತ್ ।
ಸುದರ್ಶನಾಸ್ತ್ರಂ ಭಗವಾನ್ ಪ್ರಯುಂಕ್ತ ದಯಿತಂ ತ್ರಿಪಾತ್
॥ ೨೨ ॥

ತದಾ ದಿತೇಃ ಸಮಭವತ್ಸಹಸಾ ಹೃದಿ ವೇಪಥುಃ ।
ಸ್ಮರಂತ್ಯಾ ಭರ್ತುರಾದೇಶಂ ಸ್ತನಾಚ್ಚಾಸೃಕ್ ಪ್ರಸುಸ್ರುವೇ
॥ ೨೩ ॥

ವಿನಷ್ಟಾಸು ಸ್ವಮಾಯಾಸು ಭೂಯಶ್ಚಾವ್ರಜ್ಯ ಕೇಶವಮ್ ।
ರುಷೋಪಗೂಹಮಾನೋಽಮುಂ ದದೃಶೇಽವಸ್ಥಿತಂ ಬಹಿಃ
॥ ೨೪ ॥

ತಂ ಮುಷ್ಟಿಭಿರ್ವಿನಿಘ್ನಂತಂ ವಜ್ರಸಾರೈರಧೋಕ್ಷಜಃ ।
ಕರೇಣ ಕರ್ಣಮೂಲೇಽಹನ್ ಯಥಾ ತ್ವಾಷ್ಟ್ರಂ ಮರುತ್ಪತಿಃ
॥ ೨೫ ॥

ಸ ಆಹತೋ ವಿಶ್ವಜಿತಾ ಹ್ಯವಜ್ಞಯಾ
ಪರಿಭ್ರಮದ್ಗಾತ್ರ ಉದಸ್ತಲೋಚನಃ ।
ವಿಶೀರ್ಣಬಾಹ್ವಂಘ್ರಿ ಶಿರೋರುಹೋಽಪತದ್
ಯಥಾ ನಗೇಂದ್ರೋ ಲುಲಿತೋ ನಭಸ್ವತಾ ॥ ೨೬ ॥

ಕ್ಷಿತೌ ಶಯಾನಂ ತಮಕುಂಠವರ್ಚಸಂ
ಕರಾಲದಂಷ್ಟ್ರಂ ಪರಿದಷ್ಟದಚ್ಛದಮ್ ।
ಅಜಾದಯೋ ವೀಕ್ಷ್ಯ ಶಶಂಸುರಾಗತಾ
ಅಹೋ ಇಮಾಂ ಕೋ ನು ಲಭೇತ ಸಂಸ್ಥಿತಿಮ್ ॥ ೨೭ ॥

ಆಗ ಭಯಂಕರವಾದ ಬಿರುಗಾಳಿಯು ಬೀಸುತ್ತಾ ಧೂಳಿನಿಂದ ಎಲ್ಲೆಡೆ ಕತ್ತಲೆಯೇ ತುಂಬಿಹೋಯಿತು. ಎಲ್ಲ ಕಡೆಯಿಂದ ಕವಣೆಯ ಯಂತ್ರದಿಂದ ಎಸೆಯುತ್ತಿವೆಯೋ ಎಂಬಂತೆ ಕಲ್ಲುಗಳ ಸುರಿಮಳೆ ಬೀಳತೊಡಗಿತು. ॥ ೧೮ ॥ ಸುಳಿಮಿಂಚುಗಳೊಡನೆ ಸಿಡಿಲುಗಳಿಂದ ಮೋಡಗಳು ಎಲ್ಲೆಡೆ ಕವಿದು ಆಕಾಶದಲ್ಲಿ ಸೂರ್ಯ, ಚಂದ್ರ, ನಕ್ಷತ್ರಗಳೆಲ್ಲ ಅಡಗಿಹೋದುವು ಹಾಗೂ ಕೂದಲೂ, ಕೀವು, ಮಲ-ಮೂತ್ರಗಳು, ಎಲುಬುಗಳು ನಿರಂತರ ಸುರಿಯತೊಡಗಿದವು. ॥ ೧೯ ॥ ವಿದುರನೇ! ಬಗೆ- ಬಗೆಯ ಅಸ್ತ್ರ-ಶಸ್ತ್ರಗಳ ಮಳೆಗರೆಯುವ ಪರ್ವತಗಳೇ ಕಾಣಿಸ ತೊಡಗಿದವು. ಕೈಯಲ್ಲಿ ತ್ರಿಶೂಲವನ್ನು ಹಿಡಿದು. ತಲೆಗೆದರಿ ಕೊಂಡಿದ್ದ ಬೆತ್ತಲೆಯರಾದ ರಾಕ್ಷಸಿಯರು ಕಾಣಿಸತೊಡಗಿ ದರು. ॥ ೨೦ ॥ ಬಹುಸಂಖ್ಯೆಯಲ್ಲಿ ಕಾಲಾಳುಗಳು, ಕುದುರೆ ಸವಾರರು, ರಥಿಕರು, ಮದ್ದಾನೆಗಳ ಮೇಲೇರಿದ್ದ ಮಾವುತರು, ಕೊಲ್ಲುವುದಕ್ಕೆ ಸಿದ್ಧರಾಗಿದ್ದ ಯಕ್ಷ-ರಾಕ್ಷಸರು ಕೊಲ್ಲು-ಕಡಿ ಎಂದು ಕೂಗುತ್ತಿರುವ ಅತ್ಯಂತ ಕ್ರೂರವೂ, ಹಿಂಸಾಮಯವೂ ಆದ ಕೋಲಾಹಲ ಶಬ್ದವು ಎಲ್ಲೆಡೆ ಕೇಳಿಸತೊಡಗಿತು. ॥ ೨೧ ॥

ಹೀಗೆ ಪ್ರಕಟಗೊಂಡ ಆ ಆಸುರಿಮಾಯೆಯನ್ನು ನಾಶಗೊಳಿಸ ಲೋಸುಗ ಯಜ್ಞಮೂರ್ತಿಯಾದ ಶ್ರೀವರಾಹ ಭಗವಂತನು ತನ್ನ ಪ್ರಿಯವಾದ ಸುದರ್ಶನಚಕ್ರವನ್ನು ಪ್ರಯೋಗಿಸಿದನು. ॥ ೨೨ ॥ ಆಗ ದಿತಿದೇವಿಗೆ ತನ್ನ ಪತಿಯು ಹಿಂದೆ ಹೇಳಿದ ಮಾತು ನೆನಪಿಗೆ ಬಂದು ಆಕೆಯ ಹೃದಯವು ನಡುಗಿದಂತಾಗಿ ಇದ್ದಕ್ಕಿದ್ದಂತೆ ಸ್ತನಗಳಿಂದ ರಕ್ತವು ಸುರಿಯತೊಡಗಿತು. ॥ ೨೩ ॥ ತನ್ನ ಮಾಯೆಯು ನಾಶವಾದಾಗ ಆ ದೈತ್ಯನು ಪುನಃ ಭಗವಂತನ ಬಳಿಗೆ ಬಂದನು. ಅವನು ಕೆರಳಿದ ಕೋಪದಿಂದ ಭಗವಂತನನ್ನು ಚೂರು-ಚೂರು ಮಾಡಬೇಕೆಂದು ಬಯಸಿ ಆತನನ್ನು ತನ್ನ ತೋಳ್ತೆಕ್ಕೆಯಲ್ಲಿ ಅವಚಿ ಹಿಡಿದುಕೊಂಡನು. ಆದರೆ ಭಗವಂತನಾದರೋ ಹೊರಗೆ ನಿಂತಿರು ವುದನ್ನು ನೋಡಿದನು. ॥ ೨೪ ॥ ಆಗ ಅವನು ಮತ್ತೂ ಕ್ರುದ್ಧನಾಗಿ ತನ್ನ ವಜ್ರದಂತಹ ಮುಷ್ಟಿಗಳಿಂದ ಭಗವಂತನನ್ನು ಥಳಿಸತೊಡಗಿ ದನು. ಒಡನೆಯೇ ಭಗವಂತನು – ದೇವೇಂದ್ರನು ವೃತ್ರಾಸುರ ನನ್ನು ಬಡಿವಂತೆ ಆತನ ಕೆನ್ನೆಗೆ ಒಂದು ಪೆಟ್ಟುಕೊಟ್ಟನು. ॥ ೨೫ ॥ ವಿಶ್ವವಿಜಯಿಯಾದ ಭಗವಂತನೇನೋ ಆತನಿಗೆ ಉಪೇಕ್ಷೆ ಯಿಂದಲೇ ಹೊಡೆದಿದ್ದನು. ಆದರೂ ಕೂಡ ಆ ಏಟಿನಿಂದ ಹಿರಣ್ಯಾಕ್ಷನ ದೇಹವು ಗಿರ್ರನೇ ತಿರುಗಿತು, ಕಣ್ಣಾಲಿಗಳು ಹೊರ ಬಂದವು. ಕೈ-ಕಾಲು-ಕೂದಲು ಛಿನ್ನ-ಭಿನ್ನವಾಗಿ ಆತನು ಗತ ಪ್ರಾಣನಾಗಿ ಬಿರುಗಾಳಿಯಿಂದ ಬುಡಸಹಿತ ಉರುಳಿದ ಮಹಾ ವೃಕ್ಷದಂತೆ ನೆಲಕ್ಕೆ ಉರುಳಿದನು. ॥ ೨೬ ॥

ಹಿರಣ್ಯಾಕ್ಷನ ತೇಜವು ಆಗಲೂ ಕುಂದಲಿಲ್ಲ. ಕರಾಳವಾದ ಕೋರೆಹಲ್ಲುಗಳಿಂದ ತುಟಿಗಳನ್ನು ಕಚ್ಚಿಕೊಂಡು ನೆಲದಮೇಲೆ ಶವವಾಗಿ ಬಿದ್ದಿರುವ ದೈತ್ಯನನ್ನು ನೋಡಿ – ಯುದ್ಧವನ್ನು ನೋಡಲು ಬಂದಿದ್ದ ಬ್ರಹ್ಮಾದಿದೇವತೆಗಳು ಅವನನ್ನು ಪ್ರಶಂಸಿಸುತ್ತಾ –

ಯಂ ಯೋಗಿನೋ ಯೋಗಸಮಾಧಿನಾ ರಹೋ
ಧ್ಯಾಯಂತಿ ಲಿಂಗಾದಸತೋ ಮುಮುಕ್ಷಯಾ ।
ತಸ್ಯೈಷ ದೈತ್ಯಋಷಭಃ ಪದಾಹತೋ
ಮುಖಂ ಪ್ರಪಶ್ಯಂಸ್ತನುಮುತ್ಸಸರ್ಜ ಹ ॥ ೨೮ ॥

ಏತೌ ತೌ ಪಾರ್ಷದಾವಸ್ಯ ಶಾಪಾದ್ಯಾತಾವಸದ್ಗತಿಮ್ ।
ಪುನಃ ಕತಿಪಯೈಃ ಸ್ಥಾನಂ ಪ್ರಪತ್ಸ್ಯೇತೇ ಹ ಜನ್ಮಭಿಃ ॥ ೨೯ ॥

*ದೇವಾ ಊಚುಃ*

ನಮೋ ನಮಸ್ತೇಽಖಿಲಯಜ್ಞತಂತವೇ
ಸ್ಥಿತೌ ಗೃಹೀತಾಮಲಸತ್ತ್ವಮೂರ್ತಯೇ ।
ದಿಷ್ಟ್ಯಾ ಹತೋಽಯಂ ಜಗತಾಮರುಂತುದ-
ಸ್ತ್ವತ್ಪಾದಭಕ್ತ್ಯಾ ವಯಮೀಶ ನಿರ್ವೃತಾಃ ॥ ೩೦ ॥

*ಮೈತ್ರೇಯ ಉವಾಚ*

ಏವಂ ಹಿರಣ್ಯಾಕ್ಷಮಸಹ್ಯವಿಕ್ರಮಂ
ಸ ಸಾದಯಿತ್ವಾ ಹರಿರಾದಿಸೂಕರಃ ।
ಜಗಾಮ ಲೋಕಂ ಸ್ವಮಖಂಡಿತೋತ್ಸವಂ
ಸಮೀಡಿತಃ ಪುಷ್ಕರವಿಷ್ಟರಾದಿಭಿಃ ॥ ೩೧ ॥

ಮಯಾ ಯಥಾನೂಕ್ತಮವಾದಿ ತೇ ಹರೇಃ
ಕೃತಾವತಾರಸ್ಯ ಸುಮಿತ್ರ ಚೇಷ್ಟಿತಮ್ ।
ಯಥಾ ಹಿರಣ್ಯಾಕ್ಷ ಉದಾರವಿಕ್ರಮೋ
ಮಹಾಮೃಧೇ ಕ್ರೀಡನವನ್ನಿರಾಕೃತಃ ॥ ೩೨ ॥

*ಸೂತ ಉವಾಚ*

ಇತಿ ಕೌಷಾರವಾಖ್ಯಾತಾಮಾಶ್ರುತ್ಯ ಭಗವತ್ಕಥಾಮ್ ।
ಕ್ಷತ್ತಾಽಽನಂದಂ ಪರಂ ಲೇಭೇ ಮಹಾಭಾಗವತೋ ದ್ವಿಜ ॥ ೩೩ ॥

ಅನ್ಯೇಷಾಂ ಪುಣ್ಯಶ್ಲೋಕಾನಾಮುದ್ದಾಮಯಶಸಾಂ ಸತಾಮ್ ।
ಉಪಶ್ರುತ್ಯ ಭವೇನ್ಮೋದಃ ಶ್ರೀವತ್ಸಾಂಕಸ್ಯ ಕಿಂ ಪುನಃ ॥ ೩೪ ॥

ಯೋ ಗಜೇಂದ್ರಂ ಝಷಗ್ರಸ್ತಂ
ಧ್ಯಾಯಂತಂ ಚರಣಾಂಬುಜಮ್ ।
ಕ್ರೋಶಂತೀನಾಂ ಕರೇಣೂನಾಂ
ಕೃಚ್ಛ್ರತೋಽಮೋಚಯದ್ದ್ರುತಮ್ ॥ ೩೫ ॥

"ಆಹಾ ! ಇಂತಹ ಅಲಭ್ಯವಾದ ಮೃತ್ಯುವು ಬೇರಾರಿಗೆ ತಾನೇ ದೊರಕೀತು – ಎಂದು ಉದ್ಗರಿಸಿದರು. ॥ ೨೭ ॥ ತಮ್ಮ ಮಿಥ್ಯಾ ಉಪಾಧಿಗಳಿಂದ ಬಿಡುಗಡೆ ಹೊಂದಲು ಯೋಗಿಗಳು ಏಕಾಂತದಲ್ಲಿ ಸಮಾಧಿಯೋಗದಿಂದ ಯಾವಾತನ ಧ್ಯಾನಮಾಡುತ್ತಾರೋ, ಅಂತಹ ಭಗವಂತನ ಚರಣ ಹತಿಯಿಂದ, ಆತನ ಮುಖಾರವಿಂದವನ್ನೇ ನೋಡುತ್ತಾ ದೇಹತ್ಯಾಗ ಮಾಡಿದನಲ್ಲವೇ ಈ ದೈತ್ಯರಾಜನು ! ॥ ೨೮ ॥ ಈ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಭಗವಂತನ ಪಾರ್ಷದರೇ ಆಗಿದ್ದಾರೆ. ಶಾಪವಶದಿಂದ ಅಧೋಗತಿ ಪ್ರಾಪ್ತವಾಗಿತ್ತು. ಇನ್ನು ಒಂದೆರಡು ಜನ್ಮಗಳಲ್ಲೇ ಇವರು ಮತ್ತೆ ತಮ್ಮ ಸ್ವಸ್ಥಾನಕ್ಕೆ ಹಿಂದಿರುಗುವರು" ಎಂದು ಆತನ ಧನ್ಯತೆಯನ್ನು ಕೊಂಡಾಡಿದರು. ॥ ೨೯ ॥

**ದೇವತೆಗಳು ಸ್ತುತಿಸತೊಡಗಿದರು** – ಪ್ರಭುವೇ ! ನಿನಗೆ ಮತ್ತೆ-ಮತ್ತೆ ನಮಸ್ಕಾರಗಳು. ಸಮಸ್ತ ಯಜ್ಞಗಳನ್ನು ವಿಸ್ತರಿಸುವ ವಿಭುವು ನೀನು. ಜಗತ್ತಿನ ಸ್ಥಿತಿಗಾಗಿ ಶುದ್ಧಸತ್ತ್ವಮಯವಾದ ದಿವ್ಯ ಮಂಗಳವಿಗ್ರಹವನ್ನು ಪ್ರಕಟಪಡಿಸುತ್ತೀಯೆ. ಜಗತ್ತಿಗೆ ಕಷ್ಟ ಕೊಡುತ್ತಿದ್ದ ಈ ದುಷ್ಟದೈತ್ಯನು ನಾಶಹೊಂದಿರುವುದು ಬಹಳ ಸಂತಸದ ಸುದ್ದಿ. ನಿನ್ನ ಚರಣಗಳಲ್ಲಿನ ಭಕ್ತಿಯ ಪ್ರಭಾವದಿಂದ ನಮಗೂ ಸುಖ-ಶಾಂತಿಗಳು ಲಭಿಸಿದುವು. ॥ ೩೦ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ ! ಹೀಗೆ ಮಹಾಪರಾಕ್ರಮಿಯಾದ ಹಿರಣ್ಯಾಕ್ಷನನ್ನು ವಧಿಸಿ, ಬ್ರಹ್ಮಾದಿ ದೇವತೆಗಳು ಸ್ತುತಿಮಾಡುತ್ತಿರುವಂತೆ ಭಗವಾನ್ ಆದಿವರಾಹ ಸ್ವಾಮಿಯು ತನ್ನ ಅಖಂಡ ಆನಂದಮಯ ಧಾಮಕ್ಕೆ ಬಿಜಯ ಮಾಡಿದನು. ॥ ೩೧ ॥ ಮಿತ್ರಾ ವಿದುರನೇ ! ಭಗವಂತನು ಅವತರಿಸಿ ಹೇಗೆ ಲೀಲೆಗಳನ್ನು ಮಾಡುತ್ತಾನೆ ಮತ್ತು ಮಹಾ ಪರಾಕ್ರಮಿಯಾದ ಹಿರಣ್ಯಾಕ್ಷನನ್ನು ಯುದ್ಧದಲ್ಲಿ ಹೇಗೆ ಆಟದ ಬೊಂಬೆಯಂತೆ ಮುರಿದುಹಾಕಿದನು ಎಂಬುದನ್ನು ನಾನು ಗುರುಮುಖದಿಂದ ಕೇಳಿದಂತೆಯೇ ನಿನಗೆ ನಿರೂಪಿಸಿರುವೆನು. ॥ ೩೨ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳೇ ! ಮೈತ್ರೇಯ ಮಹರ್ಷಿಗಳಿಂದ ಭಗವಂತನ ಈ ಕಥೆಯನ್ನು ಕೇಳಿ ಪರಮಭಾಗವತೋತ್ತಮನಾದ ವಿದುರನಿಗೆ ಪರಮಾನಂದ ಉಂಟಾಯಿತು. ॥ ೩೩॥ ಪವಿತ್ರವಾದ ಕೀರ್ತಿಯುಳ್ಳ ಮಹಾ ಯಶಸ್ವಿಗಳಾದ ಮಹಾಪುರುಷರ ಚರಿತ್ರೆಗಳನ್ನು ಕೇಳಿದರೂ ಪರಮಾನಂದವುಂಟಾಗುವುದು. ಹೀಗಿರುವಾಗ ಶ್ರೀವತ್ಸಲಾಂಛನಭೂಷಿತ ಶ್ರೀ ಭಗವಂತನ ಲೀಲೆಗಳನ್ನು ಕೇಳಿದಾಗ ಆಗುವ ಆನಂದದ ಬಗೆಗೆ ಹೇಳುವುದೇನಿದೆ ? ॥ ೩೪ ॥ ಘೋರವಾದ ಮೊಸಳೆಯು ಗಜರಾಜನ ಕಾಲನ್ನು ಹಿಡಿದುಕೊಂಡಾಗ ಗಜರಾಜನು ಪ್ರಭುವಿನ ಪಾದಗಳನ್ನು ಧ್ಯಾನಿಸತೊಡಗಿದನು. ಅವನ ಪರಿವಾರದ ಹೆಣ್ಣಾನೆಗಳೂ ದುಃಖದಿಂದ ಕೂಗಿಕೊಳ್ಳತೊಡಗಿದವು. ಅಂತಹ ಕಷ್ಟ ಸಮಯದಲ್ಲಿ ಒಡನೆಯೇ ಮೈದೋರಿ ಭಕ್ತಗಜೇಂದ್ರನನ್ನು ದುಃಖದ ದೆಸೆಯಿಂದ ಬಿಡಿಸಿದ ಪರಮ ಕರುಣಾಳುವೇ ಈತನು. ಶರಣು

ತಂ ಸುಖಾರಾಧ್ಯಮೃಜುಭಿರನನ್ಯಶರಣೈರ್ನೃಭಿಃ ।
ಕೃತಜ್ಞಃ ಕೋ ನ ಸೇವೇತ ದುರಾರಾಧ್ಯಮಸಾಧುಭಿಃ
॥ ೩೬ ॥

ಯೋ ವೈ ಹಿರಣ್ಯಾಕ್ಷವಧಂ ಮಹಾದ್ಭುತಂ
ವಿಕ್ರೀಡಿತಂ ಕಾರಣಸೂಕರಾತ್ಮನಃ ।
ಶೃಣೋತಿ ಗಾಯತ್ಯನುಮೋದತೇಽಂಜಸಾ
ವಿಮುಚ್ಯತೇ ಬ್ರಹ್ಮವಧಾದಪಿ ದ್ವಿಜಾಃ ॥ ೩೭ ॥

ಏತನ್ಮಹಾಪುಣ್ಯಮಲಂ ಪವಿತ್ರಂ
ಧನ್ಯಂ ಯಶಸ್ಯಂ ಪದಮಾಯುರಾಶಿಷಾಮ್ ।
ಪ್ರಾಣೇಂದ್ರಿಯಾಣಾಂ ಯುಧಿ ಶೌರ್ಯವರ್ಧನಂ
ನಾರಾಯಣೋಽಂತೇ ಗತಿರಂಗ ಶೃಣ್ವತಾಮ್ ॥ ೩೮ ॥

ಬಂದ ಸರಳಹೃದಯರಾದ ಭಕ್ತರಲ್ಲಿ ಸಹಜವಾಗಿಯೇ ಪ್ರಸನ್ನನಾಗುವನು. ಆದರೆ ದುಷ್ಟಪುರುಷರಿಗೆ ದೂರವಾಗಿರುವನು. ಅವರಿಗೆ ಅವನ ಒಲುಮೆ ದೊರೆಯದು. ಉಪಕಾರಗಳನ್ನು ಗುರುತಿಸುವ ಕೃತಜ್ಞನಾದ ಯಾರು ತಾನೇ ಆ ಭಕ್ತಪ್ರಿಯನನ್ನು ಸೇವಿಸುವುದಿಲ್ಲ? ॥ ೩೫-೩೬॥ ಶೌನಕಾದಿ ಮಹರ್ಷಿಗಳೇ! ಭೂಮಿಯನ್ನು ಉದ್ಧರಿಸುವುದಕ್ಕಾಗಿ ವರಾಹರೂಪವನ್ನು ಧರಿಸಿದ ಶ್ರೀಹರಿಯು ಮಾಡಿದ ಹಿರಣ್ಯಾಕ್ಷವಧವೆಂಬ ಅದ್ಭುತವಾದ ಈ ಲೀಲೆಯನ್ನು ಕೇಳುವವನೂ, ಹಾಡುವವನೂ, ಅನುಮೋದಿಸುವವನೂ, ಬ್ರಹ್ಮಹತ್ಯೆಯೇ ಮುಂತಾದ ಘೋರ ಪಾತಕಗಳಿಂದ ಸಹಜವಾಗಿ ಬಿಡುಗಡೆಹೊಂದುತ್ತಾನೆ. ॥ ೩೭॥ ಈ ಚರಿತ್ರೆಯು ಅತ್ಯಂತ ಪುಣ್ಯಪ್ರದವಾದುದು. ಪರಮ ಪವಿತ್ರವಾದುದು, ಧನ್ಯವಾದುದು. ಕೇಳುವ ಸುಕೃತಿಗಳಿಗೆ ಧನವನ್ನೂ, ಯಶಸ್ಸನ್ನೂ ದಯಪಾಲಿಸುವುದು. ಆಯುಸ್ಸನ್ನು ವೃದ್ಧಿಗೊಳಿಸುವುದು. ಕಾಮನೆಗಳನ್ನೂ ಈಡೇರಿಸುವುದು. ಯುದ್ಧದಲ್ಲಿ ಪ್ರಾಣ ಮತ್ತು ಇಂದ್ರಿಯಗಳ ಶಕ್ತಿಯನ್ನು ಹೆಚ್ಚಿಸುವುದು. ಇದನ್ನು ಕೇಳಿದವರಿಗೆ ಕೊನೆಗೆ ಶ್ರೀಮನ್ನಾರಾಯಣನ ಆಶ್ರಯವೇ ದೊರೆಯುವುದು. ॥ ೩೮ ॥

*ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಹಿರಣ್ಯಾಕ್ಷವಧೋನಾಮೈಕೋನವಿಂಶೋಽಧ್ಯಾಯಃ ॥ ೧೯ ॥

# ಇಪ್ಪತ್ತನೆಯ ಅಧ್ಯಾಯ

## ಬ್ರಹ್ಮದೇವರು ಮಾಡಿದ ನಾನಾ ಪ್ರಕಾರದ ಸೃಷ್ಟಿಯ ವರ್ಣನೆ

*ಶೌನಕ ಉವಾಚ*

ಮಹೀಂ ಪ್ರತಿಷ್ಠಾಮಧ್ಯಸ್ಯ ಸೌತೇ ಸ್ವಾಯಂಭುವೋ ಮನುಃ ।
ಕಾನ್ಯನ್ವತಿಷ್ಠದ್ ದ್ವಾರಾಣಿ ಮಾರ್ಗಾಯಾವರಜನ್ಮನಾಮ್
॥ ೧ ॥

ಕ್ಷತ್ತಾ ಮಹಾಭಾಗವತಃ ಕೃಷ್ಣಸ್ಯೈಕಾಂತಿಕಃ ಸುಹೃತ್ ।
ಯಸ್ತತ್ಯಾಜಾಗ್ರಜಂ ಕೃಷ್ಣೇ ಸಾಪತ್ಯಮಘವಾನಿತಿ
॥ ೨ ॥

ದ್ವೈಪಾಯನಾದನವರೋ ಮಹಿತ್ವೇ ತಸ್ಯ ದೇಹಜಃ ।
ಸರ್ವಾತ್ಮನಾಶ್ರಿತಃ ಕೃಷ್ಣಂ ತತ್ಪರಾಂಶ್ಚಾಪ್ಯನುವ್ರತಃ
॥ ೩ ॥

ಕಿಮನ್ವಪೃಚ್ಛನ್ ಮೈತ್ರೇಯಂ ವಿರಜಾಸ್ತೀರ್ಥಸೇವಯಾ ।
ಉಪಗಮ್ಯ ಕುಶಾವರ್ತ ಆಸೀನಂ ತತ್ತ್ವವಿತ್ತಮಮ್
॥ ೪ ॥

**ಶೌನಕರು ಕೇಳುತ್ತಾರೆ** – ಸೂತಪುರಾಣಿಕರೇ! ಜೀವಿಗಳಿಗೆ ಆಧಾರಸ್ಥಾನವಾಗಿರುವ ಭೂಮಿಯನ್ನು ಪಡೆದುಕೊಂಡ ಬಳಿಕ ಸ್ವಾಯಂಭುವ ಮನುವು ಮುಂದೆ ಹುಟ್ಟಲಿರುವ ಸಂತತಿಯನ್ನು ಉಂಟುಮಾಡಲು ಯಾವ-ಯಾವ ಉಪಾಯಗಳನ್ನು ಮಾಡಿದನು? ॥ ೧ ॥ ವಿದುರನಾದರೋ ಪರಮ ಭಾಗವತೋತ್ತಮನು. ಅವನು ಭಗವಾನ್ ಶ್ರೀಕೃಷ್ಣನ ಏಕಾಂತಭಕ್ತನೂ, ಸ್ನೇಹಿತನೂ ಆಗಿದ್ದನು. ಆದ್ದರಿಂದಲೇ ತನ್ನ ಅಣ್ಣನಾದ ಧೃತರಾಷ್ಟ್ರನೂ, ಅವನ ಪುತ್ರರೂ ಶ್ರೀಕೃಷ್ಣನನ್ನು ತಿರಸ್ಕಾರಮಾಡಿದ ಅಪರಾಧಿಗಳೆಂದು ತಿಳಿದು ಅವರನ್ನು ಪರಿತ್ಯಾಗಮಾಡಿಬಿಟ್ಟನು. ॥ ೨ ॥ ಅವನು ದ್ವೈಪಾಯನ ಮಹರ್ಷಿಗಳ ಸುಪುತ್ರನು. ಮಹಿಮೆಯಲ್ಲಿ ಅವನು ತನ್ನ ತೀರ್ಥರೂಪರಿಂದ ಯಾವ ವಿಷಯದಲ್ಲಿಯೂ ಕಡಿಮೆಯಾಗಿರಲಿಲ್ಲ. ಎಲ್ಲ ಪ್ರಕಾರಗಳಿಂದಲೂ ಭಗವಾನ್ ಶ್ರೀಕೃಷ್ಣನ ಆಶ್ರಿತನೂ, ಕೃಷ್ಣಭಕ್ತರ ಅನುಗಾಮಿಯೂ ಆಗಿದ್ದನು. ॥ ೩ ॥ ತೀರ್ಥಯಾತ್ರೆಗಳನ್ನು ಮಾಡಿದ್ದರಿಂದ ಆತನ ಅಂತಃಕರಣವು ಇನ್ನೂ ಪರಿಶುದ್ಧವಾಗಿತ್ತು. ಆ ಮಹಾತ್ಮನು ಕುಶಾವರ್ತ (ಹರಿದ್ವಾರ) ಕ್ಷೇತ್ರದಲ್ಲಿ ಕುಳಿತಿದ್ದ ತತ್ತ್ವಜ್ಞಾನಿಶ್ರೇಷ್ಠರಾದ ಮೈತ್ರೇಯಮಹರ್ಷಿಗಳ ಬಳಿಗೆ ಹೋಗಿ ಏನೇನು ಕೇಳಿದನು? ॥ ೪ ॥ ಸೂತಪುರಾಣಿಕರೇ! ಶ್ರೀಹರಿಯ

ತಯೋಃ ಸಂವದತೋಃ ಸೂತ ಪ್ರವೃತ್ತಾ ಹ್ಯಮಲಾಃ ಕಥಾಃ ।
ಆಪೋ ಗಾಂಗಾ ಇವಾಘಘ್ನೀರ್ಹರೇಃ ಪಾದಾಂಬುಜಾಶ್ರಯಾಃ ॥ ೫ ॥

ತಾ ನಃ ಕೀರ್ತಯ ಭದ್ರಂ ತೇ ಕೀರ್ತನ್ಯೋದಾರಕರ್ಮಣಃ ।
ರಸಜ್ಞಃ ಕೋ ನು ತೃಪ್ಯೇತ ಹರಿಲೀಲಾಮೃತಂ ಪಿಬನ್ ॥ ೬ ॥

ಏವಮುಗ್ರಶ್ರವಾಃ ಪೃಷ್ಟ ಋಷಿಭಿರ್ನೈಮಿಷಾಯನೈಃ ।
ಭಗವತ್ಯರ್ಪಿತಾಧ್ಯಾತ್ಮಸ್ತಾನಾಹ ಶ್ರೂಯತಾಮಿತಿ ॥ ೭ ॥

*ಸೂತ ಉವಾಚ*

ಹರೇರ್ಧೃತಕ್ರೋಡತನೋಃ ಸ್ವಮಾಯಯಾ
ನಿಶಮ್ಯ ಗೋರುದ್ಧರಣಂ ರಸಾತಲಾತ್ ।
ಲೀಲಾಂ ಹಿರಣ್ಯಾಕ್ಷಮವಜ್ಞಯಾ ಹತಂ
ಸಂಜಾತಹರ್ಷೋ ಮುನಿಮಾಹ ಭಾರತಃ ॥ ೮ ॥

*ವಿದುರ ಉವಾಚ*

ಪ್ರಜಾಪತಿಪತಿಃ ಸೃಷ್ಟ್ವಾ ಪ್ರಜಾಸರ್ಗೇ ಪ್ರಜಾಪತೀನ್ ।
ಕಿಮಾರಭತ ಮೇ ಬ್ರಹ್ಮನ್ ಪ್ರಬ್ರೂಹ್ಯವ್ಯಕ್ತಮಾರ್ಗವಿತ್ ॥ ೯ ॥

ಯೇ ಮರೀಚ್ಯಾದಯೋ ವಿಪ್ರಾಯಸ್ತು ಸ್ವಾಯಂಭುವೋ ಮನುಃ ।
ತೇ ವೈ ಬ್ರಹ್ಮಣ ಆದೇಶಾತ್ಕಥಮೇತದಭಾವಯನ್ ॥ ೧೦ ॥

ಸದ್ವಿತೀಯಾಃ ಕಿಮಸೃಜನ್ಸ್ವತಂತ್ರಾ ಉತ ಕರ್ಮಸು ।
ಆಹೋಸ್ವಿತ್ಸಂಹತಾಃ ಸರ್ವ ಇದಂ ಸ್ಮ ಸಮಕಲ್ಪಯನ್ ॥ ೧೧ ॥

*ಮೈತ್ರೇಯ ಉವಾಚ*

ದೈವೇನ ದುರ್ವಿತರ್ಕ್ಯೇಣ ಪರೇಣಾನಿಮಿಷೇಣ ಚ ।
ಜಾತಕ್ಷೋಭಾದ್ಭಗವತೋ ಮಹಾನಾಸೀದ್ಗುಣತ್ರಯಾತ್ ॥ ೧೨ ॥

ರಜಃಪ್ರಧಾನಾನ್ಮಹತಸ್ತ್ರಿಲಿಂಗೋ ದೈವಚೋದಿತಾತ್ ।
ಜಾತಃ ಸಸರ್ಜ ಭೂತಾದಿರ್ವಿಯದಾದೀನಿ ಪಂಚಶಃ ॥ ೧೩ ॥

ಕಥೆಗಳು ಅವನ ಶ್ರೀಪಾದತೀರ್ಥವಾದ ಗಂಗಾಜಲದಂತೆಯೇ ಸಮಸ್ತ ಪಾಪಗಳನ್ನು ನಾಶಮಾಡುವವು. ಶ್ರೀಮೈತ್ರೇಯರಿಗೂ, ವಿದುರನಿಗೂ ನಡೆದ ಸಂಭಾಷಣೆಯಲ್ಲಿ ಶ್ರೀಹರಿಯ ಚರಣಗಳಿಗೆ ಸಂಬಂಧಪಟ್ಟ ಪರಮಪವಿತ್ರವಾದ ಯಾವ ಕಥೆಗಳು ನಡೆದುವೋ ಅವುಗಳನ್ನು ನಮಗೂ ಹೇಳಿರಿ. ॥ ೫ ॥ ನಿಮಗೆ ಮಂಗಳವಾಗಲೀ. ಸಂಕೀರ್ತನೆ ಮಾಡಲು ಯೋಗ್ಯವಾದ ಉದಾರ ಚಾರಿತ್ರ್ಯವುಳ್ಳ ಸ್ವಾಮಿಯ ಅವತಾರಲೀಲೆಗಳು ಅಮೃತರೂಪವೇ ಆಗಿವೆ. ಅವನ್ನು ನಮಗೂ ಕೀರ್ತಿಸುವವರಾಗಿರಿ. ಅವುಗಳನ್ನು ಎಷ್ಟೇ ಪಾನ ಮಾಡಿದರೂ ರಸಿಕರಾದವರಿಗೆ ತೃಪ್ತಿಯು ಹೇಗೆ ಉಂಟಾದೀತು ? ॥ ೬ ॥

ನೈಮಿಷಾರಣ್ಯನಿವಾಸಿಗಳಾದ ಮುನಿಗಳು ಹೀಗೆ ಪ್ರಶ್ನೆ ಮಾಡಲು ಉಗ್ರಶ್ರವರೆಂಬ ಸೂತಪುರಾಣಿಕರು ಭಗವಂತನಲ್ಲಿ ಚಿತ್ತವನ್ನು ನೆಲೆ ಗೊಳಿಸಿ, ಅವರಿಗೆ ಕೇಳಿರಿ – ಎಂದು ಹೇಳತೊಡಗಿದರು. ॥ ೭ ॥

**ಸೂತಪುರಾಣಿಕರು ಹೇಳುತ್ತಾರೆ** – ಮುನಿಗಳೇ ! ಮಾಯಾವರಾಹರೂಪಿಯಾದ ಶ್ರೀಹರಿಯು ಪೃಥ್ವಿಯನ್ನು ರಸಾತಳದಿಂದ ಮೇಲಕ್ಕೆತ್ತಿದ ಮತ್ತು ಹಿರಣ್ಯಾಕ್ಷನನ್ನು ಕಡೆಗಣಿಸಿ ಆಟವಾಡುವಂತೆ ಅನಾಯಾಸವಾಗಿ ಸಂಹರಿಸಿದ ಅವತಾರಲೀಲೆಯನ್ನು ಕೇಳಿ ಪರಮಾನಂದಭರಿತನಾದ ವಿದುರನು ಮೈತ್ರೇಯಮಹರ್ಷಿಗಳಲ್ಲಿ ಹೀಗೆ ವಿನಂತಿಸಿಕೊಂಡನು. ॥ ೮ ॥

**ವಿದುರನು ಕೇಳಿದನು** – ಬ್ರಾಹ್ಮಣಶ್ರೇಷ್ಠರೇ ! ತಾವು ಅಪರೋಕ್ಷ ಜ್ಞಾನಿಗಳು. ಆದುದರಿಂದ ಪ್ರಜಾಪತಿಗಳಿಗೂ ಪತಿಯಾದ ಬ್ರಹ್ಮದೇವರು ಮರೀಚಿಯೇ ಮುಂತಾದ ಪ್ರಜಾಪತಿಗಳನ್ನು ಹುಟ್ಟಿಸಿದ ಬಳಿಕ ಸೃಷ್ಟಿಯನ್ನು ಮುಂದುವರಿಸಲು ಏನು ಮಾಡಿದರು ? ॥ ೯ ॥ ಮರೀಚಿಯೇ ಮುಂತಾದ ಮುನೀಶ್ವರರೂ, ಸ್ವಾಯಂಭುವಮನುವೂ ಬ್ರಹ್ಮದೇವರ ಆಣತಿಯಂತೆ ಹೇಗೆ ಪ್ರಜೆಗಳನ್ನು ವೃದ್ಧಿಗೊಳಿಸಿದರು ? ॥ ೧೦ ॥ ಅವರು ತಮ್ಮ ಪತ್ನಿಯರ ಸಹಯೋಗದಿಂದ ಈ ಜಗತ್ತನ್ನು ಸೃಷ್ಟಿಮಾಡಿದರೋ ? ಅಥವಾ ತಮ್ಮ-ತಮ್ಮ ಕಾರ್ಯಗಳಲ್ಲಿ ಸ್ವತಂತ್ರರಾಗಿದ್ದುಕೊಂಡು ರಚಿಸಿದರೇ ? ಅಥವಾ ಎಲ್ಲರೂ ಒಟ್ಟಿಗೆ ಇದನ್ನು ರಚಿಸಿದರೇ ? ತಿಳಿಸುವವರಾಗಿರಿ. ॥ ೧೧ ॥

**ಶ್ರೀಮೈತ್ರೇಯರು ಹೇಳಿದರು** – ಎಲೈ ವಿದುರನೇ ! ಕೇಳು. ಪ್ರಕೃತಿಯು ಹಿಂದೆ ತ್ರಿಗುಣಗಳ ಸಾಮ್ಯಾವಸ್ಥೆಯಿಂದ ನಿರ್ವಿಕಾರವಾಗಿತ್ತು. ಅನಂತರ ಚಿಂತಿಸಲು ಅಸಾಧ್ಯವಾಗಿರುವ ಜೀವರ ಪ್ರಾರಬ್ಧದಿಂದಲೂ, ಪ್ರಕೃತಿಯ ನಿಯಾಮಕ, ಪುರುಷ ಮತ್ತು ಕಾಲ ಈ ಮೂರು ಕಾರಣಗಳಿಂದ ಹಾಗೂ ಭಗವಂತನ ಸನ್ನಿಧಾನದಿಂದ ತ್ರಿಗುಣಮಯ ಪ್ರಕೃತಿಯಲ್ಲಿ ಕ್ಷೋಭೆ ಉಂಟಾಗಿ ಅದರಿಂದ ಮಹತ್ತತ್ತ್ವ ಉತ್ಪನ್ನವಾಯಿತು. ॥ ೧೨ ॥ ಭಗವತ್ಸಂಕಲ್ಪದಿಂದ ರಜಸ್ಸು ಪ್ರಧಾನವುಳ್ಳ ಮಹತ್ತತ್ತ್ವದಿಂದ ವೈಕಾರಿಕ (ಸಾತ್ವಿಕ), ರಾಜಸ ಮತ್ತು ತಾಮಸ ಮೂರು ರೀತಿಯ ಅಹಂಕಾರವು ಉಂಟಾಯಿತು. ಅದು ಆಕಾಶಾದಿ ಐದು-ಐದು ತತ್ತ್ವಗಳ ಅನೇಕ ವರ್ಗಗಳನ್ನು* ಪ್ರಕಟಿಸಿತು. ॥ ೧೩ ॥

* ಪಂಚತನ್ಮಾತ್ರೆಗಳು, ಪಂಚಮಹಾಭೂತಗಳು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಮತ್ತು ಅವುಗಳ ಐದೈದು ದೇವತೆಗಳು ಹೀಗೆ ಇವೇ ಆರು ವರ್ಗಗಳ ಸಂಕೇತ ಇಲ್ಲಿ ಮಾಡಲಾಗಿದೆ ಎಂದು ತಿಳಿಯಬೇಕು.

ತಾನಿ ಚೈಕೈಕಶಃ ಸ್ರಷ್ಟುಮಸಮರ್ಥಾನಿ ಭೌತಿಕಮ್ ।
ಸಂಹತ್ಯ ದೈವಯೋಗೇನ ಹೈಮಮಂಡಮವಾಸೃಜನ್ ॥ ೧೪ ॥

ಸೋಽಶಯಿಷ್ಟಾಬ್ಧಿಸಲಿಲೇ ಆಂಡಕೋಶೋ ನಿರಾತ್ಮಕಃ ।
ಸಾಗ್ರಂ ವೈ ವರ್ಷಸಾಹಸ್ರಮನ್ವವಾತ್ಸೀತ್ತಮೀಶ್ವರಃ ॥ ೧೫ ॥

ತಸ್ಯ ನಾಭೇರಭೂತ್ಪದ್ಮಂ ಸಹಸ್ರಾರ್ಕೋರುದೀಧಿತಿ ।
ಸರ್ವಜೀವನಿಕಾಯೌಕೋ ಯತ್ರ ಸ್ವಯಮಭೂತ್ಸ್ವರಾಟ್ ॥ ೧೬ ॥

ಸೋಽನುವಿಷ್ಟೋ ಭಗವತಾ ಯಃ ಶೇತೇ ಸಲಿಲಾಶಯೇ ।
ಲೋಕಸಂಸ್ಥಾಂ ಯಥಾಪೂರ್ವಂ ನಿರ್ಮಮೇ ಸಂಸ್ಥಯಾ ಸ್ವಯಾ ॥ ೧೭ ॥

ಸಸರ್ಜಚ್ಛಾಯಯಾ ವಿದ್ಯಾಂ ಪಂಚಪರ್ವಾಣಮಗ್ರತಃ ।
ತಾಮಿಸ್ರಮಂಧತಾಮಿಸ್ರಂ ತಮೋ ಮೋಹೋ ಮಹಾತಮಃ ॥ ೧೮ ॥

ವಿಸಸರ್ಜಾತ್ಮನಃ ಕಾಯಂ ನಾಭಿನಂದಂಸ್ತಮೋಮಯಮ್ ।
ಜಗೃಹುರ್ಯಕ್ಷರಕ್ಷಾಂಸಿ ರಾತ್ರಿಂ ಕ್ಷುತ್ತೃಟ್ಸಮುದ್ಭವಾಮ್ ॥ ೧೯ ॥

ಕ್ಷುತ್ತೃಡ್ಭ್ಯಾಮುಪಸೃಷ್ಟಾಸ್ತೇ ತಂ ಜಗ್ಧುಮಭಿದುದ್ರುವುಃ ।
ಮಾ ರಕ್ಷತೈನಂ ಜಕ್ಷಧ್ವಮಿತ್ಯೂಚುಃ ಕ್ಷುತ್ತೃಡರ್ದಿತಾಃ ॥ ೨೦ ॥

ದೇವಸ್ತಾನಾಹ ಸಂವಿಗ್ನೋ ಮಾ ಮಾಂ ಜಕ್ಷತ ರಕ್ಷತ ।
ಅಹೋ ಮೇ ಯಕ್ಷರಕ್ಷಾಂಸಿ ಪ್ರಜಾ ಯೂಯಂ ಬಭೂವಿಥ ॥ ೨೧ ॥

ದೇವತಾಃ ಪ್ರಭಯಾ ಯಾ ಯಾ ದೀವ್ಯನ್ ಪ್ರಮುಖತೋಽಸೃಜತ್ ।
ತೇ ಅಹಾರ್ಷುರ್ದೇವಯಂತೋ ವಿಸೃಷ್ಟಾಂ ತಾಂ ಪ್ರಭಾಮಹಃ ॥ ೨೨ ॥

ದೇವೋಽದೇವಾಂಜಘನತಃ ಸೃಜತಿ ಸ್ಮಾತಿಲೋಲುಪಾನ್ ।
ತ ಏನಂ ಲೋಲುಪತಯಾ ಮೈಥುನಾಯಾಭಿಪೇದಿರೇ ॥ ೨೩ ॥

ತತೋ ಹಸನ್ ಸ ಭಗವಾನಸುರೈರ್ನಿರಪತ್ರಪೈಃ ।
ಅನ್ವೀಯಮಾನಸ್ತರಸಾ ಕ್ರುದ್ಧೋ ಭೀತಃ ಪರಾಪತತ್ ॥ ೨೪ ॥

ಅವೆಲ್ಲವೂ ಬೇರೆ-ಬೇರೆಯಾಗಿದ್ದಾಗ ಭೂತಗಳ ಕಾರ್ಯ ರೂಪೀ ಬ್ರಹ್ಮಾಂಡವನ್ನು ರಚಿಸಲು ಅಸಮರ್ಥವಾಗಿದ್ದವು. ಅದಕ್ಕಾಗಿ ಅವು ಭಗವಂತನ ಶಕ್ತಿಯಿಂದ ಪರಸ್ಪರ ಕಲೆತು ಒಂದು ಸುವರ್ಣಮಯ ಅಂಡವು ನಿರ್ಮಿತವಾಯಿತು. ॥ ೧೪ ॥ ಆ ಅಂಡವು ಚೈತನ್ಯಶೂನ್ಯವಾದ ಸ್ಥಿತಿಯಲ್ಲಿ ಒಂದು ಸಾವಿರ ವರ್ಷಗಳಿಗಿಂತಲೂ ಹೆಚ್ಚುಕಾಲ ಕಾರಣಜಲದ ಮಧ್ಯದಲ್ಲಿ ಬಿದ್ದುಕೊಂಡಿತ್ತು. ಮತ್ತೆ ಭಗವಂತನು ಆ ಅಂಡಕೋಶದಲ್ಲಿ ಪ್ರವೇಶಿಸಿದನು. ॥ ೧೫ ॥ ಅದರಲ್ಲಿ ಅಧಿಷ್ಠಿತನಾದ ಬಳಿಕ ಅವನ ನಾಭಿಯಿಂದ ಸಾವಿರಾರು ಸೂರ್ಯರಿಗೆ ಸಮಾನವಾಗಿ ಬೆಳಗುತ್ತಿರುವ ಒಂದು ಕಮಲವು ಪ್ರಕಟಗೊಂಡಿತು. ಅದು ಎಲ್ಲ ಜೀವಸಮುದಾಯಗಳಿಗೆ ಆಶ್ರಯವಾಗಿತ್ತು. ಅದರಿಂದಲೇ ಸ್ವಯಂ ಬ್ರಹ್ಮದೇವರೂ ಆವಿರ್ಭವಿಸಿದರು. ॥ ೧೬ ॥

ಅನಂತರ ಸಾಗರಜಲಶಾಯಿಯಾದ ಶ್ರೀಮನ್ನಾರಾಯಣನು ತನ್ನ ಸಂಕಲ್ಪದಿಂದ ಆ ಬ್ರಹ್ಮದೇವರಲ್ಲಿ ಪ್ರವೇಶಿಸಿದನು. ಆಗ ಬ್ರಹ್ಮದೇವರು ಹಿಂದಿನ ಕಲ್ಪಗಳಲ್ಲಿ ತಾನೇ ನಿಶ್ಚಯಿಸಿದ್ದ ನಾಮ-ರೂಪಮಯ ವ್ಯವಸ್ಥೆಗಳಿಗೆ ಅನುಸಾರವಾಗಿ ಲೋಕಗಳನ್ನು ನಿರ್ಮಿಸತೊಡಗಿದರು. ॥ ೧೭ ॥ ಮೊಟ್ಟಮೊದಲಿಗೆ ಅವರು ತನ್ನ ಛಾಯೆಯಿಂದ ತಾಮಿಸ್ರ, ಅಂಧತಾಮಿಸ್ರ, ತಮ, ಮೋಹ ಮತ್ತು ಮಹಾಮೋಹಗಳೆಂಬ ಐದು ಬಗೆಯ ಅವಿದ್ಯೆಗಳನ್ನು ಸೃಷ್ಟಿಮಾಡಿದರು. ॥ ೧೮ ॥ ಬ್ರಹ್ಮದೇವರಿಗೆ ಆ ತಮೋಮಯವಾದ ಶರೀರವು ಮನಸ್ಸಿಗೆ ಒಪ್ಪದಿರಲು ಅವರು ಅವನ್ನು ತೊರೆದುಬಿಟ್ಟರು. ಆ ಶರೀರದಿಂದ ಉಂಟಾದ ಯಕ್ಷ-ರಾಕ್ಷಸರು ಹಸಿವು – ಬಾಯಾರಿಕೆಗಳಿಗೆ ಕಾರಣವಾದ ಆ ರಾತ್ರಿರೂಪವಾದ ದೇಹವನ್ನು ಪರಿಗ್ರಹಿಸಿದರು. ॥ ೧೯ ॥ ಆಗ ಹಸಿವು-ಬಾಯಾರಿಕೆಗಳಿಂದ ಪೀಡಿತರಾದ ಅವರು ಬ್ರಹ್ಮದೇವರನ್ನೇ ತಿಂದುಹಾಕಲು ಓಡಿಬಂದರು. 'ಈತನನ್ನು ತಿಂದುಹಾಕಿ, ಇವನನ್ನು ರಕ್ಷಿಸಬೇಡಿ' ಎಂದು ಕೂಗಿ ಕೊಂಡರು. ಏಕೆಂದರೆ, ಅವರಲ್ಲಿ ಹಸಿವು-ಬಾಯಾರಿಕೆಗಳು ಅಷ್ಟು ಉತ್ಕಟವಾಗಿದ್ದವು. ॥ ೨೦ ॥ ಆಗ ಬ್ರಹ್ಮದೇವರು ಗಾಬರಿಗೊಂಡು ಎಲೈ! ನೀವು ನನ್ನ ಸಂತಾನಗಳು. ಆದ್ದರಿಂದ ನನ್ನನ್ನು ತಿನ್ನಬೇಡಿರಿ. ನನ್ನನ್ನು ಕಾಪಾಡಿರಿ. (ಅವರಲ್ಲಿ 'ತಿಂದುಬಿಡಿ' ಎಂದು ಹೇಳಿದವರು ಯಕ್ಷರಾದರು. 'ಇವನನ್ನು ರಕ್ಷಿಸಬೇಡಿ' ಎಂದು ಹೇಳಿದವರು ರಾಕ್ಷಸರಾದರು). ॥ ೨೧ ॥

ಮತ್ತೆ ಬ್ರಹ್ಮದೇವರು ಸಾತ್ತ್ವಿಕ ಪ್ರಭೆಯಿಂದ ಬೆಳಗುತ್ತಾ ಮುಖ್ಯ-ಮುಖ್ಯರಾದ ದೇವತೆಗಳನ್ನು ಸೃಷ್ಟಿಸಿದರು. ಅವರು ಆಟವಾಡುತ್ತಾ ಇದ್ದು ಬ್ರಹ್ಮದೇವರು ತ್ಯಾಗಮಾಡಿದ ಹಗಲುರೂಪವಾದ ಪ್ರಕಾಶಮಯ ಶರೀರವನ್ನು ಪರಿಗ್ರಹಿಸಿದರು. ॥ ೨೨ ॥ ಅನಂತರ ಬ್ರಹ್ಮದೇವರು ತಮ್ಮ ಜಘನ ಪ್ರದೇಶದಿಂದ ಕಾಮಾಸಕ್ತರಾದ ಅಸುರರನ್ನು ಸೃಷ್ಟಿಸಿದನು. ಅವರು ಅತ್ಯಂತ ಕಾಮಲೋಲುಪರಾಗಿದ್ದರಿಂದ ಹುಟ್ಟಿದೊಡನೆಯೇ ಮೈಥುನಕ್ಕಾಗಿ ಬ್ರಹ್ಮದೇವರ ಕಡೆಗೆ ಓಡಿ ಬಂದರು. ॥ ೨೩ ॥ ಅದನ್ನು ಕಂಡು ಬ್ರಹ್ಮದೇವರಿಗೆ ಮೊದಲಿಗೆ ನಗುಬಂತು. ಆದರೆ ಅವರು ನಾಚಿಕೆಗೆಟ್ಟು ತನ್ನನ್ನು ಹಿಂಬಾಲಿಸುತ್ತಿರುವುದನ್ನು ಕಂಡು, ಕೋಪಗೊಂಡು ಭಯದಿಂದ ಪಲಾಯನಮಾಡಿದರು. ॥ ೨೪ ॥

ಸ ಉಪವ್ರಜ್ಯ ವರದಂ ಪ್ರಪನ್ನಾರ್ತಿಹರಂ ಹರಿಮ್ ।
ಅನುಗ್ರಹಾಯ ಭಕ್ತಾನಾಮನುರೂಪಾತ್ಮದರ್ಶನಮ್
॥ ೨೫ ॥

ಪಾಹಿ ಮಾಂ ಪರಮಾತ್ಮಂಸ್ತೇ ಪ್ರೇಷಣೇನಾಸೃಜಂ ಪ್ರಜಾಃ ।
ತಾ ಇಮಾ ಯಭಿತುಂ ಪಾಪಾ ಉಪಾಕ್ರಾಮಂತಿ ಮಾಂ ಪ್ರಭೋ
॥ ೨೬ ॥

ತ್ವಮೇಕಃ ಕಿಲ ಲೋಕಾನಾಂ ಕ್ಲಿಷ್ಟಾನಾಂ ಕ್ಲೇಶನಾಶನಃ ।
ತ್ವಮೇಕಃ ಕ್ಲೇಶದಸ್ತೇಷಾಮನಾಸನ್ನಪದಾಂ ತವ
॥ ೨೭ ॥

ಸೋಽವಧಾರ್ಯಾಸ್ಯ ಕಾರ್ಪಣ್ಯಂ ವಿವಿಕ್ತಾಧ್ಯಾತ್ಮದರ್ಶನಃ ।
ವಿಮುಂಚಾತ್ಮತನುಂ ಘೋರಾಮಿತ್ಯುಕ್ತೋ ವಿಮುಮೋಚ ಹ
॥ ೨೮ ॥

ತಾಂ ಕ್ವಣಚ್ಚರಣಾಂಭೋಜಾಂ ಮದವಿಹ್ವಲಲೋಚನಾಮ್ ।
ಕಾಂಚೀಕಲಾಪವಿಲಸದ್ದುಕೂಲಚ್ಛನ್ನರೋಧಸಮ್
॥ ೨೯ ॥

ಅನ್ಯೋನ್ಯಶ್ಲೇಷಯೋತ್ತುಂಗನಿರಂತರಪಯೋಧರಾಮ್ ।
ಸುನಾಸಾಂ ಸುದ್ವಿಜಾಂ ಸ್ನಿಗ್ಧಹಾಸಲೀಲಾವಲೋಕನಾಮ್
॥ ೩೦ ॥

ಗೂಹಂತೀಂ ವ್ರೀಡಯಾಽಽತ್ಮಾನಂ
ನೀಲಾಲಕವರೂಥಿನೀಮ್ ।
ಉಪಲಭ್ಯಾಸುರಾ ಧರ್ಮ ಸರ್ವೇ
ಸಮ್ಮುಮುಹುಃ ಸ್ತ್ರಿಯಮ್ ॥ ೩೧ ॥

ಅಹೋ ರೂಪಮಹೋ ಧೈರ್ಯಮಹೋ ಅಸ್ಯಾ ನವಂ ವಯಃ।
ಮಧ್ಯೇ ಕಾಮಯಮಾನಾನಾಮಕಾಮೇವ ವಿಸರ್ಪತಿ
॥ ೩೨ ॥

ವಿತರ್ಕಯಂತೋ ಬಹುಧಾ ತಾಂ ಸಂಧ್ಯಾಂ ಪ್ರಮದಾಕೃತಿಮ್ ।
ಅಭಿಸಂಭಾವ್ಯ ವಿಶ್ರಂಭಾತ್ಪರ್ಯಪೃಚ್ಛನ್ ಕುಮೇಧಸಃ
॥ ೩೩ ॥

ಕಾಸಿ ಕಸ್ಯಾಸಿ ರಂಭೋರು ಕೋ ವಾರ್ಥಸ್ತೇಽತ್ರ ಭಾಮಿನಿ ।
ರೂಪದ್ರವಿಣಪಣ್ಯೇನ ದುರ್ಭಗಾನ್ನೋ ವಿಬಾಧಸೇ
॥ ೩೪ ॥

ಬಳಿಕ ಅವರು ಭಕ್ತರನ್ನು ಅನುಗ್ರಹಿಸಲು ಅವರ ಭಾವನೆಗನುಸಾರವಾಗಿ ರೂಪಗಳನ್ನು ಧರಿಸಿ ದರ್ಶನ ನೀಡುವವನೂ, ಶರಣಾಗತವತ್ಸಲನೂ, ವರದಾಯಕನೂ ಆದ ಶ್ರೀಹರಿಯ ಬಳಿಗೆ ಹೋಗಿ ಇಂತೆಂದರು – ॥ ೨೫ ॥ ಪ್ರಭೋ ! ಪರಮಾತ್ಮಾ ! ನನ್ನನ್ನು ರಕ್ಷಿಸಿರಿ. ನಾನು ನಿನ್ನ ಅಪ್ಪಣೆಯಂತೆ ಪ್ರಜೆಗಳನ್ನು ಸೃಷ್ಟಿಸಿದೆ. ಆದರೆ ಈ ದುಷ್ಟ ಸಂತಾನವು ಪಾಪದಲ್ಲಿ ತೊಡಗಿ ನನ್ನನ್ನೇ ಸತಾಯಿಸುತ್ತಿದ್ದಾರಲ್ಲ! ॥ ೨೬ ॥ ಸ್ವಾಮಿ ! ದುಃಖದಿಂದ ತಲ್ಲಣಿಸುವ ಜೀವರ ದುಃಖವನ್ನು ಹೋಗಲಾಡಿಸುವವನು ನೀನೊಬ್ಬನೇ. ನಿನ್ನ ಪಾದಗಳನ್ನು ಆಶ್ರಯಿಸದೆ ಇರುವ ಜೀವಿಗಳಿಗೆ ದುಃಖವನ್ನು ಕೊಡುವವನೂ ನೀನೇ ಆಗಿರುವೆ. ॥ ೨೭ ॥

ಭಗವಂತನು ಎಲ್ಲರ ಹೃದಯದ ಭಾವನೆಗಳನ್ನು ಪ್ರತ್ಯಕ್ಷದಂತೆ ನೋಡುತ್ತಿರುವನು. ಅವನು ಬ್ರಹ್ಮದೇವರ ಆ ದೈನ್ಯಪರಿಸ್ಥಿತಿಯನ್ನು ಕಂಡು ಕನಿಕರದಿಂದ – 'ವತ್ಸ ! ನೀನು ಈ ನಿನ್ನ ಕಾಮಕಲುಷಿತವಾದ ಘೋರವಾದ ದೇಹವನ್ನು ತೊರೆದುಬಿಡು' ಎಂದು ಆದೇಶ ನೀಡಲು ಅವರು ಆ ದೇಹವನ್ನು ತೊರೆದುಬಿಟ್ಟರು. ॥ ೨೮ ॥ (ಬ್ರಹ್ಮದೇವರು ತೊರೆದ ಆ ಶರೀರವು ಒಂದು ಸುಂದರವಾದ ಸ್ತ್ರೀರೂಪ ತಾಳಿತು – ಅದೇ ಸಾಯಂಸಂಧ್ಯೆಯು.) ಅವಳ ಕಾಲುಗಳಲ್ಲಿ ಕಾಲ್ಗಡಗಳು ಝುಣ-ಝುಣ ಶಬ್ದಮಾಡುತ್ತಿದ್ದವು. ಕಣ್ಣುಗಳು ಮದದಿಂದ ಮತ್ತೇರಿದ್ದವು. ನಡುವು ಒಡ್ಯಾಣದಿಂದ ಶೋಭಿಸುತ್ತಿರುವ ಸುಂದರವಾದ ಸೀರೆಯಿಂದ ಅಲಂಕೃತವಾಗಿತ್ತು. ॥ ೨೯ ॥ ಉನ್ನತವಾದ ಸ್ತನಗಳು ನಡುವಿನಲ್ಲಿ ಅಂತರವೇ ಇಲ್ಲದಷ್ಟು ಒಂದಕ್ಕೊಂದು ಸೇರಿಕೊಂಡಿದ್ದವು. ಆಕೆಯ ಮೂಗು ಮತ್ತು ದಂತಪಂಕ್ತಿಗಳು ಅತ್ಯಂತ ಆಕರ್ಷಣೀಯವಾಗಿದ್ದವು. ಆ ಸುಂದರಿಯು ಮಧುರವಾದ ಮಂದಹಾಸದಿಂದ, ಹಾವ-ಭಾವ ಪೂರ್ಣವಾದ ದೃಷ್ಟಿಯಿಂದ ಅಸುರರನ್ನು ದಿಟ್ಟಿಸುತ್ತಿದ್ದಳು. ॥ ೩೦ ॥ ತನ್ನ ಕಪ್ಪಾದ ಮುಂಗುರುಳುಗಳಿಂದ ಶೋಭಿಸುತ್ತಿರುವ ಆ ಸುಕುಮಾರಿಯು ಲಜ್ಜೆಯಿಂದ ತನ್ನ ಸೀರೆಯಲ್ಲೇ ಮುಚ್ಚಿಹೋಗಿರುವಳೋ ಎಂದು ಕಾಣುತ್ತಿದ್ದಳು. ವಿದುರನೇ ! ಆಕೆಯನ್ನು ಕಂಡು ಅಸುರ ರೆಲ್ಲರೂ ಆಕೆಯಲ್ಲಿ ಮೋಹವಶರಾದರು. ॥ ೩೧ ॥ ಆಹಾ ! ಈಕೆಯದು ಎಂತಹ ಅದ್ಭುತವಾದ ರೂಪು ! ಎಂತಹ ಅಲೌಕಿಕ ಧೈರ್ಯ ! ಎಂತಹ ಹೊಸ ಯೌವನ ! ಕಾಮಪೀಡಿತರಾದ ನಮ್ಮ ನಡುವೆ ಈ ವೈಯ್ಯಾರಿಯು ದಿಟ್ಟತನದಿಂದ ಓಡಾಡುತ್ತಿರುವಳಲ್ಲ! ॥ ೩೨ ॥

ಹೀಗೆ ಆ ದುಷ್ಟಬುದ್ಧಿಯ ದೈತ್ಯರು ಸ್ತ್ರೀರೂಪಿಣಿಯಾದ ಸಂಧ್ಯೆಯ ವಿಷಯದಲ್ಲಿ ಬಗೆ-ಬಗೆಯ ತರ್ಕ-ವಿತರ್ಕಗಳನ್ನು ಮಾಡುತ್ತಾ, ಆಕೆಯನ್ನು ಬಹಳವಾಗಿ ಆದರಿಸುತ್ತಾ ಪ್ರೇಮಪೂರ್ವಕವಾಗಿ ಕೇಳಿದರು – ॥ ೩೩ ॥ "ಎಲೆಗೆ ಸುಂದರೀ ! ನೀನು ಯಾರು ? ಯಾರ ಮಗಳಾಗಿರುವೆ ? ಭಾಮಿನಿ ! ನೀನು ಇಲ್ಲಿಗೆ ಬಂದಿರುವ ಪ್ರಯೋಜನವೇನು ? ನಿನ್ನ ಅನುಪಮವಾದ ಸೌಂದರ್ಯವೆಂಬ ಅಮೂಲ್ಯವಾದ ಮಾರಾಟದ ವಸ್ತುವನ್ನು ತೋರಿಸಿ, ದುರದೃಷ್ಟಶಾಲಿಗಳಾದ ನಮ್ಮನ್ನು ಏಕೆ ಪೀಡಿಸುತ್ತಿರುವೆ ॥ ೩೪ ॥

ತಾನಿ ಚೈಕೈಕಶಃ ಸ್ರಷ್ಟುಮಸಮರ್ಥಾನಿ ಭೌತಿಕಮ್ ।
ಸಂಹತ್ಯ ದೈವಯೋಗೇನ ಹೈಮಮಂಡಮವಾಸೃಜನ್ ॥ ೧೪ ॥

ಸೋಽಶಯಿಷ್ಟಾಬ್ಧಿಸಲಿಲೇ ಆಂಡಕೋಶೋ ನಿರಾತ್ಮಕಃ ।
ಸಾಗ್ರಂ ವೈ ವರ್ಷಸಾಹಸ್ರಮನ್ವವಾತ್ಸೀತ್ತಮೀಶ್ವರಃ ॥ ೧೫ ॥

ತಸ್ಯ ನಾಭೇರಭೂತ್ಪದ್ಮಂ ಸಹಸ್ರಾರ್ಕೋರುದೀಧಿತಿ ।
ಸರ್ವಜೀವನಿಕಾಯೌಕೋ ಯತ್ರ ಸ್ವಯಮಭೂತ್ಸ್ವರಾಟ್ ॥ ೧೬ ॥

ಸೋಽನುವಿಷ್ಟೋ ಭಗವತಾ ಯಃ ಶೇತೇ ಸಲಿಲಾಶಯೇ ।
ಲೋಕಸಂಸ್ಥಾಂ ಯಥಾಪೂರ್ವಂ ನಿರ್ಮಮೇ ಸಂಸ್ಥಯಾ ಸ್ವಯಾ ॥ ೧೭ ॥

ಸಸರ್ಜಚ್ಛಾಯಯಾ ವಿದ್ಯಾಂ ಪಂಚಪರ್ವಾಣಮಗ್ರತಃ ।
ತಾಮಿಸ್ರಮಂಧತಾಮಿಸ್ರಂ ತಮೋ ಮೋಹೋ ಮಹಾತಮಃ ॥ ೧೮ ॥

ವಿಸಸರ್ಜಾತ್ಮನಃ ಕಾಯಂ ನಾಭಿನಂದಂಸ್ತಮೋಮಯಮ್ ।
ಜಗೃಹುರ್ಯಕ್ಷರಕ್ಷಾಂಸಿ ರಾತ್ರಿಂ ಕ್ಷುತ್ತೃಟ್ಸಮುದ್ಭವಾಮ್ ॥ ೧೯ ॥

ಕ್ಷುತ್ತೃಡ್ಭ್ಯಾಮುಪಸೃಷ್ಟಾಸ್ತೇ ತಂ ಜಗ್ಧುಮಭಿದುದ್ರುವುಃ ।
ಮಾ ರಕ್ಷತೈನಂ ಜಕ್ಷಧ್ವಮಿತ್ಯೂಚುಃ ಕ್ಷುತ್ತೃಡರ್ದಿತಾಃ ॥ ೨೦ ॥

ದೇವಸ್ತಾನಾಹ ಸಂವಿಗ್ನೋ ಮಾ ಮಾಂ ಜಕ್ಷತ ರಕ್ಷತ ।
ಅಹೋ ಮೇ ಯಕ್ಷರಕ್ಷಾಂಸಿ ಪ್ರಜಾ ಯೂಯಂ ಬಭೂವಿಥ ॥ ೨೧ ॥

ದೇವತಾಃ ಪ್ರಭಯಾ ಯಾ ಯಾ ದೀವ್ಯನ್ ಪ್ರಮುಖತೋಽಸೃಜತ್ ।
ತೇ ಅಹಾರ್ಷುರ್ದೇವಯಂತೋ ವಿಸೃಷ್ಟಾಂ ತಾಂ ಪ್ರಭಾಮಹಃ ॥ ೨೨ ॥

ದೇವೋಽದೇವಾಂಜಘನತಃ ಸೃಜತಿ ಸ್ಮಾತಿಲೋಲುಪಾನ್ ।
ತ ಏನಂ ಲೋಲುಪತಯಾ ಮೈಥುನಾಯಾಭಿಪೇದಿರೇ ॥ ೨೩ ॥

ತತೋ ಹಸನ್ ಸ ಭಗವಾನಸುರೈರ್ನಿರಪತ್ರಪೈಃ ।
ಅನ್ವೀಯಮಾನಸ್ತರಸಾ ಕ್ರುದ್ಧೋ ಭೀತಃ ಪರಾಪತತ್ ॥ ೨೪ ॥

ಅವೆಲ್ಲವೂ ಬೇರೆ-ಬೇರೆಯಾಗಿದ್ದಾಗ ಭೂತಗಳ ಕಾರ್ಯ ರೂಪೀ ಬ್ರಹ್ಮಾಂಡವನ್ನು ರಚಿಸಲು ಅಸಮರ್ಥವಾಗಿದ್ದವು. ಅದಕ್ಕಾಗಿ ಅವು ಭಗವಂತನ ಶಕ್ತಿಯಿಂದ ಪರಸ್ಪರ ಕಲೆತು ಒಂದು ಸುವರ್ಣಮಯ ಅಂಡವು ನಿರ್ಮಿತವಾಯಿತು. ॥ ೧೪ ॥ ಆ ಅಂಡವು ಚೈತನ್ಯಶೂನ್ಯವಾದ ಸ್ಥಿತಿಯಲ್ಲಿ ಒಂದು ಸಾವಿರ ವರ್ಷಗಳಿಗಿಂತಲೂ ಹೆಚ್ಚುಕಾಲ ಕಾರಣಜಲದ ಮಧ್ಯದಲ್ಲಿ ಬಿದ್ದುಕೊಂಡಿತ್ತು. ಮತ್ತೆ ಭಗವಂತನು ಆ ಅಂಡಕೋಶದಲ್ಲಿ ಪ್ರವೇಶಿಸಿದನು. ॥ ೧೫ ॥ ಅದರಲ್ಲಿ ಅಧಿಷ್ಠಿತನಾದ ಬಳಿಕ ಅವನ ನಾಭಿಯಿಂದ ಸಾವಿರಾರು ಸೂರ್ಯರಿಗೆ ಸಮಾನವಾಗಿ ಬೆಳಗುತ್ತಿರುವ ಒಂದು ಕಮಲವು ಪ್ರಕಟಗೊಂಡಿತು. ಅದು ಎಲ್ಲ ಜೀವಸಮುದಾಯಗಳಿಗೆ ಆಶ್ರಯವಾಗಿತ್ತು. ಅದರಿಂದಲೇ ಸ್ವಯಂ ಬ್ರಹ್ಮದೇವರೂ ಆವಿರ್ಭವಿಸಿದರು. ॥ ೧೬ ॥

ಅನಂತರ ಸಾಗರಜಲಶಾಯಿಯಾದ ಶ್ರೀಮನ್ನಾರಾಯಣನು ತನ್ನ ಸಂಕಲ್ಪದಿಂದ ಆ ಬ್ರಹ್ಮದೇವರಲ್ಲಿ ಪ್ರವೇಶಿಸಿದನು. ಆಗ ಬ್ರಹ್ಮದೇವರು ಹಿಂದಿನ ಕಲ್ಪಗಳಲ್ಲಿ ತಾನೇ ನಿಶ್ಚಯಿಸಿದ್ದ ನಾಮ-ರೂಪಮಯ ವ್ಯವಸ್ಥೆಗಳಿಗೆ ಅನುಸಾರವಾಗಿ ಲೋಕಗಳನ್ನು ನಿರ್ಮಿಸತೊಡಗಿದರು. ॥ ೧೭ ॥ ಮೊಟ್ಟಮೊದಲಿಗೆ ಅವರು ತನ್ನ ಛಾಯೆಯಿಂದ ತಾಮಿಸ್ರ, ಅಂಧತಾಮಿಸ್ರ, ತಮ, ಮೋಹ ಮತ್ತು ಮಹಾಮೋಹಗಳೆಂಬ ಐದು ಬಗೆಯ ಅವಿದ್ಯೆಗಳನ್ನು ಸೃಷ್ಟಿಮಾಡಿದರು. ॥ ೧೮ ॥ ಬ್ರಹ್ಮದೇವರಿಗೆ ಆ ತಮೋಮಯವಾದ ಶರೀರವು ಮನಸ್ಸಿಗೆ ಒಪ್ಪದಿರಲು ಅವರು ಅವನ್ನು ತೊರೆದುಬಿಟ್ಟರು. ಆ ಶರೀರದಿಂದ ಉಂಟಾದ ಯಕ್ಷ-ರಾಕ್ಷಸರು ಹಸಿವು – ಬಾಯಾರಿಕೆಗಳಿಗೆ ಕಾರಣವಾದ ಆ ರಾತ್ರಿರೂಪವಾದ ದೇಹವನ್ನು ಪರಿಗ್ರಹಿಸಿದರು. ॥ ೧೯ ॥ ಆಗ ಹಸಿವು-ಬಾಯಾರಿಕೆಗಳಿಂದ ಪೀಡಿತರಾದ ಅವರು ಬ್ರಹ್ಮದೇವರನ್ನೇ ತಿಂದುಹಾಕಲು ಓಡಿಬಂದರು. 'ಈತನನ್ನು ತಿಂದುಹಾಕಿ, ಇವನನ್ನು ರಕ್ಷಿಸಬೇಡಿ' ಎಂದು ಕೂಗಿ ಕೊಂಡರು. ಏಕೆಂದರೆ, ಅವರಲ್ಲಿ ಹಸಿವು-ಬಾಯಾರಿಕೆಗಳು ಅಷ್ಟು ಉತ್ಕಟವಾಗಿದ್ದವು. ॥ ೨೦ ॥ ಆಗ ಬ್ರಹ್ಮದೇವರು ಗಾಬರಿಗೊಂಡು ಎಲೈ! ನೀವು ನನ್ನ ಸಂತಾನಗಳು. ಆದ್ದರಿಂದ ನನ್ನನ್ನು ತಿನ್ನಬೇಡಿರಿ. ನನ್ನನ್ನು ಕಾಪಾಡಿರಿ. (ಅವರಲ್ಲಿ 'ತಿಂದುಬಿಡಿ' ಎಂದು ಹೇಳಿದವರು ಯಕ್ಷರಾದರು. 'ಇವನನ್ನು ರಕ್ಷಿಸಬೇಡಿ' ಎಂದು ಹೇಳಿದವರು ರಾಕ್ಷಸರಾದರು). ॥ ೨೧ ॥

ಮತ್ತೆ ಬ್ರಹ್ಮದೇವರು ಸಾತ್ತ್ವಿಕ ಪ್ರಭೆಯಿಂದ ಬೆಳಗುತ್ತಾ ಮುಖ್ಯ-ಮುಖ್ಯರಾದ ದೇವತೆಗಳನ್ನು ಸೃಷ್ಟಿಸಿದರು. ಅವರು ಆಟವಾಡುತ್ತಾ ಇದ್ದು ಬ್ರಹ್ಮದೇವರು ತ್ಯಾಗಮಾಡಿದ ಹಗಲುರೂಪವಾದ ಪ್ರಕಾಶಮಯ ಶರೀರವನ್ನು ಪರಿಗ್ರಹಿಸಿದರು. ॥ ೨೨ ॥ ಅನಂತರ ಬ್ರಹ್ಮದೇವರು ತಮ್ಮ ಜಘನ ಪ್ರದೇಶದಿಂದ ಕಾಮಾಸಕ್ತರಾದ ಅಸುರರನ್ನು ಸೃಷ್ಟಿಸಿದನು. ಅವರು ಅತ್ಯಂತ ಕಾಮಲೋಲುಪರಾಗಿದ್ದರಿಂದ ಹುಟ್ಟಿದೊಡನೆಯೇ ಮೈಥುನಕ್ಕಾಗಿ ಬ್ರಹ್ಮದೇವರ ಕಡೆಗೆ ಓಡಿ ಬಂದರು. ॥ ೨೩ ॥ ಅದನ್ನು ಕಂಡು ಬ್ರಹ್ಮದೇವರಿಗೆ ಮೊದಲಿಗೆ ನಗುಬಂತು. ಆದರೆ ಅವರು ನಾಚಿಕೆಗೆಟ್ಟು ತನ್ನನ್ನು ಹಿಂಬಾಲಿಸುತ್ತಿರುವುದನ್ನು ಕಂಡು, ಕೋಪಗೊಂಡು ಭಯದಿಂದ ಪಲಾಯನಮಾಡಿದರು. ॥ ೨೪ ॥

ಸ ಉಪವ್ರಜ್ಯ ವರದಂ ಪ್ರಪನ್ನಾರ್ತಿಹರಂ ಹರಿಮ್ ।
ಅನುಗ್ರಹಾಯ ಭಕ್ತಾನಾಮನುರೂಪಾತ್ಮದರ್ಶನಮ್ ॥ ೨೫ ॥

ಪಾಹಿ ಮಾಂ ಪರಮಾತ್ಮಂಸ್ತೇ ಪ್ರೇಷಣೇನಾಸೃಜಂ ಪ್ರಜಾಃ ।
ತಾ ಇಮಾ ಯಭಿತುಂ ಪಾಪಾ ಉಪಾಕ್ರಾಮಂತಿ ಮಾಂ ಪ್ರಭೋ ॥ ೨೬ ॥

ತ್ವಮೇಕಃ ಕಿಲ ಲೋಕಾನಾಂ ಕ್ಲಿಷ್ಟಾನಾಂ ಕ್ಲೇಶನಾಶನಃ ।
ತ್ವಮೇಕಃ ಕ್ಲೇಶದಸ್ತೇಷಾಮನಾಸನ್ನಪದಾಂ ತವ ॥ ೨೭ ॥

ಸೋಽವಧಾರ್ಯಾಸ್ಯ ಕಾರ್ಪಣ್ಯಂ ವಿವಿಕ್ತಾಧ್ಯಾತ್ಮದರ್ಶನಃ ।
ವಿಮುಂಚಾತ್ಮತನುಂ ಘೋರಾಮಿತ್ಯುಕ್ತೋ ವಿಮುಮೋಚ ಹ ॥ ೨೮ ॥

ತಾಂ ಕ್ವಣಚ್ಚರಣಾಂಭೋಜಾಂ ಮದವಿಹ್ವಲಲೋಚನಾಮ್ ।
ಕಾಂಚೀಕಲಾಪವಿಲಸದ್ದುಕೂಲಚ್ಛನ್ನರೋಧಸಮ್ ॥ ೨೯ ॥

ಅನ್ಯೋನ್ಯಶ್ಲೇಷಯೋತ್ತುಂಗನಿರಂತರಪಯೋಧರಾಮ್ ।
ಸುನಾಸಾಂ ಸುದ್ವಿಜಾಂ ಸ್ನಿಗ್ಧಹಾಸಲೀಲಾವಲೋಕನಾಮ್ ॥ ೩೦ ॥

ಗೂಹಂತೀಂ ವ್ರೀಡಯಾಽಽತ್ಮಾನಂ
ನೀಲಾಲಕವರೂಥಿನೀಮ್ ।
ಉಪಲಭ್ಯಾಸುರಾ ಧರ್ಮ ಸರ್ವೇ
ಸಮ್ಮುಮುಹುಃ ಸ್ತ್ರಿಯಮ್ ॥ ೩೧ ॥

ಅಹೋ ರೂಪಮಹೋ ಧೈರ್ಯಮಹೋ ಅಸ್ಯಾ ನವಂ ವಯಃ ।
ಮಧ್ಯೇ ಕಾಮಯಮಾನಾನಾಮಕಾಮೇವ ವಿಸರ್ಪತಿ ॥ ೩೨ ॥

ವಿತರ್ಕಯಂತೋ ಬಹುಧಾ ತಾಂ ಸಂಧ್ಯಾಂ ಪ್ರಮದಾಕೃತಿಮ್ ।
ಅಭಿಸಂಭಾವ್ಯ ವಿಶ್ರಂಭಾತ್ಪರ್ಯಪೃಚ್ಛನ್ ಕುಮೇಧಸಃ ॥ ೩೩ ॥

ಕಾಸಿ ಕಸ್ಯಾಸಿ ರಂಭೋರು ಕೋ ವಾರ್ಥಸ್ತೇಽತ್ರ ಭಾಮಿನಿ ।
ರೂಪದ್ರವಿಣಪಣ್ಯೇನ ದುರ್ಭಗಾನ್ನೋ ವಿಬಾಧಸೇ ॥ ೩೪ ॥

ಬಳಿಕ ಅವರು ಭಕ್ತರನ್ನು ಅನುಗ್ರಹಿಸಲು ಅವರ ಭಾವನೆಗನುಸಾರವಾಗಿ ರೂಪಗಳನ್ನು ಧರಿಸಿ ದರ್ಶನ ನೀಡುವವನೂ, ಶರಣಾಗತವತ್ಸಲನೂ, ವರದಾಯಕನೂ ಆದ ಶ್ರೀಹರಿಯ ಬಳಿಗೆ ಹೋಗಿ ಇಂತೆಂದರು – ॥ ೨೫ ॥ ಪ್ರಭೋ ! ಪರಮಾತ್ಮಾ ! ನನ್ನನ್ನು ರಕ್ಷಿಸಿರಿ. ನಾನು ನಿನ್ನ ಅಪ್ಪಣೆಯಂತೆ ಪ್ರಜೆಗಳನ್ನು ಸೃಷ್ಟಿಸಿದೆ. ಆದರೆ ಈ ದುಷ್ಟ ಸಂತಾನವು ಪಾಪದಲ್ಲಿ ತೊಡಗಿ ನನ್ನನ್ನೇ ಸತಾಯಿಸುತ್ತಿದ್ದಾರಲ್ಲ! ॥ ೨೬ ॥ ಸ್ವಾಮಿ ! ದುಃಖದಿಂದ ತಲ್ಲಣಿಸುವ ಜೀವರ ದುಃಖವನ್ನು ಹೋಗಲಾಡಿಸುವವನು ನೀನೊಬ್ಬನೇ. ನಿನ್ನ ಪಾದಗಳನ್ನು ಆಶ್ರಯಿಸದೆ ಇರುವ ಜೀವಿಗಳಿಗೆ ದುಃಖವನ್ನು ಕೊಡುವವನೂ ನೀನೇ ಆಗಿರುವೆ. ॥ ೨೭ ॥

ಭಗವಂತನು ಎಲ್ಲರ ಹೃದಯದ ಭಾವನೆಗಳನ್ನು ಪ್ರತ್ಯಕ್ಷದಂತೆ ನೋಡುತ್ತಿರುವನು. ಅವನು ಬ್ರಹ್ಮದೇವರ ಆ ದೈನ್ಯಪರಿಸ್ಥಿತಿಯನ್ನು ಕಂಡು ಕನಿಕರದಿಂದ – 'ವತ್ಸ ! ನೀನು ಈ ನಿನ್ನ ಕಾಮಕಲುಷಿತವಾದ ಘೋರವಾದ ದೇಹವನ್ನು ತೊರೆದುಬಿಡು' ಎಂದು ಆದೇಶ ನೀಡಲು ಅವರು ಆ ದೇಹವನ್ನು ತೊರೆದುಬಿಟ್ಟರು. ॥ ೨೮ ॥ (ಬ್ರಹ್ಮದೇವರು ತೊರೆದ ಆ ಶರೀರವು ಒಂದು ಸುಂದರವಾದ ಸ್ತ್ರೀರೂಪ ತಾಳಿತು – ಅದೇ ಸಾಯಂಸಂಧ್ಯೆಯು.) ಅವಳ ಕಾಲುಗಳಲ್ಲಿ ಕಾಲ್ಗಡಗಳು ಝಣ-ಝಣ ಶಬ್ದಮಾಡುತ್ತಿದ್ದವು. ಕಣ್ಣುಗಳು ಮದದಿಂದ ಮತ್ತೇರಿದ್ದವು. ನಡುವು ಒಡ್ಯಾಣದಿಂದ ಶೋಭಿಸುತ್ತಿರುವ ಸುಂದರವಾದ ಸೀರೆಯಿಂದ ಅಲಂಕೃತವಾಗಿತ್ತು. ॥ ೨೯ ॥ ಉನ್ನತವಾದ ಸ್ತನಗಳು ನಡುವಿನಲ್ಲಿ ಅಂತರವೇ ಇಲ್ಲದಷ್ಟು ಒಂದಕ್ಕೊಂದು ಸೇರಿಕೊಂಡಿದ್ದವು. ಆಕೆಯ ಮೂಗು ಮತ್ತು ದಂತಪಂಕ್ತಿಗಳು ಅತ್ಯಂತ ಆಕರ್ಷಣೀಯವಾಗಿದ್ದವು. ಆ ಸುಂದರಿಯು ಮಧುರವಾದ ಮಂದಹಾಸದಿಂದ, ಹಾವ-ಭಾವ ಪೂರ್ಣವಾದ ದೃಷ್ಟಿಯಿಂದ ಅಸುರರನ್ನು ದಿಟ್ಟಿಸುತ್ತಿದ್ದಳು. ॥ ೩೦ ॥ ತನ್ನ ಕಪ್ಪಾದ ಮುಂಗುರುಳುಗಳಿಂದ ಶೋಭಿಸುತ್ತಿರುವ ಆ ಸುಕುಮಾರಿಯು ಲಜ್ಜೆಯಿಂದ ತನ್ನ ಸೀರೆಯಲ್ಲೇ ಮುಚ್ಚಿಹೋಗಿರುವಳೋ ಎಂದು ಕಾಣುತ್ತಿದ್ದಳು. ವಿದುರನೇ ! ಆಕೆಯನ್ನು ಕಂಡು ಅಸುರ ರೆಲ್ಲರೂ ಆಕೆಯಲ್ಲಿ ಮೋಹವಶರಾದರು. ॥ ೩೧ ॥ ಆಹಾ ! ಈಕೆಯದು ಎಂತಹ ಅದ್ಭುತವಾದ ರೂಪು ! ಎಂತಹ ಅಲೌಕಿಕ ಧೈರ್ಯ ! ಎಂತಹ ಹೊಸ ಯೌವನ ! ಕಾಮಪೀಡಿತರಾದ ನಮ್ಮ ನಡುವೆ ಈ ವೈಯ್ಯಾರಿಯು ದಿಟ್ಟತನದಿಂದ ಓಡಾಡುತ್ತಿರುವಳಲ್ಲ! ॥ ೩೨ ॥

ಹೀಗೆ ಆ ದುಷ್ಟಬುದ್ಧಿಯ ದೈತ್ಯರು ಸ್ತ್ರೀರೂಪಿಣಿಯಾದ ಸಂಧ್ಯೆಯ ವಿಷಯದಲ್ಲಿ ಬಗೆ-ಬಗೆಯ ತರ್ಕ-ವಿತರ್ಕಗಳನ್ನು ಮಾಡುತ್ತಾ, ಆಕೆಯನ್ನು ಬಹಳವಾಗಿ ಆದರಿಸುತ್ತಾ ಪ್ರೇಮಪೂರ್ವಕವಾಗಿ ಕೇಳಿದರು – ॥ ೩೩ ॥ "ಎಲೆಗೆ ಸುಂದರೀ ! ನೀನು ಯಾರು ? ಯಾರ ಮಗಳಾಗಿರುವೆ ? ಭಾಮಿನಿ ! ನೀನು ಇಲ್ಲಿಗೆ ಬಂದಿರುವ ಪ್ರಯೋಜನವೇನು ? ನಿನ್ನ ಅನುಪಮವಾದ ಸೌಂದರ್ಯವೆಂಬ ಅಮೂಲ್ಯವಾದ ಮಾರಾಟದ ವಸ್ತುವನ್ನು ತೋರಿಸಿ, ದುರದೃಷ್ಟಶಾಲಿಗಳಾದ ನಮ್ಮನ್ನು ಏಕೆ ಪೀಡಿಸುತ್ತಿರುವೆ ॥ ೩೪ ॥

ಯಾ ವಾ ಕಾಚಿತ್ತ್ವಮಬಲೇ ದಿಷ್ಟ್ಯಾ ಸಂದರ್ಶನಂ ತವ ।
ಉತ್ಸುನೋಷೀಕ್ಷಮಾಣಾನಾಂ ಕಂದುಕಕ್ರೀಡಯಾ ಮನಃ
॥ ೩೩ ॥

ನೈಕತ್ರ ತೇ ಜಯತಿ ಶಾಲಿನಿ ಪಾದಪದ್ಮಂ
ಘ್ನಂತ್ಯಾ ಮುಹುಃ ಕರತಲೇನ ಪತತ್ಪತಂಗಮ್ ।
ಮಧ್ಯಂ ವಿಷೀದತಿ ಬೃಹತ್ಸ್ತನ ಭಾರಭೀತಂ
ಶಾಂತೇವ ದೃಷ್ಟಿರಮಲಾ ಸುಶಿಖಾಸಮೂಹಃ ॥ ೩೬ ॥

ಇತಿ ಸಾಯಂತನೀಂ ಸಂಧ್ಯಾ-
ಮಸುರಾಃ ಪ್ರಮದಾಯತೀಮ್ ।
ಪ್ರಲೋಭಯಂತೀಂ ಜಗೃಹುರ್ಮತ್ವಾ
ಮೂಢಧಿಯಃ ಸ್ತ್ರಿಯಮ್ ॥ ೩೭ ॥

ಪ್ರಹಸ್ಯ ಭಾವಗಂಭೀರಂ ಜಿಘ್ರಂತ್ಯಾತ್ಮಾನಮಾತ್ಮನಾ ।
ಕಾಂತ್ಯಾ ಸಸರ್ಜ ಭಗವಾನ್ಗಂಧರ್ವಾಪ್ಸರಸಾಂ ಗಣಾನ್
॥ ೩೮ ॥

ವಿಸಸರ್ಜ ತನುಂ ತಾಂ ವೈ
ಜ್ಯೋತ್ಸ್ನಾಂ ಕಾಂತಿಮತೀಂ ಪ್ರಿಯಾಮ್ ।
ತ ಏವ ಚಾದದುಃ ಪ್ರೀತ್ಯಾ
ವಿಶ್ವಾವಸುಪುರೋಗಮಾಃ ॥ ೩೯ ॥

ಸೃಷ್ಟ್ವಾ ಭೂತಪಿಶಾಚಾಂಶ್ಚ ಭಗವಾನಾತ್ಮತಂದ್ರಿಣಾ ।
ದಿಗ್ವಾಸಸೋ ಮುಕ್ತಕೇಶಾನ್ವೀಕ್ಷ್ಯ ಚಾಮೀಲಯದ್ದೃಶೌ
॥ ೪೦ ॥

ಜಗೃಹುಸ್ತದ್ವಿಸೃಷ್ಟಾಂ ತಾಂ ಜೃಂಭಣಾಖ್ಯಾಂ ತನುಂ ಪ್ರಭೋಃ ।
ನಿದ್ರಾಮಿಂದ್ರಿಯವಿಕ್ಲೇದೋ ಯಯಾ ಭೂತೇಷು ದೃಶ್ಯತೇ ।
ಯೇನೋಚ್ಛಿಷ್ಟಾಂಧರ್ಷಯಂತಿ ತಮುನ್ಮಾದಂ ಪ್ರಚಕ್ಷತೇ
॥ ೪೧ ॥

ಊರ್ಜಸ್ವಂತಂ ಮನ್ಯಮಾನ ಆತ್ಮಾನಂ ಭಗವಾನಜಃ ।
ಸಾಧ್ಯಾನ್ ಗಣಾನ್ ಪಿತೃಗಣಾನ್ ಪರೋಕ್ಷೇಣಾಸೃಜತ್ಪ್ರಭುಃ
॥ ೪೨ ॥

ತ ಆತ್ಮಸರ್ಗಂ ತಂ ಕಾಯಂ ಪಿತರಃ ಪ್ರತಿಪೇದಿರೇ ।
ಸಾಧ್ಯೇಭ್ಯಶ್ಚ ಪಿತೃಭ್ಯಶ್ಚ ಕವಯೋ ಯದ್ವಿತನ್ವತೇ
॥ ೪೩ ॥

ಸಿದ್ಧಾನ್ವಿದ್ಯಾಧರಾಂಶ್ಚೈವ ತಿರೋಧಾನೇನ ಸೋಽಸೃಜತ್ ।
ತೇಭ್ಯೋಽದದಾತ್ತಮಾತ್ಮಾನಮಂತರ್ಧಾನಾಖ್ಯಮದ್ಭುತಮ್
॥ ೪೪ ॥

ಸ ಕಿನ್ನರಾನ್ ಕಿಂಪುರುಷಾನ್ಪ್ರತ್ಯಾತ್ಮ್ಯೇನಾಸೃಜತ್ಪ್ರಭುಃ ।
ಮಾನಯನ್ನಾತ್ಮನಾಽಽತ್ಮಾನಮಾತ್ಮಾಭಾಸಂ ವಿಲೋಕಯನ್
॥ ೪೫ ॥

ಅಬಲೆಯೇ! ನೀನು ಯಾರೇ ಆಗಿರು. ನಿನ್ನ ದರ್ಶನವಾಗಿರುವುದೇ ನಮ್ಮ ದೊಡ್ಡ ಸೌಭಾಗ್ಯವು. ನೀನು ಚೆಂಡನ್ನು ಆಡಿಸುತ್ತಾ ದರ್ಶಕರಾಗಿರುವ ನಮ್ಮ ಮನಸ್ಸನ್ನು ಕಲಕುತ್ತಿದ್ದೀಯೇ. ॥ ೩೫ ॥ ಸುಂದರಿಯೇ! ಪುಟಿಯುತ್ತಿರುವ ಚೆಂಡನ್ನು ಅಂಗೈಯಿಂದ ನೀನು ಹೊಡೆಯುತ್ತಿರುವಾಗ ನಿನ್ನ ಪಾದಕಮಲಗಳು ಒಂದೆಡೆ ನಿಲ್ಲದೆ ಚಲಿಸುತ್ತಾ ಇರುತ್ತವೆ. ನಿನ್ನ ಕಟಿಪ್ರದೇಶವು ಸ್ಥೂಲವಾದ ಸ್ತನಗಳ ಭಾರದಿಂದ ಆಯಾಸಗೊಂಡಂತಿದೆ. ನಿನ್ನ ನಿರ್ಮಲವಾದ ದೃಷ್ಟಿಯೂ ಬಳಲಿದಂತಿದೆ. ಆಹಾ! ನಿನ್ನ ಕೇಶಪಾಶವು ಎಷ್ಟು ಸುಂದರವಾಗಿದೆ!" ॥ ೩೬ ॥ ಈ ರೀತಿಯಲ್ಲಿ ಸ್ತ್ರೀರೂಪದಿಂದ ಪ್ರಕಟಗೊಂಡ ಸಾಯಂಸಂಧ್ಯೆಯು ಅವರನ್ನು ಅತ್ಯಂತ ಕಾಮಾಸಕ್ತಗೊಳಿಸಿತು. ಆ ಮೂರ್ಖರು ಆಕೆಯನ್ನು ರಮಣೀರತ್ನವೆಂದು ಭಾವಿಸಿ ಪರಿಗ್ರಹಿಸಿದರು. ॥ ೩೭ ॥

ಅನಂತರ ಬ್ರಹ್ಮದೇವರು ಗಂಭೀರಭಾವದಿಂದ ನಗುತ್ತಾ ತನ್ನ ಸೌಂದರ್ಯವನ್ನು ತಾನೇ ಸವಿಯುತ್ತಿರುವಂತೆ ಕಂಗೊಳಿಸುತ್ತಿದ್ದ ತನ್ನ ಕಾಂತಿಮಯವಾದ ಮೂರ್ತಿಯಿಂದ ಗಂಧರ್ವರನ್ನೂ ಮತ್ತು ಅಪ್ಸರೆಯರನ್ನು ಸೃಷ್ಟಿಸಿದರು. ॥ ೩೮ ॥ ಆಗ ಅವರು ಚಂದ್ರಿಕಾ ರೂಪವಾದ ತಮ್ಮ ಕಾಂತಿಮಯ ಪ್ರಿಯಶರೀರವನ್ನು ತ್ಯಜಿಸಿದರು. ಆ ದೇಹವನ್ನು ವಿಶ್ವಾವಸುವೇ ಮುಂತಾದ ಗಂಧರ್ವರು ಪ್ರೀತಿಯಿಂದ ಪರಿಗ್ರಹಿಸಿದರು. (ಆ ದೇಹವನ್ನು ಪ್ರಾತಃಸಂಧ್ಯೆಯೆಂದು ಕರೆಯುತ್ತಾರೆ.) ॥ ೩೯ ॥

ಇದಾದ ಬಳಿಕ ಬ್ರಹ್ಮದೇವರು ತನ್ನ ಆಲಸ್ಯ(ತಂದ್ರಾ)ದಿಂದ ಭೂತ-ಪಿಶಾಚಗಳನ್ನು ಸೃಷ್ಟಿಸಿದರು. ಅವು ದಿಗಂಬರವಾಗಿ ತಲೆಗೆದರಿಕೊಂಡಿರುವುದನ್ನು ಕಂಡು ಅವರು ಕಣ್ಣುಗಳನ್ನು ಮುಚ್ಚಿಕೊಂಡರು. ॥ ೪೦ ॥ ಬ್ರಹ್ಮದೇವರು ತ್ಯಜಿಸಿದ ಆ ಆಕಳಿಕೆಯ ರೂಪವಾದ ದೇಹವನ್ನು ಭೂತ-ಪಿಶಾಚಿಗಳು ಪರಿಗ್ರಹಿಸಿದರು. ಅದನ್ನೇ ನಿದ್ದೆಯೆಂದೂ ಕರೆಯುತ್ತಾರೆ. ಅದು ಜೀವಿಗಳ ಇಂದ್ರಿಯಗಳಲ್ಲಿ ಶೈಥಿಲ್ಯವನ್ನುಂಟುಮಾಡುತ್ತದೆ. ಮನುಷ್ಯನು ಎಂಜಲು ಬಾಯಿಯಿಂದ ಮಲಗಿದರೆ ಆತನನ್ನೂ ಭೂತ-ಪಿಶಾಚಾದಿಗಳು ಆಕ್ರಮಿಸುತ್ತವೆ. ಇದನ್ನೇ ಉನ್ಮಾದವೆಂದೂ ಹೇಳುತ್ತಾರೆ. ॥ ೪೧ ॥

ಮತ್ತೆ ಬ್ರಹ್ಮದೇವರು – 'ನಾನು ತೇಜೋಮಯನಾಗಿದ್ದೇನೆ' ಎಂದು ಭಾವಿಸಿಕೊಂಡು ತಮ್ಮ ಅದೃಶ್ಯರೂಪದಿಂದ ಸಾಧ್ಯಗಣಗಳನ್ನು ಮತ್ತು ಪಿತೃಗಣಗಳನ್ನೂ ಸೃಷ್ಟಿಸಿದರು. ॥ ೪೨॥ ತಮ್ಮ ಸ್ಥಾನವಾದ ಆ ಅದೃಶ್ಯಶರೀರವನ್ನು ಪಿತೃದೇವತೆಗಳು ಪರಿಗ್ರಹಿಸಿದರು. ಅದನ್ನೇ ಗುರಿಯಾಗಿಟ್ಟುಕೊಂಡು ಪಂಡಿತರು ಶ್ರಾದ್ಧಾದಿಗಳ ಮೂಲಕ ಪಿತೃದೇವತೆಗಳಿಗೂ ಮತ್ತು ಸಾಧ್ಯಗಣಗಳಿಗೂ ಕ್ರಮವಾಗಿ ಕವ್ಯ(ಪಿಂಡ)ಗಳನ್ನು, ಹವ್ಯಗಳನ್ನೂ ಅರ್ಪಿಸುತ್ತಾರೆ. ॥ ೪೩ ॥

ಬ್ರಹ್ಮದೇವರು ತಮ್ಮ ತಿರೋಧಾನಶಕ್ತಿಯಿಂದ ಸಿದ್ಧರನ್ನೂ, ವಿದ್ಯಾಧರರನ್ನೂ ಸೃಷ್ಟಿಮಾಡಿ ಅವರಿಗೆ ತಮ್ಮ ಅಂತರ್ಧಾನವೆಂಬ ಅದ್ಭುತವಾದ ಶರೀರವನ್ನು ಅನುಗ್ರಹಿಸಿದರು. ॥ ೪೪ ॥ ಒಮ್ಮೆ ಬ್ರಹ್ಮದೇವರು ತಮ್ಮ ಪ್ರತಿಬಿಂಬವನ್ನು ಕಂಡು ಸಂತೋಷಗೊಂಡರು. ತಮ್ಮನ್ನು ಅತಿಸುಂದರರೆಂದು ಭಾವಿಸಿಕೊಂಡು ಆ ಪ್ರತಿಬಿಂಬದಿಂದ ಕಿನ್ನರರನ್ನೂ ಮತ್ತು ಕಿಂಪುರುಷರನ್ನೂ ಸೃಷ್ಟಿಮಾಡಿದರು. ॥ ೪೫ ॥

ತೇ ತು ತಜ್ಜಗೃಹೂ ರೂಪಂ ತ್ಯಕ್ತಂ ಯತ್ಪರಮೇಷ್ಠಿನಾ ।
ಮಿಥುನೀಭೂಯ ಗಾಯಂತಸ್ತಮೇವೋಷಸಿ ಕರ್ಮಭಿಃ
॥ ೪೬ ॥

ಬ್ರಹ್ಮದೇವರು ತಮ್ಮ ಆ ಪ್ರತಿಬಿಂಬಶರೀರವನ್ನು ತ್ಯಜಿಸಲು ಕಿನ್ನರರೂ ಮತ್ತು ಕಿಂಪುರುಷರೂ ಅದನ್ನು ಸ್ವೀಕರಿಸಿದರು. ಅದರಿಂದಲೇ ಇವರೆಲ್ಲರೂ ಉಷಃಕಾಲದಲ್ಲಿ ತಮ್ಮ ಪತ್ನಿಯರಿಂದೊಡಗೂಡಿ ಬ್ರಹ್ಮದೇವರ ಗುಣ-ಕರ್ಮಗಳನ್ನು ಹಾಡಿ ಹೊಗಳುತ್ತಾರೆ. ॥ ೪೬ ॥

ದೇಹೇನ ವೈ ಭೋಗವತಾ ಶಯಾನೋ ಬಹುಚಿಂತಯಾ ।
ಸರ್ಗೇಽನುಪಚಿತೇ ಕ್ರೋಧಾದುತ್ಸಸರ್ಜ ಹ ತದ್ವಪುಃ
॥ ೪೭ ॥

ಒಮ್ಮೆ ಬ್ರಹ್ಮದೇವರು ಸೃಷ್ಟಿಯ ವೃದ್ಧಿಯು ಆಗದಿರುವುದರಿಂದ ತುಂಬಾ ಚಿಂತಾಪರವಶರಾಗಿ ಕೈ-ಕಾಲು ಮುಂತಾದ ಅವಯವಗಳನ್ನು ಚಾಚಿಕೊಂಡು ಮಲಗಿಬಿಟ್ಟರು. ಮತ್ತೆ ಕ್ರೋಧವಶರಾಗಿ ತಮ್ಮ ಭೋಗಮಯ ಶರೀರವನ್ನು ತ್ಯಜಿಸಿಬಿಟ್ಟರು. ॥ ೪೭ ॥

ಯೇಽಹೀಯಂತಾಮುತಃ ಕೇಶಾ ಅಹಯಸ್ತೇಽಂಗ ಜಜ್ಞಿರೇ ।
ಸರ್ಪಾಃ ಪ್ರಸರ್ಪತಃ ಕ್ರೂರಾ ನಾಗಾ ಭೋಗೋರುಕಂಧರಾಃ
॥ ೪೮ ॥

ಆ ದೇಹದಿಂದ ಕೆಳಗೆ ಉದುರಿದ ಕೂದಲುಗಳಿಂದ ಅಹಿಗಳೆಂಬ ಹಾವುಗಳು ಉಂಟಾದವು. ಅವರು ಆ ದೇಹದಿಂದ ಚಲಿಸಿದಾಗ ಕ್ರೂರಸ್ವಭಾವವುಳ್ಳ ಸರ್ಪಗಳೂ ಮತ್ತು ನಾಗಗಳೆಂಬ ಹಾವುಗಳು ಜನಿಸಿದವು. ಅವುಗಳ ದೇಹಗಳು ಹೆಡೆಗಳ ರೂಪದಲ್ಲಿ ಹೆಗಲಿನ ಹತ್ತಿರ ವಿಸ್ತಾರವಾಗಿ ಹರಡಿಕೊಂಡಿದೆ. ॥ ೪೮ ॥

ಸ ಆತ್ಮಾನಂ ಮನ್ಯಮಾನಃ ಕೃತಕೃತ್ಯಮಿವಾತ್ಮಭೂಃ ।
ತದಾ ಮನೂನ್ಸಸರ್ಜಾಂತೇ ಮನಸಾ ಲೋಕಭಾವನಾನ್
॥ ೪೯ ॥

ಒಮ್ಮೆ ಬ್ರಹ್ಮದೇವರಿಗೆ ತಾವು ಕೃತಕೃತ್ಯರಾದಂತೆ ಅನುಭವ ಉಂಟಾಯಿತು. ಆಗ ಅವರು ಸೃಷ್ಟಿಯ ಕೊನೆಯಲ್ಲಿ ತಮ್ಮ ಮನಸ್ಸಿನಿಂದ ಮನುಗಳನ್ನು ಸೃಷ್ಟಿಸಿದರು. ಇವರೆಲ್ಲರೂ ಪ್ರಜೆಗಳನ್ನು ಬೆಳೆಸುವವರಾಗಿರುತ್ತಾರೆ. ॥ ೪೯ ॥

ತೇಭ್ಯಃ ಸೋಽತ್ಯಸೃಜತ್ಸ್ವೀಯಂ ಪುರಂ ಪುರುಷಮಾತ್ಮವಾನ್ ।
ತಾನ್‌ದೃಷ್ಟ್ವಾ ಯೇ ಪುರಾ ಸೃಷ್ಟಾಃ ಪ್ರಶಶಂಸುಃ ಪ್ರಜಾಪತಿಮ್
॥ ೫೦ ॥

ಪ್ರಶಸ್ತವಾದ ಮನಸ್ಸುಳ್ಳ ಬ್ರಹ್ಮದೇವರು ಅವರಿಗಾಗಿ ತನ್ನ ಪುರುಷಾಕಾರ ಶರೀರವನ್ನು ತ್ಯಜಿಸಿದರು. ಮನುಗಳನ್ನು ಕಂಡು ಅವರಿಗಿಂತಲೂ ಮೊದಲು ಸೃಷ್ಟಿಸಲ್ಪಟ್ಟ ದೇವತೆಗಳೂ, ಗಂಧರ್ವರೂ ಮುಂತಾದವರು ಬ್ರಹ್ಮದೇವರನ್ನು ಸ್ತುತಿಸತೊಡಗಿದರು. ॥ ೫೦ ॥

ಅಹೋ ಏತಜ್ಜಗತ್ಸ್ರಷ್ಟಃ ಸುಕೃತಂ ಬತ ತೇ ಕೃತಮ್ ।
ಪ್ರತಿಷ್ಠಿತಾಃ ಕ್ರಿಯಾ ಯಸ್ಮಿನ್ ಸಾಕಮನ್ನಮದಾಮಹೇ
॥ ೫೧ ॥

'ವಿಶ್ವಸೃಷ್ಟಿಯನ್ನು ಮಾಡಿದ ದೇವರೇ! ನಿಮ್ಮ ಈ ಮನುಗಳ ಸೃಷ್ಟಿಯು ಬಹಳ ಸುಂದರವಾಗಿದೆ. ಇದರಲ್ಲಿ ಅಗ್ನಿಹೋತ್ರಾದಿ ಎಲ್ಲ ಕರ್ಮಗಳು ನೆಲೆಗೊಂಡಿವೆ. ಇದರ ಸಹಾಯದಿಂದ ನಾವೂ ಕೂಡ ನಮ್ಮ ಹವಿರ್ಭಾಗವೆಂಬ ಅನ್ನವನ್ನು ಸ್ವೀಕರಿಸಬಲ್ಲೆವು.' ॥ ೫೧ ॥

ತಪಸಾ ವಿದ್ಯಯಾ ಯುಕ್ತೋ ಯೋಗೇನ ಸುಸಮಾಧಿನಾ ।
ಋಷೀನೃಷಿರ್ಹೃಷೀಕೇಶಃ ಸಸರ್ಜಾಭಿಮತಾಃ ಪ್ರಜಾಃ
॥ ೫೨ ॥

ತೇಭ್ಯಶ್ಚೈಕೈಕಶಃ ಸ್ವಸ್ಯ ದೇಹಸ್ಯಾಂಶಮದಾದಜಃ ।
ಯತ್ತತ್ಸಮಾಧಿಯೋಗರ್ಧಿತಪೋವಿದ್ಯಾವಿರಕ್ತಿಮತ್
॥ ೫೩ ॥

ಅನಂತರ ಆದಿಋಷಿಯಾದ ಬ್ರಹ್ಮದೇವರು ಇಂದ್ರಿಯ ಸಂಯಮಪೂರ್ವಕವಾದ ತಪಸ್ಸು, ವಿದ್ಯೆ, ಯೋಗ, ಸಮಾಧಿ ಇವುಗಳಿಂದ ಸಂಪನ್ನರಾಗಿ ತಮ್ಮ ಪ್ರಿಯಸಂತಾನವಾದ ಋಷಿಗಣವನ್ನು ರಚಿಸಿದರು. ಅವರಲ್ಲಿ ಪ್ರತಿಯೊಬ್ಬರಿಗೂ ತಮ್ಮ ಸಮಾಧಿ, ಯೋಗ, ಐಶ್ವರ್ಯ, ತಪಸ್ಸು, ವಿದ್ಯೆ, ವೈರಾಗ್ಯಮಯವಾದ ಶರೀರದ ಅಂಶಗಳನ್ನು ದಯಪಾಲಿಸಿದರು. ॥ ೫೨-೫೩ ॥

*ಇಪ್ಪತ್ತನೆಯ ಅಧ್ಯಾಯವು ಮುಗಿಯಿತು. ॥ ೨೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ವಿಂಶೋಽಧ್ಯಾಯಃ ॥ ೨೦ ॥

# ಇಪ್ಪತ್ತೊಂದನೆಯ ಅಧ್ಯಾಯ

## ಕರ್ದಮರ ತಪಸ್ಸು ಮತ್ತು ಭಗವಂತನ ವರಪ್ರದಾನ

*ವಿದುರ ಉವಾಚ*

ಸ್ವಾಯಂಭುವಸ್ಯ ಚ ಮನೋರ್ವಂಶಃ ಪರಮಸಮ್ಮತಃ ।
ಕಥ್ಯತಾಂ ಭಗವನ್ಯತ್ರ ಮೈಥುನೇನೈಧಿರೇ ಪ್ರಜಾಃ ॥ ೧ ॥

ಪ್ರಿಯವ್ರತೋತ್ತಾನಪಾದೌ ಸುತೌ ಸ್ವಾಯಂಭುವಸ್ಯ ವೈ ।
ಯಥಾಧರ್ಮಂ ಜುಗುಪತುಃ ಸಪ್ತದ್ವೀಪವತೀಂ ಮಹೀಮ್ ॥ ೨ ॥

ತಸ್ಯ ವೈ ದುಹಿತಾ ಬ್ರಹ್ಮನ್ ದೇವಹೂತೀತಿ ವಿಶ್ರುತಾ ।
ಪತ್ನೀ ಪ್ರಜಾಪತೇರುಕ್ತಾ ಕರ್ದಮಸ್ಯ ತ್ವಯಾನಘ ॥ ೩ ॥

ತಸ್ಯಾಂ ಸ ವೈ ಮಹಾಯೋಗೀ ಯುಕ್ತಾಯಾಂ ಯೋಗಲಕ್ಷಣೈಃ ।
ಸಸರ್ಜ ಕತಿಧಾ ವೀರ್ಯಂ ತನ್ಮೇ ಶುಶ್ರೂಷವೇ ವದ ॥ ೪ ॥

ರುಚಿರ್ಯೋ ಭಗವಾನ್ ಬ್ರಹ್ಮನ್-
ದಕ್ಷೋ ವಾ ಬ್ರಹ್ಮಣಃ ಸುತಃ ।
ಯಥಾ ಸಸರ್ಜ ಭೂತಾನಿ
ಲಬ್ಧ್ವಾ ಭಾರ್ಯಾಂ ಚ ಮಾನವೀಮ್ ॥ ೫ ॥

*ಮೈತ್ರೇಯ ಉವಾಚ*

ಪ್ರಜಾಃ ಸೃಜೇತಿ ಭಗವಾನ್ ಕರ್ದಮೋ ಬ್ರಹ್ಮಣೋದಿತಃ ।
ಸರಸ್ವತ್ಯಾಂ ತಪಸ್ತೇಪೇ ಸಹಸ್ರಾಣಾಂ ಸಮಾ ದಶ ॥ ೬ ॥

ತತಃ ಸಮಾಧಿಯುಕ್ತೇನ ಕ್ರಿಯಾಯೋಗೇನ ಕರ್ದಮಃ ।
ಸಂಪ್ರಪೇದೇ ಹರಿಂ ಭಕ್ತ್ಯಾ ಪ್ರಪನ್ನವರದಾಶುಷಮ್ ॥ ೭ ॥

ತಾವತ್ಪ್ರಸನ್ನೋ ಭಗವಾನ್ ಪುಷ್ಕರಾಕ್ಷಃ ಕೃತೇ ಯುಗೇ ।
ದರ್ಶಯಾಮಾಸ ತಂ ಕ್ಷತ್ತಃ ಶಾಬ್ದಂ ಬ್ರಹ್ಮ ದಧದ್ವಪುಃ ॥ ೮ ॥

ಸ ತಂ ವಿರಜಮರ್ಕಾಭಂ ಸಿತಪದ್ಮೋತ್ಪಲಸ್ರಜಮ್ ।
ಸ್ನಿಗ್ಧನೀಲಾಲಕವ್ರಾತವಕ್ತ್ರಾಬ್ಜಂ ವಿರಜೋಽಂಬರಮ್ ॥ ೯ ॥

ಕಿರೀಟಿನಂ ಕುಂಡಲಿನಂ ಶಂಖಚಕ್ರಗದಾಧರಮ್ ।
ಶ್ವೇತೋತ್ಪಲಕ್ರೀಡನಕಂ ಮನಃಸ್ಪರ್ಶಸ್ಮಿತೇಕ್ಷಣಮ್ ॥ ೧೦ ॥

**ವಿದುರನು ಕೇಳಿದನು** – ಪೂಜ್ಯ ಮೈತ್ರೇಯರೇ! ಸ್ವಾಯಂಭುವ ಮನುವಿನ ವಂಶವು ಅತ್ಯಂತ ಆದರಣೀಯವೆಂದು ಕೇಳಿದ್ದೇನೆ. ಅದರಲ್ಲಿ ಮೈಥುನಧರ್ಮದ ಮೂಲಕ ಪ್ರಜೆಯ ವೃದ್ಧಿಯಾಗಿತ್ತು. ಈಗ ನೀವು ನನಗೆ ಅವನ ಕಥೆಯನ್ನು ಹೇಳಿರಿ. ॥ ೧ ॥ ಪೂಜ್ಯರೇ! ಸ್ವಾಯಂಭುವ ಮನುವಿನ ಪುತ್ರರಾದ ಪ್ರಿಯವ್ರತ ಮತ್ತು ಉತ್ತಾನಪಾದ ಇವರು ಸಪ್ತದ್ವೀಪಗಳಿಂದ ಒಡಗೂಡ ಪೃಥ್ವಿಯನ್ನು ಧರ್ಮದಿಂದ ಆಳಿದರು ಹಾಗೂ ಖ್ಯಾತಳಾದ ಪುತ್ರಿ ದೇವಹೂತಿ ಎಂಬುವಳು ಕರ್ದಮ ಪ್ರಜಾಪತಿಯನ್ನು ವಿವಾಹವಾಗಿದ್ದಳು ಎಂದು ತಾವು ತಿಳಿಸಿರುವಿರಿ. ॥ ೨-೩ ॥ ದೇವಹೂತಿಯು ಯಮ-ನಿಯಮಗಳೇ ಮುಂತಾದ ಯೋಗಲಕ್ಷಣಗಳಿಂದ ಸಂಪನ್ನಳಾಗಿದ್ದಳು. ಅವಳು ಕರ್ದಮ ಪ್ರಜಾಪತಿಯಿಂದ ಎಷ್ಟು ಸಂತಾನಗಳನ್ನು ಪಡೆದಳು? ಎಂಬುದನ್ನು ತಿಳಿಯಲು ಇಚ್ಛೆಪಡುತ್ತಿದ್ದೇನೆ. ಈ ಎಲ್ಲ ಪ್ರಸಂಗವನ್ನು ನನಗೆ ತಿಳಿಸುವವರಾಗಿರಿ. ॥ ೪ ॥ ಹಾಗೆಯೇ ಭಗವಾನ್ ರುಚಿಯೂ ಮತ್ತು ಬ್ರಹ್ಮಪುತ್ರನಾದ ದಕ್ಷಪ್ರಜಾಪತಿಯೂ ಸ್ವಾಯಂಭುವ ಮನುವಿನ ಪುತ್ರಿಯರನ್ನು ವಿವಾಹವಾಗಿ ಅವರಿಂದ ಎಷ್ಟೆಷ್ಟು ಸಂತಾನಗಳನ್ನು ಪಡೆದರು? ಇದೆಲ್ಲ ಚರಿತ್ರೆಯನ್ನೂ ನನಗೆ ಹೇಳುವವರಾಗಿರಿ. ॥ ೫ ॥

**ಶ್ರೀಮೈತ್ರೇಯ ಮಹರ್ಷಿಗಳು ಹೇಳುತ್ತಾರೆ** – ವಿದುರನೇ! ಬ್ರಹ್ಮದೇವರು ಪೂಜ್ಯರಾದ ಕರ್ದಮರಿಗೆ – 'ನೀನು ಸಂತಾನವನ್ನು ಪಡೆ' ಎಂದು ಆಜ್ಞಾಪಿಸಿದಾಗ ಅವರು ಸರಸ್ವತಿನದೀತೀರದಲ್ಲಿ ಹತ್ತುಸಾವಿರ ವರ್ಷ ತಪಸ್ಸು ಮಾಡಿದರು. ॥ ೬ ॥ ಕರ್ದಮ ಪ್ರಜಾಪತಿಗಳು ಏಕಾಗ್ರಚಿತ್ತದಿಂದ ಭಕ್ತಿಪೂರ್ವಕ ಪೂಜೋಪಚಾರಾದಿಗಳಿಂದ (ಕ್ರಿಯಾಯೋಗ) ಶರಣಾಗತರಿಗೆ ವರದಾಯಕನಾದ ಶ್ರೀಹರಿಯನ್ನು ಆರಾಧಿಸತೊಡಗಿದರು. ॥ ೭ ॥ ಆಗ ಕೃತ ಯುಗದ ಪ್ರಾರಂಭದಲ್ಲಿ ಪುಂಡರೀಕಾಕ್ಷನಾದ ಭಗವಾನ್ ಶ್ರೀಹರಿಯು ಅವರ ತಪಸ್ಸಿನಿಂದ ಸಂತುಷ್ಟನಾಗಿ ತನ್ನ ಶಬ್ದಬ್ರಹ್ಮಮಯ ರೂಪದಿಂದ ಸಾಕಾರನಾಗಿ ಅವರಿಗೆ ದರ್ಶನವನ್ನು ಕರುಣಿಸಿದನು. ॥ ೮ ॥

ಕರ್ದಮರಿಗೆ ದರ್ಶನವಿತ್ತ ಭಗವಂತನ ಶ್ರೀವಿಗ್ರಹವು ಸೂರ್ಯನಂತೆ ತೇಜಸ್ವಿಯಾಗಿತ್ತು. ಅವನು ಕಂಠದಲ್ಲಿ ಕಮಲ ಮತ್ತು ಕುಂದ ಪುಷ್ಪಗಳ ಮಾಲೆಗಳನ್ನು ಧರಿಸಿದ್ದನು. ಮುಖಕಮಲವು ನುಣುಪಾದ ನೀಲಿಬಣ್ಣದ ಮುಂಗುರುಳುಗಳಿಂದ ಕಂಗೊಳಿಸುತ್ತಿತ್ತು. ಸ್ವಾಮಿಯು ನಿರ್ಮಲವಾದ ವಸ್ತ್ರಗಳನ್ನು ಧರಿಸಿದ್ದನು. ॥ ೯ ॥ ಅವನ ತಲೆಯ ಮೇಲೆ ಥಳ-ಥಳಿಸುವ ಸ್ವರ್ಣಕಿರೀಟವೂ, ಕಿವಿಗಳಲ್ಲಿ ಹೊಳೆಯುತ್ತಿರುವ ಕರ್ಣಕುಂಡಲಗಳು, ಕರಕಮಲಗಳಲ್ಲಿ ಶಂಖ, ಚಕ್ರ, ಗದೆ ಮುಂತಾದ ದಿವ್ಯಾಯುಧಗಳು ವಿರಾಜಿಸುತ್ತಿದ್ದವು. ಒಂದು ಕೈಯಲ್ಲಿ ಬಿಳಿಯ ಲೀಲಾಕಮಲವು ಆಡುತ್ತಿತ್ತು. ಪ್ರಭುವಿನ ಮಧುರ ಮಂದಹಾಸದಿಂದ ಶೋಭಿಸುತ್ತಿದ್ದ ದೃಷ್ಟಿಯು ಚಿತ್ತವನ್ನು ಅಪಹರಿಸುವಂತಿತ್ತು. ॥ ೧೦ ॥

ವಿನ್ಯಸ್ತಚರಣಾಂಭೋಜಮಂಸದೇಶೇ ಗರುತ್ಮತಃ ।
ದೃಷ್ಟ್ವಾ ಖೇಽವಸ್ಥಿತಂ ವಕ್ಷಃಶ್ರಿಯಂ ಕೌಸ್ತುಭಕಂಧರಮ್ ॥ ೧೧ ॥

ಜಾತಹರ್ಷೋಽಪತನ್ಮೂರ್ಧ್ನಾ ಕ್ಷಿತೌ ಲಬ್ಧಮನೋರಥಃ ।
ಗೀರ್ಭಿಸ್ತ್ವಭ್ಯಗೃಣಾತ್ಪ್ರೀತಿಸ್ವಭಾವಾತ್ಮಾ ಕೃತಾಂಜಲಿಃ ॥ ೧೨ ॥

ಋಷಿರುವಾಚ

ಜುಷ್ಟಂ ಬತಾದ್ಯಾಖಿಲಸತ್ತ್ವರಾಶೇಃ
ಸಾಂಸಿದ್ಧ್ಯಮಕ್ಷ್ಣೋಸ್ತವ ದರ್ಶನಾನ್ನಃ ।
ಯದ್ದರ್ಶನಂ ಜನ್ಮಭಿರೀಡ್ಯ ಸದ್ಭಿ-
ರಾಶಾಸತೇ ಯೋಗಿನೋ ರೂಢಯೋಗಾಃ ॥ ೧೩ ॥

ಯೇ ಮಾಯಯಾ ತೇ ಹತಮೇಧಸಸ್ತ್ವತ್
ಪಾದಾರವಿಂದಂ ಭವಸಿಂಧುಪೋತಮ್ ।
ಉಪಾಸತೇ ಕಾಮಲವಾಯ ತೇಷಾಂ
ರಾಸೀಶ ಕಾಮಾನ್ನಿರಯೇಽಪಿ ಯೇ ಸ್ಯುಃ ॥ ೧೪ ॥

ತಥಾ ಸ ಚಾಹಂ ಪರಿವೋಢುಕಾಮಃ
ಸಮಾನಶೀಲಾಂ ಗೃಹಮೇಧಧೇನುಮ್ ।
ಉಪೇಯಿವಾನ್ಮೂಲಮಶೇಷಮೂಲಂ
ದುರಾಶಯಃ ಕಾಮದುಘಾಂಘ್ರಿಪಸ್ಯ ॥ ೧೫ ॥

ಪ್ರಜಾಪತೇಸ್ತೇ ವಚಸಾಧೀಶ ತಂತ್ಯಾ
ಲೋಕಃ ಕಿಲಾಯಂ ಕಾಮಹತೋಽನುಬದ್ಧಃ ।
ಅಹಂ ಚ ಲೋಕಾನುಗತೋ ವಹಾಮಿ
ಬಲಿಂ ಚ ಶುಕ್ಲಾನಿಮಿಷಾಯ ತುಭ್ಯಮ್ ॥ ೧೬ ॥

ಲೋಕಾಂಶ್ಚ ಲೋಕಾನುಗತಾನ್ಪಶೂಂಶ್ಚ
ಹಿತ್ವಾ ಶ್ರಿತಾಸ್ತೇ ಚರಣಾತಪತ್ರಮ್ ।
ಪರಸ್ಪರಂ ತ್ವದ್ಗುಣವಾದಸೀಧು-
ಪೀಯೂಷನಿರ್ಯಾಪಿತದೇಹಧರ್ಮಾಃ ॥ ೧೭ ॥

ನ ತೇಽಜರಾಕ್ಷಭ್ರಮಿರಾಯುರೇಷಾಂ
ತ್ರಯೋದಶಾರಂ ತ್ರಿಶತಂ ಷಷ್ಟಿಪರ್ವ ।
ಷಣ್ನೇಮ್ಯನಂತಚ್ಛದಿ ಯತ್ತ್ರಿಣಾಭಿ
ಕರಾಲಸ್ರೋತೋ ಜಗದಾಚ್ಛಿದ್ಯ ಧಾವತ್ ॥ ೧೮ ॥

ಅವನ ಪಾದಾರವಿಂದಗಳು ಗರುಡದೇವನ ಹೆಗಲ ಮೇಲೆ ವಿರಾಜಿಸುತ್ತಿದ್ದವು. ವಕ್ಷಸ್ಥಳದಲ್ಲಿ ಶ್ರೀಲಕ್ಷ್ಮೀ ದೇವಿಯೂ, ಕಂಠದಲ್ಲಿ ಕೌಸ್ತುಭ ಮಣಿಯೂ ಶೋಭಿಸುತ್ತಿತ್ತು. ಆಕಾಶದಲ್ಲಿ ಬೆಳಗುತ್ತಿದ್ದ ಭಗವಂತನ ಮನೋಹರ ಮೂರ್ತಿಯನ್ನು ದರ್ಶನ ಮಾಡುತ್ತಾ ಕರ್ದಮರು ಪರಮಾನಂದದಲ್ಲಿ ಮುಳುಗಿ, ಸಕಲ ಕಾಮನೆಗಳೂ ಈಡೇರಿದಂತೆ ಭಾವಿಸಿದರು. ಅವರು ಆನಂದ ತುಂಬಿದ ಹೃದಯದಿಂದ ಭಗವಂತನಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾ ಪ್ರೇಮಪೂರ್ಣವಾದ ಚಿತ್ತದಿಂದ ಕೈಮೋಡಿಸಿಕೊಂಡು ಸವಿಮಾತುಗಳಿಂದ ಸ್ವಾಮಿಯನ್ನು ಸ್ತುತಿಸತೊಡಗಿದರು. ॥ ೧೧-೧೨ ॥

**ಕರ್ದಮರು ನುಡಿದರು** – ಸ್ತುತಿಸಲು ಯೋಗ್ಯವಾದ ಪರಮೇಶ್ವರಾ ! ನೀನು ಸಂಪೂರ್ಣ ಸತ್ತ್ವಗುಣದ ಆಧಾರನಾಗಿರುವೆ ! ಯೋಗಿಗಳು ಉತ್ತರೋತ್ತರ ಶುಭಯೋನಿಗಳಲ್ಲಿ ಜನಿಸಿ, ಕೊನೆಗೆ ಯೋಗಾರೂಢರಾಗಿ ಯಾರನ್ನು ದರ್ಶಿಸಲು ಬಯಸುತ್ತಾರೋ, ಅಂತಹ ನಿನ್ನ ಅದೇ ದರ್ಶನವನ್ನು ಪಡೆದು ಇಂದು ನನ್ನ ಕಣ್ಣುಗಳು ಸಫಲವಾದುವು. ॥ ೧೩ ॥ ನಿನ್ನ ಚರಣಕಮಲಗಳು ಭವಸಾಗರವನ್ನು ದಾಟಲು ನಾವೆಯಾಗಿವೆ. ಅಂತಹ ಪಾದಾರವಿಂದಗಳನ್ನು ನಿನ್ನ ಮಾಯೆಯಿಂದ ವಿವೇಕವನ್ನು ಕಳೆದುಕೊಂಡವರು ಮಾತ್ರ ತುಚ್ಛವೂ, ಕ್ಷಣಿಕವೂ ಆದ ವಿಷಯಸುಖಗಳಿಗಾಗಿ ಆಶ್ರಯಿಸುತ್ತಾರೆ. ಆ ಸುಖಗಳು ನರಕದಲ್ಲೂ ದೊರೆಯಬಲ್ಲವು. ಆದರೆ ಸ್ವಾಮಿ ! ನೀನಾದರೋ ಅವರಿಗೆ ಆ ವಿಷಯ ಭೋಗಗಳನ್ನೂ ಕೊಡುತ್ತೀಯೆ. ॥ ೧೪ ॥ ಪ್ರಭುವೇ ! ನೀನು ಕಲ್ಪವೃಕ್ಷನಾಗಿರುವೆ. ನಿನ್ನ ಚರಣಗಳು ಸಮಸ್ತ ಮನೋರಥಗಳನ್ನು ಪೂರ್ಣಗೊಳಿಸುವಂತಹವುಗಳು. ನನ್ನ ಹೃದಯವು ಕಾಮದಿಂದ ಕಲುಷಿತವಾಗಿದೆ. ನಾನು – ನನಗೆ ಅನುರೂಪಳಾಗಿ, ಗೃಹಸ್ಥಧರ್ಮವನ್ನು ಪಾಲನೆ ಮಾಡಲು ಸಹಾಯಕಳಾದ ಶೀಲವತಿಯಾದ ಕನ್ಯೆಯನ್ನು ಪತ್ನಿಯನ್ನಾಗಿ ಪಡೆಯಲಿಕ್ಕಾಗಿಯೇ ನಿನ್ನ ಅಡಿದಾವರೆಗಳಲ್ಲಿ ಶರಣು ಹೊಂದಿರುವೆನು. ॥ ೧೫ ॥ ಸರ್ವೇಶ್ವರಾ ! ನೀನು ಸಮಸ್ತ ಲೋಕಗಳ ಅಧಿಪತಿಯಾಗಿರುವೆ. ನಾನಾ ಪ್ರಕಾರದ ಕಾಮನೆಗಳಿಗೆ ಸಿಲುಕಿಕೊಂಡ ಈ ಲೋಕವು ನಿನ್ನ ವೇದವಾಣಿರೂಪವಾದ ಹಗ್ಗದಿಂದ ಬಂಧಿತವಾಗಿದೆ. ಧರ್ಮಮೂರ್ತಿಯೇ ! ಅದನ್ನೇ ಅನುಸರಿಸುತ್ತಾ ನಾನೂ ಕೂಡ ಕಾಲಸ್ವರೂಪನಾದ ನಿನಗೆ ಆಜ್ಞಾಪಾಲನರೂಪೀ ಪೂಜೆ-ಉಪಹಾರಾದಿಗಳನ್ನು ಸಮರ್ಪಿಸುತ್ತಿದ್ದೇನೆ. ॥ ೧೬ ॥

ಮಹಾಪ್ರಭೋ ! ವಿಷಯಸುಖಗಳಲ್ಲಿ ಆಸಕ್ತರಾದ ಜನರನ್ನೂ, ಅವರ ಮಾರ್ಗಾವಲಂಬಿಯಾದ ನನ್ನಂತಹ ಕರ್ಮಜಡರಾದ ಪಶುಗಳನ್ನೂ, ನಿನ್ನ ಏಕಾಂತಭಕ್ತರು ಸ್ವಲ್ಪವೂ ಲೆಕ್ಕಿಸದೆ ನಿನ್ನ ಪಾದಾರವಿಂದಗಳ ನೆರಳನ್ನೆ ಆಶ್ರಯಿಸುತ್ತಾರೆ. ನಿನ್ನ ಗುಣ-ಕೀರ್ತನರೂಪವಾದ ದಿವ್ಯೋನ್ಮಾದವನ್ನುಂಟುಮಾಡುವ ಸುಧೆಯನ್ನು ಪಾನಮಾಡುತ್ತಾ ಹಸಿವು ಬಾಯಾರಿಕೆಗಳೇ ಮುಂತಾದ ದೇಹಧರ್ಮಗಳನ್ನು ಶಮನಗೊಳಿಸಿಕೊಳ್ಳುತ್ತಾರೆ. ॥ ೧೭ ॥ ಸ್ವಾಮಿ ! ಈ ಕಾಲಚಕ್ರವು ತುಂಬಾ ಬಲಿಷ್ಠವಾದುದು. ಸಾಕ್ಷಾತ್ ಪರಬ್ರಹ್ಮವೇ ಇದರ ಅಚ್ಚು. ಅಧಿಕಮಾಸದಿಂದ ಕೂಡಿದ ಹದಿಮೂರು ತಿಂಗಳುಗಳು ಇದರ ಅರೆ(ಕಾಲು)ಗಳು. ಮುನ್ನೂರಅರವತ್ತು ದಿವಸಗಳು ಇದರ ಗಿಣ್ಣು

ಏಕಃ ಸ್ವಯಂ ಸಂಜಗತಃ ಸಿಸೃಕ್ಷಯಾ-
ದ್ವಿತೀಯಯಾऽऽತ್ಮನ್ನಧಿಯೋಗಮಾಯಯಾ ।
ಸೃಜಸ್ಯದಃ ಪಾಸಿ ಪುನರ್ಗ್ರಸಿಷ್ಯಸೇ
ಯಥೋರ್ಣನಾಭಿರ್ಭಗವನ್ಸ್ವಶಕ್ತಿಭಿಃ ॥ ೧೯ ॥

ನೈತದ್ಬತಾಧೀಶ ಪದಂ ತವೇಪ್ಸಿತಂ
ಯನ್ಮಾಯಯಾ ನಸ್ತನುಷೇ ಭೂತಸೂಕ್ಷ್ಮಮ್ ।
ಅನುಗ್ರಹಾಯಾಸ್ತ್ವಪಿ ಯರ್ಹಿ ಮಾಯಯಾ
ಲಸತ್ತುಲಸ್ಯಾ ತನುವಾ ವಿಲಕ್ಷಿತಃ ॥ ೨೦ ॥

ತಂ ತ್ವಾನುಭೂತ್ಯೋಪರತಕ್ರಿಯಾರ್ಥಂ
ಸ್ವಮಾಯಯಾ ವರ್ತಿತಲೋಕತಂತ್ರಮ್ ।
ನಮಾಮ್ಯಭೀಕ್ಷ್ಣಂ ನಮನೀಯಪಾದ-
ಸರೋಜಮಲ್ಪೀಯಸಿ ಕಾಮವರ್ಷಮ್ ॥ ೨೧ ॥

*ಋಷಿರುವಾಚ*

ಇತ್ಯವ್ಯಲೀಕಂ ಪ್ರಣುತೋऽಬ್ಜನಾಭ-
ಸ್ತಮಾಬಭಾಷೇ ವಚಸಾಮೃತೇನ ।
ಸುಪರ್ಣಪಕ್ಷೋಪರಿ ರೋಚಮಾನಃ
ಪ್ರೇಮಸ್ಮಿತೋದ್ವೀಕ್ಷಣವಿಭ್ರಮದ್ಭ್ರೂಃ ॥ ೨೨ ॥

*ಶ್ರೀಭಗವಾನುವಾಚ*

ವಿದಿತ್ವಾ ತವ ಚೈತ್ಯಂ ಮೇ ಪುರೈವ ಸಮಯೋಜಿ ತತ್ ।
ಯದರ್ಥಮಾತ್ಮನಿಯಮೈಸ್ತ್ವಯೈವಾಹಂ ಸಮರ್ಚಿತಃ ॥ ೨೩ ॥

ನ ವೈ ಜಾತು ಮೃಷೈವ ಸ್ಯಾತ್ಪ್ರಜಾಧ್ಯಕ್ಷ ಮದರ್ಹಣಮ್ ।
ಭವದ್ವಿಧೇಷ್ವ ತಿತರಾಂ ಮಯಿ ಸಂಗೃಭಿತಾತ್ಮನಾಮ್ ॥ ೨೪ ॥

ಪ್ರಜಾಪತಿಸುತಃ ಸಮ್ರಾಣ್ಮನುರ್ವಿಖ್ಯಾತಮಂಗಲಃ ।
ಬ್ರಹ್ಮಾವರ್ತಂ ಯೋऽಧಿವಸನ್ ಶಾಸ್ತಿ ಸಪ್ತಾರ್ಣವಾಂ ಮಹೀಮ್ ॥ ೨೫ ॥

ಸ ಚೇಹ ವಿಪ್ರ ರಾಜರ್ಷಿರ್ಮಹಿಷ್ಯಾ ಶತರೂಪಯಾ ।
ಆಯಾಸ್ಯತಿ ದಿದೃಕ್ಷುಸ್ತ್ವಾಂ ಪರಶ್ವೋ ಧರ್ಮಕೋವಿದಃ ॥ ೨೬ ॥

ಗಳು. ಇದು ಆರು ಋತುಗಳೆಂಬ ಅಂಚುಪಟ್ಟಿಗಳಿಂದಲೂ, ಅನಂತವಾದ ಕಲಾ-ಕಾಷ್ಠಾದಿ ಪತ್ರಾಕಾರವಾದ ಧಾರೆಗಳಿಂದಲೂ, ಮೂರು ಚಾತುರ್ಮಾಸ್ಯ ಇದರ ಆಧಾರಭೂತ ನಾಭಿಯಿಂದಲೂ ಕೂಡಿದೆ. ಇದು ಅತ್ಯಂತ ವೇಗವುಳ್ಳ ಸಂವತ್ಸರರೂಪೀ ಕಾಲಚಕ್ರವು ಜಗತ್ತಿನ ಆಯುಷ್ಯನ್ನು ಕತ್ತರಿಸುತ್ತಾ ಸುತ್ತುತ್ತಿದೆ. ಆದರೆ ಇದು ನಿನ್ನ ಏಕಾಂತಭಕ್ತರ ಆಯುಸ್ಸನ್ನು ಕಳೆಯಲಾರದು. ॥ ೧೮ ॥ ಭಗವಂತನೇ! ಜೇಡರ ಹುಳುವು ತನ್ನ ಬಲೆಯನ್ನು ತಾನೇ ಹೊರಹೊಮ್ಮಿಸಿ, ಅದನ್ನು ರಕ್ಷಿಸುತ್ತಾ ಕೊನೆಗೆ ನುಂಗಿಹಾಕುತ್ತದೆ. ಹಾಗೆಯೇ ನೀನೊಬ್ಬನೇ ನಿನ್ನಿಂದ ಅಭಿನ್ನವಾದ ಯೋಗಮಾಯೆಯನ್ನು ಅವಲಂಬಿಸಿ ಆದರಿಂದ ವ್ಯಕ್ತವಾದ ನಿನ್ನ ಸತ್ತ್ವಾದಿಶಕ್ತಿಗಳಿಂದ ಈ ಜಗತ್ತನ್ನು ಸೃಷ್ಟಿಸಿ, ರಕ್ಷಿಸಿ, ಲಯಗೊಳಿಸುತ್ತೀಯೆ. ॥ ೧೯ ॥ ಪ್ರಭೋ! ಈಗ ನೀನು ತನ್ನ ತುಲಸೀಮಾಲೆಯಿಂದ ಅಲಂಕೃತವಾದ, ಮಾಯೆಯಿಂದ ಪರಿಚ್ಛಿನ್ನನಂತೆ ಕಂಡುಬರುವ ಸಗುಣಮೂರ್ತಿಯಾಗಿ ದರ್ಶನವನ್ನು ನನಗೆ ದಯಪಾಲಿಸಿರುವೆ. ನೀನು ನಮ್ಮಂತಹ ಭಕ್ತರಿಗೆ ಕರುಣಿಸುವ ಶಬ್ದಾದಿ ವಿಷಯ-ಸುಖಗಳು ಮಾಯಿಕವಾಗಿದ್ದರೂ, ನಿನಗೆ ಇಷ್ಟವಿಲ್ಲದಿದ್ದರೂ, ಪರಿಣಾಮದಲ್ಲಿ ನಮಗೆ ಶುಭವೇ ಉಂಟಾಗುವಂತೆ ಇಂತಹ ಐಹಿಕಸುಖಗಳನ್ನು ಕೊಡುವವನಾಗು. ॥ ೨೦ ॥

ಸ್ವಾಮಿ! ನೀನು ಸ್ವರೂಪತಃ ನಿಷ್ಕ್ರಿಯನಾಗಿದ್ದರೂ ಮಾಯಾಶಕ್ತಿಯಿಂದ ಇಡೀ ಪ್ರಪಂಚದ ವ್ಯವಹಾರಗಳನ್ನು ನಡೆಸುತ್ತಿದ್ದೀಯೆ. ಸ್ವಲ್ಪವೇ ಉಪಾಸನೆ ಮಾಡುವವರ ಮೇಲೆಯೂ ಕೂಡ ನೀನು ಬಯಸಿದ ಎಲ್ಲ ವಸ್ತುಗಳನ್ನು ಮಳೆಗರೆಯುತ್ತಾ ಇರುತ್ತೀಯೆ. ನಿನ್ನ ವಂದನೀಯವಾದ ಚರಣಕಮಲಗಳಿಗೆ ನಾನು ಮತ್ತೆ-ಮತ್ತೆ ನಮಸ್ಕರಿಸುತ್ತಿದ್ದೇನೆ. ॥ ೨೧ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಕರ್ದಮರು ಹೀಗೆ ನಿಷ್ಕಪಟಭಾವದಿಂದ ಭಗವಂತನನ್ನು ಸ್ತೋತ್ರಮಾಡಲು ಸ್ವಾಮಿಯು ಅತ್ಯಂತ ಪ್ರಸನ್ನನಾದನು. ಗರುಡದೇವನ ಹೆಗಲಮೇಲೆ ವಿರಾಜಿಸುತ್ತಿರುವ ಭಗವಂತನು ಪ್ರೇಮಪೂರ್ಣವಾದ ಕಿರುನಗೆಯನ್ನು ಸೂಸುತ್ತಾ, ಪ್ರೇಮತುಂಬಿದ ದೃಷ್ಟಿಯನ್ನು ಬೀರುತ್ತಾ ಅಮೃತಮಯ ವಚನಗಳಿಂದ ಕರ್ದಮರಿಗೆ ಇಂತೆಂದನು. ॥ ೨೨ ॥

**ಶ್ರೀಭಗವಂತನು ಹೇಳಿದನು** – ಮಹರ್ಷಿಯೇ! ಯಾವ ಪ್ರಯೋಜನಕ್ಕಾಗಿ ನೀನು ಆತ್ಮಸಂಯಮಾದಿಗಳ ಮೂಲಕ ನನ್ನನ್ನು ಆರಾಧಿಸಿರುವೆಯೋ, ಆ ನಿನ್ನ ಹೃದಯದ ಭಾವವನ್ನು ಅರಿತವನಾದ ನಾನು ಮೊದಲಿನಿಂದಲೇ ಅದರ ವ್ಯವಸ್ಥೆ ಮಾಡಿರುವೆನು. ॥ ೨೩ ॥ ಪ್ರಜಾಪತಿಯೇ! ನನ್ನನ್ನು ಕುರಿತು ಮಾಡಿದ ಪೂಜೆಯು ಎಂದಿಗೂ ವಿಫಲವಾಗುವುದಿಲ್ಲ. ಏಕಾಂತಭಕ್ತಿಯಿಂದ ನನ್ನಲ್ಲೇ ಚಿತ್ತವನ್ನು ತೊಡಗಿಸಿರುವ ನಿನ್ನಂತಹ ಮಹಾತ್ಮರು ಮಾಡಿದ ಉಪಾಸನೆಗಾದರೋ ಅತ್ಯಧಿಕವಾದ ಫಲವು ಸಿಕ್ಕಿಯೇ ಸಿಕ್ಕುವುದು. ॥ ೨೪ ॥ ಬ್ರಹ್ಮದೇವರ ಸುಪುತ್ರನಾದ ಸ್ವಾಯಂಭುವಮನು ಚಕ್ರವರ್ತಿಯು ಸದಾಚಾರ ಸಂಪನ್ನನಾಗಿ ಬ್ರಹ್ಮಾವರ್ತದಲ್ಲಿದ್ದು ಸಪ್ತ ಸಮುದ್ರಗಳಿಂದ ಕೂಡಿದ ಇಡೀ ಭೂಮಂಡಲವನ್ನು ಈಗ ಆಳುತ್ತಿದ್ದಾನೆ. ॥ ೨೫ ॥ ವಿಪ್ರಶ್ರೇಷ್ಠನೇ! ಆ ಪರಮಧರ್ಮಜ್ಞನಾದ ಮಹಾರಾಜನು ತನ್ನ ಪತ್ನಿಯಾದ ಶತರೂಪಾದೇವಿಯೊಂದಿಗೆ ನಿನ್ನನ್ನು ಭೆಟ್ಟಿಯಾಗಲು ನಾಳಿದ್ದು ಇಲ್ಲಿಗೆ ಬರುವನು. ॥ ೨೬ ॥

ಆತ್ಮಜಾಮಸಿತಾಪಾಂಗೀಂ ವಯಃಶೀಲಗುಣಾನ್ವಿತಾಮ್ ।
ಮೃಗಯಂತೀಂ ಪತಿಂ ದಾಸ್ಯತ್ಯನುರೂಪಾಯ ತೇ ಪ್ರಭೋ
॥ ೨೭ ॥

ಸಮಾಹಿತಂ ತೇ ಹೃದಯಂ ಯತ್ರೇಮಾನ್ಪರಿವತ್ಸರಾನ್ ।
ಸಾ ತ್ವಾಂ ಬ್ರಹ್ಮನ್ನೃಪವಧೂಃ ಕಾಮಮಾಶು ಭಜಿಷ್ಯತಿ
॥ ೨೮ ॥

ಯಾ ತ ಆತ್ಮಭೃತಂ ವೀರ್ಯಂ ನವಧಾ ಪ್ರಸವಿಷ್ಯತಿ ।
ವೀರ್ಯೇ ತ್ವದೀಯೇ ಋಷಯ ಆಧಾಸ್ಯಂತ್ಯಂಜಸಾಽಽತ್ಮನಃ
॥ ೨೯ ॥

ತ್ವಂ ಚ ಸಮ್ಯಗನುಷ್ಠಾಯ ನಿದೇಶಂ ಮ ಉಶತ್ತಮಃ ।
ಮಯಿ ತೀರ್ಥೀಕೃತಾಶೇಷಕ್ರಿಯಾರ್ಥೋ ಮಾಂ ಪ್ರಪತ್ಸ್ಯಸೇ
॥ ೩೦ ॥

ಕೃತ್ವಾ ದಯಾಂ ಚ ಜೀವೇಷು ದತ್ತ್ವಾ ಚಾಭಯಮಾತ್ಮವಾನ್ ।
ಮಯ್ಯಾತ್ಮಾನಂ ಸಹ ಜಗದ್ದ್ರಕ್ಷ್ಯಸ್ಯಾತ್ಮನಿ ಚಾಪಿ ಮಾಮ್
॥ ೩೧ ॥

ಸಹಾಹಂ ಸ್ವಾಂಶಕಲಯಾ ತ್ವದ್ವೀರ್ಯೇಣ ಮಹಾಮುನೇ ।
ತವ ಕ್ಷೇತ್ರೇ ದೇವಹೂತ್ಯಾಂ ಪ್ರಣೇಷ್ಯೇ ತತ್ತ್ವಸಂಹಿತಾಮ್
॥ ೩೨ ॥

*ಮೈತ್ರೇಯ ಉವಾಚ*

ಏವಂ ತಮನುಭಾಷ್ಯಾಥ ಭಗವಾನ್ಪ್ರತ್ಯಗಕ್ಷಜಃ ।
ಜಗಾಮ ಬಿಂದುಸರಸಃ ಸರಸ್ವತ್ಯಾ ಪರಿಶ್ರಿತಾತ್
॥ ೩೩ ॥

ನಿರೀಕ್ಷತಸ್ತಸ್ಯ ಯಯಾವಶೇಷ-
ಸಿದ್ಧೇಶ್ವರಾಭಿಷ್ಟುತಸಿದ್ಧಮಾರ್ಗಃ ।
ಆಕರ್ಣಯನ್ ಪತ್ರರಥೇಂದ್ರಪಕ್ಷೈ-
ರುಚ್ಚಾರಿತಂ ಸ್ತೋಮಮುದೀರ್ಣಸಾಮ ॥ ೩೪ ॥

ಅಥ ಸಂಪ್ರಸ್ಥಿತೇ ಶುಕ್ಲೇ ಕರ್ದಮೋ ಭಗವಾನೃಷಿಃ ।
ಆಸ್ತೇ ಸ್ಮ ಬಿಂದುಸರಸಿ ತಂ ಕಾಲಂ ಪ್ರತಿಪಾಲಯನ್
॥ ೩೫ ॥

ಮನುಃ ಸ್ಯಂದನಮಾಸ್ಥಾಯ ಶಾತಕೌಂಭಪರಿಚ್ಛದಮ್ ।
ಆರೋಪ್ಯ ಸ್ವಾಂ ದುಹಿತರಂ ಸಭಾರ್ಯಃ ಪರ್ಯಟನ್ಮಹೀಮ್
॥ ೩೬ ॥

ತಸ್ಮಿನ್ ಸುಧನ್ವನ್ನಹನಿ ಭಗವಾನ್ಯತ್ಸಮಾದಿಶತ್ ।
ಉಪಾಯಾದಾಶ್ರಮಪದಂ ಮುನೇಃ ಶಾಂತವ್ರತಸ್ಯ ತತ್
॥ ೩೭ ॥

ಅವನಿಗೆ ರೂಪ, ಯೌವನ, ಗುಣ-ಶೀಲಗಳಿಂದ ಸಂಪನ್ನಳಾಗಿರುವ ಶ್ಯಾಮಲಲೋಚನೆಯಾದ ವಿವಾಹಯೋಗ್ಯಳಾದ ಕನ್ಯೆಯೊಬ್ಬಳಿದ್ದಾಳೆ. ಆಕೆಗೆ ನೀನೇ ಯೋಗ್ಯನಾದ ವರನಾಗಿರುವೆ. ಆಕೆಯನ್ನು ನಿನಗೆ ಆ ರಾಜನು ವಿವಾಹ ಮಾಡಿಕೊಡುವನು. ॥ ೨೭ ॥ ಬ್ರಾಹ್ಮಣೋತ್ತಮನೇ ! ಕಳೆದ ಅನೇಕ ವರ್ಷಗಳಿಂದ ನಿನ್ನ ಮನಸ್ಸು ಎಂತಹ ಭಾರ್ಯೆಯನ್ನು ಪಡೆಯಬೇಕೆಂದು ನೆಲೆಗೊಂಡಿದೆಯೋ, ಅಂತಹ ಪತ್ನಿಯಾಗಿ ಆ ರಾಜಕುಮಾರಿಯು ಬೇಗನೇ ನಿನಗೆ ದೊರೆತು ಯಥೇಷ್ಟವಾಗಿ ಸೇವೆಮಾಡುವಳು. ॥ ೨೮ ॥ ಆಕೆಯು ನಿನ್ನ ವೀರ್ಯವನ್ನು ತನ್ನ ಗರ್ಭದಲ್ಲಿ ಧರಿಸಿಕೊಂಡು ಅದರಿಂದ ಒಂಭತ್ತು ಕನ್ಯೆಯರನ್ನು ಹಡೆಯುವಳು. ಅನಂತರ ಮರೀಚಿಗಳೇ ಮುಂತಾದ ಮಹಾತ್ಮರು ಅವರನ್ನು ವಿವಾಹವಾಗಿ ಅವರಿಂದ ಸಂತಾನಗಳನ್ನು ಪಡೆಯುವರು. ॥ ೨೯ ॥ ನೀನೂ ಕೂಡ ನನ್ನ ಆಜ್ಞೆಯನ್ನು ಚೆನ್ನಾಗಿ ಪಾಲಿಸುವುದರಿಂದ ಚಿತ್ತಶುದ್ಧಿಯಾಗಿ, ಮತ್ತೆ ತನ್ನ ಎಲ್ಲ ಕರ್ಮಫಲಗಳನ್ನು ನನಗೆ ಅರ್ಪಿಸಿ ನನ್ನನ್ನೇ ಪಡೆಯುವೆ. ॥ ೩೦ ॥ ಸಮಸ್ತ ಜೀವಿಗಳಲ್ಲಿಯೂ ದಯೆಯನ್ನು ತೋರಿ, ಅವುಗಳಿಗೆ ಅಭಯದಾನವನ್ನಿತ್ತು ಆತ್ಮಜ್ಞಾನವನ್ನು ಹೊಂದುವೆ. ಮತ್ತೆ ತನ್ನ ಸಹಿತ ಇಡೀ ಜಗತ್ತನ್ನು ನನ್ನಲ್ಲಿಯೂ ಮತ್ತು ನನ್ನನ್ನು ತನ್ನಲ್ಲಿಯೂ ಸ್ಥಿತನೆಂದು ನೋಡುವೆ. ॥ ೩೧ ॥ ಮಹಾಮುನಿಯೇ ! ನಾನೂ ಕೂಡ ನನ್ನ ಅಂಶ-ಕಲೆಯಿಂದ ನಿನ್ನ ವೀರ್ಯದ ಮೂಲಕ ನಿನ್ನ ಪತ್ನಿಯಾದ ದೇವಹೂತಿಯ ಗರ್ಭದಲ್ಲಿ ಅವತರಿಸಿ ಸಾಂಖ್ಯಶಾಸ್ತ್ರದ ಪ್ರವರ್ತಕನಾಗುವೆನು. ॥ ೩೨ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಅಂತರ್ಮುಖವಾದ ಇಂದ್ರಿಯಗಳಿಗೆ ಗೋಚರನಾಗುವ ಶ್ರೀಹರಿಯು ಕರ್ದಮ ಋಷಿಗಳೊಡನೆ ಹೀಗೆ ಸಂಭಾಷಿಸಿ ಸರಸ್ವತೀನದಿಯಿಂದ ಸುತ್ತುವರಿಯಲ್ಪಟ್ಟ ಬಿಂದುಸರೋವರ ತೀರ್ಥದಿಂದ ತನ್ನ ಲೋಕಕ್ಕೆ ಹೊರಟನು. ॥ ೩೩ ॥ ಮಹಾಮಹಿಮರಾದ ಕರ್ದಮರು ನೋಡುತ್ತಿರುವಂತೆಯೇ ಗರುಡನನ್ನೇರಿ ಅವನ ರೆಕ್ಕೆಗಳಿಂದ ಕೇಳಿಬರುತ್ತಿದ್ದ ಸಾಮಗಾನವನ್ನೂ, ಸ್ತೋಮವೆಂಬ ಋಕ್ಕುಗಳ ಸ್ತುತಿಯನ್ನು ಕೇಳುತ್ತಾ ಜ್ಞಾನಸಿದ್ಧರಾದ ಮಹಾಯೋಗಿಗಳು ಶ್ಲಾಘಿಸುತ್ತಿರುವ ಸಿದ್ಧಮಾರ್ಗದಿಂದ ಶ್ರೀಹರಿಯು ವೈಕುಂಠಕ್ಕೆ ತೆರಳಿದನು. ॥ ೩೪ ॥

ವಿದುರನೇ ! ಭಗವಂತನು ಹಾಗೆ ತೆರಳಿದ ಬಳಿಕ ಪೂಜ್ಯರಾದ ಕರ್ದಮರು ಆತನು ಹೇಳಿದ್ದ ಕಾಲವನ್ನು ಎದುರುನೋಡುತ್ತಾ ಬಿಂದುಸರೋವರದ ಬಳಿಯಲ್ಲೇ ಇದ್ದರು. ॥ ೩೫ ॥ ಇತ್ತಕಡೆಯಿಂದ ಸ್ವಾಯಂಭುವಮನುವು ಮಹಾರಾಣಿ ಶತರೂಪಾಳೊಂದಿಗೆ ಸುವರ್ಣಮಯ ರಥದಲ್ಲಿ ತನ್ನ ಮಗಳೊಂದಿಗೆ ಭೂಮಿಯಲ್ಲಿ ಸಂಚರಿಸುತ್ತಾ ಶ್ರೀಭಗವಂತನು ಹೇಳಿದ್ದ ದಿವಸದಲ್ಲಿ ಶಾಂತಿ ಪರಾಯಣ, ವ್ರತನಿಷ್ಠರಾದ ಮಹರ್ಷಿಕರ್ದಮರ ಆಶ್ರಮವನ್ನು ತಲುಪಿದರು. ॥ ೩೬-೩೭ ॥ ಸರಸ್ವತೀನದಿಯ ಜಲದಿಂದ ತುಂಬಿ ತುಳುಕುತ್ತಿದ್ದ ಆ 'ಬಿಂದುಸರೋವರ'ವು ತನ್ನ ಶರಣಾಗತ ಭಕ್ತನಾದ ಕರ್ದಮರ ವಿಷಯದಲ್ಲಿ ಪರಮ ಕರುಣೆತುಂಬಿದ ಕಣ್ಣುಗಳಿಂದ ಭಗವಂತನ ಕಣ್ಣೀರಿನ ಬಿಂದುಗಳು ಉದುರಿದ್ದರಿಂದ ಇದಕ್ಕೆ ಈ ಹೆಸರು ಬಂದಿತ್ತು. ಆ ತೀರ್ಥವು ಅತ್ಯಂತ ಪವಿತ್ರವಾದುದು. ಅದರ

ಯಸ್ಮಿನ್ಭಗವತೋ ನೇತ್ರಾನ್ನ್ಯಪತನ್ನಶ್ರುಬಿಂದವಃ ।
ಕೃಪಯಾ ಸಂಪರೀತಸ್ಯ ಪ್ರಪನ್ನೇऽರ್ಪಿತಯಾ ಭೃಶಮ್
॥ ೩೮ ॥

ತದ್ವೈ ಬಿಂದುಸರೋ ನಾಮ ಸರಸ್ವತ್ಯಾ ಪರಿಪ್ಲುತಮ್ ।
ಪುಣ್ಯಂ ಶಿವಾಮೃತಜಲಂ ಮಹರ್ಷಿಗಣಸೇವಿತಮ್
॥ ೩೯ ॥

ಪುಣ್ಯದ್ರುಮಲತಾಜಾಲೈಃ ಕೂಜತ್ಪುಣ್ಯಮೃಗದ್ವಿಜೈಃ ।
ಸರ್ವರ್ತುಫಲಪುಷ್ಪಾಢ್ಯಂ ವನರಾಜಿಶ್ರಿಯಾನ್ವಿತಮ್
॥ ೪೦ ॥

ಮತ್ತದ್ವಿಜಗಣೈರ್ಘುಷ್ಟಂ ಮತ್ತಭ್ರಮರವಿಭ್ರಮಮ್ ।
ಮತ್ತಬರ್ಹಿನಟಾಟೋಪಮಾಹ್ವಯನ್ಮತ್ತಕೋಕಿಲಮ್
॥ ೪೧ ॥

ಕದಂಬಚಂಪಕಾಶೋಕಕರಂಜಬಕುಲಾಸನೈಃ ।
ಕುಂದಮಂದಾರಕುಟಜೈಶ್ಚೂತಪೋತೈರಲಂಕೃತಮ್
॥ ೪೨ ॥

ಕಾರಂಡವೈಃ ಪ್ಲವೈರ್ಹಂಸೈಃ ಕುರರೈರ್ಜಲಕುಕ್ಕುಟೈಃ ।
ಸಾರಸೈಶ್ಚಕ್ರವಾಕೈಶ್ಚ ಚಕೋರೈರ್ವಲ್ಗು ಕೂಜಿತಮ್
॥ ೪೩ ॥

ತಥೈವ ಹರಿಣೈಃ ಕ್ರೋಡೈಃ ಶ್ವಾವಿದ್ಗವಯಕುಂಜರೈಃ ।
ಗೋಪುಚ್ಛೈರ್ಹರಿಭಿರ್ಮರ್ಕೈರ್ನಕುಲೈರ್ನಾಭಿಭಿರ್ವೃತಮ್
॥ ೪೪ ॥

ಪ್ರವಿಶ್ಯ ತತ್ತೀರ್ಥವರಮಾದಿರಾಜಃ ಸಹಾತ್ಮಜಃ ।
ದದರ್ಶ ಮುನಿಮಾಸೀನಂ ತಸ್ಮಿನ್ ಹುತಹುತಾಶನಮ್
॥ ೪೫ ॥

ವಿದ್ಯೋತಮಾನಂ ವಪುಷಾ ತಪಸ್ಯುಗ್ರಯುಜಾ ಚಿರಮ್ ।
ನಾತಿಕ್ಷಾಮಂ ಭಗವತಃ ಸ್ನಿಗ್ಧಾಪಾಂಗಾವಲೋಕನಾತ್ ।
ತದ್ವ್ಯಾಹೃತಾಮೃತಕಲಾಪೀಯೂಷಶ್ರವಣೇನ ಚ
॥ ೪೬ ॥

ಪ್ರಾಂಶುಂ ಪದ್ಮಪಲಾಶಾಕ್ಷಂ ಜಟಿಲಂ ಚೀರವಾಸಸಮ್ ।
ಉಪಸಂಸೃತ್ಯ ಮಲಿನಂ ಯಥಾರ್ಹಣಮಸಂಸ್ಕೃತಮ್
॥ ೪೭ ॥

ಅಥೋಟಜಮುಪಾಯಾತಂ ನೃದೇವಂ ಪ್ರಣತಂ ಪುರಃ ।
ಸಪರ್ಯಯಾ ಪರ್ಯಗೃಹ್ಣಾತ್ಪ್ರತಿನಂದ್ಯಾನುರೂಪಯಾ
॥ ೪೮ ॥

ಗೃಹೀತಾರ್ಹಣಮಾಸೀನಂ ಸಂಯತಂ ಪ್ರೀಣಯನ್ಮುನಿಃ ।
ಸ್ಮರನ್ ಭಗವದಾದೇಶಮಿತ್ಯಾಹ ಶ್ಲಕ್ಷ್ಣಯಾ ಗಿರಾ
॥ ೪೯ ॥

ನೂನಂ ಚಂಕ್ರಮಣಂ ದೇವ ಸತಾಂ ಸಂರಕ್ಷಣಾಯ ತೇ ।
ವಧಾಯ ಚಾಸತಾಂ ಯಸ್ತ್ವಂ ಹರೇಃ ಶಕ್ತಿರ್ಹಿ ಪಾಲಿನೀ
॥ ೫೦ ॥

ಜಲವು ಮಂಗಳಮಯವೂ, ಅಮೃತದಂತೆ ಮಧುರವಾದುದು. ಮಹರ್ಷಿಗಡಣವು ಸದಾಕಾಲ ಅದನ್ನು ಸೇವಿಸುತ್ತಿದ್ದರು. ॥ ೩೮-೩೯ ॥ ಆ ಸರೋವರವು ಬಗೆ-ಬಗೆಯಾಗಿ ಶಬ್ದಮಾಡುತ್ತಿದ್ದ ಪವಿತ್ರವಾದ ಮೃಗಗಳಿಂದಲೂ, ಪಕ್ಷಿಗಳಿಂದಲೂ ಕೂಡಿದ್ದು, ಪುಣ್ಯ ವೃಕ್ಷಗಳಿಂದಲೂ, ಬಳ್ಳಿಗಳಿಂದಲೂ ಸುತ್ತುವರಿಯಲ್ಪಟ್ಟಿತ್ತು. ಎಲ್ಲ ಋತುಗಳಲ್ಲಿಯೂ ಬಿಡುವ ಹೂವು-ಹಣ್ಣುಗಳಿಂದ ಸಂಪನ್ನವಾಗಿ ಸುಂದರವಾದ ವನಶ್ರೇಣಿಯಿಂದ ಅದರ ಶೋಭೆ ಹೆಚ್ಚಿಸಿತ್ತು. ॥ ೪೦ ॥ ಅಲ್ಲಿ ಮದಿಸಿದ ಹಕ್ಕಿಗಳ ಹಿಂಡುಗಳು ಚಿಲಿ-ಪಿಲಿಗುಟ್ಟುತ್ತಿದ್ದವು. ಮದಭರಿತ ದುಂಬಿಗಳು ಝೇಂಕರಿಸುತ್ತಿದ್ದವು. ಉನ್ಮತ್ತ ನವಿಲುಗಳು ಗರಿಗಳನ್ನು ಕೆದರಿಕೊಂಡು ನಟರಂತೆ ಕುಣಿದಾಡುತ್ತಿದ್ದವು. ಮದಿಸಿದ ಕೋಗಿಲೆಗಳು 'ಕುಹೂ-ಕುಹೂ' ಎಂದು ಶಬ್ದಮಾಡುತ್ತಾ ಒಂದನ್ನೊಂದು ಕರೆಯುವಂತೆ ಕಾಣುತ್ತಿದ್ದವು. ॥ ೪೧ ॥ ಆ ಆಶ್ರಮವು ಕದಂಬ, ಚಂಪಕ, ಅಶೋಕ, ಕರಂಜ (ಹೊಂಗೆ), ಬಕುಳ, ಅಸನ, ಕುಂದ, ಮಂದಾರ, ಕುಟಜ, ಚೂತ ಮುಂತಾದ ವೃಕ್ಷಗಳಿಂದ ತುಂಬಿಕೊಂಡು ರಮಣೀಯವಾಗಿತ್ತು. ॥ ೪೨ ॥ ಹಾಗೆಯೇ ಅಲ್ಲಿ ಕಾರಂಡವ, ಪ್ಲವ, ಹಂಸ, ಕುಕರ, ನೀರುಕೋಳಿ, ಸಾರಸ, ಚಕ್ರವಾಕ, ಚಕೋರ ಮುಂತಾದ ಪಕ್ಷಿಗಳು ಇಂಪಾಗಿ ಕಲರವಮಾಡುತ್ತಿದ್ದವು. ॥ ೪೩ ॥ ಜಿಂಕೆ, ಹಂದಿ, ಶಲ್ಯಕ, ಗವಯ, ಗಜ, ಗೋಪುಚ್ಛ ಸಿಂಹ, ವಾನರ, ಮುಂಗುಸಿ, ಕಸ್ತೂರಿಮೃಗ ಮುಂತಾದ ವನ್ಯಜೀವಿಗಳೂ ಅಲ್ಲಿ ಓಡಾಡುತ್ತಿದ್ದವು. ॥ ೪೪ ॥

ಅಂತಹ ಆಶ್ರಮವನ್ನೂ, ತೀರ್ಥವನ್ನೂ ಆದಿರಾಜನಾದ ಸ್ವಾಯಂಭುವ ಮನುವು ತನ್ನ ಕನ್ಯೆಯೊಡನೆ ತಲುಪಿದಾಗ ಕರ್ದಮ ಮುನಿಗಳು ಅಗ್ನಿಹೋತ್ರಾದಿಗಳಿಂದ ನಿವೃತ್ತರಾಗಿ ಸುಖಾಸೀನರಾಗಿರುವುದನ್ನು ಕಂಡನು. ॥ ೪೫ ॥ ಬಹಳ ದಿವಸಗಳ ಕಾಲ ಉಗ್ರವಾದ ತಪಸ್ಸಿನಿಂದಾಗಿ ಅವರ ಶರೀರವು ಮಹಾತೇಜಸ್ಸಿನಿಂದ ಬೆಳಗುತ್ತಿತ್ತು. ದೀರ್ಘಕಾಲ ತಪಸ್ಸು ಆಚರಿಸಿದ್ದರೂ ಅವರು ಬಳಲಿದಂತೆ ಕಾಣುತ್ತಿರಲಿಲ್ಲ. ಏಕೆಂದರೆ, ಭಗವಂತನ ಸ್ನೇಹಪೂರ್ಣವಾದ ದೃಷ್ಟಿಯಿಂದಲೂ, ಕರ್ಣಾಮೃತವಾದ ವಚನಗಳಿಂದಲೂ ಆವರಿಗೆ ಅನುಗ್ರಹವಾಗಿತ್ತು. ॥ ೪೬ ॥ ಅವರ ದೇಹವು ನೀಳವಾಗಿದ್ದು ಕಣ್ಣುಗಳು ಕಮಲದ ಎಸಳಿನಂತೆ ಕಮನೀಯವಾಗಿದ್ದವು. ತಲೆಯಲ್ಲಿ ಜಟಾಜೂಟವೂ, ನಡುವಿನಲ್ಲಿ ನಾರುಮಡಿಯು ಶೋಭಿಸುತ್ತಿತ್ತು. ಹತ್ತಿರದಿಂದ ನೋಡಿದರೆ ಅವರು ಸಾಣೆ ಹಿಡಿಯದಿರುವ ಮಹಾಮೂಲ್ಯ ರತ್ನದಂತೆ ಮಲಿನರಾಗಿ ಕಾಣುತ್ತಿದ್ದರು. ॥ ೪೭ ॥ ಮಹಾರಾಜ ಸ್ವಾಯಂಭುವಮನುವು ತನ್ನ ಕುಟೀರಕ್ಕೆ ಬಂದು ತನಗೆ ನಮಸ್ಕರಿಸುವುದನ್ನು ಕಂಡು ಅವರು ಆತನನ್ನು ಆಶೀರ್ವಾದದಿಂದ ಸಂತೋಷಗೊಳಿಸಿ ಯಥೋಚಿತವಾದ ಆತಿಥ್ಯದಿಂದ ಸತ್ಕರಿಸಿದರು. ॥ ೪೮ ॥

ಮನುವು ಅವರ ಸತ್ಕಾರವನ್ನು ಸ್ವೀಕರಿಸಿ, ಶಾಂತವಾದ ಮನಸ್ಸಿನಿಂದ ಆಸನದಲ್ಲಿ ಸುಖವಾಗಿ ಕುಳಿತುಕೊಳ್ಳಲು – ಮುನಿವರ್ಯರು ಭಗವಂತನ ಆಜ್ಞೆಯನ್ನು ಸ್ಮರಿಸಿಕೊಂಡು ಅವನನ್ನು ಮಧುರವಾಣಿಯಿಂದ ಸಂತೋಷಪಡಿಸುತ್ತಾ ಹೀಗೆಂದರು – ॥ ೪೯ ॥ ದೇವಾ ! ಪೂಜ್ಯನಾದ ನೀನು ಭಗವಂತನಾದ ಮಹಾ

ಯೋಽರ್ಕಾಗ್ನೀಂದ್ರವಾಯೂನಾಂ
ಯಮಧರ್ಮಪ್ರಚೇತಸಾಮ್ ।
ರೂಪಾಣಿ ಸ್ಥಾನ ಆಧತ್ಸೇ
ತಸ್ಮೈ ಶುಕ್ಲಾಯ ತೇ ನಮಃ ॥ ೫೧ ॥

ನ ಯದಾ ರಥಮಾಸ್ಥಾಯ ಜೈತ್ರಂ ಮಣಿಗಣಾರ್ಪಿತಮ್ ।
ವಿಸ್ಫೂರ್ಜಚ್ಚಂಡ ಕೋದಂಡೋ ರಥೇನ ತ್ರಾಸಯನ್ನಘಾನ್ ॥ ೫೨ ॥

ಸ್ವಸೈನ್ಯಚರಣಕ್ಷುಣ್ಣಂ ವೇಪಯನ್ಮಂಡಲಂ ಭುವಃ ।
ವಿಕರ್ಷನ್ ಬೃಹತೀಂ ಸೇನಾಂ ಪರ್ಯಟಸ್ಯಂಶುಮಾನಿವ ॥ ೫೩ ॥

ತದೈವ ಸೇತವಃ ಸರ್ವೇ ವರ್ಣಾಶ್ರಮನಿಬಂಧನಾಃ ।
ಭಗವದ್ರಚಿತಾ ರಾಜನ್ ಭಿದ್ಯೇರನ್ಬತ ದಸ್ಯುಭಿಃ ॥ ೫೪ ॥

ಅಧರ್ಮಶ್ಚ ಸಮೇಧೇತ ಲೋಲುಪೈರ್ವ್ಯಂಕುಶೈರ್ನೃಭಿಃ ।
ಶಯಾನೇ ತ್ವಯಿ ಲೋಕೋಽಯಂ ದಸ್ಯುಗ್ರಸ್ತೋ ವಿನಂಕ್ಷ್ಯತಿ ॥ ೫೫ ॥

ಅಥಾಪಿ ಪೃಚ್ಛೇ ತ್ವಾಂ ವೀರ ಯದರ್ಥಂ ತ್ವಮಿಹಾಗತಃ ।
ತದ್ವಯಂ ನಿರ್ವ್ಯಲೀಕೇನ ಪ್ರತಿಪದ್ಯಾಮಹೇ ಹೃದಾ ॥ ೫೬ ॥

ವಿಷ್ಣುವಿನ ಪಾಲನಶಕ್ತಿರೂಪನು. ಆದ್ದರಿಂದ ನಿನ್ನ ಸಂಚಾರದ ಉದ್ದೇಶವು ನಿಸ್ಸಂಶಯವಾಗಿ ಸಜ್ಜನರ ರಕ್ಷಣೆ ಮತ್ತು ದುರ್ಜನರ ಸಂಹಾರಕ್ಕಾಗಿಯೇ ಇರುವುದು. ॥ ೫೦ ॥ ನೀನು ಸಾಕ್ಷಾತ್ತಾಗಿ ಪರಿಶುದ್ಧವಾದ ವಿಷ್ಣುರೂಪಿಯೇ ಆಗಿದ್ದು ಬೇರೆ-ಬೇರೆ ಕರ್ಮಗಳಿಗೋಸ್ಕರ ಸೂರ್ಯ, ಚಂದ್ರ, ಇಂದ್ರ, ಅಗ್ನಿ, ವಾಯು, ಯಮ, ವರುಣ ಮುಂತಾದ ರೂಪಗಳನ್ನು ಧರಿಸುವವ ನಾಗಿದ್ದೀಯೇ. ನಿನಗೆ ನಮಸ್ಕಾರಗಳು. ॥ ೫೧ ॥ ನೀನು ರತ್ನಖಚಿತ ವಾದ ವಿಜಯರಥದಲ್ಲಿ ಕುಳಿತು ಪ್ರಚಂಡವಾದ ಧನುಸ್ಸನ್ನು ಟಂಕಾರಮಾಡುತ್ತಾ ರಥದ ಘುರ್ಘರ ಧ್ವನಿಯಿಂದಲೇ ಪಾಪಿಗಳು ಭಯಗ್ರಸ್ತರಾಗುವಂತೆ ಮಾಡುವೆ. ಸೈನ್ಯದ ಪದಹತಿಯಿಂದ ಭೂಮಿಯನ್ನು ನಡುಗಿಸುತ್ತಾ ವಿಶಾಲವಾದ ಸೇನೆಯೊಡನೆ ಭೂಮಿಯ ಮೇಲೆ ಸೂರ್ಯನಂತೆ ಸಂಚರಿಸುತ್ತಿರುವೆ. ನೀನೇನಾದರೂ ಹೀಗೆ ಮಾಡದಿದ್ದರೆ ದಸ್ಯುಗಳು – ಭಗವಂತನು ರಚಿಸಿದ ವರ್ಣಾಶ್ರಮಧರ್ಮಗಳ ಮರ್ಯಾದೆಯನ್ನು ಒಡನೆಯೇ ನಾಶ ಮಾಡಿಬಿಡುವರು. ವಿಷಯಾಸಕ್ತರಾದ ಜನರು ಅಡೆ-ತಡೆಗಳಿಲ್ಲದೆ ಎಲ್ಲೆಡೆ ಅಧರ್ಮವನ್ನೇ ಹರಡುವರು. ನೀನೇನಾದರೂ ಲೋಕದ ಕಡೆಗೆ ಗಮನ ಕೊಡದೆ ನಿಶ್ಚಿಂತನಾಗಿಬಿಟ್ಟರೆ ಈ ಲೋಕವು ದುರಾಚಾರಿಗಳ ತೆಕ್ಕೆಯಲ್ಲಿ ಸಿಕ್ಕಿಬಿದ್ದು ನಾಶವಾಗಿ ಬಿಡುವುದು. ॥ ೫೨-೫೫ ॥ ಎಲೈ ಮಹಾವೀರನೇ! ಇಷ್ಟೆಲ್ಲಾ ಇದ್ದರೂ 'ನೀನು ಇಲ್ಲಿಗೆ ಯಾವ ಪ್ರಯೋಜನಕ್ಕಾಗಿ ಬಂದಿರುವೆ?' ಎಂದು ನಾನು ಕೇಳುತ್ತೇನೆ. ನೀವು ಯಾವುದೇ ಅಪ್ಪಣೆ ಮಾಡಿದರೂ ಅದನ್ನು ನಾನು ನಿಷ್ಕಪಟಭಾವದಿಂದ ಸಂತೋಷವಾಗಿ ಸ್ವೀಕರಿಸುವೆನು. ॥ ೫೬ ॥

*ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೨೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಏಕವಿಂಶೋಽಧ್ಯಾಯಃ ॥ ೨೧ ॥

# ಇಪ್ಪತ್ತೆರಡನೆಯ ಅಧ್ಯಾಯ

## ದೇವಹೂತಿ-ಕರ್ದಮರ ವಿವಾಹ

*ಮೈತ್ರೇಯ ಉವಾಚ*

ಏವಮಾವಿಷ್ಕೃತಾಶೇಷಗುಣಕರ್ಮೋದಯೋ ಮುನಿಮ್ ।
ಸವ್ರೀಡ ಇವ ತಂ ಸಮ್ರಾಡುಪಾರತಮುವಾಚ ಹ ॥ ೧ ॥

*ಮನುರುವಾಚ*

ಬ್ರಹ್ಮಾಸೃಜತ್ಸ್ವಮುಖತೋ ಯುಷ್ಮಾನಾತ್ಮಪರೀಪ್ಸಯಾ ।
ಛಂದೋಮಯಸ್ತಪೋವಿದ್ಯಾಯೋಗಯುಕ್ತಾನಲಂಪಟಾನ್ ॥ ೨ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಹೀಗೆ ಕರ್ದಮರು ಮನುವಿನ ಸಮಸ್ತ ಗುಣ-ಕರ್ಮಗಳನ್ನು ವರ್ಣಿಸಿದಾಗ ಸಾಮ್ರಾಟನಾದ ಸ್ವಾಯಂಭುವಮನುವು ಆ ನಿವೃತ್ತಿ ಪರಾಯಣ ಮುನಿಯ ಬಳಿ ಸಂಕೋಚದಿಂದಲೇ ಹೀಗೆಂದನು. ॥ ೧ ॥

**ಮನುವು ಹೇಳುತ್ತಾನೆ** – ಮುನಿವರ್ಯರೇ! ವೇದ ಮೂರ್ತಿಗಳಾದ ಬ್ರಹ್ಮದೇವರು ತಮ್ಮ ವೇದಮಯವಾದ ದಿವ್ಯ ವಿಗ್ರಹದ ರಕ್ಷಣೆಗಾಗಿ ತಪಸ್ಸು, ವಿದ್ಯೆ, ಯೋಗಗಳಿಂದ ಸಂಪನ್ನರಾದ, ವಿಷಯಲಂಪಟತೆಯಿಲ್ಲದ ಬ್ರಾಹ್ಮಣರಾದ ನಿಮ್ಮನ್ನು ತಮ್ಮ ಮುಖದಿಂದ ಪ್ರಕಟಿಸಿದರು. ಮತ್ತೆ ಸಹಸ್ರಪಾದನಾದ ವಿರಾಟ್ ಪುರುಷನು ನಿಮ್ಮ ರಕ್ಷಣೆಗಾಗಿಯೇ ತನ್ನ ಸಹಸ್ರಭುಜಗಳಿಂದ ಕ್ಷತ್ರಿಯರಾದ ನಮ್ಮನ್ನು ಸೃಷ್ಟಿಮಾಡಿದನು. ಹೀಗೆ ಅವನಿಗೆ

ತತ್ತ್ರಾಣಾಯಾಸೃಜಚ್ಚಾಸ್ಮಾನ್ ದೋಃಸಹಸ್ರಾತ್ಸಹಸ್ರಪಾತ್ ।
ಹೃದಯಂ ತಸ್ಯ ಹಿ ಬ್ರಹ್ಮ ಕ್ಷತ್ರಮಂಗಂ ಪ್ರಚಕ್ಷತೇ ॥ ೩ ॥

ಅತೋ ಹ್ಯನ್ಯೋನ್ಯಮಾತ್ಮಾನಂ ಬ್ರಹ್ಮ ಕ್ಷತ್ರಂ ಚ ರಕ್ಷತಃ ।
ರಕ್ಷತಿ ಸ್ಮಾವ್ಯಯೋ ದೇವಃ ಸ ಯಃ ಸದಸದಾತ್ಮಕಃ ॥ ೪ ॥

ತವ ಸಂದರ್ಶನಾದೇವಚ್ಛಿನ್ನಾ ಮೇ ಸರ್ವಸಂಶಯಾಃ ।
ಯತ್ಸ್ವಯಂ ಭಗವಾನ್ಪ್ರೀತ್ಯಾ ಧರ್ಮಮಾಹ ರಿರಕ್ಷಿಷೋಃ ॥ ೫ ॥

ದಿಷ್ಟ್ಯಾ ಮೇ ಭಗವಾನ್ ದೃಷ್ಟೋ ದುರ್ದರ್ಶೋ ಯೋಽಕೃತಾತ್ಮನಾಮ್ ।
ದಿಷ್ಟ್ಯಾ ಪಾದರಜಃ ಸ್ಪೃಷ್ಟಂ ಶೀರ್ಷ್ಣಾ ಮೇ ಭವತಃ ಶಿವಮ್ ॥ ೬ ॥

ದಿಷ್ಟ್ಯಾ ತ್ವಯಾನುಶಿಷ್ಟೋಽಹಂ ಕೃತಶ್ಚಾನುಗ್ರಹೋ ಮಹಾನ್ ।
ಅಪಾವೃತೈಃ ಕರ್ಣರಂಧ್ರೈರ್ಜುಷ್ಟಾ ದಿಷ್ಟ್ಯೋಶತೀರ್ಗಿರಃ ॥ ೭ ॥

ಸ ಭವಾಂದುಹಿತೃಸ್ನೇಹಪರಿಕ್ಲಿಷ್ಟಾತ್ಮನೋ ಮಮ ।
ಶ್ರೋತುಮರ್ಹಸಿ ದೀನಸ್ಯ ಶ್ರಾವಿತಂ ಕೃಪಯಾ ಮುನೇ ॥ ೮ ॥

ಪ್ರಿಯವ್ರತೋತ್ತಾನಪದೋಃ ಸ್ವಸೇಯಂ ದುಹಿತಾ ಮಮ ।
ಅನ್ವಿಚ್ಛತಿ ಪತಿಂ ಯುಕ್ತಂ ವಯಃಶೀಲಗುಣಾದಿಭಿಃ ॥ ೯ ॥

ಯದಾ ತು ಭವತಃ ಶೀಲಶ್ರುತರೂಪವಯೋಗುಣಾನ್ ।
ಅಶೃಣೋನ್ನಾರದಾದೇಷಾ ತ್ವಯ್ಯಾಸೀತ್ಕೃತನಿಶ್ಚಯಾ ॥ ೧೦ ॥

ತತ್ಪ್ರತೀಚ್ಛ ದ್ವಿಜಾಗ್ರ್ಯೇಮಾಂ ಶ್ರದ್ಧಯೋಪಹೃತಾಂ ಮಯಾ ।
ಸರ್ವಾತ್ಮನಾನುರೂಪಾಂ ತೇ ಗೃಹಮೇಧಿಷು ಕರ್ಮಸು ॥ ೧೧ ॥

ಉದ್ಯತಸ್ಯ ಹಿ ಕಾಮಸ್ಯ ಪ್ರತಿವಾದೋ ನ ಶಸ್ಯತೇ ।
ಅಪಿ ನಿರ್ಮುಕ್ತಸಂಗಸ್ಯ ಕಾಮರಕ್ತಸ್ಯ ಕಿಂ ಪುನಃ ॥ ೧೨ ॥

ಯ ಉದ್ಯತಮನಾದೃತ್ಯ ಕೀನಾಶಮಭಿಯಾಚತೇ ।
ಕ್ಷೀಯತೇ ತದ್ಯಶಃ ಸ್ಫೀತಂ ಮಾನಶ್ಚಾವಜ್ಞಯಾ ಹತಃ ॥ ೧೩ ॥

ಅಹಂ ತ್ವಾಶೃಣವಂ ವಿದ್ವನ್ವಿವಾಹಾರ್ಥಂ ಸಮುದ್ಯತಮ್ ।
ಅತಸ್ತ್ವಮುಪಕುರ್ವಾಣಃ ಪ್ರತ್ತಾಂ ಪ್ರತಿಗೃಹಾಣ ಮೇ ॥ ೧೪ ॥

ಬ್ರಾಹ್ಮಣರು ಹೃದಯವೆಂದೂ, ಕ್ಷತ್ರಿಯರು ಶರೀರವೆಂದೂ ಕರೆಯಲ್ಪಡುತ್ತಾರೆ. ॥ ೨-೩ ॥ ಆದ್ದರಿಂದ ಒಂದೇ ಶರೀರಕ್ಕೆ ಸಂಬಂಧಪಟ್ಟಿರುವುದರಿಂದ ತಮ್ಮ-ತಮ್ಮನ್ನು ಮತ್ತು ಒಬ್ಬರು ಮತ್ತೊಬ್ಬರನ್ನು ರಕ್ಷಿಸುತ್ತಿರುವ ಆ ಬ್ರಾಹ್ಮಣ ಮತ್ತು ಕ್ಷತ್ರಿಯರನ್ನು – ಸಮಸ್ತ ಕಾರಣರೂಪನಾಗಿದ್ದರೂ ವಾಸ್ತವದಲ್ಲಿ ನಿರ್ವಿಕಾರನಾಗಿರುವ ಶ್ರೀಹರಿಯೇ ರಕ್ಷಿಸುತ್ತಾನೆ. ॥ ೪ ॥ ತಮ್ಮ ದರ್ಶನದಿಂದಲೇ ನನ್ನ ಎಲ್ಲ ಸಂದೇಹಗಳೂ ದೂರವಾದುವು. ಏಕೆಂದರೆ, ತಾವು ನನ್ನ ಪ್ರಶಂಸೆಯ ನೆಪದಲ್ಲಿ ಪ್ರಜಾಪಾಲನೆಯ ಇಚ್ಛೆಯುಳ್ಳ ರಾಜನ ಧರ್ಮಗಳನ್ನು ತುಂಬು ಪ್ರೇಮದಿಂದ ನಿರೂಪಿಸಿದಿರಿ. ॥ ೫ ॥ ಜಿತೇಂದ್ರಿಯನಲ್ಲದವರಿಗೆ ತಮ್ಮ ದರ್ಶನವು ಬಹು ದುರ್ಲಭವಾಗಿದೆ. ತಮ್ಮ ದರ್ಶನವನ್ನು ಪಡೆದು, ನಿಮ್ಮ ಚರಣಗಳ ಮಂಗಳಮಯ ಧೂಳಿಯನ್ನು ತಲೆಯಲ್ಲಿ ಮುಡಿದುಕೊಂಡಿರುವ ನಾನು ದೊಡ್ಡ ಭಾಗ್ಯವಂತನೇ ಸರಿ! ॥ ೬ ॥ ನನ್ನ ಸೌಭಾಗ್ಯದಿಂದಲೇ ನೀವು ನನಗೆ ರಾಜ ಧರ್ಮಗಳನ್ನು ಉಪದೇಶಿಸಿ ಮಹದನುಗ್ರಹವನ್ನು ಮಾಡಿರುವಿರಿ. ತಮ್ಮ ಪವಿತ್ರವಾದ ವಾಣಿಯನ್ನು ನಾನು ಕಿವಿಯಾರೆ ಕೇಳಿರುವುದಕ್ಕೂ ನನ್ನ ಶುಭ ಪ್ರಾರಬ್ಧದ ಉದಯವೆಂದೇ ತಿಳಿಯುತ್ತೇನೆ. ॥ ೭ ॥

ಮುನಿಗಳೇ! ಈ ಕನ್ಯೆಯ ಮೇಲಿರುವ ಪ್ರೇಮದಿಂದ ನನ್ನ ಮನಸ್ಸು ತುಂಬಾ ಚಿಂತಾಗ್ರಸ್ತವಾಗಿದೆ. ಆದುದರಿಂದ ದೀನನಾದ ನನ್ನ ಈ ಪ್ರಾರ್ಥನೆಯನ್ನು ತಾವು ಕೃಪಾಪೂರ್ವಕವಾಗಿ ಕೇಳಬೇಕು. ॥ ೮ ॥ ಪ್ರಿಯವ್ರತ ಮತ್ತು ಉತ್ತಾನಪಾದ – ಇವರ ತಂಗಿಯಾಗಿರುವ ಈ ನನ್ನ ಮಗಳು ವಯಸ್ಸು, ಶೀಲ-ಗುಣಗಳಿಂದ ತನಗೆ ಅನುರೂಪನಾದ ಪತಿಯನ್ನು ಪಡೆಯಲು ಬಯಸುತ್ತಾಳೆ. ॥ ೯ ॥ ಈಕೆಯು ಶ್ರೀನಾರದಮಹರ್ಷಿಗಳ ಬಾಯಿಯಿಂದ – ತಮ್ಮ ಶೀಲ, ವಿದ್ಯೆ, ರೂಪ, ಆಯುಸ್ಸು, ಗುಣಗಳ ವರ್ಣನೆಯನ್ನು ಕೇಳಿದಂದಿನಿಂದಲೇ ತಮ್ಮನ್ನು ತನ್ನ ಪತಿಯನ್ನಾಗಿ ಮಾಡಿಕೊಳ್ಳಲು ನಿಶ್ಚಯಿಸಿಬಿಟ್ಟಿದ್ದಾಳೆ. ॥ ೧೦ ॥ ಬ್ರಾಹ್ಮಣಶ್ರೇಷ್ಠರೇ! ನಾನು ಅತ್ಯಂತ ಶ್ರದ್ಧೆಯಿಂದ ಈ ಕನ್ಯೆಯನ್ನು ತಮಗೆ ಸಮರ್ಪಣೆ ಮಾಡುತ್ತಿದ್ದೇನೆ. ತಾವು ಈಕೆಯನ್ನು ಸ್ವೀಕರಿಸಬೇಕು. ಇವಳು ಗೃಹಸ್ಥೋಚಿತ ಎಲ್ಲ ರೀತಿಯ ಕಾರ್ಯಗಳಲ್ಲಿ ತಮಗೆ ಯೋಗ್ಯಳಾಗಿದ್ದಾಳೆ. ॥ ೧೧ ॥ ತಾನಾಗಿಯೇ ಬಂದೊದಗಿದ ಭೋಗವನ್ನು ತಿರಸ್ಕರಿಸುವುದು ವಿರಕ್ತನಿಗೂ ಉಚಿತವಲ್ಲ. ಹಾಗಿರುವಾಗ ವಿಷಯಾಸಕ್ತನಾದವನ ವಿಷಯದಲ್ಲಿ ಹೇಳುವ ಮಾತೇನಿದೆ? ॥ ೧೨ ॥ ತಾನಾಗಿಯೇ ಒದಗಿಬಂದ ಭೋಗವನ್ನು ಕಡೆಗಣಿಸಿ ಮತ್ತೆ ಬೇರೆ ಯಾರೋ ಕೃಪಣನ ಮುಂದೆ ಕೈಚಾಚುವವನು ವಿಸ್ತಾರವಾಗಿ ಹರಡಿಕೊಂಡಿರುವ ತನ್ನ ಕೀರ್ತಿಯನ್ನು ಕಳೆದುಕೊಳ್ಳುವನು ಹಾಗೂ ಮತ್ತೊಬ್ಬರ ತಿರಸ್ಕಾರದಿಂದ ಆತನಿಗೆ ಮಾನಭಂಗವೂ ಆಗುವುದು. ॥ ೧೩ ॥ ಜ್ಞಾನಿಶ್ರೇಷ್ಠರೇ! ತಾವು ವಿವಾಹಮಾಡಿಕೊಳ್ಳಲು ಸಿದ್ಧರಾಗಿದ್ದೀರೆಂದು ನಾನು ಕೇಳಿದ್ದೇನೆ. ತಮ್ಮ ಬ್ರಹ್ಮಚರ್ಯಕ್ಕೆ ಒಂದು ಎಲ್ಲೆ ಇದೆ. ತಾವು ನೈಷ್ಠಿಕ ಬ್ರಹ್ಮಚಾರಿಗಳಲ್ಲವಲ್ಲ! ಆದ್ದರಿಂದ ತಾವು ಈ ಕನ್ಯೆಯನ್ನು ಸ್ವೀಕರಿಸಿರಿ. ನಾನು ಈಕೆಯನ್ನು ತಮಗೆ ಸಮರ್ಪಿಸುತ್ತಿದ್ದೇನೆ. ॥ ೧೪ ॥

ಋಷಿರುವಾಚ

ಬಾಢಮುದ್ವೋಢುಕಾಮೋಽಹಮಪ್ರತ್ತಾ ಚ ತವಾತ್ಮಜಾ ।
ಆವಯೋರನುರೂಪೋಽಸಾವಾದ್ಯೋ ವೈವಾಹಿಕೋ ವಿಧಿಃ ॥ ೧೫ ॥

ಕಾಮಃ ಸ ಭೂಯಾನ್ನರದೇವ ತೇಽಸ್ಯಾಃ
ಪುತ್ರ್ಯಾಃ ಸಮಾಮ್ನಾಯವಿಧೌ ಪ್ರತೀತಃ ।
ಕ ಏವ ತೇ ತನಯಾಂ ನಾದ್ರಿಯೇತ
ಸ್ವಯೈವ ಕಾಂತ್ಯಾ ಕ್ಷಿಪತೀಮಿವ ಶ್ರಿಯಮ್ ॥ ೧೬ ॥

ಯಾಂ ಹರ್ಮ್ಯಪೃಷ್ಠೇ ಕ್ವಣದಂಘ್ರಿಶೋಭಾಂ
ವಿಕ್ರೀಡತೀಂ ಕಂದುಕವಿಹ್ವಲಾಕ್ಷೀಮ್ ।
ವಿಶ್ವಾವಸುರ್ನ್ಯಪತತ್ಸ್ವಾದ್ವಿಮಾನಾದ್
ವಿಲೋಕ್ಯ ಸಮ್ಮೋಹವಿಮೂಢಚೇತಾಃ ॥ ೧೭ ॥

ತಾಂ ಪ್ರಾರ್ಥಯಂತೀಂ ಲಲನಾಲಲಾಮ-
ಮಸೇವಿತಶ್ರೀಚರಣೈರದೃಷ್ಟಾಮ್ ।
ವತ್ಸಾಂ ಮನೋರುಚ್ಚಪದಃ ಸ್ವಸಾರಂ
ಕೋ ನಾನುಮನ್ಯೇತ ಬುಧೋಽಭಿಯಾತಾಮ್ ॥ ೧೮ ॥

ಅತೋ ಭಜಿಷ್ಯೇ ಸಮಯೇನ ಸಾಧ್ವೀಂ
ಯಾವತ್ತೇಜೋ ಬಿಭೃಯಾದಾತ್ಮನೋ ಮೇ ।
ಅತೋ ಧರ್ಮಾನ್ಪಾರಮಹಂಸ್ಯಮುಖ್ಯಾನ್
ಶುಕ್ಲಪ್ರೋಕ್ತಾನ್ ಬಹು ಮನ್ಯೇಽವಿಹಿಂಸ್ರಾನ್ ॥ ೧೯ ॥

ಯತೋಽಭವದ್ವಿಶ್ವಮಿದಂ ವಿಚಿತ್ರಂ
ಸಂಸ್ಥಾಸ್ಯತೇ ಯತ್ರ ಚ ವಾವತಿಷ್ಠತೇ ।
ಪ್ರಜಾಪತೀನಾಂ ಪತಿರೇಷ ಮಹ್ಯಂ
ಪರಂ ಪ್ರಮಾಣಂ ಭಗವಾನನಂತಃ ॥ ೨೦ ॥

ಮೈತ್ರೇಯ ಉವಾಚ

ಸ ಉಗ್ರಧನ್ವನ್ನಿಯದೇವಾಬಭಾಷೇ
ಆಸೀಚ್ಚ ತೂಷ್ಣೀಮರವಿಂದನಾಭಮ್ ।
ಧಿಯೋಪಗೃಹ್ಣನ್ ಸ್ಮಿತಶೋಭಿತೇನ
ಮುಖೇನ ಚೇತೋ ಲುಲುಭೇ ದೇವಹೂತ್ಯಾಃ ॥ ೨೧ ॥

ಶ್ರೀಕರ್ದಮ ಮುನಿಗಳು ಹೇಳಿದರು – ಮಹಾರಾಜನೇ! ಸರಿ. ನಾನು ವಿವಾಹವಾಗಲು ಬಯಸುತ್ತಿದ್ದೇನೆ. ನಿಮ್ಮ ಕನ್ಯೆಯ ವಾಗ್ದಾನವು ಯಾರೊಂದಿಗೂ ಆಗಲಿಲ್ಲವಲ್ಲ! ಆದ್ದರಿಂದ ನಮ್ಮಿಬ್ಬರ ವಿವಾಹವು ಸರ್ವಶ್ರೇಷ್ಠ ಬ್ರಾಹ್ಮವಿಧಿಯಿಂದ * ಆಗುವುದು ಉಚಿತವೇ ಆಗಿದೆ. ॥ ೧೫ ॥ ಎಲೈ ರಾಜನೇ! ವೇದೋಕ್ತ ವಿವಾಹ-ವಿಧಿಯಲ್ಲಿ 'ಗೃಭ್ಣಾಮಿ ತೇ' ಮುಂತಾದ ಮಂತ್ರಗಳಲ್ಲಿ ಹೇಳಿರುವ ಸಂತಾನಕಾಮನೆಯು ನಿಮ್ಮ ಈ ಕನ್ಯೆಯೊಂದಿಗೆ ನಮ್ಮ ಸಂಬಂಧ ಬೆಳೆಯುವುದರಿಂದ ಸಫಲವಾಗುವುದು. ತನ್ನ ಅಂಗಕಾಂತಿಯಿಂದ ಆಭೂಷಣಗಳ ಶೋಭೆಯನ್ನೂ ತಿರಸ್ಕರಿಸುತ್ತಿರುವ ನಿಮ್ಮ ಕನ್ಯೆಯನ್ನು ಯಾರು ತಾನೇ ಅನಾದರಿಸುವನು? ॥ ೧೬ ॥ ಒಮ್ಮೆ ಈಕೆಯು ತನ್ನ ಅರಮನೆಯ ಮೇಲ್ಮಹಡಿಯಲ್ಲಿ ಚೆಂಡಾಟವನ್ನು ಆಡುತ್ತಿದ್ದಳು. ಚೆಂಡಿನ ಹಿಂದೆ-ಹಿಂದೆ ಅತ್ತ-ಇತ್ತ ಓಡುತ್ತಿರುವುದರಿಂದ ಆಕೆಯ ಕಣ್ಣುಗಳು ಚಂಚಲವಾಗಿದ್ದುವು. ಕಾಲಿನ ಕಾಲಂದುಗೆಗಳು ಝುಣ-ಝುಣ ಶಬ್ದಮಾಡುತ್ತಿದ್ದವು. ಆಗ ಈಕೆಯನ್ನು ಕಂಡು ಮೋಹಗೊಂಡ ವಿಶ್ವಾವಸು ಗಂಧರ್ವನು ಪ್ರಜ್ಞೆಯಿಲ್ಲದೆ ವಿಮಾನದಿಂದ ಕೆಳಗೆ ಉರುಳಿದ್ದನು. ॥ ೧೭ ॥ ಅಂತಹ ಸೌಂದರ್ಯರಾಶಿಯಾದ ಈಕೆಯು ತಾನಾಗಿ ಬಂದು ಪ್ರಾರ್ಥಿಸಿದಾಗ ಯಾವ ವಿವೇಕಿಯು ತಾನೇ ಇವಳನ್ನು ಸ್ವೀಕರಿಸದೆ ಹೋದಾನು? ಇವಳಾದರೋ ಸಾರ್ವಭೌಮ ಸ್ವಾಯಂಭುವ ಮನುವಿನ ಕಣ್ಮಣಿಯಾದ ಸುಪುತ್ರಿಯು. ಉತ್ತಾನಪಾದನ ಪ್ರೀತಿಯ ತಂಗಿ ಹಾಗೂ ರಮಣೀಯ ರತ್ನವಾಗಿದ್ದಾಳೆ. ಶ್ರೀಲಕ್ಷ್ಮೀದೇವಿಯ ಚರಣಗಳನ್ನು ಎಂದಿಗೂ ಉಪಾಸನೆ ಮಾಡದವರಿಗೆ ಈಕೆಯ ದರ್ಶನವೂ ಆಗಲಾರದು. ॥ ೧೮ ॥ ಆದ್ದರಿಂದ ನಾನು ನಿನ್ನ ಈ ಸಾಧ್ವಿಯಾದ ಕನ್ಯೆಯನ್ನು ಅವಶ್ಯವಾಗಿ ಸ್ವೀಕರಿಸುವೆನು. ಆದರೆ ಒಂದು ನಿಬಂಧನೆ ಇದೆ. ಈಕೆಯಲ್ಲಿ ಸಂತಾನ ಉಂಟಾಗುವವರೆಗೆ ನಾನು ಗೃಹಸ್ಥ ಧರ್ಮಾನುಸಾರವಾಗಿ ಇವಳೊಂದಿಗೆ ಇರುವೆನು. ಅನಂತರ ಭಗವಂತನು ಹೇಳಿರುವ ಸಂನ್ಯಾಸಪ್ರಧಾನವಾದ ಹಿಂಸಾರಹಿತವಾದ ಶಮ-ದಮಾದಿ ಧರ್ಮಗಳಿಗೆ ಹೆಚ್ಚು ಪ್ರಾಶಸ್ತ್ಯನೀಡುವೆನು. ॥ ೧೯ ॥ ಈ ವಿಚಿತ್ರವಾದ ಜಗತ್ತು ಯಾರಿಂದ ಉಂಟಾಗಿದೆಯೋ, ಯಾರಲ್ಲಿ ಲೀನವಾಗಿ ಹೋಗುತ್ತದೋ, ಯಾರ ಆಶ್ರಯದಿಂದ ಇದು ಸ್ಥಿರವಾಗಿ ಇದೆಯೋ – ಆ ಪ್ರಜಾಪತಿಗಳಿಗೂ ಪತಿಯಾದ ಭಗವಾನ್ ಶ್ರೀಅನಂತನೇ ನನಗೆ ಅತ್ಯಂತ ಅಧಿಕವಾಗಿ ಮಾನ್ಯನಾಗಿದ್ದಾನೆ. ॥ ೨೦ ॥

ಶ್ರೀಮೈತ್ರೇಯರು ಹೇಳುತ್ತಾರೆ – ಪ್ರಚಂಡ ಧನುರ್ಧಾರಿಯಾದ ವಿದುರನೇ! ಕರ್ದಮರು ಇಷ್ಟನ್ನು ಮಾತ್ರಹೇಳಿ ಹೃದಯದಲ್ಲಿ ಭಗವಾನ್ ಪದ್ಮನಾಭನನ್ನು ಧ್ಯಾನಿಸುತ್ತಾ ಮೌನವಾದರು. ಆಗ ಅವರ ಮಂದಹಾಸಯುಕ್ತ ಮುಖಕಮಲವನ್ನು ನೋಡಿ ದೇವಹೂತಿಯ ಚಿತ್ತವು ಸೂರೆಗೊಂಡಿತು. ॥ ೨೧ ॥

* ಮನುಸ್ಮೃತಿಯಲ್ಲಿ ಎಂಟು ಬಗೆಯ ವಿವಾಹಗಳನ್ನು ಉಲ್ಲೇಖಿಸಿದೆ – (೧) ಬ್ರಾಹ್ಮ, (೨) ದೈವ, (೩) ಆರ್ಷ, (೪) ಪ್ರಾಜಾಪತ್ಯ, (೫) ಆಸುರ, (೬) ಗಾಂಧರ್ವ, (೭) ರಾಕ್ಷಸ, (೮) ಪೈಶಾಚ. ಇವುಗಳಲ್ಲಿ ಮೊದಲನೆಯದಾದ 'ಬ್ರಾಹ್ಮ' ವಿವಾಹವು ಶ್ರೇಷ್ಠತಮವೆನಿಸುತ್ತದೆ. ಇದರಲ್ಲಿ ತಂದೆಯೇ ಯೋಗ್ಯನಾದ ವರನನ್ನು ಆರಿಸಿ ಆತನಿಗೆ ತನ್ನ ಕನ್ಯೆಯನ್ನು ದಾನಮಾಡುತ್ತಾನೆ.

ಸೋಽನುಜ್ಞಾತ್ವಾ ವ್ಯವಸಿತಂ ಮಹಿಷ್ಯಾ ದುಹಿತುಃ ಸ್ಫುಟಮ್ ।
ತಸ್ಮೈ ಗುಣಗಣಾಢ್ಯಾಯ ದದೌ ತುಲ್ಯಾಂ ಪ್ರಹರ್ಷಿತಃ
॥ ೨೨ ॥

ಶತರೂಪಾ ಮಹಾರಾಜ್ಞೀ ಪಾರಿಬರ್ಹಾನ್ಮಹಾಧನಾನ್ ।
ದಂಪತ್ಯೋಃ ಪರ್ಯದಾತ್ಪ್ರೀತ್ಯಾ ಭೂಷಾವಾಸಃ ಪರಿಚ್ಛದಾನ್
॥ ೨೩ ॥

ಪ್ರತ್ತಾಂ ದುಹಿತರಂ ಸಮ್ರಾಟ್ಸದೃಕ್ಷಾಯ ಗತವ್ಯಥಃ ।
ಉಪಗುಹ್ಯ ಚ ಬಾಹುಭ್ಯಾಮೌತ್ಕಂಠ್ಯೋನ್ಮಥಿತಾಶಯಃ
॥ ೨೪ ॥

ಅಶಕ್ನುವಂಸ್ತದ್ವಿರಹಂ ಮುಂಚನ್ ಬಾಷ್ಪಕಲಾಂ ಮುಹುಃ ।
ಆಸಿಂಚದಂಬ ವತ್ಸೇತಿ ನೇತ್ರೋದೈರ್ದುಹಿತುಃ ಶಿಖಾಃ
॥ ೨೫ ॥

ಆಮಂತ್ರ್ಯ ತಂ ಮುನಿವರಮನುಜ್ಞಾತಃ ಸಹಾನುಗಃ ।
ಪ್ರತಸ್ಥೇ ರಥಮಾರುಹ್ಯ ಸಭಾರ್ಯಃ ಸ್ವಪುರಂ ನೃಪಃ
॥ ೨೬ ॥

ಉಭಯೋರ್ಋಷಿಕುಲ್ಯಾಯಾಃ ಸರಸ್ವತ್ಯಾಃ ಸುರೋಧಸೋಃ ।
ಋಷೀಣಾಮುಪಶಾಂತಾನಾಂ ಪಶ್ಯನ್ನಾಶ್ರಮಸಂಪದಃ
॥ ೨೭ ॥

ತಮಾಯಾಂತಮಭಿಪ್ರೇತ್ಯ ಬ್ರಹ್ಮಾವರ್ತಾತ್ಪ್ರಜಾಃ ಪತಿಮ್ ।
ಗೀತಸಂಸ್ತುತಿವಾದಿತ್ರೈಃ ಪ್ರತ್ಯುದೀಯುಃ ಪ್ರಹರ್ಷಿತಾಃ
॥ ೨೮ ॥

ಬರ್ಹಿಷ್ಮತೀ ನಾಮ ಪುರೀ ಸರ್ವಸಂಪತ್ಸಮನ್ವಿತಾ ।
ನ್ಯಪತನ್ ಯತ್ರ ರೋಮಾಣಿ ಯಜ್ಞಸ್ಯಾಂಗಂ ವಿಧುನ್ವತಃ
॥ ೨೯ ॥

ಕುಶಾಃ ಕಾಶಾಸ್ತ ಏವಾಸನ್ ಶಶ್ವದ್ಧರಿತವರ್ಚಸಃ ।
ಋಷಯೋ ಯೈಃ ಪರಾಭಾವ್ಯ ಯಜ್ಞಘ್ನಾನ್ಯಜ್ಞಮೀಜಿರೇ
॥ ೩೦ ॥

ಕುಶಕಾಶಮಯಂ ಬರ್ಹಿರಾಸ್ತೀರ್ಯ ಭಗವಾನ್ಮನುಃ ।
ಅಯಜದ್ಯಜ್ಞಪುರುಷಂ ಲಬ್ಧಾ ಸ್ಥಾನಂ ಯತೋ ಭುವಮ್
॥ ೩೧ ॥

ಬರ್ಹಿಷ್ಮತೀಂ ನಾಮ ವಿಭುರ್ಯಾಂ ನಿರ್ವಿಶ್ಯ ಸಮಾವಸತ್ ।
ತಸ್ಯಾಂ ಪ್ರವಿಷ್ಟೋ ಭವನಂ ತಾಪತ್ರಯವಿನಾಶನಮ್
॥ ೩೨ ॥

ಈ ಸಂಬಂಧದಲ್ಲಿ ಮಹಾರಾಣಿ ಶತರೂಪಾ ಮತ್ತು ರಾಜಕುಮಾರಿಯ ಸ್ಪಷ್ಟ ಅನುಮತಿಯಿದೆ ಎಂದು ಗಮನಿಸಿ ಮನುವು ಅನೇಕಗುಣಸಂಪನ್ನರಾದ ಕರ್ದಮರಿಗೆ ಅವರಷ್ಟೇ ಗುಣಸಂಪನ್ನಳಾದ ತನ್ನ ಕನ್ಯೆಯನ್ನು ಸಂತೋಷವಾಗಿ ದಾನಮಾಡಿದನು. ॥ ೨೨ ॥ ಮಹಾರಾಣಿ ಶತರೂಪೆಯೂ ಕೂಡ ಮಗಳಿಗೂ – ಅಳಿಯನಿಗೂ ಅತ್ಯಂತ ಪ್ರೇಮ ದಿಂದ ಬಹುಮೂಲ್ಯವಾದ ಅನೇಕ ವಸ್ತ್ರಾಭೂಷಣಗಳನ್ನೂ, ಗೃಹಸ್ಥ ಜೀವನಕ್ಕೆ ಬೇಕಾದ ಪಾತ್ರೆ ಮುಂತಾದುವುಗಳನ್ನು ಬಳುವಳಿಯನ್ನಾಗಿ ಕೊಟ್ಟಳು. ॥ ೨೩ ॥ ಹೀಗೆ ಸುಯೋಗ್ಯನಾದ ವರನಿಗೆ ಕನ್ಯೆಯನ್ನು ಕೊಟ್ಟು ಮನು ಮಹಾರಾಜನು ನಿಶ್ಚಿಂತನಾದನು. ಹೊರಡುವಾಗ ಮಗಳ ಅಗಲಿಕೆಯನ್ನು ಸಹಿಸಲಾರದೆ ದುಃಖದಿಂದ ಆಕೆಯನ್ನು ಎದೆಗೊತ್ತಿಕೊಂಡು ಮಗಳೇ! ಮಗೂ! ಎಂದು ಹೇಳಿ ಅಳತೊಡಗಿದರು. ಕಣ್ಣುಗಳಿಂದ ಹರಿಯುತ್ತಿದ್ದ ಕಣ್ಣೀರಿನ ಪ್ರವಾಹದಿಂದ ಆತನು ದೇವಹೂತಿಯ ತಲೆಗೂದಲನ್ನು ನೆನೆಸಿಬಿಟ್ಟನು. ॥ ೨೪-೨೫ ॥ ಅನಂತರ ಮನುವು ಮುನಿವರ್ಯ ಕರ್ದಮರಲ್ಲಿ ಹೋಗಿ ಬರುವೆನೆಂದು ಹೇಳಿ, ಅವರಿಂದ ಅನುಮತಿಯನ್ನು ಪಡೆದು ಮಹಾರಾಣಿಯೊಂದಿಗೆ ರಥದಲ್ಲಿ ಕುಳಿತು, ತನ್ನ ಸೇವಕರೊಡನೆ ಋಷಿಗಣಗಳಿಂದ ಸೇವಿತನಾದ ಸರಸ್ವತೀನದಿಯ ಎರಡೂ ದಡಗಳಲ್ಲಿದ್ದ ಋಷ್ಯಾಶ್ರಮಗಳ ಸೊಬಗನ್ನು ನೋಡುತ್ತಾ ತನ್ನ ರಾಜಧಾನಿಗೆ ಹೊರಟು ಹೋದನು. ॥ ೨೬-೨೭॥

ತಮ್ಮ ಪ್ರಭುಗಳು ಬರುತ್ತಿರುವ ಸಮಾಚಾರವನ್ನು ತಿಳಿದೊಡನೆ ಬ್ರಹ್ಮಾವರ್ತದ ಪ್ರಜೆಗಳು ಪರಮಾನಂದ ಪುಳಕಿತರಾಗಿ ಸ್ತೋತ್ರ-ಗೀತ ಹಾಗೂ ವಾದ್ಯಧ್ವನಿಗಳೊಡನೆ ಆತನನ್ನು ಸ್ವಾಗತಿಸಲು ರಾಜಧಾನಿಯಿಂದ ಹೊರಗೆ ಬಂದರು. ॥ ೨೮ ॥ ಸಮಸ್ತ ಸಂಪತ್ತುಗಳಿಂದ ಸಂಪನ್ನವಾಗಿದ್ದ 'ಬರ್ಹಿಷ್ಮತಿನಗರ'ವು ಸ್ವಾಯಂಭುವ ಮನುವಿನ ರಾಜಧಾನಿಯಾಗಿತ್ತು. ಭಗವಂತನಾದ ಶ್ರೀವರಾಹಸ್ವಾಮಿಯು ರಸಾತಳದಿಂದ ಭೂಮಿಯನ್ನು ಮೇಲಕ್ಕೆತ್ತಿ ತಂದಾಗ ತನ್ನ ದೇಹವನ್ನು ಕೊಡಹಲು ಅದರಿಂದ ರೋಮಗಳು ಉದುರಿದ ಜಾಗವದು. ॥ ೨೯ ॥ ಆ ರೋಮಗಳೇ ಸದಾ ಹಸಿರು-ಪಚ್ಚೆಯಿಂದ ಶೋಭಿಸುವ 'ಕುಶ' ಮತ್ತು 'ಕಾಶ'ಗಳೆಂಬ ಹುಲ್ಲುಗಳಾದವು. ಅವುಗಳ ಮೂಲಕ ಮುನಿಗಳು ಯಜ್ಞದಲ್ಲಿ ವಿಘ್ನವನ್ನುಂಟು ಮಾಡುತ್ತಿದ್ದ ದೈತ್ಯರನ್ನು ತಿರಸ್ಕರಿಸಿ ಭಗವಾನ್ ಯಜ್ಞಪುರುಷನನ್ನು ಯಜ್ಞಗಳ ಮೂಲಕ ಆರಾಧಿಸಿದ್ದರು. ॥ ೩೦ ॥ ಮನುಸಾರ್ವಭೌಮನೂ ಕೂಡ ಶ್ರೀವರಾಹದೇವರ ಅನುಗ್ರಹದಿಂದ ಭೂಮಿಯೆಂಬ ನಿವಾಸಸ್ಥಾನವು ದೊರೆತ ಬಳಿಕ, ಅದೇ ಜಾಗದಲ್ಲಿ ಕುಶ ಮತ್ತು ಕಾಶಗಳ ಆಸನವನ್ನು ಹರಡಿ ಯಜ್ಞಪುರುಷನನ್ನು ಪೂಜಿಸಿದ್ದನು. ॥ ೩೧ ॥

ಮನುವು ತನ್ನ ನಿವಾಸಸ್ಥಾನವಾದ ಬರ್ಹಿಷ್ಮತಿನಗರಿಯನ್ನು ತಲುಪಿ, ತಾಪತ್ರಯಗಳನ್ನು ಹೋಗಲಾಡಿಸುವ ತನ್ನ ಅರಮನೆಯನ್ನು ಪ್ರವೇಶಮಾಡಿದನು. ॥ ೩೨ ॥ ಅಲ್ಲಿ ಆವನು ತನ್ನ ಭಾರ್ಯೆ ಹಾಗೂ ಸಂತಾನಗಳೊಡನೆ ಧರ್ಮ, ಅರ್ಥ ಮತ್ತು ಮೋಕ್ಷಗಳಿಗೆ ಅನುಕೂಲವಾಗಿರುವ ಭೋಗಗಳನ್ನು ಅನುಭವಿಸತೊಡಗಿದನು.

ಸಭಾರ್ಯಃ ಸಪ್ರಜಃ ಕಾಮಾನ್ಬುಭುಜೇಽನ್ಯಾವಿರೋಧತಃ ।
ಸಂಗೀಯಮಾನಸತ್ಕೀರ್ತಿಃ ಸಸ್ತ್ರೀಭಿಃ ಸುರಗಾಯಕೈಃ ।
ಪ್ರತ್ಯೂಷೇಷ್ವನುಬದ್ಧೇನ ಹೃದಾ ಶೃಣ್ವನ್ ಹರೇಃ ಕಥಾಃ ॥ ೩೩ ॥

ನಿಷ್ಣಾತಂ ಯೋಗಮಾಯಾಸು ಮುನಿಂ ಸ್ವಾಯಂಭುವಂ ಮನುಮ್ ।
ಯದಾ ಭ್ರಂಶಯಿತುಂ ಭೋಗಾ ನ ಶೇಕುರ್ಭಗವತ್ಪರಮ್ ॥ ೩೪ ॥

ಅಯಾತಯಾಮಾಸ್ತಸ್ಯಾಸನ್ ಯಾಮಾಃ ಸ್ವಾಂತರಯಾಪನಾಃ ।
ಶೃಣ್ವತೋ ಧ್ಯಾಯತೋ ವಿಷ್ಣೋಃ ಕುರ್ವತೋ ಬ್ರುವತಃ ಕಥಾಃ ॥ ೩೫ ॥

ಸ ಏವಂ ಸ್ವಾಂತರಂ ನಿನ್ಯೇ ಯುಗಾನಾಮೇಕಸಪ್ತತಿಮ್ ।
ವಾಸುದೇವಪ್ರಸಂಗೇನ ಪರಿಭೂತಗತಿತ್ರಯಃ ॥ ೩೬ ॥

ಶಾರೀರಾ ಮಾನಸಾ ದಿವ್ಯಾ ವೈಯಾಸೇ ಯೇ ಚ ಮಾನುಷಾಃ ।
ಭೌತಿಕಾಶ್ಚ ಕಥಂ ಕ್ಲೇಶಾ ಬಾಧಂತೇ ಹರಿಸಂಶ್ರಯಮ್ ॥ ೩೭ ॥

ಯಃ ಪೃಷ್ಟೋ ಮುನಿಭಿಃ ಪ್ರಾಹ ಧರ್ಮಾನ್ನಾನಾವಿಧಾನ್ ಶುಭಾನ್ ।
ನೃಣಾಂ ವರ್ಣಾಶ್ರಮಾಣಾಂ ಚ ಸರ್ವಭೂತಹಿತಃ ಸದಾ ॥ ೩೮ ॥

ಏತತ್ತ ಆದಿರಾಜಸ್ಯ ಮನೋಶ್ಚರಿತಮದ್ಭುತಮ್ ।
ವರ್ಣಿತಂ ವರ್ಣನೀಯಸ್ಯ ತದಪತ್ಯೋದಯಂ ಶೃಣು ॥ ೩೯॥

ಪ್ರಾತಃಕಾಲವಾದೊಡನೆ ಗಂಧರ್ವರು ತಮ್ಮ ಹೆಂಡಿರೊಡನೆ ಆತನ ಕೀರ್ತಿಯನ್ನು ಕೊಂಡಾಡುತ್ತಿದ್ದರು. ಆದರೆ ಆತನು ಅದರಲ್ಲಿ ಆಸಕ್ತಿ ತೋರದೆ ಪ್ರೇಮಪೂರ್ಣವಾದ ಹೃದಯದಿಂದ ಶ್ರೀಹರಿಯ ಕಥೆಗಳನ್ನೇ ಕೇಳುತ್ತಿದ್ದನು. ॥ ೩೩ ॥ ಆ ಮನುವು ಇಷ್ಟಬಂದ ಭೋಗಗಳನ್ನು ನಿರ್ಮಿಸುವ ಸಾಮರ್ಥ್ಯವನ್ನು ಹೊಂದಿದ್ದನು. ಆದರೆ ಮನನಶೀಲನೂ, ಭಗವತ್‌ಪರಾಯಣನೂ ಆದ ಆ ಯೋಗಿಯನ್ನು ಭೋಗಗಳು ಕಿಂಚಿತ್ತಾದರೂ ಕದಲಿಸದೆ ಹೋದುವು. ॥ ೩೪ ॥ ತನ್ನ ಮನ್ವಂತರವೆಂಬ ಕಾಲದಲ್ಲಿ ಒಂದು ಕ್ಷಣಕಾಲವನ್ನು ಅವನು ವ್ಯರ್ಥಮಾಡುತ್ತಿರಲಿಲ್ಲ. ಶ್ರೀಮಹಾವಿಷ್ಣುವಿನ ಕಥೆಗಳನ್ನು ಕೇಳುವುದರಲ್ಲಿಯೂ, ಧ್ಯಾನಿಸುವುದರಲ್ಲಿಯೂ, ರಚಿಸುವುದರಲ್ಲಿಯೂ, ನಿರೂಪಿಸುವುದರಲ್ಲಿಯೂ, ಎಲ್ಲ ಕಾಲವನ್ನು ಸದುಪಯೋಗ ಪಡಿಸುತ್ತಿದ್ದನು. ॥ ೩೫ ॥ ಹೀಗೆ ಅವನು ತನ್ನ ಜಾಗ್ರತ್, ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳನ್ನೂ, ಸತ್ತ್ವ, ರಜ, ತಮಗಳೆಂಬ ತ್ರಿಗುಣಗಳನ್ನು ತಿರಸ್ಕರಿಸಿ ತ್ರಿಗುಣಾತೀತನಾಗಿ ಶ್ರೀವಾಸುದೇವನ ಕಥಾಪ್ರಸಂಗದಲ್ಲೇ ಇರುತ್ತಾ ತನ್ನ ಮನ್ವಂತರದ ಎಪ್ಪತ್ತೊಂದು ಚತುರ್ಯುಗಗಳನ್ನು ಸಫಲವಾಗಿ ಕಳೆದನು. ॥ ೩೬ ॥ ವ್ಯಾಸಪುತ್ರನಾದ ವಿದುರನೇ! ಶ್ರೀಹರಿಯನ್ನು ಆಶ್ರಯಿಸಿರುವ ಸುಕೃತಿಯನ್ನು ಶಾರೀರಿಕ, ಮಾನಸಿಕ, ದೈವಿಕ, ಮಾನುಷಿಕ ಅಥವಾ ಭೌತಿಕ ದುಃಖಗಳು ಹೇಗೆ ತಾನೇ ಕಾಡಿಸಿಯಾವು. ॥ ೩೭ ॥ ಮಹಾಪುರುಷನಾದ ಮನುವು ಸಮಸ್ತ ಪ್ರಾಣಿಗಳ ಹಿತದಲ್ಲೇ ತೊಡಗಿರುತ್ತಿದ್ದನು. ಮುನಿಗಳು ಆತನನ್ನು ಪ್ರಶ್ನಿಸಿದಾಗ ಆ ಧರ್ಮಜ್ಞ ಪ್ರಭುವು – ಮನುಷ್ಯರಿಗೂ ಹಾಗೂ ಎಲ್ಲ ವರ್ಣಗಳಿಗೂ, ಆಶ್ರಮಗಳಿಗೂ ಸಂಬಂಧಪಟ್ಟ ಅನೇಕ ಮಂಗಲಮಯ ಧರ್ಮಗಳನ್ನೂ ವರ್ಣಿಸಿದನು. (ಅದು 'ಮನುಸಂಹಿತಾ' ಎಂಬ ಗ್ರಂಥದ ರೂಪದಲ್ಲಿ ಈಗಲೂ ಉಪಲಬ್ಧವಾಗಿದೆ.) ॥ ೩೮ ॥

ಜಗತ್ತಿನ ಮೊಟ್ಟಮೊದಲನೆಯ ಚಕ್ರವರ್ತಿಯೂ, ಪುರುಷಶ್ರೇಷ್ಠನೂ ಪುಣ್ಯಶ್ಲೋಕನೂ ಆದ ಸ್ವಾಯಂಭುವ ಮನುವಿನ ಅದ್ಭುತ ಚರಿತ್ರೆಯನ್ನು ನಾನು ನಿನಗೆ ವರ್ಣಿಸಿರುವೆನು. ಈಗ ಆತನ ಕನ್ಯಾರತ್ನವಾದ ದೇವಹೂತಿಯ ಮಹಿಮೆಯನ್ನು ಕೇಳುವವನಾಗು. ॥ ೩೯ ॥

*ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೨೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ದ್ವಾವಿಂಶೋಽಧ್ಯಾಯಃ ॥ ೨೨ ॥

# ಇಪ್ಪತ್ತಮೂರನೆಯ ಅಧ್ಯಾಯ

## ಕರ್ದಮ-ದೇವಹೂತಿಯರ ವಿಹಾರ

*ಮೈತ್ರೇಯ ಉವಾಚ*

ಪಿತೃಭ್ಯಾಂ ಪ್ರಸ್ಥಿತೇ ಸಾಧ್ವೀ ಪತಿಮಿಂಗಿತಕೋವಿದಾ ।
ನಿತ್ಯಂ ಪರ್ಯಚರತ್ಪ್ರೀತ್ಯಾ ಭವಾನೀವ ಭವಂ ಪ್ರಭುಮ್ ॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ತಂದೆ-ತಾಯಿಗಳು ಹೊರಟುಹೋದ ಬಳಿಕ ಪತಿಯ ಇಂಗಿತವನ್ನು ತಿಳಿಯುವುದರಲ್ಲಿ ಕುಶಲೆಯಾದ, ಸಾಧ್ವೀಮಣಿ ದೇವಹೂತಿಯು ಶ್ರೀಪಾರ್ವತೀದೇವಿಯು ಪರಶಿವನನ್ನು ಪೂಜಿಸುವಂತೆ ಪ್ರತಿದಿನವೂ ಪ್ರೇಮಪೂರ್ವಕವಾಗಿ ಪತಿಯಸೇವೆ, ಶುಶ್ರೂಷೆಗಳನ್ನು ಮಾಡತೊಡಗಿದಳು. ॥ ೧ ॥

ವಿಶ್ರಮ್ಭೇಣಾತ್ಮಶೌಚೇನ ಗೌರವೇಣ ದಮೇನ ಚ ।
ಶುಶ್ರೂಷಯಾ ಸೌಹೃದೇನ ವಾಚಾ ಮಧುರಯಾ ಚ ಭೋಃ ॥ ೨ ॥

ವಿಸೃಜ್ಯ ಕಾಮಂ ದಂಭಂ ಚ ದ್ವೇಷಂ ಲೋಭಮಘಂ ಮದಮ್ ।
ಅಪ್ರಮತ್ತೋದ್ಯತಾ ನಿತ್ಯಂ ತೇಜೀಯಾಂಸಮತೋಷಯತ್ ॥ ೩ ॥

ಸ ವೈ ದೇವರ್ಷಿವರ್ಯಸ್ತಾಂ ಮಾನವೀಂ ಸಮನುವ್ರತಾಮ್ ।
ದೈವಾದ್ಗರೀಯಸಃ ಪತ್ಯುರಾಶಾಸಾನಾಂ ಮಹಾಶಿಷಃ ॥ ೪ ॥

ಕಾಲೇನ ಭೂಯಸಾ ಕ್ಷಾಮಾಂ ಕರ್ಶಿತಾಂ ವ್ರತಚರ್ಯಯಾ ।
ಪ್ರೇಮಗದ್ಗದಯಾ ವಾಚಾ ಪೀಡಿತಃ ಕೃಪಯಾಬ್ರವೀತ್ ॥ ೫ ॥

*ಕರ್ದಮ ಉವಾಚ*

ತುಷ್ಟೋಽಹಮದ್ಯ ತವ ಮಾನವಿ ಮಾನದಾಯಾಃ
ಶುಶ್ರೂಷಯಾ ಪರಮಯಾ ಪರಯಾ ಚ ಭಕ್ತ್ಯಾ ।
ಯೋ ದೇಹಿನಾಮಯಮತೀವ ಸುಹೃತ್ಸ್ವದೇಹೋ
ನಾವೇಕ್ಷಿತಃ ಸಮುಚಿತಃ ಕ್ಷಪಿತುಂ ಮದರ್ಥೇ ॥ ೬ ॥

ಯೇ ಮೇ ಸ್ವಧರ್ಮನಿರತಸ್ಯ ತಪಃಸಮಾಧಿ-
ವಿದ್ಯಾತ್ಮಯೋಗವಿಜಿತಾ ಭಗವತ್ಪ್ರಸಾದಾಃ ।
ತಾನೇವ ತೇ ಮದನುಸೇವನಯಾವರುದ್ಧಾನ್
ದೃಷ್ಟಿಂ ಪ್ರಪಶ್ಯ ವಿತರಾಮ್ಯಭಯಾನಶೋಕಾನ್ ॥ ೭ ॥

ಅನ್ಯೇ ಪುನರ್ಭಗವತೋ ಭ್ರುವ ಉದ್ವಿಜೃಂಭ-
ವಿಭ್ರಂಶಿತಾರ್ಥರಚನಾಃ ಕಿಮುರುಕ್ರಮಸ್ಯ ।
ಸಿದ್ಧಾಸಿ ಭುಂಕ್ಷ್ವ ವಿಭವಾನ್ನಿಜಧರ್ಮದೋಹಾನ್
ದಿವ್ಯಾನ್ನರೈರ್ದುರಧಿಗಾನ್ನೃಪವಿಕ್ರಿಯಾಭಿಃ ॥ ೮ ॥

ಏವಂ ಬ್ರುವಾಣಮಬಲಾಖಿಲಯೋಗಮಾಯಾ-
ವಿದ್ಯಾವಿಚಕ್ಷಣಮವೇಕ್ಷ್ಯ ಗತಾಧಿರಾಸೀತ್ ।
ಸಂಪ್ರಶ್ರಯಪ್ರಣಯವಿಹ್ವಲಯಾ ಗಿರೇಷದ್
ವ್ರೀಡಾವಲೋಕವಿಲಸದ್ಧಸಿತಾನನಾಽಽಹ ॥ ೯ ॥

ಅವಳು ಕಾಮವಾಸನೆಯನ್ನೂ, ದಂಭವನ್ನೂ, ದ್ವೇಷವನ್ನೂ, ಲೋಭವನ್ನೂ, ಪಾಪವನ್ನೂ, ಮದವನ್ನೂ ಪರಿತ್ಯಜಿಸಿ ಬಹಳ ಎಚ್ಚರಿಕೆಯಿಂದಲೂ, ಆಸಕ್ತಿಯಿಂದಲೂ ಪತಿಸೇವೆಯಲ್ಲಿ ತತ್ಪರಳಾಗಿದ್ದು ವಿಶ್ವಾಸ, ಪರಿಶುದ್ಧಿ, ಪಾವಿತ್ರ್ಯ, ಗೌರವ, ಸಂಯಮ, ಶುಶ್ರೂಷೆ, ಒಲವು, ಸವಿಮಾತು ಮುಂತಾದ ಸದ್ಗುಣ-ಸದಾಚಾರಗಳಿಂದ ಪರಮ ತೇಜಸ್ವಿಯಾದ ಪತಿದೇವರನ್ನು ಸಂತೋಷಪಡಿಸಿದಳು. ॥ ೨-೩ ॥ ದೇವಹೂತಿಯು ಪತಿಯನ್ನು ದೇವರಿಗಿಂತಲೂ ಹೆಚ್ಚೆಂದು ಭಾವಿಸಿ ಆತನ ಮಹಾಶೀರ್ವಾದಗಳನ್ನು ಬಯಸುತ್ತಾ, ಅವನ ಸೇವೆಯಲ್ಲೇ ತತ್ಪರಳಾಗಿದ್ದಳು. ಈ ಪ್ರಕಾರ ಬಹಳ ದಿನಗಳವರೆಗೂ ತನ್ನನ್ನು ಅನುವರ್ತಿಸುತ್ತಾ, ವ್ರತಾದಿಗಳನ್ನು ಆಚರಿಸಿದ್ದರಿಂದ ಆ ರಾಜಪುತ್ರಿಯು ದುರ್ಬಲಳಾಗಿದ್ದುದನ್ನು ಕಂಡ ಕರ್ದಮರು ಕನಿಕರದಿಂದ ಕೂಡಿ ನೊಂದುಕೊಂಡು ಪ್ರೇಮದಿಂದ ಗದ್ಗದವಾದ ವಾಣಿಯಿಂದ ಆಕೆಗೆ ಇಂತೆಂದರು. ॥ ೪-೫ ॥

**ಕರ್ದಮರು ಹೇಳಿದರು** – ಮನುನಂದಿನಿ! ನೀನು ನನ್ನಲ್ಲಿ ತೋರಿದ ಪ್ರೀತ್ಯಾದರಗಳಿಂದ, ಮಾಡಿದ ಪರಮ ಶುಶ್ರೂಷೆಯಿಂದ, ಇಟ್ಟ ಪರಮಭಕ್ತಿಯಿಂದ ನಾನು ಬಹಳ ಸಂತೋಷವಾಗಿದ್ದೇನೆ. ಎಲ್ಲ ದೇಹಧಾರಿಗಳಿಗೂ ತಮ್ಮ ಶರೀರದಲ್ಲಿ ಅತೀವ ಪ್ರೀತಿ ಹಾಗೂ ಆದರವಿರುತ್ತದೆ. ಆದರೆ ನೀನು ನನ್ನ ಸೇವೆಯ ಮುಂದೆ ಶರೀರವು ಕ್ಷೀಣಿಸುವುದನ್ನು ಲೆಕ್ಕಿಸಲಿಲ್ಲ. ॥ ೬ ॥ ಅದರಿಂದ ಸ್ವಧರ್ಮಪಾಲನೆಯಾದ ತಪಸ್ಸು, ಸಮಾಧಿ, ಉಪಾಸನೆ, ಯೋಗ ಮುಂತಾದವುಗಳ ಮೂಲಕ ನಾನು ಭಯ-ಶೋಕರಹಿತವಾದ ವಿಭೂತಿ (ಸಿದ್ಧಿ)ಗಳನ್ನು ಭಗವದನುಗ್ರಹದಿಂದ ಸಂಪಾದಿಸಿರುವೆನು. ಅವುಗಳ ಮೇಲೆ ನೀನು ನಿನ್ನ ಸೇವಾಯೋಗದಿಂದ ಅಧಿಕಾರವನ್ನು ಗಳಿಸಿದ್ದೀಯೆ. ನಾನು ನಿನಗೆ ದಿವ್ಯ ದೃಷ್ಟಿಯನ್ನು ಕೊಡುತ್ತೇನೆ. ಅದರಿಂದ ನೀನು ಅವುಗಳನ್ನು ನೋಡುವವಳಾಗು. ॥ ೭ ॥ ಇತರ ಭೋಗಗಳಾದರೋ ಭಗವಾನ್ ಶ್ರೀಹರಿಯ ಭ್ರುಕುಟಿವಿಲಾಸ ಮಾತ್ರದಿಂದ ನಾಶವಾಗಿ ಹೋಗುತ್ತವೆ. ಆದ್ದರಿಂದ ಅವುಗಳು ನಾನು ತೋರುವ ಈ ವಿಭೂತಿಗಳ ಮುಂದೆ ಏನೂ ಅಲ್ಲ. ನೀನು ನನ್ನ ಸೇವೆಯಿಂದ ಕೃತಕೃತ್ಯಳಾಗಿರುವೆ. ಪಾತಿವ್ರತ್ಯ ಧರ್ಮವನ್ನು ಪಾಲಿಸಿದ್ದರಿಂದ ನಿನಗೆ ಈ ದಿವ್ಯಭೋಗಗಳು ದೊರಕಿವೆ. ನೀನು ಇವುಗಳನ್ನು ಭೋಗಿಸಬಹುದು. 'ನಾವು ರಾಜರು, ನಮಗೆ ಎಲ್ಲವೂ ಸುಲಭವಾಗಿದೆ' ಎಂಬ ದುರಭಿಮಾನವೇ ಮುಂತಾದ ವಿಕಾರಗಳು ಇರುವ ಮನುಷ್ಯರಿಗೆ ಈ ದಿವ್ಯಭೋಗಗಳು ದೊರೆಯಲಾರವು. ॥ ೮ ॥

ಕರ್ದಮರು ಹೀಗೆ ಹೇಳಲು, ತನ್ನ ಪತಿಯು ಸಂಪೂರ್ಣವಾದ ಯೋಗಮಾಯೆಗಳಲ್ಲೂ, ವಿದ್ಯೆಗಳಲ್ಲಿಯೂ ನಿಷ್ಣಾತರೆಂದು ಅರಿತು ಆ ಅಬಲೆಯ ಸರ್ವಚಿಂತೆಗಳು ದೂರವಾದುವು. ಆಕೆಯ ಮುಖವು ಸ್ವಲ್ಪ ಸಂಕೋಚದಿಂದ ತುಂಬಿದ ದೃಷ್ಟಿಯಿಂದಲೂ, ಮಧುರವಾದ ಮುಗುಳ್ನಗೆಯಿಂದಲೂ ಅರಳಿತು. ವಿನಯ ಮತ್ತು ಪ್ರೀತಿಯಿಂದ ಗದ್ಗದವಾದ ವಾಣಿಯಿಂದ ತನ್ನ ಪತಿಯಲ್ಲಿ ಹೀಗೆಂದಳು. ॥ ೯ ॥

*ದೇವಹೂತಿರುವಾಚ*

ರಾದ್ಧಂ ಬತ ದ್ವಿಜವೃಷೈತದಮೋಘಯೋಗ-
ಮಾಯಾಧಿಪೇ ತ್ವಯಿ ವಿಭೋ ತದವೈಮಿ ಭರ್ತಃ ।
ಯಸ್ತೇಽಭ್ಯಧಾಯಿ ಸಮಯಃ ಸಕೃದಂಗಸಂಗೋ
ಭೂಯಾದ್ಗರೀಯಸಿ ಗುಣಃ ಪ್ರಸವಃ ಸತೀನಾಮ್ ॥ ೧೦ ॥

ತತ್ರೇತಿಕೃತ್ಯಮುಪಶಿಕ್ಷ ಯಥೋಪದೇಶಂ
ಯೇನೈಷ ಮೇ ಕರ್ಶಿತೋಽತಿರಿರಂಸಯಾಽಽತ್ಮಾ ।
ಸಿದ್ಧ್ಯೇತ ತೇ ಕೃತಮನೋಭವಧರ್ಷಿತಾಯಾ
ದೀನಸ್ತದೀಶ ಭವನಂ ಸದೃಶಂ ವಿಚಕ್ಷ್ವ ॥ ೧೧ ॥

*ಮೈತ್ರೇಯ ಉವಾಚ*

ಪ್ರಿಯಾಯಾಃ ಪ್ರಿಯಮನ್ವಿಚ್ಛನ್ಕರ್ದಮೋ ಯೋಗಮಾಸ್ಥಿತಃ ।
ವಿಮಾನಂ ಕಾಮಗಂ ಕ್ಷತ್ತಸ್ತರ್ಹ್ಯೇವಾವಿರಚೀಕರತ್ ॥ ೧೨ ॥

ಸರ್ವಕಾಮದುಘಂ ದಿವ್ಯಂ ಸರ್ವರತ್ನ ಸಮನ್ವಿತಮ್ ।
ಸರ್ವರ್ದ್ಧ್ಯುಪಚಯೋದರ್ಕಂ ಮಣಿಸ್ತಮ್ಭೈರುಪಸ್ಕೃತಮ್ ॥ ೧೩ ॥

ದಿವ್ಯೋಪಕರಣೋಪೇತಂ ಸರ್ವಕಾಲಸುಖಾವಹಮ್ ।
ಪಟ್ಟಿಕಾಭಿಃ ಪತಾಕಾಭಿರ್ವಿಚಿತ್ರಾಭಿರಲಂಕೃತಮ್ ॥ ೧೪ ॥

ಸ್ರಗ್ಭಿರ್ವಿಚಿತ್ರಮಾಲ್ಯಾಭಿರ್ಮಂಜುಶಿಂಜತ್ಷಡಂಘ್ರಿಭಿಃ ।
ದುಕೂಲಕ್ಷೌಮಕೌಶೇಯೈರ್ನಾನಾವಸ್ತ್ರೈರ್ವಿರಾಜಿತಮ್ ॥ ೧೫ ॥

ಉಪರ್ಯುಪರಿ ವಿನ್ಯಸ್ತನಿಲಯೇಷು ಪೃಥಕ್ಪೃಥಕ್ ।
ಕ್ಷಿಪ್ತೈಃ ಕಶಿಪುಭಿಃ ಕಾಂತಂ ಪರ್ಯಂಕ ವ್ಯಜನಾಸನೈಃ ॥ ೧೬ ॥

ತತ್ರ ತತ್ರ ವಿನಿಕ್ಷಿಪ್ತನಾನಾಶಿಲ್ಪೋಪಶೋಭಿತಮ್ ।
ಮಹಾಮರಕತಸ್ಥಲ್ಯಾ ಜುಷ್ಟಂ ವಿದ್ರುಮವೇದಿಭಿಃ ॥ ೧೭ ॥

ದ್ವಾಃಸು ವಿದ್ರುಮದೇಹಲ್ಯಾ ಭಾತಂ ವಜ್ರಕಪಾಟವತ್ ।
ಶಿಖರೇಷ್ವಿಂದ್ರನೀಲೇಷು ಹೇಮಕುಂಭೈರಧಿಶ್ರಿತಮ್ ॥ ೧೮ ॥

**ದೇವಹೂತಿಯು ಹೇಳಿದಳು** – "ಬ್ರಾಹ್ಮಣಶ್ರೇಷ್ಠರೇ! ಪತಿದೇವಾ! ಎಂದಿಗೂ ವಿಫಲವಾಗದಿರುವ ಯೋಗಶಕ್ತಿ ಮತ್ತು ತ್ರಿಗುಣಾತ್ಮಕವಾದ ಮಾಯೆಯ ಮೇಲೆ ಅಧಿಕಾರ ಹೊಂದಿರುವ ನಿಮಗೆ ಈ ಐಶ್ವರ್ಯಗಳೆಲ್ಲವೂ ಇವೆಯೆಂದು ನಾನು ಬಲ್ಲೆನು. ಆದರೆ ವಿವಾಹ ಸಮಯದಲ್ಲಿ ನೀವು – 'ಗರ್ಭಾಧಾನವಾಗುವವರೆಗೆ ನಾನು ನಿನ್ನೊಡನೆ ಗೃಹಸ್ಥಸುಖಗಳನ್ನು ಅನುಭವಿಸುವೆನು' ಎಂದು ಪ್ರತಿಜ್ಞೆ ಮಾಡಿದುದನ್ನು ಈಗ ನೆರವೇರಿಸಿಕೊಡಬೇಕು. ಏಕೆಂದರೆ, ಶ್ರೇಷ್ಠನಾದ ಪತಿಯಿಂದ ಸಂತಾನವನ್ನು ಪಡೆಯುವುದೇ ಪತಿವ್ರತಾ ಸ್ತ್ರೀಯರಿಗೆ ಪರಮಲಾಭವು. ॥ ೧೦ ॥ ನಮ್ಮಿಬ್ಬರ ಸಮಾಗಮಕ್ಕೆ ಶಾಸ್ತ್ರಾನುಸಾರವಾಗಿ ಮಾಡಬೇಕಾದ ಕರ್ತವ್ಯಗಳನ್ನು ತಾವು ಉಪದೇಶ ಮಾಡಿರಿ. ಗಂಧ, ಮಾಲ್ಯ, ಲೇಪನ, ಭೋಜನ – ಮುಂತಾದ ಉಪಯುಕ್ತ ಸಾಮಗ್ರಿಗಳನ್ನು ಸೇರಿಸಿರಿ. ನಿಮ್ಮ ಸಂಗವನ್ನು ಬಯಸುವ ನನ್ನ ಈ ದುರ್ಬಲವಾದ ಶರೀರವು ನಿಮ್ಮ ಅಂಗಸಂಗಕ್ಕೆ ಯೋಗ್ಯವಾಗಬೇಕಲ್ಲ! ನೀವೇ ಹೆಚ್ಚಿಸಿರುವ ಕಾಮದಿಂದ ನಾನು ಪೀಡಿತಳಾಗಿರುವೆನು. ಸ್ವಾಮಿ! ಇದಕ್ಕೆ ಯೋಗ್ಯವಾದ ಒಂದು ಭವ್ಯಭವನವೂ ನಿರ್ಮಾಣವಾಗುವಂತೆ ತಾವು ವಿಚಾರ ಮಾಡಿರಿ." ॥ ೧೧ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಕೇಳು. ಕರ್ದಮ ಮಹರ್ಷಿಗಳು ತನ್ನ ಇನಿಯಳ ಇಚ್ಛೆಯನ್ನು ಈಡೇರಿಸಲು ಒಡನೆಯೇ ಯೋಗದಲ್ಲಿ ಸ್ಥಿತನಾಗಿ, ಇಷ್ಟಾನುಸಾರವಾಗಿ ಎಲ್ಲೆಡೆ ಸಂಚರಿಸುವಂತಹ ಒಂದು ದಿವ್ಯ ವಿಮಾನವನ್ನು ರಚಿಸಿದರು. ॥ ೧೨ ॥ ಆ ವಿಮಾನವು ಎಲ್ಲ ಇಷ್ಟಾರ್ಥಭೋಗಗಳನ್ನು ಈಡೇರಿಸುತ್ತಿತ್ತು. ಅದು ಅತ್ಯಂತ ಸುಂದರವಾಗಿದ್ದು, ಎಲ್ಲ ರೀತಿಯ ರತ್ನಗಳಿಂದ ಕೂಡಿದ್ದು ಎಲ್ಲ ಸಂಪತ್ತುಗಳು ಉತ್ತರೋತ್ತರ ವೃದ್ಧಿಯಿಂದ ಸಂಪನ್ನವಾಗಿತ್ತು. ರತ್ನಮಯ ಕಂಬಗಳಿಂದ ಅತ್ಯಂತ ಶೋಭಾಯಮಾನವಾಗಿತ್ತು. ॥ ೧೩ ॥ ಅದು ಎಲ್ಲ ಋತುಗಳಲ್ಲಿಯೂ ಸುಖವನ್ನುಂಟುಮಾಡುವ ಅದ್ಭುತವಾದ ವಿಮಾನ. ಎಲ್ಲೆಡೆಗಳಲ್ಲೂ ಬಗೆ-ಬಗೆಯ ದಿವ್ಯಸಾಮಗ್ರಿಗಳಿಂದ ಕೂಡಿದ್ದು ಚಿತ್ರ-ವಿಚಿತ್ರವಾದ ರೇಶ್ಮೆಯ ಧ್ವಜ-ಪತಾಕೆಗಳಿಂದ ಸಿಂಗರಿಸಲ್ಪಟ್ಟಿತ್ತು. ॥ ೧೪ ॥ ಮಧುರವಾಗಿ ಝೇಂಕರಿಸುವ ದುಂಬಿಗಳ ಹಿಂಡಿನಿಂದ ಕೂಡಿದ ಬಣ್ಣ-ಬಣ್ಣದ ಪುಷ್ಪಮಾಲೆಗಳಿಂದಲೂ, ನಾನಾ-ಪ್ರಕಾರದ ರೇಶ್ಮೆ, ನಾರು, ನೂಲುಗಳ ಪಟ್ಟೆ ಮಡಿವಸ್ತ್ರಗಳಿಂದಲೂ ಅದು ಅತ್ಯಂತ ಶೋಭಾಯಮಾನವಾಗಿತ್ತು. ॥ ೧೫ ॥ ಒಂದರ ಮೇಲೊಂದು ನಿರ್ಮಿತವಾಗಿದ್ದ ಕೊಠಡಿಗಳಲ್ಲಿ ಬೇರೆ-ಬೇರೆಯಾಗಿ ಹಾಸಲ್ಪಟ್ಟಿದ್ದ ಹಾಸಿಗೆಗಳು, ಮಂಚಗಳು, ಬೀಸಣಿಗೆಗಳು ಮತ್ತು ಆಸನಗಳಿಂದ ಕೂಡಿ ಅತ್ಯಂತ ರಮಣೀಯವಾಗಿತ್ತು. ॥ ೧೬॥ ಅಲ್ಲಲ್ಲಿ ಗೋಡೆಗಳಲ್ಲಿ ಕೆತ್ತಲ್ಪಟ್ಟ ಸುಂದರ ಕೆತ್ತನೆ ಶಿಲ್ಪಗಳಿಂದ ಅದು ಅಪೂರ್ವವಾಗಿ ಶೋಭಿಸುತ್ತಿತ್ತು. ಅದರಲ್ಲಿ ಮರಕತಮಣಿಯ ನೆಲವನ್ನೂ, ಕುಳಿತುಕೊಳ್ಳಲು ಯೋಗ್ಯವಾದ ಹವಳದ ವೇದಿಕೆಗಳನ್ನು ನಿರ್ಮಿಸಿದ್ದರು. ॥ ೧೭ ॥ ಬಾಗಿಲುಗಳು ಹವಳದ ಹೊಸ್ತಿಲುಗಳಿಂದಲೂ, ವಜ್ರದ ಕವಾಟಗಳಿಂದಲೂ ವಿರಾಜಿಸುತ್ತಿದ್ದವು. ಇಂದ್ರನೀಲಮಣಿಗಳ ಶಿಖರಗಳ ಮೇಲೆ ಚಿನ್ನದ ಕಲಶಗಳು ಹೊಳೆಯುತ್ತಿದ್ದವು. ॥ ೧೮ ॥

ಚಕ್ಷುಷ್ಮತ್ಪದ್ಮರಾಗಾಗ್ರ್ಯೈರ್ವಜ್ರಭಿತ್ತಿಷು ನಿರ್ಮಿತೈಃ ।
ಜುಷ್ಟಂ ವಿಚಿತ್ರವೈತಾನೈರ್ಮಹಾರ್ಹೈರ್ಹೇಮತೋರಣೈಃ
॥ ೧೯ ॥

ಹಂಸಪಾರಾವತವ್ರಾತೈಸ್ತತ್ರ ತತ್ರ ನಿಕೂಜಿತಮ್ ।
ಕೃತ್ರಿಮಾನ್ ಮನ್ಯಮಾನೈಃ ಸ್ವಾನಧಿರುಹ್ಯಾಧಿರುಹ್ಯ ಚ
॥ ೨೦ ॥

ವಿಹಾರಸ್ಥಾನವಿಶ್ರಾಮಸಂವೇಶಪ್ರಾಂಗಣಾಜಿರೈಃ ।
ಯಥೋಪಜೋಷಂ ರಚಿತೈರ್ವಿಸ್ಮಾಪನಮಿವಾತ್ಮನಃ
॥ ೨೧ ॥

ಈದೃಗ್ಗೃಹಂ ತತ್ಪಶ್ಯಂತೀಂ ನಾತಿಪ್ರೀತೇನ ಚೇತಸಾ ।
ಸರ್ವಭೂತಾಶಯಾಭಿಜ್ಞಃ ಪ್ರಾವೋಚತ್ಕರ್ದಮಃ ಸ್ವಯಮ್
॥ ೨೨ ॥

ನಿಮಜ್ಜ್ಯಾಸ್ಮಿನ್ ಹ್ರದೇ ಭೀರು ವಿಮಾನಮಿದಮಾರುಹ ।
ಇದಂ ಶುಕ್ಲಕೃತಂ ತೀರ್ಥಮಾಶಿಷಾಂ ಯಾಪಕಂ ನೃಣಾಮ್
॥ ೨೩ ॥

ಸಾ ತದ್ಭರ್ತುಃ ಸಮಾದಾಯ ವಚಃ ಕುವಲಯೇಕ್ಷಣಾ ।
ಸರಜಂ ಬಿಭ್ರತೀ ವಾಸೋ ವೇಣೀಭೂತಾಂಶ್ಚ ಮೂರ್ಧಜಾನ್
॥ ೨೪ ॥

ಅಂಗಂ ಚ ಮಲಪಂಕೇನ ಸಂಛನ್ನಂ ಶಬಲಸ್ತನಮ್ ।
ಆವಿವೇಶ ಸರಸ್ವತ್ಯಾಃ ಸರಃ ಶಿವಜಲಾಶಯಮ್
॥ ೨೫ ॥

ಸಾಂತಃಸರಸಿ ವೇಶ್ಮಸ್ಥಾಃ ಶತಾನಿ ದಶ ಕನ್ಯಕಾಃ ।
ಸರ್ವಾಃ ಕಿಶೋರವಯಸೋ ದದರ್ಶೋತ್ಪಲಗಂಧಯಃ
॥ ೨೬ ॥

ತಾಂ ದೃಷ್ಟ್ವಾ ಸಹಸೋತ್ಥಾಯ
ಪ್ರೋಚುಃ ಪ್ರಾಂಜಲಯಃ ಸ್ತ್ರಿಯಃ ।
ವಯಂ ಕರ್ಮಕರೀಸ್ತುಭ್ಯಂ
ಶಾಧಿ ನಃ ಕರವಾಮ ಕಿಮ್ ॥ ೨೭ ॥

ಸ್ನಾನೇನ ತಾಂ ಮಹಾರ್ಹೇಣ ಸ್ನಾಪಯಿತ್ವಾ ಮನಸ್ವಿನೀಮ್ ।
ದುಕೂಲೇ ನಿರ್ಮಲೇ ನೂತ್ನೇ ದದುರಸ್ಯೈ ಚ ಮಾನದಾಃ
॥ ೨೮ ॥

ಭೂಷಣಾನಿ ಪರಾರ್ಧ್ಯಾನಿ ವರೀಯಾಂಸಿ ದ್ಯುಮಂತಿ ಚ ।
ಅನ್ನಂ ಸರ್ವಗುಣೋಪೇತಂ ಪಾನಂ ಚೈವಾಮೃತಾಸವಮ್
॥ ೨೯ ॥

ಅದರ ವಜ್ರಮಣಿಯ ಗೋಡೆಗಳಲ್ಲಿ ಕೋದ ಥಳ-ಥಳಿಸುವ ಪದ್ಮರಾಗಮಣಿಗಳು ವಿಮಾನದ ಕಣ್ಣುಗಳಂತೆ ಕಂಗೊಳಿಸುತ್ತಿದ್ದವು. ಬಹುಮೂಲ್ಯವಾದ ಚಿತ್ರ-ವಿಚಿತ್ರವಾದ ತೋರಣಗಳಿಂದಲೂ, ಚಿನ್ನದ ಮೇಲ್ಕಟ್ಟುಗಳಿಂದಲೂ ಆ ವಿಮಾನವು ಮನೋಹರ ವಾಗಿತ್ತು. ॥ ೧೯ ॥ ಆ ವಿಮಾನದಲ್ಲಿ ಅಲ್ಲಲ್ಲಿ ಅತಿಸುಂದರವಾದ ಕೃತ್ರಿಮ ಹಂಸಗಳೂ, ಪಾರಿವಾಳಗಳೂ ನಿರ್ಮಿಸಿದ್ದರು. ಅವು ಗಳನ್ನು ಸಜೀವಪಕ್ಷಿಗಳೆಂದೇ ಭ್ರಮಿಸಿ ಬಹುಸಂಖ್ಯೆಯಲ್ಲಿ ಜೀವಂತ ಹಂಸಗಳೂ – ಪಾರಿವಾಳಗಳೂ ಅವುಗಳ ಬಳಿಯಲ್ಲಿ ಕುಳಿತು ತಮ್ಮ ಧ್ವನಿಗಳಿಂದ ಕೂಗಿಡುತ್ತಿದ್ದವು. ॥ ೨೦ ॥ ಅದರಲ್ಲಿ ಆವಶ್ಯಕತೆ ಗನುಸಾರ ಆಟದ ಉದ್ಯಾನಗಳೂ, ಶಯನಗೃಹಗಳೂ, ಕುಳಿತು ಕೊಳ್ಳುವ ಸ್ಥಾನಗಳಿಂದಲೂ, ಅಂಗಳಗಳಿಂದಲೂ, ಹಜಾರಗ ಳಿಂದಲೂ ರಾರಾಜಿಸುತ್ತಿತ್ತು. ಅದನ್ನು ತನ್ನ ಸಿದ್ಧಿಯಿಂದ ನಿರ್ಮಿಸಿದ ಕರ್ದಮರನ್ನು ಬೆರಗುಗೊಳಿಸುವಂತಿತ್ತು ಆ ವಿಮಾನವು. ॥ ೨೧ ॥

ಇಂತಹ ಸುಂದರವಾದ ಭವನವನ್ನು (ವಿಮಾನವನ್ನು) ನೋಡಿದರೂ ದೇವಹೂತಿಗೆ ಮನಸ್ಸಿನಲ್ಲಿ ಪ್ರಸನ್ನತೆ ಉಂಟಾಗಿಲ್ಲ ವೆಂಬುದನ್ನು ಅರಿತು-ಎಲ್ಲ ಭೂತಗಳ ಭಾವನೆಗಳನ್ನು ತಿಳಿಯುವ ಜ್ಞಾನಿಗಳಾದ ಕರ್ದಮರು ತನ್ನ ಇನಿಯಳನ್ನು ಕುರಿತು ಹೇಳಿದರು –॥ ೨೨॥ 'ಪ್ರಿಯೇ! ನೀನು ಈ ಬಿಂದು ಸರೋವರದಲ್ಲಿ ಸ್ನಾನಮಾಡಿ ವಿಮಾನವನ್ನು ಹತ್ತು. ಭಗವಾನ್ ಶ್ರೀಮಹಾವಿಷ್ಣುವಿ ನಿಂದ ನಿರ್ಮಿತವಾದ ಈ ತೀರ್ಥಕ್ಕೆ ಮನುಷ್ಯರ ಸರ್ವಕಾಮನೆ ಗಳನ್ನು ಈಡೇರಿಸುವ ಶಕ್ತಿಯಿದೆ.' ॥ ೨೩ ॥

ಕಮಲಲೋಚನೆಯಾದ ದೇವಹೂತಿಯು ಪತಿಯ ಮಾತಿ ನಂತೆ ಸರಸ್ವತಿಯ ಪವಿತ್ರಜಲದಿಂದ ತುಂಬಿದ್ದ ಬಿಂದು ಸರೋವರ ವನ್ನು ಪ್ರವೇಶಿಸಿದಳು. ಆ ಸಮಯದಲ್ಲಿ ಆಕೆಯ ಬಟ್ಟೆಗಳು ಮಲಿನವಾಗಿದ್ದವು. ತಲೆಕೂದಲುಗಳು ಅಂಟಿಕೊಂಡು ಜಡೆಕಟ್ಟಿ ದ್ದವು. ದೇಹದಲ್ಲಿ ಕೊಳೆ ತುಂಬಿಕೊಂಡಿತ್ತು. ಸ್ತನಗಳು ಕಾಂತಿಹೀನ ವಾಗಿದ್ದವು. ॥ ೨೪-೨೫ ॥ ಸರೋವರದಲ್ಲಿ ಮುಳುಗಿದೊಡ ನೆಯೇ ಅದರೊಳಗೆ ಆಕೆಯು – ಒಂದು ಭವ್ಯ ಅರಮನೆಯನ್ನೂ, ಅದರೊಳಗೆ ಕಮಲಗಂಧಿಯರಾದ, ಕಿಶೋರಾವಸ್ಥೆಯಲ್ಲಿದ್ದ ಒಂದು ಸಾವಿರ ಕನ್ಯೆಯರನ್ನು ನೋಡಿದಳು. ॥ ೨೬ ॥ ದೇವಹೂತಿ ಯನ್ನು ಕಂಡೊಡನೆ ಅವರು ಎದ್ದು ನಿಂತು ಕೈಜೋಡಿಸಿಕೊಂಡು – 'ನಾವು ನಿಮ್ಮ ದಾಸಿಯರು. ಏನು ಸೇವೆಮಾಡಬೇಕು ? ಅಪ್ಪಣೆ ಯಾಗಲಿ' ಎಂದು ಅರಿಕೆಮಾಡಿಕೊಂಡರು. ॥ ೨೭ ॥

ಎಲೈ ವಿದುರನೇ! ಸ್ವಾಮಿನಿಗೆ ಸಮ್ಮಾನಕೊಡುವಂತಹ ಆ ಕುಶಲ ರಮಣಿಯರು ಅಮೂಲ್ಯವಾದ ಕಂಪು-ತಂಪುಗಳಿಂದ ಕೂಡಿದ ಚೂರ್ಣ ಮುಂತಾದವುಗಳಿಂದ ಮಿಶ್ರಿತವಾದ ತೀರ್ಥ ಜಲದಿಂದ ಆಕೆಗೆ ಸ್ನಾನಮಾಡಿಸಿ ನಿರ್ಮಲವಾದ ನೂತನ ಪಟ್ಟೆ ಮಡಿಗಳನ್ನು ಉಡಲು ಕೊಟ್ಟರು. ॥ ೨೮ ॥ ಮತ್ತೆ ಕಾಂತಿ ಯುತವೂ, ಕಮನೀಯವು ಆದ ಬಹುಮೂಲ್ಯ ಒಡವೆ ಗಳನ್ನು ತೊಡಲು ಅರ್ಪಿಸಿದರು. ಸರ್ವಗುಣಗಳಿಂದಲೂ ಕೂಡಿದ ಅನ್ನಾಹಾರಗಳನ್ನೂ, ಅಮೃತಕಲ್ಪವಾದ ಪಾನೀಯ ಗಳನ್ನೂ ನೀಡಿದರು. ॥ ೨೯ ॥

ಅಥಾದರ್ಶೇ ಸ್ವಮಾತ್ಮಾನಂ ಸ್ರಗ್ವಿಣಂ ವಿರಜಾಂಬರಮ್ ।
ವಿರಜಂ ಕೃತಸ್ವಸ್ತ್ಯಯನಂ ಕನ್ಯಾಭಿರ್ಬಹುಮಾನಿತಮ್ ॥ ೩೦ ॥

ಸ್ನಾತಂ ಕೃತಶಿರಃಸ್ನಾನಂ ಸರ್ವಾಭರಣಭೂಷಿತಮ್ ।
ನಿಷ್ಕಗ್ರೀವಂ ವಲಯಿನಂ ಕೂಜತ್ಕಾಂಚನನೂಪುರಮ್ ॥ ೩೧ ॥

ಶ್ರೋಣ್ಯೋರಧ್ಯಸ್ತಯಾ ಕಾಂಚ್ಯಾ ಕಾಂಚನ್ಯಾ ಬಹುರತ್ನಯಾ ।
ಹಾರೇಣ ಚ ಮಹಾರ್ಹೇಣ ರುಚಕೇನ ಚ ಭೂಷಿತಮ್ ॥ ೩೨ ॥

ಸುದತಾ ಸುಭ್ರುವಾ ಶ್ಲಕ್ಷ್ಣಸ್ನಿಗ್ಧಾಪಾಂಗೇನ ಚಕ್ಷುಷಾ ।
ಪದ್ಮಕೋಶಸ್ಪೃಧಾ ನೀಲೈರಲಕೈಶ್ಚ ಲಸನ್ಮುಖಮ್ ॥ ೩೩ ॥

ಯದಾ ಸಸ್ಮಾರ ಋಷಭಮೃಷೀಣಾಂ ದಯಿತಂ ಪತಿಮ್ ।
ತತ್ರ ಚಾಸ್ತೇ ಸಹ ಸ್ತ್ರೀಭಿರ್ಯತ್ರಾಸ್ತೇ ಸ ಪ್ರಜಾಪತಿಃ ॥ ೩೪ ॥

ಭರ್ತುಃ ಪುರಸ್ತಾದಾತ್ಮಾನಂ ಸ್ತ್ರೀಸಹಸ್ರವೃತಂ ತದಾ ।
ನಿಶಾಮ್ಯ ತದ್ಯೋಗಗತಿಂ ಸಂಶಯಂ ಪ್ರತ್ಯಪದ್ಯತ ॥ ೩೫ ॥

ಸ ತಾಂ ಕೃತಮಲಸ್ನಾನಾಂ ವಿಭ್ರಾಜಂತೀಮಪೂರ್ವವತ್ ।
ಆತ್ಮನೋ ಬಿಭ್ರತೀಂ ರೂಪಂ ಸಂವೀತರುಚಿರಸ್ತನೀಮ್ ॥ ೩೬ ॥

ವಿದ್ಯಾಧರೀಸಹಸ್ರೇಣ ಸೇವ್ಯಮಾನಾಂ ಸುವಾಸಸಮ್ ।
ಜಾತಭಾವೋ ವಿಮಾನಂ ತದಾರೋಹಯದಮಿತ್ರಹನ್ ॥ ೩೭ ॥

ತಸ್ಮಿನ್ನಲುಪ್ತಮಹಿಮಾ ಪ್ರಿಯಯಾನುರಕ್ತೋ
ವಿದ್ಯಾಧರೀಭಿರುಪಚೀರ್ಣವಪುರ್ವಿಮಾನೇ ।
ಬಭ್ರಾಜ ಉತ್ಕಚಕುಮುದ್ಗಣವಾನಪೀಚ್ಯ-
ಸ್ತಾರಾಭಿರಾವೃತ ಇವೋಡುಪತಿರ್ನಭಃಸ್ಥಃ ॥ ೩೮ ॥

ತೇನಾಷ್ಟಲೋಕಪವಿಹಾರಕುಲಾಚಲೇಂದ್ರ-
ದ್ರೋಣೀಷ್ವನಂಗಸುಖಮಾರುತಸೌಭಗಾಸು ।
ಸಿದ್ಧೈರ್ನುತೋ ದ್ಯುಧುನಿಪಾತಶಿವಸ್ವನಾಸು
ರೇಮೇ ಚಿರಂ ಧನದವಲ್ಲಲನಾವರೂಥೀ ॥ ೩೯ ॥

ದೇವಹೂತಿಯು ತಾನು ಬಗೆ-ಬಗೆಯಾದ ಸುಗಂಧಪುಷ್ಪಗಳ ಹಾರಗಳಿಂದಲೂ, ಸ್ವಚ್ಛವಾದ ವಸ್ತ್ರಗಳಿಂದಲೂ ಅಲಂಕೃತಳಾಗಿರುವುದನ್ನೂ, ಹಾಗೆಯೇ ತನ್ನ ದೇಹವು ನಿರ್ಮಲಕಾಂತಿಯಿಂದ ಶೋಭಿಸುತ್ತಿರುವುದನ್ನೂ, ಆ ಕನ್ಯೆಯರು ಅತೀವ ಆದರದಿಂದ ತನಗೆ ಮಾಂಗಲಿಕ ಶೃಂಗಾರಮಾಡಿರುವುದನ್ನು ಕನ್ನಡಿಯಲ್ಲಿ ನೋಡಿಕೊಂಡಳು. ॥ ೩೦ ॥ ಅವಳನ್ನು ತಲೆಗೆ ಸ್ನಾನಮಾಡಿಸಿ, ಅಂಗಾಂಗಗಳನ್ನು ಅನೇಕ ಆಭರಣಗಳಿಂದ ಅಲಂಕರಿಸಲಾಗಿತ್ತು. ಅವಳ ಕಂಠಕ್ಕೆ ಒಪ್ಪುವ ಸ್ವರ್ಣಹಾರಗಳನ್ನೂ, ರತ್ನಹಾರಗಳನ್ನೂ ಕೈಗಳಿಗೆ ಬಳೆ-ಉಂಗುರಗಳನ್ನು ಕಾಲುಗಳಿಗೆ ಝಣ-ಝಣಿಸುವ ಚಿನ್ನದ ಕಾಲಂದುಗೆಗಳನ್ನು ತೊಡಿಸಿದ್ದರು. ॥ ೩೧ ॥ ನಡುವಿನಲ್ಲಿ ನವರತ್ನಗಳು ಕೋದ ಸ್ವರ್ಣದ ಒಡ್ಯಾಣದಿಂದಲೂ, ಅಂಗಾಂಗಗಳಲ್ಲಿ ಕುಂಕುಮ-ಕೇಸರಿ ಮುಂತಾದ ಮಂಗಳದ್ರವ್ಯ ಲೇಪನಗಳಿಂದಲೂ ಅವಳು ಅಪೂರ್ವ ಕಾಂತಿಯಿಂದ ಕಂಗೊಳಿಸುತ್ತಿದ್ದಳು. ॥ ೩೨ ॥ ಆಕೆಯ ಮುಖವು ಸುಂದರ ದಂತಪಂಕ್ತಿಗಳಿಂದಲೂ, ಮನೋಹರವಾದ ಹುಬ್ಬುಗಳಿಂದಲೂ, ಕಮಲದ ಮೊಗ್ಗಿನೊಡನೆ ಸ್ಪರ್ಧಿಸುತ್ತಿದೆಯೋ ಎಂಬಂತಿರುವ ಪ್ರೇಮಕಟಾಕ್ಷದಿಂದ ಕಂಗೊಳಿಸುವ ಕಣ್ಣುಗಳಿಂದಲೂ, ಮೋಹಕವಾದ ಮುಂಗುರುಳುಗಳಿಂದಲೂ, ಬಹು ಅಂದವಾಗಿ ಕಾಣುತ್ತಿತ್ತು. ॥ ೩೩ ॥ ವಿದುರನೇ! ದೇವಹೂತಿಯು ತನ್ನ ಪ್ರಿಯಪತಿಯನ್ನು ನೆನೆದೊಡನೆ ತಾನು ತನ್ನ ಗೆಳತಿಯರೊಡನೆ ಪ್ರಜಾಪತಿ ಕರ್ದಮರ ಬಳಿಯಲ್ಲೇ ವಿರಾಜಿಸುತ್ತಿರುವುದನ್ನು ನೋಡಿ ನಲಿದಳು. ॥ ೩೪ ॥ ಆಗ ತಾನು ಸಾವಿರಾರು ಸ್ತ್ರೀಯರೊಡನೆ ತನ್ನ ಪ್ರಾಣನಾಥನ ಮುಂದೆಯೇ ಇರುವುದನ್ನು ಕಂಡು, ಇದೆಲ್ಲಾ ಆತನ ಯೋಗದ ಪ್ರಭಾವವೆಂದೇ ತಿಳಿದು ಆಕೆಗೆ ತುಂಬಾ ಅಚ್ಚರಿಯಾಯಿತು. ॥ ೩೫ ॥

ಶತ್ರುವಿಜಯಿ ವಿದುರನೇ! ದೇವಹೂತಿಯ ದೇಹವು ಸ್ನಾನಾದಿಗಳಿಂದ ಅತ್ಯಂತ ನಿರ್ಮಲವಾಗಿದೆ. ವಿವಾಹಕ್ಕೆ ಮೊದಲಿದ್ದ ರೂಪ-ಸೌಂದರ್ಯದಿಂದ ಅಪೂರ್ವವಾದ ಶೋಭೆಯಿಂದ ಕೂಡಿರುವಳು. ಆಕೆಯು ಶುಭ್ರವಾದ ವಸ್ತ್ರಗಳನ್ನೂ ಧರಿಸಿದ್ದು, ಆಕೆಯ ಸುಂದರ ವಕ್ಷಸ್ಥಳಗಳು ಕುಪ್ಪಸದಿಂದ ಮುಚ್ಚಲ್ಪಟ್ಟಿವೆ. ಸಾವಿರಾರು ಮಂದಿ ವಿದ್ಯಾಧರ ಸ್ತ್ರೀಯರು ಆಕೆಯ ಸೇವೆಯಲ್ಲಿ ತೊಡಗಿರುವರು. ಇದನ್ನು ನೋಡಿ ಸಂತಸಗೊಂಡ ಕರ್ದಮ ಪ್ರಜಾಪತಿಗಳು ಆಕೆಯನ್ನು ಅತ್ಯಂತ ಪ್ರೇಮದಿಂದ ವಿಮಾನಕ್ಕೆ ಹತ್ತಿಸಿದರು. ॥ ೩೬-೩೭ ॥ ಆಗ ಕರ್ದಮರು ತನ್ನ ಪ್ರಿಯೆಯ ವಿಷಯದಲ್ಲಿ ಅನುರಕ್ತರಾಗಿದ್ದರೂ ಅವರ ಮಹಿಮೆಯು (ಮನಸ್ಸು ಇಂದ್ರಿಯಗಳ ಮೇಲಿನ ಹತೋಟಿ) ಕಡಿಮೆಯಾಗಲಿಲ್ಲ. ವಿದ್ಯಾಧರ ಸ್ತ್ರೀಯರು ಅವರ ಸೇವೆಯನ್ನು ಮಾಡುತ್ತಿದ್ದರು. ಅರಳಿದ ಕುಮುದ ಪುಷ್ಪಗಳಿಂದ ತಮ್ಮನ್ನು ಸಿಂಗರಿಸಿಕೊಂಡು ರಾರಾಜಿಸುತ್ತಿದ್ದ ಅವರು ಆಕಾಶದಲ್ಲಿ ನಕ್ಷತ್ರಗಣದಿಂದ ಸುತ್ತುವರಿಯಲ್ಪಟ್ಟ ಚಂದ್ರನಂತೆ ಬೆಳಗುತ್ತಿದ್ದರು. ॥ ೩೮ ॥ ಆ ವಿಮಾನದಲ್ಲಿ ವಾಸಮಾಡುತ್ತಾ ಅವರು ಕುಬೇರನಂತೆ ಮೇರುಪರ್ವತದ ತಪ್ಪಲುಗಳಲ್ಲಿ ದೀರ್ಘ ಕಾಲದವರೆಗೆ ವಿಹರಿಸುತ್ತಿದ್ದರು. ಆ ತಪ್ಪಲುಗಳು ಎಂಟು ಲೋಕಪಾಲರ ವಿಹಾರಭೂಮಿಯಾಗಿತ್ತು. ಕಾಮವನ್ನು ಹೆಚ್ಚಿಸುವ ತಂಪು-ಕಂಪು

ವೈಶ್ರಂಭಕೇ ಸುರಸನೇ ನಂದನೇ ಪುಷ್ಪಭದ್ರಕೇ ।
ಮಾನಸೇ ಚೈತ್ರರಥ್ಯೇ ಚ ಸ ರೇಮೇ ರಾಮಯಾ ರತಃ
॥ ೪೦ ॥

ಭ್ರಾಜಿಷ್ಣುನಾ ವಿಮಾನೇನ ಕಾಮಗೇನ ಮಹೀಯಸಾ ।
ವೈಮಾನಿಕಾನತ್ಯಶೇತ ಚರಲ್ಲೋಕಾನ್ಯಥಾನಿಲಃ
॥ ೪೧ ॥

ಕಿಂ ದುರಾಪಾದನಂ ತೇಷಾಂ ಪುಂಸಾಮುದ್ದಾಮಚೇತಸಾಮ್ ।
ಯೈರಾಶ್ರಿತಸ್ತೀರ್ಥಪದಶ್ಚರಣೋ ವ್ಯಸನಾತ್ಯಯಃ
॥ ೪೨ ॥

ಪ್ರೇಕ್ಷಯಿತ್ವಾ ಭುವೋಗೋಲಂ ಪತ್ನ್ಯೈ ಯಾವಾನ್ಸ್ವಸಂಸ್ಥಯಾ ।
ಬಹ್ವಾಶ್ಚರ್ಯಂ ಮಹಾಯೋಗೀ ಸ್ವಾಶ್ರಮಾಯ ನ್ಯವರ್ತತ
॥ ೪೩ ॥

ವಿಭಜ್ಯ ನವಧಾಽಽತ್ಮಾನಂ ಮಾನವೀಂ ಸುರತೋತ್ಸುಕಾಮ್ ।
ರಾಮಾಂ ನಿರಮಯನ್ರೇಮೇ ವರ್ಷಪೂಗಾನ್ಮುಹೂರ್ತವತ್
॥ ೪೪ ॥

ತಸ್ಮಿನ್ವಿಮಾನ ಉತ್ಕೃಷ್ಟಾಂ ಶಯ್ಯಾಂ ರತಿಕರೀಂ ಶ್ರಿತಾ ।
ನ ಚಾಬುಧ್ಯತ ತಂ ಕಾಲಂ ಪತ್ಯಾಪೀಚ್ಯೇನ ಸಂಗತಾ
॥ ೪೫ ॥

ಏವಂ ಯೋಗಾನುಭಾವೇನ ದಂಪತ್ಯೋ ರಮಮಾಣಯೋಃ ।
ಶತಂ ವ್ಯತೀಯುಃ ಶರದಃ ಕಾಮಲಾಲಸಯೋರ್ಮನಾಕ್
॥ ೪೬ ॥

ತಸ್ಯಾಮಾಧತ್ತ ರೇತಸ್ತಾಂ ಭಾವಯನ್ನಾಽಽತ್ಮನಾತ್ಮವಿತ್ ।
ನೋಧಾ ವಿಧಾಯ ರೂಪಂ ಸ್ವಂ ಸರ್ವಸಂಕಲ್ಪವಿದ್ವಿಭುಃ
॥ ೪೭ ॥

ಗಳಿಂದ ಕೂಡಿದ ಮಂದಮಾರುತವು ಬೀಸುತ್ತಾ ಅಲ್ಲಿ ಸುಖ-ಸೌಂದರ್ಯಗಳನ್ನು ವಿಸ್ತರಿಸುತ್ತಿತ್ತು. ಶ್ರೀಗಂಗೆಯು ಸ್ವರ್ಗದಿಂದ ಧುಮುಕುತ್ತಿದ್ದ ಮಂಗಳಧ್ವನಿಯು ನಿರಂತರ ಪ್ರತಿಧ್ವನಿಸುತ್ತಿತ್ತು. ಆಗಲೂ ಕೂಡ ದಿವ್ಯವಿದ್ಯಾಧರಿಯರು ಅವರ ಸೇವೆಗಾಗಿ ಸಿದ್ಧರಾಗಿದ್ದರು. ಸಿದ್ಧರ ಸಮುದಾಯವು ಅವರಿಗೆ ವಂದನೆ ಸಲ್ಲಿಸುತ್ತಿತ್ತು. ॥ ೩೯ ॥

ಹೀಗೆ ತನ್ನ ಪ್ರಾಣವಲ್ಲಭೆಯೊಡನೆ ಕರ್ದಮರು ವೈಶ್ರಂಭಕ, ಸುರಸನ, ನಂದನ, ಪುಷ್ಪಭದ್ರ, ಚೈತ್ರರಥ ಮುಂತಾದ ಅನೇಕ ದೇವತೋದ್ಯಾನಗಳಲ್ಲಿಯೂ, ಮಾನಸಸರೋವರದಲ್ಲಿಯೂ ಪರಮಾನುರಾಗದಿಂದ ವಿಹರಿಸುತ್ತಿದ್ದರು. ॥ ೪೦ ॥ ಇಚ್ಛಾನುಸಾರ ಸಂಚರಿಸುತ್ತಿದ್ದ ಆ ಕಾಂತಿಯುಕ್ತ ಶ್ರೇಷ್ಠವಾದ ವಿಮಾನದಲ್ಲಿ ಕುಳಿತು ವಾಯುವಿನಂತೆ ಎಲ್ಲ ಲೋಕಗಳಲ್ಲಿ ಸಂಚರಿಸುತ್ತಾ ವಿಮಾನ ವಿಹಾರಿಗಳಾದ ದೇವತೆಗಳಿಗಿಂತಲೂ ಹೆಚ್ಚು ಸುಖ-ಸಂಪತ್ತುಗಳನ್ನು ಅವರು ಅನುಭವಿಸಿದರು. ॥ ೪೧ ॥ ವಿದುರನೇ! ಭಗವಂತನ ಭವಭಯಹಾರಿಯಾದ ಪವಿತ್ರ ಪಾದಪದ್ಮಗಳನ್ನು ಆಶ್ರಯಿಸಿರುವ ಸುಕೃತಿಗಳಿಗೆ ಯಾವ ವಸ್ತುವು ಅಥವಾ ಶಕ್ತಿಯು ತಾನೇ ದುರ್ಲಭವಾಗಿದೆ ? ॥ ೪೨ ॥

ಹೀಗೆ ಮಹಾಯೋಗಿಗಳಾದ ಕರ್ದಮರು ತಮ್ಮ ಪ್ರಿಯೆಗೆ ಜಂಬೂದ್ವೀಪವೇ ಮುಂತಾದ ದ್ವೀಪಗಳೂ, ಭಾರತ-ಕಿಂಪುರುಷ ಮುಂತಾದ ವರ್ಷಗಳೂ, ವಿಚಿತ್ರವಾದ ರಚನೆಯಿಂದ ಅತ್ಯಂತ ಆಶ್ಚರ್ಯಕರವಾಗಿ ಕಾಣುತ್ತಿರುವ ಇಡೀ ಭೂಮಂಡಲವನ್ನು ತೋರಿಸಿ ತಮ್ಮ ಆಶ್ರಮಕ್ಕೆ ಹಿಂದಿರುಗಿದರು. ॥ ೪೩ ॥ ಮತ್ತೆ ಅವರು ತನ್ನನ್ನು ಒಂಭತ್ತು ರೂಪಗಳಲ್ಲಿ ವಿಭಕ್ತಗೊಳಿಸಿಕೊಂಡು ರತಿ ಸುಖಕ್ಕಾಗಿ ಅತ್ಯಂತ ಉತ್ಸುಕಳಾದ ಮನುಕುಮಾರಿ ದೇವಹೂತಿಯನ್ನು ಆನಂದಪಡಿಸುತ್ತಾ, ಅವಳೊಂದಿಗೆ ಅನೇಕ ವರ್ಷಗಳ ಕಾಲ ವಿಹರಿಸಿದರು. ಆದರೆ ಆ ಅತಿದೀರ್ಘಕಾಲವು ಒಂದು ಮುಹೂರ್ತದಂತೆ ಕಳೆದುಹೋಯಿತು. ॥ ೪೪ ॥ ಆ ವಿಮಾನದಲ್ಲಿ ರತಿಸುಖವನ್ನು ಹೆಚ್ಚಿಸುವ ಅತಿ ಸುಂದರವಾದ ಶಯ್ಯೆಯನ್ನು ಆಶ್ರಯಿಸಿ, ಪರಮ ಸೌಂದರ್ಯನಿಧಿಯಾದ ತನ್ನ ಪ್ರಿಯತಮನೊಡನೆ ಇರುತ್ತಿದ್ದ ದೇವಹೂತಿಗೆ ಆ ಕಾಲದ ಪರಿವೆ ಸ್ವಲ್ಪವೂ ಉಂಟಾಗಲಿಲ್ಲ. ॥ ೪೫ ॥ ಹೀಗೆ ರಮಿಸುತ್ತಾ ಆ ದಂಪತಿಗಳು ತಮ್ಮ ಯೋಗಬಲದಿಂದ ನೂರಾರುವರ್ಷಗಳ ಕಾಲ ವಿಹರಿಸುತ್ತಿದ್ದರೂ ಅವರಿಗೆ ಆ ಕಾಲವು ಅತಿ ಸ್ವಲ್ಪ ಸಮಯದಂತೆ ಕಳೆದುಹೋಯಿತು. ॥ ೪೬ ॥ ಆತ್ಮಜ್ಞಾನಿಗಳಾದ ಕರ್ದಮರು ಎಲ್ಲ ಸಂಕಲ್ಪಗಳನ್ನು ಬಲ್ಲವರಾಗಿದ್ದರು. ದೇವಹೂತಿಯು ಸಂತಾನವನ್ನು ಪಡೆಯಲು ಉತ್ಸುಕಳಾಗಿರುವುದನ್ನು ಗಮನಿಸಿ, ಹಾಗೆಯೇ ಭಗವಂತನ ಆದೇಶವನ್ನು ಸ್ಮರಿಸಿಕೊಂಡು, ಅವರು ತಮ್ಮ ಸ್ವರೂಪವನ್ನು ಒಂಭತ್ತು ಬಗೆಯಾಗಿ ವಿಭಾಗಿಸಿಕೊಂಡು ಕನ್ಯೆಯರನ್ನು ಪಡೆಯಲಿಕ್ಕಾಗಿ ಏಕಾಗ್ರಚಿತ್ತದಿಂದ ಅರ್ಧಾಂಗರೂಪದಲ್ಲಿ ತಮ್ಮ ಪತ್ನಿಯನ್ನು ಭಾವಿಸುತ್ತಾ ಆಕೆಯ ಗರ್ಭದಲ್ಲಿ ವೀರ್ಯವನ್ನು ಸ್ಥಾಪಿಸಿದರು. ॥ ೪೭ ॥

ಅತಃ ಸಾ ಸುಷುವೇ ಸದ್ಯೋ ದೇವಹೂತಿಃ ಸ್ತ್ರಿಯಃ ಪ್ರಜಾಃ ।
ಸರ್ವಾಸ್ತಾಶ್ಚಾರುಸರ್ವಾಂಗ್ಯೋ ಲೋಹಿತೋತ್ಪಲಗಂಧಯಃ ॥ ೪೮ ॥

ಪತಿಂ ಸಾ ಪ್ರವ್ರಜಿಷ್ಯಂತಂ ತದಾऽऽಲಕ್ಷ್ಯೋಶತೀ ಸತೀ ।
ಸ್ಮಯಮಾನಾ ವಿಕ್ಲವೇನ ಹೃದಯೇನ ವಿದೂಯತಾ ॥ ೪೯ ॥

ಲಿಖಂತ್ಯಧೋಮುಖೀ ಭೂಮಿಂ ಪದಾ ನಖಮಣಿಶ್ರಿಯಾ ।
ಉವಾಚ ಲಲಿತಾಂ ವಾಚಂ ನಿರುಧ್ಯಾಶ್ರುಕಲಾಂ ಶನೈಃ ॥ ೫೦ ॥

*ದೇವಹೂತಿರುವಾಚ*

ಸರ್ವಂ ತದ್ಭಗವಾನ್ಮಹ್ಯಮುಪೋವಾಹ ಪ್ರತಿಶ್ರುತಮ್ ।
ಅಥಾಪಿ ಮೇ ಪ್ರಪನ್ನಾಯಾ ಅಭಯಂ ದಾತುಮರ್ಹಸಿ ॥ ೫೧ ॥

ಬ್ರಹ್ಮನ್ ದುಹಿತೃಭಿಸ್ತುಭ್ಯಂ ವಿಮೃಗ್ಯಾಃ ಪತಯಃ ಸಮಾಃ ।
ಕಶ್ಚಿತ್ಸ್ಯಾನ್ಮೇ ವಿಶೋಕಾಯ ತ್ವಯಿ ಪ್ರವ್ರಜಿತೇ ವನಮ್ ॥ ೫೨ ॥

ಏತಾವತಾಲಂ ಕಾಲೇನ ವ್ಯತಿಕ್ರಾಂತೇನ ಮೇ ಪ್ರಭೋ ।
ಇಂದ್ರಿಯಾರ್ಥಪ್ರಸಂಗೇನ ಪರಿತ್ಯಕ್ತಪರಾತ್ಮನಃ ॥ ೫೩ ॥

ಇಂದ್ರಿಯಾರ್ಥೇಷು ಸಜ್ಜಂತ್ಯಾ ಪ್ರಸಂಗಸ್ತ್ವಯಿ ಮೇ ಕೃತಃ ।
ಅಜಾನಂತ್ಯಾ ಪರಂ ಭಾವಂ ತಥಾಪ್ಯಸ್ತ್ವಭಯಾಯ ಮೇ ॥ ೫೪ ॥

ಸಂಗೋ ಯಃ ಸಂಸೃತೇರ್ಹೇತುರಸತ್ಸು ವಿಹಿತೋऽಧಿಯಾ ।
ಸ ಏವ ಸಾಧುಷು ಕೃತೋ ನಿಃಸಂಗತ್ವಾಯ ಕಲ್ಪತೇ ॥ ೫೫ ॥

ನೇಹ ಯತ್ಕರ್ಮ ಧರ್ಮಾಯ ನ ವಿರಾಗಾಯ ಕಲ್ಪತೇ ।
ನ ತೀರ್ಥಪದಸೇವಾಯೈ ಜೀವನ್ನಪಿ ಮೃತೋ ಹಿ ಸಃ ॥ ೫೬ ॥

ಸಾಹಂ ಭಗವತೋ ನೂನಂ ವಂಚಿತಾ ಮಾಯಯಾ ದೃಢಮ್ ।
ಯತ್ತ್ವಾಂ ವಿಮುಕ್ತಿದಂ ಪ್ರಾಪ್ಯ ನ ಮುಮುಕ್ಷೇಯ ಬಂಧನಾತ್ ॥ ೫೭ ॥

ಅದರ ಫಲವಾಗಿ ದೇವಹೂತಿಯು ಒಟ್ಟಿಗೆ ಒಂಭತ್ತುಮಂದಿ ಕನ್ಯೆಯರಿಗೆ ಜನ್ಮನೀಡಿದಳು. ಅವರೆಲ್ಲರೂ ಸರ್ವಾಂಗ ಸುಂದರಿಯರಾಗಿದ್ದು ಅವರ ದೇಹದಿಂದ ಕೆಂದಾವರೆಯ ಕಂಪು ಸೂಸುತ್ತಿತ್ತು. ॥ ೪೮ ॥ ಅದೇ ಸಮಯದಲ್ಲಿ ಶುದ್ಧ ಸ್ವಭಾವವುಳ್ಳ ದೇವಹೂತಿಯು ತನ್ನ ಪತಿಯಾದ ಕರ್ದಮರು ತಮ್ಮ ಹಿಂದಿನ ಪ್ರತಿಜ್ಞೆಯಂತೆ ಸಂನ್ಯಾಸವನ್ನು ಸ್ವೀಕರಿಸಲು ಬಯಸುತ್ತಿದ್ದಾರೆ ಎಂಬುದನ್ನು ಗಮನಿಸಿದಳು. ಆಗ ಅವಳು ಉಕ್ಕಿಬರುತ್ತಿದ್ದ ತನ್ನ ಕಣ್ಣೀರನ್ನು ತಡೆದುಕೊಂಡು ಮೇಲ್ಮೆಯ ಮುಗುಳುನಗುತ್ತಾ ಕಡು ಕಳವಳಗೊಂಡ ಮನಸ್ಸಿನಿಂದ ಸವಿಮಾತಿನಲ್ಲಿ ತನ್ನ ಪತಿಯಲ್ಲಿ ಮೆಲ್ಲ-ಮೆಲ್ಲನೆ ಮಾತನಾಡಿದಳು. ಆಗ ಆಕೆಯು ತಲೆಯನ್ನು ತಗ್ಗಿಸಿಕೊಂಡು ನಖಮಣಿಗಳಿಂದ ಬೆಳಗುತ್ತಿದ್ದ ಕಾಲಿನಿಂದ ನೆಲವನ್ನು ಕೆರೆಯುತ್ತಿದ್ದಳು. ॥ ೪೯-೫೦ ॥

**ದೇವಹೂತಿಯು ಹೇಳಿದಳು** – ಪೂಜ್ಯಪಾದರೇ! ತಾವೇನೋ ಮಾಡಿದ್ದ ಪ್ರತಿಜ್ಞೆಯನ್ನು ಪೂರ್ಣವಾಗಿ ನಿಭಾಯಿಸಿಬಿಟ್ಟಿರಿ. ಆದರೂ ನಾನು ತಮ್ಮಲ್ಲಿ ಶರಣಾಗತಳಾಗಿದ್ದೇನೆ. ಆದ್ದರಿಂದ ನನಗೆ ತಾವು ಮತ್ತೊಂದು ಅಭಯಪ್ರದಾನವನ್ನು ನೀಡಬೇಕು. ॥ ೫೧ ॥ ಬ್ರಾಹ್ಮಣೋತ್ತಮರೇ! ಈ ಕನ್ಯೆಯರಿಗೆ ಯೋಗ್ಯರಾದ ಪತಿಗಳನ್ನು ಹುಡುಕಬೇಕಾಗಿದೆ. ಇದಲ್ಲದೆ ತಾವು ಅರಣ್ಯಕ್ಕೆ ಹೊರಟುಹೋದ ಬಳಿಕ ನನ್ನ ಜನನ-ಮರಣರೂಪೀ ಶೋಕವನ್ನು ದೂರ ಮಾಡುವುದಕ್ಕೆ ಒಬ್ಬರು ಜೊತೆಯಲ್ಲಿರಬೇಕಲ್ಲವೇ? ॥ ೫೨ ॥ ಪ್ರಭುವೇ! ಇಲ್ಲಿಯವರೆಗೂ ಪರಮಾತ್ಮನಿಂದ ವಿಮುಖಳಾಗಿ, ಇಂದ್ರಿಯಗಳ ಸುಖವನ್ನು ಭೋಗಿಸುವುದರಲ್ಲಿ ಕಳೆದು ಹೋದ ನನ್ನ ಸಮಯವಾದರೋ ನಿರರ್ಥಕವೇ ಆಗಿದೆ. ॥ ೫೩ ॥ ತಮ್ಮ ಪರಮ ಪ್ರಭಾವವನ್ನು ತಿಳಿಯದಿರುವ ಕಾರಣದಿಂದಲೇ ನಾನು ಇಂದ್ರಿಯವಿಷಯಗಳಲ್ಲೇ ಆಸಕ್ತಳಾಗಿದ್ದು ತಮ್ಮಲ್ಲಿ ಅನುರಾಗವನ್ನು ತೋರಿಸುತ್ತಿದ್ದೆ. ಆದರೆ ಅದೂ ಕೂಡ ನನ್ನ ಸಂಸಾರ ಭಯವನ್ನು ನೀಗಿಸುವ ಸಾಮರ್ಥ್ಯವನ್ನು ಹೊಂದಿರಲೇ ಬೇಕು. ॥ ೫೪ ॥ ಅಜ್ಞಾನವಶದಿಂದ ಅಸಜ್ಜನರೊಡನೆ ಮಾಡಿದ ಸಹವಾಸವು ಸಂಸಾರ-ಬಂಧನಕ್ಕೆ ಕಾರಣವಾಗುತ್ತದೆ. ಅದೇ ಸಹವಾಸವನ್ನು ಸಜ್ಜನರೊಡನೆ ಮಾಡಿದ್ದೇ ಆದರೆ ಅದರಿಂದ ನಿಸ್ಸಂಗತೆ ಉಂಟಾಗುವುದು. ॥ ೫೫ ॥ ಈ ಪ್ರಪಂಚದಲ್ಲಿ ಕರ್ಮಗಳಿಂದ ಧರ್ಮಾಧರ್ಮವನ್ನು ಸಂಪಾದಿಸದಿರುವವನು, ವೈರಾಗ್ಯ ಉಂಟಾಗದವನು, ಭಗವಂತನ ಸೇವೆಯನ್ನು ಮಾಡದವನು ಬದುಕಿದ್ದರೂ ಸತ್ತಿರುವವನಂತೆಯೇ ಸರಿ. ॥ ೫೬ ॥ ಸ್ವಾಮಿ! ಖಂಡಿತವಾಗಿ ನಾನು ಭಗವಂತನ ಮಾಯೆಯಿಂದ ಮೋಸಹೋಗಿರುವೆನು. ಏಕೆಂದರೆ, ತಮ್ಮಂತಹ ಮುಕ್ತಿಪ್ರದರಾದ ಪತಿದೇವರನ್ನು ಪಡೆದರೂ ಸಂಸಾರ ಬಂಧನದಿಂದ ಬಿಡುಗಡೆಯನ್ನು ಬಯಸದೆ ಹೋದೆನಲ್ಲ! ॥ ೫೭ ॥

*ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೨೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಕಾಪಿಲೇಯೋಪಾಖ್ಯಾನೇ ತ್ರಯೋವಿಂಶೋऽಧ್ಯಾಯಃ ॥ ೨೩ ॥

# ಇಪ್ಪತ್ತನಾಲ್ಕನೆಯ ಅಧ್ಯಾಯ

## ಭಗವಾನ್ ಶ್ರೀಕಪಿಲರ ಅವತಾರ

*ಮೈತ್ರೇಯ ಉವಾಚ*

ನಿರ್ವೇದವಾದಿನೀಮೇವಂ ಮನೋರ್ದುಹಿತರಂ ಮುನಿಃ ।
ದಯಾಲುಃ ಶಾಲಿನೀಮಾಹ ಶುಕ್ಲಾಭಿವ್ಯಾಹೃತಂ ಸ್ಮರನ್ ॥ ೧ ॥

*ಋಷಿರುವಾಚ*

ಮಾ ಖಿದೋ ರಾಜಪುತ್ರೀತ್ಥಮಾತ್ಮಾನಂ ಪ್ರತ್ಯನಿಂದಿತೇ ।
ಭಗವಾಂಸ್ತೇಽಕ್ಷರೋ ಗರ್ಭಮದೂರಾತ್ಸಂಪ್ರಪತ್ಸ್ಯತೇ ॥ ೨ ॥

ಧೃತವ್ರತಾಸಿ ಭದ್ರಂ ತೇ ದಮೇನ ನಿಯಮೇನ ಚ ।
ತಪೋದ್ರವಿಣದಾನೈಶ್ಚ ಶ್ರದ್ಧಯಾ ಚೇಶ್ವರಂ ಭಜ ॥ ೩ ॥

ಸ ತ್ವಯಾಽಽರಾಧಿತಃ ಶುಕ್ಲೋ ವಿತನ್ವನ್ಮಾಮಕಂ ಯಶಃ ।
ಛೇತ್ತಾ ತೇ ಹೃದಯಗ್ರಂಥಿಮೌದರ್ಯೋ ಬ್ರಹ್ಮಭಾವನಃ ॥ ೪ ॥

*ಮೈತ್ರೇಯ ಉವಾಚ*

ದೇವಹೂತ್ಯಪಿ ಸಂದೇಶಂ ಗೌರವೇಣ ಪ್ರಜಾಪತೇಃ ।
ಸಮ್ಯಕ್ ಶ್ರದ್ಧಾಯ ಪುರುಷಂ ಕೂಟಸ್ಥಮಭಜದ್ಗುರುಮ್ ॥ ೫ ॥

ತಸ್ಯಾಂ ಬಹುತಿಥೇ ಕಾಲೇ ಭಗವಾನ್ಮಧುಸೂದನಃ ।
ಕಾರ್ದಮಂ ವೀರ್ಯಮಾಪನ್ನೋ ಜಜ್ಞೇಽಗ್ನಿರಿವ ದಾರುಣಿ ॥ ೬ ॥

ಅವಾದಯಂಸ್ತದಾ ವ್ಯೋಮ್ನಿ ವಾದಿತ್ರಾಣಿ ಘನಾಘನಾಃ ।
ಗಾಯಂತಿ ತಂ ಸ್ಮ ಗಂಧರ್ವಾ ನೃತ್ಯಂತ್ಯಪ್ಸರಸೋ ಮುದಾ ॥ ೭ ॥

ಪೇತುಃ ಸುಮನಸೋ ದಿವ್ಯಾಃ ಖೇಚರೈರಪವರ್ಜಿತಾಃ ।
ಪ್ರಸೇದುಶ್ಚ ದಿಶಃ ಸರ್ವಾ ಅಂಭಾಂಸಿ ಚ ಮನಾಂಸಿ ಚ ॥ ೮ ॥

ತತ್ಕರ್ದಮಾಶ್ರಮಪದಂ ಸರಸ್ವತ್ಯಾ ಪರಿಶ್ರಿತಮ್ ।
ಸ್ವಯಂಭೂಃ ಸಾಕಮೃಷಿಭಿರ್ಮರೀಚ್ಯಾದಿಭಿರಭ್ಯಯಾತ್ ॥ ೯ ॥

ಭಗವಂತಂ ಪರಂ ಬ್ರಹ್ಮ ಸತ್ತ್ವೇನಾಂಶೇನ ಶತ್ರುಹನ್ ।
ತತ್ತ್ವಸಂಖ್ಯಾನವಿಜ್ಞಪ್ತ್ಯೈ ಜಾತಂ ವಿದ್ವಾನಜಃ ಸ್ವರಾಟ್ ॥ ೧೦ ॥

**ಶ್ರೀಮೈತ್ರೇಯರು ಹೇಳುತ್ತಾರೆ –** ವಿದುರನೇ! ಗುಣಶಾಲಿನಿಯಾದ ಮನುಕುಮಾರಿ ದೇವಹೂತಿಯು ಹೀಗೆ ವೈರಾಗ್ಯದಿಂದ ಕೂಡಿದ ಮಾತುಗಳನ್ನು ಹೇಳಿದಾಗ ಕರುಣಾಳುಗಳಾದ ಕರ್ದಮ ಮುನಿಗಳು ಭಗವಾನ್ ಶ್ರೀವಿಷ್ಣುವಿನ ಮಾತುಗಳನ್ನು ಸ್ಮರಿಸಿಕೊಂಡು, ಆಕೆಗೆ ಹೇಳಿದರು – ॥ ೧ ॥

**ಕರ್ದಮರು ಇಂತೆಂದರು –** ನಿರ್ದೋಷಳಾದ ರಾಜಕುಮಾರಿಯೇ! ನಿನ್ನ ಬಗೆಗೆ ಹೀಗೆ ವಿಷಾದಪಟ್ಟುಕೊಳ್ಳಬೇಡ. ಅವಿನಾಶಿಯಾದ ಭಗವಾನ್ ಶ್ರೀಹರಿಯು ಶೀಘ್ರದಲ್ಲಿಯೇ ನಿನ್ನ ಗರ್ಭಕ್ಕೆ ದಯಮಾಡಿಸುವನು. ॥ ೨ ॥ ಪ್ರಿಯೆ! ನೀನು ಅನೇಕ ಪ್ರಕಾರದ ವ್ರತಗಳನ್ನು ಪಾಲಿಸಿದ್ದೀಯೆ. ಆದರಿಂದ ನಿನ್ನ ಮಂಗಳವೇ ಆಗುವುದು. ಈಗ ನೀನು ಸಂಯಮ, ನಿಯಮ, ತಪಸ್ಸು ದಾನಾದಿಗಳನ್ನು ಮಾಡುತ್ತಾ ಶ್ರದ್ಧೆಯಿಂದ ಭಗವಂತನನ್ನು ಭಜಿಸುತ್ತಿರು. ॥ ೩ ॥ ನೀನು ಹೀಗೆ ಆರಾಧಿಸುತ್ತಿದ್ದರೆ ಶ್ರೀಹರಿಯು ನಿನ್ನ ಗರ್ಭದಲ್ಲಿ ಅವತರಿಸಿ, ನನ್ನ ಕೀರ್ತಿಯನ್ನು ಹೆಚ್ಚಿಸುವನು ಹಾಗೂ ಬ್ರಹ್ಮಜ್ಞಾನವನ್ನು ಉಪದೇಶಮಾಡಿ ನಿನ್ನ ಅಜ್ಞಾನದ ಗಂಟನ್ನು ಕತ್ತರಿಸಿಹಾಕುವನು. ॥ ೪ ॥

**ಶ್ರೀಮೈತ್ರೇಯರು ಹೇಳುತ್ತಾರೆ –** ಸಾಧುಶ್ರೇಷ್ಠನಾದ ವಿದುರನೇ! ದೇವಹೂತಿಯು ಕರ್ದಮ ಪ್ರಜಾಪತಿಗಳ ಆದೇಶದಲ್ಲಿ ಗೌರವಬುದ್ಧಿ ತೋರಿ, ಪೂರ್ಣ ನಂಬಿಕೆಯಿಂದ ನಿರ್ವಿಕಾರಿಯಾದ ಜಗದ್ಗುರು ಭಗವಾನ್ ಶ್ರೀಹರಿಯನ್ನು ಚೆನ್ನಾಗಿ ಆರಾಧಿಸತೊಡಗಿದಳು. ॥ ೫ ॥ ಹೀಗೆ ಬಹಳ ಸಮಯ ಕಳೆಯಲು ಭಗವಾನ್ ಶ್ರೀಮಧುಸೂದನನು ಕರ್ದಮರ ವೀರ್ಯವನ್ನು ಆಶ್ರಯಿಸಿ ಕಟ್ಟಿಗೆಯಿಂದ ಅಗ್ನಿಯು ಉದ್ಭವಿಸುವಂತೆ ದೇವಹೂತಿಯ ಗರ್ಭದಿಂದ ಪ್ರಕಟನಾದನು. ॥ ೬ ॥ ಆಗ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು. ಮೋಡಗಳು ಗುಡುಗುತ್ತಾ ಅಮೃತದ ಮಳೆಯನ್ನು ಕರೆದವು. ಗಂಧರ್ವರು ಗಾನ ಮಾಡತೊಡಗಿದರು. ಅಪ್ಸರೆಯರು ಆನಂದದಿಂದ ನೃತ್ಯವಾಡತೊಡಗಿದರು. ॥ ೭ ॥ ಆಕಾಶದಿಂದ ದೇವತೆಗಳು ಹೂಮಳೆಯನ್ನು ಸುರಿಸಿದರು. ಎಲ್ಲ ದಿಕ್ಕುಗಳಲ್ಲಿಯೂ ಆನಂದವು ಹರಡಿತು. ಜಲಾಶಯಗಳ ಜಲವು ನಿರ್ಮಲವಾಯಿತು. ಎಲ್ಲ ಜೀವಿಗಳ ಮನಸ್ಸು ಪ್ರಸನ್ನಗೊಂಡವು. ॥ ೮ ॥ ಇದೇ ಸಮಯಕ್ಕೆ ಸರಸ್ವತೀನದಿಯಿಂದ ಸುತ್ತುವರಿಯಲ್ಪಟ್ಟ ಕರ್ದಮರ ಆಶ್ರಮಕ್ಕೆ ಮರೀಚಿಯೇ ಮುಂತಾದ ಮುನಿಗಳ ಸಹಿತ ಶ್ರೀಬ್ರಹ್ಮದೇವರು ದಯಮಾಡಿಸಿದರು. ॥ ೯ ॥ ಎಲೈ ಶತ್ರುದಮನ ವಿದುರನೇ! ಸಾಕ್ಷಾತ್ ಪರಬ್ರಹ್ಮ ಭಗವಾನ್ ಶ್ರೀವಿಷ್ಣುವೇ ಸಾಂಖ್ಯಶಾಸ್ತ್ರವನ್ನು ಪ್ರವರ್ತನೆ ಮಾಡಲು ತನ್ನ ಪರಿಶುದ್ಧ ಸತ್ತ್ವಮಯವಾದ ಅಂಶದಿಂದ ಅಲ್ಲಿ ಅವತರಿಸಿರುವನು ಎಂಬುದು ಸ್ವಯಂಸಿದ್ಧ ಜ್ಞಾನದಿಂದ ಸಂಪನ್ನರೂ ಜನ್ಮರಹಿತರೂ ಆದ ಬ್ರಹ್ಮದೇವರಿಗೆ ಸ್ಪಷ್ಟವಾಗಿ ತಿಳಿದುಬಂದಿತ್ತು. ॥ ೧೦ ॥

ಸಭಾಜಯನ್ ವಿಶುದ್ಧೇನ ಚೇತಸಾ ತಚ್ಚಿಕೀರ್ಷಿತಮ್ ।
ಪ್ರಹೃಷ್ಯಮಾಣೈರಸುಭಿಃ ಕರ್ದಮಂ ಚೇದಮಭ್ಯಧಾತ್ ॥ ೧೧ ॥

ಬ್ರಹ್ಮೋವಾಚ

ತ್ವಯಾ ಮೇಽಪಚಿತಿಸ್ತಾತ ಕಲ್ಪಿತಾ ನಿರ್ವ್ಯಲೀಕತಃ ।
ಯನ್ಮೇ ಸಂಜಗೃಹೇ ವಾಕ್ಯಂ ಭವಾನ್ಮಾನದ ಮಾನಯನ್ ॥ ೧೨ ॥

ಏತಾವತ್ಯೇವ ಶುಶ್ರೂಷಾ ಕಾರ್ಯಾ ಪಿತರಿ ಪುತ್ರಕೈಃ ।
ಬಾಢಮಿತ್ಯನುಮನ್ಯೇತ ಗೌರವೇಣ ಗುರೋರ್ವಚಃ ॥ ೧೩ ॥

ಇಮಾ ದುಹಿತರಃ ಸಭ್ಯ ತವ ವತ್ಸ ಸುಮಧ್ಯಮಾಃ ।
ಸರ್ಗಮೇತಂ ಪ್ರಭಾವೈಃ ಸ್ವೈರ್ಬೃಂಹಯಿಷ್ಯಂತ್ಯನೇಕಧಾ ॥ ೧೪ ॥

ಅತಸ್ತ್ವಮೃಷಿಮುಖ್ಯೇಭ್ಯೋ ಯಥಾಶೀಲಂ ಯಥಾರುಚಿ ।
ಆತ್ಮಜಾಃ ಪರಿದೇಹ್ಯದ್ಯ ವಿಸ್ತೃಣೀಹಿ ಯಶೋ ಭುವಿ ॥ ೧೫ ॥

ವೇದಾಹಮಾದ್ಯಂ ಪುರುಷಮವತೀರ್ಣಂ ಸ್ವಮಾಯಯಾ ।
ಭೂತಾನಾಂ ಶೇವಧಿಂ ದೇಹಂ ಬಿಭ್ರಾಣಂ ಕಪಿಲಂ ಮುನೇ ॥ ೧೬ ॥

ಜ್ಞಾನವಿಜ್ಞಾನಯೋಗೇನ ಕರ್ಮಣಾಮುದ್ಧರಂಜಟಾಃ ।
ಹಿರಣ್ಯಕೇಶಃ ಪದ್ಮಾಕ್ಷಃ ಪದ್ಮಮುದ್ರಾಪದಾಂಬುಜಃ ॥ ೧೭ ॥

ಏಷ ಮಾನವಿ ತೇ ಗರ್ಭಂ ಪ್ರವಿಷ್ಟಃ ಕೈಟಭಾರ್ದನಃ ।
ಅವಿದ್ಯಾಸಂಶಯಗ್ರಂಥಿಂ ಛಿತ್ತ್ವಾ ಗಾಂ ವಿಚರಿಷ್ಯತಿ ॥ ೧೮ ॥

ಅಯಂ ಸಿದ್ಧಗಣಾಧೀಶಃ ಸಾಂಖ್ಯಾಚಾರ್ಯೈಃ ಸುಸಮ್ಮತಃ ।
ಲೋಕೇ ಕಪಿಲ ಇತ್ಯಾಖ್ಯಾಂ ಗಂತಾ ತೇ ಕೀರ್ತಿವರ್ಧನಃ ॥ ೧೯ ॥

ಮೈತ್ರೇಯ ಉವಾಚ

ತಾವಾಶ್ವಾಸ್ಯ ಜಗತ್ಸ್ರಷ್ಟಾ ಕುಮಾರೈಃ ಸಹನಾರದಃ ।
ಹಂಸೋ ಹಂಸೇನ ಯಾನೇನ ತ್ರಿಧಾಮಪರಮಂ ಯಯೌ ॥ ೨೦ ॥

ಗತೇ ಶತಧೃತೌ ಕ್ಷತ್ತಃ ಕರ್ದಮಸ್ತೇನ ಚೋದಿತಃ ।
ಯಥೋದಿತಂ ಸ್ವದುಹಿತೄಃ ಪ್ರಾದಾದ್ವಿಶ್ವಸೃಜಾಂ ತತಃ ॥ ೨೧ ॥

ಮರೀಚಯೇ ಕಲಾಂ ಪ್ರಾದಾದನಸೂಯಾಮಥಾತ್ರಯೇ ।
ಶ್ರದ್ಧಾಮಂಗಿರಸೇಽಯಚ್ಛತ್ಪುಲಸ್ತ್ಯಾಯ ಹವಿರ್ಭುವಮ್ ॥ ೨೨ ॥

ಆದ್ದರಿಂದ ಭಗವಂತನು ಮಾಡಬೇಕೆಂದಿದ್ದ ಕಾರ್ಯವನ್ನು ಅವರು ವಿಶುದ್ಧವಾದ ಚಿತ್ತದಿಂದ ಅಭಿನಂದನೆ ಮಾಡುತ್ತಾ, ಆದರಿಸುತ್ತಾ, ತಮ್ಮ ಎಲ್ಲ ಇಂದ್ರಿಯಗಳಿಂದಲೂ ಪ್ರಸನ್ನತೆಯನ್ನು ಪ್ರಕಟಿಸುತ್ತಾ ಕರ್ದಮರನ್ನು ಕುರಿತು ಇಂತೆಂದರು – ॥ ೧೧ ॥

**ಶ್ರೀಬ್ರಹ್ಮದೇವರು ಹೇಳಿದರು** – ವತ್ಸ ಕರ್ದಮ! ಬೇರೆಯವರಿಗೆ ಮಾನವನ್ನು ಕೊಡುವವನೇ! ನೀನು ನನ್ನನ್ನು ಸಮ್ಮಾನಿಸುತ್ತಾ, ನನ್ನ ಆಜ್ಞೆಯನ್ನು ಪಾಲಿಸಿರುವೆ. ಇದರಿಂದ ನಿನ್ನ ನಿಷ್ಕಪಟ ಭಾವದಿಂದ ನನ್ನ ಪೂಜೆಯನ್ನು ಸಲ್ಲಿಸಿರುವೆ. ॥ ೧೨॥ ಮಕ್ಕಳಾದವರು – 'ಏನಪ್ಪಣೆ' ಎಂದು ಹೇಳಿ ಅತ್ಯಂತ ಆದರದಿಂದ ಅವನ ಆಣತಿಯನ್ನು ಪಾಲಿಸುವುದೇ ತಂದೆಗೆ ಸಲ್ಲಿಸಬೇಕಾದ ಅತ್ಯಂತ ಶ್ರೇಷ್ಠವಾದ ಸೇವೆಯಾಗಿದೆ. ॥ ೧೩ ॥ ಮಗು! ನೀನು ಸಭ್ಯನಾಗಿರುವೆ. ನಿನ್ನ ಸುಂದರಿಯರಾದ ಈ ಕನ್ಯೆಯರು ತಮ್ಮ ವಂಶ ಸಂತತಿಗಳ ಮೂಲಕ ಈ ಸೃಷ್ಟಿಯನ್ನು ಅನೇಕ ಪ್ರಕಾರದಿಂದ ಹೆಚ್ಚಿಸುವರು. ॥ ೧೪ ॥ ಈಗ ನೀನು ಈ ಮರೀಚಿಗಳೇ ಮುಂತಾದ ಮುನಿವರ್ಯರಿಗೆ ಇವರ ಸ್ವಭಾವ ಮತ್ತು ರುಚಿಗಳಿಗೆ ತಕ್ಕಂತೆ ನಿನ್ನ ಕನ್ಯೆಯರನ್ನು ವಿವಾಹಮಾಡಿಕೊಟ್ಟು ಪ್ರಪಂಚದಲ್ಲಿ ಸತ್ಕೀರ್ತಿಯನ್ನು ಹರಡುವವನಾಗು. ॥ ೧೫ ॥ ಮುನಿವರ್ಯನೇ! ಸಮಸ್ತ ಪ್ರಾಣಿಗಳಿಗೂ ನಿಧಿಯಾಗಿ, ಅವರ ಅಭೀಷ್ಟಗಳನ್ನು ಈಡೇರಿಸುವ ಆ ಆದಿಪುರುಷನಾದ ಶ್ರೀಮನ್ನಾರಾಯಣನೇ ಈಗ ತನ್ನ ಯೋಗ ಮಾಯೆಯಿಂದ ಕಪಿಲನೆಂಬ ಹೆಸರಿನಿಂದ ಅವತರಿಸಿರುವನು. ॥ ೧೬ ॥ (ಮತ್ತೆ ದೇವಹೂತಿಗೆ ಹೇಳಿದರು –) ರಾಜಕುಮಾರಿ! ಹೊನ್ನಿನಂತೆ ಹೊಳೆಯುವ ಕೇಶಗಳಿಂದಲೂ, ತಾವರೆ ಹೂವಿನಂತೆ ಕಂಗೊಳಿಸುವ ಕಣ್ಣುಗಳಿಂದಲೂ, ಪದ್ಮಾಂಕಿತವಾದ ಪದಾರವಿಂದಗಳಿಂದಲೂ ಕೂಡಿ, ಶಿಶುರೂಪದಿಂದ ಕೈಟಭಾರಿಯಾದ ಶ್ರೀಮಹಾವಿಷ್ಣುವೇ ಜ್ಞಾನ-ವಿಜ್ಞಾನಗಳ ಮೂಲಕ ಕರ್ಮಗಳ ವಾಸನೆಯನ್ನು ನಿರ್ಮೂಲಗೊಳಿಸಲು ನಿನ್ನ ಗರ್ಭದಲ್ಲಿ ಪ್ರವೇಶಿಸಿರುವನು. ಈತನು ಅವಿದ್ಯೆಯಿಂದುಂಟಾದ ಮೋಹದ ಗಂಟನ್ನು ಕತ್ತರಿಸಿ, ಭೂಮಿಯಲ್ಲಿ ಯಥೇಚ್ಛವಾಗಿ ಸಂಚರಿಸುವನು. ॥ ೧೭-೧೮ ॥ ಇವನು ಸಿದ್ಧರಿಗೂ, ಸಾಂಖ್ಯಾಚಾರ್ಯರಿಗೂ ಸಮ್ಮಾನಯೋಗ್ಯನಾಗುವನು. 'ಕಪಿಲ' ಎಂಬ ಹೆಸರಿನಿಂದ ಪ್ರಸಿದ್ಧನಾಗಿ ಲೋಕದಲ್ಲಿ ನಿನ್ನ ಕೀರ್ತಿಯನ್ನು ಹೆಚ್ಚಿಸುವನು. ॥ ೧೯ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಜಗತ್ತನ್ನು ಸೃಷ್ಟಿಸುವ ಶ್ರೀಬ್ರಹ್ಮದೇವರು ಅವರಿಬ್ಬರಿಗೂ ಹೀಗೆ ಸಂತೈಸಿ ಸನಕಾದಿಗಳನ್ನೂ, ನಾರದರನ್ನೂ ಜೊತೆಗೂಡಿ ಹಂಸಾರೂಢರಾಗಿ ತಮ್ಮ ಬ್ರಹ್ಮಲೋಕಕ್ಕೆ ಹೊರಟುಹೋದರು. ॥ ೨೦ ॥ ಶ್ರೀಬ್ರಹ್ಮದೇವರು ಹೋದಬಳಿಕ ಕರ್ದಮರು ಅವರ ಅಪ್ಪಣೆಯಂತೆ ಮರೀಚಿಗಳೇ ಮುಂತಾದ ಪ್ರಜಾಪತಿಗಳಿಗೆ ತಮ್ಮ ಕನ್ಯೆಯರನ್ನು ಕೊಟ್ಟು ವಿವಾಹ ಮಾಡಿದರು. ॥ ೨೧ ॥ ಅವರು ತಮ್ಮ ಕನ್ಯಾಮಣಿಗಳಲ್ಲಿ 'ಕಲಾ' ಎಂಬಾಕೆಯನ್ನು ಮರೀಚಿ ಮಹರ್ಷಿಗಳಿಗೂ, 'ಅನಸೂಯೆ'ಯನ್ನು ಅತ್ರಿಗಳಿಗೂ, 'ಶ್ರದ್ಧೆ'ಯನ್ನು ಅಂಗೀರಸರಿಗೂ, 'ಹವಿರ್ಭೂ' ಎಂಬಾಕೆಯನ್ನು ಪುಲಸ್ತ್ಯರಿಗೂ ಕೊಟ್ಟು ವಿವಾಹ ಮಾಡಿದರು. ॥ ೨೨ ॥

ಪುಲಹಾಯ ಗತಿಂ ಯುಕ್ತಾಂ ಕ್ರತವೇ ಚ ಕ್ರಿಯಾಂ ಸತೀಮ್ ।
ಖ್ಯಾತಿಂ ಚ ಭೃಗವೇಽಯಚ್ಛದ್ವಸಿಷ್ಠಾಯಾಪ್ಯರುಂಧತೀಮ್ ॥ ೨೩ ॥

ಅಥರ್ವಣೇಽದದಾಚ್ಛಾಂತಿಂ ಯಯಾ ಯಜ್ಞೋ ವಿತನ್ಯತೇ ।
ವಿಪ್ರರ್ಷಭಾನ್ಕೃತೋದ್ವಾಹಾನ್ಸದಾರಾನ್ಸಮಲಾಲಯತ್ ॥ ೨೪ ॥

ತತಸ್ತ ಋಷಯಃ ಕ್ಷತ್ತಃ ಕೃತದಾರಾ ನಿಮಂತ್ರ್ಯ ತಮ್ ।
ಪ್ರಾತಿಷ್ಠನ್ನಂದಿಮಾಪನ್ನಾಃ ಸ್ವಂ ಸ್ವಮಾಶ್ರಮಮಂಡಲಮ್ ॥ ೨೫ ॥

ಸ ಚಾವತೀರ್ಣಂ ತ್ರಿಯುಗಮಾಜ್ಞಾಯ ವಿಬುಧರ್ಷಭಮ್ ।
ವಿವಿಕ್ತ ಉಪಸಂಗಮ್ಯ ಪ್ರಣಮ್ಯ ಸಮಭಾಷತ ॥ ೨೬ ॥

ಅಹೋ ಪಾಪಚ್ಯಮಾನಾನಾಂ ನಿರಯೇ ಸ್ವೈರಮಂಗಲೈಃ ।
ಕಾಲೇನ ಭೂಯಸಾ ನೂನಂ ಪ್ರಸೀದಂತೀಹ ದೇವತಾಃ ॥ ೨೭ ॥

ಬಹುಜನ್ಮವಿಪಕ್ವೇನ ಸಮ್ಯಗ್ಯೋಗಸಮಾಧಿನಾ ।
ದ್ರಷ್ಟುಂ ಯತಂತೇ ಯತಯಃ ಶೂನ್ಯಾಗಾರೇಷು ಯತ್ಪದಮ್ ॥ ೨೮ ॥

ಸ ಏವ ಭಗವಾನದ್ಯ ಹೇಲನಂ ನಗಣಯ್ಯ ನಃ ।
ಗೃಹೇಷು ಜಾತೋ ಗ್ರಾಮ್ಯಾಣಾಂ ಯಃ ಸ್ವಾನಾಂ ಪಕ್ಷಪೋಷಣಃ ॥ ೨೯ ॥

ಸ್ವೀಯಂ ವಾಕ್ಯಮೃತಂ ಕರ್ತುಮವತೀರ್ಣೋಽಸಿ ಮೇ ಗೃಹೇ ।
ಚಿಕೀರ್ಷುರ್ಭಗವಾನ್ ಜ್ಞಾನಂ ಭಕ್ತಾನಾಂ ಮಾನವರ್ಧನಃ ॥ ೩೦ ॥

ತಾನ್ಯೇವ ತೇಽಭಿರೂಪಾಣಿ ರೂಪಾಣಿ ಭಗವಂಸ್ತವ ।
ಯಾನಿ ಯಾನಿ ಚ ರೋಚಂತೇ ಸ್ವಜನಾನಾಮರೂಪಿಣಃ ॥ ೩೧ ॥

ತ್ವಾಂ ಸೂರಿಭಿಸ್ತತ್ತ್ವಬುಭುತ್ಸಯಾದ್ಧಾ
ಸದಾಭಿವಾದಾರ್ಹಣಪಾದಪೀಠಮ್ ।
ಐಶ್ವರ್ಯವೈರಾಗ್ಯಯಶೋಽವಬೋಧ-
ವೀರ್ಯಶ್ರಿಯಾ ಪೂರ್ತಮಹಂ ಪ್ರಪದ್ಯೇ ॥ ೩೨ ॥

ಪರಂ ಪ್ರಧಾನಂ ಪುರುಷಂ ಮಹಾಂತಂ
ಕಾಲಂ ಕವಿಂ ತ್ರಿವೃತಂ ಲೋಕಪಾಲಮ್ ।
ಆತ್ಮಾನುಭೂತ್ಯಾನುಗತಪ್ರಪಂಚಂ
ಸ್ವಚ್ಛಂದಶಕ್ತಿಂ ಕಪಿಲಂ ಪ್ರಪದ್ಯೇ ॥ ೩೩ ॥

ಮಹರ್ಷಿ ಪುಲಹರಿಗೆ ಅನುರೂಪಳಾದ 'ಗತಿ' ಎಂಬ ಕನ್ಯೆಯನ್ನೂ ಕ್ರತುವಿಗೆ ಸಾಧ್ವೀಮಣಿಯಾದ 'ಕ್ರಿಯೆ' ಎಂಬುವಳನ್ನೂ ಭೃಗು ಮಹರ್ಷಿಗಳಿಗೆ 'ಖ್ಯಾತಿ' ಎಂಬಾಕೆಯನ್ನೂ, ಮಹರ್ಷಿ ವಸಿಷ್ಠರಿಗೆ 'ಅರುಂಧತಿ'ಯನ್ನೂ ವಿವಾಹ ಮಾಡಿಕೊಟ್ಟರು. ॥ ೨೩ ॥ ಅಥರ್ವಾ ಮಹರ್ಷಿಗಳಿಗೆ ಯಜ್ಞಕರ್ಮವನ್ನು ವಿಸ್ತರಿಸುವ 'ಶಾಂತಿ' ಎಂಬ ಕನ್ಯೆಯನ್ನು ಕೊಟ್ಟು ವಿವಾಹ ಮಾಡಿದರು. ಕರ್ದಮರು ವಿವಾಹಿತರಾದ ಮಹರ್ಷಿಗಳನ್ನೂ, ಅವರ ಪತ್ನಿಯರನ್ನೂ ಪ್ರೀತಿಯಿಂದ ತುಂಬಾ ಸತ್ಕಾರಮಾಡಿದರು. ॥ ೨೪ ॥ ವಿದುರನೇ ! ಹೀಗೆ ವಿವಾಹಮಾಡಿಕೊಂಡ ಆ ಮಹರ್ಷಿಗಳೆಲ್ಲರೂ ಕರ್ದಮರ ಅನುಮತಿಯನ್ನು ಪಡೆದು ಪರಮಾನಂದದಿಂದ ತಮ್ಮ-ತಮ್ಮ ಆಶ್ರಮಗಳಿಗೆ ಹೊರಟುಹೋದರು. ॥ ೨೫ ॥

ದೇವಾಧಿದೇವನಾದ ಸಾಕ್ಷಾತ್ ಶ್ರೀಹರಿಯೇ ತಮ್ಮ ಮನೆಯಲ್ಲಿ ಅವತರಿಸಿರುವುದನ್ನು ಗಮನಿಸಿ ಕರ್ದಮರು ಏಕಾಂತದಲ್ಲಿ ಅವನ ಬಳಿಗೆ ಹೋಗಿ, ಅವನಿಗೆ ನಮಸ್ಕರಿಸಿ ಇಂತೆಂದರು – ॥ ೨೬ ॥ ಆಹಾ ! ನನ್ನದು ಎಂತಹ ಪುಣ್ಯ ! ತಮ್ಮ ಪಾಪಕರ್ಮಗಳ ಫಲವಾಗಿ ಈ ದುಃಖಮಯ ಪ್ರಪಂಚದಲ್ಲಿ ನಾನಾ ಪ್ರಕಾರದ ಪೀಡೆಗಳನ್ನು ಅನುಭವಿಸುತ್ತಿರುವ ಮನುಷ್ಯರ ಮೇಲೆ ದೇವತೆಗಳು ಪ್ರಸನ್ನರಾಗಬೇಕಾದರೆ ಬಹಳ ಸಮಯಬೇಕು. ॥ ೨೭ ॥ ಆದರೆ ಯಾರ ಸ್ವರೂಪವನ್ನು ಯೋಗಿಜನರು ಅನೇಕ ಜನ್ಮಗಳ ಸಾಧನೆಯಿಂದ ಸುದೃಢವಾದ ಸಮಾಧಿಯ ಮೂಲಕ ಏಕಾಂತದಲ್ಲಿ ನೋಡಲು ಪ್ರಯತ್ನಿಸುವರೋ ಅಂತಹ ತನ್ನ ಭಕ್ತರನ್ನು ರಕ್ಷಿಸುತ್ತಿರುವ ಶ್ರೀಹರಿಯು ನಮ್ಮಂತಹ ವಿಷಯಲೋಲುಪರ ಮೂಲಕ ಆಗುವ ತನ್ನ ಅವಜ್ಞತೆಯನ್ನು ಸ್ವಲ್ಪವೂ ಲೆಕ್ಕಿಸದೆ ಇಂದು ನಮ್ಮ ಮನೆಯಲ್ಲಿ ಅವತರಿಸಿದ್ದಾನಲ್ಲ! ॥ ೨೮-೨೯ ॥ ಸ್ವಾಮಿಯೇ ! ನೀನು ನಿಜವಾಗಿಯೂ ನಿನ್ನ ಭಕ್ತರ ಮಾನವನ್ನು ಹೆಚ್ಚಿಸುವವನಾಗಿರುವೆ. ನೀನು ನಿನ್ನ ವಾಕ್ಯವನ್ನು ಸತ್ಯವಾಗಿಸಲೋಸುಗ ಮತ್ತು ಸಾಂಖ್ಯಯೋಗವನ್ನು ಉಪದೇಶಮಾಡುವುದಕ್ಕಾಗಿಯೇ ನಮ್ಮಲ್ಲಿ ಅವತರಿಸಿರುವೆ. ॥ ೩೦ ॥ ಭಗವಂತಾ ! ನೀನು ಪ್ರಾಕೃತರೂಪ ರಹಿತನಾಗಿರುವೆ. ನಿನ್ನ ಚತುರ್ಭುಜಾದಿ ಅಲೌಕಿಕ ರೂಪಗಳೇ ನಿನಗೆ ಯೋಗ್ಯವಾಗಿವೆ. ಆದರೆ ನಿನ್ನ ಸ್ವಜನರಾದ ಭಕ್ತರಿಗೆ ರುಚಿಸುವ ಮನುಷ್ಯರೂಪಗಳೇ ನಿನಗೂ ಪ್ರಿಯವಾಗಿ ಅವನ್ನು ಧರಿಸುತ್ತೀಯೆ ॥ ೩೧ ॥ ನಿನ್ನ ಪಾದಪೀಠವು ತತ್ತ್ವಜ್ಞಾನೇಚ್ಛುಗಳಾದ ವಿದ್ವಾಂಸರಿಂದ ಸರ್ವದಾ ವಂದನೀಯವಾಗಿದೆ. ಹಾಗೂ ನೀನು ಐಶ್ವರ್ಯ, ವೈರಾಗ್ಯ, ಯಶ, ಜ್ಞಾನ, ವೀರ್ಯ, ಶ್ರೀ – ಹೀಗೆ ಆರು ಐಶ್ವರ್ಯಗಳಿಂದ ಪೂರ್ಣನಾಗಿರುವೆ. ನಾನು ನಿನಗೆ ಶರಣಾಗಿದ್ದೇನೆ. ॥ ೩೨ ॥ ಭಗವಂತನೇ ! ನೀನು ಸಾಕ್ಷಾತ್ ಪರಬ್ರಹ್ಮನಾಗಿರುವೆ. ಎಲ್ಲ ಶಕ್ತಿಗಳು ನಿನ್ನ ಅಧೀನವಾಗಿವೆ. ಪ್ರಕೃತಿ, ಪುರುಷ, ಮಹತ್ತತ್ತ್ವ, ಕಾಲ, ತ್ರಿವಿಧ ಅಹಂಕಾರ, ಸಮಸ್ತ ಲೋಕಗಳು ಮತ್ತು ಲೋಕಪಾಲರ ರೂಪದಲ್ಲಿ ನೀನೇ ಪ್ರಕಟನಾಗಿರುವೆ. ಸರ್ವಜ್ಞ ಪರಮಾತ್ಮನಾದ ನೀನೇ ಈ ಸಮಸ್ತ ಪ್ರಪಂಚವನ್ನು ತನ್ನ ಚೈತನ್ಯಶಕ್ತಿಯ ಮೂಲಕ ತನ್ನಲ್ಲಿ ಲೀನಗೊಳಿಸಿಕೊಳ್ಳುವೆ. ಆದ್ದರಿಂದ ಇವೆಲ್ಲವುಗಳಿಂದಲೂ ನೀನು ಅತೀತನಾಗಿರುವೆ. ಇಂತಹ ಭಗವಾನ್ ಕಪಿಲನಾದ ನಿನ್ನನ್ನು ನಾನು ಶರಣು ಹೊಂದುತ್ತೇನೆ. ॥ ೩೩ ॥

ಆ ಸ್ವಾಭಿಪೃಚ್ಛೇಽದ್ಯ ಪತಿಂ ಪ್ರಜಾನಾಂ
ತ್ವಯಾವತೀರ್ಣರ್ಣ ಉತಾಪ್ತಕಾಮಃ ।
ಪರಿವ್ರಜತ್ಪದವೀಮಾಸ್ಥಿತೋಽಹಂ
ಚರಿಷ್ಯೇ ತ್ವಾಂ ಹೃದಿ ಯುಂಜನ್ವಿಶೋಕಃ ॥ ೩೪ ॥

*ಶ್ರೀಭಗವಾನುವಾಚ*

ಮಯಾ ಪ್ರೋಕ್ತಂ ಹಿ ಲೋಕಸ್ಯ ಪ್ರಮಾಣಂ ಸತ್ಯಲೌಕಿಕೇ ।
ಅಥಾಜನಿ ಮಯಾ ತುಭ್ಯಂ ಯದವೋಚಮೃತಂ ಮುನೇ ॥ ೩೫ ॥

ಏತನ್ಮೇ ಜನ್ಮ ಲೋಕೇಽಸ್ಮಿನ್ಮುಮುಕ್ಷೂಣಾಂ ದುರಾಶಯಾತ್ ।
ಪ್ರಸಂಖ್ಯಾನಾಯ ತತ್ತ್ವಾನಾಂ ಸಮ್ಮತಾಯಾತ್ಮದರ್ಶನೇ ॥ ೩೬ ॥

ಏಷ ಆತ್ಮಪಥೋಽವ್ಯಕ್ತೋ ನಷ್ಟಃ ಕಾಲೇನ ಭೂಯಸಾ ।
ತಂ ಪ್ರವರ್ತಯಿತುಂ ದೇಹಮಿಮಂ ವಿದ್ಧಿ ಮಯಾ ಭೃತಮ್ ॥ ೩೭ ॥

ಗಚ್ಛ ಕಾಮಂ ಮಯಾಽಽಪೃಷ್ಟೋ ಮಯಿ ಸಂನ್ಯಸ್ತಕರ್ಮಣಾ ।
ಜಿತ್ವಾ ಸುದುರ್ಜಯಂ ಮೃತ್ಯುಮಮೃತತ್ವಾಯ ಮಾಂ ಭಜ ॥ ೩೮ ॥

ಮಾಮಾತ್ಮಾನಂ ಸ್ವಯಂಜ್ಯೋತಿಃ ಸರ್ವಭೂತಗುಹಾಶಯಮ್ ।
ಆತ್ಮನ್ಯೇವಾತ್ಮನಾ ವೀಕ್ಷ್ಯ ವಿಶೋಕೋಽಭಯಮೃಚ್ಛಸಿ ॥ ೩೯ ॥

ಮಾತ್ರ ಆಧ್ಯಾತ್ಮಿಕೀಂ ವಿದ್ಯಾಂ ಶಮನೀಂ ಸರ್ವಕರ್ಮಣಾಮ್ ।
ವಿತರಿಷ್ಯೇ ಯಯಾ ಚಾಸೌ ಭಯಂ ಚಾತಿತರಿಷ್ಯತಿ ॥ ೪೦ ॥

*ಮೈತ್ರೇಯ ಉವಾಚ*

ಏವಂ ಸಮುದಿತಸ್ತೇನ ಕಪಿಲೇನ ಪ್ರಜಾಪತಿಃ ।
ದಕ್ಷಿಣೀಕೃತ್ಯ ತಂ ಪ್ರೀತೋ ವನಮೇವ ಜಗಾಮ ಹ ॥ ೪೧ ॥

ವ್ರತಂ ಸ ಆಸ್ಥಿತೋ ಮೌನಮಾತ್ಮೈಕಶರಣೋ ಮುನಿಃ ।
ನಿಃಸಂಗೋ ವ್ಯಚರತ್ಕ್ಷೋಣೀಮನಗ್ನಿರನಿಕೇತನಃ ॥ ೪೨ ॥

ಮನೋ ಬ್ರಹ್ಮಣಿ ಯುಂಜಾನೋ ಯತ್ತತ್ಸದಸತಃ ಪರಮ್ ।
ಗುಣಾವಭಾಸೇ ವಿಗುಣ ಏಕಭಕ್ತ್ಯಾನುಭಾವಿತೇ ॥ ೪೩ ॥

ಸ್ವಾಮಿ! ನಿನ್ನ ಕೃಪೆಯಿಂದ ನಾನು ಮೂರೂ ಋಣಗಳಿಂದ ಮುಕ್ತನಾಗಿರುವೆ. ನನ್ನ ಎಲ್ಲ ಮನೋರಥಗಳೂ ಪೂರ್ಣವಾದುವು. ಇನ್ನು ನಾನು ಸಂನ್ಯಾಸಮಾರ್ಗವನ್ನು ಹಿಡಿದು ನಿನ್ನನ್ನೇ ಚಿಂತಿಸುತ್ತಾ ಶೋಕರಹಿತನಾಗಿ ಸಂಚರಿಸುವೆನು. ನೀನು ಸಮಸ್ತ ಪ್ರಜೆಗಳ ಒಡೆಯನಾಗಿರುವೆ. ಆದ್ದರಿಂದ ಇದಕ್ಕಾಗಿ ನಿನ್ನ ಆಜ್ಞೆ-ಅನುಮತಿಯನ್ನು ಪ್ರಾರ್ಥಿಸುತ್ತೇನೆ. ॥ ೩೪ ॥

**ಶ್ರೀಭಗವಂತನೆಂದನು** – ಎಲೈ ಮುನೀಂದ್ರನೇ! ವೈದಿಕ ಮತ್ತು ಲೌಕಿಕ ಎಲ್ಲ ಕರ್ಮಗಳಲ್ಲಿ ಪ್ರಪಂಚಕ್ಕಾಗಿ ನಾನು ಹೇಳಿದುದೇ ಪ್ರಮಾಣವಾಗಿದೆ. ಆದಕ್ಕಾಗಿ – 'ನಾನು ನಿಮ್ಮಲ್ಲಿ ಅವತರಿಸುವೆ' ಎಂದು ಹೇಳಿದುದನ್ನು ಸತ್ಯವಾಗಿಸಲೆಂದೇ ನಾನು ಇಲ್ಲಿ ಅವತರಿಸಿರುವೆನು. ॥ ೩೫ ॥ ಅಂತೆಯೇ ಲಿಂಗಶರೀರದಿಂದ ಬಿಡುಗಡೆಹೊಂದುವ ಬಯಕೆಯುಳ್ಳ ಮುನಿಗಳಿಗೆ ಆತ್ಮ ದರ್ಶನಕ್ಕೆ ಉಪಯೋಗವಾಗುವ ಪ್ರಕೃತಿಯೇ ಮುಂತಾದ ತತ್ತ್ವಗಳನ್ನು ವಿವೇಚನೆ ಮಾಡುವುದಕ್ಕಾಗಿಯೂ ನನ್ನ ಈ ಅವತಾರವಾಗಿದೆ. ॥ ೩೬ ॥ ಆತ್ಮಜ್ಞಾನದ ಸೂಕ್ಷ್ಮವಾದ ಈ ಮಾರ್ಗವು ಬಹಳ ಕಾಲದಿಂದಲೂ ಲುಪ್ತವಾಗಿಬಿಟ್ಟಿದೆ. ಅದನ್ನು ಮತ್ತೆ ಪ್ರವರ್ತನೆ ಮಾಡುವುದಕ್ಕಾಗಿಯೇ ನಾನು ಈ ಶರೀರವನ್ನು ಧರಿಸಿರುವೆನು ಎಂದು ತಿಳಿ. ॥ ೩೭ ॥ ಮುನಿವರ್ಯನೇ! ನಾನು ಅನುಮತಿಯನ್ನು ನೀಡಿರುವೆನು. ನೀನು ನಿನ್ನ ಇಷ್ಟಾನುಸಾರವಾಗಿ ಹೋಗಬಹುದು. ಸಮಸ್ತ ಕರ್ಮಗಳನ್ನು ನನ್ನಲ್ಲಿ ಸಮರ್ಪಣೆಮಾಡುತ್ತಾ, ದುರ್ಜಯವಾದ ಮೃತ್ಯುವನ್ನು ಗೆದ್ದುಕೊಂಡು ಮೋಕ್ಷವನ್ನು ಪಡೆಯುವುದಕ್ಕಾಗಿ ನನ್ನನ್ನು ಭಜಿಸುತ್ತಾ ಇರು. ॥ ೩೮ ॥ ನಾನು ಸ್ವಯಂ ಪ್ರಕಾಶನೂ, ಸಮಸ್ತ ಜೀವರ ಅಂತಃಕರಣದಲ್ಲಿ ವಾಸಿಸುವ ಪರಮಾತ್ಮನೇ ಆಗಿರುವೆ. ಆದ್ದರಿಂದ ನೀನು ವಿಶುದ್ಧಬುದ್ಧಿಯ ಮೂಲಕ ನಿನ್ನ ಅಂತಃಕರಣದಲ್ಲಿ ನನ್ನನ್ನು ಸಾಕ್ಷಾತ್ಕರಿಸಿಕೊಂಡಾಗ ಎಲ್ಲ ರೀತಿಯ ಶೋಕಗಳಿಂದ ಬಿಡುಗಡೆಹೊಂದಿ ನಿರ್ಭಯಪದ (ಮೋಕ್ಷ) ವನ್ನು ಪಡೆದುಕೊಳ್ಳುವೆ. ॥ ೩೯ ॥ ತಾಯಿಯಾದ ದೇವಹೂತಿಗೂ ನಾನು ಸಮಸ್ತ ಕರ್ಮಗಳಿಂದ ಬಿಡುಗಡೆಹೊಂದುವ ಆತ್ಮಜ್ಞಾನವನ್ನು ಕರುಣಿಸುವೆನು. ಅದರಿಂದ ಅವಳು ಈ ಸಂಸಾರ ಭಯದಿಂದ ಪಾರಾಗಿಹೋಗುವಳು. ॥ ೪೦ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಭಗವಾನ್ ಕಪಿಲನು ಹೀಗೆ ಹೇಳಿದೊಡನೆ ಪ್ರಜಾಪತಿಯಾದ ಕರ್ದಮರು ಅವನನ್ನು ಪ್ರದಕ್ಷಿಣೆಗೈದು ಸಂತೋಷದಿಂದ ಕಾಡಿಗೆ ಹೊರಟುಹೋದರು. ॥ ೪೧ ॥

ಅಲ್ಲಿ ಅಹಿಂಸಾಮಯ ಸಂನ್ಯಾಸಧರ್ಮವನ್ನು ಪಾಲಿಸುತ್ತಾ ಅವರು ಏಕಮಾತ್ರ ಶ್ರೀಭಗವಂತನಲ್ಲಿ ಶರಣಾದರು. ಬಳಿಕ ಅಗ್ನಿಯನ್ನೂ ಆಶ್ರಮವನ್ನೂ ತ್ಯಜಿಸಿ ನಿಸ್ಸಂಗಭಾವದಿಂದ ಭೂಮಿಯಲ್ಲಿ ಸಂಚರಿಸತೊಡಗಿದರು. ॥ ೪೨ ॥ ಯಾವಾತನು ಕಾರ್ಯಕಾರಣದಿಂದ ಅತೀತವಾಗಿರುವನೋ, ಸತ್ತ್ವಾದಿ ತ್ರಿಗುಣಗಳ ಪ್ರಕಾಶಕನೂ, ಗುಣಾತೀತನೂ, ಅನನ್ಯ ಭಕ್ತಿಯಿಂದಲೇ ಪ್ರತ್ಯಕ್ಷನಾಗುವನೋ ಆ ಪರಬ್ರಹ್ಮನಲ್ಲಿ ಅವರು ತಮ್ಮ ಮನವನ್ನು ತೊಡಗಿಸಿದರು. ॥ ೪೩ ॥

ನಿರಹಂಕೃತಿರ್ನಿರ್ಮಮಶ್ಚ ನಿರ್ದ್ವಂದ್ವಃ ಸಮದೃಕ್ಸ್ವದೃಕ್ ।
ಪ್ರತ್ಯಕ್ಪ್ರಶಾಂತಧೀರ್ಧೀರಃ ಪ್ರಶಾಂತೋರ್ಮಿರಿವೋದಧಿಃ ॥ ೪೪ ॥

ವಾಸುದೇವೇ ಭಗವತಿ ಸರ್ವಜ್ಞೇ ಪ್ರತ್ಯಗಾತ್ಮನಿ ।
ಪರೇಣ ಭಕ್ತಿಭಾವೇನ ಲಬ್ಧಾತ್ಮಾ ಮುಕ್ತಬಂಧನಃ ॥ ೪೫ ॥

ಆತ್ಮಾನಂ ಸರ್ವಭೂತೇಷು ಭಗವಂತಮವಸ್ಥಿತಮ್ ।
ಅಪಶ್ಯತ್ಸರ್ವಭೂತಾನಿ ಭಗವತ್ಯಪಿ ಚಾತ್ಮನಿ ॥ ೪೬ ॥

ಇಚ್ಛಾದ್ವೇಷವಿಹೀನೇನ ಸರ್ವತ್ರ ಸಮಚೇತಸಾ ।
ಭಗವದ್ಭಕ್ತಿಯುಕ್ತೇನ ಪ್ರಾಪ್ತಾ ಭಾಗವತೀ ಗತಿಃ ॥ ೪೭ ॥

ಅವರು ಅಹಂಕಾರ, ಮಮತೆ ಮತ್ತು ಸುಖ-ದುಃಖಾದಿ ದ್ವಂದ್ವಗಳಿಂದ ಬಿಡುಗಡೆಹೊಂದಿ, ಸಮದರ್ಶಿಯಾಗಿ, ಎಲ್ಲದರಲ್ಲಿ ತನ್ನ ಆತ್ಮವನ್ನೇ ನೋಡತೊಡಗಿದರು. ಅವರ ಬುದ್ಧಿ ಅಂತರ್ಮುಖಿಯೂ, ಶಾಂತವೂ ಆಯಿತು. ಆಗ ಧೀರರಾದ ಕರ್ದಮರು ಪ್ರಶಾಂತವೂ, ಗಂಭೀರವೂ ಆದ ಸಮುದ್ರದಂತೆ ಕಂಡು ಬರುತ್ತಿದ್ದರು. ॥ ೪೪ ॥ ಪರಮ ಭಕ್ತಿಭಾವದ ಮೂಲಕ ಸರ್ವಾಂತರ್ಯಾಮಿಯೂ, ಸರ್ವಜ್ಞನೂ ಆದ ಶ್ರೀವಾಸುದೇವನಲ್ಲಿ ಚಿತ್ತವು ಸ್ಥಿರವಾದ್ದರಿಂದ ಅವರು ಎಲ್ಲ ಬಂಧನಗಳಿಂದಲೂ ಮುಕ್ತರಾಗಿ ಹೋದರು. ॥ ೪೫ ॥ ಸಮಸ್ತ ಪ್ರಾಣಿಗಳಲ್ಲಿ ತನ್ನ ಆತ್ಮಸ್ವರೂಪಿ ಶ್ರೀಹರಿಯನ್ನು ಮತ್ತು ಸಮಸ್ತಪ್ರಾಣಿಗಳನ್ನು ಆತ್ಮಸ್ವರೂಪ ಶ್ರೀಭಗವಂತನಲ್ಲಿ ಇರುವುದನ್ನು ನೋಡತೊಡಗಿದರು. ॥ ೪೬ ॥ ಹೀಗೆ ಇಚ್ಛಾ-ದ್ವೇಷಗಳಿಂದ ರಹಿತರಾಗಿ ಸರ್ವತ್ರ ಸಮಬುದ್ಧಿ ಮತ್ತು ಭಗವದ್ಭಕ್ತಿಯಿಂದ ಸಂಪನ್ನರಾದ ಶ್ರೀಕರ್ದಮರು ಭಗವಂತನ ಪರಮಪದವನ್ನು ಪಡೆದುಕೊಂಡರು. ॥ ೪೭ ॥

*ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೨೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಕಾಪಿಲೇಯೋಪಾಖ್ಯಾನೇ ಚತುರ್ವಿಂಶೋಽಧ್ಯಾಯಃ ॥ ೨೪ ॥

# ಇಪ್ಪತ್ತೈದನೆಯ ಅಧ್ಯಾಯ

## ದೇವಹೂತಿಯ ಪ್ರಶ್ನೆಗೆ ಕಪಿಲರಿಂದ ಭಕ್ತಿಯೋಗದ ಮಹಿಮೆಯ ವರ್ಣನೆ

*ಶೌನಕ ಉವಾಚ*

ಕಪಿಲಸ್ತತ್ತ್ವಸಂಖ್ಯಾತಾ ಭಗವಾನಾತ್ಮಮಾಯಯಾ ।
ಜಾತಃ ಸ್ವಯಮಜಃ ಸಾಕ್ಷಾದಾತ್ಮಪ್ರಜ್ಞಪ್ತಯೇ ನೃಣಾಮ್ ॥ ೧ ॥

ನ ಹ್ಯಸ್ಯ ವರ್ಷ್ಮಣಃ ಪುಂಸಾಂ ವರಿಮ್ಣಃ ಸರ್ವಯೋಗಿನಾಮ್ ।
ವಿಶ್ರುತೌ ಶ್ರುತದೇವಸ್ಯ ಭೂರಿ ತೃಪ್ಯಂತಿ ಮೇಽಸವಃ ॥ ೨ ॥

ಯದ್ಯದ್ವಿಧತ್ತೇ ಭಗವಾನ್ಸ್ವಚ್ಛಂದಾತ್ಮಾಽಽತ್ಮಮಾಯಯಾ ।
ತಾನಿ ಮೇ ಶ್ರದ್ದಧಾನಸ್ಯ ಕೀರ್ತನ್ಯಾನ್ಯನುಕೀರ್ತಯ ॥ ೩ ॥

*ಸೂತ ಉವಾಚ*

ದ್ವೈಪಾಯನಸಖಸ್ತ್ವೇವಂ ಮೈತ್ರೇಯೋ ಭಗವಾಂಸ್ತಥಾ ।
ಪ್ರಾಹೇದಂ ವಿದುರಂ ಪ್ರೀತ ಆನ್ವೀಕ್ಷಿಕ್ಯಾಂ ಪ್ರಚೋದಿತಃ ॥ ೪ ॥

**ಶೌನಕರು ಹೇಳುತ್ತಾರೆ** – ಸೂತಪುರಾಣಿಕರೇ! ತತ್ತ್ವಗಳನ್ನು ಲೆಕ್ಕಿಸುವ ಸಾಂಖ್ಯದರ್ಶನ ಪ್ರವರ್ತಕರಾದ ಭಗವಾನ್ ಕಪಿಲರು ಸಾಕ್ಷಾತ್ ಅಜನ್ಮನಾದ ನಾರಾಯಣನೇ ಆಗಿದ್ದರೂ ಕೂಡ ಜನರಿಗೆ ಆತ್ಮಜ್ಞಾನವನ್ನು ಉಪದೇಶಿಸಲು ತನ್ನ ಮಾಯೆಯಿಂದ ಅವತರಿಸಿರುವನು ಎಂದು ತಿಳಿದುಬಂತು. ॥ ೧ ॥ ನಾನು ಭಗವಂತನ ಬಹಳಷ್ಟು ಚರಿತ್ರೆಗಳನ್ನು ಕೇಳಿದ್ದರೂ ಈ ಯೋಗಿವರ್ಯ, ಪುರುಷಶ್ರೇಷ್ಠ ಕಪಿಲರ ಕೀರ್ತಿಯನ್ನು ಕೇಳಿದಷ್ಟು ನನ್ನ ಇಂದ್ರಿಯಗಳಿಗೆ ತೃಪ್ತಿಯಾಗಿಲ್ಲ. ॥ ೨ ॥ ಸಂಪೂರ್ಣವಾಗಿ ಸ್ವತಂತ್ರನಾಗಿರುವ ಶ್ರೀಹರಿಯು ತನ್ನ ಯೋಗಮಾಯೆಯ ಮೂಲಕ ಭಕ್ತರ ಬಯಕೆಗನುಸಾರ ಶರೀರಗಳನ್ನು ಧರಿಸಿ ಮಾಡುವ ಲೀಲೆಗಳೆಲ್ಲವೂ ಕೀರ್ತನೆಗೆ ಯೋಗ್ಯವಾಗಿವೆ. ಆದ್ದರಿಂದ ತಾವು ಅವೆಲ್ಲವನ್ನು ನನಗೆ ಹೇಳಿರಿ. ಅದನ್ನು ಕೇಳುವುದರಲ್ಲಿ ನನಗೆ ಬಹಳ ಶ್ರದ್ಧೆ ಇದೆ. ॥ ೩ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳೇ! ನಿಮ್ಮಂತೆಯೇ ವಿದುರನೂ ಈ ಆತ್ಮಜ್ಞಾನ ಸಂಬಂಧವಾದ ಪ್ರಶ್ನೆಯನ್ನು ಮಾಡಿದ್ದನು. ಆಗ ವ್ಯಾಸರ ಸ್ನೇಹಿತರಾದ ಪೂಜ್ಯರಾದ ಶ್ರೀಮೈತ್ರೇಯರು ಪ್ರಸನ್ನರಾಗಿ ವಿದುರನಿಗೆ ಹೀಗೆ ಹೇಳತೊಡಗಿದರು – ॥ ೪ ॥

*ಮೈತ್ರೇಯ ಉವಾಚ*

ಪಿತರಿ ಪ್ರಸ್ಥಿತೇಽರಣ್ಯಂ ಮಾತುಃ ಪ್ರಿಯಚಿಕೀರ್ಷಯಾ ।
ತಸ್ಮಿನ್ ಬಿಂದುಸರೇಽವಾತ್ಸೀದ್ಭಗವಾನ್ಕಪಿಲಃ ಕಿಲ ॥ ೫ ॥

ತಮಾಸೀನಮಕರ್ಮಾಣಂ ತತ್ತ್ವಮಾರ್ಗಾಗ್ರದರ್ಶನಮ್ ।
ಸ್ವಸುತಂ ದೇವಹೂತ್ಯಾಹ ಧಾತುಃ ಸಂಸ್ಮರತೀ ವಚಃ ॥ ೬ ॥

*ದೇವಹೂತಿರುವಾಚ*

ನಿರ್ವಿಣ್ಣಾ ನಿತರಾಂ ಭೂಮನ್ನಸದಿಂದ್ರಿಯತರ್ಷಣಾತ್ ।
ಯೇನ ಸಂಭಾವ್ಯಮಾನೇನ ಪ್ರಪನ್ನಾಂಧಂ ತಮಃ ಪ್ರಭೋ ॥ ೭ ॥

ತಸ್ಯ ತ್ವಂ ತಮಸೋಽಂಧಸ್ಯ ದುಷ್ಪಾರಸ್ಯಾದ್ಯ ಪಾರಗಮ್ ।
ಸಚ್ಚಕ್ಷುರ್ಜನ್ಮನಾಮಂತೇ ಲಬ್ಧಂ ಮೇ ತ್ವದನುಗ್ರಹಾತ್ ॥ ೮ ॥

ಯ ಆದ್ಯೋ ಭಗವಾನ್ಪುಂಸಾಮೀಶ್ವರೋ ವೈ ಭವಾನ್ಕಿಲ ।
ಲೋಕಸ್ಯ ತಮಸಾಂಧಸ್ಯ ಚಕ್ಷುಃ ಸೂರ್ಯ ಇವೋದಿತಃ ॥ ೯ ॥

ಅಥ ಮೇ ದೇವ ಸಮ್ಮೋಹಮಪಾಕ್ರಷ್ಟುಂ ತ್ವಮರ್ಹಸಿ ।
ಯೋಽವಗ್ರಹೋಽಹಂಮಮೇತೀತ್ಯೇತಸ್ಮಿನ್ಯೋಜಿತಸ್ತ್ವಯಾ ॥ ೧೦ ॥

ತಂ ತ್ವಾ ಗತಾಹಂ ಶರಣಂ ಶರಣ್ಯಂ
ಸ್ವಭೃತ್ಯ ಸಂಸಾರತರೋಃ ಕುಠಾರಮ್ ।
ಜಿಜ್ಞಾಸಯಾಹಂ ಪ್ರಕೃತೇಃ ಪೂರುಷಸ್ಯ
ನಮಾಮಿ ಸದ್ಧರ್ಮವಿದಾಂ ವರಿಷ್ಠಮ್ ॥ ೧೧ ॥

*ಮೈತ್ರೇಯ ಉವಾಚ*

ಇತಿ ಸ್ವಮಾತುರ್ನಿರವದ್ಯಮೀಪ್ಸಿತಂ
ನಿಶಮ್ಯ ಪುಂಸಾಮಪವರ್ಗವರ್ಧನಮ್ ।
ಧಿಯಾಭಿನಂದ್ಯಾತ್ಮವತಾಂ ಸತಾಂ ಗತಿ-
ರ್ಬಭಾಷ ಈಷತ್ಸ್ಮಿತಶೋಭಿತಾನನಃ ॥ ೧೨ ॥

*ಶ್ರೀಭಗವಾನುವಾಚ*

ಯೋಗ ಆಧ್ಯಾತ್ಮಿಕಃ ಪುಂಸಾಂ ಮತೋ ನಿಃಶ್ರೇಯಸಾಯ ಮೇ ।
ಅತ್ಯಂತೋಪರತಿರ್ಯತ್ರ ದುಃಖಸ್ಯ ಚ ಸುಖಸ್ಯ ಚ ॥ ೧೩ ॥

ತಮಿಮಂ ತೇ ಪ್ರವಕ್ಷ್ಯಾಮಿ
ಯಮವೋಚಂ ಪುರಾನಘೇ ।
ಋಷೀಣಾಂ ಶ್ರೋತುಕಾಮಾನಾಂ
ಯೋಗಂ ಸರ್ವಾಂಗ ನೈಪುಣಮ್ ॥ ೧೪ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ತಂದೆಯು ಕಾಡಿಗೆ ಹೋದಬಳಿಕ ಭಗವಾನ್ ಕಪಿಲರು ತನ್ನ ತಾಯಿಯನ್ನು ಸಂತೋಷಪಡಿಸಲು ಆ ಬಿಂದುಸರೋವರ ತೀರ್ಥಕ್ಷೇತ್ರದಲ್ಲೇ ಇರತೊಡಗಿದರು. ॥ ೫ ॥ ಒಂದು ದಿನ ತತ್ತ್ವಜ್ಞಾನದಲ್ಲಿ ಪಾರಂಗತರೂ, ಕರ್ಮಕಲಾಪ ಅತೀತರೂ ಆದ ಭಗವಾನ್ ಕಪಿಲರು ಸುಖಾಸೀನರಾಗಿದ್ದಾಗ ದೇವಹೂತಿಯು ಬ್ರಹ್ಮದೇವರು ಹಿಂದೆ ಹೇಳಿದ ಮಾತನ್ನು ಸ್ಮರಿಸಿಕೊಂಡು ತನ್ನ ಪುತ್ರನಬಳಿ ಇಂತೆಂದಳು. ॥ ೬ ॥

**ದೇವಹೂತಿಯು ಕೇಳಿದಳು** – ಪ್ರಭುವೇ! ಈ ದುಷ್ಟ ಇಂದ್ರಿಯಗಳ ವಿಷಯ-ಲಾಲಸೆಯಿಂದ ನಾನು ಬೇಸರ ಗೊಂಡಿರುವೆನು. ಇವುಗಳ ಇಚ್ಛೆಯನ್ನು ಪೂರೈಸುವುದರಿಂದಲೇ ಘೋರವಾದ ಅಜ್ಞಾನಾಂಧಕಾರದಲ್ಲಿ ಬಿದ್ದು ತೊಳಲಾಡುತ್ತಿದ್ದೇನೆ. ॥ ೭ ॥ ಈಗ ನಿನ್ನ ಅನುಗ್ರಹದಿಂದ ನನ್ನ ಜನ್ಮಪರಂಪರೆಯು ಕೊನೆಗೊಂಡಿದೆ. ಇದರಿಂದ ದಾಟಲಸದಳವಾದ ಅಜ್ಞಾನದ ಈ ಕತ್ತಲೆಯನ್ನು ದಾಟಲೋಸುಗ ಒಳ್ಳೆಯ ಕಣ್ಣುಗಳಂತಿರುವ ನೀನು ನನಗೆ ದೊರೆತಿರುವೆ. ॥ ೮ ॥ ನೀನು ಸಮಸ್ತ ಜೀವರಿಗೂ ಪ್ರಭುವಾದ ಭಗವಾನ್ ಆದಿಪುರುಷನಾಗಿರುವೆ. ಅಜ್ಞಾನದ ಕತ್ತಲೆಯಿಂದ ಕುರುಡಾಗಿರುವ ಮನುಷ್ಯರಿಗೆ ಕಣ್ಣಾಗಿರುವ ಸೂರ್ಯನಂತೆ ಉದಯ ಹೊಂದಿದ್ದೀಯೆ. ॥ ೯ ॥ ದೇವನೇ! ಈ ದೇಹ-ಗೇಹ ಮುಂತಾದವುಗಳಲ್ಲಿ 'ನಾನು-ನನ್ನದು' ಎಂದು ಇರುವ ದುರಾಗ್ರಹವನ್ನು ಕೂಡ ನೀನೇ ಉಂಟುಮಾಡಿರುವೆ. ಆದ್ದರಿಂದ ನೀನೇ ಈಗ ನನ್ನ ಈ ಮಹಾಮೋಹವನ್ನು ದೂರಗೊಳಿಸು. ॥ ೧೦ ॥

ನೀನು ಭಕ್ತರ ಸಂಸಾರವೃಕ್ಷವನ್ನು ಕಡಿದುಹಾಕುವುದರಲ್ಲಿ ಕೊಡಲಿಯಂತಿರುವೆ. ಪ್ರಕೃತಿ ಮತ್ತು ಪುರುಷರ ಜ್ಞಾನವನ್ನು ಪಡೆಯುವ ಇಚ್ಛೆಯಿಂದ ಶರಣಾಗತವತ್ಸಲನಾದ ನಿನ್ನಲ್ಲಿ ಶರಣಾಗಿದ್ದೇನೆ. ಭಾಗವತ ಧರ್ಮಜ್ಞರಲ್ಲಿ ಸರ್ವಶ್ರೇಷ್ಠನಾದ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೧೧ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಹೀಗೆ ತಾಯಿಯಾದ ದೇವಹೂತಿಯು ಪ್ರಕಟಪಡಿಸಿದ ತನ್ನ ಅಭಿಲಾಷೆಯು ಪರಮ ಪವಿತ್ರವೂ ಜನರಿಗೆ ಮೋಕ್ಷಮಾರ್ಗದಲ್ಲಿ ಅನುರಾಗ ಉಂಟಾಗುವಂತಹದೂ ಆಗಿದೆ. ಅದನ್ನು ಕೇಳಿ ಆತ್ಮಜ್ಞರಾದ ಸತ್ಪುರುಷರಿಗೆಲ್ಲಾ ಶರಣ್ಯರಾದ ಶ್ರೀಕಪಿಲ ಮುನಿಗಳು – ಅವಳನ್ನು ಮನಸ್ಸಿನಲ್ಲೇ ಶ್ಲಾಘಿಸಿ, ಮತ್ತೆ ಮೃದುವಾದ ಮಂದಹಾಸದಿಂದ ಶೋಭಿಸುವ ಮುಖಾರವಿಂದದಿಂದ ಹೀಗೆ ಹೇಳತೊಡಗಿದರು. ॥ ೧೨ ॥

ಶ್ರೀಭಗವಾನ್ ಕಪಿಲರು ಹೇಳುತ್ತಾರೆ – ಅಮ್ಮಾ! ಅಧ್ಯಾತ್ಮ ಯೋಗವೇ ಮನುಷ್ಯರ ಆತ್ಯಂತಿಕ ಕಲ್ಯಾಣವನ್ನುಂಟು ಮಾಡುವ ಪ್ರಧಾನ ಸಾಧನೆಯಾಗಿವೆ. ಅದರಿಂದ ದುಃಖ ಮತ್ತು ಸುಖಗಳು ಪೂರ್ಣವಾಗಿ ನಿವೃತ್ತಿಯಾಗುತ್ತದೆ ಎಂಬುದೇ ನನ್ನ ನಿಶ್ಚಯವಾಗಿದೆ. ॥ ೧೩ ॥ ಪುಣ್ಯಾತ್ಮಳೇ! ಸರ್ವಾಂಗಸಂಪನ್ನವಾಗಿರುವ ಅಂತಹ ಯೋಗವನ್ನು ಕೇಳಲು ಬಯಸಿದ ನಾರದರೇ ಮುಂತಾದ ಮುನಿಗಳ ಮುಂದೆ ನಾನು ಹಿಂದೆ ಇದನ್ನು ವರ್ಣಿಸಿದ್ದೆನು. ಅದನ್ನೇ ಈಗ ನಿನಗೂ ಹೇಳುತ್ತೇನೆ. ॥ ೧೪ ॥

ಚೇತಃ ಖಲ್ವಸ್ಯ ಬಂಧಾಯ ಮುಕ್ತಯೇ ಚಾತ್ಮನೋ ಮತಮ್ ।
ಗುಣೇಷು ಸಕ್ತಂ ಬಂಧಾಯ ರತಂ ವಾ ಪುಂಸಿ ಮುಕ್ತಯೇ
॥ ೧೫ ॥

ಅಹಂಮಮಾಭಿಮಾನೋತ್ಥೈಃ ಕಾಮಲೋಭಾದಿಭಿರ್ಮಲೈಃ ।
ವೀತಂ ಯದಾ ಮನಃ ಶುದ್ಧಮದುಃಖಮಸುಖಂ ಸಮಮ್
॥ ೧೬ ॥

ತದಾ ಪುರುಷ ಆತ್ಮಾನಂ ಕೇವಲಂ ಪ್ರಕೃತೇಃ ಪರಮ್ ।
ನಿರಂತರಂ ಸ್ವಯಂಜ್ಯೋತಿರಣಿಮಾನಮಖಂಡಿತಮ್
॥ ೧೭ ॥

ಜ್ಞಾನವೈರಾಗ್ಯಯುಕ್ತೇನ ಭಕ್ತಿಯುಕ್ತೇನ ಚಾತ್ಮನಾ ।
ಪರಿಪಶ್ಯತ್ಯುದಾಸೀನಂ ಪ್ರಕೃತಿಂ ಚ ಹತೌಜಸಮ್
॥ ೧೮ ॥

ನ ಯುಜ್ಯಮಾನಯಾ ಭಕ್ತ್ಯಾ ಭಗವತ್ಯಖಿಲಾತ್ಮನಿ ।
ಸದೃಶೋಽಸ್ತಿ ಶಿವಃ ಪಂಥಾ ಯೋಗಿನಾಂ ಬ್ರಹ್ಮಸಿದ್ಧಯೇ
॥ ೧೯ ॥

ಪ್ರಸಂಗಮಜರಂ ಪಾಶಮಾತ್ಮನಃ ಕವಯೋ ವಿದುಃ ।
ಸ ಏವ ಸಾಧುಷು ಕೃತೋ ಮೋಕ್ಷದ್ವಾರಮಪಾವೃತಮ್
॥ ೨೦ ॥

ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಮ್ ।
ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ
॥ ೨೧ ॥

ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವಂತಿ ಯೇ ದೃಢಾಮ್ ।
ಮತ್ಕೃತೇ ತ್ಯಕ್ತಕರ್ಮಾಣಸ್ತ್ಯಕ್ತಸ್ವಜನಬಾಂಧವಾಃ
॥ ೨೨ ॥

ಮದಾಶ್ರಯಾಃ ಕಥಾ ಮೃಷ್ಟಾಃ ಶೃಣ್ವಂತಿ ಕಥಯಂತಿ ಚ ।
ತಪಂತಿ ವಿವಿಧಾಸ್ತಾಪಾ ನೈತಾನ್ಮದ್ಗತಚೇತಸಃ
॥ ೨೩ ॥

ತ ಏತೇ ಸಾಧವಃ ಸಾಧ್ವಿ ಸರ್ವಸಂಗ ವಿವರ್ಜಿತಾಃ ।
ಸಂಗಸ್ತೇಷ್ವಥ ತೇ ಪ್ರಾರ್ಥ್ಯಃ ಸಂಗ ದೋಷಹರಾ ಹಿ ತೇ
॥ ೨೪ ॥

ಸತಾಂ ಪ್ರಸಂಗಾನ್ಮಮ ವೀರ್ಯಸಂವಿದೋ
ಭವಂತಿ ಹೃತ್ಕರ್ಣರಸಾಯನಾಃ ಕಥಾಃ ।
ತಜ್ಜೋಷಣಾದಾಶ್ವಪವರ್ಗವರ್ತ್ಮನಿ
ಶ್ರದ್ಧಾ ರತಿರ್ಭಕ್ತಿರನುಕ್ರಮಿಷ್ಯತಿ ॥ ೨೫ ॥

ಭಕ್ತ್ಯಾ ಪುಮಾಂಜಾತವಿರಾಗ ಐಂದ್ರಿಯಾದ್
ದೃಷ್ಟಶ್ರುತಾನ್ಮದ್ರಚನಾನುಚಿಂತಯಾ ।
ಚಿತ್ತಸ್ಯ ಯತ್ತೋ ಗ್ರಹಣೇ ಯೋಗಯುಕ್ತೋ
ಯತಿಷ್ಯತೇ ಋಜುಭಿರ್ಯೋಗಮಾರ್ಗೈಃ ॥ ೨೬ ॥

ಈ ಜೀವಿಯ ಬಂಧನ ಮತ್ತು ಮೋಕ್ಷಗಳ ಕಾರಣ ಮನಸ್ಸೇ ಆಗಿದೆ ಎಂಬುದು ಬಲ್ಲವರ ಅಭಿಪ್ರಾಯವಾಗಿದೆ. ಆ ಮನಸ್ಸು ವಿಷಯಗಳಲ್ಲಿ ಆಸಕ್ತವಾದರೆ ಬಂಧನಕ್ಕೆ ಕಾರಣವಾಗುತ್ತದೆ ಹಾಗೂ ಪರಮಾತ್ಮನಲ್ಲಿ ಅನುರಕ್ತವಾದರೆ ಅದೇ ಮೋಕ್ಷಕ್ಕೆ ಕಾರಣವಾಗುತ್ತದೆ. ॥ ೧೫ ॥ ಈ ಮನಸ್ಸು ನಾನು-ನನ್ನದು ಎಂಬುದರಿಂದ ಉಂಟಾಗುವ ಕಾಮ-ಲೋಭಾದಿ ವಿಕಾರಗಳಿಂದ ಮುಕ್ತ ಹಾಗೂ ಶುದ್ಧವಾದಾಗ ಅದು ಸುಖ-ದುಃಖಗಳಿಂದ ಬಿಡುಗಡೆ ಹೊಂದಿ ಸಮತೆಯನ್ನು ಪಡೆಯುತ್ತದೆ. ॥ ೧೬ ॥ ಆಗ ಜೀವಿಯು ತನ್ನ ಜ್ಞಾನ-ವೈರಾಗ್ಯ ಮತ್ತು ಭಕ್ತಿಗಳಿಂದ ಕೂಡಿದ ಹೃದಯದಿಂದ ಆತ್ಮವು ಪ್ರಕೃತಿಯಿಂದ ಅತೀತವೂ, ಏಕಮಾತ್ರ (ಅದ್ವಿತೀಯ), ಭೇದರಹಿತವೂ ಸ್ವಯಂಪ್ರಕಾಶವೂ, ಸೂಕ್ಷ್ಮವೂ, ಅಖಂಡವೂ ಹಾಗೂ ಉದಾಸೀನವೂ (ಸುಖ-ದುಃಖಶೂನ್ಯ) ಎಂಬುದಾಗಿ ನೋಡುತ್ತಾನೆ ಹಾಗೂ ಪ್ರಕೃತಿಯು ಶಕ್ತಿಹೀನವೆಂದು ಅನುಭವಿಸುತ್ತಾನೆ. ॥ ೧೭-೧೮ ॥ ಯೋಗಿಗಳಿಗೆ ಬ್ರಹ್ಮಸಿದ್ಧಿಗಾಗಿ ಸರ್ವಾತ್ಮಾ ಶ್ರೀಹರಿಯ ಕುರಿತು ಮಾಡಿದ ಭಕ್ತಿಗೆ ಸಾಟಿಯಾದ ಬೇರೆ ಯಾವುದೇ ಮಂಗಳಮಯವಾದ ಮಾರ್ಗವು ಇರುವುದಿಲ್ಲ. ॥ ೧೯ ॥ ಸಂಗ ಅಥವಾ ಆಸಕ್ತಿಯನ್ನೇ ತುಂಡರಿಸಲಾರದ ಆತ್ಮನ ಬಂಧನವೆಂದು ವಿವೇಕಿಗಳು ತಿಳಿಯುತ್ತಾರೆ. ಆದರೆ ಅದೇ ಸಂಗ ಅಥವಾ ಆಸಕ್ತಿಯು ಸಂತ ಮಹಾತ್ಮರ ಕುರಿತು ಉಂಟಾದಾಗ ಅದು ಮೋಕ್ಷಕ್ಕೆ ತೆರೆದ ಬಾಗಿಲಾಗುತ್ತದೆ. ॥ ೨೦ ॥

ಸಹನಶೀಲರೂ, ದಯಾಳುಗಳೂ, ಸಮಸ್ತದೇಹಧಾರಿಗಳ ಅಕಾರಣ ಮಿತ್ರರೂ, ಯಾರೊಂದಿಗೂ ಶತ್ರುಭಾವವನ್ನು ಇರಿಸದವರೂ, ಸರಳಸ್ವಭಾವರೂ, ಸತ್ಪುರುಷರನ್ನು ಗೌರವಿಸುವವರೂ, ನನ್ನಲ್ಲಿ ಅನನ್ಯ ಭಾವದಿಂದ ಸುದೃಢವಾದ ಭಕ್ತಿಯನ್ನು ಮಾಡುವವರೂ, ನನಗಾಗಿ ಸಮಸ್ತ ಕರ್ಮ ಹಾಗೂ ತನ್ನ ನಿಜ ಸಂಬಂಧಿಗಳನ್ನೂ ತ್ಯಜಿಸುವವರೂ, ನನ್ನಲ್ಲಿ ಪರಾಯಣನಾಗಿ, ನನ್ನ ಪವಿತ್ರ ಕಥೆಗಳ ಶ್ರವಣ, ಕೀರ್ತನೆಮಾಡುವವರೂ ಹಾಗೂ ನನ್ನಲ್ಲೇ ಚಿತ್ತವನ್ನು ನೆಟ್ಟಿರುವವರೂ, ಆದ ಇಂತಹ ಭಕ್ತರಿಗೆ ಸಂಸಾರದ ಬಗೆ-ಬಗೆಯ ಸಂತಾಪಗಳು ಯಾವುದೇ ಕಷ್ಟವನ್ನು ಕೊಡಲಾರವು. ॥ ೨೧-೨೩ ॥ ಇಂತಹ ಸರ್ವಸಂಗಪರಿತ್ಯಾಗಿ ಮಹಾಪುರುಷರೇ ಸಾಧುಗಳೆನಿಸುವರು. ನೀನು ಇಂತಹವರ ಸಂಗದ ಇಚ್ಛೆಯನ್ನೇ ಮಾಡಬೇಕು. ಏಕೆಂದರೆ, ಅವರು ಆಸಕ್ತಿಯಿಂದುಂಟಾದ ಎಲ್ಲ ದೋಷಗಳನ್ನು ನಿವಾರಿಸುತ್ತಾರೆ. ॥ ೨೪ ॥ ಸತ್ಪುರುಷರ ಸಮಾಗಮದಿಂದ ನನ್ನ ಪರಾಕ್ರಮದ ಯಥಾರ್ಥ ಜ್ಞಾನವನ್ನುಂಟುಮಾಡುವ ಹಾಗೂ ಹೃದಯಕ್ಕೂ, ಕಿವಿಗಳಿಗೂ ಪ್ರಿಯವಾದ ಕಥೆಗಳು ತಿಳಿದುಬರುತ್ತವೆ. ಅವುಗಳನ್ನು ಸೇವಿಸುವುದರಿಂದ ಶೀಘ್ರವಾಗಿ ಮೋಕ್ಷಮಾರ್ಗದಲ್ಲಿ ಶ್ರದ್ಧೆ, ಪ್ರೇಮ, ಭಕ್ತಿ ಇವುಗಳು ಕ್ರಮವಾಗಿ ವಿಕಾಸ ಹೊಂದುತ್ತವೆ. ॥ ೨೫ ॥ ಅನಂತರ ನನ್ನ ಸೃಷ್ಟಿಯೇ ಮುಂತಾದ ಲೀಲೆಗಳನ್ನು ಚಿಂತನೆ ಮಾಡುವುದರಿಂದ ಉಂಟಾಗುವ ಭಕ್ತಿಯ ಮೂಲಕ ಲೌಕಿಕ ಮತ್ತು ಪಾರಲೌಕಿಕ ಸುಖಗಳಲ್ಲಿ ವೈರಾಗ್ಯವುಂಟಾಗುವುದು. ಆಗ ಮನುಷ್ಯನು ಸಾವಧಾನವಾಗಿ ಯೋಗದ ಭಕ್ತಿಪ್ರಧಾನವಾದ ಸರಳ ಉಪಾಯಗಳಿಂದ ಸಮಾಹಿತನಾಗಿ ಮನಸ್ಸನ್ನು ನಿಗ್ರಹಿಸಲು ಪ್ರಯತ್ನಿಸುವನು. ॥ ೨೬ ॥

ಅಸೇವಯಾಯಂ ಪ್ರಕೃತೇರ್ಗುಣಾನಾಂ
ಜ್ಞಾನೇನ ವೈರಾಗ್ಯವಿಜೃಂಭಿತೇನ ।
ಯೋಗೇನ ಮಯ್ಯರ್ಪಿತಯಾ ಚ ಭಕ್ತ್ಯಾ
ಮಾಂ ಪ್ರತ್ಯಗಾತ್ಮಾನಮಿಹಾವರುಂಧೇ ॥ ೨೭ ॥

*ದೇವಹೂತಿರುವಾಚ*

ಕಾಚಿತ್ತ್ವಯ್ಯುಚಿತಾ ಭಕ್ತಿಃ ಕೀದೃಶೀ ಮಮ ಗೋಚರಾ ।
ಯಯಾ ಪದಂ ತೇ ನಿರ್ವಾಣಮಂಜಸಾನ್ವಾಶ್ನವಾ ಅಹಮ್ ॥ ೨೮ ॥

ಯೋ ಯೋಗೋ ಭಗವದ್ಬಾಣೋ-
ನಿರ್ವಾಣಾತ್ಮಂಸ್ತ್ವಯೋದಿತಃ ।
ಕೀದೃಶಃ ಕತಿ ಚಾಂಗಾನಿ
ಯತಸ್ತತ್ತ್ವಾವಬೋಧನಮ್ ॥ ೨೯ ॥

ತದೇತನ್ಮೇ ವಿಜಾನೀಹಿ ಯಥಾಹಂ ಮಂದಧೀರ್ಹರೇ ।
ಸುಖಂ ಬುದ್ಧ್ಯೇಯ ದುರ್ಬೋಧಂ ಯೋಷಾ ಭವದನುಗ್ರಹಾತ್ ॥ ೩೦ ॥

*ಮೈತ್ರೇಯ ಉವಾಚ*

ವಿದಿತ್ವಾರ್ಥಂ ಕಪಿಲೋ ಮಾತುರಿತ್ಥಂ
ಜಾತಸ್ನೇಹೋ ಯತ್ರ ತನ್ವಾಭಿಜಾತಃ ।
ತತ್ತ್ವಾಮ್ನಾಯಂ ಯತ್ಪ್ರವದಂತಿ ಸಾಂಖ್ಯಂ
ಪ್ರೋವಾಚ ವೈ ಭಕ್ತಿವಿತಾನಯೋಗಮ್ ॥ ೩೧ ॥

*ಶ್ರೀಭಗವಾನುವಾಚ*

ದೇವಾನಾಂ ಗುಣಲಿಂಗಾನಾಮಾನುಶ್ರವಿಕಕರ್ಮಣಾಮ್ ।
ಸತ್ತ್ವ ಏವೈಕಮನಸೋ ವೃತ್ತಿಃ ಸ್ವಾಭಾವಿಕೀ ತು ಯಾ ॥ ೩೨ ॥

ಅನಿಮಿತ್ತಾ ಭಾಗವತೀ ಭಕ್ತಿಃ ಸಿದ್ಧೇರ್ಗರೀಯಸೀ ।
ಜರಯತ್ಯಾಶು ಯಾ ಕೋಶಂ ನಿಗೀರ್ಣಮನಲೋ ಯಥಾ ॥ ೩೩ ॥

ನೈಕಾತ್ಮತಾಂ ಮೇ ಸ್ಪೃಹಯಂತಿ ಕೇಚಿನ್
ಮತ್ಪಾದಸೇವಾಭಿರತಾ ಮದೀಹಾಃ ।
ಯೇಽನ್ಯೋನ್ಯತೋ ಭಾಗವತಾಃ ಪ್ರಸಜ್ಯ
ಸಭಾಜಯಂತೇ ಮಮ ಪೌರುಷಾಣಿ ॥ ೩೪ ॥

ಹೀಗೆ ಪ್ರಕೃತಿಯ ಗುಣಗಳಿಂದ ಉಂಟಾದ ಶಬ್ದಾದಿ ವಿಷಯಗಳನ್ನು ತ್ಯಾಗಮಾಡುವುದರಿಂದ ವೈರಾಗ್ಯಯುಕ್ತ ಜ್ಞಾನದಿಂದ, ಯೋಗದಿಂದ ಹಾಗೂ ನನ್ನ ವಿಷಯವಾದ ಸುದೃಢ ಭಕ್ತಿಯಿಂದ ಮನುಷ್ಯನು ತನ್ನ ಅಂತರಾತ್ಮನಾಗಿರುವ ನನ್ನನ್ನು ಇಲ್ಲಿಯೇ ಈ ದೇಹದಲ್ಲೇ ಪಡೆದುಕೊಳ್ಳುವನು. ॥ ೨೭ ॥

**ದೇವಹೂತಿಯು ಕೇಳಿದಳು** – ಭಗವಂತನೇ! ನಿನಗೆ ಉಚಿತವಾಗಿರುವ ಭಕ್ತಿಯ ಸ್ವರೂಪವೇನು? ನನ್ನಂತಹ ಅಬಲೆಯರಿಗೆ ಎಂತಹ ಭಕ್ತಿಯು ಸರಿಯಾದುದು? ಅದರಿಂದ ನಾನು ಸಹಜವಾಗಿಯೇ ನಿನ್ನ ನಿರ್ವಾಣಪದವನ್ನು ಹೊಂದಬಲ್ಲೆನು? ॥ ೨೮ ॥ ಮೋಕ್ಷಸ್ವರೂಪನಾದ ಪ್ರಭುವೇ! ಯಾವುದರಿಂದ ತತ್ತ್ವಜ್ಞಾನ ಉಂಟಾಗುವುದೋ ಮತ್ತು ಗುರಿಗೆ ಸರಿಯಾಗಿ ಹೊಡೆದ ಬಾಣದಂತೆ ಭಗವಂತನನ್ನು ಪ್ರಾಪ್ತಿಯಾಗಿಸುವ, ನೀನು ಹೇಳುವ ಯೋಗವು ಯಾವುದು? ಹಾಗೂ ಅದರ ಅಂಗಗಳು ಎಷ್ಟಿವೆ? ॥ ೨೯ ॥ ಹರಿಯೇ! ತಿಳಿಯಲು ಕಷ್ಟವಾಗಿರುವ ಈ ವಿಷಯಗಳನ್ನು ಮಂದಮತಿಯಾದ ನನ್ನಂತಹ ಸ್ತ್ರೀಯರೂ ಕೂಡ ನಿನ್ನ ಕೃಪೆಯಿಂದ ಸುಲಭವಾಗಿ ಅರಿಯಲು ಸಾಧ್ಯವಾಗುವಂತೆ ನಿರೂಪಿಸ ಬೇಕು.॥ ೩೦॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ತನ್ನ ಜನ್ಮಕ್ಕೆ ಕಾರಣಳಾದ ಆ ಮಹಾತಾಯಿಯ ಅಭಿಪ್ರಾಯವನ್ನು ತಿಳಿದು ಕಪಿಲರ ಹೃದಯದಲ್ಲಿ ಸ್ನೇಹವು ಉಕ್ಕಿಬಂತು. ಆಗ ಅವರು ಆಕೆಗೆ ಪ್ರಕೃತಿಯೇ ಮುಂತಾದ ತತ್ತ್ವಗಳನ್ನು ನಿರೂಪಣೆ ಮಾಡುವ 'ಸಾಂಖ್ಯ'ವೆಂಬ ಜ್ಞಾನವನ್ನು ಉಪದೇಶಿಸಿದರು. ಜೊತೆಯಲ್ಲೇ ಭಕ್ತಿಯ ವಿಸ್ತಾರವನ್ನೂ, ಯೋಗವನ್ನೂ, ಉಪದೇಶಿಸಿದರು. ॥ ೩೧ ॥

**ಶ್ರೀಭಗವಂತನೆಂದನು** – ಅಮ್ಮಾ! ಏಕಮಾತ್ರ ಭಗವಂತನಲ್ಲೇ ನೆಲೆಗೊಂಡ ಚಿತ್ತವುಳ್ಳ ಮನುಷ್ಯನ – ವೇದವಿಹಿತ ಕರ್ಮಗಳಲ್ಲಿ ತೊಡಗಿರುವ ಹಾಗೂ ವಿಷಯಗಳ ಜ್ಞಾನವನ್ನು ಮಾಡಿಸುವಂತಹ (ಕರ್ಮೇಂದ್ರಿಯ ಹಾಗೂ ಜ್ಞಾನೇಂದ್ರಿಯ – ಎರಡೂ ಪ್ರಕಾರದ) ಇಂದ್ರಿಯಗಳ ಸತ್ತ್ವಮೂರ್ತಿ ಶ್ರೀಹರಿಯ ಕುರಿತು ಇರುವ ಸ್ವಾಭಾವಿಕ ಪ್ರವೃತ್ತಿಯೇ ಭಗವಂತನ ಅಹೈತುಕೀ ಭಕ್ತಿಯಾಗಿದೆ. ಇದು ಮುಕ್ತಿಗಿಂತಲೂ ಮಿಗಿಲಾದುದು. ಏಕೆಂದರೆ, ತಿಂದಿರುವ ಅನ್ನವನ್ನು ಜಠರವು ಜೀರ್ಣಗೊಳಿಸುವಂತೆ ಈ ಭಕ್ತಿಯೂ ಕೂಡ ಕರ್ಮಸಂಸ್ಕಾರಗಳ ಭಂಡಾರವಾದ ಲಿಂಗಶರೀರವನ್ನು ಒಡನೆಯೇ ಭಸ್ಮವಾಗಿಸಿಬಿಡುತ್ತದೆ. ॥ ೩೨-೩೩ ॥ ನನ್ನ ಚರಣಸೇವೆಯಲ್ಲೇ ಪ್ರೀತಿಯನ್ನಿಟ್ಟಿರುವ ಹಾಗೂ ನನ್ನ ಪ್ರಸನ್ನತೆಗಾಗಿಯೇ ಸಮಸ್ತ ಕಾರ್ಯಗಳನ್ನು ಮಾಡುವಂತಹ ಭಾಗ್ಯವಂತರಾದ ಭಕ್ತರು ಪರಸ್ಪರ ಸೇರಿ ಪ್ರೇಮಪೂರ್ವಕ ನನ್ನ ಪರಾಕ್ರಮವೇ ಮುಂತಾದ ಗುಣಗಳಿಂದ ಕೂಡಿದ ಚರಿತ್ರೆಗಳನ್ನೇ ಚರ್ಚಿಸುತ್ತಾರೆ. ಅವರು ನನ್ನೊಡನೆ ಏಕಾತ್ಮರೂಪವಾದ ಸಾಯುಜ್ಯಮುಕ್ತಿಯನ್ನೂ ಕೂಡ ಇಚ್ಛಿಸುವುದಿಲ್ಲ. ॥ ೩೪ ॥ ಅಮ್ಮಾ! ಆ ಮಹಾತ್ಮರು ಕೆಂದಾವರೆಯನ್ನು ಹೋಲುವ ಕಣ್ಣುಗಳಿಂದಲೂ, ಪ್ರಸನ್ನವಾದ ಮುಖದಿಂದಲೂ ಕಂಗೊಳಿಸುವ ಪರಮಸುಂದರವೂ, ವರಪ್ರದವೂ ಆದ ನನ್ನ ದಿವ್ಯಮಂಗಳ ವಿಗ್ರಹವನ್ನು ಸಂದರ್ಶಿಸುತ್ತಾ, ನನ್ನೊಡನೆ ಸವಿಮಾತುಗಳಿಂದ ಸಂಭಾಷಣೆ

ಪಶ್ಯಂತಿ ತೇ ಮೇ ರುಚಿರಾಣ್ಯಂಬ ಸಂತಃ
ಪ್ರಸನ್ನವಕ್ತ್ರಾರುಣಲೋಚನಾನಿ ।
ರೂಪಾಣಿ ದಿವ್ಯಾನಿ ವರಪ್ರದಾನಿ
ಸಾಕಂ ವಾಚಂ ಸ್ಪೃಹಣೀಯಾಂ ವದಂತಿ ॥ ೩೫ ॥

ತೈರ್ದರ್ಶನೀಯಾವಯವೈರುದಾರ-
ವಿಲಾಸಹಾಸೇಕ್ಷಿತವಾಮಸೂಕ್ತೈಃ ।
ಹೃತಾತ್ಮನೋ ಹೃತಪ್ರಾಣಾಂಶ್ಚ ಭಕ್ತಿ-
ರನಿಚ್ಛತೋ ಮೇ ಗತಿಮಣ್ವೀಂ ಪ್ರಯುಂಕ್ತೇ ॥ ೩೬ ॥

ಅಥೋ ವಿಭೂತಿಂ ಮಮ ಮಾಯಾವಿನಸ್ತಾ-
ಮೈಶ್ವರ್ಯಮಷ್ಟಾಂಗಮನುಪ್ರವೃತ್ತಮ್ ।
ಶ್ರಿಯಂ ಭಾಗವತೀಂ ವಾಸ್ಪೃಹಯಂತಿ ಭದ್ರಾಂ
ಪರಸ್ಯ ಮೇ ತೇಽಶ್ನುವತೇ ತು ಲೋಕೇ ॥ ೩೭ ॥

ನ ಕರ್ಹಿಚಿನ್ಮತ್ಪರಾಃ ಶಾಂತರೂಪೇ
ನಂಕ್ಷ್ಯಂತಿ ನೋ ಮೇಽನಿಮಿಷೋ ಲೇಢಿ ಹೇತಿಃ ।
ಯೇಷಾಮಹಂ ಪ್ರಿಯ ಆತ್ಮಾ ಸುತಶ್ಚ
ಸಖಾ ಗುರುಃ ಸುಹೃದೋ ದೈವಮಿಷ್ಟಮ್ ॥ ೩೮ ॥

ಇಮಂ ಲೋಕಂ ತಥೈವಾಮು-
ಮಾತ್ಮಾನಮುಭಯಾಯಿನಮ್ ।
ಆತ್ಮಾನಮನು ಯೇ ಚೇಹ ಯೇ
ರಾಯಃ ಪಶವೋ ಗೃಹಾಃ ॥ ೩೯ ॥

ವಿಸೃಜ್ಯ ಸರ್ವಾನನ್ಯಾಂಶ್ಚ ಮಾಮೇವಂ ವಿಶ್ವತೋಮುಖಮ್ ।
ಭಜಂತ್ಯನನ್ಯಯಾ ಭಕ್ತ್ಯಾ ತಾನ್ಮೃತ್ಯೋರತಿಪಾರಯೇ ॥ ೪೦ ॥

ನಾನ್ಯತ್ರ ಮದ್ಭಗವತಃ ಪ್ರಧಾನಪುರುಷೇಶ್ವರಾತ್ ।
ಆತ್ಮನಃ ಸರ್ವಭೂತಾನಾಂ ಭಯಂ ತೀವ್ರಂ ನಿವರ್ತತೇ ॥ ೪೧ ॥

ಮದ್ಭಯಾದ್ವಾತಿ ವಾತೋಽಯಂ ಸೂರ್ಯಸ್ತಪತಿ ಮದ್ಭಯಾತ್ ।
ವರ್ಷತೀಂದ್ರೋ ದಹತ್ಯಗ್ನಿರ್ಮೃತ್ಯುಶ್ಚರತಿ ಮದ್ಭಯಾತ್ ॥ ೪೨ ॥

ಜ್ಞಾನವೈರಾಗ್ಯಯುಕ್ತೇನ ಭಕ್ತಿಯೋಗೇನ ಯೋಗಿನಃ ।
ಕ್ಷೇಮಾಯ ಪಾದಮೂಲಂ ಮೇ ಪ್ರವಿಶಂತ್ಯಕುತೋಭಯಮ್ ॥ ೪೩ ॥

ಏತಾವಾನೇವ ಲೋಕೇಽಸ್ಮಿನ್ಪುಂಸಾಂ ನಿಃಶ್ರೇಯಸೋದಯಃ ।
ತೀವ್ರೇಣ ಭಕ್ತಿಯೋಗೇನ ಮನೋ ಮಯ್ಯರ್ಪಿತಂ ಸ್ಥಿರಮ್ ॥ ೪೪ ॥

ಮಾಡುತ್ತಿರುತ್ತಾರೆ. ಅದಕ್ಕಾಗಿ ದೊಡ್ಡ-ದೊಡ್ಡ ತಪಸ್ವಿಗಳೂ ಆಸೆ ಪಡುತ್ತಿರುವರು. ॥ ೩೫ ॥ ಕಮನೀಯವಾದ ಅಂಗೋಪಾಂಗಗಳಿಂದಲೂ, ಉದಾರವಾದ ಮಂದಹಾಸವಿಲಾಸಗಳಿಂದಲೂ, ಮನೋಹರವಾದ ನೋಟಗಳಿಂದಲೂ, ಮಧುರವಾದ ಮಾತುಗಳಿಂದಲೂ ಕೂಡಿದ ನನ್ನ ಆ ರೂಪದ ಮಾಧುರ್ಯದಲ್ಲಿ ಅವರ ಮನಸ್ಸು, ಇಂದ್ರಿಯಗಳು ಮುಳುಗಿಹೋಗುತ್ತವೆ. ಇಂತಹ ನನ್ನ ಭಕ್ತಿಯು ಬಯಸದಿದ್ದರೂ ಅವರಿಗೆ ಪರಮಪದವನ್ನು ದೊರಕಿಸಿ ಕೊಡುತ್ತದೆ. ॥ ೩೬ ॥ ಅವಿದ್ಯೆಯ ನಿವೃತ್ತಿಯಾದ ಬಳಿಕವೂ ಅವರು ಮಾಯಾಪತಿಯಾದ ನನ್ನ ಸತ್ಯಲೋಕಾದಿಗಳ ಭೋಗ ಸಂಪತ್ತು, ಭಕ್ತಿಯ ಅನಂತರ ತಾನಾಗಿ ದೊರೆಯುವ ಅಷ್ಟಸಿದ್ಧಿಗಳು ಅಥವಾ ವೈಕುಂಠಧಾಮದ ಭಗವತ್ ಐಶ್ವರ್ಯವನ್ನೂ ಕೂಡ ಇಚ್ಛಿಸದಿದ್ದರೂ, ನನ್ನ ಪರಮಧಾಮವನ್ನು ತಲುಪಿದಾಗ ಅವರಿಗೆ ಇವೆಲ್ಲ ವಿಭೂತಿಗಳು ತಾನಾಗಿಯೇ ಪ್ರಾಪ್ತವಾಗುತ್ತವೆ. ॥ ೩೭ ॥ ಅಮ್ಮಾ! ಏಕಮಾತ್ರ ನಾನೇ ಪ್ರಿಯನೂ, ಆತ್ಮನೂ, ಪುತ್ರನೂ, ಮಿತ್ರನೂ, ಗುರುವೂ, ಹಿತಕಾರಿಯೂ, ಇಷ್ಟದೇವನೂ ಆಗಿರುವ ನನ್ನ ಆಶ್ರಯದಲ್ಲೇ ಇರುವ ಆ ಭಕ್ತಜನರು ಶಾಂತಿಪೂರ್ಣವಾದ ವೈಕುಂಠ ಧಾಮವನ್ನು ತಲುಪುವರು. ಅಲ್ಲಿ ಅವರಿಗೆ ಯಾವ ದಿವ್ಯ ಭೋಗಗಳ ಕೊರತೆಯೂ ಇರುವುದಿಲ್ಲ ಹಾಗೂ ನನ್ನ ಕಾಲಚಕ್ರವೂ ಅವರನ್ನು ಕಬಳಿಸಲಾರದು. ॥ ೩೮ ॥

ತಾಯೇ! ಇಹಲೋಕ-ಪರಲೋಕ ಹಾಗೂ ಇವೆರಡೂ ಲೋಕಗಳಲ್ಲಿ ಜೊತೆಯಲ್ಲೇ ಹೋಗುವ ಲಿಂಗದೇಹವನ್ನೂ, ಶರೀರದೊಂದಿಗೆ ಸಂಬಂಧವಿರಿಸುವ ಧನ, ಪಶು, ಗೃಹ ಮುಂತಾದ ಪದಾರ್ಥಗಳೆಲ್ಲವನ್ನು ಮತ್ತು ಇತರ ಸಂಗ್ರಹವನ್ನು ತೊರೆದು ಅನನ್ಯ ಭಕ್ತಿಯಿಂದ ಎಲ್ಲ ರೀತಿಯಿಂದ ನನ್ನನ್ನೇ ಭಜಿಸುವುವವರನ್ನು ನಾನು ಮೃತ್ಯುರೂಪೀ ಸಂಸಾರಸಾಗರದಿಂದ ಪಾರಾಗಿಸಿಬಿಡುತ್ತೇನೆ. ॥ ೩೯-೪೦ ॥ ನಾನು ಸಾಕ್ಷಾತ್ ಭಗವಂತನಾಗಿರುವೆನು. ಪ್ರಕೃತಿ ಮತ್ತು ಪುರುಷರಿಗೂ ಕೂಡ ಒಡೆಯನಾಗಿದ್ದೇನೆ. ಸಮಸ್ತ ಪ್ರಾಣಿಗಳ ಆತ್ಮನಾಗಿದ್ದು ನನ್ನನ್ನಲ್ಲದೆ ಬೇರೆ ಯಾವುದರ ಆಶ್ರಯವನ್ನೂ ಪಡೆದರೂ ಮೃತ್ಯುರೂಪವಾದ ಮಹಾಭಯದಿಂದ ಬಿಡುಗಡೆ ದೊರೆಯಲಾರದು. ॥ ೪೧ ॥ ನನ್ನ ಭಯದಿಂದ ವಾಯುವು ಬೀಸುತ್ತದೆ. ನನ್ನ ಭಯದಿಂದಲೇ ಸೂರ್ಯನು ಪ್ರಕಾಶಿಸುತ್ತಿರುವನು. ನನ್ನ ಭಯದಿಂದಲೇ ಇಂದ್ರನು ಮಳೆಗರೆಯುವನು ಮತ್ತು ಅಗ್ನಿಯು ಉರಿಯುತ್ತದೆ. ನನ್ನ ಭಯದಿಂದಲೇ ಮೃತ್ಯುವು ತನ್ನ ಕಾರ್ಯದಲ್ಲಿ ತೊಡಗುತ್ತದೆ. ॥ ೪೨ ॥ ಯೋಗಿಗಳು ಜ್ಞಾನ-ವೈರಾಗ್ಯಗಳಿಂದ ಕೂಡಿದ ಭಕ್ತಿಯೋಗದ ಮೂಲಕ ಶಾಂತಿಯನ್ನು ಪಡೆಯುವುದಕ್ಕಾಗಿ ನನ್ನ ನಿರ್ಭಯ ಚರಣಕಮಲಗಳನ್ನೇ ಆಶ್ರಯಿಸುತ್ತಾರೆ. ॥ ೪೩ ॥ ಚಿತ್ತವು ತೀವ್ರವಾದ ಭಕ್ತಿಯೋಗದಿಂದ ನನ್ನಲ್ಲಿ ಸಂಲಗ್ನವಾಗಿ ಸ್ಥಿರವಾಗುವುದೇ ಪ್ರಪಂಚದಲ್ಲಿ ಮನುಷ್ಯನಿಗೆ ಎಲ್ಲಕ್ಕಿಂತ ದೊಡ್ಡ ಶ್ರೇಯಸ್ಕರವಾದುದು. ॥ ೪೪ ॥

*ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು. ॥ ೨೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಕಾಪಿಲೇಯೋಪಾಖ್ಯಾನೇ ಪಂಚವಿಂಶೋಽಧ್ಯಾಯಃ ॥ ೨೫ ॥

# ಇಪ್ಪತ್ತಾರನೆಯ ಅಧ್ಯಾಯ

## ಮಹತ್ತು ಮುಂತಾದ ಬೇರೆ-ಬೇರೆ ತತ್ತ್ವಗಳ ಉತ್ಪತ್ತಿಯ ವರ್ಣನೆ

*ಶ್ರೀಭಗವಾನುವಾಚ*

**ಅಥ ತೇ ಸಂಪ್ರವಕ್ಷ್ಯಾಮಿ ತತ್ತ್ವಾನಾಂ ಲಕ್ಷಣಂ ಪೃಥಕ್ ।
ಯದ್ವಿದಿತ್ವಾ ವಿಮುಚ್ಯೇತ ಪುರುಷಃ ಪ್ರಾಕೃತೈರ್ಗುಣೈಃ ॥ ೧ ॥**

**ಜ್ಞಾನಂ ನಿಃಶ್ರೇಯಸಾರ್ಥಾಯ ಪುರುಷಸ್ಯಾತ್ಮದರ್ಶನಮ್ ।
ಯದಾಹುರ್ವರ್ಣಯೇ ತತ್ತೇ ಹೃದಯಗ್ರಂಥಿಭೇದನಮ್ ॥ ೨ ॥**

**ಅನಾದಿರಾತ್ಮಾ ಪುರುಷೋ ನಿರ್ಗುಣಃ ಪ್ರಕೃತೇಃ ಪರಃ ।
ಪ್ರತ್ಯಗ್ಧಾಮಾ ಸ್ವಯಂಜ್ಯೋತಿರ್ವಿಶ್ವಂ ಯೇನ ಸಮನ್ವಿತಮ್ ॥ ೩ ॥**

**ಸ ಏಷ ಪ್ರಕೃತಿಂ ಸೂಕ್ಷ್ಮಾಂ ದೈವೀಂ ಗುಣಮಯೀಂ ವಿಭುಃ ।
ಯದೃಚ್ಛಯೈವೋಪಗತಾಮಭ್ಯಪದ್ಯತ ಲೀಲಯಾ ॥ ೪ ॥**

**ಗುಣೈರ್ವಿಚಿತ್ರಾಃ ಸೃಜತೀಂ ಸರೂಪಾಃ ಪ್ರಕೃತಿಂ ಪ್ರಜಾಃ ।
ವಿಲೋಕ್ಯ ಮುಮುಹೇ ಸದ್ಯಃ ಸ ಇಹ ಜ್ಞಾನಗೂಹಯಾ ॥ ೫ ॥**

**ಏವಂ ಪರಾಭಿಧ್ಯಾನೇನ ಕರ್ತೃತ್ವಂ ಪ್ರಕೃತೇಃ ಪುಮಾನ್ ।
ಕರ್ಮಸು ಕ್ರಿಯಮಾಣೇಷು ಗುಣೈರಾತ್ಮನಿ ಮನ್ಯತೇ ॥ ೬ ॥**

**ತದಸ್ಯ ಸಂಸೃತಿರ್ಬಂಧಃ ಪಾರತಂತ್ರ್ಯಂ ಚ ತತ್ಕೃತಮ್ ।
ಭವತ್ಯಕರ್ತುರೀಶಸ್ಯ ಸಾಕ್ಷಿಣೋ ನಿರ್ವೃತಾತ್ಮನಃ ॥ ೭ ॥**

**ಕಾರ್ಯಕಾರಣಕರ್ತೃತ್ವೇ ಕಾರಣಂ ಪ್ರಕೃತಿಂ ವಿದುಃ ।
ಭೋಕ್ತೃತ್ವೇ ಸುಖದುಃಖಾನಾಂ ಪುರುಷಂ ಪ್ರಕೃತೇಃ ಪರಮ್ ॥ ೮ ॥**

*ದೇವಹೂತಿರುವಾಚ*

**ಪ್ರಕೃತೇಃ ಪುರುಷಸ್ಯಾಪಿ ಲಕ್ಷಣಂ ಪುರುಷೋತ್ತಮ ।
ಬ್ರೂಹಿ ಕಾರಣಯೋರಸ್ಯ ಸದಸಚ್ಚ ಯದಾತ್ಮಕಮ್ ॥ ೯ ॥**

**ಶ್ರೀಭಗವಂತನು ಹೇಳುತ್ತಾನೆ –** ಅಮ್ಮಾ! ಈಗ ನಾನು ನಿನಗೆ ಪ್ರಕೃತಿಯೇ ಮುಂತಾದ ಎಲ್ಲ ತತ್ತ್ವಗಳ ಬೇರೆ-ಬೇರೆಯಾದ ಲಕ್ಷಣವನ್ನು ಹೇಳುವೆನು. ಇದನ್ನು ತಿಳಿದುಕೊಂಡ ಮನುಷ್ಯನು ಪ್ರಕೃತಿಯ ಗುಣಗಳಿಂದ ಮುಕ್ತನಾಗುವನು. ॥ ೧ ॥ ಆತ್ಮದರ್ಶನ ರೂಪವಾದ ಜ್ಞಾನವೇ ಪುರುಷನಿಗೆ ಮೋಕ್ಷದ ಕಾರಣವಾಗಿದೆ. ಅದೇ ಅವನ ಅಹಂಕಾರರೂಪೀ ಹೃದಯಗ್ರಂಥಿಯನ್ನು ಕತ್ತರಿಸುವುದಾಗಿದೆ ಎಂದು ಪಂಡಿತರು ಹೇಳುತ್ತಾರೆ. ಅದೇ ಜ್ಞಾನವನ್ನು ನಾನು ಮುಂದೆ ನಿನಗೆ ವರ್ಣಿಸುವೆನು. ॥ ೨ ॥ ಈ ಇಡೀ ಜಗತ್ತು ಯಾರಿಂದ ವ್ಯಾಪ್ತವಾಗಿ, ಪ್ರಕಾಶಿಸುತ್ತದೋ ಆ ಆತ್ಮನೇ ಪುರುಷನಾಗಿದ್ದಾನೆ. ಅವನು ಅನಾದಿಯೂ, ನಿರ್ಗುಣನೂ, ಪ್ರಕೃತಿಗಿಂತ ಅತೀತನೂ, ಅಂತಃಕರಣದಲ್ಲಿ ಸ್ಫುರಿತನಾಗುವವನೂ, ಸ್ವಯಂ ಪ್ರಕಾಶನೂ ಆಗಿರುವನು. ॥ ೩ ॥ ಆ ಸರ್ವವ್ಯಾಪಕ ಪುರುಷನು ತನ್ನ ಬಳಿಗೆ ಲೀಲಾವಿಲಾಸಪೂರ್ವಕವಾಗಿ ಬಂದಿರುವ ಅವ್ಯಕ್ತ ಮತ್ತು ತ್ರಿಗುಣಾತ್ಮಿಕೆಯಾದ ವೈಷ್ಣವೀಮಾಯೆಯನ್ನು ತನ್ನ ಇಚ್ಛೆಯಿಂದಲೇ ಸ್ವೀಕರಿಸಿದನು. ॥ ೪ ॥ ಲೀಲಾಪರಾಯಣಳಾಗಿರುವ ಪ್ರಕೃತಿಯು ತನ್ನ ಸತ್ತ್ವಾದಿ ಗುಣಗಳಿಂದ, ಅವುಗಳಿಗೆ ಅನುರೂಪವಾದ ಪ್ರಜೆಗಳನ್ನು ಸೃಷ್ಟಿಸತೊಡಗಿದಳು. ಇದನ್ನು ಕಂಡ ಪುರುಷನು ಜ್ಞಾನವನ್ನು ಮುಚ್ಚಿಹಾಕುವ ಅದರ ಆವರಣಶಕ್ತಿಯಿಂದ ಮೋಹಿತನಾಗಿ ತನ್ನ ಸ್ವರೂಪವನ್ನು ಮರೆತುಬಿಟ್ಟನು. ॥ ೫ ॥ ಹೀಗೆ ತನ್ನಿಂದ ಭಿನ್ನವಾದ ಪ್ರಕೃತಿಯನ್ನೇ ತನ್ನ ಸ್ವರೂಪವೆಂದು ತಿಳಿದುಕೊಂಡಿದ್ದರಿಂದ ಪುರುಷನು ಪ್ರಕೃತಿಯ ಗುಣಗಳ ಮೂಲಕ ಮಾಡಲಾಗುವ ಕರ್ಮಗಳಲ್ಲಿ ತನ್ನನ್ನೇ ಕರ್ತಾ ಎಂದು ತಿಳಿಯತೊಡಗಿದನು. ॥ ೬ ॥ ಕರ್ತೃತ್ವಾಭಿಮಾನದಿಂದಲೇ ಅಕರ್ತೃವೂ, ಸ್ವಾಧೀನನೂ, ಸಾಕ್ಷಿಯೂ, ಆನಂದಸ್ವರೂಪನೂ ಆದ ಪುರುಷನಿಗೆ ಜನ್ಮ-ಮೃತ್ಯುರೂಪವಾದ ಬಂಧನವೂ ಹಾಗೂ ಪರತಂತ್ರತೆಯೂ ಪ್ರಾಪ್ತವಾಯಿತು. ॥ ೭ ॥ ಕಾರ್ಯರೂಪವಾದ ಶರೀರದಲ್ಲಿಯೂ, ಕಾರಣರೂಪವಾದ ಇಂದ್ರಿಯಗಳಲ್ಲಿಯೂ, ಕರ್ತೃರೂಪವಾದ ಇಂದ್ರಿಯಗಳ ಅಭಿಮಾನೀ ದೇವತೆಗಳಲ್ಲಿಯೂ ಪುರುಷನು 'ಅವು ನನ್ನವು' ಎಂದು ಆರೋಪಿಸಿಕೊಳ್ಳುವುದಕ್ಕೆ ಪ್ರಕೃತಿಯೇ ಕಾರಣವೆಂದು ಪಂಡಿತರು ಹೇಳುತ್ತಾರೆ. ವಾಸ್ತವದಲ್ಲಿ ಪ್ರಕೃತಿಗೆ ಅತೀತನಾಗಿದ್ದರೂ ಪ್ರಕೃತಿಸ್ಥನಾದ ಆ ಪುರುಷನನ್ನೇ ಸುಖ-ದುಃಖಗಳನ್ನೂ ಭೋಗಿಸಲು ಕಾರಣನೆಂದು ತಿಳಿಯುತ್ತಾರೆ. ॥ ೮ ॥

**ದೇವಹೂತಿಯು ಕೇಳಿದಳು –** ಪುರುಷೋತ್ತಮನೇ ! ಈ ವಿಶ್ವದ ಸ್ಥೂಲ-ಸೂಕ್ಷ್ಮಕಾರ್ಯಗಳೆಲ್ಲವೂ ಯಾರ ಸ್ವರೂಪವಾಗಿದೆಯೋ ಹಾಗೂ ಯಾರು ಇದರ ಕಾರಣನಾಗಿದ್ದಾನೋ, ಆ ಪ್ರಕೃತಿ-ಪುರುಷರ ಲಕ್ಷಣವನ್ನೂ ಕೂಡ ನೀನು ನನಗೆ ತಿಳಿಸುವವನಾಗು. ॥ ೯ ॥

*ಶ್ರೀಭಗವಾನುವಾಚ*

ಯತ್ತತ್ತ್ರಿಗುಣಮವ್ಯಕ್ತಂ ನಿತ್ಯಂ ಸದಸದಾತ್ಮಕಮ್ ।
ಪ್ರಧಾನಂ ಪ್ರಕೃತಿಂ ಪ್ರಾಹುರವಿಶೇಷಂ ವಿಶೇಷವತ್ ॥ ೧೦ ॥

ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ ।
ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ ॥ ೧೧ ॥

ಮಹಾಭೂತಾನಿ ಪಂಚೈವ ಭೂರಾಪೋಽಗ್ನಿರ್ಮರುನ್ನಭಃ ।
ತನ್ಮಾತ್ರಾಣಿ ಚ ತಾವಂತಿ ಗಂಧಾದೀನಿ ಮತಾನಿ ಮೇ ॥ ೧೨ ॥

ಇಂದ್ರಿಯಾಣಿ ದಶ ಶ್ರೋತ್ರಂ ತ್ವಗ್‌ದೃಗ್‌ರಸನನಾಸಿಕಾಃ ।
ವಾಕ್ಕರೌ ಚರಣೌ ಮೇಢ್ರಂ ಪಾಯುರ್ದಶಮ ಉಚ್ಯತೇ ॥ ೧೩ ॥

ಮನೋ ಬುದ್ಧಿರಹಂಕಾರಶ್ಚಿತ್ತಮಿತ್ಯಂತರಾತ್ಮಕಮ್ ।
ಚತುರ್ಧಾ ಲಕ್ಷ್ಯತೇ ಭೇದೋ ವೃತ್ತ್ಯಾ ಲಕ್ಷಣರೂಪಯಾ ॥ ೧೪ ॥

ಏತಾವಾನೇವ ಸಂಖ್ಯಾತೋ ಬ್ರಹ್ಮಣಃ ಸಗುಣಸ್ಯ ಹ ।
ಸನ್ನಿವೇಶೋ ಮಯಾ ಪ್ರೋಕ್ತೋ ಯಃ ಕಾಲಃ ಪಂಚವಿಂಶಕಃ ॥ ೧೫ ॥

ಪ್ರಭಾವಂ ಪೌರುಷಂ ಪ್ರಾಹುಃ ಕಾಲಮೇಕೇ ಯತೋ ಭಯಮ್ ।
ಅಹಂಕಾರವಿಮೂಢಸ್ಯ ಕರ್ತುಃ ಪ್ರಕೃತಿಮೀಯುಷಃ ॥ ೧೬ ॥

ಪ್ರಕೃತೇರ್ಗುಣಸಾಮ್ಯಸ್ಯ ನಿರ್ವಿಶೇಷಸ್ಯ ಮಾನವಿ ।
ಚೇಷ್ಟಾ ಯತಃ ಸ ಭಗವಾನ್ಕಾಲ ಇತ್ಯುಪಲಕ್ಷಿತಃ ॥ ೧೭ ॥

ಅಂತಃ ಪುರುಷರೂಪೇಣ ಕಾಲರೂಪೇಣ ಯೋ ಬಹಿಃ ।
ಸಮನ್ವೇತ್ಯೇಷ ಸತ್ತ್ವಾನಾಂ ಭಗವಾನಾತ್ಮಮಾಯಯಾ ॥ ೧೮ ॥

ದೈವಾತ್ಕ್ಷುಭಿತಧರ್ಮಿಣ್ಯಾಂ ಸ್ವಸ್ಯಾಂ ಯೋನೌ ಪರಃ ಪುಮಾನ್ ।
ಆಧತ್ತ ವೀರ್ಯಂ ಸಾಸೂತ ಮಹತ್ತತ್ತ್ವಂ ಹಿರಣ್ಮಯಮ್ ॥ ೧೯ ॥

ವಿಶ್ವಮಾತ್ಮಗತಂ ವ್ಯಂಜನ್ಕೂಟಸ್ಥೋ ಜಗದಂಕುರಃ ।
ಸ್ವತೇಜಸಾಪಿಬತ್ತೀವ್ರಮಾತ್ಮಪ್ರಸ್ವಾಪನಂ ತಮಃ ॥ ೨೦ ॥

**ಶ್ರೀಭಗವಂತನು ಹೇಳಿದನು** – ತಾಯೇ! ಯಾವುದು ತ್ರಿಗುಣಾತ್ಮಕವೂ, ಅವ್ಯಕ್ತವೂ, ನಿತ್ಯವೂ ಆಗಿ ಕಾರ್ಯಕಾರಣರೂಪವಾಗಿದೆಯೋ ಹಾಗೂ ಸ್ವತಃ ನಿರ್ವಿಶೇಷವಾಗಿದ್ದರೂ ಸಮಸ್ತ ವಿಶೇಷ ಧರ್ಮಗಳಿಗೆ ಆಶ್ರಯವಾಗಿದೆಯೋ – ಆ ಪ್ರಧಾನವೆಂಬ ತತ್ತ್ವವನ್ನೇ ಪ್ರಕೃತಿ ಎನ್ನುತ್ತಾರೆ. ॥ ೧೦ ॥ ಪಂಚಮಹಾಭೂತಗಳೂ, ಪಂಚತನ್ಮಾತ್ರೆಗಳೂ, ನಾಲ್ಕು ಅಂತಃಕರಣ ವಿಶೇಷಗಳೂ, ಹತ್ತು ಇಂದ್ರಿಯಗಳೂ ಹೀಗೆ ಈ ಇಪ್ಪತ್ತನಾಲ್ಕು ತತ್ತ್ವಗಳ ಸಮೂಹವನ್ನು ವಿದ್ವಾಂಸರು ಪ್ರಕೃತಿಯ ಕಾರ್ಯವೆಂದು ತಿಳಿಯುತ್ತಾರೆ. ॥ ೧೧ ॥ ಪೃಥಿವಿ, ಜಲ, ತೇಜ, ವಾಯು, ಆಕಾಶ – ಇವು ಪಂಚಮಹಾಭೂತಗಳು. ಗಂಧ, ರಸ, ರೂಪ, ಸ್ಪರ್ಶ, ಶಬ್ದ ಇವು ಪಂಚತನ್ಮಾತ್ರೆಗಳು ಎಂದು ತಿಳಿಯಲಾಗಿದೆ. ॥ ೧೨ ॥ ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು, ಮಾತು, ಕೈ, ಕಾಲು, ಉಪಸ್ಥ, ಪಾಯು – ಎಂಬ ಈ ಹತ್ತು ಇಂದ್ರಿಯಗಳು. ॥ ೧೩ ॥ ಮನ, ಬುದ್ಧಿ, ಚಿತ್ತ, ಅಹಂಕಾರ ಎಂಬ ಇವೇ ಅಂತಃಕರಣ ರೂಪಗಳು. ಇವುಗಳಿಗೆ ಕ್ರಮವಾಗಿ ಸಂಕಲ್ಪ, ನಿಶ್ಚಯ, ಚಿಂತೆ, ಅಭಿಮಾನ ಎಂಬ ನಾಲ್ಕು ಪ್ರವೃತ್ತಿಗಳು. ॥ ೧೪ ॥ ತತ್ತ್ವಜ್ಞಾನಿಗಳು ಹೀಗೆ ಸಗುಣಬ್ರಹ್ಮನ ಸನ್ನಿವೇಶಸ್ಥಾನಗಳನ್ನಾಗಿ ಇಪ್ಪತ್ತನಾಲ್ಕು ತತ್ತ್ವಗಳ ಸಂಖ್ಯೆಯನ್ನು ತಿಳಿಸಿರುವರು. ಇವುಗಳಲ್ಲದೆ ಕಾಲ ಎಂಬುದು ಇಪ್ಪತ್ತೈದನೆಯ ತತ್ತ್ವವಾಗಿದೆ. ॥ ೧೫ ॥ ಕೆಲವು ಜ್ಞಾನಿಗಳು ಕಾಲವನ್ನು ಪುರುಷನಿಂದ ಬೇರೆಯಾದ ತತ್ತ್ವವೆಂದು ತಿಳಿಯದೆ, ಪುರುಷನ ಪ್ರಭಾವ ಅಂದರೆ ಈಶ್ವರನ ಸಂಹಾರಕಾರಕ ಶಕ್ತಿಯನ್ನಾಗಿ ತಿಳಿಸುತ್ತಾರೆ. ಅದರಿಂದ ಮಾಯೆಯ ಕಾರ್ಯವಾದ ದೇಹಾದಿಗಳನ್ನು ಆತ್ಮವೆಂದು ಅಭಿಮಾನಪಟ್ಟು, ಅಹಂಕಾರದಿಂದ ಮೋಹಿತನಾಗಿ ತನ್ನನ್ನು ಕರ್ತಾ ಎಂದು ತಿಳಿಯುವ ಜೀವನಿಗೆ ನಿರಂತರವಾದ ಭಯವು ಇದ್ದೇ ಇರುತ್ತದೆ. ॥ ೧೬ ॥ ಅಮ್ಮಾ! ಮನುಪುತ್ರಿಯೇ! ಯಾರ ಪ್ರೇರಣೆಯಿಂದ ಗುಣಗಳ ಸಾಮ್ಯಾವಸ್ಥೆಯ ರೂಪದಲ್ಲಿರುವ ನಿರ್ವಿಶೇಷವಾದ ಪ್ರಕೃತಿಯಲ್ಲಿ ಗತಿಯು ಉಂಟಾಗುತ್ತದೋ, ಆ ಪುರುಷರೂಪಿಯಾದ ಭಗವಂತನೇ ವಾಸ್ತವವಾಗಿ 'ಕಾಲ'ನೆಂದು ಕರೆಯಲ್ಪಡುತ್ತಾನೆ. ॥ ೧೭॥ ಹೀಗೆ ತನ್ನ ಮಾಯೆಯ ಮೂಲಕ ಎಲ್ಲ ಪ್ರಾಣಿಗಳೊಳಗೆ ಜೀವರೂಪದಿಂದಲೂ ಹೊರಗೆ ಕಾಲರೂಪದಿಂದಲೂ ವ್ಯಾಪ್ತನಾಗಿರುವ ಭಗವಂತನೇ ಇಪ್ಪತ್ತೈದನೆಯ ತತ್ತ್ವವು. ॥ ೧೮ ॥

ಪರಮಪುರುಷ ಪರಮಾತ್ಮನು ಜೀವರ ಅದೃಷ್ಟವಶದಿಂದ ಕ್ಷೋಭೆಗೊಂಡ ಸರ್ವಜೀವಿಗಳ ಉತ್ಪತ್ತಿಸ್ಥಾನರೂಪವಾದ ತನ್ನ ಮಾಯೆಯಲ್ಲಿ ಚಿಚ್ಛಕ್ತಿರೂಪವಾದ ವೀರ್ಯವನ್ನು ಸ್ಥಾಪಿಸಿದಾಗ ಅದರಿಂದ ತೇಜೋಮಯ ಮಹತ್ತತ್ತ್ವವು ಉತ್ಪನ್ನವಾಯಿತು. ॥ ೧೯ ॥ ಲಯ-ವಿಕ್ಷೇಪಾದಿ ರಹಿತ ಹಾಗೂ ಜಗತ್ತಿಗೆ ಅಂಕುರದಂತಿರುವ ಈ ಮಹತ್ತತ್ತ್ವವು ತನ್ನಲ್ಲಿದ್ದ ವಿಶ್ವವನ್ನು ಪ್ರಕಟಪಡಿಸಲು ತನ್ನ ಸ್ವರೂಪವನ್ನು ಮುಚ್ಚಿಕೊಂಡಿದ್ದ ಪ್ರಳಯಕಾಲದ ಕಗ್ಗತ್ತಲೆಯನ್ನು ತನ್ನದೇ ತೇಜದಿಂದ ಕುಡಿದುಬಿಟ್ಟಿತು. ॥ ೨೦ ॥

ಯತ್ತತ್ಸತ್ತ್ವಗುಣಂ ಸ್ವಚ್ಛಂ ಶಾಂತಂ ಭಗವತಃ ಪದಮ್ ।
ಯದಾಹುರ್ವಾಸುದೇವಾಖ್ಯಂ ಚಿತ್ತಂ ತನ್ಮಹದಾತ್ಮಕಮ್ ॥ ೨೧ ॥

ಸ್ವಚ್ಛತ್ವಮವಿಕಾರಿತ್ವಂ ಶಾಂತತ್ವಮಿತಿ ಚೇತಸಃ ।
ವೃತ್ತಿಭಿರ್ಲಕ್ಷಣಂ ಪ್ರೋಕ್ತಂ ಯಥಾಪಾಂ ಪ್ರಕೃತಿಃ ಪರಾ ॥ ೨೨ ॥

ಮಹತ್ತತ್ತ್ವಾದ್ವಿಕುರ್ವಾಣಾದ್ಭಗವದ್ವೀರ್ಯಸಂಭವಾತ್ ।
ಕ್ರಿಯಾಶಕ್ತಿರಹಂಕಾರಸ್ತ್ರಿವಿಧಃ ಸಮಪದ್ಯತ ॥ ೨೩ ॥

ವೈಕಾರಿಕಸ್ತೈಜಸಶ್ಚ ತಾಮಸಶ್ಚ ಯತೋ ಭವಃ ।
ಮನಸಶ್ಚೇಂದ್ರಿಯಾಣಾಂ ಚ ಭೂತಾನಾಂ ಮಹತಾಮಪಿ ॥ ೨೪ ॥

ಸಹಸ್ರಶಿರಸಂ ಸಾಕ್ಷಾದ್ಯಮನಂತಂ ಪ್ರಚಕ್ಷತೇ ।
ಸಂಕರ್ಷಣಾಖ್ಯಂ ಪುರುಷಂ ಭೂತೇಂದ್ರಿಯಮನೋಮಯಮ್ ॥ ೨೫ ॥

ಕರ್ತೃತ್ವಂ ಕರಣತ್ವಂ ಚ ಕಾರ್ಯತ್ವಂ ಚೇತಿ ಲಕ್ಷಣಮ್ ।
ಶಾಂತ ಘೋರವಿಮೂಢತ್ವಮಿತಿ ವಾ ಸ್ಯಾದಹಂಕೃತೇಃ ॥ ೨೬ ॥

ವೈಕಾರಿಕಾದ್ವಿಕುರ್ವಾಣಾನ್ಮನಸ್ತತ್ತ್ವಮಜಾಯತ ।
ಯತ್ಸಂಕಲ್ಪವಿಕಲ್ಪಾಭ್ಯಾಂ ವರ್ತತೇ ಕಾಮಸಂಭವಃ ॥ ೨೭ ॥

ಯದ್ವಿದುರ್ಹ್ಯನಿರುದ್ಧಾಖ್ಯಂ ಹೃಷೀಕಾಣಾಮಧೀಶ್ವರಮ್ ।
ಶಾರದೇಂದೀವರಶ್ಯಾಮಂ ಸಂರಾಧ್ಯಂ ಯೋಗಿಭಿಃ ಶನೈಃ ॥ ೨೮ ॥

ತೈಜಸಾತ್ತು ವಿಕುರ್ವಾಣಾದ್ಬುದ್ಧಿ ತತ್ತ್ವಮಭೂತ್ಸತಿ ।
ದ್ರವ್ಯಸ್ಫುರಣವಿಜ್ಞಾನಮಿಂದ್ರಿಯಾಣಾಮನುಗ್ರಹಃ ॥ ೨೯ ॥

ಸಂಶಯೋಽಥ ವಿಪರ್ಯಾಸೋ ನಿಶ್ಚಯಃ ಸ್ಮೃತಿರೇವ ಚ ।
ಸ್ವಾಪ ಇತ್ಯುಚ್ಯತೇ ಬುದ್ಧೇರ್ಲಕ್ಷಣಂ ವೃತ್ತಿತಃ ಪೃಥಕ್ ॥ ೩೦ ॥

ಸತ್ತ್ವಗುಣಮಯವಾಗಿ, ಸ್ವಚ್ಛವಾಗಿ, ಶಾಂತವಾಗಿ, ಭಗವಂತನ ಉಪಲಬ್ಧಿಸ್ಥಾನವಾದ ಚಿತ್ತವೇ ಮಹತ್ತತ್ತ್ವವಾಗಿದೆ. ಅದನ್ನೇ 'ವಾಸುದೇವ' * ಎಂದೂ ಹೇಳುತ್ತಾರೆ. ॥ ೨೧ ॥ ಪೃಥಿವಿಯೇ ಮುಂತಾದ ಪದಾರ್ಥಗಳೊಡನೆ ಸಂಸರ್ಗಹೊಂದುವ ಮೊದಲು ನೀರು ನೊರೆ-ಗುಳ್ಳೆಗಳೇ ಇಲ್ಲದೆ ಸಹಜಸ್ಥಿತಿಯಲ್ಲಿರುವಾಗ ಅತ್ಯಂತ ಸ್ವಚ್ಛವೂ, ವಿಕಾರಶೂನ್ಯವೂ, ಶಾಂತವೂ ಆಗಿರುತ್ತದೆ. ಹಾಗೆಯೇ ತನ್ನ ಸ್ವಾಭಾವಿಕ ಅವಸ್ಥೆಯ ದೃಷ್ಟಿಯಿಂದ ಸ್ವಚ್ಛತ್ವ, ಅವಿಕಾರಿತ್ವ ಮತ್ತು ಶಾಂತತ್ವಗಳೇ ವೃತ್ತಿಗಳೊಡನೆ ಚಿತ್ತದ ಲಕ್ಷಣವೆಂದು ಹೇಳಲಾಗಿದೆ. ॥ ೨೨ ॥ ಅನಂತರ ಭಗವಂತನ ವೀರ್ಯರೂಪವಾದ ಚಿತ್-ಶಕ್ತಿಯಿಂದ ಉತ್ಪನ್ನವಾದ ಮಹತ್ತತ್ತ್ವದಲ್ಲಿ ವಿಕಾರ ಉಂಟಾದಾಗ, ಅದರಿಂದ ಕ್ರಿಯಾಶಕ್ತಿಪ್ರಧಾನವಾದ ಅಹಂಕಾರವು ಉತ್ಪನ್ನವಾಯಿತು. ಅದು ವೈಕಾರಿಕ, ತೈಜಸ ಮತ್ತು ತಾಮಸ ಎಂಬ ಮೂರು ಪ್ರಕಾರದಿಂದ ಕೂಡಿದೆ. ಆದರಿಂದಲೇ ಕ್ರಮವಾಗಿ ಮನಸ್ಸು, ಇಂದ್ರಿಯಗಳು ಮತ್ತು ಪಂಚಭೂತಗಳ ಉತ್ಪತ್ತಿಯಾಯಿತು. ॥ ೨೩-೨೪ ॥ ಈ ಭೂತ, ಇಂದ್ರಿಯ ಮತ್ತು ಮನೋರೂಪವಾದ ಅಹಂಕಾರವನ್ನೇ ಪಂಡಿತರು ಸಾಕ್ಷಾತ್ 'ಸಂಕರ್ಷಣ' ಹೆಸರಿನ ಸಾವಿರತಲೆಯುಳ್ಳ 'ಅನಂತ-ನಾಗರಾಜ' ಎಂದು ಕರೆಯುತ್ತಾರೆ. ॥ ೨೫ ॥ ಈ ಅಹಂಕಾರದ ಲಕ್ಷಣವು ದೇವತಾರೂಪದಿಂದ ಕರ್ತೃತ್ವ, ಇಂದ್ರಿಯರೂಪದಿಂದ ಕರಣತ್ವ, ಪಂಚಭೂತರೂಪದಿಂದ ಕಾರ್ಯತ್ವವಾಗಿದೆ ಹಾಗೂ ಸತ್ತ್ವಾದಿ ಗುಣಗಳ ಸಂಬಂಧದಿಂದ ಶಾಂತತ್ವ, ಘೋರತ್ವ, ಮತ್ತು ಮೂಢತ್ವವೂ ಇದರ ಲಕ್ಷಣವಾಗಿದೆ. ॥ ೨೬ ॥ ಮೇಲೆ ಹೇಳಿದ ಮೂರು ಬಗೆಯ ಅಹಂಕಾರದಲ್ಲಿನ ವೈಕಾರಿಕ ಅಹಂಕಾರವು ವಿಕೃತವಾದಾಗ ಅದರಿಂದ ಮನಸ್ಸುಂಟಾಯಿತು. ಅದರ ಸಂಕಲ್ಪ-ವಿಕಲ್ಪಗಳಿಂದ ಕಾಮನೆಗಳ ಉತ್ಪತ್ತಿಯಾಗುತ್ತದೆ. ॥ ೨೭ ॥ ಈ ಮನಸ್ತತ್ತ್ವವೇ ಇಂದ್ರಿಯಗಳಿಗೆ ಅಧಿಷ್ಠಾತೃವಾದ 'ಅನಿರುದ್ಧ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಯೋಗಿಗಳು ಶರತ್ಕಾಲದ ನೀಲಕಮಲದಂತೆ ಶ್ಯಾಮಲ ವರ್ಣವುಳ್ಳ ಈ ಅನಿರುದ್ಧನನ್ನು ಮೆಲ್ಲ-ಮೆಲ್ಲನೆ ಮನಸ್ಸನ್ನು ಸ್ವಾಧೀನಪಡಿಸಿಕೊಂಡು ಆರಾಧಿಸುತ್ತಾರೆ. ॥ ೨೮ ॥ ಎಲೈ ಸಾಧ್ವಿಯೇ ! ಮತ್ತೆ ತೈಜಸ ಅಹಂಕಾರವು ವಿಕಾರಗೊಳ್ಳಲು ಅದರಿಂದ ಬುದ್ಧಿತತ್ತ್ವವು ಉಂಟಾಯಿತು. ವಸ್ತುವಿನ ಸ್ಫೂರ್ತಿರೂಪವಾದ ವಿಜ್ಞಾನ ಮತ್ತು ಇಂದ್ರಿಯಗಳ ವ್ಯಾಪಾರದಲ್ಲಿ ಸಹಾಯಕವಾಗುವಿಕೆ – ಪದಾರ್ಥಗಳ ವಿಶೇಷಜ್ಞಾನ ಪಡೆಯುವಿಕೆ – ಇವು ಬುದ್ಧಿಯ ಕಾರ್ಯವಾಗಿವೆ. ॥ ೨೯ ॥ ವೃತ್ತಿಗಳ ಭೇದದಿಂದ ಸಂಶಯ, ವಿಪರ್ಯಯ (ವಿಪರೀತ ಜ್ಞಾನ), ನಿಶ್ಚಯ, ಸ್ಮೃತಿ ಮತ್ತು ನಿದ್ದೆ ಇವುಗಳೂ ಬುದ್ಧಿಯ ಲಕ್ಷಣಗಳಾಗಿವೆ. ಈ ಬುದ್ಧಿತತ್ತ್ವವೇ 'ಪ್ರದ್ಯುಮ್ನ'ನೆನಿಸುತ್ತದೆ. ॥ ೩೦ ॥

* ಅಧ್ಯಾತ್ಮದಲ್ಲಿ ಯಾವುದನ್ನು ಚಿತ್ತವೆಂದು ಕರೆಯುವರೋ, ಅದನ್ನೇ ಅಧಿಭೂತದಲ್ಲಿ ಮಹತ್ತತ್ತ್ವ ಎಂದು ಹೇಳಲಾಗುತ್ತದೆ. ಚಿತ್ತದಲ್ಲಿ ಅಧಿಷ್ಠಾತೃನಾಗಿರುವವನು. 'ಕ್ಷೇತ್ರಜ್ಞನು' ಮತ್ತು ಉಪಾಸ್ಯದೇವನು 'ವಾಸುದೇವ'ನಾಗಿದ್ದಾನೆ. ಹೀಗೆಯೇ ಅಹಂಕಾರದಲ್ಲಿ ಅಧಿಷ್ಠಾತೃನಾಗಿರುವವನು ರುದ್ರನು ಮತ್ತು ಉಪಾಸ್ಯ ದೇವನು ಸಂಕರ್ಷಣನಾಗಿದ್ದಾನೆ. ಬುದ್ಧಿಯಲ್ಲಿ ಅಧಿಷ್ಠಾತೃನಾಗಿರುವನು ಬ್ರಹ್ಮನು ಮತ್ತು ಉಪಾಸ್ಯದೇವನು ಪ್ರದ್ಯುಮ್ನನು. ಮನಸ್ಸಿನಲ್ಲಿ ಅಧಿಷ್ಠಾತೃನಾದವನು ಚಂದ್ರನು ಮತ್ತು ಉಪಾಸ್ಯದೇವನು 'ಅನಿರುದ್ಧ'ನಾಗಿದ್ದಾನೆ.

ತೈಜಸಾನೀಂದ್ರಿಯಾಣ್ಯೇವ ಕ್ರಿಯಾಜ್ಞಾನವಿಭಾಗಶಃ ।
ಪ್ರಾಣಸ್ಯ ಹಿ ಕ್ರಿಯಾ ಶಕ್ತಿರ್ಬುದ್ಧೇರ್ವಿಜ್ಞಾನಶಕ್ತಿತಾ ॥ ೩೧ ॥

ಇಂದ್ರಿಯಗಳೂ ಕೂಡ ತೈಜಸ ಅಹಂಕಾರದ್ದೇ ಕಾರ್ಯವಾಗಿದೆ. ಕರ್ಮ ಮತ್ತು ಜ್ಞಾನ ಇವುಗಳ ವಿಭಾಗದಿಂದ ಅವುಗಳಲ್ಲಿ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳೆಂಬ ಎರಡು ಭೇದಗಳಿವೆ. ಇವುಗಳಲ್ಲಿ ಕರ್ಮ ಪ್ರಾಣದ ಶಕ್ತಿ ಮತ್ತು ಜ್ಞಾನ ಬುದ್ಧಿಯ ಶಕ್ತಿಯಾಗಿದೆ. ॥ ೩೧ ॥

ತಾಮಸಾಚ್ಚ ವಿಕುರ್ವಾಣಾದ್ಭಗವದ್ವೀರ್ಯಚೋದಿತಾತ್ ।
ಶಬ್ದ ಮಾತ್ರಮಭೂತ್ತಸ್ಮಾನ್ನಭಃ ಶ್ರೋತ್ರಂ ತು ಶಬ್ದಗಮ್ ॥ ೩೨ ॥

ಭಗವಂತನ ಚೈತನ್ಯಶಕ್ತಿಯ ಪ್ರೇರಣೆಯಿಂದ ತಾಮಸ ಅಹಂಕಾರವು ವಿಕೃತವಾದಾಗ ಅದರಿಂದ ಶಬ್ದ ತನ್ಮಾತ್ರೆಯು ಉದ್ಭವಿಸಿತು. ಶಬ್ದ ತನ್ಮಾತ್ರೆಯಿಂದ ಆಕಾಶ ಹಾಗೂ ಶಬ್ದಜ್ಞಾನವನ್ನುಂಟು ಮಾಡುವ ಶ್ರೋತ್ರೇಂದ್ರಿಯವು ಉತ್ಪನ್ನವಾಯಿತು. ॥ ೩೨ ॥ ಅರ್ಥವನ್ನು ಪ್ರಕಾಶಪಡಿಸುವುದು, ಪರೋಕ್ಷದಲ್ಲಿ ಮಾತನಾಡುವವನ ಜ್ಞಾನವನ್ನು ಉಂಟುಮಾಡುವುದು, ಆಕಾಶದಂತೆ ಸೂಕ್ಷ್ಮರೂಪವಾಗುವಿಕೆ, ಇವೇ ಶಬ್ದದ ಲಕ್ಷಣವೆಂಬುದು ವಿದ್ವಾಂಸರ ಮತವಾಗಿದೆ. ॥ ೩೩ ॥ ಭೂತಗಳಿಗೆ ಅವಕಾಶ ಕೊಡುವಿಕೆ, ಎಲ್ಲರ ಒಳ-ಹೊರಗೆ ಇರುವುದು ಮತ್ತು ಪ್ರಾಣ, ಇಂದ್ರಿಯ, ಮನಸ್ಸುಗಳಿಗೆ ಆಶ್ರಯವಾಗಿರುವಿಕೆ, ಇವಿಷ್ಟೂ ಆಕಾಶದ ವೃತ್ತಿ (ಕಾರ್ಯ) ರೂಪವಾದ ಲಕ್ಷಣವಾಗಿದೆ. ॥ ೩೪ ॥

ಅರ್ಥಾಶ್ರಯತ್ವಂ ಶಬ್ದಸ್ಯ ದ್ರಷ್ಟುರ್ಲಿಂಗತ್ವಮೇವ ಚ ।
ತನ್ಮಾತ್ರತ್ವಂ ಚ ನಭಸೋ ಲಕ್ಷಣಂ ಕವಯೋ ವಿದುಃ ॥ ೩೩ ॥

ಭೂತಾನಾಂ ಛಿದ್ರದಾತೃತ್ವಂ ಬಹಿರಂತರಮೇವ ಚ ।
ಪ್ರಾಣೇಂದ್ರಿಯಾತ್ಮಧಿಷ್ಣ್ಯತ್ವಂ ನಭಸೋ ವೃತ್ತಿಲಕ್ಷಣಮ್ ॥ ೩೪ ॥

ನಭಸಃ ಶಬ್ದತನ್ಮಾತ್ರಾತ್ ಕಾಲಗತ್ಯಾ ವಿಕುರ್ವತಃ ।
ಸ್ಪರ್ಶೋಽಭವತ್ತತೋ ವಾಯುಸ್ತ್ವಕ್ ಸ್ಪರ್ಶಸ್ಯ ಚ ಸಂಗ್ರಹಃ ॥ ೩೫ ॥

ಅನಂತರ ಶಬ್ದತನ್ಮಾತ್ರೆಯ ಕಾರ್ಯವಾದ ಆಕಾಶದಲ್ಲಿ ಕಾಲಗತಿಯಿಂದ ವಿಕಾರವುಂಟಾದಾಗ ಸ್ಪರ್ಶತನ್ಮಾತ್ರೆಯು ಉಂಟಾಯಿತು ಮತ್ತು ಅದರಿಂದ ವಾಯು ಹಾಗೂ ಸ್ಪರ್ಶಗ್ರಹಣವನ್ನು ಮಾಡಿಸುವ ತ್ವಗಿಂದ್ರಿಯ (ತ್ವಚಾ)ವು ಉತ್ಪನ್ನವಾಯಿತು. ॥ ೩೫ ॥ ಕೋಮಲತೆ, ಕಠೋರತೆ, ಶೀತಲತೆ, ಉಷ್ಣತೆ ಮತ್ತು ವಾಯುವಿನಂತೆ ಸೂಕ್ಷ್ಮರೂಪವಾಗುವುದು – ಇವು ಸ್ಪರ್ಶದ ಲಕ್ಷಣಗಳಾಗಿವೆ. ॥ ೩೬॥ ಮರದ ಕೊಂಬೆಯೇ ಮುಂತಾದವುಗಳನ್ನು ಅಲ್ಲಾಡಿಸುವುದು, ಹುಲ್ಲು ಇತ್ಯಾದಿಗಳನ್ನು ಒಟ್ಟುಗೂಡಿಸುವುದು, ಎಲ್ಲೆಡೆಗೂ ತಲುಪುವುದು, ಗಂಧಾದಿಗಳಿಂದ ಕೂಡಿದ ದ್ರವ್ಯವನ್ನು ಘ್ರಾಣಾದಿ ಇಂದ್ರಿಯದ ಬಳಿಗೆ ಮತ್ತು ಶಬ್ದವನ್ನು ಶ್ರೋತ್ರೇಂದ್ರಿಯದ ಬಳಿಗೆ ಒಯ್ಯುವುದು ಹಾಗೂ ಎಲ್ಲ ಇಂದ್ರಿಯಗಳಿಗೆ ಕಾರ್ಯಶಕ್ತಿಯನ್ನು ಕೊಡುವುದು – ಇವು ವಾಯುವಿನ ವೃತ್ತಿಗಳ ಲಕ್ಷಣವಾಗಿವೆ. ॥ ೩೭ ॥

ಮೃದುತ್ವಂ ಕಠಿನತ್ವಂ ಚ ಶೈತ್ಯಮುಷ್ಣತ್ವಮೇವ ಚ ।
ಏತತ್ಸ್ಪರ್ಶಸ್ಯ ಸ್ಪರ್ಶತ್ವಂ ತನ್ಮಾತ್ರತ್ವಂ ನಭಸ್ವತಃ ॥ ೩೬ ॥

ಚಾಲನಂ ವ್ಯೂಹನಂ ಪ್ರಾಪ್ತಿರ್ನೇತೃತ್ವಂ ದ್ರವ್ಯಶಬ್ದಯೋಃ ।
ಸರ್ವೇಂದ್ರಿಯಾಣಾಮಾತ್ಮತ್ವಂ ವಾಯೋಃ ಕರ್ಮಾಭಿಲಕ್ಷಣಮ್ ॥ ೩೭ ॥

ವಾಯೋಶ್ಚ ಸ್ಪರ್ಶತನ್ಮಾತ್ರಾದ್ರೂಪಂ ದೈವೇರಿತಾದಭೂತ್ ।
ಸಮುತ್ಥಿತಂ ತತಸ್ತೇಜಶ್ಚಕ್ಷೂ ರೂಪೋಪಲಂಭನಮ್ ॥ ೩೮ ॥

ಇದಾದ ನಂತರ ದೈವ ಪ್ರೇರಣೆಯಿಂದ ಸ್ಪರ್ಶತನ್ಮಾತ್ರೆಯಿಂದ ಕೂಡಿದ ವಾಯುವು ವಿಕಾರಗೊಂಡಾಗ ಅದರಿಂದ ರೂಪತನ್ಮಾತ್ರೆಯು ಉಂಟಾಯಿತು. ಅದರಿಂದ ತೇಜಸ್ಸೂ ಮತ್ತು ರೂಪವನ್ನು ಅರಿವಿಗೆ ತರುವ ನೇತ್ರೇಂದ್ರಿಯವೂ ಆವಿರ್ಭವಿಸಿದವು. ॥ ೩೮ ॥ ಎಲೈ ಸಾಧ್ವಿಯೇ ! ವಸ್ತುವಿನ ಆಕಾರದ ಅರಿವನ್ನುಂಟು ಮಾಡುವುದು, ಗೌಣವಾಗುವುದು ಅಂದರೆ ದ್ರವ್ಯದ ಅಂಗರೂಪವಾಗಿ ಭಾಸವಾಗುವುದು, ದ್ರವ್ಯಕ್ಕೆ ಇರುವ ಆಕಾರ-ಪ್ರಕಾರ, ಪರಿಮಾಣ ಮುಂತಾದವುಗಳನ್ನು ಅದೇ ರೂಪದಲ್ಲಿ ಉಪಲಕ್ಷಿತವಾಗುವುದು ಹಾಗೂ ತೇಜಸ್ಸಿಗೆ ಸ್ವರೂಪಭೂತವಾಗುವುದು – ಇವೆಲ್ಲವೂ ರೂಪತನ್ಮಾತ್ರೆಯ ವೃತ್ತಿಗಳಾಗಿವೆ. ॥ ೩೯ ॥ ಹೊಳೆಯುವುದು, ಬೇಯಿಸುವುದು, ಚಳಿಯನ್ನು ಹೋಗಲಾಡಿಸುವುದು, ಒಣಗಿಸುವುದು, ಹಸಿವು-ಬಾಯಾರಿಕೆಗಳನ್ನು ಉಂಟುಮಾಡುವುದು ಮತ್ತು ಅವುಗಳನ್ನು ಕಳೆದುಕೊಳ್ಳಲು ಆಹಾರ-ಪಾನೀಯಗಳನ್ನು ಸೇವಿಸುವಂತೆ ಮಾಡುವುದು – ಇವು ತೇಜಸ್ಸಿನ ವೃತ್ತಿಗಳು. ॥ ೪೦ ॥

ದ್ರವ್ಯಾಕೃತಿತ್ವಂ ಗುಣತಾ ವ್ಯಕ್ತಿಸಂಸ್ಥಾತ್ವಮೇವ ಚ ।
ತೇಜಸ್ತ್ವಂ ತೇಜಸಃ ಸಾಧ್ವಿ ರೂಪಮಾತ್ರಸ್ಯ ವೃತ್ತಯಃ ॥ ೩೯ ॥

ದ್ಯೋತನಂ ಪಚನಂ ಪಾನಮದನಂ ಹಿಮಮರ್ದನಮ್ ।
ತೇಜಸೋ ವೃತ್ತಯಸ್ತ್ವೇತಾಃ ಶೋಷಣಂ ಕ್ಷುತ್ತೃಡೇವ ಚ ॥ ೪೦ ॥

ರೂಪಮಾತ್ರಾದ್ವಿಕುರ್ವಾಣಾತ್ತೇಜಸೋ ದೈವಚೋದಿತಾತ್ ।
ರಸಮಾತ್ರಮಭೂತ್ತಸ್ಮಾದಂಭೋ ಜಿಹ್ವಾ ರಸಗ್ರಹಃ ॥ ೪೧ ॥

ಕಷಾಯೋ ಮಧುರಸ್ತಿಕ್ತಃ ಕಟ್ವಮ್ಲ ಇತಿ ನೈಕಧಾ ।
ಭೌತಿಕಾನಾಂ ವಿಕಾರೇಣ ರಸ ಏಕೋ ವಿಭಿದ್ಯತೇ ॥ ೪೨ ॥

ಕ್ಲೇದನಂ ಪಿಂಡನಂ ತೃಪ್ತಿಃ ಪ್ರಾಣನಾಪ್ಯಾಯನೋಂದನಮ್ ।
ತಾಪಾಪನೋದೋ ಭೂಯಸ್ತ್ವಮಂಭಸೋ ವೃತ್ತಯಸ್ತ್ವಿಮಾಃ ॥ ೪೩ ॥

ರಸಮಾತ್ರಾದ್ವಿಕುರ್ವಾಣಾದಂಭಸೋ ದೈವಚೋದಿತಾತ್ ।
ಗಂಧಮಾತ್ರಮಭೂತ್ತಸ್ಮಾತ್ಪೃಥ್ವೀ ಘ್ರಾಣಸ್ತು ಗಂಧಗಃ ॥ ೪೪ ॥

ಕರಂಭಪೂತಿಸೌರಭ್ಯಶಾಂತೋಗ್ರಾಮ್ಲಾದಿಭಿಃ ಪೃಥಕ್ ।
ದ್ರವ್ಯಾವಯವವೈಷಮ್ಯಾದ್ಗಂಧ ಏಕೋ ವಿಭಿದ್ಯತೇ ॥ ೪೫ ॥

ಭಾವನಂ ಬ್ರಹ್ಮಣಃ ಸ್ಥಾನಂ ಧಾರಣಂ ಸದ್ವಿಶೇಷಣಮ್ ।
ಸರ್ವಸತ್ತ್ವಗುಣೋದ್ಭೇದಃ ಪೃಥಿವೀವೃತ್ತಿಲಕ್ಷಣಮ್ ॥ ೪೬ ॥

ನಭೋಗುಣವಿಶೇಷೋಽರ್ಥೋ
ಯಸ್ಯ ತಚ್ಛ್ರೋತ್ರಮುಚ್ಯತೇ ।
ವಾಯೋರ್ಗುಣವಿಶೇಷೋಽರ್ಥೋ
ಯಸ್ಯ ತತ್ಸ್ಪರ್ಶನಂ ವಿದುಃ ॥ ೪೭ ॥

ತೇಜೋಗುಣವಿಶೇಷೋಽರ್ಥೋ ಯಸ್ಯ ತಚ್ಚಕ್ಷುರುಚ್ಯತೇ ।
ಅಂಭೋಗುಣವಿಶೇಷೋಽರ್ಥೋ ಯಸ್ಯ ತದ್ರಸನಂ ವಿದುಃ ।
ಭೂಮೇರ್ಗುಣವಿಶೇಷೋಽರ್ಥೋ ಯಸ್ಯ ಸ ಘ್ರಾಣ ಉಚ್ಯತೇ ॥ ೪೮ ॥

ಪರಸ್ಯ ದೃಶ್ಯತೇ ಧರ್ಮೋ ಹ್ಯಪರಸ್ಮಿನ್ಸಮನ್ವಯಾತ್ ।
ಅತೋ ವಿಶೇಷೋ ಭಾವಾನಾಂ ಭೂಮಾವೇವೋಪಲಕ್ಷ್ಯತೇ ॥ ೪೯ ॥

ಮತ್ತೆ ದೈವದ ಪ್ರೇರಣೆಯಿಂದ ರೂಪತನ್ಮಾತ್ರಮಯವಾದ ತೇಜಸ್ಸು ವಿಕಾರಗೊಳ್ಳಲು, ಅದರಿಂದ ರಸತನ್ಮಾತ್ರೆಯು ಉಂಟಾಯಿತು ಮತ್ತು ಅದರಿಂದ ಜಲ ಹಾಗೂ ರಸವನ್ನು ಗ್ರಹಣ ಮಾಡುವ ರಸನೇಂದ್ರಿಯ (ಜಿಹ್ವೆ)ವು ಉತ್ಪನ್ನವಾಯಿತು. ॥ ೪೧ ॥ ರಸವು ತನ್ನ ಶುದ್ಧಸ್ವರೂಪದಲ್ಲಿ ಒಂದೇ ಆಗಿದ್ದರೂ ಬೇರೆ ಭೌತಿಕ ಪದಾರ್ಥಗಳ ಸಂಯೋಗದಿಂದ ಅದು ಒಗರು, ಸಿಹಿ, ಕಾರ, ಕಹಿ, ಹುಳಿ, ಉಪ್ಪು ಮುಂತಾಗಿ ನಾನಾಪ್ರಕಾರವಾಗುವುದು. ॥ ೪೨ ॥ ಪದಾರ್ಥಗಳನ್ನು ನೆನೆಸಿ ಒದ್ದೆಮಾಡುವುದು, ಮಣ್ಣುಮುಂತಾದವುಗಳನ್ನು ಮುದ್ದೆಯನ್ನಾಗಿಸುವುದು, ತೃಪ್ತಿಯನ್ನುಂಟುಮಾಡುವುದು, ಜೀವಂತವಾಗಿಡುವುದು, ಬಾಯಾರಿಕೆ ಹೋಗಲಾಡಿಸುವುದು, ಪದಾರ್ಥಗಳನ್ನು ಮೃದುವಾಗಿಸುವುದು, ತಾಪವನ್ನು ಶಮನಗೊಳಿಸುವುದು, ಬಾವಿಯೇ ಮುಂತಾದವುಗಳಿಂದ ತೆಗೆದರೂ ಅಲ್ಲಿ ಮತ್ತೆ-ಮತ್ತೆ ಪ್ರಕಟವಾಗುವುದು – ಇವು ಜಲದ ವೃತ್ತಿಗಳಾಗಿವೆ. ॥ ೪೩ ॥

ಇದಾದ ಬಳಿಕ ಭಗವತ್‌ಪ್ರೇರಣೆಯಂತೆ ರಸಸ್ವರೂಪವಾದ ಜಲವು ವಿಕಾರಗೊಳ್ಳಲು ಅದರಿಂದ ಗಂಧತನ್ಮಾತ್ರೆಯು ಉಂಟಾಯಿತು ಮತ್ತು ಅದರಿಂದ ಪೃಥ್ವಿಯೂ ಹಾಗೂ ಗಂಧವನ್ನು ಗ್ರಹಿಸುವ ಘ್ರಾಣೇಂದ್ರಿಯವೂ ಪ್ರಕಟಗೊಂಡಿತು. ॥ ೪೪ ॥ ಗಂಧವು ಒಂದೇ ಆಗಿದ್ದರೂ ಪರಸ್ಪರ ಬೆರೆತಿರುವ ದ್ರವ್ಯಭಾಗಗಳ ಹೆಚ್ಚು-ಕಡಿಮೆಯಿಂದ ಅದು ಮಿಶ್ರಿತಗಂಧ, ದುರ್ಗಂಧ, ಸುಗಂಧ, ಮೃದು, ತೀವ್ರ, ಹುಳಿ ಮುಂತಾದ ನಾನಾ ಪ್ರಕಾರಗಳಾಗುವವು. ॥ ೪೫ ॥ ಪ್ರತಿಮಾದಿ ರೂಪದಿಂದ ಬ್ರಹ್ಮನ ಸಾಕಾರ ಭಾವನೆಗೆ ಆಶ್ರಯವಾಗುವಿಕೆ, ಜಲವೇ ಮುಂತಾದ ಕಾರಣ ತತ್ತ್ವಗಳಿಂದ ಭಿನ್ನವಾದ ಯಾವುದೇ ಆಶ್ರಯದ ಅಪೇಕ್ಷೆ ಇಲ್ಲದೆಯೇ ಇರುವುದು, ಜಲವೇ ಮುಂತಾದ ಬೇರೆ ಪದಾರ್ಥಗಳನ್ನು ಧರಿಸುವುದು, ಆಕಾಶಾದಿಗಳಿಗೆ ಅವಚ್ಛೇದಕವಾಗುವುದು – ಅಂದರೆ ಘಟಾಕಾಶ, ಮಠಾಕಾಶ ಮುಂತಾದ ಭೇದಗಳನ್ನು ಸಿದ್ಧಪಡಿಸುವುದು, ಹಾಗೂ ಪರಿಣಾಮ ವಿಶೇಷದಿಂದ ಸರ್ವಪ್ರಾಣಿಗಳ ಸ್ತ್ರೀತ್ವ – ಪುರುಷತ್ವ ಮುಂತಾದ ಗುಣಗಳನ್ನು ಪ್ರಕಟಪಡಿಸುವುದು – ಇವು ಪೃಥಿವಿಯ ಕಾರ್ಯರೂಪೀ ಲಕ್ಷಣಗಳು. ॥ ೪೬ ॥

ಆಕಾಶದ ವಿಶೇಷ ಗುಣವಾದ ಶಬ್ದವನ್ನು ಗ್ರಹಿಸುವುದೇ ಶ್ರೋತ್ರೇಂದ್ರಿಯವೆನಿಸುವುದು. ವಾಯುವಿನ ವಿಶೇಷಗುಣವಾದ ಸ್ಪರ್ಶವನ್ನೇ ವಿಷಯವಾಗಿರುವುದು ತ್ವಕ್ (ಚರ್ಮ) ಇಂದ್ರಿಯವು. ॥ ೪೭ ॥ ತೇಜದ ವಿಶೇಷಗುಣವಾದ ರೂಪವನ್ನೇ ವಿಷಯವಾಗಿರುವ ಇಂದ್ರಿಯವೇ ನೇತ್ರೇಂದ್ರಿಯ. ಜಲದ ವಿಶೇಷಗುಣವಾದ ರಸವನ್ನೇ ವಿಷಯವನ್ನಾಗಿ ಹೊಂದಿರುವ ಇಂದ್ರಿಯವು ರಸನೇಂದ್ರಿಯ(ನಾಲಿಗೆ)ವಾಗಿದೆ. ಪೃಥಿವಿಯ ವಿಶೇಷಗುಣವಾದ ಗಂಧವನ್ನೇ ವಿಷಯವಾಗಿರುವ ಇಂದ್ರಿಯವು ಘ್ರಾಣೇಂದ್ರಿಯ (ಮೂಗು) ಎಂದು ಹೇಳುತ್ತಾರೆ. ॥ ೪೮ ॥ ವಾಯುವೇ ಮುಂತಾದ ಕಾರ್ಯತತ್ತ್ವಗಳಲ್ಲಿ ಆಕಾಶಾದಿ ಕಾರಣತತ್ತ್ವಗಳು ಇರುವುದರಿಂದ ಅವುಗಳ ಗುಣಗಳೂ ಅನುಸರಿಸಿ ಬಂದಿರುವುದು ನೋಡಲಾಗುತ್ತದೆ. ಅದಕ್ಕಾಗಿ ಸಮಸ್ತ ಮಹಾಭೂತಗಳ ಗುಣ-ಶಬ್ದ, ಸ್ಪರ್ಶ, ರೂಪ, ರಸ, ಗಂಧ ಕೇವಲ ಪೃಥ್ವಿಯಲ್ಲೇ ದೊರೆಯುತ್ತವೆ. ॥ ೪೯ ॥

ಏತಾನ್ಯಸಂಹತ್ಯ ಯದಾ ಮಹದಾದೀನಿ ಸಪ್ತ ವೈ ।
ಕಾಲಕರ್ಮಗುಣೋಪೇತೋ ಜಗದಾದಿರುಪಾವಿಶತ್
॥ ೫೦ ॥

ತತಸ್ತೇನಾನುವಿದ್ಧೇಭ್ಯೋ ಯುಕ್ತೇಭ್ಯೋಽಂಡಮಚೇತನಮ್ ।
ಉತ್ಥಿತಂ ಪುರುಷೋ ಯಸ್ಮಾದುದತಿಷ್ಠದಸೌ ವಿರಾಟ್
॥ ೫೧ ॥

ಏತದಂಡಂ ವಿಶೇಷಾಖ್ಯಂ ಕ್ರಮವೃದ್ಧೈರ್ದಶೋತ್ತರೈಃ ।
ತೋಯಾದಿಭಿಃ ಪರಿವೃತಂ ಪ್ರಧಾನೇನಾವೃತೈರ್ಬಹಿಃ ।
ಯತ್ರ ಲೋಕವಿತಾನೋಽಯಂ ರೂಪಂ ಭಗವತೋ ಹರೇಃ
॥ ೫೨ ॥

ಹಿರಣ್ಮಯಾದಂಡಕೋಶಾದುತ್ಥಾಯ ಸಲಿಲೇಶಯಾತ್ ।
ತಮಾವಿಶ್ಯ ಮಹಾದೇವೋ ಬಹುಧಾ ನಿರ್ಬಿಭೇದ ಖಮ್
॥ ೫೩ ॥

ನಿರಭಿದ್ಯತಾಸ್ಯ ಪ್ರಥಮಂ ಮುಖಂ ವಾಣೀ ತತೋಽಭವತ್ ।
ವಾಣ್ಯಾ ವಹ್ನಿರಥೋ ನಾಸೇ ಪ್ರಾಣೋಽತೋ ಘ್ರಾಣ ಏತಯೋಃ
॥ ೫೪ ॥

ಘ್ರಾಣಾದ್ವಾಯುರಭಿದ್ಯೇತಾಮಕ್ಷಿಣೀ ಚಕ್ಷುರೇತಯೋಃ ।
ತಸ್ಮಾತ್ಸೂರ್ಯೋ ವ್ಯಭಿದ್ಯೇತಾಂ ಕರ್ಣೌ ಶ್ರೋತ್ರಂ ತತೋ ದಿಶಃ
॥ ೫೫ ॥

ನಿರ್ಬಿಭೇದ ವಿರಾಜಸ್ತ್ವಗ್ ರೋಮಶ್ಮಶ್ರ್ವಾದಯಸ್ತತಃ ।
ತತ ಓಷಧಯಶ್ಚಾಸನ್ ಶಿಶ್ನಂ ನಿರ್ಬಿಭಿದೇ ತತಃ
॥ ೫೬ ॥

ರೇತಸ್ತಸ್ಮಾದಾಪ ಆಸನ್ನಿರಭಿದ್ಯತ ವೈ ಗುದಮ್ ।
ಗುದಾದಪಾನೋಽಪಾನಾಚ್ಚ ಮೃತ್ಯುರ್ಲೋಕಭಯಂಕರಃ
॥ ೫೭ ॥

ಹಸ್ತೌ ಚ ನಿರಭಿದ್ಯೇತಾಂ ಬಲಂ ತಾಭ್ಯಾಂ ತತಃ ಸ್ವರಾಟ್ ।
ಪಾದೌ ಚ ನಿರಭಿದ್ಯೇತಾಂ ಗತಿಸ್ತಾಭ್ಯಾಂ ತತೋ ಹರಿಃ
॥ ೫೮ ॥

ಮಹತ್ತತ್ತ್ವ, ಅಹಂಕಾರ ಮತ್ತು ಪಂಚಭೂತ – ಈ ಏಳು ತತ್ತ್ವಗಳು ಪರಸ್ಪರ ಸೇರಿಕೊಳ್ಳದೆ ಬೇರೆ-ಬೇರೆಯಾಗಿದ್ದಾಗ ಜಗತ್ತಿನ ಆದಿಕಾರಣನಾದ ಶ್ರೀಮನ್ನಾರಾಯಣನು ಕಾಲ, ಅದೃಷ್ಟ ಮತ್ತು ಸತ್ತ್ವಾದಿಗುಣಗಳೊಂದಿಗೆ ಅವುಗಳಲ್ಲಿ ಪ್ರವೇಶಿಸಿದನು. ॥ ೫೦ ॥

ಅನಂತರ ಪರಮಾತ್ಮನ ಪ್ರವೇಶದಿಂದ ಕ್ಷೋಭೆಗೊಂಡು ಒಂದರೊಡನೊಂದು ಬೆರೆತುಕೊಂಡ ಆ ತತ್ತ್ವಗಳಿಂದ ಒಂದು ಜಡವಾದ ಅಂಡವು ಉತ್ಪನ್ನವಾಯಿತು. ಆ ಅಂಡದಿಂದಲೇ ಈ ವಿರಾಟ್ ಪುರುಷನು ಅಭಿವ್ಯಕ್ತಗೊಂಡನು. ॥ ೫೧ ॥ ಆ ಅಂಡದ ಹೆಸರು 'ವಿಶೇಷ' ಎಂದಾಗಿದೆ. ಇದರೊಳಗೆ ಇದ್ದ ಶ್ರೀಹರಿಯ ಸ್ವರೂಪಭೂತ ಹದಿನಾಲ್ಕು ಭುವನಗಳ ವಿಸ್ತಾರವಿದೆ. ಇದು ನಾಲ್ಕೂ ಕಡೆಗಳಿಂದ ಕ್ರಮವಾಗಿ ಒಂದು ಮತ್ತೊಂದಕ್ಕೆ ಹತ್ತರಷ್ಟು ಇರುವ ಜಲ, ಅಗ್ನಿ, ವಾಯು, ಆಕಾಶ, ಅಹಂಕಾರ ಮತ್ತು ಮಹತ್ತತ್ತ್ವ – ಎಂಬ ಆರು ಆವರಣಗಳಿಂದ ಕೂಡಿದೆ. ಇದೆಲ್ಲದರ ಹೊರಗೆ ಏಳನೆಯ ಆವರಣ ಪ್ರಕೃತಿಯದಾಗಿದೆ. ॥ ೫೨ ॥ ಅನಂತರ ಕಾರಣಮಯವಾದ ನೀರಿನಲ್ಲಿದ್ದ ಆ ತೇಜೋಮಯ ಅಂಡದಿಂದ ಮೇಲಕ್ಕೆದ್ದು ಆ ವಿರಾಟಪುರುಷನು ಪುನಃ ಅದರಲ್ಲಿ ಪ್ರವೇಶಮಾಡಿದನು ಮತ್ತು ಅದರಲ್ಲಿ ಹಲವು ಬಗೆಯ ಛಿದ್ರಗಳನ್ನು ಮಾಡಿದನು. ॥ ೫೩ ॥ ಎಲ್ಲಕ್ಕಿಂತ ಮೊದಲು ಅದರಲ್ಲಿ ಬಾಯಿಯು ಪ್ರಕಟಗೊಂಡಿತು. ಅದರಲ್ಲಿ ವಾಗಿಂದ್ರಿಯವಾದ ನಾಲಿಗೆಯೂ ಮತ್ತು ಅನಂತರ ಅದರ ಅಧಿಷ್ಠಾತೃದೇವತೆಯೂ ಆದ ಅಗ್ನಿಯು ಉತ್ಪನ್ನವಾಯಿತು. ಮತ್ತೆ ಮೂಗಿನಹೊಳ್ಳೆಗಳು ಪ್ರಕಟ ಗೊಂಡವು. ಅದರಿಂದ ಪ್ರಾಣಸಹಿತ ಘ್ರಾಣೇಂದ್ರಿಯವು ಉತ್ಪತ್ತಿಯಾಯಿತು. ॥ ೫೪ ॥ ಘ್ರಾಣೇಂದ್ರಿಯದ ಬಳಿಕ ಅದರ ಅಧಿಷ್ಠಾತೃ ವಾಯುವು ಉತ್ಪನ್ನವಾಯಿತು. ಆಮೇಲೆ ಕಣ್ಣಿನ ಗೋಳಗಳು ಪ್ರಕಟಗೊಂಡವು. ಅದರಿಂದ ನೇತ್ರೇಂದ್ರಿಯವು ಪ್ರಕಟವಾಗಿ, ಮತ್ತೆ ಅದರ ಅಧಿಷ್ಠಾತೃದೇವತೆಯಾದ ಸೂರ್ಯನು ಉತ್ಪನ್ನನಾದನು. ಅನಂತರ ಕಿವಿಗಳ ರಂಧ್ರಗಳು ಪ್ರಕಟಗೊಂಡವು. ಅವುಗಳಿಂದ ಅವುಗಳ ಇಂದ್ರಿಯವಾದ ಶ್ರೋತ್ರ ಮತ್ತು ಅದರ ಅಭಿಮಾನಿದೇವತೆಯಾದ ದಿಗ್ದೇವತೆಯೂ ಪ್ರಕಟಗೊಂಡಿತು. ॥ ೫೫ ॥ ಅನಂತರ ಈ ವಿರಾಟ್‌ಪುರುಷನ ತ್ವಚೆ ಉಂಟಾಯಿತು. ಅದರಿಂದ ಮೈಗೂದಲು, ಗಡ್ಡ-ಮೀಸೆಗಳೂ, ತಲೆಗೂದಲುಗಳು ಆವಿರ್ಭವಿಸಿದವು. ಅನಂತರ ತ್ವಚೆಯ ಅಭಿಮಾನೀ ಔಷಧಿ (ಅನ್ನ ಮುಂತಾದವು) ಗಳು ಉತ್ಪನ್ನವಾದವು. ಇದಾದ ಬಳಿಕ ಲಿಂಗವು ಪ್ರಕಟಗೊಂಡಿತು. ॥ ೫೬ ॥ ಅದರಿಂದ ವೀರ್ಯ ಮತ್ತು ವೀರ್ಯದಿಂದ ಲಿಂಗದ ಅಭಿಮಾನಿ ದೇವತೆಯಾದ ಆಪೋ (ಜಲ) ದೇವತೆಯೂ ಉತ್ಪನ್ನವಾಯಿತು. ಮತ್ತೆ ಗುದವು ಪ್ರಕಟಗೊಂಡು, ಅದರಿಂದ ಅಪಾನವಾಯುವೂ ಮತ್ತು ಅಪಾನವಾಯುವಿನ ಬಳಿಕ ಅದರ ಅಭಿಮಾನಿಯಾದ ಲೋಕಗಳಲ್ಲಿ ಭಯವನ್ನುಂಟುಮಾಡುವ ಮೃತ್ಯುದೇವತೆ ಕಾಣಿಸಿಕೊಂಡಿತು. ॥ ೫೭ ॥ ಅದಾದಮೇಲೆ ಹಸ್ತ(ಕೈ)ಗಳು ಪ್ರಕಟಗೊಂಡವು. ಅದರಿಂದ ಬಲ ಮತ್ತು ಬಲದ ಬಳಿಕ ಹಸ್ತೇಂದ್ರಿಯದ ಅಭಿಮಾನಿ ಇಂದ್ರನು ಉತ್ಪನ್ನನಾದನು. ಮತ್ತೆ ಚರಣ (ಕಾಲು)ಗಳು ಪ್ರಕಟಗೊಂಡವು. ಅವುಗಳಿಂದ ನಡೆ ಎಂಬ ಕ್ರಿಯೆಯೂ, ಪಾದೇಂದ್ರಿಯವೂ, ಅದರ ಅಭಿಮಾನಿಯಾದ ವಿಷ್ಣುದೇವತೆಯೂ ಪ್ರಕಟಗೊಂಡನು. ॥ ೫೮ ॥

ನಾಡ್ಯೋಽಸ್ಯ ನಿರಭಿದ್ಯಂತ ತಾಭ್ಯೋ ಲೋಹಿತಮಾಭೃತಮ್ ।
ನದ್ಯಸ್ತತಃ ಸಮಭವನ್ನುದರಂ ನಿರಭಿದ್ಯತ ॥ ೫೯ ॥

ಕ್ಷುತ್ಪಿಪಾಸೇ ತತಃ ಸ್ಯಾತಾಂ ಸಮುದ್ರಸ್ತ್ವೇತಯೋರಭೂತ್ ।
ಅಥಾಸ್ಯ ಹೃದಯಂ ಭಿನ್ನಂ ಹೃದಯಾನ್ಮನ ಉತ್ಥಿತಮ್ ॥ ೬೦ ॥

ಮನಸಶ್ಚಂದ್ರಮಾ ಜಾತೋ ಬುದ್ಧಿರ್ಬುದ್ಧೇರ್ಗಿರಾಂ ಪತಿಃ ।
ಅಹಂಕಾರಸ್ತತೋ ರುದ್ರಶ್ಚಿತ್ತಂ ಚೈತ್ಯಸ್ತತೋಽಭವತ್ ॥ ೬೧ ॥

ಏತೇ ಹ್ಯಭ್ಯುತ್ಥಿತಾ ದೇವಾ ನೈವಾಸ್ಯೋತ್ಥಾಪನೇಽಶಕನ್ ।
ಪುನರಾವಿವಿಶುಃ ಖಾನಿ ತಮುತ್ಥಾಪಯಿತುಂ ಕ್ರಮಾತ್ ॥ ೬೨ ॥

ವಹ್ನಿರ್ವಾಚಾ ಮುಖಂ ಭೇಜೇ ನೋದತಿಷ್ಠತ್ತದಾ ವಿರಾಟ್ ।
ಘ್ರಾಣೇನ ನಾಸಿಕೇ ವಾಯುರ್ನೋದತಿಷ್ಠತ್ತದಾ ವಿರಾಟ್ ॥ ೬೩ ॥

ಅಕ್ಷಿಣೀ ಚಕ್ಷುಷಾಽಽದಿತ್ಯೋ ನೋದತಿಷ್ಠತ್ತದಾ ವಿರಾಟ್ ।
ಶ್ರೋತ್ರೇಣ ಕರ್ಣೌ ಚ ದಿಶೋ ನೋದತಿಷ್ಠತ್ತದಾ ವಿರಾಟ್ ॥ ೬೪ ॥

ತ್ವಚಂ ರೋಮಭಿರೋಷಧ್ಯೋ ನೋದತಿಷ್ಠತ್ತದಾ ವಿರಾಟ್ ।
ರೇತಸಾ ಶಿಶ್ನಮಾಪಸ್ತು ನೋದತಿಷ್ಠತ್ತದಾ ವಿರಾಟ್ ॥ ೬೫ ॥

ಗುದಂ ಮೃತ್ಯುರಪಾನೇನ ನೋದತಿಷ್ಠತ್ತದಾ ವಿರಾಟ್ ।
ಹಸ್ತಾವಿಂದ್ರೋ ಬಲೇನೈವ ನೋದತಿಷ್ಠತ್ತದಾ ವಿರಾಟ್ ॥ ೬೬ ॥

ವಿಷ್ಣುರ್ಗತ್ಯೈವ ಚರಣೌ ನೋದತಿಷ್ಠತ್ತದಾ ವಿರಾಟ್ ।
ನಾಡೀರ್ನದ್ಯೋ ಲೋಹಿತೇನ ನೋದತಿಷ್ಠತ್ತದಾ ವಿರಾಟ್ ॥ ೬೭ ॥

ಕ್ಷುತ್ತೃಡ್ಭ್ಯಾಮುದರಂ ಸಿಂಧುರ್ನೋದತಿಷ್ಠತ್ತದಾ ವಿರಾಟ್ ।
ಹೃದಯಂ ಮನಸಾ ಚಂದ್ರೋ ನೋದತಿಷ್ಠತ್ತದಾ ವಿರಾಟ್ ॥ ೬೮ ॥

ಬುದ್ಧ್ಯಾ ಬ್ರಹ್ಮಾಪಿ ಹೃದಯಂ ನೋದತಿಷ್ಠತ್ತದಾ ವಿರಾಟ್ ।
ರುದ್ರೋಽಭಿಮತ್ಯಾ ಹೃದಯಂ ನೋದತಿಷ್ಠತ್ತದಾ ವಿರಾಟ್ ॥ ೬೯ ॥

ಹೀಗೆಯೇ ವಿರಾಟ್ ಪುರುಷನ ನಾಡಿಗಳು ಪ್ರಕಟಗೊಂಡಾಗ ಅವುಗಳಿಂದ ರಕ್ತವೂ ಉತ್ಪನ್ನವಾಯಿತು ಮತ್ತು ಅದರಿಂದ ನದಿಗಳು ಆವಿರ್ಭವಿಸಿದವು. ಮತ್ತೆ ಆತನ ಹೊಟ್ಟೆಯು ಪ್ರಕಟವಾಯಿತು. ॥ ೫೯ ॥ ಅದರಿಂದ ಹಸಿವು-ಬಾಯಾರಿಕೆಗಳು ಕಾಣಿಸಿಕೊಂಡವು. ಬಳಿಕ ಉದರದ ಅಭಿಮಾನಿ ಸಮುದ್ರದೇವತೆ ಉತ್ಪನ್ನವಾಯಿತು. ಅದಾದ ಬಳಿಕ ಅವನ ಹೃದಯ ಪ್ರಕಟವಾಯಿತು. ಅದರಿಂದ ಮನಸ್ಸಿನ ಪ್ರಾಕಟ್ಯವಾಯಿತು. ॥ ೬೦ ॥ ಮನಸ್ಸಿನ ಬಳಿಕ ಅದರ ಅಭಿಮಾನಿದೇವತೆ ಚಂದ್ರನು ಉಂಟಾದನು. ಮತ್ತೆ ಹೃದಯದಿಂದಲೇ ಬುದ್ಧಿಯೂ, ಅದರ ಅಭಿಮಾನೀ ದೇವತೆ ಯಾದ ಬ್ರಹ್ಮನೂ ಕಾಣಿಸಿಕೊಂಡನು. ಅನಂತರ ಅಹಂಕಾರವೂ, ಅದರ ಅಭಿಮಾನಿ ರುದ್ರದೇವತೆಯೂ ಉತ್ಪನ್ನವಾಯಿತು. ಇದಾದಬಳಿಕ ಚಿತ್ತ ಮತ್ತು ಅದರ ಅಭಿಮಾನಿ ಕ್ಷೇತ್ರಜ್ಞನು ಪ್ರಕಟನಾದನು. ॥ ೬೧ ॥

ಈ ಕ್ಷೇತ್ರಜ್ಞನನ್ನು ಬಿಟ್ಟು ಇತರ ಎಲ್ಲ ದೇವತೆಗಳು ಉತ್ಪನ್ನರಾದರೂ ಕೂಡ ವಿರಾಟ್‌ಪುರುಷನನ್ನು ಎಬ್ಬಿಸಲು ಅಸಮರ್ಥರಾದಾಗ, ಅವನನ್ನು ಎಬ್ಬಿಸಲು ಅವರು ಕ್ರಮವಾಗಿ ಮತ್ತೆ ತಮ್ಮ-ತಮ್ಮ ಉತ್ಪತ್ತಿಸ್ಥಾನಗಳಲ್ಲಿ ಪ್ರವೇಶಮಾಡಿದರು. ॥ ೬೨ ॥ ಅಗ್ನಿಯು ವಾಣಿಯೊಂದಿಗೆ ಬಾಯೊಳಗೆ ಪ್ರವೇಶಿಸಿದನು. ಆದರೆ ಇದರಿಂದ ವಿರಾಟ್‌ಪುರುಷನು ಏಳಲಿಲ್ಲ. ವಾಯುವು ಘ್ರಾಣೇಂದ್ರಿಯ ಸಹಿತ ಮೂಗಿನಹೊಳ್ಳೆಗಳಲ್ಲಿ ಪ್ರವೇಶಿಸಿದನು. ಆದರೂ ವಿರಾಟ್‌ಪುರುಷನು ಏಳಲಿಲ್ಲ. ॥ ೬೩ ॥ ಸೂರ್ಯನು ಚಕ್ಷುಗಳೊಂದಿಗೆ ನೇತ್ರಗಳಲ್ಲಿ ಪ್ರವೇಶಿಸಿದನು. ಆದರೂ ವಿರಾಟ್ ಪುರುಷನು ಏಳಲಿಲ್ಲ. ದಿಕ್ಕುಗಳು ಶ್ರವಣೇಂದ್ರಿಯ ಸಹಿತ ಕಿವಿಯಲ್ಲಿ ಪ್ರವೇಶಿಸಿದವು. ಆದರೂ ವಿರಾಟ್‌ಪುರುಷನು ಏಳಲಿಲ್ಲ. ॥ ೬೪ ॥ ಔಷಧಿಗಳು ರೋಮಗಳೊಡನೆ ತ್ವಚೆಯಲ್ಲಿ ಪ್ರವೇಶಿಸಿದವು. ಆಗಲೂ ವಿರಾಟ್‌ಪುರುಷನು ಏಳಲಿಲ್ಲ. ಜಲವು ವೀರ್ಯದೊಂದಿಗೆ ಲಿಂಗದಲ್ಲಿ ಪ್ರವೇಶಿಸಿತು. ಆಗಲೂ ವಿರಾಟ್‌ಪುರುಷನು ಏಳಲಿಲ್ಲ. ॥ ೬೫ ॥ ಮೃತ್ಯುವು ಅಪಾನದೊಂದಿಗೆ ಗುದದೊಳಗೆ ಪ್ರವೇಶಿಸಿತು. ಆದರೂ ವಿರಾಟ್‌ಪುರುಷನು ಏಳಲಿಲ್ಲ. ಇಂದ್ರನು ಬಲದೊಂದಿಗೆ ಕೈಗಳಲ್ಲಿ ಪ್ರವೇಶಿಸಿದನು. ಆದರೂ ವಿರಾಟ್‌ಪುರುಷನು ಏಳಲಿಲ್ಲ. ॥ ೬೬ ॥ ವಿಷ್ಣುದೇವರು ಗತಿಯೊಡನೆ ಚರಣಗಳಲ್ಲಿ ಹೊಕ್ಕರೂ ವಿರಾಟ್‌ಪುರುಷನು ಏಳಲಿಲ್ಲ. ನದಿಗಳು ರಕ್ತದೊಡನೆ ನಾಡಿಗಳಲ್ಲಿ ಪ್ರವೇಶಿಸಿದರೂ ವಿರಾಟ್‌ಪುರುಷನು ಏಳಲಿಲ್ಲ. ॥ ೬೭ ॥ ಸಮುದ್ರವು ಹಸಿವು-ಬಾಯಾರಿಕೆಗಳೊಂದಿಗೆ ಉದರದಲ್ಲಿ ಪ್ರವೇಶಮಾಡಿತು. ಆದರೂ ವಿರಾಟ್‌ಪುರುಷನು ಏಳಲಿಲ್ಲ. ಚಂದ್ರನು ಮನಸ್ಸಿನ ಸಹಿತ ಹೃದಯದಲ್ಲಿ ಹೊಕ್ಕರೂ ವಿರಾಟ್ ಪುರುಷನು ಏಳಲಿಲ್ಲ. ॥ ೬೮ ॥ ಬ್ರಹ್ಮದೇವರು ಬುದ್ಧಿಯಸಹಿತ ಹೃದಯದಲ್ಲಿ ಪ್ರವೇಶಿಸಿದನು ಆಗಲೂ ವಿರಾಟ್‌ಪುರುಷನು ಏಳಲಿಲ್ಲ. ರುದ್ರದೇವರು ಅಹಂಕಾರದೊಂದಿಗೆ ಅದೇ ಹೃದಯದಲ್ಲಿ ಪ್ರವೇಶಿಸಿದರೂ ವಿರಾಟ್‌ಪುರುಷನು ಏಳಲಿಲ್ಲ. ॥ ೬೯ ॥

ಚಿತ್ತೇನ ಹೃದಯಂ ಚೈತ್ಯಃ ಕ್ಷೇತ್ರಜ್ಞಃ ಪ್ರಾವಿಶದ್ಯದಾ ।
ವಿರಾಟ್ ತದೈವ ಪುರುಷಃ ಸಲಿಲಾದುದತಿಷ್ಠತ ॥ ೭೦ ॥

ಆದರೆ ಚಿತ್ತದ ಅಧಿಷ್ಠಾತೃ ಕ್ಷೇತ್ರಜ್ಞನು ಚಿತ್ತದೊಂದಿಗೆ ಹೃದಯದಲ್ಲಿ ಪ್ರವೇಶಿಸಿದಾಗ ವಿರಾಟ್‌ಪುರುಷನು ಒಡನೆಯೇ ಜಲದಿಂದ ಮೇಲೆದ್ದು ನಿಂತುಕೊಂಡನು. ॥ ೭೦ ॥ ಲೋಕದಲ್ಲಿ ನಿದ್ರಿಸುತ್ತಿರುವ ಪ್ರಾಣಿಯನ್ನು – ಪ್ರಾಣ, ಇಂದ್ರಿಯಗಳು, ಮನಸ್ಸು, ಬುದ್ಧಿ ಮುಂತಾದವುಗಳೂ – ಚಿತ್ತದ ಅಧಿಷ್ಠಾತೃವಾಗಿರುವ ಕ್ಷೇತ್ರಜ್ಞನ ಸಹಾಯವಿಲ್ಲದೆ ತಮ್ಮ ಬಲದಿಂದ ಎಬ್ಬಿಸಲಾರವೋ, ಹಾಗೆಯೇ ವಿರಾಟ್‌ಪುರುಷನನ್ನೂ ಕೂಡ ಅವರು ಕ್ಷೇತ್ರಜ್ಞನಾದ ಪರಮಾತ್ಮನಲ್ಲದೆ ಎಬ್ಬಿಸಲು ಅಸಮರ್ಥರಾದುವು. ॥ ೭೧ ॥ ಆದ್ದರಿಂದ ಭಕ್ತಿ, ವೈರಾಗ್ಯ ಮತ್ತು ಚಿತ್ತದ ಏಕಾಗ್ರತೆಯಿಂದ ಪ್ರಕಟಗೊಂಡ ಜ್ಞಾನದ ಮೂಲಕ ಆ ಅಂತರಾತ್ಮಸ್ವರೂಪನಾದ ಕ್ಷೇತ್ರಜ್ಞನು ಈ ಶರೀರದಲ್ಲಿ ಇದ್ದರೂ ಇದರಿಂದ ನಿರ್ಲಿಪ್ತನೆಂದು ತಿಳಿದುಕೊಂಡು ಅವನನ್ನು ಚಿಂತಿಸಬೇಕು. ॥ ೭೨ ॥

ಯಥಾ ಪ್ರಸುಪ್ತಂ ಪುರುಷಂ ಪ್ರಾಣೇಂದ್ರಿಯಮನೋಧಿಯಃ ।
ಪ್ರಭವಂತಿ ವಿನಾ ಯೇನ ನೋತ್ಥಾಪಯಿತುಮೋಜಸಾ ॥ ೭೧ ॥

ತಮಸ್ಮಿನ್ಪ್ರತ್ಯಗಾತ್ಮಾನಂ ಧಿಯಾ ಯೋಗಪ್ರವೃತ್ತಯಾ ।
ಭಕ್ತ್ಯಾ ವಿರಕ್ತ್ಯಾ ಜ್ಞಾನೇನ ವಿವಿಚ್ಯಾತ್ಮನಿ ಚಿಂತಯೇತ್ ॥ ೭೨ ॥

*ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು. ॥ ೨೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಕಾಪಿಲೇಯೇ ತತ್ತ್ವಸಮಾಮ್ನಾಯೇ ಷಡ್ವಿಂಶೋಽಧ್ಯಾಯಃ ॥ ೨೬ ॥

# ಇಪ್ಪತ್ತೇಳನೆಯ ಅಧ್ಯಾಯ

## ಪ್ರಕೃತಿ-ಪುರುಷರ ವಿವೇಕದಿಂದ ಮೋಕ್ಷಪ್ರಾಪ್ತಿಯ ವರ್ಣನೆ

*ಶ್ರೀಭಗವಾನುವಾಚ*

ಪ್ರಕೃತಿಸ್ಥೋಽಪಿ ಪುರುಷೋ ನಾಜ್ಯತೇ ಪ್ರಾಕೃತೈರ್ಗುಣೈಃ ।
ಅವಿಕಾರಾದಕರ್ತೃತ್ವಾನ್ನಿರ್ಗುಣತ್ವಾಜ್ಜಲಾರ್ಕವತ್ ॥ ೧ ॥

**ಶ್ರೀಕಪಿಲಭಗವಂತನು ಹೇಳುತ್ತಾನೆ** – ತಾಯೆ! ಸೂರ್ಯನು ನೀರಿನಲ್ಲಿ ಪ್ರತಿಬಿಂಬಿಸಿದ್ದಾಗ ಆ ಪ್ರತಿಬಿಂಬದಲ್ಲಿ ನೀರಿನಲ್ಲಿರುವ ಶೈತ್ಯ, ಚಂಚಲತೆ ಮುಂತಾದ ಗುಣಗಳು ಅಂಟಿಕೊಳ್ಳದಂತೆ, ಆತ್ಮನು ಪ್ರಕೃತಿಯ ಕಾರ್ಯವಾದ ಶರೀರದಲ್ಲಿ ಇದ್ದರೂ ಅದರ ಗುಣಗಳಾದ ಸುಖ-ದುಃಖಾದಿಗಳಿಂದ ವಾಸ್ತವವಾಗಿ ಲಿಪ್ತನಾಗುವುದಿಲ್ಲ, ಏಕೆಂದರೆ, ಅವನು ಸ್ವಭಾವದಿಂದಲೇ ನಿರ್ವಿಕಾರನೂ, ಅಕರ್ತನೂ, ನಿರ್ಗುಣನೂ ಆಗಿರುವನು. ॥ ೧ ॥ ಆದರೆ ಅವನೇ ಪ್ರಾಕೃತಗುಣಗಳೊಂದಿಗೆ ತನ್ನ ಸಂಬಂಧವನ್ನು ಸ್ಥಾಪಿಸಿಕೊಂಡಾಗ ಅಹಂಕಾರದಿಂದ ಮೋಹಿತನಾಗಿ – 'ನಾನು ಕರ್ತಾ ಆಗಿದ್ದೇನೆ' ಎಂದು ಭಾವಿಸತೊಡಗುತ್ತಾನೆ. ॥ ೨ ॥ ಆ ಅಭಿಮಾನದ ಕಾರಣದಿಂದಲೇ ಅವನು ದೇಹದ ಸಂಸರ್ಗದಿಂದ ಮಾಡಲಾದ ಪುಣ್ಯ- ಪಾಪರೂಪವಾದ ಕರ್ಮಗಳ ದೋಷದಿಂದ ತನ್ನ ಸ್ವಾಧೀನತೆಯನ್ನೂ, ಶಾಂತಿಯನ್ನೂ ಕಳೆದುಕೊಂಡು, ಉತ್ತಮ, ಮಧ್ಯಮ, ನೀಚ ಯೋನಿಗಳಲ್ಲಿ ಜನ್ಮತಳೆದು ಸಂಸಾರಚಕ್ರದಲ್ಲಿ ಸುತ್ತುತ್ತಿರುವನು. ॥ ೩ ॥ ಸ್ವಪ್ನದಲ್ಲಿ ಭಯ-ಶೋಕಾದಿಗಳಿಗೆ ಯಾವುದೇ ಕಾರಣವಿಲ್ಲದಿದ್ದರೂ ಸ್ವಪ್ನದ ಪದಾರ್ಥಗಳಲ್ಲಿ ಆಸ್ಥೆಯು ಉಂಟಾದ ಕಾರಣ ದುಃಖವನ್ನು ಅನುಭವಿಸಬೇಕಾಗುತ್ತದೆ. ಹಾಗೆಯೇ ಭಯ-ಶೋಕ, ಅಹಂಕಾರ-ಮಮಕಾರ, ಮತ್ತು ಜನ್ಮ-ಮರಣ ಮುಂತಾದ ಸಂಸಾರಕ್ಕೆ ಯಾವ ಅಸ್ತಿತ್ವವೂ ಇಲ್ಲದಿದ್ದರೂ, ಅವಿದ್ಯೆಗೆ ವಶನಾಗಿ ವಿಷಯಗಳನ್ನು ಚಿಂತಿಸುತ್ತಿರುವುದರಿಂದ ಜೀವಿಯ ಸಂಸಾರ ಚಕ್ರವು ಎಂದಿಗೂ ತೊಲಗುವುದಿಲ್ಲ. ॥ ೪ ॥

ಸ ಏಷ ಯರ್ಹಿ ಪ್ರಕೃತೇರ್ಗುಣೇಷ್ವಭಿವಿಷಜ್ಜತೇ ।
ಅಹಂಕ್ರಿಯಾವಿಮೂಢಾತ್ಮಾ ಕರ್ತಾಸ್ಮೀತ್ಯಭಿಮನ್ಯತೇ ॥ ೨ ॥

ತೇನ ಸಂಸಾರಪದವೀಮವಶೋಽಭ್ಯೇತ್ಯನಿರ್ವೃತಃ ।
ಪ್ರಾಸಂಗಿಕೈಃ ಕರ್ಮದೋಷೈಃ ಸದಸನ್ಮಿಶ್ರಯೋನಿಷು ॥ ೩ ॥

ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।
ಧ್ಯಾಯತೋ ವಿಷಯಾನಸ್ಯ ಸ್ವಪ್ನೇಽನರ್ಥಾಗಮೋ ಯಥಾ ॥ ೪ ॥

ಅತ ಏವ ಶನೈಶ್ಚಿತ್ತಂ ಪ್ರಸಕ್ತಮಸತಾಂ ಪಥಿ ।
ಭಕ್ತಿಯೋಗೇನ ತೀವ್ರೇಣ ವಿರಕ್ತ್ಯಾ ಚ ನಯೇದ್ವಶಮ್ ॥ ೫ ॥

ಯಮಾದಿಭಿರ್ಯೋಗಪಥೈರಭ್ಯಸನ್ ಶ್ರದ್ಧಯಾನ್ವಿತಃ ।
ಮಯಿ ಭಾವೇನ ಸತ್ಯೇನ ಮತ್ಕಥಾಶ್ರವಣೇನ ಚ ॥ ೬ ॥

ಸರ್ವಭೂತಸಮತ್ವೇನ ನಿರ್ವೈರೇಣಾಪ್ರಸಂಗತಃ ।
ಬ್ರಹ್ಮಚರ್ಯೇಣ ಮೌನೇನ ಸ್ವಧರ್ಮೇಣ ಬಲೀಯಸಾ ॥ ೭ ॥

ಯದೃಚ್ಛಯೋಪಲಬ್ಧೇನ ಸಂತುಷ್ಟೋ ಮಿತಭುಙ್ ಮುನಿಃ ।
ವಿವಿಕ್ತಶರಣಃ ಶಾಂತೋ ಮೈತ್ರಃ ಕರುಣ ಆತ್ಮವಾನ್ ॥ ೮ ॥

ಸಾನುಬಂಧೇ ಚ ದೇಹೇಽಸ್ಮಿನ್ನಕುರ್ವನ್ನಸದಾಗ್ರಹಮ್ ।
ಜ್ಞಾನೇನ ದೃಷ್ಟ ತತ್ತ್ವೇನ ಪ್ರಕೃತೇಃ ಪುರುಷಸ್ಯ ಚ ॥ ೯ ॥

ನಿವೃತ್ತಬುದ್ಧ್ಯವಸ್ಥಾನೋ ದೂರೀಭೂತಾನ್ಯದರ್ಶನಃ ।
ಉಪಲಭ್ಯಾತ್ಮನಾಽಽತ್ಮಾನಂ ಚಕ್ಷುಷೇವಾರ್ಕಮಾತ್ಮದೃಕ್ ॥ ೧೦ ॥

ಮುಕ್ತಲಿಂಗಂ ಸದಾಭಾಸಮಸತಿ ಪ್ರತಿಪದ್ಯತೇ ।
ಸತೋಬಂಧು ಮಸಚ್ಚಕ್ಷುಃ ಸರ್ವಾನುಸ್ಯೂತಮದ್ವಯಮ್ ॥ ೧೧ ॥

ಯಥಾ ಜಲಸ್ಥ ಆಭಾಸಃ ಸ್ಥಲಸ್ಥೇನಾವದೃಶ್ಯತೇ ।
ಸ್ವಾಭಾಸೇನ ತಥಾ ಸೂರ್ಯೋ ಜಲಸ್ಥೇನ ದಿವಿ ಸ್ಥಿತಃ ॥ ೧೨ ॥

ಏವಂ ತ್ರಿವೃದಹಂಕಾರೋ ಭೂತೇಂದ್ರಿಯಮನೋಮಯೈಃ ।
ಸ್ವಾಭಾಸೈರ್ಲಕ್ಷಿತೋಽನೇನ ಸದಾಭಾಸೇನ ಸತ್ಯದೃಕ್ ॥ ೧೩ ॥

ಭೂತಸೂಕ್ಷ್ಮೇಂದ್ರಿಯಮನೋಬುದ್ಧ್ಯಾದಿಷ್ವಿಹ ನಿದ್ರಯಾ ।
ಲೀನೇಷ್ವಸತಿ ಯಸ್ತತ್ರ ವಿನಿದ್ರೋ ನಿರಹಂಕ್ರಿಯಃ ॥ ೧೪ ॥

ಅದಕ್ಕಾಗಿ ಬುದ್ಧಿವಂತರಾದವರು ವಿಷಯಚಿಂತನೆಯೆಂಬ ದುರ್ಮಾರ್ಗದಲ್ಲಿ ಸಿಕ್ಕಿಹಾಕಿಕೊಂಡಿರುವ ಚಿತ್ತವನ್ನು ತೀವ್ರವಾದ ಭಕ್ತಿಯೋಗ ಮತ್ತು ವೈರಾಗ್ಯಗಳ ಮೂಲಕ ನಿಧಾನವಾಗಿ ವಶಪಡಿಸಿಕೊಳ್ಳಬೇಕು. ॥ ೫ ॥

ಯಮ-ನಿಯಮಾದಿ ಯೋಗಸಾಧನೆಯನ್ನು ಶ್ರದ್ಧೆಯಿಂದ ಅಭ್ಯಾಸಮಾಡುತ್ತಾ, ಚಿತ್ತವನ್ನು ಪದೇ-ಪದೇ ಏಕಾಗ್ರಗೊಳಿಸುತ್ತಾ, ನನ್ನಲ್ಲಿ ನಿಜವಾದ ಭಾವವನ್ನಿಟ್ಟು, ನನ್ನ ಕಥೆಗಳನ್ನು ಕೇಳುತ್ತಾ, ಸಮಸ್ತ ಪ್ರಾಣಿಗಳಲ್ಲಿಯೂ ಸಮಭಾವವನ್ನಿರಿಸಿ, ಯಾರಲ್ಲಿಯೂ ವೈರಭಾವವನ್ನು ತಾಳದೆ, ಆಸಕ್ತಿಯನ್ನು ತೊರೆದು, ಬ್ರಹ್ಮಚರ್ಯ-ಮೌನವ್ರತಗಳನ್ನು ಹೊಂದಿ, ಪ್ರಾರಬ್ಧಕ್ಕನುಗುಣವಾಗಿ ಸಿಕ್ಕಿದಷ್ಟರಲ್ಲಿ ಸಂತೋಷಪಟ್ಟುಕೊಳ್ಳುತ್ತಾ , ಮಿತವಾಗಿ ಆಹಾರವನ್ನು ಸೇವಿಸುತ್ತಾ , ಏಕಾಂತದಲ್ಲಿ ವಾಸಿಸುತ್ತಾ, ಶಾಂತಸ್ವಭಾವವುಳ್ಳವನಾಗಿ, ಎಲ್ಲರಿಗೂ ಮಿತ್ರನಾಗಿ, ದಯಾಳುವಾಗಿ, ಧೈರ್ಯಶಾಲಿಯಾಗಿ, ಪ್ರಕೃತಿ-ಪುರುಷರ ನಿಜವಾದ ಸ್ವರೂಪದ ಅನುಭವದಿಂದ ದೊರೆತಿರುವ ತತ್ತ್ವಜ್ಞಾನದ ಕಾರಣ ಪತ್ನೀ, ಪುತ್ರಾದಿಗಳಿಂದ ಕೂಡಿದ ಈ ದೇಹದಲ್ಲಿ 'ನಾನು-ನನ್ನದು' ಎಂಬ ಮಿಥ್ಯಾ ಅಭಿಮಾನವನ್ನು ತೊರೆದು, ಬುದ್ಧಿಯ ಜಾಗ್ರದಾದಿ ಅವಸ್ಥೆಗಳಿಂದ ತನ್ನನ್ನು ಬೇರ್ಪಡಿಸಿಕೊಂಡು, ಪರಮಾತ್ಮನನ್ನು ಬಿಟ್ಟು ಬೇರೆ ಯಾವ ಪದಾರ್ಥವನ್ನು ನೋಡದ ಆತ್ಮದರ್ಶಿಯಾದ ಮುನಿಗೆ ಆ ಬ್ರಹ್ಮಪದವು ದೊರೆಯುವುದು. ಅವನು ಕಣ್ಣುಗಳಿಂದ ಸೂರ್ಯನನ್ನು ನೋಡುವಂತೆ ತನ್ನ ಶುದ್ಧವಾದ ಅಂತಃಕರಣದ ಮೂಲಕ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು, ದೇಹವೇ ಮುಂತಾದ ಎಲ್ಲ ಉಪಾಧಿಗಳಿಂದಲೂ ಬೇರೆಯಾಗಿ, ಅಹಂಕಾರಾದಿ ಮಿಥ್ಯಾ ವಸ್ತುಗಳಲ್ಲಿ ಸದ್ವಸ್ತುವಾಗಿ ಬೆಳಗುತ್ತಿರುವ, ಜಗತ್ಕಾರಣಭೂತವಾದ ಪ್ರಕೃತಿಗೂ ಅಧಿಷ್ಠಾನವಾಗಿರುವ, ಮಹದಾದಿ ಕಾರ್ಯವರ್ಗಗಳ ಪ್ರಕಾಶಕನಾಗಿರುವ, ಕಾರ್ಯ- ಕಾರಣ ರೂಪವಾದ ಸಮಸ್ತ ಪದಾರ್ಥಗಳಲ್ಲಿ ವ್ಯಾಪ್ತನಾಗಿರುವ ಅದ್ವಿತೀಯನಾದ ಪರಬ್ರಹ್ಮನ ಪದವನ್ನು ಪಡೆಯುವನು. ॥ ೬-೧೧ ॥

ನೀರಿನಲ್ಲಿ ಪ್ರತಿಬಿಂಬಿಸುವ ಸೂರ್ಯನ ಪ್ರಕಾಶವು ಮನೆಯೊಳಗೆ ಹೊಕ್ಕು ಗೋಡೆಯಮೇಲೆ ಬಿದ್ದಾಗ, ಅಲ್ಲಿಯ ಜನರು ಈ ಬಿಸಿಲು ಎಲ್ಲಿಂದ ಬಂತು ಎಂದು ವಿಚಾರ ಮಾಡುತ್ತಾ ಅದಕ್ಕೆ ಆಧಾರವಾಗಿ ನೀರಿನಲ್ಲಿರುವ ಸೂರ್ಯಪ್ರತಿಬಿಂಬವನ್ನು ಕಂಡು, ಅದಕ್ಕೆ ಮೂಲವಾದ ನಿಜವಾದ ಸೂರ್ಯನನ್ನು ಕಾಣುವರು. ಹಾಗೆಯೇ ವೈಕಾರಿಕಾದಿ ಭೇದದಿಂದ ಮೂರು ರೀತಿಯ ಅಹಂಕಾರವು – ದೇಹ, ಇಂದ್ರಿಯ ಮತ್ತು ಮನಸ್ಸಿನಲ್ಲಿ ಕಂಡುಬರುವ ತನ್ನ ಪ್ರತಿಬಿಂಬಗಳಿಂದ ತಿಳಿದುಬರುತ್ತದೆ. ಮತ್ತು ಪುನಃ ಸತ್‌ಪರಮಾತ್ಮನ ಪ್ರತಿಬಿಂಬದಿಂದ ಕೂಡಿದ ಅಹಂಕಾರದ ಮೂಲಕ ಸತ್ಯಜ್ಞಾನಸ್ವರೂಪ ಪರಮಾತ್ಮನ ದರ್ಶನವಾಗುತ್ತದೆ. ಅದು – ಸುಷುಪ್ತಿಯಲ್ಲಿ ನಿದ್ರೆಯಿಂದ ಶಬ್ದಾದಿ ಭೂತಸೂಕ್ಷ್ಮ, ಇಂದ್ರಿಯ ಮತ್ತು ಮನಸ್ಸು ಬುದ್ಧಿ ಮುಂತಾದವುಗಳು ಅವ್ಯಾಕೃತದಲ್ಲಿ ಲೀನವಾದ ಬಳಿಕ, ಸ್ವಯಂ ಎಚ್ಚರವಾಗಿದ್ದು ಸರ್ವಥಾ ಅಹಂಕಾರ ಶೂನ್ಯವಾಗಿರುತ್ತದೆ. ॥ ೧೨-೧೪ ॥

ಮನ್ಯಮಾನಸ್ತದಾಽಽತ್ಮಾನಮನಷ್ಟೋ ನಷ್ಟವನ್ಮೃಷಾ ।
ನಷ್ಟೇಽಹಂಕರಣೇ ದ್ರಷ್ಟಾ ನಷ್ಟವಿತ್ತ ಇವಾತುರಃ
॥ ೧೫ ॥

ಏವಂ ಪ್ರತ್ಯವಮೃಶ್ಯಾಸಾವಾತ್ಮಾನಂ ಪ್ರತಿಪದ್ಯತೇ ।
ಸಾಹಂಕಾರಸ್ಯ ದ್ರವ್ಯಸ್ಯ ಯೋಽವಸ್ಥಾನಮನುಗ್ರಹಃ
॥ ೧೬ ॥

ದೇವಹೂತಿರುವಾಚ

ಪುರುಷಂ ಪ್ರಕೃತಿರ್ಬ್ರಹ್ಮನ್ ನ ವಿಮುಂಚತಿ ಕರ್ಹಿಚಿತ್ ।
ಅನ್ಯೋನ್ಯಾಪಾಶ್ರಯತ್ವಾಚ್ಚ ನಿತ್ಯತ್ವಾದನಯೋಃ ಪ್ರಭೋ
॥ ೧೭ ॥

ಯಥಾ ಗಂಧಸ್ಯ ಭೂಮೇಶ್ಚ ನ ಭಾವೋ ವ್ಯತಿರೇಕತಃ ।
ಅಪಾಂ ರಸಸ್ಯ ಚ ಯಥಾ ತಥಾ ಬುದ್ಧೇಃ ಪರಸ್ಯ ಚ
॥ ೧೮ ॥

ಅಕರ್ತುಃ ಕರ್ಮಬಂಧೋಽಯಂ ಪುರುಷಸ್ಯ ಯದಾಶ್ರಯಃ ।
ಗುಣೇಷು ಸತ್ಸು ಪ್ರಕೃತೇಃ ಕೈವಲ್ಯಂ ತೇಷ್ವತಃ ಕಥಮ್
॥ ೧೯ ॥

ಕ್ವಚಿತ್ತತ್ತ್ವಾವಮರ್ಶೇನ ನಿವೃತ್ತಂ ಭಯಮುಲ್ಬಣಮ್ ।
ಅನಿವೃತ್ತನಿಮಿತ್ತತ್ವಾತ್ಪುನಃ ಪ್ರತ್ಯವತಿಷ್ಠತೇ
॥ ೨೦ ॥

ಶ್ರೀಭಗವಾನುವಾಚ

ಅನಿಮಿತ್ತನಿಮಿತ್ತೇನ ಸ್ವಧರ್ಮೇಣಾಮಲಾತ್ಮನಾ ।
ತೀವ್ರಯಾ ಮಯಿ ಭಕ್ತ್ಯಾ ಚ ಶ್ರುತಸಂಭೃತಯಾ ಚಿರಮ್
॥ ೨೧ ॥

ಜ್ಞಾನೇನ ದೃಷ್ಟತತ್ತ್ವೇನ ವೈರಾಗ್ಯೇಣ ಬಲೀಯಸಾ ।
ತಪೋಯುಕ್ತೇನ ಯೋಗೇನ ತೀವ್ರೇಣಾತ್ಮಸಮಾಧಿನಾ
॥ ೨೨ ॥

ಪ್ರಕೃತಿಃ ಪುರುಷಸ್ಯೇಹ ದಹ್ಯಮಾನಾ ತ್ವಹರ್ನಿಶಮ್ ।
ತಿರೋಭವಿತ್ರೀ ಶನಕೈರಗ್ನೇರ್ಯೋನಿರಿವಾರಣಿಃ
॥ ೨೩ ॥

ಭುಕ್ತಭೋಗಾ ಪರಿತ್ಯಕ್ತಾ ದೃಷ್ಟದೋಷಾ ಚ ನಿತ್ಯಶಃ ।
ನೇಶ್ವರಸ್ಯಾಶುಭಂ ಧತ್ತೇ ಸ್ವೇ ಮಹಿಮ್ನಿ ಸ್ಥಿತಸ್ಯ ಚ
॥ ೨೪ ॥

ಯಥಾ ಹ್ಯಪ್ರತಿಬುದ್ಧಸ್ಯ ಪ್ರಸ್ವಾಪೋ ಬಹ್ವನರ್ಥಭೃತ್ ।
ಸ ಏವ ಪ್ರತಿಬುದ್ಧಸ್ಯ ನ ವೈ ಮೋಹಾಯ ಕಲ್ಪತೇ
॥ ೨೫ ॥

(ಜಾಗ್ರತ್-ಅವಸ್ಥೆಯಲ್ಲಿ ಈ ಆತ್ಮನು ಭೂತಸೂಕ್ಷ್ಮಾದಿ ದೃಶ್ಯವರ್ಗದ ದ್ರಷ್ಟಾರೂಪದಲ್ಲಿ ಸ್ಪಷ್ಟವಾಗಿ ಅನುಭವಕ್ಕೆ ಬರುತ್ತಾನೆ. ಆದರೆ –) ಸುಷುಪ್ತಿಯಲ್ಲಿ ತನ್ನ ಉಪಾಧಿಭೂತ ಅಹಂಕಾರದ ನಾಶವಾದ್ದರಿಂದ ಅವನು ಭ್ರಮೆಯಿಂದ ತಾನೇ ನಾಶವಾದೆನೆಂದು ತಿಳಿದುಕೊಳ್ಳುತ್ತಾನೆ. ಧನವು ನಾಶವಾದಾಗ ತಾನೇ ನಾಶವಾದೆನೆಂದು ತಿಳಿದು ಅತ್ಯಂತ ದುಃಖಿತನಾಗುವಂತೆ ಅವನೂ ಕೂಡ ಅತ್ಯಂತ ವಿವಶನಾಗಿ ನಷ್ಟವಾದಂತೆ ಆಗಿಹೋಗುತ್ತಾನೆ. ॥ ೧೫ ॥ ಅಮ್ಮಾ! ಇವೆಲ್ಲ ಮಾತುಗಳನ್ನು ಮನನಗೈದು ವಿವೇಕಿ ಪುರುಷನು – ಅಹಂಕಾರಸಹಿತ ಸಮಸ್ತ ತತ್ತ್ವಗಳ ಅಧಿಷ್ಠಾನವೂ, ಪ್ರಕಾಶಕವೂ ಆದ ತನ್ನ ಆತ್ಮದ ಅನುಭವವನ್ನು ಪಡೆದುಕೊಳ್ಳುತ್ತಾನೆ. ॥ ೧೬॥

**ದೇವಹೂತಿಯು ಕೇಳಿದಳು** – ಪ್ರಭುವೇ! ಪ್ರಕೃತಿ ಮತ್ತು ಪುರುಷ ಇವೆರಡೂ ನಿತ್ಯವೂ, ಒಂದನ್ನೊಂದರ ಆಶ್ರಯದಿಂದಲೂ ಇರುವವು. ಅದಕ್ಕಾಗಿ ಪ್ರಕೃತಿಯಾದರೋ ಪುರುಷನನ್ನು ಎಂದೂ ಬಿಟ್ಟಿರಲಾರದು. ॥ ೧೭ ॥ ಬ್ರಹ್ಮಸ್ವರೂಪನೇ! ಗಂಧವು ಪೃಥಿವಿಯ, ರಸವು ಜಲದ ಬೇರೆಬೇರೆಯಾದ ಸ್ಥಿತಿಯು ಹೇಗೆ ಆಗಲಾರದೋ ಹಾಗೆಯೇ ಪುರುಷ ಮತ್ತು ಪ್ರಕೃತಿಯೂ ಒಂದನ್ನೊಂದು ಬಿಟ್ಟು ಇರಲಾರವು. ॥ ೧೮॥ ಆದ್ದರಿಂದ ಯಾವುದರ ಆಶ್ರಯದಿಂದ ಅಕರ್ತೃವಾದ ಪುರುಷನಿಗೆ ಈ ಕರ್ಮಬಂಧನ ಉಂಟಾಗಿದೆಯೋ ಆ ಪ್ರಕೃತಿಯ ಗುಣಗಳು ಇರುವಾಗಲೇ ಅವನಿಗೆ ಕೈವಲ್ಯಪದವು ಹೇಗೆ ದೊರಕಬಲ್ಲದು? ॥ ೧೯ ॥ ತತ್ತ್ವಗಳ ವಿಚಾರ ಮಾಡುವುದರಿಂದ ಎಂದಾದರೂ ಈ ಸಂಸಾರ ಬಂಧನದ ತೀವ್ರ ಭಯವು ನಿವೃತ್ತವಾದರೂ ಕೂಡ ಅದರ ನಿಮಿತ್ತ ಭೂತ ಪ್ರಾಕೃತ ಗುಣಗಣಗಳ ಅಭಾವ ಆಗದಿರುವುದರಿಂದ ಆ ಭಯವು ಪುನಃ ಉಂಟಾಗಬಹುದಲ್ಲ? ॥ ೨೦ ॥

**ಶ್ರೀಭಗವಂತನು ಹೇಳಿದನು** – ತಾಯೇ! ಅರಣಿಯಿಂದಲೇ ಉತ್ಪನ್ನವಾದ ಅಗ್ನಿಯಿಂದ ಅದರ ಉತ್ಪತ್ತಿಸ್ಥಾನವಾದ ಅರಣಿಯೂ ಸುಟ್ಟು ಬೂದಿಯಾಗಿ ಹೋಗುವಂತೆ, ನಿಷ್ಕಾಮಭಾವದಿಂದ ಮಾಡಲಾದ ಸ್ವಧರ್ಮಪಾಲನೆಯ ಮೂಲಕ ಶುದ್ಧವಾದ ಅಂತಃಕರಣದಿಂದ, ಬಹಳಕಾಲ ಭಗವತ್ಕಥೆಗಳನ್ನು ಕೇಳುತ್ತಿರುವುದರಿಂದ ಪುಷ್ಟಿಗೊಂಡ ನನ್ನ ತೀವ್ರವಾದ ಭಕ್ತಿಯಿಂದ, ತತ್ತ್ವಸಾಕ್ಷಾತ್ಕಾರ ಮಾಡಿಸುವ ಜ್ಞಾನದಿಂದ, ಪ್ರಬಲ ವೈರಾಗ್ಯದಿಂದ, ವ್ರತನಿಯಮಗಳೊಂದಿಗೆ ಗೈದ ಧ್ಯಾನಾಭ್ಯಾಸದಿಂದ ಮತ್ತು ಚಿತ್ತದ ಪ್ರಗಾಢವಾದ ಏಕಾಗ್ರತೆಯಿಂದ ಪುರುಷನ ಪ್ರಕೃತಿಯು (ಅವಿದ್ಯೆಯು) ಹಗಲೂ-ರಾತ್ರಿಯೂ ಕ್ಷೀಣಿಸುತ್ತಾ ನಿಧಾನವಾಗಿ ಲೀನವಾಗಿ ಹೋಗುತ್ತದೆ. ॥ ೨೧-೨೩ ॥ ಮತ್ತೆ ಪ್ರತಿದಿನವೂ ದೋಷಗಳನ್ನು ನೋಡಿ ಭೋಗಿಸಿ – ತ್ಯಜಿಸಿದ ಆ ಪ್ರಕೃತಿಯು – ತನ್ನ ಸ್ವರೂಪದಲ್ಲಿ ಸ್ಥಿತನಾದ ಸ್ವತಂತ್ರ (ಬಂಧಮುಕ್ತ)ನಾದ ಆ ಪುರುಷನ ಯಾವುದೇ ಅಹಿತವನ್ನು ಮಾಡಲಾರಳು. ॥ ೨೪ ॥ ಮಲಗಿರುವ ಮನುಷ್ಯನಿಗೆ ಸ್ವಪ್ನದಲ್ಲಿ ಎಷ್ಟೇ ಅನರ್ಥಗಳ ಅನುಭವಗಳಾದರೂ ಎಚ್ಚರವಾದಾಗ ಅವನಿಗೆ ಆ ಸ್ವಪ್ನದ ಅನುಭವದಿಂದ ಯಾವುದೇ ಮೋಹವು ಉಂಟಾಗುವುದಿಲ್ಲ. ॥ ೨೫ ॥

ಏವಂ ವಿದಿತತತ್ತ್ವಸ್ಯ ಪ್ರಕೃತಿರ್ಮಯಿ ಮಾನಸಮ್ ।
ಯುಂಜತೋ ನಾಪಕುರುತ ಆತ್ಮಾರಾಮಸ್ಯ ಕರ್ಹಿಚಿತ್ ॥ ೨೬ ॥

ಯದೈವಮಧ್ಯಾತ್ಮರತಃ ಕಾಲೇನ ಬಹುಜನ್ಮನಾ ।
ಸರ್ವತ್ರ ಜಾತವೈರಾಗ್ಯ ಆಬ್ರಹ್ಮ ಭುವನಾನ್ಮುನಿಃ ॥ ೨೭ ॥

ಮದ್ಭಕ್ತಃ ಪ್ರತಿಬುದ್ಧಾರ್ಥೋ ಮತ್ಪ್ರಸಾದೇನ ಭೂಯಸಾ ।
ನಿಃಶ್ರೇಯಸಂ ಸ್ವಸಂಸ್ಥಾನಂ ಕೈವಲ್ಯಾಖ್ಯಂ ಮದಾಶ್ರಯಮ್ ॥ ೨೮ ॥

ಪ್ರಾಪ್ನೋತೀಹಾಂಜಸಾ ಧೀರಃ ಸ್ವದೃಶಾಂಛಿನ್ನಸಂಶಯಃ ।
ಯದ್ಗತ್ವಾ ನ ನಿವರ್ತೇತ ಯೋಗೀ ಲಿಂಗಾದ್ವಿನಿರ್ಗಮೇ ॥ ೨೯ ॥

ಯದಾ ನ ಯೋಗೋಪಚಿತಾಸು ಚೇತೋ
ಮಾಯಾಸು ಸಿದ್ಧಸ್ಯ ವಿಷಜ್ಜತೇಽಂಗ ।
ಅನನ್ಯಹೇತುಷ್ವಥ ಮೇ ಗತಿಃ ಸ್ಯಾದ್
ಆತ್ಯಂತಿಕೀ ಯತ್ರ ನ ಮೃತ್ಯುಹಾಸಃ ॥ ೩೦ ॥

ಹಾಗೆಯೇ ತತ್ತ್ವಜ್ಞಾನ ಉಂಟಾದವನು ನಿರಂತರವಾಗಿ ನನ್ನಲ್ಲೇ ಮನಸ್ಸನ್ನು ತೊಡಗಿಸಿರುತ್ತಾನೆ. ಅಂತಹ ಆತ್ಮಾರಾಮ ಮುನಿಗೆ ಪ್ರಕೃತಿಯು ಯಾವ ತೊಂದರೆಯನ್ನೂ ಮಾಡಲಾರಳು. ॥ ೨೬ ॥ ಅನೇಕ ಜನ್ಮಗಳಲ್ಲಿ ಮನುಷ್ಯನು ದೀರ್ಘಕಾಲದವರೆಗೆ ಹೀಗೆ ಆತ್ಮಚಿಂತನೆಯಲ್ಲಿಯೇ ಮುಳುಗಿದ್ದರೆ, ಆಗ ಅವನಿಗೆ ಬ್ರಹ್ಮಲೋಕದವರೆಗಿನ ಎಲ್ಲ ರೀತಿಯ ಭೋಗಗಳಿಂದ ವೈರಾಗ್ಯ ಉಂಟಾಗುತ್ತದೆ. ॥ ೨೭ ॥ ಧೀರನಾದ ನನ್ನ ಆ ಭಕ್ತನು ನನ್ನ ಮಹತ್‌ಕೃಪೆಯಿಂದ ತತ್ತ್ವಜ್ಞಾನವನ್ನು ಪಡೆದು ಕೊಂಡು ಆತ್ಮಾನುಭವದ ಮೂಲಕ ಎಲ್ಲ ಸಂಶಯಗಳಿಂದಲೂ ಮುಕ್ತನಾಗಿ ಹೋಗುತ್ತಾನೆ. ಮತ್ತೆ ಲಿಂಗದೇಹವು ಭಂಗವಾದ ಮೇಲೆ ಏಕಮಾತ್ರ ನನ್ನನ್ನೇ ಆಶ್ರಯಿಸಿರುವ ತನ್ನ ಸ್ವರೂಪಭೂತ ಕೈವಲ್ಯವೆಂಬ ಮಂಗಳಮಯವಾದ ಸ್ಥಾನವನ್ನು ಸಹಜವಾಗಿಯೇ ಪಡೆದುಕೊಳ್ಳುವನು. ಅದನ್ನು ತಲುಪಿದ ಬಳಿಕ ಯೋಗಿಯು ಪುನಃ ಸಂಸಾರಕ್ಕೆ ಮರಳುವುದಿಲ್ಲ. ॥ ೨೮-೨೯ ॥ ಅಮ್ಮಾ! ಯೋಗಿಯ ಚಿತ್ತವು-ಯೋಗಸಾಧನೆಯಿಂದ ಹೆಚ್ಚಾಗಿರುವ ಮಾಯಾಮಯ ಅಣಿಮಾದಿ ಅಷ್ಟಸಿದ್ಧಿಗಳಲ್ಲಿ, ಅದರ ಪ್ರಾಪ್ತಿಗಾಗಿ ಯೋಗಸಾಧನೆಗಿಂತ ಬೇರೆ ಯಾವ ಸಾಧನವೂ ಇಲ್ಲವೆಂದು ತಿಳಿದು ಅವುಗಳಲ್ಲಿ ಸಿಕ್ಕಿಹಾಕಿಕೊಳ್ಳದಿದ್ದರೆ, ಅವನಿಗೆ ಅವಿನಾಶಿಯಾದ ನನ್ನ ಪರಮಪದವು ಪ್ರಾಪ್ತವಾಗುತ್ತದೆ. ಮತ್ತೆ ಮೃತ್ಯುವಿನ ಯಾವುದೇ ಪ್ರಭಾವ ಉಳಿಯುವುದಿಲ್ಲ. ॥ ೩೦ ॥

*ಇಪ್ಪತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೨೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಕಾಪಿಲೇಯೋಪಾಖ್ಯಾನೇ ಸಪ್ತವಿಂಶೋಽಧ್ಯಾಯಃ ॥ ೨೭ ॥

# ಇಪ್ಪತ್ತೆಂಟನೆಯ ಅಧ್ಯಾಯ

## ಅಷ್ಟಾಂಗಯೋಗದ ವಿಧಿ

*ಶ್ರೀಭಗವಾನುವಾಚ*

ಯೋಗಸ್ಯ ಲಕ್ಷಣಂ ವಕ್ಷ್ಯೇ ಸಬೀಜಸ್ಯ ನೃಪಾತ್ಮಜೇ ।
ಮನೋ ಯೇನೈವ ವಿಧಿನಾ ಪ್ರಸನ್ನಂ ಯಾತಿ ಸತ್ಪಥಮ್ ॥ ೧ ॥

ಸ್ವಧರ್ಮಾಚರಣಂ ಶಕ್ತ್ಯಾ ವಿಧರ್ಮಾಚ್ಚ ನಿವರ್ತನಮ್ ।
ದೈವಾಲ್ಲಬ್ಧೇನ ಸಂತೋಷ ಆತ್ಮವಿಚ್ಚರಣಾರ್ಚನಮ್ ॥ ೨ ॥

ಗ್ರಾಮ್ಯಧರ್ಮನಿವೃತ್ತಿಶ್ಚ ಮೋಕ್ಷಧರ್ಮರತಿಸ್ತಥಾ ।
ಮಿತಮೇಧ್ಯಾದನಂ ಶಶ್ವದ್ವಿವಿಕ್ತಕ್ಷೇಮಸೇವನಮ್ ॥ ೩ ॥

**ಶ್ರೀಕಪಿಲಭಗವಂತನು ಹೇಳುತ್ತಾನೆ** – ಅಮ್ಮಾ! ರಾಜಪುತ್ರಿಯೇ ! ಈಗ ನಾನು ನಿನಗೆ ಸಬೀಜದ (ಸಗುಣಭಕ್ತಿ ಯೋಗದ) ಲಕ್ಷಣವನ್ನು ಹೇಳುವೆನು. ಇದರಿಂದ ಚಿತ್ತವು ಶುದ್ಧ ಹಾಗೂ ಪ್ರಸನ್ನವಾಗಿ ಪರಮಾತ್ಮನ ಮಾರ್ಗವನ್ನೇ ಹಿಡಿಯುತ್ತದೆ. ॥ ೧ ॥ ಈ ಯೋಗವನ್ನು ಸಾಧನೆಮಾಡುವವನು ಶಾಸ್ತ್ರವಿಹಿತವಾದ ಸ್ವಧರ್ಮವನ್ನು ಯಥಾಶಕ್ತಿ ಆಚರಿಸಬೇಕು. ಶಾಸ್ತ್ರವಿರುದ್ಧ ಆಚರಣೆಯನ್ನು ಪರಿತ್ಯಜಿಸಬೇಕು. ಪ್ರಾರಬ್ಧಕ್ಕನುಸಾರ ದೊರೆತುದರಲ್ಲಿ ಸಂತುಷ್ಟನಾಗಬೇಕು. ಆತ್ಮಜ್ಞಾನಿಗಳ ಚರಣಗಳನ್ನು ಪೂಜಿಸಬೇಕು. ॥ ೨ ॥ ವಿಷಯವಾಸನೆಗಳನ್ನು ಹೆಚ್ಚಿಸುವ ಕರ್ಮಗಳಿಂದ ದೂರವುಳಿಯಬೇಕು. ಸಂಸಾರಬಂಧನದಿಂದ ಬಿಡಿಸುವಂತಹ ಧರ್ಮದಲ್ಲಿ ಪ್ರೇಮವಿರಿಸಬೇಕು. ಪವಿತ್ರ ಹಾಗೂ ಪರಿಮಿತ ಭೋಜನವನ್ನು ಮಾಡಬೇಕು. ನಿರಂತರ ಏಕಾಂತವೂ, ನಿರ್ಭಯವೂ ಆದ ಸ್ಥಾನದಲ್ಲಿ ವಾಸಿಸಬೇಕು. ॥ ೩ ॥

**ಅಹಿಂಸಾ ಸತ್ಯಮಸ್ತೇಯಂ ಯಾವದರ್ಥಪರಿಗ್ರಹಃ ।**
**ಬ್ರಹ್ಮಚರ್ಯಂ ತಪಃ ಶೌಚಂ ಸ್ವಾಧ್ಯಾಯಃ ಪುರುಷಾರ್ಚನಮ್ ॥ ೪ ॥**

**ಮೌನಂ ಸದಾಽಽಸನಜಯಃ ಸ್ಥೈರ್ಯಂ ಪ್ರಾಣಜಯಃ ಶನೈಃ ।**
**ಪ್ರತ್ಯಾಹಾರಶ್ಚೇಂದ್ರಿಯಾಣಾಂ ವಿಷಯಾನ್ಮನಸಾ ಹೃದಿ ॥ ೫ ॥**

**ಸ್ವಧಿಷ್ಣ್ಯಾನಾಮೇಕದೇಶೇ ಮನಸಾ ಪ್ರಾಣಧಾರಣಮ್ ।**
**ವೈಕುಂಠಲೀಲಾಭಿಧ್ಯಾನಂ ಸಮಾಧಾನಂ ತಥಾಽಽತ್ಮನಃ ॥ ೬ ॥**

**ಏತೈರನ್ಯೈಶ್ಚ ಪಥಿಭಿರ್ಮನೋ ದುಷ್ಟಮಸತ್ಪಥಮ್ ।**
**ಬುದ್ಧ್ಯಾ ಯುಂಜೀತ ಶನಕೈರ್ಜಿತಪ್ರಾಣೋ ಹ್ಯತಂದ್ರಿತಃ ॥ ೭ ॥**

**ಶುಚೌ ದೇಶೇ ಪ್ರತಿಷ್ಠಾಪ್ಯ ವಿಜಿತಾಸನ ಆಸನಮ್ ।**
**ತಸ್ಮಿನ್ಸ್ವಸ್ತಿ ಸಮಾಸೀನ ಋಜುಕಾಯಃ ಸಮಭ್ಯಸೇತ್ ॥ ೮ ॥**

**ಪ್ರಾಣಸ್ಯ ಶೋಧಯೇನ್ಮಾರ್ಗಂ ಪೂರಕುಂಭಕರೇಚಕೈಃ ।**
**ಪ್ರತಿಕೂಲೇನ ವಾ ಚಿತ್ತಂ ಯಥಾ ಸ್ಥಿರಮಚಂಚಲಮ್ ॥ ೯ ॥**

**ಮನೋಽಚಿರಾತ್ಸ್ಯಾದ್ವಿರಜಂ ಜಿತಶ್ವಾಸಸ್ಯ ಯೋಗಿನಃ ।**
**ವಾಯ್ವಗ್ನಿಭ್ಯಾಂ ಯಥಾ ಲೋಹಂ ಧ್ಮಾತಂ ತ್ಯಜತಿ ವೈ ಮಲಮ್ ॥ ೧೦ ॥**

**ಪ್ರಾಣಾಯಾಮೈರ್ದಹೇದ್ದೋಷಾನ್ ಧಾರಣಾಭಿಶ್ಚ ಕಿಲ್ಬಿಷಾನ್ ।**
**ಪ್ರತ್ಯಾಹಾರೇಣ ಸಂಸರ್ಗಾನ್ ಧ್ಯಾನೇನಾನೀಶ್ವರಾನ್ಗುಣಾನ್ ॥ ೧೧ ॥**

**ಯದಾ ಮನಃ ಸ್ವಂ ವಿರಜಂ ಯೋಗೇನ ಸುಸಮಾಹಿತಮ್ ।**
**ಕಾಷ್ಠಾಂ ಭಗವತೋ ಧ್ಯಾಯೇತ್ಸ್ವನಾಸಾಗ್ರಾವಲೋಕನಃ ॥ ೧೨ ॥**

**ಪ್ರಸನ್ನವದನಾಂಭೋಜಂ ಪದ್ಮಗರ್ಭಾರುಣೇಕ್ಷಣಮ್ ।**
**ನೀಲೋತ್ಪಲದಲಶ್ಯಾಮಂ ಶಂಖಚಕ್ರಗದಾಧರಮ್ ॥ ೧೩ ॥**

ಯಾವುದೇ ಪ್ರಾಣಿಯನ್ನು ತ್ರಿಕರಣಗಳಿಂದಲೂ ಹಿಂಸಿಸಬಾರದು. ಸತ್ಯವಾಗಿ ಮಾತನಾಡಬೇಕು. ಕಳ್ಳತನ ಮಾಡಬಾರದು. ಆವಶ್ಯಕತೆಗಿಂತ ಹೆಚ್ಚಿನ ವಸ್ತುಗಳನ್ನು ಸಂಗ್ರಹಿಸಬಾರದು. ಬ್ರಹ್ಮಚರ್ಯವನ್ನು ಪಾಲಿಸಬೇಕು. ತಪಸ್ಸನ್ನಾಚರಿಸಬೇಕು. ಒಳ-ಹೊರಗೆ ಪವಿತ್ರವಾಗಿರಬೇಕು. ಶಾಸ್ತ್ರಗಳನ್ನು ಅಧ್ಯಯನ ಮಾಡುತ್ತಾ, ಭಗವಂತನನ್ನು ಪೂಜಿಸಬೇಕು. ॥ ೪ ॥ ವಾಣಿಯ ಸಂಯಮವಿರಿಸಬೇಕು. ಒಳ್ಳೆಯ ಯೋಗಾಸನಗಳನ್ನು ಅಭ್ಯಾಸಮಾಡಿ ಸ್ಥಿರವಾಗಿ ಕುಳಿತುಕೊಳ್ಳಬೇಕು. ನಿಧಾನವಾಗಿ ಪ್ರಾಣಾಯಾಮದ ಮೂಲಕ ಶ್ವಾಸವನ್ನು ಜಯಿಸಿಕೊಳ್ಳಬೇಕು. ಇಂದ್ರಿಯಗಳನ್ನು ಮನಸ್ಸಿನ ಮೂಲಕ ವಿಷಯಗಳಿಂದ ಸೆಳೆದುಕೊಂಡು ಹೃದಯದಲ್ಲಿ ನೆಲೆಗೊಳಿಸಬೇಕು. ॥ ೫ ॥ ಮೂಲಾಧಾರವೇ ಮುಂತಾದ ಯಾವುದಾದರೊಂದು ಕೇಂದ್ರದಲ್ಲಿ ಮನಸ್ಸಿನಸಹಿತ ಪ್ರಾಣಗಳನ್ನು ಸ್ಥಿರವಾಗಿಸಬೇಕು. ನಿರಂತರವಾಗಿ ಭಗವಂತನ ಲೀಲೆಗಳನ್ನು ಚಿಂತಿಸುತ್ತಾ ಚಿತ್ತವನ್ನು ಸಮಾಧಾನಪಡಿಸಿಕೊಳ್ಳಬೇಕು. ॥ ೬ ॥ ಇವುಗಳಿಂದ ಹಾಗೂ ವ್ರತ-ದಾನಾದಿಗಳಿಂದ ಬೇರೆ ಸಾಧನೆಗಳಿಂದಲೂ ಸಾವಧಾನವಾಗಿ ಪ್ರಾಣಗಳನ್ನು ಜಯಿಸಿ, ಕುಮಾರ್ಗದಲ್ಲಿ ಸಂಚರಿಸುವ ದುಷ್ಟ ಚಿತ್ತವನ್ನು ಬುದ್ಧಿಯ ಮೂಲಕ ಮೆಲ್ಲ-ಮೆಲ್ಲನೆ ಏಕಾಗ್ರಗೊಳಿಸಿ ಅದನ್ನು ಪರಮಾತ್ಮನ ಧ್ಯಾನದಲ್ಲಿ ತೊಡಗಿಸಬೇಕು. ॥ ೭ ॥

ಮೊದಲು ಆಸನಜಯವನ್ನು ಸಾಧಿಸಿ, ಪ್ರಾಣಾಯಾಮದ ಅಭ್ಯಾಸಕ್ಕಾಗಿ ಶುಚಿಯಾದ ಜಾಗದಲ್ಲಿ ಕುಶ-ಮೃಗಚರ್ಮವೇ ಮುಂತಾದವುಗಳಿಂದ ಕೂಡಿದ ಆಸನವನ್ನು ಹಾಸಿಕೊಳ್ಳಬೇಕು. ಅದರ ಮೇಲೆ ದೇಹವನ್ನು ನೆಟ್ಟಗೆ ಸ್ಥಿರವಾಗಿ ಇರಿಸಿಕೊಂಡು ಸುಖವಾಗಿ ಕುಳಿತು ಅಭ್ಯಾಸ ಮಾಡಬೇಕು. ॥ ೮ ॥ ಆರಂಭದಲ್ಲಿ ಪೂರಕ, ಕುಂಭಕ, ರೇಚಕ ಕ್ರಮದಿಂದ ಅಥವಾ ಇದಕ್ಕೆ ವಿಪರೀತವಾಗಿ ರೇಚಕ, ಕುಂಭಕ, ಪೂರಕ, ಕ್ರಮದಲ್ಲಿ ಪ್ರಾಣಾಯಾಮ ಮಾಡಿ ಪ್ರಾಣದ ಮಾರ್ಗವನ್ನು ಶುದ್ಧಿಪಡಿಸಬೇಕು. ಅದರಿಂದ ಚಿತ್ತವು ಸ್ಥಿರವೂ, ನಿಶ್ಚಲವೂ ಆಗುವುದು. ॥ ೯ ॥ ಗಾಳಿ ಮತ್ತು ಬೆಂಕಿಯಿಂದ ಶೋಧಿಸಿದ ಚಿನ್ನವು ತನ್ನ ಕೊಳೆಯನ್ನು ಕಳೆದುಕೊಳ್ಳುವಂತೆ – ಪ್ರಾಣವಾಯುವನ್ನು ಜಯಿಸಿದ ಯೋಗಿಯ ಚಿತ್ತವು ಶೀಘ್ರವಾಗಿ ಶುದ್ಧವಾಗುವುದು. ॥ ೧೦ ॥ ಆದುದರಿಂದ ಯೋಗಿಯು-ಪ್ರಾಣಾಯಾಮದಿಂದ ವಾತಪಿತ್ತಾದಿಗಳಿಂದ ಉಂಟಾದ ದೋಷಗಳನ್ನೂ, ಧಾರಣೆಯಿಂದ ಪಾಪವನ್ನೂ, ಪ್ರತ್ಯಾಹಾರದಿಂದ ವಿಷಯಗಳ ಸಂಬಂಧವನ್ನೂ ಹಾಗೂ ಧ್ಯಾನದಿಂದ ಭಗವಂತನಿಂದ ವಿಮುಖಗೊಳಿಸುವಂತಹ ರಾಗ-ದ್ವೇಷಾದಿ ದುರ್ಗುಣಗಳನ್ನು ದೂರಮಾಡಬೇಕು. ॥ ೧೧ ॥ ಯೋಗದ ಅಭ್ಯಾಸ ಮಾಡುತ್ತಾ-ಮಾಡುತ್ತಾ ಚಿತ್ತವು ನಿರ್ಮಲವೂ, ಏಕಾಗ್ರವೂ ಆದಾಗ ನಾಸಿಕಾಗ್ರದಲ್ಲಿ ದೃಷ್ಟಿಯನ್ನು ನೆಟ್ಟು ಈ ರೀತಿಯಿಂದ ಭಗವಂತನ ಮೂರ್ತಿಯ ಧ್ಯಾನವನ್ನು ಮಾಡಬೇಕು. ॥ ೧೨ ॥

ಶ್ರೀಭಗವಂತನ ಮುಖಕಮಲವು ಪ್ರಸನ್ನವಾಗಿ ಆನಂದದಿಂದ ಅರಳಿದೆ. ಕಣ್ಣುಗಳು ಕಮಲಕೋಶದಂತೆ ನಸುಗೆಂಪಾಗಿವೆ. ಶರೀರವು ನೀಲಕಮಲದಳದಂತೆ ಶ್ಯಾಮಲ ವರ್ಣದಿಂದ ಶೋಭಿಸುತ್ತಿದೆ. ಕೈಗಳಲ್ಲಿ ಶಂಖ, ಚಕ್ರ, ಗದೆಪದ್ಮಗಳು ಅಲಂಕೃತವಾಗಿವೆ. ॥ ೧೩ ॥

ಲಸತ್ಪಂಕಜಕಿಂಜಲ್ಕಪೀತಕೌಶೇಯವಾಸಸಮ್ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಾಮುಕ್ತಕಂಧರಮ್ ॥ ೧೪ ॥

ಮತ್ತದ್ವಿರೇಫಕಲಯಾ ಪರೀತಂ ವನಮಾಲಯಾ ।
ಪರಾರ್ಧ್ಯಹಾರವಲಯಕಿರೀಟಾಂಗದನೂಪುರಮ್ ॥ ೧೫ ॥

ಕಾಂಚೀಗುಣೋಲ್ಲಸಚ್ಛ್ರೋಣಿಂ ಹೃದಯಾಂಭೋಜವಿಷ್ಟರಮ್ ।
ದರ್ಶನೀಯತಮಂ ಶಾಂತಂ ಮನೋನಯನವರ್ಧನಮ್ ॥ ೧೬ ॥

ಅಪೀಚ್ಯದರ್ಶನಂ ಶಶ್ವತ್ಸರ್ವಲೋಕನಮಸ್ಕೃತಮ್ ।
ಸಂತಂ ವಯಸಿ ಕೈಶೋರೇ ಭೃತ್ಯಾನುಗ್ರಹಕಾತರಮ್ ॥ ೧೭ ॥

ಕೀರ್ತನ್ಯತೀರ್ಥಯಶಸಂ ಪುಣ್ಯಶ್ಲೋಕಯಶಸ್ಕರಮ್ ।
ಧ್ಯಾಯೇದ್ದೇವಂ ಸಮಗ್ರಾಂಗಂ ಯಾವನ್ನ ಚ್ಯವತೇ ಮನಃ ॥ ೧೮ ॥

ಸ್ಥಿತಂ ವ್ರಜಂತಮಾಸೀನಂ ಶಯಾನಂ ವಾ ಗುಹಾಶಯಮ್ ।
ಪ್ರೇಕ್ಷಣೀಯೇಹಿತಂ ಧ್ಯಾಯೇಚ್ಛುದ್ಧಭಾವೇನ ಚೇತಸಾ ॥ ೧೯ ॥

ತಸ್ಮಿನ್ ಲಬ್ಧಪದಂ ಚಿತ್ತಂ ಸರ್ವಾವಯವಸಂಸ್ಥಿತಮ್ ।
ವಿಲಕ್ಷ್ಯೈಕತ್ರ ಸಂಯುಜ್ಯಾದಂಗೇ ಭಗವತೋ ಮುನಿಃ ॥ ೨೦ ॥

ಸಂಚಿಂತಯೇದ್ಭಗವತಶ್ಚರಣಾರವಿಂದಂ
ವಜ್ರಾಂಕುಶಧ್ವಜಸರೋರುಹಲಾಂಛನಾಢ್ಯಮ್ ।
ಉತ್ತುಂಗರಕ್ತವಿಲಸನ್ನಖಚಕ್ರವಾಲ-
ಜ್ಯೋತ್ಸ್ನಾಭಿರಾಹತಮಹದ್ಧೃದಯಾಂಧಕಾರಮ್ ॥ ೨೧ ॥

ಯಚ್ಛೌಚನಿಃಸೃತಸರಿತ್ಪ್ರವರೋದಕೇನ
ತೀರ್ಥೇನ ಮೂರ್ಧ್ನ್ಯಧಿಕೃತೇನ ಶಿವಃ ಶಿವೋಽಭೂತ್ ।
ಧ್ಯಾತುರ್ಮನಃಶಮಲಶೈಲನಿಸೃಷ್ಟವಜ್ರಂ
ಧ್ಯಾಯೇಚ್ಚಿರಂ ಭಗವತಶ್ಚರಣಾರವಿಂದಮ್ ॥ ೨೨ ॥

ಕಮಲದ ಕೇಸರದಂತೆ ಪಟ್ಟೆಪೀತಾಂಬರವು ಸ್ವಾಮಿಯ ಉಡಿಗೆಯಲ್ಲಿ ಕಳ-ಕಳಿಸುತ್ತಿದೆ. ವಕ್ಷಸ್ಥಳದಲ್ಲಿ ಶ್ರೀವತ್ಸಚಿಹ್ನೆಯಿದೆ. ಕೊರಳಲ್ಲಿ ಕೌಸ್ತುಭಮಣಿಯು ಥಳ-ಥಳಿಸುತ್ತಿದೆ. ॥ ೧೪ ॥ ವನಮಾಲೆಯು ಚರಣಗಳವರೆಗೂ ಲಂಬಿಸಿದೆ. ಅದರ ಸುತ್ತಲೂ ದುಂಬಿಗಳು ಸುಗಂಧದಿಂದ ಮದವೇರಿ ಇಂಪಾಗಿ ಝೇಂಕರಿಸುತ್ತಿವೆ. ಸ್ವಾಮಿಯ ಅಂಗಾಂಗಗಳಲ್ಲಿ ಅಮೂಲ್ಯವಾದ ಹಾರಗಳೂ, ಕಂಕಣ, ಕಿರೀಟ, ಭುಜಕೀರ್ತಿ, ಕಾಲಂದುಗೆಗಳೇ ಮುಂತಾದ ಆಭೂಷಣಗಳು ವಿರಾಜಿಸುತ್ತಿವೆ. ॥ ೧೫ ॥ ನಡುವಿನಲ್ಲಿ ಧರಿಸಿದ ಓಡ್ಯಾಣದ ಎಳೆಗಳು ಅದರ ಕಾಂತಿಯನ್ನು ಹೆಚ್ಚಿಸುತ್ತಿವೆ. ಭಕ್ತರ ಹೃದಯಕಮಲವೇ ಆ ಭಗವಂತನ ಆಸನವಾಗಿದೆ. ಶ್ಯಾಮಸುಂದರನ ಆ ಪ್ರಶಾಂತಮೂರ್ತಿಯು ಎಲ್ಲರ ಕಣ್ಣನಗಳನ್ನೂ ಸೂರೆಗೊಳ್ಳುತ್ತಿದೆ. ॥ ೧೬॥ ಎಳೆವಯಸ್ಸಿನಲ್ಲಿರುವ ಆ ಮನೋಹರ ಮೂರ್ತಿಯು ಭಕ್ತರ ಮೇಲೆ ಕರುಣೆಯನ್ನು ಹರಿಸಲು ತವಕಪಡುತ್ತಿದೆ. ತುಂಬಾ ಮನೋಹರವಾದ ದರ್ಶನವದು. ಆ ಭಗವಂತನು ಸಮಸ್ತಲೋಕಗಳಿಂದಲೂ ಸದಾ ವಂದಿತನಾಗಿದ್ದಾನೆ. ॥ ೧೭ ॥ ಅವನ ಪವಿತ್ರಕೀರ್ತಿಯು ಪರಮಕೀರ್ತನೀಯವಾಗಿದೆ. ಅವನು ರಾಜಾ ಬಲಿಯೇ ಮುಂತಾದ ಪರಮಯಶಸ್ವಿಗಳ ಯಶವನ್ನೂ ಕೂಡ ಹೆಚ್ಚಿಸುವವನಾಗಿದ್ದಾನೆ. ಹೀಗೆ ಶ್ರೀಮನ್ನಾರಾಯಣನ ಸಮಸ್ತ ಅಂಗಗಳಲ್ಲಿ ಚಿತ್ತವು ಜಾರದೆ ಸ್ಥಿರವಾಗುವವರೆಗೆ ಧ್ಯಾನಮಾಡಬೇಕು. ॥ ೧೮ ॥ ಭಗವಂತನ ಲೀಲೆಗಳು ತುಂಬಾ ದರ್ಶನೀಯವಾಗಿವೆ. ಆದ್ದರಿಂದ ತನ್ನ ಅಭಿರುಚಿಗನುಸಾರವಾಗಿ ನಿಂತಿರುವ, ನಡೆಯುತ್ತಿರುವ, ಕುಳಿತುಕೊಂಡ, ಮಲಗಿರುವ ಮುಂತಾಗಿ ಯಾವುದೇ ಭಂಗಿಯಲ್ಲಿರುವ ಅಥವಾ ಅಂತರ್ಯಾಮಿರೂಪದಲ್ಲಿ ಸ್ಥಿತನಾದ ಅವನ ಸ್ವರೂಪವನ್ನು ವಿಶುದ್ಧಭಾವದಿಂದ ಕೂಡಿದ ಚಿತ್ತದಿಂದ ಚಿಂತನೆಮಾಡಬೇಕು. ॥ ೧೯॥ ಹೀಗೆ ಸರ್ವಾಂಗಗಳಲ್ಲಿಯೂ ನೆಲೆಪಡೆದು ರಮಿಸುತ್ತಿರುವ ಚಿತ್ತವನ್ನು ಒಂದೊಂದೇ ಅವಯವದಲ್ಲಿ ನಿಲ್ಲಿಸುತ್ತಾ ಅಡಿಯಿಂದ ಮುಡಿಯವರೆಗೂ ಧ್ಯಾನಮಾಡಬೇಕು. ॥ ೨೦ ॥

ಮೊದಲಿಗೆ ಭಗವಂತನ ಚರಣಕಮಲಗಳನ್ನು ಧ್ಯಾನಿಸಬೇಕು. ಅವು – ವಜ್ರ, ಅಂಕುಶ, ಧ್ವಜ, ಕಮಲಗಳ ಮಂಗಳರೇಖೆ ಚಿಹ್ನೆಗಳಿಂದ ರಾರಾಜಿಸುತ್ತಿವೆ. ಸ್ವಲ್ಪ ಉಬ್ಬಿಕೊಂಡು, ನಸುಗೆಂಪಿನಿಂದ ಶೋಭಿಸುತ್ತಿರುವ ನಖಚಂದ್ರಮಂಡಲದ ತಿಂಗಳಬೆಳಕಿನಿಂದ ಧ್ಯಾನಿಸುತ್ತಿರುವ ಭಕ್ತರ ಹೃದಯದ ಅಜ್ಞಾನರೂಪೀ ಕತ್ತಲೆಯನ್ನು ದೂರಮಾಡುತ್ತಿದೆ. ॥ ೨೧ ॥ ಬ್ರಹ್ಮದೇವರು ಇವುಗಳನ್ನು ತೊಳೆದಾಗಲೇ ನದಿಗಳಲ್ಲಿ ಶ್ರೇಷ್ಠವಾದ ಗಂಗೆಯು ಪ್ರಕಟಳಾದಳು. ಅಂತಹ ಪವಿತ್ರ ಜಲವನ್ನು ಮಸ್ತಕದಲ್ಲಿ ಧರಿಸಿದ್ದರಿಂದಲೇ ಸ್ವತಃ ಮಂಗಳಸ್ವರೂಪನಾಗಿದ್ದರೂ ಶ್ರೀಶಿವನು ಹೆಚ್ಚು ಮಂಗಳಸ್ವರೂಪನಾದನು. ಇವು ತನ್ನ ಧ್ಯಾನಮಾಡುವವರ ಪಾಪಗಳೆಂಬ ಪರ್ವತಗಳ ಮೇಲೆ ಪ್ರಯೋಗಿಸಿದ ಇಂದ್ರನ ವಜ್ರಾಯುಧದಂತಿವೆ. ಭಗವಂತನ ಈ ಚರಣಕಮಲಗಳನ್ನು ಚಿರಕಾಲದವರೆಗೂ ಚಿಂತಿಸುತ್ತಿರಬೇಕು. ॥ ೨೨ ॥

ಜಾನುದ್ವಯಂ ಜಲಜಲೋಚನಯಾ ಜನನ್ಯಾ
ಲಕ್ಷ್ಮ್ಯಾಖಿಲಸ್ಯ ಸುರವಂದಿತಯಾ ವಿಧಾತುಃ ।
ಊರ್ವೋರ್ನಿಧಾಯ ಕರಪಲ್ಲವರೋಚಿಷಾ ಯತ್
ಸಂಲಾಲಿತಂ ಹೃದಿ ವಿಭೋರಭವಸ್ಯ ಕುರ್ಯಾತ್ ॥ ೨೩ ॥

ಜನ್ಮರಹಿತನಾದ ಭವಭಯಹಾರಿ ಶ್ರೀಹರಿಯ ಮೊಣಕಾಲುಗಳನ್ನು ಧ್ಯಾನಿಸಬೇಕು. ವಿಶ್ವವಿಧಾತೃಗಳಾದ ಬ್ರಹ್ಮದೇವರಿಗೂ ಜನನಿಯಾದ, ಸರ್ವದೇವವಂದಿತೆಯಾದ ಪದ್ಮನಯನೆ ಪದ್ಮಾದೇವಿಯು ತನ್ನ ತೊಡೆಗಳ ಮೇಲೆ ಇರಿಸಿಕೊಂಡು ತನ್ನ ಕಾಂತಿಯುತವಾದ ಕರಪಲ್ಲವಗಳಿಂದ ಸೇವಿಸುತ್ತಿರುವ ಪಾದಪದ್ಮಗಳನ್ನು ಹೃದಯದಲ್ಲಿ ಧ್ಯಾನಿಸಬೇಕು. ॥ ೨೩ ॥ ಅನಂತರ ಭಗವಂತನ ತೊಡೆಗಳ ಧ್ಯಾನಮಾಡಬೇಕು. ಅವು ಮಹಾಬಲಶಾಲಿಗಳಾಗಿದ್ದು, ವೇದಮೂರ್ತಿಯಾದ ಗರುಡನ ಹೆಗಲನ್ನು ಅಲಂಕರಿಸಿರುವ, ಅಗಸೆಯ ಹೂವಿನಂತೆ ನೀಲಿಯ ಬಣ್ಣದ ಕಾಂತಿಯಿಂದ ಕಂಗೊಳಿಸುತ್ತಿವೆ.

ಊರೂ ಸುಪರ್ಣಭುಜಯೋರಧಿ ಶೋಭಮಾನಾ-
ವೋಜೋನಿಧೀ ಅತಸಿಕಾಕುಸುಮಾವಭಾಸೌ ।
ವ್ಯಾಲಂಬಿಪೀತವರವಾಸಸಿ ವರ್ತಮಾನ-
ಕಾಂಚೀಕಲಾಪಪರಿರಂಭಿ ನಿತಂಬಬಿಂಬಮ್ ॥ ೨೪ ॥

ತರುವಾಯ ಕಣಕಾಲಿನವರೆಗೂ ಲಂಬಿಸಿರುವ ಪೀತಾಂಬರದಿಂದ ಮುಚ್ಚಲ್ಪಟ್ಟು ಅವುಗಳ ಮೇಲೆ ಧರಿಸಿರುವ ರತ್ನಖಚಿತವಾದ ನಡುದಾರ ಒಡ್ಯಾಣದ ಎಳೆಗಳನ್ನು ಆಲಿಂಗಿಸುತ್ತಿರುವ ಭಗವಂತನ ನಿತಂಬವನ್ನು ಧ್ಯಾನಿಸಬೇಕು. ॥ ೨೪ ॥

ನಾಭಿಹ್ರದಂ ಭುವನಕೋಶಗುಹೋದರಸ್ಥಂ
ಯತ್ರಾತ್ಮಯೋನಿಧಿಷಣಾಖಿಲಲೋಕಪದ್ಮಮ್ ।
ವ್ಯೂಢಂ ಹರಿನ್ಮಣಿವೃಷಸ್ತನಯೋರಮುಷ್ಯ
ಧ್ಯಾಯೇದ್ದ್ವಯಂ ವಿಶದಹಾರಮಯೂಖಗೌರಮ್ ॥ ೨೫ ॥

ಬಳಿಕ ದೇವದೇವನ ಉದರದಲ್ಲಿ ಬೆಳಗುತ್ತಿರುವ ಸುಳಿನಾಭಿಯ ಸರೋವರವನ್ನು ಧ್ಯಾನಿಸಬೇಕು. ಅದು ಸಮಸ್ತ ಲೋಕಗಳಿಗೂ ಆಶ್ರಯಸ್ಥಾನವು. ಸೃಷ್ಟಿಕರ್ತರಾದ ಬ್ರಹ್ಮದೇವರಿಗೆ ಆಧಾರವಾದ ಸರ್ವಲೋಕಮಯ ಕಮಲವು ಇಲ್ಲಿಯೇ ಪ್ರಕಟಗೊಂಡಿದೆಯಲ್ಲ! ಅನಂತರ ಮರಕತಮಣಿಗಳಂತೆ ಕಂಗೊಳಿಸುತ್ತಾ ವಕ್ಷಸ್ಥಳದಲ್ಲಿ ಅಲಂಕೃತವಾಗಿರುವ ಧವಳವಾದ ಹಾರಗಳ ಕಿರಣಗಳಿಂದ ಬೆಳ್ಳಗೆ ಪ್ರಕಾಶಿಸುತ್ತಿರುವ ಎರಡೂ ಸ್ತನಗಳನ್ನು ಧ್ಯಾನಿಸಬೇಕು. ॥ ೨೫ ॥ ಆಮೇಲೆ ಮಹಾಲಕ್ಷ್ಮಿಗೆ ನೆಲೆಯಾಗಿರುವ, ಎಲ್ಲ ಪುರುಷರ ಕಣ್ಮನಗಳಿಗೆ ಮುದವನ್ನೂ ನೀಡುವ ಪುರುಷೋತ್ತಮನ ವಕ್ಷಸ್ಥಳವನ್ನು ಧ್ಯಾನಿಸಬೇಕು.

ವಕ್ಷೋಽಧಿವಾಸಮೃಷಭಸ್ಯ ಮಹಾವಿಭೂತೇಃ
ಪುಂಸಾಂ ಮನೋನಯನನಿರ್ವೃತಿಮಾದಧಾನಮ್ ।
ಕಂಠಂ ಚ ಕೌಸ್ತುಭಮಣೇರಧಿಭೂಷಣಾರ್ಥಂ
ಕುರ್ಯಾನ್ಮನಸ್ಯ ಖಿಲಲೋಕನಮಸ್ಕೃತಸ್ಯ ॥ ೨೬ ॥

ಮತ್ತೆ ಮಣಿಗಳಿಗೆ ಭೂಷಣವಾಗಿರುವ ಕೌಸ್ತುಭಮಣಿಯನ್ನು ಧರಿಸಿಕೊಂಡಿರುವ ಸರ್ವಲೋಕ ನಮಸ್ಕೃತವಾದ ಶ್ರೀನಾರಾಯಣನ ಕೊರಳನ್ನು ಧ್ಯಾನಿಸಬೇಕು. ॥ ೨೬ ॥

ಬಾಹೂಂಶ್ಚ ಮಂದರಗಿರೇಃ ಪರಿವರ್ತನೇನ
ನಿರ್ಣಿಕ್ತಬಾಹುವಲಯಾನಧಿಲೋಕಪಾಲಾನ್ ।
ಸಂಚಿಂತಯೇದ್ದಶಶತಾರಮಸಹ್ಯತೇಜಃ
ಶಂಖಂ ಚ ತತ್ಕರಸರೋರುಹರಾಜಹಂಸಮ್ ॥ ೨೭ ॥

ತರುವಾಯ ಲೋಕಪಾಲಕರಿಗೆ ಆಶ್ರಯವಾಗಿರುವ ಭಗವಂತನ ನಾಲ್ಕು ಭುಜಗಳನ್ನೂ ಧ್ಯಾನಮಾಡಬೇಕು. ಅವುಗಳಲ್ಲಿ ಧರಿಸಿರುವ ಕಂಕಣಾದಿ ಉಜ್ವಲ ಆಭೂಷಣಗಳು ಸಮುದ್ರಮಂಥನದ ಸಮಯದಲ್ಲಿ ಮಂದರಾಚಲದ ಘರ್ಷಣೆಯಿಂದ ಸಾಣೆ ಹಿಡಿದಿವೆಯೋ ಎಂಬಂತೆ ಝುಗ-ಝುಗಿಸುತ್ತಿವೆ. ಹಾಗೆಯೇ ಸಹಿಸಲಸದಳವಾದ ತೇಜಸ್ಸಿನಿಂದ ಬೆಳಗುತ್ತಿರುವ, ಸಾವಿರ ಅಲಗುಗಳುಳ್ಳ ಸುದರ್ಶನ ಚಕ್ರವನ್ನೂ ಮತ್ತು ಕರಕಮಲದಲ್ಲಿ ರಾಜಹಂಸದಂತೆ ವಿರಾಜಿಸುತ್ತಿರುವ ಶ್ರೀಪಾಂಚಜನ್ಯಶಂಖವನ್ನೂ ಚಿಂತಿಸಬೇಕು. ॥ ೨೭ ॥

ಕೌಮೋದಕೀಂ ಭಗವತೋ ದಯಿತಾಂ ಸ್ಮರೇತ
ದಿಗ್ಧಾಮರಾತಿಭಟಶೋಣಿತಕರ್ದಮೇನ ।
ಮಾಲಾಂ ಮಧುವ್ರತವರೂಥಗಿರೋಪಘುಷ್ಟಾಂ
ಚೈತ್ಯಸ್ಯ ತತ್ತ್ವಮಮಲಂ ಮಣಿಮಸ್ಯ ಕಂಠೇ ॥ ೨೮ ॥

ಬಳಿಕ ಶತ್ರುವೀರರ ರಕ್ತದಿಂದ ತೊಯ್ದ ಪ್ರಭುವಿನ ಪ್ರಿಯವಾದ ಕೌಮೋದಕೀ ಗದೆಯನ್ನೂ, ದುಂಬಿಗಳ ಝೇಂಕಾರದಿಂದ ಕೂಡಿದ ವನಮಾಲೆಯನ್ನೂ ಮತ್ತು ಅವನ ಕೊರಳಿನಲ್ಲಿ ಶೋಭಾಯಮಾನವಾದ ಸಮಸ್ತ ಜೀವಗಳ ಪರಿಶುದ್ಧ ತತ್ತ್ವರೂಪವಾಗಿರುವ ಕೌಸ್ತುಭಮಣಿಯನ್ನು * ಧ್ಯಾನಿಸಬೇಕು. ॥ ೨೮ ॥

* 'ಆತ್ಮಾನಮಸ್ಯ ಜಗತೋ ನಿರ್ಲೇಪಮಗುಣಾಮಲಮ್ । ಬಿಭರ್ತಿ ಕೌಸ್ತುಭಮಣಿಂ ಸ್ವರೂಪಂ ಭಗವಾನ್ ಹರಿಃ ॥' ಎಂಬಂತೆ ಈ ಜಗತ್ತಿನ ನಿರ್ಲಿಪ್ತವೂ, ನಿರ್ಮಲವೂ, ಗುಣಾತೀತವೂ ಆದ ಆತ್ಮಸ್ವರೂಪವನ್ನೇ ಶ್ರೀಹರಿಯು ಕೌಸ್ತುಭಮಣಿಯ ರೂಪದಲ್ಲಿ ಧರಿಸಿರುವನು.
(ವಿಷ್ಣುಪುರಾಣ)

ಭೃತ್ಯಾನುಕಂಪಿತಧಿಯೇಹ ಗೃಹೀತಮೂರ್ತೇಃ
ಸಂಚಿಂತಯೇದ್ಭಗವತೋ ವದನಾರವಿಂದಮ್ ।
ಯದ್ವಿಸ್ಫುರನ್ಮಕರಕುಂಡಲವಲ್ಗಿತೇನ
ವಿದ್ಯೋತಿತಾಮಲಕಪೋಲಮುದಾರನಾಸಮ್ ॥ ೨೯ ॥

ಯಚ್ಛ್ರೀನಿಕೇತಮಲಿಭಿಃ ಪರಿಸೇವ್ಯಮಾನಂ
ಭೂತ್ಯಾ ಸ್ವಯಾ ಕುಟಿಲಕುಂತಲವೃಂದಜುಷ್ಟಮ್ ।
ಮೀನದ್ವಯಾಶ್ರಯಮಧಿಕ್ಷಿಪದಬ್ಜನೇತ್ರಂ
ಧ್ಯಾಯೇನ್ಮನೋಮಯಮತಂದ್ರಿತ ಉಲ್ಲಸದ್ಭ್ರು ॥ ೩೦ ॥

ತಸ್ಯಾವಲೋಕಮಧಿಕಂ ಕೃಪಯಾತಿಘೋರ-
ತಾಪತ್ರಯೋಪಶಮನಾಯ ನಿಸೃಷ್ಟಮಕ್ಣೋಃ ।
ಸ್ನಿಗ್ಧಸ್ಮಿತಾನುಗುಣಿತಂ ವಿಪುಲಪ್ರಸಾದಂ
ಧ್ಯಾಯೇಚ್ಚಿರಂ ವಿತತಭಾವನಯಾ ಗುಹಾಯಾಮ್ ॥ ೩೧ ॥

ಹಾಸಂ ಹರೇರವನತಾಖಿಲಲೋಕತೀವ್ರ-
ಶೋಕಾಶ್ರುಸಾಗರವಿಶೋಷಣಮತ್ಯುದಾರಮ್ ।
ಸಮ್ಮೋಹನಾಯ ರಚಿತಂ ನಿಜಮಾಯಯಾಸ್ಯ
ಭ್ರೂಮಂಡಲಂ ಮುನಿಕೃತೇ ಮಕರಧ್ವಜಸ್ಯ ॥ ೩೨ ॥

ಧ್ಯಾನಾಯನಂ ಪ್ರಹಸಿತಂ ಬಹುಲಾಧರೋಷ್ಠ-
ಭಾಸಾರುಣಾಯಿತತನುದ್ವಿಜಕುಂದಪಂಕ್ತಿ ।
ಧ್ಯಾಯೇತ್ಸ್ವದೇಹಕುಹರೇಽವಸಿತಸ್ಯ ವಿಷ್ಣೋ-
ರ್ಭಕ್ತ್ಯಾಽಽರ್ದ್ರಯಾರ್ಪಿತಮನಾ ನ ಪೃಥಗ್ದಿದೃಕ್ಷೇತ್ ॥ ೩೩ ॥

ಏವಂ ಹರೌ ಭಗವತಿ ಪ್ರತಿಲಬ್ಧಭಾವೋ
ಭಕ್ತ್ಯಾ ದ್ರವದ್ಧೃದಯ ಉತ್ಪುಲಕಃ ಪ್ರಮೋದಾತ್ ।
ಔತ್ಕಂಠ್ಯಬಾಷ್ಪಕಲಯಾ ಮುಹುರರ್ದ್ಯಮಾನ-
ಸ್ತಚ್ಚಾಪಿ ಚಿತ್ತಬಡಿಶಂ ಶನಕೈರ್ವಿಯುಂಕ್ತೇ ॥ ೩೪ ॥

ಅನಂತರ ಭಕ್ತರಾದ ಭೃತ್ಯರ ಮೇಲೆ ದಯೆಯನ್ನು ತೋರುವುದಕ್ಕಾಗಿಯೇ ಇಲ್ಲಿ ಸಾಕಾರರೂಪವನ್ನು ತಳೆದಿರುವ ಶ್ರೀಹರಿಯ ಮುಖಕಮಲವನ್ನು ಧ್ಯಾನಿಸಬೇಕು. ಆ ವದನಾರವಿಂದವು ಉದಾರವಾದ ಮೂಗಿನಿಂದಲೂ, ಹೊಳೆಯುತ್ತಿರುವ ಮಕರ ಕುಂಡಲಗಳು ಚಲಿಸುತ್ತಿರುವುದರಿಂದ ಅತಿಶಯವಾದ ಕಾಂತಿಯಿಂದ ಬೆಳಗುತ್ತಿರುವ ಸ್ವಚ್ಛವಾದ ಕಪೋಲಗಳಿಂದಲೂ ವಿಶೇಷವಾಗಿ ಕಂಗೊಳಿಸುತ್ತಿವೆ. ॥ ೨೯ ॥ ಕಪ್ಪು-ಕಪ್ಪಾದ ಗುಂಗುರು ಮುಂಗುರುಳುಗಳಿಂದ ಶೋಭಿಸುವ ಭಗವಂತನ ಮುಖ ಮಂಡಲವು ತನ್ನ ಕಾಂತಿಯಿಂದ-ದುಂಬಿಗಳಿಂದ ಸೇವಿತವಾದ ಕಮಲಕೋಶವನ್ನೂ ನಾಚಿಸುತ್ತಿದೆ ಮತ್ತು ಕಮಲದಂತೆ ವಿಶಾಲವಾಗಿ, ಚಂಚಲವಾಗಿ ಹೊಳೆಯುತ್ತಿರುವ ಆತನ ಕಣ್ಣುಗಳು ತನ್ನ ಕಾಂತಿಯಿಂದ ಕಮಲ ಕೋಶದ ಮೇಲೆ ಜಿಗಿಯುತ್ತಾ ಮಿನುಗುವ ಮೀನುಗಳ ಜೋಡಿಯನ್ನು ಸೋಲಿಸುತ್ತಿವೆ. ಹಾಗೆಯೇ ಉನ್ನತವಾದ ಹುಬ್ಬುಗಳ ಬಳ್ಳಿಯಿಂದಲೂ ಶೋಭಿಸುತ್ತಿರುವ ಭಗವಂತನ ಮನೋಹರವಾದ ಮುಖಾರವಿಂದವನ್ನು ಮನಸ್ಸಿನಲ್ಲಿ ಧರಿಸಿ ಆಲಸ್ಯವನ್ನು ತೊರೆದು ಧ್ಯಾನಿಸುತ್ತಾ ಇರಬೇಕು. ॥ ೩೦ ॥

ಹೃದಯಗುಹೆಯಲ್ಲಿ ಬಹಳಕಾಲದವರೆಗೆ ಭಕ್ತಿಭಾವದಿಂದ ಭಗವಂತನ ನೇತ್ರಗಳ ನೋಟವನ್ನು ಧ್ಯಾನಮಾಡಬೇಕು. ಆ ನೋಟವು ಕೃಪೆಯಿಂದಲೂ, ಪ್ರೇಮಪೂರ್ಣವಾದ ಮಂದಹಾಸದಿಂದಲೂ ಕ್ಷಣ-ಕ್ಷಣಕ್ಕೂ ವೃದ್ಧಿಯನ್ನು ಹೊಂದುತ್ತಾ ಅನುಗ್ರಹದ ಮಳೆಯನ್ನೇ ಸುರಿಸುತ್ತಿರುತ್ತದೆ ಹಾಗೂ ಭಕ್ತಜನರ ಅತಿಘೋರವಾದ ತ್ರಿತಾಪಗಳನ್ನು ಶಾಂತಗೊಳಿಸಲೆಂದೇ ಪ್ರಕಟವಾಗಿದೆ. ॥ ೩೧ ॥ ಅನಂತರ ಶರಣಾಗತರಾದ ಭಕ್ತರ ಅತಿ ತೀವ್ರವಾದ ಶೋಕದ ಕಣ್ಣೀರಿನ ಕಡಲನ್ನೇ ಬತ್ತಿಸುವಂತಹ ಅತ್ಯಂತ ಉದಾರವಾಗಿರುವ ಶ್ರೀಹರಿಯ ಹಾಸ್ಯದ ಹೊನಲನ್ನು ಧ್ಯಾನಿಸಬೇಕು. ಮುನಿಗಳ ಹಿತಕ್ಕಾಗಿಯೇ, ಮನ್ಮಥನಿಗೆ ಮೋಹವನ್ನುಂಟುಮಾಡುವುದಕ್ಕಾಗಿಯೇ ತನ್ನ ಮಾಯೆಯಿಂದ ಶ್ರೀಹರಿಯು ತನ್ನ ಭ್ರೂಮಂಡಲವನ್ನು ರಚಿಸಿರುವನು. ಅದನ್ನು ಧ್ಯಾನಿಸಬೇಕು. ॥ ೩೨ ॥ ಆಮೇಲೆ ಎಣೆಯಿಲ್ಲದ ಪ್ರೇಮಾತಿಶಯದ ಭಾವದಿಂದ ತನ್ನ ಹೃದಯದಲ್ಲಿ ವಿರಾಜಿಸುತ್ತಿರುವ ಶ್ರೀಹರಿಯ ನಗುವನ್ನು ಧ್ಯಾನಮಾಡಿರಿ. ಇದು ಧ್ಯಾನಕ್ಕೆ ಅತ್ಯಂತ ಯೋಗ್ಯವಾಗಿದೆ. ನಗುತ್ತಿರುವಾಗ ಮೇಲ್ತುಟಿ ಮತ್ತು ಕೆಳದುಟಿಗಳ ಬಲು ಕೆಂಪಾದ ಕಾಂತಿಯು ಬಾಯಿಯೊಳಗೆ ಶುಭ್ರಬಣ್ಣದ ಕುಂದಪುಷ್ಪದ ಮೊಗ್ಗಿನಂತೆ ಮೆರೆಯುತ್ತಿರುವ ಪುಟ್ಟಹಲ್ಲುಗಳ ಮೇಲೆ ಕೆಂಪು ಬಣ್ಣವು ಬಿದ್ದು ಬೆಳಗುತ್ತಿರುವಂತೆ ಧ್ಯಾನಿಸಬೇಕು. ಹೀಗೆ ಧ್ಯಾನದಲ್ಲಿ ತನ್ಮಯನಾಗಿ ಶ್ರೀಭಗವಂತನನ್ನು ಬಿಟ್ಟು ಬೇರಾವ ಪದಾರ್ಥವನ್ನು ನೋಡಲು ಬಯಸಬಾರದು. ॥ ೩೩ ॥

ಈ ರೀತಿಯ ಧ್ಯಾನದ ಅಭ್ಯಾಸದಿಂದ ಸಾಧಕನಿಗೆ ಶ್ರೀಹರಿಯಲ್ಲಿ ಪ್ರೇಮವು ಉಂಟಾಗುತ್ತದೆ. ಅವನ ಹೃದಯವು ಭಕ್ತಿಯಿಂದ ಕರಗಿಹೋಗುವುದು. ಶರೀರದಲ್ಲಿ ಆನಂದಾತಿರೇಕದಿಂದ ನವಿರೇಳುವುದು. ಉತ್ಕಂಠತೆಯಿಂದ ಉಂಟಾದ ಪ್ರೇಮಾಶ್ರುಗಳ ಪ್ರವಾಹದಿಂದ ಪದೇ-ಪದೇ ತನ್ನ ಶರೀರಕ್ಕೆ ಸ್ನಾನಮಾಡಿಸುವನು.

ಮುಕ್ತಾಶ್ರಯಂ ಯರ್ಹಿ ನಿರ್ವಿಷಯಂ ವಿರಕ್ತಂ
ನಿರ್ವಾಣಮೃಚ್ಛತಿ ಮನಃ ಸಹಸಾ ಯಥಾರ್ಚಿಃ ।
ಆತ್ಮಾನಮತ್ರ ಪುರುಷೋಽವ್ಯವಧಾನಮೇಕ-
ಮನ್ವೀಕ್ಷತೇ ಪ್ರತಿನಿವೃತ್ತಗುಣಪ್ರವಾಹಃ ॥ ೩೫ ॥

ಮತ್ತೆ ಮೀನನ್ನು ಹಿಡಿಯುವ ಗಾಳದಂತೆ ಶ್ರೀಹರಿಯನ್ನು ತನ್ನತ್ತ ಆಕರ್ಷಿಸಿಕೊಂಡು ಸಾಧನರೂಪವಾದ ಚಿತ್ತವನ್ನೂ ಕೂಡ ಮೆಲ್ಲ-ಮೆಲ್ಲನೆ ಧ್ಯೇಯವಸ್ತುವಿನಿಂದ ಅಗಲಿಸಿಬಿಡುತ್ತಾನೆ. ॥ ೩೪ ॥ ಎಣ್ಣೆಯು ಮುಗಿದಾಗ ದೀಪಶಿಖೆಯು ತನ್ನ ಕಾರಣರೂಪೀ ತೇಜಸ್ತತ್ತ್ವದಲ್ಲಿ ಲೀನವಾಗುವಂತೆ – ಆಶ್ರಯ, ವಿಷಯ ಮತ್ತು ರಾಗಗಳಿಂದ ರಹಿತವಾದ ಮನಸ್ಸು ಶಾಂತವಾಗಿ, ಬ್ರಹ್ಮಾಕಾರವಾಗಿ ಬಿಡುವುದು. ಈ ಸ್ಥಿತಿಯು ಉಂಟಾದ ಬಳಿಕ ಜೀವವು ಗುಣ ಪ್ರವಾಹರೂಪದಲ್ಲಿ ದೇಹಾದಿ ಉಪಾಧಿಗಳಿಂದ ನಿವೃತ್ತನಾದ ಕಾರಣ ಧ್ಯಾತಾ, ಧ್ಯಾನ, ಧ್ಯೇಯ ಮುಂತಾದ ವಿಭಾಗಗಳಿಂದ ರಹಿತವಾದ ಒಂದು ಅಖಂಡ ಪರಮಾತ್ಮನನ್ನು ಎಲ್ಲೆಡೆ ವ್ಯಾಪಿಸಿ ತುಂಬಿರುವುದನ್ನು ನೋಡುವನು. ॥ ೩೫ ॥

ಸೋಽಪ್ಯೇತಯಾ ಚರಮಯಾ ಮನಸೋ ನಿವೃತ್ತ್ಯಾ
ತಸ್ಮಿನ್ಮಹಿಮ್ನ್ಯವಸಿತಃ ಸುಖದುಃಖಬಾಹ್ಯೇ ।
ಹೇತುತ್ವಮಪ್ಯಸತಿ ಕರ್ತರಿ ದುಃಖಯೋರ್ಯತ್
ಸ್ವಾತ್ಮನ್ವಿಧತ್ತ ಉಪಲಬ್ಧ ಪರಾತ್ಮಕಾಷ್ಠಃ ॥ ೩೬ ॥

ಯೋಗಾಭ್ಯಾಸದಿಂದ ಉಂಟಾದ ಚಿತ್ತದ ಈ ಅವಿದ್ಯಾರಹಿತ ಲಯರೂಪೀ ನಿವೃತ್ತಿಯಿಂದ ತನ್ನ ಸುಖ-ದುಃಖರಹಿತವಾದ ಬ್ರಹ್ಮರೂಪವಾದ ಮಹಿಮೆಯಲ್ಲಿ ನೆಲೆಗೊಂಡು ಪರಮಾತ್ಮತತ್ತ್ವವನ್ನು ಯೋಗಿಯು ಸಾಕ್ಷಾತ್ಕರಿಸಿಕೊಳ್ಳುವನು. ಈ ಹಿಂದೆ ಅಜ್ಞಾನವಶದಿಂದ ಸುಖ-ದುಃಖಗಳ ಕರ್ತೃತ್ವವು ತನ್ನ ಸ್ವರೂಪದಲ್ಲೇ ಇದೆಯೆಂದು ತಿಳಿದುಕೊಂಡಿದ್ದ ಆತನು ಆ ಕರ್ತೃತ್ವವು ಅವಿದ್ಯೆಯಿಂದ ಉಂಟಾದ ಅಹಂಕಾರದಲ್ಲೇ ಇದೆಯೆಂದು ಅರಿತುಕೊಳ್ಳುವನು. ॥ ೩೬ ॥

ದೇಹಂ ಚ ತಂ ನ ಚರಮಃ ಸ್ಥಿತಮುತ್ಥಿತಂ ವಾ
ಸಿದ್ಧೋ ವಿಪಶ್ಯತಿ ಯತೋಽಧ್ಯಗಮತ್ಸ್ವರೂಪಮ್ ।
ದೈವಾದುಪೇತಮಥ ದೈವವಶಾದಪೇತಂ
ವಾಸೋ ಯಥಾ ಪರಿಕೃತಂ ಮದಿರಾಮದಾಂಧಃ ॥ ೩೭ ॥

ಮದ್ಯದ ಅಮಲಿನಲ್ಲಿರುವ ಮನುಷ್ಯನಿಗೆ ತನ್ನ ಸೊಂಟದಲ್ಲಿ ಸುತ್ತಿಕೊಂಡ ಬಟ್ಟೆಯು ಇರುವುದಾಗಲೀ, ಬಿದ್ದುಹೋದುದಾಗಲೀ ಯಾವುದೂ ತಿಳಿಯದಂತೆ – ಚರಮಾವಸ್ಥೆಯನ್ನು ಪಡೆದಿರುವ ಸಿದ್ಧ ಪುರುಷನಿಗೂ ತನ್ನ ದೇಹವು ಕುಳಿತಿರುವುದಾಗಲೀ, ಏಳುವುದಾಗಲೀ, ಅಥವಾ ದೈವವಶದಿಂದ ಎಲ್ಲಿಗಾದರೂ ಹೋಗುವುದಾಗಲೀ, ಅಲ್ಲಿಂದ ಹಿಂದಿರುಗುವುದಾಗಲೀ ಯಾವುದೇ ವಿಷಯದ ಅರಿವು ಇರುವುದಿಲ್ಲ, ಏಕೆಂದರೆ, ಅವನು ತನ್ನ ಪರಮಾನಂದಮಯ ಸ್ವರೂಪದಲ್ಲಿ ಸ್ಥಿತನಾಗಿರುತ್ತಾನೆ. ॥ ೩೭॥

ದೇಹೋಽಪಿ ದೈವವಶಗಃ ಖಲು ಕರ್ಮ ಯಾವತ್
ಸ್ವಾರಂಭಕಂ ಪ್ರತಿಸಮೀಕ್ಷತ ಏವ ಸಾಸುಃ ।
ತಂ ಸಪ್ರಪಂಚಮಧಿರೂಢಸಮಾಧಿಯೋಗಃ
ಸ್ವಾಪ್ನಂ ಪುನರ್ನ ಭಜತೇ ಪ್ರತಿಬುದ್ಧವಸ್ತುಃ ॥ ೩೮ ॥

ಅವನ ಶರೀರವಾದರೋ ಹಿಂದಿನ ಜನ್ಮದ ಸಂಸ್ಕಾರಗಳ ಅಧೀನವಾಗಿದೆ. ಆದ್ದರಿಂದ ಅವನ ಪ್ರಾರಬ್ಧಕರ್ಮವು ಉಳಿದಿರುವವರೆಗೂ ಅವನು ಇಂದ್ರಿಯಗಳ ಸಹಿತ ಜೀವಿಸಿರುತ್ತಾನೆ. ಆದರೆ ಯಾರಿಗೆ ಸಮಾಧಿವರೆಗಿನ ಯೋಗದ ಸ್ಥಿತಿಯು ಉಂಟಾಗಿದೆಯೋ, ಯಾರು ಪರಮಾತ್ಮತತ್ತ್ವವನ್ನು ಚೆನ್ನಾಗಿ ತಿಳಿದುಕೊಂಡಿರುವನೋ, ಆ ಸಿದ್ಧ ಪುರುಷನು ಪತ್ನೀ-ಪುತ್ರಾದಿಗಳ ಸಹಿತ ತನ್ನ ಶರೀರವನ್ನು ಸ್ವಪ್ನದಲ್ಲಿ ಕಂಡುಬರುವ ಶರೀರಗಳಂತೆ ಮತ್ತೆ ಸ್ವೀಕರಿಸುವುದಿಲ್ಲ – ಅವುಗಳಲ್ಲಿ ಅಹಂತೆ-ಮಮತೆ ಇಡುವುದಿಲ್ಲ. ॥ ೩೮ ॥

ಯಥಾ ಪುತ್ರಾಚ್ಚ ವಿತ್ತಾಚ್ಚ ಪೃಥಙ್ಮರ್ತ್ಯಃ ಪ್ರತೀಯತೇ ।
ಅಪ್ಯಾತ್ಮತ್ವೇನಾಭಿಮತಾದ್ದೇಹಾದೇಃ ಪುರುಷಸ್ತಥಾ ॥ ೩೯ ॥

ಸಾಧಾರಣ ಮನುಷ್ಯರಿಗೆ ಅತ್ಯಂತ ಸ್ನೇಹದ ಕಾರಣ ಪುತ್ರ, ಧನಾದಿಗಳಲ್ಲಿಯೂ ಆತ್ಮಬುದ್ಧಿ ಇರುತ್ತದೆ. ಆದರೆ ಸ್ವಲ್ಪ ವಿಚಾರ ಮಾಡುವುದರಿಂದಲೇ ಅವು ತನ್ನಿಂದ ಬೇರೆ ಎಂದು ಸ್ಪಷ್ಟವಾಗಿ ಕಂಡುಬರುತ್ತವೆ. ಹಾಗೆಯೇ ತನ್ನ ಆತ್ಮನೆಂದು ಭಾವಿಸಿದ ದೇಹವೇ ಮುಂತಾದವುಗಳಲ್ಲಿಯೂ 'ಅವು ತಾನಲ್ಲ' ಅವುಗಳಿಂದ ಬೇರೆಯಾದ, ಅವುಗಳಿಗೆ ಸಾಕ್ಷಿಯಾದ ಪುರುಷನು ಇದ್ದಾನೆ ಎಂದು ತಿಳಿದು ಬರುತ್ತದೆ. ॥ ೩೯ ॥

ಯಥೋಲ್ಮುಕಾದ್ವಿಸ್ಫುಲಿಂಗಾದ್ಧೂಮಾದ್ವಾಪಿ ಸ್ವಸಂಭವಾತ್ ।
ಅಪ್ಯಾತ್ಮತ್ವೇನಾಭಿಮತಾದ್ಯಥಾಗ್ನಿಃ ಪೃಥಗುಲ್ಮುಕಾತ್ ॥ ೪೦ ॥

ಭೂತೇಂದ್ರಿಯಾಂತಃಕರಣಾತ್ಪ್ರಧಾನಾಜ್ಜೀವಸಂಜ್ಞಿತಾತ್ ।
ಆತ್ಮಾ ತಥಾ ಪೃಥಗ್ದ್ರಷ್ಟಾ ಭಗವಾನ್ಬ್ರಹ್ಮಸಂಜ್ಞಿತಃ ॥ ೪೧ ॥

ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷೇತಾನನ್ಯಭಾವೇನ ಭೂತೇಷ್ವಿವ ತದಾತ್ಮತಾಮ್ ॥ ೪೨ ॥

ಸ್ವಯೋನಿಷು ಯಥಾ ಜ್ಯೋತಿರೇಕಂ ನಾನಾ ಪ್ರತೀಯತೇ ।
ಯೋನೀನಾಂ ಗುಣವೈಷಮ್ಯಾತ್ತಥಾಽಽತ್ಮಾ ಪ್ರಕೃತೌ ಸ್ಥಿತಃ ॥ ೪೩ ॥

ತಸ್ಮಾದಿಮಾಂ ಸ್ವಾಂ ಪ್ರಕೃತಿಂ ದೈವೀಂ ಸದಸದಾತ್ಮಿಕಾಮ್ ।
ದುರ್ವಿಭಾವ್ಯಾಂ ಪರಾಭಾವ್ಯ ಸ್ವರೂಪೇಣಾವತಿಷ್ಠತೇ ॥ ೪೪ ॥

ಉರಿಯುತ್ತಿರುವ ಸೌದೆಗಳಿಂದಲೂ, ಕಿಡಿಗಳಿಂದಲೂ ಮತ್ತು ತನ್ನಿಂದಲೇ ಉಂಟಾದ ಹೊಗೆಯಿಂದಲೂ ಹಾಗೂ ಅಗ್ನಿರೂಪವಾಗಿ ತಿಳಿಯಲ್ಪಡುವ ಉರಿಯುವ ಕಟ್ಟಿಗೆಯಿಂದಲೂ ಅಗ್ನಿಯು ವಾಸ್ತವವಾಗಿ ಬೇರೆಯೇ ಆಗಿರುವಂತೆ – ಭೂತ, ಇಂದ್ರಿಯ ಮತ್ತು ಅಂತಃಕರಣದಿಂದ ಅವನ ಸಾಕ್ಷಿ ಆತ್ಮನು ಬೇರೆಯೇ ಆಗಿದ್ದಾನೆ ಹಾಗೂ ಜೀವನೆಂದು ಕರೆಯಲ್ಪಡುವ ಆ ಆತ್ಮನಿಗಿಂತಲೂ ಬ್ರಹ್ಮವು ಭಿನ್ನವಾದುದು ಮತ್ತು ಪ್ರಕೃತಿಗೆ ಸಂಚಾಲಕನಾಗಿರುವ ಪುರುಷೋತ್ತಮನು ಪ್ರಕೃತಿಗಿಂತ ಭಿನ್ನನಾಗಿರುವನು. ॥ ೪೦-೪೧ ॥ ದೇಹದೃಷ್ಟಿಯಿಂದ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜ ಎಂಬ ನಾಲ್ಕು ಪ್ರಕಾರದ ಪ್ರಾಣಿಗಳು ಪಂಚಭೂತಮಾತ್ರವಾಗಿವೆ. ಹಾಗೆಯೇ ಸಮಸ್ತ ಜೀವರಲ್ಲಿ ಆತ್ಮನನ್ನು ಮತ್ತು ಆತ್ಮನಲ್ಲಿ ಸಮಸ್ತ ಜೀವರನ್ನು ಅನನ್ಯ ಭಾವದಿಂದ ಅನುಗತನೆಂದು ನೋಡಬೇಕು. ॥ ೪೨ ॥ ಒಂದೇ ಅಗ್ನಿಯು ತನ್ನ ಬೇರೆ-ಬೇರೆ ಆಶ್ರಯಗಳಲ್ಲಿ ಅವುಗಳ ಭಿನ್ನತೆಯಿಂದಾಗಿ ನಾನಾ ಆಕಾರದಿಂದ ಕಂಡು ಬರುವಂತೆ, ದೇವ-ಮನುಷ್ಯಾದಿ ಶರೀರಗಳಲ್ಲಿ ಇರುವ ಒಂದೇ ಆತ್ಮನು ತನ್ನ ಆಶ್ರಯಗಳ ಗುಣ-ಭೇದದಿಂದಾಗಿ ಬೇರೆ-ಬೇರೆಯಾಗಿ ಕಂಡುಬರುತ್ತಾನೆ. ॥ ೪೩ ॥ ಆದ್ದರಿಂದ ಭಗವಂತನ ಭಕ್ತನು ಜೀವದ ಸ್ವರೂಪವನ್ನು ಮರೆಸುವ ಕಾರ್ಯಕಾರಣ ರೂಪದಿಂದ ಪರಿಣಾಮವನ್ನು ಹೊಂದಿರುವ ಭಗವಂತನ ಈ ಅಚಿಂತ್ಯಶಕ್ತಿಯಾದ ಮಾಯೆಯನ್ನು ಭಗವಂತನ ಕೃಪೆಯಿಂದಲೇ ಗೆದ್ದು ತನ್ನ ನಿಜವಾದ ಸ್ವರೂಪದಲ್ಲಿ, ಬ್ರಹ್ಮರೂಪದಲ್ಲಿ ನೆಲೆಗೊಳ್ಳುವನು. ॥ ೪೪ ॥

***ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೨೮ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಕಾಪಿಲೇಯೇ ಸಾಧನಾನುಷ್ಠಾನಂ ನಾಮಾಷ್ಟಾವಿಂಶೋಽಧ್ಯಾಯಃ ॥ ೨೮ ॥**

# ಇಪ್ಪತ್ತೊಂಭತ್ತನೆಯ ಅಧ್ಯಾಯ

## ಭಕ್ತಿಯೋಗದ ಮರ್ಮ ಮತ್ತು ಕಾಲದ ಮಹಿಮೆ

*ದೇವಹೂತಿರುವಾಚ*

ಲಕ್ಷಣಂ ಮಹದಾದೀನಾಂ ಪ್ರಕೃತೇಃ ಪುರುಷಸ್ಯ ಚ ।
ಸ್ವರೂಪಂ ಲಕ್ಷ್ಯತೇಽಮೀಷಾಂ ಯೇನ ತತ್ಪಾರಮಾರ್ಥಿಕಮ್ ॥ ೧ ॥

ಯಥಾ ಸಾಂಖ್ಯೇಷು ಕಥಿತಂ ಯನ್ಮೂಲಂ ತತ್ಪ್ರಚಕ್ಷತೇ ।
ಭಕ್ತಿಯೋಗಸ್ಯ ಮೇ ಮಾರ್ಗಂ ಬ್ರೂಹಿ ವಿಸ್ತರಶಃ ಪ್ರಭೋ ॥ ೨ ॥

ವಿರಾಗೋ ಯೇನ ಪುರುಷೋ ಭಗವನ್ಸರ್ವತೋ ಭವೇತ್ ।
ಆಚಕ್ಷ್ವ ಜೀವಲೋಕಸ್ಯ ವಿವಿಧಾ ಮಮ ಸಂಸೃತೀಃ ॥ ೩ ॥

**ದೇವಹೂತಿಯು ಕೇಳಿದಳು –** ಪ್ರಭುವೇ! ಸಾಂಖ್ಯಶಾಸ್ತ್ರದಲ್ಲಿ ಪ್ರಕೃತಿ, ಪುರುಷ ಮತ್ತು ಮಹತ್ತತ್ತ್ವಾದಿ ಲಕ್ಷಣಗಳು ಇರುವಂತೆ, ಹಾಗೂ ಯಾವುದರ ಮೂಲಕ ಅವುಗಳ ವಾಸ್ತವಿಕ ಸ್ವರೂಪವನ್ನು ಬೇರೆ-ಬೇರೆ ತಿಳಿಯಲಾಗುತ್ತದೋ ಮತ್ತು ಭಕ್ತಿಯೋಗವನ್ನೂ, ಅದರ ಪ್ರಯೋಜನವನ್ನೂ ಹೇಳಲಾಗಿದೆಯೋ ಅದೆಲ್ಲವನ್ನು ನೀನು ನನಗೆ ತಿಳಿಸಿದೆ. ಈಗ ದಯಮಾಡಿ ಭಕ್ತಿಯೋಗದ ಮಾರ್ಗವನ್ನು ವಿಸ್ತಾರವಾಗಿ ನನಗೆ ಹೇಳುವವನಾಗು. ॥ ೧-೨ ॥ ಇದಲ್ಲದೆ ಜೀವರ ಜನ್ಮ-ಮರಣರೂಪವಾದ ಅನೇಕ ವಿಧವಾದ ಗತಿಗಳನ್ನೂ ವರ್ಣಿಸು. ಅವುಗಳನ್ನು ಕೇಳುವುದರಿಂದ ಜೀವನಿಗೆ ಎಲ್ಲ ವಿಧದ ವಸ್ತುಗಳಲ್ಲಿ ವೈರಾಗ್ಯ ಉಂಟಾಗುತ್ತದೆ. ॥ ೩ ॥

ಕಾಲಸ್ಯೇಶ್ವರರೂಪಸ್ಯ ಪರೇಷಾಂ ಚ ಪರಸ್ಯ ತೇ ।
ಸ್ವರೂಪಂ ಬತ ಕುರ್ವಂತಿ ಯದ್ಧೇತೋಃ ಕುಶಲಂ ಜನಾಃ ॥ ೪ ॥

ಲೋಕಸ್ಯ ಮಿಥ್ಯಾಭಿಮತೇರಚಕ್ಷುಷ-
ಶ್ಚಿರಂ ಪ್ರಸುಪ್ತಸ್ಯ ತಮಸ್ಯನಾಶ್ರಯೇ ।
ಶ್ರಾಂತಸ್ಯ ಕರ್ಮಸ್ವನುವಿದ್ಧಯಾ ಧಿಯಾ
ತ್ವಮಾವಿರಾಸೀಃ ಕಿಲ ಯೋಗಭಾಸ್ಕರಃ ॥ ೫ ॥

*ಮೈತ್ರೇಯ ಉವಾಚ*

ಇತಿ ಮಾತುರ್ವಚಃ ಶ್ಲಕ್ಷ್ಣಂ ಪ್ರತಿನಂದ್ಯ ಮಹಾಮುನಿಃ ।
ಆಬಭಾಷೇ ಕುರುಶ್ರೇಷ್ಠ ಪ್ರೀತಸ್ತಾಂ ಕರುಣಾರ್ದಿತಃ ॥ ೬ ॥

*ಶ್ರೀಭಗವಾನುವಾಚ*

ಭಕ್ತಿಯೋಗೋ ಬಹುವಿಧೋ ಮಾರ್ಗೈರ್ಭಾಮಿನಿ ಭಾವ್ಯತೇ ।
ಸ್ವಭಾವಗುಣಮಾರ್ಗೇಣ ಪುಂಸಾಂ ಭಾವೋ ವಿಭಿದ್ಯತೇ ॥ ೭ ॥

ಅಭಿಸಂಧಾಯ ಯೋ ಹಿಂಸಾಂ ದಂಭಂ ಮಾತ್ಸರ್ಯಮೇವ ವಾ।
ಸಂರಂಭೀ ಭಿನ್ನದೃಗ್ಭಾವಂ ಮಯಿ ಕುರ್ಯಾತ್ಸತಾಮಸಃ ॥ ೮ ॥

ವಿಷಯಾನಭಿಸಂಧಾಯ ಯಶ ಐಶ್ವರ್ಯಮೇವ ವಾ ।
ಅರ್ಚಾದಾವರ್ಚಯೇದ್ಯೋ ಮಾಂ ಪೃಥಗ್ಭಾವಃ ಸ ರಾಜಸಃ ॥ ೯ ॥

ಕರ್ಮನಿರ್ಹಾರಮುದ್ದಿಶ್ಯ ಪರಸ್ಮಿನ್ವಾ ತದರ್ಪಣಮ್ ।
ಯಜೇದ್ಯಷ್ಟವ್ಯಮಿತಿ ವಾ ಪೃಥಗ್ಭಾವಃ ಸ ಸಾತ್ತ್ವಿಕಃ ॥ ೧೦ ॥

ಮದ್ಗುಣಶ್ರುತಿಮಾತ್ರೇಣ ಮಯಿ ಸರ್ವಗುಹಾಶಯೇ ।
ಮನೋಗತಿರವಿಚ್ಛಿನ್ನಾ ಯಥಾ ಗಂಗಾಂಭಸೋಽಂಬುಧೌ ॥ ೧೧ ॥

ಲಕ್ಷಣಂ ಭಕ್ತಿಯೋಗಸ್ಯ ನಿರ್ಗುಣಸ್ಯ ಹ್ಯುದಾಹೃತಮ್ ।
ಅಹೈತುಕ್ಯವ್ಯವಹಿತಾ ಯಾ ಭಕ್ತಿಃ ಪುರುಷೋತ್ತಮೇ ॥ ೧೨ ॥

ಸಾಲೋಕ್ಯಸಾರ್ಷ್ಟಿಸಾಮೀಪ್ಯಸಾರೂಪ್ಯೈಕತ್ವಮಪ್ಯುತ ।
ದೀಯಮಾನಂ ನ ಗೃಹ್ಣಂತಿ ವಿನಾ ಮತ್ಸೇವನಂ ಜನಾಃ ॥ ೧೩ ॥

ಯಾವುದರ ಭಯದಿಂದ ಜನರು ಶುಭ ಕರ್ಮಗಳಲ್ಲಿ ಪ್ರವೃತ್ತರಾಗುತ್ತಾರೋ ಮತ್ತು ಯಾವುದು ಬ್ರಹ್ಮಾದಿಗಳಿಗೂ ಶಾಸನ ಮಾಡುವಂತಹುದೋ ಆ ಸರ್ವಸಮರ್ಥ ಕಾಲದ ಸ್ವರೂಪವನ್ನೂ ಕೂಡ ನೀನು ನನಗೆ ಹೇಳು. ॥ ೪ ॥ ಜ್ಞಾನದೃಷ್ಟಿಯು ಲುಪ್ತವಾದ ಕಾರಣ ದೇಹಾದಿ ಮಿಥ್ಯಾ ವಸ್ತುಗಳಲ್ಲಿ ಯಾರಿಗೆ ಆತ್ಮಾಭಿಮಾನ ಉಂಟಾಗಿದೆಯೋ, ಹಾಗೂ ಬುದ್ಧಿಯು ಕರ್ಮಾಸಕ್ತವಾಗಿರುವ ಕಾರಣ ಅತ್ಯಂತ ಶ್ರಮಪಡುತ್ತಾ ಯಾರು ಬಹಳ ಕಾಲದಿಂದ ಅಪಾರ ಅಂಧಕಾರಮಯ ಸಂಸಾರದಲ್ಲಿ ಮಲಗಿರುವರೋ ಅಂತಹವರನ್ನು ಎಚ್ಚರಿಸಲು ಯೋಗಭಾಸ್ಕರನಂತೆ ನೀನು ಅವತರಿಸಿರುವೆ. ॥ ೫ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಕುರುಶ್ರೇಷ್ಠನಾದ ವಿದುರನೇ! ತಾಯಿಯ ಆ ಚೆನ್ನುಡಿಯನ್ನು ಕೇಳಿ ಕಪಿಲ ಮಹಾಮುನಿಗಳು ಆಕೆಯನ್ನು ಪ್ರಶಂಸಿಸುತ್ತಾ, ಜೀವರ ಕುರಿತು ದಯೆಯಿಂದ ದ್ರವೀಭೂತರಾಗಿ ಹೆಚ್ಚಾದ ಪ್ರಸನ್ನತೆಯಿಂದ ಅವಳಲ್ಲಿ ಹೇಳತೊಡಗಿದರು. ॥ ೬ ॥

**ಶ್ರೀಭಗವಂತನು ಹೇಳಿದನು** – ಅಮ್ಮಾ! ಸಾಧಕರ ಭಾವಕ್ಕನುಸಾರವಾಗಿ ಭಕ್ತಿಯೋಗವು ಅನೇಕ ಪ್ರಕಾರವಾಗಿ ಪ್ರಕಾಶಿಸುತ್ತದೆ. ಏಕೆಂದರೆ, ಸ್ವಭಾವ ಮತ್ತು ಗುಣಗಳ ಭೇದದಿಂದ ಮನುಷ್ಯರ ಭಾವದಲ್ಲಿಯೂ ವಿಭಿನ್ನತೆ ಬಂದುಬಿಡುತ್ತದೆ. ॥ ೭ ॥ ಭೇದಬುದ್ಧಿಯಿಂದ ಕೂಡಿ, ಹೃದಯದಲ್ಲಿ ಹಿಂಸೆ, ದಂಭ ಅಥವಾ ಮಾತ್ಸರ್ಯ ಭಾವವನ್ನಿರಿಸಿಕೊಂಡು ನನ್ನಲ್ಲಿ ಭಕ್ತಿಯನ್ನಿಡುವವನು ನನ್ನ ತಾಮಸ ಭಕ್ತನಾಗಿದ್ದಾನೆ. ॥ ೮ ॥ ವಿಷಯಸುಖಕ್ಕಾಗಿಯೇ, ಯಶಸ್ಸು ಐಶ್ವರ್ಯದ ಕಾಮನೆಯಿಂದಲೇ ಪ್ರತಿಮಾದಿಗಳಲ್ಲಿ ಭೇದಭಾವದಿಂದ ನನ್ನನ್ನು ಪೂಜಿಸುವವನು ರಾಜಸ ಭಕ್ತನಾಗಿದ್ದಾನೆ. ॥ ೯ ॥ ಪಾಪಗಳನ್ನು ಕಳಕೊಳ್ಳುವುದಕ್ಕಾಗಿಯೇ, ಪರಮಾತ್ಮನಿಗೆ ಅರ್ಪಿಸಲೋಸುಗವೇ ಮತ್ತು ಪೂಜೆಯು ಕರ್ತವ್ಯವಾಗಿದೆ ಎಂಬ ಬುದ್ಧಿಯಿಂದ ಭೇದಭಾವದಿಂದ ನನ್ನನ್ನು ಪೂಜಿಸುವವನು ಸಾತ್ತ್ವಿಕ ಭಕ್ತನೆನಿಸುವನು. ॥ ೧೦ ॥ ಗಂಗಾಪ್ರವಾಹವು ಅಖಂಡವಾಗಿ ಸಮುದ್ರಕಡೆಗೆ ಹರಿಯುವಂತೆಯೇ ನನ್ನ ಗುಣಗಳನ್ನು ಶ್ರವಣಮಾತ್ರದಿಂದಲೇ ಮನಸ್ಸಿನ ಗತಿಯು ತೈಲಧಾರೆಯಂತೆ ಅವಿಚ್ಛಿನ್ನ ರೂಪದಿಂದ ಸರ್ವಾಂತರ್ಯಾಮಿಯಾದ ನನ್ನ ಕಡೆಗೆ ಹರಿಯುವುದು ಹಾಗೂ ಪುರುಷೋತ್ತಮನಾದ ನನ್ನಲ್ಲಿ ನಿಷ್ಕಾಮವಾದ ಅನನ್ಯಪ್ರೇಮ ಉಂಟಾಗುವುದು – ನಿರ್ಗುಣಭಕ್ತಿಯ ಲಕ್ಷಣವೆಂದು ಹೇಳಲಾಗಿದೆ. ॥ ೧೧-೧೨ ॥ ಇಂತಹ ನಿಷ್ಕಾಮಭಕ್ತರು ನನ್ನ ಸೇವೆಯನ್ನು ಬಿಟ್ಟು ನಾನು ಕೊಟ್ಟರೂ * ಸಾಲೋಕ್ಯ,[೧] ಸಾರ್ಷ್ಟಿ,[೨] ಸಾಮೀಪ್ಯ,[೩] ಸಾರೂಪ್ಯ[೪] ಮತ್ತು ಸಾಯುಜ್ಯ[೫] ಮುಕ್ತಿಗಳನ್ನೂ ಕೂಡ ಸ್ವೀಕರಿಸುವುದಿಲ್ಲ. ॥ ೧೩ ॥

ಭಗವಂತನ ಸೇವೆಗಾಗಿಯೇ ಮುಕ್ತಿಯನ್ನು ತಿರಸ್ಕರಿಸುವಂತಹ ಈ ಭಕ್ತಿಯೋಗವೇ ಪರಮ ಪುರುಷಾರ್ಥ ಅಥವಾ ಸಾಧ್ಯವೆಂದು ಹೇಳಲಾಗಿದೆ. ಇದರ ಮೂಲಕ ಮನುಷ್ಯನು ಮೂರೂ

* [೧] – ಭಗವಂತನ ನಿತ್ಯಧಾಮದಲ್ಲಿ ವಾಸಿಸುವುದು, [೨] – ಭಗವಂತನಂತೆಯೇ ಐಶ್ವರ್ಯವನ್ನು ಹೊಂದುವಿಕೆ, [೩] – ಸದಾ ಭಗವಂತನ ಸಮೀಪದಲ್ಲಿಯೇ ಇರುವುದು, [೪] – ಭಗವಂತನಂತೆಯೇ ರೂಪವನ್ನು ಹೊಂದುವಿಕೆ, [೫] – ಭಗವಂತನ ವಿಗ್ರಹದಲ್ಲಿ ಸೇರಿ ಹೋಗುವುದು. ಅವನೊಂದಿಗೆ ಒಂದಾಗುವುದು. ಅಥವಾ ಬ್ರಹ್ಮರೂಪನಾಗುವುದು.

ಸ ಏವ ಭಕ್ತಿಯೋಗಾಖ್ಯ ಆತ್ಯಂತಿಕ ಉದಾಹೃತಃ ।
ಯೇನಾತಿವ್ರಜ್ಯ ತ್ರಿಗುಣಂ ಮದ್ಭಾವಾಯೋಪಪದ್ಯತೇ ॥ ೧೪ ॥

ನಿಷೇವಿತೇನಾನಿಮಿತ್ತೇನ ಸ್ವಧರ್ಮೇಣ ಮಹೀಯಸಾ ।
ಕ್ರಿಯಾಯೋಗೇನ ಶಸ್ತೇನ ನಾತಿಹಿಂಸ್ರೇಣ ನಿತ್ಯಶಃ ॥ ೧೫ ॥

ಮದ್ಧಿಷ್ಣ್ಯದರ್ಶನಸ್ಪರ್ಶಪೂಜಾಸ್ತುತ್ಯಭಿವಂದನೈಃ ।
ಭೂತೇಷು ಮದ್ಭಾವನಯಾ ಸತ್ತ್ವೇನಾಸಂಗಮೇನ ಚ ॥ ೧೬ ॥

ಮಹತಾಂ ಬಹುಮಾನೇನ ದೀನಾನಾಮನುಕಂಪಯಾ ।
ಮೈತ್ರ್ಯಾ ಚೈವಾತ್ಮತುಲ್ಯೇಷು ಯಮೇನ ನಿಯಮೇನ ಚ ॥ ೧೭ ॥

ಆಧ್ಯಾತ್ಮಿಕಾನುಶ್ರವಣಾನ್ನಾಮಸಂಕೀರ್ತನಾಚ್ಚ ಮೇ ।
ಆರ್ಜವೇನಾರ್ಯಸಂಗೇನ ನಿರಹಂಕ್ರಿಯಯಾ ತಥಾ ॥ ೧೮ ॥

ಮದ್ಧರ್ಮಣೋ ಗುಣೈರೇತೈಃ ಪರಿಸಂಶುದ್ಧ ಆಶಯಃ ।
ಪುರುಷಸ್ಯಾಂಜಸಾಭ್ಯೇತಿ ಶ್ರುತಮಾತ್ರಗುಣಂ ಹಿ ಮಾಮ್ ॥ ೧೯ ॥

ಯಥಾ ವಾತರಥೋ ಘ್ರಾಣಮಾವೃಂಕ್ತೇ ಗಂಧ ಆಶಯಾತ್ ।
ಏವಂ ಯೋಗರತಂ ಚೇತ ಆತ್ಮಾನಮವಿಕಾರಿ ಯತ್ ॥ ೨೦ ॥

ಅಹಂ ಸರ್ವೇಷು ಭೂತೇಷು ಭೂತಾತ್ಮಾವಸ್ಥಿತಃ ಸದಾ ।
ತಮವಜ್ಞಾಯ ಮಾಂ ಮರ್ತ್ಯಃ ಕುರುತೇಽರ್ಚಾವಿಡಂಬನಮ್ ॥ ೨೧ ॥

ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಮ್ ।
ಹಿತ್ವಾರ್ಚಾಂ ಭಜತೇ ಮೌಢ್ಯಾದ್ಭಸ್ಮನ್ಯೇವ ಜುಹೋತಿ ಸಃ ॥ ೨೨ ॥

ದ್ವಿಷತಃ ಪರಕಾಯೇ ಮಾಂ ಮಾನಿನೋ ಭಿನ್ನದರ್ಶಿನಃ ।
ಭೂತೇಷು ಬದ್ಧವೈರಸ್ಯ ನ ಮನಃ ಶಾಂತಿ ಮೃಚ್ಛತಿ ॥ ೨೩ ॥

ಅಹಮುಚ್ಚಾವಚೈರ್ದ್ರವ್ಯೈಃ ಕ್ರಿಯಯೋತ್ಪನ್ನಯಾನಘೇ ।
ನೈವ ತುಷ್ಯೇಽರ್ಚಿತೋಽರ್ಚಾಯಾಂ ಭೂತಗ್ರಾಮಾವಮಾನಿನಃ ॥ ೨೪ ॥

ಅರ್ಚಾದಾವರ್ಚಯೇತ್ತಾವದೀಶ್ವರಂ ಮಾಂ ಸ್ವಕರ್ಮಕೃತ್ ।
ಯಾವನ್ನ ವೇದ ಸ್ವಹೃದಿ ಸರ್ವಭೂತೇಷ್ವವಸ್ಥಿತಮ್ ॥ ೨೫ ॥

ಆತ್ಮನಶ್ಚ ಪರಸ್ಯಾಪಿ ಯಃ ಕರೋತ್ಯಂತರೋದರಮ್ ।
ತಸ್ಯ ಭಿನ್ನದೃಶೋ ಮೃತ್ಯುರ್ವಿದಧೇ ಭಯಮುಲ್ಬಣಮ್ ॥ ೨೬ ॥

ಗುಣಗಳನ್ನು ದಾಟಿ ನನ್ನ ಭಾವವನ್ನು ಅಂದರೆ ನನ್ನ ಪ್ರೇಮರೂಪೀ ಅಪ್ರಾಕೃತ ಸ್ವರೂಪವನ್ನು ಪಡೆದುಕೊಳ್ಳುವನು. ॥ ೧೪ ॥

ನಿಷ್ಕಾಮಭಾವದಿಂದ ಶ್ರದ್ಧಾಪೂರ್ವಕ ತನ್ನ ನಿತ್ಯ-ನೈಮಿತ್ತಿಕ ಕರ್ತವ್ಯಗಳನ್ನು ಪಾಲಿಸುತ್ತಾ ಪ್ರತಿದಿನವೂ ಹಿಂಸಾರಹಿತ ಉತ್ತಮ ಕ್ರಿಯಾಯೋಗವನ್ನು ಅನುಷ್ಠಾನ ಮಾಡುವುದು ; ನನ್ನ ಪ್ರತಿಮೆಯನ್ನು ದರ್ಶನ, ಸ್ಪರ್ಶ, ಪೂಜೆ, ಸ್ತುತಿ, ವಂದನೆ ಮಾಡುವುದು; ಸರ್ವಪ್ರಾಣಿಗಳಲ್ಲಿ ನನ್ನನ್ನು ಭಾವಿಸುವುದು ; ಧೈರ್ಯ ಮತ್ತು ವೈರಾಗ್ಯವನ್ನು ಅವಲಂಬಿಸುವುದು; ಮಹಾಪುರುಷರನ್ನು ಗೌರವಿಸುವುದು ; ದೀನರಲ್ಲಿ ದಯೆ, ಸಮಾನರಲ್ಲಿ ಮಿತ್ರತೆಯ ವ್ಯವಹಾರಮಾಡುವುದು ; ಯಮ-ನಿಯಮಗಳನ್ನು ಪಾಲಿಸುವುದು; ಅಧ್ಯಾತ್ಮಶಾಸ್ತ್ರಗಳ ಶ್ರವಣ ಮತ್ತು ನನ್ನ ನಾಮಗಳನ್ನು ಗಟ್ಟಿಯಾಗಿ ಕೀರ್ತಿಸುವುದರಿಂದ; ಮನಸ್ಸಿನ ಸರಳತೆ, ಸತ್ಪುರುಷರ ಸಂಗ, ಅಹಂಕಾರದ ತ್ಯಾಗದಿಂದ ನನ್ನ ಧರ್ಮಗಳನ್ನು (ಭಾಗವತ ಧರ್ಮಗಳನ್ನು) ಅನುಷ್ಠಾನ ಮಾಡುವಂತಹ ಭಕ್ತಜನರ ಚಿತ್ತವು ಅತ್ಯಂತ ಶುದ್ಧವಾಗಿ ನನ್ನ ಗುಣಗಳ ಶ್ರವಣಮಾತ್ರದಿಂದ ಆಯಾಸವಿಲ್ಲದೆಯೇ ನನ್ನಲ್ಲಿ ತೊಡಗುತ್ತದೆ. ॥ ೧೫-೧೯ ॥

ಸುಗಂಧವು ತನಗೆ ಆಶ್ರಯವಾದ ಪುಷ್ಪದಿಂದ ಗಾಳಿಯೆಂಬ ಯಾನದ ಮೂಲಕ ಮೂಗನ್ನು ತಲುಪುವಂತೆಯೇ, ನಿರ್ವಿಕಾರಿಯಾದ ಚಿತ್ತವು ಭಕ್ತಿಯೋಗದಲ್ಲಿ ತತ್ಪರವಾಗಿ ಪರಮಾತ್ಮನನ್ನು ಸೇರಿಕೊಳ್ಳುತ್ತದೆ. ॥ ೨೦॥ ನಾನು ಆತ್ಮರೂಪದಿಂದ ಸದಾಕಾಲ ಎಲ್ಲ ಜೀವರಲ್ಲಿ ಇದ್ದೇನೆ. ಅದಕ್ಕಾಗಿ ಸರ್ವಭೂತಗಳಲ್ಲಿರುವ ಪರಮಾತ್ಮನಾದ ನನ್ನನ್ನು ಅನಾದರಿಸಿ ಕೇವಲ ಪ್ರತಿಮೆಯಲ್ಲೇ ನನ್ನನ್ನು ಪೂಜಿಸುವವರ ಪೂಜೆಯು ಕೇವಲ ವಿಡಂಬನೆಯಾಗಿದೆ. ॥ ೨೧ ॥ ಎಲ್ಲರ ಆತ್ಮಾ ಪರಮೇಶ್ವರನಾದ ನಾನು ಎಲ್ಲ ಪ್ರಾಣಿಗಳಲ್ಲಿಯೂ ಇದ್ದೇನೆ. ಇಂತಹ ಸ್ಥಿತಿಯಲ್ಲಿ ಮೋಹವಶರಾಗಿ ನನ್ನನ್ನು ಉಪೇಕ್ಷಿಸಿ ಕೇವಲ ಪ್ರತಿಮೆಯ ಪೂಜೆಯಲ್ಲೇ ತೊಡಗಿರುವವರು ಬೂದಿಯಲ್ಲಿ ಹೋಮ ಮಾಡಿದಂತೆ ಆಗುವುದು. ॥ ೨೨ ॥ ಭೇದದೃಷ್ಟಿಯುಳ್ಳವನು ಅಭಿಮಾನದಿಂದ ಬೇರೆ ಜೀವರೊಂದಿಗೆ ವೈರಕಟ್ಟಿಕೊಳ್ಳುವನು. ಹೀಗೆ ಅವುಗಳ ದೇಹದಲ್ಲಿ ಇರುವ ಆತ್ಮನಾದ ನನ್ನನ್ನು ದ್ವೇಷಿಸುತ್ತಾನೆ. ಇಂತಹವರ ಮನಸ್ಸಿಗೆ ಎಂದಿಗೂ ಶಾಂತಿಯು ದೊರೆಯುವುದಿಲ್ಲ. ॥ ೨೩ ॥ ತಾಯೇ ! ಇತರ ಜೀವರಿಗೆ ಅಪಮಾನ ಮಾಡುವವನು ಸಾಮಾನ್ಯವಾದ ಮತ್ತು ಶ್ರೇಷ್ಠವಾದ ಹಲವು ಬಗೆಯ ಸಾಮಗ್ರಿಗಳಿಂದ ಅನೇಕ ಪ್ರಕಾರವಾದ ವಿಧಿ-ವಿಧಾನಗಳೊಡನೆ ನನ್ನ ಮೂರ್ತಿಯನ್ನು ಪೂಜಿಸಿದರೂ ನಾನು ಅದರಿಂದ ಪ್ರಸನ್ನನಾಗಲಾರೆನು. ॥ ೨೪ ॥ ತನ್ನ ಹೃದಯದಲ್ಲಿಯೂ ಹಾಗೂ ಸಂಪೂರ್ಣ ಪ್ರಾಣಿಗಳಲ್ಲಿಯೂ ಇರುವ ಪರಮಾತ್ಮನ ಅನುಭವವು ಆಗುವವರೆಗೆ ಮನುಷ್ಯನು ತನ್ನ ಧರ್ಮದ ಅನುಷ್ಠಾನ ಮಾಡುತ್ತಾ ಈಶ್ವರನಾದ ನನ್ನನ್ನು ಪ್ರತಿಮೆಯೇ ಮುಂತಾದವುಗಳಲ್ಲಿ ಪೂಜೆ ಮಾಡುತ್ತಾ ಇರಬೇಕು. ॥ ೨೫ ॥

ಆತ್ಮ ಮತ್ತು ಪರಮಾತ್ಮರ ನಡುವೆ ಸ್ವಲ್ಪವಾದರೂ ಅಂತರ ತೋರುವ ಭೇದದರ್ಶಿಯಾದವನಿಗೆ ನಾನು ಮೃತ್ಯುರೂಪದಿಂದ ಮಹಾ ಭಯವನ್ನು ತಂದು ಒಡ್ಡುತ್ತೇನೆ. ॥ ೨೬ ॥ ಆದ್ದರಿಂದ ಎಲ್ಲ ಪ್ರಾಣಿಗಳ ಒಳಗೂ ಮನೆಮಾಡಿಕೊಂಡು ಅವುಗಳ ಆತ್ಮನಾಗಿರುವ ಪರಮಾತ್ಮನಾದ ನನ್ನನ್ನು ಯಥೋಚಿತವಾಗಿ ದಾನ, ಸಮ್ಮಾನ,

ಅಥ ಮಾಂ ಸರ್ವಭೂತೇಷು ಭೂತಾತ್ಮಾನಂ ಕೃತಾಲಯಮ್ ।
ಅರ್ಹಯೇದ್ದಾನಮಾನಾಭ್ಯಾಂ ಮೈತ್ರ್ಯಾಭಿನ್ನೇನ ಚಕ್ಷುಷಾ ॥ ೨೭ ॥

ಜೀವಾಃ ಶ್ರೇಷ್ಠಾ ಹ್ಯಜೀವಾನಾಂ ತತಃ ಪ್ರಾಣಭೃತಃ ಶುಭೇ ।
ತತಃ ಸಚಿತ್ತಾಃ ಪ್ರವರಾಸ್ತತಶ್ಚೇಂದ್ರಿಯವೃತ್ತಯಃ ॥ ೨೮ ॥

ತತ್ರಾಪಿ ಸ್ಪರ್ಶವೇದಿಭ್ಯಃ ಪ್ರವರಾ ರಸವೇದಿನಃ ।
ತೇಭ್ಯೋ ಗಂಧವಿದಃ ಶ್ರೇಷ್ಠಾಸ್ತತಃ ಶಬ್ದವಿದೋ ವರಾಃ ॥ ೨೯ ॥

ರೂಪಭೇದವಿದಸ್ತತ್ರ ತತಶ್ಚೋಭಯತೋದತಃ ।
ತೇಷಾಂ ಬಹುಪದಾಃ ಶ್ರೇಷ್ಠಾಶ್ಚತುಷ್ಪಾದಸ್ತತೋ ದ್ವಿಪಾತ್ ॥ ೩೦ ॥

ತತೋ ವರ್ಣಾಶ್ಚ ಚತ್ವಾರಸ್ತೇಷಾಂ ಬ್ರಾಹ್ಮಣ ಉತ್ತಮಃ ।
ಬ್ರಾಹ್ಮಣೇಷ್ವಪಿ ವೇದಜ್ಞೋ ಹ್ಯರ್ಥಜ್ಞೋಽಭ್ಯಧಿಕಸ್ತತಃ ॥ ೩೧ ॥

ಅರ್ಥಜ್ಞಾತ್ಸಂಶಯಚ್ಛೇತ್ತಾ ತತಃ ಶ್ರೇಯಾನ್ಸ್ವಕರ್ಮಕೃತ್ ।
ಮುಕ್ತಸಂಗಸ್ತತೋ ಭೂಯಾನದೋಗ್ಧಾ ಧರ್ಮಮಾತ್ಮನಃ ॥ ೩೨ ॥

ತಸ್ಮಾನ್ಮಯ್ಯರ್ಪಿತಾಶೇಷಕ್ರಿಯಾರ್ಥಾತ್ಮಾ ನಿರಂತರಃ ।
ಮಯ್ಯರ್ಪಿತಾತ್ಮನಃ ಪುಂಸೋ ಮಯಿ ಸಂನ್ಯಸ್ತಕರ್ಮಣಃ ।
ನ ಪಶ್ಯಾಮಿ ಪರಂ ಭೂತಮಕರ್ತುಃ ಸಮದರ್ಶನಾತ್ ॥ ೩೩ ॥

ಮನಸೈತಾನಿ ಭೂತಾನಿ ಪ್ರಣಮೇದ್ಬಹು ಮಾನಯನ್ ।
ಈಶ್ವರೋ ಜೀವಕಲಯಾ ಪ್ರವಿಷ್ಟೋ ಭಗವಾನಿತಿ ॥ ೩೪ ॥

ಭಕ್ತಿಯೋಗಶ್ಚ ಯೋಗಶ್ಚ ಮಯಾ ಮಾನವ್ಯುದೀರಿತಃ ।
ಯಯೋರೇಕತರೇಣೈವ ಪುರುಷಃ ಪುರುಷಂ ವ್ರಜೇತ್ ॥ ೩೫ ॥

ಸ್ನೇಹದ ವ್ಯವಹಾರ ಹಾಗೂ ಸಮದೃಷ್ಟಿಯ ಮೂಲಕ ಪೂಜಿಸಬೇಕು. ॥ ೨೭ ॥

ಅಮ್ಮಾ! ಕಲ್ಲು ಮುಂತಾದ ಅಚೇತನಗಳಿಗಿಂತ ವೃಕ್ಷವೇ ಮುಂತಾದ ಜೀವಗಳು ಶ್ರೇಷ್ಠವಾಗಿವೆ. ಅವುಗಳಿಗಿಂತಲೂ ಉಸಿರಾಡುವ ಪ್ರಾಣಿಗಳು ಶ್ರೇಷ್ಠರು. ಅವುಗಳಲ್ಲಿಯೂ ಮನಸ್ಸುಳ್ಳ ಪ್ರಾಣಿಗಳು ಉತ್ತಮರು. ಅವುಗಳಿಗಿಂತಲೂ ಇಂದ್ರಿಯಗಳ ವೃತ್ತಿಗಳಿಂದ ಕೂಡಿದ ಪ್ರಾಣಿಗಳು ಶ್ರೇಷ್ಠವಾದವುಗಳು. ಇಂದ್ರಿಯಗಳುಳ್ಳ ಪ್ರಾಣಿಗಳಿಗಿಂತಲೂ ಕೇವಲ ಸ್ಪರ್ಶವನ್ನು ಮಾತ್ರ ಅನುಭವಿಸುವ ಪ್ರಾಣಿಗಳೂ, ಅವುಗಳಿಗಿಂತ ರಸವನ್ನು ಗ್ರಹಿಸುವ ಮತ್ಸ್ಯವೇ ಮುಂತಾದ ಪ್ರಾಣಿಗಳು ಶ್ರೇಷ್ಠ ಹಾಗೂ ರಸವನ್ನು ತಿಳಿಯುವವರಿಗಿಂತಲೂ ಗಂಧವನ್ನು ಗ್ರಹಿಸುವ ಭ್ರಮರಾದಿಗಳು, ಗಂಧವನ್ನು ಗ್ರಹಿಸುವವುಗಳಿಗಿಂತ ಶಬ್ದವನ್ನು ಗ್ರಹಿಸುವ ಸರ್ಪಾದಿ ಪ್ರಾಣಿಗಳೂ ಶ್ರೇಷ್ಠ ಎನಿಸುವವು. ॥ ೨೮-೨೯ ॥ ಅವುಗಳಿಗಿಂತಲೂ ರೂಪವನ್ನು ಅನುಭವಿಸುವ ಕಾಗೆಯೇ ಮುಂತಾದವುಗಳು ಉತ್ತಮ. ಅವುಗಳಿಗಿಂತಲೂ ಬಾಯಿಯೊಳಗೆ ಮೇಲೆ-ಕೆಳಗೆ ಹಲ್ಲು ಇರುವ ಜೀವರು ಶ್ರೇಷ್ಠವಾಗಿವೆ. ಅವುಗಳಲ್ಲಿಯೂ ಕಾಲುಗಳಿಲ್ಲದ ಜೀವಿಗಳಿಗಿಂತಲೂ ಅನೇಕ ಚರಣವುಳ್ಳವುಗಳು ಶ್ರೇಷ್ಠವಾಗಿವೆ. ಅನೇಕ ಚರಣಗಳುಳ್ಳವುಗಳಿಗಿಂತ ನಾಲ್ಕುಚರಣಗಳುಳ್ಳವುಗಳು ಶ್ರೇಷ್ಠವು. ನಾಲ್ಕು ಚರಣಗಳುಳ್ಳವುಗಳಿಗಿಂತಲೂ ಎರಡು ಕಾಲುಗಳುಳ್ಳ ಮನುಷ್ಯನು ಶ್ರೇಷ್ಠನಾಗಿದ್ದಾನೆ. ॥ ೩೦ ॥ ಮನುಷ್ಯರಲ್ಲಿಯೂ ನಾಲ್ಕು ವರ್ಣಗಳು ಶ್ರೇಷ್ಠ. ಆ ನಾಲ್ಕು ವರ್ಣಗಳಲ್ಲಿಯೂ ಬ್ರಾಹ್ಮಣರು ಶ್ರೇಷ್ಠರು. ಬ್ರಾಹ್ಮಣರಲ್ಲಿಯೂ ವೇದಗಳನ್ನು ತಿಳಿದವರು, ವೇದಜ್ಞರಲ್ಲಿಯೂ ವೇದಗಳ ತಾತ್ಪರ್ಯವನ್ನು ತಿಳಿದವರು ಶ್ರೇಷ್ಠರಾಗಿದ್ದಾರೆ. ॥ ೩೧ ॥ ತಾತ್ಪರ್ಯ ತಿಳಿದವರಲ್ಲಿ ಸಂಶಯವನ್ನು ಹೋಗಲಾಡಿಸುವವರೂ, ಅವರಿಗಿಂತಲೂ ತಮ್ಮ ವರ್ಣಾಶ್ರಮೋಚಿತವಾದ ಧರ್ಮವನ್ನು ಪಾಲಿಸುವವರು ಹಾಗೂ ಅವರಿಗಿಂತಲೂ ಆಸಕ್ತಿಯನ್ನು ತ್ಯಜಿಸಿದವರು ಮತ್ತು ತಮ್ಮ ಧರ್ಮವನ್ನು ನಿಷ್ಕಾಮ ಭಾವದಿಂದ ಆಚರಿಸುವವರು ಶ್ರೇಷ್ಠರಾಗಿದ್ದಾರೆ. ॥ ೩೨ ॥ ಅವರಿಗಿಂತಲೂ ತಮ್ಮ ಎಲ್ಲ ಕರ್ಮಗಳನ್ನು ಅವುಗಳ ಫಲವನ್ನು ಹಾಗೂ ತಮ್ಮ ಶರೀರವನ್ನೂ ನನ್ನಲ್ಲಿ ಅರ್ಪಿಸಿ ಭೇದಭಾವವನ್ನು ಬಿಟ್ಟು ನನ್ನ ಉಪಾಸನೆ ಮಾಡುವವರು ಶ್ರೇಷ್ಠರಾಗಿದ್ದಾರೆ. ಹೀಗೆ ನನ್ನಲ್ಲಿಯೇ ಚಿತ್ತವನ್ನು ಮತ್ತು ಕರ್ಮವನ್ನು ಸಮರ್ಪಿಸುವ ಕರ್ತೃತ್ವವನ್ನು ತೊರೆದು, ಸಮದರ್ಶಿಗಳಾದ ಮನುಷ್ಯರಿಗಿಂತ ಹೆಚ್ಚಿನ ಬೇರೆ ಯಾವ ಪ್ರಾಣಿಯೂ ನನಗೆ ಕಂಡುಬರುವುದಿಲ್ಲ. ॥ ೩೩ ॥ ಆದ್ದರಿಂದ ಸಾಕ್ಷಾತ್ ಶ್ರೀಭಗವಂತನೇ ತನ್ನ ಜೀವರೂಪವಾದ ಅಂಶದಿಂದ ಎಲ್ಲದರಲ್ಲಿ ಪ್ರವೇಶಮಾಡಿದ್ದಾನೆ ಎಂದು ಭಾವಿಸಿ ಸಮಸ್ತ ಪ್ರಾಣಿಗಳನ್ನು ತುಂಬು ಆದರದಿಂದ ಮನಸ್ಸಿನಿಂದ ನಮಸ್ಕರಿಸಬೇಕು. ॥ ೩೪ ॥

ಅಮ್ಮಾ! ಹೀಗೆ ನಾನು ನಿನಗಾಗಿ ಭಕ್ತಿಯೋಗ ಮತ್ತು ಅಷ್ಟಾಂಗ ಯೋಗವನ್ನು ವರ್ಣಿಸಿರುವೆನು. ಇವುಗಳಲ್ಲಿ ಒಂದನ್ನಾದರೂ ಸಾಧನೆಮಾಡುವುದರಿಂದ ಜೀವನು ಪರಮಪುರುಷ ಭಗವಂತನನ್ನು ಪಡೆದುಕೊಳ್ಳಬಲ್ಲನು. ॥ ೩೫ ॥

ಏತದ್ಭಗವತೋ ರೂಪಂ ಬ್ರಹ್ಮಣಃ ಪರಮಾತ್ಮನಃ ।
ಪರಂ ಪ್ರಧಾನಂ ಪುರುಷಂ ದೈವಂ ಕರ್ಮವಿಚೇಷ್ಟಿತಮ್ ॥ ೩೬ ॥

ರೂಪಭೇದಾಸ್ಪದಂ ದಿವ್ಯಂ ಕಾಲ ಇತ್ಯಭಿಧೀಯತೇ ।
ಭೂತಾನಾಂ ಮಹದಾದೀನಾಂ ಯತೋ ಭಿನ್ನದೃಶಾಂ ಭಯಮ್ ॥ ೩೭ ॥

ಯೋಽಂತಃಪ್ರವಿಶ್ಯ ಭೂತಾನಿ ಭೂತೈರತ್ತ್ಯಖಿಲಾಶ್ರಯಃ ।
ಸ ವಿಷ್ಣ್ವಾಖ್ಯೋಽಧಿಯಜ್ಞೋಽಸೌ ಕಾಲಃ ಕಲಯತಾಂ ಪ್ರಭುಃ ॥ ೩೮ ॥

ನ ಚಾಸ್ಯ ಕಶ್ಚಿದ್ದಯಿತೋ ನ ದ್ವೇಷ್ಯೋ ನ ಚ ಬಾಂಧವಃ ।
ಆವಿಶತ್ಯಪ್ರಮತ್ತೋಽಸೌ ಪ್ರಮತ್ತಂ ಜನಮಂತಕೃತ್ ॥ ೩೯ ॥

ಯದ್ಭಯಾದ್ವಾತಿ ವಾತೋಽಯಂ ಸೂರ್ಯಸ್ತಪತಿ ಯದ್ಭಯಾತ್ ।
ಯದ್ಭಯಾದ್ವರ್ಷತೇ ದೇವೋ ಭಗಣೋ ಭಾತಿ ಯದ್ಭಯಾತ್ ॥ ೪೦ ॥

ಯದ್ವನಸ್ಪತಯೋ ಭೀತಾ ಲತಾಶ್ಚೌಷಧಿಭಿಃ ಸಹ ।
ಸ್ವೇ ಸ್ವೇ ಕಾಲೇಽಭಿಗೃಹ್ಣಂತಿ ಪುಷ್ಪಾಣಿ ಚ ಫಲಾನಿ ಚ ॥ ೪೧ ॥

ಸ್ರವಂತಿ ಸರಿತೋ ಭೀತಾ ನೋತ್ಸರ್ಪತ್ಯುದಧಿರ್ಯತಃ ।
ಅಗ್ನಿರಿಂಧೇ ಸಗಿರಿಭಿರ್ಭೂರ್ನ ಮಜ್ಜತಿ ಯದ್ಭಯಾತ್ ॥ ೪೨ ॥

ನಭೋ ದದಾತಿ ಶ್ವಸತಾಂ ಪದಂ ಯನ್ನಿಯಮಾದದಃ ।
ಲೋಕಂ ಸ್ವದೇಹಂ ತನುತೇ ಮಹಾನ್ಸಪ್ತಭಿರಾವೃತಮ್ ॥ ೪೩ ॥

ಗುಣಾಭಿಮಾನಿನೋ ದೇವಾಃ ಸರ್ಗಾದಿಷ್ವಸ್ಯ ಯದ್ಭಯಾತ್ ।
ವರ್ತಂತೇಽನುಯುಗಂ ಯೇಷಾಂ ವಶ ಏತಚ್ಚರಾಚರಮ್ ॥ ೪೪ ॥

ಸೋಽನಂತೋಽಂತಕರಃ ಕಾಲೋಽನಾದಿರಾದಿಕೃದವ್ಯಯಃ ।
ಜನಂ ಜನೇನ ಜನಯನ್ಮಾರಯನ್ಮೃತ್ಯುನಾಂತಕಮ್ ॥ ೪೫ ॥

ಪರಮಾತ್ಮ ಪರಬ್ರಹ್ಮನಾದ ಭಗವಂತನ ಅದ್ಭುತವಾದ ಪ್ರಭಾವದಿಂದ ಸಂಪನ್ನವಾಗಿ, ಜಗತ್ತಿನ ಪದಾರ್ಥಗಳ ನಾನಾವಿಧ ವೈಚಿತ್ರ್ಯಕ್ಕೆ ಕಾರಣವಾಗಿರುವ ಸ್ವರೂಪ ವಿಶೇಷವೇ 'ಕಾಲ'ವಾಗಿದೆ. ಪ್ರಕೃತಿ ಮತ್ತು ಪುರುಷರು ಇದರ ರೂಪಗಳೇ ಆಗಿವೆ ಹಾಗೂ ಈ ಎರಡರಿಂದಲೂ ಬೇರೆ ಆಗಿದೆ. ಇದು ನಾನಾ ಪ್ರಕಾರದ ಕರ್ಮಗಳಿಗೆ ಮೂಲವಾದ ಅದೃಷ್ಟವೂ ಆಗಿದೆ. ಮಹತ್ತತ್ತ್ವವೇ ಮುಂತಾದವುಗಳಲ್ಲಿ ಅಭಿಮಾನವನ್ನಿಟ್ಟಿರುವ ಭೇದದರ್ಶಿ ಪ್ರಾಣಿಗಳು ಸದಾ ಭಯಪಡುತ್ತಿರುವುದೂ ಇದಕ್ಕೆ. ॥ ೩೬-೩೭ ॥

ಇದು ಎಲ್ಲಕ್ಕೂ ಆಶ್ರಯವಾಗಿರುವುದರಿಂದ ಎಲ್ಲ ಪ್ರಾಣಿಗಳಲ್ಲಿಯೂ ಒಳಹೊಕ್ಕು ಭೂತಗಳ ಮೂಲಕವೇ ಅವುಗಳನ್ನು ಸಂಹರಿಸುವುದು. ಜಗತ್ತಿನ ಶಾಸನ ಮಾಡುವಂತಹ ಬ್ರಹ್ಮಾದಿಗಳಿಗೂ ಒಡೆಯನಾದ ಭಗವಾನ್ ಕಾಲನೇ ಯಜ್ಞಗಳ ಫಲವನ್ನು ಕೊಡುವ ವಿಷ್ಣುವಾಗಿದ್ದಾನೆ. ॥ ೩೮ ॥ ಇದಕ್ಕೆ ಮಿತ್ರರಾಗಲೀ, ಶತ್ರುಗಳಾಗಲೀ ಯಾರೂ ಇಲ್ಲ, ಬಂಧು-ಬಾಂಧವರೂ ಇಲ್ಲ. ಇದು ಸದಾಕಾಲ ಎಚ್ಚರವಾಗಿದ್ದು ತನ್ನ ಸ್ವರೂಪಭೂತ ಶ್ರೀಭಗವಂತನನ್ನು ಮರೆತು, ಭೋಗರೂಪವಾದ ಪ್ರಮಾದದಲ್ಲಿ ಬಿದ್ದಿರುವ ಪ್ರಾಣಿಗಳ ಮೇಲೆ ಆಕ್ರಮಣಗೈದು ಅವರನ್ನು ಸಂಹರಿಸುತ್ತದೆ. ॥ ೩೯ ॥ ಇದರ ಭಯದಿಂದಲೇ ಗಾಳಿಯು ಬೀಸುವುದು, ಇದರ ಭಯದಿಂದಲೇ ಸೂರ್ಯನು ಬೆಳಗುತ್ತಾನೆ. ಇದರ ಭಯದಿಂದಲೇ ಇಂದ್ರನು ಮಳೆಗರೆಯುವನು. ಇದರ ಭಯದಿಂದಲೇ ತಾರೆಗಳು ಮಿನುಗುತ್ತವೆ. ॥ ೪೦ ॥ ಇದರ ಭಯದಿಂದಲೇ ಔಷಧಿಗಳ ಸಹಿತ ಬಳ್ಳಿಗಳು ಮತ್ತು ಎಲ್ಲ ವನಸ್ಪತಿಗಳೂ ಕಾಲ-ಕಾಲದಲ್ಲಿ ಫಲ-ಪುಷ್ಪಗಳನ್ನು ಬಿಡುತ್ತವೆ. ॥ ೪೧ ॥ ಇದರ ಭಯದಿಂದಲೇ ನದಿಗಳು ಹರಿಯುತ್ತವೆ ಮತ್ತು ಸಮುದ್ರವು ಮೇರೆ ಮೀರುವುದಿಲ್ಲ. ಇದರ ಭಯದಿಂದಲೇ ಅಗ್ನಿಯು ಪ್ರಜ್ವಲಿಸುತ್ತಿರುವುದು ಹಾಗೂ ಪರ್ವತಗಳ ಸಹಿತ ಪೃಥ್ವಿಯು ನೀರಿನಲ್ಲಿ ಮುಳುಗುವುದಿಲ್ಲ. ॥ ೪೨ ॥ ಇದರ ಶಾಸನದಿಂದಲೇ ಈ ಆಕಾಶವು ಜೀವಂತ ಪ್ರಾಣಿಗಳಿಗೆ ಉಸಿರಾಡಲು ಅವಕಾಶ ಮಾಡಿ ಕೊಡುತ್ತದೆ ಮತ್ತು ಮಹತ್ತತ್ತ್ವವು ಅಹಂಕಾರರೂಪವಾದ ಶರೀರವನ್ನು ಏಳು ಆವರಣಗಳಿಂದ ಕೂಡಿರುವ ಬ್ರಹಾಂಡದ ರೂಪದಲ್ಲಿ ವಿಸ್ತರಿಸುತ್ತದೆ. ॥ ೪೩ ॥

ಈ ಚರಾಚರ ಜಗತ್ತೆಲ್ಲವೂ ಯಾರ ಅಧೀನದಲ್ಲಿದೆಯೋ ಅಂತಹ ಸತ್ತ್ವಾದಿಗುಣಗಳ ನಿಯಾಮಕನಾದ ವಿಷ್ಣುವೇ ಮೊದಲಾದ ದೇವತೆಗಳೂ ಕೂಡ ಇದರ ಭಯದಿಂದಲೇ ಯುಗಗಳ ಕ್ರಮಕ್ಕೆ ಅನುಗುಣವಾಗಿ ಜಗತ್ತಿನ ಸೃಷ್ಟಿಯೇ ಮುಂತಾದ ಕಾರ್ಯಗಳಲ್ಲಿ ತತ್ಪರರಾಗಿರುತ್ತಾರೆ. ॥ ೪೪ ॥ ಅವಿನಾಶಿಯಾದ ಈ ಕಾಲವು ಸ್ವಯಂ ಅನಾದಿಯಾಗಿದ್ದರೂ, ಇತರ ತತ್ತ್ವಗಳಿಗೆ ಆದಿಯಾಗಿದೆ. ತಾನು ಅನಂತನಾಗಿದ್ದರೂ ಬೇರೆಯವರ ಅಂತವನ್ನು ಮಾಡುವುದಾಗಿದೆ. ಜನರಿಂದ ಜನರು ಹುಟ್ಟುವಂತೆ ಮಾಡಿ ಜಗತ್ತನ್ನು ರಚಿಸುತ್ತದೆ ಮತ್ತು ತನ್ನ ಸಂಹಾರಶಕ್ತಿಯಾದ ಮೃತ್ಯುವಿನ ಮೂಲಕ ಯಮ ರಾಜನನ್ನೂ ಕೂಡ ಕೊಂದು ಇದರ ಅಂತವನ್ನು ಮಾಡುತ್ತಾನೆ. ॥ ೪೫ ॥

*ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೨೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಕಾಪಿಲೇಯೋಪಾಖ್ಯಾನೇ ಏಕೋನತ್ರಿಂಶೋಽಧ್ಯಾಯಃ ॥ ೨೯ ॥

# ಮೂವತ್ತನೆಯ ಅಧ್ಯಾಯ

## ಶರೀರದಲ್ಲಿ – ಮನೆಯಲ್ಲಿ ಆಸಕ್ತರಾದ ಮನುಷ್ಯರು ಹೊಂದುವ ಅಧೋಗತಿಯ ವರ್ಣನೆ

*ಕಪಿಲ ಉವಾಚ*

**ತಸ್ಯೈತಸ್ಯ ಜನೋ ನೂನಂ**
**ನಾಯಂ ವೇದೋರುವಿಕ್ರಮಮ್ ।**
**ಕಾಲ್ಯಮಾನೋಽಪಿ ಬಲಿನೋ**
**ವಾಯೋರಿವ ಘನಾವಲಿಃ ॥ ೧ ॥**

**ಯಂ ಯಮರ್ಥಮುಪಾದತ್ತೇ ದುಃಖೇನ ಸುಖಹೇತವೇ ।**
**ತಂ ತಂ ಧುನೋತಿ ಭಗವಾನ್ಪುಮಾನ್ ಶೋಚತಿ ಯತ್ಕೃತೇ ॥ ೨ ॥**

**ಯದಧ್ರುವಸ್ಯ ದೇಹಸ್ಯ ಸಾನುಬಂಧಸ್ಯ ದುರ್ಮತಿಃ ।**
**ಧ್ರುವಾಣಿ ಮನ್ಯತೇ ಮೋಹಾದ್ಗೃಹಕ್ಷೇತ್ರವಸೂನಿ ಚ ॥ ೩ ॥**

**ಜಂತುರ್ವೈ ಭವ ಏತಸ್ಮಿನ್ ಯಾಂ ಯಾಂ ಯೋನಿಮನುವ್ರಜೇತ್ ।**
**ತಸ್ಯಾಂ ತಸ್ಯಾಂ ಸ ಲಭತೇ ನಿರ್ವೃತಿಂ ನ ವಿರಜ್ಯತೇ ॥ ೪ ॥**

**ನರಕಸ್ಥೋಽಪಿ ದೇಹಂ ವೈ ನ ಪುಮಾಂಸ್ತ್ಯಕ್ತುಮಿಚ್ಛತಿ ।**
**ನಾರಕ್ಯಾಂ ನಿರ್ವೃತೌ ಸತ್ಯಾಂ ದೇವಮಾಯಾವಿಮೋಹಿತಃ ॥ ೫ ॥**

**ಆತ್ಮಜಾಯಾಸುತಾಗಾರಪಶುದ್ರವಿಣಬಂಧುಷು ।**
**ನಿರೂಢಮೂಲಹೃದಯ ಆತ್ಮಾನಂ ಬಹು ಮನ್ಯತೇ ॥ ೬ ॥**

**ಸಂದಹ್ಯಮಾನಸರ್ವಾಂಗ ಏಷಾಮುದ್ವಹನಾಧಿನಾ ।**
**ಕರೋತ್ಯವಿರತಂ ಮೂಢೋ ದುರಿತಾನಿ ದುರಾಶಯಃ ॥ ೭ ॥**

**ಆಕ್ಷಿಪ್ತಾತ್ಮೇಂದ್ರಿಯಃ ಸ್ತ್ರೀಣಾಮಸತೀನಾಂ ಚ ಮಾಯಯಾ ।**
**ರಹೋರಚಿತಯಾಲಾಪೈಃ ಶಿಶೂನಾಂ ಕಲಭಾಷಿಣಾಮ್ ॥ ೮ ॥**

**ಗೃಹೇಷು ಕೂಟಧರ್ಮೇಷು ದುಃಖತಂತ್ರೇಷ್ವತಂದ್ರಿತಃ ।**
**ಕುರ್ವನ್ ದುಃಖಪ್ರತೀಕಾರಂ ಸುಖವನ್ಮನ್ಯತೇ ಗೃಹೀ ॥ ೯ ॥**

**ಅರ್ಥೈರಾಪಾದಿತೈರ್ಗುರ್ವ್ಯಾ ಹಿಂಸಯೇತಸ್ತತಶ್ಚ ತಾನ್ ।**
**ಪುಷ್ಣಾತಿ ಯೇಷಾಂ ಪೋಷೇಣ ಶೇಷಭುಗ್ಯಾತ್ಯಧಃ ಸ್ವಯಮ್ ॥ ೧೦ ॥**

**ಶ್ರೀಕಪಿಲಭಗವಂತನು ಹೇಳುತ್ತಾನೆ** – ಅಮ್ಮಾ! ಪ್ರಬಲವಾದ ಬಿರುಗಾಳಿಯು ಹೊಡೆದುಕೊಂಡು ಹೋಗುತ್ತಿರುವ ಮೇಘ ಸಮೂಹವು ಗಾಳಿಯ ಬಲವನ್ನು ಅರಿಯದಂತೆ, ಈ ಜೀವಿಯೂ ಕೂಡ ಬಲಶಾಲಿಯಾದ ಕಾಲನ ಪ್ರೇರಣೆಯಿಂದ ಬೇರೆ-ಬೇರೆ ಅವಸ್ಥೆಗಳಲ್ಲಿಯೂ ಹಾಗೂ ಯೋನಿಗಳಲ್ಲಿಯೂ ಅಲೆದಾಡು ತ್ತಿದ್ದರೂ ಕಾಲದ ಪ್ರಬಲ ಪರಾಕ್ರಮವನ್ನು ತಿಳಿಯುವುದಿಲ್ಲ. ॥ ೧ ॥ ಜೀವಿಯು ಸುಖದ ಬಯಕೆಯಿಂದ ಯಾವ-ಯಾವ ವಸ್ತುಗಳನ್ನು ತುಂಬಾ ಕಷ್ಟಪಟ್ಟು ಗಳಿಸುತ್ತಾನೆಯೋ, ಅವನ್ನೆಲ್ಲಾ ಕಾಲರೂಪಿ ಯಾದ ಭಗವಂತನು ನಾಶಪಡಿಸಿ, ಈ ಜೀವಿಗೆ ಮಹಾಶೋಕವನ್ನು ತರುತ್ತಾನೆ. ॥ ೨ ॥ ಮಂದಮತಿಯಾದ ಜೀವಿಯು ತನ್ನ ಈ ನಾಶವುಳ್ಳ ಶರೀರವನ್ನೂ ಹಾಗೂ ಇದರ ಸಂಬಂಧಿಗಳನ್ನೂ, ಮನೆ, ಹೊಲ, ಧನಾದಿಗಳನ್ನು ನಿತ್ಯವೆಂದು ತಿಳಿಯುವುದೇ ಇದರ ಕಾರಣ ವಾಗಿದೆ. ॥ ೩ ॥ ಈ ಪ್ರಪಂಚದಲ್ಲಿ ಜೀವಿಯು ತಾನು ಹುಟ್ಟುವ ಯೋನಿಗಳಲ್ಲೇ ಆನಂದವನ್ನು ಅನುಭವಿಸತೊಡಗುತ್ತಾನೆ. ಅದ ರಿಂದ ಎಂದಿಗೂ ವಿರಕ್ತನಾಗುವುದೇ ಇಲ್ಲ. ॥ ೪ ॥ ಇವನು ಭಗ ವಂತನ ಮಾಯೆಯಿಂದ – ಕರ್ಮವಶನಾಗಿ ನರಕಸಂಬಂಧವಾದ ಯೋನಿಗಳಲ್ಲಿ ಹುಟ್ಟಿದರೂ ಅಲ್ಲಿಯ ಅಸಹ್ಯ ಪದಾರ್ಥಗಳ ಭೋಗಗಳಲ್ಲೇ ಸುಖವನ್ನೂ ತಿಳಿಯುವ ಕಾರಣದಿಂದ ಅದನ್ನು ಬಿಡಲಾರದಷ್ಟು ಮೋಹಿತನಾಗುತ್ತಿದ್ದಾನೆ. ॥ ೫ ॥ ಈ ಮೂರ್ಖನು ತನ್ನ ಶರೀರ, ಪತ್ನೀ, ಪುತ್ರರು, ಮನೆ, ಪಶು, ಧನ, ಬಂಧು-ಬಾಂಧ ವರು ಇವರಲ್ಲಿ ಅತ್ಯಂತ ಆಸಕ್ತನಾಗಿ ಅವರ ಸಂಬಂಧದಲ್ಲಿ ನಾನಾ ಬಗೆಯ ಮನೋರಥಗಳನ್ನು ಮಾಡುತ್ತಾ, ತನ್ನನ್ನು ಮಹಾಭಾಗ್ಯ ಶಾಲಿಯೆಂದು ತಿಳಿಯುತ್ತಿರುವನು. ॥ ೬ ॥ ಅವರನ್ನು ಸಾಕಿ-ಸಲಹುವ ಚಿಂತೆಯಿಂದ ಈತನ ಅಂಗಾಂಗಗಳು ಉರಿಯುತ್ತಾ ಇರುತ್ತವೆ. ಆದರೂ ಹೃದಯವು ದುಷ್ಟವಾಸನೆಗಳಿಂದ ದೂಷಿತವಾಗಿರುವು ದರಿಂದ ಈ ತಿಳಿಗೇಡಿಯು ಅವರಿಗಾಗಿಯೇ ನಾನಾರೀತಿಯ ಪಾಪಗಳನ್ನು ಮಾಡುತ್ತಾ ಇರುತ್ತಾನೆ. ॥ ೭ ॥ ಕುಲಟೆಯರು ಏಕಾಂತ ದಲ್ಲಿ ತೋರಿಸುವ ಕಪಟಪ್ರೇಮದಲ್ಲಿಯೂ, ಶಿಶುಗಳ ಮುದ್ದು ಮಾತುಗಳಲ್ಲಿಯೂ ಮನಸ್ಸು, ಇಂದ್ರಿಯಗಳು ಸಿಕ್ಕಿಹಾಕಿಕೊಳ್ಳುವು ದರಿಂದ ಗೃಹಸ್ಥನು ಮನೆಗೆ ಸಂಬಂಧಪಟ್ಟ ದುಃಖಪ್ರಧಾನವಾದ ಕಪಟಕರ್ಮಗಳಲ್ಲಿ ನಿರತನಾಗಿರುತ್ತಾನೆ. ಈ ನಡುವೆ ತನ್ನ ಯಾವು ದಾದರೂ ಒಂದು ದುಃಖದ ಪ್ರತೀಕಾರಮಾಡಲು ತನಗೆ ಸಾಧ್ಯ ವಾದರೆ ಅದನ್ನೇ ಸುಖವೆಂದು ಭ್ರಮಿಸುವನು. ॥ ೮-೯ ॥ ಭಯಂಕರವಾದ ಹಿಂಸಾವೃತ್ತಿಯ ಮೂಲಕ ಎಲ್ಲೆಲ್ಲಿಂದಲೂ ಹಣ ವನ್ನು ಸಂಗ್ರಹಿಸಿ ಯಾರನ್ನು ಸಾಕುವುದರಿಂದ ತಾನು ನರಕಕ್ಕೆ ಹೋಗಬೇಕಾಗುತ್ತದೋ ಅವರನ್ನೇ ಸಾಕುವನು. ಅವರು ತಿಂದು-ಕುಡಿದು ಮಿಕ್ಕಿದ್ದನ್ನು ತಾನು ಸೇವಿಸುವನು. ॥ ೧೦ ॥

ವಾರ್ತಾಯಾಂ ಲುಪ್ಯಮಾನಾಯಾ-
ಮಾರಬ್ಧಾಯಾಂ ಪುನಃ ಪುನಃ ।
ಲೋಭಾಭಿಭೂತೋ ನಿಃಸತ್ತ್ವಃ
ಪರಾರ್ಥೇ ಕುರುತೇ ಸ್ಪೃಹಾಮ್ ॥ ೧೧ ॥

ಕುಟುಂಬಭರಣಾಕಲ್ಪೋ ಮಂದಭಾಗ್ಯೋ ವೃಥೋದ್ಯಮಃ ।
ಶ್ರಿಯಾ ವಿಹೀನಃ ಕೃಪಣೋ ಧ್ಯಾಯನ್ ಶ್ವಸಿತಿ ಮೂಢಧೀಃ ॥ ೧೨ ॥

ಏವಂ ಸ್ವಭರಣಾಕಲ್ಪಂ ತತ್ಕಲತ್ರಾದಯಸ್ತಥಾ ।
ನಾದ್ರಿಯಂತೇ ಯಥಾ ಪೂರ್ವಂ ಕೀನಾಶಾ ಇವ ಗೋಜರಮ್ ॥ ೧೩ ॥

ತತ್ರಾಪ್ಯಜಾತನಿರ್ವೇದೋ ಭ್ರಿಯಮಾಣಃ ಸ್ವಯಂಭೃತೈಃ ।
ಜರಯೋಪಾತ್ತವೈರೂಪ್ಯೋ ಮರಣಾಭಿಮುಖೋ ಗೃಹೇ ॥ ೧೪ ॥

ಆಸ್ತೇಽವಮತ್ಯೋಪನ್ಯಸ್ತಂ ಗೃಹಪಾಲ ಇವಾಹರನ್ ।
ಆಮಯಾವ್ಯಪ್ರದೀಪ್ತಾಗ್ನಿರಲ್ಪಾಹಾರೋಽಲ್ಪಚೇಷ್ಟಿತಃ ॥ ೧೫ ॥

ವಾಯುನೋತ್ಕ್ರಮತೋತ್ತಾರಃ ಕಫಸಂರುದ್ಧನಾಡಿಕಃ ।
ಕಾಸಶ್ವಾಸಕೃತಾಯಾಸಃ ಕಂಠೇ ಘುರಘುರಾಯತೇ ॥ ೧೬ ॥

ಶಯಾನಃ ಪರಿಶೋಚದ್ಭಿಃ ಪರಿವೀತಃ ಸ್ವಬಂಧುಭಿಃ ।
ವಾಚ್ಯಮಾನೋಽಪಿ ನ ಬ್ರೂತೇ ಕಾಲಪಾಶವಶಂ ಗತಃ ॥ ೧೭ ॥

ಏವಂ ಕುಟುಂಬಭರಣೇ ವ್ಯಾಪೃತಾತ್ಮಾಜಿತೇಂದ್ರಿಯಃ ।
ಮ್ರಿಯತೇ ರುದತಾಂ ಸ್ವಾನಾಮುರುವೇದನಯಾಸ್ತಧೀಃ ॥ ೧೮ ॥

ಯಮದೂತೌ ತದಾ ಪ್ರಾಪ್ತೌ ಭೀಮೌ ಸರಭಸೇಕ್ಷಣೌ ।
ಸ ದೃಷ್ಟ್ವಾ ತ್ರಸ್ತಹೃದಯಃ ಶಕೃನ್ಮೂತ್ರಂ ವಿಮುಂಚತಿ ॥ ೧೯ ॥

ಯಾತನಾದೇಹ ಆವೃತ್ಯ ಪಾಶೈರ್ಬದ್ಧ್ವಾ ಗಲೇ ಬಲಾತ್ ।
ನಯತೋ ದೀರ್ಘಮಧ್ವಾನಂ ದಂಡ್ಯಂ ರಾಜಭಟಾ ಯಥಾ ॥ ೨೦ ॥

ತಯೋರ್ನಿರ್ಭಿನ್ನಹೃದಯಸ್ತರ್ಜನೈರ್ಜಾತವೇಪಥುಃ ।
ಪಥಿ ಶ್ವಭಿರ್ಭಕ್ಷ್ಯಮಾಣ ಆರ್ತೋಽಘಂ ಸ್ವಮನುಸ್ಮರನ್ ॥ ೨೧ ॥

ಕ್ಷುತ್ತೃಟ್ಪರೀತೋಽರ್ಕದವಾನಲಾನಿಲೈಃ
ಸಂತಪ್ಯಮಾನಃ ಪಥಿ ತಪ್ತವಾಲುಕೇ ।
ಕೃಚ್ಛ್ರೇಣ ಪೃಷ್ಠೇ ಕಶಯಾ ಚ ತಾಡಿತ-
ಶ್ಚಲತ್ಯಶಕ್ತೋಽಪಿ ನಿರಾಶ್ರಮೋದಕೇ ॥ ೨೨ ॥

ಪದೇ-ಪದೇ ಪ್ರಯತ್ನಪಟ್ಟರೂ ಇವನ ಜೀವನವು ನಡೆಯದಿದ್ದರೆ ಅವನು ಲೋಭವಶದಿಂದ ಧೈರ್ಯಗೆಟ್ಟು ಮತ್ತೊಬ್ಬರ ಹಣವನ್ನು ಕಸಿದುಕೊಳ್ಳಲು ಆಸೆಪಡುವನು. ॥ ೧೧ ॥ ದುರದೃಷ್ಟದಿಂದ ತನ್ನ ಯಾವ ಪ್ರಯತ್ನವೂ ಈಡೇರದಿದ್ದರೆ, ಆ ಮೂರ್ಖನು ಬಡತನದಿಂದ ಕುಟುಂಬವನ್ನು ಸಾಕಿ-ಸಲಹಲು ಅಸಮರ್ಥನಾದಾಗ ಅತಿದೈನ್ಯದಿಂದ ಚಿಂತಾತುರನಾಗಿ ನಿಟ್ಟುಸಿರುಬಿಡಲು ತೊಡಗುವನು. ॥ ೧೨ ॥

ಈತನು ತಮ್ಮನ್ನು ಸಾಕಿ-ಸಲಹಲು ಅಸಮರ್ಥನೆಂದು ತಿಳಿದು ಪತ್ನೀ-ಪುತ್ರಾದಿಗಳು – ಲೋಭಿಯಾದ ರೈತನು ಮುದಿಯಾದ ಎತ್ತನ್ನು ಉಪೇಕ್ಷಿಸುವಂತೆ – ಇವನನ್ನು ಮೊದಲಿನಂತೆ ಆದರಿಸದೆ ಉಪೇಕ್ಷಿಸುತ್ತಾರೆ. ॥ ೧೩ ॥ ಆದರೂ ಇವನಿಗೆ ಸಂಸಾರದಲ್ಲಿ ವೈರಾಗ್ಯ ಉಂಟಾಗುವುದಿಲ್ಲ. ಈತನು ಹಿಂದೆ ಯಾರನ್ನು ಸಾಕಿದ್ದನೋ, ಅವರೇ ಈಗ ಈತನನ್ನು ಸಾಕುವರು. ಮುಪ್ಪಿನ ಕಾರಣದಿಂದ ಇವನ ರೂಪವು ವಿಕಾರಹೊಂದುವುದು. ಶರೀರವು ರೋಗಗ್ರಸ್ತವಾಗುವುದು. ಜಠರಾಗ್ನಿಯು ಮಂದವಾಗುತ್ತದೆ. ಆಹಾರ ಮತ್ತು ಪುರುಷಾರ್ಥವೆರಡೂ ಕಡಿಮೆಯಾಗುವುದು. ಅವನು ಮರಣೋನ್ಮುಖವಾಗಿ ಮನೆಯಲ್ಲಿ ಬಿದ್ದುಕೊಂಡಿದ್ದು, ಹೆಂಡಿರು – ಮಕ್ಕಳೇ ಮುಂತಾದವರು ತಿರಸ್ಕಾರಪೂರ್ವಕವಾಗಿ ಕೊಡುವ ಚೂರು-ಪಾರನ್ನು ತಿನ್ನುತ್ತಾ ನಾಯಿಯಂತೆ ಜೀವನವನ್ನು ಕಳೆಯುವನು. ॥ ೧೪-೧೫ ॥ ಸಾವಿನ ಸಮಯವು ಸಮೀಪಿಸಿದಾಗ ಮೇಲುಸಿರು ಬಂದದ್ದರಿಂದ ಈತನ ಕಣ್ಣಾಲಿಗಳು ಮೇಲೇಳುವವು. ಉಸಿರಾಟದ ಚೀಲಗಳು ಕಫದಿಂದ ಕಟ್ಟಿಹೋಗುವವು. ಕೆಮ್ಮುವುದಕ್ಕೂ, ಉಸಿರಾಟಕ್ಕೂ ತುಂಬಾ ಕಷ್ಟವಾಗುವುದು. ಕಫವು ಹೆಚ್ಚುವುದರಿಂದ ಗಂಟಲು ಗುರುಗುಟ್ಟತೊಡಗುವುದು. ॥ ೧೬ ॥ ಹಾಗೆ ಬಿದ್ದುಕೊಂಡಿರುವ ಈತನ ಸುತ್ತಲೂ ದುಃಖಪೀಡಿತರಾದ ನೆಂಟರಿಷ್ಟರು ನೆರೆಯುವರು. ಆದರೆ ಮೃತ್ಯುಪಾಶಕ್ಕೆ ಸಿಲುಕಿಕೊಂಡಿರುವುದರಿಂದ ಅವರು ಕರೆದರೂ ಈತನು ಮಾತನಾಡಲಾರನು. ॥ ೧೭ ॥

ಹೀಗೆ ಇಂದ್ರಿಯಗಳನ್ನು ಜಯಿಸದೆ ನಿರಂತರವಾಗಿ ಕುಟುಂಬ ಪೋಷಣೆಯಲ್ಲೇ ಆಸಕ್ತನಾಗಿರುವ ಆ ಮೂಢನಾದ ಮನುಷ್ಯನು ಅಳುತ್ತಾ, ಗೋಳಾಡುವ ಸ್ವಜನರ ನಡುವೆ ಅತ್ಯಂತ ವೇದನೆಯಿಂದ ಪ್ರಜ್ಞೆತಪ್ಪಿ ಮರಣವನ್ನಪ್ಪುವನು. ॥ ೧೮ ॥

ಆ ಸಮಯದಲ್ಲಿ ತನ್ನನ್ನು ಎಳೆದೊಯ್ಯಲು ಬಂದ ಅತಿ ಭಯಂಕರರಾದ ಸಿಟ್ಟೇರಿದ ಕಣ್ಣುಗಳುಳ್ಳ ಇಬ್ಬರು ಯಮದೂತರನ್ನು ಕಂಡು ಭಯದಿಂದ ಮಲ-ಮೂತ್ರಗಳನ್ನು ವಿಸರ್ಜಿಸುವನು. ॥ ೧೯ ॥ ಆ ಯಮದೂತರು ಅವನಿಗೆ ಯಾತನಾದೇಹದೊಳಕ್ಕೆ ಹಾಕಿ ರಾಜಭಟರು ಅಪರಾಧಿಯನ್ನು ಎಳೆದೊಯ್ಯುವಂತೆ – ಕೊರಳಿಗೆ ಪಾಶವನ್ನು ಹಾಕಿ ಬಲವಂತವಾಗಿ ಯಮಲೋಕದ ದೂರಯಾತ್ರಿಕನನ್ನಾಗಿ ಎಳೆದುಕೊಂಡು ಹೋಗುವರು. ॥ ೨೦ ॥ ಅವರ ಬೆದರಿಕೆಯಿಂದ ಆತನ ಹೃದಯವು ಒಡೆದು, ದೇಹವು ನಡುಗತೊಡಗುವುದು. ದಾರಿಯಲ್ಲಿ ನಾಯಿಗಳು ಆತನನ್ನು ಕಚ್ಚಿ ತಿನ್ನುವರು. ಆಗ ಆತನು ತನ್ನ ಪಾಪಗಳನ್ನು ನೆನೆಯುತ್ತಾ ಕಳವಳದಿಂದ ಬಸವಳಿಯುವನು. ॥ ೨೧ ॥

ತತ್ರ ತತ್ರ ಪತನ್ ಶ್ರಾಂತೋ ಮೂರ್ಚ್ಛಿತಃ ಪುನರುತ್ಥಿತಃ ।
ಪಥಾ ಪಾಪೀಯಸಾ ನೀತಸ್ತರಸಾ ಯಮಸಾದನಮ್ ॥ ೨೩ ॥

ಯೋಜನಾನಾಂ ಸಹಸ್ರಾಣಿ ನವತಿಂ ನವ ಚಾಧ್ವನಃ ।
ತ್ರಿಭಿರ್ಮುಹೂರ್ತೈರ್ದ್ವಾಭ್ಯಾಂ ವಾ ನೀತಃ ಪ್ರಾಪ್ನೋತಿ ಯಾತನಾಃ ॥ ೨೪ ॥

ಆದೀಪನಂ ಸ್ವಗಾತ್ರಾಣಾಂ ವೇಷ್ಟಯಿತ್ವೋಲ್ಮುಕಾದಿಭಿಃ ।
ಆತ್ಮಮಾಂಸಾದನಂ ಕ್ವಾಪಿ ಸ್ವಕೃತ್ತಂ ಪರತೋಽಪಿ ವಾ ॥ ೨೫ ॥

ಜೀವತಶ್ಚಾಂತ್ರಾಭ್ಯುದ್ಧಾರಃ ಶ್ವಗೃಧ್ರೈರ್ಯಮಸಾದನೇ ।
ಸರ್ಪವೃಶ್ಚಿಕದಂಶಾದ್ಯೈರ್ದಶದ್ಭಿಶ್ಚಾತ್ಮವೈಶಸಮ್ ॥ ೨೬ ॥

ಕೃಂತನಂ ಚಾವಯವಶೋ ಗಜಾದಿಭ್ಯೋ ಭಿದಾಪನಮ್ ।
ಪಾತನಂ ಗಿರಿಶೃಂಗೇಭ್ಯೋ ರೋಧನಂ ಚಾಂಬುಗರ್ತಯೋಃ ॥ ೨೭ ॥

ಯಾಸ್ತಾಮಿಸ್ರಾಂಧತಾಮಿಸ್ರಾ ರೌರವಾದ್ಯಾಶ್ಚ ಯಾತನಾಃ ।
ಭುಂಕ್ತೇ ನರೋ ವಾ ನಾರೀ ವಾ ಮಿಥಃ ಸಂಗೇನ ನಿರ್ಮಿತಾಃ ॥ ೨೮ ॥

ಅತ್ರೈವ ನರಕಃ ಸ್ವರ್ಗ ಇತಿ ಮಾತಃ ಪ್ರಚಕ್ಷತೇ ।
ಯಾ ಯಾತನಾ ವೈ ನಾರಕ್ಯಸ್ತಾ ಇಹಾಪ್ಯುಪಲಕ್ಷಿತಾಃ ॥ ೨೯ ॥

ಏವಂ ಕುಟುಂಬಂ ಬಿಭ್ರಾಣ ಉದರಂಭರ ಏವ ವಾ ।
ವಿಸೃಜ್ಯೇಹೋಭಯಂ ಪ್ರೇತ್ಯ ಭುಂಕ್ತೇ ತತ್ಫಲಮೀದೃಶಮ್ ॥ ೩೦ ॥

ಏಕಃ ಪ್ರಪದ್ಯತೇ ಧ್ವಾಂತಂ ಹಿತ್ವೇದಂ ಸ್ವಕಲೇವರಮ್ ।
ಕುಶಲೇತರಪಾಥೇಯೋ ಭೂತದ್ರೋಹೇಣ ಯದ್ಭೃತಮ್ ॥ ೩೧ ॥

ಹಸಿವು-ಬಾಯಾರಿಕೆಗಳಿಂದ ಆತನು ಬಳಲಿ ಬೆಂಡಾಗಿ ಉರಿಯುತ್ತಿರುವ ಕಾಡ್ಗಿಚ್ಚಿನ ಜ್ವಾಲೆಗಳಿಂದ ಸುಟ್ಟುಹೋಗತೊಡಗುವನು. ಇಂತಹ ಸ್ಥಿತಿಯಲ್ಲಿ ನೀರು-ನೆರಳಿಲ್ಲದ ಕಾದ ಮರಳಿನ ದಾರಿಯಲ್ಲಿ ಒಂದು ಹೆಜ್ಜೆಯೂ ಮುಂದಿಡಲು ಶಕ್ತಿಯೂ ಇಲ್ಲದಿದ್ದಾಗ ಯಮದೂತರು ಬೆನ್ನಿನ ಮೇಲೆ ಚಾವಟಿಗೆಯ ಏಟುಗಳನ್ನು ಕೊಡುತ್ತಿರುತ್ತಾರೆ. ಆಗಲೂ ಅತಿಕಷ್ಟದಿಂದಲಾದರೂ ಮುಂದೆ ಹೋಗಲೇಬೇಕಾಗುತ್ತದೆ. ॥ ೨೨ ॥ ಅಲ್ಲಲ್ಲಿ ಬಳಲಿಕೆಯಿಂದ ಏಳುತ್ತಾ-ಬೀಳುತ್ತಾ ಮೂರ್ಛೆ ಬೀಳುತ್ತಿದ್ದರೂ, ಜ್ಞಾನ ಬಂದ ಮೇಲೆ ಮತ್ತೆ ಏಳುತ್ತಾನೆ. ಹೀಗೆ ಅತಿ ದುಃಖಮಯ ಮಾರ್ಗದಿಂದ ಅತ್ಯಂತ ಕ್ರೂರ ಯಮದೂತರು ಅವನನ್ನು ಶೀಘ್ರವಾಗಿ ಯಮಲೋಕಕ್ಕೆ ಒಯ್ಯುವರು. ॥ ೨೩ ॥ ಯಮಲೋಕದ ದಾರಿಯ ಉದ್ದ ತೊಂಬತ್ತೊಂಭತ್ತು ಸಾವಿರ ಯೋಜನಗಳು. ಅಷ್ಟು ದೂರದ ದಾರಿಯನ್ನು ಕೇವಲ ಎರಡು-ಮೂರು ಮುಹೂರ್ತಗಳಲ್ಲೇ ದಾಟಿ ಅವನು ನರಕದಲ್ಲಿ ಬಗೆ-ಬಗೆಯ ಯಾತನೆಗಳನ್ನು ಭೋಗಿಸುವನು. ॥ ೨೪ ॥ ಅಲ್ಲಿ ಆತನ ದೇಹವನ್ನು ಉರಿಯುತ್ತಿರುವ ಕಟ್ಟಿಗೆಗಳೇ ಮುಂತಾದವುಗಳ ನಡುವೆ ಹಾಕಿ ಸುಡಲಾಗುವುದು. ಕೆಲವು ಕಡೆ ತನ್ನ ದೇಹವನ್ನು ತಾನೇ ಕತ್ತರಿಸಿಕೊಂಡು ಅಥವಾ ಇತರರು ಕತ್ತರಿಸಿದ ತನ್ನ ಮಾಂಸವನ್ನೇ ತಿನ್ನಿಸಲಾಗುತ್ತದೆ. ॥ ೨೫ ॥ ಯಮಪುರಿಯ ನಾಯಿಗಳು ಅಥವಾ ಹದ್ದುಗಳು ಜೀವಂತವಾಗಿರುವಾಗಲೇ ಆತನ ಕರುಳುಗಳನ್ನೂ ಕಚ್ಚಿ ಕೀಳುತ್ತವೆ. ಹಾವು, ಚೇಳು, ಸೊಳ್ಳೆ, ಚಿಗುಟ ಮುಂತಾದವುಗಳಿಂದ ಕಚ್ಚಿಸಿ ಹಿಂಸಿಸಲಾಗುತ್ತದೆ. ॥ ೨೬ ॥ ಆತನ ಶರೀರವನ್ನು ತುಂಡು-ತುಂಡಾಗಿ ಕತ್ತರಿಸಲಾಗುತ್ತದೆ. ಆನೆಯ ಕಾಲಿನಿಂದ ತುಳಿಸಲಾಗುವುದು. ಪರ್ವತಶಿಖರದಿಂದ ತಳ್ಳಲಾಗುತ್ತದೆ. ನೀರಿನಲ್ಲಿ ಅಥವಾ ಹೊಂಡದಲ್ಲಿ ಹಾಕಿ ಮುಚ್ಚಲಾಗುತ್ತದೆ. ॥ ೨೭ ॥ ಇವೆಲ್ಲ ಯಾತನೆಗಳನ್ನೂ ಹಾಗೂ ಇದೇ ರೀತಿಯಲ್ಲಿ ತಾಮಿಸ್ರ, ಅಂಧತಾಮಿಸ್ರ, ರೌರವಗಳೇ ಮುಂತಾದ ನರಕಗಳ ಇನ್ನೂ ಅನೇಕ ಯಾತನೆಗಳನ್ನು ಜೀವಿಯು ಹೆಂಗಸರಾಗಲೀ, ಗಂಡಸರಾಗಲಿ ಪರಸ್ಪರ ದುಷ್ಟವಾದ ಸಂಸರ್ಗದಿಂದ ಉಂಟಾದ ಪಾಪಗಳ ಫಲವಾಗಿ ಅನುಭವಿಸಬೇಕಾಗುತ್ತವೆ. ॥ ೨೮ ॥ ತಾಯೇ! ಸ್ವರ್ಗ ಮತ್ತು ನರಕಗಳಾದರೋ ಇದೇ ಭೂಲೋಕದಲ್ಲಿವೆ ಎಂದು ಕೆಲವರು ಹೇಳುತ್ತಾರೆ. ಏಕೆಂದರೆ, ನರಕದ ಯಾತನೆಗಳನ್ನು ಇಲ್ಲಿಯೂ ನೋಡಲಾಗುತ್ತದೆ. ॥ ೨೯ ॥

ಈ ವಿಧವಾಗಿ ಅನೇಕ ಕಷ್ಟಗಳನ್ನು ಭೋಗಿಸುತ್ತಾ ತಮ್ಮ ಕುಟುಂಬವನ್ನೇ ಸಾಕುತ್ತಾ ಅಥವಾ ಕೇವಲ ತನ್ನ ಹೊಟ್ಟೆಯನ್ನೇ ತುಂಬಿಸಿಕೊಳ್ಳುವ ಮನುಷ್ಯನು ಆ ಕುಟುಂಬವನ್ನು ಮತ್ತು ಶರೀರವನ್ನು ಎರಡನ್ನೂ ಇಲ್ಲಿಯೇ ಬಿಟ್ಟು ತಾನು ಮಾಡಿದ ಪಾಪಗಳ ಫಲವನ್ನು ಸತ್ತನಂತರ ಭೋಗಿಸಬೇಕಾಗುತ್ತದೆ. ॥ ೩೦ ॥ ತನ್ನ ಶರೀರವನ್ನು ಇಲ್ಲಿಯೇ ಬಿಟ್ಟು ಪ್ರಾಣಿಗಳಿಗೆ ದ್ರೋಹವನ್ನೆಸಗಿ ಸಂಗ್ರಹಿಸಿದ ಪಾಪರೂಪವಾದ ಬುತ್ತಿಯನ್ನು ಮಾತ್ರ ತೆಗೆದುಕೊಂಡು ಒಬ್ಬಂಟಿಗನಾಗಿ ನರಕಕ್ಕೆ ಹೋಗುತ್ತಾನೆ. ॥ ೩೧ ॥ ತನ್ನ ಕುಟುಂಬದ ಹೊಟ್ಟೆಹೊರೆಯಲು ತಾನು ಮಾಡಿದ ಅನ್ಯಾಯದ ಫಲವನ್ನು ಅವನು ತಾನೇ ಅನುಭವಿಸಬೇಕಾಗುವುದು. ದೈವದಿಂದ ನಿರ್ದಿಷ್ಟವಾದ ಆ ಪಾಪ

ದೈವೇನಾಸಾದಿತಂ ತಸ್ಯ ಶಮಲಂ ನಿರಯೇ ಪುಮಾನ್ ।
ಭುಂಕ್ತೇ ಕುಟುಂಬಪೋಷಸ್ಯ ಹೃತವಿತ್ತ ಇವಾತುರಃ ॥ ೩೨ ॥

ಕೇವಲೇನ ಹ್ಯಧರ್ಮೇಣ ಕುಟುಂಬಭರಣೋತ್ಸುಕಃ ।
ಯಾತಿ ಜೀವೋಽಂಧತಾಮಿಸ್ರಂ ಚರಮಂ ತಮಸಃ ಪದಮ್ ॥ ೩೩ ॥

ಅಧಸ್ತಾನ್ನರಲೋಕಸ್ಯ ಯಾವತೀರ್ಯಾತನಾದಯಃ ।
ಕ್ರಮಶಃ ಸಮನುಕ್ರಮ್ಯ ಪುನರತ್ರಾವ್ರಜೇಚ್ಛುಚಿಃ ॥ ೩೪ ॥

ಗಳ ಫಲವನ್ನು ಆತನು ನರಕದಲ್ಲಿ ಭೋಗಿಸುತ್ತಾನೆ. ತನ್ನ ಸರ್ವಸ್ವವೂ ಕೊಳ್ಳೆಹೋಯಿತೋ ಎಂಬಂತೆ ಕಳವಳಕ್ಕೆ ಈಡಾಗುವನು. ॥ ೩೨ ॥ ಕೇವಲ ಅಧರ್ಮದಿಂದಲೇ ಕುಟುಂಬವನ್ನು ಸಾಕುವುದರಲ್ಲೇ ಆಸಕ್ತನಾಗಿರುವ ಜೀವಿಯು ಅಂಧತಾಮಿಸ್ರ ನರಕಕ್ಕೆ ಹೋಗುತ್ತಾನೆ. ಅದು ಎಲ್ಲ ನರಕಗಳಲ್ಲಿಯೂ ಚರಮಸೀಮೆಯ ಕಷ್ಟಪ್ರದಸ್ಥಾನವಾಗಿದೆ. ॥ ೩೩ ॥ ಮನುಷ್ಯಜನ್ಮವನ್ನು ಪಡೆಯುವ ಮೊದಲು ನರಿ-ನಾಯಿಗಳೇ ಮುಂತಾದ ಯೋನಿಗಳಲ್ಲಿ ಇರುವ ಕಷ್ಟಗಳೆಲ್ಲವನ್ನು ಕ್ರಮವಾಗಿ ಅನುಭವಿಸಿ ಶುದ್ಧವಾಗಿ ಮತ್ತೆ ಮನುಷ್ಯ ಯೋನಿಯಲ್ಲಿ ಹುಟ್ಟುವನು. ॥ ೩೪ ॥

**ಮೂವತ್ತನೆಯ ಅಧ್ಯಾಯವು ಮುಗಿಯಿತು. ॥ ೩೦ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಕಾಪಿಲೇಯೋಪಾಖ್ಯಾನೇ ಕರ್ಮವಿಪಾಕೋ ನಾಮ ತ್ರಿಂಶೋಽಧ್ಯಾಯಃ ॥ ೩೦ ॥**

# ಮೂವತ್ತೊಂದನೆಯ ಅಧ್ಯಾಯ

## ಗರ್ಭಸ್ಥ ಜೀವಿಯ ಬೆಳವಣಿಗೆ

*ಶ್ರೀಭಗವಾನುವಾಚ*

ಕರ್ಮಣಾ ದೈವನೇತ್ರೇಣ ಜಂತುರ್ದೇಹೋಪಪತ್ತಯೇ ।
ಸ್ತ್ರಿಯಾಃ ಪ್ರವಿಷ್ಟ ಉದರಂ ಪುಂಸೋ ರೇತಃಕಣಾಶ್ರಯಃ ॥ ೧ ॥

ಕಲಲಂ ತ್ವೇಕರಾತ್ರೇಣ ಪಂಚರಾತ್ರೇಣ ಬುದ್ಬುದಮ್ ।
ದಶಾಹೇನ ತು ಕರ್ಕಂಧೂಃ ಪೇಶ್ಯಂಡಂ ವಾ ತತಃ ಪರಮ್ ॥ ೨ ॥

ಮಾಸೇನ ತು ಶಿರೋ ದ್ವಾಭ್ಯಾಂ ಬಾಹ್ವಂಘ್ರ್ಯಾದ್ಯಂಗವಿಗ್ರಹಃ ।
ನಖಲೋಮಾಸ್ಥಿ ಚರ್ಮಾಣಿ ಲಿಂಗಚ್ಛಿದ್ರೋದ್ಭವಸ್ತ್ರಿಭಿಃ ॥ ೩ ॥

ಚತುರ್ಭಿರ್ಧಾತವಃ ಸಪ್ತ ಪಂಚಭಿಃ ಕ್ಷುತ್ತೃಡುದ್ಭವಃ ।
ಷಡ್ಭಿರ್ಜರಾಯುಣಾ ವೀತಃ ಕುಕ್ಷೌ ಭ್ರಾಮ್ಯತಿ ದಕ್ಷಿಣೇ ॥ ೪ ॥

ಮಾತುರ್ಜಗ್ಧಾನ್ನಪಾನಾದ್ಯೈರೇಧದ್ಧಾತುರಸಮ್ಮತೇ ।
ಶೇತೇ ವಿಣ್ಮೂತ್ರಯೋರ್ಗರ್ತೇ ಸ ಜಂತುರ್ಜಂತುಸಂಭವೇ ॥ ೫ ॥

ಶ್ರೀಕಪಿಲಭಗವಂತನು ಹೇಳುತ್ತಾನೆ – ಅಮ್ಮಾ! ಜೀವಿಯು ಮನುಷ್ಯ ದೇಹವನ್ನು ಪಡೆಯಬೇಕಾದಾಗ ಅವನು ಭಗವಂತನ ಪ್ರೇರಣೆಯಿಂದ, ತನ್ನ ಹಿಂದಿನ ಕರ್ಮಾನುಸಾರವಾಗಿ – ಪುರುಷನ ವೀರ್ಯಕಣದ ಮೂಲಕ ಸ್ತ್ರೀಯ ಗರ್ಭಾಶಯವನ್ನು ಪ್ರವೇಶಿಸುವನು. ॥ ೧ ॥ ಅಲ್ಲಿ ಒಂದು ರಾತ್ರಿಯಲ್ಲಿ ಸ್ತ್ರೀಯ ರಜಸ್ಸಿನಲ್ಲಿ ಕಲೆತು 'ಕಲಲ' ಎಂಬ ರೂಪವನ್ನು ತಾಳುವನು. ಐದು ರಾತ್ರಿಗಳಲ್ಲಿ ಬುದ್ಬುದನಾಗಿ, ಹತ್ತು ದಿನಗಳಲ್ಲಿ ಬೋರೆಯ ಹಣ್ಣಿನಂತೆ ಸ್ವಲ್ಪ ಗಟ್ಟಿಯಾಗುವನು. ಅನಂತರ ಮಾಂಸದ ಮುದ್ದೆಯ ಅಥವಾ ಮೊಟ್ಟೆಯ ಆಕಾರವನ್ನು ತಳೆಯುವನು. ॥ ೨ ॥ ಒಂದು ತಿಂಗಳಲ್ಲಿ ಅದರಲ್ಲೇ ಅವನ ತಲೆಯು ಏರ್ಪಡುವುದು. ಎರಡು ತಿಂಗಳುಗಳಲ್ಲಿ ಕೈ, ಕಾಲು ಮುಂತಾದ ಅವಯವಗಳ ವಿಭಾಗವಾಗುತ್ತದೆ. ಮೂರು ತಿಂಗಳಲ್ಲಿ ಉಗುರು, ರೋಮ, ಎಲುಬು, ಚರ್ಮ, ಹೆಣ್ಣು-ಗಂಡು ಸೂಚಿಸುವ ಚಿಹ್ನೆ ಹಾಗೂ ಇತರ ಛಿದ್ರಗಳು ಉತ್ಪನ್ನವಾಗುತ್ತವೆ. ॥ ೩ ॥ ನಾಲ್ಕು ತಿಂಗಳುಗಳಲ್ಲಿ ಮಾಂಸವೇ ಮುಂತಾದ ಏಳು ಧಾತುಗಳೂ ಉಂಟಾಗುವವು. ಐದನೆಯ ತಿಂಗಳಲ್ಲಿ ಹಸಿವು-ಬಾಯಾರಿಕೆಗಳು ಆಗತೊಡಗುತ್ತವೆ. ಆರನೆಯ ತಿಂಗಳಿನಲ್ಲಿ ಅದು ಗರ್ಭದ ಚೀಲದಿಂದ ಆವರಿಸಲ್ಪಟ್ಟು ಗರ್ಭಕೋಶದ ಬಲಭಾಗದಲ್ಲಿ ತಿರುಗುವುದು. ॥ ೪ ॥ ಆಗ ತಾಯಿಯು ತಿಂದಿರುವ ಅನ್ನ-ನೀರುಗಳಿಂದ ಅದರ ಎಲ್ಲ ಧಾತುಗಳು ಪುಷ್ಟವಾಗತೊಡಗುವವು. ಹಾಗೆಯೇ ಅದು ಕ್ರಿಮಿ, ಕೀಟ ಮುಂತಾದ ಜಂತುಗಳಿಗೆ ಉತ್ಪತ್ತಿಸ್ಥಾನವಾದ ಮಲ-ಮೂತ್ರಗಳ ಹಳ್ಳದಲ್ಲಿ ಬಿದ್ದುಕೊಂಡಿರುವುದು. ॥ ೫ ॥

ಕೃಮಿಭಿಃ ಕ್ಷತಸರ್ವಾಂಗಃ ಸೌಕುಮಾರ್ಯಾತ್ಪ್ರತಿಕ್ಷಣಮ್ ।
ಮೂರ್ಛಾಮಾಪ್ನೋತ್ಯುರುಕ್ಲೇಶಸ್ತತ್ರತ್ಯೈಃ ಕ್ಷುಧಿತೈರ್ಮುಹುಃ
॥ ೬ ॥

ಕಟುತೀಕ್ಷ್ಣೋಷ್ಣಲವಣರೂಕ್ಷಾಮ್ಲಾದಿಭಿರುಲ್ಬಣೈಃ ।
ಮಾತೃಭುಕ್ತೈರುಪಸ್ಪೃಷ್ಟಃ ಸರ್ವಾಂಗೋತ್ಥಿತವೇದನಃ
॥ ೭ ॥

ಉಲ್ಬೇನ ಸಂವೃತಸ್ತಸ್ಮಿನ್ನಂತ್ರೈಶ್ಚ ಬಹಿರಾವೃತಃ ।
ಆಸ್ತೇ ಕೃತ್ವಾ ಶಿರಃ ಕುಕ್ಷೌ ಭುಗ್ನಪೃಷ್ಠಶಿರೋಧರಃ
॥ ೮ ॥

ಅಕಲ್ಪಃ ಸ್ವಾಂಗಚೇಷ್ಟಾಯಾಂ ಶಕುಂತ ಇವ ಪಂಜರೇ ।
ತತ್ರ ಲಬ್ಧ ಸ್ಮೃತಿರ್ದೈವಾತ್ಕರ್ಮ ಜನ್ಮಶತೋದ್ಭವಮ್ ।
ಸ್ಮರಂದೀರ್ಘಮನುಚ್ಛ್ವಾಸಂ ಶರ್ಮ ಕಿಂ ನಾಮ ವಿಂದತೇ
॥ ೯ ॥

ಆರಭ್ಯ ಸಪ್ತಮಾನ್ಮಾಸಾಲ್ಲಬ್ಧ ಬೋಧೋऽಪಿ ವೇಪಿತಃ ।
ನೈಕತ್ರಾಸ್ತೇ ಸೂತಿವಾತೈರ್ವಿಷ್ಠಾಭೂರಿವ ಸೋದರಃ
॥ ೧೦ ॥

ನಾಥಮಾನ ಋಷಿರ್ಭೀತಃ ಸಪ್ತವಧ್ರಿಃ ಕೃತಾಂಜಲಿಃ ।
ಸ್ತುವೀತ ತಂ ವಿಕ್ಲವಯಾ ವಾಚಾ ಯೇನೋದರೇऽರ್ಪಿತಃ
॥ ೧೧ ॥

ಜಂತುರುವಾಚ

ತಸ್ಯೋಪಸನ್ನಮವಿತುಂ ಜಗದಿಚ್ಛಯಾತ್ತ-
ನಾನಾತನೋರ್ಭುವಿ ಚಲಚ್ಚರಣಾರವಿಂದಮ್ ।
ಸೋऽಹಂ ವ್ರಜಾಮಿ ಶರಣಂ ಹ್ಯಕುತೋಭಯಂ ಮೇ
ಯೇನೇದೃಶೀ ಗತಿರದರ್ಶ್ಯಸತೋऽನುರೂಪಾ ॥ ೧೨ ॥

ಯಸ್ತ್ವತ್ರ ಬದ್ಧ ಇವ ಕರ್ಮಭಿರಾವೃತಾತ್ಮಾ
ಭೂತೇಂದ್ರಿಯಾಶಯಮಯೀಮವಲಂಬ್ಯ ಮಾಯಾಮ್ ।
ಆಸ್ತೇ ವಿಶುದ್ಧ ಮವಿಕಾರಮಖಂಡಬೋಧ-
ಮಾತಪ್ಯಮಾನಹೃದಯೇऽವಸಿತಂ ನಮಾಮಿ ॥ ೧೩ ॥

ಯಃ ಪಂಚಭೂತರಚಿತೇ ರಹಿತಃ ಶರೀರೇ-
ಚ್ಛನ್ನೋ ಯಥೇಂದ್ರಿಯಗುಣಾರ್ಥಚಿದಾತ್ಮ ಕೋऽಹಮ್ ।
ತೇನಾವಿಕುಂಠ ಮಹಿಮಾನಮೃಷಿಂ ತಮೇನಂ
ವಂದೇ ಪರಂ ಪ್ರಕೃತಿಪೂರುಷಯೋಃ ಪುಮಾಂಸಮ್ ॥ ೧೪ ॥

ಅದರ ದೇಹವು ತುಂಬಾ ಕೋಮಲವಾಗಿರುವುದರಿಂದ ಅಲ್ಲಿಯ ಹಸಿದ ಕ್ರಿಮಿಗಳು ಅದರ ಅಂಗಾಂಗಗಳನ್ನು ಕಚ್ಚುವವು. ಆ ಕ್ಲೇಶವನ್ನು ತಾಳಲಾರದೆ ಕ್ಷಣ-ಕ್ಷಣಕ್ಕೂ ಮೂರ್ಛಿತನಾಗುವನು. ॥ ೬ ॥ ತಾಯಿಯು ತಿಂದಿರುವ ಕಹಿ, ಖಾರ, ಒಗರು, ಉಪ್ಪು ಹುಳಿ ಮುಂತಾದ ತೀಕ್ಷ್ಣ ಪದಾರ್ಥಗಳ ಸ್ಪರ್ಶದಿಂದ ಅದರ ದೇಹಕ್ಕೆಲ್ಲ ಪೀಡೆಯುಂಟಾಗುವುದು. ॥ ೭॥ ಆ ಜೀವಿಯು ತಾಯಿಯ ಗರ್ಭಾಶಯದಲ್ಲಿ ಗರ್ಭಚೀಲದಿಂದ ಮುಚ್ಚಲ್ಪಟ್ಟು ಕರುಳಬಳ್ಳಿಗಳಿಂದ ಸುತ್ತುವರಿಯಲ್ಪಡುತ್ತದೆ. ಅದು ಬೆನ್ನನ್ನೂ ಕೊರಳನ್ನೂ ಕುಂಡಲಾಕಾರವಾಗಿ ಬಗ್ಗಿಸಿಕೊಂಡು ತಲೆಯು ಹೊಟ್ಟೆಯಕಡೆಗೆ ವಾಲಿರುತ್ತದೆ. ॥ ೮ ॥

ಅದು ಪಂಜರದಲ್ಲಿ ಸೆರೆಸಿಕ್ಕಿದ ಹಕ್ಕಿಯಂತೆ ಪರಾಧೀನವಾಗಿ, ತನ್ನ ಅಂಗಾಂಗಗಳನ್ನು ಆಡಿಸುವುದಕ್ಕೂ ಅಸಮರ್ಥವಾಗಿರುತ್ತದೆ. ಆಗಲೇ ಅದೃಷ್ಟದ ಪ್ರೇರಣೆಯಿಂದ ಅದಕ್ಕೆ ಸ್ಮರಣಶಕ್ತಿಯು ಉಂಟಾಗುತ್ತದೆ. ಆಗ ತನ್ನ ನೂರಾರು ಜನ್ಮಗಳ ಕರ್ಮಗಳು ನೆನಪಾಗಿ ಪಶ್ಚಾತ್ತಾಪದಿಂದ ನಿಟ್ಟುಸಿರುಬಿಡುತ್ತಾನೆ. ಅಂತಹ ಸ್ಥಿತಿಯಲ್ಲಿ ಅದಕ್ಕೆ ನೆಮ್ಮದಿಯಾದರೂ ಹೇಗೆ ತಾನೇ ದೊರೆಯಬಲ್ಲದು ? ॥ ೯ ॥ ಏಳನೆಯ ತಿಂಗಳು ಪ್ರಾರಂಭವಾದಾಗಿನಿಂದ ಅದಕ್ಕೆ ಜ್ಞಾನಶಕ್ತಿಯೂ ಉಂಟಾಗುವುದು. ಆದರೆ ಪ್ರಸೂತಿವಾಯುವಿನಿಂದ ಅತ್ತ-ಇತ್ತ ಕದಲಿಸಲ್ಪಡುತ್ತಾ, ಅದೇ ಹೊಟ್ಟೆಯಲ್ಲಿ ಹುಟ್ಟಿಕೊಂಡ ಮಲದ ಕ್ರಿಮಿಯಂತೆ ಒಂದೆಡೆಯಲ್ಲಿ ನಿಲ್ಲದೆ ಅಲ್ಲಿಯೇ ಚಲಿಸುತ್ತಿರುತ್ತದೆ. ॥ ೧೦ ॥ ಆಗ ಸಪ್ತಧಾತುಗಳಿಂದ ಸ್ಥೂಲಶರೀರದಲ್ಲಿ ಬಂಧಿತನಾದ ಆ ದೇಹಾತ್ಮದರ್ಶಿ ಜೀವವು ಅತ್ಯಂತ ಭಯಭೀತನಾಗಿ ದೀನವಾಣಿಯಿಂದ ಪರಮಾತ್ಮನ ಕೃಪೆಯನ್ನು ಯಾಚಿಸುವುದು. ತನ್ನನ್ನು ಆ ತಾಯಿಯ ಗರ್ಭವಾಸಕ್ಕೆ ಸೇರಿಸಿದ ಸ್ವಾಮಿಯನ್ನು ಕೈಜೋಡಿಸಿಕೊಂಡು ಹೀಗೆ ಸ್ತುತಿಸುವನು. ॥ ೧೧ ॥

**ಜೀವವು ಹೇಳುತ್ತದೆ** – ಪ್ರಭೋ! ನಾನು ತುಂಬಾ ಅಧಮನಾಗಿರುವೆನು. ಭಗವಂತನು ಕೊಟ್ಟಿರುವ ಈ ಗತಿಯು ನನಗೆ ಯೋಗ್ಯವೇ ಆಗಿದೆ. ಅವನು ಶರಣು ಬಂದಿರುವ ನಶ್ವರ ಜಗತ್ತಿನ ರಕ್ಷಣೆಗಾಗಿ ಅನೇಕ ವಿಧದ ರೂಪಗಳನ್ನು ಧರಿಸುತ್ತಾನೆ. ಆದ್ದರಿಂದ ನಾನು ಕೂಡ ಭೂತಲದಲ್ಲಿ ವಿಚರಣಮಾಡುವ ಅವನ ನಿರ್ಭಯ ಚರಣಾರವಿಂದಗಳಲ್ಲಿ ಶರಣಾಗಿರುವೆನು. ॥ ೧೨ ॥ ನಾನು (ಜೀವ) ನನ್ನ ಕರ್ಮವಾಸನೆಯಿಂದ ಬಂಧಿತನಾಗಿದ್ದೇನೆ. ಅಲ್ಲದೆ ಭೂತ, ಇಂದ್ರಿಯಗಳಿಗೆ ಆಶ್ರಯವಾಗಿರುವ ದೇಹರೂಪಿ ಮಾಯೆಯನ್ನು ಆಶ್ರಯಿಸಿದ್ದೇನೆ. ನನ್ನ ಪರಿತಪ್ತ ಹೃದಯದಲ್ಲಿಯೇ ನೀನು ಇದ್ದರೂ ನಿನ್ನ ಸ್ವರೂಪವು ಶುದ್ಧವೂ ಅವಿಕಾರಿಯೂ, ಅಖಂಡ ಜ್ಞಾನಸ್ವರೂಪವೂ ಆಗಿದೆ. ಅಂತಹ ಪರಮಪುರುಷನಿಗೆ ನಾನು ನಮಸ್ಕರಿಸುತ್ತೇನೆ. ॥ ೧೩ ॥ ನಾನು ವಾಸ್ತವವಾಗಿ ಶರೀರಾದಿಗಳಿಂದ ರಹಿತ (ಅಸಂಗ)ನಾಗಿದ್ದರೂ ನೋಡಲು ಪಾಂಚಭೌತಿಕ ಶರೀರದಿಂದ ಬದ್ಧನಾಗಿದ್ದೇನೆ. ಇದರಿಂದ ಇಂದ್ರಿಯ, ಗುಣ, ಶಬ್ದಾದಿ ವಿಷಯ ಮತ್ತು ಚಿದಾಭಾಸ (ಅಹಂಕಾರ) ರೂಪನಾಗಿ ತಿಳಿಯಲ್ಪಡುವೆನು. ಆದ್ದರಿಂದ ಈ ಶರೀರಾದಿ ಆವರಣಗಳಿಂದ ಯಾರ ಮಹಿಮೆಯು ಮುಚ್ಚಲ್ಪಟ್ಟಿಲ್ಲವೋ, ಆ ಪ್ರಕೃತಿ ಮತ್ತು ಪುರುಷರ ನಿಯಾಮಕನೂ, ಸರ್ವಜ್ಞನೂ ಆದ ಪರಮಪುರುಷನನ್ನು ನಾನು ವಂದಿಸುತ್ತಿದ್ದೇನೆ. ॥ ೧೪ ॥

ಯನ್ಮಾಯಯೋರುಗುಣಕರ್ಮನಿಬಂಧನೇಽಸ್ಮಿನ್
ಸಾಂಸಾರಿಕೇ ಪಥಿ ಚರಂಸ್ತದಭಿಶ್ರಮೇಣ ।
ನಷ್ಟಸ್ಮೃತಿಃ ಪುನರಯಂ ಪ್ರವೃಣೀತ ಲೋಕಂ
ಯುಕ್ತ್ಯಾ ಕಯಾ ಮಹದನುಗ್ರಹಮಂತರೇಣ ॥ ೧೫ ॥

ಜ್ಞಾನಂ ಯದೇತದದಧಾತ್ಕತಮಃ ಸ ದೇವ-
ಸ್ತ್ರೈಕಾಲಿಕಂ ಸ್ಥಿರಚರೇಷ್ವನುವರ್ತಿತಾಂಶಃ ।
ತಂ ಜೀವಕರ್ಮಪದವೀಮನುವರ್ತಮಾನಾ-
ಸ್ತಾಪತ್ರಯೋಪಶಮನಾಯ ವಯಂ ಭಜೇಮ ॥ ೧೬ ॥

ದೇಹ್ಯನ್ಯದೇಹವಿವರೇ ಜಠರಾಗ್ನಿನಾಸೃಗ್
ವಿಣ್ಮೂತ್ರಕೂಪಪತಿತೋ ಭೃಶತಪ್ತದೇಹಃ ।
ಇಚ್ಛನ್ನಿತೋ ವಿವಸಿತುಂ ಗಣಯನ್ಸ್ವಮಾಸಾನ್
ನಿರ್ವಾಸ್ಯತೇ ಕೃಪಣಧೀರ್ಭಗವನ್‌ಕದಾ ನು ॥ ೧೭ ॥

ಯೇನೇದೃಶೀಂ ಗತಿಮಸೌ ದಶಮಾಸ್ಯ ಈಶ
ಸಂಗ್ರಾಹಿತಃ ಪುರುದಯೇನ ಭವಾದೃಶೇನ ।
ಸ್ವೇನೈವ ತುಷ್ಯತು ಕೃತೇನ ಸ ದೀನನಾಥಃ
ಕೋ ನಾಮ ತತ್ಪ್ರತಿ ವಿನಾಂಜಲಿಮಸ್ಯ ಕುರ್ಯಾತ್ ॥ ೧೮ ॥

ಪಶ್ಯತ್ಯಯಂ ಧಿಷಣಯಾ ನನು ಸಪ್ತವಧ್ರಿಃ
ಶಾರೀರಕೇ ದಮಶರೀರ್ಯಪರಃ ಸ್ವದೇಹೇ ।
ಯತ್ಸೃಷ್ಟಯಾಽಽಸಂ ತಮಹಂ ಪುರುಷಂ ಪುರಾಣಂ
ಪಶ್ಯೇ ಬಹಿರ್ಹೃದಿ ಚ ಚೈತ್ಯಮಿವ ಪ್ರತೀತಮ್ ॥ ೧೯ ॥

ಸೋಽಹಂ ವಸನ್ನಪಿ ವಿಭೋ ಬಹುದುಃಖವಾಸಂ
ಗರ್ಭಾನ್ನ ನಿರ್ಜಿಗಮಿಷೇ ಬಹಿರಂಧಕೂಪೇ ।
ಯತ್ರೋಪಯಾತಮುಪಸರ್ಪತಿ ದೇವಮಾಯಾ
ಮಿಥ್ಯಾಮತಿರ್ಯದನು ಸಂಸೃತಿಚಕ್ರಮೇತತ್ ॥ ೨೦ ॥

ತಸ್ಮಾದಹಂ ವಿಗತವಿಕ್ಲವ ಉದ್ಧರಿಷ್ಯ
ಆತ್ಮಾನಮಾಶು ತಮಸಃ ಸುಹೃದಾತ್ಮನೈವ ।
ಭೂಯೋ ಯಥಾ ವ್ಯಸನಮೇತದನೇಕರಂಧ್ರಂ
ಮಾ ಮೇ ಭವಿಷ್ಯದುಪಸಾದಿತವಿಷ್ಣುಪಾದಃ ॥ ೨೧ ॥

ಅವನ ಮಾಯೆಯಿಂದಲೇ ತನ್ನ ಸ್ವರೂಪದ ಸ್ಮೃತಿಯು ನಾಶವಾದ ಕಾರಣ ಈ ಜೀವವು ಅನೇಕ ರೀತಿಯ ಸತ್ತ್ವಾದಿ ಗುಣಗಳ ಮತ್ತು ಕರ್ಮಗಳ ಬಂಧನದಿಂದ ಕೂಡಿದ್ದು ಈ ಸಂಸಾರದಲ್ಲಿ ಬಗೆ-ಬಗೆಯ ಕಷ್ಟಗಳನ್ನು ಸಹಿಸುತ್ತಾ ಅಲೆಯುತ್ತಿರುವೆನು. ಆದ್ದರಿಂದ ಆ ಪರಮಪುರುಷ ಪರಮಾತ್ಮನ ಕೃಪೆಯಿಲ್ಲದೆ ಬೇರೆ ಯಾವುದೇ ಯುಕ್ತಿಗಳಿಂದ ನನಗೆ ನನ್ನ ಸ್ವರೂಪದ ಜ್ಞಾನವು ಉಂಟಾಗಲಾರದು. ॥ ೧೫ ॥ ನನಗೆ ಉಂಟಾದ ತ್ರೈಕಾಲಿಕ ಜ್ಞಾನವೂ ಆತನು ದಯಪಾಲಿಸಿದುದೇ ಆಗಿದೆ. ಆತನಲ್ಲದೆ ಬೇರೆ ಯಾರು ತಾನೇ ಇವನ್ನು ಕೊಡಬಲ್ಲರು ? ಸ್ಥಾವರಜಂಗಮರೂಪವಾದ ಸಮಸ್ತ ಪ್ರಾಣಿಗಳಲ್ಲಿಯೂ ಅವನೊಬ್ಬನೇ ಅಂತರ್ಯಾಮಿ ರೂಪವಾದ ಅಂಶದಿಂದ ನೆಲೆಸಿರುವನು. ಆದುದರಿಂದ ಜೀವಿಗಳ ಕರ್ಮಮಾರ್ಗವನ್ನು ಅನುಸರಿಸುತ್ತಿರುವ ನಾನು ತ್ರಿವಿಧತಾಪಗಳ ಶಮನಕ್ಕಾಗಿ ಆತನನ್ನೇ ಭಜಿಸುತ್ತೇನೆ. ॥ ೧೬ ॥

ಓ ಭಗವಂತಾ ! ಈ ದೇಹಧಾರಿಯಾದ ಜೀವನು ಮತ್ತೊಂದು (ತಾಯಿಯ) ದೇಹದಲ್ಲಿ ಮಲ-ಮೂತ್ರ, ರಕ್ತ ಇವುಗಳ ಮಡುವಿನಲ್ಲಿ ಬಿದ್ದಿರುವನು. ಅವಳ ಜಠರಾಗ್ನಿಯಿಂದ ಇವನ ದೇಹವು ಸುಡುತ್ತಿದೆ. ಇಲ್ಲಿಂದ ಯಾವಾಗ ಹೊರಬಿದ್ದೇನು ಎಂದು ತಿಂಗಳುಗಳನ್ನು ಎಣಿಸುತ್ತಿರುವನು. ಭಗವಂತಾ ! ಈ ದೀನನು ಯಾವಾಗ ಇಲ್ಲಿಂದ ಹೊರಬರುವನೋ ತಿಳಿಯದಾಗಿದೆ. ॥ ೧೭ ॥ ಸ್ವಾಮಿಯೇ ! ನೀನು ಪರಮದಯಾಳು ಆಗಿರುವೆ. ನಿನ್ನಂತಹ ಉದಾರಿಯಾದ ಪ್ರಭುವೇ ! ಈ ಹತ್ತುತಿಂಗಳ ಜೀವಕ್ಕೆ ಈ ಉತ್ಕೃಷ್ಟವಾದ ಜ್ಞಾನವನ್ನು ಕೊಟ್ಟಿರುವೆ. ಓ ದೀನಬಂಧೋ ! ನಿನಗೆ ಕೈ ಜೋಡಿಸುತ್ತೇನೆ, ಇಷ್ಟರಿಂದಲೇ ಪ್ರಸನ್ನನಾಗು. ಏಕೆಂದರೆ, ಇದಲ್ಲದೆ ನೀನು ಮಾಡಿದ ಉಪಕಾರವನ್ನು ಯಾರಾದರೂ ಹೇಗೆ ತೀರಿಸಬಲ್ಲರು ? ॥ ೧೮ ॥

ಪ್ರಭುವೇ ! ಪ್ರಪಂಚದ ಈ ಪಶು-ಪಕ್ಷಿ ಮುಂತಾದ ಬೇರೆ ಜೀವರಾದರೋ ತಮ್ಮ ಮೂಢ ಬುದ್ಧಿಗನುಸಾರವಾಗಿ ತಮ್ಮ ಶರೀರದಲ್ಲಾಗುವ ಸುಖ-ದುಃಖಾದಿಗಳನ್ನೇ ಅನುಭವಿಸುತ್ತಿರುತ್ತಾರೆ. ಆದರೆ ನಾನಾದರೋ ನಿನ್ನ ಕೃಪೆಯಿಂದ ಶಮ-ದಮಾದಿ ಸಾಧನ ಸಂಪನ್ನ ಶರೀರದಿಂದ ಕೂಡಿರುವೆನು. ಆದ್ದರಿಂದ ನೀನು ಕೊಟ್ಟಿರುವ ವಿವೇಕದಿಂದ ಕೂಡಿದ ಬುದ್ಧಿಯಿಂದ ಪುರಾಣಪುರುಷನಾದ ನಿನ್ನನ್ನು ನನ್ನ ಶರೀರದ ಹೊರಗೂ, ಹೃದಯದ ಒಳಗೂ ಆತ್ಮ ಚೈತನ್ಯಸ್ವರೂಪದಂತೆ ಪ್ರತ್ಯಕ್ಷವಾಗಿ ಅನುಭವಿಸುತ್ತಿದ್ದೇನೆ. ॥ ೧೯ ॥ ಶ್ರೀಭಗವಂತನೇ ! ಅತ್ಯಂತ ದುಃಖದಿಂದ ತುಂಬಿರುವ ಈ ಗರ್ಭಾಶಯದಲ್ಲಿ ನಾನು ಬಹು ಕಷ್ಟದಿಂದ ಇದ್ದರೂ, ಇದರಿಂದ ಹೊರ ಬಂದು ಸಂಸಾರಮಯವಾದ ಕತ್ತಲೆಯ ಬಾವಿಯಲ್ಲಿ ಬೀಳಲು ಖಂಡಿತವಾಗಿ ನನಗೆ ಇಷ್ಟವಿಲ್ಲ. ಏಕೆಂದರೆ, ಅಲ್ಲಿಗೆ ಹೋಗುವ ಜೀವರನ್ನು ನಿನ್ನ ಮಾಯೆಯು ಆವರಿಸಿಬಿಡುತ್ತದೆ. ಇದರಿಂದ ಅವನಿಗೆ ಶರೀರದಲ್ಲಿ ಅಹಂ ಬುದ್ಧಿಯು ಉಂಟಾಗುತ್ತದೆ ಹಾಗೂ ಅದರ ಪರಿಣಾಮದಿಂದ ಪುನಃ ಈ ಸಂಸಾರಚಕ್ರದಲ್ಲೇ ಬೀಳಬೇಕಾಗುತ್ತದೆ. ॥ ೨೦ ॥ ಆದ್ದರಿಂದ ನಾನು ಕಳವಳವನ್ನು ಬಿಟ್ಟು ಹೃದಯದಲ್ಲಿ ಭಗವಾನ್ ಶ್ರೀವಿಷ್ಣುವಿನ ಚರಣಗಳನ್ನು ನೆಲೆಗೊಳಿಸಿಕೊಂಡು, ತನ್ನ ಬುದ್ಧಿಯ ಸಹಾಯದಿಂದಲೇ ತನ್ನನ್ನು ಬಹುಬೇಗನೇ ಈ ಸಂಸಾರಸಮುದ್ರದಿಂದ ಉದ್ಧರಿಸಿಕೊಳ್ಳುವೆನು. ಆದ

*ಕಪಿಲ ಉವಾಚ*

**ಏವಂ ಕೃತಮತಿರ್ಗರ್ಭೇ ದಶಮಾಸ್ಯಃ ಸ್ತುವನ್ನೃಷಿಃ ।**
**ಸದ್ಯಃ ಕ್ಷಿಪತ್ಯವಾಚೀನಂ ಪ್ರಸೂತ್ಯೈ ಸೂತಿಮಾರುತಃ ॥ ೨೨ ॥**

**ತೇನಾವಸೃಷ್ಟಃ ಸಹಸಾ ಕೃತ್ವಾವಾಕ್ಶಿರ ಆತುರಃ ।**
**ವಿನಿಷ್ಕ್ರಾಮತಿ ಕೃಚ್ಛ್ರೇಣ ನಿರುಚ್ಛ್ವಾಸೋ ಹತಸ್ಮೃತಿಃ ॥ ೨೩ ॥**

**ಪತಿತೋ ಭುವ್ಯಸೃಙ್ಮೂತ್ರೇ ವಿಷ್ಠಾಭೂರಿವ ಚೇಷ್ಟತೇ ।**
**ರೋರೂಯತಿ ಗತೇ ಜ್ಞಾನೇ ವಿಪರೀತಾಂ ಗತಿಂ ಗತಃ ॥ ೨೪ ॥**

**ಪರಚ್ಛಂದಂ ನ ವಿದುಷಾ ಪುಷ್ಯಮಾಣೋ ಜನೇನ ಸಃ ।**
**ಅನಭಿಪ್ರೇತಮಾಪನ್ನಃ ಪ್ರತ್ಯಾಖ್ಯಾತುಮನೀಶ್ವರಃ ॥ ೨೫ ॥**

**ಶಾಯಿತೋಽಶುಚಿಪರ್ಯಂಕೇ ಜಂತುಃ ಸ್ವೇದಜದೂಷಿತೇ ।**
**ನೇಶಃ ಕಂಡೂಯನೇಽಂಗಾನಾಮಾಸನೋತ್ಥಾನಚೇಷ್ಟನೇ ॥ ೨೬ ॥**

**ತುದಂತ್ಯಾಮತ್ವಚಂ ದಂಶಾಃ ಮಶಕಾ ಮತ್ಕುಣಾದಯಃ ।**
**ರುದಂತಂ ವಿಗತಜ್ಞಾನಂ ಕೃಮಯಃ ಕೃಮಿಕಂ ಯಥಾ ॥ ೨೭ ॥**

**ಇತ್ಯೇವಂ ಶೈಶವಂ ಭುಕ್ತ್ವಾ ದುಃಖಂ ಪೌಗಂಡಮೇವ ಚ ।**
**ಅಲಬ್ಧಾಭೀಪ್ಸಿತೋಽಜ್ಞಾನಾದಿದ್ಧಮನ್ಯುಃ ಶುಚಾರ್ಪಿತಃ ॥ ೨೮ ॥**

**ಸಹ ದೇಹೇನ ಮಾನೇನ ವರ್ಧಮಾನೇನ ಮನ್ಯುನಾ ।**
**ಕರೋತಿ ವಿಗ್ರಹಂ ಕಾಮೀ ಕಾಮಿಷ್ವಂತಾಯ ಚಾತ್ಮನಃ ॥ ೨೯ ॥**

**ಭೂತೈಃ ಪಂಚಭಿರಾರಬ್ಧೇ ದೇಹೇ ದೇಹ್ಯಬುಧೋಽಸಕೃತ್ ।**
**ಅಹಂ ಮಮೇತ್ಯಸದ್ಗ್ರಾಹಃ ಕರೋತಿ ಕುಮತಿರ್ಮತಿಮ್ ॥ ೩೦ ॥**

**ತದರ್ಥಂ ಕುರುತೇ ಕರ್ಮ ಯದ್ಬದ್ಧೋ ಯಾತಿ ಸಂಸೃತಿಮ್ ।**
**ಯೋಽನುಯಾತಿ ದದತ್ಕ್ಲೇಶಮವಿದ್ಯಾಕರ್ಮಬಂಧನಃ ॥ ೩೧ ॥**

ರಿಂದ ಅನೇಕ ಪ್ರಕಾರದ ದೋಷಗಳಿಂದ ಕೂಡಿದ ಈ ಸಂಸಾರದ ದುಃಖವು ನನಗೆ ಪುನಃ ದೊರಕದಿರಲಿ. ॥ ೨೧ ॥

**ಶ್ರೀಕಪಿಲ ಭಗವಂತನು ಹೇಳುತ್ತಾನೆ** – ತಾಯೇ! ಆ ಹತ್ತು ತಿಂಗಳ ಜೀವವು ಹೀಗೆ ಗರ್ಭದಲ್ಲೇ ವಿವೇಕಸಂಪನ್ನವಾಗಿ ಭಗವಂತನನ್ನು ಸ್ತುತಿಸುತ್ತದೆ. ಆಗ ಕೆಳಮುಖವಾಗಿರುವ ಶಿಶುವನ್ನು ಪ್ರಸವ ಕಾಲದ ವಾಯುವು ಒಡನೆಯೇ ಹೊರಬರಲು ತಳ್ಳಿಬಿಡುತ್ತದೆ. ॥ ೨೨ ॥ ಹೀಗೆ ಇದ್ದಕ್ಕಿದ್ದಂತೆ ಆ ವಾಯು ಹೊರಗೆ ನೂಕಿದಾಗ ಆ ಮಗುವು ತುಂಬಾ ಕಳವಳಗೊಂಡು ತಲೆಕೆಳಗಾಗಿ ಅತಿಕಷ್ಟದಿಂದ ಹೊರಗೆ ಬರುವುದು. ಆಗ ಅದರ ಶ್ವಾಸಗತಿಯು ತಡೆಯಲ್ಪಟ್ಟು ಹಿಂದಿನ ಸ್ಮೃತಿಯು ಕಳೆದುಹೋಗುವುದು. ॥ ೨೩ ॥ ತಾಯಿಯ ರಕ್ತ ಮತ್ತು ಮೂತ್ರಗಳೊಡನೆ ಭೂಮಿಯ ಮೇಲೆ ಬಿದ್ದ ಆ ಶಿಶುವು ಮಲದ ಹುಳದಂತೆ ವಿಲವಿಲನೆ ಚಡಪಡಿಸುವುದು. ಅದರ ಗರ್ಭವಾಸದಲ್ಲಿ ಉಂಟಾದ ಎಲ್ಲ ಜ್ಞಾನವು ನಾಶಹೊಂದಿ, ಅದಕ್ಕೆ ವಿರುದ್ಧವಾದ ಗತಿಯನ್ನು – ಅಂದರೆ, ಅಜ್ಞಾನಾವಸ್ಥೆಯನ್ನು ಹೊಂದಿ ಅದು ಗಟ್ಟಿಯಾಗಿ ಅಳತೊಡಗುವುದು. ॥ ೨೪ ॥

ಮತ್ತೆ ಶಿಶುವಿನ ಅಭಿಪ್ರಾಯವನ್ನು ಅರಿಯದಿರುವ ಜನರು ಅದನ್ನು ಸಾಕಿ ಸಲಹುತ್ತಾರೆ. ಇಂತಹ ಸ್ಥಿತಿಯಲ್ಲಿ ಅದಕ್ಕೆ ಆಗುವ ಪ್ರತಿಕೂಲತೆಗಳನ್ನೂ ಕೂಡ ನಿಷೇಧಿಸುವ ಶಕ್ತಿಯೂ ಅದರಲ್ಲಿ ಇರುವುದಿಲ್ಲ. ॥ ೨೫ ॥ ತಿಗಣೆಯೇ ಮುಂತಾದ ಬೆವರಿನಿಂದ ಹುಟ್ಟುವ ಜಂತುಗಳಿಂದ ತುಂಬಿರುವ ಕೊಳಕು ಮಂಚ-ತೊಟ್ಟಿಲು-ಹಾಸಿಗೆಯಲ್ಲಿ ಅದನ್ನು ಮಲಗಿಸುವರು. ಆಗ ಅದಕ್ಕೆ ತನ್ನ ಅಂಗಗಳನ್ನು ಕೆರೆದುಕೊಳ್ಳುವುದಕ್ಕೂ, ಏಳುವುದಕ್ಕೂ, ಹೊರಳಾಡುವುದಕ್ಕೂ ಶಕ್ತಿಯಿಲ್ಲದೆ ಕಷ್ಟಪಡುವುದು. ॥ ೨೬ ॥ ಅದರ ಚರ್ಮವು ತುಂಬಾ ಕೋಮಲವಾಗಿರುತ್ತದೆ. ಅದನ್ನು ನೊಣ, ತಿಗಣೆ, ಸೊಳ್ಳೆ ಮುಂತಾದ ಕೀಟಗಳು ಚಿಕ್ಕಹುಳುಗಳು ದೊಡ್ಡ ಹುಳುಗಳನ್ನು ಕಚ್ಚುವಂತೆ ನೋಯಿಸುತ್ತಾ ಇರುತ್ತವೆ. ಈಗ ಅದರ ಗರ್ಭಾವಸ್ಥೆಯ ಎಲ್ಲ ಜ್ಞಾನವೂ ಹೊರಟುಹೋಗಿ, ಅಳುವುದಲ್ಲದೆ ಅದರಿಂದ ಬೇರೆ ಏನನ್ನೂ ಮಾಡಲಾಗುವುದಿಲ್ಲ. ॥ ೨೭ ॥

ಈ ಪ್ರಕಾರ ಬಾಲ್ಯ (ಕೌಮಾರ) ಮತ್ತು ಪೌಗಂಡವೆಂಬ ಬಾಲ್ಯ-ಯೌವನಗಳ ಮಧ್ಯಾವಸ್ಥೆಯ ದುಃಖವನ್ನು ಅನುಭವಿಸಿದ ಆ ಬಾಲಕನು ಯೌವನವನ್ನು ಹೊಂದುವನು. ಆಗ ಅತನಿಗೆ ಇಷ್ಟವಾದ ಭೋಗವು ಸಿಗದೆ ಇದ್ದರೆ ಅಜ್ಞಾನದಿಂದ ಕೋಪವು ಕೆರಳಿ ದುಃಖವೇಗಕ್ಕೆ ಒಳಗಾಗುವನು. ॥ ೨೮ ॥ ದೇಹದೊಂದಿಗೆ ಅಭಿಮಾನವೂ, ಕ್ರೋಧವೂ ಹೆಚ್ಚುವುದರಿಂದ ಆ ಕಾಮಪರವಶನಾದ ಜೀವನು ಇತರ ಕಾಮುಕರೊಡನೆ ತನ್ನ ವಿನಾಶಕರವಾದ ರೀತಿಯಲ್ಲಿ ಸ್ಪರ್ಧಿಸಿ ಕಾದಾಡುವನು. ॥ ೨೯ ॥ ದುರ್ಬುದ್ಧಿಯಿಂದ ಕೂಡಿದ ಅಜ್ಞಾನಿಯಾದ ಆ ಜೀವನು ಪಂಚಭೂತಗಳಿಂದ ನಿರ್ಮಿತವಾಗಿರುವ ಶರೀರದಲ್ಲಿ 'ನಾನು-ನನ್ನದು' ಎಂಬ ಅಭಿಮಾನ ಆಗ್ರಹವನ್ನು ಹೊಂದುವನು. ॥ ೩೦ ॥ ಮುಪ್ಪು ಖಾಯಿಲೆ ಮುಂತಾದ ಬಗೆ-ಬಗೆಯ ಕಷ್ಟಗಳನ್ನೇ ಕೊಡುತ್ತಾ; ಅವಿದ್ಯೆ, ಕಾಮ ಮತ್ತು ಕರ್ಮಗಳಿಗೆ ಕಟ್ಟುಬಿದ್ದು ಸದಾ ಈತನನ್ನು ಹಿಂಬಾಲಿಸುತ್ತಿರುವ ಆ ದೇಹದ ರಕ್ಷಣೆಗಾಗಿಯೇ ಕರ್ಮಗಳನ್ನು ಮಾಡುತ್ತಾ ಸಂಸಾರ ಚಕ್ರದಲ್ಲಿ ಸಿಕ್ಕಿಬೀಳುವನು. ॥ ೩೧ ॥

ಯದ್ಯಸದ್ಭಿಃ ಪಥಿ ಪುನಃ ಶಿಶ್ನೋದರಕೃತೋದ್ಯಮೈಃ ।
ಆಸ್ಥಿತೋ ರಮತೇ ಜಂತುಸ್ತಮೋ ವಿಶತಿ ಪೂರ್ವವತ್ ॥ ೩೨ ॥

ಸತ್ಯಂ ಶೌಚಂ ದಯಾ ಮೌನಂ ಬುದ್ಧಿಃ ಶ್ರೀರ್ಹ್ರೀರ್ಯಶಃ ಕ್ಷಮಾ ।
ಶಮೋ ದಮೋ ಭಗಶ್ಚೇತಿ ಯತ್ಸಂಗಾದ್ಯಾತಿ ಸಂಕ್ಷಯಮ್ ॥ ೩೩ ॥

ತೇಷ್ವಶಾಂತೇಷು ಮೂಢೇಷು ಖಂಡಿತಾತ್ಮಸ್ವಸಾಧುಷು ।
ಸಂಗಂ ನ ಕುರ್ಯಾಚ್ಛೋಚ್ಯೇಷು ಯೋಷಿತ್ಕ್ರೀಡಾಮೃಗೇಷು ಚ ॥ ೩೪ ॥

ನ ತಥಾಸ್ಯ ಭವೇನ್ಮೋಹೋ ಬಂಧಶ್ಚಾನ್ಯಪ್ರಸಂಗತಃ ।
ಯೋಷಿತ್ಸಂಗಾದ್ಯಥಾ ಪುಂಸೋ ಯಥಾ ತತ್ಸಂಗಿಸಂಗತಃ ॥ ೩೫ ॥

ಪ್ರಜಾಪತಿಃ ಸ್ವಾಂ ದುಹಿತರಂ ದೃಷ್ಟ್ವಾ ತದ್ರೂಪಧರ್ಷಿತಃ ।
ರೋಹಿದ್ಭೂತಾಂ ಸೋಽನ್ವಧಾವದೃಕ್ಷರೂಪೀ ಹತತ್ರಪಃ ॥ ೩೬ ॥

ತತ್ಸೃಷ್ಟಸೃಷ್ಟಸೃಷ್ಟೇಷು ಕೋ ನ್ವಖಂಡಿತಧೀಃ ಪುಮಾನ್ ।
ಋಷಿಂ ನಾರಾಯಣಮೃತೇ ಯೋಷಿನ್ಮಯ್ಯೇಹ ಮಾಯಯಾ ॥ ೩೭ ॥

ಬಲಂ ಮೇ ಪಶ್ಯ ಮಾಯಾಯಾಃ
ಸ್ತ್ರೀಮಯ್ಯಾ ಜಯಿನೋ ದಿಶಾಮ್ ।
ಯಾ ಕರೋತಿ ಪದಾಕ್ರಾಂತಾನ್
ಭ್ರೂವಿಜೃಂಭೇಣ ಕೇವಲಮ್ ॥ ೩೮ ॥

ಸಂಗಂ ನ ಕುರ್ಯಾತ್ಪ್ರಮದಾಸು ಜಾತು
ಯೋಗಸ್ಯ ಪಾರಂ ಪರಮಾರುರುಕ್ಷುಃ ।
ಮತ್ಸೇವಯಾ ಪ್ರತಿಲಬ್ಧಾತ್ಮಲಾಭೋ
ವದಂತಿ ಯಾ ನಿರಯದ್ವಾರಮಸ್ಯ ॥ ೩೯ ॥

ಯೋಪಯಾತಿ ಶನೈರ್ಮಾಯಾ ಯೋಷಿದ್ದೇವವಿನಿರ್ಮಿತಾ ।
ತಾಮೀಕ್ಷೇತಾತ್ಮನೋ ಮೃತ್ಯುಂ ತೃಣೈಃ ಕೂಪಮಿವಾವೃತಮ್ ॥ ೪೦ ॥

ಯಾಂ ಮನ್ಯತೇ ಪತಿಂ ಮೋಹಾನ್ಮನ್ಮಾಯಾಮೃಷಭಾಯತೀಮ್ ।
ಸ್ತ್ರೀತ್ವಂ ಸ್ತ್ರೀಸಂಗತಃ ಪ್ರಾಪ್ತೋ ವಿತ್ತಾಪತ್ಯಗೃಹಪ್ರದಮ್ ॥ ೪೧ ॥

ಸನ್ಮಾರ್ಗದಲ್ಲಿ ನಡೆಯುತ್ತಿರುವಾಗ ಇವನಿಗೆ ಎಲ್ಲಾದರೂ ಆಹಾರ-ಮೈಥುನಗಳಿಗೆ ಪ್ರಯತ್ನಿಸುವ ವಿಷಯಿ-ಜನರೊಡನೆ ಸಂಸರ್ಗ ಉಂಟಾದರೆ, ಅವರ ದಾರಿಯನ್ನೇ ಹಿಡಿದು ಹಿಂದಿನಂತೆಯೇ ಮತ್ತೆ ನರಕಯೋನಿಗಳಲ್ಲಿಯೇ ಬೀಳಬೇಕಾಗುವುದು. ॥ ೩೨ ॥ ಯಾರ ಸಂಗದಿಂದ ಸತ್ಯ, ಶೌಚ (ಒಳ-ಹೊರಗಿನ ಶುಚಿತ್ವ), ದಯೆ, ಮಿತಭಾಷಣ, ಸದ್ಬುದ್ಧಿ, ಸಂಪತ್ತು, ನಾಚಿಕೆ, ಕೀರ್ತಿ, ಕ್ಷಮೆ, ಮನ-ಇಂದ್ರಿಯಗಳ ಸಂಯಮ ಮತ್ತು ಐಶ್ವರ್ಯ ಮುಂತಾದ ಎಲ್ಲ ಸದ್ಗುಣಗಳು ನಾಶವಾಗಿ ಬಿಡುವವೋ, ಅಂತಹ ಅತ್ಯಂತ ಶೋಚನೀಯರಾದ ಹೆಂಗಸರ ಆಟದ ಬೊಂಬೆಯಂತಿರುವ – ಅಶಾಂತರೂ, ಮೂರ್ಖರೂ, ದೇಹಾತ್ಮದರ್ಶಿಗಳೂ, ಆದ ದುಷ್ಟಜನರ ಸಹವಾಸವನ್ನು ಎಂದಿಗೂ ಮಾಡಬಾರದು. ॥ ೩೩-೩೪ ॥ ಮನುಷ್ಯನಿಗೆ ಸ್ತ್ರೀಯರ ಮತ್ತು ಸ್ತ್ರೀಸಂಗಿಗಳ ಸಂಗದಿಂದ ಉಂಟಾಗುವ ಮೋಹ-ಬಂಧನಗಳು ಬೇರೆ ಯಾವುದರಿಂದಲೂ ಇಂತಹ ಮೋಹ-ಬಂಧನಗಳಂತೆ ಉಂಟಾಗುವುದಿಲ್ಲ. ॥ ೩೫ ॥ ಒಮ್ಮೆ ತನ್ನ ಪುತ್ರಿಯಾದ ಸರಸ್ವತಿಯನ್ನು ನೋಡಿ ಬ್ರಹ್ಮದೇವರೂ ಕೂಡ ಅವಳ ರೂಪಲಾವಣ್ಯಗಳಿಗೆ ಮರುಳಾಗಿದ್ದರು. ಆಕೆಯು ಮೃಗರೂಪವಾಗಿ ಓಡುತ್ತಿದ್ದರೂ ತಾನು ನಾಚಿಕೆಗೆಟ್ಟು ಮೃಗರೂಪವಾಗಿ ಓಡತೊಡಗಿದರು. ॥ ೩೬ ॥ ಹೀಗಿರುವ ಅದೇ ಬ್ರಹ್ಮನು ಸೃಷ್ಟಿಸಿದ ಮರೀಚಿಯೇ ಮುಂತಾದವರಿಂದ ಸೃಷ್ಟಿಸಲ್ಪಟ್ಟ, ಕಶ್ಯಪರೇ ಮುಂತಾದವರಿಂದ ಬೆಳೆದು ಬಂದಿರುವ ಈ ಜೀವಿಗಳಲ್ಲಿ ಯಾರು ತಾನೇ ಸ್ತ್ರೀರೂಪವಾದ ಮಾಯೆಗೆ ಒಳಗಾಗದೇ ಇರುವನು ? ಆ ಮಾಯೆಗೆ ಒಳಗಾಗದ ಬುದ್ಧಿಯುಳ್ಳವನು ಋಷಿಶ್ರೇಷ್ಠನಾದ ನಾರಾಯಣಮುನಿಯೊಬ್ಬನೇ. ॥ ೩೭ ॥ ಆಹಾ ! ನನ್ನ ಈ ಸ್ತ್ರೀರೂಪಿಯಾದ ಮಾಯೆಯ ಬಲವನ್ನು ನೋಡು ! ಅದು ತನ್ನ ಹುಟ್ಟಿನಾಟದಿಂದಲೇ ದಿಗ್ವಿಜಯಿಗಳಾದ ದೊಡ್ಡ-ದೊಡ್ಡ ವೀರರನ್ನು ಕಾಲಿನಿಂದ ಹೊಸೆದು ಹಾಕುವುದು. ॥ ೩೮ ॥

ಯೋಗದ ಪರಮ ಪದದಲ್ಲಿ ಆರೂಢನಾಗಲು ಬಯಸುವವನು, ಅಥವಾ ನನ್ನ ಸೇವೆಯ ಪ್ರಭಾವದಿಂದ ಆತ್ಮಲಾಭವನ್ನು ಪಡೆದ ವಿವೇಕಿಯು ಸ್ತ್ರೀಯರ ಸಂಗವನ್ನು ಮಾಡಲೇ ಬಾರದು. ಏಕೆಂದರೆ, ಸ್ತ್ರೀಸಂಗಿಗಳಿಗೆ ನರಕದ ಬಾಗಿಲು ತೆರೆದುಕೊಂಡಿರುತ್ತದೆ ಎಂದು ಹೇಳುತ್ತಾರೆ. ॥ ೩೯ ॥ ಭಗವಂತನು ರಚಿಸಿದ ಈ ಸ್ತ್ರೀರೂಪಿಯಾದ ಮಾಯೆಯು ಮೆಲ್ಲ-ಮೆಲ್ಲನೆ ಸೇವಾದಿಗಳ ನೆಪದಿಂದ ಒಳಗೆ ಬರುತ್ತಾಳೆ. ಇವಳು ಹುಲ್ಲು ಮುಚ್ಚಿಕೊಂಡಿರುವ ಪಾಳುಬಾವಿಯಂತೆ ತನ್ನ ಮೃತ್ಯುವೆಂದೇ ತಿಳಿಯಬೇಕು. ॥ ೪೦ ॥

ಸ್ತ್ರೀಯಲ್ಲೇ ಸದಾ ಆಸಕ್ತನಾದ್ದರಿಂದ ಮನುಷ್ಯನು ಅಂತ್ಯಕಾಲದಲ್ಲಿಯೂ ಸ್ತ್ರೀಯನ್ನೇ ಚಿಂತನೆ ಮಾಡುವುದರಿಂದ ಮುಂದೆ ಸ್ತ್ರೀಯೋನಿಯಲ್ಲೇ ಜನಿಸುತ್ತಾನೆ. ಹೀಗೆ ಸ್ತ್ರೀಯೋನಿಯಲ್ಲಿರುವ ಜೀವನು ಪುರುಷರೂಪದಲ್ಲಿ ಕಾಣುವ ನನ್ನ ಮಾಯೆಯನ್ನೇ ಧನ, ಪುತ್ರ, ಮನೆ ಮುಂತಾದವುಗಳನ್ನು ಕೊಡುವ ತನ್ನ ಪತಿಯೆಂದು ತಿಳಿಯುತ್ತಿರುತ್ತಾನೆ. ವ್ಯಾಧನ ಕಿವಿಗಿಂಪಾದ ಹಾಡನ್ನು ಕೇಳಿದ

ತಾಮಾತ್ಮನೋ ವಿಜಾನೀಯಾತ್ಪತ್ಯಪತ್ಯಗೃಹಾತ್ಮಕಮ್ ।
ದೈವೋಪಸಾದಿತಂ ಮೃತ್ಯುಂ ಮೃಗಯೋರ್ಗಾಯನಂ ಯಥಾ ॥ ೪೨ ॥

ದೇಹೇನ ಜೀವಭೂತೇನ ಲೋಕಾಲ್ಲೋಕಮನುವ್ರಜನ್ ।
ಭುಂಜಾ ನ ಏವ ಕರ್ಮಾಣಿ ಕರೋತ್ಯವಿರತಂ ಪುಮಾನ್ ॥ ೪೩ ॥

ಜೀವೋ ಹ್ಯಸ್ಯಾನುಗೋ ದೇಹೋ
ಭೂತೇಂದ್ರಿಯಮನೋಮಯಃ ।
ತನ್ನಿರೋಧೋಽಸ್ಯ ಮರಣ-
ಮಾವಿರ್ಭಾವಸ್ತು ಸಂಭವಃ ॥ ೪೪ ॥

ದ್ರವ್ಯೋಪಲಬ್ಧಿಸ್ಥಾನಸ್ಯ ದ್ರವ್ಯೇಕ್ಷಾಯೋಗ್ಯತಾ ಯದಾ ।
ತತ್ಪಂಚತ್ವಮಹಂ ಮಾನಾದುತ್ಪತ್ತಿರ್ದ್ರವ್ಯದರ್ಶನಮ್ ॥ ೪೫ ॥

ಯಥಾಕ್ಷ್ಣೋರ್ದ್ರವ್ಯಾವಯವದರ್ಶನಾಯೋಗ್ಯ ತಾ ಯದಾ ।
ತದೈವ ಚಕ್ಷುಷೋ ದ್ರಷ್ಟುರ್ದ್ರಷ್ಟೃತ್ವಾಯೋಗ್ಯ ತಾನಯೋಃ ॥ ೪೬ ॥

ತಸ್ಮಾನ್ನ ಕಾರ್ಯಃ ಸಂತ್ರಾಸೋ ನ ಕಾರ್ಪಣ್ಯಂ ನ ಸಂಭ್ರಮಃ ।
ಬುದ್ಧ್ವಾ ಜೀವಗತಿಂ ಧೀರೋ ಮುಕ್ತಸಂಗಶ್ಚರೇದಿಹ ॥ ೪೭ ॥

ಸಮ್ಯಗ್ದರ್ಶನಯಾ ಬುದ್ಧ್ಯಾ ಯೋಗವೈರಾಗ್ಯಯುಕ್ತಯಾ ।
ಮಾಯಾವಿರಚಿತೇ ಲೋಕೇ ಚರೇನ್ನ್ಯಸ್ಯ ಕಲೇವರಮ್ ॥ ೪೮ ॥

ಬಡಪಾಯಿ ಪಶು-ಪಕ್ಷಿಗಳು ಮೋಸಹೋಗಿ ಬಲೆಯಲ್ಲಿ ಸಿಕ್ಕಿಬಿದ್ದು ತಮ್ಮ ನಾಶಕ್ಕೆ ಕಾರಣವಾಗುವಂತೆ – ಆ ಜೀವನು ಪುತ್ರ, ಪತಿ, ಗೃಹಾದಿಗಳು ವಿಧಾತನು ನಿಶ್ಚಯಿಸಿದ ತನ್ನ ಮೃತ್ಯುವೆಂದೇ ತಿಳಿಯಬೇಕು. ಪುರುಷಸಂಗದಿಂದ ದೂರವುಳಿಯಬೇಕು. ॥ ೪೧-೪೨ ॥ ಅಮ್ಮಾ! ಜೀವನು ತನ್ನ ಲಿಂಗದೇಹದಿಂದ ಒಂದು ಲೋಕದಿಂದ ಮತ್ತೊಂದು ಲೋಕಕ್ಕೆ ಹೋಗುತ್ತಿರುತ್ತಾನೆ. ತನ್ನ ಪ್ರಾರಬ್ಧಕರ್ಮಗಳನ್ನು ಅನುಭವಿಸುತ್ತಾ ಬೇರೆ ದೇಹಗಳನ್ನು ಪಡೆಯಲಿಕ್ಕಾಗಿ ನಿರಂತರ ಬೇರೆ ಕರ್ಮಗಳನ್ನು ಮಾಡುತ್ತಾ ಇರುತ್ತಾನೆ. ॥ ೪೩ ॥ ಜೀವಿಯ ಈ ಉಪಾಧಿರೂಪವಾದ ಲಿಂಗಶರೀರವಾದರೋ ಮೋಕ್ಷದವರೆಗೂ ಜೊತೆಯಲ್ಲೇ ಇರುತ್ತದೆ. ಭೂತಗಳು, ಇಂದ್ರಿಯಗಳು, ಮನಸ್ಸು ಇವುಗಳ ಕಾರ್ಯರೂಪವಾದ ಸ್ಥೂಲದೇಹವು ಭೋಗಕ್ಕೆ ಅಧಿಷ್ಠಾನವು. ಈ ಲಿಂಗದೇಹ ಮತ್ತು ಸ್ಥೂಲದೇಹಗಳು ಒಟ್ಟಿಗೆ ಸೇರಿ ಕೆಲಸಮಾಡದೇ ಇರುವುದು ಮೃತ್ಯುವು. ಅವೆರಡೂ ಒಟ್ಟಿಗೆ ಸೇರಿ ಕಾರ್ಯಮಾಡುವುದನ್ನೇ ಜನ್ಮ ಎಂದು ಕರೆಯುತ್ತಾರೆ. ॥ ೪೪ ॥ ಪದಾರ್ಥಗಳನ್ನು ಪಡೆಯುವ ಸ್ಥಾನವಾದ ಈ ಸ್ಥೂಲಶರೀರದಲ್ಲಿ ಅವುಗಳನ್ನು ಗ್ರಹಿಸುವ ಯೋಗ್ಯತೆಯು ಇಲ್ಲದಿದ್ದಾಗ ಅದರ ಮರಣವಾಗಿದೆ; ಮತ್ತು ಈ ಸ್ಥೂಲಶರೀರವೇ 'ನಾನಾಗಿದ್ದೇನೆ' ಈ ಅಭಿಮಾನದೊಂದಿಗೆ ಅದನ್ನು ನೋಡುವುದೇ ಜನ್ಮವಾಗಿದೆ. ॥ ೪೫ ॥ ಕಣ್ಣುಗಳಲ್ಲಿ ಯಾವುದೋ ದೋಷದಿಂದ ರೂಪಾದಿಗಳನ್ನು ನೋಡುವ ಯೋಗ್ಯತೆಯು ಇಲ್ಲದಿದ್ದಾಗ, ಅದರಲ್ಲಿರುವ ಚಕ್ಷುರಿಂದ್ರಿಯವು ರೂಪವನ್ನು ನೋಡಲು ಅಸಮರ್ಥವಾಗುತ್ತದೆ. ಕಣ್ಣು ಮತ್ತು ಅದರಲ್ಲಿರುವ ಇಂದ್ರಿಯ ಇವೆರಡೂ ರೂಪವನ್ನು ನೋಡಲು ಅಸಮರ್ಥವಾಗುತ್ತದೆ. ಹೀಗೆ ಅಸಮರ್ಥವಾದಾಗ ಇವೆರಡರ ಸಾಕ್ಷಿಯಾದ ಜೀವನಲ್ಲಿಯೂ ಆ ಯೋಗ್ಯತೆ ಉಳಿಯುವುದಿಲ್ಲ. ॥ ೪೬ ॥ ಆದುದರಿಂದ ಮುಮುಕ್ಷುವಾದವನು ಮರಣಕ್ಕೆ ಭಯಪಡಬಾರದು. ಜೀವನಕ್ಕಾಗಿ ದೀನನಾಗ ಬಾರದು ಅಥವಾ ಮೋಹಿತನಾಗಬಾರದು. ಅವನು ಜೀವಿಯ ಸ್ವರೂಪವನ್ನು ಅರಿತುಕೊಂಡು ಧೈರ್ಯವಾಗಿ ನಿಃಸಂಗ ಭಾವದಿಂದ ವಿಚರಿಸುತ್ತಿರಬೇಕು. ಈ ಮಾಯಾಮಯ ಸಂಸಾರದಲ್ಲಿ ಯೋಗ-ವೈರಾಗ್ಯಗಳಿಂದ ಕೂಡಿ ಸಮ್ಯಕ್ ಜ್ಞಾನಮಯ ಬುದ್ಧಿಯಿಂದ ಶರೀರವು ಗಿರವಿಯಿಟ್ಟಿರುವಂತೆ ತಿಳಿದು ಅದರ ಕುರಿತು ಅನಾಸಕ್ತನಾಗಿದ್ದುಕೊಂಡು ವಿಚರಿಸುತ್ತಿರಬೇಕು. ॥ ೪೭-೪೮ ॥

*ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೩೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ ಕಾಪಿಲೇಯೋಪಾಖ್ಯಾನೇ ಜೀವಗತಿರ್ನಾಮೈಕತ್ರಿಂಶೋಽಧ್ಯಾಯಃ ॥ ೩೧ ॥

# ಮೂವತ್ತೆರಡನೆಯ ಅಧ್ಯಾಯ

## ಧೂಮಮಾರ್ಗ ಮತ್ತು ಅರ್ಚಿರಾದಿ ಮಾರ್ಗಗಳಿಂದ ಹೋಗುವವರ ಗತಿಯ ಮತ್ತು ಭಕ್ತಿಯೋಗದ ಶ್ರೇಷ್ಠತೆ

*ಕಪಿಲ ಉವಾಚ*

ಅಥ ಯೋ ಗೃಹಮೇಧೀಯಾನ್-
ಧರ್ಮಾನೇವಾವಸನ್ಗೃಹೇ ।
ಕಾಮಮರ್ಥಂ ಚ ಧರ್ಮಾನ್ಸ್ವಾನ್-
ದೋಗ್ಧಿ ಭೂಯಃ ಪಿಪರ್ತಿ ತಾನ್ ॥ ೧ ॥

ಸ ಚಾಪಿ ಭಗವದ್ಧರ್ಮಾತ್ಕಾಮಮೂಢಃ ಪರಾಙ್ಮುಖಃ ।
ಯಜತೇ ಕ್ರತುಭಿರ್ದೇವಾನ್ಪಿತೄಂಶ್ಚ ಶ್ರದ್ಧಯಾನ್ವಿತಃ ॥ ೨ ॥

ತಚ್ಛ್ರದ್ಧಯಾಕ್ರಾಂತಮತಿಃ ಪಿತೃದೇವವ್ರತಃ ಪುಮಾನ್ ।
ಗತ್ವಾ ಚಾಂದ್ರಮಸಂ ಲೋಕಂ ಸೋಮಪಾಃ ಪುನರೇಷ್ಯತಿ ॥ ೩ ॥

ಯದಾ ಚಾಹೀಂದ್ರಶಯ್ಯಾಯಾಂ ಶೇತೇಽನಂತಾಸನೋ ಹರಿಃ ।
ತದಾ ಲೋಕಾಲಯಂ ಯಾಂತಿ ತ ಏತೇ ಗೃಹಮೇಧಿನಾಮ್ ॥ ೪ ॥

ಯೇ ಸ್ವಧರ್ಮಾನ್ನ ದುಹ್ಯಂತಿ ಧೀರಾಃ ಕಾಮಾರ್ಥಹೇತವೇ ।
ನಿಃಸಂಗಾ ನ್ಯಸ್ತಕರ್ಮಾಣಃ ಪ್ರಶಾಂತಾಃ ಶುದ್ಧಚೇತಸಃ ॥ ೫ ॥

ನಿವೃತ್ತಿ ಧರ್ಮನಿರತಾ ನಿರ್ಮಮಾ ನಿರಹಂಕೃತಾಃ ।
ಸ್ವಧರ್ಮಾಖ್ಯೇನ ಸತ್ತ್ವೇನ ಪರಿಶುದ್ಧೇನ ಚೇತಸಾ ॥ ೬ ॥

ಸೂರ್ಯದ್ವಾರೇಣ ತೇ ಯಾಂತಿ ಪುರುಷಂ ವಿಶ್ವತೋಮುಖಮ್ ।
ಪರಾವರೇಶಂ ಪ್ರಕೃತಿಮಸ್ಯೋತ್ಪತ್ತ್ಯಂತಭಾವನಮ್ ॥ ೭ ॥

ದ್ವಿಪರಾರ್ಧಾವಸಾನೇ ಯಃ ಪ್ರಲಯೋ ಬ್ರಹ್ಮಣಸ್ತು ತೇ ।
ತಾವದಧ್ಯಾಸತೇ ಲೋಕಂ ಪರಸ್ಯ ಪರಚಿಂತಕಾಃ ॥ ೮ ॥

ಕ್ಷ್ಮಾಂಭೋಽನಲಾನಿಲವಿಯನ್ಮನಇಂದ್ರಿಯಾರ್ಥ-
ಭೂತಾದಿಭಿಃ ಪರಿವೃತಂ ಪ್ರತಿಸಂಜಿಹೀರ್ಷುಃ ।
ಅವ್ಯಾಕೃತಂ ವಿಶತಿ ಯರ್ಹಿ ಗುಣತ್ರಯಾತ್ಮಾ
ಕಾಲಂ ಪರಾಖ್ಯಮನುಭೂಯ ಪರಃ ಸ್ವಯಂಭೂಃ ॥ ೯ ॥

**ಶ್ರೀಭಗವಾನ್ ಕಪಿಲರು ಹೇಳುತ್ತಾರೆ** – ಅಮ್ಮಾ! ಮನೆಯಲ್ಲೇ ಇದ್ದುಕೊಂಡು ಸಕಾಮಭಾವದಿಂದ ಗೃಹಸ್ಥಧರ್ಮಗಳನ್ನು ಪಾಲಿಸುತ್ತಾ, ಅವುಗಳ ಫಲವಾಗಿ ಅರ್ಥ ಮತ್ತು ಕಾಮಗಳನ್ನು ಅನುಭವಿಸುತ್ತಾ ಪುನಃ ಅವನ್ನೇ ಅನುಷ್ಠಾನ ಮಾಡುತ್ತಾ ಇರುವವನು, ಬಗೆ-ಬಗೆಯ ಕಾಮನೆಗಳಿಂದ ಮೋಹಿತನಾದ್ದರಿಂದ ಭಗವದ್ಧರ್ಮಗಳಿಂದ ವಿಮುಖನಾಗುತ್ತಾನೆ ಹಾಗೂ ಯಜ್ಞಗಳ ಮೂಲಕ ಶ್ರದ್ಧೆಯಿಂದ ದೇವತೆಗಳನ್ನೂ, ಪಿತೃಗಳನ್ನೂ ಆರಾಧಿಸುತ್ತಾ ಇರುತ್ತಾನೆ. ॥ ೧-೨ ॥

ಆತನ ಬುದ್ಧಿಯು ಅದೇ ರೀತಿಯ ಶ್ರದ್ಧೆಯಿಂದ ತುಂಬಿರುತ್ತದೆ. ದೇವತೆಗಳು ಮತ್ತು ಪಿತೃಗಳೇ ಆತನ ಉಪಾಸ್ಯದೇವತೆಗಳಾಗಿರುತ್ತಾರೆ. ಆದ್ದರಿಂದ ಅವನು ಚಂದ್ರಲೋಕಕ್ಕೆ ಹೋಗಿ ಅವರೊಂದಿಗೆ ಸೋಮಪಾನ ಮಾಡುತ್ತಾನೆ. ಮತ್ತೆ ಪುಣ್ಯಕ್ಷೀಣವಾದಾಗ ಇದೇ ಲೋಕಕ್ಕೆ ಮರಳುತ್ತಾನೆ. ॥ ೩॥ ಪ್ರಳಯಕಾಲದಲ್ಲಿ ಭಗವಾನ್ ಶೇಷಶಾಯಿಯು ಪವಡಿಸಿದಾಗ ಸಕಾಮ ಗೃಹಸ್ಥಾಶ್ರಮಿಗಳಿಗೆ ದೊರೆಯುವ ಈ ಲೋಕಗಳೆಲ್ಲ ಲೀನವಾಗಿ ಹೋಗುತ್ತವೆ. ॥ ೪ ॥

ವಿವೇಕಿಗಳಾದ ಮನುಷ್ಯರು ತಮ್ಮ ಧರ್ಮಗಳನ್ನೂ ಅರ್ಥ-ಕಾಮಗಳ ಭೋಗ-ವಿಲಾಸಕ್ಕಾಗಿ ಉಪಯೋಗಿಸುವುದಿಲ್ಲ. ಅವರು ಶ್ರೀಭಗವಂತನ ಪ್ರಸನ್ನತೆಗಾಗಿಯೇ ಅವನ್ನು ಪಾಲಿಸುತ್ತಾರೆ. ಅಂತಹ ಅನಾಸಕ್ತರೂ, ಪ್ರಶಾಂತರೂ, ಶುದ್ಧಚಿತ್ತರೂ, ನಿವೃತ್ತಿ ಧರ್ಮಪಾರಾಯಣರೂ, ಮಮತಾ ರಹಿತರೂ, ಅಹಂಕಾರಶೂನ್ಯರೂ ಆದ ಸುಕೃತಿಗಳು ಸ್ವಧರ್ಮಪಾಲನರೂಪವಾದ ಸತ್ತ್ವಗುಣದಿಂದ ಸರ್ವಥಾ ಶುದ್ಧಚಿತ್ತರಾಗುತ್ತಾರೆ. ॥ ೫-೬ ॥ ಅವರು ಕೊನೆಯಲ್ಲಿ ಸೂರ್ಯಮಾರ್ಗ (ಅರ್ಚಿಮಾರ್ಗ ಅಥವಾ ದೇವಯಾನ)ದ ಮೂಲಕ ಸರ್ವವ್ಯಾಪಿ ಪೂರ್ಣಪುರುಷ ಶ್ರೀಹರಿಯನ್ನೇ ಪಡೆದುಕೊಳ್ಳುವರು. ಅವನೇ ಕಾರ್ಯಕಾರಣರೂಪೀ ಜಗತ್ತಿನ ನಿಯಾಮಕನೂ, ಪ್ರಪಂಚದ ಉಪಾದಾನ ಕಾರಣನೂ ಹಾಗೂ ಅದರ ಉತ್ಪತ್ತಿ, ಪಾಲನೆ, ಸಂಹಾರ ಮಾಡುವವನಾಗಿದ್ದಾನೆ. ॥ ೭ ॥ ಯಾರು ಸ್ವಾಮಿಯಾದ ಹಿರಣ್ಯಗರ್ಭನನ್ನು ಪರಮಾತ್ಮದೃಷ್ಟಿಯಿಂದ ಉಪಾಸನೆ ಮಾಡುವರೋ ಅವರು ಎರಡು ಪರಾರ್ಧದಲ್ಲಿ ಆಗುವ ಬ್ರಹ್ಮದೇವರ ಪ್ರಳಯದವರೆಗೆ ಸತ್ಯಲೋಕದಲ್ಲೇ ವಾಸಿಸುತ್ತಾರೆ. ॥ ೮ ॥ ಯಾವಾಗ ದೇವಶ್ರೇಷ್ಠರಾದ ಬ್ರಹ್ಮದೇವರು ತನ್ನ ದ್ವಿಪರಾರ್ಧಕಾಲದ ಅಧಿಕಾರವನ್ನು ಮುಗಿಸಿಕೊಂಡು, ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ, ಮನ, ಇಂದ್ರಿಯಗಳು, ಅವುಗಳ ವಿಷಯ (ಶಬ್ದಾದಿ)ಗಳು ಮತ್ತು ಅಹಂಕಾರವೇ ಮುಂತಾದವುಗಳ ಸಹಿತ ಇಡೀ ವಿಶ್ವವನ್ನು ಉಪಸಂಹಾರ ಮಾಡಿಕೊಳ್ಳುವ ಇಚ್ಛೆಯಿಂದ ತ್ರಿಗುಣಾತ್ಮಕವಾದ ಪ್ರಕೃತಿಯೊಂದಿಗೆ ಒಂದಾಗಿ ನಿರ್ವಿಶೇಷ ಪರಮಾತ್ಮನಲ್ಲಿ ಲೀನವಾಗಿ ಹೋಗುವರೋ, ಆಗ ಪ್ರಾಣಗಳನ್ನೂ

ಏವಂ ಪರೇತ್ಯ ಭಗವಂತ ಮನುಪ್ರವಿಷ್ಟಾ
ಯೇ ಯೋಗಿನೋ ಜಿತಮರುನ್ಮನಸೋ ವಿರಾಗಾಃ।
ತೇನೈವ ಸಾಕಮಮೃತಂ ಪುರುಷಂ ಪುರಾಣಂ
ಬ್ರಹ್ಮ ಪ್ರಧಾನಮುಪಯಾಂತ್ಯ ಗತಾಭಿಮಾನಾಃ ॥ ೧೦ ॥

ಅಥ ತಂ ಸರ್ವಭೂತಾನಾಂ ಹೃತ್ಪದ್ಮೇಷು ಕೃತಾಲಯಮ್।
ಶ್ರುತಾನುಭಾವಂ ಶರಣಂ ವ್ರಜ ಭಾವೇನ ಭಾಮಿನಿ ॥ ೧೧ ॥

ಆದ್ಯಃ ಸ್ಥಿರಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ।
ಯೋಗೇಶ್ವರೈಃ ಕುಮಾರಾದ್ಯೈಃ ಸಿದ್ಧೈರ್ಯೋಗಪ್ರವರ್ತಕೈಃ ॥ ೧೨ ॥

ಭೇದದೃಷ್ಟ್ಯಾಭಿಮಾನೇನ ನಿಃಸಂಗೇನಾಪಿ ಕರ್ಮಣಾ।
ಕರ್ತೃತ್ವಾತ್ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಮ್ ॥ ೧೩ ॥

ಸ ಸಂಸೃತ್ಯ ಪುನಃ ಕಾಲೇ ಕಾಲೇನೇಶ್ವರಮೂರ್ತಿನಾ।
ಜಾತೇ ಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೇ ॥ ೧೪ ॥

ಐಶ್ವರ್ಯಂ ಪಾರಮೇಷ್ಠ್ಯಂ ಚ ತೇऽಪಿ ಧರ್ಮವಿನಿರ್ಮಿತಮ್।
ನಿಷೇವ್ಯ ಪುನರಾಯಾಂತಿ ಗುಣವ್ಯತಿಕರೇ ಸತಿ ॥ ೧೫ ॥

ಯೇ ತ್ವಿಹಾಸಕ್ತಮನಸಃ ಕರ್ಮಸು ಶ್ರದ್ಧಯಾನ್ವಿತಾಃ।
ಕುರ್ವಂತ್ಯಪ್ರತಿಷಿದ್ಧಾನಿ ನಿತ್ಯಾನ್ಯಪಿ ಚ ಕೃತ್ಸ್ನಶಃ ॥ ೧೬ ॥

ರಜಸಾ ಕುಂಠಮನಸಃ ಕಾಮಾತ್ಮಾನೋऽಜಿತೇಂದ್ರಿಯಾಃ।
ಪಿತೄನ್ಯಜಂತ್ಯನುದಿನಂ ಗೃಹೇಷ್ವಭಿರತಾಶಯಾಃ ॥ ೧೭ ॥

ತ್ರೈವರ್ಗಿಕಾಸ್ತೇ ಪುರುಷಾ ವಿಮುಖಾ ಹರಿಮೇಧಸಃ।
ಕಥಾಯಾಂ ಕಥನೀಯೋರುವಿಕ್ರಮಸ್ಯ ಮಧುದ್ವಿಷಃ ॥ ೧೮ ॥

ನೂನಂ ದೈವೇನ ವಿಹತಾ ಯೇ ಚಾಚ್ಯುತಕಥಾಸುಧಾಮ್।
ಹಿತ್ವಾ ಶೃಣ್ವಂತ್ಯಸದ್ಗಾಥಾಃ ಪುರೀಷಮಿವ ವಿಡ್ಭುಜಃ ॥ ೧೯ ॥

ದಕ್ಷಿಣೇನ ಪಥಾರ್ಯಮ್ಣಃ ಪಿತೃಲೋಕಂ ವ್ರಜಂತಿ ತೇ।
ಪ್ರಜಾಮನು ಪ್ರಜಾಯಂತೇ ಶ್ಮಶಾನಾಂತಕ್ರಿಯಾಕೃತಃ ॥ ೨೦ ॥

ಮನಸ್ಸನ್ನೂ ಗೆದ್ದುಕೊಂಡಿರುವ ಆ ವಿರಕ್ತ ಯೋಗಿಗಳೂ ಕೂಡ ದೇಹಗಳನ್ನು ತೊರೆದು ಬ್ರಹ್ಮದೇವರ ದೇಹದಲ್ಲಿ ಪ್ರವೇಶಿಸುವರು. ಮತ್ತೆ ಅವರೊಂದಿಗೆ ಪರಮಾನಂದಸ್ವರೂಪನೂ, ಪುರಾಣಪುರುಷನೂ ಆದ ಪರಬ್ರಹ್ಮ ಪರಮಾತ್ಮನಲ್ಲಿ ಲೀನವಾಗಿ ಹೋಗುವರು. ಇದಕ್ಕೆ ಮೊದಲು ಅವರು ಭಗವಂತನಲ್ಲಿ ಏಕೆ ಲೀನವಾಗಲಿಲ್ಲ ವೆಂದರೆ ಅವರಲ್ಲಿ ಅಹಂಕಾರ ಶೇಷವಾಗಿತ್ತು. ॥ ೯-೧೦ ॥ ಆದ್ದರಿಂದ ಅಮ್ಮಾ! ಈಗ ನೀನೂ ಕೂಡ ಅತ್ಯಂತ ಭಕ್ತಿ-ಭಾವದಿಂದ ಆ ಶ್ರೀಹರಿಯ ಚರಣಕಮಲಗಳಲ್ಲಿ ಶರಣಾಗು. ಸಮಸ್ತ ಪ್ರಾಣಿಗಳ ಹೃದಯಕಮಲವೇ ಅವನ ವಾಸಮಂದಿರವಾಗಿದೆ. ಆತನ ಮಹಿಮೆಯನ್ನು ನಾನು ನಿನಗೆ ವರ್ಣಿಸಿರುವೆನಲ್ಲ! ॥ ೧೧ ॥

ಸಮಸ್ತ ಸ್ಥಾವರ ಜಂಗಮ ಪ್ರಾಣಿಗಳಿಗೆ ಆದಿಕಾರಣರಾದ, ವೇದಗರ್ಭ ಬ್ರಹ್ಮದೇವರೂ ಕೂಡ, ಮರೀಚಿಗಳೇ ಮುಂತಾದ ಋಷಿಗಳೂ, ಯೋಗೇಶ್ವರರೂ, ಸನಕಾದಿಗಳೂ ಹಾಗೂ ಯೋಗ ಪ್ರವರ್ತಕ ಸಿದ್ಧರೊಡನೆ ನಿಷ್ಕಾಮಕರ್ಮಗಳ ಮೂಲಕ ಆದಿ ಪುರುಷನೂ ಆದ ಸಗುಣಬ್ರಹ್ಮನನ್ನು ಹೊಂದಿದ್ದರೂ ಆಗಲೇ ಆತನಲ್ಲಿ ಸೇರಿ ಮುಕ್ತರಾಗುವುದಿಲ್ಲ. ಏಕೆಂದರೆ, ಅವರಲ್ಲಿಯೂ ಭೇದದೃಷ್ಟಿಯೂ, ಕರ್ತೃತ್ವಾಭಿಮಾನವು ಇರುವುದರಿಂದ ಭಗವಂತನ ಇಚ್ಛೆಯಂತೆ ಸೃಷ್ಟಿಕಾಲವು ಬಂದಾಗ ಕಾಲರೂಪನಾದ ಪರಮೇಶ್ವರನ ಪ್ರೇರಣೆಯಂತೆ ತ್ರಿಗುಣಗಳಲ್ಲಿ ಕ್ಷೋಭೆಯುಂಟಾದಾಗ ಹಿಂದಿನಂತೆಯೇ ಅವರು ಮತ್ತೆ ಪ್ರಕಟಗೊಳ್ಳುವರು. ॥ ೧೨-೧೪ ॥ ಹಾಗೆಯೇ ಹಿಂದೆ ಹೇಳಿದ ಸಿದ್ಧ-ಋಷಿಗಣಗಳೂ ಕೂಡ ತಮ್ಮ ಕರ್ಮಾನುಸಾರವಾಗಿ ಬ್ರಹ್ಮಲೋಕದ ಐಶ್ವರ್ಯವನ್ನು ಭೋಗಿಸಿ ಶ್ರೀಭಗವಂತನ ಇಚ್ಛೆಯಿಂದ ಗುಣಗಳಲ್ಲಿ ಕ್ಷೋಭೆಯುಂಟಾದಾಗ ಪುನಃ ಈ ಲೋಕಕ್ಕೆ ಮರಳಿಬರುವರು. ॥ ೧೫ ॥

ಯಾರ ಚಿತ್ತವು ಈ ಲೋಕದಲ್ಲಿಯೇ ಆಸಕ್ತವಾಗಿ, ಕರ್ಮಗಳಲ್ಲಿ ಶ್ರದ್ಧೆಯನ್ನು ಇಟ್ಟುಕೊಂಡಿರುವರೋ, ಅವರು ವೇದೋಕ್ತವಾದ ಕಾಮ್ಯಕರ್ಮಗಳನ್ನು ಹಾಗೂ ನಿತ್ಯಕರ್ಮಗಳನ್ನು ಸಾಂಗೋಪಾಂಗವಾಗಿ ಅನುಷ್ಠಾನ ಮಾಡುವುದರಲ್ಲಿಯೇ ತೊಡಗಿರುತ್ತಾರೆ. ॥ ೧೬ ॥ ಅವರ ಬುದ್ಧಿಯು ರಜೋಗುಣದ ಹೆಚ್ಚಳದಿಂದ ಕುಂಠಿತವಾಗಿರುತ್ತದೆ. ಹೃದಯದಲ್ಲಿ ಕಾಮನೆಗಳ ಬಲೆಯು ಹರಡಿಕೊಂಡಿರುತ್ತದೆ. ಇಂದ್ರಿಯಗಳು ಅವರ ವಶದಲ್ಲಿರುವುದಿಲ್ಲ. ಅದರಿಂದ ಅವರು ತಮ್ಮ ಮನೆಯಲ್ಲೇ ಆಸಕ್ತರಾಗಿ ಪ್ರತಿದಿನವು ಪಿತೃಗಳ ಪೂಜೆಯಲ್ಲೇ ತೊಡಗಿರುತ್ತಾರೆ. ॥ ೧೭ ॥ ಇವರು ಅರ್ಥ, ಧರ್ಮ, ಕಾಮಗಳಲ್ಲಿಯೇ ಪರಾಯಣರಾಗಿರುತ್ತಾರೆ. ಆದ್ದರಿಂದ ಕೀರ್ತನೆಗೆ ಯೋಗ್ಯನಾದ, ಮಹಾಪರಾಕ್ರಮವುಳ್ಳ, ಭವಭಯ ಹಾರಿಯಾದ ಶ್ರೀಮಧುಸೂದನನ ಕಥಾ-ಕೀರ್ತನೆಯಿಂದ ವಿಮುಖರಾಗಿರುತ್ತಾರೆ. ॥ ೧೮ ॥ ಅಯ್ಯೋ! ಹೇಸಿಗೆಯನ್ನೇ ತಿನ್ನುವ ಹಂದಿ-ನಾಯಿಗಳು ಅದನ್ನೇ ಬಯಸುವಂತೆ - ಶ್ರೀಭಗವಂತನ ಕಥಾಮೃತವನ್ನು ಬಿಟ್ಟು ನಿಂದಿತವಾದ ವಿಷಯ-ವಾರ್ತೆಗಳನ್ನೇ ಕೇಳುತ್ತಿರುವ ಜನರು ಎಂತಹ ದೈವಹತರು! ಮಂದ ಭಾಗ್ಯರು! ॥ ೧೯ ॥ ಗರ್ಭಾಧಾನದಿಂದ ಹಿಡಿದು ಅಂತ್ಯೇಷ್ಟಿಯವರೆಗಿನ ಎಲ್ಲ ಸಂಸ್ಕಾರಗಳನ್ನೂ ವಿಧಿಪೂರ್ವಕ ಆಚರಿಸಿದ ಈ ಸಕಾಮಕರ್ಮಿ

ತತಸ್ತೇ ಕ್ಷೀಣಸುಕೃತಾಃ ಪುನರ್ಲೋಕಮಿಮಂ ಸತಿ ।
ಪತಂತಿ ವಿವಶಾ ದೇವೈಃ ಸದ್ಯೋ ವಿಭ್ರಂಶಿತೋದಯಾಃ
॥ ೨೧ ॥

ತಸ್ಮಾತ್ತ್ವಂ ಸರ್ವಭಾವೇನ ಭಜಸ್ವ ಪರಮೇಷ್ಠಿನಮ್ ।
ತದ್ಗುಣಾಶ್ರಯಯಾ ಭಕ್ತ್ಯಾ ಭಜನೀಯಪದಾಂಬುಜಮ್
॥ ೨೨ ॥

ವಾಸುದೇವೇ ಭಗವತಿ ಭಕ್ತಿಯೋಗಃ ಪ್ರಯೋಜಿತಃ ।
ಜನಯತ್ಯಾಶು ವೈರಾಗ್ಯಂ ಜ್ಞಾನಂ ಯದ್ಬ್ರಹ್ಮದರ್ಶನಮ್
॥ ೨೩ ॥

ಯದಾಸ್ಯ ಚಿತ್ತಮರ್ಥೇಷು ಸಮೇಷ್ವಿಂದ್ರಿಯವೃತ್ತಿಭಿಃ ।
ನ ವಿಗೃಹ್ಣಾತಿ ವೈಷಮ್ಯಂ ಪ್ರಿಯಮಪ್ರಿಯಮಿತ್ಯುತ
॥ ೨೪ ॥

ಸ ತದೈವಾತ್ಮನಾಽಽತ್ಮಾನಂ ನಿಃಸಂಗಂ ಸಮದರ್ಶನಮ್ ।
ಹೇಯೋಪಾದೇಯರಹಿತಮಾರೂಢಂ ಪದಮೀಕ್ಷತೇ
॥ ೨೫ ॥

ಜ್ಞಾನಮಾತ್ರಂ ಪರಂ ಬ್ರಹ್ಮ ಪರಮಾತ್ಮೇಶ್ವರಃ ಪುಮಾನ್ ।
ದೃಶ್ಯಾದಿಭಿಃ ಪೃಥಗ್ಭಾವೈರ್ಭಗವಾನೇಕ ಈಯತೇ
॥ ೨೬ ॥

ಏತಾವಾನೇವ ಯೋಗೇನ ಸಮಗ್ರೇಣೇಹ ಯೋಗಿನಃ ।
ಯುಜ್ಯತೇಽಭಿಮತೋ ಹ್ಯರ್ಥೋ ಯದಸಂಗಸ್ತು ಕೃತ್ಸ್ನಶಃ
॥ ೨೭ ॥

ಜ್ಞಾನಮೇಕಂ ಪರಾಚೀನೈರಿಂದ್ರಿಯೈರ್ಬ್ರಹ್ಮ ನಿರ್ಗುಣಮ್ ।
ಅವಭಾತ್ಯರ್ಥರೂಪೇಣ ಭ್ರಾಂತ್ಯಾ ಶಬ್ದಾದಿಧರ್ಮಿಣಾ
॥ ೨೮ ॥

ಯಥಾ ಮಹಾನಹಂರೂಪಸ್ತ್ರಿವೃತ್ಪಂಚವಿಧಃ ಸ್ವರಾಟ್ ।
ಏಕಾದಶವಿಧಸ್ತಸ್ಯ ವಪುರಂಡಂ ಜಗದ್ಯತಃ
॥ ೨೯ ॥

ಏತದ್ವೈ ಶ್ರದ್ಧಯಾ ಭಕ್ತ್ಯಾ ಯೋಗಾಭ್ಯಾಸೇನ ನಿತ್ಯಶಃ ।
ಸಮಾಹಿತಾತ್ಮಾ ನಿಃಸಂಗೋ ವಿರಕ್ತ್ಯಾ ಪರಿಪಶ್ಯತಿ
॥ ೩೦ ॥

ಇತ್ಯೇತತ್ಕಥಿತಂ ಗುರ್ವಿ ಜ್ಞಾನಂ ತದ್ಬ್ರಹ್ಮದರ್ಶನಮ್ ।
ಯೇನಾನುಬುದ್ಧ್ಯತೇ ತತ್ತ್ವಂ ಪ್ರಕೃತೇಃ ಪುರುಷಸ್ಯ ಚ
॥ ೩೧ ॥

ಗಳು ಪಿತೃಯಾನ ಅಥವಾ ಧೂಮಯಾನವೆಂಬ ಮಾರ್ಗದಿಂದ ಪಿತೃಲೋಕಕ್ಕೆ ಹೋಗಿ ಮತ್ತೆ ತಮ್ಮ ಸಂತಾನದ ವಂಶದಲ್ಲೇ ಜನಿಸುವರು. ॥ ೨೦ ॥ ತಾಯೇ! ಪಿತೃಲೋಕದ ಭೋಗಗಳನ್ನು ಅನುಭವಿಸಿದ ಬಳಿಕ ಅವರ ಪುಣ್ಯವೆಲ್ಲ ಕ್ಷೀಣವಾದಾಗ ದೇವತೆಗಳು ಅವನನ್ನು ಅಲ್ಲಿಯ ಐಶ್ವರ್ಯದಿಂದ ತಳ್ಳಿಬಿಡುತ್ತಾರೆ. ಮತ್ತೆ ಅವರು ವಿವಶರಾಗಿ ಈ ಲೋಕದಲ್ಲೇ ಬಂದುಬೀಳಬೇಕಾಗುವುದು. ॥ ೨೧ ॥ ಅಮ್ಮಾ! ಆದುದರಿಂದ ನೀನು ಸದಾ ಭಜಿಸಲು ಯೋಗ್ಯವಾದ ಚರಣಕಮಲಗಳುಳ್ಳ ಶ್ರೀಭಗವಂತನನ್ನು, ಆತನ ಕಲ್ಯಾಣಗುಣಗಳನ್ನೂ ಆಶ್ರಯಿಸಿರುವ ಭಕ್ತಿಯ ಮೂಲಕ ಸರ್ವ ಪ್ರಕಾರದಿಂದಲೂ ಭಜಿಸುವವಳಾಗು. ॥ ೨೨ ॥

ಭಗವಾನ್ ವಾಸುದೇವನ ಕುರಿತು ಮಾಡಿದ ಭಕ್ತಿಯೋಗವು ಶೀಘ್ರವಾಗಿ ಸಂಸಾರದಿಂದ ವೈರಾಗ್ಯ ಮತ್ತು ಬ್ರಹ್ಮಸಾಕ್ಷಾತ್ಕಾರ ರೂಪವಾದ ಜ್ಞಾನವನ್ನು ದೊರಕಿಸಿಕೊಡುತ್ತದೆ. ॥ ೨೩॥ ವಸ್ತುತಃ ಎಲ್ಲ ಇಂದ್ರಿಯವಿಷಯಗಳು ಭಗವದ್ರೂಪವೇ ಇರುವುದರಿಂದ ಸಮಾನವಾಗಿವೆ. ಆದ್ದರಿಂದ ಇಂದ್ರಿಯ ವೃತ್ತಿಗಳ ಮೂಲಕವೂ ಭಗವದ್ಭಕ್ತನ ಚಿತ್ತವು ಅವುಗಳಲ್ಲಿ ಪ್ರಿಯ-ಅಪ್ರಿಯಗಳೆಂಬ ಭೇದ ವನ್ನೆಣಿಸದೆ ಸರ್ವತ್ರ ಭಗವಂತನನ್ನೇ ದರ್ಶಿಸುತ್ತದೆ. ಆಗಲೇ ಅವನು ಸಂಗದೋಷರಹಿತನಾಗಿ 'ಇದು ಗ್ರಾಹ್ಯ' 'ಇದು ಗ್ರಾಹ್ಯವಲ್ಲ' ಎಂಬ ಗುಣದೋಷಗಳಿಂದ ರಹಿತನಾಗಿ ಎಲ್ಲದರಲ್ಲಿಯೂ ಸಮವಾಗಿರುವ ತನ್ನ ಸ್ವರೂಪ ಮಹಿಮೆಯಲ್ಲಿ ಆರೂಢನಾಗಿ, ತನಗೆ ಆತ್ಮನಾಗಿರುವ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿ ಕೊಳ್ಳುವನು. ॥ ೨೪-೨೫ ॥ ಆ ಭಗವಂತನೇ ಜ್ಞಾನಸ್ವರೂಪನೂ, ಪರಬ್ರಹ್ಮನೂ, ಪರಮಾತ್ಮನೂ, ಈಶ್ವರನೂ, ಪರಮಪುರುಷನೂ ಆಗಿರುವನು. ನಾನಾರೂಪಗಳಲ್ಲಿ ಕಾಣಿಸುವವನೂ ಆತನೋರ್ವನೇ. ॥ ೨೬ ॥ ಇಡೀ ಪ್ರಪಂಚದ ಕುರಿತು ಅನಾಸಕ್ತಿಯನ್ನು ಹೊಂದುವುದೇ ಯೋಗಿಗಳು ಆಚರಿಸುವ ಎಲ್ಲ ಯೋಗಸಾಧನೆಗಳಿಗೂ ಏಕಮಾತ್ರ ಉದ್ದೇಶವಾಗಿದೆ. ॥ ೨೭ ॥ ಬ್ರಹ್ಮವಸ್ತುವು ಒಂದೇ ಆಗಿದ್ದು, ಜ್ಞಾನಸ್ವರೂಪನೂ, ನಿರ್ಗುಣನೂ ಆಗಿರುವನು. ಆದರೂ ಅವನು ಬಾಹ್ಯವೃತ್ತಿಗಳುಳ್ಳ ಇಂದ್ರಿಯಗಳ ಮೂಲಕ ಭ್ರಾಂತಿಯಿಂದ ಶಬ್ದಾದಿ ಧರ್ಮವುಳ್ಳ ಬೇರೆ-ಬೇರೆ ಪದಾರ್ಥಗಳ ರೂಪಗಳಲ್ಲಿ ಕಂಡು ಬರುತ್ತಾನೆ. ॥ ೨೮ ॥ ಹೇಗೆ ಒಂದೇ ಪರಬ್ರಹ್ಮವು ಮಹತ್ತತ್ತ್ವ; ವೈಕಾರಿಕ, ರಾಜಸ, ತಾಮಸ-ಮೂರು ರೀತಿಯ ಅಹಂಕಾರ; ಪಂಚಭೂತಗಳೂ ಹಾಗೂ ಹನ್ನೊಂದು ಇಂದ್ರಿಯಗಳೂ ಆಗಿರುವನೋ ಮತ್ತು ಪುನಃ ಅದೇ ಸ್ವಯಂ ಪ್ರಕಾಶವು ಇವುಗಳ ಸಂಯೋಗದಿಂದ ಜೀವನೆನಿಸಿದನೋ – ಅಂತೆಯೇ ಆ ಜೀವನ ಶರೀರರೂಪೀ ಈ ಬ್ರಹ್ಮಾಂಡವೂ ವಸ್ತುತಃ ಬ್ರಹ್ಮವೇ ಆಗಿದೆ. ಏಕೆಂದರೆ, ಬ್ರಹ್ಮನಿಂದಲೇ ಇದರ ಉತ್ಪತ್ತಿ ಯಾಗಿದೆ. ॥ ೨೯ ॥ ಆದರೆ ಶ್ರದ್ಧಾ-ಭಕ್ತಿ, ವೈರಾಗ್ಯ, ನಿರಂತರ ಯೋಗಾಭ್ಯಾಸದ ಮೂಲಕ ಏಕಾಗ್ರಚಿತ್ತನೂ, ಅಸಂಗ ಬುದ್ಧಿಯವನೂ ಆದವನೇ ಇದನ್ನು ಬ್ರಹ್ಮರೂಪದಿಂದ ನೋಡಬಲ್ಲನು. ॥ ೩೦ ॥

ಪೂಜನೀಯಳಾದ ಮಾತೆಯೇ! ಇದುವರೆಗೆ ನಾನು ನಿನಗೆ ಬ್ರಹ್ಮದರ್ಶನರೂಪವಾದ ಶ್ರೇಷ್ಠತಮಜ್ಞಾನವನ್ನು ವಿವರಿಸಿದೆನು. ಅದರ ಮೂಲಕ ಪ್ರಕೃತಿ ಮತ್ತು ಪುರುಷರ ಸ್ವರೂಪವನ್ನೂ ಯಥಾವತ್ತಾಗಿ ತಿಳಿಸಿದೆನು. ॥ ೩೧ ॥

ಜ್ಞಾನಯೋಗಶ್ಚ ಮನ್ನಿಷ್ಠೋ ನೈರ್ಗುಣ್ಯೋ ಭಕ್ತಿಲಕ್ಷಣಃ ।
ದ್ವಯೋರಪ್ಯೇಕ ಏವಾರ್ಥೋ ಭಗವಚ್ಛಬ್ದ ಲಕ್ಷಣಃ ॥ ೩೨ ॥

ಯಥೇಂದ್ರಿಯೈಃ ಪೃಥಗ್ದ್ವಾರೈರರ್ಥೋ ಬಹುಗುಣಾಶ್ರಯಃ ।
ಏಕೋ ನಾನೇಯತೇ ತದ್ವದ್ಭಗವಾನ್ ಶಾಸ್ತ್ರವರ್ತ್ಮಭಿಃ ॥ ೩೩ ॥

ಕ್ರಿಯಯಾ ಕ್ರತುಭಿರ್ದಾನೈಸ್ತಪಃಸ್ವಾಧ್ಯಾಯಮರ್ಶನೈಃ ।
ಆತ್ಮೇಂದ್ರಿಯಜಯೇನಾಪಿ ಸಂನ್ಯಾಸೇನ ಚ ಕರ್ಮಣಾಮ್ ॥ ೩೪ ॥

ಯೋಗೇನ ವಿವಿಧಾಂಗೇನ ಭಕ್ತಿಯೋಗೇನ ಚೈವ ಹಿ ।
ಧರ್ಮೇಣೋಭಯಚಿಹ್ನೇನ ಯಃ ಪ್ರವೃತ್ತಿನಿವೃತ್ತಿಮಾನ್ ॥ ೩೫ ॥

ಆತ್ಮತತ್ತ್ವಾವಬೋಧೇನ ವೈರಾಗ್ಯೇಣ ದೃಢೇನ ಚ ।
ಈಯತೇ ಭಗವಾನೇಭಿಃ ಸಗುಣೋ ನಿರ್ಗುಣಃ ಸ್ವದೃಕ್ ॥ ೩೬ ॥

ಪ್ರಾವೋಚಂ ಭಕ್ತಿಯೋಗಸ್ಯ ಸ್ವರೂಪಂ ತೇ ಚತುರ್ವಿಧಮ್ ।
ಕಾಲಸ್ಯ ಚಾವ್ಯಕ್ತಗತೇರ್ಯೋಽಂತರ್ಧಾವತಿ ಜಂತುಷು ॥ ೩೭ ॥

ಜೀವಸ್ಯ ಸಂಸೃತೀರ್ಬಹ್ವೀರವಿದ್ಯಾಕರ್ಮನಿರ್ಮಿತಾಃ ।
ಯಾಸ್ವಂಗ ಪ್ರವಿಶನ್ನಾತ್ಮಾ ನ ವೇದ ಗತಿಮಾತ್ಮನಃ ॥ ೩೮ ॥

ನೈತತ್ಖಲಾಯೋಪದಿಶೇನ್ನಾವಿನೀತಾಯ ಕರ್ಹಿಚಿತ್ ।
ನ ಸ್ತಬ್ಧಾಯ ನ ಭಿನ್ನಾಯ ನೈವ ಧರ್ಮಧ್ವಜಾಯ ಚ ॥ ೩೯ ॥

ನ ಲೋಲುಪಾಯೋಪದಿಶೇನ್ನ ಗೃಹಾರೂಢಚೇತಸೇ ।
ನಾಭಕ್ತಾಯ ಚ ಮೇ ಜಾತು ನ ಮದ್ಭಕ್ತದ್ವಿಷಾಮಪಿ ॥ ೪೦ ॥

ಶ್ರದ್ದಧಾನಾಯ ಭಕ್ತಾಯ ವಿನೀತಾಯಾನಸೂಯವೇ ।
ಭೂತೇಷು ಕೃತಮೈತ್ರಾಯ ಶುಶ್ರೂಷಾಭಿರತಾಯ ಚ ॥ ೪೧ ॥

ಬಹಿರ್ಜಾತವಿರಾಗಾಯ ಶಾಂತಚಿತ್ತಾಯ ದೀಯತಾಮ್ ।
ನಿರ್ಮತ್ಸರಾಯ ಶುಚಯೇ ಯಸ್ಯಾಹಂ ಪ್ರೇಯಸಾಂ ಪ್ರಿಯಃ ॥ ೪೨ ॥

ಯ ಇದಂ ಶೃಣುಯಾದಂಬ ಶ್ರದ್ಧಯಾ ಪುರುಷಃ ಸಕೃತ್ ।
ಯೋ ವಾಭಿಧತ್ತೇ ಮಚ್ಚಿತ್ತಃ ಸ ಹ್ಯೇತಿ ಪದವೀಂ ಚ ಮೇ ॥ ೪೩ ॥

ದೇವಿ ! ನಿರ್ಗುಣ ಬ್ರಹ್ಮವಿಷಯಕ ಜ್ಞಾನಯೋಗ ಹಾಗೂ ನನ್ನ ಕುರಿತಾಗಿ ಆಚರಿಸಿದ ಭಕ್ತಿಯೋಗ – ಇವೆರಡರ ಫಲವು ಒಂದೇ ಆಗಿದೆ. ಅದನ್ನೇ 'ಭಗವಂತ'ನೆಂಬ ಶಬ್ದದಿಂದ ಹೇಳುತ್ತಾರೆ. ॥ ೩೨ ॥ ರೂಪ, ರಸ, ಗಂಧ ಮುಂತಾದ ಅನೇಕ ಗುಣಗಳಿಗೆ ಆಶ್ರಯವಾಗಿರುವ ಒಂದೇ ಪದಾರ್ಥವು ಬೇರೆ-ಬೇರೆ ಇಂದ್ರಿಯಗಳ ಮೂಲಕ ಭಿನ್ನ-ಭಿನ್ನವಾಗಿ ಅನುಭವಕ್ಕೆ ಬರುವದು. ಹಾಗೆಯೇ ಶಾಸ್ತ್ರಗಳ ವಿಭಿನ್ನ ಮಾರ್ಗಗಳಿಂದ ಒಬ್ಬನೇ ಭಗವಂತನು ಅನೇಕ ಪ್ರಕಾರಗಳಿಂದ ಅನುಭವಕ್ಕೆ ಬರುವನು. ॥ ೩೩ ॥

ನಾನಾರೀತಿಯ ಕರ್ಮಕಲಾಪಗಳು, ಯಜ್ಞಗಳು, ದಾನಗಳು, ತಪಸ್ಸುಗಳು, ವೇದಾಧ್ಯಯನ, ವೇದವಿಚಾರ (ಮೀಮಾಂಸಾ), ಮನಸ್ಸು ಇಂದ್ರಿಯಗಳ ಸಂಯಮ, ಕರ್ಮಗಳ ತ್ಯಾಗ, ವಿವಿಧ ಅಂಗಗಳುಳ್ಳ ಯೋಗಗಳು, ಭಕ್ತಿಯೋಗ, ನಿವೃತ್ತಿ ಮತ್ತು ಪ್ರವೃತ್ತಿ ರೂಪವಾದ ಎರಡೂ ರೀತಿಯ ಧರ್ಮಗಳು, ಆತ್ಮತತ್ತ್ವದ ಜ್ಞಾನ ಹಾಗೂ ದೃಢವಾದ ವೈರಾಗ್ಯ ಇವೆಲ್ಲ ಸಾಧನೆಗಳಿಂದ ಸಗುಣ-ನಿರ್ಗುಣರೂಪನಾದ ಸ್ವಯಂಪ್ರಕಾಶ ಭಗವಂತನನ್ನೇ ಪಡೆಯಲಾಗುತ್ತದೆ. ॥ ೩೪-೩೬ ॥

ಜನನಿಯೇ ! ನಾನು ನಿನಗೆ ಸಾತ್ತ್ವಿಕ, ರಾಜಸ, ತಾಮಸ ಮತ್ತು ನಿರ್ಗುಣಗಳೆಂಬ ನಾಲ್ಕು ಪ್ರಕಾರದ ಭಕ್ತಿಯೋಗಗಳನ್ನು ವರ್ಣಿಸಿರುವೆನು. ಹೀಗೆಯೇ ಪ್ರಾಣಿಗಳ ಜನ್ಮಾದಿ ವಿಕಾರಗಳಿಗೆ ಕಾರಣ ಮತ್ತು ಯಾವುದರ ಗತಿಯು ತಿಳಿಯುವುದಿಲ್ಲವೋ ಅಂತಹ ಕಾಲದ ಸ್ವರೂಪವನ್ನೂ ವಿವರಿಸಿದ್ದೇನೆ. ॥ ೩೭ ॥ ದೇವಿ ! ಅವಿದ್ಯೆಯಿಂದ ಉಂಟಾದ ಕರ್ಮದ ಕಾರಣ ಜೀವಕ್ಕೆ ಅನೇಕಗತಿಗಳು ಉಂಟಾಗುತ್ತವೆ. ಅವುಗಳಲ್ಲಿ ಹೋದಾಗ ಜೀವನು ತನ್ನ ಸ್ವರೂಪಗಳನ್ನು ಗುರುತಿಸಿಕೊಳ್ಳಲಾರನು. ॥ ೩೮ ॥ ನಾನು ನಿನಗೆ ಮಾಡಿರುವ ಈ ಜ್ಞಾನೋಪದೇಶವನ್ನು ದುಷ್ಟರಿಗೂ, ಅವಿನೀತರಿಗೂ, ಅಹಂಕಾರಿಗಳಿಗೂ, ದುರಾಚಾರಿಗಳಿಗೂ, ಧರ್ಮದ ಸೋಗು ಹಾಕುವ ಡಾಂಭಿಕರಿಗೂ ಹೇಳಬಾರದು. ॥ ೩೯ ॥ ಹಾಗೆಯೇ ವಿಷಯಲಂಪಟರೂ, ಗೃಹಾಸಕ್ತರೂ, ನನ್ನ ಭಕ್ತರಲ್ಲದವರೂ ಅಥವಾ ನನ್ನ ಭಕ್ತರನ್ನು ದ್ವೇಷಿಸುವವರೂ – ಇವರಿಗೂ ಇದನ್ನು ಎಂದೂ ಉಪದೇಶಿಸಬಾರದು. ॥ ೪೦ ॥ ಯಾರು ಅತ್ಯಂತ ಶ್ರದ್ಧಾಳುವೂ, ಭಕ್ತನೂ, ವಿನಯಶಾಲಿಯೂ, ಬೇರೆಯವರ ಕುರಿತು ದೋಷ ದೃಷ್ಟಿಯಿಲ್ಲದವನೂ, ಎಲ್ಲ ಪ್ರಾಣಿಗಳಲ್ಲಿ ಮೈತ್ರಿಯನ್ನಿಡುವವನೂ, ಗುರುಸೇವಾ ತತ್ಪರನೂ, ಬಾಹ್ಯವಿಷಯಗಳಲ್ಲಿ ಅನಾಸಕ್ತನೂ, ಶಾಂತಚಿತ್ತನೂ, ಮತ್ಸರವಿಲ್ಲದವರೂ, ಶುದ್ಧಚಿತ್ತನೂ, ನನ್ನನ್ನು ಪರಮಪ್ರಿಯನೆಂದು ತಿಳಿಯುವವನೂ, ಇಂಥವನಿಗೆ ಮಾತ್ರ ಇದನ್ನು ಅವಶ್ಯವಾಗಿ ಉಪದೇಶಿಸಬೇಕು. ॥ ೪೧-೪೨ ॥ ತಾಯೇ ! ನನ್ನಲ್ಲಿ ಚಿತ್ತವನ್ನು ತೊಡಗಿಸಿ ಇದನ್ನು ಶ್ರದ್ಧೆಯಿಂದ ಒಮ್ಮೆಯಾದರೂ ಕೇಳುವವನೂ, ಹೇಳುವವನೂ, ಆದ ಸುಕೃತಿಯು ನನ್ನ ಪರಮಪದವನ್ನೇ ಪಡೆಯುವನು. ॥ ೪೩ ॥

*ಮೂವತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೩೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಕಾಪಿಲೇಯೇ ದ್ವಾತ್ರಿಂಶೋಽಧ್ಯಾಯಃ ॥ ೩೨ ॥

# ಮೂವತ್ತಮೂರನೆಯ ಅಧ್ಯಾಯ

## ದೇವಹೂತಿಗೆ ತತ್ತ್ವಜ್ಞಾನವುಂಟಾಗಿ ಮೋಕ್ಷಪದವಿ ಪ್ರಾಪ್ತವಾದುದು

*ಮೈತ್ರೇಯ ಉವಾಚ*

ಏವಂ ನಿಶಮ್ಯ ಕಪಿಲಸ್ಯ ವಚೋ ಜನಿತ್ರೀ
ಸಾ ಕರ್ದಮಸ್ಯ ದಯಿತಾ ಕಿಲ ದೇವಹೂತಿಃ ।
ವಿಸ್ರಸ್ತಮೋಹಪಟಲಾ ತಮಭಿಪ್ರಣಮ್ಯ
ತುಷ್ಟಾವ ತತ್ತ್ವವಿಷಯಾಂಕಿತಸಿದ್ಧಿ ಭೂಮಿಮ್ ॥ ೧ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಅಯ್ಯಾ! ವಿದುರನೇ! ಶ್ರೀಕಪಿಲಭಗವಂತನ ಈ ವಚನಗಳನ್ನು ಕೇಳಿ ಕರ್ದಮರ ಪ್ರಿಯಪತ್ನಿಯಾದ ಮಾತೆ ದೇವಹೂತಿಯ ಮೋಹದ ತೆರೆ ಕಳಚಿಹೋಯಿತು. ಆಕೆಯು ತತ್ತ್ವಪ್ರತಿಪಾದಕವಾದ ಸಾಂಖ್ಯಶಾಸ್ತ್ರಜ್ಞಾನದ ಆಧಾರ ಭೂಮಿಯಾಗಿರುವ ಶ್ರೀಕಪಿಲದೇವರಿಗೆ ನಮಸ್ಕಾರಮಾಡಿ ಆತನನ್ನು ಸ್ತುತಿಸತೊಡಗಿದಳು. ॥ ೧ ॥

*ದೇವಹೂತಿರುವಾಚ*

ಅಥಾಪ್ಯಜೋಽಂತಃಸಲಿಲೇ ಶಯಾನಂ
ಭೂತೇಂದ್ರಿಯಾರ್ಥಾತ್ಮಮಯಂ ವಪುಸ್ತೇ ।
ಗುಣಪ್ರವಾಹಂ ಸದಶೇಷಬೀಜಂ
ದಧ್ಯೌ ಸ್ವಯಂ ಯಜ್ಜ ಠರಾಬ್ಜ ಜಾತಃ ॥ ೨ ॥

ಸ ಏವ ವಿಶ್ವಸ್ಯ ಭವಾನ್ವಿಧತ್ತೇ
ಗುಣಪ್ರವಾಹೇಣ ವಿಭಕ್ತವೀರ್ಯಃ ।
ಸರ್ಗಾದ್ಯ ನೀಹೋಽವಿತಥಾಭಿಸಂಧಿ-
ರಾತ್ಮೇಶ್ವರೋಽತರ್ಕ್ಯಸಹಸ್ರಶಕ್ತಿಃ ॥ ೩ ॥

ಸ ತ್ವಂ ಭೃತೋ ಮೇ ಜಠರೇಣ ನಾಥ
ಕಥಂ ನು ಯಸ್ಯೋದರ ಏತದಾಸೀತ್ ।
ವಿಶ್ವಂ ಯುಗಾಂತೇ ವಟಪತ್ರ ಏಕಃ
ಶೇತೇ ಸ್ಮ ಮಾಯಾಶಿಶುರಂಘ್ರಿಪಾನಃ ॥ ೪ ॥

ತ್ವಂ ದೇಹತಂತ್ರಃ ಪ್ರಶಮಾಯ ಪಾಪ್ಮನಾಂ
ನಿದೇಶಭಾಜಾಂ ಚ ವಿಭೋ ವಿಭೂತಯೇ ।
ಯಥಾವತಾರಾಸ್ತವ ಸೂಕರಾದಯ-
ಸ್ತಥಾಯಮಪ್ಯಾತ್ಮಪಥೋಪಲಬ್ಧಯೇ ॥ ೫ ॥

ಯನ್ನಾಮಧೇಯಶ್ರವಣಾನುಕೀರ್ತನಾದ್
ಯತ್ಪ್ರಹ್ವಣಾದ್ಯತ್ಸ್ಮರಣಾದಪಿ ಕ್ವಚಿತ್ ।
ಶ್ವಾದೋಽಪಿ ಸದ್ಯಃ ಸವನಾಯ ಕಲ್ಪತೇ
ಕುತಃ ಪುನಸ್ತೇ ಭಗವನ್ನು ದರ್ಶನಾತ್ ॥ ೬ ॥

ಅಹೋ ಬತ ಶ್ವಪಚೋಽತೋ ಗರೀಯಾನ್
ಯಜ್ಜಿಹ್ವಾಗ್ರೇ ವರ್ತತೇ ನಾಮ ತುಭ್ಯಮ್ ।
ತೇಪುಸ್ತಪಸ್ತೇ ಜುಹುವುಃ ಸಸ್ನುರಾರ್ಯಾ
ಬ್ರಹ್ಮಾನೂಚುರ್ನಾಮ ಗೃಣಂತಿ ಯೇ ತೇ ॥ ೭ ॥

**ದೇವಹೂತಿಯು ಇಂತೆಂದಳು** – ಪ್ರಭುವೇ! ಬ್ರಹ್ಮದೇವರು ನಿನ್ನ ನಾಭಿಕಮಲದಿಂದಲೇ ಪ್ರಕಟರಾಗಿದ್ದರು. ಅವರು ಪ್ರಳಯ ಕಾಲದಲ್ಲಿ ಪವಡಿಸಿದ್ದ – ಪಂಚಭೂತಗಳೂ, ಇಂದ್ರಿಯಗಳೂ, ಶಬ್ದಾದಿ ವಿಷಯಗಳೂ, ಮನೋಮಯವಾದ ನಿನ್ನ ವಿಗ್ರಹವನ್ನೇ ಧ್ಯಾನಮಾಡಿದರು. ಸತ್ತ್ವಾದಿಗುಣಗಳ ಪ್ರವಾಹದಿಂದ ಕೂಡಿರುವ, ಸತ್ತ್ವರೂಪವೂ, ಕಾರ್ಯ- ಕಾರಣಗಳೆರಡಕ್ಕೂ ಬೀಜರೂಪನೂ ಆದ ನಿನ್ನ ಮಂಗಳವಿಗ್ರಹವನ್ನು ಅವರು ಧ್ಯಾನಮಾಡಿದರು. ॥ ೨ ॥ ನೀನು ನಿಷ್ಕ್ರಿಯನೂ, ಸತ್ಯಸಂಕಲ್ಪನೂ, ಸಮಸ್ತ ಜೀವರ ಪ್ರಭುವೂ, ಸಾವಿರಾರು ಅಚಿಂತ್ಯ ಶಕ್ತಿಗಳಿಂದಲೂ ಸಂಪನ್ನನಾಗಿರುವೆ. ತನ್ನ ಶಕ್ತಿಯನ್ನು ಗುಣಪ್ರವಾಹರೂಪದಿಂದ ಬ್ರಹ್ಮಾದಿ ಅನಂತಮೂರ್ತಿಗಳಲ್ಲಿ, ವಿಭಕ್ತಗೊಳಿಸಿ, ಅವುಗಳ ಮೂಲಕ ಸ್ವತಃ ವಿಶ್ವದ ರಚನಾದಿಗಳನ್ನು ಮಾಡುತ್ತಿರುವೆ. ॥ ೩ ॥ ಸ್ವಾಮಿ! ಯಾರ ಉದರದಲ್ಲಿ ಪ್ರಳಯಕಾಲವು ಬಂದಾಗ ಈ ಇಡೀ ಪ್ರಪಂಚವು ಲೀನವಾಗಿ ಹೋಗುತ್ತದೋ, ಯಾರು ಕಲ್ಪಾಂತ್ಯದಲ್ಲಿ ಮಾಯಾ ಶಿಶುವಿನ ರೂಪದಲ್ಲಿ ಕಾಲುಹೆಬ್ಬೆರಳನ್ನು ಚೀಪುತ್ತಾ ಒಬ್ಬಂಟಿಗನಾಗಿ ವಟವೃಕ್ಷದ ಎಲೆಯಮೇಲೆ ಪವಡಿಸಿರುವನೋ, ಅಂತಹ ನಿನ್ನನ್ನು ನಾನು ಗರ್ಭದಲ್ಲಿ ಧರಿಸಿದೆನಲ್ಲ! ಇದೆಂತಹ ಆಶ್ಚರ್ಯವಾದುದು. ॥ ೪॥ ವಿಭುವೇ! ನೀನು ಪಾಪಿಗಳನ್ನು ದಮನಗೊಳಿಸಲು ಮತ್ತು ನಿನ್ನ ಆಜ್ಞಾಕಾರಿಯಾದ ಭಕ್ತರ ಅಭ್ಯುದಯ ಮತ್ತು ನಿಃಶ್ರೇಯಸ್ಸನ್ನು ಉಂಟುಮಾಡುವುದಕ್ಕಾಗಿ ಸ್ವೇಚ್ಛೆಯಿಂದ ದೇಹವನ್ನು ಧರಿಸುತ್ತೀಯೆ. ವರಾಹವೇ ಮುಂತಾದ ಅವತಾರಗಳಂತೆಯೇ ಈ ಕಪಿಲಾವತಾರವನ್ನು ಮುಮುಕ್ಷುಗಳಿಗೆ ಜ್ಞಾನ ಮಾರ್ಗವನ್ನು ತೋರುವುದಕ್ಕಾಗಿಯೇ ಕೈಗೊಂಡಿದ್ದೀಯೆ. ॥ ೫ ॥ ಭಗವಂತಾ! ನಿನ್ನ ನಾಮಗಳನ್ನು ಶ್ರವಣಿಸಿದರೂ, ಕೀರ್ತಿಸಿದರೂ ಅಥವಾ ಅಷ್ಟ-ತಷ್ಟ ಎಂದಾದರೂ ನಿನ್ನನ್ನು ವಂದಿಸಿ, ಸ್ಮರಿಸಿದರೂ ಚಾಂಡಾಲನೂ ಕೂಡ ಸೋಮಯಾಜಿ ಬ್ರಾಹ್ಮಣನಿಗೆ ಸಮಾನವಾಗಿ ಪೂಜ್ಯನಾಗುತ್ತಾನೆ. ಮತ್ತೆ ನಿನ್ನ ದರ್ಶನದಿಂದ ಕೃತಕೃತ್ಯರಾದ ಮನುಷ್ಯರ ಕುರಿತು ಹೇಳುವುದೇನಿದೆ? ॥ ೬ ॥ ಆಹಾ! ಆತನ ನಾಲಿಗೆಯ ತುದಿಯಲ್ಲಿ ನಿನ್ನ ನಾಮವು ವಿರಾಜಮಾನವಾಗಿದೆ. ಆದರಿಂದ ಆ ಚಾಂಡಾಲನೂ ಸರ್ವಶ್ರೇಷ್ಠನೇ ಆಗಿದ್ದಾನೆ. ನಿನ್ನ ನಾಮಗಳನ್ನು ಉಚ್ಚರಿಸಿದ ಶ್ರೇಷ್ಠ ಪುರುಷರು ತಪಸ್ಸು, ಹೋಮ, ತೀರ್ಥಸ್ನಾನ, ಸದಾಚಾರ ಪಾಲನೆ ಮತ್ತು ವೇದಾಧ್ಯಯನ – ಎಲ್ಲವನ್ನು ಮಾಡಿದಂತೆಯೇ ಸರಿ. ॥ ೭ ॥

ತಂ ತ್ವಾಮಹಂ ಬ್ರಹ್ಮ ಪರಂ ಪುಮಾಂಸಂ
ಪ್ರತ್ಯಕ್ಸ್ರೋತಸ್ಯಾತ್ಮನಿ ಸಂವಿಭಾವ್ಯಮ್ ।
ಸ್ವತೇಜಸಾ ಧ್ವಸ್ತಗುಣಪ್ರವಾಹಂ
ವಂದೇ ವಿಷ್ಣುಂ ಕಪಿಲಂ ವೇದಗರ್ಭಮ್ ॥ ೮ ॥

ಮೈತ್ರೇಯ ಉವಾಚ

ಈಡಿತೋ ಭಗವಾನೇವಂ ಕಪಿಲಾಖ್ಯಃ ಪರಃ ಪುಮಾನ್ ।
ವಾಚಾಽವಿಕ್ಲವಯೇತ್ಯಾಹ ಮಾತರಂ ಮಾತೃವತ್ಸಲಃ ॥ ೯ ॥

ಕಪಿಲ ಉವಾಚ

ಮಾರ್ಗೇಣಾನೇನ ಮಾತಸ್ತೇ ಸುಸೇವ್ಯೇನೋದಿತೇನ ಮೇ ।
ಆಸ್ಥಿತೇನ ಪರಾಂ ಕಾಷ್ಠಾ ಮಚಿರಾದವರೋತ್ಸ್ಯಸಿ ॥ ೧೦ ॥

ಶ್ರದ್ಧತ್ಸ್ವೈತನ್ಮತಂ ಮಹ್ಯಂ ಜುಷ್ಟಂ ಯದ್ಬ್ರಹ್ಮವಾದಿಭಿಃ ।
ಯೇನ ಮಾಮಭವಂ ಯಾಯಾ ಮೃತ್ಯುಮೃಚ್ಛಂತ್ಯತದ್ವಿದಃ ॥ ೧೧ ॥

ಮೈತ್ರೇಯ ಉವಾಚ

ಇತಿ ಪ್ರದರ್ಶ್ಯ ಭಗವಾನ್ಸತೀಂ ತಾಮಾತ್ಮನೋ ಗತಿಮ್ ।
ಸ್ವಮಾತ್ರಾ ಬ್ರಹ್ಮವಾದಿನ್ಯಾ ಕಪಿಲೋಽನುಮತೋ ಯಯೌ ॥ ೧೨ ॥

ಸಾ ಚಾಪಿ ತನಯೋಕ್ತೇನ ಯೋಗಾದೇಶೇನ ಯೋಗಯುಕ್ ।
ತಸ್ಮಿನ್ನಾಶ್ರಮ ಆಪೀಡೇ ಸರಸ್ವತ್ಯಾಃ ಸಮಾಹಿತಾ ॥ ೧೩ ॥

ಅಭೀಕ್ಷ್ಣಾವಗಾಹಕಪಿಶಾನ್ ಜಟಿಲಾನ್ಕುಟಿಲಾಲಕಾನ್ ।
ಆತ್ಮಾನಂ ಚೋಗ್ರತಪಸಾ ಬಿಭ್ರತೀ ಚೀರಿಣಂ ಕೃಶಮ್ ॥ ೧೪ ॥

ಪ್ರಜಾಪತೇಃ ಕರ್ದಮಸ್ಯ ತಪೋಯೋಗವಿಜೃಂಭಿತಮ್ ।
ಸ್ವಗಾರ್ಹಸ್ಥ್ಯಮನೌಪಮ್ಯಂ ಪ್ರಾರ್ಥ್ಯಂ ವೈಮಾನಿಕೈರಪಿ ॥ ೧೫ ॥

ಪಯಃಫೇನನಿಭಾಃ ಶಯ್ಯಾ ದಾಂತಾ ರುಕ್ಮಪರಿಚ್ಛದಾಃ ।
ಆಸನಾನಿ ಚ ಹೈಮಾನಿ ಸುಸ್ಪರ್ಶಾಸ್ತರಣಾನಿ ಚ ॥ ೧೬ ॥

ಸ್ವಚ್ಛ ಸ್ಫಟಿಕಕುಡ್ಯೇಷು ಮಹಾಮಾರಕತೇಷು ಚ ।
ರತ್ನಪ್ರದೀಪಾ ಆಭಾಂತಿ ಲಲನಾರತ್ನಸಂಯುತಾಃ ॥ ೧೭ ॥

ಗೃಹೋದ್ಯಾನಂ ಕುಸುಮಿತೈ ರಮ್ಯಂ ಬಹ್ವಮರದ್ರುಮೈಃ ।
ಕೂಜದ್ವಿಹಂಗಮಿಥುನಂ ಗಾಯನ್ಮತ್ತಮಧುವ್ರತಮ್ ॥ ೧೮ ॥

ಸ್ವಾಮಿ! ನೀನು ಸಾಕ್ಷಾತ್ ಪರಬ್ರಹ್ಮನಾಗಿರುವೆ. ಪರಮ ಪುರುಷನೂ ನೀನೇ. ಚಿತ್ತವೃತ್ತಿಗಳ ಪ್ರವಾಹವನ್ನು ಅಂತರ್ಮುಖವಾಗಿಸಿ ಅಂತಃಕರಣದಲ್ಲಿ ನಿನ್ನನ್ನೇ ಚಿಂತಿಸಲಾಗುವುದು. ನೀನು ತನ್ನ ತೇಜದಿಂದ ಮಾಯೆಯ ಕಾರ್ಯವಾದ ಗುಣಪ್ರವಾಹವನ್ನು ಶಾಂತಗೊಳಿಸುವೆ ಹಾಗೂ ನಿನ್ನ ಉದರದಲ್ಲೇ ಸಮಸ್ತ ವೇದತತ್ತ್ವಗಳು ಅಡಗಿವೆ. ಇಂತಹ ಸಾಕ್ಷಾತ್ ವಿಷ್ಣುರೂಪನಾದ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೮ ॥

ಶ್ರೀಮೈತ್ರೇಯರು ಹೇಳುತ್ತಾರೆ – ತಾಯಿಯು ಹೀಗೆ ಸ್ತುತಿಸಿದಾಗ ಮಾತೃವತ್ಸಲನಾದ ಪರಮಪುರುಷ ಭಗವಾನ್ ಕಪಿಲದೇವರು ಗಂಭೀರವಾದ ವಾಣಿಯಿಂದ ಇಂತೆಂದರು. ॥ ೯ ॥

ಶ್ರೀಕಪಿಲಭಗವಂತನು ಹೇಳುತ್ತಾನೆ – ಅಮ್ಮಾ! ನಾನು ನಿನಗೆ ಹೇಳಿದ ಈ ಸುಗಮ ಮಾರ್ಗವನ್ನು ಅವಲಂಬಿಸುವುದರಿಂದ ನೀನು ಶೀಘ್ರವಾಗಿ ಪರಮಪದವನ್ನು ಪಡೆದುಕೊಳ್ಳುವೆ. ॥ ೧೦ ॥ ನನ್ನ ಈ ಮತದಲ್ಲಿ ಶ್ರದ್ಧೆಯನ್ನಿಡು. ಬ್ರಹ್ಮವಾದಿ ಜನರು ಇದನ್ನು ಸೇವನೆಮಾಡಿರುವರು. ಇದರ ಮೂಲಕ ನೀನು ನನ್ನ ಜನ್ಮ-ಮರಣ ರಹಿತವಾದ ಸ್ವರೂಪವನ್ನು ಪಡೆಯುವೆ. ಈ ಮತವನ್ನು ತಿಳಿಯದವರು ಜನ್ಮ-ಮರಣದ ಚಕ್ರದಲ್ಲಿ ಸಿಲುಕಿಕೊಳ್ಳುವರು. ॥ ೧೧ ॥

ಶ್ರೀಮೈತ್ರೇಯ ಮಹರ್ಷಿಗಳು ಹೇಳುತ್ತಾರೆ – ವಿದುರನೇ! ಶ್ರೀಕಪಿಲಭಗವಂತನು ಹೀಗೆ ತನ್ನ ಶ್ರೇಷ್ಠವಾದ ಆತ್ಮಜ್ಞಾನವನ್ನು ಉಪದೇಶಿಸಿ, ಬ್ರಹ್ಮವಾದಿನಿಯಾದ ಆ ತಾಯಿಯ ಅನುಮತಿಯನ್ನು ಪಡೆದು ಅಲ್ಲಿಂದ ಹೊರಟು ಹೋದನು. ॥ ೧೨ ॥ ಆಗ ದೇವಹೂತಿಯೂ ಸರಸ್ವತಿನದಿಗೆ ಶಿರೋಭೂಷದಂತಿದ್ದ ತನ್ನ ಆಶ್ರಮದಲ್ಲಿ ಪುತ್ರನು ಉಪದೇಶಿಸಿರುವ ಯೋಗಸಾಧನೆಯ ಮೂಲಕ ಯೋಗಾಭ್ಯಾಸವನ್ನು ಮಾಡುತ್ತಾ ಸಮಾಧಿಯಲ್ಲಿ ಸ್ಥಿತಳಾದಳು. ॥ ೧೩ ॥ ತ್ರಿಕಾಲಸ್ನಾನ ಮಾಡುವುದರಿಂದ ಅವಳ ಗುಂಗುರುಕೂದಲುಗಳು ಜಟೆಗಟ್ಟಿದವು. ನಾರುಮಡಿಯನ್ನು ಧರಿಸಿದ ಆಕೆಯ ದೇಹವು ಉಗ್ರವಾದ ತಪಸ್ಸಿನಿಂದಾಗಿ ದುರ್ಬಲವಾಯಿತು. ॥ ೧೪ ॥ ಆಕೆಯು ಕರ್ದಮರ ತಪಸ್ಸು ಮತ್ತು ಯೋಗ ಬಲಗಳಿಂದ ದೊರಕಿದ್ದ, ದೇವತೆಗಳೂ ಆಶಿಸುತ್ತಿದ್ದ, ಅನುಪಮವಾದ ಗಾರ್ಹಸ್ಥ್ಯ ಸುಖವನ್ನು ತೊರೆದುಬಿಟ್ಟಳು. ॥ ೧೫ ॥ ಅದರಲ್ಲಿ ಹಾಲಿನ ನೊರೆಯಂತೆ ಬಿಳುಪಾದ ಮೃದು ಹಾಸಿಗೆಗಳು, ಹಸ್ತಿದಂತದಿಂದ ಕೂಡಿದ ಮಂಚಗಳೂ, ಸುವರ್ಣದ ಪಾತ್ರೆಗಳು, ಮೆದುವಾದ ಮೆತ್ತೆಗಳಿಂದ ಕೂಡಿದ ಚಿನ್ನದ ಸಿಂಹಾಸನಗಳೂ, ಮಹಾಮರಕತಮಣಿಗಳಿಂದ ಅಲಂಕೃತವಾಗಿದ್ದ ಸ್ಫಟಿಕದ ಸ್ವಚ್ಛ ಗೋಡೆಗಳಲ್ಲಿ ರತ್ನಗಳಿಂದ ಕೆತ್ತಿದ ರಮಣಿಯರ ಮೂರ್ತಿಗಳಿಂದ ಕೂಡಿದ್ದು ಮಣಿಮಯ ದೀಪಗಳು ಬೆಳಗುತ್ತಿದ್ದವು. ಅದು ಹೂಗೊಂಚಲುಗಳಿಂದ ಕಂಗೊಳಿಸುವ ಅನೇಕ ದಿವ್ಯ ವೃಕ್ಷಗಳಿಂದ ಶೋಭಿತವಾಗಿತ್ತು. ಅವುಗಳಲ್ಲಿ ಅನೇಕ ಪ್ರಕಾರದ ಪಕ್ಷಿಗಳು ಕಲರವ ಮಾಡುತ್ತಾ, ಮತ್ತ ಭೃಂಗಗಳು ಝೇಂಕರಿಸುತ್ತಿದ್ದವು. ಕಮಲಗಳ ಕಂಪಿನಿಂದ ಸುವಾಸಿತವಾಗಿದ್ದ ತಿಳಿಗೊಳಗಳಿಂದಲೂ ಸೊಗಸುಗೊಂಡು, ಕರ್ದಮರಿಂದ ಮುದ್ದಿಸಲ್ಪಟ್ಟು ತಾನು ಅಲ್ಲಿಗೆ ವಿಹಾರಕ್ಕಾಗಿ ಪ್ರವೇಶಿಸಿದೊಡನೆ ಗಂಧರ್ವಗಣಗಳು ಸ್ತುತಿಸುತ್ತಿರುವಾಗ,

ಯತ್ರ ಪ್ರವಿಷ್ಟಮಾತ್ಮಾನಂ ವಿಬುಧಾನುಚರಾ ಜಗುಃ ।
ವಾಪ್ಯಾಮುತ್ಪಲಗಂಧಿನ್ಯಾಂ ಕರ್ದಮೇನೋಪಲಾಲಿತಮ್
॥ ೧೯ ॥

ಹಿತ್ವಾ ತದೀಪ್ಸಿತತಮಮಪ್ಯಾಖಂಡಲಯೋಷಿತಾಮ್ ।
ಕಿಂಚಿಚ್ಚಕಾರ ವದನಂ ಪುತ್ರವಿಶ್ಲೇಷಣಾತುರಾ
॥ ೨೦ ॥

ವನಂ ಪ್ರವ್ರಜಿತೇ ಪತ್ಯಾವಪತ್ಯವಿರಹಾತುರಾ ।
ಜ್ಞಾತತತ್ತ್ವಾಪ್ಯಭೂನ್ನಷ್ಟೇ ವತ್ಸೇ ಗೌರಿವ ವತ್ಸಲಾ
॥ ೨೧ ॥

ತಮೇವ ಧ್ಯಾಯತೀ ದೇವಮಪತ್ಯಂ ಕಪಿಲಂ ಹರಿಮ್ ।
ಬಭೂವಾಚಿರತೋ ವತ್ಸ ನಿಃಸ್ಪೃಹಾ ತಾದೃಶೇ ಗೃಹೇ
॥ ೨೨ ॥

ಧ್ಯಾಯತೀ ಭಗವದ್ರೂಪಂ ಯದಾಹ ಧ್ಯಾನಗೋಚರಮ್ ।
ಸುತಃ ಪ್ರಸನ್ನವದನಂ ಸಮಸ್ತವ್ಯಸ್ತಚಿಂತಯಾ
॥ ೨೩ ॥

ಭಕ್ತಿಪ್ರವಾಹಯೋಗೇನ ವೈರಾಗ್ಯೇಣ ಬಲೀಯಸಾ ।
ಯುಕ್ತಾನುಷ್ಠಾನಜಾತೇನ ಜ್ಞಾನೇನ ಬ್ರಹ್ಮಹೇತುನಾ
॥ ೨೪ ॥

ವಿಶುದ್ಧೇನ ತದಾಽಽತ್ಮಾನಮಾತ್ಮನಾ ವಿಶ್ವತೋಮುಖಮ್ ।
ಸ್ವಾನುಭೂತ್ಯಾ ತಿರೋಭೂತಮಾಯಾಗುಣವಿಶೇಷಣಮ್
॥ ೨೫ ॥

ಬ್ರಹ್ಮಣ್ಯವಸ್ಥಿತಮತಿರ್ಭಗವತ್ಯಾತ್ಮಸಂಶ್ರಯೇ ।
ನಿವೃತ್ತಜೀವಾಪತ್ತಿತ್ವಾತ್ಕ್ಷೀಣಕ್ಲೇಶಾಽಽಪ್ತನಿರ್ವೃತಿಃ
॥ ೨೬ ॥

ನಿತ್ಯಾರೂಢಸಮಾಧಿತ್ವಾತ್ಪರಾವೃತ್ತಗುಣಭ್ರಮಾ ।
ನ ಸಸ್ಮಾರ ತದಾಽಽತ್ಮಾನಂ ಸ್ವಪ್ನೇ ದೃಷ್ಟಮಿವೋತ್ಥಿತಃ
॥ ೨೭ ॥

ತದ್ದೇಹಃ ಪರತಃ ಪೋಷೋಽಪ್ಯಕೃಶಶ್ಚಾಧ್ಯಸಂಭವಾತ್ ।
ಬಭೌ ಮಲೈರವಚ್ಛನ್ನಃ ಸಧೂಮ ಇವ ಪಾವಕಃ
॥ ೨೮ ॥

ಸ್ವಾಂಗಂ ತಪೋಯೋಗಮಯಂ ಮುಕ್ತಕೇಶಂ ಗತಾಂಬರಮ್ ।
ದೈವಗುಪ್ತಂ ನ ಬುಬುಧೇ ವಾಸುದೇವಪ್ರವಿಷ್ಟಧೀಃ
॥ ೨೯ ॥

ಏವಂ ಸಾ ಕಪಿಲೋಕ್ತೇನ ಮಾರ್ಗೇಣಾಚಿರತಃ ಪರಮ್ ।
ಆತ್ಮಾನಂ ಬ್ರಹ್ಮ ನಿರ್ವಾಣಂ ಭಗವಂತಮವಾಪ ಹ
॥ ೩೦ ॥

ತದ್ವೀರಾಸೀತ್ಪುಣ್ಯತಮಂ ಕ್ಷೇತ್ರಂ ತ್ರೈಲೋಕ್ಯವಿಶ್ರುತಮ್ ।
ನಾಮ್ನಾ ಸಿದ್ಧಪದಂ ಯತ್ರ ಸಾ ಸಂಸಿದ್ಧಿಮುಪೇಯುಷೀ
॥ ೩೧ ॥

ಇಂದ್ರನ ಮಡದಿಯರೂ ಆಸೆ ಪಡುತ್ತಿದ್ದ ಆ ಗೃಹೋದ್ಯಾನಗಳ ಮಮತೆಯನ್ನು ಆಕೆಯು ತ್ಯಜಿಸಿಬಿಟ್ಟಿದ್ದಳು. ಆದರೆ ಪುತ್ರವಿಯೋಗದ ದುಃಖವುಮಾತ್ರ ಆಕೆಯ ಮುಖದಲ್ಲಿ ಕೊಂಚ ಕಾಣಿಸುತ್ತಿತ್ತು. ॥ ೧೬-೨೦ ॥

ಪತಿಯು ಅರಣ್ಯಕ್ಕೆ ತೆರಳಿದ ಬಳಿಕ ಪುತ್ರನೂ ಅಗಲಿ ದೂರ ಹೋಗಲು ಆಕೆಯು ಆತ್ಮಜ್ಞಾನಸಂಪನ್ನಳಾಗಿದ್ದರೂ ಕರುವನ್ನು ಅಗಲಿದ ಹಸುವಿನಂತೆ ಕಳವಳಗೊಂಡಳು. ॥ ೨೧ ॥ ವಿದುರನೇ! ಆದರೆ ಆಕೆಯು ತನ್ನ ಪುತ್ರನಾಗಿದ್ದ ಕಪಿಲರೂಪಿಯಾದ ಶ್ರೀಹರಿಯ ಧ್ಯಾನದಲ್ಲಿ ತೊಡಗಿ ಕೆಲವೇ ದಿನಗಳಲ್ಲಿ ವೈರಾಗ್ಯಸಂಪನ್ನೆಯಾಗಿ ಆ ವೈಭವದ ಮನೆಯನ್ನೂ ಬಿಟ್ಟುಬಿಟ್ಟಳು. ॥ ೨೨ ॥ ಅನಂತರ ಆಕೆಯು ಶ್ರೀಕಪಿಲಭಗವಂತನು ತನಗೆ ಧ್ಯಾನಯೋಗ್ಯವಾದ ಪ್ರಸನ್ನ ವದನಾರವಿಂದದಿಂದ ಕೂಡಿದ ಸ್ವರೂಪವನ್ನು ವರ್ಣನೆಮಾಡಿದ ಸ್ವರೂಪದ ಒಂದೊಂದು ಅವಯವವನ್ನೂ ಮತ್ತು ಇಡೀ ವಿಗ್ರಹವನ್ನು ಚಿಂತಿಸುತ್ತಾ ಧ್ಯಾನಮಗ್ನಳಾದಳು. ॥ ೨೩ ॥ ಭಗವದ್ಭಕ್ತಿಯ ಪ್ರವಾಹ, ಪ್ರಬಲವಾದ ವೈರಾಗ್ಯ, ಯಥೋಚಿತವಾದ ಕರ್ಮಾನುಷ್ಠಾನಗಳಿಂದ ಉಂಟಾದ ಬ್ರಹ್ಮಸಾಕ್ಷಾತ್ಕಾರವನ್ನುಂಟು ಮಾಡಿಸುವ ಜ್ಞಾನದಿಂದ ಚಿತ್ತವು ಶುದ್ಧವಾದ್ದರಿಂದ ಆಕೆಯು ತನ್ನ ಸ್ವರೂಪ ಪ್ರಕಾಶದಿಂದ ಮಾಯೆಯ ಆವರಣವನ್ನು ಕಳಚಿ ಹಾಕುವ ಸರ್ವವ್ಯಾಪಕನಾದ ಪರಮಾತ್ಮನ ಧ್ಯಾನದಲ್ಲಿ ಮುಳುಗಿಹೋದಳು. ॥ ೨೪-೨೫ ॥ ಹೀಗೆ ಜೀವಕ್ಕೆ ಅಧಿಷ್ಠಾನವಾಗಿರುವ ಪರಬ್ರಹ್ಮನಾದ ಭಗವಂತನಲ್ಲಿ ಬುದ್ಧಿಯು ನೆಲೆಗೊಳ್ಳಲು ಆಕೆಯ ಜೀವಭಾವವು ಕಳೆದುಹೋಯಿತು ಹಾಗೂ ಸಮಸ್ತ ಕ್ಲೇಶಗಳಿಂದ ಮುಕ್ತಳಾಗಿ ಪರಮಾನಂದದಲ್ಲಿ ಮಗ್ನಳಾದಳು. ॥ ೨೬ ॥ ಈಗ ನಿರಂತರ ಸಮಾಧಿಸ್ಥಳಾದ ಕಾರಣ ಆಕೆಗೆ ವಿಷಯಗಳಲ್ಲಿರುವ ಸತ್ಯತ್ವದ ಭ್ರಾಂತಿಯು ಅಳಿದುಹೋಯಿತು. ನಿದ್ದೆಯಿಂದ ಎಚ್ಚರಗೊಂಡವನು ಕನಸಿನಲ್ಲಿನ ದೇಹವನ್ನು ಮರೆಯುವಂತೆ ಆಕೆಗೆ ತನ್ನ ದೇಹದ ಎಚ್ಚರವೂ ಇರಲಿಲ್ಲ. ॥ ೨೭ ॥ ಆಕೆಯ ಶರೀರದ ಪೋಷಣೆಯನ್ನು ಇತರರು ಮಾಡುತ್ತಿದ್ದರು. ಆದರೂ ಯಾವುದೇ ಮಾನಸಿಕ ಕ್ಲೇಶವಿಲ್ಲದ ಕಾರಣ ಅವಳ ದೇಹವು ದುರ್ಬಲಗೊಂಡಿಲ್ಲ, ಅದರ ತೇಜಸ್ಸು ಇನ್ನೂ ಹೆಚ್ಚಿತ್ತು. ಹೊರಗಿನ ಕೊಳೆಯಿಂದ ಕೂಡಿದ್ದ ಆ ದೇಹವು ಹೊಗೆಯಾಡುವ ಅಗ್ನಿಯಂತೆ ಶೋಭಿಸತೊಡಗಿತು. ಆಕೆಯ ಕೂದಲು ಕೆದರಿಹೋಗಿದ್ದವು. ಬಟ್ಟೆಯೂ ಕಳಚಿ ಹೋಗಿತ್ತು. ಆದರೂ ನಿರಂತರವಾಗಿ ಅವಳ ಚಿತ್ತವು ಭಗವಂತನಲ್ಲೇ ನೆಟ್ಟಿದ್ದರಿಂದ ಆಕೆಗೆ ತನ್ನ ತಪೋಮಯವಾಗಿದ್ದ ಶರೀರದ ಅರಿವು ಕಿಂಚಿತ್ತೂ ಇರಲಿಲ್ಲ. ಕೇವಲ ಪ್ರಾರಬ್ಧವೇ ಅದನ್ನು ರಕ್ಷಿಸುತ್ತಿತ್ತು. ॥ ೨೮-೨೯ ॥

ಎಲೈ ವಿದುರನೇ! ಹೀಗೆ ದೇವಹೂತಿಯೂ ಶ್ರೀಕಪಿಲ ಭಗವಂತನು ಹೇಳಿದ್ದ ಮಾರ್ಗದಲ್ಲಿ ನಡೆದು ಸ್ವಲ್ಪ ಸಮಯದಲ್ಲೇ ಪರಮಶಾಂತಸ್ವರೂಪನಾದ ಶ್ರೀಪರಮಾತ್ಮನನ್ನು ಪಡೆದು ಕೊಂಡಳು. ॥ ೩೦ ॥ ಎಲೈ ವೀರವರನೇ! ಅವಳಿಗೆ ಸಿದ್ಧಿಯು ದೊರಕಿದ ಸ್ಥಾನವು ಪರಮಪವಿತ್ರ 'ಸಿದ್ಧಪದ' (ಇದು ಈಗ ಗುಜರಾತದಲ್ಲಿದೆ.) ಎಂಬ ಹೆಸರಿನಿಂದ ಮೂರು ಲೋಕಗಳಲ್ಲಿ ಪ್ರಸಿದ್ಧವಾಯಿತು. ॥ ೩೧ ॥

ತಸ್ಯಾಸ್ತದ್ಯೋಗವಿಧುತಮಾರ್ತ್ಯಂ ಮರ್ತ್ಯಮಭೂತ್ಸರಿತ್ ।
ಸ್ರೋತಸಾಂ ಪ್ರವರಾ ಸೌಮ್ಯ ಸಿದ್ಧಿದಾ ಸಿದ್ಧಸೇವಿತಾ
॥ ೩೨ ॥

ಕಪಿಲೋಽಪಿ ಮಹಾಯೋಗೀ ಭಗವಾನ್ಪಿತುರಾಶ್ರಮಾತ್ ।
ಮಾತರಂ ಸಮನುಜ್ಞಾಪ್ಯ ಪ್ರಾಗುದೀಚೀಂ ದಿಶಂ ಯಯೌ
॥ ೩೩ ॥

ಸಿದ್ಧಚಾರಣಗಂಧರ್ವೈರ್ಮುನಿಭಿಶ್ಚಾಪ್ಸರೋಗಣೈಃ ।
ಸ್ತೂಯಮಾನಃ ಸಮುದ್ರೇಣ ದತ್ತಾರ್ಹಣನಿಕೇತನಃ
॥ ೩೪ ॥

ಆಸ್ತೇ ಯೋಗಂ ಸಮಾಸ್ಥಾಯ ಸಾಂಖ್ಯಾಚಾರ್ಯೈರಭಿಷ್ಟುತಃ ।
ತ್ರಯಾಣಾಮಪಿ ಲೋಕಾನಾಮುಪಶಾಂತ್ಯೈ ಸಮಾಹಿತಃ
॥ ೩೫ ॥

ಏತನ್ನಿಗದಿತಂ ತಾತ ಯತ್ಪೃಷ್ಟೋಽಹಂ ತವಾನಘ ।
ಕಪಿಲಸ್ಯ ಚ ಸಂವಾದೋ ದೇವಹೂತ್ಯಾಶ್ಚ ಪಾವನಃ
॥ ೩೬ ॥

ಯ ಇದಮನುಶೃಣೋತಿ ಯೋಽಭಿಧತ್ತೇ
ಕಪಿಲಮುನೇರ್ಮತಮಾತ್ಮ ಯೋಗಗುಹ್ಯಮ್ ।
ಭಗವತಿ ಕೃತಧೀಃ ಸುಪರ್ಣಕೇತಾ-
ವುಪಲಭತೇ ಭಗವತ್ಪದಾರವಿಂದಮ್ ॥ ೩೭ ॥

ಸಾಧುಶ್ರೇಷ್ಠನೇ! ಯೋಗಸಾಧನೆಯಿಂದ ಆಕೆಯ ಶರೀರದ ಎಲ್ಲ ದೈಹಿಕ ಕೊಳೆಯು ಕಳೆದುಹೋಗಿ ಶುದ್ಧವಾಗಿ ಅದು ಒಂದು ನದಿಯರೂಪವನ್ನು ತಾಳಿತು. ಅದು ಸಿದ್ಧಗಣರಿಂದ ಸೇವಿಸಲ್ಪಡುತ್ತಾ ಸರ್ವಸಿದ್ಧಿಗಳನ್ನೂ ಕೊಡುವುದಾಗಿದೆ. ॥ ೩೨ ॥

ಯೋಗಿವರೇಣ್ಯರಾದ ಭಗವಾನ್ ಕಪಿಲದೇವರು ತಾಯಿಯ ಅಪ್ಪಣೆಯನ್ನು ಪಡೆದು, ತಂದೆಯ ಆಶ್ರಮದಿಂದ ಈಶಾನ್ಯದಿಕ್ಕಿನ ಕಡೆಗೆ ಹೊರಟುಹೋದರು. ॥ ೩೩॥ ಅಲ್ಲಿ ಸ್ವತಃ ಸಮುದ್ರರಾಜನು ಅವರಿಗೆ ಪೂಜೆಮಾಡಿ ಇರಲು ಜಾಗವನ್ನು ನೀಡಿದನು. ಅಲ್ಲಿ ಅವರು ಮೂರು ಲೋಕಗಳಿಗೂ ಶಾಂತಿಯನ್ನು ಕೊಡುವುದಕ್ಕಾಗಿ ಯೋಗಮಾರ್ಗವನ್ನು ಅವಲಂಬಿಸಿ ಸಮಾಧಿಯಲ್ಲಿ ಸ್ಥಿತರಾದರು. ಸಿದ್ಧ, ಚಾರಣ, ಗಂಧರ್ವ, ಮುನಿಗಳು ಹಾಗೂ ಅಪ್ಸರೆಯರು ಹೀಗೆ ಎಲ್ಲರೂ ಅವರನ್ನು ಸ್ತುತಿಸುತ್ತಿದ್ದಾರೆ ಮತ್ತು ಸಾಂಖ್ಯಾಚಾರ್ಯರ ಸಮೂಹವೂ ಅವರನ್ನು ಎಲ್ಲ ವಿಧದಿಂದ ಸ್ತೋತ್ರ ಮಾಡುತ್ತಿವೆ. ॥ ೩೪-೩೫ ॥

ಪುಣ್ಯಾತ್ಮನಾದ ವಿದುರನೇ! ನೀನು ಕೇಳಿದ್ದಂತೆ ನಾನು ನಿನಗೆ ಭಗವಾನ್ ಕಪಿಲರ ಮತ್ತು ದೇವಹೂತಿಯ ಪರಮ ಪವಿತ್ರವಾದ ಸಂವಾದವನ್ನು ಹೇಳಿರುವೆನು. ॥ ೩೬ ॥ ಶ್ರೀಕಪಿಲಭಗವಂತನ ಈ ಸಿದ್ಧಾಂತವು ಆಧ್ಯಾತ್ಮಯೋಗದ ಪರಮ ರಹಸ್ಯವಾಗಿದೆ. ಇದನ್ನು ಶ್ರವಣಿಸುವ ಅಥವಾ ವರ್ಣಿಸುವವನು ಭಗವಾನ್ ಗರುಡಧ್ವಜನ ಭಕ್ತಿಯಿಂದ ಕೂಡಿಕೊಂಡು ಬೇಗನೇ ಶ್ರೀಹರಿಯ ಚರಣಾರವಿಂದಗಳನ್ನು ಹೊಂದುವನು. ॥ ೩೭ ॥

*ಮೂವತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೩೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ತೃತೀಯಸ್ಕಂಧೇ
ಕಾಪಿಲೇಯೋಪಾಖ್ಯಾನೇ ತ್ರಯಸ್ತ್ರಿಂಶೋಽಧ್ಯಾಯಃ ॥ ೩೩ ॥

ಮೂರನೆಯ ಸ್ಕಂಧವು ಸಂಪೂರ್ಣವಾಯಿತು.



॥ ಓಂ ನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ಚತುರ್ಥಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಸ್ವಾಯಂಭುವ ಮನುವಿನ ಕನ್ಯೆಯರ ವಂಶದ ವರ್ಣನೆ

*ಮೈತ್ರೇಯ ಉವಾಚ*

**ಮನೋಸ್ತು ಶತರೂಪಾಯಾಂ ತಿಸ್ರಃ ಕನ್ಯಾಶ್ಚ ಜಜ್ಞಿರೇ ।
ಆಕೂತಿರ್ದೇವಹೂತಿಶ್ಚ ಪ್ರಸೂತಿರಿತಿ ವಿಶ್ರುತಾಃ ॥ ೧ ॥**

**ಆಕೂತಿಂ ರುಚಯೇ ಪ್ರಾದಾದಪಿ ಭ್ರಾತೃಮತೀಂ ನೃಪಃ ।
ಪುತ್ರಿಕಾಧರ್ಮಮಾಶ್ರಿತ್ಯ ಶತರೂಪಾನುಮೋದಿತಃ ॥ ೨ ॥**

**ಪ್ರಜಾಪತಿಃ ಸ ಭಗವಾನ್ರುಚಿಸ್ತಸ್ಯಾಮಜೀಜನತ್ ।
ಮಿಥುನಂ ಬ್ರಹ್ಮವರ್ಚಸ್ವೀ ಪರಮೇಣ ಸಮಾಧಿನಾ ॥ ೩ ॥**

**ಯಸ್ತಯೋಃ ಪುರುಷಃ ಸಾಕ್ಷಾದ್ವಿಷ್ಣುರ್ಯಜ್ಞಸ್ವರೂಪಧೃಕ್ ।
ಯಾ ಸ್ತ್ರೀ ಸಾ ದಕ್ಷಿಣಾ ಭೂತೇರಂಶಭೂತಾನಪಾಯಿನೀ ॥ ೪ ॥**

**ಆನಿನ್ಯೇ ಸ್ವಗೃಹಂ ಪುತ್ರ್ಯಾಃ ಪುತ್ರಂ ವಿತತರೋಚಿಷಮ್ ।
ಸ್ವಾಯಂಭುವೋ ಮುದಾ ಯುಕ್ತೋ ರುಚಿರ್ಜಗ್ರಾಹ ದಕ್ಷಿಣಾಮ್ ॥ ೫ ॥**

**ತಾಂ ಕಾಮಯಾನಾಂ ಭಗವಾನುವಾಹ ಯಜುಷಾಂ ಪತಿಃ ।
ತುಷ್ಟಾಯಾಂ ತೋಷಮಾಪನ್ನೋಽಜನಯದ್ದ್ವಾದಶಾತ್ಮಜಾನ್ ॥ ೬ ॥**

**ತೋಷಃ ಪ್ರತೋಷಃ ಸಂತೋಷೋ ಭದ್ರಃ ಶಾಂತಿರಿಡಸ್ಪತಿಃ ।
ಇಧ್ಮಃ ಕವಿರ್ವಿಭುಃ ಸ್ವಹ್ನಃ ಸುದೇವೋ ರೋಚನೋ ದ್ವಿಷಟ್ ॥ ೭ ॥**

**ತುಷಿತಾ ನಾಮ ತೇ ದೇವಾ ಆಸನ್ ಸ್ವಾಯಮ್ಭುವಾಂತರೇ ।
ಮರೀಚಿಮಿಶ್ರಾ ಋಷಯೋ ಯಜ್ಞಃ ಸುರಗಣೇಶ್ವರಃ ॥ ೮ ॥**

**ಶ್ರೀಮೈತ್ರೇಯ ಮಹರ್ಷಿಗಳು ಹೇಳುತ್ತಾರೆ** – ವಿದುರನೇ! ಸ್ವಾಯಂಭುವ ಮನುವು ತನ್ನ ಪತ್ನಿಯಾದ ಶತರೂಪಾದೇವಿಯಲ್ಲಿ ಪ್ರಿಯವ್ರತ ಮತ್ತು ಉತ್ತಾನಪಾದರೆಂಬ ಇಬ್ಬರು ಪುತ್ರರು, ಅಲ್ಲದೆ ಮೂವರು ಪುತ್ರಿಯರನ್ನು ಪಡೆದನು. ಅವರು ಆಕೂತಿ, ದೇವ ಹೂತಿ, ಪ್ರಸೂತಿ ಎಂಬ ಹೆಸರುಗಳಿಂದ ವಿಖ್ಯಾತರಾದರು. ॥ ೧ ॥ ಆಕೂತಿಯನ್ನು ಸೋದರರಿಬ್ಬರು ಇದ್ದರೂ ಮಹಾರಾಣಿ ಶತರೂಪೆಯ ಅನುಮತಿಯನ್ನು ಪಡೆದು ರುಚಿ ಪ್ರಜಾಪತಿಯೊಂದಿಗೆ 'ಪುತ್ರಿಕಾ ಧರ್ಮ'ಕ್ಕನುಸಾರವಾಗಿ* ವಿವಾಹಮಾಡಿ ಕೊಟ್ಟನು. ॥ ೨ ॥

ಭಗವಂತನ ಅನನ್ಯ ಚಿಂತನೆಯಿಂದ ಪ್ರಜಾಪತಿರುಚಿಯು ಬ್ರಹ್ಮತೇಜದಿಂದ ಸಂಪನ್ನನಾಗಿದ್ದನು. ಆತನು ತನ್ನ ಪರಮ ಸಮಾಧಿ ಯೋಗದ ಫಲವಾಗಿ ಆಕೂತಿಯಲ್ಲಿ ಒಂದು ಗಂಡುಮಗು ಮತ್ತು ಒಂದು ಹೆಣ್ಣುಮಗು ಹೀಗೆ ಅವಳಿ ಮಕ್ಕಳನ್ನು ಪಡೆದನು ॥ ೩ ॥ ಅವರಲ್ಲಿ ಗಂಡುಮಗುವು ಸಾಕ್ಷಾತ್ ಯಜ್ಞಸ್ವರೂಪಧರನಾದ ಭಗವಾನ್ ವಿಷ್ಣುವಾಗಿದ್ದನು. ಹೆಣ್ಣುಮಗುವು ಭಗವಂತನಿಂದ ಎಂದಿಗೂ ಅಗಲದೆ ಇರುವ ಸಾಕ್ಷಾತ್ ಶ್ರೀಮಹಾಲಕ್ಷ್ಮಿಯ ಅಂಶ ರೂಪಳಾದ 'ದಕ್ಷಿಣಾ'ದೇವಿಯಾಗಿದ್ದಳು. ॥ ೪ ॥ ಸ್ವಾಯಂಭುವ ಮನುವು ತನ್ನ ಪುತ್ರಿಯಾದ ಆಕೂತಿಯ ಆ ಪರಮ ತೇಜಸ್ವೀ ಪುತ್ರ ನನ್ನು ಅತ್ಯಂತ ಪ್ರಸನ್ನತೆಯಿಂದ ಮನೆಗೆ ತಂದನು ಮತ್ತು ದಕ್ಷಿಣಾ ಳನ್ನು ರುಚಿ ಪ್ರಜಾಪತಿಯು ತನ್ನ ಬಳಿ ಇರಿಸಿಕೊಂಡನು. ॥ ೫ ॥ ದಕ್ಷಿಣಾದೇವಿಯು ವಿವಾಹಯೋಗ್ಯಳಾದಾಗ ಅವಳು ಭಗವಾನ್ ಯಜ್ಞನನ್ನೇ ಪತಿರೂಪದಿಂದ ಪಡೆಯುವ ಇಚ್ಛೆಯನ್ನು ಪ್ರಕಟಿಸಿ ದಳು. ಆಗ ಭಗವಾನ್ ಯಜ್ಞಪುರುಷನು ಅವಳೊಂದಿಗೆ ವಿವಾಹ ವಾದನು. ಇದರಿಂದ ಪತಿ-ಪತ್ನಿಯರಿಬ್ಬರಿಗೂ ಪರಸ್ಪರ ಸಂತೋಷ ವಾಯಿತು. ಹೀಗೆ ಸಂತುಷ್ಟಳಾದ ದಕ್ಷಿಣಾದೇವಿಯಲ್ಲಿ ಯಜ್ಞನು ಹನ್ನೆರಡು ಪುತ್ರರನ್ನು ಪಡೆದನು. ॥ ೬ ॥ ಅವರ ಹೆಸರು ಇಂತಿವೆ – ತೋಷ, ಪ್ರತೋಷ, ಸಂತೋಷ, ಭದ್ರ, ಶಾಂತಿ, ಇಡಸ್ಪತಿ, ಇಧ್ಮ, ಕವಿ, ವಿಭು, ಸ್ವಹ್ನ, ಸುದೇವ ಮತ್ತು ರೋಚನ. ॥ ೭ ॥ ಈ ಹನ್ನೆರಡು ಮಂದಿ ಪುತ್ರರೇ ಸ್ವಾಯಂಭುವ ಮನ್ವಂತರದಲ್ಲಿ 'ತುಷಿತ'ರೆಂಬ ದೇವತೆಗಳಾದರು. ಆ ಮನ್ವಂತರದಲ್ಲಿ ಮರೀಚಿಯೇ ಮುಂತಾದವರು ಸಪ್ತರ್ಷಿಗಳಾಗಿದ್ದರು. ಭಗವಂತನಾದ ಯಜ್ಞನೇ ದೇವತೆಗಳೊಡೆಯ ಇಂದ್ರನಾಗಿದ್ದನು. ಮಹಾನ್

---

* 'ಪುತ್ರಿಕಾಧರ್ಮ'ಕ್ಕನುಸಾರವಾಗಿ ಮಾಡುವ ವಿವಾಹದಲ್ಲಿ ಮಗಳಲ್ಲಿ ಹುಟ್ಟುವ ಮೊದಲನೆಯ ಮಗನನ್ನು ಮಗಳ ತಂದೆಯು ಪಡೆಯುವುದೆಂಬ ನಿಬಂಧನೆ ಇರುತ್ತದೆ.

ಪ್ರಿಯವ್ರತೋತ್ತಾನಪಾದೌ ಮನುಪುತ್ರೌ ಮಹೌಜಸೌ ।
ತತ್ಪುತ್ರಪೌತ್ರನಪ್ತೄಣಾಮನುವೃತ್ತಂ ತದಂತರಮ್ ॥ ೯ ॥

ದೇವಹೂತಿಮದಾತ್ತಾತ ಕರ್ದಮಾಯಾತ್ಮಜಾಂ ಮನುಃ ।
ತತ್ಸಮ್ಬಂಧಿ ಶ್ರುತಪ್ರಾಯಂ ಭವತಾ ಗದತೋ ಮಮ ॥ ೧೦ ॥

ದಕ್ಷಾಯ ಬ್ರಹ್ಮಪುತ್ರಾಯ ಪ್ರಸೂತಿಂ ಭಗವಾನ್ಮನುಃ ।
ಪ್ರಾಯಚ್ಛದ್ಯತ್ಕೃತಃ ಸರ್ಗಸ್ತ್ರಿಲೋಕ್ಯಾಂ ವಿತತೋ ಮಹಾನ್ ॥ ೧೧ ॥

ಯಾಃ ಕರ್ದಮಸುತಾಃ ಪ್ರೋಕ್ತಾ ನವ ಬ್ರಹ್ಮರ್ಷಿಪತ್ನಯಃ ।
ತಾಸಾಂ ಪ್ರಸೂತಿಪ್ರಸವಂ ಪ್ರೋಚ್ಯಮಾನಂ ನಿಬೋಧ ಮೇ ॥ ೧೨ ॥

ಪತ್ನೀ ಮರೀಚೇಸ್ತು ಕಲಾ ಸುಷುವೇ ಕರ್ದಮಾತ್ಮಜಾ ।
ಕಶ್ಯಪಂ ಪೂರ್ಣಿಮಾನಂ ಚ ಯಯೋರಾಪೂರಿತಂ ಜಗತ್ ॥ ೧೩ ॥

ಪೂರ್ಣಿಮಾಸೂತ ವಿರಜಂ ವಿಶ್ವಗಂ ಚ ಪರಂತಪ ।
ದೇವಕುಲ್ಯಾಂ ಹರೇಃ ಪಾದಶೌಚಾದ್ಯಾಭೂತ್ಸರಿದ್ದಿವಃ ॥ ೧೪ ॥

ಅತ್ರೇಃ ಪತ್ನ್ಯನಸೂಯಾ ತ್ರೀನ್ ಜಜ್ಞೇ ಸುಯಶಸಃ ಸುತಾನ್ ।
ದತ್ತಂ ದುರ್ವಾಸಸಂ ಸೋಮಮಾತ್ಮೇಶಬ್ರಹ್ಮ ಸಂಭವಾನ್ ॥ ೧೫ ॥

*ವಿದುರ ಉವಾಚ*

ಅತ್ರೇರ್ಗೃಹೇ ಸುರಶ್ರೇಷ್ಠಾಃ ಸ್ಥಿತ್ಯುತ್ಪತ್ತ್ಯಂತಹೇತವಃ ।
ಕಿಂಚಿಚ್ಚಿಕೀರ್ಷವೋ ಜಾತಾ ಏತದಾಖ್ಯಾಹಿ ಮೇ ಗುರೋ ॥ ೧೬ ॥

*ಮೈತ್ರೇಯ ಉವಾಚ*

ಬ್ರಹ್ಮಣಾ ನೋದಿತಃ ಸೃಷ್ಟಾವತ್ರಿರ್ಬ್ರಹ್ಮವಿದಾಂ ವರಃ ।
ಸಹ ಪತ್ನ್ಯಾ ಯಯಾವೃಕ್ಷಂ ಕುಲಾದ್ರಿಂ ತಪಸಿ ಸ್ಥಿತಃ ॥ ೧೭ ॥

ತಸ್ಮಿನ್ ಪ್ರಸೂನಸ್ತಬಕಪಲಾಶಾಶೋಕಕಾನನೇ ।
ವಾರ್ಭಿಃ ಸ್ರವದ್ಭಿರುದ್ಘುಷ್ಟೇ ನಿರ್ವಿಂಧ್ಯಾಯಾಃ ಸಮಂತತಃ ॥ ೧೮ ॥

ಪ್ರಾಣಾಯಾಮೇನ ಸಂಯಮ್ಯ ಮನೋ ವರ್ಷಶತಂ ಮುನಿಃ ।
ಅತಿಷ್ಠದೇಕಪಾದೇನ ನಿರ್ದ್ವಂದ್ವೋಽನಿಲಭೋಜನಃ ॥ ೧೯ ॥

ಪ್ರಭಾವಶಾಲಿ ಪ್ರಿಯವ್ರತ ಮತ್ತು ಉತ್ತಾನಪಾದರೇ ಮನುಪುತ್ರ ರಾಗಿದ್ದರು. ಆ ಮನ್ವಂತರವು ಇವರಿಬ್ಬರ ಪುತ್ರರ, ಪೌತ್ರರ ದೌಹಿತ್ರರ ವಂಶಗಳಿಂದ ತುಂಬಿಹೋಗಿತ್ತು. ॥ ೮-೯ ॥

ಪ್ರಿಯ ವಿದುರನೇ ! ಮನುವಿನ ಎರಡನೆಯ ಮಗಳಾದ ದೇವ ಹೂತಿಯು ಕರ್ದಮರನ್ನು ವಿವಾಹವಾಗಿದ್ದಳು. ಅವಳ ಸಂಬಂಧ ವಾದ ಎಲ್ಲ ವಿಷಯಗಳನ್ನು ಸಾಮಾನ್ಯವಾಗಿ ನಿನಗೆ ಹೇಳಿಯೇ ಆಗಿದೆ. ॥ ೧೦ ॥ ಭಗವಾನ್ ಮನುವು ತನ್ನ ಮೂರನೆಯ ಮಗಳು ಪ್ರಸೂತಿಯನ್ನು ಬ್ರಹ್ಮಪುತ್ರನಾದ ದಕ್ಷಪ್ರಜಾಪತಿಗೆ ವಿವಾಹ ಮಾಡಿ ಕೊಟ್ಟಿದ್ದನು. ಆಕೆಯ ವಿಶಾಲ ವಂಶಪರಂಪರೆಯು ತ್ರಿಲೋಕಗಳಲ್ಲಿ ಹರಡಿಕೊಂಡಿದೆ. ॥ ೧೧ ॥

ಕರ್ದಮರು ತಮ್ಮ ಒಂಭತ್ತುಮಂದಿ ಕನ್ಯೆಯರನ್ನು ಒಂಭತ್ತು ಬ್ರಹ್ಮರ್ಷಿಗಳಿಗೆ ವಿವಾಹಮಾಡಿಕೊಟ್ಟ ವಿಷಯವನ್ನು ಈ ಮೊದಲೇ ವರ್ಣಿಸಿರುವೆನು. ಈಗ ಅವರ ವಂಶಪರಂಪರೆಯನ್ನು ವರ್ಣಿಸು ತ್ತೇನೆ ; ಕೇಳು. ॥ ೧೨ ॥ ಮರೀಚಿ ಋಷಿಗಳು ತಮ್ಮ ಪತ್ನಿಯಾದ ಕರ್ದಮಪುತ್ರಿಯಾದ ಕಲಾದೇವಿಯಿಂದ ಕಶ್ಯಪ ಮತ್ತು ಪೂರ್ಣಿಮಾ ಎಂಬ ಈರ್ವರು ಮಕ್ಕಳನ್ನು ಪಡೆದರು. ಇವರ ವಂಶದಿಂದಲೇ ಇಡೀ ಜಗತ್ತು ತುಂಬಿಹೋಗಿದೆ. ॥ ೧೩ ॥ ಎಲೈ ಪರಂತಪನೇ ! ಪೂರ್ಣಿಮಾಗೆ ವಿರಜ ಮತ್ತು ವಿಶ್ವಗ ಎಂಬ ಇಬ್ಬರು ಪುತ್ರರು ಹಾಗೂ ದೇವಕುಲ್ಯಾ ಎಂಬ ಕನ್ಯೆಯು ಹುಟ್ಟಿದರು. ಈ ದೇವ ಕುಲ್ಯೆಯೇ ಮುಂದಿನ ಜನ್ಮದಲ್ಲಿ ಬ್ರಹ್ಮದೇವರು ಶ್ರೀಹರಿಯ ಚರಣ ಗಳನ್ನು ತೊಳೆದಾಗ ದೇವನದಿ ಗಂಗೆಯರೂಪದಿಂದ ಪ್ರಕಟ ಗೊಂಡಳು. ॥ ೧೪ ॥ ಅತ್ರಿ ಮಹರ್ಷಿಗಳ ಪತ್ನೀ ಅನುಸೂಯೆ ಯಲ್ಲಿ ದತ್ತಾತ್ರೇಯ, ದುರ್ವಾಸ ಮತ್ತು ಚಂದ್ರ ಎಂಬ ಪರಮ ಯಶಸ್ವಿಗಳಾದ ಮೂವರು ಪುತ್ರರು ಹುಟ್ಟಿದರು. ಇವರು ಕ್ರಮ ವಾಗಿ ವಿಷ್ಣು ಶಂಕರ ಮತ್ತು ಬ್ರಹ್ಮದೇವರ ಅಂಶಗಳಿಂದ ಜನಿಸಿದವರು. ॥ ೧೫ ॥

**ವಿದುರನು ಕೇಳಿದನು** – ಗುರುಗಳೇ ! ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣರಾದ ಸರ್ವಶ್ರೇಷ್ಠ ದೇವತೆಗಳು ಏತಕ್ಕಾಗಿ ಅತ್ರಿಮಹರ್ಷಿಗಳ ಗೃಹದಲ್ಲಿ ಅವತರಿಸಿದರು ? ದಯವಿಟ್ಟು ತಿಳಿಸುವವರಾಗಿರಿ. ॥ ೧೬॥

**ಶ್ರೀಮೈತ್ರೇಯರು ಹೇಳಿದರು** – ವಿದುರನೇ ! ಬ್ರಹ್ಮದೇವರು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಅತ್ರಿಮಹರ್ಷಿಗಳಿಗೆ ಸೃಷ್ಟಿಯನ್ನು ಮಾಡುವಂತೆ ಆಜ್ಞಾಪಿಸಲು ಅವರು ತಮ್ಮ ಸಹಧರ್ಮಿಣಿ ಅನುಸೂಯೆಯೊಂದಿಗೆ ತಪಸ್ಸನ್ನಾಚರಿಸುವುದಕ್ಕಾಗಿ 'ಋಕ್ಷ' ಎಂಬ ಕುಲಪರ್ವತಕ್ಕೆ ಹೋದರು. ॥ ೧೭ ॥ ಅಲ್ಲಿ ಮುತ್ತುಗ ಮತ್ತು ಅಶೋಕ ವೃಕ್ಷಗಳ ಒಂದು ವಿಶಾಲವಾದ ವನವಿತ್ತು. ಅದರ ಎಲ್ಲ ವೃಕ್ಷಗಳು ಹೂವಿನ ಗೊಂಚಲುಗಳಿಂದ ತುಂಬಿದ್ದವು. ಆ ವನದ ಎಲ್ಲ ಕಡೆಗಳಲ್ಲಿ 'ನಿರ್ವಿಂಧ್ಯಾ' ಎಂಬ ನದಿಯ ಕಲರವವು ಪ್ರತಿಧ್ವನಿಸುತ್ತಿತ್ತು. ॥ ೧೮ ॥ ಆ ವನದಲ್ಲಿ ಮುನಿಶ್ರೇಷ್ಠರು ಪ್ರಾಣಾ ಯಾಮದ ಮೂಲಕ ಚಿತ್ತವನ್ನು ವಶಪಡಿಸಿಕೊಂಡು ನೂರು ವರ್ಷಗಳ ಕಾಲ ಕೇವಲ ಗಾಳಿಯನ್ನೇ ಕುಡಿದು, ಚಳಿ-ಸೆಕೆಗಳೆಂಬ ದ್ವಂದ್ವಗಳನ್ನು ಪರಿಗಣಿಸದೆ ಒಂಟಿಕಾಲಿನ ಮೇಲೆ ನಿಂತು ತಪಸ್ಸನ್ನಾ ಚರಿಸಿದರು. ॥ ೧೯ ॥

ಶರಣಂ ತಂ ಪ್ರಪದ್ಯೇಽಹಂ ಯ ಏವ ಜಗದೀಶ್ವರಃ ।
ಪ್ರಜಾಮಾತ್ಮಸಮಾಂ ಮಹ್ಯಂ ಪ್ರಯಚ್ಛತ್ವಿತಿ ಚಿಂತಯನ್ ॥ ೨೦ ॥

ಅವರು ಆಗ ಮನಸ್ಸಿನಲ್ಲಿಯೇ – 'ಸಮಸ್ತ ಜಗತ್ತಿಗೆ ಸ್ವಾಮಿಯಾದ ಯಾವ ಭಗವಂತನಿರುವನೋ ಆತನನ್ನು ನಾನು ಶರಣು ಹೊಂದುತ್ತೇನೆ. ಅವನು ತನಗೆ ಸಮಾನರಾದ ಪುತ್ರರನ್ನು ನನಗೆ ಕರುಣಿಸಲಿ' ಎಂದು ಪ್ರಾರ್ಥಿಸುತ್ತಿದ್ದರು. ॥ ೨೦ ॥

ತಪ್ಯಮಾನಂ ತ್ರಿಭುವನಂ ಪ್ರಾಣಾಯಾಮೈಧಸಾಗ್ನಿನಾ ।
ನಿರ್ಗತೇನ ಮುನೇರ್ಮೂರ್ಧ್ನಃ ಸಮೀಕ್ಷ್ಯ ಪ್ರಭವಸ್ತ್ರಯಃ ॥ ೨೧ ॥

ಅಪ್ಸರೋಮುನಿಗಂಧರ್ವಸಿದ್ಧವಿದ್ಯಾಧರೋರಗೈಃ ।
ವಿತಾಯಮಾನಯಶಸಸ್ತದಾಶ್ರಮಪದಂ ಯಯುಃ ॥ ೨೨ ॥

ತತ್ಪ್ರಾದುರ್ಭಾವಸಂಯೋಗವಿದ್ಯೋತಿತಮನಾ ಮುನಿಃ ।
ಉತ್ತಿಷ್ಠನ್ನೇಕಪಾದೇನ ದದರ್ಶ ವಿಬುಧರ್ಷಭಾನ್ ॥ ೨೩ ॥

ಪ್ರಣಮ್ಯ ದಂಡವದ್ಭೂಮಾವುಪತಸ್ಥೇಽರ್ಹಣಾಂಜಲಿಃ ।
ವೃಷಹಂಸಸುಪರ್ಣಸ್ಥಾನ್ ಸ್ವೈಃ ಸ್ವೈಶ್ಚಿಹ್ನೈಶ್ಚ ಚಿಹ್ನಿತಾನ್ ॥ ೨೪ ॥

ಕೃಪಾವಲೋಕೇನ ಹಸದ್ವದನೇನೋಪಲಂಭಿತಾನ್ ।
ತದ್ರೋಚಿಷಾ ಪ್ರತಿಹತೇ ನಿಮೀಲ್ಯ ಮುನಿರಕ್ಷಿಣೀ ॥ ೨೫ ॥

ಚೇತಸ್ತತ್ಪ್ರವಣಂ ಯುಂಜನ್ನಸ್ತಾವೀತ್ಸಂಹತಾಂಜಲಿಃ ।
ಶ್ಲಕ್ಷ್ಣಯಾ ಸೂಕ್ತಯಾ ವಾಚಾ ಸರ್ವಲೋಕಗರೀಯಸಃ ॥ ೨೬ ॥

ಆಗ ಪ್ರಾಣಾಯಾಮವೆಂಬ ಕಟ್ಟಿಗೆಯಿಂದ ಭುಗಿಲೆದ್ದ ಅತ್ರಿ ಮಹರ್ಷಿಗಳ ತೇಜಸ್ಸು ಅವರ ಮಸ್ತಕದಿಂದ ಹೊರಬಿದ್ದು ಮೂರು ಲೋಕಗಳನ್ನು ಸುಡುತ್ತಿರುವುದನ್ನು ಕಂಡು – ಜಗತ್ತಿಗೆ ಅಧಿಪತಿಗಳಾದ ಬ್ರಹ್ಮ ವಿಷ್ಣು ಮಹೇಶ್ವರರು ಮಹರ್ಷಿಯ ಆಶ್ರಮಕ್ಕೆ ದಯಮಾಡಿಸಿದರು. ಆಗ ಅಪ್ಸರೆಯರೂ, ಮುನಿಗಳೂ, ಗಂಧರ್ವರೂ, ಸಿದ್ಧರೂ, ವಿದ್ಯಾಧರರೂ, ನಾಗರೂ ಹೀಗೆ ಎಲ್ಲರೂ ಅವರ ಸುಕೀರ್ತಿಯನ್ನು ಕೊಂಡಾಡುತ್ತಿದ್ದರು. ॥ ೨೧-೨೨ ॥ ಆ ಮೂವರೂ ದೇವತೆಗಳು ಒಟ್ಟಿಗೆ ಪ್ರಾದುರ್ಭವಿಸಿದ್ದರಿಂದ ಅತ್ರಿ ಮುನಿಗಳ ಅಂತಃಕರಣವು ಹರ್ಷದಿಂದ ತುಂಬಿಹೋಯಿತು. ಅವರು ಒಂಟಿಕಾಲಿನಲ್ಲಿ ನಿಂತಿದ್ದಂತೆಯೇ ಅವರನ್ನು ನೋಡಿದರು. ಒಡನೆಯೇ ಅವರಿಗೆ ದೀರ್ಘದಂಡ ನಮಸ್ಕಾರಮಾಡಿ, ಅರ್ಘ್ಯ-ಪುಷ್ಪಾದಿ ಸಾಮಗ್ರಿಗಳಿಂದ ಪೂಜೆಯನ್ನು ಸಲ್ಲಿಸಿದರು. ಆ ಮೂವರೂ ತಮ್ಮ-ತಮ್ಮ ವಾಹನಗಳಾದ ಹಂಸ, ಗರುಡ, ವೃಷಭಗಳ ಮೇಲೆ ಕುಳಿತಿದ್ದು ಕಮಂಡಲು, ಚಕ್ರ, ತ್ರಿಶೂಲ ಮುಂತಾದ ತಮ್ಮ-ತಮ್ಮ ಆಯುಧಗಳನ್ನು ಧರಿಸಿದ್ದರು. ॥ ೨೩-೨೪ ॥ ಅವರು ಕಣ್ಣುಗಳಿಂದ ಕರುಣೆಯ ಮಳೆಯನ್ನು ಕರೆಯುತ್ತಾ, ಮುಖದಿಂದ ಮುಗುಳ್ನಗೆಯ ಬೆಳದಿಂಗಳನ್ನು ಚೆಲ್ಲುತ್ತಾ, ಪ್ರಸನ್ನಮೂರ್ತಿಗಳಾಗಿದ್ದರು. ಮುನಿವರ್ಯರು ಅವರ ಕೋರೈಸುವ ತೇಜಸ್ಸನ್ನು ಕಂಡು ಕಣ್ಣುಗಳನ್ನು ಮುಚ್ಚಿಕೊಂಡರು. ॥ ೨೫ ॥ ಅವರು ತನ್ನ ಚಿತ್ತವನ್ನು ಅವರಲ್ಲೇ ನೆಟ್ಟು ಕೈಜೋಡಿಸಿಕೊಂಡು, ಅತಿಮಧುರವೂ, ಭಾವಪೂರ್ಣವೂ ಆದ ನುಡಿಗಳಿಂದ ಸರ್ವಲೋಕಗಳಲ್ಲಿಯೂ, ಶ್ರೇಷ್ಠತಮರಾದ ಅವರನ್ನು ಸ್ತುತಿಸತೊಡಗಿದರು. ॥ ೨೬ ॥

ಅತ್ರಿರುವಾಚ

ವಿಶ್ವೋದ್ಭವಸ್ಥಿತಿಲಯೇಷು ವಿಭಜ್ಯಮಾನೈ-
ರ್ಮಾಯಾಗುಣೈರನುಯುಗಂ ವಿಗೃಹೀತದೇಹಾಃ ।
ತೇ ಬ್ರಹ್ಮವಿಷ್ಣುಗಿರಿಶಾಃ ಪ್ರಣತೋಽಸ್ಮ್ಯಹಂ ವ-
ಸ್ತೇಭ್ಯಃ ಕ ಏವ ಭವತಾಂ ಮ ಇಹೋಪಹೂತಃ ॥ ೨೭ ॥

ಏಕೋ ಮಯೇಹ ಭಗವಾನ್ವಿಬುಧಪ್ರಧಾನ-
ಶ್ಚಿತ್ತೀಕೃತಃ ಪ್ರಜನನಾಯ ಕಥಂ ನು ಯೂಯಮ್ ।
ಅತ್ರಾಗತಾಸ್ತನುಭೃತಾಂ ಮನಸೋಽಪಿ ದೂರಾಃ
ಬ್ರೂತ ಪ್ರಸೀದತ ಮಹಾನಿಹ ವಿಸ್ಮಯೋ ಮೇ ॥ ೨೮ ॥

**ಅತ್ರಿಮಹರ್ಷಿಗಳು ಹೇಳುತ್ತಾರೆ** – ಓ ಭಗವಂತಾ! ಪ್ರತಿಯೊಂದು ಕಲ್ಪದ ಪ್ರಾರಂಭದಲ್ಲೂ ಜಗತ್ತಿನ ಸೃಷ್ಟಿ ಸ್ಥಿತಿ, ಸಂಹಾರಗಳನ್ನು ಮಾಡುವುದಕ್ಕಾಗಿ ಅದ್ಭುತವಾದ ಮಾಯಾಶಕ್ತಿಯ ಸತ್ತ್ವಾದಿ ಮೂರು ಗುಣಗಳನ್ನು ವಿಭಾಗಗೈದು ಬೇರೆ-ಬೇರೆ ಶರೀರವನ್ನು ಧರಿಸಿರುವಿರಿ. ಬ್ರಹ್ಮಾ, ವಿಷ್ಣು ಮಹೇಶ್ವರರಾದ ನಿಮಗೆ ನಮಸ್ಕರಿಸುತ್ತಿದ್ದೇನೆ. ನಿಮ್ಮ ಮೂವರಲ್ಲಿ ನಾನು ಆಹ್ವಾನಿಸಿದ ಮಹಾನುಭಾವರು ಯಾರು ? ಎಂಬುದನ್ನು ದಯವಿಟ್ಟು ತಿಳಿಸಿರಿ. ॥ ೨೭ ॥ ಏಕೆಂದರೆ, ನಾನಾದರೋ ಸಂತಾನದ ಇಚ್ಛೆಯಿಂದ ಸುರೇಶ್ವರನಾದ ಒಬ್ಬನೇ ಭಗವಂತನನ್ನು ಚಿಂತಿಸಿದ್ದೆ. ಹಾಗಿರುವಾಗ ನೀವು ಮೂವರು ಇಲ್ಲಿಗೆ ಏಕೆ ದಯಮಾಡಿಸಿದಿರಿ. ದೇಹಧಾರಿಗಳ ಮನಸ್ಸಿಗೆ ದೂರವಾಗಿರುವ ನೀವು ಮೂವರೂ ಹೀಗೆ ಬಂದುದು ನನಗೆ ಪರಮಾಶ್ಚರ್ಯವನ್ನುಂಟುಮಾಡಿದೆ. ಪ್ರಭುಗಳೇ! ಕೃಪೆಗೈದು ನಿಮ್ಮ ಈ ರಹಸ್ಯವನ್ನು ತಿಳಿಸಿರಿ. ॥ ೨೮ ॥

ಮೈತ್ರೇಯ ಉವಾಚ

ಇತಿ ತಸ್ಯ ವಚಃ ಶ್ರುತ್ವಾ ತ್ರಯಸ್ತೇ ವಿಬುಧರ್ಷಭಾಃ।
ಪ್ರತ್ಯಾಹುಃ ಶ್ಲಕ್ಷ್ಣಯಾ ವಾಚಾ ಪ್ರಹಸ್ಯ ತಮೃಷಿಂ ಪ್ರಭೋ ॥ ೨೯ ॥

ದೇವಾ ಊಚುಃ

ಯಥಾ ಕೃತಸ್ತೇ ಸಂಕಲ್ಪೋ ಭಾವ್ಯಂ ತೇನೈವ ನಾನ್ಯಥಾ।
ಸತ್ಸಂಕಲ್ಪಸ್ಯ ತೇ ಬ್ರಹ್ಮನ್ಯದ್ವೈ ಧ್ಯಾಯತಿ ತೇ ವಯಮ್ ॥ ೩೦ ॥

ಅಥಾಸ್ಮದಂಶಭೂತಾಸ್ತೇ ಆತ್ಮಜಾ ಲೋಕವಿಶ್ರುತಾಃ।
ಭವಿತಾರೋಽಂಗ ಭದ್ರಂ ತೇ ವಿಸ್ರಪ್ಸ್ಯಂತಿ ಚ ತೇ ಯಶಃ ॥ ೩೧ ॥

ಏವಂ ಕಾಮವರಂ ದತ್ತ್ವಾ ಪ್ರತಿಜಗ್ಮುಃ ಸುರೇಶ್ವರಾಃ।
ಸಭಾಜಿತಾಸ್ತಯೋಃ ಸಮ್ಯಗ್ದಂಪತ್ಯೋರ್ಮಿಷತೋಸ್ತತಃ ॥ ೩೨ ॥

ಸೋಮೋಽಭೂದ್ಬ್ರಹ್ಮಣೋಽಂಶೇನ ದತ್ತೋ ವಿಷ್ಣೋಸ್ತು ಯೋಗವಿತ್।
ದುರ್ವಾಸಾಃ ಶಂಕರಸ್ಯಾಂಶೋ ನಿಬೋಧಾಂಗಿರಸಃ ಪ್ರಜಾಃ ॥ ೩೩ ॥

ಶ್ರದ್ಧಾ ತ್ವಂಗಿರಸಃ ಪತ್ನೀ ಚತಸ್ರೋಽಸೂತ ಕನ್ಯಕಾಃ।
ಸಿನೀವಾಲೀ ಕುಹೂ ರಾಕಾ ಚತುರ್ಥ್ಯನುಮತಿಸ್ತಥಾ ॥ ೩೪ ॥

ತತ್ಪುತ್ರಾವಪರಾವಾಸ್ತಾಂ ಖ್ಯಾತೌ ಸ್ವಾರೋಚಿಷೇಽಂತರೇ।
ಉತಥ್ಯೋ ಭಗವಾನ್ಸಾಕ್ಷಾದ್ಬ್ರಹ್ಮಿಷ್ಠಶ್ಚ ಬೃಹಸ್ಪತಿಃ ॥ ೩೫ ॥

ಪುಲಸ್ತ್ಯೋಽಜನಯತ್ಪತ್ನ್ಯಾಮಗಸ್ತ್ಯಂ ಚ ಹವಿರ್ಭುವಿ।
ಸೋಽನ್ಯಜನ್ಮನಿ ದಹ್ರಾಗ್ನಿರ್ವಿಶ್ರವಾಶ್ಚ ಮಹಾತಪಾಃ ॥ ೩೬ ॥

ತಸ್ಯ ಯಕ್ಷಪತಿರ್ದೇವಃ ಕುಬೇರಸ್ತ್ವಿಡವಿಡಾಸುತಃ।
ರಾವಣಃ ಕುಂಭಕರ್ಣಶ್ಚ ತಥಾನ್ಯಸ್ಯಾಂ ವಿಭೀಷಣಃ ॥ ೩೭ ॥

ಪುಲಹಸ್ಯ ಗತಿರ್ಭಾರ್ಯಾ ತ್ರೀನಸೂತ ಸತೀ ಸುತಾನ್।
ಕರ್ಮಶ್ರೇಷ್ಠಂ ವರೀಯಾಂಸಂ ಸಹಿಷ್ಣುಂ ಚ ಮಹಾಮತೇ ॥ ೩೮ ॥

ಕ್ರತೋರಪಿ ಕ್ರಿಯಾ ಭಾರ್ಯಾ ವಾಲಖಿಲ್ಯಾನಸೂಯತ।
ಋಷೀನ್ ಷಷ್ಟಿಸಹಸ್ರಾಣಿ ಜ್ವಲತೋ ಬ್ರಹ್ಮತೇಜಸಾ ॥ ೩೯ ॥

ಊರ್ಜಾಯಾಂ ಜಜ್ಞಿರೇ ಪುತ್ರಾ ವಸಿಷ್ಠಸ್ಯ ಪರಂತಪ।
ಚಿತ್ರಕೇತುಪ್ರಧಾನಾಸ್ತೇ ಸಪ್ತ ಬ್ರಹ್ಮರ್ಷಯೋಽಮಲಾಃ ॥ ೪೦ ॥

**ಶ್ರೀಮೈತ್ರೇಯರು ಹೇಳುತ್ತಾರೆ –** ವಿದುರನೇ! ಅತ್ರಿ ಮುನಿಯ ಆ ವಚನಗಳನ್ನು ಕೇಳಿ ಆ ಮೂವರು ದೇವಶ್ರೇಷ್ಠರು ನಕ್ಕು ಮಧುರ ವಾಣಿಯಿಂದ ಹೇಳತೊಡಗಿದರು. ॥ ೨೯ ॥

**ಶ್ರೀದೇವತೆಗಳೆಂದರು –** ಬ್ರಾಹ್ಮಣೋತ್ತಮನೇ! ನೀನು ಸತ್ಯ ಸಂಕಲ್ಪನಾಗಿರುವುದರಿಂದ ಹೇಗೆ ಸಂಕಲ್ಪಮಾಡಿದೆಯೋ ಹಾಗೆಯೇ ಆಗುವುದು. ಇದಕ್ಕೆ ವಿಪರೀತವಾಗಿ ಹೇಗಾಗಬಲ್ಲದು? ನೀನು ಧ್ಯಾನಮಾಡುತ್ತಿದ್ದ ಜಗದೀಶ್ವರ ತತ್ತ್ವವು ನಾವು ಮೂವರೂ ಆಗಿದ್ದೇವೆ. ॥ ೩೦ ॥ ಮಹರ್ಷಿಯೇ ನಿನಗೆ ಮಂಗಳವಾಗಲೀ. ನಮ್ಮ ಅಂಶಸ್ವರೂಪರೇ ಆಗಿ ಲೋಕವಿಖ್ಯಾತರಾಗಿರುವ ಮೂವರು ಪುತ್ರರು ನಿನಗೆ ಜನಿಸಿ ನಿನ್ನ ಕೀರ್ತಿಯನ್ನು ಹರಡುವರು. ॥ ೩೧ ॥

ಅತ್ರಿ ಮಹರ್ಷಿಗಳಿಗೆ ಹೀಗೆ ಅಭೀಷ್ಟವಾದ ವರವನ್ನು ಕರುಣಿಸಿ, ಪತಿ-ಪತ್ನಿಯರಿಂದ ಚೆನ್ನಾಗಿ ಪೂಜೆಗೊಂಡು ಅವರು ನೋಡುತ್ತಿರುವಂತೆ ಆ ಮೂವರು ದೇವಶ್ರೇಷ್ಠರು ತಮ್ಮ-ತಮ್ಮ ಲೋಕಗಳಿಗೆ ಬಿಜಯಂಗೈದರು. ॥ ೩೨ ॥ ಬ್ರಹ್ಮದೇವರ ಅಂಶದಿಂದ ಚಂದ್ರನೂ, ವಿಷ್ಣುವಿನ ಅಂಶದಿಂದ ಯೋಗಜ್ಞನಾದ ದತ್ತಾತ್ರೇಯನೂ, ಶಂಕರನ ಅಂಶದಿಂದ ದುರ್ವಾಸ ಮಹರ್ಷಿಗಳೂ ಅತ್ರಿಗೆ ಪುತ್ರರೂಪದಲ್ಲಿ ಪ್ರಕಟಗೊಂಡರು. ಇನ್ನು ಅಂಗಿರಾ ಋಷಿಯ ಸಂತಾನದ ವರ್ಣನೆಯನ್ನು ಕೇಳು. ॥ ೩೩ ॥

ಮಹರ್ಷಿ ಅಂಗಿರಸರ ಪತ್ನಿಯಾದ ಶ್ರದ್ಧೆಯು – ಸಿನೀವಾಲೀ, ಕುಹು, ರಾಕಾ ಮತ್ತು ಅನುಮತಿ ಎಂಬ ನಾಲ್ವರು ಪುತ್ರಿಯರಿಗೆ ಜನ್ಮನೀಡಿದಳು. ॥ ೩೪॥ ಇದಲ್ಲದೆ ಅವಳಲ್ಲಿ ಸ್ವಾರೋಚಿಷ ಮನ್ವಂತರದಲ್ಲಿ ಖ್ಯಾತರಾದ ಅತ್ಯಂತ ಪೂಜ್ಯರಾದ ಭಗವಾನ್ ಉತಥ್ಯರು ಮತ್ತು ಬ್ರಹ್ಮನಿಷ್ಠರಾದ ಬೃಹಸ್ಪತಿ ಎಂಬ ಇಬ್ಬರು ಪುತ್ರರು ಜನಿಸಿದರು. ॥ ೩೫॥ ಪುಲಸ್ತ್ಯರಿಗೆ ಅವರ ಪತ್ನಿಯಾದ ಹವಿರ್ಭೂ ಎಂಬಾಕೆಯಲ್ಲಿ ಮಹರ್ಷಿಗಳಾದ ಅಗಸ್ತ್ಯರು ಮತ್ತು ಮಹಾತಪಸ್ವೀ ವಿಶ್ರವಸರೂ ಪುತ್ರರಾಗಿ ಜನಿಸಿದರು. ಇವರಲ್ಲಿ ಅಗಸ್ತ್ಯರು ಮುಂದಿನ ಜನ್ಮದಲ್ಲಿ ಜಠರಾಗ್ನಿಸ್ವರೂಪರಾದರು. ॥ ೩೬ ॥ ಮಹರ್ಷಿ ವಿಶ್ರವಸರಿಗೆ ಇಡವಿಡಾ ಎಂಬುವಳ ಗರ್ಭದಿಂದ ಯಕ್ಷರಾಜನಾದ ಕುಬೇರನು ಜನಿಸಿದನು. ಅವರ ಇನ್ನೋರ್ವ ಪತ್ನಿಯಾದ ಕೇಶಿನಿಯಿಂದ ರಾವಣ, ಕುಂಭಕರ್ಣ ಹಾಗೂ ವಿಭೀಷಣರೆಂಬ ಪುತ್ರರು ಹುಟ್ಟಿದರು. ॥ ೩೭ ॥

ಎಲೈ ಮಹಾಮತಿಯಾದ ವಿದುರನೇ! ಮಹರ್ಷಿ ಪುಲಹ ಪತ್ನಿಯಾದ ಸಾಧ್ವೀ ಗತಿ ಎಂಬಾಕೆಯಿಂದ ಕರ್ಮಶ್ರೇಷ್ಠ, ವರೀಯಾನ್ ಮತ್ತು ಸಹಿಷ್ಣು ಎಂಬ ಮೂವರು ಪುತ್ರರು ಜನಿಸಿದರು. ॥ ೩೮ ॥ ಹಾಗೆಯೇ ಕ್ರತುವಿನ ಪತ್ನಿಯಾದ ಕ್ರಿಯಾದೇವಿಯು ಬ್ರಹ್ಮತೇಜಸ್ಸಿನಿಂದ ಬೆಳಗುವ ವಾಲಖಿಲ್ಯರೆಂಬ ಅರವತ್ತುಸಾವಿರ ಋಷಿಗಳನ್ನು ಪುತ್ರರನ್ನಾಗಿ ಪಡೆದಳು. ॥ ೩೯ ॥ ಶತ್ರುಗಳಿಗೆ ತಾಪವನ್ನುಂಟುಮಾಡುವ ವಿದುರನೇ! ವಸಿಷ್ಠರ ಪತ್ನಿಯಾದ ಊರ್ಜಾ (ಅರುಂಧತಿ) ಎಂಬುವಳಿಗೆ ಚಿತ್ರಕೇತುವೇ ಮುಂತಾದ ಪರಿಶುದ್ಧ ಚಿತ್ತರಾದ ಏಳುಮಂದಿ ಬ್ರಹ್ಮರ್ಷಿಗಳು ಪುತ್ರರಾಗಿ ಜನಿಸಿದರು. ॥ ೪೦ ॥ ಅವರ ಹೆಸರು ಇಂತಿದೆ – ಚಿತ್ರಕೇತು, ಸುರೋಚಿ, ವಿರಜಾ, ಮಿತ್ರ, ಉಲ್ಬಣ, ವಸುಭೃದ್ಯಾನ ಮತ್ತು ದ್ಯುಮಾನ್.

ಚಿತ್ರಕೇತುಃ ಸುರೋಚಿಶ್ಚ ವಿರಜಾ ಮಿತ್ರ ಏವ ಚ ।
ಉಲ್ಬಣೋ ವಸುಭೃದ್ಯಾನೋ ದ್ಯುಮಾನ್ ಶಕ್ತ್ಯಾದಯೋಽಪರೇ ॥ ೪೧ ॥

ಚಿತ್ತಿಸ್ತ್ವಥರ್ವಣಃ ಪತ್ನೀ ಲೇಭೇ ಪುತ್ರಂ ಧೃತವ್ರತಮ್ ।
ದಧ್ಯಞ್ಚಮಶ್ವಶಿರಸಂ ಭೃಗೋರ್ವಂಶಂ ನಿಬೋಧ ಮೇ ॥ ೪೨ ॥

ಭೃಗುಃ ಖ್ಯಾತ್ಯಾಂ ಮಹಾಭಾಗಃ ಪತ್ನ್ಯಾಂ ಪುತ್ರಾನಜೀಜನತ್ ।
ಧಾತಾರಂ ಚ ವಿಧಾತಾರಂ ಶ್ರಿಯಂ ಚ ಭಗವತ್ಪರಾಮ್ ॥ ೪೩ ॥

ಆಯತಿಂ ನಿಯತಿಂ ಚೈವ ಸುತೇ ಮೇರುಸ್ತಯೋರದಾತ್ ।
ತಾಭ್ಯಾಂ ತಯೋರಭವತಾಂ ಮೃಕಂಡಃ ಪ್ರಾಣ ಏವ ಚ ॥ ೪೪ ॥

ಮಾರ್ಕಂಡೇಯೋ ಮೃಕಂಡಸ್ಯ ಪ್ರಾಣಾದ್ವೇದಶಿರಾ ಮುನಿಃ ।
ಕವಿಶ್ಚ ಭಾರ್ಗವೋ ಯಸ್ಯ ಭಗವಾನುಶನಾ ಸುತಃ ॥ ೪೫ ॥

ತ ಏತೇ ಮುನಯಃ ಕ್ಷತ್ತರ್ಲೋಕಾನ್ಸರ್ಗೈರಭಾವಯನ್ ।
ಏಷ ಕರ್ದಮದೌಹಿತ್ರಸಂತಾನಃ ಕಥಿತಸ್ತವ ।
ಶೃಣ್ವತಃ ಶ್ರದ್ದಧಾನಸ್ಯ ಸದ್ಯಃ ಪಾಪಹರಃ ಪರಃ ॥ ೪೬ ॥

ಪ್ರಸೂತಿಂ ಮಾನವೀಂ ದಕ್ಷ ಉಪಯೇಮೇ ಹ್ಯಜಾತ್ಮಜಃ ।
ತಸ್ಯಾಂ ಸಸರ್ಜ ದುಹಿತೄಃ ಷೋಡಶಾಮಲಲೋಚನಾಃ ॥ ೪೭ ॥

ತ್ರಯೋದಶಾದಾದ್ಧರ್ಮಾಯ ತಥೈಕಾಮಗ್ನಯೇ ವಿಭುಃ ।
ಪಿತೃಭ್ಯ ಏಕಾಂ ಯುಕ್ತೇಭ್ಯೋ ಭವಾಯೈಕಾಂ ಭವಚ್ಛಿದೇ ॥ ೪೮ ॥

ಶ್ರದ್ಧಾ ಮೈತ್ರೀ ದಯಾ ಶಾಂತಿಸ್ತುಷ್ಟಿಃ ಪುಷ್ಟಿಃ ಕ್ರಿಯೋನ್ನತಿಃ ।
ಬುದ್ಧಿರ್ಮೇಧಾ ತಿತಿಕ್ಷಾ ಹ್ರೀರ್ಮೂರ್ತಿರ್ಧರ್ಮಸ್ಯ ಪತ್ನಯಃ ॥ ೪೯ ॥

ಶ್ರದ್ಧಾಸೂತ ಶುಭಂ ಮೈತ್ರೀ ಪ್ರಸಾದಮಭಯಂ ದಯಾ ।
ಶಾಂತಿಃ ಸುಖಂ ಮುದಂ ತುಷ್ಟಿಃ ಸ್ಮಯಂ ಪುಷ್ಟಿರಸೂಯತ ॥ ೫೦ ॥

ಯೋಗಂ ಕ್ರಿಯೋನ್ನತಿರ್ದರ್ಪಮರ್ಥಂ ಬುದ್ಧಿರಸೂಯತ ।
ಮೇಧಾ ಸ್ಮೃತಿಂ ತಿತಿಕ್ಷಾ ತು ಕ್ಷೇಮಂ ಹ್ರೀಃ ಪ್ರಶ್ರಯಂ ಸುತಮ್ ॥ ೫೧ ॥

ಮೂರ್ತಿಃ ಸರ್ವಗುಣೋತ್ಪತ್ತಿರ್ನರನಾರಾಯಣಾವೃಷೀ ॥ ೫೨ ॥

ಯಯೋರ್ಜನ್ಮನ್ಯದೋ ವಿಶ್ವಮಭ್ಯನಂದತ್ಸುನಿರ್ವೃತಮ್ ।
ಮನಾಂಸಿ ಕಕುಭೋ ವಾತಾಃ ಪ್ರಸೇದುಃ ಸರಿತೋಽದ್ರಯಃ ॥ ೫೩ ॥

ಇವರಲ್ಲದೆ ಅವರ ಇನ್ನೊಂದು ಪತ್ನಿಯಿಂದ ಶಕ್ತಿ ಮುಂತಾದ ಇನ್ನೂ ಅನೇಕ ಪುತ್ರರನ್ನು ಪಡೆದರು. ॥ ೪೧ ॥

ಅಥರ್ವಾಮುನಿಯ ಪತ್ನಿಯಾದ ಚಿತ್ತಿಯು ದಧ್ಯಂಚ (ದಧೀಚಿ) ಎಂಬ ತಪೋನಿಷ್ಠನಾದ ಪುತ್ರನನ್ನು ಪಡೆದಳು. ಈ ದಧೀಚಿ ಋಷಿಗಳಿಗೆ 'ಅಶ್ವಶಿರಾ' ಎಂಬ ಮತ್ತೊಂದು ಹೆಸರಿತ್ತು. ಇನ್ನು ಭೃಗುವಂಶವನ್ನು ವರ್ಣಿಸುವೆನು ಕೇಳು. ॥ ೪೨ ॥

ಮಹಾಭಾಗರಾದ ಭೃಗುಮಹರ್ಷಿಗಳು ತಮ್ಮ ಪತ್ನಿಯಾದ ಖ್ಯಾತಿಯಲ್ಲಿ ಧಾತಾ ಮತ್ತು ವಿಧಾತಾ ಎಂಬ ಇಬ್ಬರು ಪುತ್ರರನ್ನೂ ಹಾಗೂ ಭಗವತ್ಪರಾಯಣೆಯಾದ ಶ್ರೀ ಎಂಬ ಕನ್ಯೆಯನ್ನು ಪಡೆದರು. ॥ ೪೩ ॥ ಮೇರು ಋಷಿಗಳು ತಮ್ಮ ಆಯತಿ ಮತ್ತು ನಿಯತಿ ಎಂಬ ಕನ್ಯೆಯರನ್ನು ಕ್ರಮವಾಗಿ ಧಾತಾ ಮತ್ತು ವಿಧಾತಾ ಇವರಿಗೆ ವಿವಾಹ ಮಾಡಿಕೊಟ್ಟರು. ಅವರಿಗೆ ಮೃಕಂಡ ಹಾಗೂ ಪ್ರಾಣರೆಂಬ ಇಬ್ಬರು ಪುತ್ರರು ಜನಿಸಿದರು. ॥ ೪೪ ॥ ಅವರಿಬ್ಬರಲ್ಲಿ ಮೃಕಂಡರಿಗೆ ಮಾರ್ಕಂಡೇಯರೂ, ಪ್ರಾಣರಿಗೆ ಮುನಿವರ್ಯರಾದ ವೇದಶಿರಾ ಹುಟ್ಟಿದರು. ಭೃಗುಮಹರ್ಷಿಗಳಿಗೆ ಕವಿ ಎಂಬ ಓರ್ವ ಪುತ್ರನೂ ಇದ್ದನು. ಆ ಕವಿಯ ಪುತ್ರರೇ ಭಗವಾನ್ ಉಶನಾ (ಶುಕ್ರಾಚಾರ್ಯ)ರವರು. ॥ ೪೫ ॥ ವಿದುರನೇ ! ಇವೆಲ್ಲ ಮುನೀಶ್ವರರೂ ಸಂತಾನಗಳನ್ನು ಪಡೆದು ಸೃಷ್ಟಿಯನ್ನು ಮುಂದುವರಿಸಿದರು. ಹೀಗೆ ನಿನಗೆ ಕರ್ದಮ ಋಷಿಗಳ ಪುತ್ರಿಯರ ಸಂತಾನಗಳನ್ನು ವರ್ಣಿಸಿರುವೆನು. ಇದನ್ನು ಶ್ರದ್ಧೆಯಿಂದ ಕೇಳುವವನ ಪಾಪಗಳು ಒಡನೆಯೇ ನಾಶಹೊಂದುವವು. ॥ ೪೬ ॥

ಬ್ರಹ್ಮದೇವರ ಪುತ್ರರಾದ ದಕ್ಷಪ್ರಜಾಪತಿಯು ಮನುಪುತ್ರಿಯಾದ ಪ್ರಸೂತಿಯನ್ನು ವಿವಾಹವಾಗಿ ಆಕೆಯಲ್ಲಿ ಸುಂದರವಾದ ಕಣ್ಣುಗಳುಳ್ಳ ಹದಿನಾರು ಮಂದಿ ಕನ್ಯೆಯರನ್ನು ಪಡೆದನು. ॥ ೪೭ ॥ ಪೂಜ್ಯನಾದ ದಕ್ಷಪ್ರಜಾಪತಿಯು ಅವರಲ್ಲಿ ಹದಿಮೂರು ಕನ್ಯೆಯರನ್ನು ಧರ್ಮನಿಗೂ, ಒಬ್ಬಳನ್ನು ಅಗ್ನಿಗೂ, ಒಬ್ಬಳನ್ನು ಸಮಸ್ತ ಪಿತೃಗಣಗಳಿಗೂ, ಮತ್ತೊಬ್ಬಳನ್ನು ಜಗತ್ಸಂಹಾರಕನೂ, ಸಂಸಾರ ಬಂಧನವನ್ನು ನಾಶಪಡಿಸುವವನೂ ಆದ ಭಗವಾನ್ ಶ್ರೀಶಂಕರನಿಗೂ ವಿವಾಹಮಾಡಿ ಕೊಟ್ಟನು. ॥ ೪೮ ॥ ಅವರಲ್ಲಿ ಶ್ರದ್ಧಾ, ಮೈತ್ರೀ, ದಯಾ, ಶಾಂತಿ, ತುಷ್ಟಿ, ಪುಷ್ಟಿ, ಕ್ರಿಯಾ, ಉನ್ನತಿ, ಬುದ್ಧಿ ಮೇಧಾ, ತಿತಿಕ್ಷಾ, ಹ್ರೀಃ ಮತ್ತು ಮೂರ್ತಿ – ಈ ಹದಿಮೂರು ಮಂದಿ ಧರ್ಮನ ಪತ್ನಿಯರು. ॥ ೪೯ ॥ ಇವರಲ್ಲಿ ಶ್ರದ್ಧಾ ದೇವಿಯು ಶುಭನಿಗೂ, ಮೈತ್ರಿಯು ಪ್ರಸಾದನಿಗೂ, ದಯೆಯು ಅಭಯಕ್ಕೂ ಶಾಂತಿಯು ಸುಖಕ್ಕೂ, ತುಷ್ಟಿಯು ಮೋದಕ್ಕೂ, ಪುಷ್ಟಿಯು ಅಹಂಕಾರಕ್ಕೂ ಜನ್ಮವಿತ್ತರು. ॥ ೫೦ ॥ ಕ್ರಿಯೆಯು ಯೋಗಕ್ಕೂ, ಉನ್ನತಿಯು ದರ್ಪವನ್ನೂ, ಬುದ್ಧಿಯು ಅರ್ಥವನ್ನೂ ಮೇಧೆಯು ಸ್ಮೃತಿಯನ್ನೂ ತಿತಿಕ್ಷೆಯು ಕ್ಷೇಮವನ್ನೂ, ಹ್ರೀ (ಲಜ್ಜಾ) ದೇವಿಯು ಪ್ರಶ್ರಯ (ವಿನಯ)ವನ್ನೂ ಸಂತಾನವಾಗಿ ಪಡೆದರು. ॥ ೫೧ ॥ ಸಮಸ್ತ ಸದ್ಗುಣಗಳಿಗೂ ನಿಧಿಯಾಗಿದ್ದ ಮೂರ್ತಿದೇವಿಯು ನರ-ನಾರಾಯಣ ಮಹರ್ಷಿಗಳಿಗೆ ಜನ್ಮವನ್ನಿತ್ತಳು. ॥ ೫೨ ॥ ಆ ನರ-ನಾರಾಯಣರು ಅವತರಿಸಿದೊಡನೆಯೇ ಇಡೀ ವಿಶ್ವವೇ ಆನಂದಿತವಾಗಿ ಪ್ರಸನ್ನತೆಯನ್ನು ಪ್ರಕಟಿಸಿತು. ಆಗ ಜನರ ಮನಸ್ಸಿನಲ್ಲೂ, ದಿಕ್ಕುಗಳಲ್ಲೂ, ವಾಯುವಿನಲ್ಲೂ, ನದಿ-ಪರ್ವತಗಳಲ್ಲೂ ಪ್ರಸನ್ನತೆ ಹರಡಿತು. ॥ ೫೩ ॥

ದಿವ್ಯವಾದ್ಯಂತ ತೂರ್ಯಾಣಿ ಪೇತುಃ ಕುಸುಮವೃಷ್ಟಯಃ ।
ಮುನಯಸ್ತುಷ್ಟುವುಸ್ತುಷ್ಟಾ ಜಗುರ್ಗಂಧರ್ವಕಿನ್ನರಾಃ
॥ ೫೪ ॥

ನೃತ್ಯಂತಿ ಸ್ಮ ಸ್ತ್ರಿಯೋ ದೇವ್ಯ ಆಸೀತ್ಪರಮಮಂಗಲಮ್ ।
ದೇವಾ ಬ್ರಹ್ಮಾದಯಃ ಸರ್ವೇ ಉಪತಸ್ಥುರಭಿಷ್ಟವೈಃ
॥ ೫೫ ॥

ದೇವಾ ಊಚುಃ

ಯೋ ಮಾಯಯಾ ವಿರಚಿತಂ ನಿಜಯಾಽಽತ್ಮನೀದಂ
ಖೇ ರೂಪಭೇದಮಿವ ತತ್ಪ್ರತಿಚಕ್ಷಣಾಯ ।
ಏತೇನ ಧರ್ಮಸದನೇ ಋಷಿಮೂರ್ತಿನಾದ್ಯ
ಪ್ರಾದುಶ್ಚಕಾರ ಪುರುಷಾಯ ನಮಃ ಪರಸ್ಮೈ ॥ ೫೬ ॥

ಸೋಽಯಂ ಸ್ಥಿತಿವ್ಯತಿಕರೋಪಶಮಾಯ ಸೃಷ್ಟಾನ್
ಸತ್ತ್ವೇನ ನಃ ಸುರಗಣಾನನುಮೇಯತತ್ತ್ವಃ ।
ದೃಶ್ಯಾದದಭ್ರಕರುಣೇನ ವಿಲೋಕನೇನ
ಯಚ್ಛ್ರೀನಿಕೇತಮಮಲಂ ಕ್ಷಿಪತಾರವಿಂದಮ್ ॥ ೫೭ ॥

ಏವಂ ಸುರಗಣೈಸ್ತಾತ ಭಗವಂತಾವಭಿಷ್ಟುತೌ ।
ಲಬ್ಧಾವಲೋಕೈರ್ಯಯತುರರ್ಚಿತೌ ಗಂಧಮಾದನಮ್
॥ ೫೮ ॥

ತಾವಿಮೌ ವೈ ಭಗವತೋ ಹರೇರಂಶಾವಿಹಾಗತೌ ।
ಭಾರವ್ಯಯಾಯ ಚ ಭುವಃ ಕೃಷ್ಣೌ ಯದುಕುರೂದ್ವಹೌ
॥ ೫೯ ॥

ಸ್ವಾಹಾಭಿಮಾನಿನಶ್ಚಾಗ್ನೇರಾತ್ಮಜಾಂಸ್ತ್ರೀನಜೀಜನತ್ ।
ಪಾವಕಂ ಪವಮಾನಂ ಚ ಶುಚಿಂ ಚ ಹುತಭೋಜನಮ್
॥ ೬೦ ॥

ತೇಭ್ಯೋಽಗ್ನಯಃ ಸಮಭವನ್ ಚತ್ವಾರಿಂಶಚ್ಚ ಪಂಚ ಚ ।
ತ ಏವೈಕೋನಪಂಚಾಶತ್ಸಾಕಂ ಪಿತೃಪಿತಾಮಹೈಃ
॥ ೬೧ ॥

ವೈತಾನಿಕೇ ಕರ್ಮಣಿ ಯನ್ನಾಮಭಿರ್ಬ್ರಹ್ಮವಾದಿಭಿಃ ।
ಆಗ್ನೇಯ್ಯ ಇಷ್ಟಯೋ ಯಜ್ಞೇ ನಿರೂಪ್ಯಂತೇಽಗ್ನಯಸ್ತು ತೇ
॥ ೬೨ ॥

ಅಗ್ನಿಷ್ವಾತ್ತಾ ಬರ್ಹಿಷದಃ ಸೋಮ್ಯಾಃ ಪಿತರ ಆಜ್ಯಪಾಃ ।
ಸಾಗ್ನಯೋಽನಗ್ನಯಸ್ತೇಷಾಂ ಪತ್ನೀ ದಾಕ್ಷಾಯಣೀ ಸ್ವಧಾ
॥ ೬೩ ॥

ಆಕಾಶದಲ್ಲಿ ಮಂಗಳವಾದ್ಯಗಳು ಮೊಳಗತೊಡಗಿದವು. ದೇವತೆಗಳು ಹೂಮಳೆಯನ್ನು ಸುರಿಸಿದರು. ಗಂಧರ್ವರೂ, ಕಿನ್ನರರೂ ಹಾಡತೊಡಗಿದರು. ॥ ೫೪ ॥ ಅಪ್ಸರೆಯರು ನೃತ್ಯವಾಡ ತೊಡಗಿದರು. ಹೀಗೆ ಆಗ ಎಲ್ಲೆಲ್ಲಿಯೂ ಆನಂದ-ಮಂಗಳ ವಾಯಿತು. ಬ್ರಹ್ಮಾದಿ ಸಮಸ್ತ ದೇವತೆಗಳು ದಿವ್ಯ ಸ್ತೋತ್ರಗಳಿಂದ ಭಗವಂತನನ್ನು ಸ್ತುತಿಸತೊಡಗಿದರು. ॥ ೫೫ ॥

**ದೇವತೆಗಳು ಹೇಳಿದರು** – ಭಗವಂತನೇ! ಆಕಾಶದಲ್ಲಿ ಬಗೆ-ಬಗೆಯ ರೂಪಗಳ ಕಲ್ಪನೆ ಮಾಡಿದಂತೆ, ಭಗವಂತನು ತನ್ನ ಸ್ವರೂಪದಲ್ಲಿಯೇ ಮಾಯಾಶಕ್ತಿಯಿಂದ ಈ ವಿವಿಧರೂಪಗಳುಳ್ಳ ಜಗತ್ತನ್ನು ರಚಿಸಿರುವವನು. ಈಗ ತನ್ನ ಸ್ವರೂಪವನ್ನು ಪ್ರಕಾಶ ಪಡಿಸುವುದಕ್ಕಾಗಿ ಈ ನರ-ನಾರಾಯಣ ಮಹರ್ಷಿಗಳ ರೂಪ ದಲ್ಲಿ ಧರ್ಮನ ಮನೆಯಲ್ಲಿ ಪ್ರಕಟಗೊಂಡಿರುವನು. ಇಂತಹ ಪರಮಪುರುಷನಿಗೆ ನಮೋ ನಮಃ ॥ ೫೬ ॥ ಯಾರ ತತ್ತ್ವವನ್ನು ಶಾಸ್ತ್ರದ ಆಧಾರದಿಂದ ನಾವುಗಳು ಕೇವಲ ಅನುಮಾನಿಸಬಹುದೇ ಹೊರತು ಪ್ರತ್ಯಕ್ಷವಾಗಿ ತಿಳಿದುಕೊಳ್ಳುವುದು ಸಾಧ್ಯವಾಗದು – ಅಂತಹ ಭಗವಂತನೇ ಜಗತ್ತಿನ ಮರ್ಯಾದೆಯನ್ನು ಕಾಪಾಡು ವುದಕ್ಕಾಗಿಯೇ ಸತ್ತ್ವಗುಣದಿಂದ ದೇವತೆಗಳಾದ ನಮ್ಮನ್ನು ನಿರ್ಮಿಸಿದ್ದಾನೆ. ದಯಾಮೂರ್ತಿಯಾದ ಈ ಭಗವಂತನು ಸಮಸ್ತ ಸೌಂದರ್ಯ-ಲಾವಣ್ಯಗಳಿಗೆ ನೆಲೆಮನೆಯಾದ ತಾವರೆಯ ಹೂವನ್ನೂ ನಾಚಿಸುವಂತಹ ತನ್ನ ಪರಮ ಕರುಣೆಯ ನೋಟವನ್ನು ನಮ್ಮತ್ತ ಬೀರಲಿ ॥ ೫೭ ॥

ಪ್ರಿಯ ವಿದುರನೇ! ದೇವತೆಗಳು ಪ್ರಭುವಿನ ಸಾಕ್ಷಾತ್ ದರ್ಶನವನ್ನು ಪಡೆದು ಅವನನ್ನು ಈ ಪ್ರಕಾರವಾಗಿ ಪೂಜಿಸಿ, ಸ್ತುತಿಸಿ ದರು. ಅನಂತರ ಭಗವಾನ್ ನರ-ನಾರಾಯಣರು ಗಂಧಮಾದನ ಪರ್ವತಕ್ಕೆ ತೆರಳಿದರು. ॥ ೫೮ ॥ ಭಗವಾನ್ ಶ್ರೀಹರಿಯ ಅಂಶ ಸಂಭೂತರಾದ ನರ-ನಾರಾಯಣರೇ ಈಗ ಭೂಮಿಯ ಭಾರ ವನ್ನು ಇಳುಹುವುದಕ್ಕಾಗಿ ಯದುಕುಲಭೂಷಣನಾದ ಶ್ರೀಕೃಷ್ಣ ಮತ್ತು ಕುರುಕುಲಭೂಷಣನಾದ ಅರ್ಜುನ ಎಂಬ ರೂಪಗಳಿಂದ ಅವತರಿಸಿರುವರು. ॥ ೫೯ ॥

ಅಗ್ನಿದೇವರ ಪತ್ನಿಯಾದ ಸ್ವಾಹಾದೇವಿಯು ಅಗ್ನಿಯ ಅಭಿ ಮಾನಿಗಳಾದ ಪಾವಕ, ಪವಮಾನ ಮತ್ತು ಶುಚಿ ಎಂಬ ಮೂವರು ಪುತ್ರರನ್ನು ಪಡೆದಳು. ಅವರೂ ತಂದೆಯಂತೆ ಹವಿಸ್ಸನ್ನು ಭುಂಜಿಸು ವರು. ॥ ೬೦ ॥ ಈ ಮೂವರಿಂದಲೇ ನಲವತ್ತೈದು ಪ್ರಕಾರಗಳಾದ ಅಗ್ನಿಗಳು ಉಂಟಾದವು. ಇವರೇ ತಮ್ಮ ಮೂವರು ಪಿತೃಗಳು, ಓರ್ವ ಪಿತಾಮಹ ಸೇರಿ ನಲವತ್ತೊಂಭತ್ತು ಅಗ್ನಿಗಳೆಂದು ಪ್ರಸಿದ್ಧರಾದರು. ॥ ೬೧ ॥ ವೇದಜ್ಞ ಬ್ರಾಹ್ಮಣರು ವೈದಿಕ ಯಜ್ಞ ಕರ್ಮದಲ್ಲಿ ಆಗ್ನೇಯಿ ಇಷ್ಟಿಗಳನ್ನು ಇವೇ ನಲವತ್ತೊಂಭತ್ತು ಅಗ್ನಿಗಳ ಹೆಸರಿನಿಂದ ಮಾಡುವರು. ॥ ೬೨ ॥

ಅಗ್ನಿಷ್ವಾತ್ತ, ಬರ್ಹಿಷದ, ಸೋಮಪ ಮತ್ತು ಆಜ್ಯಪ ಇವರು ಪಿತೃಗಳಾಗಿದ್ದಾರೆ. ಇವರಲ್ಲಿ ಸಾಗ್ನಿಕರೂ (ಗೃಹಸ್ಥರು) ಇದ್ದಾರೆ. ನಿರಗ್ನಿಕರೂ (ಸಂನ್ಯಾಸಿಗಳು) ಇದ್ದಾರೆ. ಇವರೆಲ್ಲ ಪಿತೃಗಳ ಪತ್ನಿಯು ದಕ್ಷಕುಮಾರಿಯಾದ ಸ್ವಧಾದೇವಿಯಾಗಿದ್ದಳು. ॥ ೬೩ ॥

ತೇಭ್ಯೋ ದಧಾರ ಕನ್ಯೇ ದ್ವೇ ವಯುನಾಂ ಧಾರಿಣೀಂ ಸ್ವಧಾ ।
ಉಭೇ ತೇ ಬ್ರಹ್ಮವಾದಿನ್ಯೌ ಜ್ಞಾನವಿಜ್ಞಾನಪಾರಗೇ ॥ ೬೪ ॥

ಭವಸ್ಯ ಪತ್ನೀ ತು ಸತೀ ಭವಂ ದೇವಮನುವ್ರತಾ ।
ಆತ್ಮನಃ ಸದೃಶಂ ಪುತ್ರಂ ನ ಲೇಭೇ ಗುಣಶೀಲತಃ ॥ ೬೫ ॥

ಪಿತರ್ಯಪ್ರತಿರೂಪೇ ಸ್ವೇ ಭವಾಯಾನಾಗಸೇ ರುಷಾ ।
ಅಪ್ರೌಢೈವಾತ್ಮನಾಽಽತ್ಮಾನಮಜಹಾದ್ಯೋಗಸಂಯುತಾ ॥ ೬೬ ॥

ಈ ಪಿತೃಗಳಿಂದ ಸ್ವಧಾದೇವಿಗೆ ಧಾರಿಣೀ ಮತ್ತು ವಯುನಾ ಎಂಬ ಎರಡು ಕನ್ಯೆಗಳಾದರು. ಇವರಿಬ್ಬರೂ ಜ್ಞಾನ-ವಿಜ್ಞಾನ ಪಾರಂಗತೆಯರೂ, ಬ್ರಹ್ಮವಾದಿನಿಯರೂ ಆದರು. ॥ ೬೪ ॥ ಮಹಾದೇವನ ಪತ್ನೀ ಸಾಧ್ವೀಮಣಿಯಾದ ಸತಿದೇವಿಯು ಎಲ್ಲ ರೀತಿಯಿಂದಲೂ ಪತಿನಿಷ್ಠೆಯಿಂದ ಕೂಡಿದವಳಾಗಿ ಪತಿಸೇವಾ ಪರಾಯಣೆಯಾಗಿದ್ದಳು. ಆದರೆ ಆಕೆಗೆ ತನ್ನ ಗುಣಶೀಲಗಳಿಗೆ ಅನುರೂಪನಾದ ಪುತ್ರನು ಆಗಲಿಲ್ಲ. ॥ ೬೫ ॥ ಏಕೆಂದರೆ, ಶಿವನು ನಿರಪರಾಧಿಯಾಗಿದ್ದರೂ ಸತೀದೇವಿಯು ತನ್ನ ತಂದೆಯಾದ ದಕ್ಷಪ್ರಜಾಪತಿಯು ಆತನಿಗೆ ಪ್ರತಿಕೂಲವನ್ನು ಆಚರಿಸಿದ್ದರಿಂದ ಕ್ರುದ್ಧಳಾಗಿ ಆಕೆಯು ತಾರುಣ್ಯದಲ್ಲಿಯೇ ಯೋಗಸಮಾಧಿಯಿಂದ ತನ್ನ ದೇಹವನ್ನು ತ್ಯಜಿಸಿದ್ದಳು. ॥ ೬೬ ॥

***ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ವಿದುರ-ಮೈತ್ರೇಯಸಂವಾದೇ ಪ್ರಥಮೋಽಧ್ಯಾಯಃ ॥ ೧ ॥**

# ಎರಡನೆಯ ಅಧ್ಯಾಯ

## ಭಗವಾನ್ ಶಿವನಿಗೂ ಮತ್ತು ದಕ್ಷಪ್ರಜಾಪತಿಗೂ ಉಂಟಾದ ಮನಸ್ತಾಪ

*ವಿದುರ ಉವಾಚ*

ಭವೇ ಶೀಲವತಾಂ ಶ್ರೇಷ್ಠೇ ದಕ್ಷೋ ದುಹಿತೃವತ್ಸಲಃ ।
ವಿದ್ವೇಷಮಕರೋತ್ಕಸ್ಮಾದನಾದೃತ್ಯಾತ್ಮಜಾಂ ಸತೀಮ್ ॥ ೧ ॥

ಕಸ್ತಂ ಚರಾಚರಗುರುಂ ನಿರ್ವೈರಂ ಶಾಂತವಿಗ್ರಹಮ್ ।
ಆತ್ಮಾರಾಮಂ ಕಥಂ ದ್ವೇಷ್ಟಿ ಜಗತೋ ದೈವತಂ ಮಹತ್ ॥ ೨ ॥

ಏತದಾಖ್ಯಾಹಿ ಮೇ ಬ್ರಹ್ಮನ್ ಜಾಮಾತುಃ ಶ್ವಶುರಸ್ಯ ಚ ।
ವಿದ್ವೇಷಸ್ತು ಯತಃ ಪ್ರಾಣಾಂಸ್ತತ್ಯಜೇ ದುಸ್ತ್ಯಜಾನ್ಸತೀ ॥ ೩ ॥

*ಮೈತ್ರೇಯ ಉವಾಚ*

ಪುರಾ ವಿಶ್ವಸೃಜಾಂ ಸತ್ರೇ ಸಮೇತಾಃ ಪರಮರ್ಷಯಃ ।
ತಥಾಮರಗಣಾಃ ಸರ್ವೇ ಸಾನುಗಾ ಮುನಯೋಽಗ್ನಯಃ ॥ ೪ ॥

ತತ್ರ ಪ್ರವಿಷ್ಟಮೃಷಯೋ ದೃಷ್ಟ್ವಾರ್ಕಮಿವ ರೋಚಿಷಾ ।
ಭ್ರಾಜಮಾನಂ ವಿತಿಮಿರಂ ಕುರ್ವಂತಂ ತನ್ಮಹತ್ಸದಃ ॥ ೫ ॥

**ವಿದುರನು ಕೇಳಿದನು** – ಬ್ರಾಹ್ಮಣೋತ್ತಮರೇ! ದಕ್ಷ ಪ್ರಜಾಪತಿಗೆ ತನ್ನ ಪುತ್ರಿಯರಲ್ಲಿ ಅತ್ಯಂತ ಪ್ರೀತಿಯಿತ್ತು. ಹಾಗಿರುವಾಗ ಅವನು ಪುತ್ರಿಯಾದ ಸತಿದೇವಿಯನ್ನು ಅನಾದರಿಸಿ, ಶೀಲವಂತನಾದ ಎಲ್ಲರಿಂದ ಶ್ರೇಷ್ಠನಾದ ಶ್ರೀಮಹಾದೇವನಲ್ಲಿ ದ್ವೇಷವನ್ನು ಏಕೆ ತಾಳಿದನು ? ॥ ೧ ॥ ಪರಮೇಶ್ವರನಾದರೋ ಚರಾಚರಗಳಿಗೆಲ್ಲ ಗುರುವು. ಯಾರಲ್ಲಿಯೂ ವೈರವಿಲ್ಲದವನು. ಶಾಂತಮೂರ್ತಿಯು. ಆತ್ಮಾರಾಮನು. ಜಗತ್ತಿಗೆ ಪರಮಾರಾಧ್ಯನಾದ ಪರದೇವತೆಯು. ಅವನಲ್ಲಿ ಯಾರಾದರೂ ವೈರತಾಳುವರೇ ? ॥ ೨ ॥

ಪೂಜ್ಯರೇ! ಆ ಮಾವ-ಅಳಿಯಂದಿರಲ್ಲಿ ಇಂತಹ ದ್ವೇಷ ಹೇಗೆ ಉಂಟಾಯಿತು ? ಅದರ ಕಾರಣದಿಂದ ಸತಿದೇವಿಯು ತ್ಯಜಿಸಲು ದುಸ್ತರವಾದ ತನ್ನ ಪ್ರಾಣಗಳನ್ನೇ ಬಲಿಗೊಟ್ಟಳಲ್ಲ! ಇದನ್ನು ನನಗೆ ತಿಳಿಸಿರಿ. ॥ ೩ ॥

**ಶ್ರೀಮೈತ್ರೇಯರು ಹೇಳಿದರು** – ಎಲೈ ವಿದುರನೇ! ಹಿಂದೊಮ್ಮೆ ಪ್ರಜಾಪತಿಗಳು ಯಜ್ಞವನ್ನು ಮಾಡಿದಾಗ ಆ ಯಜ್ಞದಲ್ಲಿ ಎಲ್ಲ ಮಹರ್ಷಿಗಳೂ, ಮುನಿಗಳೂ, ಅಗ್ನಿಗಳೂ, ಸಮಸ್ತ ದೇವತೆಗಳೂ ತಮ್ಮ ಅನುಯಾಯಿಗಳೊಡನೆ ಬಂದು ಸೇರಿದ್ದರು. ॥ ೪ ॥ ಆಗ ದಕ್ಷಪ್ರಜಾಪತಿಯೂ ಆ ಸಭೆಯನ್ನು ಪ್ರವೇಶಿಸಿದನು. ಅವನು ತನ್ನ ತೇಜದಿಂದ ಸೂರ್ಯನಂತೆ ಪ್ರಕಾಶಿಸುತ್ತಾ ಆ ವಿಶಾಲ ಸಭಾಭವನದ ಅಂಧಕಾರವನ್ನು ದೂರಗೊಳಿಸುತ್ತಿದ್ದನು. ಅವನು ಬಂದಿರುವುದನ್ನು ನೋಡಿ, ಅವನ ತೇಜಸ್ಸಿಗೆ ಬೆರಗಾಗಿ ಬ್ರಹ್ಮದೇವರು ಮತ್ತು ಮಹಾದೇವನನ್ನು ಬಿಟ್ಟು ಇತರ ಅಗ್ನಿ ಸಮೇತರಾದ ಎಲ್ಲ ಸಭಾಸದರು ತಮ್ಮ-ತಮ್ಮ ಆಸನಗಳನ್ನು ಬಿಟ್ಟು ಎದ್ದುನಿಂತರು. ॥ ೫-೬ ॥

ಉದತಿಷ್ಠನ್ಸದಸ್ಯಾಸ್ತೇ ಸ್ವಧಿಷ್ಣ್ಯೇಭ್ಯಃ ಸಹಾಗ್ನಯಃ ।
ಋತೇ ವಿರಿಂಚಂ ಶರ್ವಂ ಚ ತದ್ಭಾಸಾಽಽಕ್ಷಿಪ್ತಚೇತಸಃ
॥ ೬ ॥

ಸದಸಸ್ಪತಿಭಿರ್ದಕ್ಷೋ ಭಗವಾನ್ಸಾಧು ಸತ್ಕೃತಃ ।
ಅಜಂ ಲೋಕಗುರುಂ ನತ್ವಾ ನಿಷಸಾದ ತದಾಜ್ಞಯಾ
॥ ೭ ॥

ಪ್ರಾಙ್ನಿಷಣ್ಣಂ ಮೃಡಂ ದೃಷ್ಟ್ವಾ ನಾಮೃಷ್ಯತ್ತದನಾದೃತಃ ।
ಉವಾಚ ವಾಮಂ ಚಕ್ಷುರ್ಭ್ಯಾಮಭಿವೀಕ್ಷ್ಯ ದಹನ್ನಿವ
॥ ೮ ॥

ಶ್ರೂಯತಾಂ ಬ್ರಹ್ಮರ್ಷಯೋ ಮೇ ಸಹದೇವಾಃ ಸಹಾಗ್ನಯಃ ।
ಸಾಧೂನಾಂ ಬ್ರುವತೋ ವೃತ್ತಂ ನಾಜ್ಞಾನಾನ್ನ ಚ ಮತ್ಸರಾತ್
॥ ೯ ॥

ಅಯಂ ತು ಲೋಕಪಾಲಾನಾಂ ಯಶೋಘ್ನೋ ನಿರಪತ್ರಪಃ ।
ಸದ್ಭಿರಾಚರಿತಃ ಪಂಥಾ ಯೇನ ಸ್ತಬ್ಧೇನ ದೂಷಿತಃ
॥ ೧೦ ॥

ಏಷ ಮೇ ಶಿಷ್ಯತಾಂ ಪ್ರಾಪ್ತೋ ಯನ್ಮೇ ದುಹಿತುರಗ್ರಹೀತ್ ।
ಪಾಣಿಂ ವಿಪ್ರಾಗ್ನಿಮುಖತಃ ಸಾವಿತ್ರ್ಯಾ ಇವ ಸಾಧುವತ್
॥ ೧೧ ॥

ಗೃಹೀತ್ವಾ ಮೃಗಶಾವಾಕ್ಷ್ಯಾಃ ಪಾಣಿಂ ಮರ್ಕಟಲೋಚನಃ ।
ಪ್ರತ್ಯುತ್ಥಾನಾಭಿವಾದಾರ್ಹೇ ವಾಚಾಪ್ಯಕೃತ ನೋಚಿತಮ್
॥ ೧೨ ॥

ಲುಪ್ತಕ್ರಿಯಾಯಾಶುಚಯೇ ಮಾನಿನೇ ಭಿನ್ನಸೇತವೇ ।
ಅನಿಚ್ಛನ್ನಪ್ಯದಾಂ ಬಾಲಾಂ ಶೂದ್ರಾಯೇವೋಶತೀಂ ಗಿರಮ್
॥ ೧೩ ॥

ಪ್ರೇತಾವಾಸೇಷು ಘೋರೇಷು ಪ್ರೇತೈರ್ಭೂತಗಣೈರ್ವೃತಃ ।
ಅಟತ್ಯುನ್ಮತ್ತವನ್ನಗ್ನೋ ವ್ಯುಪ್ತಕೇಶೋ ಹಸನ್ರುದನ್
॥ ೧೪ ॥

ಚಿತಾಭಸ್ಮಕೃತಸ್ನಾನಃ ಪ್ರೇತಸ್ರಙ್ನ್ರಸ್ಥಿಭೂಷಣಃ ।
ಶಿವಾಪದೇಶೋ ಹ್ಯಶಿವೋ ಮತ್ತೋ ಮತ್ತಜನಪ್ರಿಯಃ ।
ಪತಿಃ ಪ್ರಮಥಭೂತಾನಾಂ ತಮೋಮಾತ್ರಾತ್ಮಕಾತ್ಮನಾಮ್
॥ ೧೫ ॥

ತಸ್ಮಾ ಉನ್ಮಾದನಾಥಾಯ ನಷ್ಟಶೌಚಾಯ ದುರ್ಹೃದೇ ।
ದತ್ತಾ ಬತ ಮಯಾ ಸಾಧ್ವೀ ಚೋದಿತೇ ಪರಮೇಷ್ಠಿನಾ
॥ ೧೬ ॥

ಹೀಗೆ ಎಲ್ಲ ಸಭಾಸದರಿಂದ ಸಮ್ಮಾನ ಪಡೆದು ತೇಜಸ್ವಿಯಾದ ದಕ್ಷಪ್ರಜಾಪತಿಯು ತಂದೆಯಾದ ಬ್ರಹ್ಮದೇವರಿಗೆ ವಂದಿಸಿ, ಅವರ ಅಪ್ಪಣೆಯಂತೆ ಆಸನದಲ್ಲಿ ಮಂಡಿಸಿದನು. ॥ ೭ ॥

ಆದರೆ ಪರಮೇಶ್ವರನು ಮಾತ್ರ ಕುಳಿತೇ ಇದ್ದು ತನಗೆ ಗೌರವವನ್ನು ಸಲ್ಲಿಸದೆ ಇದ್ದುದನ್ನು ಆತನು ಗಮನಿಸಿದನು. ಇದನ್ನು ಅವನು ಅನಾದರವೆಂದು ತಿಳಿದನು. ಆಗ ಆತನು ಶಿವನನ್ನು ತನ್ನ ಕ್ರೋಧಾಗ್ನಿಯಿಂದ ಸುಟ್ಟುಬಿಡುವನೋ ಎಂಬಂತೆ ಕಡೆಗಣ್ಣಿನಿಂದ ದುರ-ದುರನೆ ನೋಡುತ್ತಾ ಹೀಗೆ ಹೇಳತೊಡಗಿದನು. ॥ ೮ ॥ ದೇವತೆಗಳಿಂದಲೂ, ಅಗ್ನಿಗಳಿಂದಲೂ ಒಡಗೂಡಿರುವ ಎಲೈ ಬ್ರಹ್ಮರ್ಷಿಗಳೇ! ನನ್ನ ಮಾತನ್ನು ಕೇಳಿರಿ. ನಾನು ಅಜ್ಞಾನದಿಂದಾಗಲೀ, ಮಾತ್ಸರ್ಯದಿಂದಾಗಲೀ ಮಾತನಾಡುತ್ತಿಲ್ಲ. ಕೇವಲ ಶಿಷ್ಟಾಚಾರ ವ್ಯವಹಾರದ ಕುರಿತೇ ಆಡುತ್ತಿದ್ದೇನೆ. ॥ ೯ ॥ ಈ ನಾಚಿಕೆಗೆಟ್ಟವನು ಎಲ್ಲ ಲೋಕಪಾಲರ ಪವಿತ್ರಕೀರ್ತಿಯನ್ನು ಕೆಡಿಸುತ್ತಿದ್ದಾನೆ. ನೋಡಿದಿರಾ! ಈ ದುರಹಂಕಾರಿಯು ಸತ್ಪುರುಷರು ನಡೆದು ಬಂದಿರುವ ದಾರಿಯನ್ನೇ ಕಲಂಕಿತಗೊಳಿಸುತ್ತಿದ್ದಾನೆ. ॥ ೧೦ ॥ ಕಪಿಯ ಕಣ್ಣಿನಂತಿರುವ ಇವನು ಸಾಧುವಿನಂತಿದ್ದ ನನ್ನ ಸಾವಿತ್ರಿ ಸದೃಶಳೂ, ಮೃಗನಯನಿಯೂ ಆದ ಪವಿತ್ರ ಕನ್ಯೆಯನ್ನು ಅಗ್ನಿ ಮತ್ತು ಬ್ರಾಹ್ಮಣರ ಸಮಕ್ಷಮದಲ್ಲಿ ಪಾಣಿಗ್ರಹಣಮಾಡಿದ್ದನು. ಇದರಿಂದ ಇವನು ಒಂದು ವಿಧದಲ್ಲಿ ನನಗೆ ಮಗನಂತೇ ಇದ್ದಾನೆ. ಇವನೂ ಎದ್ದು ನನಗೆ ಸ್ವಾಗತಿಸಿ, ನಮಸ್ಕರಿಸುತ್ತಿದ್ದರೆ ಉಚಿತವಾಗಿತ್ತು. ಆದರೆ ಇವನು ಮಾತಿನಿಂದಲೂ ನನ್ನನ್ನು ಸತ್ಕರಿಸಲಿಲ್ಲ. ॥ ೧೧-೧೨ ॥ ಅಯ್ಯೋ! ಅಯೋಗ್ಯನಿಗೆ ವೇದ ಹೇಳಿಕೊಟ್ಟಂತೆ – ನಾನು ಇಷ್ಟವಿಲ್ಲದಿದ್ದರೂ ಈತನಿಗೆ ನನ್ನ ಪುತ್ರಿಯನ್ನು ಕೊಟ್ಟೆನಲ್ಲ! ಈತನು ಸತ್ಕರ್ಮಗಳನ್ನು ಲೋಪಗೊಳಿಸಿರುವನು. ಅಶುಚಿಯು, ದುರಭಿಮಾನಿಯು. ಧರ್ಮದ ಮೇರೆಯನ್ನು ಮುರಿದು ಹಾಕಿದನು. ॥ ೧೩ ॥ ಇವನು ಪ್ರೇತಗಳಿಗೆ ನಿವಾಸಸ್ಥಾನವಾದ ಭಯಂಕರ ಸ್ಮಶಾನಗಳಲ್ಲಿ ಭೂತ-ಪ್ರೇತಗಳೊಡನೆ ಅಲೆಯುತ್ತಾ ಇರುತ್ತಾನೆ. ಹುಚ್ಚನಂತೆ ತಲೆಗೂದಲನ್ನು ಕೆದರಿಕೊಂಡು, ಬತ್ತಲೆಯಾಗಿ, ನಗುತ್ತಲೂ, ಅಳುತ್ತಲೂ ತಿರುಗಾಡುತ್ತಿರುತ್ತಾನೆ. ॥ ೧೪ ॥ ಇವನು ಅಪವಿತ್ರವಾದ ಚಿತಾಭಸ್ಮವನ್ನು ಮೈಗೆಲ್ಲ ಬಳಿದುಕೊಂಡು, ಕೊರಳಲ್ಲಿ ಭೂತಗಳು ಧರಿಸಲು ಯೋಗ್ಯವಾದ ನರಮುಂಡ ಮಾಲೆಯನ್ನೂ, ದೇಹದಲ್ಲೆಲ್ಲ ಮೂಳೆಗಳ ಒಡವೆಗಳನ್ನು ಹಾಕಿಕೊಂಡಿರುತ್ತಾನೆ. ಇವನು ಹೆಸರಿಗೆ ಮಾತ್ರ ಶಿವನಾಗಿದ್ದಾನೆ. ಆದರೆ ನಿಜವಾಗಿ ಅಶಿವ – ಅಮಂಗಳರೂಪಿಯಾಗಿದ್ದಾನೆ. ಮತ್ತೇರಿದವನಿಗೆ ಮತ್ತೇರಿದವರೇ ಪ್ರಿಯರಾಗಿರುವಂತೆ ಈತನಿಗೂ ಭೂತ-ಪ್ರೇತ-ಪಿಶಾಚಾದಿ ತಮೋಗುಣದ ಜೀವರೇ ಪ್ರಿಯರು. ಅವರಿಗೆಲ್ಲ ಈತನು ನಾಯಕನು. ॥ ೧೫ ॥ ಅಯ್ಯೋ ! ನಾನು ಬ್ರಹ್ಮದೇವರ ಮಾತಿಗೆ ಮರುಳಾಗಿ, ಭೂತಪತಿಯೂ, ಆಚಾರಹೀನನೂ, ದುಷ್ಟಸ್ವಭಾವದವನೂ ಆದ ಇಂತಹವನಿಗೆ ಸಾಧ್ವಿಯೂ, ಸುಕುಮಾರಿಯೂ ಆದ ನನ್ನ ಕುವರಿಯನ್ನು ವಿವಾಹಮಾಡಿಕೊಟ್ಟೆನಲ್ಲ! ॥ ೧೬ ॥

*ಮೈತ್ರೇಯ ಉವಾಚ*

**ಏನಿಂದ್ಯೈವಂ ಸ ಗಿರಿಶಮಪ್ರತೀಪಮವಸ್ಥಿತಮ್ ।**
**ದಕ್ಷೋಽಥಾಪ ಉಪಸ್ಪೃಶ್ಯ ಕ್ರುದ್ಧಃ ಶಪ್ತುಂ ಪ್ರಚಕ್ರಮೇ ॥ ೧೭ ॥**

**ಅಯಂ ತು ದೇವಯಜನ ಇಂದ್ರೋಪೇಂದ್ರಾದಿಭಿರ್ಭವಃ ।**
**ಸಹಭಾಗಂ ನ ಲಭತಾಂ ದೇವೈರ್ದೇವಗಣಾಧಮಃ ॥ ೧೮ ॥**

**ನಿಷಿಧ್ಯಮಾನಃ ಸ ಸದಸ್ಯಮುಖ್ಯೈ-**
**ರ್ದಕ್ಷೋ ಗಿರಿತ್ರಾಯ ವಿಸೃಜ್ಯ ಶಾಪಮ್ ।**
**ತಸ್ಮಾದ್ವಿನಿಷ್ಕ್ರಮ್ಯ ವಿವೃದ್ಧಮನ್ಯು-**
**ರ್ಜಗಾಮ ಕೌರವ್ಯ ನಿಜಂ ನಿಕೇತನಮ್ ॥ ೧೯ ॥**

**ವಿಜ್ಞಾಯ ಶಾಪಂ ಗಿರಿಶಾನುಗಾಗ್ರಣೀ-**
**ರ್ನಂದೀಶ್ವರೋ ರೋಷಕಷಾಯದೂಷಿತಃ ।**
**ದಕ್ಷಾಯ ಶಾಪಂ ವಿಸಸರ್ಜ ದಾರುಣಂ**
**ಯೇ ಚಾನ್ವಮೋದಂಸ್ತದವಾಚ್ಯತಾಂ ದ್ವಿಜಾಃ ॥ ೨೦ ॥**

**ಯ ಏತನ್ಮರ್ತ್ಯಮುದ್ದಿಶ್ಯ ಭಗವತ್ಯಪ್ರತಿದ್ರುಹಿ ।**
**ದ್ರುಹ್ಯತ್ಯಜ್ಞಃ ಪೃಥಗ್ದೃಷ್ಟಿಸ್ತತ್ತ್ವತೋ ವಿಮುಖೋ ಭವೇತ್ ॥ ೨೧ ॥**

**ಗೃಹೇಷು ಕೂಟಧರ್ಮೇಷು ಸಕ್ತೋ ಗ್ರಾಮ್ಯಸುಖೇಚ್ಛಯಾ ।**
**ಕರ್ಮತಂತ್ರಂ ವಿತನುತೇ ವೇದವಾದವಿಪನ್ನಧೀಃ ॥ ೨೨ ॥**

**ಬುದ್ಧ್ಯಾ ಪರಾಭಿಧ್ಯಾಯಿನ್ಯಾ ವಿಸ್ಮೃತಾತ್ಮಗತಿಃ ಪಶುಃ ।**
**ಸ್ತ್ರೀಕಾಮಃ ಸೋಽಸ್ತ್ವತಿತರಾಂ ದಕ್ಷೋ ಬಸ್ತಮುಖೋಽಚಿರಾತ್ ॥ ೨೩ ॥**

**ವಿದ್ಯಾಬುದ್ಧಿರವಿದ್ಯಾಯಾಂ ಕರ್ಮಮಯ್ಯಾಮಸೌ ಜಡಃ ।**
**ಸಂಸರಂತ್ವಿಹ ಯೇ ಚಾಮುಮನು ಶರ್ವಾವಮಾನಿನಮ್ ॥ ೨೪ ॥**

**ಗಿರಃ ಶ್ರುತಾಯಾಃ ಪುಷ್ಪಿಣ್ಯಾ ಮಧುಗಂಧೇನ ಭೂರಿಣಾ ।**
**ಮಥ್ನಾ ಚೋನ್ಮಥಿತಾತ್ಮಾನಃ ಸಮ್ಮುಹ್ಯಂತು ಹರದ್ವಿಷಃ ॥ ೨೫ ॥**

**ಶ್ರೀಮೈತ್ರೇಯರು ಹೇಳುತ್ತಾರೆ** – ಸಾಧುಸ್ವಭಾವದ ವಿದುರನೇ! ದಕ್ಷನು ತನ್ನನ್ನು ಹೀಗೆ ನಿಂದಿಸಿದರೂ ಭಗವಾನ್ ಮಹಾದೇವನು ಅದಕ್ಕೆ ಯಾವ ಪ್ರತಿಕ್ರಿಯೆಯನ್ನೂ ತೋರದೆ ಹಿಂದಿನಂತೆ ನಿಶ್ಚಲಭಾವದಿಂದಲೇ ಕುಳಿತಿದ್ದನು. ಇದರಿಂದ ದಕ್ಷನ ಕ್ರೋಧವು ಉಕ್ಕೇರಿ ಅವನು ಕೈಯಲ್ಲಿ ನೀರನ್ನು ತೆಗೆದುಕೊಂಡು ಶಿವನನ್ನು ಶಪಿಸಲು ಸಿದ್ಧನಾದನು. ॥ ೧೭ ॥ ದಕ್ಷನು – "ಈ ಮಹಾದೇವನು ದೇವತೆಗಳಲ್ಲಿ ಅಧಮನು. ಇಂದಿನಿಂದ ಈತನಿಗೆ ಇಂದ್ರ-ಉಪೇಂದ್ರ ಮುಂತಾದ ದೇವತೆಗಳೊಡನೆ ಯಜ್ಞದಲ್ಲಿ ಭಾಗವು ದೊರೆಯದಿರಲಿ' ಎಂಬ ಶಾಪವಾಕ್ಯವನ್ನುಚ್ಚರಿಸಿದನು. ॥ ೧೮ ॥ ಸಭೆಯಲ್ಲಿ ನೆರೆದಿದ್ದ ಮುಖ್ಯ ಸದಸ್ಯರು 'ಬೇಡ! ಬೇಡ!' ಎಂದು ತಡೆಯುತ್ತಿದ್ದರೂ ಆತನು ಯಾರ ಮಾತನ್ನೂ ಕೇಳದೆ ಶಿವನಿಗೆ ಶಾಪವನ್ನು ಕೊಟ್ಟೇ ಬಿಟ್ಟನು. ಹಾಗೂ ಕಡುಕೋಪದಿಂದ ಸಭಾತ್ಯಾಗಮಾಡಿ ಮನೆಗೆ ಹೊರಟುಹೋದನು. ॥ ೧೯ ॥

ಸ್ವಾಮಿ ಶಂಕರನ ಅನುಯಾಯಿಗಳಲ್ಲಿ ಅಗ್ರಗಣ್ಯನಾದ ನಂದಿಕೇಶ್ವರನಿಗೆ ದಕ್ಷನು ಶಾಪವಿತ್ತುದನ್ನು ತಿಳಿಯುತ್ತಲೇ ಕ್ರೋಧದಿಂದ ಕಿಡಿ-ಕಿಡಿಯಾದನು. ಆ ದಕ್ಷನಿಗೂ, ಅವನ ದುರ್ವಚನಗಳನ್ನು ಅನುಮೋದನೆ ಮಾಡಿದ ಬ್ರಾಹ್ಮಣರಿಗೂ ಅವನು ಭಯಂಕರವಾದ ಶಾಪವನ್ನು ಕೊಟ್ಟನು. ॥ ೨೦ ॥ "ಮರಣಸ್ವಭಾವವುಳ್ಳ ಈ ದೇಹದಲ್ಲೇ ಅಭಿಮಾನ ಹೊಂದಿರುವ ಈ ಮೂರ್ಖ ದಕ್ಷನು – ಯಾರಿಗೂ ದ್ರೋಹಮಾಡದೇ ಇರುವ ಭಗವಾನ್ ಶಂಕರನ ವಿಷಯದಲ್ಲಿ ದ್ವೇಷವನ್ನು ಮಾಡಿರುವನು. ಭೇದಬುದ್ಧಿಯಿಂದ ಕೂಡಿದ ಈತನು ತತ್ತ್ವಜ್ಞಾನ ವಿಮುಖನಾಗಲಿ." ॥ ೨೧ ॥ ಇವನು 'ಚಾತುರ್ಮಾಸ್ಯ ಯಜ್ಞಮಾಡುವವನಿಗೆ ಅಕ್ಷಯಪುಣ್ಯವು ದೊರೆಯುವುದು' ಮುಂತಾದ ಅರ್ಥವಾದರೂಪೀ ವೇದವಾಕ್ಯಗಳಲ್ಲಿ ಮೋಹಿತನಾಗಿ ಹಾಗೂ ವಿವೇಕಭ್ರಷ್ಟನಾಗಿ ವಿಷಯಸುಖದ ಇಚ್ಛೆಯಿಂದ ಕಪಟಧರ್ಮಮಯ ಗೃಹಸ್ಥಾಶ್ರಮದಲ್ಲಿ ಆಸಕ್ತನಾಗಿದ್ದು ಕರ್ಮಕಾಂಡದಲ್ಲೇ ತೊಡಗಿರುತ್ತಾನೆ. ಇವನ ಬುದ್ಧಿಯು ದೇಹಾದಿಗಳಲ್ಲಿ ಆತ್ಮಭಾವವನ್ನು ಚಿಂತಿಸುವಂತಹುದು. ಇದರಿಂದ ಇವನಿಗೆ ಆತ್ಮಸ್ವರೂಪವು ಮರೆಯಾಗಿದೆ. ಇವನು ಸಾಕ್ಷಾತ್ ಪಶುವಿನಂತೆ ಆಗಿದ್ದಾನೆ. ಆದ್ದರಿಂದ ಈತನು ಅತ್ಯಂತ ಸ್ತ್ರೀಲಂಪಟನಾಗಲಿ ಮತ್ತು ಶೀಘ್ರದಲ್ಲಿಯೇ ಈತನಿಗೆ ಹೋತದಮುಖ ಬರಲಿ. ॥ ೨೨-೨೩ ॥ ಈ ಮೂರ್ಖನು ಕರ್ಮಮಯವಾದ ಅವಿದ್ಯೆಯನ್ನೇ ವಿದ್ಯೆಯೆಂದು ತಿಳಿಯುತ್ತಿದ್ದಾನೆ. ಆದ್ದರಿಂದ ಈತನೂ ಮತ್ತು ಭಗವಾನ್ ಶಂಕರನಿಗೆ ಅಪಮಾನಮಾಡಿರುವ ಈತನ ಬೆಂಬಲಿಗರೆಲ್ಲರೂ ಜನ್ಮ-ಮರಣರೂಪವಾದ ಸಂಸಾರ ಚಕ್ರದಲ್ಲಿ ಸುತ್ತುತ್ತಿರಲಿ. ॥ ೨೪ ॥ ವೇದವಾಣಿಯೆಂಬ ಬಳ್ಳಿಯು ಫಲಶ್ರುತಿಯೆಂಬ ಪುಷ್ಪಗಳಿಂದ ಸುಶೋಭಿತವಾಗಿದೆ. ಕರ್ಮಫಲರೂಪವಾದ ಅದರ ಮೋಹಕವಾದ ಗಂಧಕ್ಕೆ ವಶವಾದವರ ಚಿತ್ತವು ಕಲಕಿಹೋಗುತ್ತದೆ. ಇದರಿಂದ ಈ ಶಂಕರದ್ರೋಹಿಗಳು ಕರ್ಮಗಳ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರಲಿ. ॥ ೨೫ ॥

ಸರ್ವಭಕ್ಷ್ಯಾ ದ್ವಿಜಾ ವೃತ್ತ್ಯೈ ಧೃತವಿದ್ಯಾತಪೋವ್ರತಾಃ ।
ವಿತ್ತದೇಹೇಂದ್ರಿಯಾರಾಮಾ ಯಾಚಕಾ ವಿಚರಂತ್ವಿಹ
॥ ೨೬ ॥

ತಸ್ಯೈವಂ ವದತಃ ಶಾಪಂ ಶ್ರುತ್ವಾ ದ್ವಿಜಕುಲಾಯ ವೈ ।
ಭೃಗುಃ ಪ್ರತ್ಯಸೃಜಚ್ಛಾಪಂ ಬ್ರಹ್ಮದಂಡಂ ದುರತ್ಯಯಮ್
॥ ೨೭ ॥

ಭವವ್ರತಧರಾ ಯೇ ಚ ಯೇ ಚ ತಾನ್ಸಮನುವ್ರತಾಃ ।
ಪಾಖಂಡಿನಸ್ತೇ ಭವಂತು ಸಚ್ಛಾಸ್ತ್ರಪರಿಪಂಥಿನಃ
॥ ೨೮ ॥

ನಷ್ಟಶೌಚಾ ಮೂಢಧಿಯೋ ಜಟಾಭಸ್ಮಾಸ್ಥಿಧಾರಿಣಃ ।
ವಿಶಂತು ಶಿವದೀಕ್ಷಾಯಾಂ ಯತ್ರ ದೈವಂ ಸುರಾಸವಮ್
॥ ೨೯ ॥

ಬ್ರಹ್ಮ ಚ ಬ್ರಾಹ್ಮಣಾಂಶ್ಚೈವ ಯದ್ಯೂಯಂ ಪರಿನಿಂದಥ ।
ಸೇತುಂ ವಿಧಾರಣಂ ಪುಂಸಾಮತಃ ಪಾಖಂಡಮಾಶ್ರಿತಾಃ
॥ ೩೦ ॥

ಏಷ ಏವ ಹಿ ಲೋಕಾನಾಂ ಶಿವಃ ಪಂಥಾಃ ಸನಾತನಃ ।
ಯಂ ಪೂರ್ವೇ ಚಾನುಸಂತಸ್ಥುರ್ಯತ್ಪ್ರಮಾಣಂ ಜನಾರ್ದನಃ
॥ ೩೧ ॥

ತದ್ಬ್ರಹ್ಮ ಪರಮಂ ಶುದ್ಧಂ ಸತಾಂ ವರ್ತ್ಮ ಸನಾತನಮ್ ।
ವಿಗರ್ಹ್ಯ ಯಾತ ಪಾಖಂಡಂ ದೈವಂ ವೋ ಯತ್ರ ಭೂತರಾಟ್
॥ ೩೨ ॥

ಮೈತ್ರೇಯ ಉವಾಚ

ತಸ್ಯೈವಂ ವದತಃ ಶಾಪಂ ಭೃಗೋಃ ಸ ಭಗವಾನ್ಭವಃ ।
ನಿಶ್ಚಕ್ರಾಮ ತತಃ ಕಿಂಚಿದ್ವಿಮನಾ ಇವ ಸಾನುಗಃ
॥ ೩೩ ॥

ತೇಽಪಿ ವಿಶ್ವಸೃಜಃ ಸತ್ರಂ ಸಹಸ್ರಪರಿವತ್ಸರಾನ್ ।
ಸಂವಿಧಾಯ ಮಹೇಷ್ವಾಸ ಯತ್ರೇಜ್ಯ ಋಷಭೋ ಹರಿಃ
॥ ೩೪ ॥

ಆಪ್ಲುತ್ಯಾವಭೃಥಂ ಯತ್ರ ಗಂಗಾ ಯಮುನಯಾನ್ವಿತಾ ।
ವಿರಜೇನಾತ್ಮನಾ ಸರ್ವೇ ಸ್ವಂ ಸ್ವಂ ಧಾಮ ಯಯುಸ್ತತಃ
॥ ೩೫ ॥

ಈ ಬ್ರಾಹ್ಮಣರು ಭಕ್ಷ್ಯಾ-ಭಕ್ಷ್ಯದ ವಿವೇಕವಿಲ್ಲದೆ ಕೇವಲ ಉದರಂಭರಣಕ್ಕಾಗಿ ವಿದ್ಯೆ, ತಪಸ್ಸು ವ್ರತ ಮುಂತಾದವುಗಳನ್ನು ಆಶ್ರಯಿಸಿ, ಧನ, ದೇಹೇಂದ್ರಿಯ ಸುಖವನ್ನು ಪರಮಸುಖವೆಂದು ಭಾವಿಸಿ ಅವುಗಳಿಗೆ ಗುಲಾಮರಾಗಿ ಲೋಕದಲ್ಲಿ ಭಿಕ್ಷೆಬೇಡುತ್ತಾ ಅಲೆದಾಡುತ್ತಿರಲಿ'' ಎಂದು ಶಾಪವನ್ನಿತ್ತನು. ॥ ೨೬ ॥

ನಂದೀಶ್ವರನು ಹೀಗೆ ಬ್ರಾಹ್ಮಣಕುಲವನ್ನು ಶಪಿಸಿದ್ದನ್ನು ಕೇಳಿ ಅದರ ಬದಲಿಗೆ ಭೃಗುಮಹರ್ಷಿಗಳು ಕ್ರುದ್ಧರಾಗಿ ದುಸ್ತರವಾದ ಶಾಪರೂಪವಾದ ಬ್ರಹ್ಮದಂಡವನ್ನು ವಿಧಿಸಿದರು. ॥ ೨೭ ॥ ''ಯಾರು ಕಾಪಾಲಿಕರು – ಶಿವಭಕ್ತರು ಹಾಗೂ ಅವರ ಅನುಯಾಯಿಗಳಿದ್ದಾರೋ ಅವರು ಸತ್‌ಶಾಸ್ತ್ರಗಳಿಗೆ ವಿರುದ್ಧವಾದ ಆಚರಣೆ ಮಾಡುವ ಪಾಷಂಡಿಗಳಾಗಲಿ. ॥ ೨೮ ॥ ಶೌಚಾಚಾರವನ್ನು ಬಿಟ್ಟು ಮಂದಬುದ್ಧಿಗಳಾಗಿ, ಜಟೆ, ಬೂದಿ, ಎಲುಬಿನ ಮಾಲೆಗಳನ್ನು ಧರಿಸುವವರೇ ಶೈವ ಸಂಪ್ರದಾಯದಲ್ಲಿ ದೀಕ್ಷಿತರಾಗಲಿ. ಅದರಲ್ಲಿ ಸುರೆ ಮತ್ತು ಆಸವಗಳೆಂಬ ಮದ್ಯಗಳೇ ದೇವತೆಗಳಂತೆ ಆದರಣೀಯವಾಗಿದೆ. ॥ ೨೯ ॥ ಎಲಾ! ನೀವೆಲ್ಲ ಧರ್ಮಮರ್ಯಾದೆಯ ಸಂಸ್ಥಾಪಕರೂ, ವರ್ಣಾಶ್ರಮಗಳ ರಕ್ಷಕರೂ ಆದ ವೇದ ಮತ್ತು ಬ್ರಾಹ್ಮಣರ ನಿಂದೆಯನ್ನು ಮಾಡುತ್ತಿರುವಿರಲ್ಲ! ನೀವು ಪಾಷಂಡಮತವನ್ನು ಆಶ್ರಯಿಸಿರುವಿರಿ ಎಂಬುದು ಇದರಿಂದ ತಿಳಿಯುತ್ತದೆ. ॥ ೩೦ ॥ ಈ ವೇದಮಾರ್ಗವೇ ಜನರಿಗಾಗಿ ಶ್ರೇಯಸ್ಕರ ಮತ್ತು ಸನಾತನಮಾರ್ಗವಾಗಿದೆ. ಹಿಂದಿನವರು ಇದೇ ದಾರಿಯಲ್ಲಿ ನಡೆದುಬಂದಿರುವರು ಹಾಗೂ ಇದರ ಮೂಲವು ಸಾಕ್ಷಾತ್ ಭಗವಾನ್ ವಿಷ್ಣುವೇ ಆಗಿರುವನು. ॥ ೩೧ ॥ ನೀವುಗಳು ಸತ್ಪುರುಷರಿಗೆ ಪರಮಪವಿತ್ರವೂ, ಸನಾತನ ಮಾರ್ಗವೂ ಆದ ವೇದವನ್ನು ನಿಂದಿಸುತ್ತಿರುವಿರಿ. ಆದ್ದರಿಂದ ನೀವು ಭೂತಗಳಿಗೆ ಅಧಿಪತಿಯಾಗಿರುವ, ನಿಮ್ಮ ಇಷ್ಟದೇವನು ವಾಸಿಸುವ ಪಾಷಂಡ ಮಾರ್ಗಕ್ಕೆ ಹೊರಟುಹೋಗಿರಿ. ॥ ೩೨ ॥

ಶ್ರೀಮೈತ್ರೇಯರು ಹೇಳುತ್ತಾರೆ – ವಿದುರನೇ! ಭೃಗು ಋಷಿಗಳು ಹೀಗೆ ಶಪಿಸಿದಾಗ ಭಗವಾನ್ ಶಂಕರನು ಸ್ವಲ್ಪ ಖೇದಗೊಂಡವನಂತೆ ತನ್ನ ಅನುಯಾಯಿಗಳೊಡನೆ ಅಲ್ಲಿಂದ ಹೊರಟುಹೋದನು. ॥ ೩೩॥ ಪ್ರಜಾಪತಿಗಳು ಆಚರಿಸುತ್ತಿದ್ದ ಆ ಯಜ್ಞದ ಅವಧಿ ಒಂದುಸಾವಿರ ವರ್ಷಗಳಾಗಿದ್ದಿತು. ಅದರಲ್ಲಿ ಉಪಾಸ್ಯ ದೇವತೆಯಾದರೋ ಪುರುಷೋತ್ತಮ ಶ್ರೀಹರಿಯೇ ಆಗಿದ್ದನು. ಅಂತಹ ಯಜ್ಞವನ್ನು ಮುಗಿಸಿ ಆ ಪ್ರಜಾಪತಿಗಳು ಗಂಗಾ-ಯಮುನಾ ಸಂಗಮಸ್ಥಳದಲ್ಲಿ ಅವಭೃತಸ್ನಾನಮಾಡಿ ಪ್ರಸನ್ನವಾದ ಮನಸ್ಸಿನಿಂದ ತಮ್ಮ-ತಮ್ಮ ಸ್ಥಾನಗಳಿಗೆ ಹೊರಟುಹೋದರು. ॥ ೩೪-೩೫ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ದಕ್ಷಶಾಪೋ ನಾಮ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಸತಿದೇವಿಯು ತಂದೆಯು ಮಾಡುತ್ತಿದ್ದ ಯಜ್ಞೋತ್ಸವಕ್ಕೆ ಹೋಗಬೇಕೆಂದು ಹಠಮಾಡಿದುದು

*ಮೈತ್ರೇಯ ಉವಾಚ*

**ಸದಾ ವಿದ್ವಿಷತೋರೇವಂ ಕಾಲೋ ವೈ ಧ್ರಿಯಮಾಣಯೋಃ ।
ಜಾಮಾತುಃ ಶ್ವಶುರಸ್ಯಾಪಿ ಸುಮಹಾನತಿಚಕ್ರಮೇ ॥ ೧ ॥**

**ಯದಾಭಿಷಿಕ್ತೋ ದಕ್ಷಸ್ತು ಬ್ರಹ್ಮಣಾ ಪರಮೇಷ್ಠಿನಾ ।
ಪ್ರಜಾಪತೀನಾಂ ಸರ್ವೇಷಾಮಾಧಿಪತ್ಯೇ ಸ್ಮಯೋಽಭವತ್ ॥ ೨ ॥**

**ಇಷ್ಟ್ವಾ ಸ ವಾಜಪೇಯೇನ ಬ್ರಹ್ಮಿಷ್ಠಾನಭಿಭೂಯ ಚ ।
ಬೃಹಸ್ಪತಿಸವಂ ನಾಮ ಸಮಾರೇಭೇ ಕ್ರತೂತ್ತಮಮ್ ॥ ೩ ॥**

**ತಸ್ಮಿನ್ ಬ್ರಹ್ಮರ್ಷಯಃ ಸರ್ವೇ ದೇವರ್ಷಿಪಿತೃದೇವತಾಃ ।
ಆಸನ್ ಕೃತಸ್ವಸ್ತ್ಯಯನಾಸ್ತತ್ಪತ್ನ್ಯಶ್ಚ ಸಭರ್ತೃಕಾಃ ॥ ೪ ॥**

**ತದುಪಶ್ರುತ್ಯ ನಭಸಿ ಖೇಚರಾಣಾಂ ಪ್ರಜಲ್ಪತಾಮ್ ।
ಸತೀ ದಾಕ್ಷಾಯಣೀ ದೇವೀ ಪಿತುರ್ಯಜ್ಞಮಹೋತ್ಸವಮ್ ॥ ೫ ॥**

**ವ್ರಜಂತೀಃ ಸರ್ವತೋ ದಿಗ್ಭ್ಯ ಉಪದೇವವರಸ್ತ್ರಿಯಃ ।
ವಿಮಾನಯಾನಾಃ ಸಪ್ರೇಷ್ಠಾ ನಿಷ್ಕಕಂಠೀಃ ಸುವಾಸಸಃ ॥ ೬ ॥**

**ದೃಷ್ಟ್ವಾ ಸ್ವನಿಲಯಾಭ್ಯಾಶೇ ಲೋಲಾಕ್ಷೀರ್ಮೃಷ್ಟಕುಂಡಲಾಃ ।
ಪತಿಂ ಭೂತಪತಿಂ ದೇವಮೌತ್ಸುಕ್ಯಾದಭ್ಯಭಾಷತ ॥ ೭ ॥**

*ಸತ್ಯುವಾಚ*

ಪ್ರಜಾಪತೇಸ್ತೇ ಶ್ವಶುರಸ್ಯ ಸಾಂಪ್ರತಂ
ನಿರ್ಯಾಪಿತೋ ಯಜ್ಞಮಹೋತ್ಸವಃ ಕಿಲ ।
ವಯಂ ಚ ತತ್ರಾಭಿಸರಾಮ ವಾಮ ತೇ
ಯದ್ಯರ್ಥಿತಾಮೀ ವಿಬುಧಾ ವ್ರಜಂತಿ ಹಿ ॥ ೮ ॥

ತಸ್ಮಿನ್ಭಗಿನ್ಯೋ ಮಮ ಭರ್ತೃಭಿಃ ಸ್ವಕೈ-
ರ್ಧ್ರುವಂ ಗಮಿಷ್ಯಂತಿ ಸುಹೃದ್ದಿದೃಕ್ಷವಃ ।
ಅಹಂ ಚ ತಸ್ಮಿನ್ಭವತಾಭಿಕಾಮಯೇ
ಸಹೋಪನೀತಂ ಪರಿಬರ್ಹಮರ್ಹಿತುಮ್ ॥ ೯ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಹೀಗೆ ಮಾವ-ಅಳಿಯಂದಿರು ಪರಸ್ಪರ ವಿರೋಧವನ್ನು ಕಟ್ಟಿಕೊಂಡಿರುವಂತೆ ಬಹಳ ಕಾಲವು ಸಂದಿತು. ॥ ೧ ॥ ಇದೇ ಸಮಯದಲ್ಲಿ ಬ್ರಹ್ಮದೇವರು ದಕ್ಷನನ್ನು ಸಮಸ್ತ ಪ್ರಜಾಪತಿಗಳ ಅಧಿಪತಿಯಾಗಿಸಿದನು. ಇದರಿಂದ ಅವನ ಗರ್ವವು ಇನ್ನೂ ಹೆಚ್ಚಿತು. ॥ ೨ ॥ ಅವನು ಭಗವಾನ್ ಶಂಕರನೇ ಮುಂತಾದ ಬ್ರಹ್ಮನಿಷ್ಠರಿಗೆ ಯಜ್ಞಭಾಗವನ್ನು ಕೊಡದೆ, ಅವರನ್ನು ತಿರಸ್ಕರಿಸುತ್ತಾ ಮೊದಲಿಗೆ 'ವಾಜಪೇಯ' ಯಜ್ಞವನ್ನು ಮಾಡಿದನು. ಮತ್ತೆ 'ಬೃಹಸ್ಪತಿಸವ' ಎಂಬ ಮಹಾ ಯಜ್ಞವನ್ನು ಪ್ರಾರಂಭಿಸಿದನು. ॥ ೩ ॥ ಆ ಯಜ್ಞೋತ್ಸವದಲ್ಲಿ ಎಲ್ಲ ಬ್ರಹ್ಮರ್ಷಿಗಳೂ, ದೇವರ್ಷಿಗಳೂ, ಪಿತೃಗಳೂ, ದೇವತೆಗಳೂ ಮುಂತಾದವರು ತಮ್ಮ-ತಮ್ಮ ಪತ್ನಿಯರೊಂದಿಗೆ ದಯಮಾಡಿಸಿದರು. ಅವರೆಲ್ಲರೂ ಸೇರಿ ಅಲ್ಲಿ ಮಂಗಳಕಾರ್ಯಗಳನ್ನು ಸಂಪನ್ನಗೊಳಿಸಿದರು. ದಕ್ಷಪ್ರಜಾಪತಿಯು ಅವರೆಲ್ಲರನ್ನು ಹಾರ್ದಿಕವಾಗಿ ಸ್ವಾಗತಿಸಿದನು. ॥ ೪ ॥

ಅದೇ ಸಮಯದಲ್ಲಿ ಆಕಾಶಮಾರ್ಗವಾಗಿ ಹೋಗುತ್ತಿದ್ದ ದೇವತೆಗಳು ಆ ಯಜ್ಞದ ವಿಚಾರವಾಗಿಯೇ ಪರಸ್ಪರ ಚರ್ಚಿಸುತ್ತಿದ್ದರು. ಅವರ ಬಾಯಿಂದ ದಕ್ಷಕುಮಾರಿ ಸತೀದೇವಿಯು ತಂದೆಯ ಮನೆಯಲ್ಲಿ ನಡೆಯುತ್ತಿದ್ದ ಯಜ್ಞದ ಸಮಾಚಾರವನ್ನು ಕೇಳಿ ತಿಳಿದಳು. ॥ ೫ ॥ ತಮ್ಮ ವಾಸಸ್ಥಾನವಾದ ಕೈಲಾಸದ ದಾರಿಯಾಗಿ ಎಲ್ಲ ಕಡೆಗಳಿಂದಲೂ ಚಂಚಲವಾದ ಕಣ್ಣುಗಳುಳ್ಳ ಗಂಧರ್ವಸ್ತ್ರೀಯರೂ, ಯಕ್ಷರ ಸ್ತ್ರೀಯರೂ ಥಳ-ಥಳಿಸುತ್ತಿರುವ ಕುಂಡಲಗಳನ್ನೂ, ಹಾರಗಳನ್ನೂ ಧರಿಸಿ ಚೆನ್ನಾಗಿ ಅಲಂಕರಿಸಿಕೊಂಡು ತಮ್ಮ-ತಮ್ಮ ಪತಿಗಳೊಡನೆ ವಿಮಾನಗಳಲ್ಲಿ ಕುಳಿತು ಆ ಯಜ್ಞೋತ್ಸವಕ್ಕೆ ಹೋಗುತ್ತಿರುವುದನ್ನು ಸತಿಯು ನೋಡಿದಳು. ಅದರಿಂದ ಆಕೆಗೂ ಯಜ್ಞಕ್ಕೆ ಹೋಗಬೇಕೆಂಬ ಕುತೂಹಲವುಂಟಾಗಿ, ಆಕೆಯು ತನ್ನ ಪತಿದೇವನಾದ ಭಗವಾನ್ ಭೂತನಾಥನಲ್ಲಿ ಪ್ರಾರ್ಥಿಸಿಕೊಂಡಳು. ॥ ೬-೭ ॥

**ಸತೀದೇವಿಯು ಹೇಳಿದಳು** – ಸ್ವಾಮಿ! ವಾಮದೇವರೇ! ಈಗ ನಿಮ್ಮ ಮಾವನಾದ ದಕ್ಷಪ್ರಜಾಪತಿಯ ಮನೆಯಲ್ಲಿ ಭಾರೀ ದೊಡ್ಡ ಯಜ್ಞೋತ್ಸವವು ನಡೆಯುತ್ತಿದೆ ಎಂದು ತಿಳಿಯಿತು. ನೋಡಿ, ಈ ದೇವತೆಗಳೆಲ್ಲರೂ ಅಲ್ಲಿಗೇ ಹೋಗುತ್ತಿದ್ದಾರೆ. ನೀವು ಇಷ್ಟಪಡುವುದಾದರೆ ನಾವೂ ಅದಕ್ಕೆ ಹೋಗೋಣ. ॥ ೮ ॥ ಆ ಸಮಯದಲ್ಲಿ ತಮ್ಮ ಆತ್ಮೀಯರನ್ನು ಭೆಟ್ಟಿಯಾಗಲು ನನ್ನ ಸೋದರಿಯರೂ ತಮ್ಮ-ತಮ್ಮ ಪತಿಗಳೊಡನೆ ಅಲ್ಲಿಗೆ ಅವಶ್ಯವಾಗಿ ಬರುವರು. ಅಲ್ಲಿಗೆ ನಿಮ್ಮೊಡನೆ ಹೋಗಿ ನನ್ನ ತಂದೆ-ತಾಯಿಗಳು ಕೊಡುವ ಒಡವೆ, ಉಡಿಗೆಗಳ ಉಡುಗರೆಯನ್ನು ಸ್ವೀಕರಿಸಬೇಕೆಂದು ನನಗೂ ಅನಿಸುತ್ತದೆ. ॥ ೯ ॥

ತತ್ರ ಸ್ವಸ್ಸ್ವರ್ಮೇ ನನು ಭರ್ತೃಸಮ್ಮಿತಾ
ಮಾತೃಷ್ವಸ್ಸೃಃ ಕ್ಲಿನ್ನಧಿಯಂ ಚ ಮಾತರಮ್ ।
ದ್ರಕ್ಷ್ಯೇ ಚಿರೋತ್ಕಂಠಮನಾ ಮಹರ್ಷಿಭಿ-
ರುನ್ನೀಯಮಾನಂ ಚ ಮೃಡಾಧ್ವರಧ್ವಜಮ್ ॥ ೧೦ ॥

ತ್ವಯ್ಯೇತದಾಶ್ಚರ್ಯಮಜಾತ್ಮಮಾಯಯಾ
ವಿನಿರ್ಮಿತಂ ಭಾತಿ ಗುಣತ್ರಯಾತ್ಮಕಮ್ ।
ತಥಾಪ್ಯಹಂ ಯೋಷಿದತತ್ತ್ವವಿಚ್ಚ ತೇ
ದೀನಾ ದಿದೃಕ್ಷೇ ಭವ ಮೇ ಭವಕ್ಷಿತಿಮ್ ॥ ೧೧ ॥

ಪಶ್ಯ ಪ್ರಯಾಂತೀರಭವಾನ್ಯಯೋಷಿತೋ-
ಽಪ್ಯಲಂಕೃತಾಃ ಕಾಂತಸಖಾ ವರೂಥಶಃ ।
ಯಾಸಾಂ ವ್ರಜದ್ಭಿಃ ಶಿತಿಕಂಠ ಮಂಡಿತಂ
ನಭೋ ವಿಮಾನೈಃ ಕಲಹಂಸಪಾಂಡುಭಿಃ ॥ ೧೨ ॥

ಕಥಂ ಸುತಾಯಾಃ ಪಿತೃಗೇಹಕೌತುಕಂ
ನಿಶಮ್ಯ ದೇಹಃ ಸುರವರ್ಯ ನೇಂಗತೇ ।
ಅನಾಹುತಾ ಅಪ್ಯಭಿಯಂತಿ ಸೌಹೃದಂ
ಭರ್ತುರ್ಗುರೋರ್ದೇಹಕೃತಶ್ಚ ಕೇತನಮ್ ॥ ೧೩ ॥

ತನ್ಮೇ ಪ್ರಸೀದೇದಮಮರ್ತ್ಯವಾಂಛಿತಂ
ಕರ್ತುಂ ಭವಾನ್ಕಾರುಣಿಕೋ ಬತಾರ್ಹತಿ ।
ತ್ವಯಾತ್ಮನೋಽರ್ಧೇಽಹಮದಭ್ರಚಕ್ಷುಷಾ
ನಿರೂಪಿತಾ ಮಾನುಗೃಹಾಣ ಯಾಚಿತಃ ॥ ೧೪ ॥

*ಋಷಿರುವಾಚ*

ಏವಂ ಗಿರಿತ್ರಃ ಪ್ರಿಯಯಾಭಿಭಾಷಿತಃ
ಪ್ರತ್ಯಭ್ಯಧತ್ತ ಪ್ರಹಸನ್ಸುಹೃತ್ಪ್ರಿಯಃ ।
ಸಂಸ್ಮಾರಿತೋ ಮರ್ಮಭಿದಃ ಕುವಾಗಿಷೂನ್
ಯಾನಾಹ ಕೋ ವಿಶ್ವಸೃಜಾಂ ಸಮಕ್ಷತಃ ॥ ೧೫ ॥

*ಶ್ರೀಭಗವಾನುವಾಚ*

ತ್ವಯೋದಿತಂ ಶೋಭನಮೇವ ಶೋಭನೇ
ಅನಾಹುತಾ ಅಪ್ಯಭಿಯಂತಿ ಬಂಧುಷು ।
ತೇ ಯದ್ಯನುತ್ಪಾದಿತದೋಷದೃಷ್ಟಯೋ
ಬಲೀಯಸಾನಾತ್ಮ್ಯಮದೇನ ಮನ್ಯುನಾ ॥ ೧೬ ॥

ಅಲ್ಲಿ ತಮ್ಮ ಪತಿಗಳಿಂದ ಸಮ್ಮಾನಿತರಾಗುವ ನನ್ನ ಸೋದರಿಯರು, ಚಿಕ್ಕಮ್ಮ-ದೊಡ್ಡಮ್ಮಂದಿರು, ಸ್ನೇಹದಿಂದ ನೆನೆದ ಮನಸ್ಸುಳ್ಳ ನನ್ನ ತಾಯಿ ಇವರೆಲ್ಲರನ್ನು ನೋಡಬೇಕೆಂದು ನನ್ನ ಮನಸ್ಸು ಬಹಳ ದಿನಗಳಿಂದ ಹಂಬಲಿಸುತ್ತಿದೆ. ಎಲೈ ಸುಖಕರನೇ! ಇದಲ್ಲದೆ ಅಲ್ಲಿಗೆ ಹೋದರೆ ಮಹರ್ಷಿಗಳು ರಚಿಸಿರುವ ಶ್ರೇಷ್ಠವಾದ ಯಜ್ಞವನ್ನೂ ಸಂದರ್ಶಿಸಬಹುದು. ॥ ೧೦ ॥ ಜನ್ಮರಹಿತರಾದ ಪ್ರಭುವೇ! ನೀವಾದರೋ ಜಗತ್ತಿನ ಉತ್ಪತ್ತಿಗೆ ಕಾರಣರಾದ ದೇವರು. ನಿಮ್ಮ ಮಾಯೆಯಿಂದ ರಚಿತವಾಗಿರುವ ಈ ತ್ರಿಗುಣಾತ್ಮಕವಾದ ಆಶ್ಚರ್ಯಮಯ ಈ ಜಗತ್ತು ನಿಮ್ಮಲ್ಲಿಯೇ ಪ್ರಕಾಶಿಸುತ್ತಿದೆ. ಆದರೆ ನಾನು ನಿಮ್ಮ ತತ್ತ್ವವನ್ನರಿಯದ ಹೆಣ್ಣು ಹೆಂಗಸು. ದೀನಳಾಗಿರುವ ನಾನು ಈಗ ನನ್ನ ಜನ್ಮಭೂಮಿಯನ್ನು ನೋಡಲು ತುಂಬಾ ಉತ್ಸುಕಳಾಗಿದ್ದೇನೆ ॥ ೧೧ ॥ ಜನ್ಮಾದಿರಹಿತ ನೀಲಕಂಠಸ್ವಾಮಿಯೇ! ಅಲ್ಲಿ ನೋಡಿ! ಆ ಹೆಂಗಸರಲ್ಲಿ ಅನೇಕರಿಗೆ ದಕ್ಷನೊಡನೆ ಯಾವ ಸಂಬಂಧವೂ ಇಲ್ಲ. ಆದರೂ ಅವರು ತಮ್ಮ-ತಮ್ಮ ಪತಿಗಳೊಡನೆ ಗುಂಪು-ಗುಂಪಾಗಿ ಆ ಯಜ್ಞಕ್ಕೆ ಹೋಗುತ್ತಿದ್ದಾರೆ. ಅಲ್ಲಿಗೆ ಹೋಗುತ್ತಿರುವ ದೇವಾಂಗನೆಯರ ರಾಜಹಂಸಸದೃಶವಾದ ಬಿಳಿಯ ವಿಮಾನಗಳಿಂದ ಆಕಾಶಮಂಡಲವು ಹೇಗೆ ಶೋಭಾಯಮಾನವಾಗಿದೆ! ॥ ೧೨ ॥

ಎಲೈ ಸುರಶ್ರೇಷ್ಠರೇ! ಇಂತಹ ಸ್ಥಿತಿಯಲ್ಲಿ ತಂದೆಯ ಮನೆಯಲ್ಲಿ ಉತ್ಸವ ನಡೆಯುವ ಸಮಾಚಾರವನ್ನು ಕೇಳಿ ಅವನ ಮಗಳು ಅಲ್ಲಿಗೆ ಹೋಗಿ ಯಜ್ಞದಲ್ಲಿ ಭಾಗವಹಿಸಬೇಕೆಂದು ಹಾತೊರೆಯದೇ ಇರುವುದೇ ? ಪತಿ, ಗುರುಗಳು, ತಂದೆ-ತಾಯಿಗಳು, ಗೆಳೆಯರು ಇವರ ಮನೆಗೆ ಕರೆಯದೆಯೂ ಹೋಗಬಹುದಲ್ಲ! ॥ ೧೩ ॥ ಆದುದರಿಂದ ಪತಿದೇವಾ! ನನ್ನ ಮೇಲೆ ಪ್ರಸನ್ನರಾಗಿ ನನ್ನ ಈ ಬಯಕೆಯನ್ನು ಅವಶ್ಯವಾಗಿ ಈಡೇರಿಸಬೇಕು. ನೀವು ತುಂಬಾ ಕರುಣಾಮಯರು. ಆದರಿಂದಲೇ ಪರಮಜ್ಞಾನಿಗಳಿದ್ದರೂ ನಿಮ್ಮ ದೇಹದ ಅರ್ಧಭಾಗದಲ್ಲಿ ನನಗೆ ಸ್ಥಾನವನ್ನು ಕರುಣಿಸಿದ್ದೀರಿ. ನನ್ನ ಈ ಬೇಡಿಕೆಯನ್ನು ಗಮನಿಸಿ ನನ್ನನ್ನು ಅನುಗ್ರಹಿಸಿರಿ. ॥ ೧೪ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಪ್ರಿಯ ಸತೀದೇವಿಯು ಹೀಗೆ ಪ್ರಾರ್ಥಿಸಿದಾಗ, ಸ್ನೇಹಿತರಿಗೂ, ಆತ್ಮೀಯರಿಗೂ ಪ್ರಿಯವನ್ನು ಉಂಟುಮಾಡುವ ಭಗವಾನ್ ಶಂಕರನಿಗೆ ದಕ್ಷಪ್ರಜಾಪತಿಯು ಸಮಸ್ತ ಪ್ರಜಾಪತಿಗಳ ಎದುರಿಗೆ ಹಿಂದೆ ಆಡಿದ ಆ ಮರ್ಮಭೇದಕವಾದ ದುರ್ವಚನರೂಪವಾದ ವಾಗ್ಬಾಣಗಳು ನೆನಪಾಗಿ, ನಗುತ್ತಾ ಹೀಗೆಂದನು – ॥ ೧೫ ॥

**ಶ್ರೀಭಗವಾನ್ ಶಂಕರನು ಹೇಳಿದನು** – ಎಲೈ ಸುಂದರಿಯೇ! 'ಬಂಧುಗಳ ಮನೆಗೆ ಆಹ್ವಾನವಿಲ್ಲದೆಯೂ ಹೋಗಬಹುದು' ಎಂದು ನೀನು ಹೇಳಿದ ಮಾತೇನೋ ಸಮೀಚೀನವಾಗಿದೆ. ಆದರೆ ಆ ಬಂಧುಗಳ ದೃಷ್ಟಿಯು ಅತಿಪ್ರಬಲವಾದ ದೇಹಾಭಿಮಾನದಿಂದ ಉಂಟಾದ ಮದ ಮತ್ತು ಕ್ರೋಧಗಳಿಂದ ದ್ವೇಷವೆಂಬ ದೋಷದಿಂದ ಕೂಡಿರದಿದ್ದರೆ ಮಾತ್ರ ಹಾಗೆ ಮಾಡಬೇಕು. ॥ ೧೬ ॥ ವಿದ್ಯೆ, ತಪಸ್ಸು ಸಂಪತ್ತು, ಸುದೃಢಶರೀರ, ಯೌವನದ ವಯಸ್ಸು, ಉಚ್ಚವಾದ ಕುಲ – ಇವು ಆರು ಸತ್ಪುರುಷರಲ್ಲಿ ಗುಣಗಳಾಗಿ ಶೋಭಿಸುವುವು.

ವಿದ್ಯಾ ತಪೋವಿತ್ತವಪುರ್ವಯಃಕುಲೈಃ
ಸತಾಂ ಗುಣೈಃ ಷಡ್ಭಿರಸತ್ತಮೇತರೈಃ ।
ಸ್ಮೃತೌ ಹತಾಯಾಂ ಭೃತಮಾನದುರ್ದೃಶಃ
ಸ್ತಬ್ಧಾ ನ ಪಶ್ಯಂತಿ ಹಿ ಧಾಮ ಭೂಯಸಾಮ್ ॥ ೧೭ ॥

ನೈತಾದೃಶಾನಾಂ ಸ್ವಜನವ್ಯಪೇಕ್ಷಯಾ
ಗೃಹಾನ್ಪ್ರತೀಯಾದನವಸ್ಥಿತಾತ್ಮನಾಮ್ ।
ಯೇಽಭ್ಯಾಗತಾನ್ವಕ್ರಧಿಯಾಭಿಚಕ್ಷತೇ
ಆರೋಪಿತಭ್ರೂಭಿರಮರ್ಷಣಾಕ್ಷಿಭಿಃ ॥ ೧೮ ॥

ತಥಾರಿಭಿರ್ನ ವ್ಯಥತೇ ಶಿಲೀಮುಖೈಃ
ಶೇತೇಽರ್ದಿತಾಂಗೋ ಹೃದಯೇನ ದೂಯತಾ ।
ಸ್ವಾನಾಂ ಯಥಾ ವಕ್ರಧಿಯಾಂ ದುರುಕ್ತಿಭಿ-
ರ್ದಿವಾನಿಶಂ ತಪ್ಯತಿ ಮರ್ಮತಾಡಿತಃ ॥ ೧೯ ॥

ವ್ಯಕ್ತಂ ತ್ವಮುತ್ಕೃಷ್ಟಗತೇಃ ಪ್ರಜಾಪತೇಃ
ಪ್ರಿಯಾಽಽತ್ಮಜಾನಾಮಸಿ ಸುಭ್ರು ಸಮ್ಮತಾ ।
ಅಥಾಪಿ ಮಾನಂ ನ ಪಿತುಃ ಪ್ರಪತ್ಸ್ಯಸೇ
ಮದಾಶ್ರಯಾತ್ಕಃ ಪರಿತಪ್ಯತೇ ಯತಃ ॥ ೨೦ ॥

ಪಾಪಚ್ಯಮಾನೇನ ಹೃದಾಽಽತುರೇಂದ್ರಿಯಃ
ಸಮೃದ್ಧಿಭಿಃ ಪೂರುಷಬುದ್ಧಿಸಾಕ್ಷಿಣಾಮ್ ।
ಅಕಲ್ಪ ಏಷಾಮಧಿರೋಢುಮಂಜಸಾ
ಪದಂ ಪರಂ ದ್ವೇಷ್ಟಿ ಯಥಾಸುರಾ ಹರಿಮ್ ॥ ೨೧ ॥

ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ
ವಿಧೀಯತೇ ಸಾಧು ಮಿಥಃ ಸುಮಧ್ಯಮೇ ।
ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ
ಗುಹಾಶಯಾಯೈವ ನ ದೇಹಮಾನಿನೇ ॥ ೨೨ ॥

ಸತ್ತ್ವಂ ವಿಶುದ್ಧಂ ವಸುದೇವಶಬ್ದಿತಂ
ಯದೀಯತೇ ತತ್ರ ಪುಮಾನಪಾವೃತಃ ।
ಸತ್ತ್ವೇ ಚ ತಸ್ಮಿನ್ಭಗವಾನ್ವಾಸುದೇವೋ
ಹ್ಯಧೋಕ್ಷಜೋ ಮೇ ನಮಸಾ ವಿಧೀಯತೇ ॥ ೨೩ ॥

ಆದರೆ ನೀಚನಾದ ಪುರುಷನಲ್ಲಿ ಅವೇ ಅವಗುಣಗಳಾಗಿ ಬಿಡುವುವು. ಏಕೆಂದರೆ, ಅದರಿಂದ ಅವನ ಗರ್ವವು ಹೆಚ್ಚುವುದು. ದೃಷ್ಟಿಯು ದೋಷಯುಕ್ತವಾಗುವುದು. ವಿವೇಕಶಕ್ತಿಯು ನಾಶವಾಗುವುದು. ಆದ್ದರಿಂದ ಅವರು ಮಹಾಪುರುಷರ ಪ್ರಭಾವವನ್ನು ನೋಡಲಾರರು. ॥ ೧೭ ॥ ಇದರಿಂದಲೇ ತಮ್ಮ ಬಳಿಗೆ ಬಂದ ಮನುಷ್ಯನನ್ನು ಕುಟಿಲಬುದ್ಧಿಯಿಂದ ಹುಬ್ಬುಗಂಟುಹಾಕಿಕೊಂಡು ಸಿಟ್ಟುತುಂಬಿದ ದೃಷ್ಟಿಯಿಂದ ನೋಡುವಂತಹ ಅವ್ಯವಸ್ಥಿತಚಿತ್ತರಾದ ಜನರ ಮನೆಗೆ – 'ಇವರು ಎಷ್ಟಾದರೂ ನಮ್ಮ ಬಂಧುಗಳಲ್ಲವೇ !' ಎಂದು ತಿಳಿದು ಎಂದಿಗೂ ಹೋಗಬಾರದು. ॥ ೧೮ ॥ ದೇವೀ ! ಕುಟಿಲಬುದ್ಧಿಯುಳ್ಳ ಬಂಧುಗಳ ಕುಟಿಲವಾದ ಚುಚ್ಚುಮಾತುಗಳಿಂದ ಉಂಟಾಗುವಷ್ಟು ನೋವು ಶತ್ರುಗಳ ಬಾಣಗಳು ಚುಚ್ಚಿದರೂ ಆಗುವುದಿಲ್ಲ. ಬಾಣಗಳು ಚುಚ್ಚಿದ ನೋವನ್ನಾದರೂ ಸಹಿಸಿಕೊಂಡು ನಿದ್ದೆ ಮಾಡಬಹುದು. ಆದರೆ ಕೆಟ್ಟಮಾತುಗಳು ಮರ್ಮಸ್ಥಾನಗಳನ್ನು ಭೇದಿಸಿದರೆ ಹಗಲೂ-ರಾತ್ರಿ ಮಾನಸಿಕ ಪೀಡೆಯಿಂದ ನರಳುತ್ತಿರಬೇಕಾಗುವುದು. ॥ ೧೯ ॥

ಸುಂದರೀ ! ಪರಮೋನ್ನತಿಯನ್ನೂ ಪಡೆದಿರುವ ಆ ದಕ್ಷಪ್ರಜಾಪತಿಗೆ ಆತನ ಪುತ್ರಿಯರಲ್ಲೇ ನೀನು ಅತ್ಯಂತ ಪ್ರೀತಿಪಾತ್ರಳಾಗಿರುವೆ – ಎಂಬುದನ್ನು ನಾನು ಬಲ್ಲೆನು. ಆದರೂ ನೀನು ನನ್ನನ್ನು ಆಶ್ರಯಿಸಿರುವುದರಿಂದ ನಿನಗೆ ತಂದೆಯ ಮನ್ನಣೆ ಸಿಗಲಾರದು. ಏಕೆಂದರೆ, ಆತನಿಗೆ ನನ್ನಲ್ಲಿ ಮಿತಿಮೀರಿದ ಕಿಚ್ಚಿದೆ. ॥ ೨೦ ॥ ಅಹಂಕಾರಾದಿ ದೋಷರಹಿತರಾಗಿ ಪ್ರಕೃತಿ-ಪುರುಷಾದಿ ತತ್ತ್ವಗಳ ಯಥಾರ್ಥಜ್ಞಾನವನ್ನು ತಿಳಿದಿರುವ ಸತ್ಪುರುಷರ ಸಮೃದ್ಧಿಯನ್ನು ಕಂಡು ಕರುಬುತ್ತಾ ಮನಸ್ಸು ಮತ್ತು ಇಂದ್ರಿಯಗಳಲ್ಲಿ ಸಂಕಟಪಡುವ ಕುಪುರುಷನಿಗೆ ಆ ಸತ್ಪುರುಷರ ಪದವಿಯಂತೂ ಸಿಗುವುದಿಲ್ಲ. ಆದರೆ ದೈತ್ಯಗಣಗಳು ಶ್ರೀಹರಿಯ ಮೇಲೆ ದ್ವೇಷವನ್ನು ಕಾರುವಂತೆ ಅವನು ಆ ಸತ್ಪುರುಷರ ಮೇಲೆ ದ್ವೇಷವನ್ನು ಕಾರುತ್ತಾ ಕೊರಗುತ್ತಿರುತ್ತಾನೆ, ಅಷ್ಟೆ ! ॥ ೨೧ ॥

ಸುಂದರಾಂಗಿಯೇ ! ನೀವು ಪ್ರಜಾಪತಿಗಳ ಸಭೆಯಲ್ಲಿ ನಮ್ಮ ತಂದೆಯನ್ನು ಏಕೆ ಆದರಿಸಲಿಲ್ಲ? ಎಂದು ನೀನು ನನ್ನನ್ನು ಕೇಳಬಹುದು. ಲೋಕವ್ಯವಹಾರದಲ್ಲಿ ಪರಸ್ಪರವಾಗಿ ಮುಂದೆ ಹೋಗಿ ವಿನಯ ತೋರುವುದು, ನಮಸ್ಕಾರ ಮಾಡುವುದು ಮುಂತಾದ ಕ್ರಿಯೆಗಳಿಂದ ಗೌರವವನ್ನು ಸೂಚಿಸುವರಲ್ಲವೆ ? ತತ್ತ್ವಜ್ಞಾನಿಗಳು ಅದನ್ನೇ ಅತ್ಯುತ್ತಮ ರೀತಿಯಲ್ಲಿ ಮಾಡುತ್ತಾರೆ. ಅವರು ಆ ನಮಸ್ಕಾರಾದಿಗಳನ್ನು ಅಂತರ್ಯಾಮಿ ರೂಪದಲ್ಲಿ ಹೃದಯಗುಹೆಯಲ್ಲಿರುವ ಶ್ರೀವಾಸುದೇವನಿಗೇ ಮನಸ್ಸಿನಲ್ಲಿ ಸಮರ್ಪಿಸುತ್ತಾರೆ ; ದೇಹಾಭಿಮಾನಿಯಾದ ಪುರುಷನಿಗೆ ಸಲ್ಲಿಸುವುದಿಲ್ಲ. ॥ ೨೨ ॥ ಪರಿಶುದ್ಧವಾದ ಸತ್ತ್ವ (ಅಂತಃಕರಣ)ದ ಹೆಸರು. 'ವಸುದೇವ' ಎಂದಾಗಿದೆ. ಏಕೆಂದರೆ, ಅದರಲ್ಲಿಯೇ ಭಗವಂತನಾದ ಶ್ರೀವಾಸುದೇವನು ಪ್ರತ್ಯಕ್ಷವಾಗಿ ಆವಿರ್ಭವಿಸಿ ಅನುಭವಕ್ಕೆ ಬರುವನು. ಅಂತಹ ವಿಶುದ್ಧ ಚಿತ್ತದಲ್ಲಿ ನೆಲೆಸಿರುವ ಭಗವಂತನಾದ ಶ್ರೀವಾಸುದೇವನಿಗೇ ನಾನು ನಮಸ್ಕಾರಗಳನ್ನು ಮಾಡುತ್ತೇನೆ. ॥ ೨೩ ॥

ತತ್ತೇ ನಿರೀಕ್ಷ್ಯೋ ನ ಪಿತಾಪಿ ದೇಹಕೃದ್
ದಕ್ಷೋ ಮಮ ದ್ವಿಟ್ ತದನುವ್ರತಾಶ್ಚ ಯೇ ।
ಯೋ ವಿಶ್ವಸೃಗ್ಯಜ್ಞಗತಂ ವರೋರು ಮಾಮ್
ಅನಾಗಸಂ ದುರ್ವಚಸಾಕರೋತ್ತಿರಃ ॥ ೨೪ ॥

ಆದುದರಿಂದ ಪ್ರಿಯೇ! ಆ ದಕ್ಷಪ್ರಜಾಪತಿಯು ನಿನಗೆ ಜನ್ಮವನ್ನು ಕೊಟ್ಟಿರುವ ತಂದೆಯೇ ಆಗಿದ್ದರೂ ನನ್ನನ್ನು ಮಿತಿಮೀರಿ ದ್ವೇಷಿಸುವ ಶತ್ರುವಾಗಿರುವುದರಿಂದ ನೀನು ಆತನನ್ನಾಗಲೀ, ಆತನ ಅನುಯಾಯಿಗಳನ್ನಾಗಲಿ ನೋಡುವ ವಿಚಾರವನ್ನೇ ಮಾಡ ಬಾರದು. ಆತನು ಪ್ರಜಾಪತಿಗಳ ಯಜ್ಞದಲ್ಲಿ ನಾನು ಯಾವುದೇ ಅಪರಾಧವನ್ನು ಮಾಡದಿದ್ದರೂ ನನ್ನನ್ನು ಕಟುವಾದ ಮಾತು ಗಳಿಂದ ತಿರಸ್ಕರಿಸುತ್ತಿದ್ದಾನಲ್ಲ! ॥ ೨೪ ॥ ನನ್ನ ಮಾತನ್ನು ಮೀರಿ ನೀನು ಅಲ್ಲಿಗೆ ಹೋದರೆ ನಿನಗೆ ಖಂಡಿತವಾಗಿ ಒಳ್ಳೆಯದಾಗದು. ಏಕೆಂದರೆ, ಲೋಕದಲ್ಲಿ ಗೌರವಾನ್ವಿತ ಮನುಷ್ಯನಿಗೆ ಸ್ವಜನರಿಂದ ಏನಾದರೂ ಅಪಮಾನವು ಒದಗಿದರೆ ಅದು ಒಡನೆಯೇ ಅವನ ಮೃತ್ಯುವಿಗೆ ಕಾರಣವಾಗುವುದು. ॥ ೨೫ ॥

ಯದಿ ವ್ರಜಿಷ್ಯಸ್ಯತಿಹಾಯ ಮದ್ವಚೋ
ಭದ್ರಂ ಭವತ್ಯಾ ನ ತತೋ ಭವಿಷ್ಯತಿ ।
ಸಂಭಾವಿತಸ್ಯ ಸ್ವಜನಾತ್ಪರಾಭವೋ
ಯದಾ ಸ ಸದ್ಯೋ ಮರಣಾಯ ಕಲ್ಪತೇ ॥ ೨೫ ॥

ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಉಮಾ-ರುದ್ರಸಂವಾದೇ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ಸತೀದೇವಿಯ ಅಗ್ನಿಪ್ರವೇಶ

*ಮೈತ್ರೇಯ ಉವಾಚ*

ಏತಾವದುಕ್ತ್ವಾ ವಿರರಾಮ ಶಂಕರಃ
ಪತ್ನ್ಯಂಗನಾಶಂ ಹ್ಯುಭಯತ್ರ ಚಿಂತಯನ್ ।
ಸುಹೃದ್ದಿದೃಕ್ಷುಃ ಪರಿಶಂಕಿತಾ ಭವಾನ್
ನಿಷ್ಕ್ರಾಮತೀ ನಿರ್ವಿಶತೀ ದ್ವಿಧಾಽಽಸ ಸಾ ॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಸತೀದೇವಿಗೆ ಇಷ್ಟನ್ನು ಹೇಳಿ ಭಗವಾನ್ ಶಂಕರನು ಸುಮ್ಮನಾದನು. ದಕ್ಷನ ಮನೆಗೆ ಹೋಗಗೊಡುವುದು, ಅಥವಾ ತಡೆಯುವುದು ಎರಡೂ ಅವಸ್ಥೆಗಳಲ್ಲಿ ಸತಿಯ ಪ್ರಾಣತ್ಯಾಗದ ಸಂಭವವಿದೆ ಎಂದು ಅವನು ತಿಳಿದುಕೊಂಡನು. ಇತ್ತಕಡೆ ಸತೀದೇವಿಯೂ ಬಂಧುಗಳನ್ನು ನೋಡೋಣವೆಂದು ಹೊರಗೆ ಹೋಗುವುದು ಮತ್ತು ಸ್ವಾಮಿಯಾದ ಶಂಕರನು ಕ್ರುದ್ಧನಾಗದಿರಲಿ ಎಂದು ಹಿಂದಿರುಗುವುದು ಹೀಗೆ ಯಾವುದನ್ನೂ ನಿಶ್ಚಯಿಸದೆ ಆಕೆಯು ಇಬ್ಬಂದಿಯಲ್ಲಿ ಸಿಲುಕಿ ಚಂಚಲವಾದಳು. ॥ ೧ ॥ ತನ್ನ ಬಂಧು ಗಳನ್ನು ಭೆಟ್ಟಿಯಾಗುವುದರಲ್ಲಿ ಬಾಧೆ ಉಂಟಾದ್ದರಿಂದ ಅವಳಿಗೆ ತುಂಬಾ ಖೇದವಾಯಿತು. ಬಂಧುಪ್ರೇಮದಿಂದ ಆಕೆಯ ಹೃದಯ ತುಂಬಿಬಂದು, ಕಣ್ಣುಗಳಲ್ಲಿ ನೀರನ್ನು ತುಂಬಿಕೊಂಡು ಅತ್ಯಂತ ವ್ಯಾಕುಲಳಾಗಿ ಅಳತೊಡಗಿದಳು. ಅವಳ ಶರೀರವು ಗಡಗಡನೆ ನಡುಗತೊಡಗಿತು. ಆಕೆಯು ಅಪ್ರತಿಮ ನಾದ ಭಗವಾನ್ ಶಂಕರನನ್ನು ಕೋಪದಿಂದ ಸುಟ್ಟುಬಿಡುವಳೋ ಎಂಬಂತೆ ದುರ-ದುರನೇ ನೋಡತೊಡಗಿದಳು. ॥ ೨ ॥ ನಿಟ್ಟುಸಿರು ಬಿಡುತ್ತಾ ಸ್ತ್ರೀಸಹಜವಾದ ಅವಿವೇಕಕ್ಕೆ ಒಳಗಾಗಿ, ಶೋಕದಿಂದಲೂ, ಕೋಪದಿಂದಲೂ ಸಂತಾಪಗೊಂಡ ಮನಸ್ಸಿನಿಂದ ಆಕೆಯು ತನಗೆ ಪರಮಪ್ರೇಮದಿಂದ ಶರೀರದ ಅರ್ಧಭಾಗವನ್ನೇ ಕೊಟ್ಟಿದ್ದ ಸಜ್ಜನಪ್ರಿಯನಾದ ಭಗವಾನ್ ಶಂಕರನನ್ನು ಬಿಟ್ಟು ತೌರುಮನೆಯ ಕಡೆಗೆ ಹೊರಟೇಬಿಟ್ಟಳು. ॥ ೩ ॥

ಸುಹೃದ್ದಿದೃಕ್ಷಾಪ್ರತಿಘಾತದುರ್ಮನಾಃ
ಸ್ನೇಹಾದ್ರುದತ್ಯಶ್ರುಕಲಾತಿವಿಹ್ವಲಾ ।
ಭವಂ ಭವಾನ್ಯಪ್ರತಿಪೂರುಷಂ ರುಷಾ
ಪ್ರಧಕ್ಷ್ಯತೀವೈಕ್ಷತ ಜಾತವೇಪಥುಃ ॥ ೨ ॥

ತತೋ ವಿನಿಃಶ್ವಸ್ಯ ಸತೀ ವಿಹಾಯ ತಂ
ಶೋಕೇನ ರೋಷೇಣ ಚ ದೂಯತಾ ಹೃದಾ ।
ಪಿತ್ರೋರಗಾತ್ಸ್ತ್ರೈಣವಿಮೂಢಧೀರ್ಗೃಹಾನ್
ಪ್ರೇಮ್ಣಾಽಽತ್ಮನೋ ಯೋಽರ್ಧಮದಾತ್ಸತಾಂ ಪ್ರಿಯಃ ॥ ೩ ॥

ತಾಮನ್ವಗಚ್ಛನ್ದ್ರುತವಿಕ್ರಮಾಂ ಸತೀ-
ಮೇಕಾಂ ತ್ರಿನೇತ್ರಾನುಚರಾಃ ಸಹಸ್ರಶಃ ।
ಸ್ವಪಾರ್ಷದಾ ಯೇ ಮಣಿಮನ್ಮದಾದಯಃ
ಪುರೋವೃಷೇಂದ್ರಾಸ್ತರಸಾ ಗತವ್ಯಥಾಃ ॥ ೪ ॥

ತಾಂ ಸಾರಿಕಾಕಂದುಕದರ್ಪಣಾಂಬುಜ-
ಶ್ವೇತಾತಪತ್ರವ್ಯಜನಸ್ರಗಾದಿಭಿಃ ।
ಗೀತಾಯನೈರ್ದುಂದುಭಿಶಂಖವೇಣುಭಿ-
ರ್ವೃಷೇಂದ್ರಮಾರೋಪ್ಯ ವಿಟಂಕಿತಾ ಯಯುಃ ॥ ೫ ॥

ಆಬ್ರಹ್ಮಘೋಷೋರ್ಜಿತಯಜ್ಞವೈಶಸಂ
ವಿಪ್ರರ್ಷಿಜುಷ್ಟಂ ವಿಬುಧೈಶ್ಚ ಸರ್ವಶಃ ।
ಮೃದ್ದಾರ್ವಯಃಕಾಂಚನದರ್ಭಚರ್ಮಭಿ-
ರ್ನಿಸೃಷ್ಟಭಾಂಡಂ ಯಜನಂ ಸಮಾವಿಶತ್ ॥ ೬ ॥

ತಾಮಾಗತಾಂ ತತ್ರ ನ ಕಶ್ಚನಾದ್ರಿಯದ್
ವಿಮಾನಿತಾಂ ಯಜ್ಞಕೃತೋ ಭಯಾಜ್ಜನಃ ।
ಋತೇ ಸ್ವಸೄರ್ವೈ ಜನನೀಂ ಚ ಸಾದರಾಃ
ಪ್ರೇಮಾಶ್ರುಕಂಠ್ಯಃ ಪರಿಷಸ್ವಜುರ್ಮುದಾ ॥ ೭ ॥

ಸೌದರ್ಯಸಂಪ್ರಶ್ನಸಮರ್ಥವಾರ್ತಯಾ
ಮಾತ್ರಾ ಚ ಮಾತೃಷ್ವಸೃಭಿಶ್ಚ ಸಾದರಮ್ ।
ದತ್ತಾಂ ಸಪರ್ಯಾಂ ವರಮಾಸನಂ ಚ ಸಾ
ನಾದತ್ತ ಪಿತ್ರಾಪ್ರತಿನಂದಿತಾ ಸತೀ ॥ ೮ ॥

ಅರುದ್ರಭಾಗಂ ತಮವೇಕ್ಷ್ಯ ಚಾಧ್ವರಂ
ಪಿತ್ರಾ ಚ ದೇವೇ ಕೃತಹೇಲನಂ ವಿಭೌ ।
ಅನಾದೃತಾ ಯಜ್ಞ ಸದಸ್ಯಧೀಶ್ವರೀ
ಚುಕೋಪ ಲೋಕಾನಿವ ಧಕ್ಷ್ಯತೀ ರುಷಾ ॥ ೯ ॥

ಜಗರ್ಹ ಸಾಮರ್ಷವಿಪನ್ನಯಾ ಗಿರಾ
ಶಿವದ್ವಿಷಂ ಧೂಮಪಥಶ್ರಮಸ್ಮಯಮ್ ।
ಸ್ವತೇಜಸಾ ಭೂತಗಣಾನ್ಸಮುತ್ಥಿತಾನ್
ನಿಗೃಹ್ಯ ದೇವೀ ಜಗತೋಽಭಿಶೃಣ್ವತಃ ॥ ೧೦ ॥

ಹೀಗೆ ಒಡತಿಯು ಒಬ್ಬಂಟಿಗಳಾಗಿ ಹೆಚ್ಚಾದ ಸ್ಫೂರ್ತಿಯಿಂದ ಹೋಗುತ್ತಿರುವುದನ್ನು ಕಂಡು ಮಹಾದೇವನ ಪರಿವಾರಕ್ಕೆ ಸೇರಿದ ಮಣಿಮಂತ ಮತ್ತು ಮದ ಮುಂತಾದ ಸಾವಿರಾರು ಸೇವಕರು ಭಗವಂತನ ವಾಹನವಾದ ವೃಷಭವನ್ನು ಮುಂದಿಟ್ಟುಕೊಂಡು, ಇನ್ನೂ ಅನೇಕ ಪಾರ್ಷದರನ್ನೂ, ಯಕ್ಷರನ್ನೂ ಜೊತೆಯಲ್ಲಿ ಕರೆದುಕೊಂಡು ನಿರ್ಭಯರಾಗಿ ಮಹಾವೇಗದಿಂದ ಆಕೆಯನ್ನು ಹಿಂಬಾಲಿಸಿದರು. ॥ ೪ ॥ ಅವರು ಸತೀದೇವಿಯನ್ನು ವೃಷಭದ ಮೇಲೆ ಕುಳ್ಳಿರಿಸಿ, ಆಟದ ಅರಗಿಣಿ, ಚೆಂಡು, ಕನ್ನಡಿ, ಕಲಶ, ಕಮಲ, ಬೆಳ್ಗೊಡೆ, ಚಾಮರ, ಮಾಲೆಗಳೇ ಮುಂತಾದ ರಾಜಚಿಹ್ನೆಗಳನ್ನು ತೆಗೆದುಕೊಂಡು, ಶಂಖ, ಕೊಳಲು, ದುಂದುಭಿಗಳೇ ಮುಂತಾದ ವಾದ್ಯಗಳನ್ನು ಬಾರಿಸುತ್ತಾ ಗೌರವದಿಂದ ಕರೆದುಕೊಂಡು ಹೋದರು. ॥ ೫ ॥ ಹೀಗೆ ಪ್ರಯಾಣಮಾಡಿ ಸತೀದೇವಿಯು ತನ್ನ ಸಮಸ್ತ ಸೇವಕರೊಡನೆ ದಕ್ಷನ ಯಜ್ಞಶಾಲೆಯನ್ನು ಪ್ರವೇಶಿಸಿದಳು. ಅಲ್ಲಿ ಬ್ರಹ್ಮರ್ಷಿಗಳೂ, ದೇವತೆಗಳೂ ಎಲ್ಲೆಡೆಗಳಲ್ಲಿಯೂ ನೆರೆದಿದ್ದರು. ಋತ್ವಿಜರು ಗಂಭೀರವಾದ ವೇದಘೋಷವನ್ನು ಮಾಡುತ್ತಾ ಮಂತ್ರೋಚ್ಚಾರಣೆಯ ವೈಖರಿಯಲ್ಲಿ ಸ್ಪರ್ಧಿಸುತ್ತಿದ್ದರು. ಅಲ್ಲಿ ಮೃತ್ತಿಕೆ, ಮರ, ಕಬ್ಬಿಣ, ಚಿನ್ನ ದರ್ಭೆ ಮತ್ತು ಚರ್ಮ ಇವುಗಳಿಂದ ರಚಿತವಾದ ಯಜ್ಞಪಾತ್ರೆಗಳು ಶಾಸ್ತ್ರವಿಧಿಗೆ ತಕ್ಕಂತೆ ಇರಿಸಲಾಗಿತ್ತು. ॥ ೬ ॥ ಸತೀದೇವಿಯು ಆ ಯಜ್ಞಶಾಲೆಯನ್ನು ಹೊಕ್ಕಾಗ ಯಜ್ಞದ ಯಜಮಾನನಾಗಿದ್ದ ದಕ್ಷನು ಆಕೆಯನ್ನು ತಿರಸ್ಕಾರದಿಂದಲೇ ನೋಡಿದನು. ಅದನ್ನು ಕಂಡು ಅವನಿಗೆ ಹೆದರಿದ ಇತರರೂ ಆಕೆಯನ್ನು ಆದರಿಸಲಿಲ್ಲ, ತಾಯಿ ಮತ್ತು ಸೋದರಿಯರು ಮಾತ್ರ ಆಕೆಯನ್ನು ಕಂಡು ಸಂತೋಷಗೊಂಡು ಪ್ರೀತ್ಯಾದರಗಳಿಂದ ಆಲಿಂಗಿಸಿಕೊಂಡರು. ॥ ೭ ॥ ಆದರೂ ತಂದೆಯು ಅಪಮಾನಮಾಡಿದ್ದರಿಂದ ಖೇದಗೊಂಡ ಆಕೆಯು ಸೋದರಿಯರ ಕುಶಲಪ್ರಶ್ನೆಯ ಸವಿಮಾತುಗಳನ್ನಾಗಲೀ, ತಾಯಿ–ಚಿಕ್ಕಮ್ಮ–ದೊಡ್ಡಮ್ಮಂದಿರು ಗೌರವಪೂರ್ವಕವಾಗಿ ಕೊಟ್ಟ ಬಳುವಳಿಯನ್ನಾಗಲೀ, ಶ್ರೇಷ್ಠವಾದ ಆಸನವನ್ನಾಗಲೀ, ಯಾವುದನ್ನೂ ಸ್ವೀಕರಿಸಲಿಲ್ಲ. ॥ ೮ ॥

ಸರ್ವಲೋಕೇಶ್ವರಿಯಾದ ಸತೀದೇವಿಗೆ ಯಜ್ಞಮಂಟಪದಲ್ಲಿ ತಿರಸ್ಕಾರವಾದದ್ದು ಮಾತ್ರವಲ್ಲದೇ, ಆಕೆಯ ಪತಿಗೂ ಅಪಚಾರವಾಗಿತ್ತು. ಹಾಗೆ ಭಗವಂತನಾದ ತನ್ನ ಪತಿಯಾದ ರುದ್ರನಿಗೆ ಯಜ್ಞದಲ್ಲಿ ಹವಿರ್ಭಾಗವನ್ನೇ ಕೊಡದೆ ದೊಡ್ಡ ದೈವಾಪರಾಧ ನಡೆಸಿದುದನ್ನು ಕಂಡು ಸತೀದೇವಿಯ ಕ್ರೋಧಜ್ವಾಲೆ ಭುಗಿಲೆದ್ದಿತು. ಆಗ ಆಕೆಯು ಇಡೀ ಲೋಕವನ್ನೇ ಕೋಪಾಗ್ನಿಯಿಂದ ಸುಟ್ಟುಬಿಡುವಳೋ ಎಂಬಂತೆ ಕಂಡುಬರುತ್ತಿದ್ದಳು. ॥ ೯ ॥ ದಕ್ಷನು ಕರ್ಮಮಾರ್ಗದ ಅಭ್ಯಾಸದಿಂದ ದುರಹಂಕಾರಿಯಾಗಿದ್ದನು. ಶಿವನನ್ನು ದ್ವೇಷಿಸುವ ಅವನನ್ನು ಕಂಡು ಸತಿಯ ಜೊತೆಗೆ ಬಂದ ಭೂತಗಣಗಳು ಅವನನ್ನು ಸಂಹರಿಸಲು ಸಿದ್ಧರಾದರು. ಆಗ ಸತೀದೇವಿಯು ತನ್ನ ತೇಜಸ್ಸಿನಿಂದ ಅವರನ್ನು ತಡೆಗಟ್ಟಿ ಎಲ್ಲ ಜನರು ಕೇಳುವಂತೆ ಕೋಪಾವೇಶದಿಂದ ತೊದಲುವ ಬಿರುನುಡಿಗಳಿಂದ ತಂದೆಯಾದ ದಕ್ಷನನ್ನು ಸಂಬೋಧಿಸುತ್ತಾ ಇಂತೆಂದಳು. ॥ ೧೦ ॥

ಶ್ರೀದೇವ್ಯುವಾಚ

ನ ಯಸ್ಯ ಲೋಕೇಽಸ್ತ್ಯತಿಶಾಯನಃ ಪ್ರಿಯಃ
ತಥಾಪ್ರಿಯೋ ದೇಹಭೃತಾಂ ಪ್ರಿಯಾತ್ಮನಃ ।
ತಸ್ಮಿನ್ಸಮಸ್ತಾತ್ಮನಿ ಮುಕ್ತವೈರಕೇ
ಋತೇ ಭವಂತಂ ಕತಮಃ ಪ್ರತೀಪಯೇತ್ ॥ ೧೧ ॥

ದೋಷಾನ್ಪರೇಷಾಂ ಹಿ ಗುಣೇಷು ಸಾಧವೋ
ಗೃಹ್ಣಂತಿ ಕೇಚಿನ್ನ ಭವಾದೃಶಾ ದ್ವಿಜ ।
ಗುಣಾಂಶ್ಚ ಫಲ್ಗೂನ್ಬಹುಲೀಕರಿಷ್ಣವೋ
ಮಹತ್ತಮಾಸ್ತೇಷ್ವವಿದದ್ಭವಾನಘಮ್ ॥ ೧೨ ॥

ನಾಶ್ಚರ್ಯಮೇತದ್ಯದಸತ್ಸು ಸರ್ವದಾ
ಮಹದ್ವಿನಿಂದಾ ಕುಣಪಾತ್ಮವಾದಿಷು ।
ಸೇರ್ಷ್ಯಂ ಮಹಾಪೂರುಷಪಾದಪಾಂಸುಭಿ-
ರ್ನಿರಸ್ತತೇಜಸ್ಸು ತದೇವ ಶೋಭನಮ್ ॥ ೧೩ ॥

ಯದ್ದ್ವ್ಯಕ್ಷರಂ ನಾಮ ಗಿರೇರಿತಂ ನೃಣಾಂ
ಸಕೃತ್ಪ್ರಸಂಗಾದಘಮಾಶು ಹಂತಿ ತತ್ ।
ಪವಿತ್ರಕೀರ್ತಿಂ ತಮಲಂಘ್ಯಶಾಸನಂ
ಭವಾನಹೋ ದ್ವೇಷ್ಟಿ ಶಿವಂ ಶಿವೇತರಃ ॥ ೧೪ ॥

ಯತ್ಪಾದಪದ್ಮಂ ಮಹತಾಂ ಮನೋಽಲಿಭಿ-
ರ್ನಿಷೇವಿತಂ ಬ್ರಹ್ಮರಸಾಸವಾರ್ಥಿಭಿಃ ।
ಲೋಕಸ್ಯ ಯದ್ವರ್ಷತಿ ಚಾಶಿಷೋಽರ್ಥಿನ-
ಸ್ತಸ್ಮೈ ಭವಾನ್ದ್ರುಹ್ಯತಿ ವಿಶ್ವಬಂಧವೇ ॥ ೧೫ ॥

ಕಿಂ ವಾ ಶಿವಾಖ್ಯಮಶಿವಂ ನ ವಿದುಸ್ತ್ವದನ್ಯೇ
ಬ್ರಹ್ಮಾದಯಸ್ತಮವಕೀರ್ಯ ಜಟಾಃ ಶ್ಮಶಾನೇ ।
ತನ್ಮಾಲ್ಯಭಸ್ಮನೃಕಪಾಲ್ಯವಸತ್ಪಿಶಾಚೈ-
ರ್ಯೇ ಮೂರ್ಧಭಿರ್ದಧತಿ ತಚ್ಚರಣಾವಸೃಷ್ಟಮ್ ॥ ೧೬ ॥

**ಸತೀದೇವಿಯು ಹೇಳಿದಳು** – ಎಲೈ ತಂದೆಯೇ! ಜಗದೀಶ್ವರನಾದ ಶಂಕರನ ಮಹಿಮೆಯನ್ನು ನೀನೇನು ಬಲ್ಲೆ? ಅವನಿಂದ ಮಿಗಿಲಾದವರು ಲೋಕದಲ್ಲಿ ಯಾರೂ ಇಲ್ಲ. ಎಲ್ಲ ದೇಹಿಗಳಿಗೂ ಪ್ರಿಯವಾಗಿರುವ ಆತ್ಮಸ್ವರೂಪನವನು. ಸಮದರ್ಶನನಾದ ಅವನಿಗೆ ಯಾರೂ ಪ್ರಿಯರೂ ಇಲ್ಲ, ಅಪ್ರಿಯರೂ ಇಲ್ಲ. ಯಾವ ಪ್ರಾಣಿಗಳಲ್ಲೂ ವೈರವಿಲ್ಲದ ಶಾಂತಮೂರ್ತಿಯು ಅವನು. ಅಂತಹ ಮಹಾತ್ಮನನ್ನು ನಿನ್ನೊಬ್ಬನ ಹೊರತಾಗಿ ಬೇರೆ ಯಾರು ತಾನೇ ವಿರೋಧಿಸಿಯಾರು ? ॥ ೧೧ ॥ ಎಲೈ ದ್ವಿಜವರನೇ ! ನಿನ್ನಂತಹವರು ಬೇರೆಯವರ ಗುಣಗಳಲ್ಲಿಯೂ ದೋಷವನ್ನೇ ನೋಡುತ್ತಾರೆ. ಆದರೆ ಯಾರೇ ಸಾಧು-ಸತ್ಪುರುಷರು ಹೀಗೆ ಮಾಡುವುದಿಲ್ಲ. ಬೇರೆಯವರ ದೋಷಗಳನ್ನು ನೋಡುವುದು ದೂರವುಳಿಯಿತು. ಬೇರೆಯವರ ಅಲ್ಪವಾದ ಗುಣವನ್ನೂ ಕೂಡ ದೊಡ್ಡದಾಗಿ ನೋಡುವವರೇ ನಿಜವಾಗಿ ಎಲ್ಲರಿಗಿಂತ ದೊಡ್ಡವರು. ಆದರೆ ನೀನು ಅಂತಹ ಮಹಾಪುರುಷರಲ್ಲಿಯೂ ಅಪರಾಧವನ್ನೆಸಗಿ, ದೋಷಾರೋಪಣೆ ಮಾಡಿರುವಿ. ॥ ೧೨ ॥ ಶವಸಮಾನವಾಗಿರುವ ಈ ಜಡದೇಹವನ್ನೇ ಆತ್ಮವೆಂದು ಸದಾ ಭಾವಿಸುವ ದುಷ್ಟರು ಅಸೂಯೆಯಿಂದ ಮಹಾತ್ಮರನ್ನು ಸದಾ ನಿಂದಿಸುತ್ತಿದ್ದರೂ ಅದರಲ್ಲಿ ಅಚ್ಚರಿಯೇನಿಲ್ಲ. ಆ ಮಹಾತ್ಮರು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ಆದರೆ ಆ ಸಾಧುಶ್ರೇಷ್ಠರ ಪಾದಧೂಳಿಯೇ ದುಷ್ಟರ ತೇಜಸ್ಸನ್ನು ನಾಶಪಡಿಸಿಬಿಡುವುದು. ಆದುದರಿಂದ ಮಹಾಪುರುಷರ ನಿಂದೆಯಂತಹ ನೀಚಕಾರ್ಯವು ಆ ದುಷ್ಟ ಪುರುಷರಿಗೆ ಮಾತ್ರವೇ ಶೋಭಿಸುತ್ತದೆ. ॥ ೧೩॥ 'ಶಿವ' ಎಂಬ ಎರಡು ಅಕ್ಷರಗಳ ನಾಮವು ಪ್ರಾಸಂಗಿಕವಾಗಿ ಒಮ್ಮೆ ಬಾಯಿಂದ ಬಂದರೂ ಮನುಷ್ಯರ ಸಮಸ್ತ ಪಾಪಗಳೂ ಒಡನೆಯೇ ನಾಶವಾಗಿಬಿಡುವುವೋ, ಯಾರ ಆಜ್ಞೆಯನ್ನು ಮತ್ತಾರೂ ಉಲ್ಲಂಘಿಸಲಾರರೋ ಅಂತಹ ಪವಿತ್ರ ಕೀರ್ತಿಯಾದ ಪರಮೇಶ್ವರನನ್ನೇ ನೀನು ದ್ವೇಷಿಸುತ್ತಿರುವೆಯಲ್ಲ, ಅಯ್ಯೋ! ಮಂಗಳಮಯನಾದ ಶಿವನನ್ನು ದ್ವೇಷಿಸುವ ನೀನು ಅಮಂಗಳನೇ ಸರಿ. ॥ ೧೪ ॥ ಅಯ್ಯಾ ! ಮಹಾಪುರುಷರ ಮನಸ್ಸೆಂಬ ಮಧುಕರಗಳು ಬ್ರಹ್ಮಾನಂದಮಯ ರಸವನ್ನು ಪಾನ ಮಾಡುವ ಇಚ್ಛೆಯಿಂದ ಯಾರ ಚರಣಕಮಲಗಳನ್ನು ನಿರಂತರ ಸೇವಿಸುತ್ತಿರುವವೋ, ಯಾರ ಚರಣಾರವಿಂದಗಳು ಸಕಾಮ ಪುರುಷರು ಬಯಸಿದ ಭೋಗಗಳನ್ನೂ ನೀಡುತ್ತವೆಯೋ, ಅಂತಹ ವಿಶ್ವಬಂಧು ಭಗವಾನ್ ಶಿವನಲ್ಲಿ ನೀನು ವೈರವನ್ನು ಸಾಧಿಸುತ್ತಿರುವೆಯಲ್ಲ! ॥ ೧೫ ॥

'ಈತನು ಹೆಸರಿಗೆ ಮಾತ್ರ ಶಿವನು. ಆದರೆ ರೂಪ, ಗುಣ, ವೇಷ ಮುಂತಾದವುಗಳಲ್ಲೆಲ್ಲ ಈತನು ಅಶಿವನೇ (ಅಮಂಗಳನೇ) ಆಗಿದ್ದಾನೆ' ಎಂದು ನೀನು ಶಿವನನ್ನು ನಿಂದಿಸಿದೆಯಲ್ಲ! ನೀನು ಹೇಳಿದ ಈ ತತ್ತ್ವವು ನಿನ್ನಿಂದ ಹೊರತು ಬಹುಶಃ ಬೇರೆ ಯಾವ ದೇವತೆಗಳಿಗೂ ತಿಳಿದಿಲ್ಲವೆಂದು ಕಾಣುತ್ತದೆ. ಅದಕ್ಕಾಗಿಯೇ ಬ್ರಹ್ಮಾದಿ ದೇವತೆಗಳು – ಸ್ಮಶಾನದಲ್ಲಿರುತ್ತಾ, ನರಮುಂಡಗಳ ಮಾಲೆ, ಚಿತಾಭಸ್ಮ ಮತ್ತು ಮೂಳೆಗಳನ್ನು ಧರಿಸಿ, ಜಟೆಗಳನ್ನು ಕೆದರಿಕೊಂಡು, ಭೂತ-ಪಿಶಾಚಿಗಳೊಂದಿಗೆ ವಾಸಮಾಡುವ ಭಗವಾನ್ ಪರಶಿವನ ಪಾದಗಳಿಂದ ಉದುರಿದ ನಿರ್ಮಾಲ್ಯವನ್ನು ತಮ್ಮ ತಲೆಯಲ್ಲಿ ಧರಿಸಿಕೊಳ್ಳುತ್ತಾರೆ. ॥ ೧೬ ॥

ಕರ್ಣೌ ಪಿಧಾಯ ನಿರಯಾದ್ಯದಕಲ್ಪ ಈಶೇ
ಧರ್ಮಾವಿತರ್ಯಸೃಣಿಭಿರ್ನೃಭಿರಸ್ಯಮಾನೇ ।
ಛಿಂದ್ಯಾತ್ಪ್ರಸಹ್ಯ ರುಷತೀಮಸತೀಂ ಪ್ರಭುಶ್ಚೇತ್
ಜಿಹ್ವಾಮಸೂನಪಿ ತತೋ ವಿಸೃಜೇತ್ಸ ಧರ್ಮಃ ॥ ೧೭ ॥

ಸ್ವೇಚ್ಛಾಚಾರಿಗಳಾದ ಜನರು ಧರ್ಮಮರ್ಯಾದೆಯನ್ನು ರಕ್ಷಿಸುವ ಪೂಜ್ಯನಾದ ತನ್ನ ಸ್ವಾಮಿಯನ್ನು ನಿಂದಿಸಿದರೆ, ಅವನನ್ನು ದಂಡಿಸಲು ತನ್ನಲ್ಲಿ ಶಕ್ತಿ ಇಲ್ಲದಿದ್ದರೆ ಕಿವಿಗಳನ್ನು ಮುಚ್ಚಿಕೊಂಡು ಅಲ್ಲಿಂದ ಹೊರಟುಹೋಗಬೇಕು. ದಂಡಿಸಲು ಶಕ್ತಿಯಿದ್ದರೆ ಆ ದುಷ್ಟನನ್ನು ಬಲಾತ್ಕಾರವಾಗಿ ಹಿಡಿದು ಅಮಂಗಳವಾದ ನುಡಿಗಳ ನ್ನಾಡುವ ಅವನ ನಾಲಿಗೆಯನ್ನು ಕತ್ತರಿಸಿಹಾಕಬೇಕು. ಆ ಪಾಪವನ್ನು ತಡೆಗಟ್ಟುವುದಕ್ಕಾಗಿ ತನ್ನ ಪ್ರಾಣಗಳನ್ನೂ ತೊರೆಯಲು ಸಿದ್ಧ ನಾಗಬೇಕು. ಇದೇ ಧರ್ಮವಾಗಿದೆ. ॥ ೧೭ ॥ ಅಪ್ಪಾ! ನೀನು ಭಗವಾನ್ ನೀಲಕಂಠನನ್ನೇ ನಿಂದಿಸುತ್ತಿರುವೆ. ಆದುದರಿಂದ ನಿನ್ನಿಂದ ಹುಟ್ಟಿದ ಈ ಶರೀರವನ್ನು ಇನ್ನು ನಾನು ಇಟ್ಟುಕೊಳ್ಳಲು ಬಯಸು ವುದಿಲ್ಲ. ಯಾವುದಾದರೂ ನಿಂದಿತವಾದ ಪದಾರ್ಥವನ್ನು ತಿಳಿಯದೆ ತಿಂದುಬಿಟ್ಟರೆ, ಅದನ್ನು ವಾಂತಿಮಾಡಿ ಹೊರಕ್ಕೆ ತಳ್ಳಿಬಿಡುವುದೇ ಅವರ ಶುದ್ಧಿಯಾಗುವುದು ಎಂದು ಹೇಳಲಾಗಿದೆ. ॥ ೧೮ ॥

ಅತಸ್ತವೋತ್ಪನ್ನಮಿದಂ ಕಲೇವರಂ
ನ ಧಾರಯಿಷ್ಯೇ ಶಿತಿಕಂಠ ಗರ್ಹಿಣಃ ।
ಜಗ್ಧಸ್ಯ ಮೋಹಾದ್ಧಿ ವಿಶುದ್ಧಿ ಮಂಧಸೋ
ಜುಗುಪ್ಸಿತಸ್ಯೋದ್ಧರಣಂ ಪ್ರಚಕ್ಷತೇ ॥ ೧೮ ॥

ತಮ್ಮ ಆತ್ಮಸ್ವರೂಪದಲ್ಲೇ ಸದಾಕಾಲ ರಮಿಸುತ್ತಿರುವ ಮಹಾಮುನಿಗಳ ಬುದ್ಧಿಯು ವೇದಗಳಲ್ಲಿರುವ ವಿಧಿ-ನಿಷೇಧರೂಪವಾದ ವಾಕ್ಯ ಗಳನ್ನು ಅನುಸರಿಸುವುದಿಲ್ಲ. ದೇವತೆಗಳ ಮತ್ತು ಮನುಷ್ಯರ ಗತಿಗಳಲ್ಲಿ ಭೇದವಿರುವಂತೆ, ಜ್ಞಾನಿ ಮತ್ತು ಅಜ್ಞಾನಿಯ ಸ್ಥಿತಿ-ಗತಿಗಳಲ್ಲಿಯೂ ಭೇದವಿರುತ್ತದೆ. ಆದ್ದರಿಂದ ಮನುಷ್ಯರು ತಮ್ಮದೇ ಆದ ಧರ್ಮಮಾರ್ಗದಲ್ಲಿ ಸ್ಥಿರರಾಗಿದ್ದು ಬೇರೆಯವರ ಮಾರ್ಗವನ್ನು ಎಂದೂ ನಿಂದಿಸಬಾರದು. ॥ ೧೯ ॥

ನ ವೇದವಾದಾನನುವರ್ತತೇ ಮತಿಃ
ಸ್ವ ಏವ ಲೋಕೇ ರಮತೋ ಮಹಾಮುನೇಃ ।
ಯಥಾ ಗತಿರ್ದೇವಮನುಷ್ಯಯೋಃ ಪೃಥಕ್
ಸ್ವ ಏವ ಧರ್ಮೇ ನ ಪರಂ ಕ್ಷಿಪೇತ್ಸ್ಥಿತಃ ॥ ೧೯ ॥

ಪ್ರವೃತ್ತಿ (ಯಜ್ಞ-ಯಾಗಾದಿ) ಮಾರ್ಗ ಮತ್ತು ನಿವೃತ್ತಿ (ಶಮ-ದಮಾದಿ ಅಧ್ಯಾತ್ಮ) ಮಾರ್ಗ – ಇವೆರಡೂ ವಿಧವಾದ ಕರ್ಮಗಳು ಸರಿ ಯಾಗಿವೆ. ವೇದಗಳಲ್ಲಿ ಅವುಗಳಿಗೆ ಬೇರೆ-ಬೇರೆ ಅಧಿಕಾರಿಗಳನ್ನು ಹೇಳಿದೆ. ಇವು ಪರಸ್ಪರ ವಿರುದ್ಧವಾಗಿರುವುದರಿಂದ ಎರಡೂ ಧರ್ಮಗಳನ್ನು ಒಬ್ಬನೇ ಮನುಷ್ಯನಿಂದ ಏಕಕಾಲದಲ್ಲಿ ಆಚರಿಸ ಲಾಗದು. ಭಗವಾನ್ ಶಂಕರನಾದರೋ ಪರಬ್ರಹ್ಮ ಪರಮಾತ್ಮನು. ಅವನಿಗೆ ಇವೆರಡರಲ್ಲಿ ಯಾವ ವಿಧದ ಕರ್ಮವನ್ನು ಮಾಡುವ ಆವಶ್ಯಕತೆ ಇಲ್ಲ. ॥ ೨೦ ॥

ಕರ್ಮ ಪ್ರವೃತ್ತಂ ಚ ನಿವೃತ್ತಮಪ್ಯೃತಂ
ವೇದೇ ವಿವಿಚ್ಯೋಭಯಲಿಂಗಮಾಶ್ರಿತಮ್ ।
ವಿರೋಧಿ ತದ್ಯೌಗಪದ್ಯೈಕಕರ್ತರಿ
ದ್ವಯಂ ತಥಾ ಬ್ರಹ್ಮಣಿ ಕರ್ಮ ನರ್ಚ್ಛತಿ ॥ ೨೦ ॥

ಅಪ್ಪಾ! ನಮ್ಮ ಐಶ್ವರ್ಯ ಅವ್ಯಕ್ತವಾದುದು. ಅವಧೂತರಾದ ಜ್ಞಾನಿಶ್ರೇಷ್ಠರು ಮಾತ್ರ ಅದನ್ನು ಸೇವಿಸಬಲ್ಲರು. ನಿಮಗೆ ಅಂತಹ ಐಶ್ವರ್ಯವು ಎಲ್ಲಿಂದ ಬರಬೇಕು ? ಯಜ್ಞಶಾಲೆಯಲ್ಲಿ ಸಿಕ್ಕುವ ಊಟದಿಂದ ತೃಪ್ತರಾಗಿ ಪ್ರಾಣಪೋಷಣ ಮಾಡುವಂತಹ ಕರ್ಮಠ ರಾದ ಉಂಡಾಡಿಗಳು ನಮ್ಮ ಅಕ್ಷಯವಾದ ಭಾಗ್ಯವನ್ನು ಹೇಗೆ ತಾನೇ ಹೊಗಳಿಯಾರು ? ॥ ೨೧ ॥

ಮಾ ವಃ ಪದವ್ಯಃ ಪಿತರಸ್ಮದಾಸ್ಥಿತಾ
ಯಾ ಯಜ್ಞಶಾಲಾಸು ನ ಧೂಮವರ್ತ್ಮಭಿಃ ।
ತದನ್ನತೃಪ್ತೈರಸುಭೃದ್ಭಿರೀಡಿತಾ
ಅವ್ಯಕ್ತಲಿಂಗಾ ಅವಧೂತಸೇವಿತಾಃ ॥ ೨೧ ॥

ತಂದೆಯೇ! ನೀನು ಭಗವಾನ್ ಶಂಕರನಲ್ಲಿ ಅಪರಾಧವನ್ನು ಮಾಡಿರುವೆ. ಆದ್ದರಿಂದ ನಿನ್ನ ಶರೀರದಿಂದ ಉತ್ಪನ್ನವಾದ ಈ ನಿಂದನೀಯ ದೇಹವನ್ನು ಇರಿಸಿ ಕೊಂಡು ನಾನೇನು ಮಾಡಬೇಕಾಗಿದೆ ? ನಿನ್ನಂತಹ ದುರ್ಜನ ವ್ಯಕ್ತಿಯ ಸಂಬಂಧವನ್ನು ಹೊಂದಿರುವುದಕ್ಕಾಗಿ ನನಗೆ ನಾಚಿಕೆ ಯಾಗುತ್ತಿದೆ. ಮಹಾಪುರುಷರ ಅಪರಾಧ ಮಾಡುವವನಿಂದ ಉಂಟಾದ ಜನ್ಮಕ್ಕೆ ಧಿಕ್ಕಾರವಿರಲಿ. ॥ ೨೨ ॥

ನೈತೇನ ದೇಹೇನ ಹರೇ ಕೃತಾಗಸೋ
ದೇಹೋದ್ಭವೇನಾಲಮಲಂ ಕುಜನ್ಮನಾ ।
ವ್ರೀಡಾ ಮಮಾಭೂತ್ಕುಜನಪ್ರಸಂಗತಃ
ತಜ್ಜನ್ಮ ಧಿಗ್ ಯೋ ಮಹತಾಮವದ್ಯಕೃತ್ ॥ ೨೨ ॥

ಗೋತ್ರಂ ತ್ವದೀಯಂ ಭಗವಾನ್ವೃಷಧ್ವಜೋ
ದಾಕ್ಷಾಯಣೀತ್ಯಾಹ ಯದಾ ಸುದುರ್ಮನಾಃ ।
ವ್ಯಪೇತನರ್ಮಸ್ಮಿತಮಾಶು ತದ್ಧ್ಯಹಂ
ವ್ಯುತ್ಸ್ರಕ್ಷ್ಯ ಏತತ್ಕುಣಪಂ ತ್ವದಂಗಜಮ್ ॥ ೨೩ ॥

ಭಗವಂತನಾದ ಶಿವನು ನಿನ್ನೊಡನೆ ನನಗಿರುವ ಸಂಬಂಧವನ್ನು ನೆನೆಸುತ್ತಾ, ಹಾಸ್ಯಕ್ಕಾಗಿ – 'ದಾಕ್ಷಾಯಿಣಿ' ಎಂದು ನನ್ನನ್ನು ಕರೆದರೆ ಆಗ ಆ ನಗುವನ್ನು ಮರೆತು ನನಗೆ ನಾಚಿಕೆ ಮತ್ತು ದುಃಖವೇ ಆದೀತು. ಅದಕ್ಕಾಗಿ ಅದರ ಮೊದಲೇ ನಿನ್ನ ಅಂಗದಿಂದ ಉತ್ಪನ್ನವಾದ ಕುತ್ಸಿತವಾದ ಈ ದೇಹವನ್ನು ನಾನು ತೊರೆದು ಬಿಡುವೆನು. ॥ ೨೩ ॥

ಮೈತ್ರೇಯ ಉವಾಚ

ಇತ್ಯಧ್ವರೇ ದಕ್ಷಮನೂದ್ಯ ಶತ್ರುಹನ್
ಕ್ಷಿತಾವುದೀಚೀಂ ನಿಷಸಾದ ಶಾಂತವಾಕ್ ।
ಸ್ಪೃಷ್ಟ್ವಾ ಜಲಂ ಪೀತದುಕೂಲಸಂವೃತಾ
ನಿಮೀಲ್ಯ ದೃಗ್ಯೋಗಪಥಂ ಸಮಾವಿಶತ್ ॥ ೨೪ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಕಾಮಾದಿ ಶತ್ರುಗಳನ್ನು ಗೆದ್ದಿರುವ ವಿದುರನೇ! ಸತೀದೇವಿಯು ಯಜ್ಞಮಂಟಪದಲ್ಲಿ ದಕ್ಷನಿಗೆ ಹೀಗೆ ಹೇಳಿ ಮೌನವಾಗಿ ಉತ್ತರದಿಕ್ಕಿಗೆ ತಿರುಗಿಕೊಂಡು ನೆಲದಮೇಲೆ ಕುಳಿತುಬಿಟ್ಟಳು. ಶುದ್ಧಾಚಮನವನ್ನು ಮಾಡಿ ಹಳದಿ ಬಟ್ಟೆಯನ್ನು ಹೊದ್ದುಕೊಂಡು, ಕಣ್ಣುಗಳನ್ನು ಮುಚ್ಚಿಕೊಂಡು ದೇಹತ್ಯಾಗಮಾಡುವ ಸಂಕಲ್ಪದಿಂದ ಯೋಗಮಾರ್ಗದಲ್ಲಿ ಸ್ಥಿತಳಾದಳು. ॥ ೨೪ ॥ ಆಕೆಯು ಆಸನವನ್ನು ಸ್ಥಿರಗೊಳಿಸಿಕೊಂಡು ಪ್ರಾಣಾಯಾಮದ ಮೂಲಕ ಪ್ರಾಣ ಮತ್ತು ಅಪಾನವಾಯುಗಳನ್ನು ಸಮಗೊಳಿಸಿ ನಾಭಿಚಕ್ರದಲ್ಲಿ ನೆಲೆಗೊಳಿಸಿದಳು. ಉದಾನವಾಯುವನ್ನು ನಾಭಿಯಿಂದ ಮೇಲಕ್ಕೆ ಎಬ್ಬಿಸಿ ನಿಧಾನವಾಗಿ ಬುದ್ಧಿಯೊಡನೆ ಹೃದಯದಲ್ಲಿ ಸ್ಥಾಪಿಸಿದಳು. ಅನಂತರ ಆ ಮಹಾಯೋಗಿನಿಯು ಹೃದಯಸ್ಥಿತ ವಾಯುವನ್ನು ಕಂಠಮಾರ್ಗದಿಂದ ಭ್ರುಕುಟಿಯ ನಡುವಿಗೆ ಒಯ್ದಳು. ॥ ೨೫ ॥ ಈ ರೀತಿಯಲ್ಲಿ ದಕ್ಷನಲ್ಲಿ ಕುಪಿತಳಾದ ಆ ಸಾಧ್ವಿಮಣಿಯು – ಮಹಾಪುರುಷರ ಪೂಜನೀಯನಾದ ಮಹಾದೇವನು ಹಲವುಬಾರಿ ಅತ್ಯಂತ ಆದರದಿಂದ ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡಿದ್ದ ಪವಿತ್ರವಾದ ದೇಹವನ್ನು ತೊರೆಯಬೇಕೆಂದು ದೃಢವಾಗಿ ನಿಶ್ಚಯಿಸಿ, ತನ್ನ ಎಲ್ಲ ಅಂಗಗಳಲ್ಲಿ ವಾಯು ಮತ್ತು ಅಗ್ನಿಗಳನ್ನು ಧಾರಣೆ ಮಾಡಿದಳು. ॥ ೨೬ ॥ ಬಳಿಕ ಪಾಪರಹಿತೆಯಾದ ಆ ದೇವಿಯು ತನ್ನ ಪತಿದೇವನಾದ ಜಗದ್ಗುರು ಪರಶಿವನ ದಿವ್ಯ ಚರಣಕಮಲಗಳ ಮಕರಂದವನ್ನು ಧ್ಯಾನಿಸುತ್ತಾ ಬೇರೆಲ್ಲವನ್ನು ಮರೆತುಬಿಟ್ಟಳು. ಒಡನೆಯೇ ಆಕೆಯ ಪರಿಶುದ್ಧವಾದ ದೇಹವು ಯೋಗಾಗ್ನಿಯಲ್ಲಿ ಸುಟ್ಟುಹೋಯಿತು. ॥ ೨೭ ॥ ಆ ಅದ್ಭುತವನ್ನು ಕಂಡ ದೇವತೆಗಳೂ, ಮಹರ್ಷಿಗಳೂ – ಅಯ್ಯೋ! ಎಂತಹ ಅನ್ಯಾಯವಾಯಿತು! ಎಂದು ಹಾಹಾಕಾರ ಮಾಡಿದರು. ಅವರ ಆ ಕೋಲಾಹಲವು ಆಕಾಶದಲ್ಲೂ, ಭುವಿಯಲ್ಲೂ ಎಲ್ಲೆಡೆ ಹರಡಿತು. ಎಲ್ಲ ಕಡೆಗಳಿಂದಲೂ 'ಅಕಟಾ! ಎಂತಹ ಅನಾಹುತವಾಯಿತು! ದಕ್ಷನ ದುಷ್ಟವಾದ ಆಚರಣೆಯಿಂದ ಕ್ರುದ್ಧಳಾಗಿ ದೇವಾಧಿದೇವನಾದ ಮಹಾದೇವನ ಪತ್ನಿಯು ದೇಹವನ್ನೇ ತ್ಯಾಗಮಾಡಿಬಿಟ್ಟಳಲ್ಲ! ॥ ೨೮ ॥ ಆ ದಕ್ಷನಾದರೋ ಪ್ರಜಾಪತಿಯು. ಚರಾಚರವಾದ ಜೀವಗಳೆಲ್ಲವೂ ಈತನ ಸಂತಾನಗಳೇ ಆಗಿವೆ. ಅದರಲ್ಲಿಯೂ ಶುದ್ಧಹೃದಯಳಾದ ಈ ಸತೀದೇವಿಯು ಈತನ ಸಾಕ್ಷಾತ್ ಪುತ್ರಿಯು. ಸದಾ ಸತ್ಕಾರಕ್ಕೆ ಯೋಗ್ಯಳಾದವಳು. ಆದರೂ ಈಕೆಯ ವಿಷಯದಲ್ಲಿ ಈ ದುಷ್ಟನು ಎಂತಹ ಅನಾದರವನ್ನು ತೋರಿದನು. ಅದರ ಫಲವಾಗಿ ಈಕೆಯು ಪ್ರಾಣವನ್ನೇ ತೊರೆದುಬಿಟ್ಟಳು ॥ ೨೯ ॥

ಕೃತ್ವಾ ಸಮಾನಾವನಿಲೌ ಜಿತಾಸನಾ
ಸೋದಾನಮುತ್ಥಾಪ್ಯ ಚ ನಾಭಿಚಕ್ರತಃ ।
ಶನೈರ್ಹೃದಿ ಸ್ಥಾಪ್ಯ ಧಿಯೋರಸಿ ಸ್ಥಿತಂ
ಕಂಠಾದ್ಭ್ರುವೋರ್ಮಧ್ಯಮನಿಂದಿತಾನಯತ್ ॥ ೨೫ ॥

ಏವಂ ಸ್ವದೇಹಂ ಮಹತಾಂ ಮಹೀಯಸಾ
ಮುಹುಃ ಸಮಾರೋಪಿತಮಂಕಮಾದರಾತ್ ।
ಜಿಹಾಸತೀ ದಕ್ಷರುಷಾ ಮನಸ್ವಿನೀ
ದಧಾರ ಗಾತ್ರೇಷ್ವನಿಲಾಗ್ನಿಧಾರಣಾಮ್ ॥ ೨೬ ॥

ತತಃ ಸ್ವಭರ್ತುಶ್ಚರಣಾಂಬುಜಾಸವಂ
ಜಗದ್ಗುರೋಶ್ಚಿಂತಯತೀ ನ ಚಾಪರಮ್ ।
ದದರ್ಶ ದೇಹೋ ಹತಕಲ್ಮಷಃ ಸತೀ
ಸದ್ಯಃ ಪ್ರಜಜ್ವಾಲ ಸಮಾಧಿಜಾಗ್ನಿನಾ ॥ ೨೭ ॥

ತತ್ಪಶ್ಯತಾಂ ಖೇ ಭುವಿ ಚಾದ್ಭುತಂ ಮಹದ್
ಹಾಹೇತಿ ವಾದಃ ಸುಮಹಾನಜಾಯತ ।
ಹಂತ ಪ್ರಿಯಾ ದೈವತಮಸ್ಯ ದೇವೀ
ಜಹಾವಸೂನ್ ಕೇನ ಸತೀ ಪ್ರಕೋಪಿತಾ ॥ ೨೮ ॥

ಅಹೋ ಅನಾತ್ಮ್ಯಂ ಮಹದಸ್ಯ ಪಶ್ಯತ
ಪ್ರಜಾಪತೇರ್ಯಸ್ಯ ಚರಾಚರಂ ಪ್ರಜಾಃ ।
ಜಹಾವಸೂನ್ಯದ್ವಿಮತಾಽಽತ್ಮಜಾ ಸತೀ
ಮನಸ್ವಿನೀ ಮಾನಮಭೀಕ್ಷ್ಣಮರ್ಹತಿ ॥ ೨೯ ॥

ಸೋಽಯಂ ದುರ್ಮರ್ಷಹೃದಯೋ ಬ್ರಹ್ಮಧ್ರುಕ್ಚ
ಲೋಕೇಽಪಕೀರ್ತಿಂ ಮಹತೀಮವಾಪ್ಸ್ಯತಿ ।
ಯದಂಗಜಾಂ ಸ್ವಾಂ ಪುರುಷದ್ವಿಡುದ್ಯತಾಂ
ನ ಪ್ರತ್ಯಷೇಧನ್ಮೃತಯೇಽಪರಾಧತಃ ॥ ೩೦ ॥

ವಾಸ್ತವವಾಗಿ ಈ ದಕ್ಷನು ದೊಡ್ಡ ಅಸಹಿಷ್ಣುವೂ, ಬ್ರಾಹ್ಮಣ ದ್ರೋಹಿಯೂ ಆಗಿರುವನು. ಈಗ ಇವನಿಗೆ ಜಗತ್ತಿನಲ್ಲಿ ಭಾರೀ ಅಪಕೀರ್ತಿಯು ಬಂದೀತು. ಇವನ ಪುತ್ರಿಯಾದ ಸತೀದೇವಿಯು ಇವನ ಅಪರಾಧದಿಂದ ದೇಹತ್ಯಾಗಮಾಡಲು ಸಿದ್ಧಳಾದಾಗ ಆಗಲೂ ಈ ಶಿವದ್ರೋಹಿಯು ಆಕೆಯನ್ನು ತಡೆಯಲಿಲ್ಲವಲ್ಲ!' ಎಂಬ ಆಕ್ರೋಶದ ಧ್ವನಿಗಳು ಕೇಳಿಬರತೊಡಗಿತು. ॥ ೩೦ ॥

ವದತ್ಯೇವಂ ಜನೇ ಸತ್ಯಾ ದೃಷ್ಟ್ವಾಸುತ್ಯಾಗಮದ್ಭುತಮ್ ।
ದಕ್ಷಂ ತತ್ಪಾರ್ಷದಾ ಹಂತುಮುದತಿಷ್ಠನ್ನುದಾಯುಧಾಃ ॥ ೩೧ ॥

ಜನರೆಲ್ಲರೂ ಹೀಗೆ ಹೇಳುತ್ತಿರುವಾಗಲೇ ಶಿವನ ಪಾರ್ಷದರು ಸತಿಯ ಈ ಅತ್ಯದ್ಭುತವಾದ ಪ್ರಾಣತ್ಯಾಗವನ್ನು ನೋಡಿ, ಅಸ್ತ್ರ-ಶಸ್ತ್ರಗಳನ್ನು ಧರಿಸಿಕೊಂಡು ದಕ್ಷನನ್ನು ಕೊಲ್ಲಲು ಎದ್ದುನಿಂತರು. ॥ ೩೧ ॥

ತೇಷಾಮಾಪತತಾಂ ವೇಗಂ ನಿಶಾಮ್ಯ ಭಗವಾನ್ಭೃಗುಃ ।
ಯಜ್ಞಘ್ನಘ್ನೇನ ಯಜುಷಾ ದಕ್ಷಿಣಾಗ್ನೌ ಜುಹಾವ ಹ ॥ ೩೨ ॥

ಅವರ ಆಕ್ರಮಣವನ್ನು ಭಗವಾನ್ ಭೃಗುಮುನಿಯು ಕಂಡು ಯಜ್ಞದಲ್ಲಿ ವಿಘ್ನವನ್ನೊಡ್ಡುವವರನ್ನು ನಾಶಮಾಡುವುದಕ್ಕಾಗಿ '**ಅಪಹತಂ ರಕ್ಷ......**' ಮುಂತಾದ ಮಂತ್ರಗಳನ್ನು ಉಚ್ಚರಿಸುತ್ತಾ ದಕ್ಷಿಣಾಗ್ನಿಯಲ್ಲಿ ಹೋಮ ಮಾಡಿದರು. ॥ ೩೨ ॥

ಅಧ್ವರ್ಯುಣಾ ಹೂಯಮಾನೇ ದೇವಾ ಉತ್ಪೇತುರೋಜಸಾ ।
ಋಭವೋ ನಾಮ ತಪಸಾ ಸೋಮಂ ಪ್ರಾಪ್ತಾಃ ಸಹಸ್ರಶಃ ॥ ೩೩ ॥

ಅಧ್ವರ್ಯುಗಳಾದ ಭೃಗುಮುನಿಯು ಆಹುತಿಯನ್ನು ಕೊಡುತ್ತಲೇ ಯಜ್ಞಕುಂಡದಿಂದ 'ಋಭು' ಎಂಬ ಸಾವಿರಾರು ತೇಜಸ್ವೀ ದೇವತೆಗಳು ಪ್ರಕಟರಾದರು. ಇವರು ತಮ್ಮ ತಪಃಪ್ರಭಾವದಿಂದ ಚಂದ್ರಲೋಕವನ್ನು ಪಡೆದಿದ್ದರು. ॥ ೩೩ ॥

ತೈರಲಾತಾಯುಧೈಃ ಸರ್ವೇ ಪ್ರಮಥಾಃ ಸಹಗುಹ್ಯಕಾಃ ।
ಹನ್ಯಮಾನಾ ದಿಶೋ ಭೇಜುರುಶದ್ಭಿರ್ಬ್ರಹ್ಮತೇಜಸಾ ॥ ೩೪ ॥

ಆ ಬ್ರಹ್ಮತೇಜ ಸಂಪನ್ನರಾದ ದೇವತೆಗಳು ಉರಿಯುವ ಕೊಳ್ಳಿಗಳೆಂಬ ಆಯುಧದಿಂದ ಆಕ್ರಮಿಸಿದಾಗ ಸಮಸ್ತ ಶಿವನ ಪ್ರಮಥಗಣಗಳೂ, ಗುಹ್ಯಕರೂ ದಿಕ್ಕೆಟ್ಟು ಓಡಿಹೋದರು. ॥ ೩೪ ॥

***ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಸತೀದೇಹೋತ್ಸರ್ಗೋ ನಾಮ ಚತುರ್ಥೋಽಧ್ಯಾಯಃ ॥ ೪ ॥**

# ಐದನೆಯ ಅಧ್ಯಾಯ

## ವೀರಭದ್ರನಿಂದ ದಕ್ಷಯಜ್ಞ ವಿಧ್ವಂಸ – ದಕ್ಷನ ವಧೆ

*ಮೈತ್ರೇಯ ಉವಾಚ*

ಭವೋ ಭವಾನ್ಯಾ ನಿಧನಂ ಪ್ರಜಾಪತೇ-
ರಸತ್ಕೃತಾಯಾ ಅವಗಮ್ಯ ನಾರದಾತ್ ।
ಸ್ವಪಾರ್ಷದಸೈನ್ಯಂ ಚ ತದಧ್ವರರ್ಭುಭಿ-
ರ್ವಿದ್ರಾವಿತಂ ಕ್ರೋಧಮಪಾರಮಾದಧೇ ॥ ೧ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ತನ್ನ ತಂದೆಯಾದ ದಕ್ಷನಿಂದ ಅಪಮಾನಿತಳಾದ್ದರಿಂದ ಸತೀದೇವಿಯು ಪ್ರಾಣತ್ಯಾಗಮಾಡಿದಳು. ಯಜ್ಞವೇದಿಕೆಯಿಂದ ಪ್ರಕಟಗೊಂಡ ಋಭುಗಳೆಂಬ ದೇವತೆಗಳು ತನ್ನ ಪಾರ್ಷದರನ್ನು ಹೊಡೆದೋಡಿಸಿದರು. ಈ ವಾರ್ತೆಯನ್ನು ನಾರದರಿಂದ ಕೇಳಿದ ಮಹಾದೇವನಿಗೆ ಮಿತಿಮೀರಿದ ಕ್ರೋಧವುಂಟಾಯಿತು. ॥ ೧ ॥

ಕ್ರುದ್ಧಃ ಸುದಷ್ಟೋಷ್ಠಪುಟಃ ಸ ಧೂರ್ಜಟಿ-
ರ್ಜಟಾಂ ತಡಿದ್ವಹ್ನಿಸಟೋಗ್ರರೋಚಿಷಮ್ ।
ಉತ್ಕೃತ್ಯ ರುದ್ರಃ ಸಹಸೋತ್ಥಿತೋ ಹಸನ್
ಗಂಭೀರನಾದೋ ವಿಸಸರ್ಜ ತಾಂ ಭುವಿ ॥ ೨ ॥

ರುದ್ರದೇವನು ಎದ್ದು ನಿಂತು ಉಗ್ರರೂಪವನ್ನು ಧರಿಸಿ, ಕ್ರೋಧದಿಂದ ತುಟಿಗಳನ್ನು ಕಚ್ಚುತ್ತಾ ಮಿಂಚಿನಂತೆಯೂ, ಬೆಂಕಿಯಂತೆಯೂ, ಭಯಂಕರವಾಗಿ ಹೊಳೆಯುತ್ತಿದ್ದ ತನ್ನ ಒಂದು ಜಟೆಯನ್ನು ಕಿತ್ತು ಗಂಭೀರ ನಾದದಿಂದ ಅಟ್ಟಹಾಸ ಮಾಡುತ್ತಾ ಅದನ್ನು ನೆಲಕ್ಕೆ ಅಪ್ಪಳಿಸಿದನು. ॥ ೨ ॥ ತತ್‌ಕ್ಷಣದಲ್ಲೇ ಅದರಿಂದ ಸ್ವರ್ಗವನ್ನು ಮುಟ್ಟುತ್ತಿದ್ದ ವಿಶಾಲಕಾಯನಾಗಿದ್ದ ಒಬ್ಬ ಪುರುಷನು ಉತ್ಪನ್ನನಾದನು. ಆತನಿಗೆ ಸಾವಿರ ತೋಳುಗಳೂ, ನೀಲಮೇಘದಂತೆ ಶ್ಯಾಮವರ್ಣದ

ತತೋಽತಿಕಾಯಸ್ತನುವಾ ಸ್ಪೃಶನ್‌ದಿವಂ
ಸಹಸ್ರಬಾಹುರ್ಘನರುಕ್ ತ್ರಿಸೂರ್ಯದೃಕ್ ।
ಕರಾಲದಂಷ್ಟ್ರೋ ಜ್ವಲದಗ್ನಿಮೂರ್ಧಜಃ
ಕಪಾಲಮಾಲೀ ವಿವಿಧೋದ್ಯತಾಯುಧಃ ॥ ೩ ॥

ತಂ ಕಿಂ ಕರೋಮೀತಿ ಗೃಣಂತಮಾಹ
ಬದ್ಧಾಂಜಲಿಂ ಭಗವಾನ್ಭೂತನಾಥಃ ।
ದಕ್ಷಂ ಸಯಜ್ಞಂ ಜಹಿ ಮದ್ಭಟಾನಾಂ
ತ್ವಮಗ್ರಣೀ ರುದ್ರ ಭಟಾಂಶಕೋ ಮೇ ॥ ೪ ॥

ಆಜ್ಞಪ್ತ ಏವಂ ಕುಪಿತೇನ ಮನ್ಯುನಾ
ಸ ದೇವದೇವಂ ಪರಿಚಕ್ರಮೇ ವಿಭುಮ್ ।
ಮೇನೇ ತದಾಽಽತ್ಮಾನಮಸಂಗ ರಂಹಸಾ
ಮಹೀಯಸಾಂ ತಾತ ಸಹಃ ಸಹಿಷ್ಣುಮ್ ॥ ೫ ॥

ಅನ್ವೀಯಮಾನಃ ಸ ತು ರುದ್ರಪಾರ್ಷದೈ-
ರ್ಭೃಶಂ ನದದ್ಭಿರ್ವ್ಯನದತ್ಸುಭೈರವಮ್ ।
ಉದ್ಯಮ್ಯ ಶೂಲಂ ಜಗದಂತಕಾಂತಕಂ
ಸ ಪ್ರಾದ್ರವದ್‌ಘೋಷಣಭೂಷಣಾಂಘ್ರಿಃ ॥ ೬ ॥

ಅಥರ್ತ್ವಿಜೋ ಯಜಮಾನಃ ಸದಸ್ಯಾಃ
ಕಕುಭ್ಯುದೀಚ್ಯಾಂ ಪ್ರಸಮೀಕ್ಷ್ಯ ರೇಣುಮ್ ।
ತಮಃ ಕಿಮೇತತ್ಕುತ ಏತದ್ರಜೋಽಭೂ-
ದಿತಿ ದ್ವಿಜಾ ದ್ವಿಜಪತ್ನ್ಯಶ್ಚ ದಧ್ಯುಃ ॥ ೭ ॥

ವಾತಾ ನ ವಾಂತಿ ನ ಹಿ ಸಂತಿ ದಸ್ಯವಃ
ಪ್ರಾಚೀನಬರ್ಹಿರ್ಜೀವತಿ ಹೋಗ್ರದಂಡಃ ।
ಗಾವೋ ನ ಕಾಲ್ಯಂತ ಇದಂ ಕುತೋ ರಜೋ
ಲೋಕೋಽಧುನಾ ಕಿಂ ಪ್ರಲಯಾಯ ಕಲ್ಪತೇ ॥ ೮ ॥

ಪ್ರಸೂತಿಮಿಶ್ರಾಃ ಸ್ತ್ರಿಯ ಉದ್ವಿಗ್ನಚಿತ್ತಾ
ಊಚುರ್ವಿಪಾಕೋ ವೃಜಿನಸ್ಯೈಷ ತಸ್ಯ ।
ಯತ್ಪಶ್ಯಂತೀನಾಂ ದುಹಿತೄಣಾಂ ಪ್ರಜೇಶಃ
ಸುತಾಂ ಸತೀಮವದಧ್ಯಾವನಾಗಾಮ್ ॥ ೯ ॥

ಅಂಗಕಾಂತಿಯೂ, ಸೂರ್ಯನಂತೆ ಬೆಳಗುತ್ತಿರುವ ಮೂರು ಕಣ್ಣುಗಳು, ಕರಾಳವಾದ ಕೋರೆದಾಡೆಗಳೂ, ಉರಿಯುತ್ತಿರುವ ಬೆಂಕಿಯಂತೆ ಕೆಂಪಾದ ಕೇಶರಾಶಿಗಳೂ, ಕುತ್ತಿಗೆಯಲ್ಲಿ ನರಮುಂಡ ಮಾಲೆಯೂ, ಕೈಗಳಲ್ಲಿ ಬಗೆ-ಬಗೆಯ ಅಸ್ತ್ರ-ಶಸ್ತ್ರಗಳಿದ್ದವು. ॥ ೩ ॥ ಅವನು ಕೈಜೋಡಿಸಿಕೊಂಡು – ಜೀಯಾ ! ನಾನೇನು ಮಾಡಲಿ ? ಎಂದು ಪ್ರಾರ್ಥನೆಮಾಡಲು ಭಗವಾನ್ ಭೂತನಾಥನು – 'ವತ್ಸ! ವೀರಭದ್ರ ! ನೀನು ನನ್ನ ಅಂಶಸಂಭೂತನು. ನನ್ನ ಭಟರಿಗೆ ಅಧಿನಾಯಕನಾಗಿ ಬೇಗನೇ ಇಲ್ಲಿಂದ ಹೋಗಿ ಆ ದಕ್ಷನನ್ನೂ, ಆತನ ಯಜ್ಞವನ್ನೂ ಧ್ವಂಸಮಾಡಿ ಬಾ ಎಂದು ಆತನಿಗೆ ಅಪ್ಪಣೆ ಕೊಟ್ಟನು. ॥ ೪ ॥

ಪ್ರಿಯ ವಿದುರನೇ ! ದೇವಾಧಿದೇವನಾದ ಭಗವಾನ್ ಶಂಕರನು ಕ್ರೋಧಗೊಂಡು ಹೀಗೆ ಅಪ್ಪಣೆಮಾಡಲು, ಆ ವೀರಭದ್ರನು ಆತನಿಗೆ ಪ್ರದಕ್ಷಿಣೆಮಾಡಿ ಅಲ್ಲಿಂದ ಹೊರಡಲು ಸಿದ್ಧನಾದನು. 'ನನ್ನನ್ನು ಪ್ರತಿಭಟಿಸುವವನು ಈ ಲೋಕದಲ್ಲಿ ಯಾರೂ ಇಲ್ಲ. ಇಲ್ಲಿ ನಾನು ಎಂತಹ ಪರಾಕ್ರಮಿಗಳ ವೇಗವನ್ನೂ, ಬಲವನ್ನೂ ಸಹಿಸಬಲ್ಲೆನು' – ಎಂಬ ವಿಶ್ವಾಸವು ಆತನ ಹೃದಯದಲ್ಲಿ ತುಂಬಿತ್ತು. ॥ ೫ ॥ ಅವನು ಭಯಂಕರವಾದ ಸಿಂಹನಾದವನ್ನು ಮಾಡುತ್ತಾ, ಕರಾಳವಾದ ಒಂದು ತ್ರಿಶೂಲವನ್ನು ಕೈಗೆತ್ತಿಕೊಂಡು, ಕಾಲ್ಗಡಗಗಳು ಝಣ-ಝಣಿಸುವಂತೆ ಹೆಜ್ಜೆಹಾಕುತ್ತಾ ದಕ್ಷನ ಯಜ್ಞಮಂಟಪದತ್ತ ದಡದಡನೆ ಓಡಿದನು. ಅವನ ತ್ರಿಶೂಲಕ್ಕೆ ಸಂಹಾರಕಾರಕನಾದ ಮೃತ್ಯುವನ್ನು ಸಂಹರಿಸುವ ಶಕ್ತಿಯಿತ್ತು. ಭಗವಾನ್ ರುದ್ರನ ಇತರ ಪ್ರಮಥಗಣಗಳು ಆರ್ಭಟಿಸುತ್ತಾ ಆತನನ್ನು ಹಿಂಬಾಲಿಸಿದವು. ॥ ೬ ॥

ಇತ್ತ ಯಜ್ಞಶಾಲೆಯಲ್ಲಿ ಕುಳಿತಿದ್ದ ಋತ್ವಿಜರೂ, ಯಜಮಾನನೂ, ಸದಸ್ಯರೂ, ಇತರ ಬ್ರಾಹ್ಮಣರೂ, ಬ್ರಾಹ್ಮಣ ಪತ್ನಿಯರೂ, ಉತ್ತರ ದಿಕ್ಕಿನ ಕಡೆ ಭಯಂಕರವಾಗಿ ಎದ್ದಿರುವ ಧೂಳನ್ನು ಕಂಡು ಅಯ್ಯೋ ! ಈ ಕತ್ತಲೆ ಏಕೆ ಕವಿಯುತ್ತಿದೆ ? ಧೂಳೀಪಟಲ ಎಲ್ಲಿಂದ, ಹೇಗೆ ಏಳುತ್ತಿದೆ ? ಎಂದು ಯೋಚಿಸ ತೊಡಗಿದರು. ॥ ೭ ॥ ಇದೇನೋ ಬಿರುಗಾಳಿಯ ಸಮಯವಲ್ಲ, ಕಳ್ಳ-ಕಾಕರ ಹಾವಳಿಯೂ ಇಲ್ಲ. ಏಕೆಂದರೆ, ದುಷ್ಟರಿಗೆ ಉಗ್ರವಾದ ದಂಡನೆಯನ್ನು ಕೊಡುವ ಪ್ರಾಚೀನ ಬರ್ಹಿ ಮಹಾರಾಜನು ದೇಶವನ್ನು ಆಳುತ್ತಿದ್ದಾನೆ. ಹಸುಗಳು ಮನೆಗೆ ಬರುವ ಸಮಯವಾಗಿಲ್ಲ. ಹಾಗಿದ್ದರೂ ಧೂಳು ಏಕೆ ಏಳುತ್ತಿದೆ ? ಜಗತ್ತಿನ ಪ್ರಳಯ ಕಾಲವೇ ಬಂದು ಬಿಟ್ಟಿದೆಯೋ ಏನೋ ! ಎಂದು ಗಾಬರಿಗೊಂಡು ಚಿಂತಿಸತೊಡಗಿದರು. ॥ ೮ ॥ ಆಗ ದಕ್ಷನ ಪತ್ನಿಯಾದ ಪ್ರಸೂತಿಯೇ ಮುಂತಾದ ಸ್ತ್ರೀಯರು ಚಿಂತೆಗೀಡಾಗಿ – 'ಈ ದಕ್ಷಪ್ರಜಾಪತಿಯು ತನ್ನ ಎಲ್ಲ ಕನ್ಯೆಯ ಎದುರಿಗೇ ನಿರಪರಾಧಿಯಾಗಿದ್ದ ಸತೀದೇವಿಯನ್ನು ಅವಮಾನ ಪಡಿಸಿದ್ದನು. ಈ ಪಾಪದ ಫಲವೇ ಇದು ಎಂದು ಕಾಣುತ್ತದೆ. ॥ ೯ ॥ (ಅಥವಾ ಸಂಹಾರಮೂರ್ತಿ ಭಗವಾನ್ ಶ್ರೀರುದ್ರನ ಅನಾದರದ ಪರಿಣಾಮವು ಇದ್ದರೂ ಇರಬಹುದು.) ಪ್ರಳಯಕಾಲವು ಬಂದೊದಗಿದಾಗ ರುದ್ರನು ತನ್ನ ಜಟಾಜೂಟವನ್ನು ಕೆದರಿಕೊಂಡು, ಶಸ್ತ್ರಾಸ್ತ್ರಗಳಿಂದ ಸಜ್ಜಿತವಾದ ಭುಜಗಳನ್ನು ಧ್ವಜದಂತೆ ಬೀಸುತ್ತಾ,

ಯಸ್ತ್ವಂತಕಾಲೇ ವ್ಯುಪ್ತಜಟಾಕಲಾಪಃ
ಸ್ವಶೂಲಸೂಚ್ಯರ್ಪಿತದಿಗ್ಗಜೇಂದ್ರಃ ।
ವಿತತ್ಯ ನೃತ್ಯತ್ಯುದಿತಾಸ್ತ್ರದೋರ್ಧ್ವಜಾ-
ನುಚ್ಚಾಟ್ಟಹಾಸಸ್ತನಯಿತ್ನುಭಿನ್ನದಿಕ್ ॥ ೧೦ ॥

ಅಮರ್ಷಯಿತ್ವಾ ತಮಸಹ್ಯತೇಜಸಂ
ಮನ್ಯುಪ್ಲುತಂ ದುರ್ನಿರೀಕ್ಷ್ಯಂ ಭ್ರುಕುಟ್ಯಾ ।
ಕರಾಲದಂಷ್ಟ್ರಾಭಿರುದಸ್ತಭಾಗಣಂ
ಸ್ಯಾತ್ಸ್ವಸ್ತಿ ಕಿಂ ಕೋಪಯತೋ ವಿಧಾತುಃ ॥ ೧೧ ॥

ಬಹ್ವೇವಮುದ್ವಿಗ್ನದೃಶೋಚ್ಯಮಾನೇ
ಜನೇನ ದಕ್ಷಸ್ಯ ಮುಹುರ್ಮಹಾತ್ಮನಃ ।
ಉತ್ಪೇತುರುತ್ಪಾತತಮಾಃ ಸಹಸ್ರಶೋ
ಭಯಾವಹಾ ದಿವಿ ಭೂಮೌ ಚ ಪರ್ಯಕ್ ॥ ೧೨ ॥

ತಾವತ್ಸ ರುದ್ರಾನುಚರೈರ್ಮಖೋ ಮಹಾ-
ನ್ನಾನಾಯುಧೈರ್ವಾಮನಕೈರುದಾಯುಧೈಃ ।
ಪಿಂಗೈಃ ಪಿಶಂಗೈರ್ಮಕರೋದರಾನನೈಃ
ಪರ್ಯಾದ್ರವದ್ಭಿರ್ವಿದುರಾನ್ವರುಧ್ಯತ ॥ ೧೩ ॥

ಕೇಚಿದ್ಬಭಂಜುಃ ಪ್ರಾಗ್ವಂಶಂ ಪತ್ನೀಶಾಲಾಂ ತಥಾಪರೇ ।
ಸದ ಆಗ್ನೀಧ್ರಶಾಲಾಂ ಚ ತದ್ವಿಹಾರಂ ಮಹಾನಸಮ್ ॥ ೧೪ ॥

ರುರುಜುರ್ಯಜ್ಞಪಾತ್ರಾಣಿ ತಥೈಕೇಽಗ್ನೀನನಾಶಯನ್ ।
ಕುಂಡೇಷ್ವಮೂತ್ರಯನ್ಕೇಚಿದ್ಬಿಭಿದುರ್ವೇದಿಮೇಖಲಾಃ ॥ ೧೫ ॥

ಅಬಾಧಂತ ಮುನೀನನ್ಯ ಏಕೇ ಪತ್ನೀರತರ್ಜಯನ್ ।
ಅಪರೇ ಜಗೃಹುರ್ದೇವಾನ್ಪ್ರತ್ಯಾಸನ್ನಾನ್ಪಲಾಯಿತಾನ್ ॥ ೧೬ ॥

ಭೃಗುಂ ಬಬಂಧ ಮಣಿಮಾನ್ವೀರಭದ್ರಃ ಪ್ರಜಾಪತಿಮ್ ।
ಚಂಡೀಶಃ ಪೂಷಣಂ ದೇವಂ ಭಗಂ ನಂದೀಶ್ವರೋಽಗ್ರಹೀತ್ ॥ ೧೭ ॥

ಸರ್ವ ಏವರ್ತ್ವಿಜೋ ದೃಷ್ಟ್ವಾ ಸದಸ್ಯಾಃ ಸದಿವೌಕಸಃ ।
ತೈರರ್ದ್ಯಮಾನಾಃ ಸುಭೃಶಂ ಗ್ರಾವಭಿರ್ನೈಕಧಾದ್ರವನ್ ॥ ೧೮ ॥

ತಾಂಡವನೃತ್ಯವನ್ನು ಮಾಡುತ್ತಿರುವಾಗ ಅವನ ತ್ರಿಶೂಲದ ಅಲಗುಗಳಿಂದ ದಿಗ್ಗಜಗಳು ಗಾಯಗೊಳ್ಳುತ್ತವೆ. ಅವನ ಮೇಘ ಗರ್ಜನೆಯಂತಿದ್ದ ಭಯಂಕರ ಅಟ್ಟಹಾಸದಿಂದ ದಿಕ್ಕುಗಳು ಚಲ್ಲಾಪಿಲ್ಲಿಯಾಗಿ ಹೋಗುತ್ತವೆ. ॥ ೧೦ ॥ ಆಗ ಸಹಿಸಲಸದಳವಾದ ತೇಜಸ್ಸು ಆತನಲ್ಲಿ ಉಕ್ಕೇರಿ ಬರುತ್ತದೆ. ಕ್ರೋಧದಿಂದ ಹುಬ್ಬು ಗಂಟಿಕ್ಕಿಕೊಂಡು ನಿಂತ ಆತನನ್ನು ಯಾರೂ ಎದುರಿಸಲಾರರು. ಅವನ ಕರಾಳ ಕೋರೆಹಲ್ಲುಗಳಿಂದ ನಕ್ಷತ್ರಗಳೆಲ್ಲಾ ಚೆಲ್ಲಿಹೋಗುವುವು. ಅಂತಹ ರೋಷಭೀಷಣನಾದ ಭಗವಾನ್ ಶಂಕರನನ್ನು ಕೆಣಕಿದರೆ ಸಾಕ್ಷಾತ್ ಸೃಷ್ಟಿಕರ್ತನಿಗಾದರೂ ಕ್ಷೇಮವಲ್ಲಿಯದು ? ಎಂದು ಹೇಳತೊಡಗಿದರು. ॥ ೧೧ ॥

ದಕ್ಷನ ಯಜ್ಞಮಂಟಪದಲ್ಲಿ ಕುಳಿತಿದ್ದ ಮಹಾತ್ಮರು ಭಯಗ್ರಸ್ತರಾಗಿ ಒಬ್ಬರನ್ನೊಬ್ಬರು ಅಂಜಿಕೆಯ ದೃಷ್ಟಿಯಿಂದ ದಿಟ್ಟಿಸುತ್ತಾ ಬಗೆ-ಬಗೆಯಾಗಿ ಮಾತಾಡಿಕೊಳ್ಳುತ್ತಿರುವಂತೆ ಭೂಮಿಯಲ್ಲೂ, ಆಕಾಶದಲ್ಲೂ ಎಲ್ಲ ಕಡೆಗಳಲ್ಲಿ ಸಾವಿರಾರು ಉತ್ಪಾತಗಳು ಕಾಣಿಸಿಕೊಂಡವು. ॥ ೧೨ ॥ ವಿದುರನೇ! ಅಷ್ಟರಲ್ಲೇ ರುದ್ರನ ಸೇವಕರಾದ ಪ್ರಮಥಗಣಗಳು ಆ ದೊಡ್ಡ ಯಜ್ಞಮಂಟಪವನ್ನು ಸುತ್ತುವರಿದು ಮುತ್ತಿಗೆ ಹಾಕಿದರು. ಅವರೆಲ್ಲರೂ ಅಸ್ತ್ರ-ಶಸ್ತ್ರಗಳಿಂದ ಸಜ್ಜಿತರಾಗಿದ್ದರು. ಅವರಲ್ಲಿ ಕೆಲವರು ಕುಳ್ಳರೂ, ಕೆಲವರು ಕೆಂಪು ಬಣ್ಣದವರೂ, ಕೆಲವರು ಕಂದುಬಣ್ಣದವರೂ, ಕೆಲವರು ಹಳದಿ ಬಣ್ಣದವರೂ, ಕೆಲವರು ಮೊಸಳೆಯಂತೆ ಮುಖ-ಹೊಟ್ಟೆಗಳಿಂದ ಕಾಣುತ್ತಿದ್ದರು. ॥ ೧೩ ॥ ಅವರಲ್ಲಿ ಕೆಲವರು ಯಜ್ಞದ ಪ್ರಾಗ್ವಂಶವನ್ನು (ಯಜ್ಞಶಾಲೆಯ ಪೂರ್ವ ಮತ್ತು ಪಶ್ಚಿಮದ ಕಂಬಗಳ ಮೇಲೆ ಅಡ್ಡಲಾಗಿ ಇರುವ ತೊಲೆ) ಮುರಿದು ಹಾಕಿದರು. ಮತ್ತೆ ಕೆಲವರು ಯಜ್ಞಶಾಲೆಯ ಪಶ್ಚಿಮಕ್ಕಿದ್ದ ಪತ್ನೀಶಾಲೆಯನ್ನು ನಾಶಗೊಳಿಸಿದರು. ಕೆಲವರು ಯಜ್ಞಶಾಲೆಯ ಮುಂಭಾಗದ ಸಭಾಮಂಟಪವನ್ನು, ಮುಂದೆ ಉತ್ತರದಿಕ್ಕಿನತ್ತ ಇರುವ ಆಗ್ನೀಧ್ರಶಾಲೆಯನ್ನು ಕಿತ್ತುಹಾಕಿದರು. ಕೆಲವರು ಯಜಮಾನ ಗೃಹ ಮತ್ತು ಪಾಕಶಾಲೆಯನ್ನು ಕೆಡವಿ ಹಾಳುಮಾಡಿದರು ॥ ೧೪ ॥ ಕೆಲವರು ಯಜ್ಞಪಾತ್ರೆಗಳನ್ನು ಒಡೆದು ಹಾಕಿದರು. ಕೆಲವರು ಯಜ್ಞಾಗ್ನಿಗಳನ್ನು ಆರಿಸಿಬಿಟ್ಟರು. ಕೆಲವರು ಯಜ್ಞಕುಂಡದಲ್ಲಿ ಮೂತ್ರವಿಸರ್ಜನೆ ಮಾಡಿದರು. ಮತ್ತೆ ಕೆಲವರು ವೇದಿಕೆಯ ಸೀಮೆಯ ಸೂತ್ರಗಳನ್ನು ಹರಿದು ಹಾಕಿದರು. ॥ ೧೫ ॥ ಕೆಲವರು ಮುನಿಗಳನ್ನು ಪೀಡಿಸಿದರೆ, ಮತ್ತೆ ಕೆಲವರು ಹೆಂಗಸರನ್ನು ಗದರಿಸತೊಡಗಿದರು. ಕೆಲವರು ತಮ್ಮ ಬಳಿಯಿಂದ ಓಡುತ್ತಿದ್ದ ದೇವತೆಗಳನ್ನು ಹಿಡಿದುಕೊಂಡರು. ॥ ೧೬ ॥ ಮಣಿಮಂತನು ಭೃಗುಋಷಿಯನ್ನು ಕಟ್ಟಿಹಾಕಿದನು. ವೀರಭದ್ರನು ದಕ್ಷಪ್ರಜಾಪತಿಯನ್ನು ಸೆರೆಹಿಡಿದನು. ಚಂಡೀಶನು ಪೂಷಾನನ್ನೂ ಮತ್ತು ನಂದೀಶ್ವರನು ಭಗದೇವತೆಯನ್ನು ಹಿಡಿದುಕೊಂಡರು. ॥ ೧೭ ॥

ಭಗವಾನ್ ಶಂಕರನ ಪಾರ್ಷದರ ಈ ಭಯಂಕರ ಲೀಲೆಯನ್ನು ನೋಡಿ ಹಾಗೂ ಅವರ ಕಲ್ಲು-ಕವಣೆಗಳ ಏಟುಗಳನ್ನೂ ತಾಳಲಾರದೆ ಅಲ್ಲಿದ್ದ ಋತ್ವಿಜರೂ, ಸದಸ್ಯರೂ, ದೇವತೆಗಳೂ ಹೀಗೆ ಎಲ್ಲರೂ ದಿಕ್ಕಾಪಾಲಾಗಿ ಓಡಿಹೋದರು. ॥ ೧೮ ॥

ಜುಹ್ವತಃ ಸ್ರುವಹಸ್ತಸ್ಯ ಶ್ಮಶ್ರೂಣಿ ಭಗವಾನ್ಭವಃ ।
ಭೃಗೋರ್ಲುಲುಂಚೇ ಸದಸಿ ಯೋಽಹಸಚ್ಛ್ಮಶ್ರು ದರ್ಶಯನ್ ॥ ೧೯ ॥

ಭಗಸ್ಯ ನೇತ್ರೇ ಭಗವಾನ್ಪಾತಿತಸ್ಯ ರುಷಾ ಭುವಿ ।
ಉಜ್ಜಹಾರ ಸದಃಸ್ಥೋಽಕ್ಷ್ಣಾ ಯಃ ಶಪಂತಮಸೂಸುಚತ್ ॥ ೨೦ ॥

ಪೂಷ್ಣಶ್ಚಾಪಾತಯದ್ದಂತಾನ್ ಕಾಲಿಂಗಸ್ಯ ಯಥಾ ಬಲಃ ।
ಶಪ್ಯಮಾನೇ ಗರಿಮಣಿ ಯೋಽಹಸದ್ದರ್ಶಯಂದತಃ ॥ ೨೧ ॥

ಆಕ್ರಮ್ಯೋರಸಿ ದಕ್ಷಸ್ಯ ಶಿತಧಾರೇಣ ಹೇತಿನಾ ।
ಛಿಂದನ್ನಪಿ ತದುದ್ಧರ್ತುಂ ನಾಶಕ್ನೋತ್ತ್ರ್ಯಂಬಕಸ್ತದಾ ॥ ೨೨ ॥

ಶಸ್ತ್ರೈರಸ್ತ್ರಾನ್ವಿತೈರೇವಮನಿರ್ಭಿನ್ನತ್ವಚಂ ಹರಃ ।
ವಿಸ್ಮಯಂ ಪರಮಾಪನ್ನೋ ದಧ್ಯೌ ಪಶುಪತಿಶ್ಚಿರಮ್ ॥ ೨೩ ॥

ದೃಷ್ಟ್ವಾ ಸಂಜ್ಞಪನಂ ಯೋಗಂ ಪಶೂನಾಂ ಸ ಪತಿರ್ಮಖೇ ।
ಯಜಮಾನಪಶೋಃ ಕಸ್ಯ ಕಾಯಾತ್ತೇನಾಹರಚ್ಛಿರಃ ॥ ೨೪ ॥

ಸಾಧುವಾದಸ್ತದಾ ತೇಷಾಂ ಕರ್ಮ ತತ್ತಸ್ಯ ಶಂಸತಾಮ್ ।
ಭೂತಪ್ರೇತಪಿಶಾಚಾನಾಮನ್ಯೇಷಾಂ ತದ್ವಿಪರ್ಯಯಃ ॥ ೨೫ ॥

ಜುಹಾವೈತಚ್ಛಿರಸ್ತಸ್ಮಿನ್ ದಕ್ಷಿಣಾಗ್ನಾವಮರ್ಷಿತಃ ।
ತದ್ದೇವಯಜನಂ ದಗ್ಧ್ವಾ ಪ್ರಾತಿಷ್ಠದ್ ಗುಹ್ಯಕಾಲಯಮ್ ॥ ೨೬ ॥

ಭೃಗು ಮಹರ್ಷಿಗಳು ಕೈಯಲ್ಲಿ ಸ್ರುವೆಯನ್ನೆತ್ತಿಕೊಂಡು ಹೋಮ ಮಾಡುತ್ತಿದ್ದರು. ಅವರು ಪ್ರಜಾಪತಿಯರ ಸಭೆಯಲ್ಲಿ ಮೀಸೆಗಳನ್ನು ತಿರುಹುತ್ತಾ ಶಿವನ ಕುರಿತು ಅಪಹಾಸ್ಯಮಾಡಿದ್ದರು. ಆದ್ದರಿಂದ ವೀರಭದ್ರನು ಅವರ ಗಡ್ಡ-ಮೀಸೆಗಳನ್ನು ಕಿತ್ತು ಬಿಸಾಡಿದನು. ॥ ೧೯ ॥ ಭಗದೇವತೆಯು ಸಭೆಯಲ್ಲಿ ದಕ್ಷನು ಶಿವನನ್ನು ನಿಂದಿಸುವಾಗ ಕಣ್ಣನ್ನು ಮಿಟುಕಿಸಿ ಪ್ರೇರೇಪಿಸಿದ್ದನು. ಆದ್ದರಿಂದ ವೀರಭದ್ರನು ಅವನನ್ನು ಕೋಪದಿಂದ ಕೆಳಕ್ಕೆ ಕುಕ್ಕಿ ಆತನ ಕಣ್ಣನ್ನು ಕಿತ್ತುಹಾಕಿದನು. ॥ ೨೦ ॥ ಮತ್ತೆ ಪೂಷನನ್ನು ಹಿಡಿದುಕೊಂಡು – ಮುಂದೆ ಬಲರಾಮನು ಅನಿರುದ್ಧನ ವಿವಾಹದಲ್ಲಿ ಕಳಿಂಗರಾಜನ ಹಲ್ಲುಗಳನ್ನು ಮುರಿದು ಹಾಕುವಂತೆ – ಆತನ ಹಲ್ಲುಗಳನ್ನು ಕಿತ್ತುಹಾಕಿದನು. ಏಕೆಂದರೆ, ದಕ್ಷನು ಮಹಾದೇವನನ್ನು ಬಯ್ಯುತ್ತಿದ್ದಾಗ ಈ ಪೂಷಾದೇವತೆಯು ಹಲ್ಲುಕಿರಿದು ನಕ್ಕಿದ್ದನು. ॥ ೨೧ ॥ ಬಳಿಕ ವೀರಭದ್ರನು ದಕ್ಷನ ಎದೆಯ ಮೇಲೆ ಕುಳಿತು ಹರಿತವಾದ ಕತ್ತಿಯಿಂದ ಅವನ ತಲೆಯನ್ನು ಕತ್ತರಿಸತೊಡಗಿದನು. ಆದರೆ ಎಷ್ಟು ಕಡಿದರೂ ಆ ತಲೆಯನ್ನು ಕಿತ್ತುಹಾಕಲು ಸಾಧ್ಯವಾಗಲಿಲ್ಲ. ॥ ೨೨ ॥ ಯಾವ ರೀತಿಯಿಂದಲೂ ಅಸ್ತ್ರ-ಶಸ್ತ್ರಗಳಿಂದ ದಕ್ಷಪ್ರಜಾಪತಿಯ ಚರ್ಮವು ಕತ್ತರಿಸದೇ ಇರುವಾಗ, ವೀರಭದ್ರನಿಗೆ ತುಂಬಾ ಆಶ್ಚರ್ಯವಾಯಿತು ಮತ್ತು ಏನು ಮಾಡುವುದು ಎಂದು ಬಹಳ ಹೊತ್ತು ಯೋಚನೆ ಮಾಡಿದನು. ॥ ೨೩ ॥ ಅನಂತರ ಅವನು ಯಜ್ಞದಲ್ಲಿ ಪಶುವನ್ನು ಬಲಿಕೊಡುವಂತೆಯೇ ದಕ್ಷನೆಂಬ ಯಜಮಾನ ಪಶುವಿನ ಕತ್ತನ್ನು ಕತ್ತರಿಸಿ ಬೇರ್ಪಡಿಸಿದನು. ॥ ೨೪ ॥ ಹೀಗೆ ದಕ್ಷನನ್ನು ಬಲಿಕೊಟ್ಟು ವೀರಭದ್ರನು ಮಾಡಿದ ಆ ಕರ್ಮವನ್ನು ಭೂತ-ಪ್ರೇತ-ಪಿಶಾಚಾದಿಗಳು ಭಲೇ ! ಭಲೇ ! ಎಂದು ಕೊಂಡಾಡಿದರು. ದಕ್ಷನ ಕಡೆಯವರಲ್ಲಿ ಹಾಹಾಕಾರವೆದ್ದಿತು. ॥ ೨೫ ॥ ವೀರಭದ್ರನು ಅತ್ಯಂತ ಕ್ರೋಧಾವೇಶದಿಂದ ಕತ್ತರಿಸಿದ ದಕ್ಷನ ತಲೆಯನ್ನು ದಕ್ಷಿಣಾಗ್ನಿಯಲ್ಲಿ ಎಸೆದುಬಿಟ್ಟನು. ಮತ್ತೆ ಯಜ್ಞಶಾಲೆಗೆ ಬೆಂಕಿಹಚ್ಚಿ ಯಜ್ಞವನ್ನು ಧ್ವಂಸಗೊಳಿಸಿ, ಕೈಲಾಸಕ್ಕೆ ಹಿಂತಿರುಗಿದನು. ॥ ೨೬ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ದಕ್ಷಯಜ್ಞವಿಧ್ವಂಸೋ ನಾಮ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ದೇವತೆಗಳು ಕೈಲಾಸಕ್ಕೆ ಹೋಗಿ ಶಿವನನ್ನು ಪ್ರಸನ್ನಗೊಳಿಸಿದುದು

*ಮೈತ್ರೇಯಉವಾಚ*

ಅಥ ದೇವಗಣಾಃ ಸರ್ವೇ ರುದ್ರಾನೀಕೈಃ ಪರಾಜಿತಾಃ ।
ಶೂಲಪಟ್ಟಿಶನಿಸ್ತ್ರಿಂಶಗದಾಪರಿಘಮುದ್ಗರೈಃ ॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಮಹಾತ್ಮಾ ವಿದುರನೇ ! ಈ ವಿಧವಾಗಿ ರುದ್ರದೇವರ ಸೈನಿಕರಿಂದ ಪರಾಜಿತರಾದ ದೇವತೆಗಳು ತ್ರಿಶೂಲ, ಪಟ್ಟಿಶ, ಖಡ್ಗ, ಗದೆ, ಪರಿಘ, ಮುದ್ಗರ – ಮುಂತಾದ ಆಯುಧಗಳಿಂದ ಅಂಗಾಂಗಗಳು ಛಿನ್ನ-ಭಿನ್ನವಾಗಿ ನೊಂದು, ಯಜ್ಞಕ್ಕೆ ಬಂದಿದ್ದ ಋತ್ವಿಜರೂ, ಸದಸ್ಯರು ಹೀಗೆ ಎಲ್ಲರೂ ಭಯ

ಸಂಭಿನ್ನಭಿನ್ನಸರ್ವಾಂಗಾಃ ಸರ್ತ್ವಿಕ್ಸಭ್ಯಾ ಭಯಾಕುಲಾಃ।
ಸ್ವಯಂಭುವೇ ನಮಸ್ಕೃತ್ಯ ಕಾರ್ತ್ಸ್ನ್ಯೇನೈತನ್ನ್ಯವೇದಯನ್ ॥ ೨ ॥

ಉಪಲಭ್ಯ ಪುರೈವೈತದ್ಭಗವಾನಬ್ಜಸಂಭವಃ।
ನಾರಾಯಣಶ್ಚ ವಿಶ್ವಾತ್ಮಾ ನ ಕಸ್ಯಾಧ್ವರಮೀಯತುಃ ॥ ೩ ॥

ತದಾಕರ್ಣ್ಯ ವಿಭುಃ ಪ್ರಾಹ ತೇಜೀಯಸಿ ಕೃತಾಗಸಿ।
ಕ್ಷೇಮಾಯ ತತ್ರ ಸಾ ಭೂಯಾನ್ನ ಪ್ರಾಯೇಣ ಬುಭೂಷತಾಮ್ ॥ ೪ ॥

ಅಥಾಪಿ ಯೂಯಂ ಕೃತಕಿಲ್ಬಿಷಾ ಭವಂ
ಯೇ ಬರ್ಹಿಷೋ ಭಾಗಭಾಜಂ ಪರಾದುಃ।
ಪ್ರಸಾದಯಧ್ವಂ ಪರಿಶುದ್ಧಚೇತಸಾ
ಕ್ಷಿಪ್ರಪ್ರಸಾದಂ ಪ್ರಗೃಹೀತಾಂಘ್ರಿಪದ್ಮಮ್ ॥ ೫ ॥

ಆಶಾಸಾನಾ ಜೀವಿತಮಧ್ವರಸ್ಯ
ಲೋಕಃ ಸಪಾಲಃ ಕುಪಿತೇ ನ ಯಸ್ಮಿನ್ ।
ತಮಾಶು ದೇವಂ ಪ್ರಿಯಯಾ ವಿಹೀನಂ
ಕ್ಷಮಾಪಯಧ್ವಂ ಹೃದಿ ವಿದ್ಧಂ ದುರುಕ್ತೈಃ ॥ ೬ ॥

ನಾಹಂ ನ ಯಜ್ಞೋ ನ ಚ ಯೂಯಮನ್ಯೇ
ಯೇ ದೇಹಭಾಜೋ ಮುನಯಶ್ಚ ತತ್ತ್ವಮ್ ।
ವಿದುಃ ಪ್ರಮಾಣಂ ಬಲವೀರ್ಯಯೋರ್ವಾ
ಯಸ್ಯಾತ್ಮತಂತ್ರಸ್ಯ ಕ ಉಪಾಯಂ ವಿಧಿತ್ಸೇತ್ ॥ ೭ ॥

ಸ ಇತ್ಥಮಾದಿಶ್ಯ ಸುರಾನಜಸ್ತೈಃ
ಸಮನ್ವಿತಃ ಪಿತೃಭಿಃ ಸಪ್ರಜೇಶೈಃ ।
ಯಯೌ ಸ್ವಧಿಷ್ಣ್ಯಾನ್ನಿಲಯಂ ಪುರದ್ವಿಷಃ
ಕೈಲಾಸಮದ್ರಿಪ್ರವರಂ ಪ್ರಿಯಂ ಪ್ರಭೋಃ ॥ ೮ ॥

ಜನ್ಮೌಷಧಿತಪೋಮಂತ್ರಯೋಗಸಿದ್ಧೈರ್ನರೇತರೈಃ ।
ಜುಷ್ಟಂ ಕಿನ್ನರಗಂಧರ್ವೈರಪ್ಸರೋಭಿರ್ವೃತಂ ಸದಾ ॥ ೯ ॥

ನಾನಾಮಣಿಮಯೈಃ ಶೃಂಗೈರ್ನಾನಾಧಾತುವಿಚಿತ್ರಿತೈಃ ।
ನಾನಾದ್ರುಮಲತಾಗುಲ್ಮೈರ್ನಾನಾಮೃಗಗಣಾವೃತೈಃ ॥ ೧೦ ॥

ಗ್ರಸ್ತರಾಗಿ ಬ್ರಹ್ಮದೇವರ ಬಳಿಗೆ ಹೋಗಿ ನಮಸ್ಕಾರಮಾಡಿ ಅವರ ಬಳಿಯಲ್ಲಿ ಎಲ್ಲ ವೃತ್ತಾಂತವನ್ನು ನಿವೇದಿಸಿಕೊಂಡರು ॥ ೧-೨ ॥ ಯಜ್ಞದಲ್ಲಿ ಹೀಗೆ ಉತ್ಪಾತವಾಗುವುದೆಂದು ಮೊದಲೇ ತಿಳಿದಿದ್ದ ಸರ್ವಾಂತರ್ಯಾಮಿ ನಾರಾಯಣನೂ, ಬ್ರಹ್ಮದೇವರೂ ಆ ಯಜ್ಞಕ್ಕೆ ಹೋಗಿರಲಿಲ್ಲ ॥ ೩ ॥ ಈಗ ದೇವತೆಗಳ ಬಾಯಿಂದ ಅಲ್ಲಿಯ ಎಲ್ಲ ವೃತ್ತಾಂತವನ್ನು ಕೇಳಿದ ಬ್ರಹ್ಮದೇವರು ಹೇಳಿದರು – ಎಲೈ ದೇವತೆಗಳಿರಾ! ಮಹಾಸಮರ್ಥನೂ, ತೇಜಸ್ವಿಯೂ ಆದ ಪುರುಷನಿಂದ ಒಂದು ವೇಳೆ ಯಾವುದಾದರೂ ಅಪರಾಧ ವಾದರೂ ಅದರ ಬದಲಾಗಿ ಅವರಿಗೆ ಅಪರಾಧ ಮಾಡಿದವರಿಗೆ ಒಳ್ಳೆಯದಾಗುವುದಿಲ್ಲ ॥ ೪ ॥ ಹಾಗಿರುವಾಗ ನೀವಾದರೋ ಯಜ್ಞದಲ್ಲಿ ಭಗವಾನ್ ಶಂಕರನಿಗೆ ದೊರೆಯಬೇಕಾದ ಯಜ್ಞ ಭಾಗವನ್ನು ಕೊಡದೆ ದೊಡ್ಡ ಅಪರಾಧವನ್ನೆಸಗಿದ್ದೀರಿ. ಆದರೆ ಪರಮೇಶ್ವರನು ಬೇಗನೆ ಪ್ರಸನ್ನನಾಗುವವನು. ಅದಕ್ಕಾಗಿ ನೀವೆಲ್ಲರೂ ಶುದ್ಧವಾದ ಮನಸ್ಸಿನಿಂದ ಅವನ ಪಾದಗಳನ್ನು ಹಿಡಿದುಕೊಂಡು, ಅವನಲ್ಲಿ ಕ್ಷಮೆಯನ್ನು ಯಾಚಿಸಿರಿ. ॥ ೫ ॥ ದಕ್ಷನ ದುರ್ವಚನರೂಪವಾದ ಬಾಣಗಳಿಂದ ಅವನ ಹೃದಯ ಮೊದಲೇ ನೊಂದಿತ್ತು. ಅದರ ಜೊತೆಗೆ ಪ್ರಿಯಪತ್ನಿಯಾದ ಸತೀದೇವಿಯ ವಿಯೋಗವೂ ಉಂಟಾಯಿತು. ಆದುದರಿಂದ ಈ ಯಜ್ಞವು ಪುನಃ ಪ್ರಾರಂಭಗೊಂಡು ಪೂರ್ಣವಾಗಬೇಕೆಂದು ನೀವೆಲ್ಲ ಬಯಸುವಿರಾದರೆ, ಮೊದಲಿಗೆ ನೀವು ಬೇಗನೇ ಹೋಗಿ ನಿಮ್ಮ ಅಪರಾಧಗಳಿಗಾಗಿ ಕ್ಷಮೆಯನ್ನು ಬೇಡಿಕೊಳ್ಳಿ. ಹಾಗೇ ನಾದರೂ ಅವನು ಕುಪಿತನಾಗಿ ಬಿಟ್ಟರೆ ಲೋಕಪಾಲಕರ ಸಹಿತ ಈ ಸಮಸ್ತ ಲೋಕಗಳು ಉಳಿಯುವ ಸಂಭವವಿಲ್ಲ ॥ ೬ ॥ ಭಗವಾನ್ ಮಹಾರುದ್ರನು ಪರಮ ಸ್ವತಂತ್ರನು. ಅವನ ತತ್ತ್ವವನ್ನೂ, ಶಕ್ತಿ-ಸಾಮರ್ಥ್ಯಗಳನ್ನೂ, ಋಷಿ-ಮುನಿಗಳು, ದೇವತೆಗಳು, ಯಜ್ಞ ಸ್ವರೂಪೀ ದೇವೇಂದ್ರನೂ, ಸ್ವತಃ ನಾನೂ ಕೂಡ ಅರಿಯೆನು. ಹೀಗಿರುವಾಗ ಬೇರೆಯವರ ಮಾತೇನು? ಇಂತಹ ಸ್ಥಿತಿಯಲ್ಲಿ ಆತನನ್ನು ಶಾಂತಗೊಳಿಸುವ ಉಪಾಯವನ್ನು ಯಾರು ಮಾಡ ಬಲ್ಲರು? ॥ ೭ ॥

ಬ್ರಹ್ಮದೇವರು ಅವರಿಗೆ ಹೀಗೆ ಹೇಳಿ ದೇವತೆಗಳನ್ನೂ ಪ್ರಜಾಪತಿಗಳನ್ನೂ, ಪಿತೃದೇವತೆಗಳನ್ನೂ, ಜೊತೆಯಲ್ಲಿ ಕರೆದು ಕೊಂಡು, ತನ್ನ ಲೋಕದಿಂದ ಭಗವಾನ್ ಶಂಕರನ ಪ್ರಿಯಧಾಮ ವಾದ ಪರ್ವತಶ್ರೇಷ್ಠ ಕೈಲಾಸಕ್ಕೆ ಹೋದರು. ॥ ೮ ॥ ಆ ಕೈಲಾಸದ ಪವಿತ್ರತೆ, ರಮಣೀಯತೆ ಅವರ್ಣನೀಯವಾಗಿತ್ತು. ಅದು ಔಷಧಿ-ವನಸ್ಪತಿಗಳು, ತಪಸ್ಸು, ಮಂತ್ರ, ಯೋಗ ಮುಂತಾದ ಉಪಾಯ ಗಳಿಂದ ಮತ್ತು ಹುಟ್ಟಿನಿಂದಲೇ ಸಿದ್ಧಿಯನ್ನು ಪಡೆದಿರುವ ದೇವತೆ ಗಳು ನಿತ್ಯವೂ ವಾಸಮಾಡುವ ದಿವ್ಯಧಾಮವು. ಕಿನ್ನರರೂ, ಗಂಧರ್ವರೂ, ಅಪ್ಸರೆಯರೂ ಸದಾಕಾಲ ಅಲ್ಲಿ ನೆರೆದಿರುತ್ತಾರೆ. ॥ ೯ ॥ ಅಲ್ಲಿ ನಾನಾಧಾತುಗಳಿಂದ ಚಿತ್ರ-ವಿಚಿತ್ರವಾಗಿ ವರ್ಣ ರಂಜಿತ ವಿವಿಧ ರತ್ನಮಯವಾಗಿರುವ ಉನ್ನತವಾದ ಶಿಖರಗಳು ಕಂಗೊಳಿಸುತ್ತವೆ. ಅವು ಬಗೆ-ಬಗೆಯ ಮರ-ಬಳ್ಳಿ-ಪೊದೆಗಳಿಂದ ಕೂಡಿದ್ದು ಅಲ್ಲಿ ಅನೇಕ ವನ್ಯ ಪ್ರಾಣಿಗಳು ಹಿಂಡು-ಹಿಂಡಾಗಿ ಸಂಚರಿಸುತ್ತಿವೆ. ॥ ೧೦ ॥

ಜುಹ್ವತಃ ಸ್ರುವಹಸ್ತಸ್ಯ ಶ್ಮಶ್ರೂಣಿ ಭಗವಾನ್ಭವಃ ।
ಭೃಗೋರ್ಲುಲುಂಚೇ ಸದಸಿ ಯೋಽಹಸಚ್ಛ್ಮಶ್ರು ದರ್ಶಯನ್
॥ ೧೯ ॥

ಭಗಸ್ಯ ನೇತ್ರೇ ಭಗವಾನ್ಪಾತಿತಸ್ಯ ರುಷಾ ಭುವಿ ।
ಉಜ್ಜಹಾರ ಸದಃಸ್ಥೋಽಕ್ಷ್ಣಾ ಯಃ ಶಪಂತಮಸೂಸುಚತ್
॥ ೨೦ ॥

ಪೂಷ್ಣಶ್ಚಾಪಾತಯದ್ದಂತಾನ್ಕಾಲಿಂಗಸ್ಯ ಯಥಾ ಬಲಃ ।
ಶಪ್ಯಮಾನೇ ಗರಿಮಣಿ ಯೋಽಹಸದ್ದರ್ಶಯಂದತಃ
॥ ೨೧ ॥

ಆಕ್ರಮ್ಯೋರಸಿ ದಕ್ಷಸ್ಯ ಶಿತಧಾರೇಣ ಹೇತಿನಾ ।
ಛಿಂದನ್ನಪಿ ತದುದ್ಧರ್ತುಂ ನಾಶಕ್ನೋತ್ತ್ರ್ಯಂಬಕಸ್ತದಾ
॥ ೨೨ ॥

ಶಸ್ತ್ರೈರಸ್ತ್ರಾನ್ವಿತೈರೇವಮನಿರ್ಭಿನ್ನತ್ವಚಂ ಹರಃ ।
ವಿಸ್ಮಯಂ ಪರಮಾಪನ್ನೋ ದಧ್ಯೌ ಪಶುಪತಿಶ್ಚಿರಮ್
॥ ೨೩ ॥

ದೃಷ್ಟ್ವಾ ಸಂಜ್ಞಪನಂ ಯೋಗಂ ಪಶೂನಾಂ ಸ ಪತಿರ್ಮಖೇ ।
ಯಜಮಾನಪಶೋಃ ಕಸ್ಯ ಕಾಯಾತ್ತೇನಾಹರಚ್ಛಿರಃ
॥ ೨೪ ॥

ಸಾಧುವಾದಸ್ತದಾ ತೇಷಾಂ ಕರ್ಮ ತತ್ತಸ್ಯ ಶಂಸತಾಮ್ ।
ಭೂತಪ್ರೇತಪಿಶಾಚಾನಾಮನ್ಯೇಷಾಂ ತದ್ವಿಪರ್ಯಯಃ
॥ ೨೫ ॥

ಜುಹಾವೈತಚ್ಛಿರಸ್ತಸ್ಮಿನ್ದಕ್ಷಿಣಾಗ್ನಾವಮರ್ಷಿತಃ ।
ತದ್ದೇವಯಜನಂ ದಗ್ಧ್ವಾ ಪ್ರಾತಿಷ್ಠದ್ ಗುಹ್ಯಕಾಲಯಮ್
॥ ೨೬ ॥

ಭೃಗು ಮಹರ್ಷಿಗಳು ಕೈಯಲ್ಲಿ ಸ್ರುವೆಯನ್ನೆತ್ತಿಕೊಂಡು ಹೋಮ ಮಾಡುತ್ತಿದ್ದರು. ಅವರು ಪ್ರಜಾಪತಿಯರ ಸಭೆಯಲ್ಲಿ ಮೀಸೆಗಳನ್ನು ತಿರುಹುತ್ತಾ ಶಿವನ ಕುರಿತು ಅಪಹಾಸ್ಯಮಾಡಿದ್ದರು. ಆದ್ದರಿಂದ ವೀರಭದ್ರನು ಅವರ ಗಡ್ಡ-ಮೀಸೆಗಳನ್ನು ಕಿತ್ತು ಬಿಸಾಡಿದನು. ॥ ೧೯ ॥ ಭಗದೇವತೆಯು ಸಭೆಯಲ್ಲಿ ದಕ್ಷನು ಶಿವನನ್ನು ನಿಂದಿಸುವಾಗ ಕಣ್ಣನ್ನು ಮಿಟುಕಿಸಿ ಪ್ರೇರೇಪಿಸಿದ್ದನು. ಆದ್ದರಿಂದ ವೀರಭದ್ರನು ಅವನನ್ನು ಕೋಪದಿಂದ ಕೆಳಕ್ಕೆ ಕುಕ್ಕಿ ಆತನ ಕಣ್ಣನ್ನು ಕಿತ್ತುಹಾಕಿದನು. ॥ ೨೦ ॥ ಮತ್ತೆ ಪೂಷನನ್ನು ಹಿಡಿದುಕೊಂಡು – ಮುಂದೆ ಬಲರಾಮನು ಅನಿರುದ್ಧನ ವಿವಾಹದಲ್ಲಿ ಕಳಿಂಗರಾಜನ ಹಲ್ಲುಗಳನ್ನು ಮುರಿದು ಹಾಕುವಂತೆ – ಆತನ ಹಲ್ಲುಗಳನ್ನು ಕಿತ್ತುಹಾಕಿದನು. ಏಕೆಂದರೆ, ದಕ್ಷನು ಮಹಾದೇವನನ್ನು ಬಯ್ಯುತ್ತಿದ್ದಾಗ ಈ ಪೂಷಾದೇವತೆಯು ಹಲ್ಲುಕಿರಿದು ನಕ್ಕಿದ್ದನು. ॥ ೨೧ ॥ ಬಳಿಕ ವೀರಭದ್ರನು ದಕ್ಷನ ಎದೆಯ ಮೇಲೆ ಕುಳಿತು ಹರಿತವಾದ ಕತ್ತಿಯಿಂದ ಅವನ ತಲೆಯನ್ನು ಕತ್ತರಿಸತೊಡಗಿದನು. ಆದರೆ ಎಷ್ಟು ಕಡಿದರೂ ಆ ತಲೆಯನ್ನು ಕಿತ್ತು ಹಾಕಲು ಸಾಧ್ಯವಾಗಲಿಲ್ಲ. ॥ ೨೨ ॥ ಯಾವ ರೀತಿಯಿಂದಲೂ ಅಸ್ತ್ರ-ಶಸ್ತ್ರಗಳಿಂದ ದಕ್ಷಪ್ರಜಾಪತಿಯ ಚರ್ಮವು ಕತ್ತರಿಸದೇ ಇರುವಾಗ, ವೀರಭದ್ರನಿಗೆ ತುಂಬಾ ಆಶ್ಚರ್ಯವಾಯಿತು ಮತ್ತು ಏನು ಮಾಡುವುದು ಎಂದು ಬಹಳ ಹೊತ್ತು ಯೋಚನೆ ಮಾಡಿದನು. ॥ ೨೩ ॥ ಅನಂತರ ಅವನು ಯಜ್ಞದಲ್ಲಿ ಪಶುವನ್ನು ಬಲಿಕೊಡುವಂತೆಯೇ ದಕ್ಷನೆಂಬ ಯಜಮಾನ ಪಶುವಿನ ಕತ್ತನ್ನು ಕತ್ತರಿಸಿ ಬೇರ್ಪಡಿಸಿದನು. ॥ ೨೪ ॥ ಹೀಗೆ ದಕ್ಷನನ್ನು ಬಲಿಕೊಟ್ಟು ವೀರಭದ್ರನು ಮಾಡಿದ ಆ ಕರ್ಮವನ್ನು ಭೂತ-ಪ್ರೇತ-ಪಿಶಾಚಾದಿಗಳು ಭಲೇ! ಭಲೇ! ಎಂದು ಕೊಂಡಾಡಿದರು. ದಕ್ಷನ ಕಡೆಯವರಲ್ಲಿ ಹಾಹಾಕಾರವೆದ್ದಿತು. ॥ ೨೫ ॥ ವೀರಭದ್ರನು ಅತ್ಯಂತ ಕ್ರೋಧಾವೇಶದಿಂದ ಕತ್ತರಿಸಿದ ದಕ್ಷನ ತಲೆಯನ್ನು ದಕ್ಷಿಣಾಗ್ನಿಯಲ್ಲಿ ಎಸೆದುಬಿಟ್ಟನು. ಮತ್ತೆ ಯಜ್ಞಶಾಲೆಗೆ ಬೆಂಕಿಹಚ್ಚಿ ಯಜ್ಞವನ್ನು ಧ್ವಂಸಗೊಳಿಸಿ, ಕೈಲಾಸಕ್ಕೆ ಹಿಂತಿರುಗಿದನು. ॥ ೨೬ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ದಕ್ಷಯಜ್ಞವಿಧ್ವಂಸೋ ನಾಮ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ದೇವತೆಗಳು ಕೈಲಾಸಕ್ಕೆ ಹೋಗಿ ಶಿವನನ್ನು ಪ್ರಸನ್ನಗೊಳಿಸಿದುದು

*ಮೈತ್ರೇಯಉವಾಚ*

ಅಥ ದೇವಗಣಾಃ ಸರ್ವೇ ರುದ್ರಾನೀಕೈಃ ಪರಾಜಿತಾಃ ।
ಶೂಲಪಟ್ಟಿಶನಿಸ್ತ್ರಿಂಶಗದಾಪರಿಘಮುದ್ಗರೈಃ
॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಮಹಾತ್ಮಾ ವಿದುರನೇ! ಈ ವಿಧವಾಗಿ ರುದ್ರದೇವರ ಸೈನಿಕರಿಂದ ಪರಾಜಿತರಾದ ದೇವತೆಗಳು ತ್ರಿಶೂಲ, ಪಟ್ಟಿಶ, ಖಡ್ಗ, ಗದೆ, ಪರಿಘ, ಮುದ್ಗರ – ಮುಂತಾದ ಆಯುಧಗಳಿಂದ ಅಂಗಾಂಗಗಳು ಛಿನ್ನ-ಭಿನ್ನವಾಗಿ ನೊಂದು, ಯಜ್ಞಕ್ಕೆ ಬಂದಿದ್ದ ಋತ್ವಿಜರೂ, ಸದಸ್ಯರು ಹೀಗೆ ಎಲ್ಲರೂ ಭಯ

ಸಂಭಿನ್ನಭಿನ್ನಸರ್ವಾಂಗಾಃ ಸರ್ತ್ವಿಕ್ಸಭ್ಯಾ ಭಯಾಕುಲಾಃ ।
ಸ್ವಯಂಭುವೇ ನಮಸ್ಕೃತ್ಯ ಕಾರ್ತ್ಸ್ನ್ಯೇನೈತನ್ನ್ಯವೇದಯನ್ ॥ ೨ ॥

ಉಪಲಭ್ಯ ಪುರೈವೈತದ್ಭಗವಾನಬ್ಜಸಂಭವಃ ।
ನಾರಾಯಣಶ್ಚ ವಿಶ್ವಾತ್ಮಾ ನ ಕಸ್ಯಾಧ್ವರಮೀಯತುಃ ॥ ೩ ॥

ತದಾಕರ್ಣ್ಯ ವಿಭುಃ ಪ್ರಾಹ ತೇಜೀಯಸಿ ಕೃತಾಗಸಿ ।
ಕ್ಷೇಮಾಯ ತತ್ರ ಸಾ ಭೂಯಾನ್ನ ಪ್ರಾಯೇಣ ಬುಭೂಷತಾಮ್ ॥ ೪ ॥

ಅಥಾಪಿ ಯೂಯಂ ಕೃತಕಿಲ್ಬಿಷಾ ಭವಂ
ಯೇ ಬರ್ಹಿಷೋ ಭಾಗಭಾಜಂ ಪರಾದುಃ ।
ಪ್ರಸಾದಯಧ್ವಂ ಪರಿಶುದ್ಧಚೇತಸಾ
ಕ್ಷಿಪ್ರಪ್ರಸಾದಂ ಪ್ರಗೃಹೀತಾಂಘ್ರಿಪದ್ಮಮ್ ॥ ೫ ॥

ಆಶಾಸಾನಾ ಜೀವಿತಮಧ್ವರಸ್ಯ
ಲೋಕಃ ಸಪಾಲಃ ಕುಪಿತೇ ನ ಯಸ್ಮಿನ್ ।
ತಮಾಶು ದೇವಂ ಪ್ರಿಯಯಾ ವಿಹೀನಂ
ಕ್ಷಮಾಪಯಧ್ವಂ ಹೃದಿ ವಿದ್ಧಂ ದುರುಕ್ತೈಃ ॥ ೬ ॥

ನಾಹಂ ನ ಯಜ್ಞೋ ನ ಚ ಯೂಯಮನ್ಯೇ
ಯೇ ದೇಹಭಾಜೋ ಮುನಯಶ್ಚ ತತ್ತ್ವಮ್ ।
ವಿದುಃ ಪ್ರಮಾಣಂ ಬಲವೀರ್ಯಯೋರ್ವಾ
ಯಸ್ಯಾತ್ಮತಂತ್ರಸ್ಯ ಕ ಉಪಾಯಂ ವಿಧಿತ್ಸೇತ್ ॥ ೭ ॥

ಸ ಇತ್ಥಮಾದಿಶ್ಯ ಸುರಾನಜಸ್ತೈಃ
ಸಮನ್ವಿತಃ ಪಿತೃಭಿಃ ಸಪ್ರಜೇಶೈಃ ।
ಯಯೌ ಸ್ವಧಿಷ್ಣ್ಯಾನ್ನಿಲಯಂ ಪುರದ್ವಿಷಃ
ಕೈಲಾಸಮದ್ರಿಪ್ರವರಂ ಪ್ರಿಯಂ ಪ್ರಭೋಃ ॥ ೮ ॥

ಜನ್ಮೌಷಧಿತಪೋಮಂತ್ರಯೋಗಸಿದ್ಧೈರ್ನರೇತರೈಃ ।
ಜುಷ್ಟಂ ಕಿನ್ನರಗಂಧರ್ವೈರಪ್ಸರೋಭಿರ್ವೃತಂ ಸದಾ ॥ ೯ ॥

ನಾನಾಮಣಿಮಯೈಃ ಶೃಂಗೈರ್ನಾನಾಧಾತುವಿಚಿತ್ರಿತೈಃ ।
ನಾನಾದ್ರುಮಲತಾಗುಲ್ಮೈರ್ನಾನಾಮೃಗಗಣಾವೃತೈಃ ॥ ೧೦ ॥

ಗ್ರಸ್ತರಾಗಿ ಬ್ರಹ್ಮದೇವರ ಬಳಿಗೆ ಹೋಗಿ ನಮಸ್ಕಾರಮಾಡಿ ಅವರ ಬಳಿಯಲ್ಲಿ ಎಲ್ಲ ವೃತ್ತಾಂತವನ್ನು ನಿವೇದಿಸಿಕೊಂಡರು ॥ ೧-೨ ॥ ಯಜ್ಞದಲ್ಲಿ ಹೀಗೆ ಉತ್ಪಾತವಾಗುವುದೆಂದು ಮೊದಲೇ ತಿಳಿದಿದ್ದ ಸರ್ವಾಂತರ್ಯಾಮಿ ನಾರಾಯಣನೂ, ಬ್ರಹ್ಮದೇವರೂ ಆ ಯಜ್ಞಕ್ಕೆ ಹೋಗಿರಲಿಲ್ಲ. ॥ ೩ ॥ ಈಗ ದೇವತೆಗಳ ಬಾಯಿಂದ ಅಲ್ಲಿಯ ಎಲ್ಲ ವೃತ್ತಾಂತವನ್ನು ಕೇಳಿದ ಬ್ರಹ್ಮದೇವರು ಹೇಳಿದರು – ಎಲೈ ದೇವತೆಗಳಿರಾ! ಮಹಾಸಮರ್ಥನೂ, ತೇಜಸ್ವಿಯೂ ಆದ ಪುರುಷನಿಂದ ಒಂದು ವೇಳೆ ಯಾವುದಾದರೂ ಅಪರಾಧವಾದರೂ ಅದರ ಬದಲಾಗಿ ಅವರಿಗೆ ಅಪರಾಧ ಮಾಡಿದವರಿಗೆ ಒಳ್ಳೆಯದಾಗುವುದಿಲ್ಲ. ॥ ೪ ॥ ಹಾಗಿರುವಾಗ ನೀವಾದರೋ ಯಜ್ಞದಲ್ಲಿ ಭಗವಾನ್ ಶಂಕರನಿಗೆ ದೊರೆಯಬೇಕಾದ ಯಜ್ಞಭಾಗವನ್ನು ಕೊಡದೆ ದೊಡ್ಡ ಅಪರಾಧವನ್ನೆಸಗಿದ್ದೀರಿ. ಆದರೆ ಪರಮೇಶ್ವರನು ಬೇಗನೆ ಪ್ರಸನ್ನನಾಗುವವನು. ಅದಕ್ಕಾಗಿ ನೀವೆಲ್ಲರೂ ಶುದ್ಧವಾದ ಮನಸ್ಸಿನಿಂದ ಅವನ ಪಾದಗಳನ್ನು ಹಿಡಿದುಕೊಂಡು, ಅವನಲ್ಲಿ ಕ್ಷಮೆಯನ್ನು ಯಾಚಿಸಿರಿ. ॥ ೫ ॥ ದಕ್ಷನ ದುರ್ವಚನರೂಪವಾದ ಬಾಣಗಳಿಂದ ಅವನ ಹೃದಯ ಮೊದಲೇ ನೊಂದಿತ್ತು. ಅದರ ಜೊತೆಗೆ ಪ್ರಿಯಪತ್ನಿಯಾದ ಸತೀದೇವಿಯ ವಿಯೋಗವೂ ಉಂಟಾಯಿತು. ಆದುದರಿಂದ ಈ ಯಜ್ಞವು ಪುನಃ ಪ್ರಾರಂಭಗೊಂಡು ಪೂರ್ಣವಾಗಬೇಕೆಂದು ನೀವೆಲ್ಲ ಬಯಸುವಿರಾದರೆ, ಮೊದಲಿಗೆ ನೀವು ಬೇಗನೇ ಹೋಗಿ ನಿಮ್ಮ ಅಪರಾಧಗಳಿಗಾಗಿ ಕ್ಷಮೆಯನ್ನು ಬೇಡಿಕೊಳ್ಳಿ. ಹಾಗೇನಾದರೂ ಅವನು ಕುಪಿತನಾಗಿ ಬಿಟ್ಟರೆ ಲೋಕಪಾಲಕರ ಸಹಿತ ಈ ಸಮಸ್ತ ಲೋಕಗಳು ಉಳಿಯುವ ಸಂಭವವಿಲ್ಲ. ॥ ೬ ॥ ಭಗವಾನ್ ಮಹಾರುದ್ರನು ಪರಮ ಸ್ವತಂತ್ರನು. ಅವನ ತತ್ತ್ವವನ್ನೂ, ಶಕ್ತಿ-ಸಾಮರ್ಥ್ಯಗಳನ್ನೂ, ಋಷಿ-ಮುನಿಗಳು, ದೇವತೆಗಳು, ಯಜ್ಞಸ್ವರೂಪೀ ದೇವೇಂದ್ರನೂ, ಸ್ವತಃ ನಾನೂ ಕೂಡ ಅರಿಯೆನು. ಹೀಗಿರುವಾಗ ಬೇರೆಯವರ ಮಾತೇನು? ಇಂತಹ ಸ್ಥಿತಿಯಲ್ಲಿ ಆತನನ್ನು ಶಾಂತಗೊಳಿಸುವ ಉಪಾಯವನ್ನು ಯಾರು ಮಾಡಬಲ್ಲರು? ॥ ೭ ॥

ಬ್ರಹ್ಮದೇವರು ಅವರಿಗೆ ಹೀಗೆ ಹೇಳಿ ದೇವತೆಗಳನ್ನೂ, ಪ್ರಜಾಪತಿಗಳನ್ನೂ, ಪಿತೃದೇವತೆಗಳನ್ನೂ, ಜೊತೆಯಲ್ಲಿ ಕರೆದುಕೊಂಡು, ತನ್ನ ಲೋಕದಿಂದ ಭಗವಾನ್ ಶಂಕರನ ಪ್ರಿಯಧಾಮವಾದ ಪರ್ವತಶ್ರೇಷ್ಠ ಕೈಲಾಸಕ್ಕೆ ಹೋದರು. ॥ ೮ ॥ ಆ ಕೈಲಾಸದ ಪವಿತ್ರತೆ, ರಮಣೀಯತೆ ಅವರ್ಣನೀಯವಾಗಿತ್ತು. ಅದು ಔಷಧಿ-ವನಸ್ಪತಿಗಳು, ತಪಸ್ಸು, ಮಂತ್ರ, ಯೋಗ ಮುಂತಾದ ಉಪಾಯಗಳಿಂದ ಮತ್ತು ಹುಟ್ಟಿನಿಂದಲೇ ಸಿದ್ಧಿಯನ್ನು ಪಡೆದಿರುವ ದೇವತೆಗಳು ನಿತ್ಯವೂ ವಾಸಮಾಡುವ ದಿವ್ಯಧಾಮವು. ಕಿನ್ನರರೂ, ಗಂಧರ್ವರೂ, ಅಪ್ಸರೆಯರೂ ಸದಾಕಾಲ ಅಲ್ಲಿ ನೆರೆದಿರುತ್ತಾರೆ. ॥ ೯ ॥ ಅಲ್ಲಿ ನಾನಾಧಾತುಗಳಿಂದ ಚಿತ್ರ-ವಿಚಿತ್ರವಾಗಿ ವರ್ಣರಂಜಿತ ವಿವಿಧ ರತ್ನಮಯವಾಗಿರುವ ಉನ್ನತವಾದ ಶಿಖರಗಳು ಕಂಗೊಳಿಸುತ್ತವೆ. ಅವು ಬಗೆ-ಬಗೆಯ ಮರ-ಬಳ್ಳಿ-ಪೊದೆಗಳಿಂದ ಕೂಡಿದ್ದು ಅಲ್ಲಿ ಅನೇಕ ವನ್ಯ ಪ್ರಾಣಿಗಳು ಹಿಂಡು-ಹಿಂಡಾಗಿ ಸಂಚರಿಸುತ್ತಿವೆ. ॥ ೧೦ ॥

ನಾನಾಮಲಪ್ರಸ್ರವಣೈರ್ನಾನಾಕಂದರಸಾನುಭಿಃ ।
ರಮಣಂ ವಿಹರಂತೀನಾಂ ರಮಣೈಃ ಸಿದ್ಧಯೋಷಿತಾಮ್
॥ ೧೧ ॥

ಮಯೂರಕೇಕಾಭಿರುತಂ ಮದಾಂಧಾಲಿವಿಮೂರ್ಛಿತಮ್ ।
ಪ್ಲಾವಿತೈ ರಕ್ತಕಂಠಾನಾಂ ಕೂಜಿತೈಶ್ಚ ಪತತ್ರಿಣಾಮ್
॥ ೧೨ ॥

ಆಹ್ವಯಂತಮಿವೋದ್ಧಸ್ತೈರ್ದ್ವಿಜಾನ್ಕಾಮದುಘೈರ್ದ್ರುಮೈಃ ।
ವ್ರಜಂತಮಿವ ಮಾತಂಗೈರ್ಗೃಣಂತಮಿವ ನಿರ್ಝರೈಃ
॥ ೧೩ ॥

ಮಂದಾರೈಃ ಪಾರಿಜಾತೈಶ್ಚ ಸರಲೈಶ್ಚೋಪಶೋಭಿತಮ್ ।
ತಮಾಲೈಃ ಶಾಲತಾಲೈಶ್ಚ ಕೋವಿದಾರಾಸನಾರ್ಜುನೈಃ
॥ ೧೪ ॥

ಚೂತೈಃ ಕದಂಬೈರ್ನೀಪೈಶ್ಚ ನಾಗಪುನ್ನಾಗಚಂಪಕೈಃ ।
ಪಾಟಲಾಶೋಕಬಕುಲೈಃ ಕುಂದೈಃ ಕುರಬಕೈರಪಿ
॥ ೧೫ ॥

ಸ್ವರ್ಣಾರ್ಣಶತಪತ್ರೈಶ್ಚ ವರರೇಣುಕಜಾತಿಭಿಃ ।
ಕುಬ್ಜಕೈರ್ಮಲ್ಲಿಕಾಭಿಶ್ಚ ಮಾಧವೀಭಿಶ್ಚ ಮಂಡಿತಮ್
॥ ೧೬ ॥

ಪನಸೋದುಂಬರಾಶ್ವತ್ಥಪ್ಲಕ್ಷನ್ಯಗ್ರೋಧಹಿಂಗುಭಿಃ ।
ಭೂರ್ಜೈರೋಷಧಿಭಿಃ ಪೂಗೈ ರಾಜಪೂಗೈಶ್ಚ ಜಂಬುಭಿಃ
॥ ೧೭ ॥

ಖರ್ಜೂರಾಮ್ರಾತಕಾಮ್ರಾದ್ಯೈಃ ಪ್ರಿಯಾಲಮಧುಕೇಂಗುದೈಃ ।
ದ್ರುಮಜಾತಿಭಿರನ್ಯೈಶ್ಚ ರಾಜಿತಂ ವೇಣುಕೀಚಕೈಃ
॥ ೧೮ ॥

ಕುಮುದೋತ್ಪಲಕಹ್ಲಾರಶತಪತ್ರವನರ್ದ್ಧಿಭಿಃ ।
ನಲಿನೀಷು ಕಲಂ ಕೂಜತ್ಖಗವೃಂದೋಪಶೋಭಿತಮ್
॥ ೧೯ ॥

ಮೃಗೈಃ ಶಾಖಾಮೃಗೈಃ ಕ್ರೋಡೈರ್ಮೃಗೇಂದ್ರೈರೃಕ್ಷಶಲ್ಯಕೈಃ ।
ಗವಯೈಃ ಶರಭೈರ್ವ್ಯಾಘ್ರೈ ರುರುಭಿರ್ಮಹಿಷಾದಿಭಿಃ
॥ ೨೦ ॥

ಕರ್ಣಾಂತ್ರೈಕಪದಾಶ್ವಾಸ್ಯೈರ್ನಿರ್ಜುಷ್ಟಂ ವೃಕನಾಭಿಭಿಃ ।
ಕದಲೀಷಂಡಸಂರುದ್ಧ ನಲಿನೀಪುಲಿನಶ್ರಿಯಮ್
॥ ೨೧ ॥

ಪರ್ಯಸ್ತಂ ನಂದಯಾ ಸತ್ಯಾಃ ಸ್ನಾನಪುಣ್ಯತರೋದಯಾ ।
ವಿಲೋಕ್ಯ ಭೂತೇಶಗಿರಿಂ ವಿಬುಧಾ ವಿಸ್ಮಯಂ ಯಯುಃ
॥ ೨೨ ॥

ದದೃಶುಸ್ತತ್ರ ತೇ ರಮ್ಯಾಮಲಕಾಂ ನಾಮ ವೈ ಪುರೀಮ್ ।
ವನಂ ಸೌಗಂಧಿಕಂ ಚಾಪಿ ಯತ್ರ ತನ್ನಾಮ ಪಂಕಜಮ್
॥ ೨೩ ॥

ತಿಳಿನೀರಿನಿಂದ ಕೂಡಿದ ಅನೇಕ ಜಲಪ್ರವಾಹಗಳು ಹರಿಯುತ್ತಿರುವುದರಿಂದ, ತನ್ನ ಎತ್ತರವಾದ ಶಿಖರಗಳಿಂದಲೂ, ಆಳವಾದ ಕಂದಕಗಳಿಂದಲೂ ಶೋಭಿಸುವ ಆ ಪರ್ವತವು ತಮ್ಮ ಪ್ರಿಯತಮರೊಂದಿಗೆ ವಿಹರಿಸುತ್ತಿರುವ ಸಿದ್ಧರ ಪತ್ನಿಯರಿಗೆ ಕ್ರೀಡಾಸ್ಥಳವಾಗಿದೆ. ॥ ೧೧ ॥ ಅಲ್ಲಿ ಎಲ್ಲೆಡೆ, ಕುಣಿಯುತ್ತಿರುವ ನವಿಲುಗಳ ಕೇಕಾರವಗಳೂ, ಮದವೇರಿದ ದುಂಬಿಗಳ ಝೇಂಕಾರಗಳು, ಕೋಗಿಲೆಗಳ ಪಂಚಮ ಇಂಚರಗಳ ಕೂಜನಗಳೂ, ಬೇರೆ ಪಕ್ಷಿಗಳ ಕಲರವಗಳೂ ಪ್ರತಿಧ್ವನಿಸುತ್ತಿದ್ದವು. ॥ ೧೨ ॥ ಅಲ್ಲಿ ಎತ್ತರವಾಗಿ ಬೆಳೆದಿರುವ ಕಲ್ಪವೃಕ್ಷಗಳು ಹಕ್ಕಿ ಮತ್ತು ಹಾರುವ ದ್ವಿಜಾತಿಗಳನ್ನು ತಮ್ಮ ಕೊಂಬೆಗಳಿಂದ ಕರೆಯುತ್ತಿರುವಂತೆಯೂ, ಕಾಡಾನೆಗಳ ಓಟದಿಂದ ಅವರ ಬಳಿಗೆ ಹೋಗುತ್ತಿರುವಂತೆಯೂ, ನದಿಗಳ ಕಲ-ಕಲಧ್ವನಿಯಿಂದ ಅವರನ್ನು ಮಾತನಾಡಿಸಿ ಕರೆಯುತ್ತಿರುವಂತೆ ಕಂಡುಬರುತ್ತಿತ್ತು. ॥ ೧೩ ॥

ಆ ರಜತಗಿರಿಯು ರಮಣೀಯವಾದ ಮಂದಾರ, ಪಾರಿಜಾತ, ಸರಳ, ತಮಾಲ, ಸಾಲ, ತಾಲ, ಕೋವಿದಾರ, ಅಸನ, ಅರ್ಜುನ, ಚೂತ, ಕದಂಬ, ನೀಪ, ನಾಗ, ಪುನ್ನಾಗ, ಚಂಪಕ, ಪಾಟಲ, ಅಶೋಕ, ಬಕುಳ, ಕುಂದ, ಕುರವಕ, ಸ್ವರ್ಣವರ್ಣದ ಶತಪತ್ರ ಮುಂತಾದ ವೃಕ್ಷಗಳಿಂದಲೂ, ಏಲಾ, ಮಾಲತೀ, ರೇಣುಕ, ಜಾಜಿ, ಕುಬ್ಜಕ, ಮಲ್ಲಿಕಾ, ಮಾಧವೀ ಮುಂತಾದ ಬಳ್ಳಿಗಳಿಂದಲೂ, ಹೆಚ್ಚಾಗಿ ಶೋಭಿಸುತ್ತಿತ್ತು. ॥ ೧೪-೧೬ ॥ ಪನಸ, ಔದುಂಬರ, ಅಶ್ವತ್ಥ, ಪ್ಲಕ್ಷ, ನ್ಯಗ್ರೋಧ, ಹಿಂಗು, ಭೂರ್ಜ, ಪೂಗ, ರಾಜಪೂಗ, ಜಂಬೂ, ಖರ್ಜೂರ, ಆಮ್ರಾತಕ, ಆಮ್ರ, ಪ್ರಿಯಾಳು, ಮಧುಕ, ಇಂಗುದ, ವೇಣು, ಕೀಚಕ ಮುಂತಾದ ವೃಕ್ಷ-ಔಷಧಿ-ವನಸ್ಪತಿಗಳಿಂದ ನೋಡುವವರ ಕಣ್ಮನಗಳನ್ನು ಸೆಳೆಯುತ್ತಿತ್ತು. ॥ ೧೭-೧೮ ॥ ಅದರ ಸರೋವರಗಳಲ್ಲಿ ಅರಳಿ ಆಡುತ್ತಿರುವ ಕುಮುದ, ಕನ್ನೈದಿಲೆ, ಕಲ್ಹಾರ, ಶತಪತ್ರ ಮುಂತಾದ ಕಮಲ ಪುಷ್ಪಕದಂಬಗಳಲ್ಲಿ ಕುಳಿತು ಹಂಸ-ಸಾರಸ-ಕಾರಂಡ ಮುಂತಾದ ಜಲಪಕ್ಷಿಗಳು ಹಿಂಡು-ಹಿಂಡಾಗಿ ಕಲರವಮಾಡುವುದರಿಂದ ಅವು ಶೋಭಿಸುತ್ತಿದ್ದವು. ॥ ೧೯ ॥ ಅಲ್ಲಲ್ಲಿ ಹುಲ್ಲೆಗಳು, ಕಪಿಗಳು, ಕರಡಿಗಳು, ಕಾಡುಹಂದಿಗಳು, ಸಿಂಹಗಳು, ಗವಯಗಳು, ಶರಭಗಳೂ, ವ್ಯಾಘ್ರಗಳೂ, ರುರುಮೃಗಗಳು, ಕೃಷ್ಣಮೃಗಗಳು, ಕಾಡುಕೋಣಗಳು, ಕರ್ಣಾಂತ್ರಗಳು, ಊರ್ಣಾಮೃಗಗಳು, ಒಕ್ಕಾಲಿನ ಮೃಗಗಳು, ಕುದುರೆಮುಖದ ಮೃಗಗಳು, ತೋಳಗಳು, ಕಸ್ತೂರಿಮೃಗಗಳು ಯಥೇಚ್ಛವಾಗಿ ಸಂಚರಿಸುತ್ತವೆ. ಸರೋವರದ ತೀರಗಳು ಬಾಳೆಯ ಸಾಲುಗಳಿಂದ ಶೋಭಿಸುತ್ತಿವೆ. ಸುತ್ತಲೂ ನಂದಾ, ಎಂಬ ನದಿಯು ಹರಿಯುತ್ತಿದ್ದು ಸತೀದೇವಿಯ ಸ್ನಾನದಿಂದಾಗಿ ಇನ್ನೂ ಪವಿತ್ರ ಸುಗಂಧಿತವಾದ ತಿಳಿನೀರಿನಿಂದ ಕೂಡಿದೆ. ಭಗವಾನ್ ಭೂತನಾಥನ ನಿವಾಸ ಸ್ಥಾನವಾದ ಆ ಕೈಲಾಸಪರ್ವತದ ಇಂತಹ ಸೊಬಗನ್ನು ಕಂಡು ದೇವತೆಗಳೂ ಸಹ ಅತ್ಯಂತ ಆಶ್ಚರ್ಯಭರಿತರಾದರು. ॥ ೨೦-೨೨ ॥

ಅಲ್ಲಿ ಅವರು ಅಲಕಾ ಎಂಬ ರಮಣೀಯವಾದ ನಗರಿಯನ್ನು ಮತ್ತು ಸುಗಂಧವನ್ನು ಹರಡುವ ಸೌಗಂಧಿಕವೆಂಬ ಕಮಲಗಳು ಅರಳಿರುವ ಸೌಗಂಧಿಕ ವನವನ್ನು ನೋಡಿದರು. ॥ ೨೩ ॥

ನಂದಾ ಚಾಲಕನಂದಾ ಚ ಸರಿತೌ ಬಾಹ್ಯತಃ ಪುರಃ ।
ತೀರ್ಥಪಾದಪದಾಂಭೋಜರಜಸಾತೀವ ಪಾವನೇ ॥ ೨೪ ॥

ಆ ನಗರಿಯ ಹೊರಭಾಗದಲ್ಲಿ ತೀರ್ಥಪಾದನಾದ ಶ್ರೀಹರಿಯ ಚರಣಧೂಳಿಯ ಸಂಯೋಗದಿಂದ ಅತ್ಯಂತ ಪವಿತ್ರವಾಗಿರುವ ನಂದಾ ಮತ್ತು ಅಲಕನಂದಾ ಎಂಬ ಎರಡು ನದಿಗಳು ಹರಿಯುತ್ತಿವೆ. ॥ ೨೪ ॥

ಯಯೋಃ ಸುರಸ್ತ್ರಿಯಃ ಕ್ಷತ್ತರವರುಹ್ಯ ಸ್ವಧಿಷ್ಣ್ಯತಃ ।
ಕ್ರೀಡಂತಿ ಪುಂಸಃ ಸಿಂಚಂತ್ಯೋ ವಿಗಾಹ್ಯ ರತಿಕರ್ಶಿತಾಃ ॥ ೨೫ ॥

ರತಿವಿಲಾಸದಿಂದ ಆಯಾಸಗೊಂಡ ದೇವತಾಸ್ತ್ರೀಯರು ತಮ್ಮ ನಿವಾಸಸ್ಥಾನಗಳಿಂದ ಬಂದು ಆ ನದಿಗಳಲ್ಲಿ ಸ್ನಾನಮಾಡುತ್ತಾ, ತಮ್ಮ ಪ್ರಿಯತಮರ ಮೇಲೆ ನೀರನ್ನೆರಚುತ್ತಿದ್ದರು. ॥ ೨೫ ॥

ಯಯೋಸ್ತತ್ಸ್ನಾನವಿಭ್ರಷ್ಟನವಕುಂಕುಮಪಿಂಜರಮ್ ।
ವಿತೃಷೋಽಪಿ ಪಿಬಂತ್ಯಂಭಃ ಪಾಯಯಂತೋ ಗಜಾ ಗಜೀಃ ॥ ೨೬ ॥

ಸ್ನಾನಮಾಡುವಾಗ ಅವರ ಸ್ತನಗಳ ಮೇಲಿನ ಕೇಸರಿಯ ಲೇಪವು ತೊಳೆದುಹೋದ್ದರಿಂದ ಆ ನದಿಯ ನೀರು ಹಳದಿಯಾಗುತ್ತಿತ್ತು. ಆ ಕೇಸರಮಿಶ್ರಿತ ನೀರನ್ನು ಗಂಧದ ಆಸೆಯಿಂದ ಆನೆಗಳು ಬಾಯಾರಿಕೆ ಇಲ್ಲದಿದ್ದರೂ ಕುಡಿಯುತ್ತಾ, ಜೊತೆಯ ಹೆಣ್ಣಾನೆಗಳಿಗೂ ಕುಡಿಸುತ್ತಿದ್ದವು. ॥ ೨೬ ॥

ತಾರಹೇಮಮಹಾರತ್ನವಿಮಾನಶತಸಂಕುಲಾಮ್ ।
ಜುಷ್ಟಾಂ ಪುಣ್ಯಜನಸ್ತ್ರೀಭಿರ್ಯಥಾ ಖಂ ಸತಡಿದ್ಘನಮ್ ॥ ೨೭ ॥

ಅಲಕಾನಗರಿಯ ಮೇಲೆ ಚಿನ್ನ ಬೆಳ್ಳಿ ಮತ್ತು ಬಹುಮೂಲ್ಯ ಮಣಿಗಳಿಂದ ಖಚಿತವಾದ ನೂರಾರು ವಿಮಾನಗಳು ವಿರಾಜಿಸುತ್ತಿವೆ. ಅವುಗಳಲ್ಲಿ ಅನೇಕ ಯಕ್ಷಪತ್ನಿಯರು ವಾಸಮಾಡುತ್ತಿದ್ದರು. ಇವುಗಳ ಕಾರಣ ಆ ವಿಶಾಲನಗರಿಯು ಮಿಂಚು-ಮೋಡಗಳಿಂದ ಆವರಿಸಲ್ಪಟ್ಟಿರುವ ಆಕಾಶದಂತೆ ಮೆರೆಯುತ್ತಿದೆ. ॥ ೨೭ ॥

ಹಿತ್ವಾ ಯಕ್ಷೇಶ್ವರಪುರೀಂ ವನಂ ಸೌಗಂಧಿಕಂ ಚ ತತ್ ।
ದ್ರುಮೈಃ ಕಾಮದುಘೈರ್ಹೃದ್ಯಂ ಚಿತ್ರಮಾಲ್ಯಫಲಚ್ಛದೈಃ ॥ ೨೮ ॥

ಯಕ್ಷರಾಜ ಕುಬೇರನ ರಾಜಧಾನಿಯಾದ ಆ ಅಲಕಾಪುರಿಯನ್ನು ಹಿಂದೆ ಹಾಕಿ ದೇವತೆಗಳು ಸೌಗಂಧಿಕವನಕ್ಕೆ ಬಂದರು. ಅದು ಬಣ್ಣ-ಬಣ್ಣದ ಹಣ್ಣು-ಹೂವು ಮತ್ತು ಪತ್ರೆಗಳಿಂದ ಕೂಡಿದ ಅನೇಕ ಕಲ್ಪವೃಕ್ಷಗಳಿಂದ ಸುಶೋಭಿತವಾಗಿತ್ತು. ॥ ೨೮ ॥

ರಕ್ತಕಂಠಖಗಾನೀಕಸ್ವರಮಂಡಿತಷಟ್ಪದಮ್ ।
ಕಲಹಂಸಕುಲಪ್ರೇಷ್ಠಂ ಖರದಂಡಜಲಾಶಯಮ್ ॥ ೨೯ ॥

ಅದರಲ್ಲಿ ಕೋಗಿಲೆಯೇ ಮುಂತಾದ ಪಕ್ಷಿಗಳ ಕಲರವವು ಮತ್ತು ದುಂಬಿಗಳ ಝೇಂಕಾರಗಳು ಎಲ್ಲೆಡೆ ಕೇಳಿ ಬರುತ್ತಿದ್ದವು. ರಾಜಹಂಸದ ಪರಮ ಪ್ರಿಯ ಕಮಲಕುಸುಮಗಳಿಂದ ಸುಶೋಭಿತವಾದ ಅನೇಕ ಸರೋವರಗಳು ಇದ್ದವು. ॥ ೨೯ ॥

ವನಕುಂಜರಸಂಘೃಷ್ಟಹರಿಚಂದನವಾಯುನಾ ।
ಅಧಿ ಪುಣ್ಯಜನಸ್ತ್ರೀಣಾಂ ಮುಹುರುನ್ಮಥಯನ್ಮನಃ ॥ ೩೦ ॥

ಆ ವನವು ಕಾಡಾನೆಗಳು ಉಜ್ಜಿದ್ದರಿಂದ ವಿಶೇಷವಾಗಿ ಗಂಧವನ್ನು ಸೂಸುವ ಹರಿಚಂದನ ವೃಕ್ಷಗಳನ್ನು ಹಾಯ್ದು ಬೀಸುವ ಸುಗಂಧಿತವಾಯುವು ಯಕ್ಷಪತ್ನಿಯರ ಮನಸ್ಸಿನಲ್ಲಿ ವಿಶೇಷವಾಗಿ ಮದವನ್ನೇರಿಸುತ್ತಿತ್ತು. ॥ ೩೦ ॥

ವೈದೂರ್ಯಕೃತಸೋಪಾನಾ ವಾಪ್ಯ ಉತ್ಪಲಮಾಲಿನೀಃ ।
ಪ್ರಾಪ್ತಾಂ ಕಿಂಪುರುಷೈರ್ದೃಷ್ಟ್ವಾ ತ ಆರಾದ್ದದೃಶುರ್ವಟಮ್ ॥ ೩೧ ॥

ವೈಡೂರ್ಯ ಮಣಿಗಳಿಂದ ರಚಿತವಾದ ಸೋಪಾನಗಳಿಂದ ಕೂಡಿ, ಕಮಲಪುಷ್ಪಗಳ ಸಮೂಹವು ಅರಳಿನಿಂತಿದ್ದ ಅನೇಕ ಪುಷ್ಕರಿಣಿಗಳು ಅಲ್ಲಿ ಶೋಭಿಸುತ್ತಿದ್ದುವು. ಕಿಂಪುರುಷರು ಆಯಾಸ ಪರಿಹಾರಕ್ಕಾಗಿ ಹಾಗೂ ಮನೋವಿನೋದಗಳಿಗಾಗಿ ಅಲ್ಲಿಗೆ ಬಂದಿದ್ದರು. ಇಂತಹ ವನಶೋಭೆಯನ್ನು ದಿಟ್ಟಿಸುತ್ತಾ ದೇವತೆಗಳು ಸ್ವಲ್ಪ ಮುಂದೆ ಹೋದಾಗ ಅವರಿಗೆ ಸನಿಹದಲ್ಲೇ ಒಂದು ವಿಶಾಲವಾದ ವಟವೃಕ್ಷ ಗೋಚರಿಸಿತು. ॥ ೩೧ ॥

ಸ ಯೋಜನಶತೋತ್ಸೇಧಃ ಪಾದೋನವಿಟಪಾಯತಃ ।
ಪರ್ಯಕ್ಕೃತಾಚಲಚ್ಛಾಯೋ ನಿರ್ನೀಡಸ್ತಾಪವರ್ಜಿತಃ ॥ ೩೨ ॥

ಆ ಅದ್ಭುತವಾದ ವಟವೃಕ್ಷವು ನೂರು ಯೋಜನಗಳಷ್ಟು ಎತ್ತರವಾಗಿತ್ತು. ಅದರ ಕೊಂಬೆಗಳು ಎಪ್ಪತ್ತೈದು ಯೋಜನ ಹರಡಿಕೊಂಡಿದ್ದವು. ಅದರ ಸುತ್ತಲೂ ನಿರಂತರ ನೆರಳು ಆವರಿಸಿದ್ದು ತಾಪವು ಲವಲೇಶವೂ ಇಲ್ಲದೆ ತಂಪಿನ ನೆಲೆಯಾಗಿತ್ತು. ಆ ವೃಕ್ಷದಲ್ಲಿ ಒಂದು ಗೂಡೂ ಇರಲಿಲ್ಲ. ॥ ೩೨ ॥

ತಸ್ಮಿನ್ಮಹಾಯೋಗಮಯೇ ಮುಮುಕ್ಷುಶರಣೇ ಸುರಾಃ ।
ದದೃಶುಃ ಶಿವಮಾಸೀನಂ ತ್ಯಕ್ತಾಮರ್ಷಮಿವಾಂತಕಮ್ ॥ ೩೩ ॥

ಮಹಾಯೋಗಮಯವೂ, ಮುಮುಕ್ಷುಗಳಿಗೆ ಆಶ್ರಯವೂ ಆದ ಆ ವೃಕ್ಷದ ಕೆಳಗೆ ವಿರಾಜಿಸುತ್ತಿದ್ದ ಭಗವಾನ್ ಶಂಕರನನ್ನು ದೇವತೆಗಳು ನೋಡಿದರು. ಅವನು ಸಾಕ್ಷಾತ್ ಕ್ರೋಧವನ್ನು ತೊರೆದ ಕಾಲನಂತೆ ಬೆಳಗುತ್ತಿದ್ದನು. ॥ ೩೩ ॥

ಸನಕಾದ್ಯೈರ್ಮಹಾಸಿದ್ಧೈಃ ಶಾಂತೈಃ ಸಂಶಾಂತವಿಗ್ರಹಮ್ ।
ಉಪಾಸ್ಯಮಾನಂ ಸಖ್ಯಾ ಚ ಭರ್ತ್ರಾ ಗುಹ್ಯಕರಕ್ಷಸಾಮ್ ॥ ೩೪ ॥

ವಿದ್ಯಾತಪೋಯೋಗಪಥಮಾಸ್ಥಿತಂ ತಮಧೀಶ್ವರಮ್ ।
ಚರಂತಂ ವಿಶ್ವಸುಹೃದಂ ವಾತ್ಸಲ್ಯಾಲ್ಲೋಕಮಂಗಲಮ್ ॥ ೩೫ ॥

ಲಿಂಗಂ ಚ ತಾಪಸಾಭೀಷ್ಟಂ ಭಸ್ಮದಂಡಜಟಾಜಿನಮ್ ।
ಅಂಗೇನ ಸಂಧ್ಯಾಭ್ರರುಚಾ ಚಂದ್ರಲೇಖಾಂ ಚ ಬಿಭ್ರತಮ್ ॥ ೩೬ ॥

ಉಪವಿಷ್ಟಂ ದರ್ಭಮಯ್ಯಾಂ ಬೃಸ್ಯಾಂ ಬ್ರಹ್ಮ ಸನಾತನಮ್ ।
ನಾರದಾಯ ಪ್ರವೋಚಂತಂ ಪೃಚ್ಛತೇ ಶೃಣ್ವತಾಂ ಸತಾಮ್ ॥ ೩೭ ॥

ಕೃತ್ವೋರೌ ದಕ್ಷಿಣೇ ಸವ್ಯಂ ಪಾದಪದ್ಮಂ ಚ ಜಾನುನಿ ।
ಬಾಹುಂ ಪ್ರಕೋಷ್ಠೇಽಕ್ಷಮಾಲಾಮಾಸೀನಂ ತರ್ಕಮುದ್ರಯಾ ॥ ೩೮ ॥

ತಂ ಬ್ರಹ್ಮನಿರ್ವಾಣಸಮಾಧಿಮಾಶ್ರಿತಂ
ವ್ಯುಪಾಶ್ರಿತಂ ಗಿರಿಶಂ ಯೋಗಕಕ್ಷಾಮ್ ।
ಸಲೋಕಪಾಲಾ ಮುನಯೋ ಮನೂನಾಂ
ಮಾದ್ಯಂ ಮನುಂ ಪ್ರಾಂಜಲಯಃ ಪ್ರಣೇಮುಃ ॥ ೩೯ ॥

ಸ ತೂಪಲಭ್ಯಾಗತಮಾತ್ಮಯೋನಿಂ
ಸುರಾಸುರೇಶೈರಭಿವಂದಿತಾಂಘ್ರಿಃ ।
ಉತ್ಥಾಯ ಚಕ್ರೇ ಶಿರಸಾಭಿವಂದನ-
ಮರ್ಹತ್ತಮಃ ಕಸ್ಯ ಯಥೈವ ವಿಷ್ಣುಃ ॥ ೪೦ ॥

ತಥಾಪರೇ ಸಿದ್ಧಗಣಾ ಮಹರ್ಷಿಭಿ-
ರ್ಯೇ ವೈ ಸಮಂತಾದನು ನೀಲಲೋಹಿತಮ್ ।
ನಮಸ್ಕೃತಃ ಪ್ರಾಹ ಶಶಾಂಕಶೇಖರಂ
ಕೃತಪ್ರಣಾಮಂ ಪ್ರಹಸನ್ನಿವಾತ್ಮಭೂಃ ॥ ೪೧ ॥

ಬ್ರಹ್ಮೋವಾಚ

ಜಾನೇ ತ್ವಾಮೀಶಂ ವಿಶ್ವಸ್ಯ ಜಗತೋ ಯೋನಿಬೀಜಯೋಃ ।
ಶಕ್ತೇಃ ಶಿವಸ್ಯ ಚ ಪರಂ ಯತ್ತದ್ ಬ್ರಹ್ಮ ನಿರಂತರಮ್ ॥ ೪೨ ॥

ತ್ವಮೇವ ಭಗವನ್ನೇತಚ್ಛಿವಶಕ್ತ್ಯೋಃ ಸರೂಪಯೋಃ ।
ವಿಶ್ವಂ ಸೃಜಸಿ ಪಾಸ್ಯತ್ಸಿ ಕ್ರೀಡನ್ನೂರ್ಣಪಟೋ ಯಥಾ ॥ ೪೩ ॥

ಭಗವಾನ್ ಭೂತನಾಥನ ಅಂಗಾಂಗಗಳು ತುಂಬಾ ಪ್ರಶಾಂತವಾಗಿದ್ದವು. ಸನಂದನಾದಿ ಶಾಂತ ಸಿದ್ಧಗಣರು ಮತ್ತು ಗೆಳೆಯನಾದ ಯಕ್ಷಪತಿಯಾದ ಕುಬೇರನು ಸ್ವಾಮಿಯ ಸೇವೆ ಮಾಡುತ್ತಿದ್ದರು. ॥ ೩೪ ॥ ಜಗತ್ಪತಿಯಾದ ಮಹಾದೇವನು ಜಗತ್ತಿಗೆ ಮಿತ್ರನಾಗಿ, ವಾತ್ಸಲ್ಯದಿಂದ ಎಲ್ಲರಿಗೂ ಕಲ್ಯಾಣವನ್ನುಂಟುಮಾಡುವವನು. ಲೋಕಹಿತಕ್ಕಾಗಿಯೇ ಅವನು ಉಪಾಸನೆ, ತಪಸ್ಸು ಮತ್ತು ಸಮಾಧಿಗಳೇ ಮುಂತಾದ ಯೋಗ ಸಾಧನೆಗಳನ್ನು ಆಚರಿಸುತ್ತಿದ್ದನು. ॥ ೩೫ ॥ ಭಗವಂತನು ಸಂಜೆಯ ಮೋಡದಂತೆ ಬೆಳಗುತ್ತಿದ್ದು, ತನ್ನ ದೇಹದಲ್ಲಿ ತಪಸ್ವಿಗಳಿಗೆ ಇಷ್ಟ ಚಿಹ್ನೆಗಳಾದ ಭಸ್ಮ, ಯೋಗದಂಡ, ಮೃಗಚರ್ಮವನ್ನೂ, ತಲೆಯಲ್ಲಿ ಚಂದ್ರಕಲೆಯನ್ನೂ ಧರಿಸಿದ್ದನು. ॥ ೩೬ ॥ ದರ್ಭೆಯ ಆಸನದಲ್ಲಿ ವಿರಾಜಿಸುತ್ತಿದ್ದ ಪ್ರಭು ದಕ್ಷಿಣಾಮೂರ್ತಿಯು ಶ್ರೋತೃಗಳ ನಡುವೆ ಪ್ರಶ್ನಿಸುತ್ತಿದ್ದ ನಾರದಮಹರ್ಷಿಗಳಿಗೆ ಸನಾತನ ಪರಬ್ರಹ್ಮವನ್ನು ಕುರಿತು ಉಪದೇಶಿಸುತ್ತಿದ್ದನು. ॥ ೩೭ ॥ ಎಡಗಾಲನ್ನು ಬಲಮೊಣಕಾಲಿನ ಮೇಲೂ, ಎಡಗೈಯನ್ನು ಎಡಮಂಡಿಯ ಮೇಲೂ ಇರಿಸಿಕೊಂಡು ಮಣಿಕಟ್ಟಿನಲ್ಲಿ ರುದ್ರಾಕ್ಷಿ ಮಾಲೆಯನ್ನು ಧರಿಸಿ, ತರ್ಕಮುದ್ರೆಯಿಂದ * ಕೂಡಿ ವಿರಾಜಿಸುತ್ತಿದ್ದನು. ॥ ೩೮ ॥ ಅವನು ಯೋಗಪಟ್ಟವನ್ನು ಆಶ್ರಯಿಸಿ ಏಕಾಗ್ರಚಿತ್ತದಿಂದ ಬ್ರಹ್ಮಸಮಾಧಿಯ ಸುಖವನ್ನು ಅನುಭವಿಸುತ್ತಿದ್ದನು. ಲೋಕಪಾಲರ ಸಹಿತ ಸಮಸ್ತ ಮುನಿಗಳು ಮನನಶೀಲರಲ್ಲಿ ಸರ್ವಶ್ರೇಷ್ಠ ಭಗವಾನ್ ಶಂಕರನಿಗೆ ಕೈಜೋಡಿಸಿ ಪ್ರಣಾಮಮಾಡಿದರು. ॥ ೩೯ ॥ ಸಮಸ್ತ ದೇವಾಧಿಪತಿಗಳೂ, ದೈತ್ಯಾಧಿಪತಿಗಳೂ ದೇವದೇವನಾದ ಮಹಾದೇವನ ಚರಣಕಮಲಗಳನ್ನು ವಂದಿಸುತ್ತಿದ್ದರೂ, ಅವನು ಬ್ರಹ್ಮದೇವರು ತನ್ನ ಸ್ಥಾನಕ್ಕೆ ಬಂದಿರುವುದನ್ನು ನೋಡಿ ಕೂಡಲೇ ಮೇಲೆದ್ದು – ವಾಮನಾವತಾರದಲ್ಲಿ ಪರಮಪೂಜ್ಯ ಭಗವಾನ್ ಮಹಾವಿಷ್ಣುವು ಕಶ್ಯಪರಿಗೆ ವಂದಿಸಿದಂತೆಯೇ – ತಲೆತಗ್ಗಿಸಿ ಅವರಿಗೆ ನಮಸ್ಕಾರ ಮಾಡಿದನು. ॥ ೪೦ ॥ ಹಾಗೆಯೇ ಶಿವನ ಸುತ್ತಲೂ ಕುಳಿತಿದ್ದ ಮಹರ್ಷಿಸಹಿತರಾದ ಸಿದ್ಧಗಣಗಳೂ ಬ್ರಹ್ಮದೇವರಿಗೆ ಎದ್ದು ಪ್ರಣಾಮಮಾಡಿದರು. ಎಲ್ಲರೂ ನಮಸ್ಕಾರಮಾಡಿದ ಬಳಿಕ ಬ್ರಹ್ಮದೇವರು ತನಗೆ ನಮಸ್ಕಾರಮಾಡಿದ್ದ ಭಗವಾನ್ ಚಂದ್ರಶೇಖರನಿಗೆ ನಗುತ್ತಾ ಹೀಗೆಂದರು – ॥ ೪೧ ॥

**ಬ್ರಹ್ಮದೇವರು ಹೇಳುತ್ತಾರೆ** – ಓ ದೇವದೇವಾ ! ನೀನು ಇಡೀ ಜಗತ್ತಿಗೆ ಕ್ಷೇತ್ರ ಮತ್ತು ಬೀಜಗಳಾಗಿರುವ ಪ್ರಕೃತಿ ಹಾಗೂ ಪುರುಷ ಇವರಿಬ್ಬರಿಗೂ ಪರನಾಗಿ ಏಕರಸನಾಗಿರುವ ಶಾಶ್ವತ ಪರಬ್ರಹ್ಮನೇ ಆಗಿದ್ದೀಯೆ ಎಂಬುದನ್ನು ನಾನು ಬಲ್ಲೆನು. ॥ ೪೨ ॥ ಎಲೈ ಭಗವಂತನೇ ! ನೀನು ನಿನ್ನ ಸ್ವರೂಪಭೂತ ಶಿವ-ಶಕ್ತಿ (ಪ್ರಕೃತಿ-ಪುರುಷ) ರೂಪದಲ್ಲಿ ಕ್ರೀಡಿಸುತ್ತಾ ಜೇಡರ ಹುಳುವಿನಂತೆ ಬೇರಾವುದರ ಅಪೇಕ್ಷೆ ಇಲ್ಲದೆ ಲೀಲೆಯಿಂದ ಈ ಜಗತ್ತೆಂಬ ಬಲೆಯನ್ನು ರಚಿಸಿ, ರಕ್ಷಿಸಿ, ಉಪಸಂಹಾರ ಮಾಡಿಕೊಳ್ಳುತ್ತಿರುವೆ. ॥ ೪೩ ॥

* ತರ್ಜನಿಯನ್ನು ಅಂಗುಷ್ಠದೊಡನೆ ಸೇರಿಸಿ ಇತರ ಬೆರಳುಗಳನ್ನು ಒಟ್ಟಿಗೆ ಸೇರಿಸಿ ಚಾಚಿ, ಜ್ಞಾನವನ್ನು ಬೋಧಿಸುವ ಮುದ್ರೆಗೆ ತರ್ಕಮುದ್ರೆ ಎಂದು ಜ್ಞಾನಮುದ್ರೆ ಎಂದೂ ಹೇಳುತ್ತಾರೆ. ಚಿನ್ಮುದ್ರೆ ಎಂದೂ ಇದರದ್ದೇ ಹೆಸರು.

ತ್ವಮೇವ ಧರ್ಮಾರ್ಥದುಘಾಭಿಪತ್ತಯೇ
ದಕ್ಷೇಣ ಸೂತ್ರೇಣ ಸಸರ್ಜಿಥಾಧ್ವರಮ್ ।
ತ್ವಯೈವ ಲೋಕೇಽವಸಿತಾಶ್ಚ ಸೇತವೋ
ಯಾನ್ ಬ್ರಾಹ್ಮಣಾ ಶ್ರದ್ದಧತೇ ಧೃತವ್ರತಾಃ ॥ ೪೪ ॥

ತ್ವಂ ಕರ್ಮಣಾಂ ಮಂಗಲ ಮಂಗಲಾನಾಂ
ಕರ್ತುಃ ಸ್ಮ ಲೋಕಂ ತನುಷೇ ಸ್ವಃ ಪರಂ ವಾ ।
ಅಮಂಗಲಾನಾಂ ಚ ತಮಿಸ್ರಮುಲ್ಬಣಂ
ವಿಪರ್ಯಯಃ ಕೇನ ತದೇವ ಕಸ್ಯಚಿತ್ ॥ ೪೫ ॥

ನ ವೈ ಸತಾಂ ತ್ವಚ್ಚರಣಾರ್ಪಿತಾತ್ಮನಾಂ
ಭೂತೇಷು ಸರ್ವೇಷ್ವಭಿಪಶ್ಯತಾಂ ತವ ।
ಭೂತಾನಿ ಚಾತ್ಮನ್ಯಪೃಥಗ್ದಿದೃಕ್ಷತಾಂ
ಪ್ರಾಯೇಣ ರೋಷೋಽಭಿಭವೇದ್ಯಥಾ ಪಶುಮ್ ॥ ೪೬ ॥

ಪೃಥಗ್ಧಿಯಃ ಕರ್ಮದೃಶೋ ದುರಾಶಯಾಃ
ಪರೋದಯೇನಾರ್ಪಿತಹೃದ್ರುಜೋಽನಿಶಮ್ ।
ಪರಾನ್ದುರುಕ್ತೈರ್ವಿತುದಂತ್ಯರುಂತುದಾ-
ಸ್ತಾನ್ಮಾ ವಧೀದ್ದೈವವಧಾನ್ಭವದ್ವಿಧಃ ॥ ೪೭ ॥

ಯಸ್ಮಿನ್ ಯದಾ ಪುಷ್ಕರನಾಭಮಾಯಯಾ
ದುರಂತಯಾ ಸ್ಪೃಷ್ಟಧಿಯಃ ಪೃಥಗ್ದೃಶಃ ।
ಕುರ್ವಂತಿ ತತ್ರ ಹ್ಯನುಕಂಪಯಾ ಕೃಪಾಂ
ನ ಸಾಧವೋ ದೈವಬಲಾತ್ಕೃತೇ ಕ್ರಮಮ್ ॥ ೪೮ ॥

ಭವಾಂಸ್ತು ಪುಂಸಃ ಪರಮಸ್ಯ ಮಾಯಯಾ
ದುರಂತಯಾಸ್ಪೃಷ್ಟಮತಿಃ ಸಮಸ್ತದೃಕ್ ।
ತಯಾ ಹತಾತ್ಮಸ್ವನುಕರ್ಮಚೇತಃ
ಸ್ವನುಗ್ರಹಂ ಕರ್ತುಮಿಹಾರ್ಹಸಿ ಪ್ರಭೋ ॥ ೪೯ ॥

ಕುರ್ವಧ್ವರಸ್ಯೋದ್ಧರಣಂ ಹತಸ್ಯ ಭೋಃ
ತ್ವಯಾಸಮಾಪ್ತಸ್ಯ ಮನೋ ಪ್ರಜಾಪತೇಃ ।
ನ ಯತ್ರ ಭಾಗಂ ತವ ಭಾಗಿನೋ ದದುಃ
ಕುಯಾಜ್ವಿನೋ ಯೇನ ಮಖೋ ನಿನೀಯತೇ ॥ ೫೦ ॥

ಧರ್ಮವನ್ನೂ – ಅರ್ಥವನ್ನೂ ದೊರಕಿಸಿಕೊಡುವ ವೇದಗಳ ರಕ್ಷಣೆಗಾಗಿ ದಕ್ಷನನ್ನು ನಿಮಿತ್ತವನ್ನಾಗಿಸಿಕೊಂಡು ಯಜ್ಞವನ್ನು ಪ್ರಕಟಪಡಿಸಿದವನೂ ನೀನೇ. ನಿಯಮನಿಷ್ಠರಾದ ಬ್ರಾಹ್ಮಣರು ಶ್ರದ್ಧೆಯಿಂದ ಪಾಲಿಸುತ್ತಿರುವ ವರ್ಣಾಶ್ರಮಗಳ ಮರ್ಯಾದೆಗಳನ್ನು ನೆಲೆಗೊಳಿಸಿದವನೂ ನೀನೇ ಆಗಿರುವೆ. ॥ ೪೪ ॥ ಮಂಗಳಮಯ ಮಹೇಶ್ವರನೇ! ನೀನು ಶುಭ ಕರ್ಮಗಳನ್ನು ಮಾಡುವವರಿಗೆ ಸ್ವರ್ಗಲೋಕವನ್ನು ಅಥವಾ ಮೋಕ್ಷವನ್ನು ಕರುಣಿಸುತ್ತಿರುವೆ ಹಾಗೂ ಅಮಂಗಳ ಪಾಪಕರ್ಮಗಳನ್ನು ಮಾಡುವವರಿಗೆ ಘೋರ ನರಕದಲ್ಲಿ ಕೆಡಹುವೆ. ಹಾಗಿರುವಾಗಲೂ ಕೆಲ-ಕೆಲವ್ಯಕ್ತಿಗಳಿಗೆ ಈ ಕರ್ಮಗಳ ಫಲಗಳು ವಿಪರೀತ ಹೇಗಾಗುತ್ತದೆ? ॥ ೪೫ ॥

ನಿನ್ನ ಚರಣಾರವಿಂದಗಳಲ್ಲಿ ತಮ್ಮನ್ನು ಅರ್ಪಿಸಿಕೊಂಡ ಮಹಾನುಭಾವರು ಸಮಸ್ತ ಪ್ರಾಣಿಗಳಲ್ಲಿ ನಿನ್ನನ್ನೇ ನೋಡುತ್ತಾರೆ ಹಾಗೂ ಸಮಸ್ತ ಜೀವರನ್ನು ಅಭೇದದೃಷ್ಟಿಯಿಂದ ಆತ್ಮನಲ್ಲೇ ನೋಡುತ್ತಾರೆ. ಅಂತಹವರು ಪಶುಗಳಂತೆ ಕ್ರೋಧಕ್ಕೆ ವಶರಾಗುವುದಿಲ್ಲ. ॥ ೪೬ ॥ ಭೇದ ಬುದ್ಧಿ ಇರುವ ಕಾರಣ ಕರ್ಮಗಳಲ್ಲೇ ಆಸಕ್ತರಾದ ಜನರ ನಿಯತ್ತು ಸರಿಯಿರುವುದಿಲ್ಲ. ಬೇರೆಯವರ ಉನ್ನತಿಯನ್ನು ನೋಡಿ ಹಗಲು-ರಾತ್ರಿ ಅವರ ಮನಸ್ಸು ಕುದಿಯುತ್ತಾ ಇರುತ್ತದೆ. ಮರ್ಮಭೇದಿಯಾದ ತಮ್ಮ ದುರ್ವಚನಗಳಿಂದ ಇತರರ ಮನಸ್ಸನ್ನು ನೋಯಿಸುತ್ತಿರುವ ಇಂತಹ ಅಜ್ಞಾನಿಗಳನ್ನೂ ಕೂಡ ನಿನ್ನಂತಹವರು ಕೊಲ್ಲುವುದು ಉಚಿತವಾಗಲಾರದು. ಏಕೆಂದರೆ, ಆ ಬಡಪಾಯಿಗಳಾದರೋ ವಿಧಿಯಿಂದಲೇ ಮರಣಕ್ಕೆ ತುತ್ತಾದವರು. ॥ ೪೭ ॥ ದೇವದೇವಾ! ಭಗವಾನ್ ಪದ್ಮನಾಭನ ಪ್ರಬಲ ಮಾಯೆಯಿಂದ ಮೋಹಿತನಾಗಿ ಯಾರಾದರೂ ಭೇದಬುದ್ಧಿಯನ್ನು ತೋರಿದರೂ ಸಾಧು-ಸತ್ಪುರುಷರು ತಮ್ಮ ಪರದುಃಖಕಾತರ ಸ್ವಭಾವದಿಂದಾಗಿ ಅವರ ಮೇಲೆ ಕೃಪೆಯನ್ನೇ ಮಾಡುತ್ತಾರೆ. ದೈವವಶದಿಂದ ಏನಾದರೂ ನಡೆದು ಹೋದರೆ 'ಇದೆಲ್ಲ ಕರ್ಮಗಳ ಫಲ'ವೆಂದು ಅದನ್ನು ತಡೆಯುವ ಪ್ರಯತ್ನ ಮಾಡುವುದಿಲ್ಲ. ॥ ೪೮ ॥

ಪ್ರಭುವೇ! ನೀನು ಸರ್ವಜ್ಞನಾಗಿರುವೆ. ಪರಮಪುರುಷ ಭಗವಂತನ ದುಸ್ತರ ಮಾಯೆಯು ನಿನ್ನ ಬುದ್ಧಿಯನ್ನು ಸ್ಪರ್ಶಿಸಲಾರದು. ಆದ್ದರಿಂದ ಯಾರ ಚಿತ್ತವು ಮಾಯೆಗೆ ವಶವಾಗಿ ಕರ್ಮ ಮಾರ್ಗದಲ್ಲಿ ಆಸಕ್ತವಾಗಿದೆಯೋ, ಅವನಿಂದ ಅಪರಾಧ ನಡೆದು ಹೋದರೂ ಕೂಡ ಅವನ ಮೇಲೆ ನೀನು ಕೃಪೆಯನ್ನೇ ತೋರಬೇಕು. ॥ ೪೯ ॥ ಭಗವಂತಾ! ನೀನೇ ಎಲ್ಲಕ್ಕೂ ಮೂಲ ನಾದವನು. ಎಲ್ಲ ಯಜ್ಞಗಳನ್ನು ಪೂರ್ಣಗೊಳಿಸುವವನೂ ನೀನೇ ಆಗಿರುವೆ. ಯಜ್ಞಭಾಗವನ್ನು ಪಡೆಯುವ ಪೂರ್ಣ ಅಧಿಕಾರ ನಿನಗಿದೆ. ಆದರೂ ಈ ದಕ್ಷಯಜ್ಞದ ಬುದ್ಧಿಹೀನರಾದ ಯಾಜಕರು ನಿನಗೆ ಯಜ್ಞದ ಹವಿರ್ಭಾಗವನ್ನು ಕೊಡಲಿಲ್ಲ. ಇದರಿಂದಲೇ ಅದು ಧ್ವಂಸವಾಯಿತು. ಈಗ ನೀನು ಅಪೂರ್ಣವಾಗಿರುವ ಯಜ್ಞವನ್ನು ಪೂರ್ಣಗೊಳಿಸುವ ಕೃಪೆಯನ್ನು ಮಾಡಬೇಕು. ॥ ೫೦ ॥

ಜೀವತಾದ್ಯಜಮಾನೋಽಯಂ ಪ್ರಪದ್ಯೇತಾಕ್ಷಿಣೀ ಭಗಃ ।
ಭೃಗೋಃ ಶ್ಮಶ್ರೂಣಿ ರೋಹಂತು ಪೂಷ್ಣೋ ದಂತಾಶ್ಚ ಪೂರ್ವವತ್ ॥ ೫೧ ॥

ದೇವಾನಾಂ ಭಗ್ನಗಾತ್ರಾಣಾಮೃತ್ವಿಜಾಂ ಚಾಯುಧಾಶ್ಮಭಿಃ ।
ಭವತಾನುಗೃಹೀತಾನಾಮಾಶು ಮನ್ಯೋಽಸ್ತ್ವನಾತುರಮ್ ॥ ೫೨ ॥

ಏಷ ತೇ ರುದ್ರ ಭಾಗೋಽಸ್ತು ಯದುಚ್ಛಿಷ್ಟೋಽಧ್ವರಸ್ಯ ವೈ ।
ಯಜ್ಞಸ್ತೇ ರುದ್ರ ಭಾಗೇನ ಕಲ್ಪತಾಮದ್ಯ ಯಜ್ಞಹನ್ ॥ ೫೩ ॥

ಪ್ರಭೋ! ನಿನ್ನ ಅನುಗ್ರಹದಿಂದ – ಯಜ್ಞದ ಯಜಮಾನನಾದ ದಕ್ಷನು ಜೀವಂತನಾಗಲಿ. ಭಗದೇವತೆಗೆ ಕಣ್ಣುಗಳು ಬರಲಿ. ಭೃಗುಮಹರ್ಷಿಗಳಿಗೆ ಗಡ್ಡ-ಮೀಸೆಗಳು ಬರಲಿ. ಪೂಷಾದೇವತೆಗೆ ಮೊದಲಿನಂತೆ ಹಲ್ಲುಗಳು ಮೂಡಲಿ. ॥ ೫೧ ॥ ರುದ್ರದೇವನೇ! ಅಸ್ತ್ರ-ಶಸ್ತ್ರಗಳಿಂದ ಮತ್ತು ಕಲ್ಲುಮಳೆಯಿಂದ ದೇವತೆಗಳ, ಋತ್ವಿಜರ ಗಾಯಗೊಂಡ ಅಂಗಾಂಗಗಳೆಲ್ಲವೂ ನಿನ್ನ ಅನುಗ್ರಹದಿಂದ ಸರಿಯಾಗಲಿ. ॥ ೫೨ ॥ ಯಜ್ಞವು ಸಂಪೂರ್ಣವಾದ ಬಳಿಕ ಶೇಷವಾಗಿ ಉಳಿಯುವುದೆಲ್ಲವೂ ಯಾವಾಗಲೂ ನಿನ್ನ ಭಾಗವೇ ಆಗಿದೆ. ಓ ಯಜ್ಞವಿಧ್ವಂಸಕನೇ! ನಿನ್ನ ಈ ಯಜ್ಞಭಾಗದಿಂದಲೇ ಈಗ ಈ ಯಜ್ಞವು ಪೂರ್ಣವಾಗಲೀ. ॥ ೫೩ ॥

*ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ರುದ್ರಸಾಂತ್ವನಂ ನಾಮ ಷಷ್ಠೋಽಧ್ಯಾಯಃ ॥ ೬ ॥**

# ಏಳನೆಯ ಅಧ್ಯಾಯ

## ದಕ್ಷಯಜ್ಞದ ಪರಿಸಮಾಪ್ತಿ

*ಮೈತ್ರೇಯ ಉವಾಚ*

ಇತ್ಯಜೇನಾನುನೀತೇನ ಭವೇನ ಪರಿತುಷ್ಯತಾ ।
ಅಭ್ಯಧಾಯಿ ಮಹಾಬಾಹೋ ಪ್ರಹಸ್ಯ ಶ್ರೂಯತಾಮಿತಿ ॥ ೧ ॥

*ಶ್ರೀಮಹಾದೇವ ಉವಾಚ*

ನಾಘಂ ಪ್ರಜೇಶ ಬಾಲಾನಾಂ ವರ್ಣಯೇ ನಾನುಚಿಂತಯೇ ।
ದೇವಮಾಯಾಭಿಭೂತಾನಾಂ ದಂಡಸ್ತತ್ರ ಧೃತೋ ಮಯಾ ॥ ೨ ॥

ಪ್ರಜಾಪತೇರ್ದಗ್ಧಶೀರ್ಷ್ಣೋ ಭವತ್ವಜಮುಖಂ ಶಿರಃ ।
ಮಿತ್ರಸ್ಯ ಚಕ್ಷುಷೇಕ್ಷೇತ ಭಾಗಂ ಸ್ವಂ ಬರ್ಹಿಷೋ ಭಗಃ ॥ ೩ ॥

ಪೂಷಾ ತು ಯಜಮಾನಸ್ಯ ದದ್ಭಿರ್ಜಕ್ಷತು ಪಿಷ್ಟಭುಕ್ ।
ದೇವಾಃ ಪ್ರಕೃತಸರ್ವಾಂಗಾ ಯೇ ಮ ಉಚ್ಛೇಷಣಂ ದದುಃ ॥ ೪ ॥

ಬಾಹುಭ್ಯಾಮಶ್ವಿನೋಃ ಪೂಷ್ಣೋ ಹಸ್ತಾಭ್ಯಾಂ ಕೃತಬಾಹವಃ ।
ಭವಂತ್ವಧ್ವರ್ಯವಶ್ಚಾನ್ಯೇ ಬಸ್ತಶ್ಮಶ್ರುರ್ಭೃಗುರ್ಭವೇತ್ ॥ ೫ ॥

ಶ್ರೀಮೈತ್ರೇಯರು ಹೇಳುತ್ತಾರೆ – ಮಹಾಬಾಹುವಾದ ವಿದುರನೇ! ಬ್ರಹ್ಮದೇವರು ಈ ವಿಧವಾಗಿ ಪ್ರಾರ್ಥಿಸಿದಾಗ ಭಗವಾನ್ ಶಂಕರನು ಪ್ರಸನ್ನತೆಯಿಂದ ನಗುತ್ತಾ ಹೀಗೆ ಹೇಳಿದನು – ಕೇಳಿರಿ. ॥ ೧ ॥

ಶ್ರೀಮಹಾದೇವನಿಂತೆಂದನು – ಪ್ರಜಾಪತಿಯೇ! ಭಗವಂತನ ಮಾಯೆಯಿಂದ ಮೋಹಿತರಾದ ದಕ್ಷನಂತಹ ತಿಳಿಗೇಡಿಗಳ ಅಪರಾಧವನ್ನು ನಾನು ಚರ್ಚಿಸುವುದಿಲ್ಲ ಹಾಗೂ ನೆನಪಿಡುವುದೂ ಇಲ್ಲ. ನಾನಾದರೋ ಕೇವಲ ಅವನನ್ನು ಎಚ್ಚರಿಸಲಿಕ್ಕಾಗಿ ಸ್ವಲ್ಪ ದಂಡನೆಯನ್ನು ವಿಧಿಸಿದ್ದೇನೆ. ॥ ೨ ॥ ದಕ್ಷಪ್ರಜಾಪತಿಯ ತಲೆಯು ಸುಟ್ಟುಹೋಗಿದೆ. ಅದಕ್ಕಾಗಿ ಅವನಿಗೆ ಹೋತದ ತಲೆ ಜೋಡಿಸಲಾಗುವುದು. ಭಗದೇವತೆಯು ಮಿತ್ರದೇವತೆಯ ಕಣ್ಣುಗಳಿಂದ ತನ್ನ ಯಜ್ಞಭಾಗವನ್ನು ನೋಡಲಿ. ॥ ೩ ॥ ಹಿಟ್ಟಿನ ರೂಪದಲ್ಲಿ ಆಹಾರವನ್ನು ತಿನ್ನುತ್ತಿದ್ದ ಪೂಷಾದೇವತೆಯು ಯಜಮಾನನ ಹಲ್ಲುಗಳಿಂದ ಹವಿರ್ಭಾಗವನ್ನು ತಿನ್ನುವಂತಾಗಲಿ. ಅಂಗವೈಕಲ್ಯವನ್ನು ಪಡೆದ ಇತರ ದೇವತೆಗಳ ಅಂಗೋಪಾಂಗಗಳು ಆರೋಗ್ಯವನ್ನು ಹೊಂದಲಿ. ಏಕೆಂದರೆ, ಅವರು ಯಜ್ಞದ ಶೇಷಭಾಗವಾದ 'ಸ್ವಿಷ್ಟಕೃತ್' ಎಂಬ ಹವಿರ್ಭಾಗವು ನನಗೆ ಸೇರತಕ್ಕದೆಂದು ನಿಶ್ಚಯಿಸಿರುವರು. ॥ ೪ ॥ ಅಧ್ವರ್ಯುಗಳೇ ಮುಂತಾದ ಋತ್ವಿಜರಲ್ಲಿ ಭುಜಗಳು ಮುರಿದು ಹೋಗಿರುವವರು ಅಶ್ವಿನೀದೇವತೆಗಳ ಭುಜಗಳಿಂದಲೂ, ಹಸ್ತಗಳನ್ನು ಕಳೆದು ಕೊಂಡಿರುವವರು ಪೂಷಾದೇವತೆಯ ಕೈಗಳಿಂದಲೂ ತಮ್ಮ ಕಾರ್ಯಗಳನ್ನು ಮಾಡಲಿ. ಭೃಗುಮಹರ್ಷಿಗಳಿಗೆ ಹೋತದಂತಹ ಗಡ್ಡ-ಮೀಸೆಗಳು ಉಂಟಾಗಲಿ. ॥ ೫ ॥

ಮೈತ್ರೇಯ ಉವಾಚ

ತದಾ ಸರ್ವಾಣಿ ಭೂತಾನಿ ಶ್ರುತ್ವಾ ಮೀಢುಷ್ಟಮೋದಿತಮ್ ।
ಪರಿತುಷ್ಟಾತ್ಮಭಿಸ್ತಾತ ಸಾಧು ಸಾಧ್ವಿತ್ಯಥಾಬ್ರುವನ್ ॥ ೬ ॥

ತತೋ ಮೀಢ್ವಾಂಸಮಾಮಂತ್ರ್ಯ ಶುನಾಸೀರಾಃ ಸಹರ್ಷಿಭಿಃ ।
ಭೂಯಸ್ತದ್ದೇವಯಜನಂ ಸಮೀಢ್ವದ್ವೇಧಸೋ ಯಯುಃ ॥ ೭ ॥

ವಿಧಾಯ ಕಾರ್ತ್ಸ್ನ್ಯೇನ ಚ ತದ್ಯದಾಹ ಭಗವಾನ್ಭವಃ ।
ಸಂದಧುಃ ಕಸ್ಯ ಕಾಯೇನ ಸವನೀಯಪಶೋಃ ಶಿರಃ ॥ ೮ ॥

ಸಂಧೀಯಮಾನೇ ಶಿರಸಿ ದಕ್ಷೋ ರುದ್ರಾಭಿವೀಕ್ಷಿತಃ ।
ಸದ್ಯಃ ಸುಪ್ತ ಇವೋತ್ತಸ್ಥೌ ದದೃಶೇ ಜಾಗ್ರತೋ ಮೃಡಮ್ ॥ ೯ ॥

ತದಾ ವೃಷಧ್ವಜದ್ವೇಷಕಲಿಲಾತ್ಮಾ ಪ್ರಜಾಪತಿಃ ।
ಶಿವಾವಲೋಕಾದಭವಚ್ಛರದ್ಧ್ರದ ಇವಾಮಲಃ ॥ ೧೦ ॥

ಭವಸ್ತವಾಯ ಕೃತಧೀರ್ನಾಶಕ್ನೋದನುರಾಗತಃ ।
ಔತ್ಕಂಠ್ಯಾದ್ಬಾಷ್ಪಕಲಯಾ ಸಂಪರೇತಾಂ ಸುತಾಂ ಸ್ಮರನ್ ॥ ೧೧ ॥

ಕೃಚ್ಛ್ರಾತ್ಸಂಸ್ತಭ್ಯ ಚ ಮನಃ ಪ್ರೇಮವಿಹ್ವಲಿತಃ ಸುಧೀಃ ।
ಶಶಂಸ ನಿರ್ವ್ಯಲೀಕೇನ ಭಾವೇನೇಶಂ ಪ್ರಜಾಪತಿಃ ॥ ೧೨ ॥

ದಕ್ಷ ಉವಾಚ

ಭೂಯಾನನುಗ್ರಹ ಅಹೋ ಭವತಾ ಕೃತೋ ಮೇ
ದಂಡಸ್ತ್ವಯಾ ಮಯಿ ಭೃತೋ ಯದಪಿ ಪ್ರಲಬ್ಧಃ ।
ನ ಬ್ರಹ್ಮಬಂಧುಷು ಚ ವಾಂ ಭಗವನ್ನವಜ್ಞಾ
ತುಭ್ಯಂ ಹರೇಶ್ಚ ಕುತ ಏವ ಧೃತವ್ರತೇಷು ॥ ೧೩ ॥

ವಿದ್ಯಾತಪೋವ್ರತಧರಾನ್ಮುಖತಃ ಸ್ಮ ವಿಪ್ರಾನ್
ಬ್ರಹ್ಮಾಽಽತ್ಮತತ್ತ್ವಮವಿತುಂ ಪ್ರಥಮಂ ತ್ವಮಸ್ರಾಕ್ ।
ತದ್ಬ್ರಾಹ್ಮಣಾನ್ಪರಮ ಸರ್ವವಿಪತ್ಸು ಪಾಸಿ
ಪಾಲಃ ಪಶೂನಿವ ವಿಭೋ ಪ್ರಗೃಹೀತದಂಡಃ ॥ ೧೪ ॥

ಯೋಽಸೌ ಮಯಾವಿದಿತತತ್ತ್ವದೃಶಾ ಸಭಾಯಾಂ
ಕ್ಷಿಪ್ತೋ ದುರುಕ್ತಿವಿಶಿಖೈರಗಣಯ್ಯ ತನ್ಮಾಮ್ ।
ಅರ್ವಾಕ್ಪತಂತಮರ್ಹತ್ತಮನಿಂದಯಾಪಾದ್
ದೃಷ್ಟ್ಯಾಽಽರ್ದ್ರಯಾ ಸ ಭಗವಾನ್ಸ್ವಕೃತೇನ ತುಷ್ಯೇತ್ ॥ ೧೫ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವತ್ಸ ವಿದುರನೇ! ಆಗ ಭಗವಾನ್‌ಶಂಕರನ ಮಾತನ್ನು ಕೇಳಿ ಎಲ್ಲರೂ ಪ್ರಸನ್ನಾತ್ಮರಾಗಿ ಧನ್ಯ-ಧನ್ಯವೆಂದು ಕೊಂಡಾಡಿ ಜಯಕಾರಮಾಡಿದರು. ॥ ೬ ॥ ಮತ್ತೆ ಎಲ್ಲ ದೇವತೆಗಳೂ ಮತ್ತು ಋಷಿಗಳೂ ಮಹಾದೇವನನ್ನು ದಕ್ಷನ ಯಜ್ಞಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಿ ಅವನನ್ನೂ ಮತ್ತು ಬ್ರಹ್ಮದೇವರನ್ನು ಕರೆದುಕೊಂಡು ಯಜ್ಞಶಾಲೆಗೆ ಹೋದರು. ॥ ೭ ॥ ಭಗವಾನ್ ಶಂಕರನು ಹೇಳಿದಂತೆಯೇ ಅಲ್ಲಿ ಎಲ್ಲವನ್ನು ಮಾಡಿದರು. ದಕ್ಷನ ದೇಹಕ್ಕೆ ಯಜ್ಞಪಶುವಿನ ತಲೆಯನ್ನು ಜೋಡಿಸಿದರು. ॥ ೮ ॥ ತಲೆಯು ಜೋಡಿಸಿದಾಗ ರುದ್ರದೇವರ ದೃಷ್ಟಿ ಬೀಳುತ್ತಲೇ ದಕ್ಷನು ನಿದ್ದೆಯಿಂದ ಎಚ್ಚರಗೊಂಡವನಂತೆ ಮೇಲೆದ್ದು ತನ್ನ ಮುಂದೆ ನಿಂತಿದ್ದ ಭಗವಾನ್ ಶಿವನನ್ನು ನೋಡಿದನು. ॥ ೯ ॥ ಶಂಕರದ್ರೋಹದಿಂದ ಕಲುಷಿತವಾಗಿದ್ದ ಅವನ ಹೃದಯವು ಶಿವನ ದರ್ಶನದಿಂದ ಶರತ್ಕಾಲದ ಸರೋವರದಂತೆ ಸ್ವಚ್ಛವಾಗಿ ಬಿಟ್ಟಿತು. ॥ ೧೦ ॥ ಅವನು ಮಹಾದೇವನನ್ನು ಸ್ತುತಿಸಲು ಬಯಸಿದರೂ ಮೃತಿಯನ್ನೈದಿದ ತನ್ನ ಪುತ್ರಿಯು ಸ್ಮರಣೆಗೆ ಬಂದು ಪ್ರೀತಿಯಿಂದ ಹಾಗೂ ಉತ್ಕಂಠತೆಯ ಕಾರಣ ಅವನ ಕಣ್ಣುಗಳಲ್ಲಿ ನೀರುತುಂಬಿ, ಮಾತೇ ಹೊರಡದಾಯಿತು. ॥ ೧೧ ॥ ಪ್ರೇಮವಿಹ್ವಲ, ಮೇಧಾವಿಯಾದ ಪ್ರಜಾಪತಿಯು ಹೇಗೋ ತನ್ನ ಹೃದಯದ ಶೋಕವೇಗವನ್ನು ತಡೆದುಕೊಂಡು, ವಿಶುದ್ಧಭಾವದಿಂದ ಭಗವಾನ್ ಶಿವನನ್ನು ಸ್ತುತಿಸತೊಡಗಿದನು. ॥ ೧೨ ॥

**ದಕ್ಷನು ಹೇಳುತ್ತಾನೆ** – "ಭಗವಂತನೇ ! ನಾನು ನಿನ್ನಲ್ಲಿ ಮಹಾಪರಾಧವನ್ನೇ ಮಾಡಿದ್ದೆ. ಆದರೆ ನೀನು ಅದರ ಬದಲಿಗೆ ನನ್ನನ್ನು ಶಿಕ್ಷೆಯ ಮೂಲಕ ಶುದ್ಧಗೊಳಿಸಿ ಮಹದನುಗ್ರಹವನ್ನೇ ಮಾಡಿರುವೆ. ಆಹಾ ! ಎಂತಹ ಕೃಪೆ ನಿನ್ನದು ! ಪೂಜ್ಯನಾದ ನೀನು ಮತ್ತು ಶ್ರೀಹರಿಯಾದರೋ ಆಚಾರಹೀನರಾದ ಹೆಸರಿಗೆ ಮಾತ್ರ ಬ್ರಾಹ್ಮಣರನ್ನೂ ಕೂಡ ಉಪೇಕ್ಷಿಸುವುದಿಲ್ಲ. ಹಾಗಿರುವಾಗ ನಮ್ಮಂತಹ ಯಜ್ಞ ಮಾಡುವವರನ್ನು ಮರೆಯುವುದುಂಟೇ ? ॥ ೧೩ ॥ ಪ್ರಭುವೇ ! ನೀನೇ ಬ್ರಹ್ಮರೂಪದಿಂದ ಮೊಟ್ಟಮೊದಲು ಆತ್ಮತತ್ತ್ವವನ್ನು ರಕ್ಷಿಸಲಿಕ್ಕಾಗಿ ತನ್ನ ಮುಖದಿಂದ ವಿದ್ಯೆ, ತಪಸ್ಸು ವ್ರತಾದಿಗಳನ್ನು ಧರಿಸುವ ಬ್ರಾಹ್ಮಣರನ್ನು ಸೃಷ್ಟಿಮಾಡಿದೆ. ಅನಂತರ ಗೋವಳನು ದೊಣ್ಣೆ ಹಿಡಿದುಕೊಂಡು ಗೋವುಗಳನ್ನು ರಕ್ಷಿಸುತ್ತಿರುವಂತೆ ಆ ಬ್ರಾಹ್ಮಣರನ್ನು ಸಕಲ ವಿಪತ್ತುಗಳಿಂದ ರಕ್ಷಿಸುತ್ತಿರುವೆ. ॥ ೧೪ ॥ ನಾನು ನಿನ್ನ ತತ್ತ್ವವನ್ನು ತಿಳಿದಿರದಿಲ್ಲಿ, ಅದರಿಂದ ತುಂಬಿದ ಸಭೆಯಲ್ಲಿ ನಿನ್ನನ್ನು ವಾಗ್ಬಾಣಗಳಿಂದ ಘಾತಿಗೊಳಿಸಿದೆ. ಆದರೆ ನೀನು ನನ್ನ ಆ ಅಪರಾಧವನ್ನು ಎಣಿಸಲೇ ಇಲ್ಲ. ನಾನಾದರೋ ನಿಮ್ಮಂತಹ ಪೂಜ್ಯತಮ ಮಹಾನುಭಾವರ ವಿಷಯದದಲ್ಲಿ ಅಪರಾಧ ಮಾಡಿದ್ದರಿಂದ ನರಕಾದಿ ನೀಚ ಲೋಕಗಳಲ್ಲಿ ಬೀಳುವವನಾಗಿದ್ದೆ. ಆದರೆ ನೀನು ನಿನ್ನ ಕರುಣಾಪೂರ್ಣದೃಷ್ಟಿಯಿಂದ ನನ್ನನ್ನು ಉದ್ಧರಿಸಿಬಿಟ್ಟೆ. ಈಗಲೂ ನಿನ್ನನ್ನು ಸಂತೋಷಪಡಿಸುವಂತಹ ಯಾವ ಗುಣವೂ ನನ್ನಲ್ಲಿಲ್ಲ. ಆದರೆ ನೀನು ತನ್ನ ಔದಾರ್ಯದ ವರ್ತನೆಯಿಂದ ನಿನ್ನ ಮೇಲೆ ಪ್ರಸನ್ನನಾಗು." ॥ ೧೫ ॥

ಮೈತ್ರೇಯ ಉವಾಚ

ಕ್ಷಮಾಪ್ಯೈವಂ ಸ ಮೀಢ್ವಾಂಸಂ ಬ್ರಹ್ಮಣಾ ಚಾನುಮಂತ್ರಿತಃ ।
ಕರ್ಮ ಸಂತಾನಯಾಮಾಸ ಸೋಪಾಧ್ಯಾಯರ್ತ್ವಿಗಾದಿಭಿಃ ॥ ೧೬ ॥

ವೈಷ್ಣವಂ ಯಜ್ಞಸಂತತ್ಯೈ ತ್ರಿಕಪಾಲಂ ದ್ವಿಜೋತ್ತಮಾಃ ।
ಪುರೋಡಾಶಂ ನಿರವಪನ್ ವೀರಸಂಸರ್ಗಶುದ್ಧಯೇ ॥ ೧೭ ॥

ಅಧ್ವರ್ಯುಣಾಽಽತ್ತಹವಿಷಾ ಯಜಮಾನೋ ವಿಶಾಂಪತೇ ।
ಧಿಯಾ ವಿಶುದ್ಧಯಾ ದಧ್ಯೌ ತಥಾ ಪ್ರಾದುರಭೂದ್ಧರಿಃ ॥ ೧೮ ॥

ತದಾ ಸ್ವಪ್ರಭಯಾ ತೇಷಾಂ ದ್ಯೋತಯಂತ್ಯಾ ದಿಶೋ ದಶ ।
ಮುಷ್ಣಂಸ್ತೇಜ ಉಪಾನೀತಸ್ತಾರ್ಕ್ಷ್ಯೇಣ ಸ್ತೋತ್ರವಾಜಿನಾ ॥ ೧೯ ॥

ಶ್ಯಾಮೋ ಹಿರಣ್ಯರಶನೋಽರ್ಕಕಿರೀಟಜುಷ್ಟೋ
ನೀಲಾಲಕಭ್ರಮರಮಂಡಿತಕುಂಡಲಾಸ್ಯಃ ।
ಕಂಬ್ವಬ್ಜಚಕ್ರಶರಚಾಪಗದಾಸಿಚರ್ಮ-
ವ್ಯಗ್ರೈರ್ಹಿರಣ್ಮಯಭುಜೈರಿವ ಕರ್ಣಿಕಾರಃ ॥ ೨೦ ॥

ವಕ್ಷಸ್ಯಧಿಶ್ರಿತವಧೂರ್ವನಮಾಲ್ಯುದಾರ-
ಹಾಸಾವಲೋಕಕಲಯಾ ರಮಯಂಶ್ಚ ವಿಶ್ವಮ್ ।
ಪಾರ್ಶ್ವಭ್ರಮದ್ವ್ಯಜನಚಾಮರರಾಜಹಂಸಃ
ಶ್ವೇತಾತಪತ್ರಶಶಿನೋಪರಿ ರಜ್ಯಮಾನಃ ॥ ೨೧ ॥

ತಮುಪಾಗತಮಾಲಕ್ಷ್ಯ ಸರ್ವೇ ಸುರಗಣಾದಯಃ ।
ಪ್ರಣೇಮುಃ ಸಹಸೋತ್ಥಾಯ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ ॥ ೨೨ ॥

ತತ್ತೇಜಸಾ ಹತರುಚಃ ಸನ್ನಜಿಹ್ವಾಃ ಸಸಾಧ್ವಸಾಃ ।
ಮೂರ್ಧ್ನಾ ಧೃತಾಂಜಲಿಪುಟಾ ಉಪತಸ್ಥುರಧೋಕ್ಷಜಮ್ ॥ ೨೩ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರಾ! ಹೀಗೆ ಆಶುತೋಷ ಶಂಕರನಲ್ಲಿ ತಾನು ಮಾಡಿದ ಅಪರಾಧಕ್ಕೆ ಕ್ಷಮೆಯನ್ನೂ ಯಾಚಿಸಿ, ದಕ್ಷಪ್ರಜಾಪತಿಯು ಬ್ರಹ್ಮದೇವರ ಆದೇಶ ದಂತೆ ಉಪಾಧ್ಯಾಯರೂ, ಋತ್ವಿಜರೂ ಮುಂತಾದವರ ಸಹಾಯ ದಿಂದ ಮತ್ತೆ ಯಜ್ಞವನ್ನು ಪ್ರಾರಂಭಿಸಿದನು. ॥ ೧೬ ॥ ಆಗ ಬ್ರಾಹ್ಮಣರು ಯಜ್ಞವನ್ನು ನೆರವೇರಿಸುವ ಉದ್ದೇಶದಿಂದ, ರುದ್ರ ಪರಿವಾರವಾದ ಭೂತ-ಪ್ರೇತಾದಿಗಳ ಸಂಬಂಧದಿಂದ ಉಂಟಾದ ದೋಷದ ಶಾಂತಿಗಾಗಿ ಮೂರು ಪಾತ್ರೆಗಳಲ್ಲಿ ಭಗವಾನ್ ವಿಷ್ಣು ವಿಗಾಗಿ ಸಿದ್ಧಪಡಿಸಿದ ಪುರೋಡಾಶವೆಂಬ ಚರುವನ್ನು ಹೋಮ ಮಾಡಿದರು. ॥ ೧೭ ॥ ವಿದುರನೇ! ಆ ಹವಿಸ್ಸನ್ನು ಕೈಯಲ್ಲಿ ಎತ್ತಿಕೊಂಡು ನಿಂತಿರುವ ಅಧ್ವರ್ಯುವಿನೊಡನೆ ಯಜಮಾನ ನಾದ ದಕ್ಷನು ಪರಿಶುದ್ಧವಾದ ಚಿತ್ತದಿಂದ ಧ್ಯಾನಮಾಡುತ್ತಲೇ ಭಗವಂತನು ಅಲ್ಲಿ ಪ್ರಕಟನಾದನು. ॥ ೧೮ ॥ 'ಬೃಹತ್' ಮತ್ತು 'ರಥಂತರ' ಎಂಬ ಸಾಮಮಂತ್ರಗಳೇ ರೆಕ್ಕೆಗಳುಳ್ಳ ಗರುಡದೇವ ರಿಂದ ಹತ್ತಿರಕ್ಕೆ ಒಯ್ಯಲ್ಪಟ್ಟ ಆ ಭಗವಂತನು ಹತ್ತು ದಿಕ್ಕುಗಳನ್ನು ತನ್ನ ತೇಜಸ್ಸಿನಿಂದ ಬೆಳಗಿಸುತ್ತಾ, ತನ್ನ ಅಂಗಕಾಂತಿಯಿಂದ ಎಲ್ಲ ದೇವತೆಗಳ ತೇಜಸ್ಸನ್ನು ಕಸಿದುಕೊಂಡನು. ಅವನ ಮುಂದೆ ಎಲ್ಲರೂ ನಿಸ್ತೇಜರಾದರು. ॥ ೧೯ ॥ ಅವನ ನೀಲಮೇಘದಂತೆ ಶ್ಯಾಮಲನಾದ ದೇಹಕಾಂತಿಯು. ನಡುವಿನಲ್ಲಿ ಕನಕದ ಕಟಿ ಸೂತ್ರವೂ, ಮಿಂಚಿನಂತೆ ಮಿನುಗುವ ಪೀತಾಂಬರವೂ ಪ್ರಕಾಶಿ ಸುತ್ತದೆ. ತಲೆಯಮೇಲೆ ಸೂರ್ಯನಂತೆ ದೇದೀಪ್ಯಮಾನವಾದ ಕಿರೀಟವಿತ್ತು. ಮುಖಕಮಲವೂ ದುಂಬಿಗಳಂತಿರುವ ನೀಲ ಮುಂಗುರುಳಗಳಿಂದ ಮತ್ತು ಹೊಳೆಯುವ ಕರ್ಣಕುಂಡಲ ಗಳಿಂದ ಶೋಭಿಸುತ್ತಿದೆ. ಭಕ್ತರ ರಕ್ಷಣೆಗಾಗಿ ಸದಾ ಸಿದ್ಧವಾಗಿರುವ ಎಂಟು ಭುಜಗಳು ಸುವರ್ಣಾಭರಣಗಳಿಂದ ಶೋಭಿಸುತ್ತಾ ಶಂಖ, ಪದ್ಮ, ಚಕ್ರ, ಬಾಣ, ಧನುಷ್ಯ, ಗದೆ, ಖಡ್ಗ ಮತ್ತು ಗುರಾಣಿ ಗಳೆಂಬ ದಿವ್ಯಾಯುಧಗಳನ್ನು ಧರಿಸಿ, ಪುಷ್ಪಗಳಿಂದ ತುಂಬಿದ ಕರ್ಣಿಕಾರವೃಕ್ಷದಂತೆ ವಿರಾಜಿಸುತ್ತಿವೆ. ॥ ೨೦ ॥ ಶ್ರೀಹರಿಯ ಹೃದಯದಲ್ಲಿ ಶ್ರೀವತ್ಸಚಿಹ್ನೆಯೂ, ಕೊರಳಿನಲ್ಲಿ ಕಮನೀಯ ವೈಜಯಂತಿವನಮಾಲೆಯೂ ಸುಶೋಭಿತವಾಗಿದೆ. ಅವನು ತನ್ನ ಉದಾರವಾದ ನಗುವಿನಿಂದಲೂ, ಕೃಪಾಕಟಾಕ್ಷದಿಂದಲೂ ಇಡೀ ವಿಶ್ವವನ್ನೇ ಆನಂದಮಗ್ನನಾಗಿಸುತ್ತಿದ್ದನು. ಪಾರ್ಷದರು ಇಕ್ಕೆಲ ಗಳಲ್ಲಿ ರಾಜಹಂಸದಂತಿರುವ ಬಿಳಿಯ ಚಾಮರಗಳನ್ನು ಬೀಸು ತ್ತಿದ್ದರು. ಭಗವಂತನ ತಲೆಯಮೇಲೆ ಚಂದ್ರನಂತೆ ಶುಭ್ರವಾದ ಬೆಳ್ಗೊಡೆಯು ಶೋಭಿಸುತ್ತಿತ್ತು. ॥ ೨೧ ॥

ಭಗವಂತನು ದಯಮಾಡಿಸಿದುದನ್ನು ಕಂಡು – ಬ್ರಹ್ಮ ದೇವರು, ಮಹಾದೇವರು, ಇಂದ್ರನೇ ಮೊದಲಾದ ಸಮಸ್ತ ದೇವತೆಗಳು ಗಂಧರ್ವರು, ಋಷಿಗಳು ಹೀಗೆ ಎಲ್ಲರೂ ನಿಂತು ಕೊಂಡು ಅವನಿಗೆ ಪ್ರಣಾಮಮಾಡಿದರು. ॥ ೨೨ ॥ ಅವನ ತೇಜಸ್ಸಿ ನಿಂದ ಎಲ್ಲರ ಕಾಂತಿಯು ಮಸಕಾಯಿತು. ನಾಲಿಗೆ ತೊದಲಿತು. ಅವರೆಲ್ಲರೂ ಭಯ-ಭಕ್ತಿಗಳಿಂದ ತಲೆಯಮೇಲೆ ಕೈಜೋಡಿಸಿ ಕೊಂಡು ಭಗವಂತನ ಮುಂದೆ ನಿಂತುಕೊಂಡರು. ॥ ೨೩ ॥

ಅಪ್ಯರ್ವಾಗ್ವೃತ್ತಯೋ ಯಸ್ಯ ಮಹಿ ತ್ವಾತ್ಮಭುವಾದಯಃ ।
ಯಥಾಮತಿ ಗೃಣಂತಿ ಸ್ಮ ಕೃತಾನುಗ್ರಹವಿಗ್ರಹಮ್ ॥ ೨೪ ॥

ದಕ್ಷೋ ಗೃಹೀತಾರ್ಹಣಸಾದನೋತ್ತಮಂ
ಯಜ್ಞೇಶ್ವರಂ ವಿಶ್ವಸೃಜಾಂ ಪರಂ ಗುರುಮ್ ।
ಸುನಂದನಂದಾದ್ಯನುಗೈರ್ವೃತಂ ಮುದಾ
ಗೃಣನ್ ಪ್ರಪೇದೇ ಪ್ರಯತಃ ಕೃತಾಂಜಲಿಃ ॥ ೨೫ ॥

*ದಕ್ಷ ಉವಾಚ*

ಶುದ್ಧಂ ಸ್ವಧಾಮ್ನ್ಯುಪರತಾಖಿಲಬುದ್ಧ್ಯವಸ್ಥಂ
ಚಿನ್ಮಾತ್ರಮೇಕಮಭಯಂ ಪ್ರತಿಷಿಧ್ಯ ಮಾಯಾಮ್ ।
ತಿಷ್ಠಂಸ್ತಯೈವ ಪುರುಷತ್ವಮುಪೇತ್ಯ ತಸ್ಯಾ-
ಮಾಸ್ತೇ ಭವಾನಪರಿಶುದ್ಧ ಇವಾತ್ಮತಂತ್ರಃ ॥ ೨೬ ॥

*ಋತ್ವಿಜ ಊಚುಃ*

ತತ್ತ್ವಂ ನ ತೇ ವಯಮನಂಜನ ರುದ್ರಶಾಪಾತ್
ಕರ್ಮಣ್ಯವಗ್ರಹಧಿಯೋ ಭಗವನ್ವಿದಾಮಃ ।
ಧರ್ಮೋಪಲಕ್ಷಣಮಿದಂ ತ್ರಿವೃದಧ್ವರಾಖ್ಯಂ
ಜ್ಞಾತಂ ಯದರ್ಥಮಧಿದೈವಮದೋವ್ಯವಸ್ಥಾಃ ॥ ೨೭ ॥

*ಸದಸ್ಯಾ ಊಚುಃ*

ಉತ್ಪತ್ತ್ಯಧ್ವನ್ಯಶರಣ ಉರುಕ್ಲೇಶದುರ್ಗೇಽಂತಕೋಗ್ರ-
ವ್ಯಾಲಾನ್ವಿಷ್ಟೇ ವಿಷಯಮೃಗತೃಷ್ಯಾತ್ಮಗೇಹೋರುಭಾರಃ ।
ದ್ವಂದ್ವಶ್ವಭ್ರೇ ಖಲಮೃಗಭಯೇ ಶೋಕದಾವೇಽಜ್ಞಸಾರ್ಥಃ
ಪಾದೌಕಸ್ತೇ ಶರಣದ ಕದಾ ಯಾತಿ ಕಾಮೋಪಸೃಷ್ಟಃ ॥ ೨೮ ॥

*ರುದ್ರ ಉವಾಚ*

ತವ ವರದ ವರಾಂಘ್ರಾವಾಶಿಷೇಹಾಖಿಲಾರ್ಥೇ
ಹ್ಯಪಿ ಮುನಿಭಿರಸಕ್ತೈರಾದರೇಣಾರ್ಹಣೀಯೇ ।
ಯದಿ ರಚಿತಧಿಯಂ ಮಾವಿದ್ಯಲೋಕೋಽಪವಿದ್ಧಂ
ಜಪತಿ ನ ಗಣಯೇ ತತ್ತ್ವತ್ಪರಾನುಗ್ರಹೇಣ ॥ ೨೯ ॥

ಬ್ರಹ್ಮಾದಿ ದೇವತೆಗಳ ಮತಿಗಳು ಮುಟ್ಟಲಾರದ ಮಹಾ ಮಹಿಮನವನು. ಆದರೂ ಭಕ್ತರಮೇಲೆ ಕೃಪೆದೋರಲು ಹೀಗೆ ಸಾಕಾರನಾಗಿ ಪ್ರಕಟಗೊಂಡ ಆ ಶ್ರೀಹರಿಯನ್ನು ದೇವತೆಗಳು ತಮ್ಮ-ತಮ್ಮ ಬುದ್ಧಿಗನುಗುಣವಾಗಿ ಸ್ತುತಿಸತೊಡಗಿದರು. ॥ ೨೪ ॥ ಎಲ್ಲರಿಗಿಂತ ಮೊದಲಿಗೆ ದಕ್ಷಪ್ರಜಾಪತಿಯು ಒಂದು ಉತ್ತಮ ಪಾತ್ರೆಯಲ್ಲಿ ಪೂಜಾಸಾಮಗ್ರಿಗಳನ್ನು ತುಂಬಿಕೊಂಡು ನಂದ-ಸುನಂದನಗೇ ಮುಂತಾದ ಪಾರ್ಷದರಿಂದ ಪರಿವೃತನಾಗಿದ್ದ ಪ್ರಜಾಪತಿಗಳಿಗೆ ಪರಮಗುರುವಾದ ಭಗವಾನ್ ಯಜ್ಞಪತಿಯ ಬಳಿಗೆ ಬಂದು ವಿನೀತನಾಗಿ ಪರಮಾನಂದದಿಂದ ಕೈಜೋಡಿಸಿ ಪ್ರಾರ್ಥಿಸುತ್ತಾ ಪ್ರಭುವಿಗೆ ಶರಣಾದನು. ॥ ೨೫ ॥

**ದಕ್ಷನು ಹೇಳಿದನು** – ಭಗವಂತನೇ! ನಿರಂತರವೂ ಸ್ವಸ್ವರೂಪದಲ್ಲಿ ರಮಿಸುವ ನೀನು ಜಾಗ್ರದಾದಿ ಬುದ್ಧ್ಯವಸ್ಥಾತೀತನಾದ್ದರಿಂದ, ಮಾಯಾರಹಿತನಾಗಿಯೂ, ಚಿನ್ಮಾತ್ರನಾಗಿಯೂ, ಅದ್ವಿತೀಯನಾಗಿಯೂ, ನಿರ್ಭಯನಾಗಿಯೂ ಇರುವೆ. ಹೀಗೆ ನೀನು ಸ್ವತಂತ್ರನಾಗಿದ್ದರೂ, ಮಾಯೆಯಿಂದಾಗಿ ಜೀವಭಾವನನ್ನೂ ಸ್ವೀಕರಿಸಿ, ಅದೇ ಮಾಯೆಯಲ್ಲಿ ಸ್ಥಿತನಾದಾಗ ಅಜ್ಞಾನಿಯಂತೆ ಕಂಡುಬರುವೆ. ॥ ೨೬ ॥

**ಋತ್ವಿಜರು ಹೇಳಿದರು** – ನಿರಂಜನಸ್ವರೂಪನಾದ ನಾರಾಯಣನೇ! ನಂದಿಕೇಶ್ವರನ ಶಾಪದಿಂದ ನಮ್ಮ ಬುದ್ಧಿಯು ಕೇವಲ ಕರ್ಮಕಾಂಡದಲ್ಲೇ ಸಿಲುಕಿಕೊಂಡಿದೆ. ಆದ್ದರಿಂದ ನಾವು ನಿನ್ನ ತತ್ತ್ವವನ್ನು ತಿಳಿಯಲಾರದೆ ಹೋಗಿದ್ದೇವೆ. ''ಈ ಕರ್ಮಕ್ಕೆ ಇದೇ ದೇವತೆಯು'' ಎಂಬ ಧರ್ಮಪ್ರವೃತ್ತಿಯನ್ನು ಹೇಳುವ ಮೂರು ವೇದಗಳು ಪ್ರತಿಪಾದನೆಮಾಡುವ ಯಜ್ಞವನ್ನೇ ನಿನ್ನ ಸ್ವರೂಪವೆಂದು ಭಾವಿಸುತ್ತೇವೆ. ॥ ೨೭ ॥

**ಸದಸ್ಯರು ಹೇಳಿದರು** – ಶರಣಾಗತರಿಗೆ ಆಶ್ರಯನೀಡುವ ಪ್ರಭುವೇ! ಯಾವುದು ಅನೇಕ ಪ್ರಕಾರದ ಕ್ಲೇಶಗಳ ಕಾರಣ ಅತ್ಯಂತ ದುರ್ಗಮವಾಗಿದೆಯೋ, ಯಾವುದರಲ್ಲಿ ಕಾಲರೂಪೀ ಭಯಂಕರ ಸರ್ಪಗಳು ಹೊಂಚುಹಾಕುತ್ತಿವೆಯೋ, ದ್ವಂದ್ವರೂಪವಾದ ಬಹಳಷ್ಟು ಹಳ್ಳ-ಕೊಳ್ಳಗಳಿವೆಯೋ, ದುರ್ಜನರೆಂಬ ಕಾಡುಪ್ರಾಣಿಗಳ ಭಯವಿದೆಯೋ, ಶೋಕವೆಂಬ ಕಾಡ್ಗಿಚ್ಚು ಧಗ-ಧಗನೆ ಉರಿಯುತ್ತಿದೆಯೋ, ಇಂತಹ ವಿಶ್ರಾಂತಿ ಸ್ಥಳವಿಲ್ಲದ ಸಂಸಾರಮಾರ್ಗದಲ್ಲಿ ಅಜ್ಞಾನೀ ಜೀವರು ಕಾಮನೆಗಳಿಂದ ಪೀಡಿತರಾಗಿ, ವಿಷಯಗಳೆಂಬ ಮೃಗತೃಷ್ಣೆಯಿಂದಾಗಿ ದೇಹ-ಗೇಹಗಳೆಂಬ ಭಾರೀ ಹೊರೆಯನ್ನು ತಲೆಯ ಮೇಲೆ ಹೊತ್ತುಕೊಂಡು ಹೋಗುತ್ತಿರುವಲ್ಲ! ಇಂತಹ ಪಥಿಕರು ಯಾವಾಗ ನಿನ್ನ ಚರಣಕಮಲಗಳಲ್ಲಿ ಶರಣು ಬರುವರೋ! ॥ ೨೮ ॥

**ರುದ್ರದೇವರು ಹೇಳುತ್ತಾರೆ** – ವರಪ್ರದನಾದ ವಾಸುದೇವನೇ! ನಿನ್ನ ಉತ್ತಮೋತ್ತಮವಾದ ಚರಣಕಮಲಗಳು ಈ ಜಗತ್ತಿನಲ್ಲಿ ಸಕಾಮರಾಗಿ ಪ್ರಾರ್ಥಿಸುವವರ ಎಲ್ಲ ಪುರುಷಾರ್ಥಗಳನ್ನು ಕರುಣಿಸುತ್ತಿವೆ. ಹಾಗೆಯೇ ನಿಷ್ಕಾಮರಾದ ಮಹಾಮುನಿಗಳೂ ನಿನ್ನ ಈ ಪಾದಾರವಿಂದಗಳನ್ನು ಆದರದಿಂದ ಆರಾಧಿಸುತ್ತಾರೆ. ಅವುಗಳಲ್ಲಿ ಸದಾ ಚಿತ್ತನೆಟ್ಟಿರುವ ನನ್ನನ್ನು ಅಜ್ಞಾನಿಗಳು

*ಭೃಗುರುವಾಚ*

ಯನ್ಮಾಯಯಾ ಗಹನಯಾಪಹೃತಾತ್ಮಬೋಧಾ
ಬ್ರಹ್ಮಾದಯಸ್ತನುಭೃತಸ್ತಮಸಿ ಸ್ವಪಂತಃ ।
ನಾತ್ಮನ್ ಶ್ರಿತಂ ತವ ವಿದಂತ್ಯಧುನಾಪಿ ತತ್ತ್ವಂ
ಸೋಽಯಂ ಪ್ರಸೀದತು ಭವಾನ್ಪ್ರಣತಾತ್ಮಬಂಧುಃ ॥ ೩೦ ॥

*ಬ್ರಹ್ಮೋವಾಚ*

ನೈತತ್ಸ್ವರೂಪಂ ಭವತೋಽಸೌ ಪದಾರ್ಥ-
ಭೇದಗ್ರಹೈಃ ಪುರುಷೋ ಯಾವದೀಕ್ಷೇತ್ ।
ಜ್ಞಾನಸ್ಯ ಚಾರ್ಥಸ್ಯ ಗುಣಸ್ಯ ಚಾಶ್ರಯೋ
ಮಾಯಾಮಯಾದ್ವ್ಯತಿರಿಕ್ತೋ ಯತಸ್ತ್ವಮ್ ॥ ೩೧ ॥

*ಇಂದ್ರ ಉವಾಚ*

ಇದಮಪ್ಯಚ್ಯುತ ವಿಶ್ವಭಾವನಂ
ವಪುರಾನಂದಕರಂ ಮನೋದೃಶಾಮ್ ।
ಸುರವಿದ್ವಿಟ್ಕ್ಷಪಣೈರುದಾಯುಧೈ-
ರ್ಭುಜದಂಡೈರುಪಪನ್ನಮಷ್ಟಭಿಃ ॥ ೩೨ ॥

*ಪತ್ನ್ಯ ಊಚುಃ*

ಯಜ್ಞೋಽಯಂ ತವ ಯಜನಾಯ ಕೇನ ಸೃಷ್ಟೋ
ವಿಧ್ವಸ್ತಃ ಪಶುಪತಿನಾದ್ಯ ದಕ್ಷಕೋಪಾತ್ ।
ತಂ ನಸ್ತ್ವಂ ಶವಶಯನಾಭಶಾಂತಮೇಧಂ
ಯಜ್ಞಾತ್ಮನ್ನಲಿನರುಚಾ ದೃಶಾ ಪುನೀಹಿ ॥ ೩೩ ॥

*ಋಷಯ ಊಚುಃ*

ಅನನ್ವಿತಂ ತೇ ಭಗವನ್ವಿಚೇಷ್ಟಿತಂ
ಯದಾತ್ಮನಾ ಚರಸಿ ಹಿ ಕರ್ಮ ನಾಜ್ಯಸೇ ।
ವಿಭೂತಯೇ ಯತ ಉಪಸೇದುರೀಶ್ವರೀಂ
ನ ಮನ್ಯತೇ ಸ್ವಯಮನುವರ್ತತೀಂ ಭವಾನ್ ॥ ೩೪ ॥

*ಸಿದ್ಧಾ ಊಚುಃ*

ಅಯಂ ತ್ವತ್ಕಥಾಮೃಷ್ಟಪೀಯೂಷನದ್ಯಾಂ
ಮನೋವಾರಣಃ ಕ್ಲೇಶದಾವಾಗ್ನಿದಗ್ಧಃ ।
ತೃಷಾರ್ತೋಽವಗಾಢೋ ನ ಸಸ್ಮಾರ ದಾವಂ
ನ ನಿಷ್ಕ್ರಾಮತಿ ಬ್ರಹ್ಮಸಂಪನ್ನವನ್ನಃ ॥ ೩೫ ॥

ಆಚಾರಭ್ರಷ್ಟನೆಂದು ಹೇಳಿದರೆ ಹೇಳಿಕೊಳ್ಳಲಿ. ನಿನ್ನ ಪರಮಾನುಗ್ರಹದಿಂದ ನಾನು ಅವರ ನಿಂದೆಯನ್ನು ಮನಸ್ಸಿಗೆ ಹಚ್ಚಿಕೊಳ್ಳುವುದೇ ಇಲ್ಲ. ॥ ೨೯ ॥

**ಭೃಗುಮುನಿಗಳು ಹೇಳಿದರು** – ಸ್ವಾಮಿ! ನಿನ್ನ ಗಹನವಾದ ಮಾಯೆಯಿಂದ ಆತ್ಮಜ್ಞಾನವು ಲೋಪವಾಗಿ, ಅಜ್ಞಾನ-ನಿದ್ರೆಯಲ್ಲಿ ನಿದ್ರಿಸುತ್ತಿರುವ ಬ್ರಹ್ಮದೇವರೇ ಮುಂತಾದ ದೇಹಧಾರಿಗಳಿಂದ ಆತ್ಮಜ್ಞಾನಕ್ಕೆ ಉಪಯೋಗಿಯಾದ ನಿನ್ನ ತತ್ತ್ವವನ್ನು ಇಲ್ಲಿಯವರೆಗೂ ತಿಳಿಯಲಾಗಲಿಲ್ಲ. ಹೀಗಿದ್ದರೂ ನೀನು ನಿನ್ನ ಶರಣಾಗತಭಕ್ತರ ಆತ್ಮನೂ, ಶ್ರೇಷ್ಠ ಸ್ನೇಹಿತನೂ ಆಗಿರುವೆ. ಅಂತಹ ನೀನು ನನ್ನಮೇಲೆ ಪ್ರಸನ್ನನಾಗು. ॥ ೩೦ ॥

**ಬ್ರಹ್ಮದೇವರೆಂದರು** – ಪ್ರಭುವೇ! ಬೇರೆ-ಬೇರೆ ಪದಾರ್ಥಗಳನ್ನು ಅರಿಯುವ ಇಂದ್ರಿಯಗಳಿಂದ ಪುರುಷನು ಏನೆಲ್ಲ ನೋಡುತ್ತಾನೋ, ಅದು ನಿನ್ನ ಸ್ವರೂಪವಲ್ಲ. ಏಕೆಂದರೆ, ನೀನು ಆ ಜ್ಞಾನಕ್ಕೂ, ಶಬ್ದ-ಸ್ಪರ್ಶಾದಿ ವಿಷಯಗಳಿಗೂ, ಶ್ರೋತ್ರಾದಿ ಇಂದ್ರಿಯಗಳಿಗೂ ಅಧಿಷ್ಠಾನನಾಗಿರುವೆ. ಇವೆಲ್ಲವೂ ನಿನ್ನಲ್ಲೇ ನೆಲೆಸಿವೆ. ಆದ್ದರಿಂದ ನೀನು ಈ ಮಾಯಾಮಯ ಪ್ರಪಂಚದಿಂದ ಅತಿರಿಕ್ತನಾಗಿರುವೆ. ॥ ೩೧ ॥

**ಇಂದ್ರನು ಹೇಳಿದನು** – ಅಚ್ಯುತನೇ! ದೇವದ್ರೋಹಿಗಳನ್ನು ಸಂಹಾರಮಾಡುವ ನಾನಾ ದಿವ್ಯಾಯುಧಗಳನ್ನು ಧರಿಸಿರುವ, ಅಷ್ಟಭುಜಗಳಿಂದ ಕಂಗೊಳಿಸುತ್ತಿರುವ, ಜಗತ್ತನ್ನು ಪ್ರಕಾಶಿಸುವಂತಹ ನಿನ್ನ ಈ ದಿವ್ಯರೂಪವು ನಮ್ಮ ಕಣ್ಣುಗಳಿಗೆ ಪರಮಾನಂದವನ್ನು ತುಂಬುತ್ತಿದೆ. ॥ ೩೨ ॥

**ಯಜ್ಞಪತ್ನಿಯರು ಹೇಳಿದರು** – ಎಲೈ ಯಜ್ಞಾತ್ಮಕನಾದ ಪ್ರಭುವೇ! ಬ್ರಹ್ಮದೇವರು ನಿನ್ನ ಆರಾಧನೆಗಾಗಿಯೇ ಈ ಯಜ್ಞವನ್ನು ರಚಿಸಿದ್ದಾರೆ. ಆದರೆ ದಕ್ಷನ ಮೇಲೆ ಕೋಪಗೊಂಡು ಭಗವಾನ್ ಪಶುಪತಿಯು ಇದನ್ನು ನಾಶಪಡಿಸಿರುವನು. ಯಜ್ಞಮೂರ್ತಿಯೇ! ಸ್ಮಶಾನ ಭೂಮಿಯಂತೆ ಉತ್ಸವಹೀನವಾದ ನಮ್ಮ ಈ ಯಜ್ಞವನ್ನು ನೀನು ನೀಲಕಮಲದಂತೆ ಕಾಂತಿಯಿಂದ ಕಂಗೊಳಿಸುವ ನಿನ್ನ ಅನುಗ್ರಹದೃಷ್ಟಿಯನ್ನು ಬೀರಿ ಅದನ್ನು ಪವಿತ್ರಗೊಳಿಸು. ॥ ೩೩ ॥

**ಋಷಿಗಳು ಹೇಳಿದರು** – ಭಗವಂತಾ! ನಿನ್ನ ಲೀಲೆಯು ತುಂಬಾ ಅದ್ಭುತವಾಗಿದೆ. ನೀನು ಕರ್ಮಗಳನ್ನು ಆಚರಿಸುತ್ತಿದ್ದರೂ ಅವು ನಿನಗೆ ಸ್ವಲ್ಪವೂ ಅಂಟಿಕೊಳ್ಳುವುದಿಲ್ಲ. ಇತರ ಜನರು ವೈಭವದ ಆಸೆಯಿಂದ ಯಾವ ಲಕ್ಷ್ಮೀಯನ್ನು ಉಪಾಸನೆ ಮಾಡುವರೋ ಆಕೆಯು ಸದಾ ನಿನ್ನ ಸೇವೆಯಲ್ಲೇ ತೊಡಗಿರುವಳು. ಆದರೂ ನೀನು ಆಕೆಯಲ್ಲಿ ನಿಸ್ಪೃಹನಾಗಿರುವೆಯಲ್ಲ! ॥ ೩೪ ॥

**ಸಿದ್ಧರು ಹೇಳಿದರು** – ಪ್ರಭುವೇ! ನಮ್ಮ ಮನಸ್ಸೆಂಬ ಆನೆಯು ಬಗೆ-ಬಗೆಯ ಕ್ಲೇಶಗಳೆಂಬ ಕಾಡ್ಗಿಚ್ಚಿನಿಂದ ಬೆಂದು, ಅತ್ಯಂತ ಬಾಯಾರಿಕೆಯಿಂದ ನಿನ್ನ ಕಥೆಗಳೆಂಬ ಪರಿಶುದ್ಧ ಅಮೃತಮಯ ಮಹಾನದಿಯಲ್ಲಿ ಮುಳುಗಿ-ತೇಲುತ್ತಿದೆ. ಅಲ್ಲಿ ಬ್ರಹ್ಮಾನಂದಾನುಭವದಲ್ಲಿ ಲಯಗೊಂಡಂತೆ ಇರುವ ಅದಕ್ಕೆ ಸಂಸಾರವೆಂಬ ಕಾಡ್ಗಿಚ್ಚಿನ ನೆನಪೂ ಬರುವುದಿಲ್ಲ. ಅದು ಆ ನದಿಯಿಂದ ಹೊರಬರಲೂ ಬಯಸುವುದಿಲ್ಲ. ॥ ೩೫ ॥

*ಯಜಮಾನ್ಯುವಾಚ*

**ಸ್ವಾಗತಂ ತೇ ಪ್ರಸೀದೇಶ ತುಭ್ಯಂ ನಮಃ**
**ಶ್ರೀನಿವಾಸ ಶ್ರಿಯಾ ಕಾಂತಯಾ ತ್ರಾಹಿ ನಃ ।**
**ತ್ವಾಮೃತೇಽಧೀಶ ನಾಂಗೈರ್ಮಖಃ ಶೋಭತೇ**
**ಶೀರ್ಷಹೀನಃ ಕಬಂಧೋ ಯಥಾ ಪೂರುಷಃ ॥ ೩೬ ॥**

**ಯಜಮಾನನ ಪತ್ನಿಯು ಹೇಳಿದಳು** – ಸರ್ವಸಮರ್ಥ ಪರಮೇಶ್ವರಾ ! ನಿನಗೆ ಸ್ವಾಗತವು. ನಿನಗೆ ನಮೋ ನಮಃ. ನೀನು ನನ್ನ ಮೇಲೆ ಪ್ರಸನ್ನನಾಗು. ನಿನ್ನ ಮನದನ್ನೆಯಾದ ಶ್ರೀಲಕ್ಷ್ಮೀದೇವಿಯೊಡನೆ ನಮ್ಮನ್ನು ಕಾಪಾಡು. ಓ ಶ್ರೀನಿವಾಸನೇ ! ಓ ಯಜ್ಞೇಶ್ವರನೇ ! ಉಳಿದ ಎಲ್ಲ ಅಂಗಗಳಿದ್ದರೂ ತಲೆಯಿಲ್ಲದಿದ್ದರೆ ಮನುಷ್ಯದೇಹವು ಶೋಭಿಸುವುದಿಲ್ಲ. ಹಾಗೆಯೇ ನೀನಿಲ್ಲದಿದ್ದರೆ ಯಜ್ಞಕ್ಕೆ ಶೋಭೆಯೇ ಇರುವುದಿಲ್ಲ ॥ ೩೬ ॥

*ಲೋಕಪಾಲಾ ಊಚುಃ*

**ದೃಷ್ಟಃ ಕಿಂ ನೋ ದೃಗ್ಭಿರಸದ್‌ಗ್ರಹೈಸ್ತ್ವಂ**
**ಪ್ರತ್ಯಗ್ದ್ರಷ್ಟಾ ದೃಶ್ಯತೇ ಯೇನ ದೃಶ್ಯಮ್ ।**
**ಮಾಯಾ ಹ್ಯೇಷಾ ಭವದೀಯಾ ಹಿ ಭೂಮನ್**
**ಯಸ್ತ್ವಂ ಷಷ್ಠಃ ಪಂಚಭಿರ್ಭಾಸಿ ಭೂತೈಃ ॥ ೩೭ ॥**

**ಲೋಕಪಾಲಕರು ಹೇಳಿದರು** – ಎಲೈ ಅನಂತನಾದ ಪರಮಾತ್ಮನೇ ! ನೀನು ಸಮಸ್ತ ಅಂತಃಕರಣಗಳಿಗೆ ಸಾಕ್ಷಿಯಾಗಿರುವೆ. ಈ ಇಡೀ ಜಗತ್ತನ್ನು ನಿನ್ನ ಮೂಲಕವೇ ನೋಡಲಾಗುತ್ತದೆ. ಆದರೂ ಮಾಯಾಮಯವಾದ ಈ ಪ್ರಾಕೃತ ಪದಾರ್ಥಗಳನ್ನು ಗ್ರಹಿಸುವ ನಮ್ಮ ಕಣ್ಣುಗಳೇ ಮುಂತಾದ ಇಂದ್ರಿಯಗಳಿಗೆ ನೀನು ಪ್ರತ್ಯಕ್ಷನಾಗಲಾರೆ. ಏಕೆಂದರೆ ವಾಸ್ತವಿಕವಾಗಿ ನೀನಾದರೋ ಈ ಪಂಚಭೂತಗಳಿಂದ ಪ್ರತ್ಯೇಕವಾಗಿರುವೆ. ಆದರೂ ಈ ಪಾಂಚಭೌತಿಕ ಶರೀರಗಳೊಡನೆ ಕಂಡುಬರುವ ಸಂಬಂಧವು ನಿನ್ನ ಮಾಯೆಯೇ ಆಗಿವೆ. ॥ ೩೭ ॥

*ಯೋಗೇಶ್ವರಾ ಊಚುಃ*

**ಪ್ರೇಯಾನ್ನತೇಽನ್ಯೋಽಸ್ತ್ಯಮುತಸ್ತ್ವಯಿ ಪ್ರಭೋ**
**ವಿಶ್ವಾತ್ಮನೀಕ್ಷೇನ್ನ ಪೃಥಗ್ಯ ಆತ್ಮನಃ ।**
**ಅಥಾಪಿ ಭಕ್ತ್ಯೇಶತಯೋಪಧಾವತಾ-**
**ಮನನ್ಯವೃತ್ತ್ಯಾನುಗೃಹಾಣ ವತ್ಸಲ ॥ ೩೮ ॥**

**ಜಗದುದ್ಭವಸ್ಥಿತಿಲಯೇಷು ದೈವತೋ**
**ಬಹುಭಿದ್ಯಮಾನಗುಣಯಾಽಽತ್ಮಮಾಯಯಾ ।**
**ರಚಿತಾತ್ಮಭೇದಮತಯೇ ಸ್ವಸಂಸ್ಥಯಾ**
**ವಿನಿವರ್ತಿತಭ್ರಮಗುಣಾತ್ಮನೇ ನಮಃ ॥ ೩೯ ॥**

**ಯೋಗೇಶ್ವರರು ಹೇಳಿದರು** – ಇಡೀ ವಿಶ್ವಕ್ಕೆ ಆತ್ಮನಾಗಿರುವ ನಿನ್ನಿಂದ ತನ್ನನ್ನು ಅಭೇದವಾಗಿ ನೋಡುವವನಿಗಿಂತ ಹೆಚ್ಚಿನ ಪ್ರಿಯರು ನಿನಗೆ ಯಾರೂ ಇಲ್ಲ. ಆದರೂ ಭಕ್ತವತ್ಸಲಾ ! ನಿನ್ನಲ್ಲಿ ಸ್ವಾಮಿಭಾವವನ್ನಿಟ್ಟು ಅನನ್ಯ ಭಕ್ತಿಯಿಂದ ನಿನ್ನನ್ನು ಸೇವೆಮಾಡುವ ಭಕ್ತರಮೇಲೂ ನೀನು ಕರುಣೆತೋರು. ॥ ೩೮ ॥ ಜೀವಿಗಳ ಅದೃಷ್ಟ ವಶದಿಂದ ಪ್ರಕೃತಿಯ ಸತ್ತ್ವಾದಿಗುಣಗಳಲ್ಲಿ ವಿಭಿನ್ನತೆ ಉಂಟಾಗುವುದು. ಅಂತಹ ವಿಚಿತ್ರವಾದ ಮಾಯಾಪ್ರಕೃತಿಯಿಂದ ನೀನು ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗಾಗಿ ಬ್ರಹ್ಮನೇ ಮುಂತಾದ ವಿಭಿನ್ನ ರೂಪಗಳನ್ನು ಧರಿಸಿ ಭೇದಬುದ್ಧಿಯನ್ನು ಉಂಟುಮಾಡುತ್ತೀಯೆ. ಆದರೆ ಸ್ವರೂಪತಃ ನೀನು ಆ ಭೇದಜ್ಞಾನಕ್ಕೂ ಮತ್ತು ಅದಕ್ಕೆ ಕಾರಣವಾದ ಸತ್ತ್ವಾದಿಗುಣಗಳಿಗೂ ಸರ್ವಥಾ ದೂರವಾಗಿರುವೆ. ಅಂತಹ ನಿನಗೆ ನಮೋ ನಮಃ ॥ ೩೯ ॥

*ಬ್ರಹ್ಮೋವಾಚ*

**ನಮಸ್ತೇ ಶ್ರಿತಸತ್ತ್ವಾಯ ಧರ್ಮಾದೀನಾಂ ಚ ಸೂತಯೇ ।**
**ನಿರ್ಗುಣಾಯ ಚ ಯತ್ಕಾಷ್ಠಾಂ ನಾಹಂ ವೇದಾಪರೇಽಪಿ ಚ ॥ ೪೦ ॥**

**ಬ್ರಹ್ಮಸ್ವರೂಪ ವೇದಗಳು ಹೇಳಿದವು** – ನೀನೇ ಧರ್ಮಾದಿಗಳ ಉತ್ಪತ್ತಿಗಾಗಿ ಶುದ್ಧಸತ್ತ್ವವನ್ನು ಸ್ವೀಕರಿಸಿದರೂ – ನಿರ್ಗುಣನೇ ಆಗಿರುವೆ. ನಿನ್ನ ತತ್ತ್ವವನ್ನು ನಾವಾಗಲೀ, ಬ್ರಹ್ಮಾದಿ ಗಳಾಗಲೀ ಯಾರೂ ಅರಿಯರು. ಇಂತಹ ನಿನಗೆ ನಮಸ್ಕಾರವು. ॥ ೪೦ ॥

*ಅಗ್ನಿರುವಾಚ*

**ಯತ್ತೇಜಸಾಹಂ ಸುಸಮಿದ್ಧತೇಜಾ**
**ಹವ್ಯಂ ವಹೇ ಸ್ವಧ್ವರ ಆಜ್ಯಸಿಕ್ತಮ್ ।**
**ತಂ ಯಜ್ಞಿಯಂ ಪಂಚವಿಧಂ ಚ ಪಂಚಭಿಃ**
**ಸ್ವಿಷ್ಟಂ ಯಜುರ್ಭಿಃ ಪ್ರಣತೋಽಸ್ಮಿ ಯಜ್ಞಮ್ ॥ ೪೧ ॥**

**ಅಗ್ನಿದೇವರು ಹೇಳಿದರು** – ಓ ಭಗವಂತಾ ! ನಿನ್ನ ತೇಜದಿಂದಲೇ ಪ್ರಕಾಶಿತನಾಗಿ ನಾನು ಶ್ರೇಷ್ಠವಾದ ಯಜ್ಞಗಳಲ್ಲಿ ದೇವತೆಗಳ ಬಳಿಗೆ ತುಪ್ಪವು ಬೆರೆತಿರುವ ಹವಿಸ್ಸನ್ನು ತಲುಪಿಸುತ್ತೇನೆ. ನೀನು ಸಾಕ್ಷಾತ್ ಯಜ್ಞಪುರುಷನೂ, ಯಜ್ಞಸಂರಕ್ಷಕನೂ ಆಗಿರುವೆ. ಅಗ್ನಿಹೋತ್ರ, ದರ್ಶ, ಪೌರ್ಣಮಾಸ್ಯ, ಚಾತುರ್ಮಾಸ್ಯ ಮತ್ತು ಪಶುಸೋಮ ಎಂಬ ಈ ಐದುಬಗೆಯ ಯಜ್ಞಗಳು ನಿನ್ನ ಸ್ವರೂಪಗಳೇ ಆಗಿವೆ. 'ಆಶ್ರಾವಯಾ', 'ಅಸ್ತುಶ್ರೌಷಟ್', 'ಯಜೆ', 'ಯೇಯಜಾಮಹೇ' ಮತ್ತು ವೌಷಟ್ – ಈ ಐದು ಬಗೆಯ ಯಜುರ್ಮಂತ್ರಗಳಿಂದ ನಿನ್ನದೇ ಪೂಜೆ ನಡೆಯುತ್ತಿದೆ. ನಾನು ನಿನಗೆ ವಂದಿಸುತ್ತಿದ್ದೇನೆ. ॥ ೪೧ ॥

*ದೇವಾ ಊಚುಃ*

ಪುರಾ ಕಲ್ಪಾಪಾಯೇ ಸ್ವಕೃತಮುದರೀಕೃತ್ಯ ವಿಕೃತಂ
ತ್ವಮೇವಾದ್ಯಸ್ತಸ್ಮಿನ್ಸಲಿಲ ಉರಗೇಂದ್ರಾಧಿಶಯನೇ ।
ಪುಮಾನ್ ಶೇಷೇ ಸಿದ್ಧೈರ್ಹೃದಿ ವಿಮೃಶಿತಾಧ್ಯಾತ್ಮಪದವಿಃ
ಸ ಏವಾದ್ಯಾಕ್ಷ್ಣೋರ್ಯಃ ಪಥಿ ಚರಸಿ ಭೃತ್ಯಾನವಸಿ ನಃ ॥ ೪೨ ॥

*ಗಂಧರ್ವಾ ಊಚುಃ*

ಅಂಶಾಂಶಾಸ್ತೇ ದೇವ ಮರೀಚ್ಯಾ ದಯ ಏತೇ
ಬ್ರಹ್ಮೇಂದ್ರಾದ್ಯಾ ದೇವಗಣಾ ರುದ್ರಪುರೋಗಾಃ ।
ಕ್ರೀಡಾಭಾಂಡಂ ವಿಶ್ವಮಿದಂ ಯಸ್ಯ ವಿಭೂಮನ್
ತಸ್ಮೈ ನಿತ್ಯಂ ನಾಥ ನಮಸ್ತೇ ಕರವಾಮ ॥ ೪೩ ॥

*ವಿದ್ಯಾಧರಾ ಊಚುಃ*

ತ್ವನ್ಮಾಯಯಾರ್ಥಮಭಿಪದ್ಯ ಕಲೇವರೇಽಸ್ಮಿನ್
ಕೃತ್ವಾ ಮಮಾಹಮಿತಿ ದುರ್ಮತಿರುತ್ಪಥೈಃ ಸ್ವೈಃ ।
ಕ್ಷಿಪ್ತೋಽಪ್ಯಸದ್ವಿಷಯಲಾಲಸ ಆತ್ಮಮೋಹಂ
ಯುಷ್ಮತ್ಕಥಾಮೃತನಿಷೇವಕ ಉದ್ವ್ಯುದಸ್ಯೇತ್ ॥ ೪೪ ॥

*ಬ್ರಾಹ್ಮಣಾ ಊಚುಃ*

ತ್ವಂ ಕ್ರತುಸ್ತ್ವಂ ಹವಿಸ್ತ್ವಂ ಹುತಾಶಃ ಸ್ವಯಂ
ತ್ವಂ ಹಿ ಮಂತ್ರಃ ಸಮಿದ್ದರ್ಭಪಾತ್ರಾಣಿ ಚ ।
ತ್ವಂ ಸದಸ್ಯರ್ತ್ವಿಜೋ ದಂಪತೀ ದೇವತಾ
ಅಗ್ನಿಹೋತ್ರಂ ಸ್ವಧಾ ಸೋಮ ಆಜ್ಯಂ ಪಶುಃ ॥ ೪೫ ॥

ತ್ವಂ ಪುರಾ ಗಾಂ ರಸಾಯಾ ಮಹಾಸೂಕರೋ
ದಂಷ್ಟ್ರಯಾ ಪದ್ಮಿನೀಂ ವಾರಣೇಂದ್ರೋ ಯಥಾ ।
ಸ್ತೂಯಮಾನೋ ನದಂಲ್ಲೀಲಯಾ ಯೋಗಿಭಿ-
ರ್ವ್ಯುಜ್ಜಹರ್ಥ ತ್ರಯೀಗಾತ್ರ ಯಜ್ಞಕ್ರತುಃ ॥ ೪೬ ॥

**ದೇವತೆಗಳು ಹೇಳಿದರು** – ದೇವಾ! ನೀನೇ ಆದಿಪುರುಷನಾಗಿರುವೆ. ಹಿಂದಿನ ಕಲ್ಪವು ಮುಗಿದಾಗ ನಿನ್ನ ಕಾರ್ಯರೂಪವಾದ ಈ ಪ್ರಪಂಚವನ್ನು ಉದರದಲ್ಲಿ ಲೀನಗೊಳಿಸಿಕೊಂಡು ನೀನೇ ಪ್ರಳಯಕಾಲದ ಜಲದೊಳಗೆ ಆದಿಶೇಷನೆಂಬ ಹಾಸಿಗೆಯ ಮೇಲೆ ಪವಡಿಸಿದ್ದೆ. ಆಗ ನಿನ್ನ ಆಧ್ಯಾತ್ಮಿಕ ಸ್ವರೂಪವನ್ನು ಸಿದ್ಧಗಣಗಳು ತಮ್ಮ ಹೃದಯದಲ್ಲಿ ಚಿಂತಿಸುತ್ತಾರೆ. ಅಂತಹ ಆದಿಪುರುಷನಾದ ನೀನೇ ಈಗ ಭಕ್ತರಾದ ನಮ್ಮ ಕಣ್ಣುಗಳಿಗೆ ವಿಷಯವಾಗಿ ನಮ್ಮನ್ನು ರಕ್ಷಿಸುತ್ತಿದ್ದೀಯೆ. ॥ ೪೨ ॥

**ಗಂಧರ್ವರು ಹೇಳಿದರು** – ದೇವಾ! ಮರೀಚಿಯೇ ಮುಂತಾದ ಋಷಿಗಳೂ ಮತ್ತು ಬ್ರಹ್ಮದೇವರು, ರುದ್ರದೇವರು, ಇಂದ್ರನೇ ಮೊದಲಾದ ದೇವತೆಗಳು, ನಿನ್ನ ಅಂಶದಲ್ಲಿಯೂ ಅಂಶವಾಗಿದ್ದಾರೆ. ಮಹತ್ತಮನಾದ ಪ್ರಭುವೇ! ಈ ಇಡೀ ವಿಶ್ವವು ನಿನ್ನ ಆಟದ ವಸ್ತುವೇ ಆಗಿದೆ. ಸ್ವಾಮಿ! ಅಂತಹ ನಿನಗೆ ನಾವು ಸದಾಕಾಲ ನಮಸ್ಕರಿಸುತ್ತೇವೆ. ॥ ೪೩ ॥

**ವಿದ್ಯಾಧರರು ಹೇಳಿದರು** – ಒಡೆಯಾ! ಪರಮ ಪುರುಷಾರ್ಥದ ಪ್ರಾಪ್ತಿಗಾಗಿ ಸಾಧನರೂಪವಾಗಿ ಈ ಮಾನವ ದೇಹವನ್ನು ಪಡೆದುಕೊಂಡರೂ ಜೀವನು ನಿನ್ನ ಮಾಯೆಯಿಂದ ಮೋಹಿತನಾಗಿ ಇದರಲ್ಲಿ 'ನಾನು-ನನ್ನದು' ಎಂಬ ಅಭಿಮಾನ ಪಡುತ್ತಾನೆ. ಮತ್ತೆ ಆ ದುರ್ಬುದ್ಧಿಯು ತನ್ನ ಆತ್ಮೀಯರಿಂದ ತಿರಸ್ಕೃತನಾದರೂ ಅಸತ್ ಪದಾರ್ಥಗಳಿಗಾಗಿಯೇ ಹಂಬಲಿಸುತ್ತಾನೆ. ಆದರೆ ಇಂತಹ ಅವಸ್ಥೆಯಲ್ಲೂ ನಿನ್ನ ಕಥಾಮೃತವನ್ನು ಸೇವಿಸುವವನು ಈ ಅಂತಃಕರಣದ ಮೋಹವನ್ನು ಪೂರ್ಣ ರೂಪದಿಂದ ತ್ಯಜಿಸುವನು. ॥ ೪೪ ॥

**ಬ್ರಾಹ್ಮಣರು ಹೇಳಿದರು** – ಭಗವಂತನೇ! ಯಜ್ಞವೂ ನೀನೇ. ಹವಿಸ್ಸು ನೀನೇ. ಅಗ್ನಿಯೂ ನೀನೇ. ಮಂತ್ರವೂ ನೀನೇ ಆಗಿರುವೆ. ಸಮಿತ್ತು, ದರ್ಭೆಗಳು, ಯಜ್ಞಪಾತ್ರೆಗಳೂ ನೀನೇ. ಹಾಗೆಯೇ ಸದಸ್ಯರೂ, ಋತ್ವಿಜರೂ, ಯಜಮಾನನೂ, ಯಜಮಾನ ಪತ್ನಿಯೂ, ದೇವತೆಯೂ, ಅಗ್ನಿಹೋತ್ರವೂ, ಸ್ವಧೆಯೂ, ಸೋಮ ರಸವೂ, ಘೃತವೂ ಮತ್ತು ಪಶುವೂ ನೀನೇ ಆಗಿರುವಿ. ॥ ೪೫ ॥ ವೇದಮೂರ್ತಿಯೇ! ಯಜ್ಞ ಮತ್ತು ಅದರ ಸಂಕಲ್ಪವೂ ನೀನೇ. ಹಿಂದೆ ನೀನೇ ವಿಶಾಲವಾದ ವರಾಹರೂಪವನ್ನು ಧರಿಸಿ ರಸಾತಲದಲ್ಲಿ ಮುಳುಗಿದ್ದ ಭೂಮಿಯನ್ನು – ಗಜರಾಜನು ನೀಲಕಮಲವನ್ನು ಎತ್ತಿ ತಂದಂತೆ – ತನ್ನ ಕೋರೆದಾಡೆಗಳ ಮೇಲೆ ಎತ್ತಿಕೊಂಡು ಲೀಲಾಜಾಲವಾಗಿಯೇ ಮೇಲಕ್ಕೆ ಎತ್ತಿಕೊಂಡು ಬಂದೆ. ಆಗ ಗಂಭೀರವಾಗಿ ಗರ್ಜಿಸುತ್ತಿದ್ದ ನಿನ್ನನ್ನು ಯೋಗಿಗಳು ಈ ಅಲೌಕಿಕ ಪರಾಕ್ರಮವನ್ನು ಕಂಡು ಸ್ತುತಿಸುತ್ತಾ ಇದ್ದರು. ॥ ೪೬ ॥

ಯಜ್ಞೇಶ್ವರನೇ! ಜನರು ನಿನ್ನ ನಾಮಗಳನ್ನು ಕೀರ್ತಿಸುವಾಗ ಯಜ್ಞದ ಎಲ್ಲ ವಿಘ್ನಗಳು ನಾಶವಾಗಿ ಹೋಗುತ್ತವೆ. ನಮ್ಮ ಈ ಯಜ್ಞಸ್ವರೂಪವಾದ ಸತ್ಕರ್ಮವು ನಾಶವಾಗಿ ಹೋಗಿತ್ತು. ಆದ್ದ

ಸ ಪ್ರಸೀದ ತ್ವಮಸ್ಮಾಕಮಾಕಾಂಕ್ಷತಾಂ
ದರ್ಶನಂ ತೇ ಪರಿಭ್ರಷ್ಟಸತ್ಕರ್ಮಣಾಮ್ ।
ಕೀರ್ತ್ಯಮಾನೇ ನೃಭಿರ್ನಾಮ್ನಿ ಯಜ್ಞೇಶ ತೇ
ಯಜ್ಞವಿಘ್ನಾಃ ಕ್ಷಯಂ ಯಾಂತಿ ತಸ್ಮೈ ನಮಃ ॥ ೪೭ ॥

ಮೈತ್ರೇಯ ಉವಾಚ

ಇತಿ ದಕ್ಷಃ ಕವಿರ್ಯಜ್ಞಂ ಭದ್ರ ರುದ್ರಾವಮರ್ಶಿತಮ್ ।
ಕೀರ್ತ್ಯಮಾನೇ ಹೃಷೀಕೇಶೇ ಸನ್ನಿನ್ಯೇ ಯಜ್ಞಭಾವನೇ ॥ ೪೮ ॥

ಭಗವಾನ್ಸ್ವೇನ ಭಾಗೇನ ಸರ್ವಾತ್ಮಾ ಸರ್ವಭಾಗಭುಕ್ ।
ದಕ್ಷಂ ಬಭಾಷ ಆಭಾಷ್ಯ ಪ್ರೀಯಮಾಣ ಇವಾನಘ ॥ ೪೯ ॥

ಶ್ರೀಭಗವಾನುವಾಚ

ಅಹಂ ಬ್ರಹ್ಮಾ ಚ ಶರ್ವಶ್ಚ ಜಗತಃ ಕಾರಣಂ ಪರಮ್ ।
ಆತ್ಮೇಶ್ವರ ಉಪದ್ರಷ್ಟಾ ಸ್ವಯಂದೃಗವಿಶೇಷಣಃ ॥ ೫೦ ॥

ಆತ್ಮಮಾಯಾಂ ಸಮಾವಿಶ್ಯ ಸೋಽಹಂ ಗುಣಮಯೀಂ ದ್ವಿಜ ।
ಸೃಜನ್ ರಕ್ಷನ್ ಹರನ್ವಿಶ್ವಂ ದಧ್ರೇ ಸಂಜ್ಞಾಂ ಕ್ರಿಯೋಚಿತಾಮ್ ॥ ೫೧ ॥

ತಸ್ಮಿನ್ ಬ್ರಹ್ಮಣ್ಯದ್ವಿತೀಯೇ ಕೇವಲೇ ಪರಮಾತ್ಮನಿ ।
ಬ್ರಹ್ಮರುದ್ರೌ ಚ ಭೂತಾನಿ ಭೇದೇನಾಜ್ಞೋಽನುಪಶ್ಯತಿ ॥ ೫೨ ॥

ಯಥಾ ಪುಮಾನ್ನ ಸ್ವಾಂಗೇಷು ಶಿರಃ ಪಾಣ್ಯಾದಿಷು ಕ್ವಚಿತ್ ।
ಪಾರಕ್ಯಬುದ್ಧಿಂ ಕುರುತೇ ಏವಂ ಭೂತೇಷು ಮತ್ಪರಃ ॥ ೫೩ ॥

ತ್ರಯಾಣಾಮೇಕಭಾವಾನಾಂ ಯೋ ನ ಪಶ್ಯತಿ ವೈ ಭಿದಾಮ್ ।
ಸರ್ವಭೂತಾತ್ಮನಾಂ ಬ್ರಹ್ಮನ್ ಸ ಶಾಂತಿಮಧಿಗಚ್ಛತಿ ॥ ೫೪ ॥

ಮೈತ್ರೇಯ ಉವಾಚ

ಏವಂ ಭಗವತಾದಿಷ್ಟಃ ಪ್ರಜಾಪತಿಪತಿರ್ಹರಿಮ್ ।
ಅರ್ಚಿತ್ವಾ ಕ್ರತುನಾ ಸ್ವೇನ ದೇವಾನುಭಯತೋಽಯಜತ್ ॥ ೫೫ ॥

ರುದ್ರಂ ಚ ಸ್ವೇನ ಭಾಗೇನ ಹ್ಯುಪಾಧಾವತ್ಸಮಾಹಿತಃ ।
ಕರ್ಮಣೋದವಸಾನೇನ ಸೋಮಪಾನಿತರಾನಪಿ ।
ಉದವಸ್ಯ ಸಹರ್ತ್ವಿಗ್ಭಿಃ ಸಸ್ನಾವವಭೃಥಂ ತತಃ ॥ ೫೬ ॥

ರಿಂದ ನಾವು ನಿನ್ನ ದಿವ್ಯದರ್ಶನವನ್ನು ಬಯಸುತ್ತಿದ್ದೆವು. ಈಗ ನಮ್ಮ ಮೇಲೆ ಪ್ರಸನ್ನನಾಗು. ನಿನಗೆ ಅನಂತ ವಂದನೆಗಳು. ॥ ೪೭ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಅಯ್ಯಾ ವಿದುರಾ! ಎಲ್ಲ ಜನರು ಹೀಗೆ ಯಜ್ಞರಕ್ಷಕನಾದ ಭಗವಾನ್ ಹೃಷೀಕೇಶನನ್ನು ಸ್ತುತಿಸತೊಡಗಿದಾಗ ಚತುರನಾದ ದಕ್ಷಪ್ರಜಾಪತಿಯು ರುದ್ರ ಪಾರ್ಷದನಾದ ವೀರಭದ್ರನಿಂದ ಧ್ವಂಸಮಾಡಲ್ಪಟ್ಟ ಯಜ್ಞವನ್ನು ಪುನಃ ಪ್ರಾರಂಭಿಸಿದನು. ॥ ೪೮ ॥ ಸರ್ವಾಂತರ್ಯಾಮಿಯಾದ ಶ್ರೀಹರಿಯಾದರೋ ಎಲ್ಲರ ಯಜ್ಞಭಾಗಗಳ ಭೋಕ್ತಾ ಆಗಿದ್ದರೂ ತ್ರಿಕಪಾಲ ಪುರೋಡಾಶರೂಪವಾದ ತನ್ನ ಭಾಗದಿಂದಲೇ ಹೆಚ್ಚು ಪ್ರಸನ್ನನಾಗಿ ದಕ್ಷನನ್ನು ಸಂಬೋಧಿಸಿ ಇಂತೆಂದನು. ॥ ೪೯ ॥

**ಶ್ರೀಭಗವಂತನು ಹೇಳಿದನು** – ದಕ್ಷ ಪ್ರಜಾಪತಿಯೇ! ಜಗತ್ತಿನ ಪರಮಕಾರಣನಾದ ನಾನೇ ಬ್ರಹ್ಮನೂ, ಮಹಾದೇವನೂ ಆಗಿದ್ದೇನೆ. ಎಲ್ಲರ ಆತ್ಮನೂ, ಈಶ್ವರನೂ, ಸಾಕ್ಷಿಯೂ ನಾನೇ ಆಗಿರುವೆ ಹಾಗೂ ಸ್ವಯಂಪ್ರಕಾಶನೂ ಉಪಾಧಿಶೂನ್ಯನೂ ಆಗಿರುವೆನು. ॥ ೫೦ ॥ ಬ್ರಾಹ್ಮಣೋತ್ತಮನೇ! ನಾನೇ ನನ್ನ ತ್ರಿಗುಣಾತ್ಮಿಕೆಯಾದ ಮಾಯೆಯನ್ನು ಸ್ವೀಕರಿಸಿ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಾ ಇರುವೆನು. ನಾನೇ ಆ ಕರ್ಮಗಳಿಗಾಗಿ ಬ್ರಹ್ಮಾ, ವಿಷ್ಣು, ಮಹೇಶ್ವರ ಎಂಬ ಹೆಸರುಗಳನ್ನು ಧರಿಸಿರುವೆನು. ॥ ೫೧ ॥ ಅಂತಹ ಭೇದರಹಿತನಾದ ವಿಶುದ್ಧ ಪರಬ್ರಹ್ಮಸ್ವರೂಪನು ನಾನೇ ಆಗಿರುವೆನು. ಅಜ್ಞಾನೀ ಜನರು ನನ್ನಲ್ಲೇ ಬ್ರಹ್ಮ-ರುದ್ರಾದಿ ಇತರ ಎಲ್ಲ ಜೀವರನ್ನು ಬೇರೆ-ಬೇರೆಯಾಗಿ ಕಾಣುತ್ತಾರೆ. ॥ ೫೨ ॥ ಮನುಷ್ಯನು ತನ್ನ ತಲೆ-ಕೈಕಾಲು ಮುಂತಾದ ಅಂಗಗಳಲ್ಲಿ – 'ಇವುಗಳು ನನ್ನಿಂದ ಬೇರೆಯಾಗಿವೆ' ಎಂಬುದಾಗಿ ಎಂದೂ ತಿಳಿಯುವುದಿಲ್ಲ, ನನ್ನ ಭಕ್ತನಾದವನು ಸಮಸ್ತ ಪ್ರಾಣಿಗಳನ್ನು ನನ್ನಿಂದ ಭಿನ್ನರೆಂದು ನೋಡುವುದಿಲ್ಲ. ॥ ೫೩ ॥ ಎಲೈ ಬ್ರಾಹ್ಮಣವರ್ಯ! ಬ್ರಹ್ಮಾ, ವಿಷ್ಣು, ಮಹೇಶ್ವರರೆಂಬ ನಾವು ಮೂವರೂ ಸ್ವರೂಪತಃ ಒಂದೇ ಆಗಿದ್ದೇವೆ. ಎಲ್ಲ ಜೀವರೂಪರೂ ನಾವೇ ಆಗಿರುವೆವು. ಆದ್ದರಿಂದ ನಮ್ಮಲ್ಲಿ ಸ್ವಲ್ಪವೂ ಭೇದಬುದ್ಧಿಯನ್ನು ಇರಿಸದವನೇ ಶಾಂತಿಯನ್ನು ಪಡೆಯುವನು. ॥ ೫೪ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಭಗವಂತನು ಹೀಗೆ ಅಪ್ಪಣೆ ಕೊಡಿಸಲು ಪ್ರಜಾಪತಿಗಳ ಅಧಿಪತಿಯಾದ ದಕ್ಷನು ತ್ರಿಕಪಾಲ ಯಜ್ಞದಿಂದ ಶ್ರೀಹರಿಯನ್ನು ಆರಾಧಿಸಿ, ಅನಂತರ ಅಂಗಭೂತ ಮತ್ತು ಪ್ರಧಾನವಾದ ಎರಡೂ ಬಗೆಯ ಯಜ್ಞಗಳಿಂದ ಇತರ ದೇವತೆಗಳನ್ನೂ ಪೂಜಿಸಿದನು. ॥ ೫೫ ॥ ಮತ್ತೆ ಏಕಾಗ್ರಚಿತ್ತನಾಗಿ ಯಜ್ಞಶೇಷವಾದ ಭಾಗದಿಂದ ಅಂದರೆ 'ಸ್ವಿಷ್ಟಕೃತ್' ಎಂಬ ಹವಿರ್ಭಾಗದಿಂದ ಭಗವಾನ್ ರುದ್ರನನ್ನು ಪೂಜಿಸಿದನು. ಕೊನೆಯಲ್ಲಿ ಮಾಡಲಾಗುವ 'ಉದವಸಾನ' ಎಂಬ ಕರ್ಮದಿಂದ ಇತರ ಸೋಮಪಾಯಿಗಳನ್ನು ಹಾಗೂ ಇತರ ದೇವತೆಗಳನ್ನೂ ಆರಾಧಿಸಿ ಯಜ್ಞವನ್ನು ಮುಗಿಸಿ ಕೊನೆಗೆ ಋತ್ವಿಜರ ಸಹಿತ ಅವಭೃತ ಸ್ನಾನವನ್ನು ಮಾಡಿದನು. ॥ ೫೬ ॥

ತಸ್ಮಾ ಅಪ್ಯನುಭಾವೇನ ಸ್ವೇನೈವಾವಾಪ್ತರಾಧಸೇ ।
ಧರ್ಮ ಏವ ಮತಿಂ ದತ್ತ್ವಾ ತ್ರಿದಶಾಸ್ತೇ ದಿವಂ ಯಯುಃ
॥ ೫೭ ॥

ಬಳಿಕ ತನ್ನ ಪುರುಷಾರ್ಥದಿಂದಲೇ ಎಲ್ಲ ರೀತಿಯ ಸಿದ್ಧಿಗಳನ್ನು ಪಡೆದುಕೊಂಡಿದ್ದ ದಕ್ಷಪ್ರಜಾಪತಿಯನ್ನು – 'ನಿನ್ನ ಬುದ್ಧಿಯು ಸದಾಕಾಲ ಧರ್ಮದಲ್ಲೇ ನೆಲೆಸಲಿ' ಎಂದು ಆಶೀರ್ವದಿಸಿ ಎಲ್ಲ ದೇವತೆಗಳು ಸ್ವರ್ಗಲೋಕಕ್ಕೆ ಹೊರಟುಹೋದರು. ॥ ೫೭ ॥

ಏವಂ ದಾಕ್ಷಾಯಣೀ ಹಿತ್ವಾ ಸತೀ ಪೂರ್ವಕಲೇವರಮ್ ।
ಜಜ್ಞೇ ಹಿಮವತಃ ಕ್ಷೇತ್ರೇ ಮೇನಾಯಾಮಿತಿ ಶುಶ್ರುಮ
॥ ೫೮ ॥

ತಮೇವ ದಯಿತಂ ಭೂಯ ಆವೃಂಕ್ತೇ ಪತಿಮಂಬಿಕಾ ।
ಅನನ್ಯಭಾವೈಕಗತಿಂ ಶಕ್ತಿಃ ಸುಪ್ತೇವ ಪೂರುಷಮ್
॥ ೫೯ ॥

ಏತದ್ಭಗವತಃ ಶಂಭೋಃ ಕರ್ಮ ದಕ್ಷಾಧ್ವರದ್ರುಹಃ ।
ಶ್ರುತಂ ಭಾಗವತಾಚ್ಛಿಷ್ಯಾದುದ್ಧವಾನ್ಮೇ ಬೃಹಸ್ಪತೇಃ
॥ ೬೦ ॥

ಇದಂ ಪವಿತ್ರಂ ಪರಮೀಶಚೇಷ್ಟಿತಂ
ಯಶಸ್ಯಮಾಯುಷ್ಯಮಘೌಘಮರ್ಷಣಮ್ ।
ಯೋ ನಿತ್ಯದಾಽಽಕರ್ಣ್ಯ ನರೋಽನುಕೀರ್ತಯೇತ್
ಧುನೋತ್ಯಘಂ ಕೌರವ ಭಕ್ತಿಭಾವತಃ ॥ ೬೧ ॥

ವಿದುರನೇ! ದಕ್ಷಸುತೆಯಾದ ಸತೀದೇವಿಯು ಹೀಗೆ ತನ್ನ ಹಿಂದಿನ ಶರೀರವನ್ನು ತ್ಯಾಗಗೈದು ಮತ್ತೆ ಹಿಮವಂತನ ಪತ್ನಿಯಾದ ಮೇನಾದೇವಿಯ ಗರ್ಭದಿಂದ ಆವಿರ್ಭವಿಸಿದಳು. ॥ ೫೮ ॥ ಪ್ರಳಯಕಾಲದಲ್ಲಿ ಲೀನವಾದ ಶಕ್ತಿಯು ಸೃಷ್ಟಿಯ ಪ್ರಾರಂಭದಲ್ಲಿ ಪುನಃ ಈಶ್ವರನನ್ನು ಆಶ್ರಯಿಸುವಂತೆ, ಅನನ್ಯಪರಾಯಣೆಯಾದ ಶ್ರೀಜಗದಂಬೆಯು ಆ ಜನ್ಮದಲ್ಲಿಯೂ ತನ್ನ ಏಕಮಾತ್ರ ಆಶ್ರಯನೂ, ಪ್ರಿಯತಮನೂ ಆದ ಭಗವಾನ್ ಶ್ರೀಶಂಕರನನ್ನೇ ಪತಿಯಾಗಿ ವರಿಸಿದಳು. ॥ ೫೯ ॥ ವಿದುರನೇ! ದಕ್ಷಯಜ್ಞವನ್ನು ಧ್ವಂಸಮಾಡಿದ ಭಗವಾನ್ ಶಿವನ ಈ ಚರಿತ್ರವನ್ನು ನಾನು ಹಿಂದೆ ಬೃಹಸ್ಪತ್ಯಾಚಾರ್ಯರ ಶಿಷ್ಯನಾದ ಪರಮಭಾಗವತೋತ್ತಮ ಉದ್ಧವನ ಮುಖದಿಂದ ಕೇಳಿದ್ದೆನು. ॥ ೬೦ ॥ ಕುರುನಂದನಾ! ಶ್ರೀಪರಮೇಶ್ವರನ ಈ ಪಾವನ ಚರಿತ್ರವು, ಯಶಸ್ಸನ್ನೂ, ಆಯುಸ್ಸನ್ನೂ ವೃದ್ಧಿಪಡಿಸುವುದು ಮತ್ತು ಪಾಪರಾಶಿಯನ್ನು ನಾಶ ಪಡುವಂತಹುದು. ಭಕ್ತಿಭಾವದಿಂದ ಇದನ್ನು ಪ್ರತಿದಿನವೂ ಶ್ರವಣ-ಕೀರ್ತನೆ ಮಾಡುವವನು ತನ್ನ ಸಕಲ ಪಾಪರಾಶಿಯನ್ನು ತೊಳೆದು ಪವಿತ್ರನಾಗುವನು. ॥ ೬೧ ॥

*ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ದಕ್ಷಯಜ್ಞಸಂಧಾನಂ ನಾಮ ಸಪ್ತಮೋಽಧ್ಯಾಯಃ ॥ ೭ ॥

# ಎಂಟನೆಯ ಅಧ್ಯಾಯ

## ಧ್ರುವನ ವನ ಗಮನ

*ಮೈತ್ರೇಯ ಉವಾಚ*

ಸನಕಾದ್ಯಾ ನಾರದಶ್ಚ ಋಭುರ್ಹಂಸೋಽರುಣಿರ್ಯತಿಃ ।
ನೈತೇ ಗೃಹಾನ್ ಬ್ರಹ್ಮಸುತಾ ಹ್ಯಾವಸನ್ನೂರ್ಧ್ವರೇತಸಃ
॥ ೧ ॥

ಮೃಷಾಧರ್ಮಸ್ಯ ಭಾರ್ಯಾಸೀದ್ದಂಭಂ ಮಾಯಾಂ ಚ ಶತ್ರುಹನ್ ।
ಅಸೂತ ಮಿಥುನಂ ತತ್ತು ನಿರ್ಋತಿರ್ಜಗೃಹೇಽಪ್ರಜಃ
॥ ೨ ॥

ತಯೋಃ ಸಮಭವಲ್ಲೋಭೋ ನಿಕೃತಿಶ್ಚ ಮಹಾಮತೇ ।
ತಾಭ್ಯಾಂ ಕ್ರೋಧಶ್ಚ ಹಿಂಸಾ ಚ ಯದ್ದುರುಕ್ತಿಃ ಸ್ವಸಾ ಕಲಿಃ
॥ ೩ ॥

ಶ್ರೀಮೈತ್ರೇಯರು ಹೇಳುತ್ತಾರೆ – ಶತ್ರುಸೂದನನಾದ ವಿದುರನೇ! ಸನಕಾದಿಗಳು, ನಾರದರು, ಋಭು, ಹಂಸ, ಆರುಣಿ ಮತ್ತು ಯತಿ – ಎಂಬುವರು ಬ್ರಹ್ಮದೇವರ ನೈಷ್ಠಿಕ ಬ್ರಹ್ಮಚಾರಿಗಳಾದ ಪುತ್ರರು. ಇವರು ಗೃಹಸ್ಥಾಶ್ರಮವನ್ನು ಕೈಗೊಳ್ಳಲಿಲ್ಲ. ಆದ್ದರಿಂದ ಇವರ ವಂಶ ಬೆಳೆಯಲಿಲ್ಲ. ಅಧರ್ಮ ಎಂಬುವನೂ ಬ್ರಹ್ಮನ ಮಗನೇ. ಅವನ ಹೆಂಡತಿಯ ಹೆಸರು ಮೃಷಾ ಎಂದು. ಅವನಿಗೆ ಆಕೆಯಲ್ಲಿ 'ದಂಭ' ಎಂಬ ಪುತ್ರನೂ, ಮಾಯಾ ಎಂಬ ಪುತ್ರಿಯೂ ಜನಿಸಿದರು. ನಿರ್ಋತಿಗೆ ಸಂತಾನವಿಲ್ಲದ್ದರಿಂದ ಅವನು ಅವರಿಬ್ಬರನ್ನೂ ಕೊಂಡೊಯ್ದನು. ॥ ೧-೨ ॥ ದಂಭ ಮತ್ತು ಮಾಯೆ ಇವರಿಂದ ಲೋಭ ಹಾಗೂ ನಿಕೃತಿ (ಶಾಠ್ಯ) ಎಂಬುವರು ಜನಿಸಿದರು. ಅವರಿಂದ ಕ್ರೋಧ ಮತ್ತು ಹಿಂಸೆ ಹುಟ್ಟಿದರು. ಆ ಕ್ರೋಧ – ಹಿಂಸೆಯರ ಮಕ್ಕಳೇ ಕಲಿ (ಕಲಹ) ಮತ್ತು ಅವನ ತಂಗಿ ದುರುಕ್ತಿ (ಬೈಗುಳಗಳು) ಉತ್ಪನ್ನರಾದರು. ॥ ೩ ॥

ದುರುಕ್ತೌ ಕಲಿರಾಧತ್ತ ಭಯಂ ಮೃತ್ಯುಂ ಚ ಸತ್ತಮ ।
ತಯೋಶ್ಚ ಮಿಥುನಂ ಜಜ್ಞೇ ಯಾತನಾ ನಿರಯಸ್ತಥಾ ॥ ೪ ॥

ಸಂಗ್ರಹೇಣ ಮಯಾಖ್ಯಾತಃ ಪ್ರತಿಸರ್ಗಸ್ತವಾನಘ ।
ತ್ರಿಃಶ್ರುತ್ವೈತತ್ಪುಮಾನ್ಪುಣ್ಯಂ ವಿಧುನೋತ್ಯಾತ್ಮನೋ ಮಲಮ್ ॥ ೫ ॥

ಅಥಾತಃ ಕೀರ್ತಯೇ ವಂಶಂ ಪುಣ್ಯಕೀರ್ತೇಃ ಕುರೂದ್ವಹ ।
ಸ್ವಾಯಂಭುವಸ್ಯಾಪಿ ಮನೋರ್ಹರೇರಂಶಾಂಶಜನ್ಮನಃ ॥ ೬ ॥

ಪ್ರಿಯವ್ರತೋತ್ತಾನಪಾದೌ ಶತರೂಪಾಪತೇಃ ಸುತೌ ।
ವಾಸುದೇವಸ್ಯ ಕಲಯಾ ರಕ್ಷಾಯಾಂ ಜಗತಃ ಸ್ಥಿತೌ ॥ ೭ ॥

ಜಾಯೇ ಉತ್ತಾನಪಾದಸ್ಯ ಸುನೀತಿಃ ಸುರುಚಿಸ್ತಯೋಃ ।
ಸುರುಚಿಃ ಪ್ರೇಯಸೀ ಪತ್ಯುರ್ನೇತರಾ ಯತ್ಸುತೋ ಧ್ರುವಃ ॥ ೮ ॥

ಏಕದಾ ಸುರುಚೇಃ ಪುತ್ರಮಂಕಮಾರೋಪ್ಯ ಲಾಲಯನ್ ।
ಉತ್ತಮಂ ನಾರುರುಕ್ಷಂತಂ ಧ್ರುವಂ ರಾಜಾಭ್ಯನಂದತ ॥ ೯ ॥

ತಥಾ ಚಿಕೀರ್ಷಮಾಣಂ ತಂ ಸಪತ್ನ್ಯಾಸ್ತನಯಂ ಧ್ರುವಮ್ ।
ಸುರುಚಿಃ ಶೃಣ್ವತೋ ರಾಜ್ಞಃ ಸೇರ್ಷ್ಯಮಾಹಾತಿಗರ್ವಿತಾ ॥ ೧೦ ॥

ನ ವತ್ಸ ನೃಪತೇರ್ಧಿಷ್ಣ್ಯಂ ಭವಾನಾರೋಢುಮರ್ಹತಿ ।
ನ ಗೃಹೀತೋ ಮಯಾ ಯತ್ತ್ವಂ ಕುಕ್ಷಾವಪಿ ನೃಪಾತ್ಮಜಃ ॥ ೧೧ ॥

ಬಾಲೋಽಸಿ ಬತ ನಾತ್ಮಾನಮನ್ಯಸ್ತ್ರೀಗರ್ಭಸಂಭೃತಮ್ ।
ನೂನಂ ವೇದ ಭವಾನ್ಯಸ್ಯ ದುರ್ಲಭೇಽರ್ಥೇ ಮನೋರಥಃ ॥ ೧೨ ॥

ತಪಸಾರಾಧ್ಯ ಪುರುಷಂ ತಸ್ಯೈವಾನುಗ್ರಹೇಣ ಮೇ ।
ಗರ್ಭೇ ತ್ವಂ ಸಾಧಯಾತ್ಮಾನಂ ಯದೀಚ್ಛಸಿ ನೃಪಾಸನಮ್ ॥ ೧೩ ॥

ಸಾಧುಶಿರೋಮಣಿಯೇ! ಮತ್ತೆ ದುರುಕ್ತಿಯಿಂದ ಕಲಿಯು ಭಯ ಮತ್ತು ಮೃತ್ಯುವನ್ನು ಪಡೆದುಕೊಂಡನು. ಅವರಿಬ್ಬರ ಸಂಯೋಗದಿಂದ ಯಾತನೆ ಮತ್ತು ನಿರಯ (ನರಕ) ಎಂಬ ಜೋಡಿಯು ಜನಿಸಿತು. ॥ ೪ ॥ ಪುಣ್ಯಾತ್ಮನಾದ ವಿದುರಾ! ಹೀಗೆ ನಾನು ನಿನಗೆ ಪ್ರಳಯಕ್ಕೆ ಕಾರಣವಾದ ಈ ಅಧರ್ಮದ ವಂಶವನ್ನು ಸಂಕ್ಷೇಪವಾಗಿ ತಿಳಿಸಿದೆ. ಇದನ್ನು ಮೂರು ಬಾರಿ ಕೇಳಿದ ಮನುಷ್ಯನಿಗೆ ಅಧರ್ಮವನ್ನು ತ್ಯಜಿಸಿ ಪುಣ್ಯಸಂಪಾದನೆಯನ್ನು ಮಾಡಲು ಸಹಾಯವಾಗುವುದು. ॥ ೫ ॥ ಕುರುನಂದನಾ! ಇನ್ನು ನಾನು ನಿನಗೆ ಶ್ರೀಹರಿಯ ಅಂಶವಾದ ಬ್ರಹ್ಮದೇವರ ಅಂಶದಿಂದ ಜನಿಸಿದ ಪವಿತ್ರವಾದ ಕೀರ್ತಿಯುಳ್ಳ ಮಹಾರಾಜಾ ಸ್ವಾಯಂಭುವ ಮನುವಿನ ಪುತ್ರರ ವಂಶವನ್ನು ವರ್ಣಿಸುವೆನು. ॥ ೬ ॥

ಮಹಾರಾಣಿ ಶತರೂಪಾ ಮತ್ತು ಆಕೆಯ ಪತಿ ಸ್ವಾಯಂಭುವ ಮನು ಇವರಿಂದ ಪ್ರಿಯವ್ರತ ಮತ್ತು ಉತ್ತಾನಪಾದ ಎಂಬ ಇಬ್ಬರು ಪುತ್ರರು ಜನಿಸಿದರು. ಭಗವಾನ್ ವಾಸುದೇವನ ಅಂಶದಿಂದ ಉತ್ಪನ್ನರಾದ್ದರಿಂದ ಅವರೀರ್ವರೂ ಜಗತ್ತಿನ ರಕ್ಷಣೆಯಲ್ಲಿ ತತ್ಪರರಾಗಿರುತ್ತಿದ್ದರು. ॥ ೭ ॥ ಉತ್ತಾನಪಾದ ಮಹಾರಾಜನಿಗೆ ಸುನೀತಿ ಮತ್ತು ಸುರುಚಿ ಎಂಬ ಇಬ್ಬರು ಪತ್ನಿಯರಿದ್ದರು. ಅವರಿಬ್ಬರಲ್ಲಿ ಸುರುಚಿಯೇ ಮಹಾರಾಜನಿಗೆ ಹೆಚ್ಚು ಪ್ರೀತಿಪಾತ್ರದವಳಾಗಿದ್ದಳು. ಧ್ರುವಕುಮಾರನ ತಾಯಿಯಾಗಿದ್ದ ಸುನೀತಿಯಮೇಲೆ ಆತನಿಗೆ ಅಷ್ಟು ಪ್ರೀತಿ ಇರಲಿಲ್ಲ. ॥ ೮ ॥

ಒಂದು ದಿನ ಉತ್ತಾನಪಾದ ಮಹಾರಾಜನು ಸುರುಚಿಯ ಪುತ್ರನಾದ ಉತ್ತಮನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮುದ್ದಿಸುತ್ತಿದ್ದನು. ಅದೇ ಸಮಯದಲ್ಲಿ ಧ್ರುವಕುಮಾರನು ಬಂದು ತಂದೆಯ ತೊಡೆಯ ಮೇಲೆ ಕುಳಿತುಕೊಳ್ಳಲು ಬಯಸಿದನು. ಆದರೆ ರಾಜನು ಆತನನ್ನು ಸ್ವಾಗತಿಸಲಿಲ್ಲ. ॥ ೯ ॥ ಆಗ ಗರ್ವಪೂರಿತಳಾಗಿದ್ದ ಸುರುಚಿಯು ತನ್ನ ಸವತಿಯ ಪುತ್ರನಾದ ಧ್ರುವನು ಮಹಾರಾಜನ ತೊಡೆಯನ್ನೇರಲು ಪ್ರಯತ್ನಿಸುತ್ತಿರುವುದನ್ನು ಕಂಡು ಮರ್ಮಾಘಾತವಾದ ಮಾತುಗಳನ್ನಾಡಿದಳು. ॥ ೧೦ ॥ "ಮಗು! ನೀನು ರಾಜಸಿಂಹಾಸನದಲ್ಲಿ ಕುಳಿತುಕೊಳ್ಳಲು ಅಧಿಕಾರಿಯಲ್ಲ. ನೀನು ಮಹಾರಾಜರ ಮಗನಾದರೇನಾಯಿತು? ನಿನ್ನನ್ನು ನಾನು ಗರ್ಭದಲ್ಲಿ ಧರಿಸಲಿಲ್ಲವಲ್ಲ! ॥ ೧೧ ॥ ನೀನು ಇನ್ನೂ ಹಸುಳೆಯಾಗಿರುವೆ. ನೀನು ನನ್ನನ್ನು ಬಿಟ್ಟು ಬೇರೊಬ್ಬಳ ಗರ್ಭದಲ್ಲಿ ಹುಟ್ಟಿದ್ದೀಯೆ ಎಂಬುದು ನಿನಗೆ ತಿಳಿಯದು. ಅದರಿಂದಲೇ ನೀನು ಈ ದುರ್ಲಭವಾದ ವಿಷಯಕ್ಕೆ ಆಸೆಪಡುತ್ತಿರುವೆ. ॥ ೧೨ ॥ ನಿನಗೆ ರಾಜಸಿಂಹಾಸನವನ್ನು ಪಡೆಯಬೇಕೆಂಬ ಇಚ್ಛೆಯಿದ್ದರೆ ತಪಸ್ಸುಮಾಡಿ ಪರಮಪುರುಷನಾದ ಶ್ರೀಮನ್ನಾರಾಯಣನನ್ನು ಆರಾಧಿಸು. ಅವನ ಕೃಪೆಯಿಂದ ನನ್ನ ಗರ್ಭದಿಂದ ಹುಟ್ಟಬೇಕು, ತಿಳಿಯಿತೇ?" ॥ ೧೩ ॥

ಶ್ರೀಮೈತ್ರೇಯರು ಹೇಳುತ್ತಾರೆ – ವಿದುರನೇ! ದೊಣ್ಣೆಯ ಏಟು ತಿಂದ ಸರ್ಪವು ಬುಸುಗುಟ್ಟುವಂತೆ ತನ್ನ ಮಲತಾಯಿಯ ಕಠೋರ ಮಾತುಗಳನ್ನು ಕೇಳಿದ ಧ್ರುವಕುಮಾರನು ಕ್ರೋಧಾತಿರೇಕದಿಂದ ನಿಟ್ಟುಸಿರುಬಿಡತೊಡಗಿದನು. ಅವನ ತಂದೆಯು

ಮೈತ್ರೇಯ ಉವಾಚ

ಮಾತುಃ ಸಪತ್ನ್ಯಾಃ ಸ ದುರುಕ್ತಿವಿದ್ಧಃ
ಶ್ವಸನ್ರುಷಾ ದಂಡ ಹತೋ ಯಥಾಹಿಃ ।
ಹಿತ್ವಾ ಮಿಷಂತಂ ಪಿತರಂ ಸನ್ನವಾಚಂ
ಜಗಾಮ ಮಾತುಃ ಪ್ರರುದನ್ಸಕಾಶಮ್ ॥ ೧೪ ॥

ತಂ ನಿಃಶ್ವಸಂತಂ ಸ್ಫುರಿತಾಧರೋಷ್ಠಂ
ಸುನೀತಿರುತ್ಸಂಗ ಉದೂಹ್ಯ ಬಾಲಮ್ ।
ನಿಶಮ್ಯ ತತ್ಪೌರಮುಖಾನ್ನಿಶಾಂತಂ
ಸಾ ವಿವ್ಯಥೇ ಯದ್ಗದಿತಂ ಸಪತ್ನ್ಯಾ ॥ ೧೫ ॥

ಸೋತ್ಸೃಜ್ಯ ಧೈರ್ಯಂ ವಿಲಲಾಪ ಶೋಕ-
ದಾವಾಗ್ನಿನಾ ದಾವಲತೇವ ಬಾಲಾ ।
ವಾಕ್ಯಂ ಸಪತ್ನ್ಯಾಃ ಸ್ಮರತೀ ಸರೋಜ-
ಶ್ರಿಯಾ ದೃಶಾ ಬಾಷ್ಪಕಲಾಮುವಾಹ ॥ ೧೬ ॥

ದೀರ್ಘಂ ಶ್ವಸಂತೀ ವೃಜಿನಸ್ಯ ಪಾರ-
ಮಪಶ್ಯತೀ ಬಾಲಕಮಾಹ ಬಾಲಾ ।
ಮಾಮಂಗಲಂ ತಾತ ಪರೇಷು ಮಂಸ್ಥಾ
ಭುಂಕ್ತೇ ಜನೋ ಯತ್ಪರದುಃಖದಸ್ತತ್ ॥ ೧೭ ॥

ಸತ್ಯಂ ಸುರುಚ್ಯಾಭಿಹಿತಂ ಭವಾನ್ಮೇ
ಯದ್ದುರ್ಭಗಾಯಾ ಉದರೇ ಗೃಹೀತಃ ।
ಸ್ತನ್ಯೇನ ವೃದ್ಧಶ್ಚ ವಿಲಜ್ಜ ತೇ ಯಾಂ
ಭಾರ್ಯೇತಿ ವಾ ವೋಢುಮಿಡಸ್ಪತಿರ್ಮಾಮ್ ॥ ೧೮ ॥

ಆತಿಷ್ಠ ತತ್ತಾತ ವಿಮತ್ಸರಸ್ತ್ವ-
ಮುಕ್ತಂ ಸಮಾತ್ರಾಪಿ ಯದವ್ಯಲೀಕಮ್ ।
ಆರಾಧಯಾಧೋಕ್ಷಜಪಾದಪದ್ಮಂ
ಯದೀಚ್ಛಸೇಽಧ್ಯಾಸನಮುತ್ತಮೋ ಯಥಾ ॥ ೧೯ ॥

ಯಸ್ಯಾಂಘ್ರಿಪದ್ಮಂ ಪರಿಚರ್ಯ ವಿಶ್ವ-
ವಿಭಾವನಾಯಾತ್ತಗುಣಾಭಿಪತ್ತೇಃ ।
ಅಜೋಽಧ್ಯತಿಷ್ಠತ್ಖಲು ಪಾರಮೇಷ್ಠ್ಯಂ
ಪದಂ ಜಿತಾತ್ಮ ಶ್ವಸನಾಭಿವಂದ್ಯಮ್ ॥ ೨೦ ॥

ತಥಾ ಮನುರ್ವೋ ಭಗವಾನ್ಪಿತಾಮಹೋ
ಯಮೇಕಮತ್ಯಾ ಪುರುದಕ್ಷಿಣೈರ್ಮಖೈಃ ।
ಇಷ್ಟ್ವಾಭಿಪೇದೇ ದುರವಾಪ ಮನ್ಯತೋ
ಭೌಮಂ ಸುಖಂ ದಿವ್ಯಮಥಾಪವರ್ಗ್ಯಮ್ ॥ ೨೧ ॥

ತಮೇವ ವತ್ಸಾಶ್ರಯಭೃತ್ಯವತ್ಸಲಂ
ಮುಮುಕ್ಷುಭಿರ್ಮೃಗ್ಯಪದಾಬ್ಜಪದ್ಧತಿಮ್ ।
ಅನನ್ಯಭಾವೇ ನಿಜಧರ್ಮಭಾವಿತೇ
ಮನಸ್ಯವಸ್ಥಾಪ್ಯ ಭಜಸ್ವ ಪೂರುಷಮ್ ॥ ೨೨ ॥

ಇವೆಲ್ಲವನ್ನು ಸುಮ್ಮನೆ ನೋಡುತ್ತಿದ್ದನು. ಬಾಯಿಂದ ಒಂದು ಮಾತೂ ಹೊರಡಲಿಲ್ಲ. ಆಗ ಧ್ರುವನು ತಂದೆಯನ್ನು ಬಿಟ್ಟು ಅಳುತ್ತಾ ತಾಯಿಯ ಬಳಿಗೆ ಹೋದನು. ॥ ೧೪ ॥ ಎರಡೂ ತುಟಿಗಳು ಅದುರುತ್ತಿದ್ದು, ಅವನು ಬಿಕ್ಕಿ-ಬಿಕ್ಕಿ ಅಳುತ್ತಿದ್ದನು. ತಾಯಿ ಸುನೀತಿಯು ಮಗುವನ್ನು ತೊಡೆಯಮೇಲೆ ಕುಳ್ಳಿರಿಸಿ ಕೊಂಡಳು. ಅರಮನೆಯ ಇತರ ಹೆಂಗಸರಿಂದ ಸವತಿಯಾದ ಸುರುಚಿಯು ಆಡಿದ ಮಾತುಗಳನ್ನು ಕೇಳಿದಾಗ ಅವಳಿಗೂ ತುಂಬಾ ದುಃಖವಾಯಿತು. ॥ ೧೫ ॥ ಆಕೆಯು ಧೈರ್ಯವನ್ನು ಕಳೆದುಕೊಂಡು ಕಾಡ್ಗಿಚ್ಚಿಗೆ ಸಿಕ್ಕಿದ ಬಳ್ಳಿಯಂತೆ ಸಂತಪ್ತಳಾಗಿ ಕಳೆ ಗುಂದಿ ದೈನ್ಯದಿಂದ ರೋದಿಸತೊಡಗಿದಳು. ಸವತಿಯ ಮಾತನ್ನು ನೆನೆ-ನೆನೆದು ಆಕೆಯ ಕಮಲದಂತಹ ಕಣ್ಣುಗಳಲ್ಲಿ ಕಂಬನಿ ತುಂಬಿ ಬಂತು. ॥ ೧೬ ॥ ಆ ದೀನಳಾದ ನಾರಿಗೆ ದುಃಖದ ದಡ ಕಾಣಿಸದೇ ಹೋಯಿತು. ಆಗ ಆಕೆಯು ನಿಟ್ಟುಸಿರುಬಿಡುತ್ತಾ ಧ್ರುವನಿಗೆ ಹೇಳಿದಳು – "ಮಗು ! ನೀನು ಇನ್ನೊಬ್ಬರಿಗೆ ಯಾವ ಕೇಡನ್ನೂ ಬಯಸದಿರು. ಇತರರಿಗೆ ದುಃಖ ಕೊಡುವವನು ಸ್ವತಃ ದುಃಖಕ್ಕೆ ಈಡಾಗುವನು. ॥ ೧೭ ॥ ಸುರುಚಿಯು ಹೇಳಿದುದು ನಿಜವೇ ಆಗಿದೆ. ಏಕೆಂದರೆ, ಮಹಾರಾಜರು ನನ್ನನ್ನು ಹೆಂಡತಿ ಎಂದು ಒಪ್ಪುವುದಿರಲಿ, ದಾಸಿಯೆಂದೂ ಸ್ವೀಕರಿಸಲು ನಾಚಿಕೆ ಪಟ್ಟುಕೊಳ್ಳುವರು. ಅಂತಹ ದುರದೃಷ್ಟಶಾಲಿನಿಯಾದ ನನ್ನ ಹೊಟ್ಟೆಯಲ್ಲಿ ಹುಟ್ಟಿ ನನ್ನ ಸ್ತನ್ಯದಿಂದಲೇ ಬೆಳೆದವನು ನೀನು. ॥ ೧೮ ॥ ಮಗು ! ಸುರುಚಿಯು ನಿನಗೆ ಮಲತಾಯಿಯಾಗಿದ್ದರೂ ಸರಿಯಾದ ಮಾತನ್ನೇ ಆಡಿರುವಳು. ಆದುದರಿಂದ ರಾಜಕುಮಾರನಾದ ಉತ್ತಮನಂತೆ ರಾಜ ಸಿಂಹಾಸನದಲ್ಲಿ ಕುಳಿತುಕೊಳ್ಳುವ ಇಚ್ಛೆ ನಿನಗಿದ್ದರೆ, ದ್ವೇಷಭಾವವನ್ನು ಬಿಟ್ಟು ಅವಳು ಹೇಳಿದಂತೆಯೇ ಮಾಡು. ಸರಿ ! ಅಧೋಕ್ಷಜನಾದ ಶ್ರೀಹರಿಯ ಪಾದಪದ್ಮಗಳನ್ನು ಆರಾಧಿಸಲು ತೊಡಗು. ॥ ೧೯ ॥ ಜಗತ್ತನ್ನು ಪಾಲಿಸಲಿಕ್ಕಾಗಿ ಸತ್ತ್ವ ಗುಣವನ್ನು ಸ್ವೀಕರಿಸಿದ ಆ ಶ್ರೀಹರಿಯ ಚರಣಗಳನ್ನು ಆರಾಧಿಸಿದ್ದರಿಂದಲೇ ನಿನ್ನ ಪ್ರಪಿತಾಮಹರಾದ ಬ್ರಹ್ಮದೇವರಿಗೆ – ಪ್ರಾಣಗಳನ್ನೂ, ಮನಸ್ಸನ್ನೂ ಜಯಿಸಿರುವ ಮುನಿಗಳಿಗೂ ವಂದನೀಯನಾಗಿರುವ ಸರ್ವ ಶ್ರೇಷ್ಠವಾದ 'ಪರಮೇಷ್ಠಿ' ಎಂಬ ಪದವಿಯು ದೊರೆಯಿತು. ॥ ೨೦ ॥ ಅದರಂತೆಯೇ ನಿನ್ನ ಪಿತಾಮಹರಾದ ಸ್ವಾಯಂಭುವ ಮನು ಮಹಾರಾಜರೂ ಮಹಾದಕ್ಷಿಣೆಗಳುಳ್ಳ ಯಜ್ಞಗಳ ಮೂಲಕ ಅನನ್ಯ ಭಾವದಿಂದ ಆ ಭಗವಂತನನ್ನು ಆರಾಧನೆಮಾಡಿದ್ದರಿಂದಲೇ ಇತರರಿಗೆ ದುರ್ಲಭವಾದ ಲೌಕಿಕ, ಅಲೌಕಿಕ ಹಾಗೂ ಮೋಕ್ಷಸುಖವೂ ದೊರೆಯಿತು. ॥ ೨೧ ॥ ಮಗು ! ನೀನೂ ಆ ಭಕ್ತವತ್ಸಲನಾದ ಶ್ರೀಭಗವಂತನನ್ನೇ ಆಶ್ರಯಿಸು. ಜನ್ಮ-ಮರಣಗಳ ಸುಳಿಯಿಂದ ಬಿಡುಗಡೆ ಹೊಂದಲು ಬಯಸುವ ಮುಮುಕ್ಷುಗಳು ನಿರಂತರವಾಗಿ ಅವನ ಪಾದಾರವಿಂದಗಳನ್ನೇ ಅರಸುತ್ತಿರುತ್ತಾರೆ. ನೀನು ಸ್ವಧರ್ಮಪಾಲನೆಯಿಂದ ಪರಿಶುದ್ಧವಾದ ಚಿತ್ತದಲ್ಲಿ ಆ ಭಗವಾನ್ ಪುರುಷೋತ್ತಮನನ್ನು ನೆಲೆಗೊಳಿಸಿಕೊಂಡು, ಉಳಿದ ಎಲ್ಲ ಚಿಂತನೆಗಳನ್ನು ಬಿಟ್ಟು ಕೇವಲ ಅವನನ್ನೇ ಭಜಿಸುತ್ತಿರು. ॥ ೨೨ ॥

ನಾನ್ಯಂ ತತಃ ಪದ್ಮ ಪಲಾಶಲೋಚನಾದ್
ದುಃಖಚ್ಛಿದಂ ತೇ ಮೃಗಯಾಮಿ ಕಂಚನ ।
ಯೋ ಮೃಗ್ಯತೇ ಹಸ್ತಗೃಹೀತಪದ್ಮಯಾ
ಶ್ರಿಯೇತರೈರಂಗ ವಿಮೃಗ್ಯಮಾಣಯಾ ॥ ೨೩ ॥

*ಮೈತ್ರೇಯ ಉವಾಚ*

ಏವಂ ಸಂಜಲ್ಪಿತಂ ಮಾತುರಾಕರ್ಣ್ಯಾರ್ಥಾಗಮಂ ವಚಃ ।
ಸಂನಿಯಮ್ಯಾತ್ಮನಾಽಽತ್ಮಾನಂ ನಿಶ್ಚಕ್ರಾಮ ಪಿತುಃ ಪುರಾತ್ ॥ ೨೪ ॥

ನಾರದಸ್ತದುಪಾಕರ್ಣ್ಯ ಜ್ಞಾತ್ವಾ ತಸ್ಯ ಚಿಕೀರ್ಷಿತಮ್ ।
ಸ್ಪೃಷ್ಟ್ವಾ ಮೂರ್ಧನ್ಯಘಘ್ನೇನ ಪಾಣಿನಾ ಪ್ರಾಹ ವಿಸ್ಮಿತಃ ॥ ೨೫ ॥

ಅಹೋ ತೇಜಃ ಕ್ಷತ್ರಿಯಾಣಾಂ ಮಾನಭಂಗಮಮೃಷ್ಯತಾಮ್ ।
ಬಾಲೋಽಪ್ಯಯಂ ಹೃದಾ ಧತ್ತೇ ಯತ್ಸಮಾತುರಸದ್ವಚಃ ॥ ೨೬ ॥

*ನಾರದ ಉವಾಚ*

ನಾಧುನಾಪ್ಯವಮಾನಂ ತೇ ಸಮ್ಮಾನಂ ವಾಪಿ ಪುತ್ರಕ ।
ಲಕ್ಷಯಾಮಃ ಕುಮಾರಸ್ಯ ಸಕ್ತಸ್ಯ ಕ್ರೀಡನಾದಿಷು ॥ ೨೭ ॥

ವಿಕಲ್ಪೇ ವಿದ್ಯಮಾನೇಽಪಿ ನ ಹ್ಯಸಂತೋಷಹೇತವಃ ।
ಪುಂಸೋ ಮೋಹಮೃತೇ ಭಿನ್ನಾ ಯಲ್ಲೋಕೇ ನಿಜಕರ್ಮಭಿಃ ॥ ೨೮ ॥

ಪರಿತುಷ್ಯೇತ್ತತಸ್ತಾತ ತಾವನ್ಮಾತ್ರೇಣ ಪೂರುಷಃ ।
ದೈವೋಪಸಾದಿತಂ ಯಾವದ್ವೀಕ್ಷ್ಯೇಶ್ವರಗತಿಂ ಬುಧಃ ॥ ೨೯ ॥

ಅಥ ಮಾತ್ರೋಪದಿಷ್ಟೇನ ಯೋಗೇನಾವರುರುತ್ಸಸಿ ।
ಯತ್ಪ್ರಸಾದಂ ಸ ವೈ ಪುಂಸಾಂ ದುರಾರಾಧ್ಯೋ ಮತೋ ಮಮ ॥ ೩೦ ॥

ಮುನಯಃ ಪದವೀಂ ಯಸ್ಯ ನಿಃಸಂಗೇನೋರುಜನ್ಮಭಿಃ ।
ನ ವಿದುರ್ಮೃಗಯಂತೋಽಪಿ ತೀವ್ರಯೋಗಸಮಾಧಿನಾ ॥ ೩೧ ॥

ಅತೋ ನಿವರ್ತತಾಮೇಷ ನಿರ್ಬಂಧಸ್ತವ ನಿಷ್ಫಲಃ ।
ಯತಿಷ್ಯತಿ ಭವಾನ್ಕಾಲೇ ಶ್ರೇಯಸಾಂ ಸಮುಪಸ್ಥಿತೇ ॥ ೩೨ ॥

ಕಂದ! ನಿನ್ನ ದುಃಖವನ್ನು ದೂರಮಾಡಲು ಆ ಕಮಲ ನಯನನನ್ನು ಬಿಟ್ಟು ಬೇರೆ ಯಾರೂ ನನಗೆ ಕಾಣಿಸುತ್ತಿಲ್ಲ. ಬ್ರಹ್ಮಾದಿ ಇತರ ದೇವತೆಗಳು ಯಾರಿಗಾಗಿ ಹಾತೊರೆಯುತ್ತಿರುವರೋ ಅಂತಹ ಶ್ರೀಲಕ್ಷ್ಮೀದೇವಿಯೂ ಪದ್ಮವನ್ನು ಹಿಡಿದು ಕೊಂಡು ನಿರಂತರವಾಗಿ ಆ ಶ್ರೀಹರಿಯನ್ನೇ ಅರಸುತ್ತಿರುವಳು." ॥ ೨೩ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ತಾಯಿ ಸುನೀತಿಯು ಹೇಳಿದ ಮಾತುಗಳು ಇಷ್ಟಾರ್ಥಸಿದ್ಧಿಯ ಮಾರ್ಗ ವನ್ನು ತೋರಿಸುವುದಾಗಿದ್ದವು. ಆದುದರಿಂದ ಅದನ್ನು ಕೇಳಿ ಧ್ರುವನು ಬುದ್ಧಿಯ ಮೂಲಕ ಚಿತ್ತಕ್ಕೆ ಸಮಾಧಾನವನ್ನು ತಂದು ಕೊಂಡನು. ಒಡನೆಯೇ ತಂದೆಯ ನಗರವನ್ನು ಬಿಟ್ಟು ಹೊರಟು ಹೋದನು. ॥ ೨೪ ॥ ಇವೆಲ್ಲ ಸಮಾಚಾರ ಕೇಳಿ, ಅವನು ಏನು ಮಾಡಲು ಇಷ್ಟಪಡುತ್ತಿರುವನೆಂದು ತಿಳಿದುಕೊಂಡು ನಾರದ ಮಹರ್ಷಿಗಳು ಅಲ್ಲಿಗೆ ಆಗಮಿಸಿದರು. ಅವರು ಧ್ರುವನ ಮಸ್ತಕ ದಲ್ಲಿ ತಮ್ಮ ಪಾಪನಾಶಕವಾದ ಕರಕಮಲವನ್ನು ಇಟ್ಟು, ಮನಸ್ಸಿ ನಲ್ಲೇ ವಿಸ್ಮಿತರಾಗಿ ಹೀಗೆ ಅಂದುಕೊಂಡರು – ॥ ೨೫ ॥ ಆಹಾ! ಕ್ಷತ್ರಿಯರ ತೇಜಸ್ಸು ಎಷ್ಟು ಅದ್ಭುತವಾಗಿದೆ! ಅವರು ಅತ್ಯಲ್ಪವಾದ ಮಾನಭಂಗವನ್ನು ಸಹಿಸಲಾರರು. ನೋಡಿ! ಇವನಾದರೋ ಇನ್ನೂ ಹಸುಳೆ. ಆದರೂ ಇವನ ಮನಸ್ಸಿನಲ್ಲಿ ಮಲತಾಯಿಯ ಕಟುವಚನಗಳು ಬೇರೂರಿಬಿಟ್ಟಿವೆ. ॥ ೨೬ ॥

**ದೇವರ್ಷಿ ನಾರದರು ಹೇಳಿದರು** – ಮಗು! ನೀನು ಇನ್ನೂ ಆಟ-ಪಾಠಗಳಲ್ಲಿ ಆಸಕ್ತನಾಗಿರುವ ಪುಟ್ಟ ಹುಡುಗ. ಈ ವಯಸ್ಸಿ ನಲ್ಲಿ ನಿನಗೆ ಅಪಮಾನವಾಗಲೀ, ಸಮ್ಮಾನವಾಗಲೀ ಎಲ್ಲಿಂದ ಬಂತು? ॥ ೨೭ ॥

ಆದರೂ ನೀನು ಮಾನಾಪಮಾನದ ಕುರಿತು ವಿಚಾರಮಾಡುವೆ ಯಾದರೆ, ಕಂದ! ನಿಜವಾಗಿ ಮನುಷ್ಯನ ಅಸಂತೋಷಕ್ಕೆ ಕಾರಣ ಮೋಹವಲ್ಲದೆ ಬೇರೆ ಏನೂ ಇಲ್ಲ. ಪ್ರಪಂಚದಲ್ಲಿ ಮನುಷ್ಯನು ತನ್ನ ಕರ್ಮಗಳನುಸಾರವೇ ಮಾನ-ಅಪಮಾನ, ಸುಖ-ದುಃಖಗಳನ್ನು ಪಡೆಯುವನು. ॥ ೨೮ ॥ ಮಗು! ಭಗವಂತನ ಗತಿಯು ತುಂಬಾ ವಿಚಿತ್ರವಾಗಿದೆ. ಆದುದರಿಂದ ವಿವೇಕಿಯಾದವರು ಅದನ್ನು ವಿಚಾರಮಾಡಿ, ದೈವವಶದಿಂದ ತನಗೆ ಒದಗಿದ ಪರಿಸ್ಥಿತಿಯಲ್ಲೇ ಸಂತೋಷಪಟ್ಟುಕೊಳ್ಳಬೇಕು. ॥ ೨೯ ॥ ಈಗ ನೀನು ತಾಯಿಯ ಉಪದೇಶದಂತೆ ಯೋಗ-ಸಾಧನೆಯ ಮೂಲಕ ಶ್ರೀಭಗವಂತನ ಕೃಪೆಯನ್ನು ಪಡೆಯಲು ಹೊರಟಿರುವೆ. ಆದರೆ ನನ್ನ ಅಭಿಪ್ರಾಯ ದಲ್ಲಿ ಶ್ರೀಭಗವಂತನನ್ನು ಒಲಿಸಿಕೊಳ್ಳುವುದು ಸಾಮಾನ್ಯ ಮನುಷ್ಯರಿಗೆ ಅತ್ಯಂತ ಕಠಿಣವೇ ಆಗಿದೆ. ॥ ೩೦ ॥ ಮಹಾಮುನಿ ಗಳು ಅನೇಕ ಜನ್ಮಗಳ ತನಕ ನಿಸ್ಸಂಗರಾಗಿ ಯೋಗಸಮಾಧಿಯ ಮೂಲಕ ಅತಿಕಠಿಣವಾದ ಸಾಧನೆಯನ್ನು ಮಾಡುತ್ತಿದ್ದರು. ಆದರೂ ಅವನ ಮಾರ್ಗವನ್ನು ತಿಳಿಯಲಾರರು. ॥ ೩೧ ॥ ಆದ್ದರಿಂದ ನೀನು ಈ ವ್ಯರ್ಥವಾದ ಹಠವನ್ನು ಬಿಟ್ಟು ಮನೆಗೆ ಹಿಂದಿರುಗು. ದೊಡ್ಡವನಾದಾಗ ಪರಮಾರ್ಥವನ್ನು ಸಾಧಿಸುವ ಸಮಯ ಬಂದಾಗ ಅದಕ್ಕಾಗಿ ಪ್ರಯತ್ನಮಾಡುವೆಯಂತೆ. ॥ ೩೨ ॥

ಯಸ್ಯ ಯದ್ದೈವವಿಹಿತಂ ಸ ತೇನ ಸುಖದುಃಖಯೋಃ ।
ಆತ್ಮಾನಂ ತೋಷಯನ್ ದೇಹೀ ತಮಸಃ ಪಾರಮೃಚ್ಛತಿ ॥ ೩೩ ॥

ಗುಣಾಧಿಕಾನ್ಮುದಂ ಲಿಪ್ಸೇದನುಕ್ರೋಶಂ ಗುಣಾಧಮಾತ್ ।
ಮೈತ್ರೀಂ ಸಮಾನಾದನ್ವಿಚ್ಛೇನ್ನ ತಾಪೈರಭಿಭೂಯತೇ ॥ ೩೪ ॥

ಧ್ರುವ ಉವಾಚ

ಸೋಽಯಂ ಶಮೋ ಭಗವತಾ ಸುಖದುಃಖಹತಾತ್ಮನಾಮ್ ।
ದರ್ಶಿತಃ ಕೃಪಯಾ ಪುಂಸಾಂ ದುರ್ದರ್ಶೋಽಸ್ಮದ್ವಿಧೈಸ್ತು ಯಃ ॥ ೩೫ ॥

ಅಥಾಪಿ ಮೇಽವಿನೀತಸ್ಯ ಕ್ಷಾತ್ರಂ ಘೋರಮುಪೇಯುಷಃ ।
ಸುರುಚ್ಯಾ ದುರ್ವಚೋಬಾಣೈರ್ನ ಭಿನ್ನೇ ಶ್ರಯತೇ ಹೃದಿ ॥ ೩೬ ॥

ಪದಂ ತ್ರಿಭುವನೋತ್ಕೃಷ್ಟಂ ಜಿಗೀಷೋಃ ಸಾಧು ವರ್ತ್ಮ ಮೇ ।
ಬ್ರೂಹ್ಯಸ್ಮತ್ಪಿತೃಭಿರ್ಬ್ರಹ್ಮನ್ನನ್ಯೈರಪ್ಯನಧಿಷ್ಠಿತಮ್ ॥ ೩೭ ॥

ನೂನಂ ಭವಾನ್ಭಗವತೋ ಯೋಽಂಗಜಃ ಪರಮೇಷ್ಠಿನಃ ।
ವಿತುದನ್ನಟತೇ ವೀಣಾಂ ಹಿತಾರ್ಥಂ ಜಗತೋಽರ್ಕವತ್ ॥ ೩೮ ॥

ಮೈತ್ರೇಯ ಉವಾಚ

ಇತ್ಯುದಾಹೃತಮಾಕರ್ಣ್ಯ ಭಗವಾನ್ನಾರದಸ್ತದಾ ।
ಪ್ರೀತಃ ಪ್ರತ್ಯಾಹ ತಂ ಬಾಲಂ ಸದ್ವಾಕ್ಯಮನುಕಂಪಯಾ ॥ ೩೯ ॥

ನಾರದ ಉವಾಚ

ಜನನ್ಯಾಭಿಹಿತಃ ಪಂಥಾಃ ಸ ವೈ ನಿಃಶ್ರೇಯಸಸ್ಯ ತೇ ।
ಭಗವಾನ್ವಾಸುದೇವಸ್ತಂ ಭಜ ತತ್ಪ್ರವಣಾತ್ಮನಾ ॥ ೪೦ ॥

ಧರ್ಮಾರ್ಥಕಾಮಮೋಕ್ಷಾಖ್ಯಂ ಯ ಇಚ್ಛೇಚ್ಛ್ರೇಯ ಆತ್ಮನಃ ।
ಏಕಮೇವ ಹರೇಸ್ತತ್ರ ಕಾರಣಂ ಪಾದಸೇವನಮ್ ॥ ೪೧ ॥

ತತ್ತಾತ ಗಚ್ಛ ಭದ್ರಂ ತೇ ಯಮುನಾಯಾಸ್ತಟಂ ಶುಚಿ ।
ಪುಣ್ಯಂ ಮಧುವನಂ ಯತ್ರ ಸಾನ್ನಿಧ್ಯಂ ನಿತ್ಯದಾ ಹರೇಃ ॥ ೪೨ ॥

ಸ್ನಾತ್ವಾನುಸವನಂ ತಸ್ಮಿನ್ ಕಾಲಿಂದ್ಯಾಃ ಸಲಿಲೇ ಶಿವೇ ।
ಕೃತ್ವೋಚಿತಾನಿ ನಿವಸನ್ನಾತ್ಮನಃ ಕಲ್ಪಿತಾಸನಃ ॥ ೪೩ ॥

ದೈವದ ವಿಧಾನದಂತೆ ಪ್ರಾಪ್ತವಾದ ಸುಖ-ದುಃಖಗಳಲ್ಲೇ ಮನಸ್ಸನ್ನು ಸಂತೋಷವಾಗಿಟ್ಟು ಕೊಳ್ಳುವ ಮನುಷ್ಯನು ಮೋಹ ಮಯ ಸಂಸಾರದಿಂದ ಪಾರಾಗುವನು. ॥ ೩೩॥ ಮನುಷ್ಯನು ತನಗಿಂತ ಹೆಚ್ಚಿನ ಗುಣಗಳುಳ್ಳವನನ್ನು ಕಂಡು ಸಂತೋಷ ಪಡಬೇಕು. ತನಗಿಂತ ಕಡಿಮೆ ಗುಣಗಳುಳ್ಳವನಲ್ಲಿ ದಯೆ ತೋರ ಬೇಕು. ತನಗೆ ಸಮಾನ ಗುಣಗಳುಳ್ಳವನೊಡನೆ ಮೈತ್ರಿಯನ್ನು ಬೆಳೆಸಬೇಕು. ಹೀಗೆ ಮಾಡುವವನಿಗೆ ದುಃಖಗಳು ಎಂದೂ ಸತಾಯಿಸಲಾರವು. ॥ ೩೪ ॥

**ಧ್ರುವಕುಮಾರನು ಹೇಳಿದನು** – ಪೂಜ್ಯರೇ! ಸುಖ-ದುಃಖಗಳಿಂದ ಚಿತ್ತವು ಚಂಚಲವಾದ ಜನರಿಗೆ ನೀವು ಕೃಪೆಗೈದು ಶಾಂತಿಯ ಈ ಉತ್ತಮ ಉಪಾಯವನ್ನು ಹೇಳಿದಿರಿ. ಆದರೆ ನನ್ನಂಥಹ ಅಜ್ಞಾನಿಗಳ ದೃಷ್ಟಿಯು ಅಲ್ಲಿಯವರೆಗೆ ತಲುಪ ಲಾರದು. ॥ ೩ ॥ ಇದಲ್ಲದೆ ನನ್ನದು ಘೋರವಾದ ಕ್ಷತ್ರಿಯ ಸ್ವಭಾವ. ಆದ್ದರಿಂದ ಪ್ರಾಯಶಃ ನನ್ನಲ್ಲಿ ವಿನಯದ ಅಭಾವವೇ ಇದೆ. ಸುರುಚಿಯ ಕಟುವಚನಗಳೆಂಬ ಬಾಣಗಳಿಂದ ಸೀಳಿ ಹೋದ ನನ್ನ ಹೃದಯದಲ್ಲಿ ನಿಮ್ಮ ಈ ಉಪದೇಶವು ನಿಲ್ಲುವುದಿಲ್ಲವಲ್ಲ! ॥ ೩೬ ॥ ದೇವರ್ಷಿಗಳೇ ತ್ರಿಲೋಕಗಳಲ್ಲೇ ಶ್ರೇಷ್ಠತಮವಾದ ಸ್ಥಾನವನ್ನು ತಂದೆ-ತಾತಂದಿರಾಗಲೀ ಅಥವಾ ಬೇರೆ ಯಾರೇ ಆಗಲೀ ಏರಲು ಸಾಧ್ಯವಾಗಲಿಲ್ಲವೋ ಅದನ್ನು ಪಡೆಯಬೇಕೆಂದು ನಾನು ಬಯಸುತ್ತಿರುವೆನು. ನೀವು ನನಗೆ ಅದರ ಪ್ರಾಪ್ತಿಗಾಗಿ ಯಾವುದಾದರೂ ಒಳ್ಳೆಯ ಮಾರ್ಗವನ್ನು ತೋರಿಸಿರಿ. ॥ ೩೭ ॥ ನೀವು ಭಗವಾನ್ ಬ್ರಹ್ಮದೇವರ ಪುತ್ರರು. ಜಗತ್ತಿನ ಹಿತಕ್ಕಾಗಿಯೇ ವೀಣೆಯನ್ನು ನುಡಿಸುತ್ತಾ ಸೂರ್ಯನಂತೆ ಮೂರು ಲೋಕಗಳಲ್ಲಿಯೂ ಸಂಚರಿಸುತ್ತಿರುವಿರಿ. ॥ ೩೮ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಧ್ರುವಕುಮಾರನ ಮಾತುಗಳನ್ನು ಕೇಳಿ ಪೂಜ್ಯರಾದ ನಾರದ ಮಹರ್ಷಿಗಳು ಅತ್ಯಂತ ಪ್ರಸನ್ನರಾದರು. ಅವರು ಅವನ ಮೇಲೆ ಕೃಪೆಗೈದು ಹೀಗೆ ಸದುಪದೇಶ ಮಾಡತೊಡಗಿದರು. ॥ ೩೯ ॥

**ಶ್ರೀನಾರದರು ಹೇಳಿದರು** – "ಮಗು! ತಾಯಿಯಾದ ಸುನೀತಿಯು ಹೇಳಿರುವುದೆಲ್ಲವೂ ನಿನಗೆ ಪರಮಕಲ್ಯಾಣಕರವಾದ ಮಾರ್ಗವೇ ಆಗಿದೆ. ಭಗವಾನ್ ಶ್ರೀವಾಸುದೇವನೇ ಆ ಉಪಾಯವು. ಆದುದರಿಂದ ದತ್ತಚಿತ್ತನಾಗಿ ಅವನನ್ನೇ ಭಜಿಸು. ॥ ೪೦ ॥ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳ ಅಭಿಲಾಷೆಯುಳ್ಳ ಮನುಷ್ಯನಿಗೆ ಅವುಗಳ ಪ್ರಾಪ್ತಿಯ ಏಕಮಾತ್ರ ಉಪಾಯವು ಶ್ರೀಹರಿಯ ಚರಣಸೇವೆಯೇ ಆಗಿದೆ. ॥ ೪೧ ॥ ಮಗು! ನಿನಗೆ ಮಂಗಳವಾಗಲಿ. ಈಗ ನೀನು ಯಮುನಾನದಿಯ ದಡದಲ್ಲಿರುವ ಪರಮಪವಿತ್ರವಾದ ಮಧುವನಕ್ಕೆ ಹೋಗು. ಅಲ್ಲಿ ಶ್ರೀಹರಿಯ ನಿತ್ಯಸಾನ್ನಿಧ್ಯವಿದೆ. ॥ ೪೨ ॥ ಅಲ್ಲಿ ಯಮುನಾ ನದಿಯ ನಿರ್ಮಲ ಜಲದಲ್ಲಿ ತ್ರಿಕಾಲಗಳಲ್ಲಿ ಸ್ನಾನಮಾಡಿ, ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಯಥಾವಿಧಿಯಾಗಿ ಆಸನವನ್ನು ಹಾಸಿಕೊಂಡು ಸ್ಥಿರವಾಗಿ ಕುಳಿತುಕೊಳ್ಳಬೇಕು. ॥ ೪೩ ॥

ಪ್ರಾಣಾಯಾಮೇನ ತ್ರಿವೃತಾ ಪ್ರಾಣೇಂದ್ರಿಯಮನೋಮಲಮ್ ।
ಶನೈರ್ವ್ಯುದಸ್ಯಾಭಿಧ್ಯಾಯೇನ್ಮನಸಾ ಗುರುಣಾ ಗುರುಮ್ ॥ ೪೪ ॥

ಮತ್ತೆ ರೇಚಕ, ಪೂರಕ, ಕುಂಭಕವೆಂಬ ಮೂರು ವಿಧದ ಪ್ರಾಣಾಯಾಮದಿಂದ ಮೆಲ್ಲ-ಮೆಲ್ಲನೆ ಪ್ರಾಣ-ಮನಗಳ, ಇಂದ್ರಿಯಗಳ ದೋಷಗಳನ್ನು ದೂರಗೊಳಿಸಿ, ಧೈರ್ಯದಿಂದ ಕೂಡಿದ ಮನಸ್ಸಿನಿಂದ ಪರಮಗುರು ಭಗವಂತನನ್ನು ಹೀಗೆ ಧ್ಯಾನಿಸಬೇಕು. ॥ ೪೪ ॥

ಪ್ರಸಾದಾಭಿಮುಖಂ ಶಶ್ವತ್ಪ್ರಸನ್ನವದನೇಕ್ಷಣಮ್ ।
ಸುನಾಸಂ ಸುಭ್ರುವಂ ಚಾರುಕಪೋಲಂ ಸುರಸುಂದರಮ್ ॥ ೪೫ ॥

ಭಗವಂತನ ನೇತ್ರಗಳೂ – ಮುಖವೂ ನಿರಂತರ ಪ್ರಸನ್ನವಾಗಿದೆ. ಅದನ್ನು ನೋಡುವಾಗ ಸಂತೋಷವಾಗಿ ಭಕ್ತರಿಗೆ ವರವನ್ನು ಕೊಡಲು ಅಭಿಮುಖವಾದಂತೆ ತೋರುತ್ತದೆ. ಅವನ ಮೂಗು, ಹುಬ್ಬುಗಳು, ಕೆನ್ನೆಗಳು ಅತ್ಯಂತ ಸುಶೋಭಿತವಾಗಿದೆ. ಅವನು ಸಮಸ್ತ ದೇವತೆಗಳಲ್ಲಿಯೂ ಅತ್ಯಂತ ಸುಂದರವಾಗಿದ್ದಾನೆ. ॥ ೪೫ ॥

ತರುಣಂ ರಮಣೀಯಾಂಗಮರುಣೋಷ್ಠೇಕ್ಷಣಾಧರಮ್ ।
ಪ್ರಣತಾಶ್ರಯಣಂ ನೃಮ್ಣಂ ಶರಣ್ಯಂ ಕರುಣಾರ್ಣವಮ್ ॥ ೪೬ ॥

ಅವನು ತರುಣವಯಸ್ಸಿನವನಾಗಿದ್ದು ಅಂಗಾಂಗಗಳೆಲ್ಲ ರಮಣೀಯವಾಗಿವೆ. ತುಟಿಗಳು ಕೆಂಪಾಗಿದ್ದು ಕಣ್ಣುಗಳು ನಸುಗೆಂಪಾಗಿವೆ. ಅವನು ಶರಣಾಗತರಿಗೆ ಆಶ್ರಯನೂ, ಸುಖದಾಯಕನೂ, ಶರಣಾಗತವತ್ಸಲನೂ, ದಯಾಸಮುದ್ರನೂ ಆಗಿರುವನು. ॥ ೪೬ ॥

ಶ್ರೀವತ್ಸಾಂಕಂ ಘನಶ್ಯಾಮಂ ಪುರುಷಂ ವನಮಾಲಿನಮ್ ।
ಶಂಖಚಕ್ರಗದಾಪದ್ಮೈರಭಿವ್ಯಕ್ತಚತುರ್ಭುಜಮ್ ॥ ೪೭ ॥

ಅವನ ವಕ್ಷಸ್ಥಳದಲ್ಲಿ ಶ್ರೀವತ್ಸಚಿಹ್ನೆಯಿದೆ. ಶರೀರವು ನೀರುತುಂಬಿದ ಮೋಡದಂತೆ ಶ್ಯಾಮಲವಾಗಿದೆ. ಆ ಪರಮಪುರುಷ ಶ್ಯಾಮಸುಂದರನು ಕೊರಳಲ್ಲಿ ಕಮನೀಯವಾದ ವನಮಾಲೆಯನ್ನೂ, ನಾಲ್ಕು ಭುಜಗಳಲ್ಲಿಯೂ ಶೋಭಿಸುತ್ತಿರುವ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿರುವನು. ॥ ೪೭ ॥

ಕಿರೀಟಿನಂ ಕುಂಡಲಿನಂ ಕೇಯೂರವಲಯಾನ್ವಿತಮ್ ।
ಕೌಸ್ತುಭಾಭರಣಗ್ರೀವಂ ಪೀತಕೌಶೇಯವಾಸಸಮ್ ॥ ೪೮ ॥

ಅವನ ಅಂಗ- ಉಪಾಂಗಗಳು – ಕಿರೀಟ, ಕುಂಡಲ, ಕೇಯೂರ, ಕಂಕಣ ಮುಂತಾದ ಆಭರಣಗಳಿಂದ ವಿಭೂಷಿತವಾಗಿವೆ. ಕೊರಳಿನಲ್ಲಿ ಕೌಸ್ತುಭಮಣಿಯ ಕಾಂತಿ ಮತ್ತು ನಡುವಿನಲ್ಲಿ ರೇಷ್ಮೆಯ ಪೀತಾಂಬರ ಪ್ರಕಾಶಿಸುತ್ತಿದೆ. ॥ ೪೮ ॥

ಕಾಂಚೀಕಲಾಪಪರ್ಯಸ್ತಂ ಲಸತ್ಕಾಂಚನನೂಪುರಮ್ ।
ದರ್ಶನೀಯತಮಂ ಶಾಂತಂ ಮನೋನಯನವರ್ಧನಮ್ ॥ ೪೯ ॥

ಕಟಿಯಲ್ಲಿ ಕನಕ ಒಡ್ಯಾಣವೂ, ಕಾಲುಗಳಲ್ಲಿ ಕಾಂಚನ ಕಾಲಂದುಗೆಗಳೂ ಕಣ್ಣುಗಳಿಗೆ ಹಬ್ಬವಾಗಿದೆ. ಭಗವಂತನ ದಿವ್ಯಮಂಗಳ ವಿಗ್ರಹವು ದರ್ಶನೀಯವಾಗಿದ್ದು, ಶಾಂತವಾಗಿದ್ದು ನಯನಾನಂದಕರವಾಗಿದೆ. ॥ ೪೯ ॥

ಪದ್ಭ್ಯಾಂ ನಖಮಣಿಶ್ರೇಣ್ಯಾ ವಿಲಸದ್ಭ್ಯಾಂ ಸಮರ್ಚತಾಮ್ ।
ಹೃತ್ಪದ್ಮಕರ್ಣಿಕಾಧಿಷ್ಣ್ಯಮಾಕ್ರಮ್ಯಾತ್ಮನ್ಯವಸ್ಥಿತಮ್ ॥ ೫೦ ॥

ಮಾನಸ ಪೂಜೆ ಮಾಡುವ ಅಂತರಂಗಭಕ್ತರ ಅಂತಃಕರಣದಲ್ಲಿ ಹೃದಯಕಮಲದ ಕರ್ಣಿಕೆಯ ಜಾಗದಲ್ಲಿ ತನ್ನ ಉಗುರುಗಳೆಂಬ ಮಣಿಗಳ ಸಾಲುಗಳಿಂದ ಮಿನುಗುತ್ತಿರುವ ಪಾದಾರವಿಂದಗಳನ್ನು ನೆಲೆಗೊಳಿಸಿ ಶೋಭಿಸುತ್ತಿದ್ದಾನೆ. ॥ ೫೦॥

ಸ್ಮಯಮಾನಮಭಿಧ್ಯಾಯೇತ್ಸಾನುರಾಗಾವಲೋಕನಮ್ ।
ನಿಯತೇನೈಕಭೂತೇನ ಮನಸಾ ವರದರ್ಷಭಮ್ ॥ ೫೧ ॥

ಹೀಗೆ ಧಾರಣೆಯನ್ನು ಮಾಡುತ್ತಾ ಚಿತ್ತವು ಸ್ಥಿರವೂ, ಏಕಾಗ್ರವೂ ಆದ ಬಳಿಕ 'ವರಪ್ರದನಾದ ಪ್ರಭುವು ಕಿರುನಗೆಯನ್ನು ಸೂಸುತ್ತಾ ಅನುರಾಗ ತುಂಬಿದ ನೋಟವನ್ನು ನನ್ನ ಮೇಲೆ ಬೀರುತ್ತಿದ್ದಾನೆ' ಎಂದು ಮನಸ್ಸಿನೊಳಗೆ ಧ್ಯಾನಮಾಡಬೇಕು. ॥ ೫೧ ॥

ಏವಂ ಭಗವತೋ ರೂಪಂ ಸುಭದ್ರಂ ಧ್ಯಾಯತೋ ಮನಃ ।
ನಿರ್ವೃತ್ಯಾ ಪರಯಾ ತೂರ್ಣಂ ಸಂಪನ್ನಂ ನ ನಿವರ್ತತೇ ॥ ೫೨ ॥

ಶ್ರೀಭಗವಂತನ ಮಂಗಳಮೂರ್ತಿಯನ್ನು ಹೀಗೆ ನಿರಂತರವಾಗಿ ಧ್ಯಾನಿಸುವುದರಿಂದ ಮನಸ್ಸು ಶೀಘ್ರವಾಗಿ ಪರಮಾನಂದದಲ್ಲಿ ಮುಳುಗಿ ತಲ್ಲೀನವಾಗಿಬಿಡುವುದು. ಮತ್ತೆ ಅದು ಅಲ್ಲಿಂದ ಹಿಂದಿರುಗುವುದಿಲ್ಲ. ॥ ೫೨ ॥

ಜಪಶ್ಚ ಪರಮೋ ಗುಹ್ಯಃ ಶ್ರೂಯತಾಂ ಮೇ ನೃಪಾತ್ಮಜ ।
ಯಂ ಸಪ್ತರಾತ್ರಂ ಪ್ರಪಠನ್ ಪುಮಾನ್ಪಶ್ಯತಿ ಖೇಚರಾನ್ ॥ ೫೩ ॥

ರಾಜಕುಮಾರಾ ! ಈ ಧ್ಯಾನದ ಜೊತೆಯಲ್ಲೇ ಜಪ ಮಾಡುವಂತಹ ಪರಮ ಗುಹ್ಯವಾದ ಮಂತ್ರವನ್ನು ಹೇಳುವೆನು, ಕೇಳು – ಇದನ್ನು ಏಳು ರಾತ್ರಿ ಜಪ ಮಾಡುವುದರಿಂದ ಮನುಷ್ಯನು ಆಕಾಶದಲ್ಲಿ ಸಂಚರಿಸುವ ಸಿದ್ಧರನ್ನು ದರ್ಶಿಸಬಲ್ಲನು. ॥ ೫೩ ॥

''ಓಂ ನಮೋ ಭಗವತೇ ವಾಸುದೇವಾಯ ।''
ಮನ್ತ್ರೇಣಾನೇನ ದೇವಸ್ಯ ಕುರ್ಯಾದ್ದ್ರವ್ಯಮಯೀಂ ಬುಧಃ ।
ಸಪರ್ಯಾಂ ವಿವಿಧೈರ್ದ್ರವ್ಯೈರ್ದೇಶಕಾಲವಿಭಾಗವಿತ್ ॥ ೫೪ ॥

ಸಲಿಲೈಃ ಶುಚಿಭಿರ್ಮಾಲ್ಯೈರ್ವನ್ಯೈರ್ಮೂಲಫಲಾದಿಭಿಃ ।
ಶಸ್ತಾಂಕುರಾಂಶುಕೈಶ್ಚಾರ್ಚೇತ್ತುಲಸ್ಯಾ ಪ್ರಿಯಯಾ ಪ್ರಭುಮ್ ॥ ೫೫ ॥

ಲಬ್ಧ್ವಾ ದ್ರವ್ಯಮಯೀಮರ್ಚಾಂ ಕ್ಷಿತ್ಯಂಬ್ವಾದಿಷು ವಾರ್ಚಯೇತ್ ।
ಆಭೃತಾತ್ಮಾ ಮುನಿಃ ಶಾಂತೋ ಯತವಾಙ್ಮಿತವನ್ಯಭುಕ್ ॥ ೫೬ ॥

ಸ್ವೇಚ್ಛಾವತಾರಚರಿತೈರಚಿಂತ್ಯನಿಜಮಾಯಯಾ ।
ಕರಿಷ್ಯತ್ಯುತ್ತಮಶ್ಲೋಕಸ್ತದ್ಧ್ಯಾಯೇದ್ಧೃದಯಂಗಮಮ್ ॥ ೫೭ ॥

ಪರಿಚರ್ಯಾ ಭಗವತೋ ಯಾವತ್ಯಃ ಪೂರ್ವಸೇವಿತಾಃ ।
ತಾ ಮಂತ್ರಹೃದಯೇನೈವ ಪ್ರಯುಂಜ್ಯಾನ್ಮಂತ್ರಮೂರ್ತಯೇ ॥ ೫೮ ॥

ಏವಂ ಕಾಯೇನ ಮನಸಾ ವಚಸಾ ಚ ಮನೋಗತಮ್ ।
ಪರಿಚರ್ಯಮಾಣೋ ಭಗವಾನ್ಭಕ್ತಿಮತ್ಪರಿಚರ್ಯಯಾ ॥ ೫೯ ॥

ಪುಂಸಾಮಮಾಯಿನಾಂ ಸಮ್ಯಗ್ಭಜತಾಂ ಭಾವವರ್ಧನಃ ।
ಶ್ರೇಯೋ ದಿಶತ್ಯಭಿಮತಂ ಯದ್ಧರ್ಮಾದಿಷು ದೇಹಿನಾಮ್ ॥ ೬೦ ॥

ವಿರಕ್ತಶ್ಚೇಂದ್ರಿಯರತೌ ಭಕ್ತಿಯೋಗೇನ ಭೂಯಸಾ ।
ತಂ ನಿರಂತರಭಾವೇನ ಭಜೇತಾದ್ಧಾ ವಿಮುಕ್ತಯೇ ॥ ೬೧ ॥

ಇತ್ಯುಕ್ತಸ್ತಂ ಪರಿಕ್ರಮ್ಯ ಪ್ರಣಮ್ಯ ಚ ನೃಪಾರ್ಭಕಃ ।
ಯಯೌ ಮಧುವನಂ ಪುಣ್ಯಂ ಹರೇಶ್ಚರಣಚರ್ಚಿತಮ್ ॥ ೬೨ ॥

ತಪೋವನಂ ಗತೇ ತಸ್ಮಿನ್ ಪ್ರವಿಷ್ಟೋಽನ್ತಃಪುರಂ ಮುನಿಃ ।
ಅರ್ಹಿತಾರ್ಹಣಕೋ ರಾಜ್ಞಾ ಸುಖಾಸೀನ ಉವಾಚ ತಮ್ ॥ ೬೩ ॥

*ನಾರದ ಉವಾಚ*

ರಾಜನ್ಕಿಂ ಧ್ಯಾಯಸೇ ದೀರ್ಘಂ ಮುಖೇನ ಪರಿಶುಷ್ಯತಾ ।
ಕಿಂ ವಾ ನ ರಿಷ್ಯತೇ ಕಾಮೋ ಧರ್ಮೋ ವಾರ್ಥೇನ ಸಂಯುತಃ ॥ ೬೪ ॥

'ಓಂ ನಮೋ ಭಗವತೇ ವಾಸುದೇವಾಯ' ಎಂಬುದೇ ಆ ದಿವ್ಯಮಂತ್ರ. ಈ ಮಂತ್ರದಿಂದ ಭಗವಂತನಿಗೆ – ಆಯಾ ದೇಶ-ಕಾಲಗಳಿಗೆ ಅನುಗುಣವಾದ ಸಾಮಗ್ರಿಗಳಿಂದ ದ್ರವ್ಯಮಯವಾದ ಪೂಜೆಯನ್ನು ಬುದ್ಧಿಶಾಲಿಯಾದವನು ಮಾಡಬೇಕು. ॥ ೫೪ ॥ ಪರಮಾತ್ಮನ ಪೂಜೆಯನ್ನು ಪರಿಶುದ್ಧವಾದ ಜಲ, ಪುಷ್ಪಮಾಲೆ, ಅರಣ್ಯದಲ್ಲಿ ದೊರೆಯುವ ಗೆಡ್ಡೆ-ಗೆಣಸು, ಹಣ್ಣುಗಳು, ಪ್ರಶಸ್ತವಾದ ಗರಿಕೆ – ಮುಂತಾದ ಅಂಕುರಗಳು, ವಸ್ತ್ರಗಳು ಹಾಗೂ ಅವನಿಗೆ ಪ್ರಿಯವಾದ ತುಲಸೀ ಇವುಗಳಿಂದ ಮಾಡಬೇಕು. ॥ ೫೫ ॥ ಶಿಲಾಮೂರ್ತಿ, ಶಾಲಿಗ್ರಾಮ ಮುಂತಾದ ಮೂರ್ತಿ ದೊರೆತರೆ ಅದರಲ್ಲಿ ಸ್ವಾಮಿಯನ್ನು ಪೂಜಿಸಬೇಕು. ಅವುಗಳು ದೊರೆಯದಿದ್ದರೆ ಭೂಮಿ, ನೀರು ಇವುಗಳಲ್ಲಿ ಭಗವಂತನನ್ನು ಆರಾಧಿಸಬಹುದು. ಉಪಾಸಕನ ಮನಸ್ಸು ಸದಾ ಸಂಯಮದಲ್ಲಿದ್ದು ಮನನಶೀಲ, ಶಾಂತ ಮತ್ತು ಮೌನವಾಗಿರಬೇಕು. ಕಾಡಿನಲ್ಲಿ ದೊರೆಯುವ ಫಲ ಮೂಲಾದಿಗಳನ್ನೇ ಮಿತವಾಗಿ ಸೇವಿಸಬೇಕು. ॥ ೫೬ ॥ ಇದಲ್ಲದೆ ಪುಣ್ಯಶ್ಲೋಕನಾದ ಶ್ರೀಹರಿಯು ತನ್ನ ಅಚಿಂತ್ಯವಾದ ಮಾಯೆಯಿಂದ ತನ್ನದೇ ಇಚ್ಛೆಗನುಸಾರವಾಗಿ ನಾನಾ ಅವತಾರಗಳನ್ನೆತ್ತಿ ಮಾಡಿದ ದಿವ್ಯಲೀಲೆಗಳನ್ನು ಮನಸ್ಸಿನಲ್ಲೇ ಚಿಂತಿಸುತ್ತಾ ಇರಬೇಕು. ॥ ೫೭ ॥ ಮಂತ್ರಮೂರ್ತಿಯಾದ ಶ್ರೀಭಗವಂತನಿಗೆ ಅರ್ಪಿಸುವ ಉಪಚಾರಗಳೆಲ್ಲವನ್ನು ವಿಧಾನಗಳಿಗನುಸಾರ ದ್ವಾದಶಾಕ್ಷರ ಮಹಾಮಂತ್ರದ ಮೂಲಕವೇ ಅರ್ಪಿಸಬೇಕು. ॥ ೫೮ ॥ ಹೀಗೆ ಹೃದಯದಲ್ಲಿ ನೆಲೆಸಿದ ಶ್ರೀಹರಿಯನ್ನು ಮನಸ್ಸು, ಮಾತು, ಶರೀರದಿಂದ ಭಕ್ತಿಪೂರ್ವಕವಾಗಿ ಪೂಜೆ ಮಾಡಿದರೆ, ಅವನು ನಿಶ್ಚಲಭಾವದಿಂದ ಚೆನ್ನಾಗಿ ಭಜಿಸುವ ಭಕ್ತರ ಭಾವವನ್ನು ವೃದ್ಧಿಪಡಿಸಿ, ಅವರ ಇಷ್ಟಾನುಸಾರವಾಗಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥರೂಪವಾದ ಶ್ರೇಯಸ್ಸನ್ನು ಕರುಣಿಸುವನು. ॥ ೫೯-೬೦ ॥ ಉಪಾಸಕನಿಗೆ ಇಂದ್ರಿಯ ಭೋಗಗಳಲ್ಲಿ ವೈರಾಗ್ಯ ಉಂಟಾಗಿದ್ದರೆ ಅವನು ಮೋಕ್ಷ ಪ್ರಾಪ್ತಿಗಾಗಿಯೇ ಅತ್ಯಂತ ಭಕ್ತಿಪೂರ್ವಕ ನಿರಂತರಭಾವದಿಂದ ಭಗವಂತನನ್ನು ಭಜಿಸಬೇಕು.'' ॥ ೬೧ ॥

ಹೀಗೆ ಶ್ರೀನಾರದಮುನಿಗಳ ಉಪದೇಶವನ್ನು ಪಡೆದು ರಾಜಕುಮಾರ ಧ್ರುವನು ಅವರಿಗೆ ಪ್ರದಕ್ಷಿಣೆ ಬಂದು ನಮಸ್ಕರಿಸಿದನು. ಅನಂತರ ಅವನು ಭಗವಂತನ ಚರಣಚಿಹ್ನೆಗಳಿಂದ ಅಂಕಿತವಾದ ಪರಮ ಪವಿತ್ರವಾದ ಮಧುವನಕ್ಕೆ ತೆರಳಿದನು. ॥ ೬೨ ॥ ಧ್ರುವನು ತಪೋವನದತ್ತ ಹೊರಟುಹೋದ ಬಳಿಕ ದೇವರ್ಷಿ ನಾರದರು ಉತ್ತಾನಪಾದನ ಅರಮನೆಗೆ ಬಂದರು. ರಾಜನು ಅವರನ್ನು ಯಥಾಯೋಗ್ಯ ಉಪಚಾರಾದಿಗಳಿಂದ ಪೂಜಿಸಿದನು. ಆಗ ಅವರು ಸುಖಾಸೀನರಾಗಿ ರಾಜನಲ್ಲಿ ಕುಶಲಪ್ರಶ್ನೆಗಳನ್ನು ಮಾಡಿದರು. ॥ ೬೩ ॥

ಶ್ರೀನಾರದಮುನಿಗಳು ಹೇಳಿದರು – ಮಹಾರಾಜನೇ! ನಿನ್ನ ಮುಖವು ಬಾಡಿದೆಯಲ್ಲ! ಬಹಳ ಕಾಲದಿಂದ ಏನನ್ನೋ ಚಿಂತಿಸುತ್ತಿರುವ ಹಾಗಿದೆಯಲ್ಲ! ನಿನಗೆ ಧರ್ಮ, ಅರ್ಥ, ಕಾಮಗಳಲ್ಲಿ ಯಾವ ತೊಂದರೆಯೂ ಇಲ್ಲವಲ್ಲ? ॥ ೬೪ ॥

*ರಾಜೋವಾಚ*

ಸುತೋ ಮೇ ಬಾಲಕೋ ಬ್ರಹ್ಮನ್ ಸ್ತ್ರೈಣೇನಾಕರುಣಾತ್ಮನಾ ।
ನಿರ್ವಾಸಿತಃ ಪಂಚವರ್ಷಃ ಸಹ ಮಾತ್ರಾ ಮಹಾನ್ಕವಿಃ ॥ ೬೫ ॥

ಅಪ್ಯನಾಥಂ ವನೇ ಬ್ರಹ್ಮನ್ಮಾಸ್ಮಾದಂತ್ಯರ್ಭಕಂ ವೃಕಾಃ ।
ಶ್ರಾಂತಂ ಶಯಾನಂ ಕ್ಷುಧಿತಂ ಪರಿಮ್ಲಾನಮುಖಾಂಬುಜಮ್ ॥ ೬೬ ॥

ಅಹೋ ಮೇ ಬತ ದೌರಾತ್ಮ್ಯಂ ಸ್ತ್ರೀಜಿತಸ್ಯೋಪಧಾರಯ ।
ಯೋಽಂಕಂ ಪ್ರೇಮ್ಣಾಽಽರುರುಕ್ಷಂತಂ ನಾಭ್ಯನಂದಮಸತ್ತಮಃ ॥ ೬೭ ॥

*ನಾರದ ಉವಾಚ*

ಮಾ ಮಾ ಶುಚಃ ಸ್ವತನಯಂ ದೇವಗುಪ್ತಂ ವಿಶಾಂಪತೇ ।
ತತ್ಪ್ರಭಾವಮವಿಜ್ಞಾಯ ಪ್ರಾವೃಂಕ್ತೇ ಯದ್ಯಶೋ ಜಗತ್ ॥ ೬೮ ॥

ಸುದುಷ್ಕರಂ ಕರ್ಮ ಕೃತ್ವಾ ಲೋಕಪಾಲೈರಪಿ ಪ್ರಭುಃ ।
ಐಷ್ಯತ್ಯಚಿರತೋ ರಾಜನ್ಯಶೋ ವಿಪುಲಯನ್‌ಸ್ತವ ॥ ೬೯ ॥

*ಮೈತ್ರೇಯ ಉವಾಚ*

ಇತಿ ದೇವರ್ಷಿಣಾ ಪ್ರೋಕ್ತಂ ವಿಶ್ರುತ್ಯ ಜಗತೀಪತಿಃ ।
ರಾಜಲಕ್ಷ್ಮೀಮನಾದೃತ್ಯ ಪುತ್ರಮೇವಾನ್ವಚಿಂತಯತ್ ॥ ೭೦ ॥

ತತ್ರಾಭಿಷಿಕ್ತಃ ಪ್ರಯತಸ್ತಾಮುಪೋಷ್ಯ ವಿಭಾವರೀಮ್ ।
ಸಮಾಹಿತಃ ಪರ್ಯಚರದೃಷ್ಯಾದೇಶೇನ ಪೂರುಷಮ್ ॥ ೭೧ ॥

ತ್ರಿರಾತ್ರಾಂತೇ ತ್ರಿರಾತ್ರಾಂತೇ ಕಪಿತ್ಥಬದರಾಶನಃ ।
ಆತ್ಮವೃತ್ತ್ಯನುಸಾರೇಣ ಮಾಸಂ ನಿನ್ಯೇಽರ್ಚಯನ್ಹರಿಮ್ ॥ ೭೨ ॥

ದ್ವಿತೀಯಂ ಚ ತಥಾ ಮಾಸಂ ಷಷ್ಠೇ ಷಷ್ಠೇಽರ್ಭಕೋ ದಿನೇ ।
ತೃಣಪರ್ಣಾದಿಭಿಃ ಶೀರ್ಣೈಃ ಕೃತಾನ್ನೋಽಭ್ಯರ್ಚಯದ್ವಿಭುಮ್ ॥ ೭೩ ॥

ತೃತೀಯಂ ಚಾನಯನ್ಮಾಸಂ ನವಮೇ ನವಮೇಽಹನಿ ।
ಅಬ್ಭಕ್ಷ ಉತ್ತಮಶ್ಲೋಕಮುಪಾಧಾವತ್ಸಮಾಧಿನಾ ॥ ೭೪ ॥

ಚತುರ್ಥಮಪಿ ವೈ ಮಾಸಂ ದ್ವಾದಶೇ ದ್ವಾದಶೇಽಹನಿ ।
ವಾಯುಭಕ್ಷೋ ಜಿತಶ್ವಾಸೋ ಧ್ಯಾಯನ್‌ದೇವಮಧಾರಯತ್ ॥ ೭೫ ॥

**ಉತ್ತಾನಪಾದ ರಾಜನೆಂದನು** – ಮಹರ್ಷಿಗಳೇ! ಏನು ಹೇಳಲಿ? ಅಯ್ಯೋ! ನಾನು ಸ್ತ್ರೀಲೋಲನಾಗಿ, ನಿರ್ದಯನಾಗಿ ಅಕಾರ್ಯವನ್ನು ಮಾಡಿಬಿಟ್ಟೆ ಮಹಾಮೇಧಾವಿಯಾಗಿದ್ದ ನನ್ನ ಐದು ವರ್ಷದ ಹಸುಳೆ ಬಾಲಕನನ್ನು ಅವನ ತಾಯಿಯೊಂದಿಗೆ ಮನೆಯಿಂದ ಹೊರ ಹಾಕಿದೆನು. ॥ ೬೫॥ (ಆ ಐದು ವರ್ಷದ ಮುದ್ದು ಮಗುವು ತಪಸ್ಸಿಗಾಗಿ ಕಾಡಿಗೆ ಹೋಗಿಬಿಟ್ಟಿರುವನು.) ಕಮಲದಂತಿರುವ ಅವನ ಮುಖವು ಹಸಿವಿನಿಂದ ಬಾಡಿಹೋಗಿರ ಬಹುದು. ಅವನು ಬಳಲಿ ದಾರಿಯಲ್ಲೇ ಎಲ್ಲಾದರೂ ಬಿದ್ದು ಬಿಟ್ಟಿರಬಹುದು. ಆ ಅಸಹಾಯಕ ಮಗುವನ್ನು ಕಾಡಿನಲ್ಲಿ ತೋಳಗಳು ತಿಂದುಬಿಟ್ಟಲ್ಲತಾನೇ! ॥ ೬೬ ॥ ಅಯ್ಯೋ! ನಾನು ಎಂತಹ ಸ್ತ್ರೀದಾಸನಾದೆ. ನನ್ನ ಕುಟಿಲತೆಯನ್ನು ನೋಡಿರಲ್ಲ, ಆ ಬಾಲಕನು ಪ್ರೇಮದಿಂದ ನನ್ನ ತೊಡೆಯನ್ನೇರಲು ಬಯಸುತ್ತಿದ್ದನು. ಆದರೆ ದುಷ್ಟನಾದ ನಾನು ಅವನನ್ನು ಸ್ವಲ್ಪವೂ ಆದರಿಸಲಿಲ್ಲ ವಲ್ಲ. ॥ ೬೭ ॥

**ಶ್ರೀನಾರದರು ಹೇಳಿದರು** – ರಾಜನೇ! ನೀನು ನಿನ್ನ ಮಗನ ವಿಷಯದಲ್ಲಿ ಚಿಂತಿಸಬೇಡ. ಅವನ ರಕ್ಷಕನು ಭಗವಂತನೇ ಆಗಿರು ವನು. ಅವನ ಪ್ರಭಾವವನ್ನು ನೀನು ಅರಿಯೆ. ಅವನ ಕೀರ್ತಿಯು ಇಡೀ ಜಗತ್ತಿನಲ್ಲೇ ಹರಡುತ್ತಿದೆ. ॥ ೬೮ ॥ ಆ ಬಾಲಕನು ಸರ್ವ ಸಮರ್ಥನಾಗಿದ್ದಾನೆ. ದೊಡ್ಡ-ದೊಡ್ಡ ಲೋಕಪಾಲಕರೂ ಮಾಡ ಲಾಗದ ಮಹತ್ಕಾರ್ಯವನ್ನು ಪೂರೈಸಿ ಅವನು ಶೀಘ್ರವಾಗಿ ನಿನ್ನ ಬಳಿಗೆ ಹಿಂತಿರುಗುವನು. ಅವನಿಂದ ನಿನ್ನ ಕೀರ್ತಿಯು ಹೆಚ್ಚೀತು. ॥ ೬೯ ॥

**ಶ್ರೀಮೈತ್ರೇಯಮಹರ್ಷಿಗಳು ಹೇಳುತ್ತಾರೆ** – ದೇವರ್ಷಿ ನಾರದರ ಮಾತನ್ನು ಕೇಳಿದ ಉತ್ತಾನಪಾದರಾಜನು ರಾಜ ಕಾರ್ಯ-ರಾಜಭೋಗಗಳಲ್ಲಿ ಉದಾಸೀನನಾಗಿ ನಿರಂತರ ಆ ಪುತ್ರನ ಕುರಿತೇ ಚಿಂತಿಸುತ್ತಿದ್ದನು. ॥ ೭೦ ॥ ಇತ್ತ ಧ್ರುವಕುಮಾರನು ಮಧುವನವನ್ನು ತಲುಪಿ, ಯಮುನಾನದಿಯಲ್ಲಿ ಸ್ನಾನಮಾಡಿ ಆ ರಾತ್ರಿ ಪರಿಶುದ್ಧಿಯಿಂದ ಉಪಾವಾಸಮಾಡಿ, ನಾರದರ ಉಪದೇಶಾನುಸಾರ ಏಕಾಗ್ರಚಿತ್ತದಿಂದ ಪರಮಪುರುಷ ಶ್ರೀನಾರಾ ಯಣನ ಉಪಾಸನೆಯನ್ನು ಪ್ರಾರಂಭಿಸಿದನು. ॥ ೭೧ ॥ ಅವನು ಮೂರು-ಮೂರು ರಾತ್ರಿಗಳಿಗೆ ಒಂದು ಬಾರಿಯಂತೆ ಬೇಲದ ಹಣ್ಣು ಮತ್ತು ಬೋರೆಹಣ್ಣುಗಳನ್ನು ಮಾತ್ರ ಶರೀರಧಾರಣೆಗೆ ಬೇಕಾದಷ್ಟನ್ನೇ ಸೇವಿಸುತ್ತಾ ಶ್ರೀಭಗವದಾರಾಧನೆಯಲ್ಲಿ ಒಂದು ತಿಂಗಳನ್ನು ಕಳೆದನು. ॥ ೭೨ ॥ ಎರಡನೇ ತಿಂಗಳಲ್ಲಿ ಅವನು ಆರಾರು ದಿನಗಳಿಗೆ ಒಂದು ಬಾರಿಯಂತೆ ಒಣಗಿದ ಎಲೆ ಮತ್ತು ಹುಲ್ಲನ್ನು ತಿಂದು ಭಗವಂತನನ್ನು ಭಜಿಸಿದನು. ॥ ೭೩ ॥ ಮೂರನೆಯ ತಿಂಗಳನ್ನು ಒಂಭತ್ತು-ಒಂಭತ್ತು ದಿನಗಳಿಗೊಮ್ಮೆ ಕೇವಲ ನೀರು ಕುಡಿದು ಸಮಾಧಿಯೋಗದ ಮೂಲಕ ಪುಣ್ಯಶ್ಲೋಕನಾದ ಪ್ರಭುವಿನ ಭಜನೆಯಲ್ಲಿ ಕಳೆದನು. ॥ ೭೪ ॥ ನಾಲ್ಕನೆಯ ತಿಂಗಳಲ್ಲಿ ಅವನು ಶ್ವಾಸವನ್ನು ಜಯಿಸಿ ಹನ್ನೆರಡು ದಿನಗಳಿಗೊಮ್ಮೆ ವಾಯುವನ್ನು ಮಾತ್ರ ಸ್ವೀಕರಿಸಿ ಧ್ಯಾನಯೋಗದ ಮೂಲಕ ಭಗವಂತನನ್ನು ಆರಾಧಿಸಿದನು. ॥ ೭೫ ॥

ಪಂಚಮೇ ಮಾಸ್ಯನುಪ್ರಾಪ್ತೇ ಜಿತಶ್ವಾಸೋ ನೃಪಾತ್ಮಜಃ ।
ಧ್ಯಾಯನ್ ಬ್ರಹ್ಮ ಪದೈಕೇನ ತಸ್ಥೌ ಸ್ಥಾಣುರಿವಾಚಲಃ
॥ ೭೬ ॥

ಸರ್ವತೋ ಮನ ಆಕೃಷ್ಯ ಹೃದಿ ಭೂತೇಂದ್ರಿಯಾಶಯಮ್ ।
ಧ್ಯಾಯನ್ ಭಗವತೋ ರೂಪಂ ನಾದ್ರಾಕ್ಷೀತ್ಕಿಂಚನಾಪರಮ್
॥ ೭೭ ॥

ಆಧಾರಂ ಮಹದಾದೀನಾಂ ಪ್ರಧಾನಪುರುಷೇಶ್ವರಮ್ ।
ಬ್ರಹ್ಮ ಧಾರಯಮಾಣಸ್ಯ ತ್ರಯೋ ಲೋಕಾಶ್ಚಕಂಪಿರೇ
॥ ೭೮ ॥

ಯದೈಕಪಾದೇನ ಸ ಪಾರ್ಥಿವಾರ್ಭಕಃ
ತಸ್ಥೌ ತದಂಗುಷ್ಠನಿಪೀಡಿತಾ ಮಹೀ ।
ನನಾಮ ತತ್ರಾರ್ಧಮಿಭೇಂದ್ರಧಿಷ್ಠಿತಾ
ತರೀವ ಸವ್ಯೇತರತಃ ಪದೇ ಪದೇ ॥ ೭೯ ॥

ತಸ್ಮಿನ್ನಭಿಧ್ಯಾಯತಿ ವಿಶ್ವಮಾತ್ಮನೋ
ದ್ವಾರಂ ನಿರುಧ್ಯಾಸುಮನನ್ಯಯಾ ಧಿಯಾ ।
ಲೋಕಾ ನಿರುಚ್ಛ್ವಾಸನಿಪೀಡಿತಾ ಭೃಶಂ
ಸಲೋಕಪಾಲಾಃ ಶರಣಂ ಯಯುರ್ಹರಿಮ್ ॥ ೮೦ ॥

*ದೇವಾ ಊಚುಃ*

ನೈವಂ ವಿದಾಮೋ ಭಗವನ್ ಪ್ರಾಣರೋಧಂ
ಚರಾಚರಸ್ಯಾಖಿಲಸತ್ತ್ವಧಾಮ್ನಃ ।
ವಿಧೇಹಿ ತನ್ನೋ ವೃಜಿನಾದ್ವಿಮೋಕ್ಷಂ
ಪ್ರಾಪ್ತಾ ವಯಂ ತ್ವಾಂ ಶರಣಂ ಶರಣ್ಯಮ್ ॥ ೮೧ ॥

*ಶ್ರೀಭಗವಾನುವಾಚ*

ಮಾ ಭೈಷ್ಟ ಬಾಲಂ ತಪಸೋ ದುರತ್ಯಯಾತ್
ನಿವರ್ತಯಿಷ್ಯೇ ಪ್ರತಿಯಾತ ಸ್ವಧಾಮ ।
ಯತೋ ಹಿ ವಃ ಪ್ರಾಣನಿರೋಧ ಆಸೀತ್
ಔತ್ತಾನಪಾದಿರ್ಮಯಿ ಸಂಗತಾತ್ಮಾ ॥ ೮೨ ॥

ಐದನೆಯ ತಿಂಗಳಿನಲ್ಲಿ ಶ್ವಾಸವನ್ನು ಸಂಪೂರ್ಣವಾಗಿ ಜಯಿಸಿ ಪರಬ್ರಹ್ಮನನ್ನೇ ಚಿಂತಿಸುತ್ತಾ ಒಂಟಿಕಾಲಿನ ಮೇಲೆ ಮೋಟು ಮರದಂತೆ ನಿಶ್ಚಲವಾಗಿ ನಿಂತು ತಪಸ್ಸನ್ನಾಚರಿಸುತ್ತಿದ್ದನು. ॥ ೭೬ ॥ ಆಗ ಅವನು ಶಬ್ದಾದಿ ವಿಷಯಗಳನ್ನು ಇಂದ್ರಿಯಗಳನ್ನು ಮತ್ತು ಅವುಗಳಿಗೆ ನಿಯಾಮಕವಾಗಿರುವ ಮನಸ್ಸನ್ನು ಇತರ ಎಲ್ಲ ಕಡೆಗಳಿಂದಲೂ ಸೆಳೆದು ಹೃದಯಸ್ಥನಾಗಿದ್ದ ಶ್ರೀಹರಿಯ ಸ್ವರೂಪದಲ್ಲಿ ನೆಲೆಗೊಳಿಸಿದನು. ಚಿತ್ತವನ್ನು ಬೇರೆಲ್ಲಿಗೂ ಹೋಗಗೊಡಲಿಲ್ಲ. ॥ ೭೭ ॥ ಹೀಗೆ ಅವನು ಮಹತ್ತೆ ಮುಂತಾದ ಎಲ್ಲ ತತ್ತ್ವಗಳಿಗೂ ಆಧಾರವಾಗಿ, ಪ್ರಕೃತಿ ಮತ್ತು ಪುರುಷರಿಗೂ ಅಧೀಶ್ವರನಾದ ಪರಬ್ರಹ್ಮ ಪುರುಷೋತ್ತಮನಲ್ಲಿ ಮನಸ್ಸನ್ನು ಧಾರಣೆ ಮಾಡಿದನು. ಅವನ ತೇಜಸ್ಸನ್ನು ಸಹಿಸಲಾರದೇ ಮೂರು ಲೋಕಗಳು ನಡುಗಿಹೋದವು. ॥ ೭೮ ॥ ಅವನು ಒಂಟಿಕಾಲಿನ ಮೇಲೆ ನಿಂತು ಕೊಂಡಾಗ ಆತನ ಕಾಲಿನ ಹೆಬ್ಬೆರಳಿನಿಂದ ತುಳಿಯಲ್ಪಟ್ಟ ಭೂಮಿಯು ಗಜರಾಜನು ಏರಿದ ಹಡಗಿನಂತೆ ಎಡ-ಬಲಕ್ಕೆ ತೂಗತೊಡಗಿತು. ॥ ೭೯ ॥ ಧ್ರುವನು ತನ್ನ ಇಂದ್ರಿಯ ದ್ವಾರ ಗಳನ್ನು ಹಾಗೂ ಪ್ರಾಣಗಳನ್ನು ಸ್ತಂಭಿಸಿ ಅನನ್ಯ ಬುದ್ಧಿಯಿಂದ ವಿಶ್ವಾತ್ಮನಾದ ವಿಷ್ಣುವನ್ನು ಧ್ಯಾನಿಸತೊಡಗಿದಾಗ ಸರ್ವಲೋಕ ಗಳಿಗೂ ಉಸಿರು ಕಟ್ಟಿ ಹೋಯಿತು. ಎಲ್ಲ ಲೋಕಗಳು ಮತ್ತು ಲೋಕಪಾಲಕರೂ ತಡೆಯಲಾಗದ ಪೀಡೆಗೆ ಒಳಗಾದರು. ಆಗ ಅವರೆಲ್ಲರೂ ಗಾಬರಿಗೊಂಡು ಶ್ರೀಹರಿಯನ್ನು ಶರಣು ಹೋದರು. ॥ ೮೦ ॥

**ದೇವತೆಗಳು ಹೇಳಿದರು** – ಭಗವಂತನೇ ! ಸಮಸ್ತ ಸ್ಥಾವರ-ಜಂಗಮ ಪ್ರಾಣಿಗಳ ಪ್ರಾಣಗಳು ಸ್ತಬ್ಧವಾಗಿವೆ. ನಮಗೆ ಇಂತಹ ಅನುಭವವು ಮೊದಲೂ ಎಂದೂ ಆಗಿರಲಿಲ್ಲ. ನೀನು ಶರಣಾಗತ ರಕ್ಷಕನು. ನಿನ್ನಲ್ಲಿ ಶರಣು ಬಂದಿರುವ ನಮ್ಮನ್ನು ಈ ದುಃಖದಿಂದ ಪಾರುಮಾಡು. ॥ ೮೧ ॥

**ಶ್ರೀಭಗವಂತನು ಹೇಳಿದನು** – ದೇವತೆಗಳಿರಾ ! ಹೆದರಬೇಡಿರಿ. ಉತ್ತಾನಪಾದನ ಪುತ್ರನಾದ ಧ್ರುವಕುಮಾರನು ತನ್ನ ಚಿತ್ತವನ್ನು ವಿಶ್ವಾತ್ಮನಾದ ನನ್ನಲ್ಲಿ ಲೀನಗೊಳಿಸಿರುವನು. ಆದರಿಂದ ಅವನು ನನ್ನಲ್ಲಿ ಅಭೇದಧ್ಯಾನ-ಧಾರಣೆಯಿಂದ ಚಿತ್ತವನ್ನು ಒಂದಾಗಿಸಿರುವನು. ಆತನು ಪ್ರಾಣಸ್ತಂಭನ ಮಾಡಿರುವುದರಿಂದ ನಿಮ್ಮೆಲ್ಲರ ಪ್ರಾಣಗಳೂ ಸ್ತಬ್ಧಗೊಂಡಿದೆ. ನಾನು ಆ ಬಾಲಕನು ತಪಸ್ಸನ್ನು ನಿಲ್ಲಿಸುವಂತೆ ಮಾಡುವೆನು. ನೀವು ನಿಮ್ಮ-ನಿಮ್ಮ ಲೋಕಗಳಿಗೆ ತೆರಳಿರಿ. ॥ ೮೨ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಧ್ರುವಚರಿತೇಽಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಧ್ರುವನು ವರವನ್ನು ಪಡೆದು ಹಿಂದಿರುಗಿದುದು

ಮೈತ್ರೇಯ ಉವಾಚ

ತ ಏವಮುತ್ಸನ್ನಭಯಾ ಉರುಕ್ರಮೇ
ಕೃತಾವನಾಮಾಃ ಪ್ರಯಯುಸ್ತ್ರಿವಿಷ್ಟಪಮ್ ।
ಸಹಸ್ರ ಶೀರ್ಷಾಪಿ ತತೋ ಗರುತ್ಮತಾ
ಮಧೋರ್ವನಂ ಭೃತ್ಯದಿದೃಕ್ಷಯಾ ಗತಃ ॥ ೧ ॥

ಸ ವೈ ಧಿಯಾ ಯೋಗವಿಪಾಕತೀವ್ರಯಾ
ಹೃತ್ಪದ್ಮಕೋಶೇ ಸ್ಫುರಿತಂ ತಡಿತ್ಪ್ರಭಮ್ ।
ತಿರೋಹಿತಂ ಸಹಸೈವೋಪಲಕ್ಷ್ಯ
ಬಹಿಃಸ್ಥಿತಂ ತದವಸ್ಥಂ ದದರ್ಶ ॥ ೨ ॥

ತದ್ದರ್ಶನೇನಾಗತಸಾಧ್ವಸಃ ಕ್ಷಿತಾ-
ವವಂದತಾಂಗಂ ವಿನಮಯ್ಯ ದಂಡವತ್ ।
ದೃಗ್ಭ್ಯಾಂ ಪ್ರಪಶ್ಯನ್ಪ್ರಪಿಬನ್ನಿವಾರ್ಭಕ-
ಶ್ಚುಂಬನ್ನಿವಾಸ್ಯೇನ ಭುಜೈರಿವಾಶ್ಲಿಷನ್ ॥ ೩ ॥

ಸ ತಂ ವಿವಕ್ಷಂತಮತದ್ವಿದಂ ಹರಿಃ
ಜ್ಞಾತ್ವಾಸ್ಯ ಸರ್ವಸ್ಯ ಚ ಹೃದ್ಯವಸ್ಥಿತಃ ।
ಕೃತಾಂಜಲಿಂ ಬ್ರಹ್ಮ ಮಯೇನ ಕಂಬುನಾ
ಪಸ್ಪರ್ಶ ಬಾಲಂ ಕೃಪಯಾ ಕಪೋಲೇ ॥ ೪ ॥

ಸ ವೈ ತದೈವ ಪ್ರತಿಪಾದಿತಾಂ ಗಿರಂ
ದೈವೀಂ ಪರಿಜ್ಞಾತಪರಾತ್ಮ ನಿರ್ಣಯಃ ।
ತಂ ಭಕ್ತಿಭಾವೋಽಭ್ಯಗೃಣಾದಸತ್ವರಂ
ಪರಿಶ್ರುತೋರುಶ್ರವಸಂ ಧ್ರುವಕ್ಷಿತಿಃ ॥ ೫ ॥

ಧ್ರುವ ಉವಾಚ

ಯೋಽಂತಃ ಪ್ರವಿಶ್ಯ ಮಮ ವಾಚಮಿಮಾಂ ಪ್ರಸುಪ್ತಾಂ
ಸಂಜೀವಯತ್ಯಖಿಲಶಕ್ತಿಧರಃ ಸ್ವಧಾಮ್ನಾ ।
ಅನ್ಯಾಂಶ್ಚ ಹಸ್ತಚರಣಶ್ರವಣತ್ವಗಾದೀನ್
ಪ್ರಾಣಾನ್ನಮೋ ಭಗವತೇ ಪುರುಷಾಯ ತುಭ್ಯಮ್ ॥ ೬ ॥

**ಶ್ರೀಮೈತ್ರೇಯರು ಹೇಳಿದರು** – ಎಲೈ ವಿದುರನೇ! ಶ್ರೀ ಭಗವಂತನ ಆಶ್ವಾಸನೆಯಿಂದ, ಅಭಯಪ್ರದಾನದಿಂದ ದೇವತೆಗಳು ಭಯವನ್ನು ತೊರೆದು ದೇವದೇವನಿಗೆ ವಂದಿಸಿ ಸ್ವರ್ಗಲೋಕಕ್ಕೆ ಹೊರಟುಹೋದರು. ಅನಂತರ ವಿರಾಟ್‌ಸ್ವರೂಪಿ ಭಗವಂತನು ಗರುಡನನ್ನೇರಿ ತನ್ನ ಭಕ್ತನನ್ನು ನೋಡಲು ಮಧುವನಕ್ಕೆ ದಯಮಾಡಿಸಿದನು. ॥ ೧ ॥ ಆಗ ಯೋಗಾಭ್ಯಾಸದಿಂದ ಏಕಾಗ್ರವಾಗಿದ್ದ ಬುದ್ಧಿಯಿಂದ ಮಿಂಚಿನಂತೆ ಹೊಳೆಯುತ್ತಿದ್ದ ಯಾವ ಭಗವನ್ಮೂರ್ತಿಯನ್ನು ಧ್ರುವನು ಹೃದಯಕಮಲದಲ್ಲಿ ಧ್ಯಾನಿಸುತ್ತಿದ್ದನೋ ಆ ಮೂರ್ತಿಯು ಇದ್ದಕ್ಕಿದ್ದಂತೆ ಕಣ್ಮರೆಯಾಯಿತು. 'ಇದೇನು ಹೀಗಾಯಿತಲ್ಲ! ಎಂದು ಅವನು ಕಣ್ಣುತೆರೆದಾಗ ಅದೇ ಭಗವದ್ರೂಪವೇ ಕಣ್ಣುಗಳ ಮುಂದೆ ನಿಂತಿರುವುದು ಆತನಿಗೆ ಗೋಚರಿಸಿತು. ॥ ೨ ॥ ಪ್ರಭುವಿನ ದರ್ಶನಪಡೆದು ಬಾಲಕ ಧ್ರುವನಿಗೆ ಅತೀವ ಸಂಭ್ರಮವಾಯಿತು. ಅವನು ಪ್ರೇಮದಲ್ಲಿ ಮೈಮರೆತು, ಸ್ವಾಮಿಗೆ ದೀರ್ಘದಂಡ ಪ್ರಣಾಮಮಾಡಿದನು. ಮತ್ತೆ ಆ ಸುಂದರಮೂರ್ತಿಯನ್ನು ಕಣ್ಣುಗಳಿಂದ ಕುಡಿದುಬಿಡುವನೋ, ಬಾಯಿಂದ ಮುತ್ತಿಕ್ಕುತ್ತಿರುವನೋ, ಭುಜಗಳಿಂದ ಆಲಿಂಗಿಸುತ್ತಿರುವನೋ ಎಂಬಂತೆ ಪ್ರೇಮಪೂರ್ಣವಾದ ದೃಷ್ಟಿಯಿಂದ ಎವೆಯಿಕ್ಕದೆ ನೋಡತೊಡಗಿದನು. ॥ ೩ ॥ ಅವನು ಕೈಜೋಡಿಸಿಕೊಂಡು ಸ್ವಾಮಿಯ ಎದುರಿಗೆ ನಿಂತಿದ್ದನು. ಅವನನ್ನು ಸ್ತುತಿಸಬೇಕೆಂದು ಬಯಸುತ್ತಿದ್ದನು. ಆದರೆ ಹೇಗೆ ಸ್ತುತಿಸಬೇಕೆಂದು ತಿಳಿಯದಾದನು. ಸರ್ವಾಂತರ್ಯಾಮಿ ಶ್ರೀಹರಿಯು ಅವನ ಮನಸ್ಸಿನ ಬಯಕೆಯನ್ನು ತಿಳಿದುಕೊಂಡು ಕೃಪೆಯಿಂದ ತನ್ನ ವೇದಮಯ ಶಂಖವನ್ನು ಅವನ ಗಲ್ಲಕ್ಕೆ ಮುಟ್ಟಿಸಿದನು. ॥ ೪ ॥ ಧ್ರುವನು ಭವಿಷ್ಯದಲ್ಲಿ ಅವಿಚಲ ಪದವನ್ನು ಪಡೆಯುವವನಿದ್ದನು. ಈಗ ಭಗವಂತನ ಪಾಂಚಜನ್ಯ ಶಂಖದ ಸ್ಪರ್ಶವಾಗುತ್ತಲೇ ಅವನಿಗೆ ವೇದಮಯ ದಿವ್ಯವಾಣಿಯು ಪ್ರಾಪ್ತವಾಯಿತು. ಜೀವ-ಬ್ರಹ್ಮರ ಸ್ವರೂಪದ ನಿಶ್ಚಯ ಜ್ಞಾನವೂ ಉಂಟಾಯಿತು. ಅವನು ಅತ್ಯಂತ ಭಕ್ತಿಭಾವದಿಂದೊಡಗೂಡಿ ಧೈರ್ಯದಿಂದ ವಿಶ್ವವಿಖ್ಯಾತ ಕೀರ್ತಿಯುಳ್ಳ ಶ್ರೀಹರಿಯನ್ನು ಸ್ತುತಿಸತೊಡಗಿದನು. ॥ ೫ ॥

**ಧ್ರುವನು ಹೇಳಿದನು** – ಸ್ವಾಮಿಯೇ! ನೀನು ಸರ್ವಶಕ್ತಿಸಂಪನ್ನನಾಗಿರುವೆ. ನೀನೇ ನನ್ನೊಳಗೆ ಪ್ರವೇಶಿಸಿ ನನ್ನ ಸುಪ್ತವಾದ ವಾಣಿಯನ್ನು ನಿನ್ನ ತೇಜಸ್ಸಿನಿಂದ ಉಜ್ಜೀವನಗೊಳಿಸುತ್ತೀಯೆ. ಹಾಗೆಯೇ ಕೈ-ಕಾಲು-ಕಿವಿ-ಚರ್ಮ ಮುಂತಾದ ಇತರ ಇಂದ್ರಿಯಗಳಿಗೂ, ಪ್ರಾಣಗಳಿಗೂ ಚೈತನ್ಯವನ್ನು ಕೊಡುತ್ತಿರುವೆ. ಇಂತಹ ಅಂತರ್ಯಾಮಿ ಭಗವಂತನಾದ ನಿನಗೆ ನಮೋ ನಮಃ ॥ ೬ ॥ ಭಗವಂತನೇ! ನೀನು ಒಬ್ಬನೇ ಆಗಿದ್ದರೂ ಅನಂತಗುಣಮಯಿ ನಿನ್ನ ಮಾಯಾಶಕ್ತಿಯಿಂದ ಈ ಮಹತ್ತೇ ಮುಂತಾದ ಸಮಸ್ತ ಪ್ರಪಂಚವನ್ನು ರಚಿಸಿ, ಅಂತರ್ಯಾಮಿಯಾಗಿ ಅದರಲ್ಲಿ ಒಳಹೊಕ್ಕಿರುವೆ.

ಏಕಸ್ತ್ವಮೇವ ಭಗವನ್ನಿದಮಾತ್ಮಶಕ್ತ್ಯಾ
ಮಾಯಾಖ್ಯಯೋರುಗುಣಯಾ ಮಹದಾದ್ಯಶೇಷಮ್ ।
ಸೃಷ್ಟ್ವಾನುವಿಶ್ಯ ಪುರುಷಸ್ತದಸದ್ಗುಣೇಷು
ನಾನೇವ ದಾರುಷು ವಿಭಾವಸುವದ್ವಿಭಾಸಿ ॥ ೭ ॥

ತ್ವದ್ದತ್ತಯಾ ವಯುನಯೇದಮಚಷ್ಟ ವಿಶ್ವಂ
ಸುಪ್ತಪ್ರಬುದ್ಧ ಇವ ನಾಥ ಭವತ್ಪ್ರಪನ್ನಃ ।
ತಸ್ಯಾಪವರ್ಗ್ಯಶರಣಂ ತವ ಪಾದಮೂಲಂ
ವಿಸ್ಮರ್ಯತೇ ಕೃತವಿದಾ ಕಥಮಾರ್ತಬಂಧೋ ॥ ೮ ॥

ನೂನಂ ವಿಮುಷ್ಟಮತಯಸ್ತವ ಮಾಯಯಾ ತೇ
ಯೇ ತ್ವಾಂ ಭವಾಪ್ಯಯವಿಮೋಕ್ಷಣಮನ್ಯಹೇತೋಃ ।
ಅರ್ಚಂತಿ ಕಲ್ಪಕತರುಂ ಕುಣಪೋಪಭೋಗ್ಯ-
ಮಿಚ್ಛಂತಿ ಯತ್ಸ್ಪರ್ಶಜಂ ನಿರಯೇಽಪಿ ನೃಣಾಮ್ ॥ ೯ ॥

ಯಾ ನಿರ್ವೃತಿಸ್ತನುಭೃತಾಂ ತವ ಪಾದಪದ್ಮ-
ಧ್ಯಾನಾದ್ಭವಜ್ಜನಕಥಾಶ್ರವಣೇನ ವಾ ಸ್ಯಾತ್ ।
ಸಾ ಬ್ರಹ್ಮಣಿ ಸ್ವಮಹಿಮನ್ಯಪಿ ನಾಥ ಮಾ ಭೂತ್
ಕಿಂ ತ್ವಂತಕಾಸಿಲುಲಿತಾತ್ಪತತಾಂ ವಿಮಾನಾತ್ ॥ ೧೦ ॥

ಭಕ್ತಿಂ ಮುಹುಃ ಪ್ರವಹತಾಂ ತ್ವಯಿ ಮೇ ಪ್ರಸಂಗೋ
ಭೂಯಾದನಂತ ಮಹತಾಮಮಲಾಶಯಾನಾಮ್ ।
ಯೇನಾಂಜಸೋಲ್ಬಣಮುರುವ್ಯಸನಂ ಭವಾಬ್ಧಿಂ
ನೇಷ್ಯೇ ಭವದ್ಗುಣಕಥಾಮೃತಪಾನಮತ್ತಃ ॥ ೧೧ ॥

ತೇ ನ ಸ್ಮರಂತ್ಯತಿತರಾಂ ಪ್ರಿಯಮೀಶ ಮರ್ತ್ಯಂ
ಯೇ ಚಾನ್ವದಃ ಸುತಸುಹೃದ್ಗೃಹವಿತ್ತದಾರಾಃ ।
ಯೇ ತ್ವಬ್ಜನಾಭ ಭವದೀಯಪದಾರವಿಂದ-
ಸೌಗಂಧ್ಯಲುಬ್ಧಹೃದಯೇಷು ಕೃತಪ್ರಸಂಗಾಃ ॥ ೧೨ ॥

ತಿರ್ಯಙ್ನಗದ್ವಿಜಸರೀಸೃಪದೇವದೈತ್ಯ-
ಮರ್ತ್ಯಾದಿಭಿಃ ಪರಿಚಿತಂ ಸದಸದ್ವಿಶೇಷಮ್ ।
ರೂಪಂ ಸ್ಥವಿಷ್ಠಮಜ ತೇ ಮಹದಾದ್ಯನೇಕಂ
ನಾತಃ ಪರಂ ಪರಮ ವೇದ್ಮಿ ನ ಯತ್ರ ವಾದಃ ॥ ೧೩ ॥

ಕಲ್ಪಾಂತ ಏತದಖಿಲಂ ಜಠರೇಣ ಗೃಹ್ಣನ್
ಶೇತೇ ಪುಮಾನ್ ಸ್ವದೃಗನಂತಸಖಸ್ತದಂಕೇ ।
ಯನ್ನಾಭಿಸಿಂಧುರುಹಕಾಂಚನಲೋಕಪದ್ಮ-
ಗರ್ಭೇ ದ್ಯುಮಾನ್ ಭಗವತೇ ಪ್ರಣತೋಽಸ್ಮಿ ತಸ್ಮೈ ॥ ೧೪ ॥

ಬಗೆ-ಬಗೆಯ ಕಟ್ಟಿಗೆಗಳಲ್ಲಿ ಪ್ರಕಟಗೊಳ್ಳುವ ಅಗ್ನಿಯು ತನ್ನ ಉಪಾಧಿಗಳಿಗನುಸಾರವಾಗಿ ಭಿನ್ನ-ಭಿನ್ನರೂಪವಾಗಿ ಕಾಣುವಂತೆ ನೀನು ಇಂದ್ರಿಯಾದಿ ಅಸದ್ಗುಣಗಳಲ್ಲಿ ಅವುಗಳ ಅಧಿಷ್ಠಾತೃ ದೇವತೆಗಳ ರೂಪದಲ್ಲಿದ್ದು ಅನೇಕರೂಪವಾಗಿ ಕಾಣಿಸಿಕೊಳ್ಳುತ್ತಿರುವೆ. ॥ ೭ ॥ ಒಡೆಯಾ! ಬ್ರಹ್ಮದೇವರು ಕೂಡ ನಿನ್ನಲ್ಲಿ ಶರಣಾಗಿ ಸೃಷ್ಟಿಯ ಪ್ರಾರಂಭದಲ್ಲಿ ನೀನೇ ದಯಪಾಲಿಸಿದ ಜ್ಞಾನದ ಪ್ರಭಾವದಿಂದಲೇ ಈ ಜಗತ್ತನ್ನು ನಿದ್ರೆಯಿಂದ ಎಚ್ಚೆತ್ತ ಪುರುಷನಂತೆ ಕಂಡರು. ದೀನಬಂಧುವೇ! ಮುಕ್ತ ಪುರುಷರೂ ಕೂಡ ನಿನ್ನ ಚರಣ ಕಮಲಗಳನ್ನು ಆಶ್ರಯಿಸುತ್ತಾರೆ. ಅಂತಹ ಪಾದಕಮಲಗಳನ್ನು ಕೃತಜ್ಞನಾದವರೂ ಯಾರು ತಾನೇ ಮರೆಯಬಲ್ಲರು? ॥ ೮ ॥ ಶವಕ್ಕೆ ಸಮವಾದ ಈ ಶರೀರಗಳ ಮೂಲಕ ಅನುಭವಿಸಲ್ಪಡುವ, ಇಂದ್ರಿಯಗಳ ಮತ್ತು ಅವುಗಳ ವಿಷಯಗಳ ಸಂಸರ್ಗದಿಂದ ಉಂಟಾಗುವ ಸುಖವು ಮನುಷ್ಯರಿಗೆ ನರಕದಲ್ಲಿಯೂ ದೊರೆಯಬಲ್ಲದು. ಇಂತಹ ವಿಷಯಸುಖಗಳಿಗಾಗಿ ಹಾತೊರೆಯುವವರು ಹುಟ್ಟು-ಸಾವುಗಳ ಕಟ್ಟಿನಿಂದ ಬಿಡುಗಡೆಗೊಳಿಸುವ ಕಲ್ಪತರುವಿನಂತಿರುವ ನಿನ್ನ ಉಪಾಸನೆಯನ್ನು, ನಿನ್ನ ಪ್ರಾಪ್ತಿಯನ್ನು ಬಿಟ್ಟು ಇತರ ಉದ್ದೇಶಗಳಿಗಾಗಿ ಮಾಡುವಂತಹವರ ಬುದ್ಧಿಯು ನಿಜವಾಗಿ ನಿನ್ನ ಮಾಯೆಯಿಂದ ಮೋಸಹೋಗಿದೆ ಎಂದೇ ತಿಳಿಯಬೇಕು. ॥ ೯ ॥ ಸ್ವಾಮಿಯೇ! ನಿನ್ನ ಚರಣಕಮಲಗಳ ಧ್ಯಾನದಿಂದ ಮತ್ತು ನಿನ್ನ ಭಕ್ತರ ಪವಿತ್ರ ಚರಿತ್ರಗಳನ್ನು ಕೇಳುವುದರಿಂದ ಪ್ರಾಣಿಗಳಿಗೆ ದೊರೆಯುವ ಆನಂದವು ನಿಜಾನಂದಸ್ವರೂಪವಾದ ಬ್ರಹ್ಮನಲ್ಲಿಯೂ ಸಿಕ್ಕುವುದಿಲ್ಲ. ಹೀಗಿರುವಾಗ ಕಾಲದ ಕತ್ತಿಯಿಂದ ಕತ್ತರಿಸಲ್ಪಡುವ ಸ್ವರ್ಗದ ವಿಮಾನಗಳಿಂದ ಕೆಳಗೆ ಬೀಳುವಂತಹ ಜನರಿಗೆ ಆ ಸುಖವು ಹೇಗೆ ದೊರೆಯಬಲ್ಲದು? ॥ ೧೦ ॥ ಓ ಅನಂತನೇ! ನಿನ್ನಲ್ಲಿ ಅವಿಚ್ಛಿನ್ನವಾದ ಭಕ್ತಿಭಾವವುಳ್ಳ ಶುದ್ಧಹೃದಯರಾದ ಮಹಾತ್ಮಾಭಕ್ತರ ಸಂಗವನ್ನು ನನಗೆ ಕರುಣಿಸು. ಅವರ ಸಂಗದಲ್ಲಿದ್ದು ನಾನು ನಿನ್ನ ಲೀಲಾ-ಗುಣಗಳ ಕಥಾಮೃತವನ್ನು ಕುಡಿ-ಕುಡಿದು ಮತ್ತನಾಗಿ ದುಃಖಪೂರ್ಣವಾದ ಭಯಂಕರ ಸಂಸಾರಸಾಗರವನ್ನು ದಾಟಿಬಿಡುವೆನು. ॥ ೧೧ ॥ ಓ ಪದ್ಮನಾಭ ಪ್ರಭುವೇ! ನಿನ್ನ ಚರಣ ಕಮಲಗಳ ಸುಗಂಧದಲ್ಲೇ ರಮಿಸುವ ಚಿತ್ತವುಳ್ಳ ಮಹಾನುಭಾವರ ಸಂಗಮಾಡುವವರಿಗೆ ತಮ್ಮ ಈ ಅತ್ಯಂತ ಪ್ರಿಯ ಶರೀರ ಮತ್ತು ಇದರ ಸಂಬಂಧೀ ಪುತ್ರ, ಮಿತ್ರ, ಗೃಹ, ಪತ್ನೀ ಮುಂತಾದವರ ನೆನಪೂ ಕೂಡ ಇರುವುದಿಲ್ಲ. ॥ ೧೨ ॥ ಜನ್ಮರಹಿತನಾದ ಜಗತ್ಪತಿಯೇ! ಪಶು, ಪಕ್ಷಿ, ವೃಕ್ಷ, ಪರ್ವತ, ಸರೀಸೃಪ, ದೇವತೆಗಳು, ದೈತ್ಯರು, ಮನುಷ್ಯರು ಮುಂತಾದವುಗಳಿಂದ ತುಂಬಿದ ಈ ಸದಸದಾತ್ಮಕವಾದ ಸ್ಥೂಲವಿಶ್ವವನ್ನು ಮಾತ್ರ ನಾನು ತಿಳಿದಿರುವೆನು. ಇದರಿಂದ ಹೊರತಾದ ಮಾತು-ಮನಸ್ಸು ತಲುಪಲಾರದ ನಿನ್ನ ಪರಮಸ್ವರೂಪವನ್ನು ತಿಳಿಯಲಾರೆನು. ॥ ೧೩ ॥

ಕಲ್ಪಾಂತ್ಯದಲ್ಲಿ ಪರಮಪುರುಷನಾದ ನೀನು ಯೋಗನಿದ್ರೆಯಲ್ಲಿದ್ದು ಇಡೀ ವಿಶ್ವವನ್ನು ಉದರದಲ್ಲಿ ಅಡಗಿಸಿಕೊಂಡು ಆದಿಶೇಷನ ಮಡಿಲಲ್ಲಿ ಮಲಗುತ್ತೀಯೆ. ಆಗ ನಿನ್ನ ನಾಭಿಸಮುದ್ರದಿಂದ ಪ್ರಕಟವಾದ, ಸರ್ವಲೋಕಮಯ ಸುವರ್ಣ ಕಮಲದಿಂದ

ತ್ವಂ ನಿತ್ಯಮುಕ್ತಪರಿಶುದ್ಧವಿಬುದ್ಧ ಆತ್ಮಾ
ಕೂಟಸ್ಥ ಆದಿಪುರುಷೋ ಭಗವಾಂಸ್ತ್ರ್ಯಧೀಶಃ ।
ಯದ್ಬುದ್ಧ್ಯವಸ್ಥಿತಿಮಖಂಡಿತಯಾ ಸ್ವದೃಷ್ಟ್ಯಾ
ದ್ರಷ್ಟಾ ಸ್ಥಿತಾವಧಿಮಖೋ ವ್ಯತಿರಿಕ್ತ ಆಸ್ಸೇ ॥ ೧೫ ॥

ಯಸ್ಮಿನ್ ವಿರುದ್ಧಗತಯೋ ಹ್ಯನಿಶಂ ಪತಂತಿ
ವಿದ್ಯಾದಯೋ ವಿವಿಧಶಕ್ತಯ ಆನುಪೂರ್ವ್ಯಾತ್ ।
ತದ್ಬ್ರಹ್ಮ ವಿಶ್ವಭವಮೇಕಮನಂತಮಾದ್ಯ-
ಮಾನಂದಮಾತ್ರಮವಿಕಾರಮಹಂ ಪ್ರಪದ್ಯೇ ॥ ೧೬ ॥

ಸತ್ಯಾಽಽಶಿಷೋ ಹಿ ಭಗವಂಸ್ತವ ಪಾದಪದ್ಮ-
ಮಾಶೀಸ್ತಥಾನುಭಜತಃ ಪುರುಷಾರ್ಥಮೂರ್ತೇಃ ।
ಅಪ್ಯೇವಮರ್ಯ ಭಗವಾನ್ ಪರಿಪಾತಿ ದೀನಾನ್
ವಾಶ್ರೇವ ವತ್ಸಕಮನುಗ್ರಹಕಾತರೋಽಸ್ಮಾನ್ ॥ ೧೭ ॥

*ಮೈತ್ರೇಯ ಉವಾಚ*

ಅಥಾಭಿಷ್ಟುತ ಏವಂ ವೈ ಸತ್ಸಂಕಲ್ಪೇನ ಧೀಮತಾ ।
ಭೃತ್ಯಾನುರಕ್ತೋ ಭಗವಾನ್ ಪ್ರತಿನಂದ್ಯೇದಮಬ್ರವೀತ್ ॥ ೧೮ ॥

*ಶ್ರೀಭಗವಾನುವಾಚ*

ವೇದಾಹಂ ತೇ ವ್ಯವಸಿತಂ ಹೃದಿ ರಾಜನ್ಯಬಾಲಕ ।
ತತ್ಪ್ರಯಚ್ಛಾಮಿ ಭದ್ರಂ ತೇ ದುರಾಪಮಪಿ ಸುವ್ರತ ॥ ೧೯ ॥

ನಾನ್ಯೈರಧಿಷ್ಠಿತಂ ಭದ್ರ ಯದ್ಭ್ರಾಜಿಷ್ಣು ಧ್ರುವಕ್ಷಿತಿ ।
ಯತ್ರ ಗ್ರಹರ್ಕ್ಷತಾರಾಣಾಂ ಜ್ಯೋತಿಷಾಂ ಚಕ್ರಮಾಹಿತಮ್ ॥ ೨೦ ॥

ಮೇಢ್ಯಾಂ ಗೋಚಕ್ರವತ್ಸ್ಥಾಸ್ನು ಪರಸ್ತಾತ್ಕಲ್ಪವಾಸಿನಾಮ್ ।
ಧರ್ಮೋಽಗ್ನಿಃ ಕಶ್ಯಪಃ ಶುಕ್ರೋ ಮುನಯೋ ಯೇ ವನೌಕಸಃ ।
ಚರಂತಿ ದಕ್ಷಿಣೀಕೃತ್ಯ ಭ್ರಮಂತೋ ಯತ್ಸತಾರಕಾಃ ॥ ೨೧ ॥

ಪರಮ ತೇಜೋಮಯ ಬ್ರಹ್ಮದೇವರು ಉತ್ಪನ್ನ ರಾದರು. ಇಂತಹ ಮಹಾಮಹಿಮನಾದ ನಿನಗೆ ವಂದಿಸುತ್ತೇನೆ. ॥ ೧೪ ॥

ಪ್ರಭೋ! ನೀನು ನಿನ್ನ ಅಖಂಡ ಚಿನ್ಮಯೀ ದೃಷ್ಟಿಯಿಂದ ಬುದ್ಧಿಯ ಎಲ್ಲ ಅವಸ್ಥೆಗಳ ಸಾಕ್ಷಿಯಾಗಿರುವೆ. ಹಾಗೆಯೇ ನಿತ್ಯ ಮುಕ್ತನೂ, ಶುದ್ಧಸತ್ತ್ವಮಯನೂ, ಸರ್ವಜ್ಞನೂ, ಪರಮಾತ್ಮ ಸ್ವರೂಪನೂ, ನಿರ್ವಿಕಾರನೂ, ಆದಿಪುರುಷನೂ, ಷಡೈಶ್ವರ್ಯ ಸಂಪನ್ನನೂ, ಮೂರುಗುಣಗಳ ಅಧೀಶ್ವರನೂ ಆಗಿರುವೆ. ನೀನು ಜೀವನಿಂದ ಸರ್ವಥಾ ಭಿನ್ನನಾಗಿರುವೆ. ಪ್ರಪಂಚದ ಸ್ಥಿತಿಗಾಗಿ ಯಜ್ಞಾಧಿಷ್ಠಿತನಾದ ವಿಷ್ಣುರೂಪದಿಂದ ವಿರಾಜಿಸುತ್ತೀಯೆ. ॥ ೧೫ ॥ ನಿನ್ನಿಂದಲೇ ವಿದ್ಯೆ-ಅವಿದ್ಯೆ ಮುಂತಾದ ವಿರುದ್ಧ ಗತಿಯುಳ್ಳ ಅನೇಕ ಶಕ್ತಿಗಳು ಧಾರಾವಾಹಿಯಾಗಿ ನಿರಂತರ ಪ್ರಕಟಗೊಳ್ಳುತ್ತಾ ಇರುತ್ತವೆ. ನೀನೇ ಜಗತ್ತಿನ ಕಾರಣನೂ, ಅಖಂಡನೂ, ಅನಾದಿಯೂ, ಅನಂತನೂ, ಆನಂದಮಯನೂ, ನಿರ್ವಿಕಾರನೂ, ಬ್ರಹ್ಮಸ್ವರೂಪನೂ ಆಗಿರುವೆ. ಅಂತಹ ನಿನಗೆ ನಾನು ಶರಣಾಗಿದ್ದೇನೆ. ॥ ೧೬ ॥ ಓ ಸರ್ವಪುರುಷಾರ್ಥಪ್ರದನೇ! ನಿನ್ನನ್ನು ಪರಮಪುರುಷಾರ್ಥ ಮೂರ್ತಿ, ಪರಮಾನಂದಮೂರ್ತಿ ಎಂದು ತಿಳಿದು ನಿಷ್ಕಾಮ ಭಾವದಿಂದ ನಿರಂತರವಾಗಿ ಭಜಿಸುವವರಿಗೆ ರಾಜ್ಯವೇ ಮುಂತಾದ ಭೋಗಗಳಿಗಿಂತ ನಿನ್ನ ಚರಣಕಮಲಗಳನ್ನು ಹೊಂದುವುದೇ ಭಜನೆಯ ನಿಜವಾದ ಫಲವಾಗಿರುತ್ತದೆ. ಹಾಗಿದ್ದರೂ ಆಕಳು ಆಗತಾನೇ ಹುಟ್ಟಿದ ಕರುವಿಗೆ ಹಾಲುಕುಡಿಸಿ ರಕ್ಷಿಸುವಂತೆ ನೀನು ಭಕ್ತರ ರಕ್ಷಣೆಯಲ್ಲಿ ಸದಾ ಕಾತರನಾಗಿದ್ದು ದೀನರಾಗಿರುವ ನಮ್ಮಂತಹ ಸಕಾಮಭಕ್ತರ ಇಷ್ಟಾರ್ಥಗಳನ್ನೂ ಈಡೇರಿಸಿ ಅವರನ್ನು ಸಂಸಾರಭಯದಿಂದ ಸಂರಕ್ಷಿಸುತ್ತಿರುವೆ.'' ॥ ೧೭ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಶುಭ ಸಂಕಲ್ಪ ವುಳ್ಳ ಧೀಮಂತನಾದ ಧ್ರುವನು ಹೀಗೆ ಸ್ತುತಿಸಿದಾಗ ಭಕ್ತ ವತ್ಸಲನಾದ ಭಗವಂತನು ಅವನನ್ನು ಪ್ರಶಂಸಿಸುತ್ತಾ ಹೀಗೆಂದನು – ॥ ೧೮ ॥

**ಶ್ರೀಭಗವಂತನು ಹೇಳಿದನು** – ಸುವ್ರತನಾದ ರಾಜಕುಮಾರನೇ! ನಿನ್ನ ಹೃದಯದ ಸಂಕಲ್ಪವನ್ನು ನಾನು ಅರಿತಿರುವೆನು. ಆ ಪದವನ್ನು ಪಡೆಯುವುದು ಬಹು ಕಠಿಣವಾಗಿದ್ದರೂ ನಾನು ನಿನಗೆ ಅದನ್ನು ಕೊಡುವೆನು. ನಿನಗೆ ಮಂಗಳವಾಗಲಿ. ॥ ೧೯ ॥

ಎಲೈ ಮಂಗಳಮತಿಯೇ! ಯಾವ ಅವಿನಾಶಿಯಾದ ಸ್ಥಾನವನ್ನು ಇಲ್ಲಿಯವರೆಗೆ ಯಾರೂ ಪಡೆದಿಲ್ಲವೋ, ಯಾವುದು ಗ್ರಹ-ನಕ್ಷತ್ರ-ತಾರಾಗಣಗಳಿಗೆ ಮೇಟಿಕಂಭದಂತೆ ಮೇರುವಾಗಿದೆಯೋ, ಅವಾಂತರ ಪ್ರಳಯದವರೆಗೆ ಮಾತ್ರ ಇರುವ ಇತರ ಲೋಕಗಳು ನಾಶಹೊಂದಿದರೂ ಯಾವುದು ಸ್ಥಿರವಾಗಿರುತ್ತದೋ, ಮತ್ತು ಯಾವುದನ್ನು ತಾರಾಗಣಗಳೊಡನೆ ಕೂಡಿ ಧರ್ಮ, ಅಗ್ನಿ ಕಶ್ಯಪ, ಶುಕ್ರರೇ ಮುಂತಾದ ಗ್ರಹನಕ್ಷತ್ರಗಳು ಪ್ರದಕ್ಷಿಣೆಮಾಡುತ್ತಿರುವರೋ ಅಂತಹ ಧ್ರುವಲೋಕವನ್ನು ನಾನು ನಿನಗೆ ಕೊಡುತ್ತಿದ್ದೇನೆ. ॥ ೨೦-೨೧ ॥

ಪ್ರಸ್ಥಿತೇ ತು ವನಂ ಪಿತ್ರಾ ದತ್ತ್ವಾ ಗಾಂ ಧರ್ಮಸಂಶ್ರಯಃ ।
ಷಟ್‌ತ್ರಿಂಶದ್ವರ್ಷಸಾಹಸ್ರಂ ರಕ್ಷಿತಾವ್ಯಾಹತೇಂದ್ರಿಯಃ ॥ ೨೨ ॥

ತ್ವದ್ಭ್ರಾತರ್ಯುತ್ತಮೇ ನಷ್ಟೇ ಮೃಗಯಾಯಾಂ ತು ತನ್ಮನಾಃ ।
ಅನ್ವೇಷಂತೀ ವನಂ ಮಾತಾ ದಾವಾಗ್ನಿಂ ಸಾ ಪ್ರವೇಕ್ಷ್ಯತಿ ॥ ೨೩ ॥

ಇಷ್ಟ್ವಾ ಮಾಂ ಯಜ್ಞ ಹೃದಯಂ ಯಜ್ಞೈಃ ಪುಷ್ಕಲದಕ್ಷಿಣೈಃ ।
ಭುಕ್ತ್ವಾ ಚೇಹಾಶಿಷಃ ಸತ್ಯಾ ಅಂತೇ ಮಾಂ ಸಂಸ್ಮರಿಷ್ಯಸಿ ॥ ೨೪ ॥

ತತೋ ಗಂತಾಸಿ ಮತ್ಸ್ಥಾನಂ ಸರ್ವಲೋಕನಮಸ್ಕೃತಮ್ ।
ಉಪರಿಷ್ಟಾದೃಷಿಭ್ಯಸ್ತ್ವಂ ಯತೋ ನಾವರ್ತತೇ ಗತಃ ॥ ೨೫ ॥

ಮೈತ್ರೇಯ ಉವಾಚ

ಇತ್ಯರ್ಚಿತಃ ಸ ಭಗವಾನತಿದಿಶ್ಯಾತ್ಮನಃ ಪದಮ್ ।
ಬಾಲಸ್ಯ ಪಶ್ಯತೋ ಧಾಮ ಸ್ವಮಗಾದ್‌ಗರುಡಧ್ವಜಃ ॥ ೨೬ ॥

ಸೋಽಪಿ ಸಂಕಲ್ಪಜಂ ವಿಷ್ಣೋಃ ಪಾದಸೇವೋಪಸಾದಿತಮ್ ।
ಪ್ರಾಪ್ಯ ಸಂಕಲ್ಪನಿರ್ವಾಣಂ ನಾತಿಪ್ರೀತೋಽಭ್ಯಗಾತ್ಪುರಮ್ ॥ ೨೭ ॥

ವಿದುರ ಉವಾಚ

ಸುದುರ್ಲಭಂ ಯತ್ಪರಮಂ ಪದಂ ಹರೇ-
ರ್ಮಾಯಾವಿನಸ್ತಚ್ಚರಣಾರ್ಚನಾರ್ಜಿತಮ್ ।
ಲಬ್ಧ್ವಾಪ್ಯಸಿದ್ಧಾರ್ಥಮಿವೈಕಜನ್ಮನಾ
ಕಥಂ ಸ್ವಮಾತ್ಮಾನಮಮನ್ಯತಾರ್ಥವಿತ್ ॥ ೨೮ ॥

ಮೈತ್ರೇಯ ಉವಾಚ

ಮಾತುಃ ಸಪತ್ನ್ಯಾ ವಾಗ್ಬಾಣೈರ್ಹೃದಿ ವಿದ್ಧಸ್ತು ತಾನ್ ಸ್ಮರನ್ ।
ನೈಚ್ಛನ್ಮುಕ್ತಿಪತೇರ್ಮುಕ್ತಿಂ ತಸ್ಮಾತ್ತಾಪಮುಪೇಯಿವಾನ್ ॥ ೨೯ ॥

ಧ್ರುವ ಉವಾಚ

ಸಮಾಧಿನಾ ನೈಕಭವೇನ ಯತ್ಪದಂ
ವಿದುಃ ಸನಂದಾದಯ ಊರ್ಧ್ವರೇತಸಃ ।
ಮಾಸೈರಹಂ ಷಡ್ಭಿರಮುಷ್ಯ ಪಾದಯೋ-
ಶ್ಛಾಯಾಮುಪೇತ್ಯಾಪಗತಃ ಪೃಥಙ್ಮತಿಃ ॥ ೩೦ ॥

ನಿನ್ನ ತಂದೆಯು ನಿನಗೆ ರಾಜ್ಯಸಿಂಹಾಸನವನ್ನು ಕೊಟ್ಟು ವನಕ್ಕೆ ಹೋದಬಳಿಕ ನೀನು ಮೂವತ್ತಾರುಸಾವಿರ ವರ್ಷಗಳವರೆಗೆ ಧರ್ಮದಿಂದ ಭೂಮಂಡಲವನ್ನು ಆಳುವೆ. ಆಗಲೂ ನಿನ್ನ ಇಂದ್ರಿಯಗಳ ಶಕ್ತಿಯು ಹಿಂದಿನಂತೆಯೇ ಇರುವುದು. ॥ ೨೨ ॥ ಮುಂದೆ ಒಂದು ದಿನ ನಿನ್ನ ತಮ್ಮನಾದ ಉತ್ತಮನು ಬೇಟೆಯಾಡುವುದಕ್ಕಾಗಿ ಅರಣ್ಯಕ್ಕೆ ಹೋದಾಗ ಅಲ್ಲಿ ಸಾವಿಗೆ ಈಡಾಗುವನು. ಆಗ ಆತನ ತಾಯಿ ಸುರುಚಿಯು ಪುತ್ರಪ್ರೇಮದಿಂದ ಹುಚ್ಚೇರಿ ಕಾಡಿನಲ್ಲಿ ಹುಡುಕುತ್ತಾ ಕಾಡ್ಗಿಚ್ಚಿನಲ್ಲಿ ಪ್ರವೇಶಿಸಿ ಬಿಡುವಳು. ॥ ೨೩ ॥ ಯಜ್ಞವು ನನ್ನ ಮೂರ್ತಿಯಾಗಿದೆ. ನೀನು ಬಹುದಕ್ಷಿಣೆಗಳಿಂದ ಕೂಡಿದ ಅನೇಕ ಯಜ್ಞಗಳಿಂದ ನನ್ನನ್ನು ಪೂಜಿಸಿ, ಈ ಲೋಕದಲ್ಲಿ ಉತ್ತಮ ಭೋಗಗಳನ್ನನುಭವಿಸಿ ಕೊನೆಯಲ್ಲಿ ನನ್ನನ್ನೇ ಸ್ಮರಿಸುವೆ. ॥ ೨೪ ॥ ಇದರಿಂದ ನೀನು ಕೊನೆಯಲ್ಲಿ ಸಮಸ್ತ ಲೋಕಗಳಿಗೂ ವಂದನೀಯವಾದ ಸಪ್ತರ್ಷಿಗಳಿಗಿಂತಲೂ ಮೇಲಿರುವ ನನ್ನ ನಿಜಧಾಮಕ್ಕೆ ಹೋಗುವೆ. ಅಲ್ಲಿಗೆ ತಲುಪಿದ ಬಳಿಕ ಮತ್ತೆ ಪ್ರಪಂಚಕ್ಕೆ ಮರಳಿ ಬರಬೇಕಾಗುವುದಿಲ್ಲ. ॥ ೨೫ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಹೀಗೆ ಬಾಲಕ ಧ್ರುವನಿಂದ ಪೂಜಿತನಾಗಿ ಆತನಿಗೆ ತನ್ನ ಪದವನ್ನು ಅನುಗ್ರಹಿಸಿ ಆತನು ನೋಡುತ್ತಿರುವಂತೆಯೇ ಗರುಡಧ್ವಜನು ತನ್ನ ಲೋಕಕ್ಕೆ ಹೊರಟು ಹೋದನು. ॥ ೨೬ ॥ ನಾರಾಯಣನ ಪಾದಸೇವೆಯಿಂದ ಧ್ರುವನಿಗೆ ಸಂಕಲ್ಪಿಸಿದ್ದ ಇಷ್ಟವೇನೋ ಈಡೇರಿತು. ಆದರೆ ಅವನ ಚಿತ್ತಕ್ಕೆ ವಿಶೇಷವಾದ ಸಂತೋಷ ಉಂಟಾಗಲಿಲ್ಲ. ಹಾಗೆಯೇ ಆತನು ತನ್ನ ನಗರಿಗೆ ಹಿಂದಿರುಗಿದನು. ॥ ೨೭ ॥

**ವಿದುರನು ಕೇಳಿದನು** – ಋಷಿಶ್ರೇಷ್ಠರೇ! ಮಾಯಾಪತಿ ಶ್ರೀಹರಿಯ ಪರಮಪದವಾದರೋ ಅತ್ಯಂತ ದುರ್ಲಭವಾಗಿದೆ ಮತ್ತು ಅದು ಅವನ ಚರಣಕಮಲಗಳ ಉಪಾಸನೆಯಿಂದಲೇ ದೊರೆಯುವುದು. ಅಂತಹ ದುರ್ಲಭವಾದ ಪದವನ್ನು ಒಂದೇ ಜನ್ಮದಲ್ಲಿ ಗಳಿಸಿದ್ದರೂ ವಿವೇಕಿಯಾದ ಧ್ರುವಕುಮಾರನು ತನ್ನನ್ನು ಏತಕ್ಕೆ ಕೃತಕೃತ್ಯನಾಗಿ ಭಾವಿಸಲಿಲ್ಲ? ॥ ೨೮ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಧ್ರುವನ ಹೃದಯವು ಮಲತಾಯಿಯ ವಾಗ್ಬಾಣಗಳಿಂದ ಗಾಯಗೊಂಡಿತ್ತು. ಭಗವಂತನು ವರಕೊಡಲು ಬಂದಿದ್ದನು. ಆಗ ಅವನಿಗೆ ಆ ವಾಗ್ಬಾಣಗಳು ನೆನಪಾಗಿ ಮುಕ್ತಿಯನ್ನು ಕೊಡುವಂತಹ ಶ್ರೀಹರಿಯಲ್ಲಿ ಮುಕ್ತಿಯನ್ನು ಕೇಳಲಿಲ್ಲ. ಈಗ ಭಗವದ್ದರ್ಶನದಿಂದ ಆ ಮನೋಮಾಲಿನ್ಯವು ದೂರವಾದಾಗ ಅವನಿಗೆ ತನ್ನ ತಪ್ಪಿಗಾಗಿ ಪಶ್ಚಾತ್ತಾಪವುಂಟಾಯಿತು. ॥ ೨೯ ॥

ಧ್ರುವನು ಮನಸ್ಸಿನಲ್ಲೇ ಹೀಗೆ ಅಂದುಕೊಂಡನು – ಸನಕಾದಿ ಊರ್ಧ್ವರೇತ (ನೈಷ್ಠಿಕ ಬ್ರಹ್ಮಚಾರಿ)ರಾದ ಸಿದ್ಧರೂ ಕೂಡ ಯಾವುದನ್ನು ಸಮಾಧಿಯ ಮೂಲಕ ಅನೇಕ ಜನ್ಮಗಳ ಬಳಿಕ ಪಡೆಯುವರೋ, ಆ ಭಗವಚ್ಚರಣಗಳ ನೆರಳನ್ನು ನಾನು ಆರೇ ತಿಂಗಳಲ್ಲಿ ಪಡೆದೆನು. ಆದರೆ ಆಗಲೂ ಚಿತ್ತದಲ್ಲಿ ಬೇರೆ ವಾಸನೆಯು ಇದ್ದುದರಿಂದ ನಾನು ಆ ಪಾದಗಳಿಂದ ದೂರವಾದೆನಲ್ಲ! ಅಕಟಾ! ॥ ೩೦ ॥

ಅಹೋ ಬತ ಮಮಾನಾತ್ಮ್ಯಂ ಮಂದಭಾಗ್ಯಸ್ಯ ಪಶ್ಯತ ।
ಭವಚ್ಛಿದಃ ಪಾದಮೂಲಂ ಗತ್ವಾಯಾಚೇ ಯದಂತವತ್
॥ ೩೧ ॥

ಮತಿರ್ವಿದೂಷಿತಾ ದೇವೈಃ ಪತದ್ಭಿರಸಹಿಷ್ಣುಭಿಃ ।
ಯೋ ನಾರದವಚಸ್ತಥ್ಯಂ ನಾಗ್ರಾಹಿಷಮಸತ್ತಮಃ
॥ ೩೨ ॥

ದೈವೀಂ ಮಾಯಾಮುಪಾಶ್ರಿತ್ಯ ಪ್ರಸುಪ್ತ ಇವ ಭಿನ್ನದೃಕ್ ।
ತಪ್ಯೇ ದ್ವಿತೀಯೇಽಪ್ಯಸತಿ ಭ್ರಾತೃಭ್ರಾತೃವ್ಯಹೃದ್ರುಜಾ
॥ ೩೩ ॥

ಮಯೈತತ್ಪ್ರಾರ್ಥಿತಂ ವ್ಯರ್ಥಂ ಚಿಕಿತ್ಸೇವ ಗತಾಯುಷಿ ।
ಪ್ರಸಾದ್ಯ ಜಗದಾತ್ಮಾನಂ ತಪಸಾ ದುಷ್ಪ್ರಸಾದನಮ್ ।
ಭವಚ್ಛಿದಮಯಾಚೇಽಹಂ ಭವಂ ಭಾಗ್ಯವಿವರ್ಜಿತಃ
॥ ೩೪ ॥

ಸ್ವಾರಾಜ್ಯಂ ಯಚ್ಛತೋ ಮೌಢ್ಯಾನ್ಮಾನೋ ಮೇ ಭಿಕ್ಷಿತೋ ಬತ ।
ಈಶ್ವರಾತ್ ಕ್ಷೀಣಪುಣ್ಯೇನ ಫಲೀಕಾರಾನಿವಾಧನಃ
॥ ೩೫ ॥

ಮೈತ್ರೇಯ ಉವಾಚ

ನ ವೈ ಮುಕುಂದಸ್ಯ ಪದಾರವಿಂದಯೋ
ರಜೋಜುಷಸ್ತಾತ ಭವಾದೃಶಾ ಜನಾಃ ।
ವಾಂಛಂತಿ ತದ್ದಾಸ್ಯಮೃತೇಽರ್ಥಮಾತ್ಮನೋ
ಯದೃಚ್ಛಯಾ ಲಬ್ಧಮನಃಸಮೃದ್ಧಯಃ ॥ ೩೬ ॥

ಆಕರ್ಣ್ಯಾತ್ಮಜಮಾಯಾಂತಂ ಸಂಪರೇತ್ಯ ಯಥಾಽಽಗತಮ್ ।
ರಾಜಾ ನ ಶ್ರದ್ದಧೇ ಭದ್ರಮಭದ್ರಸ್ಯ ಕುತೋ ಮಮ
॥ ೩೭ ॥

ಶ್ರದ್ಧಾಯ ವಾಕ್ಯಂ ದೇವರ್ಷೇರ್ಹರ್ಷವೇಗೇನ ಧರ್ಷಿತಃ ।
ವಾರ್ತಾಹರ್ತುರತಿಪ್ರೀತೋ ಹಾರಂ ಪ್ರಾದಾನ್ಮಹಾಧನಮ್
॥ ೩೮ ॥

ಸದಶ್ವಂ ರಥಮಾರುಹ್ಯ ಕಾರ್ತಸ್ವರಪರಿಷ್ಕೃತಮ್ ।
ಬ್ರಾಹ್ಮಣೈಃ ಕುಲವೃದ್ಧೈಶ್ಚ ಪರ್ಯಸ್ತೋಽಮಾತ್ಯಬಂಧುಭಿಃ
॥ ೩೯ ॥

ಅಯ್ಯೋ! ನಾನು ಎಂತಹ ಮೂರ್ಖತನದ ಕೆಲಸಮಾಡಿದೆನಲ್ಲ! ಮಂದಭಾಗ್ಯನಾದ ನನ್ನ ಅವಿವೇಕವನ್ನು ನೋಡಿರಿ! ಭವಪಾಶವನ್ನು ಕತ್ತರಿಸುವಂತಹ ಪ್ರಭುವಿನ ಪಾದಪದ್ಮಗಳನ್ನು ತಲುಪಿದರೂ ಅವನಿಂದ ನಾಶವುಳ್ಳ ವಸ್ತುವನ್ನೇ ಬೇಡಿದೆನಲ್ಲ! ॥ ೩೧ ॥ ಪುಣ್ಯವು ಕ್ಷಯಿಸಿದ ನಂತರ ತಾವು ಪತನವಾಗುವುದರಿಂದ ನಾನು ಪರಮ ಶ್ರೇಯಸ್ಸಿನ ಮುಕ್ತಿಯನ್ನು ಪಡೆಯುವುದನ್ನು ಸಹಿಸದ ದೇವತೆಗಳು ನನ್ನ ಮನಸ್ಸನ್ನು ಕೆಡಿಸಿಬಿಟ್ಟರು. ಅದರಿಂದಲೇ ದುಷ್ಟನಾದ ನಾನು ನಾರದರ ಯಥಾರ್ಥವಾದ ಮಾತನ್ನು ಕೇಳದೇ ಹೋದೆ. ॥ ೩೨ ॥ ಕನಸಿನಲ್ಲಿ ತನ್ನನ್ನು ಬಿಟ್ಟು ಬೇರೆ ಏನೂ ಇಲ್ಲದಿದ್ದರೂ ಮನುಷ್ಯನು ತಾನೇ ಕಲ್ಪಿಸಿಕೊಂಡ ಹುಲಿ, ಹಾವು ಮುಂತಾದವುಗಳಿಗೆ ಹೆದರುವಂತೆ, ಜಗತ್ತಿನಲ್ಲಿ ವಾಸುದೇವನನ್ನು ಬಿಟ್ಟು ಬೇರಾರೂ ಇಲ್ಲದಿದ್ದರೂ, ಭಗವಂತನ ಮಾಯೆಗೆ ಮರುಳಾಗಿ ನಾನು ಒಡಹುಟ್ಟಿದವನನ್ನೇ ವೈರಿಯೆಂದು ಭಾವಿಸಿ ದ್ವೇಷರೂಪವಾದ ಮನೋರೋಗದಿಂದ ಸಂತಪ್ತನಾದೆನಲ್ಲ! ॥ ೩೩ ॥ ಆಯುಸ್ಸು ತೀರಿದವನ ಚಿಕಿತ್ಸೆಯು ವ್ಯರ್ಥವಾಗುವಂತೆ, ಯಾರನ್ನು ಪ್ರಸನ್ನಗೊಳಿಸುವುದು ಅತ್ಯಂತ ಕಠಿಣವೋ ಅಂತಹ ವಿಶ್ವಾತ್ಮನಾದ ವಿಷ್ಣುವನ್ನು ತಪಸ್ಸಿನಿಂದ ಮೆಚ್ಚಿಸಿದ ನಾನು ಅವನಿಂದ ಕೇಳಿಕೊಂಡುದು ವ್ಯರ್ಥವಾಯಿತಲ್ಲ! ಅಯ್ಯೋ! ನಾನು ಎಂತಹ ಭಾಗ್ಯಹೀನನು ? ಸಂಸಾರಬಂಧನವನ್ನು ಬಿಡಿಸುವ ಪ್ರಭುವಿನಿಂದ ನಾನು ಪುನಃ ಸಂಸಾರವನ್ನೇ ಕೇಳಿದೆನಲ್ಲ! ॥ ೩೪ ॥ ಸಾರ್ವಭೌಮನು ಪ್ರಸನ್ನನಾಗಿರುವಾಗ ಬುದ್ಧಿಹೀನನಾದವನು ಒಂದು ಮುಷ್ಟಿ ಅಕ್ಕಿಯನ್ನು ಬೇಡುವಂತೆ ದುರದೃಷ್ಟಶಾಲಿಯಾದ ನಾನು ಬುದ್ಧಿಹೀನನಾಗಿ ಸ್ವಾರಾಜ್ಯ (ಮೋಕ್ಷ)ವನ್ನು ಕೊಡುವ ಸ್ವಾಮಿ ಶ್ರೀಹರಿಯಿಂದ ಅಭಿಮಾನವನ್ನು ಬೆಳೆಸುವ ಪದವಿಯನ್ನು ಕೇಳಿಕೊಂಡೆನಲ್ಲ! ॥ ೩೫ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಭಾಗವತೋತ್ತಮನಾದ ವಿದುರನೇ! ಶ್ರೀಮುಕುಂದನ ಪಾದಾರವಿಂದಗಳ ಮಕರಂದವನ್ನು ಪಾನಮಾಡುವ ದುಂಬಿಯಂತಿರುವ ನಿಮ್ಮಂತಹವರು ಪ್ರಭುವಿನ ಪಾದಧೂಳಿಯನ್ನೇ ಸೇವಿಸುವರು. ತಾನಾಗಿಯೇ ಒದಗಿಬಂದ ಪರಿಸ್ಥಿತಿಯಲ್ಲಿ ಸಂತುಷ್ಟ ಮನಸ್ಸುಳ್ಳ ಅವರು ಭಗವಂತನಲ್ಲಿ ಅವನ ಸೇವೆಯನ್ನಲ್ಲದೆ ಬೇರೆ ಏನನ್ನೂ ಬೇಡುವುದಿಲ್ಲ. ॥ ೩೬ ॥

ಇತ್ತ ಉತ್ತಾನಪಾದರಾಜನು ತನ್ನ ಪುತ್ರನಾದ ಧ್ರುವನು ಮನೆಗೆ ಹಿಂದಿರುಗುತ್ತಿರುವನೆಂಬ ಸಮಾಚಾರ ಕೇಳಿ – 'ಸತ್ತುಹೋದವನು ಯಮಲೋಕದಿಂದ ಮರಳಿ ಬಂದನು' ಎಂಬ ವಾರ್ತೆಯಂತೆ ಅವನು ನಂಬಲಿಲ್ಲ. ನನ್ನಂತಹ ಭಾಗ್ಯಹೀನನಿಗೆ ಇಂತಹ ಭಾಗ್ಯವು ಎಲ್ಲಿದೆ ? ಎಂದು ಚಿಂತಿಸಿದನು. ॥ ೩೭ ॥ ಆದರೆ ದೇವರ್ಷಿ ನಾರದರು ಹೇಳಿದ್ದ ಮಾತು ನೆನಪಾಗಿ ಅವನಿಗೆ ಅದರಲ್ಲಿ ನಂಬಿಕೆ ಉಂಟಾಯಿತು ಹಾಗೂ ಪರಮಾನಂದದ ವೇಗದಿಂದ ಪರವಶನಾದನು. ಅವನು ಅತ್ಯಂತ ಪ್ರಸನ್ನನಾಗಿ ಆ ಶುಭಸಮಾಚಾರ ತಂದವನಿಗೆ ಒಂದು ಅಮೂಲ್ಯವಾದ ಹಾರವನ್ನು ಕೊಟ್ಟನು. ॥ ೩೮ ॥ ಪುತ್ರನ ಮುಖವನ್ನು ನೋಡಲು ಉತ್ಸುಕನಾದ ರಾಜನು ಬಹಳಮಂದಿ ಬ್ರಾಹ್ಮಣರನ್ನೂ, ಕುಲವೃದ್ಧರನ್ನೂ, ಮಂತ್ರಿಗಳನ್ನೂ,

ಶಂಖದುಂದುಭಿನಾದೇನ ಬ್ರಹ್ಮ-ಘೋಷೇಣ ವೇಣುಭಿಃ ।
ನಿಶ್ಚಕ್ರಾಮ ಪುರಾತ್ತೂರ್ಣಮಾತ್ಮಜಾಭೀಕ್ಷಣೋತ್ಸುಕಃ
॥ ೪೦ ॥

ಸುನೀತಿಃ ಸುರುಚಿಶ್ಚಾಸ್ಯ ಮಹಿಷ್ಯೌ ರುಕ್ಮಭೂಷಿತೇ ।
ಆರುಹ್ಯ ಶಿಬಿಕಾಂ ಸಾರ್ಧಮುತ್ತಮೇನಾಭಿಜಗ್ಮತುಃ
॥ ೪೧ ॥

ತಂ ದೃಷ್ಟ್ವೋಪವನಾಭ್ಯಾಶ ಆಯಾಂತಂ ತರಸಾ ರಥಾತ್ ।
ಅವರುಹ್ಯ ನೃಪಸ್ತೂರ್ಣಮಾಸಾದ್ಯ ಪ್ರೇಮವಿಹ್ವಲಃ
॥ ೪೨ ॥

ಪರಿರೇಭೇಽಂಗಜಂ ದೋರ್ಭ್ಯಾಂ
ದೀರ್ಘೋತ್ಕಂಠಮನಾಃ ಶ್ವಸನ್ ।
ವಿಷ್ವಕ್ಸೇನಾಂಘ್ರಿಸಂಸ್ಪರ್ಶ-
ಹತಾಶೇಷಾಘಬಂಧನಮ್ ॥ ೪೩ ॥

ಅಥಾಜಿಘ್ರನ್ಮುಹುರ್ಮೂರ್ಧ್ನಿ ಶೀತೈರ್ನಯನವಾರಿಭಿಃ ।
ಸ್ನಾಪಯಾಮಾಸ ತನಯಂ ಜಾತೋದ್ದಾಮಮನೋರಥಃ
॥ ೪೪ ॥

ಅಭಿವಂದ್ಯ ಪಿತುಃ ಪಾದಾವಾಶೀರ್ಭಿಶ್ಚಾಭಿಮಂತ್ರಿತಃ ।
ನನಾಮ ಮಾತರೌ ಶೀರ್ಷ್ಣಾ ಸತ್ಕೃತಃ ಸಜ್ಜನಾಗ್ರಣೀಃ
॥ ೪೫ ॥

ಸುರುಚಿಸ್ತಂ ಸಮುತ್ಥಾಪ್ಯ ಪಾದಾವನತಮರ್ಭಕಮ್ ।
ಪರಿಷ್ವಜ್ಯಾಹ ಜೀವೇತಿ ಬಾಷ್ಪಗದ್ಗದಯಾ ಗಿರಾ
॥ ೪೬ ॥

ಯಸ್ಯ ಪ್ರಸನ್ನೋ ಭಗವಾನ್ಗುಣೈರ್ಮೈತ್ರ್ಯಾದಿಭಿರ್ಹರಿಃ ।
ತಸ್ಮೈ ನಮಂತಿ ಭೂತಾನಿ ನಿಮ್ನಮಾಪ ಇವ ಸ್ವಯಮ್
॥ ೪೭ ॥

ಉತ್ತಮಶ್ಚ ಧ್ರುವಶ್ಚೋಭಾವನ್ಯೋನ್ಯಂ ಪ್ರೇಮವಿಹ್ವಲೌ ।
ಅಂಗಸಂಗಾದುತ್ಪುಲಕಾವಸ್ರೌಘಂ ಮುಹುರೂಹತುಃ
॥ ೪೮ ॥

ಸುನೀತಿರಸ್ಯ ಜನನೀ ಪ್ರಾಣೇಭ್ಯೋಽಪಿ ಪ್ರಿಯಂ ಸುತಮ್ ।
ಉಪಗುಹ್ಯ ಜಹಾವಾಧಿಂ ತದಂಗಸ್ಪರ್ಶನಿರ್ವೃತಾ
॥ ೪೯ ॥

ಪಯಃ ಸ್ತನಾಭ್ಯಾಂ ಸುಸ್ರಾವ ನೇತ್ರಜೈಃ ಸಲಿಲೈಃ ಶಿವೈಃ ।
ತದಾಭಿಷಿಚ್ಯಮಾನಾಭ್ಯಾಂ ವೀರ ವೀರಸುವೋ ಮುಹುಃ
॥ ೫೦ ॥

ಪರಿಜನರನ್ನೂ ಜೊತೆಯಲ್ಲಿ ಕರೆದುಕೊಂಡು, ಉತ್ತಮವಾದ ಅಶ್ವಗಳಿಂದ ಹೂಡಲ್ಪಟ್ಟ ಸುವರ್ಣಖಚಿತವಾದ ರಥದಲ್ಲಿ ಕುಳಿತು ಲಗುಬಗೆಯಿಂದ ನಗರದಿಂದ ಹೊರಬಂದನು. ಅವನ ಮುಂದೆ ಶುಭವಾದ ವೇದಪಾರಾಯಣದ ಘೋಷ ನಡೆಯುತ್ತಿತ್ತು. ಶಂಖ, ದುಂದುಭಿ, ಕೊಳಲು ಮುಂತಾದ ಮಂಗಳವಾದ್ಯಗಳು ಮೊಳಗುತ್ತಿದ್ದವು. ॥ ೩೯-೪೦ ॥ ಅವನ ರಾಣಿಯರಾದ ಸುನೀತಿ ಮತ್ತು ಸುರುಚಿಯರು ಸುವರ್ಣಾಭರಣಗಳಿಂದ ಅಲಂಕೃತರಾಗಿ, ರಾಜಕುಮಾರ ಉತ್ತಮನೊಡನೆ ಪಲ್ಲಕ್ಕಿಯಲ್ಲಿ ಕುಳಿತು ಬರುತ್ತಿದ್ದರು. ॥ ೪೧ ॥ ಧ್ರುವಕುಮಾರನು ಉಪವನದ ಬಳಿಗೆ ಬರುತ್ತಲೇ ಮಹಾರಾಜನು ರಥದಿಂದ ಧಿಗ್ಗನೆ ಕೆಳಗಿಳಿದು, ಮಗನ ಮುಖವನ್ನು ನೋಡಲು ಎಷ್ಟೋ ದಿನಗಳಿಂದ ಹಂಬಲಿಸುತ್ತಿದ್ದ ಅವನು ರಭಸದಿಂದ ಮುನ್ನುಗ್ಗಿ ಪ್ರೇಮಾತುರನಾಗಿ, ನಿಟ್ಟುಸಿರುಬಿಡುತ್ತಾ, ಪುತ್ರನನ್ನು ಬಾಚಿ ತಬ್ಬಿಕೊಂಡನು. ಈಗ ಬಂದಿದ್ದ ಧ್ರುವನು ಹಿಂದಿನಂತಿರಲಿಲ್ಲ, ಪರಮಾತ್ಮನ ಪವಿತ್ರವಾದ ಪಾದಪದ್ಮಗಳ ಸ್ಪರ್ಶದಿಂದ ಇವನ ಸಮಸ್ತ ಪಾಪಬಂಧನವನ್ನು ಕಳಕೊಂಡ ಪುಣ್ಯಮೂರ್ತಿ ಯಾಗಿದ್ದನು. ॥ ೪೨ ॥ ಉತ್ತಾನಪಾದರಾಜನ ಬಹುದೊಡ್ಡ ಮನೋರಥವು ಪೂರ್ಣವಾಗಿತ್ತು. ಅವನು ಪದೇ-ಪದೇ ಮಗನ ತಲೆಯನ್ನು ನೇವರಿಸುತ್ತಾ, ನೆತ್ತಿಯನ್ನು ಮೂಸುತ್ತಾ, ತಂಪಾದ ಆನಂದಾಶ್ರುಗಳಿಂದ ಅವನನ್ನು ತೋಯಿಸಿಬಿಟ್ಟನು. ॥ ೪೪ ॥

ಮತ್ತೆ ಸಜ್ಜನಶಿರೋಮಣಿಯಾದ ಧ್ರುವನು ತಂದೆಯ ಪಾದಗಳಿಗೆ ನಮಸ್ಕರಿಸಿ ಆತನ ಆಶೀರ್ವಾದಗಳನ್ನು ಪಡೆದು, ಕುಶಲ ಪ್ರಶ್ನೆಗಳಿಂದ ಸತ್ಕೃತನಾಗಿ ಇಬ್ಬರೂ ತಾಯಂದಿರ ಚರಣಗಳಿಗೆ ತಲೆಮುಟ್ಟಿಸಿ ನಮಸ್ಕಾರಮಾಡಿದನು. ॥ ೪೫ ॥ ಚಿಕ್ಕಮ್ಮಳಾದ ಸುರುಚಿಯು ಕಾಲಿಗೆ ಬಿದ್ದ ಬಾಲಕ ಧ್ರುವನನ್ನು ಮೇಲೆತ್ತಿ ಅಪ್ಪಿಕೊಂಡು 'ಚಿರಂಜೀವಿಯಾಗು' ಎಂದು ಕಂಬನಿತುಂಬಿದ ಗದ್ಗದವಾದ ವಾಣಿಯಿಂದ ಆಶೀರ್ವದಿಸಿದಳು. ॥ ೪೬ ॥ ನೀರು ತಾನಾಗಿಯೇ ಹಳ್ಳದ ಕಡೆಗೆ ಹರಿಯುವಂತೆ – ಮೈತ್ರಿ, ಕರುಣೆ ಮುಂತಾದ ಗುಣಗಳಿಂದ ಪರಮಾತ್ಮನ ಪ್ರಸನ್ನತೆಗೆ ಪಾತ್ರನಾದವನ ಮುಂದೆ ಎಲ್ಲ ಜೀವಿಗಳು ತಲೆಬಾಗುತ್ತವೆ. ॥ ೪೭ ॥ ಇತ್ತ ಕಡೆ ಉತ್ತಮ ಮತ್ತು ಧ್ರುವನೂ ಪ್ರೇಮದಿಂದ ವಿಹ್ವಲರಾಗಿ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡರು. ಪರಸ್ಪರ ಅಂಗಸ್ಪರ್ಶದಿಂದ ಆನಂದಪುಳಕಿತರಾದ ಅವರಿಬ್ಬರ ಕಣ್ಣುಗಳಿಂದಲೂ ಕಂಬನಿಯ ಧಾರೆ ಹರಿಯತೊಡಗಿತು. ॥ ೪೮ ॥ ತಾಯಿ ಸುನೀತಿಯು ಪ್ರಾಣಕ್ಕಿಂತಲೂ ಪ್ರಿಯನಾದ ಪುತ್ರನನ್ನು ಆಲಿಂಗಿಸಿಕೊಂಡು ತನ್ನ ಎಲ್ಲ ಸಂತಾಪಗಳನ್ನು ಮರೆತುಬಿಟ್ಟಳು. ಅವನ ಸುಕುಮಾರವಾದ ಅಂಗಗಳ ಸ್ಪರ್ಶದಿಂದ ಆಕೆಯು ಮೇರೆಮೀರಿದ ಆನಂದದಲ್ಲಿ ಮುಳುಗಿದಳು. ॥ ೪೯ ॥ ವೀರನಾದ ವಿದುರನೇ! ಆ ವೀರಮಾತೆಯಾದ ಸುನೀತಿಯ ಸ್ತನಗಳು ಕಂಗಳಿಂದ ಹರಿಯುತ್ತಿದ್ದ ಮಂಗಳಮಯ ಅಶ್ರುಧಾರೆಗಳಿಂದ ನೆನೆದು ಅವುಗಳಿಂದ ಮತ್ತೆ-ಮತ್ತೆ ಹಾಲು ಸುರಿಯತೊಡಗಿತು. ॥ ೫೦ ॥

ತಾಂ ಶಶಂಸುರ್ಜನಾ ರಾಜ್ಞೀಂ ದಿಷ್ಟ್ಯಾ ತೇ ಪುತ್ರ ಆರ್ತಿಹಾ ।
ಪ್ರತಿಲಬ್ಧಶ್ಚಿರಂ ನಷ್ಟೋ ರಕ್ಷಿತಾ ಮಂಡಲಂ ಭುವಃ ॥ ೩೧ ॥

ಅಭ್ಯರ್ಚಿತಸ್ತ್ವಯಾ ನೂನಂ ಭಗವಾನ್ಪ್ರಣತಾರ್ತಿಹಾ ।
ಯದನುಧ್ಯಾಯಿನೋ ಧೀರಾ ಮೃತ್ಯುಂ ಜಿಗ್ಯುಃ ಸುದುರ್ಜಯಮ್ ॥ ೩೨ ॥

ಲಾಲ್ಯಮಾನಂ ಜನೈರೇವಂ ಧ್ರುವಂ ಸಭ್ರಾತರಂ ನೃಪಃ ।
ಆರೋಪ್ಯ ಕರಿಣೀಂ ಹೃಷ್ಟಃ ಸ್ತೂಯಮಾನೋಽವಿಶತ್ಪುರಮ್ ॥ ೩೩ ॥

ತತ್ರ ತತ್ರೋಪಸಂಕ್ಲೃಪ್ತೈರ್ಲಸನ್ಮಕರತೋರಣೈಃ ।
ಸವೃಂದೈಃ ಕದಲೀಸ್ತಂಭೈಃ ಪೂಗಪೋತೈಶ್ಚ ತದ್ವಿಧೈಃ ॥ ೩೪ ॥

ಚೂತಪಲ್ಲವವಾಸಃಸ್ರಙ್ಮುಕ್ತಾದಾಮವಿಲಂಬಿಭಿಃ ।
ಉಪಸ್ಕೃತಂ ಪ್ರತಿದ್ವಾರಮಪಾಂ ಕುಂಭೈಃ ಸದೀಪಕೈಃ ॥ ೩೫ ॥

ಪ್ರಾಕಾರೈರ್ಗೋಪುರಾಗಾರೈಃ ಶಾತಕುಂಭಪರಿಚ್ಛದೈಃ ।
ಸರ್ವತೋಽಲಂಕೃತಂ ಶ್ರೀಮದ್ವಿಮಾನಶಿಖರದ್ಯುಭಿಃ ॥ ೩೬ ॥

ಮೃಷ್ಟಚತ್ವರರಥ್ಯಾಟ್ಟಮಾರ್ಗಂ ಚಂದನಚರ್ಚಿತಮ್ ।
ಲಾಜಾಕ್ಷತೈಃ ಪುಷ್ಪಫಲೈಸ್ತಂಡುಲೈರ್ಬಲಿಭಿರ್ಯುತಮ್ ॥ ೩೭ ॥

ಧ್ರುವಾಯ ಪಥಿ ದೃಷ್ಟಾಯ ತತ್ರ ತತ್ರ ಪುರಸ್ತ್ರಿಯಃ ।
ಸಿದ್ಧಾರ್ಥಾಕ್ಷತದಧ್ಯಂಬುದೂರ್ವಾಪುಷ್ಪಫಲಾನಿ ಚ ॥ ೩೮ ॥

ಉಪಜಹ್ರುಃ ಪ್ರಯುಂಜಾನಾ ವಾತ್ಸಲ್ಯಾದಾಶಿಷಃ ಸತೀಃ ।
ಶೃಣ್ವಂಸ್ತದ್ವಲ್ಗುಗೀತಾನಿ ಪ್ರಾವಿಶದ್ಭವನಂ ಪಿತುಃ ॥ ೩೯ ॥

ಮಹಾಮಣಿವ್ರಾತಮಯೇ ಸ ತಸ್ಮಿನ್ ಭವನೋತ್ತಮೇ ।
ಲಾಲಿತೋ ನಿತರಾಂ ಪಿತ್ರಾ ನ್ಯವಸದ್ದಿವಿ ದೇವವತ್ ॥ ೪೦ ॥

ಪಯಃಫೇನನಿಭಾಃ ಶಯ್ಯಾ ದಾಂತಾ ರುಕ್ಮಪರಿಚ್ಛದಾಃ ।
ಆಸನಾನಿ ಮಹಾರ್ಹಾಣಿ ಯತ್ರ ರೌಕ್ಮಾ ಉಪಸ್ಕರಾಃ ॥ ೪೧ ॥

ಆಗ ಪುರಜನರು ಸುನೀತಿಯನ್ನು ಕುರಿತು – ಮಹಾರಾಣಿಯವರೇ! ಬಹುದಿನಗಳಿಂದ ಕಳೆದುಹೋಗಿದ್ದ ನಿಮ್ಮ ಕಣ್ಮಣಿ ಕಂದಮ್ಮನು ಹಿಂದಿರುಗಿ ಬಂದನು. ಎಂತಹ ಮಹಾಭಾಗ್ಯ! ಇವನು ನಮ್ಮೆಲ್ಲರ ದುಃಖವನ್ನು ದೂರಮಾಡುವನು. ಬಹಳ ಕಾಲ ಭೂಮಂಡಲವನ್ನು ರಕ್ಷಿಸುವನು. ॥ ೩೧ ॥ ನೀವು ನಿಜವಾಗಿಯೂ ಶರಣಾಗತರ ಭಯವನ್ನು ಭಂಜಿಸುವ ಶ್ರೀಹರಿಯನ್ನು ಚೆನ್ನಾಗಿ ಆರಾಧಿಸಿದ್ದೀರಿ. ಅವನನ್ನು ನಿರಂತರವಾಗಿ ಧ್ಯಾನಿಸುವ ಧೀರ ಪುರುಷರು ಪರಮ ದುರ್ಜಯವಾದ ಮೃತ್ಯುವನ್ನೂ ಗೆದ್ದು ಬಿಡುತ್ತಾರೆ' ಎಂದು ಹೇಳಿ ಅಭಿನಂದಿಸಿದರು. ॥ ೩೨ ॥

ಹೀಗೆ ಎಲ್ಲ ಜನರು ಧ್ರುವಕುಮಾರನನ್ನು ಮುದ್ದಿಸುತ್ತಿರಲು ಉತ್ತಾನಪಾದರಾಜನು ಆತನನ್ನೂ ಮತ್ತು ಆತನ ತಮ್ಮ ಉತ್ತಮನನ್ನೂ ಹೆಣ್ಣಾನೆಯ ಮೇಲೆ ಕುಳ್ಳಿರಿಸಿ ಎಲ್ಲರಿಂದಲೂ ಹೊಗಳಿಸಿಕೊಳ್ಳುತ್ತಾ ಪರಮ ಹರ್ಷದಿಂದ ಪುರವನ್ನು ಪ್ರವೇಶಿಸಿದನು. ॥ ೩೩ ॥ ಧ್ರುವನನ್ನು ಸ್ವಾಗತಿಸಲು ಜನರು ನಗರದ ಎಲ್ಲೆಡೆ ಮಕರಾಕಾರದ ಸುಂದರವಾದ ದ್ವಾರತೋರಣಗಳನ್ನು ರಚಿಸಿದ್ದರು. ಹೂವು-ಹಣ್ಣುಗಳ ಗೊಂಚಲು-ಗೊನೆಗಳಿಂದ ಕೂಡಿದ ಬಾಳೆಯ ಕಂಬಗಳಿಂದಲೂ ಎಳೆಯ ಅಡಿಕೆಯ ಸಸಿಗಳಿಂದಲೂ ಸಿಂಗರಿಸಿದ್ದರು. ॥ ೩೪ ॥ ಪ್ರತಿಯೊಂದು ಬಾಗಿಲುಗಳಲ್ಲಿಯೂ ಜಲಕಲಶಗಳನ್ನಿಟ್ಟು ದೀಪಗಳನ್ನು ಬೆಳಗಿಸಿದ್ದರು. ಮಾವಿನ ಚಿಗುರುಗಳನ್ನೂ, ವಸ್ತ್ರಗಳನ್ನೂ, ಹೂಮಾಲೆಗಳನ್ನೂ, ಮುತ್ತಿನ ಹಾರಗಳನ್ನೂ ಕಟ್ಟಿ ಅಲಂಕರಿಸಿದ್ದರು. ॥ ೩೫ ॥ ನಗರದ ಪ್ರಾಕಾರಗಳೂ, ಹೆಬ್ಬಾಗಿಲುಗಳೂ, ಭವ್ಯ ಭವನಗಳೂ ಚಿನ್ನದ ಕೆತ್ತನೆಗಳಿಂದ ಎಲ್ಲೆಡೆಯಲ್ಲೂ ಅಲಂಕೃತವಾಗಿದ್ದವು. ಅವುಗಳ ಗೋಪುರಗಳು ವಿಮಾನಗಳ ಶಿಖರಗಳಂತೆ ಹೊಳೆಯುತ್ತಿದ್ದವು. ॥ ೩೬ ॥ ನಗರದ ರಸ್ತೆಗಳನ್ನೂ, ವೃತ್ತಗಳನ್ನೂ, ಜಗುಲಿಗಳನ್ನು ಗುಡಿಸಿ-ಸಾರಿಸಿ ಅವುಗಳ ಮೇಲೆ ಗಂಧೋದಕವನ್ನು ಚಿಮುಕಿಸಲಾಗಿತ್ತು. ಅರಳು-ಅಕ್ಷತೆಗಳು, ಅಕ್ಕಿ-ಹೂವು-ಹಣ್ಣುಗಳೇ ಮುಂತಾದ ಮಂಗಳೋಪಹಾರಗಳು ಅಳವಡಿಸಲ್ಪಟ್ಟಿದ್ದವು. ॥ ೩೭ ॥ ಧ್ರುವನು ರಾಜಮಾರ್ಗದಲ್ಲಿ ಮೆರವಣಿಗೆ ಹೋಗುತ್ತಿರುವಾಗ ಅಲ್ಲಲ್ಲಿ ನಗರದ ಸುಂದರ ಸುಮಂಗಲಿಯರು ಅವನ ದರ್ಶನಪಡೆಯಲು ನೆರೆದಿದ್ದರು. ಅವರು ವಾತ್ಸಲ್ಯದಿಂದ ಶುಭಾಶೀರ್ವಾದಗಳನ್ನು ಮಾಡುತ್ತಾ ಆತನ ಮೇಲೆ ಬಿಳಿಸಾಸುವೆ, ಅಕ್ಷತೆ, ಮೊಸರು, ತೀರ್ಥೋದಕ, ಗರಿಕೆ, ಹೂವು-ಹಣ್ಣುಗಳ ಮಳೆಗರೆಯುತ್ತಿದ್ದರು. ಅವರು ಹಾಡುತ್ತಿದ್ದ ಇಂಪಾದ ಗೀತೆಗಳನ್ನು ಕೇಳುತ್ತಾ ಧ್ರುವನು ತನ್ನ ತಂದೆಯ ಅರಮನೆಯನ್ನು ಪ್ರವೇಶಿಸಿದನು. ॥ ೩೮-೩೯ ॥

ಆ ಭವ್ಯ ಭವನವು ಬಹುಮೂಲ್ಯವಾದ ವಿವಿಧ ರತ್ನಗಳಿಂದ ಖಚಿತವಾಗಿ ಕಂಗೊಳಿಸುತ್ತಿತ್ತು. ಅಲ್ಲಿ ತಂದೆಯ ವಾತ್ಸಲ್ಯದ ಸುಖವನ್ನು ಅನುಭವಿಸುತ್ತಾ ಧ್ರುವನು ಸ್ವರ್ಗದಲ್ಲಿ ದೇವತೆಗಳು ವಾಸಿಸುವಂತೆ ಪರಮಾನಂದದಿಂದ ಇರುತ್ತಿದ್ದನು. ॥ ೪೦ ॥ ಅಲ್ಲಿ ಹಾಲಿನ ನೊರೆಯಂತೆ ಬೆಳ್ಳಗಿದ್ದ ಮೃದುವಾದ ತಲ್ಪಗಳೂ, ಆನೆಯ ದಂತದ ಮಂಚಗಳೂ, ಚಿನ್ನದ ಕುಸುರಿಕೆಲಸದಿಂದ ಕೂಡಿದ ಪರದೆಗಳೂ, ಬಹುಮೂಲ್ಯವಾದ ಪೀಠಗಳೂ, ಹೇರಳವಾದ ಚಿನ್ನದ ಸಲಕರಣೆಗಳು ಇದ್ದುವು. ॥ ೪೧ ॥

ಯತ್ರ ಸ್ಫಟಿಕಕುಡ್ಯೇಷು ಮಹಾಮಾರಕತೇಷು ಚ ।
ಮಣಿಪ್ರದೀಪಾ ಆಭಾಂತಿ ಲಲನಾರತ್ನಸಂಯುತಾಃ ॥ ೬೨ ॥

ಉದ್ಯಾನಾನಿ ಚ ರಮ್ಯಾಣಿ ವಿಚಿತ್ರೈರಮರದ್ರುಮೈಃ ।
ಕೂಜದ್ವಿಹಂಗಮಿಥುನೈರ್ಗಾಯನ್ಮತ್ತಮಧುವ್ರತೈಃ ॥ ೬೩ ॥

ವಾಪ್ಯೋ ವೈದೂರ್ಯಸೋಪಾನಾಃ ಪದ್ಮೋತ್ಪಲಕುಮುದ್ವತೀಃ ।
ಹಂಸಕಾರಂಡ ವಕುಲೈರ್ಜುಷ್ಟಾಶ್ಚಕ್ರಾಹ್ವಸಾರಸೈಃ ॥ ೬೪ ॥

ಉತ್ತಾನಪಾದೋ ರಾಜರ್ಷಿಃ ಪ್ರಭಾವಂ ತನಯಸ್ಯ ತಮ್ ।
ಶ್ರುತ್ವಾ ದೃಷ್ಟ್ವಾದ್ಭುತತಮಂ ಪ್ರಪೇದೇ ವಿಸ್ಮಯಂ ಪರಮ್ ॥ ೬೫ ॥

ವೀಕ್ಷ್ಯೋಢವಯಸಂ ತಂ ಚ ಪ್ರಕೃತೀನಾಂ ಚ ಸಮ್ಮತಮ್ ।
ಅನುರಕ್ತಪ್ರಜಂ ರಾಜಾ ಧ್ರುವಂ ಚಕ್ರೇ ಭುವಃ ಪತಿಮ್ ॥ ೬೬ ॥

ಆತ್ಮಾನಂ ಚ ಪ್ರವಯಸಮಾಕಲಯ್ಯ ವಿಶಾಂಪತಿಃ ।
ವನಂ ವಿರಕ್ತಃ ಪ್ರಾತಿಷ್ಠದ್ವಿಮೃಶನ್ನಾತ್ಮನೋ ಗತಿಮ್ ॥ ೬೭ ॥

ಸ್ಫಟಿಕದಿಂದಲೂ, ಮರಕತಮಣಿಗಳಿಂದಲೂ ರಚಿತವಾಗಿದ್ದ ಗೋಡೆಗಳಲ್ಲಿ ಕೆತ್ತಿದ ರತ್ನಖಚಿತ ಹೆಣ್ಣುಬೊಂಬೆಗಳ ಕೈಯಲ್ಲಿ ನೂರಾರು ಮಣಿದೀಪಗಳು ಬೆಳಗುತ್ತಿದ್ದವು. ॥ ೬೨ ॥ ಅರಮನೆಯ ಸುತ್ತಲೂ ನಾನಾಜಾತಿಯ ದಿವ್ಯ ವೃಕ್ಷಗಳಿಂದ ಕೂಡಿದ ಸುಂದರ ಉದ್ಯಾನವನಗಳಿದ್ದವು. ಅದರಲ್ಲಿ ಗಂಡು ಮತ್ತು ಹೆಣ್ಣು ಹಕ್ಕಿಗಳ ಕಲರವದಿಂದ ಹಾಗೂ ದುಂಬಿಗಳ ಝೇಂಕಾರಗಳಿಂದ ಕಿವಿಗಳು ತಣಿಯುತ್ತಿದ್ದವು. ॥ ೬೩ ॥ ಆ ಹೂದೋಟಗಳಲ್ಲಿ ವೈಡೂರ್ಯ ಮಣಿಗಳ ಸೋಪಾನಗಳಿಂದ ರಚಿತವಾದ ತಿಳಿನೀರಿನ ಕೊಳಗಳು ಶೋಭಿಸುತ್ತಿದ್ದವು. ಅವುಗಳಲ್ಲಿ ಕೆಂಪು, ನೀಲಿ, ಬಿಳಿಯ ಬಣ್ಣಗಳ ಅರಳಿದ ಕಮಲಗಳಿಂದಲೂ, ಆಟವಾಡುತ್ತಿದ್ದ ಹಂಸ, ಕಾರಂಡವ, ಚಕ್ರವಾಕ, ಸಾರಸಗಳೇ ಮುಂತಾದ ಪಕ್ಷಿಗಳಿಂದಲೂ ಕಂಗೊಳಿಸುತ್ತಿದ್ದುವು. ॥ ೬೪ ॥

ರಾಜರ್ಷಿಯಾದ ಉತ್ತಾನಪಾದನು ಪುತ್ರನ ಅತ್ಯಂತ ಅದ್ಭುತವಾದ ಪ್ರಭಾವವನ್ನು ದೇವರ್ಷಿ ನಾರದರಿಂದ ಹಿಂದೆ ಕೇಳಿದ್ದನು. ಈಗ ಅದನ್ನು ಪ್ರತ್ಯಕ್ಷವಾಗಿಯೇ ನೋಡಿ ಅವನಿಗೆ ತುಂಬಾ ಆಶ್ಚರ್ಯವಾಯಿತು. ॥ ೬೫ ॥ ಅನಂತರ ಅವನು – ಧ್ರುವನು ವಿವಾಹದ ವಯಸ್ಸಿಗೆ ಬಂದಿರುವುದನ್ನೂ, ಅಮಾತ್ಯವರ್ಗವು ಅವನನ್ನು ಆದರಬುದ್ಧಿಯಿಂದ ನೋಡುವುದನ್ನೂ, ಪ್ರಜೆಗಳೂ ಕೂಡ ಆತನಲ್ಲಿ ಅನುರಕ್ತವಾಗಿರುವುದನ್ನೂ ಗಮನಿಸಿ ಅವನಿಗೆ ಅಖಿಲ ಭೂಮಂಡಲದ ಆಧಿಪತ್ಯದ ಪಟ್ಟಾಭಿಷೇಕವನ್ನು ಮಾಡಿದನು. ॥ ೬೬ ॥ ಮತ್ತೆ ತನಗೆ ಮುಪ್ಪು ಬಂದಿರುವುದನ್ನು ತಿಳಿದು ಆತ್ಮೋದ್ಧಾರದ ಗತಿಯನ್ನು ಚಿಂತಿಸುತ್ತಾ ಸಂಸಾರದಲ್ಲಿ ವಿರಕ್ತನಾಗಿ ವನಕ್ಕೆ ಹೊರಟುಹೋದನು. ॥ ೬೭ ॥

*ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಧ್ರುವರಾಜ್ಯಾಭಿಷೇಕವರ್ಣನಂ ನಾಮ ನವಮೋಽಧ್ಯಾಯಃ ॥ ೯ ॥**

# ಹತ್ತನೆಯ ಅಧ್ಯಾಯ

## ಯಕ್ಷನಿಂದ ಉತ್ತಮನ ಸಾವು – ಧ್ರುವನು ಯಕ್ಷರೊಡನೆ ಮಾಡಿದ ಯುದ್ಧ

*ಮೈತ್ರೇಯ ಉವಾಚ*

ಪ್ರಜಾಪತೇರ್ದುಹಿತರಂ ಶಿಶುಮಾರಸ್ಯ ವೈ ಧ್ರುವಃ ।
ಉಪಯೇಮೇ ಭ್ರಮಿಂ ನಾಮ ತತ್ಸುತೌ ಕಲ್ಪವತ್ಸರೌ ॥ ೧ ॥

ಇಲಾಯಾಮಪಿ ಭಾರ್ಯಾಯಾಂ ವಾಯೋಃ ಪುತ್ರ್ಯಾಂ ಮಹಾಬಲಃ ।
ಪುತ್ರಮುತ್ಕಲನಾಮಾನಂ ಯೋಷಿದ್ರತ್ನಮಜೀಜನತ್ ॥ ೨ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಧ್ರುವನು ಶಿಶುಮಾರನೆಂಬ ಪ್ರಜಾಪತಿಯ ಪುತ್ರಿಯಾದ ಭ್ರಮಿ ಎಂಬಾಕೆಯೊಂದಿಗೆ ವಿವಾಹವಾಗಿ, ಅವಳಲ್ಲಿ ಕಲ್ಪ ಮತ್ತು ವತ್ಸರ ಎಂಬ ಇಬ್ಬರು ಪುತ್ರರನ್ನು ಪಡೆದನು. ॥ ೧ ॥ ಆ ಮಹಾಬಲಿಯಾದ ಧ್ರುವನು ತನ್ನ ಮತ್ತೊಬ್ಬ ಭಾರ್ಯೆಯಾಗಿದ್ದ ವಾಯುಪುತ್ರಿಯಾದ ಇಳಾದೇವಿಯಿಂದ ಉತ್ಕಲನೆಂಬ ಪುತ್ರನನ್ನೂ ಒಂದು ಕನ್ಯಾರತ್ನವನ್ನೂ ಪಡೆದನು. ॥ ೨ ॥ ಉತ್ತಮ ಕುಮಾರನು ವಿವಾಹವಾಗುವುದಕ್ಕೆ ಮೊದಲೇ ಒಮ್ಮೆ ಬೇಟೆಯಾಡುತ್ತಿದ್ದಾಗ ಹಿಮಾಲಯ ಪರ್ವತದಲ್ಲಿ ಒಬ್ಬ ಮಹಾಬಲಶಾಲಿಯಾದ

ಉತ್ತಮಸ್ತ್ವಕೃತೋದ್ವಾಹೋ ಮೃಗಯಾಯಾಂ ಬಲೀಯಸಾ ।
ಹತಃ ಪುಣ್ಯಜನೇನಾದ್ರೌ ತನ್ಮಾತಾಸ್ಯ ಗತಿಂ ಗತಾ ॥ ೩ ॥

ಧ್ರುವೋ ಭ್ರಾತೃವಧಂ ಶ್ರುತ್ವಾ ಕೋಪಾಮರ್ಷಶುಚಾರ್ಪಿತಃ ।
ಜೈತ್ರಂ ಸ್ಯಂದನಮಾಸ್ಥಾಯ ಗತಃ ಪುಣ್ಯಜನಾಲಯಮ್ ॥ ೪ ॥

ಗತ್ವೋದೀಚೀಂ ದಿಶಂ ರಾಜಾ ರುದ್ರಾನುಚರಸೇವಿತಾಮ್ ।
ದದರ್ಶ ಹಿಮವದ್ದ್ರೋಣ್ಯಾಂ ಪುರೀಂ ಗುಹ್ಯಕಸಂಕುಲಾಮ್ ॥ ೫ ॥

ದಧ್ಮೌ ಶಂಖಂ ಬೃಹದ್ಬಾಹುಃ ಖಂ ದಿಶಶ್ಚಾನುನಾದಯನ್ ।
ಯೇನೋದ್ವಿಗ್ನದೃಶಃ ಕ್ಷತ್ತರುಪದೇವ್ಯೋಽತ್ರಸನ್ ಭೃಶಮ್ ॥ ೬ ॥

ತತೋ ನಿಷ್ಕ್ರಮ್ಯ ಬಲಿನ ಉಪದೇವಮಹಾಭಟಾಃ ।
ಅಸಹಂತಸ್ತನ್ನಿನಾದಮಭಿಪೇತುರುದಾಯುಧಾಃ ॥ ೭ ॥

ಸ ತಾನಾಪತತೋ ವೀರ ಉಗ್ರಧನ್ವಾ ಮಹಾರಥಃ ।
ಏಕೈಕಂ ಯುಗಪತ್ಸರ್ವಾನಹನ್ ಬಾಣೈಸ್ತ್ರಿಭಿಸ್ತ್ರಿಭಿಃ ॥ ೮ ॥

ತೇ ವೈ ಲಲಾಟಲಗ್ನೈಸ್ತೈರಿಷುಭಿಃ ಸರ್ವ ಏವ ಹಿ ।
ಮತ್ವಾ ನಿರಸ್ತಮಾತ್ಮಾನಮಾಶಂಸನ್ ಕರ್ಮ ತಸ್ಯ ತತ್ ॥ ೯ ॥

ತೇಽಪಿ ಚಾಮುಮಮೃಷ್ಯಂತಃ ಪಾದಸ್ಪರ್ಶಮಿವೋರಗಾಃ ।
ಶರೈರವಿಧ್ಯನ್ ಯುಗಪದ್ ದ್ವಿಗುಣಂ ಪ್ರಚಿಕೀರ್ಷವಃ ॥ ೧೦ ॥

ತತಃ ಪರಿಘನಿಸ್ತ್ರಿಂಶೈಃ ಪ್ರಾಸಶೂಲಪರಶ್ವಧೈಃ ।
ಶಕ್ತ್ಯೃಷ್ಟಿಭಿರ್ಭುಶುಂಡೀಭಿಶ್ಚಿತ್ರವಾಜೈಃ ಶರೈರಪಿ ॥ ೧೧ ॥

ಅಭ್ಯವರ್ಷನ್ಪ್ರಕುಪಿತಾಃ ಸರಥಂ ಸಹಸಾರಥಿಮ್ ।
ಇಚ್ಛಂತಸ್ತತ್ಪ್ರತೀಕರ್ತುಮಯುತಾನಿ ತ್ರಯೋದಶ ॥ ೧೨ ॥

ಔತ್ತಾನಪಾದಿಃ ಸ ತದಾ ಶಸ್ತ್ರವರ್ಷೇಣ ಭೂರಿಣಾ ।
ನ ಉಪಾದೃಶ್ಯ ತಚ್ಛನ್ನ ಆಸಾರೇಣ ಯಥಾ ಗಿರಿಃ ॥ ೧೩ ॥

ಹಾಹಾಕಾರಸ್ತದೈವಾಸೀತ್ಸಿದ್ಧಾನಾಂ ದಿವಿ ಪಶ್ಯತಾಮ್ ।
ಹತೋಽಯಂ ಮಾನವಃ ಸೂರ್ಯೋ ಮಗ್ನಃ ಪುಣ್ಯಜನಾರ್ಣವೇ ॥ ೧೪ ॥

ಯಕ್ಷನು ಅವನನ್ನು ಕೊಂದುಹಾಕಿದನು. ಆತನ ತಾಯಿಯಾದ ಸುರುಚಿಯು ಆತನೊಂದಿಗೆ ಪರಲೋಕವನ್ನೈದಿದಳು. ॥ ೩ ॥

ತಮ್ಮನ ಸಾವಿನ ಸಮಾಚಾರವನ್ನು ಕೇಳಿದ ಧ್ರುವನು ಕ್ರೋಧ, ಶೋಕ ಮತ್ತು ಉದ್ವೇಗಗೊಂಡು ಒಂದು ವಿಜಯರಥವನ್ನು ಏರಿ ಯಕ್ಷರ ನೆಲೆಯಾದ ಅಲಕಾವತಿಗೆ ಪ್ರಯಾಣ ಬೆಳೆಸಿದನು. ॥ ೪ ॥ ಉತ್ತರದಿಕ್ಕಿಗೆ ಹೋಗಿ ಅವನು ಹಿಮಾಲಯದ ತಪ್ಪಲಿನಲ್ಲಿ ಯಕ್ಷರಿಂದ ತುಂಬಿದ್ದ ಕುಬೇರನ ರಾಜಧಾನಿಯನ್ನು ಕಂಡನು. ಅಲ್ಲಿ ರುದ್ರದೇವರ ಅನುಚರರಾದ ಅನೇಕ ಭೂತ-ಪ್ರೇತ-ಪಿಶಾಚಿಗಳು ವಾಸವಾಗಿದ್ದವು. ॥ ೫ ॥ ವಿದುರನೇ! ಅಲ್ಲಿಗೆ ತಲುಪಿ ಮಹಾಬಾಹುವಾದ ಧ್ರುವನು ಹತ್ತುದಿಕ್ಕುಗಳಲ್ಲಿಯೂ ತುಂಬಿ ಮೊಳಗುವಂತೆ ಶಂಖಧ್ವನಿಯನ್ನು ಗೈದನು. ಆ ಧ್ವನಿಯನ್ನು ಕೇಳಿ ಯಕ್ಷಪತ್ನಿಯರು ತುಂಬಾ ಹೆದರಿ ಹೋದರು. ಅವರ ಕಣ್ಣುಗಳು ಭಯದಿಂದ ಕಾತರಗೊಂಡವು. ॥ ೬ ॥

ವೀರನಾದ ವಿದುರನೇ! ಮಹಾಬಲಶಾಲಿಗಳಾದ ಯಕ್ಷ ವೀರರು ಆ ಶಂಖನಾದವನ್ನು ಸಹಿಸಲಾರದೆ ಕ್ರೋಧೋದ್ದೀಡಿತರಾಗಿ ಬಗೆ-ಬಗೆಯ ಅಸ್ತ್ರ-ಶಸ್ತ್ರಗಳನ್ನು ಹಿಡಿದುಕೊಂಡು ನಗರದಿಂದ ಹೊರಬಿದ್ದು ಧ್ರುವನನ್ನು ಮುತ್ತಿದರು. ॥ ೭ ॥ ಮಹಾರಥಿಯಾದ ಧ್ರುವನು ಪ್ರಚಂಡ ಧನುರ್ಧರನಾಗಿದ್ದನು. ಅವನು ಒಮ್ಮೆಗೆ ಬಾಣಪ್ರಯೋಗಮಾಡಿ ಆ ಯಕ್ಷರಲ್ಲಿ ಒಬ್ಬೊಬ್ಬರಿಗೂ ಮೂರು-ಮೂರು ಬಾಣಗಳನ್ನು ಹೊಡೆದನು. ॥ ೮ ॥ ತಮ್ಮಲ್ಲಿ ಪ್ರತಿಯೊಬ್ಬರ ತಲೆಗೆ ಮೂರು-ಮೂರು ಬಾಣಗಳು ನೆಟ್ಟಿರುವುದನ್ನು ನೋಡಿದಾಗ ಯಕ್ಷರಿಗೆ ಖಂಡಿತವಾಗಿಯೂ ಸೋತು ಹೋಗುವೆವು ಎಂಬ ವಿಶ್ವಾಸವುಂಟಾಯಿತು. ಧ್ರುವನ ಅದ್ಭುತ ಪರಾಕ್ರಮವನ್ನು ಅವರು ಪ್ರಶಂಸೆ ಮಾಡತೊಡಗಿದರು. ॥ ೯ ॥ ಸರ್ಪವು ಮತ್ತೊಬ್ಬರ ಕಾಲ್ತುಳಿತವನ್ನು ಸಹಿಸದೆ ಕೆರಳುವಂತೆ – ಅವರೂ ಧ್ರುವನ ಪರಾಕ್ರಮವನ್ನು ಸಹಿಸಲಾರದೆ ಕೋಪದಿಂದ ಕೆರಳಿ ಅವನ ಬಾಣಗಳಿಗೆ ಉತ್ತರವಾಗಿ ಆತನ ಮೇಲೆ ಅವನ ಬಾಣಗಳಿಗೆ ಎರಡರಷ್ಟು ಬಾಣಗಳನ್ನು ಒಟ್ಟಿಗೆ ಪ್ರಯೋಗಿಸಿದರು. ॥ ೧೦ ॥ ಅಲ್ಲಿದ್ದ ಒಂದು ಲಕ್ಷದ ಮೂವತ್ತುಸಾವಿರ ಮಂದಿಯೂ ಒಟ್ಟಿಗೆ ಬಾಣಪ್ರಯೋಗ ಮಾಡಿದರು. ಧ್ರುವನ ಮೇಲೆ ಸೇಡುತೀರಿಸಿಕೊಳ್ಳಲು ಅವರು ಅತ್ಯಂತ ಕ್ರುದ್ಧರಾಗಿ ರಥ, ಸಾರಥಿಸಹಿತ ಅವನ ಮೇಲೆ ಪರಿಘ, ಖಡ್ಗ, ಪ್ರಾಸ, ತ್ರಿಶೂಲ, ಪರಶು, ಶಕ್ತಿ, ಋಷ್ಟಿ, ಭುಶುಂಡಿ ಮತ್ತು ಚಿತ್ರ-ವಿಚಿತ್ರವಾದ ಗರಿಕಟ್ಟಿದ ಬಾಣಗಳ ಮಳೆಯನ್ನೇ ಸುರಿಸಿದರು. ॥ ೧೧-೧೨ ॥ ಭಯಂಕರವಾದ ಬಾಣಗಳ ಮಳೆಯಲ್ಲಿ ಧ್ರುವನು ಪೂರ್ಣವಾಗಿ ಮುಚ್ಚಿಹೋದನು. ದೊಡ್ಡದಾದ ಮಳೆಯಿಂದ ಪರ್ವತವು ಕಾಣಿಸದಂತೆ ಆ ಬಾಣವರ್ಷದಿಂದ ಧ್ರುವನು ಕಾಣಿಸದಾದನು. ॥ ೧೩ ॥ ಆಗ ಆಕಾಶದಲ್ಲಿದ್ದು ಆ ದೃಶ್ಯವನ್ನು ನೋಡುತ್ತಿದ್ದ ಸಿದ್ಧಗಡಣವು 'ಹಾ ! ಹಾ ! ಈ ಮನುವಂಶದ ಸೂರ್ಯನು ಯಕ್ಷಸೇನೆಯೆಂಬ ಸಮುದ್ರದಲ್ಲಿ ಮುಳುಗಿ ಅಸ್ತಂಗತನಾದನಲ್ಲ!' ಎಂದು ಗೋಳಾಡಿದರು. ॥ ೧೪ ॥ ಯಕ್ಷರು ತಮ್ಮ ವಿಜಯವನ್ನು ಘೋಷಿಸುತ್ತಾ ಯುದ್ಧಕ್ಷೇತ್ರದಲ್ಲಿ ಸಿಂಹದಂತೆ ಗರ್ಜಿಸತೊಡಗಿದರು. ಆದರೆ ಈ ನಡುವೆ ಸೂರ್ಯಭಗವಂತನು ಮಂಜನ್ನು ಭೇದಿಸಿ

ನದತ್ಸು ಯಾತುಧಾನೇಷು ಜಯಕಾಶಿಷ್ವಥೋ ಮೃಧೇ ।
ಉದತಿಷ್ಠದ್ರಥಸ್ತಸ್ಯ ನೀಹಾರಾದಿವ ಭಾಸ್ಕರಃ ॥ ೧೫ ॥

ಧನುರ್ವಿಸ್ಫೂರ್ಜಯನ್ ದಿವ್ಯಂ ದ್ವಿಷತಾಂ ಖೇದಮುದ್ವಹನ್ ।
ಅಸ್ತ್ರೌಘಂ ವ್ಯಧಮದ್ಬಾಣೈರ್ಘನಾನೀಕಮಿವಾನಿಲಃ ॥ ೧೬ ॥

ತಸ್ಯ ತೇ ಚಾಪನಿರ್ಮುಕ್ತಾ ಭಿತ್ತ್ವಾ ವರ್ಮಾಣಿ ರಕ್ಷಸಾಮ್ ।
ಕಾಯಾನಾವಿವಿಶುಸ್ತಿಗ್ಮಾ ಗಿರೀನಶನಯೋ ಯಥಾ ॥ ೧೭ ॥

ಭಲ್ಲೈಃ ಸಂಛಿದ್ಯಮಾನಾನಾಂ ಶಿರೋಭಿಶ್ಚಾರುಕುಂಡಲೈಃ ।
ಊರುಭಿರ್ಹೇಮತಾಲಾಭೈರ್ದೋರ್ಭಿರ್ವಲಯವಲ್ಗುಭಿಃ ॥ ೧೮ ॥

ಹಾರಕೇಯೂರಮುಕುಟೈರುಷ್ಣೀಷೈಶ್ಚ ಮಹಾಧನೈಃ ।
ಆಸ್ತೃತಾಸ್ತಾ ರಣಭುವೋ ರೇಜುರ್ವೀರಮನೋಹರಾಃ ॥ ೧೯ ॥

ಹತಾವಶಿಷ್ಟಾ ಇತರೇ ರಣಾಜಿರಾದ್
ರಕ್ಷೋಗಣಾಃ ಕ್ಷತ್ರಿಯವರ್ಯಸಾಯಕೈಃ ।
ಪ್ರಾಯೋ ವಿವೃಕ್ಣಾವಯವಾ ವಿದುದ್ರುವು-
ರ್ಮೃಗೇಂದ್ರವಿಕ್ರೀಡಿತಯೂಥಪಾ ಇವ ॥ ೨೦ ॥

ಅಪಶ್ಯಮಾನಃ ಸ ತದಾಽಽತತಾಯಿನಂ
ಮಹಾಮೃಧೇ ಕಂಚನ ಮಾನವೋತ್ತಮಃ ।
ಪುರೀಂ ದಿದೃಕ್ಷನ್ನಪಿ ನಾವಿಶದ್ದ್ವಿಷಾಂ
ನ ಮಾಯಿನಾಂ ವೇದ ಚಿಕೀರ್ಷಿತಂ ಜನಃ ॥ ೨೧ ॥

ಇತಿ ಬ್ರುವನ್‌ಶ್ಚಿತ್ರರಥಃ ಸ್ವಸಾರಥಿಂ
ಯತ್ತಃ ಪರೇಷಾಂ ಪ್ರತಿಯೋಗಶಂಕಿತಃ ।
ಶುಶ್ರಾವ ಶಬ್ದಂ ಜಲಧೇರಿವೇರಿತಂ
ನಭಸ್ವತೋ ದಿಕ್ಷು ರಜೋಽನ್ವದೃಶ್ಯತ ॥ ೨೨ ॥

ಕ್ಷಣೇನಾಚ್ಛಾದಿತಂ ವ್ಯೋಮ ಘನಾನೀಕೇನ ಸರ್ವತಃ ।
ವಿಸ್ಫುರತ್ತಡಿತಾ ದಿಕ್ಷು ತ್ರಾಸಯತ್‌ಸ್ತನಯಿತ್ನುನಾ ॥ ೨೩ ॥

ವವೃಷೂ ರುಧಿರೌಘಾಸೃಕ್ಪೂಯವಿಣ್ಮೂತ್ರಮೇದಸಃ ।
ನಿಪೇತುರ್ಗಗನಾದಸ್ಯ ಕಬಂಧಾನ್ಯಗ್ರತೋಽನಘ ॥ ೨೪ ॥

ಕೊಂಡು ಹೊರಬರುವಂತೆ ಧ್ರುವನು ರಥದೊಂದಿಗೆ ಇದ್ದಕ್ಕಿದ್ದಂತೆ ಹೊರಗೆ ಪ್ರಕಟನಾದನು. ॥ ೧೫ ॥

ಧ್ರುವನು ತನ್ನ ದಿವ್ಯವಾದ ಧನುಸ್ಸನ್ನು ಟಂಕಾರಮಾಡಿ ಶತ್ರುಗಳ ಎದೆಯನ್ನು ನಡುಗಿಸಿಬಿಟ್ಟನು. ಪ್ರಚಂಡವಾದ ಬಾಣಗಳ ಮಳೆಯನ್ನೇ ಸುರಿಸಿ – ಬಿರುಗಾಳಿಯು ಮೋಡಗಳನ್ನು ಚದುರಿಸಿ ಬಿಡುವಂತೆ ಅವರ ಅಸ್ತ್ರ-ಶಸ್ತ್ರಗಳನ್ನು ಛಿನ್ನ-ಭಿನ್ನವಾಗಿಸಿದನು. ॥ ೧೬ ॥ ಆತನ ಧನುಸ್ಸಿನಿಂದ ಹೊರಟ ತೀಕ್ಷ್ಣವಾದ ಬಾಣಗಳು ಯಕ್ಷ-ರಾಕ್ಷಸರ ಕವಚಗಳನ್ನು ಭೇದಿಸಿ – ಇಂದ್ರನು ಪ್ರಯೋಗಿಸಿದ ವಜ್ರವು ಪರ್ವತದೊಳಗೆ ನುಗ್ಗುವಂತೆ ಅವರ ಶರೀರದೊಳಗೆ ನುಗ್ಗಿದವು. ॥ ೧೭ ॥ ವಿದುರನೇ ! ಧ್ರುವನ ಬಾಣಗಳಿಂದ ಕತ್ತರಿಸಲ್ಪಟ್ಟ ಯಕ್ಷರ ಸುಂದರವಾದ ಕುಂಡಲಸಹಿತವಾದ ತಲೆಗಳಿಂದಲೂ, ಸುವರ್ಣವರ್ಣವಾದ ತಾಳೆಮರದಂತಿರುವ ಮೊಣಕಾಲುಗಳಿಂದಲೂ, ಬಳೆಗಳಿಂದ ಭೂಷಿತವಾದ ಬಾಹುಗಳಿಂದಲೂ, ಹಾರಗಳು – ತೋಳಬಂದಿಗಳು – ಕಿರೀಟಗಳು ಮತ್ತು ಬಹುಮೂಲ್ಯವಾದ ರುಮಾಲುಗಳಿಂದಲೂ ನಿಬಿಡವಾಗಿ, ವೀರರಿಗೆ ಉತ್ಸಾಹ ವರ್ಧಕವಾದ ಆ ಯುದ್ಧಭೂಮಿಯು ಅತ್ಯಂತ ರಮಣೀಯವಾಗಿ ಕಾಣುತ್ತಿತ್ತು. ॥ ೧೮-೧೯ ॥ ಅಳಿದುಳಿದ ಯಕ್ಷರು ಕ್ಷತ್ರಿಯಶ್ರೇಷ್ಠನಾದ ಧ್ರುವನ ಬಾಣಗಳಿಂದ ಅಂಗಗಳೆಲ್ಲ ಛಿನ್ನ-ಭಿನ್ನವಾಗಿದ್ದರಿಂದ ಸಿಂಹದೊಡನೆ ಸೆಣಸಿ ಸೋತ ಗಜರಾಜನಂತೆ ಭಯಗ್ರಸ್ತರಾಗಿ ರಣರಂಗದಿಂದ ಪಲಾಯನ ಮಾಡಿಬಿಟ್ಟಿದ್ದರು. ॥ ೨೦ ॥ ಆ ವಿಸ್ತಾರವಾದ ರಣಭೂಮಿಯಲ್ಲಿ ಅಸ್ತ್ರ-ಶಸ್ತ್ರಗಳನ್ನು ಹಿಡಿದಿದ್ದ ಶತ್ರುಗಳಲ್ಲಿ ಒಂದು ಪಿಳ್ಳೆಯು ಕಾಣದಿರಲು, ನರಶ್ರೇಷ್ಠನಾದ ಧ್ರುವನಿಗೆ ಅಲಕಾಪುರಿಯನ್ನು ನೋಡಬೇಕೆಂಬ ಬಯಕೆ ಉಂಟಾಯಿತು. ಆದರೆ ಅವನು ಪುರದೊಳಗೆ ಹೋಗಲಿಲ್ಲ. 'ಈ ಮಾಯಾವಿಗಳು ಏನು ಮಾಡಲು ಬಯಸುತ್ತಾರೋ ಎಂಬುದು ಮನುಷ್ಯರಿಗೆ ತಿಳಿಯುವುದಿಲ್ಲ' ಎಂದು ಸಾರಥಿಗೆ ಹೇಳಿ ಆತನು ಆ ವಿಚಿತ್ರವಾದ ರಥದಲ್ಲಿಯೇ ಕುಳಿತುಕೊಂಡು, ಶತ್ರುಗಳು ಹೊಸದಾಗಿ ಆಕ್ರಮಣಮಾಡಬಹುದೆಂಬ ಆಶಂಕೆಯಿಂದ ಎಚ್ಚರವಾಗಿಯೇ ಇದ್ದನು. ಅಷ್ಟರಲ್ಲೇ ಅವನಿಗೆ ಸಮುದ್ರದ ಗರ್ಜನೆಯಂತೆ ಚಂಡಮಾರುತದ ಭಯಂಕರ ಶಬ್ದ ಕೇಳಿಬಂತು. ಎಲ್ಲ ದಿಕ್ಕುಗಳಲ್ಲಿಯೂ ಬಿರುಗಾಳಿ ಬೀಸತೊಡಗಿ ಧೂಳು ತುಂಬಿಹೋಯಿತು. ॥ ೨೧-೨೨ ॥

ಕ್ಷಣಕಾಲದಲ್ಲೇ ಇಡೀ ಆಕಾಶವು ಮೋಡಗಳ ಸಾಲುಗಳಿಂದ ತುಂಬಿಹೋಯಿತು. ಎಲ್ಲೆಡೆ ಭಯಂಕರವಾದ ಬರಸಿಡಿಲುಗಳೊಡನೆ ಮಿಂಚುಗಳು ಥಳ-ಥಳಿಸತೊಡಗಿತು. ॥ ೨೩ ॥ ಪುಣ್ಯಾತ್ಮನಾದ ವಿದುರನೇ ! ಮೋಡಗಳಿಂದ ರಕ್ತ, ಮಾಂಸ, ಕೀವು, ಮಲ-ಮೂತ್ರ, ಚರ್ಬಿ ಮುಂತಾದವುಗಳ ಮಳೆ ಸುರಿಯತೊಡಗಿತು. ಅನೇಕ ತಲೆಯಿಲ್ಲದ ದೇಹಗಳು ಮುಗಿಲಿನಿಂದ ಧ್ರುವನ ಮುಂದೆಯೇ ಬೀಳತೊಡಗಿದವು. ॥ ೨೪ ॥ ಮತ್ತೆ ಆಕಾಶದಲ್ಲಿ ಒಂದು ಪರ್ವತವು ಕಾಣಿಸಿಕೊಂಡು ಎಲ್ಲ ದಿಕ್ಕುಗಳಿಂದಲೂ

ತತಃ ಖೇಽದೃಶ್ಯತ ಗಿರಿರ್ನಿಪೇತುಃ ಸರ್ವತೋದಿಶಮ್ ।
ಗದಾಪರಿಘನಿಸ್ತ್ರಿಂಶಮುಸಲಾಃ ಸಾಶ್ಮವರ್ಷಿಣಃ ॥ ೨೫ ॥

ಅಹಯೋಽಶನಿನಿಃಶ್ವಾಸಾ ವಮಂತೋಽಗ್ನಿಂ ರುಷಾಕ್ಷಿಭಿಃ ।
ಅಭ್ಯಧಾವನ್ಗಜಾ ಮತ್ತಾಃ ಸಿಂಹವ್ಯಾಘ್ರಾಶ್ಚ ಯೂಥಶಃ ॥ ೨೬ ॥

ಸಮುದ್ರ ಊರ್ಮಿಭಿರ್ಭೀಮಃ ಪ್ಲಾವಯನ್ಸರ್ವತೋ ಭುವಮ್ ।
ಆಸಸಾದ ಮಹಾಹ್ರಾದಃ ಕಲ್ಪಾಂತ ಇವ ಭೀಷಣಃ ॥ ೨೭ ॥

ಏವಂ ವಿಧಾನ್ಯನೇಕಾನಿ ತ್ರಾಸನಾನ್ಯಮನಸ್ವಿನಾಮ್ ।
ಸಸೃಜುಸ್ತಿಗ್ಮಗತಯ ಆಸುರ್ಯಾ ಮಾಯಯಾಸುರಾಃ ॥ ೨೮ ॥

ಧ್ರುವೇ ಪ್ರಯುಕ್ತಾಮಸುರೈಸ್ತಾಂ ಮಾಯಾಮತಿದುಸ್ತರಾಮ್ ।
ನಿಶಾಮ್ಯ ತಸ್ಯ ಮುನಯಃ ಶಮಾಶಂಸನ್ಸಮಾಗತಾಃ ॥ ೨೯ ॥

*ಮುನಯ ಊಚುಃ*

ಔತ್ತಾನಪಾದೇ ಭಗವಾನ್‌ಸ್ತವ ಶಾರ್ಙ್ಗಧನ್ವಾ
ದೇವಃ ಕ್ಷಿಣೋತ್ವವನತಾರ್ತಿಹರೋ ವಿಪಕ್ಷಾನ್ ।
ಯನ್ನಾಮಧೇಯಮಭಿಧಾಯ ನಿಶಮ್ಯ ಚಾದ್ಧಾ
ಲೋಕೋಽಂಜಸಾ ತರತಿ ದುಸ್ತರಮಂಗ ಮೃತ್ಯುಮ್ ॥ ೩೦ ॥

ಕಲ್ಲುಗಳ ಮಳೆಯೇ ಸುರಿಯತೊಡಗಿತು. ಜೊತೆಗೆ ಗದೆಗಳು, ಪರಿಘಗಳು, ಕತ್ತಿಗಳು, ಒನಕೆಗಳು ಬೀಳತೊಡಗಿದವು. ॥ ೨೫ ॥ ಸಾವಿರಾರು ಸರ್ಪಗಳು ಸಿಡಿಲಿನಂತೆ ಬುಸುಗುಟ್ಟುತ್ತಾ ರೋಷಪೂರ್ಣವಾದ ಕಣ್ಣುಗಳಿಂದ ಕೆಂಡಗಳನ್ನು ಕಾರುತ್ತಿರುವುದು ಕಾಣಿಸಿತು. ಮದಿಸಿದ ಆನೆಗಳು, ಸಿಂಹಗಳು, ಹುಲಿಗಳು, ಹಿಂಡು-ಹಿಂಡಾಗಿ ಓಡೋಡಿ ಬರುತ್ತಿರುವುದು ಗೋಚರಿಸಿತು. ॥ ೨೬ ॥ ಸಮುದ್ರಗಳು ಪ್ರಳಯಕಾಲದಂತೆ ಭೀಕರವಾಗಿ ಭೋರ್ಗರೆಯುತ್ತಾ ಮುಗಿಲೆತ್ತರದ ಅಲೆಗಳಿಂದ ಎಲ್ಲ ಕಡೆಗಳಿಂದಲೂ ಭೂಮಿಯನ್ನು ಮುಳುಗಿಸುತ್ತಾ ಬರುತ್ತಿರುವಂತೆ ಕಾಣಿಸಿತು. ॥ ೨೭ ॥ ಕ್ರೂರಿಗಳಾದ ಅಸುರರು ತಮ್ಮ ಆಸುರೀ ಮಾಯೆಯಿಂದ ಹೇಡಿಗಳ ಹೃದಯ ನಡುಗಿಸುವಂತಹ ಅನೇಕ ಉತ್ಪಾತಗಳನ್ನು ತೋರಿದರು. ॥ ೨೮ ॥ ಧ್ರುವನ ಮೇಲೆ ಅಸುರರು ದುಸ್ತರವಾದ ಮಾಯೆಯನ್ನು ಸೃಷ್ಟಿಸುತ್ತಿದ್ದಾರೆ ಎಂಬುದನ್ನು ಕೇಳಿ ಮುನಿಗಳು ಅಲ್ಲಿಗೆ ಬಂದು ಆತನಿಗೆ ಮಂಗಳವನ್ನು ಹಾರೈಸಿದರು. ॥ ೨೯ ॥

**ಮುನಿಗಳು ಹೇಳುತ್ತಾರೆ** - ಉತ್ತಾನಪಾದನ ಸುಪುತ್ರನೇ! ಧ್ರುವನೇ! ಶರಣಾಗತರ ಭಯವನ್ನು ಭಂಜಿಸುವ ಶಾರ್ಙ್ಗಪಾಣಿ ಭಗವಾನ್ ನಾರಾಯಣನು ನಿನ್ನ ಶತ್ರುಗಳನ್ನು ಸಂಹರಿಸಲಿ. ಶ್ರೀಭಗವಂತನ ನಾಮವನ್ನು ಕೇಳಿದ್ದರಿಂದ, ಕೀರ್ತಿಸುವುದರಿಂದ ಮನುಷ್ಯನು ದುಸ್ತರವಾದ ಮೃತ್ಯುವನ್ನು ಆಯಾಸವಿಲ್ಲದೆ ಬೇಗನೇ ದಾಟಿಬಿಡುವನು ॥ ೩೦ ॥

***ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ದಶಮೋಽಧ್ಯಾಯಃ ॥ ೧೦ ॥**



# ಹನ್ನೊಂದನೆಯ ಅಧ್ಯಾಯ

## ಸ್ವಾಯಂಭುವ ಮನುವು ಯುದ್ಧವನ್ನು ನಿಲ್ಲಿಸುವಂತೆ ಧ್ರುವನಿಗೆ ಆದೇಶ ನೀಡಿದುದು

*ಮೈತ್ರೇಯ ಉವಾಚ*

ನಿಶಮ್ಯ ಗದತಾಮೇವಮೃಷೀಣಾಂ ಧನುಷಿ ಧ್ರುವಃ ।
ಸಂದಧೇಽಸ್ತ್ರಮುಪಸ್ಪೃಶ್ಯ ಯನ್ನಾರಾಯಣನಿರ್ಮಿತಮ್ ॥ ೧ ॥

ಸಂಧೀಯಮಾನ ಏತಸ್ಮಿನ್ಮಾಯಾ ಗುಹ್ಯಕನಿರ್ಮಿತಾಃ ।
ಕ್ಷಿಪ್ರಂ ವಿನೇಶುರ್ವಿದುರ ಕ್ಲೇಶಾ ಜ್ಞಾನೋದಯೇ ಯಥಾ ॥ ೨ ॥

ತಸ್ಯಾರ್ಷಾಸ್ತ್ರಂ ಧನುಷಿ ಪ್ರಯುಂಜತಾ
ಸುವರ್ಣಪುಂಖಾಃ ಕಲಹಂಸವಾಸಸಃ ।
ವಿನಿಃಸೃತಾ ಆವಿವಿಶುರ್ದ್ವಿಷದ್ಬಲಂ
ಯಥಾ ವನಂ ಭೀಮರವಾಃ ಶಿಖಂಡಿನಃ ॥ ೩ ॥

**ಶ್ರೀಮೈತ್ರೇಯ ಮಹರ್ಷಿಗಳು ಹೇಳುತ್ತಾರೆ** - ಎಲೈ ವಿದುರನೇ! ಋಷಿಗಳು ಹೀಗೆ ಹೇಳಿದುದನ್ನು ಕೇಳಿ ಮಹಾರಾಜಾ ಧ್ರುವನು ಶುದ್ಧಾಚಮನಮಾಡಿ ಶ್ರೀಮನ್ನಾರಾಯಣನು ನಿರ್ಮಿಸಿದ ನಾರಾಯಣಾಸ್ತ್ರವನ್ನು ಧನುಸ್ಸಿಗೆ ಹೂಡಿದನು. ॥ ೧ ॥ ನಾರಾಯಣಾಸ್ತ್ರವನ್ನು ಸಂಧಾನಮಾಡುತ್ತಲೇ - ಜ್ಞಾನೋದಯ ವಾಗುತ್ತಲೇ ಅವಿದ್ಯೆಯೇ ಮುಂತಾದ ಎಲ್ಲ ಕ್ಲೇಶಗಳು ನಾಶ ಹೊಂದುವಂತೆ ಯಕ್ಷರು ರಚಿಸಿದ ನಾನಾ ಮಾಯೆಗಳೆಲ್ಲ ಕಣ್ಮರೆಯಾದುವು. ॥ ೨ ॥ ನಾರಾಯಣ ಋಷಿಯಿಂದ ಆವಿಷ್ಕೃತವಾದ ಆ ಅಸ್ತ್ರವನ್ನು ಧನುಸ್ಸಿಗೆ ಸಂಧಾನಮಾಡಿದೊಡನೆಯೇ ಅದರಿಂದ ರಾಜಹಂಸದ ಗರಿಗಳಂತೆ ಚಿನ್ನದ ಗರಿಗಳಿಂದ ಕೂಡಿದ ತೀಕ್ಷ್ಣವಾದ ಬಾಣಗಳು ಹೊರಬಂದು ನವಿಲುಗಳು ಕೇಕೆಹಾಕುತ್ತಾ ಅರಣ್ಯಕ್ಕೆ ನುಗ್ಗುವಂತೆ ಭಯಂಕರವಾಗಿ ಶಬ್ದಮಾಡುತ್ತಾ ಶತ್ರುಸೈನ್ಯವನ್ನು ಹೊಕ್ಕವು. ॥ ೩ ॥

ತ್ರೈಸ್ರಿಗ್ಮಧಾರ್ಯೈಃ ಪ್ರಧನೇ ಶಿಲೀಮುಖೈ-
ರಿತಸ್ತತಃ ಪುಣ್ಯಜನಾ ಉಪದ್ರುತಾಃ ।
ತಮಭ್ಯಧಾವನ್ಕುಪಿತಾ ಉದಾಯುಧಾಃ
ಸುಪರ್ಣಮುನ್ನದ್ಧಫಣಾ ಇವಾಹಯಃ ॥ ೪ ॥

ಸ ತಾನ್ಪೃಷತ್ಕೈರಭಿಧಾವತೋ ಮೃಧೇ
ನಿಕೃತ್ತಬಾಹೂರುಶಿರೋಧರೋದರಾನ್ ।
ನಿನಾಯ ಲೋಕಂ ಪರಮರ್ಕಮಂಡಲಂ
ವ್ರಜಂತಿ ನಿರ್ಭಿದ್ಯ ಯಮೂರ್ಧ್ವರೇತಸಃ ॥ ೫ ॥

ತಾನ್ ಹನ್ಯಮಾನಾನಭಿವೀಕ್ಷ್ಯ ಗುಹ್ಯಕಾ-
ನನಾಗಸಶ್ಚಿತ್ರರಥೇನ ಭೂರಿಶಃ ।
ಔತ್ತಾನಪಾದಿಂ ಕೃಪಯಾ ಪಿತಾಮಹೋ
ಮನುರ್ಜಗಾದೋಪಗತಃ ಸಹರ್ಷಿಭಿಃ ॥ ೬ ॥

ಮನುರುವಾಚ

ಅಲಂ ವತ್ಸಾತಿರೋಷೇಣ ತಮೋದ್ವಾರೇಣ ಪಾಪ್ಮನಾ ।
ಯೇನ ಪುಣ್ಯಜನಾನೇತಾನವಧೀಸ್ತ್ವಮನಾಗಸಃ
॥ ೭ ॥

ನಾಸ್ಮತ್ಕುಲೋಚಿತಂ ತಾತ ಕರ್ಮೈತತ್ಸದ್ವಿಗರ್ಹಿತಮ್ ।
ವಧೋ ಯದುಪದೇವಾನಾಮಾರಬ್ಧಸ್ತೇಽಕೃತೈನಸಾಮ್
॥ ೮ ॥

ನನ್ವೇಕಸ್ಯಾಪರಾಧೇನ ಪ್ರಸಂಗಾದ್ಬಹವೋ ಹತಾಃ ।
ಭ್ರಾತುರ್ವಧಾಭಿತಪ್ತೇನ ತ್ವಯಾಂಗ ಭ್ರಾತೃವತ್ಸಲ
॥ ೯ ॥

ನಾಯಂ ಮಾರ್ಗೋ ಹಿ ಸಾಧೂನಾಂ
ಹೃಷೀಕೇಶಾನುವರ್ತಿನಾಮ್ ।
ಯದಾತ್ಮಾನಂ ಪರಾಗ್ಗೃಹ್ಯ
ಪಶುವದ್ಭೂತವೈಶಸಮ್ ॥ ೧೦ ॥

ಸರ್ವಭೂತಾತ್ಮಭಾವೇನ ಭೂತಾವಾಸಂ ಹರಿಂ ಭವಾನ್ ।
ಆರಾಧ್ಯಾಪ ದುರಾರಾಧ್ಯಂ ವಿಷ್ಣೋಸ್ತತ್ಪರಮಂ ಪದಮ್
॥ ೧೧ ॥

ಸ ತ್ವಂ ಹರೇರನುಧ್ಯಾತಸ್ತತ್ಪುಂಸಾಮಪಿ ಸಮ್ಮತಃ ।
ಕಥಂ ತ್ವವದ್ಯಂ ಕೃತವಾನನುಶಿಕ್ಷನ್ಸತಾಂ ವ್ರತಮ್
॥ ೧೨ ॥

ತಿತಿಕ್ಷಯಾ ಕರುಣಯಾ ಮೈತ್ರ್ಯಾ ಚಾಖಿಲಜಂತುಷು ।
ಸಮತ್ವೇನ ಚ ಸರ್ವಾತ್ಮಾ ಭಗವಾನ್ ಸಂಪ್ರಸೀದತಿ
॥ ೧೩ ॥

ಹರಿತವಾದ ಆ ಬಾಣಗಳು ಶತ್ರುಗಳನ್ನು ಬಹಳವಾಗಿ ಉಪದ್ರವಗೊಳಿಸಿದವು. ಆಗ ರಣಾಂಗಣದಲ್ಲಿ ಅನೇಕ ಯಕ್ಷರು ಕುಪಿತರಾಗಿ ಅಸ್ತ್ರ-ಶಸ್ತ್ರಗಳನ್ನು ಸಿದ್ಧಪಡಿಸಿಕೊಂಡು ಗರುಡನು ಕೆಣಕಿದಾಗ ದೊಡ್ಡ-ದೊಡ್ಡ ಸರ್ಪಗಳು ಹೆಡೆಗಳನ್ನು ಬಿಚ್ಚಿಕೊಂಡು ಅದರ ಕಡೆಗೆ ಓಡುವಂತೆ ನಾನಾಕಡೆಗಳಿಂದ ಧ್ರುವನ ಮೇಲೆ ಮುತ್ತಿಗೆ ಹಾಕಿದರು. ॥ ೪ ॥ ಹೀಗೆ ಮುಂದಕ್ಕೆ ಬರುತ್ತಿರುವ ಯಕ್ಷರನ್ನು ನೋಡಿ ಧ್ರುವನು ತನ್ನ ಬಾಣಗಳಿಂದ ಅವರ ಭುಜಗಳನ್ನೂ, ಮೊಣಕಾಲುಗಳನ್ನೂ, ಹೆಗಲು-ಹೊಟ್ಟೆಯೇ ಮುಂತಾದ ಅಂಗೋಪಾಂಗಗಳನ್ನು ಕತ್ತರಿಸಿ ಊರ್ಧ್ವರೇತಸ್ಕರಾದ ಮುನಿಗಳು ಸೂರ್ಯಮಂಡಲವನ್ನು ಭೇದಿಸಿಕೊಂಡು ಹೋಗುವಂತೆ – ಅವರೆಲ್ಲರನ್ನು ಸರ್ವಶ್ರೇಷ್ಠಲೋಕ (ಸತ್ಯಲೋಕ)ಕ್ಕೆ ಕಳಿಸಿಕೊಟ್ಟನು. ॥ ೫ ॥ ವಿಚಿತ್ರವಾದ ರಥವನ್ನು ಏರಿದ್ದ ಧ್ರುವನು ನಿರಪರಾಧಿಗಳಾದ ಯಕ್ಷರನ್ನು ಕೊಲ್ಲುತ್ತಿರುವುದನ್ನು ಕಂಡು ಆತನ ಪಿತಾಮಹನಾದ ಸ್ವಾಯಂಭುವಮನುವಿಗೆ ಅವರ ಮೇಲೆ ಕನಿಕರ ಉಂಟಾಯಿತು. ಅವನು ಅನೇಕ ಮಹರ್ಷಿಗಳೊಡನೆ ಅಲ್ಲಿಗೆ ಬಂದು ತನ್ನ ಮೊಮ್ಮಗನಿಗೆ ಹೀಗೆ ತಿಳುವಳಿಕೆ ನೀಡಿದರು. ॥ ೬ ॥

**ಮನುವು ಹೇಳಿದನು** – ಮಗು, ಧ್ರುವನೇ ! ಸಾಕು-ಸಾಕು ! ಹೀಗೆ ಹೆಚ್ಚಾದ ಕ್ರೋಧವನ್ನು ತೋರುವುದು ತರವಲ್ಲ. ಈ ಕೋಪವು ನರಕದ ಬಾಗಿಲು ಆಗಿದೆ. ಅದಕ್ಕೆ ವಶನಾಗಿ ನೀನು ಈ ನಿರಪರಾಧಿ ಯಕ್ಷರನ್ನು ವಧಿಸಿಬಿಟ್ಟೆ ॥ ೭ ॥ ವತ್ಸ! ನೀನು ಯಾವ ಅಪರಾಧವನ್ನು ಮಾಡದೇ ಇರುವ ಯಕ್ಷರ ಸಂಹಾರಕ್ಕೆ ತೊಡಗಿರುವುದು ನಮ್ಮ ವಂಶಕ್ಕೆ ತಕ್ಕುದಾದ ಕರ್ಮವಲ್ಲ. ಸಾಧುಗಳು ಇದನ್ನು ಮೆಚ್ಚುವುದಿಲ್ಲ ॥ ೮ ॥ ಮಗು ! ನಿನಗೆ ತಮ್ಮನ ಮೇಲೆ ಅತಿಶಯವಾದ ಪ್ರೀತಿಯಿರುವುದು ಸರಿಯೆ. ಆದರೆ ಆತನ ವಧೆಯಿಂದ ಸಂತಾಪಗೊಂಡು ಒಬ್ಬ ಯಕ್ಷನು ಮಾಡಿದ ಅಪರಾಧಕ್ಕಾಗಿ ಬಹುಮಂದಿ ಯಕ್ಷರ ಹತ್ಯೆ ಮಾಡಿಬಿಟ್ಟೆಯಲ್ಲ! ॥ ೯ ॥ ಈ ಜಡವಾದ ದೇಹವನ್ನೇ ಆತ್ಮವೆಂದು ತಿಳಿದು ಇದಕ್ಕಾಗಿ ಪಶುಗಳಂತೆ ಪ್ರಾಣಿಹಿಂಸೆ ಮಾಡುವುದು ಭಗವದ್ಭಕ್ತರಾದ ಸಾಧುಗಳು ಅನುಸರಿಸುವ ಮಾರ್ಗವಲ್ಲ ॥ ೧೦ ॥ ಶ್ರೀಭಗವಂತನನ್ನು ಆರಾಧಿಸಿ ಅವನನ್ನು ಒಲಿಸಿಕೊಳ್ಳುವುದು ಬಹಳ ಕಠಿಣವಾದ ಕೆಲಸ. ಆದರೆ ನೀನು ಬಾಲ್ಯದಲ್ಲಿಯೇ ಸಮಸ್ತ ಭೂತಗಳಿಗೆ ಆಶ್ರಯನಾದ ಶ್ರೀಹರಿಯನ್ನು ಸರ್ವಭೂತಾತ್ಮಭಾವನೆಯಿಂದ ಆರಾಧಿಸಿ ಪರಮಪದವನ್ನು ಪಡೆದುಕೊಂಡಿರುವೆ. ॥ ೧೧ ॥ ನಿನ್ನನ್ನಾದರೋ ಆ ಪ್ರಭುವು ತನ್ನ ಪ್ರಿಯ ಭಕ್ತನೆಂದು ತಿಳಿದಿರುವನು. ನಿನ್ನನ್ನು ಪ್ರಭುವಿನ ಭಕ್ತರಾದ ಸಾಧುಗಳು ಆದರಿಸುತ್ತಾರೆ ಹಾಗೂ ನೀನು ಅವರಿಗೆ ಮಾರ್ಗದರ್ಶಕನೂ ಆಗಿರುವೆ. ಹೀಗಿದ್ದರೂ ನೀನು ಇಂತಹ ನಿಂದನೀಯ ಕರ್ಮವನ್ನು ಹೇಗೆ ಮಾಡಿದೆ ? ॥ ೧೨ ॥ ಸರ್ವಾತ್ಮನಾದ ಶ್ರೀಹರಿಯು – ತನಗಿಂತ ಹಿರಿಯವರಲ್ಲಿ ಸಹನೆತೋರುವುದು, ಕಿರಿಯವರಲ್ಲಿ ದಯೆತೋರುವುದು, ಸರಿಸಮಾನರಲ್ಲಿ ಸ್ನೇಹವನ್ನು ಬೆಳೆಸುವುದು ಹಾಗೂ ಸಮಸ್ತ ಜೀವರೊಡನೆ ಸಮತೆಯ ವರ್ತನೆಯಿಂದಲೇ ಪ್ರಸನ್ನನಾಗುವನು. ॥ ೧೩ ॥

ಸಂಪ್ರಸನ್ನೇ ಭಗವತಿ ಪುರುಷಃ ಪ್ರಾಕೃತೈರ್ಗುಣೈಃ ।
ವಿಮುಕ್ತೋ ಜೀವನಿರ್ಮುಕ್ತೋ ಬ್ರಹ್ಮನಿರ್ವಾಣಮೃಚ್ಛತಿ ॥ ೧೪ ॥

ಭೂತೈಃ ಪಂಚಭಿರಾರಬ್ಧೈ-
ರ್ಯೋಷಿತ್ಪುರುಷ ಏವ ಹಿ ।
ತಯೋರ್ವ್ಯವಾಯಾತ್ ಸಂಭೂತಿ-
ರ್ಯೋಷಿತ್ಪುರುಷಯೋರಿಹ ॥ ೧೫ ॥

ಏವಂ ಪ್ರವರ್ತತೇ ಸರ್ಗಃ ಸ್ಥಿತಿಃ ಸಂಯಮ ಏವ ಚ ।
ಗುಣವ್ಯತಿಕರಾದ್ರಾಜನ್ಮಾಯಯಾ ಪರಮಾತ್ಮನಃ ॥ ೧೬ ॥

ನಿಮಿತ್ತಮಾತ್ರಂ ತತ್ರಾಸೀನ್ನಿರ್ಗುಣಃ ಪುರುಷರ್ಷಭಃ ।
ವ್ಯಕ್ತಾವ್ಯಕ್ತಮಿದಂ ವಿಶ್ವಂ ಯತ್ರ ಭ್ರಮತಿ ಲೋಹವತ್ ॥ ೧೭ ॥

ಸ ಖಲ್ವಿದಂ ಭಗವಾನ್ ಕಾಲಶಕ್ತ್ಯಾ
ಗುಣಪ್ರವಾಹೇಣ ವಿಭಕ್ತವೀರ್ಯಃ ।
ಕರೋತ್ಯಕರ್ತೈವ ನಿಹಂತ್ಯಹಂತಾ
ಚೇಷ್ಟಾ ವಿಭೂಮ್ನಃ ಖಲು ದುರ್ವಿಭಾವ್ಯಾ ॥ ೧೮ ॥

ಸೋಽನಂತೋಽಂತಕರಃ ಕಾಲೋಽನಾದಿರಾದಿಕೃದವ್ಯಯಃ ।
ಜನಂ ಜನೇನ ಜನಯನ್ಮಾರಯನ್ಮೃತ್ಯುನಾಂತಕಮ್ ॥ ೧೯ ॥

ನ ವೈ ಸ್ವಪಕ್ಷೋಽಸ್ಯ ವಿಪಕ್ಷ ಏವ ವಾ
ಪರಸ್ಯ ಮೃತ್ಯೋರ್ವಿಶತಃ ಸಮಂ ಪ್ರಜಾಃ ।
ತಂ ಧಾವಮಾನಮನುಧಾವಂತ್ಯನೀಶಾ
ಯಥಾ ರಜಾಂಸ್ಯನಿಲಂ ಭೂತಸಂಘಾಃ ॥ ೨೦ ॥

ಆಯುಷೋಽಪಚಯಂ ಜಂತೋ-
ಸ್ತಥೈವೋಪಚಯಂ ವಿಭುಃ ।
ಉಭಾಭ್ಯಾಂ ರಹಿತಃ ಸ್ವಸ್ಥೋ
ದುಃಸ್ಥಸ್ಯ ವಿದಧಾತ್ಯಸೌ ॥ ೨೧ ॥

ಕೇಚಿತ್ಕರ್ಮ ವದಂತ್ಯೇನಂ ಸ್ವಭಾವಮಪರೇ ನೃಪ ।
ಏಕೇ ಕಾಲಂ ಪರೇ ದೈವಂ ಪುಂಸಃ ಕಾಮಮುತಾಪರೇ ॥ ೨೨ ॥

ಅವ್ಯಕ್ತಸ್ಯಾಪ್ರಮೇಯಸ್ಯ ನಾನಾಶಕ್ತ್ಯುದಯಸ್ಯ ಚ ।
ನ ವೈ ಚಿಕೀರ್ಷಿತಂ ತಾತ ಕೋ ವೇದಾಥ ಸ್ವಸಂಭವಮ್ ॥ ೨೩ ॥

ಪ್ರಭುವು ಪ್ರಸನ್ನನಾದ ಪುರುಷನು ಪ್ರಾಕೃತಗುಣಗಳಿಂದ ಮತ್ತು ಅವುಗಳ ಕಾರ್ಯರೂಪವಾದ ಲಿಂಗಶರೀರದಿಂದ ಬಿಡುಗಡೆಹೊಂದಿ ಪರಮಾನಂದಸ್ವರೂಪ ನಾದ ಬ್ರಹ್ಮಪದವನ್ನು ಹೊಂದುವನು. ॥ ೧೪ ॥

ಮಗು ಧ್ರುವನೇ! ದೇಹವೇ ಮುಂತಾದ ರೂಪದಲ್ಲಿ ಪರಿಣಾಮಹೊಂದಿರುವ ಪಂಚಭೂತಗಳಿಂದಲೇ ಸ್ತ್ರೀ-ಪುರುಷರು ಹುಟ್ಟುತ್ತಾರೆ ಮತ್ತು ಅವರ ಪರಸ್ಪರ ಸೇರುವಿಕೆಯಿಂದ ಬೇರೆ ಸ್ತ್ರೀ-ಪುರುಷರು ಉತ್ಪನ್ನರಾಗುತ್ತಾರೆ. ॥ ೧೫ ॥ ಹೀಗೆ ಶ್ರೀಭಗವಂತನ ಮಾಯೆಯಿಂದ ಸತ್ತ್ವಾದಿಗುಣಗಳಲ್ಲಿ ಉಂಟಾಗುವ ವೈಷಮ್ಯದಿಂದಲೇ ಭೂತಗಳಿಂದ ಶರೀರಗಳ ರಚನೆಯಾಗುವಂತೆಯೇ ಅವುಗಳ ಸ್ಥಿತಿ ಮತ್ತು ಲಯಗಳೂ ಆಗುತ್ತವೆ. ॥ ೧೬ ॥ ಎಲೈ ಪುರುಷಶ್ರೇಷ್ಠನೇ! ಗುಣಾತೀತನಾದ ಪರಮಾತ್ಮನಾದರೋ ಇದರಲ್ಲಿ ಕೇವಲ ನಿಮಿತ್ತಮಾತ್ರನಾಗಿದ್ದಾನೆ. ಅವನ ಆಶ್ರಯದಿಂದಲೇ ಈ ಕಾರ್ಯಕಾರಣಾತ್ಮಕವಾದ ಜಗತ್ತು ಸೂಜಿಗಲ್ಲಿನ ಆಶ್ರಯದಿಂದ ಕಬ್ಬಿಣವು ಚಲಿಸುವಂತೆ ಸುತ್ತುತ್ತಿರುವುದು. ॥ ೧೭ ॥ ಕಾಲಶಕ್ತಿಯ ಮೂಲಕ ಕ್ರಮವಾಗಿ ಸತ್ತ್ವಾದಿಗುಣಗಳಲ್ಲಿ ಕ್ಷೋಭೆಯುಂಟಾದ್ದರಿಂದ ಲೀಲಾಮಯ ಭಗವಂತನ ಶಕ್ತಿಯೂ ಸೃಷ್ಟಿಯೇ ಮುಂತಾದ ರೂಪಗಳಲ್ಲಿ ವಿಭಜನೆ ಹೊಂದುತ್ತದೆ. ಆದ್ದರಿಂದ ಭಗವಂತನು ವಾಸ್ತವವಾಗಿ ಅಕರ್ತನಾಗಿದ್ದರೂ ಜಗತ್ತನ್ನು ಸೃಷ್ಟಿಸುತ್ತಾನೆ. ಸಂಹಾರಕನಲ್ಲದಿದ್ದರೂ ಸಂಹಾರ ಮಾಡುತ್ತಾನೆ. ನಿಜವಾಗಿ ಅನಂತನಾದ ಆ ಪ್ರಭುವಿನ ಲೀಲೆಯು ಅತ್ಯಂತ ಅಚಿಂತ್ಯವಾಗಿದೆ. ॥ ೧೮ ॥ ಧ್ರುವನೇ! ಕಾಲಸ್ವರೂಪನಾದ ಅವ್ಯಯ ಪರಮಾತ್ಮನೇ ತಾನು ಅಂತರಹಿತನಾಗಿದ್ದರೂ ಜಗತ್ತನ್ನು ಅಂತ್ಯಗೊಳಿಸುವವನಾಗಿದ್ದಾನೆ. ಅನಾದಿಯಾಗಿದ್ದರೂ ಎಲ್ಲರ ಆದಿಕರ್ತ್ಯವಾಗಿದ್ದಾನೆ. ಆತನೇ ಒಂದು ಜೀವದಿಂದ ಮತ್ತೊಂದು ಜೀವವನ್ನು ಹುಟ್ಟಿಸಿ ಜಗತ್ತನ್ನು ಸೃಷ್ಟಿಸುತ್ತಾನೆ. ಮೃತ್ಯುವಿನ ಮೂಲಕ ಸಾಯುವವರನ್ನು ಸಂಹರಿಸುತ್ತಾನೆ. ॥ ೧೯ ॥ ಆ ಕಾಲ ಸ್ವರೂಪನಾದ ಭಗವಂತನು ಸಮಸ್ತ ಸೃಷ್ಟಿಯಲ್ಲಿ ಸಮಾನ ರೂಪದಿಂದ ಒಳಹೊಕ್ಕಿರುವನು. ಅವನಿಗೆ ಸ್ವಪಕ್ಷವೂ ಇಲ್ಲ, ಶತ್ರುಪಕ್ಷವೂ ಇಲ್ಲ. ಗಾಳಿಗೆ ಎದ್ದಿರುವ ಧೂಳು ಗಾಳಿಗೆ ಅಧೀನನಾಗಿ ಅದರ ಜೊತೆಗೆ ಹಾರಿಹೋಗುವಂತೆ, ಸಮಸ್ತ ಜೀವಿಗಳು ತಮ್ಮ-ತಮ್ಮ ಕರ್ಮಗಳಿಗೆ ಅಧೀನವಾಗಿ ಸುಖ-ದುಃಖಾದಿ ಫಲಗಳನ್ನು ಅನುಭವಿಸುತ್ತವೆ. ॥ ೨೦ ॥ ಸರ್ವಸಮರ್ಥನಾದ ಶ್ರೀಹರಿಯು ಕರ್ಮಬಂಧನದಿಂದ ಬಂಧಿತರಾದ ಜೀವಿಗಳ ಆಯುಸ್ಸಿನ ವೃದ್ಧಿ-ಕ್ಷಯದ ವಿಧಾನವನ್ನು ಮಾಡುತ್ತಾನೆ. ತಾನು ಇವೆರಡರಿಂದಲೂ ರಹಿತನಾಗಿ ಸ್ವಸ್ವರೂಪದಲ್ಲಿ ನೆಲೆಗೊಂಡಿದ್ದಾನೆ. ॥ ೨೧ ॥ ರಾಜನೇ! ಈ ಪರಮಾತ್ಮನನ್ನೇ ಮೀಮಾಂಸಕರು ಕರ್ಮವೆಂದೂ, ಚಾರ್ವಾಕರು ಸ್ವಭಾವವೆಂದೂ, ವೈಶೇಷಿಕರು ಕಾಲನೆಂದು, ಜೋತಿಷ್ಕರು ಅದೃಷ್ಟ (ದೈವ)ವೆಂದೂ, ಕಾಮಶಾಸ್ತ್ರದವರು ಕಾಮವೆಂದೂ ಕರೆಯುತ್ತಾರೆ. ॥ ೨೨ ॥ ಅವನು ಯಾವುದೇ ಇಂದ್ರಿಯಕ್ಕೂ, ಪ್ರಮಾಣಕ್ಕೂ ವಿಷಯನಾಗಿರುವುದಿಲ್ಲ. ಮಹತ್ತೇ ಮುಂತಾದ ಶಕ್ತಿಗಳೂ ಕೂಡ ಅವನಿಂದಲೇ

ನ ಚೈತೇ ಪುತ್ರಕ ಭ್ರಾತುರ್ಹಂತಾರೋ ಧನದಾನುಗಾಃ ।
ವಿಸರ್ಗಾದಾನಯೋಸ್ತಾತ ಪುಂಸೋ ದೈವಂ ಹಿ ಕಾರಣಮ್
॥ ೨೪ ॥

ಸ ಏವ ವಿಶ್ವಂ ಸೃಜತಿ ಸ ಏವಾವತಿ ಹಂತಿ ಚ ।
ಅಥಾಪಿ ಹ್ಯನಹಂಕಾರಾನ್ನಾಜ್ಯತೇ ಗುಣಕರ್ಮಭಿಃ
॥ ೨೫ ॥

ಏಷ ಭೂತಾನಿ ಭೂತಾತ್ಮಾ ಭೂತೇಶೋ ಭೂತಭಾವನಃ ।
ಸ್ವಶಕ್ತ್ಯಾ ಮಾಯಯಾ ಯುಕ್ತಃ ಸೃಜತ್ಯತ್ತಿ ಚ ಪಾತಿ ಚ
॥ ೨೬ ॥

ತಮೇವ ಮೃತ್ಯುಮಮೃತಂ ತಾತ ದೈವಂ
ಸರ್ವಾತ್ಮನೋಪೇಹಿ ಜಗತ್ಪರಾಯಣಮ್ ।
ಯಸ್ಮೈ ಬಲಿಂ ವಿಶ್ವಸೃಜೋ ಹರಂತಿ
ಗಾವೋ ಯಥಾ ವೈ ನಸಿ ದಾಮಯಂತ್ರಿತಾಃ ॥೨೭ ॥

ಯಃ ಪಂಚವರ್ಷೋ ಜನನೀಂ ತ್ವಂ ವಿಹಾಯ
ಮಾತುಃ ಸಪತ್ನ್ಯಾ ವಚಸಾ ಭಿನ್ನಮರ್ಮಾ ।
ವನಂ ಗತಸ್ತಪಸಾ ಪ್ರತ್ಯಗಕ್ಷ-
ಮಾರಾಧ್ಯ ಲೇಭೇ ಮೂರ್ಧ್ನಿ ಪದಂ ತ್ರಿಲೋಕ್ಯಾಃ ॥೨೮ ॥

ತಮೇನಮಂಗಾತ್ಮನಿ ಮುಕ್ತವಿಗ್ರಹೇ
ವ್ಯಪಾಶ್ರಿತಂ ನಿರ್ಗುಣಮೇಕಮಕ್ಷರಮ್ ।
ಆತ್ಮಾನಮನ್ವಿಚ್ಛ ವಿಮುಕ್ತಮಾತ್ಮದೃಗ್
ಯಸ್ಮಿನ್ನಿದಂಭೇದಮಸತ್ಪ್ರತೀಯತೇ ॥ ೨೯ ॥

ತ್ವಂ ಪ್ರತ್ಯಗಾತ್ಮನಿ ತದಾ ಭಗವತ್ಯನಂತ
ಆನಂದಮಾತ್ರ ಉಪಪನ್ನ ಸಮಸ್ತಶಕ್ತೌ ।
ಭಕ್ತಿಂ ವಿಧಾಯ ಪರಮಾಂ ಶನಕೈರವಿದ್ಯಾ-
ಗ್ರಂಥಿಂ ವಿಭೇತ್ಸ್ಯಸಿ ಮಮಾಹಮಿತಿ ಪ್ರರೂಢಮ್ ॥ ೩೦ ॥

ಸಂಯಚ್ಛ ರೋಷಂ ಭದ್ರಂ ತೇ ಪ್ರತೀಪಂ ಶ್ರೇಯಸಾಂ ಪರಮ್ ।
ಶ್ರುತೇನ ಭೂಯಸಾ ರಾಜನ್ನಗದೇನ ಯಥಾऽऽಮಯಮ್
॥ ೩೧ ॥

ಯೇನೋಪಸೃಷ್ಟಾತ್ಪುರುಷಾಲ್ಲೋಕ ಉದ್ವಿಜತೇ ಭೃಶಮ್ ।
ನ ಬುಧಸ್ತದ್ವಶಂ ಗಚ್ಛೇದಿಚ್ಛನ್ನಭಯಮಾತ್ಮನಃ
॥ ೩೨ ॥

ಪ್ರಕಟಗೊಂಡಿವೆ. ಅವನು ಏನು ಮಾಡಲು ಬಯಸುತ್ತಿರುವನೋ ಎಂಬುದನ್ನು ಜಗತ್ತಿನಲ್ಲಿ ಯಾರೂ ಅರಿಯರು. ಹೀಗಿರುವಾಗ ಎಲ್ಲಕ್ಕೂ ಮೂಲಕಾರಣನಾದ ಆ ಪ್ರಭುವನ್ನು ಹೇಗೆ ಅರಿಯ ಬಲ್ಲರು ! ॥ ೨೩ ॥

ಮಗು ! ಕುಬೇರನ ಈ ಅನುಚರರು ನಿನ್ನ ತಮ್ಮನನ್ನು ವಾಸ್ತವ ವಾಗಿ ಕೊಂದವರಲ್ಲ. ಏಕೆಂದರೆ, ಮನುಷ್ಯನ ಜನ್ಮ-ಮರಣದ ನಿಜವಾದ ಕಾರಣ ಈಶ್ವರನೇ ಆಗಿರುವನು. ॥ ೨೪ ॥ ಆತ ನೊಬ್ಬನೇ ಪ್ರಪಂಚವನ್ನು ಸೃಷ್ಟಿಸುತ್ತಾನೆ, ಪಾಲಿಸುತ್ತಾನೆ, ನಾಶ ಗೊಳಿಸುತ್ತಾನೆ; ಆದರೆ ಅವನು ಅಹಂಕಾರರಹಿತನಾಗಿರುವುದ ರಿಂದ ಇದರ ಗುಣ-ಕರ್ಮ ಅವನಿಗೆ ಅಂಟುವುದಿಲ್ಲ. ॥ ೨೫ ॥ ಅವನು ಸಮಸ್ತ ಪ್ರಾಣಿಗಳ ಅಂತರಾತ್ಮನೂ, ನಿಯಾಮಕನೂ, ರಕ್ಷಕನೂ ಆಗಿರುವ ಆ ಪ್ರಭುವೇ ತನ್ನ ಮಾಯಾಶಕ್ತಿಯಿಂದ ಕೂಡಿಕೊಂಡು ಸಮಸ್ತ ಜೀವಿಗಳ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುತ್ತಾನೆ. ॥ ೨೬ ॥ ಮೂಗುದಾರ ಹಾಕಿದ ಎತ್ತುಗಳು ತನ್ನ ಯಜಮಾನನ ಹೊರೆಯನ್ನು ಹೊರುವಂತೆ ಜಗತ್ತಿನ ಸೃಷ್ಟಿಮಾಡುವ ಬ್ರಹ್ಮಾದಿದೇವತೆಗಳು ನಾಮ-ರೂಪವೆಂಬ ಹಗ್ಗದಿಂದ ಬಂಧಿ ತರಾಗಿ ಅವನ ಆಜ್ಞೆಯನ್ನೇ ಪಾಲಿಸುತ್ತಾರೆ. ಅವನು ಭಕ್ತರಲ್ಲದ ವರಿಗೆ ಮೃತ್ಯುರೂಪನೂ, ಭಕ್ತರಾದವರಿಗೆ ಅಮೃತರೂಪನೂ ಆಗಿರುವನು. ಇಡೀ ಜಗತ್ತಿಗೆ ಏಕಮಾತ್ರ ಆಶ್ರಯನೂ ಅವನೇ ಆಗಿರುವನು. ಮಗೂ ! ನೀನು ಎಲ್ಲ ವಿಧದಿಂದ ಆ ಪರಮಾತ್ಮನನ್ನೇ ಶರಣುಹೊಂದು. ॥ ೨೭ ॥ ನೀನು ಐದನೇ ವಯಸ್ಸಿನಲ್ಲೇ ಮಲತಾಯಿಯ ವಾಗ್ಬಾಣಗಳಿಂದ ಮನನೊಂದು ತಾಯಿಯನ್ನು ಬಿಟ್ಟು ವನಕ್ಕೆ ಹೊರಟುಹೋದೆ. ಅಲ್ಲಿ ತಪಸ್ಸಿನ ಮೂಲಕ ಯಾವ ಹೃಷೀಕೇಶ ಭಗವಂತನನ್ನು ಆರಾಧಿಸಿ ನೀನು ತ್ರಿಲೋಕದಿಂದಲೂ ಮೇಲಿನ ಧ್ರುವಪದವನ್ನು ಪಡೆದುಕೊಂಡೆಯೋ ಮತ್ತು ಯಾರು ನಿನ್ನ ವೈರಭಾವರಹಿತವಾದ ಸರಳ ಹೃದಯದಲ್ಲಿ ವಾತ್ಸಲ್ಯದಿಂದ ವಿಶೇಷವಾಗಿ ವಿರಾಜಿಸುತ್ತಿದ್ದಾನೋ ಅಂತಹ ಗುಣಾತೀತನೂ, ಅದ್ವಿತೀಯನೂ, ಅವಿನಾಶಿಯೂ, ನಿತ್ಯಮುಕ್ತನೂ ಆದ ಪರ ಮಾತ್ಮನನ್ನು ಅಧ್ಯಾತ್ಮದೃಷ್ಟಿಯಿಂದ ನಿನ್ನ ಅಂತಃಕರಣದಲ್ಲಿ ಹುಡುಕುವವನಾಗು. ಅವನಲ್ಲಿ ವಾಸ್ತವವಾಗಿ ಇಲ್ಲದಿದ್ದರೂ ಈ ಭೇದರೂಪವಾದ ಪ್ರಪಂಚವು ತೋರಿಬರುತ್ತಿದೆ. ॥ ೨೮-೨೯॥ ಹೀಗೆ ಮಾಡುವುದರಿಂದ ಸರ್ವಶಕ್ತಿಸಂಪನ್ನನೂ, ಪರಮಾನಂದ ಸ್ವರೂಪನೂ, ಸರ್ವಾಂತರ್ಯಾಮಿಯೂ ಆಗಿರುವ ಶ್ರೀಭಗವಂತ ನಾದ ಅನಂತನಲ್ಲಿ ನಿನಗೆ ದೃಢವಾದ ಭಕ್ತಿಯುಂಟಾಗುವುದು. ಅದರ ಪ್ರಭಾವದಿಂದ ನೀನು ಅಹಂಕಾರ-ಮಮಕಾರರೂಪದಲ್ಲಿ ರುವ ದೃಢವಾದ ಅವಿದ್ಯೆಯ ಗಂಟನ್ನು ಕತ್ತರಿಸಿಕೊಳ್ಳುವೆ. ॥ ೩೦ ॥

ರಾಜನೇ ! ಔಷಧಗಳಿಂದ ರೋಗವನ್ನು ಶಮನಗೊಳಿಸಿ ಕೊಳ್ಳುವಂತೆ ನಾನು ಮಾಡಿರುವ ಉಪದೇಶದ ಕುರಿತು ವಿಚಾರ ಮಾಡಿ ನಿನ್ನ ಕ್ರೋಧವನ್ನು ಶಾಂತಗೊಳಿಸಿಕೋ. ಕ್ರೋಧವು ಎಲ್ಲ ಶ್ರೇಯಸ್ಸುಗಳಿಗೂ ವಿರೋಧಿಯಾದುದು. ಭಗವಂತನು ನಿನಗೆ ಮಂಗಳವನ್ನುಂಟುಮಾಡಲಿ. ॥ ೩೧ ॥ ಕ್ರೋಧವಶನಾದ ಮನುಷ್ಯ ನನ್ನು ಕಂಡರೆ ಎಲ್ಲರಿಗೂ ಭಯವುಂಟಾಗುವುದು. ಆದ್ದರಿಂದ 'ತನ್ನಿಂದ ಯಾವ ಪ್ರಾಣಿಗೂ ಭಯ ಉಂಟಾಗಬಾರದು ಮತ್ತು

ಹೇಲನಂ ಗಿರಿಶಭ್ರಾತುರ್ಧನದಸ್ಯ ತ್ವಯಾ ಕೃತಮ್ ।
ಯಜ್ಜಘ್ನಿವಾನ್ ಪುಣ್ಯಜನಾನ್ ಭ್ರಾತೃಘ್ನಾನಿತ್ಯಮರ್ಷಿತಃ ॥ ೩೩ ॥

ತಂ ಪ್ರಸಾದಯ ವತ್ಸಾಶು ಸಂನತ್ಯಾ ಪ್ರಶ್ರಯೋಕ್ತಿಭಿಃ ।
ನ ಯಾವನ್ಮಹತಾಂ ತೇಜಃ ಕುಲಂ ನೋಽಭಿಭವಿಷ್ಯತಿ ॥ ೩೪ ॥

ಏವಂ ಸ್ವಾಯಂಭುವಃ ಪೌತ್ರಮನುಶಾಸ್ಯ ಮನುರ್ಧ್ರುವಮ್ ।
ತೇನಾಭಿವಂದಿತಃ ಸಾಕಮೃಷಿಭಿಃ ಸ್ವಪುರಂ ಯಯೌ ॥ ೩೫ ॥

ತನಗೂ ಯಾವ ಪ್ರಾಣಿಯಿಂದ ಭಯ ಉಂಟಾಗಬಾರದು' ಎಂದು ಬಯಸುವ ಬುದ್ಧಿವಂತನಾದವನು ಎಂದಿಗೂ ಕ್ರೋಧಕ್ಕೆ ವಶನಾಗಬಾರದು. ॥ ೩೨ ॥ 'ಇವರು ನನ್ನ ತಮ್ಮನನ್ನು ಕೊಂದು ಹಾಕಿದವರು' ಎಂದು ತಿಳಿದು ನೀನು ಇಷ್ಟೆಲ್ಲಾ ಯಕ್ಷರನ್ನು ಸಂಹಾರ ಮಾಡಿದೆ. ಇದರಿಂದ ಭಗವಾನ್ ಶಂಕರನ ಸಖನಾದ ಕುಬೇರನಲ್ಲಿ ಅಪರಾಧಮಾಡಿದಂತಾಗಿದೆ. ॥ ೩೩ ॥ ಆದುದರಿಂದ ಮಗು! ಮಹಾಪುರುಷರ ತೇಜಸ್ಸು ನಮ್ಮ ಕುಲವನ್ನು ಆಕ್ರಮಿಸಿಕೊಳ್ಳುವ ಮೊದಲೇ ನೀನು ವಿನಯಪೂರ್ವಕವಾಗಿ ಮಾತು, ವರ್ತನೆಯಿಂದ ಬೇಗನೇ ಆ ಕುಬೇರನನ್ನು ಪ್ರಸನ್ನಗೊಳಿಸಿಕೋ. ॥ ೩೪ ॥

ಹೀಗೆ ಸ್ವಾಯಂಭುವಮನುವು ತನ್ನ ಮೊಮ್ಮಗನಾದ ಧ್ರುವನಿಗೆ ತಿಳುವಳಿಕೆ ನೀಡಿದನು. ಆಗ ಧ್ರುವನು ಆತನಿಗೆ ನಮಸ್ಕರಿಸಿದನು. ಇದಾದ ಬಳಿಕ ಮನುವು ಮಹರ್ಷಿಗಳೊಡನೆ ತನ್ನ ಲೋಕಕ್ಕೆ ಹೊರಟುಹೋದನು. ॥ ೩೫ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಏಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ಧ್ರುವನಿಗೆ ಕುಬೇರನಿಂದ ವರಪ್ರದಾನ – ಧ್ರುವನು ವಿಷ್ಣುಲೋಕವನ್ನು ಸೇರಿದುದು

*ಮೈತ್ರೇಯ ಉವಾಚ*

ಧ್ರುವಂ ನಿವೃತ್ತಂ ಪ್ರತಿಬುದ್ಧ್ಯ ವೈಶಸಾತ್
ಅಪೇತಮನ್ಯುಂ ಭಗವಾನ್ ಧನೇಶ್ವರಃ ।
ತತ್ರಾಗತಶ್ಚಾರಣಯಕ್ಷಕಿನ್ನರೈಃ
ಸಂಸ್ತೂಯಮಾನೋಽಭ್ಯವದತ್ಕೃತಾಂಜಲಿಮ್ ॥ ೧ ॥

*ಧನದ ಉವಾಚ*

ಭೋ ಭೋಃ ಕ್ಷತ್ರಿಯದಾಯಾದ ಪರಿತುಷ್ಟೋಽಸ್ಮಿ ತೇಽನಘ ।
ಯಸ್ತ್ವಂ ಪಿತಾಮಹಾದೇಶಾದ್ವೈರಂ ದುಸ್ತ್ಯಜಮತ್ಯಜಃ ॥ ೨ ॥

ನ ಭವಾನವಧೀದ್ಯಕ್ಷಾನ್ನ ಯಕ್ಷಾ ಭ್ರಾತರಂ ತವ ।
ಕಾಲ ಏವ ಹಿ ಭೂತಾನಾಂ ಪ್ರಭುರಪ್ಯಯಭಾವಯೋಃ ॥ ೩ ॥

ಅಹಂ ತ್ವಮಿತ್ಯಪಾರ್ಥಾ ಧೀರಜ್ಞಾನಾತ್ಪುರುಷಸ್ಯ ಹಿ ।
ಸ್ವಾಪ್ನೀವಾಭಾತ್ಯತದ್ಧ್ಯಾನಾದ್ಯಯಾ ಬಂಧವಿಪರ್ಯಯೌ ॥ ೪ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಧ್ರುವನ ಕೋಪವು ಶಾಂತವಾಗಿದೆ ಮತ್ತು ಯಕ್ಷವಧೆಯನ್ನು ನಿಲ್ಲಿಸಿರುವನೆಂದು ತಿಳಿದ ಭಗವಾನ್ ಕುಬೇರನು ಅಲ್ಲಿಗೆ ಬಂದನು. ಆಗ ಯಕ್ಷರು, ಚಾರಣರು, ಕಿನ್ನರರು ವೈಶ್ರವಣನನ್ನು ಸ್ತೋತ್ರ ಮಾಡುತ್ತಿದ್ದರು. ಅವನನ್ನು ನೋಡುತ್ತಲೇ ಧ್ರುವನು ಕೈಜೋಡಿಸಿ ನಿಂತುಕೊಂಡನು. ಆಗ ಕುಬೇರನು ಇಂತೆಂದನು – ॥ ೧ ॥

**ಶ್ರೀಕುಬೇರನು ಹೇಳಿದನು** – ಎಲೈ ಶುದ್ಧಾತ್ಮನಾದ ಕ್ಷತ್ರಿಯ ಶ್ರೇಷ್ಠನೇ! ನೀನು ನಿನ್ನ ತಾತನ ಉಪದೇಶದಂತೆ ಬಿಡಲು ಕಷ್ಟಕರವಾದ ವೈರವನ್ನು ಬಿಟ್ಟಿರುವೆ. ಇದರಿಂದ ನಾನು ನಿನ್ನ ಮೇಲೆ ತುಂಬಾ ಪ್ರಸನ್ನನಾಗಿರುವೆನು. ॥ ೨ ॥ ವಾಸ್ತವದಲ್ಲಿ ನೀನು ಯಕ್ಷರನ್ನು ಕೊಂದಿಲ್ಲ. ಯಕ್ಷರು ನಿನ್ನ ತಮ್ಮನನ್ನೂ ಕೊಂದಿಲ್ಲ. ಸಮಸ್ತ ಜೀವಿಗಳ ಉತ್ಪತ್ತಿ ಮತ್ತು ವಿನಾಶದ ಕಾರಣವಾದರೋ ಕಾಲವೊಂದೇ ಆಗಿದೆ. ॥ ೩ ॥ ಈ ನಾನು-ನೀನು ಮುಂತಾದ ಮಿಥ್ಯಾಬುದ್ಧಿಯಾದರೋ ಜೀವಿಗೆ ಅಜ್ಞಾನವಶದಿಂದ ಸ್ವಪ್ನದಂತೆ ಶರೀರಾದಿಗಳನ್ನೇ ಆತ್ಮನೆಂದು ತಿಳಿಯುವುದರಿಂದ ಉಂಟಾಗುತ್ತದೆ. ಇದರಿಂದ ಮನುಷ್ಯನಿಗೆ ಬಂಧನ ಹಾಗೂ ಸುಖ-ದುಃಖಾದಿ ವಿಪರೀತ ಅವಸ್ಥೆಗಳು ಉಂಟಾಗುವವು. ॥ ೪ ॥ ಧ್ರುವನೇ! ನೀನಿನ್ನು ಹೋಗು. ಭಗವಂತನು ನಿನಗೆ ಮಂಗಳವನ್ನು ಉಂಟುಮಾಡಲಿ. ಸಂಸಾರಬಂಧನದಿಂದ ಬಿಡುಗಡೆಹೊಂದಲು ನೀನು

ತದ್ಗಚ್ಛ ಧ್ರುವ ಭದ್ರಂ ತೇ ಭಗವಂತಮಧೋಕ್ಷಜಮ್ ।
ಸರ್ವಭೂತಾತ್ಮಭಾವೇನ ಸರ್ವಭೂತಾತ್ಮ ವಿಗ್ರಹಮ್ ॥ ೫ ॥

ಭಜಸ್ವ ಭಜನೀಯಾಂಘ್ರಿಮಭವಾಯ ಭವಚ್ಛಿದಮ್ ।
ಯುಕ್ತಂ ವಿರಹಿತಂ ಶಕ್ತ್ಯಾ ಗುಣಮಯ್ಯಾಽಽತ್ಮಮಾಯಯಾ ॥ ೬ ॥

ವೃಣೀಹಿ ಕಾಮಂ ನೃಪ ಯನ್ಮನೋಗತಂ
ಮತ್ತಸ್ತ್ವ ಮೌತ್ತಾನಪದೇಽವಿಶಂಕಿತಃ ।
ವರಂ ವರಾರ್ಹೋಽಂಬುಜನಾಭಪಾದಯೋ-
ರನಂತರಂ ತ್ವಾಂ ವಯಮಂಗ ಶುಶ್ರುಮ ॥ ೭ ॥

*ಮೈತ್ರೇಯ ಉವಾಚ*

ಸ ರಾಜರಾಜೇನ ವರಾಯ ಚೋದಿತೋ
ಧ್ರುವೋ ಮಹಾಭಾಗವತೋ ಮಹಾಮತಿಃ ।
ಹರೌ ಸ ವವ್ರೇಽಚಲಿತಾಂ ಸ್ಮೃತಿಂ ಯಯಾ
ತರತ್ಯಯತ್ನೇನ ದುರತ್ಯಯಂ ತಮಃ ॥ ೮ ॥

ತಸ್ಯ ಪ್ರೀತೇನ ಮನಸಾ ತಾಂ ದತ್ತ್ವೈಡವಿಡಸ್ತತಃ ।
ಪಶ್ಯತೋಽಂತರ್ದಧೇ ಸೋಽಪಿ ಸ್ವಪುರಂ ಪ್ರತ್ಯಪದ್ಯತ ॥ ೯ ॥

ಅಥಾಯಜತ ಯಜ್ಞೇಶಂ ಕ್ರತುಭಿರ್ಭೂರಿದಕ್ಷಿಣೈಃ ।
ದ್ರವ್ಯಕ್ರಿಯಾದೇವತಾನಾಂ ಕರ್ಮ ಕರ್ಮಫಲಪ್ರದಮ್ ॥ ೧೦ ॥

ಸರ್ವಾತ್ಮನ್ಯಚ್ಯುತೇಽಸರ್ವೇ ತೀವ್ರೌಘಾಂ ಭಕ್ತಿಮುದ್ವಹನ್ ।
ದದರ್ಶಾತ್ಮನಿ ಭೂತೇಷು ತಮೇವಾವಸ್ಥಿತಂ ವಿಭುಮ್ ॥ ೧೧ ॥

ತಮೇವಂ ಶೀಲಸಂಪನ್ನಂ ಬ್ರಹ್ಮಣ್ಯಂ ದೀನವತ್ಸಲಮ್ ।
ಗೋಪ್ತಾರಂ ಧರ್ಮಸೇತೂನಾಂ ಮೇನಿರೇ ಪಿತರಂ ಪ್ರಜಾಃ ॥ ೧೨ ॥

ಷಟ್‌ತ್ರಿಂಶದ್ವರ್ಷಸಾಹಸ್ರಂ ಶಶಾಸ ಕ್ಷಿತಿಮಂಡಲಮ್ ।
ಭೋಗೈಃ ಪುಣ್ಯಕ್ಷಯಂ ಕುರ್ವನ್ನ ಭೋಗೈರಶುಭಕ್ಷಯಮ್ ॥ ೧೩ ॥

ಏವಂ ಬಹುಸವಂ ಕಾಲಂ ಮಹಾತ್ಮಾ ವಿಚಲೇಂದ್ರಿಯಃ ।
ತ್ರಿವರ್ಗೌಪಯಿಕಂ ನೀತ್ವಾ ಪುತ್ರಾಯಾದಾನ್ನೃಪಾಸನಮ್ ॥ ೧೪ ॥

ಸರ್ವಜೀವಿಗಳಲ್ಲಿಯೂ ಸಮದೃಷ್ಟಿಯನ್ನಿಟ್ಟು ಸರ್ವಭೂತಾತ್ಮನಾದ ಭಗವಾನ್ ಶ್ರೀಹರಿಯನ್ನು ಭಜಿಸು. ಅವನೇ ಭವಬಂಧನವನ್ನು ಕತ್ತರಿಸುವವನು. ಜಗತ್ತಿನ ಉತ್ಪತ್ತಿ ಮುಂತಾದವುಗಳಿಗೆ ತನ್ನ ತ್ರಿಗುಣಾತ್ಮಕವಾದ ಮಾಯಾಶಕ್ತಿಯಿಂದ ಕೂಡಿಕೊಂಡಿದ್ದರೂ ವಾಸ್ತವವಾಗಿ ಅದರಿಂದ ರಹಿತನೇ ಆಗಿದ್ದಾನೆ. ಅವನ ಚರಣ ಕಮಲಗಳೇ ಎಲ್ಲರಿಗಾಗಿ ಭಜಿಸಲು ಯೋಗ್ಯವಾಗಿವೆ. ॥ ೫-೬ ॥ ಪ್ರಿಯ ನೃಪಾಲನೇ! ನೀನು ಸದಾ ಭಗವಾನ್ ಪದ್ಮನಾಭನ ಚರಣಕಮಲದ ಬಳಿಯೇ ಇರುವವನೆಂದು ನಾನು ಕೇಳಿರುವೆನು. ಆದ್ದರಿಂದ ನೀನು ಅವಶ್ಯವಾಗಿ ವರವನ್ನು ಪಡೆಯಲು ಯೋಗ್ಯ ನಾಗಿರುವೆ. ಯಾವ ಸಂಕೋಚವೂ ಇಲ್ಲದೆ, ನಿಃಶಂಕನಾಗಿ ನಿನಗೆ ಇಷ್ಟವಾದ ವರವನ್ನು ಕೇಳಿಕೊ. ॥ ೭ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ರಾಜ ರಾಜನಾದ ಕುಬೇರನು ವರವನ್ನು ಕೇಳುವಂತೆ ಧ್ರುವನನ್ನು ಒತ್ತಾಯಿಸಿದಾಗ ಮಹಾಭಾಗವತೋತ್ತಮನೂ, ಮಹಾ ಬುದ್ಧಿ ಶಾಲಿಯೂ ಆದ ಧ್ರುವನು 'ಶ್ರೀಹರಿಯ ಸ್ಮರಣೆಯು ನನಗೆ ಸದಾ ಸ್ಥಿರವಾಗಿರಲಿ' ಎಂಬ ವರವನ್ನು ಬೇಡಿದನು. ಅದರಿಂದಲೇ ಜನರು ದಾಟಲಶಕ್ಯವಾದ ಸಂಸಾರಸಾಗರವನ್ನು ಆಯಾಸವಿಲ್ಲದೆ ದಾಟಿಹೋಗುತ್ತಾರೆ. ॥ ೮ ॥ ಇಡವಿಡಾದೇವಿಯ ಪುತ್ರನಾದ ಕುಬೇರನು ಮನಸ್ಸಿನಲ್ಲಿ ತುಂಬಾ ಸಂತೋಷಗೊಂಡು ಧ್ರುವನಿಗೆ ಆತನು ಬೇಡಿದ್ದ ವರವನ್ನು ಅನುಗ್ರಹಿಸಿ ಅವನು ನೋಡುತ್ತಿರು ವಂತೆ ಅಂತರ್ಧಾನನಾದನು. ಇದಾದ ಬಳಿಕ ಧ್ರುವನು ತನ್ನ ರಾಜಧಾನಿಗೆ ಮರಳಿದನು. ॥ ೯ ॥ ತನ್ನ ನಗರಿಯಲ್ಲಿರುತ್ತಾ ಧ್ರುವಸಾರ್ವಭೌಮನು ಬಹುದಕ್ಷಿಣೆಗಳುಳ್ಳ ಅನೇಕ ಯಜ್ಞ ಗಳಿಂದ ಭಗವಾನ್ ಯಜ್ಞಪುರುಷನನ್ನು ಆರಾಧಿಸಿದನು. ಭಗ ವಂತನೇ ದ್ರವ್ಯ, ಕ್ರಿಯೆ, ದೇವತಾಸಂಬಂಧೀ ಸಮಸ್ತಕರ್ಮಗಳು, ಅವುಗಳ ಫಲವೂ ಆಗಿರುವನು ಹಾಗೂ ಕರ್ಮಫಲವನ್ನು ಕೊಡುವವನೂ ಅವನೇ ಆಗಿದ್ದಾನೆ. ॥ ೧೦ ॥ ಸರ್ವಾತ್ಮನೂ, ಸರ್ವೋಪಾಧಿರಹಿತನೂ ಆದ ಅಚ್ಯುತನಲ್ಲಿ ತೀವ್ರವಾಗಿ ಪ್ರವ ಹಿಸುವ ಭಕ್ತಿಯನ್ನಿಟ್ಟು ಆ ಭಕ್ತಶ್ರೇಷ್ಠನು ತನ್ನಲ್ಲಿಯೂ ಮತ್ತು ಸಮಸ್ತ ಪ್ರಾಣಿಗಳಲ್ಲಿಯೂ ಸರ್ವವ್ಯಾಪಕನಾದ ಶ್ರೀಹರಿಯೇ ವಿರಾಜ ಮಾನನಾಗಿರುವುದನ್ನು ನೋಡತೊಡಗಿದನು. ॥ ೧೧ ॥ ಧ್ರುವ ರಾಜನು ಅತ್ಯಂತ ವಿನಯಶೀಲನೂ, ಬ್ರಾಹ್ಮಣಭಕ್ತನೂ, ದೀನ ವತ್ಸಲನೂ, ಧರ್ಮಮರ್ಯಾದೆಯ ಸಂರಕ್ಷಕನೂ ಆಗಿದ್ದನು. ಅವನ ಪ್ರಜೆಗಳು ಆತನನ್ನು ಸಾಕ್ಷಾತ್ ತಮ್ಮ ತಂದೆಯಂತೆಯೇ ಭಾವಿಸುತ್ತಿದ್ದರು. ॥ ೧೨ ॥ ಹೀಗೆ ಅವನು ಬಗೆ-ಬಗೆಯಾದ ಐಶ್ವರ್ಯಭೋಗಗಳಿಂದ ಪುಣ್ಯವನ್ನೂ ಮತ್ತು ಫಲತ್ಯಾಗಪೂರ್ವಕ ವಾದ ಯಜ್ಞಾದಿಕರ್ಮಗಳ ಅನುಷ್ಠಾನದಿಂದ ಪಾಪವನ್ನೂ ಕಳೆದು ಕೊಳ್ಳುತ್ತಾ, ಮೂವತ್ತಾರುಸಾವಿರ ವರ್ಷಗಳ ಕಾಲ ಭೂಮಂಡಲ ವನ್ನು ಆಳಿದನು. ॥ ೧೩ ॥ ಜಿತೇಂದ್ರಿಯನಾದ ಆ ಮಹಾಪುರುಷ ಧ್ರುವನು ಇದೇ ರೀತಿಯಲ್ಲಿ ಧರ್ಮ, ಅರ್ಥ ಮತ್ತು ಕಾಮಗಳ ಸಂಗ್ರಹದಲ್ಲಿ ಬಹಳ ವರ್ಷಗಳು ಕಳೆದ ಬಳಿಕ ತನ್ನ ಪುತ್ರನಾದ ಉತ್ಕಲನಿಗೆ ರಾಜಸಿಂಹಾಸನವನ್ನು ಒಪ್ಪಿಸಿದನು. ॥ ೧೪ ॥

ಮನ್ಯಮಾನ ಇದಂ ವಿಶ್ವಂ ಮಾಯಾರಚಿತಮಾತ್ಮನಿ ।
ಅವಿದ್ಯಾರಚಿತಸ್ವಪ್ನಗಂಧರ್ವನಗರೋಪಮಮ್
॥ ೧೫ ॥

ಆತ್ಮಸ್ತ್ರ್ಯಪತ್ಯಸುಹೃದೋ ಬಲಮೃದ್ಧಕೋಶ-
ಮಂತಃಪುರಂ ಪರಿವಿಹಾರಭುವಶ್ಚ ರಮ್ಯಾಃ ।
ಭೂಮಂಡಲಂ ಜಲಧಿಮೇಖಲಮಾಕಲಯ್ಯ
ಕಾಲೋಪಸೃಷ್ಟಮಿತಿ ಸ ಪ್ರಯಯೌ ವಿಶಾಲಾಮ್ ॥ ೧೬ ॥

ತಸ್ಯಾಂ ವಿಶುದ್ಧಕರಣಃ ಶಿವವಾರ್ವಿಗಾಹ್ಯ
ಬದ್ಧ್ವಾಽಽಸನಂ ಜಿತಮರುನ್ಮನಸಾಹೃತಾಕ್ಷಃ ।
ಸ್ಥೂಲೇ ದಧಾರ ಭಗವತ್ಪ್ರತಿರೂಪ ಏತ-
ದ್ಧ್ಯಾಯಂಸ್ತದವ್ಯವಹಿತೋ ವ್ಯಸೃಜತ್ಸಮಾಧೌ ॥ ೧೭ ॥

ಭಕ್ತಿಂ ಹರೌ ಭಗವತಿ ಪ್ರವಹನ್ನಜಸ್ರ-
ಮಾನಂದಬಾಷ್ಪಕಲಯಾ ಮುಹುರರ್ದ್ಯಮಾನಃ ।
ವಿಕ್ಲಿದ್ಯಮಾನಹೃದಯಃ ಪುಲಕಾಚಿತಾಂಗೋ
ನಾತ್ಮಾನಮಸ್ಮರದಸಾವಿತಿ ಮುಕ್ತಲಿಂಗಃ ॥ ೧೮ ॥

ಸ ದದರ್ಶ ವಿಮಾನಾಗ್ರ್ಯಂ ನಭಸೋಽವತರದ್ಧ್ರುವಃ ।
ವಿಭ್ರಾಜಯದ್ದಶ ದಿಶೋ ರಾಕಾಪತಿಮಿವೋದಿತಮ್
॥ ೧೯ ॥

ತತ್ರಾನು ದೇವಪ್ರವರೌ ಚತುರ್ಭುಜೌ
ಶ್ಯಾಮೌ ಕಿಶೋರಾವರುಣಾಂಬುಜೇಕ್ಷಣೌ ।
ಸ್ಥಿತಾವವಷ್ಟಭ್ಯ ಗದಾಂ ಸುವಾಸಸೌ
ಕಿರೀಟಹಾರಾಂಗದಚಾರುಕುಂಡಲೌ ॥ ೨೦ ॥

ವಿಜ್ಞಾಯ ತಾವುತ್ತಮಗಾಯಕಿಂಕರಾ-
ವಭ್ಯುತ್ಥಿತಃ ಸಾಧ್ವಸವಿಸ್ಮೃತಕ್ರಮಃ ।
ನನಾಮ ನಾಮಾನಿ ಗೃಣನ್ಮಧುದ್ವಿಷಃ
ಪಾರ್ಷತ್ಪ್ರಧಾನಾವಿತಿ ಸಂಹತಾಂಜಲಿಃ ॥ ೨೧ ॥

ಈ ಸಮಸ್ತ ದೃಶ್ಯಪ್ರಪಂಚವನ್ನು ಅವಿದ್ಯೆಯಿಂದ ಉಂಟಾಗಿ ಸ್ವಪ್ನ ಮತ್ತು ಗಂಧರ್ವನಗರಿಯಂತೆ ಮಾಯೆಯಿಂದ ತನ್ನಲ್ಲೇ ಕಲ್ಪಿತವಾಗಿದೆ ಎಂದು ತಿಳಿದುಕೊಂಡು ಹಾಗೂ ಶರೀರ, ಪತ್ನೀ, ಪುತ್ರ, ಮಿತ್ರ, ಸೇನೆ, ತುಂಬಿದ ಭಂಡಾರ, ಅಂತಃಪುರ, ರಮಣೀಯ ಕ್ರೀಡಾಪ್ರದೇಶಗಳು ಮತ್ತು ಸಮುದ್ರಪರ್ಯಂತವಾದ ಭೂಮಂಡಲದ ಸಾಮ್ರಾಜ್ಯ – ಇವೆಲ್ಲವೂ ಕಾಲದ ದವಡೆಯಲ್ಲಿ ಸಿಕ್ಕಿಕೊಂಡಿದೆ ಎಂದು ಭಾವಿಸಿಕೊಂಡು ಆತನು ಎಲ್ಲವನ್ನು ತ್ಯಜಿಸಿ ಬದರಿಕಾಶ್ರಮಕ್ಕೆ ಹೊರಟುಹೋದನು. ॥ ೧೫-೧೬ ॥

ಅಲ್ಲಿ ಅವನು ಪವಿತ್ರ ಜಲದಲ್ಲಿ ಸ್ನಾನಮಾಡಿ ಇಂದ್ರಿಯಗಳನ್ನು ಪರಿಶುದ್ಧವಾಗಿಸಿಕೊಂಡನು. ಮತ್ತೆ ಸ್ಥಿರ-ಸುಖ ಆಸನದಲ್ಲಿ ಕುಳಿತು ಪ್ರಾಣಾಯಾಮದ ಮೂಲಕ ವಾಯುವನ್ನು ವಶಪಡಿಸಿಕೊಂಡನು. ಅನಂತರ ಮನಸ್ಸಿನಿಂದ ಇಂದ್ರಿಯಗಳನ್ನು ಬಾಹ್ಯ ವಿಷಯಗಳ ಕಡೆಯಿಂದ ಸೆಳೆದುಕೊಂಡು ಮನಸ್ಸನ್ನು ಭಗವಂತನ ಸ್ಥೂಲ ರೂಪದಲ್ಲಿ ಸ್ಥಿರಗೊಳಿಸಿದನು. ಆ ಸ್ಥೂಲರೂಪವನ್ನೇ ಚಿಂತನೆ ಮಾಡುತ್ತಾ ಸಮಾಧಿಸಿದ್ಧಿಯನ್ನು ಪಡೆಯಲು ಆಗ ಆ ಸ್ಥೂಲ ರೂಪವೂ ಚಿಂತನೆಯಿಂದ ಹೊರಟುಹೋಯಿತು. ॥ ೧೭ ॥ ಹೀಗೆ ಆತನೊಳಗೆ ಭಗವಂತನಾದ ಶ್ರೀಹರಿಯ ನಿರಂತರವಾದ ಭಕ್ತಿ ಪ್ರವಾಹವು ಹರಿಯುತ್ತಿದ್ದುದರಿಂದ ಆತನ ಕಣ್ಣುಗಳಿಂದ ಮತ್ತೆ-ಮತ್ತೆ ಆನಂದಬಾಷ್ಪಗಳು ಧಾರೆ-ಧಾರೆಯಾಗಿ ಸುರಿಯತೊಡಗಿದುವು. ಅದರಿಂದ ಅವನ ಹೃದಯ ಕರಗಿ ಶರೀರದಲ್ಲಿ ರೋಮಾಂಚನವುಂಟಾಯಿತು. ದೇಹಾಭಿಮಾನವು ಪೂರ್ಣವಾಗಿ ಕರಗಿಹೋದುದರಿಂದ ಅವನಿಗೆ 'ನಾನು ಧ್ರುವನಾಗಿದ್ದೇನೆ' ಎನ್ನುವ ಸ್ಮೃತಿಯೂ ಉಳಿಯಲಿಲ್ಲ. ॥ ೧೮ ॥

ಅದೇ ಸಮಯದಲ್ಲಿ ಆಕಾಶದಿಂದ ಒಂದು ಅತಿಸುಂದರವಾದ ವಿಮಾನವು ಇಳಿದುಬರುತ್ತಿರುವುದನ್ನು ಅವನು ನೋಡಿದನು. ಅದು ಹುಣ್ಣಿಮೆಯ ಚಂದ್ರನು ಆಗತಾನೇ ಉದಯಿಸಿದಂತೆ ತನ್ನ ಪ್ರಕಾಶದಿಂದ ಹತ್ತು ದಿಕ್ಕುಗಳನ್ನೂ ಬೆಳಗಿಸುತ್ತಿತ್ತು. ॥ ೧೯ ॥ ಅದರಲ್ಲಿ ಭಗವಂತನ ಪಾರ್ಷದರಿಬ್ಬರು ಗದೆಯನ್ನು ಊರಿಕೊಂಡು ನಿಂತಿದ್ದರು. ಅವರಿಗೆ ನಾಲ್ಕು ಭುಜಗಳಿದ್ದು, ಸುಂದರ ಶ್ಯಾಮಲ ಶರೀರವಿತ್ತು. ತರುಣಾವಸ್ಥೆಯಲ್ಲಿದ್ದ ಅವರ ಕಣ್ಣುಗಳು ಕೆಂದಾವರೆಯಂತೆ ಹೊಳೆಯುತ್ತಿದ್ದುವು. ಅವರು ಸುಂದರ ವಸ್ತ್ರಗಳನ್ನುಟ್ಟುಕೊಂಡು, ಕಿರೀಟ, ಹಾರ, ತೋಳುಬಂದಿಗಳಿಂದ ಅಲಂಕೃತರಾಗಿದ್ದರು. ಕಿವಿಗಳಲ್ಲಿ ಮನೋಹರವಾದ ಕುಂಡಲಗಳನ್ನು ಧರಿಸಿದ್ದರು. ॥ ೨೦ ॥ ಅವರನ್ನು ಪುಣ್ಯಶ್ಲೋಕನಾದ ಶ್ರೀಹರಿಯ ಸೇವಕರೆಂದು ಅರಿತು ಧ್ರುವನು ಒಡನೆಯೇ ಎದ್ದು ನಿಂತು, ಅವರಿಗೆ ಸಲ್ಲಿಸಬೇಕಾಗಿದ್ದ ಪೂಜೆ ಮುಂತಾದವುಗಳನ್ನು ಆ ಸಂಭ್ರಮದಲ್ಲಿ ಮರೆತುಬಿಟ್ಟನು. ಅವರು ಶ್ರೀಭಗವಂತನ ಪಾರ್ಷದರಲ್ಲಿ ಮುಖ್ಯರಾದವರು ಎಂದು ತಿಳಿದು ಅವರ ಮುಂದೆ ಶ್ರೀಮಧುಸೂದನನ ದಿವ್ಯನಾಮಗಳನ್ನು ಸಂಕೀರ್ತನೆ ಮಾಡುತ್ತಾ ಕೈಜೋಡಿಸಿ ನಮಸ್ಕಾರ ಮಾಡಿದನು. ॥ ೨೧ ॥

ತಂ ಕೃಷ್ಣಪಾದಾಭಿನಿವಿಷ್ಟಚೇತಸಂ
ಬದ್ಧಾಂಜಲಿಂ ಪ್ರಶ್ರಯನಮ್ರಕಂಧರಮ್ ।
ಸುನಂದನಂದಾವುಪಸೃತ್ಯ ಸಸ್ಮಿತಂ
ಪ್ರತ್ಯೂಚತುಃ ಪುಷ್ಕರನಾಭಸಮ್ಮತೌ ॥ ೨೨ ॥

ಧ್ರುವನ ಮನಸ್ಸು ಭಗವಂತನ ಚರಣಕಮಲಗಳಲ್ಲಿ ತಲ್ಲೀನವಾಗಿ ಬಿಟ್ಟಿರಲು ಆತನು ಅವರ ಮುಂದೆ ಕೈಜೋಡಿಸಿಕೊಂಡು ವಿನಯದಿಂದ ತಲೆಬಾಗಿ ಸುಮ್ಮನೇ ನಿಂತುಕೊಂಡನು. ಆಗ ಶ್ರೀಹರಿಯ ಪ್ರಿಯಪಾರ್ಷದರಾದ ಸುನಂದ ಮತ್ತು ನಂದ ಇವರು ಆತನ ಬಳಿಗೆ ಬಂದು ಮುಗುಳ್ನಗೆ ಬೀರುತ್ತಾ ಹೀಗೆಂದರು ॥ ೨೨ ॥

*ಸುನಂದನಂದಾವೂಚತುಃ*

ಭೋ ಭೋ ರಾಜನ್ಸುಭದ್ರಂ ತೇ ವಾಚಂ ನೋಽವಹಿತಃ ಶೃಣು ।
ಯಃ ಪಂಚವರ್ಷಸ್ತಪಸಾ ಭವಾಂದೇವಮತೀತೃಪತ್ ॥ ೨೩ ॥

ತಸ್ಯಾಖಿಲಜಗದ್ಧಾತುರಾವಾಂ ದೇವಸ್ಯ ಶಾರ್ಙ್ಗಿಣಃ ।
ಪಾರ್ಷದಾವಿಹ ಸಂಪ್ರಾಪ್ತೌ ನೇತುಂ ತ್ವಾಂ ಭಗವತ್ಪದಮ್ ॥ ೨೪ ॥

ಸುದುರ್ಜಯಂ ವಿಷ್ಣುಪದಂ ಜಿತಂ ತ್ವಯಾ
ಯತ್ಸೂರಯೋಽಪ್ರಾಪ್ಯ ವಿಚಕ್ಷತೇ ಪರಮ್ ।
ಆತಿಷ್ಠತಚ್ಚಂದ್ರದಿವಾಕರಾದಯೋ
ಗ್ರಹರ್ಕ್ಷತಾರಾಃ ಪರಿಯಂತಿ ದಕ್ಷಿಣಮ್ ॥ ೨೫ ॥

ಅನಾಸ್ಥಿತಂ ತೇ ಪಿತೃಭಿರನ್ಯೈರಪ್ಯಂಗ ಕರ್ಹಿಚಿತ್ ।
ಆತಿಷ್ಠ ಜಗತಾಂ ವಂದ್ಯಂ ತದ್ವಿಷ್ಣೋಃ ಪರಮಂ ಪದಮ್ ॥ ೨೬ ॥

ಏತದ್ವಿಮಾನಪ್ರವರಮುತ್ತಮಶ್ಲೋಕಮೌಲಿನಾ ।
ಉಪಸ್ಥಾಪಿತಮಾಯುಷ್ಮನ್ನಧಿರೋಢುಂ ತ್ವಮರ್ಹಸಿ ॥ ೨೭ ॥

ಸುನಂದ ಮತ್ತು ನಂದರು ಹೇಳತೊಡಗಿದರು – ರಾಜನೇ! ನಿನಗೆ ಮಂಗಳವಾಗಲಿ. ನಮ್ಮ ಮಾತನ್ನು ಸಾವಕಾಶವಾಗಿ ಕೇಳು. ನೀನು ಐದು ವರ್ಷದವನಾಗಿದ್ದಾಗಲೇ ತಪಸ್ಸನ್ನಾಚರಿಸಿ ಸರ್ವೇಶ್ವರನಾದ ಭಗವಂತನನ್ನು ಒಲಿಸಿಕೊಂಡಿದ್ದೆ ॥ ೨೩ ॥ ನಾವು ಅದೇ ಸರ್ವಲೋಕನಿಯಾಮಕನಾದ ಶಾರ್ಙ್ಗಪಾಣಿಯಾದ ಶ್ರೀಮನ್ನಾರಾಯಣನ ಸೇವಕರು. ನಿನ್ನನ್ನು ಆ ಭಗವಂತನ ಧಾಮಕ್ಕೆ ಕರೆದೊಯ್ಯಲು ಬಂದಿದ್ದೇವೆ. ॥ ೨೪ ॥ ನೀನು ನಿನ್ನ ಭಕ್ತಿಯ ಪ್ರಭಾವದಿಂದ ಇತರರಿಗೆ ಅತಿದುರ್ಲಭವಾದ ವಿಷ್ಣುಲೋಕವನ್ನು ಗಳಿಸಿರುವೆ. ಪರಮಜ್ಞಾನಿಗಳಾದ ಸಪ್ತರ್ಷಿಗಳೂ ಕೂಡ ಅಲ್ಲಿಯವರೆಗೆ ತಲುಪಲಾರದೆ, ಕೇವಲ ಕೆಳಗಡೆಯಿಂದ ನೋಡುತ್ತಾ ಇರುತ್ತಾರೆ. ಸೂರ್ಯ-ಚಂದ್ರರೂ, ಇತರ ಗ್ರಹ-ನಕ್ಷತ್ರ-ತಾರಾಗಣಗಳೂ ಅದರ ಪ್ರದಕ್ಷಿಣೆ ಮಾಡುತ್ತಾ ಇರುತ್ತಾರೆ. ನಡೆಯಿರಿ! ನೀವು ಅದೇ ವಿಷ್ಣುಧಾಮದಲ್ಲಿ ವಾಸಮಾಡಿರಿ. ॥ ೨೫ ॥ ಪ್ರಿಯತಮನೇ! ಇಲ್ಲಿಯವರೆಗೆ ನಿನ್ನ ಪೂರ್ವಿಕರಾಗಲೀ ಅಥವಾ ಇತರ ಯಾರೇ ಆಗಲೀ ಆ ಪದವನ್ನು ತಲುಪಲು ಸಾಧ್ಯವಾಗಲಿಲ್ಲ. ಸಮಸ್ತ ಲೋಕಗಳಿಗೂ ವಂದನೀಯವಾದ ಆ ವಿಷ್ಣುವಿನ ಪರಮಧಾಮಕ್ಕೆ ಬಂದು ನೀನು ವಿರಾಜಿಸುವವನಾಗು. ॥ ೨೬ ॥ ಆಯುಷ್ಮಂತನೇ! ಈ ಶ್ರೇಷ್ಠವಾದ ವಿಮಾನವನ್ನು ಪುಣ್ಯಶ್ಲೋಕಶಿಖಾಮಣಿಯಾದ ಶ್ರೀಹರಿಯು ನಿನಗೋಸ್ಕರವೇ ಕಳಿಸಿಕೊಟ್ಟಿರುವನು. ಇದನ್ನು ಹತ್ತಲು ನೀನೇ ಯೋಗ್ಯವಾಗಿದ್ದೀಯೇ. ॥ ೨೭ ॥

*ಮೈತ್ರೇಯ ಉವಾಚ*

ನಿಶಮ್ಯ ವೈಕುಂಠ ನಿಯೋಜ್ಯ ಮುಖ್ಯಯೋ-
ರ್ಮಧುಚ್ಯುತಂ ವಾಚಮುರುಕ್ರಮಪ್ರಿಯಃ ।
ಕೃತಾಭಿಷೇಕಃ ಕೃತನಿತ್ಯಮಂಗಲೋ
ಮುನೀನ್ ಪ್ರಣಮ್ಯಾಶಿಷಮಭ್ಯವಾದಯತ್ ॥ ೨೮ ॥

ಪರೀತ್ಯಾಭ್ಯರ್ಚ್ಯ ಧಿಷ್ಣ್ಯಾಗ್ರ್ಯಂ ಪಾರ್ಷದಾವಭಿವಂದ್ಯ ಚ ।
ಇಯೇಷ ತದಧಿಷ್ಠಾತುಂ ಬಿಭ್ರದ್ರೂಪಂ ಹಿರಣ್ಮಯಮ್ ॥ ೨೯ ॥

ತದೋತ್ತಾನಪದಃ ಪುತ್ರೋ
ದದರ್ಶಾಂತಕಮಾಗತಮ್ ।
ಮೃತ್ಯೋರ್ಮೂರ್ಧ್ನಿ ಪದಂ ದತ್ತ್ವಾ
ಆರುರೋಹಾದ್ಭುತಂ ಗೃಹಮ್ ॥ ೩೦ ॥

ತದಾ ದುಂದುಭಯೋ ನೇದುರ್ಮೃದಂಗಪಣವಾದಯಃ ।
ಗಂಧರ್ವಮುಖ್ಯಾಃ ಪ್ರಜಗುಃ ಪೇತುಃ ಕುಸುಮವೃಷ್ಟಯಃ ॥ ೩೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ವೈಕುಂಠಪತಿಯ ಶ್ರೇಷ್ಠರಾದ ಪಾರ್ಷದರು ನುಡಿದ ಅಮೃತಮಯ ಮಾತನ್ನು ಕೇಳಿ ಪ್ರಭು ತ್ರಿವಿಕ್ರಮನಿಗೆ ಪ್ರಿಯನಾದ ಪರಮ ಭಾಗವತೋತ್ತಮ ಧ್ರುವನು ಸ್ನಾನಮಾಡಿ, ನಿತ್ಯಕರ್ಮಗಳನ್ನೂ, ಮಂಗಳಕಾರ್ಯಗಳನ್ನೂ ನೆರವೇರಿಸಿ, ಬದರಿಕಾಶ್ರಮದಲ್ಲಿದ್ದ ಮುನಿಗಳಿಗೆ ನಮಸ್ಕಾರ ಮಾಡಿ ಅವರಿಂದ ಆಶೀರ್ವಾದವನ್ನು ಪಡೆದುಕೊಂಡನು. ॥ ೨೮ ॥ ಇದಾದ ಬಳಿಕ ಆ ಶ್ರೇಷ್ಠ ವಿಮಾನವನ್ನು ಪೂಜಿಸಿ, ಪ್ರದಕ್ಷಿಣೆ ಬಂದು, ಶ್ರೀವಿಷ್ಣು ಪಾರ್ಷದರಿಗೆ ಪ್ರಣಾಮ ಮಾಡಿ, ಚಿನ್ನದಂತೆ ಥಳ-ಥಳಿಸುತ್ತಿದ್ದ ದಿವ್ಯರೂಪವನ್ನುತಾಳಿ ಅದನ್ನು ಹತ್ತಲು ಸಿದ್ಧನಾದನು. ॥ ೨೯ ॥ ಅಷ್ಟರಲ್ಲಿ ಮೃತ್ಯುದೇವನು ಬಂದು ಧ್ರುವನಿಗೆ ವಂದಿಸಿಕೊಂಡನು. ಆಗ ಧ್ರುವನು ಮೃತ್ಯುವಿನ ತಲೆಯ ಮೇಲೆ ಕಾಲಿಟ್ಟು ಆ ಅದ್ಭುತವಾದ ವಿಮಾನವನ್ನು ಏರಿದನು. ॥ ೩೦ ॥ ಆಗ ಆಕಾಶದಲ್ಲಿ ದುಂದುಭಿಗಳು, ಮೃದಂಗ, ಮದ್ದಲೆ ಮುಂತಾದ ವಾದ್ಯಗಳು ಮೊಳಗಿದವು. ಗಂಧರ್ವಶ್ರೇಷ್ಠರು ಗಾನಮಾಡತೊಡಗಿದರು. ಪುಷ್ಪಗಳ ಮಳೆ ಸುರಿಯತೊಡಗಿತು. ॥ ೩೧ ॥

ಹೀಗೆ ವಿಮಾನದಲ್ಲಿ ಕುಳಿತು ಭಗವಂತನ ಧಾಮಕ್ಕೆ ಹೋಗಲು ಸಿದ್ಧನಾಗುತ್ತಿದ್ದಾಗ ಧ್ರುವನಿಗೆ ಇದ್ದಕ್ಕಿದ್ದಂತೆ ತನ್ನ ತಾಯಿಯಾದ

ಸ ಚ ಸ್ವರ್ಲೋಕಮಾರೋಕ್ಷ್ಯನ್ ಸುನೀತಿಂ ಜನನೀಂ ಧ್ರುವಃ ।
ಅನ್ವಸ್ಮರದಗಂ ಹಿತ್ವಾ ದೀನಾಂ ಯಾಸ್ಯೇ ತ್ರಿವಿಷ್ಟಪಮ್ ॥ ೩೨ ॥

ಇತಿ ವ್ಯವಸಿತಂ ತಸ್ಯ ವ್ಯವಸಾಯ ಸುರೋತ್ತಮೌ ।
ದರ್ಶಯಾಮಾಸತುರ್ದೇವೀಂ ಪುರೋ ಯಾನೇನ ಗಚ್ಛತೀಮ್ ॥ ೩೩ ॥

ತತ್ರ ತತ್ರ ಪ್ರಶಂಸದ್ಭಿಃ ಪಥಿ ವೈಮಾನಿಕೈಃ ಸುರೈಃ ।
ಅವಕೀರ್ಯಮಾಣೋ ದದೃಶೇ ಕುಸುಮೈಃ ಕ್ರಮಶೋ ಗ್ರಹಾನ್ ॥ ೩೪ ॥

ತ್ರಿಲೋಕೀಂ ದೇವಯಾನೇನ ಸೋಽತಿವ್ರಜ್ಯ ಮುನೀನಪಿ ।
ಪರಸ್ತಾದ್ಯದ್ಧ್ರುವಗತಿರ್ವಿಷ್ಣೋಃ ಪದಮಥಾಭ್ಯಗಾತ್ ॥ ೩೫ ॥

ಯದ್ಭ್ರಾಜಮಾನಂ ಸ್ವರುಚೈವ ಸರ್ವತೋ
ಲೋಕಾಸ್ತ್ರಯೋ ಹ್ಯನು ವಿಭ್ರಾಜಂತ ಏತೇ ।
ಯನ್ನಾವ್ರಜಂಜಂತುಷು ಯೇಽನನುಗ್ರಹಾ
ವ್ರಜಂತಿ ಭದ್ರಾಣಿ ಚರಂತಿ ಯೇಽನಿಶಮ್ ॥ ೩೬ ॥

ಶಾಂತಾಃ ಸಮದೃಶಃ ಶುದ್ಧಾಃ ಸರ್ವಭೂತಾನುರಂಜನಾಃ ।
ಯಾಂತ್ಯಂಜಸಾಚ್ಯುತಪದಮಚ್ಯುತಪ್ರಿಯಬಾಂಧವಾಃ ॥ ೩೭ ॥

ಇತ್ಯುತ್ತಾನಪದಃ ಪುತ್ರೋ ಧ್ರುವಃ ಕೃಷ್ಣಪರಾಯಣಃ ।
ಅಭೂತ್ತ್ರಯಾಣಾಂ ಲೋಕಾನಾಂ ಚೂಡಾಮಣಿರಿವಾಮಲಃ ॥ ೩೮ ॥

ಗಂಭೀರವೇಗೋಽನಿಮಿಷಂ ಜ್ಯೋತಿಷಾಂ ಚಕ್ರಮಾಹಿತಮ್ ।
ಯಸ್ಮಿನ್ ಭ್ರಮತಿ ಕೌರವ್ಯ ಮೇಢ್ಯಾಮಿವ ಗವಾಂ ಗಣಃ ॥ ೩೯ ॥

ಮಹಿಮಾನಂ ವಿಲೋಕ್ಯಾಸ್ಯ ನಾರದೋ ಭಗವಾನೃಷಿಃ ।
ಆತೋದ್ಯಂ ವಿತುದನ್ ಶ್ಲೋಕಾನ್ಸತ್ರೇಽಗಾಯತ್ಪ್ರಚೇತಸಾಮ್ ॥ ೪೦ ॥

*ನಾರದ ಉವಾಚ*

ನೂನಂ ಸುನೀತೇಃ ಪತಿದೇವತಾಯಾ-
ಸ್ತಪಃಪ್ರಭಾವಸ್ಯ ಸುತಸ್ಯ ತಾಂ ಗತಿಮ್ ।
ದೃಷ್ಟ್ವಾಭ್ಯುಪಾಯಾನಪಿ ವೇದವಾದಿನೋ
ನೈವಾಧಿಗಂತುಂ ಪ್ರಭವಂತಿ ಕಿಂ ನೃಪಾಃ ॥ ೪೧ ॥

ಸುನೀತಿಯ ನೆನಪಾಯಿತು. 'ದೀನಳಾಗಿರುವ ನನ್ನ ತಾಯಿಯನ್ನು ಬಿಟ್ಟು ನಾನೊಬ್ಬನೇ ದುರ್ಲಭವಾದ ವಿಷ್ಣುಧಾಮಕ್ಕೆ ಹೇಗೆ ಹೋಗಲಿ?' ಎಂದು ಯೋಚಿಸತೊಡಗಿದನು. ॥ ೩೨ ॥ ಧ್ರುವನ ಮನಸ್ಸಿನ ಮಾತನ್ನು ಅರಿತ ನಂದ-ಸುನಂದರು ಆತನಿಗೆ – 'ಅದೋ ನೋಡು ! ನಿನ್ನ ತಾಯಿ ಸುನೀತಿದೇವಿಯು ಬೇರೊಂದು ವಿಮಾನದಲ್ಲಿ ಕುಳಿತು ಮುಂದೆ-ಮುಂದೆ ಹೋಗುತ್ತಿದ್ದಾಳೆ' ಎಂದು ತೋರಿಸಿದರು. ॥ ೩೩ ॥ ಅವನು ಕ್ರಮವಾಗಿ ಸೂರ್ಯನೇ ಮುಂತಾದ ಗ್ರಹರನ್ನು ನೋಡಿದನು. ಮಾರ್ಗದಲ್ಲಿ ಅಲ್ಲಲ್ಲಿ ವಿಮಾನಗಳಲ್ಲಿ ಕುಳಿತಿದ್ದ ದೇವತೆಗಳು ಅವನನ್ನು ಪ್ರಶಂಸಿಸುತ್ತಾ ಹೂವಿನ ಮಳೆಯನ್ನು ಸುರಿಸುತ್ತಾ ಹೋಗುತ್ತಿದ್ದರು. ॥ ೩೪ ॥ ಆ ದಿವ್ಯವಾದ ವಿಮಾನದಲ್ಲಿ ಕುಳಿತ ಧ್ರುವನು ಮೂರು ಲೋಕಗಳನ್ನೂ ದಾಟಿ, ಸಪ್ತರ್ಷಿಮಂಡಲದಿಂದಲೂ ಮೇಲಿರುವ ಭಗವಾನ್ ಶ್ರೀವಿಷ್ಣುವಿನ ಧ್ರುವವಾದ ಧಾಮವನ್ನು ತಲುಪಿ, ಸ್ಥಿರವಾದ ಗತಿಯನ್ನು ಪಡೆದನು. ॥ ೩೫ ॥ ಈ ದಿವ್ಯಧಾಮವು ತನ್ನ ಪ್ರಕಾಶ ದಿಂದಲೇ ಬೆಳಗುತ್ತಿದೆ. ಇದರ ಪ್ರಕಾಶದಿಂದಲೇ ಮೂರೂ ಲೋಕ ಗಳು ಬೆಳಗುತ್ತಿವೆ. ಜೀವಿಗಳ ಮೇಲೆ ದಯಾರಹಿತರಾದ ಜನರು ಅಲ್ಲಿಗೆ ತಲುಪಲಾರರು. ಪ್ರತಿದಿನವೂ ಪ್ರಾಣಿಗಳ ಕಲ್ಯಾಣಕ್ಕಾಗಿ ಶುಭಕರ್ಮಗಳನ್ನು ಮಾಡುವಂತಹ ಸುಕೃತಿಗಳೇ ಅಲ್ಲಿಗೆ ಹೋಗ ಬಲ್ಲರು. ॥ ೩೬ ॥ ಶಾಂತರಾಗಿ, ಸಮದರ್ಶಿಗಳಾಗಿ, ಶುದ್ಧರಾಗಿ, ಎಲ್ಲ ಪ್ರಾಣಿಗಳನ್ನೂ ಪ್ರಸನ್ನಗೊಳಿಸುವವರಾದ, ಭಗವದ್ಭಕ್ತರನ್ನು ಮಾತ್ರವೇ ತಮ್ಮ ಏಕಮಾತ್ರ ಬಂಧು-ಮಿತ್ರರನ್ನಾಗಿ ತಿಳಿಯುವಂತಹ ಮಹಾತ್ಮರು ಮಾತ್ರ ಸುಲಭವಾಗಿ ಈ ಭಗವದ್ಧಾಮವನ್ನು ಪಡೆಯಬಲ್ಲರು. ॥ ೩೭ ॥

ಈ ರೀತಿಯಲ್ಲಿ ಭಾಗವತೋತ್ತಮನಾದ ಉತ್ತಾನಪಾದನ ಪುತ್ರ ಧ್ರುವನು ಮೂರೂ ಲೋಕಗಳಿಗೂ ಮೇಲ್ಗಡೆ ಅವುಗಳ ನಿರ್ಮಲ ಶಿರೋಭೂಷಣನಾಗಿ ವಿರಾಜಿಸತೊಡಗಿದನು. ॥ ೩೮ ॥ ಕುರುಕುಲನಂದನಾ ! ಮೇಟಿಯ ಕಂಭವನ್ನು ಎತ್ತುಗಳು ಸುತ್ತಲೂ ಸುತ್ತುವಂತೆ ಗಂಭೀರವಾದ ವೇಗವುಳ್ಳ ಜ್ಯೋತಿಶ್ಚಕ್ರವು ಆ ಅವಿನಾಶಿ ಯಾದ ಧ್ರುವಧಾಮವನ್ನೇ ಆಶ್ರಯಿಸಿ ಅದನ್ನು ಸದಾ ಸುತ್ತುತ್ತಿರುತ್ತದೆ. ॥ ೩೯ ॥ ಅದರ ಮಹಿಮೆಯನ್ನು ನೋಡಿ ದೇವ ಋಷಿ ನಾರದರು ಪ್ರಚೇತಸರ ಯಜ್ಞಶಾಲೆಯಲ್ಲಿ ವೀಣೆಯನ್ನು ನುಡಿಸುತ್ತಾ ಈ ಮೂರು ಶ್ಲೋಕಗಳನ್ನು ಹಾಡಿದರು. ॥ ೪೦ ॥

**ಶ್ರೀನಾರದರು ಹೇಳಿದ್ದರು –** ಪತಿಪರಾಯಣಳಾದ ಸುನೀತಿಯ ಪುತ್ರನಾದ ಧ್ರುವನು ತಪಸ್ಸನ್ನಾಚರಿಸಿ ಅದರ ಪ್ರಭಾವದಿಂದ ಅದ್ಭುತ ವಾದ ಗತಿಯನ್ನು ಗಳಿಸಿದ್ದನು. ಅದನ್ನು ಭಾಗವತ ಧರ್ಮಗಳನ್ನು ವಿಮರ್ಶೆಮಾಡಿ ವೇದವಾದಿಗಳಾದ ಮುನಿಗಳೂ ಕೂಡ ಪಡೆಯ ಲಾರರು. ಇದರಲ್ಲಿ ಸಂದೇಹವೇ ಇಲ್ಲ. ಹೀಗಿರುವಾಗ ಸಾಧಾರಣ ಉಳಿದ ರಾಜರ ಮಾತೇನು ! ॥ ೪೧ ॥ ಆಹಾ ! ಅವನು ಕೇವಲ ಐದು ವರ್ಷದ ವಯಸ್ಸಿನಲ್ಲಿಯೇ ಮಲತಾಯಿಯ ವಾಗ್ಬಾಣಗಳಿಂದ ನೊಂದು ದುಃಖತುಂಬಿದ ಹೃದಯದಿಂದ ಕಾಡಿಗೆ ತೆರಳಿದನು. ಅಲ್ಲಿ ನನ್ನ ಉಪದೇಶಕ್ಕನುಸಾರವಾಗಿ ಆಚರಣೆಗೈದು – ಭಕ್ತರ ಗುಣಗಳಿಂದ ಮಾತ್ರವೇ ವಶನಾಗುವ 'ಅಜಿತ' (ಯಾರಿಂದಲೂ ಜಯಿಸಲ್ಪಡದವನು)ನಾದ ಶ್ರೀಹರಿಯನ್ನು ಜಯಿಸಿಕೊಂಡಿದ್ದನು.

ಯಃ ಪಂಚವರ್ಷೋ ಗುರುದಾರವಾಕ್ಶರೈ-
ರ್ಭಿನ್ನೇನ ಯಾತೋ ಹೃದಯೇನ ದೂಯತಾ ।
ವನಂ ಮದಾದೇಶಕರೋಽಜಿತಂ ಪ್ರಭುಂ
ಜಿಗಾಯ ತದ್ಭಕ್ತಗುಣೈಃ ಪರಾಜಿತಮ್ ॥ ೪೨ ॥

ಯಃ ಕ್ಷತ್ರಬಂಧುರ್ಭುವಿ ತಸ್ಯಾಧಿರೂಢ-
ಮನ್ವಾರುರುಕ್ಷೇದಪಿ ವರ್ಷಪೂಗೈಃ ।
ಷಟ್ಪಂಚವರ್ಷೋ ಯದಹೋಭಿರಲ್ಪೈಃ
ಪ್ರಸಾದ್ಯ ವೈಕುಂಠಮವಾಪ ತತ್ಪದಮ್ ॥ ೪೩ ॥

ಮೈತ್ರೇಯ ಉವಾಚ

ಏತತ್ತೇಽಭಿಹಿತಂ ಸರ್ವಂ ಯತ್ಪೃಷ್ಟೋಽಹಮಿಹ ತ್ವಯಾ ।
ಧ್ರುವಸ್ಯೋದ್ದಾಮಯಶಸಶ್ಚರಿತಂ ಸಮ್ಮತಂ ಸತಾಮ್ ॥ ೪೪ ॥

ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ಸ್ವಸ್ತ್ಯಯನಂ ಮಹತ್ ।
ಸ್ವರ್ಗ್ಯಂ ಧ್ರೌವ್ಯಂ ಸೌಮನಸ್ಯಂ ಪ್ರಶಸ್ಯಮಘಮರ್ಷಣಮ್ ॥ ೪೫ ॥

ಶ್ರುತ್ವೈತಚ್ಛ್ರದ್ಧಯಾಭೀಕ್ಷ್ಣಮಚ್ಯುತಪ್ರಿಯಚೇಷ್ಟಿತಮ್ ।
ಭವೇದ್ಭಕ್ತಿರ್ಭಗವತಿ ಯಯಾ ಸ್ಯಾತ್ ಕ್ಲೇಶಸಂಕ್ಷಯಃ ॥ ೪೬ ॥

ಮಹತ್ತ್ವಮಿಚ್ಛತಾಂ ತೀರ್ಥಂ
ಶ್ರೋತುಃ ಶೀಲಾದಯೋ ಗುಣಾಃ ।
ಯತ್ರ ತೇಜಸ್ತದಿಚ್ಛೂನಾಂ
ಮಾನೋ ಯತ್ರ ಮನಸ್ವಿನಾಮ್ ॥ ೪೭ ॥

ಪ್ರಯತಃ ಕೀರ್ತಯೇತ್ಪ್ರಾತಃ ಸಮವಾಯೇ ದ್ವಿಜನ್ಮನಾಮ್ ।
ಸಾಯಂ ಚ ಪುಣ್ಯಶ್ಲೋಕಸ್ಯ ಧ್ರುವಸ್ಯ ಚರಿತಂ ಮಹತ್ ॥ ೪೮ ॥

ಪೌರ್ಣಮಾಸ್ಯಾಂ ಸಿನೀವಾಲ್ಯಾಂ ದ್ವಾದಶ್ಯಾಂ ಶ್ರವಣೇಽಥವಾ ।
ದಿನಕ್ಷಯೇ ವ್ಯತೀಪಾತೇ ಸಂಕ್ರಮೇಽರ್ಕದಿನೇಽಪಿ ವಾ ॥ ೪೯ ॥

ಶ್ರಾವಯೇಚ್ಛ್ರದ್ದಧಾನಾನಾಂ ತೀರ್ಥಪಾದಪದಾಶ್ರಯಃ ।
ನೇಚ್ಛಂಸ್ತತ್ರಾತ್ಮನಾಽಽತ್ಮಾನಂ ಸಂತುಷ್ಟ ಇತಿ ಸಿಧ್ಯತಿ ॥ ೫೦ ॥

ಜ್ಞಾನಮಜ್ಞಾತತತ್ತ್ವಾಯ ಯೋ ದದ್ಯಾತ್ಸತ್ಪಥೇಽಮೃತಮ್ ।
ಕೃಪಾಲೋರ್ದೀನನಾಥಸ್ಯ ದೇವಾಸ್ತಸ್ಯಾನುಗೃಹ್ಣತೇ ॥ ೫೧ ॥

ಇದಂ ಮಯಾ ತೇಽಭಿಹಿತಂ ಕುರೂದ್ವಹ
ಧ್ರುವಸ್ಯ ವಿಖ್ಯಾತವಿಶುದ್ಧಕರ್ಮಣಃ ।
ಹಿತ್ವಾರ್ಭಕಃ ಕ್ರೀಡನಕಾನಿ ಮಾತು-
ರ್ಗೃಹಂ ಚ ವಿಷ್ಣುಂ ಶರಣಂ ಯೋ ಜಗಾಮ ॥ ೫೨ ॥

॥ ೪೨ ॥ ನಮ್ಮ ಈ ಧ್ರುವಸಾರ್ವಭೌಮನು ಐದಾರು ವರ್ಷದ ಬಾಲಕನಿರುವಾಗಲೇ ಕೆಲವೇ ದಿನಗಳ ತಪಸ್ಸಿನಿಂದ ಶ್ರೀಭಗವಂತನನ್ನು ಒಲಿಸಿ ಪರಮಪದವನ್ನು ಪಡೆದುಕೊಂಡನು. ಅಂತಹ ಪರಮ ಪದವನ್ನು ಅನೇಕ ವರ್ಷಗಳ ಕಾಲ ತಪಶ್ಚರಣೆ ಮಾಡಿದರೂ ಬೇರಾವ ಕ್ಷತ್ರಿಯನು ಪಡೆಯಬಲ್ಲನು ? ॥ ೪೩ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ನೀನು ಕೇಳಿಕೊಂಡಂತೆ ನಾನು ಉದಾರ ಕೀರ್ತಿಯುಳ್ಳ ಧ್ರುವನ ಚರಿತ್ರೆಯನ್ನು ಪೂರ್ಣವಾಗಿ ತಿಳಿಸಿರುವೆನು. ಸಾಧು-ಸಜ್ಜನರು ಈ ಚರಿತ್ರವನ್ನು ತುಂಬಾ ಪ್ರಶಂಸಿಸುತ್ತಾರೆ. ॥ ೪೪ ॥ ಇದು ಸಂಪತ್ತನ್ನೂ, ಯಶಸ್ಸನ್ನೂ, ಆಯುಸ್ಸನ್ನೂ, ವೃದ್ಧಿಪಡಿಸುವ ಪರಮ ಪವಿತ್ರ ಮಂಗಳಕರವಾದ ಕಥೆಯಾಗಿದೆ. ಇದರಿಂದ ಸ್ವರ್ಗ ಮತ್ತು ಅವಿನಾಶಿಯಾದ ಪದವೂ ದೊರೆಯಬಲ್ಲದು. ದೇವತ್ವವನ್ನೂ ನೀಡಬಲ್ಲದು. ಬಹಳ ಪ್ರಶಂಸನೀಯವಾಗಿದ್ದು ಸಮಸ್ತ ಪಾಪಗಳನ್ನು ನಾಶಮಾಡುವಂತಹುದು. ॥ ೪೫ ॥ ಭಗವದ್ಭಕ್ತನಾದ ಧ್ರುವನ ಈ ಪವಿತ್ರ ಚರಿತ್ರವನ್ನು ಶ್ರದ್ಧೆಯಿಂದ ಪದೇ-ಪದೇ ಕೇಳುವವನಿಗೆ ಶ್ರೀಭಗವಂತನ ಭಕ್ತಿಯು ಪ್ರಾಪ್ತವಾಗುತ್ತದೆ. ಆದರಿಂದ ಅವನ ಎಲ್ಲ ದುಃಖಗಳು ನಾಶವಾಗಿ ಹೋಗುತ್ತವೆ. ॥ ೪೬ ॥ ಇದನ್ನು ಶ್ರವಣಿಸುವವನಿಗೆ ಶೀಲವೇ ಮುಂತಾದ ಗುಣಗಳು ಲಭಿಸುವುವು. ಮಹತ್ತ್ವವನ್ನು ಬಯಸುವವರಿಗೆ ಅತಿ ಮಹತ್ವದ ಸ್ಥಾನವು ದೊರೆಯುವುದು. ತೇಜಸ್ಸನ್ನು ಬಯಸುವವರಿಗೆ ತೇಜಸ್ಸು ಮಾನವನ್ನು ಅಪೇಕ್ಷಿಸುವ ಮನಸ್ವಿಗಳಿಗೆ ಒಳ್ಳೆಯ ಮಾನವೂ ಸಿಗುವುದು. ॥ ೪೭ ॥ ಪವಿತ್ರಕೀರ್ತಿ ಧ್ರುವನ ಈ ಮಹಾನ್ ಚರಿತ್ರವನ್ನು ಪ್ರಾತಃಕಾಲ ಮತ್ತು ಸಾಯಂಕಾಲಗಳಲ್ಲಿ ಸತ್ಪುರುಷರ ಸಮಾಜದಲ್ಲಿ ಏಕಾಗ್ರವಾದ ಮನಸ್ಸಿನಿಂದ ಕೀರ್ತನೆ ಮಾಡಬೇಕು. ॥ ೪೮ ॥ ಶ್ರೀಭಗವಂತನ ಪವಿತ್ರವಾದ ಪಾದಾರವಿಂದಗಳನ್ನು ಆಶ್ರಯಿಸಿರುವ ಭಕ್ತನು ಇದನ್ನು ನಿಷ್ಕಾಮಭಾವದಿಂದ ಪೂರ್ಣಿಮೆ, ಅಮಾವಾಸ್ಯೆ, ದ್ವಾದಶೀ, ಶ್ರವಣಾನಕ್ಷತ್ರ, ತಿಥಿಕ್ಷಯ, ವ್ಯತೀಪಾತ, ಸಂಕ್ರಾಂತಿ ಅಥವಾ ಭಾನುವಾರಗಳಂದು ಶ್ರದ್ಧಾಳುಗಳಾದ ಸಜ್ಜನರಿಗೆ ಶ್ರವಣ ಮಾಡಿಸಿ ಸ್ವತಃ ಆತ್ಮನಲ್ಲೇ ಸಂತುಷ್ಟನಾಗಿ, ಸಿದ್ಧನಾಗಿ ಹೋಗುತ್ತಾನೆ. ॥ ೪೯-೫೦ ॥ ತತ್ತ್ವವನ್ನು ಅರಿಯದ ಅಜ್ಞಾನಿಗಳಿಗೆ ಈ ಜ್ಞಾನಾಮೃತವನ್ನು ದಾನಮಾಡುವಂತಹ ಕರುಣಾಳುವೂ, ದೀನವತ್ಸಲನೂ ಆದ ಸುಕೃತಿಯ ಮೇಲೆ ದೇವತೆಗಳು ಅನುಗ್ರಹವನ್ನು ಮಾಡುವರು. ॥ ೫೧ ॥

ಕುರುಕುಲಶಿಖಾಮಣಿಯಾದ ವಿದುರನೇ! ಧ್ರುವನು ಮಾಡಿದ ಪರಮ ಪರಿಶುದ್ಧವಾದ ಕರ್ಮವು ಎಲ್ಲೆಡೆಗಳಲ್ಲಿಯೂ ಪ್ರಸಿದ್ಧವಾಗಿದೆ. ಅತಿಬಾಲ್ಯದಲ್ಲಿಯೇ ಅವನು ತಾಯಿ, ಮನೆ, ಆಟಿಕೆ ಮುಂತಾದವುಗಳ ಮೋಹವನ್ನು ತೊರೆದು ಭಗವಾನ್ ಮಹಾವಿಷ್ಣುವನ್ನು ಶರಣುಹೊಂದಿದ್ದನು. ಅವನ ಈ ಪವಿತ್ರವಾದ ಚರಿತ್ರವನ್ನು ನಾನು ನಿನಗೆ ತಿಳಿಸಿರುವೆನು. ॥ ೫೨ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಧ್ರುವಚರಿತಂ ನಾಮ ದ್ವಾದಶೋಽಧ್ಯಾಯಃ ॥ ೧೨ ॥

# ಹದಿಮೂರನೆಯ ಅಧ್ಯಾಯ

## ಧ್ರುವನ ವಂಶದ ವರ್ಣನೆ – ಅಂಗಮಹಾರಾಜನ ಚರಿತ್ರೆ

*ಸೂತ ಉವಾಚ*

ನಿಶಮ್ಯ ಕೌಷಾರವಿಣೋಪವರ್ಣಿತಂ
ಧ್ರುವಸ್ಯ ವೈಕುಂಠ ಪದಾಧಿರೋಹಣಮ್ ।
ಪ್ರರೂಢಭಾವೋ ಭಗವತ್ಯಧೋಕ್ಷಜೇ
ಪ್ರಷ್ಟುಂ ಪುನಸ್ತಂ ವಿದುರಃ ಪ್ರಚಕ್ರಮೇ ॥ ೧ ॥

*ವಿದುರ ಉವಾಚ*

ಕೇ ತೇ ಪ್ರಚೇತಸೋ ನಾಮ ಕಸ್ಯಾಪತ್ಯಾನಿ ಸುವ್ರತ ।
ಕಸ್ಯಾನ್ವವಾಯೇ ಪ್ರಖ್ಯಾತಾಃ ಕುತ್ರ ವಾ ಸತ್ರಮಾಸತ ॥ ೨ ॥

ಮನ್ಯೇ ಮಹಾಭಾಗವತಂ ನಾರದಂ ದೇವದರ್ಶನಮ್ ।
ಯೇನ ಪ್ರೋಕ್ತಃ ಕ್ರಿಯಾಯೋಗಃ ಪರಿಚರ್ಯಾವಿಧಿರ್ಹರೇಃ ॥ ೩ ॥

ಸ್ವಧರ್ಮಶೀಲೈಃ ಪುರುಷೈರ್ಭಗವಾನ್ಯಜ್ಞ ಪೂರುಷಃ ।
ಇಜ್ಯಮಾನೋ ಭಕ್ತಿಮತಾ ನಾರದೇನೇರಿತಃ ಕಿಲ ॥ ೪ ॥

ಯಾಸ್ತಾ ದೇವರ್ಷಿಣಾ ತತ್ರ ವರ್ಣಿತಾ ಭಗವತ್ಕಥಾಃ ।
ಮಹ್ಯಂ ಶುಶ್ರೂಷವೇ ಬ್ರಹ್ಮನ್ಕಾರ್ತ್ಸ್ನ್ಯೇನಾಚಷ್ಟುಮರ್ಹಸಿ ॥ ೫ ॥

*ಮೈತ್ರೇಯ ಉವಾಚ*

ಧ್ರುವಸ್ಯ ಚೋತ್ಕಲಃ ಪುತ್ರಃ ಪಿತರಿ ಪ್ರಸ್ಥಿತೇ ವನಮ್ ।
ಸಾರ್ವಭೌಮಶ್ರಿಯಂ ನೈಚ್ಛದಧಿರಾಜಾಸನಂ ಪಿತುಃ ॥ ೬ ॥

ಸ ಜನ್ಮನೋಪಶಾಂತಾತ್ಮಾ ನಿಃಸಂಗಃ ಸಮದರ್ಶನಃ ।
ದದರ್ಶ ಲೋಕೇ ವಿತತಮಾತ್ಮಾನಂ ಲೋಕಮಾತ್ಮನಿ ॥ ೭ ॥

ಆತ್ಮಾನಂ ಬ್ರಹ್ಮ ನಿರ್ವಾಣಂ ಪ್ರತ್ಯಸ್ತಮಿತವಿಗ್ರಹಮ್ ।
ಅವಬೋಧರಸೈಕಾತ್ಮ್ಯಮಾನಂದಮನುಸಂತತಮ್ ॥ ೮ ॥

ಅವ್ಯವಚ್ಛಿನ್ನಯೋಗಾಗ್ನಿದಗ್ಧಕರ್ಮಮಲಾಶಯಃ ।
ಸ್ವರೂಪಮವರುಂಧಾನೋ ನಾತ್ಮನೋಽನ್ಯಂ ತದೈಕ್ಷತ ॥ ೯ ॥

ಜಡಾಂಧಬಧಿರೋನ್ಮತ್ತಮೂಕಾಕೃತಿರತನ್ಮತಿಃ ।
ಲಕ್ಷಿತಃ ಪಥಿ ಬಾಲಾನಾಂ ಪ್ರಶಾಂತಾರ್ಚಿರಿವಾನಲಃ ॥ ೧೦ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಮಹರ್ಷಿಗಳೇ! ಪರಮಭಾಗವತೋತ್ತಮನಾದ ಧ್ರುವನು ವಿಷ್ಣುಪದವನ್ನು ಆರೂಢನಾದ ವೃತ್ತಾಂತವನ್ನು ಕೇಳಿ ವಿದುರನ ಹೃದಯದಲ್ಲಿ ಭಗವಾನ್ ಶ್ರೀವಿಷ್ಣುವಿನ ವಿಷಯದಲ್ಲಿ ಭಕ್ತಿಯು ಬೇರೂರಿತು. ಅವನು ಮತ್ತೆ ಶ್ರೀಮೈತ್ರೇಯರಲ್ಲಿ ಪ್ರಶ್ನಿಸತೊಡಗಿದನು. ॥ ೧ ॥

**ವಿದುರನು ಕೇಳಿದನು** – ಭಗವತ್ಪರಾಯಣರಾದ ಮುನಿಶ್ರೇಷ್ಠರೇ! ಈ ಪ್ರಚೇತಸರೆಂಬುವರು ಯಾರು? ಯಾರ ಪುತ್ರರು? ಯಾರ ವಂಶದಲ್ಲಿ ಪ್ರಸಿದ್ಧರಾಗಿದ್ದರು? ಅವರು ಎಲ್ಲಿ ಯಜ್ಞವನ್ನು ಮಾಡಿದ್ದರು? ॥ ೨ ॥ ಶ್ರೀಹರಿಯ ಆರಾಧನೆಯ ವಿಧಿಯಾಗಿರುವ ಪಾಂಚರಾತ್ರ ಆಗಮದ ಮೂಲಕ ಉಪದೇಶ ಮಾಡಿದ ದೇವರ್ಷಿ ನಾರದರು ದೇವದೇವನ ದರ್ಶನದಿಂದ ಕೃತಾರ್ಥರಾದ ಮಹಾಭಾಗವತೋತ್ತಮರು. ॥ ೩ ॥ ಪ್ರಚೇತಸರು ಸ್ವಧರ್ಮವನ್ನು ಆಚರಿಸುತ್ತಾ ಭಗವಂತನಾದ ಯಜ್ಞಪುರುಷನನ್ನು ಆರಾಧನೆ ಮಾಡುತ್ತಿದ್ದ ಸಮಯದಲ್ಲಿ ಭಕ್ತವರೇಣ್ಯರಾದ ಶ್ರೀನಾರದರು ಧ್ರುವನ ಗುಣಗಳನ್ನು ಗಾನ ಮಾಡಿದರೆಂದು ಹೇಳಿದರಲ್ಲ! ॥ ೪ ॥ ಬ್ರಾಹ್ಮಣಶ್ರೇಷ್ಠರೇ! ಆ ದೇವರ್ಷಿಗಳು ಅಲ್ಲಿ ಯಾವ-ಯಾವ ಭಗವತ್ಕಥೆಗಳನ್ನು ವರ್ಣಿಸಿದರು? ಎಂಬುದನ್ನು ನನಗೆ ಪೂರ್ಣವಾಗಿ ತಿಳಿಸಿರಿ. ಅವುಗಳನ್ನು ಕೇಳಬೇಕೆಂದು ನಾನು ಉತ್ಸುಕನಾಗಿದ್ದೇನೆ. ॥ ೫ ॥

**ಶ್ರೀಮೈತ್ರೇಯರು ಹೇಳಿದರು** – ಎಲೈ ವಿದುರನೇ! ಮಹಾರಾಜಾ ಧ್ರುವನು ವನಕ್ಕೆ ಹೊರಟುಹೋದ ಬಳಿಕ ಅವನ ಪುತ್ರ ಉತ್ಕಲನು ತನ್ನ ತಂದೆಯ ಸಾರ್ವಭೌಮಸಂಪತ್ತನ್ನೂ, ರಾಜ್ಯ ಸಿಂಹಾಸನವನ್ನೂ ಸ್ವೀಕರಿಸಲಿಲ್ಲ. ॥ ೬ ॥ ಅವನು ಹುಟ್ಟಿನಿಂದಲೇ ಪ್ರಶಾಂತಸ್ವಭಾವದವನೂ, ಆಸಕ್ತಿಶೂನ್ಯನೂ, ಸಮದರ್ಶಿಯೂ ಆಗಿದ್ದು ಸಮಸ್ತ ಲೋಕಗಳನ್ನು ತನ್ನ ಆತ್ಮನಲ್ಲಿಯೂ, ತನ್ನ ಆತ್ಮವನ್ನು ಸಮಸ್ತಲೋಕಗಳಲ್ಲಿಯೂ ಸ್ಥಿತವೆಂದು ನೋಡುತ್ತಿದ್ದನು. ॥ ೭ ॥ ಅವನ ಅಂತಃಕರಣದ ವಾಸನಾರೂಪವಾದ ಮಲವು ಅಖಂಡ ಯೋಗಾಗ್ನಿಯಿಂದ ಸುಟ್ಟುಹೋಗಿತ್ತು. ಅದಕ್ಕಾಗಿ ಅವನು ತನ್ನ ಆತ್ಮವನ್ನು ವಿಶುದ್ಧ ಜ್ಞಾನರಸದೊಂದಿಗೆ ಆನಂದಮಯನೂ, ಸರ್ವತ್ರವ್ಯಾಪ್ತನೂ ಆಗಿರುವನೆಂದು ಅಭಿನ್ನವಾಗಿ ನೋಡುತ್ತಿದ್ದನು. ಎಲ್ಲ ವಿಧದ ಭೇದಗಳಿಂದ ರಹಿತನಾದ ಪ್ರಶಾಂತಬ್ರಹ್ಮವೇ ತನ್ನ ಸ್ವರೂಪವೆಂದು ಅವನು ತಿಳಿಯುತ್ತಿದ್ದನು ಹಾಗೂ ತನ್ನ ಆತ್ಮನಿಗಿಂತ ಬೇರೆ ಏನೂ ಇಲ್ಲವೆಂದು ನೋಡುತ್ತಿದ್ದನು. ॥ ೮-೯ ॥ ಅವನು ಪೂರ್ಣಜ್ಞಾನಿ ಯಾಗಿದ್ದರೂ ಬೀದಿಗಳಲ್ಲಿ ಅಜ್ಞಾನಿಗಳಿಗೆ ಮೂರ್ಖನಂತೆಯೂ, ಕುರುಡನಂತೆಯೂ, ಕಿವುಡನಂತೆಯೂ, ಹುಚ್ಚನಂತೆಯೂ, ಮೂಗನಂತೆಯೂ ಕಂಡುಬರುತ್ತಿದ್ದನು. ॥ ೧೦ ॥

ಮತ್ವಾ ತಂ ಜಡಮುನ್ಮತ್ತಂ ಕುಲವೃದ್ಧಾಃ ಸಮಂತ್ರಿಣಃ।
ವತ್ಸರಂ ಭೂಪತಿಂ ಚಕ್ರುರ್ಯವೀಯಾಂಸಂ ಭ್ರಮೇಃ ಸುತಮ್ ॥ ೧೧ ॥

ಸ್ವರ್ವೀಥಿರ್ವತ್ಸರಸ್ಯೇಷ್ಟಾ ಭಾರ್ಯಾಸೂತ ಷಡಾತ್ಮಜಾನ್।
ಪುಷ್ಪಾರ್ಣಂ ತಿಗ್ಮಕೇತುಂ ಚ ಇಷಮೂರ್ಜಂ ವಸುಂ ಜಯಮ್ ॥ ೧೨ ॥

ಪುಷ್ಪಾರ್ಣಸ್ಯ ಪ್ರಭಾ ಭಾರ್ಯಾ ದೋಷಾ ಚ ದ್ವೇ ಬಭೂವತುಃ।
ಪ್ರಾತರ್ಮಧ್ಯಂದಿನಂ ಸಾಯಮಿತಿ ಹ್ಯಾಸನ್ ಪ್ರಭಾಸುತಾಃ ॥ ೧೩ ॥

ಪ್ರದೋಷೋ ನಿಶಿಥೋ ವ್ಯುಷ್ಟ ಇತಿ ದೋಷಾಸುತಾಸ್ತ್ರಯಃ।
ವ್ಯುಷ್ಟಃ ಸುತಂ ಪುಷ್ಕರಿಣ್ಯಾಂ ಸರ್ವತೇಜಸಮಾದಧೇ ॥ ೧೪ ॥

ಸ ಚಕ್ಷುಃ ಸುತಮಾಕೂತ್ಯಾಂ ಪತ್ನ್ಯಾಂ ಮನುಮವಾಪ ಹ।
ಮನೋರಸೂತ ಮಹಿಷೀ ವಿರಜಾನ್ನಡ್ವಲಾ ಸುತಾನ್ ॥ ೧೫ ॥

ಪುರುಂ ಕುತ್ಸಂ ತ್ರಿತಂ ದ್ಯುಮ್ನಂ ಸತ್ಯವಂತಮೃತಂ ವ್ರತಮ್।
ಅಗ್ನಿಷ್ಟೋಮಮತೀರಾತ್ರಂ ಪ್ರದ್ಯುಮ್ನಂ ಶಿಬಿಮುಲ್ಮುಕಮ್ ॥ ೧೬ ॥

ಉಲ್ಮುಕೋಽಜನಯತ್ಪುತ್ರಾನ್ಪುಷ್ಕರಿಣ್ಯಾಂ ಷಡುತ್ತಮಾನ್।
ಅಂಗಂ ಸುಮನಸಂ ಖ್ಯಾತಿಂ ಕ್ರತುಮಂಗಿರಸಂ ಗಯಮ್ ॥ ೧೭ ॥

ಸುನೀಥಾಂಗಸ್ಯ ಯಾ ಪತ್ನೀ ಸುಷುವೇ ವೇನಮುಲ್ಬಣಮ್।
ಯದ್ದೌಃಶೀಲ್ಯಾತ್ಸ ರಾಜರ್ಷಿರ್ನಿರ್ವಿಣ್ಣೋ ನಿರಗಾತ್ಪುರಾತ್ ॥ ೧೮ ॥

ಯಮಂಗ ಶೇಪುಃ ಕುಪಿತಾ ವಾಗ್ವಜ್ರಾ ಮುನಯಃ ಕಿಲ।
ಗತಾಸೋಸ್ತಸ್ಯ ಭೂಯಸ್ತೇ ಮಮಂಥುರ್ದಕ್ಷಿಣಂ ಕರಮ್ ॥ ೧೯ ॥

ಅರಾಜಕೇ ತದಾ ಲೋಕೇ ದಸ್ಯುಭಿಃ ಪೀಡಿತಾಃ ಪ್ರಜಾಃ।
ಜಾತೋ ನಾರಾಯಣಾಂಶೇನ ಪೃಥುರಾದ್ಯಃ ಕ್ಷಿತೀಶ್ವರಃ ॥ ೨೦ ॥

*ವಿದುರ ಉವಾಚ*

ತಸ್ಯ ಶೀಲನಿಧೇಃ ಸಾಧೋರ್ಬ್ರಹ್ಮಣ್ಯಸ್ಯ ಮಹಾತ್ಮನಃ।
ರಾಜ್ಞಃ ಕಥಮಭೂದ್ದುಷ್ಟಾ ಪ್ರಜಾ ಯದ್ವಿಮನಾ ಯಯೌ ॥ ೨೧ ॥

ಕಿಂ ವಾಂಹೋ ವೇನ ಉದ್ದಿಶ್ಯ ಬ್ರಹ್ಮದಂಡಮಯೂಯುಜನ್।
ದಂಡ ವ್ರತಧರೇ ರಾಜ್ಞಿ ಮುನಯೋ ಧರ್ಮಕೋವಿದಾಃ ॥ ೨೨ ॥

ನಾವಧ್ಯೇಯಃ ಪ್ರಜಾಪಾಲಃ ಪ್ರಜಾಭಿರಘವಾನಪಿ।
ಯದಸೌ ಲೋಕಪಾಲಾನಾಂ ಬಿಭರ್ತ್ಯೋಜಃ ಸ್ವತೇಜಸಾ ॥ ೨೩ ॥

ಆದ್ದರಿಂದ ರಾಜಕುಲದ ಹಿರಿಯರೂ, ಮಂತ್ರಿಗಳೂ ಆತನನ್ನು ಮೂರ್ಖನೆಂದೂ, ಹುಚ್ಚನೆಂದೂ ತಿಳಿದು ಆತನ ತಮ್ಮನಾದ ಭ್ರಮಿಪುತ್ರ ವತ್ಸರನನ್ನು ರಾಜನನ್ನಾಗಿಸಿದರು. ॥ ೧೧ ॥

ಮಹಾರಾಜಾ ವತ್ಸರನು ಪತ್ನಿಯಾದ ಸ್ವರ್ವೀಥಿಯಿಂದ ಪುಷ್ಪಾರ್ಣ, ತಿಗ್ಮಕೇತು, ಇಷ, ಊರ್ಜ, ವಸು ಮತ್ತು ಜಯ ಎಂಬ ಆರು ಪುತ್ರರನ್ನು ಪಡೆದನು. ॥ ೧೨ ॥ ಅವರಲ್ಲಿ ಪುಷ್ಪಾರ್ಣನಿಗೆ ಪ್ರಭಾ ಮತ್ತು ದೋಷಾ ಎಂಬ ಇಬ್ಬರು ಭಾರ್ಯೆಯರಿದ್ದರು. ಅವರಲ್ಲಿ ಪ್ರಭಾಳಿಗೆ ಪ್ರಾತಃ, ಮಧ್ಯಂದಿನ, ಸಾಯಂ ಎಂಬ ಮೂವರು ಪುತ್ರರು ಹುಟ್ಟಿದರು. ॥ ೧೩ ॥ ದೋಷಾಳಲ್ಲಿ ಪ್ರದೋಷ, ನಿಶಿಥ ಮತ್ತು ವ್ಯುಷ್ಟ ಎಂಬ ಮೂರು ಪುತ್ರರಾದರು. ಅವರಲ್ಲಿ ವ್ಯುಷ್ಟನು ತನ್ನ ಭಾರ್ಯೆಯಾದ ಪುಷ್ಕರಣಿಯಲ್ಲಿ ಸರ್ವತೇಜಸನೆಂಬ ಪುತ್ರನನ್ನು ಪಡೆದನು. ॥ ೧೪ ॥ ಆತನ ಪತ್ನಿಯಾದ ಆಕೂತಿಯಲ್ಲಿ ಚಕ್ಷುವೆಂಬ ಪುತ್ರನು ಹುಟ್ಟಿದನು. ಅವನೇ ಚಾಕ್ಷುಷ ಮನ್ವಂತರದಲ್ಲಿ ಮನು ಆದನು. ಚಕ್ಷುಮನುವಿನ ಪತ್ನೀ ನಡ್ವಲಾ ದೇವಿಯಲ್ಲಿ ಪುರು, ಕುತ್ಸ ತ್ರಿತ, ದ್ಯುಮ್ನ, ಸತ್ಯವಾನ್, ಋತ, ವ್ರತ, ಅಗ್ನಿಷ್ಟೋಮ, ಅತಿರಾತ್ರ, ಪ್ರದ್ಯುಮ್ನ, ಶಿಬಿ ಮತ್ತು ಉಲ್ಮುಖ ಎಂಬ ಹನ್ನೆರಡು ಸತ್ತ್ವಗುಣೀ ಪುತ್ರರು ಜನಿಸಿದರು. ॥ ೧೫-೧೬ ॥ ಅವರಲ್ಲಿ ಉಲ್ಮುಕನು ತನ್ನ ಪತ್ನಿ ಪುಷ್ಕರಿಣಿಯಲ್ಲಿ ಅಂಗ, ಸುಮನಾ, ಖ್ಯಾತಿ, ಕ್ರತು, ಅಂಗಿರಾ, ಗಯ ಈ ಆರು ಉತ್ತಮ ಪುತ್ರರನ್ನು ಪಡೆದನು. ॥ ೧೭ ॥ ಅಂಗನ ಪತ್ನೀ ಸುನೀಥಾದೇವಿಯಲ್ಲಿ ವೇನನೆಂಬ ಅತಿದುಷ್ಟನಾದ ಪುತ್ರನು ಜನಿಸಿದನು. ಅವನ ದುಷ್ಟತೆಯಿಂದ ಉದ್ವಿಗ್ನನಾಗಿ ರಾಜರ್ಷಿ ಅಂಗನು ನಗರವನ್ನು ಬಿಟ್ಟು ಹೊರಟುಹೋಗಿದ್ದನು. ॥ ೧೮ ॥ ಪ್ರಿಯ ವಿದುರನೇ ! ಮುನಿಗಳ ಮಾತುಗಳು ವಜ್ರದಂತೆ ಅಮೋಘವಾಗಿರುತ್ತವೆ. ಅವರು ಕುಪಿತರಾಗಿ ವೇನನನ್ನು ಶಪಿಸಿದ್ದರು. ವೇನನು ಸತ್ತುಹೋದಾಗ ಅರಾಜಕವಾದ ಆ ರಾಜ್ಯದಲ್ಲಿ ದರೋಡೆಕೋರರಿಂದ ಪ್ರಜೆಗಳಿಗೆ ತುಂಬಾ ಕಷ್ಟಗಳು ಆಗತೊಡಗಿದವು. ಇದನ್ನು ನೋಡಿ ಮುನಿಗಳು ವೇನನ ಬಲಗೈಯನ್ನು ಕಡೆದರು. ಆದರಿಂದ ಭಗವಾನ್ ವಿಷ್ಣುವಿನ ಅಂಶಾವತಾರವಾದ ಆದಿ ಸಾಮ್ರಾಟ ಮಹಾರಾಜಾ ಪೃಥು ಪ್ರಗಟಗೊಂಡನು. ॥ ೧೯-೨೦ ॥

**ವಿದುರನು ಕೇಳಿದನು** – ಮಹರ್ಷಿಗಳೇ ! ಅಂಗಮಹಾರಾಜನಾದರೋ ಶೀಲಸಂಪನ್ನನೂ, ಸಾಧು ಸ್ವಭಾವದವನೂ, ಬ್ರಾಹ್ಮಣಭಕ್ತನೂ, ಮಹಾತ್ಮನೂ ಆಗಿದ್ದನು. ಅಂತಹವನಿಗೆ ಕಾಟವನ್ನು ಕೊಟ್ಟು ಆತನು ದುಃಖದಿಂದ ಕಾಡಿಗೆ ಹೋಗುವಂತೆ ಮಾಡಿದ ದುಷ್ಟಪುತ್ರನು ಹೇಗೆ ಹುಟ್ಟಿದನು ? ॥ ೨೧ ॥ ತಪ್ಪಿತಸ್ಥರಿಗೆ ಶಿಕ್ಷೆಯನ್ನು ಕೊಡುವ ಅಧಿಕಾರದಲ್ಲಿದ್ದ ದಂಡಧಾರಿ ವೇನನಾದರೂ ಧರ್ಮಜ್ಞರಾದ ಮುನಿಶ್ರೇಷ್ಠರಿಂದ ಶಾಪರೂಪವಾದ ಬ್ರಹ್ಮದಂಡವನ್ನು ಪಡೆಯುವಂತಹ ಯಾವ ಅಪರಾಧವನ್ನು ಮಾಡಿದ್ದನು ? ॥ ೨೨ ॥ ಪ್ರಜಾಪಾಲಕ ರಾಜನಿಂದ ಯಾವುದಾದರೂ ಪಾಪವು ಘಟಿಸಿದರೂ ಅವನನ್ನು ತಿರಸ್ಕರಿಸಬಾರದು ಎಂಬುದು ಪ್ರಜೆಯ ಧರ್ಮವಾಗಿದೆ. ಏಕೆಂದರೆ, ರಾಜನು ತನ್ನ ಪ್ರಭಾವದಿಂದ ಅಷ್ಟ ದಿಕ್ಪಾಲಕರ ತೇಜಸ್ಸನ್ನೇ ಧರಿಸುತ್ತಾನೆ. ॥ ೨೩ ॥

ಏತದಾಖ್ಯಾಹಿ ಮೇ ಬ್ರಹ್ಮನ್ ಸುನೀಥಾತ್ಮಜಚೇಷ್ಟಿತಮ್ ।
ಶ್ರದ್ದಧಾನಾಯ ಭಕ್ತಾಯ ತ್ವಂ ಪರಾವರವಿತ್ತಮಃ ॥ ೨೪ ॥

*ಮೈತ್ರೇಯ ಉವಾಚ*

ಅಂಗೋಽಶ್ವಮೇಧಂ ರಾಜರ್ಷಿರಾಜಹಾರ ಮಹಾಕ್ರತುಮ್ ।
ನಾಜಗ್ಮುರ್ದೇವತಾಸ್ತಸ್ಮಿನ್ನಾಹೂತಾ ಬ್ರಹ್ಮವಾದಿಭಿಃ ॥ ೨೫ ॥

ತಮೂಚುರ್ವಿಸ್ಮಿತಾಸ್ತತ್ರ ಯಜಮಾನಮಥರ್ತ್ವಿಜಃ ।
ಹವೀಂಷಿ ಹೂಯಮಾನಾನಿ ನ ತೇ ಗೃಹ್ಣಂತಿ ದೇವತಾಃ ॥ ೨೬ ॥

ರಾಜನ್ ಹವೀಂಷ್ಯದುಷ್ಟಾನಿ ಶ್ರದ್ಧಯಾಽಽಸಾದಿತಾನಿ ತೇ ।
ಛಂದಾಂಸ್ಯ ಯಾತಯಾಮಾನಿ ಯೋಜಿತಾನಿ ಧೃತವ್ರತೈಃ ॥ ೨೭ ॥

ನ ವಿದಾಮೇಹ ದೇವಾನಾಂ ಹೇಲನಂ ವಯಮಣ್ವಪಿ ।
ಯನ್ನ ಗೃಹ್ಣಂತಿ ಭಾಗಾನ್ಸ್ವಾನ್ಯೇ ದೇವಾಃ ಕರ್ಮಸಾಕ್ಷಿಣಃ ॥ ೨೮ ॥

*ಮೈತ್ರೇಯ ಉವಾಚ*

ಅಂಗೋ ದ್ವಿಜವಚಃ ಶ್ರುತ್ವಾ ಯಜಮಾನಃ ಸುದುರ್ಮನಾಃ ।
ತತ್ಪ್ರಷ್ಟುಂ ವ್ಯಸೃಜದ್ವಾಚಂ ಸದಸ್ಯಾಂಸ್ತದನುಜ್ಞಯಾ ॥ ೨೯ ॥

ನಾಗಚ್ಛಂತ್ಯಾಹುತಾ ದೇವಾ ನ ಗೃಹ್ಣಂತಿ ಗ್ರಹಾನಿಹ ।
ಸದಸಸ್ಪತಯೋ ಬ್ರೂತ ಕಿಮವದ್ಯಂ ಮಯಾ ಕೃತಮ್ ॥ ೩೦ ॥

*ಸದಸಸ್ಪತಯ ಊಚುಃ*

ನರದೇವೇಹ ಭವತೋ ನಾಘಂ ತಾವನ್ಮನಾಕ್ ಸ್ಥಿತಮ್ ।
ಅಸ್ತ್ಯೇಕಂ ಪ್ರಾಕ್ತನಮಘಂ ಯದಿಹೇದೃಕ್ತ್ವಮಪ್ರಜಃ ॥ ೩೧ ॥

ತಥಾ ಸಾಧಯ ಭದ್ರಂ ತೇ ಆತ್ಮಾನಂ ಸುಪ್ರಜಂ ನೃಪ ।
ಇಷ್ಟಸ್ತೇ ಪುತ್ರಕಾಮಸ್ಯ ಪುತ್ರಂ ದಾಸ್ಯತಿ ಯಜ್ಞಭುಕ್ ॥ ೩೨ ॥

ತಥಾ ಸ್ವಭಾಗಧೇಯಾನಿ ಗ್ರಹೀಷ್ಯಂತಿ ದಿವೌಕಸಃ ।
ಯದ್ಯಜ್ಞ ಪುರುಷಃ ಸಾಕ್ಷಾದಪತ್ಯಾಯ ಹರಿರ್ವೃತಃ ॥ ೩೩ ॥

ತಾಂಸ್ತಾನ್ಕಾಮಾನ್ ಹರಿರ್ದದ್ಯಾದ್ಯಾನ್ಯಾನ್ಕಾಮಯತೇ ಜನಃ ।
ಆರಾಧಿತೋ ಯಥೈವೈಷ ತಥಾ ಪುಂಸಾಂ ಫಲೋದಯಃ ॥ ೩೪ ॥

ಬ್ರಾಹ್ಮಣೋತ್ತಮರೇ! ನೀವು ಭೂತ-ಭವಿಷ್ಯದ ಮಾತುಗಳನ್ನು ತಿಳಿಯುವಂತಹ ಸರ್ವಶ್ರೇಷ್ಠರಾಗಿದ್ದೀರಿ. ಅದಕ್ಕಾಗಿ ನೀವು ಸುನೀಥಿಯ ಪುತ್ರನಾದ ವೇನನ ಎಲ್ಲ ವೃತ್ತಾಂತವನ್ನು ತಿಳಿಸಿರಿ. ನಾನು ನಿಮ್ಮ ಭಕ್ತನೂ, ಶ್ರದ್ಧಾಳುವೂ ಆಗಿರುವೆನು. ॥ ೨೪ ॥

**ಶ್ರೀಮೈತ್ರೇಯರು ಹೇಳುತ್ತಾರೆ**– ವಿದುರನೇ! ಒಮ್ಮೆ ರಾಜರ್ಷಿ ಅಂಗನು ಅಶ್ವಮೇಧ ಮಹಾಯಜ್ಞದ ಅನುಷ್ಠಾನ ಮಾಡಿದನು. ಅದರಲ್ಲಿ ವೇದವಾದಿಗಳಾದ ಬ್ರಾಹ್ಮಣರು ದೇವತೆಗಳನ್ನು ಆಹ್ವಾನಿಸಿದರೂ ಅವರು ತಮ್ಮ ಭಾಗವನ್ನು ಸ್ವೀಕರಿಸಲು ಬರಲಿಲ್ಲ ॥ ೨೫ ॥ ಆಗ ಋತ್ವಿಜರು ಆಶ್ಚರ್ಯಚಕಿತರಾಗಿ ಯಜಮಾನನಾದ ಅಂಗಮಹಾರಾಜನನ್ನು ಕೇಳಿದರು– 'ರಾಜನೇ! ನಾವು ಆಹುತಿಗಳ ರೂಪದಲ್ಲಿ ಹೋಮಮಾಡುತ್ತಿರುವ ತುಪ್ಪವೇ ಮುಂತಾದ ನಿನ್ನ ಪದಾರ್ಥಗಳನ್ನು ದೇವತೆಗಳು ಸ್ವೀಕರಿಸುತ್ತಿಲ್ಲ. ॥ ೨೬ ॥ ನಿನ್ನ ಹೋಮಸಾಮಗ್ರಿಯು ದೂಷಿತವಾಗಿಲ್ಲವೆಂಬುದನ್ನು ನಾವು ತಿಳಿದಿರುವೆವು. ನೀನು ಅದನ್ನು ಬಹು ಶ್ರದ್ಧೆಯಿಂದಲೇ ಸಂಗ್ರಹಿಸಿರುವೆ. ವೇದಮಂತ್ರಗಳು ಯಾವ ರೀತಿಯಿಂದಲೂ ಬಲಹೀನವಾಗಿಲ್ಲ. ಏಕೆಂದರೆ, ಅವುಗಳನ್ನು ಪ್ರಯೋಗಿಸುವ ಋತ್ವಿಜರು ಎಲ್ಲ ವ್ರತ-ನಿಯಮಗಳನ್ನು ಪಾಲಿಸುತ್ತಿದ್ದಾರೆ. ॥ ೨೭ ॥ ಈ ಯಜ್ಞದಲ್ಲಿ ದೇವತೆಗಳ ತಿರಸ್ಕಾರವು ಕಿಂಚಿತ್ತಾದರೂ ಆದಂತೆ ಕಂಡುಬರುವುದಿಲ್ಲ. ಹೀಗಿದ್ದರೂ ಕರ್ಮಾಧ್ಯಕ್ಷರಾದ ದೇವತೆಗಳು ಏಕೆ ತಮ್ಮ ಭಾಗವನ್ನು ಸ್ವೀಕರಿಸದೆ ಹೋಗಿದ್ದಾರೆ?' ॥ ೨೮ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಋತ್ವಿಜರ ಮಾತುಗಳನ್ನು ಕೇಳಿ ಅಂಗರಾಜನ ಮನಸ್ಸು ಖಿನ್ನವಾಯಿತು. ಆಗ ಅವನು ಯಾಜಕರ ಅನುಮತಿಯನ್ನು ಪಡೆದು ಮೌನವನ್ನು ಮುರಿದು ಸದಸ್ಯರಲ್ಲಿ ಕೇಳಿದನು. ॥ ೨೯ ॥ 'ಎಲೈ ಸದಸ್ಯರೇ! ದೇವತೆಗಳು ಆವಾಹನೆ ಮಾಡಿದರೂ ಯಜ್ಞದಲ್ಲಿ ಏಕೆ ಬರುತ್ತಿಲ್ಲ! ತಮ್ಮ ಸೋಮಪಾತ್ರೆಗಳನ್ನೂ ಏಕೆ ಗ್ರಹಿಸುವುದಿಲ್ಲ! ನಾನು ಮಾಡಿದ ಅಪರಾಧವಾದರೂ ಏನಿದೆ? ತಿಳಿಸಿರಿ.' ॥ ೩೦ ॥

**ಸದಸ್ಯರು ಹೇಳಿದರು** – ಎಲೈ ರಾಜನೇ! ಈ ಜನ್ಮದಲ್ಲಾದರೋ ನಿನ್ನಿಂದ ಯಾವ ಅಪರಾಧವೂ ನಡೆದಿಲ್ಲ. ಆದರೆ ಹಿಂದಿನ ಜನ್ಮದಲ್ಲಿ ನಿನ್ನಿಂದ ಒಂದು ಅಪರಾಧ ನಡೆದಿದೆ. ಅದರಿಂದಾಗಿ ನಿನ್ನಂತಹ ಸರ್ವಗುಣಸಂಪನ್ನನಾಗಿದ್ದರೂ ಪುತ್ರಹೀನನಾಗಿರುವೆ. ॥ ೩೧ ॥ ನಿನಗೆ ಮಂಗಳವಾಗಲಿ. ಅದಕ್ಕಾಗಿ ಚಿಂತಿಸಬೇಡ. ಮೊದಲಿಗೆ ನೀನು ಸತ್ಪುತ್ರನನ್ನು ಪಡೆಯುವ ಉಪಾಯವನ್ನು ಮಾಡು. ನೀನು ಪುತ್ರಪ್ರಾಪ್ತಿಯ ಬಯಕೆಯಿಂದ ಯಜ್ಞಮಾಡಿದರೆ ಭಗವಾನ್ ಯಜ್ಞೇಶ್ವರನು ನಿನಗೆ ಖಂಡಿತವಾಗಿ ಪುತ್ರನನ್ನು ಅನುಗ್ರಹಿಸುವನು. ॥ ೩೨ ॥ ಸಂತಾನಕ್ಕಾಗಿ ಸಾಕ್ಷಾತ್ ಯಜ್ಞಪುರುಷ ಶ್ರೀಹರಿಯನ್ನು ಆವಾಹನೆ ಮಾಡಿದಾಗ ದೇವತೆಗಳೂ ಕೂಡ ತಮ್ಮ-ತಮ್ಮ ಯಜ್ಞಭಾಗವನ್ನು ಸ್ವೀಕಾರಮಾಡುವರು. ॥ ೩೩ ॥ ಭಕ್ತರು ಬಯಸಿದ ವಸ್ತುವನ್ನು ಶ್ರೀಹರಿಯು ಕೊಡುತ್ತಾನೆ. ಯಾವ ವಿಧದಿಂದ ಅವನ ಆರಾಧನೆ ಮಾಡಲಾಗುತ್ತದೋ ಉಪಾಸಕನಿಗೆ ಅದೇ ಫಲವು ಸಿಗುವುದು.' ॥ ೩೪ ॥

ಇತಿ ವ್ಯವಸಿತಾ ವಿಪ್ರಾಸ್ತಸ್ಯ ರಾಜ್ಞಃ ಪ್ರಜಾತಯೇ।
ಪುರೋಡಾಶಂ ನಿರವಪನ್ ಶಿಪಿವಿಷ್ಟಾಯ ವಿಷ್ಣವೇ
॥ ೩೫ ॥

ತಸ್ಮಾತ್ಪುರುಷ ಉತ್ತಸ್ಥೌ ಹೇಮಮಾಲ್ಯ ಮಲಾಂಬರಃ।
ಹಿರಣ್ಮಯೇನ ಪಾತ್ರೇಣ ಸಿದ್ಧಮಾದಾಯ ಪಾಯಸಮ್
॥ ೩೬ ॥

ಸ ವಿಪ್ರಾನುಮತೋ ರಾಜಾ ಗೃಹೀತ್ವಾಂಜಲಿನೌದನಮ್।
ಅವಘ್ರಾಯ ಮುದಾ ಯುಕ್ತಃ ಪ್ರಾದಾತ್ಪತ್ನ್ಯಾ ಉದಾರಧೀಃ
॥ ೩೭ ॥

ಸಾ ತತ್ಪುಂಸವನಂ ರಾಜ್ಞೀ ಪ್ರಾಶ್ಯ ವೈ ಪತ್ಯುರಾದಧೇ।
ಗರ್ಭಂ ಕಾಲ ಉಪಾವೃತ್ತೇ ಕುಮಾರಂ ಸುಷುವೇಽಪ್ರಜಾ
॥ ೩೮ ॥

ಸ ಬಾಲ ಏವ ಪುರುಷೋ ಮಾತಾಮಹಮನುವ್ರತಃ।
ಅಧರ್ಮಾಂಶೋದ್ಭವಂ ಮೃತ್ಯುಂ ತೇನಾಭವದಧಾರ್ಮಿಕಃ
॥ ೩೯ ॥

ಸ ಶರಾಸನಮುದ್ಯಮ್ಯ ಮೃಗಯುರ್ವನಗೋಚರಃ।
ಹಂತ್ಯಸಾಧುರ್ಮೃಗಾನ್ ದೀನಾನ್ವೇನೋಽಸಾವಿತ್ಯರೌಜ್ಜನಃ
॥ ೪೦ ॥

ಆಕ್ರೀಡೇ ಕ್ರೀಡತೋ ಬಾಲಾನ್ವಯಸ್ಯಾನತಿದಾರುಣಃ।
ಪ್ರಸಹ್ಯ ನಿರನುಕ್ರೋಶಃ ಪಶುಮಾರಮಮಾರಯತ್
॥ ೪೧ ॥

ತಂ ವಿಚಕ್ಷ್ಯ ಖಲಂ ಪುತ್ರಂ ಶಾಸನೈರ್ವಿವಿಧೈರ್ನೃಪಃ।
ಯದಾ ನ ಶಾಸಿತುಂ ಕಲ್ಪೋ ಭೃಶಮಾಸೀತ್ಸುದುರ್ಮನಾಃ
॥ ೪೨ ॥

ಪ್ರಾಯೇಣಾಭ್ಯರ್ಚಿತೋ ದೇವೋ
ಯೇಽಪ್ರಜಾ ಗೃಹಮೇಧಿನಃ ।
ಕದಪತ್ಯ ಭೃತಂ ದುಃಖಂ
ಯೇ ನ ವಿಂದಂತಿ ದುರ್ಭರಮ್ ॥ ೪೩ ॥

ಯತಃ ಪಾಪೀಯಸೀ ಕೀರ್ತಿರಧರ್ಮಶ್ಚ ಮಹಾನ್ನೃಣಾಮ್।
ಯತೋ ವಿರೋಧಃ ಸರ್ವೇಷಾಂ ಯತ ಆಧಿರನಂತಕಃ
॥ ೪೪ ॥

ಕಸ್ತಂ ಪ್ರಜಾಪದೇಶಂ ವೈ ಮೋಹಬಂಧನಮಾತ್ಮನಃ।
ಪಂಡಿತೋ ಬಹು ಮನ್ಯೇತ ಯದರ್ಥಾಃ ಕ್ಲೇಶದಾ ಗೃಹಾಃ
॥ ೪೫ ॥

ಹೀಗೆ ಅಂಗರಾಜನಿಗೆ ಪುತ್ರನನ್ನು ದೊರಕಿಸಿಕೊಡುವ ನಿಶ್ಚಯ ಮಾಡಿ ಋತ್ವಿಜರು ಪಶುಗಳಲ್ಲಿ ಯಜ್ಞರೂಪದಲ್ಲಿ ನೆಲೆಗೊಂಡಿರುವ ಭಗವಾನ್ ಶ್ರೀವಿಷ್ಣುವಿನ ತೃಪ್ತಿಗಾಗಿ ಪುರೋಡಾಶವೆಂಬ ಚರುವನ್ನು ಸಮರ್ಪಣೆ ಮಾಡಿದರು. ॥ ೩೫ ॥

ಅಗ್ನಿಯಲ್ಲಿ ಆಹುತಿಯನ್ನು ಕೊಡುತ್ತಲೇ ಅಗ್ನಿಕುಂಡದಿಂದ ಸುವರ್ಣದ ಹಾರಗಳಿಂದಲೂ, ಶುಭ್ರವಾದ ವಸ್ತ್ರಗಳಿಂದಲೂ ವಿಭೂಷಿತನಾದ ಓರ್ವ ದಿವ್ಯ ಪುರುಷನು ಪ್ರಕಟಗೊಂಡನು. ಅವನು ಸಿದ್ಧವಾದ ಪಾಯಸವನ್ನು ಸ್ವರ್ಣಪಾತ್ರೆಯಲ್ಲಿ ಹಿಡಿದು ಕೊಂಡಿದ್ದನು. ॥ ೩೬ ॥ ಉದಾರಬುದ್ಧಿಯುಳ್ಳ ಅಂಗರಾಜನು ಯಾಜಕರ ಅನುಮತಿಯಿಂದ ತನ್ನ ಅಂಜಲಿಯಲ್ಲಿ ಆ ಪಾಯಸವನ್ನು ಸ್ವೀಕರಿಸಿ, ಸಂತೋಷದಿಂದ ಮೂಸಿನೋಡಿ ಅನಂತರ ಅದನ್ನು ತನ್ನ ಪತ್ನಿಗೆ ಕೊಟ್ಟನು. ॥ ೩೭ ॥ ಪುತ್ರಹೀನಳಾಗಿದ್ದ ಮಹಾರಾಣಿಯು ಆ ಪುತ್ರ ಪ್ರದಾಯಕವಾದ ಪಾಯಸವನ್ನು ತಿಂದು, ಗರ್ಭವನ್ನು ಧರಿಸಿದಳು. ಸಕಾಲದಲ್ಲಿ ಆಕೆಗೆ ಒಬ್ಬ ಪುತ್ರನು ಜನಿಸಿದನು. ॥ ೩೮ ॥ ಆ ಬಾಲಕನು ಅಧರ್ಮವಂಶದಲ್ಲಿ ಜನಿಸಿದ್ದರಿಂದ ತನ್ನ ಅಜ್ಜನಾದ ಮೃತ್ಯುವನ್ನೇ ಅನುಸರಿಸಿದ್ದರಿಂದ ತಾನೂ ಅಧಾರ್ಮಿಕ ನಾಗಿಯೇ ಬೆಳೆದನು. (ಸುನೀಥೆಯು ಮೃತ್ಯುವಿನ ಮಗಳಾಗಿದ್ದಳು.) ॥ ೩೯ ॥

ಆ ದುಷ್ಟನು ಧನುಷ್ಯ-ಬಾಣಗಳನ್ನು ಧರಿಸಿಕೊಂಡು ಕಾಡಿಗೆ ಹೋಗುತ್ತಿದ್ದನು. ಅಲ್ಲಿ ಬೇಡನಂತೆ ಬಡಪಾಯಿ ಸಾಧುಪ್ರಾಣಿಗಳಾದ ಜಿಂಕೆಗಳನ್ನು ಕೊಲ್ಲುತ್ತಿದ್ದನು. ಅವನನ್ನು ಕಂಡೊಡನೆ ಪುರಜನರು ವೇನ ಬಂದನು! ವೇನ ಬಂದನು! ಎಂದು ಕೂಗಿಕೊಳ್ಳುತ್ತಿದ್ದರು. ॥ ೪೦ ॥ ಅವನು ತನ್ನ ಜೊತೆಯಲ್ಲಿ ಆಟವಾಡುತ್ತಿದ್ದ ಸಮವಯಸ್ಸಿನ ಹುಡುಗರನ್ನು ಪಶುಗಳಂತೆ ಬಲಾತ್ಕಾರವಾಗಿ ಹಿಡಿಸಿ ಕೊಂದುಬಿಡುವಷ್ಟು ಕ್ರೂರಿಯಾಗಿದ್ದನು. ॥ ೪೧ ॥ ತನ್ನ ಪುತ್ರನ ಈ ದುಷ್ಟ ಸ್ವಭಾವವನ್ನು ಕಂಡು ಅಂಗಮಹಾರಾಜನು ಆತನನ್ನು ಸರಿದಾರಿಗೆ ತರಲು ಬಗೆ-ಬಗೆಯ ಪ್ರಯತ್ನ ಮಾಡಿದನು. ಆದರೆ ಆತನನ್ನು ಹತೋಟಿಗೆ ತರಲು ಅಸಮರ್ಥನಾದಾಗ ಅವನಿಗೆ ತಡೆಯಲಾರದ ಸಂಕಟವಾಯಿತು. ॥ ೪೨ ॥ (ಅವನು ಮನಸ್ಸಿನಲ್ಲೇ ಹೀಗೆ ಅಂದುಕೊಂಡನು.) ಪುತ್ರಹೀನರಾದ ಗೃಹಸ್ಥರೇ ಬಹುಶಃ ಪುಣ್ಯಶಾಲಿಗಳು. ಅವರು ಹಿಂದಿನ ಜನ್ಮದಲ್ಲಿ ಶ್ರೀಹರಿಯನ್ನು ಆರಾಧನೆ ಮಾಡಿರಬೇಕು. ಆದರಿಂದಲೇ ಅವರಿಗೆ ಕುಪುತ್ರನು ಮಾಡುವ ಕುಕರ್ಮಗಳಿಂದುಂಟಾಗುವ ಅಸಹ್ಯ ಕ್ಲೇಶಗಳು ಅನುಭವಿಸುವ ಸಂದರ್ಭ ಬಂದಿಲ್ಲ. ॥ ೪೩ ॥ ಯಾರು ಮಾಡುವ ಕುಕರ್ಮಗಳಿಂದ ತಂದೆ-ತಾಯಿಗಳ ಕೀರ್ತಿಯು ಮಣ್ಣುಪಾಲಾಗಿ, ಅವರು ಅಧರ್ಮಕ್ಕೆ ಗುರಿಯಾಗಿ, ಎಲ್ಲರೊಡನೆಯೂ ವಿರೋಧವುಂಟಾಗಿ ಎಂದಿಗೂ ತೊಲಗದಿರುವ ಮನೋವ್ಯಾಧಿಗೆ ತುತ್ತಾಗಿ, ಮನೆಯೆಲ್ಲ ದುಃಖದಿಂದ ತುಂಬಿಹೋಗುವುದೋ, ಅಂತಹ ಹೆಸರಿಗಷ್ಟೇ ಇರುವ ಸಂತಾನಕ್ಕಾಗಿ ಯಾವ ವಿವೇಕಿಯು ಹಂಬಲಿಸಿಯಾನು? ಅಂತಹ ಸಂತಾನವು ಆತ್ಮನಿಗಾಗಿ ಒಂದು ರೀತಿಯ ಮೋಹಮಯ ಬಂಧನವೇ ಆಗಿದೆ. ॥ ೪೪-೪೫ ॥ ಈ ದೃಷ್ಟಿಯಿಂದ ನಾನು ಕುಪುತ್ರನೇ ಒಳ್ಳೆಯವ

ಕದಪತ್ಯಂ ವರಂ ಮನ್ಯೇ ಸದಪತ್ಯಾಚ್ಛುಚಾಂ ಪದಾತ್ ।
ನಿರ್ವಿದ್ಯೇತ ಗೃಹಾನ್ಮರ್ತ್ಯೋ ಯತ್ಕ್ಲೇಶನಿವಹಾ ಗೃಹಾಃ ॥ ೪೬ ॥

ನೆಂದು ತಿಳಿಯುತ್ತೇನೆ. ಏಕೆಂದರೆ, ಸತ್ಪುತ್ರನನ್ನು ಬಿಡಲು ತುಂಬಾ ದುಃಖವಾಗುತ್ತದೆ. ಕುಪುತ್ರನು ಮನೆಯನ್ನೇ ನರಕವಾಗಿಸುತ್ತಾನೆ. ಆದ್ದರಿಂದ ಅವನಿಂದ ಸಹಜವಾಗಿಯೇ ಬಿಡುಗಡೆ ಆಗಿ ಹೋಗುತ್ತದೆ. ॥ ೪೬ ॥

ಏವಂ ಸ ನಿರ್ವಿಣ್ಣಮನಾ ನೃಪೋ ಗೃಹಾನ್
ನಿಶೀಥ ಉತ್ಥಾಯ ಮಹೋದಯೋದಯಾತ್ ।
ಅಲಬ್ಧನಿದ್ರೋಽನುಪಲಕ್ಷಿತೋ ನೃಭಿ-
ರ್ಹಿತ್ವಾ ಗತೋ ವೇನಸುವಂ ಪ್ರಸುಪ್ತಾಮ್ ॥ ೪೭ ॥

ಈ ಪ್ರಕಾರ ಯೋಚಿಸುತ್ತಾ ಚಿಂತೆಯಿಂದ ಅಂಗಮಹಾ ರಾಜನಿಗೆ ರಾತ್ರಿಯಲ್ಲಿ ನಿದ್ದೆ ಬಂದಿಲ್ಲ. ಅವನಿಗೆ ಗೃಹಸ್ಥ ಜೀವನದಲ್ಲೇ ಬೇಸರವುಂಟಾಯಿತು. ಅರ್ಧರಾತ್ರಿಯಲ್ಲಿ ವೇನನ ತಾಯಿಯು ನಿದ್ದೆಯಲ್ಲಿ ಮುಳುಗಿದ್ದಾಗ ಆತನು ಹಾಸಿಗೆಯಿಂದೆದ್ದು ವೈರಾಗ್ಯದಿಂದ ಎಲ್ಲ ಮೋಹ-ಪಾಶಗಳನ್ನು ಕಿತ್ತೊಗೆದು ಯಾರಿಗೂ ಸುಳಿವು ಕೊಡದೆ ಸುಮ್ಮನೆ ಐಶ್ವರ್ಯ ಶಾಲಿಯಾದ ಅರಮನೆಯನ್ನು ತೊರೆದು ಅರಣ್ಯಕ್ಕೆ ಹೊರಟು ಹೋದನು. ॥ ೪೭ ॥

ವಿಜ್ಞಾಯ ನಿರ್ವಿದ್ಯ ಗತಂ ಪತಿಂ ಪ್ರಜಾಃ
ಪುರೋಹಿತಾಮಾತ್ಯ ಸುಹೃದ್ಗಣಾದಯಃ ।
ವಿಚಿಕ್ಯುರುರ್ವ್ಯಾಮತಿಶೋಕಕಾತರಾ
ಯಥಾ ನಿಗೂಢಂ ಪುರುಷಂ ಕುಯೋಗಿನಃ ॥ ೪೮ ॥

ಮಹಾರಾಜರು ವಿರಕ್ತರಾಗಿ ಮನೆಯಿಂದ ಹೊರಟುಹೋದರೆಂದು ತಿಳಿದು ಎಲ್ಲ ಪ್ರಜೆಗಳೂ, ಪುರೋಹಿತರೂ, ಮಂತ್ರಿಗಳೂ, ಸ್ನೇಹಿತರೂ – ಎಲ್ಲರೂ ತುಂಬಾ ಕಳವಳಗೊಂಡು ಪೃಥ್ವಿಯಲ್ಲೆಲ್ಲ ಹುಡುಕತೊಡಗಿದರು. ಯೋಗದ ಪರಮಾರ್ಥವನ್ನು ತಿಳಿಯದಿರುವ ಜನರು ತಮ್ಮ ಹೃದಯದಲ್ಲಿ ಅಡಗಿರುವ ಭಗವಂತನನ್ನು ಹೊರಗೆ ಹುಡುಕುವಂತೆ ಅವರೆಲ್ಲಾ ಹುಡುಕುತ್ತಿದ್ದರು. ॥ ೪೮ ॥

ಅಲಕ್ಷಯಂತಃ ಪದವೀಂ ಪ್ರಜಾಪತೇ-
ರ್ಹತೋದ್ಯಮಾಃ ಪ್ರತ್ಯುಪಸೃತ್ಯ ತೇ ಪುರೀಮ್ ।
ಋಷೀನ್ಸಮೇತಾನಭಿವಂದ್ಯ ಸಾಶ್ರವೋ
ನ್ಯವೇದಯನ್ಪೌರವ ಭರ್ತೃವಿಪ್ಲವಮ್ ॥ ೪೯ ॥

ಅವರಿಗೆ ಒಡೆಯನ ಸುಳಿವು ಎಲ್ಲಿಯೂ ಸಿಕ್ಕದಿದ್ದಾಗ ಅವರು ನಿರಾಶರಾಗಿ ನಗರಕ್ಕೆ ಮರಳಿದರು. ಅಲ್ಲಿ ನೆರೆದಿದ್ದ ಮುನಿಗಳಿಗೆ ನಮಸ್ಕರಿಸಿ, ಕಣ್ಣೀರನ್ನು ತುಂಬಿ ಕೊಂಡು ಮಹಾರಾಜರು ಸಿಕ್ಕದಿರುವ ವೃತ್ತಾಂತವನ್ನು ತಿಳಿಸಿದರು. ॥ ೪೯ ॥

*ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ತ್ರಯೋದಶೋಽಧ್ಯಾಯಃ ॥ ೧೩ ॥

# ಹದಿನಾಲ್ಕನೆಯ ಅಧ್ಯಾಯ

## ವೇನರಾಜನ ಚರಿತ್ರೆ

*ಮೈತ್ರೇಯ ಉವಾಚ*

ಭೃಗ್ವಾದಯಸ್ತೇ ಮುನಯೋ ಲೋಕಾನಾಂ ಕ್ಷೇಮದರ್ಶಿನಃ ।
ಗೋಪ್ತರ್ಯಸತಿ ವೈ ನೄಣಾಂ ಪಶ್ಯಂತಃ ಪಶುಸಾಮ್ಯತಾಮ್ ॥ ೧ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಅಲ್ಲಿ ನೆರೆದಿದ್ದ ಭೃಗುವೇ ಮುಂತಾದ ಮಹರ್ಷಿಗಳು ಎಲ್ಲ ಲೋಕಗಳಿಗೆ ಕ್ಷೇಮವಾಗಿರಬೇಕಾದರೆ ಏನು ಮಾಡಬಹುದೆಂದು ಚಿಂತಿಸಿದರು. ಅಂಗರಾಜನು ಹೊರಟುಹೋದ ಬಳಿಕ ಪ್ರಜಾಪಾಲಕನಾದ ರಾಜನಿಲ್ಲದಿದ್ದರೆ ಎಲ್ಲರೂ ಪಶುಗಳಂತೆ ಸ್ವೇಚ್ಛಾಚಾರಿಗಳಾಗಿ ನಾಶವಾಗುವರು. ॥ ೧ ॥

ವೀರಮಾತರಮಾಹೂಯ ಸುನೀಥಾಂ ಬ್ರಹ್ಮವಾದಿನಃ ।
ಪ್ರಕೃತ್ಯಸಮ್ಮತಂ ವೇನಮಭ್ಯಷಿಂಚನ್ ಪತಿಂ ಭುವಃ ॥ ೨ ॥

ಆಗ ಅವರು ವೀರನಾದ ರಾಜಪುತ್ರನ ತಾಯಿಯಾದ ಸುನೀಥಾದೇವಿಯ ಸಮ್ಮತಿಯನ್ನು ಪಡೆದು, ಮಂತ್ರಿಗಳಿಗೆ ಸಹಮತವಿಲ್ಲದಿದ್ದರೂ ವೇನನನ್ನು ಭೂಮಂಡಲದ ರಾಜ್ಯಕ್ಕೆ ಪಟ್ಟಾಭಿಷೇಕ ಮಾಡಿದರು. ॥ ೨ ॥

ಶ್ರುತ್ವಾ ನೃಪಾಸನಗತಂ ವೇನಮತ್ಯುಗ್ರಶಾಸನಮ್ ।
ನಿಲಿಲ್ಯುರ್ದಸ್ಯವಃ ಸದ್ಯಃ ಸರ್ಪತ್ರಸ್ತಾ ಇವಾಖವಃ ॥ ೩ ॥

ವೇನನು ತುಂಬಾ ಕಠೋರ ಶಾಸಕನಾಗಿದ್ದನು. ಅವನೇ ಸಿಂಹಾಸನಾಧಿಪತಿಯಾಗಿದ್ದಾನೆಂದು ಕೇಳಿದ ಕಳ್ಳ-ಕಾಕರು ಹಾವಿಗೆ ಹೆದರಿದ ಇಲಿಗಳಂತೆ ಒಡನೆಯೇ ಅಲ್ಲಲ್ಲೇ ಅಡಗಿಕೊಂಡರು. ॥ ೩ ॥

ಸ ಆರುಢ ನೃಪಸ್ಥಾನ ಉನ್ನದ್ಧೋಽಷ್ಟ ವಿಭೂತಿಭಿಃ ।
ಅವಮೇನೇ ಮಹಾಭಾಗಾನ್ ಸ್ತಬ್ಧಃ ಸಂಭಾವಿತಃ ಸ್ವತಃ ॥ ೪ ॥

ಸಿಂಹಾಸನವು ದೊರೆತಾಗ ವೇನನು ಅಷ್ಟದಿಕ್ಪಾಲಕರ ಐಶ್ವರ್ಯದ ಕಲೆಯ ಕಾರಣದಿಂದ ಉನ್ಮತ್ತನಾದನು. ಅವನು ದುರಭಿಮಾನದಿಂದ ತನ್ನನ್ನೇ ಸರ್ವಶ್ರೇಷ್ಠನೆಂದು ಭಾವಿಸಿಕೊಂಡು ಮಹಾಪುರುಷರನ್ನು ಅವಮಾನಿಸತೊಡಗಿದನು. ॥ ೪ ॥

ಏವಂ ಮದಾಂಧ ಉತ್ಸಿಕ್ತೋ ನಿರಂಕುಶ ಇವ ದ್ವಿಪಃ।
ಪರ್ಯಟನ್ರಥಮಾಸ್ಥಾಯ ಕಂಪಯನ್ನಿವ ರೋದಸೀ ॥ ೫ ॥

ನ ಯಷ್ಟವ್ಯಂ ನ ದಾತವ್ಯಂ ನ ಹೋತವ್ಯಂ ದ್ವಿಜಾಃ ಕ್ವಚಿತ್।
ಇತಿ ನ್ಯವಾರಯದ್ಧರ್ಮಂ ಭೇರೀಘೋಷೇಣ ಸರ್ವಶಃ ॥ ೬ ॥

ವೇನಸ್ಯಾವೇಕ್ಷ್ಯ ಮುನಯೋ ದುರ್ವೃತ್ತಸ್ಯ ವಿಚೇಷ್ಟಿತಮ್।
ವಿಮೃಶ್ಯ ಲೋಕವ್ಯಸನಂ ಕೃಪಯೋಚುಃ ಸ್ಮ ಸತ್ರಿಣಃ ॥ ೭ ॥

ಅಹೋ ಉಭಯತಃ ಪ್ರಾಪ್ತಂ ಲೋಕಸ್ಯ ವ್ಯಸನಂ ಮಹತ್।
ದಾರುಣ್ಯುಭಯತೋ ದೀಪ್ತೇ ಇವ ತಸ್ಕರಪಾಲಯೋಃ ॥ ೮ ॥

ಅರಾಜಕಭಯಾದೇಷ ಕೃತೋ ರಾಜಾತದರ್ಹಣಃ।
ತತೋಽಪ್ಯಾಸೀದ್ಭಯಂ ತ್ವದ್ಯ ಕಥಂ ಸ್ಯಾತ್ಸ್ವಸ್ತಿ ದೇಹಿನಾಮ್ ॥ ೯ ॥

ಅಹೇರಿವ ಪಯಃಪೋಷಃ ಪೋಷಕಸ್ಯಾಪ್ಯನರ್ಥಭೃತ್।
ವೇನಃ ಪ್ರಕೃತ್ಯೈವ ಖಲಃ ಸುನೀಥಾಗರ್ಭಸಂಭವಃ ॥ ೧೦ ॥

ನಿರೂಪಿತಃ ಪ್ರಜಾಪಾಲಃ ಸ ಜಿಘಾಂಸತಿ ವೈ ಪ್ರಜಾಃ।
ತಥಾಪಿ ಸಾಂತ್ವಯೇಮಾಮುಂ ನಾಸ್ಮಾಂಸ್ತತ್ಪಾತಕಂ ಸ್ಪೃಶೇತ್ ॥ ೧೧ ॥

ತದ್ವಿದ್ವದ್ಭಿರಸದ್ ವೃತ್ತೋ ವೇನೋಽಸ್ಮಾಭಿಃ ಕೃತೋ ನೃಪಃ।
ಸಾಂತ್ವಿತೋ ಯದಿ ನೋ ವಾಚಂ ನ ಗ್ರಹೀಷ್ಯತ್ಯಧರ್ಮಕೃತ್ ॥ ೧೨ ॥

ಲೋಕಧಿಕ್ಕಾರಸಂದಗ್ಧಂ ದಹಿಷ್ಯಾಮಃ ಸ್ವತೇಜಸಾ।
ಏವಮಧ್ಯವಸಾಯೈನಂ ಮುನಯೋ ಗೂಢಮನ್ಯವಃ।
ಉಪವ್ರಜ್ಯಾಬ್ರುವನ್ವೇನಂ ಸಾಂತ್ವಯಿತ್ವಾ ಚ ಸಾಮಭಿಃ ॥ ೧೩ ॥

*ಮುನಯ ಊಚುಃ*

ನೃಪವರ್ಯ ನಿಬೋಧೈತದ್ಯತ್ತೇ ವಿಜ್ಞಾಪಯಾಮ ಭೋಃ।
ಆಯುಃಶ್ರೀಬಲಕೀರ್ತೀನಾಂ ತವ ತಾತ ವಿವರ್ಧನಮ್ ॥ ೧೪ ॥

ಧರ್ಮ ಆಚರಿತಃ ಪುಂಸಾಂ ವಾಙ್ಮನಃಕಾಯಬುದ್ಧಿಭಿಃ।
ಲೋಕಾನ್ವಿಶೋಕಾನ್ವಿತರತ್ಯಥಾನಂತ್ಯಮಸಂಗಿನಾಮ್ ॥ ೧೫ ॥

ಅವನು ಐಶ್ವರ್ಯಮದದಿಂದ ಕುರುಡನಾಗಿ ರಥವನ್ನು ಏರಿ ನಿರಂಕುಶವಾದ ಗಜರಾಜನಂತೆ ಭೂಮಿ ಮತ್ತು ಆಕಾಶಗಳನ್ನು ನಡುಗಿಸುತ್ತಾ ಎಲ್ಲೆಡೆ ಸಂಚರಿಸ ತೊಡಗಿದನು. ॥ ೫ ॥ ಇನ್ನು ಮುಂದೆ ಯಾವ ದ್ವಿಜರು ಯಾವುದೇ ರೀತಿಯ ಯಜ್ಞವನ್ನಾಗಲೀ, ದಾನವನ್ನಾಗಲೀ, ಹವನವನ್ನಾಗಲೀ ಮಾಡಕೂಡದೆಂದು ರಾಜ್ಯದಲ್ಲಿ ಡಂಗುರ ಹೊಡೆಸಿದನು. ಎಲ್ಲ ಧರ್ಮ-ಕರ್ಮಗಳನ್ನು ತಡೆದು ನಿಲ್ಲಿಸಿಬಿಟ್ಟನು. ॥ ೬ ॥

ದುಷ್ಟ ವೇನನ ಇಂತಹ ಅತ್ಯಾಚಾರವನ್ನು ನೋಡಿ ಋಷಿ-ಮುನಿಗಳು ಒಂದೆಡೆ ಸೇರಿ, ಪ್ರಪಂಚಕ್ಕೆ ಮಹಾಸಂಕಟ ಬಂದೊದಗಿದೆ ಎಂದು ತಿಳಿದು ಕನಿಕರದಿಂದ ತಮ್ಮಲ್ಲೇ ಮಾತನಾಡಿಕೊಂಡರು. ॥ ೭ ॥ "ಅಯ್ಯೋ! ಯಾವುದಾದರೂ ಮರವು ಎರಡೂ ಕಡೆಯಿಂದ ಉರಿಯುತ್ತಿರುವಾಗ ಅದರ ನಡುವೆ ಸಿಕ್ಕಿದ ಇರುವೆಯೇ ಮುಂತಾದ ಪ್ರಾಣಿಗಳು ಸಂಕಟಪಡುವಂತೆ ಈಗ ಸಮಸ್ತ ಪ್ರಜೆಯು ಒಂದೆಡೆ ರಾಜನ ಅತ್ಯಾಚಾರಗಳಿಂದ ಉಂಟಾದ ವಿಪತ್ತು, ಮತ್ತೊಂದೆಡೆ ಕಳ್ಳ-ಕಾಕರಿಂದ ಒದಗಿಬಂದ ವಿಪತ್ತುಗಳಿಂದ ಮಹಾಸಂಕಟಕ್ಕೆ ಸಿಲುಕಿದೆ. ॥ ೮ ॥ ಈ ವೇನನು ಅಯೋಗ್ಯನೆಂದು ತಿಳಿದಿದ್ದರೂ ಅರಾಜಕತೆಯು ಬರದಿರಲೆಂದು ನಾವು ಈತನನ್ನು ರಾಜನನ್ನಾಗಿ ಮಾಡಿದೆವು. ಆದರೆ ಈ ರಾಜನಿಂದಲೇ ಪ್ರಜೆಗಳಿಗೆ ಭಯ ಉಂಟಾಗಿದೆ. ಇಂತಹ ಸ್ಥಿತಿಯಲ್ಲಿ ಪ್ರಜೆಗಳಿಗೆ ಹೇಗೆ ತಾನೇ ಸುಖಶಾಂತಿಗಳು ದೊರಕುವುವು? ॥ ೯ ॥ ಸುನೀಥಾಳ ಗರ್ಭದಲ್ಲಿ ಹುಟ್ಟಿರುವ ಈ ವೇನನು ಸ್ವಭಾವದಿಂದಲೇ ದುಷ್ಟನು. ಈತನನ್ನು ನಾವು ರಕ್ಷಿಸಿದುದು ಹಾವಿಗೆ ಹಾಲೆರೆದಂತೆ ಅನರ್ಥಕ್ಕೆ ಕಾರಣವಾಯಿತು. ॥ ೧೦ ॥ ಪ್ರಜೆಗಳನ್ನು ರಕ್ಷಿಸುವ ಸಲುವಾಗಿ ನಾವು ಈತನನ್ನು ನೇಮಕಮಾಡಿದೆವು. ಆದರೆ ಇವನು ಪ್ರಜೆಗಳನ್ನೇ ನಾಶಮಾಡುವುದಕ್ಕಾಗಿ ಬಯಸುತ್ತಿದ್ದಾನೆ. ಆದರೂ ನಾವು ಈತನಿಗೆ ಸಮಾಧಾನದಿಂದ ತಿಳಿವಳಿಕೆ ನೀಡೋಣ. ಹೀಗೆ ಮಾಡಿದರೆ ನಮಗೆ ಈತನ ಪಾಪಗಳು ಅಂಟಿಕೊಳ್ಳುವುದಿಲ್ಲ. ॥ ೧೧ ॥ ನಾವು ತಿಳಿದು-ತಿಳಿದು ಈ ದುರಾಚಾರಿಯನ್ನು ರಾಜನನ್ನಾಗಿ ಮಾಡಿದೆವು. ಆದರೆ ತಿಳಿವಳಿಕೆ ನೀಡಿದರೂ ಈತನು ನಮ್ಮ ಮಾತನ್ನು ಕೇಳದೆಹೋದರೆ, ಲೋಕದ ಧಿಕ್ಕಾರದಿಂದ ಈಗಾಗಲೇ ಸುಟ್ಟುಹೋಗಿರುವ ಈತನನ್ನು ನಮ್ಮ ತೇಜಸ್ಸಿನಿಂದ ಸುಟ್ಟುಹಾಕಿಬಿಡೋಣ." ಹೀಗೆ ವಿಚಾರ ಮಾಡಿದ ಮಹರ್ಷಿಗಳು ವೇನನ ಬಳಿಗೆ ಹೋಗಿ ತಮ್ಮ ಕೋಪವನ್ನು ಪ್ರಕಟಿಸದೆ ಅಡಗಿಸಿಕೊಂಡು ಅವನನ್ನು ಸವಿನುಡಿಗಳಿಂದ ಸಂತೈಸುತ್ತಾ ಹೀಗೆ ಹೇಳತೊಡಗಿದರು. ॥ ೧೨-೧೩ ॥

**ಮುನಿಗಳು ಹೇಳಿದರು –** ರಾಜನೇ! ನಾವು ನಿನ್ನಲ್ಲಿ ಹೇಳುವ ಮಾತುಗಳ ಕುರಿತು ಗಮನಕೊಟ್ಟು ಕೇಳು. ಇದರಿಂದ ನಿನ್ನ ಆಯುಸ್ಸು, ಸಂಪತ್ತು, ಬಲ, ಕೀರ್ತಿಗಳು ವೃದ್ಧಿಹೊಂದುವವು. ॥ ೧೪ ॥ ಅಯ್ಯಾ! ಮನುಷ್ಯನು ಮನಸ್ಸು, ಮಾತು, ಶರೀರ ಮತ್ತು ಬುದ್ಧಿ ಇವುಗಳಿಂದ ಧರ್ಮವನ್ನು ಆಚರಿಸಿದರೆ ಅವನಿಗೆ ಸ್ವರ್ಗಾದಿ ಶೋಕರಹಿತವಾದ ಲೋಕಗಳು ದೊರೆಯುವುವು. ಅದನ್ನೇ ಅವನು ನಿಷ್ಕಾಮಭಾವದಿಂದ ಆಚರಿಸಿದರೆ ಆ ಧರ್ಮವು ಅವನನ್ನು ಮೋಕ್ಷಪದಕ್ಕೆ ಒಯ್ಯುವುದು. ॥ ೧೫ ॥

ಸ ತೇ ಮಾ ವಿನಶೇದ್ವೀರ ಪ್ರಜಾನಾಂ ಕ್ಷೇಮಲಕ್ಷಣಃ ।
ಯಸ್ಮಿನ್ವಿನಷ್ಟೇ ನೃಪತಿರೈಶ್ವರ್ಯಾದವರೋಹತಿ ॥ ೧೬ ॥

ರಾಜನ್ನಸಾಧ್ವಮಾತ್ಯೇಭ್ಯಶ್ಚೋರಾದಿಭ್ಯಃ ಪ್ರಜಾ ನೃಪಃ ।
ರಕ್ಷನ್ ಯಥಾ ಬಲಿಂ ಗೃಹ್ಣನ್ನಿಹ ಪ್ರೇತ್ಯ ಚ ಮೋದತೇ ॥ ೧೭ ॥

ಯಸ್ಯ ರಾಷ್ಟ್ರೇ ಪುರೇ ಚೈವ ಭಗವಾನ್ಯಜ್ಞಪೂರುಷಃ ।
ಇಜ್ಯತೇ ಸ್ವೇನ ಧರ್ಮೇಣ ಜನೈರ್ವರ್ಣಾಶ್ರಮಾನ್ವಿತೈಃ ॥ ೧೮ ॥

ತಸ್ಯ ರಾಜ್ಞೋ ಮಹಾಭಾಗ ಭಗವಾನ್ ಭೂತಭಾವನಃ ।
ಪರಿತುಷ್ಯತಿ ವಿಶ್ವಾತ್ಮಾ ತಿಷ್ಠತೋ ನಿಜಶಾಸನೇ ॥ ೧೯ ॥

ತಸ್ಮಿಂಸ್ತುಷ್ಟೇ ಕಿಮಪ್ರಾಪ್ಯಂ ಜಗತಾಮೀಶ್ವರೇಶ್ವರೇ ।
ಲೋಕಾಃ ಸಪಾಲಾ ಹ್ಯೇತಸ್ಮೈ ಹರಂತಿ ಬಲಿಮಾದೃತಾಃ ॥ ೨೦ ॥

ತಂ ಸರ್ವಲೋಕಾಮರಯಜ್ಞಸಂಗ್ರಹಂ
ತ್ರಯೀಮಯಂ ದ್ರವ್ಯಮಯಂ ತಪೋಮಯಮ್ ।
ಯಜ್ಞೈರ್ವಿಚಿತ್ರೈರ್ಯಜತೋ ಭವಾಯ ತೇ
ರಾಜನ್ ಸ್ವದೇಶಾನನುರೋದ್ಧುಮರ್ಹಸಿ ॥ ೨೧ ॥

ಯಜ್ಞೇನ ಯುಷ್ಮದ್ವಿಷಯೇ ದ್ವಿಜಾತಿಭಿ-
ರ್ವಿತಾಯಮಾನೇನ ಸುರಾಃ ಕಲಾ ಹರೇಃ ।
ಸ್ವಿಷ್ಟಾಃ ಸುತುಷ್ಟಾಃ ಪ್ರದಿಶಂತಿ ವಾಂಛಿತಂ
ತದ್ಧೇಲನಂ ನಾರ್ಹಸಿ ವೀರ ಚೇಷ್ಟಿತುಮ್ ॥ ೨೨ ॥

*ವೇನ ಉವಾಚ*

ಬಾಲಿಶಾ ಬತ ಯೂಯಂ ವಾ ಅಧರ್ಮೇ ಧರ್ಮಮಾನಿನಃ ।
ಯೇ ವೃತ್ತಿದಂ ಪತಿಂ ಹಿತ್ವಾ ಜಾರಂ ಪತಿಮುಪಾಸತೇ ॥ ೨೩ ॥

ಅವಜಾನಂತ್ಯಮೀ ಮೂಢಾ ನೃಪರೂಪಿಣಮೀಶ್ವರಮ್ ।
ನಾನುವಿಂದಂತಿ ತೇ ಭದ್ರಮಿಹ ಲೋಕೇ ಪರತ್ರ ಚ ॥ ೨೪ ॥

ಆದುದರಿಂದ ಎಲೈ ವೀರವರನೇ ! ಪ್ರಜೆಗಳ ಕಲ್ಯಾಣರೂಪವಾದ ಈ ಧರ್ಮವು ನಿನ್ನ ಕಾರಣದಿಂದ ನಾಶವಾಗಬಾರದು. ಧರ್ಮವು ನಷ್ಟವಾದದ್ದೇ ಆದರೆ ಅದರಿಂದ ರಾಜನೂ ಐಶ್ವರ್ಯದಿಂದ ಚ್ಯುತನಾಗುವನು. ॥ ೧೬ ॥ ದುಷ್ಟರಾದ ಮಂತ್ರಿಗಳಿಂದ ಮತ್ತು ಕಳ್ಳ-ಕಾಕರೇ ಮುಂತಾದವರಿಂದ ತನ್ನ ಪ್ರಜೆಗಳನ್ನು ರಕ್ಷಿಸುತ್ತಾ, ನ್ಯಾಯಕ್ಕನುಗುಣವಾದ ಕಂದಾಯ, ಕಪ್ಪ-ಕಾಣಿಕೆಗಳನ್ನು ಪ್ರಜೆಗಳಿಂದ ಸ್ವೀಕರಿಸುವ ರಾಜನು ಇಹಲೋಕ ಮತ್ತು ಪರಲೋಕಗಳೆರಡರಲ್ಲಿಯೂ ಸುಖವನ್ನು ಪಡೆಯುವನು. ॥ ೧೭ ॥

ಎಲೈ ಮಹಾಭಾಗನೇ ! ಯಾವ ರಾಜನ ರಾಜ್ಯದಲ್ಲಿ ಅಥವಾ ನಗರದಲ್ಲಿ ಜನರು ವರ್ಣಾಶ್ರಮ ಧರ್ಮವನ್ನು ಪಾಲಿಸುವರೋ, ಸ್ವಧರ್ಮಪಾಲನೆಯ ಮೂಲಕ ಭಗವಾನ್ ಯಜ್ಞಪುರುಷನನ್ನು ಆರಾಧಿಸುತ್ತಾರೆಯೋ, ಅಂತಹ ತನ್ನ ಆಜ್ಞೆಯನ್ನು ಪಾಲಿಸುವ ರಾಜನ ವಿಷಯದಲ್ಲಿ ಶ್ರೀಭಗವಂತನು ಪ್ರಸನ್ನನಾಗಿರುತ್ತಾನೆ. ಏಕೆಂದರೆ, ಆ ಭಗವಂತನೇ ಇಡೀ ವಿಶ್ವಕ್ಕೆ ಆತ್ಮಸ್ವರೂಪನಾಗಿ, ಸಮಸ್ತ ಪ್ರಾಣಿಗಳನ್ನು ಸಂರಕ್ಷಿಸುತ್ತಿರುವನು. ॥ ೧೮-೧೯॥ ಶ್ರೀಭಗವಂತನೇ ಬ್ರಹ್ಮಾದಿ ಜಗದೀಶ್ವರರಿಗೂ ಈಶ್ವರನಾಗಿದ್ದಾನೆ. ಆತನ ಪ್ರಸನ್ನತೆಯನ್ನು ಸಂಪಾದಿಸಿದರೆ ಯಾವ ವಸ್ತುವೂ ದುರ್ಲಭವಾಗುವುದಿಲ್ಲ. ಅದಕ್ಕಾಗಿಯೇ ಇಂದ್ರನೇ ಮುಂತಾದ ಲೋಕಪಾಲಕರಿಂದೊಡಗೂಡಿದ ಸಮಸ್ತ ಲೋಕಗಳು ಆತನಿಗೆ ಅತ್ಯಂತ ಆದರದಿಂದ ಪೂಜೆ-ಉಪಹಾರಗಳನ್ನು ಸಮರ್ಪಿಸುತ್ತವೆ. ॥ ೨೦ ॥ ಎಲೈ ರಾಜನೇ ! ಭಗವಾನ್ ಶ್ರೀಹರಿಯು ಸಮಸ್ತಲೋಕಗಳಿಗೂ, ಲೋಕಪಾಲಕರಿಗೂ, ಯಜ್ಞಗಳಿಗೂ ನಿಯಾಮಕನಾಗಿದ್ದಾನೆ. ವೇದತ್ರಯರೂಪನೂ, ದ್ರವ್ಯರೂಪನೂ, ತಪೋರೂಪನೂ ಆಗಿರುವನು. ಆದುದರಿಂದ ನಿನ್ನ ದೇಶದಲ್ಲಿ ವಾಸಿಸುವ ಜನರು ನಿನ್ನ ಏಳಿಗೆಗಾಗಿ ಹಲವಾರು ಯಜ್ಞಗಳ ಮೂಲಕ ಶ್ರೀಭಗವಂತನ ಆರಾಧನೆಯನ್ನು ಮಾಡಿದಾಗ ನೀನು ಅದಕ್ಕೆ ಅನುಕೂಲವಾಗಿಯೇ ವರ್ತಿಸಬೇಕು. ॥ ೨೧ ॥ ನಿನ್ನ ರಾಜ್ಯದಲ್ಲಿ ಬ್ರಾಹ್ಮಣರು ಯಜ್ಞಗಳನ್ನು ಆಚರಿಸಿದಾಗ ಶ್ರೀಭಗವಂತನ ಅಂಶರೂಪವಾದ ದೇವತೆಗಳು ಅವರ ಪೂಜೆಯಿಂದ ಪ್ರಸನ್ನರಾಗಿ ನಿನ್ನ ಮನಸ್ಸಿಗೆ ಇಷ್ಟವಾದ ಫಲವನ್ನು ಅನುಗ್ರಹಿಸುವರು. ಆದುದರಿಂದ ಎಲೈ ವೀರನೇ ! ನೀನು ಯಜ್ಞವೇ ಮುಂತಾದ ಧರ್ಮಾನುಷ್ಠಾನಗಳನ್ನು ನಿಲ್ಲಿಸಿ ದೇವತೆಗಳನ್ನು ತಿರಸ್ಕರಿಸುವುದು ಉಚಿತವಲ್ಲ. ॥ ೨೨ ॥

**ವೇನನು ಹೇಳಿದನು** – ಮುನಿಜನರೇ ! ನೀವು ತುಂಬಾ ಮೂರ್ಖರಿದ್ದೀರಿ. ಅಯ್ಯೋ ! ನೀವು ಅಧರ್ಮದಲ್ಲೇ ಧರ್ಮಬುದ್ಧಿಯನ್ನಿರಿಸಿದ್ದೀರಿ. ಅದರಿಂದಲೇ ನಿಮಗೆ ಜೀವನವೃತ್ತಿಯನ್ನು ಕೊಡುವ ಸಾಕ್ಷಾತ್ ಪತಿಯಾಗಿರುವ ನನ್ನನ್ನು ಬಿಟ್ಟು ಬೇರೆ ಯಾವನೋ ಜಾರನಾದ ಪತಿಯನ್ನು ಉಪಾಸನೆ ಮಾಡುತ್ತಿದ್ದೀರಿ. ॥ ೨೩ ॥ ರಾಜನ ರೂಪದಲ್ಲಿರುವ ಈಶ್ವರನನ್ನು ಮೂರ್ಖತನದಿಂದಾಗಿ ಅನಾದರಿಸುವ ಜನರಿಗೆ ಈ ಲೋಕದಲ್ಲಿಯೂ ಸುಖ ಸಿಗುವುದಿಲ್ಲ; ಪರಲೋಕದಲ್ಲಿಯೂ ಸುಖ ದೊರೆಯುವುದಿಲ್ಲ. ॥ ೨೪ ॥

ಕೋ ಯಜ್ಞಪುರುಷೋ ನಾಮ ಯತ್ರ ವೋ ಭಕ್ತಿರೀದೃಶೀ ।
ಭರ್ತೃಸ್ನೇಹವಿದೂರಾಣಾಂ ಯಥಾ ಜಾರೇ ಕುಯೋಷಿತಾಮ್ ॥ ೨೫ ॥

ವಿಷ್ಣುರ್ವಿರಿಂಚೋ ಗಿರಿಶ ಇಂದ್ರೋ ವಾಯುರ್ಯಮೋ ರವಿಃ ।
ಪರ್ಜನ್ಯೋ ಧನದಃ ಸೋಮಃ ಕ್ಷಿತಿರಗ್ನಿರಪಾಂಪತಿಃ ॥ ೨೬ ॥

ಏತೇ ಚಾನ್ಯೇ ಚ ವಿಬುಧಾಃ ಪ್ರಭವೋ ವರಶಾಪಯೋಃ ।
ದೇಹೇ ಭವಂತಿ ನೃಪತೇಃ ಸರ್ವದೇವಮಯೋ ನೃಪಃ ॥ ೨೭ ॥

ತಸ್ಮಾನ್ಮಾಂ ಕರ್ಮಭಿರ್ವಿಪ್ರಾ ಯಜಧ್ವಂ ಗತಮತ್ಸರಾಃ ।
ಬಲಿಂ ಚ ಮಹ್ಯಂ ಹರತ ಮತ್ತೋಽನ್ಯಃ ಕೋಽಗ್ರಭುಕ್ಪುಮಾನ್ ॥ ೨೮ ॥

ಮೈತ್ರೇಯ ಉವಾಚ

ಇತ್ಥಂ ವಿಪರ್ಯಯಮತಿಃ ಪಾಪೀಯಾನುತ್ಪಥಂ ಗತಃ ।
ಅನುನೀಯಮಾನಸ್ತದ್ಯಾಂಚಾಂ ನ ಚಕ್ರೇ ಭ್ರಷ್ಟಮಂಗಲಃ ॥ ೨೯ ॥

ಇತಿ ತೇಽಸತ್ಕೃತಾಸ್ತೇನ ದ್ವಿಜಾಃ ಪಂಡಿತಮಾನಿನಾ ।
ಭಗ್ನಾಯಾಂ ಭವ್ಯಯಾಂಚ್ಯಾಯಾಂ ತಸ್ಮೈ ವಿದುರ ಚುಕ್ರುಧುಃ ॥ ೩೦ ॥

ಹನ್ಯತಾಂ ಹನ್ಯತಾಮೇಷ ಪಾಪಃ ಪ್ರಕೃತಿದಾರುಣಃ ।
ಜೀವಂಜಗದಸಾವಾಶು ಕುರುತೇ ಭಸ್ಮಸಾದ್ಧ್ರುವಮ್ ॥ ೩೧ ॥

ನಾಯಮರ್ಹತ್ಯಸದ್‌ವೃತ್ತೋ ನರದೇವವರಾಸನಮ್ ।
ಯೋಽಧಿಯಜ್ಞಪತಿಂ ವಿಷ್ಣುಂ ವಿನಿಂದತ್ಯನಪತ್ರಪಃ ॥ ೩೨ ॥

ಕೋ ವೈನಂ ಪರಿಚಕ್ಷೀತ ವೇನಮೇಕಮೃತೇಽಶುಭಮ್ ।
ಪ್ರಾಪ್ತ ಈದೃಶಮೈಶ್ವರ್ಯಂ ಯದನುಗ್ರಹಭಾಜನಃ ॥ ೩೩ ॥

ಇತ್ಥಂ ವ್ಯವಸಿತಾ ಹಂತುಮೃಷಯೋ ರೂಢಮನ್ಯವಃ ।
ನಿಜಘ್ನುರ್ಹುಂಕೃತೈರ್ವೇನಂ ಹತಮಚ್ಯುತನಿಂದಯಾ ॥ ೩೪ ॥

ಋಷಿಭಿಃ ಸ್ವಾಶ್ರಮಪದಂ ಗತೇ ಪುತ್ರಕಲೇವರಮ್ ।
ಸುನೀಥಾ ಪಾಲಯಾಮಾಸ ವಿದ್ಯಾಯೋಗೇನ ಶೋಚತೀ ॥ ೩೫ ॥

ಏಕದಾ ಮುನಯಸ್ತೇ ತು ಸರಸ್ವತ್ಸಲಿಲಾಪ್ಲುತಾಃ ।
ಹುತ್ವಾಗ್ನೀನ್ ಸತ್ಕಥಾಶ್ಚಕ್ರುರುಪವಿಷ್ಟಾಃ ಸರಿತ್ತಟೇ ॥ ೩೬ ॥

ನೀವೆಲ್ಲ ಇಷ್ಟು ಭಕ್ತಿಯನ್ನು ಯಾರಲ್ಲಿ ತೋರಿಸುತ್ತಿರುವಿರೋ ಆ ಯಜ್ಞಪುರುಷನು ಯಾರು ? ಕೈಹಿಡಿದ ಗಂಡನಲ್ಲಿ ಪ್ರೀತಿಯನ್ನು ತೋರದೆ ಮಿಂಡನಲ್ಲಿ ಆಸಕ್ತರಾಗಿರುವ ಹೆಂಗಸರಂತೆ ಆಯಿತು ಇದು. ॥ ೨೫ ॥ ವಿಷ್ಣು ಬ್ರಹ್ಮ, ಶಿವ, ಇಂದ್ರ, ವಾಯು, ಯಮ, ಸೂರ್ಯ, ಪರ್ಜನ್ಯ, ಕುಬೇರ, ಚಂದ್ರ, ಪೃಥಿವಿ, ಅಗ್ನಿ, ವರುಣ – ಇವರಲ್ಲದೆ ವರವನ್ನೂ, ಶಾಪವನ್ನೂ ಕೊಡುವ ಸಾಮರ್ಥ್ಯವುಳ್ಳ ಇತರ ದೇವತೆಗಳೆಲ್ಲರೂ ರಾಜನ ಶರೀರದಲ್ಲಿ ವಾಸಮಾಡುತಿರುವುದರಿಂದ ರಾಜನೇ ಸರ್ವದೇವಮಯನು. ಎಲ್ಲ ದೇವತೆಗಳೂ ಆತನ ಅಂಶಗಳು ಮಾತ್ರ ಆಗಿದ್ದಾರೆ. ॥ ೨೬-೨೭ ॥ ಅದಕ್ಕಾಗಿ ಎಲೈ ಬ್ರಾಹ್ಮಣರೇ! ನೀವು ಮಾತ್ಸರ್ಯವನ್ನು ಬಿಟ್ಟು ನಿಮ್ಮ ಎಲ್ಲ ಕರ್ಮಗಳ ಮೂಲಕ ನನ್ನನ್ನೇ ಪೂಜಿಸಿರಿ. ನನಗೇ ಕಪ್ಪ- ಕಾಣಿಕೆಗಳನ್ನು ಸಮರ್ಪಿಸಿರಿ. ಅಗ್ರಪೂಜೆಯ ಅಧಿಕಾರ ನನಗಲ್ಲದೆ ಬೇರೆ ಯಾರಿಗೆ ತಾನೇ ಇದೆ ? ॥ ೨೮ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ! ಈ ರೀತಿಯಲ್ಲಿ ವಿಪರೀತ ಬುದ್ಧಿಯಿಂದ ಕೂಡಿ ಕಡುಪಾಪಿಯಾಗಿ, ದುರ್ಮಾರ್ಗವನ್ನು ಹಿಡಿದಿದ್ದ ವೇನನಿಗೆ ಪುಣ್ಯವು ಕ್ಷೀಣಿಸಿದ್ದರಿಂದ ಅವನು ಮುನಿಗಳ ವಿನಯಪೂರ್ವಕ ವಿಜ್ಞಾಪನೆಗೂ ಕಿವಿಗೊಡಲಿಲ್ಲ. ॥ ೨೯ ॥ ವಿದುರನೇ! ದುರಹಂಕಾರದಿಂದ ತನ್ನನ್ನು ಅತ್ಯಂತ ಬುದ್ಧಿಶಾಲಿಯೆಂದು ತಿಳಿದುಕೊಂಡು ವೇನನು ಹೀಗೆ ಆ ಮುನಿಗಳ ಅಪಮಾನ ಮಾಡಿದಾಗ ತಮ್ಮ ಬೇಡಿಕೆಯು ವ್ಯರ್ಥವಾದುದನ್ನು ಕಂಡು ಅವರಿಗೆ ಮಿತಿಮೀರಿದ ಕೋಪ ಉಂಟಾಯಿತು. ॥ ೩೦ ॥ ಸ್ವಭಾವದಿಂದಲೇ ದುಷ್ಟ ಪಾಪಿಯಾದ ಇವನನ್ನು ಸಾಯಿಸಿ ಬಿಡಬೇಕು. ಕೊಂದುಹಾಕಲೇಬೇಕು. ಈತನೇನಾದರೂ ಬದುಕಿದ್ದರೆ ಕೆಲವೇ ದಿನಗಳಲ್ಲಿ ಜಗತ್ತನ್ನೇ ಸುಟ್ಟು ಬೂದಿಮಾಡಿಬಿಡುವನು. ॥ ೩೧ ॥ ಈ ದುರಾಚಾರಿಯೂ ಯಾವ ರೀತಿಯಿಂದಲೂ ರಾಜ ಸಿಂಹಾಸನಕ್ಕೆ ಯೋಗ್ಯನಾಗಿಲ್ಲ. ಏಕೆಂದರೆ, ಈ ನಿರ್ಲಜ್ಜನು ಯಜ್ಞಪತಿಯಾದ ಸಾಕ್ಷಾತ್ ಮಹಾವಿಷ್ಣುವನ್ನೇ ನಿಂದೆ ಮಾಡುತ್ತಿರುವನು. ॥ ೩೨ ॥ ಯಾರ ಅನುಗ್ರಹದಿಂದ ಇಷ್ಟೆಲ್ಲಾ ಐಶ್ವರ್ಯವು ದೊರೆತಿದೆಯೋ, ಅಂತಹ ಶ್ರೀಹರಿಯನ್ನು ಅಶುಭ ಸ್ವಭಾವದ ವೇನನನ್ನು ಬಿಟ್ಟು ಬೇರೆ ಯಾರು ತಾನೇ ನಿಂದಿಸಿಯಾರು ? ॥ ೩೩ ॥

ತಾವು ಅಡಗಿಸಿಕೊಂಡಿದ್ದ ಕೋಪವನ್ನು ಹೀಗೆ ಪ್ರಕಟಪಡಿಸಿದ ಆ ಮುನಿಗಳು ಅವನನ್ನು ಕೊಂದುಬಿಡಲು ನಿಶ್ಚಯಿಸಿದರು. ಅವನಾದರೋ ಭಗವಂತನನ್ನು ನಿಂದಿಸಿದ ಕಾರಣದಿಂದ ಮೊದಲೇ ಸತ್ತಿದ್ದನು. ಅದಕ್ಕಾಗಿ ಅವರು ಕೇವಲ ಹುಂಕಾರದಿಂದಲೇ ಆತನ ಕತೆಯನ್ನು ಮುಗಿಸಿಬಿಟ್ಟರು. ॥ ೩೪ ॥ ಮುನಿಗಳು ತಮ್ಮ-ತಮ್ಮ ಆಶ್ರಮಗಳಿಗೆ ಹೊರಟುಹೋದ ಬಳಿಕ ಇತ್ತ ವೇನನ ಶೋಕಾಕುಲ ತಾಯಿ ಸುನೀಥೆಯು ಮಾತ್ರ ಮಂತ್ರಾದಿಗಳ ಬಲದಿಂದ ಹಾಗೂ ಇತರ ಯುಕ್ತಿಗಳಿಂದ ತನ್ನಪುತ್ರನ ಕಳೇಬರವನ್ನು ರಕ್ಷಿಸಿದಳು. ॥ ೩೫ ॥

ಒಂದು ದಿನ ಆ ಮುನಿಗಳು ಸರಸ್ವತಿಯ ಪವಿತ್ರಜಲದಲ್ಲಿ ಸ್ನಾನಮಾಡಿ, ಅಗ್ನಿಹೋತ್ರಾದಿಗಳಿಂದ ನಿವೃತ್ತರಾಗಿ ನದೀತೀರದಲ್ಲಿ ಕುಳಿತು ಶ್ರೀಹರಿಯ ಕುರಿತು ಚರ್ಚೆಮಾಡುತ್ತಿದ್ದರು. ॥ ೩೬ ॥

ವೀಕ್ಷ್ಯೋತ್ಥಿತಾಂಸ್ತದೋತ್ಪಾತಾ-
ನಾಹುರ್ಲೋಕಭಯಂಕರಾನ್ ।
ಅಪ್ಯಭದ್ರಮನಾಥಾಯಾ
ದಸ್ಯುಭ್ಯೋ ನ ಭವೇದ್ಭುವಃ ॥ ೩೭ ॥

ಏವಂ ಮೃಶಂತ ಋಷಯೋ
ಧಾವತಾಂ ಸರ್ವತೋದಿಶಮ್ ।
ಪಾಂಸುಃ ಸಮುತ್ಥಿತೋ ಭೂರಿಶ್ಚೋ-
ರಾಣಾಮಭಿಲುಂಪತಾಮ್ ॥ ೩೮ ॥

ತದುಪದ್ರವಮಾಜ್ಞಾಯ ಲೋಕಸ್ಯ ವಸು ಲುಂಪತಾಮ್ ।
ಭರ್ತರ್ಯುಪರತೇ ತಸ್ಮಿನ್ನನ್ಯೋನ್ಯಂ ಚ ಜಿಘಾಂಸತಾಮ್ ॥ ೩೯ ॥

ಚೋರಪ್ರಾಯಂಜನಪದಂ ಹೀನಸತ್ತ್ವಮರಾಜಕಮ್ ।
ಲೋಕಾನ್ನಾವಾರಯಂಛಕ್ತಾ ಅಪಿ ತದ್ದೋಷದರ್ಶಿನಃ ॥ ೪೦ ॥

ಬ್ರಾಹ್ಮಣಃ ಸಮದೃಕ್ ಶಾಂತೋ ದೀನಾನಾಂ ಸಮುಪೇಕ್ಷಕಃ ।
ಸ್ರವತೇ ಬ್ರಹ್ಮ ತಸ್ಯಾಪಿ ಭಿನ್ನಭಾಂಡಾತ್ಪಯೋ ಯಥಾ ॥ ೪೧ ॥

ನಾಂಗಸ್ಯ ವಂಶೋ ರಾಜರ್ಷೇರೇಷ ಸಂಸ್ಥಾತುಮರ್ಹತಿ ।
ಅಮೋಘವೀರ್ಯಾ ಹಿ ನೃಪಾ ವಂಶೇಽಸ್ಮಿನ್ಕೇಶವಾಶ್ರಯಾಃ ॥ ೪೨ ॥

ವಿನಿಶ್ಚಿತ್ಯೈವಮೃಷಯೋ ವಿಪನ್ನಸ್ಯ ಮಹೀಪತೇಃ ।
ಮಮಂಥುರೂರುಂ ತರಸಾ ತತ್ರಾಸೀದ್ಬಾಹುಕೋ ನರಃ ॥ ೪೩ ॥

ಕಾಕಕೃಷ್ಣೋಽತಿಹ್ರಸ್ವಾಂಗೋ ಹ್ರಸ್ವಬಾಹುರ್ಮಹಾಹನುಃ ।
ಹ್ರಸ್ವಪಾನ್ನಿಮ್ನನಾಸಾಗ್ರೋ ರಕ್ತಾಕ್ಷಸ್ತಾಮ್ರಮೂರ್ಧಜಃ ॥ ೪೪ ॥

ತಂ ತು ತೇಽವನತಂ ದೀನಂ ಕಿಂ ಕರೋಮೀತಿ ವಾದಿನಮ್ ।
ನಿಷೀದೇತ್ಯಬ್ರುವನ್‌ಸ್ತಾತ ಸ ನಿಷಾದಸ್ತತೋಽಭವತ್ ॥ ೪೫ ॥

ತಸ್ಯ ವಂಶ್ಯಾಸ್ತು ನೈಷಾದಾ ಗಿರಿಕಾನನಗೋಚರಾಃ ।
ಯೇನಾಹರಜ್ಜಾಯಮಾನೋ ವೇನಕಲ್ಮಷಮುಲ್ಬಣಮ್ ॥ ೪೬ ॥

ಆಗ ಲೋಕಗಳಲ್ಲೆಲ್ಲ ಆತಂಕವನ್ನು ಹರಡುವ ಅನೇಕ ಉಪದ್ರವಗಳು ಆಗುತ್ತಿರುವುದನ್ನು ನೋಡಿ ತಮ್ಮ-ತಮ್ಮಲ್ಲೇ ಹೇಳಿಕೊಂಡರು. 'ಇಂದು ಪೃಥ್ವಿಯ ರಕ್ಷಕರು ಯಾರೂ ಇಲ್ಲ. ಆದರಿಂದ ಕಳ್ಳ-ಕಾಕರ ಕಾರಣದಿಂದ ಇಡೀ ಭೂಮಿಗೆ ಕೇಡು ಉಂಟಾದರೆ ಏನು ಗತಿ ? ॥ ೩೭ ॥ ಋಷಿಗಳು ಹೀಗೆ ವಿಚಾರ ಮಾಡುತ್ತಿರುವಾಗಲೇ ಎಲ್ಲ ದಿಕ್ಕುಗಳಲ್ಲಿಯೂ ಧಾಳಿ ಮಾಡಲು ಬರುತ್ತಿದ್ದ ಕಳ್ಳರ ಮತ್ತು ದರೋಡೆಕೋರರ ಕಡೆಯಿಂದ ಧೂಳಿನ ರಾಶಿಯು ಏಳುತ್ತಿದ್ದುದು ಅವರಿಗೆ ಕಾಣಿಸಿತು. ॥ ೩೮ ॥ ರಾಜನಾದ ವೇನನು ಮೃತನಾದುದರಿಂದ ದೇಶದಲ್ಲಿ ಅರಾಜಕತೆಯು ಹರಡಿದೆ. ರಾಜ್ಯವು ಶಕ್ತಿಹೀನವಾಗಿ ಬಿಟ್ಟಿದೆ. ಕಳ್ಳ-ಕಾಕರ ಸಂಖ್ಯೆ ಹೆಚ್ಚಿದೆ. ಹಣವನ್ನು ಲೂಟಿಮಾಡುವ ಮತ್ತು ಒಬ್ಬರನ್ನೊಬ್ಬರು ತಿಂದುಹಾಕುವ ದರೋಡೆಗಾರರಿಂದಲೇ ಈ ಹಾವಳಿಯು ಉಂಟಾಗಿದೆ' ಎಂಬುದು ಅವರಿಗೆ ತಿಳಿಯಿತು. ತಮ್ಮ ತೇಜಸ್ಸಿನಿಂದ ಅಥವಾ ತಪೋಬಲದಿಂದ ಜನರನ್ನು ಕುತ್ಸಿತವಾದ ಪ್ರವೃತ್ತಿಯಿಂದ ತಡೆಯುವ ಸಾಮರ್ಥ್ಯವು ತಮ್ಮಲ್ಲಿದ್ದರೂ, ಹೀಗೆ ಮಾಡುವುದರಲ್ಲಿ ಹಿಂಸಾದಿ ದೋಷಗಳನ್ನು ಕಂಡು ಅವರು ಅದನ್ನು ನಿವಾರಣೆ ಮಾಡಲಿಲ್ಲ. ॥ ೩೯-೪೦ ॥ ಮತ್ತೆ ಯೋಚಿಸಿ ದರು – ಬ್ರಾಹ್ಮಣರು ಸಮದರ್ಶಿ, ಶಾಂತಸ್ವಭಾವದವರಾಗಿದ್ದರೂ ದೀನರನ್ನು ಉಪೇಕ್ಷೆ ಮಾಡಿದರೆ – ಒಡೆದುಹೋದ ಮಡಕೆಯಿಂದ ನೀರು ಸೋರಿ ಹೋಗುವಂತೆ ಅವರ ತಪಸ್ಸು ನಾಶವಾಗಿ ಹೋಗುತ್ತದೆ. ॥ ೪೧ ॥ ಇದಲ್ಲದೆ ರಾಜರ್ಷಿಯಾದ ಅಂಗಮಹಾ ರಾಜನ ವಂಶವೂ ನಾಶವಾಗ ಬಾರದು. ಏಕೆಂದರೆ, ಇದರಲ್ಲಿ ಅನೇಕರು ಅಮೋಘಶಕ್ತಿ ಸಂಪನ್ನರೂ, ಭಗವತ್ಪರಾಯಣ ರಾಜರೂ ಆಗಿಹೋಗಿದ್ದಾರೆ. ॥ ೪೨ ॥ ಹೀಗೆ ನಿಶ್ಚಯಿಸಿ ಅವರು ಮೃತನಾಗಿದ್ದ ವೇನರಾಜನ ತೊಡೆಯನ್ನು ಬಲವಾಗಿ ಕಡೆದರು. ಆಗ ಅದರಿಂದ ಒಬ್ಬ ಕುಬ್ಜ ಮನುಷ್ಯನು ಆವಿರ್ಭವಿಸಿದನು. ॥ ೪೩ ॥ ಅವನು ಕಾಗೆಯಂತೆ ಕಪ್ಪಾಗಿದ್ದು, ಅವನ ಎಲ್ಲ ಅವಯವಗಳು ಮತ್ತು ವಿಶೇಷವಾಗಿ ತೋಳುಗಳು ತುಂಬಾ ಗಿಡ್ಡವಾಗಿದ್ದವು. ಅವನ ಗಲ್ಲವು ಮಾತ್ರ ಉದ್ದವಾಗಿತ್ತು. ಅತಿ ಚಿಕ್ಕ ಕಾಲುಗಳು, ಹಳ್ಳವಾದ ಮೂಗು, ಕೆಂಪು ಕಣ್ಣುಗಳು, ತಾಮ್ರದಂತೆ ಕಡುಕೆಂಪಾದ ಕೂದಲುಗಳಿದ್ದವು. ॥ ೪೪ ॥ ಅವನು ಬಹಳ ದೈನ್ಯದಿಂದಲೂ, ವಿನಯದಿಂದಲೂ ಮಹರ್ಷಿಗಳನ್ನು 'ನಾನೇನು ಮಾಡಲಿ'? ಎಂದು ಕೇಳಿದಾಗ, ಅವರು 'ನಿಷೀದ (ಕುಳಿತುಕೋ) ಎಂದು ಹೇಳಿದರು. ಇದರಿಂದ ಅವನಿಗೆ ನಿಷಾದನೆಂಬ ಹೆಸರಾಯಿತು. ॥ ೪೫ ॥ ಅವನು ಹುಟ್ಟುವಾಗಲೇ ರಾಜಾ ವೇನನ ಭಯಂಕರ ಪಾಪಗಳನ್ನು ಹೊತ್ತುಬಂದಿದ್ದರಿಂದ ಅವನ ವಂಶದವರಾದ ನಿಷಾದರೂ ಕೂಡ ಹಿಂಸೆ, ಲೂಟಿ, ದರೋಡೆಗಳೇ ಮುಂತಾದ ಪಾಪಕರ್ಮಗಳಲ್ಲಿ ನಿರತರಾದರು. ಅವರು ಊರು- ನಗರಗಳಲ್ಲಿ ವಾಸಿಸದೆ ವನ-ಪರ್ವತಗಳಲ್ಲೇ ವಾಸಮಾಡುತ್ತಾರೆ. ॥ ೪೬ ॥

*ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪೃಥುಚರಿತೇ ನಿಷಾದೋತ್ಪತ್ತಿರ್ನಾಮ ಚತುರ್ದಶೋಽಧ್ಯಾಯಃ ॥ ೧೪ ॥

# ಹದಿನೈದನೆಯ ಅಧ್ಯಾಯ

## ಪೃಥು ಚಕ್ರವರ್ತಿಯ ಆವಿರ್ಭಾವ ಮತ್ತು ರಾಜ್ಯಾಭಿಷೇಕ

*ಮೈತ್ರೇಯ ಉವಾಚ*

**ಅಥ ತಸ್ಯ ಪುನರ್ವಿಪ್ರೈರಪುತ್ರಸ್ಯ ಮಹೀಪತೇಃ ।
ಬಾಹುಭ್ಯಾಂ ಮಥ್ಯಮಾನಾಭ್ಯಾಂ ಮಿಥುನಂ ಸಮಪದ್ಯತ ॥ ೧ ॥**

**ತದ್ ದೃಷ್ಟ್ವಾ ಮಿಥುನಂ ಜಾತಮೃಷಯೋ ಬ್ರಹ್ಮವಾದಿನಃ ।
ಊಚುಃ ಪರಮಸಂತುಷ್ಟಾ ವಿದಿತ್ವಾ ಭಗವತ್ಕಲಾಮ್ ॥ ೨ ॥**

*ಋಷಯ ಊಚುಃ*

**ಏಷ ವಿಷ್ಣೋರ್ಭಗವತಃ ಕಲಾ ಭುವನಪಾಲಿನೀ ।
ಇಯಂ ಚ ಲಕ್ಷ್ಮ್ಯಾಃ ಸಂಭೂತಿಃ ಪುರುಷಸ್ಯಾನಪಾಯಿನೀ ॥ ೩ ॥**

**ಅಯಂ ತು ಪ್ರಥಮೋ ರಾಜ್ಞಾಂ ಪುಮಾನ್ ಪ್ರಥಯಿತಾ ಯಶಃ ।
ಪೃಥುರ್ನಾಮ ಮಹಾರಾಜೋ ಭವಿಷ್ಯತಿ ಪೃಥುಶ್ರವಾಃ ॥ ೪ ॥**

**ಇಯಂ ಚ ಸುದತೀ ದೇವೀ ಗುಣಭೂಷಣಭೂಷಣಾ ।
ಅರ್ಚಿರ್ನಾಮ ವರಾರೋಹಾ ಪೃಥುಮೇವಾವರುಂಧತೀ ॥ ೫ ॥**

**ಏಷ ಸಾಕ್ಷಾದ್ಧರೇರಂಶೋ ಜಾತೋ ಲೋಕರಿರಕ್ಷಯಾ ।
ಇಯಂ ಚ ತತ್ಪರಾ ಹಿ ಶ್ರೀರನುಜಜ್ಞೇಽನಪಾಯಿನೀ ॥ ೬ ॥**

*ಮೈತ್ರೇಯ ಉವಾಚ*

**ಪ್ರಶಂಸಂತಿ ಸ್ಮ ತಂ ವಿಪ್ರಾ ಗಂಧರ್ವಪ್ರವರಾ ಜಗುಃ ।
ಮುಮುಚುಃ ಸುಮನೋಧಾರಾಃ ಸಿದ್ಧಾ ನೃತ್ಯಂತಿ ಸ್ವಃಸ್ತ್ರಿಯಃ ॥ ೭ ॥**

**ಶಂಖತೂರ್ಯಮೃದಂಗಾದ್ಯಾ ನೇದುರ್ದುಂದುಭಯೋ ದಿವಿ ।
ತತ್ರ ಸರ್ವ ಉಪಾಜಗ್ಮುರ್ದೇವರ್ಷಿಪಿತೃಣಾಂ ಗಣಾಃ ॥ ೮ ॥**

**ಬ್ರಹ್ಮಾ ಜಗದ್ಗುರುರ್ದೇವೈಃ ಸಹಾಸೃತ್ಯ ಸುರೇಶ್ವರೈಃ ।
ವೈನ್ಯಸ್ಯ ದಕ್ಷಿಣೇ ಹಸ್ತೇ ದೃಷ್ಟ್ವಾ ಚಿಹ್ನಂ ಗದಾಭೃತಃ ॥ ೯ ॥**

**ಪಾದಯೋರರವಿಂದಂ ಚ ತಂ ವೈ ಮೇನೇ ಹರೇಃ ಕಲಾಮ್ ।
ಯಸ್ಯಾಪ್ರತಿಹತಂ ಚಕ್ರಮಂಶಃ ಸ ಪರಮೇಷ್ಠಿನಃ ॥ ೧೦ ॥**

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಅನಂತರ ಆ ಮಹರ್ಷಿಗಳು ಪುತ್ರಹೀನನಾದ ವೇನರಾಜನ ಭುಜಗಳನ್ನು ಕಡೆದಾಗ ಅವುಗಳಿಂದ ಒಂದು ಗಂಡುಮಗು, ಒಂದು ಹೆಣ್ಣುಮಗುವಿನ ಜೋಡಿಯು ಪ್ರಕಟವಾಯಿತು. ॥ ೧ ॥ ಆ ಜೋಡಿಯು ಉತ್ಪನ್ನವಾಗಿರುವುದನ್ನು ನೋಡಿ ಬ್ರಹ್ಮವಾದಿಗಳಾದ ಮಹರ್ಷಿಗಳು 'ಇದು ಭಗವಂತನ ಅಂಶಾವತಾರ' ಎಂದು ತಿಳಿದು ಅತ್ಯಂತ ಸಂತುಷ್ಟರಾಗಿ ಹೀಗೆಂದರು. ॥ ೨ ॥

**ಋಷಿಗಳು ಹೇಳಿದರು** – ಈ ಗಂಡುಮಗುವು ಭಗವಾನ್ ಶ್ರೀವಿಷ್ಣುವಿನ ಭುವನಪಾಲಿನಿಯಾದ ಕಲೆಯಿಂದ (ಅಂಶದಿಂದ) ಪ್ರಕಟವಾಗಿದೆ. ಹಾಗೆಯೇ ಈ ಹೆಣ್ಣುಮಗುವು ಆ ಪರಮಪುರುಷನನ್ನು ಎಂದೂ ಅಗಲದೇ ಇರುವ ಶ್ರೀಲಕ್ಷ್ಮೀದೇವಿಯ ಅಂಶಾವತಾರವಾಗಿದೆ. ॥ ೩ ॥ ಈ ಪುರುಷಶಿಶುವು ರಾಜರಿಗೆಲ್ಲ ಮೊದಲಿಗನಾಗಿ ತನ್ನ ಸುಕೀರ್ತಿಯನ್ನು ಎಲ್ಲೆಲ್ಲಿಯೂ ಪ್ರಥನ (ವಿಸ್ತಾರ) ಪಡಿಸುವುದರಿಂದ 'ಪೃಥು' ಎಂಬ ನಾಮಧೇಯದಿಂದ ಪ್ರಖ್ಯಾತನಾಗುವನು. ॥ ೪ ॥ ಅಂತೆಯೇ ಸುಂದರವಾದ ಹಲ್ಲುಗಳಿಂದ ಕೂಡಿ, ಸದ್ಗುಣಗಳಿಂದ ಭೂಷಿತೆಯಾಗಿ ದಿವ್ಯ ಪ್ರಕಾಶದಿಂದ ಬೆಳಗುತ್ತಿರುವ ಈ ಹೆಣ್ಣುಮಗುವು 'ಅರ್ಚಿ' (ಪ್ರಕಾಶ) ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ಈ ಪೃಥು ಚಕ್ರವರ್ತಿಯನ್ನೇ ತನ್ನ ಪತಿಯನ್ನಾಗಿ ವರಿಸುವಳು. ॥ ೫ ॥ ಪೃಥುವಿನ ರೂಪದಲ್ಲಿ ಸಾಕ್ಷಾತ್ ಶ್ರೀಮನ್ನಾರಾಯಣನ ಅಂಶವೇ ಲೋಕರಕ್ಷಣೆಗಾಗಿ ಅವತರಿಸಿದೆ. ಹಾಗೆಯೇ ಅರ್ಚಿಯ ರೂಪದಲ್ಲಿ ನಿರಂತರವಾಗಿ ಶ್ರೀಹರಿಯ ಸೇವೆಯಲ್ಲಿ ಸದಾ ನಿರತಳಾಗಿ, ಆತನ ಸಹಚರಿಯಾದ ಶ್ರೀಲಕ್ಷ್ಮೀದೇವಿಯೇ ಆವಿರ್ಭವಿಸಿದ್ದಾಳೆ. ॥ ೬ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ವಿದುರನೇ ! ಆಗ ಬ್ರಾಹ್ಮಣರು ಪೃಥುವನ್ನು ಸ್ತುತಿಸತೊಡಗಿದರು. ಗಂಧರ್ವಶ್ರೇಷ್ಠರು ಆತನ ಗುಣಗಾನ ಮಾಡಿದರು. ಸಿದ್ಧರು ಪುಷ್ಪವೃಷ್ಟಿಯನ್ನು ಗೈದರು. ಅಪ್ಸರೆಯರು ನಾಟ್ಯವಾಡತೊಡಗಿದರು. ॥ ೭ ॥ ಆಕಾಶದಲ್ಲಿ ಶಂಖ, ತೂರ್ಯ, ಮೃದಂಗ, ದುಂದುಭಿ ಮುಂತಾದ ವಾದ್ಯಗಳು ಮೊಳಗಿದವು. ಸಮಸ್ತ ದೇವತೆಗಳೂ, ಋಷಿಗಳೂ, ಪಿತೃಗಳೂ ತಮ್ಮ-ತಮ್ಮ ಲೋಕಗಳಿಂದ ಅಲ್ಲಿಗೆ ಆಗಮಿಸಿದರು. ॥ ೮ ॥ ಜಗತ್ತಿಗೆ ಗುರುವಾದ ಬ್ರಹ್ಮದೇವರೂ ಇತರ ದೇವತಾ ಮುಖ್ಯರೊಂದಿಗೆ ದಯಮಾಡಿಸಿದರು. ಅವರು ಆ ವೇನಪುತ್ರ ಪೃಥುವಿನ ಬಲಗೈಯಲ್ಲಿ ಭಗವಾನ್ ಶ್ರೀವಿಷ್ಣುವಿನ ಹಸ್ತರೇಖೆಗಳನ್ನೂ, ಕಾಲು ಗಳಲ್ಲಿ ಕಮಲದ ಚಿಹ್ನೆಗಳನ್ನು ಕಂಡು ಅವನು ಶ್ರೀಹರಿಯ ಅಂಶವೆಂದೇ ತಿಳಿದರು. ಏಕೆಂದರೆ ಯಾರ ಕೈಯಲ್ಲಿ ಇತರ ರೇಖೆಗಳ ಮಿಶ್ರಣವಿಲ್ಲದೆ ಚಕ್ರದ ಚಿಹ್ನೆಯು ಇರುತ್ತದೋ ಅವನು ಭಗವಂತನ ಅಂಶನೇ ಆಗಿರುತ್ತಾನೆ. ॥ ೯-೧೦ ॥

ತಸ್ಯಾಭಿಷೇಕ ಆರಬ್ಧೋ ಬ್ರಾಹ್ಮಣೈರ್ಬ್ರಹ್ಮವಾದಿಭಿಃ ।
ಅಭಿಷೇಚನಿಕಾನ್ಯಸ್ಮೈ ಆಜಹ್ರುಃ ಸರ್ವತೋ ಜನಾಃ
॥ ೧೧ ॥

ಸರಿತ್ಸಮುದ್ರಾ ಗಿರಯೋ ನಾಗಾ ಗಾವಃ ಖಗಾ ಮೃಗಾಃ ।
ದ್ಯೌಃ ಕ್ಷಿತಿಃ ಸರ್ವಭೂತಾನಿ ಸಮಾಜಹ್ರುರುಪಾಯನಮ್
॥ ೧೨ ॥

ಸೋಽಭಿಷಿಕ್ತೋ ಮಹಾರಾಜಃ ಸುವಾಸಾಃ ಸಾಧ್ವಲಂಕೃತಃ ।
ಪತ್ನ್ಯಾರ್ಚಿಷಾಲಂಕೃತಯಾ ವಿರೇಜೇಽಗ್ನಿರಿವಾಪರಃ
॥ ೧೩ ॥

ತಸ್ಮೈ ಜಹಾರ ಧನದೋ ಹೈಮಂ ವೀರ ವರಾಸನಮ್ ।
ವರುಣಃ ಸಲಿಲಸ್ರಾವಮಾತಪತ್ರಂ ಶಶಿಪ್ರಭಮ್
॥ ೧೪ ॥

ವಾಯುಶ್ಚ ವಾಲವ್ಯಜನೇ ಧರ್ಮಃ ಕೀರ್ತಿಮಯೀಂ ಸ್ರಜಮ್ ।
ಇಂದ್ರಃ ಕಿರೀಟಮುತ್ಕೃಷ್ಟಂ ದಂಡಂ ಸಂಯಮನಂ ಯಮಃ
॥ ೧೫ ॥

ಬ್ರಹ್ಮಾ ಬ್ರಹ್ಮಮಯಂ ವರ್ಮ ಭಾರತೀ ಹಾರಮುತ್ತಮಮ್ ।
ಹರಿಃ ಸುದರ್ಶನಂ ಚಕ್ರಂ ತತ್ಪತ್ನ್ಯವ್ಯಾಹತಾಂ ಶ್ರಿಯಮ್
॥ ೧೬ ॥

ದಶಚಂದ್ರಮಸಿಂ ರುದ್ರಃ ಶತಚಂದ್ರಂ ತಥಾಂಬಿಕಾ ।
ಸೋಮೋಽಮೃತಮಯಾನಶ್ವಾಂಸ್ತ್ವಷ್ಟಾ ರೂಪಾಶ್ರಯಂ ರಥಮ್
॥ ೧೭ ॥

ಅಗ್ನಿರಾಜಗವಂ ಚಾಪಂ ಸೂರ್ಯೋ ರಶ್ಮಿಮಯಾನಿಷೂನ್ ।
ಭೂಃ ಪಾದುಕೇ ಯೋಗಮಯ್ಯೌ ದ್ಯೌಃ ಪುಷ್ಪಾವಲಿಮನ್ವಹಮ್ ॥ ೧೮ ॥

ನಾಟ್ಯಂ ಸುಗೀತಂ ವಾದಿತ್ರಮಂತರ್ಧಾನಂ ಚ ಖೇಚರಾಃ ।
ಋಷಯಶ್ಚಾಶಿಷಃ ಸತ್ಯಾಃ ಸಮುದ್ರಃ ಶಂಖಮಾತ್ಮಜಮ್
॥ ೧೯ ॥

ಸಿಂಧವಃ ಪರ್ವತಾ ನದ್ಯೋ ರಥವೀಥೀರ್ಮಹಾತ್ಮನಃ ।
ಸೂತೋಽಥ ಮಾಗಧೋ ವಂದೀ ತಂ ಸ್ತೋತುಮುಪತಸ್ಥಿರೇ
॥ ೨೦ ॥

ಸ್ತಾವಕಾಂಸ್ತಾನಭಿಪ್ರೇತ್ಯ ಪೃಥುರ್ವೈನ್ಯಃ ಪ್ರತಾಪವಾನ್ ।
ಮೇಘನಿರ್ಹ್ರಾದಯಾ ವಾಚಾ ಪ್ರಹಸನ್ನಿದಮಬ್ರವೀತ್
॥ ೨೧ ॥

ವೇದವಾದಿಗಳಾದ ಬ್ರಾಹ್ಮಣರು ಮಹಾರಾಜಾ ಪೃಥುವಿನ ಪಟ್ಟಾಭಿಷೇಕ ಮಾಡಬೇಕೆಂದು ಸಿದ್ಧತೆ ನಡೆಸಿದರು. ಎಲ್ಲ ಜನರೂ ಅದಕ್ಕಾಗಿ ಸಾಮಗ್ರಿಗಳನ್ನು ಸಂಗ್ರಹಿಸತೊಡಗಿದರು. ॥ ೧೧ ॥ ಆಗ ನದಿಗಳು, ಸಮುದ್ರಗಳು, ಪರ್ವತಗಳು, ಸರ್ಪಗಳು, ಗೋವುಗಳು, ಪಕ್ಷಿಗಳು, ಮೃಗಗಳು, ಸ್ವರ್ಗಲೋಕ, ಭೂಲೋಕಗಳು, ಇತರ ಪ್ರಾಣಿಗಳೂ ಆ ರಾಜನಿಗೆ ನಾನಾಬಗೆಯ ಕಾಣಿಕೆಗಳನ್ನು ಅರ್ಪಿಸಿದರು. ॥ ೧೨ ॥ ಸುಂದರವಾದ ಉಡಿಗೆ-ತೊಡಿಗೆಗಳಿಂದ ಅಲಂಕೃತನಾಗಿದ್ದ ಪೃಥುಮಹಾರಾಜನಿಗೆ ವಿಧಿವತ್ತಾಗಿ ಪಟ್ಟಾಭಿಷೇಕ ನಡೆಯಿತು. ಆಗ ದಿವ್ಯ ವಸ್ತ್ರಾಭರಣಗಳಿಂದ ಅಲಂಕೃತೆಯಾದ ಮಹಾರಾಣಿ ಅರ್ಚಿಯಿಂದೊಡಗೂಡಿದ ಪೃಥುವು ಮತ್ತೊಬ್ಬ ಅಗ್ನಿದೇವನಂತೆ ಬೆಳಗುತ್ತಿದ್ದನು. ॥ ೧೩ ॥

ವೀರವರ ವಿದುರನೇ! ಆಗ ಕುಬೇರನು ಆತನಿಗೆ ಅತಿ ಸುಂದರವಾದ ಸಿಂಹಾಸನವನ್ನು ಸಮರ್ಪಿಸಿದನು. ವರುಣನು ನೀರಿನ ಹನಿಗಳು ತೊಟ್ಟಿಕ್ಕುತ್ತಿದ್ದ ಚಂದ್ರನಂತೆ ಪ್ರಕಾಶಮಯ ಶ್ವೇತ ಛತ್ರವನ್ನು ಅರ್ಪಣೆಮಾಡಿದನು. ॥ ೧೪ ॥ ವಾಯುವು ಎರಡು ದಿವ್ಯವಾದ ಚಾಮರಗಳನ್ನು, ಧರ್ಮದೇವತೆಯು ಕೀರ್ತಿಮಯವಾದ ಮಾಲೆಯನ್ನು, ಇಂದ್ರನು ಮನೋಹರ ಕಿರೀಟವನ್ನೂ, ಯಮನು ದುಷ್ಟರನ್ನು ದಮನಗೊಳಿಸುವ ದಂಡವನ್ನೂ, ಬ್ರಹ್ಮದೇವರು ವೇದಮಯ ಕವಚವನ್ನು, ಸರಸ್ವತಿಯು ಸುಂದರವಾದ ಹಾರವನ್ನು, ಭಗವಾನ್ ಮಹಾವಿಷ್ಣುವು ಸುದರ್ಶನಚಕ್ರವನ್ನು, ಆತನ ಮನದನ್ನೆಯಾದ ಲಕ್ಷ್ಮೀದೇವಿಯು ಶಾಶ್ವತವಾದ ಐಶ್ವರ್ಯವನ್ನು, ರುದ್ರದೇವರು ಹತ್ತು ಚಂದ್ರಾಕಾರದ ಚಿಹ್ನೆಗಳಿಂದ ಬೆಳಗುತ್ತಿದ್ದ ಒರೆಸಹಿತ ಖಡ್ಗವನ್ನು, ಅಂಬಿಕಾದೇವಿಯು ನೂರು ಚಂದ್ರಾಕಾರ ಚಿಹ್ನೆಗಳಿಂದ ಶೋಭಿಸುವ ಗುರಾಣಿಯನ್ನು, ಚಂದ್ರನು ಅಮೃತಮಯವಾದ ಅಶ್ವಗಳನ್ನು, ವಿಶ್ವಕರ್ಮನು ಸುಂದರವಾದ ರಥವನ್ನು, ಅಗ್ನಿಯು ಆಜಗವ ಎಂಬ ದೃಢವಾದ ಧನುಸ್ಸನ್ನು, ಸೂರ್ಯನು ತೇಜೋಮಯವಾದ ಬಾಣಗಳನ್ನು, ಭೂದೇವಿಯು ಇಷ್ಟಬಂದ ಕಡೆಗೆ ಕೊಂಡೊಯ್ಯುವ ಯೋಗಶಕ್ತಿಯಿಂದ ಕೂಡಿದ ಪಾದುಕೆಗಳನ್ನು, ಸ್ವರ್ಗಾಭಿಮಾನಿ ದ್ಯುದೇವತೆಯು ಎಂದೆಂದಿಗೂ ಬಾಡದಿರುವ ಪುಷ್ಪಮಾಲೆಯನ್ನು ಆಕಾಶವಿಹಾರಿಗಳಾದ ಸಿದ್ಧ-ಗಂಧರ್ವಾದಿಗಳು ನೃತ್ಯ-ಗಾನ-ವಾದ್ಯವಾದನ ಮಾಡುವ ಕಲೆಯನ್ನು ಮತ್ತು ಇಷ್ಟ ಬಂದಾಗ ಅಂತರ್ಧಾನಹೊಂದುವ ಶಕ್ತಿಗಳನ್ನು ಬಳುವಳಿಯಾಗಿ ಕೊಟ್ಟರು. ಋಷಿಗಳು ಅಮೋಘವಾದ ಆಶೀರ್ವಾದಗಳನ್ನು ಅನುಗ್ರಹಿಸಿದರು. ಸಮುದ್ರರಾಜನು ತನ್ನಲ್ಲಿ ದೊರೆತ ದಿವ್ಯ ಶಂಖವನ್ನು ಸಮರ್ಪಿಸಿದನು. ಸಪ್ತಸಾಗರಗಳೂ, ಪರ್ವತಗಳೂ, ನದಿಗಳೂ ಆತನ ರಥಕ್ಕೆ ಅಡೆ-ತಡೆಯಿಲ್ಲದ ಮಾರ್ಗವನ್ನು ಕಾಣಿಕೆಯಾಗಿ ಕೊಟ್ಟವು. ಇದಾದ ಬಳಿಕ ಸೂತರು, ವಂದಿಗಳು, ಮಾಗಧರೆಂಬ ಹೊಗಳುಭಟ್ಟರು ಆತನಿಗೆ ಸ್ತೋತ್ರ ಸೇವೆಯನ್ನು ಸಮರ್ಪಿಸಲು ಮುಂದೆ ಬಂದರು. ॥ ೧೫-೨೦ ॥ ಆಗ ಆ ಪ್ರತಾಪಶಾಲಿಯಾದ ಪೃಥುಚಕ್ರವರ್ತಿಯು ಅವರ ಆಶಯವನ್ನು ಅರಿತು, ನಗುತ್ತಾ ಮೇಘದಂತೆ ಗಂಭೀರವಾದ ಮಾತುಗಳಿಂದ ಹೀಗೆಂದನು.॥ ೨೧ ॥

ಪೃಥುರುವಾಚ

ಭೋಃ ಸೂತ ಹೇ ಮಾಗಧ ಸೌಮ್ಯ ವಂದಿ-
ಲ್ಲೋಕೇಽಧುನಾಸ್ಪಷ್ಟಗುಣಸ್ಯ ಮೇ ಸ್ಯಾತ್ ।
ಕಿಮಾಶ್ರಯೋ ಮೇ ಸ್ತವ ಏಷ ಯೋಜ್ಯತಾಂ
ಮಾ ಮಯ್ಯಭೂವನ್ವಿತಥಾ ಗಿರೋ ವಃ ॥ ೨೨ ॥

ಪೃಥುವು ಹೇಳಿದನು – ಸೌಮ್ಯರಾದ ಸೂತ-ಮಾಗಧ-ವಂದಿಗಳೇ! ನನ್ನ ಯಾವ ಗುಣವೂ ಇಲ್ಲಿಯವರೆಗೆ ಲೋಕದಲ್ಲಿ ಪ್ರಕಟವಾಗಿಲ್ಲ. ಹೀಗಿರುವಾಗ ನನ್ನ ಯಾವಗುಣಗಳನ್ನು ಸ್ತೋತ್ರ ಮಾಡುವಿರಿ? ನಿಮ್ಮ ಮಾತುಗಳು ವ್ಯರ್ಥವಾಗಬಾರದು. ನನ್ನ ಬಗೆಗೆ ಸುಳ್ಳುಹೊಗಳಿಕೆಯಾಗಬಾರದು. ಆದ್ದರಿಂದ ನನ್ನಿಂದ ಬೇರೆ ಯಾರನ್ನಾದರೂ ಸ್ತುತಿಮಾಡಿರಿ. ॥ ೨೨ ॥ ಎಲೈ ಮೃದುಭಾಷಿಗಳೇ! ಕಾಲಾಂತರದಲ್ಲಿ ನನ್ನ ಗುಣಗಳು ಪ್ರಕಟವಾದಾಗ ಅವುಗಳನ್ನು ಬಾಯಿತುಂಬಾ ಸವಿಮಾತುಗಳಿಂದ ಸ್ತುತಿಸುವಿರಂತೆ. ಪವಿತ್ರಕೀರ್ತಿಯುಳ್ಳ ಶ್ರೀಭಗವಂತನ ಗುಣಗಳನ್ನು ಸ್ತೋತ್ರಮಾಡಬಹುದಾಗಿರುವಾಗ ಅದನ್ನು ಬಿಟ್ಟು ಶಿಷ್ಟರಾದವರು ತುಚ್ಛವಾದ ನರಸ್ತುತಿಯನ್ನು ಮಾಡುವುದಿಲ್ಲ. ॥ ೨೩ ॥ ಮಹಾನ್ ಗುಣಗಳನ್ನು ಧಾರಣೆ ಮಾಡಲು ಸಾಮರ್ಥ್ಯವಿದ್ದರೂ, ಯಾವುದು ತನ್ನಲ್ಲಿ ಇಲ್ಲದಿದ್ದರೂ ಕೇವಲ ಊಹಾಮಾತ್ರದಿಂದ ಸ್ತುತಿಮಾಡುವವರ ಮೂಲಕ ಯಾವ ಬುದ್ಧಿವಂತ ಮನುಷ್ಯನು ತನ್ನನ್ನು ಹೊಗಳಿಸಿಕೊಳ್ಳಬಲ್ಲನು? ಏಕೆಂದರೆ ಗುಣಗಳು ಪ್ರಕಟಗೊಳ್ಳುವ ಮೊದಲೇ ಸ್ತುತಿಸುವುದು ವಂಚನೆಯೇ ಆಗಿದೆ. ಜನರು ಈ ರೀತಿ ತನ್ನನ್ನು ಅಪಹಾಸ್ಯ ಮಾಡುತ್ತಿದ್ದಾರೆ ಎಂಬುದನ್ನು ಆ ತಿಳಿಗೇಡಿಯು ತಿಳಿಯುವುದಿಲ್ಲ. ॥ ೨೪ ॥ ಲಜ್ಜೆಯುಳ್ಳ ಉದಾರ ಪುರುಷನು ತನ್ನ ಯಾವುದೋ ನಿಂದಿತ ಪರಾಕ್ರಮದ ಚರ್ಚೆ ನಡೆದರೆ ಅದರ ಕುರಿತು ಜುಗುಪ್ಸೆಪಡುತ್ತಾರೆ. ಹೀಗೆಯೇ ಲೋಕವಿಖ್ಯಾತ ಸಮರ್ಥ ಮನುಷ್ಯರು ತನ್ನ ಸ್ತುತಿಯನ್ನೂ ನಿಂದೆಯೆಂದೇ ತಿಳಿಯುತ್ತಾರೆ. ॥ ೨೫ ॥ ಎಲೈ ಸೂತರೇ! ಇನ್ನೂ ನಾವು ನಮ್ಮ ಶ್ರೇಷ್ಠವಾದ ಕರ್ಮಗಳಿಂದ ಲೋಕದಲ್ಲಿ ಪ್ರಸಿದ್ಧಿಗೆ ಬರಲಿಲ್ಲ. ಪ್ರಶಂಸೆಗೆ ಯೋಗ್ಯವಾದ ಯಾವ ಕರ್ಮವನ್ನೂ ಮಾಡಿಲ್ಲ. ಹೀಗಿರುವಾಗ ಬಾಲಕರಂತೆ ನಿಮ್ಮಿಂದ ಹೇಗೆ ಹೊಗಳಿಸಿಕೊಳ್ಳಲಿ? ॥ ೨೬ ॥

ತಸ್ಮಾತ್ಪರೋಕ್ಷೇಽಸ್ಮ ದುಪಶ್ರುತಾನ್ಯಲಂ-
ಕರಿಷ್ಯಥ ಸ್ತೋತ್ರಮಪೀಚ್ಯವಾಚಃ ।
ಸತ್ಯುತ್ತಮಶ್ಲೋಕಗುಣಾನುವಾದೇ
ಜುಗುಪ್ಸಿತಂ ನ ಸ್ತವಯಂತಿ ಸಭ್ಯಾಃ ॥ ೨೩ ॥

ಮಹದ್ಗುಣಾನಾತ್ಮನಿ ಕರ್ತುಮೀಶಃ
ಕಃ ಸ್ತಾವಕೈಃ ಸ್ತಾವಯತೇಽಸತೋಽಪಿ ।
ತೇಽಸ್ಯಾಭವಿಷ್ಯನ್ನಿತಿ ವಿಪ್ರಲಬ್ಧೋ
ಜನಾವಹಾಸಂ ಕುಮತಿರ್ನ ವೇದ ॥ ೨೪ ॥

ಪ್ರಭವೋ ಹ್ಯಾತ್ಮನಃ ಸ್ತೋತ್ರಂ ಜುಗುಪ್ಸಂತ್ಯಪಿ ವಿಶ್ರುತಾಃ ।
ಹ್ರೀಮಂತಃ ಪರಮೋದಾರಾಃ ಪೌರುಷಂ ವಾ ವಿಗರ್ಹಿತಮ್ ॥ ೨೫ ॥

ವಯಂ ತ್ವವಿದಿತಾ ಲೋಕೇ ಸೂತಾದ್ಯಾಪಿ ವರೀಮಭಿಃ ।
ಕರ್ಮಭಿಃ ಕಥಮಾತ್ಮಾನಂ ಗಾಪಯಿಷ್ಯಾಮ ಬಾಲವತ್ ॥ ೨೬ ॥

*ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪೃಥುಚರಿತೇ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ವಂದಿ ಮಾಗಧರಿಂದ ಪೃಥುಚಕ್ರವರ್ತಿಯ ಸ್ತುತಿ

ಮೈತ್ರೇಯ ಉವಾಚ

ಇತಿ ಬ್ರುವಾಣಂ ನೃಪತಿಂ ಗಾಯಕಾ ಮುನಿಚೋದಿತಾಃ ।
ತುಷ್ಟುವುಸ್ತುಷ್ಟಮನಸಸ್ತದ್ವಾಗಮೃತಸೇವಯಾ ॥ ೧ ॥

ನಾಲಂ ವಯಂ ತೇ ಮಹಿಮಾನುವರ್ಣನೇ
ಯೋ ದೇವವರ್ಯೋಽವತತಾರ ಮಾಯಯಾ ।

ಶ್ರೀಮೈತ್ರೇಯರು ಹೇಳುತ್ತಾರೆ – ಹೀಗೆ ಪೃಥು ಮಹಾರಾಜನು 'ತನ್ನನ್ನು ಈಗ ಸ್ತುತಿಸಬಾರದು' ಎಂದು ಹೇಳಿದಾಗ ಅವನ ವಚನಾಮೃತವನ್ನು ಆಸ್ವಾದಿಸಿದ ಸೂತರೇ ಮುಂತಾದ ಗಾಯಕರ ಮನಸ್ಸು ಆನಂದದಿಂದ ತುಂಬಿಹೋಯಿತು. ಮತ್ತೆ ಮುನಿಗಳ ಪ್ರೇರಣೆಯಿಂದ ಅವರು ಪೃಥುಚಕ್ರವರ್ತಿಯನ್ನು ಹೀಗೆ ಸ್ತುತಿಸತೊಡಗಿದರು. ॥ ೧ ॥ ''ಮಹಾಪ್ರಭುವೇ ನೀನು ಸಾಕ್ಷಾತ್ ದೇವಶ್ರೇಷ್ಠನಾದ ಶ್ರೀನಾರಾಯಣನೇ ಆಗಿರುವೆ. ನಿನ್ನ ಮಾಯೆ

ವೇನಾಂಗ ಜಾತಸ್ಯ ಚ ಪೌರುಷಾಣಿ ತೇ
ವಾಚಸ್ಪತೀನಾಮಪಿ ಬಭ್ರಮುರ್ಧಿಯಃ ॥ ೨ ॥

ಅಥಾಪ್ಯುದಾರಶ್ರವಸಃ ಪೃಥೋರ್ಹರೇಃ
ಕಲಾವತಾರಸ್ಯ ಕಥಾಮೃತಾದೃತಾಃ ।
ಯಥೋಪದೇಶಂ ಮುನಿಭಿಃ ಪ್ರಚೋದಿತಾಃ
ಶ್ಲಾಘ್ಯಾನಿ ಕರ್ಮಾಣಿ ವಯಂ ವಿತನ್ಮಹಿ ॥ ೩ ॥

ಏಷ ಧರ್ಮಭೃತಾಂ ಶ್ರೇಷ್ಠೋ
ಲೋಕಂ ಧರ್ಮೇಽನುವರ್ತಯನ್ ।
ಗೋಪ್ತಾ ಚ ಧರ್ಮಸೇತೂನಾಂ
ಶಾಸ್ತಾ ತತ್ಪರಿಪಂಥಿನಾಮ್ ॥ ೪ ॥

ಏಷ ವೈ ಲೋಕಪಾಲಾನಾಂ
ಬಿಭರ್ತ್ಯೇಕಸ್ತನೌ ತನೂಃ ।
ಕಾಲೇ ಕಾಲೇ ಯಥಾಭಾಗಂ
ಲೋಕಯೋರುಭಯೋರ್ಹಿತಮ್ ॥ ೫ ॥

ವಸು ಕಾಲ ಉಪಾದತ್ತೇ ಕಾಲೇ ಚಾಯಂ ವಿಮುಂಚತಿ ।
ಸಮಃ ಸರ್ವೇಷು ಭೂತೇಷು ಪ್ರತಪನ್ಸೂರ್ಯವದ್ವಿಭುಃ
॥ ೬ ॥

ತಿತಿಕ್ಷತ್ಯಕ್ರಮಂ ವೈನ್ಯ ಉಪರ್ಯಾಕ್ರಮತಾಮಪಿ ।
ಭೂತಾನಾಂ ಕರುಣಃ ಶಶ್ವದಾರ್ತಾನಾಂ ಕ್ಷಿತಿವೃತ್ತಿಮಾನ್
॥ ೭ ॥

ದೇವೇಽವರ್ಷತ್ಯಸೌ ದೇವೋ ನರದೇವವಪುರ್ಹರಿಃ ।
ಕೃಚ್ಛ್ರಪ್ರಾಣಾಃ ಪ್ರಜಾ ಹ್ಯೇಷ ರಕ್ಷಿಷ್ಯತ್ಯಂಜಸೇಂದ್ರವತ್
॥ ೮ ॥

ಆಪ್ಯಾಯಯತ್ಯಸೌ ಲೋಕಂ ವದನಾಮೃತಮೂರ್ತಿನಾ ।
ಸಾನುರಾಗಾವಲೋಕೇನ ವಿಶದಸ್ಮಿತಚಾರುಣಾ
॥ ೯ ॥

ಅವ್ಯಕ್ತವರ್ತ್ಮೈಷ ನಿಗೂಢಕಾರ್ಯೋ
ಗಂಭೀರವೇಧಾ ಉಪಗುಪ್ತವಿತ್ತಃ ।
ಅನಂತಮಾಹಾತ್ಮ್ಯಗುಣೈಕಧಾಮಾ
ಪೃಥುಃ ಪ್ರಚೇತಾ ಇವ ಸಂವೃತಾತ್ಮಾ ॥ ೧೦ ॥

ಯಿಂದ ಅವತರಿಸಿರುವೆ. ನಿನ್ನ ಮಹಿಮೆಯನ್ನು ವರ್ಣಿಸಲು ನಮಗೇನೂ ಶಕ್ತಿಯಿಲ್ಲ. ರಾಜಾ ವೇನನ ಮೃತಶರೀರದಿಂದ ಆವಿರ್ಭವಿಸಿದ್ದರೂ ನೀನು ಅಪ್ರಾಕೃತನಾದ ಭಗವಂತನೇ ಆಗಿರುವುದರಿಂದ ನಿನ್ನ ದಿವ್ಯವಾದ ಪೌರುಷಗಳನ್ನು ವರ್ಣಿಸಲು ಸಾಕ್ಷಾತ್ ಬ್ರಹ್ಮಾದಿಗಳ ಬುದ್ಧಿಯೂ ಮಸಳಿ ಹೋಗುವುದು. ॥ ೨ ॥ ಆದರೂ ನಿನ್ನ ಕಥಾಮೃತವನ್ನು ಸವಿಯುವುದರಲ್ಲಿ ಆದರ ಬುದ್ಧಿಯನ್ನು ಹೊಂದಿ, ನಾವು ಮುನಿಗಳ ಉಪದೇಶಕ್ಕನುಸಾರ, ಅವರ ಪ್ರೇರಣೆಯಿಂದಲೇ ನಿನ್ನ ಪರಮ ಪ್ರಶಂಸನೀಯವಾದ ಕರ್ಮಗಳನ್ನು ಸ್ವಲ್ಪ ವಿವರಿಸಲು ಬಯಸುತ್ತೇವೆ. ನೀನು ಸಾಕ್ಷಾತ್ ಶ್ರೀಹರಿಯ ಕಲಾವತಾರನಾಗಿದ್ದು ಉದಾರವಾದ ಕೀರ್ತಿಯುಳ್ಳವನು. ॥ ೩ ॥

ಈ ಪೃಥುಚಕ್ರವರ್ತಿಯು ಧರ್ಮವನ್ನು ಧರಿಸಿ ಪೋಷಿಸುವವರಲ್ಲಿ ಅತ್ಯಂತ ಶ್ರೇಷ್ಠನು. ಲೋಕವನ್ನು ಧರ್ಮದಲ್ಲಿ ನೆಲೆಗೊಳಿಸಿ ಧರ್ಮಮಾರ್ಗದಲ್ಲಿ ನಡೆಸುವವನು. ಧರ್ಮಸೇತುವನ್ನು ಕಾಪಾಡುವವನು. ಧರ್ಮವಿರೋಧಿಗಳನ್ನು ದಂಡಿಸುವವನು. ॥ ೪ ॥ ಇವನು ಒಬ್ಬನೇ ಆಗಿದ್ದರೂ ತನ್ನ ಶರೀರದಲ್ಲಿ ಇಂದ್ರನೇ ಮುಂತಾದ ಎಲ್ಲ ಲೋಕಪಾಲಕರ ಮೂರ್ತಿಗಳನ್ನು ಧರಿಸಿಕೊಂಡು ಆಯಾ ಸಮಯದಲ್ಲಿ ಭೂಲೋಕ, ಸ್ವರ್ಗಲೋಕ ಈ ಎರಡಕ್ಕೂ ಹಿತ ಉಂಟಾಗುವಂತೆ ಧರ್ಮಗಳನ್ನು ಕಾಪಾಡುವನು. ಯಜ್ಞಾದಿಗಳ ಮೂಲಕ ಲೋಕಕ್ಕೆ ಮಳೆ-ಬೆಳೆಗಳನ್ನೂ, ದೇವತೆಗಳಿಗೆ ಹವಿರ್ಭಾಗಗಳನ್ನೂ ನೀಡುತ್ತಾ ಎರಡೂ ಲೋಕಗಳನ್ನೂ ಪೊರೆಯುವವನು. ॥ ೫ ॥ ಈತನು ಸೂರ್ಯನಿಗೆ ಸಮಾನವಾಗಿ ಮಹಾಪ್ರತಾಪಿಯೂ, ಸಮದರ್ಶಿಯೂ, ವ್ಯಾಪಕನೂ ಆಗಿರುವನು. ಆದಿತ್ಯನು ಎಂಟು ತಿಂಗಳ ಕಾಲ ಬಿಸಿಲನ್ನರೆದು ಜಲವನ್ನೂ ಸೆಳೆದುಕೊಂಡು ವರ್ಷಾಕಾಲದಲ್ಲಿ ಹೇರಳವಾಗಿ ಮಳೆಗರೆದು ಲೋಕಕ್ಕೆ ಹಿತವನ್ನುಂಟುಮಾಡುವಂತೆ ಈತನು ಸುಭಿಕ್ಷಕಾಲದಲ್ಲಿ ಜನರಿಂದ ಕಂದಾಯದ ಮೂಲಕ ಧನವನ್ನು ಸಂಗ್ರಹಿಸಿ ಅದನ್ನು ಪ್ರಜೆಯ ಹಿತಕ್ಕಾಗಿ ವ್ಯಯಮಾಡುವನು. ॥ ೬ ॥ ಈ ಮಹಾತ್ಮನು ಕ್ಷಮಾಗುಣದಲ್ಲಿ ಭೂದೇವಿಗೆ ಸಮಾನವಾಗಿರುವನು. ಯಾರಾದರೂ ದೀನ ಜನರು ತನ್ನ ಮೇಲೆ ಆಕ್ರಮಣಮಾಡಿದರೂ ಕರುಣೆಯಿಂದ ಅವರ ಅಪರಾಧಗಳನ್ನು ಸೈರಿಸಿಕೊಳ್ಳುವನು. ॥ ೭ ॥ ಎಂದಾದರೂ ಮಳೆಬರದೆ ಪ್ರಜೆಗಳು ಸಂಕಟಕ್ಕೊಳಗಾದರೆ ಈ ರಾಜರೂಪಿಯಾದ ಶ್ರೀಹರಿಯು ಇಂದ್ರನಂತೆ ಮಳೆಗರೆದು ಸಹಜವಾಗಿ ಅವರನ್ನು ಪೊರೆಯುವನು. ॥ ೮ ॥ ಇವನು ತನ್ನ ಅಮೃತಮಯ ಮುಖ ಚಂದ್ರದ ಮನೋಹರ ಮುಗುಳ್ನಗೆಯಿಂದ, ಪ್ರೀತಿಯನ್ನೊಸರಿಸುವ ಸವಿನೋಟದಿಂದ ಸಮಸ್ತಲೋಕಕ್ಕೆ ಆನಂದವನ್ನು ಉಂಟುಮಾಡುವನು. ॥ ೯ ॥ ಇವನ ಗತಿಯನ್ನು ಇತರರು ಅರಿಯಲಾರರು. ಇವನ ಕಾರ್ಯಗಳೂ ಕೂಡ ಗುಪ್ತವಾಗಿರುವವು. ಅವನ್ನು ಯಶಸ್ವಿಯಾಗಿಸುವ ಕ್ರಮವೂ ತುಂಬಾ ಗಂಭೀರವಾಗಿರುವುದು. ಇವನ ಧನವು ಸದಾಕಾಲ ಸುರಕ್ಷಿತವಾಗಿರುವುದು. ಅನಂತ ಮಹಾತ್ಮ್ಯ ಮತ್ತು ಗುಣ ರತ್ನಗಳಿಗೆ ಏಕಮಾತ್ರ ಆಶ್ರಯನಾಗಿರುವನು. ಹೀಗೆ ಈ ಪೃಥುವು ಸಾಕ್ಷಾತ್ ವರುಣನಿಗೆ ಸಮಾನ ನಾಗುವನು. ॥ ೧೦ ॥

ದುರಾಸದೋ ದುರ್ವಿಷಹ ಆಸನ್ನೋಽಪಿ ವಿದೂರವತ್ ।
ನೈವಾಭಿಭವಿತುಂ ಶಕ್ಯೋ ವೇನಾರಣ್ಯುತ್ಥಿತೋಽನಲಃ
॥ ೧೧ ॥

ಅಂತರ್ಬಹಿಶ್ಚ ಭೂತಾನಾಂ ಪಶ್ಯನ್ಕರ್ಮಾಣಿ ಚಾರಣೈಃ ।
ಉದಾಸೀನ ಇವಾಧ್ಯಕ್ಷೋ ವಾಯುರಾತ್ಮೇವ ದೇಹಿನಾಮ್
॥ ೧೨ ॥

ನಾದಂಡ್ಯಂ ದಂಡಯತ್ಯೇಷ ಸುತಮಾತ್ಮದ್ವಿಷಾಮಪಿ ।
ದಂಡಯತ್ಯಾತ್ಮಜಮಪಿ ದಂಡ್ಯಂ ಧರ್ಮಪಥೇ ಸ್ಥಿತಃ
॥ ೧೩ ॥

ಅಸ್ಯಾಪ್ರತಿಹತಂ ಚಕ್ರಂ ಪೃಥೋರಾಮಾನಸಾಚಲಾತ್ ।
ವರ್ತತೇ ಭಗವಾನರ್ಕೋ ಯಾವತ್ತಪತಿ ಗೋಗಣೈಃ
॥ ೧೪ ॥

ರಂಜಯಿಷ್ಯತಿ ಯಲ್ಲೋಕಮಯಮಾತ್ಮವಿಚೇಷ್ಟಿತೈಃ ।
ಅಥಾಮುಮಾಹೂ ರಾಜಾನಂ ಮನೋರಂಜನಕೈಃ ಪ್ರಜಾಃ
॥ ೧೫ ॥

ದೃಢವ್ರತಃ ಸತ್ಯಸಂಧೋ ಬ್ರಹ್ಮಣ್ಯೋ ವೃದ್ಧಸೇವಕಃ ।
ಶರಣ್ಯಃ ಸರ್ವಭೂತಾನಾಂ ಮಾನದೋ ದೀನವತ್ಸಲಃ
॥ ೧೬ ॥

ಮಾತೃಭಕ್ತಿಃ ಪರಸ್ತ್ರೀಷು ಪತ್ನ್ಯಾಮರ್ಧ ಇವಾತ್ಮನಃ ।
ಪ್ರಜಾಸು ಪಿತೃವತ್ಸ್ನಿಗ್ಧಃ ಕಿಂಕರೋ ಬ್ರಹ್ಮವಾದಿನಾಮ್
॥ ೧೭ ॥

ದೇಹಿನಾಮಾತ್ಮವತ್ಪ್ರೇಷ್ಠಃ ಸುಹೃದಾಂ ನಂದಿವರ್ಧನಃ ।
ಮುಕ್ತಸಂಗಪ್ರಸಂಗೋಽಯಂ ದಂಡಪಾಣಿರಸಾಧುಷು
॥ ೧೮ ॥

ಅಯಂ ತು ಸಾಕ್ಷಾದ್ಭಗವಾನ್ತ್ರ್ಯಧೀಶಃ
ಕೂಟಸ್ಥ ಆತ್ಮಾ ಕಲಯಾವತೀರ್ಣಃ ।
ಯಸ್ಮಿನ್ನವಿದ್ಯಾರಚಿತಂ ನಿರರ್ಥಕಂ
ಪಶ್ಯಂತಿ ನಾನಾತ್ವಮಪಿ ಪ್ರತೀತಮ್ ॥ ೧೯ ॥

ಅಯಂ ಭುವೋ ಮಂಡಲಮೋದಯಾದ್ರೇ-
ರ್ಗೋಪ್ತೈಕವೀರೋ ನರದೇವನಾಥಃ ।
ಆಸ್ಥಾಯ ಜೈತ್ರಂ ರಥಮಾತ್ತಚಾಪಃ
ಪರ್ಯಸ್ಯತೇ ದಕ್ಷಿಣತೋ ಯಥಾರ್ಕಃ ॥ ೨೦ ॥

ಅಸ್ಮೈ ನೃಪಾಲಾಃ ಕಿಲ ತತ್ರ ತತ್ರ
ಬಲಿಂ ಹರಿಷ್ಯಂತಿ ಸಲೋಕಪಾಲಾಃ ।
ಮಂಸ್ಯಂತ ಏಷಾಂ ಸ್ತ್ರಿಯ ಆದಿರಾಜಂ
ಚಕ್ರಾಯುಧಂ ತದ್ಯಶ ಉದ್ಧರಂತ್ಯಃ ॥ ೨೧ ॥

ಮಹಾರಾಜಾ ಪೃಥುವು ವೇನರೂಪೀ ಅರಣಿಯ ಮಂಥನದಿಂದ ಪ್ರಕಟನಾದವನು ಅಗ್ನಿಗೆ ಸಮಾನನಾಗಿದ್ದಾನೆ. ಶತ್ರುಗಳಿಗೆ ದುರ್ಧಷನೂ, ದುಃಸಹನೂ ಆಗುವನು. ಅವರಿಗೆ ಇವನು ಬಳಿಯಲ್ಲೇ ಇದ್ದರೂ ಸೇನಾದಿಗಳಿಂದ ಸುರಕ್ಷಿತನಾಗಿರುವುದರಿಂದ ಬಹುದೂರವಿದ್ದಂತೆ ಕಾಣುವನು. ಶತ್ರುಗಳು ಎಂದೂ ಇವನನ್ನು ಸೋಲಿಸಲಾರರು. ॥ ೧೧ ॥ ಪ್ರಾಣಿಗಳೊಳಗೆ ಇರುವ ಪ್ರಾಣರೂಪೀ ಸೂತ್ರಾತ್ಮನು ಶರೀರದ ಒಳಗಿನ-ಹೊರಗಿನ ಎಲ್ಲ ವ್ಯಾಪಾರಗಳನ್ನು ನೋಡುತ್ತಾ ಇದ್ದರೂ ಕೂಡ ಉದಾಸೀನನಾಗಿರುವಂತೆ ಇವನು ಗುಪ್ತಚರರ ಮೂಲಕ ಪ್ರಾಣಿಗಳ ಗುಪ್ತ ಮತ್ತು ಪ್ರಕಟ ಎಲ್ಲ ರೀತಿಯ ವ್ಯಾಪಾರಗಳನ್ನು ನೋಡುತ್ತಿದ್ದರೂ, ತನ್ನ ನಿಂದಾ-ಸ್ತುತಿ ಮುಂತಾದವುಗಳ ಕುರಿತು ಉದಾಸೀನನಂತೆ ಇರುವನು. ॥ ೧೨॥ ಇವನು ಧರ್ಮಮಾರ್ಗದಲ್ಲಿ ಸ್ಥಿರನಾಗಿ ನೆಲೆನಿಂತು ತನ್ನ ಶತ್ರುವಿನ ಪುತ್ರನನ್ನೂ ಕೂಡ ದಂಡನೀಯನಾಗದಿದ್ದರೆ ಯಾವುದೇ ಶಿಕ್ಷೆ ಕೊಡಲಾರನು. ಆದರೆ ದಂಡನೀಯನಾಗಿದ್ದರೆ ತನ್ನ ಪುತ್ರನನ್ನು ಬಿಡಲಾರನು. ॥ ೧೩ ॥ ಭಗವಾನ್ ಸೂರ್ಯನಾರಾಯಣನು ಮಾನಸೋತ್ತರ ಪರ್ವತದವರೆಗೆ ತನ್ನ ಕಿರಣಗಳಿಂದ ಬೆಳಗುತ್ತಿರುವ ಆ ಸಮಸ್ತ ಕ್ಷೇತ್ರದಲ್ಲಿ ಇವನ ನಿಷ್ಕಂಟಕವಾದ ರಾಜ್ಯವು ಇರುವುದು. ॥ ೧೪॥ ಇವನು ತನ್ನ ಕಾರ್ಯಗಳಿಂದ ಎಲ್ಲ ಜನರಿಗೂ ಸುಖವನ್ನು ಕೊಡುತ್ತಾ, ಅವರಿಗೆ ರಂಜನೆಯನ್ನುಂಟುಮಾಡುವನು. ಇದರಿಂದ ಆ ಮನೋರಂಜನಾತ್ಮಕವಾದ ಕರ್ಮಗಳಿಂದ ಪ್ರಜೆಯು ಇವನನ್ನು 'ರಾಜಾ' ಎಂದು ಕರೆಯುವರು. ॥ ೧೫ ॥ ಇವನು ದೃಢಸಂಕಲ್ಪನೂ, ಸತ್ಯಪ್ರತಿಜ್ಞನೂ, ಬ್ರಾಹ್ಮಣಭಕ್ತನೂ, ವೃದ್ಧರ ಸೇವೆ ಮಾಡುವವನೂ, ಶರಣಾಗತವತ್ಸಲನೂ, ಎಲ್ಲ ಪ್ರಾಣಿಗಳನ್ನು ಗೌರವಿಸುವವನೂ, ದೀನರ ಮೇಲೆ ದಯೆತೋರುವವನೂ ಆಗುವನು. ॥ ೧೬ ॥ ಇವನು ಪರಸ್ತ್ರೀಯರಲ್ಲಿ ತಾಯಿಯಂತೆ ಭಕ್ತಿಯನ್ನಿರಿಸುವನು. ಪತ್ನಿಯನ್ನು ತನ್ನ ಶರೀರದ ಅರ್ಧಭಾಗದಂತೆಯೂ, ಪ್ರಜೆಗಳನ್ನು ತಂದೆಯು ಪುತ್ರರನ್ನು ಪ್ರೀತಿಸುವಂತೆ ಪ್ರೀತಿಸುವನು. ಬ್ರಹ್ಮವಾದಿಗಳಲ್ಲಿ ಸೇವಕರಂತೆ ನಡೆದುಕೊಳ್ಳುವನು. ॥ ೧೭ ॥ ಇವನು ಎಲ್ಲ ಪ್ರಾಣಿಗಳಿಗೂ ಅವುಗಳ ದೇಹದಂತೆಯೂ, ಆತ್ಮದಂತೆಯೂ ಅತ್ಯಂತಪ್ರಿಯನಾಗುವನು. ಮಿತ್ರರಿಗೆ ಆನಂದವನ್ನುಂಟುಮಾಡುವನು. ವೈರಾಗ್ಯವುಳ್ಳ ಸತ್ಪುರುಷರಲ್ಲಿ ವಿಶೇಷ ಪ್ರೇಮವಿರಿಸುವನು. ದುಷ್ಟರಾದವರಿಗೆ ದಂಡಪಾಣಿ ಯಮನಂತೆ ದಂಡಿಸಲು ತತ್ಪರನಾಗುವನು. ॥ ೧೮ ॥

ಪಂಡಿತರು ಅವಿದ್ಯಾವಶದಿಂದ ಕಂಡುಬರುವ ನಾನಾತ್ವವನ್ನು ಮಿಥ್ಯೆಯೆಂದು ತಿಳಿಯುವ ಅಂತಹ ತ್ರಿಗುಣಗಳ ಅಧಿಷ್ಠಾತೃವೂ, ನಿರ್ವಿಕಾರನೂ ಆದ ಸಾಕ್ಷಾತ್ ಶ್ರೀಮನ್ನಾರಾಯಣನೇ ತನ್ನ ಅಂಶದಿಂದ ಇವನ ರೂಪದಲ್ಲಿ ಅವತರಿಸಿರುವನು. ॥ ೧೯ ॥ ಇವನು ಅದ್ವಿತೀಯ ವೀರನೂ, ಏಕಚ್ಛತ್ರ ಸಾಮ್ರಾಟನಾಗಿ ಒಬ್ಬನೇ ಉದಯಾಚಲದವರೆಗಿನ ಸಮಸ್ತ ಭೂಮಂಡಲವನ್ನು ರಕ್ಷಿಸುವನು., ತನ್ನ ಜಯಶೀಲವಾದ ರಥವನ್ನು ಹತ್ತಿ ಧನುಷ್ಯವನ್ನು ಕೈಯಲ್ಲಿ ಧರಿಸಿ ಸೂರ್ಯನಂತೆ ಎಲ್ಲೆಡೆ ಪ್ರದಕ್ಷಿಣೆ ಮಾಡುವನು. ॥ ೨೦ ॥

ಆ ಸಮಯದಲ್ಲಿ ಎಲ್ಲ ಲೋಕಪಾಲಕರೂ, ಭೂಪಾಲಕರೂ ಈತನಿಗೆ ಕಪ್ಪ-ಕಾಣಿಕೆಗಳನ್ನು ಸಮರ್ಪಿಸುವರು ಹಾಗೂ ಆ

ಅಯಂ ಮಹೀಂ ಗಾಂ ದುದುಹೇಽಧಿರಾಜಃ
ಪ್ರಜಾಪತಿರ್ವೃತ್ತಿಕರಃ ಪ್ರಜಾನಾಮ್ ।
ಯೋ ಲೀಲಯಾದ್ರೀನ್ಸ್ವಶರಾಸಕೋಟ್ಯಾ
ಭಿಂದನ್ ಸಮಾಂ ಗಾಮಕರೋದ್ಯಥೇಂದ್ರಃ ॥ ೨೨ ॥

ವಿಸ್ಫೂರ್ಜಯನ್ನಾಜಗವಂ ಧನುಃ ಸ್ವಯಂ
ಯದಾಚರತ್ಕ್ಷ್ಮಾಮವಿಷಹ್ಯಮಾಜೌ ।
ತದಾ ನಿಲಿಲ್ಯುರ್ದಿಶಿ ದಿಶ್ಯಸಂತೋ
ಲಾಂಗೂಲಮುದ್ಯಮ್ಯ ಯಥಾ ಮೃಗೇಂದ್ರಃ ॥ ೨೩ ॥

ಏಷೋಽಶ್ವಮೇಧಾನ್ ಶಮಾಜಹಾರ
ಸರಸ್ವತೀ ಪ್ರಾದುರಭಾವಿ ಯತ್ರ ।
ಅಹಾರಷೀದ್ಯಸ್ಯ ಹಯಂ ಪುರಂದರಃ
ಶತಕ್ರತುಶ್ಚರಮೇ ವರ್ತಮಾನೇ ॥ ೨೪ ॥

ಏಷ ಸ್ವಸದ್ಮೋಪವನೇ ಸಮೇತ್ಯ
ಸನತ್ಕುಮಾರಂ ಭಗವಂತಮೇಕಮ್ ।
ಆರಾಧ್ಯ ಭಕ್ತ್ಯಾ ಲಭತಾಮಲಂ ತಜ್
ಜ್ಞಾನಂ ಯತೋ ಬ್ರಹ್ಮ ಪರಂ ವಿದಂತಿ ॥ ೨೫ ॥

ತತ್ರ ತತ್ರ ಗಿರಸ್ತಾಸ್ತಾ ಇತಿ ವಿಶ್ರುತವಿಕ್ರಮಃ ।
ಶ್ರೋಷ್ಯತ್ಯಾತ್ಮಾಶ್ರಿತಾ ಗಾಥಾಃ ಪೃಥುಃ ಪೃಥುಪರಾಕ್ರಮಃ ॥ ೨೬ ॥

ದಿಶೋ ವಿಜಿತ್ಯಾಪ್ರತಿರುದ್ಧಚಕ್ರಃ
ಸ್ವತೇಜಸೋತ್ಪಾಟಿತಲೋಕಶಲ್ಯಃ ।
ಸುರಾಸುರೇಂದ್ರೈರುಪಗೀಯಮಾನ-
ಮಹಾನುಭಾವೋ ಭವಿತಾ ಪತಿರ್ಭುವಃ ॥ ೨೭ ॥

ಭೂಪಾಲಕರ ಸ್ತ್ರೀಯರು ಇವನನ್ನು ಗುಣಗಾನ ಮಾಡುತ್ತಾ ಈ ಆದಿರಾಜನನ್ನು ಸಾಕ್ಷಾತ್ ಶ್ರೀಹರಿಯೆಂದೇ ತಿಳಿಯುವರು. ॥ ೨೧ ॥ ಇವನು ಪ್ರಜಾಪಾಲಕ ರಾಜಾಧಿರಾಜನಾಗಿ ಪ್ರಜೆಗಾಗಿ ಜೀವನ ನಿರ್ವಾಹಕ್ಕಾಗಿ ಗೋರೂಪೀ ಪೃಥ್ವಿಯನ್ನು ಕರೆಯುವನು ಮತ್ತು ಇಂದ್ರನಂತೆ ಲೀಲಾಜಾಲವಾಗಿ ಪರ್ವತಗಳನ್ನು ತನ್ನ ಧನುಸ್ಸಿನ ತುದಿಯಿಂದ ಒಡೆದುಹಾಕಿ ಭೂಮಿಯನ್ನು ಸಮಮಟ್ಟಾಗಿಸುವನು. ॥ ೨೨ ॥ ಯುದ್ಧಭೂಮಿಯಲ್ಲಿ ಯಾರೂ ಕೂಡ ಈ ವೀರಾಧಿವೀರನ ವೇಗವನ್ನು ಸಹಿಸಲಾರರು. ಅರಣ್ಯದಲ್ಲಿ ಬಾಲವನ್ನು ಎತ್ತಿಕೊಂಡು ಸಂಚರಿಸುವ ಸಿಂಹದಂತೆ ತನ್ನ 'ಆಜಗವ'ವೆಂಬ ಧನುಷ್ಯವನ್ನು ಟಂಕಾರಮಾಡುತ್ತಾ ಭೂಮಂಡಲದಲ್ಲಿ ಸಂಚರಿಸತೊಡಗಿದಾಗ ದುಷ್ಟ ಜನರೆಲ್ಲರೂ ಕಾಣದಾಗುವರು. ॥ ೨೩ ॥ ಈ ಚಕ್ರವರ್ತಿಯು ಸರಸ್ವತೀನದಿ ಉಗಮಸ್ಥಾನದಲ್ಲಿ ನೂರು ಅಶ್ವಮೇಧ ಯಜ್ಞಗಳನ್ನು ಮಾಡುವನು. ಅವುಗಳಲ್ಲಿ ಕೊನೆಯ ಯಜ್ಞವನ್ನು ಆಚರಿಸುವಾಗ ಇಂದ್ರನು ಈತನ ಯಜ್ಞಾಶ್ವವನ್ನು ಅಪಹರಿಸಿಕೊಂಡು ಹೋಗುವನು. ॥ ೨೪ ॥ ಈ ಮಹಾತ್ಮನಿಗೆ ಒಮ್ಮೆ ತನ್ನ ಅರಮನೆಯ ಉದ್ಯಾನವನದಲ್ಲಿ ಭಗವಾನ್ ಸನತ್ಕುಮಾರರ ಭೇಟಿಯಾಗುವುದು. ಆಗ ಆ ಮುನಿಶ್ರೇಷ್ಠರನ್ನು ಏಕಾಂತದಲ್ಲಿ ತಾನೊಬ್ಬನೇ ಭಕ್ತಿಯಿಂದ ಆರಾಧಿಸಿ, ಅವರಿಂದ ಶುದ್ಧವಾದ ಜ್ಞಾನವನ್ನು ಪಡೆಯುವನು. ಅದರಿಂದ ಪರಬ್ರಹ್ಮನ ಪ್ರಾಪ್ತಿಯುಂಟಾಗುವುದು. ॥ ೨೫ ॥ ಈ ಪ್ರಕಾರ ಇವನ ಪರಾಕ್ರಮಗಳು ಜನರ ಮುಂದೆ ಪ್ರಕಟವಾದಾಗ ತನ್ನ ಚರಿತ್ರೆಯೇ ಅಲ್ಲಲ್ಲಿ ಈ ಪರಮ ಪರಾಕ್ರಮಿ ಮಹಾರಾಜನ ಕಿವಿಗೆ ಬೀಳುವವು. ॥ ೨೬ ॥ ಇವನ ಆಜ್ಞೆಯನ್ನು ಯಾರೂ ಅಲ್ಲಗಳೆಯಲಾರರು. ಇವನು ಎಲ್ಲ ದಿಕ್ಕುಗಳನ್ನು ಗೆದ್ದು, ತನ್ನ ತೇಜಸ್ಸಿನಿಂದ ಪ್ರಜೆಗಳ ಕಷ್ಟ-ಕಾರ್ಪಣ್ಯವೆಂಬ ಮುಳ್ಳನ್ನು ತೆಗೆದುಹಾಕಿ ಸಮಸ್ತ ಭೂಮಂಡಲಕ್ಕೆ ಶಾಸಕನಾಗುವನು. ಆಗ ದೇವತೆಗಳು, ಅಸುರರೂ ಕೂಡ ಇವನ ವಿಪುಲವಾದ ಪ್ರಭಾವವನ್ನು ವರ್ಣಿಸುವರು." ॥ ೨೭ ॥ 184.

ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥.

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪೃಥುಚರಿತೇ ಷೋಡಶೋಽಧ್ಯಾಯಃ ॥ ೧೬ ॥

# ಹದಿನೇಳನೆಯ ಅಧ್ಯಾಯ

## ಪೃಥು ಮಹಾರಾಜನು ಭೂದೇವಿಯ ಮೇಲೆ ಕೋಪಗೊಂಡುದು ; ಭೂದೇವಿಯು ಆತನನ್ನು ಸ್ತುತಿಸಿದುದು

*ಮೈತ್ರೇಯ ಉವಾಚ*

ಏವಂ ಸ ಭಗವಾನ್ವೈನ್ಯಃ ಖ್ಯಾಪಿತೋ ಗುಣಕರ್ಮಭಿಃ ।
ಛಂದಯಾಮಾಸ ತಾನ್ಕಾಮೈಃ ಪ್ರತಿಪೂಜ್ಯಾಭಿನಂದ್ಯ ಚ ॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಹೀಗೆ ವಂದಿ-ಮಾಗಧರು ತನ್ನ ಗುಣ ಮತ್ತು ಕರ್ಮಗಳೆಲ್ಲವನ್ನು ವರ್ಣಿಸಿ ಸ್ತೋತ್ರಮಾಡಿದಾಗ ಆ ಪೃಥುಮಹಾರಾಜನೂ ಅವರನ್ನು ಅಭಿನಂದಿಸಿ, ಇಷ್ಟವಾದ ವಸ್ತುಗಳನ್ನು ಕೊಟ್ಟು ಸಂತೋಷಪಡಿಸಿದನು. ॥ ೧ ॥ ಹಾಗೆಯೇ ಬ್ರಾಹ್ಮಣರೇ ಮುಂತಾದ ನಾಲ್ಕು ವರ್ಣದವರನ್ನೂ, ಸೇವಕ

ಬ್ರಾಹ್ಮಣಪ್ರಮುಖಾನ್ ವರ್ಣಾನ್ ಭೃತ್ಯಾಮಾತ್ಯ ಪುರೋಧಸಃ ।
ಪೌರಾಂಜಾನಪದಾನ್ ಶ್ರೇಣೀಃ ಪ್ರಕೃತೀಃ ಸಮಪೂಜಯತ್ ॥ ೨ ॥

*ವಿದುರ ಉವಾಚ*

ಕಸ್ಮಾದ್ದಧಾರ ಗೋರೂಪಂ ಧರಿತ್ರೀ ಬಹುರೂಪಿಣೀ ।
ಯಾಂ ದುದೋಹ ಪೃಥುಸ್ತತ್ರ ಕೋ ವತ್ಸೋ ದೋಹನಂ ಚ ಕಿಮ್ ॥ ೩ ॥

ಪ್ರಕೃತ್ಯಾ ವಿಷಮಾ ದೇವೀ ಕೃತಾ ತೇನ ಸಮಾ ಕಥಮ್ ।
ತಸ್ಯ ಮೇಧ್ಯಂ ಹಯಂ ದೇವಃ ಕಸ್ಯ ಹೇತೋರಪಾಹರತ್ ॥ ೪ ॥

ಸನತ್ಕುಮಾರಾದ್ಭಗವತೋ ಬ್ರಹ್ಮನ್ ಬ್ರಹ್ಮವಿದುತ್ತಮಾತ್ ।
ಲಬ್ಧ್ವಾ ಜ್ಞಾನಂ ಸವಿಜ್ಞಾನಂ ರಾಜರ್ಷಿಃ ಕಾಂ ಗತಿಂ ಗತಃ ॥ ೫ ॥

ಯಚ್ಚಾನ್ಯದಪಿ ಕೃಷ್ಣಸ್ಯ ಭವಾನ್ ಭಗವತಃ ಪ್ರಭೋಃ ।
ಶ್ರವಃ ಸುಶ್ರವಸಃ ಪುಣ್ಯಂ ಪೂರ್ವದೇಹಕಥಾಶ್ರಯಮ್ ॥ ೬ ॥

ಭಕ್ತಾಯ ಮೇಽನುರಕ್ತಾಯ ತವ ಚಾಧೋಕ್ಷಜಸ್ಯ ಚ ।
ವಕ್ತುಮರ್ಹಸಿ ಯೋಽದುಹ್ಯದ್ವೈನ್ಯರೂಪೇಣ ಗಾಮಿಮಾಮ್ ॥ ೭ ॥

*ಸೂತ ಉವಾಚ*

ಚೋದಿತೋ ವಿದುರೇಣೈವಂ ವಾಸುದೇವಕಥಾಂ ಪ್ರತಿ ।
ಪ್ರಶಸ್ಯ ತಂ ಪ್ರೀತಮನಾ ಮೈತ್ರೇಯಃ ಪ್ರತ್ಯಭಾಷತ ॥ ೮ ॥

*ಮೈತ್ರೇಯ ಉವಾಚ*

ಯದಾಭಿಷಿಕ್ತಃ ಪೃಥುರಂಗ ವಿಪ್ರೈ-
ರಾಮನ್ತ್ರಿತೋ ಜನತಾಯಾಶ್ಚ ಪಾಲಃ ।
ಪ್ರಜಾ ನಿರನ್ನೇ ಕ್ಷಿತಿಪೃಷ್ಠ ಏತ್ಯ
ಕ್ಷುತ್ ಕ್ಷಾಮದೇಹಾಃ ಪತಿಮಭ್ಯವೋಚನ್ ॥ ೯ ॥

ವಯಂ ರಾಜಂಜಾಠರೇಣಾಭಿತಪ್ತಾ
ಯಥಾಗ್ನಿನಾ ಕೋಟರಸ್ಥೇನ ವೃಕ್ಷಾಃ ।
ತ್ವಾಮದ್ಯ ಯಾತಾಃ ಶರಣಂ ಶರಣ್ಯಂ
ಯಃ ಸಾಧಿತೋ ವೃತ್ತಿಕರಃ ಪತಿರ್ನಃ ॥ ೧೦ ॥

ತನ್ನೋ ಭವಾನೀಹತು ರಾತವೇಽನ್ನಂ
ಕ್ಷುಧಾರ್ದಿತಾನಾಂ ನರದೇವದೇವ ।
ಯಾವನ್ನ ನಂಕ್ಷ್ಯಾಮಹ ಉಜ್ಝಿತೋರ್ಜಾ
ವಾರ್ತಾಪತಿಸ್ತ್ವಂ ಕಿಲ ಲೋಕಪಾಲಃ ॥ ೧೧ ॥

ರನ್ನೂ, ಮಂತ್ರಿಗಳನ್ನೂ, ಪುರೋಹಿತರನ್ನೂ, ಪುರಜನರನ್ನೂ, ದೇಶವಾಸಿಗಳನ್ನೂ, ಬೇರೆ-ಬೇರೆ ವ್ಯವಸಾಯದವರನ್ನೂ, ಇತರ ಪ್ರಜೆಗಳನ್ನೂ ಸತ್ಕರಿಸಿದನು. ॥ ೨ ॥

**ವಿದುರನು ಕೇಳಿದನು** – ಪೂಜ್ಯರೇ! ಪೃಥ್ವಿಯಾದರೋ ಅನೇಕ ರೂಪಗಳನ್ನು ತಾಳಬಲ್ಲವಳು. ಆಕೆಯು ಏತಕ್ಕಾಗಿ ಗೋವಿನ ರೂಪವನ್ನೇ ಧರಿಸಿದುದು? ಪೃಥು ಮಹಾರಾಜನು ಆಕೆಯನ್ನು ಕರೆದಾಗ ಕರು ಯಾರು ಆದರು? ಹಾಲು ಕರೆಯುವ ಪಾತ್ರೆ ಯಾವುದಿತ್ತು? ॥ ೩ ॥ ಪೃಥ್ವಿಯಾದರೋ ಮೊದಲಿನಿಂದಲೇ ಸ್ವಭಾವತಃ ಎತ್ತರ-ತಗ್ಗುಗಳಿಂದ ಕೂಡಿರುವುದೇ ಆಗಿತ್ತು. ಅವನು ಸಮತಲವಾಗಿ ಹೇಗೆ ಮಾಡಿದನು? ಇಂದ್ರನು ಅವನ ಯಜ್ಞಾಶ್ವವನ್ನು ಏಕೆ ಅಪಹರಿಸಿದನು? ॥ ೪ ॥ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಸನತ್ಕುಮಾರರಿಂದ ಜ್ಞಾನ ಮತ್ತು ವಿಜ್ಞಾನವನ್ನು ಪಡೆದು ಆ ರಾಜರ್ಷಿಯು ಯಾವ ಗತಿಯನ್ನು ಹೊಂದಿದನು? ॥ ೫ ॥ ಪೃಥುರಾಜನ ರೂಪದಲ್ಲಿ ಸರ್ವೇಶ್ವರ ಭಗವಾನ್ ಶ್ರೀಕೃಷ್ಣನೇ ಅವತರಿಸಿದ್ದನು; ಆದ್ದರಿಂದ ಪುಣ್ಯಕೀರ್ತಿಯಾದ ಶ್ರೀಹರಿಯು ಅವತರಿಸಿದ ಆ ಪೃಥುವಿಗೆ ಸಂಬಂಧಪಟ್ಟ ಇನ್ನೂ ಪವಿತ್ರ ಚರಿತ್ರೆಗಳಿದ್ದರೆ ಅದನ್ನೂ ನನಗೆ ಹೇಳಿರಿ. ನಾನು ತಮ್ಮ ಮತ್ತು ಶ್ರೀಕೃಷ್ಣಚಂದ್ರನ ಅತ್ಯಂತ ಅನುರಾಗವುಳ್ಳ ಭಕ್ತನಾಗಿರುವೆನು. ದಯಮಾಡಿ ಆ ವೃತ್ತಾಂತವೆಲ್ಲವನ್ನು ಹೇಳುವವರಾಗಿರಿ. ॥ ೬-೭ ॥

**ಶ್ರೀಸೂತಪುರಾಣಿಕರು ಹೇಳುತ್ತಾರೆ** – ಋಷಿಗಳಿರಾ! ವಿದುರನು ಭಗವಾನ್ ಶ್ರೀವಾಸುದೇವನ ಕಥೆಯನ್ನು ಹೇಳಬೇಕೆಂದು ಪ್ರೇರೇಪಿಸಿದಾಗ ಶ್ರೀಮೈತ್ರೇಯರು ಮನಸ್ಸಿನಲ್ಲಿ ಸಂತೋಷಗೊಂಡು ಅವನನ್ನು ಪ್ರಶಂಸಿಸುತ್ತಾ ಹೇಳತೊಡಗಿದರು. ॥ ೮ ॥

**ಶ್ರೀಮೈತ್ರೇಯರು ಹೇಳಿದರು** – ಎಲೈ ವಿದುರನೇ! ಬ್ರಾಹ್ಮಣರು ಮಹಾರಾಜಾ ಪೃಥುವಿಗೆ ಪಟ್ಟಾಭಿಷೇಕಮಾಡಿ ಅವನನ್ನು ಪ್ರಜಾಪಾಲಕನನ್ನಾಗಿ ಘೋಷಿಸಿದರು. ಆಗ ಭೂಮಿಯಲ್ಲಿ ಅನ್ನವೇ ಇಲ್ಲದಿರಲು ಪ್ರಜೆಗಳು ಹಸಿವಿನಿಂದ ಕೃಶಕಾಯರಾಗಿ ತಮ್ಮ ಸ್ವಾಮಿಯಾದ ಪೃಥುವಿನ ಬಳಿಗೆ ಬಂದು ಹೇಳಿದರು. ॥ ೯ ॥ ಮಹಾರಾಜರೇ! ಪೊಟರೆಯಲ್ಲಿರುವ ಬೆಂಕಿಯಿಂದ ಮರಗಳು ಕರಕಾಗಿ ಸುಟ್ಟುಹೋಗುವಂತೆ, ನಾವು ಭಯಂಕರವಾದ ಜಠರಾಗ್ನಿಯಿಂದ ಬೆಂದುಹೋಗುತ್ತಿದ್ದೇವೆ. ನೀನು ಶರಣಾಗತವತ್ಸಲನು ಮತ್ತು ನಮಗೆ ಅನ್ನದಾತನಾಗಿ, ಪ್ರಭುವಾಗಿ ಮಹರ್ಷಿಗಳು ನಿನ್ನನ್ನು ನೇಮಿಸಿದ್ದಾರೆ. ಅದಕ್ಕಾಗಿ ನಾವು ನಿನಗೆ ಶರಣಾಗಿದ್ದೇವೆ. ॥ ೧೦ ॥ ನೀನು ಸಮಸ್ತ ಲೋಕಗಳನ್ನು ರಕ್ಷಿಸುವವನಾಗಿರುವೆ. ನೀನೇ ನಮ್ಮ ಜೀವನೋಪಾಯಕ್ಕೆ ಒಡೆಯನಾಗಿರುವೆ. ಆದ್ದರಿಂದ ರಾಜೇಶ್ವರನೇ! ಹಸಿವಿನಿಂದ ಬಳಲಿದ ನಮಗೆ ನೀನು ಬೇಗನೆ ಅನ್ನ ಕೊಡುವ ವ್ಯವಸ್ಥೆ ಮಾಡು. ಅನ್ನ ಸಿಗುವ ಮೊದಲೇ ನಾಶವಾಗದಂತೆ ಪ್ರಜಾಪಾಲಕನಾದ ನೀನು ಪ್ರಜೆಗಳಾದ ನಮ್ಮನ್ನು ಕಾಪಾಡು. ॥ ೧೧ ॥

*ಮೈತ್ರೇಯ ಉವಾಚ*

ಪೃಥುಃ ಪ್ರಜಾನಾಂ ಕರುಣಂ ನಿಶಮ್ಯ ಪರಿದೇವಿತಮ್ ।
ದೀರ್ಘಂ ದಧ್ಯೌ ಕುರುಶ್ರೇಷ್ಠ ನಿಮಿತ್ತಂ ಸೋಽನ್ವಪದ್ಯತ ॥ ೧೨ ॥

ಇತಿ ವ್ಯವಸಿತೋ ಬುದ್ಧ್ಯಾ ಪ್ರಗೃಹೀತಶರಾಸನಃ ।
ಸಂದಧೇ ವಿಶಿಖಂ ಭೂಮೇಃ ಕ್ರುದ್ಧಸ್ತ್ರಿಪುರಹಾ ಯಥಾ ॥ ೧೩ ॥

ಪ್ರವೇಪಮಾನಾ ಧರಣೀ ನಿಶಾಮ್ಯೋದಾಯುಧಂ ಚ ತಮ್ ।
ಗೌಃ ಸತ್ಯಪಾದ್ರವದ್ಭೀತಾ ಮೃಗೀವ ಮೃಗಯುದ್ರುತಾ ॥ ೧೪ ॥

ತಾಮನ್ವಧಾವತ್ತದ್ವೈನ್ಯಃ ಕುಪಿತೋಽತ್ಯರುಣೇಕ್ಷಣಃ ।
ಶರಂ ಧನುಷಿ ಸಂಧಾಯ ಯತ್ರ ಯತ್ರ ಪಲಾಯತೇ ॥ ೧೫ ॥

ಸಾ ದಿಶೋ ವಿದಿಶೋ ದೇವೀ ರೋದಸೀ ಚಾಂತರಂ ತಯೋಃ ।
ಧಾವಂತೀ ತತ್ರ ತತ್ರೈನಂ ದದರ್ಶಾನೂದ್ಯತಾಯುಧಮ್ ॥ ೧೬ ॥

ಲೋಕೇ ನಾವಿಂದತ ತ್ರಾಣಂ ವೈನ್ಯಾನ್ಮೃತ್ಯೋರಿವ ಪ್ರಜಾಃ ।
ತ್ರಸ್ತಾ ತದಾ ನಿವವೃತೇ ಹೃದಯೇನ ವಿದೂಯತಾ ॥ ೧೭ ॥

ಉವಾಚ ಚ ಮಹಾಭಾಗಂ ಧರ್ಮಜ್ಞಾಪನ್ನವತ್ಸಲ ।
ತ್ರಾಹಿ ಮಾಮಪಿ ಭೂತಾನಾಂ ಪಾಲನೇಽವಸ್ಥಿತೋ ಭವಾನ್ ॥ ೧೮ ॥

ಸ ತ್ವಂ ಜಿಘಾಂಸಸೇ ಕಸ್ಮಾದ್ದೀನಾಮಕೃತಕಿಲ್ಬಿಷಾಮ್ ।
ಅಹನಿಷ್ಯತ್ಕಥಂ ಯೋಷಾಂ ಧರ್ಮಜ್ಞ ಇತಿ ಯೋ ಮತಃ ॥ ೧೯ ॥

ಪ್ರಹರಂತಿ ನ ವೈ ಸ್ತ್ರೀಷು ಕೃತಾಗಃಸ್ವಪಿ ಜಂತವಃ ।
ಕಿಮುತ ತ್ವದ್ವಿಧಾ ರಾಜನ್ ಕರುಣಾ ದೀನವತ್ಸಲಾಃ ॥ ೨೦ ॥

ಮಾಂ ವಿಪಾಟ್ಯಾಜರಾಂ ನಾವಂ ಯತ್ರ ವಿಶ್ವಂ ಪ್ರತಿಷ್ಠಿತಮ್ ।
ಆತ್ಮಾನಂ ಚ ಪ್ರಜಾಶ್ಚೇಮಾಃ ಕಥಮಂಭಸಿ ಧಾಸ್ಯಸಿ ॥ ೨೧ ॥

*ಪೃಥುರುವಾಚ*

ವಸುಧೇ ತ್ವಾಂ ವಧಿಷ್ಯಾಮಿ ಮಚ್ಛಾಸನಪರಾಙ್ಮುಖೀಮ್ ।
ಭಾಗಂ ಬರ್ಹಿಷಿ ಯಾ ವೃಂಕ್ತೇ ನ ತನೋತಿ ಚ ನೋ ವಸು ॥ ೨೨ ॥

ಯವಸಂ ಜಗ್ಧ್ಯನುದಿನಂ ನೈವ ದೋಗ್ಧ್ಯೌಧಸಂ ಪಯಃ ।
ತಸ್ಯಾಮೇವಂ ಹಿ ದುಷ್ಟಾಯಾಂ ದಂಡೋ ನಾತ್ರ ನ ಶಸ್ಯತೇ ॥ ೨೩ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಕುರುಶ್ರೇಷ್ಠನೇ! ಪ್ರಜೆಗಳ ಕರುಣಾಕ್ರಂದನವನ್ನು ಕೇಳಿ ಪೃಥುಮಹಾರಾಜನು ಬಹಳ ಹೊತ್ತು ಚಿಂತಿಸಿ, ಕೊನೆಗೆ ಆ ಅನ್ನಕ್ಷಾಮದ ಕಾರಣವನ್ನು ಕಂಡುಕೊಂಡನು. ॥ ೧೨ ॥ ಭೂಮಿಯು ಅನ್ನ-ಔಷಧಿಗಳನ್ನು ತನ್ನೊಳಗೇ ಅಡಗಿಸಿ ಕೊಳ್ಳುತ್ತಿದೆ. ಮೊಳೆಯಲು ಬಿಡುವುದಿಲ್ಲ ಎಂಬುದನ್ನು ಬುದ್ಧಿಯಿಂದ ನಿಶ್ಚಯಿಸಿ, ಅವನು ತ್ರಿಪುರಸಂಹಾರಿಯಾದ ರುದ್ರದೇವರಂತೆ ಕಡುಕೋಪದಿಂದ ಬಿಲ್ಲನ್ನೆತ್ತಿಕೊಂಡು ಭೂಮಿಯನ್ನು ಗುರಿಯಾಗಿಸಿ ಬಾಣವೊಂದನ್ನು ಹೂಡಿದನು. ॥ ೧೩ ॥ ಅದನ್ನು ಕಂಡು ಭೂದೇವಿಯು ಭಯಗೊಂಡು ಗಡ-ಗಡನೆ ನಡುಗುತ್ತಾ ಹಸುವಿನ ರೂಪವನ್ನು ತಾಳಿ, ಬೇಡನು ಬೆನ್ನಟ್ಟಿದ ಜಿಂಕೆಯಂತೆ ಓಡತೊಡಗಿದಳು. ॥ ೧೪ ॥

ಇದನ್ನು ನೋಡಿದ ಮಹಾರಾಜಾ ಪೃಥುವಿನ ಕಣ್ಣುಗಳು ಕ್ರೋಧದಿಂದ ಕೆಂಪೇರಿದವು. ಆತನು ಬಿಲ್ಲಿನಲ್ಲಿ ಬಾಣವನ್ನು ಹೂಡಿ ಭೂದೇವಿಯು ಓಡಿದಲ್ಲೆಲ್ಲ ಅಟ್ಟಿಸಿಕೊಂಡು ಹೋದನು. ॥ ೧೫ ॥ ದಿಕ್ಕು-ದಿಕ್ಕುಗಳಲ್ಲಿ ಸ್ವರ್ಗದಲ್ಲಿ, ಆಕಾಶದಲ್ಲಿ ಹೀಗೆ ಭೂ ದೇವಿಯು ಓಡಿದಲ್ಲೆಲ್ಲಕಡೆ ಪೃಥುಮಹಾರಾಜನು ಆಯುಧಗಳನ್ನು ಕೈಯಲ್ಲೆತ್ತಿಕೊಂಡು ಆಕೆಯ ಹಿಂದೆ ಕಾಣಿಸಿಕೊಳ್ಳುತ್ತಿದ್ದನು. ॥ ೧೬ ॥ ಮನುಷ್ಯನನ್ನು ಮೃತ್ಯುವಿನ ದವಡೆಯಿಂದ ಯಾರೂ ರಕ್ಷಿಸಲಾರದಂತೆ ಆಕೆಯು ಅತ್ಯಂತ ಭಯಭೀತಳಾಗಿ ಅತಿದುಃಖಗೊಂಡ ಮನಸ್ಸಿನಿಂದ ಹಿಂದಿರುಗಿದಳು. ॥ ೧೭ ॥ ಮತ್ತು ಮಹಾಭಾಗನಾದ ಪೃಥುವಿನಲ್ಲಿ ಮೊರೆಯಿಟ್ಟಳು – 'ಧರ್ಮಜ್ಞನೂ – ಶರಣಾಗತವತ್ಸಲನೂ ಆದ ಎಲೈ ರಾಜೇಂದ್ರನೇ! ಸಮಸ್ತ ಪ್ರಾಣಿಗಳನ್ನು ರಕ್ಷಿಸುವುದರಲ್ಲಿ ತತ್ಪರನಾದ ನೀನು ನನ್ನನ್ನೂ ರಕ್ಷಿಸು. ॥ ೧೮ ॥ ಹಾಗಿರುವಾಗ ಅತ್ಯಂತ ದೀನಳೂ, ನಿರಪರಾಧಿಯೂ ಆದ ನನ್ನನ್ನು ನೀನು ಏಕೆ ಕೊಲ್ಲಲು ಬಯಸುತ್ತಿರುವೆ. ಇದಲ್ಲದೆ ನೀನು ಧರ್ಮಜ್ಞನೆಂದು ತಿಳಿಯಲಾಗುತ್ತದೆ ಎಂದಾಗ ಸ್ತ್ರೀಯಾದ ನನ್ನನ್ನು ಹೇಗೆ ಕೊಲ್ಲಬಲ್ಲೆ? ॥ ೧೯ ॥ ಸ್ತ್ರೀಯರು ಅಪರಾಧ ಮಾಡಿದರೂ ಸಾಮಾನ್ಯ ಮನುಷ್ಯನೂ ಅವಳ ಮೇಲೆ ಕೈ ಎತ್ತುವುದಿಲ್ಲ. ಹಾಗಿರುವಾಗ ಕರುಣಾಳುವೂ, ದೀನವತ್ಸಲನೂ ಆದ ನಿನ್ನಂತಹವನು ಇದನ್ನು ಹೇಗೆ ಮಾಡಬಲ್ಲನು? ॥ ೨೦ ॥ ನಾನಾದರೋ ಒಂದು ದೃಢವಾದ ಹಡಗಿನಂತಿದ್ದು, ಇಡೀ ಜಗತ್ತು ನನ್ನ ಆಧಾರದಲ್ಲಿ ನಿಂತಿದೆ. ಇಂತಹ ನನ್ನನ್ನು ಕೊಂದು ನೀನು ಪ್ರಜೆಗಳನ್ನು ನೀರಿನಮೇಲೆ ಹೇಗೆ ತಾನೇ ನೆಲೆಗೊಳಿಸುವೆ? ॥ ೨೧ ॥

**ಪೃಥುಮಹಾರಾಜನು ಹೇಳಿದನು** – ಎಲೈ ಭೂಮಿಯೇ! ನೀನು ಪ್ರಜಾಪಾಲಕನಾದ ನನ್ನ ಆಜ್ಞೆಯನ್ನು ಉಲ್ಲಂಘಿಸಿರುವೆ. ನೀನು ಯಜ್ಞದಲ್ಲಿ ಹವಿರ್ಭಾಗವನ್ನು ದೇವತಾರೂಪದಿಂದ ಸ್ವೀಕರಿಸಿದ್ದರೂ ಅನ್ನ-ಧಾನ್ಯಾದಿಗಳನ್ನು ನಮಗೆ ಕೊಡುತ್ತಿಲ್ಲ. ಆದ್ದರಿಂದ ಇಂದು ನಾನು ನಿನ್ನನ್ನು ಕೊಂದು ಹಾಕುವೆನು. ॥ ೨೨ ॥ ಹಸಿರು ಹುಲ್ಲನ್ನು ಪ್ರತಿದಿನವು ತೃಪ್ತಿಯಾಗಿ ಮೇಯುತ್ತಿದ್ದರೂ ನೀನು ಹಾಲನ್ನು ಮಾತ್ರ ಕೊಡದೆ ವಂಚನೆ ಮಾಡುತ್ತಿರುವ ಗೋವು. ಇಂತಹ ದುಷ್ಟತನವನ್ನು ಮಾಡುವ ನಿನ್ನನ್ನು ಶಿಕ್ಷಿಸಿದರೆ ಅನುಚಿತವಾಗಲಾರದು. ॥ ೨೩॥

ತ್ವಂ ಖಲ್ವೋಷಧಿಬೀಜಾನಿ ಪ್ರಾಕ್ಸೃಷ್ಟಾನಿ ಸ್ವಯಂಭುವಾ ।
ನ ಮುಂಚಸ್ಯಾತ್ಮರುದ್ಧಾನಿ ಮಾಮವಜ್ಞಾಯ ಮಂದಧೀಃ ॥ ೨೪ ॥

ಅಮೂಷಾಂ ಕ್ಷುತ್ಪರೀತಾನಾಮಾರ್ತಾನಾಂ ಪರಿದೇವಿತಮ್ ।
ಶಮಯಿಷ್ಯಾಮಿ ಮದ್ಬಾಣೈರ್ಭಿನ್ನಾಯಾಸ್ತವ ಮೇದಸಾ ॥ ೨೫ ॥

ಪುಮಾನ್ಯೋಷಿದುತ ಕ್ಲೀಬ ಆತ್ಮಸಂಭಾವನೋಽಧಮಃ ।
ಭೂತೇಷು ನಿರನುಕ್ರೋಶೋ ನೃಪಾಣಾಂ ತದ್ವಧೋಽವಧಃ ॥ ೨೬ ॥

ತ್ವಾಂ ಸ್ತಬ್ಧಾಂ ದುರ್ಮದಾಂ ನೀತ್ವಾ ಮಾಯಾಗಾಂ ತಿಲಶಃ ಶರೈಃ ।
ಆತ್ಮಯೋಗಬಲೇನೇಮಾ ಧಾರಯಿಷ್ಯಾಮ್ಯಹಂ ಪ್ರಜಾಃ ॥ ೨೭ ॥

ಏವಂ ಮನ್ಯುಮಯೀಂ ಮೂರ್ತಿಂ ಕೃತಾಂತಮಿವ ಬಿಭ್ರತಮ್ ।
ಪ್ರಣತಾ ಪ್ರಾಂಜಲಿಃ ಪ್ರಾಹ ಮಹೀ ಸಂಜಾತವೇಪಥುಃ ॥ ೨೮ ॥

ಧರೋವಾಚ

ನಮಃ ಪರಸ್ಮೈ ಪುರುಷಾಯ ಮಾಯಯಾ
ವಿನ್ಯಸ್ತನಾನಾತನವೇ ಗುಣಾತ್ಮನೇ ।
ನಮಃ ಸ್ವರೂಪಾನುಭವೇನ ನಿರ್ಧುತ-
ದ್ರವ್ಯಕ್ರಿಯಾಕಾರಕವಿಭ್ರಮೋರ್ಮಯೇ ॥ ೨೯ ॥

ಯೇನಾಹಮಾತ್ಮಾಯತನಂ ವಿನಿರ್ಮಿತಾ
ಧಾತ್ರಾ ಯತೋಽಯಂ ಗುಣಸರ್ಗಸಂಗ್ರಹಃ ।
ಸ ಏವ ಮಾಂ ಹಂತು ಮುದಾಯುಧಃ ಸ್ವರಾ-
ಡುಪಸ್ಥಿತೋಽನ್ಯಂ ಶರಣಂ ಕಮಾಶ್ರಯೇ ॥ ೩೦ ॥

ಯ ಏತದಾದಾವಸೃಜಚ್ಚರಾಚರಂ
ಸ್ವಮಾಯಯಾಽಽತ್ಮಾಶ್ರಯಯಾವಿತರ್ಕ್ಯಯಾ ।
ತಯೈವ ಸೋಽಯಂ ಕಿಲ ಗೋಪ್ತುಮುದ್ಯತಃ
ಕಥಂ ನು ಮಾಂ ಧರ್ಮಪರೋ ಜಿಘಾಂಸತಿ ॥ ೩೧ ॥

ನೂನಂ ಬತೇಶಸ್ಯ ಸಮೀಹಿತಂ ಜನೈ-
ಸ್ತನ್ಮಾಯಯಾ ದುರ್ಜಯಯಾಕೃತಾತ್ಮಭಿಃ ।
ನ ಲಕ್ಷ್ಯತೇ ಯಸ್ತ್ವಕರೋದಕಾರಯದ್
ಯೋಽನೇಕ ಏಕಃ ಪರತಶ್ಚ ಈಶ್ವರಃ ॥ ೩೨ ॥

ಹಿಂದೆ ಬ್ರಹ್ಮದೇವರು ಲೋಕರಕ್ಷಣೆಗಾಗಿ ಉತ್ಪಾದನೆಮಾಡಿದ ಅನ್ನಾದಿ ಬೀಜಗಳನ್ನು ನೀನು ನಿನ್ನಲ್ಲಿ ಲೀನಗೊಳಿಸಿಕೊಂಡು ಬಿಟ್ಟಿರುವೆ. ಈಗ ನನ್ನನ್ನೂ ತಿರಸ್ಕರಿಸಿ ಸಸ್ಯಗಳನ್ನು ಮೊಳೆಯಿಸದೆ ನೀನು ಅಪರಾಧಿನಿಯೂ, ಮೂರ್ಖಳೂ ಆಗಿರುವೆ. ॥ ೨೪ ॥ ನಿನ್ನನ್ನು ನನ್ನ ಬಾಣಗಳಿಂದ ತುಂಡರಿಸಿ ಹಸಿವಿನಿಂದ ಕಂಗೆಟ್ಟಿರುವ ನನ್ನ ಪ್ರಜೆಗಳಿಗೆ ನಿನ್ನ ಕೊಬ್ಬಿನಿಂದಲೇ ಅನ್ನ ಆಹಾರಗಳ ತೃಪ್ತಿಯನ್ನು ಉಂಟುಮಾಡುವೆನು. ॥ ೨೫ ॥ ಅಧಮನಾದ ಮನುಷ್ಯನು ಪ್ರಾಣಿಗಳಲ್ಲಿ ದಯೆಯನ್ನು ತೊರೆದು ಕೇವಲ ತನ್ನ ಪೋಷಣೆಯನ್ನೇ ಮಾಡಿಕೊಳ್ಳುವವನು ಪುರುಷನಾಗಲೀ, ಸ್ತ್ರೀಯಾಗಲಿ, ನಪುಂಸಕನಾಗಲಿ ಅಂತಹವನನ್ನು ಕೊಲ್ಲುವುದು ರಾಜರಿಗಾಗಿ ಕೊಂದಂತೆಯೇ ಅಲ್ಲ. ॥ ೨೬ ॥ ನೀನು ಅತಿಗರ್ವಿಷ್ಠೆಯಾಗಿ, ಮದದಿಂದ ಕೊಬ್ಬಿದವಳಾಗಿ ಮಾಯೆಯಿಂದ ಗೋರೂಪವನ್ನು ತಾಳಿರುವ ನಿನ್ನನ್ನು ನನ್ನ ಬಾಣಗಳಿಂದ ತುಂಡು-ತುಂಡಾಗಿಸಿ ಈ ಪ್ರಜೆಗಳನ್ನು ನನ್ನ ಯೋಗಬಲದಿಂದಲೇ ಧರಿಸಿ ಕಾಪಾಡುವೆನು. ॥ ೨೭ ॥

ಹೀಗೆ ಮೃತ್ಯುವಿನಂತೆ, ಕ್ರೋಧಮಯ ಮೂರ್ತಿಯಾಗಿದ್ದ ಆ ಭೂಪತಿಯನ್ನು ಕಂಡು ಭೂದೇವಿಯು ಆತನಿಗೆ ನಮಸ್ಕರಿಸಿ ಕೈಜೋಡಿಸಿಕೊಂಡು ನಡುಗುತ್ತಾ ಅತ್ಯಂತ ವಿನಮ್ರಭಾವದಿಂದ ಹೀಗೆಂದಳು. ॥ ೨೮ ॥

**ಪೃಥಿವಿಯು ಹೇಳಿದಳು** – ನೀನು ಸಾಕ್ಷಾತ್ ಪರಮಪುರುಷನು. ಮಾಯೆಯಿಂದ ಬಗೆ-ಬಗೆಯ ದೇಹಗಳನ್ನು ಧರಿಸಿ ಗುಣಮಯನಂತೆ ಕಾಣುತ್ತಿದ್ದರೂ ವಾಸ್ತವವಾಗಿ ತ್ರಿಗುಣಾತೀತನೂ, ಆತ್ಮಾನುಭಾವದಿಂದ ಅಧಿಭೂತ, ಅಧ್ಯಾತ್ಮ, ಅಧಿದೈವ ಸಂಬಂಧವಾದ ಅಭಿಮಾನ ಮತ್ತು ಅದರಿಂದ ಉಂಟಾದ ರಾಗ-ದ್ವೇಷಾದಿಗಳಿಂದ ಸರ್ವಥಾ ರಹಿತನಾಗಿರುವೆ. ಅಂತಹ ನಿನಗೆ ನಾನು ಪದೇ-ಪದೇ ನಮಸ್ಕರಿಸುತ್ತಿದ್ದೇನೆ. ॥ ೨೯ ॥ ನೀನು ಇಡೀ ಜಗತ್ತನ್ನು ನಿರ್ಮಾಣಮಾಡಿದವನು. ಈ ತ್ರಿಗುಣಾತ್ಮಕವಾದ ಸೃಷ್ಟಿಯನ್ನು ರಚಿಸಿ, ನನ್ನನ್ನು ಸಮಸ್ತ ಜೀವಿಗಳಿಗೂ ಆಶ್ರಯವಾಗಿರುವಂತೆ ಮಾಡಿದವನೂ ನೀನೇ. ಹೀಗೆ ಸರ್ವಸ್ವತಂತ್ರನಾಗಿ, ಸರ್ವೇಶ್ವರನಾಗಿ, ನಿಯಾಮಕನಾಗಿರುವ ನೀನೇ ಆಯುಧಧಾರಿಯಾಗಿ ನನ್ನನ್ನು ಕೊಲ್ಲಲು ಬರುವಾಗ ನಾನು ಬೇರೆ ಯಾರನ್ನು ಶರಣು ಹೋಗಲಿ ? ॥ ೩೦ ॥ ಕಲ್ಪದ ಪ್ರಾರಂಭದಲ್ಲಿ ನೀನೇ ನಿನಗೆ ಆಶ್ರಿತವಾಗಿರುವ ಅನಿರ್ವಚನೀಯ ಮಾಯೆಯಿಂದಲೇ ಈ ಚರಾಚರ ಜಗತ್ತನ್ನು ರಚಿಸಿದ್ದೆ. ಆ ಮಾಯೆಯ ಮೂಲಕವೇ ನೀನು ಇದನ್ನು ಪಾಲಿಸಲು ಸಿದ್ಧನಾಗಿರುವೆ. ನೀನು ಧರ್ಮಪರಾಯಣನಾಗಿರುವೆ. ಹಾಗಿರುವಾಗ ಗೋರೂಪಧಾರಿಣಿಯಾದ ನನ್ನನ್ನು ಏಕೆ ಕೊಲ್ಲಲು ಬಯಸುವೆ ? ॥ ೩೧ ॥ ನೀನು ಒಬ್ಬನೇ ಆಗಿದ್ದರೂ ಮಾಯಾವಶದಿಂದ ಅನೇಕರೂಪಿಯಾಗಿ ಕಾಣಿಸುತ್ತಿದ್ದೀಯೇ. ನೀನೇ ಬ್ರಹ್ಮದೇವರನ್ನು ಸೃಷ್ಟಿಸಿ ಅವರಿಂದ ವಿಶ್ವದ ರಚನೆಯನ್ನು ಮಾಡಿಸಿದ್ದೀಯೆ. ನೀನು ಸಾಕ್ಷಾತ್ ಸರ್ವೇಶ್ವರನಾಗಿರುವೆ. ನಿನ್ನ ಲೀಲೆಗಳನ್ನು ಜಿತೇಂದ್ರಿಯರಲ್ಲದವರು ಹೇಗೆ ತಾನೇ ತಿಳಿಯ ಬಲ್ಲರು ? ಅವರ ಬುದ್ಧಿಯಾದರೋ ದಾಟಲಶಕ್ಯವಾದ ಮಾಯೆಯಿಂದ ವಿಕ್ಷಿಪ್ತವಾಗಿದೆ. ॥ ೩೨ ॥

ಸರ್ಗಾದಿ ಯೋಽಸ್ಯಾನುರುಣದ್ಧಿ ಶಕ್ತಿಭಿ-
ರ್ದ್ರವ್ಯಕ್ರಿಯಾಕಾರಕಚೇತನಾತ್ಮಭಿಃ ।
ತಸ್ಮೈ ಸಮುನ್ನದ್ಧ ನಿರುದ್ಧ ಶಕ್ತಯೇ
ನಮಃ ಪರಸ್ಮೈ ಪುರುಷಾಯ ವೇಧಸೇ ॥ ೩೩ ॥

ಸ ವೈ ಭವಾನಾತ್ಮವಿನಿರ್ಮಿತಂ ಜಗದ್
ಭೂತೇಂದ್ರಿಯಾಂತಃಕರಣಾತ್ಮಕಂ ವಿಭೋ ।
ಸಂಸ್ಥಾಪಯಿಷ್ಯನ್ನಜ ಮಾಂ ರಸಾತಲಾ-
ದಭ್ಯುಜ್ಜಹಾರಾಮ್ಭಸ ಆದಿಸೂಕರಃ ॥ ೩೪ ॥

ಅಪಾಮುಪಸ್ಥೇ ಮಯಿ ನಾವ್ಯವಸ್ಥಿತಾಃ
ಪ್ರಜಾ ಭವಾನದ್ಯ ರಿರಕ್ಷಿಷುಃ ಕಿಲ ।
ಸ ವೀರಮೂರ್ತಿಃ ಸಮಭೂದ್ಧರಾಧರೋ
ಯೋ ಮಾಂ ಪಯಸ್ಯುಗ್ರಶರೋ ಜಿಘಾಂಸಸಿ ॥ ೩೫ ॥

ನೂನಂ ಜನೈರೀಹಿತಮೀಶ್ವರಾಣಾ-
ಮಸ್ಮದ್ವಿಧೈಸ್ತದ್ಗುಣಸರ್ಗಮಾಯಯಾ ।
ನ ಜ್ಞಾಯತೇ ಮೋಹಿತಚಿತ್ತ ವರ್ತ್ಮಭಿ-
ಸ್ತೇಭ್ಯೋ ನಮೋ ವೀರಯಶಸ್ಕರೇಭ್ಯಃ ॥ ೩೬ ॥

ಪಂಚಭೂತಗಳು, ಇಂದ್ರಿಯಗಳು, ಅವುಗಳ ಅಧಿಷ್ಠಾತೃ ದೇವತೆಗಳು, ಬುದ್ಧಿ ಮತ್ತು ಅಹಂಕಾರರೂಪವಾದ ಸ್ವಶಕ್ತಿಗಳಿಂದ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಕ್ರಮವಾಗಿ ಮಾಡುವ ಪರಮೇಶ್ವರನು ನೀನೇ. ನಿನ್ನ ಈ ಶಕ್ತಿಗಳು ಬೇರೆ-ಬೇರೆ ಕಾರ್ಯಗಳಿಗಾಗಿ ಬೇರೆ-ಬೇರೆ ಸಮಯಗಳಲ್ಲಿ ಪ್ರಕಟವಾಗಿ, ಮರೆಯಾಗುತ್ತವೆ. ನೀನು ಸಾಕ್ಷಾತ್ ಪರಮಪುರುಷನಾಗಿದ್ದು, ಜಗದ್ವಿಧಾತನಾದ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೩೩ ॥ ಓ ಜನ್ಮರಹಿತನಾದ ಪ್ರಭುವೇ! ನೀನು ರಚಿಸಿದ ಭೂತಗಳು, ಇಂದ್ರಿಯಗಳು, ಅಂತಃಕರಣರೂಪವಾದ ಜಗತ್ತಿನ ಸ್ಥಿತಿಗಾಗಿ ಆದಿವರಾಹರೂಪವನ್ನು ಧರಿಸಿ ನನ್ನನ್ನು ರಸಾತಲದ ನೀರಿನಿಂದ ಹೊರಗೆ ತಂದು ಕಾಪಾಡಿದವನು. ॥ ೩೪ ॥ ಹೀಗೆ ಒಂದು ಬಾರಿ ನನ್ನನ್ನು ಉದ್ಧಾರಮಾಡಿ 'ಧರಾಧರ' ಎಂಬ ಹೆಸರು ಪಡೆದ ನೀನೇ ವೀರಮೂರ್ತಿಯಾಗಿ ಜಲದ ಮೇಲೆ ಹಡಗಿನಂತೆ ನಿಂತಿರುವ ನನ್ನನ್ನು ಆಶ್ರಯಿಸಿರುವ ಪ್ರಜೆಗಳನ್ನು ರಕ್ಷಿಸುವುದಕ್ಕಾಗಿ, ಅತಿತೀಕ್ಷ್ಣವಾದ ಬಾಣಗಳನ್ನು ಹೂಡಿ, ಹಾಲುಕೊಡಲಿಲ್ಲ ಎಂಬ ತಪ್ಪಿಗಾಗಿ ನನ್ನನ್ನು ಕೊಲ್ಲಲು ಬಯಸುತ್ತಿರುವೆಯಲ್ಲ. ॥ ೩೫ ॥ ಈ ತ್ರಿಗುಣಾತ್ಮಕ ಸೃಷ್ಟಿಯನ್ನು ರಚಿಸಿರುವ ನಿನ್ನ ಮಾಯೆಯಿಂದ ನನ್ನಂತಹ ಸಾಧಾರಣ ಜನರ ಚಿತ್ತವು ಮೋಹಿತವಾಗಿದೆ. ನನ್ನಂತಹವರಾದರೋ ನಿನ್ನ ಭಕ್ತರ ಲೀಲೆಗಳನ್ನೂ ಕೂಡ ಖಂಡಿತವಾಗಿ ತಿಳಿಯಲಾರರು. ಹಾಗಿರುವಾಗ ನಿನ್ನ ಯಾವುದೇ ಕ್ರಿಯೆಯ ಉದ್ದೇಶವನ್ನು ತಿಳಿಯದಿರುವುದರಲ್ಲಿ ಆಶ್ಚರ್ಯವೇನಿದೆ? ಆದ್ದರಿಂದ ಇಂದ್ರಿಯ ಸಂಯಮಾದಿಗಳ ಮೂಲಕ ವೀರೋಚಿತ ಕಾರ್ಯಗಳನ್ನು ಮಾಡುವ ನಿನ್ನ ಭಕ್ತರನ್ನೂ ಕೂಡ ನಮಸ್ಕರಿಸುತ್ತೇನೆ. ॥ ೩೬ ॥

**ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಪೃಥುವಿಜಯೇ ಧರಿತ್ರೀನಿಗ್ರಹೋ ನಾಮ ಸಪ್ತದಶೋಽಧ್ಯಾಯಃ ॥ ೧೭ ॥**

# ಹದಿನೆಂಟನೆಯ ಅಧ್ಯಾಯ

## ಗೋರೂಪವಾದ ಭೂದೇವಿಯಿಂದ ಹಾಲನ್ನು ಕರೆದುದು

*ಮೈತ್ರೇಯ ಉವಾಚ*

ಇತ್ಥಂ ಪೃಥುಮಭಿಷ್ಟೂಯ ರುಷಾ ಪ್ರಸ್ಫುರಿತಾಧರಮ್ ।
ಪುನರಾಹಾವನಿರ್ಭೀತಾ ಸಂಸ್ತಭ್ಯಾತ್ಮಾನಮಾತ್ಮನಾ ॥ ೧ ॥

ಸಂನಿಯಚ್ಛಾಭಿಭೋ ಮನ್ಯುಂ ನಿಬೋಧ ಶ್ರಾವಿತಂ ಚ ಮೇ ।
ಸರ್ವತಃ ಸಾರಮಾದತ್ತೇ ಯಥಾ ಮಧುಕರೋ ಬುಧಃ ॥ ೨ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಕೋಪದಿಂದ ತುಟಿಗಳು ಅದುರುತ್ತಿದ್ದ ಪೃಥುರಾಜನನ್ನು ಭೂದೇವಿಯು ಹೀಗೆ ಸ್ತೋತ್ರಮಾಡಿದರೂ ಭಯವು ಹೋಗದಿರಲು ತನ್ನನ್ನು ತಾನೇ ಸಮಾಧಾನಮಾಡಿಕೊಂಡು ಪುನಃ ಅವನಲ್ಲಿ ಹೀಗೆಂದಳು- ॥ ೧ ॥ ರಾಜೇಂದ್ರನೇ! ಕೋಪವನ್ನು ಉಪಸಂಹಾರಮಾಡು. ನನ್ನ ವಿಜ್ಞಾಪನೆಯನ್ನು ಲಾಲಿಸು. ಬುದ್ಧಿವಂತರಾದವರು ದುಂಬಿಯಂತೆ ಎಲ್ಲ ಕಡೆಗಳಿಂದಲೂ ಸಾರವನ್ನು ಗ್ರಹಿಸಿಕೊಳ್ಳಬಲ್ಲರು. ॥ ೨ ॥ ತತ್ತ್ವದರ್ಶಿಗಳಾದ ಮುನಿಗಳು ಈ ಲೋಕದಲ್ಲೂ ಮತ್ತು ಪರಲೋಕದಲ್ಲೂ ಮನುಷ್ಯರಿಗೆ ಶ್ರೇಯಸ್ಸನ್ನುಂಟುಮಾಡಲು ಕೃಷಿ

ಅಸ್ಮಿಲ್ಲೋಕೇಽಥವಾಮುಷ್ಮಿನ್ಮುನಿಭಿಸ್ತತ್ತ್ವದರ್ಶಿಭಿಃ ।
ದೃಷ್ಟಾ ಯೋಗಾಃ ಪ್ರಯುಕ್ತಾಶ್ಚ ಪುಂಸಾಂ ಶ್ರೇಯಃಪ್ರಸಿದ್ಧಯೇ ॥ ೩ ॥

ತಾನಾತಿಷ್ಠತಿ ಯಃ ಸಮ್ಯಗುಪಾಯಾನ್ಪೂರ್ವದರ್ಶಿತಾನ್ ।
ಅವರಃ ಶ್ರದ್ಧಯೋಪೇತ ಉಪೇಯಾನ್ವಿಂದತೇಂಜಸಾ ॥ ೪ ॥

ತಾನನಾದೃತ್ಯ ಯೋಽವಿದ್ವಾನರ್ಥಾನಾರಭತೇ ಸ್ವಯಮ್ ।
ತಸ್ಯ ವ್ಯಭಿಚರಂತ್ಯರ್ಥಾ ಆರಬ್ಧಾಶ್ಚ ಪುನಃ ಪುನಃ ॥ ೫ ॥

ಪುರಾ ಸೃಷ್ಟಾ ಹ್ಯೋಷಧಯೋ ಬ್ರಹ್ಮಣಾ ಯಾ ವಿಶಾಂಪತೇ ।
ಭುಜ್ಯಮಾನಾ ಮಯಾ ದೃಷ್ಟಾ ಅಸದ್ಭಿರಧೃತವ್ರತೈಃ ॥ ೬ ॥

ಅಪಾಲಿತಾನಾದೃತಾ ಚ ಭವದ್ಭಿರ್ಲೋಕಪಾಲಕೈಃ ।
ಚೋರೀಭೂತೇಽಥ ಲೋಕೇಽಹಂ ಯಜ್ಞಾರ್ಥೇಽಗ್ರಸಮೋಷಧೀಃ ॥ ೭ ॥

ನೂನಂ ತಾ ವೀರುಧಃ ಕ್ಷೀಣಾ ಮಯಿ ಕಾಲೇನ ಭೂಯಸಾ ।
ತತ್ರ ಯೋಗೇನ ದೃಷ್ಟೇನ ಭವಾನಾದಾತುಮರ್ಹತಿ ॥ ೮ ॥

ವತ್ಸಂ ಕಲ್ಪಯ ಮೇ ವೀರ ಯೇನಾಹಂ ವತ್ಸಲಾ ತವ ।
ಧೋಕ್ಷ್ಯೇ ಕ್ಷೀರಮಯಾನ್ ಕಾಮಾನನುರೂಪಂ ಚ ದೋಹನಮ್ ॥ ೯ ॥

ದೋಗ್ಧಾರಂ ಚ ಮಹಾಬಾಹೋ ಭೂತಾನಾಂ ಭೂತಭಾವನ ।
ಅನ್ನಮೀಪ್ಸಿತಮೂರ್ಜಸ್ವದ್ಭಗವಾನ್ ವಾಂಛತೇ ಯದಿ ॥ ೧೦ ॥

ಸಮಾಂ ಚ ಕುರು ಮಾಂ ರಾಜನ್ದೇವವೃಷ್ಟಂ ಯಥಾ ಪಯಃ ।
ಅಪರ್ತಾವಪಿ ಭದ್ರಂ ತೇ ಉಪಾವರ್ತೇತ ಮೇ ವಿಭೋ ॥ ೧೧ ॥

ಇತಿ ಪ್ರಿಯಂ ಹಿತಂ ವಾಕ್ಯಂ ಭುವ ಆದಾಯ ಭೂಪತಿಃ ।
ವತ್ಸಂ ಕೃತ್ವಾ ಮನುಂ ಪಾಣಾವದುಹತ್ಸಕಲೌಷಧೀಃ ॥ ೧೨ ॥

ತಥಾ ಪರೇ ಚ ಸರ್ವತ್ರ ಸಾರಮಾದದತೇ ಬುಧಾಃ ।
ತತೋಽನ್ಯೇ ಚ ಯಥಾಕಾಮಂ ದುದುಹುಃ ಪೃಥುಭಾವಿತಾಮ್ ॥ ೧೩ ॥

ಋಷಯೋ ದುದುಹುರ್ದೇವೀಮಿಂದ್ರಿಯೇಷ್ವಥ ಸತ್ತಮ ।
ವತ್ಸಂ ಬೃಹಸ್ಪತಿಂ ಕೃತ್ವಾ ಪಯಶ್ಛಂದೋಮಯಂ ಶುಚಿ ॥ ೧೪ ॥

ಅಗ್ನಿಹೋತ್ರ ಮುಂತಾದ ಅನೇಕ ಉಪಾಯಗಳನ್ನು ಕಂಡುಹಿಡಿದಿರುವರು. ಅವು ಉಪಯೋಗಿಯಾಗಿವೆ. ॥ ೩ ॥ ಆ ಪ್ರಾಚೀನ ಋಷಿಗಳು ತೋರಿಸಿಕೊಟ್ಟ ಉಪಾಯಗಳನ್ನು ಈಗಲೂ ಶ್ರದ್ಧೆಯಿಂದ ಚೆನ್ನಾಗಿ ಆಚರಿಸಿದ ಮನುಷ್ಯರು ಸುಲಭವಾಗಿ ಇಷ್ಟಾರ್ಥ ಸಿದ್ಧಿಯನ್ನು ಪಡೆದುಕೊಳ್ಳುವರು. ॥ ೪ ॥ ಆದರೆ ಅಜ್ಞಾನಿಯಾದವನು ಅವನ್ನು ಆದರಿಸದೆಯೇ ತನ್ನ ಮನಸ್ಸಿಗೆ ತೋಚಿದ ಉಪಾಯಗಳನ್ನು ಆಶ್ರಯಿಸುತ್ತಾನೆಯೋ ಅವನ ಎಲ್ಲ ಉಪಾಯಗಳು, ಪ್ರಯತ್ನಗಳು ಪದೇ-ಪದೇ ನಿಷ್ಫಲವಾಗುತ್ತಾ ಇರುತ್ತವೆ. ॥ ೫ ॥ ಎಲೈ ರಾಜನೇ! ಹಿಂದೆ ಬ್ರಹ್ಮದೇವರು ಪ್ರಾಣಿಗಳ ಆಹಾರಕ್ಕಾಗಿ ಸೃಷ್ಟಿಮಾಡಿದ ಧಾನ್ಯಗಳನ್ನು ಯಮ-ನಿಯಮಾದಿ ವ್ರತಗಳನ್ನು ಆಚರಿಸದ ದುರಾಚಾರಿಗಳು ತಿನ್ನುತ್ತಾ ಇರುವುದನ್ನು ನಾನು ನೋಡಿದ್ದೇನೆ. ॥ ೬ ॥ ಲೋಕಪಾಲನೆಯ ಹೊಣೆಯನ್ನು ಹೊತ್ತಿರುವ ನಿಮ್ಮಂತಹ ರಾಜರು ನನ್ನನ್ನು ಪಾಲಿಸುವುದನ್ನು, ಆದರಿಸುವುದನ್ನು ಬಿಟ್ಟುಬಿಟ್ಟರು. ಆದರಿಂದ ಎಲ್ಲ ಜನರು ಕಳ್ಳರಂತೆ ಆಗಿದ್ದಾರೆ. ಅದರಿಂದಲೇ ನಾನು ಮುಂದೆ ಯಜ್ಞಾದಿಗಳಿಗೆ ಒದಗಿಬರಲೆಂದು ಉಳಿದ ಔಷಧಿ-ಬೀಜಗಳನ್ನು ಅಡಗಿಸಿಬಿಟ್ಟಿರುವೆನು. ॥ ೭ ॥ ಈಗ ಬಹಳ ಕಾಲವು ಕಳೆದುಹೋದುದರಿಂದ ಆ ಧಾನ್ಯಗಳೆಲ್ಲ ನನ್ನ ಹೊಟ್ಟೆಯಲ್ಲೇ ಜೀರ್ಣವಾಗಿಹೋಗಿವೆ. ಅವುಗಳನ್ನು ನೀನೀಗ ಹಿಂದಿನ ಆಚಾರ್ಯರು ಹೇಳಿದ ಉಪಾಯಗಳಿಂದ ಪಡೆದುಕೊಳ್ಳಬಹುದು. ॥ ೮ ॥ ಎಲೈ ಲೋಕಪಾಲನಾದ ವೀರನೇ! ಈಗ ನಿನಗೆ ಸಕಲಲೋಕಗಳಿಗೂ ಇಷ್ಟವಾಗಿ ಹಿತಕರವಾಗಿರುವ ಅನ್ನವನ್ನು ದೊರಕಿಸಿಕೊಡುವ ಬಯಕೆಯಿದ್ದರೆ – ನನಗೆ ಯೋಗ್ಯವಾದ ಕರುವನ್ನು, ಹಾಲುಕರೆಯುವ ಪಾತ್ರೆಯನ್ನು, ಹಾಲುಕರೆಯುವವರನ್ನು ಏರ್ಪಡಿಸು. ಆ ಕರುವಿನ ಮೇಲಿನ ವಾತ್ಸಲ್ಯದಿಂದಾಗಿ ನಾನು ಹಾಲಿನ ರೂಪದಲ್ಲಿ ನಿನಗೆ ನಿನ್ನ ಎಲ್ಲ ಇಷ್ಟಾರ್ಥವನ್ನು ಈಡೇರಿಸಿಕೊಡುವೆನು. ॥ ೯-೧೦ ॥ ರಾಜನೇ! ಇನ್ನೊಂದು ಮಾತಿದೆ. ನೀನು ನನ್ನನ್ನು ಹಳ್ಳ-ತಿಟ್ಟುಗಳಿಲ್ಲದೆ ಸಮತಲವಾಗಿಸಬೇಕು. ಅದರಿಂದ ಇಂದ್ರನು ಸುರಿಸಿದ ಮಳೆಯ ನೀರು ವರ್ಷಾಕಾಲವು ಕಳೆದಹೋದ ಬಳಿಕವು ಎಲ್ಲ ಕಡೆಗಳಲ್ಲಿ ಉಳಿಯುವುದು. ನನ್ನೊಳಗಿನ ತೇವವು ಒಣಗಿಹೋಗದು. ನೀನು ಹೀಗೆ ಮಾಡಿದರೆ ನಿನಗೆ ತುಂಬಾ ಒಳ್ಳೆಯದಾಗಬಹುದು. ॥ ೧೧ ॥

ಭೂದೇವಿಯು ಹೇಳಿದ ಪ್ರಿಯವೂ, ಹಿತಕರವೂ ಆದ ಮಾತನ್ನು ಪೃಥುಮಹಾರಾಜನು ಸ್ವೀಕರಿಸಿ, ಸ್ವಾಯಂಭುವ ಮನುವನ್ನೇ ಕರುವಾಗಿಸಿಕೊಂಡು ಗೋರೂಪಿಣಿಯಾಗಿದ್ದ ಭೂದೇವಿಯಿಂದ ತನ್ನ ಕೈಗಳಲ್ಲೇ ಎಲ್ಲ ಧಾನ್ಯಗಳನ್ನು ಕರೆದುಕೊಂಡನು. ॥ ೧೨ ॥ ಹಾಗೆಯೇ ಪೃಥುವಿನಂತೆ ತಿಳಿವಳಿಕೆಯುಳ್ಳ ಇತರ ಎಲ್ಲ ಜನರೂ ಎಲ್ಲ ಕಡೆಗಳಿಂದ ಸಾರವನ್ನು ಪರಿಗ್ರಹಿಸಿದರು. ಅವರು ಪೃಥುರಾಜನ ಮೂಲಕ ವಶಪಡಿಸಿಕೊಂಡ ಭೂಮಿಯಿಂದ ತಮ್ಮ-ತಮ್ಮ ಇಷ್ಟಾರ್ಥಗಳನ್ನು ಕರೆದುಕೊಂಡರು. ॥ ೧೩ ॥ ಋಷಿಗಳು ಬೃಹಸ್ಪತಿಯನ್ನು ಕರುವನ್ನಾಗಿ ಮಾಡಿಕೊಂಡು ಇಂದ್ರಿಯ (ವಾಣಿ, ಮನಸ್ಸು, ಶ್ರೋತ್ರ) ರೂಪವಾದ ಪಾತ್ರೆಯಲ್ಲಿ ವೇದರೂಪವಾದ, ಪವಿತ್ರವಾದ ಕ್ಷೀರವನ್ನು ಕರೆದುಕೊಂಡರು. ॥ ೧೪ ॥ ದೇವತೆಗಳು

ಕೃತ್ವಾ ವತ್ಸಂ ಸುರಗಣಾ ಇಂದ್ರಂ ಸೋಮಮದೂದುಹನ್ ।
ಹಿರಣ್ಮಯೇನ ಪಾತ್ರೇಣ ವೀರ್ಯಮೋಜೋ ಬಲಂ ಪಯಃ
॥ ೧೫ ॥

ದೈತೇಯಾ ದಾನವಾ ವತ್ಸಂ ಪ್ರಹ್ಲಾದಮಸುರರ್ಷಭಮ್ ।
ವಿಧಾಯಾದೂದುಹನ್ ಕ್ಷೀರಮಯಃಪಾತ್ರೇ ಸುರಾಸವಮ್
॥ ೧೬ ॥

ಗಂಧರ್ವಾಪ್ಸರಸೋಽಧುಕ್ಷನ್ಪಾತ್ರೇ ಪದ್ಮಮಯೇ ಪಯಃ ।
ವತ್ಸಂ ವಿಶ್ವಾವಸುಂ ಕೃತ್ವಾ ಗಾಂಧರ್ವಂ ಮಧು ಸೌಭಗಮ್
॥ ೧೭ ॥

ವತ್ಸೇನ ಪಿತರೋಽರ್ಯಮ್ಣಾ ಕವ್ಯಂ ಕ್ಷೀರಮಧುಕ್ಷತ ।
ಆಮಪಾತ್ರೇ ಮಹಾಭಾಗಾಃ ಶ್ರದ್ಧಯಾ ಶ್ರಾದ್ಧದೇವತಾಃ
॥ ೧೮ ॥

ಪ್ರಕಲ್ಪ್ಯ ವತ್ಸಂ ಕಪಿಲಂ ಸಿದ್ಧಾಃ ಸಂಕಲ್ಪನಾಮಯೀಮ್ ।
ಸಿದ್ಧಿಂ ನಭಸಿ ವಿದ್ಯಾಂ ಚ ಯೇ ಚ ವಿದ್ಯಾಧರಾದಯಃ
॥ ೧೯ ॥

ಅನ್ಯೇ ಚ ಮಾಯಿನೋ ಮಾಯಾ-
ಮಂತರ್ಧಾನಾದ್ಭುತಾತ್ಮನಾಮ್ ।
ಮಯಂ ಪ್ರಕಲ್ಪ್ಯ ವತ್ಸಂ ತೇ
ದುದುಹುರ್ಧಾರಣಾಮಯೀಮ್ ॥ ೨೦ ॥

ಯಕ್ಷರಕ್ಷಾಂಸಿ ಭೂತಾನಿ ಪಿಶಾಚಾಃ ಪಿಶಿತಾಶನಾಃ ।
ಭೂತೇಶವತ್ಸಾ ದುದುಹುಃ ಕಪಾಲೇ ಕ್ಷತಜಾಸವಮ್
॥ ೨೧ ॥

ತಥಾಹಯೋ ದಂದಶೂಕಾಃ ಸರ್ಪಾ ನಾಗಾಶ್ಚ ತಕ್ಷಕಮ್ ।
ವಿಧಾಯ ವತ್ಸಂ ದುದುಹುರ್ಬಿಲಪಾತ್ರೇ ವಿಷಂ ಪಯಃ
॥ ೨೨ ॥

ಪಶವೋ ಯವಸಂ ಕ್ಷೀರಂ ವತ್ಸಂ ಕೃತ್ವಾ ಚ ಗೋವೃಷಮ್ ।
ಅರಣ್ಯಪಾತ್ರೇ ಚಾಧುಕ್ಷನ್ ಮೃಗೇಂದ್ರೇಣ ಚ ದಂಷ್ಟ್ರಿಣಃ
॥ ೨೩ ॥

ಕ್ರವ್ಯಾದಾಃ ಪ್ರಾಣಿನಃ ಕ್ರವ್ಯಂ ದುದುಹುಃ ಸ್ವೇ ಕಲೇವರೇ ।
ಸುಪರ್ಣವತ್ಸಾ ವಿಹಗಾಶ್ಚರಂ ಚಾಚರಮೇವ ಚ
॥ ೨೪ ॥

ವಟವತ್ಸಾ ವನಸ್ಪತಯಃ ಪೃಥಗ್ರಸಮಯಂ ಪಯಃ ।
ಗಿರಯೋ ಹಿಮವದ್ವತ್ಸಾ ನಾನಾಧಾತೂನ್ಸ್ವ ಸಾನುಷು
॥ ೨೫ ॥

ಇಂದ್ರನನ್ನು ಕರುವನ್ನಾಗಿಸಿ ಸುವರ್ಣಮಯ ಪಾತ್ರದಲ್ಲಿ ಸೋಮರಸ (ಅಮೃತ), ವೀರ್ಯ (ಮನೋಬಲ), ಓಜ (ಇಂದ್ರಿಯ ಬಲ) ಮತ್ತು ಶಾರೀರಿಕ ಬಲರೂಪವಾದ ಹಾಲನ್ನು ಕರೆದುಕೊಂಡರು. ॥ ೧೫ ॥ ದೈತ್ಯರು ಮತ್ತು ದಾನವರು ಅಸುರಶ್ರೇಷ್ಠನಾದ ಪ್ರಹ್ಲಾದನನ್ನು ಕರುವಾಗಿಸಿಕೊಂಡು ಕಬ್ಬಿಣದ ಪಾತ್ರೆಯಲ್ಲಿ ಮದಿರಾ ಮತ್ತು ಆಸವ (ಸುರೆ) ಮುಂತಾದ ಮದ್ಯಗಳನ್ನು ಹಾಲನ್ನಾಗಿ ಕರೆದುಕೊಂಡರು. ॥ ೧೬ ॥ ಗಂಧರ್ವರು ಮತ್ತು ಅಪ್ಸರೆಯರು ವಿಶ್ವಾವಸುವನ್ನು ಕರುವಾಗಿಸಿಕೊಂಡು ಕಮಲರೂಪವಾದ ಪಾತ್ರೆಯಲ್ಲಿ ಸಂಗೀತಮಾಧುರ್ಯ ಹಾಗೂ ಸೌಂದರ್ಯರೂಪವಾದ ಹಾಲನ್ನು ಕರೆದುಕೊಂಡರು. ॥ ೧೭ ॥ ಶ್ರಾದ್ಧದ ಅಧಿಷ್ಠಾತೃದೇವತೆಗಳಾದ ಪಿತೃದೇವತೆಗಳು ಅರ್ಯಮನನ್ನು ಕರುವನ್ನಾಗಿಸಿಕೊಂಡು ಮಣ್ಣಿನ ಮಡಕೆಯಲ್ಲಿ ಕವ್ಯರೂಪವಾದ ಹಾಲನ್ನು ಹಿಂಡಿಕೊಂಡರು. ॥ ೧೮ ॥ ಅನಂತರ ಸಿದ್ಧರು ಕಪಿಲ ಮಹರ್ಷಿಗಳನ್ನು ಕರುವನ್ನಾಗಿಸಿಕೊಂಡು ಆಕಾಶವೆಂಬ ಪಾತ್ರೆಯಲ್ಲಿ ಅಣಿಮಾದಿ ಅಷ್ಟಸಿದ್ಧಿಗಳನ್ನೂ ಹಾಗೆಯೇ ವಿದ್ಯಾಧರರು ಆಕಾಶಗಮನವೇ ಮುಂತಾದ ಸಿದ್ಧಿಗಳನ್ನು ಹಾಲನ್ನಾಗಿ ಪಡೆದುಕೊಂಡರು. ॥ ೧೯ ॥ ಕಿಂಪುರುಷರೇ ಮುಂತಾದ ಇತರ ಮಾಯಾವಿಗಳು ಮಯ ದಾನವನನ್ನು ಕರುವನ್ನಾಗಿಸಿಕೊಂಡು ಅಂತರ್ಧಾನ ಹೊಂದುವಿಕೆ, ವಿಚಿತ್ರರೂಪವನ್ನು ಧರಿಸುವುದು ಮುಂತಾದ ಧಾರಣಾಶಕ್ತಿಯನ್ನು ಹಾಲನ್ನಾಗಿ ಗಳಿಸಿಕೊಂಡರು. ॥ ೨೦ ॥ ಹೀಗೆಯೇ ಯಕ್ಷ-ರಾಕ್ಷಸ ಹಾಗೂ ಭೂತ-ಪಿಶಾಚಾದಿ ಮಾಂಸಾಹಾರಿಗಳು ಭೂತನಾಥನಾದ ರುದ್ರನನ್ನು ಕರುವನ್ನಾಗಿಸಿಕೊಂಡು ಕಪಾಲ (ತಲೆಬುರುಡೆ)ವೆಂಬ ಪಾತ್ರೆಯಲ್ಲಿ ರುಧಿರಾಸವರೂಪವಾದ ಹಾಲನ್ನು ಕರೆದುಕೊಂಡರು. ॥ ೨೧ ॥ ಹೆಡೆಯಿಲ್ಲದ ಹಾವುಗಳು, ಹೆಡೆಯುಳ್ಳ ಸರ್ಪಗಳು, ನಾಗಗಳು ಮತ್ತು ಚೇಳುಗಳು ಮುಂತಾದ ವಿಷಧರ ಪ್ರಾಣಿಗಳು ತಕ್ಷಕನನ್ನು ಕರುವನ್ನಾಗಿಸಿಕೊಂಡು ತಮ್ಮ-ತಮ್ಮ ಬಾಯಿಯೆಂಬ ಪಾತ್ರೆಯಲ್ಲಿ ವಿಷರೂಪವಾದ ಹಾಲನ್ನು ಹಿಂಡಿಕೊಂಡವು. ॥ ೨೨ ॥ ಪಶುಗಳು ಭಗವಾನ್ ರುದ್ರದೇವರ ವಾಹನವಾದ ವೃಷಭನನ್ನು ಕರುವನ್ನಾಗಿ ಮಾಡಿಕೊಂಡು ಅರಣ್ಯವೆಂಬ ಪಾತ್ರೆಯಲ್ಲಿ ಹುಲ್ಲಿನ ರೂಪವಾದ ಹಾಲನ್ನು ಪಡೆದುಕೊಂಡರು. ದೊಡ್ಡ-ದೊಡ್ಡ ಕೋರೆದಾಡೆಗಳುಳ್ಳ ಮಾಂಸಭಕ್ಷಕ ಮೃಗಗಳು ಸಿಂಹವೆಂಬ ಕರುವನ್ನು ಮುಂದಿಟ್ಟುಕೊಂಡು ತಮ್ಮ ಶರೀರವೆಂಬ ಪಾತ್ರೆಯಲ್ಲಿ ಹಸಿಯ ಮಾಂಸವೆಂಬ ಹಾಲನ್ನು ಪಡೆದುಕೊಂಡರು. ಹಾಗೆಯೇ ಹಕ್ಕಿಗಳು ಗರುಡನನ್ನು ಕರುವಾಗಿಸಿಕೊಂಡು ಹುಳು-ಹುಪ್ಪಟೆ ಮುಂತಾದ ಚರಪದಾರ್ಥಗಳನ್ನು, ಹಣ್ಣು ಮುಂತಾದ ಸ್ಥಿರಪದಾರ್ಥಗಳನ್ನು ಹಾಲಿನರೂಪದಲ್ಲಿ ಹಿಂಡಿಕೊಂಡವು. ॥ ೨೩-೨೪ ॥ ವೃಕ್ಷಗಳು ಆಲದಮರವನ್ನು ಕರುವನ್ನಾಗಿಸಿಕೊಂಡು ನಾನಾರಸರೂಪವಾದ ಹಾಲನ್ನು ಕರೆದುಕೊಂಡವು. ಪರ್ವತಗಳು ಹಿಮಾಲಯವನ್ನು ಕರುವನ್ನಾಗಿ ಮಾಡಿಕೊಂಡು ತಮ್ಮ ಶಿಖರಗಳೆಂಬ ಪಾತ್ರೆಯಲ್ಲಿ ಅನೇಕ ಪ್ರಕಾರದ ಧಾತುಗಳನ್ನು ಪಡೆದುಕೊಂಡವು. ॥ ೨೫ ॥

ಸರ್ವೇ ಸ್ವಮುಖ್ಯವತ್ಸೇನ ಸ್ವೇ ಸ್ವೇ ಪಾತ್ರೇ ಪೃಥಕ್ಪಯಃ ।
ಸರ್ವಕಾಮದುಘಾಂ ಪೃಥ್ವೀಂ ದುದುಹುಃ ಪೃಥುಭಾವಿತಾಮ್ ॥ ೨೬ ॥

ಪೃಥ್ವಿಯಾದರೋ ಬಯಸಿದ ವಸ್ತುಗಳನ್ನು ಕೊಡುವಂತಹವಳು. ಈಗ ಅವಳು ಪೃಥುರಾಜನ ಅಧೀನದಲ್ಲಿದ್ದಳು. ಆದ್ದರಿಂದ ಅವಳಿಂದ ಎಲ್ಲರೂ ತಮ್ಮ-ತಮ್ಮ ವರ್ಗದ ಮುಖ್ಯನಾಯಕನನ್ನು ಕರುವನ್ನಾಗಿಸಿಕೊಂಡು ಬೇರೆ-ಬೇರೆ ಪಾತ್ರೆಗಳಲ್ಲಿ ಬಗೆ-ಬಗೆಯ ಪದಾರ್ಥಗಳನ್ನು ಹಾಲಿನರೂಪದಲ್ಲಿ ಹಿಂಡಿಕೊಂಡರು. ॥ ೨೬ ॥

ಏವಂ ಪೃಥ್ವಾದಯಃ ಪೃಥ್ವೀಮನ್ನಾದಾಃ ಸ್ವನ್ನಮಾತ್ಮನಃ ।
ದೋಹವತ್ಸಾದಿಭೇದೇನ ಕ್ಷೀರಭೇದಂ ಕುರೂದ್ವಹ ॥ ೨೭ ॥

ಕುರುಶ್ರೇಷ್ಠ ವಿದುರನೇ! ಹೀಗೆ ಪೃಥುಮಹಾರಾಜನೇ ಮೊದಲ್ಗೊಂಡು ಅನ್ನವನ್ನು ತಿನ್ನುವ ಎಲ್ಲ ಜೀವಿಗಳು ನಾನಾಪ್ರಕಾರದ ಕರು ಮತ್ತು ಪಾತ್ರೆ ಇವುಗಳ ಮೂಲಕವಾಗಿ ತಮ್ಮ-ತಮ್ಮ ಬೇರೆ-ಬೇರೆ ಅನ್ನರೂಪವಾದ ಹಾಲನ್ನು ಭೂದೇವಿಯಿಂದ ಹಿಂಡಿಕೊಂಡರು. ॥ ೨೭ ॥ ಅದರಿಂದ ಮಹಾರಾಜಾ ಪೃಥುವಿಗೆ ಬಹಳ ಸಂತೋಷವಾಗಿ ಸರ್ವಕಾಮನೆಗಳನ್ನು ಕರೆಯುವ ಪೃಥಿವಿಯಲ್ಲಿ ಪುತ್ರಿಯಂತೆ ಪ್ರೀತಿ ಉಂಟಾಯಿತು. ಅವಳನ್ನು ತನ್ನ ಪುತ್ರಿಯಾಗಿಯೇ ಸ್ವೀಕರಿಸಿದನು. ॥ ೨೮ ॥ ಮತ್ತೆ ರಾಜಾಧಿರಾಜ ಪೃಥುವು ತನ್ನ ಧನುಷ್ಯದ ತುದಿಯಿಂದ ಪರ್ವತಗಳನ್ನು ಒಡೆದು ಈ ಇಡೀ ಭೂಮಂಡಲವನ್ನು ಬಹುಮಟ್ಟಿಗೆ ಸಮತಲವಾಗಿಸಿದನು. ॥ ೨೯ ॥ ಆ ವೇನಪುತ್ರನಾದ ಭಗವಾನ್ ಪೃಥುವು ತನ್ನ ಪ್ರಜೆಗಳಿಗೆ ತಂದೆಯಂತೆ ಇದ್ದು ಅವರ ಪಾಲನೆ-ಪೋಷಣೆಯ ವ್ಯವಸ್ಥೆಯಲ್ಲಿ ತೊಡಗಿದ್ದನು. ಅವನು ಸಮತಲವಾದ ಭೂಮಿಯಲ್ಲಿ ಪ್ರಜೆಗಳಿಗೆ ಅಲ್ಲಲ್ಲಿ ಯಥೋಚಿತವಾದ ವಾಸಸ್ಥಾನಗಳನ್ನು ವಿಭಾಗಿಸಿ ಕೊಟ್ಟನು. ॥ ೩೦ ॥ ಅವರಿಗಾಗಿ ಅನೇಕ ಗ್ರಾಮಗಳು, ಪುರಗಳು, ಪಟ್ಟಣಗಳು, ದುರ್ಗಗಳು, ಗೊಲ್ಲರ ಊರು-ಕೇರಿಗಳು, ಗೋಶಾಲೆಗಳು, ಶಿಬಿರಗಳು, ಗಣಿಗಳು, ರೈತರ ಹಳ್ಳಿಗಳು, ಪರ್ವತ ತಪ್ಪಲುಗಳ ಹಳ್ಳಿಗಳು ಮುಂತಾದ ಬೇರೆ-ಬೇರೆ ವಾಸಸ್ಥಾನಗಳನ್ನು ಕಲ್ಪಿಸಿದನು. ॥ ೩೧ ॥ ಮಹಾರಾಜಾ ಪೃಥುವಿನ ಆಳ್ವಿಕೆಗೆ ಮೊದಲು ಈ ಪೃಥಿವಿಯಲ್ಲಿ ಪುರ-ಗ್ರಾಮಾದಿಗಳ ವಿಭಾಗವಿರಲಿಲ್ಲ. ಎಲ್ಲ ಜನರೂ ತಮ್ಮ-ತಮ್ಮ ಅನುಕೂಲತೆಗನುಸಾರ ಅಡೆ-ತಡೆಯಿಲ್ಲದೆ ಅಲ್ಲಲ್ಲಿ ವಾಸಿಸುತ್ತಿದ್ದರು. (ಈಗ ಪೃಥುಮಹಾರಾಜನು ಏರ್ಪಡಿಸಿ ಕೊಟ್ಟ ವಾಸಸ್ಥಾನಗಳಲ್ಲಿ ಯಾವ ಭಯವೂ ಇಲ್ಲದೆ ಸಂತೋಷವಾಗಿ ವಾಸಿಸತೊಡಗಿದರು.) ॥ ೩೨ ॥

ತತೋ ಮಹೀಪತಿಃ ಪ್ರೀತಃ ಸರ್ವಕಾಮದುಘಾಂ ಪೃಥುಃ ।
ದುಹಿತೃತ್ವೇ ಚಕಾರೇಮಾಂ ಪ್ರೇಮ್ಣಾ ದುಹಿತೃವತ್ಸಲಃ ॥ ೨೮ ॥

ಚೂರ್ಣಯನ್ ಸ್ವಧನುಷ್ಕೋಟ್ಯಾ ಗಿರಿಕೂಟಾನಿ ರಾಜರಾಟ್ ।
ಭೂಮಂಡಲಮಿದಂ ವೈನ್ಯಃ ಪ್ರಾಯಶ್ಚಕ್ರೇ ಸಮಂ ವಿಭುಃ ॥ ೨೯ ॥

ಅಥಾಸ್ಮಿನ್ಭಗವಾನ್ ವೈನ್ಯಃ ಪ್ರಜಾನಾಂ ವೃತ್ತಿದಃ ಪಿತಾ ।
ನಿವಾಸಾನ್ ಕಲ್ಪಯಾಂಚಕ್ರೇ ತತ್ರ ತತ್ರ ಯಥಾರ್ಹತಃ ॥ ೩೦ ॥

ಗ್ರಾಮಾನ್ ಪುರಃ ಪತ್ತನಾನಿ ದುರ್ಗಾಣಿ ವಿವಿಧಾನಿ ಚ ।
ಘೋಷಾನ್ವ್ರಜಾನ್ಸಶಿಬಿರಾನಾಕರಾನ್ಖೇಟಖರ್ವಟಾನ್ ॥ ೩೧ ॥

ಪ್ರಾಕ್ಪೃಥೋರಿಹ ನೈವೈಷಾ ಪುರಗ್ರಾಮಾದಿಕಲ್ಪನಾ ।
ಯಥಾಸುಖಂ ವಸಂತಿ ಸ್ಮ ತತ್ರ ತತ್ರಾಕುತೋಭಯಾಃ ॥ ೩೨ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಪೃಥುವಿಜಯೇಽಷ್ಟಾದಶೋಽಧ್ಯಾಯಃ ॥ ೧೮ ॥

# ಹತ್ತೊಂಭತ್ತನೆಯ ಅಧ್ಯಾಯ

## ಪೃಥುಮಹಾರಾಜನಿಂದ ನೂರು ಅಶ್ವಮೇಧ ಯಜ್ಞಗಳ ಆಚರಣೆ

*ಮೈತ್ರೇಯ ಉವಾಚ*

ಅಥಾದೀಕ್ಷತ ರಾಜಾ ತು ಹಯಮೇಧಶತೇನ ಸಃ ।
ಬ್ರಹ್ಮಾವರ್ತೇ ಮನೋಃ ಕ್ಷೇತ್ರೇ ಯತ್ರ ಪ್ರಾಚೀ ಸರಸ್ವತೀ ॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಮನು ಸಾರ್ವಭೌಮನಿಗೆ ಸೇರಿದ ಸರಸ್ವತೀ ನದಿಯು ಪೂರ್ವದಿಕ್ಕಿಗೆ ಹರಿಯುವ, ಬ್ರಹ್ಮಾವರ್ತವೆಂಬ ಕ್ಷೇತ್ರದಲ್ಲಿ ಆ ಪೃಥುಚಕ್ರವರ್ತಿಯು ನೂರು ಅಶ್ವಮೇಧಯಜ್ಞಗಳನ್ನು ಮಾಡಬೇಕೆಂದು ಸಂಕಲ್ಪಿಸಿ ದೀಕ್ಷೆಯನ್ನು ಕೈಗೊಂಡನು. ॥ ೧ ॥

ತದಭಿಪ್ರೇತ್ಯ ಭಗವಾನ್ ಕರ್ಮಾತಿಶಯಮಾತ್ಮನಃ ।
ಶತಕ್ರತುರ್ನ ಮಮೃಷೇ ಪೃಥೋರ್ಯಜ್ಞಮಹೋತ್ಸವಮ್ ॥ ೨ ॥

ಯತ್ರ ಯಜ್ಞಪತಿಃ ಸಾಕ್ಷಾದ್ಭಗವಾನ್ ಹರಿರೀಶ್ವರಃ ।
ಅನ್ವಭೂಯತ ಸರ್ವಾತ್ಮಾ ಸರ್ವಲೋಕಗುರುಃ ಪ್ರಭುಃ ॥ ೩ ॥

ಅನ್ವಿತೋ ಬ್ರಹ್ಮಶರ್ವಾಭ್ಯಾಂ ಲೋಕಪಾಲೈಃ ಸಹಾನುಗೈಃ ।
ಉಪಗೀಯಮಾನೋ ಗಂಧರ್ವೈರ್ಮುನಿಭಿಶ್ಚಾಪ್ಸರೋಗಣೈಃ ॥ ೪ ॥

ಸಿದ್ಧಾ ವಿದ್ಯಾಧರಾ ದೈತ್ಯಾ ದಾನವಾ ಗುಹ್ಯಕಾದಯಃ ।
ಸುನಂದನಂದಪ್ರಮುಖಾಃ ಪಾರ್ಷದಪ್ರವರಾ ಹರೇಃ ॥ ೫ ॥

ಕಪಿಲೋ ನಾರದೋ ದತ್ತೋ ಯೋಗೇಶಾಃ ಸನಕಾದಯಃ ।
ತಮನ್ವೀಯುರ್ಭಾಗವತಾ ಯೇ ಚ ತತ್ಸೇವನೋತ್ಸುಕಾಃ ॥ ೬ ॥

ಯತ್ರ ಧರ್ಮದುಘಾ ಭೂಮಿಃ ಸರ್ವಕಾಮದುಘಾ ಸತೀ ।
ದೋಗ್ಧಿ ಸ್ಮಾಭೀಪ್ಸಿತಾನರ್ಥಾನ್ ಯಜಮಾನಸ್ಯ ಭಾರತ ॥ ೭ ॥

ಊಹುಃ ಸರ್ವರಸಾನ್ನದ್ಯಃ ಕ್ಷೀರದಧ್ಯನ್ನಗೋರಸಾನ್ ।
ತರವೋ ಭೂರಿವರ್ಷ್ಮಾಣಃ ಪ್ರಾಸೂಯಂತ ಮಧುಚ್ಯುತಃ ॥ ೮ ॥

ಸಿಂಧವೋ ರತ್ನನಿಕರಾನ್ ಗಿರಯೋಽನ್ನಂ ಚತುರ್ವಿಧಮ್ ।
ಉಪಾಯನಮುಪಾಜಹ್ರುಃ ಸರ್ವೇ ಲೋಕಾಃ ಸಪಾಲಕಾಃ ॥ ೯ ॥

ಇತಿ ಚಾಧೋಕ್ಷಜೇಶಸ್ಯ ಪೃಥೋಸ್ತು ಪರಮೋದಯಮ್ ।
ಅಸೂಯನ್ ಭಗವಾನಿಂದ್ರಃ ಪ್ರತಿಘಾತಮಚೀಕರತ್ ॥ ೧೦ ॥

ಚರಮೇಣಾಶ್ವಮೇಧೇನ ಯಜಮಾನೇ ಯಜುಷ್ಪತಿಮ್ ।
ವೈನ್ಯೇ ಯಜ್ಞಪಶುಂ ಸ್ಪರ್ಧನ್ನಪೋವಾಹ ತಿರೋಹಿತಃ ॥ ೧೧ ॥

ತಮತ್ರಿರ್ಭಗವಾನೈಕ್ಷತ್ತ್ವರಮಾಣಂ ವಿಹಾಯಸಾ ।
ಆಮುಕ್ತಮಿವ ಪಾಖಂಡಂ ಯೋಽಧರ್ಮೇಧರ್ಮವಿಭ್ರಮಃ ॥ ೧೨ ॥

ಅತ್ರಿಣಾ ಚೋದಿತೋ ಹಂತುಂ ಪೃಥುಪುತ್ರೋ ಮಹಾರಥಃ ।
ಅನ್ವಧಾವತ ಸಂಕ್ರುದ್ಧಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೧೩ ॥

ಇದನ್ನು ನೋಡಿ ಭಗವಾನ್ ಇಂದ್ರನಿಗೆ ಈ ಪೃಥುವಿನ ಕರ್ಮವು ನನ್ನ ಕರ್ಮಗಳಿಂದಲೂ ಹೆಚ್ಚಾಗುವುದು ಎಂದು ಅನಿಸಿತು. ಅದಕ್ಕಾಗಿ ಅವನು ರಾಜನ ಯಜ್ಞೋತ್ಸವವನ್ನು ಸಹಿಸದಾದನು. ॥ ೨ ॥ ಪೃಥುಮಹಾರಾಜನ ಯಜ್ಞದಲ್ಲಿ ಎಲ್ಲರ ಅಂತರಾತ್ಮನೂ, ಸರ್ವಲೋಕಪೂಜ್ಯನೂ, ಜಗದೀಶ್ವರನೂ ಆದ ಭಗವಾನ್ ಶ್ರೀಹರಿಯು ಯಜ್ಞೇಶ್ವರನ ರೂಪದಿಂದ ಪ್ರತ್ಯಕ್ಷವಾಗಿ ದರ್ಶನವನ್ನು ಕೊಟ್ಟಿದ್ದನು. ॥ ೩ ॥ ಅವನೊಂದಿಗೆ ಬ್ರಹ್ಮದೇವರು, ರುದ್ರದೇವರು ಹಾಗೂ ತಮ್ಮ-ತಮ್ಮ ಅನುಚರರ ಸಹಿತ ಲೋಕಪಾಲಕರೂ ಕೂಡ ಆಗಮಿಸಿದ್ದರು. ಆಗ ಗಂಧರ್ವರು, ಮುನಿಗಳು, ಅಪ್ಸರೆಯರು ಪ್ರಭುವಿನ ಕೀರ್ತಿಯನ್ನು ಕೊಂಡಾಡುತ್ತಿದ್ದರು. ॥ ೪ ॥ ಸಿದ್ಧರು, ವಿದ್ಯಾಧರರು, ದೈತ್ಯರು, ದಾನವರು, ಯಕ್ಷರು, ಸುನಂದ-ನಂದ ಮೊದಲಾದ ಭಗವಂತನ ಪಾರ್ಷದರು ಮತ್ತು ಸದಾ ಭಗವಂತನ ಸೇವೆಯಲ್ಲಿಯೇ ಉತ್ಸುಕರಾದ ಕಪಿಲರು, ನಾರದರು, ದತ್ತಾತ್ರೇಯರು, ಸನಕಾದಿ ಯೋಗೀಶ್ವರರು ಪ್ರಭುವನ್ನು ಹಿಂಬಾಲಿಸಿಬಂದಿದ್ದರು. ॥ ೫-೬ ॥

ಎಲೈ ಭರತಕುಲಮಣಿಯೇ! ಆ ಯಜ್ಞದಲ್ಲಿ ಯಜ್ಞಸಾಮಗ್ರಿಗಳನ್ನು ಕೊಡುವಂತ ಭೂಮಿಯು ಕಾಮಧೇನುರೂಪವನ್ನು ತಾಳಿ ಯಜಮಾನನ ಎಲ್ಲ ಇಷ್ಟಾರ್ಥಗಳನ್ನು ಪೂರ್ಣಮಾಡಿತ್ತು. ॥ ೭ ॥ ನದಿಗಳು ಹಾಲು-ಮೊಸರು-ತುಪ್ಪಗಳೇ ಮುಂತಾದ ಗೋರಸಗಳನ್ನು, ಇಕ್ಷು-ದ್ರಾಕ್ಷಾದಿ ಎಲ್ಲ ರೀತಿಯ ರಸಗಳನ್ನು ಹರಿಯಿಸುತ್ತಿದ್ದುವು. ಮಹಾವೃಕ್ಷಗಳು ಹೇರಳವಾಗಿ ಕಾಣಿಸಿಕೊಂಡು ಜೇನುತುಪ್ಪವನ್ನು, ಜೇನಿನಂತಹ ಸವಿಯುಳ್ಳ ಹಣ್ಣುಗಳನ್ನು ಸಮರ್ಪಿಸುತ್ತಿದ್ದವು. ॥ ೮ ॥ ಸಮುದ್ರಗಳು ರತ್ನರಾಶಿಗಳನ್ನೂ, ಪರ್ವತಗಳು ಭಕ್ಷ್ಯ, ಭೋಜ್ಯ-ಚೋಷ್ಯ-ಲೇಹ್ಯಗಳೆಂಬ ನಾಲ್ಕು ವಿಧದ ಅನ್ನಗಳನ್ನೂ ಮತ್ತು ಲೋಕಪಾಲರಿಂದ ಸಹಿತವಾದ ಸಮಸ್ತ ಲೋಕಗಳು ಬಗೆ-ಬಗೆಯ ಕಾಣಿಕೆಗಳನ್ನು ಪೃಥುವಿಗೆ ಸಮರ್ಪಿಸುತ್ತಿದ್ದವು.॥ ೯ ॥

ಪೃಥುಮಹಾರಾಜನಾದರೋ ಏಕಮಾತ್ರ ಶ್ರೀಹರಿಯನ್ನೇ ತನ್ನ ಪ್ರಭುವೆಂದು ತಿಳಿಯುತ್ತಿದ್ದನು. ಅವನ ಕೃಪೆಯಿಂದ ಆ ಯಜ್ಞಾನುಷ್ಠಾನದಲ್ಲಿ ಅವನ ಬಹಳ ಉತ್ಕರ್ಷವಾಯಿತು. ಆದರೆ ಇದು ದೇವೇಂದ್ರನಿಗೆ ಸಹನೆಯಾಗಲಿಲ್ಲ. ಅವನು ಆ ಯಜ್ಞದಲ್ಲಿ ವಿಘ್ನವನ್ನೊಡ್ಡಲು ಪ್ರಯತ್ನಿಸಿದನು. ॥ ೧೦ ॥ ಮಹಾರಾಜಾ ಪೃಥುವು ಕೊನೆಯ ಯಜ್ಞದ ಮೂಲಕ ಭಗವಾನ್ ಯಜ್ಞಪತಿಯ ಆರಾಧನೆ ಮಾಡುತ್ತಿರುವಾಗ ಇಂದ್ರನು ಅಸೂಯೆಯಿಂದ ಗುಟ್ಟಾಗಿ ಆತನ ಯಜ್ಞಾಶ್ವವನ್ನು ಅಪಹರಿಸಿದನು. ॥ ೧೧ ॥ ಇಂದ್ರನು ತನ್ನ ರಕ್ಷಣೆಗಾಗಿ ಪಾಷಂಡವೇಷವನ್ನು ಧರಿಸಿದ್ದನು. ಅದು ಅಧರ್ಮದಲ್ಲಿ ಧರ್ಮದ ಭ್ರಮೆಯನ್ನು ಉಂಟುಮಾಡುವಂತಹುದು. ಅದನ್ನು ಆಶ್ರಯಿಸಿದರೆ ಪಾಪೀ ಮನುಷ್ಯನೂ ಕೂಡ ಧರ್ಮಾತ್ಮನಂತೆ ಕಂಡುಬರುತ್ತಾನೆ. ಈ ವೇಷದಲ್ಲಿ ಇಂದ್ರನು ಕುದುರೆಯನ್ನು ಅಪಹರಿಸಿ ಶೀಘ್ರವಾಗಿ ಆಕಾಶಮಾರ್ಗವಾಗಿ ಹೋಗುತ್ತಿರುವಾಗ ಮಹಾತ್ಮರಾದ ಅತ್ರಿಮಹರ್ಷಿಗಳ ದೃಷ್ಟಿಗೆ ಬಿದ್ದನು. ಅವರ ಪ್ರೇರಣೆಯಿಂದ ಮಹಾರಾಜಾ ಪೃಥುವಿನ ಮಹಾರಥಿ ಪುತ್ರನು ಇಂದ್ರನನ್ನು ಕೊಲ್ಲಲು ಅವನನ್ನು ಬೆನ್ನಟ್ಟಿಕೊಂಡು ಹೋಗಿ ಮಿತಿಮೀರಿದ ಕೋಪದಿಂದ 'ಎಲವೋ! ನಿಲ್ಲು ನಿಲ್ಲು!' ಎಂದು ಕೂಗಿದನು. ॥ ೧೨-೧೩ ॥

ಸರ್ವೇ ಸ್ವಮುಖ್ಯವತ್ಸೇನ
ಸ್ವೇ ಸ್ವೇ ಪಾತ್ರೇ ಪೃಥಕ್ಪಯಃ ।
ಸರ್ವಕಾಮದುಘಾಂ ಪೃಥ್ವೀಂ
ದುದುಹುಃ ಪೃಥುಭಾವಿತಾಮ್ ॥ ೨೬ ॥

ಪೃಥ್ವಿಯಾದರೋ ಬಯಸಿದ ವಸ್ತುಗಳನ್ನು ಕೊಡುವಂತಹವಳು. ಈಗ ಅವಳು ಪೃಥುರಾಜನ ಅಧೀನದಲ್ಲಿದ್ದಳು. ಆದ್ದರಿಂದ ಅವಳಿಂದ ಎಲ್ಲರೂ ತಮ್ಮ-ತಮ್ಮ ವರ್ಗದ ಮುಖ್ಯನಾಯಕನನ್ನು ಕರುವನ್ನಾಗಿಸಿಕೊಂಡು ಬೇರೆ-ಬೇರೆ ಪಾತ್ರೆಗಳಲ್ಲಿ ಬಗೆ-ಬಗೆಯ ಪದಾರ್ಥಗಳನ್ನು ಹಾಲಿನರೂಪದಲ್ಲಿ ಹಿಂಡಿಕೊಂಡರು. ॥ ೨೬ ॥

ಏವಂ ಪೃಥ್ವಾದಯಃ ಪೃಥ್ವೀಮನ್ನಾದಾಃ ಸ್ವನ್ನಮಾತ್ಮನಃ ।
ದೋಹವತ್ಸಾದಿಭೇದೇನ ಕ್ಷೀರಭೇದಂ ಕುರೂದ್ವಹ ॥ ೨೭ ॥

ಕುರುಶ್ರೇಷ್ಠ ವಿದುರನೇ! ಹೀಗೆ ಪೃಥುಮಹಾರಾಜನೇ ಮೊದಲ್ಗೊಂಡು ಅನ್ನವನ್ನು ತಿನ್ನುವ ಎಲ್ಲ ಜೀವಿಗಳು ನಾನಾಪ್ರಕಾರದ ಕರು ಮತ್ತು ಪಾತ್ರೆ ಇವುಗಳ ಮೂಲಕವಾಗಿ ತಮ್ಮ-ತಮ್ಮ ಬೇರೆ-ಬೇರೆ ಅನ್ನರೂಪವಾದ ಹಾಲನ್ನು ಭೂದೇವಿಯಿಂದ ಹಿಂಡಿಕೊಂಡರು. ॥ ೨೭ ॥ ಅದರಿಂದ ಮಹಾರಾಜಾ ಪೃಥುವಿಗೆ ಬಹಳ ಸಂತೋಷವಾಗಿ ಸರ್ವಕಾಮನೆಗಳನ್ನು ಕರೆಯುವ ಪೃಥಿವಿಯಲ್ಲಿ ಪುತ್ರಿಯಂತೆ ಪ್ರೀತಿ ಉಂಟಾಯಿತು. ಅವಳನ್ನು ತನ್ನ ಪುತ್ರಿಯಾಗಿಯೇ ಸ್ವೀಕರಿಸಿದನು. ॥ ೨೮ ॥ ಮತ್ತೆ ರಾಜಾಧಿರಾಜ ಪೃಥುವು ತನ್ನ ಧನುಷ್ಯದ ತುದಿಯಿಂದ ಪರ್ವತಗಳನ್ನು ಒಡೆದು ಈ ಇಡೀ ಭೂಮಂಡಲವನ್ನು ಬಹುಮಟ್ಟಿಗೆ ಸಮತಲವಾಗಿಸಿದನು. ॥ ೨೯ ॥

ತತೋ ಮಹೀಪತಿಃ ಪ್ರೀತಃ ಸರ್ವಕಾಮದುಘಾಂ ಪೃಥುಃ ।
ದುಹಿತೃತ್ವೇ ಚಕಾರೇಮಾಂ ಪ್ರೇಮ್ಣಾ ದುಹಿತೃವತ್ಸಲಃ ॥ ೨೮ ॥

ಚೂರ್ಣಯನ್ ಸ್ವಧನುಷ್ಕೋಟ್ಯಾ ಗಿರಿಕೂಟಾನಿ ರಾಜರಾಟ್ ।
ಭೂಮಂಡಲಮಿದಂ ವೈನ್ಯಃ ಪ್ರಾಯಶ್ಚಕ್ರೇ ಸಮಂ ವಿಭುಃ ॥ ೨೯ ॥

ಆ ವೇನಪುತ್ರನಾದ ಭಗವಾನ್ ಪೃಥುವು ತನ್ನ ಪ್ರಜೆಗಳಿಗೆ ತಂದೆಯಂತೆ ಇದ್ದು ಅವರ ಪಾಲನೆ-ಪೋಷಣೆಯ ವ್ಯವಸ್ಥೆಯಲ್ಲಿ ತೊಡಗಿದ್ದನು. ಅವನು ಸಮತಲವಾದ ಭೂಮಿಯಲ್ಲಿ ಪ್ರಜೆಗಳಿಗೆ ಅಲ್ಲಲ್ಲಿ ಯಥೋಚಿತವಾದ ವಾಸಸ್ಥಾನಗಳನ್ನು ವಿಭಾಗಿಸಿ ಕೊಟ್ಟನು. ॥ ೩೦ ॥ ಅವರಿಗಾಗಿ ಅನೇಕ ಗ್ರಾಮಗಳು, ಪುರಗಳು, ಪಟ್ಟಣಗಳು, ದುರ್ಗಗಳು, ಗೊಲ್ಲರ ಊರು-ಕೇರಿಗಳು, ಗೋಶಾಲೆಗಳು, ಶಿಬಿರಗಳು, ಗಣಿಗಳು, ರೈತರ ಹಳ್ಳಿಗಳು, ಪರ್ವತ ತಪ್ಪಲುಗಳ ಹಳ್ಳಿಗಳು ಮುಂತಾದ ಬೇರೆ-ಬೇರೆ ವಾಸಸ್ಥಾನಗಳನ್ನು ಕಲ್ಪಿಸಿದನು. ॥ ೩೧ ॥ ಮಹಾರಾಜಾ ಪೃಥುವಿನ ಆಳ್ವಿಕೆಗೆ ಮೊದಲು ಈ ಪೃಥಿವಿಯಲ್ಲಿ ಪುರ-ಗ್ರಾಮಾದಿಗಳ ವಿಭಾಗವಿರಲಿಲ್ಲ. ಎಲ್ಲ ಜನರೂ ತಮ್ಮ-ತಮ್ಮ ಅನುಕೂಲತೆಗನುಸಾರ ಅಡೆ-ತಡೆಯಿಲ್ಲದೆ ಅಲ್ಲಲ್ಲಿ ವಾಸಿಸುತ್ತಿದ್ದರು. (ಈಗ ಪೃಥುಮಹಾರಾಜನು ಏರ್ಪಡಿಸಿ ಕೊಟ್ಟ ವಾಸಸ್ಥಾನಗಳಲ್ಲಿ ಯಾವ ಭಯವೂ ಇಲ್ಲದೆ ಸಂತೋಷವಾಗಿ ವಾಸಿಸತೊಡಗಿದರು.) ॥ ೩೨ ॥

ಅಥಾಸ್ಮಿನ್ಭಗವಾನ್ ವೈನ್ಯಃ ಪ್ರಜಾನಾಂ ವೃತ್ತಿದಃ ಪಿತಾ ।
ನಿವಾಸಾನ್ ಕಲ್ಪಯಾಂಚಕ್ರೇ ತತ್ರ ತತ್ರ ಯಥಾರ್ಹತಃ ॥ ೩೦ ॥

ಗ್ರಾಮಾನ್ ಪುರಃ ಪತ್ತನಾನಿ ದುರ್ಗಾಣಿ ವಿವಿಧಾನಿ ಚ ।
ಘೋಷಾನ್ವ್ರಜಾನ್ಸಶಿಬಿರಾನಾಕರಾನ್ಖೇಟಖರ್ವಟಾನ್ ॥ ೩೧ ॥

ಪ್ರಾಕ್ಪೃಥೋರಿಹ ನೈವೈಷಾ ಪುರಗ್ರಾಮಾದಿಕಲ್ಪನಾ ।
ಯಥಾಸುಖಂ ವಸಂತಿ ಸ್ಮ ತತ್ರ ತತ್ರಾಕುತೋಭಯಾಃ ॥ ೩೨ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪೃಥುವಿಜಯೇಽಷ್ಟಾದಶೋಽಧ್ಯಾಯಃ ॥ ೧೮ ॥

# ಹತ್ತೊಂಭತ್ತನೆಯ ಅಧ್ಯಾಯ

## ಪೃಥುಮಹಾರಾಜನಿಂದ ನೂರು ಅಶ್ವಮೇಧ ಯಜ್ಞಗಳ ಆಚರಣೆ

*ಮೈತ್ರೇಯ ಉವಾಚ*

ಅಥಾದೀಕ್ಷತ ರಾಜಾ ತು ಹಯಮೇಧಶತೇನ ಸಃ ।
ಬ್ರಹ್ಮಾವರ್ತೇ ಮನೋಃ ಕ್ಷೇತ್ರೇ ಯತ್ರ ಪ್ರಾಚೀ ಸರಸ್ವತೀ ॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಮನು ಸಾರ್ವಭೌಮನಿಗೆ ಸೇರಿದ ಸರಸ್ವತೀ ನದಿಯು ಪೂರ್ವದಿಕ್ಕಿಗೆ ಹರಿಯುವ, ಬ್ರಹ್ಮಾವರ್ತವೆಂಬ ಕ್ಷೇತ್ರದಲ್ಲಿ ಆ ಪೃಥುಚಕ್ರವರ್ತಿಯು ನೂರು ಅಶ್ವಮೇಧಯಜ್ಞಗಳನ್ನು ಮಾಡಬೇಕೆಂದು ಸಂಕಲ್ಪಿಸಿ ದೀಕ್ಷೆಯನ್ನು ಕೈಗೊಂಡನು. ॥ ೧ ॥

ತದಭಿಪ್ರೇತ್ಯ ಭಗವಾನ್ ಕರ್ಮಾತಿಶಯಮಾತ್ಮನಃ ।
ಶತಕ್ರತುರ್ನ ಮಮೃಷೇ ಪೃಥೋರ್ಯಜ್ಞಮಹೋತ್ಸವಮ್ ॥ ೨ ॥

ಯತ್ರ ಯಜ್ಞಪತಿಃ ಸಾಕ್ಷಾದ್ಭಗವಾನ್ ಹರಿರೀಶ್ವರಃ ।
ಅನ್ವಭೂಯತ ಸರ್ವಾತ್ಮಾ ಸರ್ವಲೋಕಗುರುಃ ಪ್ರಭುಃ ॥ ೩ ॥

ಅನ್ವಿತೋ ಬ್ರಹ್ಮಶರ್ವಾಭ್ಯಾಂ ಲೋಕಪಾಲೈಃ ಸಹಾನುಗೈಃ ।
ಉಪಗೀಯಮಾನೋ ಗಂಧರ್ವೈರ್ಮುನಿಭಿಶ್ಚಾಪ್ಸರೋಗಣೈಃ ॥ ೪ ॥

ಸಿದ್ಧಾ ವಿದ್ಯಾಧರಾ ದೈತ್ಯಾ ದಾನವಾ ಗುಹ್ಯಕಾದಯಃ ।
ಸುನಂದನಂದಪ್ರಮುಖಾಃ ಪಾರ್ಷದಪ್ರವರಾ ಹರೇಃ ॥ ೫ ॥

ಕಪಿಲೋ ನಾರದೋ ದತ್ತೋ ಯೋಗೇಶಾಃ ಸನಕಾದಯಃ ।
ತಮನ್ವೀಯುರ್ಭಾಗವತಾ ಯೇ ಚ ತತ್ಸೇವನೋತ್ಸುಕಾಃ ॥ ೬ ॥

ಯತ್ರ ಧರ್ಮದುಘಾ ಭೂಮಿಃ ಸರ್ವಕಾಮದುಘಾ ಸತೀ ।
ದೋಗ್ಧಿ ಸ್ಮಾಭೀಪ್ಸಿತಾನರ್ಥಾನ್ ಯಜಮಾನಸ್ಯ ಭಾರತ ॥ ೭ ॥

ಊಹುಃ ಸರ್ವರಸಾನ್ನದ್ಯಃ ಕ್ಷೀರದಧ್ಯನ್ನಗೋರಸಾನ್ ।
ತರವೋ ಭೂರಿವರ್ಷ್ಮಾಣಃ ಪ್ರಾಸೂಯಂತ ಮಧುಚ್ಯುತಃ ॥ ೮ ॥

ಸಿಂಧವೋ ರತ್ನನಿಕರಾನ್ ಗಿರಯೋಽನ್ನಂ ಚತುರ್ವಿಧಮ್ ।
ಉಪಾಯನಮುಪಾಜಹ್ರುಃ ಸರ್ವೇ ಲೋಕಾಃ ಸಪಾಲಕಾಃ ॥ ೯ ॥

ಇತಿ ಚಾಧೋಕ್ಷಜೇಶಸ್ಯ ಪೃಥೋಸ್ತು ಪರಮೋದಯಮ್ ।
ಅಸೂಯನ್ ಭಗವಾನಿಂದ್ರಃ ಪ್ರತಿಘಾತಮಚೀಕರತ್ ॥ ೧೦ ॥

ಚರಮೇಣಾಶ್ವಮೇಧೇನ ಯಜಮಾನೇ ಯಜುಷ್ಪತಿಮ್ ।
ವೈನ್ಯೇ ಯಜ್ಞಪಶುಂ ಸ್ಪರ್ಧನ್ನಪೋವಾಹ ತಿರೋಹಿತಃ ॥ ೧೧ ॥

ತಮತ್ರಿರ್ಭಗವಾನೈಕ್ಷತ್ತ್ವರಮಾಣಂ ವಿಹಾಯಸಾ ।
ಆಮುಕ್ತಮಿವ ಪಾಖಂಡಂ ಯೋಽಧರ್ಮೇಧರ್ಮವಿಭ್ರಮಃ ॥ ೧೨ ॥

ಅತ್ರಿಣಾ ಚೋದಿತೋ ಹಂತುಂ ಪೃಥುಪುತ್ರೋ ಮಹಾರಥಃ ।
ಅನ್ವಧಾವತ ಸಂಕ್ರುದ್ಧಸ್ತಿಷ್ಠ ತಿಷ್ಠೇತಿ ಚಾಬ್ರವೀತ್ ॥ ೧೩ ॥

ಇದನ್ನು ನೋಡಿ ಭಗವಾನ್ ಇಂದ್ರನಿಗೆ ಈ ಪೃಥುವಿನ ಕರ್ಮವು ನನ್ನ ಕರ್ಮಗಳಿಂದಲೂ ಹೆಚ್ಚಾಗುವುದು ಎಂದು ಅನಿಸಿತು. ಅದಕ್ಕಾಗಿ ಅವನು ರಾಜನ ಯಜ್ಞೋತ್ಸವವನ್ನು ಸಹಿಸದಾದನು. ॥ ೨ ॥ ಪೃಥುಮಹಾರಾಜನ ಯಜ್ಞದಲ್ಲಿ ಎಲ್ಲರ ಅಂತರಾತ್ಮನೂ, ಸರ್ವಲೋಕಪೂಜ್ಯನೂ, ಜಗದೀಶ್ವರನೂ ಆದ ಭಗವಾನ್ ಶ್ರೀಹರಿಯು ಯಜ್ಞೇಶ್ವರನ ರೂಪದಿಂದ ಪ್ರತ್ಯಕ್ಷವಾಗಿ ದರ್ಶನವನ್ನು ಕೊಟ್ಟಿದ್ದನು. ॥ ೩ ॥ ಅವನೊಂದಿಗೆ ಬ್ರಹ್ಮದೇವರು, ರುದ್ರದೇವರು ಹಾಗೂ ತಮ್ಮ-ತಮ್ಮ ಅನುಚರರ ಸಹಿತ ಲೋಕಪಾಲಕರೂ ಕೂಡ ಆಗಮಿಸಿದ್ದರು. ಆಗ ಗಂಧರ್ವರು, ಮುನಿಗಳು, ಅಪ್ಸರೆಯರು ಪ್ರಭುವಿನ ಕೀರ್ತಿಯನ್ನು ಕೊಂಡಾಡುತ್ತಿದ್ದರು. ॥ ೪ ॥ ಸಿದ್ಧರು, ವಿದ್ಯಾಧರರು, ದೈತ್ಯರು, ದಾನವರು, ಯಕ್ಷರು, ಸುನಂದ-ನಂದ ಮೊದಲಾದ ಭಗವಂತನ ಪಾರ್ಷದರು ಮತ್ತು ಸದಾ ಭಗವಂತನ ಸೇವೆಯಲ್ಲಿಯೇ ಉತ್ಸುಕರಾದ ಕಪಿಲರು, ನಾರದರು, ದತ್ತಾತ್ರೇಯರು, ಸನಕಾದಿ ಯೋಗೀಶ್ವರರು ಪ್ರಭುವನ್ನು ಹಿಂಬಾಲಿಸಿಬಂದಿದ್ದರು. ॥ ೫-೬ ॥

ಎಲೈ ಭರತಕುಲಮಣಿಯೇ! ಆ ಯಜ್ಞದಲ್ಲಿ ಯಜ್ಞಸಾಮಗ್ರಿಗಳನ್ನು ಕೊಡುವಂತ ಭೂಮಿಯು ಕಾಮಧೇನುರೂಪವನ್ನು ತಾಳಿ ಯಜಮಾನನ ಎಲ್ಲ ಇಷ್ಟಾರ್ಥಗಳನ್ನು ಪೂರ್ಣಮಾಡಿತ್ತು. ॥ ೭ ॥ ನದಿಗಳು ಹಾಲು-ಮೊಸರು-ತುಪ್ಪಗಳೇ ಮುಂತಾದ ಗೋರಸಗಳನ್ನು, ಇಕ್ಷು-ದ್ರಾಕ್ಷಾದಿ ಎಲ್ಲ ರೀತಿಯ ರಸಗಳನ್ನು ಹರಿಯಿಸುತ್ತಿದ್ದುವು. ಮಹಾವೃಕ್ಷಗಳು ಹೇರಳವಾಗಿ ಕಾಣಿಸಿಕೊಂಡು ಜೇನುತುಪ್ಪವನ್ನು, ಜೇನಿನಂತಹ ಸವಿಯುಳ್ಳ ಹಣ್ಣುಗಳನ್ನು ಸಮರ್ಪಿಸುತ್ತಿದ್ದವು. ॥ ೮ ॥ ಸಮುದ್ರಗಳು ರತ್ನರಾಶಿಗಳನ್ನೂ, ಪರ್ವತಗಳು ಭಕ್ಷ್ಯ, ಭೋಜ್ಯ-ಚೋಷ್ಯ-ಲೇಹ್ಯಗಳೆಂಬ ನಾಲ್ಕು ವಿಧದ ಅನ್ನಗಳನ್ನೂ ಮತ್ತು ಲೋಕಪಾಲರಿಂದ ಸಹಿತವಾದ ಸಮಸ್ತ ಲೋಕಗಳು ಬಗೆ-ಬಗೆಯ ಕಾಣಿಕೆಗಳನ್ನು ಪೃಥುವಿಗೆ ಸಮರ್ಪಿಸುತ್ತಿದ್ದವು.॥ ೯ ॥

ಪೃಥುಮಹಾರಾಜನಾದರೋ ಏಕಮಾತ್ರ ಶ್ರೀಹರಿಯನ್ನೇ ತನ್ನ ಪ್ರಭುವೆಂದು ತಿಳಿಯುತ್ತಿದ್ದನು. ಅವನ ಕೃಪೆಯಿಂದ ಆ ಯಜ್ಞಾನುಷ್ಠಾನದಲ್ಲಿ ಅವನ ಬಹಳ ಉತ್ಕರ್ಷವಾಯಿತು. ಆದರೆ ಇದು ದೇವೇಂದ್ರನಿಗೆ ಸಹನೆಯಾಗಲಿಲ್ಲ. ಅವನು ಆ ಯಜ್ಞದಲ್ಲಿ ವಿಘ್ನವನ್ನೊಡ್ಡಲು ಪ್ರಯತ್ನಿಸಿದನು. ॥ ೧೦ ॥ ಮಹಾರಾಜಾ ಪೃಥುವು ಕೊನೆಯ ಯಜ್ಞದ ಮೂಲಕ ಭಗವಾನ್ ಯಜ್ಞಪತಿಯ ಆರಾಧನೆ ಮಾಡುತ್ತಿರುವಾಗ ಇಂದ್ರನು ಅಸೂಯೆಯಿಂದ ಗುಟ್ಟಾಗಿ ಆತನ ಯಜ್ಞಾಶ್ವವನ್ನು ಅಪಹರಿಸಿದನು. ॥ ೧೧ ॥ ಇಂದ್ರನು ತನ್ನ ರಕ್ಷಣೆಗಾಗಿ ಪಾಷಂಡವೇಷವನ್ನು ಧರಿಸಿದ್ದನು. ಅದು ಅಧರ್ಮದಲ್ಲಿ ಧರ್ಮದ ಭ್ರಮೆಯನ್ನು ಉಂಟುಮಾಡುವಂತಹುದು. ಅದನ್ನು ಆಶ್ರಯಿಸಿದರೆ ಪಾಪೀ ಮನುಷ್ಯನೂ ಕೂಡ ಧರ್ಮಾತ್ಮನಂತೆ ಕಂಡುಬರುತ್ತಾನೆ. ಈ ವೇಷದಲ್ಲಿ ಇಂದ್ರನು ಕುದುರೆಯನ್ನು ಅಪಹರಿಸಿ ಶೀಘ್ರವಾಗಿ ಆಕಾಶಮಾರ್ಗವಾಗಿ ಹೋಗುತ್ತಿರುವಾಗ ಮಹಾತ್ಮರಾದ ಅತ್ರಿಮಹರ್ಷಿಗಳ ದೃಷ್ಟಿಗೆ ಬಿದ್ದನು. ಅವರ ಪ್ರೇರಣೆಯಿಂದ ಮಹಾರಾಜಾ ಪೃಥುವಿನ ಮಹಾರಥಿ ಪುತ್ರನು ಇಂದ್ರನನ್ನು ಕೊಲ್ಲಲು ಅವನನ್ನು ಬೆನ್ನಟ್ಟಿಕೊಂಡು ಹೋಗಿ ಮಿತಿಮೀರಿದ ಕೋಪದಿಂದ 'ಎಲವೋ! ನಿಲ್ಲು, ನಿಲ್ಲು!' ಎಂದು ಕೂಗಿದನು. ॥ ೧೨-೧೩ ॥

ತಂ ತಾದೃಶಾಕೃತಿಂ ವೀಕ್ಷ್ಯ ಮೇನೇ ಧರ್ಮಂ ಶರೀರಿಣಮ್ ।
ಜಟಿಲಂ ಭಸ್ಮನಾಚ್ಛನ್ನಂ ತಸ್ಮೈ ಬಾಣಂ ನ ಮುಂಚತಿ ॥ ೧೪ ॥

ವಧಾನ್ನಿವೃತ್ತಂ ತಂ ಭೂಯೋ ಹಂತವೇಽತ್ರಿರಚೋದಯತ್ ।
ಜಹಿ ಯಜ್ಞಹನಂ ತಾತ ಮಹೇಂದ್ರಂ ವಿಬುಧಾಧಮಮ್ ॥ ೧೫ ॥

ಏವಂ ವೈನ್ಯಸುತಃ ಪ್ರೋಕ್ತಸ್ತ್ವರಮಾಣಂ ವಿಹಾಯಸಾ ।
ಅನ್ವದ್ರವದಭಿಕ್ರುದ್ಧೋ ರಾವಣಂ ಗೃಧ್ರರಾಡಿವ ॥ ೧೬ ॥

ಸೋಽಶ್ವಂ ರೂಪಂ ಚ ತದ್ಧಿತ್ವಾ ತಸ್ಮಾ ಅಂತರ್ಹಿತಃ ಸ್ವರಾಟ್ ।
ವೀರಃ ಸ್ವಪಶುಮಾದಾಯ ಪಿತುರ್ಯಜ್ಞಮುಪೇಯಿವಾನ್ ॥ ೧೭ ॥

ತತ್ತಸ್ಯ ಚಾದ್ಭುತಂ ಕರ್ಮ ವಿಚಕ್ಷ್ಯ ಪರಮರ್ಷಯಃ ।
ನಾಮಧೇಯಂ ದದುಸ್ತಸ್ಮೈ ವಿಜಿತಾಶ್ವ ಇತಿ ಪ್ರಭೋ ॥ ೧೮ ॥

ಉಪಸೃಜ್ಯ ತಮಸ್ತೀವ್ರಂ ಜಹಾರಾಶ್ವಂ ಪುನರ್ಹರಿಃ ।
ಚಷಾಲಯೂಪತಶ್ಛನ್ನೋ ಹಿರಣ್ಯರಶನಂ ವಿಭುಃ ॥ ೧೯ ॥

ಅತ್ರಿಃ ಸಂದರ್ಶಯಾಮಾಸ ತ್ವರಮಾಣಂ ವಿಹಾಯಸಾ ।
ಕಪಾಲಖಟ್ವಾಂಗಧರಂ ವೀರೋ ನೈನಮಬಾಧತ ॥ ೨೦ ॥

ಅತ್ರಿಣಾ ಚೋದಿತಸ್ತಸ್ಮೈ ಸಂದಧೇ ವಿಶಿಖಂ ರುಷಾ ।
ಸೋಽಶ್ವಂ ರೂಪಂ ಚ ತದ್ಧಿತ್ವಾ ತಸ್ಥಾವಂತರ್ಹಿತಃ ಸ್ವರಾಟ್ ॥ ೨೧ ॥

ವೀರಶ್ಚಾಶ್ವಮುಪಾದಾಯ ಪಿತೃಯಜ್ಞಮಥಾವ್ರಜತ್ ।
ತದವದ್ಯಂ ಹರೇ ರೂಪಂ ಜಗೃಹುರ್ಜ್ಞಾನದುರ್ಬಲಾಃ ॥ ೨೨ ॥

ಯಾನಿ ರೂಪಾಣಿ ಜಗೃಹೇ ಇಂದ್ರೋ ಹಯಜಿಹೀರ್ಷಯಾ ।
ತಾನಿ ಪಾಪಸ್ಯ ಖಂಡಾನಿ ಲಿಂಗಂ ಖಂಡಮಿಹೋಚ್ಯತೇ ॥ ೨೩ ॥

ಏವಮಿಂದ್ರೇ ಹರತ್ಯಶ್ವಂ ವೈನ್ಯಯಜ್ಞಜಿಘಾಂಸಯಾ ।
ತದ್ಗೃಹೀತವಿಸೃಷ್ಟೇಷು ಪಾಖಂಡೇಷು ಮತಿರ್ನೃಣಾಮ್ ॥ ೨೪ ॥

ಆಗ ಇಂದ್ರನ ತಲೆಯಲ್ಲಿ ಜಟಾಜೂಟವಿತ್ತು. ಮೈಗೆ ಭಸ್ಮವನ್ನು ಬಳಿದುಕೊಂಡಿದ್ದನು. ಅದನ್ನು ಕಂಡು ಪೃಥು ಪುತ್ರನು ಆತನನ್ನು ಧರ್ಮಮೂರ್ತಿ ಎಂದು ಭಾವಿಸಿ ಅವನ ಮೇಲೆ ಬಾಣವನ್ನು ಪ್ರಯೋಗಿಸಲಿಲ್ಲ. ॥ ೧೪ ॥ ಅವನು ಇಂದ್ರನ ಮೇಲೆ ಆಕ್ರಮಣ ಮಾಡದೆ ಹಿಂದಿರುಗಿದಾಗ ಅತ್ರಿ ಮಹರ್ಷಿಗಳು 'ವತ್ಸ! ಈತನು ಯಜ್ಞವನ್ನು ಕೆಡಿಸಲು ಬಂದ ದೇವತಾಧಮನಾದ ಇಂದ್ರನು. ಇವನನ್ನು ಸಂಹರಿಸು' ಎಂದು ಆಣತಿ ನೀಡಿದರು. ॥ ೧೫ ॥ ಅತ್ರಿ ಮಹರ್ಷಿಗಳು ಹೀಗೆ ಪ್ರೋತ್ಸಾಹಿಸಿದಾಗ ಪೃಥುಕುಮಾರನಲ್ಲಿ ಕ್ರೋಧವು ಉಕ್ಕೇರಿ ಬಂತು. ಅವನು ರಾವಣನನ್ನು ಬೆನ್ನಟ್ಟಿಹೋದ ಜಟಾಯುವಿನಂತೆ ಆಕಾಶದಲ್ಲಿ ವೇಗವಾಗಿ ಹೋಗುತ್ತಿದ್ದ ಇಂದ್ರನನ್ನು ಬೆನ್ನಟ್ಟಿದನು. ॥ ೧೬ ॥ ಇದನ್ನು ನೋಡಿದ ಇಂದ್ರನು ಹೆದರಿ ತನ್ನ ಆ ಪಾಷಂಡವೇಷವನ್ನೂ, ಯಜ್ಞದ ಕುದುರೆಯನ್ನು ಅಲ್ಲಿಯೇ ಬಿಟ್ಟು ಕಣ್ಮರೆಯಾದನು. ವೀರನಾದ ಪೃಥುಪುತ್ರನು ತನ್ನ ಯಜ್ಞಾಶ್ವವನ್ನು ತೆಗೆದುಕೊಂಡು ತಂದೆಯ ಯಜ್ಞಶಾಲೆಗೆ ಮರಳಿದನು. ॥ ೧೭ ॥ ಶಕ್ತಿಶಾಲಿ ವಿದುರನೇ! ಅವನ ಆ ಅದ್ಭುತ ಪರಾಕ್ರಮವನ್ನು ಕಂಡು ಮಹರ್ಷಿಗಳು ಆತನಿಗೆ 'ವಿಜಿತಾಶ್ವ' ಎಂಬ ಬಿರುದಾಂಕಿತವನ್ನು ಕೊಟ್ಟರು. ॥ ೧೮ ॥

ಯಜ್ಞದ ಅಶ್ವವನ್ನು ಚಷಾಲ ಮತ್ತು ಯೂಪಸ್ತಂಭಗಳಿಗೆ ಕಟ್ಟಿಹಾಕಲಾಗಿತ್ತು. ಶಕ್ತಿಶಾಲಿಯಾದ ಇಂದ್ರನು ಅಲ್ಲಿ ಘೋರವಾದ ಅಂಧಕಾರವನ್ನು ಉಂಟುಮಾಡಿ ಆ ಕತ್ತಲೆಯಲ್ಲಿ ಅಡಗಿಕೊಂಡು ಯಜ್ಞಾಶ್ವವನ್ನು ಅದರ ಚಿನ್ನದ ಸರಪಣಿಯೊಡನೆ ಕದ್ದುಕೊಂಡು ಹೋದನು. ॥ ೧೯ ॥ ಅತ್ರಿಮುನಿಗಳು ಪುನಃ ಆಕಾಶಮಾರ್ಗವಾಗಿ ಹೋಗುತ್ತಿರುವ ಇಂದ್ರನನ್ನು ರಾಜಕುಮಾರನಿಗೆ ತೋರಿಸಿದರು. ಆದರೆ ಇಂದ್ರನು ಕಪಾಲವನ್ನು, ಖಟ್ವಾಂಗವನ್ನು ಧರಿಸಿ ತಪಸ್ವಿಯಂತೆ ಕಾಣುತ್ತಿದ್ದುದರಿಂದ ಪೃಥುಪುತ್ರನು ಅವನ ದಾರಿಗೆ ಅಡ್ಡಿಪಡಿಸಲಿಲ್ಲ. ॥ ೨೦ ॥ ಆಗ ಅತ್ರಿಮಹರ್ಷಿಯು ಮತ್ತೆ ಅವನಿಗೆ ಉತ್ಸಾಹತುಂಬಿ ಪ್ರೇರೇಪಿಸಲು ಪೃಥುಪುತ್ರನು ಕ್ರೋಧದಿಂದ ಇಂದ್ರನ ಮೇಲೆ ಬಾಣವನ್ನು ಗುರಿಯಿಟ್ಟು ಪ್ರಯೋಗಿಸಿದನು. ಅದನ್ನು ನೋಡಿದೊಡನೆಯೇ ದೇವರಾಜನು ತನ್ನ ಛದ್ಮವೇಷವನ್ನೂ, ಯಜ್ಞಾಶ್ವವನ್ನು ಅಲ್ಲಿಯೇ ಬಿಟ್ಟು ಅಂತರ್ಧಾನನಾದನು. ॥ ೨೧ ॥ ವೀರನಾದ ವಿಜಿತಾಶ್ವನು ಕುದುರೆಯನ್ನು ಹಿಡಿದುಕೊಂಡು ತಂದೆಯ ಯಜ್ಞಶಾಲೆಗೆ ಹಿಂದಿರುಗಿದನು. ಇಂದ್ರನು ಬಿಟ್ಟುಹೋದ ಆ ನಿಂದನೀಯವಾದ ವೇಷವನ್ನು ಮಂದಮತಿಗಳಾದ ಜನರು ಸ್ವೀಕರಿಸಿದರು. ॥ ೨೨ ॥ ಇಂದ್ರನು ಯಜ್ಞಾಶ್ವವನ್ನು ಅಪಹರಿಸುವ ದೃಷ್ಟಿಯಿಂದ ಧರಿಸಿದ ರೂಪಗಳೆಲ್ಲವೂ ಪಾಪದ ಖಂಡಗಳಾದುದರಿಂದ 'ಪಾಖಂಡ' ಎನಿಸಿದುವು. ಇಲ್ಲಿ 'ಖಂಡ'ವೆಂದರೆ ಚಿಹ್ನೆಯ ವಾಚಕವಾಗಿದೆ. ॥ ೨೩ ॥ ಹೀಗೆ ಪೃಥುವಿನ ಯಜ್ಞವನ್ನು ಧ್ವಂಸಮಾಡಲಿಕ್ಕಾಗಿ, ಯಜ್ಞಪಶುವನ್ನು ಕದಿಯುವಾಗ ಇಂದ್ರನು ಹಲವು ಬಾರಿ ಧರಿಸಿ ತ್ಯಾಗಮಾಡಿದ ದಿಗಂಬರತ್ವ, ಕೆಂಪುವಸ್ತ್ರಗಳ ಧಾರಣೆ, ಕಾಪಾಲಿಕ ಮುಂತಾದ ಪಾಖಂಡಪೂರ್ಣ ಆಚಾರಗಳಲ್ಲಿ ಮನುಷ್ಯರ ಬುದ್ಧಿಯು ಮೋಹಿತವಾಗುತ್ತದೆ. ಏಕೆಂದರೆ ಆ ನಾಸ್ತಿಕಮತಗಳು ನೋಡಲು ಸುಂದರವಾಗಿದ್ದು, ದೊಡ್ಡ-ದೊಡ್ಡ ಯುಕ್ತಿಗಳಿಂದ ತಮ್ಮ ಪಕ್ಷವನ್ನು

ಧರ್ಮ ಇತ್ಯುಪಧರ್ಮೇಷು ನಗ್ನರಕ್ತಪಟಾದಿಷು ।
ಪ್ರಾಯೇಣ ಸಜ್ಜತೇ ಭ್ರಾಂತ್ಯಾ ಪೇಶಲೇಷು ಚ ವಾಗ್ಮಿಷು
॥ ೨೫ ॥

ತದಭಿಜ್ಞಾಯ ಭಗವಾನ್ ಪೃಥುಃ ಪೃಥುಪರಾಕ್ರಮಃ ।
ಇಂದ್ರಾಯ ಕುಪಿತೋ ಬಾಣಮಾದತ್ತೋದ್ಯತಕಾರ್ಮುಕಃ
॥ ೨೬ ॥

ತಮೃತ್ವಿಜಃ ಶಕ್ರವಧಾಭಿಸಂಧಿತಂ
ವಿಚಕ್ಷ್ಯ ದುಷ್ಪ್ರೇಕ್ಷ್ಯಮಸಹ್ಯರಂಹಸಮ್ ।
ನಿವಾರಯಾಮಾಸುರಹೋ ಮಹಾಮತೇ
ನ ಯುಜ್ಯತೇಽತ್ರಾನ್ಯವಧಃ ಪ್ರಚೋದಿತಾತ್ ॥ ೨೭ ॥

ವಯಂ ಮರುತ್ವಂತಮಿಹಾರ್ಥನಾಶನಂ
ಹ್ವಯಾಮಹೇ ತ್ವಚ್ಛ್ರವಸಾ ಹತತ್ವಿಷಮ್ ।
ಅಯಾತಯಾಮೋಪಹವೈರನಂತರಂ
ಪ್ರಸಹ್ಯ ರಾಜನ್ ಜುಹವಾಮ ತೇಽಹಿತಮ್ ॥ ೨೮ ॥

ಇತ್ಯಾಮಂತ್ರ್ಯ ಕ್ರತುಪತಿಂ ವಿದುರಾಸ್ಯರ್ತ್ವಿಜೋ ರುಷಾ ।
ಸ್ರುಗ್ಘಸ್ತಾಂಜುಹ್ವತೋಽಭ್ಯೇತ್ಯ ಸ್ವಯಂಭೂಃ ಪ್ರತ್ಯಷೇಧತ
॥ ೨೯ ॥

ನ ವಧ್ಯೋ ಭವತಾಮಿಂದ್ರೋ ಯದ್ಯಜ್ಞೋ ಭಗವತ್ತನುಃ ।
ಯಂ ಜಿಘಾಂಸಥ ಯಜ್ಞೇನ ಯಸ್ಯೇಷ್ಟಾಸ್ತನವಃ ಸುರಾಃ
॥ ೩೦ ॥

ತದಿದಂ ಪಶ್ಯತ ಮಹದ್ಧರ್ಮವ್ಯತಿಕರಂ ದ್ವಿಜಾಃ ।
ಇಂದ್ರೇಣಾನುಷ್ಠಿತಂ ರಾಜ್ಞಃ ಕರ್ಮೈತದ್ವಿಜಿಘಾಂಸತಾ
॥ ೩೧ ॥

ಪೃಥುಕೀರ್ತೇಃ ಪೃಥೋರ್ಭೂಯಾತ್ತರ್ಹ್ಯೇಕೋನಶತಕ್ರತುಃ ।
ಅಲಂ ತೇ ಕ್ರತುಭಿಃ ಸ್ವಿಷ್ಟೈರ್ಯದ್ಭವಾನ್ಮೋಕ್ಷಧರ್ಮವಿತ್
॥ ೩೨ ॥

ಸಮರ್ಥಿಸುತ್ತವೆ. ವಾಸ್ತವವಾಗಿ ಇವು ಧರ್ಮಗಳೇ ಅಲ್ಲ. ಧರ್ಮವೆಂಬ ಭ್ರಾಂತಿಯಿಂದ ಪಾಮರ ಜನರು ಇವುಗಳಲ್ಲಿ ಆಸಕ್ತರಾಗುತ್ತಾರೆ. ॥ ೨೪-೨೫ ॥

ಇಂದ್ರನ ಆ ಕುಕೃತ್ಯವನ್ನು ಕಂಡು ಪರಮ ಪರಾಕ್ರಮಿಯಾದ ಪೃಥುಮಹಾರಾಜನಿಗೆ ಆತನ ಮೇಲೆ ತುಂಬಾ ಕ್ರೋಧವು ಉಂಟಾಯಿತು. ಆತನು ತನ್ನ ಬಿಲ್ಲನ್ನೆತ್ತಿಕೊಂಡು ಬಾಣವನ್ನು ಹೂಡಿದನು. ॥ ೨೬ ॥ ಆಗ ಕ್ರೋಧದಿಂದ ಕೆರಳಿದ್ದ ಆತನನ್ನು ನೋಡುವುದಕ್ಕೂ ಕಷ್ಟವಾಗಿತ್ತು. ಸಹಿಸಲಸದಳವಾದ ಪರಾಕ್ರಮವುಳ್ಳ ಪೃಥುವು ಇಂದ್ರನನ್ನು ವಧಿಸಲು ಸಿದ್ಧನಾಗಿಬಿಟ್ಟಿದ್ದಾನೆ ಎಂಬುದನ್ನು ತಿಳಿದು ಋತ್ವಿಜರು ಆತನನ್ನು ತಡೆಯುತ್ತಾ ಮಹಾರಾಜಾ! ನೀನು ಮಹಾಬುದ್ಧಿಶಾಲಿಯು. ಯಜ್ಞದೀಕ್ಷೆಯನ್ನು ವಹಿಸಿಕೊಂಡ ಮೇಲೆ ಶಾಸ್ತ್ರವಿಹಿತವಾದ ಯಜ್ಞಪಶುವನ್ನು ಬಿಟ್ಟು ಬೇರೆ ಯಾರನ್ನೂ ವಧಿಸಬಾರದು. ॥ ೨೭ ॥ ಈ ಯಜ್ಞಕಾರ್ಯದಲ್ಲಿ ನಿನಗೆ ವಿಘ್ನವನ್ನುಂಟುಮಾಡುತ್ತಿರುವ ಇಂದ್ರನು ನಿನ್ನ ಕೀರ್ತಿಯಿಂದ ಅಸೂಯೆಗೊಂಡು ಈಗಾಗಲೇ ತೇಜೋಹೀನನಾಗಿದ್ದಾನೆ. ನಾವು ಅಮೋಘವಾದ ಮಂತ್ರಗಳಿಂದ ಆತನನ್ನು ಇಲ್ಲಿಯೇ ಆವಾಹನೆ ಮಾಡಿ ಬಲಾತ್ಕಾರವಾಗಿ ಅಗ್ನಿಯಲ್ಲಿ ಹೋಮಮಾಡಿಬಿಡುವೆವು ಎಂದು ಸಮಾಧಾನಪಡಿಸಿದರು. ॥ ೨೮ ॥

ವಿದುರನೇ! ಯಜಮಾನನಲ್ಲಿ ಹೀಗೆ ಹೇಳಿ ಅವನ ಅನುಮತಿಯನ್ನು ಪಡೆದು ಯಾಜಕರು ಕ್ರೋಧದಿಂದ ಇಂದ್ರನನ್ನು ಆಹ್ವಾನಿಸಿದರು. ಅವರು ಸ್ರುವೆಯಿಂದ ಅಗ್ನಿಯಲ್ಲಿ ಆಹುತಿಯನ್ನು ಇನ್ನೇನು ಹಾಕಬೇಕು ಎನ್ನುವಷ್ಟರಲ್ಲಿ ಬ್ರಹ್ಮದೇವರು ಅಲ್ಲಿಗೆ ಬಂದು ಅವರನ್ನು ತಡೆದರು. ॥ ೨೯ ॥ ಅವರು ಹೇಳಿದರು ಎಲೈ ಯಾಜಕರೇ! ನೀವು ಇಂದ್ರನನ್ನು ವಧಿಸುವುದು ಉಚಿತವಲ್ಲ. ಇವನು ಯಜ್ಞಸಂಜ್ಞಕ ಇಂದ್ರನಾದರೋ ಭಗವಂತನ ಮೂರ್ತಿಯೇ ಆಗಿದ್ದಾನೆ. ಯಜ್ಞದಲ್ಲಿ ನೀವು ಆರಾಧಿಸುವ ದೇವತೆಗಳೆಲ್ಲರೂ ಇಂದ್ರನಿಗೆ ಶರೀರದಂತೆ ಇದ್ದಾರೆ. ಇಂತಹವನನ್ನು ನೀವು ಯಜ್ಞದಮೂಲಕವೇ ಕೊಲ್ಲಲು ಬಯಸುತ್ತೀರಲ್ಲ! ॥ ೩೦ ॥ ಪೃಥುಮಹಾರಾಜನ ಯಜ್ಞಾನುಷ್ಠಾನದಲ್ಲಿ ವಿಘ್ನವನ್ನು ಉಂಟು ಮಾಡಲು ಇಂದ್ರನು ಹರಡಿರುವ ಪಾಖಂಡವು ಧರ್ಮದ ನಾಶ ಮಾಡುವಂತಹುದು. ಈ ಮಾತಿನ ಕಡೆಗೆ ಗಮನಕೊಡಿರಿ. ಈಗ ಅವನಲ್ಲಿ ಹೆಚ್ಚು ವಿರೋಧಮಾಡಬೇಡಿ. ಇಲ್ಲದಿದ್ದರೆ ಅವನು ಇನ್ನೂ ಪಾಖಂಡಮಾರ್ಗಗಳನ್ನು ಪ್ರಚಾರಮಾಡುವನು. ॥ ೩೧ ॥ ಈ ಪೃಥುವಿಗೂ – ಇಂದ್ರನಿಗೂ ಯಜ್ಞದಲ್ಲಿ ಪೈಪೋಟಿಯೇ ಬೇಡ. ಪೃಥುಮಹಾರಾಜನ ಕೀರ್ತಿಯು ಈಗಾಗಲೇ ತುಂಬಾ ವಿಸ್ತಾರಗೊಂಡಿದೆ. ಈತನಿಗೆ ನೂರನೆಯ ಯಜ್ಞದ ಆವಶ್ಯಕತೆಯೇ ಇಲ್ಲ. ಆದ್ದರಿಂದ ಈ ಪೃಥುರಾಜನ ತೊಂಭತ್ತೊಂಭತ್ತು ಯಜ್ಞಗಳಲ್ಲೇ ಪರಿಸಮಾಪ್ತಿಯಾಗಲಿ. ಅನಂತರ ರಾಜರ್ಷಿ ಪೃಥುವಿನಲ್ಲಿ ಹೇಳಿದರು – ರಾಜೇಂದ್ರನೇ! ನೀನಾದರೋ ಮೋಕ್ಷಧರ್ಮವನ್ನು ಬಲ್ಲವನು. ಆದ್ದರಿಂದ ನಿನಗೆ ಈ ಯಜ್ಞಾನುಷ್ಠಾನಗಳ ಆವಶ್ಯಕತೆಯೇ ಇಲ್ಲ. ॥ ೩೨ ॥

ನೈವಾತ್ಮನೇ ಮಹೇಂದ್ರಾಯ ರೋಷಮಾಹರ್ತುಮರ್ಹಸಿ ।
ಉಭಾವಪಿ ಹಿ ಭದ್ರಂ ತೇ ಉತ್ತಮಶ್ಲೋಕವಿಗ್ರಹೌ
॥ ೩೩ ॥

ಮಾಸ್ಮಿನ್ಮಹಾರಾಜ ಕೃಥಾಃ ಸ್ಮ ಚಿಂತಾಂ
ನಿಶಾಮಯಾಸ್ಮದ್ವಚ ಆದೃತಾತ್ಮಾ ।
ಯದ್ಧ್ಯಾಯತೋ ದೈವಹತಂ ನು ಕರ್ತುಂ
ಮನೋಽತಿರುಷ್ಟಂ ವಿಶತೇ ತಮೋಽಂಧಮ್ ॥ ೩೪ ॥

ಕ್ರತುರ್ವಿರಮತಾಮೇಷ ದೇವೇಷು ದುರವಗ್ರಹಃ ।
ಧರ್ಮವ್ಯತಿಕರೋ ಯತ್ರ ಪಾಖಂಡೈರಿಂದ್ರನಿರ್ಮಿತೈಃ
॥ ೩೫ ॥

ಏಭಿರಿಂದ್ರೋಪಸಂಸೃಷ್ಟೈಃ ಪಾಖಂಡೈರ್ಹಾರಿಭಿರ್ಜನಮ್ ।
ಹ್ರಿಯಮಾಣಂ ವಿಚಕ್ಷ್ವೈನಂ ಯಸ್ತೇ ಯಜ್ಞಧ್ರುಗಶ್ವಮುಟ್
॥ ೩೬ ॥

ಭವಾನ್ಪರಿತ್ರಾತುಮಿಹಾವತೀರ್ಣೋ
ಧರ್ಮಂ ಜನಾನಾಂ ಸಮಯಾನುರೂಪಮ್ ।
ವೇನಾಪಚಾರಾದವಲುಪ್ತಮದ್ಯ
ತದ್ದೇಹತೋ ವಿಷ್ಣು ಕಲಾಸಿ ವೈನ್ಯ ॥ ೩೭ ॥

ಸ ತ್ವಂ ವಿಮೃಶ್ಯಾಸ್ಯ ಭವಂ ಪ್ರಜಾಪತೇ
ಸಂಕಲ್ಪನಂ ವಿಶ್ವಸೃಜಾಂ ಪಿಪೀಪೃಹಿ ।
ಐಂದ್ರೀಂ ಚ ಮಾಯಾಮುಪಧರ್ಮಮಾತರಂ
ಪ್ರಚಂಡ ಪಾಖಂಡ ಪಥಂ ಪ್ರಭೋ ಜಹಿ ॥ ೩೮ ॥

*ಮೈತ್ರೇಯ ಉವಾಚ*

ಇತ್ಥಂ ಸ ಲೋಕಗುರುಣಾ ಸಮಾದಿಷ್ಟೋ ವಿಶಾಂಪತಿಃ ।
ತಥಾ ಚ ಕೃತ್ವಾ ವಾತ್ಸಲ್ಯಂ ಮಘೋನಾಪಿ ಚ ಸಂದಧೇ
॥ ೩೯ ॥

ಕೃತಾವಭೃಥಸ್ನಾನಾಯ ಪೃಥವೇ ಭೂರಿಕರ್ಮಣೇ ।
ವರಾಂದದುಸ್ತೇ ವರದಾ ಯೇ ತದ್ಬರ್ಹಿಷಿ ತರ್ಪಿತಾಃ
॥ ೪೦ ॥

ವಿಪ್ರಾಃ ಸತ್ಯಾಶಿಷಸ್ತುಷ್ಟಾಃ ಶ್ರದ್ಧಯಾ ಲಬ್ಧ ದಕ್ಷಿಣಾಃ ।
ಆಶಿಷೋ ಯುಯುಜುಃ ಕ್ಷತ್ತರಾದಿರಾಜಾಯ ಸತ್ಕೃತಾಃ
॥ ೪೧ ॥

ತ್ವಯಾಽಽಹೂತಾ ಮಹಾಬಾಹೋ ಸರ್ವ ಏವ ಸಮಾಗತಾಃ ।
ಪೂಜಿತಾ ದಾನಮಾನಾಭ್ಯಾಂ ಪಿತೃ ದೇವರ್ಷಿಮಾನವಾಃ
॥ ೪೨ ॥

ನಿನಗೆ ಮಂಗಳವಾಗಲಿ. ನೀನು ಮತ್ತು ಇಂದ್ರನು ಇಬ್ಬರೂ ಪವಿತ್ರವಾದ ಕೀರ್ತಿಯುಳ್ಳ ಭಗವಾನ್ ಶ್ರೀಹರಿಯ ಶರೀರವಾಗಿದ್ದೀರಿ,. ಅದಕ್ಕಾಗಿ ನಿನ್ನದೇ ಸ್ವರೂಪಭೂತನಾದ ಇಂದ್ರನ ಕುರಿತು ನೀನು ಕ್ರೋಧವನ್ನು ಮಾಡಬಾರದು. ॥ ೩೩ ॥ ನಿನ್ನ ಈ ಯಜ್ಞವು ನಿರ್ವಿಘ್ನವಾಗಿ ಸಮಾಪ್ತವಾಗಲಿಲ್ಲವೆಂದು ನೀನು ಚಿಂತಿಸಬೇಡ. ನನ್ನ ಮಾತನ್ನು ಆದರದಿಂದ ಸ್ವೀಕರಿಸು. ದೈವವು ತಪ್ಪಿಸಿದ ಕೆಲಸವನ್ನು ತಾನು ಮಾಡಬೇಕೆಂದು ವಿಚಾರಮಾಡುವವನ ಮನಸ್ಸು ಅತ್ಯಂತ ಕ್ರೋಧಗೊಂಡು ಭಯಂಕರ ಮೋಹದಲ್ಲಿ ಸಿಲುಕಿಕೊಳ್ಳುವನು. ॥ ೩೪ ॥ ರಾಜನೇ! ಈ ಯಜ್ಞವನ್ನು ಇಲ್ಲಿಗೆ ನಿಲ್ಲಿಸು. ಇದರ ಕಾರಣದಿಂದ ಇಂದ್ರನು ನಡೆಸಿದ ಪಾಖಂಡಗಳಿಂದ ಧರ್ಮದ ನಾಶವಾಗುತ್ತಾ ಇದೆ. ಏಕೆಂದರೆ, ದೇವತೆಗಳಲ್ಲಿ ತುಂಬಾ ದುರಾಗ್ರಹವಿರುತ್ತದೆ. ॥ ೩೫ ॥ ಇಂದ್ರನು ಕುದುರೆಯನ್ನು ಅಪಹರಿಸಿ ನಿನ್ನ ಯಜ್ಞದಲ್ಲಿ ವಿಘ್ನವನ್ನು ಮಾಡುತ್ತಿದ್ದಾಗ ಅವನಿಂದ ರಚಿಸಲ್ಪಟ್ಟ ಮನೋಹರ ಪಾಖಂಡಗಳ ಕಡೆಗೆ ಜನರ ಮನಸ್ಸು ಸೆಳೆಯಲ್ಪಡುತ್ತಿದೆ ನೋಡು. ॥ ೩೬ ॥ ನೀನು ಸಾಕ್ಷಾತ್ ಮಹಾವಿಷ್ಣುವಿನ ಅಂಶನೇ ಆಗಿರುವೆ. ವೇನನ ದುರಾಚರಣೆಯಿಂದ ಧರ್ಮವು ಲೋಪವಾಗುತ್ತಿರುವಾಗ ಸಮಯೋಚಿತವಾದ ಧರ್ಮವನ್ನು ರಕ್ಷಿಸಲಿಕ್ಕಾಗಿಯೇ ನೀನು ಅವನ ಶರೀರದಿಂದ ಅವತರಿಸಿರುವೆ. ॥ ೩೭ ॥ ಆದ್ದರಿಂದ ಪ್ರಜಾಪಾಲಕನಾದ ಪೃಥುವೇ! ಈ ನಿನ್ನ ಅವತಾರದ ಉದ್ದೇಶವನ್ನು ವಿಚಾರಮಾಡಿ ಭೃಗುವೇ ಮುಂತಾದ ವಿಶ್ವರಚಿತವಾದ ಮುನೀಶ್ವರರ ಸಂಕಲ್ಪವನ್ನು ಪೂರ್ಣಗೊಳಿಸು. ಈ ಪ್ರಚಂಡವಾದ ಪಾಷಂಡಮಾರ್ಗವೆಂಬ ಇಂದ್ರನ ಮಾಯೆಯು ಅಧರ್ಮದ ಜನನಿಯಾಗಿದೆ. ನೀನು ಅದನ್ನು ನಾಶಮಾಡಿಬಿಡು. ॥ ೩೮ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಲೋಕಗುರುವಾದ ಭಗವಾನ್ ಬ್ರಹ್ಮದೇವರು ಹೀಗೆ ತಿಳಿವಳಿಕೆ ನೀಡಿದ ಬಳಿಕ ಪ್ರಬಲ ಪರಾಕ್ರಮಿ ಮಹಾರಾಜ ಪೃಥುವು ಯಜ್ಞದ ಆಗ್ರಹವನ್ನು ಬಿಟ್ಟು ಬಿಟ್ಟನು ಮತ್ತು ಇಂದ್ರನೊಂದಿಗೆ ಪ್ರೀತಿಯಿಂದ ಸಂಧಿಮಾಡಿ ಕೊಂಡನು. ॥ ೩೯ ॥ ಇದಾದನಂತರ ರಾಜನು ಯಜ್ಞಾಂತ ಸ್ನಾನವನ್ನು ಮಾಡಿ ನಿವೃತ್ತನಾದಾಗ ಅವನ ಯಜ್ಞದಿಂದ ತೃಪ್ತರಾದ ದೇವತೆಗಳು ಅವನಿಗೆ ಅಭೀಷ್ಟವಾದ ವರಗಳನ್ನು ಅನುಗ್ರಹಿಸಿದರು. ॥ ೪೦ ॥ ಆದಿರಾಜನಾದ ಪೃಥುವು ಅತ್ಯಂತ ಶ್ರದ್ಧೆಯಿಂದ ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ಕೊಟ್ಟನು. ಬ್ರಾಹ್ಮಣರು ಆತನ ಸತ್ಕಾರಗಳಿಂದ ಸಂತೋಷಗೊಂಡು ಅವನಿಗೆ ಅಮೋಘವಾದ ಆಶೀರ್ವಾದಗಳನ್ನು ನೀಡಿದರು. ॥ ೪೧ ॥ ಹಾಗೂ ಹೇಳಿದರು – "ಓ ಮಹಾಬಾಹುವೇ! ನಿನ್ನ ಆಹ್ವಾನದಂತೆ ಆಗಮಿಸಿದ್ದ ಪಿತೃಗಳು, ದೇವತೆಗಳು, ಮನುಷ್ಯರು ಮುಂತಾದವರೆಲ್ಲರೂ ದಾನ-ಮಾನಗಳಿಂದ ಚೆನ್ನಾಗಿ ಸತ್ಕರಿಸಲ್ಪಟ್ಟರು" ಎಂದು ಆತನನ್ನು ಅಭಿನಂದಿಸಿದರು. ॥ ೪೨ ॥

*ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಪೃಥುವಿಜಯೇ ಏಕೋನವಿಂಶೋಽಧ್ಯಾಯಃ ॥ ೧೯ ॥

# ಇಪ್ಪತ್ತನೆಯ ಅಧ್ಯಾಯ

## ಪೃಥು ಚಕ್ರವರ್ತಿಯ ಯಜ್ಞಶಾಲೆಯಲ್ಲಿ ಶ್ರೀಭಗವಂತನು ಆವಿರ್ಭವಿಸಿ ಆತನನ್ನು ಅನುಗ್ರಹಿಸಿದುದು

*ಮೈತ್ರೇಯ ಉವಾಚ*

**ಭಗವಾನಪಿ ವೈಕುಂಠಃ ಸಾಕಂ ಮಘವತಾ ವಿಭುಃ ।
ಯಜ್ಞೈರ್ಯಜ್ಞಪತಿಸ್ತುಷ್ಟೋ ಯಜ್ಞ ಭುಕ್ತಮಭಾಷತ ॥ ೧ ॥**

*ಶ್ರೀಭಗವಾನುವಾಚ*

**ಏಷ ತೇಽಕಾರಷೀದ್ಭಂಗಂ ಹಯಮೇಧಶತಸ್ಯ ಹ ।
ಕ್ಷಮಾಪಯತ ಆತ್ಮಾನಮಮುಷ್ಯ ಕ್ಷಂತುಮರ್ಹಸಿ ॥ ೨ ॥**

**ಸುಧಿಯಃ ಸಾಧವೋ ಲೋಕೇ ನರದೇವ ನರೋತ್ತಮಾಃ ।
ನಾಭಿದ್ರುಹ್ಯಂತಿ ಭೂತೇಭ್ಯೋ ಯರ್ಹಿ ನಾತ್ಮಾ ಕಲೇವರಮ್ ॥ ೩ ॥**

**ಪುರುಷಾ ಯದಿ ಮುಹ್ಯಂತಿ ತ್ವಾದೃಶಾ ದೇವಮಾಯಯಾ ।
ಶ್ರಮ ಏವ ಪರಂ ಜಾತೋ ದೀರ್ಘಯಾ ವೃದ್ಧಸೇವಯಾ ॥ ೪ ॥**

**ಅತಃ ಕಾಯಮಿಮಂ ವಿದ್ವಾನವಿದ್ಯಾಕಾಮಕರ್ಮಭಿಃ ।
ಆರಬ್ಧ ಇತಿ ನೈವಾಸ್ಮಿನ್ ಪ್ರತಿಬುದ್ಧೋಽನುಷಜ್ಜತೇ ॥ ೫ ॥**

**ಅಸಂಸಕ್ತಃ ಶರೀರೇಽಸ್ಮಿನ್ನಮುನೋತ್ಪಾದಿತೇ ಗೃಹೇ ।
ಅಪತ್ಯೇ ದ್ರವಿಣೇ ವಾಪಿ ಕಃ ಕುರ್ಯಾನ್ಮಮತಾಂ ಬುಧಃ ॥ ೬ ॥**

**ಏಕಃ ಶುದ್ಧಃ ಸ್ವಯಂಜ್ಯೋತಿರ್ನಿರ್ಗುಣೋಽಸೌ ಗುಣಾಶ್ರಯಃ ।
ಸರ್ವಗೋಽನಾವೃತಃ ಸಾಕ್ಷೀ ನಿರಾತ್ಮಾಽಽತ್ಮಾಽಽತ್ಮನಃ ಪರಃ ॥ ೭ ॥**

**ಯ ಏವಂ ಸಂತಮಾತ್ಮಾನಮಾತ್ಮಸ್ಥಂ ವೇದ ಪೂರುಷಃ ।
ನಾಜ್ಯತೇ ಪ್ರಕೃತಿಸ್ಥೋಽಪಿ ತದ್ಗುಣೈಃ ಸ ಮಯಿ ಸ್ಥಿತಃ ॥ ೮ ॥**

**ಯಃ ಸ್ವಧರ್ಮೇಣ ಮಾಂ ನಿತ್ಯಂ ನಿರಾಶೀಃ ಶ್ರದ್ಧಯಾನ್ವಿತಃ ।
ಭಜತೇ ಶನಕೈಸ್ತಸ್ಯ ಮನೋ ರಾಜನ್ಪ್ರಸೀದತಿ ॥ ೯ ॥**

**ಪರಿತ್ಯಕ್ತಗುಣಃ ಸಮ್ಯಗ್ದರ್ಶನೋ ವಿಶದಾಶಯಃ ।
ಶಾಂತಿಂ ಮೇ ಸಮವಸ್ಥಾನಂ ಬ್ರಹ್ಮ ಕೈವಲ್ಯಮಶ್ನುತೇ ॥ ೧೦ ॥**

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಯಜ್ಞಪತಿಯೂ, ಯಜ್ಞಭೋಕ್ತೃವೂ ಆದ ಭಗವಾನ್ ಶ್ರೀವಿಷ್ಣುವು ಪೃಥುಮಹಾರಾಜನ ಯಜ್ಞಗಳಿಂದ ಸಂತುಷ್ಟನಾಗಿ ಇಂದ್ರನೊಡನೆ ಅಲ್ಲಿಗೆ ದಯಮಾಡಿಸಿ ರಾಜನಲ್ಲಿ ಹೀಗೆಂದನು. ॥ ೧ ॥

**ಶ್ರೀಭಗವಂತನು ಹೇಳಿದನು** – ಎಲೈ ರಾಜೇಂದ್ರನೇ! ನೂರು ಅಶ್ವಮೇಧಯಜ್ಞಗಳನ್ನು ಪೂರ್ಣಗೊಳಿಸಬೇಕೆಂಬ ನಿನ್ನ ಸಂಕಲ್ಪಕ್ಕೆ ಈ ಇಂದ್ರನು ವಿಘ್ನವನ್ನುಂಟುಮಾಡಿದ್ದಕ್ಕಾಗಿ ನಿನ್ನಲ್ಲಿ ಕ್ಷಮೆಯಾಚಿಸುತ್ತಿದ್ದಾನೆ. ನೀನು ಈತನನ್ನು ಕ್ಷಮಿಸು. ॥ ೨ ॥ ಜ್ಞಾನಿಗಳೂ, ಸಾಧುಗಳೂ ಆದ ನರಶ್ರೇಷ್ಠರು ಯಾವ ಜೀವಿಗಳಿಗೂ ದ್ರೋಹವನ್ನೆಸಗುವುದಿಲ್ಲ. ಏಕೆಂದರೆ 'ಈ ಶರೀರವು ಆತ್ಮನಲ್ಲ' ಎಂಬುದು ಅವರಿಗೆ ತಿಳಿದಿರುತ್ತದೆ. ॥ ೩ ॥ ನಿನ್ನಂತಹ ನರಶ್ರೇಷ್ಠರು ನನ್ನ ಮಾಯೆಗೆ ಮರುಳಾಗಬಾರದು. ಹಾಗೆ ಮರುಳಾದರೆ ಬಹುದಿನಗಳವರೆಗೂ ಮಾಡಿದ ಜ್ಞಾನೀಜನರ ಸೇವೆಯು ಕೇವಲ ಶ್ರಮವೆಂದೇ ತಿಳಿಯಲಾಗುತ್ತದೆ. ॥ ೪ ॥ ಜ್ಞಾನದಿಂದ ಎಚ್ಚರಗೊಂಡವನು ಈ ಶರೀರವನ್ನು – ಅವಿದ್ಯೆ, ವಾಸನೆ ಮತ್ತು ಕರ್ಮಗಳಿಂದ ನಿರ್ಮಿತವಾಗಿರುವ ಬೊಂಬೆಯೆಂದು ತಿಳಿದಿರುತ್ತಾನೆ. ಆದ್ದರಿಂದ ಆತನು ಇದರಲ್ಲಿ ಆಸಕ್ತನಾಗುವುದಿಲ್ಲ. ॥ ೫ ॥ ಹೀಗೆ ಶರೀರದಲ್ಲಿಯೇ ಅನಾಸಕ್ತನಾಗಿರುವುದರಿಂದ ಆ ವಿವೇಕಿಯು ಈ ಶರೀರ ಸಂಬಂಧದಿಂದ ಉಂಟಾದ ಮನೆ, ಮಡದಿ, ಮಕ್ಕಳು ಮತ್ತು ಹಣ ಮುಂತಾದವುಗಳಲ್ಲಿ ಹೇಗೆ ತಾನೇ ಮಮತೆಯಿಂದ ಇರಬಲ್ಲನು? ॥ ೬ ॥

ಈ ಆತ್ಮನು ಶರೀರದಿಂದ ಭಿನ್ನನಾದವನು. ಏಕೆಂದರೆ, ಈತನು ಕೇವಲನೂ, ಶುದ್ಧನೂ, ಸ್ವಯಂಪ್ರಕಾಶವುಳ್ಳವನೂ, ತ್ರಿಗುಣರಹಿತನಾಗಿ ತ್ರಿಗುಣಗಳಿಗೆ ಆಶ್ರಯಸ್ಥಾನನೂ, ಸರ್ವ ವ್ಯಾಪಕನೂ, ಆವರಣಶೂನ್ಯನೂ ಎಲ್ಲಕ್ಕೂ ಸಾಕ್ಷಿಯೂ ಹಾಗೂ ಬೇರೊಂದು ಆತ್ಮವಿಲ್ಲದವನೂ ಆಗಿರುತ್ತಾನೆ. ॥ ೭ ॥ ಈ ದೇಹದಲ್ಲಿರುವ ಆತ್ಮನು ಹೀಗೆ ಶರೀರವಲ್ಲ; ಶರೀರದಿಂದ ಭಿನ್ನನಾದವನು – ಎಂದು ತಿಳಿದಿರುವ ಜ್ಞಾನೀ ಮನುಷ್ಯನು ಪ್ರಕೃತಿಯಲ್ಲೇ ಇದ್ದರೂ ಅದರ ಗುಣಗಳಿಂದ ಲಿಪ್ತನಾಗುವುದಿಲ್ಲ. ಏಕೆಂದರೆ, ಅವನ ಸ್ಥಿತಿ ಪರಮಾತ್ಮನಾದ ನನ್ನಲ್ಲೇ ಇರುತ್ತದೆ. ॥ ೮ ॥ ಎಲೈ ರಾಜೇಂದ್ರನೇ! ಯಾವ ರೀತಿಯ ಕಾಮನೆಯನ್ನು ಇರಿಸಿಕೊಳ್ಳದೆ ತನ್ನ ವರ್ಣಾಶ್ರಮದ ಧರ್ಮಗಳ ಮೂಲಕ ಪ್ರತಿದಿನವೂ ಶ್ರದ್ಧೆಯಿಂದ ನನ್ನನ್ನು ಆರಾಧಿಸುವವನ ಚಿತ್ತವು ನಿಧಾನವಾಗಿ ಶುದ್ಧವಾಗಿಬಿಡುವುದು. ॥ ೯ ॥ ಚಿತ್ತವು ಶುದ್ಧವಾದ ಮೇಲೆ ಅವನಿಗೆ ವಿಷಯಗಳೊಂದಿಗೆ ಸಂಬಂಧ ಉಳಿಯುವುದಿಲ್ಲ ಮತ್ತು ಅವನಿಗೆ ತತ್ತ್ವಜ್ಞಾನ ಉಂಟಾಗುತ್ತದೆ. ಮತ್ತೆ ಅವನು ನನ್ನ ಸಮತಾರೂಪವಾದ ಸ್ಥಿತಿಯನ್ನು ಪಡೆದುಕೊಳ್ಳುವನು. ಇದೇ ಪರಮಶಾಂತಿಯು, ಬ್ರಹ್ಮವು ಅಥವಾ ಕೈವಲ್ಯವೆನಿಸುವುದು. ॥ ೧೦ ॥

ಉದಾಸೀನಮಿವಾಧ್ಯಕ್ಷಂ ದ್ರವ್ಯಜ್ಞಾನಕ್ರಿಯಾತ್ಮನಾಮ್ ।
ಕೂಟಸ್ಥಮಿಮಮಾತ್ಮಾನಂ ಯೋ ವೇದಾಪ್ನೋತಿ ಶೋಭನಮ್ ॥ ೧೧ ॥

ಭಿನ್ನಸ್ಯ ಲಿಂಗಸ್ಯ ಗುಣಪ್ರವಾಹೋ
ದ್ರವ್ಯಕ್ರಿಯಾಕಾರಕಚೇತನಾತ್ಮನಃ ।
ದೃಷ್ಟಾಸು ಸಂಪತ್ಸು ವಿಪತ್ಸು ಸೂರಯೋ
ನ ವಿಕ್ರಿಯಂತೇ ಮಯಿ ಬದ್ಧಸೌಹೃದಾಃ ॥ ೧೨ ॥

ಸಮಃ ಸಮಾನೋತ್ತಮಮಧ್ಯಮಾಧಮಃ
ಸುಖೇ ಚ ದುಃಖೇ ಚ ಜಿತೇಂದ್ರಿಯಾಶಯಃ ।
ಮಯೋಪಕ್ಲೃಪ್ತಾಖಿಲಲೋಕಸಂಯುತೋ
ವಿಧತ್ಸ್ವ ವೀರಾಖಿಲಲೋಕರಕ್ಷಣಮ್ ॥ ೧೩ ॥

ಶ್ರೇಯಃ ಪ್ರಜಾಪಾಲನಮೇವ ರಾಜ್ಞೋ
ಯತ್ಸಾಂಪರಾಯೇ ಸುಕೃತಾತ್ ಷಷ್ಠಮಂಶಮ್ ।
ಹರ್ತಾನ್ಯಥಾ ಹೃತಪುಣ್ಯಃ ಪ್ರಜಾನಾ-
ಮರಕ್ಷಿತಾ ಕರಹಾರೋಽಘಮತ್ತಿ ॥ ೧೪ ॥

ಏವಂ ದ್ವಿಜಾಗ್ರ್ಯಾನುಮತಾನುವೃತ್ತ-
ಧರ್ಮಪ್ರಧಾನೋಽನ್ಯತಮೋಽವಿತಾಸ್ಯಾಃ ।
ಹ್ರಸ್ವೇನ ಕಾಲೇನ ಗೃಹೋಪಯಾತಾನ್
ದ್ರಷ್ಟಾಸಿ ಸಿದ್ಧಾನನುರಕ್ತಲೋಕಃ ॥ ೧೫ ॥

ವರಂ ಚ ಮತ್ ಕಂಚನ ಮಾನವೇಂದ್ರ
ವೃಣೀಷ್ವ ತೇಽಹಂ ಗುಣಶೀಲಯಂತ್ರಿತಃ ।
ನಾಹಂ ಮಖೈರ್ವೈ ಸುಲಭಸ್ತಪೋಭಿ-
ರ್ಯೋಗೇನ ವಾ ಯತ್ಸಮಚಿತ್ತವರ್ತೀ ॥ ೧೬ ॥

*ಮೈತ್ರೇಯ ಉವಾಚ*

ಸ ಇತ್ಥಂ ಲೋಕಗುರುಣಾ ವಿಷ್ವಕ್ಸೇನೇನ ವಿಶ್ವಜಿತ್ ।
ಅನುಶಾಸಿತ ಆದೇಶಂ ಶಿರಸಾ ಜಗೃಹೇ ಹರೇಃ ॥ ೧೭ ॥

ಸ್ಪೃಶಂತಂ ಪಾದಯೋಃ ಪ್ರೇಮ್ಣಾ ವ್ರೀಡಿತಂ ಸ್ವೇನ ಕರ್ಮಣಾ ।
ಶತಕ್ರತುಂ ಪರಿಷ್ವಜ್ಯ ವಿದ್ವೇಷಂ ವಿಸಸರ್ಜ ಹ ॥ ೧೮ ॥

ಈ ಶರೀರ, ಜ್ಞಾನ, ಕ್ರಿಯೆ ಮತ್ತು ಮನಸ್ಸಿನ ಸಾಕ್ಷಿಯಾಗಿದ್ದರೂ ಈ ಕೂಟಸ್ಥ ಆತ್ಮನು ಇವುಗಳಿಂದ ನಿರ್ಲಿಪ್ತನೇ ಆಗಿರುತ್ತಾನೆ. ಹೀಗೆ ತಿಳಿದುಕೊಂಡು ಮನುಷ್ಯನು ಪರಮ ಮಂಗಳಮಯ ಮೋಕ್ಷ ಪದವನ್ನು ಪಡೆದುಕೊಳ್ಳುವನು. ॥ ೧೧ ॥

ರಾಜನೇ ! ಗುಣಪ್ರವಾಹರೂಪವಾದ ಆವಾಗಮನವಾದರೋ ಪಂಚಭೂತಗಳು, ಇಂದ್ರಿಯಗಳು, ಇಂದ್ರಿಯಾಭಿಮಾನಿ ದೇವತೆಗಳು ಮತ್ತು ಚಿದಾಭಾಸ – ಇವೆಲ್ಲವುಗಳ ಸಮಷ್ಟಿರೂಪವಾದ ಪರಿಚ್ಛಿನ್ನ ಲಿಂಗಶರೀರಕ್ಕೆ ಆಗುವುದಲ್ಲದೆ, ಇದರ ಸಾಕ್ಷಿಯಾದ ಆತ್ಮನಿಗೆ ಯಾವ ಸಂಬಂಧವೂ ಇಲ್ಲ. ನನ್ನಲ್ಲೇ ದೃಢವಾದ ಅನುರಾಗವುಳ್ಳ ಬುದ್ಧಿವಂತನಾದ ಮನುಷ್ಯನು ಸಂಪತ್ತು-ವಿಪತ್ತುಗಳು ಪ್ರಾಪ್ತವಾದರೂ ಎಂದಿಗೂ ಹರ್ಷ-ಶೋಕ ಮುಂತಾದ ವಿಕಾರಗಳಿಗೆ ಒಳಗಾಗುವುದಿಲ್ಲ. ॥ ೧೨ ॥ ಆದುದರಿಂದ ಎಲೈ ವೀರವರನೇ ! ನೀನು ಉತ್ತಮ, ಮಧ್ಯಮ, ಅಧಮರೆಂಬ ಎಲ್ಲ ಪುರುಷರಲ್ಲಿಯೂ ಸಮಾನಭಾವವನ್ನು ಇಟ್ಟುಕೊಂಡು, ಸುಖ-ದುಃಖಗಳನ್ನು ಸಮಾನವಾಗಿ ತಿಳಿಯಬೇಕು. ಮನಸ್ಸು ಇಂದ್ರಿಯಗಳನ್ನು ಗೆದ್ದು, ನಾನು ಒದಗಿಸಿಕೊಟ್ಟಿರುವ ಮಂತ್ರಿಗಳೇ ಮುಂತಾದ ಪರಿವಾರದ ಸಹಾಯದಿಂದ ಸಮಸ್ತ ಲೋಕಗಳನ್ನು ರಕ್ಷಿಸುತ್ತಿರು. ॥ ೧೩ ॥ ಪ್ರಜೆಗಳ ರಕ್ಷಣೆಯಲ್ಲೇ ರಾಜನಿಗೆ ಕಲ್ಯಾಣವುಂಟಾಗುವುದು. ಹೀಗೆ ಅವರನ್ನು ರಕ್ಷಿಸಿದರೆ ಆತನಿಗೆ ಪರಲೋಕದಲ್ಲಿ ಪ್ರಜೆಗಳ ಪುಣ್ಯದಲ್ಲಿ ಆರನೆಯ ಒಂದು ಭಾಗವು ಸಿಗುತ್ತದೆ. ಇದಕ್ಕೆ ವಿಪರೀತವಾಗಿ ಪ್ರಜೆಗಳನ್ನು ರಕ್ಷಿಸದೆ ಅವರಿಂದ ಕಂದಾಯವನ್ನು ಮಾತ್ರ ತೆಗೆದುಕೊಳ್ಳುವಂತಹ ರಾಜನ ಇಡೀ ಪುಣ್ಯವನ್ನು ಪ್ರಜೆಗಳು ಕಿತ್ತುಕೊಳ್ಳುವರು. ಇಷ್ಟೇ ಅಲ್ಲ, ಪ್ರಜೆಗಳ ಪಾಪಕ್ಕೂ ಭಾಗಿಯಾಗಬೇಕಾಗುತ್ತದೆ. ॥ ೧೪ ॥ ಇದನ್ನರಿತು ನೀನು ಶ್ರೇಷ್ಠರಾದ ಬ್ರಾಹ್ಮಣರ ಸಮ್ಮತಿಪಡೆದು, ಪರಂಪರೆಯಿಂದ ಪ್ರಾಪ್ತವಾದ ಧರ್ಮವನ್ನೇ ಪ್ರಧಾನವಾಗಿಟ್ಟು ಕೊಂಡು ಎಲ್ಲದರಲ್ಲೂ ಅನಾಸಕ್ತನಾಗಿ ಈ ಪೃಥಿವಿಯನ್ನು ನ್ಯಾಯವಾಗಿ ಆಳುತ್ತಿದ್ದರೆ ಪ್ರಜೆಗಳು ನಿನ್ನನ್ನು ಪ್ರೀತಿಸುವರು. ಮತ್ತೆ ಕೆಲವೇ ದಿನಗಳಲ್ಲಿ ಸನಕಾದಿ ಸಿದ್ಧರು ನಿನ್ನ ಮನೆಗೇ ಬಂದು ದರ್ಶನ ಕೊಡುವರು. ॥ ೧೫ ॥ ರಾಜೇಂದ್ರನೇ ! ನಾನು ನಿನ್ನ ಗುಣ-ಶೀಲಗಳಿಗೆ ವಶನಾಗಿಬಿಟ್ಟಿದ್ದೇನೆ. ಆದುದರಿಂದ ನಿನಗೆ ಇಷ್ಟವಾದ ವರವನ್ನು ಬೇಡಿಕೋ. ನಾನು ಯಜ್ಞಗಳಿಂದಾಗಲೀ, ತಪಸ್ಸಿನಿಂದಾಗಲೀ, ಯೋಗದಿಂದಾಗಲೀ ಸುಲಭವಾಗಿ ದೊರೆಯುವವನಲ್ಲ. ಯಾರಲ್ಲಿ ಸಮಭಾವವಿರುವುದೋ ಅಂತಹವರ ಚಿತ್ತದಲ್ಲಿ ಮಾತ್ರ ಇರುವವನು. ॥ ೧೬ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ ! ಸರ್ವಲೋಕಗುರುವಾದ ವಿಶ್ವಕ್ಸೇನನು ಹೀಗೆ ಆದೇಶನೀಡಲು ಸರ್ವಲೋಕ ವಿಜಯಿಯಾದ ಆ ರಾಜೇಂದ್ರನು ಅದನ್ನು ಶಿರಸಾ ವಹಿಸಿದನು. ॥ ೧೭ ॥ ಆಗ ದೇವರಾಜ ಇಂದ್ರನು ತನ್ನ ದುಷ್ಕಾರ್ಯಕ್ಕಾಗಿ ತಾನೇ ನಾಚಿಕೆಪಟ್ಟು ಪೃಥುವಿನ ಪಾದಗಳಿಗೆ ಬೀಳುವಷ್ಟರಲ್ಲಿ ರಾಜನು ಆತನನ್ನು ಪ್ರೇಮದಿಂದ ಆಲಿಂಗಿಸಿಕೊಂಡು ಮನೋಮಾಲಿನ್ಯವನ್ನು ದೂರಮಾಡಿದನು. ॥ ೧೮ ॥

ಭಗವಾನಥ ವಿಶ್ವಾತ್ಮಾ ಪೃಥುನೋಪಹೃತಾರ್ಹಣಃ ।
ಸಮುಜ್ಜಿಹಾನಯಾ ಭಕ್ತ್ಯಾ ಗೃಹೀತಚರಣಾಂಬುಜಃ ॥ ೧೯ ॥

ಪ್ರಸ್ಥಾನಾಭಿಮುಖೋಽಪ್ಯೇನಮನುಗ್ರಹವಿಲಂಬಿತಃ ।
ಪಶ್ಯನ್ಪದ್ಮಪಲಾಶಾಕ್ಷೋ ನ ಪ್ರತಸ್ಥೇ ಸುಹೃತ್ಸತಾಮ್ ॥ ೨೦ ॥

ಸ ಆದಿರಾಜೋ ರಚಿತಾಂಜಲಿರ್ಹರಿಂ
ವಿಲೋಕಿತುಂ ನಾಶಕದಶ್ರುಲೋಚನಃ ।
ನ ಕಿಂಚನೋವಾಚ ಸ ಬಾಷ್ಪವಿಕ್ಲವೋ
ಹೃದೋಪಗುಹ್ಯಾಮುಮಧಾದವಸ್ಥಿತಃ ॥ ೨೧ ॥

ಅಥಾವಮೃಜ್ಯಾಶ್ರುಕಲಾ ವಿಲೋಕಯನ್
ಅತೃಪ್ತದೃಗ್ಗೋಚರಮಾಹ ಪೂರುಷಮ್ ।
ಪದಾ ಸ್ಪೃಶಂತಂ ಕ್ಷಿತಿಮಂಸ ಉನ್ನತೇ
ವಿನ್ಯಸ್ತಹಸ್ತಾಗ್ರಮುರಂಗವಿದ್ವಿಷಃ ॥ ೨೨ ॥

ಪೃಥುರುವಾಚ

ವರಾನ್ ವಿಭೋ ತ್ವದ್ವರದೇಶ್ವರಾದ್ ಬುಧಃ
ಕಥಂ ವೃಣೀತೇ ಗುಣವಿಕ್ರಿಯಾತ್ಮನಾಮ್ ।
ಯೇ ನಾರಕಾಣಾಮಪಿ ಸಂತಿ ದೇಹಿನಾಂ
ತಾನೀಶ ಕೈವಲ್ಯಪತೇ ವೃಣೇ ನ ಚ ॥ ೨೩ ॥

ನ ಕಾಮಯೇ ನಾಥ ತದಪ್ಯಹಂ ಕ್ವಚಿನ್
ನ ಯತ್ರ ಯುಷ್ಮಚ್ಚರಣಾಂಬುಜಾಸವಃ ।
ಮಹತ್ತಮಾಂತರ್ಹೃದಯಾನ್ಮುಖಚ್ಯುತೋ
ವಿಧತ್ಸ್ವ ಕರ್ಣಾಯುತಮೇಷ ಮೇ ವರಃ ॥ ೨೪ ॥

ಸ ಉತ್ತಮಶ್ಲೋಕ ಮಹನ್ಮುಖಚ್ಯುತೋ
ಭವತ್ಪದಾಂಭೋಜಸುಧಾಕಣಾನಿಲಃ ।
ಸ್ಮೃತಿಂ ಪುನರ್ವಿಸ್ಮೃತತತ್ತ್ವವರ್ತ್ಮನಾಂ
ಕುಯೋಗಿನಾಂ ನೋ ವಿತರತ್ಯಲಂ ವರೈಃ ॥ ೨೫ ॥

ಯಶಃ ಶಿವಂ ಸುಶ್ರವ ಆರ್ಯಸಂಗಮೇ
ಯದೃಚ್ಛಯಾ ಚೋಪಶೃಣೋತಿ ತೇ ಸಕೃತ್ ।
ಕಥಂ ಗುಣಜ್ಞೋ ವಿರಮೇದ್ವಿನಾ ಪಶುಂ
ಶ್ರೀರ್ಯತ್ಪ್ರವವ್ರೇ ಗುಣಸಂಗ್ರಹೇಚ್ಛಯಾ ॥ ೨೬ ॥

ಮತ್ತೆ ಪೃಥು ಮಹಾರಾಜನು ವಿಶ್ವಾತ್ಮನಾದ ಭಕ್ತವತ್ಸಲ ಭಗವಂತನನ್ನು ಪೂಜಿಸಿ, ಅಡಿಗಡಿಗೆ ಉಕ್ಕಿಬರುತ್ತಿದ್ದ ಭಕ್ತಿಯಿಂದ ಆತನ ಅಡಿದಾವರೆಗಳನ್ನು ಹಿಡಿದುಕೊಂಡನು. ॥ ೧೯ ॥ ಶ್ರೀಹರಿಯು ಅಲ್ಲಿಂದ ಹೊರಡಬೇಕೆಂದು ಬಯಸುತ್ತಿದ್ದರೂ ಪೃಥುವಿನ ಕುರಿತು ಇದ್ದ ವಾತ್ಸಲ್ಯಭಾವವು ಅವನನ್ನು ತಡೆಯಿತು. ಅವನು ತನ್ನ ಕಮಲದಂತಿರುವ ಕಣ್ಣುಗಳಿಂದ ರಾಜನ ಕಡೆಗೆ ನೋಡುತ್ತಲೇ ಇದ್ದನು. ಅಲ್ಲಿಂದ ಹೊರಡಲೇ ಇಲ್ಲ. ॥ ೨೦ ॥ ಆದಿರಾಜನಾದ ಪೃಥುಮಹಾರಾಜನೂ ಕೂಡ ಕಣ್ಣುಗಳಲ್ಲಿ ಕಂಬನಿಯು ತುಂಬಿದ್ದರಿಂದ ಶ್ರೀಭಗವಂತನನ್ನು ನೋಡುವುದಕ್ಕೂ ಸಮರ್ಥನಾಗಲಿಲ್ಲ. ಗಂಟಲು ಗದ್ಗದವಾಗಿದ್ದರಿಂದ ಏನನ್ನೂ ಆಡುವುದಕ್ಕೂ ಸಮರ್ಥನಾಗಲಿಲ್ಲ. ಆತನನ್ನು ಹೃದಯದಲ್ಲಿ ಆಲಿಂಗಿಸಿಕೊಂಡು, ಕೈಜೋಡಿಸಿಕೊಂಡು ಹಾಗೆಯೇ ನಿಂತು ಬಿಟ್ಟನು. ॥ ೨೧ ॥ ಪ್ರಭುವು ತನ್ನ ಚರಣಕಮಲಗಳಿಂದ ಪೃಥಿವಿಯನ್ನು ಸ್ಪರ್ಶಿಸುತ್ತಾ ನಿಂತಿದ್ದು, ಅವನ ಕೈತುದಿಯನ್ನು ಉನ್ನತವಾದ ಗರುಡನ ಹೆಗಲಮೇಲೆ ಇರಿಸಿಕೊಂಡಿದ್ದನು. ಮಹಾರಾಜಾ ಪೃಥುವು ಕಂಬನಿಯನ್ನು ಒರೆಸಿಕೊಂಡು ಅತೃಪ್ತನಯನಗಳಿಂದ ಅವನ ಕಡೆಗೆ ನೋಡುತ್ತಾ ಹೀಗೆ ವಿನಂತಿಸಿಕೊಂಡನು. ॥ ೨೨ ॥

**ಪೃಥುಮಹಾರಾಜನು ಹೇಳಿದನು** – ಓ ಕೈವಲ್ಯಪತಿಯಾದ ಪ್ರಭುವೇ! ವರವನ್ನು ಕೊಡುವ ಬ್ರಹ್ಮಾದಿ ದೇವತೆಗಳಿಗೂ ವರವನ್ನು ಕೊಡುವುದರಲ್ಲಿ ಸಮರ್ಥನು ನೀನು. ದೇಹಾಭಿಮಾನಿಗಳು ಭೋಗಿಸಲು ಯೋಗ್ಯವಾದ ವಿಷಯಗಳನ್ನು ವಿವೇಕಿಗಳು ನಿನ್ನಿಂದ ಹೇಗೆ ತಾನೇ ಬೇಡಿಯಾರು? ಅವುಗಳಾದರೋ ನರಕಕ್ಕೆ ಯೋಗ್ಯರಾದ ಸಂಸಾರಿಗಳಿಗೂ ದೊರೆಯುವುವು. ಆದರೆ ನಾನು ಅವುಗಳನ್ನು ಬೇಡುವುದಿಲ್ಲ. ॥ ೨೩ ॥ ಮಹಾಪುರುಷರ ಹೃದಯದಿಂದ ಅವರ ಬಾಯಿಯ ಮೂಲಕ ಹರಿದುಬರುವ ನಿನ್ನ ಚರಣಾರವಿಂದಗಳ ಮಕರಂದವು ಇಲ್ಲದಿರುವ, ನಿನ್ನ ಕೀರ್ತಿಕಥೆಗಳನ್ನು ಕೇಳುವ ಸುಖವು ಸಿಗದಿರುವ ಆ ಮೋಕ್ಷಪದವನ್ನು ನಾನು ಇಚ್ಛಿಸುವುದಿಲ್ಲ. ಆದುದರಿಂದ ನೀನು ನನಗೆ ಹತ್ತುಸಾವಿರ ಕಿವಿಗಳನ್ನು ಕೊಡು. ಅದರಿಂದ ನಾನು ನಿನ್ನ ದಿವ್ಯಲೀಲಾಕಥೆಗಳನ್ನು ಕೇಳುತ್ತಲೇ ಇರುವೆನು. ಇಷ್ಟೇ ನನ್ನ ಪ್ರಾರ್ಥನೆಯಾಗಿದೆ. ॥ ೨೪ ॥ ಪುಣ್ಯಕೀರ್ತಿಯಾದ ಪ್ರಭುವೇ! ನಿಮ್ಮ ಅಡಿದಾವರೆಗಳ ರಸಾಮೃತದ ಕಣಗಳನ್ನು ಹೊತ್ತುತರುತ್ತಾ ಮಹಾತ್ಮರ ಮುಖಾರವಿಂದಗಳಿಂದ ಯಾವ ಗಾಳಿಯು ಹೊರಹೊಮ್ಮುವುದೋ ಅದಕ್ಕೆ – ತತ್ತ್ವವನ್ನು ಮರೆತಿರುವ ನಮ್ಮಂತಹ ಕುಯೋಗಿಗಳಿಗೂ ಪುನಃ ತತ್ತ್ವದ ಅರಿವನ್ನುಂಟು ಮಾಡುವ ಅದ್ಭುತವಾದ ಶಕ್ತಿಯಿದೆ. ಆದುದರಿಂದ ಆ ಕಥಾಮೃತ ಶ್ರವಣವನ್ನು ಬಿಟ್ಟು ಬೇರಾವ ವರವೂ ಬೇಡ. ॥ ೨೫ ॥ ಪುಣ್ಯಶ್ಲೋಕನಾದ ಪರಮಾತ್ಮನೇ! ಸತ್ಸಂಗದಲ್ಲಿ ನಿನ್ನ ಮಂಗಳಮಯವಾದ ಕೀರ್ತಿಯನ್ನು ಆಕಸ್ಮಾತ್ತಾಗಿ ಒಮ್ಮೆ ಕಿವಿಗೆ ಬಿದ್ದಾಗ ಅಷ್ಟರಲ್ಲೇ ತೃಪ್ತಿಯಾಯಿತು ಎನ್ನುವವನು ಪಶುವಲ್ಲದೆ ಮತ್ತೇನು? ಗುಣಗ್ರಾಹಿಗಳಾದ ಧನ್ಯಜೀವಿಗಳು ಅದನ್ನು ಸದಾ ಕೇಳುತ್ತಿರಬೇಕೆಂದು ಬಯಸುತ್ತಾರೆ. ಎಲ್ಲ ರೀತಿಯ ಪುರುಷಾರ್ಥಗಳ ಸಿದ್ಧಿಗಾಗಿ ಜಗನ್ಮಾತೆಯಾದ ಶ್ರೀಲಕ್ಷ್ಮೀದೇವಿಯೂ ನಿನ್ನ ದಿವ್ಯಕಥೆಗಳನ್ನು ನಿರಂತರವಾಗಿ ಶ್ರವಣಿಸಲು ಬಯಸುತ್ತಿರುವಳು. ॥ ೨೬ ॥

ಅಥಾಭಜೇ ತ್ವಾಖಿಲಪೂರುಷೋತ್ತಮಂ
ಗುಣಾಲಯಂ ಪದ್ಮಕರೇವ ಲಾಲಸಃ ।
ಅಪ್ಯಾವಯೋರೇಕಪತಿಸ್ಪೃಧೋಃ ಕಲಿ-
ರ್ನ ಸ್ಯಾತ್ಕೃತತ್ವಚ್ಚರಣೈಕತಾನಯೋಃ ॥ ೨೭ ॥

ಜಗಜ್ಜನನ್ಯಾಂ ಜಗದೀಶ ವೈಶಸಂ
ಸ್ಯಾದೇವ ಯತ್ಕರ್ಮಣಿ ನಃ ಸಮೀಹಿತಮ್ ।
ಕರೋಷಿ ಫಲ್ಗ್ವಪ್ಯುರು ದೀನವತ್ಸಲಃ
ಸ್ವ ಏವ ಧಿಷ್ಣ್ಯೇಽಭಿರತಸ್ಯ ಕಿಂ ತಯಾ ॥ ೨೮ ॥

ಭಜಂತ್ಯಥತ್ವಾಮತ ಏವ ಸಾಧವೋ
ವ್ಯುದಸ್ತಮಾಯಾಗುಣವಿಭ್ರಮೋದಯಮ್ ।
ಭವತ್ಪದಾನುಸ್ಮರಣಾದೃತೇ ಸತಾಂ
ನಿಮಿತ್ತಮನ್ಯದ್ಭಗವನ್ನ ವಿದ್ಮಹೇ ॥ ೨೯ ॥

ಮನ್ಯೇ ಗಿರಂ ತೇ ಜಗತಾಂ ವಿಮೋಹಿನೀಂ
ವರಂ ವೃಣೀಷ್ವೇತಿ ಭಜಂತಮಾತ್ಥ ಯತ್ ।
ವಾಚಾ ನು ತಂತ್ಯಾ ಯದಿ ತೇ ಜನೋಽಸಿತಃ
ಕಥಂ ಪುನಃ ಕರ್ಮ ಕರೋತಿ ಮೋಹಿತಃ ॥ ೩೦ ॥

ತ್ವನ್ಮಾಯಯಾದ್ಧಾ ಜನ ಈಶ ಖಂಡಿತೋ
ಯದನ್ಯದಾಶಾಸ್ತ ಋತಾತ್ಮನೋಽಬುಧಃ ।
ಯಥಾ ಚರೇದ್ಬಾಲಹಿತಂ ಪಿತಾ ಸ್ವಯಂ
ತಥಾ ತ್ವಮೇವಾರ್ಹಸಿ ನಃ ಸಮೀಹಿತುಮ್ ॥ ೩೧ ॥

ಮೈತ್ರೇಯ ಉವಾಚ

ಇತ್ಯಾದಿರಾಜೇನ ನುತಃ ಸ ವಿಶ್ವದೃಕ್
ತಮಾಹ ರಾಜನ್ಮಯಿ ಭಕ್ತಿರಸ್ತು ತೇ ।
ದಿಷ್ಟ್ಯೇದೃಶೀ ಧೀರ್ಮಯಿ ತೇ ಕೃತಾ ಯಯಾ
ಮಾಯಾಂ ಮದೀಯಾಂ ತರತಿ ಸ್ಮ ದುಸ್ತ್ಯಜಾಮ್ ॥ ೩೨ ॥

ತತ್ತ್ವಂ ಕುರು ಮಯಾದಿಷ್ಟಮಪ್ರಮತ್ತಃ ಪ್ರಜಾಪತೇ ।
ಮದಾದೇಶಕರೋ ಲೋಕಃ ಸರ್ವತ್ರಾಪ್ನೋತಿ ಶೋಭನಮ್
॥ ೩೩ ॥

ಆ ಲಕ್ಷ್ಮೀದೇವಿಯಂತೆ ನಾನೂ ಕೂಡ ಪುರುಷೋತ್ತಮನೂ, ಕಲ್ಯಾಣಗುಣ ಪರಿಪೂರ್ಣನೂ ಆಗಿರುವ ನಿನ್ನ ಸೇವೆಯನ್ನು ಮಾಡಲು ಬಯಸುತ್ತೇನೆ. ಆದರೆ ನಿನ್ನ ಅಡಿದಾವರೆಗಳಲ್ಲೇ ಮನಸ್ಸನ್ನು ಏಕಾಗ್ರಗೊಳಿಸಿ ನಿನ್ನೊಬ್ಬನನ್ನೇ ಪತಿಯನ್ನಾಗಿ ಭಾವಿಸಿ ಸೇವೆಮಾಡುತ್ತಿರುವ ಜಗನ್ಮಾತೆ ಮಹಾಲಕ್ಷ್ಮಿಗೂ ನನಗೂ ಈ ನಿನ್ನ ಸೇವೆಯೆಂಬ ಸ್ಪರ್ಧೆಯಲ್ಲಿ ಕಲಹವುಂಟಾಗಬಾರದು ಅಷ್ಟೇ.॥ ೨೭ ॥ ಓ ಜಗತ್ಪತಿಯೇ! ಆದರೆ ಆ ಜಗನ್ಮಾತೆ ಲಕ್ಷ್ಮಿಯ ಹೃದಯದಲ್ಲಿ ನನ್ನ ಕುರಿತು ವಿರೋಧವು ಉಂಟಾಗುವ ಸಂಭವವು ಇದ್ದೇ ಇದೆ. ಏಕೆಂದರೆ, ನಾವಿಬ್ಬರೂ ಒಂದೇ ಸೇವಾ ಕೈಂಕರ್ಯಕ್ಕೆ ಆಸೆಪಡುತ್ತಿದ್ದೇವೆ. ಆದರೆ ನೀನು ದೀನವತ್ಸಲನು. ದೀನರಾದ ಭಕ್ತರು ಮಾಡುವ ಅತ್ಯಲ್ಪ ಸೇವೆಯನ್ನು ಬಲುದೊಡ್ಡದೆಂದು ಭಾವಿಸುವವನು. ಆದುದರಿಂದ ನಮ್ಮಿಬ್ಬರ ಜಗಳದಲ್ಲಿ ನೀನು ನನ್ನ ಪಕ್ಷವನ್ನೇ ವಹಿಸುವೆಯೆಂದು ಆಶಿಸುತ್ತೇನೆ. ಸ್ವಸ್ವರೂಪದಲ್ಲಿಯೇ ವಿಹರಿಸುತ್ತಿರುವ ನಿನಗೆ ಆಕೆಯಿಂದಾದರೂ ಆಗಬೇಕಾದುದೇನು ? ॥ ೨೮ ॥ ಹೀಗೆ ನೀನು ದೀನವತ್ಸಲನಾಗಿರುವುದರಿಂದಲೇ ಮಾಯಾಗುಣವಿಲಾಸವನ್ನು ಮೀರಿದ, ಮಾಯಾತೀತನಾದ ನಿನ್ನನ್ನು ಸಾಧುಗಳು ನಿರಂತರವೂ ಧ್ಯಾನಿಸುವರು. ಸತ್ಪುರುಷರಿಗೆ ನಿನ್ನ ಚರಣಾರವಿಂದಗಳ ಸೇವೆಯ ಹೊರತು ಬೇರಾವ ಪ್ರಯೋಜನವೂ ಇಲ್ಲವೆಂದೇ ನಾನು ತಿಳಿದಿದ್ದೇನೆ. ॥ ೨೯ ॥ ಶ್ರೀಭಗವಂತನೇ! ಹೀಗೆ ನಿನ್ನ ಭಜನೆಯೇ ಅನನ್ಯ ಪ್ರಯೋಜನವೆಂದು ತಿಳಿದ ಭಕ್ತನಾದ ನನ್ನನ್ನು ಕುರಿತು ನೀನು 'ಯಾವುದಾದರೂ ವರವನ್ನು ಕೇಳಿಕೋ' ಎಂದು ಮೋಹಕವಾದ ಮಾತನ್ನಾಡಿದೆಯಲ್ಲ! ಇದು ಲೋಕವನ್ನು ಮರಳುಮಾಡುವ ಮಾತಲ್ಲವೇ ? ನಿನ್ನ ವಾಣಿಯೇ ಆದ ವೈದಿಕಕರ್ಮಕಾಂಡವೂ ಕೂಡ ಇಂತಹ ಪಾಶಗಳಿಂದ ಜನರನ್ನು ಕಟ್ಟಿಹಾಕಿದೆ. ಹಾಗಿಲ್ಲದಿದ್ದರೆ ಜನರು ಮೋಹವಶರಾಗಿ ಸಕಾಮಕರ್ಮಗಳನ್ನು ಏಕೆ ಆಚರಿಸುತ್ತಿದ್ದರು ?॥ ೩೦ ॥ ಪ್ರಭೋ! ನಿನ್ನಮಾಯೆಯಿಂದಲೇ ಮನುಷ್ಯನು ತನ್ನ ವಾಸ್ತವಿಕ ಸ್ವರೂಪನಾದ ನಿನ್ನಿಂದ ವಿಮುಖನಾಗಿ ಅಜ್ಞಾನಕ್ಕೆ ವಶನಾಗಿ ಬೇರೆ ಪತ್ನೀ, ಪುತ್ರಾದಿಗಳನ್ನು ಬಯಸುತ್ತಾರೆ. ಆದರೂ ತನ್ನ ಬೇಡಿಕೆಗಳನ್ನು ಸಲ್ಲಿಸದೇ ಇದ್ದರೂ ತಂದೆಯು ತಾನೇ ಅವರ ಕಲ್ಯಾಣವನ್ನು ಮಾಡುವಂತೆ, ನೀನೂ ಸಹ ನಾವು ಪ್ರಾರ್ಥಿಸದೇ ಇದ್ದರೂ ನಮಗೆ ಯಾವುದು ಹಿತಕರವೋ ಅದನ್ನೇ ಮಾಡು ಎಂದು ಬೇಡಿಕೊಂಡನು. ॥ ೩೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಆದಿರಾಜನಾದ ಪೃಥುವು ಹೀಗೆ ಸ್ತುತಿಸಿದಾಗ ಸರ್ವಸಾಕ್ಷಿ ಶ್ರೀಹರಿಯು ಅವನಲ್ಲಿ ಹೇಳಿದನು – ರಾಜನೇ! ನಿನಗೆ ನನ್ನಲ್ಲಿ ಭಕ್ತಿ ಉಂಟಾಗಲಿ. ನಿನ್ನ ಚಿತ್ತವು ಹೀಗೆ ನನ್ನಲ್ಲಿ ಲೀನವಾಗಿರುವುದು ಅದೃಷ್ಟವಿಶೇಷವೇ. ಹೀಗಾದರೆ ಮನುಷ್ಯನು ಸಹಜವಾಗಿ ತೊರೆಯಲು ಅತಿಕಷ್ಟವಾದ ನನ್ನ ಆ ಮಾಯೆಯಿಂದ ಬಿಡುಗಡೆಹೊಂದುವನು. ಈಗ ನೀನು ಜಾಗರೂಕನಾಗಿ ನನ್ನ ಆಜ್ಞೆಯನ್ನು ಪಾಲಿಸುತ್ತಾ ಇರು. ಪ್ರಜಾಪಾಲಕನೇ! ನನ್ನ ಆಣತಿಯನ್ನು ಪಾಲಿಸುವವನಿಗೆ ಎಲ್ಲೆಡೆ ಮಂಗಳವೇ ಉಂಟಾಗುತ್ತದೆ. ॥ ೩೨-೩೩ ॥

*ಮೈತ್ರೇಯ ಉವಾಚ*

**ಇತಿ ವೈನ್ಯಸ್ಯ ರಾಜರ್ಷೇಃ ಪ್ರತಿನಂದ್ಯಾರ್ಥವದ್ವಚಃ ।**
**ಪೂಜಿತೋಽನುಗೃಹಿತ್ವೈನಂ ಗಂತುಂ ಚಕ್ರೇಽಚ್ಯುತೋ ಮತಿಮ್ ॥ ೩೪ ॥**

**ದೇವರ್ಷಿಪಿತೃಗಂಧರ್ವಸಿದ್ಧಚಾರಣಪನ್ನಗಾಃ ।**
**ಕಿನ್ನರಾಪ್ಸರಸೋ ಮರ್ತ್ಯಾಃ ಖಗಾ ಭೂತಾನ್ಯನೇಕಶಃ ॥ ೩೫ ॥**

**ಯಜ್ಞೇಶ್ವರಧಿಯಾ ರಾಜ್ಞಾ ವಾಗ್ವಿತ್ತಾಂಜಲಿಭಕ್ತಿತಃ ।**
**ಸಭಾಜಿತಾ ಯಯುಃ ಸರ್ವೇ ವೈಕುಂಠಾನುಗತಾಸ್ತತಃ ॥ ೩೬ ॥**

**ಭಗವಾನಪಿ ರಾಜರ್ಷೇಃ ಸೋಪಾಧ್ಯಾಯಸ್ಯ ಚಾಚ್ಯುತಃ ।**
**ಹರನ್ನಿವ ಮನೋಽಮುಷ್ಯ ಸ್ವಧಾಮ ಪ್ರತ್ಯಪದ್ಯತ ॥ ೩೭ ॥**

**ಅದೃಷ್ಟಾಯ ನಮಸ್ಕೃತ್ಯ ನೃಪಃ ಸಂದರ್ಶಿತಾತ್ಮನೇ ।**
**ಅವ್ಯಕ್ತಾಯ ಚ ದೇವಾನಾಂ ದೇವಾಯ ಸ್ವಪುರಂ ಯಯೌ ॥ ೩೮ ॥**

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಹೀಗೆ ಭಗವಂತನು ಪೃಥುವಿನ ಅರ್ಥಪೂರ್ಣವಾದ ವಚನಗಳನ್ನು ಆದರಿಸಿದನು. ಮತ್ತೆ ಪೃಥುವು ಅವನನ್ನು ಪೂಜಿಸಿದನು. ಪ್ರಭುವು ಆತನನ್ನು ಎಲ್ಲ ರೀತಿಯಿಂದ ಅನುಗ್ರಹಿಸಿ ಅಲ್ಲಿಂದ ಹೊರಡ ಲನುವಾದನು. ॥ ೩೪ ॥ ಪೃಥುಮಹಾರಾಜನು ಅಲ್ಲಿಗೆ ಬಂದಿದ್ದ ದೇವತೆಗಳು, ಋಷಿಗಳು, ಪಿತೃಗಳು, ಗಂಧರ್ವರು, ಸಿದ್ಧರು, ಚಾರಣರು, ನಾಗರು, ಕಿನ್ನರರು, ಅಪ್ಸರೆಯರು, ಮನುಷ್ಯರು ಮತ್ತು ಪಕ್ಷಿಗಳು ಮುಂತಾದ ಅನೇಕ ಬಗೆಯ ಪ್ರಾಣಿಗಳಿಗೂ ಹಾಗೂ ಭಗವಂತನ ಪಾರ್ಷದರಿಗೂ ಹೀಗೆ ಎಲ್ಲರಿಗೂ ಭಗವದ್ಬುದ್ಧಿ ಯಿಂದ ಭಕ್ತಿಪೂರ್ವಕವಾಗಿ ಮಾತು, ಮನಸ್ಸು ಮತ್ತು ಧನದ ಮೂಲಕ ಕೈಜೋಡಿಸಿ ಪೂಜಿಸಿದನು. ಇದಾದ ಬಳಿಕ ಅವರೆಲ್ಲರೂ ತಮ್ಮ-ತಮ್ಮ ಸ್ಥಾನಗಳಿಗೆ ಹೊರಟು ಹೋದರು. ॥ ೩೫-೩೬ ॥ ಭಗವಂತನಾದ ಅಚ್ಯುತನೂ ಪೃಥುರಾಜನ ಮತ್ತು ಪುರೋಹಿತರ ಚಿತ್ತವನ್ನು ಸೆಳೆದುಕೊಂಡು ತನ್ನ ಧಾಮಕ್ಕೆ ಬಿಜಯಂಗೈದನು. ॥ ೩೭ ॥ ಅನಂತರ ತನ್ನ ಸ್ವರೂಪವನ್ನು ತೋರಿ ಅಂತರ್ಧಾನವಾದ ಅವ್ಯಕ್ತಸ್ವರೂಪೀ ದೇವಾಧಿದೇವ ಭಗವಂತನನ್ನು ನಮಸ್ಕರಿಸುತ್ತಾ ಪೃಥುರಾಜನೂ ತನ್ನ ರಾಜಧಾನಿಗೆ ತೆರಳಿದನು. ॥ ೩೮ ॥

***ಇಪ್ಪತ್ತನೆಯ ಅಧ್ಯಾಯವು ಮುಗಿಯಿತು. ॥ ೨೦ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಪೃಥುಚರಿತೇ ವಿಂಶೋಽಧ್ಯಾಯಃ ॥ ೨೦ ॥**

# ಇಪ್ಪತ್ತೊಂದನೆಯ ಅಧ್ಯಾಯ

## ಪೃಥುಮಹಾರಾಜನು ತನ್ನ ಪ್ರಜೆಗಳಿಗೆ ಮಾಡಿದ ಉಪದೇಶ

*ಮೈತ್ರೇಯ ಉವಾಚ*

**ಮೌಕ್ತಿಕೈಃ ಕುಸುಮಸ್ರಗ್ಭಿರ್ದುಕೂಲೈಃ ಸ್ವರ್ಣತೋರಣೈಃ ।**
**ಮಹಾಸುರಭಿಭಿರ್ಧೂಪೈರ್ಮಂಡಿತಂ ತತ್ರ ತತ್ರ ವೈ ॥ ೧ ॥**

**ಚಂದನಾಗುರುತೋಯಾರ್ದ್ರರಥ್ಯಾಚತ್ವರಮಾರ್ಗವತ್ ।**
**ಪುಷ್ಪಾಕ್ಷತಫಲೈಸ್ತೋಕ್ಮೈರ್ಲಾಜೈರರ್ಚಿರ್ಭಿರರ್ಚಿತಮ್ ॥ ೨ ॥**

**ಸವೃಂದೈಃ ಕದಲೀಸ್ತಂಭೈಃ ಪೂಗಪೋತೈಃ ಪರಿಷ್ಕೃತಮ್ ।**
**ತರುಪಲ್ಲವಮಾಲಾಭಿಃ ಸರ್ವತಃ ಸಮಲಂಕೃತಮ್ ॥ ೩ ॥**

**ಪ್ರಜಾಸ್ತಂ ದೀಪಬಲಿಭಿಃ ಸಂಭೃತಾಶೇಷಮಂಗಲೈಃ ।**
**ಅಭೀಯುರ್ಮೃಷ್ಟಕನ್ಯಾಶ್ಚ ಮೃಷ್ಟಕುಂಡಲಮಂಡಿತಾಃ ॥ ೪ ॥**

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಆ ಪೃಥುಮಹಾರಾಜನ ರಾಜಧಾನಿಯು ಎಲ್ಲ ಕಡೆಗಳಲ್ಲಿಯೂ ಮುತ್ತಿನ ಸರಗಳಿಂದಲೂ, ಹೂಮಾಲೆಗಳಿಂದಲೂ, ರೇಷ್ಮೆಬಟ್ಟೆ ಗಳಿಂದಲೂ, ಚಿನ್ನದ ತೋರಣಗಳಿಂದಲೂ, ಸುವಾಸಿತ ಘಮ-ಘಮಿಸುತ್ತಿದ್ದ ಧೂಪಗಳಿಂದಲೂ ಅಲಂಕೃತವಾಗಿತ್ತು. ॥ ೧ ॥ ರಾಜ ಮಾರ್ಗಗಳಲ್ಲಿಯೂ, ಚೌಕಗಳಲ್ಲಿಯೂ, ಬೀದಿ-ಬೀದಿಗಳಲ್ಲಿಯೂ ಚಂದನ-ಅಗರುಮಿಶ್ರಿತ ನೀರನ್ನು ಸಿಂಪಡಿಸಿ ಹೂವು, ಅಕ್ಷತೆ, ಹಣ್ಣು, ಎಳೆಗರಿಕೆ, ಅರಳು, ದೀಪಗಳೇ ಮುಂತಾದ ಮಂಗಳ ದ್ರವ್ಯಗಳಿಂದ ಅವುಗಳನ್ನು ಸಿಂಗರಿಸಲಾಗಿತ್ತು. ॥ ೨ ॥ ಆ ರಾಜನಗರಿ ಯಲ್ಲಿ ಅಲ್ಲಲ್ಲಿ ಇರಿಸಿದ್ದ ಹಣ್ಣು-ಹೂವುಗಳ ಗೊಂಚಲುಗಳಿಂದ ಕೂಡಿದ ಬಾಳೆಯ ಕಂಬಗಳಿಂದಲೂ, ಅಡಿಕೆಯ ಮರಗಳಿಂದಲೂ ಅತಿ ಮನೋಹರವಾಗಿತ್ತು. ಎಲ್ಲೆಡೆಗಳಲ್ಲಿಯೂ ಮಾವಿನಮರದ ಚಿಗುರೆ ಲೆಗಳ ತೋರಣಗಳಿಂದ ವಿಭೂಷಿತವಾಗಿತ್ತು. ॥ ೩ ॥ ಚಕ್ರವರ್ತಿಯು ಆ ನಗರವನ್ನು ಪ್ರವೇಶಿಸಿದಾಗ ದೀಪಗಳನ್ನೂ, ಕಾಣಿಕೆಗಳನ್ನೂ ಅನೇಕ ಮಂಗಳ ದ್ರವ್ಯಗಳನ್ನೂ ತೆಗೆದುಕೊಂಡು ಪ್ರಜೆಗಳೂ ಮತ್ತು ಮನೋಹರವಾದ ಕುಂಡಲಗಳಿಂದ ಶೋಭಿಸುವ ಚೆಲುವೆ ಯರಾದ ಕನ್ಯೆಯರೂ ಆತನನ್ನು ಇದಿರ್ಗೊಂಡು ಸ್ವಾಗತಿಸಿದರು. ॥ ೪ ॥

ಶಂಖದುಂದುಭಿಘೋಷೇಣ ಬ್ರಹ್ಮಘೋಷೇಣ ಚರ್ತ್ವಿಜಾಮ್ ।
ವಿವೇಶ ಭವನಂ ವೀರಃ ಸ್ತೂಯಮಾನೋ ಗತಸ್ಮಯಃ ॥ ೫ ॥

ಪೂಜಿತಃ ಪೂಜಯಾಮಾಸ ತತ್ರ ತತ್ರ ಮಹಾಯಶಾಃ ।
ಪೌರಾಂಜಾನಪದಾಂಸ್ತಾಂಸ್ತಾನ್ ಪ್ರೀತಃ ಪ್ರಿಯವರಪ್ರದಃ ॥ ೬ ॥

ಸ ಏವಮಾದೀನ್ಯನವದ್ಯಚೇಷ್ಟಿತಃ
ಕರ್ಮಾಣಿ ಭೂಯಾಂಸಿ ಮಹಾನ್ಮಹತ್ತಮಃ ।
ಕುರ್ವನ್ ಶಶಾಸಾವನಿಮಂಡಲಂ ಯಶಃ
ಸ್ಫೀತಂ ನಿಧಾಯಾರುರುಹೇ ಪರಂ ಪದಮ್ ॥ ೭ ॥

*ಸೂತ ಉವಾಚ*

ತದಾದಿರಾಜಸ್ಯ ಯಶೋ ವಿಜೃಂಭಿತಂ
ಗುಣೈರಶೇಷೈರ್ಗುಣವತ್ಸಭಾಜಿತಮ್ ।
ಕ್ಷತ್ತಾ ಮಹಾಭಾಗವತಃ ಸದಸ್ಪತೇ
ಕೌಷಾರವಿಂ ಪ್ರಾಹ ಗೃಣಂತಮರ್ಚಯನ್ ॥ ೮ ॥

*ವಿದುರ ಉವಾಚ*

ಸೋಽಭಿಷಿಕ್ತಃ ಪೃಥುರ್ವಿಪ್ರೈ-
ರ್ಲಬ್ಧಾ ಶೇಷಸುರಾರ್ಹಣಃ ।
ಬಿಭ್ರತ್ಸ ವೈಷ್ಣವಂ ತೇಜೋ
ಬಾಹ್ವೋರ್ಯಾಭ್ಯಾಂ ದುದೋಹ ಗಾಮ್ ॥ ೯ ॥

ಕೋ ನ್ವಸ್ಯ ಕೀರ್ತಿಂ ನ ಶೃಣೋತ್ಯಭಿಜ್ಞೋ
ಯದ್ವಿಕ್ರಮೋಚ್ಛಿಷ್ಟಮಶೇಷಭೂಪಾಃ ।
ಲೋಕಾಃ ಸಪಾಲಾ ಉಪಜೀವಂತಿ ಕಾಮ-
ಮದ್ಯಾಪಿ ತನ್ಮೇ ವದ ಕರ್ಮ ಶುದ್ಧಮ್ ॥ ೧೦ ॥

*ಮೈತ್ರೇಯ ಉವಾಚ*

ಗಂಗಾಯಮುನಯೋರ್ನದ್ಯೋರಂತರಾಕ್ಷೇತ್ರಮಾವಸನ್ ।
ಆರಬ್ಧಾನೇವ ಬುಭುಜೇ ಭೋಗಾನ್ ಪುಣ್ಯಜಿಹಾಸಯಾ ॥ ೧೧ ॥

ಸರ್ವತ್ರಾಸ್ಖಲಿತಾದೇಶಃ ಸಪ್ತದ್ವೀಪೈಕದಂಡಧೃಕ್ ।
ಅನ್ಯತ್ರ ಬ್ರಾಹ್ಮಣಕುಲಾದನ್ಯತ್ರಾಚ್ಯುತಗೋತ್ರತಃ ॥ ೧೨ ॥

ಏಕದಾಽಽಸೀನ್ಮಹಾಸತ್ರದೀಕ್ಷಾ ತತ್ರ ದಿವೌಕಸಾಮ್ ।
ಸಮಾಜೋ ಬ್ರಹ್ಮರ್ಷೀಣಾಂ ಚ ರಾಜರ್ಷೀಣಾಂ ಚ ಸತ್ತಮ ॥ ೧೩ ॥

ಆಗ ಶಂಖ, ದುಂದುಭಿಗಳೇ ಮುಂತಾದ ವಾದ್ಯಗಳು ಮೊಳಗ ತೊಡಗಿದವು. ಋತ್ವಿಜರು ವೇದಮಂತ್ರಗಳನ್ನು ಪಠಿಸತೊಡಗಿದರು. ವಂದಿ-ಮಾಗಧರು ಸ್ತೋತ್ರಗಾನವನ್ನು ಪ್ರಾರಂಭಿಸಿದರು. ಇವೆಲ್ಲ ವನ್ನು ನೋಡುತ್ತಿದ್ದರೂ ಪೃಥುಮಹಾರಾಜನಿಗೆ ಸ್ವಲ್ಪವೂ ಅಹಂಕಾರ ಉಂಟಾಗಲಿಲ್ಲ. ॥ ೫ ॥ ಮಾರ್ಗದಲ್ಲಿ ಅಲ್ಲಲ್ಲಿ ಪುರವಾಸಿಗಳೂ, ದೇಶವಾಸಿಗಳೂ, ಆತನನ್ನು ಅಭಿನಂದಿಸಿದರು. ಮಹಾಯಶಸ್ವಿ ಯಾದ ಮಹಾರಾಜನೂ ಅವರಲ್ಲಿ ಪ್ರಸನ್ನತೆಯಿಂದ ಕೂಡಿ ಅವರಿಗೆ ಇಷ್ಟವಾದ ವರಗಳನ್ನಿತ್ತು, ಅವರನ್ನು ಸಂತೋಷಪಡಿಸುತ್ತಾ ತನ್ನ ಅರಮನೆಯನ್ನು ಪ್ರವೇಶಿಸಿದನು. ॥ ೬ ॥ ಆ ಪೃಥುಮಹಾರಾಜನು ಶ್ರೇಷ್ಠತಮನಾದ ಮಹಾಪುರುಷನಾಗಿ ಸರ್ವರಿಗೂ ಪೂಜನೀಯ ನಾಗಿದ್ದನು. ಇಂತಹ ಅನೇಕ ಉದಾರವಾದ ಕಾರ್ಯಗಳನ್ನು ಮಾಡುತ್ತಾ ಭೂಮಿಯನ್ನು ಆಳಿದನು. ತನ್ನ ವಿಸ್ತಾರವಾದ ಕೀರ್ತಿಯನ್ನು ಎಲ್ಲೆಡೆ ಹರಡಿದವನಾಗಿ ಕೊನೆಗೆ ಶ್ರೀಭಗವಂತನ ಪರಮಪದವನ್ನು ಪಡೆದುಕೊಂಡನು. ॥ ೭ ॥

**ಸೂತಪುರಾಣಿಕರು ಹೇಳುತ್ತಾರೆ** – ಮುನಿವರ ಶೌನಕರೇ! ಈ ರೀತಿಯಲ್ಲಿ ಪೂಜ್ಯರಾದ ಶ್ರೀಮೈತ್ರೇಯರ ಬಾಯಿಂದ ನಾನಾ ಗುಣಸಂಪನ್ನನಾಗಿ, ಗುಣಶಾಲಿಗಳಿಂದ ಹೊಗಳಲ್ಪಟ್ಟ ವಿಸ್ತಾರಗೊಂಡ ಆದಿರಾಜ ಪೃಥುವಿನ ಯಶಸ್ಸನ್ನು ಕೇಳಿ ಪರಮಭಾಗವತೋತ್ತಮ ನಾದ ವಿದುರನು ಅವರನ್ನು ಅಭಿನಂದಿಸುತ್ತಾ ಕೇಳಿದನು. ॥ ೮ ॥

**ವಿದುರನು ಕೇಳಿದನು** – ಬ್ರಾಹ್ಮಣೋತ್ತಮರೇ! ಬ್ರಾಹ್ಮಣರು ಪೃಥುಮಹಾರಾಜನಿಗೆ ಅಭಿಷೇಕಮಾಡಿದ್ದು, ಸಮಸ್ತದೇವತೆಗಳೂ ಆತನಿಗೆ ಕಾಣಿಕೆಗಳನ್ನು ಸಮರ್ಪಿಸಿದುದು, ತನ್ನ ಭುಜಗಳಲ್ಲಿ ವೈಷ್ಣ ವತೇಜಸ್ಸನ್ನು ಧರಿಸಿ, ಗೋರೂಪೀ ಪೃಥ್ವಿಯನ್ನು ಕರೆದುದು ಹೀಗೆ ಇದೆಲ್ಲವನ್ನು ನೀವು ನನಗೆ ತಿಳಿಸಿದಿರಿ. ॥ ೯ ॥ ಆತನು ಅನುಭವಿಸಿ ಮಿಕ್ಕಿರುವ ಈ ಪರಾಕ್ರಮದ ವಿಷಯಭೋಗಗಳಿಂದಲೇ ಇಂದಿಗೂ ಸಮಸ್ತರಾಜರೂ ಹಾಗೂ ಲೋಕಪಾಲಕರಿಂದೊಡ ಗೂಡಿದ ಸಮಸ್ತ ಲೋಕಗಳು ತಮ್ಮ ಇಷ್ಟಾನುಸಾರ ಜೀವನವನ್ನು ನಡೆಸುತ್ತಿದ್ದಾರೆ. ಆತನ ಪವಿತ್ರವಾದ ಕೀರ್ತಿಯನ್ನು ಕೇಳಲು ವಿವೇಕಿ ಗಳಾದವರು ಸದಾ ಬಯಸುತ್ತಾರೆ. ಆದ್ದರಿಂದ ತಾವು ಕೃಪೆಯಿಟ್ಟು ಆ ಮಹಾತ್ಮನ ಇನ್ನೂ ಪವಿತ್ರವಾದ ಚರಿತ್ರೆಗಳನ್ನು ನನಗೆ ಹೇಳಿರಿ ಎಂದು ಪ್ರಾರ್ಥಿಸಿದನು. ॥ ೧೦ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಪೃಥು ಮಹಾರಾಜನು ಗಂಗಾ-ಯಮುನೆಗಳ ಮಧ್ಯದಲ್ಲಿರುವ ಬ್ರಹ್ಮಾ ವರ್ತದೇಶದಲ್ಲಿ ವಾಸಿಸುತ್ತಾ, ತನ್ನ ಪುಣ್ಯಕರ್ಮಗಳನ್ನೂ ಕ್ಷಯಿಸು ವುದಕ್ಕಾಗಿ ಪ್ರಾರಬ್ಧವಶದಿಂದ ಬಂದ ಸುಖೋಪಭೋಗಗಳನ್ನು ಅನುಭವಿಸುತ್ತಿದ್ದನು. ॥ ೧೧ ॥ ಬ್ರಾಹ್ಮಣಕುಲಗಳನ್ನೂ ಮತ್ತು ಭಗ ವದ್ಭಕ್ತರನ್ನು ಬಿಟ್ಟು ಸಪ್ತದ್ವೀಪಗಳಲ್ಲಿರುವ ಉಳಿದ ಎಲ್ಲ ಜನರ ಮೇಲೂ ಅಖಂಡವೂ, ನಿಷ್ಕಂಟಕವೂ ಆದ ಅಧಿಕಾರವನ್ನು ನಡೆಸಿದನು. ॥ ೧೨ ॥ ಒಮ್ಮೆ ಅವನು ಒಂದು ಮಹಾಸತ್ರದ ದೀಕ್ಷೆ ಯನ್ನು ಕೈಗೊಂಡನು. ಆಗ ಅಲ್ಲಿ ದೇವತೆಗಳ, ಬ್ರಹ್ಮರ್ಷಿಗಳ, ರಾಜರ್ಷಿಗಳ ದೊಡ್ಡ ಸಭೆಯೇ ನೆರೆದಿತ್ತು. ॥ ೧೩ ॥

ತಸ್ಮಿನ್ನರ್ಹತ್ಸು ಸರ್ವೇಷು ಸ್ವರ್ಚಿತೇಷು ಯಥಾರ್ಹತಃ ।
ಉತ್ಥಿತಃ ಸದಸೋ ಮಧ್ಯೇ ತಾರಾಣಾಮುಡುರಾಡಿವ ॥ ೧೪ ॥

ಪ್ರಾಂಶುಃ ಪೀನಾಯತಭುಜೋ ಗೌರಃ ಕಂಜಾರುಣೇಕ್ಷಣಃ ।
ಸುನಾಸಃ ಸುಮುಖಃ ಸೌಮ್ಯಃ ಪೀನಾಂಸಃ ಸುದ್ವಿಜಸ್ಮಿತಃ ॥ ೧೫ ॥

ವ್ಯೂಢವಕ್ಷಾ ಬೃಹಚ್ಛ್ರೋಣಿರ್ವಲಿವಲ್ಗುದಲೋದರಃ ।
ಆವರ್ತನಾಭಿರೋಜಸ್ವೀ ಕಾಂಚನೋರುರುದಗ್ರಪಾತ್ ॥ ೧೬ ॥

ಸೂಕ್ಷ್ಮವಕ್ರಾಸಿತಸ್ನಿಗ್ಧಮೂರ್ಧಜಃ ಕಂಬುಕಂಧರಃ ।
ಮಹಾಧನೇ ದುಕೂಲಾಗ್ರ್ಯೇ ಪರಿಧಾಯೋಪವೀಯ ಚ ॥ ೧೭ ॥

ವ್ಯಂಜಿತಾಶೇಷಗಾತ್ರಶ್ರೀರ್ನಿಯಮೇ ನ್ಯಸ್ತಭೂಷಣಃ ।
ಕೃಷ್ಣಾಜಿನಧರಃ ಶ್ರೀಮಾನ್ ಕುಶಪಾಣಿಃ ಕೃತೋಚಿತಃ ॥ ೧೮ ॥

ಶಿಶಿರಸ್ನಿಗ್ಧತಾರಾಕ್ಷಃ ಸಮೈಕ್ಷತ ಸಮಂತತಃ ।
ಊಚಿವಾನಿದಮುರ್ವೀಶಃ ಸದಃ ಸಂಹರ್ಷಯನ್ನಿವ ॥ ೧೯ ॥

ಚಾರು ಚಿತ್ರಪದಂ ಶ್ಲಕ್ಷ್ಣಂ ಮೃಷ್ಟಂ ಗೂಢಮವಿಕ್ಲವಮ್ ।
ಸರ್ವೇಷಾಮುಪಕಾರಾರ್ಥಂ ತದಾ ಅನುವದನ್ನಿವ ॥ ೨೦ ॥

*ರಾಜೋವಾಚ*

ಸಭ್ಯಾಃ ಶೃಣುತ ಭದ್ರಂ ವಃ ಸಾಧವೋ ಯ ಇಹಾಗತಾಃ ।
ಸತ್ಸು ಜಿಜ್ಞಾಸುಭಿರ್ಧರ್ಮಮಾವೇದ್ಯಂ ಸ್ವಮನೀಷಿತಮ್ ॥ ೨೧ ॥

ಅಹಂ ದಂಡಧರೋ ರಾಜಾ ಪ್ರಜಾನಾಮಿಹ ಯೋಜಿತಃ ।
ರಕ್ಷಿತಾ ವೃತ್ತಿದಃ ಸ್ವೇಷು ಸೇತುಷು ಸ್ಥಾಪಿತಾ ಪೃಥಕ್ ॥ ೨೨ ॥

ಪೃಥುಮಹಾರಾಜನು ಆ ಸಭೆಯಲ್ಲಿ ಸೇರಿದ್ದ ಪೂಜನೀಯರಾದ ಅತಿಥಿಗಳನ್ನು ಯಥೋಚಿತವಾಗಿ ಸತ್ಕಾರಮಾಡಿ ಅಲ್ಲಿ ನಕ್ಷತ್ರಮಂಡಲದ ನಡುವೆ ಶೋಭಿಸುವ ಚಂದ್ರನಂತೆ ನಿಂತಿದ್ದನು. ॥ ೧೪ ॥ ಹಾಗೆ ನಿಂತುಕೊಂಡಿದ್ದ ಅವನ ಸೌಂದರ್ಯ, ಗಾಂಭೀರ್ಯಗಳನ್ನು ಹೇಗೆ ತಾನೇ ವರ್ಣಿಸೋಣ ! ಉನ್ನತವಾದ ದೇಹ, ತುಂಬಿಕೊಂಡ ವಿಶಾಲವಾದ ಭುಜಗಳು, ಗೌರವರ್ಣದ ಅಂಗಕಾಂತಿ, ಕೆಂದಾವರೆಯಂತೆ ಕಂಗೊಳಿಸುತ್ತಿದ್ದ ಕಣ್ಣುಗಳು, ಸುಂದರವಾದ ಮೂಗು-ಮುಖ, ಸೌಮ್ಯವಾದ ಆಕೃತಿ, ಎತ್ತರವಾದ ಹೆಗಲು, ಕಿರುನಗೆಯಿಂದ ಕೂಡಿದ ಸುಂದರ ದಂತಪಂಕ್ತಿ, ವಿಶಾಲವಾದ ಎದೆ, ಸ್ಥೂಲವಾದ ನಡುವಿನ ಹಿಂಭಾಗ, ಅರಳಿಯ ಎಲೆಯಂತೆ ರಮಣೀಯವಾದ ತ್ರಿವಳಿರೇಖೆಗಳಿಂದ ಒಪ್ಪುತ್ತಿದ್ದ ಹೊಟ್ಟೆ, ಸುಳಿಯಂತೆ ಆಳವಾಗಿದ್ದ ಹೊಕ್ಕುಳು, ತೇಜಸ್ವಿಯಾದ ದೇಹ, ಚಿನ್ನದಂತೆ ಹೊಳೆಯುತ್ತಿದ್ದ ತೊಡೆಗಳು ಮತ್ತು ಎತ್ತರವಾಗಿ ಒಪ್ಪುತ್ತಿದ್ದ ಪಾದಗಳು, ಗುಂಗುರು-ಗುಂಗುರಾಗಿ ನುಣುಪಾಗಿದ್ದ ತಲೆಗೂದಲು, ಶಂಖದಂತೆ ಸುಳಿಗೊಂಡಿದ್ದ ಕಂಠ ಇವುಗಳಿಂದ ಅತ್ಯಂತ ಕಮನೀಯವಾಗಿದ್ದ ದೇಹದಿಂದ ಆ ಮಹಾಪುರುಷನು ಎಣೆಯಿಲ್ಲದ ಸೊಬಗಿನಿಂದ ವಿರಾಜಿಸುತ್ತಿದ್ದನು. ಆತನು ಬಹುಮೂಲ್ಯ ಧೋತ್ರವನ್ನುಟ್ಟು, ಅಂತಹುದೇ ಉತ್ತರೀಯವನ್ನು ಹೊದ್ದುಕೊಂಡಿದ್ದನು. ॥ ೧೫-೧೭ ॥ ದೀಕ್ಷೆಯ ನಿಯಮಕ್ಕನುಸಾರವಾಗಿ ಎಲ್ಲ ಆಭರಣಗಳನ್ನು ಕಳಚಿಟ್ಟಿದ್ದರಿಂದ ಆತನ ಶರೀರದ ಅಂಗ-ಪ್ರತ್ಯಂಗಗಳು ಸ್ವಾಭಾವಿಕ ಕಾಂತಿ-ಸೌಂದರ್ಯಗಳಿಂದ ಒಪ್ಪುತ್ತಿದ್ದವು. ದೇಹದಲ್ಲಿ ಕೃಷ್ಣಾಜಿನವನ್ನು ಧರಿಸಿ, ಕೈಯಲ್ಲಿ ದರ್ಭೆಗಳನ್ನು ಹಿಡಿದಿದ್ದನು. ಇವುಗಳಿಂದ ಆತನ ದೇಹದ ಕಾಂತಿಯು ಮತ್ತೂ ಮಿಗಿಲೇರಿತ್ತು. ಅವನು ತನ್ನ ಎಲ್ಲ ನಿತ್ಯಕರ್ಮಗಳನ್ನು ಯಥಾವಿಧಿಯಾಗಿ ಮುಗಿಸಿ ಅಲ್ಲಿ ನಿಂತುಕೊಂಡಿದ್ದನು. ॥ ೧೮ ॥ ಆ ಪೃಥು ಮಹಾರಾಜನು ಇಡೀಸಭೆಯನ್ನು ಆನಂದದಿಂದ ನೆನೆಸುತ್ತಾ ಸ್ನೇಹಪೂರ್ಣವಾದ ಕಣ್ಣುಗಳಿಂದ ನಾಲ್ಕು ಕಡೆಗಳಲ್ಲಿಯೂ ದೃಷ್ಟಿಯನ್ನು ಹರಿಸಿ ಸಭೆಯನ್ನುದ್ದೇಶಿಸಿ ಒಂದು ಭಾಷಣವನ್ನು ಮಾಡಿದನು. ॥ ೧೯ ॥ ಆ ಭಾಷಣವು ಅತ್ಯಂತ ಸುಂದರವಾಗಿ, ವಿಚಿತ್ರಪದಗಳಿಂದ ಕೂಡಿದ್ದು, ಸ್ಪಷ್ಟವೂ, ಮಧುರವೂ, ಗಂಭೀರವೂ, ಶಂಕಾರಹಿತವೂ ಆದ ಶಬ್ದಗಳಿಂದ ಶೋಭಾಯಮಾನವಾಗಿತ್ತು. ಎಲ್ಲರಿಗೂ ಉಪಕಾರ ಮಾಡುವುದಕ್ಕಾಗಿ ತನ್ನ ಅನುಭವವನ್ನೇ ವ್ಯಕ್ತ ಮಾಡುತ್ತಿರುವನೋ ಎಂಬಂತಿತ್ತು. ॥ ೨೦ ॥

ರಾಜಾಪೃಥುವು ಹೇಳಿದನು – ಎಲೈ ಸಜ್ಜನರೇ ! ನಿಮಗೆ ಮಂಗಳವಾಗಲಿ. ಇಲ್ಲಿಗೆ ಆಗಮಿಸಿದ ಮಹಾನುಭಾವರೆಲ್ಲರೂ ನನ್ನ ಪ್ರಾರ್ಥನೆಯನ್ನು ಕೇಳಿರಿ. ಜಿಜ್ಞಾಸುವಾದ ಪುರುಷನು ಸಂತ-ಸಜ್ಜನರ ಸಮಾಜದಲ್ಲಿ ತನ್ನ ನಿಶ್ಚಯವನ್ನು ನಿವೇದಿಸಿಕೊಳ್ಳಬೇಕು. ॥ ೨೧ ॥ ಈ ಲೋಕದಲ್ಲಿ ನನ್ನನ್ನು ಪ್ರಜೆಗಳ ಆಳ್ವಿಕೆ, ಅವರ ರಕ್ಷಣೆ, ಅವರಿಗೆ ವೃತ್ತಿ-ಉದ್ಯೋಗಗಳನ್ನು ಒದಗಿಸಿಕೊಡುವುದು, ಅವರನ್ನು ಬೇರೆ-ಬೇರೆ ಮರ್ಯಾದೆಗಳಲ್ಲಿ ಸ್ಥಾಪಿಸುವುದಕ್ಕಾಗಿ ರಾಜನನ್ನಾಗಿ ಮಾಡಿದ್ದಾರೆ. ॥ ೨೨ ॥

ತಸ್ಯ ಮೇ ತದನುಷ್ಠಾನಾದ್ಯಾನಾಹುರ್ಬ್ರಹ್ಮವಾದಿನಃ ।
ಲೋಕಾಃ ಸ್ಯುಃ ಕಾಮಸಂದೋಹಾ ಯಸ್ಯ ತುಷ್ಯತಿ ದಿಷ್ಟದೃಕ್ ॥ ೨೩ ॥

ಯ ಉದ್ಧರೇತ್ಕರಂ ರಾಜಾ ಪ್ರಜಾ ಧರ್ಮೇಷ್ವಶಿಕ್ಷಯನ್ ।
ಪ್ರಜಾನಾಂ ಶಮಲಂ ಭುಂಕ್ತೇ ಭಗಂ ಚ ಸ್ವಂ ಜಹಾತಿ ಸಃ ॥ ೨೪ ॥

ತತ್ಪ್ರಜಾ ಭರ್ತೃಪಿಂಡಾರ್ಥಂ ಸ್ವಾರ್ಥಮೇವಾನಸೂಯವಃ ।
ಕುರುತಾಧೋಕ್ಷಜಧಿಯಸ್ತರ್ಹಿ ಮೇಽನುಗ್ರಹಃ ಕೃತಃ ॥ ೨೫ ॥

ಯೂಯಂ ತದನುಮೋದಧ್ವಂ ಪಿತೃದೇವರ್ಷಯೋಽಮಲಾಃ ।
ಕರ್ತುಃ ಶಾಸ್ತುರನುಜ್ಞಾತುಸ್ತುಲ್ಯಂ ಯತ್ಪ್ರೇತ್ಯ ತತ್ಫಲಮ್ ॥ ೨೬ ॥

ಅಸ್ತಿ ಯಜ್ಞಪತಿರ್ನಾಮ ಕೇಷಾಂಚಿದರ್ಹಸತ್ತಮಾಃ ।
ಇಹಾಮುತ್ರ ಚ ಲಕ್ಷ್ಯಂತೇ ಜ್ಯೋತ್ಸ್ನಾವತ್ಯಃ ಕ್ವಚಿದ್ಭುವಃ ॥ ೨೭ ॥

ಮನೋರುತ್ತಾನಪಾದಸ್ಯ ಧ್ರುವಸ್ಯಾಪಿ ಮಹೀಪತೇಃ ।
ಪ್ರಿಯವ್ರತಸ್ಯ ರಾಜರ್ಷೇರಂಗಸ್ಯಾಸ್ಮತ್ಪಿತುಃ ಪಿತುಃ ॥ ೨೮ ॥

ಈದೃಶಾನಾಮಥಾನ್ಯೇಷಾಮಜಸ್ಯ ಚ ಭವಸ್ಯ ಚ ।
ಪ್ರಹ್ರಾದಸ್ಯ ಬಲೇಶ್ಚಾಪಿ ಕೃತ್ಯಮಸ್ತಿ ಗದಾಭೃತಾ ॥ ೨೯ ॥

ದೌಹಿತ್ರಾದೀನೃತೇ ಮೃತ್ಯೋಃ
ಶೋಚ್ಯಾಂಧರ್ಮವಿಮೋಹಿತಾನ್ ।
ವರ್ಗಸ್ವರ್ಗಾಪವರ್ಗಾಣಾಂ
ಪ್ರಾಯೇಣೈಕಾತ್ಮ್ಯಹೇತುನಾ ॥ ೩೦ ॥

ಯತ್ಪಾದಸೇವಾಭಿರುಚಿಸ್ತಪಸ್ವಿನಾ-
ಮಶೇಷಜನ್ಮೋಪಚಿತಂ ಮಲಂ ಧಿಯಃ ।
ಸದ್ಯಃ ಕ್ಷಿಣೋತ್ಯನ್ವಹಮೇಧತೀ ಸತೀ
ಯಥಾ ಪದಾಂಗುಷ್ಠವಿನಿಃಸೃತಾ ಸರಿತ್ ॥ ೩೧ ॥

ವಿನಿರ್ಧುತಾಶೇಷಮನೋಮಲಃ ಪುಮಾನ್
ಅಸಂಗವಿಜ್ಞಾನವಿಶೇಷವೀರ್ಯವಾನ್ ।
ಯದಂಘ್ರಿಮೂಲೇ ಕೃತಕೇತನಃ ಪುನಃ
ನ ಸಂಸೃತಿಂ ಕ್ಲೇಶವಹಾಂ ಪ್ರಪದ್ಯತೇ ॥ ೩೨ ॥

ಆದ್ದರಿಂದ ಇವುಗಳನ್ನು ಪಾಲಿಸುವುದರಿಂದ ನನಗೆ ವೇದಜ್ಞರಾದ ಮುನಿಗಳ ಸಿದ್ಧಾಂತದಂತೆ ಸರ್ವಕರ್ಮಗಳಿಗೂ ಸಾಕ್ಷಿಯಾಗಿರುವ ಶ್ರೀಹರಿಯು ಪ್ರಸನ್ನನಾದಾಗ ದೊರೆಯುವ ಲೋಕಗಳು ದೊರೆಯುತ್ತವೆ. ॥ ೨೩ ॥ ಪ್ರಜೆಗಳಿಗೆ ಧರ್ಮ ಮಾರ್ಗದ ಶಿಕ್ಷಣನೀಡದೆ ಕೇವಲ ಅವರಿಂದ ತೆರಿಗೆಯನ್ನು ಸಂಗ್ರಹಿಸುವುದರಲ್ಲೇ ತತ್ಪರನಾದ ರಾಜನು ಪ್ರಜೆಗಳ ಪಾಪಕ್ಕೆ ಭಾಗಿಯಾಗಬೇಕಾಗುತ್ತದೆ. ಅಲ್ಲದೆ ಐಶ್ವರ್ಯವನ್ನು ಕಳಕೊಳ್ಳಬೇಕಾಗುತ್ತದೆ. ॥ ೨೪ ॥ ಆದುದರಿಂದ ಪ್ರಿಯ ಪ್ರಜೆಗಳೇ ! ನೀವು ನಿಮ್ಮ ಈ ರಾಜನಿಗೆ ಪರಲೋಕದಲ್ಲಿ ಹಿತವನ್ನುಂಟುಮಾಡುವುದಕ್ಕಾಗಿ ಪರಸ್ಪರ ದೋಷದೃಷ್ಟಿಯನ್ನು ಬಿಟ್ಟು ಹೃದಯದಲ್ಲಿ ಶ್ರೀಭಗವಂತನನ್ನು ನೆನೆಯುತ್ತಾ ನಿಮ್ಮ-ನಿಮ್ಮ ಕರ್ತವ್ಯಗಳನ್ನು ಪಾಲಿಸುತ್ತಿರಬೇಕು. ಹೀಗೆ ಮಾಡಿದರೆ ನಿಮ್ಮ ಸ್ವಾರ್ಥವು ಸಿದ್ಧಿಸುವುದು ಮತ್ತು ನನ್ನ ಮೇಲೆಯೂ ದೊಡ್ಡ ಅನುಗ್ರಹ ಮಾಡಿದಂತಾದೀತು. ॥ ೨೫ ॥ ಪರಿಶುದ್ಧರಾದ ಪಿತೃದೇವತೆಗಳೇ ! ದೇವತೆಗಳೇ ! ಮಹರ್ಷಿಗಳೇ ! ನೀವೆಲ್ಲರೂ ನನ್ನ ಪ್ರಾರ್ಥನೆಯನ್ನು ಅನುಮೋದಿಸಿರಿ. ಏಕೆಂದರೆ, ಕರ್ಮಗಳ ಫಲವು ಮರಣಾನಂತರ ಅವುಗಳ ಕರ್ತೃವಿಗೆ, ಅವುಗಳನ್ನು ಉಪದೇಶಿಸಿದವನಿಗೆ ಮತ್ತು ಅನುಮೋದಿಸಿದವನಿಗೆ ಸಮಾನವಾಗಿಯೇ ದೊರೆಯುತ್ತದೆ. ॥ ೨೬ ॥ ಪೂಜ್ಯರಾದ ಸಜ್ಜನರೇ ! 'ಕರ್ಮಗಳ ಫಲವನ್ನು ಕೊಡುವವನು ಯಜ್ಞಪತಿಯಾದ ಭಗವಂತನೇ ಆಗಿದ್ದಾನೆ' ಎಂಬುದು ಮಹಾನುಭಾವರ ಮತವಾಗಿದೆ. ಏಕೆಂದರೆ, ಇಹ ಲೋಕ ಮತ್ತು ಪರಲೋಕವೆರಡರಲ್ಲಿಯೂ ಕೆಲ-ಕೆಲವು ಭಾರೀ ತೇಜೋಮಯ ಶರೀರಗಳು ಕಾಣಸಿಗುತ್ತವೆ. ॥ ೨೭ ॥ ಮನು, ಉತ್ತಾನಪಾದ, ಧ್ರುವ, ರಾಜರ್ಷಿಯಾದ ಪ್ರಿಯವ್ರತ, ನಮ್ಮ ಅಜ್ಜ ಅಂಗಮಹಾರಾಜರು ಹಾಗೂ ಬ್ರಹ್ಮ, ರುದ್ರ, ಪ್ರಹ್ಲಾದ, ಬಲಿ ಹಾಗೂ ಇದೇ ವರ್ಗಕ್ಕೆ ಸೇರಿದ ಇತರ ಮಹಾನುಭಾವರ ಮತದಲ್ಲಾದರೋ ಧರ್ಮ-ಅರ್ಥ-ಕಾಮ-ಮೋಕ್ಷರೂಪವಾದ ಚತುರ್ವರ್ಗ ಮತ್ತು ಸ್ವರ್ಗ-ಮೋಕ್ಷಗಳಿಗೂ ನಿಯಾಮಕನಾದ, ಕರ್ಮಫಲಪ್ರದನಾದ ಭಗವಾನ್ ಗದಾಧರನ ಆವಶ್ಯಕತೆ ಇದ್ದೇ ಇದೆ. ಈ ವಿಷಯದಲ್ಲಾದರೋ ಕೇವಲ ಮೃತ್ಯುವಿನ ದೌಹಿತ್ರನಾದ ವೇನನೇ ಮುಂತಾದ ಕೆಲವುಮಂದಿ ಶೋಚನೀಯರಾದ ಧರ್ಮವಿಮೂಢ ಜನರಲ್ಲೇ ಮತಭೇದವಿದೆ. ಆದ್ದರಿಂದ ಅದರ ವಿಶೇಷ ಮಹತ್ವವೇನೂ ಇಲ್ಲ. ॥ ೨೮-೩೦ ॥

'ಶ್ರೀಭಗವಂತನ ಚರಣಕಮಲಗಳನ್ನು ಸೇವಿಸಬೇಕು' ಎಂಬ ಅಭಿಲಾಷೆಯೂ - ಆತನ ಪಾದನಖದಿಂದ ಉದ್ಭವಿಸಿದ ಗಂಗೆಯಂತೆ ಸಂಸಾರತಾಪಗಳಿಂದ ಸಂತಪ್ತರಾದ ಜೀವರ ಜನ್ಮ-ಜನ್ಮಾಂತರಗಳ ಕೊಳೆಗಳನ್ನು ಒಡನೆಯೇ ತೊಳೆದು ಹಾಕುವುದು. ಆತನ ಚರಣತಲವನ್ನು ಆಶ್ರಯಿಸಿದ ಮನುಷ್ಯನು ಎಲ್ಲ ಮನೋದೋಷಗಳನ್ನು ತೊಳೆದುಕೊಳ್ಳುವನು. ವೈರಾಗ್ಯವನ್ನೂ, ತತ್ತ್ವಸಾಕ್ಷಾತ್ಕಾರ ಬಲವನ್ನೂ ಪಡೆದುಕೊಳ್ಳುವನು. ಈ ದುಃಖಮಯವಾದ ಸಂಸಾರಚಕ್ರದಲ್ಲಿ ಮತ್ತೆ ಬೀಳುವುದಿಲ್ಲ. ಆತನ ಅಡಿದಾವರೆ ಎಲ್ಲ ಪುರುಷಾರ್ಥಗಳನ್ನೂ ಈಡೇರಿಸುವುವು. ಇಂತಹ ಪ್ರಭುವನ್ನು

ತಮೇವ ಯೂಯಂ ಭಜತಾತ್ಮವೃತ್ತಿಭಿ-
ರ್ಮನೋವಚಃಕಾಯಗುಣೈಃ ಸ್ವಕರ್ಮಭಿಃ ।
ಅಮಾಯಿನಃ ಕಾಮದುಘಾಂಘ್ರಿಪಂಕಜಂ
ಯಥಾಧಿಕಾರಾವಸಿತಾರ್ಥಸಿದ್ಧಯಃ ॥ ೩೩ ॥

ಅಸಾವಿಹಾನೇಕಗುಣೋಽಗುಣೋಽಧ್ವರಃ
ಪೃಥಗ್ವಿಧದ್ರವ್ಯಗುಣಕ್ರಿಯೋಕ್ತಿಭಿಃ ।
ಸಂಪದ್ಯತೇಽರ್ಥಾಶಯಲಿಂಗನಾಮಭಿ-
ರ್ವಿಶುದ್ಧವಿಜ್ಞಾನಘನಃ ಸ್ವರೂಪತಃ ॥ ೩೪ ॥

ಪ್ರಧಾನಕಾಲಾಶಯಧರ್ಮಸಂಗ್ರಹೇ
ಶರೀರ ಏಷ ಪ್ರತಿಪದ್ಯ ಚೇತನಾಮ್ ।
ಕ್ರಿಯಾಫಲತ್ವೇನ ವಿಭುರ್ವಿಭಾವ್ಯತೇ
ಯಥಾನಲೋ ದಾರುಷು ತದ್ಗುಣಾತ್ಮಕಃ ॥ ೩೫ ॥

ಅಹೋ ಮಮಾಮೀ ವಿತರಂತ್ಯನುಗ್ರಹಂ
ಹರಿಂ ಗುರುಂ ಯಜ್ಞಭುಜಾಮಧೀಶ್ವರಮ್ ।
ಸ್ವಧರ್ಮಯೋಗೇನ ಯಜಂತಿ ಮಾಮಕಾ
ನಿರಂತರಂ ಕ್ಷೋಣಿತಲೇ ದೃಢವ್ರತಾಃ ॥ ೩೬ ॥

ಮಾ ಜಾತು ತೇಜಃ ಪ್ರಭವೇನ್ಮಹರ್ದ್ಧಿಭಿಃ
ತಿತಿಕ್ಷಯಾ ತಪಸಾ ವಿದ್ಯಯಾ ಚ ।
ದೇದೀಪ್ಯಮಾನೇಽಜಿತದೇವತಾನಾಂ
ಕುಲೇ ಸ್ವಯಂ ರಾಜಕುಲಾದ್ದ್ವಿಜಾನಾಮ್ ॥ ೩೭ ॥

ಬ್ರಹ್ಮಣ್ಯದೇವಃ ಪುರುಷಃ ಪುರಾತನೋ
ನಿತ್ಯಂ ಹರಿರ್ಯಚ್ಚರಣಾಭಿವಂದನಾತ್ ।
ಅವಾಪ ಲಕ್ಷ್ಮೀಮನಪಾಯಿನೀಂ ಯಶೋ
ಜಗತ್ಪವಿತ್ರಂ ಚ ಮಹತ್ತಮಾಗ್ರಣೀಃ ॥ ೩೮ ॥

ಯತ್ಸೇವಯಾಶೇಷಗುಹಾಶಯಃ ಸ್ವರಾಡ್
ವಿಪ್ರಪ್ರಿಯಸ್ತುಷ್ಯತಿ ಕಾಮಮೀಶ್ವರಃ ।
ತದೇವ ತದ್ಧರ್ಮಪರೈರ್ವಿನೀತೈಃ
ಸರ್ವಾತ್ಮನಾ ಬ್ರಹ್ಮಕುಲಂ ನಿಷೇವ್ಯತಾಮ್ ॥ ೩೯ ॥

ನೀವು ನಿಮ್ಮ ಜೀವನವೃತ್ತಿಗೆ ಉಪಯೋಗವಾಗುವ ವರ್ಣಾಶ್ರಮೋಚಿತವಾದ ಅಧ್ಯಯನ, ಅಧ್ಯಾಪನಗಳೇ ಮುಂತಾದ ಕರ್ಮಗಳಿಂದಲೂ, ಧ್ಯಾನ-ಸ್ತೋತ್ರ-ಪೂಜೆ ಮುಂತಾದ ಮನ, ವಚನ, ದೇಹಗಳ ಕರ್ಮಗಳಿಂದಲೂ ಆರಾಧಿಸಿರಿ. ಮನಸ್ಸಿನಲ್ಲಿ ಯಾವ ಕಪಟವನ್ನೂ ಇರಿಸಿಕೊಳ್ಳಬೇಡಿರಿ. ನಮಗೆ ನಮ್ಮ-ನಮ್ಮ ಕರ್ಮಾನುಸಾರವಾಗಿ ಫಲವು ದೊರೆತೇ ದೊರೆಯುವುದು ಎಂದು ನಿಶ್ಚಯಿಸಿಕೊಳ್ಳಿ. ॥ ೩೧-೩೩ ॥

ಶ್ರೀಭಗವಂತನು ಸ್ವರೂಪತಃ ವಿಶುದ್ಧ ವಿಜ್ಞಾನಘನ ಮತ್ತು ಸಮಸ್ತ ವಿಶೇಷಣಗಳಿಂದ ರಹಿತನಾಗಿದ್ದಾನೆ. ಆದರೂ ಯಜ್ಞದಲ್ಲಿ ಬಳಸುವ ಅಕ್ಕಿಯೇ ಮುಂತಾದ ದ್ರವ್ಯಗಳು, ಶುಕ್ಲಾದಿ ಗುಣಗಳು, ಕುಟ್ಟುವುದು ಮುಂತಾದ ಕ್ರಿಯೆಗಳು, ಮಂತ್ರಗಳ ಮೂಲಕವೂ ಬಗೆ-ಬಗೆಯ ಅರ್ಥ, ಆಶಯ, ಸಂಕಲ್ಪ, ಪದಾರ್ಥಶಕ್ತಿಗಳು ಹಾಗೂ ಅಗ್ನಿಷ್ಟೋಮಾದಿ ಹೆಸರುಗಳಿಂದ ಸಂಪನ್ನವಾಗುವ ಅನೇಕ ವಿಶೇಷಣಗಳಿಂದ ಕೂಡಿದ ಯಜ್ಞಗಳ ರೂಪದಲ್ಲಿ ಪ್ರಕಾಶಗೊಳ್ಳುತ್ತಾನೆ. ॥ ೩೪ ॥ ಒಂದೇ ಅಗ್ನಿಯು ಬೇರೆ-ಬೇರೆ ಕಟ್ಟಿಗೆಗಳಲ್ಲಿ ಅವುಗಳ ಆಕಾರದಂತೆ ಕಂಡುಬರುತ್ತದೋ ಹಾಗೆಯೇ ಆ ಸರ್ವವ್ಯಾಪಕ ಪ್ರಭುವು ಪರಮಾನಂದೈಕ ಸ್ವರೂಪನಾಗಿದ್ದರೂ ಪ್ರಕೃತಿ, ಕಾಲ, ವಾಸನೆ ಮತ್ತು ಅದೃಷ್ಟಗಳಿಂದ ಉತ್ಪನ್ನವಾದ ಶರೀರದಲ್ಲಿ ವಿಷಯಾಕಾರವನ್ನು ತಳೆದಿರುವ ಬುದ್ಧಿಯಲ್ಲಿ ಸ್ಥಿತನಾಗಿದ್ದು ಆ ಯಜ್ಞ-ಯಾಗಾದಿ ಕ್ರಿಯಗಳ ಫಲರೂಪದಲ್ಲಿ ಅನೇಕ ಪ್ರಕಾರನಾಗಿರುವಂತೆ ಕಂಡುಬರುತ್ತಾನೆ. ॥ ೩೫ ॥ ಈ ಭೂಮಂಡಲದಲ್ಲಿರುವ ನನ್ನ ಪ್ರಜೆಗಳು – ಯಜ್ಞವನ್ನು ಭೋಗಿಸುವ ದೇವತೆಗಳಿಗೂ ಅಧೀಶ್ವರನಾದ ಸರ್ವಗುರುವಾದ ಶ್ರೀಹರಿಯನ್ನು ದೃಢವಾದ ವ್ರತನಿಷ್ಠೆಗಳಿಂದ ತಮ್ಮ-ತಮ್ಮ ಧರ್ಮಗಳ ಮೂಲಕ ನಿರಂತರವಾಗಿ ಸೇವಿಸಿದರೆ ಅವರು ನನ್ನ ಮೇಲೆ ದೊಡ್ಡ ಕೃಪೆಮಾಡಿದಂತಾಗುವುದು. ॥ ೩೬ ॥ ಸಹನಶೀಲತೆ, ತಪಸ್ಸು ಮತ್ತು ಜ್ಞಾನಗಳೆಂಬ ಐಶ್ವರ್ಯಗಳ ಕಾರಣದಿಂದ ವಿಷ್ಣುಭಕ್ತರೂ, ಬ್ರಾಹ್ಮಣರೂ ಇವರ ವಂಶಗಳು ಸ್ವಾಭಾವಿಕವಾಗಿಯೇ ಉಜ್ವಲವಾಗಿರುತ್ತವೆ. ಅವರ ಮೇಲೆ ರಾಜಕುಲಗಳು ತಮ್ಮ ತೇಜಸ್ಸು, ಧನ-ಸಂಪತ್ತುಗಳೇ ಮುಂತಾದ ಸಮೃದ್ಧಿಯ ಪ್ರಭಾವವನ್ನು ಬೀರಬಾರದು. ॥ ೩೭ ॥ ಬ್ರಹ್ಮದೇವರೇ ಮುಂತಾದ ಸಮಸ್ತ ದೇವತೆಗಳಿಗೆ ಅಗ್ರಗಣ್ಯನೂ, ಬ್ರಾಹ್ಮಣಭಕ್ತನೂ ಆದ ಪುರಾಣಪುರುಷ ಶ್ರೀಹರಿಯೂ ಕೂಡ ನಿರಂತರ ಅವರ ಚರಣಗಳನ್ನು ನಮಸ್ಕರಿಸಿದ್ದರಿಂದಲೇ ಸ್ಥಿರವಾದ ಲಕ್ಷ್ಮಿಯನ್ನೂ ಹಾಗೂ ಜಗತ್ತನ್ನು ಪವಿತ್ರಗೊಳಿಸುವಂತಹ ಕೀರ್ತಿಯನ್ನು ಗಳಿಸಿದ್ದಾನೆ. ॥ ೩೮ ॥ ನೀವೆಲ್ಲರೂ ಭಗವಂತನ ಲೋಕಸಂಗ್ರಹ ರೂಪವಾದ ಧರ್ಮವನ್ನು ಪಾಲಿಸುವವರಾಗಿದ್ದೀರಿ. ಸರ್ವಾಂತರ್ಯಾಮಿ ಸ್ವಯಂಪ್ರಕಾಶ, ಬ್ರಾಹ್ಮಣಪ್ರಿಯ ಶ್ರೀಹರಿಯು ಬ್ರಾಹ್ಮಣವಂಶವನ್ನು ಸೇವಿಸುವುದರಿಂದಲೇ ಪರಮ ಸಂತುಷ್ಟನಾಗುತ್ತಾನೆ. ಆದ್ದರಿಂದ ನೀವೆಲ್ಲರೂ ಎಲ್ಲ ವಿಧದಿಂದ ವಿನಯಪೂರ್ವಕ ಬ್ರಾಹ್ಮಣಕುಲದ ಸೇವೆ ಮಾಡಬೇಕು. ॥ ೩೯ ॥ ಅವರನ್ನು ನಿತ್ಯ ಸೇವೆ ಮಾಡುವುದರಿಂದ ಶೀಘ್ರವಾಗಿಯೇ ಚಿತ್ತಶುದ್ಧವಾಗಿ ಮನುಷ್ಯನು ಸ್ವಯಂ (ಜ್ಞಾನ ಮತ್ತು ಅಭ್ಯಾಸವಿಲ್ಲ

ಪುಮಾಲ್ಲಭೇತಾನತಿವೇಲಮಾತ್ಮನಃ
ಪ್ರಸೀದತೋऽತ್ಯಂತಶಮಂ ಸ್ವತಃ ಸ್ವಯಮ್ ।
ಯನ್ನಿತ್ಯಸಂಬಂಧನಿಷೇವಯಾ ತತಃ
ಪರಂ ಕಿಮತ್ರಾಸ್ತಿ ಮುಖಂ ಹವಿರ್ಭುಜಾಮ್ ॥ ೪೦ ॥

ಅಶ್ನಾತ್ಯನಂತಃ ಖಲು ತತ್ತ್ವಕೋವಿದೈಃ
ಶ್ರದ್ಧಾಹುತಂ ಯನ್ಮುಖ ಇಜ್ಯನಾಮಭಿಃ ।
ನ ವೈ ತಥಾ ಚೇತನಯಾ ಬಹಿಷ್ಕೃತೇ
ಹುತಾಶನೇ ಪಾರಮಹಂಸ್ಯಪರ್ಯಗುಃ ॥ ೪೧ ॥

ಯದ್‌ಬ್ರಹ್ಮ ನಿತ್ಯಂ ವಿರಜಂ ಸನಾತನಂ
ಶ್ರದ್ಧಾತಪೋಮಂಗಲಮೌನಸಂಯಮೈಃ ।
ಸಮಾಧಿನಾ ಬಿಭ್ರತಿ ಹಾರ್ಥದೃಷ್ಟಯೇ
ಯತ್ರೇದಮಾದರ್ಶ ಇವಾವಭಾಸತೇ ॥ ೪೨ ॥

ತೇಷಾಮಹಂ ಪಾದಸರೋಜರೇಣುಂ
ಆರ್ಯಾ ವಹೇಯಾಧಿಕಿರೀಟಮಾऽऽಯುಃ ।
ಯಂ ನಿತ್ಯದಾ ಬಿಭ್ರತ ಆಶು ಪಾಪಂ
ನಶ್ಯತ್ಯಮುಂ ಸರ್ವಗುಣಾ ಭಜಂತಿ ॥ ೪೩ ॥

ಗುಣಾಯನಂ ಶೀಲಧನಂ ಕೃತಜ್ಞಂ
ವೃದ್ಧಾಶ್ರಯಂ ಸಂವೃಣತೇऽನು ಸಂಪದಃ ।
ಪ್ರಸೀದತಾಂ ಬ್ರಹ್ಮಕುಲಂ ಗವಾಂ ಚ
ಜನಾರ್ದನಃ ಸಾನುಚರಶ್ಚ ಮಹ್ಯಮ್ ॥ ೪೪ ॥

*ಮೈತ್ರೇಯ ಉವಾಚ*

ಇತಿ ಬ್ರುವಾಣಂ ನೃಪತಿಂ ಪಿತೃದೇವದ್ವಿಜಾತಯಃ ।
ತುಷ್ಟುವುರ್ಹೃಷ್ಟಮನಸಃ ಸಾಧುವಾದೇನ ಸಾಧವಃ ॥ ೪೫ ॥

ಪುತ್ರೇಣ ಜಯತೇ ಲೋಕಾನಿತಿ ಸತ್ಯವತೀ ಶ್ರುತಿಃ ।
ಬ್ರಹ್ಮದಂಡಹತಃ ಪಾಪೋ ಯದ್ವೇನೋऽತ್ಯತರತ್ತಮಃ ॥ ೪೬ ॥

ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ ।
ವಿವಿಕ್ಷುರತ್ಯಗಾತ್ಸೂನೋಃ ಪ್ರಹ್ಲಾದಸ್ಯಾನುಭಾವತಃ ॥ ೪೭ ॥

ದೆಯೇ) ಪರಮ ಶಾಂತಿರೂಪವಾದ ಮೋಕ್ಷವನ್ನು ಪಡೆದು ಕೊಳ್ಳುವನು. ಹವಿಸ್ಸನ್ನು ಸ್ವೀಕರಿಸುವ ದೇವತೆಗಳಿಗೆ ಮುಖ್ಯವಾಗುವ ಶಕ್ತಿಯು ಇಂತಹ ಮಹಾತ್ಮರಾದ ಬ್ರಾಹ್ಮಣರಿಗಲ್ಲದೆ ಬೇರಾರಿಗುಂಟು ? ॥ ೪೦ ॥ ಇಂತಹ ಜ್ಞಾನಿಗಳು ಅಗ್ನಿಗೆ ಮಾತ್ರವಲ್ಲದೆ ಭಗವಾನ್ ಶ್ರೀಹರಿಗೂ ಮುಖವಾಗಿದ್ದಾರೆ. ಏಕೆಂದರೆ, ಪರಮಹಂಸರಿಂದ ಹೊಂದಲ್ಪಡುವವನೂ, ಜ್ಞಾನಪರವಾದ ಉಪನಿಷತ್ತಿನ ವಾಕ್ಯಗಳಿಂದ ಪ್ರತಿಪಾದಿಸಲ್ಪಡುವವನೂ ಆದ ಭಗವಾನ್ ಶ್ರೀಅನಂತನು ಇಂದ್ರಾದಿಯಜ್ಞದ ದೇವತೆಗಳ ಹೆಸರನ್ನು ಹೇಳುತ್ತಾ ತತ್ತ್ವಜ್ಞಾನಿಗಳು ಬ್ರಾಹ್ಮಣರ ಮುಖದಲ್ಲಿ ಶ್ರದ್ಧೆಯಿಂದ ಹೋಮಮಾಡುವ ಪದಾರ್ಥಗಳನ್ನು ಅತ್ಯಂತ ಪ್ರೀತಿಯಿಂದ ಆಸ್ವಾದಿಸುತ್ತಾನೆ. ಅಗ್ನಿಯಲ್ಲಿ ಹೋಮಮಾಡುವ ದ್ರವ್ಯಗಳನ್ನೂ ಕೂಡ ಶ್ರೀಭಗವಂತನು ಅಷ್ಟು ಪ್ರೀತಿಯಿಂದ ಗ್ರಹಿಸುವುದಿಲ್ಲ. ॥ ೪೧ ॥ ಓ ಸಭ್ಯಮಹಾಶಯರೇ ! ಸ್ವಚ್ಛವಾದ ಕನ್ನಡಿಯಲ್ಲಿ ಪ್ರತಿಬಿಂಬವು ಶುದ್ಧವಾಗಿ ತೋರುವಂತೆ ಇಡೀ ವಿಶ್ವದ ಅರಿವನ್ನು ಚೆನ್ನಾಗಿ ಮಾಡಿಸಿಕೊಡುವಂತಹ ನಿತ್ಯವೂ, ಶುದ್ಧವೂ, ಸನಾತನವೂ ಆದ ವೇದವೆಂಬ ಬ್ರಹ್ಮವನ್ನು ಪರಮಾರ್ಥತತ್ತ್ವದ ಪ್ರಾಪ್ತಿಗಾಗಿ ಶ್ರದ್ಧೆ ತಪಸ್ಸು ಮಂಗಳಕರವಾದ ಆಚರಣೆ, ಮೌನ, ಸಂಯಮ ಸಮಾಧಿಗಳಿಂದ ಯಾರೂ ಆ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆಯೋ ಅಂತಹ ಬ್ರಾಹ್ಮಣರ ಚರಣ ಕಮಲಗಳ ಧೂಳಿಯನ್ನು ನಾನು ಆಯುಸ್ಸು ಇರುವ ತನಕ ನನ್ನ ಕಿರೀಟದಲ್ಲಿ ಧರಿಸುವೆನು. ಏಕೆಂದರೆ, ಅದನ್ನು ಸದಾ ತಲೆಯಲ್ಲಿ ಧರಿಸುತ್ತಿದ್ದರೆ ಮನುಷ್ಯನ ಸಮಸ್ತ ಪಾಪಗಳು ಆಗಲೇ ನಾಶಹೊಂದುವುವು ಮತ್ತು ಸಮಸ್ತ ಸದ್ಗುಣಗಳೂ ಆತನನ್ನು ಆಶ್ರಯಿಸುವುವು. ॥ ೪೨-೪೩ ॥ ಅಂತಹ ಗುಣಶಾಲಿಯೂ, ಶೀಲಸಂಪನ್ನನೂ, ಕೃತಜ್ಞನೂ, ಗುರು-ಹಿರಿಯರ ಸೇವೆಮಾಡುವವನೂ ಆದವನ ಬಳಿಗೆ ಸಮಸ್ತ ಸಂಪತ್ತುಗಳು ತಾವಾಗಿಯೇ ಬಂದು ಸೇರುವುವು. ಆದುದರಿಂದ ಅಂತಹ ಬ್ರಾಹ್ಮಣಕುಲಗಳೂ, ಗೋವಂಶವೂ ಮತ್ತು ಭಕ್ತರಿಂದೊಡಗೂಡಿದ ಶ್ರೀಭಗವಂತನೂ ನನ್ನಲ್ಲಿ ಸದಾ ಪ್ರಸನ್ನನಾಗಿರಲಿ ಎಂದು ಆಶಿಸುತ್ತೇನೆ. ॥ ೪೪ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಪೃಥುಮಹಾರಾಜನ ಈ ಭಾಷಣವನ್ನು ಕೇಳಿ ದೇವತೆಗಳೂ, ಪಿತೃಗಳೂ, ಬ್ರಾಹ್ಮಣರೇ ಮುಂತಾದ ಸಮಸ್ತ ಸಜ್ಜನರು ಅತ್ಯಂತ ಪ್ರಸನ್ನರಾಗಿ ಭಲೇ ! ಭಲೇ ! ಎಂದು ಆತನನ್ನು ತಮ್ಮ-ತಮ್ಮಲ್ಲೇ ಪ್ರಶಂಸೆಮಾಡತೊಡಗಿದರು. ॥ ೪೫ ॥ ಎಲೈ ಪುಣ್ಯಾತ್ಮನೇ ! ಪುತ್ರರ ಮೂಲಕ ತಂದೆಯು ಪುಣ್ಯಲೋಕವನ್ನು ಪಡೆಯುತ್ತಾನೆ ಎಂಬ ಶ್ರುತಿವಾಕ್ಯವು ಸಾರ್ಥಕವಾಯಿತು. ಏಕೆಂದರೆ ಪಾಪಿಯಾದ ವೇನನು ಬ್ರಾಹ್ಮಣರ ಶಾಪದಿಂದ ದಗ್ಧನಾಗಿದ್ದರೂ ಸತ್ಪುತ್ರನಾದ ಈ ಪೃಥುವಿನ ಪುಣ್ಯಬಲದಿಂದ ನರಕವನ್ನು ದಾಟಿಬಿಟ್ಟನು. ॥ ೪೬ ॥ ಹೀಗೆಯೇ ಹಿರಣ್ಯಕಶಿಪುವೂ ಭಗವನ್ನಿಂದೆಯಿಂದ ನರಕದಲ್ಲಿ ಬೀಳುವವನಿದ್ದರೂ ತನ್ನ ಸುಪುತ್ರನಾದ ಪ್ರಹ್ಲಾದನ ಮಹಿಮೆಯಿಂದ ಉದ್ಧಾರವಾಗಿ ಹೋದನು. ॥ ೪೭ ॥ ಎಲೈ ವೀರವರನಾದ ಪೃಥುಸಾರ್ವಭೌಮನೇ ! ನೀನು ಪೃಥಿವಿಗೆಲ್ಲ ತಂದೆಯಾಗಿರುವುದಲ್ಲದೆ ಸಮಸ್ತ ಲೋಕ

ವೀರವರ್ಯ ಪಿತಃ ಪೃಥ್ವ್ಯಾಃ ಸಮಾಃ ಸಂಜೀವ ಶಾಶ್ವತೀಃ ।
ಯಸ್ಯೇದೃಶ್ಯಚ್ಯುತೇ ಭಕ್ತಿಃ ಸರ್ವಲೋಕೈಕಭರ್ತರಿ ॥ ೪೮ ॥

ಅಹೋ ವಯಂ ಹ್ಯದ್ಯ ಪವಿತ್ರಕೀರ್ತೇ
ತ್ವಯೈವ ನಾಥೇನ ಮುಕುಂದನಾಥಾಃ ।
ಯ ಉತ್ತಮಶ್ಲೋಕತಮಸ್ಯ ವಿಷ್ಣೋ-
ರ್ಬ್ರಹ್ಮಣ್ಯದೇವಸ್ಯ ಕಥಾಂ ವ್ಯನಕ್ತಿ ॥ ೪೯ ॥

ನಾತ್ಯದ್ಭುತಮಿದಂ ನಾಥ ತವಾಜೀವ್ಯಾನುಶಾಸನಮ್ ।
ಪ್ರಜಾನುರಾಗೋ ಮಹತಾಂ ಪ್ರಕೃತಿಃ ಕರುಣಾತ್ಮನಾಮ್ ॥ ೫೦ ॥

ಅದ್ಯ ನಸ್ತಮಸಃ ಪಾರಸ್ತ್ವಯೋಪಾಸಾದಿತಃ ಪ್ರಭೋ ।
ಭ್ರಾಮ್ಯತಾಂ ನಷ್ಟದೃಷ್ಟೀನಾಂ ಕರ್ಮಭಿರ್ದೈವಸಂಜ್ಞಿತೈಃ ॥ ೫೧ ॥

ನಮೋ ವಿವೃದ್ಧಸತ್ತ್ವಾಯ ಪುರುಷಾಯ ಮಹೀಯಸೇ ।
ಯೋ ಬ್ರಹ್ಮ ಕ್ಷತ್ರಮಾವಿಶ್ಯ ಬಿಭರ್ತೀದಂ ಸ್ವತೇಜಸಾ ॥ ೫೨ ॥

ಗಳಿಗೂ ಏಕೈಕಸ್ವಾಮಿಯಾಗಿರುವ ಶ್ರೀಹರಿಯಲ್ಲಿ ನಿಶ್ಚಲವಾದ ಭಕ್ತಿಯಿಂದ ಸಂಪನ್ನನೂ ಆಗಿರುವೆ. ಅಂತಹ ನೀನು ಅನಂತವರ್ಷಗಳ ಕಾಲ ಸುಖವಾಗಿ ಬಾಳು. ॥ ೪೮ ॥ ನಿನ್ನ ಸತ್ಕೀರ್ತಿಯು ಅತ್ಯಂತ ಪವಿತ್ರವಾದುದು. ನೀನು ಉದಾರಕೀರ್ತಿಯುಳ್ಳ ಬ್ರಹ್ಮಣ್ಯದೇವನಾದ ಶ್ರೀಹರಿಯ ಕಥೆಗಳನ್ನು ಪ್ರಚಾರಗೊಳಿಸುತ್ತಿರುವೆ. ಇದು ನಮ್ಮ ಸೌಭಾಗ್ಯವೇ ಆಗಿದೆ. ಇಂತಹ ನಿನ್ನನ್ನು ರಾಜನನ್ನಾಗಿ ಪಡೆದ ನಾವುಗಳು ನಮ್ಮನ್ನು ಭಗವಂತನ ರಾಜ್ಯದಲ್ಲಿಯೇ ಇರುವವರನ್ನಾಗಿ ತಿಳಿಯುತ್ತಿದ್ದೇವೆ. ॥ ೪೯ ॥ ಪ್ರಭುವೇ! ನೀನು ಆಶ್ರಿತ ಜನರಿಗೆ ಹೀಗೆ ಶ್ರೇಷ್ಠವಾದ ಉಪದೇಶ ನೀಡುತ್ತಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ, ತನ್ನ ಪ್ರಜೆಗಳಲ್ಲಿ ಅನುರಾಗವನ್ನು ಹೊಂದುವುದು ಕರುಣಾಳುಗಳಾದ ಮಹಾತ್ಮರ ಸ್ವಭಾವವೇ ಆಗಿದೆ. ॥ ೫೦ ॥ ದುರದೃಷ್ಟವಶದಿಂದ ವಿವೇಕಹೀನರಾಗಿ ಸಂಸಾರವೆಂಬ ಅರಣ್ಯದಲ್ಲಿ ಅಲೆದಾಡುತ್ತಿದ್ದ ನಮ್ಮನ್ನು ನೀನು ಇಂದು ಅಜ್ಞಾನಾಂಧಕಾರದಿಂದ ದಾಟಿಸಿಬಿಟ್ಟಿರುವೆ. ॥ ೫೧ ॥ ನೀನು ಶುದ್ಧಸತ್ತ್ವಮಯ ಪರಮಪುರುಷನಾಗಿರುವೆ. ಬ್ರಾಹ್ಮಣಜಾತಿ ಮತ್ತು ಕ್ಷತ್ರಿಯಜಾತಿಗಳೆರಡನ್ನೂ ಒಳಹೊಕ್ಕು ಬ್ರಾಹ್ಮಣರ ಮತ್ತು ಈ ಎರಡೂ ಜಾತಿಗಳಲ್ಲಿಯೂ ಪ್ರವಿಷ್ಟನಾಗಿ ಇಡೀ ಜಗತ್ತನ್ನು ತನ್ನ ತೇಜಸ್ಸಿನಿಂದ ಸಂರಕ್ಷಿಸುತ್ತಿರುವ ಪರಮಪುರುಷನಾದ ನಿನಗೆ ನಮಸ್ಕಾರವು. ॥ ೫೨ ॥

*ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೨೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಏಕವಿಂಶೋಽಧ್ಯಾಯಃ ॥ ೨೧ ॥

# ಇಪ್ಪತ್ತೆರಡನೆಯ ಅಧ್ಯಾಯ

## ಪೃಥು ಮಹಾರಾಜನಿಗೆ ಸನಕಾದಿಗಳ ಉಪದೇಶ

ಮೈತ್ರೇಯ ಉವಾಚ

ಜನೇಷು ಪ್ರಗೃಣತ್ಸ್ವೇವಂ ಪೃಥುಂ ಪೃಥುಲವಿಕ್ರಮಮ್ ।
ತತ್ರೋಪಜಗ್ಮುರ್ಮುನಯಶ್ಚತ್ವಾರಃ ಸೂರ್ಯವರ್ಚಸಃ ॥ ೧ ॥

ತಾಂಸ್ತು ಸಿದ್ಧೇಶ್ವರಾನ್ ರಾಜಾ ವ್ಯೋಮ್ನೋಽವತರತೋಽರ್ಚಿಷಾ ।
ಲೋಕಾನಪಾಪಾನ್ಕುರ್ವತ್ಯಾ ಸಾನುಗೋಽಚಷ್ಟ ಲಕ್ಷಿತಾನ್ ॥ ೨ ॥

ತದ್ದರ್ಶನೋದ್ಗತಾನ್ ಪ್ರಾಣಾನ್ ಪ್ರತ್ಯಾದಿತ್ಸುರಿವೋತ್ಥಿತಃ ।
ಸಸದಸ್ಯಾನುಗೋ ವೈನ್ಯ ಇಂದ್ರಿಯೇಶೋ ಗುಣಾನಿವ ॥ ೩ ॥

ಗೌರವಾದ್ಯಂತ್ರಿತಃ ಸಭ್ಯಃ ಪ್ರಶ್ರಯಾನತಕಂಧರಃ ।
ವಿಧಿವತ್ಪೂಜಯಾನ್ ಚಕ್ರೇ ಗೃಹೀತಾಧ್ಯರ್ಹಣಾಸನಾನ್ ॥ ೪ ॥

ಶ್ರೀಮೈತ್ರೇಯರು ಹೇಳುತ್ತಾರೆ – ವಿಪುಲ ಪರಾಕ್ರಮಿಯಾದ ಪೃಥುಸಾರ್ವಭೌಮನನ್ನು ಜನರು ಹೀಗೆ ಅಭಿನಂದಿಸುತ್ತಿರುವಾಗಲೇ ಸೂರ್ಯನಂತೇ ದೇದೀಪ್ಯಮಾನರಾಗಿದ್ದ ಸನಕರೇ ಮುಂತಾದ ನಾಲ್ವರು ಮುನಿಶ್ರೇಷ್ಠರು ಅಲ್ಲಿಗೆ ದಯಮಾಡಿಸಿದರು. ॥ ೧ ॥ ತಮ್ಮ ದಿವ್ಯವಾದ ಕಾಂತಿಯಿಂದ ಲೋಕಗಳ ಪಾಪಗಳನ್ನು ಕಳೆಯುತ್ತಾ ಆಕಾಶದಿಂದ ಇಳಿದು ಬರುತ್ತಿದ್ದ ಆ ಸಿದ್ಧೇಶ್ವರರನ್ನು ಪೃಥುವೂ, ಅವನ ಅನುಚರರೂ ಗುರುತಿಸಿದರು. ॥ ೨ ॥ ಅವರನ್ನು ದರ್ಶಿಸುತ್ತಲೇ ರಾಜನ ಪ್ರಾಣಗಳು – ವಿಷಯಾಸಕ್ತ ಜೀವರು ವಿಷಯಗಳ ಕಡೆಗೆ ಓಡುವಂತೆ – ಅವರ ಕಡೆಗೆ ಧಾವಿಸಿದವು. ಅವುಗಳನ್ನು ಹಿಂದಕ್ಕೆ ಬರಮಾಡಿಕೊಳ್ಳುವುದಕ್ಕಾಗಿಯೋ ಎಂಬಂತೆ ಅವನು ತನ್ನ ಸದಸ್ಯರು ಮತ್ತು ಅನುಯಾಯಿಗಳೊಂದಿಗೆ ತಟ್ಟನೆ ಎದ್ದುನಿಂತನು. ॥ ೩ ॥ ಆ ಮುನೀಶ್ವರರು ಅರ್ಘ್ಯವನ್ನು ಸ್ವೀಕರಿಸಿ ಆಸೀನರಾದಾಗ ಶಿಷ್ಟಾಗ್ರೇಸರನಾದ ಪೃಥುಮಹಾರಾಜನು ಅವರ ಗೌರವದಿಂದ ಪ್ರಭಾವಿತನಾಗಿ ವಿನಯದಿಂದ ತಲೆಯನ್ನು ತಗ್ಗಿಸಿ ಅವರನ್ನು ವಿಧಿಪೂರ್ವಕವಾಗಿ ಪೂಜಿಸಿದನು. ॥ ೪ ॥

ತತ್ಪಾದಶೌಚಸಲಿಲೈರ್ಮಾರ್ಜಿತಾಲಕಬಂಧನಃ ।
ತತ್ರ ಶೀಲವತಾಂ ವೃತ್ತಮಾಚರನ್ಮಾನಯನ್ನಿವ ॥ ೫ ॥

ಹಾಟಕಾಸನ ಆಸೀನಾನ್ ಸ್ವಧಿಷ್ಣ್ಯೇಷ್ವಿವ ಪಾವಕಾನ್ ।
ಶ್ರದ್ಧಾಸಂಯಮಸಂಯುಕ್ತಃ ಪ್ರೀತಃ ಪ್ರಾಹ ಭವಾಗ್ರಜಾನ್ ॥ ೬ ॥

ಪೃಥುರುವಾಚ

ಅಹೋ ಆಚರಿತಂ ಕಿಂ ಮೇ ಮಂಗಲಂ ಮಂಗಲಾಯನಾಃ ।
ಯಸ್ಯ ವೋ ದರ್ಶನಂ ಹ್ಯಾಸೀದ್ದುರ್ದರ್ಶಾನಾಂ ಚ ಯೋಗಿಭಿಃ ॥ ೭ ॥

ಕಿಂ ತಸ್ಯ ದುರ್ಲಭತರಮಿಹ ಲೋಕೇ ಪರತ್ರ ಚ ।
ಯಸ್ಯ ವಿಪ್ರಾಃ ಪ್ರಸೀದಂತಿ ಶಿವೋ ವಿಷ್ಣುಶ್ಚ ಸಾನುಗಃ ॥ ೮ ॥

ನೈವ ಲಕ್ಷಯತೇ ಲೋಕೋ ಲೋಕಾನ್ ಪರ್ಯಟತೋಽಪಿ ಯಾನ್ ।
ಯಥಾ ಸರ್ವದೃಶಂ ಸರ್ವ ಆತ್ಮಾನಂ ಯೇಽಸ್ಯ ಹೇತವಃ ॥ ೯ ॥

ಅಧನಾ ಅಪಿ ತೇ ಧನ್ಯಾಃ ಸಾಧವೋ ಗೃಹಮೇಧಿನಃ ।
ಯದ್ಗೃಹಾ ಹ್ಯರ್ಹವರ್ಯಾಂಬುತೃಣಭೂಮೀಶ್ವರಾವರಾಃ ॥ ೧೦ ॥

ವ್ಯಾಲಾಲಯದ್ರುಮಾವೈ ತೇಽಪ್ಯರಿಕ್ತಾಖಿಲಸಂಪದಃ ।
ಯದ್ಗೃಹಾಸ್ತೀರ್ಥಪಾದೀಯಪಾದತೀರ್ಥವಿವರ್ಜಿತಾಃ ॥ ೧೧ ॥

ಸ್ವಾಗತಂ ವೋ ದ್ವಿಜಶ್ರೇಷ್ಠಾ ಯದ್ವ್ರತಾನಿ ಮುಮುಕ್ಷವಃ ।
ಚರಂತಿ ಶ್ರದ್ಧಯಾ ಧೀರಾ ಬಾಲಾ ಏವ ಬೃಹಂತಿ ಚ ॥ ೧೨ ॥

ಕಚ್ಚಿನ್ನಃ ಕುಶಲಂ ನಾಥಾ ಇಂದ್ರಿಯಾರ್ಥಾರ್ಥವೇದಿನಾಮ್ ।
ವ್ಯಸನಾವಾಪ ಏತಸ್ಮಿನ್ ಪತಿತಾನಾಂ ಸ್ವಕರ್ಮಭಿಃ ॥ ೧೩ ॥

ಭವತ್ಸು ಕುಶಲಪ್ರಶ್ನ ಆತ್ಮಾರಾಮೇಷು ನೇಷ್ಯತೇ ।
ಕುಶಲಾಕುಶಲಾ ಯತ್ರ ನ ಸಂತಿ ಮತಿವೃತ್ತಯಃ ॥ ೧೪ ॥

ತದಹಂ ಕೃತವಿಶ್ರಂಭಃ ಸುಹೃದೋ ವಸ್ತಪಸ್ವಿನಾಮ್ ।
ಸಂಪೃಚ್ಛೇ ಭವ ಏತಸ್ಮಿನ್ ಕ್ಷೇಮಃ ಕೇನಾಂಜಸಾ ಭವೇತ್ ॥ ೧೫ ॥

ಅನಂತರ ಅವರ ಚರಣೋದಕವನ್ನು ತನ್ನ ತಲೆಯಮೇಲೆ ಪ್ರೋಕ್ಷಿಸಿಕೊಂಡು ಶೀಲವಂತರಾದ ಶಿಷ್ಟಜನರ ಆಚರಣೆಯು ಅಂತಹ ಸಮಯದಲ್ಲಿ ಹೇಗಿರಬೇಕು ಎಂಬುದಕ್ಕೆ ಆದರ್ಶನಾದನು. ॥ ೫ ॥ ಭಗವಾನ್ ಶಂಕರನಿಗೂ ಅಣ್ಣಂದಿರಾಗಿದ್ದ ಆ ಮುನೀಶ್ವರರು ತಮ್ಮ-ತಮ್ಮ ಸ್ಥಾನಗಳಲ್ಲಿ ಬೆಳಗುತ್ತಿರುವ ಅಗ್ನಿಗಳಂತೆ ಸ್ವರ್ಣಸಿಂಹಾಸನಗಳಲ್ಲಿ ಶೋಭಿಸಿದರು. ಪೃಥು ಮಹಾರಾಜನು ಅತ್ಯಂತ ಶ್ರದ್ಧಾ-ಸಂಯಮಗಳೊಡನೆ ಪ್ರೇಮಪೂರ್ವಕ ಅವರಲ್ಲಿ ಹೀಗೆ ವಿಜ್ಞಾಪಿಸಿಕೊಂಡನು. ॥ ೬ ॥

**ಪೃಥು ಮಹಾರಾಜನು ಕೇಳಿದನು** – ಮಂಗಳಮೂರ್ತಿಗಳಾದ ಮುನೀಶ್ವರರೇ! ಯೋಗಿಗಳಿಗೂ ದುರ್ಲಭವಾದ ನಿಮ್ಮ ದರ್ಶನವು ನನಗೆ ತಾನಾಗಿಯೇ ಒದಗಿ ಬಂದಿತಲ್ಲ! ನಾನು ಎಂತಹ ಪುಣ್ಯವನ್ನು ಆಚರಿಸಿರಬೇಕು! ಆಹಾ! ಎಂತಹ ಭಾಗ್ಯವು ನನ್ನದು! ॥ ೭ ॥ ಜ್ಞಾನಿಗಳಾದ ಬ್ರಾಹ್ಮಣರಾಗಲೀ, ಅನುಚರ ಸಹಿತನಾದ ಶಿವನಾಗಲೀ, ಶ್ರೀವಿಷ್ಣುವಾಗಲೀ ಯಾರ ಮೇಲೆ ಪ್ರಸನ್ನರಾಗುವರೋ ಅವರಿಗೆ ಇಹಲೋಕದಲ್ಲಾಗಲೀ – ಪರಲೋಕದಲ್ಲಾಗಲೀ ದುರ್ಲಭವಾದ ವಸ್ತು ಯಾವುದಿದೆ ? ॥ ೮ ॥ ದೃಶ್ಯ ಪ್ರಪಂಚದ ಕಾರಣವಾಗಿರುವ ಮಹತತ್ತ್ವವೇ ಮುಂತಾದವುಗಳು – ಆತ್ಮನು ಸರ್ವಸಾಕ್ಷಿಯಾಗಿ ಸರ್ವಗತವಾಗಿದ್ದರೂ ಆತನನ್ನು ನೋಡಲಾಗುವುದಿಲ್ಲವೋ, ಹಾಗೆಯೇ ನೀವು ಸಮಸ್ತ ಲೋಕಗಳಲ್ಲಿಯೂ ಸದಾ ಸಂಚರಿಸುತ್ತಿದ್ದರೂ ಸಾಧಾರಣ ಮನುಷ್ಯರು ನಿಮ್ಮನ್ನು ನೋಡಲಾರರು. ॥ ೯ ॥ ನಿಮ್ಮಂತಹ ಪೂಜ್ಯತಮರಾದ ಮಹಾಪುರುಷರು ಯಾವನಾದರೂ ಗೃಹಸ್ಥನ ಮನೆಯಲ್ಲಿ ನೀರು, ನೆಲ, ಹುಲ್ಲು, ಮನೆಯ ಯಜಮಾನನ ಅಥವಾ ಸೇವಕರ ಸೇವೆಯನ್ನು ಸ್ವೀಕರಿಸಿದರೆ ಅವನು ಧನಹೀನನಾಗಿದ್ದರೂ ಧನ್ಯತಮನೇ ಆಗುವನು. ॥ ೧೦ ॥ ಹಾಗೆಯೇ ಭಗವದ್ಭಕ್ತರ ಪರಮ ಪವಿತ್ರವಾದ ಪಾದೋದಕದ ಬಿಂದುಗಳು ಯಾರ ಮನೆಯಲ್ಲಿ ಎಂದಿಗೂ ಬಿದ್ದಿಲ್ಲವೋ, ಆ ಮನೆಗಳು ಎಲ್ಲ ರೀತಿಯ ಸಿರಿ-ಸಂಪತ್ತುಗಳಿಂದ ತುಂಬಿದ್ದರೂ ಹಾವುಗಳು ವಾಸಿಸುವ ವೃಕ್ಷಗಳಂತೆ ಆಗಿವೆ. ॥ ೧೧ ॥ ಮುನೀಶ್ವರರೇ! ನಿಮಗೆ ಸ್ವಾಗತವು. ನೀವುಗಳಾದರೋ ಬಾಲ್ಯದಿಂದಲೇ ಮುಮುಕ್ಷುಗಳ ಮಾರ್ಗವನ್ನು ಅನುಸರಿಸುತ್ತಾ ಏಕಾಗ್ರವಾದ ಚಿತ್ತದಿಂದ ಬ್ರಹ್ಮಚರ್ಯವೇ ಮುಂತಾದ ಮಹಾನ್ ವ್ರತಗಳನ್ನು ಅತಿ ಶ್ರದ್ಧೆಯಿಂದ ಆಚರಿಸುತ್ತಿರುವಿರಿ. ॥ ೧೨ ॥ ಸ್ವಾಮಿಗಳೇ! ನಾವುಗಳು ಕರ್ಮವಶರಾಗಿ ವಿಪತ್ತುಗಳಿಗೆ ಕ್ಷೇತ್ರರೂಪವಾದ ಈ ಸಂಸಾರದಲ್ಲಿ ಬಿದ್ದುಕೊಂಡು ಕೇವಲ ಇಂದ್ರಿಯಸಂಬಂಧವಾದ ಭೋಗಗಳನ್ನೇ ಪರಮಪುರುಷಾರ್ಥವೆಂದು ತಿಳಿಯುತ್ತಿದ್ದೇವೆ. ಇಂತಹ ನಮಗೆ ಶ್ರೇಯಸ್ಸಿನ ದಾರಿ ನೀವೇ ತೋರಬೇಕು. ॥ ೧೩ ॥ ನಿಮ್ಮಲ್ಲಿ ಕುಶಲದ ಬಗ್ಗೆ ಪ್ರಶ್ನಿಸುವುದು ಉಚಿತವಲ್ಲ. ಏಕೆಂದರೆ, ನೀವು ನಿರಂತರ ಆತ್ಮನಲ್ಲೇ ರಮಿಸುತ್ತಿರುವವರು. ಕುಶಲಾಕುಶಲಗಳೆಂಬ ವೃತ್ತಿಗಳೇ ನಿಮ್ಮಲ್ಲಿ ಎಂದಿಗೂ ಇರುವುದಿಲ್ಲ. ॥ ೧೪ ॥ ನೀವು ಸಂಸಾರದಲ್ಲಿ ನೊಂದು-ಬೆಂದ ಜೀವಿಗಳಿಗೆಲ್ಲ ಪರಮಮಿತ್ರರಾಗಿದ್ದೀರಿ. ಆದ್ದರಿಂದ ನಿಮ್ಮಲ್ಲಿ ನಂಬಿಕೆಯನ್ನಿಟ್ಟು ಈ ಸಂಸಾರದಲ್ಲಿ ಮನುಷ್ಯನಿಗೆ ಅತಿಶೀಘ್ರವಾಗಿ ಮತ್ತು ಸುಲಭವಾಗಿ ಶ್ರೇಯಸ್ಸು

ವ್ಯಕ್ತಮಾತ್ಮವತಾಮಾತ್ಮಾ ಭಗವಾನಾತ್ಮಭಾವನಃ ।
ಸ್ವಾನಾಮನುಗ್ರಹಾಯೇಮಾಂ ಸಿದ್ಧರೂಪೀ ಚರತ್ಯಜಃ ॥ ೧೬ ॥

*ಮೈತ್ರೇಯ ಉವಾಚ*

ಪೃಥೋಸ್ತತ್ಸೂಕ್ತಮಾಕರ್ಣ್ಯ ಸಾರಂ ಸುಷ್ಠು ಮಿತಂ ಮಧು ।
ಸ್ಮಯಮಾನ ಇವ ಪ್ರೀತ್ಯಾ ಕುಮಾರಃ ಪ್ರತ್ಯುವಾಚ ಹ ॥ ೧೭ ॥

*ಸನತ್ಕುಮಾರ ಉವಾಚ*

ಸಾಧು ಪೃಷ್ಟಂ ಮಹಾರಾಜ ಸರ್ವಭೂತಹಿತಾತ್ಮನಾ ।
ಭವತಾ ವಿದುಷಾ ಚಾಪಿ ಸಾಧೂನಾಂ ಮತಿರೀದೃಶೀ ॥ ೧೮ ॥

ಸಂಗಮಃ ಖಲು ಸಾಧೂನಾಮುಭಯೇಷಾಂ ಚ ಸಮ್ಮತಃ ।
ಯತ್ಸಂಭಾಷಣಸಂಪ್ರಶ್ನಃ ಸರ್ವೇಷಾಂ ವಿತನೋತಿ ಶಮ್ ॥ ೧೯ ॥

ಅಸ್ತ್ಯೇವ ರಾಜನ್ ಭವತೋ ಮಧುದ್ವಿಷಃ
ಪಾದಾರವಿಂದಸ್ಯ ಗುಣಾನುವಾದನೇ ।
ರತಿರ್ದುರಾಪಾ ವಿಧುನೋತಿ ನೈಷ್ಠಿಕೀ
ಕಾಮಂ ಕಷಾಯಂ ಮಲಮಂತರಾತ್ಮನಃ ॥ ೨೦ ॥

ಶಾಸ್ತ್ರೇಷ್ವಿಯಾನೇವ ಸುನಿಶ್ಚಿತೋ ನೃಣಾಂ
ಕ್ಷೇಮಸ್ಯ ಸಧ್ರ್ಯಗ್ವಿಮೃಶೇಷು ಹೇತುಃ ।
ಅಸಂಗ ಆತ್ಮವ್ಯತಿರಿಕ್ತ ಆತ್ಮನಿ
ದೃಢಾ ರತಿರ್ಬ್ರಹ್ಮಣಿ ನಿರ್ಗುಣೇ ಚ ಯಾ ॥ ೨೧ ॥

ಸಾ ಶ್ರದ್ಧಯಾ ಭಗವದ್ಧರ್ಮಚರ್ಯಯಾ
ಜಿಜ್ಞಾಸಯಾಽಽಧ್ಯಾತ್ಮಿಕಯೋಗನಿಷ್ಠಯಾ ।
ಯೋಗೇಶ್ವರೋಪಾಸನಯಾ ಚ ನಿತ್ಯಂ
ಪುಣ್ಯಶ್ರವಃ ಕಥಯಾ ಪುಣ್ಯಯಾ ಚ ॥ ೨೨ ॥

ಅರ್ಥೇಂದ್ರಿಯಾರಾಮಸಗೋಷ್ಠ್ಯತೃಷ್ಣಯಾ
ತತ್ಸಮ್ಮತಾನಾಮಪರಿಗ್ರಹೇಣ ಚ ।
ವಿವಿಕ್ತರುಚ್ಯಾ ಪರಿತೋಷ ಆತ್ಮನ್
ವಿನಾ ಹರೇರ್ಗುಣಪೀಯೂಷಪಾನಾತ್ ॥ ೨೩ ॥

ಯಾವುದರಿಂದ ಉಂಟಾಗಬಲ್ಲದು? ಎಂದು ನಿಮ್ಮಲ್ಲಿ ಕೇಳಿ ಕೊಳ್ಳುತ್ತೇನೆ. ॥ ೧೫ ॥ ಆತ್ಮಜ್ಞಾನಿಗಳಾದ ಧೀರರಿಗೆಲ್ಲ 'ಆತ್ಮ' ನಾಗಿ ಪ್ರಕಾಶಿಸುತ್ತಾ, ಉಪಾಸಕರ ಹೃದಯದಲ್ಲಿ ತನ್ನ ಸ್ವರೂಪವನ್ನು ಪ್ರಕಟಪಡಿಸುವಂತಹ ಜನ್ಮರಹಿತನಾದ ಭಗವಾನ್ ನಾರಾಯಣನೇ ತನ್ನ ಭಕ್ತರನ್ನು ಅನುಗ್ರಹಿಸಲಿಕ್ಕಾಗಿ ನಿಮ್ಮಂತಹ ಸಿದ್ಧರ ರೂಪದಲ್ಲಿ ಭೂಮಿಯಲ್ಲಿ ಸಂಚರಿಸುತ್ತಾನೆಂಬುದರಲ್ಲಿ ಸಂದೇಹವೇ ಇಲ್ಲ. ॥ ೧೬ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಪೃಥು ಮಹಾರಾಜನ ಯುಕ್ತಿಯುಕ್ತವೂ, ಗಂಭೀರವೂ, ಸಂಕ್ಷಿಪ್ತವೂ ಆದ ಮಧುರವಚನಗಳನ್ನು ಕೇಳಿ ಸನತ್ಕುಮಾರರಿಗೆ ಅತೀವ ಸಂತೋಷವಾಗಿ ನಗುನಗುತ್ತಾ ರಾಜನಲ್ಲಿ ಇಂತೆಂದರು. ॥ ೧೭ ॥

**ಶ್ರೀಸನತ್ಕುಮಾರರು ಹೇಳುತ್ತಾರೆ** – ಎಲೈ ಮಹಾರಾಜಾ! ನೀನು ಸ್ವತಃ ಇವೆಲ್ಲವನ್ನು ತಿಳಿದುಕೊಂಡಿದ್ದರೂ ಸಮಸ್ತ ಪ್ರಾಣಿಗಳಿಗೂ ಒಳ್ಳೆಯದಾಗಲಿ ಎಂಬ ದೃಷ್ಟಿಯಿಂದ ಇಂತಹ ಒಳ್ಳೆಯ ಪ್ರಶ್ನೆಯನ್ನೇ ಕೇಳಿರುವೆ. ನಿಜವಾಗಿ ಸಾಧು-ಸತ್ಪುರುಷರ ಬುದ್ಧಿಯು ಹೀಗೆಯೇ ಇರುವುದಲ್ಲ! ॥ ೧೮ ॥ ಸತ್ಪುರುಷರ ಸಮಾಗಮವು ಕೇಳುವವರಿಗೆ ಮತ್ತು ಹೇಳುವವರಿಬ್ಬರಿಗೂ ಸಮ್ಮತವೇ ಆಗಿರುತ್ತದೆ. ಏಕೆಂದರೆ, ಅವರ ಪ್ರಶ್ನೋತ್ತರಗಳು ಎಲ್ಲರ ಶ್ರೇಯಸ್ಸನ್ನೇ ಮಾಡುವುವು. ॥ ೧೯॥ ರಾಜನೇ! ನಿನಗೆ ಭಗವಾನ್ ಮಧುಸೂದನನ ಅಡಿದಾವರೆಗಳ ಗುಣಗಳನ್ನು ವರ್ಣಿಸುವುದರಲ್ಲೇ ಸ್ಥಿರವಾದ ಪ್ರೀತಿಯಿದೆ. ಎಲ್ಲರಿಗೆ ಈ ಪ್ರೀತಿಯು ಸುಲಭವಾಗಿ ಸಾಧ್ಯವಾಗುವುದಿಲ್ಲ. ಅದು ಭಾಗ್ಯವಶದಿಂದ ದೊರಕಿದ್ದೇ ಆದರೆ – ಬೇರಾವ ಉಪಾಯದಿಂದಲೂ ಬಿಟ್ಟುಹೋಗದಿರುವ ಹೃದಯಸ್ಥ ವಾಸನಾರೂಪವಾದ ಮಲವನ್ನು ಪೂರ್ಣವಾಗಿ ನಾಶಮಾಡಿಬಿಡುತ್ತದೆ. ॥ ೨೦ ॥ ಶಾಸ್ತ್ರಗಳು ಜೀವಿಗಳ ಶ್ರೇಯಸ್ಸಿಗಾಗಿಯೇ ಚೆನ್ನಾಗಿ ವಿಚಾರಮಾಡಿ, ಆತ್ಮನಿಂದ ಬೇರೆಯಾದ ದೇಹಾದಿಗಳ ಕುರಿತು ವೈರಾಗ್ಯ ಉಂಟಾಗುವುದೇ ಶ್ರೇಯಸ್ಸಿನ ಸಾಧನೆಯೆಂದು ನಿಶ್ಚಿತಗೊಳಿಸಿವೆ. ॥ ೨೧ ॥ ಗುರುಗಳ ಮತ್ತು ಶಾಸ್ತ್ರಗಳ ವಚನಗಳಲ್ಲಿ ವಿಶ್ವಾಸವಿರಿಸುವುದರಿಂದ, ಭಾಗವತ ಧರ್ಮಗಳನ್ನು ಆಚರಿಸುವುದರಿಂದ, ತತ್ತ್ವಜಿಜ್ಞಾಸೆಯಿಂದ, ಜ್ಞಾನಯೋಗದ ನಿಷ್ಠೆಯಿಂದ, ಯೋಗೇಶ್ವರ ಶ್ರೀಹರಿಯ ಉಪಾಸನೆಯಿಂದ, ಪ್ರತಿದಿನವೂ ಪುಣ್ಯಕೀರ್ತಿಯುಳ್ಳ ಶ್ರೀಭಗವಂತನ ಪಾವನ ಕಥೆಗಳನ್ನು ಶ್ರವಣಿಸುವುದರಿಂದ, ಧನ, ಇಂದ್ರಿಯಗಳ ಭೋಗದಲ್ಲಿ ತೊಡಗಿರುವ ಮನುಷ್ಯರ ಗೋಷ್ಠಿಯನ್ನು ಪ್ರೀತಿಸದೆ ಇರುವುದರಿಂದ, ಅವರಿಗೆ ಪ್ರಿಯವಾದ ಪದಾರ್ಥಗಳನ್ನು ಆಸಕ್ತಿಯಿಂದ ಸಂಗ್ರಹಿಸದೇ ಇರುವುದರಿಂದ, ಭಗವದ್ಗುಣಾಮೃತವನ್ನು ಪಾನಮಾಡುವ ಕಾಲವನ್ನು ಬಿಟ್ಟು ಉಳಿದ ಎಲ್ಲ ಸಮಯಗಳಲ್ಲಿಯೂ ಆತ್ಮನಲ್ಲೇ ಸಂತೋಷಿಸುತ್ತಾ ಏಕಾಂತಸೇವನೆಯಲ್ಲಿ ಪ್ರೀತಿಯನ್ನಿಡುವುದರಿಂದ, ಯಾವುದೇ ಜೀವಿಗೆ ಕಷ್ಟವನ್ನು ಕೊಡದಿರುವುದರಿಂದ, ನಿವೃತ್ತಿನಿಷ್ಠೆಯಿಂದ, ಆತ್ಮಹಿತವನ್ನೇ ಅನುಸಂಧಾನಮಾಡುವುದರಿಂದ, ಶ್ರೀಹರಿಯ ಪವಿತ್ರಚರಿತ್ರರೂಪವಾದ ಶ್ರೇಷ್ಠ ಅಮೃತವನ್ನು ಸವಿಯುವುದ

ಅಹಿಂಸಯಾ ಪಾರಮಹಂಸ್ಯ ಚರ್ಯಯಾ
ಸ್ಮೃತ್ಯಾ ಮುಕುಂದಾ ಚರಿತಾಗ್ರ್ಯಸೀಧುನಾ ।
ಯಮೈರಕಾಮೈರ್ನಿಯಮೈಶ್ಚಾಪ್ಯ ನಿಂದಯಾ
ನಿರೀಹಯಾ ದ್ವಂದ್ವ ತಿತಿಕ್ಷಯಾ ಚ ॥ ೨೪ ॥

ಹರೇರ್ಮುಹುಸ್ತತ್ಪರಕರ್ಣಪೂರ-
ಗುಣಾಭಿಧಾನೇನ ವಿಜೃಂಭಮಾಣಯಾ ।
ಭಕ್ತ್ಯಾ ಹ್ಯಸಂಗಃ ಸದಸತ್ಯನಾತ್ಮನಿ
ಸ್ಯಾನ್ನಿರ್ಗುಣೇ ಬ್ರಹ್ಮಣಿ ಚಾಂಜಸಾ ರತಿಃ ॥ ೨೫ ॥

ಯದಾ ರತಿರ್ಬ್ರಹ್ಮಣಿ ನೈಷ್ಠಿಕೀ ಪುಮಾ-
ನಾಚಾರ್ಯವಾನ್ ಜ್ಞಾನವಿರಾಗರಂಹಸಾ ।
ದಹತ್ಯವೀರ್ಯಂ ಹೃದಯಂ ಜೀವಕೋಶಂ
ಪಂಚಾತ್ಮಕಂ ಯೋನಿಮಿವೋತ್ಥಿತೋಽಗ್ನಿಃ ॥ ೨೬ ॥

ದಗ್ಧಾಶಯೋ ಮುಕ್ತ ಸಮಸ್ತ ತದ್ಗುಣೋ
ನೈವಾತ್ಮನೋ ಬಹಿರಂತರ್ವಿಚಷ್ಟೇ ।
ಪರಾತ್ಮನೋರ್ಯದ್ವ್ಯವಧಾನಂ ಪುರಸ್ತಾತ್
ಸ್ವಪ್ನೇ ಯಥಾ ಪುರುಷಸ್ತದ್ವಿನಾಶೇ ॥ ೨೭ ॥

ಆತ್ಮಾನಮಿಂದ್ರಿಯಾರ್ಥಂ ಚ ಪರಂ ಯದುಭಯೋರಪಿ ।
ಸತ್ಯಾಶಯ ಉಪಾಧೌ ವೈ ಪುಮಾನ್ ಪಶ್ಯತಿ ನಾನ್ಯದಾ
॥ ೨೮ ॥

ನಿಮಿತ್ತೇ ಸತಿ ಸರ್ವತ್ರ ಜಲಾದಾವಪಿ ಪೂರುಷಃ ।
ಆತ್ಮನಶ್ಚ ಪರಸ್ಯಾಪಿ ಭಿದಾಂ ಪಶ್ಯತಿ ನಾನ್ಯದಾ
॥ ೨೯ ॥

ಇಂದ್ರಿಯೈರ್ವಿಷಯಾಕೃಷ್ಟೈರಾಕ್ಷಿಪ್ತಂ ಧ್ಯಾಯತಾಂ ಮನಃ ।
ಚೇತನಾಂ ಹರತೇ ಬುದ್ಧೇಃ ಸ್ತಂಬಸ್ತೋಯಮಿವ ಹ್ರದಾತ್
॥ ೩೦ ॥

ಭ್ರಶ್ಯತ್ಯನು ಸ್ಮೃತಿಶ್ಚಿತ್ತಂ ಜ್ಞಾನಭ್ರಂಶಃ ಸ್ಮೃತಿಕ್ಷಯೇ ।
ತದ್ರೋಧಂ ಕವಯಃ ಪ್ರಾಹುರಾತ್ಮಾಪಹ್ನವಮಾತ್ಮನಃ
॥ ೩೧ ॥

ರಿಂದ, ನಿಷ್ಕಾಮಭಾವದಿಂದ ಯಮ-ನಿಯಮಗಳನ್ನು ಪಾಲಿಸುವುದರಿಂದ, ಎಂದೂ ಯಾರನ್ನೂ ನಿಂದಿಸದೆ ಇರುವುದರಿಂದ, ಯೋಗಕ್ಷೇಮಕ್ಕಾಗಿ ಪ್ರಯತ್ನಿಸದೇ ಇರುವುದರಿಂದ, ಶೀತೋಷ್ಣಗಳೇ ಮುಂತಾದ ದ್ವಂದ್ವಗಳನ್ನು ಸಹಿಸುವುದರಿಂದ, ಭಕ್ತರಿಗೆ ಕರ್ಣಾನಂದಕರವಾದ ಶ್ರೀಹರಿಯ ಗುಣಗಳನ್ನು ಪದೇ-ಪದೇ ವರ್ಣಿಸುವುದರಿಂದ ಮತ್ತು ಭಕ್ತಿಭಾವವನ್ನು ವೃದ್ಧಿಪಡಿಸುವುದರಿಂದ ಮನುಷ್ಯನಿಗೆ ಕಾರ್ಯ-ಕಾರಣರೂಪವಾದ ಇಡೀ ಜಡ-ಜಗತ್ತಿನ ಕುರಿತು ವೈರಾಗ್ಯ ಉಂಟಾಗುವುದು ಮತ್ತು ಆತ್ಮಸ್ವರೂಪೀ ನಿರ್ಗುಣ ಪರಬ್ರಹ್ಮನಲ್ಲಿ ಆಯಾಸವಿಲ್ಲದೆ ಅವನಿಗೆ ಪ್ರೀತಿ ಉಂಟಾಗುತ್ತದೆ ಎಂಬುದಾಗಿಯೂ ಶಾಸ್ತ್ರಗಳು ಹೇಳುತ್ತವೆ. ॥ ೨೨-೨೫ ॥ ಪರಬ್ರಹ್ಮನಲ್ಲಿ ದೃಢವಾದ ಪ್ರೀತಿಯುಂಟಾದಾಗ ಮನುಷ್ಯನು ಸದ್ಗುರುವಿಗೆ ಶರಣು ಹೋಗುತ್ತಾನೆ. ಮತ್ತೆ ಜ್ಞಾನ ಮತ್ತು ವೈರಾಗ್ಯದ ಪ್ರಬಲವಾದ ವೇಗದಿಂದ ವಾಸನಾಶೂನ್ಯನಾಗಿ, ಅವಿದ್ಯೆಯೇ ಮುಂತಾದ ಐದು ಕ್ಲೇಶಗಳಿಂದ ಕೂಡಿದ ಅಹಂಕಾರಾತ್ಮಕವಾದ ತನ್ನ ಲಿಂಗಶರೀರವನ್ನು – ಅಗ್ನಿಯು ಕಟ್ಟಿಗೆಯಿಂದ ಪ್ರಕಟವಾಗಿ ಆ ಕಟ್ಟಿಗೆಯನ್ನೇ ಸುಟ್ಟುಹಾಕುವಂತೆ – ಸುಟ್ಟು ಬೂದಿ ಮಾಡಿಬಿಡುತ್ತಾನೆ. ॥ ೨೬ ॥ ಹೀಗೆ ಲಿಂಗಶರೀರವು ನಾಶವಾದ ಬಳಿಕ ಅವನು ಕರ್ತೃತ್ವಾದಿ ಎಲ್ಲ ಗುಣಗಳಿಂದ ಮುಕ್ತನಾಗುತ್ತಾನೆ. ಮತ್ತೆ ಸ್ವಪ್ನಾವಸ್ಥೆಯಲ್ಲಿ ಕಂಡುಬರುವ ನಾನಾಪದಾರ್ಥಗಳು ಎಚ್ಚರವಾದಾಗ ಯಾವುದೂ ಕಂಡುಬಾರದಿರುವಂತೆಯೇ ಅವನಿಗೆ ಶರೀರದ ಹೊರಗೆ ಕಂಡುಬರುವ ಘಟ-ಪಟಾದಿಗಳು ಮತ್ತು ಒಳಗೆ ಅನುಭವಕ್ಕೆ ಬರುವ ಸುಖ-ದುಃಖಾದಿಗಳೂ ಕಂಡುಬರುವುದಿಲ್ಲ. ಈ ಸ್ಥಿತಿಯು ಪ್ರಾಪ್ತವಾಗುವ ಮೊದಲು ಈ ಪದಾರ್ಥಗಳೇ ಜೀವಾತ್ಮಾ ಮತ್ತು ಪರಮಾತ್ಮರ ನಡುವೆ ಇದ್ದುಕೊಂಡು ಅವುಗಳ ಭೇದವನ್ನು ಉಂಟುಮಾಡುತ್ತಿದ್ದವು. ॥ ೨೭ ॥

ಅಂತಃಕರಣರೂಪವಾದ ಉಪಾಧಿಯು ಇರುವ ತನಕ ಪುರುಷನಿಗೆ ಜೀವಾತ್ಮಾ ಇಂದ್ರಿಯಗಳ ವಿಷಯಗಳು ಮತ್ತು ಇವೆರಡರ ಸಂಬಂಧವನ್ನುಂಟುಮಾಡುವ ಅಹಂಕಾರದ ಅನುಭವವಾಗುತ್ತದೆ. ಅದರ ನಂತರ ಇರುವುದಿಲ್ಲ. ॥ ೨೮॥ ಬಾಹ್ಯಜಗತ್ತಿನಲ್ಲಿಯೂ ನೀರು, ಕನ್ನಡಿ ಮುಂತಾದ ನಿಮಿತ್ತಗಳು ಇರುವಾಗಲೇ ಬಿಂಬ-ಪ್ರತಿಬಿಂಬಗಳ ಭೇದವು ಕಾಣಿಸುತ್ತದೆ. ಅವುಗಳು ಇಲ್ಲವಾದಾಗ ಕಾಣುವುದಿಲ್ಲ. ॥ ೨೯ ॥ ವಿಷಯ ಚಿಂತನದಲ್ಲೇ ತೊಡಗಿರುವ ಮನುಷ್ಯರ ಇಂದ್ರಿಯಗಳು ವಿಷಯಗಳಲ್ಲಿ ಸಿಕ್ಕಿಕೊಳ್ಳುವವು ಹಾಗೂ ಮನಸ್ಸನ್ನೂ ಅವುಗಳತ್ತ ಸೆಳೆಯುತ್ತಿರುತ್ತದೆ. ಹಾಗೆಯೇ ಆ ವಿಷಯಾಸಕ್ತ ಮನಸ್ಸು-ಬೇರುಗಳು ಜಲಾಶಯದ ನೀರನ್ನು ಸೆಳೆದುಕೊಳ್ಳುವಂತೆ ಬುದ್ಧಿಯ ವಿಚಾರಶಕ್ತಿಯನ್ನು ಕ್ರಮವಾಗಿ ಕಸಿದುಕೊಳ್ಳುತ್ತದೆ. ॥ ೩೦ ॥ ವಿಚಾರಶಕ್ತಿಯು ನಾಶವಾದಮೇಲೆ ಹಿಂದು-ಮುಂದಿನ ಸ್ಮೃತಿಯು ಹೊರಟು ಹೋಗುತ್ತದೆ. ಸ್ಮೃತಿಯ ನಾಶವಾದ ಬಳಿಕ ಜ್ಞಾನವು ಉಳಿಯುವುದಿಲ್ಲ. ಈ ಜ್ಞಾನದ ನಾಶವನ್ನೇ ಪಂಡಿತರು – 'ತಾನೇ ತನ್ನನ್ನು ಹತ್ಯೆ ಮಾಡಿಕೊಳ್ಳುವುದು' ಎಂದು ಹೇಳುತ್ತಾರೆ. ॥ ೩೧ ॥ ಯಾವುದರ ಉದ್ದೇಶದಿಂದ ಬೇರೆ ಎಲ್ಲ ಪದಾರ್ಥಗಳಲ್ಲಿ 'ಇದು ಪ್ರಿಯ' ಎಂಬ

ನಾತಃ ಪರತರೋ ಲೋಕೇ ಪುಂಸಃ ಸ್ವಾರ್ಥವ್ಯತಿಕ್ರಮಃ ।
ಯದಧ್ಯನ್ಯಸ್ಯ ಪ್ರೇಯಸ್ತ್ವಮಾತ್ಮನಃ ಸ್ವವ್ಯತಿಕ್ರಮಾತ್ ॥ ೩೨ ॥

ಅರ್ಥೇಂದ್ರಿಯಾರ್ಥಾಭಿಧ್ಯಾನಂ
ಸರ್ವಾರ್ಥಾಪಹ್ನವೋ ನೃಣಾಮ್ ।
ಭ್ರಂಶಿತೋ ಜ್ಞಾನವಿಜ್ಞಾನಾ-
ದ್ಯೇನಾವಿಶತಿ ಮುಖ್ಯತಾಮ್ ॥ ೩೩ ॥

ನ ಕುರ್ಯಾತ್ಕರ್ಹಿಚಿತ್ಸಂಗಂ ತಮಸ್ತೀವ್ರಂ ತಿತೀರಿಷುಃ ।
ಧರ್ಮಾರ್ಥಕಾಮಮೋಕ್ಷಾಣಾಂ ಯದತ್ಯಂತವಿಘಾತಕಮ್ ॥ ೩೪ ॥

ತತ್ರಾಪಿ ಮೋಕ್ಷ ಏವಾರ್ಥ ಆತ್ಯಂತಿಕತಯೇಷ್ಯತೇ ।
ತ್ರೈವರ್ಗ್ಯೋಽರ್ಥೋ ಯತೋ ನಿತ್ಯಂ ಕೃತಾಂತ ಭಯಸಂಯುತಃ ॥ ೩೫ ॥

ಪರೇಽವರೇ ಚ ಯೇ ಭಾವಾ ಗುಣವ್ಯತಿಕರಾದನು ।
ನ ತೇಷಾಂ ವಿದ್ಯತೇ ಕ್ಷೇಮಮೀಶವಿಧ್ವಂಸಿತಾಶಿಷಾಮ್ ॥ ೩೬ ॥

ತತ್ತ್ವಂ ನರೇಂದ್ರಜಗತಾಮಥ ತಸ್ಥುಷಾಂ ಚ
ದೇಹೇಂದ್ರಿಯಾಸುಧಿಷಣಾತ್ಮಭಿರಾವೃತಾನಾಮ್ ।
ಯಃ ಕ್ಷೇತ್ರವಿತ್ತಪತಯಾ ಹೃದಿ ವಿಷ್ವಗಾವಿಃ
ಪ್ರತ್ಯಕ್ಚಕಾಸ್ತಿ ಭಗವಾಂಸ್ತಮವೇಹಿ ಸೋಽಸ್ಮಿ ॥ ೩೭ ॥

ಯಸ್ಮಿನ್ನಿದಂ ಸದಸದಾತ್ಮತಯಾ ವಿಭಾತಿ
ಮಾಯಾವಿವೇಕವಿಧುತಿ ಸ್ರಜಿ ವಾಹಿಬುದ್ಧಿಃ ।
ತಂ ನಿತ್ಯಮುಕ್ತಪರಿಶುದ್ಧವಿಬುದ್ಧತತ್ತ್ವಂ
ಪ್ರತ್ಯೂಢಕರ್ಮಕಲಿಲಪ್ರಕೃತಿಂ ಪ್ರಪದ್ಯೇ ॥ ೩೮ ॥

ಯತ್ಪಾದಪಂಕಜಪಲಾಶವಿಲಾಸಭಕ್ತ್ಯಾ
ಕರ್ಮಾಶಯಂ ಗ್ರಥಿತಮುದ್ಗ್ರಥಯಂತಿ ಸಂತಃ ।
ತದ್ವನ್ನ ರಿಕ್ತಮತಯೋ ಯತಯೋಽಪಿ ರುದ್ಧ-
ಸ್ರೋತೋಗಣಾಸ್ತಮರಣಂ ಭಜ ವಾಸುದೇವಮ್ ॥ ೩೯ ॥

ಭಾವ ಉಂಟಾಗುತ್ತದೋ ಆ ಆತ್ಮನು ತನ್ನ ಮೂಲಕವೇ ನಾಶವಾಗುವುದರಿಂದ ಸ್ವಾರ್ಥ ಹಾನಿಯುಂಟಾಗುತ್ತದೆ. ಜಗತ್ತಿನಲ್ಲಿ ಇದಕ್ಕಿಂತ ಮಿಗಿಲಾದ ಬೇರೆ ಯಾವ ಹಾನಿಯೂ ಇಲ್ಲ. ॥ ೩೨ ॥

ಧನ ಮತ್ತು ಇಂದ್ರಿಯಗಳ ವಿಷಯಗಳನ್ನು ಚಿಂತಿಸುತ್ತಿದ್ದರೆ ಮನುಷ್ಯನ ಎಲ್ಲ ಪುರುಷಾರ್ಥಗಳು ನಾಶಹೊಂದುವುವು. ಏಕೆಂದರೆ, ಇವುಗಳ ಚಿಂತನೆಯಿಂದ ಅವನು ಜ್ಞಾನ-ವಿಜ್ಞಾನಗಳಿಂದ ಭ್ರಷ್ಟನಾಗಿ ಮರ-ಬಳ್ಳಿಗಳೇ ಮುಂತಾದ ಸ್ಥಾವರ ಯೋನಿಯಲ್ಲಿ ಹುಟ್ಟುತ್ತಾನೆ. ॥ ೩೩ ॥ ಅದಕ್ಕಾಗಿ ಅಜ್ಞಾನಾಂಧಕಾರದಿಂದ ದಾಟಿಹೋಗುವ ಇಚ್ಛೆಯುಳ್ಳವನು ವಿಷಯಗಳಲ್ಲಿ ಎಂದಿಗೂ ಆಸಕ್ತನಾಗಬಾರದು. ಏಕೆಂದರೆ, ಇದು ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳ ಪ್ರಾಪ್ತಿಯಲ್ಲಿ ದೊಡ್ಡ ಬಾಧಕವಾಗಿದೆ. ॥ ೩೪ ॥ ಈ ನಾಲ್ಕು ಪುರುಷಾರ್ಥಗಳಲ್ಲಿ ಎಲ್ಲಕ್ಕಿಂತ ಶ್ರೇಷ್ಠವಾದುದು ಮೋಕ್ಷವಾಗಿದೆ. ಏಕೆಂದರೆ ಉಳಿದ ಮೂರು ಪುರುಷಾರ್ಥಗಳಲ್ಲಿಯೂ ಕಾಲದ ಭಯ ಅಂಟಿಕೊಂಡೇ ಇರುವುದು. ॥ ೩೫ ॥ ಪ್ರಕೃತಿಯಲ್ಲಿ ಗುಣಗಳ ಕ್ಷೋಭೆಯುಂಟಾದ ನಂತರ ಪ್ರಕಟವಾದ ಎಲ್ಲ ಉತ್ತಮ ಮತ್ತು ಅಧಮ ಭಾವ ಪದಾರ್ಥಗಳಲ್ಲಿ ಸದಾ ಕ್ಷೇಮವಾಗಿಯೇ ಇರುವುದು ಯಾವುದೂ ಇಲ್ಲ. ಭಗವಂತನಾದ ಕಾಲನು ಆ ಎಲ್ಲ ಕುಶಲಗಳನ್ನು ತುಳಿದು ಹಾಕುತ್ತಾ ಇರುತ್ತಾನೆ. ॥ ೩೬ ॥

ಆದುದರಿಂದ ಎಲೈ ರಾಜನೇ! ದೇಹ, ಇಂದ್ರಿಯ, ಪ್ರಾಣ, ಬುದ್ಧಿ ಮತ್ತು ಅಹಂಕಾರ ಇವುಗಳಿಂದ ಆವರಿಸಲ್ಪಡುವ ಎಲ್ಲ ಸ್ಥಾವರ-ಜಂಗಮ ಪ್ರಾಣಿಗಳ ಹೃದಯದಲ್ಲಿ ಜೀವಕ್ಕೆ ನಿಯಾಮಕನಾಗಿ, ಅಂತರ್ಯಾಮಿಯಾಗಿ ಆತ್ಮರೂಪದಿಂದ ಎಲ್ಲೆಲ್ಲಿಯೂ ಬೆಳಗುತ್ತಿರುವ ಪರಮಾತ್ಮನನ್ನು 'ಸೋಹಮಸ್ಮಿ' 'ನಾನೇ ಆಗಿದ್ದೇನೆ' ಎಂದು ನೀನು ತಿಳಿ. ॥ ೩೭ ॥ ಅಜ್ಞಾನವಶದಿಂದ ಹೂಮಾಲೆಯಲ್ಲಿ ಸರ್ಪವೆಂಬ ಬುದ್ಧಿಯುಂಟಾದರೂ ಅದು ಹೂಮಾಲೆಯೆಂಬ ಜ್ಞಾನ ಉಂಟಾದಾಗ ತೊಲಗಿಹೋಗುವಂತೆ – ವಿವೇಕವುಂಟಾದಾಗ ತೊಲಗಿ ಹೋಗುವಂತಹ ಈ ಮಾಯಾಮಯವಾದ ಪ್ರಪಂಚವು ಯಾವನಲ್ಲಿ ಕಾರ್ಯಕಾರಣ ರೂಪದಲ್ಲಿ ಕಾಣಿಸುತ್ತದೆಯೋ, ಯಾರು ಕರ್ಮಫಲಗಳಿಂದ ಕಲುಷಿತವಾದ ಪ್ರಕೃತಿಯಿಂದ ಹೊರಗಿರುತ್ತಾನೋ, ಆ ನಿತ್ಯಮುಕ್ತನೂ, ನಿರ್ಮಲನೂ, ಜ್ಞಾನರೂಪನೂ ಆದ ಪರಮಾತ್ಮನನ್ನು ನೀನು ಹೊಂದುತ್ತಿರುವೆ. ॥ ೩೮ ॥ ಸಂತರಾದ ಮಹಾತ್ಮರು ಅವನ ಚರಣಕಮಲಗಳ ಬೆರಳುಗಳ ದಳಗಳಿಂದ ಹೊರಹೊಮ್ಮುವ ಕಾಂತಿಯನ್ನು ಸ್ಮರಿಸುತ್ತಾ ಕರ್ಮಗಳಿಂದ ಕಟ್ಟಲ್ಪಟ್ಟ ಅಹಂಕಾರವೆಂಬ ಹೃದಯಗ್ರಂಥಿಯನ್ನು ಛಿನ್ನ-ಭಿನ್ನಗೊಳಿಸುತ್ತಾರೆ. ಎಲ್ಲ ಇಂದ್ರಿಯಗಳನ್ನು ಪ್ರತ್ಯಾಹಾರದಿಂದ ಹಿಂದಕ್ಕೆ ಸೆಳೆದುಕೊಂಡು ವಿಷಯ ಶೂನ್ಯವನ್ನಾಗಿ ಮಾಡುವ ಸಂನ್ಯಾಸಿಗಳೂ ಕತ್ತರಿಸಿಹಾಕಲು ಅತಿಕಷ್ಟಸಾಧ್ಯವಾಗಿರುವ ಆ ಹೃದಯದ ಗಂಟನ್ನು ಅದರಿಂದ ಸುಲಭವಾಗಿ ಕತ್ತರಿಸಿಹಾಕುವರು. ಆದುದರಿಂದ ನೀನು ಸರ್ವಾಶ್ರಯನಾದ ಭಗವಾನ್ ವಾಸುದೇವನನ್ನು ಭಜಿಸು. ॥ ೩೯ ॥

ಕೃಚ್ಛ್ರೋ ಮಹಾನಿಹ ಭವಾರ್ಣವಮಪ್ಲವೇಶಾಂ
ಷಡ್ವರ್ಗನಕ್ರಮಸುಖೇನ ತಿತೀರಷಂತಿ ।
ತತ್ತ್ವಂ ಹರೇರ್ಭಗವತೋ ಭಜನೀಯಮಂಘ್ರಿಂ
ಕೃತ್ವೋಡುಪಂ ವ್ಯಸನಮುತ್ತರ ದುಸ್ತರಾರ್ಣಮ್ ॥ ೪೦ ॥

ಮನಸ್ಸು ಮತ್ತು ಇಂದ್ರಿಯಗಳೆಂಬ ಮೊಸಳೆಗಳಿಂದ ತುಂಬಿರುವ ಈ ಸಂಸಾರಸಾಗರವನ್ನು ಯೋಗವೇ ಮುಂತಾದ ದುಷ್ಕರವಾದ ಸಾಧನೆಗಳಿಂದ ದಾಟಲು ಕೆಲವರು ಬಯಸುತ್ತಾರೆ. ಅವರು ಅದನ್ನು ದಾಟುವುದು ಕಠಿಣವೇ ಆಗಿದೆ. ಏಕೆಂದರೆ, ಅವರಿಗೆ ಶ್ರೀಹರಿಯೆಂಬ ಅಂಬಿಗನ ಆಶ್ರಯವಿರುವುದಿಲ್ಲ. ಆದುದರಿಂದ ಎಲೈ ರಾಜನೇ! ನೀನು ಆರಾಧಿಸಲು ಯೋಗ್ಯವಾದ ಭಗವಂತನ ಚರಣಕಮಲಗಳನ್ನು ಹಡಗನ್ನಾಗಿಸಿಕೊಂಡು ಅನಾಯಾಸವಾಗಿ ಈ ದುಸ್ತರವಾದ ಸಮುದ್ರವನ್ನು ದಾಟಿಬಿಡು. ॥ ೪೦ ॥

*ಮೈತ್ರೇಯ ಉವಾಚ*

ಸ ಏವಂ ಬ್ರಹ್ಮಪುತ್ರೇಣ ಕುಮಾರೇಣಾತ್ಮಮೇಧಸಾ ।
ದರ್ಶಿತಾತ್ಮಗತಿಃ ಸಮ್ಯಕ್ಪ್ರಶಸ್ಯೋವಾಚ ತಂ ನೃಪಃ ॥ ೪೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಬ್ರಹ್ಮದೇವರ ಪುತ್ರರಾದ ಆತ್ಮಜ್ಞಾನಿ ಸನತ್ಕುಮಾರರಿಂದ ಈ ವಿಧವಾಗಿ ಆತ್ಮತತ್ತ್ವವನ್ನು ಉಪದೇಶಪಡೆದ ಪೃಥುಮಹಾರಾಜನು ಅವರನ್ನು ಬಹಳವಾಗಿ ಪ್ರಶಂಸಿಸುತ್ತಾ ಇಂತೆಂದನು. ॥ ೪೧ ॥

*ರಾಜೋವಾಚ*

ಕೃತೋ ಮೇಽನುಗ್ರಹಃ ಪೂರ್ವಂ ಹರಿಣಾಽಽರ್ತಾನುಕಂಪಿನಾ ।
ತಮಾಪಾದಯಿತುಂ ಬ್ರಹ್ಮನ್ ಭಗವನ್ಯೂಯಮಾಗತಾಃ ॥ ೪೨ ॥

ನಿಷ್ಪಾದಿತಶ್ಚ ಕಾರ್ತ್ಸ್ನ್ಯೇನ ಭಗವದ್ಭಿರ್ಘೃಣಾಲುಭಿಃ ।
ಸಾಧೂಚ್ಛಿಷ್ಟಂ ಹಿ ಮೇ ಸರ್ವಮಾತ್ಮನಾ ಸಹ ಕಿಂ ದದೇ ॥ ೪೩ ॥

ಪ್ರಾಣಾ ದಾರಾಃ ಸುತಾ ಬ್ರಹ್ಮನ್ಗೃಹಾಶ್ಚ ಸಪರಿಚ್ಛದಾಃ ।
ರಾಜ್ಯಂ ಬಲಂ ಮಹೀ ಕೋಶ ಇತಿ ಸರ್ವಂ ನಿವೇದಿತಮ್ ॥ ೪೪ ॥

ಸೈನಾಪತ್ಯಂ ಚ ರಾಜ್ಯಂ ಚ ದಂಡನೇತೃತ್ವಮೇವ ಚ ।
ಸರ್ವಲೋಕಾಧಿಪತ್ಯಂ ಚ ವೇದಶಾಸ್ತ್ರವಿದರ್ಹತಿ ॥ ೪೫ ॥

ಸ್ವಮೇವ ಬ್ರಾಹ್ಮಣೋ ಭುಂಕ್ತೇ ಸ್ವಂ ವಸ್ತೇ ಸ್ವಂ ದದಾತಿ ಚ ।
ತಸ್ಯೈವಾನುಗ್ರಹೇಣಾನ್ನಂ ಭುಂಜತೇ ಕ್ಷತ್ರಿಯಾದಯಃ ॥ ೪೬ ॥

ಯೈರೀದೃಶೀ ಭಗವತೋ ಗತಿರಾತ್ಮವಾದೇ
ಏಕಾಂತತೋ ನಿಗಮಿಭಿಃ ಪ್ರತಿಪಾದಿತಾ ನಃ ।
ತುಷ್ಯಂತ್ವದಭ್ರ ಕರುಣಾಃ ಸ್ವಕೃತೇನ ನಿತ್ಯಂ
ಕೋ ನಾಮ ತತ್ಪ್ರತಿಕರೋತಿ ವಿನೋದಪಾತ್ರಮ್ ॥ ೪೭ ॥

ಪೃಥುರಾಜನು ಹೇಳಿದನು – ಪೂಜ್ಯರೇ! ದೀನದಯಾಳುವಾದ ಶ್ರೀಹರಿಯು ಮೊದಲೇ ನನ್ನ ಮೇಲೆ ಕೃಪೆದೋರಿದ್ದನು. ಅದನ್ನು ಪೂರ್ಣಗೊಳಿಸಲೆಂದೇ ತಾವು ದಯಮಾಡಿಸಿರುವಿರಿ. ॥ ೪೨ ॥ ನೀವು ಅತ್ಯಂತ ಕರುಣಾಳುಗಳು. ಇಲ್ಲಿಗೆ ನೀವು ಬಂದಿರುವ ಉದ್ದೇಶವನ್ನು ಚೆನ್ನಾಗಿ ಸಂಪನ್ನವಾಗಿಸಿರುವಿರಿ. ಇದರ ಬದಲಿಗೆ ಈಗ ನಾನು ನಿಮಗೆ ಏನನ್ನು ಸಮರ್ಪಿಸಲಿ? ನನ್ನ ಬಳಿ ನನ್ನ ದೇಹ ಮತ್ತು ಅದರೊಡನೆ ಇರುವುದೆಲ್ಲವೂ ಮಹಾಪುರುಷರ ಪ್ರಸಾದವೇ ಆಗಿದೆ. ॥ ೪೩ ॥ ಬ್ರಾಹ್ಮಣೋತ್ತಮರೇ! ನನ್ನ ಬಳಿ ಇರುವ – ಪ್ರಾಣ, ಪತ್ನೀ, ಪುತ್ರರು, ಎಲ್ಲ ಬಗೆಯ ಸಾಮಗ್ರಿಗಳಿಂದ ತುಂಬಿರುವ ಅರಮನೆ, ರಾಜ್ಯ, ಸೇನೆ, ಪೃಥಿವಿ, ಭಂಡಾರ ಇವೆಲ್ಲವೂ ನಿಮ್ಮದೇ ಆಗಿವೆ. ಆದ್ದರಿಂದ ಇವೆಲ್ಲವನ್ನು ನಿಮ್ಮ ಅಡಿದಾವರೆಗಳಲ್ಲೇ ಸಮರ್ಪಿಸುತ್ತಿದ್ದೇವೆ. ॥ ೪೪ ॥ ವಾಸ್ತವವಾಗಿ ಯಾದರೋ ಸೇನಾಪತಿತ್ವ, ರಾಜ್ಯದ ಪಟ್ಟ, ದಂಡವನ್ನು ವಿಧಿಸುವ ಅಧಿಕಾರ, ಎಲ್ಲ ಲೋಕಗಳ ಆಧಿಪತ್ಯವನ್ನು ಪಡೆದು ನಿರ್ವಹಿಸುವ ಅಧಿಕಾರ, ವೇದ-ಶಾಸ್ತ್ರಗಳನ್ನರಿತ ಬ್ರಾಹ್ಮಣನಿಗೇ ಇದೆ. ॥ ೪೫ ॥ ಬ್ರಾಹ್ಮಣನು ತನ್ನದಾದುದನ್ನೇ ಉಣ್ಣುವನು, ತನ್ನದನ್ನೇ ಉಡುವನು, ತನ್ನದನ್ನೇ ದಾನಮಾಡುವನು. ಬೇರೆಕ್ಷತ್ರಿಯರೇ ಮುಂತಾದವರಾದರೋ ಅವರ ಕೃಪೆಯಿಂದಲೇ ತಿನ್ನಲು ಅನ್ನವನ್ನು ಪಡೆಯುತ್ತಾರೆ. ॥ ೪೬ ॥ ವೇದಪಾರಂಗತರಾದ ನೀವು ಅಧ್ಯಾತ್ಮತತ್ತ್ವವನ್ನು ವಿಚಾರಪೂರ್ವಕವಾಗಿ ತಿಳಿಸುತ್ತಾ 'ಶ್ರೀಭಗವಂತನಲ್ಲಿ ಏಕಾಂತಭಕ್ತಿಯನ್ನು ಇರಿಸುವುದೇ ಆತನನ್ನು ಪಡೆಯಲು ಪ್ರಧಾನವಾದ ಸಾಧನೆ' ಎಂಬುದನ್ನು ನಮಗೆ ನಿಶ್ಚಿತವಾಗಿ ತಿಳಿಸಿರುವಿರಿ. ನೀವು ಪರಮಕೃಪಾಳುಗಳು. ಈ ದೀನೋದ್ಧಾರ ಕಾರ್ಯವನ್ನು ಮಾಡುವುದರಿಂದಲೇ ನೀವು ಸಂತುಷ್ಟರಾಗಿರುವಿರಿ. ಈ ಉಪಕಾರಕ್ಕೆ ಬದಲಾಗಿ ಯಾರಾದರೂ ಏನನ್ನಾದರೂ ಕೊಡಬಲ್ಲರೇ? ಅದಕ್ಕಾಗಿ ಪ್ರತ್ಯುಪಕಾರ ಮಾಡುವೆನೆಂದು ಪ್ರಯತ್ನಿಸುವುದೂ ಹಾಸ್ಯಾಸ್ಪದವೇ ಆಗಿದೆ. ॥ ೪೭ ॥

*ಮೈತ್ರೇಯ ಉವಾಚ*

ತ ಆತ್ಮಯೋಗಪತಯ ಆದಿರಾಜೇನ ಪೂಜಿತಾಃ ।
ಶೀಲಂ ತದೀಯಂ ಶಂಸಂತಃ ಖೇಽಭೂವನ್ಮಿಷತಾಂ ನೃಣಾಮ್ ॥ ೪೮ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಮತ್ತೆ ಆದಿರಾಜನಾದ ಪೃಥುವು ಆತ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಸನಕಾದಿಗಳನ್ನು ಪೂಜಿಸಿದನು. ಅವರು ರಾಜನ ಶೀಲವನ್ನು ಕೊಂಡಾಡುತ್ತಾ ಎಲ್ಲರೂ ನೋಡುತ್ತಿರುವಂತೆ ಆಕಾಶಮಾರ್ಗವಾಗಿ ಹೊರಟುಹೋದರು. ॥ ೪೮ ॥

ವೈನ್ಯಸ್ತು ಧುರ್ಯೋ ಮಹತಾಂ ಸಂಸ್ಥಿತ್ಯಾಧ್ಯಾತ್ಮಶಿಕ್ಷಯಾ ।
ಆಪ್ತಕಾಮಮಿವಾತ್ಮಾನಂ ಮೇನ ಆತ್ಮನ್ಯವಸ್ಥಿತಃ ॥ ೪೯ ॥

ಕರ್ಮಾಣಿ ಚ ಯಥಾಕಾಲಂ ಯಥಾದೇಶಂ ಯಥಾಬಲಮ್ ।
ಯಥೋಚಿತಂ ಯಥಾವಿತ್ತಮಕರೋದ್ಬ್ರಹ್ಮಸಾತ್ಕೃತಮ್ ॥ ೫೦ ॥

ಫಲಂ ಬ್ರಹ್ಮಣಿ ವಿನ್ಯಸ್ಯ ನಿರ್ವಿಷಂಗಃ ಸಮಾಹಿತಃ ।
ಕರ್ಮಾಧ್ಯಕ್ಷಂ ಚ ಮನ್ವಾನ ಆತ್ಮಾನಂ ಪ್ರಕೃತೇಃ ಪರಮ್ ॥ ೫೧ ॥

ಗೃಹೇಷು ವರ್ತಮಾನೋऽಪಿ ಸ ಸಾಮ್ರಾಜ್ಯಶ್ರಿಯಾನ್ವಿತಃ ।
ನಾಸಜ್ಜತೇಂದ್ರಿಯಾರ್ಥೇಷು ನಿರಹಂಮತಿರರ್ಕವತ್ ॥ ೫೨ ॥

ಏವಮಧ್ಯಾತ್ಮಯೋಗೇನ ಕರ್ಮಾಣ್ಯನುಸಮಾಚರನ್ ।
ಪುತ್ರಾನುತ್ಪಾದಯಾಮಾಸ ಪಂಚಾರ್ಚಿಷ್ಯಾತ್ಮಸಮ್ಮತಾನ್ ॥ ೫೩ ॥

ವಿಜಿತಾಶ್ವಂ ಧೂಮ್ರಕೇಶಂ ಹರ್ಯಕ್ಷಂ ದ್ರವಿಣಂ ವೃಕಮ್ ।
ಸರ್ವೇಷಾಂ ಲೋಕಪಾಲಾನಾಂ ದಧಾರೈಕಃ ಪೃಥುರ್ಗುಣಾನ್ ॥ ೫೪ ॥

ಗೋಪೀಥಾಯ ಜಗತ್ ಸೃಷ್ಟೇಃ ಕಾಲೇ ಸ್ವೇ ಸ್ವೇऽಚ್ಯುತಾತ್ಮಕಃ ।
ಮನೋವಾಗ್‌ವೃತ್ತಿಭಿಃ ಸೌಮ್ಯೈರ್ಗುಣೈಃ ಸಂರಂಜಯನ್ ಪ್ರಜಾಃ ॥ ೫೫ ॥

ರಾಜೇತ್ಯಧಾನ್ನಾಮಧೇಯಂ ಸೋಮರಾಜ ಇವಾಪರಃ ।
ಸೂರ್ಯವದ್ವಿಸೃಜನ್ಗೃಹ್ಣನ್ ಪ್ರತಪಂಶ್ಚ ಭುವೋ ವಸು ॥ ೫೬ ॥

ದುರ್ಧರ್ಷಸ್ತೇಜಸೇವಾಗ್ನಿರ್ಮಹೇಂದ್ರ ಇವ ದುರ್ಜಯಃ ।
ತಿತಿಕ್ಷಯಾ ಧರಿತ್ರೀವ ದ್ಯೌರಿವಾಭೀಷ್ಟದೋ ನೃಣಾಮ್ ॥ ೫೭ ॥

ವರ್ಷತಿ ಸ್ಮ ಯಥಾಕಾಮಂ ಪರ್ಜನ್ಯ ಇವ ತರ್ಪಯನ್ ।
ಸಮುದ್ರ ಇವ ದುರ್ಬೋಧಃ ಸತ್ತ್ವೇನಾಚಲರಾಡಿವ ॥ ೫೮ ॥

ಮಹಾತ್ಮರಲ್ಲಿ ಅಗ್ರಗಣ್ಯನಾದ ಪೃಥುವು ಅವರಿಂದ ಆತ್ಮೋಪದೇಶವನ್ನು ಪಡೆದು ಚಿತ್ತದ ಏಕಾಗ್ರತೆಯಿಂದ ಆತ್ಮನಲ್ಲೇ ನೆಲೆಸಿದ ಕಾರಣ ತನ್ನನ್ನು ಕೃತಕೃತ್ಯನೆಂದೇ ಭಾವಿಸಿದನು. ॥ ೪೯॥ ಅವನು ಬ್ರಹ್ಮಾರ್ಪಣ ಬುದ್ಧಿಯಿಂದ ಸಮಯ, ಸ್ಥಾನ, ಶಕ್ತಿ, ನ್ಯಾಯ, ಧನ ಇವುಗಳನುಸಾರ ಎಲ್ಲ ಕರ್ಮಗಳನ್ನು ಮಾಡುತ್ತಿದ್ದನು. ॥ ೫೦ ॥ ಹೀಗೆ ಏಕಾಗ್ರಚಿತ್ತದಿಂದ ಸಮಸ್ತ ಕರ್ಮಗಳ ಫಲವನ್ನು ಪರಮಾತ್ಮನಿಗೆ ಅರ್ಪಿಸಿ, ಆತ್ಮವನ್ನು ಕರ್ಮಗಳ ಸಾಕ್ಷಿ ಹಾಗೂ ಪ್ರಕೃತಿಗಿಂತ ಅತೀತವೆಂದು ನೋಡುವುದರಿಂದ ಸಂಪೂರ್ಣವಾಗಿ ನಿರ್ಲಿಪ್ತನಾಗಿದ್ದನು. ॥ ೫೧ ॥ ಭಗವಾನ್ ಸೂರ್ಯನು ಎಲ್ಲೆಡೆಗಳಲ್ಲಿ ಪ್ರಕಾಶವನ್ನು ಚೆಲ್ಲಿದರೂ ವಸ್ತುಗಳ ಗುಣ-ದೋಷಗಳಿಂದ ನಿರ್ಲಿಪ್ತನಾಗಿರುವಂತೆ, ಪೃಥುಸಾರ್ವಭೌಮನು ಸಾಮ್ರಾಜ್ಯಲಕ್ಷ್ಮಿಯಿಂದ ಸಂಪನ್ನನಾಗಿ ಗೃಹಸ್ಥಾಶ್ರಮದಲ್ಲಿಯೇ ಇದ್ದರೂ ಅಹಂಕಾರಶೂನ್ಯನಾಗಿದ್ದುದರಿಂದ ಅವನು ಇಂದ್ರಿಯಗಳ ವಿಷಯದಲ್ಲಿ ಆಸಕ್ತನಾಗಲಿಲ್ಲ. ॥ ೫೨ ॥

ಪೃಥುಮಹಾರಾಜನು ಹೀಗೆ ಆತ್ಮನಿಷ್ಠನಾಗಿ ಎಲ್ಲ ಕರ್ತವ್ಯ-ಕರ್ಮಗಳನ್ನು ಯಥೋಚಿತವಾಗಿ ಮಾಡುತ್ತಾ ತನ್ನ ಮಡದಿಯಾದ ಅರ್ಚಿಯಲ್ಲಿ ತನಗೆ ಅನುರೂಪರಾದ ಐದು ಪುತ್ರರನ್ನು ಪಡೆದನು. ॥ ೫೩ ॥ ವಿಜಿತಾಶ್ವ, ಧೂಮ್ರಕೇಶ, ಹರ್ಯಕ್ಷ, ದ್ರವಿಣ, ವೃಕ ಎಂಬ ಹೆಸರು ಅವರದಾಗಿತ್ತು. ಮಹಾರಾಜನಾದ ಪೃಥುವು ಭಗವಂತನ ಅಂಶನೇ ಆಗಿದ್ದನು. ಅವನು ಕಾಲ-ಕಾಲಗಳಲ್ಲಿ ಆವಶ್ಯಕತೆಗೆ ಅನುಗುಣವಾಗಿ ಜಗತ್ತಿನ ಪ್ರಾಣಿಗಳನ್ನು ರಕ್ಷಿಸುವುದಕ್ಕಾಗಿ ತಾನೊಬ್ಬನೇ ಎಲ್ಲ ಲೋಕಪಾಲಕರ ಗುಣಗಳನ್ನು ಧರಿಸಿದ್ದನು. ತನ್ನ ಉದಾರವಾದ ಮನಸ್ಸು, ಪ್ರಿಯವೂ-ಹಿತಕರವೂ ಆದ ಸವಿಮಾತು, ಮನೋಹರವಾದ ಮೂರ್ತಿ ಮತ್ತು ಸೌಮ್ಯವಾದ ಗುಣಗಳಿಂದ ಪ್ರಜಾರಂಜನೆಯನ್ನು ಮಾಡುತ್ತಿದ್ದುದರಿಂದ ಮತ್ತೊಬ್ಬ ಚಂದ್ರನಂತೆ 'ರಾಜಾ' ಎಂಬ ಹೆಸರನ್ನು ಅನ್ವರ್ಥಗೊಳಿಸಿದ್ದನು. ಸೂರ್ಯನು ಬೇಸಿಗೆಯ ಕಾಲದಲ್ಲಿ ಪೃಥಿವಿಯಿಂದ ನೀರನ್ನು ಸೆಳೆದುಕೊಂಡು ಮಳೆಗಾಲದಲ್ಲಿ ಅದನ್ನು ಮಳೆಯರೂಪದಲ್ಲಿ ಭೂಮಿಗೆ ಸುರಿಸುವನು ಹಾಗೂ ತನ್ನ ಕಿರಣಗಳಿಂದ ಎಲ್ಲರಿಗೆ ಬಿಸಿಲನ್ನು ಉಂಟುಮಾಡುತ್ತಾನೆ. ಹಾಗೆಯೇ ಪೃಥುಚಕ್ರವರ್ತಿಯು ಪ್ರಜೆಗಳಿಂದ ಕಪ್ಪ-ಕಾಣಿಕೆಗಳನ್ನು ತೆಗೆದುಕೊಂಡು ಅದನ್ನು ದುರ್ಭಿಕ್ಷವೇ ಮುಂತಾದ ಕಷ್ಟಕಾಲದಲ್ಲಿ ಕೊಡುಗೈಯಿಂದ ಪ್ರಜೆಗಳ ಹಿತದಲ್ಲಿ ತೊಡಗಿಸುತ್ತಿದ್ದನು. ಹೀಗೆ ಎಲ್ಲರ ಮೇಲೆಯೂ ತನ್ನ ಪ್ರಭಾವವನ್ನು ಬೀರುತ್ತಿದ್ದನು. ॥ ೫೪-೫೬ ॥ ಅವನು ಅಗ್ನಿಯಂತೆ ದುರ್ಧರ್ಷನೂ, ಇಂದ್ರನಂತೆ ಅಜೇಯನೂ, ಪೃಥಿವಿಯಂತೆ ಕ್ಷಮಾಶೀಲನೂ, ಸ್ವರ್ಗದಂತೆ ಸಮಸ್ತ ಮನುಷ್ಯರ ಎಲ್ಲ ಕಾಮನೆಗಳನ್ನು ಪೂರೈಸುತ್ತಿದ್ದನು. ॥ ೫೭ ॥ ಕಾಲ-ಕಾಲಗಳಲ್ಲಿ ಪ್ರಜೆಗಳನ್ನು, ತೃಪ್ತಿಪಡಿಸಲಿಕ್ಕಾಗಿ ಮೇಘದಂತೆ ಧಾರಾಳವಾಗಿ ಅವರೆಲ್ಲರ ಅಭೀಷ್ಟಪದಾರ್ಥಗಳನ್ನು ಮುಕ್ತಹಸ್ತದಿಂದ ಸೂರೆಗೊಳಿಸುತಿದ್ದನು. ಅವನು ಸಮುದ್ರದಂತೆ ಗಂಭೀರನೂ, ಪರ್ವತರಾಜ ಸುಮೇರುವಿನಂತೆ ಧೈರ್ಯಶಾಲಿಯೂ ಆಗಿದ್ದನು. ॥ ೫೮ ॥

ಪೃಥುಮಹಾರಾಜನು ದುಷ್ಟರನ್ನು ದಮನಮಾಡುವುದರಲ್ಲಿ ಯಮಧರ್ಮನಂತೆಯೂ, ಆಶ್ಚರ್ಯಪೂರ್ಣವಾದ ವಸ್ತುಗಳ

ಧರ್ಮರಾಡಿವ ಶಿಕ್ಷಾಯಾಮಾಶ್ಚರ್ಯೇ ಹಿಮವಾನಿವ ।
ಕುಬೇರ ಇವ ಕೋಶಾಢ್ಯೋ ಗುಪ್ತಾರ್ಥೋ ವರುಣೋ ಯಥಾ ॥ ೫೯ ॥

ಮಾತರಿಶ್ವೇವ ಸರ್ವಾತ್ಮಾ ಬಲೇನ ಸಹಸೌಜಸಾ ।
ಅವಿಷಹ್ಯತಯಾ ದೇವೋ ಭಗವಾನ್ ಭೂತರಾಡಿವ ॥ ೬೦ ॥

ಕಂದರ್ಪ ಇವ ಸೌಂದರ್ಯೇ ಮನಸ್ವೀ ಮೃಗರಾಡಿವ ।
ವಾತ್ಸಲ್ಯೇ ಮನುವನ್ನೃಣಾಂ ಪ್ರಭುತ್ವೇ ಭಗವಾನಜಃ ॥ ೬೧ ॥

ಬೃಹಸ್ಪತಿರ್ಬ್ರಹ್ಮವಾದೇ ಆತ್ಮವತ್ತ್ವೇ ಸ್ವಯಂ ಹರಿಃ ।
ಭಕ್ತ್ಯಾ ಗೋಗುರುವಿಪ್ರೇಷು ವಿಷ್ವಕ್ಸೇನಾನುವರ್ತಿಷು ।
ಹ್ರಿಯಾ ಪ್ರಶ್ರಯಶೀಲಾಭ್ಯಾಮಾತ್ಮತುಲ್ಯಃ ಪರೋದ್ಯಮೇ ॥ ೬೨ ॥

ಕೀರ್ತ್ಯೋರ್ಧ್ವಗೀತಯಾ ಪುಂಭಿಸ್ತ್ರೈಲೋಕ್ಯೇ ತತ್ರ ತತ್ರ ಹ ।
ಪ್ರವಿಷ್ಟಃ ಕರ್ಣರಂಧ್ರೇಷು ಸ್ತ್ರೀಣಾಂ ರಾಮಃ ಸತಾಮಿವ ॥ ೬೩ ॥

ಸಂಗ್ರಹದಲ್ಲಿ ಹಿಮಾಲಯದಂತೆಯೂ, ಭಂಡಾರದ ಸಮೃದ್ಧಿಯಲ್ಲಿ ಕುಬೇರನಂತೆಯೂ, ಧನವನ್ನು ಗುಪ್ತವಾಗಿಡುವುದರಲ್ಲಿ ವರುಣನಂತೆಯೂ ಆಗಿದ್ದನು. ॥ ೫೯ ॥ ಶಾರೀರಿಕ ಬಲದಲ್ಲಿ ಇಂದ್ರಿಯಗಳ ಪಾಟವದಲ್ಲಿ, ಪರಾಕ್ರಮದಲ್ಲಿ, ಎಲ್ಲೆಡೆ ಸಂಚರಿಸುವ ವಾಯುವಿನಂತೆಯೂ, ಸಹಿಸಲಸದಳವಾದ ತೇಜಸ್ಸಿನಲ್ಲಿ ಭಗವಾನ್ ಶಂಕರನಂತೆಯೇ ಆಗ್ಗಿದನು. ॥ ೬೦॥ ಸೌಂದರ್ಯದಲ್ಲಿ ಮನ್ಮಥನಂತೆಯೂ, ಉತ್ಸಾಹದಲ್ಲಿ ಸಿಂಹದಂತೆಯೂ, ವಾತ್ಸಲ್ಯದಲ್ಲಿ ಮನುವಿನಂತೆಯೂ, ಮನುಷ್ಯರ ಆಧಿಪತ್ಯದಲ್ಲಿ ಸರ್ವಸಮರ್ಥ ಬ್ರಹ್ಮದೇವರಿಗೆ ಸಮಾನನಾಗಿದ್ದನು. ॥ ೬೧ ॥ ಬ್ರಹ್ಮವಿಚಾರದಲ್ಲಿ ಬೃಹಸ್ಪತಿಯಂತೆಯೂ, ಇಂದ್ರಿಯ ವಿಜಯದಲ್ಲಿ ಸಾಕ್ಷಾತ್ ಶ್ರೀಹರಿಯನ್ನು ಹೋಲುತ್ತಿದ್ದನು. ಗೋವುಗಳು, ಬ್ರಾಹ್ಮಣರು, ಗುರುಹಿರಿಯರು ಮತ್ತು ಭಗವದ್ಭಕ್ತರ ವಿಷಯದಲ್ಲಿ ಭಕ್ತಿ, ಲಜ್ಜೆ, ವಿನಯಶೀಲತೆ, ಪರೋಪಕಾರಗಳೇ ಮುಂತಾದ ಗುಣಸಂಪತ್ತಿನಲ್ಲಿ ತನಗೆ-ತಾನೇ ಸಮಾನನಾಗಿದ್ದನು ; ಅನುಪಮನಾಗಿದ್ದನು. ॥ ೬೨ ॥ ಮೂರು ಲೋಕಗಳಲ್ಲಿಯೂ ಅವನ ಕೀರ್ತಿಯು ಉಚ್ಚಸ್ವರದಲ್ಲಿ ಹಾಡಲ್ಪಡುತ್ತಿತ್ತು. ಇದರಿಂದ ಅವನು ಸತ್ಪುರುಷರ ಹೃದಯಗಳಲ್ಲಿ ಶ್ರೀರಾಮನು ಹೇಗೋ ಹಾಗೆಯೇ ಸ್ತ್ರೀ ಪುರುಷರೆಲ್ಲರ ಕಿವಿಗಳಲ್ಲಿ ಪ್ರವೇಶಪಡೆದು ಕೊಂಡಿದ್ದನು. (ಅಂದರೆ ಎಲ್ಲೆಡೆ ಅವನ ಕೀರ್ತಿ ಕರ್ಣಾಕರ್ಣಿಯಾಗಿತ್ತು.) ॥ ೬೩ ॥

*ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೨೨ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಪೃಥುಚರಿತೇ ದ್ವಾವಿಂಶೋಽಧ್ಯಾಯಃ ॥ ೨೨ ॥**

# ಇಪ್ಪತ್ತಮೂರನೆಯ ಅಧ್ಯಾಯ

## ಪೃಥುಮಹಾರಾಜನ ತಪಸ್ಸು ಮತ್ತು ಪರಮಪದದ ಪ್ರಾಪ್ತಿ

*ಮೈತ್ರೇಯ ಉವಾಚ*

ದೃಷ್ಟ್ವಾಽಽತ್ಮಾನಂ ಪ್ರವಯಸಮೇಕದಾ ವೈನ ಆತ್ಮವಾನ್ ।
ಆತ್ಮನಾ ವರ್ಧಿತಾಶೇಷಸ್ವಾನುಸರ್ಗಃ ಪ್ರಜಾಪತಿಃ ॥ ೧ ॥

ಜಗತಸ್ತಸ್ಥುಷಶ್ಚಾಪಿ ವೃತ್ತಿದೋ ಧರ್ಮಭೃತ್ಸತಾಮ್ ।
ನಿಷ್ಪಾದಿತೇಶ್ವರಾದೇಶೋ ಯದರ್ಥಮಿಹ ಜಜ್ಞಿವಾನ್ ॥ ೨ ॥

ಆತ್ಮಜೇಷ್ವಾತ್ಮಜಾಂ ನ್ಯಸ್ಯ ವಿರಹಾದ್ರುದತೀಮಿವ ।
ಪ್ರಜಾಸು ವಿಮನಸ್ಸ್ವೇಕಃ ಸದಾರೋಽಗಾತ್ತಪೋವನಮ್ ॥ ೩ ॥

ಶ್ರೀಮೈತ್ರೇಯರು ಹೇಳುತ್ತಾರೆ – ಪ್ರಜಾಪಾಲಕನಾದ ಪೃಥುವು ಹೀಗೆ ತನ್ನ ಪ್ರಜೆಗಳಿಗಾಗಿ ನಗರ ಗ್ರಾಮಾದಿ ಸರ್ವವ್ಯವಸ್ಥೆಗಳನ್ನೂ ತಾನೇ ಮಾಡಿಕೊಟ್ಟು, ಸ್ಥಾವರ-ಜಂಗಮರೂಪವಾದ ಎಲ್ಲ ಪ್ರಾಣಿಗಳಿಗೂ ಜೀವನವೃತ್ತಿಗಳನ್ನು ಕಲ್ಪಿಸಿ ಸತ್ಪುರುಷರ ಧರ್ಮವನ್ನು ಪಾಲಿಸಿದನು. ತಾನು ಯಾವ ಕಾರಣಕ್ಕಾಗಿ ಜನಿಸಿ ದ್ದೇನೋ ಆ ಭಗವದಾಜ್ಞೆಯನ್ನು ನೆರವೇರಿಸಿದಂತಾಯಿತು ಎಂದು ಮನಗಂಡನು. ತನಗೆ ವೃದ್ಧಾಪ್ಯವು ಬಂದಿದೆ ; ಇನ್ನು ನನಗೆ ರಾಜ್ಯದ ಕರ್ತವ್ಯವಿಲ್ಲ ಎಂಬುದನ್ನೂ ಅರಿತು ಅವನು ತನ್ನ ವಿರಹದಲ್ಲಿ ಅಳುತ್ತಿರುವ ಪುತ್ರಿಯ ಸ್ಥಾನದಲ್ಲಿದ್ದ ಪೃಥಿವಿಯನ್ನು ಪುತ್ರರಿಗೆ ಒಪ್ಪಿಸಿ, ಪ್ರಜಾಜನರು ದುಃಖದಿಂದ ಮರುಗುತ್ತಿರುವಾಗಲೇ ಅವರನ್ನು ಬಿಟ್ಟು ಪತ್ನೀಸಹಿತನಾಗಿ ತಾನೊಬ್ಬನೇ ತಪೋವನಕ್ಕೆ ತೆರಳಿದನು. ॥ ೧-೩ ॥

ತತ್ರಾಪ್ಯದಾಭ್ಯನಿಯಮೋ ವೈಖಾನಸಸುಸಮ್ಮತೇ ।
ಆರಬ್ಧ ಉಗ್ರತಪಸಿ ಯಥಾ ಸ್ವವಿಜಯೇ ಪುರಾ
॥ ೪ ॥

ಕಂದಮೂಲಫಲಾಹಾರಃ ಶುಷ್ಕಪರ್ಣಾಶನಃ ಕ್ವಚಿತ್ ।
ಅಬ್ಭಕ್ಷಃ ಕತಿಚಿತ್ಪಕ್ಷಾನ್ವಾಯುಭಕ್ಷಸ್ತತಃ ಪರಮ್
॥ ೫ ॥

ಗ್ರೀಷ್ಮೇ ಪಂಚತಪಾ ವೀರೋ ವರ್ಷಾಸ್ವಾಸಾರಷಾಣ್ಮುನಿಃ ।
ಆಕಂಠಮಗ್ನಃ ಶಿಶಿರೇ ಉದಕೇ ಸ್ಥಂಡಿಲೇಶಯಃ
॥ ೬ ॥

ತಿತಿಕ್ಷುರ್ಯತವಾಗ್ದಾಂತ ಊರ್ಧ್ವರೇತಾ ಜಿತಾನಿಲಃ ।
ಆರಿರಾಧಯಿಷುಃ ಕೃಷ್ಣಮಚರತ್ತಪ ಉತ್ತಮಮ್
॥ ೭ ॥

ತೇನ ಕ್ರಮಾನುಸಿದ್ಧೇನ ಧ್ವಸ್ತಕರ್ಮಾಮಲಾಶಯಃ ।
ಪ್ರಾಣಾಯಾಮೈಃ ಸಂನಿರುದ್ಧಷಡ್ವರ್ಗಶ್ಛಿನ್ನಬಂಧನಃ
॥ ೮ ॥

ಸನತ್ಕುಮಾರೋ ಭಗವಾನ್ಯದಾಹಾಧ್ಯಾತ್ಮಿಕಂ ಪರಮ್ ।
ಯೋಗಂ ತೇನೈವ ಪುರುಷಮಭಜತ್ಪುರುಷರ್ಷಭಃ
॥ ೯ ॥

ಭಗವದ್ಧರ್ಮಿಣಃ ಸಾಧೋಃ ಶ್ರದ್ಧಯಾ ಯತತಃ ಸದಾ ।
ಭಕ್ತಿರ್ಭಗವತಿ ಬ್ರಹ್ಮಣ್ಯನನ್ಯವಿಷಯಾಭವತ್
॥ ೧೦ ॥

ತಸ್ಯಾನಯಾ ಭಗವತಃ ಪರಿಕರ್ಮಶುದ್ಧ-
ಸತ್ತ್ವಾತ್ಮನಸ್ತದನು ಸಂಸ್ಮರಣಾನುಪೂರ್ತ್ಯಾ ।
ಜ್ಞಾನಂ ವಿರಕ್ತಿಮದಭೂನ್ನಿಶಿತೇನ ಯೇನ
ಚಿಚ್ಛೇದ ಸಂಶಯಪದಂ ನಿಜಜೀವಕೋಶಮ್ ॥ ೧೧ ॥

ಛಿನ್ನಾನ್ಯಧೀರಧಿಗತಾತ್ಮಗತಿರ್ನಿರೀಹ-
ಸ್ತತ್ತತ್ಯಜೇಽಚ್ಛಿನದಿದಂ ವಯುನೇನ ಯೇನ ।
ತಾವನ್ನ ಯೋಗಗತಿಭಿರ್ಯತಿರಪ್ರಮತ್ತೋ
ಯಾವದ್ಗದಾಗ್ರಜಕಥಾಸು ರತಿಂ ನ ಕುರ್ಯಾತ್ ॥ ೧೨ ॥

ಹಿಂದೆ ಗೃಹಸ್ಥಾಶ್ರಮದಲ್ಲಿದ್ದಾಗ ವ್ರತನಿಷ್ಠನಾಗಿ ಭೂಮಿಯನ್ನು ಜಯಿಸುವುದರಲ್ಲಿ ತೊಡಗಿದ್ದನೋ, ಹಾಗೆಯೇ ಈಗಲೂ ವಾನಪ್ರಸ್ಥಾಶ್ರಮದ ನಿಯಮಾನುಸಾರ ಕಠೋರ ತಪಸ್ಸಿನಲ್ಲಿ ತೊಡಗಿದನು. ॥ ೪ ॥ ಆ ತಪಸ್ಸಿನಲ್ಲಿ ಕೆಲವು ದಿನಗಳ ಕಾಲ ಗಡ್ಡೆ-ಗೆಣಸು, ಹಣ್ಣು-ಹಂಪಲುಗಳನ್ನು ಮಾತ್ರವೇ ತಿನ್ನುತ್ತಿದ್ದನು. ಕೆಲವು ದಿನಗಳು ಒಣಗಿದ ಎಲೆಗಳನ್ನು ತಿನ್ನುತ್ತಾ, ಮತ್ತೆ ಕೆಲವುದಿನ ಕೇವಲ ನೀರನ್ನು ಕುಡಿಯುತ್ತಲೂ, ಕೆಲವು ದಿವಸಗಳ ಕಾಲ ಕೇವಲ ಗಾಳಿಯನ್ನೇ ಸೇವಿಸಿ ತಪಸ್ಸು ಮಾಡುತ್ತಿದ್ದನು. ॥ ೫ ॥ ಮುನಿವೃತ್ತಿಯಲ್ಲಿದ್ದ ವೀರವರನು ಬೇಸಿಗೆಯಲ್ಲಿ ನಾಲ್ಕು ದಿಕ್ಕುಗಳಲ್ಲಿ ಅಗ್ನಿಗಳು ಮತ್ತು ಮೇಲ್ಗಡೆಯಲ್ಲಿ ಸುಡುತ್ತಿರುವ ಸೂರ್ಯ ಹೀಗೆ ಪಂಚಾಗ್ನಿಗಳನ್ನು ಸೇವಿಸುತ್ತಿದ್ದನು. ಮಳೆಗಾಲದಲ್ಲಿ ಬಯಲಿನಲ್ಲಿದ್ದು ತನ್ನ ಮೇಲೆ ಸುರಿಯುತ್ತಿದ್ದ ಮಳೆಯ ನೀರನ್ನು ಸಹಿಸುತ್ತಿದ್ದನು. ಚಳಿಗಾಲದಲ್ಲಿ ಕತ್ತಿನವರೆಗೆ ನೀರಿನಲ್ಲಿ ನಿಂತು ತಪಸ್ಸು ಮಾಡುತ್ತಿದ್ದನು. ಅವನು ಪ್ರತಿದಿನವೂ ಮಣ್ಣಿನ ವೇದಿಕೆಯಲ್ಲೇ ಮಲಗುತ್ತಿದ್ದನು. ॥ ೬ ॥ ಅವನು ಚಳಿ-ಸೆಕೆಗಳೇ ಮುಂತಾದ ದ್ವಂದ್ವಗಳನ್ನು ಸಹಿಸುತ್ತಾ ಮಾತು-ಮನಸ್ಸುಗಳನ್ನು ಸಂಯಮಿಸಿಕೊಂಡು ಬ್ರಹ್ಮಚರ್ಯವನ್ನು ಪಾಲಿಸುತ್ತಾ, ಪ್ರಾಣಗಳನ್ನು ತನ್ನ ಅಧೀನಪಡಿಸಿಕೊಂಡನು. ಹೀಗೆ ಶ್ರೀಕೃಷ್ಣನನ್ನು ಆರಾಧಿಸುವುದಕ್ಕಾಗಿ ಅವನು ಉತ್ತಮವಾದ ತಪಸ್ಸನ್ನು ಮಾಡಿದನು. ॥ ೭ ॥ ಈ ಕ್ರಮದಿಂದ ಅವನ ತಪಸ್ಸು ಬೆಳವಣಿಗೆ ಹೊಂದಿ ಸಿದ್ಧಿಸುತ್ತಿರಲಾಗಿ, ಆತನ ಚಿತ್ತವು ಸಂಪೂರ್ಣವಾಗಿ ಶುದ್ಧಿಹೊಂದಿತು. ಪ್ರಾಣಾಯಾಮಗಳ ಮೂಲಕ ಮನಸ್ಸು ಮತ್ತು ಇಂದ್ರಿಯಗಳು ನಿರುದ್ಧವಾಗಿ ಕರ್ಮವಾಸನೆಗಳಿಂದ ಉಂಟಾದ ಕಟ್ಟುಗಳು ಬಿಟ್ಟುಹೋದುವು. ॥ ೮ ॥ ಆಗ ಭಗವಾನ್ ಸನತ್ಕುಮಾರರು ಉಪದೇಶಿಸಿದ್ದ ಶ್ರೇಷ್ಠತಮವಾದ ಅಧ್ಯಾತ್ಮ ಯೋಗದ ಶಿಕ್ಷಣದಂತೆಯೇ ಪೃಥುವು ಪುರುಷೋತ್ತಮನಾದ ಶ್ರೀಹರಿಯನ್ನು ಆರಾಧಿಸತೊಡಗಿದನು. ॥ ೯ ॥ ಹೀಗೆ ಭಗವತ್ಪರಾಯಣನಾಗಿ ಶ್ರದ್ಧೆಯಿಂದ ಸದಾಚಾರವನ್ನು ಪಾಲಿಸುತ್ತಾ ನಿರಂತರವಾಗಿ ಸಾಧನೆಮಾಡಿದ್ದರಿಂದ ಅವನಿಗೆ ಪರಬ್ರಹ್ಮ ಪರಮಾತ್ಮನಲ್ಲಿ ಅನನ್ಯಭಕ್ತಿಯು ಬೇರೂರಿತು. ॥ ೧೦ ॥

ಈ ವಿಧವಾದ ಭಗವದುಪಾಸನೆಯಿಂದ ಅವನ ಅಂತಃಕರಣವು ಶುದ್ಧ ಸತ್ತ್ವಮಯವಾಯಿತು. ನಿರಂತರ ಭಗವಚ್ಚಿಂತನದ ಪ್ರಭಾವದಿಂದ ಉಂಟಾದ ಆ ಅನನ್ಯಭಕ್ತಿಯಿಂದ ಅವನಿಗೆ ವೈರಾಗ್ಯಸಹಿತ ಜ್ಞಾನವು ಸಿದ್ಧಿಸಿತು. ಮತ್ತೆ ತೀವ್ರವಾದ ಜ್ಞಾನದ ಮೂಲಕ ಸಂಶಯ-ವಿಪರ್ಯಯಗಳಿಗೆ ಆಸರೆಯಾದ ಜೀವನ ಉಪಾಧಿಭೂತ ಅಹಂಕಾರವನ್ನು ನಾಶಪಡಿಸಿದನು. ॥ ೧೧ ॥ ಅನಂತರ ದೇಹಾತ್ಮಬುದ್ಧಿಯು ತೊಲಗಿ ಪರಮಾತ್ಮನಾದ ಶ್ರೀಕೃಷ್ಣನಲ್ಲಿ ಅನುಭೂತಿ ಉಂಟಾದಾಗ ಎಲ್ಲ ಬಗೆಯ ಸಿದ್ಧಿ ಮುಂತಾದವುಗಳ ವಿಷಯಗಳಲ್ಲಿಯೂ ಉದಾಸೀನತೆ ಉಂಟಾದ ಕಾರಣ ತನ್ನ ಜೀವಕ್ಕೆ ಆವರಣವಾಗಿದ್ದ ಉಪಾಧಿಯನ್ನು ನಾಶಪಡಿಸುವಂತಹ ಜ್ಞಾನದ ಸಾಧನೆಯನ್ನು ಅವನು ನಿಲ್ಲಿಸಿಬಿಟ್ಟನು. ಏಕೆಂದರೆ, ಸಾಧಕನಿಗೆ ಯೋಗಮಾರ್ಗದ ಮೂಲಕ ಶ್ರೀಕೃಷ್ಣಕಥಾಮೃತದಲ್ಲಿ ಅನುರಾಗ ಉಂಟಾಗುವವರೆಗೆ ಕೇವಲ ಯೋಗ ಸಾಧನದಿಂದ ಮೋಹಜನಿತ ಪ್ರಮಾದವು ದೂರವಾಗುವುದಿಲ್ಲ; ಭ್ರಮೆಯು ಅಳಿಯುವುದಿಲ್ಲ. ॥ ೧೨ ॥

ಏವಂ ಸ ವೀರಪ್ರವರಃ ಸಂಯೋಜ್ಯಾತ್ಮಾನಮಾತ್ಮನಿ ।
ಬ್ರಹ್ಮಭೂತೋ ದೃಢಂ ಕಾಲೇ ತತ್ಯಾಜ ಸ್ವಂ ಕಲೇವರಮ್ ॥ ೧೩ ॥

ಸಂಪೀಡ್ಯ ಪಾಯುಂ ಪಾರ್ಷ್ಣಿಭ್ಯಾಂ
ವಾಯುಮುತ್ಸಾರಯನ್‌ಛನೈಃ ।
ನಾಭ್ಯಾಂ ಕೋಷ್ಠೇಷ್ವವಸ್ಥಾಪ್ಯ
ಹೃದುರಃಕಂಠಶೀರ್ಷಣಿ ॥ ೧೪ ॥

ಉತ್ಸರ್ಪಯಂಸ್ತು ತಂ ಮೂರ್ಧ್ನಿ
ಕ್ರಮೇಣಾವೇಶ್ಯ ನಿಸ್ಪೃಹಃ ।
ವಾಯುಂ ವಾಯೌ ಕ್ಷಿತೌ ಕಾಯಂ
ತೇಜಸ್ತೇಜಸ್ಯಯೂಯುಜತ್ ॥ ೧೫ ॥

ಖಾನ್ಯಾಕಾಶೇ ದ್ರವಂ ತೋಯೇ ಯಥಾಸ್ಥಾನಂ ವಿಭಾಗಶಃ ।
ಕ್ಷಿತಿಮಂಭಸಿ ತತ್ತೇಜಸ್ಯದೋ ವಾಯೌ ನಭಸ್ಯಮುಮ್ ॥ ೧೬ ॥

ಇಂದ್ರಿಯೇಷು ಮನಸ್ತಾನಿ ತನ್ಮಾತ್ರೇಷು ಯಥೋದ್ಭವಮ್ ।
ಭೂತಾದಿನಾಮೂನ್ಯುತ್ಕೃಷ್ಯ ಮಹತ್ಯಾತ್ಮನಿ ಸಂದಧೇ ॥ ೧೭ ॥

ತಂ ಸರ್ವಗುಣವಿನ್ಯಾಸಂ ಜೀವೇ ಮಾಯಾಮಯೇ ನ್ಯಧಾತ್ ।
ತಂ ಚಾನುಶಯಮಾತ್ಮಸ್ಥಮಸಾವನುಶಯೀ ಪುಮಾನ್ ।
ಜ್ಞಾನವೈರಾಗ್ಯವೀರ್ಯೇಣ ಸ್ವರೂಪಸ್ಥೋಽಜಹಾತ್ಪ್ರಭುಃ ॥ ೧೮ ॥

ಅರ್ಚಿರ್ನಾಮ ಮಹಾರಾಜ್ಞೀ ತತ್ಪತ್ನ್ಯನುಗತಾ ವನಮ್ ।
ಸುಕುಮಾರ್ಯತದರ್ಹಾ ಚ ಯತ್ಪದ್ಭ್ಯಾಂ ಸ್ಪರ್ಶನಂ ಭುವಃ ॥ ೧೯ ॥

ಅತೀವ ಭರ್ತುರ್ವ್ರತಧರ್ಮನಿಷ್ಠಯಾ
ಶುಶ್ರೂಷಯಾ ಚಾರಷದೇಹಯಾತ್ರಯಾ ।
ನಾವಿಂದತಾರ್ತಿಂ ಪರಿಕರ್ಶಿತಾಪಿ ಸಾ
ಪ್ರೇಯಸ್ಕರಸ್ಪರ್ಶನಮಾನನಿರ್ವೃತಿಃ ॥ ೨೦ ॥

ದೇಹಂ ವಿಪನ್ನಾಖಿಲಚೇತನಾದಿಕಂ
ಪತ್ಯುಃ ಪೃಥಿವ್ಯಾ ದಯಿತಸ್ಯ ಚಾತ್ಮನಃ ।
ಆಲಕ್ಷ್ಯ ಕಿಂಚಿಚ್ಚ ವಿಲಪ್ಯ ಸಾ ಸತೀ
ಚಿತಾಮಥಾರೋಪಯದದ್ರಿಸಾನುನಿ ॥ ೨೧ ॥

ಮತ್ತೆ ಅಂತ್ಯಕಾಲವು ಸಮೀಪಿಸಿದಾಗ ವೀರವರನಾದ ಪೃಥುವು ತನ್ನ ಚಿತ್ತವನ್ನು ಪರಮಾತ್ಮನಲ್ಲಿ ದೃಢವಾಗಿ ನೆಲೆಗೊಳಿಸಿ, ಬ್ರಹ್ಮಸ್ಥಿತಿಯಲ್ಲಿ ಬ್ರಹ್ಮಭೂತನಾಗಿ ತನ್ನ ಶರೀರವನ್ನು ತೊರೆದುಬಿಟ್ಟನು. ॥ ೧೩ ॥ ಅವನು ಹಿಮ್ಮಡಿಯಿಂದ ಗುದದ್ವಾರವನ್ನು ತಡೆದು, ಮೂಲಾಧಾರದಲ್ಲಿರುವ ಪ್ರಾಣವಾಯುವನ್ನು ನಿಧಾನವಾಗಿ ಮೇಲಕ್ಕೆ ಏರಿಸುತ್ತಾ ಕ್ರಮವಾಗಿ ನಾಭಿ, ಹೃದಯ, ಕಂಠ ಮತ್ತು ಭ್ರೂಮಧ್ಯದಲ್ಲಿ ನಿಲ್ಲಿಸಿದನು. ॥ ೧೪ ॥ ಅಲ್ಲಿಂದ ಅದನ್ನು ಮೇಲಕ್ಕೆ ಸೆಳೆದು ಬ್ರಹ್ಮರಂಧ್ರದಲ್ಲಿ ಸ್ಥಾಪಿಸಿದನು. ಈಗ ಅವನಿಗೆ ಯಾವ ಸಾಂಸಾರಿಕ ಭೋಗಗಳ ಆಸೆಯೂ ಉಳಿಯಲಿಲ್ಲ. ಮತ್ತೆ ಆ ವಾಯುವನ್ನು ಸಮಷ್ಟಿ ವಾಯುವಿನಲ್ಲಿಯೂ ಪಾರ್ಥಿವ ಶರೀರವನ್ನು ಪೃಥಿವಿಯಲ್ಲಿಯೂ, ಶರೀರದ ತೇಜವನ್ನು ಸಮಷ್ಟಿತೇಜದಲ್ಲಿಯೂ ಲೀನಗೊಳಿಸಿಬಿಟ್ಟನು. ॥ ೧೫ ॥ ಹೃದಯಾಕಾಶಾದಿ ದೇಹಾವಚ್ಛಿನ್ನ ಆಕಾಶವನ್ನು ಮಹಾಕಾಶದಲ್ಲಿಯೂ, ರುಧಿರಾದಿ ನೀರಿನ ಅಂಶವನ್ನು ಸಮಷ್ಟಿ ಜಲದಲ್ಲಿ ಲೀನಗೊಳಿಸಿದನು. ಹೀಗೆಯೇ ಮತ್ತೆ ಪೃಥಿವಿಯನ್ನು ಜಲದಲ್ಲಿಯೂ, ಜಲವನ್ನು ತೇಜದಲ್ಲಿಯೂ, ತೇಜವನ್ನು ವಾಯುವಿನಲ್ಲಿಯೂ, ವಾಯುವನ್ನು ಆಕಾಶದಲ್ಲಿಯೂ ಲೀನಗೊಳಿಸಿದನು. ॥ ೧೬ ॥ ಅನಂತರ ಮನಸ್ಸನ್ನು (ಸವಿಕಲ್ಪ ಜ್ಞಾನವನ್ನು) ಇಂದ್ರಿಯಗಳಲ್ಲಿಯೂ, ಇಂದ್ರಿಯಗಳನ್ನು ಅವುಗಳ ಕಾರಣವಾಗಿರುವ ತನ್ಮಾತ್ರೆಗಳಲ್ಲಿಯೂ, ತನ್ಮಾತ್ರೆಗಳಿಗೆ ಕಾರಣವಾದ ಅಹಂಕಾರದ ಮೂಲಕ ಆಕಾಶ, ಇಂದ್ರಿಯಗಳು ಮತ್ತು ತನ್ಮಾತ್ರೆಗಳನ್ನು ಅದೇ ಅಹಂಕಾರದಲ್ಲಿ ಲಯಗೊಳಿಸಿ, ಅಹಂಕಾರವನ್ನೂ ಮಹತ್ತತ್ತ್ವದಲ್ಲಿ ಲೀನಗೊಳಿಸಿದನು. ॥ ೧೭ ॥ ಮತ್ತೆ ಸಮಸ್ತ ಗುಣಗಳನ್ನು ಅಭಿವ್ಯಕ್ತಗೊಳಿಸುವ ಆ ಮಹತ್ತತ್ತ್ವವನ್ನು ಮಾಯೋಪಾಧಿಕ ಜೀವದಲ್ಲಿ ಸ್ಥಿರಗೊಳಿಸಿದನು. ಅನಂತರ ಆ ಮಯಾರೂಪವಾದ ಉಪಾಧಿಯನ್ನೂ ಕೂಡ ಅವನು ಜ್ಞಾನ-ವೈರಾಗ್ಯದ ಪ್ರಭಾವದಿಂದ ತನ್ನ ಶುದ್ಧ ಬ್ರಹ್ಮಸ್ವರೂಪದಲ್ಲಿ ಸ್ಥಿತನಾಗಿ ಆನಂದಸ್ವರೂಪನಾದನು. ॥ ೧೮ ॥

ಪೃಥುಮಹಾರಾಜನ ಪತ್ನಿಯಾದ ಅರ್ಚಿಯೂ ಕೂಡ ಆತನೊಡನೆ ತಪೋವನಕ್ಕೆ ಹೋಗಿದ್ದಳಷ್ಟೇ! ಆಕೆಯು ಪಾದಗಳನ್ನು ನೆಲಕ್ಕೆ සೋಕಿದರೂ ತೊಂದರೆಪಡುವಷ್ಟು ಸುಕುಮಾರಿಯಾಗಿದ್ದಳು. ॥ ೧೯ ॥ ಹೀಗಿರುವಾಗಲೂ ಆಕೆಯು ತನ್ನ ಪತಿಯು ಕೈಗೊಂಡಿದ್ದ ವ್ರತ-ನಿಯಮಗಳನ್ನು ಪಾಲಿಸುತ್ತಾ ಅವನ ತುಂಬು ಸೇವೆ ಮಾಡಿದಳು. ಮುನಿವೃತ್ತಿಗನುಸಾರ ಕಂದ-ಮೂಲಾದಿಗಳಿಂದಲೇ ತನ್ನ ಜೀವನ ನಿರ್ವಾಹಮಾಡಿದಳು. ಇದರಿಂದ ಅವಳು ಬಹಳ ದುರ್ಬಲಳಾಗಿದ್ದರೂ ಪ್ರಿಯತಮನ ಕರಸ್ಪರ್ಶದಿಂದ ಸಮ್ಮಾನಿತಳಾಗಿ ಅದರಲ್ಲೇ ಆನಂದವನ್ನು ತಿಳಿದ ಕಾರಣ ಅವಳಿಗೆ ಯಾವುದೇ ಕಷ್ಟಗಳಾಗುತ್ತಿರಲಿಲ್ಲ. ॥ ೨೦ ॥ ಪೃಥಿವಿಗೆ ಪತಿಯಾಗಿ, ತನಗೂ ಪ್ರಿಯತಮನಾದ ಮಹಾರಾಜನ ದೇಹವು ಚೇತನಧರ್ಮಗಳೆಲ್ಲವನ್ನೂ ಕಳೆದುಕೊಂಡಿದ್ದರಿಂದ ಆ ಸಾಧ್ವಿಯು ಸ್ವಲ್ಪಹೊತ್ತು ವಿಲಾಪಿಸಿದಳು. ಮತ್ತೆ ಪರ್ವತದ ಮೇಲೆ ಚಿತೆಯನ್ನು ರಚಿಸಿ ಪತಿಯ ಪವಿತ್ರವಾದ ದೇಹವನ್ನು ಅದರ ಮೇಲೆ ಇರಿಸಿದಳು. ॥ ೨೧ ॥

ವಿಧಾಯ ಕೃತ್ಯಂ ಹ್ರದಿನೀಜಲಾಪ್ಲುತಾ
ದತ್ತ್ವೋದಕಂ ಭರ್ತುರುದಾರಕರ್ಮಣಃ ।
ನತ್ವಾ ದಿವಿಸ್ಥಾಂಸ್ತ್ರಿದಶಾಂಸ್ತ್ರಿಃ ಪರೀತ್ಯ
ವಿವೇಶ ವಹ್ನಿಂ ಧ್ಯಾಯತೀ ಭರ್ತೃಪಾದೌ ॥ ೨೨ ॥

ವಿಲೋಕ್ಯಾನುಗತಾಂ ಸಾಧ್ವೀಂ ಪೃಥುಂ ವೀರವರಂ ಪತಿಮ್ ।
ತುಷ್ಟುವುರ್ವರದಾ ದೇವೈರ್ದೇವಪತ್ನ್ಯಃ ಸಹಸ್ರಶಃ ॥ ೨೩ ॥

ಕುರ್ವತ್ಯಃ ಕುಸುಮಾಸಾರಂ ತಸ್ಮಿನ್ಮಂದರಸಾನುನಿ ।
ನದತ್ಸ್ವಮರತೂರ್ಯೇಷು ಗೃಣಂತಿ ಸ್ಮ ಪರಸ್ಪರಮ್ ॥ ೨೪ ॥

*ದೇವ್ಯ ಊಚುಃ*

ಅಹೋ ಇಯಂ ವಧೂರ್ಧನ್ಯಾ
ಯಾ ಚೈವಂ ಭೂಭುಜಾಂ ಪತಿಮ್ ।
ಸರ್ವಾತ್ಮನಾ ಪತಿಂ ಭೇಜೇ
ಯಜ್ಞೇಶಂ ಶ್ರೀರ್ವಧೂರಿವ ॥ ೨೫ ॥

ಸೈಷಾ ನೂನಂ ವ್ರಜತ್ಯೂರ್ಧ್ವಮನು ವೈನ್ಯಂ ಪತಿಂ ಸತೀ ।
ಪಶ್ಯತಾಸ್ಮಾನತೀತ್ಯಾರ್ಚಿರ್ದುರ್ವಿಭಾವ್ಯೇನ ಕರ್ಮಣಾ ॥ ೨೬ ॥

ತೇಷಾಂ ದುರಾಪಂ ಕಿಂ ತ್ವನ್ಯನ್
ಮರ್ತ್ಯಾನಾಂ ಭಗವತ್ಪದಮ್ ।
ಭುವಿ ಲೋಲಾಯುಷೋ ಯೇ ವೈ
ನೈಷ್ಕರ್ಮ್ಯಂ ಸಾಧಯಂತ್ಯುತ ॥ ೨೭ ॥

ಸ ವಂಚಿತೋ ಬತಾತ್ಮಧ್ರುಕ್ಕೃಚ್ಛ್ರೇಣ ಮಹತಾ ಭುವಿ ।
ಲಬ್ಧ್ವಾಪವರ್ಗ್ಯಂ ಮಾನುಷ್ಯಂ ವಿಷಯೇಷು ವಿಷಜ್ಜತೇ ॥ ೨೮ ॥

*ಮೈತ್ರೇಯ ಉವಾಚ*

ಸ್ತುವತೀಷ್ವಮರಸ್ತ್ರೀಷು ಪತಿಲೋಕಂ ಗತಾ ವಧೂಃ ।
ಯಂ ವಾ ಆತ್ಮವಿದಾಂ ಧುರ್ಯೋ ವೈನ್ಯಃ ಪ್ರಾಪಾಚ್ಯುತಾಶಯಃ ॥ ೨೯ ॥

ಇತ್ಥಂ ಭೂತಾನುಭಾವೋಽಸೌ ಪೃಥುಃ ಸ ಭಗವತ್ತಮಃ ।
ಕೀರ್ತಿತಂ ತಸ್ಯ ಚರಿತಮುದ್ದಾಮಚರಿತಸ್ಯ ತೇ ॥ ೩೦ ॥

ಯ ಇದಂ ಸುಮಹತ್ಪುಣ್ಯಂ ಶ್ರದ್ಧಯಾವಹಿತಃ ಪಠೇತ್ ।
ಶ್ರಾವಯೇಚ್ಛೃಣುಯಾದ್ವಾಪಿ ಸ ಪೃಥೋಃ ಪದವೀಮಿಯಾತ್ ॥ ೩೧ ॥

ಬ್ರಾಹ್ಮಣೋ ಬ್ರಹ್ಮವರ್ಚಸ್ವೀ ರಾಜನ್ಯೋ ಜಗತೀಪತಿಃ ।
ವೈಶ್ಯಃ ಪಠನ್ವಿಟ್ಪತಿಃ ಸ್ಯಾಚ್ಛೂದ್ರಃ ಸತ್ತಮತಾಮಿಯಾತ್ ॥ ೩೨ ॥

ಇದಾದ ಬಳಿಕ ಆ ಸಮಯದಲ್ಲಿ ಮಾಡಬೇಕಾದ ಎಲ್ಲ ವಿಧಿಗಳನ್ನು ಮುಗಿಸಿ ನದಿಯಲ್ಲಿ ಸ್ನಾನಮಾಡಿದಳು. ತನ್ನ ಆ ಪರಾಕ್ರಮಿಯಾದ ಪತಿಗೆ ಜಲಾಂಜಲಿಯನ್ನು ಸಮರ್ಪಿಸಿದಳು. ಆಕಾಶದಲ್ಲಿರುವ ದೇವತೆಗಳಿಗೆ ಪ್ರಣಾಮವನ್ನು ಸಲ್ಲಿಸಿ, ಮೂರುಬಾರಿ ಚಿತೆಗೆ ಪ್ರದಕ್ಷಿಣೆ ಬಂದು ಪತಿದೇವರ ಚರಣಗಳನ್ನು ಧ್ಯಾನಿಸುತ್ತಾ ಅಗ್ನಿಯಲ್ಲಿ ಪ್ರವೇಶಿಸಿದಳು. ॥ ೨೨ ॥ ಪರಮಸಾಧ್ವಿಯಾದ ಅರ್ಚಿಯು ಈ ರೀತಿಯಾಗಿ ತನ್ನ ಪತಿಯಾದ ವೀರವರೇಣ್ಯನಾದ ಪೃಥುವಿನೊಡನೆ ಸಹಗಮನ ಮಾಡುತ್ತಿದ್ದುದನ್ನು ನೋಡಿ ಸಾವಿರಾರು ಮಂದಿ ವರಪ್ರದಾಯಕ ದೇವಿಯರು ತಮ್ಮ-ತಮ್ಮ ಪತಿಗಳೊಡನೆ ಅವಳನ್ನು ಸ್ತುತಿಸಿದರು. ॥ ೨೩ ॥ ಅಲ್ಲಿ ದೇವತೆಗಳ ವಾದ್ಯಗಳು ಮೊಳಗಿದವು. ಆಗ ಆ ಮಂದರಾಚಲದ ಶಿಖರದಲ್ಲಿ ಆ ದೇವಾಂಗನೆಯರು ಪುಷ್ಪಗಳ ಮಳೆಯನ್ನೇ ಸುರಿಸುತ್ತಾ ತಮ್ಮ-ತಮ್ಮಲ್ಲಿ ಹೀಗೆ ಮಾತಾಡಿಕೊಳ್ಳತೊಡಗಿದರು. ॥ ೨೪ ॥

**ದೇವಾಂಗನೆಯರು ಹೇಳಿದರು** – ಆಹಾ! ಎಂತಹ ಧನ್ಯಳು ಈಕೆ! ಶ್ರೀಲಕ್ಷ್ಮೀದೇವಿಯು ಯಜ್ಞೇಶ್ವರನಾದ ಶ್ರೀಮಹಾವಿಷ್ಣುವಿನ ಸೇವೆಮಾಡುವಂತೆಯೇ ಇವಳು ತನ್ನ ಪತಿಯಾದ ರಾಜರಾಜೇಶ್ವರ ಪೃಥುವಿನ ಮನ, ವಚನ, ಶರೀರದಿಂದ ಹಾಗೆಯೇ ಸೇವೆಯನ್ನು ಮಾಡಿದಳು. ॥ ೨೫ ॥ ಅವಶ್ಯವಾಗಿಯೂ ಈ ಸಾಧ್ವಿಮಣಿಯು ಚಿಂತಿಸಲೂ ಅಸದಳವಾದ ತನ್ನ ಪುಣ್ಯಕರ್ಮದ ಪ್ರಭಾವದಿಂದ ನಮ್ಮ ಸ್ಥಾನವನ್ನೂ ದಾಟಿ ತನ್ನ ಪತಿಯೊಡನೆ ಉತ್ತಮೋತ್ತಮ ಲೋಕಗಳಿಗೆ ಹೋಗುತ್ತಿದ್ದಾಳೆ. ॥ ೨೬ ॥ ಈ ಲೋಕದಲ್ಲಿ ಕೆಲವೇ ದಿನಗಳ ಕಾಲ ಬದುಕಿದ್ದರೂ, ಭಗವಂತನ ಪರಮಪದಕ್ಕೆ ಒಯ್ಯುವಂತಹ ಆತ್ಮಜ್ಞಾನವನ್ನು ಪಡೆದಂತಹ ಧನ್ಯಾತ್ಮರಿಗೆ ಪ್ರಪಂಚದಲ್ಲಿ ಯಾವುದೂ ದುರ್ಲಭವಿಲ್ಲ. ॥ ೨೭ ॥ ಆದ್ದರಿಂದ ಮನುಷ್ಯದೇಹವನ್ನು ಅತಿಪ್ರಯಾಸದಿಂದ ಪಡೆದ ನಂತರವೂ ಮೋಕ್ಷಕ್ಕಾಗಿ ಪ್ರಯತ್ನಿಸದೆ ವಿಷಯ ಸುಖಗಳಲ್ಲಿ ಆಸಕ್ತರಾದ ಮನುಷ್ಯರು ನಿಜವಾಗಿಯೂ ಆತ್ಮಘಾತಿಗಳೆಂದೇ ತಿಳಿಯಬೇಕು. 'ಅಯ್ಯೋ ಪಾಪ! ಅವರು ಮೋಸಹೋದರಲ್ಲ!' ಎಂದು ಮಾತಾಡಿಕೊಳ್ಳುತ್ತಿದ್ದರು. ॥ ೨೮ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ದೇವಾಂಗನೆಯರು ಹೀಗೆ ಸ್ತುತಿಸುತ್ತಿರುವಾಗಲೇ ಆತ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಭಗವದ್ಭಕ್ತಶಿರೋಮಣಿಯಾಗಿದ್ದ ಪೃಥು ಮಹಾರಾಜನು ಸೇರಿದ ಭಗವಂತನ ಪರಮಧಾಮವನ್ನೇ ಮಹಾರಾಣಿ ಅರ್ಚಿಯು ಅದೇ ಪತಿಲೋಕಕ್ಕೆ ಹೊರಟುಹೋದಳು. ॥ ೨೯ ॥ ಪ್ರಭಾವಶಾಲಿಯಾದ ಪರಮಭಾಗವತೋತ್ತಮ ಪೃಥುವಿನ ಚರಿತ್ರೆಯು ಅತ್ಯಂತ ಉದಾರವಾದುದು. ಅದನ್ನು ನಾನು ನಿನಗೆ ವರ್ಣಿಸಿರುವೆನು. ॥ ೩೦ ॥ ಆ ಪರಮಪವಿತ್ರ ಚರಿತ್ರವನ್ನು ಶ್ರದ್ಧೆಯಿಂದ (ನಿಷ್ಕಾಮಭಾವದಿಂದ) ಏಕಾಗ್ರತೆಯಿಂದ ಓದುವವನೂ, ಕೇಳುವವನೂ ಕೂಡ ಪೃಥು ಮಹಾರಾಜನ ಪದವನ್ನೇ ಅಂದರೆ ಭಗವಂತನ ಪರಮಧಾಮವನ್ನು ಪಡೆಯುವನು. ॥ ೩೧ ॥ ಇದನ್ನು ಸಕಾಮಭಾವದಿಂದ ಪಠಿಸಿದರೆ ಬ್ರಾಹ್ಮಣನು ಬ್ರಹ್ಮ ತೇಜಸ್ಸನ್ನು ಪಡೆಯುತ್ತಾನೆ. ಕ್ಷತ್ರಿಯನು ಪೃಥಿವೀಪತಿಯಾಗುತ್ತಾನೆ. ವೈಶ್ಯನು ವ್ಯಾಪಾರಿಗಳಲ್ಲಿ ಪ್ರಧಾನನಾಗುತ್ತಾನೆ. ಶೂದ್ರನು ಶ್ರೇಷ್ಠ ತಮ ಸಾಧುವಾಗುತ್ತಾನೆ. ॥ ೩೨ ॥

ತ್ರಿಕೃತ್ವ ಇದಮಾಕರ್ಣ್ಯ ನರೋ ನಾರ್ಯಥವಾಽಽದೃತಾ ।
ಅಪ್ರಜಃ ಸುಪ್ರಜತಮೋ ನಿರ್ಧನೋ ಧನವತ್ತಮಃ ॥ ೩೩ ॥

ಅಸ್ಪಷ್ಟಕೀರ್ತಿಃ ಸುಯಶಾ ಮೂರ್ಖೋ ಭವತಿ ಪಂಡಿತಃ ।
ಇದಂ ಸ್ವಸ್ತ್ಯಯನಂ ಪುಂಸಾಮಮಂಗಲ್ಯನಿವಾರಣಮ್ ॥ ೩೪ ॥

ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಕಲಿಮಲಾಪಹಮ್ ।
ಧರ್ಮಾರ್ಥಕಾಮಮೋಕ್ಷಾಣಾಂ ಸಮ್ಯಕ್ಸಿದ್ಧಿಮಭೀಪ್ಸುಭಿಃ ।
ಶ್ರದ್ಧಯೈತದನುಶ್ರಾವ್ಯಂ ಚತುರ್ಣಾಂ ಕಾರಣಂ ಪರಮ್ ॥ ೩೫ ॥

ವಿಜಯಾಭಿಮುಖೋ ರಾಜಾ ಶ್ರುತ್ವೈತದಭಿಯಾತಿ ಯಾನ್ ।
ಬಲಿಂ ತಸ್ಮೈ ಹರಂತ್ಯಗ್ರೇ ರಾಜಾನಃ ಪೃಥವೇ ಯಥಾ ॥ ೩೬ ॥

ಮುಕ್ತಾನ್ಯಸಂಗೋ ಭಗವತ್ಯಮಲಾಂ ಭಕ್ತಿಮುದ್ವಹನ್ ।
ವೈನ್ಯಸ್ಯ ಚರಿತಂ ಪುಣ್ಯಂ ಶೃಣುಯಾಚ್ಛ್ರಾವಯೇತ್ಪಠೇತ್ ॥ ೩೭ ॥

ವೈಚಿತ್ರವೀರ್ಯಾಭಿಹಿತಂ ಮಹನ್ಮಾಹಾತ್ಮ್ಯಸೂಚಕಮ್ ।
ಅಸ್ಮಿನ್ಕೃತಮತಿರ್ಮರ್ತ್ಯಃ ಪಾರ್ಥವೀಂ ಗತಿಮಾಪ್ನುಯಾತ್ ॥ ೩೮ ॥

ಅನುದಿನಮಿದಮಾದರೇಣ ಶೃಣ್ವನ್
ಪೃಥುಚರಿತಂ ಪ್ರಥಯನ್ವಿಮುಕ್ತಸಂಗಃ ।
ಭಗವತಿ ಭವಸಿಂಧುಪೋತಪಾದೇ
ಸ ಚ ನಿಪುಣಾಂ ಲಭತೇ ರತಿಂ ಮನುಷ್ಯಃ ॥ ೩೯ ॥

ಸ್ತ್ರೀಯಾಗಿರಲಿ ಅಥವಾ ಪುರುಷನಾಗಿರಲಿ ಇದನ್ನು ಆದರದಿಂದ ಮೂರುಬಾರಿ ಕೇಳಿದರೆ ಅವರು ಸಂತಾನಹೀನರಾಗಿದ್ದರೆ ಸಂತತಿಯನ್ನು, ಧನಹೀನನಾಗಿದ್ದರೆ ಐಶ್ವರ್ಯವನ್ನು, ಕೀರ್ತಿಹೀನನಾಗಿದ್ದರೆ ಕೀರ್ತಿಯನ್ನು, ಮೂರ್ಖನಾಗಿದ್ದರೆ ಪಂಡಿತನು ಆಗಿಹೋಗುತ್ತಾನೆ. ಈ ಚರಿತೆಯು ಎಲ್ಲ ಮನುಷ್ಯರ ಶ್ರೇಯಸ್ಸು ಮಾಡುವುದಾಗಿಯೂ, ಅಮಂಗಳವನ್ನು ಕಳೆಯುವಂತಹದೂ ಆಗಿದೆ. ॥ ೩೩-೩೪ ॥ ಇದು ಧನ, ಕೀರ್ತಿ ಮತ್ತು ಆಯುಸ್ಸು ಇವುಗಳನ್ನು ವೃದ್ಧಿಪಡಿಸುವುದು. ಸ್ವರ್ಗವನ್ನು ದೊರಕಿಸಿಕೊಡುವಂತಹುದು ಹಾಗೂ ಕಲಿಯುಗದ ದೋಷಗಳನ್ನು ನಾಶಮಾಡುವುದೂ ಆಗಿದೆ. ಧರ್ಮವೇ ಮುಂತಾದ ನಾಲ್ಕೂ ಪುರುಷಾರ್ಥಗಳ ಉತ್ತಮಸಿದ್ಧಿಯನ್ನು ಪಡೆಯಲು ಬಯಸುವವರು ಇದನ್ನು ಶ್ರದ್ಧಾಪೂರ್ವಕವಾಗಿ ಶ್ರವಣಿಸಬೇಕು. ॥ ೩೫ ॥ ವಿಜಯಕ್ಕಾಗಿ ಪ್ರಸ್ಥಾನ ಮಾಡುವಾಗ ಇದನ್ನು ಕೇಳಿ ಹೊರಟ ರಾಜನ ಮುಂದೆ ಪೃಥುಮಹಾರಾಜನಿಗೆ ರಾಜರು ಕಾಣಿಕೆಗಳನ್ನು ಒಪ್ಪಿಸುತ್ತಿದ್ದಂತೆ ಈತನಿಗೂ ಒಪ್ಪಿಸುವರು. ॥ ೩೬ ॥ ಮನುಷ್ಯನು ಬೇರೆ ಎಲ್ಲ ರೀತಿಯ ಆಸಕ್ತಿಯನ್ನು ಬಿಟ್ಟು, ಭಗವಂತನಲ್ಲಿ ಶುದ್ಧವಾದ ನಿಷ್ಕಾಮ ಭಾವವನ್ನಿಟ್ಟು ಪೃಥುಮಹಾರಾಜನ ಈ ನಿರ್ಮಲ ಚರಿತ್ರವನ್ನು ಕೇಳಬೇಕು, ಹೇಳಬೇಕು ಮತ್ತು ಓದಬೇಕು. ॥ ೩೭ ॥ ವಿದುರನೇ! ಭಗವಂತನ ಮಹಿಮೆಯನ್ನು ಪ್ರಕಟಪಡಿಸುವ ಈ ಪವಿತ್ರವಾದ ಚರಿತ್ರೆಯನ್ನು ನಾನು ನಿನಗೆ ಹೇಳಿದೆ. ಇದರಲ್ಲಿ ಪೂರ್ಣವಾದ ಭಕ್ತಿ-ಶ್ರದ್ಧೆಯನ್ನಿಡುವವನು ಪೃಥುಮಹಾರಾಜನು ಪಡೆದ ಗತಿಯನ್ನೇ ಪಡೆಯುವನು. ॥ ೩೮ ॥ ಈ ಪೃಥುಚರಿತ್ರೆಯನ್ನು ಪ್ರತಿದಿನವೂ ಆದರದಿಂದ ನಿಷ್ಕಾಮಭಾವದೊಂದಿಗೆ ಶ್ರವಣ-ಕೀರ್ತನೆಮಾಡುವ ಮನುಷ್ಯನು ಸಂಸಾರಸಾಗರವನ್ನು ಪಾರಾಗಿಸಲು ನೌಕೆಯಂತಿರುವ ಪಾದಗಳುಳ್ಳ ಶ್ರೀಹರಿಯಲ್ಲಿ ದೃಢವಾದ ಅನುರಾಗವನ್ನು ಹೊಂದುವನು. ॥ ೩೯ ॥

*ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೨೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ತ್ರಯೋವಿಂಶೋಽಧ್ಯಾಯಃ ॥ ೨೩ ॥

# ಇಪ್ಪತ್ತನಾಲ್ಕನೆಯ ಅಧ್ಯಾಯ

## ಪೃಥುವಿನ ವಂಶಪರಂಪರೆ ಮತ್ತು ಪ್ರಾಚೇತಸರಿಗೆ ಭಗವಾನ್ ರುದ್ರನಿಂದ ಉಪದೇಶ

*ಮೈತ್ರೇಯ ಉವಾಚ*

ವಿಜಿತಾಶ್ವೋಽಧಿರಾಜಾಽಽಸೀತ್-
ಪೃಥುಪುತ್ರಃ ಪೃಥುಶ್ರವಾಃ ।
ಯವೀಯೋಭ್ಯೋಽದದಾತ್ಕಾಷ್ಠಾ
ಭ್ರಾತೃಭ್ಯೋ ಭ್ರಾತೃವತ್ಸಲಃ ॥ ೧ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಪೃಥುಮಹಾರಾಜನ ಬಳಿಕ ಪರಮ ಯಶಸ್ವೀಯಾದ ಅವನ ಪುತ್ರ ವಿಜಿತಾಶ್ವನು ರಾಜನಾದನು. ಅವನಿಗೆ ತನ್ನ ತಮ್ಮಂದಿರಲ್ಲಿ ತುಂಬಿದ ವಾತ್ಸಲ್ಯವಿತ್ತು. ಅದರಿಂದ ಅವನು ನಾಲ್ಕೂ ತಮ್ಮಂದಿರಿಗೆ ಒಂದೊಂದು ದಿಕ್ಕಿನ ರಾಜ್ಯಾಧಿಕಾರವನ್ನು ಕೊಟ್ಟನು. ॥ ೧ ॥ ಅದರಲ್ಲಿ ಹರ್ಯಕ್ಷನಿಗೆ ಪೂರ್ವದಿಕ್ಕಿನ, ಧೂಮ್ರಕೇಶನಿಗೆ ದಕ್ಷಿಣದಿಕ್ಕಿನ, ವೃಕನಿಗೆ ಪಶ್ಚಿಮದ ಮತ್ತು ದ್ರವಿಣನಿಗೆ ಉತ್ತರದ ರಾಜ್ಯಾಧಿ

ಹರ್ಯಕ್ಷಾಯಾದಿಶತ್ಪ್ರಾಚೀಂ ಧೂಮ್ರಕೇಶಾಯ ದಕ್ಷಿಣಾಮ್ ।
ಪ್ರತೀಚೀಂ ವೃಕಸಂಜ್ಞಾಯ ತುರ್ಯಾಂ ದ್ರವಿಣಸೇ ವಿಭುಃ ॥ ೨ ॥

ಅಂತರ್ಧಾನಗತಿಂ ಶಕ್ರಾಲ್ಲಬ್ಧ್ವಾಂತರ್ಧಾನಸಂಜ್ಞಿತಃ ।
ಅಪತ್ಯತ್ರಯಮಾಧತ್ತ ಶಿಖಂಡಿನ್ಯಾಂ ಸುಸಮ್ಮತಮ್ ॥ ೩ ॥

ಪಾವಕಃ ಪವಮಾನಶ್ಚ ಶುಚಿರಿತ್ಯಗ್ನಯಃ ಪುರಾ ।
ವಸಿಷ್ಠ ಶಾಪಾದುತ್ಪನ್ನಾಃ ಪುನರ್ಯೋಗಗತಿಂ ಗತಾಃ ॥ ೪ ॥

ಅಂತರ್ಧಾನೋ ನಭಸ್ವತ್ಯಾಂ ಹವಿರ್ಧಾನಮವಿಂದತ ।
ಯ ಇಂದ್ರಮಶ್ವಹರ್ತಾರಂ ವಿದ್ವಾನಪಿ ನ ಜಘ್ನಿವಾನ್ ॥ ೫ ॥

ರಾಜ್ಞಾಂ ವೃತ್ತಿಂ ಕರಾದಾನದಂಡಶುಲ್ಕಾದಿದಾರುಣಾಮ್ ।
ಮನ್ಯಮಾನೋ ದೀರ್ಘಸತ್ರವ್ಯಾಜೇನ ವಿಸಸರ್ಜ ಹ ॥ ೬ ॥

ತತ್ರಾಪಿ ಹಂಸಂ ಪುರುಷಂ ಪರಮಾತ್ಮಾನಮಾತ್ಮದೃಕ್ ।
ಯಜಂಸ್ತಲ್ಲೋಕತಾಮಾಪ ಕುಶಲೇನ ಸಮಾಧಿನಾ ॥ ೭ ॥

ಹವಿರ್ಧಾನಾದ್ಧವಿರ್ಧಾನೀ ವಿದುರಾಸೂತ ಷಟ್ಸುತಾನ್ ।
ಬರ್ಹಿಷದಂ ಗಯಂ ಶುಕ್ಲಂ ಕೃಷ್ಣಂ ಸತ್ಯಂ ಜಿತವ್ರತಮ್ ॥ ೮ ॥

ಬರ್ಹಿಷತ್ ಸುಮಹಾಭಾಗೋ ಹಾವಿರ್ಧಾನಿಃ ಪ್ರಜಾಪತಿಃ ।
ಕ್ರಿಯಾಕಾಂಡೇಷು ನಿಷ್ಣಾತೋ ಯೋಗೇಷು ಚ ಕುರೂದ್ವಹ ॥ ೯ ॥

ಯಸ್ಯೇದಂ ದೇವಯಜನಮನುಯಜ್ಞಂ ವಿತನ್ವತಃ ।
ಪ್ರಾಚೀನಾಗ್ರೈಃ ಕುಶೈರಾಸೀದಾಸ್ತೃತಂ ವಸುಧಾತಲಮ್ ॥ ೧೦ ॥

ಸಾಮುದ್ರೀಂ ದೇವದೇವೋಕ್ತಾ-
ಮುಪಯೇಮೇ ಶತದ್ರುತಿಮ್ ।
ಯಾಂ ವೀಕ್ಷ್ಯ ಚಾರುಸರ್ವಾಂಗೀಂ
ಕಿಶೋರೀಂ ಸುಷ್ಠ್ವಲಂಕೃತಾಮ್ ।
ಪರಿಕ್ರಮಂತೀಮುದ್ವಾಹೇ
ಚಕಮೇಽಗ್ನಿಃ ಶುಕೀಮಿವ ॥ ೧೧ ॥

ಕಾರವನ್ನು ಕೊಟ್ಟನು. ॥ ೨ ॥ ವಿಜಿತಾಶ್ವನು ಇಂದ್ರನಿಂದ ಅಂತರ್ಧಾನನಾಗುವ ಶಕ್ತಿಯನ್ನು ಸಂಪಾದಿಸಿದ್ದನು. ಆದರಿಂದ ಅವನನ್ನು 'ಅಂತರ್ಧಾನ' ಎಂಬ ಹೆಸರಿನಿಂದಲೂ ಕರೆಯುತ್ತಿದ್ದರು. ಅವನು ತನ್ನ ಪತ್ನಿಯಾದ ಶಿಖಂಡಿನಿಯಲ್ಲಿ ಮೂರು ಸತ್ಪುತ್ರರನ್ನು ಪಡೆದನು. ॥ ೩ ॥ ಅವರ ಹೆಸರು ಪಾವಕ, ಪವಮಾನ ಮತ್ತು ಶುಚಿ ಎಂದಿತ್ತು. ಹಿಂದೆ ವಸಿಷ್ಠರ ಶಾಪದಿಂದ ಈ ಹೆಸರುಗಳ ಅಗ್ನಿಯೇ ಇವರ ರೂಪದಿಂದ ಹುಟ್ಟಿದ್ದನು. ಮುಂದೆ ಯೋಗಮಾರ್ಗದಿಂದ ಇವರು ಪುನಃ ಅಗ್ನಿರೂಪವನ್ನೇ ಪಡೆದುಕೊಂಡರು. ॥ ೪ ॥

ಅಂತರ್ಧಾನನಿಗೆ ನಭಸ್ವತಿ ಎಂಬ ಪತ್ನಿಯಲ್ಲಿ ಹವಿರ್ಧಾನನೆಂಬ ಪುತ್ರಶ್ರೇಷ್ಠನು ಜನಿಸಿದನು. ಅಂತರ್ಧಾನ ಮಹಾರಾಜನು ತುಂಬಾ ಉದಾರಿಯಾಗಿದ್ದನು. ಇಂದ್ರನು ತನ್ನ ತಂದೆ ಪೃಥು ಚಕ್ರವರ್ತಿಯ ಯಜ್ಞಾಶ್ವವನ್ನು ಅಪಹರಿಸಿ ಸಿಕ್ಕಿಬಿದ್ದಾಗಲೂ ಅವನು ಇಂದ್ರನನ್ನು ವಧಿಸಲಿಲ್ಲ. ॥ ೫ ॥ ಕಂದಾಯವನ್ನು ಸಂಗ್ರಹಿಸುವುದು, ದಂಡನೆಯನ್ನು ವಿಧಿಸುವುದು, ದಂಡಹಾಕುವುದು ಮುಂತಾದವುಗಳು ಕಠೋರವಾದ ಕರ್ತವ್ಯಗಳು, ಇವುಗಳಿಂದ ಇತರರಿಗೆ ಕಷ್ಟವುಂಟಾಗುತ್ತದೆ ಎಂದು ಭಾವಿಸಿ ಅವನು ಒಂದು ದೀರ್ಘಕಾಲದ ಯಜ್ಞದೀಕ್ಷೆಯನ್ನು ಕೈಗೊಂಡನು. ಯಜ್ಞದೀಕ್ಷಿತನು ಲೌಕಿಕ ರಾಜಕಾರ್ಯದಲ್ಲಿ ಭಾಗವಹಿಸಬಾರದು ಎಂಬ ನೆಪದಿಂದ ತನ್ನ ರಾಜವೃತ್ತಿಯನ್ನು ಬಿಟ್ಟುಬಿಟ್ಟನು. ॥ ೬ ॥ ಆ ಆತ್ಮಜ್ಞಾನಿಯಾದ ರಾಜನು ಯಜ್ಞಕಾರ್ಯದಲ್ಲಿ ತೊಡಗಿರುವಾಗಲೇ ಭಕ್ತಭಯಭಂಜಕನೂ, ಪರಿಪೂರ್ಣನೂ ಆದ ಪರಮಾತ್ಮನನ್ನು ಆರಾಧಿಸುತ್ತಾ ಸ್ಥಿರವಾದ ಸಮಾಧಿಯ ಮೂಲಕ ಶ್ರೀಭಗವಂತನ ದಿವ್ಯಲೋಕವನ್ನು ಪಡೆದುಕೊಂಡನು. ॥ ೭ ॥

ಎಲೈ ವಿದುರನೇ ! ಮುಂದೆ ಹವಿರ್ಧಾನನು ತನ್ನ ಪತ್ನೀ ಹವಿರ್ಧಾನಿಯಲ್ಲಿ ಬರ್ಹಿಷದ, ಗಯ, ಶುಕ್ಲ, ಕೃಷ್ಣ, ಸತ್ಯ ಮತ್ತು ಜಿತವ್ರತ ಎಂಬ ಆರು ಪುತ್ರರನ್ನು ಪಡೆದನು. ॥ ೮ ॥ ಕುರುಶ್ರೇಷ್ಠ ವಿದುರನೇ ! ಇವರಲ್ಲಿ ಹವಿರ್ಧಾನನ ಪುತ್ರನಾದ ಮಹಾತ್ಮನಾದ ಬರ್ಹಿಷದನು ಯಜ್ಞಾದಿ ಕರ್ಮಕಾಂಡದಲ್ಲಿಯೂ, ಯೋಗಾಭ್ಯಾಸದಲ್ಲಿಯೂ ಕುಶಲನಾಗಿದ್ದನು. ಅವನು ಪ್ರಜಾಪತಿಯ ಪದವಿಯನ್ನು ಪಡೆದುಕೊಂಡನು. ॥ ೯॥

ಇವನು ನಾನಾ ಸ್ಥಾನಗಳಲ್ಲಿ ನಿರಂತರವಾಗಿ ಎಷ್ಟು ಯಜ್ಞಗಳನ್ನು ಮಾಡಿದ್ದನೆಂದರೆ, ಈ ಸಮಸ್ತ ಭೂಮಂಡಲವು ಆತನು ಯಜ್ಞದಲ್ಲಿ ಹರಡಿದ ಪೂರ್ವಾಗ್ರವಾದ ದರ್ಭೆಗಳಿಂದ ತುಂಬಿ ಹೋಯಿತು. ಆದ್ದರಿಂದ ಮುಂದೆ ಅವನು 'ಪ್ರಾಚೀನಬರ್ಹಿ' ಎಂಬ ಹೆಸರಿನಿಂದಲೇ ವಿಖ್ಯಾತನಾದನು. ॥ ೧೦ ॥

ಪ್ರಾಚೀನಬರ್ಹಿರಾಜನು ಬ್ರಹ್ಮದೇವರ ಮಾತಿನಂತೆ ಸಮುದ್ರನ ಕನ್ಯೆಯಾದ ಶತದ್ರುತಿಯೊಂದಿಗೆ ವಿವಾಹಿತನಾದನು. ಸರ್ವಾಂಗ ಸುಂದರಿಯಾದ ಆ ಶತದ್ರುತಿಯು ಸುಂದರವಾದ ಉಡಿಗೆ-ತೊಡಿಗೆಗಳಿಂದ ಅಲಂಕರಿಸಿಕೊಂಡು ವಿವಾಹಮಂಟಪಕ್ಕೆ ಬಂದು ಪತಿಯೊಡನೆ ಅಗ್ನಿಯನ್ನು ಪ್ರದಕ್ಷಿಣೆ ಮಾಡುತ್ತಿದ್ದಾಗ ಅಗ್ನಿದೇವನೇ – ಹಿಂದೆ ಹೆಣ್ಣುಗಿಳಿಯ ರೂಪವನ್ನು ಧರಿಸಿದ್ದ ಸ್ವಾಹಾದೇವಿಯನ್ನು ಕಾಮಿಸಿದಂತೆಯೇ ಆಕೆಯಲ್ಲಿ ಮೋಹಿತನಾದನು. ॥ ೧೧ ॥

ವಿಬುಧಾಸುರಗಂಧರ್ವಮುನಿಸಿದ್ಧನರೋರಗಾಃ ।
ವಿಜಿತಾಃ ಸೂರ್ಯಯಾ ದಿಕ್ಷು ಕ್ವಣಯಂತ್ಯೈವ ನೂಪುರೈಃ ॥ ೧೨ ॥

ಮದುವಣಗಿತ್ತಿಯಾದ ಆಕೆಯು ಝುಣ-ಝುಣಿಸುವ ನೂಪುರಗಳನ್ನು ಧರಿಸಿ ಬಂದಾಗ ಆ ಕಾಲಂದುಗೆಗಳ ಧ್ವನಿಗೆ ದಶ-ದಿಕ್ಕುಗಳಲ್ಲಿರುವ ದೇವತೆಗಳು, ಅಸುರರು, ಗಂಧರ್ವರು, ಮುನಿಗಳು, ಸಿದ್ಧರು, ಮನುಷ್ಯರು, ನಾಗರು ಹೀಗೆ ಎಲ್ಲರೂ ಮನಸೋತು ಪರವಶರಾದರು. ॥ ೧೨ ॥

ಪ್ರಾಚೀನಬರ್ಹಿಷಃ ಪುತ್ರಾಃ ಶತದ್ರುತ್ಯಾಂ ದಶಾಭವನ್ ।
ತುಲ್ಯನಾಮವ್ರತಾಃ ಸರ್ವೇ ಧರ್ಮಸ್ನಾತಾಃ ಪ್ರಚೇತಸಃ ॥ ೧೩ ॥

ಪ್ರಾಚೀನಬರ್ಹಿಯು ಶತದ್ರುತಿಯ ಗರ್ಭದಿಂದ ಪ್ರಚೇತಸರೆಂಬ ಹತ್ತು ಪುತ್ರರನ್ನು ಪಡೆದನು. ಅವರೆಲ್ಲರೂ ಅತ್ಯಂತ ಧರ್ಮಜ್ಞರಾಗಿದ್ದು, ಅವರ ಹೆಸರುಗಳು ಮತ್ತು ಆಚರಣೆಗಳು ಒಂದೇ ರೀತಿಯಲ್ಲಿದ್ದುವು. ॥ ೧೩ ॥

ಪಿತ್ರಾಽಽದಿಷ್ಟಾಃ ಪ್ರಜಾಸರ್ಗೇ ತಪಸೇಽರ್ಣವಮಾವಿಶನ್ ।
ದಶವರ್ಷಸಹಸ್ರಾಣಿ ತಪಸಾಽಽರ್ಚಂಸ್ತಪಸ್ಪತಿಮ್ ॥ ೧೪ ॥

ತಂದೆಯು ಅವರಿಗೆ ಸಂತಾನವನ್ನು ಪಡೆಯಿರಿ ಎಂದು ಆದೇಶ ನೀಡಿದಾಗ ಅವರೆಲ್ಲರೂ ತಪಸ್ಸನ್ನಾಚರಿಸಲಿಕ್ಕಾಗಿ ಸಮುದ್ರವನ್ನು ಪ್ರವೇಶಿಸಿದರು. ಅಲ್ಲಿ ಹತ್ತುಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡುತ್ತಾ ತಪಸ್ಸಿನ ಫಲವನ್ನು ನೀಡುವ ಶ್ರೀಹರಿಯನ್ನು ಆರಾಧಿಸಿದರು. ॥ ೧೪ ॥

ಯದುಕ್ತಂ ಪಥಿ ದೃಷ್ಟೇನ ಗಿರಿಶೇನ ಪ್ರಸೀದತಾ ।
ತದ್ಧ್ಯಾಯಂತೋ ಜಪಂತಶ್ಚ ಪೂಜಯಂತಶ್ಚ ಸಂಯತಾಃ ॥ ೧೫ ॥

ಮನೆಯಿಂದ ತಪಸ್ಸಿಗೆ ಹೋಗುವಾಗ ದಾರಿಯಲ್ಲಿ ಶ್ರೀಮಹಾದೇವನು ಅವರಿಗೆ ದರ್ಶನವಿತ್ತು ಕರುಣೆಯಿಂದ ಉಪದೇಶ ಮಾಡಿದ ತತ್ತ್ವವನ್ನು ಕುರಿತು ಅವರು ಏಕಾಗ್ರತೆಯಿಂದ ಧ್ಯಾನ, ಜಪ, ಪೂಜೆಗಳನ್ನು ಆಚರಿಸುತ್ತಾ ಇದ್ದರು. ॥ ೧೫ ॥

*ವಿದುರ ಉವಾಚ*

ಪ್ರಚೇತಸಾಂ ಗಿರಿತ್ರೇಣ ಯಥಾಽಽಸೀತ್ಪಥಿ ಸಂಗಮಃ ।
ಯದುತಾಹ ಹರಃ ಪ್ರೀತಸ್ತನ್ನೋ ಬ್ರಹನ್ ವದಾರ್ಥವತ್ ॥ ೧೬ ॥

**ವಿದುರನು ಕೇಳಿದನು** – ಮಹಾತ್ಮರೇ ! ಪ್ರಚೇತಸರಿಗೆ ಮಾರ್ಗದಲ್ಲಿ ಶ್ರೀಮಹಾದೇವನ ಭೇಟಿ ಹೇಗಾಯಿತು ? ಅವರ ಮೇಲೆ ಪ್ರಸನ್ನನಾಗಿ ಭಗವಾನ್ ಶಂಕರನು ಅವರಿಗೆ ಏನನ್ನು ಉಪದೇಶ ಮಾಡಿದನು ? ಆ ಸಾರವತ್ತಾದ ಮಾತನ್ನು ನೀವು ಕೃಪೆಯಿಟ್ಟು ನನಗೆ ತಿಳಿಸಿರಿ. ॥ ೧೬ ॥

ಸಂಗಮಃ ಖಲು ವಿಪ್ರರ್ಷೇ ಶಿವೇನೇಹ ಶರೀರಿಣಾಮ್ ।
ದುರ್ಲಭೋ ಮುನಯೋ ದಧ್ಯುರಸಂಗಾದ್ಯಮಭೀಪ್ಸಿತಮ್ ॥ ೧೭ ॥

ಬ್ರಹ್ಮರ್ಷಿಗಳೇ ! ದೇಹಧಾರಿಗಳಾದ ಸಂಸಾರಿಗಳಿಗೆ ಶಿವನ ದರ್ಶನವಾಗುವುದು ಅತ್ಯಂತ ದುರ್ಲಭ. ಮುನಿಜನರೂ ಎಲ್ಲ ಬಗೆಯ ಆಸಕ್ತಿಯನ್ನು ಬಿಟ್ಟು ಅವನನ್ನು ಪಡೆಯುವುದಕ್ಕಾಗಿ ನಿರಂತರವಾಗಿ ಧ್ಯಾನಮಾಡಿದರೂ ಸುಲಭವಾಗಿ ಪಡೆಯಲಾಗುವುದಿಲ್ಲ. ಹೀಗಿರುವಾಗ ಇತರರ ವಿಷಯದಲ್ಲಿ ಹೇಳುವುದೇನಿದೆ ? ॥ ೧೭ ॥

ಆತ್ಮಾರಾಮೋಽಪಿ ಯಸ್ತ್ವಸ್ಯ ಲೋಕಕಲ್ಪಸ್ಯ ರಾಧಸೇ ।
ಶಕ್ತ್ಯಾ ಯುಕ್ತೋ ವಿಚರತಿ ಘೋರಯಾ ಭಗವಾನ್ಭವಃ ॥ ೧೮ ॥

ಭಗವಾನ್ ಶಂಕರನು ಆತ್ಮಾರಾಮನು. ತನಗಾಗಿ ಏನನ್ನೂ ಮಾಡಬೇಕಾಗಿಲ್ಲ, ಏನನ್ನೂ ಪಡೆಯಬೇಕಾಗಿಲ್ಲ; ಆದರೂ ಲೋಕರಕ್ಷಣೆಯ ದೃಷ್ಟಿಯಿಂದಲೇ ಅವನು ತನ್ನ ಘೋರರೂಪವಾದ ಶಕ್ತಿದೇವಿಯೊಡನೆ ಎಲ್ಲೆಲ್ಲಿಯೂ ಸಂಚರಿಸುತ್ತಿರುವನು. ॥ ೧೮ ॥

*ಮೈತ್ರೇಯ ಉವಾಚ*

ಪ್ರಚೇತಸಃ ಪಿತುರ್ವಾಕ್ಯಂ ಶಿರಸಾಽಽದಾಯ ಸಾಧವಃ ।
ದಿಶಂ ಪ್ರತೀಚೀಂ ಪ್ರಯಯುಸ್ತಪಸ್ಯಾದೃತಚೇತಸಃ ॥ ೧೯ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ ! ಸಾಧುಸ್ವಭಾವವುಳ್ಳ ಪ್ರಚೇತಸರು ತಂದೆಯ ಮಾತನ್ನು ಶಿರಸಾವಹಿಸಿ ತಪಸ್ಸಿನಲ್ಲಿ ಚಿತ್ತವನ್ನು ನೆಟ್ಟು ಪಶ್ಚಿಮದಿಕ್ಕಿಗೆ ಹೊರಟರು. ॥ ೧೯ ॥

ಸಮುದ್ರಮುಪ ವಿಸ್ತೀರ್ಣಮಪಶ್ಯನ್ಸುಮಹತ್ಸರಃ ।
ಮಹನ್ಮನ ಇವ ಸ್ವಚ್ಛಂ ಪ್ರಸನ್ನಸಲಿಲಾಶಯಮ್ ॥ ೨೦ ॥

ಹಾಗೇ ಹೋಗುತ್ತಿರುವಾಗ ಅವರಿಗೆ ಸಮುದ್ರದಂತೆ ವಿಶಾಲವಾದ ಒಂದು ಸರೋವರವು ಕಾಣಿಸಿತು. ಅದು ಮಹಾಪುರುಷರ ಮನಸ್ಸಿನಂತೆ ಸ್ವಚ್ಛವಾಗಿದ್ದು, ಅದರಲ್ಲಿದ್ದ ಮೀನುಗಳೇ ಮುಂತಾದ ಜಲಚರ ಪ್ರಾಣಿಗಳು ಪ್ರಸನ್ನವಾಗಿ ಕಾಣುತ್ತಿದ್ದುವು. ॥ ೨೦ ॥

ನೀಲರಕ್ತೋತ್ಪಲಾಂಭೋಜಕಹ್ಲಾರೇಂದೀವರಾಕರಮ್ ।
ಹಂಸಸಾರಸಚಕ್ರಾಹ್ವಕಾರಂಡವನಿಕೂಜಿತಮ್ ॥ ೨೧ ॥

ಅದರಲ್ಲಿ ಕನ್ನೈದಿಲೆ, ಕೆಂದಾವರೆಗಳು ರಾತ್ರಿಯಲ್ಲಿ, ಹಗಲಿನಲ್ಲಿ, ಸಂಧ್ಯಾಸಮಯದಲ್ಲಿ ಅರಳುವ ಕಮಲಗಳು ಹಾಗೂ ಇಂದೀವರ ಮುಂತಾದ ಬೇರೆ ಅನೇಕ ಬಗೆಯ ಕಮಲಗಳು ಸುಶೋಭಿತವಾಗಿದ್ದವು. ಹಂಸ, ಸಾರಸ, ಚಕ್ರವಾಕ, ಕಾರಂಡವಗಳೇ ಮುಂತಾದ ನೀರುಹಕ್ಕಿಗಳು ಅದರ ದಡದಲ್ಲಿ ಕಲರವ ಮಾಡುತ್ತಿದ್ದುವು. ॥ ೨೧ ॥

ಮತ್ತಭ್ರಮರಸೌಸ್ವರ್ಯಹೃಷ್ಟರೋಮಲತಾಂಘ್ರಿಪಮ್ ।
ಪದ್ಮಕೋಶರಜೋ ದಿಕ್ಷು ವಿಕ್ಷಿಪತ್ಪವನೋತ್ಸವಮ್ ॥ ೨೨ ॥

ತತ್ರ ಗಾಂಧರ್ವಮಾಕರ್ಣ್ಯ ದಿವ್ಯಮಾರ್ಗಮನೋಹರಮ್ ।
ವಿಸಿಸ್ಮ್ಯೂ ರಾಜಪುತ್ರಾಸ್ತೇ ಮೃದಂಗಪಣವಾದ್ಯನು ॥ ೨೩ ॥

ತರ್ಹ್ಯೇವ ಸರಸಸ್ತಸ್ಮಾನ್ನಿಷ್ಕ್ರಾಮಂತಂ ಸಹಾನುಗಮ್ ।
ಉಪಗೀಯಮಾನಮಮರಪ್ರವರಂ ವಿಬುಧಾನುಗೈಃ ॥ ೨೪ ॥

ತಪ್ತಹೇಮನಿಕಾಯಾಭಂ ಶಿತಿಕಂಠಂ ತ್ರಿಲೋಚನಮ್ ।
ಪ್ರಸಾದಸುಮುಖಂ ವೀಕ್ಷ್ಯ ಪ್ರಣೇಮುರ್ಜಾತಕೌತುಕಾಃ ॥ ೨೫ ॥

ಸ ತಾನ್ಪ್ರಪನ್ನಾರ್ತಿಹರೋ ಭಗವಾನ್ ಧರ್ಮವತ್ಸಲಃ ।
ಧರ್ಮಜ್ಞಾನ್ ಶೀಲಸಂಪನ್ನಾನ್ ಪ್ರೀತಃ ಪ್ರೀತಾನುವಾಚ ಹ ॥ ೨೬ ॥

*ಶ್ರೀರುದ್ರ ಉವಾಚ*

ಯೂಯಂ ವೇದಿಷದಃ ಪುತ್ರಾ ವಿದಿತಂ ವಶ್ಚಿಕೀರ್ಷಿತಮ್ ।
ಅನುಗ್ರಹಾಯ ಭದ್ರಂ ವ ಏವಂ ಮೇ ದರ್ಶನಂ ಕೃತಮ್ ॥ ೨೭ ॥

ಯಃ ಪರಂ ರಂಹಸಃ ಸಾಕ್ಷಾತ್ತ್ರಿಗುಣಾಜ್ಜೀವಸಂಜ್ಞಿತಾತ್ ।
ಭಗವಂತಂ ವಾಸುದೇವಂ ಪ್ರಪನ್ನಃ ಸ ಪ್ರಿಯೋ ಹಿ ಮೇ ॥ ೨೮ ॥

ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್
ವಿರಿಂಚತಾಮೇತಿ ತತಃ ಪರಂ ಹಿ ಮಾಮ್ ।
ಅವ್ಯಾಕೃತಂ ಭಾಗವತೋಽಥ ವೈಷ್ಣವಂ
ಪದಂ ಯಥಾಹಂ ವಿಬುಧಾಃ ಕಲಾತ್ಯಯೇ ॥ ೨೯ ॥

ಅಥ ಭಾಗವತಾ ಯೂಯಂ ಪ್ರಿಯಾಃ ಸ್ಥ ಭಗವಾನ್ ಯಥಾ ।
ನ ಮದ್ಭಾಗವತಾನಾಂ ಚ ಪ್ರೇಯಾನನ್ಯೋಽಸ್ತಿ ಕರ್ಹಿಚಿತ್ ॥ ೩೦ ॥

ಅದರ ಸುತ್ತಲೂ ಸೊಂಪಾಗಿ ಬೆಳೆದಿದ್ದ ಬಗೆ-ಬಗೆಯ ಮರ-ಬಳ್ಳಿಗಳ ಮೇಲೆ ಮತ್ತದುಂಬಿಗಳು ಝೇಂಕರಿಸುತ್ತಿದ್ದವು. ಅವುಗಳ ಮಧುರ ಧ್ವನಿಯಿಂದ ಗಿಡ-ಮರ-ಬಳ್ಳಿಗಳು ಹರ್ಷದಿಂದ ರೋಮಾಂಚಿತವಾಗಿವೆಯೋ ಎಂಬಂತೆ ಶೋಭಿಸುತ್ತಿದ್ದವು. ತಾವರೆಯ ಪೂಧೂಳಿಯನ್ನು ಗಾಳಿಯು ಎಲ್ಲೆಡೆ ಚೆಲ್ಲುತ್ತಾ ಜನರಿಗೆ ಆನಂದೋತ್ಸವವನ್ನು ಉಂಟುಮಾಡುವಂತಿತ್ತು. ॥ ೨೨ ॥ ಅಲ್ಲಿ ಮೃದಂಗ, ಪಣವಗಳೇ ಮುಂತಾದ ವಾದ್ಯಗಳೊಂದಿಗೆ ಅನೇಕ ದಿವ್ಯ ರಾಗ-ರಾಗಿಣಿಯರ ಕ್ರಮದಿಂದ ಸಂಗೀತದ ಮಧುರ ಧ್ವನಿಯನ್ನು ಕೇಳಿ ಆ ರಾಜಕುಮಾರರಿಗೆ ತುಂಬಾ ಆಶ್ಚರ್ಯವಾಯಿತು. ॥ ೨೩ ॥ ಅಷ್ಟರಲ್ಲೇ ಅವರಿಗೆ ಅಲ್ಲಿ ದೇವಾಧಿದೇವನಾದ ಭಗವಾನ್ ಶಂಕರನು ತನ್ನ ಅನುಚರರೊಂದಿಗೆ ಆ ಸರೋವರದಿಂದ ಹೊರಗೆ ಬರುತ್ತಿರುವುದು ಕಾಣಿಸಿತು. ಆ ಸ್ವಾಮಿಯ ದೇಹವು ಪುಟವಿಟ್ಟ ಬಂಗಾರದ ರಾಶಿಯಂತೆ ಥಳ-ಥಳಿಸುತ್ತಿತ್ತು. ನೀಲಿಬಣ್ಣದ ಕಂಠದಿಂದಲೂ, ವಿಶಾಲವಾದ ಮೂರು ಕಣ್ಣುಗಳಿಂದಲೂ ಒಪ್ಪುತ್ತಿದ್ದ ಶಂಕರನು ಪ್ರಸನ್ನಮುದ್ರೆಯಿಂದ ಭಕ್ತರ ಮೇಲೆ ಅನುಗ್ರಹವನ್ನು ಬೀರುತ್ತಿದ್ದನು. ಗಂಧರ್ವರು ಶ್ರುತಿ ಮಧುರವಾಗಿ ಆತನ ಗುಣಗಾನ ಮಾಡುತ್ತಿದ್ದರು. ಹೀಗೆ ಇದ್ದಕ್ಕಿದ್ದಂತೆ ಆತನ ದರ್ಶನ ಭಾಗ್ಯವನ್ನು ಪಡೆದ ಪ್ರಚೇತಸರಿಗೆ ತುಂಬಾ ಕುತೂಹಲವುಂಟಾಗಿ ಅವರು ಶಿವನ ಚರಣಗಳಲ್ಲಿ ಪ್ರಣಾಮಗಳನ್ನು ಸಲ್ಲಿಸಿದರು. ॥ ೨೪-೨೫ ॥ ಆಗ ಶರಣಾಗತರ ಭವಭಯಹಾರಿಯೂ, ಧರ್ಮವತ್ಸಲನೂ ಆದ ಭಗವಾನ್ ಶಂಕರನು ತನ್ನ ದರ್ಶನದಿಂದ ಸಂತಸಗೊಂಡ ಆ ಧರ್ಮಜ್ಞರೂ, ಶೀಲಸಂಪನ್ನರೂ ಆದ ರಾಜಕುಮಾರರಲ್ಲಿ ಪ್ರಸನ್ನನಾಗಿ ಇಂತೆಂದನು. ॥ ೨೬॥

**ಶ್ರೀಮಹಾದೇವನು ಹೇಳಿದನು** – ನೀವು ಪ್ರಾಚೀನ ಬರ್ಹಿರಾಜನ ಸುಪುತ್ರರು. ನಿಮಗೆ ಮಂಗಳವಾಗಲಿ. ನೀವು ಏನು ಮಾಡಬೇಕೆಂಬುದನ್ನು ನಾನು ತಿಳಿದಿರುವೆ. ಈಗ ನಿಮ್ಮನ್ನು ಅನುಗ್ರಹಿಸುವುದಕ್ಕಾಗಿಯೇ ನಾನು ನಿಮಗೆ ದರ್ಶನವನ್ನು ನೀಡಿದ್ದೇನೆ. ॥ ೨೭ ॥ ಯಾರು ಅವ್ಯಕ್ತ ಪ್ರಕೃತಿ ಹಾಗೂ ಜೀವಸಂಜ್ಞಕ ಪುರುಷ ಇವೆರಡರ ನಿಯಾಮಕನಾದ ಭಗವಾನ್ ವಾಸುದೇವನಲ್ಲಿ ಶರಣಾಗುತ್ತಾನೋ ಅವನು ನನಗೆ ಪರಮಪ್ರಿಯನು. ॥ ೨೮ ॥ ತಮ್ಮ ವರ್ಣಾಶ್ರಮ ಧರ್ಮವನ್ನು ಚೆನ್ನಾಗಿ ಪಾಲಿಸುವ ಮನುಷ್ಯನು ನೂರುಜನ್ಮಗಳ ನಂತರ ಬ್ರಹ್ಮದೇವರ ಪದವನ್ನು ಪಡೆಯುತ್ತಾನೆ. ಅದಕ್ಕಿಂತಲೂ ಹೆಚ್ಚು ಪುಣ್ಯವನ್ನು ಗಳಿಸಿದರೆ ಆತನು ನನ್ನನ್ನು ಹೊಂದುವನು. ಆದರೆ ಭಗವಂತನ ಅನನ್ಯ ಭಕ್ತನಾದರೋ ನೇರವಾಗಿ ಭಗವಾನ್ ವಿಷ್ಣುವಿನ ಆ ಪ್ರಪಂಚಾತೀತ ಪರಮಪದವನ್ನು ಪಡೆದುಕೊಳ್ಳುವನು. ನಾವು ಮತ್ತು ನಮ್ಮಂತಹ ಅಧಿಕಾರಿದೇವತೆಗಳೂ ನಮ್ಮ-ನಮ್ಮ ಅಧಿಕಾರದ ಕಾಲವು ಮುಗಿದ ನಂತರ ಹೋಗಿ ಸೇರುವ ಪರಮೋತ್ತಮಪದವದು. ॥ ೨೯ ॥ ನೀವು ಭಗವದ್ಭಕ್ತರಾಗಿರುವುದರಿಂದಲೇ ನನಗೂ ಶ್ರೀಭಗವಂತನಷ್ಟೇ ಪ್ರಿಯರಾಗಿದ್ದೀರಿ. ಅಂತೆಯೇ ಭಗವಂತನ ಭಕ್ತರಿಗೂ ಕೂಡ ನನಗಿಂತ ಮಿಗಿಲಾದ ಪ್ರಿಯನು ಯಾರು ಎಂದಿಗೂ ಇರುವುದಿಲ್ಲ. ॥ ೩೦ ॥

**ಇದಂ ವಿವಿಕ್ತಂ ಜಪ್ತವ್ಯಂ ಪವಿತ್ರಂ ಮಂಗಲಂ ಪರಮ್ ।**
**ನಿಃಶ್ರೇಯಸಕರಂ ಚಾಪಿ ಶ್ರೂಯತಾಂ ತದ್ವದಾಮಿ ವಃ ॥ ೩೧ ॥**

ಮೈತ್ರೇಯ ಉವಾಚ

**ಇತ್ಯನುಕ್ರೋಶಹೃದಯೋ ಭಗವಾನಾಹ ತಾಂಶಿವಃ ।**
**ಬದ್ಧಾಂಜಲೀನ್ರಾಜಪುತ್ರಾನ್ನಾರಾಯಣಪರೋ ವಚಃ ॥ ೩೨ ॥**

ಶ್ರೀರುದ್ರ ಉವಾಚ

**ಜಿತಂ ತ ಆತ್ಮವಿದ್ಧುರ್ಯಸ್ವಸ್ತಯೇ ಸ್ವಸ್ತಿರಸ್ತು ಮೇ ।**
**ಭವತಾ ರಾಧಸಾ ರಾದ್ಧಂ ಸರ್ವಸ್ಮಾ ಆತ್ಮನೇ ನಮಃ ॥ ೩೩ ॥**

**ನಮಃ ಪಂಕಜನಾಭಾಯ ಭೂತಸೂಕ್ಷ್ಮೇಂದ್ರಿಯಾತ್ಮನೇ ।**
**ವಾಸುದೇವಾಯ ಶಾಂತಾಯ ಕೂಟಸ್ಥಾಯ ಸ್ವರೋಚಿಷೇ ॥ ೩೪ ॥**

**ಸಂಕರ್ಷಣಾಯ ಸೂಕ್ಷ್ಮಾಯ ದುರಂತಾಯಾಂತಕಾಯ ಚ ।**
**ನಮೋ ವಿಶ್ವಪ್ರಬೋಧಾಯ ಪ್ರದ್ಯುಮ್ನಾಯಾಂತರಾತ್ಮನೇ ॥ ೩೫ ॥**

**ನಮೋ ನಮೋಽನಿರುದ್ಧಾಯ ಹೃಷೀಕೇಶೇಂದ್ರಿಯಾತ್ಮನೇ ।**
**ನಮಃ ಪರಮಹಂಸಾಯ ಪೂರ್ಣಾಯ ನಿಭೃತಾತ್ಮನೇ ॥ ೩೬ ॥**

**ಸ್ವರ್ಗಾಪವರ್ಗದ್ವಾರಾಯ ನಿತ್ಯಂ ಶುಚಿಷದೇ ನಮಃ ।**
**ನಮೋ ಹಿರಣ್ಯವೀರ್ಯಾಯ ಚಾತುರ್ಹೋತ್ರಾಯ ತಂತವೇ ॥ ೩೭ ॥**

**ನಮ ಊರ್ಜ ಇಷೇ ತ್ರಯ್ಯಾಃ ಪತಯೇ ಯಜ್ಞರೇತಸೇ ।**
**ತೃಪ್ತಿದಾಯ ಚ ಜೀವಾನಾಂ ನಮಃ ಸರ್ವರಸಾತ್ಮನೇ ॥ ೩೮ ॥**

**ಸರ್ವಸತ್ತ್ವಾತ್ಮದೇಹಾಯ ವಿಶೇಷಾಯ ಸ್ಥವೀಯಸೇ ।**
**ನಮಸ್ತ್ರೈಲೋಕ್ಯಪಾಲಾಯ ಸಹ ಓಜೋಬಲಾಯ ಚ ॥ ೩೯ ॥**

ಈಗ ನಾನು ನಿಮಗೆ ಅತ್ಯಂತ ಪವಿತ್ರವೂ, ಮಂಗಳಕರವೂ, ಮೋಕ್ಷಪ್ರದವೂ ಆದ ಒಂದು ಸ್ತೋತ್ರವನ್ನು ಉಪದೇಶಿಸುತ್ತೇನೆ. ಇದನ್ನು ನೀವು ಶುದ್ಧವಾದ ಭಾವದಿಂದ ಜಪಿಸಬೇಕು. ॥ ೩೧ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಆಗ ಕರುಣಾರ್ದ್ರ ಹೃದಯನಾದ ನಾರಾಯಣಪರಾಯಣನಾದ ಭಗವಾನ್ ಶಿವನು ತನ್ನ ಮುಂದೆ ಕೈಜೋಡಿಸಿಕೊಂಡು ನಿಂತಿದ್ದ ರಾಜಪುತ್ರರಿಗೆ ಈ ಸ್ತೋತ್ರವನ್ನು ಉಪದೇಶಿಸಿದನು. ॥ ೩೨ ॥

**ಭಗವಾನ್ ರುದ್ರನು ಸ್ತುತಿಮಾಡತೊಡಗಿದನು** – ಓ ಭಗವಂತಾ ! ನಿನ್ನ ಜಯ (ಉತ್ಕರ್ಷ)ವು ಉಚ್ಚಕೋಟಿಯ ಆತ್ಮಜ್ಞಾನಿಗಳಿಗೆ ಶ್ರೇಯಸ್ಸಿಗಾಗಿಯೇ – ನಿಜಾನಂದ ಲಾಭಕ್ಕಾಗಿಯೇ ಇದೆ. ಅದರಿಂದ ನನಗೂ ಕ್ಷೇಮ ಉಂಟಾಗಲಿ. ನೀನು ಸದಾ ನಿರತಿಶಯ ಪರಮಾನಂದ ಸ್ವರೂಪದಲ್ಲಿಯೇ ನೆಲೆಗೊಂಡಿರುವವನು. ಇಂತಹ ಸರ್ವಾತ್ಮಕ ಆತ್ಮಸ್ವರೂಪನಾದ ನಿನಗೆ ನಮಸ್ಕಾರವು. ॥ ೩೩ ॥ ನೀನು ಪದ್ಮನಾಭ (ಸಮಸ್ತಲೋಕಗಳ ಆದಿಕಾರಣ)ನಾಗಿರುವೆ. ಭೂತಸೂಕ್ಷ್ಮ (ತನ್ಮಾತ್ರೆಗಳು) ಮತ್ತು ಇಂದ್ರಿಯಗಳ ನಿಯಾಮಕನೂ, ಶಾಂತನೂ, ವೃದ್ಧಿ ಕ್ಷಯಗಳನ್ನು ಹೊಂದದ ಏಕರಸನೂ ಹಾಗೂ ಸ್ವಯಂಪ್ರಕಾಶ ವಾಸುದೇವ (ಚಿತ್ತದ ಅಧಿಷ್ಠಾತೃ)ನೂ ನೀನೇ ಆಗಿರುವೆ. ಅಂತಹ ನಿನಗೆ ನಮಸ್ಕಾರವು. ॥ ೩೪॥ ಸೂಕ್ಷ್ಮ (ಅವ್ಯಕ್ತ)ರೂಪಿಯೂ, ಅಂತರಹಿತನೂ, ಸರ್ವಸಂಹಾರಕನೂ ಆಗಿರುವ ಸಂಕರ್ಷಣರೂಪಿಯಾದ ನಿನಗೆ ನಮಸ್ಕಾರವು. ವಿಶ್ವವನ್ನು ಎಚ್ಚರಗೊಳಿಸುವ, ವಿಶ್ವಕ್ಕೆ ಅಂತರಾತ್ಮನಾಗಿರುವ ಪ್ರದ್ಯುಮ್ನರೂಪಿಯಾದ ನಿನಗೆ ನಮಸ್ಕಾರವು. ॥ ೩೫ ॥ ಇಂದ್ರಿಯಗಳಿಗೆ ಅಧಿಪತಿಯಾಗಿ, ಅವುಗಳ ಅಂತರಾತ್ಮನಾಗಿ ಮನೋತತ್ತ್ವಾಭಿಮಾನಿಯಾದ ಅನಿರುದ್ಧರೂಪಿಯಾದ ನಿನಗೆ ನಮಸ್ಕಾರವು. ನೀನೇ ನಿನ್ನ ತೇಜಸ್ಸಿನಿಂದ ಜಗತ್ತನ್ನು ತುಂಬಿರುವ ಸೂರ್ಯದೇವನಾಗಿರುವೆ. ಪೂರ್ಣನಾದ್ದರಿಂದ ವೃದ್ಧಿ-ಕ್ಷಯಗಳಿಲ್ಲದ ನಿನಗೆ ನಮಸ್ಕಾರವು. ॥ ೩೬ ॥ ಸ್ವರ್ಗ ಮತ್ತು ಮೋಕ್ಷಗಳೆರಡಕ್ಕೂ ದ್ವಾರವಾಗಿರುವ ಹಾಗೂ ನಿರಂತರ ಅಂತಃಕರಣದಲ್ಲಿರುವ ನಿನಗೆ ನಮಸ್ಕಾರವು. ಸುವರ್ಣವನ್ನು ವೀರ್ಯವಾಗಿ ಉಳ್ಳವನೂ, ಚಾತುರ್ಹೋತ್ರ ಮುಂತಾದ ಯಜ್ಞಗಳಿಗೆ ಸಾಧನವಾಗಿ ಅವುಗಳನ್ನು ವಿಸ್ತರಿಸುವವನೂ ಆದ ಅಗ್ನಿದೇವ ಸ್ವರೂಪಿಯಾದ ನಿನಗೆ ನಮಸ್ಕಾರವು. ॥ ೩೭ ॥ ದೇವತೆಗಳಿಗೂ, ಪಿತೃಗಳಿಗೂ ಪೋಷಕನಾದ ಸೋಮರೂಪಿಗೆ ನಮಸ್ಕಾರವು. ವೇದಗಳಿಗೆ ಪತಿಯಾದ ಯಜ್ಞೇಶ್ವರನಿಗೆ ನಮಸ್ಕಾರವು. ಎಲ್ಲ ಜೀವಿಗಳಿಗೂ ತೃಪ್ತಿಯನ್ನುಂಟುಮಾಡುವ ಸರ್ವರಸ (ಜಲ)ರೂಪನಾದ ನಿನಗೆ ನಮಸ್ಕಾರವು. ॥ ೩೮ ॥ ಎಲ್ಲ ಪ್ರಾಣಿಗಳಿಗೆ ನೆಲೆಯಾದ ಸ್ಥೂಲವಿರಾಟ್ ಪುರುಷರೂಪಿಗೆ, ಮೂರು ಲೋಕಗಳ ಪಾಲಕನಿಗೆ, ಮಾನಸಿಕ, ಐಂದ್ರಿಯಿಕ ಮತ್ತು ಶಾರೀರಿಕ ಶಕ್ತಿರೂಪಿಯಾದ ವಾಯು (ಪ್ರಾಣ)ರೂಪಿಗೆ ನಮೋ ನಮಃ ॥ ೩೯ ॥ ನೀನೇ ನಿನ್ನ ಗುಣ ಶಬ್ದದ ಮೂಲಕ ಸಮಸ್ತ ಪದಾರ್ಥಗಳ ಅರಿವನ್ನುಂಟುಮಾಡುತ್ತಾ ಒಳ-ಹೊರಗಿನ ಭೇದವನ್ನುಂಟುಮಾಡುವ ಆಕಾಶನಾಗಿರುವೆ. ನೀನೇ ಮಹಾನ್ ಪುಣ್ಯ

ಅರ್ಥಲಿಂಗಾಯ ನಭಸೇ ನಮೋಽಂತರ್ಬಹಿರಾತ್ಮನೇ ।
ನಮಃ ಪುಣ್ಯಾಯ ಲೋಕಾಯ ಅಮುಷ್ಮೈ ಭೂರಿವರ್ಚಸೇ ॥ ೪೦ ॥

ಪ್ರವೃತ್ತಾಯ ನಿವೃತ್ತಾಯ ಪಿತೃದೇವಾಯ ಕರ್ಮಣೇ ।
ನಮೋಽಧರ್ಮವಿಪಾಕಾಯ ಮೃತ್ಯವೇ ದುಃಖದಾಯ ಚ ॥ ೪೧ ॥

ನಮಸ್ತ ಆಶಿಷಾಮೀಶ ಮನವೇ ಕಾರಣಾತ್ಮನೇ ।
ನಮೋ ಧರ್ಮಾಯ ಬೃಹತೇ ಕೃಷ್ಣಾಯಾಕುಂಠಮೇಧಸೇ ।
ಪುರುಷಾಯ ಪುರಾಣಾಯ ಸಾಂಖ್ಯಯೋಗೇಶ್ವರಾಯ ಚ ॥ ೪೨ ॥

ಶಕ್ತಿತ್ರಯಸಮೇತಾಯ ಮೀಢುಷೇಽಹಂಕೃತಾತ್ಮನೇ ।
ಚೇತಆಕೂತಿರೂಪಾಯ ನಮೋ ವಾಚೋವಿಭೂತಯೇ ॥ ೪೩ ॥

ದರ್ಶನಂ ನೋ ದಿದೃಕ್ಷೂಣಾಂ
ದೇಹಿ ಭಾಗವತಾರ್ಚಿತಮ್ ।
ರೂಪಂ ಪ್ರಿಯತಮಂ ಸ್ವಾನಾಂ
ಸರ್ವೇಂದ್ರಿಯಗುಣಾಂಜನಮ್ ॥ ೪೪ ॥

ಸ್ನಿಗ್ಧಪ್ರಾವೃಡ್ಘನಶ್ಯಾಮಂ ಸರ್ವಸೌಂದರ್ಯಸಂಗ್ರಹಮ್ ।
ಚಾರ್ವಾಯತಚತುರ್ಬಾಹುಂ ಸುಜಾತರುಚಿರಾನನಮ್ ॥ ೪೫ ॥

ಪದ್ಮಕೋಶಪಲಾಶಾಕ್ಷಂ ಸುಂದರಭ್ರು ಸುನಾಸಿಕಮ್ ।
ಸುದ್ವಿಜಂ ಸುಕಪೋಲಾಸ್ಯಂ ಸಮಕರ್ಣವಿಭೂಷಣಮ್ ॥ ೪೬ ॥

ಪ್ರೀತಿಪ್ರಹಸಿತಾಪಾಂಗಮಲಕೈರುಪಶೋಭಿತಮ್ ।
ಲಸತ್ಪಂಕಜಕಿಂಜಲ್ಕದುಕೂಲಂ ಮೃಷ್ಟಕುಂಡಲಮ್ ॥ ೪೭ ॥

ಸ್ಫುರತ್ಕಿರೀಟವಲಯಹಾರನೂಪುರಮೇಖಲಮ್ ।
ಶಂಖಚಕ್ರಗದಾಪದ್ಮಮಾಲಾಮಣ್ಯುತ್ತಮರ್ಧಿಮತ್ ॥ ೪೮ ॥

ಸಿಂಹಸ್ಕಂಧತ್ವಿಷೋ ಬಿಭ್ರತ್ಸೌಭಗಗ್ರೀವಕೌಸ್ತುಭಮ್ ।
ಶ್ರಿಯಾನಪಾಯಿನ್ಯಾ ಕ್ಷಿಪ್ತನಿಕಷಾಶ್ಮೋರಸೋಲ್ಲಸತ್ ॥ ೪೯ ॥

ಗಳಿಂದ ದೊರೆಯುವಂತಹ ಪರಮ ತೇಜೋಮಯ ಸ್ವರ್ಗ-ವೈಕುಂಠವೇ ಮುಂತಾದ ಲೋಕಗಳೂ ಆಗಿರುವೆ. ಅಂತಹ ನಿನಗೆ ಪದೇ-ಪದೇ ನಮಸ್ಕಾರಗಳು. ॥ ೪೦ ॥ ಪಿತೃಲೋಕವನ್ನು ದೊರಕಿಸಿಕೊಡುವ ಪ್ರವೃತ್ತಿಕರ್ಮರೂಪಿಯೂ, ದೇವಲೋಕವನ್ನು ದೊರಕಿಸಿಕೊಡುವ ನಿವೃತ್ತಿಕರ್ಮರೂಪಿಯೂ ನೀನೇ ಆಗಿರುವೆ. ನೀನೇ ಅಧರ್ಮದ ಫಲಸ್ವರೂಪವಾದ ದುಃಖದಾಯಕ ಮೃತ್ಯುವೂ ಆಗಿರುವೆ. ಅಂತಹ ನಿನಗೆ ನಮಸ್ಕಾರವು. ॥ ೪೧ ॥ ಸ್ವಾಮೀ! ನೀನೇ ಪುರಾಣಪುರುಷನೂ, ಸಾಂಖ್ಯ ಮತ್ತು ಯೋಗದ ಅಧೀಶ್ವರನಾದ ಭಗವಾನ್ ಶ್ರೀಕೃಷ್ಣನಾಗಿರುವೆ. ನೀನೇ ಎಲ್ಲ ರೀತಿಯ ಕಾಮನೆಗಳನ್ನು ಪೂರ್ಣಗೊಳಿಸುವ ಸಾಕ್ಷಾತ್ ಮಂತ್ರಸ್ವರೂಪಿಯೂ, ಮಹಾನ್ ಧರ್ಮಸ್ವರೂಪನೂ ಆಗಿರುವೆ. ನಿನ್ನ ಜ್ಞಾನಶಕ್ತಿಯು ಎಂದಿಗೂ ಕುಂಠಿತವಾಗುವಂತಹುದಲ್ಲ, ಅಂತಹ ನಿನಗೆ ನಮೋ ನಮಃ ॥ ೪೨ ॥ ನೀನೇ ಕರ್ತಾ-ಕರಣ-ಕರ್ಮ ಮೂರೂ ಶಕ್ತಿಗಳ ಏಕಮಾತ್ರ ಆಶ್ರಯನಾಗಿರುವೆ. ನೀನೇ ಅಹಂಕಾರತತ್ತ್ವಕ್ಕೆ ಅಧಿಪತಿಯಾದ ರುದ್ರರೂಪಿಯಾಗಿರುವೆ. ನೀನೇ ಜ್ಞಾನ ಮತ್ತು ಕ್ರಿಯಾಸ್ವರೂಪನಾಗಿರುವೆ ಹಾಗೂ ಪರಾ, ಪಶ್ಯಂತಿ, ಮಧ್ಯಮಾ, ವೈಖರಿ ಎಂಬ ನಾಲ್ಕು ಬಗೆಯ ವಾಣೀಪ್ರಕಾರನೂ ಆಗಿರುವ ನಿನಗೆ ನಮಸ್ಕಾರಗಳು. ॥ ೪೩ ॥

ಪ್ರಭುವೇ! ನಿನ್ನ ಮಂಗಳವಿಗ್ರಹವನ್ನು ನೋಡಬೇಕೆಂದು ಹಂಬಲಿಸುತ್ತಿರುವ ನಮಗೆ – ಭಾಗವತಶ್ರೇಷ್ಠರಿಂದ ಪೂಜಿತನಾಗಿ, ಆತ್ಮೀಯಭಕ್ತರಿಗೆ ಅತ್ಯಂತ ಪ್ರಿಯತಮವಾಗಿ, ಎಲ್ಲ ಇಂದ್ರಿಯಗಳಿಗೂ ತೃಪ್ತಿಯನ್ನುಂಟುಮಾಡುವ ಗುಣಗಳಿಂದ ಸಂಪನ್ನನಾಗಿರುವ ಆ ದಿವ್ಯಮೂರ್ತಿಯ ದರ್ಶನವನ್ನು ದಯಪಾಲಿಸು. ॥ ೪೪ ॥ ಆದಾದರೋ ಕಾರ್ಮುಗಿಲಿನಂತೆ ಸ್ನಿಗ್ಧ ಶ್ಯಾಮಲವರ್ಣದಿಂದಿದ್ದು ಸಮಸ್ತ ಸೌಂದರ್ಯದ ಸಾರ ಸಂಗ್ರಹವಾಗಿದೆ. ಸುಂದರವಾದ ನಾಲ್ಕು ವಿಶಾಲಭುಜಗಳು, ಮನೋಹರ ಮುಖಾರವಿಂದವು, ಕಮಲದ ಎಸಳಿನಂತಿರುವ ಕಣ್ಣುಗಳು, ಸುಂದರವಾದ ಹುಬ್ಬುಗಳು, ಎಳಸಾದ ಮೂಗು, ಮನೋಹರವಾದ ದಂತಪಂಕ್ತಿಗಳು, ಕಮನೀಯವಾದ ಕಪೋಲಗಳಿಂದ ಕೂಡಿದ ಸೊಗಸಾದ ಮುಖಮಂಡಲವು ಸಮವಾದ ಎರಡು ಕಿವಿಗಳಲ್ಲಿ ಆಭರಣಗಳು ಶೋಭಿಸುತ್ತಿವೆ. ॥ ೪೫-೪೬॥ ಪ್ರೀತಿಯಿಂದ ನಗುವನ್ನು ಹೊರಸೂಸುವ ಕಡೆಗಣ್ಣುನೋಟ, ಕಪ್ಪಾದ ಮುಂಗುರುಳುಗಳು, ಕಮಲಪುಷ್ಪದ ಕೇಸರದಂತೆ ಕಾಂತಿಕಿರಣಗಳನ್ನು ಚೆಲ್ಲುತ್ತಿರುವ ಪೀತಾಂಬರ, ಥಳ-ಥಳಿಸುವ ಕುಂಡಲಗಳು, ಮಿರುಗುತ್ತಿರುವ ಕಿರೀಟ, ಕಂಕಣ, ಹಾರ, ಕಾಲಂದುಗೆ, ಒಡ್ಯಾಣಗಳೇ ಮುಂತಾದ ವಿಚಿತ್ರವಾದ ಆಭರಣಗಳು ಹಾಗೂ ಶಂಖ, ಚಕ್ರ, ಗದಾ, ಪದ್ಮ, ವನಮಾಲೆ, ಕೌಸ್ತುಭಮಣಿಯಿಂದಾಗಿ ಅವನ ರೂಪವು ಅಪೂರ್ವವಾದ ಕಾಂತಿಯಿಂದ ಕಂಗೊಳಿಸುತ್ತಿದೆ. ॥ ೪೭-೪೮ ॥ ಸಿಂಹದ ಹೆಗಲನ್ನು ಹೋಲುವ ಉಬ್ಬಿದ ಹೆಗಲಿನ ಸೊಗಸು, ಸುಂದರವಾದ ಕೊರಳಿನಲ್ಲಿ ಹೊಳೆಯುತ್ತಿರುವ ಹಾರ, ಕೇಯೂರ, ಕುಂಡಲಗಳ ಕಾಂತಿಯು, ಶ್ರೀಲಕ್ಷ್ಮೀದೇವಿಗೆ ನಿತ್ಯನಿವಾಸಮಂದಿರವಾಗಿ ಶ್ರೀವತ್ಸಚಿಹ್ನೆಯಿಂದ ಶೋಭಿತವಾದ ವಕ್ಷಸ್ಥಳವು ಕಣ್ಣುಗಳಿಗೆ ಹಬ್ಬವಾಗಿದೆ. ॥ ೪೯ ॥

ಪೂರರೇಚಕಸಂವಿಗ್ನವಲಿವಲ್ಗುದಲೋದರಮ್ ।
ಪ್ರತಿಸಂಕ್ರಾಮಯದ್ವಿಶ್ವಂ ನಾಭ್ಯಾಽಽವರ್ತಗಭೀರಯಾ ॥ ೩೦ ॥

ಶ್ಯಾಮಶ್ರೋಣ್ಯಧಿರೋಚಿಷ್ಣು ದುಕೂಲಸ್ವರ್ಣಮೇಖಲಮ್ ।
ಸಮಚಾರ್ವಂಘ್ರಿಜಂಘೋರುನಿಮ್ನಜಾನುಸುದರ್ಶನಮ್ ॥ ೩೧ ॥

ಪದಾ ಶರತ್ಪದ್ಮಪಲಾಶರೋಚಿಷಾ
ನಖದ್ಯುಭಿರ್ನೋಽನ್ತರಘಂ ವಿಧುನ್ವತಾ ।
ಪ್ರದರ್ಶಯ ಸ್ವೀಯಮಪಾಸ್ತ ಸಾಧ್ವಸಂ
ಪದಂ ಗುರೋ ಮಾರ್ಗಗುರುಸ್ತಮೋಜುಷಾಮ್ ॥ ೩೨ ॥

ಏತದ್ರೂಪಮನುಧ್ಯೇಯಮಾತ್ಮಶುದ್ಧಿಮಭೀಪ್ಸತಾಮ್ ।
ಯದ್ಭಕ್ತಿಯೋಗೋಽಭಯದಃ ಸ್ವಧರ್ಮಮನುತಿಷ್ಠತಾಮ್ ॥ ೩೩ ॥

ಭವಾನ್ ಭಕ್ತಿಮತಾ ಲಭ್ಯೋ ದುರ್ಲಭಃ ಸರ್ವದೇಹಿನಾಮ್ ।
ಸ್ವಾರಾಜ್ಯಸ್ಯಾಪ್ಯಭಿಮತ ಏಕಾಂತೇನಾತ್ಮವಿದ್ಗತಿಃ ॥ ೩೪ ॥

ತಂ ದುರಾರಾಧ್ಯಮಾರಾಧ್ಯ ಸತಾಮಪಿ ದುರಾಪಯಾ ।
ಏಕಾಂತಭಕ್ತ್ಯಾ ಕೋ ವಾಂಛೇತ್ಪಾದಮೂಲಂ ವಿನಾ ಬಹಿಃ ॥ ೩೫ ॥

ಯತ್ರ ನಿರ್ವಿಷ್ಟಮರಣಂ ಕೃತಾಂತೋ ನಾಭಿಮನ್ಯತೇ ।
ವಿಶ್ವಂ ವಿಧ್ವಂಸಯನ್ ವೀರ್ಯಶೌರ್ಯವಿಸ್ಫೂರ್ಜಿತಭ್ರುವಾ ॥ ೩೬ ॥

ಕ್ಷಣಾರ್ಧೇನಾಪಿ ತುಲಯೇ ನ ಸ್ವರ್ಗಂ ನಾಪುನರ್ಭವಮ್ ।
ಭಗವತ್ಸಂಗಿಸಂಗಸ್ಯ ಮರ್ತ್ಯಾನಾಂ ಕಿಮುತಾಶಿಷಃ ॥ ೩೭ ॥

ಅಥಾನಘಾಂಘ್ರೇಸ್ತವ ಕೀರ್ತಿತೀರ್ಥಯೋ-
ರಂತರ್ಬಹಿಃಸ್ನಾನವಿಧೂತಪಾಪ್ಮನಾಮ್ ।
ಭೂತೇಷ್ವನುಕ್ರೋಶಸುಸತ್ತ್ವಶೀಲಿನಾಂ
ಸ್ಯಾತ್ಸಂಗಮೋಽನುಗ್ರಹ ಏಷ ನಸ್ತವ ॥ ೩೮ ॥

ಉಚ್ಛ್ವಾಸ- ನಿಃಶ್ವಾಸಗಳ ಏರಿಳಿತದಿಂದ ಚಲಿಸುತ್ತಿರುವ ತ್ರಿವಳಿಗಳಿಂದ ಒಪ್ಪುತ್ತಿರುವ ತೆಳುವಾದ ಹೊಟ್ಟೆಯಲ್ಲಿ ತನ್ನಿಂದ ಹೊರಬಂದ ವಿಶ್ವವನ್ನು ತನ್ನಲ್ಲೇ ಲಯಗೊಳಿಸಿಕೊಂಡಿದೆಯೋ ಎಂಬಂತಿರುವ ಆಳವಾದ ಸುಳಿನಾಭಿಯು ಶೋಭಿಸುತ್ತಿದೆ. ॥ ೩೦ ॥ ಶ್ಯಾಮಲವಾದ ಕಟಿಭಾಗದಲ್ಲಿ ಪೀತಾಂಬರವೂ, ಉಡಿದಾರವೂ ರಾರಾಜಿಸುತ್ತಿವೆ. ಪರಸ್ಪರ ಸಮನಾಗಿರುವ ಪಾದಗಳು, ಮೇಗಾಲು, ಮೊಣ ಕಾಲು ಮತ್ತು ತೊಡೆಗಳಿಂದ ಕೂಡಿದ ನಿನ್ನ ದಿವ್ಯ ಶ್ರೀದೇಹವು ರಮಣೀಯವಾಗಿದೆ. ॥ ೩೧ ॥ ಶರತ್ಕಾಲದ ಕಮಲದಳದ ಕಾಂತಿಯನ್ನು ನಾಚಿಸುವ ಅಡಿದಾವರೆಗಳು, ಅದರಲ್ಲಿ ರಾರಾಜಿಸುತ್ತಿರುವ ಆ ಕಾಲುಗುರುಗಳಿಂದ ಹೊರಹೊಮ್ಮುತ್ತಿರುವ ಪ್ರಕಾಶವು ಜೀವರ ಹೃದಯದ ಕತ್ತಲೆಯನ್ನು ತೊಡೆದುಹಾಕುತ್ತಿದೆ. ಭಕ್ತರ ಭಯವನ್ನು ನೀಗಿಸಿ ಅವರಿಗೆ ಆಶ್ರಯಸ್ವರೂಪವಾಗಿರುವ ನಿನ್ನ ದಿವ್ಯರೂಪದ ದರ್ಶನವನ್ನು ದಯಪಾಲಿಸು. ಜಗದ್ಗುರೋ ! ಅಜ್ಞಾನದಿಂದೊಡಗೊಂಡ ನಮ್ಮಂತಹ ಬಡಜೀವಿಗಳಿಗೆ ದಾರಿ ತೋರುವ ಸದ್ಗುರುವು ನೀನೇ ಅಲ್ಲವೇ ! ॥ ೩೨ ॥

ಪ್ರಭೋ ! ಆತ್ಮಶುದ್ಧಿಯನ್ನು ಬಯಸುವವನು – ಇಂತಹ ನಿನ್ನ ದಿವ್ಯಮೂರ್ತಿಯನ್ನೇ ಧ್ಯಾನಿಸಬೇಕು. ಇದರಲ್ಲಿ ನೆಲೆಗೊಂಡ ಭಕ್ತಿಯೋಗವೇ ಸ್ವಧರ್ಮಾಚರಣೆಯನ್ನು ಮಾಡುವವರಿಗೆ ಅಭಯವನ್ನು ನೀಡುವುದು. ॥ ೩೩ ॥ ಇತರ ಎಲ್ಲ ದೇಹಿಗಳಿಗೂ ದುರ್ಲಭನಾಗಿದ್ದರೂ, ಭಕ್ತರಿಗೆ ಸುಲಭವಾಗಿ ನೀನು ದೊರೆಯುವೆ. ಸ್ವರ್ಗದಲ್ಲಿರುವ ಇಂದ್ರಾದಿಗಳೂ ನಿನ್ನನ್ನೇ ಬಯಸುವರು. ಏಕಾಂತಭಾವವುಳ್ಳ ಆತ್ಮಜ್ಞರಿಗೆ ನೀನೇ ಗತಿಯಾಗಿರುವೆ. ॥ ೩೪ ॥ ಸತ್ಪುರುಷರಿಗೂ ದುರ್ಲಭವಾಗಿರುವ ಅನನ್ಯವಾದ ಮತ್ತು ದುಸ್ಸಾಧ್ಯವಾದ ಭಕ್ತಿಯೋಗದಿಂದ ನಿನ್ನನ್ನು ಪ್ರಸನ್ನಗೊಳಿಸಿದ ಬಳಿಕ ಆ ನಿನ್ನ ಪಾದಕಮಲಗಳನ್ನು ಬಿಟ್ಟು ಬೇರಾವುದನ್ನಾದರೂ ಯಾರು ತಾನೇ ಬಯಸಿಯಾರು ? ॥ ೩೫ ॥ ವೀರ್ಯ- ಶೌರ್ಯಗಳಿಂದ ಅದುರುತ್ತಿರುವ ಹುಬ್ಬಿನಾಟಗಳಿಂದಲೇ ಇಡೀ ಜಗತ್ತನ್ನು ಸಂಹಾರಮಾಡುವ ಯಮನೂ ಕೂಡ ನಿನ್ನ ಚರಣಗಳಲ್ಲಿ ಶರಣಾದ ಪ್ರಾಣಿಗಳ ಮೇಲೆ ತನ್ನ ಅಧಿಕಾರವನ್ನು ನಡೆಸಲಾರನು. ॥ ೩೬ ॥

ಭಗವಂತನ ಅಂತಹ ಪ್ರೇಮಿ ಭಕ್ತರ ಕ್ಷಣಾರ್ಧದ ಸತ್ಸಂಗ ಉಂಟಾದರೆ, ಅದಕ್ಕೆ ಸಮವಾಗಿ ಸ್ವರ್ಗವಾಗಲೀ, ಮೋಕ್ಷವಾಗಲೀ ನಾನು ಲೆಕ್ಕಿಸುವುದಿಲ್ಲ. ಹಾಗಿರುವಾಗ ಮರ್ತ್ಯಲೋಕದ ತುಚ್ಛ ಭೋಗಗಳ ಬಗ್ಗೆ ಹೇಳುವುದೇನಿದೆ ? ॥ ೩೭ ॥ ಪ್ರಭೋ ! ನಿನ್ನ ಚರಣಗಳು ಸಮಸ್ತ ಪಾಪರಾಶಿಯನ್ನು ಕಳೆಯುವಂತಹವುಗಳು. ನಿನ್ನ ಕೀರ್ತಿಯಲ್ಲಿಯೂ ಮತ್ತು ನಿನ್ನ ಶ್ರೀಪಾದ ತೀರ್ಥವಾದ ಗಂಗೆಯಲ್ಲಿ ಅಂತರಿಕ ಮತ್ತು ಬಾಹ್ಯ ಸ್ನಾನವನ್ನು ಮಾಡಿ ಮಾನಸಿಕ ಹಾಗೂ ಶಾರೀರಿಕ ಎರಡೂ ವಿಧದ ಪಾಪಗಳನ್ನು ತೊಳೆದುಕೊಳ್ಳುವರು. ಜೀವಿಗಳ ಕುರಿತು ದಯೆ ತೋರುವ, ರಾಗ-ದ್ವೇಷಾದಿರಹಿತ ಚಿತ್ತವುಳ್ಳ ಸರಳವಾದ ಸರ್ವಗುಣಗಳಿಂದ ಕೂಡಿದ ಆ ಭಾಗವತೋತ್ತಮರ ಸಂಗವು ನಮಗೆ ದೊರೆಯುತ್ತಿರಲಿ. ಇದೇ ಅನುಗ್ರಹವನ್ನು ನೀನು ನಮ್ಮ ಮೇಲೆ ತೋರಬೇಕು. ॥ ೩೮ ॥

ನ ಯಸ್ಯ ಚಿತ್ತಂ ಬಹಿರರ್ಥವಿಭ್ರಮಂ
ತಮೋಗುಹಾಯಾಂ ಚ ವಿಶುದ್ಧಮಾವಿಶತ್ ।
ಯದ್ಭಕ್ತಿಯೋಗಾನುಗೃಹೀತಮಂಜಸಾ
ಮುನಿರ್ವಿಚಷ್ಟೇ ನನು ತತ್ರ ತೇ ಗತಿಮ್ ॥ ೫೯ ॥

ಯತ್ರೇದಂ ವ್ಯಜ್ಯತೇ ವಿಶ್ವಂ ವಿಶ್ವಸ್ಮಿನ್ನವಭಾತಿ ಯತ್ ।
ತತ್‌ತ್ವಂ ಬ್ರಹ್ಮ ಪರಂ ಜ್ಯೋತಿರಾಕಾಶಮಿವ ವಿಸ್ತೃತಮ್ ॥ ೬೦ ॥

ಯೋ ಮಾಯಯೇದಂ ಪುರುರೂಪಯಾಸೃಜತ್
ಬಿಭರ್ತಿ ಭೂಯಃ ಕ್ಷಪಯತ್ಯವಿಕ್ರಿಯಃ ।
ಯದ್ಭೇದಬುದ್ಧಿಃ ಸದಿವಾತ್ಮದುಃಸ್ಥಯಾ
ತಮಾತ್ಮತಂತ್ರಂ ಭಗವನ್ ಪ್ರತೀಮಹಿ ॥ ೬೧ ॥

ಕ್ರಿಯಾಕಲಾಪೈರಿದಮೇವ ಯೋಗಿನಃ
ಶ್ರದ್ಧಾನ್ವಿತಾಃ ಸಾಧು ಯಜಂತಿ ಸಿದ್ಧಯೇ ।
ಭೂತೇಂದ್ರಿಯಾಂತಃಕರಣೋಪಲಕ್ಷಿತಂ
ವೇದೇ ಚ ತಂತ್ರೇ ಚ ತ ಏವ ಕೋವಿದಾಃ ॥ ೬೨ ॥

ತ್ವಮೇಕ ಆದ್ಯಃ ಪುರುಷಃ ಸುಪ್ತಶಕ್ತಿ-
ಸ್ತಯಾ ರಜಃಸತ್ತ್ವತಮೋ ವಿಭಿದ್ಯತೇ ।
ಮಹಾನಹಂ ಖಂ ಮರುದಗ್ನಿವಾರ್ಧರಾಃ
ಸುರರ್ಷಯೋ ಭೂತಗಣಾ ಇದಂ ಯತಃ ॥ ೬೩ ॥

ಸೃಷ್ಟಂ ಸ್ವಶಕ್ತ್ಯೇದಮನುಪ್ರವಿಷ್ಟ-
ಶ್ಚತುರ್ವಿಧಂ ಪುರಮಾತ್ಮಾಂಶಕೇನ ।
ಅಥೋ ವಿದುಸ್ತಂ ಪುರುಷಂ ಸಂತಮಂತ-
ರ್ಭುಂಕ್ತೇ ಹೃಷೀಕೈರ್ಮಧು ಸಾರಘಂ ಯಃ ॥ ೬೪ ॥

ಸ ಏಷ ಲೋಕಾನತಿಚಂಡ ವೇಗೋ
ವಿಕರ್ಷಸಿ ತ್ವಂ ಖಲು ಕಾಲಯಾನಃ ।
ಭೂತಾನಿ ಭೂತೈರನುಮೇಯತತ್ತ್ವೋ
ಘನಾವಲೀರ್ವಾಯುರಿವಾವಿಷಹ್ಯಃ ॥ ೬೫ ॥

ಪ್ರಮತ್ತ ಮುಚ್ಚೈರಿತಿಕೃತ್ಯಚಿಂತಯಾ
ಪ್ರವೃದ್ಧಲೋಭಂ ವಿಷಯೇಷು ಲಾಲಸಮ್ ।
ತ್ವಮಪ್ರಮತ್ತಃ ಸಹಸಾಭಿಪದ್ಯಸೇ
ಕ್ಷುಲ್ಲೇಲಿಹಾನೋಽಹಿರಿವಾಖುಮಂತಕಃ ॥ ೬೬ ॥

ಯಾವ ಸಾಧಕನ ಚಿತ್ತವು ಭಕ್ತಿಯೋಗದಿಂದ ಅನುಗ್ರಹಿಸಲ್ಪಟ್ಟು ಪರಿಶುದ್ಧವಾಗಿ ಹೊರಗಿನ ವಿಷಯಗಳಲ್ಲಿ ಅಲೆದಾಡುವುದಿಲ್ಲವೋ, ಅವನು ಆಯಾಸ ವಿಲ್ಲದೆಯೇ ನಿನ್ನ ಸ್ವರೂಪದ ದರ್ಶನವನ್ನು ಪಡೆದುಕೊಳ್ಳುವನು. ॥ ೫೯ ॥ ಈ ವಿಶ್ವವೆಲ್ಲವೂ ಯಾರಲ್ಲಿ ಅಭಿವ್ಯಕ್ತವಾಗಿದೆಯೋ, ಯಾವುದು ಈ ಇಡೀ ವಿಶ್ವದಲ್ಲಿ ಬೆಳಗುತ್ತಿದೆಯೋ, ಆ ಆಕಾಶದಂತೆ ಸರ್ವ ವ್ಯಾಪಕವು ಪರಮಪ್ರಕಾಶ ಮಯವೂ ಆದ ಪರಬ್ರಹ್ಮ ಪರಂಜ್ಯೋತಿಯು ನೀನೇ ಆಗಿರುವೆ.॥ ೬೦ ॥ ಓ ಭಗವಂತಾ! ನೀನು ನಾನಾರೂಪಗಳನ್ನು ಧರಿಸಿರುವ ಮಾಯೆಯಿಂದ ಈ ಜಗತ್ತನ್ನು ಸೃಷ್ಟಿಸಿ, ಸಲಹಿ, ಸಂಹರಿಸುತ್ತಿದ್ದರೂ ಯಾವ ವಿಕಾರಕ್ಕೂ ಒಳಪಡದವನಾಗಿರುವೆ. ಭೇದಬುದ್ಧಿಯನ್ನುಂಟುಮಾಡುತ್ತಾ ಜಗತ್ತಿನಲ್ಲಿ ಎಲ್ಲರ ಮೇಲೂ ಪ್ರಭಾವವನ್ನು ಬೀರುತ್ತಿರುವ ಆ ಮಾಯೆಯು ಪರಮಾತ್ಮನಾದ ನಿನ್ನ ಮೇಲೆ ತನ್ನ ಯಾವುದೇ ಪ್ರಭಾವವನ್ನು ಬೀರಲು ಅಸಮರ್ಥವಾಗಿದ್ದಾಳೆ. ನೀನಾದರೋ ಪರಮಸ್ವತಂತ್ರನೆಂದೇ ನಾವು ತಿಳಿಯುತ್ತೇವೆ. ॥ ೬೧ ॥ ಪಂಚಭೂತಗಳು, ಇಂದ್ರಿಯಗಳು, ಅಂತಃಕರಣ ಇವುಗಳ ಪ್ರೇರಕನು ನೀನೇ ಆಗಿರುವೆ ಮತ್ತು ಅವುಗಳ ಮೂಲಕವೇ ಸೂಚಿತನಾಗುತ್ತೀಯೆ. ಕರ್ಮಯೋಗಿಗಳು ಸಿದ್ಧಿಯನ್ನು ಹೊಂದಲಿಕ್ಕಾಗಿ ಬಗೆ-ಬಗೆಯ ಕರ್ಮಗಳ ಮೂಲಕ ನಿನ್ನ ಈ ಸಗುಣ ಸಾಕಾರ ಸ್ವರೂಪವನ್ನೇ ಶ್ರದ್ಧೆಯಿಂದ ಚೆನ್ನಾಗಿ ಪೂಜಿಸುತ್ತಾರೆ. ಅಂತಹ ಯೋಗಿಗಳೇ ವೇದ-ಶಾಸ್ತ್ರಗಳಲ್ಲಿ ಪ್ರವೀಣರೆಂದು ತಿಳಿಯಬೇಕು. ॥ ೬೨ ॥ ಓ ಸರ್ವಮೂಲನಾದ ಸ್ವಾಮಿಯೇ! ನೀನೇ ಅದ್ವಿತೀಯನಾದ ಆದಿಪುರುಷನು. ಸೃಷ್ಟಿಗೆ ಮೊದಲು ಮಾಯಾಶಕ್ತಿಯು ನಿನ್ನಲ್ಲೇ ನಿದ್ರಿಸಿರುತ್ತದೆ. ಅನಂತರ ಸೃಷ್ಟಿಕಾಲದಲ್ಲಿ ಅದರಿಂದಲೇ – ಸತ್ತ್ವ, ರಜ, ತಮ ಎಂಬ ಗುಣಗಳ ವಿಭಾಗವಾಗಿ ಮಹತ್ತತ್ತ್ವ, ಅಹಂಕಾರ, ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥಿವಿಗಳೆಂಬ ತತ್ತ್ವಗಳೂ, ದೇವತೆಗಳೂ, ಋಷಿಗಳೂ ಹಾಗೂ ಸಮಸ್ತ ಪ್ರಾಣಿಗಳಿಂದ ಕೂಡಿದ ಈ ಜಗತ್ತಿನ ಉತ್ಪತ್ತಿಯಾಗುತ್ತದೆ. ॥ ೬೩ ॥

ಜೇನುಹುಳುಗಳು ತಾವೇ ತಯಾರಿಸಿದ ಜೇನನ್ನು ತಿನ್ನುವಂತೆ ಪುರುಷನು ನಿನ್ನ ಶಕ್ತಿಯಿಂದ ಸೃಷ್ಟಿಸಲ್ಪಟ್ಟ ಈ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ಬಗೆಯ ದೇಹಗಳಲ್ಲಿ ಒಳಹೊಕ್ಕು ಇಂದ್ರಿಯಗಳ ಮೂಲಕ ವಿಷಯಸುಖಗಳನ್ನು ಅನುಭವಿಸುತ್ತಾನೆ. ಈ ಪುರುಷನು ನಿನ್ನ ಅಂಗವೇ ಆಗಿದ್ದಾನೆ. ಇವನನ್ನೇ ಜೀವನೆಂದೂ ಹೇಳುತ್ತಾರೆ. ॥ ೬೪ ॥ ಸಹಿಸಲು ಅಶಕ್ಯವಾದ ಪ್ರಚಂಡವೇಗದಿಂದ ಬೀಸುವ ಗಾಳಿಯು ಮೋಡಗಳ ಸಮೂಹವನ್ನು ಚದುರಿಸುವಂತೆ – ನೀನೇ ಕಾಲವೆಂಬ ರಥದಲ್ಲಿ ಕುಳಿತು ಸಹಿಸಲು ಅಸಾಧ್ಯವಾದ ಪ್ರಚಂಡವೇಗದಿಂದ ಭೂತಗಳನ್ನು ಚದುರಿಸಿ ಲಯಗೊಳಿಸುವೆ. ನಿನ್ನ ತತ್ತ್ವವನ್ನು ಅನುಮಾನ ಪ್ರಮಾಣದಿಂದ ಅರಿಯಬೇಕೇ ಹೊರತು ಪ್ರತ್ಯಕ್ಷದಿಂದ ತಿಳಿಯಲಾಗುವುದಿಲ್ಲ. ॥ ೬೫ ॥

'ಇದನ್ನು ಮಾಡಬೇಕು, ಅದನ್ನು ಮಾಡಬೇಕು' ಮುಂತಾದ ಚಿಂತಾಪರಂಪರೆಗಳಿಂದ ಲೋಭವು ಹೆಚ್ಚಿ ವಿಷಯಭೋಗಗಳಲ್ಲಿ

ಕಸ್ತ್ವತ್ಪದಾಬ್ಜಂ ವಿಜಹಾತಿ ಪಂಡಿತೋ
ಯಸ್ತೇಽವಮಾನವ್ಯಯಮಾನಕೇತನಃ ।
ವಿಶಂಕಯಾಸ್ಮದ್ಗುರುರರ್ಚತಿ ಸ್ಮ ಯದ್
ವಿನೋಪಪತ್ತಿಂ ಮನವಶ್ಚತುರ್ದಶ ॥ ೬೭ ॥

ಅಥ ತ್ವಮಸಿ ನೋ ಬ್ರಹ್ಮನ್ಪರಮಾತ್ಮನ್ವಿಪಶ್ಚಿತಾಮ್ ।
ವಿಶ್ವಂ ರುದ್ರಭಯಧ್ವಸ್ತಮಕುತಶ್ಚಿದ್ಭಯಾ ಗತಿಃ
॥ ೬೮ ॥

ಇದಂ ಜಪತ ಭದ್ರಂ ವೋ ವಿಶುದ್ಧಾ ನೃಪನಂದನಾಃ ।
ಸ್ವಧರ್ಮಮನುತಿಷ್ಠಂತೋ ಭಗವತ್ಯರ್ಪಿತಾಶಯಾಃ
॥ ೬೯ ॥

ತಮೇವಾತ್ಮಾನಮಾತ್ಮಸ್ಥಂ ಸರ್ವಭೂತೇಷ್ವವಸ್ಥಿತಮ್ ।
ಪೂಜಯಧ್ವಂ ಗೃಣಂತಶ್ಚ ಧ್ಯಾಯಂತಶ್ಚಾಸಕೃದ್ಧರಿಮ್
॥ ೭೦ ॥

ಯೋಗಾದೇಶಮುಪಾಸಾದ್ಯ ಧಾರಯಂತೋ ಮುನಿವ್ರತಾಃ ।
ಸಮಾಹಿತಧಿಯಃ ಸರ್ವ ಏತದಭ್ಯಸತಾದೃತಾಃ
॥ ೭೧ ॥

ಇದಮಾಹ ಪುರಾಸ್ಮಾಕಂ ಭಗವಾನ್ವಿಶ್ವಸೃಕ್ಪತಿಃ ।
ಭೃಗ್ವಾದೀನಾಮಾತ್ಮಜಾನಾಂ ಸಿಸೃಕ್ಷುಃ ಸಂಸಿಸೃಕ್ಷತಾಮ್
॥ ೭೨ ॥

ತೇ ವಯಂ ನೋದಿತಾಃ ಸರ್ವೇ ಪ್ರಜಾಸರ್ಗೇ ಪ್ರಜೇಶ್ವರಾಃ ।
ಅನೇನ ಧ್ವಸ್ತತಮಸಃ ಸಿಸೃಕ್ಷ್ಮೋ ವಿವಿಧಾಃ ಪ್ರಜಾಃ
॥ ೭೩ ॥

ಅಥೇದಂ ನಿತ್ಯದಾ ಯುಕ್ತೋ ಜಪನ್ನವಹಿತಃ ಪುಮಾನ್ ।
ಅಚಿರಾಚ್ಛ್ರೇಯ ಆಪ್ನೋತಿ ವಾಸುದೇವಪರಾಯಣಃ
॥ ೭೪ ॥

ಶ್ರೇಯಸಾಮಿಹ ಸರ್ವೇಷಾಂ ಜ್ಞಾನಂ ನಿಃಶ್ರೇಯಸಂ ಪರಮ್ ।
ಸುಖಂ ತರತಿ ದುಷ್ಪಾರಂ ಜ್ಞಾನನೌರ್ವ್ಯಸನಾರ್ಣವಮ್
॥ ೭೫ ॥

ಯ ಇಮಂ ಶ್ರದ್ಧಯಾ ಯುಕ್ತೋ ಮದ್ಗೀತಂ ಭಗವತ್ಸ್ತವಮ್ ।
ಅಧೀಯಾನೋ ದುರಾರಾಧ್ಯಂ ಹರಿಮಾರಾಧಯತ್ಯಸೌ
॥ ೭೬ ॥

ಆಸಕ್ತನಾದ ಮೈಮರೆತಿರುವ ಜೀವನನ್ನು – ಎಂದೆಂದೂ ಎಚ್ಚರವಾಗಿರುವ ಕಾಲರೂಪಿಯಾದ ನೀನು ದಿಢೀರನೆ ಆಕ್ರಮಿಸಿಬಿಡುತ್ತೀಯೆ. ಹಸಿವಿನಿಂದ ನಾಲಿಗೆಯನ್ನು ಚಾಚಿರುವ ಸರ್ಪವು ಇಲಿಯನ್ನು ಕಬಳಿಸುವಂತೆ ಮೈಮರೆತಿರುವ ಜೀವಿಯನ್ನು ಕಬಳಿಸಿಬಿಡುವೆ. ॥ ೬೬ ॥ ಯಾವ ಪಂಡಿತನು ತಾನೇ ನಿನ್ನನ್ನು ಅನಾದರಿಸಿ ತನ್ನ ಆಯುಸ್ಸನ್ನು ವ್ಯರ್ಥಮಾಡಿಕೊಂಡು ನಿನ್ನ ಪಾದಾರವಿಂದವನ್ನು ತೊರೆದಾನು ? ನಮ್ಮ ಗುರುಗಳಾದ ಬ್ರಹ್ಮದೇವರೂ, ಹದಿನಾಲ್ಕು ಮಂದಿ ಮನುಗಳೂ ಕೂಡ ಯಾವ ವಿಚಾರವೂ ಇಲ್ಲದೆ ಕೇವಲ ಶ್ರದ್ಧೆಯಿಂದಲೇ ಅದನ್ನು ಪೂಜಿಸಿದ್ದರು. ॥ ೬೭ ॥ ಓ ಪರಬ್ರಹ್ಮವೇ ! ಈ ಜಗತ್ತೆಲ್ಲವೂ ರುದ್ರರೂಪವಾದ ಕಾಲದ ಭಯದಿಂದ ವ್ಯಾಕುಲಗೊಂಡಿದೆ. ಆದ್ದರಿಂದ ಓ ಪರಮಾತ್ಮನೇ ! ಈ ತತ್ತ್ವವನ್ನು ತಿಳಿದಿರುವ ನಮಗಾದರೋ ಈಗ ನೀನೇ ಪೂರ್ಣ ಭಯಶೂನ್ಯ ಆಶ್ರಯನಾಗಿರುವೆ." ॥ ೬೮ ॥

ರಾಜಕುಮಾರರೇ ! ನೀವುಗಳು ವಿಶುದ್ಧಭಾವದಿಂದ ಸ್ವಧರ್ಮವನ್ನು ಆಚರಿಸುತ್ತಾ, ಭಗವಂತನಲ್ಲಿ ಚಿತ್ತವನ್ನು ನೆಟ್ಟು ನಾನು ಹೇಳಿರುವ ಈ ಸ್ತೋತ್ರವನ್ನು ಜಪಿಸುತ್ತಾ ಇರಿ. ಭಗವಂತನು ನಿಮಗೆ ಮಂಗಳವನ್ನು ಉಂಟುಮಾಡುವನು. ॥ ೬೯ ॥ ನೀವು ನಿಮ್ಮ ಅಂತಃಕರಣದಲ್ಲಿ ನೆಲೆಸಿದ ಆ ಸರ್ವಾಂತರ್ಯಾಮಿ ಪರಮಾತ್ಮನಾದ ಶ್ರೀಹರಿಯನ್ನು ಪದೇ-ಪದೇ ಸ್ತುತಿಸುತ್ತಾ, ಚಿಂತಿಸುತ್ತಾ, ಪೂಜಿಸುತ್ತಿರಿ. ॥ ೭೦ ॥ ನಾನು ನಿಮಗೆ ಉಪದೇಶಿಸಿದ ಈ ಯೋಗಾದೇಶವೆಂಬ ಸ್ತೋತ್ರವನ್ನು ನೀವೆಲ್ಲರೂ ಮನಸ್ಸಿನಲ್ಲಿ ಧರಿಸಿ, ಮುನಿವ್ರತವನ್ನು ಆಚರಿಸುತ್ತಾ, ಅತ್ಯಂತ ಆದರದಿಂದ ಕೂಡಿ ಏಕಾಗ್ರಭಾವದಿಂದ ಅಭ್ಯಾಸಮಾಡುತ್ತಿರಿ. ॥ ೭೧ ॥ ಈ ಸ್ತೋತ್ರವನ್ನು ಹಿಂದೆ ಜಗದ್ವಿಸ್ತಾರದ ಇಚ್ಛೆಯುಳ್ಳ ಪ್ರಜಾಪತಿಗಳ ಒಡೆಯನಾದ ಭಗವಾನ್ ಬ್ರಹ್ಮದೇವರು ಪ್ರಜೆಯನ್ನು ಉಂಟುಮಾಡಬೇಕೆಂಬ ಇಚ್ಛೆಯುಳ್ಳ ಭೃಗುವೇ ಮುಂತಾದ ತನ್ನ ಪುತ್ರರಿಗೆ ಉಪದೇಶಮಾಡಿದ್ದರು. ॥ ೭೨ ॥ ಪ್ರಜಾಪತಿಗಳಾದ ನಮಗೆ ಪ್ರಜೆಯನ್ನು ವಿಸ್ತರಿಸುವ ಆಜ್ಞೆಯು ಕೊಡಲ್ಪಟ್ಟಾಗ ಇದರ ಮೂಲಕವೇ ನಾವು ನಮ್ಮ ಅಜ್ಞಾನವನ್ನು ಕಳಕೊಂಡು ಅನೇಕ ಬಗೆಯ ಪ್ರಜೆಯನ್ನು ಉತ್ಪನ್ನಮಾಡಿದೆವು. ॥ ೭೩ ॥

ಈಗಲೂ ಭಗವತ್ಪರಾಯಣನಾದ ಪುರುಷನು ಇದನ್ನು ಏಕಾಗ್ರಚಿತ್ತದಿಂದ ಪ್ರತಿದಿನವೂ ಜಪಿಸಿದರೆ ಅವನಿಗೆ ಶೀಘ್ರವಾಗಿಯೇ ಶ್ರೇಯಸ್ಸುಂಟಾಗುವುದು. ॥ ೭೪ ॥ ಈ ಲೋಕದಲ್ಲಿ ಎಲ್ಲ ರೀತಿಯ ಶ್ರೇಯಸ್ಕರ ಸಾಧನೆಗಳಲ್ಲಿ ಮೋಕ್ಷದಾಯಕವಾದ ಜ್ಞಾನವೇ ಸರ್ವಶ್ರೇಷ್ಠವಾಗಿದೆ. ಜ್ಞಾನನೌಕೆಯನ್ನು ಹತ್ತಿದವನು ಆಯಾಸವಿಲ್ಲದೆಯೇ ಈ ದಾಟಲಶಕ್ಯವಾದ ಸಂಸಾರಸಾಗರವನ್ನು ದಾಟಿಬಿಡುವನು. ॥ ೭೫ ॥ ಭಗವಂತನ ಆರಾಧನೆಯು ಬಹಳ ಕಷ್ಟವಾಗಿದ್ದರೂ ನಾನು ಹೇಳಿದ ಈ ಸ್ತೋತ್ರವನ್ನು ಶ್ರದ್ಧೆಯಿಂದ ಪಠಿಸುವವನು ಸುಲಭವಾಗಿಯೇ ಅವನ ಪ್ರಸನ್ನತೆಯನ್ನು ಪಡೆದುಕೊಳ್ಳುವನು. ॥ ೭೬ ॥

ಏಂದತೇ ಪುರುಷೋಽಮುಷ್ಮಾದ್ಯದ್ಯದಿಚ್ಛತ್ಯಸತ್ವರಮ್ ।
ಮದ್ಗೀತಗೀತಾತ್ಸುಪ್ರೀತಾಚ್ಛ್ರೇಯಸಾಮೇಕವಲ್ಲಭಾತ್ ॥ ೭೭ ॥

ಭಗವಂತನೇ ಎಲ್ಲ ಕಲ್ಯಾಣಸಾಧನೆಗಳ ಏಕಮಾತ್ರ ಧ್ಯೇಯವಾಗಿ ಪ್ರಿಯತಮನಾಗಿರುವನು. ಆದ್ದರಿಂದ ನಾನು ಹಾಡಿರುವ ಈ ಸ್ತೋತ್ರಗಾಯನದಿಂದ ಭಗವಂತನನ್ನು ಪ್ರಸನ್ನಗೊಳಿಸಿ, ಅವನು ಸ್ಥಿರಚಿತ್ತನಾಗಿ ಭಗವಂತನಿಂದ ಬೇಕಾದುದೆಲ್ಲವನ್ನು ಪಡೆದುಕೊಳ್ಳುವನು. ॥ ೭೭ ॥

ಇದಂ ಯ ಕಲ್ಯ ಉತ್ಥಾಯ ಪ್ರಾಂಜಲಿಃ ಶ್ರದ್ಧಯಾನ್ವಿತಃ ।
ಶೃಣುಯಾಚ್ಛ್ರಾವಯೇನ್ಮರ್ತ್ಯೋ ಮುಚ್ಯತೇ ಕರ್ಮಬಂಧನೈಃ ॥ ೭೮ ॥

ಉಷಃಕಾಲದಲ್ಲಿ ಎದ್ದು ಇದನ್ನು ಶ್ರದ್ಧೆಯಿಂದ ಕೈಜೋಡಿಸಿಕೊಂಡು ಕೇಳುವವನು ಎಲ್ಲ ಪ್ರಕಾರದ ಕರ್ಮಬಂಧನದಿಂದ ಮುಕ್ತನಾಗಿ ಹೋಗುವನು. ॥ ೭೮ ॥

ಗೀತಂ ಮಯೇದಂ ನರದೇವನಂದನಾಃ
ಪರಸ್ಯ ಪುಂಸಃ ಪರಮಾತ್ಮನಃ ಸ್ತವಮ್ ।
ಜಪಂತ ಏಕಾಗ್ರಧಿಯಸ್ತಪೋ ಮಹ-
ಚ್ಚರಧ್ವಮಂತೇ ತತ ಆಪ್ಸ್ಯಥೇಪ್ಸಿತಮ್ ॥ ೭೯ ॥

ರಾಜಕುಮಾರರೇ ! ನಾನು ನಿಮಗೆ ಹೇಳಿರುವ ಈ ಪರಮಪುರುಷ ಪರಮಾತ್ಮನ ಸ್ತೋತ್ರವನ್ನು ಏಕಾಗ್ರಚಿತ್ತದಿಂದ ಜಪಿಸುತ್ತಾ ನೀವು ಮಹಾತಪಸ್ಸನ್ನು ಆಚರಿಸಿರಿ. ತಪಸ್ಸು ಪೂರ್ಣವಾದಾಗ ಇದರಿಂದಲೇ ನಿಮ್ಮ ಇಷ್ಟಾರ್ಥಫಲವು ಈಡೇರುವುದು. ॥ ೭೯ ॥

**ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೨೪ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ರುದ್ರಗೀತಂ ನಾಮ ಚತುರ್ವಿಂಶೋಽಧ್ಯಾಯಃ ॥ ೨೪ ॥**

# ಇಪ್ಪತ್ತೈದನೆಯ ಅಧ್ಯಾಯ

## ಪುರಂಜನೋಪಾಖ್ಯಾನದ ಪ್ರಾರಂಭ

*ಮೈತ್ರೇಯ ಉವಾಚ*

ಇತಿ ಸಂದಿಶ್ಯ ಭಗವಾನ್ ಬಾರ್ಹಿಷದೈರಭಿಪೂಜಿತಃ ।
ಪಶ್ಯತಾಂ ರಾಜಪುತ್ರಾಣಾಂ ತತ್ರೈವಾಂತರ್ದಧೇ ಹರಃ ॥ ೧ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಭಗವಾನ್ ಶಂಕರನು ಹೀಗೆ ಪ್ರಚೇತಸರಿಗೆ ಉಪದೇಶಿಸಿದ ಬಳಿಕ ಪ್ರಚೇತಸರು ಶಂಕರನನ್ನು ತುಂಬು ಭಕ್ತಿಯಿಂದ ಪೂಜಿಸಿದರು. ಅನಂತರ ಆ ರಾಜಕುಮಾರರು ನೋಡುತ್ತಿರುವಂತೆ ಶಿವನು ಅಂತರ್ಧಾನನಾದನು. ॥ ೧ ॥

ರುದ್ರಗೀತಂ ಭಗವತಃ ಸ್ತೋತ್ರಂ ಸರ್ವೇ ಪ್ರಚೇತಸಃ ।
ಜಪಂತಸ್ತೇ ತಪಸ್ತೇಪುರ್ವರ್ಷಾಣಾಮಯುತಂ ಜಲೇ ॥ ೨ ॥

ಮತ್ತೆ ಪ್ರಾಚೇತಸರೆಲ್ಲರೂ ರುದ್ರದೇವರು ಉಪದೇಶಿಸಿದ ಸ್ತೋತ್ರವನ್ನು ಜಪಿಸುತ್ತಾ, ನೀರಿನಲ್ಲಿ ನಿಂತುಕೊಂಡು ಹತ್ತುಸಾವಿರ ವರ್ಷಗಳವರೆಗೆ ತಪಸ್ಸನ್ನು ಆಚರಿಸುತ್ತಿದ್ದರು. ॥ ೨ ॥

ಪ್ರಾಚೀನಬರ್ಹಿಷಂ ಕ್ಷತ್ತಃ ಕರ್ಮಸ್ವಾಸಕ್ತಮಾನಸಮ್ ।
ನಾರದೋಽಧ್ಯಾತ್ಮತತ್ತ್ವಜ್ಞಃ ಕೃಪಾಲುಃ ಪ್ರತ್ಯಬೋಧಯತ್ ॥ ೩ ॥

ಇತ್ತ ಕಡೆ ಪ್ರಾಚೀನಬರ್ಹಿಯ ಚಿತ್ತವು ಕರ್ಮಕಾಂಡದಲ್ಲಿ ಅತ್ಯಂತ ಆಸಕ್ತವಾಗಿ ಅಧ್ಯಾತ್ಮದ ವಿಷಯದಲ್ಲಿ ಪ್ರೀತಿಯಿಲ್ಲದೇ ಇರುವುದನ್ನು ಗಮನಿಸಿ, ಅಧ್ಯಾತ್ಮವಿದ್ಯಾವಿಶಾರದ ರಾದ ಪರಮದಯಾಳುಗಳಾದ ನಾರದರು ಅವನ ಬಳಿಗೆ ಬಂದು ಹೀಗೆ ಉಪದೇಶಿಸಿದರು. ॥ ೩ ॥

ಶ್ರೇಯಸ್ತ್ವಂ ಕತಮದ್ರಾಜನ್ ಕರ್ಮಣಾಽಽತ್ಮನ ಈಹಸೇ ।
ದುಃಖಹಾನಿಃ ಸುಖಾವಾಪ್ತಿಃ ಶ್ರೇಯಸ್ತನ್ನೇಹ ಚೇಷ್ಯತೇ ॥ ೪ ॥

ಎಲೈ ರಾಜನೇ ! ಈ ಕರ್ಮಗಳ ಮೂಲಕ ನೀನು ತನ್ನ ಯಾವ ಶ್ರೇಯಸ್ಸನ್ನು ಪಡೆಯಲು ಇಚ್ಛಿಸುತ್ತಿರುವೆ ? ದುಃಖದ ಆತ್ಯಂತಿಕ ನಾಶ ಮತ್ತು ಪರಮಾನಂದದ ಪ್ರಾಪ್ತಿಯ ಹೆಸರೇ ಶ್ರೇಯಸ್ಸಾಗಿದೆ. ಇದಾದರೋ ಕರ್ಮಗಳಿಂದಾಗುವುದಿಲ್ಲ. ॥ ೪ ॥

*ರಾಜೋವಾಚ*

ನ ಜಾನಾಮಿ ಮಹಾಭಾಗ ಪರಂ ಕರ್ಮಾಪವಿದ್ಧಧೀಃ ।
ಬ್ರೂಹಿ ಮೇ ವಿಮಲಂ ಜ್ಞಾನಂ ಯೇನ ಮುಚ್ಯೇಯ ಕರ್ಮಭಿಃ ॥ ೫ ॥

**ರಾಜನು ಹೇಳಿದನು** – ಮಹಾಭಾಗವತರಾದ ನಾರದರೇ ! ನನ್ನ ಬುದ್ಧಿಯು ಕರ್ಮದಲ್ಲೇ ಸಿಕ್ಕಿಹಾಕಿಕೊಂಡಿದೆ. ಅದರಿಂದ ಪರಮ ಶ್ರೇಯಸ್ಸೇನೆಂಬುದು ನನಗೆ ತಿಳಿಯದಾಗಿದೆ. ಈ ಕರ್ಮಬಂಧನದಿಂದ ನಾನು ಬಿಡುಗಡೆ ಹೊಂದುವಂತಹ ವಿಶುದ್ಧ ಜ್ಞಾನವನ್ನು ನೀವು ನನಗೆ ಉಪದೇಶಿಸಿರಿ. ॥ ೫ ॥

ಗೃಹೇಷು ಕೂಟಧರ್ಮೇಷು ಪುತ್ರದಾರಧನಾರ್ಥಧೀಃ ।
ನ ಪರಂ ವಿಂದತೇ ಮೂಢೋ ಭ್ರಾಮ್ಯನ್ಸಂಸಾರವರ್ತ್ಮಸು ॥ ೬ ॥

*ನಾರದ ಉವಾಚ*

ಭೋ ಭೋಃ ಪ್ರಜಾಪತೇ ರಾಜನ್ ಪಶೂನ್ಪಶ್ಯ ತ್ವಯಾಧ್ವರೇ ।
ಸಂಜ್ಞಾಪಿತಾಂಜೀವಸಂಘಾನ್ನಿರ್ಘೃಣೇನ ಸಹಸ್ರಶಃ ॥ ೭ ॥

ಏತೇ ತ್ವಾಂ ಸಂಪ್ರತೀಕ್ಷಂತೇ ಸ್ಮರಂತೋ ವೈಶಸಂ ತವ ।
ಸಂಪರೇತಮಯಃ ಕೂಟೈಶ್ಛಿಂದಂತ್ಯುತ್ಥಿತಮನ್ಯವಃ ॥ ೮ ॥

ಅತ್ರ ತೇ ಕಥಯಿಷ್ಯೇಽಮುಮಿತಿಹಾಸಂ ಪುರಾತನಮ್ ।
ಪುರಂಜನಸ್ಯ ಚರಿತಂ ನಿಬೋಧ ಗದತೋ ಮಮ ॥ ೯ ॥

ಆಸೀತ್ಪುರಂಜನೋ ನಾಮ ರಾಜಾ ರಾಜನ್ ಬೃಹಚ್ಛ್ರವಾಃ ।
ತಸ್ಯಾ ವಿಜ್ಞಾತನಾಮಾಽಽಸೀತ್ಸಖಾವಿಜ್ಞಾತಚೇಷ್ಟಿತಃ ॥ ೧೦ ॥

ಸೋಽನ್ವೇಷಮಾಣಃ ಶರಣಂ ಬಭ್ರಾಮ ಪೃಥಿವೀಂ ಪ್ರಭುಃ ।
ನಾನುರೂಪಂ ಯದಾವಿಂದದಭೂತ್ಸ ವಿಮನಾ ಇವ ॥ ೧೧ ॥

ನ ಸಾಧು ಮೇನೇ ತಾಃ ಸರ್ವಾ ಭೂತಲೇ ಯಾವತೀಃ ಪುರಃ ।
ಕಾಮಾನ್ ಕಾಮಯಮಾನೋಽಸೌ ತಸ್ಯ ತಸ್ಯೋಪಪತ್ತಯೇ ॥ ೧೨ ॥

ಸ ಏಕದಾ ಹಿಮವತೋ ದಕ್ಷಿಣೇಷ್ವಥ ಸಾನುಷು ।
ದದರ್ಶ ನವಭಿರ್ದ್ವಾರ್ಭಿಃ ಪುರಂ ಲಕ್ಷಿತಲಕ್ಷಣಾಮ್ ॥ ೧೩ ॥

ಪ್ರಾಕಾರೋಪವನಾಟ್ಟಾಲಪರಿಖೈರಕ್ಷತೋರಣೈಃ ।
ಸ್ವರ್ಣರೌಪ್ಯಾಯಸೈಃ ಶೃಂಗೈಃ ಸಂಕುಲಾಂ ಸರ್ವತೋ ಗೃಹೈಃ ॥ ೧೪ ॥

ನೀಲಸ್ಫಟಿಕವೈದೂರ್ಯಮುಕ್ತಾಮರಕತಾರುಣೈಃ ।
ಕ್ಲೃಪ್ತಹರ್ಮ್ಯಸ್ಥಲೀಂ ದೀಪ್ತಾಂ ಶ್ರಿಯಾ ಭೋಗವತೀಮಿವ ॥ ೧೫ ॥

ಸಭಾಚತ್ವರರಥ್ಯಾಭಿರಾಕ್ರೀಡಾಯತನಾಪಣೈಃ ।
ಚೈತ್ಯಧ್ವಜಪತಾಕಾಭಿರ್ಯುಕ್ತಾಂ ವಿದ್ರುಮವೇದಿಭಿಃ ॥ ೧೬ ॥

ಕಪಟಧರ್ಮಮಯ ಗೃಹಸ್ಥಾಶ್ರಮದಲ್ಲೇ ಇದ್ದುಕೊಂಡು ಪತ್ನೀ, ಪುತ್ರ, ಧನ ಇವುಗಳನ್ನೇ ಪರಮ ಪುರುಷಾರ್ಥವೆಂದು ತಿಳಿಯುವವನಿಗೆ ಮತ್ತು ಅಜ್ಞಾನವಶದಿಂದ ಸಂಸಾರಾರಣ್ಯದಲ್ಲೇ ಅಲೆಯುತ್ತಾ ಇರುವುದರಿಂದ ಅವನಿಗೆ ಪರಮಶ್ರೇಯಸ್ಸು ದೊರೆಯುವುದಿಲ್ಲ. ॥ ೬ ॥

ಶ್ರೀನಾರದರು ಹೇಳಿದರು – ಎಲೈ ರಾಜೇಂದ್ರನೇ! ನೀನು ಯಜ್ಞದಲ್ಲಿ ನಿರ್ದಯೆಯಿಂದ ಸಾವಿರಾರು ಪಶುಗಳನ್ನು ಬಲಿ ಕೊಟ್ಟಿರುವೆ. ಅವೆಲ್ಲವನ್ನು ಇದೋ ಆಕಾಶದಲ್ಲಿ ನೋಡು, ಎಂದು ತೋರಿಸಿದರು. ॥ ೭ ॥ ಅವೆಲ್ಲವೂ ನೀನು ಅವರಿಗೆ ಕೊಟ್ಟ ಹಿಂಸೆಯನ್ನು ನೆನಪಿಸಿಕೊಂಡು ಸೇಡು ತೀರಿಸಿಕೊಳ್ಳುವುದಕ್ಕಾಗಿ ನಿನ್ನ ದಾರಿಯನ್ನು ನೋಡುತ್ತಿವೆ. ನೀನು ಸತ್ತು ಪರಲೋಕಕ್ಕೆ ಹೋದಾಗ ಅವು ಅತ್ಯಂತ ಕ್ರೋಧದಿಂದ ತಮ್ಮ ಕಬ್ಬಿಣದಂತಹ ಕೊಂಬುಗಳಿಂದ ತಿವಿಯುವರು. ॥ ೮ ॥ ಇರಲಿ. ಈ ವಿಷಯದಲ್ಲಿ ನಾನು ನಿನಗೆ ಒಂದು ಪ್ರಾಚೀನ ಉಪಾಖ್ಯಾನವನ್ನು ಹೇಳುವೆನು. ಅದು ರಾಜಾ ಪುರಂಜನನ ಚರಿತ್ರೆ. ನೀನು ಸಾವಧಾನವಾಗಿ ಕೇಳುವವನಾಗು. ॥ ೯ ॥ ಎಲೈ ರಾಜನೇ! ಹಿಂದೆ ಪುರಂಜನನೆಂಬ ಓರ್ವ ಮಹಾ ಯಶಸ್ವಿಯಾದ ರಾಜನಿದ್ದನು. ಅವನಿಗೆ ಅವಿಜ್ಞಾತನೆಂಬ ಒಬ್ಬ ಸ್ನೇಹಿತನಿದ್ದನು. ಆ ಸ್ನೇಹಿತನ ಯಾವುದೇ ಕೆಲಸ-ಕಾರ್ಯಗಳು ಯಾರಿಗೂ ತಿಳಿಯುತ್ತಿರಲಿಲ್ಲ. ॥ ೧೦ ॥ ರಾಜನು ತಾನು ವಾಸ ಮಾಡಲು ಯೋಗ್ಯವಾದ ಸ್ಥಾನವನ್ನು ಹುಡುಕುತ್ತಾ ಪೃಥಿವಿಯಲ್ಲೆಲ್ಲ ಅಡ್ಡಾಡಿದನು. ಆದರೂ ಅವನಿಗೆ ಯಾವುದೇ ಅನುಕೂಲಕರ ಸ್ಥಾನ ದೊರೆಯದಿದ್ದಾಗ ಅವನು ಬೇಸರಗೊಂಡನು. ॥ ೧೧ ॥ ಅವನಿಗೆ ನಾನಾ ಭೋಗಗಳ ಬಯಕೆ ಉತ್ಕಟವಾಗಿತ್ತು. ಅವುಗಳನ್ನು ಭೋಗಿಸಲಿಕ್ಕಾಗಿ ಅವನು ಜಗತ್ತಿನಲ್ಲಿ ನೋಡಿದ ಯಾವುದೇ ನಗರವು ಅವನಿಗೆ ಸರಿಬೀಳಲಿಲ್ಲ. ॥ ೧೨ ॥

ಒಂದು ದಿನ ಅವನು ಹಿಮಾಲಯದ ದಕ್ಷಿಣದ ತಪ್ಪಲಿನ ಕರ್ಮಭೂಮಿಯಲ್ಲಿ ಒಂದು ಒಂಭತ್ತು ಬಾಗಿಲುಗಳುಳ್ಳ ನಗರವನ್ನು ನೋಡಿದನು. ಅದು ಎಲ್ಲ ಸುಲಕ್ಷಣಗಳಿಂದ ಸಂಪನ್ನವಾಗಿತ್ತು. ॥ ೧೩ ॥ ಅದರ ಸುತ್ತಲೂ ಎತ್ತರವಾದ ಕೋಟೆ-ಕೊತ್ತಲಗಳೂ, ಕಂದಕಗಳೂ ಶೋಭಿಸುತ್ತಿದ್ದವು. ಉದ್ಯಾನವನಗಳೂ, ಗವಾಕ್ಷಗಳೂ, ತೋರಣದ್ವಾರಗಳೂ, ಚಿನ್ನ, ಬೆಳ್ಳಿ, ಕಬ್ಬಿಣಗಳ ಕಲಶಗಳಿಂದ ರಮಣೀಯವಾಗಿದ್ದ ವಿಶಾಲವಾದ ಭವನಗಳೂ ಅದನ್ನು ಅಲಂಕರಿಸಿದ್ದವು. ॥ ೧೪ ॥ ಅಲ್ಲಿಯ ಭವನಗಳು – ನೆಲಗಳು ಇಂದ್ರನೀಲಮಣಿ, ಸ್ಫಟಿಕ, ವಜ್ರ-ವೈಡೂರ್ಯ, ಮುತ್ತು, ಮರಕತಮಣಿ, ಕೆಂಪು ರತ್ನಗಳಿಂದ ಖಚಿತವಾಗಿದ್ದವು. ತನ್ನ ಕಾಂತಿಯಿಂದ ಅದು ನಾಗಗಳ ರಾಜಧಾನಿ ಯಾದ ಭೋಗವತಿನಗರದಂತೆ ಕಂಡು ಬರುತ್ತಿತ್ತು. ॥ ೧೫ ॥ ಅದರಲ್ಲಿ ಅಲ್ಲಲ್ಲಿ ಅನೇಕಸಭಾಭವನಗಳೂ, ಚೌಕಗಳೂ, ರಸ್ತೆಗಳೂ, ಕ್ರೀಡಾಗೃಹಗಳೂ, ಅಂಗಡಿಬೀದಿಗಳೂ, ವಿಶ್ರಾಂತಿಧಾಮಗಳೂ, ಬಾವುಟ – ಪತಾಕೆಗಳೂ, ಹವಳದ ಜಗುಲಿಗಳೂ ರಾರಾಜಿಸುತ್ತಿದ್ದವು. ॥ ೧೬ ॥

ಆ ನಗರದ ಹೊರಗೆ ದಿವ್ಯವಾದ ಮರ-ಬಳ್ಳಿಗಳಿಂದ ಕೂಡಿದ ಒಂದು ಸುಂದರವಾದ ಉದ್ಯಾನವನವೂ, ಅದರ ಮಧ್ಯದಲ್ಲಿ

ಪುರ್ಯಾಸ್ತು ಬಾಹ್ಯೋಪವನೇ ದಿವ್ಯದ್ರುಮಲತಾಕುಲೇ ।
ನದದ್ವಿಹಂಗಾಲಿಕುಲಕೋಲಾಹಲಜಲಾಶಯೇ ॥ ೧೭ ॥

ಹಿಮನಿರ್ಝರವಿಪ್ರುಷ್ಮತ್ಕುಸುಮಾಕರವಾಯುನಾ ।
ಚಲತ್ಪ್ರವಾಲವಿಟಪನಲಿನೀತಟಸಂಪದಿ ॥ ೧೮ ॥

ನಾನಾರಣ್ಯಮೃಗವ್ರಾತೈರನಾಬಾಧೇ ಮುನಿವ್ರತೈಃ ।
ಆಹೂತಂ ಮನ್ಯತೇ ಪಾಂಥೋ ಯತ್ರ ಕೋಕಿಲಕೂಜಿತೈಃ ॥ ೧೯ ॥

ಯದೃಚ್ಛಯಾಽಽಗತಾಂ ತತ್ರ ದದರ್ಶ ಪ್ರಮದೋತ್ತಮಾಮ್ ।
ಭೃತ್ಯೈರ್ದಶಭಿರಾಯಾಂತೀಮೇಕೈಕಶತನಾಯಕೈಃ ॥ ೨೦ ॥

ಪಂಚಶೀರ್ಷಾಹಿನಾ ಗುಪ್ತಾಂ ಪ್ರತೀಹಾರೇಣ ಸರ್ವತಃ ।
ಅನ್ವೇಷಮಾಣಾಮೃಷಭಮಪ್ರೌಢಾಂ ಕಾಮರೂಪಿಣೀಮ್ ॥ ೨೧ ॥

ಸುನಾಸಾಂ ಸುದತೀಂ ಬಾಲಾಂ ಸುಕಪೋಲಾಂ ವರಾನನಾಮ್ ।
ಸಮವಿನ್ಯಸ್ತಕರ್ಣಾಭ್ಯಾಂ ಬಿಭ್ರತೀಂ ಕುಂಡಲಶ್ರಿಯಮ್ ॥ ೨೨ ॥

ಪಿಶಂಗನೀವೀಂ ಸುಶ್ರೋಣೀಂ ಶ್ಯಾಮಾಂ ಕನಕಮೇಖಲಾಮ್ ।
ಪದ್ಭ್ಯಾಂ ಕ್ವಣದ್ಭ್ಯಾಂ ಚಲತೀಂ ನೂಪುರೈರ್ದೇವತಾಮಿವ ॥ ೨೩ ॥

ಸ್ತನೌ ವ್ಯಂಜಿತಕೈಶೋರೌ ಸಮವೃತ್ತೌ ನಿರಂತರೌ ।
ವಸ್ತ್ರಾಂತೇನ ನಿಗೂಹಂತೀಂ ವ್ರೀಡಯಾ ಗಜಗಾಮಿನೀಮ್ ॥ ೨೪ ॥

ತಾಮಾಹ ಲಲಿತಂ ವೀರಃ ಸವ್ರೀಡಸ್ಮಿತಶೋಭನಾಮ್ ।
ಸ್ನಿಗ್ಧೇನಾಪಾಂಗಪುಂಖೇನ ಸ್ಪೃಷ್ಟಃ ಪ್ರೇಮೋದ್ಭ್ರಮದ್ಭ್ರುವಾ ॥ ೨೫ ॥

ಕಾ ತ್ವಂ ಕಂಜಪಲಾಶಾಕ್ಷಿ ಕಸ್ಯಾಸೀಹ ಕುತಃ ಸತಿ ।
ಇಮಾಮುಪಪುರೀಂ ಭೀರು ಕಿಂ ಚಿಕೀರ್ಷಸಿ ಶಂಸ ಮೇ ॥ ೨೬ ॥

ಒಂದು ಸರೋವರವೂ ಶೋಭಿಸುತ್ತಿತ್ತು. ಅದರ ಅಕ್ಕ-ಪಕ್ಕಗಳಲ್ಲಿ ಬಗೆ-ಬಗೆಯ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿದ್ದವು. ದುಂಬಿಗಳು ಝೇಂಕರಿಸುತ್ತಿದ್ದವು. ॥ ೧೭ ॥ ಸರೋವರದ ಪಕ್ಕದಲ್ಲಿದ್ದ ವೃಕ್ಷಗಳ ಕೊಂಬೆಗಳೂ ಮತ್ತು ಎಲೆಗಳೂ ಶೀತಲವಾದ ಝರಿಗಳು ನೀರಿನ ಹನಿಗಳು ಬೆರೆತಿದ್ದ ವಸಂತಮಾರುತದಿಂದ ಮೆಲ್ಲಗೆ ಅಲುಗಾಡುತ್ತಾ ದಡದಲ್ಲಿದ್ದ ನೆಲದ ಶೋಭೆಯನ್ನು ಹೆಚ್ಚಿಸಿದ್ದವು. ॥ ೧೮ ॥ ಅಲ್ಲಿಯ ಕಾಡುಮೃಗಗಳೂ ಕೂಡ ಮುನಿಗಳಿಗುಚಿತವಾದ ಅಹಿಂಸಾದಿ ವ್ರತಗಳನ್ನು ಪಾಲಿಸುತ್ತಿದ್ದವು. ಅದರಿಂದ ಅಲ್ಲಿ ಯಾರಿಗೂ ಯಾವ ವಿಧವಾದ ತೊಂದರೆಯೂ ಆಗುತ್ತಿರಲಿಲ್ಲ. ಆ ಉದ್ಯಾನ ವನದಲ್ಲಿ ಕೋಗಿಲೆಗಳು ಕುಹೂ-ಕುಹೂ ಎಂದು ಇಂಪಾದ ದನಿಗೈಯುತ್ತಾ ದಾರಿಹೋಕರಿಗೆ 'ವಿಶ್ರಾಂತಿ ಪಡೆಯಲು ಇಲ್ಲಿಗೆ ಬನ್ನಿರಿ' ಎಂದು ಸ್ವಾಗತಿಸುತ್ತವೋ ಎಂಬ ಭ್ರಮೆಯುಂಟಾಗುತ್ತಿತ್ತು. ॥ ೧೯ ॥

ಆ ಅದ್ಭುತವಾದ ಉದ್ಯಾನವನದಲ್ಲಿ ಸಂಚರಿಸುತ್ತಿದ್ದ ಪುರಂಜನರಾಜನಿಗೆ ಆಗ ಅಕಸ್ಮಾತ್ತಾಗಿ ಅಲ್ಲಿಗೆ ಬರುತ್ತಿದ್ದ ಒಬ್ಬ ಸುಂದರಿಯು ಕಾಣಿಸಿದಳು. ಆಕೆಗೆ ಹತ್ತುಮಂದಿ ಸೇವಕರು ಬೆಂಗಾವಲಾಗಿದ್ದರು. ಆ ಸೇವಕರಲ್ಲಿ ಒಬ್ಬೊಬ್ಬನೂ ನೂರು ಮಂದಿ ಸ್ತ್ರೀಯರಿಗೆ ನಾಯಕರಾಗಿದ್ದರು. ॥ ೨೦ ॥ ಐದು ಹೆಡೆಯ ಹಾವೊಂದು ಅವಳ ದ್ವಾರಪಾಲಕನಾಗಿದ್ದು ಅಂಗರಕ್ಷಕನಾಗಿ ಅವಳನ್ನು ಎಲ್ಲೆಡೆಗಳಿಂದಲೂ ಕಾಪಾಡುತ್ತಿತ್ತು. ಮುಗ್ಧೆಯಾಗಿ ಇಷ್ಟಬಂದ ರೂಪವನ್ನು ಧರಿಸಬಲ್ಲವಳಾಗಿದ್ದ ಆ ರಮಣಿಯು ತನಗೆ ಅನುರೂಪನಾದ ರಮಣನನ್ನು ಅರಸುತ್ತಿದ್ದಳು. ॥ ೨೧ ॥ ಅವಳ ನೀಳವಾದ ಮೂಗು, ದಂತಪಂಕ್ತಿಗಳು, ಕಮನೀಯ ಕಪೋಲಗಳಿಂದ ಕೂಡಿದ ಮುಖವು ಬಹಳ ಸುಂದರವಾಗಿತ್ತು. ಅವಳಿಗೆ ತಕ್ಕುದಾದ ಕುಂಡಲಗಳು ಕಿವಿಗಳಲ್ಲಿ ಥಳ-ಥಳಿಸುತ್ತಿದ್ದುವು. ॥ ೨೨ ॥ ಅವಳ ಮೈಬಣ್ಣ ಶ್ಯಾಮಲವಾಗಿದ್ದು ನಡುವು ಸುಂದರವಾಗಿತ್ತು. ಹಳದಿಯ ಸೀರೆಯನ್ನುಟ್ಟು ಚಿನ್ನದ ಡಾಬನ್ನು ಧರಿಸಿ, ಕಾಲಂದುಗೆಗಳು ಝಣ-ಝಣಿಸುವಂತೆ ವೈಯ್ಯಾರದಿಂದ ನಡೆದುಬರುತ್ತಿದ್ದ ಆ ರಮಣಿಯು ಧರೆಗೆ ಇಳಿದು ಬಂದ ಓರ್ವದೇವಿಯಂತೆ ಕಾಣುತ್ತಿದ್ದಳು. ॥ ೨೩ ॥

ಆ ಗಜಗಾಮಿನಿಯು ತಾರುಣ್ಯವನ್ನು ಸೂಚಿಸುತ್ತಿರುವ ದುಂಡಾಗಿ ಒಂದಕ್ಕೊಂದು ಸೇರಿಕೊಂಡಿದ್ದ ತನ್ನ ಸ್ತನಗಳನ್ನು ಲಜ್ಜೆಯಿಂದ ಬಾರಿ-ಬಾರಿಗೂ ಸೆರಗಿನಿಂದ ಮುಚ್ಚಿಕೊಳ್ಳುತ್ತಿದ್ದಳು. ॥ ೨೪ ॥ ಲಜ್ಜೆಯಿಂದ ಕೂಡಿದ್ದ ಮುಗುಳುನಗೆಯಿಂದ ಶೋಭಿಸುತ್ತಾ, ಪ್ರೇಮದಿಂದ ಕೂಡಿದ ಭ್ರೂಮಾಟದಿಂದಲೂ, ಮನೋಹರವಾದ ಕಡೆಗಣ್ಣ ನೋಟವೆಂಬ ಬಾಣದಿಂದಲೂ ಘಾಸಿಯಾದ ವೀರ ಪುರಂಜನರಾಜನು ಪರವಶನಾಗಿ ಧೈರ್ಯವನ್ನು ಕಳೆದುಕೊಂಡು ಸವಿಮಾತುಗಳಿಂದ ಆಕೆಯನ್ನು ಹೀಗೆ ಪ್ರಶ್ನಿಸಿದನು. ॥ ೨೫ ॥ ಎಲೈ ಕಮಲಾಕ್ಷಿಯೇ! ನೀನು ಯಾರು? ಯಾರ ಮಗಳು? ಎಲ್ಲಿಂದ ಬರುತ್ತಿರುವೆ? ಸಾಧ್ವಿಯೇ! ಈ ಪುರಿಯ ಬಳಿ ಏನು ಮಾಡಬೇಕೆಂದಿರುವೆ? ॥ ೨೬ ॥

ಕ ಏತೇಽನುಪಥಾ ಯೇ ತ ಏಕಾದಶ ಮಹಾಭಟಾಃ ।
ಏತಾ ವಾ ಲಲನಾಃ ಸುಭ್ರು ಕೋಽಯಂ ತೇಽಹಿಃ ಪುರಃಸರಃ
॥ ೨೭ ॥

ತ್ವಂ ಹ್ರೀರ್ಭವಾನ್ಯಸ್ಯಥ ವಾಗ್ರಮಾ ಪತಿಂ
ವಿಚಿನ್ವತೀ ಕಿಂ ಮುನಿವದ್ರಹೋವನೇ ।
ತ್ವದಂಘ್ರಿಕಾಮಾಪ್ತಸಮಸ್ತಕಾಮಂ
ಕ್ವ ಪದ್ಮಕೋಶಃ ಪತಿತಃ ಕರಾಗ್ರಾತ್ ॥ ೨೮ ॥

ನಾಸಾಂ ವರೋರ್ವನ್ಯತಮಾ ಭುವಿಸ್ಪೃಕ್
ಪುರೀಮಿಮಾಂ ವೀರವರೇಣ ಸಾಕಮ್ ।
ಅರ್ಹಸ್ಯಲಂಕರ್ತುಮದಭ್ರ ಕರ್ಮಣಾ
ಲೋಕಂ ಪರಂ ಶ್ರೀರಿವ ಯಜ್ಞಪುಂಸಾ ॥ ೨೯ ॥

ಯದೇಷ ಮಾಪಾಂಗವಿಖಂಡಿತೇಂದ್ರಿಯಂ
ಸವ್ರೀಡಭಾವಸ್ಮಿತವಿಭ್ರಮದ್ಭ್ರುವಾ ।
ತ್ವಯೋಪಸೃಷ್ಟೋ ಭಗವಾನ್ಮನೋಭವಃ
ಪ್ರಬಾಧತೇಽಥಾನುಗೃಹಾಣ ಶೋಭನೇ ॥ ೩೦ ॥

ತ್ವದಾನನಂ ಸುಭ್ರು ಸುತಾರಲೋಚನಂ
ವ್ಯಾಲಂಬಿನೀಲಾಲಕವೃಂದಸಂವೃತಮ್ ।
ಉನ್ನೀಯ ಮೇ ದರ್ಶಯ ವಲ್ಗುವಾಚಕಂ
ಯದ್ವ್ರೀಡಯಾ ನಾಭಿಮುಖಂ ಶುಚಿಸ್ಮಿತೇ ॥ ೩೧ ॥

*ನಾರದ ಉವಾಚ*

ಇತ್ಥಂ ಪುರಂಜನಂ ನಾರೀ ಯಾಚಮಾನಮಧೀರವತ್ ।
ಅಭ್ಯನಂದತ ತಂ ವೀರಂ ಹಸಂತೀ ವೀರ ಮೋಹಿತಾ
॥ ೩೨ ॥

ನ ವಿದಾಮ ವಯಂ ಸಮ್ಯಕ್ಕರ್ತಾರಂ ಪುರುಷರ್ಷಭ ।
ಆತ್ಮನಶ್ಚ ಪರಸ್ಯಾಪಿ ಗೋತ್ರಂ ನಾಮ ಚ ಯತ್ಕೃತಮ್
॥ ೩೩ ॥

ಇಹಾದ್ಯ ಸಂತಮಾತ್ಮಾನಂ ವಿದಾಮ ನ ತತಃ ಪರಮ್ ।
ಯೇನೇಯಂ ನಿರ್ಮಿತಾ ವೀರ ಪುರೀ ಶರಣಮಾತ್ಮನಃ
॥ ೩೪ ॥

ಏತೇ ಸಖಾಯಃ ಸಖ್ಯೋ ಮೇ
ನರಾ ನಾರ್ಯಶ್ಚ ಮಾನದ ।
ಸುಪ್ತಾಯಾಂ ಮಯಿ ಜಾಗರ್ತಿ
ನಾಗೋಽಯಂ ಪಾಲಯನ್ ಪುರೀಮ್ ॥ ೩೫ ॥

ಎಲೈ ಭೀರುವೇ! ಬೆಂಗಾವಲಾಗಿ ನಿನ್ನನ್ನು ಹಿಂಬಾಲಿಸುತ್ತಿರುವ ಈ ಹನ್ನೊಂದು ಮಂದಿ ವೀರಭಟರು ಯಾರು? ಈ ಸ್ತ್ರೀಯರು ಯಾರು? ನಿನ್ನ ಮುಂದೆ ಕಾವಲಾಗಿ ಬರುತ್ತಿರುವ ಈ ಸರ್ಪವು ಯಾರು? ॥ ೨೭ ॥ ಸುಂದರಿಯೇ! ನೀನು ಪತಿಯನ್ನು ಅರಸುತ್ತಾ ಬಂದಿರುವ ಸಾಕ್ಷಾತ್ ಲಜ್ಜಾದೇವಿಯೋ, ಉಮಾದೇವಿಯೋ, ಸರಸ್ವತಿಯೋ ಅಥವಾ ರಮಾದೇವಿಯೋ? ನೀನು ಮುನಿಗಳಂತೆ ಈ ವನದಲ್ಲಿ ಏಕಾಂತವಾಸವನ್ನು ಏಕೆ ಮಾಡುತ್ತಿರುವೆ? ನಿನ್ನ ಚರಣಾನುಗ್ರಹದಿಂದಲೇ ಪತಿಯ ಎಲ್ಲ ಕಾಮನೆಗಳು ಈಡೇರಿದಂತಾಗುವುವು. ನೀನು ಲಕ್ಷ್ಮೀದೇವಿಯೇ ಆಗಿದ್ದರೆ ನಿನ್ನ ಕೈಯಲ್ಲಿದ್ದ ಲೀಲಾಕಮಲವು ಎಲ್ಲಿ ಬಿದ್ದು ಹೋಯಿತು? ॥ ೨೮ ॥ ಆದರೆ ನೀನು ಅವರಲ್ಲಿ ಯಾರೂ ಆಗಿರಲಾರೆ. ಏಕೆಂದರೆ, ನಿನ್ನ ಪಾದಗಳು ಭೂಮಿಯನ್ನು ಮುಟ್ಟುತ್ತಿವೆ. ನೀನು ಮನುಷ್ಯ ಸ್ತ್ರೀಯೇ ಆಗಿರಬೇಕು. ಒಳ್ಳೆಯದು, ಹಾಗಾದರೆ ಲಕ್ಷ್ಮೀದೇವಿಯು ಭಗವಾನ್ ವಿಷ್ಣುವಿನೊಡನೆ ವೈಕುಂಠವನ್ನು ಬೆಳಗುತ್ತಿರುವಂತೆ ನೀನು ವೀರವರನಾದ ನನ್ನೊಡನೆ ಈ ನಗರಿಯನ್ನು ಅಲಂಕರಿಸುವವಳಾಗು. ॥ ೨೯ ॥ ನಾನು ಮಹಾಪರಾಕ್ರಮಿಯೇ ಆಗಿದ್ದರೂ ಈಗ ನಿನ್ನ ಕಟಾಕ್ಷಗಳು ನನ್ನ ಮನಸ್ಸನ್ನು ಸೂರೆಗೊಂಡುಬಿಟ್ಟಿವೆ. ಲಜ್ಜೆಯಿಂದ ಕೂಡಿ ರತಿಭಾವದಿಂದ ತುಂಬಿರುವ ಕಿರುನಗೆಯಿಂದ ಕೂಡಿರುವ ನಿನ್ನ ಈ ಹುಬ್ಬುಗಳ ಪ್ರೇರಣೆಪಡೆದು ಕಡುಗಲಿಯಾದ ಕಾಮದೇವನು ನನ್ನನ್ನು ಪೀಡಿಸುತ್ತಿದ್ದಾನೆ. ಆದುದರಿಂದ ಸುಂದರಿಯೇ ನನ್ನಲ್ಲಿ ಕೃಪೆದೋರು. ॥ ೩೦ ॥ ಶುಚಿಯಾದ ಮುಗುಳ್ನಗೆಯುಳ್ಳ ಮೋಹಿನಿಯೇ! ಸುಮಧುರವಾದ ವಾಣಿಯನ್ನು ಸುರಿಸುವ ನಿನ್ನ ಮುಖಾರವಿಂದವನ್ನು ನಾಚಿಕೆಯಿಂದ ಏಕೆ ಹಿಂದಿರುಗಿಸಿ ಕೊಂಡಿರುವೆ? ಮುಖವನ್ನು ಮೇಲಕ್ಕೆತ್ತಿ ನನಗೆ ತೋರಿಸು. ಸುಂದರವಾದ ಹುಬ್ಬುಗಳಿಂದ ಕೂಡಿದ ವಿಶಾಲ ಕಣ್ಣುಗಳಿಂದ ಶೋಭಿಸುತ್ತಿರುವ ನಿನ್ನ ಈ ಮುಖಕಮಲವನ್ನು ಕಮನೀಯವಾದ ಕರಿಯ ಮುಂಗುರುಳುಗಳು ಆವರಿಸಿಕೊಂಡಿವೆ. ॥ ೩೧ ॥

**ಶ್ರೀನಾರದರು ಹೇಳುತ್ತಾರೆ** – ಎಲೈ ರಾಜನೇ! ಪುರಂಜನ ರಾಜನು ದೈನ್ಯದಿಂದ ಬೇಡುತ್ತಿರುವುದನ್ನು ಕಂಡು ಆತನಲ್ಲಿ ಮೋಹಗೊಂಡ ಆ ರಮಣಿಯು ನಸುನಗುತ್ತಾ, ಅನುಮೋದಿಸುತ್ತಾ ಹೇಳತೊಡಗಿದಳು. ॥ ೩೨ ॥

ಎಲೈ ನರಪುಂಗವನೇ! ನಮ್ಮನ್ನು ಉಂಟುಮಾಡಿದವರು ಯಾರು ಎಂಬುದು ನಮಗೆ ಸರಿಯಾಗಿ ತಿಳಿಯದು. ನಮ್ಮ ಅಥವಾ ಬೇರೆಯವರ ಹೆಸರು – ಕುಲಗೋತ್ರಗಳೂ ನಮಗೆ ತಿಳಿಯದು. ॥ ೩೩ ॥ ವೀರವರನೇ! ಇಂದು ನಾವೆಲ್ಲರೂ ಈ ನಗರದಲ್ಲಿದ್ದೇವೆ ಇದನ್ನು ಬಿಟ್ಟು ನಾನು ಬೇರೇನೂ ತಿಳಿಯಲಾರೆ. ನಮಗೆ ವಾಸಿಸಲು ಈ ಪುರವನ್ನು ಯಾರು ರಚಿಸಿದರು? ಇದೂ ಕೂಡ ನನಗೆ ತಿಳಿಯದು. ॥ ೩೪ ॥ ಪ್ರಿಯನೇ! ಈ ಪುರುಷರು ನನ್ನ ಸ್ನೇಹಿತರು ಹಾಗೂ ಈ ಸ್ತ್ರೀಯರು ನನ್ನ ಗೆಳತಿಯರು. ಈ ಸರ್ಪವು ನನ್ನ ರಕ್ಷಕನು. ನಾನು ಮಲಗಿದಾಗಲೂ ಇದು ಎಚ್ಚರವಾಗಿದ್ದು ಈ ಪುರಿಯನ್ನು ರಕ್ಷಿಸುತ್ತಿದೆ. ॥ ೩೫ ॥

ದಿಷ್ಟ್ಯಾಽಽಗತೋಽಸಿ ಭದ್ರಂ ತೇ ಗ್ರಾಮ್ಯಾನ್ಕಾಮಾನಭೀಪ್ಸಸೇ ।
ಉದ್ವಹಿಷ್ಯಾಮಿ ತಾಂಸ್ತೇಽಹಂ ಸ್ವಬಂಧುಭಿರರಿಂದಮ
॥ ೩೬ ॥

ಇಮಾಂ ತ್ವಮಧಿತಿಷ್ಠಸ್ವ ಪುರೀಂ ನವಮುಖೀಂ ವಿಭೋ ।
ಮಯೋಪನೀತಾನ್ಗೃಹ್ಣಾನಃ ಕಾಮಭೋಗಾನ್ ಶತಂ ಸಮಾಃ
॥ ೩೭ ॥

ಕಂ ನು ತ್ವದನ್ಯಂ ರಮಯೇ ಹ್ಯರತಿಜ್ಞಮಕೋವಿದಮ್ ।
ಅಸಂಪರಾಯಾಭಿಮುಖಮಶ್ವಸ್ತನವಿದಂ ಪಶುಮ್
॥ ೩೮ ॥

ಧರ್ಮೋ ಹ್ಯತ್ರಾರ್ಥಕಾಮೌ ಚ
ಪ್ರಜಾನಂದೋಽಮೃತಂ ಯಶಃ ।
ಲೋಕಾ ವಿಶೋಕಾ ವಿರಜಾ
ಯಾನ್ ನ ಕೇವಲಿನೋ ವಿದುಃ ॥ ೩೯ ॥

ಪಿತೃದೇವರ್ಷಿಮರ್ತ್ಯಾನಾಂ ಭೂತಾನಾಮಾತ್ಮನಶ್ಚ ಹ ।
ಕ್ಷೇಮ್ಯಂ ವದಂತಿ ಶರಣಂ ಭವೇಽಸ್ಮಿನ್ ಯದ್ ಗೃಹಾಶ್ರಮಃ
॥ ೪೦ ॥

ಕಾ ನಾಮ ವೀರ ವಿಖ್ಯಾತಂ ವದಾನ್ಯಂ ಪ್ರಿಯದರ್ಶನಮ್ ।
ನ ವೃಣೀತ ಪ್ರಿಯಂ ಪ್ರಾಪ್ತಂ ಮಾದೃಶೀ ತ್ವಾದೃಶಂ ಪತಿಮ್
॥ ೪೧ ॥

ಕಸ್ಯಾ ಮನಸ್ತೇ ಭುವಿ ಭೋಗಿಭೋಗಯೋಃ
ಸ್ತ್ರಿಯಾ ನ ಸಜ್ಜೇದ್ಭುಜಯೋರ್ಮಹಾಭುಜ ।
ಯೋಽನಾಥವರ್ಗಾಧಿಮಲಂ ಘೃಣೋದ್ಧತ-
ಸ್ಮಿತಾವಲೋಕೇನ ಚರತ್ಯಪೋಹಿತುಮ್ ॥ ೪೨ ॥

ನಾರದ ಉವಾಚ

ಇತಿ ತೌ ದಂಪತೀ ತತ್ರ ಸಮುದ್ಯ ಸಮಯಂ ಮಿಥಃ ।
ತಾಂ ಪ್ರವಿಶ್ಯ ಪುರೀಂ ರಾಜನ್ಮುಮುದಾತೇ ಶತಂ ಸಮಾಃ
॥ ೪೩ ॥

ಉಪಗೀಯಮಾನೋ ಲಲಿತಂ ತತ್ರ ತತ್ರ ಚ ಗಾಯಕೈಃ ।
ಕ್ರೀಡನ್ಪರಿವೃತಃ ಸ್ತ್ರೀಭಿರ್ಹ್ರದಿನೀಮಾವಿಶಚ್ಛುಚೌ
॥ ೪೪ ॥

ಸಪ್ತೋಪರಿ ಕೃತಾ ದ್ವಾರಃ ಪುರಸ್ತಸ್ಯಾಸ್ತು ದ್ವೇ ಅಧಃ ।
ಪೃಥಗ್ವಿಷಯಗತ್ಯರ್ಥಂ ತಸ್ಯಾಂ ಯಃ ಕಶ್ಚನೇಶ್ವರಃ
॥ ೪೫ ॥

ಎಲೈ ಶತ್ರುಸೂದನನೇ! ನೀನು ಭಾಗ್ಯವಶದಿಂದ ಇಲ್ಲಿಗೆ ದಯಮಾಡಿಸಿರುವೆ. ಗ್ರಾಮ್ಯಸುಖಗಳನ್ನು ಬಯಸುತ್ತಿರುವೆ. ನಿನಗೆ ಮಂಗಳವಾಗಲೀ. ನಾನು ನನ್ನ ಗೆಳೆಯ-ಗೆಳತಿಯರೊಡನೆ ನಿನಗೆ ಎಲ್ಲ ವಿಷಯಸುಖಗಳನ್ನು ಒದಗಿಸಿಕೊಡುತ್ತಾ ಇರುವೆನು. ॥ ೩೬ ॥ ಪ್ರಭೋ! ಒಂಭತ್ತು ಬಾಗಿಲುಗಳುಳ್ಳ ಈ ನಗರಿಯಲ್ಲಿ ಇಷ್ಟಬಂದ ಭೋಗಗಳನ್ನು ಅನುಭವಿಸುತ್ತಾ ನೀನು ನೂರಾರು ವರ್ಷಗಳ ಕಾಲ ಇಲ್ಲಿ ವಾಸಿಸುತ್ತಿರು. ॥ ೩೭ ॥ ನಾನು ನಿನ್ನನ್ನು ಬಿಟ್ಟು ಬೇರೆ ಯಾರ ಜೊತೆಯಲ್ಲಿ ರಮಿಸಲಿ? ಇತರ ಜನರಿಗೆ ರತಿಸುಖವೂ ಗೊತ್ತಿಲ್ಲ, ಭೋಗಗಳು ಯಾವುವು ಎಂಬುದನ್ನೂ ಅವರು ಅರಿಯರು. ಪರಲೋಕದ ವಿಚಾರವನ್ನೂ, ನಾಳೆ ಏನಾಗುವುದು ಎಂಬುದನ್ನೂ ತಿಳಿಯರು. ಅವರು ಪಶುಗಳಿಗೆ ಸಮಾನರು. ॥ ೩೮ ॥ ಆಹಾ! ಈ ಲೋಕದಲ್ಲಿ ಗೃಹಸ್ಥಾಶ್ರಮದಲ್ಲೇ ಧರ್ಮ, ಅರ್ಥ, ಕಾಮ, ಸಂತಾನ-ಸುಖ, ಮೋಕ್ಷ, ಸತ್ಕೀರ್ತಿ ಮತ್ತು ಸ್ವರ್ಗಾದಿ ದಿವ್ಯ ಲೋಕಗಳ ಪ್ರಾಪ್ತಿಯೂ ಆಗಬಲ್ಲದು. ಸಂಸಾರವನ್ನು ತೊರೆದ ಯತಿಗಳಾದರೋ ಇವೆಲ್ಲದರ ಕಲ್ಪನೆಯೇ ಮಾಡಲಾರರು. ॥ ೩೯ ॥ ಈ ಲೋಕದಲ್ಲಿ ಪಿತೃಗಳು, ದೇವತೆಗಳು, ಋಷಿಗಳು, ಮನುಷ್ಯರು- ಇವರೆಲ್ಲರ ಹಾಗೂ ಸಮಸ್ತ ಪ್ರಾಣಿಗಳ ಮತ್ತು ತನ್ನದೂ ಕೂಡ ಶ್ರೇಯಸ್ಸಿನ ಏಕಮಾತ್ರ ಆಶ್ರಯ ಗೃಹಸ್ಥಾಶ್ರಮವೇ ಆಗಿದೆ ಎಂದು ಮಹಾ ಪುರುಷರು ಹೇಳಿರುವರು. ॥ ೪೦ ॥ ಎಲೈ ವೀರಶಿರೋಮಣಿಯೇ! ತಾನಾಗಿಯೇ ಕಾಮಿಸಿ ಬಂದಿರುವ ನಿನ್ನಂತಹ ಸುಪ್ರಸಿದ್ಧನೂ, ಉದಾರಚಿತ್ತನೂ, ಸುಂದರನೂ ಆದ ಪತಿಯನ್ನು ಈ ಲೋಕದಲ್ಲಿ ನನ್ನಂತಹ ಯಾವ ಹೆಂಗಸು ತಾನೇ ವರಿಸುವುದಿಲ್ಲ? ॥ ೪೧ ॥ ಮಹಾಬಾಹುವೇ! ಸರ್ಪದಂತೆ ದುಂಡಾಗಿ ಕೋಮಲವಾಗಿರುವ ನಿನ್ನ ಭುಜಗಳಲ್ಲಿ ಸ್ಥಾನವನ್ನು ಪಡೆಯಲು ಯಾವ ಕಾಮಿನಿಯ ಚಿತ್ತವು ತಾನೇ ಆಸೆಪಡುವುದಿಲ್ಲ! ನೀನು ಸುಂದರವಾದ ಮುಗುಳುನಗೆಯಿಂದ ಕೂಡಿದ ಕರುಣಾಪೂರ್ಣವಾದ ದೃಷ್ಟಿಯಿಂದ ನಮ್ಮಂತಹ ಅನಾಥೆಯರ ಮನಸ್ಸಿನ ಸಂತಾಪವನ್ನು ಶಮನಗೊಳಿಸುವುದಕ್ಕಾಗಿಯೇ ಭೂಮಿಯಲ್ಲಿ ಸಂಚರಿಸುತ್ತಿದ್ದೀಯೆ. ॥ ೪೨ ॥

ಶ್ರೀನಾರದಮಹರ್ಷಿಗಳು ಹೇಳುತ್ತಾರೆ - ಎಲೈ ಪ್ರಾಚೀನಬರ್ಹಿನೃಪತಿಯೇ! ಹೀಗೆ ಆ ದಂಪತಿಗಳು ಪರಸ್ಪರ ಒಪ್ಪಂದ ಮಾಡಿಕೊಂಡು ಆ ನಗರಿಯನ್ನು ಪ್ರವೇಶಿಸಿ ನೂರುವರ್ಷಗಳ ಕಾಲ ಅಲ್ಲಿ ಆನಂದವನ್ನು ಅನುಭವಿಸಿದರು. ॥ ೪೩ ॥

ಸಂಗೀತಗಾರರು ಅಲ್ಲಲ್ಲಿ ಆ ರಾಜನ ಕೀರ್ತಿಯನ್ನು ಸುಮಧುರವಾಗಿ ಹಾಡುತ್ತಿದ್ದರು. ಬೇಸಿಗೆಯಕಾಲ ಬಂದಾಗ ಹಲವಾರು ಲಲನೆಯರೊಡನೆ ಕೂಡಿ ಅವರು ನದೀ ಸರೋವರಗಳಲ್ಲಿ ಜಲಕ್ರೀಡೆಯನ್ನಾಡುತ್ತಿದ್ದರು. ॥ ೪೪ ॥ ಆ ನಗರಕ್ಕೆ ಇದ್ದ ಒಂಭತ್ತು ಬಾಗಿಲುಗಳಲ್ಲಿ ಏಳು ನಗರಿಯ ಮೇಲ್ಭಾಗದಲ್ಲಿದ್ದುವು. ಎರಡು ಕೆಳಭಾಗಕ್ಕೆ ಸೇರಿದ್ದವು. ಆ ನಗರಕ್ಕೆ ಯಾರೇ ರಾಜನಾಗಿ ಬಂದರೂ ಅವನಿಗೆ ಬೇರೆ-ಬೇರೆ ದೇಶಗಳಿಗೆ ಹೋಗುವುದಕ್ಕಾಗಿ ಆ ಬಾಗಿಲುಗಳು ನಿರ್ಮಿತವಾಗಿದ್ದವು. ॥ ೪೫ ॥ ರಾಜೇಂದ್ರನೇ! ಇವುಗಳಲ್ಲಿ ಐದು ಬಾಗಿಲುಗಳು ಪೂರ್ವದ ಕಡೆಗೂ, ಒಂದು ದಕ್ಷಿಣದ ಕಡೆಗೂ, ಒಂದು ಉತ್ತರದ ಕಡೆಗೂ, ಎರಡು ಪಶ್ಚಿಮದ

ಪಂಚ ದ್ವಾರಸ್ತು ಪೌರಸ್ತ್ಯಾ ದಕ್ಷಿಣೈಕಾ ತಥೋತ್ತರಾ ।
ಪಶ್ಚಿಮೇ ದ್ವೇ ಅಮೂಷಾಂ ತೇ ನಾಮಾನಿ ನೃಪ ವರ್ಣಯೇ ॥ ೪೬ ॥

ಖದ್ಯೋತಾಽಽವಿರ್ಮುಖೀ ಚ ಪ್ರಾಗ್ದ್ವಾರಾವೇಕತ್ರ ನಿರ್ಮಿತೇ ।
ವಿಭ್ರಾಜಿತಂ ಜನಪದಂ ಯಾತಿ ತಾಭ್ಯಾಂ ದ್ಯುಮತ್ಸಖಃ ॥ ೪೭ ॥

ನಲಿನೀ ನಾಲಿನೀ ಚ ಪ್ರಾಗ್ದ್ವಾರಾವೇಕತ್ರ ನಿರ್ಮಿತೇ ।
ಅವಧೂತಸಖಸ್ತಾಭ್ಯಾಂ ವಿಷಯಂ ಯಾತಿ ಸೌರಭಮ್ ॥ ೪೮ ॥

ಮುಖ್ಯಾ ನಾಮ ಪುರಸ್ತಾದ್ದ್ವಾಸ್ತಯಾಽಽಪಣಬಹೂದನೌ ।
ವಿಷಯೌ ಯಾತಿ ಪುರರಾಡ್ರಸಜ್ಞ ವಿಪಣಾನ್ವಿತಃ ॥ ೪೯ ॥

ಪಿತೃಹೂರ್ನೃಪ ಪುರ್ಯಾ ದ್ವಾರ್ದಕ್ಷಿಣೇನ ಪುರಂಜನಃ ।
ರಾಷ್ಟ್ರಂ ದಕ್ಷಿಣಪಂಚಾಲಂ ಯಾತಿ ಶ್ರುತಧರಾನ್ವಿತಃ ॥ ೫೦ ॥

ದೇವಹೂರ್ನಾಮ ಪುರ್ಯಾ ದ್ವಾ ಉತ್ತರೇಣ ಪುರಂಜನಃ ।
ರಾಷ್ಟ್ರಮುತ್ತರಪಂಚಾಲಂ ಯಾತಿ ಶ್ರುತಧರಾನ್ವಿತಃ ॥ ೫೧ ॥

ಆಸುರೀ ನಾಮ ಪಶ್ಚಾದ್ದ್ವಾಸ್ತಯಾ ಯಾತಿ ಪುರಂಜನಃ ।
ಗ್ರಾಮಕಂ ನಾಮ ವಿಷಯಂ ದುರ್ಮದೇನ ಸಮನ್ವಿತಃ ॥ ೫೨ ॥

ನಿರ್ಋತಿರ್ನಾಮ ಪಶ್ಚಾದ್ದ್ವಾಸ್ತಯಾ ಯಾತಿ ಪುರಂಜನಃ ।
ವೈಶಸಂ ನಾಮ ವಿಷಯಂ ಲುಬ್ಧಕೇನ ಸಮನ್ವಿತಃ ॥ ೫೩ ॥

ಅಂಧಾವಮೀಷಾಂ ಪೌರಾಣಾಂ ನಿರ್ವಾಕ್ಪೇಶಸ್ಕೃತಾವುಭೌ ।
ಅಕ್ಷಣ್ವತಾಮಧಿಪತಿಸ್ತಾಭ್ಯಾಂ ಯಾತಿ ಕರೋತಿ ಚ ॥ ೫೪ ॥

ಸ ಯರ್ಹ್ಯಂತಃ ಪುರಗತೋ ವಿಷೂಚೀನಸಮನ್ವಿತಃ ।
ಮೋಹಂ ಪ್ರಸಾದಂ ಹರ್ಷಂ ವಾ ಯಾತಿ ಜಾಯಾತ್ಮಜೋದ್ಭವಮ್ ॥ ೫೫ ॥

ಏವಂ ಕರ್ಮಸು ಸಂಸಕ್ತಃ ಕಾಮಾತ್ಮಾ ವಂಚಿತೋಽಬುಧಃ ।
ಮಹಿಷೀ ಯದ್ಯದೀಹೇತ ತತ್ತದೇವಾನ್ವವರ್ತತ ॥ ೫೬ ॥

ಕ್ವಚಿತ್ಪಿಬಂತ್ಯಾಂ ಪಿಬತಿ ಮದಿರಾಂ ಮದವಿಹ್ವಲಃ ।
ಅಶ್ನಂತ್ಯಾಂ ಕ್ವಚಿದಶ್ನಾತಿ ಜಕ್ಷತ್ಯಾಂ ಸಹ ಜಕ್ಷಿತಿ ॥ ೫೭ ॥

ಕಡೆಗೂ ಇದ್ದವು. ಅವುಗಳ ಹೆಸರುಗಳನ್ನು ಹೇಳುವೆನು ಕೇಳು. ॥ ೪೬ ॥ ಪೂರ್ವದ ಕಡೆಗಿದ್ದ ಖದ್ಯೋತಾ ಮತ್ತು ಆವಿರ್ಮುಖೀ ಎಂಬ ಎರಡು ದ್ವಾರಗಳು ಒಂದೇ ಕಡೆ ನಿರ್ಮಿತವಾಗಿದ್ದವು. ಇವುಗಳ ಮೂಲಕ ಪುರಂಜನನು ತನ್ನ ಮಿತ್ರನಾದ ದ್ಯುಮಂತ ನೊಡನೆ ವಿಭ್ರಾಜಿತವೆಂಬ ದೇಶಕ್ಕೆ ಹೋಗುತ್ತಿದ್ದನು. ॥ ೪೭ ॥ ಹಾಗೆಯೇ ಪೂರ್ವಕ್ಕಿದ್ದ ನಲಿನೀ ಮತ್ತು ನಾಲಿನೀ ಎಂಬ ಇನ್ನೆರಡು ದ್ವಾರಗಳೂ ಕೂಡ ಒಂದೇ ಕಡೆ ನಿರ್ಮಿತವಾಗಿದ್ದವು. ಅವುಗಳ ಮೂಲಕ ರಾಜನು ಅವಧೂತ ಎಂಬಾತನೊಡನೆ ಸೌರಭದೇಶಕ್ಕೆ ಹೋಗುತ್ತಿದ್ದನು. ॥ ೪೮ ॥ ಪೂರ್ವದಿಕ್ಕಿಗಿದ್ದ ಮುಖ್ಯಾ ಎಂಬ ಐದನೆಯ ದ್ವಾರದ ಮೂಲಕ ರಾಜನು ರಸಜ್ಞ ಮತ್ತು ವಿಪಣ ಎಂಬುವರೊಡನೆ ಕ್ರಮವಾಗಿ ಬಹೂದನ ಹಾಗೂ ಆಪಣ ಎಂಬ ದೇಶಗಳಿಗೆ ಹೋಗುತ್ತಿದ್ದನು. ॥ ೪೯ ॥ ನಗರಿಯ ದಕ್ಷಿಣಕ್ಕಿದ್ದ ಪಿತೃಹೂ ಎಂಬ ದ್ವಾರದಿಂದ ಅವನು ಶ್ರುತಧರ ಎಂಬುವನೊಡನೆ ದಕ್ಷಿಣಪಾಂಚಾಲ ದೇಶಕ್ಕೆ ಹೋಗುತ್ತಿದ್ದನು. ॥ ೫೦ ॥ ಹಾಗೆಯೇ ಉತ್ತರಕ್ಕಿದ್ದ ದೇವಹೂ ಎಂಬ ಬಾಗಿಲಿನಿಂದ ರಾಜನು ಶ್ರುತಧರ ನೊಡನೆ ಉತ್ತರಪಾಂಚಾಲ ದೇಶಕ್ಕೆ ಹೋಗುತ್ತಿದ್ದನು. ॥ ೫೧॥ ಪಶ್ಚಿಮ ದಿಕ್ಕಿನಲ್ಲಿದ್ದ ಆಸುರೀ ಎಂಬ ದ್ವಾರದ ಮೂಲಕ ಅವನು ದುರ್ಮದನೊಂದಿಗೆ ಗ್ರಾಮಕವೆಂಬ ದೇಶಕ್ಕೆ ಹೋಗುತ್ತಿದ್ದನು. ॥ ೫೨ ॥ ಹಾಗೆಯೇ ನಿರ್ಋತಿ ಎಂಬ ಹೆಸರಿನ ಮತ್ತೊಂದು ಪಶ್ಚಿಮದ ಬಾಗಿಲಿನಿಂದ ಲುಬ್ಧಕನೆಂಬುವನೊಡನೆ ಅವನು ವೈಶಸ ವೆಂಬ ದೇಶಕ್ಕೆ ಹೋಗುತ್ತಿದ್ದನು. ॥ ೫೩ ॥ ಆ ನಗರದ ನಿವಾಸಿ ಗಳಲ್ಲಿ ನಿರ್ವಾಕ್ ಮತ್ತು ಪೇಶಸ್ಕೃತ್ ಎಂಬ ಇಬ್ಬರು ಪೌರರು ಕುರುಡರಾಗಿದ್ದರು. ಪುರಂಜನರಾಜನು ಕಣ್ಣುಗಳುಳ್ಳ ಪೌರರಿಗೆ ಅಧಿಪತಿಯಾಗಿದ್ದರೂ ಆ ಇಬ್ಬರು ಕುರುಡರ ಸಹಾಯದಿಂದಲೇ ಅಲ್ಲಲ್ಲಿಗೆ ಹೋಗಿ ಎಲ್ಲ ಬಗೆಯ ಕಾರ್ಯಗಳನ್ನು ಮಾಡು ತ್ತಿದ್ದನು. ॥ ೫೪ ॥

ರಾಜನು ಎಂದಾದರೂ ತನ್ನ ಪ್ರಧಾನ ಸೇವಕ ವಿಷೂಚೀನ ನೊಡನೆ ಅಂತಃಪುರಕ್ಕೆ ಹೋದಾಗ ಅವನಿಗೆ ಹೆಂಡತಿ, ಮಕ್ಕಳ ಕಾರಣದಿಂದ ಉಂಟಾಗುವ ಮೋಹ, ಪ್ರಸನ್ನತೆ, ಹರ್ಷ ಮುಂತಾದ ವಿಕಾರಗಳ ಅನುಭವವಾಗುತ್ತಿತ್ತು. ॥ ೫೫ ॥ ಆತನ ಚಿತ್ತವು ಕೆಲವೊಮ್ಮೆ ಪ್ರಸನ್ನವಾದರೆ, ಕೆಲವು ವೇಳೆ ಸಂತೋಷದಿಂದ ಹಿಗ್ಗು ತ್ತಿತ್ತು. ಹೀಗೆ ಬಗೆ-ಬಗೆಯ ಕರ್ಮಗಳ ಬಲೆಯಲ್ಲಿ ಸಿಕ್ಕಿಹಾಕಿ ಕೊಂಡು ಕಾಮಪರವಶನಾಗಿ ರಾಜನು ಮೂಢನಾಗಿ ದೈವದ ವಂಚನೆಗೊಳಗಾಗಿದ್ದನು. ರಮಣಿಯ ಮೋಹಕ್ಕೆ ತುತ್ತಾಗಿ ಅವಳು ಏನೇನು ಮಾಡುತ್ತಿದ್ದಳೋ ಅವನ್ನೇ ಇವನೂ ಮಾಡತೊಡಗುತ್ತಿ ದ್ದನು. ॥ ೫೬ ॥ ಆಕೆಯು ಮದ್ಯಪಾನ ಮಾಡಿದಾಗ ಅವನೂ ಮದ್ಯವನ್ನು ಕುಡಿದು ಮತ್ತೇರುತ್ತಿದ್ದನು. ಅವಳು ಊಟಮಾಡಿ ದಾಗ ತಾನೂ ಊಟಮಾಡುತ್ತಿದ್ದನು. ಆಕೆಯು ಏನನ್ನಾದರೂ ಅಗಿಯುತ್ತಿದ್ದರೆ ತಾನೂ ಅಗಿಯುತ್ತಿದ್ದನು. ॥ ೫೭ ॥

ಕ್ವಚಿದ್ಗಾಯತಿ ಗಾಯಂತ್ಯಾಂ ರುದತ್ಯಾಂ ರುದತಿ ಕ್ವಚಿತ್ ।
ಕ್ವಚಿದ್ಧಸಂತ್ಯಾಂ ಹಸದಿ ಜಲ್ಪಂತ್ಯಾಮನು ಜಲ್ಪತಿ ॥ ೫೮ ॥

ಕ್ವಚಿದ್ಧಾವತಿ ಧಾವಂತ್ಯಾಂ ತಿಷ್ಠಂತ್ಯಾಮನು ತಿಷ್ಠತಿ ।
ಅನು ಶೇತೇ ಶಯಾನಾಯಾಮನ್ವಾಸ್ತೇ ಕ್ವಚಿದಾಸತೀಮ್ ॥ ೫೯ ॥

ಕ್ವಚಿಚ್ಛೃಣೋತಿ ಶೃಣ್ವಂತ್ಯಾಂ ಪಶ್ಯಂತ್ಯಾಮನು ಪಶ್ಯತಿ ।
ಕ್ವಚಿಜ್ಜಿಘ್ರತಿ ಜಿಘ್ರಂತ್ಯಾಂ ಸ್ಪೃಶಂತ್ಯಾಂ ಸ್ಪೃಶತಿ ಕ್ವಚಿತ್ ॥ ೬೦ ॥

ಕ್ವಚಿಚ್ಚ ಶೋಚತೀಂ ಜಾಯಾಮನುಶೋಚತಿ ದೀನವತ್ ।
ಅನು ಹೃಷ್ಯತಿ ಹೃಷ್ಯಂತ್ಯಾಂ ಮುದಿತಾಮನು ಮೋದತೇ ॥ ೬೧ ॥

ವಿಪ್ರಲಬ್ಧೋ ಮಹಿಷ್ಯೈವಂ ಸರ್ವಪ್ರಕೃತಿವಂಚಿತಃ ।
ನೇಚ್ಛನ್ನನುಕರೋತ್ಯಜ್ಞಃ ಕ್ಲೈಬ್ಯಾತ್ಕ್ರೀಡಾಮೃಗೋ ಯಥಾ ॥ ೬೨ ॥

ಹೀಗೆಯೇ ಆಕೆಯು ಹಾಡಿದರೆ ತಾನೂ ಹಾಡುವನು. ಅತ್ತಾಗ ಅಳುವನು. ನಗುವಾಗ ನಗುತ್ತಿದ್ದನು. ಅವಳು ಮಾತನಾಡಿದರೆ ಇವನೂ ಮಾತನಾಡುವನು. ॥ ೫೮ ॥ ಅವಳು ಓಡಿದರೆ ತಾನೂ ಓಡುವನು. ನಿಂತರೆ ನಿಲ್ಲುವನು. ಮಲಗಿದರೆ ಅವಳೊಡನೆ ತಾನೂ ಮಲಗುತ್ತಿದ್ದನು. ಆಕೆಯು ಕುಳಿತುಕೊಂಡರೆ ತಾನೂ ಕುಳಿತು ಕೊಳ್ಳುವನು. ॥ ೫೯ ॥ ಎಂದಾದರೂ ಅವಳು ಕೇಳತೊಡಗಿದರೆ ತಾನೂ ಕೇಳುತ್ತಿದ್ದನು. ನೋಡಿದರೆ ನೋಡುತ್ತಿದ್ದನು. ಯಾವುದ ನ್ನಾದರೂ ಮೂಸಿದರೆ ಮೂಸುತ್ತಿದ್ದನು. ಏನನ್ನಾದರೂ ಮುಟ್ಟಿದರೆ ಮುಟ್ಟುತ್ತಿದ್ದನು. ॥ ೬೦ ॥ ಎಂದಾದರೂ ಅವನ ಪ್ರಿಯೆಯು ಶೋಕಾಕುಲೆಯಾದರೆ ತಾನೂ ಅತ್ಯಂತ ದೀನನಂತೆ ವ್ಯಾಕುಲನಾಗು ತ್ತಿದ್ದನು. ಆಕೆಯು ಪ್ರಸನ್ನವಾದರೆ ತಾನೂ ಸಂತೋಷಗೊಳ್ಳುವನು. ಅವಳು ಆನಂದಿತಳಾದರೆ ಇವನೂ ಆನಂದಿತನಾಗಿ ಹೋಗು ತ್ತಿದ್ದನು. ॥ ೬೧ ॥ ಹೀಗೆ ಪುರಂಜನರಾಜನು ತನ್ನ ಸುಂದರರಾಣಿ ಯಿಂದ ವಂಚನೆಗೊಳಗಾದನು. ಇಡೀ ಪ್ರಕೃತಿವರ್ಗ-ಪರಿಕರ ಗಳೇ ಅವನನ್ನು ವಂಚಿಸಿದವು. ಆ ಮೂರ್ಖನು ವಿವಶನಾಗಿ ಇಚ್ಛೆ ಇಲ್ಲದಿದ್ದರೂ, ಆಟದ ಕೋತಿಯು ಯಜಮಾನನ ಸಂಕೇತದಂತೆ ಕುಣಿಯುತ್ತದೆ. ಹಾಗೆಯೇ ಪ್ರಿಯೆಯ ಕೈಗೊಂಬೆಯಾಗಿ ಅವಳನ್ನೇ ಅನುಕರಣೆ ಮಾಡುತ್ತಿದ್ದನು. ॥ ೬೨ ॥

*ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು. ॥ ೨೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಪುರಂಜನೋಪಾಖ್ಯಾನೇ ಪಂಚವಿಂಶೋಽಧ್ಯಾಯಃ ॥ ೨೫ ॥

# ಇಪ್ಪತ್ತಾರನೆಯ ಅಧ್ಯಾಯ

## ಪುರಂಜನನ ಬೇಟೆಯ ವರ್ಣನೆ– ರಾಣಿಯ ಪ್ರಣಯಕೋಪ

*ನಾರದ ಉವಾಚ*

ಸ ಏಕದಾ ಮಹೇಷ್ವಾಸೋ ರಥಂ ಪಂಚಾಶ್ವಮಾಶುಗಮ್ ।
ದ್ವೀಷಂ ದ್ವಿಚಕ್ರಮೇಕಾಕ್ಷಂ ತ್ರಿವೇಣುಂ ಪಂಚಬಂಧುರಮ್ ॥ ೧ ॥

ಏಕರಶ್ಮ್ಯೇಕದಮನಮೇಕನೀಡಂ ದ್ವಿಕೂಬರಮ್ ।
ಪಂಚಪ್ರಹರಣಂ ಸಪ್ತವರೂಥಂ ಪಂಚವಿಕ್ರಮಮ್ ॥ ೨ ॥

ಹೈಮೋಪಸ್ಕರಮಾರುಹ್ಯ ಸ್ವರ್ಣವರ್ಮಾಕ್ಷಯೇಷುಧಿಃ ।
ಏಕಾದಶಚಮೂನಾಥಃ ಪಂಚಪ್ರಸ್ಥಮಗಾದ್ವನಮ್ ॥ ೩ ॥

**ಶ್ರೀನಾರದರು ಹೇಳುತ್ತಾರೆ** – ಎಲೈ ರಾಜನೇ! ಒಮ್ಮೆ ಮಹಾಧನುರ್ಧರನಾದ ಪುರಂಜನರಾಜನು ತನ್ನ ಧನುಸ್ಸನ್ನು ಎತ್ತಿ ಕೊಂಡು, ಚಿನ್ನದ ಕವಚವನ್ನು ತೊಟ್ಟು, ಅಕ್ಷಯಬಾಣಗಳಿರುವ ಬತ್ತಳಿಕೆಯನ್ನು ಧರಿಸಿ, ತನ್ನ ಹನ್ನೊಂದನೆಯ ಸೇನಾಪತಿಯೊಡನೆ ಭಂಗಾರದ ಒಂದು ರಥದಲ್ಲಿ ಕುಳಿತು ಬೇಟೆಯಾಡಲು ಪಂಚ ಪ್ರಸ್ಥವೆಂಬ ಕಾಡಿಗೆ ಹೊರಟನು. ಆ ರಥವು ಐದು ಕುದುರೆ ಗಳಿಂದಲೂ, ಎರಡು ಪಕ್ಕಗಳಲ್ಲಿರುವ ಬೊಂಬುಗಳು, ಎರಡು ಗಾಲಿಗಳಿಂದಲೂ, ಒಂದು ಅಚ್ಚುಮರದಿಂದಲೂ, ಮೂರು ಧ್ವಜ ಗಳಿಂದಲೂ, ಐದು ಕಟ್ಟುಗಳಿಂದಲೂ, ಒಂದೇ ಹಗ್ಗವನ್ನು ಹಿಡಿದು ಕೊಂಡಿದ್ದ ಒಬ್ಬ ಸಾರಥಿಯಿಂದಲೂ, ಒಂದು ಸಾರಥಿಯ ಸ್ಥಾನ – ಎರಡು ಯುಗಸ್ಥಾನಗಳಿಂದಲೂ, ಏಳು ಆವರಣಗಳಿಂದಲೂ, ಐದು ಆಯುಧಗಳಿಂದಲೂ, ಐದು ಪ್ರಕಾರದ ಗತಿಗಳಿಂದಲೂ ಕೂಡಿ ಅತ್ಯಂತ ಶೋಭಾಯಮಾನವಾಗಿದ್ದಿತು. ॥ ೧-೩ ॥

ಚಚಾರ ಮೃಗಯಾಂ ತತ್ರ ದೃಪ್ತ ಆತ್ತೇಷುಕಾರ್ಮುಕಃ ।
ವಿಹಾಯ ಜಾಯಾಮತದರ್ಹಾಂ ಮೃಗವ್ಯಸನಲಾಲಸಃ
॥ ೪ ॥

ಆಸುರೀಂ ವೃತ್ತಿಮಾಶ್ರಿತ್ಯ ಘೋರಾತ್ಮಾ ನಿರನುಗ್ರಹಃ ।
ನ್ಯಹನನ್ನಿಶಿತೈರ್ಬಾಣೈರ್ವನೇಷು ವನಗೋಚರಾನ್
॥ ೫ ॥

ತೀರ್ಥೇಷು ಪ್ರತಿದೃಷ್ಟೇಷು ರಾಜಾ ಮೇಧ್ಯಾನ್ಪಶೂನ್ವನೇ ।
ಯಾವದರ್ಥಮಲಂ ಲುಬ್ಧೋ ಹನ್ಯಾದಿತಿ ನಿಯಮ್ಯತೇ
॥ ೬ ॥

ಯ ಏವಂ ಕರ್ಮ ನಿಯತಂ ವಿದ್ವಾನ್ಕುರ್ವೀತ ಮಾನವಃ ।
ಕರ್ಮಣಾ ತೇನ ರಾಜೇಂದ್ರ ಜ್ಞಾನೇನ ನ ಸ ಲಿಪ್ಯತೇ
॥ ೭ ॥

ಅನ್ಯಥಾ ಕರ್ಮ ಕುರ್ವಾಣೋ ಮಾನಾರೂಢೋ ನಿಬಧ್ಯತೇ ।
ಗುಣಪ್ರವಾಹಪತಿತೋ ನಷ್ಟಪ್ರಜ್ಞೋ ವ್ರಜತ್ಯಧಃ
॥ ೮ ॥

ತತ್ರ ನಿರ್ಭಿನ್ನ ಗಾತ್ರಾಣಾಂ ಚಿತ್ರವಾಜೈಃ ಶಿಲೀಮುಖೈಃ ।
ವಿಪ್ಲವೋಽಭೂದ್ದುಃಖಿತಾನಾಂ ದುಃಸಹಃ ಕರುಣಾತ್ಮನಾಮ್
॥ ೯ ॥

ಶಶಾನ್ವರಾಹಾನ್ಮಹಿಷಾನ್ಗವಯಾನ್ರುರುಶಲ್ಯಕಾನ್ ।
ಮೇಧ್ಯಾನನ್ಯಾಂಶ್ಚ ವಿವಿಧಾನ್ವಿನಿಘ್ನನ್ ಶ್ರಮಮಧ್ಯಗಾತ್
॥ ೧೦ ॥

ತತಃ ಕ್ಷುತ್ತೃಟ್ಪರಿಶ್ರಾಂತೋ ನಿವೃತ್ತೋ ಗೃಹಮೇಯಿವಾನ್ ।
ಕೃತಸ್ನಾನೋಚಿತಾಹಾರಃ ಸಂವಿವೇಶ ಗತಕ್ಲಮಃ
॥ ೧೧ ॥

ಆತ್ಮಾನಮರ್ಹಯಾಂಚಕ್ರೇ ಧೂಪಾಲೇಪಸ್ರಗಾದಿಭಿಃ ।
ಸಾಧ್ವಲಂಕೃತಸರ್ವಾಂಗೋ ಮಹಿಷ್ಯಾಮಾದಧೇ ಮನಃ
॥ ೧೨ ॥

ತೃಪ್ತೋ ಹೃಷ್ಟಃ ಸುದೃಪ್ತಶ್ಚ ಕಂದರ್ಪಾಕೃಷ್ಟಮಾನಸಃ ।
ನ ವ್ಯಚಷ್ಟ ವರಾರೋಹಾಂ ಗೃಹಿಣೀಂ ಗೃಹಮೇಧಿನೀಮ್
॥ ೧೩ ॥

ಅಂತಃಪುರಸ್ತ್ರಿಯೋಽಪೃಚ್ಛದ್ವಿಮನಾ ಇವ ವೇದಿಷತ್ ।
ಅಪಿ ವಃ ಕುಶಲಂ ರಾಮಾಃ ಸೇಶ್ವರೀಣಾಂ ಯಥಾ ಪುರಾ
॥ ೧೪ ॥

ರಾಜನಿಗೆ ತನ್ನ ಪ್ರಿಯತಮೆಯನ್ನು ಕ್ಷಣವಾದರೂ ಬಿಟ್ಟಿರುವುದು ಕಷ್ಟವಾಗಿದ್ದರೂ ಅಂದು ಅವನಿಗೆ ಬೇಟೆಯ ಮದವು ಏರಿದ್ದರಿಂದ ಆಕೆಯ ಪರಿವೆಯಿಲ್ಲದೆ ಗರ್ವದಿಂದ ಕಾಡಿಗೆ ಬಂದು ಧನುರ್ಬಾಣಗಳನ್ನು ಎತ್ತಿಕೊಂಡು ಬೇಟೆಯಾಡತೊಡಗಿದನು. ॥ ೪ ॥ ಆಗ ಆಸುರೀವೃತ್ತಿಯು ಅವನನ್ನು ಆವರಿಸಿದ್ದರಿಂದ ಕಠೋರ ಚಿತ್ತದಿಂದ, ನಿರ್ದಯನಾಗಿ ಅವನು ತನ್ನ ತೀಕ್ಷ್ಣವಾದ ಬಾಣಗಳಿಂದ ಅರಣ್ಯದ ಮೃಗಗಳನ್ನು ಕೊಂದುಹಾಕಿದನು. ದೋಷರಹಿತವಾಗಿದ್ದ ಸಾಧುಮೃಗಗಳನ್ನೂ ಸಂಹರಿಸಿದನು. ॥ ೫ ॥ ಮಾಂಸದಲ್ಲಿ ಅತ್ಯಂತ ಆಸಕ್ತಿ ಉಂಟಾದ ರಾಜನು ಕೇವಲ ಶಾಸ್ತ್ರದಲ್ಲಿ ಹೇಳಿದ ಕರ್ಮಗಳಿಗಾಗಿಯೇ ಕಾಡಿಗೆ ಹೋಗಿ ಆವಶ್ಯಕತೆಗೆ ತಕ್ಕಂತೆ ನಿಷಿದ್ಧವಲ್ಲದ ಪಶುಗಳನ್ನು ಮಾತ್ರ ವಧಿಸಬೇಕು. ವ್ಯರ್ಥವಾಗಿ ಪಶುಹಿಂಸೆಯನ್ನು ಮಾಡಬಾರದು. ಈ ರೀತಿಯ ಉಚ್ಛೃಂಖಲ ಪ್ರವೃತ್ತಿಯನ್ನು ಶಾಸ್ತ್ರವು ನಿಯಂತ್ರಿಸುತ್ತಿದೆ. ॥ ೬ ॥ ರಾಜನೇ ! ಹೀಗೆ ಶಾಸ್ತ್ರವು ನಿಯತಮಾಡಿರುವ ಕರ್ಮಗಳನ್ನು ಆಚರಿಸುವ ವಿದ್ವಾನ್ ಮನುಷ್ಯನಿಗೆ ಆ ಕರ್ಮಾನುಷ್ಠಾನದಿಂದ ದೊರೆತ ಜ್ಞಾನದಿಂದ ಕರ್ಮದ ಲೇಪವುಂಟಾಗುವುದಿಲ್ಲ. ॥ ೭ ॥ ಇಲ್ಲದಿದ್ದರೆ ಮನಸ್ಸಿಗೆ ಬಂದಂತೆ ಕರ್ಮಮಾಡುವುದರಿಂದ ಮನುಷ್ಯನು ಅಭಿಮಾನಕ್ಕೆ ವಶನಾಗಿ ಕರ್ಮಗಳಲ್ಲಿ ಬಂಧಿತನಾಗುತ್ತಾನೆ ಹಾಗೂ ಗುಣಪ್ರವಾಹರೂಪವಾದ ಸಂಸಾರಚಕ್ರದಲ್ಲಿ ಸಿಲುಕಿ, ವಿವೇಕಬುದ್ಧಿಯು ನಾಶವಾದ್ದರಿಂದ ಅವನು ಅಧಮ ಯೋನಿಗಳಲ್ಲಿ ಹುಟ್ಟುತ್ತಾನೆ. ॥ ೮ ॥

ಪುರಂಜನನ ಬಗೆ-ಬಗೆಯ ಗರಿಗಳುಳ್ಳ ಬಾಣಗಳಿಂದ ಕತ್ತರಿಸಲ್ಪಟ್ಟು ಅನೇಕ ಜೀವರುಗಳು ಅತೀವ ಕಷ್ಟದಿಂದ ಪ್ರಾಣತ್ಯಾಗ ಮಾಡತೊಡಗಿದವು. ಅವನ ಆ ನಿರ್ದಯವಾದ ಪ್ರಾಣಿಸಂಹಾರವನ್ನು ನೋಡಿ ಎಲ್ಲ ದಯಾಳುಗಳು ಬಹಳ ದುಃಖಿತರಾದರು. ಅವರು ಇದನ್ನು ಸಹಿಸದಾದರು. ॥ ೯ ॥ ಹೀಗೆ ಅಲ್ಲಿ ಮೊಲಗಳು, ಹಂದಿಗಳೂ, ಕಾಡುಕೋಣಗಳೂ, ಕಾಡುಹಸುಗಳೂ, ಕೃಷ್ಣಮೃಗಗಳೂ, ಜಿಂಕೆಗಳೂ ಹಾಗೂ ಇನ್ನೂ ಅನೇಕಜಾತಿಯ ನೂರಾರು ನಿರ್ದೋಷ ಮೃಗಗಳನ್ನು ಕೊಂದುದರಿಂದ ಪುರಂಜನರಾಜನು ತುಂಬಾ ಆಯಾಸಗೊಂಡನು. ॥ ೧೦ ॥ ಆಗ ಹಸಿವು-ಬಾಯಾರಿಕೆಯಿಂದ ಬಳಲಿದ ಅವನು ವನದಿಂದ ಮರಳಿ ಅರಮನೆಗೆ ಬಂದಿದ್ದನು. ಅಲ್ಲಿ ಅವನು ಯಥಾ-ಯೋಗ್ಯರೀತಿಯಿಂದ ಸ್ನಾನ-ಭೋಜನಾದಿಗಳನ್ನು ಮಾಡಿ, ಕೊಂಚ ವಿಶ್ರಾಂತಿಪಡೆದು ಆಯಾಸವನ್ನು ಪರಿಹರಿಸಿಕೊಂಡನು. ॥ ೧೧ ॥ ಮತ್ತೆ ಗಂಧ-ಚಂದನ, ಮಾಲೆ ಮುಂತಾದವುಗಳಿಂದ ಸುಸಜ್ಜಿತವಾಗಿ ಅಂಗಾಂಗಗಳಲ್ಲೆಲ್ಲ ಸುಂದರವಾದ ಆಭೂಷಣಗಳನ್ನು ತೊಟ್ಟುಕೊಂಡನು. ಆಗ ಅವನಿಗೆ ತನ್ನ ಪ್ರಿಯೆಯ ನೆನಪಾಯಿತು. ॥ ೧೨ ॥ ಅವನು ಭೋಜನಾದಿಗಳಿಂದ ತೃಪ್ತನಾಗಿ, ಸಂತೋಷಭರಿತನಾಗಿ ಮದವೇರಿ ಕಾಮಪೀಡಿತನಾಗಿ, ತನ್ನ ಸುಂದರಿಯಾದ ಭಾರ್ಯೆಯನ್ನು ಹುಡುಕತೊಡಗಿದನು. ಆದರೆ ಅವನಿಗೆ ಆಕೆಯು ಎಲ್ಲಿಯೂ ಕಂಡುಬಂದಿಲ್ಲ. ॥ ೧೩ ॥

ಪ್ರಾಚೀನಬರ್ಹಿರಾಜನೇ ! ಆಗ ಅವನು ಮನಸ್ಸಿನಲ್ಲಿ ಬೇಸರಗೊಂಡು ಅಂತಃಪುರದ ಸ್ತ್ರೀಯರಲ್ಲಿ ಕೇಳಿದನು – 'ಸುಂದರಿಯರೇ ! ನಿಮ್ಮ ಒಡತಿಯೊಂದಿಗೆ ನೀವೆಲ್ಲರೂ ಮೊದಲಿನಂತೆ ಕುಶಲರಾಗಿದ್ದೀರಿ ತಾನೇ ? ॥ ೧೪ ॥

ನ ತರ್ಹ್ಯೈತರ್ಹಿ ರೋಚಂತೇ ಗೃಹೇಷು ಗೃಹಸಂಪದಃ ।
ಯದಿ ನ ಸ್ಯಾದ್ಗೃಹೇ ಮಾತಾ ಪತ್ನೀ ವಾ ಪತಿದೇವತಾ ।
ವ್ಯಂಗೇ ರಥ ಇವ ಪ್ರಾಜ್ಞಃ ಕೋ ನಾಮಾಸೀತ ದೀನವತ್
॥ ೧೫ ॥

ಕ್ವ ವರ್ತತೇ ಸಾ ಲಲನಾ ಮಜ್ಜಂತಂ ವ್ಯಸನಾರ್ಣವೇ ।
ಯಾ ಮಾಮುದ್ಧರತೇ ಪ್ರಜ್ಞಾಂ ದೀಪಯಂತೀ ಪದೇ ಪದೇ
॥ ೧೬ ॥

*ರಾಮಾ ಊಚುಃ*

ನರನಾಥ ನ ಜಾನೀಮಸ್ತ್ವತ್ಪ್ರಿಯಾ ಯದ್ವ್ಯವಸ್ಯತಿ ।
ಭೂತಲೇ ನಿರವಸ್ತಾರೇ ಶಯಾನಾಂ ಪಶ್ಯ ಶತ್ರುಹನ್
॥ ೧೭ ॥

*ನಾರದ ಉವಾಚ*

ಪುರಂಜನಃ ಸ್ವಮಹಿಷೀಂ ನಿರೀಕ್ಷ್ಯಾವಧುತಾಂ ಭುವಿ ।
ತತ್ಸಂಗೋನ್ಮಥಿತಜ್ಞಾನೋ ವೈಕ್ಲವ್ಯಂ ಪರಮಂ ಯಯೌ
॥ ೧೮ ॥

ಸಾಂತ್ವಯನ್ ಶ್ಲಕ್ಷ್ಣಯಾ ವಾಚಾ ಹೃದಯೇನ ವಿದೂಯತಾ ।
ಪ್ರೇಯಸ್ಯಾಃ ಸ್ನೇಹಸಂರಂಭಲಿಂಗಮಾತ್ಮನಿ ನಾಭ್ಯಗಾತ್
॥ ೧೯ ॥

ಅನುನಿನ್ಯೇಽಥ ಶನಕೈರ್ವೀರೋಽನುನಯಕೋವಿದಃ ।
ಪಸ್ಪರ್ಶ ಪಾದಯುಗಲಮಾಹ ಚೋತ್ಸಂಗ ಲಾಲಿತಾಮ್
॥ ೨೦ ॥

*ಪುರಂಜನ ಉವಾಚ*

ನೂನಂ ತ್ವಕೃತಪುಣ್ಯಾಸ್ತೇ ಭೃತ್ಯಾ ಯೇಷ್ವೀಶ್ವರಾಃ ಶುಭೇ ।
ಕೃತಾಗಸ್ಸ್ವಾತ್ಮಸಾತ್ಕೃತ್ವಾ ಶಿಕ್ಷಾದಂಡಂ ನ ಯುಂಜತೇ
॥ ೨೧ ॥

ಪರಮೋಽನುಗ್ರಹೋ ದಂಡೋ ಭೃತ್ಯೇಷು ಪ್ರಭುಣಾರ್ಪಿತಃ ।
ಬಾಲೋ ನ ವೇದ ತತ್ತನ್ವಿ ಬಂಧುಕೃತ್ಯಮಮರ್ಷಣಃ
॥ ೨೨ ॥

ಸಾ ತ್ವಂ ಮುಖಂ ಸುದತಿ ಸುಭ್ರ್ವನುರಾಗಭಾರ-
ವ್ರೀಡಾವಿಲಂಬವಿಲಸದ್ಧಸಿತಾವಲೋಕಮ್ ।
ನೀಲಾಲಕಾಲಿಭಿರುಪಸ್ಕೃತಮುನ್ನಸಂ ನಃ
ಸ್ವಾನಾಂ ಪ್ರದರ್ಶಯ ಮನಸ್ವಿನಿ ವಲ್ಗುವಾಕ್ಯಮ್ ॥ ೨೩ ॥

ಇಂದು ಈ ಮನೆಯ ಸಂಪತ್ತು ಹಿಂದಿನಂತೆ ಸುಂದರವಾಗಿ ಕಾಣುತ್ತಿಲ್ಲವಲ್ಲ! ಮನೆಯಲ್ಲಿ ತಾಯಿಯಾಗಲೀ ಅಥವಾ ಪತಿನಿಷ್ಠಳಾದ ಹೆಂಡತಿಯಾಗಲೀ ಇಲ್ಲದಿದ್ದಾಗ ಆ ಮನೆಯು ಚಕ್ರವಿಲ್ಲದ ರಥದಂತೆ ಆಗಿಬಿಡುವುದು. ಅಂತಹ ಮನೆಯಲ್ಲಿ ಯಾವ ಬುದ್ಧಿವಂತನು ದೀನಜನರಂತೆ ವಾಸಿಸಲು ಇಷ್ಟಪಡುವನು ? ॥ ೧೫ ॥ ಆದ್ದರಿಂದ ನಾನು, ದುಃಖಸಮುದ್ರದಲ್ಲಿ ಮುಳುಗಿದಾಗಲೆಲ್ಲ ನನ್ನ ವಿವೇಕಬುದ್ಧಿಯನ್ನು ಹೆಜ್ಜೆ-ಹೆಜ್ಜೆಗೆ ಎಚ್ಚರಗೊಳಿಸುತ್ತಾ, ಆ ಸಂಕಟದಿಂದ ಉದ್ಧರಿಸುವ ಸುಂದರಿಯಾದ ಆ ಪ್ರಿಯತಮೆಯು ಎಲ್ಲಿದ್ದಾಳೆ ?' ಎಂದು ಪ್ರಶ್ನಿಸಿದನು. ॥ ೧೬ ॥

**ಸ್ತ್ರೀಯರೆಂದರು** – ನರೇಂದ್ರನೇ! ನಿಮ್ಮ ಆ ಇನಿಯಳು ಇಂದು ಏನು ಮಾಡಲು ನಿಶ್ಚಯಿಸಿರುವಳು ಎಂಬುದು ನಮಗೆ ತಿಳಿಯದು. ಶತ್ರುಸಂಹಾರಕನೇ! ನೋಡು, ಅವಳು ಹಾಸಿಗೆಯಿಲ್ಲದೆ ಬರಿ ನೆಲದಮೇಲೆ ಮಲಗಿಕೊಂಡಿರುವಳು. ॥ ೧೭ ॥

**ಶ್ರೀನಾರದರು ಹೇಳುತ್ತಾರೆ** – ಮಹಾರಾಜಾ! ಆ ಸ್ತ್ರೀಯ ಸಂಗದಿಂದ ಪುರಂಜನರಾಜನ ವಿವೇಕವು ನಾಶವಾಗಿಬಿಟ್ಟಿತ್ತು. ಅದರಿಂದ ತನ್ನ ರಾಣಿಯು ನೆಲದ ಮೇಲೆ ಅಸ್ತವ್ಯಸ್ತವಾಗಿ ಬಿದ್ದುಕೊಂಡಿರುವುದನ್ನು ನೋಡಿ ಅವನಿಗೆ ತಡೆಯಲಾರದ ಶೋಕ ಉಂಟಾಯಿತು. ॥ ೧೮ ॥ ಅವನು ನೊಂದ ಹೃದಯದಿಂದ ಆಕೆಯನ್ನು ಸವಿಮಾತುಗಳಿಂದ ಸಂತೈಸಿದನು. ಆದರೆ ಆಕೆಗೆ ತನ್ನಲ್ಲಿ ಪ್ರೀತಿಯುಂಟಾಗುವ ಯಾವ ಚಿಹ್ನೆಯೂ ಅವನಿಗೆ ಕಂಡುಬರಲಿಲ್ಲ. ॥ ೧೯ ॥ ಪುರಂಜನನು ಸಂತೈಸುವ ಕಲೆಯಲ್ಲಿ ತುಂಬಾ ಕುಶಲನಾಗಿದ್ದನು. ಅವನು ಆಕೆಯನ್ನು ಮೆಲ್ಲ-ಮೆಲ್ಲನೆ ಅನುನಯ ವಿನಯಗಳಿಂದ ಸಾಂತ್ವನಗೊಳಿಸಲು ಪ್ರಾರಂಭಿಸಿದನು. ಮೊದಲಿಗೆ ಆಕೆಯ ಪಾದಗಳನ್ನು ತನ್ನ ತೊಡೆಯಮೇಲಿಟ್ಟು ಕೊಂಡು ಪ್ರೀತಿಯಿಂದ ಆಕೆಯನ್ನು ಮುದ್ದಿಸುತ್ತಾ ಹೀಗೆಂದನು. ॥ ೨೦ ॥

ಪುರಂಜನನು ಹೇಳುತ್ತಾನೆ – ಸುಂದರೀ! ಯಾವ ಸೇವಕರು – ಅಪರಾಧವನ್ನು ಮಾಡಿದಾಗ ಒಡೆಯನಿಂದ ಅದಕ್ಕೆ ತಕ್ಕ ದಂಡನೆಯನ್ನು ಪಡೆಯುವುದಿಲ್ಲವೋ – ಅವರು ನಿಜವಾಗಿಯೂ ಮಂದಭಾಗ್ಯರು. ॥ ೨೧ ॥ ಸ್ವಾಮಿಯು ಸೇವಕರಿಗೆ ದಂಡನೆಯನ್ನು ಕೊಟ್ಟರೆ ಅವರ ಮೇಲೆ ದೊಡ್ಡ ಅನುಗ್ರಹವನ್ನು ತೋರಿದಂತೆ ಆಗುತ್ತದೆ. ಹಿತಕಾರಿಯಾದ ತನ್ನ ಪ್ರಭುವು ಬಂಧುವಿನಂತೆ ಮಾಡಿದ ಆ ದಂಡನೆಯೆಂಬ ಉಪಕಾರವನ್ನು ಸೈರಿಸದೆ ಇರುವವನು ನಿಜವಾಗಿಯೂ ಮೂರ್ಖನು. ॥ ೨೨ ॥ ಸುಂದರವಾದ ಸುಲಿಹಲ್ಲುಗಳಿಂದಲೂ, ರಮಣೀಯವಾದ ಹುಬ್ಬುಗಳಿಂದಲೂ ಶೋಭಿಸುತ್ತಿರುವ ಶುಭಾಂಗಿಯೇ! ಈಗ ಈ ಕೋಪವನ್ನು ತೊರೆದು 'ನಾನು ನಿನ್ನವನು' ಎಂಬುದನ್ನು ನೆನೆದು ಪ್ರೇಮಾತಿಶಯದಿಂದ ಕೂಡಿದ, ನಾಚಿಕೆಯಿಂದ ತಗ್ಗಿ ಮಧುರವಾದ ಕಿರುನಗೆಯಿಂದ ಮೆರೆಯುವ ನಿನ್ನ ಮನೋಹರವಾದ ಮುಖವನ್ನು ತೋರಿಸುವವಳಾಗು. ಆಹಾ! ದುಂಬಿಗಳ ಸಾಲಿನಂತೆ ನೀಲಿಯ ಬಣ್ಣದಿಂದ ಕಂಗೊಳಿಸುತ್ತಿರುವ ಮುಂಗುರುಳು, ಉನ್ನತವಾದ ಮೂಗು ಮತ್ತು ಸವಿನುಡಿಗಳಿಂದ ನಿನ್ನ ಮುಖಾರವಿಂದವು ಎಷ್ಟು ಮನಮೋಹಕವಾಗಿದೆ ? ॥ ೨೩ ॥

ತಸ್ಮಿನ್‌ದಧೇ ದಮಮಹಂ ತವ ವೀರಪತ್ನಿ
ಯೋಽನ್ಯತ್ರ ಭೂಸುರಕುಲಾತ್ಕೃತಕಿಲ್ಬಿಷಸ್ತಮ್ ।
ಪಶ್ಯೇ ನ ವೀತಭಯಮುನ್ಮದಿತಂ ತ್ರಿಲೋಕ್ಯಾ-
ಮನ್ಯತ್ರ ವೈ ಮುರರಿಪೋರಿತರತ್ರ ದಾಸಾತ್ ॥ ೨೪ ॥

ವೀರಪತ್ನಿಯೇ! ಬೇರೆ ಯಾರಾದರೂ ನಿನಗೆ ಅಪರಾಧವೆಸಗಿದ್ದರೆ ಅದನ್ನು ಒಡನೆಯೇ ತಿಳಿಸು. ಆ ಅಪರಾಧಿಯು ಬ್ರಾಹ್ಮಣ ಕುಲದವನಲ್ಲದೇ ಇದ್ದರೆ ನಾನು ಅವನಿಗೆ ಈಗಲೇ ಉಗ್ರಶಿಕ್ಷೆಯನ್ನು ವಿಧಿಸುತ್ತೇನೆ. ಮೂರುಲೋಕಗಳಲ್ಲಾಗಲೀ, ಅಥವಾ ಅವುಗಳ ಹೊರಗಾಗಲೀ ಶ್ರೀಭಗವಂತನ ಭಕ್ತರನ್ನು ಬಿಟ್ಟು ಬೇರೆ ಯಾರೂ ನಿನ್ನಲ್ಲಿ ಅಪರಾಧಮಾಡಿ ನಿರ್ಭಯನಾಗಿಯೂ, ಸುಖಿಯಾಗಿಯೂ ಇರಲಾರನು. ॥ ೨೪ ॥ ಪ್ರಿಯೇ! ನಿನ್ನ ಮುಖವು ತಿಲಕವಿಲ್ಲದೆ, ಕಾಂತಿಹೀನವಾಗಿ, ಬಾಡಿ-ಬಸವಳಿದು ಕೋಪದಿಂದ ಭೀಕರವಾಗಿ ಇದ್ದುದನ್ನು ನಾನು ಇಂದಿನವರೆಗೂ ಎಂದೂ ಕಂಡಿರಲಿಲ್ಲ. ಹಾಗೆಯೇ ನಿನ್ನ ಸುಂದರವಾದ ಸ್ತನಗಳು ಕಣ್ಣೀರಿನಿಂದ ನೆನೆದಿರುವುದಾಗಲೀ, ತೊಂಡೆಹಣ್ಣಿನಂತಿರುವ ತುಟಿಗಳು ಕೇಸರಿಯ ಲೇಪದಿಂದ ಕೆಂಪಾಗದೆ ಇರುವುದನ್ನು ನಾನು ಎಂದೂ ನೋಡಲಿಲ್ಲ. ॥ ೨೫ ॥ ನಾನು ಬೇಟೆಯ ವ್ಯಸನದಿಂದ ನಿನ್ನನ್ನು ಕೇಳದೆಯೇ ಬೇಟೆಯಾಡಲು ಹೋಗಿ ನಿಜವಾಗಿಯೂ ಅಪರಾಧವನ್ನು ಮಾಡಿರುವೆನು. ಆದರೂ ನಾನು ನಿನ್ನವನೆಂದು ತಿಳಿದು ನನ್ನಲ್ಲಿ ಪ್ರಸನ್ನಳಾಗು. ಮನ್ಮಥನ ವಿಷಮ ಬಾಣಗಳಿಂದ ಪೀಡಿತನಾಗಿ, ಸದಾ ತನಗೆ ಅಧೀನನಾಗಿ ಬೇಡಿಕೊಳ್ಳುತ್ತಿರುವ ತನ್ನ ಪ್ರಿಯನಾದ ಪತಿಯನ್ನು ಯಾವ ಕಾಮಿನಿಯು ತಾನೇ ಉಚಿತವಾದ ಕಾರ್ಯಕ್ಕಾಗಿ ಸ್ವೀಕರಿಸುವುದಿಲ್ಲ? ಹೀಗೆ ಸವಿಮಾತು - ವರ್ತನೆಗಳಿಂದ ಪುರಂಜನನು ತನ್ನ ಕಾಮಿನಿಯನ್ನು ಸಂತೈಸಿದನು. ॥ ೨೬ ॥

ವಕ್ತ್ರಂ ನ ತೇ ವಿತಿಲಕಂ ಮಲಿನಂ ವಿಹರ್ಷಂ
ಸಂರಂಭಭೀಮಮವಿಮೃಷ್ಟಮಪೇತರಾಗಮ್ ।
ಪಶ್ಯೇ ಸ್ತನಾವಪಿ ಶುಚೋಪಹತೌ ಸುಜಾತೌ
ಬಿಂಬಾಧರಂ ವಿಗತಕುಂಕುಮಪಂಕರಾಗಮ್ ॥ ೨೫ ॥

ತನ್ಮೇ ಪ್ರಸೀದ ಸುಹೃದಃ ಕೃತಕಿಲ್ಬಿಷಸ್ಯ
ಸ್ವೈರಂ ಗತಸ್ಯ ಮೃಗಯಾಂ ವ್ಯಸನಾತುರಸ್ಯ ।
ಕಾ ದೇವರಂ ವಶಗತಂ ಕುಸುಮಾಸ್ತ್ರವೇಗ-
ವಿಸ್ರಸ್ತಪೌಂಸ್ನ ಮುಶತೀ ನ ಭಜೇತ ಕೃತ್ಯೇ ॥ ೨೬ ॥

*ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು. ॥ ೨೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪುರಂಜನೋಪಾಖ್ಯಾನೇ ಷಡ್ವಿಂಶೋಽಧ್ಯಾಯಃ ॥ ೨೬ ॥

# ಇಪ್ಪತ್ತೇಳನೆಯ ಅಧ್ಯಾಯ

## ಪುರಂಜನನ ಪುರಿಯಮೇಲೆ ಚಂಡವೇಗನ ಧಾಳಿ, ಕಾಲಕನ್ಯೆಯ ಚರಿತ್ರೆ

*ನಾರದ ಉವಾಚ*

ಇತ್ಥಂ ಪುರಂಜನಂ ಸಮ್ಯಗ್ವಶಮಾನೀಯ ವಿಭ್ರಮೈಃ ।
ಪುರಂಜನೀ ಮಹಾರಾಜ ರೇಮೇ ರಮಯತೀ ಪತಿಮ್ ॥ ೧ ॥

ಸ ರಾಜಾ ಮಹಿಷೀಂ ರಾಜನ್ಸುಸ್ನಾತಾಂ ರುಚಿರಾನನಾಮ್ ।
ಕೃತಸ್ವಸ್ತ್ಯಯನಾಂ ತೃಪ್ತಾಮಭ್ಯನಂದದುಪಾಗತಾಮ್ ॥ ೨ ॥

ತಯೋಪಗೂಢಃ ಪರಿರಬ್ಧಕಂಧರೋ
ರಹೋಽನುಮಂತ್ರೈರಪಕೃಷ್ಟಚೇತನಃ ।
ನ ಕಾಲರಂಹೋ ಬುಬುಧೇ ದುರತ್ಯಯಂ
ದಿವಾ ನಿಶೇತಿ ಪ್ರಮದಾಪರಿಗ್ರಹಃ ॥ ೩ ॥

ಶ್ರೀನಾರದರು ಹೇಳುತ್ತಾರೆ - ಎಲೈ ರಾಜೇಂದ್ರನೇ! ಹೀಗೆ ಪುರಂಜನನ ಮಡದಿಯು ತನ್ನ ಪತಿಯನ್ನು ಬಗೆ-ಬಗೆಯ ವಿಲಾಸಗಳಿಂದ ಸಂಪೂರ್ಣವಾಗಿ ವಶಪಡಿಸಿಕೊಂಡು ಆತನನ್ನು ಆನಂದಗೊಳಿಸುತ್ತಾ ವಿಹರಿಸತೊಡಗಿದಳು. ॥ ೧ ॥ ಅವಳು ಸ್ನಾನಮಾಡಿ ಚೆನ್ನಾಗಿ ಸಿಂಗರಿಸಿಕೊಂಡು, ಭೋಜನಾದಿಗಳಿಂದ ತೃಪ್ತಳಾಗಿ ರಾಜನ ಬಳಿಗೆ ಬಂದಳು. ರಾಜನು ಆ ಮನೋಹರ ಮುಖವುಳ್ಳ ರಾಣಿಯನ್ನು ಆದರದಿಂದ ಅಭಿನಂದಿಸಿದನು. ॥ ೨ ॥ ಪುರಂಜನಿಯು ರಾಜನನ್ನು ಆಲಿಂಗಿಸಿಕೊಳ್ಳಲು ಅವನೂ ಆಕೆಯನ್ನು ಅಪ್ಪಿಕೊಂಡನು. ಮತ್ತೆ ಏಕಾಂತದಲ್ಲಿ ಮನಸ್ಸಿಗನುಕೂಲವಾದ ರಹಸ್ಯವಾದ ಮಾತುಗಳನ್ನಾಡುತ್ತಾ ಆಕೆಯಲ್ಲಿ ಮಿತಿಮೀರಿ ಮೋಹಗೊಂಡನು. ಆ ಕಾಮಿನಿಯಲ್ಲಿ ಚಿತ್ತವು ನೆಟ್ಟುಹೋಗಿ - ಹಗಲು-ರಾತ್ರಿ ಎಂಬ ವ್ಯತ್ಯಾಸದಿಂದ ನಿರಂತರ ಕಳೆದುಹೋಗುತ್ತಿರುವ ದುಸ್ತರವಾದ ಕಾಲಗತಿಯು ಅವನ ಗಮನಕ್ಕೆ ಬಾರದಷ್ಟು ಮೋಹವುಂಟಾಯಿತು. ॥ ೩ ॥

ಶಯಾನ ಉನ್ನದ್ಧಮದೋ ಮಹಾಮನಾ
ಮಹಾರ್ಹತಲ್ಪೇ ಮಹಿಷೀಭುಜೋಪಧಿಃ ।
ತಾಮೇವ ವೀರೋ ಮನುತೇ ಪರಂ ಯತ-
ಸ್ತಮೋಽಭಿಭೂತೋ ನ ನಿಜಂ ಪರಂ ಚ ಯತ್ ॥ ೪ ॥

ತಯೈವಂ ರಮಮಾಣಸ್ಯ ಕಾಮಕಶ್ಮಲಚೇತಸಃ ।
ಕ್ಷಣಾರ್ಧಮಿವ ರಾಜೇಂದ್ರ ವ್ಯತಿಕ್ರಾಂತಂ ನವಂ ವಯಃ ॥ ೫ ॥

ತಸ್ಯಾಮಜನಯತ್ಪುತ್ರಾನ್ಪುರಂಜನ್ಯಾಂ ಪುರಂಜನಃ ।
ಶತಾನ್ಯೇಕಾದಶ ವಿರಾಡಾಯುಷೋಽರ್ಧಮಥಾತ್ಯಗಾತ್ ॥ ೬ ॥

ದುಹಿತೄರ್ದಶೋತ್ತರಶತಂ ಪಿತೃಮಾತೃಯಶಸ್ಕರೀಃ ।
ಶೀಲೌದಾರ್ಯಗುಣೋಪೇತಾಃ ಪೌರಂಜನ್ಯಃ ಪ್ರಜಾಪತೇ ॥ ೭ ॥

ಸ ಪಂಚಾಲಪತಿಃ ಪುತ್ರಾನ್ಪಿತೃವಂಶವಿವರ್ಧನಾನ್ ।
ದಾರೈಃ ಸಂಯೋಜಯಾಮಾಸ ದುಹಿತೄಃ ಸದೃಶೈರ್ವರೈಃ ॥ ೮ ॥

ಪುತ್ರಾಣಾಂ ಚಾಭವನ್ ಪುತ್ರಾ ಏಕೈಕಸ್ಯ ಶತಂ ಶತಮ್ ।
ಯೈರ್ವೈ ಪೌರಂಜನೋ ವಂಶಃ ಪಂಚಾಲೇಷು ಸಮೇಧಿತಃ ॥ ೯ ॥

ತೇಷು ತದ್ರಿಕ್ಥಹಾರೇಷು ಗೃಹಕೋಶಾನುಜೀವಿಷು ।
ನಿರೂಢೇನ ಮಮತ್ವೇನ ವಿಷಯೇಷ್ವನ್ವಬಧ್ಯತ ॥ ೧೦ ॥

ಈಜೇ ಚ ಕ್ರತುಭಿರ್ಘೋರೈರ್ದೀಕ್ಷಿತಃ ಪಶುಮಾರಕೈಃ ।
ದೇವಾನ್ಪಿತೄನ್ಭೂತಪತೀನ್ನಾನಾಕಾಮೋ ಯಥಾ ಭವಾನ್ ॥ ೧೧ ॥

ಯುಕ್ತೇಷ್ವೇವಂ ಪ್ರಮತ್ತಸ್ಯ ಕುಟುಂಬಾಸಕ್ತಚೇತಸಃ ।
ಆಸಸಾದ ಸ ವೈ ಕಾಲೋ ಯೋಽಪ್ರಿಯಃ ಪ್ರಿಯಯೋಷಿತಾಮ್ ॥ ೧೨ ॥

ಚಂಡವೇಗ ಇತಿ ಖ್ಯಾತೋ ಗಂಧರ್ವಾಧಿಪತಿರ್ನೃಪ ।
ಗಂಧರ್ವಾಸ್ತಸ್ಯ ಬಲಿನಃ ಷಷ್ಟ್ಯುತ್ತರಶತತ್ರಯಮ್ ॥ ೧೩ ॥

ಗಂಧರ್ವ್ಯಸ್ತಾದೃಶೀರಸ್ಯ ಮೈಥುನ್ಯಶ್ಚ ಸಿತಾಸಿತಾಃ ।
ಪರಿವೃತ್ತ್ಯಾ ವಿಲುಂಪಂತಿ ಸರ್ವಕಾಮವಿನಿರ್ಮಿತಾಮ್ ॥ ೧೪ ॥

ತೇ ಚಂಡ ವೇಗಾನುಚರಾಃ ಪುರಂಜನಪುರಂ ಯದಾ ।
ಹರ್ತುಮಾರೇಭಿರೇ ತತ್ರ ಪ್ರತ್ಯಷೇಧತ್ಪ್ರಜಾಗರಃ ॥ ೧೫ ॥

ಮತ್ತೇರಿದ ಮನಸ್ವಿಯಾದ ಪುರಂಜನನು ತನ್ನ ಪ್ರಿಯೆಯ ಭುಜದ ಮೇಲೆ ತಲೆಯನ್ನಿಟ್ಟುಕೊಂಡು ಅಮೂಲ್ಯವಾದ ಹಂಸತೂಲಿಕಾತಲ್ಪದಲ್ಲಿ ಬಿದ್ದಿರುತ್ತಿದ್ದನು. ಅವನಿಗಾದರೋ ಆ ರಮಣಿಯೇ ಜೀವನದ ಪರಮಫಲವೆಂದು ತೋರುತ್ತಿತ್ತು. ಅಜ್ಞಾನದಿಂದ ಆವೃತನಾಗಿದ್ದ ಕಾರಣ ಅವನಿಗೆ ಆತ್ಮಾ ಅಥವಾ ಪರಮಾತ್ಮನ ಯಾವ ಜ್ಞಾನವೂ ಉಳಿಯಲಿಲ್ಲ. ॥ ೪ ॥

ಎಲೈ ರಾಜನೇ! ಹೀಗೆ ಕಾಮಾತುರವಾದ ಚಿತ್ತದಿಂದ ಆಕೆಯೊಡನೆ ವಿಹರಿಸುತ್ತಾ ಇದ್ದ ಪುರಂಜನನ ಯೌವನವು ಅರ್ಧ ಕ್ಷಣದಂತೆ ಕಳೆದುಹೋಯಿತು. ॥ ೫ ॥ ಪ್ರಜಾಪತಿಯೇ! ಆ ಪುರಂಜನಿಯಲ್ಲಿ ರಾಜನಿಗೆ ಸಾವಿರದನೂರು ಮಂದಿ ಪುತ್ರರೂ, ಒಂದುನೂರಹತ್ತು ಪುತ್ರಿಯರೂ ಜನಿಸಿದರು. ಅವರೆಲ್ಲರೂ ತಂದೆ-ತಾಯಿಗಳ ಕೀರ್ತಿಯನ್ನು ವೃದ್ಧಿಪಡಿಸುವ ಹಾಗೂ ಸೌಶೀಲ್ಯ-ಔದಾರ್ಯಗಳೇ ಮುಂತಾದ ಉತ್ತಮಗುಣಗಳಿಂದ ಸಂಪನ್ನರಾಗಿದ್ದರು. ಅವರು ಪೌರಂಜನಿಯರೆಂದೇ ವಿಖ್ಯಾತರಾದರು. ಇಷ್ಟರಲ್ಲಿ ಆ ಸಾಮ್ರಾಟನ ದೀರ್ಘವಾದ ಆಯುಸ್ಸಿನ ಅರ್ಧಭಾಗ ಕಳೆದುಹೋಗಿತ್ತು. ॥ ೬-೭ ॥ ಮತ್ತೆ ಪಾಂಚಾಲನರೇಶ ಪುರಂಜನನು ಪಿತೃವಂಶವನ್ನು ವೃದ್ಧಿಪಡಿಸುವ ಪುತ್ರರ ಯೋಗ್ಯವಧುಗಳೊಂದಿಗೂ ಮತ್ತು ಕನ್ಯೆಯರನ್ನು ಅವರಿಗೆ ತಕ್ಕವರಾದ ವರರೊಂದಿಗೂ ವಿವಾಹ ಮಾಡಿದನು. ॥ ೮ ॥ ಅವನ ಪುತ್ರರಲ್ಲಿ ಒಬ್ಬೊಬ್ಬರಿಗೆ ನೂರು-ನೂರು ಪುತ್ರರು ಹುಟ್ಟಿದರು. ಅವರಿಂದ ವಂಶವು ವೃದ್ಧಿಯನ್ನು ಹೊಂದಿ ಇಡೀ ಪಾಂಚಾಲದೇಶದಲ್ಲಿ ಪುರಂಜನನವಂಶ ಹರಡಿಹೋಯಿತು. ॥ ೯ ॥ ಈ ಮಕ್ಕಳು, ಮೊಮ್ಮಕ್ಕಳು, ಮನೆ, ಕೋಶ, ಸೇವಕರು, ಮಂತ್ರಿಗಳು ಮುಂತಾದವುಗಳಲ್ಲಿ ದೃಢವಾದ ಮಮತೆ ಉಂಟಾದ್ದರಿಂದ ಅವನು ಈ ವಿಷಯಗಳಲ್ಲೇ ಬಂಧಿತನಾದನು. ॥ ೧೦ ॥ ಮತ್ತೆ ನಿನ್ನಂತೆಯೇ ಅವನೂ ಕೂಡ ಅನೇಕ ಪ್ರಕಾರದ ಭೋಗಗಳ ಕಾಮನೆಯಿಂದ ಯಜ್ಞದೀಕ್ಷೆಯನ್ನು ಕೈಗೊಂಡು ಹಲವಾರು ಬಗೆಯ ಪಶುಹಿಂಸಾಮಯವಾದ ಘೋರ ಯಜ್ಞಗಳಿಂದ ದೇವತೆಗಳನ್ನು, ಪಿತೃಗಳನ್ನು, ಭೂತಪತಿಗಳನ್ನು ಆರಾಧಿಸಿದನು. ॥ ೧೧ ॥ ಹೀಗೆ ಅವನು ತನ್ನ ಆಯುಷ್ಯವಿಡೀ ಆತ್ಮಕಲ್ಯಾಣವನ್ನುಂಟುಮಾಡುವ ಕರ್ಮಗಳ ಕಡೆಗೆ ಗಮನಕೊಡದೆ ಕುಟುಂಬಪಾಲನೆಯಲ್ಲೇ ಆಸಕ್ತನಾದನು. ಕೊನೆಗೆ ಸ್ತ್ರೀಲಂಪಟರಿಗೆ ಅತ್ಯಂತ ಅಪ್ರಿಯವಾದ ವೃದ್ಧಾಪ್ಯವು ಬಂದೊದಗಿತು. ॥ ೧೨ ॥

ರಾಜನೇ! ಚಂಡವೇಗನೆಂಬ ಒಬ್ಬ ಗಂಧರ್ವರಾಜನಿದ್ದನು. ಮುನ್ನೂರ ಅರವತ್ತು ಮಂದಿ ಮಹಾಶೂರರಾದ ಗಂಧರ್ವರು ಅವನ ಅಧೀನದಲ್ಲಿದ್ದರು. ॥ ೧೩ ॥ ಕಪ್ಪು ಮತ್ತು ಬಿಳುಪು ಬಣ್ಣಗಳಿಂದ ಕೂಡಿದ ಅಷ್ಟೇ ಸಂಖ್ಯೆಯ ಗಂಧರ್ವಸ್ತ್ರೀಯರು ಅವರೊಡನೆ ಮಡದಿಯರಂತೆ ಇದ್ದರು. ಅವರು ಒಬ್ಬರಾದ ಬಳಿಕ ಮತ್ತೊಬ್ಬರಂತೆ ಸುತ್ತಾಡುತ್ತಾ ಭೋಗ-ವಿಲಾಸಗಳಿಂದ ತುಂಬಿ ತುಳುಕುವ ನಗರಗಳನ್ನು ಸೂರೆಮಾಡುತ್ತಿದ್ದರು. ॥ ೧೪ ॥ ಗಂಧರ್ವರಾಜ ಚಂಡವೇಗನ ಆ ಅನುಚರರು ಪುರಂಜನನ ನಗರವನ್ನು ಲೂಟಿಮಾಡಲು ಪ್ರಾರಂಭಿಸಿದಾಗ ಅವರನ್ನು ಐದು ಹೆಡೆಯುಳ್ಳ ಪ್ರಜಾಗರ ಸರ್ಪವು ತಡೆಯಿತು. ॥ ೧೫ ॥

ಸ ಸಪ್ತಭಿಃ ಶತೈರೇಕೋ ವಿಂಶತ್ಯಾ ಚ ಶತಂ ಸಮಾಃ ।
ಪುರಂಜನಪುರಾಧ್ಯಕ್ಷೋ ಗಂಧರ್ವೈರ್ಯುಯುಧೇ ಬಲೀ ॥ ೧೬ ॥

ಈ ಪುರಂಜನಪುರಿಯನ್ನು ಕಾವಲು ಕಾಯುತ್ತಿದ್ದ ಮಹಾಬಲಶಾಲಿ ಯಾದ ಸರ್ಪವು ನೂರು ವರ್ಷಗಳ ಕಾಲ ಒಬ್ಬಂಟಿಗನಾಗಿ ಆ ಏಳೂನೂರಇಪ್ಪತ್ತು ಗಂಧವ-ಗಂಧರ್ವಿಯರೊಡನೆ ಯುದ್ಧ ಮಾಡುತ್ತಲೇ ಇತ್ತು. ॥ ೧೬ ॥ ಅನೇಕ ವೀರರೊಂದಿಗೆ ಒಬ್ಬನೇ ಯುದ್ಧಮಾಡಿದ್ದರಿಂದ ತನ್ನ ಏಕಮಾತ್ರ ಬಂಧುವಾಗಿದ್ದ ಪ್ರಜಾಗರನು ಬಲಹೀನನಾದುದನ್ನು ನೋಡಿ ಪುರಂಜನರಾಜನಿಗೆ ತನ್ನ ರಾಷ್ಟ್ರ ಮತ್ತು ನಗರದಲ್ಲಿ ವಾಸಿಸುವ ಇತರ ಬಂಧುಗಳೊಡನೆ ಬಹಳ ಚಿಂತೆ ಇಟ್ಟುಕೊಂಡಿತು. ॥ ೧೭ ॥

ಕ್ಷೀಯಮಾಣೇ ಸ್ವಸಂಬಂಧೇ ಏಕಸ್ಮಿನ್ಬಹುಭಿರ್ಯುಧಾ ।
ಚಿಂತಾಂ ಪರಾಂ ಜಗಾಮಾರ್ತಃ ಸರಾಷ್ಟ್ರ ಪುರಬಾಂಧವಃ ॥ ೧೭ ॥

ಸ ಏವ ಪುರ್ಯಾಂ ಮಧುಭುಕ್ಪಂಚಾಲೇಷು ಸ್ವಪಾರ್ಷದೈಃ ।
ಉಪನೀತಂ ಬಲಿಂ ಗೃಹ್ಣನ್ ಸ್ತ್ರೀಜಿತೋನಾವಿದದ್ಭಯಮ್ ॥ ೧೮ ॥

ಅವನು ಇಷ್ಟು ದಿನಗಳವರೆಗೆ ಪಾಂಚಾಲದೇಶದ ಆ ನಗರದಲ್ಲಿ ತನ್ನ ದೂತರು ತಂದು ಕೊಡುತ್ತಿದ್ದ ಕಂದಾಯವನ್ನು ಪಡೆದು ವಿಷಯ ಭೋಗಗಳಲ್ಲಿ ಮುಳುಗಿದ್ದನು. ಸ್ತ್ರೀಯಳಿಗೆ ವಶೀಭೂತನಾದ್ದರಿಂದ ಮುಂದೆ ಅವಶ್ಯವಾಗಿ ಬಂದೊದಗುವ ಇಂತಹ ಭಯದ ಸುಳಿವೇ ಅವನಿಗೆ ಹತ್ತಲಿಲ್ಲ. ॥ ೧೮ ॥

ಕಾಲಸ್ಯ ದುಹಿತಾ ಕಾಚಿತ್ತ್ರಿಲೋಕೀಂ ವರಮಿಚ್ಛತೀ ।
ಪರ್ಯಟಂತೀ ನ ಬರ್ಹಿಷ್ಮನ್ಕಶ್ಚನಂದತ ಕಶ್ಚನ ॥ ೧೯ ॥

ಬರ್ಹಿಷ್ಮಂತನೇ ! ಅದೇ ದಿನಗಳಲ್ಲಿ ಕಾಲಪುರುಷನ ಕನ್ಯೆಯೊಬ್ಬಳು ತನಗಾಗಿ ವರನನ್ನು ಹುಡುಕುತ್ತಾ ಮೂರು ಲೋಕಗಳಲ್ಲಿಯೂ ಅಲೆಯುತ್ತಿದ್ದಳು. ಆದರೆ ಆಕೆಯನ್ನು ಯಾರೂ ಸ್ವೀಕರಿಸಲಿಲ್ಲ. ॥ ೧೯ ॥ ಆ ಜರಾ (ಮುಪ್ಪು) ಎಂಬ ಕಾಲಕನ್ಯೆಯು ಅತ್ಯಂತ ಭಾಗ್ಯಹೀನಳಾದ್ದರಿಂದ ಆಕೆಯನ್ನು ಜನರು ದುರ್ಭಗಾ ಎಂದೇ ಕರೆಯುತ್ತಿದ್ದರು. ಒಮ್ಮೆ ರಾಜರ್ಷಿ ಪುರುವು ತಂದೆಗೆ ತನ್ನ ಯೌವನವನ್ನು ಕೊಡುವುದಕ್ಕಾಗಿ ತನ್ನಿಚ್ಛೆಯಂತೆ ಅವಳನ್ನು ವರಿಸಿದ್ದನು. ಇದರಿಂದ ಪ್ರಸನ್ನಳಾಗಿ ಅವಳು ರಾಜನಿಗೆ ರಾಜ್ಯ ಪ್ರಾಪ್ತಿಯ ವರವನ್ನು ಕೊಟ್ಟಿದ್ದಳು. ॥ ೨೦ ॥ ಒಮ್ಮೆ ನಾನು ಬ್ರಹ್ಮಲೋಕದಿಂದ ಭೂಮಿಗೆ ಬರುತ್ತಿದ್ದಾಗ ಆ ಕನ್ಯೆಯು ಅಲ್ಲಲ್ಲಿ ಸುತ್ತಾಡುತ್ತಾ ನನ್ನನ್ನೂ ಸಂಧಿಸಿದ್ದಳು. ನಾನು ನೈಷ್ಠಿಕಬ್ರಹ್ಮಚಾರಿ ಎಂದು ತಿಳಿದಿದ್ದರೂ ಆಕೆಯು ಕಾಮಮೋಹಿತಳಾಗಿ ನನ್ನನ್ನು ವರಿಸಲು ಬಯಸಿದಳು. ॥ ೨೧ ॥ ನಾನು ಅವಳ ಬಯಕೆಯನ್ನು ತಿರಸ್ಕರಿಸಲು ಅವಳು ಅತ್ಯಂತ ಕುಪಿತಳಾಗಿ ನನ್ನನ್ನು – 'ಎಲೈ ಮುನಿಯೇ ! ನನ್ನ ಬೇಡಿಕೆಯನ್ನು ತಿರಸ್ಕರಿಸಿದ್ದೀಯೆ. ಆದ್ದರಿಂದ ನೀನು ಒಂದೇ ಜಾಗದಲ್ಲಿ ಹೆಚ್ಚುಕಾಲ ನಿಲ್ಲದಿರುವಂತಾಗಲಿ' ಎಂದು ಸಹಿಸಲು ಕಷ್ಟವಾದ ಶಾಪವನ್ನು ಕೊಟ್ಟಳು. ॥ ೨೨ ॥

ದೌರ್ಭಾಗ್ಯೇನಾತ್ಮನೋ ಲೋಕೇ ವಿಶ್ರುತಾ ದುರ್ಭಗೇತಿ ಸಾ ।
ಯಾ ತುಷ್ಟಾ ರಾಜರ್ಷಯೇ ತು ವೃತಾದಾತ್ಪೂರವೇ ವರಮ್ ॥ ೨೦ ॥

ಕದಾಚಿದಟಮಾನಾ ಸಾ ಬ್ರಹ್ಮಲೋಕಾನ್ಮಹೀಂ ಗತಮ್ ।
ವವ್ರೇ ಬೃಹದ್ವ್ರತಂ ಮಾಂ ತು ಜಾನತೀ ಕಾಮಮೋಹಿತಾ ॥ ೨೧ ॥

ಮಯಿ ಸಂರಭ್ಯ ವಿಪುಲಮದಾಚ್ಛಾಪಂ ಸುದುಃಸಹಮ್ ।
ಸ್ಥಾತುಮರ್ಹಸಿ ನೈಕತ್ರ ಮದ್ಯಾಚ್ಞಾವಿಮುಖೋ ಮುನೇ ॥ ೨೨ ॥

ತತೋ ವಿಹತಸಂಕಲ್ಪಾ ಕನ್ಯಕಾ ಯವನೇಶ್ವರಮ್ ।
ಮಯೋಪದಿಷ್ಟಮಾಸಾದ್ಯ ವವ್ರೇ ನಾಮ್ನಾ ಭಯಂ ಪತಿಮ್ ॥ ೨೩ ॥

ಹೀಗೆ ನನ್ನಿಂದ ನಿರಾಶಳಾದ ಅವಳು ನನ್ನ ಸಲಹೆಯನ್ನು ಪಡೆದು ಯವನರಾಜನಾದ ಭಯ ಎಂಬುವನ ಬಳಿಗೆ ಹೋಗಿ ಅವನನ್ನು ಪತಿಯನ್ನಾಗಿ ವರಿಸಿಕೊಂಡಳು ಹಾಗೂ ಹೇಳಿದಳು – ॥ ೨೩ ॥ ಎಲೈ ವೀರವರನೇ ! ನೀನು ಯವನರಲ್ಲಿ ಶ್ರೇಷ್ಠನು. ಇಂತಹ ನಿನ್ನನ್ನು ನಾನು ಪ್ರೇಮಿಸಿ ಪತಿಯನ್ನಾಗಿ ಪಡೆಯಲು ಬಯಸಿದ್ದೇನೆ. ನಿನ್ನ ಕುರಿತು ಜೀವಿಗಳು ಮಾಡಿದ ಸಂಕಲ್ಪವು ಎಂದಿಗೂ ವ್ಯರ್ಥವಾಗುವುದಿಲ್ಲ. ॥ ೨೪ ॥ ಯಾವ ಮನುಷ್ಯನು ಲೋಕದ ದೃಷ್ಟಿಯಿಂದ ಅಥವಾ ಶಾಸ್ತ್ರದೃಷ್ಟಿಯಿಂದ ದಾನಮಾಡಲು ಯೋಗ್ಯವಾದ ವಸ್ತುವನ್ನು ದಾನಮಾಡುವುದಿಲ್ಲವೋ, ಯಾರು ಶಾಸ್ತ್ರದೃಷ್ಟಿಯಿಂದ ಆ ದಾನವನ್ನು ತೆಗೆದು ಕೊಳ್ಳಲು ಯೋಗ್ಯನಾಗಿದ್ದರೂ ತೆಗೆದುಕೊಳ್ಳುವುದಿಲ್ಲವೋ, ಅವರಿಬ್ಬರೂ ದುರಾಗ್ರಹಿಗಳು ಮತ್ತು ಮೂಢರು. ಆದ್ದರಿಂದ ಶೋಚನೀಯರು. ॥ ೨೫ ॥

ಋಷಭಂ ಯವನಾನಾಂ ತ್ವಾಂ ವೃಣೇ ವೀರೇಪ್ಸಿತಂ ಪತಿಮ್ ।
ಸಂಕಲ್ಪಸ್ತ್ವಯಿ ಭೂತಾನಾಂ ಕೃತಃ ಕಿಲ ನ ರಿಷ್ಯತಿ ॥ ೨೪ ॥

ದ್ವಾವಿಮಾವನುಶೋಚಂತಿ ಬಾಲಾವಸದವಗ್ರಹೌ ।
ಯಲ್ಲೋಕಶಾಸ್ತ್ರೋಪನತಂ ನ ರಾತಿ ನ ತದಿಚ್ಛತಿ ॥ ೨೫ ॥

ಅಥೋ ಭಜಸ್ವ ಮಾಂ ಭದ್ರ ಭಜಂತೀಂ ಮೇ ದಯಾಂ ಕುರು ।
ಏತಾವಾನ್ಪೌರುಷೋ ಧರ್ಮೋ ಯದಾರ್ತಾನನುಕಂಪತೇ ॥ ೨೬ ॥

ಮಂಗಳಾಂಗನೇ! ಈಗ ನಾನು ನಿನ್ನ ಸೇವೆಗಾಗಿ ಸಿದ್ಧಳಾಗಿ ಬಂದಿದ್ದೇನೆ. ನನ್ನನ್ನು ಸ್ವೀಕರಿಸಿ ಅನುಗ್ರಹಿಸು. ದೀನರ ಮೇಲೆ ದಯೆತೋರುವುದೇ ಮನುಷ್ಯರ ಶ್ರೇಷ್ಠ ಧರ್ಮವಾಗಿದೆ. ॥ ೨೬ ॥

ಕಾಲಕನ್ಯೋದಿತವಚೋ ನಿಶಮ್ಯ ಯವನೇಶ್ವರಃ ।
ಚಿಕೀರ್ಷುರ್ದೇವಗುಹ್ಯಂ ಸ ಸಸ್ಮಿತಂ ತಾಮಭಾಷತ ॥ ೨೭ ॥

ಕಾಲಕನ್ಯೆಯ ಮಾತನ್ನು ಕೇಳಿ ಯವನರಾಜನು ದೈವಸಂಕಲ್ಪದಲ್ಲಿದ್ದ ಒಂದು ಗುಟ್ಟಾದ ಕಾರ್ಯವನ್ನು ಆಕೆಯಿಂದ ನೆರವೇರಿಸಲು ಇಚ್ಛಿಸುತ್ತಾ ನಸುನಗುತ್ತಾ ಆಕೆಗೆ ಹೀಗೆಂದನು – ॥ ೨೭ ॥

ಮಯಾ ನಿರೂಪಿತಸ್ತುಭ್ಯಂ ಪತಿರಾತ್ಮಸಮಾಧಿನಾ ।
ನಾಭಿನಂದತಿ ಲೋಕೋಽಯಂ ತ್ವಾಮಭದ್ರಾಮಸಮ್ಮತಾಮ್ ॥ ೨೮ ॥

ತ್ವಮವ್ಯಕ್ತಗತಿರ್ಭುಂಕ್ಷ್ವ ಲೋಕಂ ಕರ್ಮವಿನಿರ್ಮಿತಮ್ ।
ಯಾಹಿ ಮೇ ಪೃತನಾಯುಕ್ತಾ ಪ್ರಜಾನಾಶಂ ಪ್ರಣೇಷ್ಯಸಿ ॥ ೨೯ ॥

ನಾನು ಯೋಗದೃಷ್ಟಿಯಿಂದ ನಿನಗೆ ಒಬ್ಬ ವರನನ್ನು ನಿಶ್ಚಯಿಸಿರುವೆನು. ನೀನು ಎಲ್ಲರಿಗೆ ಅನಿಷ್ಟವನ್ನು ಉಂಟುಮಾಡುವುದರಿಂದ ಯಾರಿಗೂ ಬೇಕೆನಿಸುವುದಿಲ್ಲ. ಅದಕ್ಕಾಗಿಯೇ ಯಾರೂ ನಿನ್ನನ್ನು ಸ್ವೀಕರಿಸುವುದಿಲ್ಲ. ಆದುದರಿಂದ ನೀನು ಕರ್ಮದಿಂದ ಉಂಟಾದ ಈ ಲೋಕವನ್ನು ಗುಪ್ತಳಾಗಿ ಬಲಾತ್ಕಾರದಿಂದ ಭೋಗಿಸು. ಜೊತೆಗೆ ನನ್ನ ಸೈನ್ಯವನ್ನೂ ಕರೆದುಕೊಂಡು ಹೋಗು. ಅದರ ಸಹಾಯದಿಂದ ನೀನು ಎಲ್ಲ ಪ್ರಜೆಗಳನ್ನು ನಾಶಮಾಡಲು ಸಮರ್ಥಳಾಗುವೆ. ನಿನ್ನನ್ನು ಯಾರೂ ಎದುರಿಸಲಾರರು. ॥ ೨೮-೨೯ ॥

ಪ್ರಜ್ವಾರೋಽಯಂ ಮಮ ಭ್ರಾತಾ ತ್ವಂ ಚ ಮೇ ಭಗಿನೀ ಭವ ।
ಚರಾಮ್ಯುಭಾಭ್ಯಾಂ ಲೋಕೇಽಸ್ಮಿನ್ನವ್ಯಕ್ತೋ ಭೀಮಸೈನಿಕಃ ॥ ೩೦ ॥

ನೋಡು! ಈ 'ಪ್ರಜ್ವಾರ' ಎಂಬುವನು ನನ್ನ ಸೋದರನು. ನೀನು ನನ್ನ ಸೋದರಿಯಾಗು. ನಿಮ್ಮಿಬ್ಬರೊಡಗೂಡಿ ನಾನು ನನ್ನ ಅವ್ಯಕ್ತಗತಿಯಿಂದ ಭಯಂಕರವಾದ ಸೈನ್ಯವನ್ನು ಜೊತೆಯಲ್ಲಿ ಕರೆದುಕೊಂಡು ಈ ಲೋಕದಲ್ಲೆಲ್ಲ ಸಂಚರಿಸುವೆನು. ॥ ೩೦ ॥

*ಇಪ್ಪತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೨೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪುರಂಜನೋಪಾಖ್ಯಾನೇ ಸಪ್ತವಿಂಶೋಽಧ್ಯಾಯಃ ॥ ೨೭ ॥

# ಇಪ್ಪತ್ತೆಂಟನೆಯ ಅಧ್ಯಾಯ

## ಪುರಂಜನನು ಜನ್ಮಾಂತರದಲ್ಲಿ ಹೆಂಗಸಾಗಿ ಹುಟ್ಟಿದುದು, ಅವಿಜ್ಞಾತನ ಉಪದೇಶದಿಂದ ಮುಕ್ತನಾದುದು

ನಾರದ ಉವಾಚ

ಸೈನಿಕಾ ಭಯನಾಮ್ನೋ ಯೇ ಬರ್ಹಿಷ್ಮಂದಿಷ್ಟಕಾರಿಣಃ ।
ಪ್ರಜ್ವಾರಕಾಲಕನ್ಯಾಭ್ಯಾಂ ವಿಚೇರುರವನೀಮಿಮಾಮ್ ॥ ೧ ॥

ತ ಏಕದಾ ತು ರಭಸಾ ಪುರಂಜನಪುರೀಂ ನೃಪ ।
ರುರುಧುರ್ಭೌಮಭೋಗಾಢ್ಯಾಂ ಜರತ್ಪನ್ನಗಪಾಲಿತಾಮ್ ॥ ೨ ॥

ಕಾಲಕನ್ಯಾಪಿ ಬುಭುಜೇ ಪುರಂಜನಪುರಂ ಬಲಾತ್ ।
ಯಯಾಭಿಭೂತಃ ಪುರುಷಃ ಸದ್ಯೋ ನಿಃಸಾರತಾಮಿಯಾತ್ ॥ ೩ ॥

ಶ್ರೀನಾರದಮಹರ್ಷಿಗಳು ಹೇಳುತ್ತಾರೆ – ಬರ್ಹಿಷ್ಮಂತನೇ! ಕೇಳು. ಅನಂತರ ಆ ಭಯನೆಂಬ ಯವನರಾಜನ ಸೈನಿಕರು ಪ್ರಜ್ವಾರ ಮತ್ತು ಕಾಲಕನ್ಯೆ ಜರೆಯೊಡನೆ ಈ ಭೂಮಿಯಲ್ಲಿ ಎಲ್ಲೆಲ್ಲೂ ಸಂಚರಿಸತೊಡಗಿದರು. ॥ ೧ ॥ ಒಮ್ಮೆ ಅವರು ಮುದಿಸರ್ಪದಿಂದ ಸಂರಕ್ಷಿತವಾದ ಎಲ್ಲ ರೀತಿಯ ಸುಖ-ಸಾಮಗ್ರಿಗಳಿಂದಲೂ ಸಂಪನ್ನವಾಗಿದ್ದ ಪುರಂಜನಪುರಿಗೆ ರಭಸದಿಂದ ಧಾಳಿಯಿಟ್ಟರು. ॥ ೨ ॥ ಆಗ ಕಾಲಕನ್ಯೆಯು ಆ ಪುರಿಯ ಪ್ರಜೆಗಳನ್ನು ಬಲಾತ್ಕಾರವಾಗಿ ಭೋಗಿಸತೊಡಗಿದಳು., ಆಕೆಯ ಹಿಡಿತಕ್ಕೆ ಸಿಕ್ಕಿದ ಮನುಷ್ಯರು ಬೇಗನೇ ಸತ್ವಹೀನರಾಗಿ ಬಿಡುವರು. ॥ ೩ ॥ ಅದೇ ಸಮಯದಲ್ಲಿ ಆ ಯವನರಾಜನೂ ಕಾಲಕನ್ಯೆಯಿಂದ ಭೋಗಿಸಲ್ಪಡುತ್ತಿದ್ದ ಆ ಪುರದೊಳಗೆ ನಾಲ್ಕೂ

ಸ ಸಪ್ತಭಿಃ ಶತೈರೇಕೋ ವಿಂಶತ್ಯಾ ಚ ಶತಂ ಸಮಾಃ ।
ಪುರಂಜನಪುರಾಧ್ಯಕ್ಷೋ ಗಂಧರ್ವೈರ್ಯುಯುಧೇ ಬಲೀ ॥ ೧೬ ॥

ಕ್ಷೀಯಮಾಣೇ ಸ್ವಸಂಬಂಧೇ ಏಕಸ್ಮಿನ್ಬಹುಭಿರ್ಯುಧಾ ।
ಚಿಂತಾಂ ಪರಾಂ ಜಗಾಮಾರ್ತಃ ಸರಾಷ್ಟ್ರ ಪುರಬಾಂಧವಃ ॥ ೧೭ ॥

ಸ ಏವ ಪುರ್ಯಾಂ ಮಧುಭುಕ್ಪಂಚಾಲೇಷು ಸ್ವಪಾರ್ಷದೈಃ ।
ಉಪನೀತಂ ಬಲಿಂ ಗೃಹ್ಣನ್ ಸ್ತ್ರೀಜಿತೋನಾವಿದದ್ಭಯಮ್ ॥ ೧೮ ॥

ಕಾಲಸ್ಯ ದುಹಿತಾ ಕಾಚಿತ್ತ್ರಿಲೋಕೀಂ ವರಮಿಚ್ಛತೀ ।
ಪರ್ಯಟಂತೀ ನ ಬರ್ಹಿಷ್ಮನ್ಪ್ರತ್ಯನಂದತ ಕಶ್ಚನ ॥ ೧೯ ॥

ದೌರ್ಭಾಗ್ಯೇನಾತ್ಮನೋ ಲೋಕೇ ವಿಶ್ರುತಾ ದುರ್ಭಗೇತಿ ಸಾ ।
ಯಾ ತುಷ್ಟಾ ರಾಜರ್ಷಯೇ ತು ವೃತಾದಾತ್ಪೂರವೇ ವರಮ್ ॥ ೨೦ ॥

ಕದಾಚಿದಟಮಾನಾ ಸಾ ಬ್ರಹ್ಮಲೋಕಾನ್ಮಹೀಂ ಗತಮ್ ।
ವವ್ರೇ ಬೃಹದ್ವ್ರತಂ ಮಾಂ ತು ಜಾನತೀ ಕಾಮಮೋಹಿತಾ ॥ ೨೧ ॥

ಮಯಿ ಸಂರಭ್ಯ ವಿಪುಲಮದಾಚ್ಛಾಪಂ ಸುದುಃಸಹಮ್ ।
ಸ್ಥಾತುಮರ್ಹಸಿ ನೈಕತ್ರ ಮದ್ಯಾಚ್ಞಾವಿಮುಖೋ ಮುನೇ ॥ ೨೨ ॥

ತತೋ ವಿಹತಸಂಕಲ್ಪಾ ಕನ್ಯಕಾ ಯವನೇಶ್ವರಮ್ ।
ಮಯೋಪದಿಷ್ಟಮಾಸಾದ್ಯ ವವ್ರೇ ನಾಮ್ನಾ ಭಯಂ ಪತಿಮ್ ॥ ೨೩ ॥

ಋಷಭಂ ಯವನಾನಾಂ ತ್ವಾಂ ವೃಣೇ ವೀರೇಪ್ಸಿತಂ ಪತಿಮ್ ।
ಸಂಕಲ್ಪಸ್ತ್ವಯಿ ಭೂತಾನಾಂ ಕೃತಃ ಕಿಲ ನ ರಿಷ್ಯತಿ ॥ ೨೪ ॥

ದ್ವಾವಿಮಾವನುಶೋಚಂತಿ ಬಾಲಾವಸದವಗ್ರಹೌ ।
ಯಲ್ಲೋಕಶಾಸ್ತ್ರೋಪನತಂ ನ ರಾತಿ ನ ತದಿಚ್ಛತಿ ॥ ೨೫ ॥

ಈ ಪುರಂಜನಪುರಿಯನ್ನು ಕಾವಲು ಕಾಯುತ್ತಿದ್ದ ಮಹಾಬಲಶಾಲಿ ಯಾದ ಸರ್ಪವು ನೂರು ವರ್ಷಗಳ ಕಾಲ ಒಬ್ಬಂಟಿಗನಾಗಿ ಆ ಏಳೂನೂರಇಪ್ಪತ್ತು ಗಂಧವ-ಗಂಧರ್ವಿಯರೊಡನೆ ಯುದ್ಧ ಮಾಡುತ್ತಲೇ ಇತ್ತು. ॥ ೧೬ ॥ ಅನೇಕ ವೀರರೊಂದಿಗೆ ಒಬ್ಬನೇ ಯುದ್ಧಮಾಡಿದ್ದರಿಂದ ತನ್ನ ಏಕಮಾತ್ರ ಬಂಧುವಾಗಿದ್ದ ಪ್ರಜಾಗರನು ಬಲಹೀನನಾದುದನ್ನು ನೋಡಿ ಪುರಂಜನರಾಜನಿಗೆ ತನ್ನ ರಾಷ್ಟ್ರ ಮತ್ತು ನಗರದಲ್ಲಿ ವಾಸಿಸುವ ಇತರ ಬಂಧುಗಳೊಡನೆ ಬಹಳ ಚಿಂತೆ ಇಟ್ಟುಕೊಂಡಿತು. ॥ ೧೭ ॥ ಅವನು ಇಷ್ಟು ದಿನಗಳವರೆಗೆ ಪಾಂಚಾಲದೇಶದ ಆ ನಗರದಲ್ಲಿ ತನ್ನ ದೂತರು ತಂದು ಕೊಡುತ್ತಿದ್ದ ಕಂದಾಯವನ್ನು ಪಡೆದು ವಿಷಯ ಭೋಗಗಳಲ್ಲಿ ಮುಳುಗಿದ್ದನು. ಸ್ತ್ರೀಯಳಿಗೆ ವಶೀಭೂತನಾದ್ದರಿಂದ ಮುಂದೆ ಅವಶ್ಯವಾಗಿ ಬಂದೊದಗುವ ಇಂತಹ ಭಯದ ಸುಳಿವೇ ಅವನಿಗೆ ಹತ್ತಲಿಲ್ಲ. ॥ ೧೮ ॥

ಬರ್ಹಿಷ್ಮಂತನೇ! ಅದೇ ದಿನಗಳಲ್ಲಿ ಕಾಲಪುರುಷನ ಕನ್ಯೆಯೊಬ್ಬಳು ತನಗಾಗಿ ವರನನ್ನು ಹುಡುಕುತ್ತಾ ಮೂರು ಲೋಕಗಳಲ್ಲಿಯೂ ಅಲೆಯುತ್ತಿದ್ದಳು. ಆದರೆ ಆಕೆಯನ್ನು ಯಾರೂ ಸ್ವೀಕರಿಸಲಿಲ್ಲ. ॥ ೧೯ ॥ ಆ ಜರಾ (ಮುಪ್ಪು) ಎಂಬ ಕಾಲಕನ್ಯೆಯು ಅತ್ಯಂತ ಭಾಗ್ಯಹೀನಳಾದ್ದರಿಂದ ಆಕೆಯನ್ನು ಜನರು ದುರ್ಭಗಾ ಎಂದೇ ಕರೆಯುತ್ತಿದ್ದರು. ಒಮ್ಮೆ ರಾಜರ್ಷಿ ಪುರುವು ತಂದೆಗೆ ತನ್ನ ಯೌವನವನ್ನು ಕೊಡುವುದಕ್ಕಾಗಿ ತನ್ನಿಚ್ಛೆಯಂತೆ ಅವಳನ್ನು ವರಿಸಿದ್ದನು. ಇದರಿಂದ ಪ್ರಸನ್ನಳಾಗಿ ಅವಳು ರಾಜನಿಗೆ ರಾಜ್ಯ ಪ್ರಾಪ್ತಿಯ ವರವನ್ನು ಕೊಟ್ಟಿದ್ದಳು. ॥ ೨೦ ॥ ಒಮ್ಮೆ ನಾನು ಬ್ರಹ್ಮಲೋಕದಿಂದ ಭೂಮಿಗೆ ಬರುತ್ತಿದ್ದಾಗ ಆ ಕನ್ಯೆಯು ಅಲ್ಲಲ್ಲಿ ಸುತ್ತಾಡುತ್ತಾ ನನ್ನನ್ನೂ ಸಂಧಿಸಿದ್ದಳು. ನಾನು ನೈಷ್ಠಿಕಬ್ರಹ್ಮಚಾರಿ ಎಂದು ತಿಳಿದಿದ್ದರೂ ಆಕೆಯು ಕಾಮಮೋಹಿತಳಾಗಿ ನನ್ನನ್ನು ವರಿಸಲು ಬಯಸಿದಳು. ॥ ೨೧ ॥ ನಾನು ಅವಳ ಬಯಕೆಯನ್ನು ತಿರಸ್ಕರಿಸಲು ಅವಳು ಅತ್ಯಂತ ಕುಪಿತಳಾಗಿ ನನ್ನನ್ನು – 'ಎಲೈ ಮುನಿಯೇ! ನನ್ನ ಬೇಡಿಕೆಯನ್ನು ತಿರಸ್ಕರಿಸಿದ್ದೀಯೆ. ಆದ್ದರಿಂದ ನೀನು ಒಂದೇ ಜಾಗದಲ್ಲಿ ಹೆಚ್ಚುಕಾಲ ನಿಲ್ಲದಿರುವಂತಾಗಲಿ' ಎಂದು ಸಹಿಸಲು ಕಷ್ಟವಾದ ಶಾಪವನ್ನು ಕೊಟ್ಟಳು. ॥ ೨೨ ॥

ಹೀಗೆ ನನ್ನಿಂದ ನಿರಾಶಳಾದ ಅವಳು ನನ್ನ ಸಲಹೆಯನ್ನು ಪಡೆದು ಯವನರಾಜನಾದ ಭಯ ಎಂಬುವನ ಬಳಿಗೆ ಹೋಗಿ ಅವನನ್ನು ಪತಿಯನ್ನಾಗಿ ವರಿಸಿಕೊಂಡಳು ಹಾಗೂ ಹೇಳಿದಳು – ॥ ೨೩ ॥ ಎಲೈ ವೀರವರನೇ! ನೀನು ಯವನರಲ್ಲಿ ಶ್ರೇಷ್ಠನು. ಇಂತಹ ನಿನ್ನನ್ನು ನಾನು ಪ್ರೇಮಿಸಿ ಪತಿಯನ್ನಾಗಿ ಪಡೆಯಲು ಬಯಸಿದ್ದೇನೆ. ನಿನ್ನ ಕುರಿತು ಜೀವಿಗಳು ಮಾಡಿದ ಸಂಕಲ್ಪವು ಎಂದಿಗೂ ವ್ಯರ್ಥವಾಗುವುದಿಲ್ಲ. ॥ ೨೪ ॥ ಯಾವ ಮನುಷ್ಯನು ಲೋಕದ ದೃಷ್ಟಿಯಿಂದ ಅಥವಾ ಶಾಸ್ತ್ರದೃಷ್ಟಿಯಿಂದ ದಾನಮಾಡಲು ಯೋಗ್ಯವಾದ ವಸ್ತುವನ್ನು ದಾನಮಾಡುವುದಿಲ್ಲವೋ, ಯಾರು ಶಾಸ್ತ್ರದೃಷ್ಟಿಯಿಂದ ಆ ದಾನವನ್ನು ತೆಗೆದು ಕೊಳ್ಳಲು ಯೋಗ್ಯನಾಗಿದ್ದರೂ ತೆಗೆದುಕೊಳ್ಳುವುದಿಲ್ಲವೋ, ಅವರಿಬ್ಬರೂ ದುರಾಗ್ರಹಿಗಳು ಮತ್ತು ಮೂಢರು. ಆದ್ದರಿಂದ ಶೋಚನೀಯರು. ॥ ೨೫ ॥

ಅಥೋ ಭಜಸ್ವ ಮಾಂ ಭದ್ರ ಭಜಂತೀಂ ಮೇ ದಯಾಂ ಕುರು।
ಏತಾವಾನ್ಪೌರುಷೋ ಧರ್ಮೋ ಯದಾರ್ತಾನನುಕಂಪತೇ ॥ ೨೬ ॥

ಮಂಗಳಾಂಗನೇ! ಈಗ ನಾನು ನಿನ್ನ ಸೇವೆಗಾಗಿ ಸಿದ್ಧಳಾಗಿ ಬಂದಿದ್ದೇನೆ. ನನ್ನನ್ನು ಸ್ವೀಕರಿಸಿ ಅನುಗ್ರಹಿಸು. ದೀನರ ಮೇಲೆ ದಯೆತೋರುವುದೇ ಮನುಷ್ಯರ ಶ್ರೇಷ್ಠ ಧರ್ಮವಾಗಿದೆ. ॥ ೨೬ ॥

ಕಾಲಕನ್ಯೋದಿತವಚೋ ನಿಶಮ್ಯ ಯವನೇಶ್ವರಃ।
ಚಿಕೀರ್ಷುರ್ದೇವಗುಹ್ಯಂ ಸ ಸಸ್ಮಿತಂ ತಾಮಭಾಷತ ॥ ೨೭ ॥

ಕಾಲಕನ್ಯೆಯ ಮಾತನ್ನು ಕೇಳಿ ಯವನರಾಜನು ದೈವಸಂಕಲ್ಪದಲ್ಲಿದ್ದ ಒಂದು ಗುಟ್ಟಾದ ಕಾರ್ಯವನ್ನು ಆಕೆಯಿಂದ ನೆರವೇರಿಸಲು ಇಚ್ಛಿಸುತ್ತಾ ನಸುನಗುತ್ತಾ ಆಕೆಗೆ ಹೀಗೆಂದನು – ॥ ೨೭ ॥

ಮಯಾ ನಿರೂಪಿತಸ್ತುಭ್ಯಂ ಪತಿರಾತ್ಮಸಮಾಧಿನಾ।
ನಾಭಿನಂದತಿ ಲೋಕೋಽಯಂ ತ್ವಾಮಭದ್ರಾಮಸಮ್ಮತಾಮ್ ॥ ೨೮ ॥

ತ್ವಮವ್ಯಕ್ತಗತಿರ್ಭುಂಕ್ಷ್ವ ಲೋಕಂ ಕರ್ಮವಿನಿರ್ಮಿತಮ್।
ಯಾಹಿ ಮೇ ಪೃತನಾಯುಕ್ತಾ ಪ್ರಜಾನಾಶಂ ಪ್ರಣೇಷ್ಯಸಿ ॥ ೨೯ ॥

ನಾನು ಯೋಗದೃಷ್ಟಿಯಿಂದ ನಿನಗೆ ಒಬ್ಬ ವರನನ್ನು ನಿಶ್ಚಯಿಸಿರುವೆನು. ನೀನು ಎಲ್ಲರಿಗೆ ಅನಿಷ್ಟವನ್ನು ಉಂಟುಮಾಡುವುದರಿಂದ ಯಾರಿಗೂ ಬೇಕೆನಿಸುವುದಿಲ್ಲ. ಅದಕ್ಕಾಗಿಯೇ ಯಾರೂ ನಿನ್ನನ್ನು ಸ್ವೀಕರಿಸುವುದಿಲ್ಲ. ಆದುದರಿಂದ ನೀನು ಕರ್ಮದಿಂದ ಉಂಟಾದ ಈ ಲೋಕವನ್ನು ಗುಪ್ತಳಾಗಿ ಬಲಾತ್ಕಾರದಿಂದ ಭೋಗಿಸು. ಜೊತೆಗೆ ನನ್ನ ಸೈನ್ಯವನ್ನೂ ಕರೆದುಕೊಂಡು ಹೋಗು. ಅದರ ಸಹಾಯದಿಂದ ನೀನು ಎಲ್ಲ ಪ್ರಜೆಗಳನ್ನು ನಾಶಮಾಡಲು ಸಮರ್ಥಳಾಗುವೆ. ನಿನ್ನನ್ನು ಯಾರೂ ಎದುರಿಸ ಲಾರರು. ॥ ೨೮-೨೯ ॥

ಪ್ರಜ್ವಾರೋಽಯಂ ಮಮ ಭ್ರಾತಾ ತ್ವಂ ಚ ಮೇ ಭಗಿನೀ ಭವ।
ಚರಾಮ್ಯುಭಾಭ್ಯಾಂ ಲೋಕೇಽಸ್ಮಿನ್ನವ್ಯಕ್ತೋ ಭೀಮಸೈನಿಕಃ ॥ ೩೦ ॥

ನೋಡು! ಈ 'ಪ್ರಜ್ವಾರ' ಎಂಬುವನು ನನ್ನ ಸೋದರನು. ನೀನು ನನ್ನ ಸೋದರಿಯಾಗು. ನಿಮ್ಮಿಬ್ಬರೊಡಗೂಡಿ ನಾನು ನನ್ನ ಅವ್ಯಕ್ತಗತಿಯಿಂದ ಭಯಂಕರವಾದ ಸೈನ್ಯವನ್ನು ಜೊತೆಯಲ್ಲಿ ಕರೆದುಕೊಂಡು ಈ ಲೋಕದಲ್ಲೆಲ್ಲ ಸಂಚರಿಸುವೆನು. ॥ ೩೦ ॥

*ಇಪ್ಪತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೨೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪುರಂಜನೋಪಾಖ್ಯಾನೇ ಸಪ್ತವಿಂಶೋಽಧ್ಯಾಯಃ ॥ ೨೭ ॥

# ಇಪ್ಪತ್ತೆಂಟನೆಯ ಅಧ್ಯಾಯ

## ಪುರಂಜನನು ಜನ್ಮಾಂತರದಲ್ಲಿ ಹೆಂಗಸಾಗಿ ಹುಟ್ಟಿದುದು, ಅವಿಜ್ಞಾತನ ಉಪದೇಶದಿಂದ ಮುಕ್ತನಾದುದು

2০৭

*ನಾರದ ಉವಾಚ*

ಸೈನಿಕಾ ಭಯನಾಮ್ನೋ ಏ ಬರ್ಹಿಷ್ಮಂದಿಷ್ಟಕಾರಿಣಃ।
ಪ್ರಜ್ವಾರಕಾಲಕನ್ಯಾಭ್ಯಾಂ ವಿಚೇರುರವನೀಮಿಮಾಮ್ ॥ ೧ ॥

ಶ್ರೀನಾರದಮಹರ್ಷಿಗಳು ಹೇಳುತ್ತಾರೆ – ಬರ್ಹಿಷ್ಮಂತನೇ! ಕೇಳು. ಅನಂತರ ಆ ಭಯನೆಂಬ ಯವನರಾಜನ ಸೈನಿಕರು ಪ್ರಜ್ವಾರ ಮತ್ತು ಕಾಲಕನ್ಯೆ ಜರೆಯೊಡನೆ ಈ ಭೂಮಿಯಲ್ಲಿ ಎಲ್ಲೆಲ್ಲೂ ಸಂಚರಿಸತೊಡಗಿದರು. ॥ ೧ ॥

ತ ಏಕದಾ ತು ರಭಸಾ ಪುರಂಜನಪುರೀಂ ನೃಪ।
ರುರುಧುರ್ಭೌಮಭೋಗಾಢ್ಯಾಂ ಜರತ್ಪನ್ನಗಪಾಲಿತಾಮ್ ॥ ೨ ॥

ಒಮ್ಮೆ ಅವರು ಮುದಿಸರ್ಪದಿಂದ ಸಂರಕ್ಷಿತವಾದ ಎಲ್ಲ ರೀತಿಯ ಸುಖ-ಸಾಮಗ್ರಿಗಳಿಂದಲೂ ಸಂಪನ್ನವಾಗಿದ್ದ ಪುರಂಜನಪುರಿಗೆ ರಭಸದಿಂದ ಧಾಳಿಯಿಟ್ಟರು. ॥ ೨ ॥

ಕಾಲಕನ್ಯಾಪಿ ಬುಭುಜೇ ಪುರಂಜನಪುರಂ ಬಲಾತ್।
ಯಯಾಭಿಭೂತಃ ಪುರುಷಃ ಸದ್ಯೋ ನಿಃಸಾರತಾಮಿಯಾತ್ ॥ ೩ ॥

ಆಗ ಕಾಲಕನ್ಯೆಯು ಆ ಪುರಿಯ ಪ್ರಜೆಗಳನ್ನು ಬಲಾತ್ಕಾರವಾಗಿ ಭೋಗಿಸತೊಡಗಿದಳು., ಆಕೆಯ ಹಿಡಿತಕ್ಕೆ ಸಿಕ್ಕಿದ ಮನುಷ್ಯರು ಬೇಗನೇ ಸತ್ವಹೀನರಾಗಿ ಬಿಡುವರು. ॥ ೩ ॥ ಅದೇ ಸಮಯದಲ್ಲಿ ಆ ಯವನರಾಜನೂ ಕಾಲಕನ್ಯೆಯಿಂದ ಭೋಗಿಸಲ್ಪಡುತ್ತಿದ್ದ ಆ ಪುರದೊಳಗೆ ನಾಲ್ಕೂ

ತಯೋಪಭುಜ್ಯಮಾನಾಂ ವೈ ಯವನಾಃ ಸರ್ವತೋದಿಶಮ್ ।
ದ್ವಾರ್ಭಿಃ ಪ್ರವಿಶ್ಯ ಸುಭೃಶಂ ಪ್ರಾರ್ದಯನ್ಸಕಲಾಂ ಪುರೀಮ್ ॥ ೪ ॥

ತಸ್ಯಾಂ ಪ್ರಪೀಡ್ಯಮಾನಾಯಾಮಭಿಮಾನೀ ಪುರಂಜನಃ ।
ಅವಾಪೋರುವಿಧಾಂಸ್ತಾಪಾನ್ಕುಟುಂಬೀ ಮಮತಾಕುಲಃ ॥ ೫ ॥

ಕನ್ಯೋಪಗೂಢೋ ನಷ್ಟಶ್ರೀಃ ಕೃಪಣೋ ವಿಷಯಾತ್ಮಕಃ ।
ನಷ್ಟಪ್ರಜ್ಞೋ ಹೃತೈಶ್ವರ್ಯೋ ಗಂಧರ್ವಯವನೈರ್ಬಲಾತ್ ॥ ೬ ॥

ವಿಶೀರ್ಣಾಂ ಸ್ವಪುರೀಂ ವೀಕ್ಷ್ಯ ಪ್ರತಿಕೂಲಾನನಾದೃತಾನ್ ।
ಪುತ್ರಾನ್ಪೌತ್ರಾನುಗಾಮಾತ್ಯಾಂಜಾಯಾಂ ಚ ಗತಸೌಹೃದಾಮ್ ॥ ೭ ॥

ಆತ್ಮಾನಂ ಕನ್ಯಯಾ ಗ್ರಸ್ತಂ ಪಂಚಾಲಾನರಿದೂಷಿತಾನ್ ।
ದುರಂತಚಿಂತಾಮಾಪನ್ನೋ ನ ಲೇಭೇ ತತ್ಪ್ರತಿಕ್ರಿಯಾಮ್ ॥ ೮ ॥

ಕಾಮಾನಭಿಲಷಂದೀನೋ ಯಾತಯಾಮಾಂಶ್ಚ ಕನ್ಯಯಾ ।
ವಿಗತಾತ್ಮಗತಿಸ್ನೇಹಃ ಪುತ್ರದಾರಾಂಶ್ಚ ಲಾಲಯನ್ ॥ ೯ ॥

ಗಂಧರ್ವಯವನಾಕ್ರಾಂತಾಂ ಕಾಲಕನ್ಯೋಪಮರ್ದಿತಾಮ್ ।
ಹಾತುಂ ಪ್ರಚಕ್ರಮೇ ರಾಜಾ ತಾಂ ಪುರೀಮನಿಕಾಮತಃ ॥ ೧೦ ॥

ಭಯನಾಮ್ನೋಽಗ್ರಜೋ ಭ್ರಾತಾ ಪ್ರಜ್ವಾರಃ ಪ್ರತ್ಯುಪಸ್ಥಿತಃ ।
ದದಾಹ ತಾಂ ಪುರೀಂ ಕೃತ್ಸ್ನಾಂ ಭ್ರಾತುಃ ಪ್ರಿಯಚಿಕೀರ್ಷಯಾ ॥ ೧೧ ॥

ತಸ್ಯಾಂ ಸಂದಹ್ಯಮಾನಾಯಾಂ ಸಪೌರಃ ಸಪರಿಚ್ಛದಃ ।
ಕೌಟುಂಬಿಕಃ ಕುಟುಂಬಿನ್ಯಾ ಉಪಾತಪ್ಯತ ಸಾನ್ವಯಃ ॥ ೧೨ ॥

ಯವನೋಪರುದ್ಧಾಯತನೋ ಗ್ರಸ್ತಾಯಾಂ ಕಾಲಕನ್ಯಯಾ ।
ಪುರ್ಯಾಂ ಪ್ರಜ್ವಾರಸಂಸೃಷ್ಟಃ ಪುರಪಾಲೋಽನ್ವತಪ್ಯತ ॥ ೧೩ ॥

ನ ಶೇಕೇ ಸೋಽವಿತುಂ ತತ್ರ ಪುರುಕೃಚ್ಛ್ರೋರುವೇಪಥುಃ ।
ಗಂತುಮೈಚ್ಛತ್ತತೋ ವೃಕ್ಷಕೋಟರಾದಿವ ಸಾನಲಾತ್ ॥ ೧೪ ॥

ಕಡೆಗಳಿಂದಲೂ ಬೇರೆ-ಬೇರೆ ದ್ವಾರಗಳಿಂದ ನುಗ್ಗಿ ಅದನ್ನು ನಾಶಪಡಿಸತೊಡಗಿದನು. ॥ ೪ ॥ ಹೀಗೆ ತನ್ನ ಪುರಿಯು ಪೀಡಿತವಾಗುತ್ತಿದ್ದಾಗ 'ತಾನು ಆ ಪುರಕ್ಕೆ ಒಡೆಯನು, ಅದು ತನಗೆ ಸೇರಿದ್ದು' ಎಂಬ ಅಭಿಮಾನದಿಂದ ಕೂಡಿ ಮಮತೆಗೆ ವಶನಾಗಿದ್ದ ದೊಡ್ಡ ಕುಟುಂಬಿಯಾದ ಪುರಂಜನರಾಜನನ್ನೂ ನಾನಾರೀತಿಯ ಸಂಕಷ್ಟಗಳು ಪೀಡಿಸತೊಡಗಿದವು. ॥ ೫ ॥

ಕಾಲಕನ್ಯೆಯ ಆಲಿಂಗನದಿಂದ ಅವನ ಎಲ್ಲ ಸಂಪತ್ತು ನಾಶವಾಯಿತು. ಅತ್ಯಂತ ವಿಷಯಾಸಕ್ತನಾದ್ದರಿಂದ ಅವನು ದೀನನಾಗಿ ವಿವೇಕಶಕ್ತಿಯನ್ನು ಕಳಕೊಂಡನು. ಗಂಧರ್ವರೂ ಮತ್ತು ಯವನರೂ ಬಲಾತ್ಕಾರವಾಗಿ ಆತನ ಸಂಪತ್ತೆಲ್ಲವನ್ನು ಲೂಟಿ ಮಾಡಿದರು. ॥ ೬ ॥ 'ನಗರವೆಲ್ಲ ಧ್ವಂಸವಾಗಿಬಿಟ್ಟಿದೆ. ಮಕ್ಕಳು-ಮೊಮ್ಮಕ್ಕಳು, ಸೇವಕರು, ಮಂತ್ರಿವರ್ಗದವರೆಲ್ಲರೂ ತನಗೆ ಪ್ರತಿಕೂಲರಾಗಿ ತನ್ನನ್ನು ತಿರಸ್ಕರಿಸುತ್ತಿದ್ದಾರೆ. ಹೆಂಡತಿಯೂ ಸ್ನೇಹಶೂನ್ಯಳಾಗಿಬಿಟ್ಟಿದ್ದಾಳೆ. ಕಾಲಕನ್ಯೆಯು ದೇಹವನ್ನು ವಶಪಡಿಸಿಕೊಂಡಿರುವಳು. ಪಾಂಚಾಲದೇಶವು ಶತ್ರುಗಳ ಕೈವಶವಾಗಿ ವಿನಾಶ ಹೊಂದಿದೆ' ಎಂಬುದನ್ನು ಗಮನಿಸಿ ಆತನು ಚಿಂತಾಸಾಗರದಲ್ಲಿ ಮುಳುಗಿಹೋದನು. ಈ ವಿಪತ್ತಿನಿಂದ ಪಾರಾಗುವ ಯಾವ ಉಪಾಯವೂ ಆತನಿಗೆ ತೋಚದೆ ಹೋಯಿತು. ॥ ೭-೮ ॥ ಕಾಲಕನ್ಯೆಯು ಸಾರಹೀನವನ್ನಾಗಿ ಮಾಡಿಬಿಟ್ಟಿದ್ದ ಆ ಭೋಗಗಳಿಗೆ ಆಸೆಪಡುತ್ತಾ ಅವನು ದೀನನಾಗಿದ್ದನು. ತನ್ನ ಪರಲೋಕಗತಿಯನ್ನೂ ಪರಮಾತ್ಮಸ್ನೇಹವನ್ನೂ ಮರೆತು ಅವನ ಚಿತ್ತವು ಕೇವಲ ಹೆಂಡತಿ-ಮಕ್ಕಳನ್ನು ಸಾಕುವುದರಲ್ಲೇ ತೊಡಗಿಹೋಗಿತ್ತು. ॥ ೯ ॥ ಇಂತಹ ಸ್ಥಿತಿಯಲ್ಲಿ ಅವರಿಂದ ಅಗಲಿರಲು ಇಷ್ಟವಿಲ್ಲದಿದ್ದರೂ, ಅವನು ಆ ನಗರವನ್ನು ಬಿಟ್ಟುಹೋಗಲೇಬೇಕಾಯಿತು. ಏಕೆಂದರೆ, ಅದನ್ನು ಗಂಧರ್ವರೂ, ಯವನರೂ ಮುತ್ತಿ ಲೂಟಿಮಾಡಿಬಿಟ್ಟಿದ್ದರು ಮತ್ತು ಕಾಲಕನ್ಯೆಯು ತುಳಿದುಹಾಕಿಬಿಟ್ಟಿದ್ದಳು. ॥ ೧೦ ॥ ಇಷ್ಟರಲ್ಲೇ ಯವನರಾಜನ ಅಣ್ಣನಾದ ಪ್ರಜ್ವಾರನು ತಮ್ಮನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ಆ ಇಡೀ ನಗರಿಗೆ ಬೆಂಕಿಯನ್ನು ಹಚ್ಚಿಬಿಟ್ಟನು. ॥ ೧೧ ॥

ಆ ನಗರಿಯು ಹೊತ್ತಿ ಉರಿಯುತ್ತಿದ್ದಾಗ ಪುರವಾಸಿಗಳೂ, ಸೇವಕವೃಂದಕ್ಕೂ, ಸಂತಾನಸಮೂಹಕ್ಕೂ, ಕುಟುಂಬದ ಯಜಮಾನಿಯಿಂದೊಡಗೂಡಿದ ಕುಟುಂಬವತ್ಸಲ ಪುರಂಜನನಿಗೂ ಅತೀವ ದುಃಖವಾಯಿತು. ॥ ೧೨ ॥ ನಗರವು ಕಾಲಕನ್ಯೆಯ ಕೈವಶವಾದುದನ್ನು ಕಂಡು ನಗರವನ್ನು ರಕ್ಷಿಸುತ್ತಿದ್ದ ಸರ್ಪಕ್ಕೂ ಬಹಳ ಪೀಡೆ ಉಂಟಾಯಿತು. ಏಕೆಂದರೆ, ಯವನರು ಅವನ ವಾಸಸ್ಥಾನದ ಮೇಲೂ ಅಧಿಕಾರ ಪಡೆದುಕೊಂಡಿದ್ದರು ಮತ್ತು ಪ್ರಜ್ವಾರನು ಅದರ ಮೇಲೂ ಆಕ್ರಮಣ ನಡೆಸಿದ್ದನು. ॥ ೧೩ ॥ ಆ ನಗರವನ್ನು ರಕ್ಷಿಸುವ ಸಾಮರ್ಥ್ಯವು ತನಗೆ ಇಲ್ಲದೇ ಹೋಗಲಾಗಿ ಆ ಮಹಾಸರ್ಪವು – ಉರಿಯುತ್ತಿರುವ ಮರದ ಪೊಟರೆಯಲ್ಲಿರುವ ಸರ್ಪವು ಅಲ್ಲಿಂದ ಹೊರಟುಹೋಗುವಂತೆ – ಅತಿ ಕಷ್ಟದಿಂದ ನಡುಗುತ್ತಾ ಅಲ್ಲಿಂದ ಓಡಿಹೋಗಲು ಬಯಸಿತು. ॥ ೧೪ ॥ ಅದರ ಅಂಗಾಂಗಗಳು ಶಿಥಿಲವಾಗಿ ಹೋಗಿದ್ದವು. ಗಂಧರ್ವರು

ಶಿಥಿಲಾವಯವ್ಯೋ ಯರ್ಹಿ ಗಂಧರ್ವೈರ್ಹೃತಪೌರುಷಃ ।
ಯವನೈರರಿಭೀ ರಾಜನ್ನುಪರುದ್ಧೋ ರುರೋದ ಹ ॥ ೧೫ ॥

ಆದರ ಎಲ್ಲ ಶಕ್ತಿಯನ್ನು ನಾಶಪಡಿಸಿಬಿಟ್ಟಿದ್ದರು. ಆದುದರಿಂದ ಯವನ ಶತ್ರುಗಳು ತಡೆದಾಗ ಅದು ದುಃಖದಿಂದ ಗೋಳಾಡ ತೊಡಗಿತು. ॥ ೧೫ ॥

ದುಹಿತೄಃ ಪುತ್ರಪೌತ್ರಾಂಶ್ಚ ಜಾಮಿಜಾಮಾತೃಪಾರ್ಷದಾನ್ ।
ಸ್ವತ್ವಾವಶಿಷ್ಟಂ ಯತ್ಕಿಂಚಿದ್ಗೃಹಕೋಶಪರಿಚ್ಛದಮ್ ॥ ೧೬ ॥

ಅಹಂ ಮಮೇತಿ ಸ್ವೀಕೃತ್ಯ ಗೃಹೇಷು ಕುಮತಿರ್ಗೃಹೀ ।
ದಧ್ಯೌ ಪ್ರಮದಯಾ ದೀನೋ ವಿಪ್ರಯೋಗ ಉಪಸ್ಥಿತೇ ॥ ೧೭ ॥

ಮನೆ, ಒಡಲು ಮೊದಲಾದುವುಗಳಲ್ಲಿ 'ನಾನು-ನನ್ನದು' ಎಂಬ ಭಾವವನ್ನು ಇಟ್ಟುಕೊಂಡಿದ್ದರಿಂದ ಪುರಂಜನನು ಬುದ್ಧಿ ಹೀನನಾಗಿಬಿಟ್ಟಿದ್ದನು. ಪತ್ನಿಯ ಪ್ರೇಮಪಾಶದಲ್ಲಿ ಸಿಲುಕಿ ಅವನು ಅತ್ಯಂತ ದೀನನಾಗಿದ್ದನು. ಇವೆಲ್ಲವುಗಳನ್ನು ಅಗಲಿ ಹೋಗುವ ಕಾಲವು ಬಂದಾಗ ಅವನು ತನ್ನ ಮಕ್ಕಳು, ಮೊಮ್ಮಕ್ಕಳು, ಸೊಸೆಯರು, ಅಳಿಯಂದಿರು, ಸೇವಕರು, ಮನೆ, ಭಂಡಾರ, ಮತ್ತು ಇತರ ಪದಾರ್ಥಗಳಲ್ಲಿ ಆತನಿಗೆ ಮಮತೆಯು ಇನ್ನೂ ಉಳಿದು ಕೊಂಡಿತ್ತು (ಅವುಗಳ ಭೋಗವಾದರೋ ಎಂದೋ ಬಿಟ್ಟುಹೋಗಿತ್ತು). ಅವರೆಲ್ಲರಿಗಾಗಿ ಹೀಗೆ ಚಿಂತಿಸತೊಡಗಿದನು. ॥ ೧೬-೧೭ ॥

ಲೋಕಾಂತರಂ ಗತವತಿ ಮಯ್ಯನಾಥಾ ಕುಟುಂಬಿನೀ ।
ವರ್ತಿಷ್ಯತೇ ಕಥಂ ತ್ವೇಷಾ ಬಾಲಕಾನನುಶೋಚತೀ ॥ ೧೮ ॥

ನ ಮಯ್ಯನಾಶಿತೇ ಭುಂಕ್ತೇನಾಸ್ನಾತೇ ಸ್ನಾತಿ ಮತ್ಪರಾ ।
ಮಯಿ ರುಷ್ಟೇ ಸುಸಂತ್ರಸ್ತಾ ಭರ್ತ್ಸಿತೇ ಯತವಾಗ್ಭಯಾತ್ ॥ ೧೯ ॥

ಪ್ರಬೋಧಯತಿ ಮಾವಿಜ್ಞಂ ವ್ಯುಷಿತೇ ಶೋಕಕರ್ಶಿತಾ ।
ವರ್ತ್ಮೈತದ್ಗೃಹಮೇಧೀಯಂ ವೀರಸೂರಪಿ ನೇಷ್ಯತಿ ॥ ೨೦ ॥

ಕಥಂ ನು ದಾರಕಾ ದೀನಾ ದಾರಕೀರ್ವಾಪರಾಯಣಾಃ ।
ವರ್ತಿಷ್ಯಂತೇ ಮಯಿ ಗತೇ ಭಿನ್ನನಾವ ಇವೋದಧೌ ॥ ೨೧ ॥

ಅಯ್ಯೋ! ನಾನು ಪರಲೋಕಕ್ಕೆ ಹೋದ ಬಳಿಕ ದೊಡ್ಡ ಕುಟುಂಬಕ್ಕೆ ಒಡತಿಯಾದ ನನ್ನ ಆ ಹೆಂಡತಿಯು ಅಸಹಾಯಕಳಾಗಿ ಹೇಗೆ ತಾನೇ ತನ್ನನ್ನು ನಿರ್ವಹಿಸಿಕೊಳ್ಳಬಲ್ಲಳು ? ಈ ಮಕ್ಕಳು ಮರಿಮಕ್ಕಳನ್ನು ಕುರಿತು ಚಿಂತೆಯೇ ಈಕೆಯನ್ನು ತಿಂದುಬಿಡುವುದಲ್ಲ! ॥ ೧೮ ॥ ಈಕೆಗೆ ನನ್ನ ಮೇಲೆ ಅದೆಷ್ಟು ಪ್ರೀತಿ! ನಾನು ಊಟಮಾಡಿದ ಹೊರತು ತಾನು ಊಟ ಮಾಡುತ್ತಿರಲಿಲ್ಲ, ನಾನು ಸ್ನಾನ ಮಾಡಿದ ಹೊರತು ಸ್ನಾನಮಾಡುತ್ತಿರಲಿಲ್ಲ, ಸದಾ ನನ್ನ ಸೇವೆಯಲ್ಲೇ ಆಸಕ್ತಳಾಗಿರುತ್ತಿದ್ದಳು. ನಾನೇನಾದರೂ ಮುನಿದರೆ ಭಯದಿಂದ ನಡುಗುತ್ತಿದ್ದಳು. ನಾನು ಗದರಿಸಿದರೆ ಹೆದರಿಕೆಯಿಂದ ಬಾಯಿಮುಚ್ಚಿಕೊಂಡು ಬಿಡುತ್ತಿದ್ದಳು. ॥ ೧೯ ॥ ನನ್ನಿಂದ ಏನಾದರೂ ತಪ್ಪುಗಳಾದರೆ ಎಚ್ಚರಿಕೆ ನೀಡುತ್ತಿದ್ದಳು. ಈಕೆಗೆ ನನ್ನ ಮೇಲೆ ಎಷ್ಟು ಪ್ರೀತಿ ಇತ್ತೆಂದರೆ, ನಾನೇನಾದರೂ ಪರದೇಶಕ್ಕೆ ಹೋದರೆ ಆಗ ಈಕೆಯು ಅಗಲಿಕೆಯ ದುಃಖದಿಂದ ಒಣಗಿ ಹೋಗುತ್ತಿದ್ದಳು. ಈಕೆಯು ವೀರಮಾತೆಯೇನೋ ಹೌದು. ಆದರೂ ನನ್ನ ಬಳಿಕ ಈ ಗೃಹಸ್ಥಾಶ್ರಮದ ವ್ಯವಹಾರವನ್ನು ಹೇಗೆ ನಿಭಾಯಿಸಬಲ್ಲಳು ? ॥ ೨೦ ॥ ನನ್ನನ್ನೇ ಏಕಮಾತ್ರ ಆಧಾರವನ್ನಾಗಿ ಹೊಂದಿ ಇಲ್ಲಿರುವ ನನ್ನ ಪುತ್ರ-ಪುತ್ರಿಯರು ನಾನು ಹೊರಟುಹೋದ ಬಳಿಕ ಹೇಗೆ ತಾನೇ ಜೀವನವನ್ನು ಧರಿಸಿಯಾರು ? ಸಮುದ್ರಮಧ್ಯದಲ್ಲಿ ಹಡಗು ಒಡೆದುಹೋಗಲಾಗಿ ಕಳವಳಪಡುವ ಪ್ರಯಾಣಿಕರಂತೆ ಒದ್ದಾಡುವರಲ್ಲ! ಮುಂತಾಗಿ ಪುರಂಜನನು ಚಿಂತಿಸತೊಡಗಿದನು. ॥ ೨೧ ॥

ಏವಂ ಕೃಪಣಯಾ ಬುದ್ಧ್ಯಾ ಶೋಚಂತಮತದರ್ಹಣಮ್ ।
ಗ್ರಹೀತುಂ ಕೃತಧೀರೇನಂ ಭಯನಾಮಾಭ್ಯಪದ್ಯತ ॥ ೨೨ ॥

ಜ್ಞಾನದೃಷ್ಟಿಯಿಂದ ಹೀಗೆಲ್ಲ ಶೋಕಪಡುವುದು ಅನುಚಿತವಾಗಿದ್ದರೂ, ಪುರಂಜನನು ಅಜ್ಞಾನಕ್ಕೆ ಒಳಪಟ್ಟು ಹೀಗೆ ದೀನ ಬುದ್ಧಿಯಿಂದ ತನ್ನ ಹೆಂಡತಿ-ಮಕ್ಕಳಿಗಾಗಿ ದುಃಖದಿಂದ ಕಳವಳಪಡುತ್ತಿದ್ದನು. ಆಗಲೇ ಆ ಬಡಪಾಯಿಯನ್ನು ಹಿಡಿಯುವುದಕ್ಕಾಗಿ ಭಯನೆಂಬ ಯವನರಾಜನು ಅಲ್ಲಿಗೆ ಬಂದನು. ॥ ೨೨ ॥

ಪಶುವದ್ಯವನೈರೇಷ ನೀಯಮಾನಃ ಸ್ವಕಂ ಕ್ಷಯಮ್ ।
ಅನ್ವದ್ರವನ್ನನುಪಥಾಃ ಶೋಚಂತೋ ಭೃಶಮಾತುರಾಃ ॥ ೨೩ ॥

ಯವನರು ಪಶುವನ್ನು ಎಳೆದುಕೊಂಡು ಹೋಗುವಂತೆ ರಾಜನನ್ನು ಕಟ್ಟಿಕೊಂಡು ತಮ್ಮ ಸ್ಥಾನಕ್ಕೆ ಸೆಳೆದೊಯ್ಯತೊಡಗಿದರು. ಆಗ ಆತನ ಅನುಚರರೂ ಕಡುಶೋಕದಿಂದ ಪೀಡಿತರಾಗಿ ದುಗುಡದಿಂದ ಆತನನ್ನು ಹಿಂಬಾಲಿಸಿದರು. ॥ ೨೩ ॥

ಪುರೀಂ ವಿಹಾಯೋಪಗತ ಉಪರುದ್ಧೋ ಭುಜಂಗಮಃ ।
ಯದಾ ತಮೇವಾನು ಪುರೀ ವಿಶೀರ್ಣಾ ಪ್ರಕೃತಿಂ ಗತಾ ॥ ೨೪ ॥

ವಿಕೃಷ್ಯಮಾಣಃ ಪ್ರಸಭಂ ಯವನೇನ ಬಲೀಯಸಾ ।
ನಾವಿಂದತ್ತಮಸಾಽಽವಿಷ್ಟಃ ಸಖಾಯಂ ಸುಹೃದಂ ಪುರಃ ॥ ೨೫ ॥

ತಂ ಯಜ್ಞಪಶವೋಽನೇನ ಸಂಜ್ಞಪ್ತಾ ಯೇಽದಯಾಲುನಾ ।
ಕುಠಾರೈಶ್ಚಿಚ್ಛಿದುಃ ಕ್ರುದ್ಧಾಃ ಸ್ಮರಂತೋಽಮೀವಮಸ್ಯ ತತ್ ॥ ೨೬ ॥

ಅನಂತಪಾರೇ ತಮಸಿ ಮಗ್ನೋ ನಷ್ಟಸ್ಮೃತಿಃ ಸಮಾಃ ।
ಶಾಶ್ವತೀರನುಭೂಯಾರ್ತಿಂ ಪ್ರಮದಾಸಂಗ ದೂಷಿತಃ ॥ ೨೭ ॥

ತಾಮೇವ ಮನಸಾ ಗೃಹ್ಣನ್ಬಭೂವ ಪ್ರಮದೋತ್ತಮಾ ।
ಅನಂತರಂ ವಿದರ್ಭಸ್ಯ ರಾಜಸಿಂಹಸ್ಯ ವೇಶ್ಮನಿ ॥ ೨೮ ॥

ಉಪಯೇಮೇ ವೀರ್ಯಪಣಾಂ ವೈದರ್ಭೀಂ ಮಲಯಧ್ವಜಃ ।
ಯುಧಿ ನಿರ್ಜಿತ್ಯ ರಾಜನ್ಯಾನ್ಪಾಂಡ್ಯಃ ಪರಪುರಂಜಯಃ ॥ ೨೯ ॥

ತಸ್ಯಾಂ ಸ ಜನಯಾಂಚಕ್ರ ಆತ್ಮಜಾಮಸಿತೇಕ್ಷಣಾಮ್ ।
ಯವೀಯಸಃ ಸಪ್ತ ಸುತಾನ್ ಸಪ್ತ ದ್ರವಿಡಭೂಭೃತಃ ॥ ೩೦ ॥

ಏಕೈಕಸ್ಯಾಭವತ್ತೇಷಾಂ ರಾಜನ್ನರ್ಬುದಮರ್ಬುದಮ್ ।
ಭೋಕ್ಷ್ಯತೇ ಯದ್ವಂಶಧರೈರ್ಮಹೀ ಮನ್ವಂತರಂ ಪರಮ್ ॥ ೩೧ ॥

ಅಗಸ್ತ್ಯಃ ಪ್ರಾಗ್ದುಹಿತರಮುಪಯೇಮೇ ಧೃತವ್ರತಾಮ್ ।
ಯಸ್ಯಾಂ ದೃಢಚ್ಯುತೋ ಜಾತ ಇಧ್ಮವಾಹಾತ್ಮಜೋ ಮುನಿಃ ॥ ೩೨ ॥

ವಿಭಜ್ಯ ತನಯೇಭ್ಯಃ ಕ್ಷ್ಮಾಂ ರಾಜರ್ಷಿರ್ಮಲಯಧ್ವಜಃ ।
ಆರಿರಾಧಯಿಷುಃ ಕೃಷ್ಣಂ ಸ ಜಗಾಮ ಕುಲಾಚಲಮ್ ॥ ೩೩ ॥

ಹಿತ್ವಾ ಗೃಹಾನ್ಸುತಾನ್ಭೋಗಾನ್ವೈದರ್ಭೀ ಮದಿರೇಕ್ಷಣಾ ।
ಅನ್ವಧಾವತ ಪಾಂಡ್ಯೇಶಂ ಜ್ಯೋತ್ಸ್ನೇವ ರಜನೀಕರಮ್ ॥ ೩೪ ॥

ಯವನರಿಂದ ತಡೆಯಲ್ಪಟ್ಟ ಸರ್ಪವೂ ಆಗ ಆ ಪುರಿಯನ್ನು ಬಿಟ್ಟು ಇವರೊಂದಿಗೆ ಹೊರಟಿತು. ಅದು ಹೊರಟುಹೋಗುತ್ತಲೇ ಇಡೀ ನಗರವು ಛಿನ್ನ- ಭಿನ್ನವಾಗಿ ತನ್ನ ಕಾರಣದಲ್ಲಿ ಲೀನವಾಗಿ ಹೋಯಿತು. ॥ ೨೪ ॥ ಹೀಗೆ ಮಹಾಬಲಶಾಲಿಯಾದ ಯವನ ರಾಜನು ಬಲಾತ್ಕಾರದಿಂದ ಸೆಳೆದೊಯ್ಯುತ್ತಿದ್ದರೂ ಅಜ್ಞಾನದಲ್ಲಿ ಮುಳುಗಿಹೋಗಿದ್ದ ಪುರಂಜನನು ತನ್ನ ಹಿತೈಷಿಯೂ, ಹಳೆಯಮಿತ್ರನೂ ಆದ ಅವಿಜ್ಞಾತನನ್ನು ಸ್ಮರಿಸಲಿಲ್ಲ. ॥ ೨೫ ॥ ಹಿಂದೆ ಪುರಂಜನನು ಯಜ್ಞದಲ್ಲಿ ಬಲಿ ಕೊಟ್ಟಿದ್ದ ಪಶುಗಳೇ ಈಗ ಅವನು ಕೊಟ್ಟಿದ್ದ ಪೀಡೆಯನ್ನು ನೆನೆಸಿಕೊಂಡು ಕ್ರೋಧದಿಂದ ಅವನನ್ನು ಕೊಡಲಿಗಳಿಂದ ಕತ್ತರಿಸತೊಡಗಿದವು. ॥ ೨೬ ॥ ಅನೇಕ ವರ್ಷಗಳ ಕಾಲ ಅವಿವೇಕದ ಸ್ಥಿತಿಯಲ್ಲೇ ಬಿದ್ದು ಆತನು ನಿರಂತರ ವಾಗಿ ಕಷ್ಟಗಳನ್ನು ಅನುಭವಿಸುತ್ತಿದ್ದನು. ಸ್ತ್ರೀಯಲ್ಲಿ ಇಟ್ಟಿದ್ದ ಆಸಕ್ತಿ ಯಿಂದಲೇ ಅವನಿಗೆ ಇಂತಹ ದುರ್ಗತಿಯು ಉಂಟಾಗಿತ್ತು. ॥ ೨೭ ॥ ತನ್ನ ಕೊನೆಯ ಕಾಲದಲ್ಲಿಯೂ ಸ್ತ್ರೀಚಿಂತನೆಯನ್ನೇ ಮಾಡುತ್ತಿದ್ದುದರಿಂದ ಪುರಂಜನನು ಮುಂದಿನ ಜನ್ಮದಲ್ಲಿ ನೃಪ ಶ್ರೇಷ್ಠನಾದ ವಿದರ್ಭರಾಜನ ಮನೆಯಲ್ಲಿ ಓರ್ವ ಸುಂದರಿಯಾಗಿ ಹುಟ್ಟಿದನು. ॥ ೨೮ ॥ ಆ ವಿದರ್ಭಪುತ್ರಿಯ ವಿವಾಹಕಾಲವು ಒದಗಿದಾಗ ತಂದೆ ವಿದರ್ಭಭೂಪತಿಯು – 'ಸರ್ವಶ್ರೇಷ್ಠನಾದ ವೀರ ಪರಾಕ್ರಮಿಯು ಮಾತ್ರವೇ ನನ್ನ ಈ ಪುತ್ರಿಯ ಕೈಹಿಡಿಯ ಬಲ್ಲನು' ಎಂದು ಘೋಷಿಸಿದನು. ಆಗ ಶತ್ರು ಪುರಗಳನ್ನು ಗೆಲ್ಲು ವುದರಲ್ಲಿ ಸಮರ್ಥನಾದ ಪಾಂಡ್ಯನರೇಶ ಮಲಯಧ್ವಜನು ಯುದ್ಧಭೂಮಿಯಲ್ಲಿ ಎಲ್ಲ ರಾಜರನ್ನೂ ಸೋಲಿಸಿ ವಿದರ್ಭಪುತ್ರಿ ಯನ್ನು ಮದುವೆಯಾದನು. ॥ ೨೯ ॥ ಆಕೆಯಲ್ಲಿ ಆ ಮಲಯ ಧ್ವಜನು ಸುಂದರಿಯಾಗಿದ್ದ ಒಬ್ಬ ಕನ್ಯೆಯನ್ನೂ ಮತ್ತು ಆಕೆಯ ತಮ್ಮಂದಿರನ್ನಾಗಿ ಏಳು ಮಂದಿ ಪುತ್ರರನ್ನೂ ಪಡೆದನು. ಆ ಪುತ್ರರೇ ಮುಂದೆ ದ್ರವಿಡದೇಶದ ಏಳು ಮಂದಿ ರಾಜರಾದರು. ॥ ೩೦ ॥ ಎಲೈ ರಾಜನೇ! ಮತ್ತೆ ಅವರಲ್ಲಿ ಪ್ರತಿಯೋರ್ವ ಪುತ್ರರಿಗೂ ಬಹುಮಂದಿ ಪುತ್ರರು ಹುಟ್ಟಿದರು. ಆ ವಂಶದವರು ಈ ಭೂಮಿ ಯನ್ನು ಮನ್ವಂತರದ ಕೊನೆಯವರೆಗೂ ಮತ್ತು ಅನಂತರವು ಅನು ಭವಿಸುವರು. ॥ ೩೧ ॥ ಮಲಯಧ್ವಜ ರಾಜನ ಮೊದಲನೆಯ ಪುತ್ರಿಯು ತುಂಬಾ ವ್ರತನಿಷ್ಠನಾಗಿದ್ದಳು. ಅಗಸ್ತ್ಯಮಹರ್ಷಿಗಳು ಆಕೆ ಯನ್ನು ವಿವಾಹವಾಗಿ ದೃಢಚ್ಯುತನೆಂಬ ಪುತ್ರನನ್ನು ಆಕೆಯಿಂದ ಪಡೆದರು. ದೃಢಚ್ಯುತನ ಸುಪುತ್ರನೇ ಇಧ್ಮವಾಹನೆನಿಸಿದನು. ॥ ೩೨ ॥

ಕೊನೆಗೆ ಆ ರಾಜರ್ಷಿ ಮಲಯಧ್ವಜನು ಭೂಮಿಯನ್ನು ತನ್ನ ಪುತ್ರರಿಗೆ ಹಂಚಿಕೊಟ್ಟು ಭಗವಾನ್ ಶ್ರೀಕೃಷ್ಣನನ್ನು ಆರಾಧಿಸ ಬೇಕೆಂಬ ಇಚ್ಛೆಯಿಂದ ಮಲಯಪರ್ವತಕ್ಕೆ ತೆರಳಿದನು. ॥ ೩೩ ॥ ಆಗ ಚಂದ್ರಿಕೆಯು ಚಂದ್ರನನ್ನು ಅನುಸರಿಸುವಂತೆ ಸುಂದರಿಯಾದ ವೈದರ್ಭಿಯು ತನ್ನ ಮನೆ, ಮಕ್ಕಳು ಮತ್ತು ಭೋಗಗಳೆಲ್ಲವನ್ನೂ ತೊರೆದು ತನ್ನ ಪತಿಯಾದ ಪಾಂಡ್ಯನರೇಶನನ್ನು ಅನುಸರಿಸಿ ಹೋದಳು. ॥ ೩೪ ॥

ತತ್ರ ಚಂದ್ರವಸಾ ನಾಮ ತಾಮ್ರಪರ್ಣೀ ವಟೋದಕಾ ।
ತತ್ಪುಣ್ಯಸಲಿಲೈರ್ನಿತ್ಯಮುಭಯತ್ರಾತ್ಮನೋ ಮೃಜನ್ ॥ ೩೫ ॥

ಕಂದಾಷ್ಟಿಭಿರ್ಮೂಲಫಲೈಃ ಪುಷ್ಪಪರ್ಣೈಸ್ತೃಣೋದಕೈಃ ।
ವರ್ತಮಾನಃ ಶನೈರ್ಗಾತ್ರಕರ್ಶನಂ ತಪ ಆಸ್ಥಿತಃ ॥ ೩೬ ॥

ಶೀತೋಷ್ಣವಾತವರ್ಷಾಣಿ ಕ್ಷುತ್ಪಿಪಾಸೇ ಪ್ರಿಯಾಪ್ರಿಯೇ ।
ಸುಖದುಃಖೇ ಇತಿ ದ್ವಂದ್ವಾನ್ಯಜಯತ್ಸಮದರ್ಶನಃ ॥ ೩೭ ॥

ತಪಸಾ ವಿದ್ಯಯಾ ಪಕ್ವಕಷಾಯೋ ನಿಯಮೈರ್ಯಮೈಃ ।
ಯುಯುಜೇ ಬ್ರಹ್ಮಣ್ಯಾತ್ಮಾನಂ ವಿಜಿತಾಕ್ಷಾನಿಲಾಶಯಃ ॥ ೩೮ ॥

ಆಸ್ತೇ ಸ್ಥಾಣುರಿವೈಕತ್ರ ದಿವ್ಯಂ ವರ್ಷಶತಂ ಸ್ಥಿರಃ ।
ವಾಸುದೇವೇ ಭಗವತಿ ನಾನ್ಯದ್ವೇದೋದ್ವಹನ್ರತಿಮ್ ॥ ೩೯ ॥

ಸ ವ್ಯಾಪಕತಯಾಽಽತ್ಮಾನಂ ವ್ಯತಿರಿಕ್ತತಯಾಽಽತ್ಮನಿ ।
ವಿದ್ವಾನ್ಸ್ವಪ್ನ ಇವಾಮರ್ಶಸಾಕ್ಷಿಣಂ ವಿರರಾಮ ಹ ॥ ೪೦ ॥

ಸಾಕ್ಷಾದ್ಭಗವತೋಕ್ತೇನ ಗುರುಣಾ ಹರಿಣಾ ನೃಪ ।
ವಿಶುದ್ಧ ಜ್ಞಾನದೀಪೇನ ಸ್ಫುರತಾ ವಿಶ್ವತೋಮುಖಮ್ ॥ ೪೧ ॥

ಪರೇ ಬ್ರಹ್ಮಣಿ ಚಾತ್ಮಾನಂ ಪರಂ ಬ್ರಹ್ಮ ತಥಾತ್ಮನಿ ।
ವೀಕ್ಷಮಾಣೋ ವಿಹಾಯೇಕ್ಷಾಮಸ್ಮಾದುಪರರಾಮ ಹ ॥ ೪೨ ॥

ಪತಿಂ ಪರಮಧರ್ಮಜ್ಞಂ ವೈದರ್ಭೀ ಮಲಯಧ್ವಜಮ್ ।
ಪ್ರೇಮ್ಣಾ ಪರ್ಯಚರದ್ಧಿತ್ವಾ ಭೋಗಾನ್ ಸಾ ಪತಿದೇವತಾ ॥ ೪೩ ॥

ಚೀರವಾಸಾ ವ್ರತಕ್ಷಾಮಾ ವೇಣೀಭೂತಶಿರೋರುಹಾ ।
ಬಭಾವುಪ ಪತಿಂ ಶಾಂತಾ ಶಿಖಾ ಶಾಂತಮಿವಾನಲಮ್ ॥ ೪೪ ॥

ಅಜಾನತೀ ಪ್ರಿಯತಮಂ ಯದೋಪರತಮಂಗನಾ ।
ಸುಸ್ಥಿರಾಸನಮಾಸಾದ್ಯ ಯಥಾಪೂರ್ವಮುಪಾಚರತ್ ॥ ೪೫ ॥

ಪಾಂಡ್ಯಭೂಪತಿಯು ಬಂದ ಆ ತಪೋವನದಲ್ಲಿ ಚಂದ್ರವಸಾ, ತಾಮ್ರಪರ್ಣೀ ಮತ್ತು ವಟೋದಕಾ ಎಂಬ ಮೂರು ನದಿಗಳಿದ್ದವು. ರಾಜನು ಪವಿತ್ರವಾದ ಆ ತೀರ್ಥಗಳಲ್ಲಿ ಸ್ನಾನಮಾಡಿ ಪ್ರತಿದಿನವೂ ತನ್ನ ದೇಹವನ್ನೂ, ಮನಸ್ಸನ್ನೂ ಶುಚಿಪಡಿಸಿಕೊಳ್ಳುತ್ತಿದ್ದನು. ॥ ೩೫ ॥ ಅಲ್ಲಿ ಇದ್ದುಕೊಂಡು ಅವನು ಕಂದ-ಮೂಲ, ಬೀಜ, ಫಲ-ಪುಷ್ಪ ಎಲೆ, ಹುಲ್ಲು ಮತ್ತು ನೀರು ಇವುಗಳಿಂದಲೇ ದೇಹಯಾತ್ರೆಯನ್ನು ನಡೆಸುತ್ತಾ ಬಹು ಕಠೋರವಾದ ತಪಸ್ಸನ್ನಾಚರಿಸಿದನು. ಇದರಿಂದ ದಿನಗಳೆದಂತೆ ಅವನ ಶರೀರವು ತುಂಬಾ ಸೊರಗಿಹೋಯಿತು. ॥ ೩೬ ॥ ಅವನು ಎಲ್ಲರಲ್ಲೂ ಸಮದೃಷ್ಟಿಯನ್ನಿಟ್ಟು ಕೊಂಡು ಶೀತೋಷ್ಣ ಮಳೆ-ಗಾಳಿ, ಹಸಿವು-ಬಾಯಾರಿಕೆ, ಪ್ರಿಯ-ಅಪ್ರಿಯ, ಸುಖ-ದುಃಖಗಳೇ ಮುಂತಾದ ಎಲ್ಲ ದ್ವಂದ್ವಗಳನ್ನು ಗೆದ್ದುಕೊಂಡನು. ॥ ೩೭ ॥ ತಪಸ್ಸು ಮತ್ತು ಉಪಾಸನೆಗಳಿಂದ ವಾಸನೆಗಳನ್ನು ನಿರ್ಮೂಲನಗೊಳಿಸಿ, ಯಮ-ನಿಯಮಾದಿಗಳ ಮೂಲಕ ಇಂದ್ರಿಯಗಳನ್ನು ಪ್ರಾಣಗಳನ್ನು ಮತ್ತು ಮನವನ್ನು ವಶ ಪಡಿಸಿಕೊಂಡು ಅವನು ಆತ್ಮವನ್ನು ಪರಬ್ರಹ್ಮನಲ್ಲಿ ಒಂದಾಗಿಸಿದನು. ॥ ೩೮ ॥ ಹೀಗೆ ನೂರು ದಿವ್ಯವರ್ಷಗಳವರೆಗೆ ಕಂಬದಂತೆ ನಿಶ್ಚಲಭಾವದಿಂದ ಒಂದೇ ಸ್ಥಾನದಲ್ಲಿ ಕುಳಿತಿದ್ದನು. ಭಗವಾನ್ ವಾಸುದೇವನಲ್ಲಿ ದೃಢವಾದ ಪ್ರೇಮಾಭಕ್ತಿ ಉಂಟಾದಕಾರಣ ಇಷ್ಟು ಸಮಯದವರೆಗೆ ಅವನಿಗೆ ಶರೀರಾದಿಗಳಲ್ಲಿ ಎಚ್ಚರವೇ ಇರಲಿಲ್ಲ. ॥ ೩೯ ॥ ರಾಜನೇ! ಗುರುಸ್ವರೂಪಿಯಾದ ಸಾಕ್ಷಾತ್ ಶ್ರೀಹರಿಯು ಉಪದೇಶಿಸಿರುವ ಹಾಗೂ ತನ್ನ ಅಂತಃಕರಣದಲ್ಲಿ ಎಲ್ಲಕಡೆಗೆ ಸ್ಫುರಣಗೊಳ್ಳುವ ವಿಶುದ್ಧ ವಿಜ್ಞಾನದೀಪದಿಂದ – ಅಂತಃಕರಣದ ಪ್ರವೃತ್ತಿಯ ಪ್ರಕಾಶಕನಾದ ಆತ್ಮನು ಸ್ವಪ್ನಾವಸ್ಥೆಯಂತೆ ದೇಹಾದಿ ಸಮಸ್ತ ಉಪಾಧಿಗಳಲ್ಲಿ ವ್ಯಾಪ್ತವೂ ಹಾಗೂ ಅದರಿಂದ ಬೇರೆಯೂ ಆಗಿದ್ದಾನೆ ಎಂದು ಅವನು ನೋಡಿದನು. ಹೀಗೆ ಅನುಭವಪಡೆದು ಎಲ್ಲರಲ್ಲಿ ಉದಾಸೀನನಾದನು. ॥ ೪೦-೪೧ ॥ ಮತ್ತೆ ತನ್ನ ಆತ್ಮನನ್ನು ಪರಬ್ರಹ್ಮನಲ್ಲಿಯೂ ಮತ್ತು ಪರಬ್ರಹ್ಮನನ್ನು ತನ್ನಾತ್ಮನಲ್ಲೂ ಅಭಿನ್ನರೂಪದಿಂದ ನೋಡಿದನು ಮತ್ತು ಕೊನೆಗೆ ಈ ಅಭೇದ ಚಿಂತನೆಯನ್ನೂ ತ್ಯಜಿಸಿ ಪೂರ್ಣವಾಗಿ ಶಾಂತನಾದನು. ॥ ೪೨ ॥

ರಾಜೇಂದ್ರನೇ! ಪತಿವ್ರತಾಶಿರೋಮಣಿಯಾದ ವಿದರ್ಭರಾಜನ ಪುತ್ರಿಯು ಅಲ್ಲಿ ಎಲ್ಲ ಭೋಗಗಳನ್ನು ತೊರೆದು ಪ್ರೇಮದಿಂದ ಪರಮಧರ್ಮಜ್ಞನಾದ ತನ್ನ ಪತಿ ಮಲಯಧ್ವಜನ ಸೇವೆಯನ್ನು ಮಾಡುತ್ತಿದ್ದಳು. ॥ ೪೩ ॥ ಆಕೆಯು ನಾರುಮಡಿಯನ್ನುಟ್ಟು ವ್ರತ-ಉಪವಾಸಾದಿಗಳನ್ನು ಮಾಡುತ್ತಿದ್ದುದರಿಂದ ಆಕೆಯ ಶರೀರವು ತುಂಬಾ ಕೃಶವಾಗಿಬಿಟ್ಟಿತ್ತು. ತಲೆಗೂದಲು ಸಂಸ್ಕಾರವಿಲ್ಲದೆ ಜಟೆಯಾಗಿಬಿಟ್ಟಿತ್ತು. ಆಗ ಆಕೆಯು ತನ್ನ ಪತಿದೇವನ ಪಕ್ಕದಲ್ಲಿ ಶಾಂತವಾದ ಅಗ್ನಿಜ್ವಾಲೆಯಂತೆ ಪ್ರಶಾಂತವಾದ ಮುಖಮುದ್ರೆಗಳಿಂದ ಶೋಭಿಸುತ್ತಿದ್ದಳು. ॥ ೪೪ ॥ ಆ ವೇಳೆಗಾಗಲೇ ಪತಿದೇವನು ಪರಮಪದವನ್ನು ಸೇರಿಕೊಂಡುಬಿಟ್ಟಿದ್ದನು. ಆದರೂ ಆತನ ಆಸನ ಬಂಧವು ಹಾಗೆಯೇ ಸ್ಥಿರವಾಗಿತ್ತು. ಈ ರಹಸ್ಯವನ್ನರಿಯದೆ ಆ ಮುಗ್ಧೆಯು ಆತನ ದೇಹದ ಬಳಿಗೆ ಹೋಗಿ ಹಿಂದಿನಂತೆಯೇ ಸೇವೆ ಮಾಡತೊಡಗಿದಳು. ॥ ೪೫ ॥

ಯದಾ ನೋಪಲಭೇತಾಂಘ್ರಾವೂಷ್ಮಾಣಂ ಪತ್ಯುರರ್ಚತೀ ।
ಆಸೀತ್ಸಂವಿಗ್ನಹೃದಯಾ ಯೂಥಭ್ರಷ್ಟಾ ಮೃಗೀ ಯಥಾ ॥ ೪೬ ॥

ಆತ್ಮಾನಂ ಶೋಚತೀ ದೀನಮಬಂಧುಂ ವಿಕ್ಲವಾಶ್ರುಭಿಃ ।
ಸ್ತನಾವಾಸಿಚ್ಯ ವಿಪಿನೇ ಸುಸ್ವರಂ ಪ್ರರುರೋದ ಸಾ ॥ ೪೭ ॥

ಉತ್ತಿಷ್ಠೋತ್ತಿಷ್ಠ ರಾಜರ್ಷೇ ಇಮಾಮುದಧಿಮೇಖಲಾಮ್ ।
ದಸ್ಯುಭ್ಯಃ ಕ್ಷತ್ರಬಂಧುಭ್ಯೋ ಬಿಭ್ಯತೀಂ ಪಾತುಮರ್ಹಸಿ ॥ ೪೮ ॥

ಏವಂ ವಿಲಪತೀ ಬಾಲಾ ವಿಪಿನೇಽನುಗತಾ ಪತಿಮ್ ।
ಪತಿತಾ ಪಾದಯೋರ್ಭರ್ತೂ ರುದತ್ಯಶ್ರೂಣ್ಯವರ್ತಯತ್ ॥ ೪೯ ॥

ಚಿತಿಂ ದಾರುಮಯೀಂ ಚಿತ್ವಾ ತಸ್ಯಾಂ ಪತ್ಯುಃ ಕಲೇವರಮ್ ।
ಆದೀಪ್ಯ ಚಾನುಮರಣೇ ವಿಲಪಂತೀ ಮನೋ ದಧೇ ॥ ೫೦ ॥

ತತ್ರ ಪೂರ್ವತರಃ ಕಶ್ಚಿತ್ಸಖಾ ಬ್ರಾಹ್ಮಣ ಆತ್ಮವಾನ್ ।
ಸಾಂತ್ವಯನ್ವಲ್ಗುನಾ ಸಾಮ್ನಾ ತಾಮಾಹ ರುದತೀಂ ಪ್ರಭೋ ॥ ೫೧ ॥

*ಬ್ರಾಹ್ಮಣ ಉವಾಚ*

ಕಾ ತ್ವಂ ಕಸ್ಯಾಸಿ ಕೋ ವಾಯಂ ಶಯಾನೋ ಯಸ್ಯ ಶೋಚಸಿ ।
ಜಾನಾಸಿ ಕಿಂ ಸಖಾಯಂ ಮಾಂ ಯೇನಾಗ್ರೇ ವಿಚಚರ್ಥ ಹ ॥ ೫೨ ॥

ಅಪಿ ಸ್ಮರಸಿ ಚಾತ್ಮಾನಮವಿಜ್ಞಾತಸಖಂ ಸಖೇ ।
ಹಿತ್ವಾ ಮಾಂ ಪದಮನ್ವಿಚ್ಛನ್ಭೌಮ ಭೋಗರತೋ ಗತಃ ॥ ೫೩ ॥

ಹಂಸಾವಹಂ ಚ ತ್ವಂ ಚಾರ್ಯ ಸಖಾಯೌ ಮಾನಸಾಯನೌ ।
ಅಭೂತಾಮಂತರಾ ವೌಕಃ ಸಹಸ್ರಪರಿವತ್ಸರಾನ್ ॥ ೫೪ ॥

ಸ ತ್ವಂ ವಿಹಾಯ ಮಾಂ ಬಂಧೋ ಗತೋ ಗ್ರಾಮ್ಯಮತಿರ್ಮಹೀಮ್ ।
ವಿಚರನ್ಪದಮದ್ರಾಕ್ಷೀಃ ಕಯಾಚಿನ್ನಿರ್ಮಿತಂ ಸ್ತ್ರಿಯಾ ॥ ೫೫ ॥

ಪಂಚಾರಾಮಂ ನವದ್ವಾರಮೇಕಪಾಲಂ ತ್ರಿಕೋಷ್ಠಕಮ್ ।
ಷಟ್ಕುಲಂ ಪಂಚವಿಪಣಂ ಪಂಚಪ್ರಕೃತಿ ಸ್ತ್ರೀಧವಮ್ ॥ ೫೬ ॥

ಪಾದಸೇವೆ ಮಾಡುತ್ತಿದ್ದಾಗ ಪತಿಯ ಚರಣಗಳಲ್ಲಿ ಸ್ವಲ್ಪವೂ ಶಾಖ ಕಾಣದೆ ಹೋಗಲು – ಆಕೆಯು ಹಿಂಡನ್ನು ಅಗಲಿದ ಹೆಣ್ಣು ಹುಲ್ಲೆಯಂತೆ ಮನಸ್ಸಿನಲ್ಲಿ ಅತ್ಯಂತ ಕಳವಳಗೊಂಡಳು. ॥ ೪೬ ॥ ಆ ನಿಬಿಡವಾದ ಕಾಡಿನಲ್ಲಿ ತನ್ನನ್ನು ಒಬ್ಬಂಟಿಗಳೆಂದು ನೋಡಿ ದೀನಾವಸ್ಥೆಯನ್ನು ಹೊಂದಿ ಅವಳು ಶೋಕಿಸುತ್ತಾ ಕಣ್ಣೀರ ಧಾರೆಯಿಂದ ಸ್ತನಗಳು ನೆನೆದುಹೋಗಲು ಗಟ್ಟಿಯಾಗಿ ಅಳತೊಡಗಿದಳು. ॥ ೪೭ ॥ ಓ ರಾಜರ್ಷಿಯೇ ಏಳು! ಏಳು! ಸಮುದ್ರದಿಂದ ಸುತ್ತುವರಿಯಲ್ಪಟ್ಟಿರುವ ಈ ಭೂದೇವಿಯು ದರೋಡೆಗಾರರಿಂದಲೂ, ಅಧಾರ್ಮಿಕರಾದ ರಾಜರಿಂದಲೂ ಭಯಪಡುತ್ತಿರುವಳು. ನೀನು ಈಕೆಯನ್ನು ರಕ್ಷಿಸು ಎಂದು ವಿಲಪಿಸಿದಳು. ॥ ೪೮ ॥ ಪತಿಯೊಡನೆ ಅರಣ್ಯಕ್ಕೆ ತೆರಳಿದ್ದ ಆ ಅಬಲೆಯು ಹೀಗೆ ಗೋಳಿಡುತ್ತಾ ಪತಿಯ ಪಾದಗಳ ಮೇಲೆ ಬಿದ್ದು ಅಳುತ್ತಾ ಕಣ್ಣೀರು ಸುರಿಸುತ್ತಿದ್ದಳು. ॥ ೪೯ ॥ ಆಕೆಯು ಕಟ್ಟಿಗೆಗಳಿಂದ ಚಿತೆಯನ್ನು ರಚಿಸಿ ಅದರ ಮೇಲೆ ಪತಿಯ ಶವವನ್ನಿರಿಸಿ, ಬೆಂಕಿಯನ್ನಿಟ್ಟು ರೋದಿಸುತ್ತಾ ತಾನೂ ಸಹಗಮನ ಮಾಡಲು ನಿಶ್ಚಯಿಸಿದಳು. ॥ ೫೦ ॥ ರಾಜೇಂದ್ರನೇ! ಆಗಲೇ ಆಕೆಯ ಯಾರೋ ಹಳೆಯ ಗೆಳೆಯನಾದ ಓರ್ವ ಆತ್ಮಜ್ಞಾನಿ ಬ್ರಾಹ್ಮಣನು ಅಲ್ಲಿಗೆ ಬಂದನು. ಅವನು ಅಳುತ್ತಿದ್ದ ಆ ಅಬಲೆಯನ್ನು ಸವಿಮಾತುಗಳಿಂದ ಸಂತೈಸುತ್ತಾ ಹೀಗೆಂದನು. ॥ ೫೧ ॥

**ಬ್ರಾಹ್ಮಣನು ಹೇಳಿದನು** – "ಯಾರಮ್ಮ ನೀನು? ಯಾರ ಮಗಳು? ಮಲಗಿಕೊಂಡಿರುವ ಯಾವನೋ ಪುರುಷನನ್ನು ಕುರಿತು ಅಳುತ್ತಿರುವೆಯಲ್ಲ! ಈತನು ಯಾರು? ನಾನು ಯಾರೆಂಬುದು ನಿನಗೆ ಗೊತ್ತಿಲ್ಲವೇ? ನೀನು ಹಿಂದೆ ನನ್ನೊಡನೆ ಓಡಾಡುತ್ತಿದ್ದೆಯಲ್ಲ ಆ ಮಿತ್ರನೇ ನಾನಮ್ಮ." ॥ ೫೨ ॥ ಸ್ನೇಹಿತನೇ! ನಿನಗೆ ಅವಿಜ್ಞಾತವನೆಂಬ ಒಬ್ಬ ಗೆಳೆಯನಿದ್ದನೆಂಬುದು ನೆನಪಿದೆಯೇ? ಆ ಅವಿಜ್ಞಾತನೇ ನಾನು. ನೀನು ಭೂಮಿಯ ಭೋಗಗಳನ್ನು ಅನುಭವಿಸುವುದಕ್ಕಾಗಿ ವಾಸಸ್ಥಾನವನ್ನು ಹುಡುಕುತ್ತಾ ನನ್ನನ್ನು ಬಿಟ್ಟು ಹೊರಟುಬಿಟ್ಟೆ ॥ ೫೩ ॥ ಆರ್ಯನೇ! ನೀನು ಮತ್ತು ನಾನು ಇಬ್ಬರೂ ಹಿಂದೆ ಪರಸ್ಪರ ಮಿತ್ರರಾಗಿದ್ದು ಮಾನಸಸರೋವರ ನಿವಾಸಿ ಹಂಸಗಳಾಗಿದ್ದೆವು. ನಾವಿಬ್ಬರೂ ಸಾವಿರಾರು ವರ್ಷಗಳವರೆಗೆ ಯಾವುದೇ ವಾಸಸ್ಥಾನವಿಲ್ಲದೆ ಇರುತ್ತಿದ್ದೆವು. ॥ ೫೪ ॥ ಆದರೆ ಗೆಳೆಯನೇ! ನೀನು ವಿಷಯಗಳನ್ನು ಭೋಗಿಸುವ ಇಚ್ಛೆಯಿಂದ ನನ್ನನ್ನು ಬಿಟ್ಟು ಈ ಭೂಮಿಗೆ ಬಂದೆ. ಇಲ್ಲಿ ಅಲೆದಾಡುತ್ತಾ ಇರುವಾಗ ಓರ್ವ ಹೆಂಗಸು ನಿರ್ಮಿಸಿದ್ದ ಜಾಗವನ್ನು ನೋಡಿದೆ. ॥ ೫೫ ॥ ಅದರಲ್ಲಿ ಐದು ಉದ್ಯಾನಗಳೂ, ಒಂಭತ್ತು ಬಾಗಿಲುಗಳೂ, ಒಬ್ಬ ದ್ವಾರಪಾಲನೂ, ಮೂರು ಕೋಟೆಗಳೂ, ಆರುಮಂದಿ ವರ್ತಕರು, ಐದು ಅಂಗಡಿಗಳೂ ಇದ್ದುವು. ಅದು ಐದು ಉಪಾದಾನ ಕಾರಣಗಳಿಂದ ರಚಿತವಾಗಿದ್ದು, ಅದರ ಒಡತಿ ಒಬ್ಬಳು ಸ್ತ್ರೀಯಾಗಿದ್ದಳು. ॥ ೫೬ ॥

ಮಹಾರಾಜನೇ! ಇಂದ್ರಿಯಗಳ ಐದು ವಿಷಯಗಳು ಅದರ ಉದ್ಯಾನಗಳು. ಒಂಭತ್ತು ಇಂದ್ರಿಯಗಳು ಅದರ ಬಾಗಿಲುಗಳಿ

ಪಂಚೇಂದ್ರಿಯಾರ್ಥಾ ಆರಾಮಾ ದ್ವಾರಃ ಪ್ರಾಣಾ ನವಪ್ರಭೋ ।
ತೇಜೋಽಬನ್ನಾನಿ ಕೋಷ್ಠಾನಿ ಕುಲಮಿಂದ್ರಿಯಸಂಗ್ರಹಃ ॥ ೫೭ ॥

ವಿಪಣಸ್ತು ಕ್ರಿಯಾಶಕ್ತಿರ್ಭೂತಪ್ರಕೃತಿರವ್ಯಯಾ ।
ಶಕ್ತ್ಯಧೀಶಃ ಪುಮಾಂಸ್ತತ್ರ ಪ್ರವಿಷ್ಟೋ ನಾವಬುಧ್ಯತೇ ॥ ೫೮ ॥

ತಸ್ಮಿಂಸ್ತ್ವಂ ರಾಮಯಾ ಸ್ಪೃಷ್ಟೋ ರಮಮಾಣೋಽಶ್ರುತಸ್ಮೃತಿಃ ।
ತತ್ಸಂಗಾದೀದೃಶೀಂ ಪ್ರಾಪ್ತೋ ದಶಾಂ ಪಾಪೀಯಸೀಂ ಪ್ರಭೋ ॥ ೫೯ ॥

ನ ತ್ವಂ ವಿದರ್ಭದುಹಿತಾ ನಾಯಂ ವೀರಃ ಸುಹೃತ್ತವ ।
ನ ಪತಿಸ್ತ್ವಂ ಪುರಂಜನ್ಯಾ ರುದ್ಧೋ ನವಮುಖೇ ಯಯಾ ॥ ೬೦ ॥

ಮಾಯಾ ಹ್ಯೇಷಾ ಮಯಾ ಸೃಷ್ಟಾ ಯತ್ಪುಮಾಂಸಂ ಸ್ತ್ರಿಯಂ ಸತೀಮ್ ।
ಮನ್ಯಸೇ ನೋಭಯಂ ಯದ್ವೈ ಹಂಸೌ ಪಶ್ಯಾವಯೋರ್ಗತಿಮ್ ॥ ೬೧ ॥

ಅಹಂ ಭವಾನ್ನ ಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವ ಭೋಃ ।
ನ ನೌ ಪಶ್ಯಂತಿ ಕವಯಶ್ಛಿದ್ರಂ ಜಾತು ಮನಾಗಪಿ ॥ ೬೨ ॥

ಯಥಾ ಪುರುಷ ಆತ್ಮಾನಮೇಕಮಾದರ್ಶಚಕ್ಷುಷೋಃ ।
ದ್ವಿಧಾಭೂತಮವೇಕ್ಷೇತ ತಥೈವಾಂತರಮಾವಯೋಃ ॥ ೬೩ ॥

ಏವಂ ಸ ಮಾನಸೋ ಹಂಸೋ ಹಂಸೇನ ಪ್ರತಿಬೋಧಿತಃ ।
ಸ್ವಸ್ಥಸ್ತದ್ವ್ಯಭಿಚಾರೇಣ ನಷ್ಟಾಮಾಪ ಪುನಃ ಸ್ಮೃತಿಮ್ ॥ ೬೪ ॥

ಬರ್ಹಿಷ್ಮನ್ನೇತದಧ್ಯಾತ್ಮಂ ಪಾರೋಕ್ಷ್ಯೇಣ ಪ್ರದರ್ಶಿತಮ್ ।
ಯತ್ಪರೋಕ್ಷಪ್ರಿಯೋ ದೇವೋಭಗವಾನ್ವಿಶ್ವಭಾವನಃ ॥ ೬೫ ॥

ದ್ದವು. ತೇಜಸ್ಸು ಜಲ ಮತ್ತು ಅನ್ನ ಇವು ಮೂರು ಕೋಟೆಗಳು. ಮನಸ್ಸು ಮತ್ತು ಐದು ಜ್ಞಾನೇಂದ್ರಿಯಗಳು ಸೇರಿ ಒಟ್ಟಿಗೆ ಆರು ಮಂದಿ ಅಲ್ಲಿಯ ವರ್ತಕರಾಗಿದ್ದರು. ಕ್ರಿಯಾಶಕ್ತಿರೂಪವಾದ ಕರ್ಮೇಂದ್ರಿಯಗಳೇ ಅಲ್ಲಿಯ ಅಂಗಡಿಗಳು. ಪಂಚಮಹಾ ಭೂತಗಳೇ ಎಂದಿಗೂ ಕ್ಷಿಣಿಸದೇ ಇರುವ ಅದರ ಉಪಾದಾನ ಕಾರಣಗಳಾಗಿದ್ದವು ಮತ್ತು ಬುದ್ಧಿಶಕ್ತಿಯೇ ಅದರ ಒಡತಿಯು. ಅದರಲ್ಲಿ ಪ್ರವೇಶಿಸಿದಾಗ ಪುರುಷನು ಜ್ಞಾನಶೂನ್ಯನಾಗಿ, ತನ್ನ ಸ್ವರೂಪವನ್ನು ಮರೆತು ಹೋಗುವಂತಹ ವಿಚಿತ್ರವಾದ ಆ ನಗರಿಯು. ॥ ೫೭-೫೮ ॥

ಅಯ್ಯಾ ! ಆ ನಗರದಲ್ಲಿ ಅದರ ಒಡತಿಯ ಹಿಡಿತದಲ್ಲಿ ಸಿಕ್ಕಿಕೊಂಡು, ಅವಳೊಂದಿಗೆ ವಿಹಾರಮಾಡುತ್ತಾ ನೀನೂ ನಿನ್ನ ಸ್ವರೂಪವನ್ನು ಮರೆತುಬಿಟ್ಟೆ ಅವಳ ಸಹವಾಸದಿಂದಲೇ ನಿನಗೆ ಇಂತಹ ದುರ್ದಶೆ ಉಂಟಾಯಿತು. ॥ ೫೯ ॥ ನೋಡು, ನೀನಾದರೋ ವಿದರ್ಭರಾಜನ ಪುತ್ರಿಯೂ ಅಲ್ಲ, ಈ ವೀರ ಮಲಯಧ್ವಜನು ನಿನ್ನ ಪತಿಯೂ ಅಲ್ಲ. ಒಂಭತ್ತು ದ್ವಾರಗಳ ನಗರದಲ್ಲಿ ನಿನ್ನನ್ನು ಸೆರೆಹಿಡಿದಿಟ್ಟಿದ್ದ ಆ ಪುರಂಜನಿಯ ಪತಿಯೂ ನೀನಲ್ಲ. ॥ ೬೦ ॥ ನೀನು ಕಳೆದ ಜನ್ಮದಲ್ಲಿ ತನ್ನನ್ನು ಪುರುಷನೆಂದು ತಿಳಿದುಕೊಂಡಿದ್ದೆ. ಈಗ ಸಾಧ್ವಿಯಾದ ಸ್ತ್ರೀಯೆಂದು ಭಾವಿಸಿಕೊಂಡಿರುವೆ. ಇವೆಲ್ಲವೂ ನಾನೇ ಹರಡಿದ ಮಾಯೆಯಾಗಿದೆ. ವಾಸ್ತವವಾಗಿ ನೀನು ಪುರುಷನಲ್ಲ, ಸ್ತ್ರೀಯಲ್ಲ, ನಾವಿಬ್ಬರೂ ಹಂಸಗಳು. ನಮ್ಮ ವಾಸ್ತವಿಕವಾಗಿರುವ ಸ್ವರೂಪವನ್ನು ಅನುಭವಕ್ಕೆ ತಂದುಕೋ. ॥ ೬೧ ॥ ಮಿತ್ರನೇ ! ನಾನು ಈಶ್ವರನಾಗಿದ್ದೇನೆ, ನೀನು ಜೀವನಾಗಿರುವೆ. ನೀನು ನನ್ನಿಂದ ಬೇರೆಯಲ್ಲ, ವಿಚಾರಪೂರ್ವಕವಾಗಿ ನೋಡು. ನಾನು ಏನಾಗಿರುವೆನೋ ನೀನೂ ಅವನೇ ಆಗಿರುವೆ. ಜ್ಞಾನಿಗಳು ನಮ್ಮಿಬ್ಬರಲ್ಲಿ ಎಂದೂ ಸ್ವಲ್ಪವೂ ಭೇದವನ್ನು ನೋಡುವುದಿಲ್ಲ. ॥ ೬೨ ॥ ಮನುಷ್ಯನು ತನ್ನ ಶರೀರದ ಪ್ರತಿಬಿಂಬವನ್ನು ಕನ್ನಡಿಯಲ್ಲಿ ನೋಡಬಹುದು. ಅದನ್ನೇ ಯಾರೋ ಮನುಷ್ಯನ ಕಣ್ಣಿನಲ್ಲೂ ಕಾಣಬಹುದು. ಹಾಗೆಯೇ ಒಂದೇ ಆತ್ಮನು ವಿದ್ಯೆ ಮತ್ತು ಅವಿದ್ಯೆ ಎಂಬ ಉಪಾಧಿಯ ಭೇದದಿಂದ ತನ್ನನ್ನು ಈಶ್ವರ ಮತ್ತು ಜೀವನಾಗಿ ಎರಡು ರೀತಿಯಿಂದ ನೋಡುತ್ತಿದ್ದಾನೆ. ॥ ೬೩ ॥

ಹೀಗೆ ಹಂಸ (ಈಶ್ವರ)ನು ಅದನ್ನು ಎಚ್ಚರಿಸಿದಾಗ ಆ ಮಾನಸ ಸರೋವರದ ಹಂಸವು (ಜೀವ) ತನ್ನ ಸ್ವರೂಪದಲ್ಲಿ ಸ್ಥಿತನಾಗಿ, ತನ್ನ ಮಿತ್ರನಿಂದ ಉಂಟಾದ ಅಗಲಿಕೆಯಿಂದ ಮರೆತಿರುವ ಆತ್ಮಜ್ಞಾನವನ್ನು ಪುನಃ ಪಡೆದುಕೊಂಡಿತು. ॥ ೬೪ ॥ ಪ್ರಾಚೀನಬರ್ಹಿಯೇ ! ನಾನು ನಿನಗೆ ಪರೋಕ್ಷರೂಪದಿಂದ ಈ ಆತ್ಮಜ್ಞಾನದ ದಿಗ್ದರ್ಶನ ಮಾಡಿರುವೆನು. ಏಕೆಂದರೆ ಜಗತ್ಕರ್ತೃವಾದ ಜಗದೀಶ್ವರನಿಗೆ ಪರೋಕ್ಷವರ್ಣನೆಯೇ ಹೆಚ್ಚು ಪ್ರಿಯವಾದುದು. ॥ ೬೫ ॥

*ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೨೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪುರಂಜನೋಪಾಖ್ಯಾನೇಽಷ್ಟಾವಿಂಶೋಽಧ್ಯಾಯಃ ॥ ೨೮ ॥

ಯದಾ ನೋಪಲಭೇತಾಂಘ್ರಾವೂಷ್ಮಾಣಂ ಪತ್ಯುರರ್ಚತೀ ।
ಆಸೀತ್ಸಂವಿಗ್ನಹೃದಯಾ ಯೂಥಭ್ರಷ್ಟಾ ಮೃಗೀ ಯಥಾ
॥ ೪೬ ॥

ಆತ್ಮಾನಂ ಶೋಚತೀ ದೀನಮಬಂಧುಂ ವಿಕ್ಲವಾಶ್ರುಭಿಃ ।
ಸ್ತನಾವಾಸಿಚ್ಯ ವಿಪಿನೇ ಸುಸ್ವರಂ ಪ್ರರುರೋದ ಸಾ
॥ ೪೭ ॥

ಉತ್ತಿಷ್ಠೋತ್ತಿಷ್ಠ ರಾಜರ್ಷೇ ಇಮಾಮುದಧಿಮೇಖಲಾಮ್ ।
ದಸ್ಯುಭ್ಯಃ ಕ್ಷತ್ರಬಂಧುಭ್ಯೋ ಬಿಭ್ಯತೀಂ ಪಾತುಮರ್ಹಸಿ
॥ ೪೮ ॥

ಏವಂ ವಿಲಪತೀ ಬಾಲಾ ವಿಪಿನೇಽನುಗತಾ ಪತಿಮ್ ।
ಪತಿತಾ ಪಾದಯೋರ್ಭರ್ತೂ ರುದತ್ಯಶ್ರೂಣ್ಯವರ್ತಯತ್
॥ ೪೯ ॥

ಚಿತಿಂ ದಾರುಮಯೀಂ ಚಿತ್ವಾ ತಸ್ಯಾಂ ಪತ್ಯುಃ ಕಲೇವರಮ್ ।
ಆದೀಪ್ಯ ಚಾನುಮರಣೇ ವಿಲಪಂತೀ ಮನೋ ದಧೇ
॥ ೫೦ ॥

ತತ್ರ ಪೂರ್ವತರಃ ಕಶ್ಚಿತ್ಸಖಾ ಬ್ರಾಹ್ಮಣ ಆತ್ಮವಾನ್ ।
ಸಾಂತ್ವಯನ್ವಲ್ಗುನಾ ಸಾಮ್ನಾ ತಾಮಾಹ ರುದತೀಂ ಪ್ರಭೋ
॥ ೫೧ ॥

*ಬ್ರಾಹ್ಮಣ ಉವಾಚ*

ಕಾ ತ್ವಂ ಕಸ್ಯಾಸಿ ಕೋ ವಾಯಂ ಶಯಾನೋ ಯಸ್ಯ ಶೋಚಸಿ ।
ಜಾನಾಸಿ ಕಿಂ ಸಖಾಯಂ ಮಾಂ ಯೇನಾಗ್ರೇ ವಿಚಚರ್ಥ ಹ
॥ ೫೨ ॥

ಅಪಿ ಸ್ಮರಸಿ ಚಾತ್ಮಾನಮವಿಜ್ಞಾತಸಖಂ ಸಖೇ ।
ಹಿತ್ವಾ ಮಾಂ ಪದಮನ್ವಿಚ್ಛನ್ಭೌಮ ಭೋಗರತೋ ಗತಃ
॥ ೫೩ ॥

ಹಂಸಾವಹಂ ಚ ತ್ವಂ ಚಾರ್ಯ ಸಖಾಯೌ ಮಾನಸಾಯನೌ ।
ಅಭೂತಾಮಂತರಾ ವೌಕಃ ಸಹಸ್ರಪರಿವತ್ಸರಾನ್
॥ ೫೪ ॥

ಸ ತ್ವಂ ವಿಹಾಯ ಮಾಂ ಬಂಧೋ
ಗತೋ ಗ್ರಾಮ್ಯಮತಿರ್ಮಹೀಮ್ ।
ವಿಚರನ್ಪದಮದ್ರಾಕ್ಷೀಃ
ಕಯಾಚಿನ್ನಿರ್ಮಿತಂ ಸ್ತ್ರಿಯಾ ॥ ೫೫ ॥

ಪಂಚಾರಾಮಂ ನವದ್ವಾರಮೇಕಪಾಲಂ ತ್ರಿಕೋಷ್ಠಕಮ್ ।
ಷಟ್ಕುಲಂ ಪಂಚವಿಪಣಂ ಪಂಚಪ್ರಕೃತಿ ಸ್ತ್ರೀಧವಮ್
॥ ೫೬ ॥

ಪಾದಸೇವೆ ಮಾಡುತ್ತಿದ್ದಾಗ ಪತಿಯ ಚರಣಗಳಲ್ಲಿ ಸ್ವಲ್ಪವೂ ಶಾಖ ಕಾಣದೆ ಹೋಗಲು – ಆಕೆಯು ಹಿಂಡನ್ನು ಅಗಲಿದ ಹೆಣ್ಣು ಹುಲ್ಲೆಯಂತೆ ಮನಸ್ಸಿನಲ್ಲಿ ಅತ್ಯಂತ ಕಳವಳಗೊಂಡಳು. ॥ ೪೬ ॥ ಆ ನಿಬಿಡವಾದ ಕಾಡಿನಲ್ಲಿ ತನ್ನನ್ನು ಒಬ್ಬಂಟಿಗಳೆಂದು ನೋಡಿ ದೀನಾವಸ್ಥೆಯನ್ನು ಹೊಂದಿ ಅವಳು ಶೋಕಿಸುತ್ತಾ ಕಣ್ಣೀರ ಧಾರೆ ಯಿಂದ ಸ್ತನಗಳು ನೆನೆದುಹೋಗಲು ಗಟ್ಟಿಯಾಗಿ ಅಳತೊಡಗಿದಳು. ॥ ೪೭ ॥ ಓ ರಾಜರ್ಷಿಯೇ ಏಳು! ಏಳು! ಸಮುದ್ರದಿಂದ ಸುತ್ತುವರಿಯಲ್ಪಟ್ಟಿರುವ ಈ ಭೂದೇವಿಯು ದರೋಡೆಗಾರರಿಂದಲೂ, ಅಧಾರ್ಮಿಕರಾದ ರಾಜರಿಂದಲೂ ಭಯಪಡುತ್ತಿರುವಳು. ನೀನು ಈಕೆಯನ್ನು ರಕ್ಷಿಸು ಎಂದು ವಿಲಪಿಸಿದಳು. ॥ ೪೮ ॥ ಪತಿಯೊಡನೆ ಅರಣ್ಯಕ್ಕೆ ತೆರಳಿದ್ದ ಆ ಅಬಲೆಯು ಹೀಗೆ ಗೋಳಿಡುತ್ತಾ ಪತಿಯ ಪಾದಗಳ ಮೇಲೆ ಬಿದ್ದು ಅಳುತ್ತಾ ಕಣ್ಣೀರು ಸುರಿಸುತ್ತಿದ್ದಳು. ॥ ೪೯ ॥ ಆಕೆಯು ಕಟ್ಟಿಗೆಗಳಿಂದ ಚಿತೆಯನ್ನು ರಚಿಸಿ ಅದರ ಮೇಲೆ ಪತಿಯ ಶವವನ್ನಿರಿಸಿ, ಬೆಂಕಿಯನ್ನಿಟ್ಟು ರೋದಿಸುತ್ತಾ ತಾನೂ ಸಹಗಮನ ಮಾಡಲು ನಿಶ್ಚಯಿಸಿದಳು. ॥ ೫೦ ॥ ರಾಜೇಂದ್ರನೇ! ಆಗಲೇ ಆಕೆಯ ಯಾರೋ ಹಳೆಯ ಗೆಳೆಯನಾದ ಓರ್ವ ಆತ್ಮಜ್ಞಾನಿ ಬ್ರಾಹ್ಮಣನು ಅಲ್ಲಿಗೆ ಬಂದನು. ಅವನು ಅಳುತ್ತಿದ್ದ ಆ ಅಬಲೆಯನ್ನು ಸವಿಮಾತುಗಳಿಂದ ಸಂತೈಸುತ್ತಾ ಹೀಗೆಂದನು. ॥ ೫೧ ॥

ಬ್ರಾಹ್ಮಣನು ಹೇಳಿದನು – "ಯಾರಮ್ಮ ನೀನು? ಯಾರ ಮಗಳು? ಮಲಗಿಕೊಂಡಿರುವ ಯಾವನೋ ಪುರುಷನನ್ನು ಕುರಿತು ಅಳುತ್ತಿರುವೆಯಲ್ಲ! ಈತನು ಯಾರು? ನಾನು ಯಾರೆಂಬುದು ನಿನಗೆ ಗೊತ್ತಿಲ್ಲವೇ? ನೀನು ಹಿಂದೆ ನನ್ನೊಡನೆ ಓಡಾಡುತ್ತಿದ್ದೆಯಲ್ಲ ಆ ಮಿತ್ರನೇ ನಾನಮ್ಮ." ॥ ೫೨ ॥ ಸ್ನೇಹಿತನೇ! ನಿನಗೆ ಅವಿಜ್ಞಾತವನೆಂಬ ಒಬ್ಬ ಗೆಳೆಯನಿದ್ದನೆಂಬುದು ನೆನಪಿದೆಯೇ? ಆ ಅವಿಜ್ಞಾತನೇ ನಾನು. ನೀನು ಭೂಮಿಯ ಭೋಗಗಳನ್ನು ಅನುಭವಿಸುವುದಕ್ಕಾಗಿ ವಾಸಸ್ಥಾನವನ್ನು ಹುಡುಕುತ್ತಾ ನನ್ನನ್ನು ಬಿಟ್ಟು ಹೊರಟುಬಿಟ್ಟೆ ॥ ೫೩ ॥ ಆರ್ಯನೇ! ನೀನು ಮತ್ತು ನಾನು ಇಬ್ಬರೂ ಹಿಂದೆ ಪರಸ್ಪರ ಮಿತ್ರರಾಗಿದ್ದು ಮಾನಸಸರೋವರ ನಿವಾಸಿ ಹಂಸಗಳಾಗಿದ್ದೆವು. ನಾವಿಬ್ಬರೂ ಸಾವಿರಾರು ವರ್ಷಗಳ ವರೆಗೆ ಯಾವುದೇ ವಾಸಸ್ಥಾನವಿಲ್ಲದೆ ಇರುತ್ತಿದ್ದೆವು. ॥ ೫೪ ॥ ಆದರೆ ಗೆಳೆಯನೇ! ನೀನು ವಿಷಯಗಳನ್ನು ಭೋಗಿಸುವ ಇಚ್ಛೆಯಿಂದ ನನ್ನನ್ನು ಬಿಟ್ಟು ಈ ಭೂಮಿಗೆ ಬಂದೆ. ಇಲ್ಲಿ ಅಲೆದಾಡುತ್ತಾ ಇರುವಾಗ ಓರ್ವ ಹೆಂಗಸು ನಿರ್ಮಿಸಿದ್ದ ಜಾಗವನ್ನು ನೋಡಿದೆ. ॥ ೫೫ ॥ ಅದರಲ್ಲಿ ಐದು ಉದ್ಯಾನಗಳೂ, ಒಂಭತ್ತು ಬಾಗಿಲುಗಳೂ, ಒಬ್ಬ ದ್ವಾರಪಾಲನೂ, ಮೂರು ಕೋಟೆಗಳೂ, ಆರುಮಂದಿ ವರ್ತಕರು, ಐದು ಅಂಗಡಿಗಳೂ ಇದ್ದುವು. ಅದು ಐದು ಉಪಾದಾನ ಕಾರಣಗಳಿಂದ ರಚಿತವಾಗಿದ್ದು, ಅದರ ಒಡತಿ ಒಬ್ಬಳು ಸ್ತ್ರೀಯಾಗಿದ್ದಳು. ॥ ೫೬ ॥

ಮಹಾರಾಜನೇ! ಇಂದ್ರಿಯಗಳ ಐದು ವಿಷಯಗಳು ಅದರ ಉದ್ಯಾನಗಳು. ಒಂಭತ್ತು ಇಂದ್ರಿಯಗಳು ಅದರ ಬಾಗಿಲುಗಳಿ

ಪಂಚೇಂದ್ರಿಯಾರ್ಥಾ ಆರಾಮಾ ದ್ವಾರಃ ಪ್ರಾಣಾ ನವಪ್ರಭೋ ।
ತೇಜೋಽಬನ್ನಾನಿ ಕೋಷ್ಠಾನಿ ಕುಲಮಿಂದ್ರಿಯಸಂಗ್ರಹಃ ॥ ೫೭ ॥

ವಿಪಣಸ್ತು ಕ್ರಿಯಾಶಕ್ತಿರ್ಭೂತಪ್ರಕೃತಿರವ್ಯಯಾ ।
ಶಕ್ತ್ಯಧೀಶಃ ಪುಮಾಂಸ್ತ್ವತ್ರ ಪ್ರವಿಷ್ಟೋ ನಾವಬುಧ್ಯತೇ ॥ ೫೮ ॥

ತಸ್ಮಿಂಸ್ತ್ವಂ ರಾಮಯಾ ಸ್ಪೃಷ್ಟೋ ರಮಮಾಣೋಽಶ್ರುತಸ್ಮೃತಿಃ ।
ತತ್ಸಂಗಾದೀದೃಶೀಂ ಪ್ರಾಪ್ತೋ ದಶಾಂ ಪಾಪೀಯಸೀಂ ಪ್ರಭೋ ॥ ೫೯ ॥

ನ ತ್ವಂ ವಿದರ್ಭದುಹಿತಾ ನಾಯಂ ವೀರಃ ಸುಹೃತ್ತವ ।
ನ ಪತಿಸ್ತ್ವಂ ಪುರಂಜನ್ಯಾ ರುದ್ಧೋ ನವಮುಖೇ ಯಯಾ ॥ ೬೦ ॥

ಮಾಯಾ ಹ್ಯೇಷಾ ಮಯಾ ಸೃಷ್ಟಾ ಯತ್ಪುಮಾಂಸಂ ಸ್ತ್ರಿಯಂ ಸತೀಮ್ ।
ಮನ್ಯಸೇ ನೋಭಯಂ ಯದ್ವೈ ಹಂಸೌ ಪಶ್ಯಾವಯೋರ್ಗತಿಮ್ ॥ ೬೧ ॥

ಅಹಂ ಭವಾನ್ನ ಚಾನ್ಯಸ್ತ್ವಂ ತ್ವಮೇವಾಹಂ ವಿಚಕ್ಷ್ವ ಭೋಃ ।
ನ ನೌ ಪಶ್ಯಂತಿ ಕವಯಶ್ಛಿದ್ರಂ ಜಾತು ಮನಾಗಪಿ ॥ ೬೨ ॥

ಯಥಾ ಪುರುಷ ಆತ್ಮಾನಮೇಕಮಾದರ್ಶಚಕ್ಷುಷೋಃ ।
ದ್ವಿಧಾಭೂತಮವೇಕ್ಷೇತ ತಥೈವಾಂತರಮಾವಯೋಃ ॥ ೬೩ ॥

ಏವಂ ಸ ಮಾನಸೋ ಹಂಸೋ ಹಂಸೇನ ಪ್ರತಿಬೋಧಿತಃ ।
ಸ್ವಸ್ಥಸ್ತದ್ವ್ಯಭಿಚಾರೇಣ ನಷ್ಟಾಮಾಪ ಪುನಃ ಸ್ಮೃತಿಮ್ ॥ ೬೪ ॥

ಬರ್ಹಿಷ್ಮನ್ನೇತದಧ್ಯಾತ್ಮಂ ಪಾರೋಕ್ಷ್ಯೇಣ ಪ್ರದರ್ಶಿತಮ್ ।
ಯತ್ಪರೋಕ್ಷಪ್ರಿಯೋ ದೇವೋ ಭಗವಾನ್ವಿಶ್ವಭಾವನಃ ॥ ೬೫ ॥

ದ್ದವು. ತೇಜಸ್ಸು, ಜಲ ಮತ್ತು ಅನ್ನ ಇವು ಮೂರು ಕೋಟೆಗಳು. ಮನಸ್ಸು ಮತ್ತು ಐದು ಜ್ಞಾನೇಂದ್ರಿಯಗಳು ಸೇರಿ ಒಟ್ಟಿಗೆ ಆರು ಮಂದಿ ಅಲ್ಲಿಯ ವರ್ತಕರಾಗಿದ್ದರು. ಕ್ರಿಯಾಶಕ್ತಿರೂಪವಾದ ಕರ್ಮೇಂದ್ರಿಯಗಳೇ ಅಲ್ಲಿಯ ಅಂಗಡಿಗಳು. ಪಂಚಮಹಾಭೂತಗಳೇ ಎಂದಿಗೂ ಕ್ಷೀಣಿಸದೇ ಇರುವ ಅದರ ಉಪಾದಾನ ಕಾರಣಗಳಾಗಿದ್ದವು ಮತ್ತು ಬುದ್ಧಿಶಕ್ತಿಯೇ ಅದರ ಒಡತಿಯು. ಅದರಲ್ಲಿ ಪ್ರವೇಶಿಸಿದಾಗ ಪುರುಷನು ಜ್ಞಾನಶೂನ್ಯನಾಗಿ, ತನ್ನ ಸ್ವರೂಪವನ್ನು ಮರೆತು ಹೋಗುವಂತಹ ವಿಚಿತ್ರವಾದ ಆ ನಗರಿಯು. ॥ ೫೭-೫೮ ॥

ಅಯ್ಯಾ ! ಆ ನಗರದಲ್ಲಿ ಅದರ ಒಡತಿಯ ಹಿಡಿತದಲ್ಲಿ ಸಿಕ್ಕಿಕೊಂಡು, ಅವಳೊಂದಿಗೆ ವಿಹಾರಮಾಡುತ್ತಾ ನೀನೂ ನಿನ್ನ ಸ್ವರೂಪವನ್ನು ಮರೆತುಬಿಟ್ಟೆ. ಅವಳ ಸಹವಾಸದಿಂದಲೇ ನಿನಗೆ ಇಂತಹ ದುರ್ದಶೆ ಉಂಟಾಯಿತು. ॥ ೫೯ ॥ ನೋಡು, ನೀನಾದರೋ ವಿದರ್ಭರಾಜನ ಪುತ್ರಿಯೂ ಅಲ್ಲ. ಈ ವೀರ ಮಲಯಧ್ವಜನು ನಿನ್ನ ಪತಿಯೂ ಅಲ್ಲ. ಒಂಭತ್ತು ದ್ವಾರಗಳ ನಗರದಲ್ಲಿ ನಿನ್ನನ್ನು ಸೆರೆಹಿಡಿದಿಟ್ಟಿದ್ದ ಆ ಪುರಂಜನಿಯ ಪತಿಯೂ ನೀನಲ್ಲ. ॥ ೬೦ ॥ ನೀನು ಕಳೆದ ಜನ್ಮದಲ್ಲಿ ತನ್ನನ್ನು ಪುರುಷನೆಂದು ತಿಳಿದುಕೊಂಡಿದ್ದೆ. ಈಗ ಸಾಧ್ವಿಯಾದ ಸ್ತ್ರೀಯೆಂದು ಭಾವಿಸಿಕೊಂಡಿರುವೆ. ಇವೆಲ್ಲವೂ ನಾನೇ ಹರಡಿದ ಮಾಯೆಯಾಗಿದೆ. ವಾಸ್ತವವಾಗಿ ನೀನು ಪುರುಷನಲ್ಲ, ಸ್ತ್ರೀಯಲ್ಲ, ನಾವಿಬ್ಬರೂ ಹಂಸಗಳು. ನಮ್ಮ ವಾಸ್ತವಿಕವಾಗಿರುವ ಸ್ವರೂಪವನ್ನು ಅನುಭವಕ್ಕೆ ತಂದುಕೋ. ॥ ೬೧ ॥ ಮಿತ್ರನೇ ! ನಾನು ಈಶ್ವರನಾಗಿದ್ದೇನೆ, ನೀನು ಜೀವನಾಗಿರುವೆ. ನೀನು ನನ್ನಿಂದ ಬೇರೆಯಲ್ಲ. ವಿಚಾರಪೂರ್ವಕವಾಗಿ ನೋಡು. ನಾನು ಏನಾಗಿರುವೆನೋ ನೀನೂ ಅವನೇ ಆಗಿರುವೆ. ಜ್ಞಾನಿಗಳು ನಮ್ಮಿಬ್ಬರಲ್ಲಿ ಎಂದೂ ಸ್ವಲ್ಪವೂ ಭೇದವನ್ನು ನೋಡುವುದಿಲ್ಲ. ॥ ೬೨ ॥ ಮನುಷ್ಯನು ತನ್ನ ಶರೀರದ ಪ್ರತಿಬಿಂಬವನ್ನು ಕನ್ನಡಿಯಲ್ಲಿ ನೋಡಬಹುದು. ಅದನ್ನೇ ಯಾರೋ ಮನುಷ್ಯನ ಕಣ್ಣಿನಲ್ಲೂ ಕಾಣಬಹುದು. ಹಾಗೆಯೇ ಒಂದೇ ಆತ್ಮನು ವಿದ್ಯೆ ಮತ್ತು ಅವಿದ್ಯೆ ಎಂಬ ಉಪಾಧಿಯ ಭೇದದಿಂದ ತನ್ನನ್ನು ಈಶ್ವರ ಮತ್ತು ಜೀವನಾಗಿ ಎರಡು ರೀತಿಯಿಂದ ನೋಡುತ್ತಿದ್ದಾನೆ. ॥ ೬೩ ॥

ಹೀಗೆ ಹಂಸ (ಈಶ್ವರ)ನು ಅದನ್ನು ಎಚ್ಚರಿಸಿದಾಗ ಆ ಮಾನಸ ಸರೋವರದ ಹಂಸವು (ಜೀವ) ತನ್ನ ಸ್ವರೂಪದಲ್ಲಿ ಸ್ಥಿತನಾಗಿ, ತನ್ನ ಮಿತ್ರನಿಂದ ಉಂಟಾದ ಅಗಲಿಕೆಯಿಂದ ಮರೆತಿರುವ ಆತ್ಮಜ್ಞಾನವನ್ನು ಪುನಃ ಪಡೆದುಕೊಂಡಿತು. ॥ ೬೪ ॥ ಪ್ರಾಚೀನಬರ್ಹಿಯೇ ! ನಾನು ನಿನಗೆ ಪರೋಕ್ಷರೂಪದಿಂದ ಈ ಆತ್ಮಜ್ಞಾನದ ದಿಗ್ದರ್ಶನ ಮಾಡಿರುವೆನು. ಏಕೆಂದರೆ ಜಗತ್ಕರ್ತೃವಾದ ಜಗದೀಶ್ವರನಿಗೆ ಪರೋಕ್ಷವರ್ಣನೆಯೇ ಹೆಚ್ಚು ಪ್ರಿಯವಾದುದು. ॥ ೬೫ ॥

*ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೨೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ಪುರಂಜನೋಪಾಖ್ಯಾನೇಽಷ್ಟಾವಿಂಶೋಽಧ್ಯಾಯಃ ॥ ೨೮ ॥

# ಇಪ್ಪತ್ತೊಂಭತ್ತನೆಯ ಅಧ್ಯಾಯ

## ಪುರಂಜನೋಪಾಖ್ಯಾನದ ತಾತ್ಪರ್ಯ

*ಪ್ರಾಚೀನಬರ್ಹಿರುವಾಚ*

ಭಗವಂಸ್ತೇ ವಚೋಽಸ್ಮಾಭಿರ್ನ ಸಮ್ಯಗವಗಮ್ಯತೇ ।
ಕವಯಸ್ತದ್ವಿಜಾನಂತಿ ನ ವಯಂ ಕರ್ಮಮೋಹಿತಾಃ ॥ ೧ ॥

*ನಾರದ ಉವಾಚ*

ಪುರುಷಂ ಪುರಂಜನಂ ವಿದ್ಯಾದ್ಯದ್ವ್ಯನಕ್ತ್ಯಾತ್ಮನಃ ಪುರಮ್ ।
ಏಕದ್ವಿತ್ರಿಚತುಷ್ಪಾದಂ ಬಹುಪಾದಮಪಾದಕಮ್ ॥ ೨ ॥

ಯೋಽವಿಜ್ಞಾತಾಹೃತಸ್ತಸ್ಯ ಪುರುಷಸ್ಯ ಸಖೇಶ್ವರಃ ।
ಯನ್ನ ವಿಜ್ಞಾಯತೇ ಪುಂಭಿರ್ನಾಮಭಿರ್ವಾ ಕ್ರಿಯಾಗುಣೈಃ ॥ ೩ ॥

ಯದಾ ಜಿಘೃಕ್ಷನ್ಪುರುಷಃ ಕಾರ್ತ್ಸ್ನ್ಯೇನ ಪ್ರಕೃತೇರ್ಗುಣಾನ್ ।
ನವದ್ವಾರಂ ದ್ವಿಹಸ್ತಾಂಘ್ರಿ ತತ್ರಾಮನುತ ಸಾಧ್ವಿತಿ ॥ ೪ ॥

ಬುದ್ಧಿಂ ತು ಪ್ರಮದಾಂ ವಿದ್ಯಾ-
ನ್ಮಮಾಹಮಿತಿ ಯತ್ಕೃತಮ್ ।
ಯಾಮಧಿಷ್ಠಾಯ ದೇಹೇಽಸ್ಮಿ-
ನ್ಪುಮಾನ್ಭುಂಕ್ತೇಽಕ್ಷಭಿರ್ಗುಣಾನ್ ॥ ೫ ॥

ಸಖಾಯ ಇಂದ್ರಿಯಗಣಾ ಜ್ಞಾನಂ ಕರ್ಮ ಚ ಯತ್ಕೃತಮ್ ।
ಸಖ್ಯಸ್ತದ್ ವೃತ್ತಯಃ ಪ್ರಾಣಃ ಪಂಚ ವೃತ್ತಿರ್ಯಥೋರಗಃ ॥ ೬ ॥

ಬೃಹದ್ಬಲಂ ಮನೋ ವಿದ್ಯಾದುಭಯೇಂದ್ರಿಯನಾಯಕಮ್ ।
ಪಂಚಾಲಾಃ ಪಂಚ ವಿಷಯಾ ಯನ್ಮಧ್ಯೇ ನವಖಂ ಪುರಮ್ ॥ ೭ ॥

ಅಕ್ಷಿಣೀ ನಾಸಿಕೇ ಕರ್ಣೌ ಮುಖಂ ಶಿಶ್ನಗುದಾವಿತಿ ।
ದ್ವೇ ದ್ವೇ ದ್ವಾರೌ ಬಹಿರ್ಯಾತಿ ಯಸ್ತದಿಂದ್ರಿಯಸಂಯುತಃ ॥ ೮ ॥

**ರಾಜಾ ಪ್ರಾಚೀನಬರ್ಹಿಯು ಹೇಳಿದನು** – ಪೂಜ್ಯರಾದ ಮುನಿಗಳೇ! ತಮ್ಮ ನುಡಿಗಳ ಅಭಿಪ್ರಾಯವೇನೆಂಬುದು ಪೂರ್ಣವಾಗಿ ನನ್ನ ಮನಸ್ಸಿಗೆ ಬರಲಿಲ್ಲ. ವಿವೇಕಿಗಳೇ ಇದರ ತಾತ್ಪರ್ಯವನ್ನು ಅರಿಯಬಲ್ಲರು. ಕರ್ಮಮೋಹಿತರಾದ ನಮ್ಮಂತಹ ಜೀವರು ತಿಳಿಯಲಾರರು. ॥ ೧ ॥

**ನಾರದರೆಂದರು** – ರಾಜನೇ! ಪುರಂಜನ (ನಗರದ ನಿರ್ಮಾತೃನು) ಜೀವನಾಗಿದ್ದಾನೆ. ಅವನು ತನಗಾಗಿ ಒಂದು, ಎರಡು, ಮೂರು, ನಾಲ್ಕು ಅಥವಾ ಅನೇಕ ಕಾಲುಗಳುಳ್ಳ ಅಥವಾ ಕಾಲುಗಳೇ ಇಲ್ಲದಿರುವ ಶರೀರರೂಪೀ ಪುರವನ್ನು ನಿರ್ಮಿಸಿಕೊಳ್ಳುವನು. ॥ ೨ ॥ ಆತನ ಗೆಳೆಯ ಅವಿಜ್ಞಾತನೆಂದು ಹೇಳಿರುವವನೇ ಈಶ್ವರನಾಗಿರುವನು. ಏಕೆಂದರೆ, ಯಾವುದೇ ವಿಧವಾದ ಹೆಸರುಗಳಿಂದಾಗಲೀ, ಗುಣಗಳಿಂದಾಗಲೀ, ಕರ್ಮಗಳಿಂದಾಗಲೀ ಜೀವರಿಗೆ ಅವನ ಸುಳಿವು ಹತ್ತುವುದಿಲ್ಲ. ॥ ೩ ॥ ಜೀವನು ಸುಖ-ದುಃಖರೂಪವಾದ ಎಲ್ಲ ಪ್ರಾಕೃತ ವಿಷಯಗಳನ್ನು ಅನುಭವಿಸಲು ಇಚ್ಛಿಸಿದಾಗ, ಅವನು ಬೇರೆ ಶರೀರಗಳಿಗಿಂತ ಒಂಭತ್ತು ಬಾಗಿಲುಗಳುಳ್ಳ ಎರಡು ಕೈಗಳು, ಎರಡು ಕಾಲುಗಳುಳ್ಳ ಮಾನವ ದೇಹವನ್ನೇ ಮೆಚ್ಚಿಕೊಂಡನು. ॥ ೪ ॥ ಬುದ್ಧಿ ಅಥವಾ ಅವಿದ್ಯೆಯನ್ನೇ ನೀನು ಪುರಂಜನಿ ಎಂಬ ಸ್ತ್ರೀಯೆಂದು ತಿಳಿ. ಇವಳಿಂದಾಗಿಯೇ ದೇಹ ಮತ್ತು ಇಂದ್ರಿಯಗಳಲ್ಲಿ 'ನಾನು-ನನ್ನದು' ಎಂಬ ಭಾವ ಉಂಟಾಗುತ್ತದೆ. ಪುರುಷನು ಇದನ್ನು ಆಶ್ರಯಿಸಿಯೇ ಶರೀರದಲ್ಲಿ ಇಂದ್ರಿಯಗಳ ಮೂಲಕ ವಿಷಯಗಳನ್ನು ಅನುಭವಿಸುತ್ತಾನೆ. ॥ ೫ ॥ ಹತ್ತು ಇಂದ್ರಿಯಗಳೇ ಅವನ ಮಿತ್ರರು. ಇವುಗಳಿಂದಲೇ ಎಲ್ಲ ರೀತಿಯ ಜ್ಞಾನ ಮತ್ತು ಕರ್ಮಗಳು ಆಗುತ್ತವೆ. ಇಂದ್ರಿಯಗಳ ವೃತ್ತಿಗಳೇ ಅವನ ಸಖಿಯರು. ಪ್ರಾಣ-ಅಪಾನ-ವ್ಯಾನ-ಉದಾನ-ಸಮಾನಗಳೆಂಬ ಐದು ವೃತ್ತಿಗಳುಳ್ಳ ಪ್ರಾಣವಾಯುವೇ ನಗರವನ್ನು ರಕ್ಷಿಸುವ ಐದು ಹೆಡೆಯ ಸರ್ಪವು. ॥ ೬ ॥ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳೆಂಬ ಎರಡು ರೀತಿಯ ಇಂದ್ರಿಯಗಳಿಗೆ ನಾಯಕವಾದ ಮನಸ್ಸನ್ನೇ ಹನ್ನೊಂದನೆಯದಾಗಿರುವ ಮಹಾಬಲಶಾಲಿಯಾದ ಭಟನೆಂದು ತಿಳಿಯಬೇಕು. ಶಬ್ದಾದಿ ಐದು ವಿಷಯಗಳೇ ಪಾಂಚಾಲದೇಶ. ಅದರ ನಡುವೆ ಆ ಒಂಭತ್ತು ಬಾಗಿಲುಗಳುಳ್ಳ ನಗರ ನೆಲೆಸಿದೆ. ॥ ೭ ॥

ಆ ನಗರದಲ್ಲಿ ಒಂದೇ ಜಾಗದಲ್ಲಿ ಎರಡೆರಡು ದ್ವಾರಗಳು ಹೇಳಿವೆಯೋ, ಅದು ಎರಡು ಕಣ್ಣುಗಳು, ಎರಡು ಮೂಗಿನ ಹೊಳ್ಳೆಗಳು ಮತ್ತು ಎರಡು ಕರ್ಣರಂಧ್ರಗಳಿವೆ. ಇವುಗಳೊಂದಿಗೆ ಮುಖ, ಲಿಂಗ, ಗುದ ಇವುಗಳು ಮೂರು, ಹೀಗೆ ಒಟ್ಟಿಗೆ ಸೇರಿ ಒಂಭತ್ತು ದ್ವಾರಗಳಿವೆ. ಇವುಗಳ ಮೂಲಕವೇ ಜೀವನು ಇಂದ್ರಿಯಗಳೊಂದಿಗೆ ಹೊರಗಿನ ವಿಷಯಗಳಲ್ಲಿ ಸಂಚರಿಸುತ್ತಾನೆ. ॥ ೮ ॥

ಅಕ್ಷಿಣೀ ನಾಸಿಕೇ ಆಸ್ಯಮಿತಿ ಪಂಚ ಪುರಃ ಕೃತಾಃ ।
ದಕ್ಷಿಣಾ ದಕ್ಷಿಣಃ ಕರ್ಣ ಉತ್ತರಾ ಚೋತ್ತರಃ ಸ್ಮೃತಃ ॥ ೯ ॥

ಪಶ್ಚಿಮೇ ಇತ್ಯಧೋದ್ವಾರೌಗುದಂ ಶಿಶ್ನಮಿಹೋಚ್ಯತೇ ।
ಖದ್ಯೋತಾವಿರ್ಮುಖೀ ಚಾತ್ರ ನೇತ್ರೇ ಏಕತ್ರ ನಿರ್ಮಿತೇ ।
ರೂಪಂ ವಿಭ್ರಾಜಿತಂ ತಾಭ್ಯಾಂ ವಿಚಷ್ಟೇ ಚಕ್ಷುಷೇಶ್ವರಃ ॥ ೧೦ ॥

ನಲಿನೀ ನಾಲಿನೀ ನಾಸೇ ಗಂಧಃ ಸೌರಭ ಉಚ್ಯತೇ ।
ಘ್ರಾಣೋಽವಧೂತೋ ಮುಖ್ಯಾಸ್ಯಂ ವಿಪಣೋ ವಾಗ್ರಸವಿದ್ರಸಃ ॥ ೧೧ ॥

ಆಪಣೋ ವ್ಯವಹಾರೋಽತ್ರ ಚಿತ್ರಮಂಧೋ ಬಹೂದನಮ್ ।
ಪಿತೃಹೂರ್ದಕ್ಷಿಣಃ ಕರ್ಣ ಉತ್ತರೋ ದೇವಹೂಃ ಸ್ಮೃತಃ ॥ ೧೨ ॥

ಪ್ರವೃತ್ತಂ ಚ ನಿವೃತ್ತಂ ಚ ಶಾಸ್ತ್ರಂ ಪಂಚಾಲಸಂಜ್ಞಿತಮ್ ।
ಪಿತೃಯಾನಂ ದೇವಯಾನಂ ಶ್ರೋತ್ರಾಚ್ಛ್ರುತಧರಾದ್ವ್ರಜೇತ್ ॥ ೧೩ ॥

ಆಸುರೀ ಮೇಢ್ರಮರ್ವಾಗ್ದ್ವಾರ್ವ್ಯ-
ವಾಯೋ ಗ್ರಾಮಿಣಾಂ ರತಿಃ ।
ಉಪಸ್ಥೋ ದುರ್ಮದಃ ಪ್ರೋಕ್ತೋ
ನಿರ್ಋತಿರ್ಗುದ ಉಚ್ಯತೇ ॥ ೧೪ ॥

ವೈಶಸಂ ನರಕಂ ಪಾಯುರ್ಲುಬ್ಧಕೋಽಂಧೌ ತು ಮೇ ಶೃಣು ।
ಹಸ್ತಪಾದೌ ಪುಮಾಂಸ್ತಾಭ್ಯಾಂ ಯುಕ್ತೋ ಯಾತಿ ಕರೋತಿ ಚ ॥ ೧೫ ॥

ಅಂತಃಪುರಂ ಚ ಹೃದಯಂ ವಿಷೂಚಿರ್ಮನ ಉಚ್ಯತೇ ।
ತತ್ರ ಮೋಹಂ ಪ್ರಸಾದಂ ವಾ ಹರ್ಷಂ ಪ್ರಾಪ್ನೋತಿ ತದ್ಗುಣೈಃ ॥ ೧೬ ॥

ಯಥಾ ಯಥಾ ವಿಕ್ರಿಯತೇ ಗುಣಾಕ್ತೋ ವಿಕರೋತಿ ವಾ ।
ತಥಾ ತಥೋಪದ್ರಷ್ಟಾಽಽತ್ಮಾ ತದ್ವೃತ್ತೀರನುಕಾರ್ಯತೇ ॥ ೧೭ ॥

ಇವುಗಳಲ್ಲಿ ಎರಡು ಕಣ್ಣುಗಳು, ಎರಡು ಮೂಗಿನ ಹೊಳ್ಳೆಗಳು, ಒಂದು ಬಾಯಿ ಹೀಗೆ ಐದು ಪೂರ್ವದ ದ್ವಾರಗಳು. ಬಲಕಿವಿಯು ದಕ್ಷಿಣದ ದ್ವಾರ, ಎಡಕಿವಿಯು ಉತ್ತರದ ದ್ವಾರವೆಂದು ತಿಳಿಯಬೇಕು. ॥ ೯ ॥ ಗುದ ಮತ್ತು ಲಿಂಗ ಇವು ಕೆಳಗಿನ ಎರಡು ರಂಧ್ರಗಳು ಪಶ್ಚಿಮದ ದ್ವಾರಗಳು. ಖದ್ಯೋತಾ ಮತ್ತು ಆವಿರ್ಮುಖಿ ಎಂಬ ಎರಡು ದ್ವಾರಗಳು ಒಂದೇ ಸ್ಥಾನದಲ್ಲಿ ಹೇಳಿರುವುದು ಎರಡು ಕಣ್ಣುಗಳು. ರೂಪ, ವಿಭ್ರಾಜಿತ ಎಂಬ ದೇಶಗಳನ್ನು ಈ ದ್ವಾರಗಳಿಂದ ಜೀವನು ಚಕ್ಷುರಿಂದ್ರಿಯದ ಸಹಾಯದಿಂದ ಅನುಭವಿಸುತ್ತಾನೆ (ಚಕ್ಷು – ಇಂದ್ರಿಯವನ್ನೇ ಮೊದಲು ದ್ಯುಮಾನ್ ಎಂಬ ಮಿತ್ರನೆಂದು ಹೇಳಿತ್ತು). ॥ ೧೦ ॥ ಎರಡು ಮೂಗುಹೊಳ್ಳೆಗಳೇ ನಲಿನೀ ಮತ್ತು ನಾಲಿನೀ ಎಂಬ ದ್ವಾರಗಳು ಮತ್ತು ಮೂಗಿನ ವಿಷಯಗಂಧವೇ ಸೌರಭದೇಶ. ಘ್ರಾಣೇಂದ್ರಿಯವೇ ಅವಧೂತನೆಂಬ ಮಿತ್ರನು. ಮುಖವು ಮುಖ್ಯವೆಂಬ ದ್ವಾರವಾಗಿದೆ. ಅವರಲ್ಲಿ ಇರುವ ವಾಗಿಂದ್ರಿಯವೇ ವಿಪಣವು ಮತ್ತು ರಸನೇಂದ್ರಿಯವೇ ರಸವಿದ್ (ರಸಜ್ಞ) ಎಂಬ ಮಿತ್ರನಾಗಿದ್ದಾನೆ. ॥ ೧೧ ॥ ವಾಣಿಯ ವ್ಯವಹಾರಕ್ಕೆ ಆಪಣವೆಂದೂ, ಬಗೆ-ಬಗೆಯ ಅನ್ನಗಳಿಗೆ ಬಹೂದನವೆಂದೂ ಹಾಗೂ ಬಲಕಿವಿಗೆ ಪಿತೃಹೂ ಮತ್ತು ಎಡಕಿವಿಗೆ ದೇವಹೂ ಎಂದು ಹೇಳಲಾಗಿದೆ. ॥ ೧೨ ॥ ಕರ್ಮಕಾಂಡರೂಪವಾದ ಪ್ರವೃತ್ತಿಮಾರ್ಗದ ಶಾಸ್ತ್ರ ಮತ್ತು ಉಪಾಸನಾರೂಪವಾದ ನಿವೃತ್ತಿಮಾರ್ಗದ ಶಾಸ್ತ್ರಗಳೇ ಕ್ರಮವಾಗಿ ದಕ್ಷಿಣ ಹಾಗೂ ಉತ್ತರ ಪಾಂಚಾಲ ದೇಶಗಳು. ಇವುಗಳನ್ನು ಶ್ರವಣೇಂದ್ರಿಯರೂಪವಾದ ಶ್ರುತಧರನ ಸಹಾಯದಿಂದ ಕೇಳಿಕೊಂಡು ಜೀವನು ಕ್ರಮವಾಗಿ ಪಿತೃಯಾನ ಮತ್ತು ದೇವಯಾನ ಮಾರ್ಗಗಳಲ್ಲಿ ಹೋಗುತ್ತಾನೆ. ॥ ೧೩ ॥ ಲಿಂಗವೇ ಆಸುರೀ ಎಂಬ ಪಶ್ಚಿಮದ ದ್ವಾರವಾಗಿದೆ. ಸ್ತ್ರೀಪ್ರಸಂಗವೇ ಗ್ರಾಮಕವೆಂಬ ದೇಶವು. ಲಿಂಗದಲ್ಲಿರುವ ಉಪಸ್ಥೇಂದ್ರಿಯವೇ ದುರ್ಮದ ಎಂಬ ಮಿತ್ರನು. ಗುದವು ನಿರ್ಋತಿ ಎಂಬ ಪಶ್ಚಿಮದ ದ್ವಾರವಾಗಿದೆ. ॥ ೧೪ ॥ ನರಕ ವೈಶಸ ಎಂಬ ದೇಶ, ಗುದದಲ್ಲಿರುವ ಪಾಯು ಇಂದ್ರಿಯವೇ ಲುಬ್ಧಕನೆಂಬ ಮಿತ್ರನು. ಇವರಲ್ಲದೆ ಇಬ್ಬರು ಕುರುಡರು ಹೇಳಲಾಗಿತ್ತು. ಅವರ ರಹಸ್ಯವನ್ನು ಕೇಳು. ಅವು ಕೈ ಮತ್ತು ಕಾಲುಗಳಾಗಿವೆ. ಇವುಗಳ ಸಹಾಯದಿಂದಲೇ ಜೀವಿಯು ಕ್ರಮವಾಗಿ ಎಲ್ಲ ಕೆಲಸವನ್ನು ಮಾಡುತ್ತಾನೆ ಮತ್ತು ಅಲ್ಲಲ್ಲಿಗೆ ಹೋಗುತ್ತಾನೆ. ॥ ೧೫ ॥ ಹೃದಯವೇ ಅಂತಃಪುರವು. ಅದರಲ್ಲಿ ವಾಸಿಸುವ ಮನಸ್ಸೇ ವಿಷೂಚಿ (ವಿಷೂಚೀನ್) ಎಂಬ ಪ್ರಧಾನ ಸೇವಕನು. ಜೀವನು ಆ ಮನಸ್ಸಿನ ಸತ್ತ್ವಾದಿ ಗುಣಗಳಿಂದಾಗಿಯೇ ಪ್ರಸನ್ನತೆ, ಹರ್ಷ ಮುಂತಾದ ವಿಕಾರಗಳನ್ನು ಅಥವಾ ಮೋಹವನ್ನು ಪಡೆಯುತ್ತಾನೆ. ॥ ೧೬ ॥ ಜೀವನು ಸ್ವತಃ ವಿಕಾರ ರಹಿತನಾಗಿದ್ದರೂ, ಸಾಕ್ಷಿಮಾತ್ರನೇ ಆಗಿದ್ದರೂ ಬುದ್ಧಿಗೆ (ಮಹಾರಾಣಿ ಪುರಂಜನಿ) ಅಡಿಯಾಳಿನಂತೆ ಇರುತ್ತಾನೆ. ಬುದ್ಧಿಯ ಗುಣಗಳಿಂದ ಲೇಪಿಸಲ್ಪಟ್ಟು ಬುದ್ಧಿಯು ಕನಸಿನ ಸ್ಥಿತಿಯಲ್ಲಿ ವಿಕಾರಹೊಂದುತ್ತದೋ, ಎಚ್ಚರದ ಸ್ಥಿತಿಯಲ್ಲಿ ಇಂದ್ರಿಯಗಳೇ ಮುಂತಾದವುಗಳನ್ನು ವಿಕಾರಗೊಳಿಸುತ್ತದೆಯೋ ಹಾಗೆಯೇ ಅವನು ಅದರ ವೃತ್ತಿಗಳನ್ನು ಅನುಸರಿಸಬೇಕಾಗುತ್ತದೆ. ॥ ೧೭ ॥

ದೇಹೋ ರಥಸ್ತ್ವಿಂದ್ರಿಯಾಶ್ವಃ ಸಂವತ್ಸರರಯೋಽಗತಿಃ ।
ದ್ವಿಕರ್ಮಚಕ್ರಸ್ತ್ರಿಗುಣಧ್ವಜಃ ಪಂಚಾಸುಬಂಧುರಃ ॥ ೧೮ ॥

ಮನೋರಶ್ಮಿರ್ಬುದ್ಧಿ ಸೂತೋ ಹೃನ್ನೀಡೋ ದ್ವಂದ್ವಕೂಬರಃ ।
ಪಂಚೇಂದ್ರಿಯಾರ್ಥಪ್ರಕ್ಷೇಪಃ ಸಪ್ತಧಾತುವರೂಥಕಃ ॥ ೧೯ ॥

ಆಕೂತಿರ್ವಿಕ್ರಮೋ ಬಾಹ್ಯೋ ಮೃಗತೃಷ್ಣಾಂ ಪ್ರಧಾವತಿ ।
ಏಕಾದಶೇಂದ್ರಿಯಚಮೂಃ ಪಂಚಸೂನಾವಿನೋದಕೃತ್ ॥ ೨೦ ॥

ಸಂವತ್ಸರಶ್ಚಂಡವೇಗಃ ಕಾಲೋ ಯೇನೋಪಲಕ್ಷಿತಃ ।
ತಸ್ಯಾಹಾನೀಹ ಗಂಧರ್ವಾ ಗಂಧರ್ವ್ಯೋ ರಾತ್ರಯಃ ಸ್ಮೃತಾಃ ।
ಹರಂತ್ಯಾಯುಃ ಪರಿಕ್ರಾಂತ್ಯಾ ಷಷ್ಟ್ಯುತ್ತರಶತತ್ರಯಮ್ ॥ ೨೧ ॥

ಕಾಲಕನ್ಯಾ ಜರಾ ಸಾಕ್ಷಾಲ್ಲೋಕಸ್ತಾಂ ನಾಭಿನಂದತಿ ।
ಸ್ವಸಾರಂ ಜಗೃಹೇ ಮೃತ್ಯುಃ ಕ್ಷಯಾಯ ಯವನೇಶ್ವರಃ ॥ ೨೨ ॥

ಆಧಯೋ ವ್ಯಾಧಯಸ್ತಸ್ಯ ಸೈನಿಕಾ ಯವನಾಶ್ಚರಾಃ ।
ಭೂತೋಪಸರ್ಗಾಶುರಯಃ ಪ್ರಜ್ವಾರೋ ದ್ವಿವಿಧೋ ಜ್ವರಃ ॥ ೨೩ ॥

ಏವಂ ಬಹುವಿಧೈರ್ದುಃಖೈರ್ದೈವಭೂತಾತ್ಮ ಸಂಭವೈಃ ।
ಕ್ಲಿಶ್ಯಮಾನಃ ಶತಂ ವರ್ಷಂ ದೇಹೇ ದೇಹೀ ತಮೋವೃತಃ ॥ ೨೪ ॥

ಪ್ರಾಣೇಂದ್ರಿಯಮನೋಧರ್ಮಾನಾತ್ಮನ್ಯಧ್ಯಸ್ಯ ನಿರ್ಗುಣಃ ।
ಶೇತೇ ಕಾಮಲವಾನ್‌ಧ್ಯಾಯನ್ಮಮಾಹಮಿತಿ ಕರ್ಮಕೃತ್ ॥ ೨೫ ॥

ಯದಾಽಽತ್ಮಾನಮವಿಜ್ಞಾಯ ಭಗವಂತಂ ಪರಂ ಗುರುಮ್ ।
ಪುರುಷಸ್ತು ವಿಷಜ್ಜೇತ ಗುಣೇಷು ಪ್ರಕೃತೇಃ ಸ್ವದೃಕ್ ॥ ೨೬ ॥

ಶರೀರವೇ ರಥವಾಗಿದೆ. ಅದರಲ್ಲಿ ಜ್ಞಾನೇಂದ್ರಿಯರೂಪೀ ಐದು ಕುದುರೆಗಳು ಹೂಡಲ್ಪಟ್ಟಿವೆ. ವಾಸ್ತವವಾಗಿ ಅವು ಗತಿಹೀನ ವಾಗಿದ್ದರೂ ನೋಡುವುದಕ್ಕೆ ಸಂವತ್ಸರರೂಪವಾದ ಕಾಲ ದಂತೆಯೇ ಅಡೆ-ತಡೆಗಳಿಲ್ಲದ ವೇಗವನ್ನು ಹೊಂದಿರುವುದು. ಪುಣ್ಯ ಮತ್ತು ಪಾಪಗಳೆಂಬ ಎರಡು ರೀತಿಯ ಕರ್ಮಗಳೇ ಆ ರಥದ ಎರಡು ಗಾಲಿಗಳು. ತ್ರಿಗುಣಗಳೇ ಆ ರಥದ ಧ್ವಜಗಳು. ಪಂಚಪ್ರಾಣಗಳೇ ಹಗ್ಗಗಳಾಗಿವೆ. ॥ ೧೮ ॥ ಮನಸ್ಸೇ ಲಗಾಮು, ಬುದ್ಧಿಯೇ ಸಾರಥಿ. ಹೃದಯವೇ ಕುಳಿತುಕೊಳ್ಳುವ ಸ್ಥಾನ. ಸುಖ-ದುಃಖಾದಿ ದ್ವಂದ್ವಗಳೇ ಅದರ ನೊಗ. ಶಬ್ದ-ಸ್ಪರ್ಶಾದಿ ವಿಷಯಗಳೇ ಅದರಲ್ಲಿರಿಸಿದ ಆಯುಧಗಳು. ಚರ್ಮವೇ ಮುಂತಾದ ಸಪ್ತಧಾತುಗಳು ಅದರ ಆವರಣಗಳು. ॥ ೧೯ ॥ ಐದು ಕರ್ಮೇಂದ್ರಿಯಗಳೇ ಅದರ ಐದು ಬಗೆಯ ಗತಿಗಳಾಗಿವೆ. ಇಂತಹ ರಥವನ್ನೇರಿ ರಥಿಯಾಗಿರುವ ಜೀವನು ಬಿಸಿಲ್ಗುದುರೆಯಂತಿರುವ ಮಿಥ್ಯಾ ವಿಷಯಗಳ ಕಡೆಗೆ ವೇಗದಿಂದ ಓಡುತ್ತಾನೆ. ಹನ್ನೊಂದು ಇಂದ್ರಿಯಗಳೇ ಆತನ ಸೇನೆಯಾಗಿದೆ. ಐದೂ ಜ್ಞಾನೇಂದ್ರಿಯಗಳ ಮೂಲಕ ಅಯಾ ಇಂದ್ರಿಯ ವಿಷಯಗಳನ್ನು ಅನ್ಯಾಯದಿಂದ ಗ್ರಹಣಮಾಡುವುದೇ ಬೇಟೆಯಾಡುವುದು. ॥ ೨೦ ॥

ಕಾಲದ ಜ್ಞಾನವನ್ನುಂಟುಮಾಡುವ ಸಂವತ್ಸರವೇ ಚಂಡವೇಗ ನೆಂಬ ಗಂಧರ್ವರಾಜನು. ಆತನ ಅಧೀನದಲ್ಲಿ ಮುನ್ನೂರ ಅರವತ್ತು ಮಂದಿ ಗಂಧರ್ವರಿದ್ದಾರೆಂದು ಹೇಳಿತ್ತಲ್ಲ, ಅವರೇ ಹಗಲುಗಳು. ಮೂನ್ನೂರಅರವತ್ತು ಮಂದಿ ಗಂಧರ್ವಸ್ತ್ರೀಯರು ರಾತ್ರಿಗಳು. ಅವರು ಮೇಲಿಂದಮೇಲೆ ಸುತ್ತುತ್ತಾ ಮನುಷ್ಯರ ಆಯುಸ್ಸನ್ನು ಅಪಹರಿಸುತ್ತಿರುವರು. ॥ ೨೧ ॥ ವೃದ್ಧಾವಸ್ಥೆಯೇ ಸಾಕ್ಷಾತ್ ಕಾಲಕನ್ಯೆಯು. ಆಕೆಯನ್ನು ಯಾವ ಮನುಷ್ಯನೂ ಮೆಚ್ಚು ವುದಿಲ್ಲ. ಮೃತ್ಯುವೆಂಬ ಯವನರಾಜನು ಲೋಕವನ್ನು ಸಂಹರಿಸು ವುದಕ್ಕೋಸ್ಕರ ಆಕೆಯನ್ನು ತನ್ನ ತಂಗಿಯಾಗಿ ಸ್ವೀಕರಿಸಿ ದನು. ॥ ೨೨ ॥ ಆಧಿ(ಮಾನಸಿಕ) ಮತ್ತು ವ್ಯಾಧಿ (ದೈಹಿಕ) ರೋಗ ಗಳೇ ಆತನ ಕಾಲಾಳು ಪಡೆಗಳು. ಪ್ರಾಣಿಗಳಿಗೆ ಪೀಡೆಯನ್ನುಂಟು ಮಾಡಿ ಮೃತ್ಯುವಿನ ಮುಖಕ್ಕೆ ಒಯ್ಯುವ ಶೀತಜ್ವರ ಮತ್ತು ಉಷ್ಣಜ್ವರಗಳೆಂಬ ಎರಡೂ ಆತನ ಸೋದರನೆಂದು ಹೇಳಿದ ಪ್ರಜ್ವಾರನು. ॥ ೨೩ ॥

ಈ ಪ್ರಕಾರ ದೇಹಾಭಿಮಾನಿಯಾದ ಜೀವನು ಅಜ್ಞಾನದಿಂದ ಆಚ್ಛಾದಿತನಾಗಿ ಬಗೆ-ಬಗೆಯ ಆಧಿಭೌತಿಕ, ಆಧ್ಯಾತ್ಮಿಕ, ಆಧಿದೈವಿಕ ಕ್ಲೇಶಗಳನ್ನು ಅನುಭವಿಸುತ್ತಾ ನೂರು ವರ್ಷಗಳವರೆಗೆ ಮನುಷ್ಯಶರೀರದಲ್ಲಿರುತ್ತಾನೆ. ॥ ೨೪॥ ವಾಸ್ತವವಾಗಿ ಈತನು ತ್ರಿಗುಣರಹಿತನು. ಆದರೆ ಪ್ರಾಣ, ಇಂದ್ರಿಯಗಳು ಮತ್ತು ಮನಸ್ಸಿನ ಧರ್ಮಗಳನ್ನು ತನ್ನಲ್ಲಿ ಆರೋಪಿಸಿಕೊಂಡು 'ನಾನು-ನನ್ನದು' ಎಂಬ ಅಭಿಮಾನದಿಂದ ಬಂಧಿತನಾಗಿ ಕ್ಷುದ್ರ ವಿಷಯ ಗಳನ್ನು ಚಿಂತಿಸುತ್ತಾ, ಬಗೆ-ಬಗೆಯ ಕರ್ಮಗಳನ್ನು ಮಾಡುತ್ತಿರು ತ್ತಾನೆ. ॥ ೨೫ ॥ ಈ ಜೀವನು ಸ್ವಯಂಪ್ರಕಾಶನಾಗಿದ್ದರೂ – ಎಲ್ಲರ ಪರಮಗುರು ಆತ್ಮಸ್ವರೂಪವಾದ ಶ್ರೀಭಗವಂತನ ಸ್ವರೂಪ ವನ್ನು ತಿಳಿದುಕೊಳ್ಳುವವರೆಗೆ ಪ್ರಕೃತಿಯ ಗುಣಗಳಲ್ಲೇ ಬಂಧಿ ತನಾಗಿರುತ್ತಾನೆ. ॥ ೨೬ ॥

ಗುಣಾಭಿಮಾನೀ ಸ ತದಾ ಕರ್ಮಾಣಿ ಕುರುತೇಽವಶಃ ।
ಶುಕ್ಲಂ ಕೃಷ್ಣಂ ಲೋಹಿತಂ ವಾ ಯಥಾಕರ್ಮಾಭಿಜಾಯತೇ
॥ ೨೭ ॥

ಶುಕ್ಲಾತ್ಪ್ರಕಾಶಭೂಯಿಷ್ಠಾ-
ಲ್ಲೋಕಾನಾಪ್ನೋತಿ ಕರ್ಹಿಚಿತ್ ।
ದುಃಖೋದರ್ಕಾನ್ ಕ್ರಿಯಾಯಾಸಾಂ-
ಸ್ತಮಃ ಶೋಕೋತ್ಕಟಾನ್ ಕ್ವಚಿತ್ ॥ ೨೮ ॥

ಕ್ವಚಿತ್ಪುಮಾನ್ಕ್ವಚಿಚ್ಚ ಸ್ತ್ರೀ ಕ್ವಚಿನ್ನೋಭಯಮಂಧಧೀಃ ।
ದೇವೋ ಮನುಷ್ಯಸ್ತಿರ್ಯಗ್ವಾ ಯಥಾಕರ್ಮಗುಣಂ ಭವಃ
॥ ೨೯ ॥

ಕ್ಷುತ್ಪರೀತೋ ಯಥಾ ದೀನಃ ಸಾರಮೇಯೋ ಗೃಹಂ ಗೃಹಮ್ ।
ಚರನ್ವಿಂದತಿ ಯದ್ದಿಷ್ಟಂ ದಂಡ ಮೋದನಮೇವ ವಾ
॥ ೩೦ ॥

ತಥಾ ಕಾಮಾಶಯೋ ಜೀವ
ಉಚ್ಚಾವಚಪಥಾ ಭ್ರಮನ್ ।
ಉಪರ್ಯಧೋ ವಾ ಮಧ್ಯೇ ವಾ
ಯಾತಿ ದಿಷ್ಟಂ ಪ್ರಿಯಾಪ್ರಿಯಮ್ ॥ ೩೧ ॥

ದುಃಖೇಷ್ವೇಕತರೇಣಾಪಿ ದೈವಭೂತಾತ್ಮಹೇತುಷು ।
ಜೀವಸ್ಯ ನ ವ್ಯವಚ್ಛೇದಃ ಸ್ಯಾಚ್ಚೇತ್ತತ್ತತ್ಪ್ರತಿಕ್ರಿಯಾ
॥ ೩೨ ॥

ಯಥಾ ಹಿ ಪುರುಷೋ ಭಾರಂ ಶಿರಸಾ ಗುರುಮುದ್ವಹನ್ ।
ತಂ ಸ್ಕಂಧೇನ ಸ ಆಧತ್ತೇ ತಥಾ ಸರ್ವಾಃ ಪ್ರತಿಕ್ರಿಯಾಃ
॥ ೩೩ ॥

ನೈಕಾಂತತಃ ಪ್ರತೀಕಾರಃ ಕರ್ಮಣಾಂ ಕರ್ಮ ಕೇವಲಮ್ ।
ದ್ವಯಂ ಹ್ಯವಿದ್ಯೋಪಸೃತಂ ಸ್ವಪ್ನೇ ಸ್ವಪ್ನ ಇವಾನಘ
॥ ೩೪ ॥

ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।
ಮನಸಾ ಲಿಂಗರೂಪೇಣ ಸ್ವಪ್ನೇ ವಿಚರತೋ ಯಥಾ
॥ ೩೫ ॥

ಈ ಗುಣಗಳಲ್ಲಿ ಅಭಿಮಾನಪರವಶನಾಗಿ ಈತನು ಸಾತ್ತ್ವಿಕ, ರಾಜಸ, ತಾಮಸ ಕರ್ಮಗಳನ್ನು ಆಚರಿಸುತ್ತಾ, ಅವುಗಳಿಗೆ ತಕ್ಕಂತೆ ಬೇರೆ-ಬೇರೆ ಯೋನಿಗಳಲ್ಲಿ ಜನ್ಮತಾಳುತ್ತಿರುತ್ತಾನೆ. ॥ ೨೭ ॥ ಕೆಲವೊಮ್ಮೆ ಸಾತ್ತ್ವಿಕ ಕರ್ಮಗಳ ಮೂಲಕ ಅವನು ಪ್ರಕಾಶವೇ ಹೆಚ್ಚಾಗಿರುವ ಸ್ವರ್ಗಾದಿ ಲೋಕಗಳನ್ನು ಹೊಂದುವನು. ಕೆಲವೊಮ್ಮೆ ರಾಜಸ ಕರ್ಮಗಳ ಮೂಲಕ ದುಃಖಮಯ ರಾಜಸೀ ಲೋಕಗಳನ್ನು ಪಡೆದು, ಬಗೆ-ಬಗೆಯ ಕರ್ಮಗಳ ಕ್ಲೇಶಗಳನ್ನು ಅನುಭವಿಸುವನು ಮತ್ತು ಕೆಲವೊಮ್ಮೆ ತಮೋಗುಣದ ಕರ್ಮಗಳ ಮೂಲಕ ಅತ್ಯಧಿಕ ಶೋಕದಿಂದ ತುಂಬಿದ ಯೋನಿಗಳಲ್ಲಿ ಹುಟ್ಟುವನು. ॥ ೨೮ ॥ ಹೀಗೆ ತನ್ನ ಕರ್ಮ ಮತ್ತು ಗುಣಗಳನು ಸಾರವಾಗಿ ದೇವಯೋನಿ, ಮನುಷ್ಯಯೋನಿ ಅಥವಾ ಪಶು-ಪಕ್ಷಿ ಯೋನಿಗಳಲ್ಲಿ ಹುಟ್ಟಿ ಅಜ್ಞಾನದಿಂದ ಕುರುಡನಾದ ಈ ಜೀವಿಯು ಕೆಲವೊಮ್ಮೆ ಪುರುಷನಾಗಿ, ಕೆಲವೊಮ್ಮೆ ಸ್ತ್ರೀಯಾಗಿ, ಕೆಲವೊಮ್ಮೆ ನಪುಂಸಕನಾಗುತ್ತಾನೆ. ॥ ೨೯ ॥ ಬಡಪಾಯಿಯಾದ ನಾಯಿಯು ಹಸಿವಿಗೆ ತುತ್ತಾಗಿ ಮನೆ-ಮನೆಗೆ ಅಲೆಯುತ್ತಾ ತನ್ನ ಅದೃಷ್ಟದಂತೆ ಕೆಲವೊಮ್ಮೆ ಜನರಿಂದ ಏಟು ತಿನ್ನುವುದು, ಕೆಲವೊಮ್ಮೆ ಅನ್ನವನು ತಿನ್ನುವಂತೆಯೇ ಈ ಜೀವನು ಚಿತ್ತದಲ್ಲಿ ಬಗೆ-ಬಗೆಯ ವಾಸನೆಗಳನ್ನು ತುಂಬಿಕೊಂಡು ಮೇಲಿನ ಮತ್ತು ಕೆಳಗಿನ ಮಾರ್ಗಗಳಿಂದ ಮೇಲಿನ ಲೋಕಗಳಿಗೋ, ಕೆಳಗಿನ ಲೋಕಗಳಿಗೋ ಅಥವಾ ಮಧ್ಯದ ಲೋಕಗಳಿಗೋ ಹೋಗಿ ಅಲೆಯುತ್ತಾ ತನ್ನ ಕರ್ಮಗಳಿಗೆ ಅನುಸಾರವಾಗಿ ಸುಖ-ದುಃಖಗಳನ್ನು ಅನುಭವಿಸುವನು. ॥ ೩೦-೩೧ ॥

ಅಜ್ಞಾನಿಯಾದ ಜೀವನು ಆಧಿದೈವಿಕ, ಆಧಿಭೌತಿಕ ಮತ್ತು ಆಧ್ಯಾತ್ಮಿಕ ಈ ಮೂರು ಪ್ರಕಾರದ ದುಃಖಗಳಲ್ಲಿ ಯಾವುದರಿಂದಲೂ ಪೂರ್ಣವಾಗಿ ಬಿಡುಗಡೆ ಹೊಂದಲಾರನು. ಎಂದಾದರೂ ಏನಾದರೂ ಸ್ವಲ್ಪ ಬಿಡುಗಡೆಯಾದಂತೆ ತೋರಿದರೂ ಅದು ಕೇವಲ ತಾತ್ಕಾಲಿಕವಾದ ನಿವೃತ್ತಿಯೇ ಆಗಿದೆ. ॥ ೩೨ ॥ ತಲೆಯ ಮೇಲೆ ದೊಡ್ಡ ಭಾರವನ್ನು ಹೊತ್ತುಕೊಂಡು ಹೋಗುವವನು ಅದನ್ನು ಹೆಗಲಮೇಲೆ ಇರಿಸಿಕೊಂಡಂತೆಯೇ ಇದು ಆಗಿದೆ. ಹೀಗೆಯೇ ಎಲ್ಲ ಪ್ರತಿಕ್ರಿಯೆ (ದುಃಖ-ನಿವೃತ್ತಿ) ಎಂದು ತಿಳಿಯ ಬೇಕು. ಯಾವುದೇ ಉಪಾಯದಿಂದ ಮನುಷ್ಯನು ಒಂದು ರೀತಿಯ ದುಃಖದಿಂದ ಬಿಡುಗಡೆ ಹೊಂದಿದರೆ ಮತ್ತೊಂದು ದುಃಖವು ಅವನ ತಲೆಗಡರುತ್ತದೆ. ॥ ೩೩ ॥ ಎಲೈ ಪಾಪರಹಿತನಾದ ರಾಜೇಂದ್ರನೇ! ಸ್ವಪ್ನದಲ್ಲಿ ಉಂಟಾಗುವ ಸ್ವಪ್ನಾಂತರವು ಆ ಸ್ವಪ್ನದಿಂದ ಪೂರ್ಣವಾಗಿ ಬಿಡುಗಡೆಯಲ್ಲ ತಾನೇ! ಹಾಗೆಯೇ ಕೇವಲ ಕರ್ಮವೇ ಕರ್ಮಫಲಭೋಗದಿಂದ ಪೂರ್ಣವಾಗಿ ಪಾರಾಗುವುದಕ್ಕೆ ಉಪಾಯವಾಗಲಾರದು. ಏಕೆಂದರೆ, ಕರ್ಮ ಮತ್ತು ಕರ್ಮಫಲ ಇವೆರಡೂ ಅವಿದ್ಯೆ ಯಿಂದಲೇ ಕೂಡಿವೆ. ॥ ೩೪ ॥ ಸ್ವಪ್ನಾವಸ್ಥೆ ಯಲ್ಲಿ ತನ್ನ ಮನೋ ಮಯವಾದ ಲಿಂಗಶರೀರದಿಂದ ಸಂಚರಿಸುವ ಪ್ರಾಣಿಗೆ ಕನಸಿನಲ್ಲಿ ಪದಾರ್ಥಗಳಿಲ್ಲದೆಯೇ ಕಾಣುತ್ತವೆ. ಹಾಗೆಯೇ ಅಜ್ಞಾನ ನಿದ್ರೆಯು ಕಳೆದು ಹೋಗುವವರೆಗೂ ಈ ದೃಶ್ಯ ಪದಾರ್ಥಗಳೂ ಕಂಡೇ ಕಾಣುತ್ತವೆ. ಹುಟ್ಟು-ಸಾವುಗಳ ರೂಪವಾದ ಸಂಸಾರದಿಂದ ಬಿಡುಗಡೆಯುಂಟಾಗು

ಅಥಾತ್ಮನೋಽರ್ಥಭೂತಸ್ಯ ಯತೋಽನರ್ಥಪರಂಪರಾ ।
ಸಂಸೃತಿಸ್ತದ್ವ್ಯವಚ್ಛೇದೋಭಕ್ತ್ಯಾ ಪರಮಯಾ ಗುರೌ
॥ ೩೬ ॥

ವಾಸುದೇವೇಭಗವತಿ ಭಕ್ತಿಯೋಗಃ ಸಮಾಹಿತಃ ।
ಸಧ್ರೀಚೀನೇನ ವೈರಾಗ್ಯಂ ಜ್ಞಾನಂ ಚ ಜನಯಿಷ್ಯತಿ
॥ ೩೭ ॥

ಸೋಽಚಿರಾದೇವ ರಾಜರ್ಷೇ ಸ್ಯಾದಚ್ಯುತಕಥಾಶ್ರಯಃ ।
ಶೃಣ್ವತಃ ಶ್ರದ್ದಧಾನಸ್ಯ ನಿತ್ಯದಾ ಸ್ಯಾದಧೀಯತಃ
॥ ೩೮ ॥

ಯತ್ರ ಭಾಗವತಾ ರಾಜನ್ಸಾಧವೋ ವಿಶದಾಶಯಾಃ ।
ಭಗವದ್ಗುಣಾನುಕಥನಶ್ರವಣವ್ಯಗ್ರಚೇತಸಃ
॥ ೩೯ ॥

ತಸ್ಮಿನ್ಮಹನ್ಮುಖರಿತಾ ಮಧುಭಿಚ್ಚರಿತ್ರ-
ಪೀಯೂಷಶೇಷಸರಿತಃ ಪರಿತಃ ಸ್ರವಂತಿ ।
ತಾ ಯೇ ಪಿಬಂತ್ಯವಿತೃಷೋ ನೃಪ ಗಾಢಕರ್ಣೈಃ
ತಾನ್ನ ಸ್ಪೃಶಂತ್ಯ ಶನತೃಡ್ಭಯಶೋಕಮೋಹಾಃ ॥ ೪೦ ॥

ಏತೈರುಪದ್ರುತೋ ನಿತ್ಯಂ ಜೀವಲೋಕಃ ಸ್ವಭಾವಜೈಃ ।
ನ ಕರೋತಿ ಹರೇರ್ನೂನಂ ಕಥಾಮೃತನಿಧೌ ರತಿಮ್
॥ ೪೧ ॥

ಪ್ರಜಾಪತಿಪತಿಃ ಸಾಕ್ಷಾದ್ಭಗವಾನ್ಗಿರಿಶೋ ಮನುಃ ।
ದಕ್ಷಾದಯಃ ಪ್ರಜಾಧ್ಯಕ್ಷಾ ನೈಷ್ಠಿಕಾಃ ಸನಕಾದಯಃ
॥ ೪೨ ॥

ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ।
ಭೃಗುರ್ವಸಿಷ್ಠ ಇತ್ಯೇತೇ ಮದಂತಾ ಬ್ರಹ್ಮವಾದಿನಃ
॥ ೪೩ ॥

ಅದ್ಯಾಪಿ ವಾಚಸ್ಪತಯಸ್ತಪೋವಿದ್ಯಾ ಸಮಾಧಿಭಿಃ ।
ಪಶ್ಯಂತೋಽಪಿ ನ ಪಶ್ಯಂತಿ ಪಶ್ಯಂತಂ ಪರಮೇಶ್ವರಮ್
॥ ೪೪ ॥

ಶಬ್ದಬ್ರಹ್ಮಣಿ ದುಷ್ಪಾರೇ ಚರಂತ ಉರುವಿಸ್ತರೇ ।
ಮಂತ್ರಲಿಂಗೈರ್ವ್ಯವಚ್ಛಿನ್ನಂ ಭಜಂತೋ ನ ವಿದುಃ ಪರಮ್
॥ ೪೫ ॥

ಯದಾ ಯಮನುಗೃಹ್ಣಾತಿ ಭಗವಾನಾತ್ಮಭಾವಿತಃ ।
ಸ ಜಹಾತಿ ಮತಿಂ ಲೋಕೇ ವೇದೇ ಚ ಪರಿನಿಷ್ಠಿತಾಮ್
॥ ೪೬ ॥

ವುದೇ ಇಲ್ಲ. ಆತ್ಮಜ್ಞಾನವೊಂದೇ ಇವುಗಳನ್ನು ಅವಶ್ಯವಾಗಿ ತೊಲಗಿಸುವ ಉಪಾಯವಾಗಿದೆ. ॥ ೩೫ ॥

ಎಲೈ ರಾಜನೇ! ಪರಮಾರ್ಥಸ್ವರೂಪನಾದ ಆತ್ಮನ ಹುಟ್ಟು ಸಾವುಗಳ ರೂಪವಾದ ಈ ಅನರ್ಥಪರಂಪರೆಗೆ ಕಾರಣವಾದ ಅವಿದ್ಯೆಯು ಗುರುಸ್ವರೂಪನಾದ ಶ್ರೀಹರಿಯಲ್ಲಿ ದೃಢವಾದ ಭಕ್ತಿಯುಂಟಾದಾಗಲೇ ತೊಲಗುವುದು. ॥ ೩೬ ॥ ಭಗವಾನ್ ವಾಸುದೇವನಲ್ಲಿ ಭಕ್ತಿಯೋಗವು ಚೆನ್ನಾಗಿ ನೆಲೆಗೊಂಡರೆ ಅದರಿಂದ ಜ್ಞಾನ-ವೈರಾಗ್ಯಗಳು ಉಂಟಾಗುವುವು. ॥ ೩೭ ॥ ರಾಜರ್ಷಿಯೇ! ಈ ಭಕ್ತಿಭಾವವು ಭಗವಂತನ ಕಥೆಗಳಲ್ಲಿ ಆಶ್ರಿತವಾಗಿರುತ್ತದೆ. ಅದಕ್ಕಾಗಿ ಶ್ರದ್ಧೆಯಿಂದ ಅವನ್ನು ಕೇಳುವವನು ಅಥವಾ ಓದುವವನು ಅದನ್ನು ಬೇಗನೇ ಪಡೆದುಕೊಳ್ಳುವನು. ॥ ೩೮ ॥ ರಾಜನೇ! ಶ್ರೀಭಗವಂತನ ಗುಣಗಳನ್ನು ಹೇಳುವುದರಲ್ಲಿಯೂ, ಕೇಳುವುದರಲ್ಲಿಯೂ ಆಸಕ್ತರಾಗಿರುವ ಪರಿಶುದ್ಧ ಚಿತ್ತವುಳ್ಳ ಭಕ್ತ ಜನರು ಇರುವ ಸಾಧುಸಮಾಜದಲ್ಲಿ ಎಲ್ಲ ಕಡೆಗಳಲ್ಲಿಯೂ ಮಹಾಪುರುಷರ ಮುಖದಿಂದ ಹೊರಟ ಭಗವಾನ್ ಮಧುಸೂದನನ ಚರಿತ್ರವೆಂಬ ಶುದ್ಧ ಅಮೃತದ ನದಿಗಳು ಹರಿಯುತ್ತಿರುತ್ತವೆ. ಯಾರು ಎಷ್ಟು ಕೇಳಿದರೂ ತೃಪ್ತಿಹೊಂದದಿರುವ ಮನಸ್ಸಿನಿಂದ ಆ ಶ್ರೀಭಗವಂತನ ಚರಿತ್ರೆಯ ಶ್ರವಣದಲ್ಲಿ ತತ್ಪರರಾಗಿ ತಮ್ಮ ಕಿವಿಗಳೆಂಬ ಪಾತ್ರೆಯಗಳಿಂದ ಆ ಅಮೃತವನ್ನು ಕುಡಿಯುತ್ತಾರೋ, ಅವರನ್ನು ಹಸಿವು, ಬಾಯಾರಿಕೆ, ಭಯ, ಶೋಕ, ಮೋಹ ಮುಂತಾದ ಯಾವುದೂ ಪೀಡಿಸಲಾರವು. ॥ ೩೯-೪೦॥ ಅಕಟಾ! ಸ್ವಭಾವದಿಂದಲೇ ಉಂಟಾಗುವ ಈ ಹಸಿವು-ಬಾಯಾರಿಕೆ ಮುಂತಾದ ವಿಘ್ನಗಳಿಂದ ಸುತ್ತುವರಿಯಲ್ಪಟ್ಟ ಜೀವ ಸಮುದಾಯವು ಶ್ರೀಹರಿಯ ಕಥಾಮೃತಸಿಂಧುವನ್ನು ಪ್ರೀತಿಸುವುದಿಲ್ಲವಲ್ಲ! ॥ ೪೧ ॥ ಎಲ್ಲ ಪ್ರಜಾಪತಿಗಳಿಗೆ ಅಧಿಪತಿಯಾದ ಸಾಕ್ಷಾತ್ ಬ್ರಹ್ಮದೇವರು, ಶ್ರೀರುದ್ರದೇವರು, ಸ್ವಾಯಂಭುವ ಮನು, ದಕ್ಷನೇ ಮುಂತಾದ ಪ್ರಜಾಪತಿಗಳು, ಸನಕಾದಿ ನೈಷ್ಠಿಕ ಬ್ರಹ್ಮಚಾರಿಗಳು, ಮರೀಚಿ, ಅತ್ರಿ, ಅಂಗಿರಾ, ಪುಲಸ್ತ್ಯ, ಪುಲಹ, ಕ್ರತು, ಭೃಗು, ವಸಿಷ್ಠ ಮತ್ತು ನನ್ನವರೆಗಿನ ಬ್ರಹ್ಮಜ್ಞರಾದ ಈ ಮುನಿಗಳ ಸಮೂಹವು ಸಮಸ್ತ ವಾಙ್ಮಯಕ್ಕೆ ಅಧಿಪತಿಗಳಾಗಿದ್ದರೂ ಕೂಡ ತಪಸ್ಸು ಉಪಾಸನೆ ಮತ್ತು ಸಮಾಧಿಗಳ ಮೂಲಕ ಈತನನ್ನು ಹುಡುಕಿ-ಹುಡುಕಿ ಸೋತರು. ಆದರೂ ಅವರು ಇಂದಿನವರೆಗೆ ಸರ್ವಸಾಕ್ಷಿಯಾಗಿರುವ ಆ ಪರಮೇಶ್ವರನನ್ನು ನೋಡಲಾಗಲಿಲ್ಲ. ॥ ೪೨-೪೪ ॥ ವೇದಗಳು ಅನಂತವಾಗಿವೆ. ಅಪಾರವಾಗಿವೆ. ಅನೇಕ ಮಹಾನುಭಾವರು ಆ ವೇದವನ್ನು ವಿಚಾರ ಮಾಡಿ ಮಂತ್ರಗಳಲ್ಲಿ ಹೇಳಿರುವ ಲಕ್ಷಣಗಳಿಂದ ಕೂಡಿರುವ ಇಂದ್ರನೇ ಮುಂತಾದ ದೇವತೆಗಳ ರೂಪದಲ್ಲಿ ಬೇರೆ-ಬೇರೆ ಕರ್ಮಗಳ ಮೂಲಕ ಆ ಪರಮಾತ್ಮನೊಬ್ಬನನ್ನೇ ಆರಾಧಿಸುತ್ತಾರೆ. ಆದರೂ ಆತನ ಸ್ವರೂಪವನ್ನು ಅವರೂ ಅರಿತಿಲ್ಲ. ॥ ೪೫ ॥ ನಿರಂತರವಾಗಿ ಹೃದಯದಲ್ಲಿ ಚಿಂತನೆಮಾಡುತ್ತಿರುವ ಯಾವುದಾದರೂ ಜೀವಿಯ ಮೇಲೆ ಭಗವಂತನು ಅನುಗ್ರಹವನ್ನು ಹರಿಸಿದಾಗಲೇ ಅವನು ಲೌಕಿಕ ವ್ಯವಹಾರದಿಂದಲೂ, ವೈದಿಕಕರ್ಮಮಾರ್ಗದಲ್ಲಿ ಬೇರೂರಿದ್ದ ಆಸೆಗಳಿಂದಲೂ ಬಿಡುಗಡೆ ಹೊಂದುವನು. ॥ ೪೬ ॥

ತಸ್ಮಾತ್ಕರ್ಮಸು ಬರ್ಹಿಷ್ಮನ್ನಜ್ಞಾನಾದರ್ಥಕಾಶಿಷು ।
ಮಾರ್ಥದೃಷ್ಟಿಂ ಕೃಥಾಃ ಶ್ರೋತ್ರಸ್ಪರ್ಶಿಷ್ವಸ್ಪೃಷ್ಟವಸ್ತುಷು ॥ ೪೭ ॥

ಸ್ವಂ ಲೋಕಂ ನ ವಿದುಸ್ತೇ ವೈ ಯತ್ರ ದೇವೋ ಜನಾರ್ದನಃ ।
ಆಹುರ್ಧೂಮ್ರಧಿಯೋ ವೇದಂ ಸಕರ್ಮಕಮತದ್ವಿದಃ ॥ ೪೮ ॥

ಆಸ್ತೀರ್ಯ ದರ್ಭೈಃ ಪ್ರಾಗಗ್ರೈಃ ಕಾರ್ತ್ಸ್ನ್ಯೇನ ಕ್ಷಿತಿಮಂಡಲಮ್ ।
ಸ್ತಬ್ಧೋ ಬೃಹದ್ವಧಾನ್ಮಾನೀ ಕರ್ಮ ನಾವೈಷಿ ಯತ್ಪರಮ್ ।
ತತ್ಕರ್ಮ ಹರಿತೋಷಂ ಯತ್ಸಾ ವಿದ್ಯಾ ತನ್ಮತಿರ್ಯಯಾ ॥ ೪೯ ॥

ಹರಿರ್ದೇಹಭೃತಾಮಾತ್ಮಾ ಸ್ವಯಂ ಪ್ರಕೃತಿರೀಶ್ವರಃ ।
ತತ್ಪಾದಮೂಲಂ ಶರಣಂ ಯತಃ ಕ್ಷೇಮೋ ನೃಣಾಮಿಹ ॥ ೫೦ ॥

ಸ ವೈ ಪ್ರಿಯತಮಶ್ಚಾತ್ಮಾ ಯತೋ ನ ಭಯಮಣ್ವಪಿ ।
ಇತಿ ವೇದ ಸ ವೈ ವಿದ್ವಾನ್ಯೋ ವಿದ್ವಾನ್ಸ ಗುರುರ್ಹರಿಃ ॥ ೫೧ ॥

214

ನಾರದ ಉವಾಚ

ಪ್ರಶ್ನ ಏವಂ ಹಿ ಸಂಛಿನ್ನೋ ಭವತಃ ಪುರುಷರ್ಷಭ ।
ಅತ್ರ ಮೇ ವದತೋ ಗುಹ್ಯಂ ನಿಶಾಮಯ ಸುನಿಶ್ಚಿತಮ್ ॥ ೫೨ ॥

ಕ್ಷುದ್ರಂಚರಂ ಸುಮನಸಾಂ ಶರಣೇ ಮಿಥಿತ್ವಾ
ರಕ್ತಂ ಷಡಂಘ್ರಿಗಣಸಾಮಸು ಲುಬ್ಧಕರ್ಣಮ್ ।
ಅಗ್ರೇ ವೃಕಾನಸುತೃಪೋಽವಿಗಣಯ್ಯ ಯಾಂತಂ
ಪೃಷ್ಠೇ ಮೃಗಂ ಮೃಗಯ ಲುಬ್ಧಕಬಾಣಭಿನ್ನಮ್ ॥ ೫೩ ॥

ಬರ್ಹಿಷ್ಮರಾಜನೇ! ನೀನು ಈ ಕರ್ಮಗಳಲ್ಲಿ ಪರಮಾರ್ಥ ಬುದ್ಧಿಯನ್ನಿರಿಸಬೇಡ. ಇವು ಕೇಳುವುದಕ್ಕೆ ಪ್ರಿಯವಾಗಿ ಕಂಡು ಬರುತ್ತಿದ್ದರೂ ಪರಮಾರ್ಥವನ್ನು ಮುಟ್ಟುವುದಿಲ್ಲ. ಈ ಕರ್ಮ ಕಾಂಡವು ಪರಮಾರ್ಥವೆಂದು ಕಂಡುಬರುವುದಕ್ಕೆ ಕಾರಣ ಅಜ್ಞಾನ ವೊಂದೇ. ॥ ೪೭ ॥ ಮಲಿನಮತಿಗಳಾದ ಕರ್ಮವಾದಿ ಜನರು ವೇದವನ್ನು ಕರ್ಮಪರವೆಂದೇ ಹೇಳುವವರು ವಾಸ್ತವವಾಗಿ ಅದರ ಮರ್ಮವನ್ನು ತಿಳಿದವರಲ್ಲ. ಅವರು ಸಾಕ್ಷಾತ್ ಭಗವಾನ್ ಶ್ರೀಜನಾರ್ದನನು ವಿರಾಜಮಾನನಾಗಿರುವ ತಮ್ಮ ಸ್ವರೂಪ ಭೂತಲೋಕ (ಆತ್ಮತತ್ತ್ವ)ವನ್ನು ತಿಳಿಯದೇ ಇರುವ ಕಾರಣವೂ ಇದೇ ಆಗಿದೆ. ॥ ೪೮ ॥ ಪೂರ್ವಾಗ್ರವಾಗಿ ದರ್ಭೆಗಳನ್ನು ಇಡೀ ಭೂಮಂಡಲದ ಮೇಲೆ ಹರಡಿ ಅನೇಕ ಪಶುಗಳನ್ನು ಯಜ್ಞಗಳಲ್ಲಿ ವಧೆಮಾಡಿರುವುದರಿಂದ ನಿನಗೆ ಮದ ಉಂಟಾಗಿಬಿಟ್ಟಿದೆ. ಆದರೆ ವಸ್ತುತಃ ನಿನಗೆ ಕರ್ಮದ ರಹಸ್ಯವಾಗಲೀ, ಉಪಾಸನೆಯ ರಹಸ್ಯವಾಗಲೀ ಯಾವುದೂ ತಿಳಿಯದು. ವಾಸ್ತವವಾಗಿ ಶ್ರೀಹರಿಯನ್ನು ಪ್ರಸನ್ನಗೊಳಿಸುವಂತಹ ಕರ್ಮವೇ ಕರ್ಮವಾಗಿದೆ. ಭಗವಂತನಲ್ಲಿ ಚಿತ್ತವು ನೆಲಸುವಂತಹ ವಿದ್ಯೆಯೇ ವಿದ್ಯೆಯಾಗಿದೆ. ॥ ೪೯ ॥ ಶ್ರೀಹರಿಯು ಸಮಸ್ತ ದೇಹಧಾರಿಗಳ ಆತ್ಮನೂ, ನಿಯಾಮಕನೂ, ಸ್ವತಂತ್ರ ಕಾರಣನೂ ಆಗಿದ್ದಾನೆ. ಆದ್ದರಿಂದ ಅವನ ಅಡಿದಾವರೆಗಳೇ ಮನುಷ್ಯರಿಗೆ ಏಕಮಾತ್ರ ಆಶ್ರಯವಾಗಿವೆ. ಅವುಗಳಿಂದಲೇ ಪ್ರಪಂಚದಲ್ಲಿ ಎಲ್ಲರ ಶ್ರೇಯಸ್ಸು ಆಗಬಲ್ಲದು. ॥ ೫೦ ॥ 'ಯಾವುದರಿಂದ ಯಾರಿಗೂ ಎಳ್ಳಷ್ಟು ಭಯವುಂಟಾಗುವುದಿಲ್ಲವೋ – ಅದೇ ಅವನ ಪ್ರಿಯತಮ ಆತ್ಮವಾಗಿದೆ' ಎಂದು ತಿಳಿಯುವವನೇ ಜ್ಞಾನಿಯು. ಆ ಜ್ಞಾನಿಯೇ ಗುರುವು ಮತ್ತು ಸಾಕ್ಷಾತ್ ಶ್ರೀಹರಿಯು ಆತನೇ. ॥ ೫೧ ॥

**ಶ್ರೀನಾರದರು ಹೇಳುತ್ತಾರೆ** – ಎಲೈ ಪುರುಷಶ್ರೇಷ್ಠನೇ! ಇಲ್ಲಿಯವರೆಗೆ ನಿನ್ನ ಪ್ರಶ್ನೆಯ ಉತ್ತರ ಸಂಕ್ಷಿಪ್ತವಾಗಿ ಹೇಳಿ ಯಾಯಿತು. ಈಗ ನಾನು ನಿನಗೆ ಒಂದು ಅತ್ಯಂತ ರಹಸ್ಯವಾದ, ಚೆನ್ನಾಗಿ ನಿಶ್ಚಯಿಸಿರುವ ಸಾಧನೆಯನ್ನು ಹೇಳುವೆನು. ಲಕ್ಷ್ಯಕೊಟ್ಟು ಕೇಳು. ॥ ೫೨ ॥ ಹೂದೋಟವೊಂದರಲ್ಲಿ ಒಂದು ಗಂಡು ಹುಲ್ಲೆಯು ಹೆಣ್ಣುಹುಲ್ಲೆಯೊಡನೆ ವಿಹರಿಸುತ್ತಾ ಮತ್ತೇರಿ ಅಲೆದಾಡುತ್ತಾ ಎಳೆಗರಿಕೆಯೇ ಮುಂತಾದ ಸಣ್ಣ ಚಿಗುರುಗಳನ್ನು ಮೇಯುತ್ತಿದೆ. ಅದರ ಕಿವಿಗಳು ದುಂಬಿಗಳ ಮಧುರ ಝೇಂಕಾರ ವನ್ನು ಆಲಿಸುತ್ತಿದೆ. ಆ ಹುಲ್ಲೆಯ ಮುಂದೆಯೇ ಇತರ ಜೀವಿಗಳನ್ನು ತಿಂದು ಹೊಟ್ಟೆತುಂಬಿಸಿಕೊಳ್ಳುವ ತೋಳಗಳು ಹೊಂಚು ಹಾಕುತ್ತಾ ನಿಂತಿವೆ. ಹಿಂದುಗಡೆಯಿಂದ ಒಬ್ಬ ಬೇಟೆಗಾರನು ಹುಲ್ಲೆಯಮೇಲೆ ಬಾಣವನ್ನು ಬಿಟ್ಟು ಘಾಸಿಗೊಳಿಸುತ್ತಾನೆ. ಆದರೆ ಹುಲ್ಲೆಯು ಇವಾವುದನ್ನೂ ಗಮನಿಸದಷ್ಟು ಅಜಾಗರೂಕವಾಗಿದೆ. ಆ ಜಿಂಕೆಯ ಸ್ಥಿತಿಯನ್ನು ಕುರಿತು ಒಮ್ಮೆ ವಿಚಾರಮಾಡು. ॥ ೫೩ ॥

ಎಲೈ ರಾಜನೇ! ಈ ರೂಪಕದ ಅಭಿಪ್ರಾಯವನ್ನು ಕೇಳು – ಈ ಮೃತಪ್ರಾಯವಾದ ಜಿಂಕೆಯೇ ನೀನಾಗಿರುವೆ. ನೀನು ನಿನ್ನ ಸ್ಥಿತಿಯ ಬಗ್ಗೆ ವಿಚಾರಮಾಡು. ಹೂವುಗಳಂತಿರುವ ಈ ಸ್ತ್ರೀಯರು ಕೇವಲ ನೋಡಲಷ್ಟೇ ಸುಂದರರಾಗಿದ್ದಾರೆ. ಈ ಸ್ತ್ರೀಯರು ಇರುವ

(ಅಸ್ಯಾರ್ಥಃ)

ಸುಮನಃ ಸಧರ್ಮಣಾಂ ಸ್ತ್ರೀಣಾಂ ಶರಣ ಆಶ್ರಮೇ ಪುಷ್ಪಮಧುಗಂಧವತ್ಕ್ಷುದ್ರತಮಂ ಕಾಮ್ಯಕರ್ಮ ವಿಪಾಕಜಂ ಕಾಮಸುಖಲವಂ ಜೈಹ್ವ್ಯೌಪಸ್ಥ್ಯಾದಿವಿಚಿನ್ವಂತಂ ಮಿಥುನೀಭೂಯ ತದಭಿನಿವೇಶಿತಮನಸಂ ಷಡಂಘ್ರಿಗಣಸಾಮಗೀತವದತಿಮನೋಹರವನಿತಾದಿಜನಾಲಾಪೇಷ್ವತಿತರಾಮತಿಪ್ರಲೋಭಿತಕರ್ಣಮಗ್ರೇ ವೃಕಯೂಥವದಾತ್ಮನ ಆಯುರ್ಹರತೋಽಹೋರಾತ್ರಾಂತಾನ್ಕಾಲಲವವಿಶೇಷಾನವಿಗಣಯ್ಯ ಗೃಹೇಷು ವಿಹರಂತಂ ಪೃಷ್ಠತ ಏವ ಪರೋಕ್ಷಮನುಪ್ರವೃತ್ತೋ ಲುಬ್ಧಕಃ ಕೃತಾಂತೋಽಂತಃ ಶರೇಣ ಯಮಿಹಪರಾವಿಧ್ಯತಿ ತಮಿಮಮಾತ್ಮಾನಮಹೋ ರಾಜನ್ ಭಿನ್ನ ಹೃದಯಂ ದ್ರಷ್ಟುಮರ್ಹಸೀತಿ ॥ ೫೪ ॥

ಸ ತ್ವಂ ವಿಚಕ್ಷ್ಯ ಮೃಗಚೇಷ್ಟಿತಮಾತ್ಮನೋಽಂತ-
ಶ್ಚಿತ್ತಂ ನಿಯಚ್ಛ ಹೃದಿ ಕರ್ಣಧುನೀಂ ಚ ಚಿತ್ತೇ ।
ಜಹ್ಯಂಗನಾಶ್ರಮಮಸತ್ತಮಯೂಥಗಾಥಂ
ಪ್ರೀಣೀಹಿ ಹಂಸಶರಣಂ ವಿರಮ ಕ್ರಮೇಣ ॥ ೫೫ ॥

ರಾಜೋವಾಚ

ಶ್ರುತಮನ್ವೀಕ್ಷಿತಂ ಬ್ರಹ್ಮನ್ ಭಗವಾನ್ ಯದಭಾಷತ ।
ನೈತಜ್ಜಾನಂತ್ಯುಪಾಧ್ಯಾಯಾಃ ಕಿಂ ನ ಬ್ರೂಯುರ್ವಿದುರ್ಯದಿ ॥ ೫೬ ॥

ಸಂಶಯೋಽತ್ರ ತು ಮೇ ವಿಪ್ರ ಸಂಛಿನ್ನಸ್ತತ್ಕೃತೋ ಮಹಾನ್ ।
ಋಷಯೋಽಪಿ ಹಿ ಮುಹ್ಯಂತಿ ಯತ್ರ ನೇಂದ್ರಿಯವೃತ್ತಯಃ ॥ ೫೭ ॥

ಕರ್ಮಾಣ್ಯಾರಭತೇ ಯೇನ ಪುಮಾನಿಹ ವಿಹಾಯ ತಮ್ ।
ಅಮುತ್ರಾನ್ಯೇನ ದೇಹೇನ ಜುಷ್ಟಾನಿ ಸ ಯದಶ್ನುತೇ ॥ ೫೮ ॥

ಇತಿ ವೇದವಿದಾಂ ವಾದಃ ಶ್ರೂಯತೇ ತತ್ರ ತತ್ರ ಹ ।
ಕರ್ಮ ಯತ್ಕ್ರಿಯತೇ ಪ್ರೋಕ್ತಂ ಪರೋಕ್ಷಂ ನ ಪ್ರಕಾಶತೇ ॥ ೫೯ ॥

ಮನೆಯೇ ಹೂದೋಟವು. ಇದರಲ್ಲಿದ್ದುಕೊಂಡು ನೀನು ಹೂವುಗಳ ಮಧುವಿಗೂ, ಪರಿಮಳಕ್ಕೂ ಸಮಾನವಾದ ಕ್ಷುದ್ರವಾದ ಸಕಾಮಕರ್ಮಗಳ ಫಲರೂಪವಾಗಿ ನಾಲಿಗೆಗೂ ಜನನೇಂದ್ರಿಯಕ್ಕೂ ಪ್ರಿಯವೆನಿಸುವ ಭೋಜನ, ಸ್ತ್ರೀಪ್ರಸಂಗಗಳೇ ಮುಂತಾದ ತುಚ್ಛ-ಭೋಗಗಳನ್ನು ಹುಡುಕುತ್ತಿರುವೆ. ಸ್ತ್ರೀಯರಿಂದ ಸುತ್ತುವರಿಯಲ್ಪಟ್ಟು, ತನ್ನ ಮನಸ್ಸನ್ನು ಅವರಲ್ಲೇ ನೆಟ್ಟಿರುವೆ. ಹೆಂಡಿರು-ಮಕ್ಕಳ ಸವಿಮಾತುಗಳೇ ದುಂಬಿಗಳ ಮಧುರ ಗುಂಜಾರವವಾಗಿದೆ. ನಿನ್ನ ಕಿವಿಗಳು ಅದರಲ್ಲೇ ಅತ್ಯಂತ ಆಸಕ್ತವಾಗಿವೆ. ಇದಿರ್ಗಡೆಯೇ ತೋಳಗಳ ಹಿಂಡಿನಂತೆ ಕಾಲದ ಅಂಶವಾದ ಹಗಲು-ರಾತ್ರಿಗಳು ನಿನ್ನ ಆಯುಸ್ಸನ್ನು ಕಸಿದುಕೊಳ್ಳುತ್ತಿವೆ. ಆದರೆ ನೀನು ಅದಾವುದನ್ನೂ ಗಮನಿಸದೆ ಗೃಹಸ್ಥಸುಖಗಳಲ್ಲೇ ರಮಿಸುತ್ತಿದ್ದೀಯೆ. ನಿನ್ನ ಹಿಂದುಗಡೆ ಕಾಲಪುರುಷನೆಂಬ ಬೇಟೆಗಾರನು ಸದ್ದಿಲ್ಲದೆ ನಿಂತುಕೊಂಡು ಬಾಣದಿಂದ ನಿನ್ನ ಹೃದಯವನ್ನು ದೂರದಿಂದಲೇ ಸೀಳಿಹಾಕಲು ಬಯಸುತ್ತಿದ್ದಾನೆ. ॥ ೫೪ ॥ ಹೀಗೆ ನಿನ್ನ ಸ್ಥಿತಿಯು ಆ ಮೃಗದ ಸ್ಥಿತಿಯಂತೆಯೇ ಇರುವುದನ್ನು ಗಮನಿಸಿ, ನೀನು ಚಿತ್ತವನ್ನು ಹೃದಯದೊಳಗೆ ಸ್ಥಿರಗೊಳಿಸು. ನದಿಯಂತೆ ಹರಿಯುತ್ತಿರುವ ಶ್ರವಣೇಂದ್ರಿಯದ ಬಾಹ್ಯವೃತ್ತಿಯನ್ನು ಚಿತ್ತದಲ್ಲಿ ನೆಲೆಗೊಳಿಸು (ಅಂತರ್ಮುಖಿಯಾಗು). ಕಾಮಿಗಳ ಚರ್ಚೆ ನಡೆಯುತ್ತಿರುವ ಗೃಹಸ್ಥಾಶ್ರಮವನ್ನು ಬಿಟ್ಟು ಪರಮಹಂಸರಿಗೆ ಆಶ್ರಯನಾದ ಶ್ರೀಹರಿಯನ್ನು ಪ್ರಸನ್ನಗೊಳಿಸು ಮತ್ತು ಕ್ರಮವಾಗಿ ಎಲ್ಲ ವಿಷಯಗಳಿಂದ ದೂರವಾಗಿರು. ॥ ೫೫ ॥

ಪ್ರಾಚೀನ ಬರ್ಹಿರಾಜನು ಹೇಳಿದನು - ಭಗವಾನ್ ದೇವರ್ಷಿಗಳೇ! ತಾವು ಕರುಣೆಯಿಂದ ನನಗೆ ಅನುಗ್ರಹಿಸಿರುವ ಉಪದೇಶವನ್ನು ಆಲಿಸಿ ಅದರ ಬಗೆಗೆ ವಿಶೇಷವಾಗಿ ವಿಚಾರ ಮಾಡಿದೆನು. ನನಗೆ ಕರ್ಮವನ್ನೇ ಉಪದೇಶ ಮಾಡಿದ ಆ ಉಪಾಧ್ಯಾಯರಿಗೆ ನಿಶ್ಚಯವಾಗಿಯೂ ಈ ಜ್ಞಾನವಿಲ್ಲ, ಇದನ್ನು ಅವರು ತಿಳಿದಿದ್ದರೆ ನನಗೆ ಇಂತಹ ಉಪದೇಶವನ್ನು ಕೊಡುತ್ತಿರಲಿಲ್ಲವೇ? ॥ ೫೬ ॥ ವಿಪ್ರವರ್ಯರೇ! ನನ್ನ ಉಪಾಧ್ಯಾಯರ ಉಪದೇಶದಿಂದ ಆತ್ಮತತ್ತ್ವದ ವಿಷಯದಲ್ಲಿ ನನ್ನ ಹೃದಯದಲ್ಲಿ ಉಂಟಾದ ದೊಡ್ಡ ಸಂಶಯವನ್ನು ತಾವು ತೊಲಗಿಸಿದಿರಿ. ಇದು ಅತೀಂದ್ರಿಯವಾದ ವಿಷಯವಾದ್ದರಿಂದ ಋಷಿಗಳಿಗೂ ಇದರಲ್ಲಿ ಕೆಲವೊಮ್ಮೆ ಮೋಹ ಉಂಟಾಗುತ್ತದೆ. ॥ ೫೭ ॥ ''ಮನುಷ್ಯನು ಈ ಲೋಕದಲ್ಲಿ ಯಾವ ದೇಹದಿಂದ ಕರ್ಮಗಳನ್ನು ಆಚರಿಸುತ್ತಾನೆಯೋ, ಆ ಸ್ಥೂಲದೇಹವನ್ನು ಇಲ್ಲೇ ಬಿಟ್ಟು ಪರಲೋಕದಲ್ಲಿ ಕರ್ಮಗಳಿಂದಲೇ ನಿರ್ಮಿತವಾದ ಬೇರೊಂದು ಶರೀರವನ್ನು ಪಡೆದು ಅದರಿಂದ ಕರ್ಮಫಲವನ್ನು ಅನುಭವಿಸುವನು'' ಎಂದು ವೇದವಾದಿಗಳು ಹೇಳುವುದು ಅಲ್ಲಲ್ಲಿ ಕೇಳಿಬರುತ್ತಿದೆ. ಆದರೆ ಈ ಮಾತು ಹೇಗಾಗಬಲ್ಲದು? (ಏಕೆಂದರೆ ಆ ಕರ್ಮಗಳ ಕರ್ತೃವಾದ ಸ್ಥೂಲಶರೀರವು ಇಲ್ಲೇ ನಷ್ಟವಾಗಿ ಹೋಗುತ್ತದೆ.) ಇದಲ್ಲದೆ ಯಾವ-ಯಾವ ಕರ್ಮಗಳನ್ನು ಇಲ್ಲಿ ಮಾಡಲಾಗುತ್ತದೋ ಅವುಗಳಾದರೋ ಮರುಕ್ಷಣದಲ್ಲೇ ಅದೃಶ್ಯವಾಗುತ್ತವೆ. ಅವು ಪರಲೋಕದಲ್ಲಿ ಫಲಕೊಡಲು ಹೇಗೆ ಪುನಃ ಪ್ರಕಟಗೊಳ್ಳಬಲ್ಲವು? ॥ ೫೮-೫೯ ॥

*ನಾರದ ಉವಾಚ*

**ಯೇನೈವಾರಭತೇ ಕರ್ಮ ತೇನೈವಾಮುತ್ರ ತತ್ಪುಮಾನ್ ।
ಭುಂಕ್ತೇ ಹ್ಯವ್ಯವಧಾನೇನ ಲಿಂಗೇನ ಮನಸಾ ಸ್ವಯಮ್ ॥ ೬೦ ॥**

**ಶಯಾನಮಿಮಮುತ್ಸೃಜ್ಯ ಶ್ವಸಂತಂ ಪುರುಷೋ ಯಥಾ ।
ಕರ್ಮಾತ್ಮನ್ಯಾಹಿತಂ ಭುಂಕ್ತೇ ತಾದೃಶೇನೇತರೇಣ ವಾ ॥ ೬೧ ॥**

**ಮಮೈತೇ ಮನಸಾ ಯದ್ಯದಸಾವಹಮಿತಿ ಬ್ರುವನ್ ।
ಗೃಹ್ಣೀಯಾತ್ತತ್ಪುಮಾನ್ರಾದ್ಧಂ ಕರ್ಮ ಯೇನ ಪುನರ್ಭವಃ ॥ ೬೨ ॥**

**ಯಥಾನುಮೀಯತೇ ಚಿತ್ತಮುಭಯೈರಿಂದ್ರಿಯೇಹಿತೈಃ ।
ಏವಂ ಪ್ರಾಗ್ದೇಹಜಂ ಕರ್ಮ ಲಕ್ಷ್ಯತೇ ಚಿತ್ತವೃತ್ತಿಭಿಃ ॥ ೬೩ ॥**

**ನಾನುಭೂತಂ ಕ್ವ ಚಾನೇನ ದೇಹೇನಾದೃಷ್ಟಮಶ್ರುತಮ್ ।
ಕದಾಚಿದುಪಲಭ್ಯೇತ ಯದ್ರೂಪಂ ಯಾದೃಗಾತ್ಮನಿ ॥ ೬೪ ॥**

**ತೇನಾಸ್ಯ ತಾದೃಶಂ ರಾಜಲ್ಲಿಂಗಿನೋ ದೇಹಸಂಭವಮ್ ।
ಶ್ರದ್ಧತ್ಸ್ವಾನನುಭೂತೋಽರ್ಥೋ ನ ಮನಃ ಸ್ಪ್ರಷ್ಟುಮರ್ಹತಿ ॥ ೬೫ ॥**

**ಮನ ಏವ ಮನುಷ್ಯಸ್ಯ ಪೂರ್ವರೂಪಾಣಿ ಶಂಸತಿ ।
ಭವಿಷ್ಯತಶ್ಚ ಭದ್ರಂ ತೇ ತಥೈವ ನ ಭವಿಷ್ಯತಃ ॥ ೬೬ ॥**

**ಅದೃಷ್ಟಮಶ್ರುತಂ ಚಾತ್ರ ಕ್ವಚಿನ್ಮನಸಿ ದೃಶ್ಯತೇ ।
ಯಥಾ ತಥಾನುಮಂತವ್ಯಂ ದೇಶಕಾಲಕ್ರಿಯಾಶ್ರಯಮ್ ॥ ೬೭ ॥**

**ಶ್ರೀನಾರದರು ಹೇಳಿದರು** – ಎಲೈ ರಾಜನೇ! (ಸ್ಥೂಲ ಶರೀರವಾದರೋ ಲಿಂಗಶರೀರದ ಅಧೀನವಾಗಿದೆ. ಆದ್ದರಿಂದ ಕರ್ಮಗಳ ಹೊಣೆಗಾರಿಕೆ ಅದರ ಮೇಲೆಯೇ ಇದೆ.) ಮನಃ ಪ್ರಧಾನವಾದ ಲಿಂಗಶರೀರದ ಸಹಾಯದಿಂದಲೇ ಮನುಷ್ಯನು ಕರ್ಮವನ್ನು ಮಾಡುತ್ತಾನೆ. ಅದಾದರೋ ಸತ್ತಬಳಿಕವೂ ಅವನೊಂದಿಗೆ ಇರುತ್ತದೆ. ಆದ್ದರಿಂದ ಅವನು ಪರಲೋಕದಲ್ಲಿ ಅಪರೋಕ್ಷವಾಗಿ ಸ್ವತಃ ಅದರ ಮೂಲಕವೇ ಫಲವನ್ನು ಅನುಭವಿಸುತ್ತಾನೆ. ॥ ೬೦ ॥ ಸ್ವಪ್ನಾವಸ್ಥೆಯಲ್ಲಿ ಮನುಷ್ಯನು ಈ ಜೀವಿತ ಶರೀರದ ಅಭಿಮಾನವನ್ನಾದರೋ ಬಿಟ್ಟುಬಿಡುತ್ತಾನೆ. ಆದರೆ ಅದರಂತೆ ಇರುವ ಅಥವಾ ಇದರಿಂದ ಭಿನ್ನವಾದ ಪಶು– ಪಕ್ಷಿ ಮುಂತಾದ ಶರೀರದಿಂದ ಅವನು ಮನಸ್ಸಿನಲ್ಲಿರುವ ಸಂಸ್ಕಾರ ರೂಪದಿಂದ ಇರುವ ಕರ್ಮಗಳ ಫಲವನ್ನು ಅನುಭವಿಸುತ್ತಾ ಇರುತ್ತಾನೆ. ॥ ೬೧ ॥ ಈ ಮನಸ್ಸಿನ ಮೂಲಕ ಜೀವನು ಪತ್ನೀ-ಪುತ್ರಾದಿಗಳನ್ನು 'ಇವರು ನನ್ನವರು' ಮತ್ತು ದೇಹಾದಿಗಳನ್ನು 'ಇದು ನಾನು' ಎಂದು ಹೇಳಿಕೊಂಡು ಒಪ್ಪಿಕೊಳ್ಳುವನು. ಅವರು ಮಾಡಿರುವ ಪಾಪ-ಪುಣ್ಯ ಮುಂತಾದ ಕರ್ಮಗಳನ್ನೂ ಕೂಡ ತಾನು ಪರಿಗ್ರಹಿಸಿ, ಅವುಗಳಿಂದಾಗಿ ಇವನಿಗೆ ವ್ಯರ್ಥವಾಗಿಯೇ ಪುನಃ ಹುಟ್ಟಬೇಕಾಗುತ್ತದೆ. ॥ ೬೨ ॥ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯ ಎರಡರ ಚೇಷ್ಟೆಗಳಿಂದ ಅವುಗಳಿಗೆ ಪ್ರೇರಕವಾದ ಚಿತ್ತದ ಅನುಮಾನ ಮಾಡಲಾಗುತ್ತದೆ. ಹಾಗೆಯೇ ಚಿತ್ತದ ಬೇರೆ-ಬೇರೆ ರೀತಿಯ ವೃತ್ತಿಗಳಿಂದ ಹಿಂದಿನ ಜನ್ಮದ ಕರ್ಮಗಳನ್ನೂ ಅನುಮಾನಿಸಬೇಕಾಗುತ್ತದೆ. (ಆದ್ದರಿಂದ ಕರ್ಮವು ಅದೃಷ್ಟರೂಪದಿಂದ ಫಲವನ್ನು ಕೊಡಲಿಕ್ಕಾಗಿ ಕಾಲಾಂತರ ದಲ್ಲಿಯೂ ಇರುವುದೆಂದು ತಿಳಿಯಬೇಕು.) ॥ ೬೩ ॥ ಕೆಲವೊಮ್ಮೆ ನಾವು ಈಗ ಇರುವ ದೇಹದಿಂದ ಎಲ್ಲಿಯೂ ಯಾವಾಗಲೂ ಕಾಣದಿರುವ ಮತ್ತು ಕೇಳದಿರುವ ಸಂಗತಿಗಳನ್ನು ಸ್ವಪ್ನದಲ್ಲಿ ಸ್ಪಷ್ಟ ವಾಗಿ ನಿಜವಾಗಿ ನಡೆದಂತೆ ಅನುಭವಿಸುತ್ತೇವೆ. (ಇದರಿಂದ ಪೂರ್ವಜನ್ಮದ ಕರ್ಮಗಳು ಇರುವುದೆಂದು ಊಹಿಸ ಬಹುದು.) ॥ ೬೪ ॥ ಎಲೈ ರಾಜನೇ ! ಲಿಂಗದೇಹದ ಅಭಿಮಾನೀ ಜೀವನಿಗೆ ಅವುಗಳ ಅನುಭವ ಹಿಂದಿನ ಜನ್ಮದಲ್ಲಿ ಆಗಿಹೋಗಿವೆ ಎಂದು ನೀನು ನಿಶ್ಚಯವಾಗಿ ತಿಳಿದುಕೋ. ಏಕೆಂದರೆ, ಮೊದಲು ಅನುಭವಿಸದೆ ಇರುವ ವಸ್ತುವಿನ ವಾಸನೆಯು ಮನಸ್ಸಿನಲ್ಲಿ ಬರಲು ಸಾಧ್ಯವೇ ಇಲ್ಲ. ॥ ೬೫ ॥

ಎಲೈ ರಾಜನೇ ! ನಿನಗೆ ಮಂಗಳವಾಗಲಿ. ಮನುಷ್ಯನ ಹಿಂದಿನ ರೂಪಗಳನ್ನು ಹಾಗೂ ಮುಂದಿನ ಶರೀರಾದಿಗಳನ್ನೂ ಕೂಡ ಮನಸ್ಸೇ ತಿಳಿಸುತ್ತದೆ ಮತ್ತು ಮುಂದೆ ಜನ್ಮವೇ ಆಗದಿರುವ ತತ್ತ್ವವೇತ್ತರಾದವರ ವಿದೇಹಮುಕ್ತಿಯ ಸ್ಥಿತಿಯನ್ನು ಅವರ ಮನಸ್ಸಿನಿಂದಲೇ ತಿಳಿಯುತ್ತದೆ. ॥ ೬೬ ॥ ಕೆಲವೊಮ್ಮೆ ಸ್ವಪ್ನದಲ್ಲಿ ದೇಶ, ಕಾಲ ಅಥವಾ ಕ್ರಿಯೆಯ ಸಂಬಂಧೀ ಮಾತುಗಳೂ ಮೊದಲೂ ಎಂದೂ ನೋಡದೆ ಇದ್ದ ಅಥವಾ ಕೇಳದೇ ಇದ್ದುದನ್ನು (ಪರ್ವತದ ತುದಿಯಲ್ಲಿ ಸಮುದ್ರವನ್ನು, ಹಗಲಿನಲ್ಲಿ ನಕ್ಷತ್ರಗಳು ಅಥವಾ ತನ್ನ ತಲೆಯೇ ತುಂಡಾದಂತೆ) ನೋಡಲಾಗುತ್ತದೆ. ಇವುಗಳನ್ನು ನೋಡುವುದರಲ್ಲಿ ನಿದ್ರಾದೋಷವನ್ನೇ ಕಾರಣವೆಂದು ತಿಳಿಯಬೇಕು. ॥ ೬೭ ॥ ಮನಸ್ಸಿನ ಮುಂದೆ ಇಂದ್ರಿಯಗಳಿಂದ ಅನುಭವಿಸಲು ಯೋಗ್ಯವಾದ ಪದಾರ್ಥಗಳೇ ಭೋಗರೂಪದಿಂದ

ಸರ್ವೇ ಕ್ರಮಾನುರೋಧೇನ ಮನಸೀಂದ್ರಿಯಗೋಚರಾಃ ।
ಆಯಾಂತಿ ವರ್ಗಶೋ ಯಾಂತಿ ಸರ್ವೇ ಸಮನಸೋ ಜನಾಃ ॥ ೬೮ ॥

ಸತ್ತ್ವೈಕನಿಷ್ಠೇ ಮನಸಿ ಭಗವತ್ಪಾರ್ಶ್ವವರ್ತಿನಿ ।
ತಮಶ್ಚಂದ್ರಮಸೀವೇದಮುಪರಜ್ಯಾವಭಾಸತೇ ॥ ೬೯ ॥

ನಾಹಂ ಮಮೇತಿ ಭಾವೋಽಯಂ ಪುರುಷೇ ವ್ಯವಧೀಯತೇ ।
ಯಾವದ್ಬುದ್ಧಿಮನೋಽಕ್ಷಾರ್ಥ-ಗುಣವ್ಯೂಹೋ ಹ್ಯನಾದಿಮಾನ್ ॥ ೭೦ ॥

ಸುಪ್ತಿಮೂರ್ಚ್ಛೋಪತಾಪೇಷು ಪ್ರಾಣಾಯನವಿಘಾತತಃ ।
ನೇಹತೇಽಹಮಿತಿ ಜ್ಞಾನಂ ಮೃತ್ಯುಪ್ರಜ್ವಾರಯೋರಪಿ ॥ ೭೧ ॥

ಗರ್ಭೇ ಬಾಲ್ಯೇಽಪ್ಯಪೌಷ್ಕಲ್ಯಾದೇಕಾದಶವಿಧಂ ತದಾ ।
ಲಿಂಗಂ ನ ದೃಶ್ಯತೇ ಯೂನಃ ಕುಹ್ವಾಂ ಚಂದ್ರಮಸೋ ಯಥಾ ॥ ೭೨ ॥

ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।
ಧ್ಯಾಯತೋ ವಿಷಯಾನಸ್ಯ ಸ್ವಪ್ನೇಽನರ್ಥಾಗಮೋ ಯಥಾ ॥ ೭೩ ॥

ಏವಂ ಪಂಚವಿಧಂ ಲಿಂಗಂ ತ್ರಿವೃತ್ಷೋಡಶವಿಸ್ತೃತಮ್ ।
ಏಷ ಚೇತನಯಾ ಯುಕ್ತೋ ಜೀವ ಇತ್ಯಭಿಧೀಯತೇ ॥ ೭೪ ॥

ಅನೇನ ಪುರುಷೋ ದೇಹಾನುಪಾದತ್ತೇ ವಿಮುಂಚತಿ ।
ಹರ್ಷಂ ಶೋಕಂ ಭಯಂ ದುಃಖಂ ಸುಖಂ ಚಾನೇನ ವಿಂದತಿ ॥ ೭೫ ॥

ಯಥಾ ತೃಣಜಲೂಕೇಯಂ ನಾಪಯಾತ್ಯಪಯಾತಿ ಚ ।
ನ ತ್ಯಜೇನ್ಮ್ರಿಯಮಾಣೋಽಪಿ ಪ್ರಾಗ್ದೇಹಾಭಿಮತಿಂ ಜನಃ ॥ ೭೬ ॥

ಯಾವದನ್ಯಂ ನ ವಿಂದೇತ ವ್ಯವಧಾನೇನ ಕರ್ಮಣಾಮ್ ।
ಮನ ಏವ ಮನುಷ್ಯೇಂದ್ರ ಭೂತಾನಾಂ ಭವಭಾವನಮ್ ॥ ೭೭ ॥

ಪದೇ-ಪದೇ ಬರುತ್ತಿರುತ್ತವೆ ಮತ್ತು ಭೋಗವು ಸಮಾಪ್ತವಾದ ಮೇಲೆ ಹೊರಟುಹೋಗುತ್ತವೆ. ಇಂದ್ರಿಯಗಳಿಂದ ಅನುಭವಿಸ ಲಾರದ ಯಾವುದೇ ಪದಾರ್ಥಗಳು ಬರುವುದಿಲ್ಲ. ಇದರ ಕಾರಣ ಎಲ್ಲ ಜೀವರೂ ಮನಸಹಿತರೇ ಆಗಿದ್ದಾರೆ. ॥ ೬೮ ॥ ಸಾಮಾನ್ಯ ವಾಗಿ ವಿಷಯಗಳು ಎಲ್ಲರಿಗೂ ಕ್ರಮವಾಗಿ ಅನುಭವಕ್ಕೆ ಬರುತ್ತವೆ. ಆದರೆ ಮನಸ್ಸು ಶುದ್ಧಸತ್ತ್ವದಲ್ಲಿ ನೆಲೆಸಿ ಶ್ರೀಭಗವಂತನಲ್ಲಿ ತೊಡಗಿದಾಗ – ರಾಹುವು ದೃಷ್ಟಿಯ ವಿಷಯನಲ್ಲದಿದ್ದರೂ ಚಂದ್ರಬಿಂಬದಲ್ಲಿ ತೋರುವಂತೆ ಕೆಲವೊಮ್ಮೆ ಭಗವಂತನ ಸಂಸರ್ಗ ದಿಂದ ಸಮಸ್ತ ವಿಶ್ವವೂ, ಸಮಸ್ತ ವಾಸನೆಗಳೂ ಏಕಕಾಲದಲ್ಲಿ ತೋರುವುದೂ ಉಂಟು,. ॥ ೬೯ ॥ ಬುದ್ಧಿ, ಮನಸ್ಸು, ಇಂದ್ರಿಯ ಗಳು ಮತ್ತು ಇಂದ್ರಿಯಗಳ ವಿಷಯಗಳು – ಈ ಗುಣಗಳ ಪರಿಣಾಮವಾದ ಅನಾದಿ ಲಿಂಗಶರೀರವು ಇರುವಲ್ಲಿಯವರೆಗೂ ಜೀವನಲ್ಲಿ ಸ್ಥೂಲದೇಹದ ಕುರಿತು 'ನಾನು-ನನ್ನದು' ಎಂಬ ಭಾವವು ನಾಶಹೊಂದುವುದಿಲ್ಲ. ॥ ೭೦ ॥ ಗಾಢನಿದ್ರೆ, ಮೂರ್ಛೆ, ಅತ್ಯಂತ ದುಃಖ ಹಾಗೂ ಮೃತ್ಯು ತೀವ್ರವಾದ ಸನ್ನಿಪಾತ ಜ್ವರವೇ ಮುಂತಾದ ಸ್ಥಿತಿಯಲ್ಲಿ ಇಂದ್ರಿಯಗಳ ವ್ಯಾಕುಲತೆಯ ಕಾರಣ 'ನಾನು-ನನ್ನದು' ಇದರ ಸ್ಪಷ್ಟ ಅನುಭೂತಿ ಆಗದಿದ್ದರೂ ಆಗಲೂ ಅವುಗಳ ಅಭಿಮಾನ ಇದ್ದೇ ಇರುತ್ತದೆ. ॥ ೭೧ ॥ ಅಮಾವಾಸ್ಯೆಯ ರಾತ್ರಿಯಲ್ಲಿ ಚಂದ್ರನು ಇದ್ದೇ ಇದ್ದರೂ ನಮಗೆ ಗೋಚರಿಸು ವುದಿಲ್ಲ. ಹಾಗೆಯೇ ಗರ್ಭದಶೆ ಮತ್ತು ಬಾಲ್ಯಾವಸ್ಥೆಗಳಲ್ಲಿ ಇಂದ್ರಿಯಗಳ ಪೂರ್ಣವಿಕಾಸವಾಗದಿದ್ದರಿಂದ ಈ ಹನ್ನೊಂದು ಇಂದ್ರಿಯಗಳಿಂದ ಕೂಡಿದ ಲಿಂಗದೇಹವು ತೋರಿಬರದಿದ್ದರೂ, ಯೌವನಾವಸ್ಥೆಯಲ್ಲಿರುವ ಮನುಷ್ಯನಲ್ಲಿ ಸ್ಪಷ್ಟ ತೋರಿ ಬರುವುದು. ॥ ೭೨ ॥ ಕನಸಿನಲ್ಲಿ ಯಾವ ವಸ್ತುವೂ ಇಲ್ಲದಿದ್ದರೂ ಕನಸಿನ ಅನರ್ಥವು ಎಚ್ಚರಿಕೆಯಾಗುವವರೆಗೆ ತೊಲಗುವುದಿಲ್ಲ. ಹಾಗೆಯೇ ಈ ಪ್ರಪಂಚದ ವಸ್ತುಗಳು ವಾಸ್ತವವಾಗಿ ಅಸತ್ತಾಗಿ ದ್ದರೂ ಅವಿದ್ಯೆಗೆ ವಶನಾದ ಜೀವನು ಅವುಗಳನ್ನು ಚಿಂತಿಸುತ್ತಿರು ವನು. ಆದ್ದರಿಂದ ಅವನಿಗೆ ಹುಟ್ಟು- ಸಾವುಗಳ ರೂಪವಾದ ಈ ಸಂಸಾರವು ತೊಲಗುವುದಿಲ್ಲ. ॥ ೭೩ ॥

ಹೀಗೆ ಪಂಚತನ್ಮಾತ್ರೆಗಳಿಂದ ಉಂಟಾದ ಹಾಗೂ ಹದಿನಾರು ತತ್ತ್ವಗಳ ರೂಪದಲ್ಲಿ ವಿಕಸಿತವಾದ ಈ ತ್ರಿಗುಣಮಯ ಸಂಘಾ ತವೇ ಲಿಂಗಶರೀರವು. ಇದು ಚೇತನದಿಂದ ಕೂಡಿದಾಗ 'ಜೀವ' ಎನಿಸಿಕೊಳ್ಳುವುದು. ॥ ೭೪ ॥ ಇವನ ಮೂಲಕವೇ ಪುರುಷನು ಬೇರೆ-ಬೇರೆ ದೇಹಗಳನ್ನು ಗ್ರಹಿಸುತ್ತಾ, ತ್ಯಜಿಸುತ್ತಾ ಇರುವನು, ಹಾಗೂ ಇದರಿಂದಲೇ ಅವನಿಗೆ ಹರ್ಷ, ಶೋಕ, ಭಯ, ದುಃಖ ಮತ್ತು ಸುಖ ಮುಂತಾದ ಅನುಭವಗಳು ಉಂಟಾಗುತ್ತವೆ. ॥ ೭೫ ॥ ಜಿಗಣೆಯ ಹುಳುವು ಒಂದು ಹುಲ್ಲಿನಿಂದ ಮತ್ತೊಂದು ಹುಲ್ಲಿಗೆ ಹತ್ತುವಾಗ ಮುಂದಿನ ಹುಲ್ಲನ್ನು ಗಟ್ಟಿಯಾಗಿ ಹಿಡಿದುಕೊಳ್ಳುವ ವರೆಗೂ ಹಿಂದಿನ ಹುಲ್ಲನ್ನು ಬಿಡುವುದಿಲ್ಲ. ಹಾಗೆಯೇ ಜೀವನು ಮರಣಕಾಲವು ಒದಗಿದರೂ ದೇಹಾ ರಂಭದ ಕರ್ಮಗಳು ಮುಗಿದುಹೋದರೂ ಮತ್ತೊಂದು ಶರೀರವು ದೊರೆಯುವ ತನಕ ಹಿಂದಿನ ಶರೀರದ ಅಭಿಮಾನವನ್ನು ಬಿಡುವುದಿಲ್ಲ. ರಾಜೇಂದ್ರನೇ! ಈ ಮನಃಪ್ರಧಾನವಾದ ಲಿಂಗ

ಯದಾಕ್ಷೈಶ್ಚರಿತಾಂಧ್ಯಾಯನ್ಕರ್ಮಾಣ್ಯಾಚಿನುತೇಽಸಕೃತ್ ।
ಸತಿ ಕರ್ಮಣ್ಯವಿದ್ಯಾಯಾಂ ಬಂಧಃ ಕರ್ಮಣ್ಯನಾತ್ಮನಃ ॥ ೭೮ ॥

ಅತಸ್ತದಪವಾದಾರ್ಥಂ ಭಜ ಸರ್ವಾತ್ಮನಾ ಹರಿಮ್ ।
ಪಶ್ಯಂಸ್ತದಾತ್ಮಕಂ ವಿಶ್ವಂ ಸ್ಥಿತ್ಯುತ್ಪತ್ತ್ಯಪ್ಯಯಾ ಯತಃ ॥ ೭೯ ॥

ಮೈತ್ರೇಯ ಉವಾಚ

ಭಾಗವತಮುಖ್ಯೋ ಭಗವಾನ್
ನಾರದೋ ಹಂಸಯೋರ್ಗತಿಮ್ ।
ಪ್ರದರ್ಶ್ಯ ಹ್ಯಮುಮಾಮಂತ್ರ್ಯ
ಸಿದ್ಧಲೋಕಂ ತತೋಽಗಮತ್ ॥ ೮೦ ॥

ಪ್ರಾಚೀನಬರ್ಹೀ ರಾಜರ್ಷಿಃ ಪ್ರಜಾಸರ್ಗಾಭಿರಕ್ಷಣೇ ।
ಆದಿಶ್ಯ ಪುತ್ರಾನಗಮತ್ತಪಸೇ ಕಪಿಲಾಶ್ರಮಮ್ ॥ ೮೧ ॥

ತತ್ರೈಕಾಗ್ರಮನಾ ವೀರೋ ಗೋವಿಂದ ಚರಣಾಂಬುಜಮ್ ।
ವಿಮುಕ್ತಸಂಗೋಽನುಭಜನ್ಭಕ್ತ್ಯಾ ತತ್ಸಾಮ್ಯತಾಮಗಾತ್ ॥ ೮೨ ॥

ಏತದಧ್ಯಾತ್ಮ ಪಾರೋಕ್ಷ್ಯಂ ಗೀತಂ ದೇವರ್ಷಿಣಾನಘ ।
ಯಃ ಶ್ರಾವಯೇದ್ಯಃ ಶೃಣುಯಾತ್ಸ ಲಿಂಗೇನ ವಿಮುಚ್ಯತೇ ॥ ೮೩ ॥

ಏತನ್ಮುಕುಂದ ಯಶಸಾ ಭುವನಂ ಪುನಾನಂ
ದೇವರ್ಷಿವರ್ಯಮುಖನಿಸ್ಸೃತಮಾತ್ಮಶೌಚಮ್ ।
ಯಃ ಕೀರ್ತ್ಯಮಾನಮಧಿಗಚ್ಛತಿ ಪಾರಮೇಷ್ಠ್ಯಂ
ನಾಸ್ಮಿನ್ ಭವೇ ಭ್ರಮತಿ ಮುಕ್ತಸಮಸ್ತಬಂಧಃ ॥ ೮೪ ॥

ಅಧ್ಯಾತ್ಮ ಪಾರೋಕ್ಷ್ಯಮಿದಂ ಮಯಾಧಿಗತಮದ್ಭುತಮ್ ।
ಏವಂ ಸ್ತ್ರಿಯಾಽಽಶ್ರಮಃ ಪುಂಸಶ್ಛಿನ್ನೋಽಮುತ್ರ ಚ ಸಂಶಯಃ ॥ ೮೫ ॥

ಶರೀರವೇ ಜೀವಿಯ ಜನ್ಮಾದಿಗಳಿಗೆ ಕಾರಣವಾಗಿದೆ. ॥ ೭೬-೭೭ ॥ ಜೀವನು ಇಂದ್ರಿಯಜನಿತ ಭೋಗಗಳನ್ನು ಚಿಂತಿಸುತ್ತಾ ಪದೇ-ಪದೇ ಅವುಗಳಿಗಾಗಿಯೇ ಕರ್ಮ ಮಾಡುತ್ತಿರುವಾಗ, ಆ ಕರ್ಮಗಳು ಆಗುತ್ತಾ ಇರುವುದರಿಂದ ಅವಿದ್ಯಾವಶನಾಗಿ ಅವನು ದೇಹಾದಿಗಳ ಕರ್ಮಗಳಲ್ಲಿ ಬಂಧಿತನಾಗುತ್ತಾನೆ. ॥ ೭೮ ॥ ಆದುದರಿಂದ ಆ ಕರ್ಮಬಂಧನದಿಂದ ಬಿಡುಗಡೆ ಹೊಂದಲಿಕ್ಕಾಗಿ ಸಮಸ್ತ ವಿಶ್ವವನ್ನು ಭಗವದ್ರೂಪವಾಗಿ ನೋಡುತ್ತಾ ಎಲ್ಲ ರೀತಿಯಿಂದ ಶ್ರೀಹರಿಯನ್ನು ಭಜಿಸು. ಅವನಿಂದಲೇ ಈ ವಿಶ್ವದ ಉತ್ಪತ್ತಿ, ಸ್ಥಿತಿ ಆಗುತ್ತದೆ ಹಾಗೂ ಅವನಲ್ಲೇ ಲಯಹೊಂದುತ್ತದೆ. ॥ ೭೯ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಭಾಗವತೋತ್ತಮರಾದ ಶ್ರೀನಾರದಮಹರ್ಷಿಗಳು ಹೀಗೆ ಪ್ರಾಚೀನ ಬರ್ಹಿರಾಜನಿಗೆ ಜೀವ ಮತ್ತು ಈಶ್ವರರ ಸ್ವರೂಪದ ದಿಗ್ದರ್ಶನ ಮಾಡಿದರು. ಬಳಿಕ ಅವರು ಅವನಿಂದ ಬೀಳ್ಕೊಂಡು ಸಿದ್ಧಲೋಕಕ್ಕೆ ಹೊರಟುಹೋದರು. ॥ ೮೦ ॥ ಅನಂತರ ಆ ರಾಜರ್ಷಿ ಪ್ರಾಚೀನ ಬರ್ಹಿಯೂ ಪ್ರಜಾಪಾಲನೆಯ ಹೊಣೆಯನ್ನು ತನ್ನ ಪುತ್ರನಿಗೆ ಒಪ್ಪಿಸಿ, ತಪಸ್ಸನ್ನಾಚರಿಸಲಿಕ್ಕಾಗಿ ಕಪಿಲಾಶ್ರಮಕ್ಕೆ ಹೊರಟು ಹೋದನು. ॥ ೮೧ ॥ ಅಲ್ಲಿ ಆ ವೀರವರನು ಸಮಸ್ತ ವಿಷಯಗಳ ಆಸಕ್ತಿಯನ್ನು ಬಿಟ್ಟು ಏಕಾಗ್ರ ಮನಸ್ಸಿನಿಂದ ಭಕ್ತಿಯಿಂದ ಶ್ರೀಹರಿಯ ಚರಣಕಮಲಗಳನ್ನು ಧ್ಯಾನಿಸುತ್ತಾ ಭಗವಂತನ ಸಾರೂಪ್ಯಪದವನ್ನು ಪಡೆದುಕೊಂಡನು. ॥ ೮೨ ॥

ಎಲೈ ಪುಣ್ಯಶಾಲಿಯಾದ ವಿದುರನೇ! ದೇವರ್ಷಿಗಳಾದ ನಾರದರು ಹಾಡಿದ ಈ ಪರೋಕ್ಷರೂಪವಾದ ಆತ್ಮಜ್ಞಾನವನ್ನು ಕೇಳುವ ಅಥವಾ ಹೇಳುವವನು ಶೀಘ್ರವಾಗಿ ಲಿಂಗದೇಹದ ಬಂಧನದಿಂದ ಬಿಡುಗಡೆ ಹೊಂದುವನು. ॥ ೮೩ ॥ ದೇವರ್ಷಿ ನಾರದರ ಮುಖದಿಂದ ಹೊರಬಿದ್ದ ಈ ಆತ್ಮಜ್ಞಾನವು ಭಗವಾನ್ ಮುಕುಂದನ ಕೀರ್ತಿಯಿಂದ ಕೂಡಿರುವ ಕಾರಣದಿಂದ ಮೂರುಲೋಕಗಳನ್ನು ಪವಿತ್ರಗೊಳಿಸುವ, ಅಂತಃಕರಣವನ್ನು ಶುದ್ಧಗೊಳಿಸುವ ಮತ್ತು ಪರಮಾತ್ಮಪದವನ್ನು ಪ್ರಕಾಶಗೊಳಿಸುವುದು. ಈ ಕಥಾಮೃತವನ್ನು ಕೇಳುವವನು ಹೇಳುವವನು ಎಲ್ಲ ಬಂಧನಗಳಿಂದ ಮುಕ್ತನಾಗುವನು ಮತ್ತು ಅವನಿಗೆ ಈ ಸಂಸಾರಚಕ್ರದಲ್ಲಿ ಸುತ್ತಾಟವಿರುವುದಿಲ್ಲ. ॥ ೮೪ ॥ ಎಲೈ ವಿದುರನೇ! ಗೃಹಸ್ಥಾಶ್ರಮಿ ಪುರಂಜನನ ರೂಪಕದಿಂದ ಪರೋಕ್ಷರೂಪದಿಂದ ಹೇಳಿರುವ ಈ ಅದ್ಭುತವಾದ ಆತ್ಮಜ್ಞಾನವನ್ನು ನಾನು ಗುರುಗಳ ಕೃಪೆಯಿಂದ ಪಡೆದಿದ್ದೆನು. ಇದರ ತಾತ್ಪರ್ಯವನ್ನು ಅರಿಯುವುದರಿಂದ ಬುದ್ಧಿಯಿಂದ ಕೂಡಿದ ಜೀವಿಯ ದೇಹಾಭಿಮಾನವು ತೊಲಗುವುದು ಮತ್ತು ಪರಲೋಕದಲ್ಲಿ ಜೀವನಿಗೆ ಕರ್ಮಫಲಭೋಗವು ಹೇಗೆ ಆಗುವುದು ಎಂಬ ಸಂಶಯವೂ ಪರಿಹಾರವಾಗುವುದು. ॥ ೮೫ ॥

*ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೨೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ವಿದುರ-ಮೈತ್ರೇಯಸಂವಾದೇ ಪ್ರಾಚೀನಬರ್ಹಿರ್ನಾರದಸಂವಾದೋ ನಾಮೈಕೋನತ್ರಿಂಶೋಽಧ್ಯಾಯಃ ॥ ೨೯ ॥

# ಮೂವತ್ತನೆಯ ಅಧ್ಯಾಯ

## ಪ್ರಚೇತಸರಿಗೆ ಭಗವಾನ್ ಮಹಾವಿಷ್ಣುವಿನಿಂದ ವರಪ್ರದಾನ

*ವಿದುರ ಉವಾಚ*

**ಯೇ ತ್ವಯಾಭಿಹಿತಾ ಬ್ರಹ್ಮನ್ ಸುತಾ ಪ್ರಾಚೀನಬರ್ಹಿಷಃ ।
ತೇ ರುದ್ರಗೀತೇನ ಹರಿಂ ಸಿದ್ಧಿಮಾಪುಃ ಪ್ರತೋಷ್ಯ ಕಾಮ್ ॥ ೧ ॥**

**ಕಿಂ ಬಾರ್ಹಸ್ಪತ್ಯೇಹ ಪರತ್ರ ವಾಥ
ಕೈವಲ್ಯನಾಥಪ್ರಿಯಪಾರ್ಶ್ವವರ್ತಿನಃ ।
ಆಸಾದ್ಯ ದೇವಂ ಗಿರಿಶಂ ಯದೃಚ್ಛಯಾ
ಪ್ರಾಪುಃ ಪರಂ ನೂನಮಥ ಪ್ರಚೇತಸಃ ॥ ೨ ॥**

*ಮೈತ್ರೇಯ ಉವಾಚ*

**ಪ್ರಚೇತಸೋಽಂತರುದಧೌ ಪಿತುರಾದೇಶಕಾರಿಣಃ ।
ಜಪಯಜ್ಞೇನ ತಪಸಾ ಪುರಂಜನಮತೋಷಯನ್ ॥ ೩ ॥**

**ದಶವರ್ಷಸಹಸ್ರಾಂತೇ ಪುರುಷಸ್ತು ಸನಾತನಃ ।
ತೇಷಾಮಾವಿರಭೂತ್ಕೃಚ್ಛ್ರಂ ಶಾಂತೇನ ಶಮಯನ್ರುಚಾ ॥ ೪ ॥**

**ಸುಪರ್ಣಸ್ಕಂಧಮಾರೂಢೋ ಮೇರುಶೃಂಗಮಿವಾಂಬುದಃ ।
ಪೀತವಾಸಾ ಮಣಿಗ್ರೀವಃ ಕುರ್ವನ್ವಿತಿಮಿರಾ ದಿಶಃ ॥ ೫ ॥**

**ಕಾಶಿಷ್ಣುನಾ ಕನಕವರ್ಣವಿಭೂಷಣೇನ
ಭ್ರಾಜತ್ಕಪೋಲವದನೋ ವಿಲಸತ್ಕಿರೀಟಃ ।
ಅಷ್ಟಾಯುಧೈರನುಚರೈರ್ಮುನಿಭಿಃ ಸುರೇಂದ್ರೈ-
ರಾಸೇವಿತೋ ಗರುಡಕಿನ್ನರಗೀತಕೀರ್ತಿಃ ॥ ೬ ॥**

**ಪೀನಾಯತಾಷ್ಟಭುಜಮಂಡಲಮಧ್ಯಲಕ್ಷ್ಮ್ಯಾ
ಸ್ಪರ್ಧಚ್ಛ್ರಿಯಾ ಪರಿವೃತೋ ವನಮಾಲಯಾದ್ಯಃ ।
ಬರ್ಹಿಷ್ಮತಃ ಪುರುಷ ಆಹ ಸುತಾನ್ಪ್ರಪನ್ನಾನ್
ಪರ್ಜನ್ಯನಾದರುತಯಾ ಸಘೃಣಾವಲೋಕಃ ॥ ೭ ॥**

*ಶ್ರೀಭಗವಾನುವಾಚ*

**ವರಂ ವೃಣೀಧ್ವಂ ಭದ್ರಂ ವೋ
ಯೂಯಂ ಮೇ ನೃಪನಂದನಾಃ ।
ಸೌಹಾರ್ದೇನಾಪೃಥಗ್ಧರ್ಮಾ-
ಸ್ತುಷ್ಟೋಽಹಂ ಸೌಹೃದೇನ ವಃ ॥ ೮ ॥**

**ವಿದುರನು ಕೇಳಿದನು** – ಮುನಿಶ್ರೇಷ್ಠರೇ! ತಾವು ಈವರೆಗೆ ವರ್ಣನೆಮಾಡಿದ ಪ್ರಾಚೀನಬರ್ಹಿ ಮಹಾರಾಜನ ಪುತ್ರರಾದ ಪ್ರಚೇತಸರು ರುದ್ರಗೀತೆಯ ಮೂಲಕ ಶ್ರೀಹರಿಯನ್ನು ಸ್ತುತಿಸಿ ಯಾವ ಸಿದ್ಧಿಯನ್ನು ಪಡೆದರು? ॥ ೧ ॥ ಬೃಹಸ್ಪತಿಶಿಷ್ಯರೇ! ಮೋಕ್ಷಾಧಿಪತಿಯಾದ ಶ್ರೀನಾರಾಯಣನಿಗೆ ಅತ್ಯಂತ ಪ್ರಿಯರಾದ ಭಗವಾನ್ ಶಂಕರನ ಸಾನ್ನಿಧ್ಯವನ್ನು ಅಕಸ್ಮಾತ್ತಾಗಿ ಪಡೆದ ಪ್ರಚೇತಸರು ಮುಕ್ತಿಯನ್ನೇನೋ ಪಡೆದಿರಬಹುದು. ಅದಕ್ಕೆ ಮೊದಲು ಈ ಲೋಕದಲ್ಲಿ ಅಥವಾ ಪರಲೋಕದಲ್ಲಿಯೂ ಅವರು ಏನನ್ನು ಪಡೆದರು? ಎಂಬುದನ್ನು ಹೇಳುವ ಕೃಪೆಮಾಡಬೇಕು. ॥ ೨ ॥

**ಶ್ರೀಮೈತ್ರೇಯರು ಹೇಳಿದರು** – ಎಲೈ ವಿದುರನೇ! ತಂದೆಯ ಆಜ್ಞಾಕಾರಿಗಳಾದ ಪ್ರಚೇತಸರು ಸಮುದ್ರದ ಒಳಗೆ ನಿಂತು ಕೊಂಡೇ ರುದ್ರಗೀತೆಯನ್ನು ಜಪಿಸುತ್ತಾ, ಜಪಯಜ್ಞದಿಂದಲೂ, ತಪಸ್ಸಿನಿಂದಲೂ ಸಮಸ್ತ ಶರೀರಗಳ ಉತ್ಪಾದಕನಾದ ಭಗವಾನ್ ಶ್ರೀಹರಿಯನ್ನು ಪ್ರಸನ್ನಗೊಳಿಸಿದರು. ॥ ೩ ॥ ತಪಸ್ಸು ಮಾಡುತ್ತಾ-ಮಾಡುತ್ತಾ ಹತ್ತುಸಾವಿರ ವರ್ಷಗಳು ಕಳೆದುಹೋಗಲಾಗಿ ಪುರಾಣ ಪುರುಷನಾದ ಶ್ರೀನಾರಾಯಣನು ತನ್ನ ಮನೋಹರ ಕಾಂತಿಯಿಂದ ಅವರ ತಪಸ್ಸಿನಿಂದುಂಟಾದ ಕ್ಲೇಶವನ್ನು ಶಾಂತಗೊಳಿಸುತ್ತಾ ಸೌಮ್ಯವಾದ ದಿವ್ಯವಿಗ್ರಹದಿಂದ ಅವರ ಎದುರಿಗೆ ಪ್ರಕಟನಾದನು. ॥ ೪ ॥ ಗರುತ್ಮಂತನ ಹೆಗಲಿನ ಮೇಲೆ ಕುಳಿತಿರುವ ಶ್ಯಾಮ ಸುಂದರನಾದ ಸ್ವಾಮಿಯು ಮೇರುಪರ್ವತದ ಶಿಖರದಲ್ಲಿ ಕಂಗೊಳಿಸುವ ಮುಗಿಲಿನಂತೆ ಮೆರೆಯುತ್ತಿದ್ದನು. ಪರಮಾತ್ಮನ ಪ್ರಭಾಪುಂಜವು ಎಲ್ಲ ದಿಕ್ಕುಗಳ ಕತ್ತಲೆಯನ್ನು ಹೊಡೆದಟ್ಟುವಂತಿತ್ತು. ಅವನ ಶ್ರೀದೇಹದಲ್ಲಿ ಮನೋಹರ ಪೀತಾಂಬರವೂ, ಕಂಠದಲ್ಲಿ ಕೌಸ್ತುಭಮಣಿಯೂ ಶೋಭಿಸುತ್ತಿತ್ತು. ॥ ೫ ॥ ಥಳ-ಥಳಿಸುತ್ತಿದ್ದ ಸ್ವರ್ಣರತ್ನಾಭರಣಗಳ ಕಾಂತಿಯಿಂದ ಕೆನ್ನೆ-ಕದಪುಗಳೂ, ಮುಖಕಮಲವೂ ತೊಳತೊಳಗಿ ಬೆಳಗುತ್ತಿದ್ದವು. ತಲೆಯ ಮೇಲೆ ರತ್ನ ಕಿರೀಟವೂ, ಎಂಟು ಭುಜಗಳಲ್ಲಿಯೂ ಎಂಟು ದಿವ್ಯಾಯುಧಗಳು ಹೊಳೆಯುತ್ತಿದ್ದವು. ದೇವತೆಗಳೂ, ಮುನಿಗಳೂ, ಪಾರ್ಷದರೂ ಸ್ವಾಮಿಯನ್ನು ಸೇವಿಸುತ್ತಿದ್ದರು. ಗರುಡದೇವರು ಕಿನ್ನರರಂತೆ ತಮ್ಮ ಸಾಮವೇದ ಮಯವಾದ ರೆಕ್ಕೆಗಳ ಧ್ವನಿಯಿಂದ ದೇವದೇವನ ಕೀರ್ತಿಯನ್ನು ಗಾನಮಾಡುತ್ತಿದ್ದರು. ॥ ೬ ॥ ಅವನ ಎಂಟು ನೀಳವಾದ ಸ್ಥೂಲಭುಜಗಳ ನಡುವೆ ಶ್ರೀಲಕ್ಷ್ಮೀದೇವಿಯೊಡನೆ ಸ್ಪರ್ಧಿಸುತ್ತಿದ್ದ ವನಮಾಲೆಯು ಮೆರೆಯುತ್ತಿತ್ತು. ಆದಿಪುರುಷ ಶ್ರೀಮನ್ನಾರಾಯಣನು ತನ್ನಲ್ಲಿ ಶರಣಾಗತರಾಗಿದ್ದ ಪ್ರಚೇತಸರ ಮೇಲೆ ದಯಾದೃಷ್ಟಿಯನ್ನು ಬೀರುತ್ತಾ ಮೇಘಗಂಭೀರವಾಣಿಯಿಂದ ಇಂತೆಂದನು – ॥ ೭ ॥

**ಶ್ರೀಭಗವಂತನು ಹೇಳಿದನು** – ರಾಜಪುತ್ರರೇ! ನಿಮಗೆ ಮಂಗಳವಾಗಲಿ. ನಿಮಗಿಷ್ಟವಾದ ವರವನ್ನು ಬೇಡಿರಿ. ನಿಮ್ಮೆಲ್ಲರಲ್ಲಿ ಪರಸ್ಪರ ಪ್ರೀತಿಯಿದ್ದು ಏಕಧರ್ಮವನ್ನು ಪಾಲಿಸುತ್ತಿರುವ ನಿಮ್ಮ ಈ

ಯೋಽನುಸ್ಮರತಿ ಸಂಧ್ಯಾಯಾಂ ಯುಷ್ಮಾನನುದಿನಂ ನರಃ ।
ತಸ್ಯ ಭ್ರಾತೃಷ್ವಾತ್ಮಸಾಮ್ಯಂ ತಥಾ ಭೂತೇಷು ಸೌಹೃದಮ್ ॥ ೯ ॥

ಯೇ ತು ಮಾಂ ರುದ್ರಗೀತೇನ ಸಾಯಂ ಪ್ರಾತಃ ಸಮಾಹಿತಾಃ ।
ಸ್ತುವಂತ್ಯಹಂ ಕಾಮವರಾನ್ ದಾಸ್ಯೇ ಪ್ರಜ್ಞಾಂ ಚ ಶೋಭನಾಮ್ ॥ ೧೦ ॥

ಯದ್ಯೂಯಂ ಪಿತುರಾದೇಶಮಗ್ರಹೀಷ್ಟ ಮುದಾನ್ವಿತಾಃ ।
ಅಥೋ ವ ಉಶತೀ ಕೀರ್ತಿರ್ಲೋಕಾನನು ಭವಿಷ್ಯತಿ ॥ ೧೧ ॥

ಭವಿತಾ ವಿಶ್ರುತಃ ಪುತ್ರೋಽನವಮೋ ಬ್ರಹ್ಮಣೋ ಗುಣೈಃ ।
ಯ ಏತಾಮಾತ್ಮವೀರ್ಯೇಣ ತ್ರಿಲೋಕೀಂ ಪೂರಯಿಷ್ಯತಿ ॥ ೧೨ ॥

ಕಂಡೋಃ ಪ್ರಮ್ಲೋಚಯಾ ಲಬ್ಧಾ ಕನ್ಯಾ ಕಮಲಲೋಚನಾ ।
ತಾಂ ಚಾಪವಿದ್ಧಾಂ ಜಗೃಹುರ್ಭೂರುಹಾ ನೃಪನಂದನಾಃ ॥ ೧೩ ॥

ಕ್ಷುತ್ಕ್ಷಾಮಾಯಾ ಮುಖೇ ರಾಜಾ ಸೋಮಃ ಪೀಯೂಷವರ್ಷಿಣೀಮ್ ।
ದೇಶಿನೀಂ ರೋದಮಾನಾಯಾ ನಿದಧೇ ಸ ದಯಾನ್ವಿತಃ ॥ ೧೪ ॥

ಪ್ರಜಾವಿಸರ್ಗ ಆದಿಷ್ಟಾಃ ಪಿತ್ರಾ ಮಾಮನುವರ್ತತಾ ।
ತತ್ರ ಕನ್ಯಾಂ ವರಾರೋಹಾಂ ತಾಮುದ್ವಹತ ಮಾಚಿರಮ್ ॥ ೧೫ ॥

ಅಪೃಥಗ್ಧರ್ಮಶೀಲಾನಾಂ ಸರ್ವೇಷಾಂ ವಃ ಸುಮಧ್ಯಮಾ ।
ಅಪೃಥಗ್ಧರ್ಮಶೀಲೇಯಂ ಭೂಯಾತ್ಪತ್ನ್ಯರ್ಪಿತಾಶಯಾ ॥ ೧೬ ॥

ದಿವ್ಯವರ್ಷಸಹಸ್ರಾಣಾಂ ಸಹಸ್ರಮಹತೌಜಸಃ ।
ಭೌಮಾನ್ಭೋಕ್ಷ್ಯಥ ಭೋಗಾನ್ವೈ ದಿವ್ಯಾಂಶ್ಚಾನುಗ್ರಹಾನ್ಮಮ ॥ ೧೭ ॥

ಅಥ ಮಯ್ಯನಪಾಯಿನ್ಯಾ ಭಕ್ತ್ಯಾ ಪಕ್ವಗುಣಾಶಯಾಃ ।
ಉಪಯಾಸ್ಯಥ ಮದ್ಧಾಮ ನಿರ್ವಿದ್ಯ ನಿರಯಾದತಃ ॥ ೧೮ ॥

ಗೃಹೇಷ್ವಾವಿಶತಾಂ ಚಾಪಿ ಪುಂಸಾಂ ಕುಶಲಕರ್ಮಣಾಮ್ ।
ಮದ್ವಾರ್ತಾಯಾತಯಾಮಾನಾಂ ನ ಬಂಧಾಯ ಗೃಹಾ ಮತಾಃ ॥ ೧೯ ॥

ಸೌಹಾರ್ದವು ನನಗೆ ಸಂತೋಷವನ್ನುಂಟುಮಾಡಿದೆ. ॥ ೮ ॥ ಪ್ರತಿದಿನವು ಸಾಯಂಕಾಲದಲ್ಲಿ ನಿಮ್ಮನ್ನು ಸ್ಮರಿಸುವವನಿಗೆ ಅಣ್ಣತಮ್ಮಂದಿರಲ್ಲಿ ನಿಮ್ಮಂತೆಯೇ ಪ್ರೇಮ ಉಂಟಾದೀತು ಹಾಗೂ ಸಮಸ್ತ ಜೀವರ ಕುರಿತು ಮೈತ್ರಿಯ ಭಾವ ಉಂಟಾಗುವುದು. ॥ ೯ ॥ ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಏಕಾಗ್ರ ಚಿತ್ತದಿಂದ ರುದ್ರಗೀತೆಯ ಮೂಲಕ ನನ್ನನ್ನು ಸ್ತುತಿಸುವವನಿಗೆ ನಾನು ಇಷ್ಟವಾದ ವರವನ್ನು ಮತ್ತು ಶುದ್ಧವಾದ ಬುದ್ಧಿಯನ್ನು ಕರುಣಿಸುವೆನು. ॥ ೧೦ ॥ ನೀವು ಸಂತೋಷದಿಂದ ತಂದೆಯ ಅಪ್ಪಣೆಯನ್ನು ಶಿರಸಾವಹಿಸಿದ್ದೀರಿ. ಅದರಿಂದ ನಿಮ್ಮ ಕಮನೀಯ ಕೀರ್ತಿಯು ಸಮಸ್ತ ಲೋಕಗಳಲ್ಲಿಯೂ ಹರಡುವುದು. ॥ ೧೧ ॥ ನಿಮಗೆ ಅತ್ಯಂತ ವಿಖ್ಯಾತವಾದ ಒಬ್ಬ ಸುಪುತ್ರನು ಜನಿಸುವನು. ಅವನು ಬ್ರಹ್ಮದೇವರಿಗೆ ಸ್ವಲ್ಪವೂ ಕಡಿಮೆಯಿಲ್ಲದ ಗುಣಗಳಿಂದ ಬೆಳಗುತ್ತಾ ತನ್ನ ಸಂತಾನದಿಂದ ಮೂರುಲೋಕಗಳನ್ನೂ ತುಂಬುವನು. ॥ ೧೨ ॥

ರಾಜಕುಮಾರರೇ! ತಪೋನಿಷ್ಠನಾಗಿದ್ದ ಕಂಡು ಮಹರ್ಷಿಯ ತಪಸ್ಸನ್ನು ಕೆಡಿಸಲು ಇಂದ್ರನು 'ಪ್ರಮ್ಲೋಚಾ' ಎಂಬ ಅಪ್ಸರೆಯನ್ನು ಕಳುಹಿಸಿದಾಗ ಅವಳಲ್ಲಿ ಮಹರ್ಷಿಗೆ ಕಮಲಲೋಚನೆಯಾದ ಒಂದು ಕನ್ಯಾರತ್ನವು ಜನಿಸಿತು. ಆ ಮಗುವನ್ನು ಅಲ್ಲಿಯೇ ಬಿಟ್ಟು ಆಕೆಯು ಸ್ವರ್ಗಕ್ಕೆ ಹೊರಟುಹೋದಳು. ಆಗ ಅಲ್ಲಿದ್ದ ವೃಕ್ಷಗಳೇ ಆ ಮಗುವನ್ನು ಪಾಲಿಸಿ-ಪೋಷಿಸಿದರು. ॥ ೧೩ ॥ ಆ ಮಗುವು ಹಸಿವಿನಿಂದ ಪೀಡಿತವಾಗಿ ಅಳತೊಡಗಿದಾಗ ಔಷಧಿಗಳ ಅರಸನಾದ ಚಂದ್ರನು ಕರುಣೆಯಿಂದ ಅದರ ಬಾಯಲ್ಲಿ ಅಮೃತವನ್ನು ಸುರಿಸುವ ತನ್ನ ತೋರುಬೆರಳನ್ನು ಇರಿಸಿದನು. ॥ ೧೪ ॥ ನಿಮ್ಮ ತಂದೆಯು ಈಗ ನನ್ನ ಆರಾಧನೆಯಲ್ಲಿ ತೊಡಗಿರುವನು. ನಿಮಗೆ ಸಂತಾನವನ್ನು ಪಡೆಯಬೇಕೆಂಬ ಆಜ್ಞೆಯನ್ನು ಕೊಟ್ಟಿರುವನು. ಆದ್ದರಿಂದ ನೀವು ಬೇಗನೇ ದೇವತೋಪಮಳಾದ ಆ ಕನ್ಯಾಮಣಿಯನ್ನು ವಿವಾಹ ವಾಗಿರಿ. ॥ ೧೫ ॥ ನೀವೆಲ್ಲರೂ ಒಂದೇ ಧರ್ಮದಲ್ಲಿ ತತ್ಪರರಾಗಿರುವಿರಿ ಮತ್ತು ನಿಮ್ಮ ಸ್ವಭಾವವೂ ಒಂದೇ ರೀತಿಯಾಗಿದೆ. ಅದಕ್ಕಾಗಿ ನಿಮ್ಮಂತೆಯೇ ಸಮಾನಧರ್ಮ-ಸ್ವಭಾವವುಳ್ಳ ಆ ಸುಂದರಕನ್ಯೆಯು ನಿಮ್ಮೆಲ್ಲರ ಪತ್ನಿಯಾಗುವಳು. ನಿಮ್ಮೆಲ್ಲರಲ್ಲಿ ಅವಳಿಗೆ ಸಮಾನವಾದ ಅನುರಾಗವಿದ್ದೀತು. ॥ ೧೬ ॥ ನೀವು ನನ್ನ ಕೃಪೆಯಿಂದ ಹತ್ತುಲಕ್ಷ ವರ್ಷಗಳ ಕಾಲ ಪೂರ್ಣ ಬಲಶಾಲಿಗಳಾಗಿದ್ದು ನಾನಾರೀತಿಯ ಭೂಲೋಕದ ಭೋಗಗಳನ್ನು ಹಾಗೂ ಸ್ವರ್ಗಲೋಕದ ದಿವ್ಯಭೋಗಗಳನ್ನೂ ಅನುಭವಿಸುವಿರಿ. ॥ ೧೭ ॥ ಕೊನೆಯಲ್ಲಿ ನನ್ನ ನಿಶ್ಚಲವಾದ ಭಕ್ತಿಯಿಂದ ಹೃದಯದ ಸಮಸ್ತ ವಾಸನಾರೂಪವಾದ ದೋಷಗಳು ದಗ್ಧವಾದ ಬಳಿಕ ನೀವುಗಳು ಈ ಲೋಕ ಮತ್ತು ಪರಲೋಕದ ನರಕ ಸದೃಶವಾದ ಎಲ್ಲ ಭೋಗಗಳಿಂದಲೂ ವಿರಕ್ತರಾಗಿ ನನ್ನ ಪರಮ ಧಾಮಕ್ಕೆ ತೆರಳುವಿರಿ. ॥ ೧೮ ॥ ಭಗವದರ್ಪಣ ಬುದ್ಧಿಯಿಂದ ಕರ್ಮಗಳನ್ನು ಆಚರಿಸುತ್ತಾ, ತಮ್ಮ ಎಲ್ಲ ಕಾಲವನ್ನು ನನ್ನ ಕಥಾ-ಕೀರ್ತನೆಯಲ್ಲೇ ಕಳೆಯುವವರು ಗೃಹಸ್ಥಾಶ್ರಮದಲ್ಲೇ ಇದ್ದರೂ ಅವರಿಗೆ ಗೃಹವು ಬಂಧನಕಾರಕವಾಗುವುದಿಲ್ಲ. ॥ ೧೯ ॥

ಅವರು ಪ್ರತಿದಿನವೂ ನನ್ನ ಲೀಲೆಗಳನ್ನೇ ಕೇಳುತ್ತಿರುತ್ತಾರೆ. ಆದುದರಿಂದ ಬ್ರಹ್ಮವಾದಿಗಳಾದ ಜ್ಞಾನೋಪದೇಶಕರ ಮೂಲಕ

# ಮೂವತ್ತನೆಯ ಅಧ್ಯಾಯ

## ಪ್ರಚೇತಸರಿಗೆ ಭಗವಾನ್ ಮಹಾವಿಷ್ಣುವಿನಿಂದ ವರಪ್ರದಾನ

*ವಿದುರ ಉವಾಚ*

**ಯೇ ತ್ವಯಾಭಿಹಿತಾ ಬ್ರಹ್ಮನ್ ಸುತಾ ಪ್ರಾಚೀನಬರ್ಹಿಷಃ ।**
**ತೇ ರುದ್ರಗೀತೇನ ಹರಿಂ ಸಿದ್ಧಿಮಾಪುಃ ಪ್ರತೋಷ್ಯ ಕಾಮ್ ॥ ೧ ॥**

**ಕಿಂ ಬಾರ್ಹಸ್ಪತ್ಯೇಹ ಪರತ್ರ ವಾಥ**
**ಕೈವಲ್ಯನಾಥಪ್ರಿಯಪಾರ್ಶ್ವವರ್ತಿನಃ ।**
**ಆಸಾದ್ಯ ದೇವಂ ಗಿರಿಶಂ ಯದೃಚ್ಛಯಾ**
**ಪ್ರಾಪುಃ ಪರಂ ನೂನಮಥ ಪ್ರಚೇತಸಃ ॥ ೨ ॥**

*ಮೈತ್ರೇಯ ಉವಾಚ*

**ಪ್ರಚೇತಸೋಽಂತರುದಧೌ ಪಿತುರಾದೇಶಕಾರಿಣಃ ।**
**ಜಪಯಜ್ಞೇನ ತಪಸಾ ಪುರಂಜನಮತೋಷಯನ್ ॥ ೩ ॥**

**ದಶವರ್ಷಸಹಸ್ರಾಂತೇ ಪುರುಷಸ್ತು ಸನಾತನಃ ।**
**ತೇಷಾಮಾವಿರಭೂತ್ಕೃಚ್ಛ್ರಂ ಶಾಂತೇನ ಶಮಯನ್ರುಚಾ ॥ ೪ ॥**

**ಸುಪರ್ಣಸ್ಕಂಧಮಾರೂಢೋ ಮೇರುಶೃಂಗಮಿವಾಂಬುದಃ ।**
**ಪೀತವಾಸಾ ಮಣಿಗ್ರೀವಃ ಕುರ್ವನ್ವಿತಿಮಿರಾ ದಿಶಃ ॥ ೫ ॥**

**ಕಾಶಿಷ್ಣುನಾ ಕನಕವರ್ಣವಿಭೂಷಣೇನ**
**ಭ್ರಾಜತ್ಕಪೋಲವದನೋ ವಿಲಸತ್ಕಿರೀಟಃ ।**
**ಅಷ್ಟಾಯುಧೈರನುಚರೈರ್ಮುನಿಭಿಃ ಸುರೇಂದ್ರೈ-**
**ರಾಸೇವಿತೋ ಗರುಡಕಿನ್ನರಗೀತಕೀರ್ತಿಃ ॥ ೬ ॥**

**ಪೀನಾಯತಾಷ್ಟಭುಜಮಂಡಲಮಧ್ಯಲಕ್ಷ್ಮ್ಯಾ**
**ಸ್ಪರ್ಧಚ್ಛ್ರಿಯಾ ಪರಿವೃತೋ ವನಮಾಲಯಾದ್ಯಃ ।**
**ಬರ್ಹಿಷ್ಮತಃ ಪುರುಷ ಆಹ ಸುತಾನ್ಪ್ರಪನ್ನಾನ್**
**ಪರ್ಜನ್ಯನಾದರುತಯಾ ಸಘೃಣಾವಲೋಕಃ ॥ ೭ ॥**

*ಶ್ರೀಭಗವಾನುವಾಚ*

**ವರಂ ವೃಣೀಧ್ವಂ ಭದ್ರಂ ವೋ**
**ಯೂಯಂ ಮೇ ನೃಪನಂದನಾಃ ।**
**ಸೌಹಾರ್ದೇನಾಪೃಥಗ್ಧರ್ಮಾ-**
**ಸ್ತುಷ್ಟೋಽಹಂ ಸೌಹೃದೇನ ವಃ ॥ ೮ ॥**

**ವಿದುರನು ಕೇಳಿದನು** – ಮುನಿಶ್ರೇಷ್ಠರೇ ! ತಾವು ಈವರೆಗೆ ವರ್ಣನೆಮಾಡಿದ ಪ್ರಾಚೀನಬರ್ಹಿ ಮಹಾರಾಜನ ಪುತ್ರರಾದ ಪ್ರಚೇತಸರು ರುದ್ರಗೀತೆಯ ಮೂಲಕ ಶ್ರೀಹರಿಯನ್ನು ಸ್ತುತಿಸಿ ಯಾವ ಸಿದ್ಧಿಯನ್ನು ಪಡೆದರು ? ॥ ೧ ॥ ಬೃಹಸ್ಪತಿಶಿಷ್ಯರೇ ! ಮೋಕ್ಷಾಧಿಪತಿಯಾದ ಶ್ರೀನಾರಾಯಣನಿಗೆ ಅತ್ಯಂತ ಪ್ರಿಯರಾದ ಭಗವಾನ್ ಶಂಕರನ ಸಾನ್ನಿಧ್ಯವನ್ನು ಆಕಸ್ಮಾತ್ತಾಗಿ ಪಡೆದ ಪ್ರಚೇತಸರು ಮುಕ್ತಿಯನ್ನೇನೋ ಪಡೆದಿರಬಹುದು. ಅದಕ್ಕೆ ಮೊದಲು ಈ ಲೋಕದಲ್ಲಿ ಅಥವಾ ಪರಲೋಕದಲ್ಲಿಯೂ ಅವರು ಏನನ್ನು ಪಡೆದರು ? ಎಂಬುದನ್ನು ಹೇಳುವ ಕೃಪೆಮಾಡಬೇಕು. ॥ ೨ ॥

**ಶ್ರೀಮೈತ್ರೇಯರು ಹೇಳಿದರು** – ಎಲೈ ವಿದುರನೇ ! ತಂದೆಯ ಆಜ್ಞಾಕಾರಿಗಳಾದ ಪ್ರಚೇತಸರು ಸಮುದ್ರದ ಒಳಗೆ ನಿಂತು ಕೊಂಡೇ ರುದ್ರಗೀತೆಯನ್ನು ಜಪಿಸುತ್ತಾ, ಜಪಯಜ್ಞದಿಂದಲೂ, ತಪಸ್ಸಿನಿಂದಲೂ ಸಮಸ್ತ ಶರೀರಗಳ ಉತ್ಪಾದಕನಾದ ಭಗವಾನ್ ಶ್ರೀಹರಿಯನ್ನು ಪ್ರಸನ್ನಗೊಳಿಸಿದರು. ॥ ೩ ॥ ತಪಸ್ಸು ಮಾಡುತ್ತಾ-ಮಾಡುತ್ತಾ ಹತ್ತುಸಾವಿರ ವರ್ಷಗಳು ಕಳೆದುಹೋಗಲಾಗಿ ಪುರಾಣ ಪುರುಷನಾದ ಶ್ರೀನಾರಾಯಣನು ತನ್ನ ಮನೋಹರ ಕಾಂತಿ ಯಿಂದ ಅವರ ತಪಸ್ಸಿನಿಂದುಂಟಾದ ಕ್ಲೇಶವನ್ನು ಶಾಂತಗೊಳಿಸುತ್ತಾ ಸೌಮ್ಯವಾದ ದಿವ್ಯವಿಗ್ರಹದಿಂದ ಅವರ ಎದುರಿಗೆ ಪ್ರಕಟನಾದನು. ॥ ೪ ॥ ಗರುತ್ಮಂತನ ಹೆಗಲಿನ ಮೇಲೆ ಕುಳಿತಿರುವ ಶ್ಯಾಮ ಸುಂದರನಾದ ಸ್ವಾಮಿಯು ಮೇರುಪರ್ವತದ ಶಿಖರದಲ್ಲಿ ಕಂಗೊಳಿಸುವ ಮುಗಿಲಿನಂತೆ ಮೆರೆಯುತ್ತಿದ್ದನು. ಪರಮಾತ್ಮನ ಪ್ರಭಾಪುಂಜವು ಎಲ್ಲ ದಿಕ್ಕುಗಳ ಕತ್ತಲೆಯನ್ನು ಹೊಡೆದಟ್ಟು ವಂತಿತ್ತು. ಅವನ ಶ್ರೀದೇಹದಲ್ಲಿ ಮನೋಹರ ಪೀತಾಂಬರವೂ, ಕಂಠದಲ್ಲಿ ಕೌಸ್ತುಭಮಣಿಯೂ ಶೋಭಿಸುತ್ತಿತ್ತು. ॥ ೫ ॥ ಥಳ-ಥಳಿಸುತ್ತಿದ್ದ ಸ್ವರ್ಣರತ್ನಾಭರಣಗಳ ಕಾಂತಿಯಿಂದ ಕೆನ್ನೆ-ಕದಪು ಗಳೂ, ಮುಖಕಮಲವೂ ತೊಳತೊಳಗಿ ಬೆಳಗುತ್ತಿದ್ದವು. ತಲೆಯ ಮೇಲೆ ರತ್ನ ಕಿರೀಟವೂ, ಎಂಟು ಭುಜಗಳಲ್ಲಿಯೂ ಎಂಟು ದಿವ್ಯಾಯುಧಗಳು ಹೊಳೆಯುತ್ತಿದ್ದವು. ದೇವತೆಗಳೂ, ಮುನಿ ಗಳೂ, ಪಾರ್ಷದರೂ ಸ್ವಾಮಿಯನ್ನು ಸೇವಿಸುತ್ತಿದ್ದರು. ಗರುಡ ದೇವರು ಕಿನ್ನರರಂತೆ ತಮ್ಮ ಸಾಮವೇದ ಮಯವಾದ ರೆಕ್ಕೆಗಳ ಧ್ವನಿಯಿಂದ ದೇವದೇವನ ಕೀರ್ತಿಯನ್ನು ಗಾನಮಾಡು ತ್ತಿದ್ದರು. ॥ ೬ ॥ ಅವನ ಎಂಟು ನೀಳವಾದ ಸ್ಥೂಲಭುಜಗಳ ನಡುವೆ ಶ್ರೀಲಕ್ಷ್ಮೀದೇವಿಯೊಡನೆ ಸ್ಪರ್ಧಿಸುತ್ತಿದ್ದ ವನಮಾಲೆಯು ಮೆರೆಯುತ್ತಿತ್ತು. ಆದಿಪುರುಷ ಶ್ರೀಮನ್ನಾರಾಯಣನು ತನ್ನಲ್ಲಿ ಶರಣಾಗತರಾಗಿದ್ದ ಪ್ರಚೇತಸರ ಮೇಲೆ ದಯಾದೃಷ್ಟಿಯನ್ನು ಬೀರುತ್ತಾ ಮೇಘಗಂಭೀರವಾಣಿಯಿಂದ ಇಂತೆಂದನು – ॥ ೭ ॥

**ಶ್ರೀಭಗವಂತನು ಹೇಳಿದನು** – ರಾಜಪುತ್ರರೇ ! ನಿಮಗೆ ಮಂಗಳವಾಗಲಿ. ನಿಮಗಿಷ್ಟವಾದ ವರವನ್ನು ಬೇಡಿರಿ. ನಿಮ್ಮೆಲ್ಲರಲ್ಲಿ ಪರಸ್ಪರ ಪ್ರೀತಿಯಿದ್ದು ಏಕಧರ್ಮವನ್ನು ಪಾಲಿಸುತ್ತಿರುವ ನಿಮ್ಮ ಈ

ಯೋಽನುಸ್ಮರತಿ ಸಂಧ್ಯಾಯಾಂ ಯುಷ್ಮಾನನುದಿನಂ ನರಃ ।
ತಸ್ಯ ಭ್ರಾತೃಷ್ವಾತ್ಮಸಾಮ್ಯಂ ತಥಾ ಭೂತೇಷು ಸೌಹೃದಮ್ ॥ ೯ ॥

ಯೇ ತು ಮಾಂ ರುದ್ರಗೀತೇನ ಸಾಯಂ ಪ್ರಾತಃ ಸಮಾಹಿತಾಃ ।
ಸ್ತುವಂತ್ಯಹಂ ಕಾಮವರಾನ್ ದಾಸ್ಯೇ ಪ್ರಜ್ಞಾಂ ಚ ಶೋಭನಾಮ್ ॥ ೧೦ ॥

ಯದ್ಯೂಯಂ ಪಿತುರಾದೇಶಮಗ್ರಹೀಷ್ಟ ಮುದಾನ್ವಿತಾಃ ।
ಅಥೋ ವ ಉಶತೀ ಕೀರ್ತಿರ್ಲೋಕಾನನು ಭವಿಷ್ಯತಿ ॥ ೧೧ ॥

ಭವಿತಾ ವಿಶ್ರುತಃ ಪುತ್ರೋಽನವಮೋ ಬ್ರಹ್ಮಣೋ ಗುಣೈಃ ।
ಯ ಏತಾಮಾತ್ಮವೀರ್ಯೇಣ ತ್ರಿಲೋಕೀಂ ಪೂರಯಿಷ್ಯತಿ ॥ ೧೨ ॥

ಕಂಡೋಃ ಪ್ರಮ್ಲೋಚಯಾ ಲಬ್ಧಾ ಕನ್ಯಾ ಕಮಲಲೋಚನಾ ।
ತಾಂ ಚಾಪವಿದ್ಧಾಂ ಜಗೃಹುರ್ಭೂರುಹಾ ನೃಪನಂದನಾಃ ॥ ೧೩ ॥

ಕ್ಷುತ್ಕ್ಷಾಮಾಯಾ ಮುಖೇ ರಾಜಾ ಸೋಮಃ ಪೀಯೂಷವರ್ಷಿಣೀಮ್ ।
ದೇಶಿನೀಂ ರೋದಮಾನಾಯಾ ನಿದಧೇ ಸ ದಯಾನ್ವಿತಃ ॥ ೧೪ ॥

ಪ್ರಜಾವಿಸರ್ಗ ಆದಿಷ್ಟಾಃ ಪಿತ್ರಾ ಮಾಮನುವರ್ತತಾ ।
ತತ್ರ ಕನ್ಯಾಂ ವರಾರೋಹಾಂ ತಾಮುದ್ವಹತ ಮಾಚಿರಮ್ ॥ ೧೫ ॥

ಅಪೃಥಗ್ಧರ್ಮಶೀಲಾನಾಂ ಸರ್ವೇಷಾಂ ವಃ ಸುಮಧ್ಯಮಾ ।
ಅಪೃಥಗ್ಧರ್ಮಶೀಲೇಯಂ ಭೂಯಾತ್ಪತ್ನ್ಯರ್ಪಿತಾಶಯಾ ॥ ೧೬ ॥

ದಿವ್ಯವರ್ಷಸಹಸ್ರಾಣಾಂ ಸಹಸ್ರಮಹತೌಜಸಃ ।
ಭೌಮಾನ್ಭೋಕ್ಷ್ಯಥ ಭೋಗಾನ್ವೈ ದಿವ್ಯಾಂಶ್ಚಾನುಗ್ರಹಾನ್ಮಮ ॥ ೧೭ ॥

ಅಥ ಮಯ್ಯನಪಾಯಿನ್ಯಾ ಭಕ್ತ್ಯಾ ಪಕ್ವಗುಣಾಶಯಾಃ ।
ಉಪಯಾಸ್ಯಥ ಮದ್ಧಾಮ ನಿರ್ವಿದ್ಯ ನಿರಯಾದತಃ ॥ ೧೮ ॥

ಗೃಹೇಷ್ವಾವಿಶತಾಂ ಚಾಪಿ ಪುಂಸಾಂ ಕುಶಲಕರ್ಮಣಾಮ್ ।
ಮದ್ವಾರ್ತಾಯಾತಯಾಮಾನಾಂ ನ ಬಂಧಾಯ ಗೃಹಾ ಮತಾಃ ॥ ೧೯ ॥

ಸೌಹಾರ್ದವು ನನಗೆ ಸಂತೋಷವನ್ನುಂಟುಮಾಡಿದೆ. ॥ ೮ ॥ ಪ್ರತಿದಿನವು ಸಾಯಂಕಾಲದಲ್ಲಿ ನಿಮ್ಮನ್ನು ಸ್ಮರಿಸುವವನಿಗೆ ಅಣ್ಣತಮ್ಮಂದಿರಲ್ಲಿ ನಿಮ್ಮಂತೆಯೇ ಪ್ರೇಮ ಉಂಟಾದೀತು ಹಾಗೂ ಸಮಸ್ತ ಜೀವರ ಕುರಿತು ಮೈತ್ರಿಯ ಭಾವ ಉಂಟಾಗುವುದು. ॥ ೯ ॥ ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಏಕಾಗ್ರಚಿತ್ತದಿಂದ ರುದ್ರಗೀತೆಯ ಮೂಲಕ ನನ್ನನ್ನು ಸ್ತುತಿಸುವವನಿಗೆ ನಾನು ಇಷ್ಟವಾದ ವರವನ್ನು ಮತ್ತು ಶುದ್ಧವಾದ ಬುದ್ಧಿಯನ್ನು ಕರುಣಿಸುವೆನು. ॥ ೧೦ ॥ ನೀವು ಸಂತೋಷದಿಂದ ತಂದೆಯ ಅಪ್ಪಣೆಯನ್ನು ಶಿರಸಾವಹಿಸಿದ್ದೀರಿ. ಅದರಿಂದ ನಿಮ್ಮ ಕಮನೀಯ ಕೀರ್ತಿಯು ಸಮಸ್ತ ಲೋಕಗಳಲ್ಲಿಯೂ ಹರಡುವುದು. ॥ ೧೧ ॥ ನಿಮಗೆ ಅತ್ಯಂತ ವಿಖ್ಯಾತವಾದ ಒಬ್ಬ ಸುಪುತ್ರನು ಜನಿಸುವನು. ಅವನು ಬ್ರಹ್ಮದೇವರಿಗೆ ಸ್ವಲ್ಪವೂ ಕಡಿಮೆಯಿಲ್ಲದ ಗುಣಗಳಿಂದ ಬೆಳಗುತ್ತಾ ತನ್ನ ಸಂತಾನದಿಂದ ಮೂರುಲೋಕಗಳನ್ನೂ ತುಂಬುವನು. ॥ ೧೨ ॥

ರಾಜಕುಮಾರರೇ ! ತಪೋನಿಷ್ಠನಾಗಿದ್ದ ಕಂಡು ಮಹರ್ಷಿಯ ತಪಸ್ಸನ್ನು ಕೆಡಿಸಲು ಇಂದ್ರನು 'ಪ್ರಮ್ಲೋಚಾ' ಎಂಬ ಅಪ್ಸರೆಯನ್ನು ಕಳುಹಿಸಿದಾಗ ಅವಳಲ್ಲಿ ಮಹರ್ಷಿಗೆ ಕಮಲಲೋಚನೆಯಾದ ಒಂದು ಕನ್ಯಾರತ್ನವು ಜನಿಸಿತು. ಆ ಮಗುವನ್ನು ಅಲ್ಲಿಯೇ ಬಿಟ್ಟು ಆಕೆಯು ಸ್ವರ್ಗಕ್ಕೆ ಹೊರಟುಹೋದಳು. ಆಗ ಅಲ್ಲಿದ್ದ ವೃಕ್ಷಗಳೇ ಆ ಮಗುವನ್ನು ಪಾಲಿಸಿ-ಪೋಷಿಸಿದರು. ॥ ೧೩ ॥ ಆ ಮಗುವು ಹಸಿವಿನಿಂದ ಪೀಡಿತವಾಗಿ ಅಳತೊಡಗಿದಾಗ ಔಷಧಿಗಳ ಅರಸನಾದ ಚಂದ್ರನು ಕರುಣೆಯಿಂದ ಅದರ ಬಾಯಲ್ಲಿ ಅಮೃತವನ್ನು ಸುರಿಸುವ ತನ್ನ ತೋರುಬೆರಳನ್ನು ಇರಿಸಿದನು. ॥ ೧೪ ॥ ನಿಮ್ಮ ತಂದೆಯು ಈಗ ನನ್ನ ಆರಾಧನೆಯಲ್ಲಿ ತೊಡಗಿರುವನು. ನಿಮಗೆ ಸಂತಾನವನ್ನು ಪಡೆಯಬೇಕೆಂಬ ಆಜ್ಞೆಯನ್ನು ಕೊಟ್ಟಿರುವನು. ಆದ್ದರಿಂದ ನೀವು ಬೇಗನೇ ದೇವತೋಪಮಳಾದ ಆ ಕನ್ಯಾಮಣಿಯನ್ನು ವಿವಾಹ ವಾಗಿರಿ. ॥ ೧೫ ॥ ನೀವೆಲ್ಲರೂ ಒಂದೇ ಧರ್ಮಲ್ಲಿ ತತ್ಪರರಾಗಿರುವಿರಿ ಮತ್ತು ನಿಮ್ಮ ಸ್ವಭಾವವೂ ಒಂದೇ ರೀತಿಯಾಗಿದೆ. ಅದಕ್ಕಾಗಿ ನಿಮ್ಮಂತೆಯೇ ಸಮಾನಧರ್ಮ-ಸ್ವಭಾವವುಳ್ಳ ಆ ಸುಂದರಕನ್ಯೆಯು ನಿಮ್ಮೆಲ್ಲರ ಪತ್ನಿಯಾಗುವಳು. ನಿಮ್ಮೆಲ್ಲರಲ್ಲಿ ಅವಳಿಗೆ ಸಮಾನವಾದ ಅನುರಾಗವಿದ್ದೀತು. ॥ ೧೬ ॥ ನೀವು ನನ್ನ ಕೃಪೆಯಿಂದ ಹತ್ತುಲಕ್ಷ ವರ್ಷಗಳ ಕಾಲ ಪೂರ್ಣ ಬಲಶಾಲಿಗಳಾಗಿದ್ದು ನಾನಾರೀತಿಯ ಭೂಲೋಕದ ಭೋಗಗಳನ್ನು ಹಾಗೂ ಸ್ವರ್ಗಲೋಕದ ದಿವ್ಯಭೋಗಗಳನ್ನೂ ಅನುಭವಿಸುವಿರಿ. ॥ ೧೭ ॥ ಕೊನೆಯಲ್ಲಿ ನನ್ನ ನಿಶ್ಚಲವಾದ ಭಕ್ತಿಯಿಂದ ಹೃದಯದ ಸಮಸ್ತ ವಾಸನಾರೂಪವಾದ ದೋಷಗಳು ದಗ್ಧವಾದ ಬಳಿಕ ನೀವುಗಳು ಈ ಲೋಕ ಮತ್ತು ಪರಲೋಕದ ನರಕ ಸದೃಶವಾದ ಎಲ್ಲ ಭೋಗಗಳಿಂದಲೂ ವಿರಕ್ತರಾಗಿ ನನ್ನ ಪರಮ ಧಾಮಕ್ಕೆ ತೆರಳುವಿರಿ. ॥ ೧೮ ॥ ಭಗವದರ್ಪಣ ಬುದ್ಧಿಯಿಂದ ಕರ್ಮಗಳನ್ನು ಆಚರಿಸುತ್ತಾ, ತಮ್ಮ ಎಲ್ಲ ಕಾಲವನ್ನು ನನ್ನ ಕಥಾ-ಕೀರ್ತನೆಯಲ್ಲೇ ಕಳೆಯುವವರು ಗೃಹಸ್ಥಾಶ್ರಮದಲ್ಲೇ ಇದ್ದರೂ ಅವರಿಗೆ ಗೃಹವು ಬಂಧನಕಾರಕವಾಗುವುದಿಲ್ಲ. ॥ ೧೯ ॥

ಅವರು ಪ್ರತಿದಿನವೂ ನನ್ನ ಲೀಲೆಗಳನ್ನೇ ಕೇಳುತ್ತಿರುತ್ತಾರೆ. ಆದುದರಿಂದ ಬ್ರಹ್ಮವಾದಿಗಳಾದ ಜ್ಞಾನೋಪದೇಶಕರ ಮೂಲಕ

ನವ್ಯವದ್ಧೃದಯೇ ಯಜ್ಞೋ ಬ್ರಹ್ಮೈತದ್ಬ್ರಹ್ಮವಾದಿಭಿಃ ।
ನ ಮುಹ್ಯಂತಿ ನ ಶೋಚಂತಿ ನ ಹೃಷ್ಯಂತಿ ಯತೋ ಗತಾಃ
॥ ೨೦ ॥

*ಮೈತ್ರೇಯ ಉವಾಚ*

ಏವಂ ಬ್ರುವಾಣಂ ಪುರುಷಾರ್ಥಭಾಜನಂ
ಜನಾರ್ದನಂ ಪ್ರಾಂಜಲಯಃ ಪ್ರಚೇತಸಃ ।
ತದ್ದರ್ಶನಧ್ವಸ್ತತಮೋರಜೋಮಲಾ
ಗಿರಾಗೃಣನ್ಗದ್ಗದಯಾ ಸುಹೃತ್ತಮಮ್ ॥ ೨೧ ॥

*ಪ್ರಚೇತಸ ಊಚುಃ*

ನಮೋ ನಮಃ ಕ್ಲೇಶವಿನಾಶನಾಯ
ನಿರೂಪಿತೋದಾರಗುಣಾಹ್ವಯಾಯ ।
ಮನೋವಚೋವೇಗಪುರೋಜವಾಯ
ಸರ್ವಾಕ್ಷಮಾರ್ಗೈರಗತಾಧ್ವನೇ ನಮಃ ॥ ೨೨ ॥

ಶುದ್ಧಾಯ ಶಾಂತಾಯ ನಮಃ ಸ್ವನಿಷ್ಠಯಾ
ಮನಸ್ಯಪಾರ್ಥಂ ವಿಲಸದ್ದ್ವಯಾಯ ।
ನಮೋ ಜಗತ್ಸ್ಥಾನಲಯೋದಯೇಷು
ಗೃಹೀತಮಾಯಾಗುಣವಿಗ್ರಹಾಯ ॥ ೨೩ ॥

ನಮೋ ವಿಶುದ್ಧಸತ್ತ್ವಾಯ ಹರಯೇ ಹರಿಮೇಧಸೇ ।
ವಾಸುದೇವಾಯ ಕೃಷ್ಣಾಯ ಪ್ರಭವೇ ಸರ್ವಸಾತ್ವತಾಮ್
॥ ೨೪ ॥

ನಮಃ ಕಮಲನಾಭಾಯ ನಮಃ ಕಮಲಮಾಲಿನೇ ।
ನಮಃ ಕಮಲಪಾದಾಯ ನಮಸ್ತೇ ಕಮಲೇಕ್ಷಣ
॥ ೨೫ ॥

ನಮಃ ಕಮಲಕಿಂಜಲ್ಕಪಿಶಂಗಾಮಲವಾಸಸೇ ।
ಸರ್ವಭೂತನಿವಾಸಾಯ ನಮೋಽಯುಂಕ್ಷ್ಮಹಿ ಸಾಕ್ಷಿಣೇ
॥ ೨೬ ॥

ರೂಪಂ ಭಗವತಾ ತ್ವೇತದಶೇಷಕ್ಲೇಶಸಂಕ್ಷಯಮ್ ।
ಆವಿಷ್ಕೃತಂ ನಃ ಕ್ಲಿಷ್ಟಾನಾಂ ಕಿಮನ್ಯದನುಕಂಪಿತಮ್
॥ ೨೭ ॥

ಏತಾವತ್ತ್ವಂ ಹಿ ವಿಭುಭಿರ್ಭಾವ್ಯಂ ದೀನೇಷು ವತ್ಸಲೈಃ ।
ಯದನುಸ್ಮರ್ಯತೇ ಕಾಲೇ ಸ್ವಬುದ್ಧ್ಯಾಭದ್ರರಂಧನ
॥ ೨೮ ॥

ಯೇನೋಪಶಾಂತಿರ್ಭೂತಾನಾಂ
ಕ್ಷುಲ್ಲಕಾನಾಮಪೀಹತಾಮ್ ।
ಅಂತರ್ಹಿತೋಽಂತರ್ಹೃದಯೇ
ಕಸ್ಮಾನ್ನೋ ವೇದ ನಾಶಿಷಃ ॥ ೨೯ ॥

ಆ ಶ್ರೋತೃಗಳ ಹೃದಯದಲ್ಲಿ ಜ್ಞಾನಸ್ವರೂಪನಾದ ಪರಬ್ರಹ್ಮನಾದ ನಾನು ಪ್ರತಿದಿನವೂ ಹೊಸಬನಂತೆ ಬೆಳಗುತ್ತಿರುತ್ತೇನೆ. ನನ್ನನ್ನು ಹೊಂದಿದ ಬಳಿಕ ಜೀವಿಗಳಿಗೆ ಶೋಕವಾಗಲೀ, ಮೋಹವಾಗಲೀ, ಹರ್ಷವಾಗಲೀ ಇರುವುದಿಲ್ಲ. ॥ ೨೦॥

**ಶ್ರೀಮೈತ್ರೇಯರು ಹೇಳುತ್ತಾರೆ** – ಸಕಲ ಪುರುಷಾರ್ಥಗಳಿಗೂ ಆಶ್ರಯನಾಗಿ, ಸರ್ವರಿಗೂ ಪರಮಸುಹೃದನೂ ಆದ ಶ್ರೀಹರಿಯು ಹೀಗೆ ಅಪ್ಪಣೆಕೊಡಿಸಲು, ಆತನ ದರ್ಶನದಿಂದಲೇ ರಜೋಗುಣ-ತಮೋಗುಣಗಳ ಮಲವನ್ನು ಕಳಕೊಂಡಿದ್ದ ಪ್ರಚೇತಸರು ಕೈಗಳನ್ನು ಜೋಡಿಸಿಕೊಂಡು ಗದ್ಗದವಾದ ವಾಣಿಯಿಂದ ಆತನನ್ನು ಸ್ತುತಿಸ ತೊಡಗಿದರು. ॥ ೨೧ ॥

**ಪ್ರಚೇತಸರು ಹೇಳುತ್ತಾರೆ** – ಭಕ್ತರ ಕ್ಲೇಶಗಳನ್ನು ದೂರಮಾಡುವ ಭಗವಂತನೇ ನಿನಗೆ ನಮೋ ನಮಃ. ವೇದಗಳಿಂದ ಹೊಗಳಲ್ಪಟ್ಟ ಉದಾರವಾದ ಗುಣಗಳಿಂದಲೂ, ನಾಮಗಳಿಂದಲೂ ಭೂಷಿತನಾದ ನಿನಗೆ ನಮಸ್ಕಾರವು. ಮನಸ್ಸು ಮತ್ತು ಮಾತುಗಳ ವೇಗಗಳನ್ನು ಮೀರಿದ ವೇಗವುಳ್ಳವನಾಗಿ ಎಲ್ಲ ಇಂದ್ರಿಯಗಳ ಗತಿಗಳಿಂದಲೂ ಹೊರಗೆ ಬೆಳಗುತ್ತಿರುವ ಸ್ವರೂಪವುಳ್ಳ ನಿನಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೨೨ ॥ ಸ್ವಸ್ವರೂಪದಲ್ಲಿ ನೆಲೆಗೊಂಡಿರುವುದರಿಂದ ಸದಾಶುದ್ಧನಾಗಿ ಶಾಂತನಾಗಿರುವವನೂ, ಪರಮಾರ್ಥವಲ್ಲದಿರುವ ದ್ವೈತವನ್ನು ಮನಸ್ಸಿನಲ್ಲಿ ತೋರುತ್ತಿರುವವನೂ, ಸೃಷ್ಟಿ ಸ್ಥಿತಿ, ಲಯಗಳಿಗಾಗಿ ಮಾಯೆಯ ಗುಣಗಳನ್ನು ಸ್ವೀಕರಿಸಿ ತ್ರಿಮೂರ್ತಿ ಸ್ವರೂಪದಿಂದ ಬೆಳಗುತ್ತಿರುವವನೂ ಆದ ನಿನಗೆ ನಮೋ ನಮಃ ॥ ೨೩ ॥ ಶುದ್ಧ ಸತ್ತ್ವಸ್ವರೂಪನೂ, ಸಂಸಾರವನ್ನು ದೂರಮಾಡುವ ಜ್ಞಾನವುಳ್ಳವನೂ, ವಸುದೇವನಂದನನೂ, ಸಮಸ್ತ ಭಾಗವತರ ಪ್ರಭುವೂ ಆಗಿರುವ ಭಗವಾನ್ ಶ್ರೀಹರಿ-ಕೃಷ್ಣನಿಗೆ ನಮಸ್ಕಾರವು. ॥ ೨೪ ॥ ನಾಭಿಯಲ್ಲಿ (ಜಗತ್ಕಾರಣವಾದ) ಕಮಲವುಳ್ಳವನೂ, ಕೊರಳಲ್ಲಿ ಕಮಲ ಕುಸುಮಗಳ ಮಾಲೆಯುಳ್ಳವನೂ, ಕಮಲವನ್ನು ಹೋಲುವ ಕೋಮಲ ಚರಣವುಳ್ಳವನೂ, ಕಮಲದಂತೆ ಕಣ್ಣುಗಳುಳ್ಳವನೂ ಆದ ನಿನಗೆ ನಮಸ್ಕಾರವು. ॥ ೨೫ ॥ ನೀನು ಕಮಲ ಕೇಸರದಂತೆ ಇರುವ ಸ್ವಚ್ಛ ಪೀತಾಂಬರವನ್ನು ಧರಿಸಿರುವೆ. ಸಮಸ್ತ ಪ್ರಾಣಿಗಳ ಆಶ್ರಯನೂ, ಎಲ್ಲರ ಸಾಕ್ಷಿಯೂ ಆದ ನಿನಗೆ ನಾವು ನಮಸ್ಕರಿಸುತ್ತೇವೆ. ॥ ೨೬ ॥

ಭಗವಂತನೇ ! ನಿನ್ನ ಈ ಸ್ವರೂಪವು ಸಮಸ್ತ ಕ್ಲೇಶಗಳನ್ನು ದೂರಮಾಡುವುದಾಗಿದೆ. ಅವಿದ್ಯೆ, ಅಸ್ಮಿತೆ, ರಾಗ-ದ್ವೇಷ ಮುಂತಾದ ಕ್ಲೇಶಗಳಿಂದ ಪೀಡಿತರಾದ ನಮ್ಮ ಮುಂದೆ ಇದನ್ನು ಪ್ರಕಟಿಸಿರುವೆ. ಇದಕ್ಕಿಂತಲೂ ಮಿಗಿಲಾದ ಕೃಪೆಯು ಬೇರೇನಿರಬಹುದು ? ॥ ೨೭ ॥ ಅಮಂಗಳವನ್ನು ತೊಡೆದು ಹಾಕುವ ಮಂಗಳ ಸ್ವರೂಪನೇ ! ದೀನರಲ್ಲಿ ವಾತ್ಸಲ್ಯವುಳ್ಳ ಪ್ರಭುವು ದೀನಜನರನ್ನು 'ಇವರು ನಮ್ಮವರು' ಎಂದು ಸದಾಕಾಲ ಸ್ಮರಿಸಿಕೊಳ್ಳುವುದೇ ಪರಮಾನುಗ್ರಹವು. ॥ ೨೮ ॥ ಅದರಿಂದಲೇ ಅವರಿಗೆ ಶಾಂತಿ ಸಿಗುತ್ತದೆ. ನೀನಾದರೋ ಅತಿಕ್ಷುದ್ರ ಪ್ರಾಣಿಗಳ ಅಂತಃಕರಣದಲ್ಲಿ ಅಂತರ್ಯಾಮಿಯಾಗಿ ವಿರಾಜಿಸುತ್ತಿರುವೆ. ಮತ್ತೆ ನಿನ್ನ ಉಪಾಸಕರಾದ ನಾವುಗಳು ಮಾಡುವ ಕಾಮನೆಗಳು ನಿನಗೆ ತಿಳಿಯದೇ ಇರುವುದೇ ? ॥ ೨೯॥ ಜಗದೀಶ್ವರನೇ ! ನೀನು ಮೋಕ್ಷಮಾರ್ಗವನ್ನು ತೋರುವವನೂ, ಸ್ವತಃ ಪುರುಷಾರ್ಥಸ್ವರೂಪನೂ ಆಗಿರುವೆ. ನೀನು ನಮ್ಮ ಮೇಲೆ

ಅಸಾವೇವ ವರೋಽಸ್ಮಾಕಮೀಪ್ಸಿತೋ ಜಗತಃ ಪತೇ ।
ಪ್ರಸನ್ನೋ ಭಗವಾನ್ಯೇಷಾಮಪವರ್ಗಗುರುರ್ಗತಿಃ ॥ ೩೦ ॥

ವರಂ ವೃಣೀಮಹೇಽಥಾಪಿ ನಾಥ ತ್ವತ್ಪರತಃ ಪರಾತ್ ।
ನ ಹ್ಯಂತಸ್ತ್ವದ್ವಿಭೂತೀನಾಂ ಸೋಽನಂತ ಇತಿ ಗೀಯಸೇ ॥ ೩೧ ॥

ಪಾರಿಜಾತೇಽಂಜಸಾ ಲಬ್ಧೇ ಸಾರಂಗೋಽನ್ಯನ್ನ ಸೇವತೇ ।
ತ್ವದಂಘ್ರಿಮೂಲಮಾಸಾದ್ಯ ಸಾಕ್ಷಾತ್ಕಿಂ ಕಿಂ ವೃಣೀಮಹಿ ॥ ೩೨ ॥

ಯಾವತ್ತೇ ಮಾಯಯಾ ಸ್ಪೃಷ್ಟಾ ಭ್ರಮಾಮ ಇಹ ಕರ್ಮಭಿಃ ।
ತಾವದ್ಭವತ್ಪ್ರಸಂಗಾನಾಂ ಸಂಗಃ ಸ್ಯಾನ್ನೋ ಭವೇ ಭವೇ ॥ ೩೩ ॥

ತುಲಯಾಮ ಲವೇನಾಪಿ ನ ಸ್ವರ್ಗಂ ನಾಪುನರ್ಭವಮ್ ।
ಭಗವತ್ಸಂಗಿಸಂಗಸ್ಯ ಮರ್ತ್ಯಾನಾಂ ಕಿಮುತಾಶಿಷಃ ॥ ೩೪ ॥

ಯತ್ರೇಡ್ಯಂತೇ ಕಥಾ ಮೃಷ್ಟಾಸ್ತೃಷ್ಣಾಯಾಃ ಪ್ರಶಮೋ ಯತಃ ।
ನಿರ್ವೈರಂ ಯತ್ರ ಭೂತೇಷು ನೋದ್ವೇಗೋ ಯತ್ರ ಕಶ್ಚನ ॥ ೩೫ ॥

ಯತ್ರ ನಾರಾಯಣಃ ಸಾಕ್ಷಾದ್ಭಗವಾನ್ನ್ಯಾಸಿನಾಂ ಗತಿಃ ।
ಸಂಸ್ತೂಯತೇ ಸತ್ಕಥಾಸು ಮುಕ್ತಸಂಗೈಃ ಪುನಃ ಪುನಃ ॥ ೩೬ ॥

ತೇಷಾಂ ವಿಚರತಾಂ ಪದ್ಭ್ಯಾಂ ತೀರ್ಥಾನಾಂ ಪಾವನೇಚ್ಛಯಾ ।
ಭೀತಸ್ಯ ಕಿಂ ನ ರೋಚೇತ ತಾವಕಾನಾಂ ಸಮಾಗಮಃ ॥ ೩೭ ॥

ವಯಂ ತು ಸಾಕ್ಷಾದ್ಭಗವನ್ಭವಸ್ಯ
ಪ್ರಿಯಸ್ಯ ಸಖ್ಯುಃ ಕ್ಷಣಸಂಗಮೇನ ।
ಸುದುಶ್ಚಿಕಿತ್ಸ್ಯಸ್ಯ ಭವಸ್ಯ ಮೃತ್ಯೋ-
ರ್ಭಿಷಕ್ತಮಂ ತ್ವಾದ್ಯ ಗತಿಂ ಗತಾಃ ಸ್ಮಃ ॥ ೩೮ ॥

ಯನ್ನಃ ಸ್ವಧೀತಂ ಗುರವಃ ಪ್ರಸಾದಿತಾ
ವಿಪ್ರಾಶ್ಚ ವೃದ್ಧಾಶ್ಚ ಸದಾನುವೃತ್ತ್ಯಾ ।
ಆರ್ಯಾ ನತಾಃ ಸುಹೃದೋ ಭ್ರಾತರಶ್ಚ
ಸರ್ವಾಣಿ ಭೂತಾನ್ಯನಸೂಯಯೈವ ॥ ೩೯ ॥

ಯನ್ನಃ ಸುತಪ್ತಂ ತಪ ಏತದೀಶ
ನಿರಂಧಸಾಂ ಕಾಲಮದಭ್ರಮಪ್ಸು ।
ಸರ್ವಂ ತದೇತತ್ಪುರುಷಸ್ಯ ಭೂಮ್ನೋ
ವೃಣೀಮಹೇ ತೇ ಪರಿತೋಷಣಾಯ ॥ ೪೦ ॥

ಪ್ರಸನ್ನನಾಗಿರುವೆ. ಇದಕ್ಕಿಂತ ಬೇರೆ ಏನು ನಮಗೆ ಬೇಕು? ನಿನ್ನ ಪ್ರಸನ್ನತೆಯೇ ನಮ್ಮ ಇಷ್ಟವಾದ ವರವಲ್ಲವೇ! ॥ ೩೦ ॥ ಆದರೂ ಸ್ವಾಮಿ! ನಾವು ಒಂದು ವರವನ್ನು ನಿನ್ನಲ್ಲಿ ಅವಶ್ಯವಾಗಿ ಕೇಳುತ್ತೇವೆ. ಪ್ರಭೋ! ನೀನು ಪ್ರಕೃತಿಯಿಂದ ಅತೀತನಾಗಿರುವೆ. ನಿನ್ನ ವಿಭೂತಿಗಳಿಗೂ ಯಾವುದೇ ಕೊನೆಯಿಲ್ಲ, ಅದಕ್ಕಾಗಿ ನೀನು 'ಅನಂತ'ನೆಂದು ಹೇಳಿಸಿಕೊಳ್ಳುವೆ. ॥ ೩೧ ॥ ಭ್ರಮರಕ್ಕೆ ಆಯಾಸವಿಲ್ಲದೆಯೇ ಪಾರಿಜಾತ ವೃಕ್ಷವು ದೊರೆತರೆ, ಅದು ಯಾವುದೇ ಬೇರೆ ವೃಕ್ಷವನ್ನು ಆಶ್ರಯಿಸಿತೇ? ಹೀಗಿರುವಾಗ ನಿನ್ನಲ್ಲಿ ಶರಣಾಗತರಾಗಿ ಬಂದ ನಾವು ಈಗ ಏನನ್ನು ಬೇಡಲಿ? ॥ ೩೨ ॥ ನಿನ್ನ ಮಾಯೆಯಿಂದ ಮೋಹಿತರಾಗಿ ನಾವು ನಮ್ಮ ಕರ್ಮಾನುಸಾರ ಪ್ರಪಂಚದಲ್ಲಿ ಅಲೆದಾಡುತ್ತಿರುವವರೆಗೆ ಜನ್ಮ-ಜನ್ಮಗಳಲ್ಲಿಯೂ ನಮಗೆ ನಿನ್ನ ಪ್ರೇಮಿಭಕ್ತರ ಸಂಗವು ದೊರೆಯುತ್ತಿರಲಿ' ಇಷ್ಟು ಮಾತ್ರ ನಿನ್ನಲ್ಲಿ ಬೇಡಿಕೊಳ್ಳುತ್ತೇವೆ. ॥ ೩೩ ॥ ನಾವಾದರೋ ಭಗವದ್ಭಕ್ತರ ಕ್ಷಣಕಾಲದ ಸಂಗಕ್ಕೆ ಸಮಾನವಾಗಿ ಸ್ವರ್ಗ ಮತ್ತು ಮೋಕ್ಷವೂ ಕೂಡ ಏನೂ ಇಲ್ಲವೆಂದೇ ಭಾವಿಸುತ್ತೇವೆ. ಹಾಗಿರುವಾಗ ಮಾನುಷ ಭೋಗಗಳ ಬಗ್ಗೆ ಹೇಳುವುದಾದರೂ ಏನಿದೆ? ॥ ೩೪ ॥ ಭಗವದ್ಭಕ್ತರ ಸಮಾಜದಲ್ಲಿ ಸದಾಕಾಲವೂ ಭಗವಂತನ ಮಧುರವಾದ ಕಥೆಗಳ ಕೀರ್ತನೆ ಆಗುತ್ತಾ ಇರುತ್ತವೆ. ಅದರ ಶ್ರವಣಮಾತ್ರದಿಂದ ಭೋಗತೃಷ್ಣೆಯು ಶಾಂತವಾಗಿ ಹೋಗುತ್ತದೆ. ಅಲ್ಲಿ ಪ್ರಾಣಿಗಳಲ್ಲಿ ಯಾವುದೇ ರೀತಿಯ ವೈರ-ವಿರೋಧ, ಉದ್ವೇಗಗಳು ಉಳಿಯುವುದಿಲ್ಲ. ॥ ೩೫ ॥ ಒಳ್ಳೊಳ್ಳೆಯ ಕಥಾ ಪ್ರಸಂಗಗಳ ಮೂಲಕ ಸಂನ್ಯಾಸಿಗಳ ಏಕಮಾತ್ರ ಆಶ್ರಯನಾದ ಸಾಕ್ಷಾತ್ ಶ್ರೀಮನ್ನಾರಾಯಣನ ಗುಣಗಾನವು ಪದೇ-ಪದೇ ನಿಷ್ಕಾಮಭಾವದಿಂದ ನಡೆಯುತ್ತಾ ಇರುತ್ತದೆ. ॥ ೩೬ ॥ ನಿನ್ನ ಆ ಭಕ್ತಶ್ರೇಷ್ಠರು ತೀರ್ಥಗಳನ್ನು ಪವಿತ್ರಗೊಳಿಸುವ ಉದ್ದೇಶದಿಂದಲೇ ಭೂಮಿಯಮೇಲೆ ಕಾಲ್ನಡಿಗೆಯಿಂದ ಸಂಚರಿಸುತ್ತಿರುತ್ತಾರೆ. ಅಂತಹ ಮಹಾತ್ಮರ ಸಮಾಗಮವು ಸಂಸಾರಭೀತರಾದ ಯಾವ ಮನುಷ್ಯನಿಗೆ ತಾನೇ ರುಚಿಸದು? ॥ ೩೭ ॥

ಭಗವಂತನೇ! ನಿನಗೆ ಪ್ರಿಯನಾದ ಭಗವಾನ್ ಶಂಕರನ ಕ್ಷಣಕಾಲದ ಸಮಾಗಮದಿಂದಲೇ ಇಂದು ನಮಗೆ ನಿನ್ನ ಸಾಕ್ಷಾತ್ತಾದ ದರ್ಶನದ ಭಾಗ್ಯವು ಒದಗಿದೆ. ದುಃಸಾಧ್ಯವಾದ ಹುಟ್ಟು-ಸಾವುಗಳೆಂಬ ರೋಗಕ್ಕೆ ಶ್ರೇಷ್ಠತಮ ವೈದ್ಯನು ನೀನೇ. ಆದ್ದರಿಂದ ನಾವು ನಿನ್ನನ್ನೇ ಆಶ್ರಯಿಸಿರುವೆವು. ॥ ೩೮ ॥ ಪ್ರಭೋ! ನಾವು ವೇದ-ಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನ ಮಾಡಿರುವುದು; ನಿರಂತರವಾಗಿ ಸೇವಾ-ಶುಶ್ರೂಷೆಗಳಿಂದ ಗುರುಗಳನ್ನೂ, ಬ್ರಾಹ್ಮಣರನ್ನೂ ವೃದ್ಧರನ್ನು ಪ್ರಸನ್ನಗೊಳಿಸಿರುವುದು; ಅಸೂಯೆಯನ್ನು ಬಿಟ್ಟು ಶ್ರೇಷ್ಠ ಪುರುಷರನ್ನೂ, ಸ್ನೇಹಿತವರ್ಗವನ್ನು, ಬಂಧುವರ್ಗವನ್ನೂ ಹಾಗೂ ಸಮಸ್ತ ಪ್ರಾಣಿಗಳನ್ನೂ ನಮಸ್ಕರಿಸುವುದು ಮತ್ತು ಅನ್ನಾಹಾರಾದಿಗಳನ್ನು ಬಿಟ್ಟು ದೀರ್ಘಕಾಲದವರೆಗೆ ನೀರಿನಲ್ಲಿ ನಿಂತು ತಪಸ್ಸು ಮಾಡಿರುವುದು – ಇವೆಲ್ಲವೂ ಸರ್ವವ್ಯಾಪಕನೂ, ಪುರುಷೋತ್ತಮನೂ ಆದ ನಿನ್ನ ಸಂತೋಷಕ್ಕೆ ಕಾರಣವಾಗಲಿ ಎಂದಿಷ್ಟೇ ವರವನ್ನು ನಿನ್ನಲ್ಲಿ ಬೇಡುತ್ತೇವೆ. ॥ ೩೯-೪೦ ॥

ಸ್ವಾಮಿ! ಸ್ವಾಯಂಭುವ ಮನು, ಸಾಕ್ಷಾತ್ ಬ್ರಹ್ಮದೇವರು, ಭಗವಾನ್ ಶ್ರೀಶಂಕರ ಮತ್ತು ತಪಸ್ಸು-ಜ್ಞಾನಗಳಿಂದ ಶುದ್ಧಚಿತ್ತರಾದ ಇತರ ಮಹಾಪುರುಷರು ನಿನ್ನ ಮಹಿಮೆಯ ಪಾರವನ್ನು

ಮನುಃ ಸ್ವಯಂಭೂರ್ಭಗವಾನ್ ಭವಶ್ಚ
ಯೇಽನ್ಯೇ ತಪೋಜ್ಞಾನವಿಶುದ್ಧಸತ್ತ್ವಾಃ ।
ಅದೃಷ್ಟ ಪಾರಾ ಅಪಿ ಯನ್ಮಹಿಮ್ನಃ
ಸ್ತುವಂತ್ಯಥೋಕ್ತ್ವಾಽಽತ್ಮಸಮಂ ಗೃಣೀಮಃ ॥ ४೧ ॥

ನಮಃ ಸಮಾಯ ಶುದ್ಧಾಯ ಪುರುಷಾಯ ಪರಾಯ ಚ ।
ವಾಸುದೇವಾಯ ಸತ್ತ್ವಾಯ ತುಭ್ಯಂ ಭಗವತೇ ನಮಃ ॥ ४೨ ॥

ಮೈತ್ರೇಯ ಉವಾಚ

ಇತಿ ಪ್ರಚೇತೋಭಿರಭಿಷ್ಟುತೋ ಹರಿಃ
ಪ್ರೀತಸ್ತಥೇತ್ಯಾಹ ಶರಣ್ಯವತ್ಸಲಃ ।
ಅನಿಚ್ಛತಾಂ ಯಾನಮತೃಪ್ತಚಕ್ಷುಷಾಂ
ಯಯೌ ಸ್ವಧಾಮಾನಪವರ್ಗವೀರ್ಯಃ ॥ ४३ ॥

ಅಥ ನಿರ್ಯಾಯ ಸಲಿಲಾ-
ತ್ಪ್ರಚೇತಸ ಉದನ್ವತಃ ।
ವೀಕ್ಷ್ಯಾಕುಪ್ಯಂದ್ರುಮೈಶ್ಛನ್ನಾಂ
ಗಾಂ ಗಾಂ ರೋದ್ಧುಮಿವೋಚ್ಛ್ರಿತೈಃ ॥ ४४ ॥

ತತೋಽಗ್ನಿ ಮಾರುತೌ ರಾಜನ್ನಮುಂಚನ್ಮುಖತೋ ರುಷಾ ।
ಮಹೀಂ ನಿರ್ವೀರುಧಂ ಕರ್ತುಂ ಸಂವರ್ತಕ ಇವಾತ್ಯಯೇ ॥ ४५ ॥

ಭಸ್ಮಸಾತ್ಕ್ರಿಯಮಾಣಾಂಸ್ತಾಂದ್ರುಮಾನ್ವೀಕ್ಷ್ಯ ಪಿತಾಮಹಃ ।
ಆಗತಃ ಶಮಯಾಮಾಸ ಪುತ್ರಾನ್ಬರ್ಹಿಷ್ಮತೋ ನಯೈಃ ॥ ४६ ॥

ತತ್ರಾವಶಿಷ್ಟಾ ಯೇ ವೃಕ್ಷಾ ಭೀತಾ ದುಹಿತರಂ ತದಾ ।
ಉಜ್ಜಹ್ರುಸ್ತೇ ಪ್ರಚೇತೋಭ್ಯ ಉಪದಿಷ್ಟಾಃ ಸ್ವಯಂಭುವಾ ॥ ४೭ ॥

ತೇ ಚ ಬ್ರಹ್ಮಣ ಆದೇಶಾನ್ಮಾರಿಷಾಮುಪಯೇಮಿರೇ ।
ಯಸ್ಯಾಂ ಮಹದವಜ್ಞಾನಾದಜನ್ಯಜನಯೋನಿಜಃ ॥ ४೮ ॥

ಚಾಕ್ಷುಷೇ ತ್ವಂತರೇ ಪ್ರಾಪ್ತೇ ಪ್ರಾಕ್ಸರ್ಗೇ ಕಾಲವಿದ್ರುತೇ ।
ಯಃ ಸಸರ್ಜ ಪ್ರಜಾ ಇಷ್ಟಾಃ ಸ ದಕ್ಷೋ ದೈವಚೋದಿತಃ ॥ ४९ ॥

ಯೋ ಜಾಯಮಾನಃ ಸರ್ವೇಷಾಂ ತೇಜಸ್ತೇಜಸ್ವಿನಾಂ ರುಚಾ ।
ಸ್ವಯೋಪಾದತ್ತ ದಾಕ್ಷ್ಯಾಚ್ಚ ಕರ್ಮಣಾಂ ದಕ್ಷಮಬ್ರುವನ್ ॥ ೫೦ ॥

ತಂ ಪ್ರಜಾಸರ್ಗರಕ್ಷಾಯಾ-
ಮನಾದಿರಭಿಷಿಚ್ಯ ಚ ।
ಯುಯೋಜ ಯುಯುಜೇಽನ್ಯಾಂಶ್ಚ
ಸ ವೈ ಸರ್ವಪ್ರಜಾಪತೀನ್ ॥ ೫೧ ॥

ಹೊಂದದೇ ಇದ್ದರೂ-ನಿರಂತರವಾಗಿ ನಿನ್ನ ಸ್ತುತಿಯನ್ನು ಮಾಡುತ್ತಾ ಬಂದಿದ್ದಾರೆ. ಆದುದರಿಂದ ನಾವೂ ಕೂಡ ನಮ್ಮ ಬುದ್ಧಿಗೆ ತಕ್ಕಂತೆ ನಿನ್ನ ಕೀರ್ತಿಗಾನವನ್ನು ಮಾಡುತ್ತೇವೆ. ॥ ४೧ ॥ ನೀನು ಸರ್ವಸಮನೂ, ಶುದ್ಧಸ್ವರೂಪನೂ ಪರಮಪುರುಷನಾಗಿರುವೆ. ಇಂತಹ ಸತ್ತ್ವಮೂರ್ತಿಯಾದ ಭಗವಾನ್ ವಾಸುದೇವನೇ ನಿನಗೆ ನಮೋ ನಮಃ ॥ ४೨ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಪ್ರಚೇತಸರು ಹೀಗೆ ಭಗವಂತನನ್ನು ಸ್ತೋತ್ರಮಾಡಲು ಶರಣಾಗತ ವತ್ಸಲನಾದ ಶ್ರೀಭಗವಂತನು ಪ್ರಸನ್ನನಾಗಿ 'ತಥಾಸ್ತು' ಎಂದು ಹೇಳಿ ಅನುಗ್ರಹ ಮಾಡಿದನು. ಅಪ್ರತಿಹತವಾದ ಪ್ರಭಾವವುಳ್ಳ ಶ್ರೀಹರಿಯ ಆ ಮಧುರವಾದ ಮೂರ್ತಿಯ ದರ್ಶನದಿಂದ ಪ್ರಚೇತಸರ ಕಣ್ಣುಗಳಿಗೆ ಇನ್ನು ತೃಪ್ತಿಯಾಗಿರಲೇ ಇಲ್ಲ. ಅದಕ್ಕಾಗಿ ಆತನನ್ನು ಕಳುಹಿಸಿಕೊಡಲು ಇಷ್ಟವೇ ಇರಲಿಲ್ಲ. ಆದರೂ ಶ್ರೀಭಗವಂತನು ತನ್ನ ಪರಮಧಾಮಕ್ಕೆ ಹೊರಟು ಹೋದನು. ॥ ४३ ॥ ಅದಾದನಂತರ ಪ್ರಚೇತಸರು ಸಮುದ್ರಜಲದಿಂದ ಹೊರಗೆ ಬಂದು ನೋಡಲು, ಇಡೀ ಭೂಮಂಡಲವನ್ನು – ಸ್ವರ್ಗದ ಮಾರ್ಗವನ್ನು ತಡೆಯುತ್ತಿವೆಯೋ ಎಂಬಂತೆ – ಮಿತಿಮೀರಿ ಎತ್ತರವಾಗಿ ಬೆಳೆದ ವೃಕ್ಷಗಳು ಮುಚ್ಚಿಬಿಟ್ಟಿರುವುದನ್ನು ಕಂಡರು. ಅದನ್ನು ನೋಡಿ ಅವರಿಗೆ ವೃಕ್ಷಗಳ ಮೇಲೆ ಭಾರೀ ಕೋಪವುಂಟಾಯಿತು. ॥ ४४ ॥ ಆಗ ಅವರು ಭೂಮಿಯನ್ನು ಮರಬಳ್ಳಿಗಳಿಂದ ಶೂನ್ಯವನ್ನಾಗಿ ಮಾಡಬೇಕೆಂದು ಸಂಕಲ್ಪಿಸಿ, ಪ್ರಳಯಕಾಲದ ಕಾಲಾಗ್ನಿರುದ್ರನಂತೆ ತಮ್ಮ ಬಾಯಿಂದ ಪ್ರಚಂಡವಾದ ವಾಯುವನ್ನು ಮತ್ತು ಅಗ್ನಿಯನ್ನೂ ಹೊರಗೆ ಬಿಟ್ಟರು. ॥ ४५ ॥ ಅವರು ಹೀಗೆ ಸಮಸ್ತ ವೃಕ್ಷಗಳನ್ನೂ ಸುಟ್ಟು ಭಸ್ಮಮಾಡುತ್ತಿರುವುದನ್ನು ಕಂಡು ಬ್ರಹ್ಮದೇವರು ಅಲ್ಲಿಗೆ ಬಂದು ಪ್ರಾಚೀನಬರ್ಹಿ ಪುತ್ರರಿಗೆ ಯುಕ್ತಿಪೂರ್ವಕವಾಗಿ ತಿಳಿವಳಿಕೆ ನೀಡಿ ಅವರ ಕೋಪವನ್ನು ಶಾಂತಗೊಳಿಸಿದರು. ॥ ४६ ॥ ಆಗ ಅಲ್ಲಿ ಅಳಿದುಳಿದಿದ್ದ ವೃಕ್ಷಗಳು ಹೆದರಿಕೊಂಡು ಬ್ರಹ್ಮದೇವರ ಆಣತಿಯಂತೆ ತಮ್ಮಲ್ಲಿದ್ದ ಆ ಕನ್ಯೆಯನ್ನು ತಂದು ಪ್ರಚೇತಸರಿಗೆ ಒಪ್ಪಿಸಿದವು. ॥ ४೭ ॥ ಪ್ರಚೇತಸರೂ ಕೂಡ ಬ್ರಹ್ಮದೇವರ ಆದೇಶದಂತೆ ಆ ಮಾರಿಷಾ ಎಂಬ ಕನ್ಯೆಯೊಡನೆ ವಿವಾಹಿತರಾದರು. ಶ್ರೀಮಹಾದೇವನನ್ನು ತಿರಸ್ಕರಿಸಿದ ಕಾರಣ ತನ್ನ ದೇಹವನ್ನು ತ್ಯಜಿಸಿದ್ದ ಬ್ರಹ್ಮಪುತ್ರನಾದ ದಕ್ಷನು ಆಕೆಯ ಗರ್ಭದಲ್ಲಿ ಜನಿಸಿದನು. ॥ ४೮ ॥ ಆ ದಕ್ಷನೇ ಕಾಲಕ್ರಮದಲ್ಲಿ ಹಿಂದಿದ್ದ ಸೃಷ್ಟಿಯು ನಶಿಸಿಹೋಗಿ ಚಾಕ್ಷುಷ ಮನ್ವಂತರವು ಬಂದಾಗ ಶ್ರೀಭಗವಂತನ ಪ್ರೇರಣೆಯಂತೆ ಹೊಸ ಪ್ರಜೆಗಳನ್ನು ಸೃಷ್ಟಿಸಿದನು. ॥ ४९ ॥ ಇವನು ಹುಟ್ಟುವಾಗಲೇ ತನ್ನ ತೇಜಸ್ಸಿನಿಂದ ಎಲ್ಲ ತೇಜಸ್ವಿಗಳ ತೇಜಸ್ಸನ್ನು ಸೆಳೆದುಕೊಂಡನು. ಕರ್ಮಗಳನ್ನು ಆಚರಿಸುವುದರಲ್ಲಿ ಅತ್ಯಂತ ದಕ್ಷ(ಕುಶಲ) ನಾಗಿದ್ದುದರಿಂದ 'ದಕ್ಷ'ನೆಂದೇ ಆತನ ಹೆಸರಾಯಿತು. ॥ ೫೦ ॥ ಬ್ರಹ್ಮದೇವರು ಆತನನ್ನು ಪ್ರಜಾಪತಿಗಳಿಗೆಲ್ಲ ಅಧಿಪತಿಯನ್ನಾಗಿ ಪಟ್ಟವನ್ನು ಕಟ್ಟಿ ಸೃಷ್ಟಿಯನ್ನು ರಕ್ಷಿಸಲು ಆದೇಶ ವನ್ನಿತ್ತರು. ಆಗ ಅವನು ಮರೀಚಿಯೇ ಮುಂತಾದ ಇತರ ಎಲ್ಲ ಪ್ರಜಾಪತಿಗಳನ್ನೂ ಅವರವರ ಕಾರ್ಯದಲ್ಲಿ ನೇಮಕಮಾಡಿದನು. ॥ ೫೧ ॥

*ಮೂವತ್ತನೆಯ ಅಧ್ಯಾಯವು ಮುಗಿಯಿತು. ॥ ३೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ತ್ರಿಂಶೋಽಧ್ಯಾಯಃ ॥ ३೦ ॥

# ಮೂವತ್ತೊಂದನೆಯ ಅಧ್ಯಾಯ

## ನಾರದರ ಉಪದೇಶದಿಂದ ಪ್ರಚೇತಸರಿಗೆ ಪರಮಪದ ಪ್ರಾಪ್ತಿ

*ಮೈತ್ರೇಯ ಉವಾಚ*

ತತ ಉತ್ಪನ್ನವಿಜ್ಞಾನಾ ಆಶ್ವಧೋಕ್ಷಜಭಾಷಿತಮ್ ।
ಸ್ಮರಂತ ಆತ್ಮಜೇ ಭಾರ್ಯಾಂ ವಿಸೃಜ್ಯ ಪ್ರಾವ್ರಜನ್‌ಗೃಹಾತ್ ॥ ೧ ॥

ದೀಕ್ಷಿತಾ ಬ್ರಹ್ಮಸತ್ರೇಣ ಸರ್ವಭೂತಾತ್ಮಮೇಧಸಾ ।
ಪ್ರತೀಚ್ಯಾಂ ದಿಶಿ ವೇಲಾಯಾಂ ಸಿದ್ಧೋಽಭೂದ್ಯತ್ರ ಜಾಜಲಿಃ ॥ ೨ ॥

ತಾನ್ನಿರ್ಜಿತಪ್ರಾಣಮನೋವಚೋದೃಶೋ
ಜಿತಾಸನಾನ್ ಶಾಂತಸಮಾನವಿಗ್ರಹಾನ್ ।
ಪರೇಽಮಲೇ ಬ್ರಹ್ಮಣಿ ಯೋಜಿತಾತ್ಮನಃ
ಸುರಾಸುರೇಡ್ಯೋದದೃಶೇ ಸ್ಮ ನಾರದಃ ॥ ೩ ॥

ತಮಾಗತಂ ತ ಉತ್ಥಾಯ ಪ್ರಣಿಪತ್ಯಾಭಿನಂದ್ಯ ಚ ।
ಪೂಜಯಿತ್ವಾ ಯಥಾದೇಶಂ ಸುಖಾಸೀನಮಥಾಬ್ರುವನ್ ॥ ೪ ॥

*ಪ್ರಚೇತಸ ಊಚುಃ*

ಸ್ವಾಗತಂ ತೇ ಸುರರ್ಷೇಽದ್ಯ ದಿಷ್ಟ್ಯಾ ನೋ ದರ್ಶನಂ ಗತಃ ।
ತವ ಚಂಕ್ರಮಣಂ ಬ್ರಹ್ಮನ್ನಭಯಾಯ ಯಥಾ ರವೇಃ ॥ ೫ ॥

ಯದಾದಿಷ್ಟಂ ಭಗವತಾ ಶಿವೇನಾಧೋಕ್ಷಜೇನ ಚ ।
ತದ್ಗೃಹೇಷು ಪ್ರಸಕ್ತಾನಾಂ ಪ್ರಾಯಶಃ ಕ್ಷಪಿತಂ ಪ್ರಭೋ ॥ ೬ ॥

ತನ್ನಃ ಪ್ರದ್ಯೋತಯಾಧ್ಯಾತ್ಮಜ್ಞಾನಂ ತತ್ತ್ವಾರ್ಥದರ್ಶನಮ್ ।
ಯೇನಾಂಜಸಾ ತರಿಷ್ಯಾಮೋ ದುಸ್ತರಂ ಭವಸಾಗರಮ್ ॥ ೭ ॥

*ಮೈತ್ರೇಯ ಉವಾಚ*

ಇತಿ ಪ್ರಚೇತಸಾಂ ಪೃಷ್ಟೋ ಭಗವಾನ್ನಾರದೋ ಮುನಿಃ ।
ಭಗವತ್ಯುತ್ತಮಶ್ಲೋಕ ಆವಿಷ್ಟಾತ್ಮಾಬ್ರವೀನ್ನೃಪಾನ್ ॥ ೮ ॥

*ನಾರದ ಉವಾಚ*

ತಜ್ಜನ್ಮ ತಾನಿ ಕರ್ಮಾಣಿ ತದಾಯುಸ್ತನ್ಮನೋ ವಚಃ ।
ನೃಣಾಂ ಯೇನೇಹ ವಿಶ್ವಾತ್ಮಾ ಸೇವ್ಯತೇ ಹರಿರೀಶ್ವರಃ ॥ ೯ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ಭಾಗವತಶ್ರೇಷ್ಠನೇ! ಹತ್ತು ಲಕ್ಷ ದಿವ್ಯವರ್ಷಗಳು ಕಳೆದುಹೋಗಲಾಗಿ ಪ್ರಚೇತಸರಿಗೆ ವಿವೇಕ ಉಂಟಾಯಿತು. ಆಗ ಅವರಿಗೆ ಭಗವಂತನ ಮಾತುಗಳು ನೆನಪಾದವು ಮತ್ತು ಅವರು ತಮ್ಮ ಭಾರ್ಯೆಯಾದ ಮಾರಿಷಾ ಳನ್ನು ಮಗನ ಬಳಿಯಲ್ಲಿ ಬಿಟ್ಟು ಕೂಡಲೇ ಮನೆಯಿಂದ ಹೊರ ಬಿದ್ದರು. ॥ ೧ ॥ ಅವರು ಪಶ್ಚಿಮದಿಕ್ಕಿನಲ್ಲಿ ಜಾಜಲಿ ಮಹರ್ಷಿಯು ಸಿದ್ಧಿಯನ್ನು ಪಡೆದಿದ್ದ ಸಮುದ್ರ ತಟಕ್ಕೆ ತಲುಪಿ – 'ಸಮಸ್ತ ಭೂತ ಗಳಲ್ಲಿಯೂ ಒಂದೇ ಆತ್ಮತತ್ತ್ವವು ಬೆಳಗುತ್ತಿದೆ' ಎಂಬ ಜ್ಞಾನವನ್ನು ಉಂಟುಮಾಡುವ ಆತ್ಮವಿಚಾರರೂಪವಾದ ಬ್ರಹ್ಮಸತ್ರದ ಸಂಕಲ್ಪ ಗೈದು ಕುಳಿತುಬಿಟ್ಟರು. ॥ ೨ ॥ ಅವರು ಪ್ರಾಣ, ಮನಸ್ಸು, ವಾಣಿ ಮತ್ತು ದೃಷ್ಟಿಯನ್ನು ವಶಪಡಿಸಿಕೊಂಡು, ಶರೀರವನ್ನು ಅಲುಗಾಡ ದಂತೆ ಸ್ಥಿರವಾಗಿಯೂ, ನೇರವಾಗಿಯೂ ಇರಿಸಿಕೊಂಡು, ಆಸನ ಜಯವನ್ನು ಸಾಧಿಸಿ ಚಿತ್ತವನ್ನು ವಿಶುದ್ಧವಾದ ಪರಬ್ರಹ್ಮನಲ್ಲಿ ಒಂದು ಗೂಡಿಸಿದರು. ಇಂತಹ ಸ್ಥಿತಿಯಲ್ಲಿ ಅವರಿಗೆ ದೇವಾಸುರರಿಗೂ ವಂದನೀಯರಾದ ಶ್ರೀನಾರದರ ದರ್ಶನವಾಯಿತು. ॥ ೩ ॥ ನಾರ ದರು ಬಂದಿರುವುದನ್ನು ನೋಡಿ ಪ್ರಚೇತಸರು ಎದ್ದು ನಿಂತು, ಪ್ರಣಾಮಮಾಡಿ ಆದರ ಸತ್ಕಾರಪೂರ್ವಕ ದೇಶ-ಕಾಲಕ್ಕನು ಸಾರ ವಾಗಿ ಅವರನ್ನು ವಿಧಿವತ್ತಾಗಿ ಪೂಜಿಸಿದರು. ನಾರದರು ಸುಖಾಸೀನ ರಾಗಲು ಪ್ರಚೇತಸರು ಅವರಲ್ಲಿ ವಿಜ್ಞಾಪಿಸಿ ಕೊಂಡರು. ॥ ೪ ॥

**ಪ್ರಚೇತಸರು ಹೇಳಿದರು** – ದೇವರ್ಷಿಗಳೇ! ತಮಗೆ ಸ್ವಾಗ ತವು. ಮಹಾಭಾಗ್ಯ ವಿಶೇಷದಿಂದಲೇ ನಮಗೆ ತಮ್ಮ ದರ್ಶನ ಭಾಗ್ಯವು ಲಭಿಸಿತು. ತಮ್ಮ ಲೋಕಸಂಚಾರವು ಸೂರ್ಯ ದೇವ ರಂತೆ ಸಮಸ್ತ ಜೀವಿಗಳಿಗೆ ಜ್ಞಾನಪ್ರಕಾಶವನ್ನೂ, ಅಭಯ ದಾನ ವನ್ನೂ ಕೊಡುವುದಕ್ಕಾಗಿಯೇ ಆಗಿದೆ. ॥ ೫ ॥ ಸ್ವಾಮಿ! ಭಗವಂತ ನಾದ ಶ್ರೀಶಂಕರನೂ, ಭಗವಾನ್ ಶ್ರೀವಿಷ್ಣುವೂ ನಮಗೆ ಉಪದೇಶ ಮಾಡಿದ್ದ ಜ್ಞಾನವನ್ನು ನಾವು ಗೃಹಸ್ಥಾಶ್ರಮದಲ್ಲೇ ಆಸಕ್ತರಾಗಿದ್ದ ಕಾರಣದಿಂದ ಮರೆತುಬಿಟ್ಟಂತಾಗಿದೆ. ॥ ೬ ॥ ಆದ್ದರಿಂದ ನೀವು ನಮ್ಮ ಹೃದಯದಲ್ಲಿ ಪರಮಾರ್ಥತತ್ತ್ವದ ಸಾಕ್ಷಾತ್ಕಾರವಾಗಿಸು ವಂತಹ ಅಧ್ಯಾತ್ಮಜ್ಞಾನವನ್ನು ಪುನಃ ಪ್ರಕಾಶಿತಗೊಳಿಸಿರಿ. ಅದರಿಂದ ನಾವು ಈ ದುಸ್ತರವಾದ ಸಂಸಾರಸಾಗರವನ್ನು ಸುಲಭವಾಗಿ ದಾಟ ಬಲ್ಲೆವು. ॥ ೭ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಭಗವನ್ಮಯ ಶ್ರೀನಾರದರ ಚಿತ್ತವು ಸದಾಕಾಲ ಭಗವಾನ್ ಶ್ರೀಕೃಷ್ಣನಲ್ಲೇ ನೆಲೆಸಿರುತ್ತದೆ. ಅವರು ಪ್ರಚೇತಸರ ವಿಜ್ಞಾಪನೆಯನ್ನು ಕೇಳಿ ಹೀಗೆಂದರು. ॥ ೮ ॥

**ಶ್ರೀನಾರದರು ಹೇಳಿದರು** – ಎಲೈ ರಾಜರುಗಳೇ! ಈ ಲೋಕ ದಲ್ಲಿ ಯಾವುದರಿಂದ ಸರ್ವಾತ್ಮನೂ, ಸರ್ವೇಶ್ವರನೂ ಆದ ಶ್ರೀಹರಿ ಯ ಸೇವೆಯಾಗುವುದೋ ಆ ಜನ್ಮ, ಕರ್ಮ, ಆಯುಸ್ಸು, ಮನಸ್ಸು, ಮಾತುಗಳು ಸಫಲವಾದುವುಗಳು. ॥ ೯ ॥

ಮನುಃ ಸ್ವಯಂಭೂರ್ಭಗವಾನ್ ಭವಶ್ಚ
ಯೇಽನ್ಯೇ ತಪೋಜ್ಞಾನವಿಶುದ್ಧಸತ್ತ್ವಾಃ ।
ಅದೃಷ್ಟ ಪಾರಾ ಅಪಿ ಯನ್ಮಹಿಮ್ನಃ
ಸ್ತುವಂತ್ಯಥೋ ತ್ವಾಽಽತ್ಮಸಮಂ ಗೃಣೀಮಃ ॥ ೪೧ ॥

ನಮಃ ಸಮಾಯ ಶುದ್ಧಾಯ ಪುರುಷಾಯ ಪರಾಯ ಚ ।
ವಾಸುದೇವಾಯ ಸತ್ತ್ವಾಯ ತುಭ್ಯಂ ಭಗವತೇ ನಮಃ ॥ ೪೨ ॥

*ಮೈತ್ರೇಯ ಉವಾಚ*

ಇತಿ ಪ್ರಚೇತೋಭಿರಭಿಷ್ಟುತೋ ಹರಿಃ
ಪ್ರೀತಸ್ತಥೇತ್ಯಾಹ ಶರಣ್ಯವತ್ಸಲಃ ।
ಅನಿಚ್ಛತಾಂ ಯಾನಮತೃಪ್ತಚಕ್ಷುಷಾಂ
ಯಯೌ ಸ್ವಧಾಮಾನಪವರ್ಗವೀರ್ಯಃ ॥ ೪೩ ॥

ಅಥ ನಿರ್ಯಾಯ ಸಲಿಲಾ-
ತ್ಪ್ರಚೇತಸ ಉದನ್ವತಃ ।
ವೀಕ್ಷ್ಯಾಕುಪ್ಯಂದ್ರುಮೈಶ್ಛನ್ನಾಂ
ಗಾಂ ಗಾಂ ರೋದ್ಧುಮಿವೋಚ್ಛ್ರಿತೈಃ ॥ ೪೪ ॥

ತತೋಽಗ್ನಿ ಮಾರುತೌ ರಾಜನ್ನಮುಂಚನ್ಮುಖತೋ ರುಷಾ ।
ಮಹೀಂ ನಿರ್ವೀರುಧಂ ಕರ್ತುಂ ಸಂವರ್ತಕ ಇವಾತ್ಯಯೇ ॥ ೪೫ ॥

ಭಸ್ಮಸಾತ್ಕ್ರಿಯಮಾಣಾಂಸ್ತಾಂದ್ರುಮಾನ್ವೀಕ್ಷ್ಯ ಪಿತಾಮಹಃ ।
ಆಗತಃ ಶಮಯಾಮಾಸ ಪುತ್ರಾನ್ಬರ್ಹಿಷ್ಮತೋ ನಯೈಃ ॥ ೪೬ ॥

ತತ್ರಾವಶಿಷ್ಟಾ ಯೇ ವೃಕ್ಷಾ ಭೀತಾ ದುಹಿತರಂ ತದಾ ।
ಉಜ್ಜಹ್ರುಸ್ತೇ ಪ್ರಚೇತೋಭ್ಯ ಉಪದಿಷ್ಟಾಃ ಸ್ವಯಂಭುವಾ ॥ ೪೭ ॥

ತೇ ಚ ಬ್ರಹ್ಮಣ ಆದೇಶಾನ್ಮಾರಿಷಾಮುಪಯೇಮಿರೇ ।
ಯಸ್ಯಾಂ ಮಹದವಜ್ಞಾನಾದಜನ್ಯಜನಯೋನಿಜಃ ॥ ೪೮ ॥

ಚಾಕ್ಷುಷೇ ತ್ವಂತರೇ ಪ್ರಾಪ್ತೇ ಪ್ರಾಕ್ಸರ್ಗೇ ಕಾಲವಿದ್ರುತೇ ।
ಯಃ ಸಸರ್ಜ ಪ್ರಜಾ ಇಷ್ಟಾಃ ಸ ದಕ್ಷೋ ದೈವಚೋದಿತಃ ॥ ೪೯ ॥

ಯೋ ಜಾಯಮಾನಃ ಸರ್ವೇಷಾಂ ತೇಜಸ್ತೇಜಸ್ವಿನಾಂ ರುಚಾ ।
ಸ್ವಯೋಪಾದತ್ತ ದಾಕ್ಷ್ಯಾಚ್ಚ ಕರ್ಮಣಾಂ ದಕ್ಷಮಬ್ರುವನ್ ॥ ೫೦ ॥

ತಂ ಪ್ರಜಾಸರ್ಗರಕ್ಷಾಯಾ-
ಮನಾದಿರಭಿಷಿಚ್ಯ ಚ ।
ಯುಯೋಜ ಯುಯುಜೇಽನ್ಯಾಂಶ್ಚ
ಸ ವೈ ಸರ್ವಪ್ರಜಾಪತೀನ್ ॥ ೫೧ ॥

ಹೊಂದದೇ ಇದ್ದರೂ-ನಿರಂತರವಾಗಿ ನಿನ್ನ ಸ್ತುತಿಯನ್ನು ಮಾಡುತ್ತಾ ಬಂದಿದ್ದಾರೆ. ಆದುದರಿಂದ ನಾವೂ ಕೂಡ ನಮ್ಮ ಬುದ್ಧಿಗೆ ತಕ್ಕಂತೆ ನಿನ್ನ ಕೀರ್ತಿಗಾನವನ್ನು ಮಾಡುತ್ತೇವೆ. ॥ ೪೧ ॥ ನೀನು ಸರ್ವಸಮನೂ, ಶುದ್ಧಸ್ವರೂಪನೂ ಪರಮಪುರುಷನಾಗಿರುವೆ. ಇಂತಹ ಸತ್ತ್ವಮೂರ್ತಿಯಾದ ಭಗವಾನ್ ವಾಸುದೇವನೇ ನಿನಗೆ ನಮೋ ನಮಃ ॥ ೪೨ ॥

ಶ್ರೀಮೈತ್ರೇಯರು ಹೇಳುತ್ತಾರೆ – ಎಲೈ ವಿದುರನೇ! ಪ್ರಚೇತಸರು ಹೀಗೆ ಭಗವಂತನನ್ನು ಸ್ತೋತ್ರಮಾಡಲು ಶರಣಾಗತ ವತ್ಸಲನಾದ ಶ್ರೀಭಗವಂತನು ಪ್ರಸನ್ನನಾಗಿ 'ತಥಾಸ್ತು' ಎಂದು ಹೇಳಿ ಅನುಗ್ರಹ ಮಾಡಿದನು. ಅಪ್ರತಿಹತವಾದ ಪ್ರಭಾವವುಳ್ಳ ಶ್ರೀಹರಿಯ ಆ ಮಧುರವಾದ ಮೂರ್ತಿಯ ದರ್ಶನದಿಂದ ಪ್ರಚೇತಸರ ಕಣ್ಣುಗಳಿಗೆ ಇನ್ನು ತೃಪ್ತಿಯಾಗಿರಲೇ ಇಲ್ಲ. ಅದಕ್ಕಾಗಿ ಆತನನ್ನು ಕಳುಹಿಸಿಕೊಡಲು ಇಷ್ಟವೇ ಇರಲಿಲ್ಲ. ಆದರೂ ಶ್ರೀಭಗವಂತನು ತನ್ನ ಪರಮಧಾಮಕ್ಕೆ ಹೊರಟು ಹೋದನು. ॥ ೪೩ ॥ ಅದಾದನಂತರ ಪ್ರಚೇತಸರು ಸಮುದ್ರಜಲದಿಂದ ಹೊರಗೆ ಬಂದು ನೋಡಲು, ಇಡೀ ಭೂಮಂಡಲವನ್ನು – ಸ್ವರ್ಗದ ಮಾರ್ಗವನ್ನು ತಡೆಯುತ್ತಿವೆಯೋ ಎಂಬಂತೆ – ಮಿತಿಮೀರಿ ಎತ್ತರವಾಗಿ ಬೆಳೆದ ವೃಕ್ಷಗಳು ಮುಚ್ಚಿಬಿಟ್ಟಿರುವುದನ್ನು ಕಂಡರು. ಅದನ್ನು ನೋಡಿ ಅವರಿಗೆ ವೃಕ್ಷಗಳ ಮೇಲೆ ಭಾರೀ ಕೋಪವುಂಟಾಯಿತು. ॥ ೪೪ ॥ ಆಗ ಅವರು ಭೂಮಿಯನ್ನು ಮರಬಳ್ಳಿಗಳಿಂದ ಶೂನ್ಯವನ್ನಾಗಿ ಮಾಡಬೇಕೆಂದು ಸಂಕಲ್ಪಿಸಿ, ಪ್ರಳಯಕಾಲದ ಕಾಲಾಗ್ನಿರುದ್ರನಂತೆ ತಮ್ಮ ಬಾಯಿಂದ ಪ್ರಚಂಡವಾದ ವಾಯುವನ್ನು ಮತ್ತು ಅಗ್ನಿಯನ್ನೂ ಹೊರಗೆ ಬಿಟ್ಟರು. ॥ ೪೫ ॥ ಅವರು ಹೀಗೆ ಸಮಸ್ತ ವೃಕ್ಷಗಳನ್ನೂ ಸುಟ್ಟು ಭಸ್ಮಮಾಡುತ್ತಿರುವುದನ್ನು ಕಂಡು ಬ್ರಹ್ಮದೇವರು ಅಲ್ಲಿಗೆ ಬಂದು ಪ್ರಾಚೀನಬರ್ಹಿ ಪುತ್ರರಿಗೆ ಯುಕ್ತಿಪೂರ್ವಕವಾಗಿ ತಿಳಿವಳಿಕೆ ನೀಡಿ ಅವರ ಕೋಪವನ್ನು ಶಾಂತಗೊಳಿಸಿದರು. ॥ ೪೬ ॥ ಆಗ ಅಲ್ಲಿ ಅಳಿದುಳಿದಿದ್ದ ವೃಕ್ಷಗಳು ಹೆದರಿಕೊಂಡು ಬ್ರಹ್ಮದೇವರ ಅಣತಿಯಂತೆ ತಮ್ಮಲ್ಲಿದ್ದ ಆ ಕನ್ಯೆಯನ್ನು ತಂದು ಪ್ರಚೇತಸರಿಗೆ ಒಪ್ಪಿಸಿದವು. ॥ ೪೭ ॥ ಪ್ರಚೇತಸರೂ ಕೂಡ ಬ್ರಹ್ಮದೇವರ ಆದೇಶದಂತೆ ಆ ಮಾರಿಷಾ ಎಂಬ ಕನ್ಯೆಯೊಡನೆ ವಿವಾಹಿತರಾದರು. ಶ್ರೀಮಹಾದೇವನನ್ನು ತಿರಸ್ಕರಿಸಿದ ಕಾರಣ ತನ್ನ ದೇಹವನ್ನು ತ್ಯಜಿಸಿದ್ದ ಬ್ರಹ್ಮಪುತ್ರನಾದ ದಕ್ಷನು ಆಕೆಯ ಗರ್ಭದಲ್ಲಿ ಜನಿಸಿದನು. ॥ ೪೮ ॥ ಆ ದಕ್ಷನೇ ಕಾಲಕ್ರಮದಲ್ಲಿ ಹಿಂದಿದ್ದ ಸೃಷ್ಟಿಯು ನಶಿಸಿಹೋಗಿ ಚಾಕ್ಷುಷ ಮನ್ವಂತರವು ಬಂದಾಗ ಶ್ರೀಭಗವಂತನ ಪ್ರೇರಣೆಯಂತೆ ಹೊಸ ಪ್ರಜೆಗಳನ್ನು ಸೃಷ್ಟಿಸಿದನು. ॥ ೪೯ ॥ ಇವನು ಹುಟ್ಟುವಾಗಲೇ ತನ್ನ ತೇಜಸ್ಸಿನಿಂದ ಎಲ್ಲ ತೇಜಸ್ವಿಗಳ ತೇಜಸ್ಸನ್ನು ಸೆಳೆದುಕೊಂಡನು. ಕರ್ಮಗಳನ್ನು ಆಚರಿಸುವುದರಲ್ಲಿ ಅತ್ಯಂತ ದಕ್ಷ (ಕುಶಲ) ನಾಗಿದ್ದುದರಿಂದ 'ದಕ್ಷ'ನೆಂದೇ ಆತನ ಹೆಸರಾಯಿತು. ॥ ೫೦ ॥ ಬ್ರಹ್ಮದೇವರು ಆತನನ್ನು ಪ್ರಜಾಪತಿಗಳಿಗೆಲ್ಲ ಅಧಿಪತಿಯನ್ನಾಗಿ ಪಟ್ಟವನ್ನು ಕಟ್ಟಿ ಸೃಷ್ಟಿಯನ್ನು ರಕ್ಷಿಸಲು ಆದೇಶ ವನ್ನಿತ್ತರು. ಆಗ ಅವನು ಮರೀಚಿಯೇ ಮುಂತಾದ ಇತರ ಎಲ್ಲ ಪ್ರಜಾಪತಿಗಳನ್ನೂ ಅವರವರ ಕಾರ್ಯದಲ್ಲಿ ನೇಮಕಮಾಡಿದನು. ॥ ೫೧ ॥

*ಮೂವತ್ತನೆಯ ಅಧ್ಯಾಯವು ಮುಗಿಯಿತು. ॥ ೩೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ ತ್ರಿಂಶೋಽಧ್ಯಾಯಃ ॥ ೩೦ ॥

# ಮೂವತ್ತೊಂದನೆಯ ಅಧ್ಯಾಯ

## ನಾರದರ ಉಪದೇಶದಿಂದ ಪ್ರಚೇತಸರಿಗೆ ಪರಮಪದ ಪ್ರಾಪ್ತಿ

*ಮೈತ್ರೇಯ ಉವಾಚ*

**ತತ ಉತ್ಪನ್ನವಿಜ್ಞಾನಾ ಆಶ್ವಧೋಕ್ಷಜಭಾಷಿತಮ್ ।**
**ಸ್ಮರಂತ ಆತ್ಮಜೇ ಭಾರ್ಯಾಂ ವಿಸೃಜ್ಯ ಪ್ರಾವ್ರಜನ್‌ಗೃಹಾತ್ ॥ ೧ ॥**

**ದೀಕ್ಷಿತಾ ಬ್ರಹ್ಮಸತ್ರೇಣ ಸರ್ವಭೂತಾತ್ಮಮೇಧಸಾ ।**
**ಪ್ರತೀಚ್ಯಾಂ ದಿಶಿ ವೇಲಾಯಾಂ ಸಿದ್ಧೋಽಭೂದ್ಯತ್ರ ಜಾಜಲಿಃ ॥ ೨ ॥**

**ತಾನ್ನಿರ್ಜಿತಪ್ರಾಣಮನೋವಚೋದೃಶೋ**
**ಜಿತಾಸನಾನ್ ಶಾಂತಸಮಾನವಿಗ್ರಹಾನ್ ।**
**ಪರೇಽಮಲೇ ಬ್ರಹ್ಮಣಿ ಯೋಜಿತಾತ್ಮನಃ**
**ಸುರಾಸುರೇಡ್ಯೋದದೃಶೇ ಸ್ಮ ನಾರದಃ ॥ ೩ ॥**

**ತಮಾಗತಂ ತ ಉತ್ಥಾಯ ಪ್ರಣಿಪತ್ಯಾಭಿನಂದ್ಯ ಚ ।**
**ಪೂಜಯಿತ್ವಾ ಯಥಾದೇಶಂ ಸುಖಾಸೀನಮಥಾಬ್ರುವನ್ ॥ ೪ ॥**

*ಪ್ರಚೇತಸ ಊಚುಃ*

**ಸ್ವಾಗತಂ ತೇ ಸುರರ್ಷೇಽದ್ಯ ದಿಷ್ಟ್ಯಾ ನೋ ದರ್ಶನಂ ಗತಃ ।**
**ತವ ಚಂಕ್ರಮಣಂ ಬ್ರಹ್ಮನ್ನಭಯಾಯ ಯಥಾ ರವೇಃ ॥ ೫ ॥**

**ಯದಾದಿಷ್ಟಂ ಭಗವತಾ ಶಿವೇನಾಧೋಕ್ಷಜೇನ ಚ ।**
**ತದ್ಗೃಹೇಷು ಪ್ರಸಕ್ತಾನಾಂ ಪ್ರಾಯಶಃ ಕ್ಷಪಿತಂ ಪ್ರಭೋ ॥ ೬ ॥**

**ತನ್ನಃ ಪ್ರದ್ಯೋತಯಾಧ್ಯಾತ್ಮಜ್ಞಾನಂ ತತ್ತ್ವಾರ್ಥದರ್ಶನಮ್ ।**
**ಯೇನಾಂಜಸಾ ತರಿಷ್ಯಾಮೋ ದುಸ್ತರಂ ಭವಸಾಗರಮ್ ॥ ೭ ॥**

*ಮೈತ್ರೇಯ ಉವಾಚ*

**ಇತಿ ಪ್ರಚೇತಸಾಂ ಪೃಷ್ಟೋ ಭಗವಾನ್ನಾರದೋ ಮುನಿಃ ।**
**ಭಗವತ್ಯುತ್ತಮಶ್ಲೋಕ ಆವಿಷ್ಟಾತ್ಮಾಬ್ರವೀನ್ನೃಪಾನ್ ॥ ೮ ॥**

*ನಾರದ ಉವಾಚ*

**ತಜ್ಜನ್ಮ ತಾನಿ ಕರ್ಮಾಣಿ ತದಾಯುಸ್ತನ್ಮನೋ ವಚಃ ।**
**ನೃಣಾಂ ಯೇನೇಹ ವಿಶ್ವಾತ್ಮಾ ಸೇವ್ಯತೇ ಹರಿರೀಶ್ವರಃ ॥ ೯ ॥**

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ಭಾಗವತಶ್ರೇಷ್ಠನೇ! ಹತ್ತು ಲಕ್ಷ ದಿವ್ಯವರ್ಷಗಳು ಕಳೆದುಹೋಗಲಾಗಿ ಪ್ರಚೇತಸರಿಗೆ ವಿವೇಕ ಉಂಟಾಯಿತು. ಆಗ ಅವರಿಗೆ ಭಗವಂತನ ಮಾತುಗಳು ನೆನಪಾದವು ಮತ್ತು ಅವರು ತಮ್ಮ ಭಾರ್ಯೆಯಾದ ಮಾರಿಷಾ ಳನ್ನು ಮಗನ ಬಳಿಯಲ್ಲಿ ಬಿಟ್ಟು ಕೂಡಲೇ ಮನೆಯಿಂದ ಹೊರ ಬಿದ್ದರು. ॥ ೧ ॥ ಅವರು ಪಶ್ಚಿಮದಿಕ್ಕಿನಲ್ಲಿ ಜಾಜಲಿ ಮಹರ್ಷಿಯು ಸಿದ್ಧಿಯನ್ನು ಪಡೆದಿದ್ದ ಸಮುದ್ರ ತಟಕ್ಕೆ ತಲುಪಿ – 'ಸಮಸ್ತ ಭೂತ ಗಳಲ್ಲಿಯೂ ಒಂದೇ ಆತ್ಮತತ್ತ್ವವು ಬೆಳಗುತ್ತಿದೆ' ಎಂಬ ಜ್ಞಾನವನ್ನು ಉಂಟುಮಾಡುವ ಆತ್ಮವಿಚಾರರೂಪವಾದ ಬ್ರಹ್ಮಸತ್ರದ ಸಂಕಲ್ಪ ಗೈದು ಕುಳಿತುಬಿಟ್ಟರು. ॥ ೨ ॥ ಅವರು ಪ್ರಾಣ, ಮನಸ್ಸು, ವಾಣಿ ಮತ್ತು ದೃಷ್ಟಿಯನ್ನು ವಶಪಡಿಸಿಕೊಂಡು, ಶರೀರವನ್ನು ಅಲುಗಾಡ ದಂತೆ ಸ್ಥಿರವಾಗಿಯೂ, ನೇರವಾಗಿಯೂ ಇರಿಸಿಕೊಂಡು, ಆಸನ ಜಯವನ್ನು ಸಾಧಿಸಿ ಚಿತ್ತವನ್ನು ವಿಶುದ್ಧವಾದ ಪರಬ್ರಹ್ಮನಲ್ಲಿ ಒಂದು ಗೂಡಿಸಿದರು. ಇಂತಹ ಸ್ಥಿತಿಯಲ್ಲಿ ಅವರಿಗೆ ದೇವಾಸುರರಿಗೂ ವಂದನೀಯರಾದ ಶ್ರೀನಾರದರ ದರ್ಶನವಾಯಿತು. ॥ ೩ ॥ ನಾರ ದರು ಬಂದಿರುವುದನ್ನು ನೋಡಿ ಪ್ರಚೇತಸರು ಎದ್ದು ನಿಂತು, ಪ್ರಣಾಮಮಾಡಿ ಆದರ ಸತ್ಕಾರಪೂರ್ವಕ ದೇಶ-ಕಾಲಕ್ಕನು ಸಾರ ವಾಗಿ ಅವರನ್ನು ವಿಧಿವತ್ತಾಗಿ ಪೂಜಿಸಿದರು. ನಾರದರು ಸುಖಾಸೀನ ರಾಗಲು ಪ್ರಚೇತಸರು ಅವರಲ್ಲಿ ವಿಜ್ಞಾಪಿಸಿ ಕೊಂಡರು. ॥ ೪ ॥

**ಪ್ರಚೇತಸರು ಹೇಳಿದರು** – ದೇವರ್ಷಿಗಳೇ! ತಮಗೆ ಸ್ವಾಗ ತವು. ಮಹಾಭಾಗ್ಯ ವಿಶೇಷದಿಂದಲೇ ನಮಗೆ ತಮ್ಮ ದರ್ಶನ ಭಾಗ್ಯವು ಲಭಿಸಿತು. ತಮ್ಮ ಲೋಕಸಂಚಾರವು ಸೂರ್ಯ ದೇವ ರಂತೆ ಸಮಸ್ತ ಜೀವಿಗಳಿಗೆ ಜ್ಞಾನಪ್ರಕಾಶವನ್ನೂ, ಅಭಯ ದಾನ ವನ್ನೂ ಕೊಡುವುದಕ್ಕಾಗಿಯೇ ಆಗಿದೆ. ॥ ೫ ॥ ಸ್ವಾಮಿ! ಭಗವಂತ ನಾದ ಶ್ರೀಶಂಕರನೂ, ಭಗವಾನ್ ಶ್ರೀವಿಷ್ಣುವೂ ನಮಗೆ ಉಪದೇಶ ಮಾಡಿದ್ದ ಜ್ಞಾನವನ್ನು ನಾವು ಗೃಹಸ್ಥಾಶ್ರಮದಲ್ಲೇ ಆಸಕ್ತರಾಗಿದ್ದ ಕಾರಣದಿಂದ ಮರೆತುಬಿಟ್ಟಂತಾಗಿದೆ. ॥ ೬ ॥ ಆದ್ದರಿಂದ ನೀವು ನಮ್ಮ ಹೃದಯದಲ್ಲಿ ಪರಮಾರ್ಥತತ್ತ್ವದ ಸಾಕ್ಷಾತ್ಕಾರವಾಗಿಸು ವಂತಹ ಅಧ್ಯಾತ್ಮಜ್ಞಾನವನ್ನು ಪುನಃ ಪ್ರಕಾಶಿತಗೊಳಿಸಿರಿ. ಅದರಿಂದ ನಾವು ಈ ದುಸ್ತರವಾದ ಸಂಸಾರಸಾಗರವನ್ನು ಸುಲಭವಾಗಿ ದಾಟ ಬಲ್ಲೆವು. ॥ ೭ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಭಗವನ್ಮಯ ಶ್ರೀನಾರದರ ಚಿತ್ತವು ಸದಾಕಾಲ ಭಗವಾನ್ ಶ್ರೀಕೃಷ್ಣನಲ್ಲೇ ನೆಲೆಸಿರುತ್ತದೆ. ಅವರು ಪ್ರಚೇತಸರ ವಿಜ್ಞಾಪನೆಯನ್ನು ಕೇಳಿ ಹೀಗೆಂದರು. ॥ ೮ ॥

**ಶ್ರೀನಾರದರು ಹೇಳಿದರು** – ಎಲೈ ರಾಜರುಗಳೇ! ಈ ಲೋಕ ದಲ್ಲಿ ಯಾವುದರಿಂದ ಸರ್ವಾತ್ಮನೂ, ಸರ್ವೇಶ್ವರನೂ ಆದ ಶ್ರೀಹರಿ ಯ ಸೇವೆಯಾಗುವುದೋ ಆ ಜನ್ಮ, ಕರ್ಮ, ಆಯುಸ್ಸು, ಮನಸ್ಸು, ಮಾತುಗಳು ಸಫಲವಾದುವುಗಳು. ॥ ೯ ॥

ಕಿಂ ಜನ್ಮಭಿಸ್ತ್ರಿಭಿರ್ವೇಹ
ಶೌಕ್ಲ ಸಾವಿತ್ರಯಾಜ್ಞಿಕೈಃ ।
ಕರ್ಮಭಿರ್ವಾ ತ್ರಯೀಪ್ರೋಕ್ತೈಃ
ಪುಂಸೋಽಪಿ ವಿಬುಧಾಯುಷಾ ॥ ೧೦ ॥

ಶ್ರುತೇನ ತಪಸಾ ವಾ ಕಿಂ ವಚೋಭಿಶ್ಚಿತ್ತವೃತ್ತಿಭಿಃ ।
ಬುದ್ಧ್ಯಾ ವಾ ಕಿಂ ನಿಪುಣಯಾ ಬಲೇನೇಂದ್ರಿಯರಾಧಸಾ
॥ ೧೧ ॥

ಕಿಂ ವಾ ಯೋಗೇನ ಸಾಂಖ್ಯೇನ ನ್ಯಾಸಸ್ವಾಧ್ಯಾಯಯೋರಪಿ ।
ಕಿಂ ವಾ ಶ್ರೇಯೋಭಿರನ್ಯೈಶ್ಚ ನ ಯತ್ರಾತ್ಮಪ್ರದೋ ಹರಿಃ
॥ ೧೨ ॥

ಶ್ರೇಯಸಾಮಪಿ ಸರ್ವೇಷಾಮಾತ್ಮಾ ಹ್ಯವಧಿರರ್ಥತಃ ।
ಸರ್ವೇಷಾಮಪಿ ಭೂತಾನಾಂ ಹರಿರಾತ್ಮಾಽಽತ್ಮದಃ ಪ್ರಿಯಃ
॥ ೧೩ ॥

ಯಥಾ ತರೋರ್ಮೂಲನಿಷೇಚನೇನ
ತೃಪ್ಯಂತಿ ತತ್ಸ್ಕಂಧಭುಜೋಪಶಾಖಾಃ ।
ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ
ತಥೈವ ಸರ್ವಾರ್ಹಣಮಚ್ಯುತೇಜ್ಯಾ ॥ ೧೪ ॥

ಯಥೈವ ಸೂರ್ಯಾತ್ಪ್ರಭವಂತಿ ವಾರಃ
ಪುನಶ್ಚ ತಸ್ಮಿನ್ಪ್ರವಿಶಂತಿ ಕಾಲೇ ।
ಭೂತಾನಿ ಭೂಮೌ ಸ್ಥಿರಜಂಗಮಾನಿ
ತಥಾ ಹರಾವೇವ ಗುಣಪ್ರವಾಹಃ ॥ ೧೫ ॥

ಏತತ್ಪದಂ ತಜ್ಜಗದಾತ್ಮನಃ ಪರಂ
ಸಕೃದ್ವಿಭಾತಂ ಸವಿತುರ್ಯಥಾ ಪ್ರಭಾ ।
ಯಥಾಸವೋ ಜಾಗ್ರತಿ ಸುಪ್ತಶಕ್ತಯೋ
ದ್ರವ್ಯಕ್ರಿಯಾಜ್ಞಾನಭಿದಾಭ್ರಮಾತ್ಯಯಃ ॥ ೧೬ ॥

ಆತ್ಮಾನುಭವವನ್ನು ಕರುಣಿಸುವ ಶ್ರೀಹರಿಯು ಯಾವುದರಿಂದ ದೊರಕುವುದಿಲ್ಲವೋ – ಅಂತಹ ಜನ್ಮದಿಂದಾಗಲೀ, ಯಜ್ಞೋಪವೀತ ಸಂಸ್ಕಾರ, ಗಾಯತ್ರಿ ಉಪದೇಶ, ಯಜ್ಞದೀಕ್ಷೆಗಳೆಂಬ ಮೂರು ಸಂಸ್ಕಾರಗಳಿಂದಾಗಲೀ, ವೇದೋಕ್ತ ಕರ್ಮಗಳಿಂದಾಗಲೀ, ದೇವಮಾನದ ಪೂರ್ಣಾಯುಷ್ಯದಿಂದಾಗಲೀ, ಶಾಸ್ತ್ರಜ್ಞಾನದಿಂದಾಗಲೀ, ತಪಸ್ಸಿನಿಂದಾಗಲೀ, ಮಾತಿನ ಚಾತುರ್ಯದಿಂದಾಗಲೀ, ಅದ್ಭುತವಾದ ಚಿತ್ತವೃತ್ತಿಗಳಿಂದಾಗಲೀ, ಸ್ಮರಣಶಕ್ತಿಯಿಂದಾಗಲೀ, ಸೂಕ್ಷ್ಮವಾದ ಬುದ್ಧಿಯಿಂದಾಗಲೀ, ಬಲದಿಂದಾಗಲೀ, ಇಂದ್ರಿಯಪಾಟವದಿಂದಾಗಲೀ, ಯೋಗದಿಂದಾಗಲೀ, ಸಾಂಖ್ಯ (ಆತ್ಮಾನಾತ್ಮಾವಿವೇಕ)ದಿಂದಾಗಲೀ, ಸಂನ್ಯಾಸದಿಂದಾಗಲೀ, ವೇದಾಧ್ಯಯನ, ವ್ರತ, ವೈರಾಗ್ಯಗಳೇ ಮುಂತಾದ ಇತರ ಶ್ರೇಯಃ ಸಾಧನೆಯ ಉಪಾಯಗಳಿಂದಾಗಲೀ ಮನುಷ್ಯನಿಗೆ ಆಗುವ ಪ್ರಯೋಜನವಾದರೂ ಏನು ? ॥ ೧೦-೧೨ ॥ ವಾಸ್ತವವಾಗಿ ಎಲ್ಲ ಶ್ರೇಯಸ್ಸುಗಳಿಗೂ ಆತ್ಮನೇ ಅವಧಿಯು. ಆತ್ಮಜ್ಞಾನವನ್ನು ಕರುಣಿಸುವ ಶ್ರೀಹರಿಯೇ ಎಲ್ಲ ಪ್ರಾಣಿಗಳಿಗೂ ಪ್ರಿಯತಮನಾದ ಆತ್ಮನಾಗಿದ್ದಾನೆ. ॥ ೧೩ ॥ ವೃಕ್ಷದ ಬುಡಕ್ಕೆ ನೀರು ಹಾಯಿಸಿದರೆ ಅದರ ಕಾಂಡ, ಶಾಖೆ, ಉಪಶಾಖೆಗಳೆಲ್ಲಕ್ಕೂ ತೃಪ್ತಿಯುಂಟಾಗುವಂತೆಯೇ, ಊಟದ ಮೂಲಕ ಪ್ರಾಣಗಳನ್ನು ತೃಪ್ತಿಪಡಿಸಿದರೆ ಎಲ್ಲ ಇಂದ್ರಿಯಗಳೂ ಪುಷ್ಟವಾಗುವಂತೆಯೇ, (ಸರ್ವಮೂಲನಾಗಿರುವ) ಅಚ್ಯುತನನ್ನು ಪೂಜಿಸಿದರೆ ಅದರಿಂದ ಸರ್ವರ ಆರಾಧನೆಯು ಆಗುವುದು. ॥ ೧೪ ॥ ನೀರೆಲ್ಲವೂ ಮಳೆಗಾಲದಲ್ಲಿ ಸೂರ್ಯನಿಂದಲೇ ಉಂಟಾಗಿ ಬೇಸಗೆಯಲ್ಲಿ ಆತನ ಕಿರಣಗಳಲ್ಲಿಯೇ ಸೇರಿಕೊಳ್ಳುವುದೋ, ಚರಾಚರವಾದ ಸಮಸ್ತ ಪ್ರಾಣಿಗಳೂ ಭೂಮಿಯಿಂದಲೇ ಉತ್ಪನ್ನವಾಗಿ ಕಡೆಗೆ ಅದರಲ್ಲೇ ಸೇರಿಹೋಗುವಂತೆಯೇ ಗುಣಪ್ರವಾಹಕ್ಕೆ ಸೇರಿದ ಈ ಚೇತನಾಚೇತನಾತ್ಮಕವಾದ ಸಮಸ್ತ ಪ್ರಪಂಚವು ಶ್ರೀಹರಿಯಿಂದಲೇ ಉತ್ಪನ್ನವಾಗಿ ಕೊನೆಗೆ ಅವನಲ್ಲೇ ಲಯಹೊಂದುವುದು. ॥ ೧೫ ॥ ವಸ್ತುತಃ ಈ ಜಗತ್ತು ಭಗವಾನ್ ವಿಶ್ವಾತ್ಮನ ಶಾಸ್ತ್ರಪ್ರಸಿದ್ಧವಾದ ಸರ್ವ ಉಪಾಧಿರಹಿತವಾದ ಸ್ವರೂಪವೇ ಆಗಿದೆ. ಸೂರ್ಯನ ಪ್ರಭೆಯು ಅವನಿಂದ ಹೇಗೆ ಬೇರೆಯಾಗುವುದಿಲ್ಲವೋ ಹಾಗೆಯೇ ಗಂಧರ್ವನಗರದಂತೆ ಕೆಲವೊಮ್ಮೆ ಸ್ಫುರಿತವಾಗುವ ಈ ಜಗತ್ತು ಭಗವಂತನಿಂದ ಭಿನ್ನವಾಗಿಲ್ಲ. ಜಾಗ್ರತದಲ್ಲಿ ಇಂದ್ರಿಯಗಳು ಕ್ರಿಯಾಶೀಲವಾಗಿರುತ್ತವೆ, ಆದರೆ ಸುಷುಪ್ತಿಯಲ್ಲಿ ಅವುಗಳ ಶಕ್ತಿ ಲೀನವಾಗಿ ಹೋಗುತ್ತದೆ, ಹಾಗೆಯೇ ಈ ಜಗತ್ತು ಸೃಷ್ಟಿಯಕಾಲದಲ್ಲಿ ಭಗವಂತನಿಂದ ಪ್ರಕಟವಾಗುತ್ತದೆ ಮತ್ತು ಕಲ್ಪಾಂತ್ಯದಲ್ಲಿ ಅವನಲ್ಲೇ ಲೀನವಾಗಿ ಹೋಗುತ್ತದೆ. ಸ್ವರೂಪತಃ ಭಗವಂತನಲ್ಲಿ ದ್ರವ್ಯ, ಕ್ರಿಯೆ ಮತ್ತು ಜ್ಞಾನರೂಪೀ ತ್ರಿವಿಧ ಅಹಂಕಾರದ ಹಾಗೂ ಅವುಗಳ ನಿಮಿತ್ತದಿಂದಾಗುವ ಭೇದಭ್ರಮೆಯು ಇರುವುದೇ ಇಲ್ಲ. ॥ ೧೬ ॥ ಎಲೈ ನೃಪತಿಗಳೇ ! ಬೆಳಕು, ಮೋಡ ಮತ್ತು ಕತ್ತಲೆ – ಇವು ಮೂರೂ ಕ್ರಮವಾಗಿ ಆಕಾಶದಲ್ಲಿಯೇ ಪ್ರಕಟಗೊಂಡು ಅದರಲ್ಲೇ ಲೀನವಾಗುವುವು, ಆದರೆ ಆಕಾಶವು ಇವುಗಳಿಂದ ಲಿಪ್ತವಾಗುವುದಿಲ್ಲ. ಹಾಗೆಯೇ ಈ ಸತ್ತ್ವ, ರಜ, ತಮ ಎಂಬ ಶಕ್ತಿಗಳು ಕೆಲವೊಮ್ಮೆ

ಯಥಾ ನಭಸ್ಯಭ್ರತಮಃಪ್ರಕಾಶಾ
ಭವಂತಿ ಭೂಪಾ ನ ಭವಂತ್ಯನುಕ್ರಮಾತ್ ।
ಏವಂ ಪರೇ ಬ್ರಹ್ಮಣಿ ಶಕ್ತಯಸ್ತ್ವಮೂ
ರಜಸ್ತಮಃಸತ್ತ್ವಮಿತಿ ಪ್ರವಾಹಃ ॥ ೧೭ ॥

ತೇನೈಕಮಾತ್ಮಾನಮಶೇಷದೇಹಿನಾಂ
ಕಾಲಂ ಪ್ರಧಾನಂ ಪುರುಷಂ ಪರೇಶಮ್ ।
ಸ್ವತೇಜಸಾ ಧ್ವಸ್ತಗುಣಪ್ರವಾಹ-
ಮಾತ್ಮೈಕಭಾವೇನ ಭಜಧ್ವಮದ್ಧಾ ॥ ೧೮ ॥

ದಯಯಾ ಸರ್ವಭೂತೇಷು ಸಂತುಷ್ಟ್ಯಾ ಯೇನ ಕೇನ ವಾ ।
ಸರ್ವೇಂದ್ರಿಯೋಪಶಾಂತ್ಯಾ ಚ ತುಷ್ಯತ್ಯಾಶು ಜನಾರ್ದನಃ ॥ ೧೯ ॥

ಅಪಹತಸಕಲೈಷಣಾಮಲಾತ್ಮ-
ನ್ಯವಿರತಮೇಧಿತಭಾವನೋಪಹೂತಃ ।
ನಿಜಜನವಶಗತ್ವಮಾತ್ಮ ನೋಽಯ-
ನ್ನ ಸರತಿ ಛಿದ್ರವದಕ್ಷರಃ ಸತಾಂ ಹಿ ॥ ೨೦ ॥

ನ ಭಜತಿ ಕುಮನೀಷಿಣಾಂ ಸ ಇಜ್ಯಾಂ
ಹರಿರಧನಾತ್ಮಧನಪ್ರಿಯೋ ರಸಜ್ಞಃ ।
ಶ್ರುತಧನಕುಲಕರ್ಮಣಾಂ ಮದೈರ್ಯೇ
ವಿದಧತಿ ಪಾಪಮಕಿಂಚನೇಷು ಸತ್ಸು ॥ ೨೧ ॥

ಶ್ರಿಯಮನುಚರತೀಂ ತದರ್ಥಿನಶ್ಚ
ದ್ವಿಪದಪತೀನ್ವಿಬುಧಾಂಶ್ಚ ಯತ್ಸ್ವಪೂರ್ಣಃ ।
ನ ಭಜತಿ ನಿಜಭೃತ್ಯವರ್ಗತಂತ್ರಃ
ಕಥಮಮುಮುದ್ವಿಸೃಜೇತ್ಪುಮಾನ್ ಕೃತಜ್ಞಃ ॥ ೨೨ ॥

*ಮೈತ್ರೇಯ ಉವಾಚ*

ಇತಿ ಪ್ರಚೇತಸೋ ರಾಜನ್
ಅನ್ಯಾಶ್ಚ ಭಗವತ್ಕಥಾಃ ।
ಶ್ರಾವಯಿತ್ವಾ ಬ್ರಹ್ಮಲೋಕಂ
ಯಯೌ ಸ್ವಾಯಂಭುವೋ ಮುನಿಃ ॥ ೨೩ ॥

ಪರಮಾತ್ಮನಿಂದಲೇ ಉತ್ಪನ್ನವಾಗುತ್ತವೆ ಹಾಗೂ ಕೆಲವೊಮ್ಮೆ ಅವನಲ್ಲೇ ಲೀನವಾಗಿ ಹೋಗುತ್ತವೆ. ಹೀಗೆಯೇ ಇವುಗಳ ಪ್ರವಾಹ ನಡೆಯುತ್ತಾ ಇರುತ್ತದೆ. ಆದರೆ ಇದರಿಂದ ಆಕಾಶದಂತೆ ಅಸಂಗ ಪರಮಾತ್ಮನಲ್ಲಿ ಯಾವ ವಿಕಾರವೂ ಉಂಟಾಗುವುದಿಲ್ಲ. ॥ ೧೭ ॥ ಆದ್ದರಿಂದ ಬ್ರಹ್ಮಾದಿ ಸಮಸ್ತ ಲೋಕಪಾಲಕರಿಗೂ ಅಧೀಶ್ವರನಾದ ಶ್ರೀಹರಿಯನ್ನು ತಸ್ನಿಂದ ಅಭಿನ್ನನೆಂದು ತಿಳಿದು ನೀವು ಭಜಿಸಿರಿ. ಏಕೆಂದರೆ, ಅವನೇ ಸಮಸ್ತ ದೇಹಧಾರಿಗಳ ಆತ್ಮನಾಗಿರುವನು. ಅವನೇ ಜಗತ್ತಿನ ನಿಮಿತ್ತಕಾರಣನಾದ ಕಾಲ, ಉಪಾದಾನಕಾರಣನಾದ ಪ್ರಧಾನ ಮತ್ತು ನಿಯಾಮಕ ಪುರುಷೋತ್ತಮನಾಗಿದ್ದಾನೆ ಹಾಗೂ ತನ್ನ ಕಾಲಶಕ್ತಿಯಿಂದಲೇ ಈ ಗುಣಗಳ ಪ್ರವಾಹರೂಪವಾದ ಪ್ರಪಂಚವನ್ನು ಸಂಹಾರಮಾಡುತ್ತಾನೆ. ॥ ೧೮ ॥

ಸಮಸ್ತ ಪ್ರಾಣಿಗಳಲ್ಲಿ ದಯೆಯನ್ನು ತೋರುವಿಕೆ, ಏನು ದೊರೆಯುವುದೋ ಅದರಲ್ಲೇ ಸಂತುಷ್ಟನಾಗಿರುವುದು, ಸರ್ವೇಂದ್ರಿಯಗಳನ್ನು ವಿಷಯಗಳಿಂದ ಹಿಂದಿರುಗಿಸಿ ಶಾಂತಗೊಳಿಸುವುದು – ಈ ಮೂರರಿಂದ ಭಕ್ತವತ್ಸಲನಾದ ಭಗವಂತನು ಬೇಗನೇ ಪ್ರಸನ್ನನಾಗುತ್ತಾನೆ. ॥ ೧೯ ॥ ಪುತ್ರೈಷಣಾ ಮುಂತಾದ ಎಲ್ಲ ವಿಧದ ವಾಸನೆಗಳು ಹೊರಟುಹೋದ್ದರಿಂದ ನಿರಂತರವಾಗಿ ವೃದ್ಧಿಹೊಂದುತ್ತಿರುವ ಧ್ಯಾನದಿಂದ ಸೆಳೆಯಲ್ಪಟ್ಟವನಾಗಿ ಅವಿನಾಶಿಯಾದ ಶ್ರೀಹರಿಯು ಶುದ್ಧಾಂತಃಕರಣರಾದ ಸಂತರ ಹೃದಯಕ್ಕೆ ಬಂದುಬಿಡುತ್ತಾನೆ. ತನ್ನ ಭಕ್ತಪರಾಧೀನತೆಯನ್ನು ಅನ್ವರ್ಥಗೊಳಿಸಿ ಹೃದಯಾಕಾಶದಂತೆ ಅಲ್ಲಿಂದ ಸರಿಯದೆ ಅಲ್ಲಿಯೇ ನೆಲೆಗೊಳ್ಳುವನು. ॥ ೨೦ ॥ ಭಗವಂತನೇ ಸರ್ವಸ್ವವೆಂದು ಭಾವಿಸುವ, ಭೌತಿಕ ಶ್ರೀಮಂತಿಕೆಯಿಲ್ಲದ ಮನುಷ್ಯರ ಮೇಲೆಯೇ ಪರಮಾತ್ಮನು ಪ್ರೇಮವನ್ನಿಡುತ್ತಾನೆ. ಏಕೆಂದರೆ, ಆತನು ಪರಮರಸಜ್ಞನು. ನಿರ್ವ್ಯಾಜಭಕ್ತಿಯುಳ್ಳ ಅನನ್ಯಭಕ್ತರ ಭಕ್ತಿಯಲ್ಲಿ ಎಷ್ಟು ಮಾಧುರ್ಯವಿದೆಯೆಂಬುದನ್ನು ಆತನು ಚೆನ್ನಾಗಿ ಬಲ್ಲನು. ವಿದ್ಯಾಮದ, ಧನಮದ, ಕುಲಮದ, ಕರ್ಮಮದ ಇವುಗಳಿಂದ ಕೊಬ್ಬಿ ಅಕಿಂಚನ ಸಾಧುಜನರನ್ನು ತಿರಸ್ಕಾರ ಮಾಡುವ ಆ ದುರ್ಬುದ್ಧಿಯುಳ್ಳವರ ಪೂಜೆಯನ್ನು ಅವನು ಸ್ವೀಕರಿಸುವುದೇ ಇಲ್ಲ. ॥ ೨೧ ॥ ಭಗವಂತನಾದ ಶ್ರೀಹರಿಯು ಆಪ್ತಕಾಮನೂ, ಸ್ವಾನಂದಪೂರ್ಣನೂ ಆಗಿರುವುದರಿಂದ ಆತನು ತನ್ನನ್ನು ನಿರಂತರವಾಗಿ ಸೇವಿಸುತ್ತಿರುವ ಶ್ರೀಲಕ್ಷ್ಮೀದೇವಿಯನ್ನಾಗಲೀ, ಆ ಸಂಪತ್ತನ್ನು ಬಯಸುವ ರಾಜರನ್ನಾಗಲೀ, ಅಥವಾ ದೇವತೆಗಳನ್ನಾಗಲೀ ಯಾರನ್ನೂ ಅಪೇಕ್ಷಿಸುವುದಿಲ್ಲ. ಆದರೂ ಅವನು ತನ್ನ ಭಕ್ತರಿಗೆ ಅಧೀನನಾಗಿರುತ್ತಾನೆ. ಆಹಾ! ಇಂತಹ ಕರುಣಾಸಾಗರನಾದ ಸ್ವಾಮಿಯನ್ನು ಕೃತಜ್ಞನಾದ ಯಾರೇ ಮನುಷ್ಯನು ಸ್ವಲ್ಪ ಹೊತ್ತಾದರೂ ಬಿಟ್ಟಿರಲು ಸಾಧ್ಯವೇ? ॥ ೨೨ ॥

**ಶ್ರೀಮೈತ್ರೇಯರು ಹೇಳುತ್ತಾರೆ** – ಎಲೈ ವಿದುರನೇ! ಪೂಜ್ಯರಾದ ನಾರದಮಹರ್ಷಿಗಳು ಪ್ರಚೇತಸರಿಗೆ ಹೀಗೆ ಉಪದೇಶ ಮಾಡಿ, ಇನ್ನೂ ಅನೇಕ ಭಗವತ್ಕಥೆಗಳನ್ನೂ ಅವರಿಗೆ ಹೇಳಿದರು. ಅನಂತರ ಅವರು ಬ್ರಹ್ಮಲೋಕಕ್ಕೆ ಹೊರಟುಹೋದರು. ॥ ೨೩ ॥ ಪ್ರಚೇತಸರೂ ಕೂಡ ಜಗತ್ತಿನ ಸರ್ವಪಾಪಗಳನ್ನು ತೊಳೆದು

ತೇಽಪಿ ತನ್ಮುಖನಿರ್ಯಾತಂ ಯಶೋ ಲೋಕಮಲಾಪಹಮ್ ।
ಹರೇರ್ನಿಶಮ್ಯ ತತ್ಪಾದಂ ಧ್ಯಾಯಂತಸ್ತದ್ಗತಿಂ ಯಯುಃ ॥ ೨೪ ॥

ಹಾಕುವ ಭಗವಚ್ಚರಿತ್ರೆಗಳನ್ನು ಆ ಮಹರ್ಷಿಗಳ ಮುಖಕಮಲದಿಂದ ಕೇಳಿ ಶ್ರೀಭಗವಂತನ ಅಡಿದಾವರೆಗಳನ್ನು ಚಿಂತಿಸುತ್ತಾ ಕೊನೆಗೆ ಅವರು ಭಗವಂತನ ಧಾಮವನ್ನೂ ಸೇರಿದರು. ॥ ೨೪ ॥

ಏತತ್ತೇಽಭಿಹಿತಂ ಕ್ಷತ್ತರ್ಯನ್ಮಾಂ ತ್ವಂ ಪರಿಪೃಷ್ಟವಾನ್ ।
ಪ್ರಚೇತಸಾಂ ನಾರದಸ್ಯ ಸಂವಾದಂ ಹರಿಕೀರ್ತನಮ್ ॥ ೨೫ ॥

ಹೀಗೆ ಶ್ರೀನಾರದರಿಗೂ ಮತ್ತು ಪ್ರಚೇತಸರಿಗೂ ನಡೆದ ಭಗವತ್ಕಥಾರೂಪವಾದ ಸಂಭಾಷಣೆಯು ಹೇಗೆ ನಡೆಯಿತೆಂದು ನೀನು ಕೇಳಿದೆಯಲ್ಲ, ಅದನ್ನು ನಾನು ನಿನಗೆ ತಿಳಿಸಿರುವೆನು. ॥ ೨೫ ॥

*ಶ್ರೀಶುಕ ಉವಾಚ*

ಯ ಏಷ ಉತ್ತಾನಪದೋ ಮಾನವಸ್ಯಾನುವರ್ಣಿತಃ ।
ವಂಶಃ ಪ್ರಿಯವ್ರತಸ್ಯಾಪಿ ನಿಬೋಧ ನೃಪಸತ್ತಮ ॥ ೨೬ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ಇಲ್ಲಿಯವರೆಗೆ ನಾನು ಸ್ವಾಯಂಭುವಮನುವಿನ ಪುತ್ರನಾದ ಉತ್ತಾನಪಾದನ ವಂಶವನ್ನು ವರ್ಣಿಸಿದೆ. ಇನ್ನು ಪ್ರಿಯವ್ರತನ ವಂಶವನ್ನೂ ವರ್ಣಿಸುವೆನು ಕೇಳು. ॥ ೨೬ ॥ ಪ್ರಿಯವ್ರತ ಮಹಾರಾಜನೂ ಶ್ರೀನಾರದರಿಂದ ಆತ್ಮಜ್ಞಾನದ ಉಪದೇಶವನ್ನು ಪಡೆದರೂ ಕೂಡ ರಾಜ್ಯಸೌಖ್ಯವನ್ನು ಕೆಲವುಕಾಲ ಅನುಭವಿಸಿದನು. ಕೊನೆಗೆ ಇಡೀ ಭೂಮಿಯನ್ನು ತಮ್ಮ ಪುತ್ರರಿಗೆ ಹಂಚಿ ಅವನು ಭಗವಂತನ ಪರಮಧಾಮವನ್ನು ಹೊಂದಿದನು. ॥ ೨೭ ॥

ಯೋ ನಾರದಾದಾತ್ಮವಿದ್ಯಾಮಧಿಗಮ್ಯ ಪುನರ್ಮಹೀಮ್ ।
ಭುಕ್ತ್ವಾ ವಿಭಜ್ಯ ಪುತ್ರೇಭ್ಯ ಐಶ್ವರಂ ಸಮಗಾತ್ಪದಮ್ ॥ ೨೭ ॥

ಇಮಾಂ ತು ಕೌಷಾರವಿಣೋಪವರ್ಣಿತಾಂ
ಕ್ಷತ್ತಾ ನಿಶಮ್ಯಾಜಿತವಾದಸತ್ಕಥಾಮ್ ।
ಪ್ರವೃದ್ಧಭಾವೋಽಶ್ರುಕಲಾಕುಲೋ ಮುನೇ-
ರ್ದಧಾರ ಮೂರ್ಧ್ನಾ ಚರಣಂ ಹೃದಾ ಹರೇಃ ॥ ೨೮ ॥

ರಾಜೇಂದ್ರನೇ! ಇತ್ತ ಮೈತ್ರೇಯ ಮಹರ್ಷಿಗಳ ಬಾಯಿಂದ ಶ್ರೀಭಗವಂತನ ಅನಂತಕಲ್ಯಾಣಗುಣಗಳಿಂದ ಕೂಡಿದ ಪವಿತ್ರತಮವಾದ ಭಗವತ್ಕಥೆಯನ್ನು ಕೇಳಿ ವಿದುರನು ಪ್ರೇಮಮಗ್ನನಾಗಿ, ಭಕ್ತಿಭಾವದ ಉದ್ರೇಕ ಉಂಟಾದ್ದರಿಂದ ಅವನ ಕಣ್ಣುಗಳಿಂದ ಪ್ರೇಮಾಶ್ರುಗಳು ಹರಿಯತೊಡಗಿದವು ಹಾಗೂ ಅವನು ಹೃದಯದಲ್ಲಿ ಭಗವಚ್ಚರಣಗಳನ್ನು ಸ್ಮರಿಸುತ್ತಾ ತನ್ನ ತಲೆಯನ್ನು ಮೈತ್ರೇಯ ಮುನಿವರ್ಯರ ಅಡಿದಾವರೆಗಳಲ್ಲಿರಿಸಿ ಹೀಗೆ ವಿಜ್ಞಾಪಿಸಿಕೊಂಡರು. ॥ ೨೮ ॥

*ವಿದುರ ಉವಾಚ*

ಸೋಽಯಮದ್ಯ ಮಹಾಯೋಗಿನ್ಭವತಾ ಕರುಣಾತ್ಮನಾ ।
ದರ್ಶಿತಸ್ತಮಸಃ ಪಾರೋ ಯತ್ರಾಕಿಂಚನಗೋ ಹರಿಃ ॥ ೨೯ ॥

ವಿದುರನು ಹೇಳತೊಡಗಿದನು – ಮಹಾಯೋಗಿವರ್ಯರೇ! ತಾವು ಎಂತಹ ಕರುಣಾಮಯರು. ಇಂದು ತಾವು ನನ್ನನ್ನು ಅಜ್ಞಾನಾಂಧಕಾರದಿಂದ ದಾಟಿಸಿ ಅಕಿಂಚನರಿಗೆ ಸರ್ವಸ್ವನಾಗಿರುವ ಶ್ರೀಹರಿಯು ಬೆಳಗುತ್ತಿರುವಲ್ಲಿಗೆ ಮುಟ್ಟಿಸಿದಿರಿ. ॥ ೨೯ ॥

*ಶ್ರೀಶುಕ ಉವಾಚ*

ಇತ್ಯಾನಮ್ಯ ತಮಾಮಂತ್ರ್ಯ ವಿದುರೋ ಗಜಸಾಹ್ವಯಮ್ ।
ಸ್ವಾನಾಂ ದಿದೃಕ್ಷುಃ ಪ್ರಯಯೌ ಜ್ಞಾತೀನಾಂ ನಿರ್ವೃತಾಶಯಃ ॥ ೩೦ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಭಾಗವತೋತ್ತಮನಾದ ವಿದುರನು ಮೈತ್ರೇಯರಲ್ಲಿ ಹೀಗೆ ಕೃತಜ್ಞತಾಪೂರ್ಣವಾದ ಮಾತುಗಳನ್ನು ಅರಿಕೆಮಾಡಿಕೊಂಡು ಅವರಿಗೆ ನಮಸ್ಕರಿಸಿ, ಅವರಿಂದ ಅಪ್ಪಣೆ ಪಡೆದು ಪ್ರಶಾಂತಚಿತ್ತರಾಗಿ ಬಂಧುಜನರನ್ನು ನೋಡಲು ಹಸ್ತಿನಾಪುರಕ್ಕೆ ಹೊರಟುಹೋದನು. ॥ ೩೦॥ ನೃಪಶ್ರೇಷ್ಠನೇ! ಭಗವಂತನ ಶರಣಾಗತ ಪರಮಭಾಗವತರಾದ ರಾಜರ ಈ ಪವಿತ್ರ ಚರಿತ್ರವನ್ನು ಕೇಳುವವರು – ದೀರ್ಘಾಯುಷ್ಯ, ಧನ, ಕೀರ್ತಿ, ಕ್ಷೇಮ, ಸದ್ಗತಿ ಮತ್ತು ಐಶ್ವರ್ಯವನ್ನು ಪಡೆಯುವರು. ॥ ೩೧ ॥

ಏತದ್ಯಃ ಶೃಣುಯಾದ್ರಾಜನ್-
ರಾಜ್ಞಾಂ ಹರ್ಯರ್ಪಿತಾತ್ಮನಾಮ್ ।
ಆಯುರ್ಧನಂ ಯಶಃ ಸ್ವಸ್ತಿ
ಗತಿಮೈಶ್ವರ್ಯಮಾಪ್ನುಯಾತ್ ॥ ೩೧ ॥

*ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೩೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಚತುರ್ಥಸ್ಕಂಧೇ
ಪ್ರಚೇತಉಪಾಖ್ಯಾನಂ ನಾಮೈಕತ್ರಿಂಶೋಽಧ್ಯಾಯಃ ॥ ೩೧ ॥

ನಾಲ್ಕನೆಯ ಸ್ಕಂಧವು ಸಂಪೂರ್ಣವಾಯಿತು.

॥ ಓಂ ನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ಪಂಚಮಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಪ್ರಿಯವ್ರತ – ಚರಿತ್ರೆ

*ರಾಜೋವಾಚ*

**ಪ್ರಿಯವ್ರತೋ ಭಾಗವತಃ ಆತ್ಮಾರಾಮಃ ಕಥಂ ಮುನೇ ।**
**ಗೃಹೇಽರಮತ ಯನ್ಮೂಲಃ ಕರ್ಮಬಂಧಃ ಪರಾಭವಃ ॥ ೧ ॥**

**ನ ನೂನಂ ಮುಕ್ತಸಂಗಾನಾಂ ತಾದೃಶಾನಾಂ ದ್ವಿಜರ್ಷಭ ।**
**ಗೃಹೇಷ್ವಭಿನಿವೇಶೋಽಯಂ ಪುಂಸಾಂ ಭವಿತುಮರ್ಹತಿ ॥ ೨ ॥**

**ಮಹತಾಂ ಖಲು ವಿಪ್ರರ್ಷೇ ಉತ್ತಮಶ್ಲೋಕಪಾದಯೋಃ ।**
**ಛಾಯಾನಿರ್ವೃತಚಿತ್ತಾನಾಂ ನ ಕುಟುಂಬೇ ಸ್ಪೃಹಾಮತಿಃ ॥ ೩ ॥**

**ಸಂಶಯೋಽಯಂ ಮಹಾನ್ ಬ್ರಹ್ಮನ್ ದಾರಾಗಾರಸುತಾದಿಷು ।**
**ಸಕ್ತಸ್ಯ ಯತ್ಸಿದ್ಧಿರಭೂತ್ಕೃಷ್ಣೇ ಚ ಮತಿರಚ್ಯುತಾ ॥ ೪ ॥**

*ಶ್ರೀಶುಕ ಉವಾಚ*

**ಬಾಢಮುಕ್ತಂ ಭಗವತ ಉತ್ತಮಶ್ಲೋಕಸ್ಯ ಶ್ರೀಮಚ್ಚರಣಾರವಿಂದಮಕರಂದರಸ ಆವೇಶಿತಚೇತಸೋ ಭಾಗವತಪರಮಹಂಸದಯಿತಕಥಾಂ ಕಿಂಚಿದಂತರಾಯವಿಹತಾಂ ಸ್ವಾಂ ಶಿವತಮಾಂ ಪದವೀಂ ನ ಪ್ರಾಯೇಣ ಹಿನ್ವಂತಿ ॥ ೫ ॥ ಯರ್ಹಿ ವಾವ ಹ ರಾಜನ್ ಸ ರಾಜಪುತ್ರಃ ಪ್ರಿಯವ್ರತಃ**

**ಪರೀಕ್ಷಿದ್ರಾಜನು ಕೇಳಿದನು** – ಮುನಿವರ್ಯರೇ! ಪ್ರಿಯವ್ರತ ಮಹಾರಾಜನಾದರೋ ದೊಡ್ಡ ಭಗವದ್ಭಕ್ತನಾಗಿದ್ದನು; ಆತ್ಮಾರಾಮನಾಗಿದ್ದನು. ಅವನಿಗೆ ಗೃಹಸ್ಥಾಶ್ರಮದಲ್ಲಿ ಅಭಿರುಚಿ ಯು ಹೇಗೆ ಉಂಟಾಯಿತು? ಅದರಲ್ಲಿ ಸಿಕ್ಕಿಹಾಕಿಕೊಂಡ ಮನುಷ್ಯನಿಗೆ ತನ್ನ ಸ್ವರೂಪದ ವಿಸ್ಮೃತಿ ಉಂಟಾಗಿ ಅವನು ಕರ್ಮಗಳಲ್ಲಿ ಬಂಧಿತನಾಗುವನಲ್ಲ? ॥ ೧ ॥ ಬ್ರಹ್ಮರ್ಷಿಶ್ರೇಷ್ಠರೇ! ನಿಶ್ಚಯವಾಗಿಯೂ ಇಂತಹ ನಿಸಂಗ ಮಹಾಪುರುಷರು ಹೀಗೆ ಗೃಹಸ್ಥಾಶ್ರಮದಲ್ಲಿ ಆಸಕ್ತರಾಗುವುದು ಉಚಿತವಲ್ಲ ॥ ೨ ॥ ಯಾರ ಚಿತ್ತವು ಪುಣ್ಯಕೀರ್ತಿಯಾದ ಶ್ರೀಹರಿಯ ಚರಣಾರವಿಂದಗಳ ಶೀತಲ ಛಾಯೆಯ ಆಶ್ರಯಪಡೆದು ಪ್ರಶಾಂತವಾಗಿದೆಯೋ, ಆ ಮಹಾಪುರುಷರಿಗೆ ಕುಟುಂಬವೇ ಮುಂತಾದವುಗಳಲ್ಲಿ ಆಸಕ್ತಿ ಉಂಟಾಗಲಾರದು. ॥ ೩॥ ಬ್ರಾಹ್ಮಣೋತ್ತಮರೇ! ಮಹಾರಾಜಾ ಪ್ರಿಯವ್ರತನು ಪತ್ನೀ, ಗೃಹ, ಪುತ್ರಾದಿಗಳಲ್ಲಿ ಆಸಕ್ತನಾಗಿದ್ದರೂ ಹೇಗೆ ಸಿದ್ಧಿಯನ್ನು ಪಡೆದನು? ಆತನಿಗೆ ಶ್ರೀಕೃಷ್ಣಪರಮಾತ್ಮನಲ್ಲಿ ನಿಶ್ಚಲವಾದ ಭಕ್ತಿಯು ಹೇಗೆ ಉಂಟಾಯಿತು? ಇವೆಲ್ಲ ವಿಷಯದಲ್ಲಿ ನನಗೆ ಸಂದೇಹವುಂಟಾಗಿದೆ. ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಮಹಾರಾಜನೇ! ನೀನು ಹೇಳಿದುದು ಸರಿಯೇ ಆಗಿದೆ. ಯಾರ ಚಿತ್ತವು ಪುಣ್ಯಕೀರ್ತಿಯಾದ ಶ್ರೀಹರಿಯ ಪರಮಮಧುರವಾದ ಚರಣಕಮಲಗಳ ಮಕರಂದ ರಸವನ್ನು ಸವಿಯುವುದರಲ್ಲಿ ತತ್ಪರವಾಗಿದೆಯೋ – ಅವರು ಯಾವುದಾದರೂ ಅಡ್ಡಿ – ಆತಂಕಗಳಿಂದ ತಡೆಯುಂಟಾದರೂ ಕೂಡ ಭಗವದ್ಭಕ್ತ ಶಿರೋಮಣಿಗಳಾದ ಪರಮಹಂಸರಿಗೆ ಪ್ರಿಯನಾದ ಭಗವಾನ್ ಶ್ರೀವಾಸುದೇವನ ಕಥಾಶ್ರವಣವೆಂಬ ಪರಮ ಕಲ್ಯಾಣಮಯವಾದ ಮಾರ್ಗವನ್ನು ಸಾಮಾನ್ಯವಾಗಿ ಬಿಡಲಾರರು. ॥ ೫ ॥ ಎಲೈ ರಾಜನೇ! ಆ ರಾಜಕುಮಾರನಾದ ಪ್ರಿಯವ್ರತನು ಪರಮಭಾಗವತೋತ್ತಮನಾಗಿದ್ದನು. ಶ್ರೀನಾರದಮಹರ್ಷಿಗಳ ಅಡಿದಾವರೆಗಳ ಸೇವೆಮಾಡಿದ್ದರಿಂದ ಅವನಿಗೆ ಸಹಜವಾಗಿಯೇ ಪರಮಾರ್ಥತತ್ತ್ವದ ಬೋಧ ಉಂಟಾಗಿತ್ತು. ಅವನು ನಿರಂತರವಾಗಿ ಬ್ರಹ್ಮಾಭ್ಯಾಸದಲ್ಲಿ ಜೀವನವನ್ನು ಕಳೆಯುವ ನಿಯಮವುಳ್ಳ ಬ್ರಹ್ಮಸತ್ರವೆಂಬ ಅಧ್ಯಾತ್ಮದೀಕ್ಷೆಯನ್ನು ಇನ್ನೇನು ತೆಗೆದುಕೊಳ್ಳಬೇಕು ಎನ್ನುವಷ್ಟರಲ್ಲಿ – ಆತನ ತಂದೆ ಸ್ವಾಯಂಭುವ ಮನುವು ಆತನಲ್ಲಿ

ಪರಮಭಾಗವತೋ ನಾರದಸ್ಯ ಚರಣೋಪಸೇವಯಾಂಜಸಾವಗತಪರಮಾರ್ಥಸತತ್ತ್ವೋ ಬ್ರಹ್ಮಸತ್ರೇಣ ದೀಕ್ಷಿಷ್ಯಮಾಣೋಽವನಿತಲಪರಿಪಾಲನಾಯಾಮ್ನಾತಪ್ರವರಗುಣಗಣೈಕಾಂತಭಾಜನತಯಾ ಸ್ವಪಿತ್ರೋಪಾಮನ್ತ್ರಿತೋ ಭಗವತಿ ವಾಸುದೇವ ಏವಾವ್ಯವಧಾನಸಮಾಧಿಯೋಗೇನ ಸಮಾವೇಶಿತಸಕಲಕಾರಕಕ್ರಿಯಾಕಲಾಪೋ ನೈವಾಭ್ಯನಂದದ್ಯದ್ಯಪಿ ತದಪ್ರತ್ಯಾಮ್ನಾತವ್ಯಂ ತದಧಿಕರಣ ಆತ್ಮನೋಽನ್ಯಸ್ಮಾದಸತೋಽಪಿ ಪರಾಭವಮನ್ವೀಕ್ಷಮಾಣಃ ॥ ೬ ॥

ಭೂಮಂಡಲವನ್ನು ಪಾಲಿಸಲು ಬೇಕಾದ ಎಲ್ಲ ಶ್ರೇಷ್ಠಗುಣಗಳೂ ಇರುವುದನ್ನು ಗಮನಿಸಿ – 'ನೀನು ರಾಜನಾಗಿ ರಾಜ್ಯವನ್ನಾಳು' ಎಂದು ಅಪ್ಪಣೆಯನ್ನಿತ್ತನು. ಆದರೆ ಪ್ರಿಯವ್ರತನು ಆಗಲೇ ಅಖಂಡವಾದ ಸಮಾಧಿಯೋಗದ ಮೂಲಕ ತನ್ನ ಎಲ್ಲ ಇಂದ್ರಿಯಗಳನ್ನು ಮತ್ತು ಕ್ರಿಯೆಗಳನ್ನು ಭಗವಾನ್ ಶ್ರೀವಾಸುದೇವನ ಚರಣಗಳಲ್ಲಿ ಸಮರ್ಪಿಸಿ ಬಿಟ್ಟಿದ್ದನು. ಆದುದರಿಂದ ಆತನು ತಂದೆಯ ಆಜ್ಞೆಯನ್ನು ಉಲ್ಲಂಘಿಸುವುದು ಅನುಚಿತವಾಗಿದ್ದರೂ ರಾಜಪದವಿಯನ್ನು ಸ್ವೀಕರಿಸಲಿಲ್ಲ. 'ರಾಜ್ಯಾಧಿಕಾರವು ಬಂದೊಡನೆ ಪತ್ನೀ-ಪುತ್ರರೇ ಮುಂತಾದ ಅಸತ್‌ಪ್ರಪಂಚವು ಆತ್ಮಸ್ವರೂಪವನ್ನು ಮುಚ್ಚಿ ಬಿಡುವುದು ; ಆ ಚಿಂತೆಯಲ್ಲೇ ಪರಮಾರ್ಥತತ್ತ್ವವು ಮರೆತು ಹೋಗುವುದು' ಎಂದು ಭಾವಿಸಿ ಆ ಪದವಿಯನ್ನು ಸ್ವೀಕರಿಸಲಿಲ್ಲ. ॥ ೬ ॥

ಅಥ ಹ ಭಗವಾನಾದಿದೇವ ಏತಸ್ಯ ಗುಣವಿಸರ್ಗಸ್ಯ ಪರಿಬೃಂಹಣಾನುಧ್ಯಾನವ್ಯವಸಿತಸಕಲಜಗದಭಿಪ್ರಾಯ ಆತ್ಮಯೋನಿರಖಿಲನಿಗಮನಿಜಗಣಪರಿವೇಷ್ಟಿತಃ ಸ್ವಭವನಾದ್-ಅವತತಾರ ॥ ೭ ॥ ಸ ತತ್ರ ತತ್ರ ಗಗನತಲ ಉಡುಪತಿರಿವ ವಿಮಾನಾವಲಿಭಿರನುಪಥಮಮರಪರಿವೃಢೈರಭಿಪೂಜ್ಯಮಾನಃ ಪಥಿ ಪಥಿ ಚ ವರೂಥಶಃ ಸಿದ್ಧಗಂಧರ್ವಸಾಧ್ಯಚಾರಣಮುನಿಗಣೈರುಪಗೀಯಮಾನೋ ಗಂಧಮಾದನದ್ರೋಣೀಮವಭಾಸಯನ್ನುಪಸಸರ್ಪ ॥ ೮ ॥ ತತ್ರ ಹ ವಾ ಏನಂ ದೇವರ್ಷಿಃಹಂಸಯಾನೇನ ಪಿತರಂ ಭಗವಂತಂ ಹಿರಣ್ಯಗರ್ಭಮುಪಲಭಮಾನಃ ಸಹಸೈವೋತ್ಥಾಯಾರ್ಹಣೇನ ಸಹ ಪಿತಾಪುತ್ರಾಭ್ಯಾಮವಹಿತಾಂಜಲಿಃ ಉಪತಸ್ಥೇ ॥ ೯ ॥ ಭಗವಾನಪಿ ಭಾರತ ತದುಪನೀತಾರ್ಹಣಃ ಸೂಕ್ತವಾಕೇನಾತಿತರಾಮುದಿತಗುಣಗಣಾವತಾರಸುಜಯಃ ಪ್ರಿಯವ್ರತಮಾದಿಪುರುಷಸ್ತಂ ಸದಯಹಾಸಾವಲೋಕ ಇತಿ ಹೋವಾಚ ॥ ೧೦ ॥

ಆದಿದೇವ ಸ್ವಯಂಭೂ ಭಗವಾನ್‌ಬ್ರಹ್ಮದೇವರಿಗೆ ನಿರಂತರವಾಗಿ ಈ ಗುಣಮಯ ಪ್ರಪಂಚವನ್ನು ವೃದ್ಧಿಪಡಿಸುವ ವಿಚಾರವೇ ಇರುತ್ತದೆ. ಅವರು ಇಡೀ ಪ್ರಪಂಚದ ಜನರ ಅಭಿಪ್ರಾಯವನ್ನು ತಿಳಿಯುತ್ತಾ ಇರುತ್ತಾರೆ. ಪ್ರಿಯವ್ರತನ ಇಂತಹ ಸ್ಥಿತಿಯನ್ನು ನೋಡಿದಾಗ ಅವರು ಮೂರ್ತಿಮಂತ ನಾಲ್ಕು ವೇದಗಳನ್ನು ಮತ್ತು ಮರೀಚಿಯೇ ಮುಂತಾದ ಪಾರ್ಷದರನ್ನು ಜೊತೆಸೇರಿಸಿಕೊಂಡು ತನ್ನ ಲೋಕದಿಂದ ಕೆಳಗಿಳಿದರು. ॥ ೭ ॥ ಆಕಾಶದಲ್ಲಿ ಅಲ್ಲಲ್ಲಿ ವಿಮಾನಗಳನ್ನೇರಿದ್ದ ಇಂದ್ರಾದಿ ದೇವತೆಗಳು ಅವರನ್ನು ಪೂಜಿಸಿದರು. ಮಾರ್ಗದಲ್ಲಿ ಗುಂಪು-ಗುಂಪಾಗಿ ಬಂದಿದ್ದ ಸಿದ್ಧರೂ, ಗಂಧರ್ವರೂ, ಸಾಧ್ಯರೂ, ಚಾರಣರೂ, ಮುನಿಗಳೂ ಅವರನ್ನು ಸ್ತೋತ್ರಮಾಡಿದರು. ಹೀಗೆ ಹೆಜ್ಜೆ-ಹೆಜ್ಜೆಗೂ ಆದರ ಸನ್ಮಾನಗಳನ್ನು ಪಡೆಯುತ್ತಾ ಅವರು ಸಾಕ್ಷಾತ್ ತಾರಾನಾಥ ನಾದ ಚಂದ್ರನಂತೆ ಗಂಧಮಾದನದ ತಪ್ಪಲನ್ನು ಪ್ರಕಾಶಪಡಿಸುತ್ತಾ ಪ್ರಿಯವ್ರತನ ಬಳಿಗೆ ತಲುಪಿದರು. ॥ ೮ ॥ ಪ್ರಿಯವ್ರತನಿಗೆ ಆತ್ಮವಿದ್ಯೆಯನ್ನು ಉಪದೇಶ ಮಾಡಲು ಶ್ರೀನಾರದಮಹರ್ಷಿಗಳು ಅಲ್ಲಿಗೆ ದಯಮಾಡಿಸಿದ್ದರು. ಬ್ರಹ್ಮದೇವರು ಅಲ್ಲಿಗೆ ತಲುಪಿದಾಗ ಹಂಸವಾಹನವನ್ನು ಕಂಡು ತಂದೆಯಾದ ಬ್ರಹ್ಮದೇವರೇ ಬಂದಿದ್ದಾರೆ ಎಂದು ತಿಳಿದುಕೊಂಡು ನಾರದರು ಸ್ವಾಯಂಭುವಮನು ಮತ್ತು ಪ್ರಿಯವ್ರತರೊಡನೆ ಒಡನೆಯೇ ಎದ್ದುನಿಂತರು. ಎಲ್ಲರೂ ಅವರಿಗೆ ಕೈಜೋಡಿಸಿ ನಮಸ್ಕರಿಸಿದರು. ॥ ೯ ॥ ಪರೀಕ್ಷಿದ್ರಾಜನೇ ! ನಾರದರು ಅವರನ್ನು ಅನೇಕ ವಿಧದಿಂದ ಪೂಜೆಗೈದು, ಮಧುರ ವಚನಗಳಿಂದ ಅವರ ಗುಣಗಳನ್ನು, ಅವತಾರದ ಮಹಿಮೆಯನ್ನು ಅಗ್ಗಳಿಕೆಯನ್ನು ವೇದಸೂಕ್ತಗಳಿಂದ ಹೊಗಳುತ್ತಿರಲು – ಆದಿಪುರುಷ ಬ್ರಹ್ಮದೇವರು ಪ್ರಿಯವ್ರತನನ್ನು ವಾತ್ಸಲ್ಯದಿಂದ ನೋಡಿ ಮುಗುಳ್ನಗೆಯಿಂದ ಹೀಗೆ ನುಡಿದರು. ॥ ೧೦ ॥

ಬ್ರಹ್ಮದೇವರು ಹೇಳಿದರು – ಮಗು ಪ್ರಿಯವ್ರತನೇ ! ನಾನು ನಿನಗೆ ಸತ್ಯವಾದ ಸಿದ್ಧಾಂತದ ಮಾತನ್ನು ಹೇಳುವೆನು. ಲಕ್ಷ್ಯಕೊಟ್ಟು ಕೇಳು. ಅಪ್ರಮೇಯ ಶ್ರೀಹರಿಯ ಕುರಿತು ನೀನು ಯಾವ ವಿಧ ದಿಂದಲೂ ದೋಷದೃಷ್ಟಿಯನ್ನು ಇರಿಸಬಾರದು. ನೀನು ಮಾತ್ರ ವೇನು – ನಾನೂ, ಶ್ರೀಮಹಾದೇವನೂ, ನಿನ್ನ ತಂದೆ

*ಶ್ರೀ ಭಗವಾನುವಾಚ*

ನಿಬೋಧ ತಾತೇದಮೃತಂ ಬ್ರವೀಮಿ
ಮಾಸೂಯಿತುಂ ದೇವಮರ್ಹಸ್ಯಪ್ರಮೇಯಮ್ ।
ವಯಂ ಭವಸ್ತೇ ತತ ಏಷ ಮಹರ್ಷಿ-
ರ್ವಹಾಮ ಸರ್ವೇ ವಿವಶಾ ಯಸ್ಯ ದಿಷ್ಟಮ್ ॥ ೧೧ ॥

ನ ತಸ್ಯ ಕಶ್ಚಿತ್ತಪಸಾ ವಿದ್ಯಯಾ ವಾ
ನ ಯೋಗವೀರ್ಯೇಣ ಮನೀಷಯಾ ವಾ ।
ನೈವಾರ್ಥಧರ್ಮೈಃ ಪರತಃ ಸ್ವತೋ ವಾ
ಕೃತಂ ವಿಹಂತುಂ ತನುಭೃದ್ವಿಭೂಯಾತ್ ॥ ೧೨ ॥

ಭವಾಯ ನಾಶಾಯ ಚ ಕರ್ಮ ಕರ್ತುಂ
ಶೋಕಾಯ ಮೋಹಾಯ ಸದಾ ಭಯಾಯ ।
ಸುಖಾಯ ದುಃಖಾಯ ಚ ದೇಹಯೋಗ-
ಮವ್ಯಕ್ತದಿಷ್ಟಂ ಜನತಾಂಗ ಧತ್ತೇ ॥ ೧೩ ॥

ಯದ್ವಾಚಿ ತಂತ್ಯಾಂ ಗುಣಕರ್ಮದಾಮಭಿಃ
ಸುದುಸ್ತರೈರ್ವತ್ಸ ವಯಂ ಸುಯೋಜಿತಾಃ ।
ಸರ್ವೇ ವಹಾಮೋ ಬಲಿಮೀಶ್ವರಾಯ
ಪ್ರೋತಾ ನಸೀವ ದ್ವಿಪದೇ ಚತುಷ್ಪದಃ ॥ ೧೪ ॥

ಈಶಾಭಿಸೃಷ್ಟಂ ಹ್ಯವರುನ್ಧ್ಮಹೇಽಂಗ
ದುಃಖಂ ಸುಖಂ ವಾ ಗುಣಕರ್ಮಸಂಗಾತ್ ।
ಆಸ್ಥಾಯ ತತ್ತದ್ಯದಯುಂಕ್ತ ನಾಥ-
ಶ್ಚಕ್ಷುಷ್ಮತಾಂಧಾ ಇವ ನೀಯಮಾನಾಃ ॥ ೧೫ ॥

ಮುಕ್ತೋಽಪಿ ತಾವದ್ಬಿಭೃಯಾತ್ಸ್ವದೇಹ-
ಮಾರಬ್ಧಮಶ್ನನ್ನಭಿಮಾನಶೂನ್ಯಃ ।
ಯಥಾನುಭೂತಂ ಪ್ರತಿಯಾತನಿದ್ರಃ
ಕಿಂ ತ್ವನ್ಯದೇಹಾಯ ಗುಣಾನ್ನ ವೃಂಕ್ತೇ ॥ ೧೬ ॥

ಭಯಂ ಪ್ರಮತ್ತಸ್ಯ ವನೇಷ್ವಪಿ ಸ್ಯಾ-
ದ್ಯತಃ ಸ ಆಸ್ತೇ ಸಹಷಟ್ಸಪತ್ನಃ ।
ಜಿತೇಂದ್ರಿಯಸ್ಯಾತ್ಮರತೇರ್ಬುಧಸ್ಯ
ಗೃಹಾಶ್ರಮಃ ಕಿಂ ನು ಕರೋತ್ಯವದ್ಯಮ್ ॥ ೧೭ ॥

ಯಃ ಷಟ್ ಸಪತ್ನಾನ್ ವಿಜಿಗೀಷಮಾಣೋ
ಗೃಹೇಷು ನಿರ್ವಿಶ್ಯ ಯತೇತ ಪೂರ್ವಮ್ ।
ಅತ್ಯೇತಿ ದುರ್ಗಾಶ್ರಿತ ಊರ್ಜಿತಾರೀನ್
ಕ್ಷೀಣೇಷು ಕಾಮಂ ವಿಚರೇದ್ವಿಪಶ್ಚಿತ್ ॥ ೧೮ ॥

ಸ್ವಾಯಂಭುವಮನು ಮತ್ತು ನಿನ್ನ ಗುರುಗಳಾದ ಈ ನಾರದಮಹರ್ಷಿಗಳೂ ಕೂಡ ಪರವಶರಾಗಿ ಅವನ ಆಜ್ಞೆಯನ್ನೇ ಪಾಲಿಸುತ್ತಿದ್ದಾರೆ. ॥ ೧೧ ॥ ಆ ಭಗವಂತನ ವಿಧಾನವನ್ನು ದೇಹಧಾರಿಯಾದ ಯಾವನೂ ಕೂಡ ತಪಸ್ಸಿನಿಂದಾಗಲೀ, ವಿದ್ಯೆಯಿಂದಾಗಲೀ, ಯೋಗಬಲದಿಂದಾಗಲೀ, ಬುದ್ಧಿಬಲದಿಂದಾಗಲೀ, ಅರ್ಥದಿಂದಾಗಲೀ ಅಥವಾ ಧರ್ಮಶಕ್ತಿಯಿಂದಾಗಲೀ, ಸ್ವತಃ ತನ್ನಿಂದಾಗಲೀ, ಬೇರೆಯವರ ಸಹಾಯದಿಂದಾಗಲೀ ಮೀರುವುದಕ್ಕೆ ಆಗುವುದಿಲ್ಲ. ॥ ೧೨ ॥ ಪ್ರಿಯವ್ರತ! ಆ ಅವ್ಯಕ್ತ ಈಶ್ವರನು ದಯಪಾಲಿಸಿದ ಶರೀರವನ್ನು ಧರಿಸಿಯೇ ಎಲ್ಲ ಜೀವಿಗಳು ಸದಾಕಾಲ ಹುಟ್ಟು, ಸಾವು, ಶೋಕ, ಮೋಹ, ಭಯ, ಸುಖ-ದುಃಖಗಳನ್ನು ಅನುಭವಿಸುತ್ತಾರೆ. ಈ ಶರೀರದ ಮೂಲಕವಾಗಿಯೇ ಕರ್ಮಗಳನ್ನು ಮಾಡುತ್ತಿರುತ್ತಾರೆ ಮತ್ತೂ ಮೋಕ್ಷವನ್ನೂ ಸಾಧಿಸುತ್ತಾರೆ. ॥ ೧೩ ॥ ವತ್ಸ! ಮೂಗುದಾರ ಹಾಕಲ್ಪಟ್ಟ ಪಶುಗಳು ಮನುಷ್ಯರ ಭಾರವನ್ನು ಹೊರುವಂತೆಯೇ ನಾವೆಲ್ಲರೂ ಆತನ ವಾಣಿಯಾದ ವೇದವೆಂಬ ಹಗ್ಗದಲ್ಲಿರುವ ತ್ರಿಗುಣಗಳು, ಅವುಗಳಿಗೆ ತಕ್ಕ ಕರ್ಮಗಳು, ಬ್ರಾಹ್ಮಣಾದಿ ವಾಕ್ಯಗಳು ಎಂಬ ಮುಪ್ಪುರಿಯಿಂದ ಬಲವಾಗಿ ಕಟ್ಟಲ್ಪಟ್ಟು ಆತನ ಇಚ್ಛೆಗನುಗುಣನಾಗಿಯೇ ಕರ್ಮಗಳಲ್ಲಿ ತೊಡಗಿ ಅವುಗಳ ಮೂಲಕ ಅವನ ಪೂಜೆಯನ್ನು ಮಾಡುತ್ತಾ ಇದ್ದೇವೆ. ॥ ೧೪ ॥ ಮಗು! ನಮ್ಮ ಗುಣ ಮತ್ತು ಕರ್ಮಗಳಿಗೆ ಅನುಸಾರ ಪ್ರಭುವು ನಮ್ಮನ್ನು ಯಾವ ಯೋನಿಯಲ್ಲಿ ಹಾಕಿರುವನೋ, ಅದನ್ನೇ ಸ್ವೀಕರಿಸಿ, ಅವನು ಮಾಡಿದ ವ್ಯವಸ್ಥೆಗನುಸಾರವಾಗಿ ನಾವು ಸುಖ ಅಥವಾ ದುಃಖಗಳನ್ನು ಅನುಭವಿಸುತ್ತಿದ್ದೇವೆ. ಕುರುಡನು ಕಣ್ಣುಳ್ಳವನಿಂದ ನಡೆಸಲ್ಪಡುವಂತೆ ನಾವುಗಳೂ ಕೂಡ ಅವನ ಇಚ್ಛೆಯನ್ನೇ ಅನುಸರಿಸಬೇಕಾಗುತ್ತದೆ. ॥ ೧೫ ॥ ಜೀವನ್ಮುಕ್ತರೂ ಕೂಡ ಶರೀರ ಧರಿಸಿಕೊಂಡು ಪ್ರಾರಬ್ಧ ಕರ್ಮಗಳನ್ನು ಭೋಗಿಸುತ್ತಾರೆ. ಅವರ ಶರೀರದಿಂದ ಕರ್ಮಗಳು ಜರುಗುತ್ತಿದ್ದರೂ ಕೂಡ ಕರ್ಮಗಳ ಬಂಧನದಲ್ಲಿ ಬೀಳುವುದಿಲ್ಲ. ಹೇಗೆ ಕನಸಿನಲ್ಲಿ ಅನುಭವಿಸಿದ ವಸ್ತುಗಳಿಗೆ ಜಗತ್ತಿನಲ್ಲಿ ಮಹತ್ವವಿರುವುದಿಲ್ಲವೋ ಹಾಗೆಯೇ ಜ್ಞಾನವಾದ ನಂತರ ಅವರಿಗೆ ಎಲ್ಲವೂ ಮಿಥ್ಯೆಯೇ ॥ ೧೬ ॥ ಇಂದ್ರಿಯಗಳಿಗೆ ವಶೀಭೂತನಾಗಿ ವನ-ವನಗಳಲ್ಲಿ ಸಂಚರಿಸುತ್ತಿದ್ದರೂ ಅವನಿಗೆ ಜನ್ಮ-ಮರಣದ ಭಯ ಇದ್ದೇ ಇರುತ್ತದೆ. ಏಕೆಂದರೆ, ವಶವಲ್ಲದ ಮನಸ್ಸು ಮತ್ತು ಇಂದ್ರಿಯಗಳೆಂಬ ಆರು ಶತ್ರುಗಳು ಎಂದೂ ಅವನ ಬೆನ್ನುಬಿಡುವುದಿಲ್ಲ. ಬುದ್ಧಿವಂತನಾದವನು ಇಂದ್ರಿಯಗಳನ್ನು ಜಯಿಸಿ, ತನ್ನ ಆತ್ಮದಲ್ಲೇ ರಮಮಾಣನಾಗಿರುತ್ತಾನೆ. ಅಂತಹ ಜ್ಞಾನಿಗೆ ಗೃಹಸ್ಥಾಶ್ರಮವು ಯಾವ ಕೆಡುಕನ್ನೂ ಮಾಡುವುದಿಲ್ಲ. ॥ ೧೭ ॥ ಆ ಆರು ಶತ್ರುಗಳನ್ನು ಜಯಿಸಲು ಬಯಸುವವನು – ದುರ್ಗವನ್ನು ಆಶ್ರಯಿಸಿ ಶತ್ರುಗಳನ್ನು ಜಯಿಸುವ ರಾಜನಂತೆ ಮೊದಲು ಗೃಹಸ್ಥಾಶ್ರಮದಲ್ಲಿ ನೆಲೆಸಿ ಅದರ ರಕ್ಷಣೆಯಲ್ಲಿದ್ದು ಆ ಒಳ ಶತ್ರುಗಳನ್ನು ಗೆಲ್ಲಬೇಕು. ಆ ಶತ್ರುಗಳು ಬಲಗುಂದಿದ ಬಳಿಕ ಜ್ಞಾನಿಯು ತನ್ನ ಇಷ್ಟಬಂದಂತೆ ಸಂಚರಿಸಬಹುದು. ॥ ೧೮ ॥

ತ್ವಂ ತ್ವಬ್ಜನಾಭಾಂಘ್ರಿಸರೋಜಕೋಶ-
ದುರ್ಗಾಶ್ರಿತೋ ನಿರ್ಜಿತಷಟ್ಸಪತ್ನಃ ।
ಭುಂಕ್ಷ್ವೇಹ ಭೋಗಾನ್ ಪುರುಷಾತಿದಿಷ್ಟಾನ್
ವಿಮುಕ್ತಸಂಗಃ ಪ್ರಕೃತಿಂ ಭಜಸ್ವ ॥ ೧೯ ॥

ನೀನು ಸ್ವಾಮಿಯಾದ ಪದ್ಮನಾಭನ ಅಡಿದಾವರೆಗಳೆಂಬ ದುರ್ಗವನ್ನು ಆಶ್ರಯಿಸಿ ಈಗಾಗಲೇ ಆ ಶತ್ರುಗಳನ್ನು ಜಯಿಸಿ ಬಿಟ್ಟಿರುವೆ. ಹೀಗಿದ್ದರೂ ಆ ಪುರಾಣಪುರುಷನು ದಯಪಾಲಿಸಿರುವ ಭೋಗಗಳನ್ನು ಅನುಭವಿಸು. ಅನಂತರ ನಿಃಸಂಗನಾಗಿ ನಿನ್ನ ಸ್ವರೂಪದಲ್ಲಿ ನೆಲೆಗೊಳ್ಳುವೆಯಂತೆ. ॥ ೧೯ ॥

*ಶ್ರೀಶುಕ ಉವಾಚ*

ಇತಿ ಸಮಭಿಹಿತೋ ಮಹಾಭಾಗವತೋ ಭಗವತಸ್ತ್ರಿಭುವನಗುರೋರನುಶಾಸನಮಾತ್ಮನೋ ಲಘುತಯಾವನತಶಿರೋಧರೋ ಬಾಢಮಿತಿ ಸಬಹುಮಾನಮುವಾಹ ॥ ೨೦॥ ಭಗವಾನಪಿ ಮನುನಾ ಯಥಾವದುಪಕಲ್ಪಿತಾಪಚಿತಿಃ ಪ್ರಿಯವ್ರತನಾರದಯೋರವಿಷಮಮಭಿಸಮೀಕ್ಷಮಾಣಯೋರಾತ್ಮಸಮವಸ್ಥಾನಮವಾಙ್ಮನಸಂ ಕ್ಷಯಮವ್ಯವಹೃತಂ ಪ್ರವರ್ತಯನ್ನಗಮತ್ ॥ ೨೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜನೇ! ತ್ರಿಲೋಕಗಳ ಗುರುಗಳಾದ ಬ್ರಹ್ಮದೇವರು ಹೀಗೆ ಹೇಳಲು ಪರಮ ಭಾಗವತ ಪ್ರಿಯವ್ರತನು ಆ ದೇವದೇವನ ಮುಂದೆ ತಾನು ಅತಿ ಚಿಕ್ಕವನು ಎಂದು ಅರಿತು ವಿನಯದಿಂದ ತಲೆಬಾಗಿಸಿ 'ಹಾಗೆಯೇ ಆಗಲಿ' ಎಂದು ಅತ್ಯಂತ ಗೌರವದಿಂದ ಅವರ ಆಜ್ಞೆಯನ್ನು ಶಿರಸಾವಹಿಸಿದನು. ॥ ೨೦ ॥ ಆಗ ಸ್ವಾಯಂಭುವ ಮನುವು ಪ್ರಸನ್ನನಾಗಿ ಭಗವಾನ್ ಬ್ರಹ್ಮದೇವರನ್ನು ಯಥಾವಿಧಿಯಾಗಿ ಪೂಜಿಸಿದನು. ಇದಾದ ಬಳಿಕ ಮನಸ್ಸು ಮತ್ತು ವಾಣಿಗೂ ವಿಷಯನಲ್ಲದ, ತನಗೆ ಆಶ್ರಯನಾದ, ಸರ್ವವ್ಯವಹಾರ ಅತೀತನಾದ ಪರಬ್ರಹ್ಮನನ್ನು ಚಿಂತಿಸುತ್ತಾ ಅವರು ತನ್ನ ಲೋಕಕ್ಕೆ ಹೊರಟು ಹೋದರು. ಆಗ ಪ್ರಿಯವ್ರತ ಮತ್ತು ನಾರದರು ಮುಗ್ಧರಾಗಿ ಅವರ ಕಡೆಗೆ ನೋಡುತ್ತಲೇ ಇದ್ದರು. ॥ ೨೧ ॥

ಮನುರಪಿ ಪರೇಣೈವಂ ಪ್ರತಿಸಂಧಿತಮನೋರಥಃ ಸುರರ್ಷಿವರಾನುಮತೇನಾತ್ಮಜಮಖಿಲಧರಾಮಂಡಲಸ್ಥಿತಿಗುಪ್ತಯ ಆಸ್ಥಾಪ್ಯ ಸ್ವಯಮತಿವಿಷಮವಿಷಯವಿಷಜಲಾಶಯಾಶಾಯಾ ಉಪರರಾಮ ॥ ೨೨ ॥ ಇತಿ ಹ ವಾವ ಸ ಜಗತೀಪತಿರೀಶ್ವರೇಚ್ಛಯಾಧಿನಿವೇಶಿತ ಕರ್ಮಾಧಿಕಾರೋಽಖಿಲಜಗದ್ಬಂಧಧ್ವಂಸನಪರಾನುಭಾವಸ್ಯ ಭಗವತ ಆದಿಪುರುಷಸ್ಯಾಂಘ್ರಿಯುಗಲಾನವರತಧ್ಯಾನಾನುಭಾವೇನಪರಿರಂಧಿತಕಷಾಯಾಶಯೋಽವದಾತೋಽಪಿ ಮಾನವರ್ಧನೋ ಮಹತಾಂ ಮಹೀತಲಮನುಶಶಾಸ ॥ ೨೩ ॥ ಅಥ ಚ ದುಹಿತರಂ ಪ್ರಜಾಪತೇರ್ವಿಶ್ವಕರ್ಮಣ ಉಪಯೇಮೇ ಬರ್ಹಿಷ್ಮತೀಂ ನಾಮ ತಸ್ಯಾಮು ಹ ವಾವ ಆತ್ಮಜಾನಾತ್ಮಸಮಾನಶೀಲಗುಣಕರ್ಮರೂಪವೀರ್ಯೋದಾರಾಂದಶ ಭಾವಯಾಂಬಭೂವ ಕನ್ಯಾಂ ಚ ಯವೀಯಸೀಮೂರ್ಜಸ್ವತೀಂ ನಾಮ ॥ ೨೪ ॥ ಆಗ್ನೀಧ್ರೇಧ್ಮಜಿಹ್ವಯಜ್ಞಬಾಹುಮಹಾವೀರಹಿರಣ್ಯರೇತೋಘೃತಪೃಷ್ಠಸವನಮೇಧಾತಿಥಿವೀತಿಹೋತ್ರಕವಯ ಇತಿ ಸರ್ವ ಏವಾಗ್ನಿನಾಮಾನಃ ॥ ೨೫ ॥ ಏತೇಷಾಂ ಕವಿರ್ಮಹಾವೀರಃ ಸವನ ಇತಿ ತ್ರಯ ಆಸನ್ನೂರ್ಧ್ವರೇತಸಸ್ತ ಆತ್ಮವಿದ್ಯಾಯಾಮ್ ಅರ್ಭಭಾವಾದಾರಭ್ಯ ಕೃತಪರಿಚಯಾಃ ಪಾರಮಹಂಸ್ಯಮೇವಾಶ್ರಮಮಭಜನ್ ॥ ೨೬ ॥ ತಸ್ಮಿನ್ನು

ಹೀಗೆ ಬ್ರಹ್ಮದೇವರ ದಯೆಯಿಂದ ತಮ್ಮ ಮನೋರಥವು ಈಡೇರಲು ಸ್ವಾಯಂಭುವಮನುವು ಶ್ರೀನಾರದರ ಅಪ್ಪಣೆಯಂತೆ ಪ್ರಿಯವ್ರತನಿಗೆ ಸಮಸ್ತ ಭೂಮಂಡಲದ ಆಧಿಪತ್ಯವನ್ನು ವಹಿಸಿಕೊಟ್ಟು, ತಾನು ಇಂದ್ರಿಯವಿಷಯಗಳೆಂಬ ವಿಷಜಲದಿಂದ ತುಂಬಿರುವ ಗೃಹಸ್ಥಾಶ್ರಮರೂಪವಾದ ದುಸ್ತರವಾದ ಭವಾಬ್ಧಿಯ ಆಸೆಯನ್ನು ಬಿಟ್ಟು ನಿವೃತ್ತನಾದನು. ॥ ೨೨ ॥ ಈಗ ಆ ಪ್ರಿಯವ್ರತ ಭೂಪತಿಯು ಭಗವಂತನ ಇಚ್ಛೆಯಂತೆ ರಾಜ್ಯವನ್ನಾಳುವ ಕಾರ್ಯದಲ್ಲಿ ನಿಯುಕ್ತನಾದನು. ಸಮಸ್ತ ಜಗತ್ತನ್ನು ಬಂಧನದಿಂದ ಮುಕ್ತಗೊಳಿಸಲು ಪರಮಸಮರ್ಥನಾದ ಆದಿಪುರುಷನಾದ ಶ್ರೀಭಗವಂತನ ಅಡಿದಾವರೆಗಳನ್ನು ನಿರಂತರವಾಗಿ ಧ್ಯಾನಮಾಡುತ್ತಿದ್ದುದರಿಂದ ರಾಗಾದಿ ಕಲ್ಮಶಗಳೆಲ್ಲವೂ ನಾಶವಾಗಿ ಹೋಗಿ ಆತನ ಹೃದಯವು ಅತ್ಯಂತ ಶುದ್ಧವಾಗಿ ಹೋಗಿತ್ತು. ಆದರೂ ಅವನು ಹಿರಿಯರ ಮಾತನ್ನು ನಡೆಸಿಕೊಡುವುದಕ್ಕಾಗಿ ಭೂಮಿಯನ್ನು ಆಳತೊಡಗಿದನು. ॥ ೨೩ ॥ ಅನಂತರ ಅವನು ಪ್ರಜಾಪತಿ ವಿಶ್ವಕರ್ಮನ ಮಗಳಾದ ಬರ್ಹಿಷ್ಮತಿಯನ್ನು ವಿವಾಹವಾಗಿ ಅವಳಲ್ಲಿ ಹತ್ತುಮಂದಿ ಪುತ್ರರನ್ನು ಪಡೆದನು. ಅವರೆಲ್ಲರೂ ಶೀಲ, ಗುಣ, ಕರ್ಮನಿಷ್ಠೆ ಮತ್ತು ಪರಾಕ್ರಮಗಳಲ್ಲಿ ತಂದೆಗೆ ಸಮಾನರಾಗಿದ್ದರು. ಆ ಪುತ್ರರ ನಂತರ ಅವರಿಗೆ ತಂಗಿಯಾಗಿ 'ಊರ್ಜಸ್ವತಿ' ಎಂಬ ಕನ್ಯೆಯನ್ನು ಪಡೆದುಕೊಂಡನು. ॥ ೨೪ ॥ ಆಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಮಹಾವೀರ, ಹಿರಣ್ಯರೇತಸ, ಘೃತಪೃಷ್ಠ, ಸವನ ಮೇಧಾತಿಥಿ, ವೀತಿಹೋತ್ರ ಮತ್ತು ಕವಿ ಎಂಬುವರೇ ಪ್ರಿಯವ್ರತನ ಅಗ್ನಿನಾಮಕ ಹತ್ತುಮಂದಿ ಪುತ್ರರು. ॥ ೨೫ ॥ ಇವರಲ್ಲಿ ಕವಿ, ಮಹಾವೀರ, ಸವನ – ಎಂಬ ಮೂವರು ನೈಷ್ಠಿಕ ಬ್ರಹ್ಮಚಾರಿಗಳಾದರು. ಇವರು ಬಾಲ್ಯದಿಂದಲೇ ಆತ್ಮವಿದ್ಯೆಯನ್ನು ಅಭ್ಯಾಸ ಮಾಡುತ್ತಾ ಕೊನೆಗೆ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದರು. ॥ ೨೬ ॥

ಹ ವಾ ಉಪಶಮಶೀಲಾಃ ಪರಮರ್ಷಯಃ ಸಕಲಜೀವನಿಕಾಯಾವಾಸಸ್ಯ ಭಗವತೋ ವಾಸುದೇವಸ್ಯ ಭೀತಾನಾಂ ಶರಣಭೂತಸ್ಯ ಶ್ರೀಮಚ್ಚರಣಾರವಿಂದಾವಿರತಸ್ಮರಣಾವಿಗಲಿತಪರಮಭಕ್ತಿಯೋಗಾನುಭಾವೇನ ಪರಿಭಾವಿತಾಂತರ್ಹೃದಯಾಧಿಗತೇ ಭಗವತಿ ಸರ್ವೇಷಾಂ ಭೂತಾನಾಮಾತ್ಮಭೂತೇ ಪ್ರತ್ಯಗಾತ್ಮನ್ಯೇವಾತ್ಮನಸ್ತಾದಾತ್ಮ್ಯಮವಿಶೇಷೇಣ ಸಮೀಯುಃ ॥ ೨೭ ॥ ಅನ್ಯಸ್ಯಾಮಪಿ ಜಾಯಾಯಾಂ ತ್ರಯಃ ಪುತ್ರಾ ಆಸನ್ನುತ್ತಮಸ್ತಾಮಸೋ ರೈವತ ಇತಿ ಮನ್ವಂತರಾಧಿಪತಯಃ ॥ ೨೮ ॥

ಏವಮುಪಶಮಾಯನೇಷು ಸ್ವತನಯೇಷ್ವಥ ಜಗತೀಪತಿರ್ಜಗತೀಮರ್ಬುದಾನ್ಯೇಕಾದಶ ಪರಿವತ್ಸರಾಣಾಮವ್ಯಾಹತಾಖಿಲಪುರುಷಕಾರಸಾರಸಂಭೃತದೋರ್ದಂಡಯುಗಲಾಪೀಡಿತಮೌರ್ವೀಗುಣಸ್ತನಿತವಿರಮಿತಧರ್ಮಪ್ರತಿಪಕ್ಷೋ ಬರ್ಹಿಷ್ಮತ್ಯಾಶ್ಚಾನುದಿನಮೇಧಮಾನಪ್ರಮೋದಪ್ರಸರಣಯೌಷಿಣ್ಯವ್ರೀಡಾಪ್ರಮುಷಿತಹಾಸಾವಲೋಕರುಚಿರಕ್ಷ್ವೇಲ್ಯಾದಿಭಿಃ ಪರಾಭೂಯಮಾನವಿವೇಕ ಇವಾನವಬುಧ್ಯಮಾನ ಇವ ಮಹಾಮನಾ ಬುಭುಜೇ ॥ ೨೯ ॥

ಯಾವದವಭಾಸಯತಿ ಸುರಗಿರಿಮನುಪರಿಕ್ರಾಮನ್ ಭಗವಾನಾದಿತ್ಯೋ ವಸುಧಾತಲಮರ್ಧೇನೈವ ಪ್ರತಪತ್ಯರ್ಧೇನಾವಚ್ಛಾದಯತಿ ತದಾ ಹಿ ಭಗವದುಪಾಸನೋಪಚಿತಾತಿಪುರುಷಪ್ರಭಾವಸ್ತದನಭಿನಂದನ್ ಸಮಜವೇನ ರಥೇನ ಜ್ಯೋತಿರ್ಮಯೇನ ರಜನೀಮಪಿ ದಿನಂ ಕರಿಷ್ಯಾಮೀತಿ ಸಪ್ತಕೃತ್ವಸ್ತರಣಿಮನುಪರ್ಯಕ್ರಾಮದ್ದ್ವಿತೀಯ ಇವ ಪತಂಗಃ ॥ ೩೦ ॥ ಯೇ ವಾ ಉ ಹ ತದ್ರಥಚರಣನೇಮಿಕೃತಪರಿಖಾತಾಸ್ತೇ ಸಪ್ತ ಸಿಂಧವ ಆಸನ್ಯತ ಏವ ಕೃತಾಃ ಸಪ್ತ ಭುವೋ ದ್ವೀಪಾಃ ॥ ೩೧ ॥ ಜಂಬೂಪ್ಲಕ್ಷಶಾಲ್ಮಲಿ-

ನಿವೃತ್ತಿ ಧರ್ಮನಿಷ್ಠರಾದ ಆ ಮಹರ್ಷಿಗಳು ಸಂನ್ಯಾಸಾಶ್ರಮದಲ್ಲೇ ಇದ್ದುಕೊಂಡು ಸಮಸ್ತ ಜೀವರಿಗೆ ಅಧಿಷ್ಠಾನ ಮತ್ತು ಭವ ಬಂಧನದಿಂದ ಹೆದರಿದ ಜನರಿಗೆ ಆಸರೆನೀಡುವ ಭಗವಾನ್ ಶ್ರೀವಾಸುದೇವನ ಪರಮ ಸುಂದರ ಚರಣಾರವಿಂದಗಳನ್ನು ನಿರಂತರವಾಗಿ ಧ್ಯಾನಮಾಡುತ್ತಿದ್ದರು. ಅದರಿಂದ ಪ್ರಾಪ್ತವಾದ ಶ್ರೇಷ್ಠವಾದ ಅಖಂಡಭಕ್ತಿಯೋಗದಿಂದ ಅವರ ಅಂತಃಕರಣವು ಪೂರ್ಣವಾಗಿ ಶುದ್ಧವಾಯಿತು. ಅದರಲ್ಲಿ ಶ್ರೀಭಗವಂತನು ಆವಿರ್ಭವಿಸಿದನು. ಆಗ ದೇಹವೇ ಮುಂತಾದ ಉಪಾಧಿಗಳು ತೊಲಗಿಹೋಯಿತು. ಅವರು ಎಲ್ಲ ಜೀವಿಗಳಿಗೂ ಆತ್ಮಭೂತನಾದ ಶ್ರೀಪರಮಾತ್ಮನಲ್ಲಿ ತಾದಾತ್ಮ್ಯವನ್ನು ಪಡೆದುಕೊಂಡರು. ॥ ೨೭ ॥ ಪ್ರಿಯವ್ರತನ ಮತ್ತೊಬ್ಬ ಮಡದಿಯಲ್ಲಿ ಉತ್ತಮ, ತಾಮಸ, ರೈವತ ಎಂಬ ಮೂವರು ಪುತ್ರರು ಜನಿಸಿದರು. ಅವರು ತಮ್ಮ ಹೆಸರಿನ ಮನ್ವಂತರಗಳಿಗೆ ಅಧಿಪತಿಗಳಾದರು. ॥ ೨೮ ॥

ಹೀಗೆ ಕವಿಯೇ ಮುಂತಾದ ಮೂವರು ಪುತ್ರರು ನಿವೃತ್ತಿ ಪರಾಯಣರಾದ ಬಳಿಕ ಪ್ರಿಯವ್ರತ ಮಹಾರಾಜನು ಹನ್ನೊಂದು ಅರ್ಬುದವರ್ಷಗಳವರೆಗೆ ರಾಜ್ಯಶಾಸನವನ್ನು ಮಾಡಿದನು. ಅಖಂಡಪುರುಷಾರ್ಥಮಯವೂ, ಪರಾಕ್ರಮನಿಧಿಯೂ ಆದ ಅವನು ತನ್ನ ಭುಜಗಳಿಂದ ಬಿಲ್ಲಿನ ನಾಣನ್ನೆಳೆದು ಟಂಕಾರ ಮಾಡಿದೊಡನೆಯೇ ಧರ್ಮದ್ರೋಹಿಗಳು ಗಡ-ಗಡನೆ ನಡುಗಿ ಎಲ್ಲಿಯೋ ಅವಿತುಕೊಂಡು ಬಿಡುತ್ತಿದ್ದರು. ಪ್ರಾಣವಲ್ಲಭೆಯಾದ ಬರ್ಹಿಷ್ಮತಿಯ ಪ್ರತಿದಿನವು ಹೆಚ್ಚುತ್ತಿರುವ ಆಮೋದ-ಪ್ರಮೋದ, ಇದಿರ್ಗೊಳ್ಳುವಿಕೆ ಮುಂತಾದ ಕ್ರೀಡೆಗಳಿಂದಾಗಿ ಹಾಗೂ ಸ್ತ್ರೀಸಹಜವಾದ ಹಾವ-ಭಾವಗಳನ್ನು ತೋರುವುದು, ಲಜ್ಜೆಯಿಂದ ಸಂಕೋಚಗೊಂಡು ಕಿರುನಗೆಯಿಂದ ಕೂಡಿದ ದೃಷ್ಟಿಯನ್ನು ಬೀರುವುದು, ಮನಸ್ಸಿಗೆ ರುಚಿಸುವ ವಿನೋದಗಳನ್ನು ಮಾಡುವುದು – ಇವೇ ಮುಂತಾದವುಗಳಿಂದ ಆಕೆಗೆ ವಶನಾಗಿ ವಿವೇಕಹೀನನಾದವನಂತೆ ಆತ್ಮಸ್ವರೂಪವನ್ನು ಮರೆತವನಂತೆ ಭೋಗಗಳನ್ನು ಅನುಭವಿಸುತ್ತಿದ್ದರೂ ವಾಸ್ತವವಾಗಿ ಆತನು ಅದರಲ್ಲಿ ಆಸಕ್ತನಾಗಿರಲಿಲ್ಲ. ॥ ೨೯ ॥

ಒಮ್ಮೆ ಅವನು – ಸೂರ್ಯನು ಸುಮೇರು ಪರ್ವತವನ್ನು ಪ್ರದಕ್ಷಿಣೆ ಮಾಡುತ್ತಾ ಲೋಕಾಲೋಕದವರೆಗೆ ಭೂಮಿಯ ಒಂದು ಭಾಗವನ್ನು ನೋಡಿದಾಗ ಅದರಲ್ಲಿ ಅರ್ಧಭಾಗಕ್ಕೆ ಮಾತ್ರ ಪ್ರಕಾಶ ಬೀಳುತ್ತಿದ್ದು ಉಳಿದ ಅರ್ಧಭಾಗದಲ್ಲಿ ಕತ್ತಲೆಯು ಕವಿಯುತ್ತಿರುವುದನ್ನು ನೋಡಿ ಅವನಿಗೆ ಸರಿಬೀಳಲಿಲ್ಲ. 'ನಾನು ರಾತ್ರಿಯನ್ನು ಹಗಲನ್ನಾಗಿ ಮಾಡುವೆನು' ಎಂದು ಸಂಕಲ್ಪಿಸಿ, ಒಂದು ಜ್ಯೋತಿರ್ಮಯ ರಥವನ್ನು ಏರಿ ಇನ್ನೊಬ್ಬ ಸೂರ್ಯನಂತೆ ಆತನ ಹಿಂದೆ-ಹಿಂದೆಯೇ ಹೋಗುತ್ತಾ ಭೂಮಿಯನ್ನು ಏಳು ಬಾರಿ ಪ್ರದಕ್ಷಿಣೆ ಮಾಡಿದನು. ಭಗವಂತನ ಉಪಾಸನೆ ಮಾಡಿದ್ದರಿಂದ ಅವನಿಗೆ ಇಂತಹ ಅಲೌಕಿಕ ಪ್ರಭಾವವು ಹೆಚ್ಚಾಗಿ ಉಂಟಾಗಿತ್ತು. ॥ ೩೦ ॥ ಆ ಸಮಯದಲ್ಲಿ ಅವನ ರಥದ ಚಕ್ರಗಳು ಮಾಡಿದ ಗೆರೆಗಳ ಗುರುತುಗಳೇ ಏಳು ಸಮುದ್ರಗಳಾದವು. ಅವುಗಳಿಂದ ಪೃಥ್ವಿಯಲ್ಲಿ ಏಳು ದ್ವೀಪಗಳು ಉಂಟಾದವು. ॥ ೩೧ ॥

ಕುಶಕ್ರೌಂಚಶಾಕಪುಷ್ಕರಸಂಜ್ಞಾಸ್ತೇಷಾಂ ಪರಿಮಾಣಂ ಪೂರ್ವಸ್ಮಾತ್ಪೂರ್ವಸ್ಮಾದುತ್ತರ ಉತ್ತರೋ ಯಥಾಸಂಖ್ಯಂ ದ್ವಿಗುಣಮಾನೇನ ಬಹಿಃ ಸಮಂತತ ಉಪಕ್ಲೃಪ್ತಾಃ ॥ ೩೨ ॥ ಕ್ಷಾರೋದೇಕ್ಷುರಸೋದಸುರೋದಘೃತೋದಕ್ಷೀರೋ-ದದಧಿಮಂಡೋದಶುದ್ಧೋದಾಃ ಸಪ್ತ ಜಲಧಯಃ ಸಪ್ತ ದ್ವೀಪಪರಿಖಾ ಇವಾಭ್ಯಂತರದ್ವೀಪಸಮಾನಾ ಏಕೈಕಶ್ಯೇನ ಯಥಾನುಪೂರ್ವಂ ಸಪ್ತಸ್ವಪಿ ಬಹಿರ್ದ್ವೀಪೇಷು ಪೃಥಕ್ಪರಿತ ಉಪಕಲ್ಪಿತಾಸ್ತೇಷು ಜಂಬ್ವಾದಿಷು ಬರ್ಹಿಷ್ಮತೀಪತಿರನು-ವ್ರತಾನಾತ್ಮಜಾನಾಗ್ನೀಧ್ರೇಧ್ಮಜಿಹ್ವಯಜ್ಞಬಾಹುಹಿರಣ್ಯರೇ-ತೋಘೃತಪೃಷ್ಠಮೇಧಾತಿಥಿವೀತಿಹೋತ್ರಸಂಜ್ಞಾನ್ ಯಥಾ-ಸಂಖ್ಯೇನೈಕೈಕಸ್ಮಿನ್ನೇಕಮೇವಾಧಿಪತಿಂ ವಿದಧೇ ॥ ೩೩ ॥ ದುಹಿತರಂ ಚೋರ್ಜಸ್ವತೀಂ ನಾಮೋಶನಸೇ ಪ್ರಾಯಚ್ಛದ್ಯ-ಸ್ಯಾಮಾಸೀದ್ದೇವಯಾನೀ ನಾಮ ಕಾವ್ಯಸುತಾ ॥ ೩೪ ॥

ಅವುಗಳ ಹೆಸರು ಕ್ರಮವಾಗಿ ಜಂಬೂ, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರವೆಂದಾಯಿತು. ಅವುಗಳಲ್ಲಿ ಮುಂದು-ಮುಂದಿನ ದ್ವೀಪಗಳು ಹಿಂದು-ಹಿಂದಿನ ದ್ವೀಪಕ್ಕೆ ಎರಡರಷ್ಟು ವಿಸ್ತಾರವಾಗಿದ್ದು, ಅವು ಸಮುದ್ರದ ಹೊರಭಾಗದಲ್ಲಿ ಭೂಮಿಯ ನಾಲ್ಕೂ ಕಡೆಗಳಲ್ಲಿಯೂ ಹರಡಿಕೊಂಡಿವೆ. ॥ ೩೨ ॥ ಸಪ್ತ ಸಮುದ್ರಗಳು ಕ್ರಮವಾಗಿ ಉಪ್ಪುನೀರು, ಕಬ್ಬಿನ ರಸ, ಮದ್ಯರಸ, ತುಪ್ಪ ಹಾಲು, ಮೊಸರು ಮತ್ತು ಶುದ್ಧೋದಕಗಳಿಂದ ತುಂಬಿವೆ. ಇವು ಏಳೂ ದ್ವೀಪಗಳಿಗೂ ಕಂದಕದಂತಿದ್ದು ತಮ್ಮೊಳಗೆ ಇರುವ ದ್ವೀಪಕ್ಕೆ ಸಮವಾಗಿ ವಿಸ್ತಾರ ಹೊಂದಿವೆ. ಇವುಗಳಲ್ಲಿ ಒಂದೊಂದು ಕ್ರಮವಾಗಿ ಬೇರೆ-ಬೇರೆ ಏಳೂ ದ್ವೀಪಗಳನ್ನು ಹೊರಗಿನಿಂದ ಸುತ್ತುವರಿದಿದೆ. ಬರ್ಹಿಷ್ಮತಿಪತಿಯಾದ ಪ್ರಿಯವ್ರತನು ತನಗೆ ವಿಧೇಯರಾಗಿದ್ದ ಆಗ್ನೀಧ್ರ, ಇಧ್ಮಜಿಹ್ವ, ಯಜ್ಞಬಾಹು, ಹಿರಣ್ಯರೇತಸ, ಘೃತಪೃಷ್ಠ ಮೇಧಾತಿಥಿ ಮತ್ತು ವೀತಿಹೋತ್ರರೆಂಬ ಏಳು ಮಂದಿ ಪುತ್ರರನ್ನು ಕ್ರಮವಾಗಿ ಆ ಏಳು ದ್ವೀಪಗಳಲ್ಲಿ ಒಂದೊಂದಕ್ಕೆ ಒಬ್ಬೊಬ್ಬನನ್ನು ರಾಜನನ್ನಾಗಿ ನೇಮಿಸಿದನು. ॥ ೩೩ ॥ ತನ್ನ ಕನ್ಯೆಯಾಗಿದ್ದ ಊರ್ಜಸ್ವತಿಯನ್ನು ಶುಕ್ರಾಚಾರ್ಯರಿಗೆ ವಿವಾಹಮಾಡಿಕೊಟ್ಟನು. ಅವಳಿಂದ ಶುಕ್ರಕನ್ಯೆ ದೇವಯಾನಿಯು ಜನಿಸಿದಳು. ॥ ೩೪ ॥ ರಾಜನೇ! ಯಾರು ಭಗವಚ್ಚರಣಾರವಿಂದಗಳ ರಜದ ಪ್ರಭಾವದಿಂದ ಶರೀರದ ಹಸಿವು-ಬಾಯಾರಿಕೆ, ಶೋಕ-ಮೋಹ, ಮುಪ್ಪು-ಮರಣ ಎಂಬ ಆರು ಗುಣಗಳನ್ನು ಅಥವಾ ಮನಸ್ಸಿನಿಂದೊಡಗೂಡಿದ ಆರು ಇಂದ್ರಿಯಗಳನ್ನು ಗೆದ್ದುಕೊಂಡಿರುವನೋ, ಅಂತಹ ಭಗವದ್ಭಕ್ತರಿಗೆ ಇಂತಹ ಪುರುಷಾರ್ಥವು ಸಿದ್ಧಿಸುವುದರಲ್ಲಿ ಆಚ್ಚರಿಯೇನೂ ಇಲ್ಲ. ಏಕೆಂದರೆ, ಎಲ್ಲ ವರ್ಣಗಳಿಂದಲೂ ಹೊರಗಾದ ಚಾಂಡಾಲರೇ ಆದಿ ನೀಚಯೋನಿಯ ಮನುಷ್ಯರೂ ಕೂಡ ಭಗವಂತನ ದಿವ್ಯನಾಮವನ್ನು ಕೇವಲ ಒಂದೇ ಬಾರಿ ಉಚ್ಚರಿಸಿದರೂ ಒಡನೆಯೇ ಸಂಸಾರಬಂಧನದಿಂದ ಬಿಡುಗಡೆ ಹೊಂದುತ್ತಾರೆ. ॥ ೩೫ ॥

ನೈವಂವಿಧಃ ಪುರುಷಕಾರ ಉರುಕ್ರಮಸ್ಯ
ಪುಂಸಾಂ ತದಂಘ್ರಿರಜಸಾ ಜಿತಷಡ್ಗುಣಾನಾಮ್ ।
ಚಿತ್ರಂ ವಿದೂರವಿಗತಃ ಸಕೃದಾದದೀತ
ಯನ್ನಾಮಧೇಯಮಧುನಾ ಸ ಜಹಾತಿ ಬಂಧಮ್ ॥ ೩೫ ॥

ಇಂತಹ ಎಣೆಯಿಲ್ಲದ ಬಲ-ಪರಾಕ್ರಮದಿಂದ ಸಂಪನ್ನನಾಗಿದ್ದ ಪ್ರಿಯವ್ರತ ಮಹಾರಾಜನು ತಾನು ದೇವರ್ಷಿ ನಾರದರ ಅಡಿದಾವರೆಗಳಲ್ಲಿ ಶರಣಾಗತನಾಗಿ ಪರಮಾತ್ಮತತ್ತ್ವವನ್ನು ಅರಿತಿದ್ದರೂ ಮತ್ತೆ ದೈವವಶದಿಂದ ಪ್ರಪಂಚದಲ್ಲಿ ಸಿಕ್ಕಿಹಾಕಿಕೊಂಡಿದ್ದರಿಂದ ನೆಮ್ಮದಿ ಕಳೆದುಕೊಂಡವನಂತೆ ಆಗಿದ್ದುದನ್ನು ಒಮ್ಮೆ ಗಮನಿಸಿ ಮನಸ್ಸಿನಲ್ಲೇ ವಿರಕ್ತನಾಗಿ ಹೀಗೆ ಅಂದುಕೊಂಡನು. ॥ ೩೬ ॥ ಅಯ್ಯೋ! ನಾನು ಎಂತಹ ತಪ್ಪು ಮಾಡಿದೆ! ವಿಷಯಾಸಕ್ತವಾದ ಇಂದ್ರಿಯಗಳು ನನ್ನನ್ನು ಅವಿದ್ಯೆಯಿಂದುಂಟಾದ ವಿಷಮಯವಾದ ವಿಷಯಗಳೆಂಬ ಹಾಳುಬಾವಿಯಲ್ಲಿ ತಳ್ಳಿಬಿಟ್ಟಿವೆಯಲ್ಲ! ಸಾಕು! ಸಾಕು! ಇದು ತುಂಬಾ ಹೆಚ್ಚಾಯಿತು. ಅಕಟಾ! ನಾನು ಹೆಂಗಸಿನ ಆಟದ ಮೃಗವಾಗಿಬಿಟ್ಟೆನು. ಆಕೆಯು ನನ್ನನ್ನು ಕಪಿಯಂತೆ ಕುಣಿಸಿದಳು. ನನಗೆ ಧಿಕ್ಕಾರವಿರಲಿ! ಎಂದು ತನ್ನನ್ನು ನಿಂದಿಸಿಕೊಂಡನು. ॥ ೩೭ ॥ ಪರಮಾರಾಧ್ಯನಾದ ಶ್ರೀಹರಿಯ ಕೃಪೆಯಿಂದ ಅವನ ವಿವೇಕ ವೃತ್ತಿಯು ಎಚ್ಚರಗೊಂಡಿತು. ಅವನು ಇಡೀ ಭೂಮಂಡಲವನ್ನು ವಿಧೇಯರಾಗಿದ್ದ ತನ್ನ ಪುತ್ರರಿಗೆ ಯಥಾಯೋಗ್ಯವಾಗಿ ಹಂಚಿಬಿಟ್ಟನು. ಯಾರೊಡನೆ ಅವನು ಬಗೆ-ಬಗೆಯ ಭೋಗಗಳನ್ನು

ಸ ಏವಮಪರಿಮಿತಬಲಪರಾಕ್ರಮ ಏಕದಾ ತು ದೇವರ್ಷಿಚರಣಾನುಶಯನಾನುಪತಿತಗುಣವಿಸರ್ಗಸಂಸ-ರ್ಗೇಣಾನಿರ್ವೃತಮಿವಾತ್ಮಾನಂ ಮನ್ಯಮಾನ ಆತ್ಮನಿರ್ವೇದ ಇದಮಾಹ ॥ ೩೬ ॥ ಅಹೋ ಅಸಾಧ್ವನುಷ್ಠಿತಂ ಯದಭಿನಿವೇಶಿತೋಽಹಮಿಂದ್ರಿಯೈರವಿದ್ಯಾರಚಿತವಿಷಮ-ವಿಷಯಾಂಧಕೂಪೇ ತದಲಮಲಮಮುಷ್ಯಾ ವನಿತಾಯಾ ವಿನೋದಮೃಗಂ ಮಾಂ ಧಿಗ್ಧಿಗಿತಿ ಗರ್ಹಯಾಂ-ಚಕಾರ ॥ ೩೭ ॥ ಪರದೇವತಾಪ್ರಸಾದಾಧಿಗತಾತ್ಮಪ್ರತ್ಯ-

ವಮರ್ಶೀನಾನುಪ್ರವೃತ್ತೇಭ್ಯಃ ಪುತ್ರೇಭ್ಯ ಇಮಾಂ ಯಥಾದಾಯಂ ವಿಭಜ್ಯ ಭುಕ್ತಭೋಗಾಂ ಚ ಮಹಿಷೀಂ ಮೃತಕಮಿವ ಸಹಮಹಾವಿಭೂತಿಮಪಹಾಯ ಸ್ವಯಂ ನಿಹಿತನಿರ್ವೇದೋ ಹೃದಿ ಗೃಹೀತಹರಿವಿಹಾರಾನುಭಾವೋ ಭಗವತೋ ನಾರದಸ್ಯ ಪದವೀಂ ಪುನರೇವಾನುಸಸಾರ ॥ ೩೮ ॥

ತಸ್ಯ ಹ ವಾ ಏತೇ ಶ್ಲೋಕಾಃ –

ಪ್ರಿಯವ್ರತಕೃತಂ ಕರ್ಮ ಕೋ ನು ಕುರ್ಯಾದ್ವಿನೇಶ್ವರಮ್ ।
ಯೋ ನೇಮಿನಿಮ್ನೈರಕರೋಚ್ಛಾಯಾಂ ಘ್ನನ್ಸಪ್ತ ವಾರಿಧೀನ್ ॥ ೩೯ ॥

ಭೂಸಂಸ್ಥಾನಂ ಕೃತಂ ಯೇನ ಸರಿದ್ಗಿರಿವನಾದಿಭಿಃ ।
ಸೀಮಾ ಚ ಭೂತನಿರ್ವೃತ್ಯೈ ದ್ವೀಪೇ ದ್ವೀಪೇ ವಿಭಾಗಶಃ ॥ ೪೦ ॥

ಭೌಮಂ ದಿವ್ಯಂ ಮಾನುಷಂ ಚ ಮಹಿತ್ವಂ ಕರ್ಮಯೋಗಜಮ್ ।
ಯಶ್ಚಕ್ರೇ ನಿರಯೌಪಮ್ಯಂ ಪುರುಷಾನುಜನಪ್ರಿಯಃ ॥ ೪೧ ॥

ಅನುಭವಿಸಿದ್ದನೋ ಆ ಪಟ್ಟದರಾಣಿಯನ್ನು ಅಂತೆಯೇ ಸಾಮ್ರಾಜ್ಯ ಲಕ್ಷ್ಮಿಯನ್ನು ಮೃತದೇಹದಂತೆ ತ್ಯಜಿಸಿ, ಹೃದಯದಲ್ಲಿ ವೈರಾಗ್ಯವನ್ನು ತಾಳಿ ಭಗವಂತನ ದಿವ್ಯಕಥೆಗಳನ್ನು ಚಿಂತಿಸುತ್ತಾ ಅದರ ಪ್ರಭಾವದಿಂದ ಶ್ರೀನಾರದರು ತೋರಿದ ಮಾರ್ಗವನ್ನು ಪುನಃ ಅನುಸರಿಸತೊಡಗಿದನು. ॥ ೩೮ ॥

ಮಹಾರಾಜಾ ಪ್ರಿಯವ್ರತನ ವಿಷಯದಲ್ಲಿ ಈ ಪ್ರಶಂಸಾರ್ಹವಾದ ಶ್ಲೋಕಗಳು ಪ್ರಸಿದ್ಧವಾಗಿವೆ.

ಪ್ರಿಯವ್ರತ ಮಹಾರಾಜನು ಮಾಡಿದ ಕರ್ಮಗಳನ್ನು ಸರ್ವಶಕ್ತಿಶಾಲಿಯಾದ ಈಶ್ವರನ ಹೊರತು ಬೇರೆ ಯಾರು ಮಾಡಬಲ್ಲರು ? ಅವನು ರಾತ್ರಿಯ ಅಂಧಕಾರವನ್ನು ಇಲ್ಲವಾಗಿಸಲು ಪ್ರಯತ್ನಿಸುತ್ತಾ ತನ್ನ ರಥದ ಗಾಲಿಗಳಿಂದ ಉಂಟಾದ ಗೆರೆಗಳಿಂದಲೇ ಏಳು ಸಮುದ್ರಗಳನ್ನು ನಿರ್ಮಿಸಿದನಲ್ಲವೇ ! ॥ ೩೯ ॥ ಪ್ರಾಣಿಗಳ ಸಂರಕ್ಷಣೆಗಾಗಿ ಇಡೀ ಭೂಮಂಡಲವನ್ನು ದ್ವೀಪಗಳಾಗಿ ವಿಭಾಗಿಸಿ ಪ್ರತಿಯೊಂದು ದ್ವೀಪದಲ್ಲಿಯೂ ಬೇರೆ-ಬೇರೆ ನದಿಗಳೂ ಅರಣ್ಯಗಳೂ, ಪರ್ವತಗಳೂ ಮುಂತಾದವುಗಳಿಂದ ಎಲ್ಲೆಯನ್ನು ನಿಶ್ಚಿತಗೊಳಿಸಿದನು. ॥ ೪೦ ॥ ಅವನು ಭಗವದ್ಭಕ್ತ ನಾರದಾದಿಗಳ ಪ್ರೇಮೀಭಕ್ತನಾಗಿದ್ದನು. ಅವನು ಪಾತಾಳಲೋಕದ, ದೇವಲೋಕದ, ಭೂಲೋಕದ ಸಂಪತ್ತನ್ನು ಮತ್ತು ಕರ್ಮಗಳಿಂದಲೂ, ಯೋಗದಿಂದಲೂ ಸಂಪಾದಿಸಿದ್ದ ಐಶ್ವರ್ಯವನ್ನು ನರಕಸಮಾನವೆಂದು ತಿಳಿಸಿದ್ದನು. ॥ ೪೧ ॥

*ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ಪ್ರಿಯವ್ರತವಿಜಯೇ ಪ್ರಥಮೋಽಧ್ಯಾಯಃ ॥ ೧ ॥

# ಎರಡನೆಯ ಅಧ್ಯಾಯ

## ಆಗ್ನೀಧ್ರನ ಚರಿತ್ರೆ

*ಶ್ರೀಶುಕ ಉವಾಚ*

ಏವಂ ಪಿತರಿ ಸಂಪ್ರವೃತ್ತೇ ತದನುಶಾಸನೇ ವರ್ತಮಾನ ಆಗ್ನೀಧ್ರೋ ಜಂಬೂದ್ವೀಪೌಕಸಃ ಪ್ರಜಾ ಔರಸವದ್ಧರ್ಮಾವೇಕ್ಷಮಾಣಃ ಪರ್ಯಗೋಪಾಯತ್ ॥ ೧ ॥ ಸ ಚ ಕದಾಚಿತ್ಪಿತೃಲೋಕಕಾಮಃ ಸುರವರವನಿತಾಕ್ರೀಡಾಚಲದ್ರೋಣ್ಯಾಂ ಭಗವಂತಂ ವಿಶ್ವಸೃಜಾಂ ಪತಿಮಾಭೃತಪರಿಚರ್ಯೋಪಕರಣ ಆತ್ಮೈಕಾಗ್ರ್ಯೇಣ ತಪಸ್ವ್ಯಾರಾಧಯಾಂಬಭೂವ ॥ ೨ ॥ ತದುಪಲಭ್ಯ ಭಗವಾನಾದಿಪುರುಷಃ ಸದಸಿ ಗಾಯಂತೀಂ ಪೂರ್ವಚಿತ್ತಿಂ ನಾಮಾಪ್ಸರಸಮಭಿಯಾಪಯಾಮಾಸ ॥ ೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ ! ತಂದೆಯಾದ ಪ್ರಿಯವ್ರತ ಮಹಾರಾಜನು ತಪೋನಿಷ್ಠನಾದ ಬಳಿಕ ಮಹಾರಾಜಾ ಆಗ್ನೀಧ್ರನು ಆತನ ಆಜ್ಞೆಗನುಸಾರವಾಗಿ ಜಂಬೂದ್ವೀಪದ ಪ್ರಜೆಗಳನ್ನು ಧರ್ಮಾನುಸಾರವಾಗಿ ಔರಸಪುತ್ರರಂತೆ ಪಾಲಿಸತೊಡಗಿದನು. ॥ ೧ ॥ ಒಮ್ಮೆ ಅವನು ಪಿತೃಲೋಕದ ಕಾಮನೆಗಾಗಿ ಸತ್ಪುತ್ರನನ್ನು ಪಡೆಯಲಿಕ್ಕಾಗಿ ಪೂಜೆಯ ಎಲ್ಲ ಸಾಮಗ್ರಿಗಳನ್ನು ಜೊತೆ ಸೇರಿಸಿಕೊಂಡು ಸುರಸುಂದರಿಯರ ಕ್ರೀಡಾಸ್ಥಳವಾದ ಮಂದರಪರ್ವತದ ತಪ್ಪಲಿಗೆ ಹೋಗಿ, ತಪಸ್ಸಿನಲ್ಲಿ ತತ್ಪರನಾಗಿ, ಏಕಾಗ್ರಚಿತ್ತದಿಂದ ಪ್ರಜಾಪತಿಗಳ ಅಧಿಪತಿಯಾದ ಬ್ರಹ್ಮದೇವರನ್ನು ಆರಾಧಿಸತೊಡಗಿದನು. ॥ ೨ ॥ ಆದಿದೇವರಾದ ಭಗವಾನ್ ಶ್ರೀಬ್ರಹ್ಮದೇವರು ಆತನ ಅಭಿಲಾಷೆಯನ್ನು ತಿಳಿದುಕೊಂಡರು. ಆದ್ದರಿಂದ ತಮ್ಮ ಸಭೆಯ ಗಾಯಕಿಯಾದ ಪೂರ್ವಚಿತ್ತಿ ಎಂಬ ಅಪ್ಸರೆಯನ್ನು ಅವನ ಬಳಿಗೆ ಕಳಿಸಿದರು. ॥ ೩ ॥

ಸಾ ಚ ತದಾಶ್ರಮೋಪವನಮತಿರಮಣೀಯಂ ವಿವಿಧನಿಬಿಡವಿಟಪಿವಿಟಪನಿಕರಸಂಶ್ಲಿಷ್ಟಪುರಟಲತಾರೂಢಸ್ಥಲವಿಹಂಗಮಮಿಥುನೈಃ ಪ್ರೋಚ್ಯಮಾನಶ್ರುತಿಭಿಃ ಪ್ರತಿಬೋಧ್ಯಮಾನಸಲಿಲಕುಕ್ಕುಟಕಾರಂಡವಕಲಹಂಸಾದಿಭಿರ್ವಿಚಿತ್ರಮುಪಕೂಜಿತಾಮಲಜಲಾಶಯಕಮಲಾಕರಮುಪ ಬಭ್ರಾಮ ॥ ೪ ॥

ಆಗ್ನೀಧ್ರನ ಆಶ್ರಮದ ಬಳಿ ಒಂದು ಅತಿರಮಣೀಯವಾದ ಉಪವನವಿತ್ತು. ಆ ಅಪ್ಸರೆಯು ಅದರಲ್ಲಿ ಸಂಚರಿಸತೊಡಗಿದಳು. ಆ ಉಪವನದಲ್ಲಿ ನಾನಾ ರೀತಿಯ ದಟ್ಟವಾದ ಮರಗಳ ಕೊಂಬೆಗಳಲ್ಲಿ ಹೊಂಬಣ್ಣದ ಬಳ್ಳಿಗಳು ಹಬ್ಬಿಕೊಂಡಿದ್ದುವು. ಅವುಗಳ ಮೇಲೆ ನವಿಲುಗಳು – ಗಿಳಿಗಳು ಮುಂತಾದ ಪಕ್ಷಿದಂಪತಿಗಳು ಕುಳಿತು ಇಂಪಾಗಿ ಧ್ವನಿಮಾಡುತ್ತಿದ್ದುವು. ಅವುಗಳ ಷಡ್ಜವೇ ಮುಂತಾದ ಧ್ವನಿಗಳನ್ನು ಕೇಳಿ ಸ್ಫೂರ್ತಿಗೊಂಡ ನೀರ್ಕೋಳಿ, ಕಾರಂಡವ, ಕಲಹಂಸಗಳೇ ಮುಂತಾದ ನೀರುಹಕ್ಕಿಗಳು ಬಗೆ-ಬಗೆಯಾಗಿ ಕಲ-ಕಲನಿನಾದವನ್ನು ಮಾಡುತ್ತಿದ್ದವು. ಇದರಿಂದ ಅಲ್ಲಿಯ ಕಮಲಪುಷ್ಪಗಳಿಂದ ರಮಣೀಯವಾದ ನಿರ್ಮಲ ಸರೋವರವು ಪ್ರತಿಧ್ವನಿಸುತ್ತಿತ್ತು. ॥ ೪ ॥

ತಸ್ಯಾಃ ಸುಲಲಿತಗಮನಪದವಿನ್ಯಾಸಗತಿವಿಲಾಸಾಯಾಶ್ಚಾನುಪದಂ ಖಣಖಣಾಯಮಾನರುಚಿರಚರಣಾಭರಣಸ್ವನಮುಪಾಕರ್ಣ್ಯ ನರದೇವಕುಮಾರಃ ಸಮಾಧಿಯೋಗೇನಾಮೀಲಿತನಯನನಲಿನಮುಕುಲಯುಗಲಮೀಷದ್ವಿಕಚಯ್ಯ ವ್ಯಚಷ್ಟ ॥ ೫ ॥ ತಾಮೇವಾವಿದೂರೇ ಮಧುಕರೀಮಿವ ಸುಮನಸ ಉಪಜಿಘ್ರಂತೀಂ ದಿವಿಜಮನುಜಮನೋನಯನಾಹ್ಲಾದದುಘೈರ್ಗತಿವಿಹಾರವ್ರೀಡಾವಿನಯಾವಲೋಕಸುಸ್ವರಾಕ್ಷರಾವಯವೈರ್ಮನಸಿ ನೃಣಾಂ ಕುಸುಮಾಯುಧಸ್ಯ ವಿದಧತೀಂ ವಿವರಂ ನಿಜಮುಖವಿಗಲಿತಾಮೃತಾಸವಸಹಾಸಭಾಷಣಾಮೋದಮದಾಂಧಮಧುಕರನಿಕರೋಪರೋಧೇನ ದ್ರುತಪದವಿನ್ಯಾಸೇನ ವಲ್ಗುಸ್ಪಂದನಸ್ತನಕಲಶಕಬರಭಾರರಶನಾಂ ದೇವೀಂ ತದವಲೋಕನೇನ ವಿವೃತಾವಸರಸ್ಯ ಭಗವತೋ ಮಕರಧ್ವಜಸ್ಯ ವಶಮುಪನೀತೋ ಜಡವದಿತಿ ಹೋವಾಚ ॥ ೬ ॥

ಆ ಪೂರ್ವಚಿತ್ತಿಯು ಸುಂದರವಾದ ಮಂದಗಮನದಿಂದ ಹೆಜ್ಜೆಹಾಕುತ್ತಾ ವೈಯ್ಯಾರದಿಂದ ಸಂಚರಿಸುತ್ತಿರುವಾಗ ಹೆಜ್ಜೆ-ಹೆಜ್ಜೆಗೆ ಅವಳ ನೂಪುರಗಳು ಝುಣ-ಝುಣಿಸುತ್ತಿದ್ದವು. ಅವುಗಳ ಇಂಪಾದ ನಾದವನ್ನು ಕೇಳಿ ರಾಜಕುಮಾರ ಆಗ್ನೀಧ್ರನು – ಸಮಾಧಿಯೋಗದಿಂದ ಮುಚ್ಚಿಕೊಂಡಿದ್ದ ತನ್ನ ಕಮಲದ ಮೊಗ್ಗಿನಂತಿರುವ ಸುಂದರ ಕಣ್ಣುಗಳನ್ನು ಸ್ವಲ್ಪ ತೆರೆದು ನೋಡಿದರೆ ಬಳಿಯಲ್ಲೇ ಆ ಅಪ್ಸರೆಯು ಅವನಿಗೆ ಕಾಣಿಸಿದಳು. ಆ ರಮಣಿಯು ಹೆಣ್ಣು ದುಂಬಿಯಂತೆ ಒಂದೊಂದು ಹೂವಿನ ಬಳಿಗೂ ಹೋಗಿ ಅದನ್ನು ಮೂಸಿನೋಡುತ್ತಾ ದೇವತೆಗಳ ಮತ್ತು ಮನುಷ್ಯರ ಮನಸ್ಸನ್ನು ಹಾಗೂ ನಯನಗಳನ್ನು ಆಹ್ಲಾದಪಡಿಸುತ್ತಿದ್ದ ತನ್ನ ವಿಲಾಸಪೂರ್ಣವಾದ ನಡಿಗೆಯಿಂದಲೂ, ಕ್ರೀಡೆಯ ಚಾಪಲ್ಯದಿಂದಲೂ, ಲಜ್ಜೆಯಿಂದಲೂ, ವಿನಯದಿಂದಲೂ, ಓರೆನೋಟದಿಂದಲೂ, ಸುಮಧುರ ವಾಣಿಯಿಂದಲೂ, ಚೆಲುವಿನ ನೆಲೆಯಾದ ಸರ್ವಾವಯವಗಳಿಂದಲೂ ಮನುಷ್ಯರ ಮನಸ್ಸಿನಲ್ಲಿ ಮನ್ಮಥನ ಪ್ರವೇಶಕ್ಕೆ ದ್ವಾರದಂತೆ ಎಡೆಮಾಡಿಕೊಡುತ್ತಿದ್ದಳು. ಅವಳು ನಗು-ನಗುತ್ತಾ ಮಾತಾಡತೊಡಗಿದಾಗ ಆಕೆಯ ಮುಖದಿಂದ ಅಮೃತಮಯವಾದ ಮದವನ್ನುಂಟುಮಾಡುವ ಜೇನು ಒಸರುವಂತಿತ್ತು. ಮುಖಕಮಲದ ಪರಿಮಳದಿಂದ ಮತ್ತೇರಿದ ದುಂಬಿಗಳು ಆ ಮುಖಕಮಲವನ್ನು ಮುತ್ತುತ್ತಿರಲು ತನ್ನನ್ನು ಅವುಗಳಿಂದ ರಕ್ಷಿಸಿಕೊಳ್ಳಲು ಬೇಗ-ಬೇಗನೇ ಹೆಜ್ಜೆಹಾಕುತ್ತಿರುವಾಗ ಅವಳ ಸ್ತನಕಲಶಗಳೂ, ಕೇಶಪಾಶಗಳೂ, ನಡುವಿನ ಒಡ್ಯಾಣವೂ ಚಲಿಸುವುದರಿಂದ ಆಕರ್ಷಕವಾಗಿ ಕಾಣುತ್ತಿದ್ದವು. ಇಂತಹ ಸೊಬಗಿನಿಂದ ಕೂಡಿದ್ದ ಆಕೆಯನ್ನು ಕಂಡೊಡನೆ ಮನ್ಮಥನಿಗೆ ಆಗ್ನೀಧ್ರನ ಹೃದಯವನ್ನು ಪ್ರವೇಶಿಸಲು ಅವಕಾಶ ದೊರೆತಂತಾಯಿತು. ಆಗ್ನೀಧ್ರನು ಕಾಮಕ್ಕೆ ಅಧೀನವಾಗಿ ಆಕೆಯನ್ನು ಪ್ರಸನ್ನಗೊಳಿಸಲು ಹುಚ್ಚನಂತಾಗಿ ಹೀಗೆ ಹೇಳಲುಪಕ್ರಮಿಸಿದನು. ॥ ೫-೬ ॥

ಓ ಮುನಿವರ್ಯನೇ! ನೀನು ಯಾರು? ಈ ಪರ್ವತದ ಮೇಲೆ ಏನು ಮಾಡಬೇಕೆಂದಿರುವೆ? ನೀನು ಪರಮಪುರುಷ ಶ್ರೀನಾರಾಯಣನ ಮಾಯೆಯಲ್ಲ ತಾನೇ! ಸ್ನೇಹಿತನೇ! ನೀನು (ಈ ಹುಬ್ಬುಗಳ ರೂಪದಲ್ಲಿ) ನಾಣೇ ಇಲ್ಲದ ಎರಡು ಧನುಸ್ಸುಗಳನ್ನು ಏಕೆ ಧರಿಸಿದ್ದೀಯೇ? ಇದರಿಂದ ನಿನಗೆ ಏನಾದರೂ

ಕಾ ತ್ವಂ ಚಿಕೀರ್ಷಸಿ ಚ ಕಿಂ ಮುನಿವರ್ಯ ಶೈಲೇ
ಮಾಯಾಸಿ ಕಾಪಿ ಭಗವತ್ಪರದೇವತಾಯಾಃ ।
ವಿಜ್ಯೇ ಬಿಭರ್ಷಿ ಧನುಷೀ ಸುಹೃದಾತ್ಮನೋಽರ್ಥೇ
ಕಿಂ ವಾ ಮೃಗಾನ್ಮೃಗಯಸೇ ವಿಪಿನೇ ಪ್ರಮತ್ತಾನ್ ॥ ೭ ॥

ಬಾಣಾವಿಮೌ ಭಗವತಃ ಶತಪತ್ರಪತ್ರೌ
ಶಾಂತಾವಪುಂಖರುಚಿರಾವತಿತಿಗ್ಮದಂತೌ ।
ಕಸ್ಮೈ ಯುಯುಂಕ್ಷಸಿ ವನೇ ವಿಚರನ್ನ ವಿದ್ಮಃ
ಕ್ಷೇಮಾಯ ನೋ ಜಡಧಿಯಾಂ ತವ ವಿಕ್ರಮೋಽಸ್ತು ॥ ೮ ॥

ಶಿಷ್ಯಾ ಇಮೇ ಭಗವತಃ ಪರಿತಃ ಪಠಂತಿ
ಗಾಯಂತಿ ಸಾಮ ಸರಹಸ್ಯಮಜಸ್ರಮೀಶಮ್ ।
ಯುಷ್ಮಚ್ಛಿಖಾವಿಲುಲಿತಾಃ ಸುಮನೋಽಭಿವೃಷ್ಟೀಃ
ಸರ್ವೇ ಭಜಂತ್ಯೃಷಿಗಣಾ ಇವ ವೇದಶಾಖಾಃ ॥ ೯ ॥

ವಾಚಂ ಪರಂ ಚರಣಪಂಜರತಿತ್ತಿರೀಣಾಂ
ಬ್ರಹ್ಮನ್ನರೂಪಮುಖರಾಂ ಶೃಣವಾಮ ತುಭ್ಯಮ್ ।
ಲಬ್ಧಾ ಕದಂಬರುಚಿರಂಕವಿಟಂಕಬಿಂಬೇ
ಯಸ್ಯಾಮಲಾತಪರಿಧಿಃ ಕ್ವ ಚ ವಲ್ಕಲಂ ತೇ ॥ ೧೦ ॥

ಕಿಂ ಸಂಭೃತಂ ರುಚಿರಯೋರ್ದ್ವಿಜ ಶೃಂಗಯೋಸ್ತೇ
ಮಧ್ಯೇ ಕೃಶೋ ವಹಸಿ ಯತ್ರ ದೃಶಿಃ ಶ್ರಿತಾ ಮೇ ।
ಪಂಕೋಽರುಣಃ ಸುರಭಿರಾತ್ಮವಿಷಾಣ ಈದೃಗ್
ಯೇನಾಶ್ರಮಂ ಸುಭಗ ಮೇ ಸುರಭೀಕರೋಷಿ ॥ ೧೧ ॥

ಲೋಕಂ ಪ್ರದರ್ಶಯ ಸುಹೃತ್ತಮ ತಾವಕಂ ಮೇ
ಯತ್ರತ್ಯ ಇತ್ಥಮುರಸಾವಯವಾವಪೂರ್ವೌ ।
ಅಸ್ಮದ್ವಿಧಸ್ಯ ಮನಉನ್ನಯನೌ ಬಿಭರ್ತಿ
ಬಹ್ವದ್ಭುತಂ ಸರಸರಾಸಸುಧಾದಿ ವಕ್ತ್ರೇ ॥ ೧೨ ॥

ಪ್ರಯೋಜನವುಂಟೇ ? ಅಥವಾ ಈ ಸಂಸಾರವೆಂಬ ಅರಣ್ಯದಲ್ಲಿ ನನ್ನಂತಹ ಉನ್ಮತ್ತ ಮೃಗಗಳನ್ನು ಬೇಟೆಯಾಡಲು ಬಯಸುತ್ತಿರುವೆಯಾ ? ॥ ೭॥ ನಿನ್ನ ಈ (ಕಡೆಗಣ್ಣುಗಳ ನೋಟವೆಂಬ) ಎರಡು ಬಾಣಗಳು ಎಷ್ಟು ಚೂಪಾಗಿ ಚೆಲುವಾಗಿವೆ! ಆಹಾ! ಇವುಗಳಿಗೆ ಕಮಲದಳಗಳಂತೆ ಪಂಖಗಳಿವೆ. ನೋಡಲೂ ಶಾಂತವಾಗಿವೆ ಮತ್ತು ಹಿಂದಿನ ಭಾಗವು ಪಂಖಹೀನವಾಗಿದೆ. ಇಲ್ಲಿ ಕಾಡಿನಲ್ಲಿ ಸಂಚರಿಸುತ್ತಾ ನೀನು ಇದನ್ನು ಯಾರ ಮೇಲೆ ಪ್ರಯೋಗಿಸಲು ಬಯಸುತ್ತಿರುವೆ? ಇಲ್ಲಿ ನಿನ್ನನ್ನು ಇದಿರಿಸುವವರು ಯಾರೂ ಕಾಣುತ್ತಿಲ್ಲವಲ್ಲ! ನಿನ್ನ ಈ ಪರಾಕ್ರಮವು ನಮ್ಮಂತಹ ಜಡಬುದ್ಧಿಯುಳ್ಳವರಿಗೆ ಕಲ್ಯಾಣಕಾರಿಯಾಗಲೀ. ॥ ೮ ॥ (ದುಂಬಿಗಳ ಕಡೆಗೆ ನಿರ್ದೇಶಿಸಿ) ಪೂಜ್ಯರೇ! ನಿಮ್ಮ ಸುತ್ತಲೂ ಅಧ್ಯಯನ ಮಾಡುತ್ತಿರುವ ಈ ಶಿಷ್ಯರು ನಿರಂತರವಾಗಿ ರಹಸ್ಯಪೂರ್ಣವಾದ ಸಾಮವೇದವನ್ನು ಗಾನಮಾಡುತ್ತಾ ಶ್ರೀಭಗವಂತನನ್ನು ಸ್ತುತಿಸುತ್ತಿರುವರಲ್ಲ! ಋಷಿಗಣಗಳು ವೇದಗಳ ಶಾಖೆಗಳನ್ನು ಅನುಸರಿಸುತ್ತಿರುವಂತೆಯೇ, ಇವರೆಲ್ಲರೂ ನಿನ್ನ ತುರುಬಿನಿಂದ ಜಾರುತ್ತಿರುವ ಹೂವುಗಳನ್ನು ಸೇವಿಸುತ್ತಾ ಆನಂದಪಡುತ್ತಿರುವರು. ॥ ೯ ॥ (ಆಕೆಯ ಕಾಲಂದುಗೆಗಳ ಕಡೆಗೆ ಕೈತೋರಿಸಿ) ಎಲೈ ಬ್ರಾಹ್ಮಣೋತ್ತಮನೇ! ನಿನ್ನ ಪಾದಗಳೆಂಬ ಪಂಜರದಲ್ಲಿ ತಿತ್ತಿರಿಪಕ್ಷಿಗಳಂತೆ ಅಡಗಿಕೊಂಡಿರುವ ಈ ರತ್ನಗಳ ನೂಪುರಗಳು ಹೊರತೋರದೆ ಶಬ್ದಮಾತ್ರ ಕೇಳಿಬರುತ್ತಿದೆಯಲ್ಲ! (ಆಕೆಯ ಒಡ್ಯಾಣಸಹಿತವಾದ ಪೀತಾಂಬರದಲ್ಲಿ ಅಂಗದ ಕಾಂತಿಯನ್ನು ಉತ್ಪ್ರೇಕ್ಷಿಸುತ್ತಾ) ನಿನ್ನ ನಿತಂಬಗಳ ಮೇಲೆ ಈ ಕದಂಬ ಕುಸುಮದ ಕಾಂತಿಯು ಎಲ್ಲಿಂದ ಬಂದಿದೆ? ಇವುಗಳ ಮೇಲಂತೂ (ರತ್ನದ ಒಡ್ಯಾಣವೆಂಬ) ಜ್ವಾಲೆಗಳ ಮಂಡಲವೇ ತೊಳ-ತೊಳಗಿ ಬೆಳಗುತ್ತಿದೆಯಲ್ಲ! ಆದರೆ ನಿನ್ನ ನಾರುಮಡಿಯ ಉಡಿಗೆ ಎಲ್ಲಿ? ॥ ೧೦ ॥ (ಕುಂಕುಮ ಮಂಡಿತ ಕುಚಗಳನ್ನು ನಿರ್ದೇಶಿಸುತ್ತಾ) ದ್ವಿಜವರ್ಯನೇ! ಅತಿ ಸುಂದರವಾಗಿ ನಿನ್ನ ಎದೆಯಲ್ಲಿ ಕಂಗೊಳಿಸುತ್ತಿರುವ ಈ ಕೊಂಬುಗಳಲ್ಲಿ ಏನು ತುಂಬಿದೆ? ಅವಶ್ಯವಾಗಿಯೂ ಇವುಗಳಲ್ಲಿ ಬಹಳ ಅಮೂಲ್ಯವಾದ ರತ್ನಗಳೇ ತುಂಬಿರಬೇಕು. ಅದಕ್ಕೆ ನಿನ್ನ ನಡುವು ಕೃಶವಾಗಿದ್ದರೂ ನೀನು ಇವುಗಳ ಭಾರವನ್ನು ಹೊತ್ತುಕೊಂಡಿರುವೆ. ಇವುಗಳನ್ನು ನೋಡಿ ನನ್ನ ದೃಷ್ಟಿಯು ಅಲ್ಲೇ ನೆಟ್ಟುಹೋಗಿದೆ. ಎಲೈ ಸುಭಗನೇ! ಈ ಕೊಂಬುಗಳ ಮೇಲೆ ನೀನು ಕೆಂಪಾದ ಲೇಪವನ್ನು ಹಚ್ಚಿಕೊಂಡಿರುವೆಯಲ್ಲ! ಅದು ಏನು? ಅದರ ಸುಗಂಧದಿಂದ ನನ್ನ ಆಶ್ರಮವೆಲ್ಲ ಘಮ-ಘಮಿಸುತ್ತಿದೆಯಲ್ಲ! ॥ ೧೧ ॥ ಮಿತ್ರನೇ! ನಿನ್ನ ಸ್ವಂತ ದೇಶ ಯಾವುದೆಂಬುದನ್ನು ನನಗೆ ತೋರಿಸು. ಅಲ್ಲಿಯ ನಿವಾಸಿಗಳು ತಮ್ಮ ವಕ್ಷಸ್ಥಳದ ಮೇಲೆ ನಮ್ಮಂತಹ ಪ್ರಾಣಿಗಳ ಚಿತ್ತವನ್ನು ಕಲಕುವ ಅದ್ಭುತವಾದ ಅವಯವಗಳನ್ನು ಧರಿಸಿರುತ್ತಾರೆ ಹಾಗೂ ಮುಖದಲ್ಲಿ ವಿಚಿತ್ರವಾದ ಹಾವ-ಭಾವ, ವಿಲಾಸ, ಸವಿಮಾತು ಮತ್ತು ಅಧರಾಮೃತದಂತಹ ಅದ್ಭುತವಾದ ವಸ್ತುಗಳನ್ನು ಧರಿಸುತ್ತಿರಬೇಕು. ॥ ೧೨ ॥

ಪ್ರಿಯನೇ! ಯಾವ ವಸ್ತುವನ್ನು ತಿನ್ನುವುದರಿಂದ ನಿನ್ನ ಮುಖದಿಂದ ಈ ಸುವಾಸನೆಯು ಹೊರಹೊಮ್ಮುತ್ತಿದೆ? ನಿನ್ನ

ಕಾ ವಾಽಽತ್ಮವೃತ್ತಿರದನಾದ್ಧವಿರಂಗ ವಾತಿ
ವಿಷ್ಣೋಃ ಕಲಾಸ್ಯನಿಮಿಷೋನ್ಮಕರೌ ಚ ಕರ್ಣೌ ।
ಉದ್ವಿಗ್ನಮೀನಯುಗಲಂ ದ್ವಿಜಪಂಕ್ತಿಶೋಚಿ-
ರಾಸನ್ನಭೃಂಗನಿಕರಂ ಸರ ಇನ್ಮುಖಂ ತೇ ॥ ೧೩ ॥

ಯೋಽಸೌ ತ್ವಯಾ ಕರಸರೋಜಹತಃ ಪತಂಗೋ
ದಿಕ್ಷು ಭ್ರಮನ್ ಭ್ರಮತ ಏಜಯತೇಽಕ್ಷಿಣೀ ಮೇ ।
ಮುಕ್ತಂ ನ ತೇ ಸ್ಮರಸಿ ವಕ್ರಜಟಾವರೂಥಂ
ಕಷ್ಟೋಽನಿಲೋ ಹರತಿ ಲಂಪಟ ಏಷ ನೀವೀಮ್ ॥ ೧೪ ॥

ರೂಪಂ ತಪೋಧನ ತಪಶ್ಚರತಾಂ ತಪೋಘ್ನಂ
ಹ್ಯೇತತ್ತು ಕೇನ ತಪಸಾ ಭವತೋಪಲಬ್ಧಮ್ ।
ಚರ್ತುಂ ತಪೋಽರ್ಹಸಿ ಮಯಾ ಸಹ ಮಿತ್ರ ಮಹ್ಯಂ
ಕಿಂ ವಾ ಪ್ರಸೀದತಿ ಸ ವೈ ಭವಭಾವನೋ ಮೇ ॥ ೧೫ ॥

ನ ತ್ವಾಂ ತ್ಯಜಾಮಿ ದಯಿತಂ ದ್ವಿಜದೇವದತ್ತಂ
ಯಸ್ಮಿನ್ಮನೋ ದೃಗಪಿ ನೋ ನ ವಿಯಾತಿ ಲಗ್ನಮ್ ।
ಮಾಂ ಚಾರುಶೃಂಗ್ಯರ್ಹಸಿ ನೇತುಮನುವ್ರತಂ ತೇ
ಚಿತ್ತಂ ಯತಃ ಪ್ರತಿಸರಂತು ಶಿವಾಃ ಸಚಿವ್ಯಃ ॥ ೧೬ ॥

*ಶ್ರೀಶುಕ ಉವಾಚ*

ಇತಿ ಲಲನಾನುನಯಾತಿವಿಶಾರದೋ ಗ್ರಾಮ್ಯವೈದಗ್ಧ್ಯಯಾ ಪರಿಭಾಷಯಾ ತಾಂ ವಿಬುಧವಧೂಂ ವಿಬುಧಮತಿರಧಿಸಭಾಜಯಾಮಾಸ ॥ ೧೭ ॥ ಸಾ ಚ ತತಸ್ತಸ್ಯ ವೀರಯೂಥಪತೇರ್ಬುದ್ಧಿಶೀಲರೂಪವಯಃಶ್ರಿಯೌದಾರ್ಯೇಣ ಪರಾಕ್ಷಿಪ್ತಮನಾಸ್ತೇನ ಸಹಾಯುತಾಯುತಪರಿವತ್ಸರೋಪಲಕ್ಷಣಂ ಕಾಲಂ ಜಂಬೂದ್ವೀಪಪತಿನಾ ಭೌಮಸ್ವರ್ಗಭೋಗಾನ್ ಬುಭುಜೇ ॥ ೧೮ ॥ ತಸ್ಯಾ ಮು ಹ ವಾ ಆತ್ಮಜಾನ್ ಸ ರಾಜವರ ಆಗ್ನೀಧ್ರೋ ನಾಭಿಕಿಂಪುರುಷಹರಿವರ್ಷೇಲಾವೃತರಮ್ಯಕಹಿರಣ್ಮಯಕುರುಭದ್ರಾಶ್ವಕೇತುಮಾಲಸಂಜ್ಞಾನ್ನವ ಪುತ್ರಾನಜನಯತ್ ॥ ೧೯ ॥

ಆಹಾರವು ಯಾವುದು? ನೀನು ಮಹಾವಿಷ್ಣುವಿನ ಕಲೆಯೇ ಆಗಿರಬೇಕೆಂದು ಅನಿಸುತ್ತದೆ. ಅದಕ್ಕಾಗಿ ನಿನ್ನ ಕಿವಿಗಳಲ್ಲಿ ಮಿನುಗುವಂತಹ ಎರಡು ಮಕರಾಕೃತಿಯ ಕುಂಡಲಗಳು ಥಳಥಳಿಸುತ್ತಿವೆ. ನಿನ್ನ ಮುಖವು ಒಂದು ಸುಂದರ ಸರೋವರದಂತೆ ಇದೆ. ಅದರಲ್ಲಿ ನಿನ್ನ ಚಂಚಲವಾದ ಕಣ್ಣುಗಳೇ ಭಯದಿಂದ ಚಲಿಸುತ್ತಿರುವ ಎರಡು ಮೀನುಗಳು. ದಂತಪಂಕ್ತಿಗಳೇ ಹಂಸಗಳು. ಕಪ್ಪಾದ ಮುಂಗರುಳುಗಳೇ ಭ್ರಮರದಂತೆ ಶೋಭಿಸುತ್ತಿವೆ. ॥ ೧೩ ॥ ನೀನು ಕರಕಮಲಗಳಿಂದ ಹೊಡೆದು ಪುಟಹಾರಿಸುತ್ತಿರುವ ಆ ಆಟದ ಚೆಂಡು ದಿಕ್ಕು-ದಿಕ್ಕುಗಳಲ್ಲಿ ಒಡಾಡುತ್ತಾ ನನ್ನ ಕಣ್ಣುಗಳನ್ನು ಚಂಚಲಗೊಳಿಸುತ್ತಿದೆ. ಜೊತೆಗೆ ನನ್ನ ಮನಸ್ಸಿನಲ್ಲಿಯೂ ಗಲಿಬಿಲಿಯನ್ನುಂಟುಮಾಡುತ್ತದೆ. ಕೊಂಕಾದ ಜಡೆಕೂದಲು ಬಿಚ್ಚಿಹೋಗಿರುವುದನ್ನು ನೀನು ಗಮನಿಸುತ್ತಿಲ್ಲವಲ್ಲ, ಅರೇ! ಈ ಧೂರ್ತನಾದ ವಾಯುವು ಬಾರಿ-ಬಾರಿಗೂ ನಿನ್ನ ಮೇಲುವಸ್ತ್ರವನ್ನು ಹಾರಿಸುತ್ತಿದೆಯಲ್ಲ! ॥ ೧೪ ॥ ತಪೋಧನನನೇ! ತಪಸ್ವಿಗಳ ತಪಸ್ಸನ್ನು ಭ್ರಷ್ಟಗೊಳಿಸುವ ಈ ಅನುಪಮವಾದ ರೂಪ-ಲಾವಣ್ಯಗಳನ್ನು ನೀನು ಯಾವ ತಪಸ್ಸಿನ ಪ್ರಭಾವದಿಂದ ಪಡೆದಿರುವೆ? ಮಿತ್ರನೇ! ಇಲ್ಲಿಗೆ ಬಾ! ಕೆಲವು ದಿನಗಳವರೆಗೆ ನನ್ನೊಡನೆ ಇದ್ದು ತಪಸ್ಸುಮಾಡು. ಅಥವಾ ವಿಶ್ವವನ್ನು ವಿಸ್ತರಿಸುವ ಇಚ್ಛೆಯಿಂದ ಎಲ್ಲಾದರೂ ಬ್ರಹ್ಮದೇವರೇ ನನ್ನ ಮೇಲೆ ಕೃಪೆ ಮಾಡಿರಬಹುದೇ? ॥ ೧೫ ॥ ನಿಜವಾಗಿ ನೀನು ಬ್ರಹ್ಮದೇವರು ಕರುಣಿಸಿದ ಪ್ರಿಯ ಕೊಡುಗೆಯೇ ಆಗಿರುವೆ. ಈಗ ನಾನು ನಿನ್ನನ್ನು ಬಿಟ್ಟಿರಲಾರೆ. ನಿನ್ನಲ್ಲಿ ನನ್ನ ಮನಸ್ಸು ಮತ್ತು ಕಣ್ಣುಗಳು ಬೇರೆಲ್ಲಿಗೂ ಹೋಗಲು ಬಯಸದಷ್ಟು ನೆಟ್ಟುಹೋಗಿವೆ. ಮನೋಹರವಾದ ಕೊಂಬುಗಳುಳ್ಳವಳೇ! ನಿನಗೆ ಮನಸ್ಸು ಬಂದಲ್ಲಿಗೆ ನನ್ನನ್ನು ಕರಕೊಂಡುಹೋಗು. ನಾನಾದರೋ ನಿನ್ನ ಅನುಚರನು. ನಿನ್ನ ಈ ಮಂಗಳಮಯರಾದ ಸಖಿಯರೂ ನಮ್ಮೊಡನೆ ಇರಲಿ. ॥ ೧೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜೇಂದ್ರಾ! ಆಗ್ನೀಧ್ರನು ದೇವತೆಗಳಂತೆ ಬುದ್ಧಿವಂತನೂ, ಸ್ತ್ರೀಯರನ್ನು ಪ್ರಸನ್ನಗೊಳಿಸುವುದರಲ್ಲಿ ಅತಿಕುಶಲನೂ ಆಗಿದ್ದನು. ಅವನು ಈ ರೀತಿಯಲ್ಲಿ ರತಿಚಾತುರ್ಯದಿಂದ ಕೂಡಿದ ಸವಿಮಾತುಗಳಿಂದ ಆ ಅಪ್ಸರೆಯನ್ನು ಒಲಿಸಿಕೊಂಡನು. ॥ ೧೭ ॥ ವೀರಾಧಿವೀರರಲ್ಲಿ ಅಗ್ರಗಣ್ಯನಾದ ಆಗ್ನೀಧ್ರನ ಬುದ್ಧಿ, ಶೀಲ, ರೂಪ, ವಯಸ್ಸು, ಕಾಂತಿ ಔದಾರ್ಯಗಳಿಗೆ ಆಕರ್ಷಿತಳಾದ ಆ ಪೂರ್ವಚಿತ್ತಿಯು ಜಂಬೂದ್ವಿಪಾಧಿಪತಿಯೊಡನೆ ಅನೇಕ ಸಾವಿರವರ್ಷಗಳವರೆಗೆ ಪೃಥ್ವಿ ಮತ್ತು ಸ್ವರ್ಗದ ಭೋಗಗಳನ್ನು ಅನುಭವಿಸುತ್ತಿದ್ದಳು. ॥ ೧೮ ॥ ಅನಂತರ ಆಗ್ನೀಧ್ರನು ಆಕೆಯ ಗರ್ಭದಿಂದ ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ ಮತ್ತು ಕೇತುಮಾಲ ಎಂಬ ಒಂಭತ್ತು ಪುತ್ರರನ್ನು ಪಡೆದನು. ॥ ೧೯ ॥

ಪೂರ್ವಚಿತ್ತಿಯು ಹೀಗೆ ವರ್ಷಕ್ಕೆ ಒಬ್ಬರಂತೆ ಒಂಭತ್ತು ಮಂದಿ ಪುತ್ರರನ್ನು ಪಡೆದು, ಅವರನ್ನು ಆಗ್ನೀಧ್ರನ ಅರಮನೆಯಲ್ಲೇ ಬಿಟ್ಟು ತಾನು ಬ್ರಹ್ಮಲೋಕಕ್ಕೆ ತೆರಳಿ ಅಲ್ಲಿ ಬ್ರಹ್ಮದೇವರ ಸೇವೆಯಲ್ಲಿ

ಸಾ ಸೂತ್ವಾಥ ಸುತಾನ್ನವಾನುವತ್ಸರಂ ಗೃಹ ಏವಾಪಹಾಯ ಪೂರ್ವಚಿತ್ತಿರ್ಭೂಯ ಏವಾಜಂ ದೇವಮುಪತಸ್ಥೇ ॥ ೨೦ ॥ ಆಗ್ನೀಧ್ರಸುತಾಸ್ತೇ ಮಾತುರನುಗ್ರಹಾದೌತ್ಪತ್ತಿಕೇನೈವ ಸಂಹನನಬಲೋಪೇತಾಃ ಪಿತ್ರಾ ವಿಭಕ್ತಾ ಆತ್ಮತುಲ್ಯನಾಮಾನಿ ಯಥಾಭಾಗಂ ಜಂಬೂದ್ವೀಪವರ್ಷಾಣಿ ಬುಭುಜುಃ ॥ ೨೧ ॥ ಆಗ್ನೀಧ್ರೋ ರಾಜಾತೃಪ್ತಃ ಕಾಮಾನಾಮಪ್ಸರಸಮೇವಾನುದಿನಮಧಿಮನ್ಯಮಾನಸ್ತಸ್ಯಾಃ ಸಲೋಕತಾಂ ಶ್ರುತಿಭಿರವಾರುಂಧ ಯತ್ರ ಪಿತರೋ ಮಾದಯಂತೇ ॥ ೨೨ ॥ ಸಂಪರೇತೇ ಪಿತರಿ ನವ ಭ್ರಾತರೋ ಮೇರುದುಹಿತೄರ್ಮೇರುದೇವೀಂ ಪ್ರತಿರೂಪಾಮುಗ್ರದಂಷ್ಟ್ರೀಂ ಲತಾಂ ರಮ್ಯಾಂ ಶ್ಯಾಮಾಂ ನಾರೀಂ ಭದ್ರಾಂ ದೇವವೀತಿಮಿತಿಸಂಜ್ಞಾ ನವೋದವಹನ್ ॥ ೨೩ ॥

ತೊಡಗಿದಳು. ॥ ೨೦ ॥ ಆಗ್ನೀಧ್ರನ ಆ ಪುತ್ರರು ತಾಯಿಯ ಅನುಗ್ರಹದಿಂದ ಸ್ವಾಭಾವಿಕವಾಗಿಯೇ ಸುಂದರ ಸುದೃಢ ದೇಹ-ಪರಾಕ್ರಮಗಳಿಂದ ಸಂಪನ್ನರಾಗಿದ್ದರು. ಆಗ್ನೀಧ್ರನು ಜಂಬೂದ್ವೀಪವನ್ನು ವಿಂಗಡಿಸಿ, ಆಯಾಪುತ್ರರ ಹೆಸರಿನಿಂದಲೇ ಕರೆಯಲ್ಪಡುವ ಒಂಭತ್ತು ವರ್ಷ (ಭೂಖಂಡ)ಗಳನ್ನಾಗಿ ಮಾಡಿ ಅವುಗಳನ್ನು ಆಯಾ ಪುತ್ರರಿಗೆ ಒಪ್ಪಿಸಿದನು. ಅವರೆಲ್ಲರೂ ತಮ್ಮ-ತಮ್ಮ ವರ್ಷಗಳಲ್ಲಿ ಆಧಿಪತ್ಯವನ್ನು ಅನುಭವಿಸ ತೊಡಗಿದರು. ॥ ೨೧ ॥ ಮಹಾರಾಜಾ ಆಗ್ನೀಧ್ರನಿಗೆ ಪ್ರತಿದಿನವೂ ಭೋಗಗಳನ್ನು ಅನುಭವಿಸುತ್ತಿದ್ದರೂ ಅವುಗಳಿಂದ ತೃಪ್ತಿಯುಂಟಾಗಲಿಲ್ಲ. ಆತನು ಆ ಅಪ್ಸರೆಯನ್ನೇ ಪರಮಪುರುಷಾರ್ಥವೆಂದು ಭಾವಿಸಿಕೊಂಡಿದ್ದನು. ಅದಕ್ಕಾಗಿ ಅವನು ವೈದಿಕ ಕರ್ಮಗಳ ಮೂಲಕ ಪಿತೃಗಣಗಳು ತಮ್ಮ ಸುಕೃತಗಳಿಗೆ ಅನುಸಾರವಾಗಿ ಬಗೆ-ಬಗೆಯ ಸುಖ-ಭೋಗಗಳನ್ನು ಅನುಭವಿಸುತ್ತಿರುವ ದಿವ್ಯಲೋಕವನ್ನು ಪಡೆದುಕೊಂಡನು. ॥ ೨೨ ॥ ತಂದೆಯು ಪರಲೋಕಕ್ಕೆ ತೆರಳಿದನಂತರ ನಾಭಿಯೇ ಮುಂತಾದ ಒಂಭತ್ತುಮಂದಿ ಸೋದರರು ಮೇರುವಿನ ಪುತ್ರಿಯರಾಗಿದ್ದ ಮೇರುದೇವೀ, ಪ್ರತಿರೂಪಾ, ಉಗ್ರದಂಷ್ಟ್ರೀ, ಲತಾ, ರಮ್ಯಾ, ಶ್ಯಾಮಾ, ನಾರೀ, ಭದ್ರಾ ಮತ್ತು ದೇವವೀತಿ ಎಂಬ ಒಂಭತ್ತು ಮಂದಿ ಕನ್ಯೆಯರನ್ನು ವಿವಾಹವಾದರು. ॥ ೨೩ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ಆಗ್ನೀಧ್ರವರ್ಣನಂ ನಾಮ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ನಾಭಿಮಹಾರಾಜನ ಚರಿತ್ರೆ

*ಶ್ರೀಶುಕ ಉವಾಚ*

ನಾಭಿರಪತ್ಯಕಾಮೋಽಪ್ರಜಯಾ ಮೇರುದೇವ್ಯಾ ಭಗವಂತಂ ಯಜ್ಞಪುರುಷಮವಹಿತಾತ್ಮಾಯಜತ ॥ ೧ ॥ ತಸ್ಯ ಹ ವಾವ ಶ್ರದ್ಧಯಾ ವಿಶುದ್ಧಭಾವೇನ ಯಜತಃ ಪ್ರವರ್ಗ್ಯೇಷು ಪ್ರಚರತ್ಸು ದ್ರವ್ಯದೇಶಕಾಲಮಂತ್ರರ್ತ್ವಿಗ್ದಕ್ಷಿಣಾವಿಧಾನಯೋಗೋಪಪತ್ತ್ಯಾ ದುರಧಿಗಮೋಽಪಿ ಭಗವಾನ್ ಭಾಗವತವಾತ್ಸಲ್ಯತಯಾ ಸುಪ್ರತೀಕ ಆತ್ಮಾನಮಪರಾಜಿತಂ ನಿಜಜನಾಭಿಪ್ರೇತಾರ್ಥವಿಧಿತ್ಸಯಾ ಗೃಹೀತಹೃದಯೋ ಹೃದಯಂಗಮಂ ಮನೋನಯನಾನಂದನಾವಯವಾಭಿರಾಮಮಾವಿಶ್ಚಕಾರ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರನೇ! ಆಗ್ನೀಧ್ರನ ಪುತ್ರನಾದ ನಾಭಿಮಹಾರಾಜನಿಗೆ ಸಂತಾನವಿರಲಿಲ್ಲ. ಅದಕ್ಕಾಗಿ ಅವನು ತನ್ನ ಭಾರ್ಯೆಯಾದ ಮೇರುದೇವಿಯೊಂದಿಗೆ ಪುತ್ರಕಾಮನೆಯಿಂದ ಏಕಾಗ್ರವಾದ ಮನಸ್ಸಿನಿಂದ ಭಗವಾನ್ ಯಜ್ಞಪುರುಷನನ್ನು ಆರಾಧಿಸಿದನು. ॥ ೧ ॥ ಸುಂದರಾಂಗನಾದ ಶ್ರೀಭಗವಂತನು – ದ್ರವ್ಯ, ದೇಶ, ಕಾಲ, ಮಂತ್ರ, ಋತ್ವಿಜ, ದಕ್ಷಿಣೆ ಮತ್ತು ವಿಧಿ ಮುಂತಾದ ಯಜ್ಞದ ಸಾಧನೆಗಳಿಂದ ಸಹಜವಾಗಿ ದೊರಕುವವನಲ್ಲವಾದರೂ ಅವನು ಭಕ್ತರ ಮೇಲೆ ಕೃಪೆ ಮಾಡುವವನಾಗಿದ್ದಾನೆ. ಅದಕ್ಕಾಗಿ ನಾಭಿಮಹಾರಾಜನು ಶ್ರದ್ಧೆಯಿಂದ ವಿಶುದ್ಧಭಾವದಿಂದ ಅವನ ಆರಾಧನೆಯನ್ನು ಮಾಡಿದಾಗ ಅವನ ಚಿತ್ತವು ತನ್ನ ಭಕ್ತನ ಅಭೀಷ್ಟವನ್ನು ಈಡೇರಿಸಲು ಉತ್ಸುಕವಾಯಿತು. ಅವನ ಸ್ವರೂಪವು ಸರ್ವಥಾ ಸ್ವತಂತ್ರವಾಗಿದ್ದರೂ ಅವನು ಪ್ರವರ್ಗ್ಯವೆಂಬ ಕರ್ಮದ ಅನುಷ್ಠಾನ ನಡೆಯುತ್ತಿದ್ದಾಗ ಕಣ್ಣಿನಗಳಿಗೆ ಆನಂದವನ್ನು ಈಯುವ ಅವಯವಗಳಿಂದ ಕೂಡಿ ಅವನು ಅತಿಸುಂದರವಾದ ಹೃದಯವನ್ನು ಸೂರೆಗೊಳ್ಳುವ ದಿವ್ಯ ಮಂಗಳ

ಕಾ ವಾಽಽತ್ಮವೃತ್ತಿರದನಾದ್ಧವಿರಂಗ ವಾತಿ
ವಿಷ್ಣೋಃ ಕಲಾಸ್ಯನಿಮಿಷೋನ್ಮಕರೌ ಚ ಕರ್ಣೌ ।
ಉದ್ವಿಗ್ನಮೀನಯುಗಲಂ ದ್ವಿಜಪಂಕ್ತಿಶೋಚಿ-
ರಾಸನ್ನಭೃಂಗನಿಕರಂ ಸರ ಇನ್ಮುಖಂ ತೇ ॥ ೧೩ ॥

ಯೋಽಸೌ ತ್ವಯಾ ಕರಸರೋಜಹತಃ ಪತಂಗೋ
ದಿಕ್ಷು ಭ್ರಮನ್ ಭ್ರಮತ ಏಜಯತೇಽಕ್ಷಿಣೀ ಮೇ ।
ಮುಕ್ತಂ ನ ತೇ ಸ್ಮರಸಿ ವಕ್ರಜಟಾವರೂಥಂ
ಕಷ್ಟೋಽನಿಲೋ ಹರತಿ ಲಂಪಟ ಏಷ ನೀವೀಮ್ ॥ ೧೪ ॥

ರೂಪಂ ತಪೋಧನ ತಪಶ್ಚರತಾಂ ತಪೋಘ್ನಂ
ಹ್ಯೇತತ್ತು ಕೇನ ತಪಸಾ ಭವತೋಪಲಬ್ಧಮ್ ।
ಚರ್ತುಂ ತಪೋಽರ್ಹಸಿ ಮಯಾ ಸಹ ಮಿತ್ರ ಮಹ್ಯಂ
ಕಿಂ ವಾ ಪ್ರಸೀದತಿ ಸ ವೈ ಭವಭಾವನೋ ಮೇ ॥ ೧೫ ॥

ನ ತ್ವಾಂ ತ್ಯಜಾಮಿ ದಯಿತಂ ದ್ವಿಜದೇವದತ್ತಂ
ಯಸ್ಮಿನ್ಮನೋ ದೃಗಪಿ ನೋ ನ ವಿಯಾತಿ ಲಗ್ನಮ್ ।
ಮಾಂ ಚಾರುಶೃಂಗ್ಯರ್ಹಸಿ ನೇತುಮನುವ್ರತಂ ತೇ
ಚಿತ್ತಂ ಯತಃ ಪ್ರತಿಸರಂತು ಶಿವಾಃ ಸಚಿವ್ಯಃ ॥ ೧೬ ॥

*ಶ್ರೀಶುಕ ಉವಾಚ*

ಇತಿ ಲಲನಾನುನಯಾತಿವಿಶಾರದೋ ಗ್ರಾಮ್ಯವೈದಗ್ಧ್ಯಯಾ ಪರಿಭಾಷಯಾ ತಾಂ ವಿಬುಧವಧೂಂ ವಿಬುಧಮತಿರಧಿಸಭಾಜಯಾಮಾಸ ॥ ೧೭ ॥ ಸಾ ಚ ತತಸ್ತಸ್ಯ ವೀರಯೂಥಪತೇರ್ಬುದ್ಧಿಶೀಲರೂಪವಯಃಶ್ರಿಯೌದಾರ್ಯೇಣ ಪರಾಕ್ಷಿಪ್ತಮನಾಸ್ತೇನ ಸಹಾಯುತಾಯುತಪರಿವತ್ಸರೋಪಲಕ್ಷಣಂ ಕಾಲಂ ಜಂಬೂದ್ವೀಪಪತಿನಾ ಭೌಮಸ್ವರ್ಗಭೋಗಾನ್ ಬುಭುಜೇ ॥ ೧೮ ॥ ತಸ್ಯಾ ಮು ಹ ವಾ ಆತ್ಮಜಾನ್ ಸ ರಾಜವರ ಆಗ್ನೀಧ್ರೋ ನಾಭಿ-ಕಿಂಪುರುಷಹರಿವರ್ಷೇಲಾವೃತರಮ್ಯಕಹಿರಣ್ಮಯಕುರು-ಭದ್ರಾಶ್ವಕೇತುಮಾಲಸಂಜ್ಞಾನ್ನವ ಪುತ್ರಾನಜನಯತ್ ॥ ೧೯ ॥

ಆಹಾರವು ಯಾವುದು? ನೀನು ಮಹಾವಿಷ್ಣುವಿನ ಕಲೆಯೇ ಆಗಿರಬೇಕೆಂದು ಅನಿಸುತ್ತದೆ. ಅದಕ್ಕಾಗಿ ನಿನ್ನ ಕಿವಿಗಳಲ್ಲಿ ಮಿನುಗುವಂತಹ ಎರಡು ಮಕರಾಕೃತಿಯ ಕುಂಡಲಗಳು ಥಳಥಳಿಸುತ್ತಿವೆ. ನಿನ್ನ ಮುಖವು ಒಂದು ಸುಂದರ ಸರೋವರದಂತೆ ಇದೆ. ಅದರಲ್ಲಿ ನಿನ್ನ ಚಂಚಲವಾದ ಕಣ್ಣುಗಳೇ ಭಯದಿಂದ ಚಲಿಸುತ್ತಿರುವ ಎರಡು ಮೀನುಗಳು. ದಂತಪಂಕ್ತಿಗಳೇ ಹಂಸಗಳು. ಕಪ್ಪಾದ ಮುಂಗರುಳುಗಳೇ ಭ್ರಮರದಂತೆ ಶೋಭಿಸುತ್ತಿವೆ. ॥ ೧೩ ॥ ನೀನು ಕರಕಮಲಗಳಿಂದ ಹೊಡೆದು ಪುಟಹಾರಿಸುತ್ತಿರುವ ಆ ಆಟದ ಚೆಂಡು ದಿಕ್ಕು-ದಿಕ್ಕುಗಳಲ್ಲಿ ಒಡಾಡುತ್ತಾ ನನ್ನ ಕಣ್ಣುಗಳನ್ನು ಚಂಚಲಗೊಳಿಸುತ್ತಿದೆ. ಜೊತೆಗೆ ನನ್ನ ಮನಸ್ಸಿನಲ್ಲಿಯೂ ಗಲಿಬಿಲಿಯನ್ನುಂಟುಮಾಡುತ್ತದೆ. ಕೊಂಕಾದ ಜಡೆಕೂದಲು ಬಿಚ್ಚಿಹೋಗಿರುವುದನ್ನು ನೀನು ಗಮನಿಸುತ್ತಿಲ್ಲವಲ್ಲ. ಅರೇ! ಈ ಧೂರ್ತನಾದ ವಾಯುವು ಬಾರಿ-ಬಾರಿಗೂ ನಿನ್ನ ಮೇಲುವಸ್ತ್ರವನ್ನು ಹಾರಿಸುತ್ತಿದೆಯಲ್ಲ! ॥ ೧೪ ॥ ತಪೋಧನನೇ! ತಪಸ್ವಿಗಳ ತಪಸ್ಸನ್ನು ಭ್ರಷ್ಟಗೊಳಿಸುವ ಈ ಅನುಪಮವಾದ ರೂಪ-ಲಾವಣ್ಯಗಳನ್ನು ನೀನು ಯಾವ ತಪಸ್ಸಿನ ಪ್ರಭಾವದಿಂದ ಪಡೆದಿರುವೆ? ಮಿತ್ರನೇ! ಇಲ್ಲಿಗೆ ಬಾ! ಕೆಲವು ದಿನಗಳವರೆಗೆ ನನ್ನೊಡನೆ ಇದ್ದು ತಪಸ್ಸುಮಾಡು. ಅಥವಾ ವಿಶ್ವವನ್ನು ವಿಸ್ತರಿಸುವ ಇಚ್ಛೆಯಿಂದ ಎಲ್ಲಾದರೂ ಬ್ರಹ್ಮದೇವರೇ ನನ್ನ ಮೇಲೆ ಕೃಪೆ ಮಾಡಿರಬಹುದೇ? ॥ ೧೫ ॥ ನಿಜವಾಗಿ ನೀನು ಬ್ರಹ್ಮದೇವರು ಕರುಣಿಸಿದ ಪ್ರಿಯ ಕೊಡುಗೆಯೇ ಆಗಿರುವೆ. ಈಗ ನಾನು ನಿನ್ನನ್ನು ಬಿಟ್ಟಿರಲಾರೆ. ನಿನ್ನಲ್ಲಿ ನನ್ನ ಮನಸ್ಸು ಮತ್ತು ಕಣ್ಣುಗಳು ಬೇರೆಲ್ಲಿಗೂ ಹೋಗಲು ಬಯಸದಷ್ಟು ನೆಟ್ಟುಹೋಗಿವೆ. ಮನೋಹರವಾದ ಕೊಂಬುಗಳುಳ್ಳವಳೇ! ನಿನಗೆ ಮನಸ್ಸು ಬಂದಲ್ಲಿಗೆ ನನ್ನನ್ನು ಕರಕೊಂಡುಹೋಗು. ನಾನಾದರೋ ನಿನ್ನ ಅನುಚರನು. ನಿನ್ನ ಈ ಮಂಗಳಮಯರಾದ ಸಖಿಯರೂ ನಮ್ಮೊಡನೆ ಇರಲಿ. ॥ ೧೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜೇಂದ್ರಾ! ಆಗ್ನೀಧ್ರನು ದೇವತೆಗಳಂತೆ ಬುದ್ಧಿವಂತನೂ, ಸ್ತ್ರೀಯರನ್ನು ಪ್ರಸನ್ನಗೊಳಿಸುವುದರಲ್ಲಿ ಅತಿಕುಶಲನೂ ಆಗಿದ್ದನು. ಅವನು ಈ ರೀತಿಯಲ್ಲಿ ರತಿಚಾತುರ್ಯದಿಂದ ಕೂಡಿದ ಸವಿಮಾತುಗಳಿಂದ ಆ ಅಪ್ಸರೆಯನ್ನು ಒಲಿಸಿಕೊಂಡನು. ॥ ೧೭ ॥ ವೀರಾಧಿವೀರರಲ್ಲಿ ಅಗ್ರಗಣ್ಯನಾದ ಆಗ್ನೀಧ್ರನ ಬುದ್ಧಿ, ಶೀಲ, ರೂಪ, ವಯಸ್ಸು, ಕಾಂತಿ ಔದಾರ್ಯಗಳಿಗೆ ಆಕರ್ಷಿತಳಾದ ಆ ಪೂರ್ವಚಿತ್ತಿಯು ಜಂಬೂದ್ವೀಪಾಧಿಪತಿಯೊಡನೆ ಅನೇಕ ಸಾವಿರವರ್ಷಗಳವರೆಗೆ ಪೃಥ್ವಿ ಮತ್ತು ಸ್ವರ್ಗದ ಭೋಗಗಳನ್ನು ಅನುಭವಿಸುತ್ತಿದ್ದಳು. ॥ ೧೮ ॥ ಅನಂತರ ಆಗ್ನೀಧ್ರನು ಆಕೆಯ ಗರ್ಭದಿಂದ ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ ಮತ್ತು ಕೇತುಮಾಲ ಎಂಬ ಒಂಭತ್ತು ಪುತ್ರರನ್ನು ಪಡೆದನು. ॥ ೧೯ ॥

ಪೂರ್ವಚಿತ್ತಿಯು ಹೀಗೆ ವರ್ಷಕ್ಕೆ ಒಬ್ಬರಂತೆ ಒಂಭತ್ತು ಮಂದಿ ಪುತ್ರರನ್ನು ಪಡೆದು, ಅವರನ್ನು ಆಗ್ನೀಧ್ರನ ಅರಮನೆಯಲ್ಲೇ ಬಿಟ್ಟು ತಾನು ಬ್ರಹ್ಮಲೋಕಕ್ಕೆ ತೆರಳಿ ಅಲ್ಲಿ ಬ್ರಹ್ಮದೇವರ ಸೇವೆಯಲ್ಲಿ

ಸಾ ಸೂತ್ವಾಥ ಸುತಾನ್ನವಾನುವತ್ಸರಂ ಗೃಹ ಏವಾಪಹಾಯ ಪೂರ್ವಚಿತ್ತಿರ್ಭೂಯ ಏವಾಜಂ ದೇವಮುಪತಸ್ಥೇ ॥ ೨೦ ॥ ಆಗ್ನೀಧ್ರಸುತಾಸ್ತೇ ಮಾತುರನುಗ್ರಹಾದೌತ್ಪತ್ತಿಕೇನೈವ ಸಂಹನನಬಲೋಪೇತಾಃ ಪಿತ್ರಾ ವಿಭಕ್ತಾ ಆತ್ಮತುಲ್ಯನಾಮಾನಿ ಯಥಾಭಾಗಂ ಜಂಬೂದ್ವೀಪವರ್ಷಾಣಿ ಬುಭುಜುಃ ॥ ೨೧ ॥ ಆಗ್ನೀಧ್ರೋ ರಾಜಾತೃಪ್ತಃ ಕಾಮಾನಾಮಪ್ಸರಸಮೇವಾನುದಿನಮಧಿಮನ್ಯಮಾನಸ್ತಸ್ಯಾಃ ಸಲೋಕತಾಂ ಶ್ರುತಿಭಿರವಾರುಂಧ ಯತ್ರ ಪಿತರೋ ಮಾದಯಂತೇ ॥ ೨೨ ॥ ಸಂಪರೇತೇ ಪಿತರಿ ನವ ಭ್ರಾತರೋ ಮೇರುದುಹಿತೄರ್ಮೇರುದೇವೀಂ ಪ್ರತಿರೂಪಾಮುಗ್ರದಂಷ್ಟ್ರೀಂ ಲತಾಂ ರಮ್ಯಾಂ ಶ್ಯಾಮಾಂ ನಾರೀಂ ಭದ್ರಾಂ ದೇವವೀತಿಮಿತಿಸಂಜ್ಞಾ ನವೋದವಹನ್ ॥ ೨೩ ॥

ತೊಡಗಿದಳು. ॥ ೨೦ ॥ ಆಗ್ನೀಧ್ರನ ಆ ಪುತ್ರರು ತಾಯಿಯ ಅನುಗ್ರಹದಿಂದ ಸ್ವಾಭಾವಿಕವಾಗಿಯೇ ಸುಂದರ ಸುದೃಢ ದೇಹ-ಪರಾಕ್ರಮಗಳಿಂದ ಸಂಪನ್ನರಾಗಿದ್ದರು. ಆಗ್ನೀಧ್ರನು ಜಂಬೂದ್ವೀಪವನ್ನು ವಿಂಗಡಿಸಿ, ಆಯಾಪುತ್ರರ ಹೆಸರಿನಿಂದಲೇ ಕರೆಯಲ್ಪಡುವ ಒಂಭತ್ತು ವರ್ಷ (ಭೂಖಂಡ)ಗಳನ್ನಾಗಿ ಮಾಡಿ ಅವುಗಳನ್ನು ಆಯಾ ಪುತ್ರರಿಗೆ ಒಪ್ಪಿಸಿದನು. ಅವರೆಲ್ಲರೂ ತಮ್ಮ-ತಮ್ಮ ವರ್ಷಗಳಲ್ಲಿ ಆಧಿಪತ್ಯವನ್ನು ಅನುಭವಿಸ ತೊಡಗಿದರು. ॥ ೨೧ ॥ ಮಹಾರಾಜಾ ಆಗ್ನೀಧ್ರನಿಗೆ ಪ್ರತಿದಿನವೂ ಭೋಗಗಳನ್ನು ಅನುಭವಿಸುತ್ತಿದ್ದರೂ ಅವುಗಳಿಂದ ತೃಪ್ತಿಯುಂಟಾಗಲಿಲ್ಲ. ಆತನು ಆ ಅಪ್ಸರೆಯನ್ನೇ ಪರಮಪುರುಷಾರ್ಥವೆಂದು ಭಾವಿಸಿಕೊಂಡಿದ್ದನು. ಅದಕ್ಕಾಗಿ ಅವನು ವೈದಿಕ ಕರ್ಮಗಳ ಮೂಲಕ ಪಿತೃಗಣಗಳು ತಮ್ಮ ಸುಕೃತಗಳಿಗೆ ಅನುಸಾರವಾಗಿ ಬಗೆ-ಬಗೆಯ ಸುಖ-ಭೋಗಗಳನ್ನು ಅನುಭವಿಸುತ್ತಿರುವ ದಿವ್ಯಲೋಕವನ್ನು ಪಡೆದುಕೊಂಡನು. ॥ ೨೨ ॥ ತಂದೆಯು ಪರಲೋಕಕ್ಕೆ ತೆರಳಿದನಂತರ ನಾಭಿಯೇ ಮುಂತಾದ ಒಂಭತ್ತುಮಂದಿ ಸೋದರರು ಮೇರುವಿನ ಪುತ್ರಿಯರಾಗಿದ್ದ ಮೇರುದೇವೀ, ಪ್ರತಿರೂಪಾ, ಉಗ್ರದಂಷ್ಟ್ರೀ, ಲತಾ, ರಮ್ಯಾ, ಶ್ಯಾಮಾ, ನಾರೀ, ಭದ್ರಾ ಮತ್ತು ದೇವವೀತಿ ಎಂಬ ಒಂಭತ್ತು ಮಂದಿ ಕನ್ಯೆಯರನ್ನು ವಿವಾಹವಾದರು. ॥ ೨೩ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಆಗ್ನೀಧ್ರವರ್ಣನಂ ನಾಮ ದ್ವಿತೀಯೋಽಧ್ಯಾಯಃ ॥ ೨ ॥**

# ಮೂರನೆಯ ಅಧ್ಯಾಯ

## ನಾಭಿಮಹಾರಾಜನ ಚರಿತ್ರೆ

*ಶ್ರೀಶುಕ ಉವಾಚ*

ನಾಭಿರಪತ್ಯಕಾಮೋಽಪ್ರಜಯಾ ಮೇರುದೇವ್ಯಾ ಭಗವಂತಂ ಯಜ್ಞಪುರುಷಮವಹಿತಾತ್ಮಾಯಜತ ॥ ೧ ॥ ತಸ್ಯ ಹ ವಾವ ಶ್ರದ್ಧಯಾ ವಿಶುದ್ಧಭಾವೇನ ಯಜತಃ ಪ್ರವರ್ಗ್ಯೇಷು ಪ್ರಚರತ್ಸು ದ್ರವ್ಯದೇಶಕಾಲಮಂತ್ರರ್ತ್ವಿಗ್ದಕ್ಷಿಣಾವಿಧಾನಯೋಗೋಪಪತ್ತ್ಯಾ ದುರಧಿಗಮೋಽಪಿ ಭಗವಾನ್ ಭಾಗವತವಾತ್ಸಲ್ಯತಯಾ ಸುಪ್ರತೀಕ ಆತ್ಮಾನಮಪರಾಜಿತಂ ನಿಜಜನಾಭಿಪ್ರೇತಾರ್ಥವಿಧಿತ್ಸಯಾ ಗೃಹೀತಹೃದಯೋ ಹೃದಯಂಗಮಂ ಮನೋನಯನಾನಂದನಾವಯವಾಭಿರಾಮಮಾವಿಶ್ಚಕಾರ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರನೇ! ಆಗ್ನೀಧ್ರನ ಪುತ್ರನಾದ ನಾಭಿಮಹಾರಾಜನಿಗೆ ಸಂತಾನವಿರಲಿಲ್ಲ. ಅದಕ್ಕಾಗಿ ಅವನು ತನ್ನ ಭಾರ್ಯೆಯಾದ ಮೇರುದೇವಿಯೊಂದಿಗೆ ಪುತ್ರಕಾಮನೆಯಿಂದ ಏಕಾಗ್ರವಾದ ಮನಸ್ಸಿನಿಂದ ಭಗವಾನ್ ಯಜ್ಞಪುರುಷನನ್ನು ಆರಾಧಿಸಿದನು. ॥ ೧ ॥ ಸುಂದರಾಂಗನಾದ ಶ್ರೀಭಗವಂತನು – ದ್ರವ್ಯ, ದೇಶ, ಕಾಲ, ಮಂತ್ರ, ಋತ್ವಿಜ, ದಕ್ಷಿಣೆ ಮತ್ತು ವಿಧಿ ಮುಂತಾದ ಯಜ್ಞದ ಸಾಧನೆಗಳಿಂದ ಸಹಜವಾಗಿ ದೊರಕುವವನಲ್ಲವಾದರೂ ಅವನು ಭಕ್ತರ ಮೇಲೆ ಕೃಪೆ ಮಾಡುವವನಾಗಿದ್ದಾನೆ. ಅದಕ್ಕಾಗಿ ನಾಭಿಮಹಾರಾಜನು ಶ್ರದ್ಧೆಯಿಂದ ವಿಶುದ್ಧಭಾವದಿಂದ ಅವನ ಆರಾಧನೆಯನ್ನು ಮಾಡಿದಾಗ ಅವನ ಚಿತ್ತವು ತನ್ನ ಭಕ್ತನ ಅಭೀಷ್ಟವನ್ನು ಈಡೇರಿಸಲು ಉತ್ಸುಕವಾಯಿತು. ಅವನ ಸ್ವರೂಪವು ಸರ್ವಥಾ ಸ್ವತಂತ್ರವಾಗಿದ್ದರೂ ಅವನು ಪ್ರವರ್ಗ್ಯವೆಂಬ ಕರ್ಮದ ಅನುಷ್ಠಾನ ನಡೆಯುತ್ತಿದ್ದಾಗ ಕಣ್ಮನಗಳಿಗೆ ಆನಂದವನ್ನು ಈಯುವ ಅವಯವಗಳಿಂದ ಕೂಡಿ ಅವನು ಅತಿಸುಂದರವಾದ ಹೃದಯವನ್ನು ಸೂರೆಗೊಳ್ಳುವ ದಿವ್ಯ ಮಂಗಳ

**ಅಥ ಹ ತಮಾವಿಷ್ಕೃತಭುಜಯುಗಲದ್ವಯಂ ಹಿರಣ್ಮಯಂ ಪುರುಷವಿಶೇಷಂ ಕಪಿಶಕೌಶೇಯಾಂಬರಧರಮುರಸಿ ವಿಲಸಚ್ಛ್ರೀವತ್ಸಲಲಾಮಂ ದರವರವನರುಹವನಮಾಲಾಚ್ಛೂರ್ಯಮೃತಮಣಿಗದಾದಿಭಿರುಪಲಕ್ಷಿತಂ ಸ್ಫುಟಕಿರಣಪ್ರವರಮುಕುಟಕುಂಡಲಕಟಕಕಟಿಸೂತ್ರಹಾರಕೇಯೂರನೂಪುರಾದ್ಯಂಗಭೂಷಣವಿಭೂಷಿತಮೃತ್ವಿಕ್ಸದಸ್ಯಗೃಹಪತಯೋಽಧನಾ ಇವೋತ್ತಮಧನಮುಪಲಭ್ಯ ಸಬಹುಮಾನಮರ್ಹಣೇನಾವನತಶೀರ್ಷಾಣ ಉಪತಸ್ಥುಃ ॥ ೩ ॥**

ವಿಗ್ರಹದೊಡನೆ ಅಲ್ಲಿ ಪ್ರಕಟಗೊಂಡನು. ॥ ೨ ॥ ಶ್ರೀಸ್ವಾಮಿಯು ಹೊಂಬಣ್ಣದ ಪೀತಾಂಬರವನ್ನು ಧರಿಸಿದ್ದನು. ಆತನ ವಕ್ಷಸ್ಥಳದಲ್ಲಿ ಸುಮನೋಹರವಾದ ಶ್ರೀವತ್ಸಲಾಂಛನ ಶೋಭಿಸುತ್ತಿತ್ತು. ಭುಜಗಳಲ್ಲಿ ಶಂಖ, ಚಕ್ರ, ಗದೆ, ಪದ್ಮಗಳೂ ಹಾಗೂ ಕೊರಳಲ್ಲಿ ವನಮಾಲೆಯೂ, ಕೌಸ್ತುಭಮಣಿಯೂ ಶೋಭಿಸುತ್ತಿದ್ದವು. ಅವನ ಇಡೀ ಶರೀರವು – ಅಂಗ ಪ್ರತ್ಯಂಗಗಳ ಕಾಂತಿಯನ್ನು ಹೆಚ್ಚಿಸುತ್ತಿದ್ದ ಕಿರಣಜಾಲಗಳಿಂದ ಮಂಡಿತವಾಗಿ ಮಣಿಮಯವಾಗಿದ್ದ ಕಿರೀಟ, ಕುಂಡಲ, ಕಂಕಣ, ಉಡಿದಾರ, ಹಾರ, ತೋಳ್ಬಳೆ, ನೂಪುರ ಮುಂತಾದ ಭೂಷಣಗಳಿಂದ ಭೂಷಿತವಾಗಿತ್ತು. ಇಂತಹ ಪರಮತೇಜಸ್ವಿಯಾದ ಚತುರ್ಭುಜನಾದ ಪರಮಪುರುಷನ ಶ್ರೀಮೂರ್ತಿಯನ್ನು ಪ್ರತ್ಯಕ್ಷವಾಗಿ ಕಂಡೊಡನೆಯೇ ಋತ್ವಿಜರು, ಸದಸ್ಯರು ಮತ್ತು ಯಜಮಾನರೇ ಮುಂತಾದವರೆಲ್ಲರೂ ಧನರಾಶಿಯನ್ನು ಪಡೆದ ಕಡುಬಡವನಂತೆ ಪರಮಾನಂದದಿಂದ ಹಿರಿ-ಹಿರಿ ಹಿಗ್ಗಿದರು. ಅನಂತರ ಎಲ್ಲರೂ ತಲೆಬಾಗಿ ಅತ್ಯಂತ ಆದರದಿಂದ ಪ್ರಭುವನ್ನು ಅರ್ಘ್ಯಾದಿಗಳಿಂದ ಆರಾಧಿಸಿದರು. ಋತ್ವಿಜರು ಅವನನ್ನು ಸ್ತುತಿಸತೊಡಗಿದರು. ॥ ೩ ॥

*ಋತ್ವಿಜ ಊಚುಃ*

**ಅರ್ಹಸಿ ಮುಹುರರ್ಹತ್ತಮಾರ್ಹಣಮಸ್ಮಾಕಮನುಪಥಾನಾಂ ನಮೋ ನಮ ಇತ್ಯೇತಾವತ್ಸದುಪಶಿಕ್ಷಿತಂ ಕೋಽರ್ಹತಿ ಪುಮಾನ್ ಪ್ರಕೃತಿಗುಣವ್ಯತಿಕರಮತಿರನೀಶ ಈಶ್ವರಸ್ಯ ಪರಸ್ಯ ಪ್ರಕೃತಿಪುರುಷಯೋರರ್ವಾಕ್ತನಾಭಿರ್ನಾಮರೂಪಾಕೃತಿಭೀ ರೂಪನಿರೂಪಣಮ್ ॥ ೪ ॥ ಸಕಲಜನನಿಕಾಯವೃಜಿನನಿರಸನಶಿವತಮಪ್ರವರಗುಣಗಣೈಕದೇಶಕಥನಾದೃತೇ ॥ ೫ ॥ ಪರಿಜನಾನುರಾಗವಿರಚಿತಶಬಲಸಂಶಬ್ದಸಲಿಲಸಿತಕಿಸಲಯತುಲಸಿಕಾದೂರ್ವಾಂಕುರೈರಪಿ ಸಂಭೃತಯಾ ಸಪರ್ಯಯಾ ಕಿಲ ಪರಮ ಪರಿತುಷ್ಯಸಿ ॥ ೬ ॥**

**ಋತ್ವಿಜರೆಂದರು** – ಎಲೈ ಪೂಜ್ಯತಮನಾದ ಪ್ರಭುವೇ! ನಿನ್ನನ್ನೇ ಅನುಸರಿಸುತ್ತಿರುವ ಭಕ್ತರಾದ ನಮಗೆ ನೀನು ಮತ್ತೆ-ಮತ್ತೆ ಪೂಜನೀಯನಾಗಿದ್ದೀಯೆ. ಆದರೆ ನಿನ್ನನ್ನು ಪೂಜಿಸಲು ನಾವೇನು ಬಲ್ಲೆವು ? ಮಹಾಪುರುಷರು ನಮಗೆ ನಿನ್ನನ್ನು ಕುರಿತು 'ನಮೋ ನಮಃ' ಎಂಬುದನ್ನು ಮಾತ್ರ ಕಲಿಸಿಕೊಟ್ಟಿದ್ದಾರೆ. ನಮ್ಮ ಈ ವಂದನೆಯನ್ನೇ ಪೂಜೆಯೆಂದು ಸ್ವೀಕರಿಸು. ಸ್ವಾಮಿ ! ನೀನು ಪ್ರಕೃತಿಯನ್ನು ಪುರುಷನನ್ನು ಮೀರಿ ಅವುಗಳಿಗೆ ನಿಯಾಮಕನಾಗಿರುವವನು. ಅಪ್ರಾಕೃತನಾಗಿರುವ ಸಾಕ್ಷಾತ್ ಪರಮೇಶ್ವರನು. ಹೀಗಿರುವಾಗ ಪ್ರಾಕೃತ ಗುಣಗಳ ಕಾರ್ಯವಾಗಿರುವ ಈ ಪ್ರಪಂಚದಲ್ಲಿ ಬುದ್ಧಿಯು ಸಿಕ್ಕಿಕೊಂಡಿರುವುದರಿಂದ ನಿನ್ನ ಗುಣಗಳನ್ನು ಗಾನಮಾಡಲು ಅತ್ಯಂತ ಅಸಮರ್ಥನಾಗಿರುವ ಯಾವ ಪುರುಷನು ತಾನೇ ಪ್ರಾಕೃತವಾದ ನಾಮ, ರೂಪ, ಆಕೃತಿಗಳ ಮೂಲಕ ನಿನ್ನ ಸ್ವರೂಪವನ್ನು ನಿರೂಪಿಸಿಯಾನು ? ॥ ೪ ॥ ನಿನ್ನ ಪರಮ ಮಂಗಲಮಯ ಗುಣಗಳು ಎಲ್ಲ ಜನರ ದುಃಖಗಳನ್ನು ಹೋಗಲಾಡಿಸುವಂತಹುದು. ಯಾರಾದರೂ ಅದನ್ನು ವರ್ಣಿಸುವ ಸಾಹಸ ಮಾಡಿದರೆ ಕೇವಲ ಅತ್ಯಲ್ಪಭಾಗವನ್ನು ಮಾತ್ರ ವರ್ಣಿಸಬಲ್ಲನು. ॥ ೫ ॥ ಆದರೆ ಪ್ರಭುವೇ ! ನಿನ್ನ ಭಕ್ತರು ಪ್ರೇಮದಿಂದ ಗದ್ಗದವಾದ ವಾಣಿಯಿಂದ ಸ್ತುತಿಸುತ್ತಾ ಸಾಮಾನ್ಯವಾದ ನೀರು, ಶುದ್ಧವಾದ ಎಳೆ ತುಲಸೀದಳ ಮತ್ತು ಗರಿಕೆಗಳೇ ಮುಂತಾದ ಸಾಮಗ್ರಿಗಳಿಂದ ಪೂಜೆಮಾಡಿದರೂ ನೀನು ಅತ್ಯಂತ ಸಂತೋಷಪಡುವೆ. ॥ ೬ ॥

**ಅಥಾನಯಾಪಿ ನ ಭವತ ಇಜ್ಯಯೋರುಭಾರಭರಯಾ ಸಮುಚಿತಮರ್ಥಮಿಹೋಪಲಭಾಮಹೇ ॥ ೭ ॥ ಆತ್ಮನ ಏವಾನುಸವನಮಂಜಸಾವ್ಯತಿರೇಕೇಣ ಬೋಭೂಯಮಾನಾಶೇಷಪುರುಷಾರ್ಥಸ್ವರೂಪಸ್ಯ ಕಿಂತು ನಾಥಾಶಿಷ**

ಭಕ್ತಿಯೊಂದು ಇಲ್ಲದೆ ಇದ್ದ ಪಕ್ಷದಲ್ಲಿ ಈ ದ್ರವ್ಯ-ಕಾಲಗಳೇ ಮುಂತಾದ ಅನೇಕ ಅಂಗಗಳುಳ್ಳ ಯಜ್ಞದಿಂದಲೂ ನಿನಗೆ ಯಾವ ಪ್ರಯೋಜನವೂ ಇಲ್ಲವೆಂದು ನಾವು ಬಲ್ಲೆವು. ॥ ೭ ॥ ಏಕೆಂದರೆ, ತನಗೆ ತಾನೇ ಸದಾ ಸಂಪೂರ್ಣವಾಗಿ ಬೆಳಗುತ್ತಿರುವ ಸಮಸ್ತ ಪುರುಷಾರ್ಥಸ್ವರೂಪವಾದ ಯಾವ ಪರಮಾನಂದ ವಿದೆಯೋ ಆ ಪರಮಾನಂದದ ಸಾಕ್ಷಾತ್ ಸ್ವರೂಪವೇ ನೀನು. ನಿನಗೆ ಈ ಪೂಜಾದಿ

ಆಶಾಸಾನಾನಾಮೇತದಭಿಸಂರಾಧನಮಾತ್ರಂ ಭವಿತುಮರ್ಹತಿ ॥ ೮ ॥ ತದ್ಯಥಾ ಬಾಲಿಶಾನಾಂ ಸ್ವಯಮಾತ್ಮನಃ ಶ್ರೇಯಃ ಪರಮವಿದುಷಾಂ ಪರಮಪರಮಪುರುಷಪ್ರಕರ್ಷಕರುಣಯಾ ಸ್ವಮಹಿಮಾನಂ ಚಾಪವರ್ಗಾಖ್ಯಮುಪಕಲ್ಪಯಿಷ್ಯನ್ ಸ್ವಯಂ ನಾಪಚಿತ ಏವೇತರವದಿಹೋಪಲಕ್ಷಿತಃ ॥ ೯ ॥ ಅಥಾಯಮೇವ ವರೋ ಹ್ಯರ್ಹತ್ತಮ ಯರ್ಹಿ ಬರ್ಹಿಷಿ ರಾಜರ್ಷೇರ್ವರದರ್ಷಭೋಭವಾನ್ನಿಜಪುರುಷೇಕ್ಷಣವಿಷಯ ಆಸೀತ್ ॥ ೧೦ ॥

ಗಳಿಂದ ಯಾವುದೇ ಪ್ರಯೋಜನವೂ ಇಲ್ಲದಿದ್ದರೂ ಅನೇಕ ಪ್ರಕಾರದ ಕಾಮನೆಗಳ ಸಿದ್ಧಿಯನ್ನು ಬಯಸುವ ನಮ್ಮಂತಹವರಿಗೆ ಮನೋರಥಸಿದ್ಧಿಯ ಸಾಧನೆ ಇದೇ ಆಗಿದೆ. ॥ ೮ ॥ ನೀನು ಬ್ರಹ್ಮದೇವರೇ ಮುಂತಾದ ಪರಮಪುರುಷರಿಗಿಂತಲೂ ಪರಮಶ್ರೇಷ್ಠನಾಗಿರುವೆ. ನಮ್ಮ ಪರಮ ಶ್ರೇಯಸ್ಸು ಯಾವುದರಲ್ಲಿದೆ ಎಂಬುನ್ನು ನಾವು ಅರಿಯೆವು. ಯಥೋಚಿತವಾದ ನಿನ್ನ ಪೂಜೆಯೂ ನಮ್ಮಿಂದ ನಡೆಯಲಿಲ್ಲ. ಆದರೂ ತತ್ತ್ವಜ್ಞರಾದ ಪುರುಷರು ಕರೆಯದೇ ಕೇವಲ ಕರುಣಾವಶರಾಗಿ ಅಜ್ಞಾನಿಗಳ ಬಳಿಗೆ ಹೋಗುವಂತೆ ನೀನೂ ಕೂಡ ನಮಗೆ ಮೋಕ್ಷವೆಂಬ ತನ್ನ ಪರಮಪದವನ್ನು ಮತ್ತು ನಮ್ಮ ಅಭೀಷ್ಟ ವಸ್ತುಗಳನ್ನು ಕರುಣಿಸಲಿಕ್ಕಾಗಿ ಬೇರೆ ಸಾಧಾರಣ ಯಜ್ಞದರ್ಶಕರಂತೆ ಇಲ್ಲಿ ಪ್ರಕಟನಾಗಿರುವೆ. ॥ ೯ ॥ ಪೂಜ್ಯತಮನಾದ ಪರಮಾತ್ಮನೇ! ಬ್ರಹ್ಮಾದಿ ಸಮಸ್ತ ವರಪ್ರದರಲ್ಲಿಯೂ ಶ್ರೇಷ್ಠನಾಗಿದ್ದರೂ ನೀನು ರಾಜರ್ಷಿ ನಾಭಿಯ ಈ ಯಜ್ಞಶಾಲೆಯಲ್ಲಿ ಸಾಕ್ಷಾತ್ ನಮ್ಮ ಕಣ್ಣುಗಳ ಮುಂದೆ ಪ್ರಕಟನಾಗಿರುವೆಯಲ್ಲ! ಇದೇ ನಮಗೆ ಎಲ್ಲಕ್ಕಿಂತ ದೊಡ್ಡ ವರವನ್ನು ನೀನು ಕೊಟ್ಟಿರುವೆ. ಈಗ ನಾವು ನಿನ್ನಲ್ಲಿ ಬೇರೆ ಯಾವ ವರವನ್ನು ಬೇಡಲಿ ? ॥ ೧೦ ॥

ಅಸಂಗನಿಶಿತಜ್ಞಾನಾನಲವಿಧೂತಾಶೇಷಮಲಾನಾಂ ಭವತ್ ಸ್ವಭಾವಾನಾಮಾತ್ಮಾರಾಮಾಣಾಂ ಮುನೀನಾಮನವರತಪರಿಗುಣಿತಗುಣಗಣ ಪರಮಮಂಗಲಾಯನಗುಣಗಣಕಥನೋಽಸಿ ॥ ೧೧ ॥ ಅಥ ಕಥಂಚಿತ್ ಸ್ಖಲನಕ್ಷುತ್ಪತನಜೃಂಭಣದುರವಸ್ಥಾನಾದಿಷು ವಿವಶಾನಾಂ ನಃ ಸ್ಮರಣಾಯ ಜ್ವರಮರಣದಶಾಯಾಮಪಿ ಸಕಲಕಶ್ಮಲನಿರಸನಾನಿ ತವ ಗುಣಕೃತನಾಮಧೇಯಾನಿ ವಚನಗೋಚರಾಣಿ ಭವಂತು ॥ ೧೨ ॥

ಪ್ರಭೋ! ನಿನ್ನ ಗುಣಗಣಗಳ ಗಾನವು ಪರಮ ಮಂಗಳಮಯವಾದುದು. ವೈರಾಗ್ಯದಿಂದ ಪ್ರಜ್ವಲಿತವಾದ ಜ್ಞಾನಾಗ್ನಿಯ ಮೂಲಕ ತಮ್ಮ ಅಂತಃಕರಣದ ರಾಗ-ದ್ವೇಷಾದಿ ಎಲ್ಲ ದೋಷಗಳನ್ನು ಸುಟ್ಟುಹಾಕಿಕೊಂಡು, ನಿನ್ನಂತೆಯೇ ಪ್ರಶಾಂತಸ್ವಭಾವವಾಗಿರುವ ಆತ್ಮಾರಾಮ ಮುನಿಗಳೂ ಕೂಡ ನಿರಂತರವಾಗಿ ನಿನ್ನ ಗುಣಗಳನ್ನು ಗಾನಮಾಡುತ್ತಿರುತ್ತಾರೆ. ॥ ೧೧ ॥ ಆದ್ದರಿಂದ ಕೆಳಗೆ ಬೀಳುವುದು, ಎಡವುದು, ಸೀನುವುದು, ಆಕಳಿಸುವುದು, ಮಹಾ ಸಂಕಟಕ್ಕೆ ಒಳಗಾಗುವುದು, ಜ್ವರಕ್ಕೆ ತುತ್ತಾಗುವುದು, ಮರಣಕ್ಕೆ ಗುರಿಯಾಗುವುದು ಇವೇ ಮುಂತಾದ ಸಮಯಗಳಲ್ಲಿ ನಿನ್ನ ಸ್ಮರಣೆ ಆಗದಿದ್ದರೂ ಯಾವುದೇ ರೀತಿಯಿಂದ ಸಕಲಕಲಿಮಲನಾಶಕವಾದ 'ಭಕ್ತವತ್ಸಲಾ', 'ದೀನಬಂಧು' ಮುಂತಾದ ಗುಣದ್ಯೋತಕ ನಾಮಗಳನ್ನು ನಾವು ಉಚ್ಚರಿಸುವಂತಾಗಲಿ ಎಂಬುದೇ ನಿನ್ನಲ್ಲಿ ನಾವು ವರವನ್ನು ಬೇಡುತ್ತೇವೆ. ॥ ೧೨ ॥

ಕಿಂಚಾಯಂ ರಾಜರ್ಷಿರಪತ್ಯಕಾಮಃ ಪ್ರಜಾಂ ಭವಾದೃಶೀಮಾಶಾಸಾನ ಈಶ್ವರಮಾಶಿಷಾಂ ಸ್ವರ್ಗಾಪವರ್ಗಯೋರಪಿ ಭವಂತಮುಪಧಾವತಿ ಪ್ರಜಾಯಾಮರ್ಥಪ್ರತ್ಯಯೋ ಧನದಮಿವಾಧನಃ ಫಲೀಕರಣಮ್ ॥ ೧೩ ॥ ಕೋ ವಾ ಇಹ ತೇಽಪರಾಜಿತೋಽಪರಾಜಿತಯಾ ಮಾಯಯಾನವಸಿತಪದವ್ಯಾನಾವೃತಮತಿರ್ವಿಷಯವಿಷರ-

ಇದಲ್ಲದೆ ನಮ್ಮದು ಇನ್ನೂ ಒಂದು ಪ್ರಾರ್ಥನೆಯುಂಟು. ಪ್ರಭುವೇ! ಈ ರಾಜರ್ಷಿನಾಭಿಯು ಸಂತಾನವನ್ನು ಬಯಸುತ್ತಾ ನಿನ್ನಂತಹ ಪುತ್ರನೇ ಬೇಕು ಎಂಬುದಾಗಿ ಆಸೆಪಡುತ್ತಿದ್ದಾನೆ. ನೀನು ಸರ್ವಫಲಪ್ರದನೂ, ಸ್ವರ್ಗ-ಮೋಕ್ಷಗಳನ್ನು ಕೊಡಬಲ್ಲವನೂ ಆಗಿದ್ದೀಯೆ. ಆದರೆ ಕಡುಬಡವನಾದವನು ಕೊಡುಗೈಯುಳ್ಳ ಧನಿಕನ ಬಳಿಗೆ ಹೋದರೂ ಆತನಿಂದ ಹೊಟ್ಟು, ನುಚ್ಚುಗಳನ್ನೇ ಬೇಡಿಕೊಳ್ಳುವಂತೆ ಈ ರಾಜರ್ಷಿಯು ಸಂತಾನವೇ ಪರಮಪುರುಷಾರ್ಥವೆಂದು ತಿಳಿದು ಸರ್ವೇಶ್ವರನಾದ ನಿನ್ನನ್ನು ಅದಕ್ಕೋಸ್ಕರವೇ ಆರಾಧನೆ ಮಾಡುತ್ತಿದ್ದಾನೆ. ॥ ೧೩ ॥ ಇದರಲ್ಲಿ ಆಚ್ಚರಿಯೇನೂ ಇಲ್ಲ. ನಿನ್ನ ಮಾಯೆಯ ಅಂತವನ್ನು ಯಾರೂ ಕಾಣಲಾರರು. ಅದು ಯಾರ ವಶಕ್ಕೂ ಸಿಗುವುದಿಲ್ಲ. ಮಹಾಪುರುಷರ ಪಾದಾರವಿಂದಗಳ ಆಶ್ರಯವನ್ನು ಪಡೆಯದೇ ಇದ್ದ ಯಾವನೂ ಅದಕ್ಕೆ

ಯಾನಾವೃತಪ್ರಕೃತಿರನುಪಾಸಿತಮಹಚ್ಚರಣಃ ॥ ೧೪ ॥ ಯದು ಹ ವಾವ ತವ ಪುನರದಭ್ರಕರ್ತರಿಹ ಸಮಾಹೂತ-ಸ್ತತ್ರಾರ್ಥಧಿಯಾಂ ಮಂದಾನಾಂ ನಸ್ತದ್ಯದ್ದೇವಹೇಲನಂ ದೇವದೇವಾರ್ಹಸಿ ಸಾಮ್ಯೇನ ಸರ್ವಾನ್ ಪ್ರತಿವೋಢು-ಮವಿದುಷಾಮ್ ॥ ೧೫ ॥

*ಶ್ರೀಶುಕ ಉವಾಚ*

ಇತಿ ನಿಗದೇನಾಭಿಷ್ಟೂಯಮಾನೋ ಭಗವಾನನಿಮಿ-ಷರ್ಷಭೋ ವರ್ಷಧರಾಭಿವಾದಿತಾಭಿವಂದಿತಚರಣಃ ಸದಯಮಿದಮಾಹ ॥ ೧೬ ॥

*ಶ್ರೀಭಗವಾನುವಾಚ*

ಅಹೋ ಬತಾಹಮೃಷಯೋ ಭವದ್ಭಿರವಿತಥಗೀರ್ಭಿ-ರ್ವರಮಸುಲಭಮಭಿಯಾಚಿತೋ ಯದಮುಷ್ಯಾತ್ಮಜೋ ಮಯಾ ಸದೃಶೋ ಭೂಯಾದಿತಿ ಮಮಾಹಮೇವಾಭಿ-ರೂಪಃ ಕೈವಲ್ಯಾದಥಾಪಿ ಬ್ರಹ್ಮವಾದೋ ನ ಮೃಷಾ ಭವಿ-ತುಮರ್ಹತಿ ಮಮೈವ ಹಿ ಮುಖಂ ಯದ್ ದ್ವಿಜದೇವ-ಕುಲಮ್ ॥ ೧೭ ॥ ತತ ಆಗ್ನೀಧ್ರೀಯೇಽಂಶಕಲಯಾ-ವತರೀಷ್ಯಾಮ್ಯಾತ್ಮತುಲ್ಯ ಮನುಪಲಭಮಾನಃ ॥ ೧೮ ॥

*ಶ್ರೀಶುಕ ಉವಾಚ*

ಇತಿ ನಿಶಾಮಯಂತ್ಯಾ ಮೇರುದೇವ್ಯಾಃ ಪತಿಮಭಿಧಾ-ಯಾಂತರ್ದಧೇ ಭಗವಾನ್ ॥ ೧೯ ॥ ಬರ್ಹಿಷಿ ತಸ್ಮಿನ್ನೇವ ವಿಷ್ಣುದತ್ತ ಭಗವಾನ್ಪರಮರ್ಷಿಭಿಃ ಪ್ರಸಾದಿತೋ ನಾಭೇಃ ಪ್ರಿಯಚಿಕೀರ್ಷಯಾ ತದವರೋಧಾಯನೇ ಮೇರುದೇ-ವ್ಯಾಂ ಧರ್ಮಾಂದರ್ಶಯಿತುಕಾಮೋ ವಾತರಶನಾನಾಂ ಶ್ರಮಣಾನಾಮೃಷೀಣಾಮೂರ್ಧ್ವ ಮಂಥಿನಾಂ ಶುಕ್ಲಯಾ ತನುವಾವತತಾರ ॥ ೨೦ ॥

ವಶನಾಗದೆ ಇರಲಾರನು. ತನ್ನ ಬುದ್ಧಿಯ ಮೇಲೆ ಅದರ ತೆರೆಯು ಬೀಳದಂತೆ ಮಾಡಲಾರನು. ವಿಷಯವೆಂಬ ವಿಷದ ವೇಗದಿಂದ ತನ್ನ ಸ್ವಭಾವವು ದೂಷಿತವಾಗದಂತೆ ಮಾಡಿಕೊಳ್ಳಲಾರನು. ॥ ೧೪ ॥ ಓ ದೇವದೇವನೇ! ನೀನು ಭಕ್ತರ ಮಹಾ-ಮಹಾ ಕಾರ್ಯಗಳನ್ನೂ ಮಾಡಿಕೊಡುವ ಸರ್ವಶಕ್ತನು. ಮಂದಮತಿಗಳಾದ ನಾವು ಕಾಮನೆಗೆ ವಶರಾಗಿ ಈ ಅಲ್ಪಕಾರ್ಯಕ್ಕಾಗಿ ನಿನ್ನನ್ನು ಆವಾಹನೆಮಾಡಿ ನಿನಗೆ ಅಗೌರವ ತೋರಿದ್ದೇವೆ. ಆದರೆ ನೀನು ಸಮದರ್ಶಿಯಾದುದರಿಂದ ಅಜ್ಞಾನಿಗಳಾದ ನಮ್ಮ ಈ ದಿಟ್ಟತನವನ್ನು ಕ್ಷಮಿಸಬೇಕು, ಭಗವಂತನೇ! ॥ ೧೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜನೇ! ವರ್ಷಾಧಿಪತಿಯಾದ ನಾಭಿಮಹಾರಾಜನ ಪೂಜ್ಯರಾದ ಋತ್ವಿಜರು ಪ್ರಭುವಿನ ಅಡಿಗಳಿಗೆ ಎರಗಿ ಹೀಗೆ ಪ್ರಾರ್ಥನೆಮಾಡಲು ದೇವದೇವೋತ್ತಮನಾದ ಶ್ರೀಭಗವಂತನು ಕರುಣೆಯಿಂದ ಹೀಗೆ ಅಪ್ಪಣೆ ಕೊಡಿಸಿದನು. ॥ ೧೬ ॥

**ಶ್ರೀಭಗವಂತನು ಹೇಳಿದನು** – ಎಲೈ ಋಷಿಗಳೇ! ನೀವು ಸತ್ಯವಾದಿಗಳಾದ ಮಹಾತ್ಮರು. ಆದರೆ ರಾಜರ್ಷಿನಾಭಿಗೆ ನನ್ನಂತಹ ಪುತ್ರನು ಹುಟ್ಟಬೇಕು ಎಂಬ ದುರ್ಲಭವಾದ ವರವನ್ನು ಬೇಡಿದಿರಲ್ಲ, ಮುನಿಗಳೇ! ನನಗೆ ಸಮಾನನಾದರೋ ನಾನೇ ಆಗಿದ್ದೇನೆ. ಏಕೆಂದರೆ, ನಾನು ಅದ್ವಿತೀಯನಾಗಿದ್ದೇನೆ. ಆದರೂ ಬ್ರಾಹ್ಮಣರ ವಚನವು ಸುಳ್ಳಾಗಬಾರದು. ದ್ವಿಜಕುಲವು ನನ್ನದೇ ಮುಖವಾಗಿದ್ದಾರಲ್ಲ. ॥ ೧೭ ॥ ಅದಕ್ಕಾಗಿ ನಾನು ಸ್ವತಃ ನನ್ನ ಅಂಶಕಲೆಯಿಂದ ಆಗ್ನೀಧ್ರನಂದನ ನಾಭಿಯ ಮನೆಯಲ್ಲಿ ಅವತರಿಸುವೆನು. ಏಕೆಂದರೆ, ನನಗೆ ಸಮಾನರಾದವರು ಬೇರಾರೂ ಇಲ್ಲ. ॥ ೧೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಶ್ರೀಭಗವಂತನು ಮೇರುದೇವಿಯು ಕೇಳುವಂತೆ ಆಕೆಯ ಪತಿಗೆ ಹೀಗೆ ಹೇಳಿ ಅಂತರ್ಧಾನ ಹೊಂದಿದನು. ॥ ೧೯ ॥ ವಿಷ್ಣುದತ್ತ ಪರೀಕ್ಷಿತನೇ! ಹೀಗೆ ಯಜ್ಞದಲ್ಲಿ ಮಹರ್ಷಿಗಳಿಂದ ಪ್ರಸನ್ನಗೊಳಿಸಲ್ಪಟ್ಟ ಶ್ರೀಭಗವಂತನು ನಾಭಿಮಹಾರಾಜನಿಗೆ ಪ್ರಿಯವನ್ನುಂಟುಮಾಡಲು ಆತನ ಮಹಾರಾಣಿ ಮೇರುದೇವಿಯ ಗರ್ಭದಲ್ಲಿ ಶ್ರಮಣ (ದಿಗಂಬರ) ಸಂನ್ಯಾಸಿಗಳ ಮತ್ತು ನೈಷ್ಠಿಕ ಬ್ರಹ್ಮಚರ್ಯವುಳ್ಳ ಮುನಿಗಳ ಧರ್ಮವನ್ನು ಪ್ರಕಟಪಡಿಸಲಿಕ್ಕಾಗಿ ತನ್ನ ಶುದ್ಧ ಸತ್ತ್ವಮಯವಾದ ವಿಗ್ರಹದಿಂದ ಆವಿರ್ಭವಿಸಿದನು. ॥ ೨೦ ॥

*ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ನಾಭಿಚರಿತೇ ಋಷಭಾವತಾರೋ ನಾಮ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ಋಷಭದೇವರ ಮಹಿಮೆ – ರಾಜ್ಯಶಾಸನ

*ಶ್ರೀಶುಕ ಉವಾಚ*

**ಅಥ ಹ ತಮುತ್ಪತ್ತ್ಯೈವಾಭಿವ್ಯಜ್ಯಮಾನಭಗವಲ್ಲಕ್ಷಣಂ ಸಾಮ್ಯೋಪಶಮವೈರಾಗ್ಯೈಶ್ವರ್ಯಮಹಾವಿಭೂತಿಭಿರನುದಿನಮೇಧಮಾನಾನುಭಾವಂ ಪ್ರಕೃತಯಃ ಪ್ರಜಾ ಬ್ರಾಹ್ಮಣಾ ದೇವತಾಶ್ಚಾವನಿತಲಸಮವನಾಯಾತಿತರಾಂ ಜಗೃಧುಃ ॥ ೧ ॥ ತಸ್ಯ ಹ ವಾ ಇತ್ಥಂ ವರ್ಷ್ಮಣಾ ವರೀಯಸಾ ಬೃಹಚ್ಛ್ಲೋಕೇನ ಚೌಜಸಾ ಬಲೇನ ಶ್ರಿಯಾ ಯಶಸಾ ವೀರ್ಯಶೌರ್ಯಾಭ್ಯಾಂ ಚ ಪಿತಾ ಋಷಭ ಇತೀದಂ ನಾಮ ಚಕಾರ ॥ ೨ ॥**

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ನಾಭಿರಾಜನ ಪುತ್ರನಾಗಿ ಅವತರಿಸಿದವನು ಹುಟ್ಟಿನಿಂದಲೇ ಭಗವಾನ್ ನಾರಾಯಣನ ಚಿಹ್ನೆಗಳಾದ ವಜ್ರ, ಅಂಕುಶ ಮುಂತಾದವುಗಳಿಂದ ಅಲಂಕೃತನಾಗಿದ್ದು, ಶಾಂತಿ, ಸಮತೆ, ವೈರಾಗ್ಯ ಮತ್ತು ಐಶ್ವರ್ಯ ಮುಂತಾದ ದಿವ್ಯ ಲಕ್ಷಣಗಳಿಂದ ದಿನೇ-ದಿನೇ ವೃದ್ಧಿ ಹೊಂದುತ್ತಿದ್ದನು. ಇದನ್ನು ನೋಡಿ ಮಂತ್ರಿ, ಪುರೋಹಿತರೇ ಮುಂತಾದ ಪ್ರಕೃತಿಗಳಿಗೂ (ಮಂತ್ರಿಗಳಿಗೂ), ಪ್ರಜೆಗಳಿಗೂ ಬ್ರಾಹ್ಮಣರಿಗೂ, ದೇವತೆಗಳಿಗೂ ಈತನೇ ಮುಂದೆ ರಾಜನಾಗಿ ಭೂಮಿಯನ್ನು ಆಳಬೇಕೆಂಬ ಉತ್ಕಟವಾದ ಅಭಿಲಾಷೆಯುಂಟಾಯಿತು. ॥ ೧ ॥ ಆ ಶಿಶುವಿನ ಸುಂದರವೂ, ಸುಲಕ್ಷಣವೂ, ಸುದೃಢವೂ ಆದ ದೇಹವನ್ನೂ, ತೇಜಸ್ಸು, ಯಶಸ್ಸು, ಬಲ, ಐಶ್ವರ್ಯ, ಪರಾಕ್ರಮ, ಶೌರ್ಯ, ವೀರ್ಯ ಮುಂತಾದ ಗುಣಗಳಿಂದಾಗಿ ಮಹಾರಾಜಾ ನಾಭಿಯು ಅವನಿಗೆ 'ಋಷಭ' (ಶ್ರೇಷ್ಠ) ಎಂಬ ನಾಮಕರಣ ಮಾಡಿದನು. ॥ ೨ ॥

**ತಸ್ಯ ಹೀಂದ್ರಃ ಸ್ಪರ್ಧಮಾನೋ ಭಗವಾನ್ ವರ್ಷೇ ನ ವವರ್ಷ ತದವಧಾರ್ಯ ಭಗವಾನೃಷಭದೇವೋ ಯೋಗೇಶ್ವರಃ ಪ್ರಹಸ್ಯಾತ್ಮಯೋಗಮಾಯಯಾ ಸ್ವವರ್ಷಮಜನಾಭಂ ನಾಮಾಭ್ಯವರ್ಷತ್ ॥ ೩ ॥ ನಾಭಿಸ್ತು ಯಥಾಭಿಲಷಿತಂ ಸುಪ್ರಜಸ್ತ್ವಮವರುಧ್ಯಾತಿಪ್ರಮೋದಭರವಿಹ್ವಲೋ ಗದ್ಗದಾಕ್ಷರಯಾ ಗಿರಾ ಸ್ವೈರಂ ಗೃಹೀತನರಲೋಕಸಧರ್ಮಂ ಭಗವಂತಂ ಪುರಾಣಪುರುಷಂ ಮಾಯಾವಿಲಸಿತಮತಿರ್ವತ್ಸ ತಾತೇತಿ ಸಾನುರಾಗಮುಪಲಾಲಯನ್ ಪರಾಂ ನಿರ್ವೃತಿಮುಪಗತಃ ॥ ೪ ॥**

ಒಮ್ಮೆ ಭಗವಾನ್ ಇಂದ್ರನು ಅಸೂಯೆಗೊಂಡು ಆತನ ರಾಜ್ಯದಲ್ಲಿ ಮಳೆಯನ್ನೇ ಸುರಿಸಲಿಲ್ಲ. ಆಗ ಯೋಗೇಶ್ವರನಾದ ಭಗವಾನ್ ಋಷಭದೇವನು ಇಂದ್ರನ ಮೂರ್ಖತೆಯ ಬಗ್ಗೆ ನಗುತ್ತಾ ತನ್ನ ಯೋಗಮಾಯೆಯ ಪ್ರಭಾವದಿಂದ ಅಜನಾಭವೆಂಬ ಹೆಸರುಳ್ಳ ತನ್ನ ಭಾರತವರ್ಷದಲ್ಲಿ ಹೇರಳವಾಗಿ ಮಳೆಯನ್ನು ಸುರಿಸಿದನು. ॥ ೩ ॥ ತನ್ನ ಇಚ್ಛೆಗೆ ಅನುಗುಣವಾದ ಶ್ರೇಷ್ಠ ಪುತ್ರನು ದೊರಕಿದುದನ್ನು ಕಂಡು ನಾಭಿಮಹಾರಾಜನಿಗೆ ಪರಮಾನಂದವಾಯಿತು. ತನ್ನ ಸಂಕಲ್ಪದಿಂದಲೇ ಮನುಷ್ಯ-ಶರೀರವನ್ನು ಧರಿಸಿದ್ದ ಆ ಪುರಾಣಪುರುಷನ ಮಾಯಾವಿಲಾಸಕ್ಕೆ ಮರುಳಾಗಿ ಆತನು ಆ ಶಿಶುವನ್ನು ಪ್ರೀತಿಯಿಂದ ಮುದ್ದಿಸುತ್ತಾ ಅಪ್ಪ! ಮಗು! ಎಂದು ಮೃದುವಾಗಿ ಗದ್ಗದ ಕಂಠದಿಂದ ಕರೆಯುತ್ತಾ ಸುಖ ಸಾಗರದಲ್ಲಿ ಓಲಾಡುತ್ತಿದ್ದನು. ॥ ೪ ॥

**ವಿದಿತಾನುರಾಗಮಾಪೌರಪ್ರಕೃತಿ ಜನಪದೋ ರಾಜಾ ನಾಭಿರಾತ್ಮಜಂ ಸಮಯಸೇತುರಕ್ಷಾಯಾಮಭಿಷಿಚ್ಯ ಬ್ರಾಹ್ಮಣೇಷೂಪನಿಧಾಯ ಸಹ ಮೇರುದೇವ್ಯಾ ವಿಶಾಲಾಯಾಂ ಪ್ರಸನ್ನನಿಪುಣೇನ ತಪಸಾ ಸಮಾಧಿಯೋಗೇನ ನರನಾರಾಯಣಾಖ್ಯಂ ಭಗವಂತಂ ವಾಸುದೇವಮುಪಾಸೀನಃ ಕಾಲೇನ ತನ್ಮಹಿಮಾನಮವಾಪ ॥ ೫ ॥**

ಮಂತ್ರಿಮಂಡಲವೂ, ನಾಗರೀಕರೂ ಮತ್ತು ರಾಷ್ಟ್ರದ ಜನತೆಯೂ ಆ ಋಷಭದೇವನನ್ನು ಬಹಳವಾಗಿ ಪ್ರೀತಿಸುವುದನ್ನು ಕಂಡಾಗ ನಾಭಿಮಹಾರಾಜನು ಧರ್ಮಮರ್ಯಾದೆಯ ರಕ್ಷಣೆಗಾಗಿ ಆತನಿಗೆ ರಾಜ್ಯಾಭಿಷೇಕವನ್ನು ಮಾಡಿ ಬ್ರಾಹ್ಮಣರ ವಶಕ್ಕೆ ಒಪ್ಪಿಸಿದನು. ತಾನು ಪತ್ನಿಯಾದ ಮೇರುದೇವಿಯೊಡನೆ ಬದರಿಕಾಶ್ರಮಕ್ಕೆ ತೆರಳಿ, ಅಲ್ಲಿ ಯಾರಿಗೂ ಉದ್ವೇಗವನ್ನು ಉಂಟುಮಾಡದಿರುವ ಅಹಿಂಸಾವೃತ್ತಿಯಿಂದ ಕೂಡಿ, ಕುಶಲತೆಯಿಂದ ತೀವ್ರವಾದ ತಪಸ್ಸನ್ನಾಚರಿಸಿ ಸಮಾಧಿಯೋಗದ ಮೂಲಕ ಭಗವಾನ್ ವಾಸುದೇವನ ನರ-ನಾರಾಯಣರೂಪವನ್ನು ಆರಾಧಿಸುತ್ತಾ ಸಮಯ ಬಂದಾಗ ಭಗವಂತನ ಸ್ವರೂಪದಲ್ಲಿ ಲೀನವಾಗಿ ಹೋದನು. ॥ ೫ ॥

ಯಸ್ಯ ಹ ಪಾಂಡವೇಯ ಶ್ಲೋಕಾವುದಾಹರಂತಿ –

ಕೋ ನು ತತ್ಕರ್ಮ ರಾಜರ್ಷೇರ್ನಾಭೇರನ್ವಾಚರೇತ್ಪುಮಾನ್ ।
ಅಪತ್ಯತಾಮಗಾದ್ಯಸ್ಯ ಹರಿಃ ಶುದ್ಧೇನ ಕರ್ಮಣಾ ॥ ೬ ॥

ಪಾಂಡುನಂದನನೇ! ಆ ನಾಭಿರಾಜನ ವಿಷಯದಲ್ಲಿ ಈ ಲೋಕೋಕ್ತಿಯು ಪ್ರಸಿದ್ಧವಾಗಿದೆ – ರಾಜರ್ಷಿಯಾದ ನಾಭಿರಾಜನ ಉದಾರವಾದ ಕರ್ಮಗಳನ್ನು ಆಚರಿಸಲು ಬೇರೆ ಯಾರಿಗೆ ತಾನೇ ಸಾಧ್ಯವಾಗುವುದು ? ಆತನ ವಿಶುದ್ಧವಾದ ಕರ್ಮಗಳಿಂದ ಸಂತುಷ್ಟನಾಗಿ ಶ್ರೀಹರಿಯೇ ಆತನಿಗೆ ಪುತ್ರನಾದನಲ್ಲ! ॥ ೬ ॥

ಬ್ರಹ್ಮಣ್ಯೋಽನ್ಯಃ ಕುತೋ ನಾಭೇರ್ವಿಪ್ರಾ ಮಂಗಲಪೂಜಿತಾಃ ।
ಯಸ್ಯ ಬರ್ಹಿಷಿ ಯಜ್ಞೇಶಂ ದರ್ಶಯಾಮಾಸುರೋಜಸಾ ॥ ೭ ॥

ಆ ನಾಭಿಮಹಾರಾಜನಿಗೆ ಸಮಾನವಾದ ಬ್ರಾಹ್ಮಣಭಕ್ತನು ಬೇರೆ ಯಾರು ಇದ್ದಾರೆ? ಮಂಗಳಕರ್ಮ-ಪೂಜಾದಿಗಳಿಂದ ಸಂತುಷ್ಟರಾದ ಬ್ರಾಹ್ಮಣ ಶ್ರೇಷ್ಠರು ತಮ್ಮ ಮಂತ್ರ ಬಲದಿಂದ ಯಜ್ಞಶಾಲೆಯಲ್ಲಿ ಆತನಿಗೆ ಸಾಕ್ಷಾತ್ ಶ್ರೀಮಹಾವಿಷ್ಣುವಿನ ದರ್ಶನ ಮಾಡಿಸಿದರು. ॥ ೭ ॥

ಅಥ ಹ ಭಗವಾನೃಷಭದೇವಃ ಸ್ವವರ್ಷಂ ಕರ್ಮಕ್ಷೇತ್ರ-ಮನುಮನ್ಯಮಾನಃ ಪ್ರದರ್ಶಿತಗುರುಕುಲವಾಸೋ ಲಬ್ಧ-ವರೈರ್ಗುರುಭಿರನುಜ್ಞಾತೋ ಗೃಹಮೇಧಿನಾಂ ಧರ್ಮಾ-ನನುಶಿಕ್ಷಮಾಣೋ ಜಯಂತ್ಯಾಮಿಂದ್ರದತ್ತಾಯಾಮುಭ-ಯಲಕ್ಷಣಂ ಕರ್ಮ ಸಮಾಮ್ನಾಯಾಮ್ನಾತಮಭಿಯುಂ-ಜನ್ನಾತ್ಮಜಾನಾಮಾತ್ಮಸಮಾನಾನಾಂ ಶತಂ ಜನಯಾ-ಮಾಸ ॥ ೮ ॥ ಯೇಷಾಂ ಖಲು ಮಹಾಯೋಗೀ ಭರತೋ ಜ್ಯೇಷ್ಠಃ ಶ್ರೇಷ್ಠಗುಣ ಆಸೀದ್ಯೇನೇದಂ ವರ್ಷಂ ಭಾರತಮಿತಿ ವ್ಯಪದಿಶಂತಿ ॥ ೯ ॥ ತಮನು ಕುಶಾವರ್ತ ಇಲಾವರ್ತೋ ಬ್ರಹ್ಮಾವರ್ತೋ ಮಲಯಃ ಕೇತುರ್ಭ-ದ್ರಸೇನ ಇಂದ್ರಸ್ಪೃಗ್ವಿದರ್ಭಃ ಕೀಕಟ ಇತಿ ನವ ನವತಿ-ಪ್ರಧಾನಾಃ ॥ ೧೦ ॥

ಭಗವಾನ್ ಋಷಭದೇವನು ತನ್ನ ದೇಶವಾದ ಅಜನಾಭ ಖಂಡವನ್ನು ಕರ್ಮಭೂಮಿಯೆಂದು ತಿಳಿದು ಲೋಕಸಂಗ್ರಹಕ್ಕಾಗಿ ಕೊಂಚಕಾಲ ಗುರುಕುಲವಾಸವನ್ನು ಮಾಡಿದನು. ಗುರುಗಳಿಗೆ ಯಥೋಚಿತವಾದ ದಕ್ಷಿಣೆಯನ್ನು ಸಮರ್ಪಿಸಿ, ಗೃಹಸ್ಥಾಶ್ರಮವನ್ನು ಕೈಗೊಳ್ಳಲು ಅವರಿಂದ ಅನುಮತಿಯನ್ನು ಪಡೆದನು. ಮತ್ತೆ ಜನರಿಗೆ ಗೃಹಸ್ಥಾಶ್ರಮದ ಆದರ್ಶವನ್ನು ತೋರುವುದಕ್ಕಾಗಿ ದೇವ ರಾಜನಾದ ಇಂದ್ರನು ತನಗೆ ಕನ್ಯಾದಾನಮಾಡಿಕೊಟ್ಟ ಜಯಂತೀ ದೇವಿಯನ್ನು ವಿವಾಹಮಾಡಿ ಕೊಂಡನು. ಅನಂತರ ಶ್ರೌತ, ಸ್ಮಾರ್ತ ಎರಡೂ ಬಗೆಯ ಶಾಸ್ತ್ರೀಯ ಕರ್ಮಗಳನ್ನು ಆಚರಿಸುತ್ತಾ ಜಯಂತಿಯಲ್ಲಿ ತನಗೆ ಸಮಾನವಾದ ಗುಣಗಳುಳ್ಳ ನೂರು ಮಂದಿ ಪುತ್ರರನ್ನು ಪಡೆದನು. ॥ ೮ ॥ ಮಹಾಯೋಗೀ ಭರತನು ಆ ನೂರುಮಂದಿಯಲ್ಲಿ ಎಲ್ಲರಿಗೆ ಹಿರಿಯವನಾಗಿದ್ದು, ಎಲ್ಲರಿಂದ ಗುಣಗಳಲ್ಲಿಯೂ ಶ್ರೇಷ್ಠನಾಗಿದ್ದನು. ಆ ಭರತನ ಹೆಸರಿನಿಂದಲೇ ಈ ಅಜನಾಭಖಂಡಕ್ಕೆ "ಭಾರತವರ್ಷ" ಎಂಬ ಹೆಸರಾಯಿತು. ॥ ೯ ॥ ಅವನಿಂದ ಕಿರಿಯವರಾದ ಕುಶಾವರ್ತ, ಇಳಾವರ್ತ, ಬ್ರಹ್ಮಾವರ್ತ, ಮಲಯ, ಕೇತು, ಭದ್ರಸೇನ, ಇಂದ್ರಸ್ಪೃಕ್, ವಿದರ್ಭ ಮತ್ತು ಕೀಕಟ ಎಂಬ ಈ ಒಂಭತ್ತು ರಾಜಕುಮಾರರು ಉಳಿದ ತೊಂಭತ್ತು ತಮ್ಮಂದಿರಿಂದ ಹಿರಿಯವರೂ, ಶ್ರೇಷ್ಠರೂ ಆಗಿದ್ದರು. ॥ ೧೦ ॥

ಕವಿರ್ಹರಿರಂತರಿಕ್ಷಃ ಪ್ರಬುದ್ಧಃ ಪಿಪ್ಪಲಾಯನಃ ।
ಆವಿರ್ಹೋತ್ರೋಽಥ ದ್ರುಮಿಲಶ್ಚಮಸಃ ಕರಭಾಜನಃ ॥ ೧೧ ॥

ಇತಿ ಭಾಗವತಧರ್ಮದರ್ಶನಾ ನವ ಮಹಾಭಾಗವ-ತಾಸ್ತೇಷಾಂ ಸುಚರಿತಂ ಭಗವನ್ಮಹಿಮೋಪಬೃಂಹಿತಂ ವಸುದೇವನಾರದಸಂವಾದಮುಪಶಮಾಯನಮುಪರಿ-ಷ್ಟಾದ್ವರ್ಣಯಿಷ್ಯಾಮಃ ॥ ೧೨ ॥ ಯವೀಯಾಂಸ ಏಕಾ-ಶೀತಿರ್ಜಾಯಂತೇಯಾಃ ಪಿತುರಾದೇಶಕರಾ ಮಹಾಶಾ-ಲೀನಾ ಮಹಾಶ್ರೋತ್ರಿಯಾ ಯಜ್ಞಶೀಲಾಃ ಕರ್ಮವಿಶುದ್ಧಾ ಬ್ರಾಹ್ಮಣಾ ಬಭೂವುಃ ॥ ೧೩ ॥

ಅವರಿಗಿಂತಲೂ ಕಿರಿಯವರಾದ ಕವಿ, ಹರಿ, ಅಂತರಿಕ್ಷ, ಪ್ರಬುದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಲ, ಚಮಸ ಮತ್ತು ಕರಭಾಜನ ಎಂಬ ಒಂಭತ್ತು ಮಂದಿ ರಾಜ ಕುಮಾರರು ಭಾಗವತಧರ್ಮವನ್ನು ಪ್ರಚಾರಮಾಡಿದ ಭಗವದ್ಭಕ್ತ ಶಿರೋಮಣಿಗಳಾಗಿದ್ದರು. ಶ್ರೀಭಗವಂತನ ಮಹಿಮೆಯಿಂದ ಮಹಿಮಾನ್ವಿತರಾಗಿ ಪರಮಶಾಂತಿಯಿಂದ ಸಂಪನ್ನರಾಗಿದ್ದ ಇವರ ಪವಿತ್ರ ಚರಿತ್ರೆಯನ್ನು ನಾವು ಮುಂದೆ ನಾರದ-ವಸುದೇವರ ಸಂವಾದದ ಪ್ರಸಂಗದಲ್ಲಿ (ಏಕಾದಶಸ್ಕಂಧದಲ್ಲಿ) ಹೇಳುವೆವು. ॥ ೧೧-೧೨ ॥ ಇವರಿಂದಲೂ ಕಿರಿಯವರಾಗಿದ್ದ ಎಂಭತ್ತೊಂದು ಮಂದಿ ಜಯಂತಿಯ ಪುತ್ರರು ತಂದೆಯ ಆಜ್ಞೆಯನ್ನು ಪಾಲಿಸುವವರೂ, ಅತ್ಯಂತ ವಿನಯಶಾಲಿಗಳೂ, ವೇದಜ್ಞರೂ ಆಗಿದ್ದು ನಿರಂತರ ಯಜ್ಞಗಳನ್ನು ಆಚರಿಸುತ್ತಾ ಪುಣ್ಯಕರ್ಮಗಳ ಅನುಷ್ಠಾನದಿಂದ ಶುದ್ಧರಾಗಿ ಬ್ರಾಹ್ಮಣ್ಯವನ್ನು ಪಡೆದುಕೊಂಡರು. ॥ ೧೩ ॥

ಭಗವಾನೃಷಭಸಂಜ್ಞ ಆತ್ಮತಂತ್ರಃ ಸ್ವಯಂ ನಿತ್ಯನಿವೃತ್ತಾ-ನರ್ಥಪರಂಪರಃ ಕೇವಲಾನಂದಾನುಭವ ಈಶ್ವರ ಏವ ವಿಪರೀತವತ್ಕರ್ಮಾಣ್ಯಾರಭಮಾಣಃ ಕಾಲೇನಾನುಗತಂ ಧರ್ಮಮಾಚರಣೇನೋಪಶಿಕ್ಷಯನ್ನತದ್ವಿದಾಂ ಸಮ ಉಪ-ಶಾಂತೋಮೈತ್ರಃಕಾರುಣಿಕೋ ಧರ್ಮಾರ್ಥಯಶಃ-ಪ್ರಜಾನಂದಾಮೃತಾವರೋಧೇನ ಗೃಹೇಷು ಲೋಕಂ ನಿಯಮಯತ್ ॥ ೧೪ ॥ ಯದ್ಯಚ್ಛೀರ್ಷಣ್ಯಾಚರಿತಂ ತತ್ತ-ದನುವರ್ತತೇ ಲೋಕಃ ॥ ೧೫ ॥ ಯದ್ಯಪಿ ಸ್ವವಿದಿತಂ ಸಕಲಧರ್ಮಂ ಬ್ರಾಹ್ಮಂ ಗುಹ್ಯಂ ಬ್ರಾಹ್ಮಣೈರ್ದರ್ಶಿ-ತಮಾರ್ಗೇಣ ಸಾಮಾದಿಭಿರುಪಾಯೈರ್ಜನತಾಮನು-ಶಶಾಸ ॥ ೧೬ ॥ ದ್ರವ್ಯದೇಶಕಾಲವಯಃಶ್ರದ್ಧರ್ತ್ವಿಗ್ವಿವಿ-ಧೋದ್ದೇಶೋಪಚಿತ್ಯೈಃ ಸರ್ವೈರಪಿ ಕ್ರತುಭಿರ್ಯಥೋಪ-ದೇಶಂ ಶತಕೃತ್ವ ಇಯಾಜ ॥ ೧೭ ॥ ಭಗವತರ್ಷಭೇಣ ಪರಿರಕ್ಷ್ಯಮಾಣ ಏತಸ್ಮಿನ್ವರ್ಷೇ ನ ಕಶ್ಚನ ಪುರುಷೋ ವಾಂಛತ್ಯವಿದ್ಯಮಾನಮಿವಾತ್ಮನೋಽನ್ಯಸ್ಮಾತ್ಕಥಂಚನ ಕಿಮಪಿ ಕರ್ಹಿಚಿದವೇಕ್ಷತೇ ಭರ್ತರ್ಯನುಸವನಂ ವಿಜೃಂಭಿತ-ಸ್ನೇಹಾತಿಶಯಮಂತರೇಣ ॥ ೧೮ ॥ ಸ ಕದಾಚಿದಟ-ಮಾನೋ ಭಗವಾನೃಷಭೋ ಬ್ರಹ್ಮಾವರ್ತಗತೋ ಬ್ರಹ್ಮ-ರ್ಷಿಪ್ರವರಸಭಾಯಾಂ ಪ್ರಜಾನಾಂ ನಿಶಾಮಯಂತೀ-ನಾಮಾತ್ಮಜಾನವಹಿತಾತ್ಮನಃ ಪ್ರಶ್ರಯಪ್ರಣಯಭರಸು-ಯಂತ್ರಿತಾನಪ್ಯುಪಶಿಕ್ಷಯನ್ನಿತಿ ಹೋವಾಚ ॥ ೧೯ ॥

ಭಗವಾನ್ ಋಷಭದೇವರು ಭಗವದವತಾರಿಗಳಾಗಿದ್ದು ಆತ್ಮ ತಂತ್ರರಾಗಿದ್ದವರು. ಎಂದಿಗೂ ಯಾವ ಅನರ್ಥಪರಂಪರೆಗೂ ಸಿಲುಕದೆ ಕೇವಲ ಆನಂದಾನುಭವಸ್ವರೂಪದಲ್ಲೇ ನೆಲೆಗೊಂಡಿದ್ದರು. ಹೀಗೆ ಸಾಕ್ಷಾತ್ ಈಶ್ವರಸ್ವರೂಪರೇ ಆಗಿದ್ದರೂ ಅಜ್ಞಾನಿಗಳಂತೆ ಕರ್ಮಗಳನ್ನಾಚರಿಸುತ್ತಾ, ಕಾಲಾನುಸಾರವಾಗಿ ಪ್ರಾಪ್ತ ದರ್ಮಗಳನ್ನೂ ಅನುಷ್ಠಾನಮಾಡುತ್ತಾ ಅದರ ತತ್ತ್ವವನ್ನು ಅರಿಯದ ಜನರಿಗೆ ಆ ಬಗೆಗೆ ಶಿಕ್ಷಣವನ್ನು ನೀಡುತ್ತಿದ್ದರು. ಜೊತೆಗೆ ಸರ್ವಸಮರೂ, ಶಾಂತರೂ, ಸುಹೃದಯರೂ, ಕಾರುಣಿಕರೂ ಆಗಿದ್ದು ಧರ್ಮ, ಅರ್ಥ, ಯಶಸ್ಸು, ಸಂತಾನ, ಭೋಗಸುಖ ಮತ್ತು ಮೋಕ್ಷವನ್ನು ಸಂಗ್ರಹಿಸುತ್ತಾ ಜನರನ್ನು ಗೃಹಸ್ಥಾಶ್ರಮದಲ್ಲಿ ನಿಯಮಿಸುತ್ತಿದ್ದರು. ॥ ೧೪ ॥ ಮಹಾಪುರುಷರು ಹೇಗೆ-ಹೇಗೆ ಆಚರಿಸುತ್ತಾರೋ ಬೇರೆ ಜನರು ಅದನ್ನೇ ಅನುಕರಣ ಮಾಡತೊಡಗುವರು. ॥ ೧೫ ॥ ಧರ್ಮಗಳ ಸಾರರೂಪವಾದ ವೇದಗಳ ಗೂಢರಹಸ್ಯಗಳನ್ನು ತಾವು ಚೆನ್ನಾಗಿ ಅರಿತಿದ್ದರೂ, ಬ್ರಾಹ್ಮಣರು ತಿಳಿಸಿದ ವಿಧಿಯಂತೆ ಸಾಮ-ದಾನಗಳೇ ಮುಂತಾದ ನೀತಿಗೆ ಅನುಸಾರವಾಗಿಯೇ ಜನರನ್ನು ಪಾಲಿಸುತ್ತಿದ್ದರು. ॥ ೧೬ ॥ ಅವರು ಶಾಸ್ತ್ರಗಳ ಮತ್ತು ಶಾಸ್ತ್ರಜ್ಞರಾದ ಬ್ರಾಹ್ಮಣರ ಉಪದೇಶಗಳಂತೆ ಬೇರೆ-ಬೇರೆ ದೇವತೆಗಳನ್ನು ಉದ್ದೇಶಿಸಿ ದ್ರವ್ಯ, ದೇಶ, ಕಾಲ, ವಯಸ್ಸು, ಶ್ರದ್ಧೆ ಮತ್ತು ಋತ್ವಿಜರು ಮುಂತಾದವುಗಳಿಂದ ಸಂಪನ್ನವಾದ ಎಲ್ಲ ಯಜ್ಞಗಳನ್ನು ನೂರು ಬಾರಿ ಆಚರಿಸಿದರು. ॥ ೧೭ ॥ ಭಗವಾನ್ ಋಷಭದೇವರ ಆಳ್ವಿಕೆಯ ಕಾಲದಲ್ಲಿ ಭಾರತವರ್ಷದ ಜನರು ತಮ್ಮ ಪ್ರಭುವಿನ ವಿಷಯದಲ್ಲಿ ಪ್ರತಿದಿನವೂ ಬೆಳೆಯುತ್ತಿದ್ದ ಅನುರಾಗವಲ್ಲದೆ ಬೇರೆ ಯಾವ ವಸ್ತುವನ್ನು ಎಂದೂ ಬಯಸುತ್ತಿರಲಿಲ್ಲ. ಇಷ್ಟೇ ಅಲ್ಲ, ಪರರ ಪದಾರ್ಥಗಳನ್ನು ಆಕಾಶಕುಸುಮವೇ ಮುಂತಾದವುಗಳಂತೇ ಭಾವಿಸಿ ಯಾರೂ ಬಯಸುತ್ತಿರಲಿಲ್ಲ. ಅದರತ್ತ ದೃಷ್ಟಿಯನ್ನೂ ಹರಿಸುತ್ತಿರಲಿಲ್ಲ. ॥ ೧೮ ॥ ಭಗವಾನ್ ಋಷಭದೇವರು ದೇಶದಲ್ಲಿ ಸಂಚರಿಸುತ್ತಾ ಒಮ್ಮೆ ಬ್ರಹ್ಮಾವರ್ತಕ್ಕೆ ದಯಮಾಡಿಸಿದರು. ಅಲ್ಲಿ ಅವರು ದೊಡ್ಡ-ದೊಡ್ಡ ಮಹರ್ಷಿಗಳ ಸಭೆಯಲ್ಲಿ ಎಲ್ಲ ಪ್ರಜೆಗಳ ಎದುರಿಗೆ ಎಲ್ಲರೂ ಕೇಳುವಂತೇ ಜಿತೇಂದ್ರಿಯರೂ, ವಿನಯಶಾಲಿಗಳೂ, ಪಿತೃಭಕ್ತಿಸಂಪನ್ನರೂ ಆದ ತನ್ನ ಪುತ್ರರನ್ನು ಕುರಿತು ಹೀಗೆ ಉಪದೇಶ ಮಾಡಿದರು. ॥ ೧೯ ॥

*ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ಋಷಭದೇವರು ಪುತ್ರರಿಗೆ ಮಾಡಿದ ಉಪದೇಶ ಮತ್ತು ಸ್ವಯಂ ಅವಧೂತವೃತ್ತಿಯನ್ನು ಕೈಗೊಂಡಿದ್ದು

*ಋಷಭ ಉವಾಚ*

ನಾಯಂ ದೇಹೋ ದೇಹಭಾಜಾಂ ನೃಲೋಕೇ
ಕಷ್ಟಾನ್ಕಾಮಾನರ್ಹತೇ ವಿಡ್ಭುಜಾಂ ಯೇ ।
ತಪೋ ದಿವ್ಯಂ ಪುತ್ರಕಾ ಯೇನ ಸತ್ತ್ವಂ
ಶುದ್ಧ್ಯೇದ್ಯಸ್ಮಾದ್ ಬ್ರಹ್ಮಸೌಖ್ಯಂ ತ್ವನಂತಮ್ ॥ ೧ ॥

ಮಹತ್ಸೇವಾಂ ದ್ವಾರಮಾಹುರ್ವಿಮುಕ್ತೇ-
ಸ್ತಮೋದ್ವಾರಂ ಯೋಷಿತಾಂ ಸಂಗಿಸಂಗಮ್ ।
ಮಹಾಂತಸ್ತೇ ಸಮಚಿತ್ತಾಃ ಪ್ರಶಾಂತಾ
ವಿಮನ್ಯವಃ ಸುಹೃದಃ ಸಾಧವೋ ಯೇ ॥ ೨ ॥

ಯೇ ವಾ ಮಯೀಶೇ ಕೃತಸೌಹೃದಾರ್ಥಾ
ಜನೇಷು ದೇಹಂಭರವಾರ್ತಿಕೇಷು ।
ಗೃಹೇಷು ಜಾಯಾತ್ಮಜರಾತಿಮತ್ಸು
ನ ಪ್ರೀತಿಯುಕ್ತಾ ಯಾವದರ್ಥಾಶ್ಚ ಲೋಕೇ ॥ ೩ ॥

ನೂನಂ ಪ್ರಮತ್ತಃ ಕುರುತೇ ವಿಕರ್ಮ
ಯದಿಂದ್ರಿಯಪ್ರೀತಯ ಆಪೃಣೋತಿ ।
ನ ಸಾಧು ಮನ್ಯೇ ಯತ ಆತ್ಮನೋಽಯ-
ಮಸನ್ನಪಿ ಕ್ಲೇಶದ ಆಸ ದೇಹಃ ॥ ೪ ॥

ಪರಾಭವಸ್ತಾವದಬೋಧಜಾತೋ
ಯಾವನ್ನ ಜಿಜ್ಞಾಸತ ಆತ್ಮತತ್ತ್ವಮ್ ।
ಯಾವತ್ಕ್ರಿಯಾಸ್ತಾವದಿದಂ ಮನೋ ವೈ
ಕರ್ಮಾತ್ಮಕಂ ಯೇನ ಶರೀರಬಂಧಃ ॥ ೫ ॥

ಏವಂ ಮನಃ ಕರ್ಮವಶಂ ಪ್ರಯುಂಕ್ತೇ
ಅವಿದ್ಯಯಾಽಽತ್ಮನ್ಯುಪಧೀಯಮಾನೇ ।
ಪ್ರೀತಿರ್ನ ಯಾವನ್ಮಯಿ ವಾಸುದೇವೇ
ನ ಮುಚ್ಯತೇ ದೇಹಯೋಗೇನ ತಾವತ್ ॥ ೬ ॥

ಯದಾ ನ ಪಶ್ಯತ್ಯಯಥಾ ಗುಣೇಹಾಂ
ಸ್ವಾರ್ಥೇ ಪ್ರಮತ್ತಃ ಸಹಸಾ ವಿಪಶ್ಚಿತ್ ।
ಗತಸ್ಮೃತಿರ್ವಿಂದತಿ ತತ್ರ ತಾಪಾ-
ನಾಸಾದ್ಯ ಮೈಥುನ್ಯಮಗಾರಮಜ್ಞಃ ॥ ೭ ॥

**ಶ್ರೀಋಷಭದೇವರು ಹೇಳುತ್ತಾರೆ** – ಎಲೈ ಪುತ್ರರೇ ! ಮನುಷ್ಯ ಲೋಕದಲ್ಲಿ ಈ ಮನುಷ್ಯಶರೀರವು ಕೇವಲ ದುಃಖ ಮಯವಾದ ವಿಷಯಸುಖಗಳನ್ನು ಪಡೆಯಲಿಕ್ಕಾಗಿ ಇದೆ ಎಂದು ತಿಳಿಯಬೇಡಿರಿ. ಈ ಭೋಗಗಳನ್ನಾದರೋ ಅಮೇಧ್ಯವನ್ನು ಭಕ್ಷಿಸುವ ಹಂದಿ-ನಾಯಿ ಮುಂತಾದವುಗಳೂ ಅನುಭವಿಸುತ್ತಿವೆ. ಈ ಶರೀರದಿಂದ ದಿವ್ಯ ತಪಸ್ಸನ್ನೇ ಆಚರಿಸಬೇಕು. ಅದರಿಂದ ಅಂತಃಕರಣವು ಶುದ್ಧವಾಗಿ, ಅನಂತ ಬ್ರಹ್ಮಾನಂದವು ದೊರೆಯುವುದು. ॥ ೧ ॥ ಮಹಾಪುರುಷರ ಸೇವೆಯು ಮುಕ್ತಿಗೆ ದ್ವಾರವೆಂದೂ, ಸ್ತ್ರೀಲಂಪಟರಾದ ಕಾಮುಕರ ಸಂಗವು ನರಕದ ದ್ವಾರವೆಂದು ತಿಳಿಸಲಾಗಿದೆ. ಸಮಚಿತ್ತರೂ, ಪ್ರಶಾಂತರೂ, ಕ್ರೋಧರಹಿತರೂ, ಸರ್ವರಿಗೆ ಹಿತವನ್ನೇ ಚಿಂತಿಸುವವರೂ, ಸದಾಚಾರಸಂಪನ್ನರೂ ಆದವರೇ ಮಹಾಪುರುಷರಾಗಿದ್ದಾರೆ. ॥ ೨ ॥ ಅಥವಾ ಪರಮಾತ್ಮನಾದ ನನ್ನ ಪ್ರೇಮವನ್ನೇ ಏಕೈಕ ಪುರುಷಾರ್ಥವೆಂದು ತಿಳಿಯುವವರೂ, ಕೇವಲ ವಿಷಯಗಳ ಚರ್ಚೆಯನ್ನೇ ಮಾಡುವ ಜನರಲ್ಲಿ ಹಾಗೂ ಪತ್ನೀ, ಪುತ್ರ, ಧನಾದಿ ಸಾಮಗ್ರಿಗಳಿಂದ ಸಂಪನ್ನವಾದ ಮನೆಯಲ್ಲಿ ರುಚಿಯಿಲ್ಲದಿರುವವರೂ, ತಮ್ಮ ಶರೀರದ ನಿರ್ವಾಹಕ್ಕಾಗಿ ಬೇಕಷ್ಟೇ ಲೌಕಿಕ ಕರ್ಮಗಳಲ್ಲಿ ಪ್ರವೃತ್ತರಾದವರೂ ಮಹಾತ್ಮರಾಗಿದ್ದಾರೆ. ॥ ೩ ॥ ಮನುಷ್ಯನು ನಿಜವಾಗಿಯೂ ಇಂದ್ರಿಯಗಳನ್ನು ತೃಪ್ತಿಪಡಿಸಲಿಕ್ಕಾಗಿಯೇ ಪ್ರಮಾದವಶನಾಗಿ ಕೆಟ್ಟಕೆಲಸಗಳನ್ನು ಮಾಡುತ್ತಾನೆ. ಇದನ್ನು ನಾನು ಒಳ್ಳೆಯದೆಂದು ತಿಳಿಯುವುದಿಲ್ಲ, ಏಕೆಂದರೆ, ಇದರಿಂದಲೇ ಆತ್ಮನಿಗೆ ಈ ಅಸತ್ತಾದ ದುಃಖಮಯ ಶರೀರವು ದೊರೆಯುತ್ತದೆ. ॥ ೪ ॥ ಜೀವಿಗೆ ಆತ್ಮತತ್ತ್ವದ ಜಿಜ್ಞಾಸೆ ಉಂಟಾಗುವವರೆಗೆ ಅಜ್ಞಾನವಶದಿಂದ ದೇಹಾದಿಗಳ ಮೂಲಕ ಆತ್ಮನ ಸ್ವರೂಪವು ಅಡಗಿಕೊಂಡಿರುತ್ತದೆ. ಈ ಲೌಕಿಕ- ವೈದಿಕ ಕರ್ಮಗಳಲ್ಲಿ ಸಿಕ್ಕಿಹಾಕಿಕೊಂಡಿರುವವರೆಗೆ ಮನಸ್ಸಿನಲ್ಲಿ ಕರ್ಮಗಳ ವಾಸನೆಗಳು ಇದ್ದುಕೊಂಡಿರುತ್ತವೆ ಮತ್ತು ಅದರಿಂದಲೇ ಅವನಿಗೆ ಶರೀರ ಬಂಧನವು ಬಂದೇ ಬರುವುದು. ॥ ೫ ॥ ಹೀಗೆ ಅವಿದ್ಯೆಯ ಮೂಲಕ ಆತ್ಮತತ್ತ್ವವು ಮುಚ್ಚಿಹೋಗಿರುವುದರಿಂದ ಕರ್ಮವಾಸನೆಗೆ ತುತ್ತಾಗಿ ಚಿತ್ತವು ಮನುಷ್ಯನನ್ನು ಪುನಃ ಕರ್ಮಗಳಲ್ಲೇ ತೊಡಗಿಸುತ್ತದೆ. ಆದ್ದರಿಂದ ಜೀವಿಗೆ ವಾಸುದೇವನಾದ ನನ್ನಲ್ಲಿ ಪ್ರೀತಿಯುಂಟಾಗುವ ವರೆಗೆ ದೇಹಬಂಧನದಿಂದ ಬಿಡುಗಡೆಯಾಗಲಾರನು. ॥ ೬॥ ಸ್ವಾರ್ಥದಿಂದ ಮರುಳಾದ ಜೀವನು ವಿವೇಕವನ್ನು ಆಶ್ರಯಿಸಿ, ಇಂದ್ರಿಯಗಳ ಚೇಷ್ಟೆಗಳನ್ನು ಮಿಥ್ಯೆಗಳೆಂದು ನೋಡುವವರೆಗೆ ಆತ್ಮಸ್ವರೂಪದ ಸ್ಮೃತಿಯನ್ನು ಕಳಕೊಂಡ ಕಾರಣದಿಂದ ಅವನು ಅಜ್ಞಾನವಶನಾಗಿ ವಿಷಯ ಪ್ರಧಾನವಾದ ಮನೆಯೇ ಮುಂತಾದವುಗಳಲ್ಲಿ ಆಸಕ್ತನಾಗಿರುತ್ತಾನೆ ಮತ್ತು ನಾನಾರೀತಿಯ ಕ್ಲೇಶಗಳನ್ನು ಅನುಭವಿಸುತ್ತಿರುತ್ತಾನೆ. ॥ ೭ ॥

ಸ್ತ್ರೀ-ಪುರುಷರ ದಾಂಪತ್ಯಭಾವವೆಂಬುದು ಅವರ ಹೃದಯವನ್ನು ಸೇರಿಸುವ ಮತ್ತೊಂದು ಸ್ಥೂಲವಾದ ಹಾಗೂ ಕತ್ತರಿಸಲಾಗದ

ಪುಂಸಃ ಸ್ತ್ರಿಯಾ ಮಿಥುನೀಭಾವಮೇತಂ
ತಯೋರ್ಮಿಥೋ ಹೃದಯಗ್ರಂಥಿಮಾಹುಃ ।
ಅತೋ ಗೃಹಕ್ಷೇತ್ರಸುತಾಪ್ತವಿತ್ತೈ-
ರ್ಜನಸ್ಯ ಮೋಹೋಽಯಮಹಂ ಮಮೇತಿ ॥ ೮ ॥

ಯದಾ ಮನೋಹೃದಯಗ್ರಂಥಿರಸ್ಯ
ಕರ್ಮಾನುಬದ್ಧೋ ದೃಢ ಆಶ್ಲಥೇತ ।
ತದಾ ಜನಃ ಸಂಪರಿವರ್ತತೇಽಸ್ಮಾದ್
ಮುಕ್ತಃ ಪರಂ ಯಾತ್ಯತಿಹಾಯ ಹೇತುಮ್ ॥ ೯ ॥

ಹಂಸೇ ಗುರೌ ಮಯಿ ಭಕ್ತ್ಯಾನುವೃತ್ತ್ಯಾ
ವಿತೃಷ್ಣಯಾ ದ್ವಂದ್ವತಿತಿಕ್ಷಯಾ ಚ ।
ಸರ್ವತ್ರ ಜಂತೋರ್ವ್ಯಸನಾವಗತ್ಯಾ
ಜಿಜ್ಞಾಸಯಾ ತಪಸೇಹಾನಿವೃತ್ತ್ಯಾ ॥ ೧೦ ॥

ಮತ್ಕರ್ಮಭಿರ್ಮತ್ಕಥಯಾ ಚ ನಿತ್ಯಂ
ಮದ್ದೇವಸಂಗಾದ್ಗುಣಕೀರ್ತನಾನ್ಮೇ ।
ನಿರ್ವೈರಸಾಮ್ಯೋಪಶಮೇನ ಪುತ್ರಾ
ಜಿಹಾಸಯಾ ದೇಹಗೇಹಾತ್ಮಬುದ್ಧೇಃ ॥ ೧೧ ॥

ಅಧ್ಯಾತ್ಮಯೋಗೇನ ವಿವಿಕ್ತಸೇವಯಾ
ಪ್ರಾಣೇಂದ್ರಿಯಾತ್ಮಾಭಿಜಯೇನ ಸಧ್ರ್ಯಕ್ ।
ಸಚ್ಛ್ರದ್ಧಯಾ ಬ್ರಹ್ಮಚರ್ಯೇಣ ಶಶ್ವದ್
ಅಸಂಪ್ರಮಾದೇನ ಯಮೇನ ವಾಚಾಮ್ ॥ ೧೨ ॥

ಸರ್ವತ್ರ ಮದ್ಭಾವವಿಚಕ್ಷಣೇನ
ಜ್ಞಾನೇನ ವಿಜ್ಞಾನವಿರಾಜಿತೇನ ।
ಯೋಗೇನ ಧೃತ್ಯುದ್ಯಮಸತ್ತ್ವಯುಕ್ತೋ
ಲಿಂಗಂ ವ್ಯಪೋಹೇತ್ಕುಶಲೋಽಹಮಾಖ್ಯಮ್ ॥ ೧೩ ॥

ಕರ್ಮಾಶಯಂ ಹೃದಯಗ್ರಂಥಿಬಂಧ-
ಮವಿದ್ಯಯಾಽಽಸಾದಿತಮಪ್ರಮತ್ತಃ ।
ಅನೇನ ಯೋಗೇನ ಯಥೋಪದೇಶಂ
ಸಮ್ಯಗ್ವ್ಯಪೋಹ್ಯೋಪರಮೇತ ಯೋಗಾತ್ ॥ ೧೪ ॥

ಗಂಟು ಆಗಿದೆ ಎಂದು ಪಂಡಿತರು ಹೇಳುತ್ತಾರೆ. ದೇಹಾಭಿಮಾನ ರೂಪವಾದ ಒಂದೊಂದು ಸೂಕ್ಷ್ಮಗಂಟುಗಳಾದರೋ ಅವನಲ್ಲಿ ಬೇರೆ-ಬೇರೆಯಾಗಿ ಮೊದಲಿನಿಂದಲೇ ಇವೆ. ಇದರಿಂದಲೇ ಜೀವಿಗೆ ದೇಹೇಂದ್ರಿಯಗಳಲ್ಲದೆ ಮನೆ, ಹೊಲ, ಪುತ್ರರು, ಸ್ವಜನರು ಮತ್ತು ಧನ ಮುಂತಾದವುಗಳಲ್ಲಿಯೂ 'ನಾನು- ನನ್ನದು' ಎಂಬ ಮೋಹವು ಉಂಟಾಗುವುದು. ॥ ೮ ॥ ಕರ್ಮ ವಾಸನೆಯಿಂದ ಬಿದ್ದಿರುವ ಇವನ ಈ ಬಲವಾದ ಹೃದಯ ಗ್ರಂಥಿಯು ಸಡಿಲವಾದಾಗ ಈ ದಾಂಪತ್ಯಭಾವದಿಂದ ನಿವೃತ್ತಿಯಾಗಿ ಹೋಗುತ್ತಾನೆ. ಹಾಗೆಯೇ ಸಂಸಾರಬಂಧನಕ್ಕೆ ಕಾರಣವಾದ ಅಹಂಕಾರವನ್ನು ತ್ಯಜಿಸಿ ಎಲ್ಲವಿಧದ ಬಂಧನಗಳಿಂದ ಮುಕ್ತನಾಗಿ ಪರಮಪದವನ್ನು ಪಡೆದು ಕೊಳ್ಳುವನು. ॥ ೯ ॥ ಪುತ್ರರೇ ! ಸಂಸಾರಸಾಗರದಿಂದ ದಾಟಲು ಕುಶಲನಾದ ಹಾಗೂ ಧೈರ್ಯ, ಉದ್ಯಮ, ಸತ್ತ್ವವಿಶಿಷ್ಟನಾದ ಮನುಷ್ಯನು – ಎಲ್ಲರ ಆತ್ಮ ಸ್ವರೂಪನೂ, ಗುರುಸ್ವರೂಪನೂ ಆ ಭಗವಂತನಾದ ನನ್ನಲ್ಲಿ ಭಕ್ತಿ ಭಾವವನ್ನು ಇರಿಸುವುದರಿಂದ, ನನ್ನಲ್ಲಿ ಪರಾಯಣನಾಗುವುದರಿಂದ, ತೃಷ್ಣೆಯ ತ್ಯಾಗದಿಂದ, ಸುಖ-ದುಃಖಾದಿ ದ್ವಂದ್ವಗಳನ್ನು ಸಹಿಸುವುದರಿಂದ, 'ಜೀವಿಯ ಎಲ್ಲ ಯೋನಿಗಳಲ್ಲಿಯೂ ದುಃಖವೇ ತುಂಬಿದೆ' ಎಂಬ ವಿಚಾರದಿಂದ, ತತ್ತ್ವಜ್ಞಾನದಿಂದ, ತಪಸ್ಸಿನಿಂದ, ಸಕಾಮಕರ್ಮಗಳ ತ್ಯಾಗದಿಂದ, ನನಗಾಗಿಯೇ ಕರ್ಮಮಾಡುವುದರಿಂದ, ನನ್ನ ಕಥೆಗಳನ್ನು ಪ್ರತಿದಿನವೂ ಶ್ರವಣಿಸುವುದರಿಂದ, ನನ್ನ ಭಕ್ತರ ಸಮಾಗಮ ಮತ್ತು ನನ್ನ ಗುಣಗಳ ಕೀರ್ತನದಿಂದ, ವೈರತ್ಯಾಗದಿಂದ, ಸಮತೆಯಿಂದ, ಶಾಂತಿಯಿಂದ, ಶರೀರ ಮತ್ತು ಮನೆ ಮುಂತಾದವುಗಳಲ್ಲಿ 'ನಾನು-ನನ್ನದು' ಎಂಬ ಭಾವವನ್ನು ತ್ಯಜಿಸುವ ಇಚ್ಛೆಯಿಂದ, ಅಧ್ಯಾತ್ಮಶಾಸ್ತ್ರವನ್ನು ಅನುಸಂಧಾನಮಾಡುವುದರಿಂದ, ಏಕಾಂತ ಸೇವನೆಯಿಂದ, ಪ್ರಾಣ-ಇಂದ್ರಿಯಗಳು-ಮನಸ್ಸು ಇವುಗಳ ಸಂಯಮದಿಂದ, ಶಾಸ್ತ್ರಗಳಲ್ಲಿ ಮತ್ತು ಸತ್ಪುರುಷರ ವಚನಗಳಲ್ಲಿ ಶ್ರದ್ಧೆಯನ್ನಿಡುವುದರಿಂದ, ಪೂರ್ಣ ಬ್ರಹ್ಮಚರ್ಯದಿಂದ, ಕರ್ತವ್ಯ- ಕರ್ಮಗಳಲ್ಲಿ ನಿರಂತರ ಸಾವಧಾನವಾಗಿರುವುದರಿಂದ, ಮಾತಿನ ಸಂಯಮದಿಂದ, ಎಲ್ಲೆಡೆ ನನ್ನದೇ ಅಸ್ತಿತ್ವವನ್ನು ನೋಡುವುದರಿಂದ, ಅನುಭವಜ್ಞಾನ ಸಹಿತ ತತ್ತ್ವವಿಚಾರದಿಂದ ಮತ್ತು ಯೋಗಸಾಧನೆಯಿಂದ ಅಹಂಕಾರರೂಪವಾದ ತನ್ನ ಲಿಂಗಶರೀರವನ್ನು ಲೀನವಾಗಿಸಿ ಬಿಡಬೇಕು. ॥ ೧೦-೧೩ ॥ ಮನುಷ್ಯನು ಎಚ್ಚರವಾಗಿದ್ದು ಅವಿದ್ಯೆಯಿಂದ ಉಂಟಾದ ಹೃದಯದ ಗ್ರಂಥಿರೂಪವಾದ ಬಂಧನವನ್ನು ಶಾಸ್ತ್ರೋಕ್ತ ರೀತಿಯಿಂದ ಈ ಸಾಧನೆಗಳ ಮೂಲಕ ಚೆನ್ನಾಗಿ ಕತ್ತರಿಸಿ ಬಿಡಬೇಕು. ಏಕೆಂದರೆ, ಇದೇ ಕರ್ಮಸಂಸ್ಕಾರಗಳು ವಾಸಿಸುವ ಸ್ಥಾನವಾಗಿದೆ. ಅನಂತರ ಸಾಧನೆಗಳನ್ನೂ ತ್ಯಾಗಮಾಡಿ ಬಿಡಬೇಕು. ॥ ೧೪ ॥

ನನ್ನ ಲೋಕವನ್ನು ಪಡೆಯುವ ಇಚ್ಛೆಯಿದ್ದರೆ ಅಥವಾ ನನ್ನ ಅನುಗ್ರಹದ ಪ್ರಾಪ್ತಿಯೇ ಪರಮ ಪುರುಷಾರ್ಥವೆಂದು ತಿಳಿದಿರುವವನು ರಾಜನಾಗಿದ್ದರೆ ತಿಳುವಳಿಕೆಯಿಲ್ಲದ ತನ್ನ ಪ್ರಜೆಗಳಿಗೆ-ಗುರುವು ಶಿಷ್ಯರಿಗೆ ಮತ್ತು ತಂದೆಯು ಮಕ್ಕಳಿಗೆ ಶಿಕ್ಷಣವನ್ನು ಕೊಡುವಂತೆ ಪ್ರೀತಿಯಿಂದ ಶಿಕ್ಷಣವನ್ನು ಕೊಡಬೇಕು. ಅವರೇನಾದರೂ ಅಜ್ಞಾನದಿಂದ ಆ ಶಿಕ್ಷಣಕ್ಕೆ ಅನುಗುಣವಾಗಿ ನಡೆಯದೇ ಕರ್ಮ

ಪುತ್ರಾಂಶ್ಚ ಶಿಷ್ಯಾಂಶ್ಚ ನೃಪೋ ಗುರುರ್ವಾ
ಮಲ್ಲೋಕಕಾಮೋ ಮದನುಗ್ರಹಾರ್ಥಃ ।
ಇತ್ಥಂ ವಿಮನ್ಯುರನುಶಿಷ್ಯಾದತಜ್ಜ್ಞಾನ್
ನ ಯೋಜಯೇತ್ಕರ್ಮಸು ಕರ್ಮಮೂಢಾನ್ ।
ಕಂ ಯೋಜಯನ್ಮನುಜೋಽರ್ಥಂ ಲಭೇತ
ನಿಪಾತಯನ್ನಷ್ಟದೃಶಂ ಹಿ ಗರ್ತೇ ॥ ೧೫ ॥

ಲೋಕಃ ಸ್ವಯಂ ಶ್ರೇಯಸಿ ನಷ್ಟದೃಷ್ಟಿ-
ರ್ಯೋಽರ್ಥಾನ್ ಸಮೀಹೇತ ನಿಕಾಮಕಾಮಃ ।
ಅನ್ಯೋನ್ಯವೈರಃ ಸುಖಲೇಶಹೇತೋ-
ರನಂತದುಃಖಂ ಚ ನ ವೇದ ಮೂಢಃ ॥ ೧೬ ॥

ಕಸ್ತಂ ಸ್ವಯಂ ತದಭಿಜ್ಞೋ ವಿಪಶ್ಚಿದ್
ಅವಿದ್ಯಾಯಾಮಂತರೇ ವರ್ತಮಾನಮ್ ।
ದೃಷ್ಟ್ವಾ ಪುನಸ್ತಂ ಸಘೃಣಃ ಕುಬುದ್ಧಿಂ
ಪ್ರಯೋಜಯೇದುತ್ಪಥಗಂ ಯಥಾಂಧಮ್ ॥ ೧೭ ॥

ಗುರುರ್ನ ಸ ಸ್ಯಾತ್ಸ್ವಜನೋ ನ ಸ ಸ್ಯಾತ್
ಪಿತಾ ನ ಸ ಸ್ಯಾಜ್ಜನನೀ ನ ಸಾ ಸ್ಯಾತ್ ।
ದೈವಂ ನ ತತ್ಸ್ಯಾನ್ನ ಪತಿಶ್ಚ ಸ ಸ್ಯಾ-
ನ್ನ ಮೋಚಯೇದ್ಯಃ ಸಮುಪೇತಮೃತ್ಯುಮ್ ॥ ೧೮ ॥

ಇದಂ ಶರೀರಂ ಮಮ ದುರ್ವಿಭಾವ್ಯಂ
ಸತ್ತ್ವಂ ಹಿ ಮೇ ಹೃದಯಂ ಯತ್ರ ಧರ್ಮಃ ।
ಪೃಷ್ಠೇ ಕೃತೋ ಮೇ ಯದಧರ್ಮ ಆರಾದ್
ಅತೋ ಹಿ ಮಾಂ ಋಷಭಂ ಪ್ರಾಹುರಾರ್ಯಾಃ ॥ ೧೯ ॥

ತಸ್ಮಾದ್ಭವಂತೋ ಹೃದಯೇನ ಜಾತಾಃ
ಸರ್ವೇ ಮಹೀಯಾಂಸಮಮುಂ ಸನಾಭಮ್ ।
ಅಕ್ಲಿಷ್ಟಬುದ್ಧ್ಯಾ ಭರತಂ ಭಜಧ್ವಂ
ಶುಶ್ರೂಷಣಂ ತದ್ಭರಣಂ ಪ್ರಜಾನಾಮ್ ॥ ೨೦ ॥

ಭೂತೇಷು ವೀರುದ್ಭ್ಯ ಉದುತ್ತಮಾ ಯೇ
ಸರೀಸೃಪಾಸ್ತೇಷು ಸಬೋಧನಿಷ್ಠಾಃ ।
ತತೋ ಮನುಷ್ಯಾಃ ಪ್ರಮಥಾಸ್ತತೋಽಪಿ
ಗಂಧರ್ವಸಿದ್ಧಾ ವಿಬುಧಾನುಗಾ ಯೇ ॥ ೨೧ ॥

ವನ್ನೇ ಪರಮಪುರುಷಾರ್ಥವೆಂದು ತಿಳಿದುಕೊಂಡಿದ್ದರೆ ಅವರ ಮೇಲೆ ಸಿಟ್ಟಾಗದೆ ಅವರನ್ನು ಮೃದುವಾಗಿ ತಿಳಿವಳಿಕೆ ನೀಡಿ ಕಾಮ್ಯ ಕರ್ಮದಲ್ಲಿ ಅವರು ತೊಡಗದಂತೆ ಮಾಡಬೇಕು. ಅವರನ್ನು ವಿಷಯಾಸಕ್ತಿಯಿಂದ ಕೂಡಿದ ಕಾಮ್ಯಕರ್ಮಗಳಲ್ಲಿ ತೊಡಗಿಸುವುದು ಕುರುಡನನ್ನು ಬೇಕೆಂತಲೇ ಹಳ್ಳಕ್ಕೆ ತಳ್ಳಿದಂತೆ ಇದೆ. ಇದರಿಂದ ಯಾವ ಪುರುಷಾರ್ಥದ ಸಿದ್ಧಿಯಾದಂತಾದೀತು ? ॥ ೧೫ ॥ ತಮ್ಮ ನಿಜವಾದ ಶ್ರೇಯಸ್ಸು ಯಾವುದರಲ್ಲಿದೆ ಎಂಬುದನ್ನು ಜನರು ತಿಳಿಯಲಾರರು. ಇದರಿಂದಲೇ ಅವರು ಬಗೆ-ಬಗೆಯ ಭೋಗ-ಕಾಮನೆಗಳಲ್ಲಿ ಸಿಕ್ಕಿಹಾಕಿಕೊಂಡು ತುಚ್ಛವಾದ ಕ್ಷಣಿಕ ಸುಖಕ್ಕಾಗಿ ಪರಸ್ಪರ ವೈರವನ್ನು ಕಟ್ಟಿಕೊಳ್ಳುತ್ತಾರೆ ಮತ್ತು ನಿರಂತರವಾಗಿ ವಿಷಯಭೋಗಗಳಿಗಾಗಿಯೇ ಪ್ರಯತ್ನಿಸುತ್ತಿರುತ್ತಾರೆ. ಈ ವೈರ-ವಿರೋಧದಿಂದ ನರಕಾದಿ ಅನಂತ ಘೋರ ದುಃಖಗಳು ಉಂಟಾಗಬಹುದೆಂಬುದನ್ನು ಆ ಮೂರ್ಖರು ವಿಚಾರ ಮಾಡುವುದೇ ಇಲ್ಲ. ॥ ೧೬ ॥ ಹಳ್ಳಕ್ಕೆ ಬೀಳುವಂತಹ ತಪ್ಪುದಾರಿಯಿಂದ ಕುರುಡನೊಬ್ಬನು ಹೋಗುತ್ತಿದ್ದರೆ, ಕಣ್ಣುಳ್ಳ ಮನುಷ್ಯನು ಅವನನ್ನು ಅಲ್ಲಿಗೆ ಹೋಗಲು ಬಿಡುವುದಿಲ್ಲ. ಹಾಗೆಯೇ ಅಜ್ಞಾನಿಯು ಅವಿದ್ಯೆಯಲ್ಲಿ ಸಿಕ್ಕಿಕೊಂಡು ದುಃಖದ ಕಡೆಗೆ ಹೋಗುತ್ತಿರುವುದನ್ನು ಕಂಡು ಯಾವ ದಯಾಳುವಾದ ಜ್ಞಾನಿಯು ತಿಳಿದು-ತಿಳಿದು ಆತನನ್ನು ಆ ತಪ್ಪುದಾರಿಯಲ್ಲಿ ಹೋಗಲು ಬಿಡುವನು ಅಥವಾ ಹೋಗಲು ಪ್ರೇರೇಪಿಸಬಹುದು ? ॥ ೧೭ ॥ ತನಗೆ ಪ್ರಿಯನಾದ ಸಂಬಂಧಿಯನ್ನು ಅಥವಾ ಶಿಷ್ಯನನ್ನು ಭಗವದ್ಭಕ್ತಿಯ ಉಪದೇಶವನ್ನು ಕೊಟ್ಟು ಮೃತ್ಯುವಿನ ದವಡೆಯಿಂದ ಬಿಡಿಸದಿರುವ ಗುರುವು ನಿಜವಾದ ಗುರುವೇ ಅಲ್ಲ. ಸ್ವಜನನು-ಸ್ವಜನನಲ್ಲ. ತಂದೆಯು-ತಂದೆಯಲ್ಲ. ತಾಯಿಯು-ತಾಯಿಯಲ್ಲ. ದೈವವು-ಇಷ್ಟದೇವರಲ್ಲ. ಪತಿಯು- ಪತಿಯೇ ಅಲ್ಲ. ॥ ೧೮ ॥

ಎಲೈ ಪುತ್ರರೇ ! ನನ್ನ ಈ ಅವತಾರ ಶರೀರದ ರಹಸ್ಯವು ಸಾಧಾರಣ ಮನುಷ್ಯರ ಬುದ್ಧಿಗೆ ಎಟಕುವುದಲ್ಲ. ಧರ್ಮಕ್ಕೆ ನೆಲೆಯಾಗಿರುವ ಶುದ್ಧಸತ್ತ್ವವೇ ನನ್ನ ಹೃದಯವು. ಅಧರ್ಮವನ್ನು ನಾನು ಬಹಳ ದೂರ ಹಿಂದಕ್ಕೆ ತಳ್ಳಿಬಿಟ್ಟಿರುವೆನು. ಇದರಿಂದ ಸತ್ಪುರುಷರು ನನ್ನನ್ನು 'ಋಷಭ'ನೆಂದು ಹೇಳುತ್ತಾರೆ. ॥ ೧೯ ॥ ನೀವೆಲ್ಲರೂ ನನ್ನ ಆ ಶುದ್ಧಸತ್ತ್ವಮಯ ಹೃದಯದಿಂದ ಉತ್ಪನ್ನರಾಗಿರುವಿರಿ. ಅದಕ್ಕಾಗಿ ಮತ್ಸರವನ್ನು ಬಿಟ್ಟು ನಿಮ್ಮ ಹಿರಿಯಣ್ಣ ಭರತನ ಸೇವೆಯನ್ನು ಮಾಡಿರಿ. ಅವನನ್ನು ಸೇವಿಸುವುದು ನನ್ನ ಸೇವೆಯೇ ಆಗಿದೆ ಹಾಗೂ ಇದೇ ನಿಮ್ಮ ಪ್ರಜಾಪಾಲನೆಯೂ ಆಗಿದೆ. ॥ ೨೦ ॥ ಎಲ್ಲ ಸ್ಥಾವರಗಳಲ್ಲಿ ವೃಕ್ಷಗಳು ಅತ್ಯಂತ ಶ್ರೇಷ್ಠವಾಗಿವೆ. ಅವುಗಳಿಗಿಂತ ನಡೆಯುವ ಪ್ರಾಣಿಗಳು ಶ್ರೇಷ್ಠರು. ಅವುಗಳಲ್ಲಿಯೂ ಕೀಟಾದಿಗಳಿಗಿಂತ ಜ್ಞಾನವುಳ್ಳ ಪಶುಗಳು ಶ್ರೇಷ್ಠರು. ಪಶುಗಳಿಗಿಂತ ಮನುಷ್ಯ, ಮನುಷ್ಯರಿಗಿಂತ ಪ್ರಮಥಗಣಗಳು, ಪ್ರಮಥರಿಗಿಂತ ಗಂಧರ್ವರು, ಗಂಧರ್ವರಿಗಿಂತ ಸಿದ್ಧರು, ಸಿದ್ಧರುಗಳಿಗಿಂತ ದೇವತೆಗಳ ಅನುಯಾಯಿಗಳಾದ ಕಿನ್ನರರು ಶ್ರೇಷ್ಠರಾಗಿದ್ದಾರೆ. ॥ ೨೧ ॥ ಆ ಕಿನ್ನರರಿಗಿಂತಲೂ ಅಸುರರು, ಅಸುರರಿಗಿಂತಲೂ ದೇವತೆಗಳು, ದೇವತೆಗಳಿಗಿಂತಲೂ ಇಂದ್ರನು ಶ್ರೇಷ್ಠನಾಗಿದ್ದಾನೆ. ಇಂದ್ರನಿಗಿಂತಲೂ

ದೇವಾಸುರೇಭ್ಯೋ ಮಘವತ್ಪ್ರಧಾನಾ
ದಕ್ಷಾದಯೋ ಬ್ರಹ್ಮಸುತಾಸ್ತು ತೇಷಾಮ್ ।
ಭವಃ ಪರಃ ಸೋಽಥ ವಿರಿಂಚವೀರ್ಯಃ
ಸ ಮತ್ಪರೋಽಹಂ ದ್ವಿಜದೇವದೇವಃ ॥ ೨೨ ॥

ನ ಬ್ರಾಹ್ಮಣೈಸ್ತುಲಯೇ ಭೂತಮನ್ಯತ್
ಪಶ್ಯಾಮಿ ವಿಪ್ರಾಃ ಕಿಮತಃ ಪರಂ ತು ।
ಯಸ್ಮಿನ್ನೃಭಿಃ ಪ್ರಹುತಂ ಶ್ರದ್ಧಯಾಹ-
ಮಶ್ನಾಮಿ ಕಾಮಂ ನ ತಥಾಗ್ನಿಹೋತ್ರೇ ॥ ೨೩ ॥

ಧೃತಾ ತನೂರುಶತೀ ಮೇ ಪುರಾಣೀ
ಯೇನೇಹ ಸತ್ತ್ವಂ ಪರಮಂ ಪವಿತ್ರಮ್ ।
ಶಮೋ ದಮಃಸತ್ಯಮನುಗ್ರಹಶ್ಚ
ತಪಸ್ತಿತಿಕ್ಷಾನುಭವಶ್ಚ ಯತ್ರ ॥ ೨೪ ॥

ಮತ್ತೋಽಪ್ಯನಂತಾತ್ಪರತಃ ಪರಸ್ಮಾ-
ತ್ಸ್ವರ್ಗಾಪವರ್ಗಾಧಿಪತೇರ್ನ ಕಿಂಚಿತ್ ।
ಯೇಷಾಂ ಕಿಮು ಸ್ಯಾದಿತರೇಣ ತೇಷಾ-
ಮಕಿಂಚನಾನಾಂ ಮಯಿ ಭಕ್ತಿಭಾಜಾಮ್ ॥ ೨೫ ॥

ಸರ್ವಾಣಿ ಮದ್ಧಿಷ್ಣ್ಯತಯಾ ಭವದ್ಭಿ-
ಶ್ಚರಾಣಿ ಭೂತಾನಿ ಸುತಾ ಧ್ರುವಾಣಿ ।
ಸಂಭಾವಿತವ್ಯಾನಿ ಪದೇ ಪದೇ ವೋ
ವಿವಿಕ್ತದೃಗ್ಭಿಸ್ತದುಹಾರ್ಹಣಂ ಮೇ ॥ ೨೬ ॥

ಮನೋವಚೋದೃಕ್ಕರಣೇಹಿತಸ್ಯ
ಸಾಕ್ಷಾತ್ಕೃತಂ ಮೇ ಪರಿಬರ್ಹಣಂ ಹಿ ।
ವಿನಾ ಪುಮಾನ್ಯೇನ ಮಹಾವಿಮೋಹಾತ್
ಕೃತಾಂತಪಾಶಾನ್ನ ವಿಮೋಕ್ತುಮೀಶೇತ್ ॥ ೨೭ ॥

*ಶ್ರೀಶುಕ ಉವಾಚ*

ಏವಮನುಶಾಸ್ಯಾತ್ಮಜಾನ್ ಸ್ವಯಮನುಶಿಷ್ಟಾನಪಿ ಲೋಕಾನುಶಾಸನಾರ್ಥಂ ಮಹಾನುಭಾವಃ ಪರಮ-ಸುಹೃದ್ಭಗವಾನೃಷಭಾಪದೇಶ ಉಪಶಮಶೀಲಾನಾ-ಮುಪರತಕರ್ಮಣಾಂ ಮಹಾಮುನೀನಾಂ ಭಕ್ತಿಜ್ಞಾನ-ವೈರಾಗ್ಯಲಕ್ಷಣಂ ಪಾರಮಹಂಸ್ಯಧರ್ಮಮುಪಶಿಕ್ಷಮಾಣಃ ಸ್ವತನಯಶತಜ್ಯೇಷ್ಠಂ ಪರಮಭಾಗವತಂ ಭಗವಜ್ಜನ-

ಬ್ರಹ್ಮದೇವರ ಪುತ್ರರಾದ ದಕ್ಷಾದಿ ಪ್ರಜಾಪತಿಗಳು ಶ್ರೇಷ್ಠರಾಗಿದ್ದಾರೆ. ಬ್ರಹ್ಮದೇವರ ಪುತ್ರರಲ್ಲಿ ರುದ್ರನು ಸರ್ವಶ್ರೇಷ್ಠನಾಗಿದ್ದಾನೆ. ಅವರು ಬ್ರಹ್ಮದೇವರಿಂದಲೇ ಉತ್ಪನ್ನರಾದವರು ; ಅದಕ್ಕಾಗಿ ಬ್ರಹ್ಮದೇವರು ಅವರಿಗಿಂತಲೂ ಶ್ರೇಷ್ಠರು. ಅವರೂ ನನ್ನಿಂದಲೇ ಉತ್ಪನ್ನರಾದವರು ಮತ್ತು ನನ್ನನ್ನೇ ಉಪಾಸಿಸುತ್ತಾರೆ, ಅದಕ್ಕಾಗಿ ನಾನು ಅವರಿಗಿಂತಲೂ ಶ್ರೇಷ್ಠನಾಗಿದ್ದೇನೆ. ಆದರೆ ಬ್ರಾಹ್ಮಣರು ನನಗಿಂತಲೂ ಶ್ರೇಷ್ಠರಾಗಿ ದ್ದಾರೆ. ಏಕೆಂದರೆ, ಅವರನ್ನು ನಾನು ಪೂಜ್ಯರೆಂದು ತಿಳಿಯು ತ್ತೇನೆ. ॥ ೨೨ ॥

(ಸಭೆಯಲ್ಲಿ ಉಪಸ್ಥಿತರಾಗಿದ್ದ ಬ್ರಾಹ್ಮಣರನ್ನು ಕುರಿತು –) ಎಲೈ ವಿಪ್ರಶ್ರೇಷ್ಠರೇ! ಇತರ ಯಾವ ಪ್ರಾಣಿಗಳೂ ಬ್ರಾಹ್ಮಣರಿಗೆ ಸಾಟಿಯೇ ಅಲ್ಲವೆಂದು ನಾನು ತಿಳಿಯುತ್ತೇನೆ. ಹೀಗಿರುವಾಗ ಅವ ರಿಂದ ಹೆಚ್ಚಿನವರೆಂದು ಯಾರನ್ನು ಹೇಳಬಹುದು ? ಜನರು ಶ್ರದ್ಧಾ ಪೂರ್ವಕವಾಗಿ ಬ್ರಾಹ್ಮಣರ ಬಾಯಿಯಲ್ಲಿ ಸಮರ್ಪಿಸುವ ಅನ್ನವೇ ಮುಂತಾದ ಆಹುತಿಯನ್ನು ನಾನು ಅತ್ಯಂತ ಪ್ರಸನ್ನತೆಯಿಂದ ಸ್ವೀಕರಿಸುವಂತೆ ಅಗ್ನಿಹೋತ್ರದಲ್ಲಿ ಹೋಮಮಾಡಿದ ಆಹುತಿ ಯನ್ನು ಸ್ವೀಕರಿಸುವುದಿಲ್ಲ. ॥ ೨೩ ॥ ಯಾರು ಈ ಲೋಕದಲ್ಲಿ ಅಧ್ಯಯನದ ಮೂಲಕ ನನ್ನ ವೇದರೂಪವಾದ ಅತಿಸುಂದರವೂ, ಪುರಾತನವೂ ಆದ ಮೂರ್ತಿಯನ್ನು ಧರಿಸಿಕೊಂಡಿರುವರೋ, ಯಾರು ಪರಮಪವಿತ್ರ ಸತ್ತ್ವಗುಣ, ಶಮ, ದಮ, ಸತ್ಯ, ದಯೆ, ತಪಸ್ಸು, ತಿತಿಕ್ಷೆ ಮತ್ತು ಜ್ಞಾನವೇ ಮುಂತಾದ ಎಂಟು ಗುಣಗಳಿಂದ ಸಂಪನ್ನರಾಗಿರುವರೋ ಅಂತಹ ಬ್ರಾಹ್ಮಣರಿಗಿಂತ ಮಿಗಿಲಾದವರು ಯಾರು ತಾನೇ ಇರಬಲ್ಲರು ? ॥ ೨೪ ॥ ನಾನು ಬ್ರಹ್ಮಾದಿ ಗಳಿಗಿಂತಲೂ ಶ್ರೇಷ್ಠನೂ, ಅನಂತನೂ ಆಗಿರುವೆನು ಹಾಗೂ ಸ್ವರ್ಗ-ಮೋಕ್ಷಗಳನ್ನೂ ಕೊಡುವ ಸಾಮರ್ಥ್ಯವುಳ್ಳವನು. ಆದರೆ ನನ್ನ ಆಕಿಂಚನರಾದ ನಿಷ್ಕಾಮ ಭಕ್ತರು ನನ್ನಿಂದ ಎಂದಿಗೂ ಏನನ್ನೂ ಬಯಸುವುದಿಲ್ಲ. ಅಂತಹ ನಿಸ್ಪೃಹರಾದವರು ರಾಜ್ಯವೇ ಮುಂತಾದ ಬೇರೆ ವಸ್ತುಗಳನ್ನು ಹೇಗೆ ಇಚ್ಛಿಸಬಲ್ಲರು ? ॥ ೨೫ ॥

ಎಲೈ ಪುತ್ರರೇ! ನೀವು ಸಮಸ್ತ ಚರಾಚರ ಪ್ರಾಣಿಗಳೂ ನನ್ನದೇ ಶರೀರವೆಂದರಿತು ಶುದ್ಧಬುದ್ಧಿಯಿಂದ ಹೆಜ್ಜೆ-ಹೆಜ್ಜೆಗೆ ಅವರ ಸೇವೆ ಮಾಡಿರಿ. ಇದೇ ನಿಜವಾದ ನನ್ನ ಪೂಜೆಯಾಗಿದೆ. ॥ ೨೬ ॥ ಮನಸ್ಸು, ಮಾತು ದೃಷ್ಟಿ ಹಾಗೂ ಇತರ ಇಂದ್ರಿಯಗಳ ಕರ್ಮ ಗಳೆಲ್ಲಕ್ಕೂ ನನ್ನ ಆರಾಧನೆಯೇ ಫಲವೆಂದು ತಿಳಿಯಿರಿ. ಇದಲ್ಲದೆ ಮನುಷ್ಯನು ತನ್ನನ್ನು ಮಹಾಮೋಹಮಯ ಕಾಲಪಾಶದಿಂದ ಬಿಡಿಸಿಕೊಳ್ಳಲಾರನು. ॥ ೨೭ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ರಾಜೇಂದ್ರಾ! ಋಷಭದೇವರ ಪುತ್ರರೆಲ್ಲರೂ ಸ್ವತಃ ಎಲ್ಲ ವಿಧದಿಂದ ಸುಶಿಕ್ಷಿತರೇ ಆಗಿದ್ದರೂ ಜನರಿಗೆ ಶಿಕ್ಷಣವನ್ನು ಕೊಡುವ ಉದ್ದೇಶದಿಂದ ಮಹಾಪ್ರಭಾವಶಾಲಿ ಪರಮ ಸುಹೃದ್ ಭಗವಾನ್ ಋಷಭ ದೇವರು ಅವರಿಗೆ ಎಲ್ಲ ರೀತಿಯ ಉಪದೇಶವನ್ನು ಮಾಡಿದರು. ಋಷಭದೇವರ ನೂರು ಪುತ್ರರಲ್ಲಿ ಭರತನು ಎಲ್ಲರಿಗಿಂತ ಹಿರಿಯ ವನಾಗಿದ್ದನು. ಅವನು ಭಗವಂತನ ಪರಮ ಭಕ್ತನೂ, ಭಗವದ್ಭಕ್ತರ ಪರಾಯಣನೂ ಆಗಿದ್ದನು. ಋಷಭದೇವರು-ಪೃಥ್ವಿಯನ್ನು ಪಾಲಿ ಸಲಿಕ್ಕಾಗಿ ಅವನನ್ನು ರಾಜಸಿಂಹಾಸನದ ಮೇಲೆ ಕುಳ್ಳಿರಿಸಿದರು ಮತ್ತು ಸ್ವತಃ ಶಮ-ದಮಾದಿ ಸಂಪನ್ನರಾದ, ನಿವೃತ್ತಿಧರ್ಮ

ಪರಾಯಣಂ ಭರತಂ ಧರಣಿಪಾಲನಾಯಾಭಿಷಿಚ್ಯ ಸ್ವಯಂ ಭವನ ಏವೋರ್ವರಿತಶರೀರಮಾತ್ರಪರಿಗ್ರಹ ಉನ್ಮತ್ತ ಇವ ಗಗನಪರಿಧಾನಃ ಪ್ರಕೀರ್ಣಕೇಶ ಆತ್ಮನ್ಯಾರೋಪಿತಾಹವನೀಯೋ ಬ್ರಹ್ಮಾವರ್ತಾತ್ಪ್ರವವ್ರಾಜ ॥ ೨೮ ॥ ಜಡಾಂಧಮೂಕಬಧಿರಪಿಶಾಚೋನ್ಮಾದಕವದವಧೂತವೇಷೋಽಭಿಭಾಷ್ಯಮಾಣೋಽಪಿ ಜನಾನಾಂ ಗೃಹೀತಮೌನವ್ರತಸ್ತೂಷ್ಣೀಂ ಬಭೂವ ॥ ೨೯॥ ತತ್ರ ತತ್ರ ಪುರಗ್ರಾಮಾಕರಖೇಟವಾಟಖರ್ವಟಶಿಬಿರವ್ರಜಘೋಷಸಾರ್ಥಗಿರಿವನಾಶ್ರಮಾದಿಷ್ವನುಪಥಮವನಿಚರಾಪಸದೈಃ ಪರಿಭೂಯಮಾನೋ ಮಕ್ಷಿಕಾಭಿರಿವ ವನಗಜಸ್ತರ್ಜನತಾಡನಾವಮೇಹನಷ್ಠೀವನಗ್ರಾವಶಕೃದ್ರಜಃಪ್ರಕ್ಷೇಪಪೂತಿವಾತದುರುಕ್ತೈಸ್ತದವಿಗಣಯನ್ನೇವಾಸತ್ಸಂಸ್ಥಾನ ಏತಸ್ಮಿನ್ ದೇಹೋಪಲಕ್ಷಣೇ ಸದಪದೇಶ ಉಭಯಾನುಭವಸ್ವರೂಪೇಣ ಸ್ವಮಹಿಮಾವಸ್ಥಾನೇನಾಸಮಾರೋಪಿತಾಹಂಮಮಾಭಿಮಾನತ್ವಾದವಿಖಂಡಿತಮನಾಃ ಪೃಥಿವೀಮೇಕಚರಃ ಪರಿಬಭ್ರಾಮ ॥ ೩೦ ॥ ಅತಿಸುಕುಮಾರಕರಚರಣೋರಃಸ್ಥಲವಿಪುಲಬಾಹ್ವಂಸಗಲವದನಾದ್ಯವಯವವಿನ್ಯಾಸಃ ಪ್ರಕೃತಿಸುಂದರಸ್ವಭಾವಹಾಸಸುಮುಖೋ ನವನಲಿನದಲಾಯಮಾನಶಿಶಿರತಾರಾರುಣಾಯತನಯನರುಚಿರಃ ಸದೃಶಸುಭಗಕಪೋಲಕರ್ಣಕಂಠನಾಸೋ ವಿಗೂಢಸ್ಮಿತವದನಮಹೋತ್ಸವೇನ ಪುರವನಿತಾನಾಂ ಮನಸಿ ಕುಸುಮಶರಾಸನಮುಪದಧಾನಃ ಪರಾಗವಲಂಬಮಾನಕುಟಿಲಜಟಿಲಕಪಿಶಕೇಶಭೂರಿಭಾರೋಽವಧೂತಮಲಿನನಿಜಶರೀರೇಣ ಗ್ರಹಗೃಹೀತ ಇವಾದೃಶ್ಯತ ॥ ೩೧ ॥

ಪರಾಯಣರಾದ ಮುನಿಗಳಿಗೆ ಭಕ್ತಿ, ಜ್ಞಾನ, ವೈರಾಗ್ಯರೂಪವಾದ ಪರಮಹಂಸೋಚಿತವಾದ ಧರ್ಮದ ಶಿಕ್ಷಣವನ್ನು ಕೊಡುವುದಕ್ಕಾಗಿ ಪೂರ್ಣವಾಗಿ ವಿರಕ್ತರಾದರು. ಕೇವಲ ಶರೀರವನ್ನು ಮಾತ್ರ ಇಟ್ಟುಕೊಂಡು ಬೇರೆ ಎಲ್ಲವನ್ನೂ ಮನೆಯಲ್ಲೇ ಬಿಟ್ಟುಬಿಟ್ಟರು. ಈಗ ಅವರು ವಸ್ತ್ರಗಳನ್ನೂ ತ್ಯಜಿಸಿ ಸರ್ವಥಾ ದಿಗಂಬರರಾದರು. ಆಗ ಅವರ ತಲೆ ಕೆದರಿತ್ತು, ಉನ್ಮತ್ತನಂತೆ ವೇಷವಿತ್ತು. ಈ ಸ್ಥಿತಿಯಲ್ಲಿ ಅವರು ಆಹವನೀಯವೇ ಮೊದಲಾದ ಅಗ್ನಿಗಳನ್ನು ತನ್ನಲ್ಲೇ ಲೀನವಾಗಿಸಿಕೊಂಡು ಸಂನ್ಯಾಸಿಗಳಾಗಿ, ಬ್ರಹ್ಮಾವರ್ತ ದೇಶದಿಂದ ಹೊರಗೆ ಹೊರಟುಹೋದರು. ॥ ೨೮ ॥ ಅವರು ಪೂರ್ಣವಾಗಿ ಮೌನವಾಗಿದ್ದರು. ಯಾರಾದರೂ ಮಾತನಾಡಿಸಿದರೂ ಮಾತನಾಡುತ್ತಿರಲಿಲ್ಲ. ಮೂರ್ಖರಂತೆ, ಕುರುಡರಂತೆ, ಕಿವುಡರಂತೆ ಮೂಗರಂತೆ, ಪಿಶಾಚಿಗಳಂತೆ ಹಾಗೂ ಹುಚ್ಚರಂತೆ ಆಚರಣೆಗಳನ್ನು ಆಚರಿಸುತ್ತಾ ಅವರು ಅವಧೂತರಾಗಿ ಅಲ್ಲಲ್ಲಿ ಸಂಚರಿಸತೊಡಗಿದರು. ॥ ೨೯ ॥ ಕೆಲವು ಸಲ ನಗರಗಳಿಗೋ, ಹಳ್ಳಿಗಳಿಗೋ ಹೋದರೆ, ಕೆಲವೊಮ್ಮೆ ಗಣಿಗಳಿಗೋ, ರೈತರ ವಸತಿಗಳಿಗೋ, ತೋಟಗಳಿಗೋ, ಬೆಟ್ಟದ ಹಳ್ಳಿಗಳಿಗೋ, ಸೇನಾ ಶಿಬಿರಗಳಿಗೋ, ಗೋಶಾಲೆಗಳಿಗೋ, ಗೊಲ್ಲರ ಕೇರಿಗಳಿಗೋ, ಯಾತ್ರಿಕರು ತಂಗುವ ಸ್ಥಳಗಳಿಗೆ ಹೋಗುತ್ತಿದ್ದರು. ಕೆಲವೊಮ್ಮೆ ಪರ್ವತಗಳಲ್ಲೂ, ಅರಣ್ಯಗಳಲ್ಲೂ, ಆಶ್ರಮಗಳಲ್ಲೂ ಸಂಚರಿಸುತ್ತಿದ್ದರು. ಅವರು ಯಾವುದೇ ಮಾರ್ಗವಾಗಿ ಹೋದರೂ ಕಾಡಿನಲ್ಲಿ ಸಂಚರಿಸುವ ಆನೆಯನ್ನು ನೊಣಗಳು ಮುತ್ತುವಂತೆ – ಮೂರ್ಖರೂ, ದುಷ್ಟರೂ ಆತನನ್ನು ಹಿಂಬಾಲಿಸಿ ಅವರಿಗೆ ಕಿರುಕುಳಕೊಡುತ್ತಿದ್ದರು. ಕೆಲವರು ಗದರಿಸಿದರೆ, ಕೆಲವರು ಹೊಡೆಯುತ್ತಿದ್ದರು. ಕೆಲವರು ಇವರ ಮುಂದೆ ಮೂತ್ರವಿಸರ್ಜನೆ ಮಾಡಿದರೆ, ಕೆಲವರು ಉಗುಳುತ್ತಿದ್ದರು. ಕೆಲವರು ಮಣ್ಣುಹೆಂಟೆಗಳನ್ನು ಎಸೆದರೆ, ಕೆಲವರು ಮಲವನ್ನೂ, ಧೂಳನ್ನೂ ಎರಚುತ್ತಿದ್ದರು. ಕೆಲವರು ಅಧೋವಾಯು ಇವರಮೇಲೆ ಬಿಟ್ಟರೆ, ಕೆಲವರು ಮನಸ್ವೀಯಾಗಿ ಬೈದು ತಿರಸ್ಕರಿಸುತ್ತಿದ್ದರು, ಆದರೆ ಅವರು ಇವೆಲ್ಲದರ ಕಡೆಗೆ ಸ್ವಲ್ಪವೂ ಲಕ್ಷ್ಯಕೊಡದೆ ಉದಾಸೀನರಾಗಿದ್ದರು. ಕಾರಣ – ಭ್ರಮೆಯಿಂದ ಸತ್ಯವೆಂದು ಹೇಳಲ್ಪಡುವ ಈ ಶರೀರದಲ್ಲಿ ಅವರಿಗೆ ಅಹಂತೆ-ಮಮತೆ ಸ್ವಲ್ಪವೂ ಇರಲಿಲ್ಲ. ಅವರು ಕಾರ್ಯ ಕಾರಣರೂಪವಾದ ಸಮಸ್ತ ಪ್ರಪಂಚದ ಸಾಕ್ಷಿಯಾಗಿ ತನ್ನ ಪರ ಮಾತ್ಮಸ್ವರೂಪದಲ್ಲೇ ಸ್ಥಿತರಾಗಿದ್ದರು. ಅದಕ್ಕಾಗಿ ಅಖಂಡ ಚಿತ್ತವೃತ್ತಿಯಿಂದ ಒಬ್ಬಂಟಿಗರಾಗಿಯೇ ಪೃಥ್ವಿಯಲ್ಲಿ ಸಂಚರಿಸುತ್ತಿದ್ದರು. ॥೩೦॥

ಋಷಭದೇವರು ಆಗಲೂ ಸುಂದರ ಸುಕುಮಾರವಾದ ದೇಹ ಸಂಪತ್ತಿನಿಂದ ಕೂಡಿದ್ದರು. ಅವರ ಕೈ-ಕಾಲುಗಳು, ಎದೆ, ನೀಡು ತೋಳುಗಳು, ಹೆಗಲು, ಕೊರಳು, ಮುಖ-ಮುಂತಾದ ಸರ್ವಾಂಗಗಳೂ ಅತ್ಯಂತ ಕೋಮಲವಾಗಿದ್ದವು. ಅವರ ಸಹಜ ಸುಂದರ ಮುಖವು ಮಧುರ ಮಂದಹಾಸದಿಂದ ಇನ್ನೂ ಮನೋಹರವಾಗಿ ಕಣ್ಮನಗಳನ್ನು ಸೆಳೆಯುತ್ತಿತ್ತು. ನೇತ್ರಗಳು ಹೊಸ ಕಮಲದಳಗಳಂತೆ ರಮಣೀಯವಾಗಿ ವಿಶಾಲವಾಗಿ ಕೊಂಚ ಕೆಂಬಣ್ಣದಿಂದ ಕೂಡಿದ್ದು ಶೀತಲವೂ, ಸಂತಾಪಹರವೂ ಆದ ಕಣ್ಣುಗುಡ್ಡೆಗಳಿಂದ ಕಂಗೊಳಿಸುತ್ತಿದ್ದವು. ಕೆನ್ನೆ, ಕಿವಿ, ಮತ್ತು ಮೂಗುಗಳು ಸಮಾನವಾಗಿದ್ದು ಸೌಂದರ್ಯದ ರಸದೌತಣವನ್ನು ಮಾಡಿಸುತ್ತಿದ್ದವು. ಇವೆಲ್ಲದರ

ಯರ್ಹಿ ವಾವ ಸ ಭಗವಾನ್ ಲೋಕಮಿಮಂ ಯೋಗಸ್ಯಾದ್ಧಾ ಪ್ರತೀಪಮಿವಾಚಕ್ಷಾಣಸ್ತತ್ಪ್ರತಿಕ್ರಿಯಾಕರ್ಮ-ಬೀಭತ್ಸಿತಮಿತಿ ವ್ರತಮಾಜಗರಮಾಸ್ಥಿತಃ ಶಯಾನ ಏವಾ-ಶ್ನಾತಿ ಪಿಬತಿ ಖಾದತ್ಯವಮೇಹತಿ ಹದತಿ ಸ್ಮ ಚೇಷ್ಟಮಾನ ಉಚ್ಚರಿತ ಆದಿಗ್ಧೋದ್ದೇಶಃ ॥ ೩೨ ॥ ತಸ್ಯ ಹ ಯಃ ಪುರೀಷಸುರಭಿಸೌಗಂಧ್ಯವಾಯುಸ್ತಂ ದೇಶಂ ದಶಯೋ-ಜನಂ ಸಮಂತಾತ್ ಸುರಭಿಂ ಚಕಾರ ॥ ೩೩ ॥ ಏವಂ ಗೋಮೃಗಕಾಕಚರ್ಯಯಾ ವ್ರಜಂಸ್ತಿಷ್ಠನ್ನಾಸೀನಃ ಶಯಾನಃ ಕಾಕಮೃಗಗೋಚರಿತಃ ಪಿಬತಿ ಖಾದತ್ಯ-ವಮೇಹತಿ ಸ್ಮ ॥ ೩೪ ॥ ಇತಿ ನಾನಾಯೋಗಚರ್ಯಾ-ಚರಣೋ ಭಗವಾನ್ಕೈವಲ್ಯಪತಿರ್ಋಷಭೋಽವಿರತ-ಪರಮಮಹಾನಂದಾನುಭವ ಆತ್ಮನಿ ಸರ್ವೇಷಾಂ ಭೂತಾನಾಮಾತ್ಮಭೂತೇ ಭಗವತಿ ವಾಸುದೇವ ಆತ್ಮನೋಽವ್ಯವಧಾನಾನಂತರೋದರಭಾವೇನ ಸಿದ್ಧಸ-ಮಸ್ತಾರ್ಥಪರಿಪೂರ್ಣೋ ಯೋಗೈಶ್ವರ್ಯಾಣಿ ವೈಹಾಯಸ-ಮನೋಜವಾಂತರ್ಧಾನಪರಕಾಯಪ್ರವೇಶದೂರಗ್ರಹ-ಣಾದೀನಿ ಯದೃಚ್ಛಯೋಪಗತಾನಿ ನಾಂಜ ಸಾ ನೃಪ ಹೃದಯೇನಾಭ್ಯನಂದತ್ ॥ ೩೫ ॥

ಜೊತೆಗೆ ಆತನ ಕಿರುನಗೆಯ ಬೆಡಗಿನಿಂದ ಕೂಡಿದ ಮುಖಾರ ವಿಂದದ ಕಾಂತಿಯನ್ನು ಕಂಡು ಪುರನಾರಿಯರ ಮನಸ್ಸು ಕಾಮ ದೇವನ ಆಕ್ರಮಣಕ್ಕೆ ಒಳಗಾಗುತ್ತಿತ್ತು. ಆದರೂ ಮುಖದ ಮುಂದೆ ಜೋಲಾಡುತ್ತಿದ್ದ ಉದ್ದವಾದ, ಬೂದುಬಣ್ಣದ ಗುಂಗುರು ಕೂದಲುಗಳ ಭಾರದಿಂದಲೂ, ಅವಧೂತರಿಗೆ ತಕ್ಕುದಾದ ಧೂಳು ಮುಸುಕಿದ ದೇಹದಿಂದಲೂ ಅವರು ಗ್ರಹಣಹಿಡಿದವರಂತೆ ಕಾಣುತ್ತಿದ್ದರು. ॥ ೩೧ ॥

ಭಗವಾನ್ ಋಷಭದೇವರು ಈ ಜನರೆಲ್ಲರೂ ಯೋಗಕ್ಕೆ ವಿಘ್ನ ವನ್ನುಂಟುಮಾಡುವವರಾಗಿದ್ದಾರೆ ಎಂದು ನೋಡಿ ಇವರಿಂದ ಬದುಕುಳಿಯಲು ಬೀಭತ್ಸವೃತ್ತಿಯಿಂದ ಇರುವುದೇ ಆಗಿದೆ ಎಂದು ತಿಳಿದು ಅವರು ಅಜಗರ ವೃತ್ತಿಯನ್ನು ಧರಿಸಿದರು. ಅವರು ಮಲಗಿಕೊಂಡೇ ತಿನ್ನುವುದು, ಕುಡಿಯುವುದು, ಅಗಿಯುವುದು ಮತ್ತು ಮಲ-ಮೂತ್ರ ವಿಸರ್ಜನೆಮಾಡುವುದು ಮುಂತಾದವು ಗಳನ್ನು ಮಾಡತೊಡಗಿದರು. ತಾನು ವಿಸರ್ಜನೆಮಾಡಿದ ಮಲ ದಲ್ಲೇ ಹೊರಳಾಡುತ್ತಾ ಅದನ್ನು ಮೈಗೆಲ್ಲಾ ಬಳಿದುಕೊಳ್ಳುತ್ತಿ ದ್ದರು. ॥ ೩೨ ॥ ಆದರೆ ಅವರ ಮಲಕ್ಕೆ ದುರ್ಗಂಧವಿರಲಿಲ್ಲ. ಸುಗಂಧವೇ ಇತ್ತು. ವಾಯುವು ಆ ಸುಗಂಧವನ್ನು ಹೊತ್ತುಕೊಂಡು ಹೋಗಿ ಸುತ್ತಲೂ ಹತ್ತೂ ಯೋಜನಗಳವರೆಗೆ ಇಡೀ ದೇಶವನ್ನೇ ಸುಗಂಧಿತವಾಗಿಸುತ್ತಿತ್ತು. ॥ ೩೩ ॥ ಹೀಗೆಯೇ ಅವರು ಗೋವು ಗಳು, ಜಿಂಕೆಗಳು, ಕಾಗೆಗಳು ಮುಂತಾದವುಗಳ ಆಚರಣೆಯನ್ನು ಅನುಸರಿಸುತ್ತಾ ಕೆಲವೊಮ್ಮೆ ನಡೆಯುತ್ತಿರುವಾಗಲೂ, ಕೆಲವೊಮ್ಮೆ ನಿಂತಿರುವಾಗಲೂ, ಕೆಲವೊಮ್ಮೆ ಕುಳಿತಿರುವಾಗಲೂ, ಕೆಲವೊಮ್ಮೆ ಮಲಗಿರುವಾಗಲೂ ಆಹಾರ-ಪಾನೀಯಗಳನ್ನು ತಿನ್ನುತ್ತಾ-ಕುಡಿ ಯುತ್ತಾ ಮಲ-ಮೂತ್ರ ವಿಸರ್ಜನೆ ಮಾಡುತ್ತಿದ್ದರು. ॥ ೩೪ ॥ ಎಲೈ ಪರೀಕ್ಷಿತನೇ! ಪರಮಹಂಸರಿಗೆ ತ್ಯಾಗದ ಆದರ್ಶವನ್ನು ಕಲಿಸುವುದಕ್ಕಾಗಿ ಹೀಗೆ ಮೋಕ್ಷಪತಿಯಾದ ಭಗವಾನ್ ಋಷಭ ದೇವರು ಅನೇಕ ರೀತಿಯ ಯೋಗಚರ್ಯೆಗಳನ್ನು ಆಚರಿಸಿದರು. ಅವರು ನಿರಂತರ ಸರ್ವಶ್ರೇಷ್ಠ ಮಹಾ ಆನಂದವನ್ನು ಅನುಭವಿಸು ತ್ತಿದ್ದರು. ಅವರ ದೃಷ್ಟಿಯಲ್ಲಿ ನಿರುಪಾಧಿಕರೂಪದಿಂದ ಸಮಸ್ತ ಪ್ರಾಣಿಗಳ ಆತ್ಮನು – ತನ್ನ ಆತ್ಮಸ್ವರೂಪ ಭಗವಾನ್ ವಾಸು ದೇವನಿಂದ ಯಾವ ಪ್ರಕಾರದ ಭೇದವು ಇರಲಿಲ್ಲ. ಇದರಿಂದ ಅವರ ಎಲ್ಲ ಪುರುಷಾರ್ಥಗಳೂ ಪೂರ್ಣವಾಗಿ ಹೋಗಿದ್ದವು. ಅವರ ಬಳಿ ಆಕಾಶಗಮನ, ಮನೋವೇಗದಿಂದ ಇಷ್ಟಬಂದಲ್ಲಿಗೆ ತನ್ನ ಶರೀರವನ್ನು ಕೊಂಡೊಯ್ಯುವ ಶಕ್ತಿ, ಅಂತರ್ಧಾನಹೊಂದುವ ಸಿದ್ಧಿ, ಪರಕಾಯಪ್ರವೇಶ, ದೂರಶ್ರವಣ, ದೂರದರ್ಶನ ಮುಂ ತಾದ ಎಲ್ಲ ಸಿದ್ಧಿಗಳು ತಾವಾಗಿಯೇ ಸೇವೆಮಾಡಲು ಬಂದವು. ಆದರೆ ಅವರು ಅವನ್ನು ಮನಸ್ಸಿನಿಂದ ಆಶಿಸಲಿಲ್ಲ, ಆದರಿಸಲಿಲ್ಲ, ಸ್ವೀಕರಿಸಲಿಲ್ಲ. ॥ ೩೫ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ಋಷಭದೇವಾನುಚರಿತೇ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ಋಷಭದೇವರ ದೇಹತ್ಯಾಗ

*ರಾಜೋವಾಚ*

**ನ ನೂನಂ ಭಗವ ಆತ್ಮಾರಾಮಾಣಾಂ ಯೋಗಸಮೀರಿತಜ್ಞಾನಾವಭರ್ಜಿತಕರ್ಮಬೀಜಾನಾಮೈಶ್ವರ್ಯಾಣಿ ಪುನಃ ಕ್ಲೇಶದಾನಿ ಭವಿತುಮರ್ಹಂತಿ ಯದೃಚ್ಛಯೋಪಗತಾನಿ ॥ ೧ ॥**

ರಾಜಾ ಪರೀಕ್ಷಿತನು ಕೇಳಿದನು – ಮುನಿವರ್ಯರೇ! ಯೋಗರೂಪವಾದ ವಾಯುವಿನ ಮೂಲಕ ಪ್ರಜ್ವಲಿತವಾದ ಜ್ಞಾನಾಗ್ನಿಯಿಂದ ರಾಗಾದಿ ಕರ್ಮಬೀಜಗಳು ಸುಟ್ಟುಹೋಗಿರುವಂತಹ ಆತ್ಮಾರಾಮ ಮುನಿಗಳಿಗೆ ದೈವವಶಾತ್ ಸ್ವತಃ ಅಣಿಮಾದಿ ಸಿದ್ಧಿಗಳು ದೊರಕಿದರೆ, ಅವು ಅವರಿಗೆ ರಾಗ-ದ್ವೇಷಾದಿ ಕ್ಲೇಶಗಳಿಗೆ ಕಾರಣಗಳಾಗುವುದೇ ಇಲ್ಲ. ಹಾಗಿರುವಾಗ ಭಗವಾನ್ ಋಷಭದೇವರು ಅವನ್ನು ಏಕೆ ಸ್ವೀಕರಿಸಲಿಲ್ಲ? ॥ ೧ ॥

*ಋಷಿರುವಾಚ*

**ಸತ್ಯಮುಕ್ತಂ ಕಿಂತ್ವಿಹ ವಾ ಏಕೇ ನ ಮನಸೋಽದ್ಧಾ ವಿಶ್ರಂಭಮನವಸ್ಥಾನಸ್ಯ ಶಠಕಿರಾತ ಇವ ಸಂಗಚ್ಛಂತೇ ॥ ೨ ॥**

**ತಥಾ ಚೋಕ್ತಮ್ –**

**ನ ಕುರ್ಯಾತ್ಕರ್ಹಿಚಿತ್ಸಖ್ಯಂ ಮನಸಿ ಹ್ಯನವಸ್ಥಿತೇ ।<br>ಯದ್ವಿಶ್ರಂಭಾಚ್ಚಿರಾಚ್ಚೀರ್ಣಂ ಚಸ್ಕಂದ ತಪ ಐಶ್ವರಮ್ ॥ ೩ ॥**

**ನಿತ್ಯಂ ದದಾತಿ ಕಾಮಸ್ಯ ಚ್ಛಿದ್ರಂ ತಮನು ಯೇಽರಯಃ ।<br>ಯೋಗಿನಃ ಕೃತಮೈತ್ರಸ್ಯ ಪತ್ಯುರ್ಜಾಯೇವ ಪುಂಶ್ಚಲೀ ॥ ೪ ॥**

**ಕಾಮೋ ಮನ್ಯುರ್ಮದೋ ಲೋಭಃ ಶೋಕಮೋಹಭಯಾದಯಃ ।<br>ಕರ್ಮಬಂಧಶ್ಚ ಯನ್ಮೂಲಃ ಸ್ವೀಕುರ್ಯಾತ್ಕೋನು ತದ್ಬುಧಃ ॥ ೫ ॥**

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ರಾಜೇಂದ್ರನೇ! ನೀನು ಹೇಳಿರುವುದು ಸರಿಯಾಗಿದೆ. ಆದರೆ ಧೂರ್ತನಾದ ಬೇಡನು ಮೃಗಗಳು ತನ್ನ ಬಲೆಯಲ್ಲಿ ಬಂದು ಬಿದ್ದು ತನ್ನ ಹಿಡಿತದಲ್ಲಿದ್ದರೂ ಅವುಗಳ ಮೇಲೆ ಭರವಸೆಯನ್ನು ಇಡುವುದಿಲ್ಲ; ಹಾಗೆಯೇ ಬುದ್ಧಿವಂತರಾದವರು ಈ ಚಂಚಲವಾದ ಚಿತ್ತದ ಮೇಲೆ ಭರವಸೆಯನ್ನಿಡುವುದಿಲ್ಲ. ॥ ೨ ॥ ಈ ಪ್ರಸಿದ್ಧವಾದ ಶ್ಲೋಕಗಳು ಇದೇ ಅಭಿಪ್ರಾಯವನ್ನು ಸಾರುತ್ತಿವೆ –

ಈ ಚಂಚಲವಾದ ಚಿತ್ತದಲ್ಲಿ ಎಂದಿಗೂ ಸ್ನೇಹ-ನಂಬಿಕೆಗಳನ್ನಿಡಬಾರದು. ಇದರಲ್ಲಿ ನಂಬಿಕೆಯನ್ನಿಟ್ಟಿದ್ದರಿಂದಲೇ ಬಹುಮಂದಿ ಯೋಗೀಶ್ವರರು ತಾವು ಚಿರಕಾಲದಿಂದ ಸಂಪಾದಿಸಿದ್ದ ತಪಸ್ಸನ್ನು ಕಳಕೊಂಡರು. ಅವರ ತಪಶ್ಶಕ್ತಿಯು ಕ್ಷಯಹೊಂದಿತು. ॥ ೩ ॥ ವ್ಯಭಿಚಾರಿಣಿಯಾದ ಹೆಂಗುಸು ಜಾರಪುರುಷರಿಗೆ ಅವಕಾಶಕೊಟ್ಟು ತನ್ನಲ್ಲಿ ನಂಬಿಕೆಯನ್ನಿಟ್ಟಿರುವ ಪತಿಯನ್ನು ಅವರ ಮೂಲಕ ಕೊಲ್ಲಿಸುವಂತೆಯೇ ಯೋಗಿಯು ತನ್ನ ಮನಸ್ಸಿನ ಮೇಲೆ ವಿಶ್ವಾಸವನ್ನಿಟ್ಟರೆ ಆ ಮನಸ್ಸು ಕಾಮಕ್ಕೂ, ಅದರ ಜೊತೆಗಾರರಾದ ಕ್ರೋಧವೇ ಮುಂತಾದವುಗಳು ಆ ಯೋಗಿಯ ಮೇಲೆ ಆಕ್ರಮಣಮಾಡಲು ಅವಕಾಶವನ್ನು ಕಲ್ಪಿಸಿಕೊಟ್ಟು ಅವನನ್ನು ನಷ್ಟ-ಭ್ರಷ್ಟನನ್ನಾಗಿ ಮಾಡುತ್ತದೆ. ॥ ೪॥ಕಾಮ-ಕ್ರೋಧ-ಮದ-ಲೋಭ-ಶೋಕ-ಮೋಹ ಮತ್ತು ಭಯಗಳೇ ಮುಂತಾದ ಶತ್ರುಗಳಿಗೂ ಮತ್ತು ಕರ್ಮಬಂಧನಕ್ಕೂ ಈ ಮನಸ್ಸೇ ಮೂಲವಾದುದು. ಇದರ ಮೇಲೆ ಯಾವುದೇ ಬುದ್ಧಿವಂತನು ಭರವಸೆಯನ್ನಿಡಬಾರದು. ॥ ೫ ॥

**ಅಥೈವಮಖಿಲಲೋಕಪಾಲಲಲಾಮೋಽಪಿ ವಿಲಕ್ಷಣೈರ್ಜಡವದವಧೂತವೇಷಭಾಷಾಚರಿತೈರವಿಲಕ್ಷಿತಭಗವತ್ಪ್ರಭಾವೋ ಯೋಗಿನಾಂ ಸಾಂಪರಾಯವಿಧಿಮನುಶಿಕ್ಷಯನ್ ಸ್ವಕಲೇವರಂ ಜಿಹಾಸುರಾತ್ಮನ್ಯಾತ್ಮಾನಮಸಂವ್ಯವಹಿತಮನರ್ಥಾಂತರಭಾವೇನಾನ್ವೀಕ್ಷಮಾಣ ಉಪರತಾನುವೃತ್ತಿರುಪರರಾಮ ॥ ೬ ॥ ತಸ್ಯ ಹ ವಾ ಏವಂ ಮುಕ್ತಲಿಂಗಸ್ಯ ಭಗವತ ಋಷಭಸ್ಯ ಯೋಗಮಾಯಾವಾಸನಯಾ ದೇಹ ಇಮಾಂ ಜಗತೀಮಭಿಮಾನಾಭಾಸೇನ ಸಂಕ್ರಮಮಾಣಃ ಕೊಂಕವೇಂಕಕುಟಕಾನ್ದಕ್ಷಿಣಕರ್ಣಾಟಕಾನ್ದೇಶಾನ್ಯದೃಚ್ಛಯೋಪಗತಃ ಕುಟಕಾ-**

ಇದರಿಂದಲೇ ಭಗವಾನ್ ಋಷಭದೇವರು ಇಂದ್ರಾದಿ ಸಮಸ್ತ ಲೋಕಪಾಲಕರಿಗೆ ಭೂಷಣಸ್ವರೂಪರಾಗಿದ್ದರೂ, ಅವರು ಜಡ-ಮೂರ್ಖಮನುಷ್ಯನಂತೆ ಅವಧೂತರಿಗೆ ಸರಿಹೋಲುವ ನಾನಾ ವೇಷ, ಭಾಷೆ, ಆಚರಣೆಗಳಿಂದ ತನ್ನ ಈಶ್ವರೀಯ ಪ್ರಭಾವವನ್ನು ಮರೆಮಾಚಿಕೊಂಡಿದ್ದರು. ಕೊನೆಗೆ ಅವರು ಯೋಗಿಗಳಿಗೆ ದೇಹತ್ಯಾಗದ ವಿಧಿಯನ್ನು ಕಲಿಸುವುದಕ್ಕಾಗಿ ತನ್ನ ಶರೀರವನ್ನು ತ್ಯಜಿಸಲು ಬಯಸಿದರು. ಅವರು ತನ್ನ ಅಂತಃಕರಣದಲ್ಲಿ ಅಭೇದರೂಪದಿಂದ ಸ್ಥಿತನಾದ ಪರಮಾತ್ಮನನ್ನು ಅಭಿನ್ನರೂಪದಿಂದ ನೋಡುತ್ತಾ ವಾಸನೆಗಳ ಅನುವೃತ್ತಿಯನ್ನು ಬಿಟ್ಟು ಲಿಂಗದೇಹದ ಅಭಿಮಾನವನ್ನೂ ಪೂರ್ಣವಾಗಿ ತೊರೆದಿದ್ದರು. ॥ ೬ ॥ ಹೀಗೆ ಲಿಂಗದೇಹದ ಅಭಿಮಾನದಿಂದ ಮುಕ್ತರಾದ ಭಗವಾನ್ ಋಷಭದೇವರ ಶರೀರವು ಯೋಗಮಾಯೆಯ ವಾಸನೆಯಿಂದ ಕೇವಲ ಅಭಿಮಾನದ ಆಭಾಸವನ್ನೇ ಆಶ್ರಯಿಸಿ ಭೂಮಿಯಲ್ಲಿ ಸಂಚರಿಸುತ್ತಿತ್ತು. ಅವರು

ಚಲೋಪವನ ಆಸ್ಯಕೃತಾಶ್ಮಕವಲ ಉನ್ಮಾದ ಇವ ಮುಕ್ತ-ಮೂರ್ಧಜೋಽಸಂವೀತ ಏವ ವಿಚಚಾರ ॥ ೭ ॥ ಅಥ ಸಮೀರವೇಗವಿಧೂತ ವೇಣುವಿಕರ್ಷಣಜಾತೋಗ್ರದಾವಾ-ನಲಸ್ತದ್ವನಮಾಲೇಲಿಹಾನಃ ಸಹ ತೇನ ದದಾಹ ॥ ೮ ॥

ಯಸ್ಯ ಕಿಲಾನುಚರಿತಮುಪಾಕರ್ಣ್ಯ ಕೊಂಕವೇಂಕ-ಕುಟಕಾನಾಂ ರಾಜಾರ್ಹನ್ನಾಮೋಪಶಿಕ್ಷ್ಯ ಕಲಾವಧರ್ಮ ಉತ್ಕೃಷ್ಯಮಾಣೇ ಭವಿತವ್ಯೇನ ವಿಮೋಹಿತಃ ಸ್ವಧರ್ಮ-ಪಥಮಕುತೋಭಯ ಮಪಹಾಯ ಕುಪಥಪಾಖಂಡ-ಮಸಮಂಜಸಂ ನಿಜಮನೀಷಯಾ ಮಂದಃ ಸಂಪ್ರವರ್ತ-ಯಿಷ್ಯತೇ ॥ ೯ ॥ ಯೇನ ಹ ವಾವ ಕಲೌ ಮನುಜಾಪ-ಸದಾ ದೇವಮಾಯಾ ಮೋಹಿತಾಃ ಸ್ವವಿಧಿನಿಯೋಗ-ಶೌಚಚಾರಿತ್ರವಿಹೀನಾ ದೇವಹೇಲನಾನ್ಯಪವ್ರತಾನಿ ನಿಜ-ನಿಜೇಚ್ಛಯಾ ಗೃಹ್ಣಾನಾ ಅಸ್ನಾನಾನಾಚಮನಾಶೌಚಕೇ-ಶೋಲ್ಲುಂಚನಾದೀನಿ ಕಲಿನಾಧರ್ಮಬಹುಲೇನೋಪ-ಹತಧಿಯೋ ಬ್ರಹ್ಮಬ್ರಾಹ್ಮಣಯಜ್ಞಪುರುಷಲೋಕವಿದೂಷಕಾಃ ಪ್ರಾಯೇಣ ಭವಿಷ್ಯಂತಿ ॥ ೧೦ ॥ ತೇ ಚ ಹ್ಯರ್ವಾಕ್ತನಯಾ ನಿಜಲೋಕಯಾತ್ರಯಾಂಧಪರಂಪರಯಾಽಽಶ್ವಸ್ತಾಸ್ತಮ-ಸ್ಯಂಧೇ ಸ್ವಯಮೇವ ಪ್ರಪತಿಷ್ಯಂತಿ ॥ ೧೧ ॥

ಅಯಮವತಾರೋ ರಜಸೋಪಪ್ಲುತಕೈವಲ್ಯೋಪ-ಶಿಕ್ಷಣಾರ್ಥಃ ॥ ೧೨ ॥ ತಸ್ಯಾನುಗುಣಾನ್ ಶ್ಲೋಕಾನ್ ಗಾಯಂತಿ –

ಅಹೋ ಭುವಃ ಸಪ್ತಸಮುದ್ರವತ್ಯಾ
ದ್ವೀಪೇಷು ವರ್ಷೇಷ್ವಧಿಪುಣ್ಯಮೇತತ್ ।
ಗಾಯಂತಿ ಯತ್ರತ್ಯಜನಾ ಮುರಾರೇಃ
ಕರ್ಮಾಣಿ ಭದ್ರಾಣ್ಯವತಾರವಂತಿ ॥ ೧೩ ॥

ಅಹೋ ನು ವಂಶೋ ಯಶಸಾವದಾತಃ
ಪ್ರೈಯವ್ರತೋ ಯತ್ರ ಪುಮಾನ್ಪುರಾಣಃ ।
ಕೃತಾವತಾರಃ ಪುರುಷಃ ಸ ಆದ್ಯಃ
ಚಚಾರ ಧರ್ಮಂ ಯದಕರ್ಮಹೇತುಮ್ ॥ ೧೪ ॥

ಕೋ ನ್ವಸ್ಯ ಕಾಷ್ಠಾಮಪರೋಽನುಗಚ್ಛೇ-
ನ್ಮನೋರಥೇನಾಪ್ಯಭವಸ್ಯ ಯೋಗೀ ।
ಯೋ ಯೋಗಮಾಯಾಃ ಸ್ಪೃಹಯತ್ಯುದಸ್ತಾ
ಹ್ಯಸತ್ತಯಾ ಯೇನ ಕೃತಪ್ರಯತ್ನಾಃ ॥ ೧೫ ॥

ದೈವವಶದಿಂದ ಕೊಂಕಣ ವೆಂಕಟಾಚಲ ಮತ್ತು ದಕ್ಷಿಣದ ಕನ್ನಡದ ದೇಶಗಳಿಗೆ ಕಟಕಗಿರಿಯ ಉಪವನದಲ್ಲಿ ಬಾಯಿಗೆ ಕಲ್ಲುಗಳನ್ನು ಹಾಕಿಕೊಂಡು, ಕೂದಲನ್ನು ಕೆದರಿಕೊಂಡು ಉನ್ಮತ್ತರಂತೆ ದಿಗಂಬರರಾಗಿ ತಿರುಗಾಡತೊಡಗಿದರು. ॥ ೭ ॥ ಅದೇ ಸಮಯದಲ್ಲಿ ಬಿರುಗಾಳಿಯೊಂದು ಭರ್ರನೇ ಬೀಸಿ ಬಿದಿರುಮೆಳೆಗಳ ತಿಕ್ಕಾಟದಿಂದ ಹುಟ್ಟಿದ ಕಾಡುಗಿಚ್ಚು ಭುಗಿಲೆದ್ದು ಕೆಂಪುಜ್ವಾಲೆಗಳಿಂದ ಇಡೀ ಅರಣ್ಯವನ್ನೂ ಹಾಗೂ ಅಲ್ಲಿ ಸಂಚರಿಸುತ್ತಿದ್ದ ಋಷಭದೇವರ ದೇಹವನ್ನೂ ಕಬಳಿಸಿ ಭಸ್ಮಮಾಡಿಬಿಟ್ಟಿತು. ॥ ೮ ॥

ಎಲೈ ರಾಜನೇ! ಕಲಿಯುಗದಲ್ಲಿ ಅಧರ್ಮವು ವೃದ್ಧಿಹೊಂದಿದಾಗ ಕೊಂಕ, ವೆಂಕ ಮತ್ತು ಕುಟಕದೇಶಗಳಿಗೆ ಅಧಿಪತಿಯಾದ ಮಂದಮತಿಯಾದ ಓರ್ವ ರಾಜನಾದ ಅರ್ಹತ್ ಎಂಬುವನು ಶ್ರೀಋಷಭದೇವರ ಆಶ್ರಮಧರ್ಮಗಳನ್ನು ಮೀರಿದ ಆಚರಣೆಯ ವೃತ್ತಾಂತವನ್ನು ಕೇಳಿ, ತಾನು ಅದಕ್ಕೆ ಅಧಿಕಾರಿಯಲ್ಲದಿದ್ದರೂ ಅದನ್ನು ಅನುಕರಿಸುತ್ತಾ ನಿರ್ಭಯನಾಗಿ ಸ್ವಧರ್ಮವನ್ನು ಬಿಟ್ಟು ಪಾಷಂಡಧರ್ಮದ ಮಾರ್ಗವನ್ನು ಜನರಲ್ಲಿ ಪ್ರಚಾರಮಾಡುವನು. ॥ ೯ ॥ ಅದರಿಂದ ಕಲಿಯುಗದಲ್ಲಿ ದೇವಮಾಯೆಯಿಂದ ಮೋಹಿತರಾದ ಅನೇಕ ಮನುಷ್ಯರು ತಮ್ಮ ಶಾಸ್ತ್ರವಿಹಿತವಾದ ಶೌಚಾಚಾರವನ್ನು ಬಿಟ್ಟುಬಿಡುವರು. ವೇದವನ್ನೂ, ಬ್ರಾಹ್ಮಣರನ್ನೂ, ಯಜ್ಞಪುರುಷನನ್ನೂ ನಿಂದಿಸತೊಡಗುವರು ಹಾಗೂ ವೇದ ವಿರುದ್ಧವಾದ ಅಂಧಪರಂಪರೆಯಿಂದ ಪ್ರೋತ್ಸಾಹಿತರಾಗಿ ಅವರಲ್ಲಿ ವಿಶ್ವಾಸವನ್ನಿಟ್ಟು, ಸ್ನಾನಮಾಡದಿರುವುದು, ಆಚಮನ ಮಾಡದಿರುವುದು, ಅಶುದ್ಧವಾಗಿರುವುದು, ಕೇಶಗಳನ್ನು ಕೀಳಿಸಿಕೊಳ್ಳುವುದು ಮುಂತಾಗಿ ಸ್ವೇಚ್ಛೆಯಿಂದ ವರ್ತಿಸುತ್ತಾ ತಾವಾಗಿಯೇ ಅಂಧತಮಸ್ಸಿನಲ್ಲಿ ಬೀಳುವರು. ಅದು ಅವರ ಪತನಕ್ಕೆ ಕಾರಣವಾಗುವುದು. ॥ ೧೦-೧೧ ॥

ಶ್ರೀಭಗವಂತನು ರಜೋಗುಣದಿಂದ ತುಂಬಿರುವ ಜನರಿಗೆ ಮೋಕ್ಷಮಾರ್ಗದ ಶಿಕ್ಷಣಕೊಡಲು ಈ ಋಷಭಾವತಾರವನ್ನು ಮಾಡಿದನು. ॥ ೧೨ ॥ ಈ ಅವತಾರದ ದಿವ್ಯಗುಣಗಳನ್ನು ವರ್ಣಿಸುವ ಈ ಶ್ಲೋಕಗಳನ್ನು ವಿದ್ವಾಂಸರು ಹಾಡುತ್ತಾ ಬಂದಿದ್ದಾರೆ –

ಆಹಾ! ಏಳು ಸಮುದ್ರಗಳಿಂದ ಕೂಡಿದ ಸಮಸ್ತ ದ್ವೀಪಗಳಲ್ಲಿಯೂ, ವರ್ಷಗಳಲ್ಲಿಯೂ ಈ ಭಾರತವರ್ಷವು ಎಂತಹ ಪುಣ್ಯಭೂಮಿಯಾಗಿದೆ! ಇಲ್ಲಿಯ ಜನರು ಶ್ರೀಹರಿಯ ಮಂಗಳಮಯ ಅವತಾರ ಚರಿತ್ರೆಗಳನ್ನು ಹಾಡುತ್ತಾ ಇರುತ್ತಾರೆ. ॥ ೧೩ ॥ ಆಹಾ! ಮಹಾರಾಜಾ ಪ್ರಿಯವ್ರತನ ವಂಶವು ಉಜ್ವಲವಾದ ಕೀರ್ತಿಯಿಂದ ಕೂಡಿ ಅತ್ಯಂತ ಪವಿತ್ರವಾಗಿದೆ. ಅದರಲ್ಲಿಯೇ ಪುರಾಣಪುರುಷನಾದ ಆದಿನಾರಾಯಣನು ಋಷಭಾವತಾರವನ್ನು ತಾಳಿ ಮೋಕ್ಷವನ್ನು ದೊರಕಿಸುವಂತಹ ಪರಮಹಂಸಧರ್ಮವನ್ನು ಆಚರಿಸಿದನು. ॥ ೧೪ ॥ ಆಹಾ! ಈ ಜನ್ಮರಹಿತ ಭಗವಾನ್ ಋಷಭದೇವರ ಅಸಾಧಾರಣವಾದ ನಡೆವಳಿಕೆಯನ್ನು ಇತರ ಯೋಗಿಗಳು ಮನಸ್ಸಿನಿಂದಲೂ ಮುಟ್ಟಲಾರರು. ಏಕೆಂದರೆ, ಯೋಗಿಗಳು ಯಾವ ಯೋಗಸಿದ್ಧಿಗಳಿಗಾಗಿ ಆಶಿಸಿ ನಿರಂತರ ಪ್ರಯತ್ನಿಸುತ್ತಾರೋ, ಆ ಸಿದ್ಧಿಗಳೆಲ್ಲವೂ ತಾವಾಗಿಯೇ ಪ್ರಾಪ್ತವಾಗಿದ್ದರೂ ಅವನ್ನು ಅಸತ್ತೆಂದು ಭಾವಿಸಿ ನಿರಾಕರಿಸಿಬಿಟ್ಟನು. ॥ ೧೫ ॥

ಪರೀಕ್ಷಿದ್ರಾಜೇಂದ್ರಾ! ಹೀಗೆ ನಾನು ನಿನಗೆ ಸಮಸ್ತ ವೇದಗಳು, ಲೋಕಗಳು, ಬ್ರಾಹ್ಮಣರು ಮತ್ತು ಗೋವುಗಳು ಇವರೆಲ್ಲ

# ಆರನೆಯ ಅಧ್ಯಾಯ

## ಋಷಭದೇವರ ದೇಹತ್ಯಾಗ

ರಾಜೋವಾಚ

**ನ ನೂನಂ ಭಗವ ಆತ್ಮಾರಾಮಾಣಾಂ ಯೋಗ-ಸಮೀರಿತಜ್ಞಾನಾವಭರ್ಜಿತಕರ್ಮಬೀಜಾನಾಮೈಶ್ವರ್ಯಾಣಿ ಪುನಃ ಕ್ಲೇಶದಾನಿ ಭವಿತುಮರ್ಹಂತಿ ಯದೃಚ್ಛಯೋಪಗತಾನಿ ॥ ೧ ॥**

ಋಷಿರುವಾಚ

**ಸತ್ಯಮುಕ್ತಂ ಕಿಂತ್ವಿಹ ವಾ ಏಕೇ ನ ಮನಸೋಽದ್ಧಾ ವಿಶ್ರಂಭಮನವಸ್ಥಾನಸ್ಯ ಶಠಕಿರಾತ ಇವ ಸಂಗಚ್ಛಂತೇ ॥ ೨ ॥**

**ತಥಾ ಚೋಕ್ತಮ್ –**

**ನ ಕುರ್ಯಾತ್ಕರ್ಹಿಚಿತ್ಸಖ್ಯಂ ಮನಸಿ ಹ್ಯನವಸ್ಥಿತೇ ।
ಯದ್ವಿಶ್ರಂಭಾಚ್ಚಿರಾಚ್ಚೀರ್ಣಂ ಚಸ್ಕಂದ ತಪ ಐಶ್ವರಮ್ ॥ ೩ ॥**

**ನಿತ್ಯಂ ದದಾತಿ ಕಾಮಸ್ಯ ಚ್ಛಿದ್ರಂ ತಮನು ಯೇಽರಯಃ ।
ಯೋಗಿನಃ ಕೃತಮೈತ್ರಸ್ಯ ಪತ್ಯುರ್ಜಾಯೇವ ಪುಂಶ್ಚಲೀ ॥ ೪ ॥**

**ಕಾಮೋ ಮನ್ಯುರ್ಮದೋ ಲೋಭಃ ಶೋಕಮೋಹಭಯಾದಯಃ ।
ಕರ್ಮಬಂಧಶ್ಚ ಯನ್ಮೂಲಃ ಸ್ವೀಕುರ್ಯಾತ್ಕೋ ನು ತದ್ಬುಧಃ ॥ ೫ ॥**

**ಅಥೈವಮಖಿಲಲೋಕಪಾಲಲಲಾಮೋಽಪಿ ವಿಲಕ್ಷಣೈರ್ಜಡವದವಧೂತವೇಷಭಾಷಾಚರಿತೈರವಿಲಕ್ಷಿತಭಗವತ್ಪ್ರಭಾವೋ ಯೋಗಿನಾಂ ಸಾಂಪರಾಯವಿಧಿಮನುಶಿಕ್ಷಯನ್ ಸ್ವಕಲೇವರಂ ಜಿಹಾಸುರಾತ್ಮನ್ಯಾತ್ಮಾನಮಸಂವ್ಯವಹಿತಮನರ್ಥಾಂತರಭಾವೇನಾನ್ವೀಕ್ಷಮಾಣ ಉಪರತಾನುವೃತ್ತಿರುಪರರಾಮ ॥ ೬ ॥ ತಸ್ಯ ಹ ವಾ ಏವಂ ಮುಕ್ತಲಿಂಗಸ್ಯ ಭಗವತ ಋಷಭಸ್ಯ ಯೋಗಮಾಯಾವಾಸನಯಾ ದೇಹ ಇಮಾಂ ಜಗತೀಮಭಿಮಾನಾಭಾಸೇನ ಸಂಕ್ರಮಮಾಣಃ ಕೊಂಕವೇಂಕಕುಟಕಾನ್ದಕ್ಷಿಣಕರ್ಣಾಟಕಾನ್ದೇಶಾನ್ಯದೃಚ್ಛಯೋಪಗತಃ ಕುಟಕಾ-**

**ರಾಜಾ ಪರೀಕ್ಷಿತನು ಕೇಳಿದನು** – ಮುನಿವರ್ಯರೇ! ಯೋಗರೂಪವಾದ ವಾಯುವಿನ ಮೂಲಕ ಪ್ರಜ್ವಲಿತವಾದ ಜ್ಞಾನಾಗ್ನಿಯಿಂದ ರಾಗಾದಿ ಕರ್ಮಬೀಜಗಳು ಸುಟ್ಟುಹೋಗಿರುವಂತಹ ಆತ್ಮಾರಾಮ ಮುನಿಗಳಿಗೆ ದೈವವಶಾತ್ ಸ್ವತಃ ಅಣಿಮಾದಿ ಸಿದ್ಧಿಗಳು ದೊರಕಿದರೆ, ಅವು ಅವರಿಗೆ ರಾಗ-ದ್ವೇಷಾದಿ ಕ್ಲೇಶಗಳಿಗೆ ಕಾರಣಗಳಾಗುವುದೇ ಇಲ್ಲ. ಹಾಗಿರುವಾಗ ಭಗವಾನ್ ಋಷಭದೇವರು ಅವನ್ನು ಏಕೆ ಸ್ವೀಕರಿಸಲಿಲ್ಲ? ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರನೇ! ನೀನು ಹೇಳಿರುವುದು ಸರಿಯಾಗಿದೆ. ಆದರೆ ಧೂರ್ತನಾದ ಬೇಡನು ಮೃಗಗಳು ತನ್ನ ಬಲೆಯಲ್ಲಿ ಬಂದು ಬಿದ್ದು ತನ್ನ ಹಿಡಿತದಲ್ಲಿದ್ದರೂ ಅವುಗಳ ಮೇಲೆ ಭರವಸೆಯನ್ನು ಇಡುವುದಿಲ್ಲ; ಹಾಗೆಯೇ ಬುದ್ಧಿವಂತರಾದವರು ಈ ಚಂಚಲವಾದ ಚಿತ್ತದ ಮೇಲೆ ಭರವಸೆಯನ್ನಿಡುವುದಿಲ್ಲ. ॥ ೨ ॥ ಈ ಪ್ರಸಿದ್ಧವಾದ ಶ್ಲೋಕಗಳು ಇದೇ ಅಭಿಪ್ರಾಯವನ್ನು ಸಾರುತ್ತಿವೆ –

ಈ ಚಂಚಲವಾದ ಚಿತ್ತದಲ್ಲಿ ಎಂದಿಗೂ ಸ್ನೇಹ-ನಂಬಿಕೆಗಳನ್ನಿಡಬಾರದು. ಇದರಲ್ಲಿ ನಂಬಿಕೆಯನ್ನಿಟ್ಟಿದ್ದರಿಂದಲೇ ಬಹುಮಂದಿ ಯೋಗೀಶ್ವರರು ತಾವು ಚಿರಕಾಲದಿಂದ ಸಂಪಾದಿಸಿದ್ದ ತಪಸ್ಸನ್ನು ಕಳಕೊಂಡರು. ಅವರ ತಪಶ್ಶಕ್ತಿಯು ಕ್ಷಯಹೊಂದಿತು. ॥ ೩ ॥ ವ್ಯಭಿಚಾರಿಣಿಯಾದ ಹೆಂಗುಸು ಜಾರಪುರುಷರಿಗೆ ಅವಕಾಶಕೊಟ್ಟು ತನ್ನಲ್ಲಿ ನಂಬಿಕೆಯನ್ನಿಟ್ಟಿರುವ ಪತಿಯನ್ನು ಅವರ ಮೂಲಕ ಕೊಲ್ಲಿಸುವಂತೆಯೇ ಯೋಗಿಯು ತನ್ನ ಮನಸ್ಸಿನ ಮೇಲೆ ವಿಶ್ವಾಸವನ್ನಿಟ್ಟರೆ ಆ ಮನಸ್ಸು ಕಾಮಕ್ಕೂ, ಅದರ ಜೊತೆಗಾರರಾದ ಕ್ರೋಧವೇ ಮುಂತಾದವುಗಳು ಆ ಯೋಗಿಯ ಮೇಲೆ ಆಕ್ರಮಣಮಾಡಲು ಅವಕಾಶವನ್ನು ಕಲ್ಪಿಸಿಕೊಟ್ಟು ಅವನನ್ನು ನಷ್ಟ-ಭ್ರಷ್ಟನನ್ನಾಗಿ ಮಾಡುತ್ತದೆ. ॥ ೪ ॥ ಕಾಮ-ಕ್ರೋಧ-ಮದ-ಲೋಭ-ಶೋಕ-ಮೋಹ ಮತ್ತು ಭಯಗಳೇ ಮುಂತಾದ ಶತ್ರುಗಳಿಗೂ ಮತ್ತು ಕರ್ಮಬಂಧನಕ್ಕೂ ಈ ಮನಸ್ಸೇ ಮೂಲವಾದುದು. ಇದರ ಮೇಲೆ ಯಾವುದೇ ಬುದ್ಧಿವಂತನು ಭರವಸೆಯನ್ನಿಡಬಾರದು. ॥ ೫ ॥

ಇದರಿಂದಲೇ ಭಗವಾನ್ ಋಷಭದೇವರು ಇಂದ್ರಾದಿ ಸಮಸ್ತ ಲೋಕಪಾಲಕರಿಗೆ ಭೂಷಣಸ್ವರೂಪರಾಗಿದ್ದರೂ, ಅವರು ಜಡ-ಮೂರ್ಖಮನುಷ್ಯನಂತೆ ಅವಧೂತರಿಗೆ ಸರಿಹೋಲುವ ನಾನಾ ವೇಷ, ಭಾಷೆ, ಆಚರಣೆಗಳಿಂದ ತನ್ನ ಈಶ್ವರೀಯ ಪ್ರಭಾವವನ್ನು ಮರೆಮಾಚಿಕೊಂಡಿದ್ದರು. ಕೊನೆಗೆ ಅವರು ಯೋಗಿಗಳಿಗೆ ದೇಹತ್ಯಾಗದ ವಿಧಿಯನ್ನು ಕಲಿಸುವುದಕ್ಕಾಗಿ ತನ್ನ ಶರೀರವನ್ನು ತ್ಯಜಿಸಲು ಬಯಸಿದರು. ಅವರು ತನ್ನ ಅಂತಃಕರಣದಲ್ಲಿ ಅಭೇದರೂಪದಿಂದ ಸ್ಥಿತನಾದ ಪರಮಾತ್ಮನನ್ನು ಅಭಿನ್ನರೂಪದಿಂದ ನೋಡುತ್ತಾ ವಾಸನೆಗಳ ಅನುವೃತ್ತಿಯನ್ನು ಬಿಟ್ಟು ಲಿಂಗದೇಹದ ಅಭಿಮಾನವನ್ನೂ ಪೂರ್ಣವಾಗಿ ತೊರೆದಿದ್ದರು. ॥ ೬ ॥ ಹೀಗೆ ಲಿಂಗದೇಹದ ಅಭಿಮಾನದಿಂದ ಮುಕ್ತರಾದ ಭಗವಾನ್ ಋಷಭದೇವರ ಶರೀರವು ಯೋಗಮಾಯೆಯ ವಾಸನೆಯಿಂದ ಕೇವಲ ಅಭಿಮಾನದ ಆಭಾಸವನ್ನೇ ಆಶ್ರಯಿಸಿ ಭೂಮಿಯಲ್ಲಿ ಸಂಚರಿಸುತ್ತಿತ್ತು. ಅವರು

ಚಲೋಪವನ ಆಸ್ಯಕೃತಾಶ್ಮಕವಲ ಉನ್ಮಾದ ಇವ ಮುಕ್ತ-ಮೂರ್ಧಜೋऽಸಂವೀತ ಏವ ವಿಚಚಾರ ॥ ೭ ॥ ಅಥ ಸಮೀರವೇಗವಿಧೂತ ವೇಣುವಿಕರ್ಷಣಜಾತೋಗ್ರದಾವಾ-ನಲಸ್ತದ್ವನಮಾಲೇಲಿಹಾನಃ ಸಹ ತೇನ ದದಾಹ ॥ ೮ ॥

ಯಸ್ಯ ಕಿಲಾನುಚರಿತಮುಪಾಕರ್ಣ್ಯ ಕೊಂಕವೇಂಕ-ಕುಟಕಾನಾಂ ರಾಜಾರ್ಹನ್ನಾಮೋಪಶಿಕ್ಷ್ಯ ಕಲಾವಧರ್ಮ ಉತ್ಕೃಷ್ಯಮಾಣೇ ಭವಿತವ್ಯೇನ ವಿಮೋಹಿತಃ ಸ್ವಧರ್ಮ-ಪಥಮಕುತೋಭಯ ಮಪಹಾಯ ಕುಪಥಪಾಖಂಡ-ಮಸಮಂಜಸಂ ನಿಜಮನೀಷಯಾ ಮಂದಃ ಸಂಪ್ರವರ್ತ-ಯಿಷ್ಯತೇ ॥ ೯ ॥ ಯೇನ ಹ ವಾವ ಕಲೌ ಮನುಜಾಪ-ಸದಾ ದೇವಮಾಯಾ ಮೋಹಿತಾಃ ಸ್ವವಿಧಿನಿಯೋಗ-ಶೌಚಚಾರಿತ್ರವಿಹೀನಾ ದೇವಹೇಲನಾನ್ಯಪವ್ರತಾನಿ ನಿಜ-ನಿಜೇಚ್ಛಯಾ ಗೃಹ್ಣಾನಾ ಅಸ್ನಾನಾನಾಚಮನಾಶೌಚಕೇ-ಶೋಲ್ಲುಂಚನಾದೀನಿ ಕಲಿನಾಧರ್ಮಬಹುಲೇನೋಪ-ಹತಧಿಯೋ ಬ್ರಹ್ಮಬ್ರಾಹ್ಮಣಯಜ್ಞಪುರುಷಲೋಕವಿದೂಷಕಾಃ ಪ್ರಾಯೇಣ ಭವಿಷ್ಯಂತಿ ॥ ೧೦ ॥ ತೇ ಚ ಹ್ಯರ್ವಾಕ್ತನಯಾ ನಿಜಲೋಕಯಾತ್ರಯಾಂಧಪರಂಪರಯಾऽऽಶ್ವಸ್ತಾಸ್ತಮ-ಸ್ಯಂಧೇ ಸ್ವಯಮೇವ ಪ್ರಪತಿಷ್ಯಂತಿ ॥ ೧೧ ॥

ಅಯಮವತಾರೋ ರಜಸೋಪಪ್ಲುತಕೈವಲ್ಯೋಪ-ಶಿಕ್ಷಣಾರ್ಥಃ ॥ ೧೨ ॥ ತಸ್ಯಾನುಗುಣಾನ್ ಶ್ಲೋಕಾನ್ ಗಾಯಂತಿ –

ಅಹೋ ಭುವಃ ಸಪ್ತಸಮುದ್ರವತ್ಯಾ<br>
ದ್ವೀಪೇಷು ವರ್ಷೇಷ್ವಧಿಪುಣ್ಯಮೇತತ್ ।<br>
ಗಾಯಂತಿ ಯತ್ರತ್ಯಜನಾ ಮುರಾರೇಃ<br>
ಕರ್ಮಾಣಿ ಭದ್ರಾಣ್ಯವತಾರವಂತಿ ॥ ೧೩ ॥

ಅಹೋ ನು ವಂಶೋ ಯಶಸಾವದಾತಃ<br>
ಪ್ರೈಯವ್ರತೋ ಯತ್ರ ಪುಮಾನ್ಪುರಾಣಃ ।<br>
ಕೃತಾವತಾರಃ ಪುರುಷಃ ಸ ಆದ್ಯಃ<br>
ಚಚಾರ ಧರ್ಮಂ ಯದಕರ್ಮಹೇತುಮ್ ॥ ೧೪ ॥

ಕೋ ನ್ವಸ್ಯ ಕಾಷ್ಠಾಮಪರೋऽನುಗಚ್ಛೇ-<br>
ನ್ಮನೋರಥೇನಾಪ್ಯಭವಸ್ಯ ಯೋಗೀ ।<br>
ಯೋ ಯೋಗಮಾಯಾಃ ಸ್ಪೃಹಯತ್ಯುದಸ್ತಾ<br>
ಹ್ಯಸತ್ತಯಾ ಯೇನ ಕೃತಪ್ರಯತ್ನಾಃ ॥ ೧೫ ॥

ದೈವವಶದಿಂದ ಕೊಂಕಣ ವೆಂಕಟಾಚಲ ಮತ್ತು ದಕ್ಷಿಣದ ಕನ್ನಡದ ದೇಶಗಳಿಗೆ ಕಟಕಗಿರಿಯ ಉಪವನದಲ್ಲಿ ಬಾಯಿಗೆ ಕಲ್ಲುಗಳನ್ನು ಹಾಕಿಕೊಂಡು, ಕೂದಲನ್ನು ಕೆದರಿಕೊಂಡು ಉನ್ಮತ್ತರಂತೆ ದಿಗಂಬರರಾಗಿ ತಿರುಗಾಡತೊಡಗಿದರು. ॥ ೭ ॥ ಅದೇ ಸಮಯದಲ್ಲಿ ಬಿರುಗಾಳಿಯೊಂದು ಭರ್‍ರನೇ ಬೀಸಿ ಬಿದಿರುಮೆಳೆಗಳ ತಿಕ್ಕಾಟದಿಂದ ಹುಟ್ಟಿದ ಕಾಡುಗಿಚ್ಚು ಭುಗಿಲೆದ್ದು ಕೆಂಪುಜ್ವಾಲೆಗಳಿಂದ ಆಡೀ ಅರಣ್ಯವನ್ನೂ ಹಾಗೂ ಅಲ್ಲಿ ಸಂಚರಿಸುತ್ತಿದ್ದ ಋಷಭದೇವರ ದೇಹವನ್ನೂ ಕಬಳಿಸಿ ಭಸ್ಮಮಾಡಿಬಿಟ್ಟಿತು. ॥ ೮ ॥

ಎಲೈ ರಾಜನೇ! ಕಲಿಯುಗದಲ್ಲಿ ಅಧರ್ಮವು ವೃದ್ಧಿಹೊಂದಿದಾಗ ಕೊಂಕ, ವೆಂಕ ಮತ್ತು ಕುಟಕದೇಶಗಳಿಗೆ ಅಧಿಪತಿಯಾದ ಮಂದಮತಿಯಾದ ಓರ್ವ ರಾಜನಾದ ಅರ್ಹತ್ ಎಂಬುವನು ಶ್ರೀಋಷಭದೇವರ ಆಶ್ರಮಧರ್ಮಗಳನ್ನು ಮೀರಿದ ಆಚರಣೆಯ ವೃತ್ತಾಂತವನ್ನು ಕೇಳಿ, ತಾನು ಅದಕ್ಕೆ ಅಧಿಕಾರಿಯಲ್ಲದಿದ್ದರೂ ಅದನ್ನು ಅನುಕರಿಸುತ್ತಾ ನಿರ್ಭಯನಾಗಿ ಸ್ವಧರ್ಮವನ್ನು ಬಿಟ್ಟು ಪಾಷಂಡಧರ್ಮದ ಮಾರ್ಗವನ್ನು ಜನರಲ್ಲಿ ಪ್ರಚಾರಮಾಡುವನು. ॥ ೯ ॥ ಅದರಿಂದ ಕಲಿಯುಗದಲ್ಲಿ ದೇವಮಾಯೆಯಿಂದ ಮೋಹಿತರಾದ ಅನೇಕ ಮನುಷ್ಯರು ತಮ್ಮ ಶಾಸ್ತ್ರವಿಹಿತವಾದ ಶೌಚಾಚಾರವನ್ನು ಬಿಟ್ಟುಬಿಡುವರು. ವೇದವನ್ನೂ, ಬ್ರಾಹ್ಮಣರನ್ನೂ, ಯಜ್ಞಪುರುಷನನ್ನೂ ನಿಂದಿಸತೊಡಗುವರು ಹಾಗೂ ವೇದ ವಿರುದ್ಧವಾದ ಅಂಧಪರಂಪರೆಯಿಂದ ಪ್ರೋತ್ಸಾಹಿತರಾಗಿ ಅವರಲ್ಲಿ ವಿಶ್ವಾಸವನ್ನಿಟ್ಟು, ಸ್ನಾನಮಾಡದಿರುವುದು, ಆಚಮನ ಮಾಡದಿರುವುದು, ಅಶುದ್ಧವಾಗಿರುವುದು, ಕೇಶಗಳನ್ನು ಕೀಳಿಸಿಕೊಳ್ಳುವುದು ಮುಂತಾಗಿ ಸ್ವೇಚ್ಛೆಯಿಂದ ವರ್ತಿಸುತ್ತಾ ತಾವಾಗಿಯೇ ಅಂಧತಮಸ್ಸಿನಲ್ಲಿ ಬೀಳುವರು. ಅದು ಅವರ ಪತನಕ್ಕೆ ಕಾರಣವಾಗುವುದು. ॥ ೧೦-೧೧ ॥

ಶ್ರೀಭಗವಂತನು ರಜೋಗುಣದಿಂದ ತುಂಬಿರುವ ಜನರಿಗೆ ಮೋಕ್ಷಮಾರ್ಗದ ಶಿಕ್ಷಣಕೊಡಲು ಈ ಋಷಭಾವತಾರವನ್ನು ಮಾಡಿದನು. ॥ ೧೨ ॥ ಈ ಅವತಾರದ ದಿವ್ಯಗುಣಗಳನ್ನು ವರ್ಣಿಸುವ ಈ ಶ್ಲೋಕಗಳನ್ನು ವಿದ್ವಾಂಸರು ಹಾಡುತ್ತಾ ಬಂದಿದ್ದಾರೆ –

ಆಹಾ! ಏಳು ಸಮುದ್ರಗಳಿಂದ ಕೂಡಿದ ಸಮಸ್ತ ದ್ವೀಪಗಳಲ್ಲಿಯೂ, ವರ್ಷಗಳಲ್ಲಿಯೂ ಈ ಭಾರತವರ್ಷವು ಎಂತಹ ಪುಣ್ಯಭೂಮಿಯಾಗಿದೆ! ಇಲ್ಲಿಯ ಜನರು ಶ್ರೀಹರಿಯ ಮಂಗಳಮಯ ಅವತಾರ ಚರಿತ್ರೆಗಳನ್ನು ಹಾಡುತ್ತಾ ಇರುತ್ತಾರೆ. ॥ ೧೩ ॥ ಆಹಾ! ಮಹಾರಾಜಾ ಪ್ರಿಯವ್ರತನ ವಂಶವು ಉಜ್ವಲವಾದ ಕೀರ್ತಿಯಿಂದ ಕೂಡಿ ಅತ್ಯಂತ ಪವಿತ್ರವಾಗಿದೆ. ಅದರಲ್ಲಿಯೇ ಪುರಾಣಪುರುಷನಾದ ಆದಿನಾರಾಯಣನು ಋಷಭಾವತಾರವನ್ನು ತಾಳಿ ಮೋಕ್ಷವನ್ನು ದೊರಕಿಸುವಂತಹ ಪರಮಹಂಸಧರ್ಮವನ್ನು ಆಚರಿಸಿದನು. ॥ ೧೪ ॥ ಆಹಾ! ಈ ಜನ್ಮರಹಿತ ಭಗವಾನ್ ಋಷಭದೇವರ ಅಸಾಧಾರಣವಾದ ನಡೆವಳಿಕೆಯನ್ನು ಇತರ ಯೋಗಿಗಳು ಮನಸ್ಸಿನಿಂದಲೂ ಮುಟ್ಟಲಾರರು. ಏಕೆಂದರೆ, ಯೋಗಿಗಳು ಯಾವ ಯೋಗಸಿದ್ಧಿಗಳಿಗಾಗಿ ಆಶಿಸಿ ನಿರಂತರ ಪ್ರಯತ್ನಿಸುತ್ತಾರೋ, ಆ ಸಿದ್ಧಿಗಳೆಲ್ಲವೂ ತಾವಾಗಿಯೇ ಪ್ರಾಪ್ತವಾಗಿದ್ದರೂ ಅವನ್ನು ಅಸತ್ತೆಂದು ಭಾವಿಸಿ ನಿರಾಕರಿಸಿಬಿಟ್ಟನು. ॥ ೧೫ ॥

ಪರೀಕ್ಷಿದ್ರಾಜೇಂದ್ರಾ! ಹೀಗೆ ನಾನು ನಿನಗೆ ಸಮಸ್ತ ವೇದಗಳು, ಲೋಕಗಳು, ಬ್ರಾಹ್ಮಣರು ಮತ್ತು ಗೋವುಗಳು ಇವರೆಲ್ಲ

ಇತಿ ಹ ಸ್ಮ ಸಕಲವೇದಲೋಕದೇವಬ್ರಾಹ್ಮಣಗವಾಂ ಪರಮಗುರೋರ್ಭಗವತ ಋಷಭಾಖ್ಯಸ್ಯ ವಿಶುದ್ಧಾಚರಿತ-ಮೀರಿತಂ ಪುಂಸಾಂ ಸಮಸ್ತದುಶ್ಚರಿತಾಭಿಹರಣಂ ಪರಮ-ಮಹಾಮಂಗಲಾಯನಮಿದಮನು ಶ್ರದ್ಧಯೋಪಚಿತ-ಯಾನುಶೃಣೋತ್ಯಾಶ್ರಾವಯತಿವಾವಹಿತೋ ಭಗವತಿ ತಸ್ಮಿನ್ವಾಸುದೇವ ಏಕಾಂತತೋ ಭಕ್ತಿರನಯೋರಪಿ ಸಮ-ನುವರ್ತತೇ ॥ ೧೬ ॥ ಯಸ್ಯಾಮೇವ ಕವಯ ಆತ್ಮಾನ-ಮವಿರತಂ ವಿವಿಧವೃಜಿನಸಂಸಾರಪರಿತಾಪೋಪತಪ್ಯ-ಮಾನಮನುಸವನಂ ಸ್ನಾಪಯಂತಸ್ತಯೈವ ಪರಯಾ ನಿರ್ವೃತ್ಯಾ ಹ್ಯಪವರ್ಗಮಾತ್ಯಂತಿಕಂ ಪರಮ ಪುರುಷಾ-ರ್ಥಮಪಿ ಸ್ವಯಮಾಸಾದಿತಂ ನೋ ಏವಾದ್ರಿಯಂತೇ ಭಗವದೀಯತ್ವೇನೈವ ಪರಿಸಮಾಪ್ತಸರ್ವಾರ್ಥಾಃ ॥ ೧೭ ॥

ರಾಜನ್ ಪತಿರ್ಗುರುರಲಂ ಭವತಾಂ ಯದೂನಾಂ
ದೈವಂ ಪ್ರಿಯಃ ಕುಲಪತಿಃ ಕ್ವ ಚ ಕಿಂಕರೋ ವಃ ।
ಅಸ್ತ್ವೇವಮಂಗ ಭಗವಾನ್ ಭಜತಾಂ ಮುಕುಂದೋ
ಮುಕ್ತಿಂ ದದಾತಿ ಕರ್ಹಿಚಿತ್ಸ್ಮ ನ ಭಕ್ತಿಯೋಗಮ್ ॥ ೧೮ ॥

ನಿತ್ಯಾನುಭೂತನಿಜಲಾಭನಿವೃತ್ತತೃಷ್ಣಃ
ಶ್ರೇಯಸ್ಯತದ್ರಚನಯಾ ಚಿರಸುಪ್ತಬುದ್ಧೇಃ ।
ಲೋಕಸ್ಯ ಯಃ ಕರುಣಯಾಭಯಮಾತ್ಮಲೋಕ-
ಮಾಖ್ಯಾನ್ನಮೋ ಭಗವತೇ ಋಷಭಾಯ ತಸ್ಮೈ ॥ ೧೯ ॥

ರಿಗೂ ಪರಮಗುರುವಾಗಿರುವ ಭಗವಾನ್ ಶ್ರೀಋಷಭದೇವರ ಪರಿಶುದ್ಧವಾದ ಚರಿತ್ರೆಯನ್ನು ವರ್ಣಿಸಿರುವೆನು. ಇದು ಮನುಷ್ಯರ ಸಮಸ್ತ ಪಾಪಗಳನ್ನು ಕಳೆಯುವಂತಹುದು. ಪರಮ ಮಂಗಳ ಮಯವಾದ ಈ ಪವಿತ್ರ ಚರಿತ್ರೆಯನ್ನು ಏಕಾಗ್ರಚಿತ್ತದಿಂದ ಶ್ರದ್ಧಾ ಪೂರ್ವಕ ನಿರಂತರವಾಗಿ ಕೇಳುವ, ಹೇಳುವ ಮನುಷ್ಯರಿಗೆ ಭಗವಾನ್ ವಾಸುದೇವನಲ್ಲಿ ಅನನ್ಯವಾದ ಭಕ್ತಿಯು ಉಂಟಾಗು ವುದು. ॥ ೧೬ ॥ ಬಗೆ-ಬಗೆಯ ಪಾಪಗಳಿಂದ ತುಂಬಿರುವ ಸಾಂಸಾರಿಕ ತಾಪಗಳಿಂದ ಬೆಂದು-ನೊಂದಿರುವ ಪಂಡಿತರು ತಮ್ಮ ಅಂತಃಕರಣವನ್ನು ಈ ಭಕ್ತಿರಸವಾಹಿನಿಯಲ್ಲಿ ನಿರಂತರವಾಗಿ ಮೀಯಿಸುವರು. ಅದರಿಂದ ಅವರಿಗೆ ದೊರೆಯುವ ಪರಮ ಶಾಂತಿಯು ವರ್ಣನಾತೀತವಾದುದು. ಅದನ್ನು ಪಡೆದ ಸುಕೃತಿ ಗಳು ತಾನಾಗಿಯೇ ಒದಗಿ ಬರುವ ಮೋಕ್ಷವೆಂಬ ಪರಮಪುರು ಷಾರ್ಥವನ್ನು ಕೂಡ ಆದರಿಸುವುದಿಲ್ಲ. ಶ್ರೀಭಗವಂತನಿಗೆ ಸ್ವಕೀಯ ರಾಗಿದ್ದರಿಂದಲೇ ಅವರ ಸಮಸ್ತ ಪುರುಷಾರ್ಥಗಳು ಈಡೇರು ತ್ತವೆ. ॥ ೧೭ ॥

ಎಲೈ ರಾಜನೇ ! ಭಗವಾನ್ ಶ್ರೀಕೃಷ್ಣನು ಸ್ವಯಂ ಪಾಂಡವರ ಮತ್ತು ಯದುವಂಶೀಯರ ರಕ್ಷಕನೂ, ಗುರುವೂ, ಇಷ್ಟದೇವನೂ, ಸಖನೂ, ಕುಲಪತಿಯೂ ಆಗಿದ್ದನು. ಇಷ್ಟು ಮಾತ್ರವಲ್ಲ; ಕೆಲ ವೊಮ್ಮೆ ನಿಮ್ಮ ಆಜ್ಞಾಕಾರಿ ಸೇವಕನೂ ಆಗಿರುತ್ತಿದ್ದನು. ಹೀಗೆಯೇ ಶ್ರೀಭಗವಂತನು ತನ್ನನ್ನು ಭಜಿಸುವ ಇತರ ಭಕ್ತರಿಗೂ ಈ ಉಪಕಾರ ಗಳನ್ನಲ್ಲದೆ ಮುಕ್ತಿಯನ್ನು ದಯಪಾಲಿಸುವನು. ಆದರೆ ಅದಕ್ಕೂ ಅತಿಶಯವಾಗಿರುವ ಭಕ್ತಿಯೋಗವನ್ನು ಮಾತ್ರ ಸುಲಭವಾಗಿ ಕೊಡು ವುದಿಲ್ಲ. ॥ ೧೮ ॥ ನಿರಂತರವಾಗಿ ಆತ್ಮಾನುಭವದಲ್ಲಿ ಮುಳುಗಿದವ ನಾಗಿ, ಎಲ್ಲ ಕಾಮನೆಗಳನ್ನು ಕಳೆದುಕೊಂಡವ ನಾಗಿದ್ದ, ಕೃತಕೃತ್ಯನಾದ ಮಹಾ ಪುರುಷನು-ನಿರಂತರವಾಗಿ ವಿಷಯಭೋಗಗಳಲ್ಲಿ ಮುಳುಗಿ ತಮ್ಮ ವಾಸ್ತವಿಕ ಶ್ರೇಯಸ್ಸನ್ನು ಮರೆತಿರುವ ಜನರಲ್ಲಿ ದಯೆದೋರಿ ಅವರಿಗೆ ನಿರ್ಭಯವಾದ ಆತ್ಮಸ್ವರೂಪವನ್ನು ಉಪದೇಶಮಾಡಿದ ಆ ಭಗವಾನ್ ಋಷಭದೇವನಿಗೆ ನಮಸ್ಕಾರವು. ॥ ೧೯ ॥

*ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ಋಷಭದೇವಾನುಚರಿತೇ ಷಷ್ಠೋಽಧ್ಯಾಯಃ ॥ ೬ ॥

# ಏಳನೆಯ ಅಧ್ಯಾಯ

## ಭರತೋಪಾಖ್ಯಾನ

*ಶ್ರೀಶುಕ ಉವಾಚ*

ಭರತಸ್ತು ಮಹಾಭಾಗವತೋ ಯದಾ ಭಗವತಾವ-ನಿತಲಪರಿಪಾಲನಾಯ ಸಂಚಿಂತಿತಸ್ತದನುಶಾಸನಪರಃ ಪಂಚಜನೀಂ ವಿಶ್ವರೂಪದುಹಿತರಮುಪಯೇಮೇ ॥ ೧ ॥ ತಸ್ಯಾಮು ಹ ವಾ ಆತ್ಮಜಾನ್ಕಾರ್ತ್ಸ್ನ್ಯೇನಾನುರೂಪಾನಾತ್ಮನಃ

ಶ್ರೀಶುಕಮುನಿಗಳು ಹೇಳುತ್ತಾರೆ – ಅಯ್ಯಾ ರಾಜೇಂದ್ರನೇ ! ಭರತಮಹಾರಾಜನು ದೊಡ್ಡ ಭಗವದ್ಭಕ್ತನಾಗಿದ್ದನು. ಭಗವಾನ್ ಋಷಭದೇವರು ತನ್ನಿಚ್ಛೆಯಂತೆ ಅವನನ್ನು ಭೂಮಂಡಲವನ್ನು ಪಾಲಿಸಲಿಕ್ಕಾಗಿ ನೇಮಿಸಿದ್ದರು. ಭರತನು ತಂದೆಯ ಆಜ್ಞೆಯನ್ನು ಶಿರಸಾವಹಿಸಿ, ವಿಶ್ವರೂಪನ ಕನ್ಯೆಯಾದ ಪಂಚಜನಿಯನ್ನು ವಿವಾಹವಾದನು. ॥ ೧ ॥ ತಾಮಸಾಹಂಕಾರವು ಶಬ್ದವೇ

ಪಂಚ ಜನಯಾಮಾಸ ಭೂತಾದಿರಿವ ಭೂತಸೂಕ್ಷ್ಮಾಣಿ ॥ ೨ ॥ ಸುಮತಿಂ ರಾಷ್ಟ್ರಭೃತಂ ಸುದರ್ಶನಮಾವರಣಂ ಧೂಮ್ರಕೇತುಮಿತಿ। ಅಜನಾಭಂ ನಾಮ್ನೈತದ್ವರ್ಷಂ ಭಾರತಮಿತಿ ಯತ ಆರಭ್ಯ ವ್ಯಪದಿಶಂತಿ ॥ ೩ ॥

ಮುಂತಾದ ಐದು ತನ್ಮಾತ್ರೆಗಳನ್ನು ಉತ್ಪನ್ನಮಾಡುವಂತೆ, ಭರತನು ಪಂಚಜನಿಯಲ್ಲಿ ತನಗೆ ಸಮಾನರಾದ ಸುಮತಿ, ರಾಷ್ಟ್ರಭೃತ್, ಸುದರ್ಶನ, ಆವರಣ ಮತ್ತು ಧೂಮ್ರಕೇತು ಎಂಬ ಐದು ಪುತ್ರರನ್ನು ಪಡೆದನು. ಅಜನಾಭವರ್ಷವೆಂದು ಕರೆಯಲ್ಪಡುತ್ತಿದ್ದ ಈ ವರ್ಷಕ್ಕೆ ಭರತಚಕ್ರವರ್ತಿಯ ಕಾಲದಿಂದ 'ಭಾರತವರ್ಷ' ಎಂಬ ಹೆಸರಾಯಿತು. ॥ ೨-೩ ॥

ಸ ಬಹುವಿನ್ಮಹೀಪತಿಃ ಪಿತೃಪಿತಾಮಹವದುರುವತ್ಸಲತಯಾ ಸ್ವೇ ಸ್ವೇ ಕರ್ಮಣಿ ವರ್ತಮಾನಾಃ ಪ್ರಜಾಃ ಸ್ವಧರ್ಮಮನುವರ್ತಮಾನಃ ಪರ್ಯಪಾಲಯತ್ ॥ ೪ ॥ ಈಜೇ ಚ ಭಗವಂತಂ ಯಜ್ಞಕ್ರತುರೂಪಂ ಕ್ರತುಭಿರುಚ್ಚಾವಚೈಃ ಶ್ರದ್ಧಯಾऽऽಹೃತಾಗ್ನಿಹೋತ್ರದರ್ಶಪೂರ್ಣಮಾಸಚಾತುರ್ಮಾಸ್ಯಪಶುಸೋಮಾನಾಂ ಪ್ರಕೃತಿವಿಕೃತಿಭಿರನುಸವನಂ ಚಾತುರ್ಹೋತ್ರವಿಧಿನಾ ॥ ೫ ॥ ಸಂಪ್ರಚರತ್ಸು ನಾನಾಯಾಗೇಷು ವಿರಚಿತಾಂಗಕ್ರಿಯೇಷ್ವಪೂರ್ವಂ ಯತ್ತತ್ಕ್ರಿಯಾಫಲಂ ಧರ್ಮಾಖ್ಯಂ ಪರೇ ಬ್ರಹ್ಮಣಿ ಯಜ್ಞಪುರುಷೇ ಸರ್ವದೇವತಾಲಿಂಗಾನಾಂ ಮಂತ್ರಾಣಾಮರ್ಥನಿಯಾಮಕತಯಾ ಸಾಕ್ಷಾತ್ಕರ್ತರಿ ಪರದೇವತಾಯಾಂ ಭಗವತಿ ವಾಸುದೇವ ಏವ ಭಾವಯಮಾನ ಆತ್ಮನೈಪುಣ್ಯಮೃದಿತಕಷಾಯೋ ಹವಿಃಷ್ವಧ್ವರ್ಯುಭಿರ್ಗೃಹ್ಯಮಾಣೇಷು ಸ ಯಜಮಾನೋ ಯಜ್ಞಭಾಜೋ ದೇವಾಂಸ್ತಾನ್ಪುರುಷಾವಯವೇಷ್ವಭ್ಯಧ್ಯಾಯತ್ ॥ ೬ ॥ ಏವಂ ಕರ್ಮವಿಶುದ್ಧ್ಯಾ ವಿಶುದ್ಧಸತ್ತ್ವಸ್ಯಾಂತರ್ಹೃದಯಾಕಾಶಶರೀರೇ ಬ್ರಹ್ಮಣಿ ಭಗವತಿ ವಾಸುದೇವೇ ಮಹಾಪುರುಷರೂಪೋಪಲಕ್ಷಣೇ-ಶ್ರೀವತ್ಸಕೌಸ್ತುಭವನಮಾಲಾರಿದರಗದಾದಿಭಿರುಪಲಕ್ಷಿತೇ ನಿಜಪುರುಷಹೃಲ್ಲಿಖಿತೇನಾತ್ಮನಿ ಪುರುಷರೂಪೇಣ ವಿರೋಚಮಾನ ಉಚ್ಚೈಸ್ತರಾಂ ಭಕ್ತಿರನುದಿನಮೇಧಮಾನರಯಾಜಾಯತ ॥ ೭ ॥

ಮಹಾಪ್ರಾಜ್ಞನಾದ ಆ ಭರತಸಾರ್ವಭೌಮನು ತಮ್ಮ-ತಮ್ಮ ಕರ್ಮಗಳಲ್ಲಿ ತೊಡಗಿದ್ದ ಪ್ರಜೆಗಳನ್ನು ತನ್ನ ತಂದೆ, ತಾತಂದಿರಂತೆ ತಾನೂ ಸ್ವಧರ್ಮಾಚರಣೆಯಲ್ಲಿ ನಿರತನಾಗಿದ್ದು, ಅತ್ಯಂತ ವಾತ್ಸಲ್ಯದಿಂದ ಪಾಲಿಸತೊಡಗಿದನು. ॥ ೪ ॥ ಅವನು ಹೋತಾ, ಅಧ್ವರ್ಯು, ಉದ್ಗಾತಾ ಮತ್ತು ಬ್ರಹ್ಮಾ ಎಂಬ ನಾಲ್ವರು ಋತ್ವಿಜರಿಂದ ನಡೆಸಲ್ಪಡಬೇಕಾದ ಚಾತುರ್ಹೋತ್ರವೆಂಬ ಕರ್ಮವಿಧಿಯಂತೆ ಅಗ್ನಿಹೋತ್ರ, ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಪಶು ಮತ್ತು ಸೋಮಗಳೆಂಬ ಯಜ್ಞಗಳನ್ನು ಅವುಗಳ ಪ್ರಕೃತಿ ಮತ್ತು ವಿಕೃತಿ ಎಂಬ ಎರಡು ವಿಧಾನಗಳಿಂದಲೂ ಆಯಾ ಕಾಲಗಳಲ್ಲಿ ಶ್ರದ್ಧಾಪೂರ್ವಕ ಆಚರಿಸಿ ಯಜ್ಞರೂಪನಾದ ಶ್ರೀಭಗವಂತನನ್ನು ಆರಾಧಿಸಿದನು. ॥ ೫ ॥ ಹೀಗೆ ಅಂಗ ಮತ್ತು ಕ್ರಿಯೆಗಳಿಂದ ಕೂಡಿದ ಬೇರೆ-ಬೇರೆ ಯಜ್ಞಗಳನ್ನು ಅನುಷ್ಠಾನಮಾಡುವಾಗ ಅಧ್ವರ್ಯುವು ಆಹುತಿಯನ್ನು ಸಮರ್ಪಿಸುವುದಕ್ಕಾಗಿ ಹವಿಸ್ಸನ್ನು ಕೈಯಲ್ಲಿ ಎತ್ತಿಕೊಂಡಾಗ ಯಜಮಾನನಾದ ಭರತನು ಆ ಯಜ್ಞಕರ್ಮದಿಂದ ಒದಗುವ ಪುಣ್ಯಫಲವನ್ನು ಯಜ್ಞಪುರುಷನಾದ ಭಗವಾನ್ ವಾಸುದೇವನಿಗೆ ಅರ್ಪಿಸಿಬಿಡುತ್ತಿದ್ದನು. ವಾಸ್ತವವಾಗಿ ಆ ಪರಬ್ರಹ್ಮನೇ ಇಂದ್ರಾದಿ ಸಮಸ್ತ ದೇವತೆಗಳ ಪ್ರಕಾಶಕನೂ, ಮಂತ್ರಗಳ ನಿಜವಾದ ಪ್ರತಿಪಾದ್ಯನೂ ಹಾಗೂ ಆ ದೇವತೆಗಳ ನಿಯಾಮಕನೂ ಆಗಿದ್ದರಿಂದ ಮುಖ್ಯಕರ್ತನೂ, ಪ್ರಧಾನದೇವನೂ ಆತನೇ ಆಗಿದ್ದಾನೆ. ಹೀಗೆ ತನ್ನ ಭಗವದರ್ಪಣ ಬುದ್ಧಿರೂಪವಾದ ಕುಶಲತೆಯಿಂದ ಹೃದಯದ ರಾಗ-ದ್ವೇಷಾದಿ ಕಶ್ಮಲಗಳನ್ನು ತೊಳೆದುಕೊಂಡು, ಅವನು ಯಜ್ಞಭೋಕ್ತೃಗಳಾದ ಸೂರ್ಯನೇ ಮುಂತಾದ ದೇವತೆಗಳನ್ನು ಭಗವಂತನ ನೇತ್ರವೇ ಮುಂತಾದ ಅವಯವಗಳಲ್ಲಿ ಧ್ಯಾನಮಾಡುತ್ತಿದ್ದನು. ॥ ೬ ॥ ಈ ರೀತಿಯ ಕರ್ಮಶುದ್ಧಿಯಿಂದ ಆತನ ಅಂತಃಕರಣವು ಪರಿಶುದ್ಧವಾಯಿತು. ಆಗ ಆತನಿಗೆ-ಶ್ರೀವತ್ಸ, ಕೌಸ್ತುಭ, ವನಮಾಲೆ, ಚಕ್ರ, ಶಂಖ ಮತ್ತು ಗದೆ ಮುಂತಾದ ದಿವ್ಯಾಭರಣ ಮತ್ತು ದಿವ್ಯಾಯುಧಗಳಿಂದ ಶೋಭಿಸುತ್ತಾ, ನಾರದರೇ ಮುಂತಾದ ತನ್ನ ಭಕ್ತರ ಹೃದಯದಲ್ಲಿ ಚಿತ್ರದಂತೆ ನಿಶ್ಚಲವಾಗಿ ನೆಲೆಸುವವನಾಗಿ, ಅಂತರ್ಯಾಮಿ ರೂಪದಲ್ಲಿ ಬೆಳಗುತ್ತಾ, ಹೃದಯಾಕಾಶದಲ್ಲೇ ಕಾಣಿಸಿಕೊಳ್ಳುವ ಬ್ರಹ್ಮಸ್ವರೂಪನೂ, ಮಹಾಪುರುಷ ಲಕ್ಷಣಸಂಪನ್ನನೂ ಆದ ಭಗವಾನ್ ಶ್ರೀವಾಸುದೇವನಲ್ಲಿ ದಿನ-ದಿನವೂ ವೇಗವಾಗಿ ವೃದ್ಧಿಹೊಂದುವ ಶ್ರೇಷ್ಠವಾದ ಭಕ್ತಿಯು ಉಂಟಾಯಿತು. ॥ ೭ ॥

ಏವಂ ವರ್ಷಾಯುತಸಹಸ್ರಪರ್ಯಂತಾವಸಿತಕರ್ಮನಿರ್ವಾಣಾವಸರೋऽಧಿಭುಜ್ಯಮಾನಂ ಸ್ವತನಯೇಭ್ಯೋ ರಿಕ್ಥಂ ಪಿತೃಪೈತಾಮಹಂ ಯಥಾದಾಯಂ ವಿಭಜ್ಯ ಸ್ವಯಂ ಸಕಲಸಂಪನ್ನಿಕೇತಾತ್ಸ್ವನಿಕೇತಾತ್ಪುಲಹಾಶ್ರಮಂ ಪ್ರವವ್ರಾಜ ॥ ೮ ॥ ಯತ್ರ ಹ ವಾವ ಭಗವಾನ್ ಹರಿರದ್ಯಾಪಿ ತತ್ರ-

ಈ ಪ್ರಕಾರ ಒಂದುಕೋಟಿ ವರ್ಷಗಳು ಕಳೆಯಲು, ಆತನಿಗೆ ರಾಜ್ಯಭೋಗದ ಪ್ರಾರಬ್ಧವು ಕ್ಷೀಣಿಸಿಹೋಯಿತು ಎಂದು ತಿಳಿದು, ತಾನು ಅನುಭವಿಸಿದ ವಂಶಪರಂಪರಾಗತವಾದ ತನ್ನ ಸಂಪತ್ತನ್ನು ಯಥೋಚಿತವಾಗಿ ತನ್ನ ಪುತ್ರರಿಗೆ ಹಂಚಿಕೊಟ್ಟನು. ಮತ್ತೆ ಸರ್ವಸಂಪತ್ತುಗಳಿಂದ ತುಂಬಿದ ತನ್ನ ಅರಮನೆಯನ್ನೂ ಬಿಟ್ಟು ಅವನು ಪುಲಹಾಶ್ರಮಕ್ಕೆ ಹೊರಟುಹೋದನು. ॥ ೮ ॥ ಈ ಪುಲಹಾಶ್ರಮ

ತ್ಯಾನಾಂ ನಿಜಜನಾನಾಂ ವಾತ್ಸಲ್ಯೇನ ಸಂನಿಧಾಪ್ಯತ ಇಚ್ಛಾರೂಪೇಣ ॥ ೯ ॥ ಯತ್ರಾಶ್ರಮಪದಾನ್ಯುಭಯತೋನಾಭಿಭಿರ್ದೃಷಚ್ಚಕ್ರೈಶ್ಚಕ್ರನದೀ ನಾಮ ಸರಿತ್ಪ್ರವರಾ ಸರ್ವತಃ ಪವಿತ್ರೀಕರೋತಿ ॥ ೧೦॥

ದಲ್ಲಿ ವಾಸಿಸುವ ಭಕ್ತರಮೇಲೆ ಶ್ರೀಭಗವಂತನಿಗೆ ಅತೀವ ವಾತ್ಸಲ್ಯ ಇದೆ. ಅವನು ಇಂದಿಗೂ ಕೂಡ ಅವರಿಗೆ ಇಷ್ಟದೇವತೆಯ ರೂಪದಲ್ಲಿ ದೊರೆಯುತ್ತಾನೆ. ॥ ೯ ॥ ಅಲ್ಲಿ ಚಕ್ರನದಿ (ಗಂಡಕೀ) ಎಂಬ ಪ್ರಸಿದ್ಧವಾದ ನದಿಯು ಮೇಲೆ ಮತ್ತು ಕೆಳಗೆ ಎರಡೂ ಕಡೆಗಳಲ್ಲಿಯೂ ನಾಭಿಯಂತಹ ಗುರುತುಗಳನ್ನು ಹೊಂದಿರುವ ಚಕ್ರಾಕಾರವಾದ ಶಾಲಗ್ರಾಮ ಶಿಲೆಯೊಡನೆ ಎಲ್ಲ ಕಡೆಗಳಿಂದಲೂ ಋಷಿಗಳ ಆಶ್ರಮಗಳನ್ನು ಪವಿತ್ರಗೊಳಿಸುತ್ತಿದೆ. ॥ ೧೦ ॥

ತಸ್ಮಿನ್ ವಾವ ಕಿಲ ಸ ಏಕಲಃ ಪುಲಹಾಶ್ರಮೋಪವನೇ ವಿವಿಧಕುಸುಮಕಿಸಲಯತುಲಸಿಕಾಂಬುಭಿಃ ಕಂದಮೂಲಫಲೋಪಹಾರೈಶ್ಚ ಸಮೀಹಮಾನೋ ಭಗವತ ಆರಾಧನಂ ವಿವಿಕ್ತ ಉಪರತ ವಿಷಯಾಭಿಲಾಷ ಉಪಭೃತೋಪಶಮಃ ಪರಾಂ ನಿರ್ವೃತಿಮವಾಪ ॥ ೧೧ ॥ ತಯೇತ್ಥಮವಿರತಪುರುಷಪರಿಚರ್ಯಯಾ ಭಗವತಿ ಪ್ರವರ್ಧಮಾನಾನುರಾಗಭರದ್ರುತಹೃದಯಶೈಥಿಲ್ಯಃ ಪ್ರಹರ್ಷವೇಗೇನಾತ್ಮನ್ಯುದ್ಭಿದ್ಯಮಾನರೋಮಪುಲಕಕುಲಕ ಔತ್ಕಂಠ್ಯಪ್ರವೃತ್ತಪ್ರಣಯಬಾಷ್ಪನಿರುದ್ಧಾವಲೋಕನಯನ ಏವಂ ನಿಜರಮಣಾರುಣಚರಣಾರವಿಂದಾನುಧ್ಯಾನಪರಿಚಿತಭಕ್ತಿಯೋಗೇನ ಪರಿಪ್ಲುತಪರಮಾಹ್ಲಾದಗಂಭೀರಹೃದಯಹ್ರದಾವಗಾಢಧಿಷಣಸ್ತಾಮಪಿ ಕ್ರಿಯಮಾಣಾಂ ಭಗವತ್ಸಪರ್ಯಾಂ ನ ಸಸ್ಮಾರ ॥ ೧೨ ॥ ಇತ್ಥಂ ಧೃತಭಗವದ್ವ್ರತ ಐಣೇಯಾಜಿನವಾಸಸಾನುಸವನಾಭಿಷೇಕಾರ್ದ್ರಕಪಿಶಕುಟಿಲಜಟಾಕಲಾಪೇನ ಚ ವಿರೋಚಮಾನಃ ಸೂರ್ಯರ್ಚಾ ಭಗವಂತಂ ಹಿರಣ್ಮಯಂ ಪುರುಷಮುಜ್ಜಿಹಾನೇ ಸೂರ್ಯಮಂಡಲೇಽಭ್ಯುಪತಿಷ್ಠನ್ನೇತದು ಹೋವಾಚ ॥ ೧೩॥

ಆ ಪುಲಹಾಶ್ರಮದ ಉಪವನದಲ್ಲಿ ಭರತನು ಏಕಾಂತವಾದ ಜಾಗದಲ್ಲಿ ಒಬ್ಬಂಟಿಗನಾಗಿದ್ದು ಅನೇಕ ಪ್ರಕಾರದ ಪತ್ರ, ಪುಷ್ಪ, ತುಳಸೀದಳ, ಜಲ ಮತ್ತು ಗೆಡ್ಡೆ-ಗೆಣಸುಗಳೇ ಮುಂತಾದ ನೈವೇದ್ಯಗಳಿಂದ ಶ್ರೀಭಗವಂತನನ್ನು ಆರಾಧಿಸುತ್ತಿದ್ದನು. ಇದರಿಂದ ಅವನ ಅಂತಃಕರಣವು ಎಲ್ಲ ವಿಷಯಾಭಿಲಾಷೆಗಳನ್ನು ಕಳಕೊಂಡು ಪ್ರಶಾಂತವಾಯಿತು ಮತ್ತು ಅವನಿಗೆ ಪರಮಾನಂದ ಪ್ರಾಪ್ತವಾಯಿತು. ॥ ೧೧ ॥ ಹೀಗೆ ಅವನು ನಿಯಮಪೂರ್ವಕವಾಗಿ ಶ್ರೀಭಗವಂತನ ಕೈಂಕರ್ಯವನ್ನು ಮಾಡತೊಡಗಲು, ಅದರಿಂದ ಪ್ರೇಮದ ವೇಗವು ಹೆಚ್ಚುತ್ತಾ ಹೃದಯವು ಕರಗಿ ಶಾಂತವಾಯಿತು. ಆನಂದದ ಪ್ರಬಲವಾದ ವೇಗದಿಂದ ಶರೀರದಲ್ಲಿ ರೋಮಾಂಚನವುಂಟಾಯಿತು. ಉತ್ಕಂಠತೆಯ ಕಾರಣ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಹರಿದುಬಂದು ಕಣ್ಣುಗಳ ನೋಟವು ಮಂದವಾಯಿತು. ಕಡೆಗೆ ತನ್ನ ಪ್ರಿಯತಮನ ಕೆಂಪಾದ ಅಡಿದಾವರೆಗಳ ಧ್ಯಾನದಿಂದ ಭಕ್ತಿಯೋಗವು ಸಿದ್ಧಿಸಿತು. ಪರಮಾನಂದದಿಂದ ತುಂಬಿದ ಹೃದಯವೆಂಬ ಆಳವಾದ ಸರೋವರದಲ್ಲಿ ಬುದ್ಧಿಯು ಮುಳುಗಿ ಹೋಗಿದ್ದರಿಂದ ನಿಯಮಪೂರ್ವಕವಾಗಿ ಮಾಡುತ್ತಿದ್ದ ಶ್ರೀಭಗವಂತನ ಪೂಜೆಯ ಸ್ಮರಣೆಯೂ ಉಳಿಯಲಿಲ್ಲ. ॥ ೧೨ ॥ ಹೀಗೆ ಆತನು ಭಗವತ್ಸೇವೆಯ ನಿಯಮದಲ್ಲಿಯೇ ತತ್ಪರನಾಗಿರುತ್ತಿದ್ದನು. ದೇಹದಲ್ಲಿ ಜಿಂಕೆಯ ಚರ್ಮವನ್ನು ಧರಿಸುತ್ತಿದ್ದನು. ತ್ರಿಕಾಲಗಳಲ್ಲಿಯೂ ಸ್ನಾನಮಾಡಿ ನೆನೆಯುತ್ತಲೇ ಇದ್ದುದರಿಂದ ಕೂದಲುಗಳು ಬೂದುಬಣ್ಣದ ಗುಂಗುರುಕೂದಲುಗಳು ಜಟೆಗಳಾಗಿದ್ದವು. ಇದರಿಂದ ಅವನು ಬಹುಸುಂದರವಾಗಿ ಕಾಣುತ್ತಿದ್ದನು. ಉದಯಗೊಂಡ ಸೂರ್ಯಮಂಡಲದಲ್ಲಿ ಸೂರ್ಯಸಂಬಂಧವಾದ ಋಕ್ಕುಗಳ ಮೂಲಕ ಜ್ಯೋತಿರ್ಮಯ ಪರಮಪುರುಷ ಭಗವಂತನಾದ ಶ್ರೀಮನ್ನಾರಾಯಣನನ್ನು ಆರಾಧಿಸುತ್ತಾ ಈ ಪ್ರಕಾರ ಹೇಳುತ್ತಿದ್ದನು. ॥ ೧೩ ॥

ಪರೋರಜಃ ಸವಿತುರ್ಜಾತವೇದೋ
ದೇವಸ್ಯ ಭರ್ಗೋ ಮನಸೇದಂ ಜಜಾನ ।
ಸುರೇತಸಾದಃ ಪುನರಾವಿಶ್ಯ ಚಷ್ಟೇ
ಹಂಸಂ ಗೃಧ್ರಾಣಂ ನೃಷದ್ರಿಂಗಿರಾಮಿಮಃ ॥ ೧೪॥

ಭಗವಾನ್ ಸೂರ್ಯನ ಕರ್ಮಫಲದಾಯಕನಾದ ತೇಜಸ್ಸು ಪ್ರಕೃತಿಯಿಂದ ಅತೀತವಾಗಿದೆ. ತನ್ನ ಸಂಕಲ್ಪದ ಮೂಲಕ ಈ ಜಗತ್ತನ್ನು ಸೃಷ್ಟಿಸಿದ್ದಾನೆ. ಮತ್ತೆ ಅವನೇ ಅಂತರ್ಯಾಮಿ ರೂಪದಿಂದ ಇದರಲ್ಲಿ ಪ್ರವೇಶಮಾಡಿ ತನ್ನ ಚಿತ್‌ಶಕ್ತಿಯಮೂಲಕ ವಿಷಯಾಸಕ್ತಿಯುಳ್ಳ ಜೀವಿಗಳನ್ನು ರಕ್ಷಿಸುತ್ತಾನೆ. ನಾನು ಬುದ್ಧಿ ಪ್ರವರ್ತಕನಾದ ಆ ತೇಜಸ್ಸನ್ನು ಶರಣು ಹೊಂದುವೆನು. ॥ ೧೪ ॥

*ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಭರತಚರಿತೇ ಭಗವತ್ಪರಿಚರ್ಯಾಯಾಂ ಸಪ್ತಮೋಽಧ್ಯಾಯಃ ॥ ೭ ॥

# ಎಂಟನೆಯ ಅಧ್ಯಾಯ

## ಭರತನು ಜಿಂಕೆಯ ಮೋಹದಲ್ಲಿ ಸಿಲುಕಿ – ಜಿಂಕೆಯ ಯೋನಿಯಲ್ಲಿ ಜನ್ಮತಾಳುವುದು

*ಶ್ರೀಶುಕ ಉವಾಚ*

**ಏಕದಾ ತು ಮಹಾನದ್ಯಾಂ ಕೃತಾಭಿಷೇಕನೈಯಮಿಕಾವಶ್ಯಕೋ ಬ್ರಹ್ಮಾಕ್ಷರಮಭಿಗೃಣಾನೋ ಮುಹೂರ್ತತ್ರಯಮುದಕಾಂತ ಉಪವಿವೇಶ ॥ ೧ ॥ ತತ್ರ ತದಾ ರಾಜನ್ ಹರಿಣೀ ಪಿಪಾಸಯಾ ಜಲಾಶಯಾಭ್ಯಾಶಮೇಕೈವೋಪಜಗಾಮ ॥ ೨ ॥ ತಯಾ ಪೇಪೀಯಮಾನ ಉದಕೇ ತಾವದೇವಾವಿದೂರೇಣ ನದತೋ ಮೃಗಪತೇರುನ್ನಾದೋ ಲೋಕಭಯಂಕರ ಉದಪತತ್ ॥ ೩ ॥ ತಮುಪಶ್ರುತ್ಯ ಸಾ ಮೃಗವಧೂಃ ಪ್ರಕೃತಿವಿಕ್ಲವಾ ಚಕಿತನಿರೀಕ್ಷಣಾ ಸುತರಾಮಪಿ ಹರಿಭಯಾಭಿನಿವೇಶವ್ಯಗ್ರಹೃದಯಾ ಪಾರಿಪ್ಲವದೃಷ್ಟಿರಗತತೃಷಾ ಭಯಾತ್ಸಹಸೈವೋಚ್ಚಕ್ರಾಮ ॥ ೪ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜನೇ! ಒಂದು ದಿನ ಆ ಮಹಾತ್ಮನಾದ ಭರತನು ಗಂಡಕೀನದಿಯಲ್ಲಿ ಸ್ನಾನಮಾಡಿ ನಿತ್ಯ-ನೈಮಿತ್ತಿಕಾದಿ ಆಹ್ನಿಕಗಳನ್ನು ಮುಗಿಸಿಕೊಂಡು ಪ್ರಣವವನ್ನು ಜಪಿಸುತ್ತಾ ಮೂರುಮುಹೂರ್ತಗಳ ಕಾಲದವರೆಗೆ ನದಿಯ ಧಾರೆಯ ಬಳಿಯೇ ಕುಳಿತಿದ್ದನು. ॥ ೧ ॥ ಅದೇ ಸಮಯಕ್ಕೆ ಒಂದು ಹೆಣ್ಣು ಜಿಂಕೆಯು ಬಾಯಾರಿಕೆಯಿಂದ ಪೀಡಿತವಾಗಿ ನೀರು ಕುಡಿಯಲಿಕ್ಕಾಗಿ ಒಂಟಿಯಾಗಿಯೇ ನದಿತೀರಕ್ಕೆ ಬಂತು. ॥ ೨ ॥ ಅದು ಇನ್ನೇನು ನೀರು ಕುಡಿಯಬೇಕೆಂದಾಗ ಇದ್ದಕಿದ್ದಂತೆ ಲೋಕಭಯಂಕರವಾದ ಒಂದು ಸಿಂಹಗರ್ಜನೆ ಕೇಳಿಬಂತು. ॥ ೩ ॥ ಜಿಂಕೆಯ ಸ್ವಭಾವವೇ ಅಂಜುಬುರುಕುತನವಿರುತ್ತದೆ. ಆದುದರಿಂದ ಅದು ಮೊದಲೇ ಚಕಿತದೃಷ್ಟಿಯಿಂದ ಅತ್ತ-ಇತ್ತ ನೋಡುತ್ತಿತ್ತು. ಆ ಭೀಕರವಾದ ಶಬ್ದವು ಕಿವಿಗೆ ಬೀಳುತ್ತಲೆ ಸಿಂಹದ ಭಯದಿಂದ ಎದೆಯು ಡವಗುಟ್ಟುತ್ತಿರಲು, ಬಾಯಾರಿಕೆಯು ತಣಿಯುವುದಕ್ಕೆ ಮೊದಲೇ ಪ್ರಾಣಭಯದಿಂದ ನದಿಯನ್ನು ದಾಟಲೆಂದು ಥಟ್ಟನೆ ಮೇಲೆ ನೆಗೆಯಿತು. ॥ ೪ ॥

**ತಸ್ಯಾ ಉತ್ಪತಂತ್ಯಾ ಅಂತರ್ವತ್ನ್ಯಾ ಉರುಭಯಾವಗಲಿತೋ ಯೋನಿನಿರ್ಗತೋ ಗರ್ಭಃ ಸ್ರೋತಸಿ ನಿಪಪಾತ ॥ ೫ ॥ ತತ್ಪ್ರಸವೋತ್ಸರ್ಪಣಭಯಖೇದಾತುರಾ ಸ್ವಗಣೇನ ವಿಯುಜ್ಯಮಾನಾ ಕಸ್ಯಾಂಚಿದ್ದರ್ಯಾಂ ಕೃಷ್ಣಸಾರಸತೀ ನಿಪಪಾತಾಥ ಚ ಮಮಾರ ॥ ೬ ॥**

ಅದು ಗರ್ಭಧರಿಸಿದ್ದ ಜಿಂಕೆಯಾದ್ದರಿಂದ ಮೇಲೆ ಹಾರಿದಾಗ ಭಯದಿಂದ ಅದರ ಗರ್ಭವು ತನ್ನ ಜಾಗದಿಂದ ಜಾರಿ ಯೋನಿ ದ್ವಾರದಿಂದ ಹೊರಬಂದು ನದಿಯ ಪ್ರವಾಹದಲ್ಲಿ ಬಿದ್ದುಬಿಟ್ಟಿತು. ॥ ೫ ॥ ಹಾಗೆ ಗರ್ಭಭಾರವು ಬಿದ್ದುಹೋದ ಆಯಾಸದಿಂದಲೂ, ಸಿಂಹದ ಭಯದಿಂದಲೂ ಅತಿಪೀಡಿತವಾದ ಆ ಜಿಂಕೆಯು ತನ್ನ ಹಿಂಡನ್ನು ಅಗಲಿ ಓಡುತ್ತಾ ಒಂದು ಗುಹೆಯಲ್ಲಿ ಬಿದ್ದು ಸತ್ತುಹೋಯಿತು. ॥ ೬ ॥

**ತಂ ತ್ವೇಣಕುಣಕಂ ಕೃಪಣಂ ಸ್ರೋತಸಾನೂಹ್ಯಮಾನಮಭಿವೀಕ್ಷ್ಯಾಪವಿದ್ಧಂ ಬಂಧುರಿವಾನುಕಂಪಯಾ ರಾಜರ್ಷಿರ್ಭರತ ಆದಾಯ ಮೃತಮಾತರಮಿತ್ಯಾಶ್ರಮಪದಮನಯತ್ ॥ ೭ ॥ ತಸ್ಯ ಹ ವಾ ಏಣಕುಣಕ ಉಚ್ಚೈರೇತಸ್ಮಿನ್ ಕೃತನಿಜಾಭಿಮಾನಸ್ಯಾಹರಹಸ್ತತ್ಪೋಷಣಪಾಲನಲಾಲನಪ್ರೀಣನಾನುಧ್ಯಾನೇನಾತ್ಮನಿಯಮಾಃ ಸಹಯಮಾಃ ಪುರುಷಪರಿಚರ್ಯಾದಯ ಏಕೈಕಶಃ ಕತಿಪಯೇನಾಹರ್ಗಣೇನ ವಿಯುಜ್ಯಮಾನಾಃ ಕಿಲ ಸರ್ವ ಏವೋದವಸನ್ ॥ ೮ ॥ ಅಹೋ ಬತಾಯಂ ಹರಿಣಕುಣಕಃ ಕೃಪಣ**

ಆಗ ಆ ಬಡಪಾಯಿಯಾದ ಜಿಂಕೆಯ ಮರಿಯು ತನ್ನ ಬಂಧುಗಳನ್ನಗಲಿ ನದಿಯ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿರುವುದನ್ನು ಕಂಡ ರಾಜರ್ಷಿಯಾದ ಭರತನಿಗೆ ಕರುಣೆಯುಂಟಾಗಿ ಆತನು ತಬ್ಬಲಿಯಾದ ಆ ಮರಿಯನ್ನು ಆತ್ಮೀಯತೆಯಿಂದ ಎತ್ತಿಕೊಂಡು ತನ್ನ ಆಶ್ರಮಕ್ಕೆ ಬಂದನು. ॥ ೭ ॥ ಆ ಜಿಂಕೆಯ ಮರಿಯಮೇಲೆ ದಿನ-ದಿನಕ್ಕೆ ಭರತನ ಮಮತೆಯು ಹೆಚ್ಚತೊಡಗಿತು. ಆತನು ಪ್ರತಿದಿನವೂ ಅದಕ್ಕೆ ಆಹಾರ-ಪಾನೀಯಗಳನ್ನು ಒದಗಿಸುವುದು, ಅದನ್ನು ಹುಲಿ ಮುಂತಾದವುಗಳಿಂದ ರಕ್ಷಿಸುವುದು, ಮೈದಡವಿ ಮುದ್ದಿಸುವುದು ಮುಂತಾದ ಚಿಂತೆಗಳಲ್ಲೇ ಮುಳುಗತೊಡಗಿದನು. ಕೆಲವೇ ದಿನಗಳಲ್ಲಿ ಅವನ ಯಮ, ನಿಯಮ, ಭಗವತ್ಪೂಜೆ ಮುಂತಾದ ಆವಶ್ಯಕವಾದ ವಿಧಿಗಳು ಒಂದೊಂದಾಗಿ ಬಿಟ್ಟುಹೋಗುತ್ತಾ, ಕೊನೆಗೆ ಎಲ್ಲವೂ ಬಿಟ್ಟುಹೋಯಿತು. ॥ ೮ ॥ ಆತನು ಹೀಗೆ ವಿಚಾರಮಾಡತೊಡಗಿದನು – "ಆಹಾ! ಈ ಬಡಪಾಯಿಯಾದ ಜಿಂಕೆಯ ಮರಿಯು ಭಗವಂತನ ಕಾಲಚಕ್ರದ ವೇಗದಿಂದ ತನ್ನ ಹಿಂಡನ್ನೂ, ಗೆಳೆಯರನ್ನೂ ನೆಂಟರಿಷ್ಟರನ್ನೂ ಅಗಲಿ ಕೊನೆಗೆ ನನ್ನ ಆಸರೆಗೆ ಬಂದು ಸೇರಿತಲ್ಲ!

ಈಶ್ವರರಥಚರಣಪರಿಭ್ರಮಣರಯೇಣ ಸ್ವಗಣಸುಹೃದ್ಬಂಧುಭ್ಯಃ ಪರಿವರ್ಜಿತಃ ಶರಣಂ ಚ ಮೋಪಸಾದಿತೋ ಮಾಮೇವ ಮಾತಾಪಿತರೌ ಭ್ರಾತೃಜ್ಞಾತೀನ್ ಯೌಥಿಕಾಂಶ್ಚೈವೋಪೇಯಾಯ ನಾನ್ಯಂ ಕಂಚನ ವೇದ ಮಯ್ಯತಿವಿಸ್ರಬ್ಧಶ್ಚಾತ ಏವ ಮಯಾ ಮತ್ಪರಾಯಣಸ್ಯ ಪೋಷಣಪಾಲನಪ್ರೀಣನಲಾಲನಮನಸೂಯುನಾನುಷ್ಠೇಯಂಶರಣ್ಯೋಪೇಕ್ಷಾದೋಷವಿದುಷಾ ॥ ೯ ॥ ನೂನಂ ಹ್ಯಾರ್ಯಾಃ ಸಾಧವ ಉಪಶಮಶೀಲಾಃ ಕೃಪಣಸುಹೃದ್ ಏವಂವಿಧಾರ್ಥೇ ಸ್ವಾರ್ಥಾನಪಿ ಗುರುತರಾನುಪೇಕ್ಷಂತೇ ॥ ೧೦ ॥

ಈಗ ಇದು ನನ್ನನ್ನೇ ತನ್ನ ತಾಯಿಯೆಂದೂ, ತಂದೆಯೆಂದೂ, ಬಂಧುಬಳಗವೆಂದೂ, ಹಿಂಡಿನ ಗೆಳೆಯನೆಂದೂ ತಿಳಿದು ಕೊಂಡಿದೆ. ನನ್ನನ್ನು ಬಿಟ್ಟು ಇದಕ್ಕೆ ಬೇರೆ ಯಾರ ಪರಿಚಯವೂ ಇಲ್ಲ. ನನ್ನಲ್ಲಿ ಪೂರ್ಣವಾದ ನಂಬಿಕೆಯೂ ಇದಕ್ಕೆ ಉಂಟಾಗಿದೆ. ಶರಣು ಬಂದವರನ್ನು ಕೈಬಿಡುವುದು ಮಹಾದೋಷವೆಂದು ನನಗೆ ತಿಳಿದಿದೆ. ಆದುದರಿಂದ ನನ್ನಲ್ಲಿ ಶರಣಾದ ಈ ಪ್ರಾಣಿಯನ್ನು ನಾನು ಎಲ್ಲ ದೋಷಬುದ್ಧಿಯನ್ನು ಬಿಟ್ಟು ಸಾಕಿ-ಸಲಹಿ ಮುದ್ದಿಸುತ್ತಾ ಬೆಳೆಸಬೇಕು. ॥ ೯ ॥ ನಿಶ್ಚಯವಾಗಿಯೂ ಶಾಂತಸ್ವಭಾವದವರೂ, ದೀನರಕ್ಷಕರೂ ಆದ ಪರೋಪಕಾರಿಗಳಾದ ಸಜ್ಜನರು ಇಂತಹ ಶರಣಾಗತರನ್ನು ರಕ್ಷಿಸುವುದಕ್ಕಾಗಿ ದೊಡ್ಡ-ದೊಡ್ಡ ಸ್ವಾರ್ಥಗಳನ್ನು ಕಡೆಗಣಿಸಿಬಿಡುತ್ತಾರೆ. ॥ ೧೦ ॥

ಇತಿ ಕೃತಾನುಷಂಗ ಆಸನಶಯನಾಟನಸ್ಥಾನಾಶನಾದಿಷು ಸಹ ಮೃಗಜಹುನಾ ಸ್ನೇಹಾನುಬದ್ಧಹೃದಯ ಆಸೀತ್ ॥ ೧೧ ॥ ಕುಶಕುಸುಮಸಮಿತ್ಪಲಾಶಫಲಮೂಲೋದಕಾನ್ಯಾಹರಿಷ್ಯಮಾಣೋ ವೃಕಸಾಲಾವೃಕಾದಿಭ್ಯೋ ಭಯಮಾಶಂಸಮಾನೋ ಯದಾ ಸಹ ಹರಿಣಕುಣಕೇನ ವನಂ ಸಮಾವಿಶತಿ ॥ ೧೨ ॥ ಪಥಿಷು ಚ ಮುಗ್ಧಭಾವೇನ ತತ್ರ ತತ್ರ ವಿಷಕ್ತಮತಿಪ್ರಣಯ ಭರಹೃದಯಃ ಕಾರ್ಪಣ್ಯಾತ್ಸ್ಕಂಧೇನೋದ್ವಹತಿ ಏವಮುತ್ಸಂಗ ಉರಸಿ ಚಾಧಾಯೋಪಲಾಲಯನ್ಮುದಂ ಪರಮಾಮವಾಪ ॥ ೧೩ ॥ ಕ್ರಿಯಾಯಾಂ ನಿರ್ವರ್ತ್ಯಮಾನಾಯಾಮಂತರಾಲೇಽಪ್ಯುತ್ಥಾಯೋತ್ಥಾಯ ಯದೈನಮಭಿಚಕ್ಷೀತ ತರ್ಹಿ ವಾವ ಸ ವರ್ಷಪತಿಃ ಪ್ರಕೃತಿಸ್ಥೇನ ಮನಸಾ ತಸ್ಮಾ ಆಶಿಷ ಆಶಾಸ್ತೇ ಸ್ವಸ್ತಿ ಸ್ತಾದ್ವತ್ಸ ತೇ ಸರ್ವತ ಇತಿ ॥ ೧೪ ॥

ಹೀಗೆ ಆ ಹುಲ್ಲೆಮರಿಯಲ್ಲಿ ವ್ಯಾಮೋಹವು ಹೆಚ್ಚಿದ್ದರಿಂದ ಆತನ ಮನಸ್ಸು ಕುಳಿತಿರುವಾಗಲೂ, ಮಲಗುವಾಗಲೂ, ನಿಲ್ಲುವಾಗಲೂ, ಆಹಾರವನ್ನು ಸೇವಿಸುವಾಗಲೂ ಸದಾ ಅದನ್ನೇ ಯೋಚಿಸುತ್ತಾ ಸ್ನೇಹಪಾಶಕ್ಕೆ ಕಟ್ಟುಬಿದ್ದಿತು. ॥ ೧೧ ॥ ದರ್ಭೆ, ಸಮಿತ್ತು , ಪತ್ರ, ಪುಷ್ಪ, ಗೆಡ್ಡೆ ಗೆಣಸುಗಳನ್ನು ತರುವುದಕ್ಕೆ ಹೋದಾಗಲೂ ಆತನು – ತೋಳ, ನಾಯಿಗಳು ಮುತ್ತಬಹುದೆಂಬ ಭಯದಿಂದ ಅದನ್ನು ಜೊತೆಯಲ್ಲೇ ಅರಣ್ಯಕ್ಕೆ ಕರೆದುಕೊಂಡು ಹೋಗುತ್ತಿದ್ದನು. ॥ ೧೨ ॥ ದಾರಿಯಲ್ಲಿ ಅಲ್ಲಲ್ಲಿ ಆ ಹುಲ್ಲೆಯ ಮರಿಯು ಮೃದುವಾದ ಹುಲ್ಲನ್ನು ಕಂಡು ಮುಗ್ಧಭಾವದಿಂದ ಆಸಕ್ತವಾಗಿ ಮೊಂಡುಬಿದ್ದಾಗ, ಭರತನು ಅತ್ಯಂತ ಪ್ರೇಮಪೂರ್ಣವಾದ ಹೃದಯದಿಂದ ಅದನ್ನು ತನ್ನ ಹೆಗಲಮೇಲೆ ಏರಿಸಿಕೊಳ್ಳುತ್ತಿದ್ದನು. ಹೀಗೆಯೇ ಅದನ್ನು ತೊಡೆಯ ಮೇಲೆ ಮಲಗಿಸಿಕೊಳ್ಳುವುದು, ಎದೆಗಪ್ಪಿಕೊಂಡು ಮುದ್ದಾಡುವುದು ಇವುಗಳಿಂದ ಅವನಿಗೆ ತುಂಬಾ ಸಂತೋಷವುಂಟಾಗುತ್ತಿತ್ತು. ॥ ೧೩ ॥ ನಿತ್ಯ-ನೈಮಿತ್ತಿಕ ಕರ್ಮಗಳನ್ನು ಮಾಡುವಾಗಲೂ ಭರತಚಕ್ರವರ್ತಿಯು ನಡು-ನಡುವೆ ಎದ್ದು ಆ ಮರಿಯನ್ನು ನೋಡಲು ಹೋಗುತ್ತಿದ್ದನು. ಆಗ ಅದನ್ನು ಕಣ್ಣಿಂದ ಕಂಡಾಗಲೇ ಆತನ ಮನಸ್ಸಿಗೆ ನೆಮ್ಮದಿಯುಂಟಾಗುತ್ತಿತ್ತು. ಆಗ ಆತನು 'ಮಗೂ ! ನಿನಗೆ ಎಲ್ಲೆಲ್ಲಿಯೂ ಮಂಗಳವುಂಟಾಗಲಿ' ಎಂದು ಶುಭ ಹಾರೈಸುತ್ತಿದ್ದನು. ॥ ೧೪ ॥

ಅನ್ಯದಾ ಭೃಶಮುದ್ವಿಗ್ನಮನಾ ನಷ್ಟದ್ರವಿಣ ಇವ ಕೃಪಣಃ ಸಕರುಣಮತಿತರ್ಷೇಣ ಹರಿಣಕುಣಕವಿರಹವಿಹ್ವಲಹೃದಯಸಂತಾಪಸ್ತಮೇವಾನುಶೋಚನ್ಕಿಲ ಕಶ್ಮಲಂ ಮಹದಭಿರಂಭಿತ ಇತಿ ಹೋವಾಚ ॥ ೧೫ ॥ ಅಪಿ ಬತ ಸ ವೈ ಕೃಪಣ ಏಣಬಾಲಕೋ ಮೃತಹರಿಣೀಸುತೋಽಹೋ ಮಮಾನಾರ್ಯಸ್ಯ ಶಠಕಿರಾತಮತೇರಕೃತಸುಕೃತಸ್ಯ ಕೃತವಿಸ್ರಂಭ ಆತ್ಮಪ್ರತ್ಯಯೇನ ತದವಿಗಣಯನ್ಸುಜನ ಇವಾಗಮಿಷ್ಯತಿ ॥ ೧೬ ॥ ಅಪಿ ಕ್ಷೇಮೇಣಾಸ್ಮಿನ್ನಾಶ್ರಮೋಪವನೇ ಶಷ್ಪಾಣಿ ಚರಂತಂ ದೇವಗುಪ್ತಂ ದ್ರಕ್ಷ್ಯಾಮಿ ॥ ೧೭ ॥ ಅಪಿ ಚ ನ ವೃಕಃ ಸಾಲಾವೃಕೋಽನ್ಯತಮೋ ವಾ ನೈಕಚರ ಏಕಚರೋ ವಾ ಭಕ್ಷಯತಿ ॥ ೧೮ ॥

ಕೆಲವೊಮ್ಮೆ ಅದು ಏನಾದರೂ ಕಣ್ಣಿಗೆ ಕಾಣದೇ ಹೋದರೆ – ಹಣವನ್ನು ಕಳೆದುಕೊಂಡ ಕೃಪಣನಂತೆ ಮನಸ್ಸಿನಲ್ಲಿ ತುಂಬಾ ಕಳವಳಗೊಂಡು ಅದರ ಅಗಲಿಕೆಯಿಂದ ಕಡುನೊಂದವನಾಗಿ ಮೋಹಾವೇಶಗೊಂಡು ದುಃಖದಲ್ಲಿ ಮುಳುಗಿ ಹೀಗೆ ಉದ್ಗರಿಸುತ್ತಿದ್ದನು. ॥ ೧೫ ॥ ಅಯ್ಯೋ ! ತಾಯಿಯಿಲ್ಲದ ಆ ದೀನವಾದ ಹುಲ್ಲೆಮರಿಯು ದುಷ್ಟಕಿರಾತನಂತೆ ಬುದ್ಧಿಯುಳ್ಳ, ಪುಣ್ಯಹೀನ, ಅನಾರ್ಯನಾದ ನನ್ನಲ್ಲಿ ನಂಬಿಕೆಯನ್ನಿಟ್ಟು ನನ್ನನ್ನು ತನ್ನವನೆಂದು ಭಾವಿಸಿ ಸತ್ಪುರುಷರಂತೆ ನಾನು ಮಾಡಿದ ಅಪರಾಧಗಳನ್ನು ಮರೆತು ಹಿಂದಿರುಗಿ ಬರುವುದು ತಾನೇ ! ॥ ೧೬ ॥ ಅದು ಈ ಆಶ್ರಮದ ಉಪವನಕ್ಕೆ ಹಿಂದಿರುಗಿ ಶ್ರೀಭಗವಂತನ ಕೃಪೆಯಿಂದ ಸುರಕ್ಷಿತವಾಗಿ ನಿರ್ವಿಘ್ನವಾಗಿ ಹಸಿರುಹುಲ್ಲನ್ನು ಮೇಯುತ್ತಿರುವುದನ್ನು ನಾನು ಕಾಣುವೆನು ತಾನೇ ! ॥ ೧೭ ॥ ಯಾವುದಾದರೂ

ನಿಮ್ಲೋಚತಿ ಹ ಭಗವಾನ್ಸಕಲಜಗತ್ ಕ್ಷೇಮೋದಯಸ್ತ್ರಯ್ಯಾತ್ಮಾದ್ಯಾಪಿ ಮಮ ನ ಮೃಗವಧೂನ್ಯಾಸ ಆಗಚ್ಛತಿ ॥ ೧೯ ॥ ಅಪಿಸ್ವಿದಕೃತಸುಕೃತಮಾಗತ್ಯ ಮಾಂ ಸುಖಯಿಷ್ಯತಿ ಹರಿಣ ರಾಜಕುಮಾರೋ ವಿವಿಧರುಚಿರದರ್ಶನೀಯನಿಜಮೃಗದಾರಕವಿನೋದೈರಸಂತೋಷಂ ಸ್ವಾನಾಮಪನುದನ್ ॥ ೨೦ ॥ ಕ್ಷ್ವೇಲಿಕಾಯಾಂ ಮಾಂ ಮೃಷಾಸಮಾಧಿನಾಽಽಮೀಲಿತದೃಶಂ ಪ್ರೇಮಸಂರಂಭೇಣ ಚಕಿತಚಕಿತ ಆಗತ್ಯ ಪೃಷದಪರುಷವಿಷಾಣಾಗ್ರೇಣ ಲುಠತಿ ॥ ೨೧ ॥ ಆಸಾದಿತಹವಿಷಿ ಬರ್ಹಿಷಿ ದೂಷಿತೇ ಮಯೋಪಾಲಬ್ಧೋ ಭೀತಭೀತಃ ಸಪದ್ಯುಪರತರಾಸ ಋಷಿಕುಮಾರವದವಹಿತಕರಣಕಲಾಪ ಆಸ್ತೇ ॥ ೨೨ ॥

ತೋಳವೋ, ನಾಯಿಯೋ, ಹಿಂಡುಕಟ್ಟಿ ಕೊಂಡು ಓಡಾಡುವ ಹಂದಿಯೇ ಮುಂತಾದ ಪ್ರಾಣಿಗಳೋ ಒಂಟಿಯಾಗಿ ಸಂಚರಿಸುವ ಹುಲಿಯೇ ಅದನ್ನು ತಿಂದುಹಾಕಿಲ್ಲ ತಾನೇ! ಆದರೆ ಹೀಗಾಗದಿರಲಿ. ॥ ೧೮ ॥ ಅಯ್ಯೋ! ಇದೇನಿದು! ಇಡೀ ಜಗತ್ತಿನ ಕ್ಷೇಮಕ್ಕಾಗಿ ಪ್ರಕಟಗೊಳ್ಳುವ ವೇದತ್ರಯ ಸ್ವರೂಪನಾದ ಭಗವಾನ್ ಸೂರ್ಯನು ಮುಳುಗಲು ಬಯಸುತ್ತಿದ್ದಾನೆ. ಆದರೂ ಆ ತಾಯಿಜಿಂಕೆಯು ನನ್ನಲ್ಲಿ ನ್ಯಾಸವಾಗಿ ಇಟ್ಟುಹೋಗಿರುವ ನಿಧಿಯು ಇನ್ನೂ ಹಿಂದಿರುಗಿ ಬಂದಿಲ್ಲವಲ್ಲ! ॥ ೧೯ ॥ ಆ ಹರಿಣ ರಾಜಕುಮಾರನು ಪುಣ್ಯಹೀನನಾದ ನನ್ನ ಬಳಿಗೆ ಬಂದು, ತನ್ನ ವಯಸ್ಸಿಗೂ, ಜಾತಿಗೂ ಉಚಿತವಾದ ಬಗೆಬಗೆಯ ಮನೋಹರವಾದ ಆಟ-ಪಾಟಗಳಿಂದ ಸ್ವಜನರ ಶೋಕವನ್ನು ದೂರಮಾಡುತ್ತಾ ನನ್ನನ್ನು ಆನಂದಗೊಳಿಸತೇ? ॥ ೨೦ ॥ ಆಹಾ! ನಾನೇನಾದರೂ ಪ್ರೀತಿಯ ಕೋಪದಿಂದ ಆಟಕ್ಕಾಗಿ ಸುಳ್ಳು-ಸುಳ್ಳೇ ಸಮಾಧಿಯಲ್ಲಿರುವ ನೆಪದಿಂದ ಕಣ್ಣುಗಳನ್ನು ಮುಚ್ಚಿಕೊಂಡು ಕುಳಿತುಕೊಂಡರೆ, ಅದು ಚಕಿತವಾದ ಚಿತ್ತದಿಂದ ನನ್ನ ಬಳಿಗೆ ಬಂದು ನೀರಿನ ಹನಿಯಂತೆ ಮೃದುವಾದ ತನ್ನ ಎಳೆಯ ಕೊಂಬಿನ ತುದಿಯಿಂದ ಹೇಗೆ ನನ್ನ ಅಂಗಾಂಗಗಳನ್ನು ತುರಿಸುತ್ತಿತ್ತು. ॥ ೨೧ ॥ ನಾನು ಎಂದಾದರೂ ದರ್ಭೆಗಳ ಮೇಲೆ ಹವನ ಸಾಮಗ್ರಿಯನ್ನು ಇಟ್ಟರುವಾಗ ಅದು ಅವುಗಳನ್ನು ಹಲ್ಲಿನಿಂದ ಎಳೆದು ಅಪವಿತ್ರಗೊಳಿಸಿದಾಗ ನಾನು ಅದನ್ನು ಗದರಿಸುತ್ತಿದ್ದೆ. ಆಗ ಅದು ತುಂಬಾ ಭಯ-ಭೀತವಾಗಿ ಒಡನೆಯೇ ತನ್ನ ಜಿಗಿತ-ಕುಣಿತವನ್ನು ಬಿಟ್ಟು ಋಷಿಕುಮಾರನಂತೆ ಎಲ್ಲ ಇಂದ್ರಿಯಗಳನ್ನು ತಡೆದು ಸುಮ್ಮನೆ ಕುಳಿತಿರುತ್ತಿತ್ತು. ॥ ೨೨ ॥

ಕಿಂ ವಾ ಅರೇ ಆಚರಿತಂ ತಪಸ್ತಪಸ್ವಿನ್ಯಾನಯಾ ಯದಿಯಮವನಿಃ ಸವಿನಯಕೃಷ್ಣಸಾರತನಯತನುತರಸುಭಗಶಿವತಮಾಖರಖುರಪದಪಂಕ್ತಿಭಿರ್ದ್ರವಿಣವಿಧುರಾತುರಸ್ಯ ಕೃಪಣಸ್ಯ ಮಮ ದ್ರವಿಣಪದವೀಂ ಸೂಚಯಂತ್ಯಾತ್ಮಾನಂ ಚ ಸರ್ವತಃ ಕೃತಕೌತುಕಂ ದ್ವಿಜಾನಾಂ ಸ್ವರ್ಗಾಪವರ್ಗಕಾಮಾನಾಂ ದೇವಯಜನಂ ಕರೋತಿ ॥ ೨೩ ॥ ಅಪಿಸ್ವಿದಸೌ ಭಗವಾನುಡುಪತಿರೇನಂ ಮೃಗಪತಿಭಯಾನ್ಮೃತಮಾತರಂ ಮೃಗಬಾಲಕಂ ಸ್ವಾಶ್ರಮಪರಿಭ್ರಷ್ಟಮನುಕಂಪಯಾ ಕೃಪಣಜನವತ್ಸಲಃ ಪರಿಪಾತಿ ॥ ೨೪ ॥ ಕಿಂ ವಾಽಽತ್ಮಜವಿಶ್ಲೇಷಜ್ವರದ ವದಹನಶಿಖಾಭಿ-

ಭೂಮಿಯ ಮೇಲೆ ಆ ಜಿಂಕೆಯ ಮರಿಯ ಹೆಜ್ಜೆಗಳ ಗುರುತುಗಳು ಕಾಣಿಸಿದರೆ ಅದನ್ನು ನೋಡಿ ಭರತನು ಹೀಗೆ ಉದ್ಗರಿಸುತ್ತಿದ್ದನು – ಓಹೋ! ಈ ಭೂದೇವಿಯು ಎಂತಹ ತಪಸ್ಸು ಮಾಡಿರುವಳೋ! ಅದಕ್ಕೆ ಈಕೆಯು ಜಿಂಕೆಯ ಮರಿಯೆಂಬ ಮಹಾಧನವನ್ನು ಕಳೆದುಕೊಂಡು ಕಳವಳಗೊಂಡು ದೀನನಾಗಿರುವ ನನಗೆ ಅದರ ಸುಂದರವೂ, ಸುಖಕರವೂ ಆದ ಗೊರಸುಗಳುಳ್ಳ ಪುಟ್ಟ ಪದಚಿಹ್ನೆಗಳಿಂದ ಆ ದ್ರವ್ಯವು ದೊರಕುವ ಮಾರ್ಗವನ್ನು ತೋರಿಸುತ್ತಿದ್ದಾಳೆ ಮತ್ತು ತಾನೂ ಸ್ವರ್ಗ-ಮೋಕ್ಷಗಳನ್ನು ಬಯಸುವ ದ್ವಿಜರಿಗೆ ಯಜ್ಞಾನುಷ್ಠಾನದ ಸ್ಥಳವನ್ನು * ಸೂಚಿಸುವ ಆ ಪವಿತ್ರವಾದ ಪಾದಚಿಹ್ನೆಗಳಿಂದ ಅಲಂಕೃತವಾಗಿದ್ದಾಳೆ. ॥ ೨೩ ॥ (ಚಂದ್ರನಲ್ಲಿ ಜಿಂಕೆಯಂತೆ ಕಪ್ಪಾಗಿರುವ ಗುರುತನ್ನು ಕಂಡು ಅದನ್ನೇ ತನ್ನ ಪ್ರೀತಿಯ ಜಿಂಕೆಮರಿಯೆಂದು ಭಾವಿಸಿ) 'ಅಯ್ಯೋ! ಸಿಂಹದ ಭಯದಿಂದ ಪ್ರಾಣಕಳೆದುಕೊಂಡ ಜಿಂಕೆಯ ಮರಿಯು ಈಗ ನನ್ನ ಆಶ್ರಮವನ್ನು ಅಗಲಿಹೋಗಿದೆ. ಆದ್ದರಿಂದ ಅದನ್ನು ಅನಾಥವೆಂದು ತಿಳಿದು ಈ ದೀನವತ್ಸಲನಾದ ಭಗವಾನ್ ಚಂದ್ರನು ದಯೆಯಿಂದ ರಕ್ಷಿಸುತ್ತಿದ್ದಾನಲ್ಲ!' ॥ ೨೪ ॥

* ಕೃಷ್ಣಮೃಗವು ಎಲ್ಲಿ ಧಾರಾಳವಾಗಿ ಸಂಚರಿಸುವುದೋ, ಅದು ಯಜ್ಞಾನುಷ್ಠಾನಕ್ಕೆ ಮತ್ತು ಧರ್ಮಶ್ರವಣಕ್ಕೆ ಯೋಗ್ಯವಾದ ಸ್ಥಳ ಎಂದು ಶಾಸ್ತ್ರಗಳು ಹೇಳುತ್ತವೆ.
'ಮಿಥಿಲಾಸ್ಥಃ ಸ ಯೋಗೀಂದ್ರಃ ಕ್ಷಣಂ ಧ್ಯಾತ್ವಾ ಬ್ರವೀನ್ಮುನೀನ್ । ಯಸ್ಮಿನ್ ದೇಶೇ ಮೃಗಃ ಕೃಷ್ಣಃ ತಸ್ಮಿನ್ ಧರ್ಮಾನ್ನಿಬೋಧತ ॥' *(ಯಾಜ್ಞವಲ್ಕ್ಯ ಸ್ಮೃತಿ)*

ರುಪತಪ್ಯಮಾನಹೃದಯಸ್ಥಲನಲಿನೀಕಂ ಮಾಮುಪಸೃತ-ಮೃಗೀತನಯಂ ಶಿಶಿರಶಾಂತಾನುರಾಗಗುಣಿತನಿಜವದನಸಲಿಲಾಮೃತಮಯಗಭಸ್ತಿಭಿಃ ಸ್ವಧಯತೀತಿ ಚ ॥ ೨೫ ॥

(ಮತ್ತೆ ಚಂದ್ರನ ತಂಪಾದ ಕಿರಣಗಳಿಂದ ಆಹ್ಲಾದಿತನಾಗಿ) 'ಅಥವಾ ಪುತ್ರರ ಅಗಲಿಕೆಯೆಂಬ ಕಾಡ್ಗಿಚ್ಚಿನ ವಿಷಮವಾದ ಜ್ವಾಲೆಯಿಂದ ಹೃದಯಕಮಲವು ಸುಟ್ಟುಹೋಗುತ್ತಿದ್ದುದರಿಂದ ನಾನು ಒಂದು ಜಿಂಕೆಯ ಮರಿಯ ಆಸರೆಯನ್ನು ಪಡೆದಿದ್ದೆ. ಈಗ ಅದು ಹೊರಟುಹೋಗಿರುವುದರಿಂದ ನನ್ನ ಹೃದಯವು ಮತ್ತೆ ಸುಡಲು ಆರಂಭವಾಗಿದೆ. ಆದುದರಿಂದ ಈ ಚಂದ್ರನು ತನ್ನ ಶೀತಲವೂ, ಶಾಂತವೂ, ಸ್ನೇಹಪೂರ್ಣವೂ ಆದ ಮುಖಾರವಿಂದ ರಸ ರೂಪವಾದ ಅಮೃತಕಿರಣಗಳಿಂದ ನನ್ನನ್ನು ಶಾಂತಗೊಳಿಸುತ್ತಿದ್ದಾನೆ.' ॥ ೨೫ ॥

ಏವಮಘಟಮಾನಮನೋರಥಾಕುಲಹೃದಯೋ ಮೃಗದಾರಕಾಭಾಸೇನ ಸ್ವಾರಬ್ಧಕರ್ಮಣಾಯೋಗಾರಂಭಣತೋ ವಿಭ್ರಂಶಿತಃ ಸ ಯೋಗತಾಪಸೋ ಭಗವದಾರಾಧನಲಕ್ಷಣಾಚ್ಚ ಕಥಮಿತರಥಾ ಜಾತ್ಯಂತರ ಏಣಕುಣಕ ಆಸಂಗಃ ಸಾಕ್ಷಾನ್ನಿಃಶ್ರೇಯಸಪ್ರತಿಪಕ್ಷತಯಾ ಪ್ರಾಕ್ಪರಿತ್ಯಕ್ತದುಸ್ತ್ಯಜಹೃದಯಾಭಿಜಾತಸ್ಯ ತಸ್ಯೈವಮಂತರಾಯವಿಹತಯೋಗಾರಂಭಣಸ್ಯರಾಜರ್ಷೇರ್ಭರತಸ್ಯ ತಾವನ್ಮೃಗಾರ್ಭಕಪೋಷಣಪಾಲನಪ್ರೀಣನಲಾಲನಾನುಷಂಗೇಣಾವಿಗಣಯತ ಆತ್ಮಾನಮಹಿರಿವಾಖುಬಿಲಂ ದುರತಿಕ್ರಮಃ ಕಾಲಃ ಕರಾಲರಭಸ ಆಪದ್ಯತ ॥ ೨೬ ॥

ರಾಜೇಂದ್ರಾ! ಹೀಗೆ ಈಡೇರಿಸಲು ಅಸಂಭವವಾದ ವಿವಿಧ ಮನೋರಥಗಳಿಂದ ಭರತನ ಚಿತ್ತವು ಕಳವಳದಿಂದ ತುಂಬಿ ಹೋಯಿತು. ತಪಸ್ವೀ ಭರತನು ಜಿಂಕೆಯ ಮರಿಯ ರೂಪದಲ್ಲಿ ಕಾಣಿಸಿಕೊಂಡ ಪ್ರಾರಬ್ಧಕರ್ಮದಿಂದ ಶ್ರೀಭಗವಂತನ ಆರಾಧನೆಯ ರೂಪವಾದ ಕರ್ಮಗಳಿಂದಲೂ, ಯೋಗಾನುಷ್ಠಾನದಿಂದಲೂ ಜಾರಿಬಿಟ್ಟನು. ಮೋಕ್ಷಮಾರ್ಗಕ್ಕೆ ಸಾಕ್ಷಾತ್ತಾಗಿ ವಿಘ್ನರೂಪವೆಂದು ಭಾವಿಸಿ ಬಿಡುವುದಕ್ಕೆ ಅತಿಕಷ್ಟವಾಗಿದ್ದ ತನ್ನ ಪುತ್ರಾದಿಗಳನ್ನೂ ಕೂಡ ತ್ಯಜಿಸಿದ್ದನು. ಅಂತಹವನಿಗೆ ಬೇರೆ ಜಾತಿಯ ಪ್ರಾಣಿಯಾದ ಜಿಂಕೆಯ ಮರಿಯಲ್ಲಿ ಇಂತಹ ಆಸಕ್ತಿ ಉಂಟಾದುದಕ್ಕೆ ಪ್ರಾರಬ್ಧಕರ್ಮವಲ್ಲದೆ ಮತ್ತಾವ ಕಾರಣವಿದ್ದೀತು? ಹೀಗೆ ರಾಜರ್ಷಿ ಭರತನು ವಿಘ್ನಗಳಿಗೆ ವಶನಾಗಿ ಯೋಗಸಾಧನೆಯಿಂದ ಭ್ರಷ್ಟನಾಗಿ ಆ ಜಿಂಕೆಯ ಮರಿಯ ಪಾಲನೆ-ಪೋಷಣೆ ಮತ್ತು ಮುದ್ದಿಸುವುದರಲ್ಲೇ ತೊಡಗಿರುವುದರಿಂದ ಆತ್ಮಸ್ವರೂಪವನ್ನು ಮರೆತುಬಿಟ್ಟನು. ಆಗಲೇ ಯಾರಿಂದಲೂ ತಪ್ಪಿಸಿಕೊಳ್ಳುವುದು ಅಸಾಧ್ಯವಾದ ಬಲಶಾಲಿಯೂ, ವೇಗಶಾಲಿಯೂ ಆದ ಕರಾಳ-ಕಾಲವು – ಇಲಿಯ ಬಿಲಕ್ಕೆ ಹಾವು ನುಗ್ಗುವಂತೆ – ಆ ರಾಜರ್ಷಿಯನ್ನು ಆಕ್ರಮಿಸಿತು. ॥ ೨೬ ॥

ತದಾನೀಮಪಿ ಪಾರ್ಶ್ವವರ್ತಿನಮಾತ್ಮಜಮಿವಾನುಶೋಚಂತಮಭಿವೀಕ್ಷಮಾಣೋ ಮೃಗ ಏವಾಭಿನಿವೇಶಿತಮನಾ ವಿಸೃಜ್ಯ ಲೋಕಮಿಮಂ ಸಹ ಮೃಗೇಣ ಕಲೇವರಂ ಮೃತಮನು ನ ಮೃತಜನ್ಮಾನುಸ್ಮೃತಿರಿತರವನ್ಮೃಗಶರೀರಮವಾಪ ॥ ೨೭ ॥ ತತ್ರಾಪಿ ಹ ವಾ ಆತ್ಮನೋ ಮೃಗತ್ವಕಾರಣಂ ಭಗವದಾರಾಧನಸಮೀಹಾನುಭಾವೇನಾನುಸ್ಮೃತ್ಯ ಭೃಶಮನುತಪ್ಯಮಾನ ಆಹ ॥ ೨೮ ॥ ಅಹೋ ಕಷ್ಟಂ ಭ್ರಷ್ಟೋಽಹಮಾತ್ಮವತಾಮನುಪಥಾದ್ಯ ದ್ವಿಮುಕ್ತಸಮಸ್ತಸಂಗಸ್ಯ ವಿವಿಕ್ತಪುಣ್ಯಾರಣ್ಯಶರಣ್ಯಸ್ಯಾತ್ಮವತ ಆತ್ಮನಿ

ಆಗಲೂ ತನ್ನ ಬಳಿಯಲ್ಲಿ ಪುತ್ರನಂತೆ ಶೋಕಾತುರವಾಗಿ ಕುಳಿತಿದ್ದ ಆ ಜಿಂಕೆಯ ಮರಿಯನ್ನೇ ನೋಡುತ್ತಾ ಅದರಲ್ಲೇ ಅವನ ಚಿತ್ತವು ತೊಡಗಿತ್ತು. ಇಂತಹ ಆಸಕ್ತಿಯಲ್ಲೇ ಮೃಗದೊಂದಿಗೆ ಅವನ ಶರೀರವು ಬಿಟ್ಟು ಹೋಯಿತು. ಅನಂತರ ಅವನಿಗೆ ಅಂತ್ಯಕಾಲದ ಭಾವನೆಗನುಸಾರವಾಗಿ ಬೇರೆ ಸಾಧಾರಣ ಮನುಷ್ಯರಂತೆ ಮೃಗಶರೀರವೇ ದೊರೆಯಿತು. ಆದರೆ ಅವನ ಸಾಧನೆ ಪೂರ್ಣವಾಗಿತ್ತು, ಆದರಿಂದಾಗಿ ಅವನಿಗೆ ಹಿಂದಿನ ಜನ್ಮದ ಸ್ಮೃತಿಯು ನಾಶವಾಗಲಿಲ್ಲ. ॥ ೨೭ ॥ ಆ ಜಿಂಕೆಯ ಯೋನಿಯಲ್ಲಿಯೂ ಹಿಂದಿನ ಜನ್ಮದ ಭಗವದಾರಾಧನೆಯ ಪ್ರಭಾವದಿಂದ ತಾನು ಮೃಗರೂಪನಾದ ಕಾರಣವನ್ನು ಅರಿತುಕೊಂಡು ಅವನು ಅತ್ಯಂತ ಪಶ್ಚಾತ್ತಾಪಪಡುತ್ತಾ ಹೀಗೆ ಹೇಳತೊಡಗಿದನು. ॥ ೨೮ ॥ ಅಯ್ಯೋ! ಕಷ್ಟವೇ! ನಾನು ಸಂಯಮಶೀಲ ಮಹಾನುಭಾವರ ಮಾರ್ಗದಿಂದ ಪತಿತನಾದೆನು. ನಾನಾದರೋ ಧೈರ್ಯದಿಂದ ಎಲ್ಲ ರೀತಿಯ ಆಸಕ್ತಿಯನ್ನು ಬಿಟ್ಟು ಏಕಾಂತವೂ, ಪವಿತ್ರವೂ ಆದವನವನ್ನು ಆಶ್ರಯಿಸಿದ್ದೆ. ಅಲ್ಲಿದ್ದುಕೊಂಡು ನನ್ನ ಚಿತ್ತವನ್ನು ಸರ್ವಭೂತಾತ್ಮಾ ಶ್ರೀವಾಸುದೇವನಲ್ಲಿ, ನಿರಂತರ ಅವನ ಗುಣಗಳನ್ನು

ಸರ್ವೇಷಾಮಾತ್ಮನಾಂ ಭಗವತಿ ವಾಸುದೇವೇ ತದನುಶ್ರವಣಮನನಸಂಕೀರ್ತನಾರಾಧನಾನುಸ್ಮರಣಾಭಿಯೋಗೇನಾಶೂನ್ಯಸಕಲಯಾಮೇನ ಕಾಲೇನ ಸಮಾವೇಶಿತಂ ಸಮಾಹಿತಂ ಕಾರ್ತ್ಸ್ನ್ಯೇನ ಮನಸ್ತತ್ತು ಪುನರ್ಮಾಮಾಬುಧಸ್ಯಾರಾನ್ಮೃಗಸುತಮನುಪರಿಸುಸ್ರಾವ ॥ ೨೯ ॥

ಇತ್ಯೇವಂ ನಿಗೂಢನಿರ್ವೇದೋ ವಿಸೃಜ್ಯ ಮೃಗೀಂ ಮಾತರಂ ಪುನರ್ಭಗವತ್‌ಕ್ಷೇತ್ರಮುಪಶಮಶೀಲಮುನಿಗಣದಯಿತಂ ಶಾಲಗ್ರಾಮಂ ಪುಲಸ್ತ್ಯಪುಲಹಾಶ್ರಮಂ ಕಾಲಂಜರಾತ್ಪ್ರತ್ಯಾಜಗಾಮ ॥ ೩೦ ॥ ತಸ್ಮಿನ್ನಪಿ ಕಾಲಂ ಪ್ರತೀಕ್ಷಮಾಣಃ ಸಂಗಾಚ್ಚ ಭೃಶಮುದ್ವಿಗ್ನ ಆತ್ಮಸಹಚರಃ ಶುಷ್ಕಪರ್ಣತೃಣವೀರುಧಾ ವರ್ತಮಾನೋ ಮೃಗತ್ವನಿಮಿತ್ತಾವಸಾನಮೇವ ಗಣಯನ್ಮೃಗಶರೀರಂ ತೀರ್ಥೋದಕಕ್ಲಿನ್ನಮುತ್ಸಸರ್ಜ ॥ ೩೧ ॥

ಶ್ರವಣಿಸುತ್ತಾ, ಮನನಮಾಡುತ್ತಾ, ಸಂಕೀರ್ತನೆಮಾಡುತ್ತಾ ಹಾಗೂ ಪ್ರತಿಯೊಂದು ಕ್ಷಣವನ್ನು ಅವನ ಆರಾಧನೆ ಮತ್ತು ಸ್ಮರಣಾದಿಗಳಿಂದ ಸಫಲಗೊಳಿಸಿಕೊಂಡು ಸ್ಥಿರಭಾವದಿಂದ ಪೂರ್ಣವಾಗಿ ತೊಡಗಿಸಿಬಿಟ್ಟಿದ್ದೆ. ಅಜ್ಞಾನಿಯಾದ ನನ್ನನ್ನು ಅದೇ ಮನಸ್ಸು ಅಕಸ್ಮಾತ್ತಾಗಿ ಒಂದು ಎಳೆಯ ಜಿಂಕೆಯಮರಿಯ ಹಿಂದೆಬಿದ್ದು ನನ್ನ ಲಕ್ಷ್ಯದಿಂದ ಜಾರಿಬಿಟ್ಟೆನಲ್ಲ! ॥ ೨೯ ॥

ಮೃಗರೂಪನಾಗಿದ್ದ ರಾಜರ್ಷಿ ಭರತನು ಹೀಗೆ ತನ್ನ ಮನಸ್ಸಿನಲ್ಲಿ ಎಚ್ಚರಗೊಂಡಿದ್ದ ವೈರಾಗ್ಯಭಾವವನ್ನು ಅಡಗಿಸಿಟ್ಟುಕೊಂಡು, ತನ್ನ ತಾಯಿಯಾದ ಜಿಂಕೆಯನ್ನು ತೊರೆದು, ತಾನು ಹುಟ್ಟಿದ್ದ ಕಾಲಂಜರ ಪರ್ವತದಿಂದ ಮತ್ತೆ ಶಾಂತಸ್ವಭಾವರಾದ ಮುನಿಗಳಿಗೆ ಪ್ರಿಯವಾದ ಅದೇ ಭಗವತ್‌ಕ್ಷೇತ್ರವಾದ ಶಾಲಗ್ರಾಮ ತೀರ್ಥದಲ್ಲಿದ್ದ ಪುಲಸ್ತ್ಯಮತ್ತು ಪುಲಹ ಋಷಿಗಳ ಆಶ್ರಮಕ್ಕೆ ಬಂದು ಸೇರಿದನು. ॥ ೩೦ ॥ ಅಲ್ಲಿ ವಾಸವಿದ್ದಾಗಲೂ ಅವನು ಕಾಲವನ್ನೇ ಇದಿರುನೋಡುತ್ತಿದ್ದನು. 'ಆಸಕ್ತಿ' ಎಂದರೆ ಅವನಿಗೆ ಭಯವಾಗುತ್ತಿತ್ತು. ಅಲ್ಲಿ ಆತನು ಒಣ ಎಲೆ, ಹುಲ್ಲು, ಪೊದೆ ಮುಂತಾದವುಗಳಿಂದ ಜೀವನವನ್ನು ನಿರ್ವಹಿಸುತ್ತಾ, ತನಗೆ ಮೃಗಯೋನಿಯನ್ನುಂಟುಮಾಡಲು ಕಾರಣವಾಗಿದ್ದ ಪ್ರಾರಬ್ಧದ ಕ್ಷಯದ ದಾರಿಯನ್ನೇ ನೋಡುತ್ತಿದ್ದನು. ಕೊನೆಗೆ ಅವನು ತನ್ನ ಶರೀರದ ಅರ್ಧಭಾಗವನ್ನು ಗಂಡಕೀನದಿಯಲ್ಲಿ ಮುಳುಗಿಸಿಕೊಂಡು ಆ ಮೃಗಶರೀರವನ್ನು ತ್ಯಜಿಸಿಬಿಟ್ಟನು. ॥ ೩೧ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಭರತಚರಿತೇಽಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಬ್ರಾಹ್ಮಣಕುಲದಲ್ಲಿ ಭರತನ ಜನ್ಮ - ಜಡನಂತೆ ಆಚರಣೆ

*ಶ್ರೀಶುಕ ಉವಾಚ*

ಅಥ ಕಸ್ಯಚಿದ್ ದ್ವಿಜವರಸ್ಯಾಂಗಿರಃಪ್ರವರಸ್ಯ ಶಮದಮತಪಃಸ್ವಾಧ್ಯಾಯಾಧ್ಯಯನತ್ಯಾಗಸಂತೋಷತಿತಿಕ್ಷಾಪ್ರಶ್ರಯವಿದ್ಯಾನಸೂಯಾತ್ಮಜ್ಞಾನಾನಂದಯುಕ್ತಸ್ಯಾತ್ಮಸದೃಶಶ್ರುತಶೀಲಾಚಾರರೂಪೌದಾರ್ಯಗುಣಾ ನವ ಸೋದರ್ಯಾ ಅಂಗಜಾ ಬಭೂವುರ್ಮಿಥುನಂ ಚ ಯವೀಯಸ್ಯಾಂ ಭಾರ್ಯಾಯಾಮ್ ॥ ೧ ॥ ಯಸ್ತು ತತ್ರ ಪುಮಾಂಸ್ತಂ ಪರಮಭಾಗವತಂ ರಾಜರ್ಷಿಪ್ರವರಂ ಭರತಮುತ್ಸೃಷ್ಟಮೃಗಶರೀರಂ ಚರಮಶರೀರೇಣ ವಿಪ್ರತ್ವಂ ಗತಮಾಹುಃ ॥ ೨ ॥ ತತ್ರಾಪಿ ಸ್ವಜನಸಂಗಾಚ್ಚ ಭೃಶಮುದ್ವಿಜಮಾನೋ

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಅಂಗಿರಸ ಗೋತ್ರದಲ್ಲಿ ಶಮ, ದಮ, ತಪಸ್ಸು, ಅಧ್ಯಯನ, ತ್ಯಾಗ, ಸಂತೋಷ, ಸಹನೆ, ವಿನಯ, ಕರ್ಮವಿದ್ಯೆ, ಅಸೂಯೆ ಇಲ್ಲದಿರುವಿಕೆ, ಆತ್ಮಜ್ಞಾನ ಮತ್ತು ಆನಂದಗಳೆಂಬ ಎಲ್ಲ ಸದ್ಗುಣಗಳಿಂದಲೂ ಸಂಪನ್ನನಾಗಿದ್ದ ಒಬ್ಬ ಬ್ರಾಹ್ಮಣ ಶ್ರೇಷ್ಠನಿದ್ದನು. ಅವನು ಹಿರಿಯ ಹೆಂಡತಿಯಲ್ಲಿ ವಿದ್ಯೆ, ಶೀಲ, ಆಚಾರ, ರೂಪ, ಔದಾರ್ಯ ಮುಂತಾದ ಗುಣಗಳುಳ್ಳ ತನಗೆ ಸಮಾನರಾದ ಒಂಭತ್ತು ಪುತ್ರರನ್ನು ಪಡೆದನು. ಕಿರಿಯ ಮಡದಿಯಲ್ಲಿ ಒಬ್ಬ ಪುತ್ರನೂ, ಒಬ್ಬಳು ಕನ್ಯೆಯೂ ಜನಿಸಿದರು. ॥ ೧ ॥ ಆ ಇಬ್ಬರು ಮಕ್ಕಳಲ್ಲಿ ಪುತ್ರನಾಗಿದ್ದವನೇ ಪರಮಭಾಗವತ ಶಿರೋಮಣಿಯೂ, ರಾಜರ್ಷಿಯೂ ಆಗಿದ್ದ ಭರತನಾಗಿದ್ದನು. 'ಅವನು ಮೃಗಶರೀರವನ್ನು ತೊರೆದು ಕೊನೆಯ ಜನ್ಮದಲ್ಲಿ ಬ್ರಾಹ್ಮಣನಾಗಿದ್ದನು' ಎಂದು ಮಹಾಪುರುಷರು ಹೇಳುತ್ತಾರೆ. ॥ ೨ ॥ ಈ ಜನ್ಮದಲ್ಲಿಯೂ

**ಭಗವತಃ ಕರ್ಮಬಂಧವಿಧ್ವಂಸನಶ್ರವಣಸ್ಮರಣಗುಣವಿವ-ರಣಚರಣಾರವಿಂದಯುಗಲಂ ಮನಸಾ ವಿದಧದಾತ್ಮನಃ ಪ್ರತಿಘಾತಮಾಶಂಕಮಾನೋ ಭಗವದನುಗ್ರಹೇಣಾನು-ಸ್ಮೃತಸ್ವಪೂರ್ವಜನ್ಮಾವಲಿರಾತ್ಮಾನಮುನ್ಮತ್ತಜಡಾಂಧಬಧಿರಸ್ವರೂಪೇಣ ದರ್ಶಯಾಮಾಸ ಲೋಕಸ್ಯ ॥ ೩ ॥ ತಸ್ಯಾಪಿ ಹ ವಾ ಆತ್ಮಜಸ್ಯ ವಿಪ್ರಃ ಪುತ್ರಸ್ನೇಹಾನುಬದ್ಧಮನಾ ಆಸಮಾವರ್ತನಾತ್ಸಂಸ್ಕಾರಾನ್ಯಥೋಪದೇಶಂ ವಿದಧಾನ ಉಪನೀತಸ್ಯ ಚ ಪುನಃ ಶೌಚಾಚಮನಾದೀನ್ಕರ್ಮನಿ-ಯಮಾನನಭಿಪ್ರೇತಾನಪಿ ಸಮಶಿಕ್ಷಯದನುಶಿಷ್ಟೇನ ಹಿ ಭಾವ್ಯಂ ಪಿತುಃ ಪುತ್ರೇಣೇತಿ ॥ ೪ ॥ ಸ ಚಾಪಿ ತದು ಹ ಪಿತೃಸಂನಿಧಾವೇವಾಸಧ್ರೀಚೀನಮಿವ ಸ್ಮ ಕರೋತಿ ಛಂದಾಂಸ್ಯ-ಧ್ಯಾಪಯಿಷ್ಯನ್ ಸಹ ವ್ಯಾಹೃತಿಭಿಃ ಸಪ್ರಣವಶಿರಸ್ತ್ರಿಪದೀಂ ಸಾವಿತ್ರೀಂ ಗ್ರೈಷ್ಮವಾಸಂತಿಕಾನ್ಮಾಸಾನಧೀಯಾನಮಪ್ಯ-ಸಮವೇತರೂಪಂ ಗ್ರಾಹಯಾಮಾಸ ॥ ೫ ॥**

**ಏವಂ ಸ್ವತನುಜ ಆತ್ಮನ್ಯನುರಾಗಾವೇಶಿತಚಿತ್ತಃ ಶೌಚಾ-ಧ್ಯಯನವ್ರತನಿಯಮಗುರ್ವನಲಶುಶ್ರೂಷಣಾದ್ಯೌಪಕು-ರ್ವಾಣಕಕರ್ಮಾಣ್ಯನಭಿಯುಕ್ತಾನ್ಯಪಿ ಸಮನುಶಿಷ್ಟೇನ ಭಾವ್ಯಮಿತ್ಯಸದಾಗ್ರಹಃ ಪುತ್ರಮನುಶಾಸ್ಯ ಸ್ವಯಂ ತಾವದ-ನಧಿಗತಮನೋರಥಃ ಕಾಲೇನಾಪ್ರಮತ್ತೇನ ಸ್ವಯಂ ಗೃಹ ಏವ ಪ್ರಮತ್ತ ಉಪಸಂಹೃತಃ ॥ ೬ ॥ ಅಥ ಯವೀಯಸೀ ದ್ವಿಜಸತೀ ಸ್ವಗರ್ಭಜಾತಂ ಮಿಥುನಂ ಸಪತ್ನ್ಯಾ ಉಪನ್ಯಸ್ಯ ಸ್ವಯಮನುಸಂಸ್ಥಯಾ ಪತಿಲೋಕಮಗಾತ್ ॥ ೭ ॥**

**ಪಿತರ್ಯುಪರತೇ ಭ್ರಾತರ ಏನಮತತ್ಪ್ರಭಾವವಿದ-ಸ್ತ್ರಯ್ಯಾಂ ವಿದ್ಯಾಯಾಮೇವ ಪರ್ಯವಸಿತಮತಯೋ ನ ಪರವಿದ್ಯಾಯಾಂ ಜಡಮತಿರಿತಿ ಭ್ರಾತುರನುಶಾಸನನಿರ್ಬಂಧಾನ್ನ್ಯವೃತ್ಸಂತ ॥ ೮ ॥ ಸ ಚ ಪ್ರಾಕೃತೈರ್ದ್ವಿಪದಪಶುಭಿ-**

ಭಗವಂತನ ಕೃಪೆಯಿಂದ ತನ್ನ ಹಿಂದಿನ ಜನ್ಮಪರಂಪರೆಯ ನೆನಪು ಇದ್ದುದರಿಂದ ಅವನು– 'ತನ್ನ ಯೋಗದಲ್ಲಿ ಪುನಃ ವಿಘ್ನವು ಒದಗದಿರಲಿ' ಎಂಬ ಆಶಂಕೆಯಿಂದಲೇ ತಮ್ಮ ಬಂಧುಗಳ ಸಹವಾಸದಿಂದಲೂ ಹೆದರುತ್ತಿದ್ದನು. ಯಾರ ಸ್ಮರಣೆ ಮತ್ತು ಗುಣಕೀರ್ತನೆಗಳನ್ನು ಸದಾ ಮಾಡುತ್ತಿರುವುದರಿಂದ ಸಕಲ ಕರ್ಮಬಂಧನಗಳು ಕತ್ತರಿಸಿಹೋಗುವವೋ, ಆ ಭಗವಂತನ ಅಡಿದಾವರೆಗಳನ್ನೇ ತನ್ನ ಹೃದಯದಲ್ಲಿ ಧರಿಸಿಕೊಂಡಿದ್ದು, ಬೇರೆಯವರ ದೃಷ್ಟಿಗೆ ತಾನು ಹುಚ್ಚನಂತೆಯೂ, ಮೂರ್ಖನಂತೆಯೂ, ಕುರುಡನಂತೆಯೂ, ಕಿವುಡನಂತೆಯೂ ತೋರ್ಪಡಿಸಿಕೊಳ್ಳುತ್ತಿದ್ದನು. ॥ ೩ ॥

ತಂದೆಗಾದರೋ ಇತರ ಮಕ್ಕಳಲ್ಲಿರುವಷ್ಟೇ ಪ್ರೇಮ ಇವನಲ್ಲಿಯೂ ಇತ್ತು. ಆ ವಿಪ್ರವರ್ಯನು ಹುಚ್ಚನಂತೆ ಕಾಣುತ್ತಿದ್ದ ತನ್ನ ಈ ಮಗನಿಗೂ ಶಾಸ್ತ್ರಾನುಸಾರವಾಗಿ ಸಮಾವರ್ತನದವರೆಗಿನ ವಿವಾಹ ಪೂರ್ವಭಾವಿಯಾದ ಸಂಸ್ಕಾರಗಳೆಲ್ಲವನ್ನು ಮಾಡಬೇಕೆಂಬ ಮನಸ್ಸಿನಿಂದ ಅವನಿಗೆ ಉಪನಯನಸಂಸ್ಕಾರ ಮಾಡಿದನು. ಹುಡುಗನಿಗೆ ಇಷ್ಟವಿಲ್ಲದಿದ್ದರೂ ತಂದೆಯು ಶಾಸ್ತ್ರವಿಧಿಗನುಸಾರವಾಗಿ ಶೌಚ-ಆಚಮನವೇ ಮುಂತಾದ ಎಲ್ಲ ಆವಶ್ಯಕ ಕರ್ಮಗಳನ್ನು ತನ್ನ ಕರ್ತವ್ಯವೆಂಬ ಭಾವನೆಯಿಂದ ಅವನಿಗೆ ಕಲಿಸಿದನು. ॥ ೪ ॥ ಆದರೆ ಭರತನಾದರೋ ತನ್ನ ತಂದೆಯ ಎದುರಿನಲ್ಲಿಯೇ ಅವನ ಉಪದೇಶಕ್ಕೆ ವಿರುದ್ಧವಾಗಿಯೇ ಆಚರಿಸುತ್ತಿದ್ದನು. ವರ್ಷಾಕಾಲದಲ್ಲಿ ಅವನಿಗೆ ವೇದಾಧ್ಯಯನವನ್ನು ಪ್ರಾರಂಭಿಸಬೇಕೆಂದು ತಂದೆಯು ಬಯಸುತ್ತಿದ್ದನು. ಆದರೆ ವಸಂತ ಮತ್ತು ಗ್ರೀಷ್ಮಋತುಗಳ ನಾಲ್ಕು ತಿಂಗಳು ಹೇಳಿಕೊಟ್ಟರೂ ಭರತನಿಗೆ ವ್ಯಾಹೃತಿ ಮತ್ತು ಗಾಯತ್ರಿಶಿರಸ್ಸಿನಿಂದ ಕೂಡಿದ ತ್ರಿಪದಾ ಗಾಯತ್ರಿ ಮಂತ್ರವನ್ನೂ ಕೂಡ ಚೆನ್ನಾಗಿ ಕಲಿಸಲಾಗಲಿಲ್ಲ. ॥ ೫ ॥

ಹೀಗಿದ್ದರೂ ತಂದೆಗೆ ಆ ಬಾಲಕನ ಮೇಲೆ ತನ್ನ ಆತ್ಮದಲ್ಲಿರುವಷ್ಟೇ ಪ್ರೇಮವು ತುಂಬಿತ್ತು. ಅದಕ್ಕಾಗಿ ಆತನಿಗೆ ಕಲಿಯುವ ಪ್ರವೃತ್ತಿಯೇ ಇಲ್ಲದಿದ್ದರೂ 'ಪುತ್ರನಿಗೆ ಒಳ್ಳೆಯ ಶಿಕ್ಷಣವನ್ನು ನೀಡಬೇಕು' ಎಂಬ ಆಗ್ರಹದಿಂದ ಅವನಿಗೆ ಶೌಚ, ವೇದಾಧ್ಯಯನ, ವ್ರತ,ನಿಯಮ, ಗುರುವಿನ ಮತ್ತು ಅಗ್ನಿಯ ಸೇವೆ ಇವೇ ಮುಂತಾದ ಬ್ರಹ್ಮಚರ್ಯಾಶ್ರಮದ ಆವಶ್ಯಕವಾದ ನಿಯಮಗಳನ್ನು ಕಲಿಸುತ್ತಲೇ ಇದ್ದನು. ಆದರೆ ಪುತ್ರನನ್ನು ಶಿಕ್ಷಿತನನ್ನಾಗಿ ನೋಡುವ ಅವನ ಮನೋರಥ ಪೂರ್ಣವಾಗಲೇ ಇಲ್ಲ. ಸ್ವತಃ ತಾನೂ ಕೂಡ ಭಗವದ್ಭಜನರೂಪವಾದ ಮುಖ್ಯ ಕರ್ತವ್ಯವನ್ನು ಮರೆತು ಕೇವಲ ಮನೆವಾರ್ತೆಯಲ್ಲೇ ತೊಡಗಿರುತ್ತಾ ಎಚ್ಚರಿಕೆ ಇಲ್ಲದಿರುವಾಗಲೇ ಕಾಲವಶನಾದನು. ॥ ೬ ॥ ಆಗ ಅವನ ಕಿರಿಯ ಹೆಂಡತಿಯು ತನ್ನಲ್ಲಿ ಹುಟ್ಟಿದ ಇಬ್ಬರು ಬಾಲಕರನ್ನು ತನ್ನ ಸವತಿಗೆ ಒಪ್ಪಿಸಿ ತಾನು ಸಹಗಮನಮಾಡಿ ಪತಿಲೋಕವನ್ನು ಸೇರಿದಳು. ॥ ೭ ॥

ಭರತನ ಒಡಹುಟ್ಟಿದವರೆಲ್ಲರೂ ಕರ್ಮಕಾಂಡವನ್ನೇ ಸರ್ವಶ್ರೇಷ್ಠವೆಂದು ತಿಳಿಯುತ್ತಿದ್ದರು. ಬ್ರಹ್ಮಜ್ಞಾನರೂಪವಾದ ಪರಾ ವಿದ್ಯೆಯ ಪರಿಚಯವೇ ಇಲ್ಲದವರೂ, ಭರತನ ಪ್ರಭಾವವನ್ನು ಅರಿಯದವರೂ ಆಗಿದ್ದು ಅವನನ್ನು ಶುದ್ಧಮೂರ್ಖನೆಂದೇ

ರುನ್ಮತ್ತಜಡಬಧಿರೇತ್ಯಭಿಭಾಷ್ಯಮಾಣೋ ಯದಾ ತದನುರೂಪಾಣಿ ಪ್ರಭಾಷತೇ ಕರ್ಮಾಣಿ ಚ ಸ ಕಾರ್ಯಮಾಣಃ ಪರೇಚ್ಛಯಾ ಕರೋತಿ ವಿಷ್ಟಿತೋ ವೇತನತೋ ವಾ ಯಾಂಚಯಾ ಯದೃಚ್ಛಯಾ ವೋಪಸಾದಿತಮಲ್ಪಂ ಬಹು ಮೃಷ್ಟಂ ಕದನ್ನಂ ವಾಭ್ಯವಹರತಿ ಪರಂ ನೇಂದ್ರಿಯಪ್ರೀತಿನಿಮಿತ್ತಮ್ । ನಿತ್ಯನಿವೃತ್ತನಿಮಿತ್ತಸ್ವಸಿದ್ಧವಿಶುದ್ಧಾನುಭವಾನಂದಸ್ವಾತ್ಮಲಾಭಾಧಿಗಮಃ । ಸುಖದುಃಖಯೋರ್ದ್ವಂದ್ವನಿಮಿತ್ತಯೋರಸಂಭಾವಿತದೇಹಾಭಿಮಾನಃ ॥ ೯ ॥ ಶೀತೋಷ್ಣವಾತವರ್ಷೇಷು ವೃಷ ಇವಾನಾವೃತಾಂಗಃ ಪೀನಃ ಸಂಹನನಾಂಗಃ ಸ್ಥಂಡಿಲಸಂವೇಶನಾನುನ್ಮರ್ದನಾಮಜ್ಜನರಜಸಾ ಮಹಾಮಣಿ ರಿವಾನಭಿವ್ಯಕ್ತಬ್ರಹ್ಮವರ್ಚಸಃ ಕುಪಟಾವೃತಕಟಿರುಪವೀತೇನೋರುಮಷಿಣಾದ್ವಿಜಾತಿರಿತಿ ಬ್ರಹ್ಮಬಂಧುರಿತಿ ಸಂಜ್ಞಯಾತಜ್ಜ್ಞಜನಾವಮತೋ ವಿಚಚಾರ ॥ ೧೦ ॥ ಯದಾ ತು ಪರತ ಆಹಾರಂ ಕರ್ಮವೇತನತ ಈಹಮಾನಃ ಸ್ವಭ್ರಾತೃಭಿರಪಿ ಕೇದಾರಕರ್ಮಣಿ ನಿರೂಪಿತಸ್ತದಪಿ ಕರೋತಿ ಕಿಂತು ನ ಸಮಂ ವಿಷಮಂ ನ್ಯೂನಮಧಿಕಮಿತಿ ವೇದ ಕಣಪಿಣ್ಯಾಕಫಲೀಕರಣಕುಲ್ಮಾಷಸ್ಥಾಲೀಪುರೀಷಾದೀನ್ಯಪ್ಯಮೃತವದಭ್ಯವಹರತಿ ॥ ೧೧ ॥

ತಿಳಿಯುತ್ತಿದ್ದರು. ಆದ್ದರಿಂದ ತಂದೆಯು ಸರ್ಗಸ್ಥನಾದ ಬಳಿಕ ಅವರು ಅವನನ್ನು ಓದು-ಬರಹವನ್ನು ಕಲಿಸುವ ಆಗ್ರಹವನ್ನು ಬಿಟ್ಟುಬಿಟ್ಟರು. ॥ ೮ ॥ ಭರತನಿಗೆ ಮಾನಾಪಮಾನದ ಭಾವನೆಯೇ ಇರಲಿಲ್ಲ. ಅದರಿಂದ ಸಾಧಾರಣ ನರಪಶುಗಳು ಅವನನ್ನು ಹುಚ್ಚ, ಮೂರ್ಖ ಅಥವಾ ಕಿವುಡ ಎಂದು ಹೇಳಿ ಕರೆದಾಗಲೂ ಅವನು ಅಗಕ್ಕೆ ಅನುರೂಪವಾಗಿಯೇ ಮಾತಾಡುತ್ತಿದ್ದನು. ಯಾರಾದರೂ ತನ್ನಿಂದ ಏನೇ ಕೆಲಸವನ್ನು ಮಾಡಿಸಿಕೊಳ್ಳಲು ಬಯಸಿದರೆ ಅವರ ಇಚ್ಛೆಗನುಗುಣವಾಗಿ ಆ ಕೆಲಸವನ್ನು ಮಾಡಿಕೊಡುತ್ತಿದ್ದನು. ಕೂಲಿ ಇಲ್ಲದ ಬಿಟ್ಟಿಯ ಕೆಲಸವನ್ನಾಗಲೀ, ಕೂಲಿಯ ಕೆಲಸವನ್ನಾಗಲೀ, ಯಾರಾದರೂ ಮಾಡಲು ಬೇಡಿದರೆ ಅವರನ್ನು ಏನೂ ಕೇಳದೆ ಅವರು ಸ್ವಲ್ಪವೋ ಹೆಚ್ಚಾಗಿಯೋ ಎಷ್ಟುಕೊಟ್ಟರೆ ಅಷ್ಟನ್ನು, ಒಳ್ಳೆಯ ಅನ್ನವೋ, ಕೆಟ್ಟ ಅನ್ನವೋ ಏನೂ ಕೊಟ್ಟರೂ ನಾಲಿಗೆಯ ರುಚಿ ನೋಡದೆಯೇ ತಿಂದುಬಿಡುತ್ತಿದ್ದನು. ಸ್ವತಃ ಸಿದ್ಧವಾದ ಕೇವಲ ಜ್ಞಾನಾನಂದಸ್ವರೂಪವಾದ ಆತ್ಮಜ್ಞಾನವು ಆತನಿಗೆ ಉಂಟಾಗಿದ್ದರಿಂದ ಶೀತ-ಉಷ್ಣ ಮಾನ-ಅಪಮಾನ ಮುಂತಾದ ದ್ವಂದ್ವಗಳಿಂದುಂಟಾಗುವ ಸುಖ-ದುಃಖಾದಿಗಳಲ್ಲಿ ದೇಹಾಭಿಮಾನದ ಸ್ಫೂರ್ತಿಯೇ ಆತನಿಗೆ ಉಂಟಾಗುತ್ತಿರಲಿಲ್ಲ. ॥ ೯ ॥ ಚಳಿ, ಸೆಕೆ, ಮಳೆ, ಬಿರುಗಾಳಿ ಇವಾವುದನ್ನೂ ಲೆಕ್ಕಿಸದೆ ಬರಿಮೈಯಲ್ಲಿ ಎಲ್ಲೆಂದರಲ್ಲಿ ಬಿದ್ದುಕೊಂಡಿರುತ್ತಿದ್ದನು. ಆದರೆ ಅವನ ಅಂಗಾಂಗಗಳೆಲ್ಲವೂ ದಷ್ಟಪುಷ್ಟವಾಗಿ ದೃಢವಾಗಿದ್ದವು. ಅವನು ಬರೀ ನೆಲದಲ್ಲೇ ಬಿದ್ದುಕೊಂಡಿರುತ್ತಿದ್ದನು. ಎಂದೂ ಎಣ್ಣೆ ಹಚ್ಚಿಕೊಳ್ಳುತ್ತಿರಲಿಲ್ಲ, ಸ್ನಾನವನ್ನೂ ಮಾಡುತ್ತಿರಲಿಲ್ಲ, ಇದರಿಂದ ದೇಹಕ್ಕೆ ಕೊಳೆಯು ಸದಾ ಮೆತ್ತಿಕೊಂಡಿರುತ್ತಿತ್ತು. ಅವನ ಬ್ರಹ್ಮತೇಜಸ್ಸು ಧೂಳಿನಿಂದ ಮುಚ್ಚಿಕೊಂಡಿರುವ ಅಮೂಲ್ಯವಾದ ಮಣಿ-ಮಾಣಿಕ್ಯದಂತೆ ಅಡಗಿಕೊಂಡಿತ್ತು. ನಡುವಿಗೆ ಒಂದು ಕೊಳೆಯಾದ ಬಟ್ಟೆಯನ್ನು ಸುತ್ತಿಕೊಂಡಿರುತ್ತಿದ್ದನು. ಅವನ ಜನಿವಾರವೂ ತುಂಬಾ ಕೊಳಕಾಗಿತ್ತು. ಆದ್ದರಿಂದ ಅಜ್ಞಾನಿಗಳು – 'ಈತನು ಯಾವನೋ ಒಬ್ಬ ಬ್ರಾಹ್ಮಣನು, ಆದರೆ ಅಧಮ ಬ್ರಾಹ್ಮಣನು' ಎಂದು ಹೇಳಿ ಅವನನ್ನು ತಿರಸ್ಕರಿಸುತ್ತಿದ್ದರು. ಆದರೆ ಭರತನು ಅದಾವುದನ್ನೂ ವಿಚಾರ ಮಾಡದೆ ಸ್ವಚ್ಛಂದವಾಗಿ ಓಡಾಡುತ್ತಿದ್ದನು. ॥ ೧೦ ॥ ಇತರರ ಮನೆಗಳಲ್ಲಿ ಕೆಲಸವನ್ನು ಮಾಡಿ ಹೊಟ್ಟೆಹೊರೆಯುವುದನ್ನು ಕಂಡು ಭರತನ ಸೋದರರು ಆತನನ್ನು ಕೆಸರುಗದ್ದೆಯ ಕೆಲಸಕ್ಕೆ ನೇಮಿಸಿದರು. ಆ ಮಹಾತ್ಮನು ಅದನ್ನೂ ಮಾಡತೊಡಗಿದನು. ಆದರೆ ಆತನಿಗೆ ಗದ್ದೆಯ ಭೂಮಿಯು ಸಮತಲವಾಗಿದೆಯೇ, ಎತ್ತರ-ತಗ್ಗಾಗಿದೆಯೇ, ಚಿಕ್ಕದಾಗಿದೆಯೇ, ದೊಡ್ಡದಾಗಿದೆಯೇ ಎಂಬುದರ ಕಡೆಗೆ ಸ್ವಲ್ಪವೂ ಗಮನವಿರಲಿಲ್ಲ. ಸಹೋದರರು ಆತನಿಗೆ ನುಚ್ಚನ್ನೋ, ಹಿಂಡಿಯನ್ನೋ, ತೌಡನ್ನೋ ಹಳಸಿಹೋದ ಉದ್ದನ್ನೋ, ಪಾತ್ರೆಯಲ್ಲಿ ಅಂಟಿಕೊಂಡಿದ್ದ ಸೀದುಹೋದ ಅನ್ನವನ್ನೋ ತಿನ್ನಲು ಕೊಡುತ್ತಿದ್ದರು. ಅದನ್ನು ಅವನು ಅಮೃತತುಲ್ಯವೆಂದು ಭಾವಿಸಿ ತಿಂದುಬಿಡುತ್ತಿದ್ದನು. ॥ ೧೧ ॥

ಅಥ ಕದಾಚಿತ್ಕಶ್ಚಿದ್ ವೃಷಲಪತಿರ್ಭದ್ರಕಾಲ್ಯೈ ಪುರುಷಪಶುಮಾಲಭತಾಪತ್ಯಕಾಮಃ ॥ ೧೨ ॥ ತಸ್ಯ ಹ ದೈವಮುಕ್ತಸ್ಯ ಪಶೋಃ ಪದವೀಂ ತದನುಚರಾಃ ಪರಿಧಾವಂತೋ ನಿಶಿ ನಿಶೀಥಸಮಯೇ ತಮಸಾऽऽವೃತಾಯಾಮನಧಿಗತ-

ಹೀಗಿರುವಾಗ ಒಮ್ಮೆ ಅಧರ್ಮಿಷ್ಠನಾದ ಕಳ್ಳರತಂಡದ ನಾಯಕನು ಪುತ್ರಕಾಮನೆಗಾಗಿ ಭದ್ರಕಾಳಿಗೆ ನರಬಲಿಯನ್ನು

ಪಶವ ಆಕಸ್ಮಿಕೇನ ವಿಧಿನಾ ಕೇದಾರಾನ್ ವೀರಾಸನೇನ ಮೃಗ-ವರಾಹಾದಿಭ್ಯಃ ಸಂರಕ್ಷಮಾಣಮಂಗಿರಃಪ್ರವರ ಸುತಮಪಶ್ಯನ್ ॥ ೧೩ ॥

ಅಥ ತ ಏನಮನವದ್ಯಲಕ್ಷಣಮವಮೃಶ್ಯ ಭರ್ತೃ-ಕರ್ಮನಿಷ್ಪತ್ತಿಂ ಮನ್ಯಮಾನಾ ಬದ್ಧ್ವಾ ರಶನಯಾ ಚಂಡಿ-ಕಾಗೃಹಮುಪನಿನ್ಯುರ್ಮುದಾ ವಿಕಸಿತವದನಾಃ ॥ ೧೪ ॥

ಅಥ ಪಣಯಸ್ತಂ ಸ್ವವಿಧಿನಾಭಿಷಿಚ್ಯಾಹತೇನ ವಾಸ-ಸಾಽಽಚ್ಛಾದ್ಯ ಭೂಷಣಾಲೇಪಸ್ರಕ್ತಿಲಕಾದಿಭಿರು-ಪಸ್ಕೃತಂ ಭುಕ್ತವಂತಂ ಧೂಪದೀಪಮಾಲ್ಯಲಾಜಕಿಸಲ-ಯಾಂಕುರ ಫಲೋಪಹಾರೋಪೇತಯಾ ವೈಶಸ-ಸಂಸ್ಥಯಾ ಮಹತಾ ಗೀತಸ್ತುತಿಮೃದಂಗಪಣವಘೋ-ಷೇಣ ಚ ಪುರುಷಪಶುಂ ಭದ್ರಕಾಲ್ಯಾಃ ಪುರತ ಉಪವೇಶ-ಯಾಮಾಸುಃ ॥ ೧೫ ॥ ಅಥ ವೃಷಲರಾಜಪಣಿಃ ಪುರುಷ-ಪಶೋರಸೃಗಾಸವೇನ ದೇವೀಂ ಭದ್ರಕಾಲೀಂ ಯಕ್ಷ್ಯಮಾಣ-ಸ್ತದಭಿಮಂತ್ರಿತಮಸಿಮತಿಕರಾಲನಿಶಿತಮುಪಾದದೇ ॥ ೧೬ ॥

ಇತಿ ತೇಷಾಂ ವೃಷಲಾನಾಂ ರಜಸ್ತಮಃಪ್ರಕೃತೀನಾಂ ಧನಮದರಜಉತ್ಸಿಕ್ತಮನಸಾಂ ಭಗವತ್ಕಲಾವೀರಕುಲಂ ಕದರ್ಥೀಕೃತ್ಯೋತ್ಪಥೇನ ಸ್ವೈರಂ ವಿಹರತಾಂ ಹಿಂಸಾವಿ-ಹಾರಾಣಾಂ ಕರ್ಮಾತಿದಾರುಣಂ ಯದ್ಬ್ರಹ್ಮಭೂತಸ್ಯ ಸಾಕ್ಷಾದ್ಬ್ರಹ್ಮರ್ಷಿಸುತಸ್ಯ ನಿರ್ವೈರಸ್ಯ ಸರ್ವಭೂತಸುಹೃದಃ ಸೂನಾಯಾಮಪ್ಯನನುಮತಮಾಲಂಭನಂ ತದುಪಲಭ್ಯ ಬ್ರಹ್ಮತೇಜಸಾತಿದುರ್ವಿಷಹೇಣ ದಂದಹ್ಯಮಾನೇನವಪುಷಾ ಸಹಸೋಚ್ಚಚಾಟ ಸೈವ ದೇವೀ ಭದ್ರಕಾಲೀ ॥ ೧೭ ॥

ಕೊಡುವ ಸಂಕಲ್ಪ ಮಾಡಿದನು. ॥ ೧೨ ॥ ಅವನು ಬಲಿಕೊಡುವುದಕ್ಕಾಗಿ ಹಿಡಿದುಹಾಕಿದ್ದ ಮನುಷ್ಯರೂಪದ ಪಶುವು ದೈವವಶದಿಂದ ಸೆರೆಯಿಂದ ತಪ್ಪಿಸಿಕೊಂಡು ಓಡಿಹೋಯಿತು. ಅವನನ್ನು ಹುಡುಕುವುದಕ್ಕಾಗಿ ನಾಯಕನ ಸೇವಕರು ನಾಲ್ಕೂ ಕಡೆಗಳಲ್ಲಿ ಓಡಿದರು. ಆದರೆ ಕಗ್ಗತ್ತಲೆ ಕವಿದಿದ್ದ ಅರ್ಧರಾತ್ರಿಯಲ್ಲಿ ಅವನು ಎಲ್ಲಿಯೂ ಸಿಗಲಿಲ್ಲ. ಅದೇ ಸಮಯದಲ್ಲಿ ದೈವಯೋಗದಿಂದ ಅವರ ದೃಷ್ಟಿಯು ಅಕಸ್ಮಾತ್ತಾಗಿ ಜಿಂಕೆ-ಹಂದಿ ಮುಂತಾದ ಪ್ರಾಣಿಗಳಿಂದ ಹೊಲವನ್ನು ಕಾಯುವುದಕ್ಕಾಗಿ ವೀರಾಸನದಲ್ಲಿ ಕುಳಿತಿದ್ದ ಅಂಗೀರಸ ಗೋತ್ರದ ಬ್ರಾಹ್ಮಣಕುಮಾರ ಭರತನ ಮೇಲೆ ಬಿತ್ತು. ॥ ೧೩ ॥ 'ಇದು ತುಂಬಾ ಒಳ್ಳೆಯ ಲಕ್ಷಣಗಳಿಂದ ಕೂಡಿದ ನರಪಶುವಾಗಿದೆ. ಇದರಿಂದ ನಮ್ಮ ಒಡೆಯನ ಕಾರ್ಯವು ಖಂಡಿತವಾಗಿ ಸಿದ್ಧಿಸುವುದು' ಎಂಬ ಭಾವನೆಯಿಂದ ಅವರ ಮುಖಗಳು ಆನಂದದಿಂದ ಅರಳಿದವು. ಒಡನೆಯೇ ಆತನನ್ನು ಹಗ್ಗಗಳಿಂದ ಕಟ್ಟಿ ಚಂಡಿಕಾದೇವಿಯ ದೇವಾಲಯಕ್ಕೆ ತಂದರು. ॥ ೧೪ ॥

ಅನಂತರ ಆ ಕಳ್ಳರು ತಮ್ಮ ಪದ್ಧತಿಯಂತೆ ಆತನಿಗೆ ವಿಧಿಪೂರ್ವಕವಾಗಿ ಸ್ನಾನಮಾಡಿಸಿ, ಹೊಸ ಬಟ್ಟೆಗಳನ್ನು ಉಡಿಸಿ, ಬಗೆ-ಬಗೆಯ ಒಡವೆಗಳಿಂದಲೂ, ಗಂಧ, ಮಾಲೆ, ತಿಲಕ ಮುಂತಾದವುಗಳಿಂದ ಚೆನ್ನಾಗಿ ಅಲಂಕರಿಸಿ, ಊಟ ಮಾಡಿಸಿದರು. ಮತ್ತೆ ಧೂಪ, ದೀಪ, ಮಾಲೆ, ಅರಳು, ಎಲೆ, ಧಾನ್ಯದ ಮೊಳಕೆ, ಫಲಗಳು ಮುಂತಾದ ಪೂಜಾಸಾಮಗ್ರಿಗಳೊಡನೆ ಬಲಿದಾನದ ವಿಧಿಯಂತೆ ಹಾಡುಗಳನ್ನು ಹಾಡುತ್ತಾ, ಸ್ತುತಿಸುತ್ತಾ , ಮೃದಂಗ, ಡೋಲು ಮುಂತಾದ ವಾದ್ಯಗಳನ್ನು ನುಡಿಸುತ್ತಾ ಆ ನರಪಶುವನ್ನು ಭದ್ರಕಾಳಿಯ ಮುಂದೆ ತಲೆಬಾಗಿಸಿ ಕುಳ್ಳಿರಿಸಿದರು. ॥ ೧೫ ॥ ಅನಂತರ ಕಳ್ಳರ ಪುರೋಹಿತನಾದ ದರೋಡೆಕೋರನು ಆ ನರಪಶುವಿನ ರಕ್ತದಿಂದ ದೇವಿಯನ್ನು ತೃಪ್ತಿಪಡಿಸಲಿಕ್ಕಾಗಿ ದೇವೀಮಂತ್ರಗಳಿಂದ ಅಭಿಮಂತ್ರಿಸಿದ ಒಂದು ಹರಿತವಾದ ಖಡ್ಗವನ್ನು ಎತ್ತಿಕೊಂಡನು. ॥ ೧೬ ॥

ಆ ದರೋಡೆಕೋರರಾದರೋ ಸ್ವಾಭಾವಿಕವಾಗಿಯೇ ರಜೋಗುಣೀ-ತಮೋಗುಣಿಗಳಾಗಿದ್ದರು. ಅಲ್ಲದೆ ಧನಮದದಿಂದ ಅವರ ಚಿತ್ತವು ಮತ್ತೇರಿತ್ತು. ಹಿಂಸೆಯಲ್ಲೇ ಅವರಿಗೆ ಅಭಿರುಚಿಯಿತ್ತು. ಆ ಸಮಯದಲ್ಲಿ ಅವರು ಶ್ರೀಭಗವಂತನ ಅಂಶಸ್ವರೂಪನಾದ ಬ್ರಾಹ್ಮಣಕುಲವನ್ನು ತಿರಸ್ಕರಿಸಿ ಸ್ವಚ್ಛಂದವಾಗಿ ದುರ್ಮಾರ್ಗದ ಕಡೆಗೆ ಮುನ್ನುಗ್ಗಿದ್ದರು. ಆಪತ್ಕಾಲದಲ್ಲಿ ಯಾವ ಹಿಂಸೆಯನ್ನು ಅನುಮೋದಿಸಲಾಗಿದೆಯೋ ಅದರಲ್ಲಿಯೂ ಬ್ರಾಹ್ಮಣನ ವಧೆಯನ್ನು ಪೂರ್ಣವಾಗಿ ನಿಷೇಧಿಸಲ್ಪಟ್ಟಿದೆ. ಅದರಲ್ಲಿಯೂ ಇವನು ಸಾಕ್ಷಾತ್ ಬ್ರಹ್ಮಭಾವವನ್ನು ಹೊಂದಿದ, ವೈರಭಾವಹೀನ ಹಾಗೂ ಸಮಸ್ತ ಪ್ರಾಣಿಗಳಲ್ಲಿಯೂ ಸೌಹಾರ್ದವನ್ನೂ ಹೊಂದಿದ್ದ ಬ್ರಹ್ಮರ್ಷಿಕುಮಾರನನ್ನು ಬಲಿಕೊಡಲು ಬಯಸುತ್ತಿದ್ದರು.

ಇಂತಹ ಭಯಂಕರವಾದ ಕುಕರ್ಮವನ್ನು ಕಂಡು ಭದ್ರಕಾಳಿಯ ಶರೀರದಲ್ಲಿ ತಡೆಯಲಸಾಧ್ಯವಾದ ಭರತನ ಬ್ರಹ್ಮತೇಜಸ್ಸಿನ ತಾಪವು ತುಂಬಿ ಆಕೆಯು ಇದ್ದಕ್ಕಿದ್ದಂತೆ ಮೂರ್ತಿಯನ್ನು ಒಡೆದುಕೊಂಡು ಅಲ್ಲಿ ಪ್ರಕಟಳಾದಳು. ॥ ೧೭॥ ಕಡುರೋಷದಿಂದಲೂ, ಅಸಹನೆಯಿಂದಲೂ ಆಕೆಯ ಹುಬ್ಬುಗಳು ಮೇಲೆದ್ದು

ಭೃಶಮಮರ್ಷರೋಷಾವೇಶರಭಸವಿಲಸಿತಭ್ರುಕುಟಿವಿಟಪಕುಟಿಲದಂಷ್ಟ್ರಾರುಣೇಕ್ಷಣಾಟೋಪಾತಿಭಯಾನಕವದನಾ ಹಂತುಕಾಮೇವೇದಂ ಮಹಾಟ್ಟಹಾಸಮತಿಸಂರಂಭೇಣ ವಿಮುಂಚಂತೀ ತತ ಉತ್ಪತ್ಯ ಪಾಪೀಯಸಾಂ ದುಷ್ಟಾನಾಂ ತೇನೈವಾಸಿನಾ ವಿವೃಕ್ಣಶೀರ್ಷ್ಣಾಂ ಗಲಾತ್ಸ್ರವಂತಮಸೃಗಾಸವಮತ್ಯುಷ್ಣಂ ಸಹ ಗಣೇನ ನಿಪೀಯಾತಿಪಾನಮದವಿಹ್ವಲೋಚ್ಚೈಸ್ತರಾಂ ಸ್ವಪಾರ್ಷದೈಃ ಸಹ ಜಗೌ ನನರ್ತ ಚ ವಿಜಹಾರ ಚ ಶಿರಃಕಂದುಕಲೀಲಯಾ ॥ ೧೮ ॥ ಏವಮೇವ ಖಲು ಮಹದಭಿಚಾರಾತಿಕ್ರಮಃ ಕಾರ್ತ್ಸ್ನ್ಯೇನಾತ್ಮನೇ ಫಲತಿ ॥ ೧೯ ॥ ನ ವಾ ಏತದ್ವಿಷ್ಣುದತ್ತ ಮಹದದ್ಭುತಂ ಯದಸಂಭ್ರಮಃ ಸ್ವಶಿರಶ್ಛೇದನ ಆಪತಿತೇಽಪಿ ವಿಮುಕ್ತದೇಹಾದ್ಯಾತ್ಮಭಾವಸುದೃಢಹೃದಯಗ್ರಂಥೀನಾಂ ಸರ್ವಸತ್ತ್ವ ಸುಹೃದಾತ್ಮನಾಂ ನಿರ್ವೈರಾಣಾಂ ಸಾಕ್ಷಾದ್ಭಗವತಾನಿಮಿಷಾರಿವರಾಯುಧೇನಾಪ್ರಮತ್ತೇನ ತೈಸ್ತೈರ್ಭಾವೈಃ ಪರಿರಕ್ಷ್ಯಮಾಣಾನಾಂ ತತ್ಪಾದಮೂಲಮಕುತಶ್ಚಿದ್ಭಯಮುಪಸೃತಾನಾಂ ಭಾಗವತಪರಮಹಂಸಾನಾಮ್ ॥ ೨೦ ॥

ಗಂಟುಹಾಕಿಕೊಂಡಿದ್ದವು. ಕರಾಳವಾದ ಕೋರೆದಾಡೆಗಳು ಹೊರಗೆ ಚಾಚಿಕೊಂಡಿದ್ದವು. ಕಣ್ಣುಗಳು ಕೆಂಪಾಗಿ ಆಕೆಯ ಮುಖವು ಅತ್ಯಂತ ಭೀಕರವಾಗಿತ್ತು. ಆಕೆಯ ಆ ಕರಾಳವಾದ ರೂಪವನ್ನು ನೋಡಿದಾಗ ಆಕೆಯು ಈ ಜಗತ್ತನ್ನೇ ಸಂಹರಿಸಿ ಬಿಡುವಳೋ ಎಂಬಂತೆ ತೋರುತ್ತಿತ್ತು. ದೇವಿಯು ರೋಷಾವೇಶದಿಂದ ಗಟ್ಟಿಯಾಗಿ ಅಟ್ಟಹಾಸ ಮಾಡಿ ಪುರೋಹಿತನ ಕೈಯಿಂದ ಅಭಿಮಂತ್ರಿತವಾದ ಆ ಖಡ್ಗವನ್ನು ಕಿತ್ತುಕೊಂಡು ಅದರಿಂದಲೇ ಆ ಎಲ್ಲ ಪಾಪಿಗಳ ತಲೆಗಳನ್ನೂ ಕಡಿದು ಹಾರಿಸಿದಳು ಮತ್ತು ತನ್ನ ಗಣಗಳೊಡನೆ ಆ ದುಷ್ಟರ ಕುತ್ತಿಗೆಗಳಿಂದ ಹರಿಯುತ್ತಿದ್ದ ಬಿಸಿರಕ್ತ ರೂಪದ ಮದ್ಯವನ್ನು ಕುಡಿದು ಹುಚ್ಚೇರಿ ಗಟ್ಟಿಯಾಗಿ ಹಾಡುತ್ತಾ ಕುಣಿದು ಕುಪ್ಪಳಿಸುತ್ತಾ ಅವರ ತಲೆಬುರುಡೆಗಳನ್ನು ಚೆಂಡಾಡಿದಳು. ॥ ೧೮ ॥ ಮಹಾಪುರುಷರಿಗೆ ಅತ್ಯಾಚಾರದ ಅಪಚಾರವನ್ನೆಸಗಿದರೆ ಅದು ಹೀಗೆಯೇ ಅದನ್ನು ಮಾಡಿದವನ ಮೇಲೆ ಬಂದು ಎರಗುವುದು. ಇದು ಸತ್ಯ. ॥ ೧೯ ॥ ವಿಷ್ಣುದತ್ತ ಮಹಾರಾಜನೇ! ಯಾರ ದೇಹಾಭಿಮಾನರೂಪವಾದ ದೃಢವಾದ ಹೃದಯ ಗ್ರಂಥಿಯು ಬಿಚ್ಚಿಹೋಗಿದೆಯೋ, ಯಾರು ಸಮಸ್ತ ಪ್ರಾಣಿಗಳ ಆತ್ಮಸ್ವರೂಪನೂ, ಸುಹೃದನೂ, ವೈರಹೀನನಾಗಿರುವನೋ, ಸಾಕ್ಷಾತ್ ಭಗವಂತನೇ ಭದ್ರಕಾಳಿ ಮುಂತಾದ ಬೇರೆ-ಬೇರೆ ರೂಪಗಳನ್ನು ಧರಿಸಿ – ಎಂದಿಗೂ ಗುರಿತಪ್ಪದಿರುವ ಕಾಲಚಕ್ರವೆಂಬ ಶ್ರೇಷ್ಠವಾದ ಶಸ್ತ್ರದಿಂದ ರಕ್ಷಿಸುತ್ತಾನೋ, ಯಾರು ಭಗವಂತನ ನಿರ್ಭಯ ಚರಣಕಮಲಗಳನ್ನು ಆಶ್ರಯಿಸಿರುವನೋ, ಅಂತಹ ಭಗವದ್ಭಕ್ತ ಪರಮಹಂಸರಿಗೆ ತಮ್ಮ ತಲೆಯು ಕತ್ತರಿಸಿ ಹೋಗುವ ಕಾಲವು ಬಂದರೂ ಯಾವರೀತಿಯ ಕಳವಳವೂ ಉಂಟಾಗುವುದಿಲ್ಲ ಎಂಬುದರಲ್ಲಿ ಅದ್ಭುತವೇನೂ ಇಲ್ಲ. ॥ ೨೦ ॥

***ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಜಡಭರತಚರಿತೇ ನವಮೋಽಧ್ಯಾಯಃ ॥ ೯ ॥**

# ಹತ್ತನೆಯ ಅಧ್ಯಾಯ

239

## ಜಡಭರತ ಮತ್ತು ರಹೂಗಣ ರಾಜನ ಭೇಟಿ

*ಶ್ರೀಶುಕ ಉವಾಚ*

ಅಥ ಸಿಂಧುಸೌವೀರಪತೇ ರಹೂಗಣಸ್ಯ ವ್ರಜತ ಇಕ್ಷುಮತ್ಯಾಸ್ತಟೇ ತತ್ಕುಲಪತಿನಾ ಶಿಬಿಕಾವಾಹಪುರುಷಾನ್ವೇಷಣಸಮಯೇ ದೈವೇನೋಪಸಾದಿತಃ ಸ ದ್ವಿಜವರ ಉಪಲಬ್ಧ ಏಷ ಪೀವಾ ಯುವಾ ಸಂಹನನಾಂಗೋ ಗೋಖರವದ್ಧುರಂ ವೋಢುಮಲಮಿತಿ ಪೂರ್ವವಿಷ್ಟಿ-

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ಒಮ್ಮೆ ಸಿಂಧು-ಸೌವೀರ ದೇಶದ ಒಡೆಯ ರಹೂಗಣ ಮಹಾರಾಜನು ಪಲ್ಲಕ್ಕಿಯನ್ನೇರಿ ಹೋಗುತ್ತಿದ್ದಾಗ ದಾರಿಯಲ್ಲಿ ಇಕ್ಷುಮತಿ ನದಿಯ ತೀರದಲ್ಲಿ ಪಲ್ಲಕ್ಕಿಯನ್ನು ಹೊರುವ ಬೋಯಿಗಳ ನಾಯಕನಿಗೆ ಒಬ್ಬ ಬೋಯಿಯ ಆವಶ್ಯಕತೆ ಒದಗಿತು. ಅದಕ್ಕಾಗಿ ಬೋಯಿಯನ್ನು ಹುಡುಕುತ್ತಿದ್ದಾಗ ದೈವವಶದಿಂದ ಅವನಿಗೆ ಬ್ರಾಹ್ಮಣಶ್ರೇಷ್ಠನಾದ ಈ ಜಡಭರತನು ಸಿಕ್ಕಿದನು. 'ಈ ಮನುಷ್ಯನು ಹೃಷ್ಟ-ಪುಷ್ಟನಾಗಿ ದೃಢಕಾಯನಾಗಿದ್ದಾನೆ, ತರುಣ

ಗೃಹೀತೈಃ ಸಹ ಗೃಹೀತಃ ಪ್ರಸಭಮತದರ್ಹ ಉವಾಹ ಶಿಬಿಕಾಂ ಸ ಮಹಾನುಭಾವಃ ॥ ೧ ॥

ಯದಾ ಹಿ ದ್ವಿಜವರಸ್ಯೇಷುಮಾತ್ರಾವಲೋಕಾನುಗತೇರ್ನ ಸಮಾಹಿತಾ ಪುರುಷಗತಿಸ್ತದಾ ವಿಷಮಗತಾಂ ಸ್ವಶಿಬಿಕಾಂ ರಹೂಗಣ ಉಪಧಾರ್ಯ ಪುರುಷಾನಧಿವಹತ ಆಹ ಹೇ ವೋಢಾರಃ । ಸಾಧ್ವತಿಕ್ರಮತ ಕಿಮಿತಿ ವಿಷಮಮುಹ್ಯತೇ ಯಾನಮಿತಿ ॥ ೨ ॥

ಅಥ ತ ಈಶ್ವರವಚಃ ಸೋಪಾಲಂಭಮುಪಾಕರ್ಣ್ಯೋಪಾಯತುರೀಯಾಚ್ಛಂಕಿತಮನಸಸ್ತಂ ವಿಜ್ಞಾಪಯಾಂಬಭೂವುಃ ॥ ೩ ॥ ನ ವಯಂ ನರದೇವ ಪ್ರಮತ್ತಾ ಭವನ್ನಿಯಮಾನುಪಥಾಃ ಸಾಧ್ವೇವ ವಹಾಮಃ । ಅಯಮಧುನೈವ ನಿಯುಕ್ತೋಽಪಿ ನ ದ್ರುತಂ ವ್ರಜತಿ ನಾನೇನ ಸಹ ವೋಢುಮು ಹ ವಯಂ ಪಾರಯಾಮ ಇತಿ ॥ ೪ ॥

ಸಾಂಸರ್ಗಿಕೋ ದೋಷ ಏವ ನೂನಮೇಕಸ್ಯಾಪಿ ಸರ್ವೇಷಾಂ ಸಾಂಸರ್ಗಿಕಾಣಾಂ ಭವಿತುಮರ್ಹತೀತಿ ನಿಶ್ಚಿತ್ಯ ನಿಶಮ್ಯ ಕೃಪಣವಚೋ ರಾಜಾ ರಹೂಗಣ ಉಪಾಸಿತವೃದ್ಧೋಽಪಿ ನಿಸರ್ಗೇಣ ಬಲಾತ್ಕೃತ ಈಷದುತ್ಥಿತಮನ್ಯುರವಿಸ್ಪಷ್ಟಬ್ರಹ್ಮತೇಜಸಂ ಜಾತವೇದಸಮಿವ ರಜಸಾಽಽವೃತಮತಿರಾಹ ॥ ೫ ॥ ಅಹೋ ಕಷ್ಟಂ ಭ್ರಾತರ್ವ್ಯಕ್ತಮುರು ಪರಿಶ್ರಾಂತೋ ದೀರ್ಘ ಮಧ್ವಾನಮೇಕ ಏವ ಊಹಿವಾನ್ಸುಚಿರಂ ನಾತಿಪೀವಾ ನ ಸಂಹನನಾಂಗೋ ಜರಸಾಚೋಪದ್ರುತೋ ಭವಾನ್ ಸಖೇ ನೋ ಏವಾಪರ ಏತೇ ಸಂಘಟ್ಟಿನ ಇತಿ ಬಹು ವಿಪ್ರಲಬ್ಧೋಽಪ್ಯವಿದ್ಯಯಾ ರಚಿತದ್ರವ್ಯಗುಣಕರ್ಮಾಶಯಸ್ವಚರಮಕಲೇವ-

ನಾಗಿದ್ದಾನೆ. ಇವನ ಅಂಗಾಂಗಗಳು ಗಟ್ಟಿ-ಮುಟ್ಟಾಗಿವೆ. ಆದ್ದರಿಂದ ಈತನು ಎತ್ತು-ಕತ್ತೆಗಳಂತೆ ಭಾರವನ್ನು ಚೆನ್ನಾಗಿ ಹೊರಬಲ್ಲನು' ಎಂದು ಯೋಚಿಸಿ, ಆತನು ಬಿಟ್ಟಿ ಕೆಲಸಕ್ಕೆ ಸಿಕ್ಕಿದ್ದರಿಂದ ಇತರ ಬೋಯಿಗಳ ಜೊತೆಗೆ ಭರತನನ್ನೂ ಬಲಾತ್ಕಾರವಾಗಿ ಹಿಡಿದುತಂದು ಪಲ್ಲಕ್ಕಿಯನ್ನು ಹೊರೆಸಿಬಿಟ್ಟನು. ಮಹಾತ್ಮನಾದ ಭರತನು ಯಾವ ರೀತಿಯಿಂದಲೂ ಇಂತಹ ಕೆಲಸಕ್ಕೆ ಯೋಗ್ಯನಲ್ಲದಿದ್ದರೂ ಅವನು ಏನನ್ನೂ ಮರುಮಾತಾಡದೆ ಸುಮ್ಮನೆ ಪಲ್ಲಕ್ಕಿಯನ್ನು ಹೊತ್ತುನಡೆದನು. ॥ ೧ ॥

ಆ ದ್ವಿಜಶ್ರೇಷ್ಠನು ತನ್ನ ಕಾಲ್ಕೆಳಗೆ ಯಾವುದೇ ಜೀವಿಯೂ ಹಿಂಸೆಗೊಳಗಾಗಬಾರದೆಂಬ ಭಯದಿಂದ ಒಂದು ಬಾಣದಷ್ಟು ಮುಂದಿನ ಭೂಮಿಯನ್ನು ನೋಡಿ ನಡೆಯುತ್ತಿದ್ದನು. ಅದರಿಂದ ಬೇರೆ ಬೋಯಿಗಳ ಜೊತೆಗೆ ಇವನ ನಡಿಗೆ ಸರಿಹೊಂದುತ್ತಿರಲಿಲ್ಲ. ಆದ್ದರಿಂದ ಪಲ್ಲಕ್ಕಿಯು ಅಡ್ಡಾದಿಡ್ಡಿಯಾಗುವುದನ್ನು ಕಂಡು ರಾಜಾ ರಹೂಗಣನು ಪಲ್ಲಕ್ಕಿಯನ್ನು ಹೊರುವವರಿಗೆ ಕುರಿತು – 'ಎಲೈ ಬೋಯಿಗಳೇ ! ಸರಿಯಾಗಿ ನಡೆಯಿರಿ. ಪಲ್ಲಕ್ಕಿಯನ್ನು ಏಕೆ ಹೀಗೆ ಮೇಲಕ್ಕೂ-ಕೆಳಕ್ಕೂ ತೂಗುತ್ತಾ ಹೆಜ್ಜೆಹಾಕುತ್ತಿದ್ದೀರಲ್ಲ ?' ಎಂದು ಆಕ್ಷೇಪಿಸಿದನು. ॥ ೨ ॥

ರಾಜನ ಆ ಆಕ್ಷೇಪಾರ್ಹವಾದ ಮಾತನ್ನು ಕೇಳಿ, ತಮಗೆ ಶಿಕ್ಷೆಯಾದೀತೆಂಬ ಭಯದಿಂದ ಅವರು ರಾಜನಲ್ಲಿ ಹೀಗೆ ವಿನಂತಿಸಿಕೊಂಡರು. ॥ ೩ ॥ ಮಹಾಪ್ರಭುಗಳೇ ! ನಾವೇನು ಮೈಮರೆತಿಲ್ಲ. ತಮ್ಮ ನಿಯಮ-ಮರ್ಯಾದೆಗಳಿಗೆ ಅನುಗುಣವಾಗಿ ಸರಿಯಾಗಿಯೇ ಪಲ್ಲಕ್ಕಿಯನ್ನು ಸಾಗಿಸುತ್ತಿದ್ದೇವೆ. ಆದರೆ ಈ ಹೊಸ ಬೋಯಿಯು ಈಗ ತಾನೇ ಪಲ್ಲಕ್ಕಿಯನ್ನು ಹೊರಲು ನೇಮಿಸಲ್ಪಟ್ಟಿದ್ದರೂ ಬೇಗ-ಬೇಗನೇ ನಡೆಯುತ್ತಿಲ್ಲ. ನಾವು ಈತನೊಡನೆ ಪಲ್ಲಕ್ಕಿಯನ್ನು ಹೊರಲಾರೆವು. ॥ ೪ ॥

ಬೋಯಿಗಳ ಈ ದೀನವಾದ ಮಾತನ್ನು ಕೇಳಿ ರಹೂಗಣ ರಾಜನು – 'ಸಂಸರ್ಗದಿಂದ ಉಂಟಾದ ದೋಷವು ಒಬ್ಬನಲ್ಲಿದ್ದರೂ ಆತನೊಡನೆ ಸಂಬಂಧವನ್ನು ಇಟ್ಟುಕೊಂಡಿರುವ ಎಲ್ಲ ಮನುಷ್ಯರಲ್ಲಿಯೂ ಹರಡುವುದು. ಅದಕ್ಕಾಗಿ ಇದಕ್ಕೆ ಪ್ರತೀಕಾರ ಮಾಡದೇ ಇದ್ದರೆ ಎಲ್ಲ ಬೋಯಿಗಳ ನಡಿಗೆಯು ಕೆಟ್ಟುಹೋಗುವುದು.' ಈ ರೀತಿಯಲ್ಲಿ ಯೋಚಿಸಿದ ರಾಜನಿಗೆ ಸ್ವಲ್ಪ ಕೋಪವೂ ಉಂಟಾಯಿತು. ಅವನು ಮಹಾಪುರುಷರ ಸೇವೆಮಾಡಿದ್ದರೂ ಕ್ಷತ್ರಿಯಸ್ವಭಾವಕ್ಕೆ ವಶನಾಗಿ ಬಲವಂತವಾಗಿ ಅವನ ಬುದ್ಧಿಯು ರಜೋಗುಣದಿಂದ ತುಂಬಿಹೋಯಿತು. ಆಗ ಆತನು ಬೂದಿ ಮುಚ್ಚಿದ್ದ ಕೆಂಡದಂತೆ ಬ್ರಹ್ಮತೇಜಸ್ಸು ಪ್ರಕಟವಾಗದೆ ಮರೆಗೊಂಡಿದ್ದ ಆ ಬ್ರಾಹ್ಮಣಶ್ರೇಷ್ಠನಿಗೆ ಈ ರೀತಿಯಾಗಿ ವ್ಯಂಗ್ಯದಿಂದ ತುಂಬಿದ ಮಾತುಗಳನ್ನು ಆಡಿದನು – ॥ ೫ ॥ 'ಅಯ್ಯೋ ಪಾಪ ! ನಿನಗೆ ತುಂಬಾ ಆಯಾಸವಾಗಿರಬೇಕು. ಯಾರ ಸಹಾಯವೂ ಇಲ್ಲದೆ ಬಹುದೂರ ಬಹುಕಾಲದವರೆಗೂ ನೀನೊಬ್ಬನೇ ಪಲ್ಲಕ್ಕಿಯನ್ನು ಹೊತ್ತು ಬಂದಿರುವೆ. ನಿನ್ನ ದೇಹವೂ ಅಷ್ಟೇನೂ ದಪ್ಪವಾಗಿಲ್ಲ. ಅಂಗಗಳೂ ದೃಢವಾಗಿಲ್ಲ. ಜೊತೆಗೆ ಮುಪ್ಪು ನಿನ್ನನ್ನು ಆಕ್ರಮಿಸಿ ಅದುಮಿಹಾಕಿದೆಯಲ್ಲವೇ ?' ಹೀಗೆ ಬಹಳಷ್ಟು

ರೇವಸ್ತುನಿ ಸಂಸ್ಥಾನವಿಶೇಷೇಽಹಂಮಮೇತ್ಯನಧ್ಯಾರೋಪಿತಮಿಥ್ಯಾಪ್ರತ್ಯಯೋ ಬ್ರಹ್ಮಭೂತಸ್ತೂಷ್ಣೀಂ ಶಿಬಿಕಾಂ ಪೂರ್ವವದುವಾಹ ॥ ೬ ॥

ಅಥ ಪುನಃ ಸ್ವಶಿಬಿಕಾಯಾಂ ವಿಷಮಗತಾಯಾಂ ಪ್ರಕುಪಿತ ಉವಾಚ ರಹೂಗಣಃ ಕಿಮಿದಮರೇ ತ್ವಂ ಜೀವನ್ಮೃತೋ ಮಾಂ ಕದರ್ಥೀಕೃತ್ಯ ಭರ್ತೃಶಾಸನಮತಿಚರಸಿ ಪ್ರಮತ್ತಸ್ಯ ಚ ತೇ ಕರೋಮಿ ಚಿಕಿತ್ಸಾಂ ದಂಡಪಾಣಿರಿವ ಜನತಾಯಾ ಯಥಾ ಪ್ರಕೃತಿಂ ಸ್ವಾಂ ಭಜಿಷ್ಯಸ ಇತಿ ॥ ೭ ॥

ಏವಂ ಬಹ್ವಬದ್ಧಮಪಿ ಭಾಷಮಾಣಂ ನರದೇವಾಭಿಮಾನಂ ರಜಸಾ ತಮಸಾನುವಿದ್ಧೇನ ಮದೇನ ತಿರಸ್ಕೃತಾಶೇಷಭಗವತ್ಪ್ರಿಯನಿಕೇತಂ ಪಂಡಿತಮಾನಿನಂ ಸ ಭಗವಾನ್ ಬ್ರಾಹ್ಮಣೋ ಬ್ರಹ್ಮಭೂತಃ ಸರ್ವಭೂತಸುಹೃದಾತ್ಮಾ ಯೋಗೇಶ್ವರಚರ್ಯಾಯಾಂ ನಾತಿವ್ಯುತ್ಪನ್ನಮತಿಂ ಸ್ಮಯಮಾನ ಇವ ವಿಗತಸ್ಮಯ ಇದಮಾಹ ॥ ೮ ॥

ಬ್ರಾಹ್ಮಣ ಉವಾಚ

ತ್ವಯೋದಿತಂ ವ್ಯಕ್ತಮವಿಪ್ರಲಬ್ಧಂ
ಭರ್ತುಃ ಸ ಮೇ ಸ್ಯಾದ್ಯದಿ ವೀರ ಭಾರಃ ।
ಗಂತುರ್ಯದಿ ಸ್ಯಾದಧಿಗಮ್ಯಮಧ್ವಾ
ಪೀವೇತಿ ರಾಶೌ ನ ವಿದಾಂ ಪ್ರವಾದಃ ॥ ೯ ॥

ಸ್ಥೌಲ್ಯಂ ಕಾರ್ಶ್ಯಂ ವ್ಯಾಧಯ ಆಧಯಶ್ಚ
ಕ್ಷುತ್ತೃಡ್ಭಯಂ ಕಲಿರಿಚ್ಛಾ ಜರಾ ಚ ।
ನಿದ್ರಾ ರತಿರ್ಮನ್ಯುರಹಂಮದಃ ಶುಚೋ
ದೇಹೇನ ಜಾತಸ್ಯ ಹಿ ಮೇ ನ ಸಂತಿ ॥ ೧೦ ॥

ಕಟಕಿಯನ್ನು ರಾಜನು ನುಡಿದರೂ ಅವನು ಹಿಂದಿನಂತೆಯೇ ಸುಮ್ಮನೆ ಪಲ್ಲಕ್ಕಿಯನ್ನು ಹೊತ್ತು ನಡೆಯುತ್ತಿದ್ದನು. ರಾಜನ ಮಾತುಗಳನ್ನು ಆತನು ಸ್ವಲ್ಪವೂ ಕೆಟ್ಟದಾಗಿ ಭಾವಿಸಲಿಲ್ಲ. ಏಕೆಂದರೆ, ಪಂಚಭೂತಗಳು, ಇಂದ್ರಿಯಗಳು, ಅಂತಃಕರಣಗಳ ಸಮುದಾಯವಾದ ಈ ತನ್ನ ಕೊನೆಯ ಶರೀರವು ಅವಿದ್ಯೆಯ ಕಾರ್ಯವೇ ಆಗಿದೆ ಎಂದು ಆತನು ಅರಿತಿದ್ದನು. ಅದು ವಿವಿಧ ಅಂಗಗಳಿಂದ ಕೂಡಿಕೊಂಡು ಕಾಣಿಸಿಕೊಂಡಿದ್ದರೂ ವಸ್ತುತಃ ಇರಲೇ ಇಲ್ಲ. ಅದಕ್ಕಾಗಿ ಅದರಲ್ಲಿ ಅವನಿಗೆ 'ನಾನು-ನನ್ನದು' ಎಂಬ ಮಿಥ್ಯಾ ಅಧ್ಯಾಸವು ಸರ್ವಥಾ ಹೊರಟುಹೋಗಿತ್ತು ಮತ್ತು ಅವನು ಬ್ರಹ್ಮಸ್ವರೂಪನೇ ಆಗಿದ್ದನು. ॥ ೬ ॥

ತಾನು ಇಷ್ಟು ಹೇಳಿದರೂ ಪಲ್ಲಕ್ಕಿಯು ಸರಿಯಾಗಿ ಹೋಗದೆ ಇರುವುದನ್ನು ಕಂಡು ರಾಜನು ಕ್ರೋಧದಿಂದ ಕೆಂಡಕಾರುತ್ತಾ ಆ ಭರತಮುನಿಯನ್ನು – 'ಎಲವೋ ! ಇದೇನಿದು ? ನೀನು ಜೀವಂತನಾಗಿದ್ದರೂ ಸತ್ತಿರುವೆಯಾ ? ನನ್ನನ್ನು ತಿರಸ್ಕರಿಸಿ ನನ್ನ ಆಜ್ಞೆಯನ್ನು ಉಲ್ಲಂಘಿಸಿದ್ದೀಯೆ. ದಂಡಪಾಣಿಯಾದ ಯಮಧರ್ಮರಾಜನು ಜನರಿಗೆ ಅಪರಾಧಕ್ಕಾಗಿ ಶಿಕ್ಷೆಯನ್ನು ಕೊಡುವಂತೆ ನಾನು ನಿನಗೆ ಈಗಲೇ ತಕ್ಕ ಚಿಕಿತ್ಸೆಯನ್ನು ಮಾಡುತ್ತೇನೆ. ಆಗ ನಿನ್ನ ಬುದ್ಧಿಯು ಸರಿಹೋಗುವುದು' ಎಂದು ಗದರಿಸಿದನು. ॥ ೭ ॥

ಹೀಗೆ ತಾನು ರಾಜನೆಂಬ ದುರಭಿಮಾನದಿಂದ ರಹೂಗಣ ರಾಜನು ಮನಬಂದಂತೆ ಮಾತುಗಳನ್ನಾಡಿದನು. ತನ್ನನ್ನು ಮಹಾ ಪಂಡಿತನೆಂದು ಭಾವಿಸಿಕೊಂಡು ರಜೋಗುಣ- ತಮೋಗುಣಗಳಿಂದ ಕೂಡಿದ ಅಹಂಕಾರಕ್ಕೆ ವಶನಾಗಿ, ಶ್ರೀಭಗವಂತನ ಅನನ್ಯ ಪ್ರೇಮಕ್ಕೆ ಪಾತ್ರನಾದ, ಭಕ್ತಶ್ರೇಷ್ಠನಾದ ಭರತನನ್ನು ತಿರಸ್ಕಾರ ಮಾಡಿದನು. ಯೋಗೇಶ್ವರರ ನಡೆಯು ಹೇಗಿರುತ್ತದೆ ? ಎಂಬುದರ ಪರಿಚಯವೇ ಆತನಿಗೆ ಇರಲಿಲ್ಲ. ಆತನ ಆ ಅಪಕ್ವವಾದ ಬುದ್ಧಿಯನ್ನು ನೋಡಿ ಸಮಸ್ತಪ್ರಾಣಿಗಳಲ್ಲಿಯೂ ಸೌಹಾರ್ದ ತುಂಬಿದ ಆತ್ಮವುಳ್ಳವನಾಗಿ ಬ್ರಹ್ಮದಲ್ಲಿ ನೆಲೆಗೊಂಡಿದ್ದ ಆ ಬ್ರಾಹ್ಮಣೋತ್ತಮನು ನಸುನಕ್ಕು ಯಾವ ಬಗೆಯ ಅಭಿಮಾನವೂ ಇಲ್ಲದೆ ಆ ರಾಜನಿಗೆ ಹೀಗೆಂದನು – ॥ ೮ ॥

**ಜಡಭರತನು ಹೇಳಿದನು –** ಎಲೈ ವೀರನೇ ! ನೀನು ಹೇಳಿರುವುದು ಯಥಾರ್ಥವಾಗಿದೆ. ಅದರಲ್ಲಿ ಉಪಹಾಸವೇನೂ ಇಲ್ಲ. ಭಾರವೆಂಬ ವಸ್ತು ಇರುವುದಾದರೆ ಅದು ಹೊರುವವನಿಗೆ ಇದೆ. ಮಾರ್ಗ ಇರುವುದಾದರೆ ಅದು ನಡೆಯುವವನಿಗೆ ಇದೆ. ದಪ್ಪನಾಗಿರುವುದು ಅದರದ್ದೇ ಆಗಿದೆ ; ಇವೆಲ್ಲವೂ ಶರೀರಕ್ಕಾಗಿಯೇ ಹೇಳಲಾಗುವುದು, ಆತ್ಮನಿಗೆ ಅಲ್ಲ. ಜ್ಞಾನಿಗಳು ಹೀಗೆ ಮಾತಾಡುವುದಿಲ್ಲ. ॥ ೯ ॥ ದಪ್ಪನಾಗಿರುವಿಕೆ, ತೆಳ್ಳಗಿರುವಿಕೆ, ದೈಹಿಕ-ಮಾನಸಿಕ ರೋಗಗಳು, ಹಸಿವು-ಬಾಯಾರಿಕೆಗಳು, ಭಯ, ದ್ವೈರ್ಯ, ಇಚ್ಛೆ, ಮುಪ್ಪು, ನಿದ್ರೆ, ಸ್ತ್ರೀ-ಪುರುಷರತಿ, ಕ್ರೋಧ, ದೈನ್ಯ, ಅಹಂಕಾರ, ಮದ ಮತ್ತು ಶೋಕ ಇವೆಲ್ಲ ಧರ್ಮಗಳು ದೇಹಾಭಿಮಾನದಿಂದಾಗಿ ಉಂಟಾಗುವ ಜೀವನಲ್ಲಿ ಇರುತ್ತವೆ. ನನ್ನಲ್ಲಿ ಇವುಗಳು ಲೇಶಮಾತ್ರವೂ ಇಲ್ಲ. ॥ ೧೦ ॥ ರಾಜನೇ ! ಬದುಕಿದ್ದರೂ ಸತ್ತವನು ಎಂದು ನೀನು ಹೇಳಿದ ಮಾತು – ಎಷ್ಟು ವಿಕಾರಿ

ಜೀವನ್ಮೃತತ್ವಂ ನಿಯಮೇನ ರಾಜನ್
ಆದ್ಯಂತವದ್ಯದ್ವಿಕೃತಸ್ಯ ದೃಷ್ಟಮ್ ।
ಸ್ವಸ್ವಾಮ್ಯಭಾವೋ ಧ್ರುವ ಈಡ್ಯ ಯತ್ರ
ತರ್ಹ್ಯುಚ್ಯತೇಽಸೌ ವಿಧಿಕೃತ್ಯಯೋಗಃ ॥ ೧೧ ॥

ವಿಶೇಷಬುದ್ಧೇರ್ವಿವರಂ ಮನಾಕ್ ಚ
ಪಶ್ಯಾಮ ಯನ್ನ ವ್ಯವಹಾರತೋಽನ್ಯತ್ ।
ಕ ಈಶ್ವರಸ್ತತ್ರ ಕಿಮೀಶಿತವ್ಯಂ
ತಥಾಪಿ ರಾಜನ್ ಕರವಾಮ ಕಿಂ ತೇ ॥ ೧೨ ॥

ಉನ್ಮತ್ತಮತ್ತಜಡವತ್ಸ್ವಸಂಸ್ಥಾಂ
ಗತಸ್ಯ ಮೇ ವೀರ ಚಿಕಿತ್ಸಿತೇನ ।
ಅರ್ಥಃ ಕಿಯಾನ್ ಭವತಾ ಶಿಕ್ಷಿತೇನ
ಸ್ತಬ್ಧಪ್ರಮತ್ತಸ್ಯ ಚ ಪಿಷ್ಟಪೇಷಃ ॥ ೧೩ ॥

*ಶ್ರೀಶುಕ ಉವಾಚ*

ಏತಾವದನುವಾದಪರಿಭಾಷಯಾ ಪ್ರತ್ಯುದೀರ್ಯ ಮುನಿವರ ಉಪಶಮಶೀಲ ಉಪರತಾನಾತ್ಮ್ಯನಿಮಿತ್ತ ಉಪಭೋಗೇನ ಕರ್ಮಾರಬ್ಧಂ ವ್ಯಪನಯನ್ ರಾಜಯಾನಮಪಿ ತಥೋವಾಹ ॥ ೧೪ ॥ ಸ ಚಾಪಿ ಪಾಂಡವೇಯ ಸಿಂಧುಸೌವೀರಪತಿಸ್ತತ್ತ್ವಜಿಜ್ಞಾಸಾಯಾಂ ಸಮ್ಯಕ್‌ಶ್ರದ್ಧಯಾಧಿಕೃತಾಧಿಕಾರಸ್ತದ್ಧೃದಯಗ್ರಂಥಿಮೋಚನಂ ದ್ವಿಜವಚ ಆಶ್ರುತ್ಯ ಬಹುಯೋಗಗ್ರಂಥಸಮ್ಮತಂ ತ್ವರಯಾವರುಹ್ಯ ಶಿರಸಾ ಪಾದಮೂಲಮುಪಸೃತಃ ಕ್ಷಮಾಪಯನ್ ವಿಗತನೃಪದೇವಸ್ಮಯ ಉವಾಚ ॥ ೧೫ ॥

ಕಸ್ತ್ವಂ ನಿಗೂಢಶ್ಚರಸಿ ದ್ವಿಜಾನಾಂ
ಬಿಭರ್ಷಿ ಸೂತ್ರಂ ಕತಮೋಽವಧೂತಃ ।
ಕಸ್ಯಾಸಿ ಕುತ್ರತ್ಯ ಇಹಾಪಿ ಕಸ್ಮಾತ್
ಕ್ಷೇಮಾಯ ನಶ್ಚೇದಸಿ ನೋತ ಶುಕ್ಲಃ ॥ ೧೬ ॥

ಪದಾರ್ಥಗಳಿವೆಯೋ ಅವೆಲ್ಲವುಗಳಲ್ಲಿ ನಿಯಮಿತರೂಪದಿಂದ ಇವೆರಡು ಮಾತುಗಳು ಕಂಡುಬರುತ್ತವೆ. ಏಕೆಂದರೆ, ಅವೆಲ್ಲವೂ ಆದಿ-ಅಂತ್ಯಗಳು ಇರುವಂತಹವುಗಳು. ಎಲೈ ಯಶಸ್ವೀರಾಜನೇ! ಸ್ವಾಮಿ-ಸೇವಕ-ಭಾವ ಸ್ಥಿರವಾಗಿರುವಲ್ಲಿಯೇ ಆಜ್ಞಾ-ಪಾಲನಾದಿಗಳ ನಿಯಮ ಹೊಂದಬಲ್ಲದು. ॥ ೧೧ ॥ 'ನೀನು ರಾಜನಾಗಿದ್ದಿ ಮತ್ತು ನಾನು ಪ್ರಜೆಯಾಗಿದ್ದೇನೆ' ಈ ರೀತಿಯ ಭೇದಬುದ್ಧಿಯು ವ್ಯವಹಾರವಲ್ಲದೆ ಬೇರೆ ಯಾವುದೂ ಕಂಡುಬರುವುದಿಲ್ಲ. ಪರಮಾರ್ಥ ದೃಷ್ಟಿಯಿಂದ ನೋಡಿದರೆ, ಯಾರನ್ನು ಸ್ವಾಮಿ ಯಾರನ್ನು ಸೇವಕನೆಂದು ಹೇಳುವುದು? ಆದರೂ ರಾಜನೇ! ನಿನಗೆ ಸ್ವಾಮಿತ್ವದ ಅಭಿಮಾನವಿದ್ದರೆ ಹೇಳು, ನಾನು ನಿನ್ನ ಯಾವ ಸೇವೆಮಾಡಲಿ? ॥ ೧೨ ॥ ವೀರನೇ! ನಾನು ಉನ್ಮತ್ತ, ಜಡನಂತೆ ನನ್ನ ಸ್ಥಿತಿಯಲ್ಲೇ ಇರುತ್ತೇನೆ. ನನಗೆ ಚಿಕಿತ್ಸೆಮಾಡಿ ನಿನಗೆ ಏನು ಸಿಗುವುದಿದೆ? ವಾಸ್ತವವಾಗಿ ನಾನು ಜಡ ಮತ್ತು ಪ್ರಮಾದಿಯೇ ಆಗಿದ್ದರೆ ನನಗೆ ಶಿಕ್ಷೆ ಕೊಡುವುದು ಪಿಷ್ಟಪೇಷಣದಂತೆ ವ್ಯರ್ಥವೇ ಆದೀತಲ್ಲ! ॥ ೧೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಜಡಭರತ ಮಹಾಮುನಿಯು ರಾಜನಿಗೆ ಯಥಾರ್ಥವಾದ ತತ್ತ್ವವನ್ನು ಉಪದೇಶಮಾಡುತ್ತಾ ಹೀಗೆ ಉತ್ತರ ಹೇಳಿ ಮೌನವಾದನು. ಅವನಲ್ಲಿ ದೇಹಾತ್ಮಬುದ್ಧಿಗೆ ಹೇತುಭೂತವಾದ ಅಜ್ಞಾನವು ನಿವೃತ್ತವಾಗಿ ಹೋಗಿತ್ತು, ಅದರಿಂದ ಅವನು ಪರಮ ಶಾಂತನಾಗಿದ್ದನು. ಆದ್ದರಿಂದ ಇಷ್ಟು ಹೇಳಿ ಭೋಗದ ಮೂಲಕ ಪ್ರಾರಬ್ಧವನ್ನು ಕ್ಷಯಗೊಳಿಸಲಿಕ್ಕಾಗಿ ಅವನು ಪುನಃ ಮೊದಲಿನಂತೆಯೇ ಆ ಪಲ್ಲಕ್ಕಿಯನ್ನು ಹೆಗಲಮೇಲೇರಿಸಿ ನಡೆಯತೊಡಗಿದನು. ॥ ೧೪ ॥ ಸಿಂಧು-ಸೌವೀರಪತಿಯಾದ ರಹೂಗಣನೂ ಕೂಡ ತನ್ನ ಉತ್ತಮ ಶ್ರದ್ಧೆಯಿಂದ ತತ್ತ್ವಜ್ಞಾನದ ಪೂರ್ಣ ಅಧಿಕಾರಿಯಾಗಿದ್ದನು. ಅನೇಕ ಯೋಗ ಗ್ರಂಥಗಳಿಂದ ಸಮರ್ಥಿತವಾದ ಹೃದಯ ಗ್ರಂಥಿಯು ಕತ್ತರಿಸುವಂತಹ ಆ ಬ್ರಾಹ್ಮಣೋತ್ತಮನ ವಚನವನ್ನು ಕೇಳಿ ಆ ರಾಜನು ಒಡನೆಯೇ ಪಲ್ಲಕ್ಕಿಯಿಂದ ಇಳಿದುಬಂದನು. ಅವನ ರಾಜಮದವು ಪೂರ್ಣವಾಗಿ ಹೊರಟುಹೋಗಿತ್ತು. ಅವನು ಜಡಭರತನ ಕಾಲಿಗೆ ಬಿದ್ದು ತನ್ನ ಅಪರಾಧಕ್ಕೆ ಕ್ಷಮೆಯನ್ನು ಬೇಡುತ್ತಾ ಹೀಗೆಂದನು. ॥ ೧೫ ॥

ಎಲೈ ಮಹಾತ್ಮರೇ! ವೇಷಾಂತರದಲ್ಲಿ ಸಂಚರಿಸುತ್ತಿರುವ ತಾವು ಯಾರು? ಯಜ್ಞೋಪವೀತವನ್ನು ಧರಿಸಿರುವುದರಿಂದ ತಾವು ಬ್ರಾಹ್ಮಣರಿರಬೇಕು. ದತ್ತಾತ್ರೇಯರೇ ಮುಂತಾದ ಅವಧೂತರಲ್ಲಿ ಯಾರಾಗಿದ್ದೀರಿ? ತಾವು ಯಾರ ಪುತ್ರರು? ತಮ್ಮ ಜನ್ಮಸ್ಥಳ ಯಾವುದು? ಇಲ್ಲಿಗೆ ತಾವು ಹೇಗೆ ಪಾದ ಬೆಳೆಸಿದಿರಿ? ನಮಗೆ ಮಂಗಳವನ್ನುಂಟುಮಾಡುವುದಕ್ಕಾಗಿ ತಾವು ದಯಮಾಡಿಸಿದ್ದರೆ – ಶುದ್ಧ ಸತ್ತ್ವಮಯ ಮೂರ್ತಿಯಾದ ಸಾಕ್ಷಾತ್ ಭಗವಾನ್ ಕಪಿಲದೇವರೇ ತಾವಲ್ಲ ತಾನೇ? ॥ ೧೬ ॥ ನಾನು ಇಂದ್ರನ ವಜ್ರಾಯುಧಕ್ಕೆ ಹೆದರುವುದಿಲ್ಲ, ಮಹಾದೇವನ ತ್ರಿಶೂಲಕ್ಕೂ ಭಯಪಡುವಿದಿಲ್ಲ, ಯಮರಾಜನ ದಂಡಕ್ಕೂ ಅಂಜುವುದಿಲ್ಲ. ನನಗೆ

ನಾಹಂ ವಿಶಂಕೇ ಸುರರಾಜವಜ್ರಾತ್
ನ ತ್ರ್ಯಕ್ಷಶೂಲಾನ್ನ ಯಮಸ್ಯ ದಂಡಾತ್ ।
ನಾಗ್ನ್ಯರ್ಕಸೋಮಾನಿಲವಿತ್ತಪಾಸ್ತ್ರಾ-
ಚ್ಛಂಕೇ ಭೃಶಂ ಬ್ರಹ್ಮಕುಲಾವಮಾನಾತ್ ॥ ೧೭ ॥

ತದ್ ಬ್ರೂಹ್ಯಸಂಗೋ ಜಡವನ್ನಿಗೂಢ-
ವಿಜ್ಞಾನವೀರ್ಯೋ ವಿಚರಸ್ಯಪಾರಃ ।
ವಚಾಂಸಿ ಯೋಗಗ್ರಥಿತಾನಿ ಸಾಧೋ
ನ ನಃ ಕ್ಷಮಂತೇ ಮನಸಾಪಿ ಭೇತ್ತುಮ್ ॥ ೧೮ ॥

ಅಹಂ ಚ ಯೋಗೇಶ್ವರಮಾತ್ಮತತ್ತ್ವ-
ವಿದಾಂ ಮುನೀನಾಂ ಪರಮಂ ಗುರುಂ ವೈ ।
ಪ್ರಷ್ಟುಂ ಪ್ರವೃತ್ತಃ ಕಿಮಿಹಾರಣಂ ತತ್
ಸಾಕ್ಷಾದ್ಧರಿಂ ಜ್ಞಾನಕಲಾವತೀರ್ಣಮ್ ॥ ೧೯ ॥

ಸ ವೈ ಭವಾಂಲ್ಲೋಕನಿರೀಕ್ಷಣಾರ್ಥ-
ಮವ್ಯಕ್ತಲಿಂಗೋ ವಿಚರತ್ಯಪಿಸ್ವಿತ್ ।
ಯೋಗೇಶ್ವರಾಣಾಂ ಗತಿಮಂಧಬುದ್ಧಿಃ
ಕಥಂ ವಿಚಕ್ಷೀತ ಗೃಹಾನುಬಂಧಃ ॥ ೨೦ ॥

ದೃಷ್ಟಃ ಶ್ರಮಃ ಕರ್ಮತ ಆತ್ಮನೋ ವೈ
ಭರ್ತುರ್ಗಂತುರ್ಭವತಶ್ಚಾನುಮನ್ಯೇ ।
ಯಥಾಸತೋದಾನಯನಾದ್ಯಭಾವಾತ್
ಸಮೂಲ ಇಷ್ಟೋ ವ್ಯವಹಾರಮಾರ್ಗಃ ॥ ೨೧ ॥

ಸ್ಥಾಲ್ಯಗ್ನಿತಾಪಾತ್ಪಯಸೋಽಭಿತಾಪ-
ಸ್ತತ್ತಾಪತಸ್ತಂಡುಲಗರ್ಭರಂಧಿಃ ।
ದೇಹೇಂದ್ರಿಯಾಸ್ವಾಶಯಸನ್ನಿಕರ್ಷಾತ್
ತತ್ಸಂಸೃತಿಃ ಪುರುಷಸ್ಯಾನುರೋಧಾತ್ ॥ ೨೨ ॥

ಶಾಸ್ತಾಭಿಗೋಪ್ತಾ ನೃಪತಿಃ ಪ್ರಜಾನಾಂ
ಯಃ ಕಿಂಕರೋ ವೈ ನ ಪಿನಷ್ಟಿ ಪಿಷ್ಟಮ್ ।
ಸ್ವಧರ್ಮಮಾರಾಧನಮಚ್ಯುತಸ್ಯ
ಯದೀಹಮಾನೋ ವಿಜಹಾತ್ಯಘೌಘಮ್ ॥ ೨೩ ॥

ಅಗ್ನಿ, ಸೂರ್ಯ, ಚಂದ್ರ, ವಾಯು ಮತ್ತು ಕುಬೇರ ಇವರ ಅಸ್ತ್ರ-ಶಸ್ತ್ರಗಳ ಯಾವ ಭಯವೂ ಇಲ್ಲ. ಆದರೆ ನಾನು ಬ್ರಾಹ್ಮಣಕುಲದ ಅಪಮಾನದಿಂದ ತುಂಬಾ ಹೆದರುತ್ತೇನೆ. ॥ ೧೭ ॥ ಆದ್ದರಿಂದ ಜ್ಞಾನ-ಶಕ್ತಿಗಳು ಪೂರ್ಣವಾಗಿದ್ದರೂ ಅವುಗಳನ್ನು ತೋರ್ಪಡಿಸದೆ ಮೂಢರಂತೆ ಕಾಣುತ್ತಾ, ಯಾರ ಸಂಗಕ್ಕೂ ಸೇರದೆ ಒಂಟಿಯಾಗಿ ಸಂಚರಿಸುತ್ತಿರುವ ತಾವು ಯಾರು ? ತಮ್ಮ ಆಳವೇನು ಎಂಬುದು ತಿಳಿಯುತ್ತಿಲ್ಲ. ಯೋಗತತ್ತ್ವದಿಂದ ಸಂಪನ್ನವಾಗಿರುವ ತಮ್ಮ ಮಾತುಗಳು ಬುದ್ಧಿಯಿಂದ ಎಷ್ಟು ಆಲೋಚಿಸಿದರೂ ನನಗೆ ಅರ್ಥವಾಗುತ್ತಿಲ್ಲ. ನನ್ನ ಸಂದೇಹವೂ ಹೋಗುತ್ತಿಲ್ಲ. ॥ ೧೮ ॥ ಈ ಲೋಕದಲ್ಲಿ ಶರಣುಹೊಂದುವುದಕ್ಕೆ ಯೋಗ್ಯವಾದ ಏಕೈಕ ವಸ್ತು ಯಾವುದು ? ಎಂಬುದನ್ನು ಕೇಳುವುದಕ್ಕಾಗಿ ನಾನು ಆತ್ಮಜ್ಞಾನಿಗಳಾದ ಮುನಿಗಳಿಗೆಲ್ಲ ಪರಮಗುರುಗಳಾದ ಜ್ಞಾನಕಲೆಯಿಂದ ಅವತಾರಮಾಡಿರುವ ಸಾಕ್ಷಾತ್ ಶ್ರೀಹರಿಯಾಗಿರುವ ಭಗವಾನ್ ಕಪಿಲರಲ್ಲಿಗೆ ಹೋಗುತ್ತಿದ್ದೇನೆ. ॥ ೧೯ ॥ ಲೋಕಗಳ ಸ್ಥಿತಿಯನ್ನು ನೋಡುವುದಕ್ಕೋಸ್ಕರ ತಮ್ಮ ರೂಪವನ್ನು ಮರೆಸಿಕೊಂಡು ಓಡಾಡುತ್ತಿರುವ ಆ ಕಪಿಲಮುನಿಗಳೇ ತಾವಾಗಿದ್ದೀರೋ ? ಗೃಹದಲ್ಲಿ ಆಸಕ್ತನಾಗಿರುವ ಬುದ್ಧಿಹೀನನಿಗೆ ಯೋಗೇಶ್ವರರ ಗತಿಯನ್ನು ಹೇಗೆ ತಾನೇ ತಿಳಿಯಲು ಸಾಧ್ಯವಾದೀತು ? ॥ ೨೦ ॥

"ನಾನು ಯುದ್ಧಾದಿ ಕರ್ಮಗಳಲ್ಲಿ ನನಗೆ ಶ್ರಮವಾಗುವುದನ್ನು ನೋಡಿದ್ದೇನೆ. ಅದಕ್ಕಾಗಿ ಭಾರಹೊತ್ತುಕೊಂಡು ಮಾರ್ಗದಲ್ಲಿ ನಡೆಯುವುದರಿಂದ ನಿಮಗೂ ಕೂಡ ಅವಶ್ಯವಾಗಿ ಶ್ರಮವಾಗಿರಬಹುದೆಂದು ತಿಳಿದೆ. ನನಗಾದರೋ ವ್ಯವಹಾರ ಮಾರ್ಗವೇ ಸತ್ಯವೆಂದು ತಿಳಿಯುತ್ತದೆ ಏಕೆಂದರೆ ಮಿಥ್ಯೆಯಾದ ಗಡಿಗೆಯಿಂದ ನೀರು ತರುವುದು ಮುಂತಾದ ಕಾರ್ಯಗಳು ಆಗುವುದಿಲ್ಲ. ॥ ೨೧ ॥ (ದೇಹಾದಿ ಧರ್ಮಗಳು ಆತ್ಮನ ಮೇಲೆ ಯಾವ ಪ್ರಭಾವವನ್ನೂ ಉಂಟು ಮಾಡುವುದಿಲ್ಲ. ಎಂಬ ಮಾತೂ ಇಲ್ಲ.) ಒಲೆಯ ಮೇಲಿಟ್ಟ ನೀರುತುಂಬಿದ ಪಾತ್ರೆಯು ಬೆಂಕಿಯಿಂದ ಕಾದಾಗ ಆ ನೀರು ಕುದಿಯತೊಡಗುತ್ತದೆ ಮತ್ತು ಅದರಲ್ಲಿ ಹಾಕಿದ ಅಕ್ಕಿಯ ಒಳಭಾಗವೂ ಬೆಂದುಹೋಗುತ್ತದೆ. ಹೀಗೆಯೇ ತನ್ನ ಉಪಾಧಿಗಳನ್ನು ಅನುವರ್ತಿಸುವ ಕಾರಣದಿಂದ ದೇಹ, ಇಂದ್ರಿಯಗಳು, ಪ್ರಾಣ ಮತ್ತು ಮನಸ್ಸು ಇವುಗಳ ಸನ್ನಿಧಿಯಿಂದ ಆತ್ಮನಿಗೂ ಕೂಡ ಅವುಗಳ ಧರ್ಮಗಳಾದ ಶ್ರಮಾದಿಗಳ ಅನುಭವ ಆಗಿಯೇ ಆಗುವುದು. ॥ ೨೨ ॥ ರಾಜನು ಚಿಕಿತ್ಸೆಯ ರೂಪದಲ್ಲಿ ಅಪರಾಧಿಗಳಿಗೆ ದಂಡಾದಿವಿಧಿಗಳನ್ನು ವಿಧಿಸುವುದು ವ್ಯರ್ಥವೆಂದು ತಾವು ಹೇಳಿದಿರಿ. ಆದರೆ ರಾಜನಾದರೋ ಪ್ರಜೆಯ ಶಾಸನ ಮತ್ತು ಪಾಲನೆ ಮಾಡಲಿಕ್ಕಾಗಿ ನಿಯುಕ್ತನಾದ ಅವರ ದಾಸನೇ ಆಗಿದ್ದಾನೆ. ಅವನು ಉನ್ಮತ್ತರಿಗೆ ದಂಡವಿಧಿಸುವುದು ಹಿಟ್ಟನ್ನು ಪುನಃ ಬೀಸುವಂತೆ ವ್ಯರ್ಥವಾಗಲಾರದು. ಏಕೆಂದರೆ, ತನ್ನ ಧರ್ಮವನ್ನು ಪಾಲಿಸುವುದು ಭಗವಂತನ ಸೇವೆಯೇ ಆಗಿದೆ. ಅದನ್ನು ಆಚರಿಸುವವನು ತನ್ನ ಸಮಸ್ತ ಪಾಪರಾಶಿಯನ್ನು ನಾಶಮಾಡಿಬಿಡುತ್ತಾನೆ. ॥ ೨೩ ॥

ತನ್ಮೇ ಭವಾನ್ನರದೇವಾಭಿಮಾನ-
ಮದೇನ ತುಚ್ಛೀಕೃತಸತ್ತಮಸ್ಯ ।
ಕೃಷೀಷ್ಟ ಮೈತ್ರೀದೃಶಮಾರ್ತಬಂಧೋ
ಯಥಾ ತರೇ ಸದವಧ್ಯಾನಮಂಹಃ ॥ ೨೪ ॥

ದೀನಬಂಧುಗಳೇ! ರಾಜನೆಂಬ ಅಭಿಮಾನದಿಂದ ಉನ್ಮತ್ತನಾಗಿ ನಾನು ನಿಮ್ಮಂತಹ ಪರಮ ಸಾಧುಗಳ ತಿರಸ್ಕಾರ ಮಾಡಿದೆ. ಈಗ ಇಂತಹ ಸಾಧುಗಳ ಅವಜ್ಞೆಯಂತಹ ಅಪರಾಧದಿಂದ ನಾನು ಮುಕ್ತನಾಗುವಂತೆ ಕೃಪೆದೋರಿರಿ. ॥ ೨೪ ॥ ನೀವು ದೇಹಾಭಿಮಾನ ಶೂನ್ಯರೂ, ವಿಶ್ವಬಂಧುಗಳೂ, ಶ್ರೀಹರಿಯ ಅನನ್ಯ ಭಕ್ತರೂ ಆಗಿರುವಿರಿ. ಇದಕ್ಕಾಗಿ ಎಲ್ಲದರಲ್ಲಿ ಸಮಾನದೃಷ್ಟಿ ಇರುವುದರಿಂದ ಈ ಮಾನಾಪಮಾನದಿಂದಾಗಿ ನಿಮ್ಮಲ್ಲಿ ಯಾವುದೇ ವಿಕಾರ ಉಂಟಾಗಲಾರದು. ಆದರೂ ಓರ್ವ ಮಹಾಪುರುಷರ ಅಪಮಾನಮಾಡುವುದರಿಂದ ನನ್ನಂಥವನು ಸಾಕ್ಷಾತ್ ತ್ರಿಶೂಲಪಾಣಿಯಾದ ಮಹಾದೇವನಂತೆ ಪ್ರಭಾವಶಾಲಿಯಾಗಿದ್ದರೂ ತನ್ನ ಅಪರಾಧದಿಂದ ಖಂಡಿತವಾಗಿ ಕೆಲವೇ ದಿನಗಳಲ್ಲಿ ನಾಶವಾಗಿ ಹೋಗುವನು. ॥ ೨೫ ॥

ನ ವಿಕ್ರಿಯಾ ವಿಶ್ವಸುಹೃತ್ಸಖಸ್ಯ
ಸಾಮ್ಯೇನ ವೀತಾಭಿಮತೇಸ್ತವಾಪಿ ।
ಮಹದ್ವಿಮಾನಾತ್ಸ್ವಕೃತಾದ್ಧಿ ಮಾದೃಙ್
ನಂಕ್ಷ್ಯತ್ಯದೂರಾದಪಿ ಶೂಲಪಾಣಿಃ ॥ ೨೫ ॥

*ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ದಶಮೋಽಧ್ಯಾಯಃ ॥ ೧೦ ॥

# ಹನ್ನೊಂದನೆಯ ಅಧ್ಯಾಯ

## ರಹೂಗಣರಾಜನಿಗೆ ಭರತಮುನಿಯ ಉಪದೇಶ

*ಬ್ರಾಹ್ಮಣ ಉವಾಚ*

ಅಕೋವಿದಃ ಕೋವಿದವಾದವಾದಾನ್
ವದಸ್ಯಥೋ ನಾತಿವಿದಾಂ ವರಿಷ್ಠಃ ।
ನ ಸೂರಯೋ ಹಿ ವ್ಯವಹಾರಮೇನಂ
ತತ್ತ್ವಾವಮರ್ಶೇನ ಸಹಾಮನಂತಿ ॥ ೧ ॥

ತಥೈವ ರಾಜನ್ನುರುಗಾರ್ಹಮೇಧ-
ವಿತಾನವಿದ್ಯೋರುವಿಜೃಂಭಿತೇಷು ।
ನ ವೇದವಾದೇಷು ಹಿ ತತ್ತ್ವವಾದಃ
ಪ್ರಾಯೇಣ ಶುದ್ಧೋ ನು ಚಕಾಸ್ತಿ ಸಾಧುಃ ॥ ೨ ॥

ನ ತಸ್ಯ ತತ್ತ್ವಗ್ರಹಣಾಯ ಸಾಕ್ಷಾದ್
ವರೀಯಸೀರಪಿ ವಾಚಃ ಸಮಾಸನ್ ।
ಸ್ವಪ್ನೇ ನಿರುಕ್ತ್ಯಾ ಗೃಹಮೇಧಿಸೌಖ್ಯಂ
ನ ಯಸ್ಯ ಹೇಯಾನುಮಿತಂ ಸ್ವಯಂ ಸ್ಯಾತ್ ॥ ೩ ॥

ಯಾವನ್ಮನೋ ರಜಸಾ ಪೂರುಷಸ್ಯ
ಸತ್ತ್ವೇನ ವಾ ತಮಸಾ ವಾನುರುದ್ಧಮ್ ।
ಚೇತೋಭಿರಾಕೂತಿಭಿರಾತನೋತಿ
ನಿರಂಕುಶಂ ಕುಶಲಂ ಚೇತರಂ ವಾ ॥ ೪ ॥

ಜಡಭರತನು ಹೇಳಿದನು – ಎಲೈ ರಾಜನೇ! ನೀನು ಅಜ್ಞಾನಿಯಾಗಿದ್ದರೂ ಪಂಡಿತರಂತೆ ಪ್ರೌಢವಾದ ವಾದ-ವಿವಾದಗಳ ಮಾತನ್ನು ಆಡುತ್ತಿರುವೆ. ಇದರಿಂದ ಶ್ರೇಷ್ಠ ಜ್ಞಾನಿಗಳಲ್ಲಿ ನಿನ್ನನ್ನು ಪರಿಗಣಿಸಲಾಗುವುದಿಲ್ಲ. ತತ್ತ್ವಜ್ಞಾನಿಗಳು ಈ ಅವಿಚಾರಸಿದ್ಧವಾದ ಸ್ವಾಮಿ-ಸೇವಕ ಮುಂತಾದ ವ್ಯವಹಾರಗಳನ್ನು ಪರಮಾರ್ಥದೊಡನೆ ಸೇರಿಸಿ ಹೇಳುವುದಿಲ್ಲ. ॥ ೧ ॥ ರಾಜನೇ! ಗೃಹಸ್ಥ ಜನರಿಗೆ ಉಚಿತವಾಗಿರುವ ಯಜ್ಞವಿಧಿಯ ವಿಸ್ತಾರದಲ್ಲಿಯೇ ಹೆಚ್ಚಾಗಿ ಆಸಕ್ತವಾಗಿರುವ ವೈದಿಕ ಕರ್ಮಕಾಂಡದ ಬಗೆಗೂ ಇದೇ ಮಾತನ್ನು ಹೇಳಬೇಕಾಗುತ್ತದೆ. ಪರಿಶುದ್ಧವಾದ ತತ್ತ್ವಜ್ಞಾನದ ಅಭಿವ್ಯಕ್ತಿಯು ಸಾಮಾನ್ಯವಾಗಿ ಆ ವೇದವಾದಗಳಲ್ಲಿಯೂ ಪೂರ್ಣವಾಗಿ ಆಗಿಲ್ಲ. ॥ ೨ ॥ ಈ ಗೃಹಸ್ಥ ಜನೋಚಿತ ಯಜ್ಞಾದಿ ಕರ್ಮಗಳಿಂದ ದೊರೆಯುವ ಸ್ವರ್ಗಾದಿ ಸುಖಗಳು ಕನಸಿನಂತೆ ಹೇಯವೆಂದು ಯಾವನಿಗೆ ತಿಳಿಯುವುದಿಲ್ಲವೋ ಆತನಿಗೆ ತತ್ತ್ವಜ್ಞಾನವನ್ನುಂಟು ಮಾಡುವುದಕ್ಕೆ ಶ್ರೇಷ್ಠತಮವಾದ ಉಪನಿಷದ್ವಾಣಿಗಳೂ ಸಮರ್ಥವಾಗಿಲ್ಲ. ॥ ೩ ॥ ಮನುಷ್ಯನ ಮನಸ್ಸು ಸತ್ತ್ವ, ರಜ, ತಮ ಈ ಗುಣಗಳಿಗೆ ವಶವಾಗಿರುವ ತನಕ ಅದು ನಿರಂಕುಶವಾಗಿ ಅವನ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳಿಂದ ಶುಭಾಶುಭ ಕರ್ಮಗಳನ್ನು ಮಾಡಿಸುತ್ತಲೇ ಇರುತ್ತದೆ. ॥ ೪ ॥ ಈ ಮನಸ್ಸು ವಾಸನಾಮಯ, ವಿಷಯಾಸಕ್ತ ಗುಣಗಳಿಂದ ಪ್ರೇರಿತವಾಗಿ,

ಸ ವಾಸನಾತ್ಮಾ ವಿಷಯೋಪರಕ್ತೋ
　ಗುಣಪ್ರವಾಹೋ ವಿಕೃತಃ ಷೋಡಶಾತ್ಮಾ ।
ಬಿಭ್ರತ್ಪೃಥಙ್ನಾಮಭಿ ರೂಪಭೇದ-
　ಮಂತರ್ಬಹಿಷ್ಟ್ವಂ ಚ ಪುರೈಸ್ತನೋತಿ ॥ ೫ ॥

ದುಃಖಂ ಸುಖಂ ವ್ಯತಿರಿಕ್ತಂ ಚ ತೀವ್ರಂ
　ಕಾಲೋಪಪನ್ನಂ ಫಲಮಾವ್ಯನಕ್ತಿ ।
ಆಲಿಂಗ್ಯ ಮಾಯಾರಚಿತಾಂತರಾತ್ಮಾ
　ಸ್ವದೇಹಿನಂ ಸಂಸೃತಿಚಕ್ರಕೂಟಃ ॥ ೬ ॥

ತಾವಾನಯಂ ವ್ಯವಹಾರಃ ಸದಾವಿಃ
　ಕ್ಷೇತ್ರಜ್ಞ ಸಾಕ್ಷ್ಯೋ ಭವತಿ ಸ್ಥೂಲಸೂಕ್ಷ್ಮಃ ।
ತಸ್ಮಾನ್ಮನೋ ಲಿಂಗಮದೋ ವದಂತಿ
　ಗುಣಾಗುಣತ್ವಸ್ಯ ಪರಾವರಸ್ಯ ॥ ೭ ॥

ಗುಣಾನುರಕ್ತಂ ವ್ಯಸನಾಯ ಜಂತೋಃ
　ಕ್ಷೇಮಾಯ ನೈರ್ಗುಣ್ಯಮಥೋ ಮನಃ ಸ್ಯಾತ್ ।
ಯಥಾ ಪ್ರದೀಪೋ ಘೃತವರ್ತಿಮಶ್ನನ್
　ಶಿಖಾಃ ಸಧೂಮಾ ಭಜತಿ ಹ್ಯನ್ಯದಾ ಸ್ವಮ್ ।
ಪದಂ ತಥಾ ಗುಣಕರ್ಮಾನುಬದ್ಧಂ
　ವೃತ್ತೀರ್ಮನಃ ಶ್ರಯತೇಽನ್ಯತ್ರ ತತ್ತ್ವಮ್ ॥ ೮ ॥

ಏಕಾದಶಾಸನ್ಮನಸೋ ಹಿ ವೃತ್ತಯ
　ಆಕೂತಯಃ ಪಂಚ ಧಿಯೋಽಭಿಮಾನಃ ।
ಮಾತ್ರಾಣಿ ಕರ್ಮಾಣಿ ಪುರಂ ಚ ತಾಸಾಂ
　ವದಂತಿ ಹೈಕಾದಶ ವೀರ ಭೂಮೀಃ ॥ ೯ ॥

ಗಂಧಾಕೃತಿಸ್ಪರ್ಶರಸಶ್ರವಾಂಸಿ
　ವಿಸರ್ಗರತ್ಯರ್ತ್ಯಭಿಜಲ್ಪಶಿಲ್ಪಾಃ ।
ಏಕಾದಶಂ ಸ್ವೀಕರಣಂ ಮಮೇತಿ
　ಶಯ್ಯಾಮಹಂ ದ್ವಾದಶಮೇಕ ಆಹುಃ ॥ ೧೦ ॥

ದ್ರವ್ಯಸ್ವಭಾವಾಶಯಕರ್ಮಕಾಲೈ-
　ರೇಕಾದಶಾಮೀ ಮನಸೋ ವಿಕಾರಾಃ ।
ಸಹಸ್ರಶಃ ಶತಶಃ ಕೋಟಿಶಶ್ಚ
　ಕ್ಷೇತ್ರಜ್ಞತೋ ನ ಮಿಥೋ ನ ಸ್ವತಃ ಸ್ಯುಃ ॥ ೧೧ ॥

ವಿಕಾರಿ ಮತ್ತು ಭೂತಗಳು ಹಾಗೂ ಇಂದ್ರಿಯರೂಪವಾದ ಹದಿನಾರು ಕಲೆಗಳಲ್ಲಿ ಮುಖ್ಯವಾದುದು. ಇದೇ ಬೇರೆ-ಬೇರೆ ಹೆಸರುಗಳಿಂದ ದೇವತೆಗಳು ಹಾಗೂ ಮನುಷ್ಯರೇ ಮುಂತಾದ ರೂಪವನ್ನು ಧರಿಸಿ ಶರೀರರೂಪೀ ಉಪಾಧಿಗಳ ಭೇದದಿಂದ ಜೀವನಲ್ಲಿ ಉಚ್ಚ-ನೀಚಭಾವಗಳನ್ನು ತೋರ್ಪಡಿಸುತ್ತದೆ. ॥ ೫ ॥ ಈ ಮಾಯಾಮಯ ಮನಸ್ಸು ಸಂಸಾರಚಕ್ರಕ್ಕೆ ಮೂಲವಾದುದು. ಇದೇ ತನ್ನ ದೇಹದ ಅಭಿಮಾನೀ ಜೀವಿಯೊಂದಿಗೆ ಸೇರಿಕೊಂಡು ಆಯಾ ಕಾಲಕ್ಕೆ ಅನುಗುಣವಾಗಿ ಅವಶ್ಯವಾಗಿ ಬರುವ ಸುಖ-ದುಃಖಗಳನ್ನಾಗಲೀ, ಮೋಹವನ್ನಾಗಲೀ ಜೀವನಿಗೆ ಉಂಟುಮಾಡುವುದು. ॥ ೬ ॥ ಈ ಮನಸ್ಸು ಇರುವ ತನಕ ಜಾಗ್ರತ್ ಮತ್ತು ಸ್ವಪ್ನಾವಸ್ಥೆಯ ವ್ಯವಹಾರಗಳು ಪ್ರಕಾಶಿತವಾಗಿ ಜೀವಿಯು ದೃಶ್ಯನಾಗುತ್ತಾನೆ. ಅದಕ್ಕಾಗಿ ಪಂಡಿತರು ಮನಸ್ಸನ್ನೇ ತ್ರಿಗುಣಮಯ ಅಥವಾ ಸಂಸಾರದ ಮತ್ತು ಗುಣಾತೀತ ಪರಮೋತ್ಕೃಷ್ಟ ಮೋಕ್ಷಪದದ ಕಾರಣವೆಂದು ಹೇಳುತ್ತಾರೆ. ॥ ೭ ॥ ವಿಷಯಾಸಕ್ತ ಮನಸ್ಸೇ ಜೀವಿಯನ್ನು ಸಂಸಾರದ ಸಂಕಟದಲ್ಲಿ ಕೆಡಹುತ್ತದೆ. ವಿಷಯಹೀನವಾದಾಗ ಅದು ಜೀವಿಗೆ ಶಾಂತಿಮಯ ಮೋಕ್ಷಪದವನ್ನು ದೊರಕಿಸಿ ಕೊಡುತ್ತದೆ. ದೀಪವು ತುಪ್ಪದ ಬತ್ತಿಯಲ್ಲಿ ಹೊತ್ತಿಕೊಂಡು ಉರಿಯುವಾಗ ಹೊಗೆಯಿಂದ ಕೂಡಿದ ಜ್ವಾಲೆಗಳನ್ನು ಉಗುಳುವುದು. ತುಪ್ಪವು ಮುಗಿದಾಗ ಅದು ತನ್ನ ಕಾರಣ ಅಗ್ನಿತತ್ತ್ವದಲ್ಲಿ ಲೀನವಾಗಿ ಹೋಗುತ್ತದೆ. ಹೀಗೆಯೇ ವಿಷಯ ಮತ್ತು ಕರ್ಮಗಳಲ್ಲಿ ಆಸಕ್ತವಾದ ಮನಸ್ಸು ಬಗೆ-ಬಗೆಯ ವೃತ್ತಿಗಳನ್ನು ಆಶ್ರಯಿಸಿ ಇರುತ್ತದೆ ಮತ್ತು ಇವುಗಳಿಂದ ಮುಕ್ತವಾದಾಗ ಅದು ತನ್ನ ತತ್ತ್ವದಲ್ಲಿ ಲೀನವಾಗುತ್ತದೆ. ॥ ೮ ॥

ಎಲೈ ವೀರನೇ! ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಒಂದು ಅಹಂಕಾರ ಈ ಹನ್ನೊಂದು ಮನಸ್ಸಿನ ವೃತ್ತಿಗಳು. ಐದು ಪ್ರಕಾರದ ಕರ್ಮಗಳು, ಐದು ತನ್ಮಾತ್ರೆಗಳು, ಒಂದು ಶರೀರ ಈ ಹನ್ನೊಂದು ಆ ವೃತ್ತಿಗಳಿಗೆ ಆಧಾರವಾಗಿರುವ ವಿಷಯಗಳೆಂದು ಹೇಳಲಾಗಿವೆ. ॥ ೯ ॥ ಗಂಧ, ಶಬ್ದ, ಸ್ಪರ್ಶ, ರೂಪ, ರಸ, ಗಂಧ – ಈ ಐದು ಜ್ಞಾನೇಂದ್ರಿಯಗಳ ವಿಷಯಗಳು. ಮಲತ್ಯಾಗ, ಸಂಭೋಗ, ನಡಿಗೆ, ಭಾಷಣ, ಕೊಟ್ಟು-ಕೊಳ್ಳುವ ವ್ಯಾಪಾರ ಈ ಐದು ಕರ್ಮೇಂದ್ರಿಯಗಳ ವಿಷಯಗಳು. ಶರೀರವನ್ನು 'ಇದು ನನ್ನನ್ನು' ಎಂದು ಸ್ವೀಕರಿಸುವುದು ಅಹಂಕಾರದ ವಿಷಯವಾಗಿದೆ. ಕೆಲವರು ಅಹಂಕಾರವನ್ನು ಮನಸ್ಸಿನ ಹನ್ನೆರಡನೆಯ ವೃತ್ತಿ ಮತ್ತು ಅದರ ಆಶ್ರಯ ಶರೀರವನ್ನು ಹನ್ನೆರಡನೆಯ ವಿಷಯವೆಂದು ತಿಳಿಯುತ್ತಾರೆ. ॥ ೧೦ ॥ ಮನಸ್ಸಿನ ಈ ಹನ್ನೊಂದು ವೃತ್ತಿಗಳೂ ದ್ರವ್ಯ (ವಿಷಯ), ಸ್ವಭಾವ, ಆಶಯ (ಸಂಸ್ಕಾರ), ಕರ್ಮ ಮತ್ತು ಕಾಲದ ಮೂಲಕ ನೂರಾರು, ಸಾವಿರಾರು, ಕೋಟ್ಯಂತರ ಭೇದಗಳಾಗಿ ಪರಿಣಾಮ ಹೊಂದುತ್ತವೆ. ಆದರೆ ಅವುಗಳ ಇರುವಿಕೆಯು ಕ್ಷೇತ್ರಜ್ಞನಾದ ಆತ್ಮನ ಇರುವಿಕೆಯಿಂದಲೇ ಇವೆ. ಸ್ವತಃ ಅಥವಾ ಪರಸ್ಪರ ಸೇರುವಿಕೆಯಿಂದಲ್ಲ. ॥ ೧೧ ॥

ಕ್ಷೇತ್ರಜ್ಞ ಏತಾ ಮನಸೋ ವಿಭೂತೀ-
ರ್ಜೀವಸ್ಯ ಮಾಯಾರಚಿತಸ್ಯ ನಿತ್ಯಾಃ ।
ಆವಿರ್ಹಿತಾಃ ಕ್ವಾಪಿ ತಿರೋಹಿತಾಶ್ಚ
ಶುದ್ಧೋ ವಿಚಷ್ಟೇ ಹ್ಯವಿಶುದ್ಧಕರ್ತುಃ ॥ ೧೨ ॥

ಕ್ಷೇತ್ರಜ್ಞ ಆತ್ಮಾ ಪುರುಷಃ ಪುರಾಣಃ
ಸಾಕ್ಷಾತ್ಸ್ವಯಂಜ್ಯೋತಿರಜಃ ಪರೇಶಃ ।
ನಾರಾಯಣೋ ಭಗವಾನ್ವಾಸುದೇವಃ
ಸ್ವಮಾಯಯಾಽಽತ್ಮನ್ಯವಧೀಯಮಾನಃ ॥ ೧೩ ॥

ಯಥಾನಿಲಃ ಸ್ಥಾವರಜಂಗಮಾನಾ-
ಮಾತ್ಮಸ್ವರೂಪೇಣ ನಿವಿಷ್ಟ ಈಶೇತ್ ।
ಏವಂ ಪರೋ ಭಗವಾನ್ವಾಸುದೇವಃ
ಕ್ಷೇತ್ರಜ್ಞ ಆತ್ಮೇದಮನುಪ್ರವಿಷ್ಟಃ ॥ ೧೪ ॥

ನ ಯಾವದೇತಾಂ ತನುಭೃನ್ನರೇಂದ್ರ
ವಿಧೂಯ ಮಾಯಾಂ ವಯುನೋದಯೇನ ।
ವಿಮುಕ್ತಸಂಗೋ ಜಿತಷಟ್ಸಪತ್ನೋ
ವೇದಾತ್ಮತತ್ತ್ವಂ ಭ್ರಮತೀಹ ತಾವತ್ ॥ ೧೫ ॥

ನ ಯಾವದೇತನ್ಮನ ಆತ್ಮಲಿಂಗಂ
ಸಂಸಾರತಾಪಾವಪನಂ ಜನಸ್ಯ ।
ಯಚ್ಛೋಕಮೋಹಾಮಯರಾಗಲೋಭ-
ವೈರಾನುಬಂಧಂ ಮಮತಾಂ ವಿಧತ್ತೇ ॥ ೧೬ ॥

ಭ್ರಾತೃವ್ಯಮೇನಂ ತದದಭ್ರವೀರ್ಯ-
ಮುಪೇಕ್ಷಯಾಧ್ಯೇಧಿತಮಪ್ರಮತ್ತಃ ।
ಗುರೋರ್ಹರೇಶ್ಚರಣೋಪಾಸನಾಸ್ತ್ರೋ
ಜಹಿ ವ್ಯಲೀಕಂ ಸ್ವಯಮಾತ್ಮಮೋಷಮ್ ॥ ೧೭ ॥

ಹೀಗಿದ್ದರೂ ಮನಸ್ಸಿನೊಂದಿಗೆ ಕ್ಷೇತ್ರಜ್ಞನಿಗೆ ಯಾವ ಸಂಬಂಧವೂ ಇಲ್ಲ. ಇದಾದರೋ ಜೀವಿಯದೇ ಮಾಯಾನಿರ್ಮಿತ ಉಪಾಧಿಯಾಗಿದೆ. ಇದು ಪ್ರಾಯಶಃ ಸಂಸಾರಬಂಧನದಲ್ಲಿ ಕೆಡಹುವ ಅಶುದ್ಧ ಕರ್ಮಗಳಲ್ಲೇ ಪ್ರವೃತ್ತವಾಗಿರುತ್ತದೆ. ಮೇಲೆ ಹೇಳಿದ ಇವುಗಳ ವೃತ್ತಿಗಳು ಪ್ರವಾಹರೂಪದಿಂದ ನಿತ್ಯವಾಗಿಯೇ ಇರುತ್ತವೆ. ಜಾಗ್ರತ್ ಮತ್ತು ಸ್ವಪ್ನದ ಸಮಯದಲ್ಲಿ ಅವು ಪ್ರಕಟಗೊಳ್ಳುತ್ತವೆ ಮತ್ತು ಸುಷುಪ್ತಿಯಲ್ಲಿ ಅಡಗಿರುತ್ತವೆ. ಇವೆರಡೂ ಅವಸ್ಥೆಗಳಲ್ಲಿ ವಿಶುದ್ಧನೂ, ಚಿನ್ಮಾತ್ರನೂ ಆದ ಕ್ಷೇತ್ರಜ್ಞನು ಮನಸ್ಸಿನ ಈ ವೃತ್ತಿಗಳನ್ನು ಸಾಕ್ಷಿರೂಪದಿಂದ ನೋಡುತ್ತಾನೆ. ॥ ೧೨ ॥

ಈ ಕ್ಷೇತ್ರಜ್ಞ ಪರಮಾತ್ಮನು ಸರ್ವವ್ಯಾಪಕನೂ, ಜಗತ್ತಿನ ಮೂಲ ಕಾರಣನೂ, ಪರಿಪೂರ್ಣನೂ, ಅಪರೋಕ್ಷನೂ, ಸ್ವಯಂ ಪ್ರಕಾಶನೂ, ಜನ್ಮರಹಿತನೂ, ಬ್ರಹ್ಮಾದಿಗಳಿಗೂ ನಿಯಾಮಕನೂ ಮತ್ತು ತನ್ನ ಅಧೀನದಲ್ಲಿರುವ ಮಾಯೆಯ ಮೂಲಕ ಎಲ್ಲರ ಅಂತಃಕರಣದಲ್ಲಿ ಇದ್ದು ಜೀವರನ್ನು ಪ್ರೇರಿತಗೊಳಿಸುವ ಸಮಸ್ತ ಪ್ರಾಣಿಗಳ ಆಶ್ರಯಸ್ವರೂಪನೂ ಆದ ಭಗವಾನ್ ವಾಸುದೇವನೇ ಆಗಿದ್ದಾನೆ. ॥ ೧೩ ॥ ವಾಯುವು ಸಮಸ್ತ ಸ್ಥಾವರ-ಜಂಗಮ ಪ್ರಾಣಿಗಳಲ್ಲಿ ಪ್ರಾಣರೂಪದಿಂದ ಸೇರಿಕೊಂಡು ಅವುಗಳನ್ನು ಪ್ರೇರೇಪಿಸುವಂತೆಯೇ ಆ ಪರಮೇಶ್ವರ ಭಗವಾನ್ ವಾಸುದೇವನು ಸರ್ವಸಾಕ್ಷಿ ಆತ್ಮಸ್ವರೂಪದಿಂದ ಈ ಸಮಸ್ತ ಪ್ರಪಂಚದಲ್ಲಿ ಓತಪ್ರೋತನಾಗಿದ್ದಾನೆ. ॥ ೧೪ ॥ ರಾಜನೇ! ಮನುಷ್ಯನು ಜ್ಞಾನೋದಯದ ಮೂಲಕ ಈ ಮಾಯೆಯನ್ನು ತಿರಸ್ಕರಿಸಿ, ಎಲ್ಲದರ ಆಸಕ್ತಿಯನ್ನು ಬಿಟ್ಟು ಕಾಮ-ಕ್ರೋಧಾದಿ ಆರು ಶತ್ರುಗಳನ್ನು ಗೆದ್ದುಕೊಂಡು ಆತ್ಮತತ್ತ್ವವನ್ನು ತಿಳಿದುಕೊಳ್ಳುವುದಿಲ್ಲವೋ ಮತ್ತು ಆತ್ಮನ ಉಪಾಧಿರೂಪವಾದ ಮನಸ್ಸನ್ನು ಸಂಸಾರವು ದುಃಖದ ಕ್ಷೇತ್ರವೆಂದು ತಿಳಿಯುವುದಿಲ್ಲವೋ ಅವನು ಈ ಲೋಕದಲ್ಲಿ ಹೀಗೆಯೇ ಅಲೆಯುತ್ತಾ ಇರುತ್ತಾನೆ. ಏಕೆಂದರೆ, ಈ ಚಿತ್ತವೇ ಅವನ ಶೋಕ, ಮೋಹ, ರೋಗ, ರಾಗ, ಲೋಭ ಮತ್ತು ವೈರ ಮುಂತಾದ ಸಂಸ್ಕಾರಗಳು ಹಾಗೂ ಮಮತೆಯನ್ನು ವೃದ್ಧಿಪಡಿಸುತ್ತಾ ಇರುತ್ತದೆ. ॥ ೧೫-೧೬ ॥ ಈ ಮನಸ್ಸೇ ನಿನ್ನ ದೊಡ್ಡ ಬಲಿಷ್ಠವಾದ ಶತ್ರುವಾಗಿದೆ. ನೀನು ಉಪೇಕ್ಷೆ ಮಾಡಿದ್ದರಿಂದ ಇದರ ಶಕ್ತಿಯು ಇನ್ನೂ ಹೆಚ್ಚಿದೆ. ಇದು ಸ್ವಯಂ ಸರ್ವಥಾ ಮಿಥ್ಯೆಯಾಗಿದ್ದರೂ ನಿನ್ನ ಆತ್ಮಸ್ವರೂಪವನ್ನು ಮರೆಮಾಚುತ್ತಿದೆ. ಅದಕ್ಕಾಗಿ ನೀನು ಸಾವಧಾನವಾಗಿದ್ದು ಶ್ರೀಗುರು ಮತ್ತು ಹರಿಯ ಚರಣಗಳ ಉಪಾಸನೆಯೆಂಬ ಶಸ್ತ್ರದಿಂದ ಇದನ್ನು ಕೊಂದುಬಿಡು. ॥ ೧೭ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ಬ್ರಾಹ್ಮಣ - ರಹೂಗಣಸಂವಾದೇ ಏಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ರಹೂಗಣನ ಪ್ರಶ್ನೆ ಮತ್ತು ಭರತಮುನಿಯ ಉತ್ತರ

*ರಹೂಗಣ ಉವಾಚ*

ನಮೋ ನಮಃ ಕಾರಣವಿಗ್ರಹಾಯ
ಸ್ವರೂಪತುಚ್ಛೀಕೃತವಿಗ್ರಹಾಯ ।
ನಮೋಽವಧೂತ ದ್ವಿಜಬಂಧುಲಿಂಗ-
ನಿಗೂಢನಿತ್ಯಾನುಭವಾಯ ತುಭ್ಯಮ್ ॥ ೧ ॥

ಜ್ವರಾಮಯಾರ್ತಸ್ಯ ಯಥಾಗದಂ ಸತ್
ನಿದಾಘದಗ್ಧಸ್ಯ ಯಥಾ ಹಿಮಾಂಭಃ ।
ಕುದೇಹಮಾನಾಹಿವಿದಷ್ಟದೃಷ್ಟೇಃ
ಬ್ರಹ್ಮನ್ವಚಸ್ತೇಽಮೃತಮೌಷಧಂ ಮೇ ॥ ೨ ॥

ತಸ್ಮಾದ್ಭವಂತಂ ಮಮ ಸಂಶಯಾರ್ಥಂ
ಪ್ರಕ್ಷ್ಯಾಮಿ ಪಶ್ಚಾದಧುನಾ ಸುಬೋಧಮ್ ।
ಅಧ್ಯಾತ್ಮಯೋಗಗ್ರಥಿತಂ ತವೋಕ್ತ-
ಮಾಖ್ಯಾಹಿ ಕೌತೂಹಲಚೇತಸೋ ಮೇ ॥ ೩ ॥

ಯದಾಹ ಯೋಗೇಶ್ವರ ದೃಶ್ಯಮಾನಂ
ಕ್ರಿಯಾಫಲಂ ಸದ್ವ್ಯವಹಾರಮೂಲಮ್ ।
ನ ಹ್ಯಂಜಸಾ ತತ್ತ್ವವಿಮರ್ಶನಾಯ
ಭವಾನಮುಷ್ಮಿನ್ ಭ್ರಮತೇ ಮನೋ ಮೇ ॥ ೪ ॥

**ರಹೂಗಣರಾಜನು ಹೇಳಿದನು** – ಪೂಜ್ಯರೇ ! ನಾನು ನಿಮಗೆ ನಮಸ್ಕಾರ ಮಾಡುತ್ತೇನೆ. ತಾವು ಜಗತ್ತಿನ ಉದ್ಧಾರಕ್ಕಾಗಿಯೇ ಈ ದೇಹವನ್ನು ಧರಿಸಿರುವಿರಿ. ಯೋಗೀಶ್ವರರೇ ! ತಾವು ಪರಮಾನಂದಮಯ ನಿಜಸ್ವರೂಪವನ್ನು ಅನುಭವಿಸುತ್ತಿದ್ದರೂ, ಅದನ್ನು ಮರೆಮಾಚಿ ಜನಸಾಮಾನ್ಯರ ದೃಷ್ಟಿಯಲ್ಲಿ ಓರ್ವ ಬಡ ಬ್ರಾಹ್ಮಣನಂತೆ ಕಾಣಿಸಿಕೊಂಡಿರುವ ಅವಧೂತರಾದ ನಿಮಗೆ ಮತ್ತೆ-ಮತ್ತೆ ನಮಸ್ಕಾರವು. ॥ ೧ ॥ ಬ್ರಾಹ್ಮಣಶ್ರೇಷ್ಠರೇ ! ಜ್ವರದಿಂದ ಪೀಡಿತನಾದ ರೋಗಿಗೆ ದಿವ್ಯವಾದ ಔಷಧಿಯೂ, ಬಿಸಿಲಿನ ಬೇಗೆಯಿಂದ ಬೆಂದವನಿಗೆ ಶೀತಲ ಜಲವೂ ಅಮೃತತುಲ್ಯವಾಗಿರುವಂತೆಯೇ – ದೇಹಾಭಿಮಾನವೆಂಬ ವಿಷಸರ್ಪದಿಂದ ಕಚ್ಚಲ್ಪಟ್ಟು ವಿವೇಕದೃಷ್ಟಿಯನ್ನು ಕಳಕೊಂಡ ನನಗೆ ನಿಮ್ಮ ಮಾತುಗಳು ಅಮೃತಮಯ ಔಷಧದಂತೆ ಇವೆ. ॥ ೨ ॥ ಭೂಸುರರೇ ! ಅಧ್ಯಾತ್ಮರಹಸ್ಯದ ಬಗ್ಗೆ ನನಗೆ ಉಂಟಾದ ಸಂಶಯಗಳನ್ನು ಆಮೇಲೆ ಅರಿಕೆಮಾಡಿಕೊಳ್ಳುವೆನು. ಮೊದಲಿಗೆ ಈಗ ನೀವು ನುಡಿದ ಅಧ್ಯಾತ್ಮಯೋಗಮಯ ಉಪದೇಶವನ್ನು ಅರ್ಥಮಾಡಿಕೊಳ್ಳುವುದು ನನಗೆ ಕಷ್ಟವಾಗಿದೆ. ಅದನ್ನು ಸರಳವಾಗಿ ತಿಳಿಸಿರಿ. ಇದನ್ನು ತಿಳಿಯಬೇಕೆಂಬ ಉತ್ಕಂಠತೆ ನನಗೆ ಇದೆ. ॥ ೩ ॥ ಯೋಗೇಶ್ವರರೇ ! 'ಭಾರವನ್ನು ಎತ್ತುವ ಕ್ರಿಯೆಯು, ಅದರಿಂದ ಉಂಟಾಗುವ ಶ್ರಮರೂಪೀ ಫಲವು ಇವೆರಡೂ ಪ್ರತ್ಯಕ್ಷವಾಗಿದ್ದರೂ ಕೇವಲ ವ್ಯವಹಾರಕ್ಕಾಗಿಯೇ ಇದೆ, ವಾಸ್ತವವಾಗಿ ಸತ್ಯವಾಗಿಲ್ಲ, ತತ್ತ್ವವಿಚಾರವನ್ನು ಮಾಡಿದಾಗ ಇವು ನಿಲ್ಲುವುದಿಲ್ಲ' – ಎಂದು ನೀವು ಹೇಳಿದಿರಲ್ಲ, ಈ ವಿಷಯದಲ್ಲಿ ನನ್ನ ಬುದ್ಧಿಯು ಭ್ರಮಿಸುತ್ತಿದೆ. ಇದರ ಮರ್ಮವು ನನ್ನ ಅರಿವಿಗೆ ಬರುತ್ತಿಲ್ಲ. ನಿಮ್ಮ ಆಶಯವನ್ನು ವಿವರಿಸುವವರಾಗಿರಿ. ॥ ೪ ॥

*ಬ್ರಾಹ್ಮಣ ಉವಾಚ*

ಅಯಂ ಜನೋ ನಾಮ ಚಲನ್ಪೃಥಿವ್ಯಾಂ
ಯಃ ಪಾರ್ಥಿವಃ ಪಾರ್ಥಿವ ಕಸ್ಯ ಹೇತೋಃ ।
ತಸ್ಯಾಪಿ ಚಾಂಘ್ರ್ಯೋರಧಿ ಗುಲ್ಫಜಂಘಾ-
ಜಾನೂರುಮಧ್ಯೋರಶಿರೋಧರಾಂಸಾಃ ॥ ೫ ॥

ಅಂಸೇಽಧಿ ದಾರ್ವೀ ಶಿಬಿಕಾ ಚ ಯಸ್ಯಾಂ
ಸೌವೀರರಾಜೇತ್ಯಪದೇಶ ಆಸ್ತೇ ।
ಯಸ್ಮಿನ್ ಭವಾನ್ರೂಢನಿಜಾಭಿಮಾನೋ
ರಾಜಾಸ್ಮಿ ಸಿಂಧುಷ್ವಿತಿ ದುರ್ಮದಾಂಧಃ ॥ ೬ ॥

**ಜಡಭರತನೆಂದನು** – ಎಲೈ ಪೃಥಿವೀಪತೇ ! ಈ ದೇಹವು ಪೃಥಿವಿಯ ವಿಕಾರವಾಗಿದೆ. ಕಲ್ಲು-ಮಣ್ಣುಗಳಿಗೂ ಇದಕ್ಕೂ ಯಾವ ಭೇದವಿದೆ ? ಯಾವುದೋ ಕಾರಣದಿಂದ ಈ ವಿಕಾರವು ಭೂಮಿಯಲ್ಲಿ ನಡೆಯತೊಡಗಿದಾಗ ಭಾರಹೊರುವುದು ಮುಂತಾದ ಹೆಸರುಗಳು ಉಂಟಾಗುತ್ತವೆ. ಇದಕ್ಕೆ ಎರಡು ಕಾಲುಗಳಿವೆ. ಕ್ರಮವಾಗಿ ಮೇಲಕ್ಕೆ ಹಿಮ್ಮಡಿಗಳು, ಮೀಗಾಲು, ಮಂಡಿಗಳು, ತೊಡೆಗಳು, ಸೊಂಟವೂ, ಎದೆಯೂ, ಕುತ್ತಿಗೆಯೂ, ಭುಜಗಳೂ ಮುಂತಾದ ಅವಯವಗಳಿಗೆ. ॥ ೫ ॥ ಆ ಹೆಗಲ ಮೇಲೆ ಮರದ ಪಲ್ಲಕ್ಕಿ ಇಡಲ್ಪಟ್ಟಿದೆ. ಅದರಲ್ಲಿಯೂ ಸೌವೀರರಾಜನೆಂಬ ಒಂದು ಪಾರ್ಥಿವ ವಿಕಾರ ಕುಳಿತಿದೆ. ಅದರಲ್ಲಿ ಆತ್ಮಬುದ್ಧಿಯನ್ನು ಆರೋಪಗೊಳಿಸಿದ್ದರಿಂದ ನೀನು – 'ನಾನು ಸಿಂಧುದೇಶದ ರಾಜನಾಗಿದ್ದೇನೆ' ಎಂಬ ಪ್ರಬಲ ಮದದಿಂದ ಕುರುಡನಾಗಿದ್ದೀಯೆ. ॥ ೬ ॥ ಆದರೆ ಇದರಿಂದ ನಿನ್ನ ಯಾವುದೇ ಶ್ರೇಷ್ಠತೆ ಸಿದ್ಧವಾಗುವುದಿಲ್ಲ. ನಿಜವಾಗಿ ನೀನೊಬ್ಬ ಕಡುಕ್ರೂರಿಯಾಗಿರುವೆ.

ಶೋಚ್ಯಾನಿಮಾಂಸ್ತ್ವಮಧಿಕಷ್ಟದೀನಾನ್
ವಿಷ್ಟ್ಯಾ ನಿಗೃಹ್ಣನ್ನಿರನುಗ್ರಹೋಽಸಿ ।
ಜನಸ್ಯ ಗೋಪ್ತಾಸ್ಮಿ ವಿಕತ್ಥಮಾನೋ
ನ ಶೋಭಸೇ ವೃದ್ಧಸಭಾಸು ಧೃಷ್ಟಃ ॥ ೭ ॥

ಯದಾ ಕ್ಷಿತಾವೇವ ಚರಾಚರಸ್ಯ
ವಿದಾಮ ನಿಷ್ಠಾಂ ಪ್ರಭವಂ ಚ ನಿತ್ಯಮ್ ।
ತನ್ನಾಮತೋಽನ್ಯದ್ ವ್ಯವಹಾರಮೂಲಂ
ನಿರೂಪ್ಯತಾಂ ಸತ್ಕ್ರಿಯಯಾನುಮೇಯಮ್ ॥ ೮ ॥

ಏವಂ ನಿರುಕ್ತಂ ಕ್ಷಿತಿಶಬ್ದವೃತ್ತ-
ಮಸನ್ನಿಧಾನಾತ್ಪರಮಾಣವೋ ಯೇ ।
ಅವಿದ್ಯಯಾ ಮನಸಾ ಕಲ್ಪಿತಾಸ್ತೇ
ಯೇಷಾಂ ಸಮೂಹೇನ ಕೃತೋ ವಿಶೇಷಃ ॥ ೯ ॥

ಏವಂ ಕೃಶಂ ಸ್ಥೂಲಮಣುರ್ಬೃಹದ್ಯದ್
ಅಸಚ್ಚ ಸಜ್ಜೀವಮಜೀವಮನ್ಯತ್ ।
ದ್ರವ್ಯಸ್ವಭಾವಾಶಯಕಾಲಕರ್ಮ-
ನಾಮ್ನಾಜಯಾವೇಹಿ ಕೃತಂ ದ್ವಿತೀಯಮ್ ॥ ೧೦ ॥

ಜ್ಞಾನಂ ವಿಶುದ್ಧಂ ಪರಮಾರ್ಥಮೇಕ-
ಮನಂತರಂ ತ್ವಬಹಿರ್ಬ್ರಹ್ಮ ಸತ್ಯಮ್ ।
ಪ್ರತ್ಯಕ್ ಪ್ರಶಾಂತಂ ಭಗವಚ್ಛಬ್ದಸಂಜ್ಞಂ
ಯದ್ವಾಸುದೇವಂ ಕವಯೋ ವದಂತಿ ॥ ೧೧ ॥

ರಹೂಗಣೈತತ್ತಪಸಾ ನ ಯಾತಿ
ನ ಚೇಜ್ಯಯಾ ನಿರ್ವಪಣಾದ್ ಗೃಹಾದ್ವಾ ।
ನ ಛಂದಸಾ ನೈವ ಜಲಾಗ್ನಿಸೂರ್ಯೈ-
ರ್ವಿನಾ ಮಹತ್ಪಾದರಜೋಽಭಿಷೇಕಮ್ ॥ ೧೨ ॥

ಯತ್ರೋತ್ತಮಶ್ಲೋಕಗುಣಾನುವಾದಃ
ಪ್ರಸ್ತೂಯತೇ ಗ್ರಾಮ್ಯಕಥಾವಿಘಾತಃ ।
ನಿಷೇವ್ಯಮಾಣೋಽನುದಿನಂ ಮುಮುಕ್ಷೋ-
ರ್ಮತಿಂ ಸತೀಂ ಯಚ್ಛತಿ ವಾಸುದೇವೇ ॥ ೧೩ ॥

ಅಹಂ ಪುರಾ ಭರತೋ ನಾಮ ರಾಜಾ
ವಿಮುಕ್ತದೃಷ್ಟಶ್ರುತಸಂಗಬಂಧಃ ।
ಆರಾಧನಂ ಭಗವತ ಈಹಮಾನೋ
ಮೃಗೋಽಭವಂ ಮೃಗಸಂಗಾದ್ಧತಾರ್ಥಃ ॥ ೧೪ ॥

ನೀನು ಈ ಬಡಪಾಯಿ ಬೋಯಿಗಳನ್ನು ಹಿಡಿದುತಂದು ಬಿಟ್ಟಿಯಾಗಿ ಪಲ್ಲಕ್ಕಿಯನ್ನು ಹೊರಿಸುತ್ತಿರುವೆ. ಮತ್ತೆ 'ನಾನು ಪ್ರಜೆಗಳನ್ನು ರಕ್ಷಿಸುವವನು' ಎಂದು ಮಹಾಪುರುಷರ ಸಭೆಯಲ್ಲಿ ಬಡಾಯಿ ಕೊಚ್ಚಿಕೊಂಡಿರುವೆ. ಇದು ನಿನಗೆ ಏನೂ ಶೋಭಿಸುವುದಿಲ್ಲ. ॥ ೭ ॥ ಸಮಸ್ತ ಚರಾಚರ ಪ್ರಾಣಿಗಳು ಯಾವಾಗಲೂ ಪೃಥಿವಿಯಿಂದಲೇ ಉಂಟಾಗಿ, ಪೃಥಿವಿಯಲ್ಲೇ ಲೀನವಾಗಿ ಹೋಗುತ್ತವೆ ಎಂಬುದನ್ನು ನಾವು ನೋಡುತ್ತೇವೆ. ಆದ್ದರಿಂದ ಅವುಗಳ ಕ್ರಿಯಾಭೇದದಿಂದ ಅವಕ್ಕೆ ಬೇರೆ-ಬೇರೆ ಹೆಸರುಗಳು ಉಂಟಾಗಿವೆ. ಇದಲ್ಲದೆ ವ್ಯವಹಾರಕ್ಕೆ ಇನ್ನೇನು ಮೂಲವಿದೆ ಹೇಳು. ॥ ೮ ॥

ಹೀಗೆಯೇ 'ಪೃಥಿವಿ' ಶಬ್ದದ ವ್ಯವಹಾರವೂ ಮಿಥ್ಯೆಯೇ ಆಗಿದೆ, ವಾಸ್ತವಿಕವಾಗಿಲ್ಲ, ಏಕೆಂದರೆ, ಇದೂ ತನ್ನ ಉಪಾದಾನ ಕಾರಣವಾದ ಸೂಕ್ಷ್ಮ ಪರಮಾಣುಗಳಲ್ಲಿ ಲೀನವಾಗಿ ಹೋಗುತ್ತದೆ. ಯಾವುದರ ಸೇರುವಿಕೆಯಿಂದ ಪೃಥಿವೀರೂಪವಾದ ಕಾರ್ಯದ ಸಿದ್ಧಿಯಾಗುತ್ತದೋ ಆ ಪರಮಾಣುಗಳೂ ಅವಿದ್ಯೆಗೆ ವಶವಾದ ಮನಸ್ಸಿನ ಕಲ್ಪನೆಯೇ ಆಗಿದೆ. ನಿಜವಾಗಿ ಆದರ ಅಸ್ತಿತ್ವವೂ ಇಲ್ಲ. ॥ ೯ ॥ ಹೀಗೆಯೇ ಇನ್ನೂ ಏನೆಲ್ಲ ದಪ್ಪ-ತೆಳ್ಳಗೆ, ಚಿಕ್ಕದು-ದೊಡ್ಡದು, ಕಾರ್ಯ-ಕಾರಣ ಹಾಗೂ ಚೇತನ-ಅಚೇತನ ಮುಂತಾದ ಗುಣಗಳಿಂದ ಕೂಡಿದ ದ್ವೈತ ಪ್ರಪಂಚವಿದೆಯೋ ಅದನ್ನು ಕೂಡ ದ್ರವ್ಯ, ಸ್ವಭಾವ, ಆಶಯ, ಕಾಲ ಮತ್ತು ಕರ್ಮ ಮುಂತಾದ ಹೆಸರುಗಳುಳ್ಳ ಭಗವಂತನ ಮಾಯೆಯ ಕಾರ್ಯವೇ ಆಗಿದೆ ಎಂದು ತಿಳಿ. ॥ ೧೦ ॥ ಪರಿಶುದ್ಧವೂ, ಜ್ಞಾನಸ್ವರೂಪವೂ, ಪರಮಾರ್ಥವೂ, ವಿಕಾರ ರಹಿತವೂ, ನಿರಂತರವಾಗಿ ಒಳಗೆ-ಹೊರಗೆ ತುಂಬಿಕೊಂಡಿರುವುದೂ, ಪ್ರತ್ಯಗಾನಂದವೂ ಆದ ಪರಬ್ರಹ್ಮಪರಮಾತ್ಮನೇ ಪರಮ ಸತ್ಯವು. ಅದನ್ನೇ 'ಭಗವಂತ' ಎಂದೂ ವಾಸುದೇವನೆಂದೂ ಜ್ಞಾನಿಗಳು ಹೇಳುತ್ತಾರೆ. ॥ ೧೧ ॥ ರಹೂಗಣನೇ! ಮಹಾಪುರುಷರ ಪಾದಧೂಳಿಯಿಂದ ಅಭಿಷೇಕ ಮಾಡಿಕೊಳ್ಳದಿದ್ದರೆ – ಕೇವಲ ತಪಸ್ಸು, ಯಜ್ಞವೇ ಮುಂತಾದ ವೈದಿಕ ಕರ್ಮಗಳು, ಅನ್ನಾದಿದಾನಗಳು, ಅತಿಥಿಸೇವೆ, ದೀನ ದರಿದ್ರರ ಸೇವೆ ಮುಂತಾದ ಗೃಹಸ್ಥೋಚಿತವಾದ ಧರ್ಮಗಳ ಅನುಷ್ಠಾನದಿಂದಾಗಲೀ, ವೇದಾಧ್ಯಯನದಿಂದಾಗಲೀ ಜಲ, ಅಗ್ನಿ ಅಥವಾ ಸೂರ್ಯರೇ ಮುಂತಾದವರ ಉಪಾಸನೆಯಿಂದಾಗಲೀ, ಯಾವುದೇ ಸಾಧನೆಯಿಂದಾಗಲೀ ಈ ಪರಮಾತ್ಮಜ್ಞಾನವು ಲಭಿಸಲಾರದು. ॥ ೧೨ ॥ ಇದರ ಕಾರಣ – ಮಹಾಪುರುಷರ ಸಮಾಜದಲ್ಲಿ ಸದಾ ಪವಿತ್ರವಾದ ಕೀರ್ತಿಯುಳ್ಳ ಶ್ರೀಹರಿಯ ಗುಣಗಳ ವರ್ಣನೆಯೇ ನಡೆಯುತ್ತದೆ. ಗ್ರಾಮ್ಯಸುಖಗಳ ಸಮಾಜವು ಅಲ್ಲಿಗೆ ಸುಳಿಯುವುದೇ ಇಲ್ಲ. ಅಂತಹ ಸಂತರ ಸಂಗದಲ್ಲಿ ಶ್ರೀಭಗವಂತನ ಕಥೆಗಳನ್ನು ನಿತ್ಯವೂ ಸೇವನೆ ಮಾಡುತ್ತಿದ್ದರೆ, ಅದು ಮೋಕ್ಷವನ್ನು ಬಯಸುವ ಮನುಷ್ಯನ ಶುದ್ಧವಾದ ಬುದ್ಧಿಯನ್ನು ಭಗವಾನ್ ವಾಸುದೇವನಲ್ಲಿ ನೆಲೆಗೊಳಿಸುವುದು. ॥ ೧೩ ॥

ಹಿಂದಿನ ಜನ್ಮದಲ್ಲಿ ನಾನು ಭರತನೆಂಬ ರಾಜನಾಗಿದ್ದೆನು. ಐಹಿಕ ಮತ್ತು ಪಾರಲೌಕಿಕ ಎರಡೂ ವಿಧದ ವಿಷಯಗಳಿಂದ ವಿರಕ್ತನಾಗಿ ಭಗವಂತನ ಆರಾಧನೆಯಲ್ಲಿ ತೊಡಗಿದ್ದೆ. ಹೀಗಿದ್ದರೂ ಒಂದು ಮೃಗದಲ್ಲಿ ಆಸಕ್ತನಾದ್ದರಿಂದ ನಾನು ಪರಮಾರ್ಥದಿಂದ ಭ್ರಷ್ಟನಾಗಿ ಮುಂದಿನ ಜನ್ಮದಲ್ಲಿ ಜಿಂಕೆಯಾಗಿ ಹುಟ್ಟಬೇಕಾಯಿತು. ॥ ೧೪ ॥ ಆದರೆ ಭಗವಾನ್ ಶ್ರೀಕೃಷ್ಣನ ಆರಾಧನೆಯ ಪ್ರಭಾವ

ಸಾ ಮಾಂ ಸ್ಮೃತಿರ್ಮೃಗದೇಹೇಽಪಿ ವೀರ
ಕೃಷ್ಣಾರ್ಚನಪ್ರಭವಾ ನೋ ಜಹಾತಿ ।
ಅಥೋ ಅಹಂ ಜನಸಂಗಾದಸಂಗೋ
ವಿಶಂಕಮಾನೋಽವಿವೃತಶ್ಚರಾಮಿ ॥ ೧೫ ॥

ದಿಂದ ಆ ಜಿಂಕೆಯ ಯೋನಿಯಲ್ಲಿಯೂ ನನ್ನ ಪೂರ್ವಜನ್ಮದ ಸ್ಮೃತಿಯು ಅಳಿಯಲಿಲ್ಲ. ಆದರಿಂದಲೇ ಈಗ ನಾನು ಜನರ ಸಹವಾಸಕ್ಕೆ ಹೆದರಿ ಯಾವಾಗಲೂ ಅಸಂಗಭಾವದಿಂದ ಗುಪ್ತರೂಪದಿಂದಲೇ ಸಂಚರಿಸುತ್ತಿದ್ದೇನೆ. ॥ ೧೫ ॥ ಸಾರಾಂಶ ಇಷ್ಟೇ – ವಿರಕ್ತರಾದ ಮಹಾಪುರುಷರ ಸಂಗದಿಂದ ಉಂಟಾದ ಜ್ಞಾನವೆಂಬ ಖಡ್ಗದಿಂದ ಮನುಷ್ಯನು ಈ ಲೋಕದಲ್ಲಿಯೇ ತನ್ನ ಮೋಹ ಬಂಧನವನ್ನು ಕತ್ತರಿಸಿಹಾಕಿ, ಶ್ರೀಹರಿಯ ಲೀಲಾಕಥೆಗಳ ಶ್ರವಣ, ಕೀರ್ತನ, ಮನನ ಇವುಗಳಿಂದ ಶ್ರೀಭಗವಂತನ ನಿರಂತರ ಸ್ಮೃತಿಯನ್ನು ಪಡೆದು ಸುಲಭವಾಗಿ ಸಂಸಾರಮಾರ್ಗವನ್ನು ದಾಟಿ ಶ್ರೀಭಗವಂತನನ್ನು ಹೊಂದುವನು. ॥ ೧೬ ॥

ತಸ್ಮಾನ್ನರೋಽಸಂಗ ಸುಸಂಗಜಾತ-
ಜ್ಞಾನಾಸಿನೇಹೈವ ವಿವೃಕ್ಣಮೋಹಃ ।
ಹರಿಂ ತದೀಹಾಕಥನಶ್ರುತಾಭ್ಯಾಂ
ಲಬ್ಧಸ್ಮೃತಿರ್ಯಾತ್ಯತಿಪಾರಮಧ್ವನಃ ॥ ೧೬ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ 12 ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಬ್ರಾಹ್ಮಣ-ರಹೂಗಣಸಂವಾದೇ ದ್ವಾದಶೋಽಧ್ಯಾಯಃ ॥ ೧೨ ॥**

# ಹದಿಮೂರನೆಯ ಅಧ್ಯಾಯ

## ಭರತಮುನಿಯಿಂದ ಭವಾಟವಿಯ ವರ್ಣನೆ– ರಹೂಗಣನ ಸಂಶಯ ಪರಿಹಾರ

*ಬ್ರಾಹ್ಮಣ ಉವಾಚ*

ದುರತ್ಯಯೇಽಧ್ವನ್ಯಜಯಾ ನಿವೇಶಿತೋ
ರಜಸ್ತಮಃಸತ್ತ್ವವಿಭಕ್ತಕರ್ಮದೃಕ್ ।
ಸ ಏಷ ಸಾರ್ಥೋಽರ್ಥಪರಃ ಪರಿಭ್ರಮನ್
ಭವಾಟವೀಂ ಯಾತಿ ನ ಶರ್ಮ ವಿಂದತಿ ॥ ೧ ॥

ಯಸ್ಯಾಮಿಮೇ ಷಣ್ನರದೇವ ದಸ್ಯವಃ
ಸಾರ್ಥಂ ವಿಲುಂಪಂತಿ ಕುನಾಯಕಂ ಬಲಾತ್ ।
ಗೋಮಾಯವೋ ಯತ್ರ ಹರಂತಿ ಸಾರ್ಥಿಕಂ
ಪ್ರಮತ್ತಮಾವಿಶ್ಯ ಯಥೋರಣಂ ವೃಕಾಃ ॥ ೨ ॥

ಪ್ರಭೂತವೀರುತ್ತೃಣಗುಲ್ಮಗಹ್ವರೇ
ಕಠೋರದಂಶೈರ್ಮಶಕೈರುಪದ್ರುತಃ ।
ಕ್ವಚಿತ್ತು ಗಂಧರ್ವಪುರಂ ಪ್ರಪಶ್ಯತಿ
ಕ್ವಚಿತ್ಕ್ವಚಿಚ್ಚಾಶುರಯೋಲ್ಮುಕಗ್ರಹಮ್ ॥ ೩ ॥

**ಜಡ ಭರತನು ಹೇಳುತ್ತಾನೆ** – ಎಲೈ ರಾಜೇಂದ್ರನೇ! ಈ ಜೀವಸಮುದಾಯವು ಸುಖರೂಪವಾದ ಧನದಲ್ಲಿ ಆಸಕ್ತವಾಗಿ ದೇಶ-ದೇಶಾಂತರದಲ್ಲಿ ಸುತ್ತಾಡಿ ವ್ಯಾಪಾರ ಮಾಡುವಂತಹ ವ್ಯಾಪಾರಿಗಳ ಗುಂಪಿನಂತೆ ಇದೆ. ಇದನ್ನು ಮಾಯೆಯು ದುಸ್ತರವಾದ ಪ್ರವೃತ್ತಿಮಾರ್ಗದಲ್ಲಿ ತೊಡಗಿಸಿದೆ. ಅದಕ್ಕಾಗಿ ಇದರ ದೃಷ್ಟಿಯು ಸಾತ್ತ್ವಿಕ, ರಾಜಸ, ತಾಮಸ ಎಂಬ ಭೇದದಿಂದ ನಾನಾ ವಿಧದ ಕರ್ಮಗಳ ಕಡೆಗೆ ಹೋಗುತ್ತಿರುತ್ತದೆ. ಆ ಕರ್ಮಗಳಲ್ಲಿ ಅಲೆಯುತ್ತಾ-ಅಲೆಯುತ್ತಾ ಈ ಸಂಸಾರರೂಪವಾದ ಗೊಂಡಾರಣ್ಯಕ್ಕೆ ತಲುಪುತ್ತದೆ. ಅಲ್ಲಿ ಅದಕ್ಕೆ ಸ್ವಲ್ಪವೂ ನೆಮ್ಮದಿಯು ಸಿಗುವುದಿಲ್ಲ. ॥ ೧ ॥ ಮಹಾರಾಜನೇ! ಆ ಅರಣ್ಯದಲ್ಲಿ ಆರು ಕಳ್ಳರಿದ್ದಾರೆ. ಈ ವ್ಯಾಪಾರಿಗಳ ತಂಡದ ನಾಯಕನು ಅತಿದುಷ್ಟನಾಗಿರುವನು. ಅವನ ನೇತೃತ್ವದಲ್ಲಿ ಇವನು ಅಲ್ಲಿಗೆ ತಲುಪಿದಾಗ ಈ ದರೋಡೆಕೋರರು ಬಲಾತ್ಕಾರದಿಂದ ಇವನ ಎಲ್ಲ ಸಂಪತ್ತನ್ನು ಲೂಟಿಮಾಡುತ್ತಾರೆ. ತೋಳಗಳು ಕುರಿಯ ಮಂದೆಯಲ್ಲಿ ನುಗ್ಗಿ ಅವನ್ನು ಎಳೆದುಕೊಂಡು ಹೋಗುವಂತೆ, ಅವುಗಳ ಜೊತೆಯಲ್ಲಿರುವ ನರಿಗಳು ಇವನು ಅಸಾವಧಾನವೆಂದರಿತು ಇವನ ಧನವನ್ನು ಅತ್ತ-ಇತ್ತ ಸೆಳೆದಾಡುತ್ತವೆ. ॥ ೨ ॥ ಆ ಕಾಡು ಬಹಳಷ್ಟು ಲತೆ, ಹುಲ್ಲು, ಪೊದೆಗಳಿಂದ ನಿಬಿಡವಾಗಿದ್ದು ತುಂಬಾ ದುರ್ಗಮವಾಗಿದೆ. ಅದರಲ್ಲಿ ಕ್ರೂರವಾದ ಕಾಡುಕೋಣ, ಕಾಡುಸೊಳ್ಳೆಗಳು ಇವನನ್ನು ನೆಮ್ಮದಿಯಾಗಿರಲು ಬಿಡುವುದಿಲ್ಲ. ಅಲ್ಲಿ ಇವನಿಗೆ ಕೆಲವೊಮ್ಮೆ ಗಂಧರ್ವನಗರವು ಕಂಡುಬಂದರೆ, ಕೆಲವೊಮ್ಮೆ ಥಳ-ಥಳಿಸುವ ಕೊಳ್ಳಿ-ಪಿಶಾಚಿಗಳೂ ಕಣ್ಮುಂದೆ ಬಂದು ಬಿಡುತ್ತವೆ. ॥ ೩ ॥ ಈ ವ್ಯಾಪಾರಿ ಸಮುದಾಯವು ಈ ಕಾಡಿನಲ್ಲಿ

ನಿವಾಸತೋಯದ್ರವಿಣಾತ್ಮಬುದ್ಧಿ-
ಸ್ತತಸ್ತತೋ ಧಾವತಿ ಭೋ ಅಟವ್ಯಾಮ್ ।
ಕ್ವಚಿಚ್ಚ ವಾತ್ಯೋತ್ಥಿತಪಾಂಸುಧೂಮ್ರಾ
ದಿಶೋ ನ ಜಾನಾತಿ ರಜಸ್ವಲಾಕ್ಷಃ ॥ ೪ ॥

ಅದೃಶ್ಯಝಿಲ್ಲೀಸ್ವನಕರ್ಣಶೂಲ
ಉಲೂಕವಾಗ್ಭಿರ್ವ್ಯಥಿತಾಂತರಾತ್ಮಾ ।
ಅಪುಣ್ಯವೃಕ್ಷಾನ್ ಶ್ರಯತೇ ಕ್ಷುಧಾರ್ದಿತೋ
ಮರೀಚಿತೋಯಾನ್ಯಭಿಧಾವತಿ ಕ್ವಚಿತ್ ॥ ೫ ॥

ಕ್ವಚಿದ್ವಿತೋಯಾಃ ಸರಿತೋಽಭಿಯಾತಿ
ಪರಸ್ಪರಂ ಚಾಲಷತೇ ನಿರಂಧಃ ।
ಆಸಾದ್ಯ ದಾವಂ ಕ್ವಚಿದಗ್ನಿತಪ್ತೋ
ನಿರ್ವಿದ್ಯತೇ ಕ್ವ ಚ ಯಕ್ಷೈರ್ಹೃತಾಸುಃ ॥ ೬ ॥

ಶೂರೈರ್ಹೃತಸ್ವಃ ಕ್ವ ಚ ನಿರ್ವಿಣ್ಣಚೇತಾಃ
ಶೋಚನ್ ವಿಮುಹ್ಯನ್ನುಪಯಾತಿ ಕಶ್ಮಲಮ್ ।
ಕ್ವಚಿಚ್ಚ ಗಂಧರ್ವಪುರಂ ಪ್ರವಿಷ್ಟಃ
ಪ್ರಮೋದತೇ ನಿರ್ವೃತವನ್ಮುಹೂರ್ತಮ್ ॥ ೭ ॥

ಚಲನ್ಕ್ವಚಿತ್ಕಂಟಕಶರ್ಕರಾಂಘ್ರಿ-
ರ್ನಗಾರುರುಕ್ಷುರ್ವಿಮನಾ ಇವಾಸ್ತೇ ।
ಪದೇ ಪದೇಽಭ್ಯಂತರವಹ್ನಿನಾರ್ದಿತಃ
ಕೌಟುಂಬಿಕಃ ಕ್ರುಧ್ಯತಿ ವೈ ಜನಾಯ ॥ ೮ ॥

ಕ್ವಚಿನ್ನಿಗೀರ್ಣೋಽಜಗರಾಹಿನಾ ಜನೋ
ನಾವೈತಿ ಕಿಂಚಿದ್ವಿಪಿನೇಽಪವಿದ್ಧಃ ।
ದಷ್ಟಃ ಸ್ಮ ಶೇತೇ ಕ್ವ ಚ ದಂದಶೂಕೈ-
ರಂಧೋಽಂಧಕೂಪೇ ಪತಿತಸ್ತಮಿಸ್ರೇ ॥ ೯ ॥

ಕರ್ಹಿ ಸ್ಮ ಚಿತ್ ಕ್ಷುದ್ರರಸಾನ್ವಿಚಿನ್ವಂ-
ಸ್ತನ್ಮಕ್ಷಿಕಾಭಿರ್ವ್ಯಥಿತೋ ವಿಮಾನಃ ।
ತತ್ರಾತಿಕೃಚ್ಛ್ರಾತ್ಪ್ರತಿಲಬ್ಧಮಾನೋ
ಬಲಾದ್ವಿಲುಂಪಂತ್ಯಥ ತಂ ತತೋಽನ್ಯೇ ॥ ೧೦ ॥

ಕ್ವಚಿಚ್ಚ ಶೀತಾತಪವಾತವರ್ಷ-
ಪ್ರತಿಕ್ರಿಯಾಂ ಕರ್ತುಮನೀಶ ಆಸ್ತೇ ।
ಕ್ವಚಿನ್ ಮಿಥೋ ವಿಪಣನ್ಯಚ್ಚ ಕಿಂಚಿದ್
ವಿದ್ವೇಷಮೃಚ್ಛತ್ಯುತ ವಿತ್ತಶಾಠ್ಯಾತ್ ॥ ೧೧ ॥

ವಾಸಸ್ಥಾನ, ನೀರು ಮತ್ತು ಧನಾದಿಗಳಲ್ಲಿ ಆಸಕ್ತವಾಗಿ ಅತ್ತ-ಇತ್ತ ಅಲೆಯುತ್ತಿರುತ್ತದೆ. ಕೆಲವೊಮ್ಮೆ ಬಿರುಗಾಳಿಯಿಂದ ಎದ್ದಿರುವ ಧೂಳಿನಿಂದ ಎಲ್ಲ ದಿಕ್ಕುಗಳು ಮುಚ್ಚಿದಂತೆ ಆಗುತ್ತವೆ. ಮತ್ತು ಇವನ ಕಣ್ಣುಗಳಲ್ಲಿಯೂ ತುಂಬಿಹೋಗುತ್ತದೆ. ಆಗ ಇವನಿಗೆ ದಿಗ್ಭ್ರಮೆ ಯುಂಟಾಗುತ್ತದೆ. ॥ ೪ ॥ ಕೆಲವೊಮ್ಮೆ ಇವನಿಗೆ ಕಾಣಸಿಗದಿರುವ ಝಿಲ್ಲೀಕ್ರಿಮಿಗಳ ಕರ್ಣಕರ್ಕಶವಾದ ಶಬ್ದಗಳು ಕೇಳಿಸುತ್ತಿದ್ದರೆ, ಕೆಲವೊಮ್ಮೆ ಗೂಬೆಗಳ ಕೂಗಿನಿಂದ ಇವನ ಚಿತ್ತವು ದುಃಖಿತ ವಾಗುತ್ತದೆ. ಕೆಲವೊಮ್ಮೆ ಇವನಿಗೆ ಹಸಿವು ಕಾಡಿದಾಗ ಇವನು ನಿಂದನೀಯ ವೃಕ್ಷಗಳನ್ನು ಆಶ್ರಯಿಸತೊಡಗುವನು. ಕೆಲವೊಮ್ಮೆ ಬಾಯರಿಕೆಯಿಂದ ಬಳಲಿದಾಗ ಬಿಸಿಲ್ಗುದುರೆಯ ಕಡೆಗೆ ಓಡತೊಡಗುವನು. ॥ ೫ ॥ ಕೆಲವೊಮ್ಮೆ ನೀರಿಲ್ಲದ ನದಿಗಳ ಕಡೆಗೆ ಹೋಗುತ್ತಾನೆ. ಕೆಲವೊಮ್ಮೆ ಅನ್ನವು ಸಿಗದಿದ್ದಾಗ ಪರಸ್ಪರ ಒಬ್ಬರ ನ್ನೊಬ್ಬರು ಭೋಜನವನ್ನು ಬಯಸುತ್ತಾರೆ. ಕೆಲವೊಮ್ಮೆ ಕಾಡು ಗಿಚ್ಚಿನಲ್ಲಿ ನುಗ್ಗಿ ಬೆಂಕಿಯಿಂದ ಬೆಂದುಹೋಗುತ್ತಾರೆ. ಕೆಲವೊಮ್ಮೆ ಯಕ್ಷರು ಇವನ ಪ್ರಾಣಗಳನ್ನು ಎಳೆದಾಡತೊಡಗಿದಾಗ ಇವನು ದುಃಖಿತನಾಗುವನು. ॥ ೬ ॥ ಕೆಲವೊಮ್ಮೆ ತನ್ನಿಂದ ಬಲಿಷ್ಠರಾದ ವರು ಇವನ ಧನವನ್ನು ಕಸಿದುಕೊಂಡಾಗ ಇವನು ದುಃಖಿತನಾಗಿ ಶೋಕ ಮತ್ತು ಮೋಹದಿಂದ ಎಚ್ಚರತಪ್ಪುವನು. ಕೆಲವೊಮ್ಮೆ ಗಂಧರ್ವನಗರವನ್ನು ತಲುಪಿ ಒಂದು ಕ್ಷಣವಾದರೂ ಎಲ್ಲ ದುಃಖಗಳನ್ನು ಮರೆತು ಸಂತೋಷಪಡುವನು. ॥ ೭ ॥ ಕೆಲವೊಮ್ಮೆ ಪರ್ವತಗಳ ಮೇಲೆ ಹತ್ತಲು ಬಯಸಿದರೆ ಕಲ್ಲು-ಮುಳ್ಳುಗಳಿಂದ ಕಾಲು ಜರಡಿಯಂತಾಗಿ ಖಿನ್ನನಾಗುವನು. ಕುಟುಂಬವು ದೊಡ್ಡದಾಗಿ ಬೆಳೆದು ಜೀವಿಕೆಯು ನಡೆಯದಿದ್ದಾಗ ಹಸಿವಿನ ಬಾಧೆಯಿಂದ ತನ್ನ ಬಂಧು-ಬಾಂಧವರ ಮೇಲೆ ರೇಗತೊಡಗು ತ್ತಾನೆ. ॥ ೮ ॥ ಕೆಲವೊಮ್ಮೆ ಹೆಬ್ಬಾವಿಗೆ ತುತ್ತಾಗಿ ಕಾಡಿನಲ್ಲಿ ಎಸೆದಿರುವ ಹೆಣದಂತೆ ಬಿದ್ದುಕೊಳ್ಳುವನು. ಆಗ ಇವನಿಗೆ ಯಾವ ಎಚ್ಚರವೂ ಇರುವುದಿಲ್ಲ. ಕೆಲವೊಮ್ಮೆ ಬೇರೆ ವಿಷಸರ್ಪದ ಪ್ರಭಾವ ದಿಂದ ಕುರುಡನಾಗಿ ಯಾವುದೋ ಕತ್ತಲ ಬಾವಿಯಲ್ಲಿ ಬಿದ್ದುಬಿಡು ತ್ತಾನೆ ಹಾಗೂ ಘೋರವಾದ ದುಃಖಮಯ ಅಂಧಕಾರದಲ್ಲಿ ಜ್ಞಾನತಪ್ಪಿ ಬಿದ್ದಿರುತ್ತಾನೆ. ॥ ೯ ॥ ಕೆಲವೊಮ್ಮೆ ಜೇನನ್ನು ಹುಡುಕ ತೊಡಗುವನು. ಆಗ ಜೇನುನೊಣಗಳು ಇವನನ್ನು ಕಚ್ಚಿ ಪೀಡಿಸು ವವು ಹಾಗೂ ಇವನ ಅಭಿಮಾನವೆಲ್ಲವೂ ನಾಶವಾಗಿ ಹೋಗುತ್ತದೆ. ಯಾವುದೇ ರೀತಿಯಿಂದ ಅನೇಕ ಕಷ್ಟಗಳನ್ನು ಎದುರಿಸಿ ಜೇನು ಸಿಕ್ಕಿದರೂ ಬಲಾತ್ಕಾರದಿಂದ ಬೇರೆಯವರು ಕಸಿದುಕೊಳ್ಳುವರು. ॥ ೧೦ ॥ ಕೆಲವೊಮ್ಮೆ ಚಳಿ, ಸೆಕೆ, ಚಂಡಮಾರುತ, ಮಳೆ ಇವು ಗಳಿಂದ ತನ್ನನ್ನು ಕಾಪಾಡಿಕೊಳ್ಳಲು ಅಸಮರ್ಥನಾಗುತ್ತಾನೆ. ಕೆಲ ವೊಮ್ಮೆ ತಮ್ಮ-ತಮ್ಮಲ್ಲಿ ಸ್ವಲ್ಪ ವ್ಯಾಪಾರ ಮಾಡುತ್ತಾನೆ, ಧನದ ಲೋಭದಿಂದ ಬೇರೆಯವರಿಗೆ ಮೋಸಮಾಡಿ ಅವರಲ್ಲಿ ವೈರವನ್ನು ಕಟ್ಟಿಕೊಳ್ಳುತ್ತಾನೆ. ॥ ೧೧ ॥ ಕೆಲವೊಮ್ಮೆ ಆ ಸಂಸಾರಾರಣ್ಯದಲ್ಲಿ ಹಣವನ್ನು ಕಳೆದುಕೊಂಡು ಹಾಸಿಗೆ, ಹೊದಿಕೆ, ಆಸನ, ಮನೆ, ವಾಹನ ಯಾವುದೂ ಇಲ್ಲದೆ ಅವುಗಳಿಗಾಗಿ ಇತರರನ್ನು ಬೇಡಬೇಕಾಗುವುದು. ಅವರು ಕೊಡದೆ ಹೋದರೆ ಅವುಗಳನ್ನು

ಕ್ವಚಿತ್ ಕ್ವಚಿತ್ ಕ್ಷೀಣಧನಸ್ತು ತಸ್ಮಿನ್
ಶಯ್ಯಾಸನಸ್ಥಾನವಿಹಾರಹೀನಃ ।
ಯಾಚನ್ ಪರಾದಪ್ರತಿಲಬ್ಧಕಾಮಃ
ಪಾರಕ್ಯದೃಷ್ಟಿರ್ಲಭತೇಽವಮಾನಮ್ ॥ ೧೨ ॥

ಅನ್ಯೋನ್ಯವಿತ್ತವ್ಯತಿಷಂಗವೃದ್ಧ-
ವೈರಾನುಬಂಧೋ ವಿವಹನ್ಮಿಥಶ್ಚ ।
ಅಧ್ವನ್ಯಮುಷ್ಮಿನ್ನುರುಕೃಚ್ಛ್ರವಿತ್ತ-
ಬಾಧೋಪಸರ್ಗೈರ್ವಿಹರನ್ ವಿಪನ್ನಃ ॥ ೧೩ ॥

ತಾಂಸ್ತಾನ್ವಿಪನ್ನಾನ್ ಸ ಹಿ ತತ್ರ ತತ್ರ
ವಿಹಾಯ ಜಾತಂ ಪರಿಗೃಹ್ಯ ಸಾರ್ಥಃ ।
ಆವರ್ತತೇಽದ್ಯಾಪಿ ನ ಕಶ್ಚಿದತ್ರ
ವೀರಾಧ್ವನಃ ಪಾರಮುಪೈತಿ ಯೋಗಮ್ ॥ ೧೪ ॥

ಮನಸ್ವಿನೋನಿರ್ಜಿತದಿಗ್ಗಜೇಂದ್ರಾ
ಮಮೇತಿ ಸರ್ವೇ ಭುವಿ ಬದ್ಧವೈರಾಃ ।
ಮೃಧೇ ಶಯೀರನ್ನ ತು ತದ್ ವ್ರಜಂತಿ
ಯನ್ನ್ಯಸ್ತದಂಡೋ ಗತವೈರೋಽಭಿಯಾತಿ ॥ ೧೫ ॥

ಪ್ರಸಜ್ಜತಿ ಕ್ವಾಪಿ ಲತಾಭುಜಾಶ್ರಯ-
ಸ್ತದಾಶ್ರಯಾವ್ಯಕ್ತಪದದ್ವಿಜಸ್ಪೃಹಃ ।
ಕ್ವಚಿತ್ಕದಾಚಿದ್ಧರಿಚಕ್ರತಸ್ತ್ರಸನ್
ಸಖ್ಯಂ ವಿಧತ್ತೇ ಬಕಕಂಕಗೃಧ್ರೈಃ ॥ ೧೬ ॥

ತೈರ್ವಂಚಿತೋ ಹಂಸಕುಲಂ ಸಮಾವಿಶನ್
ನರೋಚಯನ್ ಶೀಲಮುಪೈತಿ ವಾನರಾನ್ ।
ತಜ್ಜಾತಿರಾಸೇನ ಸುನಿರ್ವೃತೇಂದ್ರಿಯಃ
ಪರಸ್ಪರೋದ್ವೀಕ್ಷಣವಿಸ್ಮೃತಾವಧಿಃ ॥ ೧೭ ॥

ದ್ರುಮೇಷು ರಂಸ್ಯನ್ ಸುತದಾರವತ್ಸಲೋ
ವ್ಯವಾಯದೀನೋ ವಿವಶಃ ಸ್ವಬಂಧನೇ ।
ಕ್ವಚಿತ್ಪ್ರಮಾದಾದ್ಗಿರಿಕಂದರೇ ಪತನ್
ವಲ್ಲೀಂ ಗೃಹೀತ್ವಾ ಗಜಭೀತ ಆಸ್ಥಿತಃ ॥ ೧೮ ॥

ಅತಃ ಕಥಂಚಿತ್ಸ ವಿಮುಕ್ತ ಆಪದಃ
ಪುನಶ್ಚ ಸಾರ್ಥಂ ಪ್ರವಿಶತ್ಯರಿಂದಮ ।
ಅಧ್ವನ್ಯಮುಷ್ಮಿನ್ನಜಯಾ ನಿವೇಶಿತೋ
ಭ್ರಮಂಜನೋಽದ್ಯಾಪಿ ನ ವೇದ ಕಶ್ಚನ ॥ ೧೯ ॥

ಹೇಗಾದರೂ ಕಸಿದುಕೊಳ್ಳುವ ಕಳ್ಳದೃಷ್ಟಿಯನ್ನಿಟ್ಟು ತಿರಸ್ಕಾರಕ್ಕೆ ಒಳಗಾಗಬೇಕಾಗುತ್ತದೆ. ॥ ೧೨ ॥

ಹೀಗೆ ವ್ಯಾವಹಾರಿಕ ಸಂಬಂಧದಿಂದ ಪರಸ್ಪರ ದ್ವೇಷಭಾವನೆ ಬೆಳೆದಿದ್ದರೂ ಆ ವಣಿಕ್ ಸಮೂಹವು ತಮ್ಮ-ತಮ್ಮಲ್ಲೇ ವಿವಾಹಾದಿ ಸಂಬಂಧಗಳನ್ನು ಸ್ಥಾಪಿಸುತ್ತದೆ. ಮತ್ತೆ ಈ ಮಾರ್ಗದಲ್ಲಿ ಬಗೆ-ಬಗೆಯ ಕಷ್ಟ, ಧನಕ್ಷಯ ಮುಂತಾದ ಕಷ್ಟಗಳನ್ನು ಅನುಭವಿಸುತ್ತಾ ಹೆಣದಂತೆ ಬದುಕಬೇಕಾಗುತ್ತದೆ. ॥ ೧೩ ॥ ಜೊತೆಯವರಲ್ಲಿ ಸತ್ತು ಹೋದವರನ್ನು ಅಲ್ಲಲ್ಲೇ ಬಿಟ್ಟು, ಹೊಸದಾಗಿ ಹುಟ್ಟಿದವರೊಂದಿಗೆ ಆ ವ್ಯಾಪಾರಿ ಸಮೂಹವು ಪದೇ-ಪದೇ ಮುಂದೆ ಹೋಗುತ್ತಾ ಇರುತ್ತದೆ. ಎಲೈ ವೀರನೇ ! ಅವರಲ್ಲಿ ಯಾವ ಪ್ರಾಣಿಯೂ ಇಂದಿನ ವರೆಗೆ ಮರಳಲಿಲ್ಲ. ಯಾರೂ ಕೂಡ ಈ ಸಂಕಟಮಯ ಮಾರ್ಗವನ್ನು ದಾಟಿ ಪರಮಾನಂದಮಯ ಯೋಗವನ್ನು ಆಶ್ರಯಿಸಲಿಲ್ಲ. ॥ ೧೪ ॥ ಮಹಾವೀರಾಧಿವೀರರಾಗಿ ದೊಡ್ಡ-ದೊಡ್ಡ ದಿಗ್ಗಜರನ್ನೂ, ದಿಕ್ಪಾಲಕರನ್ನೂ ಗೆದ್ದವರೂ ಕೂಡ 'ಈ ಭೂಮಿ ನನ್ನದು, ಈ ರಾಜ್ಯ ನನ್ನದು' ಎಂಬ ಅಭಿಮಾನದಿಂದ ಪರಸ್ಪರ ದ್ವೇಷವನ್ನು ಕಟ್ಟಿಕೊಂಡು ಯುದ್ಧಭೂಮಿಯಲ್ಲಿ ಮಡಿದುಹೋಗುವರು. ಆದರೂ ಅವರಿಗೆ ವೈರಹೀನ ಪರಮಹಂಸರಿಗೆ ದೊರೆಯಬಹುದಾದ ಭಗವಾನ್ ವಿಷ್ಣುವಿನ ಆ ಅವಿನಾಶಿಯಾದ ಪದವು ಸಿಗುವುದಿಲ್ಲ. ॥ ೧೫ ॥

ಈ ಭವಾಟವಿಯಲ್ಲಿ ಅಲೆಯುತ್ತಿರುವ ವರ್ತಕರ ಗುಂಪು ಕೆಲವೊಮ್ಮೆ ಯಾವುದೋ ಲತೆಗಳನ್ನು ಆಶ್ರಯಿಸಿ, ಅದರ ಮೇಲೆ ವಾಸಿಸುವ ಮಧುರವಾಗಿ ಹಾಡುವ ಪಕ್ಷಿಗಳ ಮೋಹದಲ್ಲಿ ಸಿಕ್ಕಿಕೊಂಡುಬಿಡುತ್ತಾರೆ. ಕೆಲವೊಮ್ಮೆ ಸಿಂಹಗಳ ಗುಂಪಿಗೆ ಹೆದರಿ ಕೊಕ್ಕರೆ, ನೀರುಹಕ್ಕಿ, ಹದ್ದು ಇವುಗಳೊಡನೆ ಸ್ನೇಹ ಬೆಳಸುವರು. ॥ ೧೬ ॥ ಅವರ ಮೋಸಕ್ಕೆ ಒಳಗಾದಾಗ ಹಂಸಪಕ್ಷಿಗಳ ಸಮೂಹವನ್ನು ಸೇರಲು ಬಯಸುತ್ತಾರೆ. ಆದರೆ ಅವರಿಗೆ ಇವುಗಳ ಆಚಾರ ಸರಿಬೀಳುವುದಿಲ್ಲ. ಅದಕ್ಕಾಗಿ ಕಪಿಗಳೊಡನೆ ಸೇರಿ ಅವುಗಳ ಜಾತಿ ಸ್ವಭಾವಕ್ಕನುಸಾರ ದಾಂಪತ್ಯಸುಖದಲ್ಲಿ ತೊಡಗಿದ್ದು ವಿಷಯ ಭೋಗಗಳಿಂದ ಇಂದ್ರಿಯಗಳನ್ನು ತೃಪ್ತಿಪಡಿಸಿಕೊಳ್ಳುತ್ತಿರುತ್ತಾರೆ. ಒಬ್ಬರು ಮತ್ತೊಬ್ಬರ ಮುಖವನ್ನು ನೋಡುತ್ತಾ-ನೋಡುತ್ತಾ ತಮ್ಮ ಆಯುಸ್ಸಿನ ಅವಧಿಯನ್ನು ಮರೆತುಬಿಡುತ್ತಾರೆ. ॥ ೧೭ ॥ ಅಲ್ಲಿ ವೃಕ್ಷಗಳಲ್ಲಿ ಕ್ರೀಡಿಸುತ್ತಾ ಪತ್ನೀ-ಪುತ್ರರ ಸ್ನೇಹಪಾಶದಲ್ಲಿ ಬಂಧಿತನಾಗುತ್ತಾನೆ. ಇವರಲ್ಲಿ ಮೈಥುನದ ವಾಸನೆ ಎಷ್ಟು ಬೆಳೆಯುತ್ತದೆ ಎಂದರೆ ಬಗೆ-ಬಗೆಯ ದುರ್ವ್ಯವಹಾರಗಳಿಂದ ದೀನರಾಗಿದ್ದರೂ ಕೂಡ ಇವನು ವಿವಶನಾಗಿ ತನ್ನ ಬಂಧನವನ್ನು ಕಿತ್ತೊಗೆಯಲು ಸಾಹಸಮಾಡುವುದಿಲ್ಲ. ಕೆಲವೊಮ್ಮೆ ಎಚ್ಚರತಪ್ಪಿ ಪರ್ವತದ ಗುಹೆಯಲ್ಲಿ ಬೀಳತೊಡಗಿದಾಗ ಅದರಲ್ಲಿ ವಾಸಿಸುವ ಆನೆಗೆ ಹೆದರಿಕೊಂಡು ಯಾವುದೋ ಬಳ್ಳಿಯನ್ನು ಆಶ್ರಯಿಸಿ ನೇತಾಡುತ್ತಿರುವನು. ॥ ೧೮ ॥ ಎಲೈ ಪರಂತಪ ! ಯಾವ ರೀತಿಯಿಂದಲಾದರೂ ಇವನು ಆ ಆಪತ್ತುಗಳಿಂದ ಬಿಡುಗಡೆ ಹೊಂದಿದರೂ ಪುನಃ ತನ್ನ ಗುಂಪನ್ನೇ ಸೇರಿಕೊಳ್ಳುವನು. ಮಾಯೆಯ ಪ್ರೇರಣೆಯಿಂದ ಒಮ್ಮೆ ಈ ಮಾರ್ಗಕ್ಕೆ ಬಂದುಬಿಟ್ಟರೆ, ಅವನಿಗೆ ಅಲೆಯುತ್ತಾ-ಅಲೆಯುತ್ತಾ ಕೊನೆಯವರೆಗೂ ತನ್ನ ಪರಮ ಪುರುಷಾರ್ಥದ ಅರಿವೇ ಉಂಟಾಗುವುದಿಲ್ಲ. ॥ ೧೯ ॥ ರಹೂಗಣ ರಾಜನೇ ! ನೀನೂ ಕೂಡ ಇದೇ ಮಾರ್ಗದಲ್ಲಿ ಅಲೆಯುತ್ತಿರುವೆ. ಅದಕ್ಕಾಗಿ ಈಗ ಪ್ರಜೆಗಳನ್ನು ದಂಡಿಸುವ ಕಾರ್ಯವನ್ನು ಬಿಟ್ಟು, ಸಮಸ್ತ ಪ್ರಾಣಿಗಳಿಗೂ ಮಿತ್ರ

ರಹೂಗಣ ತ್ವಮಪಿ ಹ್ಯಧ್ವನೋಽಸ್ಯ
ಸಂನ್ಯಸ್ತದಂಡಃ ಕೃತಭೂತಮೈತ್ರಃ ।
ಅಸಜ್ಜಿತಾತ್ಮಾ ಹರಿಸೇವಯಾ ಶಿತಂ
ಜ್ಞಾನಾಸಿಮಾದಾಯ ತರಾತಿಪಾರಮ್ ॥ ೨೦ ॥

ರಾಜೋವಾಚ

ಅಹೋ ನೃಜನ್ಮಾಖಿಲಜನ್ಮಶೋಭನಂ
ಕಿಂ ಜನ್ಮಭಿಸ್ತ್ವಪರೈರಪ್ಯಮುಷ್ಮಿನ್ ।
ನ ಯದ್ಧೃಷೀಕೇಶಯಶಃ ಕೃತಾತ್ಮನಾಂ
ಮಹಾತ್ಮನಾಂ ವಃ ಪ್ರಚುರಃ ಸಮಾಗಮಃ ॥ ೨೧ ॥

ನ ಹ್ಯದ್ಭುತಂ ತ್ವಚ್ಚರಣಾಬ್ಜ ರೇಣುಭಿ-
ರ್ಹತಾಂಹಸೋ ಭಕ್ತಿರಧೋಕ್ಷಜೇಽಮಲಾ ।
ಮೌಹೂರ್ತಿಕಾದ್ಯ ಸ್ಯ ಸಮಾಗಮಾಚ್ಚ ಮೇ
ದುಸ್ತರ್ಕಮೂಲೋಽಪಹತೋಽವಿವೇಕಃ ॥ ೨೨ ॥

ನಮೋ ಮಹದ್ಭ್ಯೋಽಸ್ತು ನಮಃ ಶಿಶುಭ್ಯೋ
ನಮೋ ಯುವಭ್ಯೋ ನಮ ಆ ವಟುಭ್ಯಃ ।
ಯೇ ಬ್ರಾಹ್ಮಣಾ ಗಾಮವಧೂತಲಿಂಗಾ-
ಶ್ಚರಂತಿ ತೇಭ್ಯಃ ಶಿವಮಸ್ತು ರಾಜ್ಞಾಮ್ ॥ ೨೩ ॥

ಶ್ರೀಶುಕ ಉವಾಚ

ಇತ್ಯೇವಮುತ್ತರಾಮಾತಃ ಸವೈ ಬ್ರಹ್ಮರ್ಷಿಸುತಃ ಸಿಂಧುಪತಯ ಆತ್ಮಸತತ್ತ್ವಂ ವಿಗಣಯತಃ ಪರಾನುಭಾವಃ ಪರಮಕಾರುಣಿಕತಯೋಪದಿಶ್ಯ ರಹೂಗಣೇನ ಸಕರುಣಮಭಿವಂದಿತಚರಣ ಆಪೂರ್ಣಾರ್ಣವ ಇವ ನಿಭೃತಕರಣೋರ್ಮ್ಯಾಶಯೋ ಧರಣಿಮಿಮಾಂ ವಿಚಚಾರ ॥ ೨೪ ॥ ಸೌವೀರಪತಿರಪಿ ಸುಜನಸಮವಗತಪರಮಾತ್ಮಸತತ್ತ್ವ ಆತ್ಮನ್ಯವಿದ್ಯಾಧ್ಯಾರೋಪಿತಾಂ ಚ ದೇಹಾತ್ಮಮತಿಂ ವಿಸಸರ್ಜ । ಏವಂ ಹಿ ನೃಪ ಭಗವದಾಶ್ರಿತಾಶ್ರಿತಾನುಭಾವಃ ॥ ೨೫ ॥

ರಾಜೋವಾಚ

ಯೋ ಹ ವಾ ಇಹ ಬಹುವಿದಾ ಮಹಾಭಾಗವತ ತ್ವಯಾಭಿಹಿತಃ ಪರೋಕ್ಷೇಣ ವಚಸಾ ಜೀವಲೋಕಭವಾಧ್ವಾ ಸ ಹ್ಯಾರ್ಯಮನೀಷಯಾ ಕಲ್ಪಿತವಿಷಯೋ ನಾಂಜಸಾವ್ಯುತ್ಪನ್ನಲೋಕಸಮಧಿಗಮಃ । ಅಥ ತದೇವೈತ ದ್ದುರವಗಮಂ ಸಮವೇತಾನುಕಲ್ಪೇನ ನಿರ್ದಿಶ್ಯತಾಮಿತಿ ॥ ೨೬ ॥

ನಾಗು. ವಿಷಯಗಳಲ್ಲಿ ಅನಾಸಕ್ತನಾಗಿ ಭಗವತ್ಸೇವೆ ಎಂಬ ಹರಿತವಾದ ಜ್ಞಾನಖಡ್ಗದಿಂದ ಈ ಮಾರ್ಗದಿಂದ ಪಾರಾಗಿಬಿಡು. ॥ ೨೦ ॥

**ರಹೂಗಣರಾಜನು ಹೇಳಿದನು** – ಆಹಾ ! ಸಮಸ್ತ ಯೋನಿಗಳಲ್ಲಿ ಈ ಮನುಷ್ಯ ಜನ್ಮವೇ ಶ್ರೇಷ್ಠವಾಗಿದೆ. ಭಗವಾನ್ ಹೃಷೀಕೇಶನ ಪವಿತ್ರಕೀರ್ತಿಯಿಂದ ಶುದ್ಧಾಂತಃಕರಣವುಳ್ಳ ನಿಮ್ಮಂತಹ ಮಹಾತ್ಮರ ಸಮಾಗಮವು ಹೆಚ್ಚು-ಹೆಚ್ಚಾಗಿ ದೊರೆಯದಿರುವಲ್ಲಿ ಬೇರೆ-ಬೇರೆ ಲೋಕಗಳಲ್ಲಿ ಪ್ರಾಪ್ತವಾಗುವ ದೇವತೆಗಳೇ ಮುಂತಾದ ಶ್ರೇಷ್ಠ ಜನ್ಮಗಳಿಂದ ಯಾವ ಲಾಭವಿದೆ ? ॥ ೨೧ ॥ ನಿಮ್ಮ ಅಡಿದಾವರೆಗಳ ಧೂಳನ್ನು ಸೇವಿಸುವುದರಿಂದ ಎಲ್ಲ ಪಾಪ-ತಾಪಗಳು ನಾಶ ಹೊಂದಿರುವಂತಹ ಮಹಾನುಭಾವರಿಗೆ ಭಗ ವಂತನ ವಿಶುದ್ಧವಾದ ಭಕ್ತಿಯು ದೊರೆಯುವುದು ಏನೂ ವಿಚಿತ್ರವಲ್ಲ. ನನಗಾದರೋ ಎರಡುಗಳಿಗೆ ದೊರೆತ ನಿಮ್ಮ ಸತ್ಸಂಗದಿಂದ ನನ್ನ ಎಲ್ಲ ಕುತರ್ಕಮೂಲವಾದ ಅಜ್ಞಾನವು ನಾಶವಾಗಿಹೋಯಿತು. ॥ ೨೨ ॥ ಬ್ರಹ್ಮಜ್ಞಾನಿಗಳಾದ ಮಹಾತ್ಮರು ಯಾವ ವಯಸ್ಸು, ಯಾವರೂಪದಲ್ಲಿ ಸಂಚರಿಸುವರೋ ತಿಳಿಯದು. ಆದ್ದರಿಂದ ಬ್ರಹ್ಮಜ್ಞಾನಿಗಳಲ್ಲಿ ವಯೋವೃದ್ಧರಾದವರಿಗೆ ನಮಸ್ಕಾರವು. ಶಿಶುಗಳಿಗೆ ನಮಸ್ಕಾರವು. ಯುವಕರಾಗಿರುವವರಿಗೆ ನಮಸ್ಕಾರವು. ವಟುಗಳಿಗೆ ನಮಸ್ಕಾರವು. ನಿಮ್ಮಂತಹ ಬ್ರಹ್ಮಜ್ಞಾನಿಗಳಾದ ಬ್ರಾಹ್ಮಣರು ಅವಧೂತವೇಷದಿಂದ ಭೂಮಿಯಲ್ಲಿ ಸಂಚರಿಸುತ್ತಿರುವುದರಿಂದ ನಮ್ಮಂತಹ ಐಶ್ವರ್ಯಮದೋನ್ಮತ್ತ ರಾಜರಿಗೆ ಕಲ್ಯಾಣವೇ ಆಗಲಿ. ॥ ೨೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಉತ್ತರಾನಂದನನೇ ! ಹೀಗೆ ಆ ಪರಮಪ್ರಭಾವಶಾಲಿಯಾದ ಬ್ರಹ್ಮರ್ಷಿಪುತ್ರರು ತನ್ನನ್ನು ಅಪಮಾನಗೊಳಿಸಿದ ಸಿಂಧುನರೇಶ ರಹೂಗಣನನ್ನೂ ಕೂಡ ಅತ್ಯಂತ ಕರುಣೆಯಿಂದ ಆತ್ಮತತ್ತ್ವವನ್ನು ಉಪದೇಶಿಸಿದರು. ಆಗ ರಹೂಗಣರಾಜನು ದೀನನಾಗಿ ಅವರ ಚರಣಗಳಿಗೆ ವಂದಿಸಿಕೊಂಡನು. ಮತ್ತೆ ಅವನು ತುಂಬಿದ ಸಮುದ್ರದಂತೆ ಶಾಂತಚಿತ್ತನಾಗಿ, ಇಂದ್ರಿಯಗಳಿಂದ ಉಪರತನಾಗಿ ಭೂಮಿಯಲ್ಲಿ ಸಂಚರಿಸತೊಡಗಿದನು. ॥ ೨೪ ॥ ಅವರ ಸತ್ಸಂಗದಿಂದ ಪರಮಾತ್ಮತತ್ತ್ವದ ಜ್ಞಾನವನ್ನು ಪಡೆದು ಸೌವೀರದೊರೆ ರಹೂಗಣನೂ ಕೂಡ ಅಂತಃಕರಣದಲ್ಲಿ ಅವಿದ್ಯೆಯಿಂದ ಆರೋಪಿತವಾದ ದೇಹಾತ್ಮ ಬುದ್ಧಿಯನ್ನು ತ್ಯಜಿಸಿದನು. ರಾಜನೇ ! ಭಗವದಾಶ್ರಿತ ಅನನ್ಯ ಭಕ್ತರಲ್ಲಿ ಶರಣಾಗುವವನ ಪ್ರಭಾವ ಹೀಗೆ ಇರುತ್ತದೆ. ಅವರ ಬಳಿಯಲ್ಲಿ ಅವಿದ್ಯೆಯು ನಿಲ್ಲಲಾರದು. ॥ ೨೫ ॥

**ಪರೀಕ್ಷಿದ್ರಾಜನು ಹೇಳಿದನು** – ಭಾಗವತೋತ್ತಮರಾದ ಮುನಿಶ್ರೇಷ್ಠರೇ ! ತಾವು ವಿದ್ವಾಂಸರಾಗಿದ್ದೀರಿ. ನೀವು ರೂಪಕದ ಮೂಲಕ ಅಪ್ರತ್ಯಕ್ಷರೂಪದಿಂದ ಜೀವಿಗಳ ಸಂಸಾರರೂಪವಾದ ಮಾರ್ಗವನ್ನು ವರ್ಣಿಸಿರುವಿರಿ. ಆ ವಿಷಯದ ಕಲ್ಪನೆಯನ್ನು ವಿವೇಕಿಗಳ ಬುದ್ಧಿಯೇ ಮಾಡಬಲ್ಲದು ; ಅಲ್ಪಬುದ್ಧಿಯುಳ್ಳವರ ಅರಿವಿಗೆ ಅದು ಸುಲಭವಾಗಿ ಬರಲಾರದು. ಆದ್ದರಿಂದ ಈ ದುರ್ಬೋಧ ವಿಷಯದ ರೂಪಕವನ್ನು ಸ್ಪಷ್ಟವಾಗಿ ಬಿಡಿಸಿಹೇಳಬೇಕು ಎಂದು ಪ್ರಾರ್ಥಿಸಿಕೊಂಡನು. ॥ ೨೬ ॥

*ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ತ್ರಯೋದಶೋಽಧ್ಯಾಯಃ ॥ ೧೩ ॥

# ಹದಿನಾಲ್ಕನೆಯ ಅಧ್ಯಾಯ

## ಭವಾಟವಿಯ ಸ್ಪಷ್ಟೀಕರಣ

*ಸ ಹೋವಾಚ*

ಯ ಏಷ ದೇಹಾತ್ಮಮಾನಿನಾಂ ಸತ್ತ್ವಾದಿಗುಣವಿಶೇಷ-ವಿಕಲ್ಪಿತಕುಶಲಾಕುಶಲಸಮವಹಾರವಿನಿರ್ಮಿತವಿವಿಧದೇಹಾ-ವಲಿಭಿರ್ವಿಯೋಗಸಂಯೋಗಾದ್ಯನಾದಿಸಂಸಾರಾನುಭವಸ್ಯ ದ್ವಾರಭೂತೇನ ಷಡಿಂದ್ರಿಯವರ್ಗೇಣ ತಸ್ಮಿಂದುರ್ಗಾಧ್ವವದಸುಗಮೇಽಧ್ವನ್ಯಾಪತಿತ ಈಶ್ವರಸ್ಯ ಭಗವತೋ ವಿಷ್ಣೋರ್ವಶವರ್ತಿನ್ಯಾ ಮಾಯಯಾ ಜೀವ-ಲೋಕೋಽಯಂ ಯಥಾ ವಣಿಕ್ಸಾರ್ಥೋಽರ್ಥಪರಃ ಸ್ವದೇಹನಿಷ್ಪಾದಿತಕರ್ಮಾನುಭವಃ ಶ್ಮಶಾನವದಶಿವತ-ಮಾಯಾಂ ಸಂಸಾರಾಟವ್ಯಾಂ ಗತೋ ನಾದ್ಯಾಪಿ ವಿಫಲ-ಬಹುಪ್ರತಿಯೋಗೇಹಸ್ತತ್ತಾಪೋಪಶಮನೀಂ ಹರಿಗುರು-ಚರಣಾರವಿಂದಮಧುಕರಾನುಪದವೀಮವರುಂಧೇ ಯಸ್ಯಾಮು ಹ ವಾ ಏತೇ ಷಡಿಂದ್ರಿಯನಾಮಾನಃ ಕರ್ಮಣಾ ದಸ್ಯವ ಏವ ತೇ ॥ ೧ ॥ ತದ್ಯಥಾ ಪುರುಷಸ್ಯ ಧನಂ ಯತ್ಕಿಂಚಿದ್ಧರ್ಮೌಪಯಿಕಂ ಬಹುಕೃಚ್ಛ್ರಾಧಿಗತಂ ಸಾಕ್ಷಾ-ತ್ಪರಮಪುರುಷಾರಾಧನಲಕ್ಷಣೋ ಯೋಽಸೌ ಧರ್ಮಸ್ತಂ ತು ಸಾಂಪರಾಯ ಉದಾಹರಂತಿ। ತದ್ಧರ್ಮ್ಯಂ ಧನಂ ದರ್ಶನಸ್ಪರ್ಶನಶ್ರವಣಾಸ್ವಾದನಾವಘ್ರಾಣಸಂಕಲ್ಪವ್ಯವ-ಸಾಯಗೃಹಗ್ರಾಮ್ಯೋಪಭೋಗೇನ ಕುನಾಥಸ್ಯಾಜಿತಾ-ತ್ಮನೋ ಯಥಾ ಸಾರ್ಥಸ್ಯ ವಿಲುಂಪಂತಿ ॥ ೨ ॥ ಅಥ ಚ ಯತ್ರ ಕೌಟುಂಬಿಕಾ ದಾರಾಪತ್ಯಾದಯೋ ನಾಮ್ನಾ ಕರ್ಮಣಾ ವೃಕಸೃಗಾಲಾ ಏವಾನಿಚ್ಛತೋಽಪಿ ಕದರ್ಯಸ್ಯ

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತ ರಾಜನೇ! ದೇಹಾಭಿಮಾನಿಗಳಾದ ಜೀವರಿಂದ ಸತ್ತ್ವಾದಿ ಗುಣಗಳ ಭೇದದಿಂದ ಶುಭ, ಅಶುಭ ಮತ್ತು ಮಿಶ್ರ ಎಂಬ ಮೂರು ವಿಧದ ಕರ್ಮಗಳು ಆಗುತ್ತಾ ಇರುತ್ತವೆ. ಆ ಕರ್ಮಗಳ ಮೂಲಕವೇ ಉಂಟಾದ ನಾನಾರೀತಿಯ ಶರೀರಗಳೊಂದಿಗೆ ಉಂಟಾಗುವ ಸಂಯೋಗ-ವಿಯೋಗವೇ ಮುಂತಾದ ಅನಾದಿ ಸಂಸಾರವು ಜೀವಿಗೆ ಪ್ರಾಪ್ತವಾಗುತ್ತದೆ. ಅದನ್ನು ಅನುಭವಿಸಲು ಮನಸ್ಸು ಮತ್ತು ಐದು ಜ್ಞಾನೇಂದ್ರಿಯಗಳೆಂಬ ಆರು ಬಾಗಿಲುಗಳಿವೆ. ಅವುಗಳಿಂದ ವಿವಶನಾಗಿ ಈ ಜೀವಸಮೂಹವು ನಿಜವಾದ ಮಾರ್ಗವನ್ನು ಮರೆತು ಭಯಂಕರ ಕಾಡಿನಲ್ಲಿ ಅಲೆಯುತ್ತಾ ಧನದ ಲೋಭಿಗಳಾದ ವ್ಯಾಪಾರಿಗಳಂತೆ ಪರಮ ಸಮರ್ಥ ಭಗವಾನ್ ವಿಷ್ಣುವಿನಲ್ಲಿ ಆಶ್ರಿತವಾಗಿರುವ ಮಾಯೆಯ ಪ್ರೇರಣೆಯಿಂದ ದಟ್ಟವಾದ ಅಡವಿಯಂತಿರುವ ದುರ್ಗಮ ಮಾರ್ಗದಲ್ಲಿ ಬಿದ್ದು ಸಂಸಾರ ವನಕ್ಕೆ ಬಂದು ತಲುಪುತ್ತಾನೆ. ಈ ವನವು ಸ್ಮಶಾನದಂತೆ ಅತ್ಯಂತ ಅಶುಭವಾಗಿದೆ. ಇದರಲ್ಲಿ ಅಲೆಯುತ್ತಿರುವಾಗ ಅವನಿಗೆ ತನ್ನ ಶರೀರದಿಂದ ಮಾಡಿರುವ ಕರ್ಮಗಳನ್ನು ಅನುಭವಿಸಬೇಕಾಗುತ್ತದೆ. ಇಲ್ಲಿ ಅನೇಕ ವಿಘ್ನಗಳ ಕಾರಣದಿಂದ ಅವನಿಗೆ ತನ್ನ ವ್ಯಾಪಾರದಲ್ಲಿ ಸಫಲತೆ ದೊರೆಯದಿದ್ದರೂ ಇವನು ಅವರ ಶ್ರಮವನ್ನು ಶಾಂತಗೊಳಿಸುವಂತಹ ಶ್ರೀಹರಿಯ ಹಾಗೂ ಸದ್ಗುರುವಿನ ಚರಣಾರವಿಂದ ಮಕರಂದ-ಮಧುವಿನ ರಸಿಕ ಭಕ್ತ-ಭ್ರಮರಗಳ ಮಾರ್ಗವನ್ನು ಅನುಸರಿಸುವುದಿಲ್ಲ. ಈ ಸಂಸಾರವನದಲ್ಲಿ ಮನಸ್ಸಿನಸಹಿತ ಆರು ಇಂದ್ರಿಯಗಳೇ ನಮ್ಮ ಕರ್ಮಗಳ ದೃಷ್ಟಿಯಿಂದ ಕಳ್ಳರಂತೆ ಇದ್ದಾರೆ. ॥ ೧ ॥ ಪುರುಷನು ಬಹಳ ಕಷ್ಟಪಟ್ಟು ಗಳಿಸಿದ ಧನವನ್ನು ಧರ್ಮಕ್ಕಾಗಿ ಉಪಯೋಗಿಸಬೇಕು. ಆ ಧರ್ಮವನ್ನು ಸಾಕ್ಷಾತ್ ಭಗವಾನ್ ಪರಮ ಪುರುಷನ ಆರಾಧನೆಯ ರೂಪದಲ್ಲಿ ಆಚರಿಸಿದರೆ ಅದನ್ನು ಪರಲೋಕದಲ್ಲಿ ನಿಃಶ್ರೇಯಸ್ಸಿನ ಸಾಧನವೆಂದು ಹೇಳಲಾಗಿದೆ. ಆದರೆ ಬುದ್ಧಿರೂಪೀ ಸಾರಥಿಯು ವಿವೇಕಹೀನನಾದಾಗ, ಮನಸ್ಸು ವಶದಲ್ಲಿ ಇಲ್ಲದಿದ್ದಾಗ ಆ ಮನುಷ್ಯನ ಧರ್ಮೋಪಯೋಗಿ ಆ ಧನವನ್ನು ಈ ಮನಸಹಿತ ಆರು ಇಂದ್ರಿಯಗಳು ನೋಡುವುದು, ಸ್ಪರ್ಶಿಸುವುದು, ಕೇಳುವುದು, ರುಚಿ ನೋಡುವುದು, ಮೂಸುವುದು, ಸಂಕಲ್ಪ-ವಿಕಲ್ಪಗಳನ್ನು ಮಾಡುವುದು ಮತ್ತು ನಿಶ್ಚಯಿಸುವುದು – ಈ ವೃತ್ತಿಗಳ ಮೂಲಕ ಗೃಹಸ್ಥೋಚಿತವಾದ ವಿಷಯಭೋಗಗಳಲ್ಲಿ ಸಿಕ್ಕಿಕೊಂಡು – ವಂಚಕನಾದ ಮುಖಂಡನನ್ನು ಅನುಸರಿಸುತ್ತಿರುವ ಹಾಗೂ ಎಚ್ಚರತಪ್ಪಿದ ವ್ಯಾಪಾರಿಗಳ ಗುಂಪಿನ ಧನವನ್ನು ಕಳ್ಳ-ಕಾಕರು ಲೂಟಿಮಾಡುವಂತೆ – ಲೂಟಿಮಾಡುತ್ತವೆ. ॥ ೨ ॥ ಇಷ್ಟೇ ಅಲ್ಲ, ಆ ಸಂಸಾರವನದಲ್ಲಿ ವಾಸಿಸುವ ಅವನ ಸಂಬಂಧಿಗಳೂ ಕೂಡ – ಹೆಸರಿಗೆ ಪತ್ನಿ-ಪುತ್ರರೆಂದು ಹೇಳಲ್ಪಟ್ಟರೂ ಅವರ ಕರ್ಮಗಳು ಸಾಕ್ಷಾತ್ ತೋಳ,

ಕುಟುಂಬಿನ ಉರಣಕವತ್‌ಸಂರಕ್ಷ್ಯಮಾಣಂ ಮಿಷತೋऽಪಿ ಹರಂತಿ ॥ ೩ ॥ ಯಥಾ ಹ್ಯನುವತ್ಸರಂ ಕೃಷ್ಯಮಾಣಮಪ್ಯದಗ್ಧಬೀಜಂ ಕ್ಷೇತ್ರಂ ಪುನರೇವಾವಪನಕಾಲೇ ಗುಲ್ಮತೃಣವೀರುದ್ಭಿರ್ಗಹ್ವರಮಿವ ಭವತ್ಯೇವಮೇವ ಗೃಹಾಶ್ರಮಃ ಕರ್ಮಕ್ಷೇತ್ರಂ ಯಸ್ಮಿನ್ನ ಹಿ ಕರ್ಮಾಣ್ಯುತ್ಸೀದಂತಿ ಯದಯಂ ಕಾಮಕರಂಡ ಏಷ ಆವಸಥಃ ॥ ೪ ॥

ತತ್ರ ಗತೋ ದಂಶಮಶಕಸಮಾಪಸದೈರ್ಮನುಜೈಃ ಶಲಭಶಕುಂತತಸ್ಕರಮೂಷಕಾದಿಭಿರುಪರುಧ್ಯಮಾನಬಹಿಃಪ್ರಾಣಃ ಕ್ವಚಿತ್ ಪರಿವರ್ತಮಾನೋऽಸ್ಮಿನ್ನಧ್ವನ್ಯವಿದ್ಯಾಕಾಮಕರ್ಮಭಿರುಪರಕ್ತಮನಸಾನುಪಪನ್ನಾರ್ಥಂ ನರಲೋಕಂ ಗಂಧರ್ವನಗರಮುಪಪನ್ನಮಿತಿ ಮಿಥ್ಯಾದೃಷ್ಟಿರನುಪಶ್ಯತಿ ॥ ೫ ॥ ತತ್ರ ಚ ಕ್ವಚಿದಾತಪೋದಕನಿಭಾನ್ವಿಷಯಾನುಪಧಾವತಿ ಪಾನಭೋಜನವ್ಯವಾಯಾದಿವ್ಯಸನಲೋಲುಪಃ ॥ ೬ ॥ ಕ್ವಚಿಚ್ಚಾಶೇಷದೋಷನಿಷದನಂ ಪುರೀಷವಿಶೇಷಂ ತದ್ವರ್ಣಗುಣನಿರ್ಮಿತಮತಿಃ ಸುವರ್ಣಮುಪಾದಿತ್ಸತ್ಯಗ್ನಿಕಾಮಕಾತರ ಇವೋಲ್ಮುಕಪಿಶಾಚಮ್ ॥ ೭ ॥ ಅಥ ಕದಾಚಿನ್ನಿವಾಸಪಾನೀಯದ್ರವಿಣಾದ್ಯನೇಕಾತ್ಮೋಪಜೀವನಾಭಿನಿವೇಶ ಏತಸ್ಯಾಂ ಸಂಸಾರಾಟವ್ಯಾಮಿತಸ್ತತಃ ಪರಿಧಾವತಿ ॥ ೮ ॥ ಕ್ವಚಿಚ್ಚ ವಾತ್ಯೌಪಮ್ಯಯಾ ಪ್ರಮದಯಾऽऽರೋಹಮಾರೋಪಿತಸ್ತತ್ಕಾಲರಜಸಾ ರಜನೀಭೂತ ಇವಾಸಾಧುಮರ್ಯಾದೋರಜಸ್ವಲಾಕ್ಷೋऽಪಿ ದಿಗ್ದೇವತಾ ಅತಿರಜಸ್ವಲಮತಿರ್ನ ವಿಜಾನಾತಿ ॥ ೯ ॥ ಕ್ವಚಿತ್ಸಕೃದವಗತವಿಷಯವೈತಥ್ಯಃ ಸ್ವಯಂ ಪರಾಭಿಧ್ಯಾನೇನ ವಿಭ್ರಂಶಿತಸ್ಮೃ-

ನರಿಗಳಂತೆ ಇರುತ್ತವೆ. ಆ ಅರ್ಥಲೋಲುಪ ಕುಟುಂಬಿಯ ಧನವನ್ನು ಅವನು ಇಚ್ಛಿಸದಿದ್ದರೂ – ಕುರಿಕಾಯುವವರ ರಕ್ಷಣೆಯಲ್ಲಿದ್ದರೂ ತೋಳವು ಕುರಿಗಳನ್ನು ಎತ್ತಿಕೊಂಡು ಹೋಗುವಂತೆ – ಅವರು ನೋಡು-ನೋಡುತ್ತಾ ಕಿತ್ತುಕೊಳ್ಳುವರು. ॥ ೩ ॥ ಯಾವುದೇ ಹೊಲದಲ್ಲಿರುವ ಕಸ-ಕಡ್ಡಿಗಳ ಬೀಜಗಳನ್ನು ಬೆಂಕಿಯಿಂದ ಸುಡದೆ ಇದ್ದರೆ ಪ್ರತಿವರ್ಷವೂ ಉಳಿಮೆ ಮಾಡಿದರೂ ಬೀಜನೆಡುವ ವೇಳೆಗೆ ಅವು ಪುನಃ ಕಳೆ-ಮೇಳೆಗಳು, ಬಳ್ಳಿಗಳು-ಪೊದೆಗಳು, ಹುಲ್ಲು ಮುಂತಾದವುಗಳು ದಟ್ಟವಾಗಿ ಬೆಳೆಯುವುವು. ಹೀಗೆಯೇ ಈ ಗೃಹಸ್ಥಾಶ್ರಮವೂ ಕರ್ಮಭೂಮಿಯಾಗಿದೆ. ಇದರಲ್ಲಿಯೂ ಕರ್ಮಗಳನ್ನು ಪೂರ್ಣವಾಗಿ ಕಿತ್ತುಹಾಕಲು ಬರುವುದಿಲ್ಲ. ಏಕೆಂದರೆ, ಈ ಮನೆಯು ಕಾಮನೆಗಳ ಪೆಟ್ಟಿಗೆಯಾಗಿದೆ. ॥ ೪ ॥

ಈ ಗೃಹಸ್ಥಾಶ್ರಮದಲ್ಲಿರುವ ವ್ಯಕ್ತಿಗೆ ಹಣವು ಹೊರಗೆ ಓಡಾಡುವ ಪ್ರಾಣದಂತೆ ಪ್ರಿಯವಾಗಿರುವುದು. ಅವನಿಗೆ ಕಾಡುಕೋಣ, ಕಾಡುಸೊಳ್ಳೆಗಳಂತಿರುವ ನೀಚಪುರುಷರಿಂದ ಹಾಗೂ ಮಿಡತೆ, ಹಕ್ಕಿಗಳು, ಕಳ್ಳರೂ, ಇಲಿಗಳೂ ಮುಂತಾದವುಗಳಿಂದ ತೊಂದರೆ ಆಗುತ್ತಾ ಇರುತ್ತದೆ. ಕೆಲವೊಮ್ಮೆ ಈ ಮಾರ್ಗದಲ್ಲಿ ಅಲೆಯುತ್ತಾ-ಅಲೆಯುತ್ತಾ ಇವನು ಅವಿದ್ಯೆ, ಕಾಮನೆ ಮತ್ತು ಕರ್ಮಗಳಿಂದ ಕಲುಷಿತವಾದ ತನ್ನ ಚಿತ್ತದಿಂದ ದೃಷ್ಟಿದೋಷದ ಕಾರಣ ಈ ಮರ್ತ್ಯಲೋಕವನ್ನು ಗಂಧರ್ವನಗರದಂತೆ ಅಸತ್ತಾಗಿದ್ದರೂ ಸತ್ಯವೆಂದೇ ತಿಳಿಯತೊಡಗುತ್ತಾನೆ. ॥ ೫ ॥ ಮತ್ತೆ ಊಟ-ತಿಂಡಿ, ಸ್ತ್ರೀಪ್ರಸಂಗಾದಿ ವ್ಯಸನಗಳಲ್ಲಿ ಸಿಕ್ಕಿಬಿದ್ದು ಬಿಸಿಲ್ಗುದುರೆಯಂತೆ ಮಿಥ್ಯಾವಿಷಯಗಳ ಕಡೆಗೆ ಓಡಲು ತೊಡಗುತ್ತಾನೆ. ॥ ೬ ॥ ಕೆಲವೊಮ್ಮೆ ಬುದ್ಧಿಯ ರಜೋಗುಣದಿಂದ ಪ್ರಭಾವಿತನಾದಾಗ ಎಲ್ಲ ಅನರ್ಥಗಳಿಗೆ ಮೂಲವಾದ ಅಗ್ನಿಯ ಮಲರೂಪವಾದ ಭಂಗಾರವನ್ನೇ ಸುಖದ ಸಾಧನವೆಂದು ತಿಳಿದು, ಅದನ್ನು ಪಡೆಯಲಿಕ್ಕಾಗಿ ಆಸೆಪಡುತ್ತಾ – ಕಾಡಿನಲ್ಲಿ ಛಳಿಯಿಂದ ಗಡ-ಗಡನೆ ನಡುಗುತ್ತಿರುವ ವ್ಯಕ್ತಿಯು ಬೆಂಕಿಗಾಗಿ ವ್ಯಾಕುಲನಾಗಿ ಕಾಡಿನಲ್ಲಿ ಓಡಾಡುವ ಕೊಳ್ಳಿಪಿಶಾಚಿಗಳನ್ನೇ ಬೆಂಕಿಯೆಂದು ಭ್ರಮಿಸಿ ಅವರ ಬಳಿ ಓಡಿಹೋಗಿ ಅವರ ಕೈಗೆ ಸಿಕ್ಕಿ ಒದ್ದಾಡುವಂತೆ – ಪ್ರಯತ್ನಿಸುತ್ತಿರುತ್ತಾನೆ. ॥ ೭ ॥ ಕೆಲವೊಮ್ಮೆ ತನ್ನ ದೇಹಯಾತ್ರೆಗೆ ಬೇಕಾದ ಅನ್ನ, ನೀರು, ಹಣ ಮುಂತಾದವುಗಳನ್ನು ಗಳಿಸಬೇಕೆಂದು ಈ ಸಂಸಾರಾರಣ್ಯದಲ್ಲಿ ಅಲ್ಲಲ್ಲಿ ಅಲೆದಾಡುತ್ತಿರುವನು. ॥ ೮ ॥ ಕೆಲವೊಮ್ಮೆ ಸುಂಟರಗಾಳಿಯಂತೆ ಕಣ್ಣಿಗೆ ಮಣ್ಣೆರಚುವ ಸ್ತ್ರೀಗೆ ಮರುಳಾಗಿ ಆಕೆಯ ತೊಡೆಯಲ್ಲಿ ಕುಳಿತು ಕಾಮರಾಗದಿಂದ ಕುರುಡನಾಗಿ ಸತ್ಪುರುಷರ ಮರ್ಯಾದೆಯನ್ನೂ ಲೆಕ್ಕಿಸುವುದಿಲ್ಲ. ಆಗ ಕಣ್ಣುಗಳಲ್ಲಿ ರಜೋಗುಣದ ಧೂಳು ತುಂಬಿದ್ದರಿಂದ ತನ್ನ ಕರ್ಮಗಳ ಸಾಕ್ಷಿಯಾಗಿರುವ ದಿಕ್ಕುಗಳ ದೇವತೆಗಳನ್ನೂ ಮರೆಯುವಷ್ಟು ಬುದ್ಧಿಯು ಮಲಿನವಾಗಿ ಹೋಗುತ್ತದೆ. ॥ ೯ ॥ ಕೆಲವೊಮ್ಮೆ ತಾನಾಗಿಯೇ ವಿಷಯಗಳ ಮಿಥ್ಯತ್ವವು ತಿಳಿದುಬಂದರೂ ಅನಾದಿಕಾಲದಿಂದ ದೇಹದಲ್ಲಿ ಆತ್ಮಬುದ್ಧಿಯು ಇರುವುದರಿಂದ ವಿವೇಕಬುದ್ಧಿಯು ನಾಶವಾದ ಕಾರಣ ಆ ಬಿಸಿಲ್ಗುದುರೆಯಂತಿರುವ ವಿಷಯಗಳ ಕಡೆಗೆ ಪುನಃ ಓಡತೊಡಗುವನು. ॥ ೧೦ ॥

ತಿಸ್ತಯ್ಯೈವ ಮರೀಚಿತೋಯಪ್ರಾಯಾಂಸ್ತಾನೇವಾಭಿಧಾವತಿ ॥ ೧೦ ॥ ಕ್ವಚಿದುಲೂಕಝಿಲ್ಲೀಸ್ವನವದತಿಪರುಷರಭಸಾಟೋಪಂ ಪ್ರತ್ಯಕ್ಷಂ ಪರೋಕ್ಷಂ ವಾ ರಿಪುರಾಜಕುಲನಿರ್ಭರ್ತ್ಸಿತೇನಾತಿವ್ಯಥಿತಕರ್ಣಮೂಲಹೃದಯಃ ॥ ೧೧ ॥

ಕೆಲವೊಮ್ಮೆ ಗೂಗೆಯ ಕೂಗಿನಂತೆ ಎದುರಿನಲ್ಲೇ ಕಟುವಾಗಿ ಮಾತನಾಡುವ ಶತ್ರುಗಳ ಮಾತುಗಳು ಮತ್ತು ಹುಳುವಿನಂತೆ ಪರೋಕ್ಷವಾಗಿ ರಾಜನ ಬೆದರಿಕೆಯ ಭೀಕರವಾದ ಭಾಷಣದಿಂದ ಕಿವಿಗಳಿಗೆ ಹಾಗೂ ಮನಸ್ಸಿಗೆ ತುಂಬಾ ವ್ಯಥೆ ಉಂಟಾಗುತ್ತದೆ. ॥ ೧೧ ॥

ಸ ಯದಾ ದುಗ್ಧಪೂರ್ವಸುಕೃತಸ್ತದಾ ಕಾರಸ್ಕರಕಾಕತುಂಡಾದ್ಯಪುಣ್ಯದ್ರುಮಲತಾವಿಷೋದಪಾನವದುಭಯಾರ್ಥಶೂನ್ಯದ್ರವಿಣಾನ್ ಜೀವನ್ಮೃತಾನ್ ಸ್ವಯಂ ಜೀವನ್ಮ್ರಿಯಮಾಣ ಉಪಧಾವತಿ ॥ ೧೨ ॥ ಏಕದಾಸತ್ಪ್ರಸಂಗಾನ್ನಿಕೃತಮತಿರ್ವ್ಯುದಕಸ್ರೋತಃಸ್ಖಲನವದುಭಯತೋಽಪಿ ದುಃಖದಂ ಪಾಖಂಡಮಭಿಯಾತಿ ॥ ೧೩ ॥ ಯದಾ ತು ಪರಬಾಧಯಾಂಧ ಆತ್ಮನೇ ನೋಪನಮತಿ ತದಾ ಹಿ ಪಿತೃಪುತ್ರಬರ್ಹಿಷ್ಮತಃ ಪಿತೃಪುತ್ರಾನ್ವಾ ಸ ಖಲು ಭಕ್ಷಯತಿ ॥ ೧೪ ॥ ಕ್ವಚಿದಾಸಾದ್ಯ ಗೃಹಂ ದಾವವತ್ಪ್ರಿಯಾರ್ಥವಿಧುರಮಸುಖೋದರ್ಕಂ ಶೋಕಾಗ್ನಿನಾ ದಹ್ಯಮಾನೋ ಭೃಶಂ ನಿರ್ವೇದಮುಪಗಚ್ಛತಿ ॥ ೧೫ ॥ ಕ್ವಚಿತ್ ಕಾಲವಿಷಮಿತರಾಜಕುಲರಕ್ಷಸಾಪಹೃತಪ್ರಿಯತಮಧನಾಸುಃ ಪ್ರಮೃತಕ ಇವ ವಿಗತಜೀವಲಕ್ಷಣ ಆಸ್ತೇ ॥ ೧೬ ॥ ಕದಾಚಿನ್ಮನೋರಥೋಪಗತಪಿತೃಪಿತಾಮಹಾದ್ಯಸತ್ಸದಿತಿ ಸ್ವಪ್ನನಿರ್ವೃತಿಲಕ್ಷಣಮನುಭವತಿ ॥ ೧೭ ॥ ಕ್ವಚಿದ್ಗೃಹಾಶ್ರಮಕರ್ಮಚೋದನಾತಿಭರಗಿರಿಮಾರುರುಕ್ಷಮಾಣೋ ಲೋಕವ್ಯಸನಕರ್ಷಿತಮನಾಃ ಕಂಟಕಶರ್ಕರಾಕ್ಷೇತ್ರಂ ಪ್ರವಿಶನ್ನಿವ ಸೀದತಿ ॥ ೧೮ ॥ ಕ್ವಚಿಚ್ಚ ದುಃಸಹೇನ ಕಾಯಾಭ್ಯಂತರವಹ್ನಿನಾ ಗೃಹೀತಸಾರಃ ಸ್ವಕುಟುಂಬಾಯ ಕ್ರುಧ್ಯತಿ ॥ ೧೯ ॥ ಸ ಏವ ಪುನರ್ನಿದ್ರಾಜಗರಗೃಹೀತೋಽಂಧೇ ತಮಸಿ ಮಗ್ನಃ ಶೂನ್ಯಾರಣ್ಯ ಇವ ಶೇತೇ ನಾನ್ಯತ್ಕಿಂಚನ ವೇದ ಶವ ಇವಾಪವಿದ್ಧಃ ॥ ೨೦ ॥

ಪೂರ್ವಪುಣ್ಯವನ್ನು ಕಳೆದುಕೊಂಡ ಈತನು ಬದುಕಿದ್ದರೂ ಸತ್ತವನಂತೆ ಆಗುವನು. ಕಡುಬಡವನಾಗಿ ದೈನ್ಯದಿಂದ ಕೂಡಿ ಇಹ-ಪರ ಜೀವನಗಳೆರಡಕ್ಕೂ ಸಾಧನವಾಗದಂತೆ ಹುಚ್ಚುಬೇವು, ಕಾಗೆಮೋರೆಯೇ ಮುಂತಾದ ಪಾಪವೃಕ್ಷಗಳಿಗೂ, ವಿಷದ ಬಳ್ಳಿ - ವಿಷದ ಬಾವಿಗಳಿಗೂ ಸಮನಾಗಿರುವ ಜಿಪುಣರಾದ ಹಣವಂತರನ್ನೂ ಆಶ್ರಯಿಸಬೇಕಾಗುವುದು. ॥ ೧೨ ॥ ಕೆಲವೊಮ್ಮೆ ದುಷ್ಟ ಮನುಷ್ಯರ ಸಂಗದಿಂದ ಬುದ್ಧಿಯು ಕೆಟ್ಟುಹೋಗಿ ಒಣಗಿದ ನದಿಯಲ್ಲಿ ಬಿದ್ದು ದುಃಖಿಯಾಗುವಂತೆ ಈ ಲೋಕ ಮತ್ತು ಪರಲೋಕದಲ್ಲಿ ದುಃಖವನ್ನು ಕೊಡುವಂತಹ ಪಾಷಂಡಮತದಲ್ಲಿ ಸಿಕ್ಕಿಕೊಳ್ಳುವನು. ॥ ೧೩ ॥ ಬೇರೆಯವರನ್ನು ತೊಂದರೆಗೆ ಗುರಿಪಡಿಸಿದ್ದರಿಂದ ಅವನಿಗೆ ಅನ್ನವೂ ಸಿಗದಿದ್ದಾಗ, ಅವನು ತನ್ನ ತಂದೆ-ಮಕ್ಕಳಲ್ಲಿ ಅಥವಾ ಬಂಧುಗಳಲ್ಲಿ ಹುಲ್ಲುಕಡ್ಡಿಯಷ್ಟು ದ್ರವ್ಯವು ಕಂಡುಬಂದರೆ ತಂದೆ-ಮಕ್ಕಳನ್ನಾದರೂ ಪೀಡಿಸಿ ಅದನ್ನು ಕಸಿದುಕೊಳ್ಳಲು ಸಿದ್ಧನಾಗುತ್ತಾನೆ. ॥ ೧೪ ॥ ಕೆಲವೊಮ್ಮೆ ಕಾಡ್ಗಿಚ್ಚಿನಂತಹ ಪ್ರಿಯ ವಿಷಯಗಳಿಂದ ಶೂನ್ಯವಾದ ಹಾಗೂ ಪರಿಣಾಮದಲ್ಲಿ ದುಃಖಮಯವಾದ ಮನೆಗೆ ತಲಪುತ್ತಾನೆ. ಆಗ ಅಲ್ಲಿ ಪ್ರಿಯಜನರ ವಿಯೋಗಾದಿಗಳಿಂದ ಅವನ ಶೋಕಾಗ್ನಿಯು ಭುಗಿಲೇಳುತ್ತದೆ. ಇದರಿಂದ ಸಂತಪ್ತನಾಗಿ ಅವನು ಬಹಳ ಖಿನ್ನನಾಗತೊಡಗುವನು. ॥ ೧೫ ॥ ಇನ್ನೊಮ್ಮೆ ಕಾಲನಂತೆ ಭಯಂಕರ ರಾಜಕುಲರೂಪನಾದ ರಾಕ್ಷಸನು ಇವನ ಪರಮಪ್ರಿಯ ಧನರೂಪೀ ಪ್ರಾಣಗಳನ್ನು ಕಸಿದುಕೊಂಡಾಗ, ಇವನು ಸತ್ತವನಂತೆ ನಿರ್ಜೀವನಾಗಿ ಹೋಗುತ್ತಾನೆ. ॥ ೧೬ ॥ ಕೆಲವೊಮ್ಮೆ ಮನೋರಥ ಪದಾರ್ಥಗಳಂತೆ ಅತ್ಯಂತ ಅಸತ್ತಾದ ಪಿತಾ-ಪಿತಾಮಹರು ಮುಂತಾದ ಸಂಬಂಧಗಳನ್ನು ಸತ್ಯವೆಂದು ತಿಳಿದುಕೊಂಡು ಅವರ ಸಹವಾಸದಿಂದ ಸ್ವಪ್ನದಂತಿರುವ ಕ್ಷಣಿಕ ಸುಖವನ್ನು ಅನುಭವಿಸುತ್ತಾ ಇರುತ್ತಾನೆ. ॥ ೧೭ ॥ ಗೃಹಸ್ಥಾಶ್ರಮಕ್ಕಾಗಿ ವಿಸ್ತಾರಮಾಡಲ್ಪಟ್ಟ ಮಹಾನ್ ಕರ್ಮವಿಧಾನದ ಅನುಷ್ಠಾನ ಮಾಡುವುದು ಯಾವುದೋ ಕಡಿದಾದ ಪರ್ವತವನ್ನು ಹತ್ತುವಂತೆಯೇ ಇದೆ. ಜನರು ಅತ್ತಕಡೆ ಪ್ರವೃತ್ತರಾಗಿರುವುದನ್ನು ಕಂಡು ಅವರಂತೆಯೇ ಇವನೂ ಅದನ್ನು ಆಚರಿಸಲು ಪ್ರಯತ್ನಿಸಿದಾಗ ಬಗೆ-ಬಗೆಯ ಕಷ್ಟಗಳಿಂದ ಕ್ಲೇಶಗೊಂಡು ಕಲ್ಲು-ಮುಳ್ಳುಗಳಿಂದ ತುಂಬಿದ ಭೂಮಿಯನ್ನು ತಲುಪಿದ ವ್ಯಕ್ತಿಯಂತೆ ದುಃಖಿತನಾಗುತ್ತಾನೆ. ॥ ೧೮ ॥ ಕೆಲವೊಮ್ಮೆ ಜಠರಾಗ್ನಿಯ ಜ್ವಾಲೆಯೆಂಬ ಹಸಿವಿನಿಂದ ಪೀಡಿತನಾಗಿ ತನ್ನ ಕುಟುಂಬದ ಮೇಲೆಯೇ ಕ್ರೋಧಗೊಳ್ಳುವನು. ॥ ೧೯ ॥ ಮತ್ತೆ ನಿದ್ದೆಯೆಂಬ ಹೆಬ್ಬಾವಿನ ಹಿಡಿತಕ್ಕೆ ಸಿಕ್ಕಿಬಿದ್ದಾಗ ಅಜ್ಞಾನರೂಪವಾದ ಘೋರ ಅಂಧಕಾರದಲ್ಲಿ ಮುಳುಗಿ – ಶೂನ್ಯವಾದ ಅರಣ್ಯದಲ್ಲಿ ಎಸೆಯಲ್ಪಟ್ಟ ಹೆಣದಂತೆ ಬಿದ್ದುಕೊಳ್ಳುವನು. ಆಗ ಅವನಿಗೆ ಯಾವುದರ ಜ್ಞಾನವೂ ಇರುವುದಿಲ್ಲ. ॥ ೨೦ ॥

ಕುಟುಂಬಿನ ಉರಣಕವತ್‌ಸಂರಕ್ಷ್ಯಮಾಣಂ ಮಿಷತೋಽಪಿ ಹರಂತಿ ॥ ೩ ॥ ಯಥಾ ಹ್ಯನುವತ್ಸರಂ ಕೃಷ್ಯಮಾಣಮಪ್ಯದಗ್ಧಬೀಜಂ ಕ್ಷೇತ್ರಂ ಪುನರೇವಾವಪನಕಾಲೇ ಗುಲ್ಮತೃಣವೀರುದ್ಭಿರ್ಗಹ್ವರಮಿವ ಭವತ್ಯೇವಮೇವ ಗೃಹಾಶ್ರಮಃ ಕರ್ಮಕ್ಷೇತ್ರಂ ಯಸ್ಮಿನ್ನ ಹಿ ಕರ್ಮಾಣ್ಯುತ್ಸೀದಂತಿ ಯದಯಂ ಕಾಮಕರಂಡ ಏಷ ಆವಸಥಃ ॥ ೪ ॥

ತತ್ರ ಗತೋ ದಂಶಮಶಕಸಮಾಪಸದೈರ್ಮನುಜೈಃ ಶಲಭಶಕುಂತತಸ್ಕರಮೂಷಕಾದಿಭಿರುಪರುಧ್ಯಮಾನಬಹಿಃಪ್ರಾಣಃ ಕ್ವಚಿತ್ ಪರಿವರ್ತಮಾನೋಽಸ್ಮಿನ್ನಧ್ವನ್ಯವಿದ್ಯಾಕಾಮಕರ್ಮಭಿರುಪರಕ್ತಮನಸಾನುಪಪನ್ನಾರ್ಥಂ ನರಲೋಕಂ ಗಂಧರ್ವನಗರಮುಪಪನ್ನಮಿತಿ ಮಿಥ್ಯಾದೃಷ್ಟಿರನುಪಶ್ಯತಿ ॥ ೫ ॥ ತತ್ರ ಚ ಕ್ವಚಿದಾತಪೋದಕನಿಭಾನ್ವಿಷಯಾನುಪಧಾವತಿ ಪಾನಭೋಜನವ್ಯವಾಯಾದಿವ್ಯಸನಲೋಲುಪಃ ॥ ೬ ॥ ಕ್ವಚಿಚ್ಚಾಶೇಷದೋಷನಿಷದನಂ ಪುರೀಷವಿಶೇಷಂ ತದ್ವರ್ಣಗುಣನಿರ್ಮಿತಮತಿಃ ಸುವರ್ಣಮುಪಾದಿತ್ಸತ್ಯಗ್ನಿಕಾಮಕಾತರ ಇವೋಲ್ಮುಕಪಿಶಾಚಮ್ ॥ ೭ ॥ ಅಥ ಕದಾಚಿನ್ನಿವಾಸಪಾನೀಯದ್ರವಿಣಾದ್ಯನೇಕಾತ್ಮೋಪಜೀವನಾಭಿನಿವೇಶ ಏತಸ್ಯಾಂ ಸಂಸಾರಾಟವ್ಯಾಮಿತಸ್ತತಃ ಪರಿಧಾವತಿ ॥ ೮ ॥ ಕ್ವಚಿಚ್ಚ ವಾತ್ಯೌಪಮ್ಯಯಾ ಪ್ರಮದಯಾಽಽರೋಹಮಾರೋಪಿತಸ್ತತ್ಕಾಲರಜಸಾ ರಜನೀಭೂತ ಇವಾಸಾಧುಮರ್ಯಾದೋರಜಸ್ವಲಾಕ್ಷೋಽಪಿ ದಿಗ್ದೇವತಾ ಅತಿರಜಸ್ವಲಮತಿರ್ನವಿಜಾನಾತಿ ॥ ೯ ॥ ಕ್ವಚಿತ್ಸಕೃದವಗತವಿಷಯವೈತಥ್ಯಃ ಸ್ವಯಂ ಪರಾಭಿಧ್ಯಾನೇನ ವಿಭ್ರಂಶಿತಸ್ಮೃ-

ನರಿಗಳಂತೆ ಇರುತ್ತವೆ. ಆ ಅರ್ಥಲೋಲುಪ ಕುಟುಂಬಿಯ ಧನವನ್ನು ಅವನು ಇಚ್ಛಿಸದಿದ್ದರೂ – ಕುರಿಕಾಯುವವರ ರಕ್ಷಣೆಯಲ್ಲಿದ್ದರೂ ತೋಳವು ಕುರಿಗಳನ್ನು ಎತ್ತಿಕೊಂಡು ಹೋಗುವಂತೆ – ಅವರು ನೋಡು-ನೋಡುತ್ತಾ ಕಿತ್ತುಕೊಳ್ಳುವರು. ॥ ೩ ॥ ಯಾವುದೇ ಹೊಲದಲ್ಲಿರುವ ಕಸ-ಕಡ್ಡಿಗಳ ಬೀಜಗಳನ್ನು ಬೆಂಕಿಯಿಂದ ಸುಡದೆ ಇದ್ದರೆ ಪ್ರತಿವರ್ಷವೂ ಉಳಿಮೆ ಮಾಡಿದರೂ ಬೀಜನೆಡುವ ವೇಳೆಗೆ ಅವು ಪುನಃ ಕಳೆ-ಮೇಳೆಗಳು, ಬಳ್ಳಿಗಳು-ಪೊದೆಗಳು, ಹುಲ್ಲು ಮುಂತಾದವುಗಳು ದಟ್ಟವಾಗಿ ಬೆಳೆಯುವುವು. ಹೀಗೆಯೇ ಈ ಗೃಹಸ್ಥಾಶ್ರಮವೂ ಕರ್ಮಭೂಮಿಯಾಗಿದೆ. ಇದರಲ್ಲಿಯೂ ಕರ್ಮಗಳನ್ನು ಪೂರ್ಣವಾಗಿ ಕಿತ್ತುಹಾಕಲು ಬರುವುದಿಲ್ಲ. ಏಕೆಂದರೆ, ಈ ಮನೆಯು ಕಾಮನೆಗಳ ಪೆಟ್ಟಿಗೆಯಾಗಿದೆ. ॥ ೪ ॥

ಈ ಗೃಹಸ್ಥಾಶ್ರಮದಲ್ಲಿರುವ ವ್ಯಕ್ತಿಗೆ ಹಣವು ಹೊರಗೆ ಓಡಾಡುವ ಪ್ರಾಣದಂತೆ ಪ್ರಿಯವಾಗಿರುವುದು. ಅವನಿಗೆ ಕಾಡುಕೋಣ, ಕಾಡುಸೊಳ್ಳೆಗಳಂತಿರುವ ನೀಚಪುರುಷರಿಂದ ಹಾಗೂ ಮಿಡತೆ, ಹಕ್ಕಿಗಳು, ಕಳ್ಳರೂ, ಇಲಿಗಳೂ ಮುಂತಾದವುಗಳಿಂದ ತೊಂದರೆ ಆಗುತ್ತಾ ಇರುತ್ತದೆ. ಕೆಲವೊಮ್ಮೆ ಈ ಮಾರ್ಗದಲ್ಲಿ ಅಲೆಯುತ್ತಾ-ಅಲೆಯುತ್ತಾ ಇವನು ಅವಿದ್ಯೆ, ಕಾಮನೆ ಮತ್ತು ಕರ್ಮಗಳಿಂದ ಕಲುಷಿತವಾದ ತನ್ನ ಚಿತ್ತದಿಂದ ದೃಷ್ಟಿದೋಷದ ಕಾರಣ ಈ ಮರ್ತ್ಯಲೋಕವನ್ನು ಗಂಧರ್ವನಗರದಂತೆ ಅಸತ್ತಾಗಿದ್ದರೂ ಸತ್ಯವೆಂದೇ ತಿಳಿಯತೊಡಗುತ್ತಾನೆ. ॥ ೫ ॥ ಮತ್ತೆ ಊಟ-ತಿಂಡಿ, ಸ್ತ್ರೀಪ್ರಸಂಗಾದಿ ವ್ಯಸನಗಳಲ್ಲಿ ಸಿಕ್ಕಿಬಿದ್ದು ಬಿಸಿಲ್ಗುದುರೆಯಂತೆ ಮಿಥ್ಯಾವಿಷಯಗಳ ಕಡೆಗೆ ಓಡಲು ತೊಡಗುತ್ತಾನೆ. ॥ ೬ ॥ ಕೆಲವೊಮ್ಮೆ ಬುದ್ಧಿಯ ರಜೋಗುಣದಿಂದ ಪ್ರಭಾವಿತನಾದಾಗ ಎಲ್ಲ ಅನರ್ಥಗಳಿಗೆ ಮೂಲವಾದ ಅಗ್ನಿಯ ಮಲರೂಪವಾದ ಭಂಗಾರವನ್ನೇ ಸುಖದ ಸಾಧನವೆಂದು ತಿಳಿದು, ಅದನ್ನು ಪಡೆಯಲಿಕ್ಕಾಗಿ ಆಸೆಪಡುತ್ತಾ - ಕಾಡಿನಲ್ಲಿ ಛಳಿಯಿಂದ ಗಡ-ಗಡನೆ ನಡುಗುತ್ತಿರುವ ವ್ಯಕ್ತಿಯು ಬೆಂಕಿಗಾಗಿ ವ್ಯಾಕುಲನಾಗಿ ಕಾಡಿನಲ್ಲಿ ಓಡಾಡುವ ಕೊಳ್ಳಿಪಿಶಾಚಿಗಳನ್ನೇ ಬೆಂಕಿಯೆಂದು ಭ್ರಮಿಸಿ ಅವರ ಬಳಿ ಓಡಿಹೋಗಿ ಅವರ ಕೈಗೆ ಸಿಕ್ಕಿ ಒದ್ದಾಡುವಂತೆ – ಪ್ರಯತ್ನಿಸುತ್ತಿರುತ್ತಾನೆ. ॥ ೭ ॥ ಕೆಲವೊಮ್ಮೆ ತನ್ನ ದೇಹಯಾತ್ರೆಗೆ ಬೇಕಾದ ಅನ್ನ, ನೀರು, ಹಣ ಮುಂತಾದವುಗಳನ್ನು ಗಳಿಸಬೇಕೆಂದು ಈ ಸಂಸಾರಾರಣ್ಯದಲ್ಲಿ ಅಲ್ಲಲ್ಲಿ ಅಲೆದಾಡುತ್ತಿರುವನು. ॥ ೮ ॥ ಕೆಲವೊಮ್ಮೆ ಸುಂಟರಗಾಳಿಯಂತೆ ಕಣ್ಣಿಗೆ ಮಣ್ಣೆರಚುವ ಸ್ತ್ರೀಗೆ ಮರುಳಾಗಿ ಆಕೆಯ ತೊಡೆಯಲ್ಲಿ ಕುಳಿತು ಕಾಮರಾಗದಿಂದ ಕುರುಡನಾಗಿ ಸತ್ಪುರುಷರ ಮರ್ಯಾದೆಯನ್ನೂ ಲೆಕ್ಕಿಸುವುದಿಲ್ಲ. ಆಗ ಕಣ್ಣುಗಳಲ್ಲಿ ರಜೋಗುಣದ ಧೂಳು ತುಂಬಿದ್ದರಿಂದ ತನ್ನ ಕರ್ಮಗಳ ಸಾಕ್ಷಿಯಾಗಿರುವ ದಿಕ್ಕುಗಳ ದೇವತೆಗಳನ್ನೂ ಮರೆಯುವಷ್ಟು ಬುದ್ಧಿಯು ಮಲಿನವಾಗಿ ಹೋಗುತ್ತದೆ. ॥ ೯ ॥ ಕೆಲವೊಮ್ಮೆ ತಾನಾಗಿಯೇ ವಿಷಯಗಳ ಮಿಥ್ಯತ್ವವು ತಿಳಿದುಬಂದರೂ ಅನಾದಿಕಾಲದಿಂದ ದೇಹದಲ್ಲಿ ಆತ್ಮಬುದ್ಧಿಯು ಇರುವುದರಿಂದ ವಿವೇಕ-ಬುದ್ಧಿಯು ನಾಶವಾದ ಕಾರಣ ಆ ಬಿಸಿಲ್ಗುದುರೆಯಂತಿರುವ ವಿಷಯಗಳ ಕಡೆಗೆ ಪುನಃ ಓಡತೊಡಗುವನು. ॥ ೧೦ ॥

ತಿಸ್ತಯೈವ ಮರೀಚಿತೋಯಪ್ರಾಯಾಂಸ್ತಾನೇವಾಭಿಧಾವತಿ ॥ ೧೦ ॥ ಕ್ವಚಿದುಲೂಕಝಿಲ್ಲೀಸ್ವನವದತಿಪರುಷರಭಸಾಟೋಪಂ ಪ್ರತ್ಯಕ್ಷಂ ಪರೋಕ್ಷಂ ವಾ ರಿಪುರಾಜಕುಲನಿರ್ಭರ್ತ್ಸಿತೇನಾತಿವ್ಯಥಿತಕರ್ಣಮೂಲಹೃದಯಃ ॥ ೧೧ ॥

ಸ ಯದಾ ದುಗ್ಧಪೂರ್ವಸುಕೃತಸ್ತದಾ ಕಾರಸ್ಕರಕಾಕತುಂಡಾದ್ಯಪುಣ್ಯದ್ರುಮಲತಾವಿಷೋದಪಾನವದುಭಯಾರ್ಥಶೂನ್ಯದ್ರವಿಣಾನ್ ಜೀವನ್ಮೃತಾನ್ ಸ್ವಯಂ ಜೀವನ್ಮ್ರಿಯಮಾಣ ಉಪಧಾವತಿ ॥ ೧೨ ॥ ಏಕದಾಸತ್ಪ್ರಸಂಗಾನ್ನಿಕೃತಮತಿರ್ವ್ಯುದಕಸ್ರೋತಃಸ್ಖಲನವದುಭಯತೋಽಪಿ ದುಃಖದಂ ಪಾಖಂಡಮಭಿಯಾತಿ ॥ ೧೩ ॥ ಯದಾ ತು ಪರಬಾಧಯಾಂಧ ಆತ್ಮನೇ ನೋಪನಮತಿ ತದಾ ಹಿ ಪಿತೃಪುತ್ರಬರ್ಹಿಷ್ಮತಃ ಪಿತೃಪುತ್ರಾನ್ವಾ ಸ ಖಲು ಭಕ್ಷಯತಿ ॥ ೧೪ ॥ ಕ್ವಚಿದಾಸಾದ್ಯ ಗೃಹಂ ದಾವವತ್ಪ್ರಿಯಾರ್ಥವಿಧುರಮಸುಖೋದರ್ಕಂ ಶೋಕಾಗ್ನಿನಾ ದಹ್ಯಮಾನೋ ಭೃಶಂ ನಿರ್ವೇದಮುಪಗಚ್ಛತಿ ॥ ೧೫ ॥ ಕ್ವಚಿತ್ ಕಾಲವಿಷಮಿತರಾಜಕುಲರಕ್ಷಸಾಪಹೃತಪ್ರಿಯತಮಧನಾಸುಃ ಪ್ರಮೃತಕ ಇವ ವಿಗತಜೀವಲಕ್ಷಣ ಆಸ್ತೇ ॥ ೧೬ ॥ ಕದಾಚಿನ್ಮನೋರಥೋಪಗತಪಿತೃಪಿತಾಮಹಾದ್ಯಸತ್ಸದಿತಿ ಸ್ವಪ್ನನಿರ್ವೃತಿಲಕ್ಷಣಮನುಭವತಿ ॥ ೧೭ ॥ ಕ್ವಚಿದ್ಗೃಹಾಶ್ರಮಕರ್ಮಚೋದನಾತಿಭರಗಿರಿಮಾರುರುಕ್ಷಮಾಣೋ ಲೋಕವ್ಯಸನಕರ್ಷಿತಮನಾಃ ಕಂಟಕಶರ್ಕರಾಕ್ಷೇತ್ರಂ ಪ್ರವಿಶನ್ನಿವ ಸೀದತಿ ॥ ೧೮ ॥ ಕ್ವಚಿಚ್ಚ ದುಃಸಹೇನ ಕಾಯಾಭ್ಯಂತರವಹ್ನಿನಾ ಗೃಹೀತಸಾರಃ ಸ್ವಕುಟುಂಬಾಯ ಕ್ರುಧ್ಯತಿ ॥ ೧೯ ॥ ಸ ಏವ ಪುನರ್ನಿದ್ರಾಜಗರಗೃಹೀತೋಽಂಧೇ ತಮಸಿ ಮಗ್ನಃ ಶೂನ್ಯಾರಣ್ಯ ಇವ ಶೇತೇ ನಾನ್ಯತ್ಕಿಂಚನ ವೇದ ಶವ ಇವಾಪವಿದ್ಧಃ ॥ ೨೦ ॥

ಕೆಲವೊಮ್ಮೆ ಗೂಗೆಯ ಕೂಗಿನಂತೆ ಎದುರಿನಲ್ಲೇ ಕಟುವಾಗಿ ಮಾತನಾಡುವ ಶತ್ರುಗಳ ಮಾತುಗಳು ಮತ್ತು ಹುಳುವಿನಂತೆ ಪರೋಕ್ಷವಾಗಿ ರಾಜನ ಬೆದರಿಕೆಯ ಭೀಕರವಾದ ಭಾಷಣದಿಂದ ಕಿವಿಗಳಿಗೆ ಹಾಗೂ ಮನಸ್ಸಿಗೆ ತುಂಬಾ ವ್ಯಥೆ ಉಂಟಾಗುತ್ತದೆ. ॥ ೧೧ ॥

ಪೂರ್ವಪುಣ್ಯವನ್ನು ಕಳೆದುಕೊಂಡ ಈತನು ಬದುಕಿದ್ದರೂ ಸತ್ತವನಂತೆ ಆಗುವನು. ಕಡುಬಡವನಾಗಿ ದೈನ್ಯದಿಂದ ಕೂಡಿ 'ಇಹ-ಪರ ಜೀವನಗಳೆರಡಕ್ಕೂ ಸಾಧನವಾಗದಂತೆ ಹುಚ್ಚುಬೇವು, ಕಾಗೆಮೋರೆಯೇ ಮುಂತಾದ ಪಾಪವೃಕ್ಷಗಳಿಗೂ, ವಿಷದ ಬಳ್ಳಿ - ವಿಷದ ಬಾವಿಗಳಿಗೂ ಸಮನಾಗಿರುವ ಜಿಪುಣರಾದ ಹಣವಂತರನ್ನೂ ಆಶ್ರಯಿಸಬೇಕಾಗುವುದು. ॥ ೧೨ ॥ ಕೆಲವೊಮ್ಮೆ ದುಷ್ಟ ಮನುಷ್ಯರ ಸಂಗದಿಂದ ಬುದ್ಧಿಯು ಕೆಟ್ಟುಹೋಗಿ ಒಣಗಿದ ನದಿಯಲ್ಲಿ ಬಿದ್ದು ದುಃಖಿಯಾಗುವಂತೆ ಈ ಲೋಕ ಮತ್ತು ಪರಲೋಕದಲ್ಲಿ ದುಃಖವನ್ನು ಕೊಡುವಂತಹ ಪಾಷಂಡಮತದಲ್ಲಿ ಸಿಕ್ಕಿಕೊಳ್ಳುವನು. ॥ ೧೩ ॥ ಬೇರೆಯವರನ್ನು ತೊಂದರೆಗೆ ಗುರಿಪಡಿಸಿದ್ದರಿಂದ ಅವನಿಗೆ ಅನ್ನವೂ ಸಿಗದಿದ್ದಾಗ, ಅವನು ತನ್ನ ತಂದೆ-ಮಕ್ಕಳಲ್ಲಿ ಅಥವಾ ಬಂಧುಗಳಲ್ಲಿ ಹುಲ್ಲುಕಡ್ಡಿಯಷ್ಟು ದ್ರವ್ಯವು ಕಂಡುಬಂದರೆ ತಂದೆ-ಮಕ್ಕಳನ್ನಾದರೂ ಪೀಡಿಸಿ ಅದನ್ನು ಕಸಿದುಕೊಳ್ಳಲು ಸಿದ್ಧನಾಗುತ್ತಾನೆ. ॥ ೧೪ ॥ ಕೆಲವೊಮ್ಮೆ ಕಾಡ್ಗಿಚ್ಚಿನಂತಹ ಪ್ರಿಯ ವಿಷಯಗಳಿಂದ ಶೂನ್ಯವಾದ ಹಾಗೂ ಪರಿಣಾಮದಲ್ಲಿ ದುಃಖಮಯವಾದ ಮನೆಗೆ ತಲಪುತ್ತಾನೆ. ಆಗ ಅಲ್ಲಿ ಪ್ರಿಯ ಜನರ ವಿಯೋಗಾದಿಗಳಿಂದ ಅವನ ಶೋಕಾಗ್ನಿಯು ಭುಗಿಲೇಳುತ್ತದೆ. ಇದರಿಂದ ಸಂತಪ್ತನಾಗಿ ಅವನು ಬಹಳ ಖಿನ್ನನಾಗತೊಡಗುವನು. ॥ ೧೫ ॥ ಇನ್ನೊಮ್ಮೆ ಕಾಲನಂತೆ ಭಯಂಕರ ರಾಜಕುಲರೂಪನಾದ ರಾಕ್ಷಸನು ಇವನ ಪರಮಪ್ರಿಯ ಧನರೂಪೀ ಪ್ರಾಣಗಳನ್ನು ಕಸಿದುಕೊಂಡಾಗ, ಇವನು ಸತ್ತವನಂತೆ ನಿರ್ಜೀವನಾಗಿ ಹೋಗುತ್ತಾನೆ. ॥ ೧೬ ॥ ಕೆಲವೊಮ್ಮೆ ಮನೋರಥ ಪದಾರ್ಥಗಳಂತೆ ಅತ್ಯಂತ ಅಸತ್ತಾದ ಪಿತಾ-ಪಿತಾಮಹರು ಮುಂತಾದ ಸಂಬಂಧಗಳನ್ನು ಸತ್ಯವೆಂದು ತಿಳಿದುಕೊಂಡು ಅವರ ಸಹವಾಸದಿಂದ ಸ್ವಪ್ನದಂತಿರುವ ಕ್ಷಣಿಕ ಸುಖವನ್ನು ಅನುಭವಿಸುತ್ತಾ ಇರುತ್ತಾನೆ. ॥ ೧೭ ॥ ಗೃಹಸ್ಥಾಶ್ರಮಕ್ಕಾಗಿ ವಿಸ್ತಾರಮಾಡಲ್ಪಟ್ಟ ಮಹಾನ್ ಕರ್ಮವಿಧಾನದ ಅನುಷ್ಠಾನ ಮಾಡುವುದು ಯಾವುದೋ ಕಡಿದಾದ ಪರ್ವತವನ್ನು ಹತ್ತುವಂತೆಯೇ ಇದೆ. ಜನರು ಅತ್ತಕಡೆ ಪ್ರವೃತ್ತರಾಗಿರುವುದನ್ನು ಕಂಡು ಅವರಂತೆಯೇ ಇವನೂ ಅದನ್ನು ಆಚರಿಸಲು ಪ್ರಯತ್ನಿಸಿದಾಗ ಬಗೆ-ಬಗೆಯ ಕಷ್ಟಗಳಿಂದ ಕ್ಲೇಶಗೊಂಡು ಕಲ್ಲು-ಮುಳ್ಳುಗಳಿಂದ ತುಂಬಿದ ಭೂಮಿಯನ್ನು ತಲುಪಿದ ವ್ಯಕ್ತಿಯಂತೆ ದುಃಖಿತನಾಗುತ್ತಾನೆ. ॥ ೧೮ ॥ ಕೆಲವೊಮ್ಮೆ ಜಠರಾಗ್ನಿಯ ಜ್ವಾಲೆಯೆಂಬ ಹಸಿವಿನಿಂದ ಪೀಡಿತನಾಗಿ ತನ್ನ ಕುಟುಂಬದ ಮೇಲೆಯೇ ಕ್ರೋಧಗೊಳ್ಳುವನು. ॥ ೧೯ ॥ ಮತ್ತೆ ನಿದ್ದೆಯೆಂಬ ಹೆಬ್ಬಾವಿನ ಹಿಡಿತಕ್ಕೆ ಸಿಕ್ಕಿಬಿದ್ದಾಗ ಅಜ್ಞಾನರೂಪವಾದ ಘೋರ ಅಂಧಕಾರದಲ್ಲಿ ಮುಳುಗಿ – ಶೂನ್ಯವಾದ ಅರಣ್ಯದಲ್ಲಿ ಎಸೆಯಲ್ಪಟ್ಟ ಹೆಣದಂತೆ ಬಿದ್ದುಕೊಳ್ಳುವನು. ಆಗ ಅವನಿಗೆ ಯಾವುದರ ಜ್ಞಾನವೂ ಇರುವುದಿಲ್ಲ. ॥ ೨೦ ॥

ಕದಾಚಿದ್ಭಗ್ನಮಾನದಂಷ್ಟ್ರೋ ದುರ್ಜನದಂದಶೂಕೈರಲಬ್ಧನಿದ್ರಾಕ್ಷಣೋ ವ್ಯಥಿತಹೃದಯೇನಾನುಕ್ಷೀಯಮಾಣವಿಜ್ಞಾನೋಽಂಧಕೂಪೇಽಂಧವತ್ಪತತಿ ॥ ೨೧ ॥ ಕರ್ಹಿ ಸ್ಮ ಚಿತ್ಕಾಮಮಧುಲವಾನ್ವಿಚಿನ್ವನ್ಯದಾ ಪರದಾರ ಪರದ್ರವ್ಯಾಣ್ಯವರುಂಧಾನೋ ರಾಜ್ಞಾ ಸ್ವಾಮಿಭಿರ್ವಾ ನಿಹತಃ ಪತತ್ಯಪಾರೇ ನಿರಯೇ ॥ ೨೨ ॥ ಅಥ ಚ ತಸ್ಮಾದುಭಯಥಾಪಿ ಹಿ ಕರ್ಮಾಸ್ಮಿನ್ನಾತ್ಮನಃ ಸಂಸಾರಾವಪನಮುದಾಹರಂತಿ ॥ ೨೩ ॥ ಮುಕ್ತಸ್ತತೋ ಯದಿ ಬಂಧಾದ್ದೇವದತ್ತ ಉಪಾಚ್ಛಿನತ್ತಿ ತಸ್ಮಾದಪಿ ವಿಷ್ಣುಮಿತ್ರ ಇತ್ಯನವಸ್ಥಿತಿಃ ॥ ೨೪ ॥ ಕ್ವಚಿಚ್ಚ ಶೀತವಾತಾದ್ಯನೇಕಾಧಿದೈವಿಕಭೌತಿಕಾತ್ಮೀಯಾನಾಂ ದಶಾನಾಂ ಪ್ರತಿನಿವಾರಣೇಽಕಲ್ಪೋ ದುರಂತಚಿಂತಯಾ ವಿಷಣ್ಣ ಆಸ್ತೇ ॥ ೨೫ ॥ ಕ್ವಚಿನ್ಮಿಥೋ ವ್ಯವಹರನ್ಯತ್ಕಿಂಚಿದ್ಧನಮನ್ಯೇಭ್ಯೋ ವಾ ಕಾಕಿಣಿಕಾಮಾತ್ರಮಪ್ಯಪಹರನ್ ಯತ್ಕಿಂಚಿದ್ವಾ ವಿದ್ವೇಷಮೇತಿ ವಿತ್ತಶಾಠ್ಯಾತ್ ॥ ೨೬ ॥

ಕೆಲವೊಮ್ಮೆ ದುರ್ಜನರೆಂಬ ವಿಷಸರ್ಪಗಳು ಈತನನ್ನು ಬಲವಾಗಿ ಕಚ್ಚಿ ತಿರಸ್ಕರಿಸುತ್ತವೆ. ಆಗ ಇತರರನ್ನು ಕಚ್ಚಲು ಸಾಧನವಾಗಿದ್ದ ಇವನ ಗರ್ವವೆಂಬ ಹಲ್ಲುಗಳು ಮುರಿದು ಬೀಳುತ್ತವೆ. ಈತನಿಗೆ ಅಶಾಂತಿಯಿಂದ ನಿದ್ರೆಯು ಹತ್ತುವುದಿಲ್ಲ. ಮರ್ಮಸ್ಥಾನದಲ್ಲಿ ಪೀಡೆಯುಂಟಾಗುವುದರಿಂದ ಕ್ಷಣ-ಕ್ಷಣಕ್ಕೂ ವಿವೇಕಶಕ್ತಿಯು ಕ್ಷೀಣಿಸುತ್ತಿರುವಾಗ ಕೊನೆಗೆ ಕುರುಡನಂತೆ ಇವನು ನರಕರೂಪವಾದ ಕತ್ತಲ ಬಾವಿಯಲ್ಲಿ ಬಿದ್ದುಬಿಡುತ್ತಾನೆ. ॥ ೨೧ ॥ ಕೆಲವೊಮ್ಮೆ ವಿಷಯಸುಖರೂಪವಾದ ಜೇನಹನಿಗಳನ್ನು ಅರಸುತ್ತಾ ಈತನು ಕಳ್ಳತನದಿಂದ ಪರಸ್ತ್ರೀಯರನ್ನೂ, ಪರಧನವನ್ನೂ ಆಶ್ರಯಿಸಲು ಹೋಗಿ ಅವರ ಯಜಮಾನರಿಂದಲೂ, ರಾಜನಿಂದಲೂ ಹೊಡೆದು ಸಾಯಿಸಲ್ಪಟ್ಟು ಅನಂತವೂ, ಅಪಾರವೂ ಆದ ನರಕದಲ್ಲಿ ಹೋಗಿ ಬೀಳುವನು. ॥ ೨೨ ॥ ಇದರಿಂದಲೇ ಪ್ರವೃತ್ತಿಮಾರ್ಗದಲ್ಲಿದ್ದುಕೊಂಡು ಮಾಡಿದ ಲೌಕಿಕ ಮತ್ತು ವೈದಿಕ ಎರಡೂ ರೀತಿಯ ಕರ್ಮಗಳು ಜೀವನಿಗೆ ಸಂಸಾರವನ್ನೇ ದೊರಕಿಸಿಕೊಡುವವು ಎಂದು ಹೇಳುತ್ತಾರೆ. ॥ ೨೩ ॥ ಈ ರಾಜರೇ ಮುಂತಾದವರ ಬಂಧನದಿಂದ ಅತಿ ಪ್ರಯಾಸದಿಂದ ಬಿಡುಗಡೆ ಹೊಂದಿದರೂ, ಅನ್ಯಾಯದಿಂದ ಅಪಹರಿಸಿದ್ದ ಆ ಸ್ತ್ರೀ ಮತ್ತು ಧನವನ್ನು ದೇವದತ್ತನೆಂಬ ಯಾರೋ ಮತ್ತೊಬ್ಬನು ಕಸಿದುಕೊಳ್ಳುವನು ಮತ್ತೆ ಅವನಿಂದಲೂ ವಿಷ್ಣುಮಿತ್ರನೆಂಬ ಯಾವನೋ ಮೂರನೇ ವ್ಯಕ್ತಿಯು ಕಿತ್ತುಕೊಳ್ಳುವನು. ಹೀಗೆ ಆ ಭೋಗಗಳು ಒಬ್ಬರಿಂದ ಮತ್ತೊಬ್ಬರ ಬಳಿಗೆ ಹೋಗುತ್ತಾ ಇರುತ್ತವೆ; ಒಂದೇ ಕಡೆ ಸ್ಥಿರವಾಗಿ ನಿಲ್ಲುವುದಿಲ್ಲ. ॥ ೨೪ ॥ ಕೆಲವೊಮ್ಮೆ ಚಳಿ-ಗಾಳಿ ಮುಂತಾದ ಅನೇಕ ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ದುಃಖಗಳನ್ನು ನಿವಾರಿಸಲು ಅಸಮರ್ಥವಾದ್ದರಿಂದ ಇವನು ಅಪಾರವಾದ ಚಿಂತೆಗಳಲ್ಲಿ ಮುಳುಗಿ ಮರುಗುವನು. ॥ ೨೫ ॥ ಕೆಲವೊಮ್ಮೆ ಕೊಟ್ಟು-ಕೊಳ್ಳುವ ವ್ಯವಹಾರ ಮಾಡುವಾಗ ಬೇರೆಯವರ ಕವಡೆಯಷ್ಟು ಸ್ವಲ್ಪ ಅಥವಾ ಅದಕ್ಕಿಂತಲೂ ಕಡಿಮೆ ಹಣವನ್ನು ಅಪಹರಿಸಿದರೆ ಈ ಮೋಸದಿಂದ ಅವನ ದ್ವೇಷಕ್ಕೆ ಪಾತ್ರನಾಗುತ್ತಾನೆ. ॥ ೨೬ ॥

ಅಧ್ವನ್ಯಮುಷ್ಮಿನ್ನಿಮ ಉಪಸರ್ಗಾಸ್ತಥಾ ಸುಖದುಃಖರಾಗದ್ವೇಷಭಯಾಭಿಮಾನಪ್ರಮಾದೋನ್ಮಾದಶೋಕಮೋಹಲೋಭಮಾತ್ಸರ್ಯೇರ್ಷ್ಯಾವಮಾನಕ್ಷುತ್ಪಿಪಾಸಾಧಿವ್ಯಾಧಿಜನ್ಮಜರಾಮರಣಾದಯಃ ॥ ೨೭ ॥ ಕ್ವಾಪಿ ದೇವಮಾಯಯಾ ಸ್ತ್ರಿಯಾ ಭುಜಲತೋಪಗೂಢಃ ಪ್ರಸ್ಕನ್ನವಿವೇಕವಿಜ್ಞಾನೋ ಯದ್ವಿಹಾರಗೃಹಾರಂಭಾಕುಲಹೃದಯಸ್ತದಾಶ್ರಯಾವಸಕ್ತಸುತದುಹಿತೃಕಲತ್ರಭಾಷಿತಾವಲೋಕವಿಚೇಷ್ಟಿತಾಪಹೃತಹೃದಯ ಆತ್ಮಾನಮಜಿತಾತ್ಮಾಪಾರೇಽಂಧೇ ತಮಸಿ ಪ್ರಹಿಣೋತಿ ॥ ೨೮ ॥

ಎಲೈ ರಾಜನೇ! ಈ ಮಾರ್ಗದಲ್ಲಿ ಹಿಂದೆ ಹೇಳಿದ ವಿಘ್ನಗಳನ್ನಲ್ಲದೆ ಸುಖ-ದುಃಖ, ರಾಗ-ದ್ವೇಷ, ಭಯ, ಅಭಿಮಾನ, ಪ್ರಮಾದ, ಉನ್ಮಾದ, ಶೋಕ, ಮೋಹ, ಲೋಭ, ಮತ್ಸರ, ಈರ್ಷ್ಯೆ ಅಪಮಾನ, ಹಸಿವು-ಬಾಯಾರಿಕೆ, ಆಧಿ-ವ್ಯಾಧಿ, ಹುಟ್ಟು ಮುಪ್ಪು ಸಾವು ಮುಂತಾದ ಇನ್ನೂ ಅನೇಕ ವಿಘ್ನಗಳಿವೆ. ॥ ೨೭ ॥ (ಈ ಬಹು ವಿಘ್ನಗಳುಳ್ಳ ಮಾರ್ಗದಲ್ಲಿ ಹೀಗೆ ಅಲೆಯುತ್ತಿರುವ ಜೀವನು) ಎಂದೋ ದೇವಮಾಯಾರೂಪಿಣಿಯಾದ ಸ್ತ್ರೀಯಳ ತೋಳ್ತೆಕ್ಕೆಯಲ್ಲಿ ಬಿದ್ದು ವಿವೇಕಹೀನನಾಗುವನು. ಅವಳಿಗಾಗಿ ವಿಹಾರಭವನ ಮುಂತಾದವುಗಳನ್ನು ಒದಗಿಸುವ ಚಿಂತೆಯಲ್ಲಿ ಮುಳುಗಿರುತ್ತಾನೆ. ಅವನ ಆಶ್ರಿತವಾಗಿರುವ ಪುತ್ರರು, ಪುತ್ರಿಯರು ಹಾಗೂ ಬೇರೆ-ಬೇರೆ ಸ್ತ್ರೀಯರ ಸವಿಮಾತು, ಓರೆನೋಟ ಮತ್ತು ಚೇಷ್ಟೆಗಳಲ್ಲಿ ಆಸಕ್ತನಾಗಿ, ಅವರಲ್ಲೇ ಚಿತ್ತವು ಸಿಕ್ಕಿಹಾಕಿಕೊಂಡಿರುವುದರಿಂದ ಅವನು ಇಂದ್ರಿಯಗಳ ಗುಲಾಮನಾಗಿ ಅಪಾರ ಅಂಧಕಾರಮಯ ನರಕದಲ್ಲಿ ಬೀಳುತ್ತಾನೆ. ॥ ೨೮ ॥

ಕದಾಚಿದೀಶ್ವರಸ್ಯ ಭಗವತೋ ವಿಷ್ಣೋಶ್ಚಕ್ರಾತ್ಪರಮಾಣ್ವಾದಿದ್ವಿಪರಾರ್ಧಾಪವರ್ಗಕಾಲೋಪಲಕ್ಷಣಾತ್ಪರಿವರ್ತಿತೇನ ವಯಸಾ ರಂಹಸಾ ಹರತ ಆಬ್ರಹ್ಮತೃಣಸ್ತಂಬಾದೀನಾಂ ಭೂತಾನಾಮನಿಮಿಷತೋ ಮಿಷತಾಂ ವಿತ್ರಸ್ತಹೃದಯಸ್ತಮೇವೇಶ್ವರಂ ಕಾಲಚಕ್ರನಿಜಾಯುಧಂ ಸಾಕ್ಷಾದ್ಭಗವಂತಂ ಯಜ್ಞಪುರುಷಮ್ ಅನಾದೃತ್ಯ ಪಾಖಂಡದೇವತಾಃ ಕಂಕಗೃಧ್ರಬಕವಟಪ್ರಾಯಾ ಆರ್ಯಸಮಯಪರಿಹೃತಾಃ ಸಾಂಕೇತ್ಯೇನಾಭಿಧತ್ತೇ ॥ ೨೯ ॥ ಯದಾ ಪಾಖಂಡಿಭಿರಾತ್ಮವಂಚಿತೈಸ್ತೈರುರು ವಂಚಿತೋ ಬ್ರಹ್ಮಕುಲಂ ಸಮಾವಸಂಸ್ತೇಷಾಂ ಶೀಲಮುಪನಯನಾದಿಶ್ರೌತಸ್ಮಾರ್ತಕರ್ಮಾನುಷ್ಠಾನೇನ ಭಗವತೋ ಯಜ್ಞಪುರುಷಸ್ಯಾರಾಧನಮೇವ ತದರೋಚಯನ್ ಶೂದ್ರಕುಲಂ ಭಜತೇ ನಿಗಮಾಚಾರೇಽಶುದ್ಧಿತೋ ಯಸ್ಯ ಮಿಥುನೀಭಾವಃ ಕುಟುಂಬಭರಣಂ ಯಥಾ ವಾನರಜಾತೇಃ ॥ ೩೦ ॥ ತತ್ರಾಪಿ ನಿರವರೋಧಃ ಸ್ವೈರೇಣ ವಿಹರನ್ನತಿಕೃಪಣಬುದ್ಧಿರನ್ಯೋನ್ಯಮುಖನಿರೀಕ್ಷಣಾದಿನಾ ಗ್ರಾಮ್ಯಕರ್ಮಣೈವ ವಿಸ್ಮೃತಕಾಲಾವಧಿಃ ॥ ೩೧ ॥ ಕ್ವಚಿದ್ ದ್ರುಮವದೈಹಿಕಾರ್ಥೇಷು ಗೃಹೇಷು ರಂಸ್ಯನ್ಯಥಾ ವಾನರಃ ಸುತದಾರವತ್ಸಲೋ ವ್ಯವಾಯಕ್ಷಣಃ ॥ ೩೨ ॥

ಕಾಲಚಕ್ರವು ಸಾಕ್ಷಾತ್ ಭಗವಾನ್ ವಿಷ್ಣುವಿನ ಆಯುಧವಾಗಿದೆ. ಅದು ಪರಮಾಣುವಿನಿಂದ ಹಿಡಿದು ದ್ವಿಪರಾರ್ಧದವರೆಗೆ ಕ್ಷಣ-ಘಟಿ ಮುಂತಾದ ಅವಯವಗಳಿಂದ ಕೂಡಿದೆ. ಅದು ಎಚ್ಚರವಾಗಿದ್ದು ನಿರಂತರವಾಗಿ ತಿರುಗುತ್ತಾ ಇರುತ್ತದೆ. ಬೇಗ-ಬೇಗನೇ ಬದಲಾಗುತ್ತಿರುವ ಬಾಲ್ಯ, ಯೌವನ ಮುಂತಾದ ಅವಸ್ಥೆಗಳೇ ಅದರ ವೇಗವಾಗಿದೆ. ಅದರ ಮೂಲಕ ಅದು ಬ್ರಹ್ಮನಿಂದ ಹಿಡಿದು ಅತಿಕ್ಷುದ್ರ ತೃಣದವರೆಗಿನ ಎಲ್ಲ ಪ್ರಾಣಿಗಳನ್ನು ನಿರಂತರ ಸಂಹಾರಮಾಡುತ್ತಾ ಇರುತ್ತದೆ. ಯಾರೂ ಅದರ ಗತಿ (ವೇಗ)ಯಲ್ಲಿ ಬಾಧೆಯನ್ನೊಡ್ಡಲಾರರು. ಅದಕ್ಕೆ ಭಯಪಟ್ಟುಕೊಂಡಾದರೂ, ಈ ಕಾಲಚಕ್ರವು ಯಾರ ನಿಜ ಆಯುಧವಾಗಿದೆಯೋ ಆ ಸಾಕ್ಷಾತ್ ಭಗವಾನ್ ಯಜ್ಞಪುರುಷನ ಆರಾಧನೆಯನ್ನು ಬಿಟ್ಟು ಈ ಮಂದಮತಿ ಮನುಷ್ಯನು ಪಾಷಂಡಿಗಳ ವಂಚನೆಗೆ ಸಿಕ್ಕಿ, ಹದ್ದು, ಗೂಗೆ, ಬಕ ಮುಂತಾದ ಸಮೂಹದಂತೆ ಆರ್ಯಶಾಸ್ತ್ರ ಬಹಿಷ್ಕೃತ ದೇವತೆಗಳನ್ನು ಆಶ್ರಯಿಸುತ್ತಾನೆ. ಅವುಗಳನ್ನು ಕೇವಲ ವೇದಬಾಹ್ಯ ಅಪ್ರಾಮಾಣಿಕ ಆಗಮಗಳಲ್ಲೇ ಉಲ್ಲೇಖಿಸಲ್ಪಟ್ಟಿದೆ. ॥ ೨೯ ॥ ಈ ಪಾಷಂಡರಾದರೋ ಸ್ವತಃ ಆಪತ್ತಿನಲ್ಲೇ ಇದ್ದಾರೆ. ಇವನೂ ಕೂಡ ಅವರ ಮೋಸದಲ್ಲಿ ಸಿಲುಕಿ ದುಃಖಿಯಾದಾಗ ಬ್ರಾಹ್ಮಣರನ್ನು ಶರಣಾಗುತ್ತಾನೆ. ಆದರೆ ಉಪನಯನ ಸಂಸ್ಕಾರದ ಬಳಿಕ ಶ್ರೌತ-ಸ್ಮಾರ್ತಕರ್ಮಗಳಿಂದ ಭಗವಾನ್ ಯಜ್ಞಪುರುಷನನ್ನು ಆರಾಧಿಸುವುದು ಮುಂತಾದ ಅವರ ಶಾಸ್ತ್ರೋಕ್ತ ಆಚಾರವು ಇವನಿಗೆ ಸರಿಬೀಳುವುದಿಲ್ಲ. ಅದಕ್ಕಾಗಿ ವೇದೋಕ್ತ ಆಚಾರಕ್ಕನುಕೂಲವಾಗಿ ತನ್ನಲ್ಲಿ ಶುದ್ಧಿ ಇಲ್ಲದ ಕಾರಣ ಇವನು ಕರ್ಮಶೂನ್ಯ ಶೂದ್ರಕುಲದಲ್ಲಿ ಪ್ರವೇಶಿಸುತ್ತಾನೆ. ಅವನ ಸ್ವಭಾವವು ಕಪಿಗಳಂತೆ ಕೇವಲ ಕುಟುಂಬಪೋಷಣೆ ಮತ್ತು ಸ್ತ್ರೀಸೇವನೆ ಮಾಡುವುದೇ ಆಗಿರುತ್ತದೆ. ॥ ೩೦ ॥ ಅಲ್ಲಿ ಅಡೆ-ತಡೆಯಿಲ್ಲದೆ ಸ್ವೇಚ್ಛೆಯಿಂದ ವಿಹರಿಸುವುದರಿಂದ ಇವನ ಬುದ್ಧಿಯು ಅತ್ಯಂತ ದೈನ್ಯವನ್ನು ಹೊಂದುವುದು. ಪರಸ್ಪರ ಮುಖನೋಡುತ್ತಿರುವುದು ಮುಂತಾದ ವಿಷಯ-ಭೋಗಗಳಲ್ಲಿ ಸಿಕ್ಕಿಕೊಂಡು ಅವನಿಗೆ ತನ್ನ ಮರಣಕಾಲದ ನೆನಪೂ ಕೂಡ ಇರುವುದಿಲ್ಲ. ॥ ೩೧ ॥ ವೃಕ್ಷಗಳಂತೆ ಐಹಿಕ ಸುಖಗಳ ಫಲವನ್ನು ಮಾತ್ರ ಕೊಡುವ ಮನೆಗಳಲ್ಲೇ ಸುಖವೆಂದು ತಿಳಿದು ವಾನರರಂತೆ ಸ್ತ್ರೀ-ಪುತ್ರಾದಿಗಳಲ್ಲಿಯೇ ಆಸಕ್ತನಾಗಿ ಇವನು ತನ್ನ ಎಲ್ಲ ಸಮಯವನ್ನು ಮೈಥುನಾದಿ ವಿಷಯಭೋಗಗಳಲ್ಲೇ ಕಳೆಯುತ್ತಾನೆ. ॥ ೩೨ ॥

ಏವಮಧ್ವನ್ಯವರುಂಧಾನೋ ಮೃತ್ಯುಗಜಭಯಾತ್ತಮಸಿ ಗಿರಿಕಂದರಪ್ರಾಯೇ ॥ ೩೩ ॥ ಕ್ವಚಿಚ್ಛೀತವಾತಾದ್ಯನೇಕದೈವಿಕಭೌತಿಕಾತ್ಮೀಯಾನಾಂ ದುಃಖಾನಾಂ ಪ್ರತಿನಿವಾರಣೇಽಕಲ್ಪೋ ದುರಂತವಿಷಯವಿಷಣ್ಣ ಆಸ್ತೇ ॥ ೩೪ ॥ ಕ್ವಚಿನ್ಮಿಥೋ ವ್ಯವಹರನ್ ಯತ್ಕಿಂಚಿದ್ಧನಮುಪಯಾತಿ ವಿತ್ತಶಾಠ್ಯೇನ ॥ ೩೫ ॥ ಕ್ವಚಿತ್ ಕ್ಷೀಣಧನಃ ಶಯ್ಯಾಸನಾಶ-

ಹೀಗೆ ಪ್ರವೃತ್ತಿಮಾರ್ಗದಲ್ಲಿ ಬಿದ್ದು ಸುಖ-ದುಃಖಗಳನ್ನು ಅನುಭವಿಸುತ್ತಾ ಈ ಜೀವನು ರೋಗರೂಪವಾದ ಗಿರಿಗುಹೆಯಲ್ಲಿ ಬಿದ್ದು ಅದರಲ್ಲಿರುವ ಮೃತ್ಯುರೂಪೀ ಮಹಾಗಜಕ್ಕೆ ಹೆದರುತ್ತಿರುತ್ತಾನೆ. ॥ ೩೩ ॥ ಕೆಲವೊಮ್ಮೆ ಚಳಿ, ಗಾಳಿ ಮುಂತಾದ ಅನೇಕತರೀತಿಯ ಆಧಿದೈವಿಕ, ಆಧಿಭೌತಿಕ ಮತ್ತು ಆಧ್ಯಾತ್ಮಿಕ ದುಃಖಗಳ ನಿವೃತ್ತಿಯನ್ನು ಮಾಡಿಕೊಳ್ಳಲು ಅಸಫಲನಾದಾಗ ಅಪಾರ ವಿಷಯಗಳ ಚಿಂತೆಗಳಿಂದ ಇವನು ಕಳವಳಪಡುವನು. ॥ ೩೪ ॥ ಕೆಲವೊಮ್ಮೆ ಪರಸ್ಪರ ಕ್ರಯ-ವಿಕ್ರಯಗಳೇ ಮುಂತಾದ ವ್ಯಾಪಾರ ಮಾಡಿ ಜಿಪುಣತನದಿಂದ ವರ್ತಿಸಿದಾಗ ಇವನಿಗೆ ಸ್ವಲ್ಪ ಹಣವೂ ಕೈಸೇರುತ್ತದೆ. ॥ ೩೫ ॥

ನಾದ್ಯುಪಭೋಗವಿಹೀನೋ ಯಾವದಪ್ರತಿಲಬ್ಧಮನೋ-ರಥೋಪಗತಾದಾನೇಽವಸಿತಮತಿಸ್ತತಸ್ತತೋಽವಮಾ-ನಾದೀನಿ ಜನಾದಭಿಲಭತೇ ॥ ೩೬ ॥ ಏವಂ ವಿತ್ತವ್ಯತಿ-ಷಂಗವಿವೃದ್ಧವೈರಾನುಬಂಧೋಽಪಿ ಪೂರ್ವವಾಸನಯಾ ಮಿಥ ಉದ್ವಹತ್ಯಥಾಪವಹತಿ ॥ ೩೭ ॥ ಏತಸ್ಮಿನ್ ಸಂಸಾರಾಧ್ವನಿ ನಾನಾಕ್ಲೇಶೋಪಸರ್ಗಬಾಧಿತ ಆಪನ್ನವಿಪ-ನ್ನೋಯತ್ರ ಯಸ್ತಮು ಹ ವಾವೇತರಸ್ತತ್ರ ವಿಸೃಜ್ಯ ಜಾತಂ ಜಾತಮುಪಾದಾಯ ಶೋಚನ್ಮುಹ್ಯನ್ ಬಿಭ್ಯದ್ವಿವದನ್ ಕ್ರಂದನ್ ಸಂಹೃಷ್ಯನ್ಗಾಯನ್ನಹ್ಯಮಾನಃ ಸಾಧುವರ್ಜಿತೋ ನೈವಾವರ್ತತೇಽದ್ಯಾಪಿ ಯತ ಆರಬ್ಧ ಏಷ ನರಲೋಕ-ಸಾರ್ಥೋ ಯಮಧ್ವನಃ ಪಾರಮುಪ ದಿಶಂತಿ ॥ ೩೮ ॥ ಯದಿದಂ ಯೋಗಾನುಶಾಸನಂ ನ ವಾ ಏತದವರುಂಧತೇ ಯನ್ನ್ಯಸ್ತದಂಡಾ ಮುನಯ ಉಪಶಮಶೀಲಾ ಉಪರ-ತಾತ್ಮಾನಃ ಸಮವಗಚ್ಛಂತಿ ॥ ೩೯ ॥ ಯದಪಿ ದಿಗಿಭಜಯಿನೋ ಯಜ್ವಿನೋ ಯೇ ವೈ ರಾಜರ್ಷಯಃ ಕಿಂ ತು ಪರಂ ಮೃಧೇ ಶಯೀರನ್ನಸ್ಯಾಮೇವ ಮಮೇಯಮಿತಿ ಕೃತವೈರಾನುಬಂಧಾ ಯಾಂ ವಿಸೃಜ್ಯ ಸ್ವಯಮುಪಸಂಹೃತಾಃ ॥ ೪೦ ॥ ಕರ್ಮವಲ್ಲೀಮವಲಂಬ್ಯ ತತ ಆಪದಃ ಕಥಂಚಿನ್ನರಕಾದ್ವಿಮುಕ್ತಃ ಪುನರಪ್ಯೇವಂ ಸಂಸಾರಾಧ್ವನಿ ವರ್ತಮಾನೋ ನರಲೋಕಸಾರ್ಥಮುಪ- ಯಾತಿ ಏವಮುಪರಿ ಗತೋಽಪಿ ॥ ೪೧ ॥

ಕೆಲವೊಮ್ಮೆ ಧನವು ನಷ್ಟವಾಗಿ ಹೋಗಿ ಇವನ ಬಳಿ ಮಲಗಲು, ಕುಳಿತುಕೊಳ್ಳಲು ಮತ್ತು ತಿನ್ನುವುದೇ ಮುಂತಾದ ಯಾವ ಸಾಮಗ್ರಿಯೂ ಇರದಿದ್ದಾಗ, ತನಗೆ ಇಷ್ಟವಾದ ಭೋಗಗಳು ಸಿಗದಿರುವಾಗ ಅವನ್ನು ಕಳ್ಳತನವೇ ಮುಂತಾದ ಕೆಟ್ಟ ಉಪಾಯಗಳಿಂದ ಪಡೆಯಲು ನಿಶ್ಚಯಿಸುವನು. ಇದರಿಂದ ಅವನು ಅಲ್ಲಲ್ಲಿ ಬೇರೆಯವರ ಕೈಯಲ್ಲಿ ತುಂಬಾ ಅಪಮಾನಿತ ನಾಗಬೇಕಾಗುತ್ತದೆ. ॥ ೩೬ ॥ ಹೀಗೆ ಧನದ ಆಸಕ್ತಿಯಿಂದ ಪರಸ್ಪರ ವೈರಭಾವವು ಹೆಚ್ಚಿದಾಗಲೂ ಕೂಡ ಇವನು ತನ್ನ ಹಿಂದಿನ ವಾಸನೆಗಳಿಂದ ವಿವಶನಾಗಿ ತಮ್ಮ-ತಮ್ಮಲ್ಲಿ ವಿವಾಹಾದಿ ಸಂಬಂಧವನ್ನು ಮಾಡುತ್ತಾ-ಬಿಡುತ್ತಾ ಇರುತ್ತಾನೆ. ॥ ೩೭ ॥ ಈ ಸಂಸಾರಮಾರ್ಗದಲ್ಲಿ ನಡೆಯುವ ಈ ಜೀವನು ಅನೇಕ ಪ್ರಕಾರದ ಕ್ಲೇಶ ಮತ್ತು ವಿಘ್ನ-ಬಾಧೆಗಳಿಂದ ತೊಂದರೆಗೊಳಗಾದರೂ, ಮಾರ್ಗದಲ್ಲಿ ಯಾರ ಮೇಲಾದರೂ ಆಪತ್ತು ಬಂದರೆ ಅಥವಾ ಯಾರಾದರೂ ಸತ್ತರೆ ಅವನನ್ನು ಅಲ್ಲೇ ಬಿಟ್ಟುಬಿಡುತ್ತಾನೆ ಮತ್ತು ಹೊಸದಾಗಿ ಹುಟ್ಟಿದವರೊಂದಿಗೆ ಕೂಡಿಕೊಳ್ಳುತ್ತಾನೆ. ಕೆಲವೊಮ್ಮೆ ಯಾರಿಗಾದರೂ ಶೋಕಪಡುತ್ತಾನೆ, ಯಾರದೋ ದುಃಖ ನೋಡಿ ಮೂರ್ಛಿತನಾಗುತ್ತಾನೆ. ಯಾರದಾದರೂ ವಿಯೋಗ ಉಂಟಾಗುವ ಆಶಂಕೆಯಿಂದ ಭಯಗೊಳ್ಳುವನು. ಯಾರೊಂದಿಗಾದರೂ ಜಗಳ ಕಾಯುತ್ತಾನೆ. ಎಲ್ಲಾದರೂ ಯಾವುದಾದರೂ ಮನಸ್ಸಿಗೆ ಅನುಕೂಲವಾದ ಮಾತು ನಡೆದರೆ ಸಂತೋಷದಿಂದ ಉಬ್ಬಿ ಹೋಗುತ್ತಾನೆ. ಕೆಲವೊಮ್ಮೆ ಹಾಡತೊಡಗುವನು. ಕೆಲವೊಮ್ಮೆ ಹಾಗೆ ಅನುಕೂಲವಾಗಿ ಮಾತಾಡಿದವರಿಗಾಗಿ ಬಂಧನಕ್ಕೆ ಸಿಲುಕಲು ಹಿಂಜರಿಯುವುದಿಲ್ಲ. ಸಾಧುಗಳು ಇವನ ಬಳಿಗೆ ಎಂದಿಗೂ ಬರುವುದಿಲ್ಲ. ಇವನು ಸಾಧುಸಂಗದಿಂದ ಸದಾಕಾಲ ವಂಚಿತನಾಗಿರುತ್ತಾನೆ. ಹೀಗೆ ಇವನು ನಿರಂತರ ಮುಂದರಿಯುತ್ತಾ ಇರುತ್ತಾನೆ. ಎಲ್ಲಿಂದ ಈ ಯಾತ್ರೆಯ ಪ್ರಾರಂಭವಾಯಿತೋ, ಯಾರನ್ನು ಈ ಯಾತ್ರೆಯ ಕೊನೆಯ ನೆಲೆ ಎಂದು ಹೇಳುತ್ತಾರೋ, ಆ ಪರಮಾತ್ಮನ ಬಳಿಗೆ ಇವನು ಇಂದಿನವರೆಗೆ ಮರಳಲಿಲ್ಲ. ॥ ೩೮ ॥ ಪರಮಾತ್ಮನವರೆಗಾದರೂ ಯೋಗಶಾಸ್ತ್ರದ ಗತಿಯೂ ಇಲ್ಲ. ಎಲ್ಲ ಪ್ರಕಾರದ ದಂಡ (ಶಾಸನ)ಗಳನ್ನು ತ್ಯಾಗಮಾಡಿ ಬಿಟ್ಟಿರುವ, ನಿವೃತ್ತಿಪರಾಯಣರೂ ಆತ್ಮಸಂಯಮಿಗಳೂ ಆದ ಮುನಿಜನರು ಅವನನ್ನು ಪಡೆದುಕೊಳ್ಳಬಲ್ಲರು. ॥ ೩೯ ॥ ದಿಗ್ಗಜಗಳನ್ನು ಗೆದ್ದುಕೊಂಡು ದೊಡ್ಡ-ದೊಡ್ಡ ಯಜ್ಞಗಳ ಅನುಷ್ಠಾನಗಳನ್ನು ಮಾಡುವ ರಾಜರ್ಷಿಗಳಿಗೂ ಅಲ್ಲಿಯವರೆಗೆ ಗತಿಯು ಇರುವುದಿಲ್ಲ. ಅವರು ರಣರಂಗದಲ್ಲಿ ಶತ್ರುಗಳೊಡನೆ ಹೋರಾಡುತ್ತಾ ಪ್ರಾಣಗಳನ್ನು ಕಳೆದುಕೊಳ್ಳುವರು. ಯಾವ ಭೂಮಿಗಾಗಿ 'ಇದು ನನ್ನದು' ಎಂದು ಅಭಿಮಾನಪಟ್ಟು ವೈರಕಟ್ಟಿಕೊಂಡಿದ್ದರೋ ಆ ಪೃಥಿವಿಯಲ್ಲೇ ತನ್ನ ಶರೀರವನ್ನು ತ್ಯಜಿಸಿ ಪರಲೋಕಕ್ಕೆ ಹೊರಟುಹೋಗುತ್ತಾರೆ. ಈ ಸಂಸಾರದಿಂದ ಅವರೂ ಪಾರಾಗಿ ಹೋಗುವುದಿಲ್ಲ. ॥ ೪೦ ॥

ತಸ್ಯೇದಮುಪಗಾಯಂತಿ –

ಆರ್ಷಭಸ್ಯೇಹ ರಾಜರ್ಷೇರ್ಮನಸಾಪಿ ಮಹಾತ್ಮನಃ ।
ನಾನುವರ್ತ್ಮಾರ್ಹತಿ ನೃಪೋ ಮಕ್ಷಿಕೇವ ಗರುತ್ಮತಃ ॥ ೪೨ ॥

ಯೋ ದುಸ್ತ್ಯಜಾನ್ ದಾರಸುತಾನ್ಸುಹೃದ್ರಾಜ್ಯಂ ಹೃದಿಸ್ಪೃಶಃ ।
ಜಹೌ ಯುವೈವ ಮಲವದುತ್ತಮಶ್ಲೋಕಲಾಲಸಃ ॥ ೪೩ ॥

ಯೋ ದುಸ್ತ್ಯಜಾನ್ ಕ್ಷಿತಿಸುತಸ್ವಜನಾರ್ಥದಾರಾನ್
ಪ್ರಾರ್ಥ್ಯಾಂ ಶ್ರಿಯಂ ಸುರವರೈಃ ಸದಯಾವಲೋಕಾಮ್ ।
ನೈಚ್ಛನ್ನೃಪಸ್ತದುಚಿತಂ ಮಹತಾಂ ಮಧುದ್ವಿಟ್
ಸೇವಾನುರಕ್ತಮನಸಾಮಭವೋಽಪಿ ಫಲ್ಗುಃ ॥ ೪೪ ॥

ಯಜ್ಞಾಯ ಧರ್ಮಪತಯೇ ವಿಧಿನೈಪುಣಾಯ
ಯೋಗಾಯ ಸಾಂಖ್ಯಶಿರಸೇ ಪ್ರಕೃತೀಶ್ವರಾಯ ।
ನಾರಾಯಣಾಯ ಹರಯೇ ನಮ ಇತ್ಯುದಾರಂ
ಹಾಸ್ಯನ್ಮೃಗತ್ವಮಪಿ ಯಃ ಸಮುದಾಜಹಾರ ॥ ೪೫ ॥

ಯ ಇದಂ ಭಾಗವತಸಭಾಜಿತಾವದಾತಗುಣಕರ್ಮಣೋ ರಾಜರ್ಷೇರ್ಭರತಸ್ಯಾನುಚರಿತಂ ಸ್ವಸ್ತ್ಯಯನಮಾಯುಷ್ಯಂ ಧನ್ಯಂ ಯಶಸ್ಯಂ ಸ್ವರ್ಗ್ಯಾಪವರ್ಗ್ಯಂ ವಾನುಶೃಣೋತ್ಯಾಖ್ಯಾಸ್ಯತ್ಯಭಿನಂದತಿ ಚ ಸರ್ವಾ ಏವಾಶಿಷ ಆತ್ಮನ ಆಶಾಸ್ತೇ ನ ಕಾಂಚನ ಪರತ ಇತಿ ॥ ೪೬ ॥

ತಮ್ಮ ಪುಣ್ಯಕರ್ಮರೂಪಿಯಾದ ಲತೆಯನ್ನು ಆಶ್ರಯಿಸಿ ಯಾವ ರೀತಿಯಿಂದಾದರೂ ಈ ಜೀವನು ಈ ಆಪತ್ತುಗಳಿಂದ ಅಥವಾ ನರಕದಿಂದ ಬಿಡುಗಡೆಯು ಹೊಂದಿದರೂ ಪುನಃ ಇದೇ ಸಂಸಾರಮಾರ್ಗದಲ್ಲಿ ಅಲೆಯುತ್ತಾ ಈ ಜನ ಸಮುದಾಯದಲ್ಲಿ ಸೇರಿಕೊಳ್ಳುವನು. ಸ್ವರ್ಗಾದಿ ಮೇಲಿನ ಲೋಕಗಳಿಗೆ ಹೋಗುವವರ ಸ್ಥಿತಿಯು ಇದೇ ಆಗಿದೆ. ॥ ೪೧ ॥

ಮಹಾರಾಜ ಪರೀಕ್ಷಿತನೇ! ರಾಜರ್ಷಿಯಾದ ಭರತನ ವಿಷಯದಲ್ಲಿ ಪಂಡಿತರಾದವರು ಹೀಗೆ ಹೇಳುತ್ತಾರೆ – ಗರುಡನೊಡನೆ ಒಂದು ನೊಣವು ಹೇಗೆ ಸ್ಪರ್ಧಿಸಲಾರದೋ ಹಾಗೆಯೇ ರಾಜರ್ಷಿ ಮಹಾತ್ಮಾ ಭರತನ ಮಾರ್ಗವನ್ನು ಬೇರೆ ಯಾವ ರಾಜನೂ ಮನಸ್ಸಿನಿಂದಲೂ ಅನುಸರಿಸಲಾರನು. ॥ ೪೨ ॥ ಅವನು ಪುಣ್ಯಶ್ಲೋಕನಾದ ಶ್ರೀಹರಿಯಲ್ಲಿ ಅನುರಕ್ತನಾಗಿ ಬೇರೆಯವರಿಗೆ ತ್ಯಾಗಮಾಡಲು ಬಹುಕಷ್ಟತರವಾದ ಅತಿಮನೋಹರವಾದ ಪತ್ನೀ, ಪುತ್ರ, ರಾಜ್ಯಾದಿಗಳನ್ನು ಯುವಕನಾಗಿರುವಾಗಲೇ ಮಲದಂತೆ ತ್ಯಜಿಸಿಬಿಟ್ಟಿದ್ದನು. ॥ ೪೩ ॥ ತ್ಯಜಿಸಲು ಅತಿಕಷ್ಟವಾಗಿರುವ ರಾಜ್ಯ, ಪುತ್ರರು, ಸ್ವಜನರು, ಸಂಪತ್ತು ಮತ್ತು ಪತ್ನೀಯನ್ನೂ ಹಾಗೂ ಯಾವಳ ದಯಾಕಟಾಕ್ಷಕ್ಕೆ ಬೀಳಬೇಕೆಂದು ದೊಡ್ಡ-ದೊಡ್ಡ ದೇವತೆಗಳು ಹಾತೊರೆಯುತ್ತಿರುತ್ತಾರೋ ಅಂತಹ ಲಕ್ಷ್ಮಿಯನ್ನೂ ಕೂಡ ಲೇಶ ಮಾತ್ರವೂ ಇಚ್ಛಿಸಲಿಲ್ಲವೋ ಅಂತಹ ಭರತ ಚಕ್ರವರ್ತಿಗೆ ಇದೆಲ್ಲವೂ ಉಚಿತವೇ ಆಗಿದೆ. ಏಕೆಂದರೆ, ಯಾವ ಮಹಾನುಭಾವರ ಚಿತ್ತವು ಭಗವಾನ್ ಮಧುಸೂದನನ ಸೇವೆಯಲ್ಲಿ ಅನುರಕ್ತವಾಗಿದೆಯೋ ಅವರ ದೃಷ್ಟಿಯಲ್ಲಿ ಮೋಕ್ಷಪದವೂ ಅತ್ಯಂತ ತುಚ್ಛವಾಗಿದೆ. ॥ ೪೪ ॥ ಅವನು ಮೃಗಶರೀರವನ್ನು ಬಿಡಲು ಇಚ್ಛಿಸಿದಾಗ ಉಚ್ಚಸ್ವರದಲ್ಲಿ – ಧರ್ಮವನ್ನು ರಕ್ಷಿಸುತ್ತಿರುವವನೂ, ಧರ್ಮಾನುಷ್ಠಾನದಲ್ಲಿ ನಿಪುಣನೂ, ಯೋಗಗಮ್ಯನೂ, ಸಾಂಖ್ಯದ ಪ್ರತಿಪಾದಕನೂ, ಪ್ರಕೃತಿಗೆ ಅಧೀಶ್ವರನೂ, ಆದ ಯಜ್ಞಮೂರ್ತಿ ಸರ್ವಾಂತರ್ಯಾಮಿ ಶ್ರೀಹರಿಗೆ ನಮಸ್ಕಾರವು ಎಂದು ಹೇಳಿದ್ದನು. ॥ ೪೫ ॥

ಎಲೈ ರಾಜೇಂದ್ರಾ! ರಾಜರ್ಷಿ ಭರತನ ಪವಿತ್ರ ಗುಣ-ಕರ್ಮಗಳನ್ನು ಭಕ್ತರೂ ಕೂಡ ಪ್ರಶಂಸಿಸುತ್ತಾರೆ. ಅವನ ಈ ಪವಿತ್ರ ಚರಿತ್ರವು ಶ್ರೇಯಸ್ಕರವೂ, ಆಯುಸ್ಸು, ಸಂಪತ್ತನ್ನು ವೃದ್ಧಿಪಡಿಸುವುದೂ, ಲೋಕದಲ್ಲಿ ಸತ್ಕೀರ್ತಿಯನ್ನು ಹೆಚ್ಚಿಸುವಂತಹುದೂ ಮತ್ತು ಸ್ವರ್ಗ-ಮೋಕ್ಷಗಳನ್ನು ದೊರಕಿಸಿ ಕೊಡುವುದೂ ಆಗಿದೆ. ಇವನ್ನು ಕೇಳುವವನೂ, ಹೇಳುವವನೂ ಮತ್ತು ಇದನ್ನು ಅಭಿನಂದಿಸುವವನೂ ಆದವನ ಎಲ್ಲ ಕಾಮನೆಗಳು ಪೂರ್ಣವಾಗಿ ಹೋಗುತ್ತವೆ. ಬೇರೆಯವರಲ್ಲಿ ಅವನಿಗೆ ಏನನ್ನೂ ಬೇಡಬೇಕಾಗಿ ಬರುವುದಿಲ್ಲ. ॥ ೪೬ ॥

*ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ಭರತೋಪಾಖ್ಯಾನೇ ಪಾರೋಕ್ಷ್ಯವಿವರಣಂ ನಾಮ ಚತುರ್ದಶೋಽಧ್ಯಾಯಃ ॥ ೧೪ ॥

# ಹದಿನೈದನೆಯ ಅಧ್ಯಾಯ

## ಭರತವಂಶದ ವರ್ಣನೆ

*ಶ್ರೀಶುಕ ಉವಾಚ*

**ಭರತಸ್ಯಾತ್ಮಜಃ ಸುಮತಿರ್ನಾಮಾಭಿಹಿತೋ ಯಮು ಹ ವಾವ ಕೇಚಿತ್ಪಾಖಂಡಿನ ಋಷಭಪದವೀಮನುವರ್ತಮಾನಂ ಚಾನಾರ್ಯಾ ಅವೇದಸಮಾಮ್ನಾತಾಂ ದೇವತಾಂ ಸ್ವಮನೀಷಯಾ ಪಾಪೀಯಸ್ಯಾ ಕಲೌ ಕಲ್ಪಯಿಷ್ಯಂತಿ ॥ ೧ ॥ ತಸ್ಮಾದ್ ವೃದ್ಧಸೇನಾಯಾಂ ದೇವತಾಜಿನ್ನಾಮ ಪುತ್ರೋಽಭವತ್ ॥ ೨ ॥ ಅಥಾಸುರ್ಯಾಂ ತತ್ತನಯೋ ದೇವದ್ಯುಮ್ನಸ್ತತೋ ಧೇನುಮತ್ಯಾಂ ಸುತಃ ಪರಮೇಷ್ಠೀ ತಸ್ಯ ಸುವರ್ಚಲಾಯಾಂ ಪ್ರತೀಹ ಉಪಜಾತಃ ॥ ೩ ॥ ಯ ಆತ್ಮವಿದ್ಯಾಮಾಖ್ಯಾಯ ಸ್ವಯಂ ಸಂಶುದ್ಧೋ ಮಹಾಪುರುಷಮನುಸಸ್ಮಾರ ॥ ೪ ॥ ಪ್ರತಿಹಾತ್ಸುವರ್ಚಲಾಯಾಂ ಪ್ರತಿಹರ್ತ್ರಾದಯಸ್ತ್ರಯ ಆಸನ್ನಿಜ್ಯಾಕೋವಿದಾಃ ಸೂನವಃ ಪ್ರತಿಹರ್ತುಃ ಸ್ತುತ್ಯಾಮಜಭೂಮಾನಾವಜನಿಷಾತಾಮ್ ॥ ೫ ॥ ಭೂಮ್ನ ಋಷಿಕುಲ್ಯಾಯಾಮುದ್ಗೀಥಸ್ತತಃ ಪ್ರಸ್ತಾವೋ ದೇವಕುಲ್ಯಾಯಾಂ ಪ್ರಸ್ತಾವಾನ್ನಿಯುತ್ಸಾಯಾಂ ಹೃದಯಜ ಆಸೀದ್ವಿಭುರ್ವಿಭೋ ರತ್ಯಾಂ ಚ ಪೃಥುಷೇಣಸ್ತಸ್ಮಾನ್ನಕ್ತ ಆಕೂತ್ಯಾಂ ಜಜ್ಞೇ ನಕ್ತಾದ್ ದ್ರುತಿಪುತ್ರೋ ಗಯೋ ರಾಜರ್ಷಿಪ್ರವರ ಉದಾರಶ್ರವಾ ಅಜಾಯತ ಸಾಕ್ಷಾದ್ಭಗವತೋ ವಿಷ್ಣೋರ್ಜಗದ್ರಿರಕ್ಷಿಷಯಾ ಗೃಹೀತಸತ್ತ್ವಸ್ಯ ಕಲಾಽಽತ್ಮವತ್ತ್ವಾದಿಲಕ್ಷಣೇನ ಮಹಾಪುರುಷತಾಂ ಪ್ರಾಪ್ತಃ ॥ ೬ ॥ ಸ ವೈ ಸ್ವಧರ್ಮೇಣ ಪ್ರಜಾಪಾಲನಪೋಷಣಪ್ರೀಣನೋಪಲಾಲನಾನುಶಾಸನಲಕ್ಷಣೇನೇಜ್ಯಾದಿನಾ ಚ ಭಗವತಿ ಮಹಾಪುರುಷೇ ಪರಾವರೇ ಬ್ರಹ್ಮಣಿ ಸರ್ವಾತ್ಮನಾರ್ಪಿತಪರಮಾರ್ಥಲಕ್ಷಣೇನ ಬ್ರಹ್ಮವಿಚ್ಚರಣಾನುಸೇವಯಾಽಽಪಾದಿತಭಗವದ್ಭಕ್ತಿಯೋಗೇನ ಚಾಭೀಕ್ಷ್ಣಶಃ ಪರಿಭಾವಿತಾತಿಶುದ್ಧಮತಿರುಪರತಾನಾತ್ಮ್ಯ**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜೇಂದ್ರನೇ ! ಭರತನ ಪುತ್ರನು ಸುಮತಿ ಎಂಬುದನ್ನು ಹಿಂದೆಯೇ ಹೇಳಿಯಾಗಿದೆ. ಅವನು ಋಷಭದೇವರ ಮಾರ್ಗವನ್ನು ಅನುಸರಿಸಿದ ಮಹಾತ್ಮನೂ ಇದರಿಂದಲೇ ಕಲಿಯುಗದಲ್ಲಿ ಅನೇಕ ಪಾಷಂಡಿಗಳಾದ ಅನಾರ್ಯರೂ ತಮ್ಮ ದುಷ್ಟಬುದ್ಧಿಯಿಂದಾಗ ಆತನನ್ನು ಅವೈದಿಕವಾದ ಒಂದು ದೇವತೆಯೆಂದು ಕಲ್ಪಿಸಿಕೊಳ್ಳುವರು. ॥ ೧ ॥ ಅವನ ಪತ್ನಿಯಾದ ವೃದ್ಧಸೇನೆಯಲ್ಲಿ ದೇವಾಜಿತ್ ಎಂಬ ಪುತ್ರನು ಹುಟ್ಟಿದನು. ॥ ೨ ॥ ದೇವಾಜಿತನ ಪತ್ನೀ ಅಸುರಿಯ ಗರ್ಭದಿಂದ ದೇವದ್ಯುಮ್ನನೂ, ದೇವದ್ಯುಮ್ನನ ಪತ್ನಿ ಧೇನುಮತಿಯಿಂದ ಪರಮೇಷ್ಠಿಯೂ ಮತ್ತು ಅವನ ಪತ್ನೀ ಸುವರ್ಚಲೆಯ ಗರ್ಭದಿಂದ ಪ್ರತೀಹನೆಂಬ ಪುತ್ರನು ಜನಿಸಿದನು. ॥ ೩ ॥ ಇವನು ಅನೇಕ ಬೇರೆ ಜನರಿಗೆ ಆತ್ಮವಿದ್ಯೆಯನ್ನು ಉಪದೇಶಿಸಿದ್ದನು. ಸ್ವತಃ ಶುದ್ಧಚಿತ್ತನಾಗಿ ಪರಮಪುರುಷ ಶ್ರೀನಾರಾಯಣನ ಸಾಕ್ಷಾತ್ಕಾರದ ಅನುಭವವನ್ನು ಪಡೆದಿದ್ದನು. ॥ ೪ ॥ ಪ್ರತೀಹನ ಪತ್ನೀಯಾದ ಇನ್ನೊಬ್ಬ ಸುವರ್ಚಲಾದೇವಿಯ ಗರ್ಭದಲ್ಲಿ ಪ್ರತಿಹರ್ತಾ, ಪ್ರಸ್ತೋತಾ, ಉದ್ಗಾತಾ ಎಂಬ ಮೂರು ಪುತ್ರರು ಹುಟ್ಟಿದರು. ಇವರು ಯಜ್ಞಾದಿ ಕರ್ಮಗಳಲ್ಲಿ ಬಹಳ ನಿಪುಣರಾಗಿದ್ದರು. ಇವರಲ್ಲಿ ಪ್ರತಿಹರ್ತಾನ ಭಾರ್ಯೆಯಾದ ಸ್ತುತಿ ಎಂಬುವಳ ಗರ್ಭದಿಂದ ಅಜ ಮತ್ತು ಭೂಮಾ ಎಂಬ ಎರಡು ಪುತ್ರರು ಜನಿಸಿದರು. ॥ ೫ ॥ ಅವರಲ್ಲಿ ಭೂಮಾನ ಪತ್ನೀ ಋಷಿಕುಲ್ಯಾ ಎಂಬುವಳಲ್ಲಿ ಉದ್ಗಿಥನೂ, ಅವನ ಪತ್ನಿ ದೇವಕುಲ್ಯೆಯಿಂದ ಪ್ರಸ್ತಾವನೂ, ಪ್ರಸ್ತಾವನ ಪತ್ನೀ ನಿಯುತ್ಸುವಿನಲ್ಲಿ ವಿಭು ಎಂಬ ಪುತ್ರನು ಜನಿಸಿದನು. ವಿಭುವಿನ ಹೆಂಡತಿ ರತಿಯ ಉದರದಲ್ಲಿ ಪೃಥುಷೇಣ, ಪೃಥುಷೇಣನ ಪತ್ನೀ ಆಕೂತಿಯಿಂದ ನಕ್ತನೂ, ನಕ್ತನ ಪತ್ನೀ ದ್ರುತಿಯಲ್ಲಿ ಉದಾರಕೀರ್ತಿಶಾಲಿಯಾದ ರಾಜರ್ಷಿಶ್ರೇಷ್ಠ ಗಯನ ಜನ್ಮವಾಯಿತು. ಇವನು ಜಗತ್ತನ್ನು ರಕ್ಷಿಸಲು ಸತ್ತ್ವಗುಣವನ್ನು ಸ್ವೀಕರಿಸಿರುವ ಸಾಕ್ಷಾತ್ ಭಗವಾನ್ ವಿಷ್ಣುವಿನ ಅಂಶನೆಂದು ಹೇಳಲಾಗುತ್ತದೆ. ಸಂಯಮಾದಿ ಅನೇಕಗುಣಗಳಿಂದ ಇವನನ್ನು ಮಹಾಪುರುಷರಲ್ಲಿ ಪರಿಗಣಿಸುತ್ತಾರೆ. ॥ ೬ ॥ ಮಹಾರಾಜಾ ಗಯನು ಪ್ರಜೆಗಳ ಪಾಲನೆ, ಪೋಷಣೆ, ರಂಜನೆಗಳನ್ನು ಮಾಡುತ್ತಾ ಪ್ರೀತಿಯಿಂದ ಅವರನ್ನು ಲಾಲಿಸುತ್ತಾ ಹಾಗೆಯೇ ಅವರನ್ನು ಆಳುತ್ತಾ, ಬಗೆ-ಬಗೆಯ ಯಜ್ಞಗಳನ್ನು ಆಚರಿಸುತ್ತಾ ನಿಷ್ಕಾಮಭಾವದಿಂದ ಕೇವಲ ಭಗವತ್ಪ್ರೀತಿಗಾಗಿ ತನ್ನ ಧರ್ಮಗಳನ್ನು ಆಚರಿಸುತ್ತಿದ್ದನು. ಇದರಿಂದ ಅವನ ಎಲ್ಲ ಕರ್ಮಗಳು ಸರ್ವಶ್ರೇಷ್ಠ ಪರಮಪುರುಷ ಪರಮಾತ್ಮ ಶ್ರೀಹರಿಗೆ ಅರ್ಪಿತವಾಗಿ ಪರಮಾರ್ಥರೂಪಗಳಾದುವು. ಬ್ರಹ್ಮಜ್ಞಾನಿಗಳಾದ ಮಹಾಪುರುಷರ ಚರಣಗಳ ಸೇವೆಯಿಂದ ಅವನಿಗೆ ಭಕ್ತಿಯೋಗದ ಪ್ರಾಪ್ತಿಯಾಯಿತು. ನಿರಂತರ ಭಗವಚ್ಚಿಂತನದಿಂದ ಅವನು ತನ್ನ ಚಿತ್ತವನ್ನು ಶುದ್ಧವಾಗಿಸಿಕೊಂಡು, ದೇಹಾದಿ ಅನಾತ್ಮವಸ್ತುಗಳಲ್ಲಿರುವ ಅಹಂಕಾರವನ್ನು ತೊರೆದು

ಆತ್ಮನಿ ಸ್ವಯಮುಪಲಭ್ಯಮಾನಬ್ರಹ್ಮಾತ್ಮಾನುಭವೋಽಪಿ ನಿರಭಿಮಾನ ಏವ ಅವನಿಮ್ ಅಜೂಗುಪತ್ ॥ ೭ ॥

ತಸ್ಯೇಮಾಂ ಗಾಥಾಂ ಪಾಂಡವೇಯ ಪುರಾವಿದ ಉಪಗಾಯಂತಿ ॥ ೮ ॥

ಗಯಂ ನೃಪಃ ಕಃ ಪ್ರತಿಯಾತಿ ಕರ್ಮಭಿ-
ರ್ಯಜ್ವಾಭಿಮಾನೀ ಬಹುವಿದ್ಧರ್ಮಗೋಪ್ತಾ ।
ಸಮಾಗತಶ್ರೀಃ ಸದಸಸ್ಪತಿಃ ಸತಾಂ
ಸತ್ಸೇವಕೋಽನ್ಯೋ ಭಗವತ್ಕಲಾಮೃತೇ ॥ ೯ ॥

ಯಮಭ್ಯಷಿಂಚನ್ ಪರಯಾ ಮುದಾ ಸತೀಃ
ಸತ್ಯಾಶಿಷೋ ದಕ್ಷಕನ್ಯಾಃ ಸರಿದ್ಭಿಃ ।
ಯಸ್ಯ ಪ್ರಜಾನಾಂ ದುದುಹೇ ಧರಾಽಽಶಿಷೋ
ನಿರಾಶಿಷೋ ಗುಣವತ್ಸಸ್ನುತೋಧಾಃ ॥ ೧೦ ॥

ಛಂದಾಂಸ್ಯಕಾಮಸ್ಯ ಚ ಯಸ್ಯ ಕಾಮಾನ್
ದುದೂಹುರಾಜಹ್ರುರಥೋ ಬಲಿಂ ನೃಪಾಃ ।
ಪ್ರತ್ಯಂಚಿತಾ ಯುಧಿ ಧರ್ಮೇಣ ವಿಪ್ರಾ-
ಯದಾಶಿಷಾಂ ಷಷ್ಠಮಂಶಂ ಪರೇತ್ಯ ॥ ೧೧ ॥

ಯಸ್ಯಾಧ್ವರೇ ಭಗವಾನಧ್ವರಾತ್ಮಾ
ಮಘೋನಿ ಮಾದ್ಯತ್ಯುರುಸೋಮಪೀಥೇ ।
ಶ್ರದ್ಧಾವಿಶುದ್ಧಾಚಲಭಕ್ತಿಯೋಗ-
ಸಮರ್ಪಿತೇಜ್ಯಾಫಲಮಾಜಹಾರ ॥ ೧೨ ॥

ಯತ್ಪ್ರೀಣನಾದ್ಬರ್ಹಿಷಿ ದೇವತಿರ್ಯಙ್
ಮನುಷ್ಯವೀರುತ್ತೃಣಮಾವಿರಿಂಚಾತ್ ।
ಪ್ರೀಯೇತ ಸದ್ಯಃ ಸ ಹ ವಿಶ್ವಜೀವಃ
ಪ್ರೀತಃ ಸ್ವಯಂ ಪ್ರೀತಿಮಗಾದ್ಗಯಸ್ಯ ॥ ೧೩ ॥

ಗಯಾದ್ಗಯಂತ್ಯಾಂ ಚಿತ್ರರಥಃ ಸುಗತಿರವರೋಧನ ಇತಿ ತ್ರಯಃ ಪುತ್ರಾ ಬಭೂವುಶ್ಚಿತ್ರರಥಾದೂರ್ಣಾಯಾಂ ಸಮ್ರಾಡಜನಿಷ್ಟ॥ ೧೪ ॥ ತತ ಉತ್ಕಲಾಯಾಂ ಮರೀಚಿರ್ಮರೀಚೇರ್ಬಿಂದುಮತ್ಯಾಂ ಬಿಂದುಮಾನುದಪದ್ಯತ ತಸ್ಮಾತ್ಸರಘಾಯಾಂ ಮಧುರ್ನಾಮಾಭವನ್ಮಧೋಃ ಸುಮನಸಿ

ಪರಬ್ರಹ್ಮಾತ್ಮಭಾವದ ಅನುಭವವನ್ನು ಪಡೆದನು. ಇದೆಲ್ಲವೂ ಆದ ಬಳಿಕವೂ ಅವನು ನಿರಭಿಮಾನಿಯಾಗಿ ಪೃಥಿವಿಯನ್ನು ಪಾಲಿಸುತ್ತಿದ್ದನು. ॥ ೭ ॥

ಪರೀಕ್ಷಿದ್ರಾಜನೇ! ಪ್ರಾಚೀನ ಇತಿಹಾಸವನ್ನು ತಿಳಿದ ಮಹಾತ್ಮರು ರಾಜರ್ಷಿಯಾದ ಗಯನ ವಿಷಯದಲ್ಲಿ ಈ ಗಾಥೆಯನ್ನು ಹೇಳಿರುವರು – ॥ ೮ ॥

ಆಹಾ! ಈ ಗಯಮಹಾರಾಜನಿಗೆ ಸತ್ಕರ್ಮಾಚರಣೆಯಲ್ಲಿ ಸಾಟಿಯಾದವನು ಯಾರಿದ್ದಾರೆ? ಅವನು ಸಾಕ್ಷಾತ್ ಭಗವಂತನ ಕಲೆಯೇ ಆಗಿದ್ದನು. ಅವನನ್ನು ಬಿಟ್ಟು ಬೇರಾವನು ಈ ರೀತಿಯಲ್ಲಿ ಯಜ್ಞಗಳನ್ನು ಅನುಷ್ಠಾನ ಮಾಡುವನು? ಪ್ರಶಸ್ತವಾದ ಮನಸ್ಸುಳ್ಳವನೂ, ಬಹುಜ್ಞನೂ, ಧರ್ಮರಕ್ಷಕನೂ, ಲಕ್ಷ್ಮಿಗೆ ಪ್ರೀತಿಪಾತ್ರನೂ, ಸಾಧುಸಮಾಜದಲ್ಲಿ ಶಿರೋಮಣಿಯೂ, ಸತ್ಪುರುಷರ ನಿಜವಾದ ಸೇವಕನೂ, ಬೇರಾವನಿರಲು ಸಾಧ್ಯ? ॥ ೯ ॥ ಸತ್ಯ ಸಂಕಲ್ಪವುಳ್ಳ ಪರಮಸಾಧ್ವಿಯರಾದ ಶ್ರದ್ಧೆ ಮೈತ್ರಿ, ದಯೆ ಮುಂತಾದ ದಕ್ಷಕನ್ಯೆಯರು ಗಂಗಾದಿ ನದಿಗಳ ಸಹಿತ ಅತಿ ಪ್ರಸನ್ನತೆಯಿಂದ ಅವನಿಗೆ ಅಭಿಷೇಕ ಮಾಡಿದ್ದರು. ಆತನು ಬಯಸದಿದ್ದರೂ ಭೂದೇವಿಯು ಆತನ ಗುಣಗಳಿಗೆ ಅಧೀನಳಾಗಿ ಆತನ ಪ್ರಜೆಗಳಿಗೆ – ಆಕಳು ತನ್ನ ಕರುವಿಗೆ ಸ್ನೇಹದಿಂದ ಹಾಲನ್ನು ಉಣಿಸುವಂತೆ – ಧನ-ರತ್ನಾದಿ ಎಲ್ಲ ಇಷ್ಟಾರ್ಥ ಪದಾರ್ಥಗಳನ್ನು ಹೇರಳವಾಗಿ ಕೊಟ್ಟಿದ್ದಳು. ॥ ೧೦ ॥ ಅವನಿಗೆ ಯಾವುದೇ ಕಾಮನೆ ಇಲ್ಲದಿದ್ದರೂ ವೇದೋಕ್ತ ಕರ್ಮಗಳು ಎಲ್ಲ ರೀತಿಯ ಭೋಗಗಳನ್ನು ಕೊಟ್ಟಿದ್ದವು. ರಾಜರುಗಳು ಯುದ್ಧದಲ್ಲಿ ಅವನ ಬಾಣಗಳಿಂದ ಸತ್ಕೃತರಾಗಿ ನಾನಾ ರೀತಿಯ ಕಪ್ಪ-ಕಾಣಿಕೆಗಳನ್ನು ಕೊಡುತ್ತಿದ್ದರು. ಬ್ರಾಹ್ಮಣರು ದಕ್ಷಿಣೆಯೇ ಮುಂತಾದ ಧರ್ಮಗಳಿಂದ ಸಂತುಷ್ಟರಾಗಿ ತಮಗೆ ಪರಲೋಕದಲ್ಲಿ ದೊರೆಯಬಹುದಾದ ಧರ್ಮಫಲದ ಆರನೆಯ ಒಂದು ಭಾಗವನ್ನು ಕೊಟ್ಟಿದ್ದರು. ॥ ೧೧ ॥ ಅವನ ಯಜ್ಞದಲ್ಲಿ ಇಂದ್ರನು ಅತ್ಯಧಿಕ ಸೋಮಪಾನಮಾಡಿ ಮತ್ತೇರಿ ಹೋಗಿದ್ದನು. ಅವನು ಅತ್ಯಂತ ಶ್ರದ್ಧೆಯಿಂದಲೂ, ಪರಿಶುದ್ಧವಾದ ನಿಶ್ಚಲಭಕ್ತಿಯಿಂದಲೂ ಸಮರ್ಪಣೆ ಮಾಡಿದ ಯಜ್ಞಫಲವನ್ನು ಭಗವಾನ್ ಯಜ್ಞಪುರುಷನು ಸಾಕ್ಷಾತ್ತಾಗಿ ಪ್ರಕಟಗೊಂಡು ಸ್ವೀಕರಿಸಿದ್ದನು. ॥ ೧೨ ॥ ಯಾರು ತೃಪ್ತಿಗೊಂಡರೆ ಬ್ರಹ್ಮದೇವರಿಂದ ಹಿಡಿದು ದೇವತೆಗಳೂ, ಮನುಷ್ಯರೂ, ಪಶು-ಪಕ್ಷಿಗಳೂ, ವೃಕ್ಷಗಳೂ ಹಾಗೂ ತೃಣದವರೆಗಿನ ಸಮಸ್ತ ಜೀವಿಗಳು ಆಗಲೇ ತೃಪ್ತವಾಗುತ್ತವೋ, ಅಂತಹ ವಿಶ್ವಾತ್ಮನಾದ ಶ್ರೀಹರಿಯು ನಿತ್ಯತೃಪ್ತನಾಗಿದ್ದರೂ ರಾಜರ್ಷಿಗಯನ ಯಜ್ಞದಲ್ಲಿ ತೃಪ್ತನಾಗಿದ್ದನು. ಅದರಿಂದ ಅವನಿಗೆ ಸರಿಸಮಾನರಾದವರು ಬೇರೆ ವ್ಯಕ್ತಿಯು ಹೇಗೆ ಇರಬಲ್ಲನು? ॥ ೧೩ ॥

ಮಹಾರಾಜಾ ಗಯನ ಪತ್ನಿಯಾದ ಗಯಂತಿಯಿಂದ ಚಿತ್ರರಥ, ಸುಗತಿ, ಅವರೋಧನ ಎಂಬ ಮೂವರು ಪುತ್ರರು ಹುಟ್ಟಿದರು. ಅವರಲ್ಲಿ ಚಿತ್ರರಥನ ಪತ್ನಿಯಾದ ಊರ್ಣಾಳಿಂದ 'ಸಾಮ್ರಾಟ' ಎಂಬ ಪುತ್ರನು ಜನಿಸಿದನು. ॥ ೧೪ ॥ ಸಾಮ್ರಾಟನ ಹೆಂಡತಿ ಉತ್ಕಲೆಯಿಂದ ಮರೀಚಿಯೂ, ಮರೀಚಿಯ ಪತ್ನೀ ಬಿಂದುಮತಿಯಿಂದ ಬಿಂದುಮಾನ್ ಎಂಬ ಪುತ್ರನು ಹುಟ್ಟಿದನು. ಅವನ ಪತ್ನೀ

ವೀರವ್ರತಸ್ತತೋ ಭೋಜಾಯಾಂ ಮಂಥುಪ್ರಮಂಥೂ ಜಜ್ಞಾತೇ ಮಂಥೋಃ ಸತ್ಯಾಯಾಂ ಭೌವನಸ್ತತೋ ದೂಷಣಾಯಾಂ ತ್ವಷ್ಟಾಜನಿಷ್ಟ ತ್ವಷ್ಟುರ್ವಿರೋಚನಾಯಾಂ ವಿರಜೋ ವಿರಜಸ್ಯ ಶತಜಿತ್ಪ್ರವರಂ ಪುತ್ರಶತಂ ಕನ್ಯಾ ಚ ವಿಷೂಚ್ಯಾಂ ಕಿಲ ಜಾತಮ್ ॥ ೧೫ ॥

ತತ್ರಾಯಂ ಶ್ಲೋಕಃ

ಪ್ರೈಯ್ಯವ್ರತಂ ವಂಶಮಿಮಂ ವಿರಜಶ್ಚರಮೋದ್ಭವಃ ।
ಅಕರೋದತ್ಯಲಂ ಕೀರ್ತ್ಯಾ ವಿಷ್ಣುಃ ಸುರಗಣಂ ಯಥಾ ॥ ೧೬ ॥

ಸರಘಾ ಇವಳಿಂದ ಮಧು, ಮಧುವಿನ ಪತ್ನೀ ಸುಮನಸೆಯಿಂದ ವೀರವ್ರತ ಮತ್ತು ವೀರವ್ರತನು ಭೋಜಾಳಿಂದ ಮಂಥು ಹಾಗೂ ಪ್ರಮಂಥು ಎಂಬ ಎರಡು ಪುತ್ರರನ್ನು ಪಡೆದನು. ಅವರಲ್ಲಿ ಮಂಥುವಿನ ಹೆಂಡತಿಯಾದ ಸತ್ಯೆಯ ಗರ್ಭದಿಂದ ಭೌವನನೂ, ಭೌವನನ ಪತ್ನೀ ದೂಷಣೆಯ ಉದರದಿಂದ ತ್ವಷ್ಟಾ ಎಂಬುವನೂ, ತ್ವಷ್ಟಾನ ಪತ್ನೀ ವಿರೋಚನೆಯಿಂದ ವಿರಜ ಮತ್ತು ವಿರಜನ ಪತ್ನಿ ವಿಷೂಚಿ ಎಂಬ ಭಾರ್ಯೆಯಲ್ಲಿ ಶತಜಿತ್ ಮುಂತಾದ ನೂರು ಪುತ್ರರು ಹಾಗೂ ಓರ್ವ ಕನ್ಯೆಯು ಜನಿಸಿದರು. ॥ ೧೫ ॥ ವಿರಜನ ವಿಷಯದಲ್ಲಿ ಈ ಶ್ಲೋಕವು ಪ್ರಸಿದ್ಧವಾಗಿದೆ – ಭಗವಾನ್ ವಿಷ್ಣುವು ದೇವತೆಗಳ ಶೋಭೆಯನ್ನು ಹೆಚ್ಚಿಸುವಂತೆ ಈ ಪ್ರಿಯವ್ರತ ವಂಶವನ್ನು ಇದರಲ್ಲಿ ಬಹಳ ಹಿಂದೆ ಉತ್ಪನ್ನನಾದ ರಾಜಾ ವಿರಜನು ತನ್ನ ಸತ್ಕೀರ್ತಿಯಿಂದ ವಿಭೂಷಿತಗೊಳಿಸಿದ್ದನು. ॥ ೧೬ ॥

*ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಪ್ರಿಯವ್ರತವಂಶಾನುಕೀರ್ತನಂ ನಾಮ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ಭುವನ ಕೋಶದ ವರ್ಣನೆ

*ರಾಜೋವಾಚ*

ಉಕ್ತಸ್ತ್ವಯಾ ಭೂಮಂಡಲಾಯಾಮವಿಶೇಷೋ ಯಾವದಾದಿತ್ಯಸ್ತಪತಿ ಯತ್ರ ಚಾಸೌ ಜ್ಯೋತಿಷಾಂ ಗಣೈಶ್ಚಂದ್ರಮಾ ವಾ ಸಹ ದೃಶ್ಯತೇ ॥ ೧ ॥ ತತ್ರಾಪಿ ಪ್ರಿಯವ್ರತರಥಚರಣಪರಿಖಾತೈಃ ಸಪ್ತಭಿಃ ಸಪ್ತ ಸಿಂಧವ ಉಪಕ್ಲೃಪ್ತಾ ಯತ ಏತಸ್ಯಾಃ ಸಪ್ತದ್ವೀಪವಿಶೇಷವಿಕಲ್ಪಸ್ತ್ವಯಾ ಭಗವನ್ಖಲು ಸೂಚಿತ ಏತದೇವಾಖಿಲಮಹಂ ಮಾನತೋ ಲಕ್ಷಣತಶ್ಚ ಸರ್ವಂ ವಿಜಿಜ್ಞಾಸಾಮಿ ॥ ೨ ॥ ಭಗವತೋ ಗುಣಮಯೇ ಸ್ಥೂಲರೂಪ ಆವೇಶಿತಂ ಮನೋ ಹ್ಯಗುಣೇಽಪಿ ಸೂಕ್ಷ್ಮತಮ ಆತ್ಮಜ್ಯೋತಿಷಿ ಪರೇ ಬ್ರಹ್ಮಣಿ ಭಗವತಿ ವಾಸುದೇವಾಖ್ಯೇ ಕ್ಷಮಮಾವೇಶಿತುಂ ತದು ಹೈತದ್ಗುರೋಽರ್ಹಸ್ಯನುವರ್ಣಯಿತುಮಿತಿ ॥ ೩ ॥

**ಪರೀಕ್ಷಿದ್ರಾಜನು ಕೇಳಿದನು** – ಮುನಿವರ್ಯರೇ! ಸೂರ್ಯನ ಪ್ರಕಾಶವು ಎಲ್ಲಿಯವರೆಗೆ ಪಸರಿಸಿದೆಯೋ, ನಕ್ಷತ್ರಗಣಸಮೇತನಾಗಿ ಚಂದ್ರನು ಕಾಣಿಸುತ್ತಾನೋ ಅಲ್ಲಿಯವರೆಗಿನ ಭೂಮಂಡಲದ ವಿಸ್ತಾರವನ್ನು ತಾವು ಸಂಕ್ಷೇಪವಾಗಿ ತಿಳಿಸಿರುವಿರಿ. ॥ ೧ ॥ ಅದರಲ್ಲಿಯೂ ಪ್ರಿಯವ್ರತ ಮಹಾರಾಜನ ರಥದ ಚಕ್ರಗಳಿಂದ ಏಳುಲೋಕಗಳಿಂದ ಏಳು ಸಮುದ್ರಗಳು ಉಂಟಾಗಿದ್ದವು. ಅದರಿಂದ ಈ ಭೂಮಂಡಲದಲ್ಲಿ ಏಳು ದ್ವೀಪಗಳ ವಿಭಾಗವಾಯಿತು ಎಂದು ತಾವು ತಿಳಿಸಿದ್ದೀರಿ. ಆದ್ದರಿಂದ ಪೂಜ್ಯರೇ! ಈಗ ನಾನು ಇವೆಲ್ಲವುಗಳ ವಿಸ್ತಾರ ಮತ್ತು ಲಕ್ಷಣಗಳ ಸಹಿತ ಎಲ್ಲ ವಿವರಣೆಯನ್ನು ಕೇಳಲು ಬಯಸುತ್ತೇನೆ. ॥ ೨ ॥ ಏಕೆಂದರೆ, ಯಾವ ಮನಸ್ಸು ಭಗವಂತನ ಈ ಗುಣಮಯ ಸ್ಥೂಲವಿಗ್ರಹದಲ್ಲಿ ತೊಡಗಿದರೆ, ಅವನ ವಾಸುದೇವ ಎಂದು ಕರೆಯಲ್ಪಡುವ ಸ್ವಯಂ ಪ್ರಕಾಶವೂ, ನಿರ್ಗುಣವೂ, ಬ್ರಹ್ಮಸ್ವರೂಪವೂ ಆದ ಸೂಕ್ಷ್ಮತಮ ಸ್ವರೂಪದಲ್ಲಿ ನೆಲೆಗೊಳ್ಳಲು ಸಂಭವವಿದೆ. ಆದ್ದರಿಂದ ಗುರುವರ್ಯರೇ! ಈ ವಿಷಯವನ್ನು ವಿಶದವಾಗಿ ವರ್ಣಿಸುವ ಕೃಪೆ ಮಾಡಬೇಕು. ॥ ೩ ॥

*ಋಷಿರುವಾಚ*

ನ ವೈ ಮಹಾರಾಜ ಭಗವತೋ ಮಾಯಾಗುಣವಿಭೂತೇಃ ಕಾಷ್ಠಾಂ ಮನಸಾ ವಚಸಾ ವಾಧಿಗಂತುಮಲಂ ವಿಬುಧಾಯುಷಾಪಿ ಪುರುಷಸ್ತಸ್ಮಾತ್ಪ್ರಾಧಾನ್ಯೇನೈವ ಭೂಗೋ-

**ಶ್ರೀಶುಕಮಹಾಮುನಿಗಳು ಹೇಳಿದರು** – ಎಲೈ ಮಹಾರಾಜನೇ! ಭಗವಂತನ ಮಾಯೆಯ ಗುಣಗಳು ಅಳತೆಯನ್ನು ಮೀರಿವೆ. ಅವು ಎಷ್ಟು ವಿಸ್ತಾರವಾಗಿದೆ ಎಂದರೆ – ದೇವತೆಗಳ ಆಯುಸ್ಸನ್ನು ಪಡೆದರೂ ಮನಸ್ಸು ಮತ್ತು ಮಾತುಗಳಿಂದ ಅವುಗಳ ಮಹಿಮೆಯನ್ನು, ನಾಮ-ರೂಪಗಳನ್ನು ತಿಳಿಸಲು ಸಾಧ್ಯವಾಗ

ಲಕವಿಶೇಷಂ ನಾಮರೂಪಮಾನಲಕ್ಷಣತೋ ವ್ಯಾಖ್ಯಾಸ್ಯಾಮಃ ॥ ೪ ॥ ಯೋ ವಾಯಂ ದ್ವೀಪಃ ಕುವಲಯಕಮಲಕೋಶಾಭ್ಯಂತರಕೋಶೋ ನಿಯುತಯೋಜನವಿಶಾಲಃ ಸಮವರ್ತುಲೋ ಯಥಾ ಪುಷ್ಕರಪತ್ರಮ್ ॥ ೫ ॥ ಯಸ್ಮಿನ್ನವ ವರ್ಷಾಣಿ ನವಯೋಜನಸಹಸ್ರಾಯಾಮಾನ್ಯಷ್ಟಭಿರ್ಮರ್ಯಾದಾಗಿರಿಭಿಃ ಸುವಿಭಕ್ತಾನಿ ಭವಂತಿ ॥ ೬ ॥ ಏಷಾಂ ಮಧ್ಯೇ ಇಲಾವೃತಂ ನಾಮಾಭ್ಯಂತರವರ್ಷಂ ಯಸ್ಯ ನಾಭ್ಯಾಮವಸ್ಥಿತಃ ಸರ್ವತಃ ಸೌವರ್ಣಃ ಕುಲಗಿರಿರಾಜೋ ಮೇರುರ್ದ್ವೀಪಾಯಾಮಸಮುನ್ನಾಹಃ ಕರ್ಣಿಕಾಭೂತಃ ಕುವಲಯಕಮಲಸ್ಯ ಮೂರ್ಧನಿ ದ್ವಾತ್ರಿಂಶತ್ಸಹಸ್ರಯೋಜನವಿತತೋ ಮೂಲೇ ಷೋಡಶಸಹಸ್ರಂ ತಾವತಾಂತರ್ಭೂಮ್ಯಾಂ ಪ್ರವಿಷ್ಟಃ ॥ ೭ ॥ ಉತ್ತರೋತ್ತರೇಣೇಲಾವೃತಂ ನೀಲಃ ಶ್ವೇತಃ ಶೃಂಗವಾನಿತಿ ತ್ರಯೋ ರಮ್ಯಕಹಿರಣ್ಮಯಕುರೂಣಾಂ ವರ್ಷಾಣಾಂ ಮರ್ಯಾದಾಗಿರಯಃ ಪ್ರಾಗಾಯತಾ ಉಭಯತಃ ಕ್ಷಾರೋದಾವಧಯೋ ದ್ವಿಸಹಸ್ರಪೃಥವ ಏಕೈಕಶಃ ಪೂರ್ವಸ್ಮಾತ್ಪೂರ್ವಸ್ಮಾದುತ್ತರ ಉತ್ತರೋ ದಶಾಂಶಾಧಿಕಾಂಶೇನ ದೈರ್ಘ್ಯ ಏವ ಹ್ರಸಂತಿ ॥ ೮ ॥

ಲಾರದು. ಆದುದರಿಂದ ನಾನು ಮುಖ್ಯವಾಗಿ ಭೂಗೋಳದ ನಾಮ, ರೂಪ, ಪ್ರಮಾಣ ಮತ್ತು ಲಕ್ಷಣಗಳನ್ನು ವರ್ಣಿಸುವೆನು. ॥ ೪ ॥ ಭೂಮಂಡಲರೂಪೀ ಕಮಲದ ಕೋಶದಂತಿರುವ ಸಪ್ತ ದ್ವೀಪಗಳಲ್ಲಿ ಎಲ್ಲಕ್ಕಿಂತ ಒಳಗಿನ ಕೋಶವು ನಾವು ವಾಸಮಾಡುತ್ತಿರುವ ಈ ಜಂಬೂದ್ವೀಪವಾಗಿದೆ. ಇದರ ವಿಸ್ತಾರವು ಒಂದು ಲಕ್ಷಯೋಜನಗಳು. ಇದು ಕಮಲಪತ್ರದಂತೆ ದುಂಡಗೆ ಸಮವಾಗಿದೆ. ॥ ೫ ॥ ಈ ಜಂಬೂದ್ವೀಪದೊಳಗೆ ಒಂಭತ್ತು ಸಾವಿರ ಯೋಜನಗಳಷ್ಟು ವಿಸ್ತಾರವುಳ್ಳ (ಇಳಾವೃತ, ಭರತವರ್ಷ, ಹರಿವರ್ಷ, ಕಿಂಪುರುಷವರ್ಷ, ರಮ್ಯಕ, ಹಿರಣ್ಮಯ, ಕುರು, ಭದ್ರಾಶ್ವ ಮತ್ತು ಕೇತುಮಾಲ) ಒಂಭತ್ತು ವರ್ಷ (ವಿಭಾಗ) ಗಳಿವೆ. ಈ ವರ್ಷಗಳು (ನೀಲ, ಶ್ವೇತ, ಶೃಂಗವಂತ, ನಿಷಧ, ಹೇಮಕೂಟ, ಹಿಮಾಲಯ, ಮಾಲ್ಯವಂತ ಮತ್ತು ಗಂಧಮಾದನ ಎಂಬ) ಎಂಟು ಕುಲಪರ್ವತಗಳಿಂದ ವಿಂಗಡಿಸಲ್ಪಟ್ಟಿವೆ. ॥ ೬ ॥ ಇವುಗಳ ನಟ್ಟನಡುವೆ ಇಳಾವೃತವೆಂಬ ಹತ್ತನೆಯ ವರ್ಷವಿದೆ. ಇದರ ಮಧ್ಯದಲ್ಲಿ ಕುಲಪರ್ವತಗಳ ರಾಜ ಮೇರು ಪರ್ವತವಿದೆ. ಅದು ಭೂಮಂಡಲರೂಪೀ ಕಮಲದ ಕರ್ಣಿಕೆಯಂತೆ ಇದೆ. ಅದು ಮೇಲಿಂದ-ಕೆಳಗಿನವರೆಗೆ ಇಡೀ ಸುವರ್ಣಮಯವಾಗಿದೆ ಮತ್ತು ಒಂದು ಲಕ್ಷಯೋಜನ ಎತ್ತರವಾಗಿದೆ. ಅದರ ಶಿಖರದ ವಿಸ್ತಾರವು ಮೂವತ್ತೆರಡು ಸಾವಿರ ಯೋಜನಗಳು, ಕೆಳಗಡೆಯಲ್ಲಿ ಹದಿನಾರು ಸಾವಿರ ಯೋಜನಗಳಷ್ಟು ಭೂಮಿಯಲ್ಲಿ ಹೂತಿದೆ. ಅಂದರೆ ಭೂಮಿಯ ಹೊರಗೆ ಎಂಭತ್ತನಾಲ್ಕು ಲಕ್ಷಯೋಜನ ಎತ್ತರವಾಗಿ ಕಾಣುವುದು. ॥ ೭ ॥ ಇಳಾವೃತವರ್ಷದ ಉತ್ತರದಲ್ಲಿ ಕ್ರಮಶಃ ನೀಲ, ಶ್ವೇತ ಮತ್ತು ಶೃಂಗವಾನ್ ಎಂಬ ಮೂರು ಪರ್ವತಗಳಿವೆ. ಅವು ರಮ್ಯಕ, ಹಿರಣ್ಮಯ, ಮತ್ತು ಕುರು ಎಂಬ ವರ್ಷಗಳ ಸೀಮೆಯನ್ನು ನಿರ್ಧರಿಸುತ್ತವೆ. ಅವು ಪೂರ್ವದಿಂದ ಪಶ್ಚಿಮದವರೆಗೆ ಉಪ್ಪುನೀರಿನ ಸಮುದ್ರದವರೆಗೆ ಹರಡಿಕೊಂಡಿವೆ. ಅವುಗಳಲ್ಲಿ ಪ್ರತಿಯೊಂದರ ಅಗಲವು ಎರಡುಸಾವಿರ ಯೋಜನಗಳಿವೆ ಹಾಗೂ ಉದ್ದದಲ್ಲಿ ಮೊದಲನೆಯದಕ್ಕಿಂತ ಹಿಂದಿನದು ಕ್ರಮವಾಗಿ ಹತ್ತನೆಯ ಒಂದಂಶದಿಂದ ಹೆಚ್ಚು-ಕಡಿಮೆ ಇದೆ. ಅಗಲ ಮತ್ತು ಎತ್ತರ ಎಲ್ಲದರಲ್ಲಿ ಒಂದೇ ಸಮವಾಗಿದೆ. ॥ ೮ ॥

ಏವಂ ದಕ್ಷಿಣೇನೇಲಾವೃತಂ ನಿಷಧೋ ಹೇಮಕೂಟೋ ಹಿಮಾಲಯ ಇತಿ ಪ್ರಾಗಾಯತಾ ಯಥಾನೀಲಾದಯೋಽಯುತಯೋಜನೋತ್ಸೇಧಾ ಹರಿವರ್ಷಕಿಂಪುರುಷಭಾರತಾನಾಂ ಯಥಾಸಂಖ್ಯಮ್ ॥ ೯ ॥ ತಥೈವೇಲಾವೃತಮಪರೇಣ ಪೂರ್ವೇಣ ಚ ಮಾಲ್ಯವದ್ಗಂಧಮಾದನಾವಾನೀಲನಿಷಧಾಯತೌ ದ್ವಿಸಹಸ್ರಂ ಪಪ್ರಥತುಃ ಕೇತುಮಾಲಭದ್ರಾಶ್ವಯೋಃ ಸೀಮಾನಂ ವಿದಧಾತೇ ॥ ೧೦ ॥ ಮಂದರೋ

ಇದೇ ರೀತಿಯಲ್ಲಿ ಇಳಾವೃತದ ದಕ್ಷಿಣದಲ್ಲಿ ಒಂದಾದ ಮೇಲೆ ಒಂದರಂತೆ ನಿಷಧ, ಹೇಮಕೂಟ, ಹಿಮಾಲಯ ಎಂಬ ಮೂರು ಪರ್ವತಗಳಿವೆ. ಇವೂ ಕೂಡ ನೀಲವೇ ಮುಂತಾದ ಪರ್ವತಗಳಂತೆ ಪೂರ್ವ-ಪಶ್ಚಿಮದ ಕಡೆಗೆ ಹರಡಿಕೊಂಡಿವೆ ಮತ್ತು ಹತ್ತುಸಾವಿರ ಯೋಜನ ಎತ್ತರವಾಗಿವೆ. ಇವುಗಳಿಂದ ಕ್ರಮವಾಗಿ ಹರಿವರ್ಷ, ಕಿಂಪುರುಷವರ್ಷ, ಭಾರತವರ್ಷದ ಸೀಮೆಗಳ ವಿಭಾಗವಾಗುತ್ತದೆ. ॥ ೯ ॥ ಇಳಾವೃತದ ಪೂರ್ವ ಮತ್ತು ಪಶ್ಚಿಮದ ಕಡೆಗೆ ಉತ್ತರದಲ್ಲಿ ನೀಲಪರ್ವತ ಮತ್ತು ದಕ್ಷಿಣದಲ್ಲಿ ನಿಷಧ ಪರ್ವತದವರೆಗೆ ಹರಡಿರುವ ಗಂಧಮಾದನ ಹಾಗೂ ಮಾಲ್ಯವಾನ್ ಎಂಬ ಎರಡು ಪರ್ವತಗಳಿವೆ. ಇವುಗಳ ಅಗಲ ಎರಡೆರಡು ಸಾವಿರ ಯೋಜನಗಳಿವೆ. ಇವು ಭದ್ರಾಶ್ವ ಹಾಗೂ ಕೇತುಮಾಲ ಎಂಬ ಎರಡು ವರ್ಷಗಳ ಸೀಮೆಯನ್ನು ನಿಶ್ಚಯಿಸುತ್ತವೆ. ॥ ೧೦ ॥

ಮೇರುಮಂದರಃ ಸುಪಾರ್ಶ್ವಃ ಕುಮುದ ಇತ್ಯಯುತ-ಯೋಜನವಿಸ್ತಾರೋನ್ನಾಹಾ ಮೇರೋಶ್ಚತುರ್ದಿಶಮವ-ಷ್ಟಂಭಗಿರಯ ಉಪಕ್ಲ್ಪಪ್ತಾಃ ॥ ೧೧ ॥ ಚತುರ್ಷ್ವೇತೇಷು ಚೂತಜಂಬೂಕದಂಬನ್ಯಗ್ರೋಧಾಶ್ಚತ್ವಾರಃ ಪಾದಪಪ್ರ-ವರಾಃ ಪರ್ವತಕೇತವ ಇವಾಧಿಸಹಸ್ರಯೋಜನೋನ್ನಾಹಾ-ಸ್ತಾವದ್ ವಿಟಪವಿತತಯಶತಯೋಜನಪರಿಣಾಹಾಃ ॥ ೧೨ ॥ ಹ್ರದಾಶ್ಚತ್ವಾರಃ ಪಯೋಮಧ್ವಿಕ್ಷುರಸಮೃಷ್ಟಜಲಾ ಯದುಪ-ಸ್ಪರ್ಶಿನ ಉಪದೇವಗಣಾ ಯೋಗೈಶ್ವರ್ಯಾಣಿ ಸ್ವಾಭಾವಿಕಾನಿ ಭರತರ್ಷಭ ಧಾರಯಂತಿ ॥ ೧೩ ॥ ದೇವೋದ್ಯಾನಾನಿ ಚ ಭವಂತಿ ಚತ್ವಾರಿ ನಂದನಂ ಚೈತ್ರರಥಂ ವೈಭ್ರಾಜಕಂ ಸರ್ವ-ತೋಭದ್ರಮಿತಿ ॥ ೧೪ ॥ ಯೇಷ್ವಮರಪರಿವೃಢಾಃ ಸಹ ಸುರಲಲನಾಲಲಾಮಯೂಥಪತಯ ಉಪದೇವಗಣೈ-ರುಪಗೀಯಮಾನಮಹಿಮಾನಃ ಕಿಲ ವಿಹರಂತಿ ॥ ೧೫ ॥

ಇವಲ್ಲದೆ ಮಂದರ, ಮೇರುಮಂದರ, ಸುಪಾರ್ಶ್ವ, ಕುಮುದ ಎಂಬ ಹತ್ತುಸಾವಿರ ಯೋಜನಗಳಷ್ಟು ಎತ್ತರ ಮತ್ತು ಅಷ್ಟೇ ವಿಸ್ತಾರವುಳ್ಳ ನಾಲ್ಕು ಪರ್ವತಗಳು ಮೇರುಪರ್ವತಕ್ಕೆ ನಾಲ್ಕೂ ಕಡೆಗಳಲ್ಲಿ ಆಧಾರಸ್ತಂಭಗಳಂತೆ ಉಂಟಾಗಿವೆ. ॥ ೧೧ ॥ ಈ ನಾಲ್ಕು ಗಿರಿಗಳಲ್ಲಿಯೂ ಕ್ರಮವಾಗಿ ಅತಿದೊಡ್ಡದಾದ ಮಾವು, ನೇರಳೆ, ಈಚಲು ಮತ್ತು ಆಲದ ಮರಗಳು ಧ್ವಜಗಳಂತೆ ಕಂಗೊಳಿಸುತ್ತಿವೆ. ಇವುಗಳಲ್ಲಿ ಪ್ರತಿಯೊಂದು ಹನ್ನೊಂದು ಸಾವಿರಯೋಜನ ಎತ್ತರವಾಗಿವೆ ಹಾಗೂ ಇಷ್ಟೇ ಇವುಗಳ ಶಾಖೆ (ಕೊಂಬೆ) ಗಳ ವಿಸ್ತಾರವಾಗಿದೆ. ಇವುಗಳ ದಪ್ಪವೂ ನೂರು-ನೂರು ಯೋಜನಗಳಷ್ಟಿದೆ. ॥ ೧೨ ॥ ಎಲೈ ಭರತಶ್ರೇಷ್ಠನೇ ! ಈ ಪರ್ವತಗಳ ಮೇಲೆ ಕ್ರಮವಾಗಿ ಹಾಲು, ಜೇನುತುಪ್ಪ, ಕಬ್ಬಿನರಸ ಮತ್ತು ಸಿಹಿನೀರಿನಿಂದ ತುಂಬಿರುವ ನಾಲ್ಕು ಸರೋವರಗಳೂ ಇವೆ. ಇವುಗಳನ್ನು ಸೇವಿಸುವ ಯಕ್ಷ-ಕಿನ್ನರರೇ ಮುಂತಾದ ಉಪದೇವತೆಗಳಿಗೆ ಸ್ವಾಭಾವಿಕವಾಗಿಯೇ ಯೋಗಸಿದ್ಧಿಗಳು ಪ್ರಾಪ್ತವಾಗಿವೆ. ॥ ೧೩ ॥ ಇವುಗಳ ಮೇಲೆ ಕ್ರಮವಾಗಿ ನಂದನ, ಚೈತ್ರರಥ, ವೈಭ್ರಾಜಕ, ಸರ್ವತೋಭದ್ರ ಎಂಬ ನಾಲ್ಕು ದಿವ್ಯವಾದ ಉಪವನಗಳೂ ಇವೆ. ॥ ೧೪ ॥ ಇವುಗಳಲ್ಲಿ ಪ್ರಧಾನ-ಪ್ರಧಾನರಾದ ದೇವತೆಗಳು ಅನೇಕ ಸುರಸುಂದರಿಯರ ನಾಯಕರಾಗಿ ಜೊತೆ-ಜೊತೆಗೆ ವಿಹರಿಸುತ್ತಿರುತ್ತಾರೆ. ಆಗ ಗಂಧರ್ವರೇ ಮುಂತಾದ ಉಪದೇವತಾಗಣಗಳು ಇವರ ಮಹಿಮೆಯನ್ನು ಹೊಗಳುತ್ತಾ ಇರುತ್ತಾರೆ. ॥ ೧೫ ॥

ಮಂದರೋತ್ಸಂಗ ಏಕಾದಶಶತಯೋಜನೋತ್ತುಂಗ-ದೇವಚೂತಶಿರಸೋ ಗಿರಿಶಿಖರಸ್ಥೂಲಾನಿ ಫಲಾನ್ಯಮೃತ-ಕಲ್ಪಾನಿ ಪತಂತಿ ॥ ೧೬ ॥ ತೇಷಾಂ ವಿಶೀರ್ಯಮಾ-ಣಾನಾಮತಿಮಧುರಸುರಭಿಸುಗಂಧಿಬಹುಲಾರುಣರಸೋ-ದೇನಾರುಣೋದಾ ನಾಮ ನದೀ ಮಂದರಗಿರಿಶಿಖರಾನ್ನಿ-ಪತಂತೀ ಪೂರ್ವೇಣೇಲಾವೃತಮುಪಪ್ಲಾವಯತಿ ॥ ೧೭ ॥ ಯದುಪಜೋಷಣಾದ್ಭವಾನ್ಯಾ ಅನುಚರೀಣಾಂ ಪುಣ್ಯ-ಜನವಧೂನಾಮವಯವಸ್ಪರ್ಶಸುಗಂಧವಾತೋ ದಶಯೋ-ಜನಂ ಸಮಂತಾದನುವಾಸಯತಿ ॥ ೧೮ ॥ ಏವಂ ಜಂಬೂ-ಫಲಾನಾಮತ್ಯುಚ್ಚನಿಪಾತವಿಶೀರ್ಣಾನಾಮನಸ್ಥಿಪ್ರಾಯಾಣಾ-ಮಿಭಕಾಯನಿಭಾನಾಂ ರಸೇನ ಜಂಬೂ ನಾಮ ನದೀ ಮೇರುಮಂದರಶಿಖರಾದಯುತಯೋಜನಾದವನಿತಲೇನಿ-ಪತಂತೀ ದಕ್ಷಿಣೇನಾತ್ಮಾನಂ ಯಾವದಿಲಾವೃತಮುಷ್ಯಂದ-ಯತಿ ॥ ೧೯ ॥ ತಾವದುಭಯೋರಪಿ ರೋಧಸೋರ್ಯಾ ಮೃತ್ತಿಕಾ ತದ್ರಸೇನಾನುವಿಧ್ಯಮಾನಾ ವಾಯ್ವರ್ಕ-ಸಂಯೋಗವಿಪಾಕೇನ ಸದಾಮರಲೋಕಾಭರಣಂ ಜಾಂಬೂನದಂ ನಾಮ ಸುವರ್ಣಂ ಭವತಿ ॥ ೨೦ ॥

ಮಂದರಗಿರಿಯ ತಪ್ಪಲಿನಲ್ಲಿರುವ ಹನ್ನೊಂದುಸಾವಿರ ಯೋಜನ ಎತ್ತರವಾದ ಆ ಮಾವಿನ ಮರದಿಂದ ಗಿರಿಶಿಖರಗಳಷ್ಟು ದೊಡ್ಡದಾದ, ಅಮೃತದಂತೆ ಸ್ವಾದಿಷ್ಟವಾದ ಹಣ್ಣುಗಳು ಉದುರುತ್ತಾ ಇರುತ್ತವೆ. ॥ ೧೬ ॥ ಅವು ಉದುರಿ ಒಡೆದುಹೋದಾಗ ಅವುಗಳಿಂದ ಅದ್ಭುತವಾದ ಸುಗಂಧದಿಂದ ಕೂಡಿದ, ಸಿಹಿಯಾದ, ಕೆಂಪಾದ ರಸವು ಹರಿಯತೊಡಗುತ್ತದೆ. ಅದೇ ಅರುಣೋದಾ ಎಂಬ ನದಿಯಾಗಿ ಮಂದರಾಚಲದ ಶಿಖರದಿಂದ ಧುಮುಕಿ ತನ್ನ ಜಲದಿಂದ ಇಳಾವೃತವರ್ಷದ ಪೂರ್ವಭಾಗವನ್ನು ನೆನೆಸುತ್ತದೆ. ॥ ೧೭ ॥ ಶ್ರೀಪಾರ್ವತಿಯ ಅನುಚರಿಯರಾದ ಯಕ್ಷಪತ್ನಿಯರು ಈ ಜಲವನ್ನು ಸೇವಿಸುತ್ತಾರೆ. ಇದರಿಂದ-ಅವರ ಅಂಗಸ್ಪರ್ಶಮಾಡಿ ಬೀಸುವ ಗಾಳಿಯು ಸುತ್ತಲೂ ಹತ್ತತ್ತು ಯೋಜನದವರೆಗಿನ ಪ್ರದೇಶವನ್ನು ಸುಗಂಧದಿಂದ ತುಂಬಿ ಬರುವಷ್ಟು ಸುಗಂಧ ಅವರ ಮೈಯಿಂದ ಹೊರಡುತ್ತಿರುತ್ತದೆ. ॥ ೧೮ ॥ ಹೀಗೆಯೇ ನೇರಳೇ ಮರದಿಂದ ಆನೆಗಳಷ್ಟು ಗಾತ್ರದ ದೊಡ್ಡ-ದೊಡ್ಡದಾದ ಬೀಜಗಳೇ ಇಲ್ಲದ ಹಣ್ಣುಗಳು ಉದುರುತ್ತವೆ. ಬಹಳ ಎತ್ತರದಿಂದ ಬೀಳುವುದರಿಂದ ಅವು ಒಡೆದು ಅದರ ರಸವು ಜಂಬೂ ಎಂಬ ನದಿಯಾಗಿ ಪ್ರಕಟಗೊಂಡು ಮಂದರಪರ್ವತದ ಹತ್ತುಸಾವಿರಯೋಜನ ಎತ್ತರವಾದ ಶಿಖರದಿಂದ ಕೆಳಗೆ ಧುಮುಕಿ ಇಳಾವೃತದ ದಕ್ಷಿಣದ ಭೂಭಾಗವನ್ನು ನೆನೆಸುತ್ತದೆ. ॥ ೧೯ ॥ ಆ ನದಿಯ ಎರಡೂ ದಡದ ಮಣ್ಣು ಆ ರಸದಿಂದ ನೆನೆದು ವಾಯು ಮತ್ತು ಸೂರ್ಯರ ಸಂಯೋಗದಿಂದ ಒಣಗಿದಾಗ ಅದೇ ದೇವಲೋಕವನ್ನು ವಿಭೂಷಿತಗೊಳಿಸುವ 'ಜಾಂಬೂನದ' ಎಂಬ ಭಂಗಾರವಾಗುತ್ತದೆ. ॥ ೨೦ ॥

ಯದುಹ ವಾವ ವಿಬುಧಾದಯಃ ಸಹ ಯುವತಿಭಿರ್ಮುಕುಟಕಟಕಕಟಿಸೂತ್ರಾದ್ಯಾಭರಣರೂಪೇಣ ಖಲು ಧಾರಯಂತಿ ॥ ೨೧ ॥

ಯಸ್ತು ಮಹಾಕದಂಬಃ ಸುಪಾರ್ಶ್ವನಿರೂಢೋ ಯಾಸ್ತಸ್ಯ ಕೋಟರೇಭ್ಯೋ ವಿನಿಃಸೃತಾಃ ಪಂಚಾಯಾಮಪರಿಣಾಹಾಃ ಪಂಚ ಮಧುಧಾರಾಃ ಸುಪಾರ್ಶ್ವಶಿಖರಾತ್ಪತಂತ್ಯೋಽಪರೇಣಾತ್ಮಾನಮಿಲಾವೃತಮನುಮೋದಯಂತಿ ॥ ೨೨ ॥ ಯಾ ಹ್ಯುಪಯುಂಜಾನಾನಾಂ ಮುಖನಿರ್ವಾಸಿತೋ ವಾಯುಃ ಸಮಂತಾಚ್ಛತಯೋಜನಮನುವಾಸಯತಿ ॥ ೨೩ ॥

ಏವಂ ಕುಮುದನಿರೂಢೋ ಯಃ ಶತವಲ್ಶೋ ನಾಮ ವಟಸ್ತಸ್ಯ ಸ್ಕಂದೇಭ್ಯೋ ನೀಚೀನಾಃ ಪಯೋದಧಿಮಧುಘೃತಗುಡಾನ್ನಾದ್ಯಂಬರಶಯ್ಯಾಸನಾಭರಣಾದಯಃ ಸರ್ವ ಏವ ಕಾಮದುಘಾ ನದಾಃ ಕುಮುದಾಗ್ರಾತ್ಪತಂತಸ್ತಮುತ್ತರೇಣೇಲಾವೃತಮುಪಯೋಜಯಂತಿ ॥ ೨೪ ॥ ಯಾನುಪಜುಷಾಣಾನಾಂ ನ ಕದಾಚಿದಪಿ ಪ್ರಜಾನಾಂ ವಲೀಪಲಿತಕ್ಲಮಸ್ವೇದದೌರ್ಗಂಧ್ಯಜರಾಮಯಮೃತ್ಯುಶೀತೋಷ್ಣವೈವರ್ಣ್ಯೋಪಸರ್ಗಾದಯಸ್ತಾಪವಿಶೇಷಾ ಭವಂತಿ ಯಾವಜ್ಜೀವಂ ಸುಖಂ ನಿರತಿಶಯಮೇವ ॥ ೨೫ ॥

ಕುರಂಗಕುರರಕುಸುಂಭವೈಕಂಕತ್ರಿಕೂಟಶಿಶಿರಪತಂಗರುಚಕನಿಷಧಶಿನೀವಾಸಕಪಿಲಶಂಖವೈಡೂರ್ಯಜಾರುಧಿಹಂಸರ್ಷಭನಾಗಕಾಲಂಜರನಾರದಾದಯೋ ವಿಂಶತಿಗಿರಯೋ ಮೇರೋಃ ಕರ್ಣಿಕಾಯಾ ಇವ ಕೇಸರಭೂತಾ ಮೂಲದೇಶೇ ಪರಿತ ಉಪಕ್ಲೃಪ್ತಾಃ ॥ ೨೬ ॥ ಜಠರದೇವಕೂಟೌ ಮೇರುಂ ಪೂರ್ವೇಣಾಷ್ಟಾದಶಯೋಜನಸಹಸ್ರಮುದಗಾಯತೌ ದ್ವಿಸಹಸ್ರಂ ಪೃಥುತುಂಗೌ ಭವತಃ । ಏವಮಪರೇಣ ಪವನಪಾರಿಯಾತ್ರೌ ದಕ್ಷಿಣೇನ ಕೈಲಾಸಕರವೀರೌ ಪ್ರಾಗಾಯತಾವೇವಮುತ್ತರತಸ್ತ್ರಿಶೃಂಗಮಕರಾವಷ್ಟಭಿರೇತೈಃ ಪರಿಸೃತೋಽಗ್ನಿರಿವ ಪರಿತಶ್ಚಕಾಸ್ತಿ

ಇದನ್ನು ದೇವತೆಗಳು, ಗಂಧರ್ವರು ಮುಂತಾದವರ ತರುಣಿಯರಾದ ಸ್ತ್ರೀಯರ ಸಹಿತ ಕಿರೀಟ, ಕಂಕಣ, ಉಡಿದಾರ ಮುಂತಾದ ಆಭರಣಗಳ ರೂಪದಲ್ಲಿ ಧರಿಸುತ್ತಾರೆ. ॥ ೨೧ ॥

ಸುಪಾರ್ಶ್ವಪರ್ವತದ ಮೇಲೆ ಇರುವ ಕಾಚಲಮರದ ಐದು ಪೊಟರೆಗಳಿಂದ ಐದು ಮಾರುಗಳ ಗಾತ್ರವಿರುವ ಐದು ಜೇನುತುಪ್ಪದ ಧಾರೆಗಳು ಹರಿದುಬರುತ್ತವೆ. ಅವು ಸುಪಾರ್ಶ್ವ ಶಿಖರದಿಂದ ಧುಮುಕಿ ಇಳಾವೃತವರ್ಷದ ಪಶ್ಚಿಮದ ಭಾಗವನ್ನು ತನ್ನ ಸುಗಂಧದಿಂದ ಸುವಾಸನೆಗೊಳಿಸುತ್ತವೆ. ॥ ೨೨ ॥ ಆ ಜೇನುರಸವನ್ನು ಕುಡಿದವರ ಮುಖದಿಂದ ಹೊರಟ ವಾಯುವು ಸುತ್ತಲೂ ನೂರು-ನೂರು ಯೋಜನಗಳವರೆಗೆ ಅದರ ಸುಗಂಧವನ್ನು ಹರಡಿಕೊಳ್ಳುತ್ತದೆ. ॥ ೨೩ ॥

ಇದೇ ರೀತಿ ಕುಮುದ ಪರ್ವತದಮೇಲೆ ಬೆಳೆದಿರುವ ಶತವಶ್ಯವೆಂಬ ಆಲದ ಮರದ ದೊಡ್ಡ ಕೊಂಬೆಗಳಿಂದ ಹರಿದುಬರುವ ಅನೇಕ ನದಗಳಿವೆ. ಅವೆಲ್ಲವೂ ಇಷ್ಟಾನುಸಾರವಾದ ಭೋಗಗಳನ್ನು ಕೊಡುತ್ತವೆ. ಅವುಗಳಿಂದ ಹಾಲು, ಮೊಸರು, ಜೇನು, ತುಪ್ಪ, ಬೆಲ್ಲ ಅನ್ನ, ವಸ್ತ್ರ, ಶಯ್ಯೆ, ಆಸನ ಮತ್ತು ಆಭೂಷಣ ಮುಂತಾದ ಎಲ್ಲ ಪದಾರ್ಥಗಳು ದೊರೆಯಬಲ್ಲವು. ಅವೆಲ್ಲವೂ ಕುಮುದ ಶಿಖರದಿಂದ ಧುಮುಕಿ ಇಳಾವೃತದ ಉತ್ತರದ ಭಾಗವನ್ನು ನೆನೆಸುತ್ತವೆ. ॥ ೨೪ ॥ ಇವುಗಳು ಕೊಟ್ಟಿರುವ ಪದಾರ್ಥಗಳನ್ನು ಉಪಭೋಗಿಸುವುದರಿಂದ ಅಲ್ಲಿಯ ಪ್ರಜೆಗಳಲ್ಲಿ ತ್ವಚೆಯಲ್ಲಿ ನೆರಿಗೆ ಬೀಳುವುದು, ಕೂದಲು ಹಣ್ಣಾಗುವುದು, ಬಳಲಿಕೆ ಉಂಟಾಗುವುದು, ಮುಪ್ಪು, ರೋಗ, ಮೃತ್ಯು, ಶೀತ, ಸೆಕೆಯಪೀಡೆ, ಶರೀರವು ಕಾಂತಿಹೀನವಾಗುವುದು ಹಾಗೂ ಅವಯವಗಳು ತುಂಡರಿಸುವುದು ಮುಂತಾದ ಕಷ್ಟಗಳು ಎಂದೂ ತೊಂದರೆ ಕೊಡುವುದಿಲ್ಲ ಮತ್ತು ಜೀವನವಿಡೀ ಪೂರ್ಣಸುಖವು ದೊರೆಯುತ್ತದೆ. ॥ ೨೫ ॥

ಎಲೈ ರಾಜನೇ! ಕಮಲದ ಕರ್ಣಿಕೆಯ ಸುತ್ತಲೂ ಕೇಸರವಿರುವಂತೆ ಮೇರು ಪರ್ವತದ ಬುಡದಲ್ಲಿ ಅದರ ಸುತ್ತಲೂ ಕುರಂಗ, ಕುರರ, ಕುಸುಂಭ, ವೈಕಂಕ, ತ್ರಿಕೂಟ, ಶಿಶಿರ, ಪತಂಗ, ರುಚಕ, ನಿಷಧ, ಶಿನೀವಾಸ, ಕಪಿಲ, ಶಂಖ, ವೈಡೂರ್ಯ, ಜಾರುಧಿ, ಹಂಸ, ಋಷಭ, ನಾಗ, ಕಾಲಂಜರ ಮತ್ತು ನಾರದ ಮುಂತಾದ ಇಪ್ಪತ್ತು ಪರ್ವತಗಳು ಇನ್ನೂ ಇವೆ. ॥ ೨೬ ॥ ಇವಲ್ಲದೆ ಮೇರುವಿನ ಪೂರ್ವಕ್ಕೆ ಜಠರ, ದೇವಕೂಟ ಎಂಬ ಎರಡು ಪರ್ವತಗಳಿವೆ. ಅವು ಹದಿನೆಂಟು-ಹದಿನೆಂಟುಸಾವಿರ ಯೋಜನ ಉದ್ದ ಹಾಗೂ ಎರಡೆರಡು ಸಾವಿರ ಯೋಜನ ಅಗಲ ಮತ್ತು ಎತ್ತರವಾಗಿವೆ. ಹೀಗೆಯೇ ಪಶ್ಚಿಮದ ಕಡೆಗೆ ಪವನ, ಪಾರಿಯಾತ್ರ, ದಕ್ಷಿಣದ ಕಡೆಗೆ ಕೈಲಾಸ, ಕರವೀರ ಹಾಗೂ ಉತ್ತರಕ್ಕೆ ತ್ರಿಶೃಂಗ, ಮಕರ ಎಂಬ ಪರ್ವತಗಳು ಇವೆ. ಈ ಎಂಟು ಪರ್ವತಗಳಿಂದ ಸುತ್ತುವರಿದ ಸುವರ್ಣಗಿರಿ ಮೇರುವು ಅಗ್ನಿಯಂತೆ ಹೊಳೆಯುತ್ತದೆ. ॥ ೨೭ ॥ ಮೇರುವಿನ ಶಿಖರದ ನಟ್ಟನಡುವೆ ಭಗವಾನ್ ಬ್ರಹ್ಮದೇವರ ಸುವರ್ಣಮಯ ಪುರಿಯು ಇದೆ ಎಂದು ಹೇಳುತ್ತಾರೆ. ಅದು ಆಕಾರದಲ್ಲಿ ಚೌಕಾಕಾರವಾಗಿದ್ದು ಕೋಟಿ ಯೋಜನ ವಿಸ್ತಾರವಾಗಿದೆ. ॥ ೨೮ ॥

ಕಾಂಚನಗಿರಿಃ ॥ ೨೭ ॥ ಮೇರೋರ್ಮೂರ್ಧನಿ ಭಗವತ ಆತ್ಮಯೋನೇರ್ಮಧ್ಯತ ಉಪಕ್ಲೃಪ್ತಾಂ ಪುರೀಮಯುತ-ಯೋಜನಸಾಹಸ್ರೀಂ ಸಮಚತುರಸ್ರಾಂ ಶಾತಕೌಂಭೀಂ ವದಂತಿ ॥ ೨೮ ॥ ತಾಮನು ಪರಿತೋ ಲೋಕಪಾಲಾನಾ-ಮಷ್ಟಾನಾಂ ಯಥಾದಿಶಂ ಯಥಾರೂಪಂ ತುರೀಯ-ಮಾನೇನ ಪುರೋಽಷ್ಟಾವುಪಕ್ಲೃಪ್ತಾಃ ॥ ೨೯ ॥

ಅದರ ಕೆಳಗೆ ಪೂರ್ವವೇ ಮುಂತಾದ ನಾಲ್ಕು ದಿಕ್ಕುಗಳಲ್ಲಿ ಮತ್ತು ಉಪದಿಕ್ಕುಗಳಲ್ಲಿ ಅವುಗಳ ಅಧಿಪತಿಗಳಾದ ಇಂದ್ರಾದಿ ಎಂಟು ಲೋಕಪಾಲಕರ ಎಂಟು ಪುರಗಳು ಇವೆ. ಅವು ತಮ್ಮ-ತಮ್ಮ ಒಡೆಯನಿಗನುರೂಪವಾಗಿ ಆಯಾಯಾ ದಿಕ್ಕುಗಳಲ್ಲಿ ಇವೆ ಹಾಗೂ ವಿಸ್ತಾರದಲ್ಲಿ ಬ್ರಹ್ಮದೇವರ ಪುರಕ್ಕಿಂತ ನಾಲ್ಕನೆಯ ಒಂದಂಶ ಇವೆ. ॥ ೨೯ ॥

*ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಭುವನಕೋಶವರ್ಣನಂ ನಾಮ ಷೋಡಶೋಽಧ್ಯಾಯಃ ॥ ೧೬ ॥

# ಹದಿನೇಳನೆಯ ಅಧ್ಯಾಯ

## ಗಂಗಾದೇವಿಯ ವರ್ಣನೆ – ಭಗವಾನ್ ಶಂಕರನು ಮಾಡಿದ ಸಂಕರ್ಷಣಸ್ತುತಿ

*ಶ್ರೀಶುಕ ಉವಾಚ*

ತತ್ರ ಭಗವತಃ ಸಾಕ್ಷಾದ್ಯಜ್ಞಲಿಂಗಸ್ಯ ವಿಷ್ಣೋರ್ವಿಕ್ರ-ಮತೋ ವಾಮಪಾದಾಂಗುಷ್ಠನಖನಿರ್ಭಿನ್ನೋರ್ಧ್ವಾಂಡ ಕಟಾಹವಿವರೇಣಾಂತಃಪ್ರವಿಷ್ಟಾ ಯಾ ಬಾಹ್ಯಜಲಧಾರಾ ತಚ್ಚರಣಪಂಕಜಾವನೇಜನಾರುಣಕಿಂಜಲ್ಕೋಪರಂಜಿತಾ-ಖಿಲಜಗದಘಮಲಾಪಹೋಪಸ್ಪರ್ಶನಾಮಲಾ ಸಾಕ್ಷಾದ್ಭ-ಗವತ್ಪದೀತ್ಯನುಪಲಕ್ಷಿತವಚೋಽಭಿಧೀಯಮಾನಾತಿಮ-ಹತಾ ಕಾಲೇನ ಯುಗಸಹಸ್ರೋಪಲಕ್ಷಣೇನ ದಿವೋ ಮೂರ್ಧನ್ಯವತತಾರ ಯತ್ತದ್ವಿಷ್ಣುಪದಮಾಹುಃ ॥ ೧ ॥ ಯತ್ರ ಹ ವಾವ ವೀರವ್ರತ ಔತ್ತಾನಪಾದಿಃ ಪರಮ ಭಾಗವತೋಽಸ್ಮತ್ಕುಲದೇವತಾಚರಣಾರವಿಂದೋದಕಮಿತಿ ಯಾಮನುಸವನಮುತ್ಕೃಷ್ಯಮಾಣಭಗವದ್ಭಕ್ತಿಯೋಗೇನ ದೃಢಂ ಕ್ಲಿದ್ಯಮಾನಾಂತರ್ಹೃದಯ ಔತ್ಕಂಠ್ಯವಿವಶಾಮೀಲಿ-ತಲೋಚನಯುಗಲಕುಡ್ಮಲವಿಗಲಿತಾಮಲಬಾಷ್ಪಕಲಯಾ-ಭಿವ್ಯಜ್ಯಮಾನರೋಮಪುಲಕಕುಲಕೋಽಧುನಾಪಿ ಪರಮಾ-ದರೇಣ ಶಿರಸಾ ಬಿಭರ್ತಿ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಯಜ್ಞಮೂರ್ತಿಯಾದ ಸಾಕ್ಷಾತ್ ಭಗವಾನ್ ಮಹಾವಿಷ್ಣುವು ಬಲಿಚಕ್ರವರ್ತಿಯ ಯಜ್ಞಶಾಲೆಯಲ್ಲಿ ಮೂರು ಲೋಕಗಳನ್ನು ಅಳೆಯಲು ತನ್ನ ಪಾದಗಳನ್ನು ಚಾಚಿದಾಗ ಅವನ ಎಡಪಾದದ ಅಂಗುಷ್ಠದ ಉಗುರಿನಿಂದ ಬ್ರಹ್ಮಾಂಡಕಟಾಹದ ಮೇಲ್ಭಾಗವು ಒಡೆದು ಹೋಯಿತು. ಆ ರಂಧ್ರದ ಮೂಲಕ ಬ್ರಹ್ಮಾಂಡದ ಹೊರಗೆ ಹರಿದುಬಂದ ಜಲಧಾರೆಯು ಭಗವಂತನ ಚರಣಕಮಲವನ್ನು ತೊಳೆದುದರಿಂದ ಅದಕ್ಕೆ ಅಂಟಿಕೊಂಡಿದ್ದ ಕುಂಕುಮ-ಕೇಸರಗಳಿಂದ ಅದು ಕೆಂಪೇರಿತು. ಆ ನಿರ್ಮಲಧಾರೆಯ ಸ್ಪರ್ಶವಾದೊಡನೆಯೇ ಜಗತ್ತಿನ ಸರ್ವಪಾಪಗಳೂ ತೊಳೆದುಹೋಗುತ್ತವೆ. ಆದರೆ ಅದು ಮಾತ್ರ ಪೂರ್ಣವಾಗಿ ಶುದ್ಧವಾಗಿಯೇ ಇರುತ್ತದೆ. ಮೊದಲಿಗೆ ಬೇರೆ ಯಾವುದೇ ಹೆಸರಿನಿಂದ ಕರೆಯದೆ 'ಭಗವತ್ಪದೀ' ಎಂದೇ ಕರೆಯುತ್ತಿದ್ದರು. ಆ ಧಾರೆಯು ಸಾವಿರ ಯುಗಗಳು ಕಳೆದ ಬಳಿಕ ಸ್ವರ್ಗದ ಶಿರೋಭಾಗದಲ್ಲಿ 'ವಿಷ್ಣುಪದ' ವೆಂದೂ ಕರೆಯಲ್ಪಡುವ ಧ್ರುವಲೋಕಕ್ಕೆ ಇಳಿಯಿತು. ॥ ೧ ॥ ವೀರವ್ರತ ಪರೀಕ್ಷಿತನೇ! ಆ ಧ್ರುವಲೋಕದಲ್ಲಿಯೇ ಉತ್ತಾನಪಾದನ ಪುತ್ರನೂ ಪರಮ ಭಾಗವತೋತ್ತಮನೂ ಆದ ಧ್ರುವನು ವಾಸಿಸುವನು. ಅವನು ಪ್ರತಿದಿನವೂ ವೃದ್ಧಿಹೊಂದುತ್ತಿರುವ ಭಕ್ತಿಯೋಗದಿಂದ – 'ಇದು ನಮ್ಮ ಕುಲದೇವತೆಯ ಶ್ರೀಪಾದ ತೀರ್ಥವಾಗಿದೆ' ಎಂದು ತಿಳಿದುಕೊಂಡು ಇಂದೂ ಕೂಡ ಆ ಜಲವನ್ನು ತುಂಬಾ ಆದರದಿಂದ ತಲೆಯಲ್ಲಿ ಧರಿಸುತ್ತಾನೆ. ದೃಢವಾದ ಭಕ್ತಿಯೋಗದಿಂದ ಹೃದಯವು ಗದ್ಗದಿತನಾಗಿ ಉತ್ಕಂಠತೆಯಿಂದ ಪರವಶನಾಗಿ ಮುಚ್ಚಿಕೊಂಡಿರುವ ತನ್ನ ನೇತ್ರಕಮಲಗಳಿಂದ ನಿರ್ಮಲವಾದ ಆನಂದಬಾಷ್ಪಗಳು ಹರಿಯತೊಡಗಿ, ಶರೀರವು ರೋಮಾಂಚವಾಗುತ್ತದೆ. ॥ ೨ ॥

ತತಃ ಸಪ್ತಋಷಯಸ್ತತ್ಪ್ರಭಾವಾಭಿಜ್ಞಾ ಯಾಂ ನನು ತಪಸ ಆತ್ಯಂತಿಕೀ ಸಿದ್ಧಿರೇತಾವತೀ ಭಗವತಿ ಸರ್ವಾತ್ಮನಿ ವಾಸುದೇವೇಽನುಪರತಭಕ್ತಿಯೋಗಲಾಭೇನೈವೋಪೇಕ್ಷಿತಾನ್ಯಾರ್ಥಾತ್ಮಗತಯೋ ಮುಕ್ತಿಮಿವಾಗತಾಂ ಮುಮುಕ್ಷವ ಇವ ಸಬಹುಮಾನಮದ್ಯಾಪಿ ಜಟಾಜೂಟೈರುದ್ವಹಂತಿ ॥ ೩ ॥ ತತೋಽನೇಕಸಹಸ್ರಕೋಟಿವಿಮಾನಾನೀಕಸಂಕುಲದೇವಯಾನೇನಾವತರಂತೀಂದುಮಂಡಲಮಾವಾರ್ಯ ಬ್ರಹ್ಮಸದನೇ ನಿಪತತಿ ॥ ೪ ॥

ಇದಾದ ಬಳಿಕ ಆತ್ಮನಿಷ್ಠರಾದ ಸಪ್ತರ್ಷಿಗಳು ಆ ತೀರ್ಥದ ಮಹಿಮೆಯನ್ನರಿತು – 'ಇದೇ ನಮ್ಮ ತಪಸ್ಸಿನ ಕೊನೆಯ ಸಿದ್ಧಿ' ಎಂದು ತಿಳಿದುಕೊಂಡು ಇಂದೂ ಕೂಡ – ಮುಮುಕ್ಷುಗಳು ಪ್ರಾಪ್ತವಾದ ಮುಕ್ತಿಯನ್ನು ತಮ್ಮ ಜಟಾಜೂಟದಲ್ಲಿ ಧರಿಸಿಕೊಳ್ಳುವಂತೆ – ಅದನ್ನು ಆದರಪೂರ್ವಕವಾಗಿ ಧರಿಸಿಕೊಳ್ಳುವರು. ಆ ಸಪ್ತರ್ಷಿಗಳು ಆತ್ಮಜ್ಞಾನವನ್ನು ಕಡೆಗಣಿಸಿ ಸರ್ವಾತ್ಮಕನಾದ ವಾಸುದೇವನನ್ನು ಕುರಿತು ನಿಶ್ಚಲವಾದ ಭಕ್ತಿಯೋಗವನ್ನೇ ತಮ್ಮ ಪರಮಾರ್ಥವೆಂದು ಭಾವಿಸಿ ಇತರ ಎಲ್ಲ ಕಾಮನೆಗಳನ್ನು ತೊರೆಯುವರು. ಇಂತಹ ನಿಷ್ಕಾಮರೂ ಕೂಡ ತಮ್ಮ ಶಿರಸ್ಸಿನಲ್ಲಿ ಪರಮಾದರದಿಂದ ತಳೆಯುತ್ತಿರುವ ತೀರ್ಥವದು. ॥ ೩ ॥ ಈ ದಿವ್ಯಗಂಗೆಯು ಅಲ್ಲಿಂದ ಕೋಟ್ಯಂತರ ವಿಮಾನಗಳಿಂದ ಸುತ್ತುವರಿಯಲ್ಪಟ್ಟಿರುವ ಆಕಾಶಮಾರ್ಗವಾಗಿ ಹರಿದುಬಂದು ಚಂದ್ರಮಂಡಲವನ್ನು ನೆನೆಸುತ್ತಾ, ಮೇರುವಿನ ಶಿಖರದಲ್ಲಿರುವ ಬ್ರಹ್ಮ ಲೋಕದಲ್ಲಿ ಬಂದು ಬೀಳುವಳು. ॥ ೪ ॥

ತತ್ರ ಚತುರ್ಧಾ ಭಿದ್ಯಮಾನಾ ಚತುರ್ಭಿರ್ನಾಮಭಿಶ್ಚತುರ್ದಿಶಮಭಿಸ್ಪಂದಂತೀ ನದನದೀಪತಿಮೇವಾಭಿನಿವಿಶತಿ ಸೀತಾಲಕನಂದಾ ಚಕ್ಷುರ್ಭದ್ರೇತಿ ॥ ೫ ॥ ಸೀತಾ ತು ಬ್ರಹ್ಮಸದನಾತ್ಕೇಸರಾಚಲಾದಿಗಿರಿಶಿಖರೇಭ್ಯೋಽಧೋಽಧಃ ಪ್ರಸ್ರವಂತೀ ಗಂಧಮಾದನಮೂರ್ಧಸು ಪತಿತ್ವಾಂತರೇಣ ಭದ್ರಾಶ್ವವರ್ಷಂ ಪ್ರಾಚ್ಯಾಂ ದಿಶಿ ಕ್ಷಾರಸಮುದ್ರಮಭಿಪ್ರವಿಶತಿ ॥ ೬ ॥ ಏವಂ ಮಾಲ್ಯವಚ್ಛಿಖರಾನ್ನಿಷ್ಪತಂತೀ ತತೋಽನುಪರತವೇಗಾ ಕೇತುಮಾಲಮಭಿ ಚಕ್ಷುಃ ಪ್ರತೀಚ್ಯಾಂ ದಿಶಿ ಸರಿತ್ಪತಿಂ ಪ್ರವಿಶತಿ ॥ ೭ ॥ ಭದ್ರಾ ಚೋತ್ತರತೋ ಮೇರುಶಿರಸೋ ನಿಪತಿತಾ ಗಿರಿಶಿಖರಾದ್ಗಿರಿಶಿಖರಮತಿಹಾಯ ಶೃಂಗವತಃ ಶೃಂಗಾದವಸ್ಯಂದಮಾನಾ ಉತ್ತರಾಂಸ್ತು ಕುರೂನಭಿತ ಉದೀಚ್ಯಾಂ ದಿಶಿ ಜಲಧಿಮಭಿಪ್ರವಿಶತಿ ॥ ೮ ॥ ತಥೈವಾಲಕನಂದಾ ದಕ್ಷಿಣೇನ ಬ್ರಹ್ಮಸದನಾದ್ಬಹೂನಿ ಗಿರಿಕೂಟಾನ್ಯತಿಕ್ರಮ್ಯ ಹೇಮಕೂಟಾದ್ಧೈಮಕೂಟಾನ್ಯತಿರಭಸತರರಂಹಸಾ ಲುಠಯಂತೀ ಭಾರತಮಭಿವರ್ಷಂ ದಕ್ಷಿಣಸ್ಯಾಂ ದಿಶಿ ಜಲಧಿಮಭಿಪ್ರವಿಶತಿ ಯಸ್ಯಾಂ ಸ್ನಾನಾರ್ಥಂ ಚಾಗಚ್ಛತಃ ಪುಂಸಃ ಪದೇ ಪದೇಽಶ್ವಮೇಧರಾಜಸೂಯಾದೀನಾಂ ಫಲಂ ನ ದುರ್ಲಭಮಿತಿ ॥ ೯ ॥ ಅನ್ಯೇ ಚ ನದಾ ನದ್ಯಶ್ಚ ವರ್ಷೇ ವರ್ಷೇ ಸಂತಿ ಬಹುಶೋ ಮೇರ್ವಾದಿಗಿರಿದುಹಿತರಃ ಶತಶಃ ॥ ೧೦ ॥

ಅಲ್ಲಿ ಅದು ಸೀತಾ, ಅಲಕನಂದಾ, ಚಕ್ಷು ಮತ್ತು ಭದ್ರಾ ಎಂಬ ನಾಲ್ಕು ಹೆಸರುಗಳಿಂದ ಕವಲೊಡೆದು ಬೇರೆ-ಬೇರೆಯಾಗಿ ನಾಲ್ಕು ದಿಕ್ಕುಗಳಲ್ಲಿ ಹರಿಯುತ್ತಾ ಕಡೆಗೆ ನದ-ನದಿಗಳಿಗೆ ಅಧಿಪತಿಯಾದ ಸಮುದ್ರವನ್ನು ಸೇರುವುದು. ॥ ೫ ॥ ಇವುಗಳಲ್ಲಿ ಸೀತಾ ಎಂಬ ಧಾರೆಯು ಬ್ರಹ್ಮಪುರಿಯಿಂದ ಧುಮುಕಿ ಕೇಸರಾಚಲವೇ ಮುಂತಾದ ಗಿರಿಗಳ ಸರ್ವೋಚ್ಚ ಶಿಖರಗಳ ಮಾರ್ಗವಾಗಿ ಕೆಳಗಡೆಗೆ ಹರಿಯುತ್ತಾ ಗಂಧಮಾದನದ ಶಿಖರಗಳ ಮೇಲೆ ಬಂದು ಬೀಳುವುದು. ಮತ್ತೆ ಭದ್ರಾಶ್ವವರ್ಷವನ್ನು ನೆನೆಸುತ್ತಾ ಪೂರ್ವದ ಲವಣಸಮುದ್ರದಲ್ಲಿ ಹೋಗಿಸೇರುವುದು. ॥ ೬ ॥ ಹೀಗೆಯೇ ಚಕ್ಷು ಎಂಬ ಧಾರೆಯು ಮಾಲ್ಯವತ್ಪರ್ವತದ ಶಿಖರವನ್ನು ತಲುಪಿ ಅಲ್ಲಿಂದ ಅಡೆ-ತಡೆಯಿಲ್ಲದೆ ಕೇತುಮಾಲವರ್ಷದಲ್ಲಿ ಹರಿಯುತ್ತಾ ಪಶ್ಚಿಮದ ಕ್ಷಾರಸಮುದ್ರವನ್ನು ಸೇರುತ್ತದೆ. ॥ ೭ ॥ ಭದ್ರಾ ಎಂಬ ಧಾರೆಯು ಮೇರುಪರ್ವತದ ಶಿಖರದಿಂದ ಉತ್ತರದ ಕಡೆಗೆ ಧುಮುಕಿ ಒಂದು ಪರ್ವತದಿಂದ ಇನ್ನೊಂದು ಪರ್ವತಕ್ಕೆ ಹೋಗುತ್ತಾ ಕೊನೆಗೆ ಶೃಂಗವಾನ್ ಶಿಖರದಿಂದ ಧುಮುಕಿ ಉತ್ತರ ಕುರುದೇಶದ ಮಾರ್ಗವಾಗಿ ಉತ್ತರದ ಕಡೆಗೆ ಹರಿಯುತ್ತಾ ಸಮುದ್ರವನ್ನು ಸೇರುವುದು. ॥ ೮ ॥ ಅಲಕನಂದಾ ಎಂಬ ಧಾರೆಯು ಬ್ರಹ್ಮಪುರದಿಂದ ದಕ್ಷಿಣದ ಕಡೆಗೆ ಧುಮುಕಿ ಅನೇಕ ಗಿರಿ-ಶಿಖರಗಳನ್ನು ದಾಟಿ ಹೇಮಕೂಟ ಪರ್ವತಕ್ಕೆ ತಲುಪುವುದು. ಅಲ್ಲಿಂದ ಮಿತಿಮೀರಿದ ವೇಗದಿಂದ ಹಿಮಾಲಯದ ಶಿಖರಗಳನ್ನು ಸೀಳುತ್ತಾ ಭಾರತವರ್ಷಕ್ಕೆ ಬಂದು ಮತ್ತೆ ದಕ್ಷಿಣದ ಕಡೆಗೆ ಸಮುದ್ರವನ್ನು ಸೇರುವುದು. ಇದರಲ್ಲಿ ಸ್ನಾನಮಾಡಲು ಬರುವ ಜನರಿಗೆ ಹೆಜ್ಜೆ-ಹೆಜ್ಜೆಗೆ ಅಶ್ವಮೇಧ ಮತ್ತು ರಾಜಸೂಯ ಮುಂತಾದ ಯಜ್ಞಗಳ ಫಲವೂ ಸುಲಭವಾಗಿ ದೊರೆಯುವುದರಲ್ಲಿ ಸಂಶಯವೇ ಇಲ್ಲ. ॥ ೯ ॥ ಇದಲ್ಲದೆ ಪ್ರತಿವರ್ಷದಲ್ಲಿಯೂ ಮೇರುವೇ ಮುಂತಾದ ಪರ್ವತಗಳಿಂದ ಹುಟ್ಟಿಬರುವ ಇನ್ನೂ ನೂರಾರು ನದ-ನದಿಗಳು ಇವೆ. ॥ ೧೦ ॥

ತತ್ರಾಪಿ ಭಾರತಮೇವ ವರ್ಷಂ ಕರ್ಮಕ್ಷೇತ್ರಮನ್ಯಾನ್ಯಷ್ಟ ವರ್ಷಾಣಿ ಸ್ವರ್ಗಿಣಾಂ ಪುಣ್ಯಶೇಷೋಪಭೋಗಸ್ಥಾನಾನಿ ಭೌಮಾನಿ ಸ್ವರ್ಗಪದಾನಿ ವ್ಯಪದಿಶಂತಿ ॥ ೧೧ ॥ ಏಷು ಪುರುಷಾಣಾಮಯುತಪುರುಷಾಯುರ್ವರ್ಷಾಣಾಂ ದೇವಕಲ್ಪಾನಾಂ ನಾಗಾಯುತಪ್ರಾಣಾನಾಂ ವಜ್ರಸಂಹನನಬಲವಯೋಮೋದಪ್ರಮುದಿತಮಹಾಸೌರತಮಿಥುನವ್ಯವಾಯಾಪವರ್ಗವರ್ಷಧೃತೈಕಗರ್ಭಕಲತ್ರಾಣಾಂ ತತ್ರ ತು ತ್ರೇತಾಯುಗಸಮಃ ಕಾಲೋ ವರ್ತತೇ ॥ ೧೨ ॥ ಯತ್ರ ಹ ದೇವಪತಯಃ ಸ್ವೈಃ ಸ್ವೈರ್ಗಣನಾಯಕೈರ್ವಿಹಿತಮಹಾರ್ಹಣಾಃ ಸರ್ವರ್ತುಕುಸುಮಸ್ತಬಕಫಲಕಿಸಲಯಶ್ರಿಯಾಽಽನಮ್ಯಮಾನವಿಟಪಲತಾವಿಟಪಿಭಿರುಪಶುಂಭಮಾನರುಚಿರಕಾನನಾಶ್ರಮಾಯತನವರ್ಷಗಿರಿದ್ರೋಣೀಷು ತಥಾ ಚಾಮಲಜಲಾಶಯೇಷು ವಿಕಚವಿವಿಧನವವನರುಹಾಮೋದಮುದಿತರಾಜಹಂಸಜಲಕುಕ್ಕುಟಕಾರಂಡವಸಾರಸಚಕ್ರವಾಕಾದಿಭಿರ್ಮಧುಕರನಿಕರಾಕೃತಿಭಿರುಪಕೂಜಿತೇಷು ಜಲಕ್ರೀಡಾದಿಭಿರ್ವಿಚಿತ್ರವಿನೋದೈಃ ಸುಲಲಿತಸುರಸುಂದರೀಣಾಂ ಕಾಮಕಲಿಲವಿಲಾಸಹಾಸಲೀಲಾವಲೋಕಾಕೃಷ್ಟಮನೋದೃಷ್ಟಯಃ ಸ್ವೈರಂ ವಿಹರಂತಿ ॥ ೧೩ ॥

ಈ ಎಲ್ಲ ವರ್ಷಗಳಲ್ಲಿಯೂ ಭಾರತವರ್ಷವೇ ಕರ್ಮಭೂಮಿಯಾಗಿದೆ. ಉಳಿದ ಎಂಟು ವರ್ಷಗಳೂ ಸ್ವರ್ಗವಾಸಿಗಳಾದ ಜೀವರು ಸ್ವರ್ಗದಲ್ಲಿ ತಮ್ಮ ಭೋಗಗಳನ್ನು ಅನುಭವಿಸಿದ ಬಳಿಕ ಉಳಿದ ಪುಣ್ಯಫಲಗಳನ್ನು ಅನುಭವಿಸುವ ಸ್ಥಾನಗಳು. ಆದುದರಿಂದ ಇದನ್ನು ಭೂಲೋಕದ ಸ್ವರ್ಗವೆಂದೂ ಹೇಳುತ್ತಾರೆ. ॥ ೧೧ ॥ ಅಲ್ಲಿಯ ದೇವಸದೃಶರಾದ ಮನುಷ್ಯರಿಗೆ ಮಾನವರ ಗಣನೆಗನುಸಾರವಾಗಿ ಹತ್ತುಸಾವಿರ ವರ್ಷದ ಆಯುಸ್ಸು ಇರುತ್ತದೆ. ಅವರಲ್ಲಿ ಹತ್ತುಸಾವಿರ ಆನೆಗಳ ಬಲವಿರುತ್ತದೆ. ಅವರ ವಜ್ರದಂತಹ ದೃಢವಾದ ಶರೀರದಲ್ಲಿರುವ ಶಕ್ತಿ, ಯೌವನ, ಉಲ್ಲಾಸ ಇವುಗಳಿಂದ ಅವರು ಹೆಚ್ಚು-ಕಾಲದವರೆಗೆ ಮೈಥುನ ಮುಂತಾದ ವಿಷಯಗಳನ್ನು ಅನುಭವಿಸುತ್ತಿರುತ್ತಾರೆ. ಕೊನೆಯಲ್ಲಿ ಭೋಗಗಳು ಮುಗಿದುಹೋಗಿ ಇನ್ನು ಒಂದು ವರ್ಷ ಬಾಕಿ ಇರುವಾಗ ಅವರ ಸ್ತ್ರೀಯರು ಗರ್ಭವತಿಯರಾಗುತ್ತಾರೆ. ಹೀಗೆ ಅಲ್ಲಿ ಸದಾಕಾಲ ತ್ರೇತಾಯುಗದಂತೆ ಸಮಯ ಇರುತ್ತದೆ. ॥ ೧೨ ॥ ಅಲ್ಲಿ ಇರುವ ಆಶ್ರಮ, ಭವನ, ವರ್ಷ, ಪರ್ವತದ ತಪ್ಪಲುಗಳು, ಅಲ್ಲಿಯ ಸುಂದರ ವನ-ಉಪವನಗಳೂ ಎಲ್ಲ ಋತುಗಳಲ್ಲಿ ಹೂವುಗಳ ಗೊಂಚಲು, ಫಲಗಳು ಮತ್ತು ಹೊಸ ಚಿಗುರುಗಳ ಶೋಭೆಯ ಭಾರದಿಂದ ಬಾಗಿರುವ ಕೊಂಬೆಗಳಿಂದ, ಲತೆಗಳಿಂದ ವೃಕ್ಷಗಳಿಂದ ಸುಶೋಭಿತವಾಗಿವೆ. ಅಲ್ಲಿ ನಿರ್ಮಲ ನೀರಿನಿಂದ ತುಂಬಿರುವ ಅನೇಕ ಜಲಾಶಯಗಳೂ ಇವೆ. ಅವುಗಳಲ್ಲಿ ಬಗೆ-ಬಗೆಯ ಕಮಲಗಳು ಅರಳಿವೆ. ಆ ಕಮಲಗಳ ಸುಗಂಧದಿಂದ ಆನಂದಿತವಾದ ರಾಜಹಂಸ, ನೀರುಕೋಳಿ, ಕಾರಂಡವ, ಸಾರಸ, ಚಕ್ರವಾಕ ಮುಂತಾದ ನೀರುಹಕ್ಕಿಗಳು ಬಗೆ-ಬಗೆಯಾಗಿ ಚಿಲಿಪಿಲಿಗುಟ್ಟುತ್ತಾ ಕ್ರೀಡಿಸುತ್ತವೆ. ಬೇರೆ-ಬೇರೆ ಜಾತಿಯ ಮತ್ತಭೃಂಗಗಳು ಮಧುರವಾಗಿ ಝೇಂಕರಿಸುತ್ತಿವೆ. ಈ ಆಶ್ರಮಗಳಲ್ಲಿ, ಭವನಗಳಲ್ಲಿ, ತಪ್ಪಲುಗಳಲ್ಲಿ, ಜಲಾಶಯಗಳಲ್ಲಿ ಅಲ್ಲಿರುವ ದೇವೇಶ್ವರರು ಪರಮ ಸುಂದರಿಯಾದ ದೇವಾಂಗನೆಯರೊಡನೆ, ಅವರ ಕಾಮೋನ್ಮಾದ ಸೂಚಕ ಕಿರುನಗೆ, ಸವಿನೋಟಗಳಿಂದ ಮನಸ್ಸು, ನೇತ್ರಗಳು ಸೂರೆಹೋದ ಕಾರಣ ಜಲಕ್ರೀಡಾದಿ ನಾನಾರೀತಿಯ ಆಟಗಳನ್ನಾಡುತ್ತಾ ಸ್ವಚ್ಛಂದವಾಗಿ ವಿಹರಿಸುತ್ತಿರುವರು. ಅವರ ಪ್ರಧಾನವಾದ ಅನುಚರರು ಅನೇಕ ಪ್ರಕಾರದ ಸಾಮಗ್ರಿಗಳಿಂದ ಅವರನ್ನು ಆದರಿಸುತ್ತಾ-ಸತ್ಕರಿಸುತ್ತಾ ಇರುತ್ತಾರೆ. ॥ ೧೩ ॥

ನವಸ್ವಪಿ ವರ್ಷೇಷು ಭಗವಾನ್ನಾರಾಯಣೋ ಮಹಾಪುರುಷಃ ಪುರುಷಾಣಾಂ ತದನುಗ್ರಹಾಯಾತ್ಮತತ್ತ್ವವ್ಯೂಹೇನಾತ್ಮನಾದ್ಯಾಪಿ ಸಂನಿಧೀಯತೇ ॥ ೧೪ ॥ ಇಲಾವೃತೇ ತು ಭಗವಾನ್ ಭವ ಏಕ ಏವ ಪುಮಾನ್ನ ಹ್ಯನ್ಯಸ್ತತ್ರಾಪರೋ ನಿರ್ವಿಶತಿ ಭವಾನ್ಯಾಃ ಶಾಪನಿಮಿತ್ತಜ್ಞೋ ಯತ್ಪ್ರವೇಕ್ಷ್ಯತಃ ಸ್ತ್ರೀಭಾವಸ್ತತ್ಪಶ್ಚಾದ್ವಕ್ಷ್ಯಾಮಿ ॥ ೧೫ ॥ ಭವಾನೀನಾಥೈಃ ಸ್ತ್ರೀಗಣಾರ್ಬುದಸಹಸ್ರೈರವರುಧ್ಯಮಾನೋ ಭಗವತಶ್ಚತುರ್ಮೂರ್ತೇರ್ಮಹಾಪುರುಷಸ್ಯ ತುರೀಯಾಂ

ಈ ಒಂಭತ್ತು ವರ್ಷಗಳಲ್ಲಿಯೂ ಪರಮಪುರುಷ ಭಗವಾನ್ ನಾರಾಯಣನು ಅಲ್ಲಿಯ ಜನರನ್ನು ಅನುಗ್ರಹಿಸುವುದಕ್ಕಾಗಿ ಈಗಲೂ ಕೂಡ ತನ್ನ ವ್ಯೂಹಾತ್ಮಕವಾದ ಬೇರೆ-ಬೇರೆ ಮೂರ್ತಿಗಳಿಂದ ವಿರಾಜಮಾನನಾಗಿದ್ದಾನೆ. ॥ ೧೪ ॥ ಇಳಾವೃತ ವರ್ಷದಲ್ಲಿ ಭಗವಾನ್ ಶಂಕರನೊಬ್ಬನೇ ಪುರುಷನು. ಪಾರ್ವತಿದೇವಿಯು ಕೊಟ್ಟಿರುವ ಶಾಪವನ್ನು ಅರಿತವರಾದ ಯಾವ ಪುರುಷರೂ ಅಲ್ಲಿ ಪ್ರವೇಶಿಸುವುದಿಲ್ಲ. ಏಕೆಂದರೆ ಅಲ್ಲಿಗೆ ಹೋದವನು ಸ್ತ್ರೀರೂಪವನ್ನೇ ಪಡೆಯುವನು. ಈ ಪ್ರಸಂಗವನ್ನು ನಾವು ಮುಂದೆ (ನವಮ ಸ್ಕಂಧದಲ್ಲಿ) ವರ್ಣಿಸುವೆವು. ॥ ೧೫ ॥ ಅಲ್ಲಿ ಪಾರ್ವತಿದೇವಿಯು ಮತ್ತು ಅವಳ ಕೋಟ್ಯಂತರ ದಾಸಿಯರಿಂದ ಸೇವಿತನಾದ

ತಾಮಸೀಂ ಮೂರ್ತಿಂ ಪ್ರಕೃತಿಮಾತ್ಮನಃ ಸಂಕರ್ಷಣ ಸಂಜ್ಞಾಮಾತ್ಮಸಮಾಧಿರೂಪೇಣ ಸನ್ನಿಧಾಪ್ಯೈತದಭಿಗೃಣನ್ ಭವ ಉಪಧಾವತಿ ॥ ೧೬ ॥

*ಶ್ರೀಭಗವಾನುವಾಚ*

ಓಂ ನಮೋ ಭಗವತೇ ಮಹಾಪುರುಷಾಯ ಸರ್ವಗುಣ-ಸಂಖ್ಯಾನಾಯಾನಂತಾಯಾವ್ಯಕ್ತಾಯ ನಮ ಇತಿ ॥ ೧೭ ॥

ಭಜೇ ಭಜನ್ಯಾರಣಪಾದಪಂಕಜಂ
ಭಗಸ್ಯ ಕೃತ್ಸ್ನಸ್ಯ ಪರಂ ಪರಾಯಣಮ್ ।
ಭಕ್ತೇಷ್ವಲಂ ಭಾವಿತಭೂತಭಾವನಂ
ಭವಾಪಹಂ ತ್ವಾ ಭವಭಾವಮೀಶ್ವರಮ್ ॥ ೧೮ ॥

ನ ಯಸ್ಯ ಮಾಯಾಗುಣಚಿತ್ತವೃತ್ತಿಭಿಃ
ನಿರೀಕ್ಷತೋ ಹ್ಯಣ್ವಪಿ ದೃಷ್ಟಿರಜ್ಯತೇ ।
ಈಶೇ ಯಥಾ ನೋಽಜಿತಮನ್ಯುರಂಹಸಾಂ
ಕಸ್ತಂ ನ ಮನ್ಯೇತ ಜಿಗೀಷುರಾತ್ಮನಃ ॥ ೧೯ ॥

ಅಸದ್ದೃಶೋ ಯಃ ಪ್ರತಿಭಾತಿ ಮಾಯಯಾ
ಕ್ಷೀಬೇವ ಮಧ್ವಾಸವತಾಮ್ರಲೋಚನಃ ।
ನ ನಾಗವಧ್ವೋಽರ್ಹಣ ಈಶಿರೇ ಹ್ರಿಯಾ
ಯತ್ಪಾದಯೋಃ ಸ್ಪರ್ಶನಧರ್ಷಿತೇಂದ್ರಿಯಾಃ ॥ ೨೦ ॥

ಯಮಾಹುರಸ್ಯ ಸ್ಥಿತಿಜನ್ಮಸಂಯಮಂ
ತ್ರಿಭಿರ್ವಿಹೀನಂ ಯಮನಂತಮೃಷಯಃ ।
ನ ವೇದ ಸಿದ್ಧಾರ್ಥಮಿವ ಕ್ವಚಿತ್ಸ್ಥಿತಂ
ಭೂಮಂಡಲಂ ಮೂರ್ಧಸಹಸ್ರಧಾಮಸು ॥ ೨೧ ॥

ಭಗವಾನ್ ಶಂಕರನು ಪರಮಪುರುಷ ಪರಮಾತ್ಮನ ವಾಸುದೇವ, ಪ್ರದ್ಯುಮ್ನ ಅನಿರುದ್ಧ ಮತ್ತು ಸಂಕರ್ಷಣ ಎಂಬ ಚತುರ್ವ್ಯೂಹ ಮೂರ್ತಿಗಳಲ್ಲಿ ತನಗೆ ಕಾರಣವಾಗಿರುವ ಸಂಕರ್ಷಣ ಎಂಬ ತಮೋಗುಣ ಪ್ರಧಾನವಾದ ನಾಲ್ಕನೆಯ ಮೂರ್ತಿಯನ್ನು ಧ್ಯೇಯ ಮೂರ್ತಿಯನ್ನಾಗಿ ಮನಸ್ಸಿನಲ್ಲಿ ನೆಲೆಗೊಳಿಸಿಕೊಂಡು, ಈ ಮಂತ್ರ ವನ್ನು ಜಪಿಸುತ್ತಾ ಉಪಾಸನೆ ಮಾಡುತ್ತಿರುವನು.* ॥ ೧೬ ॥

**ಭಗವಾನ್ ಶಂಕರನು ಹೇಳುತ್ತಾನೆ –** ಓಂ ಸರ್ವಗುಣಗಳ ಅಭಿವ್ಯಕ್ತಿಗೂ ಕಾರಣವಾಗಿರುವ, ಅನಂತನೂ, ಅವ್ಯಕ್ತ ಮೂರ್ತಿಯೂ ಆಗಿರುವುದು. ಓಂಕಾರಸ್ವರೂಪಿಯಾದ ಪರಮಪುರುಷ ಶ್ರೀಭಗ ವಂತನಿಗೆ ನಮೋ ನಮಃ. ಭಜನೆಗೆ ಯೋಗ್ಯವಾದ ಭಗವಂತನೇ! ನಿನ್ನ ಅಡಿದಾವರೆಗಳು ಭಕ್ತರಿಗೆ ಪರಮಾಶ್ರಯವಾಗಿವೆ. ನೀನು ಸಮಸ್ತ ಐಶ್ವರ್ಯಗಳಿಗೂ ಪರಮಾಶ್ರಯನು. ಭಕ್ತರ ಮುಂದೆ ಭೂತಭಾವನನಾದ ನಿನ್ನ ಸ್ವರೂಪವನ್ನು ಪ್ರಕಟಗೊಳಿಸಿ, ಅವರನ್ನು ಭವಬಂಧನದಿಂದ ಬಿಡುಗಡೆ ಮಾಡುವವನು ನೀನೇ. ಭಕ್ತ ರಲ್ಲದವರನ್ನು ಸಂಸಾರ ಬಂಧನದಲ್ಲಿ ಕೆಡಹುವವನೂ ನೀನೇ. ಇಂತಹ ಸರ್ವೇಶ್ವರನಾದ ನಿನ್ನನ್ನು ನಾನು ಭಜಿಸುತ್ತೇನೆ. ॥ ೧೭-೧೮ ॥ ಪ್ರಭೋ! ನಾವು ಕ್ರೋಧದ ವೇಗವನ್ನು ಜಯಿ ಸಲು ಅಸಮರ್ಥರು ಮತ್ತು ತತ್ಕಾಲದಲ್ಲೇ ಪಾಪದಿಂದ ಲಿಪ್ತರಾಗಿ ಹೋಗುತ್ತೇವೆ. ಆದರೆ ನೀನಾದರೋ ಜಗತ್ತನ್ನು ನಿಯಮಿಸಲಿಕ್ಕಾಗಿ ನಿರಂತರವಾಗಿ ಸಾಕ್ಷಿರೂಪದಿಂದ ಅದರ ಎಲ್ಲ ವ್ಯಾಪಾರಗಳನ್ನು ನೋಡುತ್ತಾ ಇರುವೆ. ಆದರೂ ಈ ಮಾಯಾಮಯವಾದ ಗುಣ ಮತ್ತು ಚಿತ್ತವೃತ್ತಿಗಳು ನಿನ್ನ ಮೇಲೆ ಎಳ್ಳಷ್ಟು ಪ್ರಭಾವವನ್ನು ಬೀರುವುದಿಲ್ಲ. ಹೀಗಿರುವಾಗ ಮನಸ್ಸನ್ನು ವಶಪಡಿಸಿಕೊಳ್ಳಬೇಕೆಂಬ ಇಚ್ಛೆಯುಳ್ಳ ಯಾವನು ತಾನೇ ನಿನ್ನನ್ನು ಆದರಿಸುವುದಿಲ್ಲ. ॥ ೧೯ ॥ ನಿನ್ನಮಾಯೆಗೆ ವಶರಾಗಿ, ಅಸತ್ತಾಗಿರುವ ಶರೀರಾದಿಗಳಲ್ಲಿ ಆತ್ಮ ಬುದ್ಧಿಯನ್ನಿಟ್ಟಿರುವ ಪಾಮರರ ದೃಷ್ಟಿಗೆ ನೀನು ಮದ್ಯ, ಆಸವ ಮುಂತಾದವುಗಳ ಸೇವನೆಯಿಂದ ಮತ್ತೇರಿ ಕಣ್ಣು ಕೆಂಪೇರಿದವ ನಂತೆ ಕಾಣಿಸುತ್ತಿದ್ದೀಯೇ. ನೀನು ಪರಮ ರಮಣೀಯ ಮೂರ್ತಿಯು. ನಿನ್ನ ಸೇವೆಮಾಡಲು ಬಂದ ನಾಗಪತ್ನಿಯರು ನಿನ್ನ ಚರಣಸ್ಪರ್ಶ ದಿಂದಲೇ ಮನಸ್ಸು ಚಂಚಲಗೊಂಡವರಾಗಿ ಲಜ್ಜೆಯಿಂದ ನಿನ್ನನ್ನು ಪೂಜಿಸಲು ಅಸಮರ್ಥರಾಗುವರು. ॥ ೨೦ ॥ ಜಗತ್ತಿನ ಉತ್ಪತ್ತಿ, ಸ್ಥಿತಿ ಮತ್ತು ಲಯಗಳಿಗೆ ನೀನೇ ಕಾರಣವೆಂದು ವೇದಮಂತ್ರಗಳು ಹೇಳುತ್ತವೆ. ಆದರೂ ನೀನು ಸ್ವತಃ ಈ ಮೂರು ವಿಕಾರಗಳಿಂದ ರಹಿತನಾಗಿರುವೆ. ಅದಕ್ಕಾಗಿ ನಿನ್ನನ್ನು 'ಅನಂತ' ಎಂದು ಹೇಳು ತ್ತಾರೆ. ನಿನ್ನ ಸಾವಿರ ಹೆಡೆಗಳ ಮೇಲೆ ಈ ಬ್ರಹ್ಮಾಂಡವು ಸಾಸಿವೆ ಕಾಳಿನಂತೆ ಇಡಲ್ಪಟ್ಟಿದೆ. ಅದರ ಅರಿವೇ ನಿನಗೆ ಆಗದಷ್ಟು ಹಗುರ ವಾಗಿ ಅದನ್ನು ಧರಿಸಿಕೊಂಡಿರುವೆ. ॥ ೨೧ ॥ ಯಾರಿಂದ ಉತ್ಪನ್ನ ನಾದ ನಾನು ಅಹಂಕಾರರೂಪವಾದ ನಿನ್ನ ತ್ರಿಗುಣಮಯವಾದ ತೇಜಸ್ಸಿನಿಂದ ದೇವತೆಗಳನ್ನು, ಇಂದ್ರಿಯಗಳನ್ನು ಮತ್ತು ಪ್ರಾಣ

* ಭಗವಂತನ ವಿಗ್ರಹವು ಶುದ್ಧ ಸತ್ತ್ವಮಯವೇ ಆಗಿದ್ದರೂ ಸಂಹಾರವೇ ಮುಂತಾದ ಕಾರ್ಯಗಳಿಗಾಗಿ ತಮೋಗುಣ ಪ್ರಧಾನವಾದ ಸಂಕರ್ಷಣ ದೇಹವನ್ನು ಧರಿಸುತ್ತಾನೆ. ಅದಕ್ಕಾಗಿ ಇದನ್ನು ತಾಮಸೀಮೂರ್ತಿ ಎಂದು ಹೇಳುತ್ತಾರೆ. ಆದರೆ ಆತನಲ್ಲಿ ಯಾವ ವಿಕಾರವನ್ನೂ ಉಂಟುಮಾಡುವುದಿಲ್ಲ.

ಯಸ್ಯಾದ್ಯ ಆಸೀದ್ಗುಣವಿಗ್ರಹೋ ಮಹಾನ್
ವಿಜ್ಞಾನಧಿಷ್ಣ್ಯೋ ಭಗವಾನಜಃ ಕಿಲ ।
ಯತ್ಸಂಭವೋಽಹಂ ತ್ರಿವೃತಾ ಸ್ವತೇಜಸಾ
ವೈಕಾರಿಕಂ ತಾಮಸಮೈಂದ್ರಿಯಂ ಸೃಜೇ ॥ ೨೨ ॥

ಏತೇ ವಯಂ ಯಸ್ಯ ವಶೇ ಮಹಾತ್ಮನಃ
ಸ್ಥಿತಾಃ ಶಕುಂತಾ ಇವ ಸೂತ್ರಯಂತ್ರಿತಾಃ ।
ಮಹಾನಹಂ ವೈಕೃತ ತಾಮಸೇಂದ್ರಿಯಾಃ
ಸೃಜಾಮ ಸರ್ವೇ ಯದನುಗ್ರಹಾದಿದಮ್ ॥ ೨೩ ॥

ಯನ್ನಿರ್ಮಿತಾಂ ಕರ್ಹ್ಯಪಿ ಕರ್ಮಪರ್ವಣೀಂ
ಮಾಯಾಂ ಜನೋಽಯಂ ಗುಣಸರ್ಗಮೋಹಿತಃ ।
ನ ವೇದ ನಿಸ್ತಾರಣಯೋಗಮಂಜಸಾ
ತಸ್ಮೈ ನಮಸ್ತೇ ವಿಲಯೋದಯಾತ್ಮನೇ ॥ ೨೪ ॥

ಗಳನ್ನು ರಚಿಸುತ್ತೇನೆಯೋ, ಆ ವಿಜ್ಞಾನಕ್ಕೆ ಆಶ್ರಯರಾದ ಬ್ರಹ್ಮದೇವರೂ ಕೂಡ ನಿನ್ನ ಮಹತ್ತತ್ತ್ವವೆಂಬ ಮೊದಲನೆಯ ಗುಣಮಯ ಸ್ವರೂಪರೇ ಆಗಿದ್ದಾರೆ. ॥ ೨೨ ॥ ಎಲೈ ಮಹಾತ್ಮನೇ! ಮಹತ್ತತ್ತ್ವ, ಅಹಂಕಾರ, ಇಂದ್ರಿಯಾಭಿಮಾನಿದೇವತೆಗಳು, ಇಂದ್ರಿಯಗಳು, ಪಂಚಭೂತಗಳೇ ಮುಂತಾದ ನಾವೆಲ್ಲರೂ ದಾರದಿಂದ ಕಟ್ಟಲ್ಪಟ್ಟ ಪಕ್ಷಿಯಂತೆ ನಿನ್ನ ಕ್ರಿಯಾಶಕ್ತಿಗೆ ವಶರಾಗಿ ನಿನ್ನ ಕೃಪೆಯಿಂದಲೇ ಈ ಜಗತ್ತನ್ನು ನಿರ್ಮಿಸುತ್ತೇವೆ. ॥ ೨೩ ॥ ಸತ್ತ್ವಾದಿ ಗುಣಗಳ ಸೃಷ್ಟಿಯಿಂದ ಮೋಹಿತನಾದ ಈ ಜೀವನು ನೀನೇ ರಚಿಸಿರುವ ಮತ್ತು ಕರ್ಮಬಂಧನದಲ್ಲಿ ಕಟ್ಟಿಹಾಕುವ ಮಾಯೆಯನ್ನು ಎಂದಾದರೂ ತಿಳಿದುಕೊಳ್ಳಬಹುದು. ಆದರೆ ಅದರಿಂದ ಬಿಡುಗಡೆಹೊಂದುವ ಉಪಾಯವು ಆತನಿಗೆ ಸುಲಭವಾಗಿ ತಿಳಿಯುವುದಿಲ್ಲ. ಈ ಜಗತ್ತಿನ ಉತ್ಪತ್ತಿ ಮತ್ತು ಪ್ರಳಯವು ನಿನ್ನ ರೂಪಗಳೇ ಆಗಿವೆ. ಇಂತಹ ನಿನಗೆ ನಾನು ಪದೇ-ಪದೇ ನಮಸ್ಕರಿಸುತ್ತೇನೆ. ॥ ೨೪ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಸಪ್ತದಶೋಽಧ್ಯಾಯಃ ॥ ೧೭ ॥

# ಹದಿನೆಂಟನೆಯ ಅಧ್ಯಾಯ

## ಬೇರೆ-ಬೇರೆ ವರ್ಷಗಳ ವರ್ಣನೆ

*ಶ್ರೀಶುಕ ಉವಾಚ*

ತಥಾ ಚ ಭದ್ರಶ್ರವಾ ನಾಮ ಧರ್ಮಸುತಸ್ತತ್ಕುಲಪತಯಃ ಪುರುಷಾ ಭದ್ರಾಶ್ವವರ್ಷೇ ಸಾಕ್ಷಾದ್ಭಗವತೋ ವಾಸುದೇವಸ್ಯ ಪ್ರಿಯಾಂ ತನುಂ ಧರ್ಮಮಯೀಂ ಹಯಶೀರ್ಷಾಭಿಧಾನಾಂ ಪರಮೇಣ ಸಮಾಧಿನಾ ಸಂನಿಧಾಪ್ಯೇದಮಭಿಗೃಣಂತ ಉಪಧಾವಂತಿ ॥ ೧ ॥

*ಭದ್ರಶ್ರವಸ ಊಚುಃ*

ಓಂ ನಮೋ ಭಗವತೇ ಧರ್ಮಾಯಾತ್ಮವಿಶೋಧನಾಯ ನಮ ಇತಿ ॥ ೨ ॥

ಅಹೋ ವಿಚಿತ್ರಂ ಭಗವದ್ವಿಚೇಷ್ಟಿತಂ
ಘ್ನಂತಂ ಜನೋಽಯಂ ಹಿ ಮಿಷನ್ನ ಪಶ್ಯತಿ ।
ಧ್ಯಾಯನ್ನಸದ್ಯರ್ಹಿ ವಿಕರ್ಮ ಸೇವಿತುಂ
ನಿರ್ಹೃತ್ಯ ಪುತ್ರಂ ಪಿತರಂ ಜಿಜೀವಿಷತಿ ॥ ೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ರಾಜನೇ! ಭದ್ರಾಶ್ವವೆಂಬ ವರ್ಷದಲ್ಲಿ ಧರ್ಮಪುತ್ರ ಭದ್ರಶ್ರವನೂ ಮತ್ತು ಆತನ ಮುಖ್ಯರಾದ ಸೇವಕರು ಭಗವಾನ್ ವಾಸುದೇವನನ್ನು 'ಹಯಗ್ರೀವ' ಎಂಬ ಧರ್ಮಮಯವೂ, ಪ್ರಿಯವೂ ಆದ ಮೂರ್ತಿಯನ್ನು ಅತ್ಯಂತ ಸಮಾಧಿನಿಷ್ಠೆಯಿಂದ ಹೃದಯದಲ್ಲಿ ನೆಲೆ ಗೊಳಿಸಿಕೊಂಡು ಈ ಮಂತ್ರವನ್ನು ಜಪಿಸುತ್ತಾ ಹೀಗೆ ಸ್ತುತಿಸುತ್ತಾರೆ. ॥ ೧ ॥

ಭದ್ರಶ್ರವನೂ ಮತ್ತು ಅವನ ಸೇವಕರು ಹೇಳುತ್ತಾರೆ – 'ಚಿತ್ತವನ್ನು ವಿಶುದ್ಧಗೊಳಿಸುವಂತಹ ಓಂಕಾರಸ್ವರೂಪನಾದ ಭಗವಾನ್ ಧರ್ಮಮೂರ್ತಿಗೆ ನಮೋ ನಮಃ ॥ ೨ ॥ ಆಹಾ! ಭಗವಂತನ ಲೀಲೆಗಳು ತುಂಬಾ ವಿಚಿತ್ರವಾಗಿದೆ. ಅದರಿಂದಲೇ ಇಡೀ ಜಗತ್ತನ್ನು ಸಂಹರಿಸುತ್ತಿರುವ ಮೃತ್ಯುವನ್ನು ಕಣ್ಣಾರೆ ಕಾಣುತ್ತಿದ್ದರೂ ಕಾಣದವನಂತೆ ಇದ್ದಾನೆ ಈ ಜೀವನು. ತುಚ್ಛವಾದ ವಿಷಯ ಸುಖಗಳನ್ನು ಸೇವಿಸುವುದಕ್ಕಾಗಿಯೇ ಪಾಪಮಯ ವಿಚಾರಗಳನ್ನೇ ಚಿಂತಿಸುತ್ತಿದ್ದಾನೆ. ಮೃತನಾದ ತಮ್ಮ ಪುತ್ರನ ಮತ್ತು ತಂದೆಯ ಶವವನ್ನು ತಮ್ಮ ಕೈಯಿಂದಲೇ ದಹನಮಾಡಿ ಬಂದಿದ್ದರೂ ತಾವು ಬದುಕಿರಬೇಕೆಂದು ಬಯಸುತ್ತಾರಲ್ಲ! ॥ ೩ ॥ ಎಲೈ ಜನ್ಮರಹಿತನಾದ ಪ್ರಭುವೇ! ಜಗತ್ತನ್ನು ನಶ್ವರವೆಂದು ವಿದ್ವಾಂಸರು ಹೇಳುತ್ತಾರೆ ಮತ್ತು ಸೂಕ್ಷ್ಮದರ್ಶಿಗಳಾದ ಆತ್ಮಜ್ಞಾನಿಗಳು ಹೀಗೆಯೇ ನೋಡಿಯೂ ನೋಡುತ್ತಾರೆ. ಆದರೂ ನಿನ್ನ ಮಾಯೆಯಿಂದ ಜನರು ಮೋಹಿತರಾಗುತ್ತಿದ್ದಾರೆ. ನೀನು ಅನಾದಿಯಾಗಿದ್ದು ನಿನ್ನ

ವದಂತಿ ವಿಶ್ವಂ ಕವಯಃ ಸ್ಮ ನಶ್ವರಂ
ಪಶ್ಯಂತಿ ಚಾಧ್ಯಾತ್ಮವಿದೋ ವಿಪಶ್ಚಿತಃ ।
ತಥಾಪಿ ಮುಹ್ಯಂತಿ ತವಾಜ ಮಾಯಯಾ
ಸುವಿಸ್ಮಿತಂ ಕೃತ್ಯಮಜಂ ನತೋಽಸ್ಮಿ ತಮ್ ॥ ೪ ॥

ವಿಶ್ವೋದ್ಭವಸ್ಥಾನನಿರೋಧಕರ್ಮ ತೇ
ಹ್ಯಕರ್ತುರಂಗೀಕೃತಮಪ್ಯಪಾವೃತಃ ।
ಯುಕ್ತಂ ನ ಚಿತ್ರಂ ತ್ವಯಿ ಕಾರ್ಯಕಾರಣೇ
ಸರ್ವಾತ್ಮನಿ ವ್ಯತಿರಿಕ್ತೇ ಚ ವಸ್ತುತಃ ॥ ೫ ॥

ವೇದಾನ್ ಯುಗಾಂತೇ ತಮಸಾ ತಿರಸ್ಕೃತಾನ್
ರಸಾತಲಾದ್ಯೋ ನೃತುರಂಗವಿಗ್ರಹಃ ।
ಪ್ರತ್ಯಾದದೇ ವೈ ಕವಯೇಽಭಿಯಾಚತೇ
ತಸ್ಮೈ ನಮಸ್ತೇಽವಿತಥೇಹಿತಾಯ ಇತಿ ॥ ೬ ॥

ಹರಿವರ್ಷೇ ಚಾಪಿ ಭಗವಾನ್ನರಹರಿರೂಪೇಣಾಸ್ತೇ । ತದ್ರೂಪಗ್ರಹಣನಿಮಿತ್ತಮುತ್ತರತ್ರಾಭಿಧಾಸ್ಯೇ । ತದ್ದಯಿತಂ ರೂಪಂ ಮಹಾಪುರುಷಗುಣಭಾಜನೋ ಮಹಾಭಾಗವತೋ ದೈತ್ಯದಾನವಕುಲತೀರ್ಥೀಕರಣಶೀಲಾಚರಿತಃ ಪ್ರಹ್ಲಾದೋಽವ್ಯವಧಾನಾನನ್ಯಭಕ್ತಿಯೋಗೇನ ಸಹ ತದ್ವರ್ಷಪುರುಷೈರುಪಾಸ್ತೇ ಇದಂ ಚೋದಾಹರತಿ ॥ ೭ ॥

ಓಂ ನಮೋ ಭಗವತೇ ನರಸಿಂಹಾಯ ನಮಸ್ತೇಜಸ್ತೇಜಸೇ ಆವಿರಾವಿರ್ಭವ ವಜ್ರನಖ ವಜ್ರದಂಷ್ಟ್ರ ಕರ್ಮಾಶಯಾನ್ ರಂಧಯ ರಂಧಯ ತಮೋ ಗ್ರಸ ಗ್ರಸ ಓಂ ಸ್ವಾಹಾ । ಅಭಯಮಭಯಮಾತ್ಮನಿ ಭೂಯಿಷ್ಠಾ ಓಂ ಕ್ಷ್ರೌಮ್ ॥ ೮ ॥

ಸ್ವಸ್ತ್ಯಸ್ತು ವಿಶ್ವಸ್ಯ ಖಲಃ ಪ್ರಸೀದತಾಂ
ಧ್ಯಾಯಂತು ಭೂತಾನಿ ಶಿವಂ ಮಿಥೋ ಧಿಯಾ ।
ಮನಶ್ಚ ಭದ್ರಂ ಭಜತಾದಧೋಕ್ಷಜೇ
ಆವೇಶ್ಯತಾಂ ನೋ ಮತಿರಪ್ಯಹೈತುಕೀ ॥ ೯ ॥

ಕೃತ್ಯಗಳು ತುಂಬಾ ವಿಸ್ಮಯಮಯವಾಗಿವೆ. ನಾವು ನಿನಗೆ ನಮಸ್ಕರಿಸುತ್ತಿದ್ದೇವೆ. ॥ ೪ ॥ ಓ ಪರಮಾತ್ಮನೇ ! ನೀನು ಕರ್ತೃತ್ವರಹಿತನೂ, ಮಾಯೆಯ ಆವರಣದಿಂದ ಅತೀತನಾಗಿದ್ದರೂ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಳಯ – ಇವುಗಳನ್ನು ನಿನ್ನದೇ ಕರ್ಮಗಳೆಂದು ತಿಳಿಯಲಾಗಿದೆ. ಅದು ಸರಿಯೇ. ಇದರಲ್ಲಿ ಯಾವ ಆಶ್ಚರ್ಯದ ಮಾತೂ ಇಲ್ಲ. ಏಕೆಂದರೆ, ಸರ್ವಾತ್ಮರೂಪದಿಂದ ನೀನೇ ಸಮಸ್ತ ಕಾರ್ಯಗಳ ಕಾರಣನಾಗಿರುವೆ ಮತ್ತು ತನ್ನ ಶುದ್ಧಸ್ವರೂಪದಲ್ಲಿ ಇದ್ದು ಈ ಕಾರ್ಯ-ಕಾರಣಭಾವದಿಂದ ಅತೀತನಾಗಿರುವೆ. ॥ ೫ ॥ ನಿನ್ನ ದಿವ್ಯಮಂಗಳ ವಿಗ್ರಹವು ಮನುಷ್ಯ ಮತ್ತು ಕುದುರೆ ಸೇರಿದ ಹಯಗ್ರೀವರೂಪವಾಗಿದೆ. ಪ್ರಳಯಕಾಲದಲ್ಲಿ ತಮೋಗುಣ ಪ್ರಧಾನರಾದ ದೈತ್ಯರು ವೇದಗಳನ್ನು ಕದ್ದುಕೊಂಡು ಹೋಗಿದ್ದಾಗ ಬ್ರಹ್ಮದೇವರ ಪ್ರಾರ್ಥನೆಯಂತೆ ನೀನು ಆ ವೇದಗಳನ್ನು ರಸಾತಲದಿಂದ ತಂದುಕೊಟ್ಟೆ. ಇಂತಹ ಅಮೋಘ ಲೀಲೆಗಳನ್ನು ನಡೆಸುವ ಸತ್ಯಸಂಕಲ್ಪನಾದ ನಿನಗೆ ನಾವು ನಮಸ್ಕರಿಸುತ್ತೇವೆ. ॥ ೬ ॥

ಹರಿವರ್ಷಖಂಡದಲ್ಲಿ ಭಗವಂತನು ನರಸಿಂಹರೂಪದಿಂದ ಬೆಳಗುತ್ತಿದ್ದಾನೆ. ಅವನು ಈ ರೂಪವನ್ನು ಏಕೆ ಧರಿಸಿದನು ಎಂಬುದನ್ನು ಮುಂದೆ (ಏಳನೆಯ ಸ್ಕಂಧದಲ್ಲಿ) ವರ್ಣಿಸಲಾಗುವುದು. ಭಗವಂತನ ಆ ಪ್ರಿಯರೂಪವನ್ನು ಮಹಾಭಾಗವತೋತ್ತಮ ಪ್ರಹ್ಲಾದರು ಆ ವರ್ಷದ ಇತರ ಪುರುಷರೊಂದಿಗೆ ನಿಷ್ಕಾಮ ಹಾಗೂ ಅನನ್ಯಭಕ್ತಿಯಿಂದ ಉಪಾಸಿಸುತ್ತಾರೆ. ಈ ಪ್ರಹ್ಲಾದರು ಮಹಾಪುರುಷರಿಗೆ ಉಚಿತವಾದ ಗುಣಗಳಿಂದ ಸಂಪನ್ನರಾಗಿರುವರು. ಇವರು ತಮ್ಮ ಶೀಲ, ಆಚರಣೆಗಳಿಂದ ದೈತ್ಯ ಮತ್ತು ದಾನವರ ಕುಲವನ್ನು ಪವಿತ್ರಗೊಳಿಸಿದವರು. ಅವರು ಈ ಮಂತ್ರದ ಸ್ತೋತ್ರ-ಜಪ-ಪಾರಾಯಣೆಯನ್ನು ಮಾಡುತ್ತಾ ಇರುತ್ತಾರೆ – ॥ ೭ ॥ 'ಓಂಕಾರಸ್ವರೂಪನಾದ ಭಗವಾನ್ ಶ್ರೀನರಸಿಂಹನಿಗೆ ನಮಸ್ಕಾರವು. ತೇಜಸ್ಸುಗಳಿಗೆಲ್ಲ ತೇಜಸ್ಸನ್ನು ಅನುಗ್ರಹಿಸುವ ಪರಮ ತೇಜೋಮಯ ಮೂರ್ತಿಯಾದ ನಿನಗೆ ನಮಸ್ಕಾರವು. ಹೇ ವಜ್ರನಖನೇ ! ಹೇ ವಜ್ರದಂಷ್ಟ್ರನೇ ! ನೀನು ನಮ್ಮ ಮುಂದೆ ಪ್ರಕಟನಾಗು ! ಪ್ರಕಟನಾಗು ! ನಮ್ಮ ಕರ್ಮವಾಸನೆಗಳನ್ನು ಸುಟ್ಟುಹಾಕು ! ಸುಟ್ಟುಹಾಕು ! ನಮ್ಮ ಅಜ್ಞಾನರೂಪವಾದ ಅಂಧಕಾರವನ್ನು ನಾಶಮಾಡು ! ನಾಶಮಾಡು ! ಓಂ ಸ್ವಾಹಾ ! ನಮ್ಮ ಅಂತಃಕರಣದಲ್ಲಿ ಅಭಯದಾನವನ್ನು ನೀಡುತ್ತಾ ಪ್ರಕಾಶಿತನಾಗು. 'ಓಂ ಕ್ಷ್ರೌಮ್' ॥ ೮ ॥ ಸ್ವಾಮಿ ! ವಿಶ್ವಕ್ಕೆ ಕಲ್ಯಾಣವುಂಟಾಗಲಿ. ದುಷ್ಟರ ಬುದ್ಧಿಯು ಶುದ್ಧವಾಗಲೀ. ಎಲ್ಲ ಪ್ರಾಣಿಗಳಲ್ಲಿಯೂ ಪರಸ್ಪರ ಸದ್ಭಾವನೆ ಉಂಟಾಗಲಿ. ಎಲ್ಲರೂ ಒಬ್ಬರನ್ನೊಬ್ಬರ ಹಿತವನ್ನು ಚಿಂತಿಸಲಿ. ನಮ್ಮ ಮನಸ್ಸು ಶುಭವಾದ ಮಾರ್ಗದಲ್ಲಿ ಪ್ರವೃತ್ತವಾಗಲಿ. ನಮ್ಮೆಲ್ಲರ ಬುದ್ಧಿಯು ನಿಷ್ಕಾಮಭಾವದಿಂದ ಭಗವಾನ್ ಶ್ರೀಹರಿಯಲ್ಲಿ ಪ್ರವೇಶಿಸಲಿ. ॥ ೯ ॥ ಪ್ರಭೋ ! ಮನೆ, ಹೆಂಡತಿ, ಮಕ್ಕಳು, ಹಣ, ಬಂಧು-ಬಾಂಧವರಲ್ಲಿ ನಮಗೆ ಆಸಕ್ತಿಯು ಇಲ್ಲದಿರಲಿ. ಇರುವುದಾದರೆ ಕೇವಲ ಭಗವಂತನ ಪ್ರೇಮೀಭಕ್ತರಲ್ಲಿ ಇರಲಿ. ಶರೀರನಿರ್ವಹಣೆಗಾಗಿ ಅನಿವಾರ್ಯವಾಗಿ ಬೇಕಾಗಿರುವಷ್ಟು ದ್ರವ್ಯಗಳಿಂದಲೇ ಸಂತೋಷಪಡುವ ಸಂಯಮಿಗಳಿಗೆ ಶೀಘ್ರ

ಮಾಗಾರದಾರಾತ್ಮಜವಿತ್ತಬಂಧುಷು
ಸಂಗೋ ಯದಿ ಸ್ಯಾದ್ಭಗವತ್ಪ್ರಿಯೇಷು ನಃ ।
ಯಃ ಪ್ರಾಣವೃತ್ತ್ಯಾ ಪರಿತುಷ್ಟ ಆತ್ಮವಾನ್
ಸಿದ್ಧ್ಯತ್ಯದೂರಾನ್ನ ತಥೇಂದ್ರಿಯಪ್ರಿಯಃ ॥ ೧೦ ॥

ಯತ್ಸಂಗಲಬ್ಧಂ ನಿಜವೀರ್ಯವೈಭವಂ
ತೀರ್ಥಂ ಮುಹುಃ ಸಂಸ್ಪೃಶತಾಂ ಹಿ ಮಾನಸಮ್ ।
ಹರತ್ಯಜೋಽಂತಃ ಶ್ರುತಿಭಿರ್ಗತೋಂಗಜಂ
ಕೋ ವೈ ನ ಸೇವೇತ ಮುಕುಂದವಿಕ್ರಮಮ್ ॥ ೧೧ ॥

ಯಸ್ಯಾಸ್ತಿ ಭಕ್ತಿರ್ಭಗವತ್ಯಕಿಂಚನಾ
ಸರ್ವೈರ್ಗುಣೈಸ್ತತ್ರ ಸಮಾಸತೇ ಸುರಾಃ ।
ಹರಾವಭಕ್ತಸ್ಯ ಕುತೋ ಮಹದ್ಗುಣಾ
ಮನೋರಥೇನಾಸತಿ ಧಾವತೋ ಬಹಿಃ ॥ ೧೨ ॥

ಹರಿರ್ಹಿ ಸಾಕ್ಷಾದ್ಭಗವಾನ್ ಶರೀರಿಣಾ-
ಮಾತ್ಮಾ ಝಷಾಣಾಮಿವ ತೋಯಮೀಪ್ಸಿತಮ್ ।
ಹಿತ್ವಾ ಮಹಾಂಸ್ತಂ ಯದಿ ಸಜ್ಜತೇ ಗೃಹೇ
ತದಾ ಮಹತ್ತ್ವಂ ವಯಸಾ ದಂಪತೀನಾಮ್ ॥ ೧೩ ॥

ತಸ್ಮಾದ್ರಜೋರಾಗವಿಷಾದಮನ್ಯು-
ಮಾನಸ್ಪೃಹಾಭಯದೈನ್ಯಾಧಿಮೂಲಮ್ ।
ಹಿತ್ವಾ ಗೃಹಂ ಸಂಸೃತಿಚಕ್ರವಾಲಂ
ನೃಸಿಂಹಪಾದಂ ಭಜತಾಕುತೋಭಯಮಿತಿ ॥ ೧೪ ॥

ಕೇತುಮಾಲೇಽಪಿ ಭಗವಾನ್ ಕಾಮದೇವಸ್ವರೂಪೇಣ ಲಕ್ಷ್ಮ್ಯಾಃ ಪ್ರಿಯಚಿಕೀರ್ಷಯಾ ಪ್ರಜಾಪತೇರ್ದುಹಿ- ತೄಣಾಂ ಪುತ್ರಾಣಾಂ ತದ್ವರ್ಷಪತೀನಾಂ ಪುರುಷಾ- ಯುಷಾಹೋರಾತ್ರಪರಿಸಂಖ್ಯಾನಾನಾಂ ಯಾಸಾಂ ಗರ್ಭಾ ಮಹಾಪುರುಷಮಹಾಸ್ತ್ರತೇಜಸೋದ್ವೇಜಿತಮ- ನಸಾಂ ವಿಧ್ವಸ್ತಾ ವ್ಯಸವಃ ಸಂವತ್ಸರಾಂತೇ ವಿನಿಪತಂತಿ ॥ ೧೫ ॥ ಅತೀವ ಸುಲಲಿತಗತಿವಿಲಾಸವಿಲಸಿತರುಚಿರಹಾ

ದಲ್ಲಿಯೇ ಸಿದ್ಧಿಯು ಉಂಟಾಗುವುದು. ಇಂದ್ರಿಯ ಲೋಲುಪರಾದ ಜನರಿಗೆ ಸಿದ್ಧಿಯು ದೊರೆಯುವುದೇ ಇಲ್ಲ. ॥ ೧೦ ॥ ಆ ಭಕ್ತರ ಸಂಗದಲ್ಲಿದ್ದರೆ ಶ್ರೀಭಗವಂತನ ಅಸಾಧಾರಣವಾದ ಶಕ್ತಿಯನ್ನು ಮತ್ತು ಪ್ರಭಾವವನ್ನು ಪ್ರಕಟಿಸುವ ತೀರ್ಥಸಮಾನವಾದ ಪವಿತ್ರ ಕಥೆಗಳ ಶ್ರವಣಭಾಗ್ಯ ಉಂಟಾಗುವುದು. ಅವನ್ನು ಮತ್ತೆ-ಮತ್ತೆ ಕೇಳುವವರ ಕಿವಿಗಳ ಮೂಲಕ ಹೃದಯವನ್ನು ಪ್ರವೇಶಮಾಡಿ ಅವರ ಎಲ್ಲ ರೀತಿಯ ದೈಹಿಕ ಮತ್ತು ಮಾನಸಿಕ ದೋಷಗಳನ್ನು ನಾಶಪಡಿಸುವುದು. ಹೀಗಿರುವಾಗ ಭಗವದ್ಭಕ್ತರ ಸಂಗವನ್ನು ಯಾರು ತಾನೇ ಮಾಡುವುದಿಲ್ಲ. ॥ ೧೧ ॥ ಭಗವಂತನಲ್ಲಿ ನಿಷ್ಕಾಮ ಭಕ್ತಿಯುಳ್ಳವನ ಹೃದಯದಲ್ಲಿ ಸಮಸ್ತ ದೇವತೆಗಳು ಧರ್ಮ-ಜ್ಞಾನಾದಿ ಸಮಸ್ತ ಸದ್ಗುಣಗಳೊಡನೆ ಸದಾ ವಾಸಿಸುತ್ತವೆ. ಆದರೆ ಭಗವಂತನ ಭಕ್ತನಲ್ಲದವನಲ್ಲಿ ಮಹಾಪುರುಷರ ಆ ಗುಣಗಳು ಹೇಗೆ ಬರಬಲ್ಲವು ? ಅವನಾದರೋ ಬಗೆ-ಬಗೆಯ ಸಂಕಲ್ಪಗಳನ್ನು ಮಾಡಿ ನಿರಂತರವಾಗಿ ತುಚ್ಛವಾದ ಹೊರಗಿನ ವಿಷಯಗಳ ಕಡೆಗೆ ಓಡುತ್ತಿರುತ್ತಾನೆ. ॥ ೧೨ ॥ ನೀರು ಮೀನುಗಳಿಗೆ ಪ್ರಿಯವಾಗಿದ್ದು, ಅವುಗಳ ಜೀವನವೇ ಆಗಿರುವಂತೆ, ಸಾಕ್ಷಾತ್ ಶ್ರೀಹರಿಯೇ ಸಮಸ್ತ ದೇಹಧಾರಿಗಳ ಪ್ರಿಯತಮ ಆತ್ಮಾ ಆಗಿದ್ದಾನೆ. ಅವನನ್ನು ಬಿಟ್ಟು ಯಾರಾದರೂ ಮಹತ್ವಾಭಿಮಾನಿಯು ಮನೆಯಲ್ಲೇ ಆಸಕ್ತನಾಗಿದ್ದರೆ ಆ ಸ್ಥಿತಿಯಲ್ಲಿ ಪತ್ನೀ-ಪುತ್ರರಿಂದ ಉಂಟಾದ ದೊಡ್ಡಸ್ತಿಕೆಯು ಕೇವಲ ವಯಸ್ಸಿನಿಂದಲೇ ತಿಳಿಯಲಾಗುತ್ತದೆ. ಗುಣಗಳ ದೃಷ್ಟಿಯಿಂದ ಅಲ್ಲ. ॥ ೧೩ ॥ ಆದ್ದರಿಂದ ಅಸುರರೇ ! ನೀವು ತೃಷ್ಣೆ, ಆಸಕ್ತಿ, ವಿಷಾದ, ಕ್ರೋಧ, ಅಭಿಮಾನ, ಇಚ್ಛೆ, ಭಯ, ದೈನ್ಯ ಮತ್ತು ಮಾನಸಿಕ ಸಂತಾಪ ಇವುಗಳ ಮೂಲವಾದ ಹಾಗೂ ಜನ್ಮ-ಮರಣರೂಪವಾದ ಸಂಸಾರಕ್ಕೆ ಕಾರಣವಾದ ಮನೆಯೇ ಮುಂತಾದವುಗಳನ್ನು ತ್ಯಜಿಸಿ ಭಗವಾನ್ ನರಸಿಂಹನ ನಿರ್ಭಯ ಚರಣಗಳನ್ನು ಆಶ್ರಯಿಸಿರಿ. ॥ ೧೪ ॥

ಕೇತುಮಾಲವರ್ಷದಲ್ಲಿ ಭಗವಂತನು ಶ್ರೀಲಕ್ಷ್ಮೀದೇವಿಗೂ ಹಾಗೂ ಸಂವತ್ಸರನೆಂಬ ಪ್ರಜಾಪತಿಯ ಪುತ್ರ-ಪುತ್ರಿಯರಿಗೂ ಪ್ರಿಯವನ್ನುಂಟುಮಾಡುವುದಕ್ಕಾಗಿ ಭಗವಾನ್ ಕಾಮದೇವನ (ಪ್ರದ್ಯುಮ್ನಮೂರ್ತಿ) ರೂಪದಲ್ಲಿ ನೆಲೆಸುವನು. ಆ ಸಂವತ್ಸರ ಪ್ರಜಾಪತಿಯ ಪುತ್ರಿಯರು ರಾತ್ರಿಗೂ, ಪುತ್ರರು ಹಗಲಿಗೂ ಅಭಿಮಾನಿದೇವತೆಗಳು. ಇವರ ಸಂಖ್ಯೆಯು ಮನುಷ್ಯರ ನೂರು ವರ್ಷಗಳ ಆಯುಸ್ಸಿನ ಹಗಲೂ-ರಾತ್ರಿಗಳಷ್ಟು ಅಂದರೆ ಪುತ್ರರ ಸಂಖ್ಯೆಯು ಮೂವತ್ತಾರುಸಾವಿರ ಮತ್ತು ಪುತ್ರಿಯರ ಸಂಖ್ಯೆಯು ಅಷ್ಟೇ ಇರುತ್ತದೆ. ಇವರೇ ಈ ವರ್ಷದ ಅಧಿಪತಿಗಳು. ಆ ಕನ್ಯೆಯರು ಪರಮಪುರುಷ ನಾರಾಯಣನ ಶ್ರೇಷ್ಠ ಅಸ್ತ್ರವಾದ ಸುದರ್ಶನಚಕ್ರದ (ಕಾಲಚಕ್ರದ) ತೇಜದಿಂದ ಹೆದರಿ, ಪ್ರತೀ ವರ್ಷದ ಕೊನೆಯಲ್ಲಿ ಅವರ ಗರ್ಭ (ಕಲಾ-ಕಾಷ್ಠಾ ಮುಂತಾದ ಕಾಲವಿಭಾಗಗಳು) ಗಳು ಬಿದ್ದುಹೋಗುವುವು. ॥ ೧೫ ॥ ಅಲ್ಲಿ ಪ್ರದ್ಯುಮ್ನರೂಪಿಯಾದ ಶ್ರೀಭಗವಂತನು ತನ್ನ ಮನೋಹರವಾದ ಮಂದಗಮನದಿಂದಲೂ, ಕಮನೀಯವಾದ ಕಿರುನಗೆಯಿಂದಲೂ, ಬೆಡಗಿನಿಂದ ಕೂಡಿದ

ಸಲೇಶಾವಲೋಕಲೀಲಯಾಕಿಂಚಿದುತ್ತಂಭಿತಸುಂದರ-ಭ್ರೂಮಂಡಲಸುಭಗವದನಾರವಿಂದಶ್ರಿಯಾ ರಮಾಂ ರಮಯನ್ನಿಂದ್ರಿಯಾಣಿ ರಮಯತೇ ॥ ೧೬ ॥

ತದ್ಭಗವತೋ ಮಾಯಾಮಯಂ ರೂಪಂ ಪರಮಸಮಾಧಿಯೋಗೇನ ರಮಾದೇವೀ ಸಂವತ್ಸರಸ್ಯ ರಾತ್ರಿಷು ಪ್ರಜಾಪತೇರ್ದುಹಿತೃಭಿರುಪೇತಾಹಃಸು ಚ ತದ್ಭರ್ತೃಭಿರುಪಾಸ್ತೇ ಇದಂ ಚೋದಾಹರತಿ ॥ ೧೭ ॥ ಓಂ ಹ್ರಾಂ ಹ್ರೀಂ ಹ್ರೂಂ ಓಂ ನಮೋ ಭಗವತೇ ಹೃಷೀಕೇಶಾಯ ಸರ್ವಗುಣವಿಶೇಷೈರ್ವಿಲಕ್ಷಿತಾತ್ಮನೇ ಆಕೂತೀನಾಂ ಚಿತ್ತೀನಾಂ ಚೇತಸಾಂ ವಿಶೇಷಾಣಾಂ ಚಾಧಿಪತಯೇ ಷೋಡಶಕಲಾಯಚ್ಛಂದೋಮಯಾಯ ಅನ್ನಮಯಾಯ ಅಮೃತಮಯಾಯ ಸರ್ವಮಯಾಯ ಸಹಸೇ ಓಜಸೇ ಬಲಾಯ ಕಾಂತಾಯ ಕಾಮಾಯ ನಮಸ್ತೇ ಉಭಯತ್ರ ಭೂಯಾತ್ ॥ ೧೮ ॥

ಸ್ತ್ರಿಯೋ ವ್ರತೈಸ್ತ್ವಾ ಹೃಷಿಕೇಶ್ವರಂ ಸ್ವತೋ
ಹ್ಯಾರಾಧ್ಯ ಲೋಕೇ ಪತಿಮಾಶಾಸತೇಽನ್ಯಮ್ ।
ತಾಸಾಂ ನ ತೇ ವೈ ಪರಿಪಾಂತ್ಯಪತ್ಯಂ
ಪ್ರಿಯಂ ಧನಾಯೂಂಷಿ ಯತೋಽಸ್ವತಂತ್ರಾಃ ॥ ೧೯ ॥

ಸ ವೈ ಪತಿಃ ಸ್ಯಾದಕುತೋಭಯಃ ಸ್ವಯಂ
ಸಮಂತತಃ ಪಾತಿ ಭಯಾತುರಂ ಜನಮ್ ।
ಸ ಏಕ ಏವೇತರಥಾ ಮಿಥೋ ಭಯಂ
ನೈವಾತ್ಮಲಾಭಾದಧಿ ಮನ್ಯತೇ ಪರಮ್ ॥ ೨೦ ॥

ಯಾ ತಸ್ಯ ತೇ ಪಾದಸರೋರುಹಾರ್ಹಣಂ
ನಿಕಾಮಯೇತ್ಸಾಖಿಲಕಾಮಲಂಪಟಾ ।
ತದೇವ ರಾಸೀಪ್ಸಿತಮೀಪ್ಸಿತೋಽರ್ಚಿತೋ
ಯದ್ಭಗ್ನಯಾಚ್ಞಾ ಭಗವನ್ ಪ್ರತಪ್ಯತೇ ॥ ೨೧ ॥

ಕಡೆಗಣ್ಣ ವಿಲಾಸದಿಂದಲೂ, ಕೊಂಚ ಮೇಲೆದ್ದ ಸುಂದರವಾದ ಹುಬ್ಬುಗಳಿಂದಲೂ ಮೆರೆಯುತ್ತಿರುವ ವದನಾರವಿಂದದಿಂದ ರೂಪ-ಲಾವಣ್ಯಗಳ ಕಾಂತಿಯ ಮಳೆಗರೆಯುತ್ತಾ ರಮಾದೇವಿಯನ್ನು ಆನಂದಗೊಳಿಸುತ್ತಾ ತಾನೂ ಆನಂದಪಡುತ್ತಿರುವನು. ॥ ೧೬ ॥ ಶ್ರೀಲಕ್ಷ್ಮೀದೇವಿಯು ಶ್ರೀಭಗವಂತನ ಅದ್ಭುತವಾದ ಸ್ವರೂಪವನ್ನು ಪರಮ ಸಮಾಧಿಯೋಗದಿಂದ ರಾತ್ರಿಯಲ್ಲಿ ಸಂವತ್ಸರ ಪ್ರಜಾಪತಿಯ ಪುತ್ರಿಯರೊಡನೆಯೂ, ಹಗಲಿನಲ್ಲಿ ಆತನ ಪುತ್ರರೊಡನೆಯೂ ಆರಾಧನೆಮಾಡುತ್ತಾ ಈ ಮಂತ್ರದ ಜಪದಿಂದ ಸ್ವಾಮಿಯನ್ನು ಸ್ತುತಿಸುವಳು. ॥ ೧೭ ॥

'ಓಂ ಹ್ರಾಂ ಹ್ರೀಂ ಹ್ರೂಂ ಬೀಜಮಂತ್ರಗಳಿಂದ ನಿನಗೆ ನಮೋ ನಮಃ ಇಂದ್ರಿಯಗಳಿಗೆ ನಿಯಾಮಕನೂ, ಸಮಸ್ತ ಕಲ್ಯಾಣಗುಣಾತಿಶಯಗಳ ಮೂರ್ತಿಯೂ, ಕ್ರಿಯಾಶಕ್ತಿಗೂ, ಜ್ಞಾನಶಕ್ತಿಗೂ, ಸಂಕಲ್ಪ-ನಿಶ್ಚಯಗಳೇ ಮುಂತಾದ ಚಿತ್ತದ ಧರ್ಮಗಳಿಗೂ, ಅವುಗಳ ವಿಷಯಗಳಿಗೆ ಅಧಿಪತಿಯೂ, ಹನ್ನೊಂದು ಇಂದ್ರಿಯಗಳು ಮತ್ತು ಐದು ವಿಷಯಗಳೆಂಬ ಹದಿನಾರು ಕಲೆಗಳಿಂದ ತುಂಬಿರುವವನೂ, ವೇದಮಯನೂ, ಅನ್ನಮಯನೂ, ಅಮೃತಮಯನೂ, ಸರ್ವಮಯನೂ, ಸಹಸ್ಸು (ಮನಶ್ಶಕ್ತಿ) ಓಜಸ್ಸು (ಇಂದ್ರಿಯಶಕ್ತಿ) ಬಲ (ದೇಹಶಕ್ತಿ) ಸ್ವರೂಪನೂ, ಪರಮಸುಂದರನೂ ಆದ ಭಗವಂತನಾದ ಕಾಮದೇವನಿಗೆ (ಒಳಗೆ ಮತ್ತು ಹೊರಗೆ) ಎರಡೂ ಕಡೆಗಳಲ್ಲಿಯೂ ನಮಸ್ಕಾರವು. ॥ ೧೮ ॥

ಭಗವಂತಾ! ನೀನು ಇಂದ್ರಿಯಗಳ ಅಧೀಶ್ವರನಾಗಿರುವೆ. ಸ್ತ್ರೀಯರು ಬಗೆ-ಬಗೆಯ ಕಠೋರ ವ್ರತಗಳಿಂದ ನಿನ್ನನ್ನೇ ಆರಾಧಿಸುತ್ತಾ ಬೇರೆ ಲೌಕಿಕ ಪತಿಗಳನ್ನು ಇಚ್ಛಿಸುತ್ತಾ ಇರುತ್ತಾರೆ. ಪತಿ ಎಂದರೆ ಪಾಲಿಸುವವನೆಂದರ್ಥ. ಆದರೆ ಅವರು ತನ್ನ ಪ್ರಿಯ ಪುತ್ರ, ಧನ ಮತ್ತು ಆಯುಸ್ಸನ್ನು ರಕ್ಷಿಸಿಕೊಳ್ಳಲಾರರು. ಏಕೆಂದರೆ ಅವರು ಸ್ವತಃ ಅಸ್ವತಂತ್ರರಾಗಿರುವರು. ॥ ೧೯ ॥ ನಿಜವಾದ ಪತಿಯು (ಪಾಲಿಸುವವನು) – ಸ್ವಯಂ ಪೂರ್ಣವಾಗಿ ನಿರ್ಭಯನಾಗಿ, ಭಯಭೀತರಾದ ಇತರ ಜನರನ್ನು ಎಲ್ಲ ರೀತಿಯಿಂದ ರಕ್ಷಿಸಬಲ್ಲನೋ ಅವನೇ ಆಗಿರುವನು. ಇಂತಹ ಪತಿಯು ಏಕಮಾತ್ರ ನೀನೇ ಆಗಿರುವೆ. ಒಬ್ಬರಿಂದ ಹೆಚ್ಚು ಈಶ್ವರರನ್ನು ಒಪ್ಪಿಕೊಂಡರೆ ಅವರಲ್ಲಿ ಒಬ್ಬರಿಗೊಬ್ಬರಿಂದ ಭಯ ಉಂಟಾಗುವ ಸಂಭವವು ಇದೆ. ಆದುದರಿಂದ ವಿಶ್ವಕ್ಕೆಲ್ಲಾ ಒಬ್ಬನೇ ಪತಿಯಾಗಿರುವ ನಿನ್ನ ಲಾಭಕ್ಕಿಂತಲೂ ಅಧಿಕವಾದ ಬೇರಾವುದನ್ನೂ ನಾನು ಎಣಿಸುವುದಿಲ್ಲ. ॥ ೨೦ ॥ ಭಗವಂತಾ! ನಿನ್ನ ಚರಣಕಮಲಗಳನ್ನು ಪೂಜಿಸುತ್ತಾ ಬೇರೆ ಏನನ್ನೂ ಬಯಸದಿರುವ ಸ್ತ್ರೀಯಳ ಎಲ್ಲ ಕಾಮನೆಗಳು ಪೂರ್ಣವಾಗುತ್ತವೆ. ಆದರೆ ಯಾವುದಾದರೊಂದು ಕಾಮನೆಯಿಂದ ನಿನ್ನನ್ನು ಉಪಾಸನೆ ಮಾಡಿದರೆ, ಅವಳಿಗೆ ಭೋಗವು ಸಮಾಪ್ತವಾದಾಗ ನಾಶಹೊಂದುವಂತಹ ವಸ್ತುವನ್ನೇ ಕೊಡುವೆ. ಅದರಿಂದ ಅವಳು ಸಂತಪ್ತಳಾಗಬೇಕಾಗುತ್ತದೆ. ॥ ೨೧ ॥ ಎಲೈ ಅಜಿತನೇ! ನನ್ನನ್ನು (ಐಶ್ವರ್ಯವನ್ನು) ಪಡೆಯಲಿಕ್ಕಾಗಿ ಇಂದ್ರಿಯಸುಖದ ಅಭಿಲಾಷಿಗಳಾದ ಬ್ರಹ್ಮ-ರುದ್ರರೇ ಮುಂತಾದ ಸಮಸ್ತ ಸುರಾಸುರರು ಘೋರತಪಸ್ಸನ್ನು ಆಚರಿಸುತ್ತಾರೆ. ಆದರೆ ನಿನ್ನ

ಮತ್ಕಾಮಯಿತಯೇಽಜೇಶಸುರಾಸುರಾದಯ-
ಸ್ತಪ್ಯಂತ ಉಗ್ರಂ ತಪ ಐಂದ್ರಿಯೇಧಿಯಃ ।
ಋತೇ ಭವತ್ಪಾದಪರಾಯಣಾನ್ನ ಮಾಂ
ವಿಂದಂತ್ಯಹಂ ತ್ವದ್ಧೃದಯಾ ಯತೋಽಜಿತ ॥ ೨೨ ॥

ಸ ತ್ವಂ ಮಮಾಪ್ಯಚ್ಯುತ ಶೀರ್ಷ್ಣಿ ವಂದಿತಂ
ಕರಾಂಬುಜಂ ಯತ್ತ್ವದಧಾಯಿ ಸಾತ್ವತಾಮ್ ।
ಬಿಭರ್ಷಿ ಮಾಂ ಲಕ್ಷ್ಮ ವರೇಣ್ಯ ಮಾಯಯಾ
ಕ ಈಶ್ವರಸ್ಯೇಹಿತಮೂಹಿತುಂ ವಿಭುರಿತಿ ॥ ೨೩ ॥

ರಮ್ಯಕೇ ಚ ಭಗವತಃ ಪ್ರಿಯತಮಂ ಮಾತ್ಸ್ಯಮ-ವತಾರರೂಪಂ ತದ್ವರ್ಷಪುರುಷಸ್ಯ ಮನೋಃ ಪ್ರಾಕ್ಪ್ರದ-ರ್ಶಿತಂ ಸ ಇದಾನೀಮಪಿ ಮಹತಾ ಭಕ್ತಿಯೋಗೇ-ನಾರಾಧಯತೀದಂ ಚೋದಾಹರತಿ ॥ ೨೪ ॥ ಓಂ ನಮೋ ಭಗವತೇ ಮುಖ್ಯತಮಾಯ ನಮಃ ಸತ್ತ್ವಾಯ ಪ್ರಾಣಾ-ಯೌಜಸೇ ಸಹಸೇ ಬಲಾಯ ಮಹಾಮತ್ಸ್ಯಾಯ ನಮ ಇತಿ ॥ ೨೫ ॥

ಅಂತರ್ಬಹಿಶ್ಚಾಖಿಲಲೋಕಪಾಲಕೈ-
ರದೃಷ್ಟರೂಪೋ ವಿಚರಸ್ಯುರುಸ್ವನಃ ।
ಸ ಈಶ್ವರಸ್ತ್ವಂ ಯ ಇದಂ ವಶೇಽನಯ-
ನ್ನಾಮ್ನಾ ಯಥಾ ದಾರುಮಯೀಂ ನರಃ ಸ್ತ್ರಿಯಮ್ ॥ ೨೬ ॥

ಯಂ ಲೋಕಪಾಲಾಃ ಕಿಲ ಮತ್ಸರಜ್ವರಾ
ಹಿತ್ವಾ ಯತಂತೋಽಪಿ ಪೃಥಕ್ಸಮೇತ್ಯ ಚ ।
ಪಾತುಂ ನ ಶೇಕುರ್ದ್ವಿಪದಶ್ಚತುಷ್ಪದಃ
ಸರೀಸೃಪಂ ಸ್ಥಾಣು ಯದತ್ರ ದೃಶ್ಯತೇ ॥ ೨೭ ॥

ಭವಾನ್ ಯುಗಾಂತಾರ್ಣವ ಊರ್ಮಿಮಾಲಿನಿ
ಕ್ಷೋಣೀಮಿಮಾಮೋಷಧಿವೀರುಧಾಂ ನಿಧಿಮ್ ।
ಮಯಾ ಸಹೋರು ಕ್ರಮತೇಽಜ ಓಜಸಾ
ತಸ್ಮೈ ಜಗತ್ಪ್ರಾಣಗಣಾತ್ಮನೇ ನಮ ಇತಿ ॥ ೨೮ ॥

ಹಿರಣ್ಮಯೇಽಪಿ ಭಗವಾನ್ನಿವಸತಿ ಕೂರ್ಮತನುಂ ಬಿಭ್ರಾಣಸ್ತಸ್ಯ ತತ್ಪ್ರಿಯತಮಾಂ ತನುಮರ್ಯಮಾ ಸಹ ವರ್ಷಪುರುಷೈಃ ಪಿತೃಗಣಾಧಿಪತಿರುಪಧಾವತಿ ಮಂತ್ರ-ಮಿಮಂ ಚಾನುಜಪತಿ ॥ ೨೯ ॥ ಓಂ ನಮೋ ಭಗವತೇ

ಚರಣಕಮಲಗಳ ಆಶ್ರಯ ಪಡೆದ ಭಕ್ತರಲ್ಲದೆ ನನ್ನನ್ನು ಯಾರೂ ಪಡೆಯಲಾರರು. ಏಕೆಂದರೆ, ನನ್ನ ಮನಸ್ಸಾದರೋ ನಿನ್ನಲ್ಲೇ ನೆಲೆಸಿದೆ. ॥ ೨೨ ॥ ಅಚ್ಯುತನೇ! ನೀನು ನಿನ್ನ ವಂದನೀಯ ಕರ ಕಮಲವನ್ನು ಭಕ್ತರ ಮಸ್ತಕದಲ್ಲಿರಿಸುವಂತೆ ನನ್ನ ತಲೆಯ ಮೇಲೆಯೂ ಇರಿಸು. ಎಲೈ ವರೇಣ್ಯನೇ! ನನ್ನನ್ನು ಕೇವಲ ಶ್ರೀಲಾಂಛನ (ಚಿಹ್ನೆ) ರೂಪದಲ್ಲಿ ವಕ್ಷಸ್ಥಳದಲ್ಲಿ ಧರಿಸಿದ್ದೀಯೆ. ಸರ್ವ ಸಮರ್ಥನು ನೀನು. ನೀನು ನಿನ್ನ ಮಾಯೆಯಿಂದ ಮಾಡುವ ಲೀಲೆಗಳ ರಹಸ್ಯವನ್ನು ಯಾವನು ತಿಳಿಯಬಲ್ಲನು ? ॥ ೨೩ ॥

ರಮ್ಯಕ ವರ್ಷದಲ್ಲಿ ಭಗವಂತನು ಅಲ್ಲಿಯ ಅಧಿಪತಿಯಾದ ಮನುವಿಗೆ ಹಿಂದೆ ತನ್ನ ಪರಮಪ್ರಿಯ ಮತ್ಸ್ಯರೂಪವನ್ನು ತೋರಿದ್ದನು. ಮನುವು ಈಗಲೂ ಭಗವಂತನ ಅದೇ ರೂಪವನ್ನು ಅತ್ಯಂತ ಭಕ್ತಿಭಾವದಿಂದ ಉಪಾಸನೆ ಮಾಡುತ್ತಿದ್ದಾನೆ. ಅವನು ಈ ಮಂತ್ರವನ್ನು ಜಪಿಸುತ್ತಾ, ಸ್ತುತಿಸುತ್ತಿದ್ದಾನೆ – ಬಲರೂಪವಾದ ಮುಖ್ಯ ಪ್ರಾಣರೂಪಿಯೂ, ಮನೋಬಲ-ಬುದ್ಧಿಬಲ-ದೇಹಬಲ ರೂಪಿಯೂ, ಓಂಕಾರದ ಪರಮಾರ್ಥವೂ ಆಗಿರುವ ಸರ್ವಶ್ರೇಷ್ಠನಾದ ಭಗವಾನ್ ಮಹಾಮತ್ಸ್ಯನಿಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೨೪-೨೫ ॥

ಪ್ರಭೋ! ನಟನು ಸೂತ್ರದ ಬೊಂಬೆಯನ್ನು ಕುಣಿಸುವಂತೆಯೇ ನೀನು ಬ್ರಾಹ್ಮಣಾದಿ ನಾಮಗಳ ಹಗ್ಗದಿಂದ ಇಡೀ ವಿಶ್ವವನ್ನು ತನ್ನ ಅಧೀನದಲ್ಲಿಟ್ಟುಕೊಂಡು ಕುಣಿಸುತ್ತಿರುವೆ. ಆದ್ದರಿಂದ ನೀನೇ ಎಲ್ಲರ ಪ್ರೇರಕನಾಗಿರುವೆ. ನಿನ್ನನ್ನು ಬ್ರಹ್ಮಾದಿ ಲೋಕಪಾಲರೂ ಕೂಡ ನೋಡಲಾರರು. ಆದರೂ ನೀನು ಸಮಸ್ತ ಪ್ರಾಣಿಗಳ ಒಳಗೆ ಪ್ರಾಣರೂಪದಿಂದ, ಹೊರಗೆ ವಾಯುರೂಪದಿಂದ ನಿರಂತರವಾಗಿ ಸಂಚರಿಸುತ್ತಿರುವೆ. ವೇದವೇ ನಿನ್ನ ಮಹಾಶಬ್ದವಾಗಿದೆ. ॥ ೨೬ ॥ ಒಮ್ಮೆ ಇಂದ್ರಾದಿ ಇಂದ್ರಿಯಾಭಿಮಾನಿ ದೇವತೆಗಳಿಗೆ ಪ್ರಾಣ ಸ್ವರೂಪನಾದ ನಿನ್ನಲ್ಲಿ ಮತ್ಸರ ಉಂಟಾಗಿ ನಿನ್ನೊಡನೆ ಸ್ಪರ್ಧಿಸಿದರು. ಆಗ ನೀನು ಅವರನ್ನು ಬಿಟ್ಟು ದೇಹದಿಂದ ಅಗಲಿದಾಗ, ಅವರು ಎಷ್ಟೇ ಪ್ರಯತ್ನಿಸಿದರೂ ಒಬ್ಬೊಬ್ಬರಾಗಲೀ ಅಥವಾ ಒಟ್ಟಿಗೆ ಸೇರಿಕೊಂಡಾಗಲೀ ಮನುಷ್ಯ, ಪಶು, ಸ್ಥಾವರ-ಜಂಗಮ ಮುಂತಾದ ಕಂಡುಬರುವ ಯಾವ ದೇಹವನ್ನೂ ರಕ್ಷಿಸಲಾರದೆ ಹೋದರು. ॥ ೨೭ ॥ 'ಎಲೈ ಜನ್ಮರಹಿತನಾದ ಸ್ವಾಮಿಯೇ! ನೀನು ನನ್ನೊಡನೆ ಸಮಸ್ತ ಔಷಧಿಗಳಿಗೂ ಮತ್ತು ಲತೆಗಳಿಗೂ ಆಶ್ರಯವಾಗಿರುವ ಈ ಪೃಥಿವಿಯನ್ನು ತೆಗೆದುಕೊಂಡು ದೊಡ್ಡ-ದೊಡ್ಡ ಎತ್ತರವಾದ ಅಲೆಗಳಿಂದ ಕೂಡಿದ ಪ್ರಳಯಸಮುದ್ರದಲ್ಲಿ ಭಾರೀ ಉತ್ಸಾಹದಿಂದ ವಿಹರಿಸಿದೆ. ನೀನು ಜಗತ್ತಿನ ಸಮಸ್ತ ಪ್ರಾಣಿಸಮುದಾಯದ ನಿಯಾಮಕನಾಗಿರುವೆ. ನಿನಗೆ ನನ್ನ ನಮಸ್ಕಾರವು.' ॥ ೨೮ ॥

ಹಿರಣ್ಮಯವರ್ಷದಲ್ಲಿ ಶ್ರೀಭಗವಂತನು ಕಚ್ಛಪರೂಪವನ್ನು ಧರಿಸಿ ವಾಸಿಸುವನು. ಅಲ್ಲಿಯ ನಿವಾಸಿಗಳೊಡನೆ ಪಿತೃಗಳ ರಾಜನಾದ ಅರ್ಯಮನು ಭಗವಂತನ ಪ್ರಿಯತಮವಾದ ಕೂರ್ಮ ಮೂರ್ತಿಯನ್ನು ಉಪಾಸನೆ ಮಾಡುತ್ತಾ ಈ ಮಂತ್ರವನ್ನು ನಿರಂತರವಾಗಿ ಜಪಿಸುತ್ತಿರುವನು. ॥ ೨೯ ॥ 'ಸಮಸ್ತ ಸತ್ತ್ವಗುಣ ಸಂಪನ್ನನೂ, ತಿಳಿಯಲಾಗದ ನೆಲೆಯುಳ್ಳವನೂ, ಮಹಾದೇಹನೂ, ಮಹಾ

ಅಕೂಪಾರಾಯ ಸರ್ವಸತ್ತ್ವಗುಣವಿಶೇಷಣಾಯಾನುಪಲಕ್ಷಿತಸ್ಥಾನಾಯ ನಮೋ ವರ್ಷ್ಮಣೇ ನಮೋ ಭೂಮ್ನೇ ನಮೋ ನಮೋಽವಸ್ಥಾನಾಯ ನಮಸ್ತೇ ॥ ೩೦ ॥

ಯದ್ರೂಪಮೇತನ್ನಿಜಮಾಯಯಾರ್ಪಿತ
ಮರ್ಥಸ್ವರೂಪಂ ಬಹುರೂಪರೂಪಿತಮ್ ।
ಸಂಖ್ಯಾ ನ ಯಸ್ಯಾಸ್ತ್ಯಯಥೋಪಲಂಭನಾತ್
ತಸ್ಮೈ ನಮಸ್ತೇಽವ್ಯಪದೇಶರೂಪಿಣೇ ॥ ೩೧ ॥

ಜರಾಯುಜಂ ಸ್ವೇದಜಮಂಡಜೋದ್ಭಿದಂ
ಚರಾಚರಂ ದೇವರ್ಷಿಪಿತೃಭೂತಮೈಂದ್ರಿಯಮ್ ।
ದ್ಯೌಃ ಖಂ ಕ್ಷಿತಿಃ ಶೈಲಸರಿತ್ಸಮುದ್ರ-
ದ್ವೀಪಗ್ರಹರ್ಕ್ಷೇತ್ಯಭಿಧೇಯ ಏಕಃ ॥ ೩೨ ॥

ಯಸ್ಮಿನ್ನಸಂಖ್ಯೇಯವಿಶೇಷನಾಮ-
ರೂಪಾಕೃತೌ ಕವಿಭಿಃ ಕಲ್ಪಿತೇಯಮ್ ।
ಸಂಖ್ಯಾ ಯಯಾ ತತ್ತ್ವದೃಶಾಪನೀಯತೇ
ತಸ್ಮೈ ನಮಃ ಸಾಂಖ್ಯನಿದರ್ಶನಾಯ ತೇ ಇತಿ ॥ ೩೩ ॥

ಉತ್ತರೇಷು ಚ ಕುರುಷು ಭಗವಾನ್ಯಜ್ಞಪುರುಷಃ ಕೃತವರಾಹರೂಪ ಆಸ್ತೇ ತಂ ತು ದೇವೀ ಹ್ಯೇಷಾ ಭೂಃ ಸಹ ಕುರುಭಿರಸ್ಖಲಿತಭಕ್ತಿಯೋಗೇನೋಪಧಾವತಿ ಇಮಾಂ ಚ ಪರಮಾಮುಪನಿಷದಮಾವರ್ತಯತಿ ॥ ೩೪ ॥ ಓಂ ನಮೋ ಭಗವತೇ ಮಂತ್ರತತ್ತ್ವಲಿಂಗಾಯ ಯಜ್ಞಕ್ರತವೇ ಮಹಾಧ್ವರಾವಯವಾಯ ಮಹಾಪುರುಷಾಯ ನಮಃ ಕರ್ಮ ಶುಕ್ಲಾಯ ತ್ರಿಯುಗಾಯ ನಮಸ್ತೇ ॥ ೩೫ ॥

ಯಸ್ಯ ಸ್ವರೂಪಂ ಕವಯೋ ವಿಪಶ್ಚಿತೋ
ಗುಣೇಷು ದಾರುಷ್ವಿವ ಜಾತವೇದಸಮ್ ।
ಮಥ್ನಂತಿ ಮಥ್ನಾ ಮನಸಾ ದಿದೃಕ್ಷವೋ
ಗೂಢಂ ಕ್ರಿಯಾರ್ಥೈರ್ನಮ ಈರಿತಾತ್ಮನೇ ॥ ೩೬ ॥

ಪುರುಷನೂ, ವಿನಾಶರಹಿತನೂ, ಸರ್ವಾಧಾರನೂ ಆದ ಕೂರ್ಮರೂಪೀ ಭಗವಂತನೇ! ನಿನಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೩೦ ॥

ಭಗವಂತನೇ! ಅನೇಕ ರೂಪಗಳಲ್ಲಿ ಕಂಡು ಬರುವ ಈ ದೃಶ್ಯ ಪ್ರಪಂಚವು ಮಿಥ್ಯೆಯೇ ಆಗಿದ್ದು ವಾಸ್ತವವಾಗಿ ಇದರ ಯಾವುದೇ ಗಣನೆ ಇಲ್ಲದಿದ್ದರೂ, ಇದು ಮಾಯೆಯಿಂದ ಪ್ರಕಾಶಿತವಾಗುವ ನಿನ್ನ ಸ್ವರೂಪವೇ ಆಗಿದೆ. ಇಂತಹ ಅನಿರ್ವಚನೀಯನಾದ ನಿನಗೆ ನನ್ನ ನಮಸ್ಕಾರಗಳು. ॥ ೩೧ ॥ ಜರಾಯುಜ, ಸ್ವೇದಜ, ಅಂಡಜ, ಉದ್ಭಿಜ್ಜ, ಜಂಗಮ, ಸ್ಥಾವರ, ದೇವತೆಗಳು, ಪಿತೃಗಳು, ಋಷಿಗಳು, ಭೂತಗಳು, ಇಂದ್ರಿಯಗಳು, ಸ್ವರ್ಗ, ಆಕಾಶ, ಪೃಥಿವಿ, ಪರ್ವತ, ನದಿ, ಸಮುದ್ರ, ದ್ವೀಪ, ಗ್ರಹ ಮತ್ತು ನಕ್ಷತ್ರ ಮುಂತಾದ ಬೇರೆ-ಬೇರೆ ಹೆಸರುಗಳಿಂದ ಕರೆಯಲ್ಪಡುವವನು ನೀನೊಬ್ಬನೇ. ॥ ೩೨ ॥ ನೀನು ಅಸಂಖ್ಯವಾದ ನಾಮ-ರೂಪ-ಆಕೃತಿಗಳಿಂದ ಕೂಡಿರುವೆ. ನಿನ್ನಲ್ಲಿ ಕಪಿಲರೇ ಮುಂತಾದ ಮಹರ್ಷಿಗಳಿಂದ ಕಲ್ಪಿತವಾದ ೨೪ ತತ್ತ್ವಗಳು ಯಾವ ತತ್ತ್ವಜ್ಞಾನದಿಂದ ನೀಗಿಸಲ್ಪಡುವುದೋ ಅಂತಹ ಸಾಂಖ್ಯಸಿದ್ಧಾಂತ ರೂಪಿಯಾದ ನಿನಗೆ ನನ್ನ ನಮಸ್ಕಾರಗಳು. ॥ ೩೩ ॥

ಉತ್ತರಕುರುವರ್ಷದಲ್ಲಿ ಭಗವಾನ್ ಯಜ್ಞಪುರುಷನು ವರಾಹ ರೂಪವನ್ನು ಧರಿಸಿ ವಿರಾಜಿಸುತ್ತಿರುವನು. ಅಲ್ಲಿಯ ನಿವಾಸಿಗಳೊಡನೆ ಸಾಕ್ಷಾತ್ ಪೃಥಿವಿದೇವಿಯು ನಿಶ್ಚಲವಾದ ಭಕ್ತಿಯೋಗದಿಂದ ಆ ಯಜ್ಞವರಾಹಸ್ವಾಮಿಯನ್ನು ಉಪಾಸನೆಮಾಡುತ್ತಾ ಈ ಮಂತ್ರವನ್ನು ಜಪಿಸುತ್ತಿರುವಳು – ॥ ೩೪ ॥ ಓ ಭಗವಂತನೇ! ಯಾರ ತತ್ತ್ವವನ್ನು ಮಂತ್ರಗಳಿಂದ ತಿಳಿಯಲಾಗುತ್ತದೋ, ಯಾರು ಯಜ್ಞ ಮತ್ತು ಕ್ರತುಸ್ವರೂಪನೋ, ದೊಡ್ಡ-ದೊಡ್ಡ ಯಜ್ಞಗಳು ಯಾರ ಅವಯವಗಳಾಗಿವೆಯೋ, ಆ ಓಂಕಾರಸ್ವರೂಪನೂ, ಶುಕ್ಲಮಯ ತ್ರಿಯುಗಮೂರ್ತಿಯೂ, ಆದ ಭಗವಾನ್ ಪುರುಷೋತ್ತಮ ವರಾಹಸ್ವಾಮಿಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೩೫ ॥

ಋತ್ವಿಜರು ಅರಣಿ ಎಂಬ ಕಟ್ಟಿಗೆಯನ್ನು ಕಡೆದು ಅಡಗಿರುವ ಅಗ್ನಿಯನ್ನು ಪ್ರಕಟಗೊಳಿಸುವಂತೆಯೇ ಕರ್ಮಾಸಕ್ತಿ ಮತ್ತು ಕರ್ಮಫಲದ ಕಾಮನೆಯಿಂದ ಅಡಗಿರುವ ಯಾರ ರೂಪವನ್ನು ನೋಡುವ ಇಚ್ಛೆಯಿಂದ ತತ್ತ್ವಾನ್ವೇಷಣೆಯಲ್ಲಿ ನಿಷ್ಣಾತರಾದ ಪಂಡಿತ ಜ್ಞಾನಿಗಳು ತಮ್ಮ ವಿವೇಕದಿಂದ ಕೂಡಿದ ಮನರೂಪೀ ಮಂಥನಕಾಷ್ಠದಿಂದ ಶರೀರ ಮತ್ತು ಇಂದ್ರಿಯಗಳನ್ನು ಕಡೆದು ನಿನ್ನ ಸ್ವರೂಪವನ್ನು ಕಾಣುವರು. ಹೀಗೆ ಭಕ್ತರಿಗೆ ಮಾತ್ರ ನಿಜಸ್ವರೂಪವನ್ನು ತೋರಿಸುವ ನಿನಗೆ ನಮಸ್ಕಾರವು. ॥ ೩೬ ॥ ವಿಚಾರ ಹಾಗೂ ಯಮ-ನಿಯಮಾದಿ ಯೋಗಸಾಧನೆಯಿಂದ ನಿಶ್ಚಯಾತ್ಮಿಕವಾದ ಬುದ್ಧಿಯು ಉಂಟಾದ ಮಹಾಪುರುಷರು – ದ್ರವ್ಯ (ವಿಷಯ), ಕ್ರಿಯೆ (ಇಂದ್ರಿಯಗಳ ವ್ಯಾಪಾರ), ಹೇತು (ಇಂದ್ರಿಯಾಧಿಷ್ಠಿತ ದೇವತೆಗಳು), ಆಯನ (ಶರೀರ), ಈಶ, ಕಾಲ ಮತ್ತು ಕರ್ತಾ (ಅಹಂಕಾರ) ಮುಂತಾದ ಮಾಯೆಯ ಕಾರ್ಯವನ್ನು ನೋಡಿ ಯಾರ ನಿಜವಾದ ಸ್ವರೂಪವನ್ನು ನಿಶ್ಚಯಿಸುವರೋ, ಅಂತಹ

ದ್ರವ್ಯಕ್ರಿಯಾಹೇತ್ವಯನೇಶಕರ್ತೃಭಿ-
ರ್ಮಾಯಾಗುಣೈರ್ವಸ್ತುನಿರೀಕ್ಷಿತಾತ್ಮನೇ ।
ಅನ್ವೀಕ್ಷಯಾಂಗಾತಿಶಯಾತ್ಮಬುದ್ಧಿಭಿ-
ರ್ನಿರಸ್ತಮಾಯಾಕೃತಯೇ ನಮೋ ನಮಃ ॥ ೩೭ ॥

ಕರೋತಿ ವಿಶ್ವಸ್ಥಿತಿ ಸಂಯಮೋದಯಂ
ಯಸ್ಯೇಪ್ಸಿತಂ ನೇಪ್ಸಿತಮೀಕ್ಷಿತುರ್ಗುಣೈಃ ।
ಮಾಯಾ ಯಥಾಽಯೋ ಭ್ರಮತೇ ತದಾಶ್ರಯಂ
ಗ್ರಾವ್ಣೋ ನಮಸ್ತೇ ಗುಣಕರ್ಮಸಾಕ್ಷಿಣೇ ॥ ೩೮ ॥

ಪ್ರಮಥ್ಯ ದೈತ್ಯಂ ಪ್ರತಿವಾರಣಂ ಮೃಧೇ
ಯೋ ಮಾಂ ರಸಾಯಾ ಜಗದಾದಿಸೂಕರಃ ।
ಕೃತ್ವಾಗ್ರದಂಷ್ಟ್ರೇ ನಿರಗಾದುದನ್ವತಃ
ಕ್ರೀಡನ್ನಿವೇಭಃ ಪ್ರಣತಾಸ್ಮಿ ತಂ ವಿಭುಮಿತಿ ॥ ೩೯ ॥

ಮಾಯಾ ಆಕೃತಿಗಳಿಂದ ರಹಿತನಾದ ನಿನಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೩೭॥ ಸರ್ವಕ್ಕೂ ಸಾಕ್ಷಿಯಾಗಿರುವ ನಿನ್ನ ಪೃಥ್ವಿಯೇ ಮುಂತಾದ ಸಂಕಲ್ಪವು ತನಗಾಗಿ ಇರದೆ ಸಮಸ್ತ ಪ್ರಾಣಿಗಳಿಗಾಗಿ ಇರುತ್ತದೆ. ಮಾಯೆ ಎಂಬುದು ಜಡವಾಗಿದ್ದರೂ ನಿನ್ನ ಸಾನ್ನಿಧ್ಯವನ್ನು ಪಡೆದು – ಸೂಜಿಗಲ್ಲು ಜಡವಾದ ಕಬ್ಬಿಣವನ್ನು ಆಡಿಸುವಂತೆ – ತನ್ನ ಗುಣಗಳಿಂದ ಜಗತ್ತಿನ ಸೃಷ್ಟಿಯೇ ಮುಂತಾದ ಕಾರ್ಯಗಳನ್ನು ನಡೆಸುತ್ತಿದೆ. ಹೀಗೆ ಎಲ್ಲರ ಮನಸ್ಸುಗಳಿಗೂ, ಗುಣಗಳಿಗೂ, ಕರ್ಮಗಳಿಗೂ ಸಾಕ್ಷಿಯಾಗಿರುವ ನಿನಗೆ ಅನಂತ ನಮಸ್ಕಾರಗಳು. ॥ ೩೮ ॥ ನೀನು ಜಗತ್ತಿನ ಕಾರಣವಾದ ಆದಿಸೂಕರನಾಗಿರುವೆ. ಒಂದು ಆನೆಯು ಮತ್ತೊಂದು ಆನೆಯನ್ನು ಹಿಡಿಯುವಂತೆ, ಗಜರಾಜನಂತೆ ಕ್ರೀಡಿಸುತ್ತಾ ನೀನು ಪ್ರತಿದ್ವಂದೀ ಹಿರಣ್ಯಾಕ್ಷ ದೈತ್ಯನನ್ನು ಯುದ್ಧದಲ್ಲಿ ಸಂಹರಿಸಿ ನನ್ನನ್ನು ತನ್ನ ಕೋರೆದಾಡೆಗಳ ತುದಿಯಲ್ಲಿ ಇಟ್ಟುಕೊಂಡು ರಸಾತಳದಿಂದ ಪ್ರಳಯಪಯೋಧಿಯಿಂದ ಹೊರಗೆ ತಂದಿದ್ದೆ. ಸರ್ವಶಕ್ತಿವಂತನಾದ ನಿನಗೆ ನಾನು ಪುನಃ ಪುನಃ ನಮಸ್ಕರಿಸುತ್ತೇನೆ. ॥ ೩೯ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಭುವನಕೋಶವರ್ಣನಂ ನಾಮಾಷ್ಟಾದಶೋಽಧ್ಯಾಯಃ ॥ ೧೮ ॥

# ಹತ್ತೊಂಭತ್ತನೆಯ ಅಧ್ಯಾಯ

## ಕಿಂಪುರುಷವರ್ಷ ಮತ್ತು ಭಾರತವರ್ಷಗಳ ವರ್ಣನೆ

*ಶ್ರೀಶುಕ ಉವಾಚ*

ಕಿಂಪುರುಷೇ ವರ್ಷೇ ಭಗವಂತಮಾದಿಪುರುಷಂ ಲಕ್ಷ್ಮಣಾಗ್ರಜಂ ಸೀತಾಭಿರಾಮಂ ರಾಮಂ ತಚ್ಚರಣಸಂನಿಕರ್ಷಾಭಿರತಃ ಪರಮಭಾಗವತೋ ಹನುಮಾನ್ ಸಹ ಕಿಂಪುರುಷೈರವಿರತಭಕ್ತಿರುಪಾಸ್ತೇ ॥ ೧ ॥ ಆರ್ಷ್ಟಿಷೇಣೇನ ಸಹ ಗಂಧರ್ವೈರನುಗೀಯಮಾನಾಂ ಪರಮಕಲ್ಯಾಣೀಂ ಭರ್ತೃಭಗವತ್ಕಥಾಂ ಸಮುಪಶೃಣೋತಿ ಸ್ವಯಂ ಚೇದಂ ಗಾಯತಿ ॥ ೨ ॥ ಓಂ ನಮೋ ಭಗವತೇ ಉತ್ತಮಶ್ಲೋಕಾಯ ನಮ ಆರ್ಯಲಕ್ಷಣಶೀಲವ್ರತಾಯ ನಮ ಉಪಶಿಕ್ಷಿತಾತ್ಮನ ಉಪಾಸಿತಲೋಕಾಯ ನಮಃ ಸಾಧುವಾದನಿಕಷಣಾಯ ನಮೋ ಬ್ರಹ್ಮಣ್ಯದೇವಾಯ ಮಹಾಪುರುಷಾಯ ಮಹಾರಾಜಾಯ ನಮ ಇತಿ ॥ ೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಮಹಾರಾಜನೇ! ಕಿಂಪುರುಷವರ್ಷದಲ್ಲಿ ಶ್ರೀಲಕ್ಷ್ಮಣನ ಅಣ್ಣನೂ, ಆದಿಪುರುಷನೂ, ಸೀತೆಯ ಹೃದಯಾಭಿರಾಮನೂ ಆದ ಭಗವಾನ್ ಶ್ರೀರಾಮಚಂದ್ರನ ಅಡಿದಾವರೆಗಳ ಸಾನ್ನಿಧ್ಯದಲ್ಲಿ ಸದಾ ಆಸಕ್ತನಾಗಿರುವ ಪರಮಭಾಗವತೋತ್ತಮ ಆಂಜನೇಯನು ಇತರ ಕಿನ್ನರರಿಂದೊಡಗೂಡಿ ನಿಶ್ಚಲವಾದ ಭಕ್ತಿಭಾವದಿಂದ ಶ್ರೀರಾಮದೇವರನ್ನು ಉಪಾಸನೆ ಮಾಡುತ್ತಿರುವನು. ॥ ೧ ॥ ಅಲ್ಲಿ ಇತರ ಗಂಧರ್ವರೊಡನೆ ಆರ್ಷ್ಟಿಷೇಣನು ಪ್ರಭುವಾದ ಶ್ರೀರಾಮದೇವರ ಪರಮಕಲ್ಯಾಣಗುಣಮಯವಾದ ಕಥೆಯನ್ನು ಗಾನಮಾಡುತ್ತಿರುವನು. ಹನುಮಂತನು ಅದನ್ನು ಕೇಳಿ ಸವಿಯುತ್ತಾ ತಾನು ಈ ಮಂತ್ರವನ್ನು ಜಪಿಸುತ್ತಾ ಶ್ರೀರಾಮದೇವರನ್ನು ಹೀಗೆ ಸ್ತುತಿಸುವನು. ॥ ೨ ॥ ಓಂಕಾರಸ್ವರೂಪನೂ, ಉತ್ತಮಕೀರ್ತಿಯುಳ್ಳವನೂ ಆದ ಭಗವಾನ್ ಶ್ರೀರಾಮನಿಗೆ ನಮಸ್ಕಾರವು. ಆರ್ಯರ ಲಕ್ಷಣ, ಶೀಲ ಮತ್ತು ವ್ರತಗಳಿಂದ ಸಂಪನ್ನನಾಗಿರುವ ಪ್ರಭುವಿಗೆ ನಮಸ್ಕಾರವು. ಪರಮ ಸಂಯಮದಿಂದ ಕೂಡಿದ ಚಿತ್ತವುಳ್ಳವನಾಗಿ, ಲೋಕಾರಾಧನೆಯಲ್ಲಿ ತತ್ಪರನಾಗಿ, ಸಾಧುತ್ವಕ್ಕೆ ಒರೆಗಲ್ಲಾಗಿರುವ ಸ್ವಾಮಿಗೆ ನಮಸ್ಕಾರವು. ಬ್ರಾಹ್ಮಣರಿಗೆ ಹಿತಕರವಾಗಿರುವ

ಯತ್ತದ್ವಿಶುದ್ಧಾನುಭವಮಾತ್ರಮೇಕಂ
ಸ್ವತೇಜಸಾ ಧ್ವಸ್ತಗುಣವ್ಯವಸ್ಥಮ್ ।
ಪ್ರತ್ಯಕ್ ಪ್ರಶಾಂತಂ ಸುಧಿಯೋಪಲಂಭನಂ
ಹ್ಯನಾಮರೂಪಂ ನಿರಹಂ ಪ್ರಪದ್ಯೇ ॥ ೪ ॥

ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ
ರಕ್ಷೋವಧಾಯೈವ ನ ಕೇವಲಂ ವಿಭೋಃ ।
ಕುತೋಽನ್ಯಥಾ ಸ್ಯಾದ್ರಮತಃ ಸ್ವ ಆತ್ಮನಃ
ಸೀತಾಕೃತಾನಿ ವ್ಯಸನಾನೀಶ್ವರಸ್ಯ ॥ ೫ ॥

ನ ವೈ ಸ ಆತ್ಮಾಽಽತ್ಮವತಾಂ ಸುಹೃತ್ತಮಃ
ಸಕ್ತಸ್ತ್ರಿಲೋಕ್ಯಾಂ ಭಗವಾನ್ವಾಸುದೇವಃ ।
ನ ಸ್ತ್ರೀಕೃತಂ ಕಶ್ಮಲಮಶ್ನುವೀತ
ನ ಲಕ್ಷ್ಮಣಂ ಚಾಪಿ ವಿಹಾತುಮರ್ಹತಿ ॥ ೬ ॥

ನ ಜನ್ಮ ನೂನಂ ಮಹತೋ ನ ಸೌಭಗಂ
ನ ವಾಙ್ನ ಬುದ್ಧಿರ್ನಾಕೃತಿಸ್ತೋಷಹೇತುಃ ।
ತೈರ್ಯದ್ವಿಸೃಷ್ಟಾನಪಿ ನೋ ವನೌಕಸ-
ಶ್ಚಕಾರ ಸಖ್ಯೇ ಬತ ಲಕ್ಷ್ಮಣಾಗ್ರಜಃ ॥ ೭ ॥

ಸುರೋಽಸುರೋ ವಾಪ್ಯಥ ವಾನರೋ ನರಃ
ಸರ್ವಾತ್ಮನಾ ಯಃ ಸುಕೃತಜ್ಞಮುತ್ತಮಮ್ ।
ಭಜೇತ ರಾಮಂ ಮನುಜಾಕೃತಿಂ ಹರಿಂ
ಯ ಉತ್ತರಾನನಯತ್ಕೋಸಲಾನ್ದಿವಮಿತಿ ॥ ೮ ॥

ದೇವನಿಗೆ ನಮಸ್ಕಾರವು. ಮಹಾಪುರುಷನೂ, ಮಹಾರಾಜನೂ ಆದ ಶ್ರೀರಾಮಚಂದ್ರನಿಗೆ ಪುನಃ ಪುನಃ ನನ್ನ ನಮಸ್ಕಾರಗಳು. ॥ ೩ ॥

ಓ ಭಗವಂತಾ! ಪರಿಶುದ್ಧ ಜ್ಞಾನಸ್ವರೂಪನೂ, ಅದ್ವಿತೀಯನೂ, ತ್ರಿಗುಣಾತೀತವಾದ ತನ್ನ ತೇಜಃಸ್ವರೂಪದ ತ್ರಿಗುಣ ಕಾರ್ಯಗಳ ರಚನೆಯನ್ನು ತೊಡೆದುಹಾಕಿದ ತುರೀಯನೂ, ಅಂತರಾತ್ಮನೂ, ಪ್ರಶಾಂತನೂ, ಶುದ್ಧವಾದ ಬುದ್ಧಿಯಿಂದಲೇ ಗ್ರಹಿಸಲ್ಪಡುವವನೂ, ನಾಮ-ರೂಪರಹಿತನೂ, ಅಹಂಭಾವ ರಹಿತನೂ ಆದ ನಿನ್ನನ್ನು ಶರಣು ಹೊಂದುತ್ತೇನೆ. ॥ ೪ ॥ ಪ್ರಭೋ! ನಿನ್ನ ಮನುಷ್ಯಾವತಾರವು ಕೇವಲ ರಾಕ್ಷಸರ ಸಂಹಾರಕ್ಕಷ್ಟೇ ಅಲ್ಲ; ಇದರ ಮುಖ್ಯ ಉದ್ದೇಶ ಮನುಷ್ಯರಿಗೆ ಶಿಕ್ಷಣ ನೀಡುವುದೇ ಆಗಿದೆ. ಇಲ್ಲದಿದ್ದರೆ ತನ್ನ ಸ್ವರೂಪದಲ್ಲೇ ಸದಾ ರಮಿಸುತ್ತಿರುವ ಆನಂದಮಯನೂ, ಸರ್ವೇಶ್ವರನೂ ಆದ ನಿನಗೆ ಸೀತಾದೇವಿಯ ಅಗಲಿಕೆಯ ದುಃಖವು ಹೇಗಾಗ ಬಲ್ಲದು? ॥ ೫॥ ನೀನು ಧೀರ ಪುರುಷರ ಆತ್ಮನಾಗಿದ್ದು,* ಪ್ರಿಯತಮ ಭಗವಾನ್ ವಾಸುದೇವನಾಗಿರುವೆ. ಮೂರುಲೋಕಗಳಲ್ಲಿ ಯಾವುದೇ ವಸ್ತುವಿನಲ್ಲಿಯೂ ನಿನಗೆ ಆಸಕ್ತಿಯು ಇಲ್ಲ. ಇಂತಹ ನಿನಗೆ ಸ್ತ್ರೀಸಂಬಂಧವಾದ ದುಃಖವಾಗಲೀ, ಪ್ರಾಣಪ್ರಿಯನಾದ ತಮ್ಮನಾದ ಲಕ್ಷ್ಮಣನನ್ನು ತೊರೆಯುವ ಪ್ರಸಂಗವಾಗಲೀ ಹೇಗೆ ಒದಗುತ್ತಿದ್ದವು? ॥ ೬ ॥ ನಿನ್ನ ಈ ವ್ಯಾಪಾರಗಳೆಲ್ಲ ಕೇವಲ ಲೋಕಶಿಕ್ಷಣಕ್ಕಾಗಿಯೇ ಇವೆ. ಲಕ್ಷ್ಮಣಾಗ್ರಜನೇ! ಉತ್ತಮ ಕುಲದಲ್ಲಿ ಹುಟ್ಟುವುದು, ಸುಂದರತೆ, ವಾಕ್ಚಾತುರ್ಯ, ಬುದ್ಧಿಮತ್ತೆ, ಉತ್ತಮವಾದ ಆಕೃತಿ ಇವುಗಳಲ್ಲಿ ಯಾವ ಗುಣವು ನಿನ್ನ ಪ್ರಸನ್ನತೆಗೆ ಕಾರಣವಾಗಲಾರದು. ಇದನ್ನು ತೋರಿಸುವುದಕ್ಕಾಗಿ ಇವೆಲ್ಲ ಗುಣಗಳಿಂದ ರಹಿತರಾದ ನಮ್ಮಂತಹ ವನವಾಸೀ ವಾನರರೊಂದಿಗೆ ಸ್ನೇಹವನ್ನು ಬೆಳೆಸಿದೆ. ॥ ೭ ॥ ದೇವತೆಗಳು, ಅಸುರರು, ವಾನರರು, ಮನುಷ್ಯರು – ಇವರಲ್ಲಿ ಯಾರೇ ಆಗಿರಲೀ, ಎಲ್ಲ ರೀತಿಯಿಂದಲೂ ಶ್ರೀರಾಮರೂಪನಾದ ನಿನ್ನನ್ನೇ ಭಜಿಸಬೇಕು. ಏಕೆಂದರೆ, ನೀನು ಮನುಷ್ಯರೂಪದಲ್ಲಿ ಸಾಕ್ಷಾತ್ ಶ್ರೀಹರಿಯೇ ಆಗಿರುವೆ. ನಿನ್ನ ಸೇವಕರು ಮಾಡಿದ ಅಲ್ಪ ಸೇವೆಯನ್ನು ಬಹಳ ಹೆಚ್ಚು ಎಂದು ನೀನು ತಿಳಿಯುತ್ತೀಯೆ. ನೀನು ನಿನ್ನ ದಿವ್ಯಧಾಮಕ್ಕೆ ತೆರಳುವಾಗ ಸಮಸ್ತ ಉತ್ತರಕೋಸಲ ನಿವಾಸಿಗಳನ್ನು ನಿನ್ನ ಜೊತೆಗೆ ಒಯ್ದಿರುವಂತಹ ಆಶ್ರಿತವತ್ಸಲನಾಗಿರುವೆ. ॥ ೮ ॥

* 'ಭಗವಂತನಾದರೋ ಎಲ್ಲರ ಆತ್ಮನಾಗಿರುವನು. ಹಾಗಿರುವಾಗ ಇಲ್ಲಿ ಅವನನ್ನು ಆತ್ಮವಾನ್ (ಧೀರ) ಪುರುಷರ ಆತ್ಮಾ ಎಂದು ಏಕೆ ಹೇಳಲಾಗಿದೆ?' ಎಂಬ ಪ್ರಶ್ನೆ ಇಲ್ಲಿ ಉಂಟಾಗಬಹುದು. ಇದರ ಉತ್ತರ – ಅವನು ಎಲ್ಲರ ಆತ್ಮನಾಗಿದ್ದರೂ ಅವನನ್ನು ಕೇವಲ ಆತ್ಮಜ್ಞಾನಿಗಳೇ ತಮ್ಮ ಆತ್ಮರೂಪದಿಂದ ಅನುಭವಿಸುತ್ತಾರೆ – ಬೇರೆಯವರು ಇಲ್ಲ. ಶ್ರುತಿಯಲ್ಲಿ ಆತ್ಮಸಾಕ್ಷಾತ್ಕಾರ ಮಾತುಬರುವಲ್ಲಿ ಆತ್ಮನನ್ನು ತಿಳಿದವರಿಗೆ 'ಧೀರ' ಎಂಬ ಶಬ್ದದ ಪ್ರಯೋಗ ಮಾಡಲಾಗಿದೆ. **'ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್' 'ನಃ ಶುಶ್ರುಮಧೀರಾಣಾಮ್'** ಇತ್ಯಾದಿ. ಅದಕ್ಕಾಗಿ ಇಲ್ಲಿಯೂ ಭಗವಂತನನ್ನು ಆತ್ಮವಾನ್ ಅಥವಾ ಧೀರಪುರುಷರ ಆತ್ಮಾ ಎಂದು ಹೇಳಲಾಗಿದೆ.

ಒಮ್ಮೆ ಭಗವಾನ್ ಶ್ರೀರಾಮನು ಏಕಾಂತದಲ್ಲಿ ಓರ್ವ ದೇವದೂತನೊಂದಿಗೆ ಮಾತಾಡುತ್ತಿದ್ದನು. ಆಗ ಲಕ್ಷ್ಮಣನು ಕಾವಲಾಗಿದ್ದನು. 'ಈ ಸಮಯದಲ್ಲಿ ಯಾರಾದರೂ ಒಳಗೆ ಬಂದರೆ ಅವನು ನನ್ನ ಕೈಯಿಂದ ಕೊಲ್ಲಲ್ಪಡುವನು' ಎಂಬ ಭಗವಂತನ ಆಜ್ಞೆ ಇತ್ತು. ಇಷ್ಟರಲ್ಲಿ ದುರ್ವಾಸಮಹಾಮುನಿಗಳು ಆಗಮಿಸಿದರು. ಅವರು ಲಕ್ಷ್ಮಣನನ್ನು ಒಳಗೆ ಹೋಗಿ ತಾನು ಬಂದಿರುವ ಸಮಾಚಾರ ತಿಳಿಸುವಂತೆ ಒತ್ತಾಯಿಸಿದರು. ಲಕ್ಷ್ಮಣನು ಹಾಗೆ ಮಾಡಲು – ಇದರಿಂದ ತನ್ನ ಪ್ರತಿಜ್ಞೆಗನುಸಾರ ಭಗವಂತನು ಚಿಂತಿತನಾದನು. ಆಗ ವಸಿಷ್ಠರು ಹೇಳಿದರು – ಲಕ್ಷ್ಮಣನನ್ನು ಕೊಲ್ಲದೆ ಅವನನ್ನು ತ್ಯಜಿಸಿಬಿಡು. ಏಕೆಂದರೆ ತನ್ನ ಪ್ರಿಯಜನರ ತ್ಯಾಗವು ಮರಣದಂಡನೆಗೆ ಸಮಾನವಾಗಿದೆ. ಇದರಿಂದ ಭಗವಂತನು ಅವನನ್ನು ತ್ಯಜಿಸಿಬಿಟ್ಟನು.

ಭಾರತೇऽಪಿ ವರ್ಷೇ ಭಗವಾನ್ನರನಾರಾಯಣಾಖ್ಯ ಆಕಲ್ಪಾಂತಮುಪಚಿತಧರ್ಮಜ್ಞಾನವೈರಾಗ್ಯೈಶ್ವರ್ಯೋಪಶಮೋಪರಮಾತ್ಮೋಪಲಂಭನಮನುಗ್ರಹಾಯಾತ್ಮವತಾಮನುಕಂಪಯಾ ತಪೋऽವ್ಯಕ್ತಗತಿಶ್ಚರತಿ ॥ ೯ ॥ ತಂ ಭಗವಾನ್ನಾರದೋ ವರ್ಣಾಶ್ರಮವತೀಭಿರ್ಭಾರತೀಭಿಃ ಪ್ರಜಾಭಿರ್ಭಗವತ್ಪ್ರೋಕ್ತಾಭ್ಯಾಂ ಸಾಂಖ್ಯಯೋಗಾಭ್ಯಾಂ ಭಗವದನುಭಾವೋಪವರ್ಣನಂ ಸಾವರ್ಣೇರುಪದೇಕ್ಷ್ಯಮಾಣಃ ಪರಮಭಕ್ತಿಭಾವೇನೋಪಸರತಿ ಇದಂ ಚಾಭಿಗೃಣಾತಿ ॥ ೧೦ ॥ ಓಂ ನಮೋ ಭಗವತೇ ಉಪಶಮಶೀಲಾಯೋಪರತಾನಾತ್ಮ್ಯಾಯ ನಮೋऽಕಿಂಚನವಿತ್ತಾಯ ಋಷಿಋಷಭಾಯ ನರನಾರಾಯಣಾಯ ಪರಮಹಂಸಪರಮಗುರವೇ ಆತ್ಮಾರಾಮಾಧಿಪತಯೇ ನಮೋ ನಮ ಇತಿ ॥ ೧೧ ॥ ಗಾಯತಿ ಚೇದಮ್

ಕರ್ತಾಸ್ಯ ಸರ್ಗಾದಿಷು ಯೋ ನ ಬಧ್ಯತೇ
ನ ಹನ್ಯತೇ ದೇಹಗತೋऽಪಿ ದೈಹಿಕೈಃ ।
ದ್ರಷ್ಟುರ್ನ ದೃಗ್ಯಸ್ಯ ಗುಣೈರ್ವಿದೂಷ್ಯತೇ
ತಸ್ಮೈ ನಮೋऽಸಕ್ತವಿವಿಕ್ತಸಾಕ್ಷಿಣೇ ॥ ೧೨ ॥

ಇದಂ ಹಿ ಯೋಗೇಶ್ವರ ಯೋಗನೈಪುಣಂ
ಹಿರಣ್ಯಗರ್ಭೋ ಭಗವಾಂಜಗಾದ ಯತ್ ।
ಯದಂತಕಾಲೇ ತ್ವಯಿ ನಿರ್ಗುಣೇ ಮನೋ
ಭಕ್ತ್ಯಾ ದಧೀತೋಜ್ಝಿತದುಷ್ಕಲೇವರಃ ॥ ೧೩ ॥

ಯಥೈಹಿಕಾಮುಷ್ಮಿಕಕಾಮಲಂಪಟಃ
ಸುತೇಷು ದಾರೇಷು ಧನೇಷು ಚಿಂತಯನ್ ।
ಶಂಕೇತ ವಿದ್ವಾನ್ಕುಕಲೇವರಾತ್ಯಯಾದ್
ಯಸ್ತಸ್ಯ ಯತ್ನಃ ಶ್ರಮ ಏವ ಕೇವಲಮ್ ॥ ೧೪ ॥

ತನ್ನಃ ಪ್ರಭೋ ತ್ವಂ ಕುಕಲೇವರಾರ್ಪಿತಾಂ
ತ್ವನ್ಮಾಯಯಾಹಂಮಮತಾಮಧೋಕ್ಷಜ ।
ಭಿಂದ್ಯಾಮ ಯೇನಾಶು ವಯಂ ಸುದುರ್ಭಿದಾಂ
ವಿಧೇಹಿ ಯೋಗಂ ತ್ವಯಿ ನಃ ಸ್ವಭಾವಮಿತಿ ॥ ೧೫ ॥

ಭಾರತವರ್ಷದಲ್ಲಿಯೂ ಭಗವಂತನು ಕರುಣೆಯಿಂದ ನರ-ನಾರಾಯಣರೂಪವನ್ನು ಧರಿಸಿ ಸಂಯಮಶೀಲರಾದ ಮನುಷ್ಯರ ಮೇಲೆ ಅನುಗ್ರಹವನ್ನು ತೋರುವುದಕ್ಕಾಗಿ ಕಲ್ಪದ ಕೊನೆಯವರೆಗೂ ಅವ್ಯಕ್ತರೂಪದಿಂದ ತಪಸ್ಸು ಮಾಡುತ್ತಾ ಇರುವನು. ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ, ಇಂದ್ರಿಯಜಯ, ಶಾಂತಿ ಇವುಗಳು ಉತ್ತರೋತ್ತರ ವೃದ್ಧಿಹೊಂದಿ ಆತ್ಮಸಾಕ್ಷಾತ್ಕಾರವನ್ನು ದೊರಕಿಸುವ ತಪಸ್ಸಿನ ಆದರ್ಶವನ್ನು ತೋರುತ್ತಿದ್ದಾನೆ. ॥ ೯ ॥ ಅಲ್ಲಿ ಭಗವಾನ್ ನಾರದಮುನಿಗಳು ಶ್ರೀಭಗವಂತನು ಸ್ವತಃ ಉಪದೇಶಿಸಿದ ಸಾಂಖ್ಯ ಮತ್ತು ಯೋಗಶಾಸ್ತ್ರದ ಸಹಿತ ಭಗವನ್ಮಹಿಮೆಯನ್ನು ಪ್ರಕಟಪಡಿಸುವ ಪಾಂಚರಾತ್ರಾಗಮವನ್ನು ಸಾವರ್ಣಿ ಮನುವಿಗೆ ಉಪದೇಶ ಮಾಡುತ್ತಾ - ಅತ್ಯಂತ ಭಕ್ತಿಯಿಂದ ವರ್ಣಾಶ್ರಮಧರ್ಮಗಳನ್ನು ಪಾಲಿಸುತ್ತಿರುವ ಭಾರತವರ್ಷದ ಪ್ರಜೆಗಳೊಂದಿಗೆ ಭಗವಾನ್ ನರ-ನಾರಾಯಣಸ್ವಾಮಿಯನ್ನು ಉಪಾಸನೆಮಾಡುತ್ತಾ, ಈ ಮಂತ್ರವನ್ನು ಜಪಿಸುತ್ತಾ, ಭಗವಂತನ ಸ್ತೋತ್ರಗಳನ್ನು ಹಾಡುತ್ತಾ ಸ್ತುತಿಸುತ್ತಿರುವರು. ॥ ೧೦ ॥ 'ಓಂಕಾರಸ್ವರೂಪನೂ, ಅಹಂಕಾರ ರಹಿತನೂ, ನಿರ್ಧನರ ನಿಧಿಯೂ, ಶಾಂತಸ್ವಭಾವನೂ ಆದ ಋಷಿಶ್ರೇಷ್ಠ ಭಗವಾನ್ ನರ-ನಾರಾಯಣನಿಗೆ ನಮಸ್ಕಾರವು. ಪರಮ ಹಂಸರಿಗೆ ಪರಮಗುರುವೂ, ಆತ್ಮಾರಾಮರ ಅಧೀಶ್ವರನೂ ಆದ ಅವನಿಗೆ ಮತ್ತೆ-ಮತ್ತೆ ನಮಸ್ಕಾರಗಳು.' ॥ ೧೧ ॥ ಮತ್ತೆ ಹೀಗೆ ಹಾಡುತ್ತಿರುತ್ತಾರೆ – 'ಯಾವಾತನು ವಿಶ್ವದ ಉತ್ಪತ್ತಿ ಮುಂತಾದವುಗಳ ಕರ್ತಾ ಆಗಿದ್ದರೂ ಕರ್ತೃತ್ವದ ಅಭಿಮಾನದಿಂದ ಬಂಧಿತನಾಗುವುದಿಲ್ಲವೋ, ಶರೀರದಲ್ಲಿದ್ದರೂ ಅದರ ಧರ್ಮಗಳಾದ ಹಸಿವು-ಬಾಯಾರಿಕೆ ಮುಂತಾದವುಗಳಿಗೆ ವಶನಾಗುವುದಿಲ್ಲವೋ, ದೃಷ್ಟಾ ಆಗಿದ್ದರೂ ಯಾರ ದೃಷ್ಟಿಯು ದೃಶ್ಯದ ಗುಣ-ದೋಷಗಳಿಂದ ದೂಷಿತವಾಗುವುದಿಲ್ಲವೋ, ಅಂತಹ ಅಸಂಗ ಹಾಗೂ ವಿಶುದ್ಧ ಸಾಕ್ಷಿರೂಪನಾದ ಭಗವಾನ್ ನರ-ನಾರಾಯಣನಿಗೆ ನಮಸ್ಕಾರವು. ॥ ೧೨ ॥ ಎಲೈ ಯೋಗೇಶ್ವರನೇ! ಹಿರಣ್ಯಗರ್ಭ ಬ್ರಹ್ಮದೇವರು – 'ಮನುಷ್ಯನು ಅಂತ್ಯಕಾಲದಲ್ಲಿ ದೇಹಾಭಿಮಾನವನ್ನು ಬಿಟ್ಟು ಭಕ್ತಿಯಿಂದ ಪ್ರಾಕೃತಗುಣರಹಿತವಾದ ನಿನ್ನ ಸ್ವರೂಪದಲ್ಲಿ ಮನಸ್ಸನ್ನು ತೊಡಗಿಸುವುದೇ ಯೋಗಸಾಧನೆಯ ಎಲ್ಲಕ್ಕಿಂತ ದೊಡ್ಡ ಕುಶಲತೆಯಾಗಿದೆ' ಎಂದು ಹೇಳಿರುವರು. ॥ ೧೩ ॥ ಲೌಕಿಕ ಮತ್ತು ಪಾರಲೌಕಿಕ ಭೋಗಗಳಲ್ಲಿ ಲಂಪಟನಾಗಿರುವ ಮೂಢ ಮನುಷ್ಯನು – ಮಕ್ಕಳು, ಮಡದಿ, ಹಣ ಮುಂತಾದವುಗಳನ್ನೇ ಚಿಂತಿಸುತ್ತಾ ಮೃತ್ಯುವಿಗೆ ಹೆದರುವಂತೆಯೇ – ವಿದ್ವಾಂಸರೂ ಕೂಡ 'ಈ ನಿಂದ್ಯವಾದ ದೇಹವನ್ನು ಬಿಟ್ಟುಹೋಗಬೇಕಲ್ಲ' ಎಂದು ಹೆದರಿದರೆ, ಅವನು ಜ್ಞಾನವನ್ನು ಪಡೆಯಲು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವೇ ಸರಿ. ॥ ೧೪ ॥ ಆದ್ದರಿಂದ ಓ ಅಧೋಕ್ಷಜನೇ! ನೀನು ನಮಗೆ ನಿನ್ನ ಸ್ವಾಭಾವಿಕವಾದ ಪ್ರೇಮರೂಪವಾದ ಭಕ್ತಿಯೋಗವನ್ನು ಅನುಗ್ರಹಿಸು. ಹೇ ಪ್ರಭೋ! ಈ ನಿಂದನೀಯವಾದ ಶರೀರದಲ್ಲಿ ನಿನ್ನ ಮಾಯೆಯಿಂದ ಬೇರು ಬಿಟ್ಟಿರುವ, ಭೇದಿಸಲು ಅತಿಕಷ್ಟವಾಗಿರುವ ಅಹಂತೆ-ಮಮತೆಯನ್ನು ಆ ಭಕ್ತಿಯೋಗದಿಂದ ನಾವು ಒಡನೆಯೇ ಕತ್ತರಿಸಿ ಹಾಕುವೆವು. ॥ ೧೫ ॥

ಭಾರತೇऽಪ್ಯಸ್ಮಿನ್ ವರ್ಷೇ ಸರಿಚ್ಛೈಲಾಃ ಸಂತಿ ಬಹವೋ ಮಲಯೋ ಮಂಗಲಪ್ರಸ್ಥೋ ಮೈನಾಕಸ್ತ್ರಿಕೂಟ ಋಷಭಃ ಕೂಟಕಃ ಕೊಲ್ಲಕಃ ಸಹ್ಯೋ ದೇವಗಿರಿರ್ಋಷ್ಯಮೂಕಃ ಶ್ರೀಶೈಲೋ ವೇಂಕಟೋ ಮಹೇಂದ್ರೋ ವಾರಿಧಾರೋ ವಿಂಧ್ಯಃ ಶುಕ್ತಿಮಾನೃಕ್ಷಗಿರಿಃ ಪಾರಿಯಾತ್ರೋ ದ್ರೋಣಶ್ಚಿತ್ರಕೂಟೋ ಗೋವರ್ಧನೋ ರೈವತಕಃ ಕಕುಭೋ ನೀಲೋ ಗೋಕಾಮುಖ ಇಂದ್ರಕೀಲಃ ಕಾಮಗಿರಿರಿತಿ ಚಾನ್ಯೇ ಚ ಶತಸಹಸ್ರಶಃ ಶೈಲಾಸ್ತೇಷಾಂ ನಿತಂಬಪ್ರಭವಾ ನದಾ ನದ್ಯಶ್ಚ ಸಂತ್ಯಸಂಖ್ಯಾತಾಃ ॥ ೧೬ ॥

ಏತಾಸಾಮಪೋ ಭಾರತ್ಯಃ ಪ್ರಜಾ ನಾಮಭಿರೇವ ಪುನಂತೀನಾಮಾತ್ಮನಾ ಚೋಪಸ್ಪೃಶಂತಿ ॥ ೧೭ ॥ ಚಂದ್ರವಸಾ ತಾಮ್ರಪರ್ಣೀ ಅವಟೋದಾ ಕೃತಮಾಲಾ ವೈಹಾಯಸೀ ಕಾವೇರಿ ವೇಣೀ ಪಯಸ್ವಿನೀ ಶರ್ಕರಾವರ್ತಾ ತುಂಗಭದ್ರಾ ಕೃಷ್ಣಾ ವೇಣ್ಯಾ ಭೀಮರಥೀ ಗೋದಾವರೀ ನಿರ್ವಿಂಧ್ಯಾ, ಪಯೋಷ್ಣೀ ತಾಪೀ ರೇವಾ ಸುರಸಾ ನರ್ಮದಾ ಚರ್ಮಣ್ವತೀ ಸಿಂಧುರಂಧಃ ಶೋಣಶ್ಚ ನದೌ ಮಹಾನದೀ ವೇದಸ್ಮೃತಿರ್ಋಷಿಕುಲ್ಯಾ ತ್ರಿಸಾಮಾ ಕೌಶಿಕೀ ಮಂದಾಕಿನೀ ಯಮುನಾ ಸರಸ್ವತೀ ದೃಷದ್ವತೀ ಗೋಮತೀ ಸರಯೂ ರೋಧಸ್ವತೀ ಸಪ್ತವತೀ ಸುಷೋಮಾ ಶತದ್ರೂಶ್ಚಂದ್ರಭಾಗಾ ಮರುದ್ವೃಧಾ ವಿತಸ್ತಾ ಅಸಿಕ್ನೀ ವಿಶ್ವೇತಿ ಮಹಾನದ್ಯಃ ॥ ೧೮ ॥ ಅಸ್ಮಿನ್ನೇವ ವರ್ಷೇ ಪುರುಷೈರ್ಲಬ್ಧಜನ್ಮಭಿಃ ಶುಕ್ಲ-ಲೋಹಿತ-ಕೃಷ್ಣವರ್ಣೇನ ಸ್ವಾರಬ್ಧೇನ ಕರ್ಮಣಾ ದಿವ್ಯಮಾನುಷನಾರಕಗತಯೋ ಬಹ್ವ್ಯ ಆತ್ಮನ ಆನುಪೂರ್ವ್ಯೇಣ ಸರ್ವಾ ಹ್ಯೇವ ಸರ್ವೇಷಾಂ ವಿಧೀಯಂತೇ ಯಥಾವರ್ಣವಿಧಾನಮಪವರ್ಗಶ್ಚಾಪಿ ಭವತಿ ॥ ೧೯ ॥ ಯೋऽಸೌ ಭಗವತಿ ಸರ್ವಭೂತಾತ್ಮನ್ಯನಾತ್ಮ್ಯೇऽನಿರುಕ್ತೇऽನಿಲಯನೇ ಪರಮಾತ್ಮನಿ ವಾಸುದೇವೇऽನನ್ಯನಿಮಿತ್ತಭಕ್ತಿಯೋಗಲಕ್ಷಣೋ ನಾನಾಗತಿನಿಮಿತ್ತಾವಿದ್ಯಾಗ್ರಂಥಿರಂಧನದ್ವಾರೇಣ ಯದಾ ಹಿ ಮಹಾಪುರುಷಪುರುಷಪ್ರಸಂಗಃ ॥ ೨೦ ॥

ಎಲೈ ರಾಜೇಂದ್ರನೇ! ಈ ಭಾರತವರ್ಷದಲ್ಲಿಯೂ ಕೂಡ ಬಹುಸಂಖ್ಯೆಯ ಪರ್ವತಗಳೂ, ನದಿಗಳೂ ಇವೆ. ಮಲಯ, ಮಂಗಲಪ್ರಸ್ಥ, ಮೈನಾಕ, ತ್ರಿಕೂಟ, ಋಷಭ, ಕೂಟಕ, ಕೊಲ್ಲಕ, ಸಹ್ಯ, ದೇವಗಿರಿ, ಋಷ್ಯಮೂಕ, ಶ್ರೀಶೈಲ, ವೇಂಕಟ, ಮಹೇಂದ್ರ ವಾರಿಧಾರ, ವಿಂಧ್ಯ, ಶುಕ್ತಿಮಾನ್, ಋಕ್ಷಗಿರಿ, ಪಾರಿಯಾತ್ರ, ದ್ರೋಣ, ಚಿತ್ರಕೂಟ, ಗೋವರ್ಧನ, ರೈವತಕ, ಕಕುಭ, ನೀಲ, ಗೋಕಾಮುಖ, ಇಂದ್ರಕೀಲ ಮತ್ತು ಕಾಮಗಿರಿ ಮುಂತಾದವುಗಳು – ಇನ್ನೂ ನೂರಾರು, ಸಾವಿರಾರು ಗಿರಿಗಳೂ ಹಾಗೂ ಅವುಗಳ ತಪ್ಪಲುಗಳಿಂದ ಹುಟ್ಟುವ ನದ-ನದಿಗಳು ಲೆಕ್ಕವಿಲ್ಲದಷ್ಟಿವೆ. ॥ ೧೬ ॥ ಈ ನದಿಗಳ ನಾಮಸ್ಮರಣೆಯೂ ಕೂಡ ಜೀವರನ್ನು ಪವಿತ್ರಗೊಳಿಸುತ್ತದೆ. ಇವುಗಳ ತೀರ್ಥದಲ್ಲಿ ಭಾರತ ವರ್ಷದ ಪ್ರಜೆಗಳು ಸ್ನಾನಾದಿಗಳನ್ನು ಮಾಡುತ್ತಾರೆ. ॥ ೧೭ ॥ ಈ ನದಿಗಳಲ್ಲಿ – ಚಂದ್ರವಸಾ, ತಾಮ್ರಪರ್ಣಿ, ಅವಟೋದಾ, ಕೃತಮಾಲಾ, ವೈಹಾಯಸೀ, ಕಾವೇರೀ, ವೇಣೀ, ಪಯಸ್ವಿನೀ, ಶರ್ಕರಾವರ್ತಾ, ತುಂಗಭದ್ರಾ, ಕೃಷ್ಣಾ ವೇಣ್ಯಾ, ಭೀಮರಥೀ, ಗೋದಾವರೀ, ನಿರ್ವಿಂಧ್ಯಾ, ಪಯೋಷ್ಣೀ, ತಾಪೀ, ರೇವಾ, ಸುರಸಾ, ನರ್ಮದಾ, ಚರ್ಮಣ್ವತೀ, ಸಿಂಧು, ಅಂಧ, ಶೋಣ (ನದಿಗಳು), ಮಹಾನದೀ, ವೇದಸ್ಮೃತಿ, ಋಷಿಕುಲ್ಯಾ, ತ್ರಿಸಾಮಾ, ಕೌಶಿಕೀ, ಮಂದಾಕಿನೀ, ಯಮುನಾ, ಸರಸ್ವತೀ, ದೃಷದ್ವತೀ, ಗೋಮತೀ, ಸರಯೂ, ರೋಧಸ್ವತೀ, ಸಪ್ತವತೀ, ಸುಷೋಮಾ, ಶತದ್ರೂ, ಚಂದ್ರಭಾಗಾ, ಮರುದ್ವೃಧಾ, ವಿತಸ್ತಾ, ಅಸಿಕ್ನೀ, ವಿಶ್ವಾ ಎಂಬಿವು ಮಹಾನದಿಗಳೆನಿಸುವುವು. ॥ ೧೮ ॥ ಈ ಭಾರತವರ್ಷದಲ್ಲಿ ಜನ್ಮವನ್ನು ಪಡೆದ ಮನುಷ್ಯರು ತಾವು ಮಾಡಿದ ಸಾತ್ವಿಕ, ರಾಜಸ, ತಾಮಸ ಎಂಬ ಕರ್ಮಗಳನುಸಾರವಾಗಿ ಕ್ರಮವಾಗಿ ನಾನಾ ರೀತಿಯ ದೇವತಾ, ಮನುಷ್ಯ ಮತ್ತು ನಾರಕೀ ಯೋನಿಗಳು ದೊರೆಯುತ್ತವೆ. ಏಕೆಂದರೆ, ಕರ್ಮಾನುಸಾರವಾಗಿ ಎಲ್ಲ ಜೀವರಿಗೆ ಎಲ್ಲಾ ಯೋನಿಗಳು ದೊರೆಯಬಲ್ಲವು. ಇದೇ ವರ್ಷದಲ್ಲಿ ತಮ್ಮ-ತಮ್ಮ ವರ್ಣಾಶ್ರಮ ಧರ್ಮಗಳನ್ನು ವಿಧಿವತ್ತಾಗಿ ಅನುಷ್ಠಾನ ಮಾಡುವುದರಿಂದ ಮೋಕ್ಷವೂ ಕೂಡ ಪ್ರಾಪ್ತವಾಗ ಬಲ್ಲುದು. ॥ ೧೯ ॥ ಪರೀಕ್ಷಿತನೇ! ಸಮಸ್ತ ಭೂತಗಳಿಗೂ ಆತ್ಮನಾಗಿಯೂ, ರಾಗಾದಿ ದೋಷಗಳಿಂದ ರಹಿತನೂ, ಅನಿರ್ವಚನೀಯನೂ, ನಿರಾಧಾರನಾದ ಪರಮಾತ್ಮ ಭಗವಾನ್ ವಾಸುದೇವನಲ್ಲಿ ಅನನ್ಯ, ಅಹೈತುಕೀ ಭಕ್ತಿಭಾವವೇ ಈ ಮೋಕ್ಷಪದವಾಗಿದೆ. ಈ ಭಕ್ತಿಭಾವವು – ಅನೇಕ ರೀತಿಯ ಗತಿಗಳನ್ನು ಪ್ರಕಟಗೊಳಿಸುವ ಅವಿದ್ಯೆ ಎಂಬ ಹೃದಯ ಗ್ರಂಥಿಯು ಕಡಿದುಹೋಗಿ, ಭಗವಂತನ ಪ್ರೇಮೀಭಕ್ತರ ಸಮಾಗಮ ದೊರೆತಾಗಲೇ ಉಂಟಾಗುತ್ತದೆ. ॥ ೨೦ ॥

ದೇವತೆಗಳೂ ಕೂಡ ಭಾರತವರ್ಷದಲ್ಲಿ ಹುಟ್ಟಿದ ಮನುಷ್ಯರ ಮಹಿಮೆಯನ್ನು ಈ ರೀತಿ ಹಾಡುತ್ತಾರೆ – ಆಹಾ! ಭಾರತವರ್ಷದಲ್ಲಿ ಭಗವಂತನ ಸೇವೆಗೆ ಯೋಗ್ಯವಾದ ಮನುಷ್ಯಜನ್ಮವನ್ನು ಪಡೆದವರು ಯಾವ ಪುಣ್ಯ ಮಾಡಿರುವರೋ! ಅಥವಾ ಇವರ ಮೇಲೆ ಸ್ವಯಂ ಶ್ರೀಹರಿಯೇ ಪ್ರಸನ್ನನಾಗಿರುವನೇ! ಇಂತಹ ಪರಮ ಸೌಭಾಗ್ಯಕ್ಕಾಗಿಯೇ ನಾವು ನಿರಂತರವಾಗಿ ಆಸೆಪಡುತ್ತಿರುತ್ತೇವೆ. ॥ ೨೦ ॥ ಭಾರೀ ಕಷ್ಟಮಯ ಯಜ್ಞಗಳನ್ನು,

ಏತದೇವ ಹಿ ದೇವಾ ಗಾಯಂತಿ –

ಅಹೋ ಅಮೀಷಾಂ ಕಿಮಕಾರಿ ಶೋಭನಂ
ಪ್ರಸನ್ನ ಏಷಾಂ ಸ್ವಿದುತ ಸ್ವಯಂ ಹರಿಃ ।
ಯೈರ್ಜನ್ಮ ಲಬ್ಧಂ ನೃಷು ಭಾರತಾಜಿರೇ
ಮುಕುಂದಸೇವೌಪಯಿಕಂ ಸ್ಪೃಹಾ ಹಿ ನಃ ॥ ೨೧ ॥

ಕಿಂ ದುಷ್ಕರೈರ್ನಃ ಕ್ರತುಭಿಸ್ತಪೋವ್ರತೈ-
ರ್ದಾನಾದಿಭಿರ್ವಾ ದ್ಯುಜಯೇನ ಫಲ್ಗುನಾ ।
ನ ಯತ್ರ ನಾರಾಯಣಪಾದಪಂಕಜ-
ಸ್ಮೃತಿಃ ಪ್ರಮುಷ್ಟಾತಿಶಯೇಂದ್ರಿಯೋತ್ಸವಾತ್ ॥ ೨೨ ॥

ಕಲ್ಪಾಯುಷಾಂ ಸ್ಥಾನಜಯಾತ್ಪುನರ್ಭವಾತ್
ಕ್ಷಣಾಯುಷಾಂ ಭಾರತಭೂಜಯೋ ವರಮ್ ।
ಕ್ಷಣೇನ ಮರ್ತ್ಯೇನ ಕೃತಂ ಮನಸ್ವಿನಃ
ಸಂನ್ಯಸ್ಯ ಸಂಯಾಂತ್ಯಭಯಂ ಪದಂ ಹರೇಃ ॥ ೨೩ ॥

ನ ಯತ್ರ ವೈಕುಂಠ ಕಥಾಸುಧಾಪಗಾ
ನ ಸಾಧವೋ ಭಾಗವತಾಸ್ತದಾಶ್ರಯಾಃ ।
ನ ಯತ್ರ ಯಜ್ಞೇಶಮಖಾ ಮಹೋತ್ಸವಾಃ
ಸುರೇಶಲೋಕೋಽಪಿ ನ ವೈ ಸ ಸೇವ್ಯತಾಮ್ ॥ ೨೪ ॥

ಪ್ರಾಪ್ತಾ ನೃಜಾತಿಂ ತ್ವಿಹ ಯೇ ಚ ಜಂತವೋ
ಜ್ಞಾನಕ್ರಿಯಾದ್ರವ್ಯಕಲಾಪಸಂಭೃತಾಮ್ ।
ನ ವೈ ಯತೇರನ್ನಪುನರ್ಭವಾಯ ತೇ
ಭೂಯೋ ವನೌಕಾ ಇವ ಯಾಂತಿ ಬಂಧನಮ್ ॥ ೨೫ ॥

ಯೈಃ ಶ್ರದ್ಧಯಾ ಬರ್ಹಿಷಿ ಭಾಗಶೋ ಹವಿ-
ರ್ನಿರುಪ್ತಮಿಷ್ಟಂ ವಿಧಿಮಂತ್ರವಸ್ತುತಃ ।
ಏಕಃ ಪೃಥಙ್ನಾಮಭಿರಾಹುತೋ ಮುದಾ
ಗೃಹ್ಣಾತಿ ಪೂರ್ಣಃ ಸ್ವಯಮಾಶಿಷಾಂ ಪ್ರಭುಃ ॥ ೨೬ ॥

ಸತ್ಯಂ ದಿಶತ್ಯರ್ಥಿತಮರ್ಥಿತೋ ನೃಣಾಂ
ನೈವಾರ್ಥದೋ ಯತ್ಪುನರರ್ಥಿತಾ ಯತಃ ।
ಸ್ವಯಂ ವಿಧತ್ತೇ ಭಜತಾಮನಿಚ್ಛತಾ-
ಮಿಚ್ಛಾಪಿಧಾನಂ ನಿಜಪಾದಪಲ್ಲವಮ್ ॥ ೨೭ ॥

ತಪಸ್ಸನ್ನು, ವ್ರತಗಳನ್ನು ಮಾಡಿ ಪಡೆದ ಈ ತುಚ್ಛವಾದ ಸ್ವರ್ಗದ ಅಧಿಕಾರದಿಂದಲಾದರೂ ಏನು ಲಾಭವಿದೆ ? ಇಲ್ಲಿ ಇಂದ್ರಿಯಗಳ ಭೋಗಗಳ ಹೆಚ್ಚಳದಿಂದ ಸ್ಮರಣಶಕ್ತಿಯು ಕಸಿಯಲ್ಪಟ್ಟು ಶ್ರೀಮನ್ನಾರಾಯಣನ ಚರಣಕಮಲಗಳ ಸ್ಮೃತಿಯು ಉಂಟಾಗುವುದೇ ಇಲ್ಲ. ॥ ೨೨ ॥ ಇಲ್ಲಿಯ ಸ್ವರ್ಗದ ನಿವಾಸಿಗಳ ಆಯುಸ್ಸು ಒಂದು ಕಲ್ಪದವರೆಗೆ ಇದ್ದರೂ ಇಲ್ಲಿಂದ ಪುನಃ ಸಂಸಾರಚಕ್ರಕ್ಕೆ ಮರಳಬೇಕಾಗುತ್ತದೆ. ಬ್ರಹ್ಮಲೋಕಕ್ಕಿಂತಲೂ ಭಾರತ ಭೂಮಿಯಲ್ಲಿ ಅಲ್ಪಾಯುವಾಗಿ ಹುಟ್ಟುವುದು ಶ್ರೇಷ್ಠವಾಗಿದೆ. ಏಕೆಂದರೆ, ಇಲ್ಲಿ ಧೀರ ಪುರುಷರು ಒಂದು ಕ್ಷಣದಲ್ಲಿ ತನ್ನ ಈ ಮರ್ತ್ಯಶರೀರದಿಂದ ಮಾಡಿರುವ ಸಮಸ್ತ ಕರ್ಮಗಳನ್ನು ಶ್ರೀಭಗವಂತನಿಗೆ ಅರ್ಪಿಸಿ ಅವನ ಅಭಯಪದವನ್ನು ಪಡೆದುಕೊಳ್ಳಬಲ್ಲರು. ॥ ೨೩ ॥

ಎಲ್ಲಿ ಶ್ರೀಹರಿಯ ಕಥಾಮೃತದ ನದಿಗಳು ಹರಿಯುವುದಿಲ್ಲವೋ, ಆ ನದಿಗಳ ಉಗಮಸ್ಥಾನವಾದ ಭಗವದ್ಭಕ್ತರಾದ ಸಾಧುಗಳು ವಾಸಿಸುವುದಿಲ್ಲವೋ, ಎಲ್ಲಿ ನೃತ್ಯ-ಗೀತಾದಿಗಳೊಂದಿಗೆ ಭಗವಾನ್ ಯಜ್ಞಪುರುಷನ ಪೂಜೆ-ಅರ್ಚನೆಗಳು ನಡೆಯುವುದಿಲ್ಲವೋ – ಅದು ಬ್ರಹ್ಮಲೋಕವೇ ಆಗಿದ್ದರೂ ಅದನ್ನು ಸೇವಿಸಬಾರದು. ॥ ೨೪ ॥ ಭಾರತವರ್ಷದಲ್ಲಿ ವಿವೇಕ ಬುದ್ಧಿ, ಅದಕ್ಕೆ ಅನುಗುಣವಾದ ಕರ್ಮಗಳು ಮತ್ತು ಆ ಕರ್ಮಗಳನ್ನು ಆಚರಿಸುವುದಕ್ಕೆ ಉಪಯೋಗಪಡುವ ದ್ರವ್ಯವೇ ಮುಂತಾದ ಸಾಮಗ್ರಿಗಳಿಂದ ಸಂಪನ್ನವಾದ ಮನುಷ್ಯಜನ್ಮವನ್ನು ಪಡೆದಿದ್ದರೂ ಯಾರು ಹುಟ್ಟು-ಸಾವುಗಳ ಸುಳಿಯಿಂದ ತಪ್ಪಿಸಿಕೊಳ್ಳಲು ಪ್ರಯತ್ನ ಮಾಡುವುದಿಲ್ಲವೋ – ಅವರು ಬೇಡನು ಒಡ್ಡಿದ ಬೋನು-ಬಲೆಗಳಿಂದ ತಪ್ಪಿಸಿಕೊಂಡರೂ ಆಮಿಷಗಳ ಆಸೆಯಿಂದ ಮತ್ತೆ ಅಲ್ಲಿ ಸಿಕ್ಕಿಹಾಕಿಕೊಳ್ಳುವ ಅರಣ್ಯವಾಸಿಗಳಾದ ಪಶು-ಪಕ್ಷಿಗಳಿಗೆ ಸಮಾನರು. ॥ ೨೫ ॥

ಆಹಾ ! ಎಂತಹ ಭಾಗ್ಯಶಾಲಿಗಳು ಈ ಭಾರತದೇಶದ ನಿವಾಸಿಗಳು ! ಇವರು ಯಜ್ಞಗಳಲ್ಲಿ ಬೇರೆ-ಬೇರೆ ದೇವತೆಗಳನ್ನು ಉದ್ದೇಶಿಸಿ ಭಾಗಗಳನ್ನು ಇರಿಸಿ ವಿಧಿ, ಮಂತ್ರ ಮತ್ತು ದ್ರವ್ಯಾದಿಗಳೊಡನೆ ಶ್ರದ್ಧೆಯಿಂದ ಹವಿಸ್ಸನ್ನು ಸಮರ್ಪಿಸಿದಾಗ ಇಂದ್ರಾದಿ ನಾನಾ ನಾಮಗಳಿಂದ ಕರೆಯಲ್ಪಡುವ ಸಮಸ್ತ ಕಾಮನೆಗಳನ್ನು ಪೂರ್ಣಗೊಳಿಸುವ ಪೂರ್ಣಕಾಮನಾದ ಶ್ರೀಹರಿಯು ಅವೆಲ್ಲವನ್ನು ತಾನೇ ಪ್ರಸನ್ನತೆಯಿಂದ ಸ್ವೀಕಾರಮಾಡುವನು. ॥ ೨೬ ॥ ಭಕ್ತರು ಯಾವುದಾದರೂ ಕಾಮನೆಯಿಂದ ಭಗವಂತನಲ್ಲಿ ಬೇಡಿದರೂ, ಅವನು ಅವರಿಗೆ ಬೇಡಿದ ಪದಾರ್ಥಗಳನ್ನು ಕರುಣಿಸುತ್ತಾನೆ ಎಂಬುದು ಸರಿಯೇ. ಆದರೆ ಇದು ಭಗವಂತನ ನಿಜವಾದ ವರದಾನವಾಗಲಾರದು. ಏಕೆಂದರೆ, ಆ ಪದಾರ್ಥಗಳನ್ನು ಪಡೆದ ಬಳಿಕವೂ ಮನುಷ್ಯನ ಮನಸ್ಸಿನಲ್ಲಿ ಪುನಃ ಕಾಮನೆಗಳು ಏಳುತ್ತವೆ. ಇದರ ಬದಲಿಗೆ ಭಗವಂತನನ್ನು ನಿಷ್ಕಾಮರಾಗಿ ಭಜಿಸುವವರಿಗೆ ಅವನು ತನ್ನ ಸಾಕ್ಷಾತ್ ಚರಣಕಮಲಗಳನ್ನೇ ಕರುಣಿಸುವನು. ಅವು ಬೇರೆ ಎಲ್ಲ ಇಚ್ಛೆಗಳನ್ನು ಇಲ್ಲವಾಗಿಸುವಂತಹವುಗಳಾಗಿವೆ. ॥ ೨೭ ॥ ಆದ್ದರಿಂದ ಇಷ್ಟರವರೆಗೆ ಸ್ವರ್ಗಸುಖಗಳನ್ನು ಭೋಗಿಸಿದ ಬಳಿಕ ನಾವು ಹಿಂದೆ ಮಾಡಿದ ಯಜ್ಞ, ಪ್ರವಚನ, ಶುಭಕರ್ಮಗಳಿಂದ

ಯದ್ಯತ್ರ ನಃ ಸ್ವರ್ಗಸುಖಾವಶೇಷಿತಂ
ಸ್ವಿಷ್ಟಸ್ಯ ಸೂಕ್ತಸ್ಯ ಕೃತಸ್ಯ ಶೋಭನಮ್ ।
ತೇನಾಜನಾಭೇ ಸ್ಮೃತಿಮಜ್ಜನ್ಮ ನಃ ಸ್ಯಾದ್
ವರ್ಷೇ ಹರಿರ್ಯದ್ಭಜತಾಂ ಶಂ ತನೋತಿ ॥ ೨೮ ॥

*ಶ್ರೀಶುಕ ಉವಾಚ*

ಜಂಬೂದ್ವೀಪಸ್ಯ ಚ ರಾಜನ್ನುಪದ್ವೀಪಾನಷ್ಟೌ ಹೈಕ ಉಪದಿಶಂತಿ ಸಗರಾತ್ಮಜೈರಶ್ವಾನ್ವೇಷಣ ಇಮಾಂ ಮಹೀಂ ಪರಿತೋ ನಿಖನದ್ಭಿರುಪಕಲ್ಪಿತಾನ್ ॥ ೨೯ ॥ ತದ್ಯಥಾ ಸ್ವರ್ಣಪ್ರಸ್ಥಶ್ಚಂದ್ರಶುಕ್ಲ ಆವರ್ತನೋ ರಮಣಕೋ ಮಂದ-ರಹರಿಣಃ ಪಾಂಚಜನ್ಯಃ ಸಿಂಹಲೋ ಲಂಕೇತಿ ॥ ೩೦ ॥ ಏವಂ ತವ ಭಾರತೋತ್ತಮ ಜಂಬೂದ್ವೀಪವರ್ಷವಿ-ಭಾಗೋ ಯಥೋಪದೇಶಮುಪವರ್ಣಿತ ಇತಿ ॥ ೩೧ ॥

ಏನಾದರೂ ಪುಣ್ಯ ಉಳಿದಿದ್ದರೆ, ಅದರ ಪ್ರಭಾವದಿಂದ ನಮಗೆ ಈ ಭಾರತವರ್ಷದಲ್ಲಿ ಭಗವಂತನ ಸ್ಮೃತಿಯಿಂದ ಕೂಡಿದ ಮನುಷ್ಯ ಜನ್ಮವು ಸಿಗಲಿ. ಏಕೆಂದರೆ, ಶ್ರೀಹರಿಯು ತನ್ನನ್ನು ಭಜಿಸುವವನ ಎಲ್ಲ ರೀತಿಯ ಶ್ರೇಯಸ್ಸನ್ನು ಮಾಡುತ್ತಾನೆ. ॥ ೨೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿದ್ರಾಜನೇ ! ಹಿಂದೆ ಸಗರನ ಪುತ್ರರು ತಮ್ಮ ಯಜ್ಞಾಶ್ವವನ್ನು ಹುಡುಕುತ್ತಿರುವಾಗ ಈ ಪೃಥಿವಿಯನ್ನು ನಾಲ್ಕೂ ಕಡೆಗಳಿಂದ ಅಗೆದಿದ್ದರು. ಅದರಿಂದ ಜಂಬೂದ್ವೀಪದ ಅಂತರ್ಗತ ಎಂಟು ಉಪದ್ವೀಪಗಳು ಉಂಟಾದುವು ಎಂದು ಕೆಲವರು ಹೇಳುತ್ತಾರೆ. ॥ ೨೯ ॥ ಅವು ಸ್ವರ್ಣಪ್ರಸ್ಥ, ಚಂದ್ರಶುಕ್ಲ, ಆವರ್ತನ, ರಮಣಕ, ಮಂದರಹರಿಣ, ಪಾಂಚಜನ್ಯ, ಸಿಂಹಳ ಮತ್ತು ಲಂಕಾ ಎಂಬುದಾಗಿವೆ. ॥ ೩೦ ॥ ಭರತಶ್ರೇಷ್ಠನೇ ! ಹೀಗೆ ನಾನು ಗುರುಮುಖದಿಂದ ಕೇಳಿದಂತೆಯೇ ನಿನಗೆ ಜಂಬೂದ್ವೀಪದ ವರ್ಷಗಳ ವಿಭಾಗವನ್ನು ಹೇಳಿರುವೆನು. ॥ ೩೧ ॥

***ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಜಂಬೂದ್ವೀಪವರ್ಣನಂ ನಾಮೈಕೋನವಿಂಶೋಽಧ್ಯಾಯಃ ॥ ೧೯ ॥**

# ಇಪ್ಪತ್ತನೆಯ ಅಧ್ಯಾಯ

## ಇತರ ಆರು ದ್ವೀಪಗಳ ಮತ್ತು ಲೋಕಾಲೋಕ ಪರ್ವತದ ವರ್ಣನೆ

*ಶ್ರೀಶುಕ ಉವಾಚ*

ಅತಃ ಪರಂ ಪ್ಲಕ್ಷಾದೀನಾಂ ಪ್ರಮಾಣಲಕ್ಷಣ-ಸಂಸ್ಥಾನತೋ ವರ್ಷವಿಭಾಗ ಉಪವರ್ಣ್ಯತೇ ॥ ೧ ॥ ಜಂಬೂದ್ವೀಪೋಽಯಂ ಯಾವತ್ಪ್ರಮಾಣವಿಸ್ತಾರ-ಸ್ತಾವತಾ ಕ್ಷಾರೋದಧಿನಾ ಪರಿವೇಷ್ಟಿತೋ ಯಥಾ ಮೇರುರ್ಜಂಬ್ವಾಖ್ಯೇನ ಲವಣೋದಧಿರಪಿ ತತೋ ದ್ವಿಗುಣ-ವಿಶಾಲೇನ ಪ್ಲಕ್ಷಾಖ್ಯೇನ ಪರಿಕ್ಷಿಪ್ತೋ ಯಥಾ ಪರಿಖಾ ಬಾಹ್ಯೋಪವನೇನ । ಪ್ಲಕ್ಷೋ ಜಂಬೂಪ್ರಮಾಣೋ ದ್ವೀಪಾಖ್ಯಾಕರೋ ಹಿರಣ್ಮಯ ಉತ್ಥಿತೋ ಯತ್ರಾ-ಗ್ನಿರುಪಾಸ್ತೇ ಸಪ್ತಜಿಹ್ವಸ್ತಸ್ಯಾಧಿಪತಿಃ ಪ್ರಿಯವ್ರತಾತ್ಮಜ ಇಧ್ಮ-ಜಿಹ್ವಃ ಸ್ವಂ ದ್ವೀಪಂ ಸಪ್ತವರ್ಷಾಣಿ ವಿಭಜ್ಯ ಸಪ್ತವರ್ಷ-ನಾಮಭ್ಯ ಆತ್ಮಜೇಭ್ಯ ಆಕಲಯ್ಯ ಸ್ವಯಮಾತ್ಮಯೋ-ಗೇನೋಪರರಾಮ ॥ ೨ ॥ ಶಿವಂ ಯವಸಂ ಸುಭದ್ರಂ

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜೇಂದ್ರನೇ ! ಇನ್ನು ಪ್ರಮಾಣ, ಲಕ್ಷಣ ಮತ್ತು ಸ್ಥಿತಿಗನುಸಾರ ಪ್ಲಕ್ಷವೇ ಮುಂತಾದ ದ್ವೀಪಗಳ ವರ್ಷವಿಭಾಗಗಳನ್ನು ವರ್ಣಿಸಲಾಗುವುದು. ॥ ೧ ॥ ಮೇರು ಪರ್ವತವು ಜಂಬೂದ್ವೀಪದಿಂದ ಸುತ್ತುವರಿದಂತೆಯೇ ಜಂಬೂದ್ವೀಪವು ತನ್ನಷ್ಟೇ ಅಗಲ-ವಿಸ್ತಾರಗಳುಳ್ಳ ಲವಣಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ಕಂದಕವು ಹೊರಗಿನ ಉಪವನಗಳಿಂದ ಬಳಸಿಕೊಂಡಿರುವಂತೆಯೇ ಲವಣಸಮುದ್ರವೂ ಕೂಡ ತನ್ನಿಂದ ಎರಡರಷ್ಟು ವಿಸ್ತಾರವುಳ್ಳ ಪ್ಲಕ್ಷದ್ವೀಪದಿಂದ ಸುತ್ತುವರಿಯಲ್ಪಟ್ಟಿದೆ. ಜಂಬೂದ್ವೀಪದಲ್ಲಿ ಎಷ್ಟು ದೊಡ್ಡ ನೇರಳೆಮರ ವಿರುವುದೋ ಇಲ್ಲಿ ಅಷ್ಟೇ ವಿಸ್ತಾರವುಳ್ಳ ಸುವರ್ಣಮಯ ಪ್ಲಕ್ಷ (ಬಸರೀಮರ) ವೃಕ್ಷವಿದೆ. ಅದರಿಂದಲೇ ಇದರ ಹೆಸರು ಪ್ಲಕ್ಷದ್ವೀಪವೆಂದಾಯಿತು. ಇಲ್ಲಿ ಏಳು ನಾಲಿಗೆಗಳುಳ್ಳ ಅಗ್ನಿದೇವನು ವಿರಾಜಿಸುತ್ತಿರುವನು. ಈ ದ್ವೀಪದ ಅಧಿಪತಿಯು ಪ್ರಿಯವ್ರತಪುತ್ರ ಇಧ್ಮಜಿಹ್ವ ಮಹಾರಾಜನಿದ್ದನು. ಅವನು ಇದನ್ನು ಏಳುವರ್ಷಗಳಾಗಿ ವಿಂಗಡಿಸಿ, ಅವನ್ನು ಆಯಾ ವರ್ಷದ ಹೆಸರನ್ನೇ ಹೊಂದಿದ ತನ್ನ ಪುತ್ರರಿಗೆ ಒಪ್ಪಿಸಿ, ತಾನು ಅಧ್ಯಾತ್ಮಯೋಗವನ್ನು ಆಶ್ರಯಿಸಿ ಮುಕ್ತನಾದನು. ॥ ೨ ॥ ಶಿವ, ಯವಸ, ಸುಭದ್ರ, ಶಾಂತ, ಕ್ಷೇಮ, ಅಮೃತ ಮತ್ತು ಅಭಯ ಎಂಬಿವೇ ಆ ಏಳು ವರ್ಷಗಳು. ಇವುಗಳಲ್ಲಿಯೂ ಏಳು ಪರ್ವತಗಳು ಹಾಗೂ ಏಳು ನದಿಗಳೂ

ಶಾಂತಂ ಕ್ಷೇಮಮಮೃತಮಭಯಮಿತಿ ವರ್ಷಾಣಿ ತೇಷು ಗಿರಯೋ ನದ್ಯಶ್ಚ ಸಪ್ತೈವಾಭಿಜ್ಞಾತಾಃ ॥ ೩ ॥

ಮಣಿಕೂಟೋ ವಜ್ರಕೂಟ ಇಂದ್ರಸೇನೋ ಜ್ಯೋತಿಷ್ಮಾನ್ಸುಪರ್ಣೋ ಹಿರಣ್ಯಷ್ಠೀವೋ ಮೇಘಮಾಲ ಇತಿ ಸಪ್ತಶೈಲಾಃ। ಅರುಣಾ ನೃಮ್ಣಾಽಽಂಗಿರಸೀ ಸಾವಿತ್ರೀ ಸುಪ್ರಭಾತಾ ಋತಂಭರಾ ಸತ್ಯಂಭರಾ ಇತಿ ಮಹಾನದ್ಯಃ। ಯಾಸಾಂ ಜಲೋಪಸ್ಪರ್ಶನವಿಧೂತರಜಸ್ತಮಸೋ ಹಂಸಪತಂಗೋರ್ಧ್ವಾಯನಸತ್ಯಾಂಗಸಂಜ್ಞಾಶ್ಚತ್ವಾರೋ ವರ್ಣಾಃ ಸಹಸ್ರಾಯುಷೋ ವಿಬುಧೋಪಮ-ಸಂದರ್ಶನಪ್ರಜನನಾಃ ಸ್ವರ್ಗದ್ವಾರಂ ತ್ರಯ್ಯಾ ವಿದ್ಯಯಾ ಭಗವಂತಂ ತ್ರಯೀಮಯಂ ಸೂರ್ಯಮಾತ್ಮಾನಂ ಯಜಂತೇ ॥ ೪ ॥

ಪ್ರತ್ನಸ್ಯ ವಿಷ್ಣೋ ರೂಪಂ ಯತ್ಸತ್ಯಸ್ಯರ್ತಸ್ಯ ಬ್ರಹ್ಮಣಃ ।
ಅಮೃತಸ್ಯ ಚ ಮೃತ್ಯೋಶ್ಚ ಸೂರ್ಯಮಾತ್ಮಾನಮೀಮಹೀತಿ ॥ ೫ ॥

ಪ್ಲಕ್ಷಾದಿಷು ಪಂಚಸು ಪುರುಷಾಣಾಮಾಯು-ರಿಂದ್ರಿಯಮೋಜಃ ಸಹೋ ಬಲಂ ಬುದ್ಧಿರ್ವಿಕ್ರಮ ಇತಿ ಚ ಸರ್ವೇಷಾಮೌತ್ಪತ್ತಿಕೀ ಸಿದ್ಧಿರವಿಶೇಷೇಣ ವರ್ತತೇ ॥ ೬ ॥

ಪ್ಲಕ್ಷಃ ಸ್ವಸಮಾನೇನೇಕ್ಷುರಸೋದೇನಾವೃತೋ ಯಥಾ ತಥಾ ದ್ವೀಪೋಽಪಿ ಶಾಲ್ಮಲೋ ದ್ವಿಗುಣವಿಶಾಲಃ ಸಮಾ-ನೇನ ಸುರೋದೇನಾವೃತಃ ಪರಿವೃಂಕ್ತೇ ॥ ೭ ॥ ಯತ್ರ ಹ ವೈ ಶಾಲ್ಮಲೀ ಪ್ಲಕ್ಷಾಯಾಮಾ ಯಸ್ಯಾಂ ವಾವ ಕಿಲ ನಿಲ-ಯಮಾಹುರ್ಭಗವತಶ್ಛಂದಸ್ತುತಃ ಪತತ್ತ್ರಿರಾಜಸ್ಯ ಸಾ ದ್ವೀಪಹೂತಯೇ ಉಪಲಕ್ಷ್ಯತೇ ॥ ೮ ॥ ತದ್ದ್ವೀಪಾಧಿಪತಿಃ ಪ್ರಿಯವ್ರತಾತ್ಮಜೋ ಯಜ್ಞಬಾಹುಃ ಸ್ವಸುತೇಭ್ಯಃ ಸಪ್ತಭ್ಯಸ್ತ-ನ್ನಾಮಾನಿ ಸಪ್ತವರ್ಷಾಣಿ ವ್ಯಭಜತ್ಸುರೋಚನಂ ಸೌಮ-ನಸ್ಯಂ ರಮಣಕಂ ದೇವವರ್ಷಂ ಪಾರಿಭದ್ರಮಾಪ್ಯಾಯ-ನಮವಿಜ್ಞಾತಮಿತಿ ॥ ೯ ॥ ತೇಷು ವರ್ಷಾದ್ರಯೋ ನದ್ಯಶ್ಚ ಸಪ್ತೈವಾಭಿಜ್ಞಾತಾಃ । ಸ್ವರಸಃ ಶತಶೃಂಗೋ ವಾಮದೇವಃ ಕುಂದೋ ಮುಕುಂದಃ ಪುಷ್ಪವರ್ಷಃ ಸಹಸ್ರಶ್ರುತಿರಿತಿ । ಅನುಮತಿಃ ಸಿನೀವಾಲೀ ಸರಸ್ವತೀ ಕುಹೂ ರಜನೀ ನಂದಾ ರಾಕೇತಿ ॥ ೧೦ ॥

ಪ್ರಸಿದ್ಧವಾಗಿವೆ. ॥ ೩ ॥ ಮಣಿಕೂಟ, ವಜ್ರಕೂಟ, ಇಂದ್ರಸೇನ, ಜ್ಯೋತಿಷ್ಮಾನ್, ಸುಪರ್ಣ, ಹಿರಣ್ಯಷ್ಠೀವ ಮತ್ತು ಮೇಘಮಾಲ ಎಂಬ ಏಳು ಮೆರೆಯಾಗಿರುವ ಪರ್ವತಗಳು. ಅರುಣಾ, ನೃಮ್ಣಾ ಆಂಗೀರಸೀ, ಸಾವಿತ್ರೀ, ಸುಪ್ರಭಾತಾ, ಋತಂಭರಾ ಹಾಗೂ ಸತ್ಯಂಭರಾ ಎಂಬ ಏಳು ಮಹಾನದಿಗಳು. ಅಲ್ಲಿ ಹಂಸ, ಪತಂಗ, ಊರ್ಧ್ವಾಯನ, ಸತ್ಯಾಂಕ ಎಂಬ ನಾಲ್ಕು ವರ್ಣಗಳಿಗೆ ಸೇರಿದ ಜನರಿದ್ದಾರೆ. ಇವರು ಮೇಲೆ ಹೇಳಿದ ನದಿಗಳಲ್ಲಿ ಸ್ನಾನಮಾಡಿ ಇವರ ರಜೋಗುಣ-ತಮೋಗುಣ ಕಳೆದುಕೊಂಡವರಾಗಿ ಸಾವಿರ ವರ್ಷಗಳ ಆಯುಸ್ಸುಳ್ಳವರಾಗಿದ್ದಾರೆ. ಇವರ ಶರೀರಗಳಲ್ಲಿ ದೇವತೆಗಳಂತೆ ಬಳಲಿಕೆ, ಬೆವರು ಮುಂತಾದವುಗಳು ಇರುವುದಿಲ್ಲ. ಸಂತಾನೋತ್ಪತ್ತಿಯೂ ಅವರಂತೆಯೇ ಇರುತ್ತದೆ. ಇವರು ತ್ರಯೀ ವಿದ್ಯೆಮೂಲಕ ಮೂರೂ ವೇದಗಳಲ್ಲಿ ವರ್ಣಿಸಿರುವ ಸ್ವರ್ಗದ ದ್ವಾರದಂತಿರುವ ಆತ್ಮಸ್ವರೂಪನಾದ ಭಗವಾನ್ ಸೂರ್ಯನನ್ನು ಉಪಾಸಿಸುತ್ತಾರೆ. ॥ ೪ ॥ 'ಸತ್ಯಕ್ಕೂ (ಆಚರಣೆಯಲ್ಲಿರುವ ಧರ್ಮ), ಋತಕ್ಕೂ (ನಿಯಮರೂಪದಲ್ಲಿರುವ ಧರ್ಮ), ವೇದಕ್ಕೂ, ಅಮೃತಕ್ಕೂ, ಮೃತ್ಯುವಿಗೂ ಆತ್ಮಸ್ವರೂಪನಾದ ಪುರಾಣಪುರುಷನಾದ, ವಿಷ್ಣುಸ್ವರೂಪಿಯಾದ ಸೂರ್ಯಭಗವಂತನನ್ನು ನಾವು ಶರಣು ಹೊಂದುತ್ತೇವೆ' ಎಂದು ಆ ಸೂರ್ಯದೇವನನ್ನು ಸ್ತೋತ್ರಮಾಡುತ್ತಾರೆ. ॥ ೫ ॥ ಪ್ಲಕ್ಷ ಮುಂತಾದ ಐದು ದ್ವೀಪಗಳಲ್ಲಿ ಎಲ್ಲ ಮನುಷ್ಯರಿಗೂ ಹುಟ್ಟಿನಿಂದಲೇ ಆಯುಸ್ಸು, ಮನೋಬಲ, ಇಂದ್ರಿಯಬಲ, ಶಾರೀರಿಕಬಲ, ಬುದ್ಧಿ, ಪರಾಕ್ರಮ ಇವುಗಳು ಸಮಾನವಾಗಿ ಸಿದ್ಧವಾಗಿಯೇ ಇರುತ್ತವೆ. ॥ ೬ ॥

ಪ್ಲಕ್ಷದ್ವೀಪವು ತನ್ನಷ್ಟೇ ವಿಸ್ತಾರವುಳ್ಳ ಕಬ್ಬಿನರಸದ ಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ಇವರ ಮುಂದೆ ಅದಕ್ಕೆ ಎರಡರಷ್ಟು ವಿಸ್ತಾರವಾದ ಶಾಲ್ಮಲೀದ್ವೀಪವಿದೆ. ಇದು ತನ್ನಷ್ಟೇ ವಿಸ್ತಾರವುಳ್ಳ ಮದ್ಯದ ಸಮುದ್ರದಿಂದ ಬಳಸಲ್ಪಟ್ಟಿದೆ. ॥ ೭ ॥ ಪ್ಲಕ್ಷದ್ವೀಪದ ಬಸರೀಮರದಂತೆ ಇದರಲ್ಲಿ ಶಾಲ್ಮಲೀ (ಬೂರುಗದ) ವೃಕ್ಷವಿದೆ. ಈ ವೃಕ್ಷವೇ ತನ್ನ ವೇದಮಯ ರೆಕ್ಕೆಗಳಿಂದ ಭಗವಂತನನ್ನು ಸ್ತುತಿಸುವ ಪಕ್ಷಿರಾಜ ಗರುಡದೇವರ ನಿವಾಸಸ್ಥಾನವಾಗಿದೆ. ಇದೇ ಈ ದ್ವೀಪದ ಹೆಸರಿಗೆ ಕಾರಣವೆಂದು ಹೇಳುತ್ತಾರೆ. ॥ ೮ ॥ ಈ ದ್ವೀಪಕ್ಕೆ ಅಧಿಪತಿಯಾಗಿ ಪ್ರಿಯವ್ರತಪುತ್ರ ಯಜ್ಞಬಾಹು ಮಹಾರಾಜನಿದ್ದನು. ಅವನು ಇದನ್ನು ಸುರೋಚನ, ಸೌಮನಸ್ಯ, ರಮಣಕ, ದೇವವರ್ಷ, ಪಾರಿಭದ್ರ, ಆಪ್ಯಾಯನ ಮತ್ತು ಅವಿಜ್ಞಾತ ಎಂಬ ಏಳು ವಿಭಾಗ ಮಾಡಿದನು. ಇವುಗಳನ್ನು ಅದೇ ಹೆಸರುಳ್ಳ ತನ್ನ ಪುತ್ರರಿಗೆ ಒಪ್ಪಿಸಿಕೊಟ್ಟಿದ್ದನು. ॥ ೯ ॥ ಇದರಲ್ಲಿಯೂ ಏಳು ವರ್ಷ ಪರ್ವತಗಳೂ, ಏಳು ನದಿಗಳೂ ಪ್ರಸಿದ್ಧವಾಗಿವೆ. ಸ್ವರಸ, ಶತಶೃಂಗ, ವಾಮದೇವ, ಕುಂದ, ಮುಕುಂದ, ಪುಷ್ಪವರ್ಷ, ಹಾಗೂ ಸಹಶ್ರುತಿ – ಇವು ಏಳು ಪರ್ವತಗಳು ಹಾಗೂ ಅನುಮತಿ, ಸಿನೀವಾಲಿ, ಸರಸ್ವತಿ, ಕುಹೂ, ರಜನೀ, ನಂದಾ ಮತ್ತು ರಾಕಾ ಎಂಬ ಏಳು ನದಿಗಳು. ॥ ೧೦ ॥ ಈ ವರ್ಷದಲ್ಲಿ ಶ್ರುತಧರ, ವೀರ್ಯಧರ, ವಸುಂಧರ, ಇಷಂಧರ ಎಂಬ ನಾಲ್ಕು ವರ್ಣದ ಜನರು ವಾಸಿಸುತ್ತಾ, ವೇದಮಯ ಆತ್ಮಸ್ವರೂಪನಾದ ಭಗವಾನ್ ಚಂದ್ರನನ್ನು

ತದ್ವರ್ಷಪುರುಷಾಃ ಶ್ರುತಧರವೀರ್ಯಧರವಸುಂಧರೇಷಂಧರಸಂಜ್ಞಾ ಭಗವಂತಂ ವೇದಮಯಂ ಸೋಮಮಾತ್ಮಾನಂ ವೇದೇನ ಯಜಂತೇ ॥ ೧೧ ॥

ಸ್ವಗೋಭಿಃ ಪಿತೃದೇವೇಭ್ಯೋ ವಿಭಜನ್ ಕೃಷ್ಣಶುಕ್ಲಯೋಃ ।
ಪ್ರಜಾನಾಂ ಸರ್ವಾಸಾಂ ರಾಜಾಂಧಃ ಸೋಮೋ ನ ಆಸ್ತ್ವಿತಿ ॥ ೧೨ ॥

ಏವಂ ಸುರೋದಾದ್ಬಹಿಸ್ತದ್ದ್ವಿಗುಣಃ ಸಮಾನೇನಾವೃತೋ ಘೃತೋದೇನ ಯಥಾಪೂರ್ವಃ ಕುಶದ್ವೀಪೋ ಯಸ್ಮಿನ್ಕುಶಸ್ತಂಬೋ ದೇವಕೃತಸ್ತದ್ದ್ವೀಪಾಖ್ಯಾಕರೋ ಜ್ವಲನ ಇವಾಪರಃ ಸ್ವಶಷ್ಪರೋಚಿಷಾ ದಿಶೋ ವಿರಾಜಯತಿ ॥ ೧೩ ॥ ತದ್ದ್ವೀಪಪತಿಃ ಪ್ರೈಯವ್ರತೋ ರಾಜನ್ ಹಿರಣ್ಯರೇತಾ ನಾಮ ಸ್ವಂ ದ್ವೀಪಂ ಸಪ್ತಭ್ಯಃ ಸ್ವಪುತ್ರೇಭ್ಯೋ ಯಥಾಭಾಗಂ ವಿಭಜ್ಯ ಸ್ವಯಂ ತಪ ಆತಿಷ್ಠತ । ವಸುವಸುದಾನದೃಢರುಚಿನಾಭಿಗುಪ್ತಸ್ತುತ್ಯವ್ರತವಿವಿಕ್ತವಾಮದೇವನಾಮಭ್ಯಃ ॥ ೧೪ ॥ ತೇಷಾಂ ವರ್ಷೇಷು ಸೀಮಾಗಿರಯೋ ನದ್ಯಶ್ಚಾಭಿಜ್ಞಾತಾಃ ಸಪ್ತಸಪ್ತೈವ ಚಕ್ರಶ್ಚತುಃಶೃಂಗಃ ಕಪಿಲಶ್ಚಿತ್ರಕೂಟೋ ದೇವಾನೀಕ ಊರ್ಧ್ವರೋಮಾ ದ್ರವಿಣ ಇತಿ ರಸಕುಲ್ಯಾ ಮಧುಕುಲ್ಯಾ ಮಿತ್ರವಿಂದಾ ಶ್ರುತವಿಂದಾ ದೇವಗರ್ಭಾ ಘೃತಚ್ಯುತಾ ಮಂತ್ರ ಮಾಲೇತಿ ॥ ೧೫ ॥ ಯಾಸಾಂ ಪಯೋಭಿಃ ಕುಶದ್ವೀಪೌಕಸಃ ಕುಶಲಕೋವಿದಾಭಿಯುಕ್ತಕುಲಕಸಂಜ್ಞಾ ಭಗವಂತಂ ಜಾತವೇದಸರೂಪಿಣಂ ಕರ್ಮಕೌಶಲೇನ ಯಜಂತೇ ॥ ೧೬ ॥

ಪರಸ್ಯ ಬ್ರಹ್ಮಣಃ ಸಾಕ್ಷಾಜ್ಜಾತವೇದೋಽಸಿ ಹವ್ಯವಾಟ್ ।
ದೇವಾನಾಂ ಪುರುಷಾಂಗಾನಾಂ ಯಜ್ಞೇನ ಪುರುಷಂ ಯಜೇತಿ ॥ ೧೭ ॥

ತಥಾ ಘೃತೋದಾದ್ಬಹಿಃ ಕ್ರೌಂಚದ್ವೀಪೋ ದ್ವಿಗುಣಃ ಸ್ವಮಾನೇನ ಕ್ಷೀರೋದೇನ ಪರಿತ ಉಪಕ್ಲೃಪ್ತೋ ವೃತೋ ಯಥಾ ಕುಶದ್ವೀಪೋ ಘೃತೋದೇನ ಯಸ್ಮಿನ್ ಕ್ರೌಂಚೋ ನಾಮ ಪರ್ವತರಾಜೋ ದ್ವೀಪನಾಮನಿರ್ವರ್ತಕ ಆಸ್ತೇ ॥ ೧೮ ॥ ಯೋಽಸೌ ಗುಹಪ್ರಹರಣೋನ್ಮಥಿತನಿತಂಬಕುಂಜೋಽಪಿ ಕ್ಷೀರೋದೇನಾಸಿಚ್ಯಮಾನೋ ಭಗವತಾ ವರುಣೇನಾಭಿಗುಪ್ತೋ ವಿಭಯೋ ಬಭೂವ ॥ ೧೯ ॥

ವೇದಮಂತ್ರಗಳಿಂದ ಉಪಾಸನೆ ಮಾಡುತ್ತಾರೆ. ॥ ೧೧ ॥ ಶುಕ್ಲಪಕ್ಷ ಮತ್ತು ಕೃಷ್ಣಪಕ್ಷಗಳಲ್ಲಿ ತನ್ನ ಕಿರಣಗಳಿಂದ ವಿಭಾಗಗೈದು ದೇವತೆಗಳಿಗೆ, ಪಿತೃಗಳಿಗೆ ಹಾಗೂ ಸಮಸ್ತ ಪ್ರಾಣಿಗಳಿಗೆ ಅನ್ನವನ್ನು ಕೊಡುವಂತಹ ಆ ಚಂದ್ರದೇವನು ನಮಗೆ ರಾಜ (ರಂಜನೆ ಮಾಡುವವ) ನಾಗಲೀ – ಎಂದು ಸ್ತುತಿಸುತ್ತಾರೆ. ॥ ೧೨ ॥

ಇದೇ ರೀತಿಯಲ್ಲಿ ಮದ್ಯಸಮುದ್ರದ ಮುಂದೆ ಅದಕ್ಕೆ ಎರಡರಷ್ಟು ವಿಸ್ತಾರವುಳ್ಳ ಕುಶದ್ವೀಪವಿದೆ. ಹಿಂದೆ ಹೇಳಿದ ದ್ವೀಪಗಳಂತೆ ಇದೂ ಕೂಡ ತನ್ನಷ್ಟೇ ವಿಸ್ತಾರವಾದ ತುಪ್ಪದ ಸಮುದ್ರದಿಂದ ಬಳಸಲ್ಪಟ್ಟಿದೆ. ಇದರಲ್ಲಿ ಭಗವಂತನು ರಚಿಸಿದ ಒಂದು ದರ್ಭೆಯ ತೆಂಡೆಯಿರುವುದರಿಂದಲೇ ಇದಕ್ಕೆ ಕುಶದ್ವೀಪ ಎಂಬ ಹೆಸರಾಯಿತು. ಇದು ಮತ್ತೊಂದು ಅಗ್ನಿದೇವನಂತೆ ತನ್ನ ಕೋಮಲ ಹುಲ್ಲುಗಳ ಕಾಂತಿಯಿಂದ ಎಲ್ಲ ದಿಕ್ಕುಗಳನ್ನು ಬೆಳಗಿಸುತ್ತದೆ. ॥ ೧೩ ॥ ರಾಜೇಂದ್ರನೇ! ಪ್ರಿಯವ್ರತನ ಪುತ್ರ ಹಿರಣ್ಯರೇತ ಮಹಾರಾಜನು ಈ ದ್ವೀಪಕ್ಕೆ ಅಧಿಪತಿಯು. ಇವನು ಇದನ್ನು ಏಳು ವಿಭಾಗಗಳಾಗಿ ವಿಂಗಡಿಸಿ ಅವುಗಳನ್ನು ತನ್ನ ಏಳು ಪುತ್ರರಾದ ವಸು, ವಸುದಾನ, ದೃಢರುಚಿ, ನಾಭಿಗುಪ್ತ, ಸ್ತುತ್ಯವ್ರತ, ವಿವಿಕ್ತ ಮತ್ತು ವಾಮದೇವ – ಇವರಿಗೆ ಹಂಚಿಕೊಟ್ಟು ತಾನು ತಪಸ್ಸನ್ನಾಚರಿಸಲು ಹೊರಟು ಹೋದನು. ॥ ೧೪ ॥ ಅವುಗಳ ಗಡಿಗಳನ್ನು ನಿರ್ಧರಿಸುವ ಏಳು ಪರ್ವತಗಳು ಮತ್ತು ಏಳು ನದಿಗಳೂ ಇವೆ. ಚಕ್ರ, ಚತುಃಶೃಂಗ, ಕಪಿಲ, ಚಿತ್ರಕೂಟ, ದೇವಾನೀಕ, ಊರ್ಧ್ವರೋಮಾ ಮತ್ತು ದ್ರವಿಣ – ಇವು ಏಳು ಪರ್ವತಗಳೂ, ರಸಕುಲ್ಯಾ, ಮಧುಕುಲ್ಯಾ, ಮಿತ್ರವಿಂದಾ, ಶ್ರುತವಿಂದಾ, ದೇವಗರ್ಭಾ, ಘೃತಚ್ಯುತಾ ಮತ್ತು ಮಂತ್ರಮಾಲಾ ಎಂಬ ಏಳು ನದಿಗಳು ಪ್ರಸಿದ್ಧವಾಗಿವೆ. ॥ ೧೫ ॥ ಈ ನದಿಗಳಲ್ಲಿ ಮಿಂದು ಕುಶದ್ವೀಪ ನಿವಾಸಿಗಳಾದ ಕುಶಲ, ಕೋವಿದ, ಅಭಿಯುಕ್ತ ಹಾಗೂ ಕುಲಕರೆಂಬ ನಾಲ್ಕು ವರ್ಣದ ಪುರುಷರು ಅಗ್ನಿಸ್ವರೂಪನಾದ ಭಗವಾನ್ ಶ್ರೀಹರಿಯನ್ನು ಯಜ್ಞಾದಿ ಕರ್ಮಕೌಶಲ್ಯದಿಂದ ಉಪಾಸನೆಮಾಡಿ ಹೀಗೆ ಸ್ತುತಿಸುತ್ತಾರೆ. ॥ ೬ ॥ ಎಲೈ ಅಗ್ನಿದೇವನೇ! ನೀನು ಪರಬ್ರಹ್ಮನಿಗೆ ಸಾಕ್ಷಾತ್ತಾಗಿ ಹವಿಸ್ಸನ್ನು ಮುಟ್ಟಿಸುವವನಾಗಿರುವೆ. ಆದ್ದರಿಂದ ಶ್ರೀಭಗವಂತನಿಗೆ ಅಂಗಭೂತರಾದ ದೇವತೆಗಳ ಕುರಿತು ನಾವು ಮಾಡುವ ಯಜ್ಞಗಳ ಮೂಲಕ ಶ್ರೀಹರಿಗೆ ಯಜ್ಞಪೂಜೆಯು ಸಂತೃಪ್ತಿಯುಂಟಾಗುವಂತೆ ಮಾಡು. ॥ ೧೭ ॥

ಎಲೈ ರಾಜನೇ! ಮತ್ತೆ ಘೃತಸಮುದ್ರದ ಮುಂದೆ ಅದಕ್ಕೆ ಎರಡರಷ್ಟು ವಿಸ್ತಾರವುಳ್ಳ ಕ್ರೌಂಚದ್ವೀಪವಿದೆ. ಕುಶದ್ವೀಪವು ತುಪ್ಪದ ಸಮುದ್ರದಿಂದ ಸುತ್ತುವರಿದಂತೆ ತನ್ನಷ್ಟೇ ವಿಸ್ತಾರವಾದ ಹಾಲಿನ ಸಮುದ್ರದಿಂದ ಈ ಕ್ರೌಂಚದ್ವೀಪವು ಸುತ್ತುವರಿಯಲ್ಪಟ್ಟಿದೆ. ಇಲ್ಲಿ ಕ್ರೌಂಚವೆಂಬ ದೊಡ್ಡ ಪರ್ವತವಿದೆ. ಅದರಿಂದ ಇದರ ಹೆಸರು ಕ್ರೌಂಚದ್ವೀಪವೆಂದಾಯಿತು. ॥ ೧೮ ॥ ಈ ಪರ್ವತವು ಹಿಂದೆ ಕಾರ್ತಿಕೇಯಸ್ವಾಮಿಯ ಶಕ್ತ್ಯಾಯುಧದಿಂದ ಭೇದಿಸಲ್ಪಟ್ಟು ಗಾಯಗೊಳಿಸಿದ್ದರೂ ಕ್ಷೀರಸಮುದ್ರದಿಂದ ನೆನೆಸಲ್ಪಟ್ಟು, ವರುಣದೇವರಿಂದ ರಕ್ಷಣೆಗೊಂಡು ನಿರ್ಭಯವಾಯಿತು. ॥ ೧೯ ॥ ಪ್ರಿಯವ್ರತನ ಪುತ್ರ ಮಹಾರಾಜಾ ಘೃತ

ತಸ್ಮಿನ್ನಪಿ ಪ್ರೈಯವ್ರತೋ ಘೃತಪೃಷ್ಠೋ ನಾಮಾಧಿಪತಿಃ ಸ್ವೇ ದ್ವೀಪೇ ವರ್ಷಾಣಿ ಸಪ್ತ ವಿಭಜ್ಯ ತೇಷು ಪುತ್ರನಾಮಸು ಸ್ವತುರಿಕ್ಥಾದಾನ್ ವರ್ಷಪಾನ್ನಿವೇಶ್ಯ ಸ್ವಯಂ ಭಗವಾನ್ಭಗವತಃ ಪರಮಕಲ್ಯಾಣಯಶಸ ಆತ್ಮಭೂತಸ್ಯ ಹರೇಶ್ಚರಣಾರವಿಂದಮುಪಜಗಾಮ ॥ ೨೦ ॥ ಆಮೋ ಮಧುರುಹೋ ಮೇಘಪೃಷ್ಠಃ ಸುಧಾಮಾ ಭ್ರಾಜಿಷ್ಠೋ ಲೋಹಿತಾರ್ಣೋ ವನಸ್ಪತಿರಿತಿ ಘೃತಪೃಷ್ಠಸುತಾಸ್ತೇಷಾಂ ವರ್ಷಗಿರಯಃ ಸಪ್ತ ಸಪ್ತೈವ ನದ್ಯಶ್ಚಾಭಿಖ್ಯಾತಾಃ ಶುಕ್ಲೋ ವರ್ಧಮಾನೋ ಭೋಜನ ಉಪಬರ್ಹಿಣೋ ನಂದೋ ನಂದನಃ ಸರ್ವತೋಭದ್ರ ಇತಿ ಅಭಯಾ ಅಮೃತೌಘಾ ಆರ್ಯಕಾ ತೀರ್ಥವತೀ ವೃತ್ತಿರೂಪವತೀ ಪವಿತ್ರವತೀ ಶುಕ್ಲೇತಿ ॥ ೨೧॥ ಯಾಸಾಮಂಭಃ ಪವಿತ್ರಮಮಲಮುಪಯುಂಜಾನಾಃ ಪುರುಷಋಷಭದ್ರವಿಣದೇವಕಸಂಜ್ಞಾ ವರ್ಷಪುರುಷಾ ಆಪೋಮಯಂ ದೇವಮಪಾಂ ಪೂರ್ಣೇನಾಂಜಲಿನಾ ಯಜಂತೇ ॥ ೨೨ ॥

ಆಪಃ ಪುರುಷವೀರ್ಯಾಃ ಸ್ಥ ಪುನಂತೀರ್ಭೂರ್ಭುವಃ ಸುವಃ।
ತಾ ನಃ ಪುನೀತಾಮೀವಘ್ನೀಃ ಸ್ಪೃಶತಾಮಾತ್ಮನಾ ಭುವ ಇತಿ ॥ ೨೩ ॥

ಏವಂ ಪುರಸ್ತಾತ್ಕ್ಷೀರೋದಾತ್ಪರಿತ ಉಪವೇಶಿತಃ ಶಾಕದ್ವೀಪೋ ದ್ವಾತ್ರಿಂಶಲ್ಲಕ್ಷಯೋಜನಾಯಾಮಃ ಸಮಾನೇನ ಚ ದಧಿಮಂಡೋದೇನ ಪರೀತೋ ಯಸ್ಮಿನ್ ಶಾಕೋ ನಾಮ ಮಹೀರುಹಃ ಸ್ವಕ್ಷೇತ್ರವ್ಯಪದೇಶಕೋ ಯಸ್ಯ ಹ ಮಹಾಸುರಭಿಗಂಧಸ್ತಂ ದ್ವೀಪಮನುವಾಸಯತಿ ॥ ೨೪॥ ತಸ್ಯಾಪಿ ಪ್ರೈಯವ್ರತ ಏವಾಧಿಪತಿರ್ನಾಮ್ನಾ ಮೇಧಾತಿಥಿಃ ಸೋಽಪಿ ವಿಭಜ್ಯ ಸಪ್ತ ವರ್ಷಾಣಿ ಪುತ್ರನಾಮಾನಿ ತೇಷು ಸ್ವಾತ್ಮಜಾನ್ ಪುರೋಜವಮನೋಜವಪವಮಾನಧೂಮ್ರಾನೀಕಚಿತ್ರರೇಫಬಹುರೂಪವಿಶ್ವಧಾರಸಂಜ್ಞಾನ್ನಿಧಾಪ್ಯಾಧಿಪತೀನ್‌ಸ್ವಯಂ ಭಗವತ್ಯನಂತ ಆವೇಶಿತಮತಿಸ್ತಪೋವನಂ ಪ್ರವಿವೇಶ ॥ ೨೫ ॥ ಏತೇಷಾಂ ವರ್ಷಮರ್ಯಾದಾಗಿರಯೋ ನದ್ಯಶ್ಚ ಸಪ್ತ ಸಪ್ತೈವ

ಪೃಷ್ಠನು ಇಲ್ಲಿಯ ಅಧಿಪತಿಯು. ಅವನು ಮಹಾಜ್ಞಾನಿಯಾಗಿದ್ದನು. ಅವನು ಇದನ್ನು ಏಳು ವರ್ಷಗಳಾಗಿ ವಿಂಗಡಿಸಿ ಅವುಗಳಲ್ಲಿ ಅದೇ ಹೆಸರಿನ ತನ್ನ ಏಳು ಪುತ್ರರನ್ನು ಉತ್ತರಾಧಿಕಾರಿಗಳಾಗಿ ನೇಮಿಸಿ ತಾನು ಸಮಸ್ತ ಜೀವಿಗಳಿಗೆ ಅಂತರಾತ್ಮನಾಗಿ ಪರಮ ಮಂಗಲಮಯ ಕೀರ್ತಿಯುಳ್ಳ ಭಗವಾನ್ ಶ್ರೀಹರಿಯ ಅಡಿದಾವರೆಗಳನ್ನು ಶರಣು ಹೊಂದಿದನು. ॥ ೨೦ ॥ ಆಮ, ಮಧುರುಹ, ಮೇಘಪೃಷ್ಠ, ಸುಧಾಮಾ, ಭ್ರಾಜಿಷ್ಠ, ಲೋಹಿತಾರ್ಣ ಮತ್ತು ವನಸ್ಪತಿ ಎಂಬುವರೇ ಘೃತಪೃಷ್ಠನ ಏಳು ಪುತ್ರರು. ಅವರ ವರ್ಷಗಳಲ್ಲಿಯೂ ಏಳು ಪರ್ವತಗಳು ಮತ್ತು ಏಳು ನದಿಗಳು ಹರಿಯುತ್ತಿದ್ದುವು. ಶುಕ್ಲ, ವರ್ಧಮಾನ, ಭೋಜನ, ಉಪಬರ್ಹಿಣ, ನಂದ, ನಂದನ ಮತ್ತು ಸರ್ವತೋಭದ್ರ ಎಂಬ ಏಳೂ ಪರ್ವತಗಳೂ ; ಅಭಯಾ, ಅಮೃತೌಘಾ, ಆರ್ಯಕಾ, ತೀರ್ಥವತಿ, ವೃತ್ತಿರೂಪವತೀ, ಪವಿತ್ರವತೀ ಹಾಗೂ ಶುಕ್ಲಾ ಎಂಬ ಏಳು ನದಿಗಳು. ॥ ೨೧ ॥ ಅವುಗಳ ಪವಿತ್ರವೂ, ನಿರ್ಮಲವೂ ಆದ ಜಲವನ್ನು ಸೇವಿಸುವ – ಪುರುಷ , ಋಷಭ, ದ್ರವಿಣ ಮತ್ತು ದೇವಕ ಎಂಬ ನಾಲ್ಕು ವರ್ಣಗಳಿಗೆ ಸೇರಿದ ಅಲ್ಲಿಯ ನಿವಾಸಿಗಳು ನೀರುತುಂಬಿದ ಅಂಜಲಿಗಳಿಂದ ನೀರಿನ ದೇವತೆಯಾದ ವರುಣದೇವರನ್ನು ಉಪಾಸನೆಮಾಡುವರು. ॥ ೨೨ ॥ (ಅವರು ಈ ಮಂತ್ರದಿಂದ ಜಲಾಧಿಪತಿಯನ್ನು ಸ್ತುತಿಸುವರು) – ಎಲೈ ಜಲ ದೇವತೆಯೇ! ನೀನು ಪರಮಪುರುಷನಿಂದ ಸಾಮರ್ಥ್ಯವನ್ನು ಪಡೆದಿದ್ದೀಯೆ. ಭೂಃ ಭುವಃ ಸುವಃ ಎಂಬ ಮೂರು ಲೋಕಗಳನ್ನೂ ಪವಿತ್ರಗೊಳಿಸುತ್ತಿರುವೆ. ಏಕೆಂದರೆ, ಸ್ವಾಭಾವಿಕವಾಗಿಯೇ ಪಾಪಗಳನ್ನು ನಾಶಮಾಡುವವನಾಗಿರುವೆ. ನಾವು ನಮ್ಮ ಶರೀರಗಳಿಂದ ನಿನ್ನನ್ನು ಸ್ಪರ್ಶಿಸುತ್ತೇವೆ, ನೀನು ನಮ್ಮ ಅಂಗಗಳನ್ನು ಪವಿತ್ರಗೊಳಿಸು. ॥ ೨೩ ॥

ಹೀಗೆಯೇ ಕ್ಷೀರಸಮುದ್ರದಿಂದ ಮುಂದೆ ಅದರ ನಾಲ್ಕು ಕಡೆಗಳಲ್ಲಿಯೂ ಮೂವತ್ತೆರಡುಲಕ್ಷ ಯೋಜನ ವಿಸ್ತಾರವುಳ್ಳ ಶಾಕ ದ್ವೀಪವಿದೆ. ಇದು ತನ್ನಷ್ಟೇ ವಿಸ್ತಾರವಾದ ಮೊಸರಿನ ಸಮುದ್ರದಿಂದ ಬಳಸಿಕೊಂಡಿದೆ. ಈ ದ್ವೀಪದಲ್ಲಿ ಶಾಕವೆಂಬ ಹೆಸರಿನ ಮಹಾವೃಕ್ಷವೊಂದುಂಟು. ಈ ಕ್ಷೇತ್ರಕ್ಕೆ ಶಾಕದ್ವೀಪವೆಂಬ ಹೆಸರು ಬರಲು ಈ ವೃಕ್ಷವೇ ಕಾರಣವು. ಈ ವೃಕ್ಷವು ಅದ್ಭುತವಾದ ಪರಿಮಳದಿಂದ ಘಮಘಮಿಸುತ್ತಾ ಇಡೀ ದ್ವೀಪವನ್ನು ತನ್ನ ಸುವಾಸನೆಯಿಂದ ತುಂಬುತ್ತಿದೆ. ॥ ೨೪ ॥ ಇದರ ಅಧಿಪತಿಯಾದ ಮೇಧಾತಿಥಿಯೂ ಪ್ರಿಯವ್ರತರಾಜನ ಪುತ್ರನೇ. ಅವನೂ ಕೂಡ ತನ್ನ ಈ ದ್ವೀಪವನ್ನು ಏಳು ವರ್ಷಗಳನ್ನಾಗಿ ವಿಂಗಡಿಸಿ, ಅವುಗಳ ಆಧಿಪತ್ಯವನ್ನು ಆಯಾ ದ್ವೀಪದ ಹೆಸರನ್ನೇ ಹೊಂದಿರುವ ತನ್ನ ಪುತ್ರರಾದ – ಪುರೋಜವ, ಮನೋಜವ, ಪವಮಾನ, ಧೂಮ್ರಾನೀಕ, ಚಿತ್ರರೇಫ, ಬಹುರೂಪ ಮತ್ತು ವಿಶ್ವಧಾರ – ಎಂಬ ಏಳು ಮಂದಿಗೆ ಒಪ್ಪಿಸಿಕೊಟ್ಟು ತಾನು ಭಗವಾನ್ ಅನಂತನಲ್ಲಿ ದತ್ತಚಿತ್ತನಾಗಿ ತಪೋವನಕ್ಕೆ ತೆರಳಿದನು. ॥ ೨೫ ॥ ಈ ವರ್ಷಗಳಲ್ಲಿಯೂ ಏಳು ಪರ್ವತಗಳೂ, ಏಳು ನದಿಗಳು ಇವೆ. ಈಶಾನ, ಉರುಶೃಂಗ, ಬಲಭದ್ರ, ಶತಕೇಸರ, ಸಹಸ್ರಸ್ರೋತ, ದೇವಪಾಲ ಮತ್ತು ಮಹಾನಸ

ಈಶಾನ ಉರುಶೃಂಗೋ ಬಲಭದ್ರಃ ಶತಕೇಸರಃ ಸಹಸ್ರ-ಸ್ರೋತೋ ದೇವಪಾಲೋ ಮಹಾನಸ ಇತಿ ಅನಘಾಽಽಯುರ್ದಾ ಉಭಯಸ್ಪೃಷ್ಟಿರಪರಾಜಿತಾ ಪಂಚಪದೀ ಸಹಸ್ರಸ್ರುತಿರ್ನಿಜಧೃತಿರಿತಿ ॥ ೨೬ ॥ ತದ್ವರ್ಷಪುರುಷಾ ಋತವ್ರತಸತ್ಯವ್ರತದಾನವ್ರತಾನುವ್ರತನಾಮಾನೋ ಭಗವಂತಂ ವಾಯ್ವಾತ್ಮಕಂ ಪ್ರಾಣಾಯಾಮವಿಧೂತ ರಜಸ್ತಮಸಃ ಪರಮಸಮಾಧಿನಾ ಯಜಂತೇ ॥ ೨೭ ॥

ಅಂತಃ ಪ್ರವಿಶ್ಯ ಭೂತಾನಿ ಯೋ ಬಿಭರ್ತ್ಯಾತ್ಮಕೇತುಭಿಃ ।
ಅಂತರ್ಯಾಮೀಶ್ವರಃ ಸಾಕ್ಷಾತ್ಪಾತು ನೋ ಯದ್ವಶೇ ಸ್ಫುಟಮ್ ॥ ೨೮ ॥

ಏವಮೇವ ದಧಿಮಂಡೋದಾತ್ಪರತಃ ಪುಷ್ಕರದ್ವೀಪ-ಸ್ತತೋ ದ್ವಿಗುಣಾಯಾಮಃ ಸಮಂತತ ಉಪಕಲ್ಪಿತಃ ಸಮಾನೇನ ಸ್ವಾದೂದಕೇನ ಸಮುದ್ರೇಣ ಬಹಿರಾವೃತೋ ಯಸ್ಮಿನ್ಬೃಹತ್ಪುಷ್ಕರಂ ಜ್ವಲನಶಿಖಾಮಲಕನಕಪತ್ರಾಯುತಾ-ಯುತಂ ಭಗವತಃ ಕಮಲಾಸನಸ್ಯಾಧ್ಯಾಸನಂ ಪರಿಕಲ್ಪಿ-ತಮ್ ॥ ೨೯ ॥ ತದ್ದ್ವೀಪಮಧ್ಯೇ ಮಾನಸೋತ್ತರನಾ-ಮೈಕ ಏವಾರ್ವಾಚೀನ ಪರಾಚೀನವರ್ಷಯೋರ್ಮ-ರ್ಯಾದಾಚಲೋಽಯುತಯೋಜನೋಚ್ಛ್ರಾಯಾಯಾಮೋ ಯತ್ರ ತು ಚತಸೃಷು ದಿಕ್ಷು ಚತ್ವಾರಿ ಪುರಾಣಿ ಲೋಕಪಾ-ಲಾನಾಮಿಂದ್ರಾದೀನಾಂ ಯದುಪರಿಷ್ಟಾತ್ಸೂರ್ಯರಥಸ್ಯ ಮೇರುಂ ಪರಿಭ್ರಮತಃ ಸಂವತ್ಸರಾತ್ಮಕಂ ಚಕ್ರಂ ದೇವಾನಾ-ಮಹೋರಾತ್ರಾಭ್ಯಾಂ ಪರಿಭ್ರಮತಿ ॥ ೩೦ ॥ ತದ್ದ್ವೀಪಸ್ಯಾ-ಪ್ಯಧಿಪತಿಃ ಪ್ರೈಯವ್ರತೋ ವೀತಿಹೋತ್ರೋ ನಾಮೈತ-ಸ್ಯಾತ್ಮಜೌ ರಮಣಕಧಾತಕಿನಾಮಾನೌ ವರ್ಷಪತೀ ನಿಯುಜ್ಯ ಸ ಸ್ವಯಂ ಪೂರ್ವಜವದ್ಭಗವತ್ಕರ್ಮಶೀಲ ಏವಾಸ್ತೇ ॥ ೩೧ ॥ ತದ್ವರ್ಷಪುರುಷಾ ಭಗವಂತಂ ಬ್ರಹ್ಮರೂಪಿಣಂ ಸಕರ್ಮಕೇಣ ಕರ್ಮಣಾಽಽರಾಧ-ಯಂತೀದಂ ಚೋದಾಹರಂತಿ ॥ ೩೨ ॥

ಯತ್ತತ್ಕರ್ಮಮಯಂ ಲಿಂಗಂ
ಬ್ರಹ್ಮಲಿಂಗಂ ಜನೋಽರ್ಚಯೇತ್ ।
ಏಕಾಂತಮದ್ವಯಂ ಶಾಂತಂ
ತಸ್ಮೈ ಭಗವತೇ ನಮ ಇತಿ ॥ ೩೩ ॥

ಎಂಬ ಏಳು ಗಿರಿಗಳು ಇದರ ಎಲ್ಲೆಯನ್ನು ನಿರ್ಧರಿಸುವುವು. ಅನಘಾ, ಆಯುರ್ದಾ, ಉಭಯಸ್ಪೃಷ್ಟಿ ಅಪರಾಜಿತಾ, ಪಂಚಪದೀ, ಸಹಸ್ರಶ್ರುತಿ, ಹಾಗೂ ನಿಜಧೃತಿ – ಎಂಬಿವೇ ಆ ಏಳು ಮಹಾನದಿಗಳು. ॥ ೨೬ ॥ ಆ ವರ್ಷದಲ್ಲಿರುವ ಋತವ್ರತ, ಸತ್ಯವ್ರತ, ದಾನವ್ರತ ಮತ್ತು ಅನುವ್ರತರೆಂಬ ನಾಲ್ಕು ವರ್ಣದವರು. ಇವರು ಪ್ರಾಣಾಯಾಮದಿಂದ ತಮ್ಮ ರಜೋಗುಣ-ತಮೋಗುಣಗಳನ್ನು ನೀಗಿದವರಾಗಿ ವಾಯುರೂಪೀ ಶ್ರೀಹರಿಯನ್ನು ಆರಾಧಿಸುತ್ತಾರೆ. ಈ ಮಂತ್ರವನ್ನು ಜಪಿಸುತ್ತಾ ಅವರು ಶ್ರೀಹರಿಯನ್ನು ಉಪಾಸನೆ ಮಾಡುತ್ತಾರೆ. ॥ ೨೭ ॥ ಯಾರು ತನ್ನ ಪ್ರಾಣಾಪಾನಾದಿ ವೃತ್ತಿಗಳೆಂಬ ಧ್ವಜಗಳೊಡನೆ ಕೂಡಿ ಪ್ರಾಣಿಗಳ ಒಳಹೊಕ್ಕು ಅವುಗಳನ್ನು ರಕ್ಷಿಸುತ್ತಿರುವನೋ ಮತ್ತು ಸಮಸ್ತ ದೃಶ್ಯ ಜಗತ್ತು ಯಾರ ಅಧೀನವಾಗಿದೆಯೋ ಆ ಸಾಕ್ಷಾತ್ ಅಂತರ್ಯಾಮಿ ವಾಯುರೂಪನಾದ ಭಗವಂತನು ನಮ್ಮನ್ನು ರಕ್ಷಿಸಲಿ. ॥ ೨೮ ॥

ಹೀಗೆಯೇ ಮೊಸರಿನ ಸಮುದ್ರದ ಮುಂದೆ ಅದರ ನಾಲ್ಕೂ ಕಡೆಗಳಲ್ಲಿ ಅದಕ್ಕೆ ಎರಡರಷ್ಟು ವಿಸ್ತಾರವುಳ್ಳ ಪುಷ್ಕರದ್ವೀಪವಿದೆ. ಅದನ್ನು ಸುತ್ತಲೂ ಅಷ್ಟೇ ವಿಸ್ತಾರವಾದ ಸಿಹಿನೀರಿನ ಸಮುದ್ರವು ಬಳಸಿಕೊಂಡಿದೆ. ಅಲ್ಲಿ ಲಕ್ಷಾಂತರ ಸುವರ್ಣಮಯವಾದ ದಳಗಳಿಂದ ಕೂಡಿದ ಅಗ್ನಿಶಿಖೆಯಂತೆ ಬೆಳಗುತ್ತಿರುವ ಒಂದು ದೊಡ್ಡ ಕೆಂದಾವರೆ ಇದೆ. ಅದು ಬ್ರಹ್ಮದೇವರ ಆಸನವೆಂದು ತಿಳಿಯಲಾಗುತ್ತದೆ. (ಆ ಕಮಲದಿಂದಲೇ ಆ ದ್ವೀಪಕ್ಕೆ ಪುಷ್ಕರದ್ವೀಪವೆಂಬ ಹೆಸರಾಯಿತು). ॥ ೨೯ ॥ ಅದರ ನಟ್ಟನಡುವೆ ಪೂರ್ವ-ಪಶ್ಚಿಮಗಳ ಗಡಿಯನ್ನು ನಿರ್ಧರಿಸುವ ಮಾನಸೋತ್ತರವೆಂಬ ಒಂದೇ ಪರ್ವತವಿದೆ. ಇದು ಹತ್ತುಸಾವಿರ ಯೋಜನ ಎತ್ತರವೂ, ಅಷ್ಟೇ ಉದ್ದವೂ ಇದೆ. ಅದರ ಮೇಲೆ ನಾಲ್ಕೂ ದಿಕ್ಕುಗಳಲ್ಲಿಯೂ ಕ್ರಮವಾಗಿ ಇಂದ್ರನೇ ಮುಂತಾದ ಲೋಕಪಾಲರ ನಾಲ್ಕು ಪುರಗಳಿವೆ. ಆ ಪರ್ವತದ ಮೇಲ್ಗಡೆಯಲ್ಲಿ ಸಂಚರಿಸುವ ಸೂರ್ಯದೇವರ ರಥದ ಸಂವತ್ಸರವೆಂಬ ಚಕ್ರವು ದೇವತೆಗಳಿಗೆ ಹಗಲೂ-ರಾತ್ರಿಗಳೆನಿಸಿದ ಉತ್ತರಾಯಣ ಮತ್ತು ದಕ್ಷಿಣಾಯನರೂಪವಾಗಿ ಸದಾ ಸುತ್ತುತ್ತಿರುತ್ತದೆ. ॥ ೩೦ ॥ ಆ ದ್ವೀಪಕ್ಕೆ ಅಧಿಪತಿಯಾಗಿ ಪ್ರಿಯವ್ರತಪುತ್ರನಾದ ವೀತಿಹೋತ್ರ ಮಹಾರಾಜನೂ ಕೂಡ ತನ್ನ ಪುತ್ರರಾದ ರಮಣಕ ಮತ್ತು ಧಾತಕಿ ಎಂಬುವರಿಗೆ ಎರಡು ವರ್ಷಗಳ ಆಧಿಪತ್ಯವನ್ನು ಒಪ್ಪಿಸಿ ತನ್ನ ಅಣ್ಣಂದಿರಂತೆ ಭಗವತ್ಸೇವೆಯಲ್ಲೇ ತತ್ಪರನಾಗಿದ್ದಾನೆ. ॥ ೩೧ ॥ ಅಲ್ಲಿಯ ನಿವಾಸಿಗಳು ಬ್ರಹ್ಮರೂಪಿಯಾದ ಶ್ರೀಭಗವಂತನನ್ನು ಬ್ರಹ್ಮಲೋಕಪ್ರಾಪ್ತಿಯನ್ನು ಮಾಡಿಸುವಂತಹ ಕರ್ಮಗಳಿಂದ ಆರಾಧಿಸುತ್ತಾ ಈ ಮಂತ್ರಜಪದಿಂದ ಸ್ತುತಿಸುತ್ತಾರೆ – ॥ ೩೨ ॥ ಕರ್ಮಫಲಸ್ವರೂಪನೂ, ಬ್ರಹ್ಮಸ್ವರೂಪವನ್ನು ಪ್ರಕಾಶಪಡಿಸುವವನೂ, ಬ್ರಹ್ಮ (ವೇದ) ಪ್ರತಿಪಾದ್ಯನೂ, ಪರಬ್ರಹ್ಮವೊಂದರಲ್ಲೇ ತತ್ಪರನೂ, ಅದ್ವಿತೀಯನೂ, ಸರ್ವರಿಂದ ಪೂಜಿತನೂ, ಶಾಂತಸ್ವರೂಪಿಯೂ ಆದ ಭಗವಾನ್ ಬ್ರಹ್ಮದೇವರಿಗೆ ನಮಸ್ಕಾರವು. ॥ ೩೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ ! ಆ ಸಿಹಿನೀರಿನಿಂದಾಚೆ ಲೋಕಾಲೋಕವೆಂಬ ಪರ್ವತವಿದೆ. ಅದು ಸೂರ್ಯನ ಬೆಳಕುಬೀಳುವ ಪ್ರದೇಶಗಳಿಗೂ ಮತ್ತು ಬೆಳಕು

*ಋಷಿರುವಾಚ*

**ತತಃ ಪರಸ್ತಾಲ್ಲೋಕಾಲೋಕನಾಮಾಚಲೋ ಲೋಕಾಲೋಕಯೋರಂತರಾಲೇ ಪರಿತ ಉಪಕ್ಷಿಪ್ತಃ ॥ ೩೪ ॥ ಯಾವನ್ಮಾನಸೋತ್ತರಮೇರ್ವೋರಂತರಂ ತಾವತೀ ಭೂಮಿಃ ಕಾಂಚನ್ಯನ್ಯಾಽಽದರ್ಶತಲೋಪಮಾ ಯಸ್ಯಾಂ ಪ್ರಹಿತಃ ಪದಾರ್ಥೋ ನ ಕಥಂಚಿತ್ಪುನಃ ಪ್ರತ್ಯುಪಲಭ್ಯತೇ ತಸ್ಮಾತ್ಸರ್ವಸತ್ತ್ವಪರಿಹೃತಾಽಽಸೀತ್ ॥ ೩೫ ॥**

**ಲೋಕಾಲೋಕ ಇತಿ ಸಮಾಖ್ಯಾ ಯದನೇನಾಚಲೇನ ಲೋಕಾಲೋಕಸ್ಯಾಂತರ್ವರ್ತಿನಾವಸ್ಥಾಪ್ಯತೇ ॥ ೩೬ ॥ ಸ ಲೋಕತ್ರಯಾಂತೇ ಪರಿತ ಈಶ್ವರೇಣ ವಿಹಿತೋ ಯಸ್ಮಾತ್ಸೂರ್ಯಾದೀನಾಂ ಧ್ರುವಾಪವರ್ಗಾಣಾಂ ಜ್ಯೋತಿರ್ಗಣಾನಾಂ ಗಭಸ್ತಯೋಽರ್ವಾಚೀನಾಂಸ್ತ್ರೀಲ್ಲೋಕಾನಾವಿತನ್ವಾನಾ ನ ಕದಾಚಿತ್ಪರಾಚೀನಾ ಭವಿತುಮುತ್ಸಹಂತೇ ತಾವದುನ್ನಹನಾಯಾಮಃ ॥ ೩೭ ॥**

**ಏತಾವಾಲ್ಲೋಕವಿನ್ಯಾಸೋ ಮಾನಲಕ್ಷಣಸಂಸ್ಥಾಭಿರ್ವಿಚಿಂತಿತಃ ಕವಿಭಿಃ ಸ ತು ಪಂಚಾಶತ್ಕೋಟಿಗಣಿತಸ್ಯ ಭೂಗೋಲಸ್ಯ ತುರೀಯಭಾಗೋಽಯಂ ಲೋಕಾಲೋಕಾಚಲಃ ॥ ೩೮ ॥ ತದುಪರಿಷ್ಟಾಚ್ಚತಸೃಷ್ವಾಶಾಸ್ವಾತ್ಮಯೋನಿನಾಖಿಲಜಗದ್ಗುರುಣಾಧಿನಿವೇಶಿತಾ ಯೇ ದ್ವಿರದಪತಯ ಋಷಭಃ ಪುಷ್ಕರಚೂಡೋ ವಾಮನೋಽಪರಾಜಿತ ಇತಿ ಸಕಲಲೋಕಸ್ಥಿತಿಹೇತವಃ ॥ ೩೯ ॥ ತೇಷಾಂ ಸ್ವವಿಭೂತೀನಾಂ ಲೋಕಪಾಲಾನಾಂ ಚ ವಿವಿಧವೀರ್ಯೋಪಬೃಂಹಣಾಯ ಭಗವಾನ್ಪರಮಮಹಾಪುರುಷೋ ಮಹಾವಿಭೂತಿಪತಿರಂತರ್ಯಾಮ್ಯಾತ್ಮನೋ ವಿಶುದ್ಧ ಸತ್ತ್ವಂ ಧರ್ಮಜ್ಞಾನವೈರಾಗ್ಯೈಶ್ವರ್ಯಾದ್ಯಷ್ಟಮಹಾಸಿದ್ಧ್ಯುಪಲಕ್ಷಣಂ ವಿಷ್ವಕ್ಸೇನಾದಿಭಿಃ ಸ್ವಪಾರ್ಷದಪ್ರವರೈಃ ಪರಿವಾರಿತೋ ನಿಜವರಾಯುಧೋಪಶೋಭಿತೈರ್ನಿಜಭುಜದಂಡೈಃ ಸಂಧಾರಯಮಾಣಸ್ತಸ್ಮಿನ್ ಗಿರಿವರೇ ಸಮಂತಾತ್ಸಕಲಲೋಕಸ್ವಸ್ತಯ ಆಸ್ತೇ ॥ ೪೦ ॥ ಆಕಲ್ಪಮೇವಂ ವೇಷಂ ಗತ ಏಷ ಭಗವಾನಾತ್ಮಯೋಗಮಾಯಯಾ ವಿರಚಿತವಿವಿಧಲೋಕಯಾತ್ರಾಗೋಪೀಥಾ ಯೇತ್ಯರ್ಥಃ ॥ ೪೧ ॥ ಯೋಽಂತರ್ವಿಸ್ತಾರ ಏತೇನ ಹ್ಯಲೋಕಪರಿಮಾಣಂ ಚ ವ್ಯಾಖ್ಯಾತಂ ಯದ್ಬಹಿರ್ಲೋಕಾಲೋಕಾಚಲಾತ್ । ತತಃ ಪರಸ್ತಾದ್ಯೋಗೇಶ್ವರಗತಿಂ ವಿಶುದ್ಧಾಮುದಾಹರಂತಿ ॥ ೪೨ ॥**

ಬೆಳಕಿನ ಪ್ರದೇಶಗಳಿಗೂ ಬೆಳಗದ ಕತ್ತಲೆಯ ಪ್ರದೇಶಗಳಿಗೂ ಗಡಿಯಾಗಿ ಮಧ್ಯಭಾಗದಲ್ಲಿದೆ. ॥ ೩೪ ॥ ಮೇರುವಿನಿಂದ ಹಿಡಿದು ಮಾನಸೋತ್ತರ ಪರ್ವತದವರೆಗೆ ಎಷ್ಟು ದೂರವಿದೆಯೋ, ಅಷ್ಟೇ ವಿಸ್ತಾರವುಳ್ಳ ಭೂಮಿಯು ಸಿಹಿನೀರಿನ ಸಮುದ್ರದ ಆಚೆಗೆ ಇದೆ. ಅದರ ಮುಂದೆ ಕನ್ನಡಿಯಂತೆ ಶುದ್ಧವಾದ ಸ್ವರ್ಣಭೂಮಿಯಿದೆ. ಅದರಲ್ಲಿ ಬಿದ್ದ ವಸ್ತುವು ಮತ್ತೆ ಸಿಗುವುದಿಲ್ಲ. ಆದ್ದರಿಂದ ಅಲ್ಲಿ ದೇವತೆಗಳಲ್ಲದೆ ಬೇರೆ ಯಾವ ಪ್ರಾಣಿಯೂ ವಾಸಿಸುವುದಿಲ್ಲ. ॥ ೩೫ ॥ ಲೋಕಾಲೋಕ ಪರ್ವತವು ಬೆಳಕು ಮತ್ತು ಕತ್ತಲೆಗಳ ಪ್ರದೇಶಗಳೆರಡಕ್ಕೂ ನಡುವೆ ಗಡಿಯಾಗಿದೆ. ಇದರಿಂದಲೇ ಇದಕ್ಕೆ ಈ ಹೆಸರು ಬಂದಿದೆ. ॥ ೩೬॥ ಪರಮಾತ್ಮನು ಇದನ್ನು ಮೂರೂ ಲೋಕಗಳಿಗೂ ಹೊರಗೆ ಅವುಗಳ ನಾಲ್ಕೂ ಕಡೆಗಳ ಎಲ್ಲೆಗಳ ರೂಪದಲ್ಲಿ ಸ್ಥಾಪಿಸಿರುವನು. ಇದರ ಒಂದು ಕಡೆಯಿಂದ-ಮೂರು ಲೋಕಗಳನ್ನು ಪ್ರಕಾಶಿತಗೊಳಿಸುವ ಸೂರ್ಯನಿಂದ ಹಿಡಿದು ಧ್ರುವಲೋಕದವರೆಗಿನ ಸಮಸ್ತ ಜ್ಯೋತಿಮಂಡಲಗಳ ಕಿರಣಗಳು ಮತ್ತೊಂದು ಕಡೆಗೆ ಹೋಗದಷ್ಟು ಈ ಪರ್ವತವು ಎತ್ತರ ಮತ್ತು ಉದ್ದವಿದೆ. ॥ ೩೭ ॥

ವಿದ್ವಾಂಸರು – ಪ್ರಮಾಣ, ಲಕ್ಷಣ ಮತ್ತು ಸ್ಥಿತಿಗನುಸಾರವಾಗಿ ಸಮಸ್ತ ಲೋಕಗಳ ವಿಸ್ತಾರವು ಇಷ್ಟೇ ಎಂದು ನಿರೂಪಿಸಿದ್ದಾರೆ. ಈ ಇಡೀ ಭೂಗೋಳವು ಐವತ್ತು ಕೋಟಿ ಯೋಜನ ವಿಸ್ತಾರವಾಗಿದೆ. ಇದರ ನಾಲ್ಕನೆಯ ಒಂದಂಶ (ಹನ್ನೆರಡುವರೆ ಕೋಟಿ ಯೋಜನ ವಿಸ್ತಾರವುಳ್ಳ) ಈ ಲೋಕಾಲೋಕ ಪರ್ವತವಿದೆ. ॥ ೩೮ ॥ ಇದರ ಮೇಲೆ ನಾಲ್ಕೂ ದಿಕ್ಕುಗಳಲ್ಲಿ ಸಮಸ್ತ ಜಗತ್ತಿಗೆ ಗುರುವಾದ ಸ್ವಯಂಭೂಬ್ರಹ್ಮದೇವರು ಸಮಸ್ತ ಲೋಕಗಳ ಸ್ಥಿತಿಗಾಗಿ ಋಷಭ, ಪುಷ್ಕರಚೂಡ, ವಾಮನ ಮತ್ತು ಅಪರಾಜಿತ ಎಂಬ ನಾಲ್ಕು ಗಜರಾಜರನ್ನು ನಿಯುಕ್ತಗೊಳಿಸಿರುವರು. ॥ ೩೯ ॥ ಆ ದಿಗ್ಗಜಗಳ ಮತ್ತು ತನ್ನ ಅಂಶಸ್ವರೂಪರಾದ ಇಂದ್ರಾದಿ ಲೋಕಪಾಲರ ವಿವಿಧ ಶಕ್ತಿಯನ್ನು ವೃದ್ಧಿಪಡಿಸಲಿಕ್ಕಾಗಿ ಹಾಗೂ ಸಮಸ್ತ ಲೋಕಗಳ ಕ್ಷೇಮಕ್ಕಾಗಿಯೂ ಪರಮೈಶ್ವರ್ಯದ ಅಧಿಪತಿಯೂ, ಸರ್ವಾಂತರ್ಯಾಮಿಯೂ ಆದ ಪರಮಪುರುಷ ಶ್ರೀಹರಿಯು ತನ್ನ ವಿಶ್ವಕ್‌ಸೇನ ಮುಂತಾದ ಪಾರ್ಷದರೊಂದಿಗೆ ಈ ಪರ್ವತದಲ್ಲಿ ಎಲ್ಲ ಕಡೆಗಳಲ್ಲಿಯೂ ವಿರಾಜಿಸುತ್ತಿರುವನು. ಸ್ವಾಮಿಯು ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳೇ ಮುಂತಾದ ಅಷ್ಟಸಿದ್ಧಿಗಳಿಂದ ಸಂಪನ್ನನಾಗಿ ತನ್ನ ದಿವ್ಯ ಶುದ್ಧ ಸತ್ತ್ವಮಯವಾದ ದಿವ್ಯ ಮಂಗಳ ವಿಗ್ರಹದಲ್ಲಿ ಶಂಖ-ಚಕ್ರಾದಿ ದಿವ್ಯಾಯುಧಗಳನ್ನು ಕರಗಳಲ್ಲಿ ಧರಿಸಿ ಮೆರೆಯುತ್ತಿದ್ದಾನೆ. ॥ ೪೦ ॥ ಹೀಗೆ ತನ್ನ ಯೋಗಮಾಯೆಯಿಂದ ರಚಿಸಿದ ವಿವಿಧ ಲೋಕಗಳ ವ್ಯವಸ್ಥೆಯನ್ನು ಸುರಕ್ಷಿತವಾಗಿಡಲು ಅವನು ಇದೇ ಲೀಲಾಮಯರೂಪದಿಂದ ಕಲ್ಪಾಂತ್ಯದವರೆಗೆ ಅಲ್ಲಿ ಎಲ್ಲ ಕಡೆಗಳಲ್ಲಿ ನೆಲೆಸಿರುವನು. ॥ ೪೧ ॥

ಲೋಕಾಲೋಕದ ಒಳಗಿನ ಭೂಭಾಗದ ಎಷ್ಟು ವಿಸ್ತಾರವಿದೆಯೋ, ಅದರಿಂದ ಅದರ ಹೊರಗಿನ ಕತ್ತಲೆಯ ಪ್ರದೇಶದ ವಿಸ್ತಾರದ ವ್ಯಾಖ್ಯೆಯನ್ನು ಮಾಡಿದಂತಾಯಿತು. ಅಲ್ಲಿಂದ ಆಚೆಗಾದರೋ ಕೇವಲ ಯೋಗೇಶ್ವರರೇ ಸಂಚರಿಸಬಲ್ಲರು. ॥ ೪೨ ॥

ಅಂಡಮಧ್ಯಗತಃ ಸೂರ್ಯೋ
ದ್ಯಾವಾಭೂಮ್ಯೋರ್ಯದಂತರಮ್ ।
ಸೂರ್ಯಾಂಡಗೋಲಯೋರ್ಮಧ್ಯೇ
ಕೋಟ್ಯಃ ಸ್ಯುಃ ಪಂಚವಿಂಶತಿಃ ॥ ೪೩ ॥

ಮೃತೇಽಂಡ ಏಷ ಏತಸ್ ಯನ್ಮದಭೂತ್ತತೋ
ಮಾರ್ತಂಡ ಇತಿ ವ್ಯಪದೇಶಃ ।
ಹಿರಣ್ಯಗರ್ಭ ಇತಿ ಯದ್ ಹಿರಣ್ಯಾಂಡಸಮುದ್ಭವಃ
॥ ೪೪ ॥

ಸೂರ್ಯೇಣ ಹಿ ವಿಭಜ್ಯಂತೇ ದಿಶಃ ಖಂ ದ್ಯೌರ್ಮಹೀ ಭಿದಾ ।
ಸ್ವರ್ಗಾಪವರ್ಗೌ ನರಕಾ ರಸೌಕಾಂಸಿ ಚ ಸರ್ವಶಃ
॥ ೪೫ ॥

ದೇವತಿರ್ಯಙ್ಮನುಷ್ಯಾಣಾಂ ಸರೀಸೃಪಸವೀರುಧಾಮ್ ।
ಸರ್ವಜೀವನಿಕಾಯಾನಾಂ ಸೂರ್ಯ ಆತ್ಮಾ ದೃಗೀಶ್ವರಃ
॥ ೪೬ ॥

ಎಲೈ ರಾಜನೇ! ಸ್ವರ್ಗ – ಪೃಥಿವಿಯ ನಡುವೆ ಬ್ರಹ್ಮಾಂಡದ ಕೇಂದ್ರವೇ ಸೂರ್ಯನ ಸ್ಥಿತಿಯಾಗಿದೆ. ಸೂರ್ಯ ಹಾಗೂ ಬ್ರಹ್ಮಾಂಡಗೋಲದ ನಡುವೆ ಎಲ್ಲ ಕಡೆಯಿಂದ ಇಪ್ಪತ್ತೈದು ಕೋಟಿ ಯೋಜನಗಳ ಅಂತರವಿದೆ. ॥ ೪೩ ॥ ಸೂರ್ಯನು ಈ ಮೃತ ಅರ್ಥಾತ್ ಸತ್ತಂತೆ (ಅಚೇತನ) ಇರುವ ಅಂಡದಲ್ಲಿ ವೈರಾಜ ರೂಪದಿಂದ ಬೆಳಗುತ್ತಿರುವುದರಿಂದಲೇ ಇವನ ಹೆಸರು 'ಮಾರ್ತಾಂಡ'ವೆಂದಾಯಿತು. ಇವನು ಹಿರಣ್ಮಯ (ಜ್ಯೋತಿರ್ಮಯ) ಬ್ರಹ್ಮಾಂಡದಿಂದ ಪ್ರಕಟನಾದ್ದರಿಂದ ಇವನನ್ನು 'ಹಿರಣ್ಯಗರ್ಭ' ಎಂದೂ ಹೇಳುತ್ತಾರೆ. ॥ ೪೪ ॥ ಸೂರ್ಯನಿಂದಲೇ ದಿಕ್ಕು, ಆಕಾಶ, ದ್ಯುಲೋಕ (ಅಂತರಿಕ್ಷ), ಭೂರ್ಲೋಕ, ಸ್ವರ್ಗ ಮತ್ತು ಮೋಕ್ಷದ ಪ್ರದೇಶ, ನರಕ ಮತ್ತು ರಸಾತಳ ಹಾಗೂ ಎಲ್ಲ ಭಾಗಗಳ ವಿಭಾಗವಾಗುತ್ತದೆ. ॥ ೪೫ ॥ ಸೂರ್ಯನೇ ದೇವತೆಗಳು, ತಿರ್ಯಕ್, ಮನುಷ್ಯ, ಸರೀಸೃಪ ಮತ್ತು ವೃಕ್ಷ-ಲತಾದಿ ಸಮಸ್ತ ಜೀವಸಮೂಹದ ಆತ್ಮಾ ಹಾಗೂ ನೇತ್ರೇಂದ್ರಿಯದ ಅಧಿಷ್ಠಾತೃವಾಗಿದ್ದಾನೆ. ॥ ೪೬ ॥

ಇಪ್ಪತ್ತನೆಯ ಅಧ್ಯಾಯವು ಮುಗಿಯಿತು. ॥ ೨೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಭುವನಕೋಶವರ್ಣನೇ ಸಮುದ್ರವರ್ಷಸಂನಿವೇಶಪರಿಮಾಣಲಕ್ಷಣೋ ವಿಂಶೋಽಧ್ಯಾಯಃ॥ ೨೦ ॥

# ಇಪ್ಪತ್ತೊಂದನೆಯ ಅಧ್ಯಾಯ

## ಸೂರ್ಯನ ರಥ ಮತ್ತು ಅದರ ಗತಿಗಳ ವರ್ಣನೆ

*ಶ್ರೀಶುಕ ಉವಾಚ*

ಏತಾವಾನೇವ ಭೂವಲಯಸ್ಯ ಸಂನಿವೇಶಃ ಪ್ರಮಾಣಲಕ್ಷಣತೋ ವ್ಯಾಖ್ಯಾತಃ ॥ ೧ ॥ ಏತೇನ ಹಿ ದಿವೋ ಮಂಡಲಮಾನಂ ತದ್ವಿದ ಉಪದಿಶಂತಿ ಯಥಾ ದ್ವಿದಲಯೋರ್ನಿಷ್ಪಾವಾದೀನಾಂ ತೇ ಅಂತರೇಣಾಂತರಿಕ್ಷಂ ತದುಭಯಸಂಧಿತಮ್ ॥ ೨ ॥ ಯನ್ಮಧ್ಯಗತೋ ಭಗವಾಂಸ್ತಪತಾಂಪತಿಸ್ತಪನ ಆತಪೇನ ತ್ರಿಲೋಕೀಂ ಪ್ರತಪತ್ಯವಭಾಸಯತ್ಯಾತ್ಮಭಾಸಾ ಸ ಏಷ ಉದಗಯನದಕ್ಷಿಣಾಯನವೈಷುವತಸಂಜ್ಞಾಭಿರ್ಮಾಂದ್ಯಶೈಘ್ರ್ಯಸಮಾನಾಭಿರ್ಗತಿಭಿರಾರೋಹಣಾವರೋಹಣಸಮಾನಸ್ಥಾನೇಷು ಯಥಾಸವನಮಭಿಪದ್ಯಮಾನೋ ಮಕರಾದಿಷು ರಾಶಿಷ್ವಹೋರಾತ್ರಾಣಿ

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜನೇ! ಇಲ್ಲಿಯವರೆಗೆ ನಿನಗೆ ಇಡೀ ಭೂಮಂಡಲದ ವಿಸ್ತಾರವನ್ನು ಲಕ್ಷಣ-ಪ್ರಮಾಣಗಳೊಡನೆ ವಿವರಿಸಿದೆನು. (ಇನ್ನು ಖಗೋಳದ ಸ್ವರೂಪವನ್ನು ವಿವರಿಸುವೆನು.) ॥ ೧ ॥ ಭೂಮಂಡಲದ ವಿಸ್ತಾರಕ್ಕನುಸಾರವಾಗಿಯೇ ದ್ಯುಲೋಕದ ಪರಿಮಾಣವನ್ನು ವಿದ್ವಾಂಸರು ನಿರೂಪಿಸುತ್ತಾರೆ. ಅವರೆಯೇ ಮುಂತಾದ ದ್ವಿದಳ ಧಾನ್ಯಗಳ ಒಂದು ಹೋಳಿನ ಪರಿಮಾಣವನ್ನು ತಿಳಿದಾಗ ಮತ್ತೊಂದರ ಪರಿಮಾಣವೂ ತಿಳಿಯುವಂತೆ ಭೂಲೋಕದ ಪರಿಮಾಣದಿಂದಲೇ ದ್ಯುಲೋಕದ ಪರಿಮಾಣವನ್ನು ತಿಳಿದುಕೊಳ್ಳಬೇಕು. ಇವೆರಡರ ನಡುವೆ ಅಂತರಿಕ್ಷಲೋಕವಿದೆ. ಇದು ಇವೆರಡರ ಸಂಧಿಸ್ಥಾನವಾಗಿದೆ. ॥ ೨ ॥ ಇದರ ಮಧ್ಯಭಾಗದಲ್ಲಿ ಇರುವ ಗ್ರಹ-ನಕ್ಷತ್ರಗಳ ಅಧಿಪತಿ ಭಗವಾನ್ ಸೂರ್ಯನು ಮೂರೂ ಲೋಕಗಳಿಗೆ ತನ್ನ ಬಿಸಿಲು ಮತ್ತು ಪ್ರಕಾಶಗಳನ್ನು ಬೀರುತ್ತಿರುವನು. ಅವನು ಉತ್ತರಾಯಣ, ದಕ್ಷಿಣಾಯನ ಮತ್ತು ವಿಷುವತ್ ಎಂಬ ನಾಮಗಳಿಂದ ಕ್ರಮವಾಗಿ ಮಂದ, ಶೀಘ್ರ ಮತ್ತು ಸಮಾನ ಗತಿಗಳಿಂದ ನಡೆಯುತ್ತಾ ಸಮಯಕ್ಕೆ ಸರಿಯಾಗಿ ಮಕರಾದಿ ರಾಶಿಗಳಲ್ಲಿ ಮೇಲೆ, ಕೆಳಗೆ ಮತ್ತು ಸಮಾನ ಸ್ಥಾನಗಳಲ್ಲಿ ಸಂಚರಿಸುತ್ತಾ ಹಗಲು-ರಾತ್ರಿಗಳನ್ನು ದೊಡ್ಡದು-ಸಣ್ಣದು ಅಥವಾ ಸಮಾನವಾಗಿ

**ದೀರ್ಘಹ್ರಸ್ವಸಮಾನಾನಿ ವಿಧತ್ತೇ॥ ೩ ॥ ಯದಾ ಮೇಷತುಲಯೋರ್ವರ್ತತೇ ತದಾಹೋರಾತ್ರಾಣಿ ಸಮಾನಾನಿ ಭವಂತಿ ಯದಾ ವೃಷಭಾದಿಷು ಪಂಚಸು ಚ ರಾಶಿಷು ಚರತಿ ತದಾಹಾನ್ಯೇವ ವರ್ಧಂತೇ ಹ್ರಸತಿ ಚ ಮಾಸಿ ಮಾಸ್ಯೇಕೈಕಾಘಟಿಕಾ ರಾತ್ರಿಷು ॥ ೪ ॥ ಯದಾ ವೃಶ್ಚಿಕಾದಿಷು ಪಂಚಸು ವರ್ತತೇ ತದಾಹೋರಾತ್ರಾಣಿ ವಿಪರ್ಯಯಾಣಿ ಭವಂತಿ ॥ ೫ ॥ ಯಾವದ್ದಕ್ಷಿಣಾಯನಮಹಾನಿ ವರ್ಧಂತೇ ಯಾವದುದಗಯನಂ ರಾತ್ರಯಃ ॥ ೬ ॥**

**ಏವಂ ನವ ಕೋಟಯ ಏಕಪಂಚಾಶಲ್ಲಕ್ಷಾಣಿ ಯೋಜನಾನಾಂ ಮಾನಸೋತ್ತರಗಿರಿಪರಿವರ್ತನಸ್ಯೋಪದಿಶಂತಿ ತಸ್ಮಿನ್ನೈಂದ್ರೀಂ ಪುರೀಂ ಪೂರ್ವಸ್ಮಾನ್ಮೇರೋರ್ದೇವಧಾನೀಂ ನಾಮ ದಕ್ಷಿಣತೋ ಯಾಮ್ಯಾಂ ಸಂಯಮನೀಂ ನಾಮ ಪಶ್ಚಾದ್ವಾರುಣೀಂ ನಿಮ್ಲೋಚನೀಂ ನಾಮ ಉತ್ತರತಃ ಸೌಮ್ಯಾಂ ವಿಭಾವರೀಂ ನಾಮ ತಾಸೂದಯಮಧ್ಯಾಹ್ನಾಸ್ತಮಯನಿಶೀಥಾನೀತಿ ಭೂತಾನಾಂ ಪ್ರವೃತ್ತಿನಿವೃತ್ತಿನಿಮಿತ್ತಾನಿ ಸಮಯವಿಶೇಷೇಣ ಮೇರೋಶ್ಚತುರ್ದಿಶಮ್ ॥ ೭ ॥ ತತ್ರತ್ಯಾನಾಂ ದಿವಸಮಧ್ಯಂಗತ ಏವ ಸದಾಽಽದಿತ್ಯಸ್ತಪತಿ ಸವ್ಯೇನಾಚಲಂ ದಕ್ಷಿಣೇನ ಕರೋತಿ ॥ ೮ ॥ ಯತ್ರೋದೇತಿ ತಸ್ಯ ಹ ಸಮಾನ- ಸೂತ್ರನಿಪಾತೇ ನಿಮ್ಲೋಚತಿ ಯತ್ರ ಕ್ವಚನ ಸ್ಯಂದೇನಾಭಿತಪತಿ ತಸ್ಯ ಹೈಷ ಸಮಾನಸೂತ್ರನಿಪಾತೇ ಪ್ರಸ್ವಾಪಯತಿ ತತ್ರ ಗತಂ ನ ಪಶ್ಯಂತಿ ಯೇ ತಂ ಸಮನುಪಶ್ಯೇರನ್ ॥ ೯ ॥ ಯದಾ ಚೈಂದ್ರ್ಯಾಃ ಪುರ್ಯಾಃ ಪ್ರಚಲತೇ ಪಂಚದಶಘಟಿಕಾಭಿರ್ಯಾಮ್ಯಾಂ ಸಪಾದಕೋಟಿದ್ವಯಂ ಯೋಜನಾನಾಂ ಸಾರ್ಧದ್ವಾದಶಲಕ್ಷಾಣಿ ಸಾಧಿಕಾನಿ ಚೋಪಯಾತಿ ॥ ೧೦ ॥ ಏವಂ ತತೋ ವಾರುಣೀಂ ಸೌಮ್ಯಾಮೈಂದ್ರೀಂ ಚ ಪುನಸ್ತಥಾನ್ಯೇ ಚ ಗ್ರಹಾಃ ಸೋಮಾದಯೋ ನಕ್ಷತ್ರೈಃ ಸಹ ಜ್ಯೋತಿಶ್ಚಕ್ರೇ ಸಮಭ್ಯುದ್ಯಂತಿ ಸಹ ವಾ ನಿಮ್ಲೋಚಂತಿ ॥ ೧೧ ॥ ಏವಂ**

ಮಾಡುತ್ತಾನೆ. ॥ ೩ ॥ ಸೂರ್ಯನು ಮೇಷರಾಶಿ-ತುಲಾರಾಶಿಯಲ್ಲಿ ಬಂದಾಗ ಹಗಲು-ರಾತ್ರಿಗಳು ಸಮವಾಗಿರುತ್ತವೆ. ವೃಷಭವೇ ಮುಂತಾದ ಐದು ರಾಶಿಗಳಲ್ಲಿ ಸಂಚರಿಸುವಾಗ ಪ್ರತಿತಿಂಗಳ ರಾತ್ರಿಗಳಲ್ಲಿ ಒಂದೊಂದು ಗಳಿಗೆ ಕಡಿಮೆಯಾಗುತ್ತಾ ಹೋಗುತ್ತದೆ ಮತ್ತು ಅದೇ ಲೆಕ್ಕದಲ್ಲಿ ಹಗಲು ಬೆಳೆಯುತ್ತಾ ಹೋಗುತ್ತದೆ. ॥ ೪ ॥ ವೃಶ್ಚಿಕವೇ ಮುಂತಾದ ಐದು ರಾಶಿಗಳಲ್ಲಿ ಅವನು ಸಂಚರಿಸುವಾಗ ಹಗಲು-ರಾತ್ರಿಗಳ ಪ್ರಮಾಣವು ಅದಕ್ಕೆ ವಿರುದ್ಧವಾಗಿ ಆಗುವುದು. ॥ ೫ ॥ ಹೀಗೆ ದಕ್ಷಿಣಾಯನವು ಪ್ರಾರಂಭವಾಗುವ ತನಕ ಹಗಲು ಹಿಗ್ಗುತ್ತಾ ಹೋಗುವುವು. ಉತ್ತರಾಯಣವು ಬರುವವರೆವಿಗೂ ರಾತ್ರಿಯು ಹೆಚ್ಚುತ್ತಾ ಹೋಗುವುದು. ॥ ೬ ॥

ಹೀಗೆ ಮಾನಸೋತ್ತರ ಪರ್ವತದ ಮೇಲೆ ಸೂರ್ಯನ ಪ್ರದಕ್ಷಿಣೆಯ ಮಾರ್ಗವು ಒಂಭತ್ತುಕೋಟಿ ಐವತ್ತೊಂದು ಲಕ್ಷ ಯೋಜನವೆಂದು ವಿದ್ವಾಂಸರು ಹೇಳುತ್ತಾರೆ. ಆ ಪರ್ವತದಲ್ಲಿ ಮೇರುವಿನ ಪೂರ್ವದ ಕಡೆಗೆ ಇಂದ್ರನ ದೇವಧಾನೀ, ದಕ್ಷಿಣದಲ್ಲಿ ಯಮರಾಜನ ಸಂಯಮನೀ, ಪಶ್ಚಿಮದಲ್ಲಿ ವರುಣನ ನಿಮ್ಲೋಚನೀ ಮತ್ತು ಉತ್ತರದಲ್ಲಿ ಚಂದ್ರನ ವಿಭಾವರೀ ಹೆಸರಿನ ಪುರಿಗಳು ಇವೆ. ಈ ಪುರಿಗಳಲ್ಲಿ ಮೇರುವಿನ ನಾಲ್ಕು ಕಡೆಗಳಲ್ಲಿ ಕಾಲ-ಕಾಲಗಳಲ್ಲಿ ಕ್ರಮವಾಗಿ ಸೂರ್ಯೋದಯ, ಮಧ್ಯಾಹ್ನ, ಸಾಯಂಕಾಲ ಮತ್ತು ಅರ್ಧರಾತ್ರಿ ಆಗುತ್ತಾ ಇರುತ್ತವೆ. ಇವುಗಳಿಂದಾಗಿಯೇ ಸಮಸ್ತ ಜೀವನ ಪ್ರವೃತ್ತಿ ಮತ್ತು ನಿವೃತ್ತಿಗಳು ಆಗುತ್ತಾ ಇರುತ್ತವೆ. ॥ ೭ ॥ ಸುಮೇರು ಪರ್ವತದಲ್ಲಿ ವಾಸಿಸುವವರಿಗಾದರೋ ಸೂರ್ಯನ ಸದಾಕಾಲ ಮಧ್ಯಾಹ್ನದಲ್ಲಿರುವಂತೆಯೇ ಸುಡುತ್ತಿರುವನು. ಅವನು ತನ್ನ ಗತಿಗನುಸಾರವಾಗಿ ಅಶ್ವಿನಿಯೇ ಮುಂತಾದ ನಕ್ಷತ್ರಗಳ ಕಡೆಗೆ - ಮೇರುವನ್ನು ಎಡಗಡೆ ಇರುವಂತೆ ನಡೆದರೂ ಇಡೀ ಜ್ಯೋತಿರ್ಮಂಡಲವನ್ನು ತಿರುಗಿಸುವಂತಹ ನಿರಂತರ ಬಲಗಡೆಗೆ ಬೀಸುತ್ತಾ ವಾಯುವಿನ ಮೂಲಕ ತಿರುಗಿಸುವುದರಿಂದ ಸೂರ್ಯನು ಬಲಗಡೆಗೆ ಇರಿಸಿ ನಡೆದಂತೆ ಕಂಡು ಬರುತ್ತಾನೆ. ॥ ೮ ॥ ಯಾವ ಪುರದಲ್ಲಿ ಭಗವಾನ್ ಸೂರ್ಯನು ಉದಯಿಸುತ್ತಾನೋ ಅದರ ಸರಿಯಾಗಿ ಇನ್ನೊಂದು ತುದಿಯ ಪುರಿಯಲ್ಲಿ ಅವನು ಅಸ್ತನಾದಂತೆ ಕಾಣುತ್ತಾನೆ. ಎಲ್ಲಿ ಮಧ್ಯಾಹ್ನದ ಉರಿಬಿಸಿಲಲ್ಲಿ ಬೆವರಿನಿಂದ ಉರಿಯುತ್ತಾರೋ ಅದಕ್ಕೆ ಸರಿಯಾಗಿ ಇನ್ನೊಂದು ತುದಿಯಲ್ಲಿ ಅರ್ಧರಾತ್ರಿಯಾದ ಕಾರಣ ಅವರು ನಿದ್ರಾವಶರಾಗಿರುವರು. ಯಾವ ಜನರಿಗೆ ಮಧ್ಯಾಹ್ನದ ಸಮಯದಲ್ಲಿ ಸೂರ್ಯನು ಸ್ಪಷ್ಟವಾಗಿ ಕಾಣಿಸುತ್ತಿರುವವರಿಗೆ ಸೂರ್ಯನು ಸೌಮದಿಶೆಯಲ್ಲಿ ತಲುಪಿದಾಗ ಅವನ ದರ್ಶನವಾಗಲಾರದು. ॥ ೯ ॥

ಸೂರ್ಯನು ಇಂದ್ರನ ಪುರಿಯಿಂದ ಹೊರಟಾಗ ಮೊದಲ ಹದಿನೈದು ಗಳಿಗೆಯಲ್ಲಿ ಎರಡುಕೋಟಿ ಮೂವತ್ತೇಳುಲಕ್ಷ ಎಪ್ಪತ್ತೈದು ಸಾವಿರ ಯೋಜನಗಳ ದೂರದಲ್ಲಿರುವ ಯಮನಪುರಿಯನ್ನು ತಲುಪುವನು. ॥ ೧೦ ॥ ಹೀಗೆಯೇ ಕ್ರಮವಾಗಿ ವರುಣನ ಮತ್ತು ಚಂದ್ರನ ಪುರಗಳನ್ನು ದಾಟಿ ಅರವತ್ತು ಗಳಿಗೆಯಲ್ಲಿ ಪುನಃ ಇಂದ್ರನ ಪುರಿಯನ್ನು ತಲುಪುತ್ತಾನೆ. ಹೀಗೆಯೇ ಚಂದ್ರನೇ ಮುಂತಾದ ಬೇರೆ ಗ್ರಹಗಳೂ ಜ್ಯೋತಿಶ್ಚಕ್ರದಲ್ಲಿ ಬೇರೆ ನಕ್ಷತ್ರಗಳೊಂದಿಗೆ ಉದಯಿಸಿ, ಅಸ್ತವಾಗುತ್ತಾ ಇರುತ್ತಾರೆ. ॥ ೧೧ ॥ ಹೀಗೆಯೇ ಸೂರ್ಯದೇವನ ವೇದಮಯ ರಥವು ಒಂದು ಮುಹೂರ್ತದಲ್ಲಿ

ಮುಹೂರ್ತೇನ ಚತುಸ್ತ್ರಿಂಶಲ್ಲಕ್ಷಯೋಜನಾನ್ಯಷ್ಟಶತಾಧಿಕಾನಿ ಸೌರೋ ರಥಸ್ತ್ರಯೀಮಯೋಽಸೌ ಚತಸೃಷು ಪರಿವರ್ತತೇ ಪುರೀಷು ॥ ೧೨ ॥

ಯಸ್ಯೈಕಂ ಚಕ್ರಂ ದ್ವಾದಶಾರಂ ಷಣ್ನೇಮಿ ತ್ರಿಣಾಭಿ ಸಂವತ್ಸರಾತ್ಮಕಂ ಸಮಾಮನಂತಿ ತಸ್ಯಾಕ್ಷೋ ಮೇರೋರ್ಮೂರ್ಧನಿ ಕೃತೋ ಮಾನಸೋತ್ತರೇ ಕೃತೇತರಭಾಗೋ ಯತ್ರ ಪ್ರೋತಂ ರವಿರಥಚಕ್ರಂ ತೈಲಯಂತ್ರಚಕ್ರವದ್ಭ್ರಮನ್ಮಾನಸೋತ್ತರಗಿರೌ ಪರಿಭ್ರಮತಿ ॥ ೧೩ ॥ ತಸ್ಮಿನ್ನಕ್ಷೇ ಕೃತಮೂಲೋ ದ್ವಿತೀಯೋಽಕ್ಷಸ್ತುರ್ಯಮಾನೇನ ಸಮ್ಮಿತಸ್ತೈಲಯಂತ್ರಾಕ್ಷವದ್ಧ್ರುವೇ ಕೃತೋಪರಿಭಾಗಃ ॥ ೧೪ ॥

ರಥನೀಡಸ್ತು ಷಟ್‌ತ್ರಿಂಶಲ್ಲಕ್ಷಯೋಜನಾಯತಸ್ತತ್ತುರೀಯಭಾಗವಿಶಾಲಸ್ತಾವಾನ್ರವಿರಥಯುಗೋ ಯತ್ರ ಹಯಾಶ್ಛಂದೋನಾಮಾನಃ ಸಪ್ತಾರುಣಯೋಜಿತಾ ವಹಂತಿ ದೇವಮಾದಿತ್ಯಮ್ ॥ ೧೫ ॥ ಪುರಸ್ತಾತ್ಸವಿತುರರುಣಃ ಪಶ್ಚಾಚ್ಚ ನಿಯುಕ್ತಃ ಸೌತ್ಯೇ ಕರ್ಮಣಿ ಕಿಲಾಸ್ತೇ ॥ ೧೬ ॥ ತಥಾ ವಾಲಖಿಲ್ಯಾ ಋಷಯೋಽಂಗುಷ್ಠಪರ್ವಮಾತ್ರಾಃ ಷಷ್ಟಿಸಹಸ್ರಾಣಿ ಪುರತಃ ಸೂರ್ಯಂ ಸೂಕ್ತವಾಕಾಯ ನಿಯುಕ್ತಾಃ ಸಂಸ್ತುವಂತಿ ॥ ೧೭ ॥ ತಥಾನ್ಯೇ ಚ ಋಷಯೋ ಗಂಧರ್ವಾಪ್ಸರಸೋ ನಾಗಾಗ್ರಾಮಣ್ಯೋ ಯಾತುಧಾನಾ ದೇವಾ ಇತ್ಯೇಕೈಕಶೋ ಗಣಾಃ ಸಪ್ತ ಚತುರ್ದಶ ಮಾಸಿ ಮಾಸಿ ಭಗವಂತಂ ಸೂರ್ಯಮಾತ್ಮಾನಂ ನಾನಾನಾಮಾನಂ ಪೃಥಙ್ನಾನಾನಾಮಾನಃ ಪೃಥಕ್ಕರ್ಮಭಿರ್ದ್ವಂದ್ವಶ ಉಪಾಸತೇ ॥ ೧೮ ॥ ಲಕ್ಷೋತ್ತರಂ ಸಾರ್ಧನವಕೋಟಿಯೋಜನಪರಿಮಂಡಲಂ ಭೂವಲಯಸ್ಯ ಕ್ಷಣೇನ ಸಗವ್ಯೂತ್ಯುತ್ತರಂ ದ್ವಿಸಹಸ್ರಯೋಜನಾನಿ ಸ ಭುಂಕ್ತೇ ॥ ೧೯ ॥

ಮೂವತ್ತನಾಲ್ಕುಲಕ್ಷ ಎಂಟುನೂರು ಯೋಜನಗಳ ಲೆಕ್ಕದಲ್ಲಿ ನಡೆಯುತ್ತಾ ನಾಲ್ಕೂ ಪುರಗಳಲ್ಲಿ ಸಂಚರಿಸುತ್ತಿರುವುದು. ॥ ೧೨ ॥

ಸೂರ್ಯದೇವನ ರಥಕ್ಕೆ ಸಂವತ್ಸರವೆಂಬ ಒಂದೇ ಒಂದು ಚಕ್ರವಿದೆ. ಹನ್ನೆರಡು ಮಾಸಗಳೇ ಅದರ ಅರೆಕಾಲುಗಳು. ಆರು ಋತುಗಳೇ ಅದರ ಪಟ್ಟಿ (ಅಂಚು)ಗಳು. ಚಾತುರ್ಮಾಸ್ಯವೇ (ನಾಲ್ಕು ತಿಂಗಳುಗಳು) ಅದರ ನಾಭಿಯು. ಈ ರಥದ ಅಚ್ಚಿನ ಒಂದು ತುದಿಯು ಮೇರುಪರ್ವತದ ಶಿಖರದಲ್ಲಿ ನಿಂತಿದೆ ಮತ್ತು ಇನ್ನೊಂದು ಮಾನಸೋತ್ತರ ಪರ್ವತದ ಮೇಲಿದೆ. ಅಚ್ಚಿಗೆ ಸೇರಿಕೊಂಡಿರುವ ಈ ಚಕ್ರವು ಎಣ್ಣೆಯ ಗಾಣದ ಚಕ್ರದಂತೆ ಮಾನಸೋತ್ತರ ಪರ್ವತದ ಮೇಲೆ ಸುತ್ತುತ್ತಾ ಇರುತ್ತದೆ. ॥ ೧೩ ॥ ಈ ಅಚ್ಚಿನಲ್ಲಿ ಜೋಡಿಸಲ್ಪಟ್ಟ ಮೂಲಭಾಗವುಳ್ಳ ಮತ್ತೊಂದು ಅಚ್ಚು ಇದೆ. ಅದು ಉದ್ದದಲ್ಲಿ ಇದರ ನಾಲ್ಕನೆಯ ಒಂದಂಶವಿದೆ. ಅದರ ಮೇಲ್ಭಾಗವು ಎಣ್ಣೆಯ ಗಾಣದ ಅಚ್ಚಿನಂತೆ ಧ್ರುವಲೋಕಕ್ಕೆ ಜೋಡಿಸಲ್ಪಟ್ಟಿದೆ. ॥ ೧೪ ॥

ಈ ರಥದಲ್ಲಿ ಕೂರುವ ಜಾಗವು ಮೂವತ್ತಾರು ಲಕ್ಷಯೋಜನ ಉದ್ದವೂ, ಒಂಭತ್ತು ಲಕ್ಷಯೋಜನ ಅಗಲವು ಇದೆ. ಇದರ ನೊಗವು ಮೂವತ್ತಾರು ಲಕ್ಷಯೋಜನ ಉದ್ದವಾಗಿದೆ. ಅದರಲ್ಲಿ ಅರುಣನೆಂಬ ಸಾರಥಿಯು ಗಾಯತ್ರಿಯೇ ಮುಂತಾದ ಹೆಸರುಳ್ಳ ಏಳು ಕುದುರೆಗಳನ್ನು ಹೂಡಿರುವನು. ಅವನೇ ಈ ರಥದಲ್ಲಿ ಕುಳಿತಿರುವ ಭಗವಾನ್ ಸೂರ್ಯದೇವನನ್ನು ಕೊಂಡುಹೋಗುತ್ತಾನೆ. ॥ ೧೫ ॥ ಸೂರ್ಯದೇವನ ಮುಂದೆ ಅವನ ಕಡೆಗೆ ಮುಖಮಾಡಿ ಕುಳಿತಿರುವ ಅರುಣನು ಅವನ ಸಾರಥ್ಯದ ಕಾರ್ಯವನ್ನು ಮಾಡುತ್ತಾನೆ. ॥ ೧೬ ॥ ಭಗವಾನ್ ಸೂರ್ಯನ ಮುಂದೆ ಹೆಬ್ಬೆರಳಿನ ಗಿಣ್ಣಿನಷ್ಟು ಪ್ರಮಾಣವುಳ್ಳ ವಾಲಖಿಲ್ಯರೇ ಮುಂತಾದ ಅರವತ್ತುಸಾವಿರ ಮಂದಿ ಋಷಿಗಳು ಸ್ವಸ್ತಿವಾಚನಕ್ಕಾಗಿ ನಿಯುಕ್ತರಾಗಿದ್ದಾರೆ. ಅವರು ಸೂರ್ಯನನ್ನು ಸ್ತುತಿಸುತ್ತಾ ಇರುತ್ತಾರೆ. ॥ ೧೭ ॥ ಇವರಲ್ಲದೆ ಋಷಿಗಳು, ಗಂಧರ್ವರು, ಅಪ್ಸರೆಯರು, ನಾಗರು, ಯಕ್ಷರು, ರಾಕ್ಷಸರು, ದೇವತೆಗಳು ಇವರುಗಳೂ ಕೂಡ ಆತನನ್ನು ಆರಾಧಿಸುತ್ತಿರುವರು. ಇವರ ಸಂಖ್ಯೆ ಒಟ್ಟು ಹದಿನಾಲ್ಕು. ಆದರೆ ಜೋಡಿಗಳಾಗಿರುವುದರಿಂದ ಏಳು ಗಣಗಳೆನಿಸುತ್ತಾರೆ. ಪ್ರತಿಯೊಂದು ತಿಂಗಳಲ್ಲಿ ಬೇರೆ-ಬೇರೆ ಹೆಸರುಳ್ಳವರಾಗಿ ತಮ್ಮ ಬೇರೆ-ಬೇರೆ ಕರ್ಮಗಳಿಂದ ಪ್ರತಿಯೊಂದು ತಿಂಗಳಿನಲ್ಲಿಯೂ ಬೇರೆ-ಬೇರೆ ಹೆಸರುಗಳನ್ನು ಧರಿಸುವ ಆತ್ಮಸ್ವರೂಪ ಭಗವಾನ್ ಸೂರ್ಯನನ್ನು ಇಬ್ಬರಿಬ್ಬರು ಕೂಡಿ ಉಪಾಸನೆ ಮಾಡುತ್ತಾರೆ. ॥ ೧೮ ॥ ಹೀಗೆ ಸೂರ್ಯಭಗವಂತನು ಭೂಮಂಡಲದ ಒಂಭತ್ತುಕೋಟಿ ಐವತ್ತೊಂದುಲಕ್ಷ ಯೋಜನ ಉದ್ದದ ಪ್ರದಕ್ಷಿಣೆಯಲ್ಲಿ ಪ್ರತಿಯೊಂದು ಕ್ಷಣದಲ್ಲಿ ಎರಡುಸಾವಿರದ ಎರಡು ಯೋಜನವನ್ನು ದಾಟಿಬಿಡುವನು. ॥ ೧೯ ॥

*ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೨೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ಜ್ಯೋತಿಶ್ಚಕ್ರಸೂರ್ಯರಥಮಂಡಲವರ್ಣನಂ ನಾಮೈಕವಿಂಶೋಽಧ್ಯಾಯಃ ॥ ೨೧ ॥

# ಇಪ್ಪತ್ತೆರಡನೆಯ ಅಧ್ಯಾಯ

## ಬೇರೆ-ಬೇರೆ ಗ್ರಹಗಳ ಸ್ಥಿತಿ ಮತ್ತು ಗತಿಗಳ ವರ್ಣನೆ

*ರಾಜೋವಾಚ*

**ಯದೇತದ್ಭಗವತ ಆದಿತ್ಯಸ್ಯ ಮೇರುಂ ಧ್ರುವಂ ಚ ಪ್ರದಕ್ಷಿಣೇನ ಪರಿಕ್ರಾಮತೋ ರಾಶೀನಾಮಭಿಮುಖಂ ಪ್ರಚಲಿತಂ ಚಾಪ್ರದಕ್ಷಿಣಂ ಭಗವತೋಪವರ್ಣಿತಮಮುಷ್ಯ ವಯಂ ಕಥಮನುಮಿಮೀಮಹೀತಿ ॥ ೧ ॥**

*ಸ ಹೋವಾಚ*

**ಯಥಾ ಕುಲಾಲಚಕ್ರೇಣ ಭ್ರಮತಾ ಸಹ ಭ್ರಮತಾಂ ತದಾಶ್ರಯಾಣಾಂ ಪಿಪೀಲಿಕಾದೀನಾಂ ಗತಿರನ್ಯೈವ ಪ್ರದೇಶಾಂತರೇಷ್ವಪ್ಯುಪಲಭ್ಯಮಾನತ್ವಾದೇವಂ ನಕ್ಷತ್ರರಾಶಿಭಿರುಪಲಕ್ಷಿತೇನ ಕಾಲಚಕ್ರೇಣ ಧ್ರುವಂ ಮೇರುಂ ಚ ಪ್ರದಕ್ಷಿಣೇನ ಪರಿಧಾವತಾ ಸಹ ಪರಿಧಾವಮಾನಾನಾಂ ತದಾಶ್ರಯಾಣಾಂ ಸೂರ್ಯಾದೀನಾಂ ಗ್ರಹಾಣಾಂ ಗತಿರನ್ಯೈವ ನಕ್ಷತ್ರಾಂತರೇ ರಾಶ್ಯಂತರೇ ಚೋಪಲಭ್ಯಮಾನತ್ವಾತ್ ॥ ೨ ॥ ಸ ಏಷ ಭಗವಾನಾದಿಪುರುಷ ಏವ ಸಾಕ್ಷಾನ್ನಾರಾಯಣೋ ಲೋಕಾನಾಂ ಸ್ವಸ್ತಯ ಆತ್ಮಾನಂ ತ್ರಯೀಮಯಂ ಕರ್ಮವಿಶುದ್ಧಿನಿಮಿತ್ತಂ ಕವಿಭಿರಪಿ ಚ ವೇದೇನ ವಿಜಿಜ್ಞಾಸ್ಯಮಾನೋ ದ್ವಾದಶಧಾ ವಿಭಜ್ಯ ಷಟ್ಸು ವಸಂತಾದಿಷ್ವೃತುಷು ಯಥೋಪಜೋಷಮೃತುಗುಣಾನ್ವಿದಧಾತಿ ॥ ೩ ॥ ತಮೇತಮಿಹ ಪುರುಷಾಸ್ತ್ರಯ್ಯಾ ವಿದ್ಯಯಾ ವರ್ಣಾಶ್ರಮಾಚಾರಾನುಪಥಾ ಉಚ್ಚಾವಚೈಃ ಕರ್ಮಭಿರಾಮ್ನಾತೈರ್ಯೋಗವಿತಾನೈಶ್ಚ ಶ್ರದ್ಧಯಾ ಯಜಂತೋಽಂಜಸಾ ಶ್ರೇಯಃ ಸಮಧಿಗಚ್ಛಂತಿ ॥ ೪ ॥ ಅಥ ಸ ಏಷ ಆತ್ಮಾ ಲೋಕಾನಾಂ ದ್ಯಾವಾಪೃಥಿವ್ಯೋರಂತರೇಣ ನಭೋವಲಯಸ್ಯ ಕಾಲಚಕ್ರಗತೋ ದ್ವಾದಶ ಮಾಸಾನ್ ಭುಂಕ್ತೇ ರಾಶಿಸಂಜ್ಞಾನ್ ಸಂವತ್ಸರಾವಯವಾನ್ಮಾಸಃ ಪಕ್ಷದ್ವಯಂ ದಿವಾ ನಕ್ತಂ ಚೇತಿ ಸಪಾದರ್ಕ್ಷದ್ವಯಮುಪದಿಶಂತಿ**

**ಪರೀಕ್ಷಿದ್ರಾಜನು ಕೇಳಿದನು** – 'ಮಹಾತ್ಮರೇ! ಭಗವಾನ್ ಆದಿತ್ಯನು ಮೇರುಗಿರಿಯನ್ನು ಮತ್ತು ಧ್ರುವಲೋಕವನ್ನು ಪ್ರದಕ್ಷಿಣಾಕಾರವಾಗಿ ಸುತ್ತುತ್ತಿದ್ದರೂ ರಾಶಿಗಳಿಗೆ ಎದುರಾಗಿ ಅಪ್ರದಕ್ಷಿಣವಾಗಿಯೇ ಚಲಿಸುತ್ತಾನೆ ಎಂದುತಾವು ಹೇಳಿದಿರಿ. ಇದನ್ನು ನಾವು ಹೇಗೆ ಅರ್ಥೈಸಿಕೊಳ್ಳಬಹುದು ತಿಳಿಸೋಣವಾಗಲಿ.' ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಮಹಾರಾಜನೇ! ಕುಂಬಾರನ ತಿರುಗುತ್ತಿರುವ ಚಕ್ರದಮೇಲೆ ಕುಳಿತ ಅದರೊಂದಿಗೆ ತಿರುಗುತ್ತಿರುವ ಇರುವೆಯೇ ಮುಂತಾದವುಗಳ ಗತಿಯು ಅದರಿಂದ ಭಿನ್ನವೇ ಆಗಿದೆ. ಏಕೆಂದರೆ, ಅದು ಬೇರೆ-ಬೇರೆ ಸಮಯದಲ್ಲಿ ಆ ಚಕ್ರದ ಬೇರೆ-ಬೇರೆ ಸ್ಥಾನಗಳಲ್ಲಿ ನೋಡಲ್ಪಡುತ್ತದೆ. ಹಾಗೆಯೇ ನಕ್ಷತ್ರ ಮತ್ತು ರಾಶಿಗಳಿಂದ ಕಂಡುಬರುವ ಕಾಲಚಕ್ರದಲ್ಲಿ ಬಿದ್ದು ಧ್ರುವ ಮತ್ತು ಮೇರುವನ್ನು ಬಲಕ್ಕಿಟ್ಟು ತಿರುಗುವ ಸೂರ್ಯನೇ ಮುಂತಾದ ಗ್ರಹಗಳ ಗತಿಯು ವಾಸ್ತವವಾಗಿ ಅದರಿಂದ ಭಿನ್ನವೇ ಆಗಿದೆ. ಏಕೆಂದರೆ ಅವನು ಕಾಲಭೇದದಿಂದ ಬೇರೆ-ಬೇರೆ ರಾಶಿ ಮತ್ತು ನಕ್ಷತ್ರಗಳಲ್ಲಿ ಕಂಡುಬರುತ್ತಿರುವನು. ॥ ೨ ॥ ಜಗತ್ತಿಗೆ ಕಾರಣನೂ, ಸಾಕ್ಷಾತ್ ನಾರಾಯಣ ಸ್ವರೂಪನೂ ಆಗಿರುವ ಆದಿಪುರುಷನಾದ ಭಗವಾನ್ ಸೂರ್ಯದೇವನು – ವೇದಮಂತ್ರದರ್ಶಿಗಳಾದ ಜ್ಞಾನಿಗಳೂ ಮತ್ತು ವೇದಗಳೂ ತಿಳಿಯಲು ಬಯಸುವ ಸ್ವರೂಪವುಳ್ಳವನು. ಆದರೂ ಆತನು ಲೋಕಗಳ ಕ್ಷೇಮಕ್ಕಾಗಿ ವೇದರೂಪಿಯಾದ ತನ್ನನ್ನು ಹನ್ನೆರಡು ಬಗೆಗಳನ್ನಾಗಿ ವಿಭಾಗಿಸಿಕೊಂಡು ಚೈತ್ರವೇ ಮುಂತಾದ ಹನ್ನೆರಡು ಮಾಸಗಳಲ್ಲಿ ಪ್ರತಿಯೊಂದರಲ್ಲಿಯೂ ಒಂದೊಂದು ಹೆಸರಿನಿಂದ ಕೂಡಿ ಜೀವಿಗಳು ಆಯಾ ಕರ್ಮಫಲವನ್ನು ಭೋಗಿಸುವುದಕ್ಕಾಗಿ ವಸಂತವೇ ಮುಂತಾದ ಆರು ಋತುಗಳಲ್ಲಿಯೂ ಅವುಗಳ ಯಥಾಯೋಗ್ಯ ಗುಣಧರ್ಮಗಳನ್ನು ಉಂಟುಮಾಡುತ್ತಾನೆ. ॥ ೩ ॥ ಈ ಲೋಕದಲ್ಲಿ ವರ್ಣಾಶ್ರಮಧರ್ಮವನ್ನು ಅನುಸರಿಸುವವರು ವೇದತ್ರಯದ ಮೂಲಕ ಪ್ರತಿಪಾದಿತ ಸಣ್ಣ-ದೊಡ್ಡ ಕರ್ಮಗಳಿಂದ ಇಂದ್ರಾದಿ ದೇವತೆಗಳ ರೂಪದಲ್ಲಿ ಮತ್ತು ಯೋಗಸಾಧನೆಯಿಂದ ಅಂತರ್ಯಾಮಿರೂಪದಲ್ಲಿ ಸೂರ್ಯನಾರಾಯಣನನ್ನು ಶ್ರದ್ಧೆಯಿಂದ ಆರಾಧಿಸಿ ಸುಲಭವಾಗಿ ಪರಮಪದವನ್ನು ಪಡೆದುಕೊಳ್ಳುವರು. ॥ ೪ ॥ ಭಗವಾನ್ ಸೂರ್ಯನು ಸಮಸ್ತ ಲೋಕಗಳ ಆತ್ಮನು. ಅವನು ಪೃಥಿವಿ ಮತ್ತು ದ್ಯುಲೋಕದ ಮಧ್ಯದಲ್ಲಿ ನೆಲೆಸಿರುವ ಆಕಾಶಮಂಡಲದೊಳಗೆ ಕಾಲಚಕ್ರದಲ್ಲಿ ಸ್ಥಿತನಾಗಿ ಸಂವತ್ಸರದ ಅವಯವಗಳಾದ ಮೇಷವೇ ಮುಂತಾದ ರಾಶಿಗಳಿಂದ ಪ್ರಸಿದ್ಧವಾದ ಹನ್ನೆರಡು ತಿಂಗಳುಗಳನ್ನು ಭೋಗಿಸುತ್ತಾನೆ. ಇದರಲ್ಲಿನ ಪ್ರತಿಯೊಂದು ತಿಂಗಳು ಚಂದ್ರನಿಂದ ಶುಕ್ಲ ಮತ್ತು ಕೃಷ್ಣ ಎಂಬ ಎರಡು ಪಕ್ಷಗಳನ್ನು ಪಿತೃಗಳ ಮಾನದಿಂದ ಒಂದು ರಾತ್ರಿ ಹಾಗೂ ಒಂದು ಹಗಲು ಎಂದೂ ಸೌರಮಾನದಿಂದ ಎರಡುಕಾಲು ನಕ್ಷತ್ರಗಳಿಂದ ತಿಳಿಸಲಾಗುತ್ತದೆ. ಸೂರ್ಯನು ಈ ಸಂವತ್ಸರದ

**ಯಾವತಾ ಷಷ್ಠಮಂಶಂ ಭುಂಜೀತ ಸ ವೈ ಋತುರಿತ್ಯುಪದಿಶ್ಯತೇ ಸಂವತ್ಸರಾವಯವಃ ॥ ೫ ॥ ಅಥ ಚ ಯಾವತಾರ್ಧೇನ ನಭೋವೀಥ್ಯಾಂ ಪ್ರಚರತಿ ತಂ ಕಾಲಮಯನಮಾಚಕ್ಷತೇ ॥ ೬ ॥ ಅಥ ಚ ಯಾವನ್ನಭೋಮಂಡಲಂ ಸಹ ದ್ಯಾವಾಪೃಥಿವ್ಯೋರ್ಮಂಡಲಾಭ್ಯಾಂ ಕಾರ್ತ್ಸ್ನ್ಯೇನ ಸ ಹ ಭುಂಜೀತ ತಂ ಕಾಲಂ ಸಂವತ್ಸರಂ ಪರಿವತ್ಸರಮಿಡಾವತ್ಸರಮನುವತ್ಸರಂ ವತ್ಸರಮಿತಿ ಭಾನೋರ್ಮಾಂದ್ಯಶೈಘ್ರ್ಯಸಮಗತಿಭಿಃ ಸಮಾಮನಂತಿ ॥ ೭ ॥**

**ಏವಂ ಚಂದ್ರಮಾ ಅರ್ಕಗಭಸ್ತಿಭ್ಯ ಉಪರಿಷ್ಟಾಲ್ಲಕ್ಷಯೋಜನತ ಉಪಲಭ್ಯಮಾನೋಽರ್ಕಸ್ಯ ಸಂವತ್ಸರಭುಕ್ತಿಂ ಪಕ್ಷಾಭ್ಯಾಂ ಮಾಸಭುಕ್ತಿಂ ಸಪಾದರ್ಕ್ಷಾಭ್ಯಾಂ ದಿನೇನೈವ ಪಕ್ಷಭುಕ್ತಿಮಗ್ರಚಾರೀ ದ್ರುತತರಗಮನೋ ಭುಂಕ್ತೇ ॥ ೮ ॥ ಅಥ ಚಾಪೂರ್ಯಮಾಣಾಭಿಶ್ಚ ಕಲಾಭಿರಮರಾಣಾಂ ಕ್ಷೀಯಮಾಣಾಭಿಶ್ಚ ಕಲಾಭಿಃ ಪಿತೄಣಾಮಹೋರಾತ್ರಾಣಿ ಪೂರ್ವಪಕ್ಷಾಪರಪಕ್ಷಾಭ್ಯಾಂ ವಿತನ್ವಾನಃ ಸರ್ವಜೀವನಿವಹಪ್ರಾಣೋ ಜೀವಶ್ಚೈಕಮೇಕಂ ನಕ್ಷತ್ರಂ ತ್ರಿಂಶತಾ ಮುಹೂರ್ತೈರ್ಭುಂಕ್ತೇ ॥ ೯ ॥ ಯ ಏಷ ಷೋಡಶಕಲಃ ಪುರುಷೋ ಭಗವಾನ್ಮನೋಮಯೋಽನ್ನಮಯೋಽಮೃತಮಯೋ ದೇವಪಿತೃಮನುಷ್ಯಭೂತಪಶುಪಕ್ಷಿಸರೀಸೃಪವೀರುಧಾಂ ಪ್ರಾಣಾಪ್ಯಾಯನಶೀಲತ್ವಾತ್ಸರ್ವಮಯ ಇತಿ ವರ್ಣಯಂತಿ ॥ ೧೦ ॥**

**ತತ ಉಪರಿಷ್ಟಾತ್ತ್ರಿಲಕ್ಷಯೋಜನತೋ ನಕ್ಷತ್ರಾಣಿ ಮೇರುಂ ದಕ್ಷಿಣೇನೈವ ಕಾಲಾಯನ ಈಶ್ವರಯೋಜಿತಾನಿ ಸಹಾಭಿಜಿತಾಷ್ಟಾವಿಂಶತಿಃ ॥ ೧೧ ॥ ತತ ಉಪರಿಷ್ಟಾದುಶನಾ ದ್ವಿಲಕ್ಷಯೋಜನತ ಉಪಲಭ್ಯತೇ ಪುರತಃ ಪಶ್ಚಾತ್ಸಹೈವ ವಾರ್ಕಸ್ಯ ಶೈಘ್ರ್ಯಮಾಂದ್ಯಸಾಮ್ಯಾಭಿರ್ಗತಿಭಿರರ್ಕವಚ್ಚರತಿ ಲೋಕಾನಾಂ ನಿತ್ಯದಾನುಕೂಲ ಏವ ಪ್ರಾಯೇಣ ವರ್ಷಯಂಶ್ಚಾರೇಣಾನುಮೀಯತೇ ಸ ವೃಷ್ಟಿವಿಷ್ಟಂಭಗ್ರಹೋಪಶಮನಃ ॥ ೧೨ ॥**

ಆರನೆಯ ಒಂದು ಭಾಗವನ್ನು ಭೋಗಿಸುವ ಅವಯವದ ಹೆಸರು 'ಋತು' ಎಂದು ಹೇಳಲಾಗುತ್ತದೆ ॥ ೫ ॥ ಭಗವಾನ್ ಸೂರ್ಯನು ಖಗೋಳದ ಅರ್ಧಭಾಗವಾಗಿರುವ ಆರು ರಾಶಿಗಳನ್ನು ದಾಟುವ ಕಾಲವನ್ನು 'ಅಯನ'ವೆಂದು ಕರೆಯುತ್ತಾರೆ. ॥ ೬ ॥ ಹಾಗೆಯೇ ಸೂರ್ಯನು ತನ್ನ ಮಂದಗತಿ, ತೀವ್ರಗತಿ ಮತ್ತು ಸಮಾನಗತಿಗಳಿಂದ ಸ್ವರ್ಗ ಮತ್ತು ಭೂಮಂಡಲದ ಸಹಿತ ಇಡೀ ಆಕಾಶವನ್ನು ಸುತ್ತುಬರುವ ಕಾಲವನ್ನು ಗತಿಭೇದದಿಂದ ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ ಅಥವಾ ವತ್ಸರವೆಂದು ಕರೆಯುತ್ತಾರೆ. ॥ ೭ ॥

ಹೀಗೆಯೇ ಸೂರ್ಯನ ಕಿರಣಗಳಿಂದ ಒಂದು ಲಕ್ಷಯೋಜನ ಮೇಲ್ಗಡೆ ಚಂದ್ರನಿದ್ದಾನೆ. ಅವನ ಗತಿಯು ಅತಿಶೀಘ್ರವಾಗಿರುವುದರಿಂದ ಎಲ್ಲ ನಕ್ಷತ್ರಗಳಿಂದಲೂ ಮುಂದೆ ಇರುತ್ತಾನೆ. ಇವನು ಸೂರ್ಯನ ಒಂದು ವರ್ಷದ ಮಾರ್ಗವನ್ನು ಒಂದು ತಿಂಗಳಿನಲ್ಲಿ, ಒಂದು ತಿಂಗಳ ಮಾರ್ಗವನ್ನು ಎರಡುಕಾಲು ದಿನಗಳಲ್ಲಿಯೂ ಮತ್ತು ಒಂದು ಪಕ್ಷದ ಮಾರ್ಗವನ್ನು ಒಂದೇ ದಿನದಲ್ಲಿ ದಾಟಿಬಿಡುತ್ತಾನೆ. ॥ ೮ ॥ ಚಂದ್ರನು ಕೃಷ್ಣಪಕ್ಷದಲ್ಲಿ ಕ್ಷೀಣವಾಗುವ ಕಲೆಗಳಿಂದ ಪಿತೃಗಳ ಮತ್ತು ಶುಕ್ಲಪಕ್ಷದಲ್ಲಿ ಬೆಳೆಯುತ್ತಿರುವ ಕಲೆಗಳಿಂದ ದೇವತೆಗಳ ಹಗಲು-ರಾತ್ರಿಯ ವಿಭಾಗವನ್ನು ಮಾಡುತ್ತಾನೆ ಹಾಗೂ ಮೂವತ್ತು ಮುಹೂರ್ತಗಳಲ್ಲಿ ಒಂದೊಂದು ನಕ್ಷತ್ರವನ್ನು ದಾಟುತ್ತಾನೆ. ಅವನು ಅನ್ನಮಯ ಮತ್ತು ಅಮೃತಮಯವಾದ್ದರಿಂದ ಸಮಸ್ತ ಜೀವರ ಪ್ರಾಣ ಹಾಗೂ ಜೀವನನಾಗಿದ್ದಾನೆ. ॥ ೯ ॥ ಇವನು ಹದಿನಾರು ಕಲೆಗಳಿಂದ ಕೂಡಿ ಮನೋಮಯ, ಅನ್ನಮಯ, ಅಮೃತಮಯ, ಪುರುಷಸ್ವರೂಪ ಭಗವಾನ್ ಚಂದ್ರನು – ದೇವತೆಗಳು, ಪಿತೃಗಳು, ಮನುಷ್ಯರು, ಭೂತ, ಪಶು, ಪಕ್ಷಿ, ಸರೀಸೃಪ ಮತ್ತು ವೃಕ್ಷವೇ ಮುಂತಾದ ಸಮಸ್ತ ಪ್ರಾಣಿಗಳ ಪ್ರಾಣಗಳನ್ನು ಪೋಷಿಸುತ್ತಾನೆ; ಅದಕ್ಕಾಗಿ ಇವನಿಗೆ ಸರ್ವಮಯ ಎಂದು ಹೇಳುತ್ತಾರೆ. ॥ ೧೦ ॥

ಚಂದ್ರನಿಂದ ಮೂರು ಲಕ್ಷಯೋಜನಗಳಷ್ಟು ಮೇಲೆ ಅಭಿಜಿತ್ ನಕ್ಷತ್ರವೂ ಸೇರಿ ಇಪ್ಪತ್ತೆಂಟು ನಕ್ಷತ್ರಗಳಿವೆ. ಭಗವಂತನು ಇವುಗಳನ್ನು ಕಾಲಚಕ್ರದಲ್ಲಿ ನೇಮಿಸಿರುವುದರಿಂದ ಮೇರುವನ್ನು ಬಲಕ್ಕೆ ಇಟ್ಟುಕೊಂಡು ಪ್ರದಕ್ಷಿಣೆ ಮಾಡುತ್ತಿವೆ. ॥ ೧೧ ॥ ಇವುಗಳಿಂದ ಎರಡು ಲಕ್ಷಯೋಜನಗಳಷ್ಟು ಮೇಲೆ ಶುಕ್ರಗ್ರಹವು ಗೋಚರಿಸುತ್ತದೆ. ಇವನು ಸೂರ್ಯನ ಶೀಘ್ರ, ಮಂದ ಮತ್ತು ಸಮಾನ ಗತಿಗಳನುಸಾರ ಅವನಂತೆಯೇ ಕೆಲವೊಮ್ಮೆ ಮುಂದೆ, ಕೆಲವೊಮ್ಮೆ ಹಿಂದೆ, ಕೆಲವೊಮ್ಮೆ ಜೊತೆ-ಜೊತೆಗೆ ಇದ್ದು ಸಂಚರಿಸುತ್ತಾನೆ. ಇವನು ಮಳೆಗರೆಯುವ ಗ್ರಹನಾಗಿದ್ದಾನೆ. ಅದಕ್ಕಾಗಿ ಜನರಿಗೆ ಪ್ರಾಯಶಃ ಸದಾಕಾಲ ಅನುಕೂಲನಾಗಿಯೇ ಇರುತ್ತಾನೆ. ಇವನ ಗತಿಯಿಂದ ಮಳೆಯನ್ನು ತಡೆಯುವ ಗ್ರಹರನ್ನು ಶಾಂತಗೊಳಿಸುತ್ತಾನೆ ಎಂಬ ಅನುಮಾನ ಉಂಟಾಗುತ್ತದೆ. ॥ ೧೨ ॥

ಶುಕ್ರನ ಗತಿಯ ಜೊತೆ-ಜೊತೆಗೆ ಬುಧನ ವ್ಯಾಖ್ಯೆಯು ಆದಂತಾಯಿತು. ಶುಕ್ರನಂತೆಯೇ ಬುಧನ ಗತಿಯನ್ನು ತಿಳಿದುಕೊಳ್ಳಬೇಕು. ಚಂದ್ರಪುತ್ರನಾದ ಈ ಬುಧನು ಶುಕ್ರನಿಂದ ಎರಡುಲಕ್ಷ ಯೋಜನಗಳಷ್ಟು ಮೇಲೆ ಇದ್ದಾನೆ. ಇವನು ಪ್ರಾಯಶಃ ಮಂಗಲಕಾರಿಯೇ

ಉಶನಸಾ ಬುಧೋ ವ್ಯಾಖ್ಯಾತಸ್ತತ ಉಪರಿಷ್ಟಾದ್ದ್ವಿ-ಲಕ್ಷಯೋಜನತೋ ಬುಧಃ ಸೋಮಸುತ ಉಪಲಭ್ಯ-ಮಾನಃ ಪ್ರಾಯೇಣ ಶುಭಕೃದ್ಯದಾರ್ಕಾದ್ವ್ಯತಿರಿಚ್ಯೇತ ತದಾತಿವಾತಾಭ್ರಪ್ರಾಯಾನಾವೃಷ್ಟ್ಯಾದಿಭಯಮಾಶಂಸತೇ ॥ ೧೩ ॥ ಅತ ಊರ್ಧ್ವಮಂಗಾರಕೋಽಪಿ ಯೋಜನ-ಲಕ್ಷದ್ವಿತಯ ಉಪಲಭ್ಯಮಾನಸ್ತ್ರಿಭಿಸ್ತ್ರಿಭಿಃ ಪಕ್ಷೈರೇಕೈಕಶೋ ರಾಶೀನ್‌ದ್ವಾದಶಾನುಭುಂಕ್ತೇ ಯದಿ ನ ವಕ್ರೇಣಾಭಿ-ವರ್ತತೇ ಪ್ರಾಯೇಣಾಶುಭಗ್ರಹೋಽಘಶಂಸಃ ॥ ೧೪ ॥ ತತ ಉಪರಿಷ್ಟಾದ್ದ್ವಿಲಕ್ಷಯೋಜನಾಂತರಗತೋ ಭಗವಾನ್ ಬೃಹಸ್ಪತಿರೇಕೈಕಸ್ಮಿನ್ರಾಶೌ ಪರಿವತ್ಸರಂ ಪರಿವತ್ಸರಂ ಚರತಿ ಯದಿ ನ ವಕ್ರಃ ಸ್ಯಾತ್ಪ್ರಾಯೇಣಾನುಕೂಲೋ ಬ್ರಾಹ್ಮಣ-ಕುಲಸ್ಯ ॥ ೧೫ ॥

ತತ ಉಪರಿಷ್ಟಾದ್ಯೋಜನಲಕ್ಷದ್ವಯಾತ್ಪ್ರತೀಯಮಾನಃ ಶನೈಶ್ಚರ ಏಕೈಕಸ್ಮಿನ್ರಾಶೌ ತ್ರಿಂಶನ್ಮಾಸಾನ್ವಿಲಂಬಮಾನಃ ಸರ್ವಾ-ನೇವಾನುಪರ್ಯೇತಿ ತಾವದ್ಭಿರನುವತ್ಸರೈಃ ಪ್ರಾಯೇಣ ಹಿ ಸರ್ವೇಷಾಮಶಾಂತಿಕರಃ ॥ ೧೬ ॥ ತತ ಉತ್ತರಸ್ಮಾದೃಷಯ ಏಕಾದಶಲಕ್ಷಯೋಜನಾಂತರ ಉಪಲಭ್ಯಂತೇ ಯ ಏವ ಲೋಕಾನಾಂ ಶಮನುಭಾವಯಂತೋ ಭಗವತೋ ವಿಷ್ಣೋ-ರ್ಯತ್ಪರಮಂ ಪದಂ ಪ್ರದಕ್ಷಿಣಂ ಪ್ರಕ್ರಮಂತಿ ॥ ೧೭ ॥

ಆಗಿದ್ದಾನೆ. ಆದರೆ ಸೂರ್ಯನ ಗತಿಯನ್ನು ಬಿಟ್ಟು ಮುಂದಕ್ಕೆ ಹೋದರೆ ಬಿರುಗಾಳಿ, ಮೋಡಗಳು ಮತ್ತು ಅನಾವೃಷ್ಟಿಗಳನ್ನು ಸೂಚಿಸುತ್ತಾನೆ. ॥ ೧೩ ॥ ಬುಧಗ್ರಹನಿಂದ ಎರಡುಲಕ್ಷ ಯೋಜನ ಗಳಷ್ಟು ಮೇಲೆ ಮಂಗಳಗ್ರಹವಿದೆ. ಇವನು ವಕ್ರಗತಿಯಿಂದ ನಡೆಯದಿದ್ದರೆ ಒಂದೊಂದು ರಾಶಿಯನ್ನು ಮೂರು-ಮೂರು ಪಕ್ಷಗಳಲ್ಲಿ ಭೋಗಿಸುತ್ತಾ ಹನ್ನೆರಡೂ ರಾಶಿಯನ್ನು ದಾಟುತ್ತಾನೆ. ಇವನು ಅಶುಭಗ್ರಹನಾಗಿದ್ದು ಪ್ರಾಯಶಃ ಅಮಂಗಳ ಸೂಚಕನೇ ಆಗಿದ್ದಾನೆ. ॥ ೧೪ ॥ ಮಂಗಳನಿಗಿಂತ ಎರಡುಲಕ್ಷ ಯೋಜನ ಗಳಷ್ಟು ದೂರದಲ್ಲಿ ಭಗವಾನ್ ಬೃಹಸ್ಪತಿಯಿದ್ದಾನೆ. ಇವನು ವಕ್ರಗತಿಯಿಂದ ನಡೆಯದಿದ್ದರೆ ಒಂದೊಂದು ರಾಶಿಯನ್ನು ಒಂದು ವರ್ಷದಲ್ಲಿ ಭೋಗಿಸುತ್ತಾನೆ. ಇವನು ಸಾಮಾನ್ಯವಾಗಿ ಬ್ರಾಹ್ಮಣಕುಲಕ್ಕೆ ಅನುಕೂಲವಾಗಿ ಇರುತ್ತಾನೆ. ॥ ೧೫ ॥

ಬೃಹಸ್ಪತಿಗಿಂತ ಎರಡುಲಕ್ಷ ಯೋಜನಗಳಷ್ಟು ಮೇಲೆ ಶನೈಶ್ಚ ರನು ಕಂಡುಬರುತ್ತಾನೆ. ಇವನು ಮೂವತ್ತು ತಿಂಗಳುತನಕ ಒಂದೊಂದು ರಾಶಿಯಲ್ಲಿ ಇರುತ್ತಾನೆ. ಆದ್ದರಿಂದ ಇವನಿಗೆ ಎಲ್ಲ ರಾಶಿಗಳನ್ನು ದಾಟಲು ಮೂವತ್ತು ವರ್ಷಗಳು ಬೇಕಾಗುತ್ತವೆ. ಇವನು ಸಾಮಾನ್ಯವಾಗಿ ಎಲ್ಲರಿಗೆ ಅಶಾಂತಿಕಾರಕನಾಗಿದ್ದಾನೆ. ॥ ೧೬ ॥ ಶನಿಗ್ರಹದ ಮೇಲೆ ಹನ್ನೆರಡು ಲಕ್ಷಯೋಜನ ದೂರದಲ್ಲಿ ಕಶ್ಯಪಾದಿ ಸಪ್ತರ್ಷಿಗಳು ಕಂಡುಬರುವರು. ಇವರು ಎಲ್ಲ ಲೋಕಗಳಿಗೂ ಮಂಗಳವನ್ನು ಬಯಸುತ್ತಾ ಭಗವಾನ್ ವಿಷ್ಣುವಿನ ಪರಮಪದ ವಾದ ಧ್ರುವಲೋಕವನ್ನು ಪ್ರದಕ್ಷಿಣೆ ಮಾಡುತ್ತಾರೆ. ॥ ೧೭ ॥

*ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೨೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಜ್ಯೋತಿಶ್ಚಕ್ರವರ್ಣನೇ ದ್ವಾವಿಂಶೋಽಧ್ಯಾಯಃ ॥ ೨೨ ॥

# ಇಪ್ಪತ್ತಮೂರನೆಯ ಅಧ್ಯಾಯ

## ಶಿಶುಮಾರ ಚಕ್ರದ ವರ್ಣನೆ

*ಶ್ರೀಶುಕ ಉವಾಚ*

ಅಥ ತಸ್ಮಾತ್ಪರತಸ್ತ್ರಯೋದಶಲಕ್ಷಯೋಜನಾಂತರತೋ ಯತ್ತದ್ವಿಷ್ಣೋಃ ಪರಮಂ ಪದಮಭಿವದಂತಿ ಯತ್ರ ಹ ಮಹಾಭಾಗವತೋ ಧ್ರುವ ಔತ್ತಾನಪಾದಿರಗ್ನಿನೇಂದ್ರೇಣ ಪ್ರಜಾಪತಿನಾ ಕಶ್ಯಪೇನ ಧರ್ಮೇಣ ಚ ಸಮಕಾಲಯುಗ್ಭಿಃ ಸಬಹುಮಾನಂ ದಕ್ಷಿಣತಃ ಕ್ರಿಯಮಾಣ ಇದಾನೀಮಪಿ ಕಲ್ಪಜೀವಿನಾಮಾಜೀವ್ಯ ಉಪಾಸ್ತೇ ತಸ್ಯೇಹಾನುಭಾವ ಉಪವರ್ಣಿತಃ ॥ ೧ ॥ ಸ ಹಿ ಸರ್ವೇಷಾಂ ಜ್ಯೋತಿರ್ಗ-

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ–** ಎಲೈ ರಾಜೇಂದ್ರನೇ! ಸಪ್ತರ್ಷಿಮಂಡಲಕ್ಕಿಂತ ಹದಿಮೂರುಲಕ್ಷ ಯೋಜನಗಳಷ್ಟು ಎತ್ತರ ದಲ್ಲಿ ಧ್ರುವಲೋಕವಿದೆ. ಇದನ್ನು ಭಗವಾನ್ ವಿಷ್ಣುವಿನ ಪರಮಪದ ವೆಂದು ಹೇಳುತ್ತಾರೆ. ಇಲ್ಲಿ ಉತ್ತಾನಪಾದನ ಪುತ್ರನಾದ ಪರಮಭಾಗ ವತೋತ್ತಮ ಧ್ರುವನು ಬೆಳಗುತ್ತಿದ್ದಾನೆ. ಅಗ್ನಿ, ಇಂದ್ರ, ಪ್ರಜಾಪತಿ, ಕಶ್ಯಪ ಮತ್ತು ಧರ್ಮ – ಇವರೆಲ್ಲರೂ ಒಟ್ಟಿಗೆ ಅತ್ಯಾದರಪೂರ್ವಕ ವಾಗಿ ಆ ಧ್ರುವನನ್ನು ಪ್ರದಕ್ಷಿಣೆ ಮಾಡುತ್ತಿದ್ದಾರೆ. ಈಗಲೂ ಕೂಡ ಕಲ್ಪಾಂತ್ಯದವರೆಗೆ ಜೀವಿಸಿರುವ ಚಿರಂಜೀವಿಗಳಿಗೆ ಈ ಧ್ರುವನೇ ಆಧಾರ. ಈ ಲೋಕದ ಪ್ರಭಾವವನ್ನು ನಾನು ಹಿಂದೆಯೇ (ನಾಲ್ಕನೆಯ ಸ್ಕಂಧದಲ್ಲಿ) ವರ್ಣಿಸಿರುವೆನು. ॥ ೧ ॥ ಸದಾಕಾಲ ಎಚ್ಚರವಾಗಿರುವ ಅವ್ಯಕ್ತಗತಿಯುಳ್ಳ ಭಗವಾನ್‌ಕಾಲನ ಮೂಲಕ

ಣಾನಾಂ ಗ್ರಹನಕ್ಷತ್ರಾದೀನಾಮನಿಮಿಷೇಣಾವ್ಯಕ್ತರಂಹಸಾ ಭಗವತಾ ಕಾಲೇನ ಭ್ರಾಮ್ಯಮಾಣಾನಾಂ ಸ್ಥಾಣುರಿವಾವಷ್ಟಂಭ ಈಶ್ವರೇಣ ವಿಹಿತಃ ಶಶ್ವದವಭಾಸತೇ ॥ ೨ ॥

ಯಥಾ ಮೇಢೀಸ್ತಂಭ ಆಕ್ರಮಣಪಶವಃ ಸಂಯೋಜಿತಾಸ್ತ್ರಿಭಿಸ್ತ್ರಿಭಿಃ ಸವನೈರ್ಯಥಾಸ್ಥಾನಂ ಮಂಡಲಾನಿ ಚರಂತ್ಯೇವಂ ಭಗಣಾ ಗ್ರಹಾದಯ ಏತಸ್ಮಿನ್ನಂತರ್ಬಹಿರ್ಯೋಗೇನ ಕಾಲಚಕ್ರ ಆಯೋಜಿತಾ ಧ್ರುವಮೇವಾವಲಂಬ್ಯ ವಾಯುನೋದೀರ್ಯಮಾಣಾ ಆಕಲ್ಪಾಂತಂ ಪರಿಚಂಕ್ರಮಂತಿ ನಭಸಿ ಯಥಾ ಮೇಘಾಃ ಶ್ಯೇನಾದಯೋ ವಾಯುವಶಾಃ ಕರ್ಮಸಾರಥಯಃ ಪರಿವರ್ತಂತೇ ಏವಂ ಜ್ಯೋತಿರ್ಗಣಾಃ ಪ್ರಕೃತಿಪುರುಷಸಂಯೋಗಾನುಗೃಹೀತಾಃ ಕರ್ಮನಿರ್ಮಿತಗತಯೋ ಭುವಿ ನ ಪತಂತಿ ॥ ೩ ॥

ಕೇಚನೈತಜ್ಜ್ಯೋತಿರನೀಕಂ ಶಿಶುಮಾರಸಂಸ್ಥಾನೇನ ಭಗವತೋ ವಾಸುದೇವಸ್ಯ ಯೋಗಧಾರಣಾಯಾಮನುವರ್ಣಯಂತಿ ॥ ೪ ॥ ಯಸ್ಯ ಪುಚ್ಛಾಗ್ರೇಽವಾಕ್ಶಿರಸಃ ಕುಂಡಲೀಭೂತದೇಹಸ್ಯ ಧ್ರುವ ಉಪಕಲ್ಪಿತಸ್ತಸ್ಯ ಲಾಂಗೂಲೇ ಪ್ರಜಾಪತಿರಗ್ನಿರಿಂದ್ರೋ ಧರ್ಮ ಇತಿ ಪುಚ್ಛಮೂಲೇ ಧಾತಾ ವಿಧಾತಾ ಚ ಕಟ್ಯಾಂ ಸಪ್ತರ್ಷಯಃ। ತಸ್ಯ ದಕ್ಷಿಣಾವರ್ತಕುಂಡಲೀಭೂತಶರೀರಸ್ಯ ಯಾನ್ಯುದಗಯನಾನಿ ದಕ್ಷಿಣಪಾರ್ಶ್ವೇ ತು ನಕ್ಷತ್ರಾಣ್ಯುಪಕಲ್ಪಯಂತಿ ದಕ್ಷಿಣಾಯನಾನಿ ತು ಸವ್ಯೇ । ಯಥಾ ಶಿಶುಮಾರಸ್ಯ ಕುಂಡಲಾಭೋಗಸನ್ನಿವೇಶಸ್ಯ ಪಾರ್ಶ್ವಯೋರುಭಯೋರಪ್ಯವಯವಾಃ ಸಮಸಂಖ್ಯಾ ಭವಂತಿ । ಪೃಷ್ಠೇ ತ್ವಜವೀಥೀ ಆಕಾಶಗಂಗಾ ಚೋದರತಃ ॥ ೫ ॥ ಪುನರ್ವಸುಪುಷ್ಯೌ ದಕ್ಷಿಣವಾಮಯೋಃ ಶ್ರೋಣ್ಯೋರಾರ್ದ್ರಾಶ್ಲೇಷೇ ಚ ದಕ್ಷಿಣವಾಮಯೋಃ ಪಶ್ಚಿಮಯೋಃ ಪಾದಯೋ ರಭಿಜಿದುತ್ತರಾಷಾಢೇ ದಕ್ಷಿಣವಾಮಯೋರ್ನಾಸಿಕಯೋರ್ಯಥಾಸಂಖ್ಯಂ ಶ್ರವಣ ಪೂರ್ವಾಷಾಢೇ ದಕ್ಷಿಣವಾಮಯೋರ್ಲೋಚನಯೋರ್ಧನಿಷ್ಠಾ ಮೂಲಂ ಚ ದಕ್ಷಿಣ-

ಗ್ರಹ-ನಕ್ಷತ್ರಾದಿ ಜ್ಯೋತಿರ್ಗಣಗಳೆಲ್ಲರೂ ನಿರಂತರ ತಿರುಗುತ್ತಾ ಇರುತ್ತಾರೆ. ಭಗವಂತನು ಧ್ರುವಲೋಕವನ್ನೇ ಅವರೆಲ್ಲರ ಆಧಾರಸ್ತಂಭವಾಗಿ ನಿಯಮಿಸಿರುವನು. ಆದ್ದರಿಂದ ಈ ಧ್ರುವಲೋಕವು ಒಂದೇ ಜಾಗದಲ್ಲಿ ಇದ್ದು ಸದಾ ಪ್ರಕಾಶಿಸುತ್ತಾ ಇರುತ್ತದೆ. ॥ ೨ ॥

ಧಾನ್ಯವನ್ನು ತುಳಿಸುವುದಕ್ಕಾಗಿ ಮೇಟಿಯ ಕಂಬಕ್ಕೆ ಹಗ್ಗಗಳಿಂದ ಬಿಗಿಯಲ್ಪಟ್ಟ ಎತ್ತುಗಳು ಎಂದಿಗೂ ಆ ನೆಲೆಯನ್ನು ಬಿಡದೆ ಮಂಡಲಾಕಾರವಾಗಿ ಆ ಕಂಬವನ್ನೇ ಸುತ್ತುತ್ತಿರುವಂತೆಯೇ, ಸೂರ್ಯನೇ ಮುಂತಾದ ಗ್ರಹರೂ, ನಕ್ಷತ್ರಗಳೂ ಆ ಕಾಲಚಕ್ರದ ಒಳಗೂ-ಹೊರಗೂ ಅದರಲ್ಲಿ ನೇಮಕಗೊಂಡು ಧ್ರುವಲೋಕವನ್ನೇ ಆಶ್ರಯಿಸಿ, ವಾಯುವಿನ ಪ್ರೇರಣೆಯಿಂದ ಕಲ್ಪದ ಕೊನೆಯವರೆಗೆ ತಿರುಗುತ್ತಾ ಇರುತ್ತವೆ. ಮೋಡಗಳೂ, ಹದ್ದು ಮೊದಲಾದ ಹಕ್ಕಿಗಳು ಕರ್ಮಗಳಿಗೆ ಅಧೀನರಾಗಿ ವಾಯುವಿಗೆ ಅಧೀನರಾಗಿ ಆಕಾಶದಲ್ಲಿ ಹಾರುತ್ತಾ ಇರುವಂತೆಯೇ, ಗ್ರಹ-ನಕ್ಷತ್ರಾದಿಗಳು ತಮ್ಮ-ತಮ್ಮ ಕರ್ಮಗಳಿಗನುಸಾರವಾಗಿ ಭೂಮಿಗೆ ಬೀಳದೆ ಆ ಕಾಲಚಕ್ರದಲ್ಲೇ ಸುತ್ತುತ್ತಿರುವರು. ॥ ೩ ॥

ಕೆಲವರು ಭಗವಂತನ ಯೋಗಮಾಯೆಯ ಆಧಾರದಲ್ಲಿ ನೆಲೆಸಿರುವ ಈ ಜ್ಯೋತಿಶ್ಚಕ್ರವನ್ನು ಶಿಶುಮಾರಚಕ್ರದ ರೂಪದಲ್ಲಿ ವರ್ಣಿಸುತ್ತಾರೆ. ॥ ೪ ॥ ಈ ಶಿಶುಮಾರವು ಕುಂಡಲದ ಆಕಾರದಲ್ಲಿ ಸುತ್ತಿಕೊಂಡಿರುವ ಸರ್ಪದಂತಿದೆ. ಇದು ತಲೆಕೆಳಗಾಗಿ ಬಾಲವನ್ನು ಮೇಲಿಟ್ಟುಕೊಂಡಿದೆ. ಅದರ ಬಾಲದ ತುದಿಯಲ್ಲಿ ಧ್ರುವನು ಬೆಳಗುತ್ತಿದ್ದಾನೆ. ಬಾಲದ ಮಧ್ಯಭಾಗದಲ್ಲಿ ಪ್ರಜಾಪತಿ, ಅಗ್ನಿ, ಇಂದ್ರ ಮತ್ತು ಧರ್ಮ ಇವರು ಪ್ರಕಾಶಿಸುತ್ತಿದ್ದಾರೆ. ಬಾಲದ ಬುಡದಲ್ಲಿ ಧಾತಾ ಮತ್ತು ವಿಧಾತಾ ಎಂಬುವರಿದ್ದಾರೆ. ಇದರ ಕಟಿಪ್ರದೇಶದಲ್ಲಿ ಸಪ್ತರ್ಷಿಗಳಿದ್ದಾರೆ. ಈ ಶಿಶುಮಾರವು ಪ್ರದಕ್ಷಿಣಾಕಾರವಾಗಿ ಮಂಡಲದ ಆಕಾರದಲ್ಲಿ ದೇಹವನ್ನು ಸುತ್ತಿಕೊಂಡಿದೆ. ಅದರ ಬಲಗಡೆಯಲ್ಲಿ ಅಭಿಜಿತ್ತೆಂಬ ನಕ್ಷತ್ರದಿಂದ ಪ್ರಾರಂಭವಾಗಿ ಪುನರ್ವಸು ನಕ್ಷತ್ರದವರೆಗಿನ ಉತ್ತರಾಯಣದ ಹದಿನಾಲ್ಕು ನಕ್ಷತ್ರಗಳಿವೆ. ಪುಷ್ಯದಿಂದ ಹಿಡಿದು ಉತ್ತರಾಷಾಢಾವರೆಗಿನ ದಕ್ಷಿಣಾಯನದ ಹದಿನಾಲ್ಕು ನಕ್ಷತ್ರಗಳು ಎಡಭಾಗದಲ್ಲಿವೆ. ಹೀಗೆ ಆ ಶಿಶುಮಾರ ಚಕ್ರದ ಎರಡೂ ಪಕ್ಕದಲ್ಲಿಯೂ ಅಶ್ವಿನಿಯೇ ಮುಂತಾದ ಇಪ್ಪತ್ತೆಂಟು ನಕ್ಷತ್ರಗಳು ಸಮಸಂಖ್ಯೆಯ ಅವಯವಗಳಾಗಿವೆ. ಕುಂಡಲಾಕಾರದ ರಚನೆಯಲ್ಲಿ ಎರಡೂ ಕಡೆಯ ಅಂಗಗಳು ಸಮನಾಗಿರುವಂತೆ ಇಲ್ಲಿ ನಕ್ಷತ್ರಗಳ ಸಂಖ್ಯೆಯೂ ಸಮವಾಗಿದೆ. ಅದರ ಬೆನ್ನಿನಲ್ಲಿ ಅಜವಿಥಿಯೂ (ಮೂಲಾ, ಪೂರ್ವಾಷಾಢಾ, ಉತ್ತರಾಷಾಢಾ ಎಂಬ ಮೂರು ನಕ್ಷತ್ರಗಳ ಗುಂಪು) ಇದೆ. ಉದರದಲ್ಲಿ ಆಕಾಶಗಂಗೆಯು ಪ್ರಕಾಶಿಸುತ್ತಿದೆ. ॥ ೫ ॥ ಎಲೈ ರಾಜನೇ ! ಇದರ ಬಲ-ಎಡಭಾಗಗಳ ಕಟಿಗಳಲ್ಲಿ ಪುನರ್ವಸು ಮತ್ತು ಪುಷ್ಯ ನಕ್ಷತ್ರಗಳಿವೆ. ಹಿಂದುಗಡೆಯ ಬಲ ಮತ್ತು ಎಡ ಪಾದಗಳಲ್ಲಿ ಆರ್ದ್ರಾ ಮತ್ತು ಆಶ್ಲೇಷಾ ನಕ್ಷತ್ರಗಳಿವೆ. ಬಲ-ಎಡಭಾಗದ ಮೂಗಿನ ಹೊಳ್ಳೆಗಳಲ್ಲಿ ಕ್ರಮವಾಗಿ ಅಭಿಜಿತ್ ಮತ್ತು ಉತ್ತರಾಷಾಢಾ ನಕ್ಷತ್ರಗಳಿವೆ. ಹೀಗೆಯೇ ಬಲ-ಎಡ ನೇತ್ರಗಳಲ್ಲಿ ಶ್ರವಣ ಹಾಗೂ ಪೂರ್ವಾಷಾಢಾ ನಕ್ಷತ್ರಗಳೂ, ಹಾಗೆಯೇ ಬಲ-ಎಡ ಕಿವಿಗಳಲ್ಲಿ

ವಾಮಯೋಃ ಕರ್ಣಯೋರ್ಮಘಾದೀನ್ಯಷ್ಟ ನಕ್ಷತ್ರಾಣಿ ದಕ್ಷಿಣಾಯನಾನಿವಾಮಪಾರ್ಶ್ವವಂಕ್ರಿಷು ಯುಂಜೀತ ತಥೈವ ಮೃಗಶೀರ್ಷಾದೀನ್ಯುದಗಯನಾನಿ ದಕ್ಷಿಣಪಾರ್ಶ್ವ- ವಂಕ್ರಿಷು ಪ್ರಾತಿಲೋಮ್ಯೇನ ಪ್ರಯುಂಜೀತ ಶತಭಿಷಾ- ಜ್ಯೇಷ್ಠೇಸ್ಕಂದಯೋರ್ದಕ್ಷಿಣವಾಮಯೋರ್ನ್ಯಸೇತ್ ॥ ೬ ॥ ಉತ್ತರಾಹನಾವಗಸ್ತಿರಧರಾಹನೌ ಯಮೋ ಮುಖೇಷು ಚಾಂಗಾರಕಃ ಶನೈಶ್ಚರ ಉಪಸ್ಥೇ ಬೃಹಸ್ಪತಿಃ ಕಕುದಿ ವಕ್ಷಸ್ಯಾದಿತ್ಯೋ ಹೃದಯೇ ನಾರಾಯಣೋ ಮನಸಿ ಚಂದ್ರೋ ನಾಭ್ಯಾಮುಶನಾ ಸ್ತನಯೋರಶ್ವಿನೌ ಬುಧಃ ಪ್ರಾಣಾಪಾನಯೋ ರಾಹುರ್ಗಲೇ ಕೇತವಃ ಸರ್ವಾಂ- ಗೇಷು ರೋಮಸು ಸರ್ವೇ ತಾರಾಗಣಾಃ ॥ ೭ ॥

ಏತದು ಹೈವ ಭಗವತೋ ವಿಷ್ಣೋಃ ಸರ್ವದೇ- ವತಾಮಯಂ ರೂಪಮಹರಹಃ ಸಂಧ್ಯಾಯಾಂ ಪ್ರಯ- ತೋ ವಾಗ್ಯತೋ ನಿರೀಕ್ಷಮಾಣ ಉಪತಿಷ್ಠೇತ ನಮೋ ಜ್ಯೋತಿರ್ಲೋಕಾಯ ಕಾಲಾಯನಾಯಾನಿಮಿಷಾಂ ಪತಯೇ ಮಹಾಪುರುಷಾಯಾಭಿಧೀ- ಮಹೀತಿ ॥ ೮ ॥

ಗ್ರಹರ್ಕ್ಷತಾರಾಮಯಮಾಧಿದೈವಿಕಂ
ಪಾಪಾಪಹಂ ಮಂತ್ರಕೃತಾಂ ತ್ರಿಕಾಲಮ್ ।
ನಮಸ್ಯತಃ ಸ್ಮರತೋ ವಾ ತ್ರಿಕಾಲಂ
ನಶ್ಯೇತ ತತ್ಕಾಲಜಮಾಶು ಪಾಪಮ್ ॥ ೯ ॥

ಧನಿಷ್ಠಾ ಮತ್ತು ಮೂಲಾ ನಕ್ಷತ್ರಗಳಿವೆ. ಮಘಾ ಮುಂತಾದ ದಕ್ಷಿಣಾಯನದ ಎಂಟು ನಕ್ಷತ್ರಗಳು ಎಡ ಪಕ್ಕೆಲುಬಿನಲ್ಲಿ ಮತ್ತು ವಿಪರೀತ ಕ್ರಮದಿಂದ ಮೃಗಶಿರಾ ಮುಂತಾದ ಉತ್ತರಾಯಣದ ಎಂಟು ನಕ್ಷತ್ರಗಳು ಬಲದ ಪಕ್ಕೆಲುಬಿನಲ್ಲಿದೆ. ಶತಭಿಷಾ ಮತ್ತು ಜ್ಯೇಷ್ಠಾ ಇವೆರಡು ನಕ್ಷತ್ರಗಳು ಕ್ರಮವಾಗಿ ಬಲ ಮತ್ತು ಎಡ ಹೆಗಲುಗಳಲ್ಲಿ ಇವೆ. ॥ ೬ ॥ ಅದರ ಮೇಲಿನ ದವಡೆಯಲ್ಲಿ ನಕ್ಷತ್ರರೂಪರಾದ ಅಗಸ್ತ್ಯರೂ, ಕೆಳಗಿನ ದವಡೆಯಲ್ಲಿ ನಕ್ಷತ್ರರೂಪನಾದ ಯಮನೂ, ಮುಖಗಳಲ್ಲಿ ಮಂಗಳನೂ, ಲಿಂಗಪ್ರದೇಶದಲ್ಲಿ ಶನಿಯೂ, ಕತ್ತಿನ ಹೆರಳಿನಲ್ಲಿ ಬೃಹಸ್ಪತಿಯೂ, ಎದೆಯಲ್ಲಿ ಸೂರ್ಯನೂ, ಹೃದಯದಲ್ಲಿ ನಾರಾಯಣನೂ, ಮನಸ್ಸಿನಲ್ಲಿ ಚಂದ್ರನೂ, ಹೊಕ್ಕುಳಲ್ಲಿ ಶುಕ್ರನೂ, ಸ್ತನಗಳಲ್ಲಿ ಅಶ್ವಿನೀದೇವತೆಗಳೂ, ಪ್ರಾಣಾಪಾನಗಳಲ್ಲಿ ಬುಧನೂ, ಕತ್ತಿನಲ್ಲಿ ರಾಹುವೂ, ಸಮಸ್ತ ಅಂಗಗಳಲ್ಲಿ ಕೇತುವೂ, ರೋಮಗಳಲ್ಲಿ ಸಮಸ್ತ ತಾರೆಗಳೂ ನೆಲೆಸಿವೆ. ॥ ೭ ॥

ಎಲೈ ರಾಜನೇ! ಇದು ಭಗವಂತನಾದ ವಿಷ್ಣುವಿನ ಸರ್ವದೇವಮಯ ಸ್ವರೂಪವಾಗಿದೆ. ಪ್ರತಿದಿನವು ಸಾಯಂಕಾಲದಲ್ಲಿ ಪವಿತ್ರ ಮತ್ತು ಮೌನವಾಗಿ ಇದನ್ನು ದರ್ಶನಮಾಡುತ್ತಾ ಶ್ರೀಭಗವಂತನನ್ನು ಚಿಂತಿಸಬೇಕು ಹಾಗೂ ಈ ಮಂತ್ರವನ್ನು ಜಪಿಸುತ್ತಾ ಭಗವಂತನನ್ನು ಸ್ತುತಿಸಬೇಕು – 'ಸಮಸ್ತ ಜ್ಯೋತಿರ್ಗಣಗಳಿಗೆಲ್ಲಾ ಆಶ್ರಯನೂ, ಕಾಲಚಕ್ರ ಸ್ವರೂಪಿಯೂ, ಸರ್ವದೇವತಾಧಿಪತಿಯೂ ಆದ ಪರಮಪುರುಷ ಪರಮಾತ್ಮನನ್ನು ನಾವು ನಮಸ್ಕಾರಪೂರ್ವಕ ಧ್ಯಾನಿಸುತ್ತೇವೆ. ॥ ೮ ॥ ಗ್ರಹ, ನಕ್ಷತ್ರ ಮತ್ತು ತಾರೆಗಳ ರೂಪದಲ್ಲಿ ಭಗವಂತನ ಅಧಿದೈವಿಕರೂಪವೇ ಪ್ರಕಾಶಿಸುತ್ತಿದೆ. ಅದು ತ್ರಿಕಾಲಗಳಲ್ಲಿಯೂ ಮೇಲೆ ಹೇಳಿದ ಮಂತ್ರವನ್ನು ಜಪಿಸುವವನ ಎಲ್ಲ ಪಾಪಗಳನ್ನು ನಾಶಪಡಿಸುತ್ತದೆ. ಪ್ರಾತಃಕಾಲ, ಮಧ್ಯಾಹ್ನಕಾಲ, ಸಾಯಂಕಾಲಗಳೆಂಬ ಮೂರೂ ಕಾಲಗಳಲ್ಲಿ ಶ್ರೀಭಗವಂತನ ಈ ಅಧಿದೈವಿಕಸ್ವರೂಪವನ್ನು ಪ್ರತಿದಿನವೂ ಚಿಂತಿಸುವವನ ಮತ್ತು ವಂದನೆಮಾಡುವವನ ಪಾಪಗಳು ಒಡನೆಯೇ ನಾಶವಾಗಿ ಹೋಗುತ್ತವೆ. ॥ ೯ ॥

**ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೨೩ ॥**

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ಶಿಶುಮಾರಸಂಸ್ಥಾವರ್ಣನಂ ನಾಮ ತ್ರಯೋವಿಂಶೋಽಧ್ಯಾಯಃ ॥ ೨೩ ॥

# ಇಪ್ಪತ್ತನಾಲ್ಕನೆಯ ಅಧ್ಯಾಯ

## ರಾಹುವೇ ಮುಂತಾದವರ ಸ್ಥಿತಿ – ಅತಲವೇ ಮುಂತಾದ ಅಧೋಲೋಕಗಳ ವರ್ಣನೆ

*ಶ್ರೀಶುಕ ಉವಾಚ*

ಅಧಸ್ತಾತ್ಸವಿತುರ್ಯೋಜನಾಯುತೇ ಸ್ವರ್ಭಾನು- ರ್ನಕ್ಷತ್ರವಚ್ಚರತೀತ್ಯೇಕೇ ಯೋಽಸಾವಮರತ್ವಂ ಗ್ರಹತ್ವಂ ಚಾಲಭತ ಭಗವದನುಕಂಪಯಾ ಸ್ವಯಮಸುರಾಪಸದಃ

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಮಹಾರಾಜನೇ! ಸೂರ್ಯನಿಗಿಂತಲೂ ಹತ್ತುಸಾವಿರ ಯೋಜನಗಳಷ್ಟು ಕೆಳಗೆ ರಾಹುವು ನಕ್ಷತ್ರಗಳಂತೆ ಸಂಚರಿಸುತ್ತಿದ್ದಾನೆ ಎಂದು ಕೆಲವರು ಹೇಳುತ್ತಾರೆ. ಸಿಂಹಿಕೆಯ ಪುತ್ರನಾದ ಈ ರಾಹುವು ರಾಕ್ಷಸಾಧಮನಾಗಿ ದೇವತ್ವಕ್ಕೆ ಅಯೋಗ್ಯನಾಗಿದ್ದರೂ ಶ್ರೀಭಗವಂತನ ಕೃಪೆಯಿಂದ ದೇವತ್ವವನ್ನೂ, ಗ್ರಹತ್ವವನ್ನೂ ಪಡೆದುಕೊಂಡನು. ಇವನ ಹುಟ್ಟು ಮತ್ತು

ಸೈಂಹಿಕೇಯೋ ಹ್ಯತದರ್ಹಸ್ತಸ್ಯ ತಾತ ಜನ್ಮ ಕರ್ಮಾಣಿ ಚೋಪರಿಷ್ಟಾದ್ವಕ್ಷ್ಯಾಮಃ ॥ ೧ ॥ ಯದದಸ್ತರಣೇರ್ಮಂಡಲಂ ಪ್ರತಪತಸ್ತದ್ವಿಸ್ತರತೋ ಯೋಜನಾಯುತಮಾಚಕ್ಷತೇ ದ್ವಾದಶಸಹಸ್ರಂ ಸೋಮಸ್ಯ ತ್ರಯೋದಶಸಹಸ್ರಂ ರಾಹೋರ್ಯಃ ಪರ್ವಣಿ ತದ್ವ್ಯವಧಾನಕೃದ್ವೈರಾನುಬಂಧಃ ಸೂರ್ಯಾಚಂದ್ರಮಸಾವಭಿಧಾವತಿ ॥ ೨ ॥ ತನ್ನಿಶಮ್ಯೋಭಯತ್ರಾಪಿ ಭಗವತಾ ರಕ್ಷಣಾಯ ಪ್ರಯುಕ್ತಂ ಸುದರ್ಶನಂ ನಾಮ ಭಾಗವತಂ ದಯಿತಮಸ್ತ್ರಂ ತತ್ತೇಜಸಾ ದುರ್ವಿಷಹಂ ಮುಹುಃ ಪರಿವರ್ತಮಾನಮಭ್ಯವಸ್ಥಿತೋ ಮುಹೂರ್ತಮುದ್ವಿಜಮಾನಶ್ಚಕಿತಹೃದಯ ಆರಾದೇವ ನಿವರ್ತತೇ ತದುಪರಾಗಮಿತಿ ವದಂತಿ ಲೋಕಾಃ ॥ ೩ ॥

ತತೋಽಧಸ್ತಾತ್ಸಿದ್ಧಚಾರಣವಿದ್ಯಾಧರಾಣಾಂ ಸದನಾನಿ ತಾವನ್ಮಾತ್ರ ಏವ ॥ ೪ ॥ ತತೋಽಧಸ್ತಾದ್ಯಕ್ಷರಕ್ಷಃಪಿಶಾಚಪ್ರೇತಭೂತಗಣಾನಾಂ ವಿಹಾರಾಜಿರಮಂತರಿಕ್ಷಂ ಯಾವದ್ವಾಯುಃ ಪ್ರವಾತಿ ಯಾವನ್ಮೇಘಾ ಉಪಲಭ್ಯಂತೇ ॥ ೫ ॥ ತತೋಽಧಸ್ತಾಚ್ಛತಯೋಜನಾಂತರ ಇಯಂ ಪೃಥಿವೀ ಯಾವದ್ಧಂಸಭಾಸಶ್ಯೇನಸುಪರ್ಣಾದಯಃ ಪತತ್ತ್ರಿಪ್ರವರಾ ಉತ್ಪತಂತೀತಿ ॥ ೬ ॥ ಉಪವರ್ಣಿತಂ ಭೂಮೇರ್ಯಥಾಸಂನಿವೇಶಾವಸ್ಥಾನಮವನೇರಪ್ಯಧಸ್ತಾತ್ಸಪ್ತ ಭೂವಿವರಾ ಏಕೈಕಶೋ ಯೋಜನಾಯುತಾಂತರೇಣಾಯಾಮವಿಸ್ತಾರೇಣೋಪಕ್ಲೃಪ್ತಾ ಅತಲಂ ವಿತಲಂ ಸುತಲಂ ತಲಾತಲಂ ಮಹಾತಲಂ ರಸಾತಲಂ ಪಾತಾಲಮಿತಿ ॥ ೭ ॥ ಏತೇಷು ಹಿ ಬಿಲಸ್ವರ್ಗೇಷು ಸ್ವರ್ಗಾದಪ್ಯ ಕಕಾಮಭೋಗೈಶ್ವರ್ಯಾನಂದಭೂತಿವಿಭೂತಿಭಿಃ ಸುಸಮೃದ್ಧಭವನೋದ್ಯಾನಾಕ್ರೀಡವಿಹಾರೇಷು ದೈತ್ಯದಾನವಕಾದ್ರವೇಯಾ ನಿತ್ಯ-

ಕರ್ಮಗಳನ್ನು ನಾವು ಮುಂದೆ ವರ್ಣಿಸುವೆವು. ॥ ೧ ॥ ಅತ್ಯಂತ ಉಜ್ವಲವಾಗಿ ಬೆಳಗುತ್ತಿರುವ ಸೂರ್ಯಮಂಡಲವು ಹತ್ತುಸಾವಿರ ಯೋಜನಗಳಷ್ಟು ವಿಸ್ತಾರವಾಗಿದೆಯೆಂದು ಹೇಳುತ್ತಾರೆ. ಹೀಗೆಯೇ ಚಂದ್ರಮಂಡಲದ ವಿಸ್ತಾರವು ಹನ್ನೆರಡುಸಾವಿರ ಯೋಜನಗಳಿವೆ ಮತ್ತು ರಾಹುವಿನ ಮಂಡಲವು ಹದಿಮೂರುಸಾವಿರ ಯೋಜನ ವಿಸ್ತಾರವಾಗಿದೆ. ಅಮೃತಪಾನದ ಸಮಯ ರಾಹುವು ದೇವತೆಯ ವೇಷದಲ್ಲಿ ಸೂರ್ಯ ಮತ್ತು ಚಂದ್ರರ ನಡುವೆ ಬಂದು ಕುಳಿತಿದ್ದನು. ಆಗ ಸೂರ್ಯ-ಚಂದ್ರರು ಇದರ ರಹಸ್ಯವನ್ನು ಬಯಲಾಗಿಸಿದರು. ಆ ವೈರವನ್ನು ಸಾಧಿಸಲಿಕ್ಕಾಗಿ ಅಮಾವಾಸ್ಯೆ ಮತ್ತು ಪೌರ್ಣಮಿಯ ದಿನಗಳಲ್ಲಿ ಅವರ ಮೇಲೆ ಆಕ್ರಮಿಸುತ್ತಾನೆ. ॥ ೨ ॥ ಇದನ್ನು ನೋಡಿ ಭಗವಂತನು ಸೂರ್ಯ-ಚಂದ್ರರನ್ನು ರಕ್ಷಿಸಲಿಕ್ಕಾಗಿ ಅವರ ಬಳಿಯಲ್ಲಿ ತನ್ನ ಸುದರ್ಶನಚಕ್ರವನ್ನು ನೇಮಿಸಿರುವನು. ಅದು ನಿರಂತರ ಸುತ್ತುತ್ತಾ ಇರುವುದರಿಂದ ರಾಹುವು ತಡೆಯಲಾರದ ಅದರ ತೇಜದಿಂದ ಉದ್ವಿಗ್ನನಾಗಿ, ಚಕಿತನಾಗಿ ಮುಹೂರ್ತಕಾಲ ಮಾತ್ರ ಅವರ ಇದಿರಿಗೆ ಇದ್ದು ಮತ್ತೆ ಮರಳಿ ಹೊರಟುಹೋಗುತ್ತಾನೆ. ಅವನು ಅವರ ಮುಂದೆ ಇದ್ದು ಅವರನ್ನು ಮರೆಮಾಡುವ ಕಾಲವನ್ನು 'ಗ್ರಹಣ'ವೆಂದು ಹೇಳುತ್ತಾರೆ. ॥ ೩ ॥

ರಾಹುವಿನಿಂದ ಹತ್ತುಸಾವಿರ ಯೋಜನಗಳಷ್ಟು ಕೆಳಗೆಸಿದ್ಧರೂ, ಚಾರಣರೂ ಮತ್ತು ವಿದ್ಯಾಧರರೂ ಮುಂತಾದವರ ಸ್ಥಾನವಿದೆ. ॥ ೪ ॥ ಅವರಿಂದ ಕೆಳಗೆ ವಾಯುವಿನ ಗತಿ ಇರುವತನಕ ಮತ್ತು ಮೋಡಗಳು ಕಾಣಸುವವರೆಗೆ ಅಂತರಿಕ್ಷಲೋಕವಿದೆ. ಇದು ಯಕ್ಷರು, ರಾಕ್ಷಸರು, ಪಿಶಾಚಗಳು, ಪ್ರೇತಗಳು ಮತ್ತು ಭೂತಗಳು ಇವರ ವಿಹಾರಸ್ಥಳವಾಗಿದೆ. ॥ ೫ ॥ ಅಲ್ಲಿಂದ ಕೆಳಗೆ ನೂರು ಯೋಜನಗಳಷ್ಟು ದೂರದಲ್ಲಿ ಈ ಭೂಮಿಯು ಇದೆ. ಹಂಸಗಳು, ಗಿಡುಗಗಳು, ಹದ್ದುಗಳು ಮತ್ತು ಗರುಡನೇ ಮುಂತಾದ ಮುಖ್ಯ-ಮುಖ್ಯ ಪಕ್ಷಿಗಳು ಹಾರಬಲ್ಲವೋ ಅಲ್ಲಿಯವರೆಗೆ ಭೂಮಿಯ ಸೀಮೆಯಾಗಿದೆ. ॥ ೬ ॥ ಭೂಮಿಯ ವಿಸ್ತಾರ ಮತ್ತು ಸ್ಥಿತಿ ಮುಂತಾದವುಗಳ ವರ್ಣನೆಯಾದರೋ ಆಗಿಹೋಗಿದೆ. ಇದರ ಕೆಳಗೆ ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ ಮತ್ತು ಪಾತಾಲ ಎಂಬ ಏಳು ಲೋಕಗಳಿವೆ. ಇವುಗಳು ಭೂಮಿಯ ಮಹಾಬಿಲಗಳ ರೂಪದಲ್ಲಿರುವ ಲೋಕಗಳು. ಇವು ಒಂದರ ಕೆಳಗೆ ಒಂದರಂತೆ ಹತ್ತತ್ತುಸಾವಿರ ಯೋಜನಗಳಷ್ಟು ದೂರದಲ್ಲಿ ನಿಂತಿವೆ. ಇವುಗಳಲ್ಲಿ ಪ್ರತಿಯೊಂದರ ಉದ್ದ-ಅಗಲವು ಹತ್ತತ್ತುಸಾವಿರ ಯೋಜನಗಳಷ್ಟೇ ಇದೆ. ॥ ೭ ॥ ಈ ಭೂಮಿಯ ಬಿಲಗಳೂ ಕೂಡ ಒಂದು ರೀತಿಯ ಸ್ವರ್ಗವೇ ಆಗಿವೆ. ಇವುಗಳಲ್ಲಿ ಸ್ವರ್ಗಕ್ಕಿಂತಲೂ ಮಿಗಿಲಾದ ವಿಷಯಭೋಗ, ಐಶ್ವರ್ಯ, ಆನಂದ, ಸಂತಾನಸುಖ ಮತ್ತು ಧನ-ಸಂಪತ್ತುಗಳಿವೆ. ಇಲ್ಲಿಯ ವೈಭವೋಪೇತ ಭವನಗಳಲ್ಲಿ, ಉದ್ಯಾನಗಳಲ್ಲಿ, ಕ್ರೀಡಾಸ್ಥಳಗಳಲ್ಲಿ ದೈತ್ಯರು, ದಾನವರು, ನಾಗಗಳು ಬಗೆ-ಬಗೆಯ ಮಾಯಾಮಯ ಕ್ರೀಡೆಗಳನ್ನು ಆಡುತ್ತಾ ವಾಸಿಸುತ್ತಾರೆ. ಅವರೆಲ್ಲರೂ ಗೃಹಸ್ಥ ಧರ್ಮವನ್ನು ಪಾಲಿಸುವವರಾಗಿದ್ದಾರೆ. ಅವರ ಪತ್ನೀ, ಪುತ್ರರು, ಬಂಧು-ಬಾಂಧವರು, ಸೇವಕರು ಇವರಲ್ಲಿ ಬಹಳಷ್ಟು ಪ್ರೀತಿಯನ್ನಿಡುತ್ತಾ ಸದಾಕಾಲ ಸಂತೋಷ

ಪ್ರಮುದಿತಾನುರಕ್ತಕಲತ್ರಾಪತ್ಯಬಂಧುಸುಹೃದನುಚರಾ ಗೃಹಪತಯ ಈಶ್ವರಾದಪ್ಯಪ್ರತಿಹತಕಾಮಾ ಮಾಯಾ-ವಿನೋದಾ ನಿವಸಂತಿ ॥ ೮ ॥ ಯೇಷು ಮಹಾರಾಜ ಮಯೇನ ಮಾಯಾವಿನಾ ವಿನಿರ್ಮಿತಾಃ ಪುರೋ ನಾನಾಮಣಿಪ್ರವರಪ್ರವೇಕವಿರಚಿತವಿಚಿತ್ರಭವನಪ್ರಾಕಾರ-ಗೋಪುರಸಭಾಚೈತ್ಯಚತ್ವರಾಯತನಾದಿಭಿರ್ನಾಗಾಸುರ-ಮಿಥುನಪಾರಾವತಶುಕಸಾರಿಕಾಕೀರ್ಣಕೃತ್ರಿಮಭೂಮಿಭಿ-ರ್ವಿವರೇಶ್ವರಗೃಹೋತ್ತಮೈಃ ಸಮಲಂಕೃತಾಶ್ಚಕಾಸತಿ ॥ ೯ ॥ ಉದ್ಯಾನಾನಿ ಚಾತಿತರಾಂ ಮನಇಂದ್ರಿಯಾನಂದಿಭಿಃ ಕುಸುಮ ಫಲಸ್ತಬಕಸುಭಗಕಿಸಲಯಾವನತರುಚಿರವಿಟಪ-ವಿಟಪಿನಾಂ ಲತಾಂಗಾಲಿಂಗಿತಾನಾಂ ಶ್ರೀಭಿಃ ಸಮಿಥುನ-ವಿವಿಧವಿಹಂಗಮಜಲಾಶಯಾನಾಮಮಲಜಲಪೂರ್ಣಾನಾಂ ಝುಷಕುಲೋಲ್ಲಂಘನಕ್ಷುಭಿತನೀರನೀರಜಕುಮುದ-ಕುವಲಯಕಹ್ಲಾರನೀಲೋತ್ಪಲಲೋಹಿತಶತಪತ್ರಾದಿ-ವನೇಷು ಕೃತನಿಕೇತನಾನಾಮೇಕವಿಹಾರಾಕುಲಮಧುರ-ವಿವಿಧಸ್ವನಾದಿಭಿರಿಂದ್ರಿಯೋತ್ಸವೈರಮರಲೋಕಶ್ರಿಯಮತಿ-ಶಯಿತಾನಿ ॥ ೧೦ ॥ ಯತ್ರ ಹ ವಾವ ನ ಭಯಮ-ಹೋರಾತ್ರಾದಿಭಿಃ ಕಾಲವಿಭಾಗೈರುಪಲಕ್ಷ್ಯತೇ ॥ ೧೧ ॥ ಯತ್ರ ಹಿ ಮಹಾಹಿಪ್ರವರಶಿರೋಮಣಯಃ ಸರ್ವಂ ತಮಃ ಪ್ರಬಾಧಂತೇ ॥ ೧೨ ॥ ನ ವಾ ಏತೇಷು ವಸತಾಂ ದಿವ್ಯೌ-ಷಧಿರಸರಸಾಯನಾನ್ನಪಾನಸ್ನಾನಾದಿಭಿರಾಧಯೋ ವ್ಯಾಧಯೋ ವಲೀಪಲಿತಜರಾದಯಶ್ಚ ದೇಹವೈವರ್ಣ್ಯದೌ-ರ್ಗಂಧ್ಯಸ್ವೇದಕ್ಲಮಗ್ಲಾನಿರಿತಿ ವಯೋಽವಸ್ಥಾಶ್ಚ ಭವಂತಿ ॥ ೧೩ ॥ ನ ಹಿ ತೇಷಾಂ ಕಲ್ಯಾಣಾನಾಂ ಪ್ರಭವತಿ ಕುತಶ್ಚನ

ಚಿತ್ತರಾಗಿರುತ್ತಾರೆ. ಅವರ ಭೋಗಗಳಲ್ಲಿ ತೊಂದರೆಯನ್ನುಂಟು ಮಾಡಲು ಇಂದ್ರಾದಿಗಳಲ್ಲಿಯೂ ಸಾಮರ್ಥ್ಯವಿಲ್ಲ ॥ ೮ ॥ ಮಹಾರಾಜಾ! ಈ ಬಿಲರೂಪೀ ಲೋಕಗಳಲ್ಲಿ ಮಾಯಾವಿ ಮಯದಾನವನಿಂದ ರಚಿಸಲ್ಪಟ್ಟ ಅನೇಕ ಪುರಗಳು ಶೋಭಿಸುತ್ತಾ ಬೆಳಗುತ್ತಿವೆ. ಅವುಗಳು ಅನೇಕ ಜಾತಿಯ ಸುಂದರ, ಶ್ರೇಷ್ಠ ಮಣಿ-ರತ್ನಗಳಿಂದ ರಚಿತವಾದ, ಚಿತ್ರ-ವಿಚಿತ್ರವಾದ ಭವನಗಳು, ಕೋಟೆಗಳು, ನಗರದ್ವಾರಗಳು, ಸಭಾಭವನಗಳು, ಮಂದಿರಗಳು, ದೊಡ್ಡ-ದೊಡ್ಡ ಅಂಗಳಗಳು, ಅರಮನೆಗಳು ಇವುಗಳಿಂದ ಶೋಭಿಸುತ್ತಿವೆ. ಅವುಗಳ ಕೃತ್ರಿಮವಾದ ಭೂಪ್ರದೇಶಗಳಲ್ಲಿ ನಾಗ ದಂಪತಿಗಳೂ, ಅಸುರ ದಂಪತಿಗಳೂ, ಪಾರಿವಾಳ, ಗಿಳಿ, ಸಾರಿ ಕೆಗಳೇ ಮುಂತಾದ ಪಕ್ಷಿಗಳ ಜೋಡಿಗಳು ನಲಿಯುತ್ತಿರುವುವು. ಪಾತಾಳದ ಅಧಿಪತಿಗಳ ಇಂತಹ ಭವ್ಯ ಭವನಗಳು ಆ ಪುರಿಗಳ ಶೋಭೆಯನ್ನು ಹೆಚ್ಚಿಸುತ್ತಿವೆ. ॥ ೯ ॥ ಅಲ್ಲಿಯ ಉದ್ಯಾನವನಗಳು ತನ್ನ ಶೋಭೆಯಿಂದ ದೇವಲೋಕದ ಉದ್ಯಾನಗಳ ಶೋಭೆಯನ್ನು ನಾಚಿಸುತ್ತವೆ. ಹೂವು-ಹಣ್ಣುಗಳ ಗೊಂಚಲುಗಳ ಮತ್ತು ಚಿಗು ರೆಲೆಗಳ ಭಾರದಿಂದ ಬಾಗಿ-ಬಳುಕುತ್ತಾ ಸುಂದರವಾದ ಕೊಂಬೆ ಗಳಿಂದ ಕೂಡಿ ಬಗೆ-ಬಗೆಯ ಬಳ್ಳಿಗಳಿಂದ ಆಲಿಂಗಿತವಾಗಿರುವ ಅಲ್ಲಿಯ ವೃಕ್ಷಗಳು ಕಣ್ಮನಗಳನ್ನು ಸೂರೆಗೊಳ್ಳುತ್ತಿವೆ. ಅಲ್ಲಿನ ನಿರ್ಮಲ ಜಲದಿಂದ ತುಂಬಿದ ಅನೇಕ ಜಲಾಶಯಗಳ ಸೌಂದರ್ಯ ದಿಂದ ಆ ಉದ್ಯಾನಗಳು ತುಂಬಾ ಶೋಭಿಸುತ್ತಿವೆ. ಆ ಜಲಾಶಯ ಗಳಲ್ಲಿ ವಾಸಿಸುವ ಮೀನುಗಳು ಆಟವಾಡುತ್ತಾ ಮೇಲಕ್ಕೆ ನೆಗೆದಾಗ ಅವುಗಳ ನೀರು ಅಲ್ಲಾಡತೊಡಗುತ್ತದೆ. ಜೊತೆಗೆ ನೀರಿನಲ್ಲಿ ಅರಳಿ ನಿಂತ ಕನ್ನೈದಿಲೆ, ಕೆಂದಾವರೆ, ಬೆಳ್ದಾವರೆ, ಕುವಲಯ, ಕಲ್ಹಾರ, ನೀಲಕಮಲ, ನೂರುದಳಗಳ ತಾವರೆ ಮುಂತಾದ ಹೂವುಗಳು ಅಲ್ಲಾಡುತ್ತವೆ. ಈ ಕಮಲವನದಲ್ಲಿ ವಾಸಿಸುವ ಪಕ್ಷಿಗಳು ಎಡೆಬಿಡದೆ ಕ್ರೀಡಿಸುತ್ತಾ ಕಿವಿಗಿಂಪಾಗಿ ಬಗೆ-ಬಗೆಯಾಗಿ ಕಲ-ಕಲ ನಿನಾದ ಮಾಡುತ್ತಾ ಇರುತ್ತವೆ. ಅದನ್ನು ಕೇಳಿದ ಮನಸ್ಸು-ಇಂದ್ರಿಯಗಳಿಗೆ ಹಬ್ಬದ ರಸದೌತಣ ದೊರೆತಂತಾಗುತ್ತದೆ. ॥ ೧೦ ॥ ಅಲ್ಲಿ ಸೂರ್ಯ ಪ್ರಕಾಶವು ತಲುಪುವುದಿಲ್ಲ. ಆದರಿಂದ ಹಗಲು-ರಾತ್ರಿಗಳ ಅಡಚಣೆಯಿಲ್ಲ. ॥ ೧೧ ॥ ಅಲ್ಲಿಯ ಎಲ್ಲ ಅಂಧಕಾರವನ್ನು ದೊಡ್ಡ-ದೊಡ್ಡ ನಾಗಗಳ ಹೆಡೆಗಳಲ್ಲಿರುವ ಮಣಿಗಳೇ ದೂರ ಮಾಡುವುವು. ॥ ೧೨ ॥ ಅಲ್ಲಿ ವಾಸಿಸುವ ನಿವಾಸಿಗಳು ದಿವ್ಯವಾದ ಔಷಧಿಗಳನ್ನು, ರಸಾಯನಗಳನ್ನು, ರಸವನ್ನು ಸೇವಿಸುತ್ತಾ ಅವು ಗಳಿಂದಲೇ ಅನ್ನ-ಪಾನ-ಸ್ನಾನಾದಿಗಳನ್ನು ಮಾಡುವರು. ಅವೆಲ್ಲ ಪದಾರ್ಥಗಳು ದಿವ್ಯವಾಗಿರುತ್ತವೆ. ಈ ದಿವ್ಯ ವಸ್ತುಗಳ ಸೇವನೆ ಯಿಂದ ಅವರಿಗೆ ಮಾನಸಿಕ, ಶಾರೀರಿಕ ರೋಗಗಳು ಉಂಟಾಗು ವುದಿಲ್ಲ. ಚರ್ಮ ಸುಕ್ಕಾಗುವುದು, ಕೂದಲು ಹಣ್ಣಾಗುವುದು, ಮುದುಕರಾಗುವುದು, ಶರೀರವು ಕಾಂತಿಹೀನವಾಗುವುದು, ಶರೀ ರದಲ್ಲಿ ದುರ್ಗಂಧ ಉಂಟಾಗುವುದು, ಬೆವರುವುದು ಬಳಲಿಕೆ, ಅಶಕ್ತತೆ ಉಂಟಾಗುವುದು. ವಯಸ್ಸಿಗೆ ತಕ್ಕಂತೆ ಶರೀರದಲ್ಲಿ ಬದಲಾ ವಣೆ ಮುಂತಾದ ಯಾವ ವಿಕಾರಗಳೂ ಉಂಟಾಗುವುದಿಲ್ಲ. ಅವರು ಸದಾಕಾಲ ಸುಂದರ, ಆರೋಗ್ಯವಂತ, ತಾರುಣ್ಯ ದಿಂದಿದ್ದು ಶಕ್ತಿಸಂಪನ್ನರಾಗಿರುತ್ತಾರೆ. ॥ ೧೩ ॥

ಮೃತ್ಯುರ್ವಿನಾ ಭಗವತ್ತೇಜಸಶ್ಚಕ್ರಾಪದೇಶಾತ್ ॥ ೧೪ ॥ ಯಸ್ಮಿನ್ ಪ್ರವಿಷ್ಟೇಽಸುರವಧೂನಾಂ ಪ್ರಾಯಃ ಪುಂಸವನಾನಿ ಭಯಾದೇವ ಸ್ರವಂತಿ ಪತಂತಿ ಚ ॥ ೧೫ ॥

ಆ ಪುಣ್ಯ ಪುರುಷರಿಗೆ ಭಗವಂತನ ತೇಜಸ್ಸಿನ ರೂಪವಾದ ಸುದರ್ಶನಚಕ್ರವಲ್ಲದೆ ಬೇರೆ ಯಾವ ಸಾಧನೆಯಿಂದಲೂ ಮೃತ್ಯುವು ಉಂಟಾಗುವುದಿಲ್ಲ. ॥ ೧೪ ॥ ಸುದರ್ಶನ ಚಕ್ರವು ಬಂದೊಡನೆಯೇ ಅಸುರ ರಮಣಿ ಯರಿಗೆ ಗರ್ಭಸ್ರಾವ ಮತ್ತು ಗರ್ಭಪಾತಗಳು * ಉಂಟಾಗು ವುವು. ॥ ೧೫ ॥

ಅಥಾತಲೇ ಮಯಪುತ್ರೋಽಸುರೋ ಬಲೋ ನಿವಸತಿ ಯೇನ ಹ ವಾ ಇಹ ಸೃಷ್ಟಾಃ ಷಣ್ಣವತಿರ್ಮಾಯಾಃ ಕಾಶ್ಚನಾದ್ಯಾಪಿ ಮಾಯಾವಿನೋ ಧಾರಯಂತಿ ಯಸ್ಯ ಚ ಜೃಂಭಮಾಣಸ್ಯ ಮುಖತಸ್ತ್ರಯಃ ಸ್ತ್ರೀಗಣಾ ಉದಪದ್ಯಂತ ಸ್ವೈರಿಣ್ಯಃ ಕಾಮಿನ್ಯಃ ಪುಂಶ್ಚಲ್ಯ ಇತಿ ಯಾ ವೈ ಬಿಲಾಯನಂ ಪ್ರವಿಷ್ಟಂ ಪುರುಷಂ ರಸೇನ ಹಾಟಕಾಖ್ಯೇನ ಸಾಧಯಿತ್ವಾ ಸ್ವವಿಲಾಸಾವಲೋಕನಾನುರಾಗಸ್ಮಿತಸಂಲಾಪೋಪಗೂಹನಾದಿಭಿಃ ಸ್ವೈರಂ ಕಿಲ ರಮಯಂತಿ ಯಸ್ಮಿನ್ನುಪಯುಕ್ತೇ ಪುರುಷ ಈಶ್ವರೋಽಹಂ ಸಿದ್ಧೋಽಹಮಿತ್ಯಯುತಮಹಾಗಜಬಲಮಾತ್ಮಾನಮಭಿಮನ್ಯಮಾನಃ ಕತ್ಥತೇ ಮದಾಂಧ ಇವ ॥ ೧೬ ॥

ಅತಲ ಲೋಕದಲ್ಲಿ ಮಯದಾನವನ ಪುತ್ರ ಅಸುರ ಬಲನು ಇರುತ್ತಾನೆ. ಅವನು ತೊಂಭತ್ತಾರು ರೀತಿಯ ಮಾಯೆಗಳನ್ನು ಸೃಷ್ಟಿ ರುವನು. ಅವುಗಳಲ್ಲಿ ಕೆಲ-ಕೆಲವು ಇಂದೂ ಕೂಡ ಮಾಯಾವೀ ಜನರಲ್ಲಿ ಕಂಡುಬರುತ್ತವೆ. ಆ ಬಲಾಸುರನು ಒಮ್ಮೆ ಆಕಳಿಸಿದಾಗ ಅವನ ಬಾಯಿಂದ ಸ್ವೈರಿಣೀ, ಕಾಮಿನೀ ಮತ್ತು ಪುಂಶ್ಚಲೀ ಎಂಬ ಮೂರು ರೀತಿಯ ಸ್ತ್ರೀಯರು ಜನಿಸಿದರು. (ಇವರಲ್ಲಿ ತನ್ನ ವರ್ಣಕ್ಕೆ ಸೇರಿದ ಪುರುಷನಲ್ಲಿ ಮಾತ್ರ ರಮಿಸುವವಳು ಸ್ವೈರಿಣಿಯೆಂದೂ, ಇತರ ವರ್ಣದವರೊಡನೆ ರಮಿಸುವವಳು ಕಾಮಿನಿಯೆಂದೂ, ಅತ್ಯಂತ ಚಂಚಲೆಯಾದ ಸ್ವಭಾವ ಉಳ್ಳವಳು ಪುಂಶ್ಚಲೀ ಎಂದೂ ಹೇಳುತ್ತಾರೆ.) ಆ ಸ್ತ್ರೀಯರು ಆ ಲೋಕದಲ್ಲಿ ವಾಸಿಸುವ ಪುರುಷ ರಿಗೆ ಹಾಟಕ ಎಂಬ ರಸವನ್ನು ಕುಡಿಸಿ ಅವರನ್ನು ಸಂಭೋಗ ಸಮರ್ಥರನ್ನಾಗಿಸಿ ವಶಪಡಿಸಿಕೊಂಡು, ತಮ್ಮ ಹಾವ-ಭಾವ ಗಳಿಂದಲೂ, ತುಂಬಿದ ನೋಟಗಳಿಂದಲೂ, ಕಿರುನಗೆಯಿಂದಲೂ, ಸವಿಮಾತು ಮತ್ತು ಆಲಿಂಗನೆಗಳಿಂದಲೂ ಯಥೇಷ್ಟವಾಗಿ ಅವ ರೊಂದಿಗೆ ರಮಿಸುವರು. ಆ ಹಾಟಕ ರಸವನ್ನು ಕುಡಿದ ಮನುಷ್ಯನು ಮತ್ತಿನಿಂದ ಕುರುಡನಂತಾಗಿ ತಾನು ಹತ್ತುಸಾವಿರ ಆನೆಗಳಷ್ಟು ಬಲವುಳ್ಳವನು ಎಂದು ಭಾವಿಸಿಕೊಂಡು 'ನಾನೇ ಈಶ್ವರನು, ನಾನೇ ಸಿದ್ಧನು!' ಎಂದು ಬಡಬಡಿಸತೊಡಗು ವನು. ॥ ೧೬ ॥

ತತೋಽಧಸ್ತಾದ್ವಿತಲೇ ಹರೋ ಭಗವಾನ್ಹಾಟಕೇಶ್ವರಃ ಸ್ವಪಾರ್ಷದಭೂತಗಣಾವೃತಃ ಪ್ರಜಾಪತಿಸರ್ಗೋಪಬೃಂಹಣಾಯ ಭವೋ ಭವಾನ್ಯಾ ಸಹ ಮಿಥುನೀಭೂತ ಆಸ್ತೇ ಯತಃ ಪ್ರವೃತ್ತಾ ಸರಿತ್ಪ್ರವರಾ ಹಾಟಕೀ ನಾಮ ಭವಯೋರ್ವೀರ್ಯೇಣ ಯತ್ರ ಚಿತ್ರಭಾನುರ್ಮಾತರಿಶ್ವನಾ ಸಮಿಧ್ಯಮಾನ ಓಜಸಾ ಪಿಬತಿ ತನ್ನಿಷ್ಠ್ಯೂತಂ ಹಾಟಕಾಖ್ಯಂ ಸುವರ್ಣಂ ಭೂಷಣೇನಾಸುರೇಂದ್ರಾವರೋಧೇಷು ಪುರುಷಾಃ ಸಹ ಪುರುಷೀಭಿರ್ಧಾರಯಂತಿ ॥ ೧೭ ॥

ಅದರ ಕೆಳಗಿನ ವಿತಲ ಲೋಕದಲ್ಲಿ ಭಗವಾನ್ ಹಾಟಕೇಶ್ವರ ನೆಂಬ ಹೆಸರಿನಿಂದ ಮಹಾದೇವನು ತನ್ನ ಪಾರ್ಷದರಾದ ಭೂತ ಗಣಗಳೊಂದಿಗೆ ವಾಸಮಾಡುತ್ತಾನೆ. ಅವನು ಪ್ರಜಾಪತಿಯ ಸೃಷ್ಟಿ ಯನ್ನು ವೃದ್ಧಿಪಡಿಸಲಿಕ್ಕಾಗಿ ಭವಾನಿಯೊಂದಿಗೆ ವಿಹರಿಸುತ್ತಾ ಇರುತ್ತಾನೆ. ಅವರಿಬ್ಬರ ತೇಜದಿಂದ ಅಲ್ಲಿ ಹಾಟಕೀ ಎಂಬ ಶ್ರೇಷ್ಠ ನದಿಯೊಂದು ಹರಿಯುತ್ತಿರುವುದು. ಅದರ ನೀರನ್ನು ವಾಯುವಿ ನಿಂದ ಪ್ರಜ್ವಲಿತವಾದ ಅಗ್ನಿಯು ತುಂಬಾ ಉತ್ಸಾಹದಿಂದ ಕುಡಿ ಯುತ್ತಾನೆ. ಅವನು ಕುಡಿದು ಉಗುಳುವ ಆ ರುದ್ರವೀರ್ಯಕ್ಕೆ ಹಾಟಕ ಸುವರ್ಣವೆಂದು ಹೆಸರು. ಆ ಸುವರ್ಣದಿಂದ ಮಾಡಿದ ಆಭರಣಗಳನ್ನು ದೈತ್ಯರಾಜನ ಅಂತಃಪುರದ ಸ್ತ್ರೀ-ಪುರುಷರೆಲ್ಲರೂ ಧರಿಸುತ್ತಾರೆ. ॥ ೧೭ ॥

ವಿತಲದ ಕೆಳಗೆ ಸುತಲಲೋಕದಲ್ಲಿ ಮಹಾಯಶಸ್ವಿಯೂ, ಪವಿತ್ರಕೀರ್ತಿಯೂ ಆದ ವಿರೋಚನಪುತ್ರ ಬಲಿಯು ವಾಸವಾಗಿ ದ್ದಾನೆ. ಶ್ರೀಭಗವಂತನು ಇಂದ್ರನಿಗೆ ಪ್ರಿಯವನ್ನುಂಟು ಮಾಡಲು

* "ಆ ಚತುರ್ಥಾದ್ಭವೇತ್‌ಸ್ರಾವಃ ಪಾತಃ ಪಂಚಮ ಷಷ್ಠಯೋಃ" ಅರ್ಥಾತ್ – ನಾಲ್ಕನೇ ತಿಂಗಳವರೆಗೆ ಗರ್ಭವು ಬಿದ್ದುಹೋದರೆ ಅದನ್ನು 'ಗರ್ಭಸ್ರಾವ' ಎಂದು ಹೇಳುತ್ತಾರೆ. ಐದನೇ, ಆರನೇ ತಿಂಗಳಲ್ಲಿ ಬಿದ್ದರೆ ಅದು 'ಗರ್ಭಪಾತ' ಎಂದು ಹೇಳುತ್ತಾರೆ.

ತತೋಽಧಸ್ತಾತ್ಸುತಲೇ ಉದಾರಶ್ರವಾಃ ಪುಣ್ಯಶ್ಲೋಕೋ ವಿರೋಚನಾತ್ಮಜೋ ಬಲಿರ್ಭಗವತಾ ಮಹೇಂದ್ರಸ್ಯ ಪ್ರಿಯಂ ಚಿಕೀರ್ಷಮಾಣೇನಾದಿತೇರ್ಲಬ್ಧಕಾಯೋ ಭೂತ್ವಾ ವಟುವಾಮನರೂಪೇಣ ಪರಾಕ್ಷಿಪ್ತಲೋಕತ್ರಯೋ ಭಗವದನುಕಂಪಯೈವ ಪುನಃ ಪ್ರವೇಶಿತ ಇಂದ್ರಾದಿಷ್ವವಿದ್ಯಮಾನಯಾ ಸುಸಮೃದ್ಧಯಾ ಶ್ರಿಯಾಭಿಜುಷ್ಟಃ ಸ್ವಧರ್ಮೇಣಾರಾಧಯಂಸ್ತಮೇವ ಭಗವಂತಮಾರಾಧನೀಯಮಪಗತಸಾಧ್ವಸ ಆಸ್ತೇಽಧುನಾಪಿ ॥ ೧೮ ॥ ನೋ ಏವೈತತ್ಸಾಕ್ಷಾತ್ಕಾರೋ ಭೂಮಿದಾನಸ್ಯ ಯತ್ತದ್ಭಗವತ್ಯಶೇಷಜೀವನಿಕಾಯಾನಾಂ ಜೀವಭೂತಾತ್ಮಭೂತೇ ಪರಮಾತ್ಮನಿ ವಾಸುದೇವೇ ತೀರ್ಥತಮೇ ಪಾತ್ರ ಉಪಪನ್ನೇ ಪರಯಾ ಶ್ರದ್ಧಯಾ ಪರಮಾದರಸಮಾಹಿತಮನಸಾ ಸಂಪ್ರತಿಪಾದಿತಸ್ಯ ಸಾಕ್ಷಾದಪವರ್ಗದ್ವಾರಸ್ಯ ಯದ್ಬಿಲನಿಲಯೈಶ್ವರ್ಯಮ್ ॥ ೧೯ ॥ ಯಸ್ಯ ಹ ವಾವ ಕ್ಷುತಪತನಪ್ರಸ್ಖಲನಾದಿಷು ವಿವಶಃ ಸಕೃನ್ನಾಮಾಭಿಗೃಣನ್ ಪುರುಷಃ ಕರ್ಮಬಂಧನಮಂಜಸಾ ವಿಧುನೋತಿ ಯಸ್ಯ ಹೈವ ಪ್ರತಿಬಾಧನಂ ಮುಮುಕ್ಷವೋಽನ್ಯಥೈವೋ ಪಲಭಂತೇ ॥ ೨೦ ॥ ತದ್ಭಕ್ತಾನಾಮಾತ್ಮವತಾಂ ಸರ್ವೇಷಾಮಾತ್ಮನ್ಯಾತ್ಮದ ಆತ್ಮತಯೈವ ॥ ೨೧ ॥ ನ ವೈ ಭಗವಾನ್ನೂನಮಮುಷ್ಯಾನುಜಗ್ರಾಹ ಯದುತ ಪುನರಾತ್ಮಾನುಸ್ಮೃತಿಮೋಷಣಂ ಮಾಯಾಮಯಭೋಗೈಶ್ವರ್ಯಮೇವಾತನುತೇತಿ ॥ ೨೨ ॥ ಯತ್ತದ್ ಭಗವತಾನಧಿಗತಾನ್ಯೋಪಾಯೇನ ಯಾಚ್ಞಾಚ್ಛಲೇನಾಪಹೃತಸ್ವಶರೀರಾವಶೇಷಿತಲೋಕತ್ರಯೋ ವರುಣಪಾಶೈಶ್ಚ ಸಂಪ್ರತಿಮುಕ್ತೋ ಗಿರಿದರ್ಯಾಂ ಚಾಪವಿದ್ಧ ಇತಿ ಹೋವಾಚ ॥ ೨೩ ॥

ನೂನಂ ಬತಾಯಂ ಭಗವಾನರ್ಥೇಷು ನ ನಿಷ್ಣಾತೋ ಯೋಽಸಾವಿಂದ್ರೋ ಯಸ್ಯ ಸಚಿವೋ ಮಂತ್ರಾಯ ವೃತ ಏಕಾಂತತೋ ಬೃಹಸ್ಪತಿಸ್ತಮತಿಹಾಯ ಸ್ವಯಮುಪೇಂದ್ರೇಣಾತ್ಮಾನಮಯಾಚತಾತ್ಮನಶ್ಚಾಶಿಷೋ ನೋ ಏವ

ಅದಿತಿಯ ಗರ್ಭದಿಂದ ವಾಮನವಟುವಿನ ರೂಪದಲ್ಲಿ ಅವತರಿಸಿ ಬಲಿಚಕ್ರವರ್ತಿಯಿಂದ ತ್ರಿಲೋಕಗಳನ್ನು ಕಿತ್ತುಕೊಂಡಿದ್ದನು. ಮತ್ತೆ ಭಗವಂತನ ಕೃಪೆಯಿಂದಲೇ ಅವನಿಗೆ ಈ ಲೋಕದಲ್ಲಿ ಪ್ರವೇಶವು ದೊರೆಯಿತು. ಇಂದ್ರನೇ ಮುಂತಾದವರಲ್ಲಿಯೂ ಇಲ್ಲದೆ ಇರುವ ಉತ್ಕೃಷ್ಟವಾದ ಸಂಪತ್ತನ್ನು ಭಗವದನುಗ್ರಹದಿಂದ ಅಲ್ಲಿ ಪಡೆದುಕೊಂಡು ಮಹಾತ್ಮನಾದ ಬಲಿಯು ತನ್ನ ಪೂಜ್ಯತಮನಾದ ಪ್ರಭುವನ್ನು ಧರ್ಮಾಚರಣೆಯ ಮೂಲಕ ಆರಾಧಿಸುತ್ತಾ ಇಂದಿಗೂ ಯಾವ ಭಯವೂ ಇಲ್ಲದೆ ವಾಸವಾಗಿದ್ದಾನೆ. ॥ ೧೮ ॥ ಎಲೈ ರಾಜೇಂದ್ರನೇ! ಸಮಸ್ತ ಜೀವಿಗಳ ನಿಯಾಮಕನೂ, ಆತ್ಮಸ್ವರೂಪನೂ ಆದ ಪರಮಾತ್ಮನಾದ ಭಗವಾನ್ ಶ್ರೀವಾಸುದೇವನಂತಹ ಪೂಜ್ಯತಮ, ಪವಿತ್ರತಮ ಸತ್ಪಾತ್ರವು ಬಂದಾಗ ಅವನಿಗೆ ಅತ್ಯಂತ ಶ್ರದ್ಧೆ-ಆದರಗಳಿಂದ ಸ್ಥಿರವಾದ ಚಿತ್ತದಿಂದ ಮಾಡಿದ ಭೂಮಿದಾನಕ್ಕಾಗಿ ಬಲೀಂದ್ರನಿಗೆ ದೊರೆತ ಸುತಲಲೋಕದ ಐಶ್ವರ್ಯವು ಮುಖ್ಯಫಲವಲ್ಲ. ಈ ಐಶ್ವರ್ಯವಾದರೋ ಅನಿತ್ಯವಾಗಿದೆ. ಆದರೆ ಆ ಭೂಮಿದಾನವಾದರೋ ಸಾಕ್ಷಾತ್ ಮೋಕ್ಷದ ದ್ವಾರವೇ ಆಗಿದೆ. ॥ ೧೯ ॥ ಮುಮುಕ್ಷುಗಳು ಯೋಗಸಾಧನೆ ಮುಂತಾದ ಬೇರೆ ಉಪಾಯಗಳನ್ನು ಆಶ್ರಯಿಸಿ ಕರ್ಮಬಂಧನವನ್ನು ಬಹಳ ಕಷ್ಟದಿಂದ ಕಡಿದುಕೊಳ್ಳಲಾರರೋ, ಅಂತಹ ಕರ್ಮಬಂಧನವನ್ನು ಭಗವಂತನ ದಿವ್ಯನಾಮವನ್ನು ಸೀನುವಾಗ, ಬೀಳುವಾಗ, ಕೆಮ್ಮುವಾಗ, ವಿವಶವಾದಾಗ ಒಮ್ಮೆ ಕೊಂಡಾಡಿದರೆ ಮನುಷ್ಯನು ಸುಲಭವಾಗಿ ಕಳೆದುಕೊಳ್ಳುವನು. ॥ ೨೦ ॥ ಆದುದರಿಂದ ಸಂಯಮೀ ಭಕ್ತರಿಗೆ ಮತ್ತು ಜ್ಞಾನಿಗಳಿಗೆ ತನ್ನ ಸ್ವರೂಪವನ್ನೇ ಪ್ರದಾನಮಾಡುವ ಸಮಸ್ತ ಪ್ರಾಣಿಗಳ ಆತ್ಮನಾದ ಶ್ರೀಭಗವಂತನಿಗೆ ಆತ್ಮಭಾವದಿಂದ ಮಾಡಿದ ಭೂಮಿದಾನಕ್ಕೆ ಈ ಸುತಲಲೋಕದ ಪ್ರಾಪ್ತಿಯು ಮುಖ್ಯಫಲವಾಗಲಾರದು. ॥ ೨೧ ॥ ತನ್ನ ಸರ್ವಸ್ವವನ್ನು ಸಮರ್ಪಣೆಮಾಡಿದ ಭಕ್ತಶ್ರೇಷ್ಠನಾದ ಬಲೀಂದ್ರನಿಗೆ ಶ್ರೀಭಗವಂತನು ಆ ಸಮರ್ಪಣೆಯ ಬದಲಿಗೆ ತನ್ನನ್ನು ಮರೆಸುವಂತಹ ಈ ಮಾಯಾಮಯವಾದ ಐಶ್ವರ್ಯವನ್ನೇ ಕೊಟ್ಟಿದ್ದರೆ ಅದು ದೊಡ್ಡ ಅನುಗ್ರಹವೇನೂ ಆಗುತ್ತಿರಲಿಲ್ಲ. ॥ ೨೨ ॥ ಬೇರಾವ ಉಪಾಯವನ್ನು ಕಾಣದೆ ಶ್ರೀಭಗವಂತನು ಯಾಚನೆಮಾಡುವ ಕಪಟವ್ಯಾಜದಿಂದ ಆತನ ತ್ರೈಲೋಕ್ಯರಾಜ್ಯವನ್ನು ಕಿತ್ತುಕೊಂಡು ಶರೀರ ಮಾತ್ರವೇ ಉಳಿಯುವಂತೆ ಮಾಡಿ, ವರುಣಪಾಶದಿಂದ ಕಟ್ಟಿ ಪರ್ವತದ ಗುಹೆಯಲ್ಲಿ ಹಾಕಿ ಭಗವಂತನು ಮೊದಲಿಗೆ ಎರಡು ಪಾದಗಳಿಂದ ಭೂಮ್ಯಾಕಾಶವನ್ನು ಅಳೆದುಕೊಂಡಿದ್ದು ಮೂರನೇ ಪಾದವನ್ನು ಎಲ್ಲಿಡಲೀ ಎಂದು ಕೇಳಿದಾಗ ಬಲಿ ಚಕ್ರವರ್ತಿಯು ಆತ್ಮಸಮರ್ಪಣ ಮಾಡಿಕೊಂಡು ನನ್ನ ತಲೆಯ ಮೇಲೆ ಇರಿಸೆಂದು ಹೇಳಿದನು. ಇಂತಹ ಭಾಗವತೋತ್ತಮನಾದ ಬಲಿಯು ಹೀಗೆ ಅಂದುಕೊಂಡನು. ॥ ೨೩ ॥ ಈ ಐಶ್ವರ್ಯಶಾಲಿ ಯಾದ ಇಂದ್ರನು ವಿದ್ವಾಂಸನಾಗಿದ್ದರೂ ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುವ ವಿಷಯದಲ್ಲಿ ಕುಶಲನಲ್ಲ. ಈತನು ತನ್ನ ಸಮ್ಮತಿಯನ್ನು ಪಡೆಯಲಿಕ್ಕಾಗಿ ಇತರರನ್ನು ಬಿಟ್ಟು ಮಹಾಬುದ್ಧಿಶಾಲಿಯಾದ ಬೃಹಸ್ಪತಿಯನ್ನೇ ತನ್ನ ಮಂತ್ರಿಯನ್ನಾಗಿಸಿಕೊಂಡನು.

ತದ್ದಾಸ್ಯಮತಿಗಂಭೀರವಯಸಃ ಕಾಲಸ್ಯ ಮನ್ವಂತರಪರಿವೃತ್ತಂ ಕಿಯಲ್ಲೋಕತ್ರಯಮಿದಮ್ ॥ ೨೪ ॥ ಯಸ್ಯಾನುದಾಸ್ಯಮೇವಾಸ್ಮತ್ಪಿತಾಮಹಃ ಕಿಲ ವವ್ರೇ ನ ತು ಸ್ವಪಿತ್ರ್ಯಂ ಯದುತಾಕುತೋಭಯಂ ಪದಂ ದೀಯಮಾನಂ ಭಗವತಃ ಪರಮಿತಿ ಭಗವತೋಽಪರತೇ ಖಲು ಸ್ವಪಿತರಿ ॥ ೨೫ ॥ ತಸ್ಯ ಮಹಾನುಭಾವಸ್ಯಾನುಪಥಮಮೃಜಿತಕಷಾಯಃ ಕೋ ವಾಸ್ಮದ್ವಿಧಃ ಪರಿಹೀಣಭಗವದನುಗ್ರಹ ಉಪಜಿಗಮಿಷತೀತಿ ॥ ೨೬ ॥ ತಸ್ಯಾನುಚರಿತಮುಪರಿಷ್ಟಾದ್ವಿಸ್ತರಿಷ್ಯತೇ ಯಸ್ಯ ಭಗವಾನ್ ಸ್ವಯಮಖಿಲಜಗದ್ಗುರುರ್ನಾರಾಯಣೋ ದ್ವಾರಿ ಗದಾಪಾಣಿರವತಿಷ್ಠತೇ ನಿಜಜನಾನುಕಂಪಿತಹೃದಯೋ ಯೇನಾಂಗುಷ್ಠೇನ ಪದಾ ದಶಕಂಧರೋ ಯೋಜನಾಯುತಾಯುತಂ ದಿಗ್ವಿಜಯ ಉಚ್ಚಾಟಿತಃ ॥ ೨೭ ॥

ಆದರೂ ಅವಿವೇಕದಿಂದ ಆತನನ್ನು ಅನಾದರಿಸಿ ಶ್ರೀಭಗವಂತನಿಂದ ಆತನ ದಾಸ್ಯವನ್ನು ಕೇಳಿಕೊಳ್ಳದೆ ಆತನ ಮೂಲಕ ತನಗಾಗಿ ನನ್ನಿಂದ ಭೋಗಗಳನ್ನೇ ಬೇಡಿದನು. ಈ ತ್ರೈಲೋಕ್ಯರಾಜ್ಯವೇನೂ ಸ್ಥಿರವಲ್ಲ. ಅನಂತಕಾಲದ ಒಂದು ಅವಯವವಾಗಿರುವ ಒಂದು ಮನ್ವಂತರಕಾಲ ಮಾತ್ರ ಇರುವುದು. ಶ್ರೀಭಗವಂತನ ಕೈಂಕರ್ಯದ ಮುಂದೆ ಈ ತುಚ್ಛವಾದ ಭೋಗಗಳಿಗೆ ಯಾವ ಬೆಲೆ ಇದೆ? ॥ ೨೪ ॥ ನಮ್ಮ ತಾತನಾದ ಪ್ರಹ್ಲಾದನಾದರೋ ಶ್ರೀಭಗವಂತನಿಂದ ತನ್ನ ತಂದೆಯಾದ ಹಿರಣ್ಯಕಶಿಪುವು ಸಂಹರಿಸಲ್ಪಟ್ಟಾಗ ಆ ಭಗವಂತನಿಂದ ಭಗವತ್ಸೇವೆಯ ವರವನ್ನು ಮಾತ್ರ ಬೇಡಿಕೊಂಡನು. ಭಗವಂತನು ತನಗೆ ನಿಷ್ಕಂಟಕವಾದ ತಂದೆಯ ರಾಜ್ಯವನ್ನು ಕೊಡುವವನಾಗಿದ್ದರೂ,ಅದು ಭಗವಂತನಿಂದ ದೂರ ಮಾಡುವುದು ಎಂದರಿತು ಅದನ್ನು ಸ್ವೀಕರಿಸಲಿಲ್ಲ. ॥ ೨೫ ॥ ಅವರು ದೊಡ್ಡ ಮಹಾನುಭಾವರಾಗಿದ್ದರು. ನನ್ನ ಮೇಲಾದರೋ ಭಗವಂತನ ಕೃಪೆಯೂ ಇಲ್ಲ, ನನ್ನ ವಾಸನೆಗಳೂ ಶಾಂತವಾಗಲಿಲ್ಲ. ಮತ್ತೆ ನನ್ನಂತಹ ಯಾವನು ಅವರ ಬಳಿಗೆ ತಲುಪುವ ಸಾಹಸ ಮಾಡಿಯಾನು? ॥ ೨೬ ॥ ರಾಜೇಂದ್ರನೇ! ಈ ಬಲಿಯ ಚರಿತ್ರವನ್ನು ಮುಂದೆ (ಎಂಟನೆಯ ಸ್ಕಂಧದಲ್ಲಿ) ನಾವು ವಿಸ್ತಾರವಾಗಿ ಹೇಳುವೆವು. ತನ್ನ ಭಕ್ತರ ಕುರಿತು ಭಗವಂತನ ಹೃದಯವು ದಯೆಯಿಂದ ತುಂಬಿರುತ್ತದೆ. ಆದರಿಂದಲೇ ಅಖಿಲ ಜಗತ್ತಿನ ಪೂಜನೀಯ ಗುರುವಾಗಿರುವ ಭಗವಾನ್ ನಾರಾಯಣನು ಕೈಯಲ್ಲಿ ಗದೆಯನ್ನು ಧರಿಸಿಕೊಂಡು ಸುತಲಲೋಕದಲ್ಲಿ ಬಲಿಚಕ್ರವರ್ತಿಯ ಮನೆಯ ಬಾಗಿಲಲ್ಲಿ ಸದಾಕಾಲ ಉಪಸ್ಥಿತನಾಗಿದ್ದಾನೆ. ದುರಹಂಕಾರಿ ರಾವಣನು ಒಮ್ಮೆ ದಿಗ್ವಿಜಯ ಮಾಡುತ್ತಾ ಸುತಲಲೋಕಕ್ಕೆ ಬಂದಾಗ ಭಗವಂತನು ಅವನನ್ನು ತನ್ನ ಕಾಲಿನ ಅಂಗುಷ್ಠದಿಂದಲೇ ಲಕ್ಷಾಂತರ ಯೋಜನ ದೂರಕ್ಕೆ ಎಸೆದುಬಿಟ್ಟಿದ್ದನು. ॥ ೨೭ ॥

ತತೋಽಧಸ್ತಾತ್ತಲಾತಲೇ ಮಯೋ ನಾಮ ದಾನವೇಂದ್ರಸ್ತ್ರಿಪುರಾಧಿಪತಿರ್ಭಗವತಾ ಪುರಾರಿಣಾ ತ್ರಿಲೋಕೀಶಂ ಚಿಕೀರ್ಷುಣಾ ನಿರ್ದಗ್ಧಸ್ವಪುರತ್ರಯಸ್ತತ್ಪ್ರಸಾದಾಲ್ಲಬ್ಧಪದೋ ಮಾಯಾವಿನಾಮಾಚಾರ್ಯೋ ಮಹಾದೇವೇನ ಪರಿರಕ್ಷಿತೋ ವಿಗತಸುದರ್ಶನಭಯೋ ಮಹೀಯತೇ ॥ ೨೮ ॥

ಸುತಲ ಲೋಕದ ಕೆಳಗೆ ತಲಾತಲಲೋಕವಿದೆ. ಅಲ್ಲಿ ತ್ರಿಪುರಾಧಿಪತಿ ದಾನವರಾಜ ಮಯನು ಇರುತ್ತಾನೆ. ಹಿಂದೆ ತ್ರಿಲೋಕಕ್ಕೆ ಮಂಗಳವನ್ನುಂಟು ಮಾಡುವುದಕ್ಕಾಗಿ ಭಗವಾನ್ ಶಂಕರನು ಅವನ ಮೂರೂ ಪುರವನ್ನು ಸುಟ್ಟುಬೂದಿ ಮಾಡಿದ್ದನು. ಮತ್ತೆ ಅವನ ಕೃಪೆಯಿಂದಲೇ ಮಯನಿಗೆ ಈ ಸ್ಥಾನವು ದೊರೆಯಿತು. ಮಯನು ಮಾಯಾವಿಗಳ ಪರಮಗುರುವಾಗಿದ್ದಾನೆ ಮತ್ತು ದೇವದೇವ ಮಹಾದೇವನಿಂದ ಸುರಕ್ಷಿತನಾಗಿದ್ದಾನೆ. ಅದರಿಂದ ಅವನಿಗೆ ಸುದರ್ಶನಚಕ್ರದಿಂದಲೂ ಯಾವುದೇ ಭಯವಿಲ್ಲ. ಅಲ್ಲಿಯ ನಿವಾಸಿಗಳು ಅವನನ್ನು ತುಂಬಾ ಆದರಿಸುತ್ತಾರೆ. ॥ ೨೮ ॥

ತತೋಽಧಸ್ತಾನ್ಮಹಾತಲೇ ಕಾದ್ರವೇಯಾಣಾಂ ಸರ್ಪಾಣಾಂ ನೈಕಶಿರಸಾಂ ಕ್ರೋಧವಶೋ ನಾಮ ಗಣಃ ಕುಹಕತಕ್ಷಕಕಾಲೀಯಸುಷೇಣಾದಿಪ್ರಧಾನಾ ಮಹಾಭೋಗವಂತಃ ಪತತ್ತ್ರಿರಾಜಾಧಿಪತೇಃ ಪುರುಷವಾಹಾದನವರತಮುದ್ವಿಜಮಾನಾಃ ಸ್ವಕಲತ್ರಾಪತ್ಯಸುಹೃತ್ಕುಟುಂಬಸಂಗೇನ ಕ್ವಚಿತ್ಪ್ರಮತ್ತಾ ವಿಹರಂತಿ ॥ ೨೯ ॥

ಅದರ ಕೆಳಗೆ ಮಹಾತಲದಲ್ಲಿ ಕದ್ರುವಿನಿಂದ ಉತ್ಪನ್ನರಾದ ಅನೇಕ ತಲೆಗಳುಳ್ಳ 'ಕ್ರೋಧವಶ'ರೆಂಬ ಸರ್ಪಗಳ ಒಂದು ಸಮುದಾಯವು ವಾಸಿಸುತ್ತದೆ. ಅವರಲ್ಲಿ ಕುಹಕ, ತಕ್ಷಕ, ಕಾಲಿಯ ಮತ್ತು ಸುಷೇಣ ಮುಂತಾದವರು ಮುಖ್ಯರಾಗಿದ್ದಾರೆ. ಅವರಿಗೆ ದೊಡ್ಡ-ದೊಡ್ಡ ಹೆಡೆಗಳಿವೆ. ಅವರು ಸದಾಕಾಲ ಭಗವಂತನ ವಾಹನನಾದ ಪಕ್ಷಿರಾಜ ಗರುಡನಿಗೆ ಹೆದರುತ್ತಾ ಇರುತ್ತಾರೆ. ಹೀಗಿದ್ದರೂ ಕೆಲವೊಮ್ಮೆ ತಮ್ಮ ಪತ್ನೀ, ಪುತ್ರರು, ಮಿತ್ರರು, ಬಂಧು-ಬಾಂಧವರ ಸಂಗದಲ್ಲಿ ಮತ್ತೇರಿ ವಿಹರಿಸುತ್ತಾ ಇರುವರು. ॥ ೨೯ ॥

ತತೋಽಧಸ್ತಾದ್ರಸಾತಲೇ ದೈತೇಯಾ ದಾನವಾಃ ಪಣಯೋ ನಾಮ ನಿವಾತಕವಚಾಃ ಕಾಲೇಯಾ ಹಿರಣ್ಯ-ಪುರವಾಸಿನ ಇತಿ ವಿಬುಧಪ್ರತ್ಯನೀಕಾ ಉತ್ಪತ್ತ್ಯಾ ಮಹೌ-ಜಸೋ ಮಹಾಸಾಹಸಿನೋ ಭಗವತಃ ಸಕಲಲೋಕಾ-ನುಭಾವಸ್ಯ ಹರೇರೇವ ತೇಜಸಾ ಪ್ರತಿಹತಬಲಾವಲೇಪಾ ಬಿಲೇಶಯಾ ಇವ ವಸಂತಿ ಯೇ ವೈ ಸರಮಯೇಂದ್ರ-ದೂತ್ಯಾ ವಾಗ್ಭಿರ್ಮಂತ್ರವರ್ಣಾಭಿರಿಂದ್ರಾದ್ಬಿಭ್ಯತಿ ॥ ೩೦ ॥

ಅದರ ಕೆಳಗೆ ರಸಾತಲದಲ್ಲಿ 'ಪಣಿ' ಎಂಬ ದೈತ್ಯರು-ದಾನವರು ಇರುತ್ತಾರೆ. ಇವರು ನಿವಾತಕವಚ, ಕಾಲೇಯ ಮತ್ತು ಹಿರಣ್ಯಪುರವಾಸಿಗಳು ಎಂದೂ ಕರೆಸಲ್ಪಡುವರು. ಇವರಿಗೆ ದೇವತೆಗಳೊಂದಿಗೆ ವೈರವಿದೆ. ಇವರು ಹುಟ್ಟಿನಿಂದಲೇ ಅತಿಬಲಾಢ್ಯರೂ, ಮಹಾನ್ ಸಾಹಸಿಗಳೂ ಆಗಿರುತ್ತಾರೆ. ಆದರೆ ಸಮಸ್ತ ಲೋಕಗಳಲ್ಲಿ ಹರಡಿರುವ ಪ್ರಭಾವವುಳ್ಳ ಶ್ರೀಹರಿಯ ತೇಜದಿಂದ ಬಲ-ಅಭಿಮಾನಗಳು ಚೂರು-ಚೂರಾಗಿ ಹೋದಕಾರಣ ಇವರು ಸರ್ಪಗಳಂತೆ ಅಡಗಿಕೊಂಡೇ ಇರುವರು ಹಾಗೂ ಇಂದ್ರನ ದೂತಿಯಾದ ಸರಮಾ ಎಂಬ ದೇವಶುನಿಯು ನುಡಿದ ಮಂತ್ರರೂಪವಾದ * ಶಾಪಕ್ಕೆ ಹೆದರಿ ಇಂದ್ರನಿಗೆ ಭಯಪಡುತ್ತಾರೆ. ॥ ೩೦ ॥

ತತೋಽಧಸ್ತಾತ್ಪಾತಾಲೇ ನಾಗಲೋಕಪತಯೋ ವಾಸು-ಕಿಪ್ರಮುಖಾಃ ಶಂಖಕುಲಿಕಮಹಾಶಂಖಶ್ವೇತಧನಂಜಯ-ಧೃತರಾಷ್ಟ್ರಶಂಖಚೂಡಕಂಬಲಾಶ್ವತರದೇವದತ್ತಾದಯೋ ಮಹಾ ಭೋಗಿನೋ ಮಹಾಮರ್ಷಾ ನಿವಸಂತಿ ಯೇ-ಷಾಮು ಹ ವೈ ಪಂಚಸಪ್ತದಶಶತಸಹಸ್ರಶೀರ್ಷಾಣಾಂ ಫಣಾಸು ವಿರಚಿತಾ ಮಹಾಮಣಯೋ ರೋಚಿಷ್ಣವಃ ಪಾತಾಲವಿವರತಿಮಿರನಿಕರಂ ಸ್ವರೋಚಿಷಾ ವಿಧಮಂತಿ ॥ ೩೧ ॥

ರಸಾತಳದ ಕೆಳಗೆ ಪಾತಾಳವಿದೆ. ಅಲ್ಲಿ ಶಂಖ, ಕುಲಿಕ, ಮಹಾಶಂಖ ಶ್ವೇತ ಧನಂಜಯ, ಧೃತರಾಷ್ಟ್ರ, ಶಂಖಚೂಡ, ಕಂಬಲ, ಅಶ್ವತರ ಮತ್ತು ದೇವದತ್ತ ಮುಂತಾದ ಭಾರೀ ಕ್ರೋಧವುಳ್ಳ ದೊಡ್ಡ-ದೊಡ್ಡ ಹೆಡೆಯುಳ್ಳ ನಾಗಗಳು ವಾಸಿಸುತ್ತಾರೆ. ಇವರಲ್ಲಿ ವಾಸುಕಿಯು ಮುಖ್ಯನಾಗಿದ್ದಾನೆ. ಅವರಲ್ಲಿ ಕೆಲವರಿಗೆ ಐದು, ಕೆಲವರಿಗೆ ಏಳು, ಕೆಲವರಿಗೆ ಹತ್ತು, ಕೆಲವರಿಗೆ ನೂರು ಮತ್ತು ಕೆಲವರಿಗೆ ಸಾವಿರ ಹೆಡೆಗಳಿವೆ. ಅವರ ಹೆಡೆಗಳಲ್ಲಿ ಹೊಳೆಯುತ್ತಿರುವ ಮಣಿಗಳು ತಮ್ಮ ಪ್ರಕಾಶದಿಂದ ಪಾತಾಳಲೋಕದ ಎಲ್ಲ ಕತ್ತಲೆಯನ್ನು ದೂರಗೊಳಿಸುತ್ತಾರೆ. ॥ ೩೧ ॥

*ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೨೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ರಾಹ್ವಾದಿಸ್ಥಿತಿಬಿಲಸ್ವರ್ಗಮರ್ಯಾದಾನಿರೂಪಣಂ ನಾಮ ಚತುರ್ವಿಂಶೋಽಧ್ಯಾಯಃ ॥ ೨೪ ॥

# ಇಪ್ಪತ್ತೈದನೆಯ ಅಧ್ಯಾಯ

## ಶ್ರೀಸಂಕರ್ಷಣದೇವರ ವರ್ಣನೆ ಮತ್ತು ಸ್ತುತಿ

*ಶ್ರೀಶುಕ ಉವಾಚ*

ತಸ್ಯ ಮೂಲದೇಶೇ ತ್ರಿಂಶದ್ಯೋಜನಸಹಸ್ರಾಂತರ ಆಸ್ತೇ ಯಾ ವೈ ಕಲಾ ಭಗವತಸ್ತಾಮಸೀ ಸಮಾಖ್ಯಾತಾ-ನಂತ ಇತಿ ಸಾತ್ವತೀಯಾ ದ್ರಷ್ಟೃದೃಶ್ಯಯೋಃ ಸಂಕರ್ಷಣ-ಮಹಮಿತ್ಯಭಿಮಾನಲಕ್ಷಣಂ ಯಂ ಸಂಕರ್ಷಣಮಿತ್ಯಾ-

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಮಹಾರಾಜ! ಪಾತಾಳಲೋಕದ ಕೆಳಗೆ ಮೂವತ್ತುಸಾವಿರ ಯೋಜನಗಳ ದೂರದಲ್ಲಿ ಭಗವಾನ್ ಶ್ರೀನಾರಾಯಣನ ಕಲಾಮೂರ್ತಿಯಾಗಿ ತಾಮಸಾಹಂಕಾರಕ್ಕೆ ಅಭಿಮಾನಿಯಾಗಿರುವ 'ಅನಂತ' ಎಂದು ಪ್ರಸಿದ್ಧನಾದ ಆದಿಶೇಷನು ವಾಸವಾಗಿದ್ದಾನೆ. ಆತನು ಅಹಂಕಾರಕ್ಕೆ ಅಭಿಮಾನಿಯಾಗಿ ದೃಶ್ಯವಾದ ದೇಹೇಂದ್ರಿಯ ಮತ್ತು ಜಗತ್ತು ಇವುಗಳನ್ನು ನೋಡುವ ದ್ರಷ್ಟಾ ಜೀವನು ಅವುಗಳೊಂದಿಗೆ ತಾದಾತ್ಮ್ಯಹೊಂದುವುದು ಈ ಅಹಂಕಾರದಿಂದ. ಆದ್ದರಿಂದ

* ಪಣಿಗಳೆಂಬ ದೈತ್ಯರು ಪೃಥ್ವಿಯನ್ನು ಅಪಹರಿಸಿ ರಸಾತಳದಲ್ಲಿ ಬಚ್ಚಿಟ್ಟರು. ಆಗ ಇಂದ್ರನು ಅವನ್ನು ಹುಡುಕುವುದಕ್ಕಾಗಿ ಸರಮಾ ಎಂಬ ಒಂದು ದೂತಿಯನ್ನು ಕಳಿಸಿದ್ದನು. ಸರಮೆಯು ದೈತ್ಯರಲ್ಲಿ ಸಂಧಿಮಾಡಲು ಬಯಸಿದಳು. ಆದರೆ ಸರಮೆಯು ಸಂಧಿಮಾಡದೆ ಇಂದ್ರನನ್ನು ಸ್ತುತಿಸುತ್ತಾ – '**ಹತಾ ಇಂದ್ರೇಣ ಪಣಯಃ ಶಯಧ್ವಮ್**' (ಎಲೈ ಪಣಿಗಳೇ! ನೀವು ಇಂದ್ರನ ಕೈಯಿಂದ ಹತರಾಗಿ ಭೂಮಿಯಲ್ಲಿ ಮಲಗಿಬಿಡಿರಿ) ಎಂದು ಶಪಿಸಿದಳು. ಈ ಶಾಪದಿಂದಾಗಿ ಅವರಿಗೆ ಇಂದ್ರನ ಭಯವು ಪೀಡಿಸುತ್ತಿರುವುದು; ಎಂಬ ಒಂದು ಕಥೆಯಿದೆ.

ಚಕ್ಷತೇ ॥ ೧ ॥ ಯಸ್ಯೇದಂ ಕ್ಷಿತಿಮಂಡಲಂ ಭಗವತೋಽನಂತಮೂರ್ತೇಃ ಸಹಸ್ರಶಿರಸ ಏಕಸ್ಮಿನ್ನೇವ ಶೀರ್ಷಣಿ ಧ್ರಿಯಮಾಣಂ ಸಿದ್ಧಾರ್ಥ ಇವ ಲಕ್ಷ್ಯತೇ ॥ ೨ ॥ ಯಸ್ಯ ಹ ವಾ ಇದಂ ಕಾಲೇನೋಪಸಂಜಿಹೀರ್ಷತೋಽಮರ್ಷವಿರಚಿತರುಚಿರಭ್ರಮದ್ಭ್ರುವೋರಂತರೇಣ ಸಾಂಕರ್ಷಣೋ ನಾಮ ರುದ್ರ ಏಕಾದಶವ್ಯೂಹಸ್ತ್ರ್ಯಕ್ಷಸ್ತ್ರಿಶಿಖಂ ಶೂಲಮುತ್ತಂಭಯನ್ನುದತಿಷ್ಠತ್ ॥ ೩ ॥ ಯಸ್ಯಾಂಘ್ರಿಕಮಲಯುಗಲಾರುಣವಿಶದನಖಮಣಿಷಂಡಮಂಡಲೇಷ್ವಹಿಪತಯಃ ಸಹ ಸಾತ್ವತರ್ಷಭೈರೇಕಾಂತಭಕ್ತಿಯೋಗೇನಾವನಮಂತಃ ಸ್ವವದನಾನಿ ಪರಿಸ್ಫುರತ್ಕುಂಡಲಪ್ರಭಾಮಂಡಿತಗಂಡಸ್ಥಲಾನ್ಯತಿಮನೋಹರಾಣಿ ಪ್ರಮುದಿತಮನಸಃ ಖಲು ವಿಲೋಕಯಂತಿ ॥ ೪ ॥ ಯಸ್ಯೈವ ಹಿ ನಾಗರಾಜಕುಮಾರ್ಯ ಆಶಿಷ ಆಶಾಸಾನಾಶ್ಚಾರ್ವಂಗವಲಯವಿಲಸಿತವಿಶದವಿಪುಲಧವಲಸುಭಗರುಚಿರಭುಜರಜತಸ್ತಂಭೇಷ್ವಗುರುಚಂದನಕುಂಕುಮಪಂಕಾನುಲೇಪೇನಾವಲಿಂಪಮಾನಾಸ್ತದಭಿಮರ್ಶನೋನ್ಮಥಿತಹೃದಯಮಕರಧ್ವಜಾವೇಶರುಚಿರಲಲಿತಸ್ಮಿತಾಸ್ತದನುರಾಗಮದಮುದಿತಮದವಿಘೂರ್ಣಿತಾರುಣಕರುಣಾವಲೋಕನಯನವದನಾರವಿಂದಂ ಸವ್ರೀಡಂ ಕಿಲ ವಿಲೋಕಯಂತಿ ॥ ೫ ॥

ಸ ಏವ ಭಗವಾನನಂತೋಽನಂತಗುಣಾರ್ಣವ ಆದಿದೇವ ಉಪಸಂಹೃತಾಮರ್ಷರೋಷವೇಗೋ ಲೋಕಾನಾಂ ಸ್ವಸ್ತಯ ಆಸ್ತೇ ॥ ೬ ॥

ಧ್ಯಾಯಮಾನಃ ಸುರಾಸುರೋರಗಸಿದ್ಧಗಂಧರ್ವವಿದ್ಯಾಧರಮುನಿಗಣೈರನವರತಮದಮುದಿತವಿಕೃತವಿಹ್ವಲಲೋಚನಃ ಸುಲಲಿತಮುಖರಿಕಾಮೃತೇನಾಪ್ಯಾಯಮಾನಃ ಸ್ವಪಾರ್ಷದವಿಬುಧಯೂಥಪತೀನಪರಿಮ್ಲಾನರಾಗನವತುಲಸಿಕಾಮೋದಮಧ್ವಾಸವೇನ ಮಾದ್ಯನ್ಮಧುಕರವ್ರಾತಮಧುರಗೀತಶ್ರಿಯಂ ವೈಜಯಂತೀಂ ಸ್ವಾಂ ವನಮಾಲಾಂ ನೀಲವಾಸಾ ಏಕಕುಂಡಲೋ ಹಲಕಕುದಿ ಕೃತಸುಭಗ-

ಪಾಂಚರಾತ್ರ ಆಗಮದ ಅನುಯಾಯಿ ಭಕ್ತರು ಇವನನ್ನು ಸಂಕರ್ಷಣನೆಂದು ಹೇಳುತ್ತಾರೆ. ॥ ೧ ॥ ಭಗವಾನ್ ಅನಂತನಿಗೆ ಒಂದು ಸಾವಿರ ತಲೆಗಳಿವೆ. ಆ ಮಹಾಫಣಾಮಂಡಲದಲ್ಲಿ ಈ ಇಡೀ ಭೂಮಂಡಲವು ಒಂದೇ ಹೆಡೆಯಮೇಲೆ ಧರಿಸಲ್ಪಟ್ಟು ಒಂದು ಸಾಸಿವೆ ಕಾಳಿನಂತೆ ಕಾಣುತ್ತದೆ. ॥ ೨ ॥ ಪ್ರಳಯಕಾಲವು ಬಂದಾಗ ಇವನಿಗೆ ಈ ವಿಶ್ವದ ಉಪಸಂಹಾರ ಮಾಡುವ ಇಚ್ಛೆ ಉಂಟಾದಾಗ ಕ್ರೋಧದಿಂದ ಹುಬ್ಬುಗಂಟಿಕ್ಕಿ ತಿರುಗುತ್ತಿರುವ ಆತನ ಮನೋಹರ ಭ್ರುಕುಟಿಯ ಮಧ್ಯದಿಂದ ಸಂಕರ್ಷಣ ಎಂಬ ರುದ್ರರು ಪ್ರಕಟರಾಗುತ್ತಾರೆ. ಅವರ ವ್ಯೂಹ ಸಂಖ್ಯೆಯು ಹನ್ನೊಂದು ಇರುತ್ತದೆ. ಅವರೆಲ್ಲರೂ ಮುಕ್ಕಣ್ಣರಾಗಿ ಕೈಯಲ್ಲಿ ತ್ರಿಶೂಲವನ್ನು ಹಿಡಿದಿರುತ್ತಾರೆ. ॥ ೩ ॥ ಭಗವಾನ್ ಸಂಕರ್ಷಣನ ಚರಣಕಮಲಗಳ ದುಂಡಾಗಿರುವ ಸ್ವಚ್ಛ ಮತ್ತು ಅರುಣವರ್ಣ ನಖಮಣಿಗಳ ಸಾಲುಗಳು ಹೊಳೆಯುತ್ತಾ ಇವೆ. ಬೇರೆ ಮುಖ್ಯ-ಮುಖ್ಯರಾದ ನಾಗರಾಜರು ಭಕ್ತರೊಡಗೂಡಿ ಅನನ್ಯ ಭಕ್ತಿಭಾವದಿಂದ ಅವನನ್ನು ವಂದಿಸುತ್ತಿರುವಾಗ ಆ ನಖಮಣಿಗಳಲ್ಲಿ ತಮ್ಮ ಕುಂಡಲಮಂಡಿತ ಕಾಂತಿಯುಕ್ತ ಕಮನೀಯ ಕಪೋಲಗಳುಳ್ಳ ಮುಖಾರವಿಂದದ ಮನಮೋಹಕವಾದ ಪ್ರತಿಬಿಂಬವನ್ನು ಕಂಡು ಅವರ ಮನಸ್ಸು ಆನಂದದಿಂದ ತುಂಬಿಹೋಗುತ್ತದೆ. ॥ ೪ ॥ ಅನೇಕ ನಾಗರಾಜರ ಕನ್ಯೆಯರು ವಿವಿಧ ಕಾಮನೆಗಳಿಂದ ಅವನ ಚೆಲುವಾದ ಅಂಗಮಂಡಲದಲ್ಲಿ ಬೆಳ್ಳಿಯ ಕಂಬಗಳಂತೆ ಬೆಳ್ಳಗೆ ಹೊಳೆಯುತ್ತಾ, ತೋಳ್ಬಳೆಗಳಿಂದ ಮಿರುಗುತ್ತಾ ದುಂಡು-ದುಂಡಾಗಿ ನೀಳವಾದ ತೋಳುಗಳಿಗೆ ಅಗರು, ಚಂದನ ಮತ್ತು ಕುಂಕುಮ ಕೇಸರಗಳ ಲೇಪವನ್ನು ಹಚ್ಚುತ್ತಿರುವರು. ಆತನ ಅಂಗ ಸ್ಪರ್ಶದಿಂದ ಅವರಲ್ಲಿ ಪ್ರೇಮಭಾವವು ಹರಿಯತೊಡಗುತ್ತದೆ. ಆಗ ಅವರು ಕರುಣಾಪೂರ್ಣವಾಗಿ ಕೆಂದಾವರೆಯಂತೆ ಕಂಗೊಳಿಸುವ ಕಣ್ಣುಗಳಿಂದ ಕೂಡಿ ಪ್ರೇಮೋನ್ಮಾದದಿಂದ ಆನಂದಗೊಂಡಿರುವ ಆತನ ಮುಖಕಮಲವನ್ನು ಮಧುರವೂ, ಮನೋಹರವೂ ಆದ ಕಿರುನಗೆಯಿಂದ ಲಜ್ಜಾಭಾವ ಸಹಿತವಾದ ಅನುರಾಗದಿಂದ ನೋಡುತ್ತಿರುವರು. ॥ ೫ ॥ ಅನಂತಗುಣಗಳ ಸಾಗರನಾದ ಆ ಆದಿದೇವ ಭಗವಾನ್ ಅನಂತನು ತನ್ನ ಅಸಹನೆ-ಕ್ರೋಧಗಳನ್ನು ಉಪಸಂಹಾರಮಾಡಿಕೊಂಡು ಸಮಸ್ತಲೋಕಗಳ ಕಲ್ಯಾಣಕ್ಕಾಗಿ ಅಲ್ಲಿ ವಿರಾಜಮಾನನಾಗಿದ್ದಾನೆ. ॥ ೬ ॥

ದೇವತೆಗಳು, ಅಸುರರು, ನಾಗರು, ಸಿದ್ಧರು, ಗಂಧರ್ವರು, ವಿದ್ಯಾಧರರು, ಮುನಿಗಣಗಳು ಆ ಭಗವಾನ್ ಅನಂತನನ್ನು ಧ್ಯಾನಿಸುತ್ತಾ ಇರುವರು. ಅವನ ನೇತ್ರಗಳು ನಿರಂತರವಾಗಿ ಆನಂದಾನುಭಾವದಿಂದ ಚಂಚಲವಾಗಿ ತಿರುಗುತ್ತಿರುವಂತೆ ಕಾಣುತ್ತಿವೆ. ಅವನು ಮಧುರವಾದ ವಚನಾಮೃತಗಳಿಂದ ತನ್ನ ಪಾರ್ಷದರನ್ನು ಮತ್ತು ದೇವತಾಗಣಗಳ ನಾಯಕರನ್ನು ಸಂತೋಷಗೊಳಿಸುತ್ತಿದ್ದಾನೆ. ಸ್ವಾಮಿಯ ಮೈಯಲ್ಲಿ ನೀಲಾಂಬರ ಹಾಗೂ ಕಿವಿಗಳಲ್ಲಿ ಕೇವಲ ಒಂದೇ ಕುಂಡಲವು ಹೊಳೆಯುತ್ತಿದೆ. ಎಂದೆಂದಿಗೂ ಬಾಡದೇ ಇರುವ ಹೊಸ ತುಲಸಿಯ ಸುವಾಸನೆ ಮತ್ತು ರಸಗಳ ಸೇವನೆಯಿಂದ ಮತ್ತೇರಿ ಝೇಂಕರಿಸುತ್ತಿರುವ ದುಂಬಿಗಳ ಸಂಗೀತದಿಂದ ಶೋಭಿಸುತ್ತಿರುವ ವೈಜಯಂತಿ ಎಂಬ ಸಾಟಿಯಿಲ್ಲದ

ಸುಂದರಭುಜೋ ಭಗವಾನ್ಮಾಹೇಂದ್ರೋ ವಾರಣೇಂದ್ರ ಇವ ಕಾಂಚನೀಂ ಕಕ್ಷಾಮುದಾರಲೀಲೋ ಬಿಭರ್ತಿ ॥ ೭ ॥

ಯ ಏಷ ಏವಮನುಶ್ರುತೋ ಧ್ಯಾಯಮಾನೋ ಮುಮುಕ್ಷೂಣಾಮನಾದಿಕಾಲಕರ್ಮವಾಸನಾಗ್ರಥಿತಮವಿದ್ಯಾಮಯಂ ಹೃದಯಗ್ರಂಥಿಂ ಸತ್ತ್ವರಜಸ್ತಮೋಮಯಮಂತರ್ಹೃದಯಂ ಗತ ಆಶು ನಿರ್ಭಿನತ್ತಿ ತಸ್ಯಾನುಭಾವಾನ್ ಭಗವಾನ್ ಸ್ವಾಯಂಭುವೋ ನಾರದಃ ಸಹ ತುಂಬುರುಣಾ ಸಭಾಯಾಂ ಬ್ರಹ್ಮಣಃ ಸಂಶ್ಲೋಕಯಾಮಾಸ ॥ ೮ ॥

ಉತ್ಪತ್ತಿಸ್ಥಿತಿಲಯಹೇತವೋಽಸ್ಯ ಕಲ್ಪಾಃ
ಸತ್ತ್ವಾದ್ಯಾಃ ಪ್ರಕೃತಿಗುಣಾ ಯದೀಕ್ಷಯಾಽಽಸನ್ ।
ಯದ್ರೂಪಂ ಧ್ರುವಮಕೃತಂ ಯದೇಕಮಾತ್ಮ-
ನ್ನಾನಾಧಾತ್ಕಥಮು ಹ ವೇದ ತಸ್ಯ ವರ್ತ್ಮ ॥ ೯ ॥

ಮೂರ್ತಿಂ ನಃ ಪುರುಕೃಪಯಾ ಬಭಾರ ಸತ್ತ್ವಂ
ಸಂಶುದ್ಧಂ ಸದಸದಿದಂ ವಿಭಾತಿ ಯತ್ರ ।
ಯಲ್ಲೀಲಾಂ ಮೃಗಪತಿರಾದದೇಽನವದ್ಯಾ-
ಮಾದಾತುಂ ಸ್ವಜನಮನಾಂಸ್ಯುದಾರವೀರ್ಯಃ ॥ ೧೦ ॥

ಯನ್ನಾಮ ಶ್ರುತಮನುಕೀರ್ತಯೇದಕಸ್ಮಾ-
ದಾರ್ತೋ ವಾ ಯದಿ ಪತಿತಃ ಪ್ರಲಂಭನಾದ್ವಾ ।
ಹನ್ತ್ಯಂಹಃ ಸಪದಿ ನೃಣಾಮಶೇಷಮನ್ಯಂ
ಕಂ ಶೇಷಾದ್ಭಗವತ ಆಶ್ರಯೇನ್ಮುಮುಕ್ಷುಃ ॥ ೧೧ ॥

ಮೂರ್ಧನ್ಯರ್ಪಿತಮಣುವತ್ಸಹಸ್ರಮೂರ್ಧ್ನೋ
ಭೂಗೋಲಂ ಸಗಿರಿಸರಿತ್ಸಮುದ್ರಸತ್ತ್ವಮ್ ।
ಆನಂತ್ಯಾದನಿಮಿತವಿಕ್ರಮಸ್ಯ ಭೂಮ್ನಃ
ಕೋ ವೀರ್ಯಾಣ್ಯಧಿಗಣಯೇತ್ಸಹಸ್ರಜಿಹ್ವಃ ॥ ೧೨ ॥

ಏವಂಪ್ರಭಾವೋ ಭಗವಾನನಂತೋ
ದುರಂತವೀರ್ಯೋರುಗುಣಾನುಭಾವಃ ।
ಮೂಲೇ ರಸಾಯಾಃ ಸ್ಥಿತ ಆತ್ಮತಂತ್ರೋ
ಯೋ ಲೀಲಯಾ ಕ್ಷ್ಮಾಂ ಸ್ಥಿತಯೇ ಬಿಭರ್ತಿ ॥ ೧೩ ॥

ವನಮಾಲೆಯಿಂದ ಅಲಂಕೃತನಾಗಿರುವ ಸ್ವಾಮಿಯು ಸುವರ್ಣ ಮಾಲೆಯಿಂದ ಅಲಂಕೃತವಾದ ಐರಾವತದಂತೆ ರಾರಾಜಿಸುತ್ತಿದ್ದಾನೆ. ತನ್ನ ಸುಭಗವೂ, ಸುಂದರವೂ ಆದ ಭುಜವನ್ನು ನೇಗಿಲಿನ ಹಿಡಿಯಮೇಲೆ ಇರಿಸಿಕೊಂಡು ಮೆರೆಯುತ್ತಿದ್ದಾನೆ. ॥ ೭ ॥

ಪರೀಕ್ಷಿದ್ರಾಜನೇ ! ಹೀಗೆ ಭಗವಾನ್ ಅನಂತನ ಮಹಾತ್ಮ್ಯವನ್ನು ಶ್ರವಣಿಸುತ್ತಾ, ಧ್ಯಾನಮಾಡುವುದರಿಂದ ಮುಮುಕ್ಷುಗಳ ಹೃದಯದಲ್ಲಿ ಪ್ರಕಟಗೊಂಡು ಅವರ ಅನಾದಿಕಾಲದ ಕರ್ಮ ವಾಸನೆಗಳಿಂದ ಕಗ್ಗಂಟಾದ ಸತ್ತ್ವ, ರಜ, ತಮೋಗುಣರೂಪ ಅವಿದ್ಯಾಮಯವಾದ ಹೃದಯದ ಗಂಟನ್ನು ಒಡನೆಯೇ ಕತ್ತರಿಸಿ ಬಿಡುವನು. ಬ್ರಹ್ಮಪುತ್ರರಾದ ಭಗವಾನ್ ನಾರದರು ತುಂಬುರರು ಗಂಧರ್ವರೊಡನೆ ಒಮ್ಮೆ ಬ್ರಹ್ಮದೇವರ ಸಭೆಯಲ್ಲಿ ಆ ಸಂಕರ್ಷಣ ದೇವರ ಗುಣಗಳನ್ನು ಹೀಗೆ ಗಾನ ಮಾಡಿದರು. ॥ ೮ ॥

ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣವಾಗಿರುವ ಸತ್ತ್ವವೇ ಮುಂತಾದ ಪ್ರಾಕೃತಗುಣಗಳು ಯಾರ ದೃಷ್ಟಿ (ಸಂಕಲ್ಪ) ಮಾತ್ರದಿಂದಲೇ ತಮ್ಮ-ತಮ್ಮ ಕಾರ್ಯವನ್ನು ಮಾಡಲು ಸಮರ್ಥವಾಗುವವೋ, ಯಾರ ಸ್ವರೂಪವು ಧ್ರುವ (ಅನಂತ) ಮತ್ತು ಅಕೃತ (ಅನಾದಿ)ಯಾಗಿದೆಯೋ, ಕೇವಲ ಒಬ್ಬನೇ ಆಗಿದ್ದರೂ ಈ ನಾನಾತ್ಮಕವಾದ ಪ್ರಪಂಚವನ್ನು ಯಾರು ತನ್ನಲ್ಲಿ ಧರಿಸಿಕೊಂಡಿರುವನೋ ಆ ಭಗವಾನ್ ಸಂಕರ್ಷಣನ ತತ್ತ್ವವನ್ನು ಯಾರಾದರೂ ಹೇಗೆ ತಾನೇ ತಿಳಿಯಬಲ್ಲರು ? ॥ ೯ ॥ ಯಾರಲ್ಲಿ ಈ ಕಾರ್ಯ- ಕಾರಣರೂಪವಾದ ಇಡೀ ಪ್ರಪಂಚವು ತೋರುವುದೋ ಹಾಗೂ ತನ್ನ ನಿಜಜನರ ಚಿತ್ತವನ್ನು ಆಕರ್ಷಿಸಲಿಕ್ಕಾಗಿಯೇ ಮಾಡಿರುವ ಪರಾಕ್ರಮವುಳ್ಳ ಲೀಲೆಯನ್ನು ಪರಮ ಪರಾಕ್ರಮಿಸಿಂಹವು ಆದರ್ಶವೆಂದು ತಿಳಿದು ತನ್ನದಾಗಿಸಿಕೊಂಡಿದೆಯೋ, ಆ ಉದಾರ ವೀರ್ಯನಾದ ಭಗವಾನ್ ಸಂಕರ್ಷಣನು ನಮ್ಮ ಮೇಲೆ ಕೃಪೆಗೈದು ಈ ವಿಶುದ್ಧ ಸತ್ತ್ವಮಯ ಸ್ವರೂಪವನ್ನು ಧರಿಸಿರುವನು. ॥ ೧೦ ॥ ಆತನ ನಾಮಮಹಿಮೆಯೂ ಅಪಾರವಾದುದು. ಪೀಡಿತವಾಗಿರಲೀ, ಪಾಪಿಯೇ ಆಗಿರಲೀ, ಆಕಸ್ಮಿಕವಾಗಿಯಾದರೂ, ವಿನೋದಕ್ಕಾದರೂ, ಮತ್ತೊಬ್ಬರು ಹೇಳಿದುದನ್ನು ಕೇಳಿ ಅಣಕಿಸುವುದಕ್ಕಾಗಲೀ, ಆತನ ದಿವ್ಯನಾಮವನ್ನು ಉಚ್ಚರಿಸಿದರೆ ತಾನು ಪಾಪಗಳಿಂದ ಬಿಡುಗಡೆ ಹೊಂದುವನು. ಅಷ್ಟೇ ಅಲ್ಲದೆ ಇತರ ಎಲ್ಲ ಪಾಪಗಳನ್ನೂ ಒಡನೆಯೇ ಧ್ವಂಸಮಾಡುವನು. ಮೋಕ್ಷವನ್ನು ಬಯಸುವವನು ಇಂತಹ ಶ್ರೀಶೇಷಭಗವಂತನನ್ನು ಬಿಟ್ಟು ಬೇರೆ ಯಾರನ್ನು ಆಶ್ರಯಿಸ ಬಲ್ಲನು ? ॥ ೧೧ ॥ ಬೆಟ್ಟ ನದಿಗಳು, ಸಮುದ್ರ ಮುಂತಾದವುಗಳಿಂದ ಕೂಡಿದ ಈ ಇಡೀ ಭೂಮಂಡಲವು ಆ ಸಹಸ್ರಶೀರ್ಷ ಭಗವಂತನ ಒಂದು ತಲೆಯಲ್ಲಿ ಒಂದು ಧೂಳಿನ ಕಣದಂತೆ ನೆಲೆಸಿದೆ. ಅಂತಹ ಅನಂತಸ್ವಾಮಿಯ ಅನಂತವಾದ ಮಹಿಮೆಯನ್ನು ಯಾರೂ ತಿಳಿಯರು. ಸಾವಿರ ನಾಲಿಗೆಗಳಿದ್ದರೂ ಆ ಸರ್ವವ್ಯಾಪಕ ಭಗವಂತನ ಪರಾಕ್ರಮಗಳನ್ನು ಹೇಗೆ ಬಣ್ಣಿಸಬಲ್ಲನು ? ॥ ೧೨ ॥ ನಿಜವಾಗಿಯೂ ಅವನ ಅನಂತವಾದ ವೀರ್ಯ, ಅತಿಶಯವಾದ ಗುಣ ಮತ್ತು ಪ್ರಭಾವವು ಅಸೀಮವಾದುದು. ಇಂತಹ ಪ್ರಭಾವಶಾಲಿ ಭಗವಾನ್ ಅನಂತನು ರಸಾತಳದ ಮೂಲದಲ್ಲಿ ತನ್ನದೇ ಮಹಿಮೆಯಲ್ಲಿ ಸ್ಥಿತನಾಗಿ ಸ್ವತಂತ್ರ

ಏತಾ ಹ್ಯೇವೇಹ ನೃಭಿರುಪಗಂತವ್ಯಾ ಗತಯೋ ಯಥಾಕರ್ಮವಿನಿರ್ಮಿತಾ ಯಥೋಪದೇಶಮನುವರ್ಣಿತಾಃ ಕಾಮಾನ್ ಕಾಮಯಮಾನೈಃ ॥ ೧೪ ॥

ಏತಾವತೀರ್ಹಿ ರಾಜನ್ ಪುಂಸಃ ಪ್ರವೃತ್ತಿಲಕ್ಷಣಸ್ಯ ಧರ್ಮಸ್ಯ ವಿಪಾಕಗತಯ ಉಚ್ಚಾವಚಾ ವಿಸದೃಶಾ ಯಥಾಪ್ರಶ್ನಂ ವ್ಯಾಚಖ್ಯೇ ಕಿಮನ್ಯತ್ಕಥಯಾಮ ಇತಿ ॥ ೧೫ ॥

ನಾಗಿದ್ದಾನೆ ಮತ್ತು ಸಮಸ್ತ ಲೋಕಗಳ ಸ್ಥಿತಿಗಾಗಿ ಲೀಲೆಯಿಂದಲೇ ಈ ಪೃಥಿವಿಯನ್ನು ಧರಿಸಿರುವನು. ॥ ೧೩ ॥

ಎಲೈ ರಾಜನೇ! ಭೋಗಗಳನ್ನು ಬಯಸುವ ಮನುಷ್ಯರು ಹೊಂದಲು ಸಾಧ್ಯವಾಗುವಂತೆ ಶ್ರೀಭಗವಂತನು ಅದರ ಕರ್ಮಗಳಿಗೆ ಅನುಗುಣವಾಗಿ ನಿರ್ಮಿಸಿರುವ ಗತಿಗಳು ಇಷ್ಟೆ ನಾನು ಗುರುಮುಖದಿಂದ ಕೇಳಿರುವ ರೀತಿಯಲ್ಲೇ ಇವನ್ನು ನಿನಗೆ ತಿಳಿಸಿದ್ದೇನೆ. ॥ ೧೪ ॥ ಮನುಷ್ಯನಿಗೆ ಪ್ರವೃತ್ತಿರೂಪವಾದ ಧರ್ಮದ ಪರಿಣಾಮದಲ್ಲಿ ದೊರಕುವ ಪರಸ್ಪರ ವಿಲಕ್ಷಣದ ಉಚ್ಚ-ನೀಚ ಗತಿಗಳು ನಾನಾಪ್ರಕಾರದ್ದಾಗಿದೆ. ಇದನ್ನು ನಿನ್ನ ಪ್ರಶ್ನೆಗನುಸಾರವಾಗಿ ನಾನು ಹೇಳಿಯಾಯಿತು. ಈಗ ಹೇಳು. ಇನ್ನೇನು ಹೇಳಲಿ? ॥ ೧೫ ॥

**ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು. ॥ ೨೫ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ ಭೂವಿವರವಿಧ್ಯುಪವರ್ಣನಂ ನಾಮ ಪಂಚವಿಂಶೋಽಧ್ಯಾಯಃ ॥ ೨೫ ॥**

# ಇಪ್ಪತ್ತಾರನೆಯ ಅಧ್ಯಾಯ

## ನರಕಗಳ ಬೇರೆ-ಬೇರೆ ಗತಿಗಳ ವರ್ಣನೆ

*ರಾಜೋವಾಚ*

ಮಹರ್ಷ ಏತದ್ವೈಚಿತ್ರ್ಯಂ ಲೋಕಸ್ಯ ಕಥಮಿತಿ ॥ ೧ ॥

*ಋಷಿರುವಾಚ*

ತ್ರಿಗುಣತ್ವಾತ್ಕರ್ತುಃ ಶ್ರದ್ಧಯಾ ಕರ್ಮಗತಯಃ ಪೃಥಗ್ವಿಧಾಃ ಸರ್ವಾ ಏವ ಸರ್ವಸ್ಯ ತಾರತಮ್ಯೇನ ಭವಂತಿ ॥ ೨ ॥ ಅಥೇದಾನೀಂ ಪ್ರತಿಷಿದ್ಧಲಕ್ಷಣಸ್ಯಾಧರ್ಮಸ್ಯ ತಥೈವ ಕರ್ತುಃ ಶ್ರದ್ಧಾಯಾ ವೈಸಾದೃಶ್ಯಾತ್ಕರ್ಮಫಲಂ ವಿಸದೃಶಂ ಭವತಿ ಯಾ ಹ್ಯನಾದ್ಯವಿದ್ಯಯಾ ಕೃತಕಾಮಾನಾಂ ತತ್ಪರಿಣಾಮಲಕ್ಷಣಾಃ ಸೃತಯಃ ಸಹಸ್ರಶಃ ಪ್ರವೃತ್ತಾಸ್ತಾಸಾಂ ಪ್ರಾಚುರ್ಯೇಣಾನುವರ್ಣಯಿಷ್ಯಾಮಃ ॥ ೩ ॥

*ರಾಜೋವಾಚ*

ನರಕಾ ನಾಮ ಭಗವನ್ಕಿಂ ದೇಶವಿಶೇಷಾ ಅಥವಾ ಬಹಿಸ್ತ್ರಿಲೋಕ್ಯಾ ಆಹೋಸ್ವಿದಂತರಾಲ ಇತಿ ॥ ೪ ॥

**ಪರೀಕ್ಷಿದ್ರಾಜನು ಕೇಳಿದನು** – ಮಹರ್ಷಿಗಳೇ! ಲೋಕದ ಜೀವಿಗಳಿಗೆ ಉಂಟಾಗುವ ಉಚ್ಚ-ನೀಚ ಗತಿಗಳಲ್ಲಿ ಇಷ್ಟೊಂದು ಭಿನ್ನತೆಗಳು ಏಕೆ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜನೇ! ಕರ್ಮ ಮಾಡುವವರಲ್ಲಿ ಸಾತ್ವಿಕರು, ರಾಜಸರು ಮತ್ತು ತಾಮಸರು ಎಂಬ ಮೂರು ಸ್ವಭಾವದ ಜನರಿರುತ್ತಾರೆ. ಅವರ ಶ್ರದ್ಧೆಗಳಲ್ಲಿಯೂ ಭೇದಗಳಿರುತ್ತವೆ. ಈ ರೀತಿ ಸ್ವಭಾವ ಮತ್ತು ಶ್ರದ್ಧೆಯ ಭೇದದಿಂದ ಅವರ ಗತಿಗಳಲ್ಲಿಯೂ ಭಿನ್ನತೆ ಉಂಟಾಗುತ್ತವೆ. ಇವೆಲ್ಲ ಗತಿಗಳು ಹೆಚ್ಚು-ಕಡಿಮೆ ಎಲ್ಲ ಕರ್ತೃಗಳಾದ ಜೀವರಿಗೆ ದೊರೆಯುತ್ತವೆ. ॥ ೨ ॥ ಹೀಗೆಯೇ ನಿಷಿದ್ಧ ಕರ್ಮವಾದ ಪಾಪಗಳನ್ನು ಮಾಡುವವರಿಗೂ ಅವರ ಶ್ರದ್ಧೆಗಳು ಬೇರೆ-ಬೇರೆಯಾಗಿರುವುದರಿಂದ ಅವರಿಗೆ ದೊರೆಯುವ ಫಲಗಳೂ ಬೇರೆ-ಬೇರೆಯಾಗುವುವು. ಆದುದರಿಂದ ಅನಾದಿಯಾದ ಅವಿದ್ಯೆಗೆ ವಶರಾಗಿ ಜೀವರು ಕಾಮನಾಪೂರ್ವಕವಾಗಿ ಆಚರಿಸುವ ನಿಷಿದ್ಧಕರ್ಮಗಳಿಂದ ಸಾವಿರಾರು ಬಗೆಯ ನರಕಗತಿಗಳು ಉಂಟಾಗುವುವು. ಅವುಗಳನ್ನು ವಿಸ್ತಾರವಾಗಿ ವರ್ಣಿಸುವೆನು ಕೇಳು. ॥ ೩ ॥

**ಪರೀಕ್ಷಿದ್ರಾಜನು ಕೇಳಿದನು** – ಭಗವಂತರೇ! ತಾವು ವರ್ಣಿಸುವುದಾಗಿ ಹೇಳಿದ ಈ ನರಕಗಳು ಇದೇ ಭೂಮಿಯಲ್ಲಿರುವ ಯಾವುದಾದರೂ ದೇಶವಿಶೇಷಗಳೇ? ಅಥವಾ ತ್ರಿಲೋಕದಿಂದ ಹೊರಗೆ ಇವೆಯೇ? ಅಥವಾ ಇದರೊಳಗೆ ಯಾವುದಾದರೂ ಜಾಗದಲ್ಲಿವೆಯೇ? ॥ ೪ ॥

ಋಷಿರುವಾಚ

ಅಂತರಾಲ ಏವ ತ್ರಿಜಗತ್ಯಾಸ್ತು ದಿಶಿ ದಕ್ಷಿಣಸ್ಯಾಮಧಸ್ತಾದ್ಭೂಮೇರುಪರಿಷ್ಟಾಚ್ಚ ಜಲಾದ್ಯಸ್ಯಾಮಗ್ನಿಷ್ವಾತ್ತಾದಯಃ ಪಿತೃಗಣಾ ದಿಶಿ ಸ್ವಾನಾಂ ಗೋತ್ರಾಣಾಂ ಪರಮೇಣ ಸಮಾಧಿನಾ ಸತ್ಯಾ ಏವಾಶಿಷ ಆಶಾಸಾನಾ ನಿವಸಂತಿ ॥ ೫ ॥ ಯತ್ರ ಹ ವಾವ ಭಗವಾನ್ಪಿತೃರಾಜೋ ವೈವಸ್ವತಃ ಸ್ವವಿಷಯಂ ಪ್ರಾಪಿತೇಷು ಸ್ವಪುರುಷೈರ್ಜಂತುಷು ಸಂಪರೇತೇಷು ಯಥಾಕರ್ಮಾವದ್ಯಂ ದೋಷಮೇವಾನುಲ್ಲಂಘಿತಭಗವಚ್ಛಾಸನಃ ಸಗಣೋ ದಮಂ ಧಾರಯತಿ ॥ ೬ ॥ ತತ್ರ ಹೈಕೇ ನರಕಾನೇಕವಿಂಶತಿಂ ಗಣಯಂತಿ ಅಥ ತಾಂಸ್ತೇ ರಾಜನ್ನಾಮರೂಪಲಕ್ಷಣತೋಽನುಕ್ರಮಿಷ್ಯಾಮಸ್ತಾಮಿಸ್ರೋಽಂಧತಾಮಿಸ್ರೋ ರೌರವೋ ಮಹಾರೌರವಃ ಕುಂಭೀಪಾಕಃ ಕಾಲಸೂತ್ರಮಸಿಪತ್ರವನಂ ಸೂಕರಮುಖಮಂಧಕೂಪಃ ಕೃಮಿಭೋಜನಃ ಸಂದಂಶಸ್ತಪ್ತಸೂರ್ಮಿರ್ವಜ್ರಕಂಟಕಶಾಲ್ಮಲೀ ವೈತರಣೀ ಪೂಯೋದಃ ಪ್ರಾಣರೋಧೋ ವಿಶಸನಂ ಲಾಲಾಭಕ್ಷಃ ಸಾರಮೇಯಾದನಮವೀಚಿರಯಃಪಾನಮಿತಿ । ಕಿಂಚ ಕ್ಷಾರಕರ್ದಮೋ ರಕ್ಷೋಗಣಭೋಜನಃ ಶೂಲಪ್ರೋತೋ ದಂದಶೂಕೋಽವಟನಿರೋಧನಃ ಪರ್ಯಾವರ್ತನಃ ಸೂಚೀಮುಖಮಿತ್ಯಷ್ಟಾವಿಂಶತಿರ್ನರಕಾ ವಿವಿಧಯಾತನಾಭೂಮಯಃ ॥ ೭ ॥

ತತ್ರ ಯಸ್ತು ಪರವಿತ್ತಾಪತ್ಯಕಲತ್ರಾಣ್ಯಪಹರತಿ ಸ ಹಿ ಕಾಲಪಾಶಬದ್ಧೋ ಯಮಪುರುಷೈರತಿಭಯಾನಕೈಸ್ತಾಮಿಸ್ರೇ ನರಕೇ ಬಲಾನ್ನಿಪಾತ್ಯತೇ ಅನಶನಾನುದಪಾನದಂಡತಾಡನಸಂತರ್ಜನಾದಿಭಿರ್ಯಾತನಾಭಿರ್ಯಾತ್ಯಮಾನೋ ಜಂತುರ್ಯತ್ರ ಕಶ್ಮಲಮಾಸಾದಿತ ಏಕದೈವ ಮೂರ್ಛಾಮುಪಯಾತಿ ತಾಮಿಸ್ರಪ್ರಾಯೇ ॥ ೮ ॥ ಏವಮೇವಾಂಧತಾಮಿಸ್ರೇ ಯಸ್ತು ವಂಚಯಿತ್ವಾ ಪುರುಷಂ ದಾರಾದೀನುಪಯುಂಕ್ತೇ ಯತ್ರ ಶರೀರೀ ನಿಪಾತ್ಯಮಾನೋ ಯಾತನಾಸ್ಥೋ ವೇದನಯಾ ನಷ್ಟಮತಿರ್ನಷ್ಟದೃಷ್ಟಿಶ್ಚ ಭವತಿ ಯಥಾ ವನಸ್ಪತಿರ್ವೃಶ್ಚ್ಯಮಾನಮೂಲಸ್ತಸ್ಮಾದಂಧತಾಮಿಸ್ರಂ ತಮುಪದಿಶಂತಿ ॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜನೇ! ಇವು ತ್ರಿಲೋಕಗಳ ಒಳಗೆಯೇ ಇವೆ ಹಾಗೂ ದಕ್ಷಿಣದಿಕ್ಕಿನತ್ತ ಪೃಥಿವಿಯಿಂದ ಕೆಳಗೆ ನೀರಿನಮೇಲೆ ನಿಂತಿವೆ. ಇದೇ ದಿಕ್ಕಿನಲ್ಲಿ ಅಗ್ನಿಷ್ವಾತ್ತರೇ ಮುಂತಾದ ಪಿತೃಗಣಗಳೂ ಇರುತ್ತಾರೆ. ಇವರು ಅತ್ಯಂತ ಏಕಾಗ್ರತೆಯಿಂದ ತಮ್ಮ ವಂಶದಲ್ಲಿ ಜನಿಸಿದವರಿಗೆ ಮಂಗಳ ಉಂಟಾಗಲೆಂದು ಬಯಸುತ್ತಾ ಇರುತ್ತಾರೆ. ॥ ೫ ॥ ಆ ನರಕಲೋಕದಲ್ಲಿ ಸೂರ್ಯನ ಪುತ್ರ ಪಿತೃರಾಜನಾದ ಭಗವಾನ್ ಯಮನು ತನ್ನ ಸೇವಕರೊಂದಿಗೆ ಇರುತ್ತಾನೆ. ಭಗವಂತನ ಆಜ್ಞೆಯನ್ನು ಮೀರದೆ ತನ್ನ ದೂತರ ಮೂಲಕ ಅಲ್ಲಿಗೆ ತರಲ್ಪಟ್ಟ ಮೃತಪ್ರಾಣಿಗಳಿಗೆ ಅವರ ದುಷ್ಕರ್ಮಗಳಿಗನುಸಾರ ಪಾಪದ ಫಲಕ್ಕೆ ಶಿಕ್ಷೆಯನ್ನು ಕೊಡುತ್ತಾನೆ. ॥ ೬ ॥ ಪರೀಕ್ಷಿತನೇ! ಕೆಲಜನರು ನರಕಗಳ ಸಂಖ್ಯೆ ಇಪ್ಪತ್ತೊಂದು ಎಂದು ತಿಳಿಸುತ್ತಾರೆ. ಈಗ ಅವುಗಳ ಹೆಸರು, ರೂಪ, ಲಕ್ಷಣ ಇವುಗಳನ್ನು ಕ್ರಮವಾಗಿ ವರ್ಣಿಸುವೆವು, ಕೇಳು. ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಸೂಕರಮುಖ, ಅಂಧಕೂಪ, ಕೃಮಿಭೋಜನ, ಸಂದಂಶ, ತಪ್ತಸೂರ್ಮಿ, ವಜ್ರಕಂಟಕ ಶಾಲ್ಮಲೀ, ವೈತರಣೀ, ಪೂಯೋದ, ಪ್ರಾಣರೋಧ, ವಿಶಸನ, ಲಾಲಾಭಕ್ಷ, ಸಾರಮೇಯಾದನ, ಅವೀಚಿ ಮತ್ತು ಅಯಃಪಾನ ಎಂಬಿವೇ ಆ ಇಪ್ಪತ್ತೊಂದು ನರಕಗಳು. ಇವುಗಳಲ್ಲದೆ ಕ್ಷಾರಕರ್ದಮ, ರಕ್ಷೋಗಣಭೋಜನ, ಶೂಲಪ್ರೋತ, ದಂದಶೂಕ, ಅವಟನಿರೋಧನ, ಪರ್ಯಾವರ್ತನ, ಸೂಚಿಮುಖ ಎಂಬ ಏಳು ಸೇರಿ ಒಟ್ಟು ಇಪ್ಪತ್ತೆಂಟು ನರಕಗಳು ಬಗೆ-ಬಗೆಯ ಯಾತನೆಗಳನ್ನು ಜೀವಿಗಳು ಅನುಭವಿಸುವ ಜಾಗಗಳು. ॥ ೭ ॥ ಮತ್ತೊಬ್ಬರ ಹಣ, ಹೆಂಡತಿ, ಅಥವಾ ಸಂತಾನವನ್ನು ಅಪಹರಿಸುವಂತಹ ಪಾಪಿಯನ್ನು ಭಯಂಕರರಾದ ಯಮದೂತರು ಕಾಲಪಾಶದಿಂದ ಕಟ್ಟಿ ಬಲಾತ್ಕಾರವಾಗಿ ತಾಮಿಸ್ರ ನರಕದಲ್ಲಿ ಕೆಡಹುವರು. ಆ ಅಂಧಕಾರಮಯ ನರಕದಲ್ಲಿ ಅವನಿಗೆ ಅನ್ನ-ನೀರು ಕೊಡದಿರುವುದು, ದೊಣ್ಣೆಗಳಿಂದ ಬಡಿಯುವುದು, ಭಯಪಡಿಸುವುದು ಮುಂತಾದ ಅನೇಕ ಉಪಾಯಗಳಿಂದ ಪೀಡಿಸಲಾಗುತ್ತದೆ. ಇದರಿಂದ ಅವನು ಅತ್ಯಂತ ದುಃಖಿತನಾಗಿ ಒಮ್ಮಿಂದೊಮ್ಮೆಗೆ ಮೂರ್ಛೆಹೋಗುವನು. ॥ ೮ ॥ ಹೀಗೆಯೇ ಮತ್ತೊಬ್ಬನಿಗೆ ಮೋಸಮಾಡಿ ಅವನ ಹೆಂಡತಿಯನ್ನು ಭೋಗಿಸುವವನು ಅಂಧತಾಮಿಸ್ರ ನರಕದಲ್ಲಿ ಬೀಳುವನು. ಅಲ್ಲಿಯ ಯಾತನೆಗಳಲ್ಲಿ ಬಿದ್ದು ಅವನು ಬೇರು ಕತ್ತರಿಸಿದ ಮರದಂತೆ ತತ್ತರಿಸುತ್ತಾ ಮತಿಗೆಟ್ಟು ಕುರುಡನಾಗುವನು. ಇದರಿಂದ ಈ ನರಕಕ್ಕೆ ಅಂಧತಾಮಿಸ್ರವೆಂದು ಹೇಳುತ್ತಾರೆ. ॥ ೯ ॥

ಈ ಲೋಕದಲ್ಲಿ "ಈ ಶರೀರವೇ ನಾನಾಗಿದ್ದೇನೆ ಮತ್ತು ಈ ಪತ್ನೀ, ಧನ ಇತ್ಯಾದಿಗಳೆಲ್ಲ ನನ್ನವು" ಎಂಬ ಬುದ್ಧಿಯಿಂದ ಕೂಡಿ ಬೇರೆ ಪ್ರಾಣಿಗಳಿಗೆ ದ್ರೋಹವನ್ನೆಸಗುತ್ತಾ ನಿರಂತರ ತನ್ನ ಕುಟುಂಬವನ್ನು ಸಾಕುವುದರಲ್ಲೇ ತೊಡಗಿರುವವನು ತನ್ನ ಶರೀರವನ್ನು ಬಿಟ್ಟ

ಯಸ್ತ್ವಿಹ ವಾ ಏತದಹಮಿತಿ ಮಮೇದಮಿತಿ ಭೂತದ್ರೋಹೇಣ ಕೇವಲಂ ಸ್ವಕುಟುಂಬಮೇವಾನುದಿನಂ ಪ್ರಪುಷ್ಣಾತಿ ಸ ತದಿಹ ವಿಹಾಯ ಸ್ವಯಮೇವ ತದಶುಭೇನ ರೌರವೇ ನಿಪತತಿ ॥ ೧೦ ॥ ಯೇ ತ್ವಿಹ ಯಥೈವಾಮುನಾ ವಿಹಿಂಸಿತಾ ಜಂತವಃ ಪರತ್ರ ಯಮಯಾತನಾಮುಪಗತಂ ತ ಏವ ರುರವೋ ಭೂತ್ವಾ ತಥಾ ತಮೇವ ವಿಹಿಂಸಂತಿ ತಸ್ಮಾದ್ರೌರವಮಿತ್ಯಾಹೂ ರುರುರಿತಿ ಸರ್ಪಾದತಿಕ್ರೂರ-ಸತ್ತ್ವಸ್ಯಾಪದೇಶಃ ॥ ೧೧ ॥ ಏವಮೇವ ಮಹಾರೌರವೋ ಯತ್ರ ನಿಪತಿತಂ ಪುರುಷಂ ಕ್ರವ್ಯಾದಾ ನಾಮ ರುರವಸ್ತಂ ಕ್ರವ್ಯೇಣ ಘಾತಯಂತಿ ಯಃ ಕೇವಲಂ ದೇಹಂಭರಃ ॥ ೧೨ ॥

ಯಸ್ತ್ವಿಹ ವಾ ಉಗ್ರಃ ಪಶೂನ್ ಪಕ್ಷಿಣೋ ವಾ ಪ್ರಾಣತ ಉಪರಂಧಯತಿ ತಮಪಕರುಣಂ ಪುರುಷಾದೈರಪಿ ವಿಗ-ರ್ಹಿತಮಮುತ್ರ ಯಮಾನುಚರಾಃ ಕುಂಭೀಪಾಕೇ ತಪ್ತ-ತೈಲೇ ಉಪರಂಧಯಂತಿ ॥ ೧೩ ॥ ಯಸ್ತ್ವಿಹ ಪಿತೃವಿಪ್ರ-ಬ್ರಹ್ಮಧ್ರುಕ್ಸ ಕಾಲಸೂತ್ರಸಂಜ್ಞಕೇ ನರಕೇ ಅಯುತಯೋ-ಜನಪರಿಮಂಡಲೇ ತಾಮ್ರಮಯೇ ತಪ್ತಖಲೇ ಉಪ-ರ್ಯಧಸ್ತಾದಗ್ನ್ಯರ್ಕಾಭ್ಯಾಮತಿತಪ್ಯಮಾನೇಽಭಿನಿವೇಶಿತಃ ಕ್ಷುತ್ಪಿಪಾಸಾಭ್ಯಾಂ ಚ ದಹ್ಯಮಾನಾಂತರ್ಬಹಿಃಶರೀರ ಆಸ್ತೇ ಶೇತೇ ಚೇಷ್ಟತೇಽವತಿಷ್ಠತಿ ಪರಿಧಾವತಿ ಚ ಯಾವಂತಿ ಪಶುರೋಮಾಣಿ ತಾವದ್ವರ್ಷಸಹಸ್ರಾಣಿ ॥ ೧೪ ॥

ಯಸ್ತ್ವಿಹ ವೈ ನಿಜವೇದಪಥಾದನಾಪದ್ಯಪಗತಃ ಪಾಖಂಡಂ ಚೋಪಗತಸ್ತಮಸಿಪತ್ರವನಂ ಪ್ರವೇಶ್ಯ ಕಶಯಾ ಪ್ರಹರಂತಿ ತತ್ರ ಹಾಸಾವಿತಸ್ತತೋ ಧಾವಮಾನ ಉಭಯತೋಧಾ-ರೈಸ್ತಾಲವನಾಸಿಪತ್ರೈಶ್ಛಿದ್ಯಮಾನಸರ್ವಾಂಗೋ ಹಾ ಹ-ತೋಽಸ್ಮೀತಿ ಪರಮಯಾ ವೇದನಯಾ ಮೂರ್ಛಿತಃ ಪದೇ ಪದೇ ನಿಪತತಿ ಸ್ವಧರ್ಮಹಾ ಪಾಖಂಡಾನುಗತಂ ಫಲಂ ಭುಂಕ್ತೇ ॥ ೧೫ ॥

ಬಳಿಕ ತನ್ನ ಪಾಪಗಳಿಂದಾಗಿ ರೌರವವೆಂಬ ನರಕದಲ್ಲಿ ತಾನೇ ಬೀಳುವನು. ॥ ೧೦ ॥ ಅವನು ಈ ಲೋಕದಲ್ಲಿದ್ದಾಗ ಯಾವ ಜೀವಿಗಳಿಗೆ ಯಾವ ರೀತಿಯ ಕಷ್ಟವನ್ನು ಕೊಟ್ಟಿರುವನೋ, ಪರಲೋಕದಲ್ಲಿ ಯಮಯಾತನೆಯ ಸಮಯಬಂದಾಗ ಅದೇ ಜೀವರು 'ರುರು' ಎಂಬ ಕ್ರಿಮಿಯಾಗಿ ಅವನಿಗೆ ಅದೇ ರೀತಿಯಲ್ಲಿ ಕಷ್ಟಕೊಡುವರು. ಅದಕ್ಕಾಗಿ ಈ ನರಕದ ಹೆಸರು 'ರೌರವ' ಎಂದಿದೆ. 'ರುರು' ಎಂಬುದು ಸರ್ಪಕ್ಕಿಂತಲೂ ಹೆಚ್ಚು ಕ್ರೂರವಾದ ಒಂದು ಜೀವಿಯ ಹೆಸರು. ॥ ೧೧ ॥ ಹೀಗೆಯೇ ಮಹಾರೌರವ ನರಕವಿದೆ. ಯಾರನ್ನೂ ಗಮನಿಸದೆ ಕೇವಲ ತನ್ನ ಶರೀರದ ಪೋಷಣೆಯಲ್ಲೇ ತೊಡಗಿದ ಪಾಪಿಯು ಈ ನರಕಕ್ಕೆ ಹೋಗುವನು. ಅಲ್ಲಿ ಹಸಿಮಾಂಸವನ್ನು ತಿನ್ನುವ ರುರುಗಳು ಇವನನ್ನು ಮಾಂಸಕ್ಕಾಗಿ ಕಡಿಯುತ್ತಾ ಇರುತ್ತಾರೆ. ॥ ೧೨ ॥ ಯಾವ ಕ್ರೂರಿಯು ಈ ಲೋಕದಲ್ಲಿ ತನ್ನ ಹೊಟ್ಟೆಯನ್ನು ಹೊರೆದುಕೊಳ್ಳಲು ಬದುಕಿರುವ ಪಶು-ಪಕ್ಷಿಗಳನ್ನು ಬೇಯಿಸುತ್ತಾನೋ ಆ ಹೃದಯಶೂನ್ಯ, ರಾಕ್ಷಸರಿಂದಲೂ ನೀಚನೆನಿಸಿದ ನರಾಧಮನನ್ನು ಯಮದೂತರು ಕುಂಭೀಪಾಕ ನರಕಕ್ಕೆ ಕೊಂಡುಹೋಗಿ ಅವನನ್ನು ಕುದಿಯುತ್ತಿರುವ ಎಣ್ಣೆಯ ಕಡಾಯಿಯಲ್ಲಿ ಬೇಯಿಸುವರು. ॥ ೧೩ ॥ ಈ ಲೋಕದಲ್ಲಿ ತಂದೆ-ತಾಯಿ, ಬ್ರಾಹ್ಮಣರು ಮತ್ತು ವೇದ ಇವುಗಳನ್ನು ವಿರೋಧಿಸುವವನನ್ನು ಯಮದೂತರು ಕಾಲಸೂತ್ರವೆಂಬ ನರಕಕ್ಕೆ ಕೊಂಡು ಹೋಗುತ್ತಾರೆ. ಇದರ ಸುತ್ತಳತೆ ಹತ್ತುಸಾವಿರ ಯೋಜನವಿದೆ. ಇದರ ಭೂಮಿಯು ತಾಮ್ರದ್ದಾಗಿರುತ್ತದೆ. ಇದರಲ್ಲಿ ಕಾದ ಬಯಲು ಇದ್ದು ಮೇಲಿನಿಂದ ಸೂರ್ಯನ ಮತ್ತು ಕೆಳಗಿನಿಂದ ಅಗ್ನಿಯ ಉರಿಯಿಂದ ಸುಡುತ್ತಾ ಇರುತ್ತದೆ. ಅಲ್ಲಿಗೆ ಕೊಂಡುಹೋದ ಪಾಪೀ ಜೀವನು ಹಸಿವು-ಬಾಯಾರಿಕೆಯಿಂದ ದುಃಖಿತನಾಗುತ್ತಾನೆ ಮತ್ತು ಅವನ ಶರೀರವು ಒಳಗಿಂದ ಹೊರಗಿನಿಂದ ಸುಡಲು ತೊಡಗುತ್ತದೆ. ಇದರಿಂದ ಶಾಂತಿಯನ್ನು ಕಳಕೊಂಡ ಜೀವಿಯು ಕೆಲವೊಮ್ಮೆ ಕುಳಿತುಕೊಳ್ಳುವನು, ಕೆಲವೊಮ್ಮೆ ಮಲಗುವನು, ಕೆಲವೊಮ್ಮೆ ಒದ್ದಾಡುವನು, ಕೆಲವೊಮ್ಮೆ ನಿಲ್ಲುವನು, ಕೆಲವೊಮ್ಮೆ ಅತ್ತ-ಇತ್ತ ಓಡುವನು. ಹೀಗೆ ಆ ನರಪಶುವಿನ ಶರೀರದಲ್ಲಿ ರೋಮಗಳಿರುವಷ್ಟು ಸಾವಿರ ವರ್ಷಗಳವರೆಗೆ ಅವನಿಗೆ ಇಂತಹ ದುರ್ಗತಿ ಆಗುತ್ತಾ ಇರುತ್ತದೆ. ॥ ೧೪ ॥

ಯಾವುದೇ ಆಪತ್ತು ಬಾರದಿದ್ದರೂ ತನ್ನ ವೈದಿಕ ಮಾರ್ಗವನ್ನು ಬಿಟ್ಟು ಬೇರೆ ಪಾಷಂಡಮತವನ್ನು ಅನುಸರಿಸುವವನನ್ನು ಯಮದೂತರು ಅಸಿಪತ್ರವನವೆಂಬ ನರಕಕ್ಕೆ ಕೊಂಡುಹೋಗಿ ಚಾವಟಿಗೆಯಿಂದ ಹೊಡೆಯುತ್ತಾರೆ. ಏಟುಗಳಿಂದ ತಪ್ಪಿಸಿಕೊಳ್ಳಲು ಅವನು ಅಲ್ಲಲ್ಲಿ ಓಡತೊಡಗಿದಾಗ ಅವನ ಎಲ್ಲ ಅಂಗಗಳೂ ಎರಡೂ ಕಡೆಗಳಲ್ಲೂ ಅಲಗುಗಳಿಂದ ಕೂಡಿದ ಕತ್ತಿಯಂತೆ ತೀಕ್ಷ್ಣವಾದ ತಾಳೆಯ ಮರಗಳ ಎಲೆಗಳಿಂದ ಕತ್ತರಿಸಲ್ಪಡುವುವು. ಆ ವೇದನೆಯಿಂದ ಅಯ್ಯೋ ಸತ್ತೆನು ! ಎಂದು ಕಿರಿಚಿಕೊಳ್ಳುತ್ತಾ ಹೆಜ್ಜೆ-ಹೆಜ್ಜೆಗೂ ಮೂರ್ಛಿತನಾಗಿ ಬೀಳತೊಡಗುವನು. ತನ್ನ ಧರ್ಮಕ್ಕೆ ದ್ರೋಹ ಮಾಡಿ ಪಾಷಂಡಧರ್ಮವನ್ನು ಅನುಸರಿಸುವುದರಿಂದ ಅವನಿಗೆ ಇಂತಹ ಕುಕರ್ಮದ ಫಲವನ್ನು ಅನುಭವಿಸಬೇಕಾಗುವುದು. ॥ ೧೫ ॥

ಯಸ್ತ್ವಿಹ ವೈ ರಾಜಾ ರಾಜಪುರುಷೋ ವಾ ಅದಂಡ್ಯೇ ದಂಡಂ ಪ್ರಣಯತಿ ಬ್ರಾಹ್ಮಣೇ ವಾ ಶರೀರದಂಡಂ ಸ ಪಾಪೀಯಾನ್ನರಕೇಽಮುತ್ರ ಸೂಕರಮುಖೇ ನಿಪತತಿ ತತ್ರಾತಿಬಲೈರ್ವಿನಿಷ್ಪಿಷ್ಟಮಾಣಾವಯವೋ ಯಥೈವೇಹೇಕ್ಷುಖಂಡ ಆರ್ತಸ್ವರೇಣ ಸ್ವನಯನ್ ಕ್ವಚಿನ್ಮೂರ್ಚ್ಛಿತಃ ಕಶ್ಮಲಮುಪಗತೋ ಯಥೈವೇಹಾದೃಷ್ಟದೋಷಾ ಉಪರುದ್ಧಾಃ ॥ ೧೬ ॥

ಈ ಲೋಕದಲ್ಲಿ ಯಾರಾದರೂ ರಾಜನಾಗಲೀ, ಅವನ ಅಧಿಕಾರಿಯಾಗಲೀ ನಿರಪರಾಧಿಯಾದ ಮನುಷ್ಯನಿಗೆ ದಂಡನೆಯನ್ನು ವಿಧಿಸಿದರೆ ಅಥವಾ ಬ್ರಾಹ್ಮಣನಿಗೆ ಶರೀರದಂಡನೆಯನ್ನು ವಿಧಿಸಿದರೆ, ಆ ಮಹಾಪಾಪಿಯು ಸತ್ತು ಸೂಕರಮುಖವೆಂಬ ನರಕದಲ್ಲಿ ಬೀಳುವನು. ಅಲ್ಲಿ ಮಹಾಬಲಶಾಲಿಗಳಾದ ಯಮದೂತರು ಆತನನ್ನು ತುಳಿದು ಹಾಕುವರು. ಆಗ ಅಂಗಾಂಗಗಳು ಜಜ್ಜಿಹೋಗಿ ಗಾಣದಲ್ಲಿ ಸಿಕ್ಕಿದ ಕಬ್ಬಿನಂತೆ ಅರೆಯಲ್ಪಟ್ಟು ನೋವಿನಿಂದ ನರಳುತ್ತಾ ಆತನು ಹಿಂದೆ ಪೀಡಿಸಿದ್ದ ನಿರಪರಾಧಿಗಳು ಹೇಗೆ ಕೂಗಿಕೊಳ್ಳುತ್ತಿದ್ದರೋ ಹಾಗೆಯೇ ತಾನೂ ಅರಚುತ್ತಾ ಕೆಲವೊಮ್ಮೆ ಮೂರ್ಛಿತನಾಗುವನು. ॥ ೧೬ ॥

ಯಸ್ತ್ವಿಹ ವೈ ಭೂತಾನಾಮೀಶ್ವರೋಪಕಲ್ಪಿತವೃತ್ತೀನಾಮವಿವಿಕ್ತಪರವ್ಯಥಾನಾಂ ಸ್ವಯಂ ಪುರುಷೋಪಕಲ್ಪಿತವೃತ್ತಿರ್ವಿವಿಕ್ತಪರವ್ಯಥೋ ವ್ಯಥಾಮಾಚರತಿ ಸ ಪರತ್ರಾಂಧಕೂಪೇ ತದಭಿದ್ರೋಹೇಣ ನಿಪತತಿ ತತ್ರ ಹಾಸೌ ತೈರ್ಜಂತುಭಿಃ ಪಶುಮೃಗಪಕ್ಷಿಸರೀಸೃಪೈರ್ಮಶಕಯೂಕಾಮತ್ಕುಣಮಕ್ಷಿಕಾದಿಭಿರ್ಯೇ ಕೇ ಚಾಭಿದ್ರುಗ್ಧಾಸ್ತೈಃ ಸರ್ವತೋಽಭಿದ್ರುಹ್ಯಮಾಣಸ್ತಮಸಿ ವಿಹತನಿದ್ರಾನಿರ್ವೃತಿರಲಬ್ಧಾವಸ್ಥಾನಃ ಪರಿಕ್ರಾಮತಿ ಯಥಾ ಕುಶರೀರೇ ಜೀವಃ ॥ ೧೭ ॥

ಶ್ರೀಭಗವಂತನು ಮನುಷ್ಯನಿಗೆ 'ಇದು ವಿಹಿತವಾದುದು, ಇದು ನಿಷಿದ್ಧವಾದುದು' ಎಂಬ ವಿವೇಕದಿಂದ ಜೀವನದ ವೃತ್ತಿಯನ್ನು ಆರಿಸಿಕೊಂಡು ಅವಲಂಬಿಸಲು ನಿಯಮಿಸಿದ್ದಾನೆ. ಇತರರಿಗೆ ಉಂಟಾಗುವ ಕಷ್ಟಗಳ ಅರಿವೂ ಅವನಿಗೆ ಆಗುತ್ತದೆ. ಆದರೆ ತಿಗಣೆಯೇ ಮುಂತಾದ ಜೀವಿಗಳಿಗೆ ಈ ಅರಿವು ಇರುವುದಿಲ್ಲ, ತಮ್ಮಿಂದ ಇತರ ಜೀವಿಗಳಿಗೆ ಸಂಕಟವುಂಟಾಗುತ್ತದೆ ಎಂಬುದನ್ನರಿಯದೆ ತಮ್ಮ ಜೀವನಕ್ಕಾಗಿ ಅವು ಇತರರ ರಕ್ತವನ್ನು ಹೀರುತ್ತವೆ. ಆದುದರಿಂದ ತಿಳಿವಳಿಕೆಯುಳ್ಳ ಮನುಷ್ಯನು ಅವುಗಳಿಗೆ ಹಿಂಸೆ ಮಾಡಬಾರದು. ಹಾಗೆ ಹಿಂಸೆಮಾಡುವವನು ಅಂಧಕೂಪವೆಂಬ ನರಕದಲ್ಲಿ ಬೀಳುವನು. ಅಲ್ಲಿ ಅವನಿಂದ ಹಿಂದೆ ದ್ರೋಹಕ್ಕೆ ಬಲಿಯಾಗಿದ್ದ ಆ ಪಶು-ಪಕ್ಷಿ-ಮೃಗಗಳೂ, ಸರ್ಪವೇ ಮುಂತಾದ ಜಂತುಗಳೂ, ಸೊಳ್ಳೆ, ಹೇನು, ತಿಗಣೆ, ನೊಣಗಳೇ ಮುಂತಾದ ಕ್ರಿಮಿ-ಕೀಟಗಳು ಆತನನ್ನು ಎಲ್ಲ ಕಡೆಯಿಂದ ಕಚ್ಚಿ ನೋಯಿಸುವುವು. ಆದರಿಂದ ಅವನಿಗೆ ನಿದ್ರಾಭಂಗವಾಗಿ, ನೆಲೆಗಾಣದೆ ನೆಮ್ಮದಿಯನ್ನು ಕಳೆದುಕೊಂಡು ಅವನು ನರಕದ ಕಗ್ಗತ್ತಲೆಯಲ್ಲಿ ಕಡುರೋಗವುಳ್ಳ ದೇಹದಲ್ಲಿ ಹೇಗೋ ಹಾಗೇ ವಿಲ-ವಿಲನೆ ಒದ್ದಾಡುತ್ತಾನೆ. ॥ ೧೭ ॥

ಯಸ್ತ್ವಿಹ ವಾ ಅಸಂವಿಭಜ್ಯಾಶ್ನಾತಿ ಯತ್ಕಿಂಚನೋಪನತಮನಿರ್ಮಿತಪಂಚಯಜ್ಞೋ ವಾಯಸಸಂಸ್ತುತಃ ಸ ಪರತ್ರ ಕೃಮಿಭೋಜನೇ ನರಕಾಧಮೇ ನಿಪತತಿ ತತ್ರ ಶತಸಹಸ್ರಯೋಜನೇ ಕೃಮಿಕುಂಡೇ ಕೃಮಿಭೂತಃ ಸ್ವಯಂ ಕೃಮಿಭಿರೇವ ಭಕ್ಷ್ಯಮಾಣಃ ಕೃಮಿಭೋಜನೋ ಯಾವತ್ತದಪ್ರತ್ತಾಪ್ರಹುತಾದೋಽನಿರ್ವೇಶಮಾತ್ಮಾನಂ ಯಾತಯತೇ ॥ ೧೮ ॥

ಈ ಲೋಕದಲ್ಲಿ ಪಂಚಮಹಾಯಜ್ಞಗಳನ್ನು ಆಚರಿಸದೆ ತನಗೆ ದೊರೆತ ಪದಾರ್ಥಗಳನ್ನು ಇತರರಿಗೆ ಕೊಡದೆ ತಿನ್ನುವ ಮನುಷ್ಯನು ಕಾಗೆಗೆ ಸಮಾನನಾದವನು. ಅವನು ಪರಲೋಕದಲ್ಲಿ ಕ್ರಿಮಿಭೋಜನ ಎಂಬ ಕೀಳಾದ ನರಕದಲ್ಲಿ ಬೀಳುವನು. ಅಲ್ಲಿ ಒಂದು ಲಕ್ಷ ಯೋಜನ ಉದ್ದ-ಅಗಲದ ಒಂದು ಕ್ರಿಮಿಗಳ ಕುಂಡವಿದೆ. ಅದರಲ್ಲೇ ಅವನಿಗೂ ಕ್ರಿಮಿಯಾಗಿ ಇರಬೇಕಾಗುತ್ತದೆ. ಯಾರಿಗೂ ಕೊಡದೆ, ಹವನಮಾಡದೆ ತಿಂದ ದೋಷಗಳು, ಪಾಪಗಳ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದ ಆ ಪಾಪಿಯ ದೋಷಗಳು ಶುದ್ಧವಾಗುವವರೆಗೆ ಅವನು ಅಲ್ಲೇ ಬಿದ್ದುಕೊಂಡು ಕಷ್ಟ ಅನುಭವಿಸಬೇಕಾಗುತ್ತದೆ. ಅಲ್ಲಿ ಕ್ರಿಮಿಗಳು ಅವನನ್ನು ಕಿತ್ತು ತಿನ್ನುತ್ತಿರುತ್ತವೆ. ॥ ೧೮ ॥

ಯಸ್ತ್ವಿಹ ವೈ ಸ್ತೇಯೇನ ಬಲಾದ್ವಾ ಹಿರಣ್ಯರತ್ನಾದೀನಿ ಬ್ರಾಹ್ಮಣಸ್ಯ ವಾಪಹರತ್ಯನ್ಯಸ್ಯ ವಾನಾಪದಿ ಪುರುಷಸ್ತಮಮುತ್ರ ರಾಜನ್ಯಮಪುರುಷಾ ಅಯಸ್ಮಯೈರಗ್ನಿಪಿಂಡೈಃ ಸಂದಂಶೈಸ್ತ್ವಚಿ ನಿಷ್ಕುಷಂತಿ ॥ ೧೯ ॥

ಈ ಲೋಕದಲ್ಲಿ ಆಪತ್ಕಾಲವಿದ್ದರೂ ಬ್ರಾಹ್ಮಣನಿಗೆ ಸೇರಿದ ಅಥವಾ ಇತರರಿಗೆ ಸೇರಿದ ಚಿನ್ನ-ರತ್ನಾದಿಗಳನ್ನು ಕಳ್ಳತನದಿಂದಾಗಲೀ, ಬಲಾತ್ಕಾರದಿಂದಾಗಲೀ ಕಿತ್ತುಕೊಳ್ಳುವವನನ್ನು ಸತ್ತಮೇಲೆ ಯಮದೂತರು ಸಂದಂಶವೆಂಬ ನರಕಕ್ಕೆ ಕೊಂಡುಹೋಗಿ ಕಾದಕಬ್ಬಿಣದ ಗುಂಡುಗಳಿಂದ ಸುಡುತ್ತಾ ಸಂದಂಶವೆಂಬ ಮುಳ್ಳುಗಳಿಂದ ಅವನ

ಯಸ್ತ್ವಿಹ ವಾ ಅಗಮ್ಯಾಂ ಸ್ತ್ರಿಯಮಗಮ್ಯಂ ವಾ ಪುರುಷಂ

ಯೋಷಿದಭಿಗಚ್ಛತಿ ತಾವಮುತ್ರ ಕಶಯಾ ತಾಡಯಂತ-ಸ್ತಿಗ್ಮಯಾ ಸೂರ್ಮ್ಯಾ ಲೋಹಮಯ್ಯಾ ಪುರುಷಮಾ-ಲಿಂಗಯಂತಿ ಸ್ತ್ರಿಯಂ ಚ ಪುರುಷರೂಪಯಾ ಸೂರ್ಮ್ಯಾ ॥ ೨೦ ॥ ಯಸ್ತ್ವಿಹ ವೈ ಸರ್ವಾಭಿಗ- ಮಸ್ತಮಮುತ್ರ ನಿರಯೇ ವರ್ತಮಾನಂ ವಜ್ರಕಂಟಕಶಾಲ್ಮಲೀಮಾ ರೋಪ್ಯ ನಿಷ್ಕರ್ಷಂತಿ ॥ ೨೧ ॥

ಯೇ ತ್ವಿಹ ವೈ ರಾಜನ್ಯಾ ರಾಜಪುರುಷಾ ವಾ ಅಪಾಖಂಡಾ ಧರ್ಮಸೇತೂನ್ ಭಿಂದಂತಿ ತೇ ಸಂಪರೇತ್ಯ ವೈತರಣ್ಯಾಂ ನಿಪತಂತಿ ಭಿನ್ನಮರ್ಯಾದಾಸ್ತಸ್ಯಾಂ ನಿರಯ-ಪರಿಖಾಭೂತಾಯಾಂ ನದ್ಯಾಂ ಯಾದೋಗಣೈರಿತ-ಸ್ತತೋ ಭಕ್ಷ್ಯಮಾಣಾ ಆತ್ಮನಾ ನ ವಿಯುಜ್ಯಮಾನಾಶ್ಚಾ-ಸುಭಿರುಹ್ಯಮಾನಾಃ ಸ್ವಾಘೇನ ಕರ್ಮಪಾಕಮನು-ಸ್ಮರಂತೋ ವಿಣ್ಮೂತ್ರಪೂಯಶೋಣಿತಕೇಶನಖಾಸ್ಥಿಮೇ-ದೋಮಾಂಸವಸಾವಾಹಿನ್ಯಾಮುಪತಪ್ಯಂತೇ ॥ ೨೨ ॥

ಯೇ ತ್ವಿಹ ವೈ ವೃಷಲೀಪತಯೋ ನಷ್ಟಶೌಚಾಚಾರ-ನಿಯಮಾಸ್ತ್ಯಕ್ತಲಜ್ಜಾಃ ಪಶುಚರ್ಯಾಂ ಚರಂತಿ ತೇ ಚಾಪಿ ಪ್ರೇತ್ಯ ಪೂಯವಿಣ್ಮೂತ್ರಶ್ಲೇಷ್ಮಮಲಾಪೂರ್ಣಾರ್ಣವೇ ನಿಪತಂತಿ ತದೇವಾತಿಬೀಭತ್ಸಿತಮಶ್ನಂತಿ ॥ ೨೩ ॥ ಯೇ ತ್ವಿಹ ವೈ ಶ್ವಗರ್ದಭಪತಯೋ ಬ್ರಾಹ್ಮಣಾದಯೋ ಮೃಗಯಾ-ವಿಹಾರಾ ಅತೀರ್ಥೇ ಚ ಮೃಗಾನ್ನಿಘ್ನಂತಿ ತಾನಪಿ ಸಂಪರೇ-ತಾಂಲ್ಲಕ್ಷ್ಯಭೂತಾನ್ಯಮಪುರುಷಾ ಇಷುಭಿರ್ವಿಧ್ಯಂತಿ ॥ ೨೪ ॥

ಯೇ ತ್ವಿಹ ವೈ ದಾಂಭಿಕಾ ದಂಭಯಜ್ಞೇಷು ಪಶೂನ್ವಿಶಸಂತಿ ತಾನಮುಷ್ಮಿಲ್ಲೋಕೇ ವೈಶಸೇ ನರಕೇ ಪತಿತಾನ್ನಿರಯಪತಯೋ ಯಾತಯಿತ್ವಾವಿಶಸಂತಿ ॥ ೨೫ ॥ ಯಸ್ತ್ವಿಹ ವೈ ಸವರ್ಣಾಂ ಭಾರ್ಯಾಂ ದ್ವಿಜೋ ರೇತಃ ಪಾಯಯತಿ ಕಾಮಮೋಹಿತಸ್ತಂ ಪಾಪಕೃತಮಮುತ್ರ

ಚರ್ಮವನ್ನು ಚುಚ್ಚುವರು. ॥ ೧೯ ॥ ಈ ಲೋಕದಲ್ಲಿ ಸೇರಬಾರದ ಹೆಂಗಸಿನೊಡನೆ ಪುರುಷನು ರಮಿಸಿದರೆ ಅಥವಾ ಸೇರಬಾರದ ಗಂಡಸಿನೊಡನೆ ಹೆಂಗಸು ರಮಿಸಿದರೆ ಯಮದೂತರು ಆ ವ್ಯಭಿಚಾರಿಗಳನ್ನು ತಪ್ತಸೂರ್ಮಿ ಎಂಬ ನರಕಕ್ಕೆ ಕೊಂಡುಹೋಗಿ ಅಲ್ಲಿ ಅವರನ್ನು ಚಾವಟಿಯಿಂದ ಹೊಡೆಯುತ್ತಾರೆ. ಪುರುಷನಿಗೆ ಕಾದಕಬ್ಬಿಣದ ಸ್ತ್ರೀಬೊಂಬೆಯನ್ನು, ಸ್ತ್ರೀಗೆ ಕಾದ ಕಬ್ಬಿಣದ ಪುರುಷ ಬೊಂಬೆಯನ್ನು ಅಪ್ಪಿಕೊಳ್ಳಬೇಕಾಗುತ್ತದೆ. ॥ ೨೦ ॥ ಈ ಲೋಕ ದಲ್ಲಿ ಪಶುಗಳೇ ಮುಂತಾದ ಎಲ್ಲರೊಂದಿಗೆ ವ್ಯಭಿಚಾರಮಾಡು ವವನನ್ನು ಸತ್ತಬಳಿಕ ಯಮದೂತರು 'ವಜ್ರಕಂಟಕಶಾಲ್ಮಲೀ' ಎಂಬ ನರಕದಲ್ಲಿ ಕೆಡಹುವರು. ಅಲ್ಲಿ ಆತನನ್ನು ವಜ್ರದಂತೆ ಕಠೋರವಾದ ಮುಳ್ಳುಗಳುಳ್ಳ ಬುರುಗದ ಮೇಲಕ್ಕೆ ಏರಿಸಿ ಅಲ್ಲಿಂದ ಸೆಳೆದಾಡು ವರು. ॥ ೨೧ ॥

ಈ ಲೋಕದಲ್ಲಿ ಶ್ರೇಷ್ಠಕುಲದಲ್ಲಿ ಹುಟ್ಟಿದ ರಾಜನಾಗಲೀ, ರಾಜನ ಅಧಿಕಾರಿಯಾಗಲೀ ನಾಸ್ತಿಕನಾಗಿ ಧರ್ಮಮರ್ಯಾದೆ ಯನ್ನು ಮೀರಿ ನಡೆಯುವವರು ಸತ್ತಮೇಲೆ ವೈತರಣೀ ನದಿಯಲ್ಲಿ ಎಸೆಯಲ್ಪಡುತ್ತಾರೆ. ಮಲ, ಮೂತ್ರ, ಕೀವು, ರಕ್ತ, ಕೂದಲು, ಉಗುರು, ಮೂಳೆ, ಕೊಬ್ಬು, ಮಾಂಸ, ಮಜ್ಜೆಗಳೇ ಮುಂತಾದ ಕೊಳಕು ಪದಾರ್ಥಗಳಿಂದ ತುಂಬಿ ನರಕಗಳ ಕೂಪದಂತೆ ಇರುವ ಆ ನದಿಯಲ್ಲಿ ಮುಳುಗಿದ ಅವನನ್ನು ಅಲ್ಲಿರುವ ಜಲಚರಪ್ರಾಣಿ ಗಳು ಕಚ್ಚಿ ತಿನ್ನುತ್ತವೆ. ಅದರಿಂದ ಎಷ್ಟೇ ಹಿಂಸೆಯುಂಟಾಗುತ್ತಿದ್ದರೂ ಅವರಿಗೆ ದೇಹವು ಬಿಟ್ಟುಹೋಗುವುದಿಲ್ಲ, ಪಾಪದ ಕಾರಣದಿಂದ ಪ್ರಾಣಗಳು ಅದನ್ನು ಧರಿಸಿಕೊಂಡಿರುತ್ತವೆ. ಅವನು ಆ ದುರ್ಗತಿ ಯನ್ನು ತನ್ನ ಪಾಪದ ಫಲವೆಂದು ತಿಳಿದುಕೊಂಡು ಮನಸ್ಸಿನಲ್ಲೇ ಕೊರಗುತ್ತಿರುವನು. ॥ ೨೨ ॥ ಯಾರು ಶೌಚ-ಆಚಾರಗಳ ನಿಯ ಮಗಳನ್ನು ತೊರೆದು, ನಾಚಿಕೆಯನ್ನು ಬಿಟ್ಟು ಈ ಲೋಕದಲ್ಲಿ ಅಧಮವರ್ಣದ ಸ್ತ್ರೀಯನ್ನು ಮದುವೆಯಾಗಿ ಪಶುಗಳಂತೆ ಆಚರಿ ಸುತ್ತಾರೋ ಅವರೂ ಕೂಡ ಸತ್ತನಂತರ ಕೀವು, ಮಲ-ಮೂತ್ರ ಮತ್ತು ಶ್ಲೇಷ್ಮಗಳಿಂದ ತುಂಬಿದ ಪುಯೋದವೆಂಬ ಸಮುದ್ರದಲ್ಲಿ ಬಿದ್ದು ಆ ಅತ್ಯಂತ ಹೇಯವಾದ ಪದಾರ್ಥಗಳನ್ನೇ ತಿನ್ನುತ್ತಾರೆ. ॥ ೨೩ ॥ ಈ ಲೋಕದಲ್ಲಿ ಬ್ರಾಹ್ಮಣಾದಿ ಉಚ್ಚವರ್ಣದ ಜನರು ನಾಯಿ ಅಥವಾ ಕತ್ತೆಯನ್ನು ಸಾಕುವವರನ್ನು ಮತ್ತು ಬೇಟೆಯಾಡು ವುದರಲ್ಲೇ ತೊಡಗಿರುವವರನ್ನು, ಶಾಸ್ತ್ರಕ್ಕೆ ವಿರುದ್ಧವಾಗಿ ಪಶು ಗಳನ್ನು ವಧಿಸುವವರನ್ನು ಸತ್ತಬಳಿಕ 'ಪ್ರಾಣರೋಧ' ಎಂಬ ನರಕದಲ್ಲಿ ಹಾಕಿಬಿಡುತ್ತಾರೆ. ಅಲ್ಲಿ ಯಮದೂತರು ಅವನನ್ನು ಗುರಿಯಾಗಿಸಿ ಬಾಣಗಳಿಂದ ಹೊಡೆಯುವರು. ॥ ೨೪ ॥

ಈ ಲೋಕದಲ್ಲಿ ದಾಂಭಿಕರಾಗಿ ಪಾಷಂಡಯಜ್ಞಗಳಲ್ಲಿ ಪಶುಗಳನ್ನು ವಧಿಸುವವರನ್ನು ಪರಲೋಕದಲ್ಲಿ ವೈಶಸ (ವಿಶಸನ) ಎಂಬ ನರಕಕ್ಕೆ ಹಾಕಿ, ಅಲ್ಲಿಯ ಅಧಿಕಾರಿಗಳು ಬಗೆ-ಬಗೆಯಾಗಿ ಹಿಂಸೆಪಡಿಸುವರು. ॥ ೨೫ ॥ ಕಾಮಾತುರನಾದ ದ್ವಿಜನು ತನ್ನ ಸವರ್ಣಳಾದ ಹೆಂಡತಿಗೆ ತನ್ನ ರೇತಸ್ಸನ್ನು ಕುಡಿಸುವನೋ ಆ ಪಾಪಿ ಯನ್ನು ಮೃತನಾದ ಬಳಿಕ ಯಮದೂತರು ರೇತಸ್ಸಿನಿಂದ ತುಂಬಿದ ಲಾಲಾಭಕ್ಷವೆಂಬ ನದಿಯಲ್ಲಿ ಕೆಡಹಿ ಅವನಿಗೆ ರೇತಸ್ಸನ್ನೇ ಕುಡಿಸು

ರೇತಃ ಕುಲ್ಯಾಯಾಂ ಪಾತಯಿತ್ವಾ ರೇತಃ ಸಂಪಾಯಯಂತಿ ॥ ೨೬ ॥ ಯೇ ತ್ವಿಹ ವೈ ದಸ್ಯವೋಽಗ್ನಿದಾ ಗರದಾ ಗ್ರಾಮಾನ್ಸಾರ್ಥಾನ್ವಾ ವಿಲುಂಪಂತಿ ರಾಜಾನೋ ರಾಜ ಭಟಾ ವಾ ತಾಂಶ್ಚಾಪಿ ಹಿ ಪರೇತ್ಯ ಯಮದೂತಾ ವಜ್ರದಂಷ್ಟ್ರಾಃ ಶ್ವಾನಃ ಸಪ್ತಶತಾನಿ ವಿಂಶತಿಶ್ಚ ಸರಭಸಂ ಖಾದಂತಿ ॥ ೨೭ ॥ ಯಸ್ತ್ವಿಹ ವಾ ಅನೃತಂ ವದತಿ ಸಾಕ್ಷ್ಯೇ ದ್ರವ್ಯವಿನಿಮಯೇ ದಾನೇ ವಾ ಕಥಂಚಿತ್ಸ ವೈ ಪ್ರೇತ್ಯ ನರಕೇಽವೀಚಿಮತ್ಯಧಃಶಿರಾ ನಿರವಕಾಶೇ ಯೋಜನಶತೋಚ್ಛ್ರಾಯಾದ್ಗಿರಿಮೂರ್ಧ್ನಃ ಸಂಪಾತ್ಯತೇ ಯತ್ರ ಜಲಮಿವ ಸ್ಥಲಮಶ್ಮಪೃಷ್ಠಮವಭಾಸತೇ ತದವೀಚಿಮತ್ತಿಲಶೋ ವಿಶೀರ್ಯಮಾಣಶರೀರೋ ನ ಮ್ರಿಯಮಾಣಃ ಪುನರಾರೋಪಿತೋ ನಿಪತತಿ ॥ ೨೮ ॥

ಯಸ್ತ್ವಿಹ ವೈ ವಿಪ್ರೋ ರಾಜನ್ಯೋ ವೈಶ್ಯೋ ವಾ ಸೋಮಪೀಥಸ್ತತ್ಕಲತ್ರಂ ವಾ ಸುರಾಂ ವ್ರತಸ್ಥೋಽಪಿ ವಾ ಪಿಬತಿ ಪ್ರಮಾದತಸ್ತೇಷಾಂ ನಿರಯಂ ನೀತಾನಾಮುರಸಿ ಪದಾಽಽಕ್ರಮ್ಯಾಸ್ಯೇ ವಹ್ನಿನಾ ದ್ರವಮಾಣಂ ಕಾರ್ಷ್ಣಾಯಸಂ ನಿಷಿಂಚಂತಿ ॥ ೨೯ ॥

ಅಥ ಚ ಯಸ್ತ್ವಿಹ ವಾ ಆತ್ಮಸಂಭಾವನೇನ ಸ್ವಯಮಧಮೋ ಜನ್ಮತಪೋವಿದ್ಯಾಚಾರವರ್ಣಾಶ್ರಮವತೋ ವರೀಯಸೋ ನ ಬಹು ಮನ್ಯೇತ ಸ ಮೃತಕ ಏವ ಮೃತ್ವಾ ಕ್ಷಾರಕರ್ದಮೇ ನಿರಯೇಽವಾಕ್ ಶಿರಾ ನಿಪಾತಿತೋ ದುರಂತಾ ಯಾತನಾ ಹ್ಯಶ್ನುತೇ ॥ ೩೦ ॥

ಯೇ ತ್ವಿಹ ವೈ ಪುರುಷಾಃ ಪುರುಷಮೇಧೇನ ಯಜಂತೇ ಯಾಶ್ಚ ಸ್ತ್ರಿಯೋ ನೃಪಶೂನ್ ಖಾದಂತಿ ತಾಂಶ್ಚ ತೇ ಪಶವ ಇವ ನಿಹತಾ ಯಮಸದನೇ ಯಾತಯಂತೋ ರಕ್ಷೋಗಣಾಃ ಸೌನಿಕಾ ಇವ ಸ್ವಧಿತಿನಾವದಾಯಾಸೃಕ್ಪಿಬಂತಿ ನೃತ್ಯಂತಿ ಚ ಗಾಯಂತಿ ಚ ಹೃಷ್ಯಮಾಣಾ ಯಥೇಹ ಪುರುಷಾದಾಃ ॥ ೩೧ ॥ ಯೇ ತ್ವಿಹ ವಾ ಅನಾಗಸೋಽರಣ್ಯೇ ಗ್ರಾಮೇ ವಾ ವೈಶ್ರಂಭಕೈರುಪಸೃತಾನುಪವಿಶ್ರಂಭಯ್ಯ

ವರು. ॥ ೨೬ ॥ ಯಾವನಾದರೂ ರಾಜನಾಗಲೀ, ಅವನ ಅಧಿಕಾರಿಯಾಗಲೀ, ಅಥವಾ ಕಳ್ಳನಾಗಲೀ ಈ ಲೋಕದಲ್ಲಿ ಮನೆಗೆ ಬೆಂಕಿಹಚ್ಚುವುದು, ಮತ್ತೊಬ್ಬರಿಗೆ ವಿಷವುಣಿಸುವುದು, ಊರನ್ನು ಅಥವಾ ವ್ಯಾಪಾರಿಗಳನ್ನು ಲೂಟಿಮಾಡುವುದು ಮುಂತಾದ ಪಾತಕಗಳನ್ನು ಮಾಡಿದವರನ್ನು ಮರಣಾನಂತರ ಸಾರಮೇಯಾದನವೆಂಬ ನರಕದಲ್ಲಿ ಯಮದೂತರು, ವಜ್ರದಂತೆ ಕೋರೆದಾಡೆಗಳುಳ್ಳ ಏಳುನೂರ ಇಪ್ಪತ್ತು ನಾಯಿಗಳಾಗಿ ಬಹಳ ಕ್ರೋಧದಿಂದ ಕಿತ್ತು ತಿನ್ನುವರು. ॥ ೨೭ ॥ ಈ ಲೋಕದಲ್ಲಿ ಸಾಕ್ಷಿ ಹೇಳುವಾಗ, ವ್ಯಾಪಾರದಲ್ಲಿ ಅಥವಾ ದಾನಕೊಡುವಾಗ ಸುಳ್ಳು ಹೇಳುವವನು ಸತ್ತಮೇಲೆ ಆಧಾರರಹಿತವಾದ ಅವೀಚಿಮಾನ್ ಎಂಬ ನರಕದಲ್ಲಿ ಬೀಳುತ್ತಾನೆ. ಅಲ್ಲಿ ಅವನನ್ನು ನೂರುಯೋಜನ ಎತ್ತರವಾದ ಪರ್ವತದ ತುದಿಯಿಂದ ತಲೆಕೆಳಗಾಗಿಸಿ ಬೀಳಿಸುವರು. ಆ ನರಕದ ಭೂಮಿಯು ನೀರಿನಂತೆ ಕಂಡುಬರುತ್ತದೆ. ಅದರಿಂದ ಇದನ್ನು ಅವೀಚಿಮಾನ್ ಎಂದು ಹೇಳುತ್ತಾರೆ. ಅಲ್ಲಿ ಬೀಳಿಸಿದಾಗ ಅವನ ಶರೀರವು ಚೂರು-ಚೂರಾದರೂ ಪ್ರಾಣಗಳು ಹೋಗುವುದಿಲ್ಲ. ಅದರಿಂದ ಅವನನ್ನು ಪದೇ-ಪದೇ ಮೇಲಕ್ಕೆ ಕೊಂಡುಹೋಗಿ ಬೀಳಿಸುವರು. ॥ ೨೮ ॥ ಬ್ರಾಹ್ಮಣನಾಗಲೀ, ಬ್ರಾಹ್ಮಣಿಯಾಗಲೀ ಅಥವಾ ವ್ರತದಲ್ಲಿರುವವನಾಗಲೀ, ಬೇರೆ ಯಾವನೇ ಪ್ರಮಾದವಶನಾಗಿ ಮದ್ಯಪಾನ ಮಾಡಿದರೆ, ಕ್ಷತ್ರಿಯನು ಅಥವಾ ವೈಶ್ಯನು ಸೋಮಪಾನ ಮಾಡಿದರೆ ಇವರನ್ನು ಯಮದೂತರು ಅಯಃಪಾನವೆಂಬ ನರಕಕ್ಕೆ ಕೊಂಡುಹೋಗಿ, ಅವನ ಎದೆಯಮೇಲೆ ಕಾಲನ್ನಿಟ್ಟು ಅವನ ಬಾಯಲ್ಲಿ ಬೆಂಕಿಯಲ್ಲಿ ಕರಗಿಸಿದ ಕಬ್ಬಿಣದ ರಸವನ್ನು ಹುಯ್ಯುವರು. ॥ ೨೯ ॥ ತಾನು ಅಧಮನಾಗಿದ್ದರೂ ತನ್ನನ್ನು ಉತ್ತಮನೆಂದು ಭಾವಿಸಿಕೊಂಡು ಜನ್ಮ, ತಪಸ್ಸು, ವಿದ್ಯೆ, ಆಚರಣೆ, ವರ್ಣ, ಆಶ್ರಮ ಇವುಗಳಲ್ಲಿ ತನಗಿಂತ ಉತ್ತಮರಾದವರನ್ನು ವಿಶೇಷವಾಗಿ ಗೌರವಿಸದಿರುವವನು ಬದುಕಿದ್ದರೂ ಸತ್ತವನಂತೆ ತಿಳಿಯಬೇಕು. ಸತ್ತಮೇಲೆ ಅವನನ್ನು ಕ್ಷಾರಕರ್ದಮವೆಂಬ ನರಕದಲ್ಲಿ ತಲೆಕೆಳಗಾಗಿ ಬೀಳಿಸುತ್ತಾರೆ. ಅವನಿಗೆ ಅಲ್ಲಿ ಅನಂತ ಪೀಡೆಗಳನ್ನು ಭೋಗಿಸಬೇಕಾಗುತ್ತದೆ. ॥ ೩೦ ॥

ಈ ಲೋಕದಲ್ಲಿ ನರಮೇಧವೇ ಮುಂತಾದವುಗಳ ಮೂಲಕ ಭೈರವ, ಯಕ್ಷ, ರಾಕ್ಷಸ ಮುಂತಾದವರನ್ನು ಪೂಜಿಸುವವರಿಗೆ, ಸ್ತ್ರೀಯು ಪಶುವಿನಂತೆ ಪುರುಷನನ್ನು ತಿನ್ನುವವಳಿಗೆ – ಪಶುಗಳಂತೆ ಸತ್ತುಹೋದ ಆ ಪುರುಷರು ಯಮಲೋಕದಲ್ಲಿ ರಾಕ್ಷಸರಾಗಿ ಬಗೆ-ಬಗೆಯ ಕಷ್ಟಗಳನ್ನು ಕೊಡುತ್ತಾರೆ ಮತ್ತು ರಕ್ಷೋಗಣಭೋಜನವೆಂಬ ನರಕದಲ್ಲಿ ಕಟುಕರಂತೆ ಅವರನ್ನು ಕೊಡಲಿಯಿಂದ ಕತ್ತರಿಸಿ ಅವನ ರಕ್ತವನ್ನು ಕುಡಿಯುತ್ತಾರೆ. ಆ ಮಾಂಸವನ್ನು ತಿನ್ನುವವರು ಈ ಲೋಕದಲ್ಲಿ ಮಾಂಸಭಕ್ಷಣದಿಂದ ಆನಂದಿತರಾದಂತೆ, ಆ ರಾಕ್ಷಸರು ಅವನ ರಕ್ತವನ್ನು ಕುಡಿದು ಆನಂದಿತರಾಗಿ ಹಾಡುತ್ತಾ-ಕುಣಿಯುತ್ತಾ ಇರುತ್ತಾರೆ. ॥ ೩೧ ॥ ಈ ಲೋಕದಲ್ಲಿ ಬದುಕಬೇಕೆಂದಿರುವ ಅರಣ್ಯದ ಅಥವಾ ಊರಿನ ನಿರಪರಾಧಿಗಳಾದ ಪ್ರಾಣಿಗಳನ್ನು ಬಗೆ-ಬಗೆಯ ಉಪಾಯಗಳಿಂದ ತಮ್ಮ ಬಳಿಗೆ ಬರಮಾಡಿಕೊಂಡು ಆ ಪ್ರಾಣಿಗಳನ್ನು ಶೂಲಕ್ಕೇರಿಸಿ ಅಥವಾ

ಜಿಜೀವಿಷೂನ್ ಶೂಲಸೂತ್ರಾದಿಷೂಪಪ್ರೋತಾನ್ ಕ್ರೀಡನಕತಯಾ ಯಾತಯಂತಿ ತೇಽಪಿ ಚ ಪ್ರೇತ್ಯ ಯಮಯಾತನಾಸು ಶೂಲಾದಿಷು ಪ್ರೋತಾತ್ಮಾನಃ ಕ್ಷುತ್ತೃಡ್ಭ್ಯಾಂ ಚಾಭಿಹತಾಃ ಕಂಕವಟಾದಿಭಿಶ್ಚೇತಸ್ತತಸ್ತಿಗ್ಮತುಂಡೈರಾಹನ್ಯಮಾನಾ ಆತ್ಮಶಮಲಂ ಸ್ಮರಂತಿ ॥ ೩೨ ॥

ಯೇ ತ್ವಿಹ ವೈ ಭೂತಾನ್ಯುದ್ವೇಜಯಂತಿ ನರಾ ಉಲ್ಬಣಸ್ವಭಾವಾ ಯಥಾ ದಂದಶೂಕಾಸ್ತೇಽಪಿ ಪ್ರೇತ್ಯ ನರಕೇ ದಂದಶೂಕಾಖ್ಯೇ ನಿಪತಂತಿ ಯತ್ರ ನೃಪ ದಂದಶೂಕಾಃ ಪಂಚಮುಖಾಃ ಸಪ್ತಮುಖಾ ಉಪಸೃತ್ಯ ಗ್ರಸಂತಿ ಯಥಾ ಬಿಲೇಶಯಾನ್ ॥ ೩೩ ॥ ಯೇ ತ್ವಿಹ ವಾ ಅಂಧಾವಟಕುಸೂಲಗುಹಾದಿಷು ಭೂತಾನಿ ನಿರುಂಧಂತಿ ತಥಾಮುತ್ರ ತೇಷ್ವೇವೋಪವೇಶ್ಯ ಸಗರೇಣ ವಹ್ನಿನಾ ಧೂಮೇನ ನಿರುಂಧಂತಿ ॥ ೩೪ ॥

ಯಸ್ತ್ವಿಹ ವಾ ಅತಿಥೀನಭ್ಯಾಗತಾನ್ವಾ ಗೃಹಪತಿರಸಕೃದುಪಗತಮನ್ಯುರ್ದಿಧಕ್ಷುರಿವ ಪಾಪೇನ ಚಕ್ಷುಷಾ ನಿರೀಕ್ಷತೇ ತಸ್ಯ ಚಾಪಿ ನಿರಯೇ ಪಾಪದೃಷ್ಟೇರಕ್ಷಿಣೀ ವಜ್ರತುಂಡಾ ಗೃಧ್ರಾಃ ಕಂಕಕಾಕವಟಾದಯಃ ಪ್ರಸಹ್ಯೋರುಬಲಾದುತ್ಪಾಟಯಂತಿ ॥ ೩೫ ॥

ಯಸ್ತ್ವಿಹ ವಾ ಆಢ್ಯಾಭಿಮತಿರಹಂಕೃತಿಸ್ತಿರ್ಯಕ್ಪ್ರೇಕ್ಷಣಃ ಸರ್ವತೋಽಭಿವಿಶಂಕೀ ಅರ್ಥವ್ಯಯನಾಶಚಿಂತಯಾ ಪರಿಶುಷ್ಯಮಾಣಹೃದಯವದನೋ ನಿರ್ವೃತಿಮನವಗತೋ ಗ್ರಹ ಇವಾರ್ಥಮಭಿರಕ್ಷತಿ ಸ ಚಾಪಿ ಪ್ರೇತ್ಯ ತದುತ್ಪಾದನೋತ್ಕರ್ಷಣಸಂರಕ್ಷಣಶಮಲಗ್ರಹಃ ಸೂಚೀಮುಖೇ ನರಕೇ ನಿಪತತಿ ಯತ್ರ ಹ ವಿತ್ತಗ್ರಹಂ ಪಾಪಪುರುಷಂ ಧರ್ಮರಾಜಪುರುಷಾ ವಾಯಕಾ ಇವ ಸರ್ವತೋಽಂಗೇಷು ಸೂತ್ರೈಃ ಪರಿವಯಂತಿ ॥ ೩೬ ॥

ಏವಂವಿಧಾ ನರಕಾ ಯಮಾಲಯೇ ಸಂತಿ ಶತಶಃ ಸಹಸ್ರಶಸ್ತೇಷು ಸರ್ವೇಷು ಚ ಸರ್ವ ಏವಾಧರ್ಮವರ್ತಿನೋ ಯೇ ಕೇಚಿದಿಹೋದಿತಾ ಅನುದಿತಾಶ್ಚಾವನಿಪತೇ ಪರ್ಯಾಯೇಣ ವಿಶಂತಿ ತಥೈವ ಧರ್ಮಾನು-

ಹಗ್ಗದಿಂದ ಬಿಗಿದು ಆಟವಾಡುತ್ತಾ ಅವುಗಳಿಗೆ ನಾನಾರೀತಿಯ ಪೀಡೆಗಳನ್ನು ಕೊಡುವವರನ್ನೂ ಕೂಡ ಮರಣಾನಂತರ ಯಮಯಾತನೆಯನ್ನು ಕೊಡುವ 'ಶೂಲಪ್ರೋತ'ವೆಂಬ ನರಕದಲ್ಲಿ ಶೂಲವೇ ಮುಂತಾದವುಗಳಿಗೆ ಪೋಣಿಸಿ ಅವರಿಗೆ ಚಿತ್ರಹಿಂಸೆಗಳನ್ನು ಕೊಡುವರು. ಹಸಿವು-ಬಾಯಾರಿಕೆಗಳಿಂದ ಸಂಕಟಪಡುವಾಗ ಮತ್ತು ಹದ್ದು, ಗಿಡುಗಗಳೇ ಮುಂತಾದ ಹರಿತವಾದ ಕೊಕ್ಕುಗಳುಳ್ಳ ಭೀಕರವಾದ ನರಕದ ಹಕ್ಕಿಗಳಿಂದ ಕಚ್ಚಿ ತಿನ್ನುತ್ತಿರುವಾಗ ತಾನು ಮಾಡಿದ ಎಲ್ಲ ಪಾಪಗಳು ನೆನಪಾಗುತ್ತವೆ. ॥ ೩೨ ॥

ಎಲೈ ರಾಜನೇ! ಈ ಲೋಕದಲ್ಲಿ ಯಾರು ಸರ್ಪಗಳಂತೆ ಉಗ್ರಸ್ವಭಾವವುಳ್ಳವರು ಬೇರೆ ಜೀವಿಗಳಿಗೆ ಪೀಡೆಯನ್ನುಂಟು ಮಾಡುತ್ತಾರೋ ಅವರು ಸತ್ತಮೇಲೆ ದಂದಶೂಕವೆಂಬ ನರಕದಲ್ಲಿ ಬೀಳುವರು. ಅಲ್ಲಿ ಐದೈದು, ಏಳೇಳು ಹೆಡೆಗಳುಳ್ಳ ಸರ್ಪಗಳು ಅವನ ಬಳಿಗೆ ಬಂದು ಅವನನ್ನು ಇಲಿಯಂತೆ ನುಂಗಿಬಿಡುವುವು. ॥ ೩೩॥ ಯಾರು ಇಲ್ಲಿ ಇತರ ಪ್ರಾಣಿಗಳನ್ನು ಕತ್ತಲೆಯ ಹಳ್ಳ-ಹಗೆವು-ಗುಹೆಗಳಲ್ಲಿ ಕೂಡಿಹಾಕುತ್ತಾರೋ ಅವರನ್ನು ಪರಲೋಕದಲ್ಲಿ ಯಮದೂತರು ಅಂತಹುದೇ ಕಗ್ಗತ್ತಲೆಯ ಸ್ಥಳದಲ್ಲಿ ಇರಿಸಿ ವಿಷಯುಕ್ತ ಹೊಗೆಯಿಂದ ಉಸಿರುಕಟ್ಟುವಂತೆ ಮಾಡುತ್ತಾರೆ. ಇದರಿಂದ ಈ ನರಕವನ್ನು ಅವಟನಿರೋಧ ಎಂದು ಹೇಳುತ್ತಾರೆ. ॥ ೩೪ ॥ ಯಾವ ಗೃಹಸ್ಥನು ಮನೆಗೆ ಬಂದ ಅತಿಥಿ-ಅಭ್ಯಾಗತರನ್ನು ಪದೇ-ಪದೇ ಸುಟ್ಟುಬಿಡುವಂತೆ ಕುಟಿಲತೆಯಿಂದ ಅವರತ್ತ ಸಿಟ್ಟಿನಿಂದ ನೋಡುತ್ತಾನೋ ಅವನು ನರಕಕ್ಕೆ ಹೋದಾಗ ಆ ಪಾಪದೃಷ್ಟಿಯುಳ್ಳ ಕಣ್ಣುಗಳನ್ನು ಗಿಡುಗ, ಹದ್ದು, ಕಾಗೆ ಮುಂತಾದ ವಜ್ರದಂತೆ ಕೊಕ್ಕುಳ್ಳ ಪಕ್ಷಿಗಳು ಬಲವಂತವಾಗಿ ಕಿತ್ತುಬಿಡುವರು. ಈ ನರಕವನ್ನು ಪರ್ಯಾವರ್ತನವೆಂದು ಹೇಳುತ್ತಾರೆ. ॥ ೩೫ ॥ ಈ ಲೋಕದಲ್ಲಿ ಕೆಲವು ವ್ಯಕ್ತಿಗಳು ತಮ್ಮನ್ನು ದೊಡ್ಡ ಶ್ರೀಮಂತರೆಂದು ತಿಳಿದುಕೊಂಡು ದುರಭಿಮಾನದಿಂದ ಎಲ್ಲರನ್ನು ವಕ್ರದೃಷ್ಟಿಯಿಂದ ನೋಡುತ್ತಾರೆ ಮತ್ತು ಎಲ್ಲರ ಮೇಲೂ ಸಂಶಯಪಡುತ್ತಾರೆ. ಹಣವು ಖರ್ಚಾಯಿತಲ್ಲಾ! ನಾಶವಾಗಿ ಹೋಯಿತಲ್ಲ! ಎಂಬ ಚಿಂತೆಯಿಂದ ಮನಸ್ಸು ಮುಖಗಳು ಒಣಗಿ ಹೋದವರಾಗಿ ಸ್ವಲ್ಪವೂ ನೆಮ್ಮದಿಯಿಲ್ಲದೆ ಯಕ್ಷರಂತೆ ಹಣದ ರಕ್ಷಣೆಯಲ್ಲೇ ಆಸಕ್ತರಾಗಿರುತ್ತಾರೆ. ಹಣದ ಸಂಪಾದನೆ, ಹಣವನ್ನು ಹೆಚ್ಚಿಸುವಿಕೆ, ಉಳಿಸುವಿಕೆ ಮುಂತಾದವುಗಳಿಗಾಗಿ ಬಗೆ-ಬಗೆಯ ಪಾಪಗಳನ್ನು ಮಾಡುತ್ತಾ ಇರುತ್ತಾರೆ. ಇಂತಹ ನರಾಧಮರು ಸತ್ತನಂತರ ಸೂಚೀ ಮುಖವೆಂಬ ನರಕದಲ್ಲಿ ಬೀಳುತ್ತಾರೆ. ಅಲ್ಲಿ ಆ ಅರ್ಥಪಿಶಾಚಿಯಾದ ಪಾಪಿಯ ಸರ್ವಾಂಗಗಳನ್ನು ಯಮದೂತರು ದರ್ಜಿಗಳಂತೆ ಸೂಜಿಯಿಂದ ಚುಚ್ಚಿ ದಾರಗಳಿಂದ ಹೊಲಿಯುವರು. ॥ ೩೬ ॥

ರಾಜೇಂದ್ರನೇ! ಯಮಲೋಕದಲ್ಲಿ ಇದೇ ಪ್ರಕಾರದ ನೂರಾರು, ಸಾವಿರಾರು ನರಕಗಳಿವೆ. ಅವುಗಳಲ್ಲಿ ಯಾವುದನ್ನು ಇಲ್ಲಿ ಉಲ್ಲೇಖಿಸಲ್ಪಟ್ಟಿದೆಯೋ, ಯಾವುದರ ಕುರಿತು ಏನೂ ಹೇಳಲಿಲ್ಲವೋ ಅವೆಲ್ಲವುಗಳಲ್ಲಿ ಎಲ್ಲ ಅಧರ್ಮಪರಾಯಣ ಜೀವರು ತಮ್ಮ ಕರ್ಮಗಳನುಸಾರವಾಗಿ ಮತ್ತೆ-ಮತ್ತೆ ಹೋಗುತ್ತಿರುತ್ತಾರೆ. ಹೀಗೆಯೇ ಧರ್ಮಾತ್ಮರಾದ ಜನರು ಸ್ವರ್ಗಾದಿಗಳಿಗೆ ಹೋಗುತ್ತಾರೆ. ಹೀಗೆ

ವರ್ತಿನ ಇತರತ್ರ ಇಹ ತು ಪುನರ್ಭವೇ ತ ಉಭಯಶೇಷಾಭ್ಯಾಂ ನಿವಿಶಂತಿ ॥ ೩೭ ॥

ನಿವೃತ್ತಿಲಕ್ಷಣಮಾರ್ಗ ಆದಾವೇವ ವ್ಯಾಖ್ಯಾತಃ। ಏತಾವಾನೇವಾಂಡಕೋಶೋ ಯಶ್ಚತುರ್ದಶಧಾ ಪುರಾಣೇಷು ವಿಕಲ್ಪಿತ ಉಪಗೀಯತೇ ಯತ್ತದ್ಭಗವತೋ ನಾರಾಯಣಸ್ಯ ಸಾಕ್ಷಾನ್ಮಹಾಪುರುಷಸ್ಯ ಸ್ಥವಿಷ್ಠಂ ರೂಪಮಾತ್ಮಮಾಯಾಗುಣಮಯಮನುವರ್ಣಿತಮಾದೃತಃ ಪಠತಿ ಶೃಣೋತಿ ಶ್ರಾವಯತಿ ಸ ಉಪಗೇಯಂ ಭಗವತಃ ಪರಮಾತ್ಮನೋಽಗ್ರಾಹ್ಯಮಪಿ ಶ್ರದ್ಧಾಭಕ್ತಿವಿಶುದ್ಧಬುದ್ಧಿರ್ವೇದ ॥ ೩೮ ॥

ಶ್ರುತ್ವಾ ಸ್ಥೂಲಂ ತಥಾ ಸೂಕ್ಷ್ಮಂ ರೂಪಂ ಭಗವತೋ ಯತಿಃ ।
ಸ್ಥೂಲೇ ನಿರ್ಜಿತಮಾತ್ಮಾನಂ ಶನೈಃ ಸೂಕ್ಷ್ಮಂ ಧಿಯಾ ನಯೇದಿತಿ ॥ ೩೯ ॥

ಭೂದ್ವೀಪವರ್ಷಸರಿದದ್ರಿನಭಃಸಮುದ್ರ-
ಪಾತಾಲದಿಙ್ನರಕಭಾಗಣಲೋಕಸಂಸ್ಥಾ ।
ಗೀತಾ ಮಯಾ ತವ ನೃಪಾದ್ಭುತಮೀಶ್ವರಸ್ಯ
ಸ್ಥೂಲಂ ವಪುಃ ಸಕಲಜೀವನಿಕಾಯಧಾಮ ॥ ೪೦ ॥

ನರಕ ಮತ್ತು ಸ್ವರ್ಗದ ಭೋಗದಿಂದ ಇವರ ಹೆಚ್ಚಿನಂಶದ ಪಾಪ ಮತ್ತು ಪುಣ್ಯಗಳು ಕ್ಷೀಣವಾಗಿ ಹೋದಾಗ ಬಾಕಿ ಉಳಿದಿರುವ ಪುಣ್ಯಪಾಪರೂಪವಾದ ಕರ್ಮಗಳಂತೆ ಇವರು ಪುನಃ ಇದೇ ಲೋಕದಲ್ಲಿ ಹುಟ್ಟಲು ಮರಳುತ್ತಾರೆ. ॥ ೩೭॥

ಈ ಧರ್ಮ ಮತ್ತು ಅಧರ್ಮ ಎರಡರಿಂದಲೂ ವಿಲಕ್ಷಣವಾದ ನಿವೃತ್ತಿಮಾರ್ಗವನ್ನಾದರೋ ಮೊದಲಿಗೆ (ದ್ವಿತೀಯ ಸ್ಕಂಧದಲ್ಲಿ) ವರ್ಣಿಸಿ ಆಗಿದೆ. ಪುರಾಣಗಳಲ್ಲಿ ಹದಿನಾಲ್ಕು ಭುವನಗಳ ರೂಪದಲ್ಲಿ ವರ್ಣಿತವಾದ ಬ್ರಹ್ಮಾಂಡಕೋಶವು ಇಷ್ಟೇ ಇದೆ. ಇದು ಸಾಕ್ಷಾತ್ ಪರಮಪುರುಷ ಶ್ರೀಮನ್ನಾರಾಯಣನ ಮಾಯೆಯ ಗುಣಗಳಿಂದ ಕೂಡಿದ ಅತ್ಯಂತ ಸ್ಥೂಲ ಸ್ವರೂಪವಾಗಿದೆ. ಇದರ ವರ್ಣನೆಯನ್ನು ನಾನು ಮಾಡಿರುವೆನು. ಪರಮಾತ್ಮಾ ಭಗವಂತನ ನಿರ್ಗುಣ ಸ್ವರೂಪವನ್ನು ಉಪನಿಷತ್ತುಗಳಲ್ಲಿ ವರ್ಣಿತವಾಗಿದ್ದರೂ ಮನ-ಬುದ್ಧಿಗಳು ತಲುಪಲಾರದಷ್ಟು ಹೊರಗಿದೆ; ದೂರವಿದೆ. ಆದರೂ ಈ ಸ್ಥೂಲರೂಪದ ವರ್ಣನೆಯನ್ನು ಆದರದಿಂದ ಓದುವವನ, ಕೇಳುವವನ, ಹೇಳುವವನ ಬುದ್ಧಿಯು ಶ್ರದ್ಧೆ ಮತ್ತು ಭಕ್ತಿಯ ಕಾರಣದಿಂದ ಶುದ್ಧವಾಗುತ್ತದೆ ಮತ್ತು ಅವನು ಆ ಸೂಕ್ಷ್ಮರೂಪವನ್ನು ಕೂಡ ಅನುಭವಿಸಬಲ್ಲನು. ॥ ೩೮ ॥

ಯತಿಯಾದವನು ಭಗವಂತನ ಸ್ಥೂಲ ಮತ್ತು ಸೂಕ್ಷ್ಮ ಎರಡೂ ರೂಪಗಳನ್ನು ಶ್ರವಣಿಸಿ ಮೊದಲಿಗೆ ಸ್ಥೂಲರೂಪದಲ್ಲಿ ಚಿತ್ತವನ್ನು ಸ್ಥಿರಗೊಳಿಸಬೇಕು. ಮತ್ತೆ ನಿಧಾನವಾಗಿ ಅಲ್ಲಿಂದ ತೊಡೆದು ಅದನ್ನು ಸೂಕ್ಷ್ಮದಲ್ಲಿ ತೊಡಗಿಸಬೇಕು. ॥ ೩೯ ॥ ಪರೀಕ್ಷಿತನೇ! ನಾನು ನಿನಗೆ ಪೃಥಿವಿ, ಅದರ ಅಂತರ್ಗತ ದ್ವೀಪ, ವರ್ಷ, ನದಿ, ಪರ್ವತ, ಆಕಾಶ, ಸಮುದ್ರ, ಪಾತಾಳ, ದಿಕ್ಕುಗಳು, ನರಕ, ಜ್ಯೋತಿರ್ಗಣ ಮತ್ತು ಲೋಕಗಳ ಸ್ಥಿತಿಯನ್ನು ವರ್ಣಿಸಿರುವೆನು. ಇದೇ ಭಗವಂತನ ಅತಿ ಅದ್ಭುತ ಸ್ಥೂಲರೂಪವಾಗಿದೆ. ಅದು ಸಮಸ್ತ ಜೀವಿಗಳಿಗೆ ಆಶ್ರಯವಾಗಿದೆ. ॥ ೪೦ ॥

*ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು. ॥ ೨೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಪಂಚಮಸ್ಕಂಧೇ
ನರಕಾನುವರ್ಣನಂ ನಾಮ ಷಡ್ವಿಂಶೋಽಧ್ಯಾಯಃ ॥ ೨೬ ॥

ಐದನೆಯ ಸ್ಕಂಧವು ಸಂಪೂರ್ಣವಾಯಿತು.

॥ ಓಂ ನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ಷಷ್ಠಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಅಜಾಮಿಳೋಪಾಖ್ಯಾನ ಪ್ರಾರಂಭ

*ರಾಜೋವಾಚ*

**ನಿವೃತ್ತಿಮಾರ್ಗಃ ಕಥಿತಃ ಆದೌ ಭಗವತಾ ಯಥಾ।**
**ಕ್ರಮಯೋಗೋಪಲಬ್ಧೇನ ಬ್ರಹ್ಮಣಾ ಯದಸಂಸೃತಿಃ ॥ ೧ ॥**

**ಪ್ರವೃತ್ತಿಲಕ್ಷಣಶ್ಚೈವ ತ್ರೈಗುಣ್ಯವಿಷಯೋ ಮುನೇ।**
**ಯೋಽಸಾವಲೀನಪ್ರಕೃತೇರ್ಗುಣಸರ್ಗಃ ಪುನಃ ಪುನಃ ॥ ೨ ॥**

**ಅಧರ್ಮಲಕ್ಷಣಾ ನಾನಾ ನರಕಾಶ್ಚಾನುವರ್ಣಿತಾಃ।**
**ಮನ್ವಂತರಶ್ಚ ವ್ಯಾಖ್ಯಾತ ಆದ್ಯಃ ಸ್ವಾಯಂಭುವೋ ಯತಃ ॥ ೩ ॥**

**ಪ್ರಿಯವ್ರತೋತ್ತಾನಪದೋರ್ವಂಶಸ್ತಚ್ಚರಿತಾನಿ ಚ।**
**ದ್ವೀಪವರ್ಷಸಮುದ್ರಾದ್ರಿನದ್ಯುದ್ಯಾನವನಸ್ಪತೀನ್ ॥ ೪ ॥**

**ಧರಾಮಂಡಲಸಂಸ್ಥಾನಂ ಭಾಗಲಕ್ಷಣಮಾನತಃ।**
**ಜ್ಯೋತಿಷಾಂ ವಿವರಾಣಾಂ ಚ ಯಥೇದಮಸೃಜದ್ವಿಭುಃ ॥ ೫ ॥**

**ಅಧುನೇಹ ಮಹಾಭಾಗ ಯಥೈವ ನರಕಾನ್ನರಃ।**
**ನಾನೋಗ್ರಯಾತನಾನ್ನೇಯಾತ್ತನ್ಮೇ ವ್ಯಾಖ್ಯಾತುಮರ್ಹಸಿ ॥ ೬ ॥**

**ಪರೀಕ್ಷಿತ ಮಹಾರಾಜನು ಕೇಳಿದನು** – ಭಗವಾನ್ ಶುಕಮಹಾಮುನಿಗಳೇ! ನೀವು ಹಿಂದೆ (ದ್ವಿತೀಯ ಸ್ಕಂಧದಲ್ಲಿ) ನನಗೆ ನಿವೃತ್ತಿಮಾರ್ಗವನ್ನು ವರ್ಣಿಸಿದಿರಿ. ಆ ಮಾರ್ಗಗ ಮೂಲಕ ಅರ್ಚಿರಾದಿ ಗತಿಯಿಂದ ಕ್ರಮವಾಗಿ ಜೀವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ ಹಾಗೂ ಕಲ್ಪಾಂತ್ಯದಲ್ಲಿ ಬ್ರಹ್ಮದೇವರೊಡನೆ ಮುಕ್ತನಾಗುತ್ತಾನೆ ಎಂಬುದನ್ನು ತಿಳಿಸಿರುವಿರಿ. ॥ ೧ ॥ ಮುನಿವರ್ಯರೇ! ಇದಲ್ಲದೆ ಪ್ರವೃತ್ತಿಮಾರ್ಗವನ್ನೂ (ತೃತೀಯ ಸ್ಕಂಧದಲ್ಲಿ) ಚೆನ್ನಾಗಿ ವರ್ಣಿಸಿದ್ದೀರಿ. ಅದರಿಂದ ತ್ರಿಗುಣಮಯ ಸ್ವರ್ಗಾದಿ ಲೋಕಗಳು ಪ್ರಾಪ್ತವಾಗುತ್ತವೆ. ಹಾಗೂ ಪ್ರಕೃತಿಯ ಸಂಬಂಧವು ಕಳಚಿಹೋಗದಿರುವುದರಿಂದ ಜೀವನು ಪದೇ-ಪದೇ ಜನ್ಮ-ಮರಣದ ಚಕ್ರದಲ್ಲಿ ಸಿಲುಕಿಕೊಳ್ಳುವನು. ॥ ೨ ॥ ಅಧರ್ಮವನ್ನು ಆಚರಿಸುವುದರಿಂದ ಅನೇಕ ನರಕಗಳು ದೊರೆಯುತ್ತವೆ ಮತ್ತು ಐದನೆಯ ಸ್ಕಂಧದಲ್ಲಿ ಅವನ್ನು ವಿಸ್ತಾರವಾಗಿ ವರ್ಣಿಸಿದಿರಿ. ನಾಲ್ಕನೆಯ ಸ್ಕಂಧದಲ್ಲಿ ಆ ಮೊದಲನೆಯ ಮನ್ವಂತರವನ್ನು ವರ್ಣಿಸಿ ಅದರ ಅಧಿಪತಿಯು ಸ್ವಾಯಂಭುವ ಮನುವಾಗಿದ್ದನು ಎಂಬುದನ್ನು ತಿಳಿಸಿದಿರಿ. ॥ ೩ ॥ ಜೊತೆಗೆ ನಾಲ್ಕನೆಯ ಮತ್ತು ಐದನೆಯ ಸ್ಕಂಧದಲ್ಲಿ ಪ್ರಿಯವ್ರತ ಹಾಗೂ ಉತ್ತಾನಪಾದ ಇವರ ವಂಶವನ್ನು, ಚರಿತ್ರೆಯನ್ನು, ಹಾಗೆಯೇ ದ್ವೀಪ, ವರ್ಷ, ಸಮುದ್ರ, ಪರ್ವತ, ನದಿ, ಉದ್ಯಾನ ಹಾಗೂ ಬೇರೆ-ಬೇರೆ ದ್ವೀಪಗಳು, ವೃಕ್ಷಗಳು ಇವನ್ನೂ ನಿರೂಪಿಸಿದಿರಿ. ॥ ೪ ॥ ಭೂಮಂಡಲದ ಸ್ಥಿತಿ, ಅದರ ದ್ವೀಪ-ವರ್ಷಾದಿಗಳ ವಿಭಾಗ, ಅವುಗಳ ಲಕ್ಷಣ ಹಾಗೂ ವಿಸ್ತಾರ, ನಕ್ಷತ್ರಗಳ ಸ್ಥಿತಿ, ಅತಲ-ವಿತಲ ಮುಂತಾದ ಏಳು ಪಾತಾಳಗಳನ್ನೂ ಭಗವಂತನು ಹೇಗೆ ಸೃಷ್ಟಿಸಿದನು? ಎಂಬುದನ್ನು ವರ್ಣಿಸಿದಿರಿ. ॥ ೫ ॥ ಮಹಾತ್ಮರೇ! ಯಾವುದರ ಅನುಷ್ಠಾನದಿಂದ ಮನುಷ್ಯನಿಗೆ ಅನೇಕಾನೇಕ ಭಯಂಕರ ಯಾತನೆಗಳಿಂದ ತುಂಬಿದ ನರಕಕ್ಕೆ ಹೋಗಬೇಕಾಗುವುದಿಲ್ಲವೋ ಅಂತಹ ಉಪಾಯವನ್ನು ತಿಳಿಯಲು ನಾನು ಬಯಸುತ್ತಿರುವೆನು. ದಯಮಾಡಿ ಅದನ್ನು ನನಗೆ ಉಪದೇಶಿಸಿರಿ. ॥ ೬ ॥

*ಶ್ರೀಶುಕ ಉವಾಚ*

**ನ ಚೇದಿಹೈವಾಪಚಿತಿಂ ಯಥಾಂಹಸಃ**
**ಕೃತಸ್ಯ ಕುರ್ಯಾನ್ಮನಉಕ್ತಪಾಣಿಭಿಃ।**
**ಧ್ರುವಂ ಸ ವೈ ಪ್ರೇತ್ಯ ನರಕಾನುಪೈತಿ**
**ಯೇ ಕೀರ್ತಿತಾ ಮೇ ಭವತಸ್ತಿಗ್ಮಯಾತನಾಃ ॥ ೭ ॥**

**ಶ್ರೀಶುಕಮಹಾಮುನಿಗಳು ಹೇಳಿದರು** – ಎಲೈ ರಾಜನೇ! ಮನಸ್ಸು, ಮಾತು ಮತ್ತು ಶರೀರದಿಂದ ಮನುಷ್ಯನು ಪಾಪಗಳನ್ನು ಮಾಡುತ್ತಾನೆ. ಅವನು ಆ ಪಾಪಗಳಿಗೆ ಇದೇ ಜನ್ಮದಲ್ಲಿ ಪ್ರಾಯಶ್ಚಿತ್ತ

ತಸ್ಮಾತ್ಪುರೈವಾಶ್ವಿಹ ಪಾಪನಿಷ್ಕೃತೌ
ಯತೇತ ಮೃತ್ಯೋರವಿಪದ್ಯತಾಽಽತ್ಮನಾ ।
ದೋಷಸ್ಯ ದೃಷ್ಟ್ವಾ ಗುರುಲಾಘವಂ ಯಥಾ
ಭಿಷಕ್ ಚಿಕಿತ್ಸೇತ ರುಜಾಂ ನಿದಾನವಿತ್ ॥ ೮ ॥

ರಾಜೋವಾಚ

ದೃಷ್ಟಶ್ರುತಾಭ್ಯಾಂ ಯತ್ಪಾಪಂ ಜಾನನ್ನಪ್ಯಾತ್ಮನೋಽಹಿತಮ್ ।
ಕರೋತಿ ಭೂಯೋ ವಿವಶಃ ಪ್ರಾಯಶ್ಚಿತ್ತಮಥೋ ಕಥಮ್ ॥ ೯ ॥

ಕ್ವಚಿನ್ನಿವರ್ತತೇಽಭದ್ರಾತ್ಕ್ವಚಿಚ್ಚರತಿ ತತ್ಪುನಃ ।
ಪ್ರಾಯಶ್ಚಿತ್ತಮತೋಽಪಾರ್ಥಂ ಮನ್ಯೇ ಕುಂಜರಶೌಚವತ್ ॥ ೧೦ ॥

ಶ್ರೀಶುಕ ಉವಾಚ

ಕರ್ಮಣಾ ಕರ್ಮನಿರ್ಹಾರೋ ನ ಹ್ಯಾತ್ಯಂತಿಕ ಇಷ್ಯತೇ ।
ಅವಿದ್ವದಧಿಕಾರಿತ್ವಾತ್ ಪ್ರಾಯಶ್ಚಿತ್ತಂ ವಿಮರ್ಶನಮ್ ॥ ೧೧ ॥

ನಾಶ್ನತಃ ಪಥ್ಯಮೇವಾನ್ನಂ ವ್ಯಾಧಯೋಽಭಿಭವಂತಿ ಹಿ ।
ಏವಂ ನಿಯಮಕೃದ್ರಾಜನ್ ಶನೈಃ ಕ್ಷೇಮಾಯ ಕಲ್ಪತೇ ॥ ೧೨ ॥

ತಪಸಾ ಬ್ರಹ್ಮಚರ್ಯೇಣ ಶಮೇನ ಚ ದಮೇನ ಚ ।
ತ್ಯಾಗೇನ ಸತ್ಯಶೌಚಾಭ್ಯಾಂ ಯಮೇನ ನಿಯಮೇನ ಚ ॥ ೧೩ ॥

ದೇಹವಾಗ್ಬುದ್ಧಿಜಂ ಧೀರಾ ಧರ್ಮಜ್ಞಾಃ ಶ್ರದ್ಧಯಾನ್ವಿತಾಃ ।
ಕ್ಷಿಪಂತ್ಯಘಂ ಮಹದಪಿ ವೇಣುಗುಲ್ಮಮಿವಾನಲಃ ॥ ೧೪ ॥

ಕೇಚಿತ್ಕೇವಲಯಾ ಭಕ್ತ್ಯಾ ವಾಸುದೇವಪರಾಯಣಾಃ ।
ಅಘಂ ಧುನ್ವಂತಿ ಕಾರ್ತ್ಸ್ನ್ಯೇನ ನೀಹಾರಮಿವ ಭಾಸ್ಕರಃ ॥ ೧೫ ॥

ವನ್ನು ಮಾಡಿಕೊಳ್ಳದಿದ್ದರೆ ಸತ್ತಮೇಲೆ ಅವನು ಖಂಡಿತವಾಗಿ ಆ ಭಯಂಕರ ಯಾತನೆಗಳಿಂದ ತುಂಬಿದ ನರಕಗಳಿಗೆ ಹೋಗಬೇಕಾಗುತ್ತದೆ. ಇದನ್ನು ನಾನು ಹಿಂದೆಯೇ (ಐದನೆಯ ಸ್ಕಂಧದಲ್ಲಿ) ನಿನಗೆ ತಿಳಿಸಿರುವೆನು. ॥ ೭॥ ಇದರಿಂದ ತುಂಬಾ ಸಾವಧಾನತೆಯಿಂದ, ಎಚ್ಚರವಾಗಿದ್ದು, ರೋಗ ಮತ್ತು ಮೃತ್ಯುವಿನ ಮೊದಲೇ ಅತಿಶೀಘ್ರವಾಗಿ ಪಾಪಗಳಲ್ಲಿ ಯಾವುದು ದೊಡ್ಡದು - ಯಾವುದು ಚಿಕ್ಕದು ಎಂದು ವಿಚಾರಮಾಡಿ ಮರ್ಮಜ್ಞನಾದ ವೈದ್ಯನು ರೋಗದ ಕಾರಣ ಮತ್ತು ಗುರು-ಲಾಘವಗಳನ್ನು ಮನಗಂಡು ಒಡನೆಯೇ ಚಿಕಿತ್ಸೆ ಮಾಡುವಂತೆ – ಅವುಗಳಿಗೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ॥ ೮ ॥

**ಪರೀಕ್ಷಿದ್ರಾಜನು ಕೇಳಿದನು** – ಮಹಾತ್ಮರೇ! ಮನುಷ್ಯನು ರಾಜದಂಡ, ಸಮಾಜದಂಡ ಮುಂತಾದ ಲೌಕಿಕ ಮತ್ತು ಶಾಸ್ತ್ರೋಕ್ತ ನರಕಗಮನವೇ ಮುಂತಾದ ಪಾರಲೌಕಿಕ ಕಷ್ಟಗಳು ತನ್ನ ಶತ್ರುಗಳಾಗಿವೆ ಎಂದು ತಿಳಿದರೂ ಪಾಪವಾಸನೆಗಳಿಗೆ ವಿವಶನಾಗಿ ಮತ್ತೆ-ಮತ್ತೆ ಅಂತಹುದೇ ಪಾಪಕರ್ಮಗಳಲ್ಲಿ ಪ್ರವೃತ್ತನಾಗುತ್ತಾನೆ. ಇಂತಹ ಸ್ಥಿತಿಯಲ್ಲಿ ಅವನ ಪಾಪಗಳ ಪ್ರಾಯಶ್ಚಿತ್ತವು ಹೇಗಾಗಬಲ್ಲದು? ॥ ೯॥ ಮನುಷ್ಯನು ಕೆಲವೊಮ್ಮೆ ಪ್ರಾಯಶ್ಚಿತ್ತಾದಿಗಳ ಮೂಲಕ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಕೆಲವೊಮ್ಮೆ ಪುನಃ ಅದನ್ನು ಮಾಡತೊಡಗುತ್ತಾನೆ. ಇಂತಹ ಸ್ಥಿತಿಯಲ್ಲಿ ಮನುಷ್ಯನು ಪ್ರಾಯಶ್ಚಿತ್ತ ಮಾಡಿಕೊಳ್ಳುವುದು ಆನೆಯ ಸ್ನಾನದಂತೇ ವ್ಯರ್ಥವೆಂದೇ ನಾನು ತಿಳಿಯುತ್ತೇನೆ. ॥ ೧೦॥

**ಶ್ರೀಶುಕಮಹಾಮುನಿಗಳು ಹೇಳಿದರು** – ಎಲೈ ರಾಜನೇ! ವಾಸ್ತವವಾಗಿ ಕರ್ಮದಿಂದ ಕರ್ಮವು ನಿಶ್ಶೇಷವಾಗಿ ನಾಶವಾಗುವುದಿಲ್ಲ. ಏಕೆಂದರೆ, ಅಜ್ಞಾನಿಗಳೇ ಕರ್ಮಕ್ಕೆ ಅಧಿಕಾರಿಗಳಾಗಿದ್ದಾರೆ. ಅಜ್ಞಾನವು ಇರುವಾಗ ಪಾಪವಾಸನೆಗಳು ಪೂರ್ಣವಾಗಿ ಅಳಿದುಹೋಗುವುದಿಲ್ಲ. ಆದ್ದರಿಂದ ನಿಜವಾದ ಪ್ರಾಯಶ್ಚಿತ್ತವಾದರೋ ತತ್ತ್ವಜ್ಞಾನವೇ ಆಗಿದೆ. ॥ ೧೧ ॥ ಒಳ್ಳೆಯ ಪಥ್ಯವಾದ ಆಹಾರವನ್ನೇ ಸೇವಿಸುವವನಿಗೆ ರೋಗಗಳು ಬಾಧಿಸುವುದಿಲ್ಲ. ಒಂದೊಮ್ಮೆ ರೋಗಗ್ರಸ್ತನಾದರೂ ಬೇಗನೇ ಗುಣಮುಖನಾಗುವನು. ಪರೀಕ್ಷಿತನೇ! ಹಾಗೆಯೇ ನಿಯಮಗಳನ್ನು ಪಾಲಿಸುವವನು ಸ್ವಲ್ಪ-ಸ್ವಲ್ಪವಾಗಿ ಪಾಪವಾಸನೆಗಳಿಂದ ಮುಕ್ತನಾಗಿ ಶ್ರೇಯಸ್ಕರವಾದ ತತ್ತ್ವಜ್ಞಾನವನ್ನು ಪಡೆಯುವುದರಲ್ಲಿ ಸಮರ್ಥನಾಗುವನು. ॥ ೧೨ ॥ ಬಿದಿರುಮೆಳೆಗೆ ತಗುಲಿದ ಬೆಂಕಿಯು ಇಡೀ ಬಿದುರುಪೊದೆಯನ್ನೇ ಸುಟ್ಟುಹಾಕುವಂತೆಯೇ ಧರ್ಮಜ್ಞರೂ, ಶ್ರದ್ಧಾವಂತರೂ ಆದ ಧೀರರು – ತಪಸ್ಸು, ಬ್ರಹ್ಮಚರ್ಯ, ಇಂದ್ರಿಯದಮನ, ಮನಸ್ಸಿನ ಸ್ಥೈರ್ಯ, ದಾನ, ಸತ್ಯ, ಒಳ-ಹೊರಗಿನ ಪವಿತ್ರತೆ ಮತ್ತು ಯಮ-ನಿಯಮಗಳು ಎಂಬ ಒಂಭತ್ತು ಸಾಧನೆಗಳಿಂದ ಮನಸ್ಸು, ಮಾತು, ಶರೀರಗಳಿಂದ ಮಾಡಲಾದ ಅತಿದೊಡ್ಡ ಪಾಪಗಳನ್ನೂ ಕೂಡ ನಾಶಮಾಡಿಬಿಡುವರು. ॥ ೧೩-೧೪ ॥ ಭಗವಂತನಲ್ಲಿ ಶರಣಾದ ವಿರಳವಾಗಿರುವ ಭಕ್ತರು ಕೇವಲ ಭಕ್ತಿಯಿಂದಲೇ ಸೂರ್ಯನು ಇಬ್ಬನಿಯನ್ನು ಕಳೆಯುವಂತೆ ತಮ್ಮ ಸಮಸ್ತ ಪಾಪಗಳನ್ನು ಕಳೆದುಕೊಳ್ಳುವರು. ॥ ೧೫ ॥

ನ ತಥಾ ಹ್ಯಘವಾನ್ರಾಜನ್ಪೂಯೇತ ತಪಆದಿಭಿಃ ।
ಯಥಾ ಕೃಷ್ಣಾರ್ಪಿತಪ್ರಾಣಸ್ತತ್ಪೂರುಷನಿಷೇವಯಾ ॥ ೧೬ ॥

ಸಧ್ರೀಚೀನೋ ಹ್ಯಯಂ ಲೋಕೇ
ಪಂಥಾಃ ಕ್ಷೇಮೋಽಕುತೋಭಯಃ ।
ಸುಶೀಲಾಃ ಸಾಧವೋ ಯತ್ರ
ನಾರಾಯಣಪರಾಯಣಾಃ ॥ ೧೭ ॥

ಪ್ರಾಯಶ್ಚಿತ್ತಾನಿ ಚೀರ್ಣಾನಿ ನಾರಾಯಣಪರಾಙ್ಮುಖಮ್ ।
ನ ನಿಷ್ಪುನಂತಿ ರಾಜೇಂದ್ರ ಸುರಾಕುಂಭಮಿವಾಪಗಾಃ ॥ ೧೮ ॥

ಸಕೃನ್ಮನಃ ಕೃಷ್ಣಪದಾರವಿಂದಯೋ-
ರ್ನಿವೇಶಿತಂ ತದ್ಗುಣರಾಗಿ ಯೈರಿಹ ।
ನ ತೇ ಯಮಂ ಪಾಶಭೃತಶ್ಚ ತದ್ಭಟಾನ್
ಸ್ವಪ್ನೇಽಪಿ ಪಶ್ಯಂತಿ ಹಿ ಚೀರ್ಣನಿಷ್ಕೃತಾಃ ॥ ೧೯ ॥

ಅತ್ರ ಚೋದಾಹರಂತೀಮಮಿತಿಹಾಸಂ ಪುರಾತನಮ್ ।
ದೂತಾನಾಂ ವಿಷ್ಣುಯಮಯೋಃ ಸಂವಾದಸ್ತಂ ನಿಬೋಧ ಮೇ ॥ ೨೦ ॥

ಕಾನ್ಯಕುಬ್ಜೇ ದ್ವಿಜಃ ಕಶ್ಚಿದ್ದಾಸೀಪತಿರಜಾಮಿಲಃ ।
ನಾಮ್ನಾ ನಷ್ಟಸದಾಚಾರೋ ದಾಸ್ಯಾಃ ಸಂಸರ್ಗದೂಷಿತಃ ॥ ೨೧ ॥

ವಂಧ್ಯಕ್ಷಕೈತವೈಶ್ಚೌರ್ಯೈರ್ಗರ್ಹಿತಾಂ ವೃತ್ತಿಮಾಸ್ಥಿತಃ ।
ಬಿಭ್ರತ್ಕುಟುಂಬಮಶುಚಿರ್ಯಾತಯಾಮಾಸ ದೇಹಿನಃ ॥ ೨೨ ॥

ಏವಂ ನಿವಸತಸ್ತಸ್ಯ ಲಾಲಯಾನಸ್ಯ ತತ್ಸುತಾನ್ ।
ಕಾಲೋಽತ್ಯಗಾನ್ಮಹಾನ್ರಾಜನ್ನಷ್ಟಾಶೀತ್ಯಾಯುಷಃ ಸಮಾಃ ॥ ೨೩ ॥

ತಸ್ಯ ಪ್ರವಯಸಃ ಪುತ್ರಾ
ದಶ ತೇಷಾಂ ತು ಯೋಽವಮಃ ।
ಬಾಲೋ ನಾರಾಯಣೋ ನಾಮ್ನಾ-
ಪಿತ್ರೋಶ್ಚ ದಯಿತೋ ಭೃಶಮ್ ॥ ೨೪ ॥

ಸ ಬದ್ಧಹೃದಯಸ್ತಸ್ಮಿನ್ನರ್ಭಕೇ ಕಲಭಾಷಿಣಿ ।
ನಿರೀಕ್ಷಮಾಣಸ್ತಲ್ಲೀಲಾಂ ಮುಮುದೇ ಜರಠೋ ಭೃಶಮ್ ॥ ೨೫ ॥

ಭುಂಜಾನಃ ಪ್ರಪಿಬನ್ಖಾದನ್ ಬಾಲಕಸ್ನೇಹಯಂತ್ರಿತಃ ।
ಭೋಜಯನ್ಪಾಯಯನ್ಮೂಢೋ ನ ವೇದಾಗತಮಂತಕಮ್ ॥ ೨೬ ॥

ಎಲೈ ಮಹಾರಾಜನೇ! ಪಾಪಿಯಾದ ಮನುಷ್ಯನಿಗೆ ತನ್ನನ್ನು ಭಗವಾನ್ ಶ್ರೀಕೃಷ್ಣನಿಗೆ ಸಮರ್ಪಣೆ ಮಾಡಿಕೊಂಡು ಆತನನ್ನೂ ಅವನ ಭಕ್ತರನ್ನೂ ಸೇವಿಸುವುದರಿಂದ ಉಂಟಾಗುವಷ್ಟು ಶುದ್ಧಿಯು ತಪಸ್ಸು ಮುಂತಾದವುಗಳಿಂದ ಉಂಟಾಗುವುದಿಲ್ಲ. ॥ ೧೬ ॥ ಜಗತ್ತಿನಲ್ಲಿ ಈ ಭಕ್ತಿಪಂಥವೇ ಸರ್ವಶ್ರೇಷ್ಠವೂ, ಭಯ ರಹಿತವೂ, ಕಲ್ಯಾಣಪ್ರದವೂ ಆಗಿದೆ. ಏಕೆಂದರೆ, ಈ ಮಾರ್ಗದಲ್ಲಿ ಭಗವತ್ಪರಾಯಣರೂ, ಶೀಲವಂತರೂ ಆದ ಸಾಧುಗಳು ನಡೆಯುತ್ತಾರೆ. ॥ ೧೭ ॥ ಪರೀಕ್ಷಿತನೇ! ಮದ್ಯ ತುಂಬಿದ ಗಡಿಗೆಯನ್ನು ನದಿಗಳು ಶುದ್ಧವಾಗಿಸಲಾರವೋ, ಹಾಗೆಯೇ ಶ್ರೀಭಗವಂತನಿಗೆ ವಿಮುಖರಾದ ಮನುಷ್ಯರು ದೊಡ್ಡ-ದೊಡ್ಡ ಪ್ರಾಯಶ್ಚಿತ್ತಗಳನ್ನು ಮತ್ತೆ-ಮತ್ತೆ ಮಾಡಿಕೊಂಡರೂ ಅವರು ಪವಿತ್ರರಾಗಲಾರರು. ॥ ೧೮ ॥ ಶ್ರೀಭಗವಂತನ ಗುಣಗಳ ಸೇವನೆಯಲ್ಲಿ ಅನುರಾಗವುಳ್ಳ ತಮ್ಮ ಮನಸ್ಸೆಂಬ ದುಂಬಿಗೆ ಶ್ರೀಕೃಷ್ಣನ ಅಡಿದಾವರೆಗಳ ಮಕರಂದ ರಸವನ್ನು ಒಂದು ಬಾರಿ ಪಾನಮಾಡಿಸುವವನು ಎಲ್ಲ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡಂತೆಯೇ ಸರಿ. ಅಂಥವರು ಕನಸಿನಲ್ಲಿಯೂ ಯಮರಾಜನನ್ನೂ, ಅವನ ಪಾಶಧರಿಸಿದ ದೂತರನ್ನೂ ನೋಡಲಾರನು. ಮತ್ತೆ ನರಕದ ಮಾತೆಲ್ಲಿದೆ? ॥ ೧೯ ॥

ಪರೀಕ್ಷಿದ್ರಾಜನೇ! ಈ ವಿಷಯದಲ್ಲಿ ಮಹಾತ್ಮರು ಒಂದು ಪ್ರಾಚೀನ ಇತಿಹಾಸವನ್ನು ಹೇಳುತ್ತಾರೆ. ಅದರಲ್ಲಿ ಭಗವಾನ್ ವಿಷ್ಣು ದೂತರಿಗೂ, ಯಮದೂತರಿಗೂ ನಡೆದ ಸಂವಾದವಿದೆ. ಅದನ್ನು ನಿನಗೆ ಹೇಳುತ್ತೇನೆ, ಕೇಳು. ॥ ೨೦॥ ಕಾನ್ಯಕುಬ್ಜದೇಶದಲ್ಲಿ ಅಜಾಮಿಳನೆಂಬ ಓರ್ವ ಬ್ರಾಹ್ಮಣನಿದ್ದನು. ಅವನು ಒಬ್ಬ ದಾಸಸ್ತ್ರೀಯನ್ನು ಹೆಂಡತಿಯನ್ನಾಗಿಸಿಕೊಂಡು ಆಕೆಯ ಸಹವಾಸದಿಂದ ದೂಷಿತನಾಗಿ ಸದಾಚಾರವನ್ನು ತೊರೆದು ಪೂರ್ಣಭ್ರಷ್ಟನಾಗಿದ್ದನು. ॥ ೨೧ ॥ ಆ ಪತಿತನು ಕೆಲವೊಮ್ಮೆ ಲೂಟಿ ಮಾಡುವುದು, ಕೆಲವೊಮ್ಮೆ ಕಳ್ಳತನ ಮಾಡುವುದು ಮುಂತಾದ ನೀಚವೃತ್ತಿಗಳಿಂದ ತನ್ನ ಕುಟುಂಬವನ್ನು ಸಾಕುತ್ತಿದ್ದನು. ಹಾಗೂ ಪ್ರಾಣಿಗಳಿಗೆ ತುಂಬಾ ಪೀಡೆಯನ್ನುಂಟುಮಾಡುತ್ತಿದ್ದನು. ॥ ೨೨ ॥ ಮಹಾರಾಜನೇ! ಹೀಗೆ ಆ ದಾಸಿಯ ಸಹವಾಸದಲ್ಲಿರುತ್ತಾ ಆಕೆಯ ಮಕ್ಕಳನ್ನು ಲಾಲಿಸಿ-ಪಾಲಿಸುತ್ತಾ ಆತನ ಆಯುಸ್ಸಿನ ಬಹುಭಾಗವು ಅಂದರೆ ಎಂಭತ್ತೆಂಟು ವರ್ಷಗಳು ಕಳೆದು ಹೋದವು. ॥ ೨೩ ॥ ಮುದುಕನಾದ ಅಜಾಮಿಳನಿಗೆ ಹತ್ತು ಪುತ್ರರಿದ್ದರು. ಅವರಲ್ಲಿ ಎಲ್ಲರಿಗಿಂತಲೂ ಕಿರಿಯವನ ಹೆಸರು 'ನಾರಾಯಣ' ಎಂದಿತ್ತು. ತಂದೆ-ತಾಯಿಯರು ಅವನನ್ನು ತುಂಬಾ ಪ್ರೀತಿಸುತ್ತಿದ್ದರು. ॥ ೨೪ ॥ ಮುದುಕ ಅಜಾಮಿಳನು ಕಡುಮೋಹದಿಂದ ತನ್ನ ಪೂರ್ಣವಾದ ಮನಸ್ಸನ್ನು ಆ ಪುತ್ರನಲ್ಲಿಟ್ಟಿದ್ದನು. ಆತನ ತೊದಲುನುಡಿಗಳನ್ನು ಕೇಳುತ್ತಾ ಅವನ ಆಟ-ಪಾಟಗಳನ್ನು ನೋಡುತ್ತಾ ಆನಂದಪಡುತ್ತಿದ್ದನು. ॥ ೨೫ ॥ ಹುಡುಗನ ಸ್ನೇಹಪಾಶದಲ್ಲಿ ಬಂಧಿತನಾದ ಅವನು ತಾನು ತಿನ್ನುವಾಗ, ಕುಡಿಯುವಾಗ ಅವನಿಗೂ ತಿನ್ನಿಸುತ್ತಾ ಕಾಲಕಳೆಯುತ್ತಿದ್ದ ಆ ಮೂಢನಿಗೆ ಮೃತ್ಯುವು ತಲೆಯ ಮೇಲೆ ಬಂದು ಕುಳಿತಿರುವುದು ತಿಳಿಯದೇ ಹೋಯಿತು. ॥ ೨೬ ॥

ಸ ಏವಂ ವರ್ತಮಾನೋಽಜ್ಞೋ ಮೃತ್ಯುಕಾಲ ಉಪಸ್ಥಿತೇ ।
ಮತಿಂ ಚಕಾರ ತನಯೇ ಬಾಲೇ ನಾರಾಯಣಾಹ್ವಯೇ ॥ ೨೭ ॥

ಸ ಪಾಶಹಸ್ತಾಂಸ್ತ್ರೀನ್ ದೃಷ್ಟ್ವಾ ಪುರುಷಾನ್ ಭೃಶದಾರುಣಾನ್ ।
ವಕ್ರತುಂಡಾನೂರ್ಧ್ವರೋಮ್ಣ ಆತ್ಮಾನಂ ನೇತುಮಾಗತಾನ್ ॥ ೨೮ ॥

ದೂರೇ ಕ್ರೀಡನಕಾಸಕ್ತಂ ಪುತ್ರಂ ನಾರಾಯಣಾಹ್ವಯಮ್ ।
ಪ್ಲಾವಿತೇನ ಸ್ವರೇಣೋಚ್ಚೈರಾಜುಹಾವಾಕುಲೇಂದ್ರಿಯಃ ॥ ೨೯ ॥

ನಿಶಮ್ಯ ಮ್ರಿಯಮಾಣಸ್ಯ ಬ್ರುವತೋ ಹರಿಕೀರ್ತನಮ್ ।
ಭರ್ತುರ್ನಾಮ ಮಹಾರಾಜ ಪಾರ್ಷದಾಃ ಸಹಸಾಽಪತನ್ ॥ ೩೦ ॥

ವಿಕರ್ಷತೋಽನ್ತರ್ಹೃದಯಾದ್ದಾಸೀಪತಿಮಜಾಮಿಲಮ್ ।
ಯಮಪ್ರೇಷ್ಯಾನ್ವಿಷ್ಣುದೂತಾ ವಾರಯಾಮಾಸುರೋಜಸಾ ॥ ೩೧ ॥

ಊಚುರ್ನಿಷೇಧಿತಾಸ್ತಾಂಸ್ತೇ ವೈವಸ್ವತಪುರಃಸರಾಃ ।
ಕೇ ಯೂಯಂ ಪ್ರತಿಷೇದ್ಧಾರೋ ಧರ್ಮರಾಜಸ್ಯ ಶಾಸನಮ್ ॥ ೩೨ ॥

ಕಸ್ಯ ವಾ ಕುತ ಆಯಾತಾಃ ಕಸ್ಮಾದಸ್ಯ ನಿಷೇಧಥ ।
ಕಿಂ ದೇವಾ ಉಪದೇವಾ ವಾ ಯೂಯಂ ಕಿಂ ಸಿದ್ಧಸತ್ತಮಾಃ ॥ ೩೩ ॥

ಸರ್ವೇ ಪದ್ಮಪಲಾಶಾಕ್ಷಾಃ ಪೀತಕೌಶೇಯವಾಸಸಃ ।
ಕಿರೀಟಿನಃ ಕುಂಡಲಿನೋ ಲಸತ್ಪುಷ್ಕರಮಾಲಿನಃ ॥ ೩೪ ॥

ಸರ್ವೇ ಚ ನೂತ್ನವಯಸಃ ಸರ್ವೇ ಚಾರುಚತುರ್ಭುಜಾಃ ।
ಧನುರ್ನಿಷಂಗಾಸಿಗದಾಶಂಖಚಕ್ರಾಂಬುಜಶ್ರಿಯಃ ॥ ೩೫ ॥

ದಿಶೋ ವಿತಿಮಿರಾಲೋಕಾಃ ಕುರ್ವಂತಃ ಸ್ವೇನ ರೋಚಿಷಾ ।
ಕಿಮರ್ಥಂ ಧರ್ಮಪಾಲಸ್ಯ ಕಿಂಕರಾನ್ನೋ ನಿಷೇಧಥ ॥ ೩೬ ॥

*ಶ್ರೀಶುಕ ಉವಾಚ*

ಇತ್ಯುಕ್ತೇ ಯಮದೂತೈಸ್ತೈರ್ವಾಸುದೇವೋಕ್ತಕಾರಿಣಃ ।
ತಾನ್ ಪ್ರತ್ಯೂಚುಃ ಪ್ರಹಸ್ಯೇದಂ ಮೇಘನಿರ್ಹ್ರಾದಯಾ ಗಿರಾ ॥ ೩೭ ॥

*ವಿಷ್ಣುದೂತಾ ಊಚುಃ*

ಯೂಯಂ ವೈ ಧರ್ಮರಾಜಸ್ಯ ಯದಿ ನಿರ್ದೇಶಕಾರಿಣಃ ।
ಬ್ರೂತ ಧರ್ಮಸ್ಯ ನಸ್ತತ್ತ್ವಂ ಯಚ್ಚ ಧರ್ಮಸ್ಯ ಲಕ್ಷಣಮ್ ॥ ೩೮ ॥

ಆ ಮೂರ್ಖನು ಹೀಗೆ ತನ್ನ ಜೀವನವನ್ನು ಸಾಗಿಸುತ್ತಿರುವಾಗ ಕೊನೆಗಾಲವು ಬಂದೇಬಿಟ್ಟಿತು. ಆಗಲೂ ಅವನು ತನ್ನ ಪುತ್ರ ನಾರಾಯಣನ ಕುರಿತೇ ಚಿಂತಿಸುತ್ತಿದ್ದನು. ॥ ೨೭ ॥ ಇಷ್ಟರಲ್ಲಿ ತನ್ನನ್ನು ಸೆಳೆದೊಯ್ಯಲು ಅತ್ಯಂತ ಭಯಂಕರರಾದ ಮೂವರು ಯಮದೂತರು ಬಂದಿರುವುದನ್ನು ಅವನು ನೋಡಿದನು. ಅವರು ಕೈಯಲ್ಲಿ ಪಾಶಗಳನ್ನು ಹಿಡಿದಿದ್ದು, ಅವರ ಮುಖಗಳು ಸೊಟ್ಟಗಿದ್ದವು. ಶರೀರದ ಮೇಲೆ ರೋಮಗಳು ನಿಮಿರಿ ನಿಂತಿದ್ದವು. ॥ ೨೮ ॥ ಆಗ ಬಾಲಕನಾದ ನಾರಾಯಣನು ಸ್ವಲ್ಪ ದೂರದಲ್ಲಿ ಆಡುತ್ತಿದ್ದನು. ಯಮದೂತರನ್ನು ಕಂಡು ಅಜಾಮಿಳನು ಅತ್ಯಂತ ವ್ಯಾಕುಲನಾಗಿ, ಭಯಗೊಂಡು ಗಟ್ಟಿಯಾಗಿ 'ನಾರಾಯಣಾ' ಎಂದು ಕೂಗಿದನು. ॥ ೨೯ ॥ ಭಗವಂತನ ಪಾರ್ಷದರು ನೋಡಿದರು – ಇವನು ಸಾಯುವಾಗ ನಮ್ಮ ಸ್ವಾಮಿಯಾದ ಭಗವಾನ್ ನಾರಾಯಣನ ಹೆಸರನ್ನು ಹೇಳುತ್ತಿದ್ದಾನೆ. ಅವನ ನಾಮದ ಕೀರ್ತನೆ ಮಾಡುತ್ತಿದ್ದಾನೆ. ಆದ್ದರಿಂದ ಅವರು ಅತ್ಯಧಿಕ ವೇಗದಿಂದ ತಟ್ಟನೇ ಅಲ್ಲಿಗೆ ಬಂದು ತಲುಪಿದರು. ॥ ೩೦ ॥ ಆ ಸಮಯದಲ್ಲಿ ಯಮನ ದೂತರು ದಾಸೀಪತಿಯಾದ ಅಜಾಮಿಳನ ಶರೀರದಿಂದ ಅವನ ಸೂಕ್ಷ್ಮಶರೀರವನ್ನು ಸೆಳೆಯುತ್ತಿದ್ದರು. ವಿಷ್ಣುದೂತರು ಅವರನ್ನು ಬಲವಂತವಾಗಿ ತಡೆದರು. ॥ ೩೧ ॥ ಅವರು ಹೀಗೆ ತಡೆದಾಗ ಯಮನ ದೂತರು ವಿಷ್ಣುದೂತರಲ್ಲಿ ಹೇಳಿದರು – ಅರೇ ! ಯಮಧರ್ಮನ ಶಾಸನವನ್ನು ತಡೆಯುವವರು ನೀವು ಯಾರು ? ॥ ೩೨ ॥ ನೀವು ಯಾರ ದೂತರು ? ಎಲ್ಲಿಂದ ಬಂದಿರುವಿರಿ ? ಇವನನ್ನು ಕೊಂಡುಹೋಗುವುದನ್ನು ಏಕೆ ತಡೆಯುತ್ತಿರುವಿರಿ ? ನೀವು ಯಾರಾದರೂ ದೇವತೆಗಳೋ, ಉಪದೇವತೆಗಳೋ, ಅಥವಾ ಸಿದ್ಧಶ್ರೇಷ್ಠರಾಗಿದ್ದೀರೋ ? ॥ ೩೩ ॥ ನಿಮ್ಮೆಲ್ಲರ ಕಣ್ಣುಗಳು ಕಮಲದ ದಳಗಳಂತೆ ಸುಂದರ ಸುಕುಮಾರವಾಗಿವೆ. ನೀವು ಹಳದಿಬಣ್ಣದ ರೇಶ್ಮೆಯ ವಸ್ತ್ರವನ್ನು ಧರಿಸಿರುವಿರಿ. ನಿಮ್ಮ ತಲೆಯ ಮೇಲೆ ಕಿರೀಟವೂ, ಕಿವಿಗಳಲ್ಲಿ ಕುಂಡಲಗಳೂ, ಕತ್ತಿನಲ್ಲಿ ಕಮಲಗಳ ಮಾಲೆಗಳು ಬೆಳಗುತ್ತಿವೆ. ॥ ೩೪ ॥ ನೀವೆಲ್ಲರೂ ತರುಣರಾಗಿದ್ದೀರಿ. ಸುಂದರವಾದ ನಾಲ್ಕು-ನಾಲ್ಕು ನೀಡುತೋಳುಗಳಿದ್ದು, ಎಲ್ಲರ ಕರಕಮಲಗಳಲ್ಲಿ ಧನುಷ್ಯ, ಬಾಣ, ಖಡ್ಗ, ಗದೆ, ಶಂಖ, ಚಕ್ರ, ಕಮಲ ಮುಂತಾದವುಗಳು ಶೋಭಿಸುತ್ತಿವೆ. ॥ ೩೫ ॥ ನಿಮ್ಮಗಳ ದೇಹಕಾಂತಿಯಿಂದ ಎಲ್ಲ ದಿಕ್ಕುಗಳ ಅಂಧಕಾರ ಮತ್ತು ಪ್ರಾಕೃತ ಪ್ರಕಾಶವೂ ದೂರವಾಗುತ್ತಿದೆ. ನಾವು ಯಮಧರ್ಮನ ಸೇವಕರು. ನಮ್ಮನ್ನು ನೀವುಗಳು ಏಕೆ ತಡೆಯುತ್ತಿದ್ದೀರಿ ? ॥ ೩೬ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ ! ಯಮದೂತರು ಹೀಗೆ ಕೇಳಿದಾಗ ಭಗವಾನ್ ನಾರಾಯಣನ ಆಜ್ಞಾಕಾರಿ ಪಾರ್ಷದರು ನಗುತ್ತಾ ಮೇಘಗಂಭೀರವಾದ ಮಾತುಗಳಿಂದ ಅವರಲ್ಲಿ ಹೀಗೆ ಹೇಳಿದರು. ॥ ೩೭ ॥

ಭಗವಂತನ ಪಾರ್ಷದರು ಹೇಳಿದರು – ಎಲೈ ಯಮದೂತರಿರಾ ! ನೀವುಗಳು ನಿಜವಾಗಿ ಯಮಧರ್ಮನ ಆಜ್ಞಾಕಾರಿಗಳಾಗಿದ್ದರೆ ಧರ್ಮದ ಲಕ್ಷಣ ಮತ್ತು ಧರ್ಮದ ತತ್ತ್ವವನ್ನು ತಿಳಿಸೋಣವಾಗಲಿ. ॥ ೩೮ ॥

ಕಥಂಸ್ವಿದ್ ಧ್ರಿಯತೇ ದಂಡಃ ಕಿಂ ವಾಸ್ಯ ಸ್ಥಾನಮೀಪ್ಸಿತಮ್ ।
ದಂಡ್ಯಾಃ ಕಿಂ ಕಾರಿಣಃ ಸರ್ವೇ ಆಹೋಸ್ವಿತ್ಕತಿಚಿನ್ನೃಣಾಮ್ ॥ ೩೯ ॥

ದಂಡನೆಯನ್ನು ಹೇಗೆ ಕೊಡಲಾಗುತ್ತದೆ? ದಂಡನೆಗೆ ಯಾವನು ಪಾತ್ರನು? ಮನುಷ್ಯರಲ್ಲಿ ಪಾಪವನ್ನು ಆಚರಿಸಿದವರೆಲ್ಲರೂ ದಂಡನೆಗೆ ಅರ್ಹರೋ, ಅಥವಾ ಅವರಲ್ಲಿ ಕೆಲವರೋ? ಎಂಬುದನ್ನು ತಿಳಿಸಿರಿ. ॥ ೩೯ ॥

*ಯಮದೂತಾ ಊಚುಃ*

ವೇದಪ್ರಣಿಹಿತೋಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ।
ವೇದೋ ನಾರಾಯಣಃ ಸಾಕ್ಷಾತ್ಸ್ವಯಂಭೂರಿತಿ ಶುಶ್ರುಮ ॥ ೪೦ ॥

ಯೇನ ಸ್ವಧಾಮ್ನ್ಯಮೀ ಭಾವಾ ರಜಸ್ಸತ್ತ್ವತಮೋಮಯಾಃ ।
ಗುಣನಾಮಕ್ರಿಯಾರೂಪೈರ್ವಿಭಾವ್ಯಂತೇ ಯಥಾತಥಮ್ ॥ ೪೧ ॥

ಸೂರ್ಯೋಽಗ್ನಿಃ ಖಂ ಮರುದ್ಗಾವಃ ಸೋಮಃ ಸಂಧ್ಯಾಹನೀ ದಿಶಃ ।
ಕಂ ಕುಃ ಕಾಲೋ ಧರ್ಮ ಇತಿ ಹ್ಯೇತೇ ದೈಹ್ಯಸ್ಯ ಸಾಕ್ಷಿಣಃ ॥ ೪೨ ॥

ಏತೈರಧರ್ಮೋ ವಿಜ್ಞಾತಃ ಸ್ಥಾನಂ ದಂಡಸ್ಯ ಯುಜ್ಯತೇ ।
ಸರ್ವೇ ಕರ್ಮಾನುರೋಧೇನ ದಂಡಮರ್ಹಂತಿ ಕಾರಿಣಃ ॥ ೪೩ ॥

ಸಂಭವಂತಿ ಹಿ ಭದ್ರಾಣಿ ವಿಪರೀತಾನಿ ಚಾನಘಾಃ ।
ಕಾರಿಣಾಂ ಗುಣಸಂಗೋಽಸ್ತಿ ದೇಹವಾನ್ನ ಹ್ಯಕರ್ಮಕೃತ್ ॥ ೪೪ ॥

ಯೇನ ಯಾವಾನ್ಯಥಾಧರ್ಮೋ ಧರ್ಮೋ ವೇಹ ಸಮೀಹಿತಃ ।
ಸ ಏವ ತತ್ಫಲಂ ಭುಂಕ್ತೇ ತಥಾ ತಾವದಮುತ್ರ ವೈ ॥ ೪೫ ॥

ಯಥೇಹ ದೇವಪ್ರವರಾಸ್ತ್ರೈವಿಧ್ಯಮುಪಲಭ್ಯತೇ ।
ಭೂತೇಷು ಗುಣವೈಚಿತ್ರ್ಯಾತ್ತಥಾನ್ಯತ್ರಾನುಮೀಯತೇ ॥ ೪೬ ॥

ವರ್ತಮಾನೋಽನ್ಯಯೋಃ ಕಾಲೋ ಗುಣಾಭಿಜ್ಞಾಪಕೋ ಯಥಾ ।
ಏವಂ ಜನ್ಮಾನ್ಯಯೋರೇತದ್ ಧರ್ಮಾಧರ್ಮನಿದರ್ಶನಮ್ ॥ ೪೭ ॥

ಮನಸೈವ ಪುರೇ ದೇವಃ ಪೂರ್ವರೂಪಂ ವಿಪಶ್ಯತಿ ।
ಅನುಮೀಮಾಂಸತೇಽಪೂರ್ವಂ ಮನಸಾ ಭಗವಾನಜಃ ॥ ೪೮ ॥

**ಯಮದೂತರು ಹೇಳಿದರು** – ವೇದಗಳು ವಿಧಿಸಿದ ಕರ್ಮಗಳೇ ಧರ್ಮವು. ನಿಷೇಧ ಮಾಡಿರುವುದೆಲ್ಲವೂ ಅಧರ್ಮವಾಗಿದೆ. ವೇದಗಳು ಸ್ವಯಂ ಭಗವಂತನ ಸ್ವರೂಪಗಳಾಗಿವೆ. ಅವು ಅವನ ಸ್ವಾಭಾವಿಕ ಶ್ವಾಸ-ಉಚ್ಛ್ವಾಸಗಳು ಹಾಗೂ ಸ್ವಯಂಪ್ರಕಾಶ ಜ್ಞಾನವಾಗಿದೆ ಎಂದು ನಾವು ಕೇಳಿದ್ದೇವೆ. ॥ ೪೦ ॥ ಜಗತ್ತಿನ ರಜೋಮಯ, ಸತ್ತ್ವಮಯ, ತಮೋಮಯ ಎಲ್ಲ ಪದಾರ್ಥಗಳು, ಎಲ್ಲ ಪ್ರಾಣಿಗಳು ತಮ್ಮ ಪರಮಾಶ್ರಯ ಭಗವಂತನಲ್ಲೇ ನೆಲೆಸಿವೆ. ವೇದವೇ ಅವುಗಳ ಗುಣ, ನಾಮ, ಕರ್ಮ, ರೂಪ ಮುಂತಾದವುಗಳಿಗೆ ಅನುಸಾರವಾಗಿ ಅವುಗಳನ್ನು ಯಥಾಯೋಗ್ಯವಾಗಿ ವಿಭಾಜಿಸುತ್ತವೆ. ॥ ೪೧ ॥ ಜೀವಿಯು ಶರೀರ ಅಥವಾ ಮನೋವೃತ್ತಿಯಿಂದ ಮಾಡುವ ಕರ್ಮಗಳಿಗೆ – ಸೂರ್ಯ, ಅಗ್ನಿ, ಆಕಾಶ, ವಾಯು, ಇಂದ್ರಿಯಗಳು, ಚಂದ್ರ, ಸಂಧ್ಯೆಗಳು, ರಾತ್ರಿ, ಹಗಲು, ದಿಕ್ಕುಗಳು, ನೀರು, ಪೃಥಿವಿ, ಕಾಲ ಮತ್ತು ಧರ್ಮ ಇವುಗಳು ಸಾಕ್ಷಿಯಾಗಿರುತ್ತವೆ. ॥ ೪೨ ॥ ಇವುಗಳ ಮೂಲಕ ಅಧರ್ಮವು ಯಾವುದು ಎಂಬುದು ಪತ್ತೆ ಮಾಡಿ ದಂಡನೆಯ ನಿರ್ಣಯವಾಗುತ್ತದೆ. ಪಾಪಕರ್ಮ ಮಾಡುವ ಎಲ್ಲ ಮನುಷ್ಯರು ತಮ್ಮ-ತಮ್ಮ ಕರ್ಮಗಳಿಗೆ ಅನುಸಾರ ದಂಡನೆಗೆ ಯೋಗ್ಯರಾಗುವರು. ॥ ೪೩ ॥ ಎಲೈ ಪುಣ್ಯಾತ್ಮರೇ! ಕರ್ಮ ಮಾಡುವ ಪ್ರಾಣಿಗಳಿಗೆ ಗುಣಗಳೊಂದಿಗೆ ಸಂಬಂಧ ಇದ್ದೇ ಇರುತ್ತದೆ. ಅದರಿಂದ ಎಲ್ಲರಿಂದಲೂ ಕೆಲವು ಪಾಪಗಳು, ಕೆಲವು ಪುಣ್ಯಗಳು ಆಗುತ್ತಿರುತ್ತವೆ. ದೇಹವನ್ನು ಹೊತ್ತ ಯಾವ ಪುರುಷನೂ ಕೂಡ ಕರ್ಮಗಳನ್ನು ಮಾಡದೆ ಇರಲಾರದು. ॥ ೪೪ ॥ ಈ ಲೋಕದಲ್ಲಿ ಯಾವ ಮನುಷ್ಯನು ಎಷ್ಟು ರೀತಿಯ ಧರ್ಮ ಮತ್ತು ಅಧರ್ಮವನ್ನು ಮಾಡುವನೋ ಅವನು ಪರಲೋಕದಲ್ಲಿ ಅಷ್ಟಷ್ಟೇ ಫಲವನ್ನು ಭೋಗಿಸುತ್ತಾನೆ. ॥ ೪೫ ॥ ಎಲೈ ದೇವಶಿಖಾಮಣಿಗಳೇ! ಸತ್ತ್ವ, ರಜ, ತಮ – ಈ ತ್ರಿಗುಣಗಳ ಭೇದದಿಂದ ಈ ಲೋಕದಲ್ಲಿ ಪುಣ್ಯಾತ್ಮರು, ಪಾಪಾತ್ಮರು ಮತ್ತು ಪಾಪ-ಪುಣ್ಯ ಇದರಿಂದ ಕೂಡಿದವರು ಅಥವಾ ಸುಖಿಗಳು, ದುಃಖಿಗಳು ಮತ್ತು ಸುಖ-ದುಃಖವೆರಡರಿಂದಲೂ ಕೂಡಿದ ಮೂರು ರೀತಿಯ ಪ್ರಾಣಿಗಳು ಕಂಡುಬರುತ್ತವೆ. ಹಾಗೆಯೇ ಪರಲೋಕದಲ್ಲಿಯೂ ಅವರ ತ್ರಿವಿಧತೆಯನ್ನು ಊಹಿಸಬಹುದು. ॥ ೪೬ ॥ ವರ್ತಮಾನ ಕಾಲದಿಂದ ಭೂತ ಮತ್ತು ಭವಿಷ್ಯತ್ತನ್ನು ಊಹಿಸಬಹುದೋ, ಹಾಗೆಯೇ ವರ್ತಮಾನ ಜನ್ಮದ ಪಾಪ-ಪುಣ್ಯಗಳನ್ನೂ ಕೂಡಾ ಭೂತ ಹಾಗೂ ಭವಿಷ್ಯತ್ತಿನಿಂದ ಊಹಿಸಬಹುದು. ॥ ೪೭ ॥ ನಮ್ಮ ಸ್ವಾಮಿಯಾದ ಅಜನ್ಮಾ ಭಗವಾನ್ ಸರ್ವಜ್ಞ ಯಮರಾಜರು ಎಲ್ಲರ ಅಂತಃಕರಣದಲ್ಲಿ ವಿರಾಜಮಾನರಾಗಿದ್ದಾರೆ. ಅದರಿಂದ ಅವರು ತಮ್ಮ ಮನಸ್ಸಿನಿಂದಲೇ ಎಲ್ಲರ ಹಿಂದಿನ ರೂಪಗಳನ್ನು ನೋಡಿಕೊಳ್ಳುವರು. ಜೊತೆಗೆ ಅವರ ಮುಂದಿನ ಸ್ವರೂಪವನ್ನೂ ವಿಚಾರಮಾಡಿಕೊಳ್ಳುವರು. ॥ ೪೮ ॥

ಯಥಾಜ್ಞಸ್ತಮಸಾ ಯುಕ್ತ ಉಪಾಸ್ತೇ ವ್ಯಕ್ತಮೇವ ಹಿ।
ನ ವೇದ ಪೂರ್ವಮಪರಂ ನಷ್ಟಜನ್ಮಸ್ಮೃತಿಸ್ತಥಾ ॥ ೪೯ ॥

ಪಂಚಭಿಃ ಕುರುತೇ ಸ್ವಾರ್ಥಾನ್ ಪಂಚ ವೇದಾಥ ಪಂಚಭಿಃ।
ಏಕಸ್ತು ಷೋಡಶೇನ ತ್ರೀನ್ಸ್ವಯಂ ಸಪ್ತದಶೋಽಶ್ನುತೇ ॥ ೫೦ ॥

ತದೇತತ್ ಷೋಡಶಕಲಂ ಲಿಂಗಂ ಶಕ್ತಿತ್ರಯಂ ಮಹತ್।
ಧತ್ತೇಽನು ಸಂಸೃತಿಂ ಪುಂಸಿ ಹರ್ಷಶೋಕಭಯಾರ್ತಿದಾಮ್ ॥ ೫೧ ॥

ದೇಹ್ಯಜ್ಞೋಽಜಿತಷಡ್ವರ್ಗೋ ನೇಚ್ಛನ್ಕರ್ಮಾಣಿ ಕಾರ್ಯತೇ।
ಕೋಶಕಾರ ಇವಾತ್ಮಾನಂ ಕರ್ಮಣಾಽಽಚ್ಛಾದ್ಯ ಮುಹ್ಯತಿ ॥ ೫೨ ॥

ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್।
ಕಾರ್ಯತೇ ಹ್ಯವಶಃ ಕರ್ಮ ಗುಣೈಃ ಸ್ವಾಭಾವಿಕೈರ್ಬಲಾತ್ ॥ ೫೩ ॥

ಲಬ್ಧ್ವಾ ನಿಮಿತ್ತಮವ್ಯಕ್ತಂ ವ್ಯಕ್ತಾವ್ಯಕ್ತಂ ಭವತ್ಯುತ।
ಯಥಾಯೋನಿ ಯಥಾಬೀಜಂ ಸ್ವಭಾವೇನ ಬಲೀಯಸಾ ॥ ೫೪ ॥

ಏಷ ಪ್ರಕೃತಿಸಂಗೇನ ಪುರುಷಸ್ಯ ವಿಪರ್ಯಯಃ।
ಆಸೀತ್ ಸ ಏವ ನಚಿರಾದೀಶಸಂಗಾದ್ವಿಲೀಯತೇ ॥ ೫೫ ॥

ಅಯಂ ಹಿ ಶ್ರುತಸಂಪನ್ನಃ ಶೀಲವೃತ್ತಗುಣಾಲಯಃ।
ಧೃತವ್ರತೋ ಮೃದುರ್ದಾಂತಃ ಸತ್ಯವಾನ್ಮಂತ್ರವಿಚ್ಛುಚಿಃ ॥ ೫೬ ॥

ಮಲಗಿರುವ ಅಜ್ಞಾನಿಯು ಸ್ವಪ್ನದ ಸಮಯದಲ್ಲಿ ಕಂಡು ಬರುವ ಕಲ್ಪಿತ ಶರೀರವನ್ನೇ ತನ್ನ ನಿಜವಾದ ಶರೀರವೆಂದು ತಿಳಿಯುತ್ತಾನೆ. ಮಲಗಿರುವ ಅಥವಾ ಎಚ್ಚರಗೊಳ್ಳುವ ಶರೀರವನ್ನು ಮರೆತುಬಿಡುತ್ತಾನೆ. ಹೀಗೆಯೇ ಜೀವಿಯೂ ಕೂಡ ತನ್ನ ಹಿಂದಿನ ಜನ್ಮಗಳ ನೆನಪನ್ನು ಮರೆತು ಬಿಡುತ್ತಾನೆ ಮತ್ತು ವರ್ತಮಾನದ ಶರೀರವನ್ನು ಬಿಟ್ಟು ಹಿಂದಿನ-ಮುಂದಿನ ಶರೀರಗಳ ಸಂಬಂಧದಲ್ಲಿ ಏನನ್ನು ತಿಳಿಯುವುದಿಲ್ಲ. ॥ ೪೯ ॥ ಸಿದ್ಧಪುರುಷರೇ! ಜೀವಿಯು ಈ ಶರೀರದಲ್ಲಿ ಕರ್ಮೇಂದ್ರಿಯಗಳಿಂದ ಕೊಟ್ಟು-ಕೊಳ್ಳುವುದು, ನಡೆದಾಡುವುದು ಮುಂತಾದ ಕೆಲಸವನ್ನು ಮಾಡುತ್ತಾನೆ. ಐದು ಜ್ಞಾನೇಂದ್ರಿಯಗಳಿಂದ ರೂಪ, ರಸ ಮುಂತಾದ ಐದು ವಿಷಯಗಳನ್ನು ಅನುಭವಿಸುತ್ತಾನೆ. ಹದಿನಾರನೆಯ ಮನಸ್ಸಿನೊಂದಿಗೆ ಸ್ವಯಂ ಹದಿನೇಳನೆಯವನಾಗಿ ಕೂಡಿಕೊಂಡು ಒಬ್ಬಂಟಿಗನಾಗಿಯೇ ಮನಸ್ಸು, ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯ ಈ ಮೂರರ ವಿಷಯಗಳನ್ನು ಭೋಗಿಸುತ್ತಾನೆ. ॥ ೫೦ ॥ ಜೀವಿಯ ಈ ಹದಿನಾರು ಕಲೆ ಮತ್ತು ಸತ್ತ್ವಾದಿ ಮೂರು ಗುಣಗಳುಳ್ಳ ಲಿಂಗಶರೀರವು ಅನಾದಿಯಾಗಿದೆ. ಇದೇ ಜೀವಿ ಯನ್ನು ಪದೇ-ಪದೇ ಹರ್ಷ, ಶೋಕ, ಭಯ ಮತ್ತು ಪೀಡೆಗಳನ್ನು ಕೊಡುವ ಜನ್ಮ-ಮರಣದ ಚಕ್ರದಲ್ಲಿ ಕೆಡಹುತ್ತದೆ. ॥ ೫೧ ॥ ಅಜ್ಞಾನಕ್ಕೆ ವಶನಾಗಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು ಶತ್ರುಗಳ ಮೇಲೆ ವಿಜಯವನ್ನು ಪಡೆಯದಿರುವ ಜೀವನಿಗೆ ಇಚ್ಛೆ ಇಲ್ಲದಿದ್ದರೂ ಬೇರೆ-ಬೇರೆ ವಾಸನೆಗಳ ಅನುಸಾರ ಅನೇಕ ಕರ್ಮಗಳನ್ನು ಮಾಡ ಬೇಕಾಗುತ್ತದೆ. ಅಂತಹ ಸ್ಥಿತಿಯಲ್ಲಿ ಅವನು ರೇಶ್ಮೆಹುಳದಂತೆ ತಾನು ಕರ್ಮದ ಬಲೆಯಲ್ಲಿ ಸಿಕ್ಕಿಕೊಳ್ಳುವನು ಮತ್ತು ಹಾಗೆ ತನ್ನ ಕೈಯಾರೆ ಮೋಹಕ್ಕೆ ಬಲಿಯಾಗುತ್ತಾನೆ. ॥ ೫೨ ॥ ಯಾವುದೇ ಶರೀರಧಾರೀ ಜೀವನು ಕರ್ಮಮಾಡದೆ ಒಂದು ಕ್ಷಣವೂ ಇರಲಾರನು. ಪ್ರತಿ ಯೋರ್ವ ಪ್ರಾಣಿಯ ಸ್ವಾಭಾವಿಕ ಗುಣಗಳೇ ಬಲವಂತವಾಗಿ ವಿವಶಗೊಳಿಸಿ ಅವನಿಂದ ಕರ್ಮಗಳನ್ನು ಮಾಡಿಸುತ್ತವೆ. ॥ ೫೩ ॥ ಜೀವಿಯು ತನ್ನ ಹಿಂದಿನ ಜನ್ಮಗಳ ಪಾಪ-ಪುಣ್ಯಮಯ ಸಂಸ್ಕಾರಗಳನುಸಾರವಾಗಿ ಸ್ಥೂಲ ಮತ್ತು ಸೂಕ್ಷ್ಮ ಶರೀರಗಳನ್ನು ಹೊಂದುತ್ತಾನೆ. ಅದರ ಸ್ವಾಭಾವಿಕ ಹಾಗೂ ಪ್ರಬಲ ವಾಸನೆಗಳು ಕೆಲವೊಮ್ಮೆ ಅವನಿಗೆ ತಾಯಿಯಂತೆ (ಸ್ತ್ರೀರೂಪವನ್ನು) ಮಾಡುತ್ತವೆ. ಕೆಲವೊಮ್ಮೆ ತಂದೆಯಂತೆ (ಪುರುಷರೂಪವನ್ನು) ಮಾಡುತ್ತವೆ. ॥ ೫೪ ॥ ಪ್ರಕೃತಿಯ ಸಂಸರ್ಗ ಉಂಟಾದ್ದರಿಂದಲೇ ಪುರುಷನು ತನ್ನ ವಾಸ್ತವಿಕ ಸ್ವರೂಪಕ್ಕಿಂತ ವಿಪರೀತವಾದ ಲಿಂಗಶರೀರವೇ ತಾನೆಂದು ತಿಳಿದು ಕೊಳ್ಳುವನು. ಈ ವಿರುದ್ಧವಾದ ಬುದ್ಧಿಯು ಭಗವಂತನ ಭಜನೆಯಿಂದ ಬೇಗನೇ ಹೊರಟುಹೋಗುವುದು. ॥ ೫೫ ॥

ಎಲೈ ದೇವತೆಗಳಿರಾ! ನಿಮಗೆ ತಿಳಿದೇ ಇರುವಂತೆ ಈ ಅಜಾಮಿಳನು ದೊಡ್ಡ ಶಾಸ್ತ್ರಜ್ಞನಾಗಿದ್ದನು. ಶೀಲ, ಸದ್ಗುಣ, ಸದಾಚಾರಗಳ ನಿಧಿಯಾಗಿದ್ದನು. ಬ್ರಹ್ಮಚಾರಿಯೂ, ವಿನಯಿಯೂ, ಜಿತೇಂದ್ರಿಯನೂ, ಸತ್ಯನಿಷ್ಠನೂ, ಮಂತ್ರಜ್ಞನೂ, ಪವಿತ್ರಾತ್ಮನೂ ಆಗಿದ್ದನು. ॥ ೫೬ ॥ ಇವನು ಗುರುಗಳ, ಅಗ್ನಿಯ, ಅತಿಥಿಗಳ, ಹಿರಿಯರ ಸೇವೆ ಮಾಡಿದ್ದನು. ಅಹಂಕಾರವಾದರೋ ಇವನಲ್ಲಿ ಇರಲೇ ಇಲ್ಲ.

ಗುರ್ವಗ್ನ್ಯತಿಥಿವೃದ್ಧಾನಾಂ ಶುಶ್ರೂಷುರ್ನಿರಹಂಕೃತಃ ।
ಸರ್ವಭೂತಸುಹೃತ್ಸಾಧುರ್ಮಿತವಾಗನಸೂಯಕಃ ॥ ೫೭ ॥

ಏಕದಾಸೌ ವನಂ ಯಾತಃ ಪಿತೃಸಂದೇಶಕೃದ್ದ್ವಿಜಃ ।
ಆದಾಯ ತತ ಆವೃತ್ತಃ ಫಲಪುಷ್ಪಸಮಿತ್ಕುಶಾನ್ ॥ ೫೮ ॥

ದದರ್ಶ ಕಾಮಿನಂ ಕಂಚಿಚ್ಛೂದ್ರಂ ಸಹ ಭುಜಿಷ್ಯಯಾ ।
ಪೀತ್ವಾ ಚ ಮಧು ಮೈರೇಯಂ ಮದಾಘೂರ್ಣಿತನೇತ್ರಯಾ ॥ ೫೯ ॥

ಮತ್ತಯಾ ವಿಶ್ಲಥನ್ನೀವ್ಯಾ ವ್ಯಪೇತಂ ನಿರಪತ್ರಪಮ್ ।
ಕ್ರೀಡಂತಮನು ಗಾಯಂತಂ ಹಸಂತಮನಯಾಂತಿಕೇ ॥ ೬೦ ॥

ದೃಷ್ಟ್ವಾ ತಾಂ ಕಾಮಲಿಪ್ತೇನ ಬಾಹುನಾ ಪರಿರಂಭಿತಾಮ್ ।
ಜಗಾಮ ಹೃಚ್ಛಯವಶಂ ಸಹಸೈವ ವಿಮೋಹಿತಃ ॥ ೬೧ ॥

ಸ್ತಂಭಯನ್ನಾತ್ಮನಾಽಽತ್ಮಾನಂ ಯಾವತ್ಸತ್ತ್ವಂ ಯಥಾಶ್ರುತಮ್ ।
ನ ಶಶಾಕ ಸಮಾಧಾತುಂ ಮನೋ ಮದನವೇಪಿತಮ್ ॥ ೬೨ ॥

ತನ್ನಿಮಿತ್ತಸ್ಮರವ್ಯಾಜಗ್ರಹಗ್ರಸ್ತೋ ವಿಚೇತನಃ ।
ತಾಮೇವ ಮನಸಾ ಧ್ಯಾಯನ್ ಸ್ವಧರ್ಮಾದ್ವಿರರಾಮ ಹ ॥ ೬೩ ॥

ತಾಮೇವ ತೋಷಯಾಮಾಸ ಪಿತ್ರ್ಯೇಣಾರ್ಥೇನ ಯಾವತಾ ।
ಗ್ರಾಮ್ಯೈರ್ಮನೋರಮೈಃ ಕಾಮೈಃ ಪ್ರಸೀದೇತ ಯಥಾ ತಥಾ ॥ ೬೪ ॥

ವಿಪ್ರಾಂ ಸ್ವಭಾರ್ಯಾಮಪ್ರೌಢಾಂ ಕುಲೇ ಮಹತಿ ಲಂಭಿತಾಮ್ ।
ವಿಸಸರ್ಜಾಚಿರಾತ್ಪಾಪಃ ಸ್ವೈರಿಣ್ಯಾಪಾಂಗವಿದ್ಧಧೀಃ ॥ ೬೫ ॥

ಯತಸ್ತತಶ್ಚೋಪನಿನ್ಯೇ ನ್ಯಾಯತೋಽನ್ಯಾಯತೋ ಧನಮ್ ।
ಬಭಾರಾಸ್ಯಾಃ ಕುಟುಂಬಿನ್ಯಾಃ ಕುಟುಂಬಂ ಮಂದಧೀರಯಮ್ ॥ ೬೬ ॥

ಯದಸೌ ಶಾಸ್ತ್ರಮುಲ್ಲಂಘ್ಯ ಸ್ವೈರಚಾರ್ಯಾರ್ಯಗರ್ಹಿತಃ ।
ಅವರ್ತತ ಚಿರಂ ಕಾಲಮಘಾಯುರಶುಚಿರ್ಮಲಾತ್ ॥ ೬೭ ॥

ಎಲ್ಲ ಪ್ರಾಣಿಗಳಿಗೂ ಹಿತವನ್ನೇ ಬಯಸುತ್ತಾ, ಉಪಕಾರ ಮಾಡುತ್ತಾ, ಆವಶ್ಯಕತೆ ಇದ್ದಷ್ಟೇ ಮಾತಾಡುತ್ತಿದ್ದನು. ಯಾರು ದೋಷಗಳನ್ನು ಎತ್ತಿ ಆಡುತ್ತಿರಲಿಲ್ಲ. ॥ ೫೭ ॥ ಒಂದು ದಿನ ಈ ಬ್ರಾಹ್ಮಣನು ತನ್ನ ತಂದೆಯ ಅಪ್ಪಣೆಯಂತೆ ಕಾಡಿಗೆ ಹೋಗಿ ಫಲ-ಪುಷ್ಪ, ಸಮಿಧೆ, ದರ್ಭೆಗಳನ್ನು ಎತ್ತಿಕೊಂಡು ಮನೆಗೆ ಹಿಂದಿರುಗುತ್ತಿದ್ದನು. ॥ ೫೮ ॥ ಮರಳಿ ಬರುತ್ತಿರುವಾಗ ದಾರಿಯಲ್ಲಿ ಓರ್ವ ಭ್ರಷ್ಟನಾದ ವೃಷಲನು ಅತಿಕಾಮಿಯೂ, ನಿರ್ಲಜ್ಜನೂ ಆಗಿ ಹೆಂಡವನ್ನು ಕುಡಿದು ವೇಶ್ಯೆಯೊಂದಿಗೆ ವಿಹರಿಸುತ್ತಿದ್ದನು. ವೇಶ್ಯೆಯೂ ಮದ್ಯ ಕುಡಿದು ಉನ್ಮತ್ತಳಾಗಿ, ಕಣ್ಣುಗಳನ್ನು ತಿರುಗಿಸುತ್ತಾ, ಅರ್ಧನಗ್ನಸ್ಥಿತಿಯಲ್ಲಿದ್ದಳು. ಆ ಶೂದ್ರನು ಆ ವೇಶ್ಯೆಯೊಂದಿಗೆ ಕೆಲವೊಮ್ಮೆ ನಗುತ್ತಾ, ಹಾಡುತ್ತಾ, ನಾನಾ ಬಗೆಯ ಕುಚೇಷ್ಟೆಗಳನ್ನು ಮಾಡುತ್ತಾ ಅವಳನ್ನು ಸಂತೋಷಪಡಿಸುತ್ತಿದ್ದನು. ॥ ೫೯-೬೦ ॥ ಓ ಪುಣ್ಯಾತ್ಮರಿರಾ ! ಆ ಶೂದ್ರನು ಭುಜಗಳಿಗೆ ಕಾಮೋದ್ದೀಪಕವಾದ ಅಂಗರಾಗವನ್ನು ಬಳಿದುಕೊಂಡು ಅವುಗಳಿಂದ ಆ ಕುಲಟೆಯನ್ನು ಆಲಿಂಗಿಸಿಕೊಂಡಿದ್ದನು. ಅಜಾಮಿಳನು ಅವರನ್ನು ನೋಡಿ ಇದ್ದಕ್ಕಿದ್ದಂತೆ ಅವನ ಮನಸ್ಸು ಮೋಹಗೊಂಡು ಕಾಮಪರವಶನಾಗಿಬಿಟ್ಟನು. ॥ ೬೧ ॥ ಅಜಾಮಿಳನು ತನ್ನ ಧೈರ್ಯ, ಜ್ಞಾನಕ್ಕನುಸಾರ ತನ್ನ ಕಾಮಪರವಶವಾದ ಮನಸ್ಸನ್ನು ತಡೆಯಲು ಬಹಳ ಮಟ್ಟಿಗೆ ಪ್ರಯತ್ನಿಸಿದನು. ಆದರೆ ಸರ್ವತ್ರ ಸರ್ವಪ್ರಯತ್ನಮಾಡಿದರೂ ಅವನು ಮನಸ್ಸನ್ನು ಹತೋಟಿಗೆ ತಂದುಕೊಳ್ಳಲು ಅಸಮರ್ಥನಾದನು. ॥ ೬೨ ॥ ಆ ವೇಶ್ಯೆಯನ್ನು ನಿಮಿತ್ತವಾಗಿಸಿ ಕಾಮಪಿಶಾಚಿಯು ಅಜಾಮಿಳನ ಮನಸ್ಸನ್ನು ಆಕ್ರಮಿಸಿಬಿಟ್ಟಿತು. ಇವನ ಸದಾಚಾರ ಮತ್ತು ಶಾಸ್ತ್ರಜ್ಞಾನವು ಕರಗಿ ಹೋಯಿತು. ಈಗ ಇವನು ಮನಸ್ಸಿನಲ್ಲೇ ಆ ವೇಶ್ಯೆಯನ್ನು ಚಿಂತಿಸುತ್ತಾ ತನ್ನ ಧರ್ಮದಿಂದ ವಿಮುಖನಾಗಿ ಬಿಟ್ಟನು. ॥ ೬೩ ॥ ಅಜಾಮಿಳನು ಆಕೆಯನ್ನು ಸಂತೋಷಪಡಿಸಲಿಕ್ಕಾಗಿ ಅತಿ ಸುಂದರವಾದ ವಸ್ತ್ರ-ಒಡವೆಗಳನ್ನು ತಂದು ಕೊಡತೊಡಗಿದನು. ತನ್ನ ತಂದೆಯ ಎಲ್ಲ ಸಂಪತ್ತನ್ನೂ ವೆಚ್ಚಮಾಡಿ ಆ ಕುಲಟೆಯನ್ನು ಮೆಚ್ಚಿಸಿದನು. ಅವಳು ಯಾವುದರಿಂದ ಪ್ರಸನ್ನವಾಗಿರುವಳೋ ಅದೇ ರೀತಿಯ ಚೇಷ್ಟೆಗಳನ್ನು ಮಾಡುತ್ತಿದ್ದನು. ॥ ೬೪ ॥ ಆ ಸ್ವೇಚ್ಛಾಚಾರಿಣಿಯ ಕಡೆಗಣ್ಣ ನೋಟದಿಂದ ಇವನು ಸೂರೆಗೊಂಡಿದ್ದನು. ಅದರಿಂದ ಕುಲೀನೆಯೂ, ತರುಣಿಯೂ ಆದ ತನ್ನ ವಿವಾಹಿತ ಬ್ರಾಹ್ಮಣೀ ಪತ್ನಿಯನ್ನು ತೊರೆದುಬಿಟ್ಟನು. ಇನ್ನು ಈತನ ಪಾಪಕ್ಕೆ ಎಲ್ಲೆ ಏನು ಬಂತು ? ॥ ೬೫ ॥ ದುಷ್ಟಬುದ್ಧಿಯಾದ ಇವನು ನ್ಯಾಯದಿಂದಿರಲೀ, ಅನ್ಯಾಯದಿಂದಿರಲೀ, ಹೇಗಾದರೂ ಸಿಕ್ಕಿದಲ್ಲಿಂದ ಹಣವನ್ನು ಸಂಪಾದಿಸುತ್ತಾ ಆ ವೇಶ್ಯೆಯ ದೊಡ್ಡ ಕುಟುಂಬವನ್ನು ಸಾಕುವುದರಲ್ಲೇ ಆಸಕ್ತನಾದನು. ॥ ೬೬ ॥ ಈ ಪಾಪಿಯು ಶಾಸ್ತ್ರಜ್ಞಾನವನ್ನು ಮೀರಿ ಸ್ವೇಚ್ಛಾಚಾರಿಯಾಗಿ ನಡೆದು ಕೊಳ್ಳುವುದರಿಂದ ಇವನು ಸತ್ಪುರುಷರಿಂದ ನಿಂದಿತನಾಗಿದ್ದಾನೆ. ಇವನು ಅನೇಕ ದಿನಗಳವರೆಗೆ ವೇಶ್ಯೆಯ ಮಲಕ್ಕೆ ಸಮಾನವಾದ, ಅಪವಿತ್ರವಾದ ಅನ್ನದಿಂದ ತನ್ನ ಜೀವನವನ್ನು ಕಳೆದನು. ಹೀಗೆ ಇವನ ಇಡೀ ಜೀವನವೇ ಪಾಪಮಯವಾಗಿದೆ. ॥ ೬೭ ॥

**ತತ ಏನಂ ದಂಡಪಾಣೇಃ ಸಕಾಶಂ ಕೃತಕಿಲ್ಬಿಷಮ್ ।**
**ನೇಷ್ಯಾಮೋऽಕೃತನಿರ್ವೇಶಂ ಯತ್ರ ದಂಡೇನ ಶುಧ್ಯತಿ ॥ ೬೮ ॥**

ಇವನು ಇಂದಿನವರೆಗೆ ತನ್ನ ಪಾಪಗಳಿಗೆ ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿಲ್ಲ, ಅದಕ್ಕಾಗಿ ಈಗ ನಾವು ಈ ಪಾಪಿಯನ್ನು ದಂಡಪಾಣಿಯಾದ ಭಗವಾನ್ ಯಮರಾಜನ ಬಳಿಗೆ ಕೊಂಡು ಹೋಗುವೆವು. ಅಲ್ಲಿ ಇವನು ತನ್ನ ಪಾಪಗಳನ್ನು ಭೋಗಿಸಿ ಶುದ್ಧನಾಗಿ ಹೋಗುವನು. ॥ ೬೮ ॥

***ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ಅಜಾಮಿಲೋಪಾಖ್ಯಾನೇ ಪ್ರಥಮೋऽಧ್ಯಾಯಃ ॥ ೧ ॥**

# ಎರಡನೆಯ ಅಧ್ಯಾಯ

## ವಿಷ್ಣುದೂತರಿಂದ ಭಾಗವತ ಧರ್ಮದ ನಿರೂಪಣೆ ಮತ್ತು ಅಜಾಮಿಳನು ಪರಂಧಾಮವನ್ನು ಹೊಂದಿದುದು

*ಶ್ರೀಶುಕ ಉವಾಚ*

**ಏವಂ ತೇ ಭಗವದ್ದೂತಾ ಯಮದೂತಾಭಿಭಾಷಿತಮ್ ।**
**ಉಪಧಾರ್ಯಾಥ ತಾನ್ರಾಜನ್ಪ್ರತ್ಯಾಹುರ್ನಯಕೋವಿದಾಃ ॥ ೧ ॥**

*ವಿಷ್ಣುದೂತಾ ಊಚುಃ*

**ಅಹೋ ಕಷ್ಟಂ ಧರ್ಮದೃಶಾಮಧರ್ಮಃ ಸ್ಪೃಶತೇ ಸಭಾಮ್ ।**
**ಯತ್ರಾ ದಂಡ್ಯೇಷ್ವಪಾಪೇಷು ದಂಡೋ ಯೈರ್ಧ್ರಿಯತೇ ವೃಥಾ ॥ ೨ ॥**

**ಪ್ರಜಾನಾಂ ಪಿತರೋ ಯೇ ಚ ಶಾಸ್ತಾರಃ ಸಾಧವಃ ಸಮಾಃ ।**
**ಯದಿ ಸ್ಯಾತ್ತೇಷು ವೈಷಮ್ಯಂ ಕಂ ಯಾಂತಿ ಶರಣಂ ಪ್ರಜಾಃ ॥ ೩ ॥**

**ಯದ್ಯದಾಚರತಿ ಶ್ರೇಯಾನಿತರಸ್ತತ್ತದೀಹತೇ ।**
**ಸ ಯತ್ಪ್ರಮಾಣಮ್ ಕುರುತೇ ಲೋಕಸ್ತದನುವರ್ತತೇ ॥ ೪ ॥**

**ಯಸ್ಯಾಂಕೇ ಶಿರ ಆಧಾಯ ಲೋಕಃ ಸ್ವಪಿತಿ ನಿರ್ವೃತಃ ।**
**ಸ್ವಯಂ ಧರ್ಮಮಧರ್ಮಂ ವಾ ನ ಹಿ ವೇದ ಯಥಾ ಪಶುಃ ॥ ೫ ॥**

**ಸ ಕಥಂ ನ್ಯರ್ಪಿತಾತ್ಮಾನಂ ಕೃತಮೈತ್ರಮಚೇತನಮ್ ।**
**ವಿಶ್ರಂಭಣೀಯೋ ಭೂತಾನಾಂ ಸಘೃಣೋ ದ್ರೋಗ್ಧುಮರ್ಹತಿ ॥ ೬ ॥**

**ಶ್ರೀಶುಕಮುನಿಗಳು ಹೇಳುತ್ತಾರೆ –** ಪರೀಕ್ಷಿತ ರಾಜೇಂದ್ರನೇ! ನೀತಿನಿಪುಣರೂ, ಧರ್ಮದ ಮರ್ಮವನ್ನು ಬಲ್ಲವರೂ ಆದ ಭಗವಂತನ ಪಾರ್ಷದರು ಯಮದೂತರ ಈ ಮಾತುಗಳನ್ನು ಕೇಳಿ ಅವರಲ್ಲಿ ಇಂತೆಂದರು – ॥ ೧ ॥

**ಭಗವಂತನ ಪಾರ್ಷದರು ಹೇಳುತ್ತಾರೆ –** ಎಲೈ ಯಮದೂತರಿರಾ! ಆಹಾ! ಎಂತಹ ಆಶ್ಚರ್ಯದ ಮತ್ತು ಖೇದದ ಮಾತಾಗಿದೆ. ಧರ್ಮಜ್ಞರ ಸಭೆಯಲ್ಲಿ ಅಧರ್ಮವು ಪ್ರವೇಶಿಸುತ್ತಿದೆಯಲ್ಲ! ಏಕೆಂದರೆ, ಅಲ್ಲಿ ನಿರಪರಾಧಿಗಳಾದ, ದಂಡನೆಗೆ ಯೋಗ್ಯರಲ್ಲದ ವ್ಯಕ್ತಿಗಳಿಗೂ ವ್ಯರ್ಥವಾಗಿ ದಂಡನೆ ಕೊಡಲಾಗುತ್ತದಲ್ಲ! ॥ ೨ ॥ ಪ್ರಜಾರಕ್ಷಕನೂ, ಶಾಸಕನೂ, ಸಮದರ್ಶಿಯೂ, ಪರೋಪಕಾರಿಯೂ ಆದವರೇ ಪ್ರಜೆಗಳ ವಿಷಯದಲ್ಲಿ ವಿಷಮತೆಯ ವ್ಯವಹಾರ ಮಾಡತೊಡಗಿದರೆ ಮತ್ತೆ ಪ್ರಜೆಯು ಯಾರ ಮೊರೆ ಹೋಗಬೇಕು? ॥ ೩ ॥ ಸತ್ಪುರುಷರು ಆಚರಿಸಿದಂತೆಯೇ ಸಾಧಾರಣ ಜನರು ಅನುಸರಿಸುತ್ತಾರೆ. ಸಜ್ಜನರು ತಮ್ಮ ಆಚರಣೆಯ ಮೂಲಕ ಯಾವುದನ್ನು ಪ್ರಮಾಣೀಕರಿಸುತ್ತಾರೋ, ಉಳಿದ ಜನರು ಅದನ್ನೇ ಅನುಕರಣಮಾಡತೊಡಗುವರು. ॥ ೪ ॥ ಸಾಮಾನ್ಯ ಜನರು ಪಶುಗಳಂತೆ ಧರ್ಮ-ಅಧರ್ಮಗಳ ಸ್ವರೂಪವನ್ನು ಅರಿಯದೆ ಯಾರೋ ಸತ್ಪುರುಷರ ಮೇಲೆ ವಿಶ್ವಾಸವಿಟ್ಟು ಅವರ ತೊಡೆಯಲ್ಲಿ ತಲೆಯನ್ನಿಟ್ಟು ನಿರ್ಭಯರಾಗಿ ನಿಶ್ಚಿಂತರಾಗಿ ಮಲಗಿಬಿಡುತ್ತಾರೆ. ॥ ೫ ॥ ಅಂತಹ ದಯಾಳುಗಳಾದ ಸತ್ಪುರುಷರೇ ಪ್ರಾಣಿಗಳಿಗೆ ಅತ್ಯಂತ ವಿಶ್ವಾಸಪಾತ್ರರಾಗಿದ್ದಾರೆ. ಮೈತ್ರೀಭಾವದಿಂದ ತಮ್ಮ ಹಿತೈಷಿಗಳೆಂದು ತಿಳಿದು ಆತ್ಮಸಮರ್ಪಣೆ ಮಾಡಿರುವ ಆ ಅಜ್ಞಾನೀ ಜೀವರೊಂದಿಗೆ ಸಜ್ಜನರು ಹೇಗೆ ವಿಶ್ವಾಸಘಾತ ಮಾಡಬಲ್ಲರು? ॥ ೬ ॥

ಅಯಂ ಹಿ ಕೃತನಿರ್ವೇಶೋ ಜನ್ಮ ಕೋಟ್ಯಂಹಸಾಮಪಿ ।
ಯದ್ವ್ಯಾಜಹಾರ ವಿವಶೋ ನಾಮ ಸ್ವಸ್ತ್ಯಯನಂ ಹರೇಃ ॥ ೭ ॥

ಎಲೈ ಯಮದೂತರೇ! ಈ ಅಜಾಮಿಳನು ಕೋಟಿ-ಕೋಟಿ ಜನ್ಮಗಳಲ್ಲಿ ಮಾಡಿದ್ದ ಪಾಪಗಳಿಗೂ ಪೂರ್ಣವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿರುವನು. ಏಕೆಂದರೆ, ಬೇರಾವುದೋ ವ್ಯಾಮೋಹದಿಂದಲೇ ಆದರೂ ಇವನು ಶ್ರೀಹರಿಯ ಪರಮ ಕಲ್ಯಾಣಮಯವಾದ ಮೋಕ್ಷಪ್ರದವಾದ ನಾಮವನ್ನು ಉಚ್ಚರಿಸಿರುವನು. ॥ ೭ ॥ ಇವನು 'ನಾರಾಯಣ' ಎಂಬ ಈ ನಾಲ್ಕು ಅಕ್ಷರಗಳನ್ನು ಉಚ್ಚರಿಸುವುದರಿಂದಲೇ ಈ ಪಾಪಿಯ ಎಲ್ಲ ಪಾಪಗಳ ಪ್ರಾಯಶ್ಚಿತ್ತವು ಆಗಿಹೋಯಿತು. ॥ ೮ ॥ ಕಳ್ಳನಿರಲೀ, ಹೆಂಡ ಕುಡುಕನಿರಲೀ, ಮಿತ್ರದ್ರೋಹಿಯಾಗಿರಲೀ, ಬ್ರಹ್ಮಹತ್ಯಾ ಪಾತಕಿಯಾಗಿರಲೀ, ಗುರುಪತ್ನೀಗಾಮಿಯಾಗಿರಲೀ, ಸ್ತ್ರೀಹತ್ಯೆ, ರಾಜಹತ್ಯೆ, ಪಿತೃಹತ್ಯೆ, ಗೋಹತ್ಯೆಗಳನ್ನು ಮಾಡಿದವನಾಗಿರಲೀ, ಬೇಕಾದರೆ ಎಷ್ಟೇ ದೊಡ್ಡ ಪಾಪಿಯಾಗಲೀ, ಎಲ್ಲ ಪಾತಕಗಳಿಗೂ ಭಗವಂತನ ನಾರಾಯಣನ ನಾಮವನ್ನು ಉಚ್ಚರಿಸುವುದೇ ದೊಡ್ಡ ಪ್ರಾಯಶ್ಚಿತ್ತವು. * ಏಕೆಂದರೆ, ಭಗವನ್ನಾಮಗಳನ್ನು ಉಚ್ಚರಿಸುವುದರಿಂದ ಮನುಷ್ಯನ ಬುದ್ಧಿಯು ಭಗವಂತನ ಗುಣ, ಲೀಲೆ, ಸ್ವರೂಪಗಳಲ್ಲಿ ರಮಿಸಿಹೋಗುತ್ತದೆ ಹಾಗೂ ಸ್ವಯಂ ಭಗವಂತನ ಕುರಿತು ಆತ್ಮೀಯತೆ ಉಂಟಾಗುತ್ತದೆ. ॥ ೯-೧೦ ॥ ದೊಡ್ಡ-ದೊಡ್ಡ ಬ್ರಹ್ಮವಾದಿ ಋಷಿಗಳು ಪಾತಕಗಳ ಪರಿಹಾರಕ್ಕಾಗಿ ಕೃಚ್ಛ್ರ, ಚಾಂದ್ರಾಯಣ ಮುಂತಾದ ಅನೇಕ ವ್ರತಗಳನ್ನು ವಿಧಿಸಿದ್ದಾರೆ. ಆದರೆ ಭಗವಂತನ ನಾಮಗಳನ್ನು, ಭಗವಂತನ ನಾಮಗಳಿಂದ ಕೂಡಿದ ಪದಗಳನ್ನು** ಉಚ್ಚರಿಸುವುದರಿಂದ ಆ ಪಾಪಗಳು ಎಷ್ಟರ ಮಟ್ಟಿಗೆ ನಿರ್ಮೂಲವಾಗುವವೋ, ಅಷ್ಟುಮಟ್ಟಿಗೆ ಆ ಪ್ರಾಯಶ್ಚಿತ್ತಗಳಿಂದ ಅವು ನಿರ್ಮೂಲವಾಗುವುದಿಲ್ಲ. ಏಕೆಂದರೆ, ಭಗವಂತನ ನಾಮಗಳು ಪವಿತ್ರಕೀರ್ತಿ ಶ್ರೀಹರಿಯ ಗುಣಗಳ ಜ್ಞಾನವನ್ನು ಮಾಡಿಸುತ್ತವೆ. ॥ ೧೧ ॥ ಪ್ರಾಯಶ್ಚಿತ್ತವನ್ನು ಮಾಡಿ ಕೊಂಡ ಬಳಿಕವೂ ಮನಸ್ಸು ಮತ್ತೆ ದುರ್ಮಾರ್ಗದ ಕಡೆಗೆ ಓಡುವುದಾದರೆ ಅದು ಹೇಗೆ ಪೂರ್ಣ ಪ್ರಾಯಶ್ಚಿತ್ತವಾಗ ಬಲ್ಲದು? ಆದುದರಿಂದ ಪಾಪಗಳು ಬುಡಸಹಿತ ನಾಶಹೊಂದುವಂತಹ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕೆಂಬ ಬಯಕೆ ಇರುವವರು ಶ್ರೀಭಗವಂತನ ಗುಣಗಳನ್ನು ಗಾನ ಮಾಡಬೇಕು. ಅದರಿಂದ ಚಿತ್ತವು ಪೂರ್ಣವಾಗಿ ಶುದ್ಧವಾಗಿ ಹೋಗುತ್ತದೆ. ॥ ೧೨ ॥

ಏತೇನೈವ ಹ್ಯಘೋನೋಽಸ್ಯ ಕೃತಂ ಸ್ಯಾದಘನಿಷ್ಕೃತಮ್ ।
ಯದಾ ನಾರಾಯಣಾಯೇತಿ ಜಗಾದ ಚತುರಕ್ಷರಮ್ ॥ ೮ ॥

ಸ್ತೇನಃ ಸುರಾಪೋ ಮಿತ್ರಧ್ರುಗ್ ಬ್ರಹ್ಮಹಾ ಗುರುತಲ್ಪಗಃ ।
ಸ್ತ್ರೀರಾಜಪಿತೃಗೋಹಂತಾ ಯೇ ಚ ಪಾತಕಿನೋಽಪರೇ ॥ ೯ ॥

ಸರ್ವೇಷಾಮಪ್ಯಘವತಾಮಿದಮೇವ ಸುನಿಷ್ಕೃತಮ್ ।
ನಾಮವ್ಯಾಹರಣಂ ವಿಷ್ಣೋರ್ಯತಸ್ತದ್ವಿಷಯಾ ಮತಿಃ ॥ ೧೦ ॥

ನ ನಿಷ್ಕೃತೈರುದಿತೈರ್ಬ್ರಹ್ಮವಾದಿಭಿ-
ಸ್ತಥಾ ವಿಶುದ್ಧ್ಯತ್ಯಘವಾನ್ ವ್ರತಾದಿಭಿಃ ।
ಯಥಾ ಹರೇರ್ನಾಮಪದೈರುದಾಹೃತೈ-
ಸ್ತದುತ್ತಮಶ್ಲೋಕಗುಣೋಪಲಂಭಕಮ್ ॥ ೧೧ ॥

ನೈಕಾಂತಿಕಂ ತದ್ಧಿ ಕೃತೇಽಪಿ ನಿಷ್ಕೃತೇ
ಮನಃ ಪುನರ್ಧಾವತಿ ಚೇದಸತ್ಪಥೇ ।
ತತ್ಕರ್ಮನಿರ್ಹಾರಮಭೀಪ್ಸತಾಂ ಹರೇ-
ರ್ಗುಣಾನುವಾದಃ ಖಲು ಸತ್ತ್ವಭಾವನಃ ॥ ೧೨ ॥

* ಈ ಪ್ರಸಂಗದಲ್ಲಿ 'ನಾಮ-ವ್ಯಾಹರಣ' ಇದರ ಅರ್ಥ ನಾಮೋಚ್ಚಾರಣೆ ಮಾತ್ರವಾಗಿದೆ. ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ - "**ಯದ್ ಗೋವಿಂದೇತಿ ಚುಕ್ರೋಶ ಕೃಷ್ಣಾ ಮಾಂ ದೂರವಾಸಿನಮ್ । ಋಣಮೇತತ್ ಪ್ರವೃದ್ಧಂ ಮೇ ಹೃದಯಾನ್ನಾಪಸರ್ಪತಿ ॥**" ನಾನು ದೂರ ಇರುವುದರಿಂದ ದ್ರೌಪದಿಯು ಜೋರಾಗಿ 'ಗೋವಿಂದ-ಗೋವಿಂದ' ಹೀಗೆ ಕರುಣಾಕ್ರಂದನ ಮಾಡಿ ನನ್ನನ್ನು ಕರೆದಳು. ಆ ಋಣವು ನನ್ನ ಮೇಲೆ ಬೆಳೆಯಿತು ಮತ್ತು ನನ್ನ ಹೃದಯದಿಂದ ಅದರ ಭಾರವು ಒಂದು ಕ್ಷಣವಾದರೂ ತೊಲಗುವುದಿಲ್ಲ.

** 'ನಾಮಪದೈಃ' ಎಂದು ಹೇಳುವ ಅಭಿಪ್ರಾಯ - ಭಗವಂತನ ಕೇವಲ ನಾಮ 'ರಾಮ-ರಾಮ', 'ಕೃಷ್ಣ-ಕೃಷ್ಣ', 'ನಾರಾಯಣ-ನಾರಾಯಣ' ಇವು ಅಂತಃಕರಣದ ಶುದ್ಧಿಗಾಗಿ - ಪಾಪಗಳ ನಿವೃತ್ತಿಗಾಗಿ ಸಾಕು. 'ನಮಃ-ನಮಾಮಿ' ಮುಂತಾದ ಕ್ರಿಯಾಪದಗಳನ್ನು ಜೋಡಿಸುವ ಆವಶ್ಯಕತೆಯೇ ಇಲ್ಲ. ಭಗವಂತನಿಗೆ ಅನೇಕ ನಾಮಗಳಿವೆ. ಅವುಗಳಲ್ಲಿ ಯಾವುದನ್ನು ಬೇಕಾದರೂ ಸಂಕೀರ್ತನ ಮಾಡಬಹುದು. ಒಂದನ್ನು ಕೊಂಡಾಡಿದರೆ ಎಲ್ಲವನ್ನೂ ಕೊಂಡಾಡಿದಂತೆ - ಎಂಬ ಅಭಿಪ್ರಾಯದಿಂದ ನಾಮದ ಜೊತೆಗೆ ಬಹುವಚನ ಪ್ರಯೋಗವಾಗಿದೆ. ಒಬ್ಬ ವ್ಯಕ್ತಿಯು ಎಲ್ಲ ನಾಮಗಳನ್ನು ಉಚ್ಚರಿಸಬೇಕೆಂಬ ಅಭಿಪ್ರಾಯದಿಂದ ಅಲ್ಲ. ಏಕೆಂದರೆ, ಭಗವಂತನ ನಾಮಗಳು ಅನಂತವಾಗಿವೆ. ಎಲ್ಲ ನಾಮಗಳನ್ನು ಉಚ್ಚರಿಸಲೂ ಸಾಧ್ಯವೂ ಇಲ್ಲ. ತಾತ್ಪರ್ಯ - ಭಗವಂತನ ಒಂದು ನಾಮವನ್ನು ಉಚ್ಚರಿಸುವುದರಿಂದ ಎಲ್ಲ ಪಾಪಗಳ ನಿವೃತ್ತಿಯಾಗುತ್ತದೆ. ಪೂರ್ಣವಿಶ್ವಾಸವಿಲ್ಲದಿರುವುದು ಮತ್ತು ನಾಮೋಚ್ಚಾರದ ನಂತರವೂ ಪಾಪಗಳನ್ನು ಮಾಡುವುದರಿಂದ ಅದರ ಅನುಭವ ಉಂಟಾಗುವುದಿಲ್ಲ.

ಅಥೈನಂ ಮಾಪನಯತ ಕೃತಾಶೇಷಾಘನಿಷ್ಕೃತಮ್ ।
ಯದಸೌ ಭಗವನ್ನಾಮ ಮ್ರಿಯಮಾಣಃ ಸಮಗ್ರಹೀತ್
॥ ೧೩ ॥

ಆದ್ದರಿಂದ ಯಮದೂತರೇ ! ನೀವು ಅಜಾಮಿಳನನ್ನು ಒಯ್ಯಬೇಡಿರಿ. ಇವನು ಎಲ್ಲ ಪಾಪಗಳ ಪ್ರಾಯಶ್ಚಿತ್ತವನ್ನು ಮಾಡಿಕೊಂಡಿರುನು. ಏಕೆಂದರೆ, ಇವನು ಸಾಯುವಾಗ* ಭಗವಂತನ ನಾಮವನ್ನು ಉಚ್ಚರಿಸಿರುವನು. ॥ ೧೩ ॥

ಸಾಂಕೇತ್ಯಂ ಪಾರಿಹಾಸ್ಯಂ ವಾ ಸ್ತೋಭಂ ಹೇಲನಮೇವ ವಾ ।
ವೈಕುಂಠನಾಮಗ್ರಹಣಮಶೇಷಾಘಹರಂ ವಿದುಃ
॥ ೧೪ ॥

ಪತಿತಃ ಸ್ಖಲಿತೋ ಭಗ್ನಃ ಸಂದಷ್ಟಸ್ತಪ್ತ ಆಹತಃ ।
ಹರಿರಿತ್ಯವಶೇನಾಹ ಪುಮಾನ್ನಾರ್ಹತಿ ಯಾತನಾಮ್
॥ ೧೫ ॥

ಗುರೂಣಾಂ ಚ ಲಘೂನಾಂ ಚ ಗುರೂಣಿ ಚ ಲಘೂನಿ ಚ ।
ಪ್ರಾಯಶ್ಚಿತ್ತಾನಿ ಪಾಪಾನಾಂ ಜ್ಞಾತ್ವೋಕ್ತಾನಿ ಮಹರ್ಷಿಭಿಃ
॥ ೧೬ ॥

ತೈಸ್ತಾನ್ಯಘಾನಿ ಪೂಯಂತೇ ತಪೋದಾನಜಪಾದಿಭಿಃ ।
ನಾಧರ್ಮಜಂ ತದ್ಧೃದಯಂ ತದಪೀಶಾಂಘ್ರಿಸೇವಯಾ
॥ ೧೭ ॥

ಅಜ್ಞಾನಾದಥವಾ ಜ್ಞಾನಾದುತ್ತಮಶ್ಲೋಕನಾಮ ಯತ್ ।
ಸಂಕೀರ್ತಿತಮಘಂ ಪುಂಸೋ ದಹೇದೇಧೋ ಯಥಾನಲಃ
॥ ೧೮ ॥

ಯಥಾಗದಂ ವೀರ್ಯತಮಮುಪಯುಕ್ತಂ ಯದೃಚ್ಛಯಾ ।
ಅಜಾನತೋಽಪ್ಯಾತ್ಮಗುಣಂ ಕುರ್ಯಾನ್ಮಂತ್ರೋಽಪ್ಯುದಾಹೃತಃ
॥ ೧೯ ॥

ಸಾಂಕೇತಕ್ಕಾಗಲೀ (ಯಾವುದೇ ಬೇರೆ ಅಭಿಪ್ರಾಯದಿಂದ), ಪರಿಹಾಸ್ಯಕ್ಕಾಗಲೀ, ರಾಗದ ಆಲಾಪನೆಯಲ್ಲಾಗಲೀ, ಯಾರನ್ನಾದರೂ ಅಣಕಿಸುವುದಕ್ಕಾಗಲೀ, ಯಾರಾದರೂ ಭಗವಂತನ ನಾಮವನ್ನು ಉಚ್ಚರಿಸಿದರೆ ಅವನ ಎಲ್ಲ ಪಾಪಗಳು ನಾಶವಾಗುತ್ತವೆ ಎಂದು ದೊಡ್ಡ-ದೊಡ್ಡ ಮಹಾತ್ಮರು ಇದನ್ನು ತಿಳಿದಿರುತ್ತಾರೆ. ॥ ೧೪ ॥ ಬೀಳುವಾಗ, ಕಾಲುಜಾರಿ ಮುಗ್ಗರಿಸಿದಾಗ, ಅಂಗಗಳು ಮುರಿದುಹೋದಾಗ, ಹಾವು ಕಡಿದಾಗ, ಬೆಂಕಿಯಿಂದ ಸುಟ್ಟಾಗ, ಏಟು ಬಿದ್ದಾಗ, ಪರವಶತೆಯಿಂದ ಮನುಷ್ಯನು 'ಹರಿ-ಹರಿ' ಎಂದು ಹೇಳಿ ಭಗವಂತನ ನಾಮವನ್ನು ಉಚ್ಚರಿಸುವವನು ಯಮಯಾತನೆಗೆ ಪಾತ್ರನಾಗುವುದಿಲ್ಲ. ॥ ೧೫ ॥ ಮಹರ್ಷಿಗಳು ಪಾಪದ ಸ್ವರೂಪವನ್ನು ಪರಿಶೀಲನೆಮಾಡಿ ದೊಡ್ಡ ಪಾಪಗಳಿಗೆ ದೊಡ್ಡ ಪ್ರಾಯಶ್ಚಿತ್ತವನ್ನು ಚಿಕ್ಕ ಪಾಪಗಳಿಗೆ ಚಿಕ್ಕ ಪ್ರಾಯಶ್ಚಿತ್ತವನ್ನೂ ವಿಧಿಸಿದ್ದಾರೆ. ॥ ೧೬ ॥ ತಪಸ್ಸು, ದಾನ, ಜಪ ಮುಂತಾದ ಪ್ರಾಯಶ್ಚಿತ್ತಗಳ ಮೂಲಕ ಆ ಪಾಪಗಳು ನಾಶವಾಗಿ ಹೋಗುತ್ತವೆ ಎಂಬುದರಲ್ಲಿ ಸಂದೇಹವೇ ಇಲ್ಲ, ಆದರೆ ಆ ಪಾಪಗಳಿಂದ ಮಲಿನವಾದ ಹೃದಯವು ಶುದ್ಧವಾಗುವುದಿಲ್ಲ, ಭಗವಂತನ ಚರಣಗಳ ಸೇವೆಯಿಂದ ಅದೂ ಕೂಡ ಶುದ್ಧವಾಗಿ ಹೋಗುತ್ತದೆ. ॥ ೧೭ ॥ ಯಮದೂತರೇ ! ತಿಳಿದೋ, ತಿಳಿಯದೆಯೋ ಕಟ್ಟಿಗೆಗೆ ಬೆಂಕಿ ತಗುಲಿದರೆ ಅದನ್ನು ಸುಟ್ಟು ಬೂದಿಮಾಡುವಂತೆಯೇ, ತಿಳಿದೋ, ತಿಳಿಯದೆಯೋ ಭಗವಂತನ ನಾಮಸಂಕೀರ್ತನ ಮಾಡುವುದರಿಂದ ಮನುಷ್ಯನ ಎಲ್ಲ ಪಾಪಗಳು ಭಸ್ಮವಾಗಿ ಹೋಗುವುವು. ॥ ೧೮ ॥ ಮಹಾಶಕ್ತಿಶಾಲಿಯಾದ ಅಮೃತವನ್ನು ಅದರ ಗುಣ-ವೀರ್ಯ ತಿಳಿಯದೆಯೇ ಯಾರಾದರೂ ಕುಡಿದರೆ ಅವನನ್ನು ಅಮರನನ್ನಾಗಿಸುವಂತೆಯೇ, ನಾಮದ ಗುಣ-ಶಕ್ತಿ ತಿಳಿಯದೆಯೇ ಉಚ್ಚರಿಸಿದರೂ ಆ ಭಗವಂತನ ನಾಮವು *ತನ್ನ ಫಲವನ್ನು ಕೊಟ್ಟೇ ಕೊಡುವುದು. ವಸ್ತುವಿನ ಶಕ್ತಿಯು ಶ್ರದ್ಧೆಯನ್ನು ಅಪೇಕ್ಷಿಸುವುದಿಲ್ಲ. ॥ ೧೯ ॥

*ಶ್ರೀಶುಕ ಉವಾಚ*

ತ ಏವಂ ಸುವಿನಿರ್ಣೀಯ ಧರ್ಮಂ ಭಾಗವತಂ ನೃಪ ।
ತಂ ಯಾಮ್ಯಪಾಶಾನ್ನಿರ್ಮುಚ್ಯ ವಿಪ್ರಂ ಮೃತ್ಯೋರಮೂಮುಚನ್
॥ ೨೦ ॥

ಇತಿ ಪ್ರತ್ಯುದಿತಾ ಯಾಮ್ಯಾ ದೂತಾ ಯಾತ್ವಾ ಯಮಾಂತಿಕೇ ।
ಯಮರಾಜ್ಞೇ ಯಥಾ ಸರ್ವಮಾಚಚಕ್ಷುರರಿಂದಮ
॥ ೨೧ ॥

ಶ್ರೀಶುಕ ಮಹಾಮುನಿಗಳು ಹೇಳುತ್ತಾರೆ – ಎಲೈ ರಾಜನೇ ! ಹೀಗೆ ಭಗವಂತನ ಪಾರ್ಷದರು ಭಾಗವತಧರ್ಮದ ಸಮಗ್ರವಾದ ನಿರ್ಣಯವನ್ನು ತಿಳಿಸಿ, ಅಜಾಮಿಳನನ್ನು ಯಮನ ದೂತರಿಂದ ಬಿಡಿಸಿ ಮೃತ್ಯುಮುಖದಿಂದ ಪಾರು ಮಾಡಿದರು. ॥ ೨೦ ॥ ಪ್ರಿಯ ಪರೀಕ್ಷಿತನೇ ! ಪಾರ್ಷದರ ಈ ಮಾತನ್ನು ಕೇಳಿ ಯಮದೂತರು ಯಮಧರ್ಮನ ಬಳಿಗೆ ಹೋಗಿ, ಅವರಿಗೆ ಇವೆಲ್ಲ ವೃತ್ತಾಂತವನ್ನು ಇದ್ದಂತೆಯೇ ತಿಳಿಸಿದರು. ॥ ೨೧ ॥

* ಪಾಪದ ನಿವೃತ್ತಿಗಾಗಿ ಭಗವನ್ನಾಮದ ಒಂದು ಅಂಶವು 'ರಾಮ' 'ಮರಾ' ಎಂಬುದೇ ಸಾಕಾಗುವಷ್ಟಿದೆ. ಇವನಾದರೋ ನಾಮವನ್ನು ಪೂರ್ಣವಾಗಿ ಉಚ್ಚರಿಸಿರುವನು. ಸಾಯುವ ಸಮಯವೆಂದರೆ ಪೂರ್ಣವಾಗಿ ಸಾಯುವ ಕ್ಷಣವಲ್ಲ, ಏಕೆಂದರೆ, ಸಾಯುವ ಕ್ಷಣವು ಕೃಚ್ಛ್ರ-ಚಾಂದ್ರಾಯಣ ಮುಂತಾದವುಗಳನ್ನು ಮಾಡುವ ವಿಧಿ ಆಗಲಾರದೋ ಹಾಗೆಯೇ ನಾಮೋಚ್ಚಾರ ವಿಧಿಯಿಲ್ಲ, ಅದಕ್ಕಾಗಿ 'ಮ್ರಿಯಮಾಣ' ಶಬ್ದದ ಅಭಿಪ್ರಾಯ – ಇನ್ನು ಮುಂದೆ ಇವನಿಂದ ಯಾವುದೇ ಪಾಪಗಳಾಗುವ ಸಂಭವವಿಲ್ಲ. (ಮುಂದಿನ ಪುಟದಲ್ಲಿ ಎರಡನೇ ಅಡಿ ಟಿಪ್ಪಣಿ* ಇದೆ.)

ದ್ವಿಜಃ ಪಾಶಾದ್ವಿನಿರ್ಮುಕ್ತೋ ಗತಭೀಃ ಪ್ರಕೃತಿಂ ಗತಃ ।
ವವಂದೇ ಶಿರಸಾ ವಿಷ್ಣೋಃ ಕಿಂಕರಾನ್‌ದರ್ಶನೋತ್ಸವಃ ॥ ೨೨ ॥

ಅಜಾಮಿಳನು ಯಮದೂತರ ಪಾಶಗಳಿಂದ ಬಿಡುಗಡೆಹೊಂದಿ ನಿರ್ಭಯನಾಗಿ, ಸ್ವಸ್ಥನಾದನು. ಅವನು ವಿಷ್ಣುಕಿಂಕರ ದರ್ಶನದಿಂದ ಆನಂದಮಗ್ನನಾಗಿ ಅವರಿಗೆ ತಲೆಬಾಗಿ ವಂದಿಸಿದನು. ॥ ೨೨ ॥

* ವಸ್ತುವಿನ ಸ್ವಾಭಾವಿಕ ಶಕ್ತಿಯು – ನನ್ನ ಮೇಲೆ ಶ್ರದ್ಧೆ ಇದೆಯೋ, ಇಲ್ಲವೋ ಎಂಬುದನ್ನು – ಬೆಂಕಿ – ಅಮೃತವು ಗಮನಿಸುವುದಿಲ್ಲ.

**ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ । ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ ॥**

ದುಷ್ಟಚಿತ್ತನಾದವನ ಮೂಲಕ ಸ್ಮರಿಸಲ್ಪಟ್ಟರೂ ಭಗವಾನ್ ಶ್ರೀಹರಿಯು ಪಾಪಗಳನ್ನು ಕಳೆಯುತ್ತಾನೆ. ತಿಳಿದೋ, ತಿಳಿಯದೆಯೋ ಬೆಂಕಿಯನ್ನು ಮುಟ್ಟಿದರೆ ಸುಡದೆ ಇರುತ್ತದೆಯೇ ?

ಭಗವಂತನ ನಾಮವನ್ನು ಉಚ್ಚರಿಸುವುದು ಕೇವಲ ಪಾಪಗಳನ್ನೇ ಕಳೆಯುತ್ತದೆ. ಇದಕ್ಕೆ ಬೇರೆ ಯಾವುದೇ ಫಲವಿಲ್ಲ ಎಂಬ ಧೋರಣೆ ಭ್ರಮೆಯಿಂದ ಕೂಡಿದೆ. ಏಕೆಂದರೆ, ಶಾಸ್ತ್ರದಲ್ಲಿ ಹೇಳಿದೆ –

**'ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರದ್ವಯಮ್ । ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥'**

ಯಾರು 'ಹರಿ' ಎಂಬ ಎರಡು ಅಕ್ಷರಗಳನ್ನು ಒಮ್ಮೆಯಾದರೂ ಉಚ್ಚರಿಸಿರುವನೋ, ಅವನು ಮೋಕ್ಷಪ್ರಾಪ್ತಿಗಾಗಿ ಸೊಂಟಕಟ್ಟಿ ಸಿದ್ಧನಾದಂತೆಯೇ. ಈ ವಚನದಿಂದ – ಭಗವನ್ನಾಮವು ಮೋಕ್ಷದ ಸಾಧನೆಯೂ ಆಗಿದೆ, ಎಂಬುದು ಸಿದ್ಧವಾಗುತ್ತದೆ. ಮೋಕ್ಷದೊಂದಿಗೆ ಇದು ಧರ್ಮ, ಅರ್ಥ, ಕಾಮದ ಸಾಧನೆಯೂ ಆಗಿದೆ. ಏಕೆಂದರೆ, ಅದರಲ್ಲಿ ತ್ರಿವರ್ಗ ಸಿದ್ಧಿಗೂ ಕೂಡ ನಾಮವೇ ಕಾರಣವಾಗಿದೆ – ಎಂಬ ಅನೇಕ ಪ್ರಮಾಣಗಳು ದೊರೆಯುತ್ತವೆ.

**ನ ಗಂಗಾ ನ ಗಯಾಸೇತುರ್ನ ಕಾಶೀ ನ ಚ ಪುಷ್ಕರಮ್ । ಜಿಹ್ವಾಗ್ರೇ ವರ್ತತೇ ಯಸ್ಯ ಹರಿರಿತ್ಯಕ್ಷರದ್ವಯಮ್ ॥**
**ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ । ಅಧೀತಾಸ್ತೇನ ಯೇನೋಕ್ತಂ ಹರಿರಿತ್ಯಕ್ಷರದ್ವಯಮ್ ॥**
**ಅಶ್ವಮೇಧಾದಿಭಿರ್ಯಜ್ಞೈರ್ನರಮೇಧೈಃ ಸದಕ್ಷಿಣೈಃ । ಯಜಿತಂ ತೇನ ಯೇನೋಕ್ತಂ ಹರಿರಿತ್ಯಕ್ಷರದ್ವಯಮ್ ॥**
**ಪ್ರಾಣಪ್ರಯಾಣಪಾಥೇಯಂ ಸಂಸಾರವ್ಯಾಧಿಭೇಷಜಮ್ । ದುಃಖಕ್ಲೇಷಪರಿತ್ರಾಣಂ ಹರಿರಿತ್ಯಕ್ಷರದ್ವಯಮ್ ॥**

ಯಾರ ನಾಲಿಗೆಯ ತುದಿಯಲ್ಲಿ 'ಹರಿ' ಎಂಬ ಇವೆರಡು ಅಕ್ಷರಗಳು ನೆಲೆಸಿವೆಯೋ, ಅವನಿಗೆ ಗಂಗೆ, ಗಯಾ, ಸೇತುಬಂಧ ಕಾಶೀ ಮತ್ತು ಪುಷ್ಕರ ಮುಂತಾದ ತೀರ್ಥಕ್ಷೇತ್ರಗಳ ಆವಶ್ಯಕತೆ ಇಲ್ಲ, ಅರ್ಥಾತ್ – ಅವುಗಳ ಯಾತ್ರೆಯ, ಸ್ನಾನಾದಿಗಳ ಫಲವು ಭಗವನ್ನಾಮದಿಂದಲೇ ದೊರೆಯುತ್ತದೆ. 'ಹರಿ' ಎಂಬ ಎರಡು ಅಕ್ಷರಗಳನ್ನು ಉಚ್ಚರಿಸಿದವನು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಇವುಗಳ ಅಧ್ಯಯನ ಮಾಡಿದಂತೆಯೆ. 'ಹರಿ' ಎಂಬ ಇವೆರಡು ಅಕ್ಷರಗಳನ್ನು ಉಚ್ಚರಿಸಿದವನು ದಕ್ಷಿಣೆಸಹಿತ ಅಶ್ವಮೇಧವೇ ಮುಂತಾದ ಯಜ್ಞಗಳಿಂದ ಯಜ್ಞಪುರುಷನನ್ನು ಪೂಜಿಸಿದಂತೆಯೇ. 'ಹರಿ' ಎಂಬ ಈ ಎರಡು ಅಕ್ಷರಗಳು ಮೃತ್ಯುವಿನ ಬಳಿಕ ಪರಲೋಕದ ಮಾರ್ಗದಲ್ಲಿ ಪ್ರಯಾಣಿಸುವ ಪ್ರಾಣಿಗೆ ದಾರಿಬುತ್ತಿಯೇ ಆಗಿದೆ. ಸಂಸಾರವೆಂಬ ರೋಗಕ್ಕೆ ಸಿದ್ಧ ಔಷಧವಾಗಿದೆ. ಜೀವನದ ದುಃಖ ಮತ್ತು ಕ್ಲೇಶಗಳು ಪೂರ್ಣವಾಗಿ ಹೊರಟುಹೋಗುವುವು.

ಈ ವಚನಗಳಿಂದ ಭಗವನ್ನಾಮವು ಧರ್ಮ, ಅರ್ಥ, ಕಾಮ – ಎಂಬ ಮೂರು ವರ್ಗಗಳಿಗೂ ಸಾಧನೆಯಾಗಿದೆ ಎಂಬುದು ಸಿದ್ಧವಾಗುತ್ತದೆ. ಈ ಮಾತು 'ಹರಿ' 'ನಾರಾಯಣ' ಮುಂತಾದ ಕೆಲವು ವಿಶೇಷ ನಾಮಗಳ ಕುರಿತೇ ಆಗಿರದೆ ಎಲ್ಲ ನಾಮಗಳ ಸಂಬಂಧವಾಗಿಯೂ ಇದೆ. ಏಕೆಂದರೆ ಅನಂತನ ನಾಮ, ವಿಷ್ಣುವಿನ ನಾಮ, ಹರಿಯ ನಾಮ ಮುಂತಾದ ಮಾತು ಅಲ್ಲಲ್ಲಿ ಸಾಮಾನ್ಯವಾಗಿ ಹೇಳಲ್ಪಟ್ಟಿದೆ. ಭಗವಂತನ ಎಲ್ಲ ನಾಮಗಳಲ್ಲಿ ಶಕ್ತಿಯು ಒಂದೇ ರೀತಿಯಾಗಿದೆ.

ನಾಮ ಸಂಕೀರ್ತನಾದಿಗಳಲ್ಲಿ ವರ್ಣ-ಆಶ್ರಮದ ಯಾವ ನಿಯಮವೂ ಇಲ್ಲ.

**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಸ್ತ್ರಿಯಃ ಶೂದ್ರಾಂತ್ಯಜಾತಯಃ ।**
**ಯತ್ರ ತತ್ರಾನುಕುರ್ವಂತಿ ವಿಷ್ಣೋರ್ನಾಮಾನುಕೀರ್ತನಮ್ । ಸರ್ವಪಾಪವಿನಿರ್ಮುಕ್ತಾಸ್ತೇಽಪಿಯಾಂತಿ ಸನಾತನಮ್ ॥**

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಸ್ತ್ರೀಯರು, ಶೂದ್ರರು, ಅಂತ್ಯಜರು ಮುಂತಾದವರೆಲ್ಲರೂ ಅಲ್ಲಲ್ಲಿ ಭಗವಾನ್ ವಿಷ್ಣುವಿನ ನಾಮವನ್ನು ಕೀರ್ತಿಸುತ್ತಾ ಇರುತ್ತಾರೆ. ಅವರೂ ಕೂಡ ಸಮಸ್ತ ಪಾಪಗಳಿಂದ ಮುಕ್ತರಾಗಿ ಸನಾತನ ಪರಮಾತ್ಮನನ್ನು ಪಡೆದುಕೊಳ್ಳುವರು.

ನಾಮ ಸಂಕೀರ್ತನೆಯಲ್ಲಿ ದೇಶಕಾಲ ಮುಂತಾದವುಗಳ ನಿಯಮಗಳೂ ಇಲ್ಲ.

**ನ ದೇಶಕಾಲನಿಯಮಃ ಶೌಚಾಶೌಚವಿನಿರ್ಣಯಃ । ಪರಂ ಸಂಕೀರ್ತನಾದೇವ ರಾಮ ರಾಮೇತಿ ಮುಚ್ಯತೇ ॥**

★ ★ ★

**ನ ದೇಶ ನಿಯಮೋ ರಾಜನ್ ನ ಕಾಲನಿಯಮಸ್ತಥಾ । ವಿದ್ಯತೇ ನಾತ್ರ ಸಂದೇಹೋ ವಿಷ್ಣೋರ್ನಾಮಾನುಕೀರ್ತನೇ ॥**
**ಕಾಲೋಽಸ್ತಿ ಯಜ್ಞೇ ದಾನೇ ವಾ ಸ್ನಾನೇ ಕಾಲೋಽಸ್ತಿ ಸಜ್ಜಪೇ । ವಿಷ್ಣುಸಂಕೀರ್ತನೇ ಕಾಲೋ ನಾಸ್ತ್ಯತ್ರ ಪೃಥಿವೀಪತೇ ॥**
**ಗಚ್ಛನ್ ತಿಷ್ಠನ್ ಸ್ವಪನ್‌ವಾಪಿ ಪಿಬನ್ ಭುಂಜನ್‌ಜಪನ್‌ಸ್ತಥಾ । ಕೃಷ್ಣ ಕೃಷ್ಣೇತಿ ಸಂಕೀರ್ತ್ಯ ಮುಚ್ಯತೇ ಪಾಪಕಂಚುಕಾತ್ ॥**

★ ★ ★

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ । ಯಃ ಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಃ ಶುಚಿಃ ॥**

ನಾಮಸ್ಮರಣೆಯಲ್ಲಿ ದೇಶ-ಕಾಲದ ನಿಯಮವಿಲ್ಲ. ಶೌಚ-ಅಶೌಚ ಮುಂತಾದವುಗಳನ್ನೂ ನಿರ್ಣಯಿಸುವ ಆವಶ್ಯಕತೆಯಿಲ್ಲ. ಕೇವಲ ರಾಮ–ರಾಮ ಈ ಸಂಕೀರ್ತನ ಮಾತ್ರದಿಂದಲೇ ಜೀವನು ಮುಕ್ತನಾಗಿ ಹೋಗುತ್ತಾನೆ.

(ಮುಂದಿನ ಪುಟಕ್ಕೆ)

ತಂ ವಿವಕ್ಷುಮಭಿಪ್ರೇತ್ಯ ಮಹಾಪುರುಷಕಿಂಕರಾಃ ।
ಸಹಸಾ ಪಶ್ಯತಸ್ತಸ್ಯ ತತ್ರಾಂತರ್ದಧಿರೇಽನಘ ॥ ೨೩ ॥

ಪುಣ್ಯಾತ್ಮನಾದ ರಾಜನೇ! ಅಜಾಮಿಳನು ಏನೋ ಹೇಳಲು ಬಯಸುತ್ತಿರುವನೆಂದು ನೋಡಿ ಭಗವಂತನ ಪಾರ್ಷದರು ಅವನು ನೋಡುತ್ತಿರುವಂತೆ ಅಲ್ಲೇ ಅಂತರ್ಧಾನ ಹೊಂದಿದರು. ॥ ೨೩ ॥

ಭಗವಂತನ ನಾಮವನ್ನು ಸಂಕೀರ್ತನೆ ಮಾಡುವುದರಲ್ಲಿ ದೇಶದ ಹಾಗೂ ಕಾಲದ ನಿಯಮವಿರುವುದಿಲ್ಲ. ಇದರಲ್ಲಿ ಸಂದೇಹವೇ ಇಲ್ಲ. ಎಲೈ ರಾಜನೇ! ಯಜ್ಞ, ದಾನ, ತೀರ್ಥಸ್ನಾನ ಅಥವಾ ವಿಧಿಪೂರ್ವಕ ಜಪಕ್ಕಾಗಿ ಶುದ್ಧ ಕಾಲದ ಆವಶ್ಯಕತೆ ಇದೆ. ಆದರೆ ಭಗವಂತನ ನಾಮ ಸಂಕೀರ್ತನೆಯಲ್ಲಿ ಕಾಲ-ಶುದ್ಧಿಯ ಯಾವ ಆವಶ್ಯಕತೆಯೂ ಇಲ್ಲ. ನಡೆವಾಗ, ಓಡಾಡುವಾಗ, ನಿಂತಾಗ, ಮಲಗಿದಾಗ, ಉಂಬಾಗ, ತಿಂಬಾಗ ಮತ್ತು ಜಪ ಮಾಡುವಾಗಲೂ 'ಕೃಷ್ಣ-ಕೃಷ್ಣ' ಎಂಬ ಸಂಕೀರ್ತನೆಗೈದು ಮನುಷ್ಯನು ಪಾಪದ ತೆಕ್ಕೆಯಿಂದ ಬಿಡುಗಡೆ ಹೊಂದುವನು. ಅಪವಿತ್ರವಾಗಿರಲೀ, ಪವಿತ್ರವಾಗಿರಲೀ, ಎಲ್ಲ ಅವಸ್ಥೆಗಳಲ್ಲಿಯೂ ಕಮಲನಯನ ಭಗವಂತನ ಸ್ಮರಣೆ ಮಾಡುವವನು ಒಳ-ಹೊರಗೆ ಪವಿತ್ರನಾಗಿ ಹೋಗುವನು.

**ಕೃಷ್ಣೇತಿ ಮಂಗಲಂ ನಾಮ ಯಸ್ಯವಾಚಿ ಪ್ರವರ್ತತೇ । ಭಸ್ಮೀಭವಂತಿ ಸದ್ಯಸ್ತು ಮಹಾಪಾತಕಕೋಟಯಃ ॥**
**ಸರ್ವೇಷಾಮಪಿ ಯಜ್ಞಾನಾಂ ಲಕ್ಷಾಣಿ ವ್ರತಾನಿ ಚ । ತೀರ್ಥಸ್ನಾನಾನಿ ಸರ್ವಾಣಿ ತಪಾಂಸ್ಯನಶನಾನಿ ಚ ॥**
**ವೇದಪಾಠಸಹಸ್ರಾಣಿ ಪ್ರಾದಕ್ಷಿಣ್ಯಂ ಭುವಃ ಶತಮ್ । ಕೃಷ್ಣನಾಮ ಜಪಸ್ಯಾಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥**

ಯಾರ ನಾಲಿಗೆಯಲ್ಲಿ ಕೃಷ್ಣ-ಕೃಷ್ಣ-ಕೃಷ್ಣ ಎಂಬ ಮಂಗಲನಾಮವು ಕುಣಿಯುತ್ತಿರುತ್ತದೋ ಅವನ ಕೋಟಿ-ಕೋಟಿ ಮಹಾಪಾತಕಗಳ ರಾಶಿಯು ಆಗಲೇ ಭಸ್ಮವಾಗಿ ಹೋಗುತ್ತವೆ. ಎಲ್ಲ ಯಜ್ಞಗಳು, ಲಕ್ಷಾಂತರ ವ್ರತಗಳು, ಎಲ್ಲ ತೀರ್ಥಸ್ನಾನ, ತಪಸ್ಸು, ಅನೇಕ ಉಪವಾಸ, ಸಾವಿರಾರು ವೇದಪಾರಾಯಣಗಳು, ನೂರಾರು ಭೂಪ್ರದಕ್ಷಿಣೆಗಳು, ಶ್ರೀಕೃಷ್ಣನ ನಾಮ-ಜಪದ ಹದಿನಾರನೆಯ ಒಂದು ಭಾಗಕ್ಕೂ ಸಾಟಿಯಾಗಲಾರದು. ಭಗವನ್ನಾಮದ ಕೀರ್ತನೆಯಲ್ಲೇ ಇಂತಹ ಫಲವಿದೆ ಎಂಬ ಮಾತಿಲ್ಲ, ಅದರ ಶ್ರವಣ, ಸ್ಮರಣೆಯಲ್ಲಿಯೂ ಅದೇ ಫಲವಿದೆ. ದಶಮಸ್ಕಂಧದ ಕೊನೆಯಲ್ಲಿ- 'ಕೃಷ್ಣನ ನಾಮದ ಸ್ಮರಣೆ ಮತ್ತು ಉಚ್ಚಾರಣೆ ಅಮಂಗಳಗಳನ್ನು ನಾಶಮಾಡುವಂತಹುದು' ಎಂದು ಹೇಳಿದೆ. ಶಿವಗೀತಾ ಮತ್ತು ಪದ್ಮಪುರಾಣದಲ್ಲಿಯೂ ಹೇಳಿದೆ –

**ಆಶ್ಚರ್ಯೆ ವಾ ಭಯೇ ಶೋಕೇ ಕ್ಷತೇ ವಾ ಮಮನಾಮ ಯಃ । ವ್ಯಾಜೇನ ವಾ ಸ್ಮರೇದ್ಯಸ್ತು ಸ ಯಾತಿ ಪರಮಾಂ ಗತಿಮ್ ॥**
**ಪ್ರಯಾಣೇ ಚಾಪ್ರಯಾಣೇ ಚ ಯನ್ನಾಮ ಸ್ಮರತಾಂ ನೃಣಾಮ್ । ಸದ್ಯೋ ನಶ್ಯತಿ ಪಾಪೌಘೋ ನಮಸ್ತಸ್ಮೈ ಚಿದಾತ್ಮನೇ ॥**

ಭಗವಂತನು ಹೇಳುತ್ತಾನೆ – ಆಶ್ಚರ್ಯ, ಭಯ, ಶೋಕ, ಏಟು ಬೀಳುವುದು ಮುಂತಾದ ಅವಸ್ಥೆಯಲ್ಲಿ ನನ್ನ ನಾಮವನ್ನು ಉಚ್ಚರಿಸುವವನು, ಅಥವಾ ಯಾವುದೋ ನೆಪದಿಂದ ಸ್ಮರಿಸಿದರೂ ಅವನು ಪರಮಗತಿಯನ್ನು ಪಡೆಯುತ್ತಾನೆ. ಬದುಕಿರುವಾಗ, ಸಾಯುವಾಗ, ಬೇಕಾದಾಗ ಭಗವಂತನ ನಾಮವನ್ನು ಸ್ಮರಿಸುವ ಮನುಷ್ಯನ ಪಾಪರಾಶಿಯು ಆಗಲೇ ನಾಶವಾಗಿ ಹೋಗುತ್ತದೆ. ಅಂತಹ ಚಿದಾತ್ಮನಾದ ಭಗವಂತನಿಗೆ ನಮಸ್ಕಾರವು.

ಉತ್ತಮವಾದ ಇತಿಹಾಸದಲ್ಲಿಯೂ ಹೇಳಲಾಗಿದೆ –

**ಶ್ರುತ್ವಾ ನಾಮಾನಿ ತತ್ರಸ್ಥಾಸ್ತೇನೋಕ್ತಾನಿ ಹರೇರ್ದ್ವಿಜ । ನಾರಕಾ ನರಕಾನ್ಮುಕ್ತಾಃ ಸದ್ಯ ಏವ ಮಹಾಮುನೇ ॥**

ಮಹಾಮುನಿಗಳಾದ ವಿಪ್ರೋತ್ತಮರೇ! ನರಕದಲ್ಲಿ ವಾಸಿಸುವ ಪ್ರಾಣಿಗಳು ಭಕ್ತರಾಜನ ಮುಖದಿಂದ ಶ್ರೀಹರಿಯ ನಾಮವನ್ನು ಶ್ರವಣಿಸಿ, ಅವರು ಒಡನೆಯೇ ನರಕದಿಂದ ಮುಕ್ತರಾಗಿ ಹೋದರು.

ಯಜ್ಞಯಾಗಾದಿರೂಪವಾದ ಧರ್ಮದ ಅನುಷ್ಠಾನದಲ್ಲಿ ಪವಿತ್ರದೇಶ,ಕಾಲ, ಪಾತ್ರ, ಶಕ್ತಿ, ಸಾಮಗ್ರಿ, ಶ್ರದ್ಧೆ ಮಂತ್ರ, ದಕ್ಷಿಣೆ ಮುಂತಾದವುಗಳ ಆವಶ್ಯಕತೆ ಇರುತ್ತದೆ. ಈ ಕಲಿಯುಗದಲ್ಲಿ ಅದು ಸಾಂಗವಾಗಿ ನೆರವೇರುವುದು ಅತ್ಯಂತ ಕಷ್ಟವಾಗಿದೆ. ಭಗವನ್ನಾಮ ಸಂಕೀರ್ತನೆಯಿಂದ ಅದರ ಫಲವನ್ನು ಆಯಾಸವಿಲ್ಲದೆ ಪಡೆಯಲಾಗುತ್ತದೆ. ಭಗವಾನ್ ಶಂಕರನು ಪಾರ್ವತಿಗೆ ಹೇಳುತ್ತಾನೆ –

**ಈಶೋಽಹಂ ಸರ್ವಜಗತಾಂ ನಾಮ್ನಾಂ ವಿಷ್ಣೋರ್ಹಿ ಜಾಪಕಃ । ಸತ್ಯಂ ಸತ್ಯಂ ವದಾಮ್ಯೇವ ಹರೇರ್ನಾನ್ಯಾ ಗತಿರ್ನೃಣಾಮ್ ॥**

ನಾನು ಸಮಸ್ತ ಜಗತ್ತಿಗೆ ಒಡೆಯನಾಗಿದ್ದರೂ ಭಗವಾನ್ ವಿಷ್ಣುವಿನ ನಾಮವನ್ನೇ ಜಪಿಸುತ್ತಾ ಇರುತ್ತೇನೆ. ಭಗವಂತನನ್ನು ಬಿಟ್ಟು ಜೀವಿಗಳಿಗೆ ಈಗ ಕರ್ಮಕಾಂಡವೇ ಮುಂತಾದ ಯಾವ ಗತಿಯೂ ಇಲ್ಲ ಎಂಬುದನ್ನು ನಾನು ನಿನಗೆ ಸತ್ಯವಾಗಿ ಹೇಳುತ್ತೇನೆ. ಶ್ರೀಮದ್ಭಾಗವತದಲ್ಲಿಯೂ ಇದೇ ಮಾತು ಮುಂದೆ ಬರುವುದಿದೆ. ಕೃತಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ಯಜ್ಞದಿಂದಲೂ, ದ್ವಾಪರದಲ್ಲಿ ಅರ್ಚನೆಯಿಂದಲೂ ಸಿಗುವ ಫಲವೇ ಕಲಿಯುಗದಲ್ಲಿ ಕೇವಲ ಭಗವನ್ನಾಮ ಕೀರ್ತನೆಯಿಂದ ದೊರೆಯುತ್ತದೆ. ಇಷ್ಟೇ ಅಲ್ಲದೆ – ಕಲಿಯುಗವು ದೋಷಗಳ ಭಂಡಾರವಾಗಿದೆ. ಆದರೂ ಇದರಲ್ಲಿ ಮಹತ್ತಮವಾದ ಒಂದು ಗುಣವಿದೆ – ಶ್ರೀಕೃಷ್ಣನ ಸಂಕೀರ್ತನ ಮಾತ್ರದಿಂದಲೇ ಜೀವಿಗಳು ಬಂಧನದಿಂದ ಮುಕ್ತರಾಗಿ ಪರಮಾತ್ಮನನ್ನು ಪಡೆದುಕೊಳ್ಳುವರು.

ಹೀಗೆ ಒಂದೇ ಬಾರಿ ನಾಮೋಚ್ಚಾರದ ಅನಂತ ಮಹಿಮೆಯನ್ನು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಇಲ್ಲಿ ಮೂಲ ಪ್ರಸಂಗದಲ್ಲಿ – **'ಸಕೃದುಚ್ಚರಿತಂ'** ಎಂಬುದರ ಉಲ್ಲೇಖವಾಗಿದೆ. ಪದೇ-ಪದೇ ನಾಮೋಚ್ಚಾರಣೆಯ ವಿಧಾನವು. ಮುಂದೆ ಇನ್ನೂ ಪಾಪಗಳು ಉಂಟಾಗದಿರಲೆಂದೇ ಇದೆ. ಭಗವಂತನ ನಾಮವನ್ನು ಕೊಂಡಾಡುವುದರಿಂದ ಭೂತ, ವರ್ತಮಾನ, ಭವಿಷ್ಯದ ಎಲ್ಲ ಪಾಪಗಳು ಭಸ್ಮವಾಗಿ ಹೋಗುವುವು.

**ವರ್ತಮಾನಂ ಚ ಯತ್ ಪಾಪಂ ಯದ್ ಭೂತಂ ಯದ್ ಭವಿಷ್ಯತಿ । ತತ್ಸರ್ವಂ ನಿರ್ದಹತ್ಯಾಶು ಗೋವಿಂದಾನಲಕೀರ್ತನಮ್ ॥**

ಹೀಗಿದ್ದರೂ ಭಗವತ್ಪ್ರೇಮಿಯಾದ ಜೀವಿಯು ಪಾಪಗಳ ನಾಶದ ಬಗ್ಗೆ ಹೆಚ್ಚು ದೃಷ್ಟಿ ಇರಿಸಬಾರದು. ಅವನಿಗಾದರೋ ಭಕ್ತಿ-ಭಾವದ ದೃಢತೆಗಾಗಿಯೇ ಭಗವಂತನ ಚರಣಗಳಲ್ಲಿ ಹೆಚ್ಚೆಚ್ಚು ಪ್ರೇಮ-ಭಕ್ತಿಯು ಬೆಳೆಯಲಿ ಈ ದೃಷ್ಟಿಯಿಂದ ಹಗಲು-ರಾತ್ರಿ, ನಿತ್ಯ-ನಿರಂತರ ಭಗವಂತನ ಮಧುರವಾದ ನಾಮಗಳ ಜಪವನ್ನು ಮಾಡಬೇಕು. ನಿಷ್ಕಾಮತೆ ಹೆಚ್ಚಿದಷ್ಟು ನಾಮದ ಪೂರ್ಣತೆ ಪ್ರಕಟಗೊಳ್ಳುವುದು, ಅನುಭವಕ್ಕೆ ಬರುವುದು.

(ಮುಂದಿನ ಪುಟಕ್ಕೆ)

ಅಜಾಮಿಲೋಽಪ್ಯಥಾಕರ್ಣ್ಯ ದೂತಾನಾಂ ಯಮಕೃಷ್ಣಯೋಃ ।
ಧರ್ಮಂ ಭಾಗವತಂ ಶುದ್ಧಂ ತ್ರೈವಿದ್ಯಂ ಚ ಗುಣಾಶ್ರಯಮ್ ॥ ೨೪ ॥

ಭಕ್ತಿಮಾನ್ ಭಗವತ್ಯಾಶು ಮಾಹಾತ್ಮ್ಯಶ್ರವಣಾದ್ಧರೇಃ ।
ಅನುತಾಪೋ ಮಹಾನಾಸೀತ್ಸ್ಮರತೋಽಶುಭಮಾತ್ಮನಃ ॥ ೨೫ ॥

ಅಹೋ ಮೇ ಪರಮಂ ಕಷ್ಟಮಭೂದವಿಜಿತಾತ್ಮನಃ ।
ಯೇನ ವಿಪ್ಲಾವಿತಂ ಬ್ರಹ್ಮ ವೃಷಲ್ಯಾಂ ಜಾಯತಾಽಽತ್ಮನಾ ॥ ೨೬ ॥

ಧಿಂಗ್ಮಾಂ ವಿಗರ್ಹಿತಂ ಸದ್ಭಿರ್ದುಷ್ಕೃತಂ ಕುಲಕಜ್ಜಲಮ್ ।
ಹಿತ್ವಾಬಾಲಾಂ ಸತೀಂ ಯೋಽಹಂ ಸುರಾಪಾಮಸತೀಮಗಾಮ್ ॥ ೨೭ ॥

ವೃದ್ಧಾವನಾಥೌ ಪಿತರೌ ನಾನ್ಯಬಂಧೂ ತಪಸ್ವಿನೌ ।
ಅಹೋ ಮಯಾಧುನಾ ತ್ಯಕ್ತಾವಕೃತಜ್ಞೇನ ನೀಚವತ್ ॥ ೨೮ ॥

ಸೋಽಹಂ ವ್ಯಕ್ತಂ ಪತಿಷ್ಯಾಮಿ ನರಕೇ ಭೃಶದಾರುಣೇ ।
ಧರ್ಮಘ್ನಾಃ ಕಾಮಿನೋ ಯತ್ರ ವಿಂದಂತಿ ಯಮಯಾತನಾಃ ॥ ೨೯ ॥

ಕಿಮಿದಂ ಸ್ವಪ್ನ ಆಹೋಸ್ವಿತ್ ಸಾಕ್ಷಾದ್ದೃಷ್ಟಮಿಹಾದ್ಭುತಮ್ ।
ಕ್ವ ಯಾತಾ ಅದ್ಯ ತೇ ಯೇ ಮಾಂ ವ್ಯಕರ್ಷನ್ ಪಾಶಪಾಣಯಃ ॥ ೩೦ ॥

ಅಥ ತೇ ಕ್ವ ಗತಾಃ ಸಿದ್ಧಾಶ್ಚತ್ವಾರಶ್ಚಾರುದರ್ಶನಾಃ ।
ವ್ಯಮೋಚಯನ್ನೀಯಮಾನಂ ಬದ್ಧ್ವಾ ಪಾಶೈರಧೋ ಭುವಃ ॥ ೩೧ ॥

ಈ ಸಂದರ್ಭದಲ್ಲಿ ಅಜಾಮಿಳನು ಭಗವಂತನ ಪಾರ್ಷದರಿಂದ ವಿಶುದ್ಧವಾದ ಭಾಗವತ ಧರ್ಮವನ್ನು ಮತ್ತು ಯಮದೂತರಿಂದ ವೇದೋಕ್ತವಾದ ಪ್ರವೃತ್ತಿ ಧರ್ಮವನ್ನು ಕೇಳಿದ್ದನು. ॥ ೨೪ ॥ ಸರ್ವ ಪಾಪಹಾರಿಯಾದ ಭಗವಂತನ ಮಹಿಮೆಯನ್ನೂ ಕೇಳಿದ್ದರಿಂದ ಅಜಾಮಿಳನ ಹೃದಯದಲ್ಲಿ ಆಗಲೇ ಭಕ್ತಿಯ ಉದಯವಾಯಿತು. ಈಗ ಅವನಿಗೆ ತನ್ನ ಪಾಪಗಳು ನೆನಪಾಗಿ ಭಾರೀ ಪಶ್ಚಾತ್ತಾಪ ಉಂಟಾಯಿತು. ॥ ೨೫ ॥ ಅವನು ಮನಸ್ಸಿನಲ್ಲೇ ಅಂದು ಕೊಂಡನು– ಅಯ್ಯೋ! ನಾನು ಇಂದ್ರಿಯಗಳಿಗೆ ಎಂತಹ ಗುಲಾಮನಾಗಿಬಿಟ್ಟೆ! ಈ ದಾಸಿಯ ಗರ್ಭದಿಂದ ಪುತ್ರರನ್ನು ಪಡೆದು ನಾನು ಬ್ರಾಹ್ಮಣ್ಯವನ್ನು ಹಾಳು ಮಾಡಿಕೊಂಡೆನಲ್ಲ! ಇದೆಂತಹ ದುಃಖದ ಸಂಗತಿಯಾಗಿದೆ! ॥ ೨೬ ॥ ಇಂತಹ ಕಡುಪಾಪಿಯಾದ ನನಗೆ ಧಿಕ್ಕಾರವಿರಲಿ! ಸತ್ಪುರುಷರ ನಿಂದೆಗೆ ಪಾತ್ರನಾದ ಪಾಪಾತ್ಮನು ನಾನು. ನನ್ನ ಕುಲಕ್ಕೆ ಕಳಂಕವನ್ನು ತಂದ ಪಾಪಿಯು ನಾನು. ಅಯ್ಯೋ! ಶಿವನೇ! ಕಿರು ವಯಸ್ಸಿನಲ್ಲಿದ್ದ ಸಾಧ್ವಿಯಾದ ಪತ್ನಿಯನ್ನು ತೊರೆದು, ಹೆಂಡಕುಡಿಯುವ ಕುಲಟೆಯ ಸಹವಾಸ ಮಾಡಿದೆನಲ್ಲ! ॥ ೨೭ ॥ ಎಂತಹ ನೀಚನು ನಾನು! ನನ್ನ ತಂದೆ-ತಾಯಂದಿರು ವೃದ್ಧರೂ, ತಪಸ್ವಿಗಳೂ ಆಗಿದ್ದರು. ಸರ್ವಥಾ ಅಸಹಾಯಕರಾದ ಅವರ ಸೇವೆ-ಶುಶ್ರೂಷೆ ಮಾಡುವವರು ಬೇರೆ ಯಾರೂ ಇಲ್ಲದಿದ್ದರೂ ನಾನೂ ಅವರನ್ನು ತೊರೆದುಬಿಟ್ಟೆನಲ್ಲ! ಅಯ್ಯೋ! ನಾನು ಎಷ್ಟು ಕೃತಘ್ನನಾಗಿದ್ದೇನೆ! ॥ ೨೮ ॥ ಈಗ ನಾನು – ಧರ್ಮಘಾತಕರಾದ ಪಾಪಾತ್ಮರೂ, ಕಾಮುಕರೂ ಅನೇಕ ರೀತಿಯ ಯಮ ಯಾತನೆಗಳನ್ನೂ ಅನುಭವಿಸುವ ಅತ್ಯಂತ ಭಯಂಕರವಾದ ನರಕದಲ್ಲಿ ಬೀಳಬೇಕಾಗುವುದು. ॥ ೨೯ ॥

ಈಗ ನಾನು ಕಂಡಿರುವ ಅದ್ಭುತವಾದ ದೃಶ್ಯವು ಸ್ವಪ್ನವೋ ? ಅಥವಾ ಜಾಗ್ರತ ಸ್ಥಿತಿಯ ಪ್ರತ್ಯಕ್ಷ ಅನುಭವವೋ ? ಈಗ ತಾನೇ ಕೈಯಲ್ಲಿ ಪಾಶಗಳನ್ನೂ ಹಿಡಿದುಕೊಂಡು ನನ್ನನ್ನು ಸೆಳೆಯುತ್ತಿದ್ದವರು ಎಲ್ಲಿಗೆ ಹೋದರು ? ॥ ೩೦ ॥ ಅವರು ನನ್ನನ್ನು ಪಾಶಗಳಿಂದ ಬಂಧಿಸಿ ಭೂಮಿಯ ಕೆಳಗಡೆಗೆ ಸೆಳೆದೊಯ್ಯುತ್ತಿದ್ದರು. ಆದರೆ ಅತ್ಯಂತ ಸುಂದರರಾದ ನಾಲ್ಕುಮಂದಿ ಸಿದ್ಧರು ಬಂದು ನನ್ನನ್ನು ಬಿಡಿಸಿದರಲ್ಲ! ಈಗ ಅವರೆಲ್ಲಿಗೆ ಹೋದರು ? ॥ ೩೧ ॥

---

ನಾಮದ ಮಹಿಮೆ ವಾಸ್ತವಿಕವಲ್ಲ, ಅರ್ಥವಾದ ಮಾತ್ರವಾಗಿದೆ ಎಂಬ ಕಲ್ಪನೆ ಅನೇಕ ತಾರ್ಕಿಕರ ಮನಸ್ಸಿನಲ್ಲಿ ಏಳುತ್ತದೆ. ಅವರ ಮನಸ್ಸಿನಲ್ಲಿ – ಮದ್ಯದ ಒಂದು ತೊಟ್ಟು ಕೂಡ ಪತಿತನನ್ನಾಗಿಸಲು ಸಾಕಷ್ಟಿದೆ ಎಂಬ ಧೋರಣೆ ಇರುತ್ತದೆ. ಆದರೆ ಭಗವಂತನ ಒಂದೇ ನಾಮವೂ ಕೂಡ ಪರಮ ಶ್ರೇಯಸ್ಕರವಾಗಿದೆ ಎಂಬ ವಿಶ್ವಾಸ ಉಂಟಾಗುವುದಿಲ್ಲ. ಭಗವನ್ನಾಮದ ಮಹಿಮೆಯನ್ನು ಅರ್ಥವಾದವೆಂದು ತಿಳಿಯುವುದು ಮಹಾಪಾಪವೆಂದು ಶಾಸ್ತ್ರಗಳಲ್ಲಿ ತಿಳಿಸಲಾಗಿದೆ – ಪುರಾಣೇಷ್ವರ್ಥವಾದತ್ವಂ ಯೇ ವದಂತಿ ನರಾಧಮಾಃ । ತೈರರ್ಜಿತಾನಿ ಪುಣ್ಯಾನಿ ತದ್ವದೇವ ಭವಂತಿ ಹಿ ॥

* * *

ಮನ್ನಾಮಕೀರ್ತನಫಲಂ ವಿವಿಧಂ ನಿಶಮ್ಯ ನ ಶ್ರದ್ದಧಾತಿ ಮನುತೇ ಯದುತಾರ್ಥವಾದಮ್ ।
ಯೋ ಮಾನುಷಸ್ತಮಿಹ ದುಃಖಚಯೇ ಕ್ಷಿಪಾಮಿ ಸಂಸಾರಘೋರವಿವಿಧಾರ್ತಿನಿಪೀಡಿತಾಂಗಮ್ ॥

* * *

ಅರ್ಥವಾದಂ ಹರೇರ್ನಾಮ್ನಿ ಸಂಭಾವಯತಿ ಯೋ ನರಃ । ಸ ಪಾಪಿಷ್ಠೋ ಮನುಷ್ಯಾಣಾಂ ನರಕೇ ಪತತಿ ಸ್ಫುಟಮ್ ॥
ಪುರಾಣಗಳಲ್ಲಿ ಅರ್ಥವಾದದ ಕಲ್ಪನೆ ಮಾಡುವ ನರಾಧಮನು ಗಳಿಸಿದ ಪುಣ್ಯಗಳು ಅರ್ಥವಾದದಂತೆ ವ್ಯರ್ಥವಾಗಿ ಹೋಗುತ್ತವೆ.

* * *

ನನ್ನ ನಾಮ-ಕೀರ್ತನೆಯ ವಿವಿಧ ಫಲಗಳನ್ನು ಕೇಳಿ ಅವರಲ್ಲಿ ಶ್ರದ್ಧೆ ಇಡುವುದಿಲ್ಲವೋ ಮತ್ತು ಅದನ್ನು ಅರ್ಥವಾದವೆಂದು ತಿಳಿಯುವ ಮನುಷ್ಯನಿಗೆ ಸಂಸಾರದ ನಾನಾ ಘೋರ ಕಷ್ಟಗಳಿಂದ ಪೀಡಿತವಾಗಬೇಕಾಗುತ್ತವೆ. ಅವನನ್ನು ನಾನು ಅನೇಕ ದುಃಖಗಳಲ್ಲಿ ಕೆಡಹುತ್ತೇನೆ.

* * *

ಭಗವಂತನ ನಾಮದಲ್ಲಿ ಅರ್ಥವಾದವನ್ನು ಎಣಿಸುವ ಮನುಷ್ಯನು ಅತ್ಯಂತ ಪಾಪಿಯಾಗಿದ್ದಾನೆ ಮತ್ತು ಅವನಿಗೆ ನರಕದಲ್ಲಿ ಬೀಳಬೇಕಾಗುತ್ತದೆ.

ಅಥಾಪಿ ಮೇ ದುರ್ಭಗಸ್ಯ ವಿಬುಧೋತ್ತಮದರ್ಶನೇ।
ಭವಿತವ್ಯಂ ಮಂಗಲೇನ ಯೇನಾತ್ಮಾ ಮೇ ಪ್ರಸೀದತಿ ॥ ೩೨ ॥

ಅನ್ಯಥಾ ಮ್ರಿಯಮಾಣಸ್ಯ ನಾಶುಚೇರ್ವೃಷಲೀಪತೇಃ।
ವೈಕುಂಠನಾಮ ಗ್ರಹಣಂ ಜಿಹ್ವಾ ವಕ್ತುಮಿಹಾರ್ಹತಿ ॥ ೩೩ ॥

ಕ್ವ ಚಾಹಂ ಕಿತವಃ ಪಾಪೋ ಬ್ರಹ್ಮಘ್ನೋ ನಿರಪತ್ರಪಃ।
ಕ್ವ ಚ ನಾರಾಯಣೇತ್ಯೇತದ್ಭಗವನ್ನಾಮ ಮಂಗಲಮ್ ॥ ೩೪ ॥

ಸೋಽಹಂ ತಥಾ ಯತಿಷ್ಯಾಮಿ ಯತಚಿತ್ತೇಂದ್ರಿಯಾನಿಲಃ।
ಯಥಾ ನ ಭೂಯ ಆತ್ಮಾನಮಂಧೇ ತಮಸಿ ಮಜ್ಜಯೇ ॥ ೩೫ ॥

ವಿಮುಚ್ಯ ತಮಿಮಂ ಬಂಧಮವಿದ್ಯಾಕಾಮಕರ್ಮಜಮ್।
ಸರ್ವಭೂತಸುಹೃಚ್ಛಾಂತೋ ಮೈತ್ರಃ ಕರುಣ ಆತ್ಮವಾನ್ ॥ ೩೬ ॥

ಮೋಚಯೇ ಗ್ರಸ್ತಮಾತ್ಮಾನಂ ಯೋಷಿನ್ಮಯ್ಯಾಽಽತ್ಮಮಾಯಯಾ।
ವಿಕ್ರೀಡಿತೋ ಯಯೈವಾಹಂ ಕ್ರೀಡಾಮೃಗ ಇವಾಧಮಃ ॥ ೩೭ ॥

ಮಮಾಹಮಿತಿ ದೇಹಾದೌ ಹಿತ್ವಾ ಮಿಥ್ಯಾರ್ಥಧೀರ್ಮತಿಮ್।
ಧಾಸ್ಯೇ ಮನೋ ಭಗವತಿ ಶುದ್ಧಂ ತತ್ಕೀರ್ತನಾದಿಭಿಃ ॥ ೩೮ ॥

*ಶ್ರೀಶುಕ ಉವಾಚ*

ಇತಿ ಜಾತಸುನಿರ್ವೇದಃ ಕ್ಷಣಸಂಗೇನ ಸಾಧುಷು।
ಗಂಗಾದ್ವಾರಮುಪೇಯಾಯ ಮುಕ್ತಸರ್ವಾನುಬಂಧನಃ ॥ ೩೯ ॥

ಸ ತಸ್ಮಿಂದೇವಸದನ ಆಸೀನೋ ಯೋಗಮಾಶ್ರಿತಃ।
ಪ್ರತ್ಯಾಹೃತೇಂದ್ರಿಯಗ್ರಾಮೋ ಯುಯೋಜ ಮನ ಆತ್ಮನಿ ॥ ೪೦ ॥

ತತೋ ಗುಣೇಭ್ಯ ಆತ್ಮಾನಂ ವಿಯುಜ್ಯಾತ್ಮಸಮಾಧಿನಾ।
ಯುಯುಜೇ ಭಗವದ್ಧಾಮ್ನಿ ಬ್ರಹ್ಮಣ್ಯನುಭವಾತ್ಮನಿ ॥ ೪೧ ॥

ನಾನು ಈ ಜನ್ಮದಲ್ಲಿ ಮಹಾಪಾಪಿ ಆಗಿದ್ದರೂ, ಹಿಂದಿನ ಜನ್ಮದಲ್ಲಿ ಖಂಡಿತವಾಗಿಯೂ ಶುಭಕರ್ಮಗಳನ್ನು ಮಾಡಿರಲೇ ಬೇಕು. ಆದರಿಂದಲೇ ನನಗೆ ಈ ಶ್ರೇಷ್ಠ ದೇವತೆಗಳ ದರ್ಶನ ವಾದುದು. ಅವರನ್ನು ನೆನೆದು ನನ್ನ ಮನಸ್ಸು ಈಗಲೂ ಆನಂದ ದಿಂದ ತುಂಬಿಹೋಗುತ್ತದೆ. ॥ ೩೨ ॥ ನಾನು ಕುಲಟೆಯ ಸಂಗ ಮಾಡಿದವನೂ, ಅತ್ಯಂತ ಅಪವಿತ್ರನೂ ಆಗಿರುವೆ. ಹಿಂದಿನ ಜನ್ಮ ದಲ್ಲಿ ನಾನು ಪುಣ್ಯವನ್ನು ಮಾಡದಿದ್ದರೆ ಸಾಯುವ ಸಮಯದಲ್ಲಿ ನನ್ನ ನಾಲಿಗೆಯು ಭಗವಂತನ ಮಧುರವಾದ ನಾಮವನ್ನು ಹೇಗೆ ಉಚ್ಚರಿಸುತ್ತಿತ್ತು ? ॥ ೩೩ ॥ ಮಹಾಕಪಟಿಯೂ, ಪಾಪಿಯೂ, ನಿರ್ಲಜ್ಜನೂ, ಬ್ರಹ್ಮತೇಜವನ್ನು ನಾಶಮಾಡಿದವನೂ ಆದ ನಾನೆಲ್ಲಿ? ಭಗವಂತನ ಆ ಪರಮಮಂಗಲಮಯ 'ನಾರಾಯಣ' ನಾಮ ವೆಲ್ಲಿ? (ನಿಜವಾಗಿ ನಾನು ಕೃತಾರ್ಥನೇ ಆಗಿರುವೆನು.) ॥ ೩೪ ॥ ಈಗ ನಾನು ನನ್ನ ಮನಸ್ಸು, ಇಂದ್ರಿಯಗಳು ಮತ್ತು ಪ್ರಾಣಗಳನ್ನು ವಶಪಡಿಸಿಕೊಂಡು ಮತ್ತೆ ಘೋರವಾದ, ಅಂಧಕಾರಮಯವಾದ ನರಕದಲ್ಲಿ ಬೀಳದಂತೆ ಪ್ರಯತ್ನಿಸುವೆನು. ॥ ೩೫ ॥ ಅಜ್ಞಾನಕ್ಕೆ ವಶ ನಾದ ನಾನು ಶರೀರವನ್ನೇ ನಾನೆಂದು ತಿಳಿದು ಅದಕ್ಕಾಗಿ ದೊಡ್ಡ-ದೊಡ್ಡ ಕಾಮನೆಗಳನ್ನು ಮಾಡಿದೆ. ಅದನ್ನು ಪೂರ್ಣಗೊಳಿಸಲಿಕ್ಕಾಗಿ ಅನೇಕ ಕರ್ಮಗಳನ್ನು ಮಾಡಿದೆ. ಅದರ ಫಲವೇ ಈ ಬಂಧನ ವಾಗಿದೆ. ಈಗ ನಾನು ಇದನ್ನು ಹರಿದೊಗೆದು ಸಮಸ್ತ ಪ್ರಾಣಿಗಳ ಹಿತವನ್ನೇ ಮಾಡುವೆನು. ವಾಸನೆಗಳನ್ನು ಶಾಂತಗೊಳಿಸಿ, ಎಲ್ಲ ರೊಂದಿಗೆ ಮಿತ್ರರಂತೆ ವ್ಯವಹರಿಸುವೆನು. ದುಃಖಿತರ ಮೇಲೆ ದಯೆ ಗೈದು, ಪೂರ್ಣಸಂಯಮದೊಂದಿಗೆ ಇರುವೆನು. ॥ ೩೬॥ ಭಗ ವಂತನ ಮಾಯೆಯೇ ಸ್ತ್ರೀಯಾಗಿ ಅಧಮನಾದ ನನ್ನನ್ನು ಮೋಸ ಗೊಳಿಸಿತು ಹಾಗೂ ಕ್ರೀಡಾಮೃಗ (ಆಟದ ಪ್ರಾಣಿ) ದಂತೆ ನನ್ನನ್ನು ತುಂಬಾ ಕುಣಿಸಿತು. ಈಗ ನಾನು ಆ ಮಾಯೆಯಿಂದ ಬಿಡುಗಡೆ ಹೊಂದುವೆ. ॥ ೩೭ ॥ ಈಗ ನಾನು ಸದ್ವಸ್ತುವಾದ ಪರಮಾತ್ಮನನ್ನು ಗುರುತಿಸಿರುವೆನು. ಆದ್ದರಿಂದ ಇನ್ನು ನಾನು ಶರೀರಾದಿಗಳಲ್ಲಿ 'ನಾನು-ನನ್ನದು' ಎಂಬ ಭಾವವನ್ನು ತೊರೆದು, ಭಗವಂತನ ಕೀರ್ತ ನಾದಿಗಳಿಂದ ನನ್ನ ಮನಸ್ಸನ್ನು ಶುದ್ಧಗೊಳಿಸಿ ಅದನ್ನು ಭಗವಂತನಲ್ಲಿ ತೊಡಗಿಸುವೆನು ಎಂದು ಅವನು ಅಂದುಕೊಂಡನು. ॥ ೩೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಂತನ ಪಾರ್ಷದರಾದ ಆ ಮಹಾತ್ಮರ ಕ್ಷಣಕಾಲದ ಸತ್ಸಂಗ ದಿಂದಲೇ ಅಜಾಮಿಳನ ಚಿತ್ತದಲ್ಲಿ ತೀವ್ರವಾದ ವೈರಾಗ್ಯ ಉಂಟಾಗಿ, ಸಂಸಾರದ ಎಲ್ಲ ಸಂಬಂಧಗಳನ್ನೂ, ಮೋಹವನ್ನೂ ತೊರೆದು ಹರಿದ್ವಾರಕ್ಕೆ ಹೊರಟುಹೋದನು. ॥ ೩೯ ॥ ಆ ದೇವಭೂಮಿ ಯಾದ ಪವಿತ್ರಕ್ಷೇತ್ರಕ್ಕೆ ಹೋಗಿ ಅವನು ಒಂದು ಭಗವಂತನ ಮಂದಿರದಲ್ಲಿ ಯೋಗಾಸನದಲ್ಲಿ ಕುಳಿತು, ಯೋಗವನ್ನು ಆಚರಿ ಸುತ್ತಾ ತನ್ನ ಎಲ್ಲ ಇಂದ್ರಿಯಗಳನ್ನು ವಿಷಯಗಳಿಂದ ತೊಡೆದು, ಮನಸ್ಸನ್ನು ಬುದ್ಧಿಯಲ್ಲಿ ಸೇರಿಸಿ ಬಿಟ್ಟನು. ॥ ೪೦ ॥ ಅನಂತರ ಆತ್ಮ ಚಿಂತನೆಯಿಂದ ಬುದ್ಧಿಯನ್ನು ವಿಷಯಗಳಿಂದ ಬೇರ್ಪಡಿಸಿ, ಭಗ ವಂತನ ಧಾಮವಾದ ಅನುಭವಸ್ವರೂಪವಾದ ಪರಬ್ರಹ್ಮನಲ್ಲಿ ಸೇರಿಸಿಬಿಟ್ಟನು. ॥ ೪೧ ॥

ಯರ್ಹ್ಯುಪಾರತಧೀಸ್ತಸ್ಮಿನ್ನದ್ರಾಕ್ಷೀತ್ಪುರುಷಾನ್ ಪುರಃ ।
ಉಪಲಭ್ಯೋಪಲಬ್ಧಾನ್ ಪ್ರಾಗ್ವವಂದೇ ಶಿರಸಾ ದ್ವಿಜಃ ॥ ೪೨ ॥

ಹೀಗೆ ಅಜಾಮಿಳನ ಬುದ್ಧಿಯು ತ್ರಿಗುಣಮಯ ಪ್ರಕೃತಿಯಿಂದ ಮೀರಿ ಭಗವಂತನ ಸ್ವರೂಪದಲ್ಲಿ ನೆಲೆಸಿದಾಗ, ಅವನು ಹಿಂದೆ ನೋಡಿದ ನಾಲ್ಕೂ ಪಾರ್ಷದರು ತನ್ನ ಇದಿರ್ಗಡೆ ನಿಂತಿರುವುದನ್ನು ಕಂಡು ಅಜಾಮಿಳನು ತಲೆಬಾಗಿ ನಮಸ್ಕರಿಸಿದನು. ॥ ೪೨ ॥

ಹಿತ್ವಾ ಕಲೇವರಂ ತೀರ್ಥೇ ಗಂಗಾಯಾಂ ದರ್ಶನಾದನು ।
ಸದ್ಯಃ ಸ್ವರೂಪಂ ಜಗೃಹೇ ಭಗವತ್ಪಾರ್ಶ್ವವರ್ತಿನಾಮ್ ॥ ೪೩ ॥

ಅವರನ್ನು ದರ್ಶಿಸಿದ ಬಳಿಕ ಅವನು ಆ ತೀರ್ಥಕ್ಷೇತ್ರದ ಗಂಗಾತೀರದಲ್ಲಿ ತನ್ನ ಶರೀರವನ್ನು ತ್ಯಜಿಸಿದನು ಹಾಗೂ ಒಡನೆಯೇ ಭಗವಂತನ ಪಾರ್ಷದರ ಸ್ವರೂಪವನ್ನು ಪಡೆದುಕೊಂಡನು. ॥ ೪೩ ॥

ಸಾಕಂ ವಿಹಾಯಸಾ ವಿಪ್ರೋ ಮಹಾಪುರುಷಕಿಂಕರೈಃ ।
ಹೈಮಂ ವಿಮಾನಮಾರುಹ್ಯ ಯಯೌ ಯತ್ರ ಶ್ರಿಯಃ ಪತಿಃ ॥ ೪೪ ॥

ಅಜಾಮಿಳನು ಭಗವಂತನ ಪಾರ್ಷದರೊಂದಿಗೆ ಸ್ವರ್ಣಮಯ ವಿಮಾನದಲ್ಲಿ ಹತ್ತಿ ಆಕಾಶಮಾರ್ಗದಿಂದ ಭಗವಾನ್ ಲಕ್ಷ್ಮೀಪತಿಯ ನಿವಾಸಸ್ಥಾನವಾದ ವೈಕುಂಠವನ್ನು ಸೇರಿದನು. ॥ ೪೪ ॥

ಏವಂ ಸ ವಿಪ್ಲಾವಿತಸರ್ವಧರ್ಮಾ
ದಾಸ್ಯಾಃ ಪತಿಃ ಪತಿತೋ ಗರ್ಹ್ಯಕರ್ಮಣಾ ।
ನಿಪಾತ್ಯಮಾನೋ ನಿರಯೇ ಹತವ್ರತಃ
ಸದ್ಯೋ ವಿಮುಕ್ತೋ ಭಗವನ್ನಾಮ ಗೃಹ್ಣನ್ ॥ ೪೫ ॥

ಪರೀಕ್ಷಿದ್ರಾಜನೇ! ಅಜಾಮಿಳನು ದಾಸಿಯ ಸಹವಾಸ ಮಾಡಿ ಎಲ್ಲ ಧಮ-ಕರ್ಮಗಳನ್ನು ಹಾಳುಗೆಡವಿದ್ದನು. ಅವನು ತನ್ನ ನಿಂದ್ಯ ಕರ್ಮಗಳಿಂದ ಪತಿತನಾಗಿದ್ದನು. ನಿಯಮಗಳಿಂದ ಚ್ಯುತನಾದ ಕಾರಣ ಅವನೂ ನರಕಕ್ಕೆ ಬೀಳುವವನಿದ್ದನು. ಆದರೆ ಭಗವಂತನ ನಾಮವನ್ನು ಒಂದೇ ಬಾರಿ ಉಚ್ಚರಿಸಿ ಅವನು ಅದರಿಂದ ತತ್‌ಕಾಲದಲ್ಲೇ ಮುಕ್ತನಾಗಿ ಹೋದನು. ॥ ೪೫ ॥

ನಾತಃ ಪರಂ ಕರ್ಮನಿಬಂಧಕೃಂತನಂ
ಮುಮುಕ್ಷತಾಂ ತೀರ್ಥಪದಾನುಕೀರ್ತನಾತ್ ।
ನ ಯತ್ಪುನಃ ಕರ್ಮಸು ಸಜ್ಜತೇ ಮನೋ
ರಜಸ್ತಮೋಭ್ಯಾಂ ಕಲಿಲಂ ತತೋಽನ್ಯಥಾ ॥ ೪೬ ॥

ಈ ಸಂಸಾರ ಬಂಧನದಿಂದ ಮುಕ್ತನಾಗಲು ಬಯಸುವವನಿಗೆ – ತನ್ನ ಚರಣ ಸ್ಪರ್ಶದಿಂದ ತೀರ್ಥಕ್ಕೂ ತೀರ್ಥತ್ವವನ್ನು ಉಂಟು ಮಾಡುವ ಭಗವಂತನ ನಾಮಕ್ಕಿಂತ ಮಿಗಿಲಾದ ಯಾವ ಸಾಧನೆಯೂ ಇಲ್ಲ. ಏಕೆಂದರೆ, ನಾಮವನ್ನು ಆಶ್ರಯಿಸಿದ ಮನುಷ್ಯನ ಮನಸ್ಸು ಪುನಃ ಕರ್ಮಗಳ ಜಂಜಡದಲ್ಲಿ ಬೀಳಲಾರದು. ಭಗವನ್ನಾಮವಲ್ಲದೆ ಬೇರೆ ಯಾವುದೇ ಪ್ರಾಯಶ್ಚಿತ್ತವನ್ನು ಆಶ್ರಯಿಸದ ಮೇಲೆಯೂ ಮನಸ್ಸು ರಜೋಗುಣ ಮತ್ತು ತಮೋಗುಣಗಳಿಂದ ಗ್ರಸ್ತವಾಗಿರುತ್ತದೆ ಹಾಗೂ ಸಮೂಲವಾಗಿ ಪಾಪಗಳೂ ನಾಶವಾಗುವುದಿಲ್ಲ. ॥ ೪೬ ॥

ಯ ಏವಂ ಪರಮಂ ಗುಹ್ಯಮಿತಿಹಾಸಮಘಾಪಹಮ್ ।
ಶೃಣುಯಾಚ್ಛ್ರದ್ಧಯಾ ಯುಕ್ತೋ ಯಶ್ಚ ಭಕ್ತ್ಯಾನುಕೀರ್ತಯೇತ್ ॥ ೪೭ ॥

ನ ವೈ ಸ ನರಕಂ ಯಾತಿ ನೇಕ್ಷಿತೋ ಯಮಕಿಂಕರೈಃ ।
ಯದ್ಯಪ್ಯಮಂಗಲೋ ಮರ್ತ್ಯೋ ವಿಷ್ಣುಲೋಕೇ ಮಹೀಯತೇ ॥ ೪೮ ॥

ಪರೀಕ್ಷಿತನೇ! ಈ ಇತಿಹಾಸವು ಅತ್ಯಂತ ಗೋಪ್ಯವೂ, ಸಮಸ್ತ ಪಾಪಗಳನ್ನು ನಾಶಮಾಡುವಂತಹದೂ ಆಗಿದೆ. ಇದನ್ನು ಶ್ರದ್ಧಾ-ಭಕ್ತಿಗಳಿಂದ ಶ್ರವಣಿಸುವವನು, ಕೀರ್ತಿಸುವವನು ಎಂದಿಗೂ ನರಕಕ್ಕೆ ಹೋಗುವುದಿಲ್ಲ. ಯಮದೂತರು ಕಣ್ಣೆತ್ತಿಯೂ ಆತನನ್ನು ನೋಡಲಾರರು. ಅವನ ಜೀವನವು ಪಾಪಮಯವಾಗಿದ್ದರೂ ವೈಕುಂಠ ಲೋಕದಲ್ಲಿ ಅವನು ಪೂಜಿಸಲ್ಪಡುತ್ತಾನೆ. ॥ ೪೭-೪೮ ॥

ಮ್ರಿಯಮಾಣೋ ಹರೇರ್ನಾಮ ಗೃಣನ್ಪುತ್ರೋಪಚಾರಿತಮ್ ।
ಅಜಾಮಿಲೋಽಪ್ಯಗಾದ್ಧಾಮ ಕಿಂ ಪುನಃ ಶ್ರದ್ಧಯಾ ಗೃಣನ್ ॥ ೪೯ ॥

ಎಲೈ ರಾಜನೇ! ನೋಡು! ಅಜಾಮಿಳನಂತಹ ಪಾಪಿಯು ಸಾಯುವಾಗ ತನ್ನ ಪುತ್ರನನ್ನು ಕೂಗುವ ನೆಪದಿಂದ ಭಗವಂತನ ನಾಮವನ್ನು ಉಚ್ಚರಿಸಿದನು. ಅವನಿಗೂ ವೈಕುಂಠದ ಪ್ರಾಪ್ತಿಯಾಗಿಹೋಯಿತು. ಹಾಗಿರುವಾಗ ಶ್ರದ್ಧೆಯಿಂದ ಭಗವನ್ನಾಮವನ್ನು ಉಚ್ಚರಿಸುವವರ ಕುರಿತು ಹೇಳುವುದೇನಿದೆ? ॥ ೪೯ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ
ಅಜಾಮಿಲೋಪಾಖ್ಯಾನೇ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಯಮ ಮತ್ತು ಯಮದೂತರ ಸಂವಾದ

*ರಾಜೋವಾಚ*

ನಿಶಮ್ಯ ದೇವಃ ಸ್ವಭಟೋಪವರ್ಣಿತಂ
ಪ್ರತ್ಯಾಹ ಕಿಂ ತಾನ್ಯಪಿ ಧರ್ಮರಾಜಃ ।
ಏವಂ ಹತಾಜ್ಞೋ ವಿಹತಾನ್ಮುರಾರೇ-
ರ್ನೈದೇಶಿಕೈರ್ಯಸ್ಯ ವಶೇ ಜನೋಽಯಮ್ ॥ ೧ ॥

ಯಮಸ್ಯ ದೇವಸ್ಯ ನ ದಂಡ ಭಂಗಃ
ಕುತಶ್ಚನರ್ಷೇ ಶ್ರುತಪೂರ್ವ ಆಸೀತ್ ।
ಏತನ್ಮುನೇ ವೃಶ್ಚತಿ ಲೋಕಸಂಶಯಂ
ನ ಹಿ ತ್ವದನ್ಯ ಇತಿ ಮೇ ವಿನಿಶ್ಚಿತಮ್ ॥ ೨ ॥

*ಶ್ರೀಶುಕ ಉವಾಚ*

ಭಗವತ್ಪುರುಷೈ ರಾಜನ್ ಯಾಮ್ಯಾಃ ಪ್ರತಿಹತೋದ್ಯಮಾಃ ।
ಪತಿಂ ವಿಜ್ಞಾಪಯಾಮಾಸುರ್ಯಮಂ ಸಂಯಮನೀಪತಿಮ್ ॥ ೩ ॥

*ಯಮದೂತಾ ಊಚುಃ*

ಕತಿ ಸಂತೀಹ ಶಾಸ್ತಾರೋ ಜೀವಲೋಕಸ್ಯ ವೈ ಪ್ರಭೋ ।
ತ್ರೈವಿಧ್ಯಂ ಕುರ್ವತಃ ಕರ್ಮ ಫಲಾಭಿವ್ಯಕ್ತಿಹೇತವಃ ॥ ೪ ॥

ಯದಿ ಸ್ಯುರ್ಬಹವೋ ಲೋಕೇ ಶಾಸ್ತಾರೋ ದಂಡಧಾರಿಣಃ ।
ಕಸ್ಯ ಸ್ಯಾತಾಂ ನ ವಾ ಕಸ್ಯ ಮೃತ್ಯುಶ್ಚಾಮೃತಮೇವ ವಾ ॥ ೫ ॥

ಕಿಂತು ಶಾಸ್ತೃಬಹುತ್ವೇ ಸ್ಯಾದ್ಬಹೂನಾಮಿಹ ಕರ್ಮಿಣಾಮ್ ।
ಶಾಸ್ತೃತ್ವಮುಪಚಾರೋ ಹಿ ಯಥಾ ಮಂಡಲವರ್ತಿನಾಮ್ ॥ ೬ ॥

ಅತಸ್ತ್ವಮೇಕೋ ಭೂತಾನಾಂ ಸೇಶ್ವರಾಣಾಮಧೀಶ್ವರಃ ।
ಶಾಸ್ತಾ ದಂಡಧರೋ ನೃಣಾಂ ಶುಭಾಶುಭವಿವೇಚನಃ ॥ ೭ ॥

ತಸ್ಯ ತೇ ವಿಹತೋ ದಂಡೋ ನ ಲೋಕೇ ವರ್ತತೇಽಧುನಾ ।
ಚತುರ್ಭಿರದ್ಭುತೈಃ ಸಿದ್ಧೈರಾಜ್ಞಾ ತೇ ವಿಪ್ರಲಂಭಿತಾ ॥ ೮ ॥

ನೀಯಮಾನಂ ತವಾದೇಶಾದಸ್ಮಾಭಿರ್ಯಾತನಾಗೃಹಾನ್ ।
ವ್ಯಮೋಚಯನ್ಪಾತಕಿನಂ ಛಿತ್ತ್ವಾ ಪಾಶಾನ್ ಪ್ರಸಹ್ಯ ತೇ ॥ ೯ ॥

**ಪರೀಕ್ಷಿದ್ರಾಜನು ಕೇಳಿದನು** – ಮಹರ್ಷಿಗಳೇ! ದೇವದೇವನಾದ ಯಮಧರ್ಮರಾಜನ ವಶದಲ್ಲಿ ಎಲ್ಲ ಜೀವರು ಇರುವರು ಮತ್ತು ಭಗವಂತನ ಪಾರ್ಷದರು ಅವನ ಆಜ್ಞೆಯನ್ನು ಭಂಗಗೊಳಿಸಿದರು. ಅವನ ದೂತರನ್ನು ಅಪಮಾನ ಮಾಡಿದರು. ಯಮದೂತರು ಯಮಪುರಕ್ಕೆ ಹೋಗಿ ಅವನಲ್ಲಿ ಅಜಾಮಿಳನ ವೃತ್ತಾಂತವನ್ನು ಅರುಹಿದಾಗ ಎಲ್ಲವನ್ನು ಕೇಳಿ ಅವನು ತನ್ನ ದೂತರಿಗೆ ಏನು ಹೇಳಿದನು. ॥ ೧ ॥ ಋಷಿವರ್ಯರೇ! ಯಾರು ಎಂದಿಗೂ ಯಾವುದೇ ಕಾರಣದಿಂದ ಧರ್ಮರಾಜನ ಶಾಸನವನ್ನು ಉಲ್ಲಂಘಿಸಿದ ಮಾತನ್ನು ನಾನು ಮೊದಲು ಎಂದೂ ಕೇಳಿರಲಿಲ್ಲ. ಪೂಜ್ಯರೇ! ಈ ವಿಷಯದಲ್ಲಿ ಜನರು ತುಂಬಾ ಸಂದೇಹಪಡುವರು. ಅದನ್ನು ನಿವಾರಿಸುವವರು ನೀವಲ್ಲದೆ ಬೇರೆ ಯಾರೂ ಇರಲಾರದೆಂದೇ ನನ್ನ ನಿಶ್ಚಯವು. ॥ ೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** –ಪರೀಕ್ಷಿದ್ರಾಜನೇ! ಭಗವಂತನ ಪಾರ್ಷದರು ಯಮದೂತರ ಪ್ರಯತ್ನವನ್ನು ವಿಫಲಗೊಳಿಸಿದಾಗ ಅವರು ಸಂಯಮಿನಿಪುರದೊಡೆಯನೂ, ತಮ್ಮ ಶಾಸಕನೂ ಆದ ಯಮರಾಜನ ಬಳಿಗೆ ಹೋಗಿ ಹೀಗೆ ನಿವೇದಿಸಿಕೊಂಡರು. ॥ ೩॥

**ಯಮದೂತರು ಹೇಳಿದರು** – ಸ್ವಾಮಿ! ಪ್ರಪಂಚದ ಜೀವರು– ಪಾಪ, ಪುಣ್ಯ ಅಥವಾ ಎರಡರಿಂದಲೂ ಮಿಶ್ರವಾದ ಮೂರು ರೀತಿಯ ಕರ್ಮಗಳನ್ನು ಮಾಡುತ್ತಿದ್ದಾರೆ. ಈ ಜೀವಿಗಳಿಗೆ ಆ ಕರ್ಮಗಳ ಫಲವನ್ನು ಕೊಡುವ ಶಾಸಕರು ಪ್ರಪಂಚದಲ್ಲಿ ಎಷ್ಟು ಜನರಿದ್ದಾರೆ? ॥ ೪ ॥ ಜಗತ್ತಿನಲ್ಲಿ ದಂಡನೆ ಕೊಡುವವರು ಬಹಳಷ್ಟು ಶಾಸಕರು ಇರುವುದಾದರೆ ಯಾರಿಗೆ ಸುಖ ಸಿಗುವುದು, ಯಾರಿಗೆ ದುಃಖ – ಇದರ ವ್ಯವಸ್ಥೆ ಒಂದೇ ರೀತಿಯಾಗಿರಲಾರದು. ॥ ೫ ॥ ಪ್ರಪಂಚದಲ್ಲಿ ಕರ್ಮಮಾಡುವವರು ಅನೇಕರಿರುವ ಕಾರಣ, ಅವರ ಶಾಸಕರೂ ಅನೇಕರಾದರೆ ಆ ಶಾಸಕರ ಶಾಸನವು ಹೆಸರಿಗಷ್ಟೇ ಆಗುವುದು. ಒಬ್ಬ ಸಾಮ್ರಾಟನ ಅಧೀನದಲ್ಲಿ ಬಹಳಷ್ಟು ಜನರು ಹೆಸರಿಗಷ್ಟೇ ಸಾಮಂತರಿರುವಂತೆಯೇ ಆದೀತು. ॥ ೬ ॥ ಆದರೆ ನೀವೊಬ್ಬರೇ ಸಮಸ್ತ ಪ್ರಾಣಿಗಳಿಗೆ ಮತ್ತು ಅವರ ಒಡೆಯರಿಗೆ ಅಧೀಶ್ವರರಾಗಿರುವಿರಿ ಎಂದು ನಾವು ತಿಳಿಯುತ್ತೇವೆ. ನೀವೇ ಮನುಷ್ಯರ ಪಾಪ ಮತ್ತು ಪುಣ್ಯಗಳ ನಿರ್ಣಾಯಕ ದಂಡವನ್ನು ಕೊಡುವವರು ಹಾಗೂ ಶಾಸಕರೂ ಆಗಿರುವಿರಿ. ॥ ೭ ॥ ಪ್ರಭುಗಳೇ! ಪ್ರಪಂಚದಲ್ಲಿ ಇಂದಿನವರೆಗೆ ಎಲ್ಲಿಯೂ ತಾವು ನಿಯಮಿಸಿದ ದಂಡನೆಯನ್ನು ಯಾರೂ ಅವಹೇಳನೆ ಮಾಡಿರಲಿಲ್ಲ. ಆದರೆ ಈಗ ನಾಲ್ವರು ಅದ್ಭುತ ಸಿದ್ಧರು ನಿಮ್ಮ ಆಜ್ಞೆಯನ್ನು ಉಲ್ಲಂಘಿಸಿರುವರು. ॥ ೮ ॥ ಸ್ವಾಮಿ! ನಿಮ್ಮ ಅಪ್ಪಣೆಯಂತೆ ನಾವು ಒಬ್ಬ ಪಾಪಿಯನ್ನು ಯಾತನಾಗೃಹವಾದ ನರಕಕ್ಕೆ ಕೊಂಡುಹೋಗುತ್ತಿದ್ದೆವು. ಆದರೆ ಅವರು ಬಲವಂತವಾಗಿ ನಿಮ್ಮ ಪಾಶವನ್ನು ತುಂಡರಿಸಿ ಅವನನ್ನು ಬಿಡಿಸಿದರು. ॥ ೯ ॥

ತಾಂಸ್ತೇ ವೇದಿತುಮಿಚ್ಛಾಮೋ
ಯದಿ ನೋ ಮನ್ಯಸೇ ಕ್ಷಮಮ್ ।
ನಾರಾಯಣೇತ್ಯಭಿಹಿತೇ
ಮಾ ಭೈರಿತ್ಯಾಯಯುರ್ದ್ರುತಮ್ ॥ ೧೦ ॥

ಇದರ ರಹಸ್ಯವನ್ನು ನಾವು ನಿಮ್ಮಿಂದ ತಿಳಿಯಲು ಇಚ್ಛಿಸುವೆವು. ನೀವು ನಮ್ಮನ್ನು ಕೇಳುವ ಅಧಿಕಾರಿಗಳೆಂದು ತಿಳಿದರೆ ಹೇಳಿರಿ. ಪ್ರಭೋ! ಅಜಾಮಿಳನ ಬಾಯಿಂದ 'ನಾರಾಯಣ' ಎಂಬ ಶಬ್ದ ಹೊರಡುತ್ತಲೇ ಅತ್ತಕಡೆಯಿಂದ ಅವರು 'ಹೆದರಬೇಡ! ಹೆದರಬೇಡ!' ಎಂದು ಹೇಳುತ್ತಾ ಅಲ್ಲಿಗೆ ಬಂದುಬಿಟ್ಟರು. ಎಂತಹ ಆಶ್ಚರ್ಯವಿದು! ॥ ೧೦ ॥

*ಶ್ರೀಶುಕ ಉವಾಚ*

ಇತಿ ದೇವಃ ಸ ಆಪೃಷ್ಟಃ ಪ್ರಜಾಸಂಯಮನೋ ಯಮಃ ।
ಪ್ರೀತಃ ಸ್ವದೂತಾನ್ ಪ್ರತ್ಯಾಹ ಸ್ಮರನ್ಪಾದಾಂಬುಜಂ ಹರೇಃ ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜನೇ! ದೂತರು ಹೀಗೆ ಪ್ರಶ್ನಿಸಿದಾಗ ದೇವಶಿರೋಮಣಿ ಪ್ರಜಾಶಾಸಕನಾದ ಭಗವಾನ್ ಯಮಧರ್ಮನು ಪ್ರಸನ್ನನಾಗಿ ಶ್ರೀಹರಿಯ ಚರಣಕಮಲಗಳನ್ನು ಸ್ಮರಿಸುತ್ತಾ ಅವರಿಗೆ ಹೀಗೆಂದನು – ॥ ೧೧ ॥

*ಯಮ ಉವಾಚ*

ಪರೋ ಮದನ್ಯೋ ಜಗತಸ್ತಸ್ಥುಷಶ್ಚ
ಓತಂ ಪ್ರೋತಂ ಪಟವದ್ಯತ್ರ ವಿಶ್ವಮ್ ।
ಯದಂಶತೋಽಸ್ಯ ಸ್ಥಿತಿಜನ್ಮನಾಶಾ
ನಸ್ಯೋತವದ್ಯಸ್ಯ ವಶೇ ಚ ಲೋಕಃ ॥ ೧೨ ॥

ಯೋ ನಾಮಭಿರ್ವಾಚಿ ಜನಾನ್ನಿಜಾಯಾಂ
ಬಧ್ನಾತಿ ತಂತ್ಯಾಮಿವ ದಾಮಭಿರ್ಗಾಃ ।
ಯಸ್ಮೈ ಬಲಿಂ ತ ಇಮೇ ನಾಮಕರ್ಮ-
ನಿಬಂಧಬದ್ಧಾಶ್ಚಕಿತಾ ವಹಂತಿ ॥ ೧೩ ॥

ಅಹಂ ಮಹೇಂದ್ರೋ ನಿರ್ಋತಿಃ ಪ್ರಚೇತಾಃ
ಸೋಮೋಽಗ್ನಿರೀಶಃ ಪವನೋಽರ್ಕೋ ವಿರಿಂಚಃ ।
ಆದಿತ್ಯವಿಶ್ವೇ ವಸವೋಽಥ ಸಾಧ್ಯಾ
ಮರುದ್ಗಣಾ ರುದ್ರಗಣಾಃ ಸಸಿದ್ಧಾಃ ॥ ೧೪ ॥

ಅನ್ಯೇ ಚ ಯೇ ವಿಶ್ವಸೃಜೋಽಮರೇಶಾ
ಭೃಗ್ವಾದಯೋಽಸ್ಪೃಷ್ಟರಜಸ್ತಮಸ್ಕಾಃ ।
ಯಸ್ಯೇಹಿತಂ ನ ವಿದುಃ ಸ್ಪೃಷ್ಟಮಾಯಾಃ
ಸತ್ತ್ವಪ್ರಧಾನಾ ಅಪಿ ಕಿಂ ತತೋಽನ್ಯೇ ॥ ೧೫ ॥

ಯಂ ವೈ ನ ಗೋಭಿರ್ಮನಸಾಸುಭಿರ್ವಾ
ಹೃದಾ ಗಿರಾ ವಾಸುಭೃತೋ ವಿಚಕ್ಷತೇ ।
ಆತ್ಮಾನಮಂತರ್ಹೃದಿ ಸಂತಮಾತ್ಮನಾಂ
ಚಕ್ಷುರ್ಯಥೈ ವಾಕೃತಯಸ್ತತಃ ಪರಮ್ ॥ ೧೬ ॥

**ಯಮಧರ್ಮರಾಜನು ಹೇಳುತ್ತಾನೆ** – ಎಲೈ ದೂತರೇ! ಈ ಚರಾಚರ ಜಗತ್ತಿಗೆಲ್ಲಾ ಮಹಾಪ್ರಭುವಾದವನು ನನಗಿಂತಲೂ ಬೇರೊಬ್ಬನಿದ್ದಾನೆ. ಅವನಲ್ಲಿಯೇ ಈ ಇಡೀ ಜಗತ್ತು – ವಸ್ತ್ರದಲ್ಲಿ ನೂಲು ಹಾಸು-ಹೊಕ್ಕಾಗಿರುವಂತೆ ಪೋಣಿಸಲ್ಪಟ್ಟಿದೆ. ಅವನ ಅಂಶರೇ ಆದ ಬ್ರಹ್ಮಾ, ವಿಷ್ಣು, ಮಹೇಶ್ವರ ಇವರು ಈ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಳಯವನ್ನು ಮಾಡುತ್ತಾರೆ. ಅವನೇ ಈ ಇಡೀ ಜಗತ್ತನ್ನು ಮೂಗುದಾರ ಹಾಕಿದ ಎತ್ತಿನಂತೆ ತನ್ನ ಅಧೀನದಲ್ಲಿರಿಸಿಕೊಂಡಿರುವನು. ॥ ೧೨ ॥ ನನ್ನ ಪ್ರೀತಿಯ ದೂತರೇ! ರೈತನು ತನ್ನ ಎತ್ತುಗಳನ್ನು ಮೊದಲು ಸಣ್ಣ-ಸಣ್ಣ ಹಗ್ಗಗಳಲ್ಲಿ ಕಟ್ಟಿ, ಆ ಹಗ್ಗಗಳನ್ನು ಒಂದು ದೊಡ್ಡ ಹಗ್ಗಕ್ಕೆ ಕಟ್ಟುವಂತೆಯೇ ಜಗದೀಶನಾದ ಭಗವಂತನೂ ಕೂಡ ಬ್ರಾಹ್ಮಣಾದಿ ವರ್ಣಗಳು, ಬ್ರಹ್ಮಚರ್ಯಾದಿ ಆಶ್ರಮಗಳೆಂಬ ಸಣ್ಣ-ಸಣ್ಣ ನಾಮಗಳೆಂಬ ಹಗ್ಗಗಳಿಂದ ಕಟ್ಟಿ ಮತ್ತೆ ಎಲ್ಲ ನಾಮಗಳನ್ನು ವೇದರೂಪವಾದ ದೊಡ್ಡ ಹಗ್ಗದಲ್ಲಿ ಕಟ್ಟಿ ಇಟ್ಟಿರುವನು. ಹೀಗೆ ಎಲ್ಲ ಜೀವರು ನಾಮ ಮತ್ತು ಕರ್ಮರೂಪವಾದ ಬಂಧನದಲ್ಲಿ ಬಿಗಿಯಲ್ಪಟ್ಟು, ಭಯಗೊಂಡು, ಅವನಿಗೆ ತಮ್ಮ ಸರ್ವಸ್ವವನ್ನು ಕಾಣಿಕೆಯಾಗಿ ಅರ್ಪಿಸುತ್ತಾರೆ. ॥ ೧೩ ॥ ದೂತರೇ! ನಾನು, ಇಂದ್ರ, ನಿರ್ಋತಿ, ವರುಣ, ಚಂದ್ರ, ಅಗ್ನಿ, ಶಂಕರ, ವಾಯು, ಸೂರ್ಯ, ಬ್ರಹ್ಮಾ ಹನ್ನೆರಡು ಆದಿತ್ಯರು, ವಿಶ್ವೇದೇವತೆಗಳು, ಎಂಟು ವಸುಗಳು, ಸಾಧ್ಯರು, ನಲವತ್ತೊಂಭತ್ತು ಮರುದ್ದೇವತೆಗಳು, ಸಿದ್ಧರು, ಹನ್ನೊಂದು ರುದ್ರರು, ರಜೋಗುಣ ಹಾಗೂ ತಮೋಗುಣಗಳಿಂದ ರಹಿತರಾದ ಭೃಗುವೇ ಮುಂತಾದ ಪ್ರಜಾಪತಿಗಳು, ದೊಡ್ಡ-ದೊಡ್ಡ ದೇವತೆಗಳು – ಹೀಗೆ ಎಲ್ಲರೂ ಸತ್ತ್ವಪ್ರಧಾನರಾಗಿದ್ದರೂ ಅವನ ಮಾಯೆಗೆ ಅಧೀನರಾಗಿದ್ದಾರೆ. ಭಗವಂತನು ಎಂದು ಏನು ಮಾಡಲು ಬಯಸುವನೋ ಇದನ್ನು ತಿಳಿಯಲಾರರು. ಹಾಗಿರುವಾಗ ಬೇರೆ ಯವರ ಮಾತಾದರೂ ಏನಿದೆ? ॥ ೧೪-೧೫ ॥ ದೂತರೇ! ಮಡಿಕೆ, ಕುಡಿಕೆ, ಬಟ್ಟೆಗಳೇ ಮುಂತಾದ ರೂಪವುಳ್ಳ ಪದಾರ್ಥಗಳು ತನ್ನ ಪ್ರಕಾಶಕವಾದ ಕಣ್ಣನ್ನು ನೋಡಲಾರವೋ ಹಾಗೆಯೇ ಅಂತಃಕರಣದಲ್ಲಿ ತನಗೆ ಸಾಕ್ಷಿರೂಪನಾಗಿರುವ ಪರಮಾತ್ಮನನ್ನು ಯಾವುದೇ ಪ್ರಾಣಿಯು ಇಂದ್ರಿಯ, ಮನ, ಪ್ರಾಣ, ಹೃದಯ ಅಥವಾ ವಾಣಿ ಮುಂತಾದ ಯಾವುದೇ ಸಾಧನೆಯಿಂದ ತಿಳಿಯಲಾರರು. ॥ ೧೬ ॥

ತಸ್ಯಾತ್ಮತಂತ್ರಸ್ಯ ಹರೇರಧೀಶಿತುಃ
ಪರಸ್ಯ ಮಾಯಾಧಿಪತೇರ್ಮಹಾತ್ಮನಃ ।
ಪ್ರಾಯೇಣ ದೂತಾ ಇಹ ವೈ ಮನೋಹರಾ-
ಶ್ಚರಂತಿ ತದ್ರೂಪಗುಣಸ್ವಭಾವಾಃ ॥ ೧೭ ॥

ಭೂತಾನಿ ವಿಷ್ಣೋಃ ಸುರಪೂಜಿತಾನಿ
ದುರ್ದರ್ಶಲಿಂಗಾನಿ ಮಹಾದ್ಭುತಾನಿ ।
ರಕ್ಷಂತಿ ತದ್ಭಕ್ತಿಮತಃ ಪರೇಭ್ಯೋ
ಮತ್ತಶ್ಚ ಮರ್ತ್ಯಾನಥ ಸರ್ವತಶ್ಚ ॥ ೧೮ ॥

ಧರ್ಮಂ ತು ಸಾಕ್ಷಾದ್ಭಗವತ್ಪ್ರಣೀತಂ
ನ ವೈ ವಿದುರ್ಋಷಯೋ ನಾಪಿ ದೇವಾಃ ।
ನ ಸಿದ್ಧಮುಖ್ಯಾ ಅಸುರಾ ಮನುಷ್ಯಾಃ
ಕುತಶ್ಚ ವಿದ್ಯಾಧರಚಾರಣಾದಯಃ ॥ ೧೯ ॥

ಸ್ವಯಂಭೂರ್ನಾರದಃ ಶಂಭುಃ ಕುಮಾರಃ ಕಪಿಲೋ ಮನುಃ ।
ಪ್ರಹ್ಲಾದೋ ಜನಕೋ ಭೀಷ್ಮೋ ಬಲಿರ್ವೈಯಾಸಕಿರ್ವಯಮ್
॥ ೨೦ ॥

ದ್ವಾದಶೈತೇ ವಿಜಾನೀಮೋ ಧರ್ಮಂ ಭಾಗವತಂ ಭಟಾಃ ।
ಗುಹ್ಯಂ ವಿಶುದ್ಧಂ ದುರ್ಬೋಧಂ ಯಂ ಜ್ಞಾತ್ವಾಮೃತಮಶ್ನುತೇ
॥ ೨೧ ॥

ಏತಾವಾನೇವ ಲೋಕೇಽಸ್ಮಿನ್ ಪುಂಸಾಂ ಧರ್ಮಃ ಪರಃ ಸ್ಮೃತಃ ।
ಭಕ್ತಿಯೋಗೋ ಭಗವತಿ ತನ್ನಾಮಗ್ರಹಣಾದಿಭಿಃ
॥ ೨೨ ॥

ನಾಮೋಚ್ಚಾರಣಮಾಹಾತ್ಮ್ಯಂ ಹರೇಃ ಪಶ್ಯತ ಪುತ್ರಕಾಃ ।
ಅಜಾಮಿಲೋಽಪಿ ಯೇನೈವ ಮೃತ್ಯುಪಾಶಾದಮುಚ್ಯತ
॥ ೨೩ ॥

ಏತಾವತಾಲಮಘನಿರ್ಹರಣಾಯ ಪುಂಸಾಂ
ಸಂಕೀರ್ತನಂ ಭಗವತೋ ಗುಣಕರ್ಮನಾಮ್ನಾಮ್ ।
ವಿಕ್ರುಶ್ಯ ಪುತ್ರಮಘವಾನ್ಯದಜಾಮಿಲೋಽಪಿ
ನಾರಾಯಣೇತಿ ಮ್ರಿಯಮಾಣ ಇಯಾಯ ಮುಕ್ತಿಮ್ ॥ ೨೪ ॥

ಪ್ರಾಯೇಣ ವೇದ ತದಿದಂ ನ ಮಹಾಜನೋಽಯಂ
ದೇವ್ಯಾ ವಿಮೋಹಿತಮತಿರ್ಬತ ಮಾಯಯಾಲಮ್ ।
ತ್ರಯ್ಯಾಂ ಜಡೀಕೃತಮತಿರ್ಮಧುಪುಷ್ಪಿತಾಯಾಂ
ವೈತಾನಿಕೇ ಮಹತಿ ಕರ್ಮಣಿ ಯುಜ್ಯಮಾನಃ ॥ ೨೫ ॥

ಆ ಪ್ರಭುವು ಎಲ್ಲರ ಸ್ವಾಮಿ ಹಾಗೂ ಸ್ವತಃ ಪರಮ ಸ್ವತಂತ್ರನಾಗಿದ್ದಾನೆ. ಅದೇ ಮಾಯಾಪತಿ ಪುರುಷೋತ್ತಮನ ದೂತರು ಅವನಂತೆಯೇ ಪರಮ ಮನೋಹರ ರೂಪ, ಗುಣ, ಮತ್ತು ಸ್ವಭಾವದಿಂದ ಸಂಪನ್ನರಾಗಿ ಈ ಲೋಕದಲ್ಲಿ ಸಾಮಾನ್ಯವಾಗಿ ವಿಚರಿಸುತ್ತಿರುವರು. ॥ ೧೭ ॥ ಭಗವಾನ್ ವಿಷ್ಣುವಿನ ಸುರಪೂಜಿತ ಹಾಗೂ ಪರಮ ಅಲೌಕಿಕ ಪಾರ್ಷದರ ದರ್ಶನವೂ ತುಂಬಾ ದುರ್ಲಭವಾಗಿದೆ. ಅವರು ಭಗವಂತನ ಭಕ್ತರನ್ನು ಅವರ ಶತ್ರುಗಳಿಂದ, ನನ್ನಿಂದ ಮತ್ತು ಅಗ್ನಿಯೇ ಮುಂತಾದ ಎಲ್ಲ ಆಪತ್ತುಗಳಿಂದ ಸದಾಕಾಲ ಸುರಕ್ಷಿತವಾಗಿಡುತ್ತಾರೆ. ॥ ೧೮ ॥

ಸಾಕ್ಷಾತ್ ಭಗವಂತನೇ ನಿರ್ಮಾಣಮಾಡಿದ ಧರ್ಮದ ಮರ್ಯಾದೆಯನ್ನು ಋಷಿಗಳಾಗಲೀ, ದೇವತೆಗಳಾಗಲೀ, ಸಿದ್ಧರಾಗಲೀ ಯಾರೂ ಅರಿಯಲಾರರು. ಹೀಗಿರುವಾಗ ಮನುಷ್ಯರು, ವಿದ್ಯಾಧರರೂ, ಚಾರಣರು ಮತ್ತು ಅಸುರರೇ ಮುಂತಾದವರು ಹೇಗೆ ಅರಿಯಬಲ್ಲರು ? ॥ ೧೯ ॥ ಭಗವಂತನಿಂದ ನಿರ್ಮಿತವಾದ ಭಾಗವತಧರ್ಮವು ಪರಮಶುದ್ಧವೂ, ಅತ್ಯಂತ ಗೋಪ್ಯವೂ ಆಗಿದೆ. ಅದನ್ನು ತಿಳಿಯುವುದು ಅತಿಕಷ್ಟವಾಗಿದೆ. ಅದನ್ನು ತಿಳಿದವನು ಭಗವತ್ಸ್ವರೂಪವನ್ನು ಹೊಂದುವನು. ದೂತರೇ ! ಭಾಗವತ ಧರ್ಮದ ರಹಸ್ಯವನ್ನು – ಬ್ರಹ್ಮದೇವರು, ದೇವರ್ಷಿ ನಾರದರು, ಭಗವಾನ್ ಶಂಕರನು, ಸನತ್ಕುಮಾರನು, ಕಪಿಲದೇವರು, ಸ್ವಾಯಂಭುವ ಮನುವು, ಪ್ರಹ್ಲಾದನು, ಜನಕ ಮಹಾರಾಜನು, ಭೀಷ್ಮಪಿತಾಮಹರು, ಬಲಿಚಕ್ರವರ್ತಿಯೂ, ಶುಕಮಹರ್ಷಿಗಳು ಮತ್ತು ಯಮಧರ್ಮನಾದ ನಾನು – ಹೀಗೆ ಈ ಹನ್ನೆರಡು ಮಂದಿ ಮಾತ್ರವೇ ತಿಳಿದಿರುವೆವು. ॥ ೨೦-೨೧ ॥ ಈ ಜಗತ್ತಿನಲ್ಲಿ ಜೀವರಿಗಾಗಿ ನಾಮ-ಕೀರ್ತನಾದಿ ಉಪಾಯಗಳಿಂದ ಭಗವಂತನ ಚರಣಗಳಲ್ಲಿ ಭಕ್ತಿಭಾವವನ್ನು ಪಡೆದುಕೊಳ್ಳುವುದೇ ಎಲ್ಲಕ್ಕಿಂತ ದೊಡ್ಡ ಕರ್ತವ್ಯವೂ, ಪರಮಧರ್ಮವೂ ಆಗಿದೆ. ॥ ೨೨ ॥ ಪ್ರಿಯ ದೂತರೇ ! ಭಗವಂತನ ನಾಮೋಚ್ಚಾರಣೆಯ ಮಹಿಮೆಯನ್ನಾದರೋ ನೋಡಿರಿ ! ಅಜಾಮಿಳನಂತಹ ಪಾಪಿಯು ಒಂದು ಬಾರಿ ನಾಮೋಚ್ಚಾರಣೆ ಮಾಡಿದಷ್ಟರಿಂದಲೇ ಮೃತ್ಯುಪಾಶದಿಂದ ಬಿಡುಗಡೆ ಹೊಂದಿದನು. ॥ ೨೩ ॥ ಭಗವಂತನ ಗುಣ, ಲೀಲೆ ಮತ್ತು ನಾಮಗಳ ಚೆನ್ನಾದ ಕೀರ್ತನೆಯು ಮನುಷ್ಯರ ಪಾಪಗಳನ್ನು ಪೂರ್ಣವಾಗಿ ನಾಶಮಾಡುವುದು ಇದೇನೋ ಅದರ ಬಹುದೊಡ್ಡ ಫಲವಲ್ಲ. ಏಕೆಂದರೆ, ಅತ್ಯಂತ ಪಾಪಿಯಾದ ಅಜಾಮಿಳನು ಮರಣಕಾಲದಲ್ಲಿ ಚಂಚಲಚಿತ್ತದಿಂದ ತನ್ನ ಮಗನ ಹೆಸರು 'ನಾರಾಯಣ' ಎಂದು ಉಚ್ಚರಿಸಿದನು. ಈ ನಾಮಾಭಾಸಮಾತ್ರದಿಂದಲೇ ಅವನ ಎಲ್ಲ ಪಾಪಗಳು ಕ್ಷೀಣಿಸಿ, ಆತನು ಮೋಕ್ಷವನ್ನೇ ಪಡೆದುಕೊಂಡನು. ॥ ೨೪ ॥ ದೊಡ್ಡ-ದೊಡ್ಡ ವಿದ್ವಾಂಸರ ಬುದ್ಧಿಯೂ ಕೆಲವೊಮ್ಮೆ ಭಗವಂತನ ಮಾಯೆಯಿಂದ ಮೋಹಿತವಾಗುತ್ತದೆ. ಅವರು ಕರ್ಮಗಳ ಸಿಹಿ ಯಾದ ಫಲಗಳನ್ನು ವರ್ಣಿಸುವ ಅರ್ಥರೂಪವಾದ ವೇದವಾಣಿಯಲ್ಲೇ ಮೋಹಿತರಾಗುತ್ತಾರೆ ಮತ್ತು ಯಜ್ಞ-ಯಾಗಾದಿ ದೊಡ್ಡ-ದೊಡ್ಡ ಕರ್ಮಗಳಲ್ಲೇ ಮುಳುಗಿರುತ್ತಾರೆ. ಈ ಅತಿಸುಗಮವಾದ ಭಗವನ್ನಾಮದ ಮಹಿಮೆಯನ್ನು ತಿಳಿಯುವುದೇ ಇಲ್ಲ. ಇದು ಎಂತಹ ಖೇದದ ವಿಷಯ ? ॥ ೨೫ ॥

ಏವಂ ವಿಮೃಶ್ಯ ಸುಧಿಯೋ ಭಗವತ್ಯನಂತೇ
ಸರ್ವಾತ್ಮನಾ ವಿದಧತೇ ಖಲು ಭಾವಯೋಗಮ್ ।
ತೇ ಮೇ ನ ದಂಡ ಮರ್ಹಂತ್ಯಥ ಯದ್ಯಮೀಷಾಂ
ಸ್ಯಾತ್ಪಾತಕಂ ತದಪಿ ಹಂತ್ಯುರುಗಾಯವಾದಃ ॥ ೨೬ ॥

ತೇ ದೇವಸಿದ್ಧಪರಿಗೀತಪವಿತ್ರಗಾಥಾ
ಯೇ ಸಾಧವಃ ಸಮದೃಶೋ ಭಗವತ್ಪ್ರಪನ್ನಾಃ ।
ತಾನ್ ನೋಪಸೀದತ ಹರೇರ್ಗದಯಾಭಿಗುಪ್ತಾನ್
ನೈಷಾಂ ವಯಂ ನ ಚ ವಯಃ ಪ್ರಭವಾಮ ದಂಡೇ ॥ ೨೭ ॥

ತಾನಾನಯಧ್ವಮಸತೋ ವಿಮುಖಾನ್ಮುಕುಂದ-
ಪಾದಾರವಿಂದಮಕರಂದರಸಾದಜಸ್ರಮ್ ।
ನಿಷ್ಕಿಂಚನೈಃ ಪರಮಹಂಸಕುಲೈ ರಸಜ್ಞೈ-
ರ್ಜುಷ್ಟಾದ್ಗೃಹೇ ನಿರಯವರ್ತ್ಮನಿ ಬದ್ಧತೃಷ್ಣಾನ್ ॥ ೨೮ ॥

ಜಿಹ್ವಾ ನ ವಕ್ತಿ ಭಗವದ್ಗುಣನಾಮಧೇಯಂ
ಚೇತಶ್ಚ ನ ಸ್ಮರತಿ ತಚ್ಚರಣಾರವಿಂದಮ್ ।
ಕೃಷ್ಣಾಯ ನೋ ನಮತಿ ಯಚ್ಛಿರ ಏಕದಾಪಿ
ತಾನಾನಯಧ್ವಮಸತೋಽಕೃತವಿಷ್ಣುಕೃತ್ಯಾನ್ ॥ ೨೯ ॥

ತತ್ ಕ್ಷಮ್ಯತಾಂ ಸ ಭಗವಾನ್ಪುರುಷಃ ಪುರಾಣೋ
ನಾರಾಯಣಃ ಸ್ವಪುರುಷೈರ್ಯದಸತ್ಕೃತಂ ನಃ ।
ಸ್ವಾನಾಮಹೋ ನ ವಿದುಷಾಂ ರಚಿತಾಂಜಲೀನಾಂ
ಕ್ಷಾಂತಿರ್ಗರೀಯಸಿ ನಮಃ ಪುರುಷಾಯ ಭೂಮ್ನೇ ॥ ೩೦ ॥

ತಸ್ಮಾತ್ ಸಂಕೀರ್ತನಂ ವಿಷ್ಣೋರ್ಜಗನ್ಮಂಗಲಮಂಹಸಾಮ್ ।
ಮಹತಾಮಪಿ ಕೌರವ್ಯ ವಿದ್ಧ್ಯೈಕಾಂತಿಕನಿಷ್ಕೃತಿಮ್ ॥ ೩೧ ॥

ಪ್ರಿಯದೂತರೇ! ಬುದ್ಧಿವಂತರಾದ ಮನುಷ್ಯರು ಹೀಗೆ ವಿಚಾರಮಾಡಿ ಭಗವಾನ್ ಅನಂತನಲ್ಲೇ ಪೂರ್ಣ ಅಂತಃಕರಣದಿಂದ ತಮ್ಮ ಭಕ್ತಿಭಾವವನ್ನು ನೆಲೆಗೊಳಿಸುವರು. ಅವರು ನನ್ನ ದಂಡನೆಗೆ ಪಾತ್ರರಾಗುವುದಿಲ್ಲ. ಅಂತಹವರು ಪಾಪವನ್ನು ಮಾಡುವುದೇ ಇಲ್ಲ. ಆದರೂ ಕೆಲವು ವೇಳೆ ಆಕಸ್ಮಾತ್ತಾಗಿ ಯಾವುದಾದರೂ ಪಾಪವು ನಡೆದರೂ, ಅದನ್ನು ಭಗವಂತನ ಗುಣಗಾನದಿಂದ ಒಡನೆಯೇ ನಾಶಮಾಡಿ ಬಿಡುವರು. ॥ ೨೬ ॥ ಸಮದರ್ಶಿ ಸಾಧುಗಳು ಭಗವಂತನನ್ನೇ ತಮ್ಮ ಸಾಧ್ಯ ಮತ್ತು ಸಾಧನೆ ಎಂದು ತಿಳಿದುಕೊಂಡು ಅವನನ್ನೇ ಅವಲಂಬಿಸಿ ಇರುತ್ತಾರೆ. ದೊಡ್ಡ-ದೊಡ್ಡ ದೇವತೆಗಳೂ, ಸಿದ್ಧರೂ ಕೂಡ ಅವರ ಪವಿತ್ರ ಚರಿತ್ರೆಯನ್ನು ಪ್ರೇಮದಿಂದ ಹಾಡುತ್ತಾ ಇರುತ್ತಾರೆ. ನನ್ನ ದೂತರಿರಾ! ಭಗವಂತನ ಗದೆಯು ಅವರನ್ನು ಸದಾಕಾಲ ರಕ್ಷಿಸುತ್ತಾ ಇರುತ್ತದೆ. ಇಂತಹವರ ಬಳಿಗೆ ನೀವು ಎಂದಿಗೂ ಸುಳಿಯಬೇಡಿರಿ. ಇಂತಹವರನ್ನು ದಂಡಿಸುವ ಶಕ್ತಿಯು ನನ್ನಲ್ಲಾಗಲೀ, ಸಾಕ್ಷಾತ್ ಕಾಲನಲ್ಲಾಗಲೀ ಇಲ್ಲವೇ ಇಲ್ಲ. ॥ ೨೭ ॥ ಮಹಾ ಪರಮಹಂಸರು ಇಡೀ ಜಗತ್ತಿನ ಮತ್ತು ತಮ್ಮ ಶರೀರದ ವಿಷಯದಲ್ಲಿ ಅಹಂಕಾರ-ಮಮಕಾರಗಳನ್ನು ತೊರೆದು, ಅಕಿಂಚನರಾಗಿ ದಿವ್ಯರಸವನ್ನು ಸವಿಯುವ ಲೋಭದಿಂದ ನಿರಂತರವಾಗಿ ಮುಕುಂದನ ಅಡಿದಾವರೆಗಳ ಮಕರಂದರಸವನ್ನು ಪಾನ ಮಾಡುತ್ತಾ ಇರುತ್ತಾರೆ. ಆ ದಿವ್ಯರಸಕ್ಕೆ ವಿಮುಖರಾದ ದುಷ್ಟರು ನರಕದ ದ್ವಾರವಾದ ಮನೆವಾರ್ತೆಯ ತೃಷ್ಣೆಯ ಹೊರೆಯನ್ನು ಹೊತ್ತಿರುತ್ತಾರೆ. ಅವರನ್ನು ನನ್ನ ಬಳಿಗೆ ಪದೇ-ಪದೇ ಕರೆದುಕೊಂಡು ಬನ್ನಿರಿ. ॥ ೨೮ ॥ ಯಾರ ನಾಲಿಗೆ ಭಗವಂತನ ನಾಮಗಳನ್ನು ಗುಣಗಳನ್ನು ಕೊಂಡಾಡುವುದಿಲ್ಲವೋ, ಯಾರ ಚಿತ್ತವು ಅವನ ಚರಣಾರವಿಂದಗಳನ್ನು ಚಿಂತಿಸುವುದಿಲ್ಲವೋ, ಯಾರ ತಲೆಯು ಒಮ್ಮೆಯೂ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ಬಾಗುವುದಿಲ್ಲವೋ, ಅಂತಹ ಭಗವತ್ಸೇವಾ ವಿಮುಖರಾದ ಪಾಪಿಗಳನ್ನೇ ನನ್ನ ಬಳಿಗೆ ಕರೆದುತನ್ನಿರಿ. ॥ ೨೯ ॥ ಇಂದು ನನ್ನ ದೂತರು ಭಗವಂತನ ಪಾರ್ಷದರ ಅಪರಾಧವನ್ನು ಮಾಡಿ, ಸಾಕ್ಷಾತ್ ಭಗವಂತನನ್ನು ತಿರಸ್ಕಾರ ಮಾಡಿರುವರು. ಈ ಅಪರಾಧವು ನನ್ನದೂ ಆಗಿದೆ. ಪುರಾಣಪುರುಷ ಭಗವಾನ್ ಶ್ರೀಮನ್ನಾರಾಯಣನು ನಮ್ಮಗಳ ಅಪರಾಧವನ್ನು ಕ್ಷಮಿಸಲಿ. ನಾವು ಅಜ್ಞಾನಿಗಳಾಗಿದ್ದರೂ ಅವನ ಸೇವಕರೇ ಆಗಿದ್ದೇವಲ್ಲ! ಅವನ ಅಪ್ಪಣೆಯನ್ನು ಪಡೆಯಲಿಕ್ಕಾಗಿ ಕೈಜೋಡಿಸಿಕೊಂಡು ಸದಾ ಉತ್ಸುಕರಾಗಿರುತ್ತೇವೆ. ಆದ್ದರಿಂದ ಅಪಾರ ಮಹಿಮೆಯುಳ್ಳ ಭಗವಂತನಿಗೆ ನಮ್ಮನ್ನು ಕ್ಷಮಿಸುವುದೇ ಯೋಗ್ಯವಾಗಿದೆ. ಆ ಸರ್ವಾಂತರ್ಯಾಮಿ ಏಕರಸ ಅನಂತನಾದ ಪ್ರಭುವನ್ನು ನಾವು ನಮಸ್ಕರಿಸುತ್ತೇವೆ. ॥ ೩೦ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ಶ್ರೀಭಗವಂತನ ಗುಣಗಳನ್ನೂ, ಲೀಲೆಗಳನ್ನೂ, ನಾಮಗಳನ್ನೂ ಕೀರ್ತನೆ ಮಾಡುತ್ತಿರುವುದೇ ಸಮಸ್ತ ಮಹಾಪಾತಕಗಳಿಗೂ ಸರ್ವೋತ್ತಮವಾದ ಪ್ರಾಯಶ್ಚಿತ್ತವು. ಸಮಸ್ತ ಪಾಪವಾಸನೆಗಳನ್ನು ನಿರ್ಮೂಲಗೊಳಿಸುವ ಕಟ್ಟಕಡೆಯ ಪ್ರಾಯಶ್ಚಿತ್ತವು. ಆದರಿಂದಲೇ ಸಮಸ್ತ ಜಗತ್ತಿಗೆ ಕಲ್ಯಾಣವುಂಟಾಗುವುದು. ॥ ೩೧ ॥

ಶೃಣ್ವತಾಂ ಗೃಣತಾಂ ವೀರ್ಯಾಣ್ಯುದ್ದಾಮಾನಿ ಹರೇರ್ಮುಹುಃ ।
ಯಥಾ ಸುಜಾತಯಾ ಭಕ್ತ್ಯಾ ಶುದ್ಧ್ಯೇನ್ನಾತ್ಮಾ ವ್ರತಾದಿಭಿಃ ॥ ೩೨ ॥

ಶ್ರೀಭಗವಂತನ ಉದಾರವೂ, ಕೃಪಾಪೂರ್ಣವೂ ಆದ ಚರಿತ್ರೆಗಳ ಶ್ರವಣ-ಕೀರ್ತನೆಗಳನ್ನು ಮತ್ತೆ-ಮತ್ತೆ ಮಾಡುತ್ತಿರುವ ಮಹಾತ್ಮರ ಹೃದಯದಲ್ಲಿ ಪ್ರೇಮಮಯ ಭಕ್ತಿಯು ಉದಯಿಸುವುದು. ಆ ಭಕ್ತಿಯಿಂದ ಉಂಟಾಗುವಷ್ಟು ಆತ್ಮಶುದ್ಧಿಯು ಕೃಚ್ಛ್ರ-ಚಾಂದ್ರಾಯಣಗಳೇ ಮುಂತಾದ ವ್ರತಗಳಿಂದಲೂ ಉಂಟಾಗುವುದಿಲ್ಲ. ॥ ೩೨ ॥

ಕೃಷ್ಣಾಂಘ್ರಿಪದ್ಮಮಧುಲಿಣ್ ನ ಪುನರ್ವಿಸೃಷ್ಟ
ಮಾಯಾಗುಣೇಷು ರಮತೇ ವೃಜಿನಾವಹೇಷು ।
ಅನ್ಯಸ್ತು ಕಾಮಹತ ಆತ್ಮರಜಃ ಪ್ರಮಾರ್ಷ್ಟು-
ಮೀಹೇತ ಕರ್ಮ ಯತ ಏವ ರಜಃ ಪುನಃ ಸ್ಯಾತ್ ॥ ೩೩ ॥

ಭಗವಾನ್ ಶ್ರೀಕೃಷ್ಣಚಂದ್ರನ ಚರಣಾರವಿಂದ-ಮಕರಂದ ರಸದ ಲೋಭಿಯಾದ ಭ್ರಮರದಂತೆ ಇರುವ ಜನರು ಆರಂಭದಲ್ಲಿ ಮಾತ್ರ ರಮಣೀಯವಾಗಿ, ಅನಂತರ ದುಃಖವನ್ನೇ ಉಂಟು ಮಾಡುವ ವಿಷಯಗಳಲ್ಲಿ ರಮಿಸಲು ಮರಳಿ ಬರು-ವುದಿಲ್ಲ. ಆದರೆ ಆ ರಸದಿಂದ ವಿಮುಖರಾಗಿ ಕಾಮನೆಗಳಿಂದ ವಿವೇಕಬುದ್ಧಿಯನ್ನು ಕಳೆದುಕೊಂಡಿರುವ ಜನರು ತಮ್ಮ ಪಾಪಗಳನ್ನು ತೊಳೆದುಕೊಳ್ಳಲು ಪುನಃ ಪ್ರಾಯಶ್ಚಿತ್ತರೂಪವಾದ ಕರ್ಮಗಳನ್ನೇ ಆಚರಿಸುತ್ತಾರೆ. ಇದರಿಂದ ಅವರ ಕರ್ಮ ವಾಸನೆಯು ಅಳಿಯುವುದಿಲ್ಲ ಹಾಗೂ ಅವರು ಪುನಃ ಅಂತಹ ದೋಷಗಳನ್ನೇ ಮಾಡುತ್ತಿರುತ್ತಾರೆ. ॥ ೩೩ ॥

ಇತ್ಥಂ ಸ್ವಭರ್ತೃಗದಿತಂ ಭಗವನ್ಮಹಿತ್ವಂ
ಸಂಸ್ಮೃತ್ಯ ವಿಸ್ಮಿತಧಿಯೋ ಯಮಕಿಂಕರಾಸ್ತೇ ।
ನೈವಾಚ್ಯುತಾಶ್ರಯಜನಂ ಪ್ರತಿಶಂಕಮಾನಾ
ದ್ರಷ್ಟುಂ ಚ ಬಿಭ್ಯತಿ ತತಃ ಪ್ರಭೃತಿ ಸ್ಮ ರಾಜನ್ ॥ ೩೪ ॥

ಪರೀಕ್ಷಿತನೇ! ಯಮದೂತರು ತಮ್ಮ ಒಡೆಯನಾದ ಯಮಧರ್ಮನ ಮುಖದಿಂದ ಹೀಗೆ ಭಗವಂತನ ಮಹಿಮೆಯನ್ನು ಕೇಳಿ, ಅದನ್ನು ಸ್ಮರಿಸುತ್ತಿರುವಾಗ ಅವರಿಗೆ ಎಣೆಯಿಲ್ಲದ ಆಶ್ಚರ್ಯವುಂಟಾಯಿತು. ಅಂದಿನಿಂದ ಅವರು ಯಮಧರ್ಮನ ಮಾತಿನಲ್ಲಿ ವಿಶ್ವಾಸವಿರಿಸಿ ತಮ್ಮ ನಾಶದ ಅಂಜಿಕೆಯಿಂದ ಭಗವಂತನ ಆಶ್ರಿತರಾದ ಭಕ್ತರ ಬಳಿಗೆ ಸುಳಿಯುವುದಿಲ್ಲ. ಹೆಚ್ಚೇನು ಅವರು ಭಕ್ತರ ಕಡೆಗೆ ಕಣ್ಣೆತ್ತಿನೋಡಲೂ ಭಯಪಡುವರು. ॥ ೩೪ ॥

ಇತಿಹಾಸಮಿಮಂ ಗುಹ್ಯಂ ಭಗವಾನ್ ಕುಂಭಸಂಭವಃ ।
ಕಥಯಾಮಾಸ ಮಲಯ ಆಸೀನೋ ಹರಿಮರ್ಚಯನ್ ॥ ೩೫ ॥

ಪ್ರಿಯ ಪರೀಕ್ಷಿತನೇ! ಈ ಇತಿಹಾಸವು ಪರಮ ಗೋಪ್ಯವೂ, ಅತ್ಯಂತ ರಹಸ್ಯವೂ ಆಗಿದೆ. ಮಲಯಪರ್ವತದಲ್ಲಿ ವಿರಾಜಮಾನರಾದ ಪೂಜ್ಯರಾದ ಅಗಸ್ತ್ಯರು ಶ್ರೀಹರಿಯನ್ನು ಪೂಜಿಸುವಾಗ ನನಗೆ ಇದನ್ನು ಹೇಳಿದ್ದರು. ॥ ೩೫ ॥

**ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥**

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ
ಯಮಪುರುಷಸಂವಾದೇ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ದಕ್ಷನಿಂದ ಭಗವಂತನ ಸ್ತುತಿ ಮತ್ತು ಭಗವಂತನ ಪ್ರಾದುರ್ಭಾವ

*ರಾಜೋವಾಚ*

ದೇವಾಸುರನೃಣಾಂ ಸರ್ಗೋ ನಾಗಾನಾಂ ಮೃಗಪಕ್ಷಿಣಾಮ್ ।
ಸಾಮಾಸಿಕಸ್ತ್ವಯಾ ಪ್ರೋಕ್ತೋ ಯಸ್ತು ಸ್ವಾಯಂಭುವೇಽಂತರೇ ॥ ೧ ॥

ತಸ್ಯೈವ ವ್ಯಾಸಮಿಚ್ಛಾಮಿ ಜ್ಞಾತುಂ ತೇ ಭಗವನ್ಯಥಾ ।
ಅನುಸರ್ಗಂ ಯಯಾ ಶಕ್ತ್ಯಾ ಸಸರ್ಜ ಭಗವಾನ್ ಪರಃ ॥ ೨ ॥

**ಪರೀಕ್ಷಿದ್ರಾಜನು ಕೇಳಿದನು** – ಮಹಾತ್ಮರೇ! ಸ್ವಾಯಂಭುವ ಮನ್ವಂತರದಲ್ಲಿ ದೇವತೆಗಳು, ಅಸುರರು, ಮನುಷ್ಯರು, ಸರ್ಪಗಳು, ಪಶು-ಪಕ್ಷಿ ಮುಂತಾದವುಗಳ ಸೃಷ್ಟಿ ಹೇಗಾಯಿತೆಂಬುದನ್ನು ನೀವು (ಮೂರನೇ ಸ್ಕಂಧದಲ್ಲಿ) ಹಿಂದೆ ಸಂಕ್ಷೇಪವಾಗಿ ವರ್ಣಿಸಿದಿರಿ. ॥ ೧ ॥ ಈಗ ನಾನು ಅದನ್ನು ವಿಸ್ತಾರವಾಗಿ ತಿಳಿಯಲು ಬಯಸುತ್ತಿದ್ದೇನೆ. ಪ್ರಕೃತಿಯೇ ಮುಂತಾದ ಕಾರಣಗಳಿಗೆ ಪರಮ ಕಾರಣನಾದ ಭಗವಂತನು ತನ್ನ ಯಾವ ಶಕ್ತಿಯಿಂದ, ಯಾವ ರೀತಿಯಲ್ಲಿ ಅನಂತರದ ಸೃಷ್ಟಿಯನ್ನು ಮಾಡಿದನು? ಎಂಬುದನ್ನು ತಿಳಿಯಲೂ ಇಚ್ಛಿಸುತ್ತೇನೆ. ॥ ೨ ॥

*ಸೂತ ಉವಾಚ*

ಇತಿ ಸಂಪ್ರಶ್ನಮಾಕರ್ಣ್ಯ ರಾಜರ್ಷೇರ್ಬಾದರಾಯಣಿಃ ।
ಪ್ರತಿನಂದ್ಯ ಮಹಾಯೋಗೀ ಜಗಾದ ಮುನಿಸತ್ತಮಾಃ ॥ ೩ ॥

*ಶ್ರೀಶುಕ ಉವಾಚ*

ಯದಾ ಪ್ರಚೇತಸಃ ಪುತ್ರಾ ದಶ ಪ್ರಾಚೀನಬರ್ಹಿಷಃ ।
ಅಂತಃಸಮುದ್ರಾದುನ್ಮಗ್ನಾ ದದೃಶುರ್ಗಾಂ ದ್ರುಮೈರ್ವೃತಾಮ್ ॥ ೪ ॥

ದ್ರುಮೇಭ್ಯಃ ಕ್ರುಧ್ಯಮಾನಾಸ್ತೇ ತಪೋದೀಪಿತಮನ್ಯವಃ ।
ಮುಖತೋ ವಾಯುಮಗ್ನಿಂ ಚ ಸಸೃಜುಸ್ತದ್ದಿಧಕ್ಷಯಾ ॥ ೫ ॥

ತಾಭ್ಯಾಂ ನಿರ್ದಹ್ಯಮಾನಾಂಸ್ತಾನುಪಲಭ್ಯ ಕುರೂದ್ವಹ ।
ರಾಜೋವಾಚ ಮಹಾನ್ ಸೋಮೋ ಮನ್ಯುಂ ಪ್ರಶಮಯನ್ನಿವ ॥ ೬ ॥

ಮಾ ದ್ರುಮೇಭ್ಯೋ ಮಹಾಭಾಗಾ ದೀನೇಭ್ಯೋ ದ್ರೋಗ್ಧುಮರ್ಹಥ ।
ವಿವರ್ಧಯಿಷವೋ ಯೂಯಂ ಪ್ರಜಾನಾಂಪತಯಃ ಸ್ಮೃತಾಃ ॥ ೭ ॥

ಅಹೋ ಪ್ರಜಾಪತಿಪತಿರ್ಭಗವಾನ್ ಹರಿರವ್ಯಯಃ ।
ವನಸ್ಪತೀನೋಷಧೀಶ್ಚ ಸಸರ್ಜೋರ್ಜಮಿಷಂ ವಿಭುಃ ॥ ೮ ॥

ಅನ್ನಂ ಚರಾಣಾಮಚರಾ ಹ್ಯಪದಃ ಪಾದಚಾರಿಣಾಮ್ ।
ಅಹಸ್ತಾ ಹಸ್ತಯುಕ್ತಾನಾಂ ದ್ವಿಪದಾಂ ಚ ಚತುಷ್ಪದಃ ॥ ೯ ॥

ಯೂಯಂ ಚ ಪಿತ್ರಾನ್ವಾದಿಷ್ಟಾ ದೇವದೇವೇನ ಚಾನಘಾಃ ।
ಪ್ರಜಾಸರ್ಗಾಯ ಹಿ ಕಥಂ ವೃಕ್ಷಾನ್ನಿರ್ದಗ್ಧುಮರ್ಹಥ ॥ ೧೦ ॥

ಆತಿಷ್ಠತ ಸತಾಂ ಮಾರ್ಗಂ ಕೋಪಂ ಯಚ್ಛತ ದೀಪಿತಮ್ ।
ಪಿತ್ರಾ ಪಿತಾಮಹೇನಾಪಿ ಜುಷ್ಟಂ ವಃ ಪ್ರಪಿತಾಮಹೈಃ ॥ ೧೧ ॥

ತೋಕಾನಾಂ ಪಿತರೌ ಬಂಧೂ ದೃಶಃ ಪಕ್ಷ್ಮ ಸ್ತ್ರಿಯಾಃ ಪತಿಃ ।
ಪತಿಃ ಪ್ರಜಾನಾಂ ಭಿಕ್ಷೂಣಾಂ ಗೃಹ್ಯಜ್ಞಾನಾಂ ಬುಧಃ ಸುಹೃತ್ ॥ ೧೨ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳಿರಾ! ಪರಮಯೋಗಿಗಳಾದ ವ್ಯಾಸಪುತ್ರ ಶ್ರೀಶುಕಮಹಾಮುನಿಗಳು ರಾಜರ್ಷಿ ಪರೀಕ್ಷಿತನ ಈ ಪ್ರಶ್ನೆಯನ್ನು ಅಭಿನಂದಿಸುತ್ತಾ ಉತ್ತರವಾಗಿ ಹೀಗೆ ಹೇಳಲುಪಕ್ರಮಿಸಿದರು. ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜೇಂದ್ರನೇ! ಪ್ರಾಚೀನಬರ್ಹಿ ಮಹಾರಾಜನ ಹತ್ತು ಮಂದಿ ಪುತ್ರರಾದ ಪ್ರಚೇತಸರು ಸಮುದ್ರದಿಂದ ಹೊರಕ್ಕೆ ಬಂದಾಗ – ಇಡೀ ಪೃಥ್ವಿಯನ್ನು ವೃಕ್ಷಗಳು ಆವರಿಸಿಕೊಂಡಿರುವುದನ್ನು ಕಂಡರು. ॥ ೪ ॥ ಅವರಿಗೆ ಆ ವೃಕ್ಷಗಳ ಮೇಲೆ ವಿಪರೀತವಾದ ಕೋಪ ಬಂತು. ಅವರ ತಪೋಬಲವು ಆ ಕ್ರೋಧಾಗ್ನಿಯಲ್ಲಿ ತುಪ್ಪ ಎರೆದಂತೆ ಅದನ್ನು ಭುಗಿಲೆಬ್ಬಿಸಿತು. ಒಡನೆಯೇ ಅವರು ಆ ವೃಕ್ಷಗಳನ್ನು ಸುಟ್ಟುಹಾಕುವುದಕ್ಕಾಗಿ ತಮ್ಮ ಬಾಯಿಂದ ಬೆಂಕಿಯನ್ನೂ, ಗಾಳಿಯನ್ನೂ ಸೃಷ್ಟಿಸಿದರು. ॥ ೫ ॥ ಪರೀಕ್ಷಿತನೇ! ಪ್ರಚೇತಸರು ಬಿಟ್ಟ ಗಾಳಿ ಮತ್ತು ಬೆಂಕಿಯಿಂದ ಆ ವೃಕ್ಷಗಳು ಸುಡತೊಡಗಿದವು. ಆಗ ವೃಕ್ಷಗಳ ರಾಜನಾದ ಚಂದ್ರನು ಅವರ ಕ್ರೋಧವನ್ನು ಶಾಂತಗೊಳಿಸಲಿಕ್ಕಾಗಿ ಇಂತೆಂದನು –॥ ೬ ॥ ಎಲೈ ಭಾಗ್ಯಶಾಲಿಗಳಾದ ಪ್ರಚೇತಸರೇ! ಈ ವೃಕ್ಷಗಳು ಅತ್ಯಂತ ಶೋಚನೀಯ ಸ್ಥಿತಿಯಲ್ಲಿರುವವು. ನೀವುಗಳು ಇವುಗಳೊಂದಿಗೆ ದ್ರೋಹ ಮಾಡಬೇಡಿರಿ. ಏಕೆಂದರೆ, ನೀವಾದರೋ ಪ್ರಜೆಯ ವೃದ್ಧಿಯನ್ನು ಮಾಡಲು ಬಯಸುತ್ತಿರುವಿರಿ. ನೀವು ಪ್ರಜಾಪತಿಗಳಿರುವುದನ್ನು ಎಲ್ಲರೂ ಬಲ್ಲರು. ॥ ೭ ॥ ಮಹಾತ್ಮರಾದ ಪ್ರಚೇತಸರೇ! ಪ್ರಜಾಪತಿಗಳ ಅಧಿಪತಿಯಾದ ಭಗವಾನ್ ಶ್ರೀಹರಿಯು ಸಮಸ್ತ ವನಸ್ಪತಿಗಳನ್ನು ಮತ್ತು ಔಷಧಿಗಳನ್ನು ಪ್ರಜೆಗಳ ಹಿತಕ್ಕಾಗಿ, ಅವರ ಆಹಾರಕ್ಕಾಗಿ ಸೃಷ್ಟಿಸಿರುವನು. ॥ ೮ ॥ ಪ್ರಪಂಚದಲ್ಲಿ ರೆಕ್ಕೆಗಳಿಂದ ಹಾರುವ ಚರಪ್ರಾಣಿಗಳಿಗೆ ಫಲ-ಪುಷ್ಪಾದಿ ಅಚರ ಪದಾರ್ಥಗಳೇ ಆಹಾರವು. ಕಾಲುಗಳಿಂದ ನಡೆದಾಡುವ ಜೀವಿಗಳಿಗೆ ಕಾಲಿಲ್ಲದ ಹುಲ್ಲು-ಸೊಪ್ಪು ಮುಂತಾದವುಗಳು ಆಹಾರವು. ಕೈಗಳುಳ್ಳವರಿಗೆ ಕೈಗಳಿಲ್ಲದ ಲತಾ-ವೃಕ್ಷಗಳೇ ಆಹಾರವು ಮತ್ತು ಎರಡು ಕಾಲುಗಳುಳ್ಳ ಮನುಷ್ಯರಿಗಾಗಿ ಅಕ್ಕಿ-ಗೋಧಿ ಮುಂತಾದ ಅನ್ನ ಪದಾರ್ಥಗಳೇ ಆಹಾರವು. ನಾಲ್ಕು ಕಾಲುಗಳುಳ್ಳ ಎತ್ತು, ಒಂಟೆ ಮುಂತಾದವುಗಳು ಕೃಷಿಯ ಮೂಲಕ ಅನ್ನವನ್ನು ಉತ್ಪಾದಿಸಲು ಸಹಾಯಕವಾಗಿವೆ. ॥ ೯ ॥ ಪುಣ್ಯಾತ್ಮರಾದ ಪ್ರಚೇತಸರೇ! ನಿಮ್ಮ ತಂದೆ ಯವರು ಮತ್ತು ದೇವಾಧಿದೇವನಾದ ಭಗವಂತನು ನಿಮಗೆ ಪ್ರಜೆಗಳನ್ನು ಸೃಷ್ಟಿಸಿರಿ ಎಂದು ಅಪ್ಪಣೆ ಕೊಟ್ಟಿದ್ದರು. ಇಂತಹ ಸ್ಥಿತಿಯಲ್ಲಿ ನೀವು ವೃಕ್ಷಗಳನ್ನು ಸುಟ್ಟು ಹಾಕಿದರೆ ಉಚಿತವಾದೀತೇ? ॥ ೧೦ ॥ ನೀವುಗಳು ನಿಮ್ಮ ಕ್ರೋಧವನ್ನು ಶಾಂತ ಗೊಳಿಸಿಕೊಂಡು ತಂದೆ-ತಾತ-ಮುತ್ತಾತರು ಮುಂತಾದವರು ಸೇವಿಸಿದ ಸತ್ಪುರುಷರ ಮಾರ್ಗವನ್ನು ಅನುಸರಿಸಿರಿ. ॥ ೧೧ ॥

ತಂದೆ-ತಾಯಂದಿರು ಬಾಲಕನನ್ನು, ಕಣ್ಣಿನ ರೆಪ್ಪೆಗಳು ಕಣ್ಣುಗಳನ್ನು, ಪತಿಯು ಪತ್ನಿಯನ್ನು, ಗೃಹಸ್ಥರು ಭಿಕ್ಷುಕರನ್ನು, ಜ್ಞಾನಿಗಳು ಅಜ್ಞಾನಿಗಳನ್ನು ರಕ್ಷಿಸುತ್ತಾ, ಅವರ ಹಿತವನ್ನು ಬಯಸುವಂತೆ, ಪ್ರಜೆಯ ರಕ್ಷಣೆ ಮತ್ತು ಹಿತದ ಉತ್ತರದಾಯಿತ್ವ ರಾಜನ ಮೇಲಿರುತ್ತದೆ. ॥ ೧೨ ॥

ಅಂತರ್ದೇಹೇಷು ಭೂತಾನಾಮಾತ್ಮಾಽಽಸ್ತೇ ಹರಿರೀಶ್ವರಃ ।
ಸರ್ವಂ ತದ್ಧಿಷ್ಣ್ಯಮೀಕ್ಷಧ್ವಮೇವಂ ವಸ್ತೋಷಿತೋ ಹ್ಯಸೌ ॥ ೧೩ ॥

ಯಃ ಸಮುತ್ಪತಿತಂ ದೇಹ ಆಕಾಶಾನ್ಮನ್ಯುಮುಲ್ಬಣಮ್ ।
ಆತ್ಮಜಿಜ್ಞಾಸಯಾ ಯಚ್ಛೇತ್ ಸಗುಣಾನತಿವರ್ತತೇ ॥ ೧೪ ॥

ಅಲಂ ದಗ್ಧೈರ್ದ್ರುಮೈರ್ದೀನೈಃ ಖಿಲಾನಾಂ ಶಿವಮಸ್ತು ವಃ ।
ವಾರ್ಕ್ಷೀ ಹ್ಯೇಷಾ ವರಾ ಕನ್ಯಾ ಪತ್ನೀತ್ವೇ ಪ್ರತಿಗೃಹ್ಯತಾಮ್ ॥ ೧೫ ॥

ಇತ್ಯಾಮಂತ್ರ್ಯ ವರಾರೋಹಾಂ
ಕನ್ಯಾಮಾಪ್ಸರಸೀಂ ನೃಪ ।
ಸೋಮೋ ರಾಜಾ ಯಯೌ
ದತ್ತ್ವಾ ತೇ ಧರ್ಮೇಣೋಪಯೇಮಿರೇ ॥ ೧೬ ॥

ತೇಭ್ಯಸ್ತಸ್ಯಾಂ ಸಮಭವದ್ದಕ್ಷಃ ಪ್ರಾಚೇತಸಃ ಕಿಲ ।
ಯಸ್ಯ ಪ್ರಜಾವಿಸರ್ಗೇಣ ಲೋಕಾ ಆಪೂರಿತಾಸ್ತ್ರಯಃ ॥ ೧೭ ॥

ಯಥಾ ಸಸರ್ಜ ಭೂತಾನಿ ದಕ್ಷೋ ದುಹಿತೃವತ್ಸಲಃ ।
ರೇತಸಾ ಮನಸಾ ಚೈವ ತನ್ಮಮಾವಹಿತಃ ಶೃಣು ॥ ೧೮ ॥

ಮನಸೈವಾಸೃಜತ್ಪೂರ್ವಂ ಪ್ರಜಾಪತಿರಿಮಾಃ ಪ್ರಜಾಃ ।
ದೇವಾಸುರಮನುಷ್ಯಾದೀನ್ನಭಃಸ್ಥಲಜಲೌಕಸಃ ॥ ೧೯ ॥

ತಮಬೃಂಹಿತಮಾಲೋಕ್ಯ ಪ್ರಜಾಸರ್ಗಂ ಪ್ರಜಾಪತಿಃ ।
ವಿಂಧ್ಯಪಾದಾನುಪವ್ರಜ್ಯ ಸೋಽಚರದ್ದುಷ್ಕರಂ ತಪಃ ॥ ೨೦ ॥

ತತ್ರಾಘಮರ್ಷಣಂ ನಾಮ ತೀರ್ಥಂ ಪಾಪಹರಂ ಪರಮ್ ।
ಉಪಸ್ಪೃಶ್ಯಾನುಸವನಂ ತಪಸಾತೋಷಯದ್ಧರಿಮ್ ॥ ೨೧ ॥

ಅಸ್ತೌಷೀದ್ಧಂಸಗುಹ್ಯೇನ ಭಗವಂತಮಧೋಕ್ಷಜಮ್ ।
ತುಭ್ಯಂ ತದಭಿಧಾಸ್ಯಾಮಿ ಕಸ್ಯಾತುಷ್ಯದ್ಯತೋ ಹರಿಃ ॥ ೨೨ ॥

ಪ್ರಜಾಪತಿರುವಾಚ

ನಮಃ ಪರಾಯಾವಿತಥಾನುಭೂತಯೇ
ಗುಣತ್ರಯಾಭಾಸನಿಮಿತ್ತಬಂಧವೇ ।
ಅದೃಷ್ಟಧಾಮ್ನೇ ಗುಣತತ್ತ್ವಬುದ್ಧಿಭಿ-
ರ್ನಿವೃತ್ತಮಾನಾಯ ದಧೇ ಸ್ವಯಂಭುವೇ ॥ ೨೩ ॥

ಪ್ರಚೇತಸರೇ ! ಸಮಸ್ತ ಪ್ರಾಣಿಗಳ ಹೃದಯದಲ್ಲಿ ಸರ್ವಶಕ್ತನಾದ ಭಗವಂತನು ಆತ್ಮರೂಪದಿಂದ ವಿರಾಜಮಾನನಾಗಿದ್ದಾನೆ. ಅದಕ್ಕಾಗಿ ನೀವುಗಳು ಎಲ್ಲರನ್ನು ಭಗವಂತನ ನಿವಾಸಸ್ಥಾನವೆಂದು ತಿಳಿಯಿರಿ. ನೀವು ಹೀಗೆ ಮಾಡಿದರೆ ಭಗವಂತನನ್ನು ಒಲಿಸಿಕೊಳ್ಳಬಹುದು. ॥ ೧೩ ॥ ಹೃದಯದಲ್ಲಿ ಉಕ್ಕುತ್ತಿರುವ ಭಯಂಕರ ಕ್ರೋಧವನ್ನು ಆತ್ಮ ವಿಚಾರದ ಮೂಲಕ ಶರೀರದಲ್ಲೇ ಶಾಂತಗೊಳಿಸಿ, ಹೊರ ಹೋಗಲು ಬಿಡದಿರುವವನು ತ್ರಿಗುಣಗಳನ್ನು ದಾಟಿ ಹೋಗಲು ಸಮರ್ಥನಾಗುತ್ತಾನೆ ॥ ೧೪ ॥ ಪ್ರಚೇತಸರೇ ! ಈ ದೀನ-ಹೀನರಾದ ವೃಕ್ಷಗಳನ್ನು ಇನ್ನು ಸುಡಬೇಡಿರಿ. ಉಳಿದಿರುವ ವೃಕ್ಷ ಸಂಪತ್ತನ್ನು ಕಾಪಾಡಿರಿ. ಇದರಿಂದ ನಿಮಗೂ ಶ್ರೇಯಸ್ಸುಂಟಾದೀತು. ಈ ವೃಕ್ಷಗಳು 'ವಾರ್ಕ್ಷೀ' ಎಂಬ ಕನ್ಯಾಮಣಿಯನ್ನು ಸಂರಕ್ಷಣೆ ಮಾಡಿವೆ. ನೀವು ಆಕೆಯನ್ನು ಪತ್ನಿಯಾಗಿ ಸ್ವೀಕರಿಸಿರಿ. ॥ ೧೫ ॥

ಪರೀಕ್ಷಿದ್ರಾಜನೇ ! ವನಸ್ಪತಿಗಳ ರಾಜನಾದ ಚಂದ್ರನು ಪ್ರಚೇತಸರನ್ನು ಈ ರೀತಿಯಾಗಿ ಸಮಾಧಾನಪಡಿಸಿ, ಅವರಿಗೆ ಪ್ರಮ್ಲೋಚಾ ಎಂಬ ಅಪ್ಸರೆಯ ಸುಂದರಿಯಾದ ಕನ್ಯೆಯನ್ನು ಒಪ್ಪಿಸಿ ಅಲ್ಲಿಂದ ಹೊರಟುಹೋದನು. ಪ್ರಚೇತಸರು ಬಳಿಕ ಧರ್ಮಾನುಸಾರ ಆಕೆಯನ್ನು ಪಾಣಿಗ್ರಹಣ ಮಾಡಿಕೊಂಡರು. ॥ ೧೬ ॥ ಆ ಪ್ರಚೇತಸರಿಂದ ಆಕೆಯ ಗರ್ಭದಿಂದ ಪ್ರಾಚೇತಸನಾದ ದಕ್ಷನು ಜನಿಸಿದನು. ಮತ್ತೆ ಆ ದಕ್ಷ ಪ್ರಜಾಪತಿಯ ಪ್ರಜಾಸೃಷ್ಟಿಯಿಂದ ಮೂರು ಲೋಕಗಳೂ ತುಂಬಿ ಹೋದುವು. ॥ ೧೭ ॥ ದಕ್ಷನಿಗೆ ತನ್ನ ಹೆಣ್ಣು ಮಕ್ಕಳ ಮೇಲೆ ಅಪಾರವಾದ ಪ್ರೇಮವಿತ್ತು. ಅವನು ತನ್ನ ಸಂಕಲ್ಪದಿಂದ ಹಾಗೂ ವೀರ್ಯದಿಂದ ವಿವಿಧ ಪ್ರಾಣಿಗಳನ್ನು ಸೃಷ್ಟಿ ಮಾಡಿದುದನ್ನು ನಾನು ನಿನಗೆ ಹೇಳುವೆನು. ಸಾವಧಾನವಾಗಿ ಕೇಳು. ॥ ೧೮ ॥

ಪರೀಕ್ಷಿತನೇ ! ಮೊದಲಿಗೆ ದಕ್ಷಪ್ರಜಾಪತಿಯು ನೆಲ, ಜಲ, ಆಕಾಶಗಳಲ್ಲಿ ವಾಸಿಸುವ ದೇವತೆಗಳು, ಅಸುರರು ಮತ್ತು ಮನುಷ್ಯರು ಮುಂತಾದವರನ್ನು ಸಂಕಲ್ಪಮಾತ್ರದಿಂದಲೇ ಸೃಷ್ಟಿಸಿದನು. ॥ ೧೯ ॥ ಆ ಸೃಷ್ಟಿಯು ವೃದ್ಧಿಹೊಂದದೇ ಇರುವುದನ್ನು ನೋಡಿ ಅವನು ವಿಂಧ್ಯಾಚಲದ ಬಳಿಯಿರುವ ಪರ್ವತಕ್ಕೆ ಹೋಗಿ ತೀವ್ರವಾದ ತಪಸ್ಸನ್ನು ಆಚರಿಸಿದನು. ॥ ೨೦ ॥ ಅಲ್ಲಿ ಅತ್ಯಂತ ಶ್ರೇಷ್ಠವಾದೊಂದು 'ಅಘಮರ್ಷಣ' ಎಂಬ ತೀರ್ಥವಿದೆ. ಅದು ಎಲ್ಲ ಪಾಪಗಳನ್ನು ತೊಳೆದುಬಿಡುತ್ತದೆ. ದಕ್ಷಪ್ರಜಾಪತಿಯು ಆ ತೀರ್ಥದಲ್ಲಿ ತ್ರಿಕಾಲಗಳಲ್ಲಿಯೂ ಸ್ನಾನವನ್ನು ಮಾಡಿ, ತಪಸ್ಸಿನ ಮೂಲಕ ಭಗವಂತನನ್ನು ಆರಾಧಿಸತೊಡಗಿದನು. ॥ ೨೧ ॥ ದಕ್ಷಪ್ರಜಾಪತಿಯು ಇಂದ್ರಿಯಾತೀತನಾದ ಭಗವಂತನನ್ನು 'ಹಂಸ ಗುಹ್ಯ' ಎಂಬ ಸ್ತೋತ್ರದಿಂದ ಸ್ತುತಿಸಿದನು. ಅದರಿಂದಲೇ ಭಗವಂತನು ಅವನ ಮೇಲೆ ಪ್ರಸನ್ನನಾಗಿದ್ದನು. ಆ ಸ್ತುತಿಯನ್ನು ನಿನಗೆ ಹೇಳುವೆನು, ಕೇಳು. ॥ ೨೨ ॥

ದಕ್ಷಪ್ರಜಾಪತಿಯು ಹೀಗೆ ಸ್ತುತಿಸತೊಡಗಿದನು – ಭಗವಂತಾ ! ನೀನು ಸತ್ಯವಾದ ಅನುಭವಭೂತಿ ಸ್ವರೂಪನಾಗಿ ಸರ್ವೋತ್ತಮನಾಗಿರುವೆ. ಜೀವನನ್ನೂ ಪ್ರಕೃತಿಯನ್ನೂ ಮೀರಿದವನಾಗಿ ಅವುಗಳಿಗೆ ಸತ್ತಾ-ಸ್ಫೂರ್ತಿಯನ್ನು ನೀಡುತ್ತಿರುವೆ. ನೀನು ಪ್ರಮಾಣಾತೀತನಾಗಿರುವುದರಿಂದ ತ್ರಿಗುಣಾತ್ಮಕವಾದ ಸೃಷ್ಟಿಯಲ್ಲೇ

ನ ಯಸ್ಯ ಸಖ್ಯಂ ಪುರುಷೋಽವೈತಿ ಸಖ್ಯುಃ
ಸಖಾ ವಸನ್ ಸಂವಸತಃ ಪುರೇಽಸ್ಮಿನ್ ।
ಗುಣೋ ಯಥಾ ಗುಣಿನೋ ವ್ಯಕ್ತದೃಷ್ಟೇ-
ಸ್ತಸ್ಮೈ ಮಹೇಶಾಯ ನಮಸ್ಕರೋಮಿ ॥ ೨೪ ॥

ದೇಹೋಽಸವೋಽಕ್ಷಾ ಮನವೋ ಭೂತಮಾತ್ರಾ
ನಾತ್ಮಾನಮನ್ಯಂ ಚ ವಿದುಃ ಪರಂ ಯತ್ ।
ಸರ್ವಂ ಪುಮಾನ್ವೇದ ಗುಣಾಂಶ್ಚ ತಜ್ಜ್ಞೋ
ನ ವೇದ ಸರ್ವಜ್ಞಮನಂತಮೀಡೇ ॥ ೨೫ ॥

ಯದೋಪರಾಮೋ ಮನಸೋ ನಾಮರೂಪ-
ರೂಪಸ್ಯ ದೃಷ್ಟಸ್ಮೃತಿಸಂಪ್ರಮೋಷಾತ್ ।
ಯ ಈಯತೇ ಕೇವಲಯಾ ಸ್ವಸಂಸ್ಥಯಾ
ಹಂಸಾಯ ತಸ್ಮೈ ಶುಚಿಸದ್ಮನೇ ನಮಃ ॥ ೨೬ ॥

ಮನೀಷಿಣೋಽಂತರ್ಹೃದಿ ಸಂನಿವೇಶಿತಂ
ಸ್ವಶಕ್ತಿಭಿರ್ನವಭಿಶ್ಚ ತ್ರಿವೃದ್ಭಿಃ ।
ವಹ್ನಿಂ ಯಥಾ ದಾರುಣಿ ಪಾಂಚದಶ್ಯಂ
ಮನೀಷಯಾ ನಿಷ್ಕರ್ಷಂತಿ ಗೂಢಮ್ ॥ ೨೭ ॥

ಸ ವೈ ಮಮಾಶೇಷವಿಶೇಷಮಾಯಾ-
ನಿಷೇಧನಿರ್ವಾಣಸುಖಾನುಭೂತಿಃ ।
ಸ ಸರ್ವನಾಮಾ ಸ ಚ ವಿಶ್ವರೂಪಃ
ಪ್ರಸೀದತಾಮನಿರುಕ್ತಾತ್ಮಶಕ್ತಿಃ ॥ ೨೮ ॥

ಯದ್ಯನ್ನಿರುಕ್ತಂ ವಚಸಾ ನಿರೂಪಿತಂ
ಧಿಯಾಕ್ಷಭಿರ್ವಾ ಮನಸಾ ವೋತ ಯಸ್ಯ ।
ಮಾ ಭೂತ್ಸ್ವರೂಪಂ ಗುಣರೂಪಂ ಹಿ ತತ್ತತ್
ಸ ವೈ ಗುಣಾಪಾಯವಿಸರ್ಗಲಕ್ಷಣಃ ॥ ೨೯ ॥

ತತ್ತ್ವಬುದ್ಧಿಯನ್ನಿಟ್ಟಿರುವ ಜೀವಿಗಳು ನಿನ್ನ ನಿಜ ಸ್ವರೂಪವನ್ನು ಅರಿಯಲಾರರು. ಇಂತಹ ಸ್ವಯಂಪ್ರಕಾಶನೂ, ಪರಾತ್ಪರನೂ ಆದ ನಿನಗೆ ನಮಸ್ಕರಿಸುತ್ತಿದ್ದೇನೆ. ॥ ೨೩ ॥ ನೀನಾದರೋ ಜೀವಿಗಳಿಗೆ ಗೆಳೆಯನಾಗಿ, ಇದೇ ಶರೀರದಲ್ಲಿ ಒಟ್ಟಿಗೆ ಇರುತ್ತಿದ್ದರೂ, ಸರ್ವಶಕ್ತಿಯುಳ್ಳ ನಿನ್ನ ಸಖ್ಯಭಾವವನ್ನು ಜೀವಿಗಳು ತಿಳಿಯಲಾರರು. ರೂಪ, ರಸ, ಗಂಧಗಳೇ ಮುಂತಾದ ವಿಷಯಗಳು ಕಣ್ಣು ನಾಲಿಗೆ, ಮೂಗು ಮುಂತಾದ ಇಂದ್ರಿಯ ವೃತ್ತಿಗಳು ತಮ್ಮನ್ನು ಪ್ರಕಾಶಪಡಿಸುತ್ತಿದ್ದರೂ ಅವುಗಳನ್ನು ತಿಳಿಯಲಾರವೊ, ಅಂತೆಯೇ ಜೀವಿಗಳು ತಮ್ಮನ್ನು ಪ್ರಕಾಶ ಪಡಿಸುತ್ತಿರುವ ಮತ್ತು ಸಾಕ್ಷಿಯಾಗಿರುವ ನಿನ್ನನ್ನು ಕಾಣಲಾರರು. ಅಂತಹ ಮಹೇಶ್ವರನಾದ ನಿನಗೆ ನಮಸ್ಕರಿಸುತ್ತೇನೆ. ॥ ೨೪ ॥ ದೇಹ, ಪ್ರಾಣ, ಇಂದ್ರಿಯಗಳು, ಅಂತಃಕರಣದ ವೃತ್ತಿಗಳು, ಪಂಚಮಹಾ ಭೂತಗಳು ಮತ್ತು ಅವುಗಳ ತನ್ಮಾತ್ರೆಗಳು – ಹೀಗೆ ಇವೆಲ್ಲವೂ ಜಡವಾಗಿದ್ದ ಕಾರಣ ತಮ್ಮನ್ನು ಮತ್ತು ತಮ್ಮಿಂದ ಬೇರೆಯಾದುದನ್ನೂ ತಿಳಿಯಲಾರವು. ಆದರೆ ಜೀವನು ಇವೆಲ್ಲವನ್ನು ಮತ್ತು ಇವುಗಳ ಕಾರಣವಾದ ಸತ್ತ್ವ, ರಜ, ತಮ ಈ ಮೂರು ಗುಣ ಗಳನ್ನೂ ತಿಳಿಯುವನು. ಆದರೂ ಕೂಡ ಸರ್ವಜ್ಞನೂ, ಅನಂತನೂ ಆಗಿರುವ ನಿನ್ನನ್ನು ತಿಳಿಯಲಾರನು. ಅಂತಹ ನಿನ್ನನ್ನು ಸ್ತುತಿಸುತ್ತೇನೆ. ॥ ೨೫ ॥ ಸಮಾಧಿಕಾಲದಲ್ಲಿ ಪ್ರಮಾಣ, ವಿಕಲ್ಪ ವಿಪರ್ಯಯಗಳೆಂಬ ವಿವಿಧ ಜ್ಞಾನಗಳೂ, ಮತ್ತು ಸ್ಮರಣಶಕ್ತಿಯೂ ಲೋಪವಾಗುವುದರಿಂದ ಈ ನಾಮ-ರೂಪಾತ್ಮಕವಾದ ಜಗತ್ತನ್ನು ನಿರೂಪಿಸುವ ಮನಸ್ಸೂ ಶಾಂತವಾಗಿ ಬಿಡುವುದು. ಹಾಗೇ ಮನಸ್ಸೇ ಲಯಗೊಂಡರೂ ನೀನು ಕೇವಲ ಸ್ವಸ್ವರೂಪದಿಂದ ಪ್ರಕಾಶಿಸುತ್ತಿರುವೆ. ಅಂತಹ ಶುದ್ಧನೂ, ಶುದ್ಧ ಹೃದಯಮಂದಿರನಿವಾಸಿಯೂ ಆದ ನಿನಗೆ ನಮೋ ನಮಃ ॥ ೨೬ ॥ ಯಾಜ್ಞಿಕರು ಅರಣಿ ಎಂಬ ಕಟ್ಟಿಗೆಯಲ್ಲಿ ಅಡಗಿರುವ ಅಗ್ನಿಯನ್ನು 'ಸಾಮಿಧೇನೀ' ಎಂಬ ಹದಿನೈದು ಮಂತ್ರಗಳಿಂದ ಪ್ರಕಟಪಡಿಸುವಂತೆ ಜ್ಞಾನೀ ಪುರುಷರು ತಮ್ಮ ಇಪ್ಪತ್ತೇಳು ಶಕ್ತಿಗಳ ಒಳಗೆ ಗೂಢವಾಗಿ ಅಡಗಿರುವ ನಿನ್ನನ್ನು ತಮ್ಮ ಶುದ್ಧಬುದ್ಧಿಯಿಂದ ಹೃದಯಲ್ಲೇ ಹುಡುಕಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ॥ ೨೭ ॥ ಜಗತ್ತಿನಲ್ಲಿ ಕಂಡುಬರುವ ಭಿನ್ನತೆಗಳೆಲ್ಲವೂ ಮಾಯೆಯದ್ದೇ ಆಗಿವೆ. ಮಾಯೆಯನ್ನು ನಿಷೇಧಮಾಡಿದಾಗ ಕೇವಲ ಪರಮ ಸುಖದ ಸಾಕ್ಷಾತ್ಕಾರರೂಪವಾದ ನೀನೇ ಶೇಷವಾಗಿ ಉಳಿಯುವಿ. ಆದರೆ ವಿಚಾರಮಾಡಿದಾಗ ನಿನ್ನ ಸ್ವರೂಪದಲ್ಲಿ ಮಾಯೆಯು ನಿರ್ವಚನವಾಗಲಾರದು. ಅರ್ಥಾತ್ ಮಾಯೆಯೂ ನೀನೇ ಆಗಿರುವೆ. ಆದ್ದರಿಂದ ಎಲ್ಲ ನಾಮ ಮತ್ತು ಎಲ್ಲ ರೂಪಗಳೂ ನಿನ್ನವೇ ಆಗಿವೆ. ಪ್ರಭುವೇ! ನೀನು ನನ್ನ ಮೇಲೆ ಪ್ರಸನ್ನನಾಗು. ನನ್ನನ್ನು ಆತ್ಮ ಪ್ರಸಾದದಿಂದ ಪೂರ್ಣಗೊಳಿಸಿಬಿಡು. ॥ ೨೮ ॥

ಸ್ವಾಮಿ! ವಾಣಿಯಿಂದ ಹೇಳುವುದೆಲ್ಲವೂ ಅಥವಾ ಮನಸ್ಸು ಬುದ್ಧಿ ಇಂದ್ರಿಯಗಳಿಂದ ಗ್ರಹಿಸಲಾಗುವುದೆಲ್ಲವೂ ನಿನ್ನ ಸ್ವರೂಪವಲ್ಲ. ಏಕೆಂದರೆ, ಅದೆಲ್ಲವೂ ಗುಣರೂಪವಾಗಿದೆ, ನೀನು ಗುಣಗಳ ಉತ್ಪತ್ತಿ ಮತ್ತು ಪ್ರಳಯದ ಅಧಿಷ್ಠಾನನಾಗಿರುವೆ. ನಿನ್ನಲ್ಲಿ ಅದರ ಕೇವಲ ಪ್ರತೀತಿ ಮಾತ್ರವಿದೆ. ॥ ೨೯ ॥ ಭಗವಂತನೇ! ಈ ಇಡೀ ಜಗತ್ತು

ಅಂತರ್ದೇಹೇಷು ಭೂತಾನಾಮಾತ್ಮಾಽಽಸ್ತೇ ಹರಿರೀಶ್ವರಃ ।
ಸರ್ವಂ ತದ್ಧಿಷ್ಣ್ಯಮೀಕ್ಷಧ್ವಮೇವಂ ವಸ್ತೋಷಿತೋ ಹ್ಯಸೌ ॥ ೧೩ ॥

ಯಃ ಸಮುತ್ಪತಿತಂ ದೇಹ ಆಕಾಶಾನ್ಮನ್ಯುಮುಲ್ಬಣಮ್ ।
ಆತ್ಮಜಿಜ್ಞಾಸಯಾ ಯಚ್ಛೇತ್ ಸಗುಣಾನತಿವರ್ತತೇ ॥ ೧೪ ॥

ಅಲಂ ದಗ್ಧೈರ್ದ್ರುಮೈರ್ದೀನೈಃ ಖಿಲಾನಾಂ ಶಿವಮಸ್ತು ವಃ ।
ವಾರ್ಕ್ಷೀ ಹ್ಯೇಷಾ ವರಾ ಕನ್ಯಾ ಪತ್ನೀತ್ವೇ ಪ್ರತಿಗೃಹ್ಯತಾಮ್ ॥ ೧೫ ॥

ಇತ್ಯಾಮಂತ್ರ್ಯ ವರಾರೋಹಾಂ ಕನ್ಯಾಮಾಪ್ಸರಸೀಂ ನೃಪ ।
ಸೋಮೋ ರಾಜಾ ಯಯೌ ದತ್ವಾ ತೇ ಧರ್ಮೇಣೋಪಯೇಮಿರೇ ॥ ೧೬ ॥

ತೇಭ್ಯಸ್ತಸ್ಯಾಂ ಸಮಭವದ್ದಕ್ಷಃ ಪ್ರಾಚೇತಸಃ ಕಿಲ ।
ಯಸ್ಯ ಪ್ರಜಾವಿಸರ್ಗೇಣ ಲೋಕಾ ಆಪೂರಿತಾಸ್ತ್ರಯಃ ॥ ೧೭ ॥

ಯಥಾ ಸಸರ್ಜ ಭೂತಾನಿ ದಕ್ಷೋ ದುಹಿತೃವತ್ಸಲಃ ।
ರೇತಸಾ ಮನಸಾ ಚೈವ ತನ್ಮಮಾವಹಿತಃ ಶೃಣು ॥ ೧೮ ॥

ಮನಸೈವಾಸೃಜತ್ಪೂರ್ವಂ ಪ್ರಜಾಪತಿರಿಮಾಃ ಪ್ರಜಾಃ ।
ದೇವಾಸುರಮನುಷ್ಯಾದೀನ್ನಭಃಸ್ಥಲಜಲೌಕಸಃ ॥ ೧೯ ॥

ತಮಬೃಂಹಿತಮಾಲೋಕ್ಯ ಪ್ರಜಾಸರ್ಗಂ ಪ್ರಜಾಪತಿಃ ।
ವಿಂಧ್ಯಪಾದಾನುಪವ್ರಜ್ಯ ಸೋಽಚರದ್ದುಷ್ಕರಂ ತಪಃ ॥ ೨೦ ॥

ತತ್ರಾಘಮರ್ಷಣಂ ನಾಮ ತೀರ್ಥಂ ಪಾಪಹರಂ ಪರಮ್ ।
ಉಪಸ್ಪೃಶ್ಯಾನುಸವನಂ ತಪಸಾತೋಷಯದ್ಧರಿಮ್ ॥ ೨೧ ॥

ಅಸ್ತೌಷೀದ್ಧಂಸಗುಹ್ಯೇನ ಭಗವಂತಮಧೋಕ್ಷಜಮ್ ।
ತುಭ್ಯಂ ತದಭಿಧಾಸ್ಯಾಮಿ ಕಸ್ಯಾತುಷ್ಯದ್ಯತೋ ಹರಿಃ ॥ ೨೨ ॥

ಪ್ರಜಾಪತಿರುವಾಚ

ನಮಃ ಪರಾಯಾವಿತಥಾನುಭೂತಯೇ ಗುಣತ್ರಯಾಭಾಸನಿಮಿತ್ತ ಬಂಧವೇ ।
ಅದೃಷ್ಟಧಾಮ್ನೇ ಗುಣತತ್ತ್ವಬುದ್ಧಿಭಿ-ರ್ನಿವೃತ್ತಮಾನಾಯ ದಧೇ ಸ್ವಯಂಭುವೇ ॥ ೨೩ ॥

ಪ್ರಚೇತಸರೇ ! ಸಮಸ್ತ ಪ್ರಾಣಿಗಳ ಹೃದಯದಲ್ಲಿ ಸರ್ವಶಕ್ತನಾದ ಭಗವಂತನು ಆತ್ಮರೂಪದಿಂದ ವಿರಾಜಮಾನನಾಗಿದ್ದಾನೆ. ಅದಕ್ಕಾಗಿ ನೀವುಗಳು ಎಲ್ಲರನ್ನು ಭಗವಂತನ ನಿವಾಸಸ್ಥಾನವೆಂದು ತಿಳಿಯಿರಿ. ನೀವು ಹೀಗೆ ಮಾಡಿದರೆ ಭಗವಂತನನ್ನು ಒಲಿಸಿಕೊಳ್ಳಬಹುದು. ॥ ೧೩ ॥ ಹೃದಯದಲ್ಲಿ ಉಕ್ಕುತ್ತಿರುವ ಭಯಂಕರ ಕ್ರೋಧವನ್ನು ಆತ್ಮ ವಿಚಾರದ ಮೂಲಕ ಶರೀರದಲ್ಲೇ ಶಾಂತಗೊಳಿಸಿ, ಹೊರ ಹೋಗಲು ಬಿಡದಿರುವವನು ತ್ರಿಗುಣಗಳನ್ನು ದಾಟಿ ಹೋಗಲು ಸಮರ್ಥನಾಗುತ್ತಾನೆ ॥ ೧೪ ॥ ಪ್ರಚೇತಸರೇ ! ಈ ದೀನ-ಹೀನರಾದ ವೃಕ್ಷಗಳನ್ನು ಇನ್ನು ಸುಡಬೇಡಿರಿ. ಉಳಿದಿರುವ ವೃಕ್ಷ ಸಂಪತ್ತನ್ನು ಕಾಪಾಡಿರಿ. ಇದರಿಂದ ನಿಮಗೂ ಶ್ರೇಯಸ್ಸುಂಟಾದೀತು. ಈ ವೃಕ್ಷಗಳು 'ವಾರ್ಕ್ಷೀ' ಎಂಬ ಕನ್ಯಾಮಣಿಯನ್ನು ಸಂರಕ್ಷಣೆ ಮಾಡಿವೆ. ನೀವು ಆಕೆಯನ್ನು ಪತ್ನಿಯಾಗಿ ಸ್ವೀಕರಿಸಿರಿ. ॥ ೧೫ ॥

ಪರೀಕ್ಷಿದ್ರಾಜನೇ ! ವನಸ್ಪತಿಗಳ ರಾಜನಾದ ಚಂದ್ರನು ಪ್ರಚೇತಸರನ್ನು ಈ ರೀತಿಯಾಗಿ ಸಮಾಧಾನಪಡಿಸಿ, ಅವರಿಗೆ ಪ್ರಮ್ಲೋಚಾ ಎಂಬ ಅಪ್ಸರೆಯ ಸುಂದರಿಯಾದ ಕನ್ಯೆಯನ್ನು ಒಪ್ಪಿಸಿ ಅಲ್ಲಿಂದ ಹೊರಟುಹೋದನು. ಪ್ರಚೇತಸರು ಬಳಿಕ ಧರ್ಮಾನುಸಾರ ಆಕೆಯನ್ನು ಪಾಣಿಗ್ರಹಣ ಮಾಡಿಕೊಂಡರು. ॥ ೧೬ ॥ ಆ ಪ್ರಚೇತಸರಿಂದ ಆಕೆಯ ಗರ್ಭದಿಂದ ಪ್ರಾಚೇತಸನಾದ ದಕ್ಷನು ಜನಿಸಿದನು. ಮತ್ತೆ ಆ ದಕ್ಷ ಪ್ರಜಾಪತಿಯ ಪ್ರಜಾಸೃಷ್ಟಿಯಿಂದ ಮೂರು ಲೋಕಗಳೂ ತುಂಬಿ ಹೋದುವು. ॥ ೧೭ ॥ ದಕ್ಷನಿಗೆ ತನ್ನ ಹೆಣ್ಣು ಮಕ್ಕಳ ಮೇಲೆ ಅಪಾರವಾದ ಪ್ರೇಮವಿತ್ತು. ಅವನು ತನ್ನ ಸಂಕಲ್ಪದಿಂದ ಹಾಗೂ ವೀರ್ಯದಿಂದ ವಿವಿಧ ಪ್ರಾಣಿಗಳನ್ನು ಸೃಷ್ಟಿಮಾಡಿದುದನ್ನು ನಾನು ನಿನಗೆ ಹೇಳುವೆನು. ಸಾವಧಾನವಾಗಿ ಕೇಳು. ॥ ೧೮ ॥

ಪರೀಕ್ಷಿತನೇ ! ಮೊದಲಿಗೆ ದಕ್ಷಪ್ರಜಾಪತಿಯು ನೆಲ, ಜಲ, ಆಕಾಶಗಳಲ್ಲಿ ವಾಸಿಸುವ ದೇವತೆಗಳು, ಅಸುರರು ಮತ್ತು ಮನುಷ್ಯರು ಮುಂತಾದವರನ್ನು ಸಂಕಲ್ಪಮಾತ್ರದಿಂದಲೇ ಸೃಷ್ಟಿಸಿದನು. ॥ ೧೯ ॥ ಆ ಸೃಷ್ಟಿಯು ವೃದ್ಧಿಹೊಂದದೇ ಇರುವುದನ್ನು ನೋಡಿ ಅವನು ವಿಂಧ್ಯಾಚಲದ ಬಳಿಯಿರುವ ಪರ್ವತಕ್ಕೆ ಹೋಗಿ ತೀವ್ರವಾದ ತಪಸ್ಸನ್ನು ಆಚರಿಸಿದನು. ॥ ೨೦ ॥ ಅಲ್ಲಿ ಅತ್ಯಂತ ಶ್ರೇಷ್ಠವಾದೊಂದು 'ಅಘಮರ್ಷಣ' ಎಂಬ ತೀರ್ಥವಿದೆ. ಅದು ಎಲ್ಲ ಪಾಪಗಳನ್ನು ತೊಳೆದುಬಿಡುತ್ತದೆ. ದಕ್ಷಪ್ರಜಾಪತಿಯು ಆ ತೀರ್ಥದಲ್ಲಿ ತ್ರಿಕಾಲಗಳಲ್ಲಿಯೂ ಸ್ನಾನವನ್ನು ಮಾಡಿ, ತಪಸ್ಸಿನ ಮೂಲಕ ಭಗವಂತನನ್ನು ಆರಾಧಿಸತೊಡಗಿದನು. ॥ ೨೧ ॥ ದಕ್ಷಪ್ರಜಾಪತಿಯು ಇಂದ್ರಿಯಾತೀತನಾದ ಭಗವಂತನನ್ನು 'ಹಂಸ ಗುಹ್ಯ' ಎಂಬ ಸ್ತೋತ್ರದಿಂದ ಸ್ತುತಿಸಿದನು. ಅದರಿಂದಲೇ ಭಗವಂತನು ಅವನ ಮೇಲೆ ಪ್ರಸನ್ನನಾಗಿದ್ದನು. ಆ ಸ್ತುತಿಯನ್ನು ನಿನಗೆ ಹೇಳುವೆನು, ಕೇಳು. ॥ ೨೨ ॥

**ದಕ್ಷಪ್ರಜಾಪತಿಯು ಹೀಗೆ ಸ್ತುತಿಸತೊಡಗಿದನು** – ಭಗವಂತಾ ! ನೀನು ಸತ್ಯವಾದ ಅನುಭವಭೂತಿ ಸ್ವರೂಪನಾಗಿ ಸರ್ವೋತ್ತಮನಾಗಿರುವೆ. ಜೀವನನ್ನೂ, ಪ್ರಕೃತಿಯನ್ನೂ ಮೀರಿದವನಾಗಿ ಅವುಗಳಿಗೆ ಸತ್ತಾ-ಸ್ಫೂರ್ತಿಯನ್ನು ನೀಡುತ್ತಿರುವೆ. ನೀನು ಪ್ರಮಾಣಾತೀತನಾಗಿರುವುದರಿಂದ ತ್ರಿಗುಣಾತ್ಮಕವಾದ ಸೃಷ್ಟಿಯಲ್ಲೇ

ನ ಯಸ್ಯ ಸಖ್ಯಂ ಪುರುಷೋಽವೈತಿ ಸಖ್ಯುಃ
ಸಖಾ ವಸನ್ ಸಂವಸತಃ ಪುರೇಽಸ್ಮಿನ್ ।
ಗುಣೋ ಯಥಾ ಗುಣಿನೋ ವ್ಯಕ್ತದೃಷ್ಟೇ-
ಸ್ತಸ್ಮೈ ಮಹೇಶಾಯ ನಮಸ್ಕರೋಮಿ ॥ ೨೪ ॥

ದೇಹೋಽಸವೋಽಕ್ಷಾ ಮನವೋ ಭೂತಮಾತ್ರಾ
ನಾತ್ಮಾನಮನ್ಯಂ ಚ ವಿದುಃ ಪರಂ ಯತ್ ।
ಸರ್ವಂ ಪುಮಾನ್ವೇದ ಗುಣಾಂಶ್ಚ ತಜ್ಞೋ
ನ ವೇದ ಸರ್ವಜ್ಞಮನಂತಮೀಡೇ ॥ ೨೫ ॥

ಯದೋಪರಾಮೋ ಮನಸೋ ನಾಮರೂಪ-
ರೂಪಸ್ಯ ದೃಷ್ಟಸ್ಮೃತಿಸಂಪ್ರಮೋಷಾತ್ ।
ಯ ಈಯತೇ ಕೇವಲಯಾ ಸ್ವಸಂಸ್ಥಯಾ
ಹಂಸಾಯ ತಸ್ಮೈ ಶುಚಿಸದ್ಮನೇ ನಮಃ ॥ ೨೬ ॥

ಮನೀಷಿಣೋಽಂತರ್ಹೃದಿ ಸಂನಿವೇಶಿತಂ
ಸ್ವಶಕ್ತಿಭಿರ್ನವಭಿಶ್ಚ ತ್ರಿವೃದ್ಭಿಃ ।
ವಹ್ನಿಂ ಯಥಾ ದಾರುಣಿ ಪಾಂಚದಶ್ಯಂ
ಮನೀಷಯಾ ನಿಷ್ಕರ್ಷಂತಿ ಗೂಢಮ್ ॥ ೨೭ ॥

ಸ ವೈ ಮಮಾಶೇಷವಿಶೇಷಮಾಯಾ-
ನಿಷೇಧನಿರ್ವಾಣಸುಖಾನುಭೂತಿಃ ।
ಸ ಸರ್ವನಾಮಾ ಸ ಚ ವಿಶ್ವರೂಪಃ
ಪ್ರಸೀದತಾಮನಿರುಕ್ತಾತ್ಮಶಕ್ತಿಃ ॥ ೨೮ ॥

ಯದ್ಯನ್ನಿರುಕ್ತಂ ವಚಸಾ ನಿರೂಪಿತಂ
ಧಿಯಾಕ್ಷಭಿರ್ವಾ ಮನಸಾ ವೋತ ಯಸ್ಯ ।
ಮಾ ಭೂತ್ಸ್ವರೂಪಂ ಗುಣರೂಪಂ ಹಿ ತತ್ತತ್
ಸ ವೈ ಗುಣಾಪಾಯವಿಸರ್ಗಲಕ್ಷಣಃ ॥ ೨೯ ॥

ತತ್ತ್ವಬುದ್ಧಿಯನ್ನಿಟ್ಟಿರುವ ಜೀವಿಗಳು ನಿನ್ನ ನಿಜ ಸ್ವರೂಪವನ್ನು ಅರಿಯಲಾರರು. ಇಂತಹ ಸ್ವಯಂಪ್ರಕಾಶನೂ, ಪರಾತ್ಪರನೂ ಆದ ನಿನಗೆ ನಮಸ್ಕರಿಸುತ್ತಿದ್ದೇನೆ. ॥ ೨೩ ॥ ನೀನಾದರೋ ಜೀವಿಗಳಿಗೆ ಗೆಳೆಯನಾಗಿ, ಇದೇ ಶರೀರದಲ್ಲಿ ಒಟ್ಟಿಗೆ ಇರುತ್ತಿದ್ದರೂ, ಸರ್ವಶಕ್ತಿಯುಳ್ಳ ನಿನ್ನ ಸಖ್ಯಭಾವವನ್ನು ಜೀವಿಗಳು ತಿಳಿಯಲಾರರು. ರೂಪ, ರಸ, ಗಂಧಗಳೇ ಮುಂತಾದ ವಿಷಯಗಳು ಕಣ್ಣು ನಾಲಿಗೆ, ಮೂಗು ಮುಂತಾದ ಇಂದ್ರಿಯ ವೃತ್ತಿಗಳು ತಮ್ಮನ್ನು ಪ್ರಕಾಶಪಡಿಸುತ್ತಿದ್ದರೂ ಅವುಗಳನ್ನು ತಿಳಿಯಲಾರವೋ, ಅಂತೆಯೇ ಜೀವಿಗಳು ತಮ್ಮನ್ನು ಪ್ರಕಾಶ ಪಡಿಸುತ್ತಿರುವ ಮತ್ತು ಸಾಕ್ಷಿಯಾಗಿರುವ ನಿನ್ನನ್ನು ಕಾಣಲಾರರು. ಅಂತಹ ಮಹೇಶ್ವರನಾದ ನಿನಗೆ ನಮಸ್ಕರಿಸುತ್ತೇನೆ. ॥ ೨೪ ॥ ದೇಹ, ಪ್ರಾಣ, ಇಂದ್ರಿಯಗಳು, ಅಂತಃಕರಣದ ವೃತ್ತಿಗಳು, ಪಂಚಮಹಾ ಭೂತಗಳು ಮತ್ತು ಅವುಗಳ ತನ್ಮಾತ್ರೆಗಳು – ಹೀಗೆ ಇವೆಲ್ಲವೂ ಜಡವಾಗಿದ್ದ ಕಾರಣ ತಮ್ಮನ್ನು ಮತ್ತು ತಮ್ಮಿಂದ ಬೇರೆಯಾದುದನ್ನೂ ತಿಳಿಯಲಾರವು. ಆದರೆ ಜೀವನು ಇವೆಲ್ಲವನ್ನು ಮತ್ತು ಇವುಗಳ ಕಾರಣವಾದ ಸತ್ತ್ವ, ರಜ, ತಮ ಈ ಮೂರು ಗುಣ ಗಳನ್ನೂ ತಿಳಿಯುವನು. ಆದರೂ ಕೂಡ ಸರ್ವಜ್ಞನೂ, ಅನಂತನೂ ಆಗಿರುವ ನಿನ್ನನ್ನು ತಿಳಿಯಲಾರನು. ಅಂತಹ ನಿನ್ನನ್ನು ಸ್ತುತಿಸುತ್ತೇನೆ. ॥ ೨೫ ॥ ಸಮಾಧಿಕಾಲದಲ್ಲಿ ಪ್ರಮಾಣ, ವಿಕಲ್ಪ, ವಿಪರ್ಯಯಗಳೆಂಬ ವಿವಿಧ ಜ್ಞಾನಗಳೂ, ಮತ್ತು ಸ್ಮರಣಶಕ್ತಿಯೂ ಲೋಪವಾಗುವುದರಿಂದ ಈ ನಾಮ-ರೂಪಾತ್ಮಕವಾದ ಜಗತ್ತನ್ನು ನಿರೂಪಿಸುವ ಮನಸ್ಸೂ ಶಾಂತವಾಗಿ ಬಿಡುವುದು. ಹಾಗೇ ಮನಸ್ಸೇ ಲಯಗೊಂಡರೂ ನೀನು ಕೇವಲ ಸ್ವಸ್ವರೂಪದಿಂದ ಪ್ರಕಾಶಿಸುತ್ತಿರುವೆ. ಅಂತಹ ಶುದ್ಧನೂ, ಶುದ್ಧ ಹೃದಯಮಂದಿರನಿವಾಸಿಯೂ ಆದ ನಿನಗೆ ನಮೋ ನಮಃ ॥ ೨೬ ॥ ಯಾಜ್ಞಿಕರು ಅರಣಿ ಎಂಬ ಕಟ್ಟಿಗೆಯಲ್ಲಿ ಅಡಗಿರುವ ಅಗ್ನಿಯನ್ನು 'ಸಾಮಿಧೇನೀ' ಎಂಬ ಹದಿನೈದು ಮಂತ್ರಗಳಿಂದ ಪ್ರಕಟಪಡಿಸುವಂತೆ ಜ್ಞಾನೀ ಪುರುಷರು ತಮ್ಮ ಇಪ್ಪತ್ತೇಳು ಶಕ್ತಿಗಳ ಒಳಗೆ ಗೂಢವಾಗಿ ಅಡಗಿರುವ ನಿನ್ನನ್ನು ತಮ್ಮ ಶುದ್ಧಬುದ್ಧಿಯಿಂದ ಹೃದಯದಲ್ಲೇ ಹುಡುಕಿ ಸಾಕ್ಷಾತ್ಕರಿಸಿಕೊಳ್ಳುತ್ತಾರೆ. ॥ ೨೭ ॥ ಜಗತ್ತಿನಲ್ಲಿ ಕಂಡುಬರುವ ಭಿನ್ನತೆಗಳೆಲ್ಲವೂ ಮಾಯೆಯದ್ದೇ ಆಗಿವೆ. ಮಾಯೆಯನ್ನು ನಿಷೇಧಮಾಡಿದಾಗ ಕೇವಲ ಪರಮ ಸುಖದ ಸಾಕ್ಷಾತ್ಕಾರರೂಪವಾದ ನೀನೇ ಶೇಷವಾಗಿ ಉಳಿಯುವಿ. ಆದರೆ ವಿಚಾರಮಾಡಿದಾಗ ನಿನ್ನ ಸ್ವರೂಪದಲ್ಲಿ ಮಾಯೆಯು ನಿರ್ವಚನವಾಗಲಾರದು. ಅರ್ಥಾತ್ ಮಾಯೆಯೂ ನೀನೇ ಆಗಿರುವೆ. ಆದ್ದರಿಂದ ಎಲ್ಲ ನಾಮ ಮತ್ತು ಎಲ್ಲ ರೂಪಗಳೂ ನಿನ್ನವೇ ಆಗಿವೆ. ಪ್ರಭುವೇ ! ನೀನು ನನ್ನ ಮೇಲೆ ಪ್ರಸನ್ನನಾಗು. ನನ್ನನ್ನು ಆತ್ಮ ಪ್ರಸಾದದಿಂದ ಪೂರ್ಣಗೊಳಿಸಿಬಿಡು. ॥ ೨೮ ॥

ಸ್ವಾಮಿ ! ವಾಣಿಯಿಂದ ಹೇಳುವುದೆಲ್ಲವೂ ಅಥವಾ ಮನಸ್ಸು ಬುದ್ಧಿ, ಇಂದ್ರಿಯಗಳಿಂದ ಗ್ರಹಿಸಲಾಗುವುದೆಲ್ಲವೂ ನಿನ್ನ ಸ್ವರೂಪವಲ್ಲ, ಏಕೆಂದರೆ, ಅದೆಲ್ಲವೂ ಗುಣರೂಪವಾಗಿದೆ, ನೀನು ಗುಣಗಳ ಉತ್ಪತ್ತಿ ಮತ್ತು ಪ್ರಳಯದ ಅಧಿಷ್ಠಾನನಾಗಿರುವೆ. ನಿನ್ನಲ್ಲಿ ಅದರ ಕೇವಲ ಪ್ರತೀತಿ ಮಾತ್ರವಿದೆ ॥ ೨೯ ॥ ಭಗವಂತನೇ ! ಈ ಇಡೀ ಜಗತ್ತು

ಯಸ್ಮಿನ್ ಯತೋ ಯೇನ ಚ ಯಸ್ಯ ಯಸ್ಮೈ
ಯದ್ ಯೋ ಯಥಾ ಕುರುತೇ ಕಾರ್ಯತೇ ಚ ।
ಪರಾವರೇಷಾಂ ಪರಮಂ ಪ್ರಾಕ್ ಪ್ರಸಿದ್ಧಂ
ತದ್ ಬ್ರಹ್ಮ ತದ್ಧೇತುರನನ್ಯದೇಕಮ್ ॥ ೩೦ ॥

ಯಚ್ಛಕ್ತಯೋ ವದತಾಂ ವಾದಿನಾಂ ವೈ
ವಿವಾದಸಂವಾದಭುವೋ ಭವಂತಿ ।
ಕುರ್ವಂತಿ ಚೈಷಾಂ ಮುಹುರಾತ್ಮಮೋಹಂ
ತಸ್ಮೈ ನಮೋಽನಂತಗುಣಾಯ ಭೂಮ್ನೇ ॥ ೩೧ ॥

ಅಸ್ತೀತಿ ನಾಸ್ತೀತಿ ಚ ವಸ್ತುನಿಷ್ಠಯೋ-
ರೇಕಸ್ಥಯೋರ್ಭಿನ್ನವಿರುದ್ಧಧರ್ಮಯೋಃ ।
ಅವೇಕ್ಷಿತಂ ಕಿಂಚನ ಯೋಗಸಾಂಖ್ಯಯೋಃ
ಸಮಂ ಪರಂ ಹ್ಯನುಕೂಲಂ ಬೃಹತ್ತತ್ ॥ ೩೨ ॥

ಯೋಽನುಗ್ರಹಾರ್ಥಂ ಭಜತಾಂ ಪಾದಮೂಲ-
ಮನಾಮರೂಪೋ ಭಗವಾನನಂತಃ ।
ನಾಮಾನಿ ರೂಪಾಣಿ ಚ ಜನ್ಮ ಕರ್ಮಭಿ-
ರ್ಭೇಜೇ ಸ ಮಹ್ಯಂ ಪರಮಃ ಪ್ರಸೀದತು ॥ ೩೩ ॥

ಯಃ ಪ್ರಾಕೃತೈರ್ಜ್ಞಾನಪಥೈರ್ಜನಾನಾಂ
ಯಥಾಶಯಂ ದೇಹಗತೋ ವಿಭಾತಿ ।
ಯಥಾನಿಲಃ ಪಾರ್ಥಿವಮಾಶ್ರಿತೋ ಗುಣಂ
ಸ ಈಶ್ವರೋ ಮೇ ಕುರುತಾನ್ಮನೋರಥಮ್ ॥ ೩೪ ॥

ನಿನ್ನಲ್ಲಿ ನೆಲೆಸಿದೆ. ನಿನ್ನಿಂದಲೇ ಉಂಟಾಗಿದೆ. ನೀನು ಬೇರೆ ಯಾವುದರ ಆಸರೆಯಿಲ್ಲದೆ ತನ್ನಿಂದಲೇ ಇದನ್ನು ನಿರ್ಮಿಸಿರುವೆ. ಇದು ನಿನ್ನದೇ ಆಗಿದ್ದು, ನಿನಗಾಗಿಯೇ ಇದೆ. ಈ ರೂಪದಲ್ಲಿ ಉಂಟಾಗುವವನೂ ನೀನೇ ಆಗಿರುವೆ ಮತ್ತು ಉಂಟು ಮಾಡುವವನೂ ನೀನೇ ಆಗಿರುವೆ. ಉಂಟಾಗುವ-ಉಂಟು ಮಾಡುವ ವಿಧಿಯೂ ನೀನೇ ಆಗಿರುವೆ. ಎಲ್ಲರಿಂದ ಕಾರ್ಯ ಮಾಡಿಸುವವನೂ ನೀನೇ. ಕಾರ್ಯ-ಕಾರಣ ಭೇದ ಇಲ್ಲದಿರುವಾಗಲೂ ನೀನೇ ಸ್ವಯಂ ಸಿದ್ಧ ಸ್ವರೂಪದಿಂದ ನೆಲೆಗೊಂಡಿದ್ದೆ. ಇದರಿಂದ ಎಲ್ಲದರ ಕಾರಣನು ನೀನೇ ಆಗಿರುವೆ. ನೀನು ಜೀವ-ಜಗತ್ತೆಂಬ ಭೇದದಿಂದ ಮತ್ತು ಸ್ವಗತಭೇದದಿಂದ ಸರ್ವಥಾ ರಹಿತನಾದ ಅದ್ವಿತೀಯನಾಗಿರುವೆ. ನೀನು ಸ್ವಯಂ ಬ್ರಹ್ಮನೇ ಆಗಿರುವೆ. ನನ್ನ ಮೇಲೆ ಪ್ರಸನ್ನನಾಗು. ॥ ೩೦ ॥ ಪ್ರಭೋ! ವಾದೀ-ಪ್ರತಿವಾದಿಗಳ ವಿವಾದ ಮತ್ತು ಸಂವಾದ(ಐಕ್ಯಮತ್ಯ)ದ ವಿಷಯವೂ ನಿನ್ನ ಶಕ್ತಿಯೇ ಆಗಿದೆ ಹಾಗೂ ಅವರನ್ನೂ ಪದೇ-ಪದೇ ಮೋಹದಲ್ಲಿ ಅದು ಕೆಡವುತ್ತ ಇರುತ್ತದೆ. ನೀನು ಅಪ್ರಾಕೃತ ಅನಂತ ಕಲ್ಯಾಣಗುಣಗಳಿಂದ ಕೂಡಿದ್ದು ಸ್ವತಃ ಅನಂತನೇ ಆಗಿರುವೆ. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೩೧ ॥ ಭಗವಂತಾ! ನಮ್ಮ ಪ್ರಭುವು ಹಸ್ತ- ಪಾದಾದಿಗಳಿಂದ ಕೂಡಿದ ಸಾಕಾರ-ವಿಗ್ರಹನಾಗಿದ್ದಾನೆ ಎಂದು ಉಪಾಸಕರು ಹೇಳುತ್ತಾರೆ. ಭಗವಂತನು ಹಸ್ತ-ಪಾದಾದಿ ವಿಗ್ರಹದಿಂದ ರಹಿತ-ನಿರಾಕಾರನಾಗಿದ್ದಾನೆಂದು ಸಾಂಖ್ಯರು ಹೇಳುತ್ತಾರೆ. ಹೀಗೆ ಅವರು ಒಂದೇ ವಸ್ತುವನ್ನು ಎರಡು ಪರಸ್ಪರ ವಿರೋಧೀ ಧರ್ಮ ಗಳನ್ನು ವರ್ಣಿಸುತ್ತಿದ್ದರೂ ಅದರಲ್ಲಿ ವಿರೋಧವಿಲ್ಲ, ಏಕೆಂದರೆ, ಎರಡೂ ಒಂದೇ ಪರಮ ವಸ್ತುವಿನಲ್ಲಿ ಸ್ಥಿತವಾಗಿವೆ. ಆಧಾರವಿಲ್ಲದೆ ಕೈ-ಕಾಲು ಮುಂತಾದವುಗಳು ಇರುವುದು ಸಂಭವವೇ ಇಲ್ಲ ಹಾಗೂ ನಿಷೇಧಕ್ಕೂ ಯಾವುದಾದರೂ ಅವಧಿಯು ಇರಲೇ ಬೇಕಲ್ಲವೇ. ಆ ಆಧಾರ ಮತ್ತು ನಿಷೇಧದ ಅವಧಿಯೂ ನೀನೇ ಆಗಿರುವೆ. ಅದಕ್ಕಾಗಿ ಸಾಕಾರ-ನಿರಾಕಾರ ಎರಡರಿಂದಲೂ ಅವಿರುದ್ಧವಾದ ಸಮಬ್ರಹ್ಮನು ನೀನೇ ಆಗಿರುವೆ. ॥ ೩೨ ॥ ಪ್ರಭೋ! ನೀನು ಅನಂತನಾಗಿರುವೆ. ನಿನಗೆ ಪ್ರಾಕೃತವಾದ ನಾಮವಾಗಲೀ, ರೂಪವಾಗಲೀ ಇಲ್ಲ, ಆದರೂ ನಿನ್ನ ಚರಣಕಮಲಗಳನ್ನು ಭಜಿಸುವವರ ಮೇಲೆ ಅನುಗ್ರಹವನ್ನು ತೋರಲಿಕ್ಕಾಗಿ ನೀನೇ ಅನೇಕ ರೂಪಗಳಲ್ಲಿ ಪ್ರಕಟನಾಗಿ, ಅನೇಕ ಲೀಲೆಗಳನ್ನು ನಡೆಸುವೆ ಹಾಗೂ ಆಯಾಯಾ ರೂಪಗಳಿಗೆ, ಲೀಲೆಗಳಿಗೆ ಅನುಗುಣವಾಗಿ ಅನೇಕ ನಾಮಗಳನ್ನು ಧರಿಸಿಕೊಳ್ಳುವೆ. ಓ ಪರಮಾತ್ಮಾ! ನನಗೆ ಕೃಪಾಪ್ರಸಾದವನ್ನಿತ್ತು ಪ್ರಸನ್ನನಾಗು. ॥ ೩೩ ॥ ಜನರ ಉಪಾಸನೆಗಳು ಸಾಧಾರಣ ಮಟ್ಟದ್ದಾಗಿರುತ್ತವೆ. ಆದ್ದರಿಂದ ನೀನು ಎಲ್ಲರ ಹೃದಯದಲ್ಲಿ ನೆಲೆಸಿ ಅವರ ಭಾವನೆಗೆ ಅನುಸಾರವಾಗಿ ಬೇರೆ-ಬೇರೆ ದೇವತೆಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತಿರುವೆ. ಹಾಗೆಯೇ ಗಂಧವನ್ನು ಆಶ್ರಯಿಸಿದ ಗಾಳಿಯು ಸುಗಂಧಿತನಾಗಿ ಕಂಡುಬರುತ್ತದೆ. ಆದರೆ ಗಾಳಿಯು ನಿಜವಾಗಿ ಸುಗಂಧಿತವಾಗಿರುವುದಿಲ್ಲ. ಹೀಗೆಯೇ ಎಲ್ಲರ ಭಾವನೆಗಳನ್ನು ಅನುಸರಿಸುವ ಪ್ರಭುವು ನನ್ನ ಅಭಿಲಾಷೆಯನ್ನು ಪೂರ್ಣಗೊಳಿಸಲಿ. ॥ ೩೪ ॥

*ಶ್ರೀಶುಕ ಉವಾಚ*

ಇತಿ ಸ್ತುತಃ ಸಂಸ್ತುವತಃ ಸ ತಸ್ಮಿನ್ನಘಮರ್ಷಣೇ ।
ಆವಿರಾಸೀತ್ಕುರುಶ್ರೇಷ್ಠ ಭಗವಾನ್ ಭಕ್ತವತ್ಸಲಃ ॥ ೩೫ ॥

ಕೃತಪಾದಃ ಸುಪರ್ಣಾಂಸೇ ಪ್ರಲಂಬಾಷ್ಟಮಹಾಭುಜಃ ।
ಚಕ್ರಶಂಖಾಸಿಚರ್ಮೇಷುಧನುಃಪಾಶಗದಾಧರಃ ॥ ೩೬ ॥

ಪೀತವಾಸಾ ಘನಶ್ಯಾಮಃ ಪ್ರಸನ್ನ ವದನೇಕ್ಷಣಃ ।
ವನಮಾಲಾನಿವೀತಾಂಗೋ ಲಸಚ್ಛ್ರೀವತ್ಸಕೌಸ್ತುಭಃ ॥ ೩೭ ॥

ಮಹಾಕಿರೀಟಕಟಕಃ ಸ್ಫುರನ್ಮಕರಕುಂಡಲಃ ।
ಕಾಂಚ್ಯಂಗುಲೀಯವಲಯನೂಪುರಾಂಗದಭೂಷಿತಃ ॥ ೩೮ ॥

ತ್ರೈಲೋಕ್ಯಮೋಹನಂ ರೂಪಂ ಬಿಭ್ರತ್ ತ್ರಿಭುವನೇಶ್ವರಃ ।
ವೃತೋ ನಾರದನಂದಾದ್ಯೈಃ ಪಾರ್ಷದೈಃ ಸುರಯೂಥಪೈಃ ॥ ೩೯ ॥

ಸ್ತೂಯಮಾನೋಽನುಗಾಯದ್ಭಿಃ ಸಿದ್ಧಗಂಧರ್ವಚಾರಣೈಃ ।
ರೂಪಂ ತನ್ಮಹದಾಶ್ಚರ್ಯಂ ವಿಚಕ್ಷ್ಯಾಗತಸಾಧ್ವಸಃ ॥ ೪೦ ॥

ನನಾಮ ದಂಡವದ್ಭೂಮೌ ಪ್ರಹೃಷ್ಟಾತ್ಮಾ ಪ್ರಜಾಪತಿಃ ।
ನ ಕಿಂಚನೋದೀರಯಿತುಮಶಕತ್ತೀವ್ರಯಾ ಮುದಾ ।
ಆಪೂರಿತಮನೋದ್ವಾರೈರ್ಹ್ರದಿನ್ಯ ಇವ ನಿರ್ಝರೈಃ ॥ ೪೧ ॥

ತಂ ತಥಾವನತಂ ಭಕ್ತಂ ಪ್ರಜಾಕಾಮಂ ಪ್ರಜಾಪತಿಮ್ ।
ಚಿತ್ತಜ್ಞಃ ಸರ್ವಭೂತಾನಾಮಿದಮಾಹ ಜನಾರ್ದನಃ ॥ ೪೨ ॥

*ಶ್ರೀಭಗವಾನುವಾಚ*

ಪ್ರಾಚೇತಸ ಮಹಾಭಾಗ ಸಂಸಿದ್ಧಸ್ತಪಸಾ ಭವಾನ್ ।
ಯಚ್ಛ್ರದ್ಧಯಾ ಮತ್ಪರಯಾ ಮಯಿ ಭಾವಂ ಪರಂ ಗತಃ ॥ ೪೩ ॥

ಪ್ರೀತೋಽಹಂ ತೇ ಪ್ರಜಾನಾಥ
ಯತ್ತೇಽಸ್ಯೋದ್ಬೃಂಹಣಂ ತಪಃ ।
ಮಮೈಷ ಕಾಮೋ ಭೂತಾನಾಂ
ಯದ್ ಭೂಯಾಸುರ್ವಿಭೂತಯಃ ॥ ೪೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಮಹಾರಾಜನೇ! ವಿಂಧ್ಯಪರ್ವತದ ಅಘಮರ್ಷಣ ತೀರ್ಥದಲ್ಲಿ ದಕ್ಷಪ್ರಜಾಪತಿಯು ಹೀಗೆ ಸ್ತುತಿಸಿದಾಗ ಭಕ್ತವತ್ಸಲ ಭಗವಂತನು ಅವನ ಮುಂದೆ ಪ್ರಕಟಗೊಂಡನು. ॥ ೩೫ ॥ ಆಗ ಭಗವಂತನು ಗರುಡನ ಹೆಗಲುಗಳ ಮೇಲೆ ಚರಣಗಳನ್ನಿಟ್ಟಿದ್ದನು. ಹೃಷ್ಟ-ಪುಷ್ಟವಾದ ವಿಶಾಲವಾದ ಎಂಟು ಭುಜಗಳಿಂದ ಶೋಭಿಸುತ್ತಾ ಅವುಗಳಲ್ಲಿ ಚಕ್ರ, ಶಂಖ, ಖಡ್ಗ, ಗುರಾಣಿ, ಬಾಣ, ಧನುಷ್ಯ, ಪಾಶ ಮತ್ತು ಗದೆ ಮುಂತಾದ ದಿವ್ಯಾಯುಧಗಳನ್ನು ಧರಿಸಿದ್ದನು. ॥ ೩೬ ॥ ಮಳೆಗಾಲದ ಮೇಘದಂತೆ ಶ್ಯಾಮಲ ಶರೀರದ ಮೇಲೆ ಪೀತಾಂಬರವು ಪ್ರಕಾಶಿಸುತ್ತಿದೆ. ಮುಖಮಂಡಲವು ಪ್ರಫುಲ್ಲಿತವಾಗಿದ್ದು, ಕಣ್ಣುಗಳಿಂದ ಪ್ರಸಾದದ ಮಳೆಯೇ ಗರೆಯುತ್ತಿತ್ತು. ಮೊಣಕಾಲಿನವರೆಗೆ ವನಮಾಲೆಯು ಜೋತು ಬೀಳುತ್ತಿತ್ತು. ವಕ್ಷಸ್ಥಳದಲ್ಲಿ ಶ್ರೀದೇವಿ ಮತ್ತು ಶ್ರೀವತ್ಸ ಲಾಂಛನ ಹಾಗೂ ಕೊರಳಲ್ಲಿ ಕೌಸ್ತುಭಮಣಿಯು ಹೊಳೆಯುತ್ತಿತ್ತು. ॥ ೩೭ ॥ ಬಹುಮೂಲ್ಯವಾದ ಕಿರೀಟ, ಕಂಕಣ, ಮಕರಾಕೃತಿಯ ಕುಂಡಲಗಳು, ಒಡ್ಯಾಣ, ಉಂಗುರ, ತೋಳ್ಬಳೆಗಳು, ಕಾಲಂದುಗೆ, ಭುಜಕೀರ್ತಿಗಳು ತಮ್ಮ-ತಮ್ಮ ಸ್ಥಾನಗಳಲ್ಲಿ ಶೋಭಿಸುತ್ತಿದ್ದುವು. ॥ ೩೮ ॥ ಮೂರು ಲೋಕದೊಡೆಯ ಭಗವಂತನು ತ್ರಿಲೋಕಗಳನ್ನು ಮರುಳು-ಮಾಡುವಂತಹ ರೂಪವನ್ನು ಧರಿಸಿದ್ದನು. ನಾರದ, ನಂದ, ಸುನಂದ ಮುಂತಾದ ಪಾರ್ಷದರು ಅವನ ಸುತ್ತಲೂ ನಿಂತಿದ್ದರು. ಇಂದ್ರಾದಿ ದೇವೇಶ್ವರರು ಸ್ತುತಿ ಮಾಡುತ್ತಿದ್ದರು. ಸಿದ್ಧರು, ಗಂಧರ್ವರು, ಚಾರಣರು ಭಗವಂತನ ಗುಣಗಳನ್ನು ಕೊಂಡಾಡುತ್ತಿದ್ದರು. ಇಂತಹ ಅತ್ಯಂತ ಆಶ್ಚರ್ಯಮಯವೂ, ಅಲೌಕಿಕವೂ ಆದ ರೂಪವನ್ನು ನೋಡಿ ದಕ್ಷಪ್ರಜಾಪತಿಯು ಸ್ವಲ್ಪ ಭಯಚಕಿತನಾದನು. ॥ ೩೯-೪೦ ॥ ದಕ್ಷಪ್ರಜಾಪತಿಯು ಆನಂದ ತುಂದಿಲನಾಗಿ ಭಗವಂತನ ಚರಣಗಳಲ್ಲಿ ಸಾಷ್ಟಾಂಗ ನಮಸ್ಕಾರ ಮಾಡಿದನು. ಝರಿಗಳ ನೀರಿನಿಂದ ನದಿಗಳು ತುಂಬಿ ಹೋಗುವಂತೆ, ಉಕ್ಕೇರಿಬಂದ ಆನಂದೋದ್ರೇಕದಿಂದ ಅವನ ಪ್ರತಿಯೊಂದು ಇಂದ್ರಿಯವೂ ತುಂಬಿಹೋಯಿತು. ಆನಂದ ಪರವಶತೆಯಿಂದ ಅವನು ಏನನ್ನು ಮಾತಾಡದಾದನು. ॥ ೪೧ ॥ ಪರೀಕ್ಷಿತನೇ! ದಕ್ಷಪ್ರಜಾಪತಿಯು ಅತ್ಯಂತ ನಮ್ರತೆಯಿಂದ ಬಾಗಿ ಭಗವಂತನ ಇದಿರು ನಿಂತಿದ್ದನು. ಭಗವಂತನು ಎಲ್ಲರ ಹೃದಯದ ಮಾತು ಬಲ್ಲವನಾಗಿದ್ದಾನೆ. ಅವನು ದಕ್ಷಪ್ರಜಾಪತಿಯ ಭಕ್ತಿ ಮತ್ತು ಪ್ರಜಾವೃದ್ಧಿಯ ಕಾಮನೆಯನ್ನು ಅರಿತುಕೊಂಡು ಅವನಲ್ಲಿ ಇಂತೆಂದನು. ॥ ೪೨ ॥

**ಶ್ರೀಭಗವಂತನು ಹೇಳಿದನು** – ಪರಮ ಭಾಗ್ಯಶಾಲಿಯಾದ ದಕ್ಷಪ್ರಜಾಪತಿಯೇ! ಈಗ ನಿನ್ನ ತಪಸ್ಸು ಸಿದ್ಧವಾಯಿತು. ಏಕೆಂದರೆ, ನನ್ನಲ್ಲಿ ಇಟ್ಟ ಶ್ರದ್ಧೆಯಿಂದ ನಿನ್ನ ಹೃದಯದಲ್ಲಿ ನನ್ನ ಕುರಿತು ಪರಮ ಪ್ರೇಮದ ಉದಯವಾಗಿದೆ. ॥ ೪೩ ॥ ಪ್ರಜಾಪತಿಯೇ! ನೀನು ಈ ವಿಶ್ವದ ವೃದ್ಧಿಗಾಗಿ ತಪಸ್ಸನ್ನು ಆಚರಿಸಿದೆ. ಅದಕ್ಕಾಗಿ ನಾನು ನಿನ್ನ ಮೇಲೆ ಪ್ರಸನ್ನನಾಗಿರುವೆನು. ಏಕೆಂದರೆ, ಜಗತ್ತಿನ ಸಮಸ್ತ ಪ್ರಾಣಿಗಳ ಅಭಿವೃದ್ಧಿ ಹಾಗೂ ಸಮೃದ್ಧಿ ಉಂಟಾಗಲೆಂದೇ ನನ್ನ ಬಯಕೆಯೂ ಆಗಿದೆ. ॥ ೪೪ ॥

ಬ್ರಹ್ಮಾ ಭವೋಭವಂತಶ್ಚ ಮನವೋ ವಿಬುಧೇಶ್ವರಾಃ ।
ವಿಭೂತಯೋ ಮಮ ಹ್ಯೇತಾ ಭೂತಾನಾಂ ಭೂತಿಹೇತವಃ
॥ ೪೫ ॥

ತಪೋ ಮೇ ಹೃದಯಂ ಬ್ರಹ್ಮಂಸ್ತನುರ್ವಿದ್ಯಾ ಕ್ರಿಯಾಽಽಕೃತಿಃ ।
ಅಂಗಾನಿ ಕ್ರತವೋ ಜಾತಾ ಧರ್ಮ ಆತ್ಮಾಸವಃ ಸುರಾಃ
॥ ೪೬ ॥

ಅಹಮೇವಾಸಮೇವಾಗ್ರೇ ನಾನ್ಯತ್ಕಿಂಚಾಂತರಂ ಬಹಿಃ ।
ಸಂಜ್ಞಾನಮಾತ್ರಮವ್ಯಕ್ತಂ ಪ್ರಸುಪ್ತಮಿವ ವಿಶ್ವತಃ
॥ ೪೭ ॥

ಮಯ್ಯನಂತಗುಣೇಽನಂತೇ ಗುಣತೋ ಗುಣವಿಗ್ರಹಃ ।
ಯದಾಽಽಸೀತ್ತತ ಏವಾದ್ಯಃ ಸ್ವಯಂಭೂಃ ಸಮಭೂದಜಃ
॥ ೪೮ ॥

ಸ ವೈ ಯದಾ ಮಹಾದೇವೋ ಮಮ ವೀರ್ಯೋಪಬೃಂಹಿತಃ ।
ಮೇನೇ ಖಿಲಮಿವಾತ್ಮಾನಮುದ್ಯತಃ ಸರ್ಗಕರ್ಮಣಿ
॥ ೪೯ ॥

ಅಥ ಮೇಽಭಿಹಿತೋ ದೇವಸ್ತಪೋಽತಪ್ಯತ ದಾರುಣಮ್ ।
ನವ ವಿಶ್ವಸೃಜೋ ಯುಷ್ಮಾನ್ ಯೇನಾದಾವಸೃಜದ್ವಿಭುಃ
॥ ೫೦ ॥

ಏಷಾ ಪಂಚಜನಸ್ಯಾಂಗ ದುಹಿತಾ ವೈ ಪ್ರಜಾಪತೇಃ ।
ಅಸಿಕ್ನೀ ನಾಮ ಪತ್ನೀತ್ವೇ ಪ್ರಜೇಶ ಪ್ರತಿಗೃಹ್ಯತಾಮ್
॥ ೫೧ ॥

ಮಿಥುನವ್ಯವಾಯಧರ್ಮಸ್ತ್ವಂ ಪ್ರಜಾಸರ್ಗಮಿಮಂ ಪುನಃ ।
ಮಿಥುನವ್ಯವಾಯಧರ್ಮಿಣ್ಯಾಂ ಭೂರಿಶೋ ಭಾವಯಿಷ್ಯಸಿ
॥ ೫೨ ॥

ತ್ವತ್ತೋಽಧಸ್ತಾತ್ಪ್ರಜಾಃ ಸರ್ವಾ ಮಿಥುನೀಭೂಯ ಮಾಯಯಾ ।
ಮದೀಯಯಾ ಭವಿಷ್ಯಂತಿ ಹರಿಷ್ಯಂತಿ ಚ ಮೇ ಬಲಿಮ್
॥ ೫೩ ॥

*ಶ್ರೀಶುಕ ಉವಾಚ*

ಇತ್ಯುಕ್ತ್ವಾ ಮಿಷತಸ್ತಸ್ಯ ಭಗವಾನ್ವಿಶ್ವಭಾವನಃ ।
ಸ್ವಪ್ನೋಪಲಬ್ಧಾರ್ಥ ಇವ ತತ್ರೈವಾಂತರ್ದಧೇ ಹರಿಃ
॥ ೫೪ ॥

ಬ್ರಹ್ಮದೇವರು, ಶಂಕರನು, ನಿಮ್ಮಂತಹ ಪ್ರಜಾಪತಿಗಳು, ಸ್ವಾಯಂಭುವ ಮುಂತಾದ ಮನುಗಳು, ಇಂದ್ರಾದಿ ದೇವೇಶ್ವರರು – ಇವರೆಲ್ಲರೂ ನನ್ನ ವಿಭೂತಿಗಳೇ ಆಗಿವೆ ಮತ್ತು ಎಲ್ಲರೂ ಪ್ರಾಣಿಗಳ ಅಭಿವೃದ್ಧಿ ಮಾಡುವವರಾಗಿದ್ದಾರೆ. ॥ ೪೫ ॥ ಬ್ರಾಹ್ಮಣೋತ್ತಮನೇ! ತಪಸ್ಸು ನನ್ನ ಹೃದಯವಾಗಿದೆ. ವಿದ್ಯೆಯು ಶರೀರವಾಗಿದೆ. ಕರ್ಮವು ಆಕೃತಿಯಾಗಿದೆ. ಯಜ್ಞವೇ ಅಂಗಾಂಗಗಳು. ಧರ್ಮ ಮನಸ್ಸು ಮತ್ತು ದೇವತೆಗಳು ಪ್ರಾಣವಾಗಿದ್ದಾರೆ. ॥ ೪೬ ॥ ಈ ಸೃಷ್ಟಿಯು ಇಲ್ಲದಿದ್ದಾಗ ನಿಷ್ಕ್ರಿಯ ರೂಪದಿಂದ ಕೇವಲ ನಾನೇ ಇದ್ದೆ. ಒಳಗೆ-ಹೊರಗೆ ಎಲ್ಲಿಯೂ ಏನೂ ಇರಲಿಲ್ಲ. ದ್ರಷ್ಟಾ ಇರಲೀ, ದೃಶ್ಯವಾಗಲೀ ಇರಲಿಲ್ಲ. ಕೇವಲ ಜ್ಞಾನಸ್ವರೂಪನು ಮತ್ತು ಅವ್ಯಕ್ತನು ನಾನೊಬ್ಬನೇ ಇದ್ದೆ. ಎಲ್ಲ ಕಡೆಗಳಲ್ಲಿಯೂ ಸುಷುಪ್ತಿಯೇ-ಸುಷುಪ್ತಿ ಆವರಿಸಿತ್ತು ಎಂದೇ ತಿಳಿದುಕೋ. ॥ ೪೭ ॥ ಪ್ರಿಯ ದಕ್ಷನೇ! ನಾನು ಅನಂತಗುಣಗಳ ಆಧಾರನು ಹಾಗೂ ಸ್ವಯಂ ಅನಂತನಾಗಿದ್ದೇನೆ. ಗುಣಮಯಿ ಮಾಯೆಯ ಕ್ಷೋಭದಿಂದ ಈ ಬ್ರಹ್ಮಾಂಡ-ಶರೀರವು ಪ್ರಕಟವಾದಾಗ ಇದರಲ್ಲಿ ಅಯೋನಿಜ ಆದಿಪುರುಷ ಬ್ರಹ್ಮನು ಉತ್ಪನ್ನನಾದನು. ॥ ೪೮ ॥ ನಾನು ಅವನಲ್ಲಿ ಶಕ್ತಿ ಮತ್ತು ಚೇತನೆಯ ಸಂಚಾರ ಮಾಡಿಸಿದಾಗ ದೇವಶಿರೋಮಣಿ ಬ್ರಹ್ಮದೇವರು ಸೃಷ್ಟಿ ಮಾಡಲು ತೊಡಗಿದನು. ಆದರೆ ಅವನು ತನ್ನನ್ನು ಸೃಷ್ಟಿಕಾರ್ಯದಲ್ಲಿ ಅಸಮರ್ಥನೆಂದೇ ತಿಳಿದನು. ॥ ೪೯ ॥ ಆಗ ನಾನು ಅವನಿಗೆ ತಪಸ್ಸುಮಾಡುವಂತೆ ಆಜ್ಞಾಪಿಸಿದೆ. ಅದರಂತೆ ಅವನು ಘೋರ ತಪಸ್ಸು ಮಾಡಿದನು ಮತ್ತು ಆ ತಪಸ್ಸಿನ ಪ್ರಭಾವದಿಂದ ಮೊಟ್ಟ ಮೊದಲಿಗೆ ಒಂಭತ್ತು ಮಂದಿ ಪ್ರಜಾಪತಿಗಳಾದ ನಿಮ್ಮನ್ನು ಸೃಷ್ಟಿಸಿದನು. ॥ ೫೦ ॥

ಪ್ರಿಯ ದಕ್ಷನೇ! ನೋಡು! ಇವಳು ಪಂಚಜನ ಪ್ರಜಾಪತಿಯ ಕನ್ಯೆಯಾದ ಅಸಿಕ್ನಿಯು. ಇವಳನ್ನು ನೀನು ಧರ್ಮಪತ್ನಿಯಾಗಿ ಸ್ವೀಕರಿಸು. ॥ ೫೧ ॥ ಇನ್ನು ನೀನು ಗೃಹಸ್ಥರಿಗೆ ಯೋಗ್ಯವಾದ ಸ್ತ್ರೀಸಹವಾಸ ಧರ್ಮವನ್ನು ಸ್ವೀಕರಿಸು. ಈ ಅಸಿಕ್ನಿಯೂ ಅದೇ ಧರ್ಮವನ್ನು ಸ್ವೀಕರಿಸುವಳು. ಆಗ ನೀನು ಇವಳಿಂದ ಅನೇಕ ಪ್ರಜೆಗಳನ್ನು ಉತ್ಪನ್ನ ಮಾಡಬಲ್ಲೆ. ॥ ೫೨ ॥ ಪ್ರಜಾಪತಿಯೇ! ಇಂದಿನ ತನಕವಾದರೋ ಮಾನಸೀ ಸೃಷ್ಟಿಯಾಗುತ್ತಿತ್ತು. ಆದರೆ ಇನ್ನು ನಿನ್ನ ಬಳಿಕ ಎಲ್ಲ ಪ್ರಜೆಯು ನನ್ನ ಮಾಯೆಯಿಂದ ಸ್ತ್ರೀ-ಪುರುಷ ಸಂಯೋಗದಿಂದಲೇ ಉತ್ಪನ್ನರಾಗಿ, ನನ್ನ ಸೇವೆಯಲ್ಲಿ ತತ್ಪರರಾಗಿರುವರು. ॥ ೫೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ರಾಜನೇ! ವಿಶ್ವಕ್ಕೆಲ್ಲಾ ಜೀವನಪ್ರದನಾದ ಭಗವಾನ್ ಶ್ರೀಹರಿಯು ಹೀಗೆ ಹೇಳಿ ದಕ್ಷನ ಮುಂದೆಯೇ – ಸ್ವಪ್ನದಲ್ಲಿ ನೋಡಿದ ವಸ್ತು ಸ್ವಪ್ನವು ಮುರಿದಾಗ ಕಣ್ಮರೆಯಾಗುವಂತೆ ಅಂತರ್ಧಾನ ಹೊಂದಿದನು. ॥ ೫೪ ॥

*ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ಶ್ರೀನಾರದರ ಉಪದೇಶದಂತೆ ದಕ್ಷಪುತ್ರರ ವಿರಕ್ತಿ ಹಾಗೂ ದಕ್ಷನಿಂದ ನಾರದರಿಗೆ ಶಾಪ

*ಶ್ರೀಶುಕ ಉವಾಚ*

ತಸ್ಯಾಂ ಸ ಪಾಂಚಜನ್ಯಾಂ ವೈ ವಿಷ್ಣುಮಾಯೋಪಬೃಂಹಿತಃ ।
ಹರ್ಯಶ್ವಸಂಜ್ಞಾನಯುತಂ ಪುತ್ರಾನಜನಯದ್ ವಿಭುಃ ॥ ೧ ॥

ಅಪೃಥಗ್ಧರ್ಮಶೀಲಾಸ್ತೇ ಸರ್ವೇ ದಾಕ್ಷಾಯಣಾ ನೃಪ ।
ಪಿತ್ರಾ ಪ್ರೋಕ್ತಾಃ ಪ್ರಜಾಸರ್ಗೇ ಪ್ರತೀಚೀಂ ಪ್ರಯಯುರ್ದಿಶಮ್ ॥ ೨ ॥

ತತ್ರ ನಾರಾಯಣಸರಸ್ತೀರ್ಥಂ ಸಿಂಧು ಸಮುದ್ರಯೋಃ ।
ಸಂಗಮೋ ಯತ್ರ ಸುಮಹನ್ಮುನಿಸಿದ್ಧ ನಿಷೇವಿತಮ್ ॥ ೩ ॥

ತದುಪಸ್ಪರ್ಶನಾದೇವ ವಿನಿರ್ಧೂತಮಲಾಶಯಾಃ ।
ಧರ್ಮೇ ಪಾರಮಹಂಸ್ಯೇ ಚ ಪ್ರೋತ್ಪನ್ನಮತಯೋಽಪ್ಯುತ ॥ ೪ ॥

ತೇಪಿರೇ ತಪ ಏವೋಗ್ರಂ ಪಿತ್ರಾದೇಶೇನ ಯಂತ್ರಿತಾಃ ।
ಪ್ರಜಾವಿವೃದ್ಧಯೇ ಯತ್ತಾನ್ ದೇವರ್ಷಿಸ್ತಾನ್ ದದರ್ಶ ಹ ॥ ೫ ॥

ಉವಾಚ ಚಾಥ ಹರ್ಯಶ್ವಾಃ ಕಥಂ ಸ್ರಕ್ಷ್ಯಥ ವೈ ಪ್ರಜಾಃ ।
ಅದೃಷ್ಟ್ವಾಂತಂ ಭುವೋ ಯೂಯಂ ಬಾಲಿಶಾ ಬತ ಪಾಲಕಾಃ ॥ ೬ ॥

ತಥೈಕಪುರುಷಂ ರಾಷ್ಟ್ರಂ ಬಿಲಂ ಚಾದೃಷ್ಟ ನಿರ್ಗಮಮ್ ।
ಬಹುರೂಪಾಂ ಸ್ತ್ರಿಯಂ ಚಾಪಿ ಪುಮಾಂಸಂ ಪುಂಶ್ಚಲೀಪತಿಮ್ ॥ ೭ ॥

ನದೀಮುಭಯತೋವಾಹಾಂ ಪಂಚಪಂಚಾದ್ಭುತಂ ಗೃಹಮ್ ।
ಕ್ವಚಿದ್ಧಂಸಂ ಚಿತ್ರಕಥಂ ಕ್ಷೌರಪವ್ಯಂ ಸ್ವಯಂ ಭ್ರಮಿಮ್ ॥ ೮ ॥

ಕಥಂ ಸ್ವಪಿತುರಾದೇಶಮವಿದ್ವಾಂಸೋ ವಿಪಶ್ಚಿತಃ ।
ಅನುರೂಪಮವಿಜ್ಞಾಯ ಅಹೋ ಸರ್ಗಂ ಕರಿಷ್ಯಥ ॥ ೯ ॥

*ಶ್ರೀಶುಕ ಉವಾಚ*

ತನ್ನಿಶಮ್ಯಾಥ ಹರ್ಯಶ್ವಾ ಔತ್ಪತ್ತಿಕಮನೀಷಯಾ ।
ವಾಚಃಕೂಟಂ ತು ದೇವರ್ಷೇಃ ಸ್ವಯಂ ವಿಮಮೃಶುರ್ಧಿಯಾ ॥ ೧೦ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ಭಗವಂತನ ಅದ್ಭುತ ಶಕ್ತಿಸಂಚಾರದಿಂದ ದಕ್ಷಪ್ರಜಾಪತಿಯು ಪರಮ ಸಮರ್ಥನಾದನು. ಅವನು ಪಂಚಜನಿಯ ಪುತ್ರಿಯಾದ ಅಸಿಕ್ನೀದೇವಿಯಲ್ಲಿ ಹರ್ಯಶ್ವರೆಂಬ ಹತ್ತುಸಾವಿರ ಪುತ್ರರನ್ನು ಪಡೆದನು. ॥ ೧ ॥ ರಾಜನೇ! ದಕ್ಷನಂದನರೆಲ್ಲರೂ ಒಂದೇ ಸ್ವಭಾವ, ಧರ್ಮ, ಆಚರಣೆಗಳುಳ್ಳವರಾಗಿದ್ದರು. ದಕ್ಷನು ಅವರಿಗೆ 'ಸಂತಾನವನ್ನು ಉಂಟುಮಾಡಿರಿ' ಎಂಬ ಅಪ್ಪಣೆಯನ್ನು ಕೊಟ್ಟಾಗ ಅವರೆಲ್ಲರೂ ತಪಸ್ಸಿಗಾಗಿ ಪಶ್ಚಿಮದಿಕ್ಕಿನತ್ತ ನಡೆದರು. ॥ ೨ ॥ ಪಶ್ಚಿಮದಿಕ್ಕಿನಲ್ಲಿ ಸಿಂಧುನದಿ ಮತ್ತು ಸಮುದ್ರಗಳ ಸಂಗಮ ಸ್ಥಾನದಲ್ಲಿ ನಾರಾಯಣಸರೋವರವೆಂಬ ದೊಡ್ಡ ತೀರ್ಥವಿದೆ. ದೊಡ್ಡ-ದೊಡ್ಡ ಮುನಿಗಳೂ, ಸಿದ್ಧರೂ ಅಲ್ಲಿ ವಾಸಿಸುತ್ತಾರೆ. ॥ ೩ ॥ ಹರ್ಯಶ್ವರು ಆ ನಾರಾಯಣ ಸರೋವರದಲ್ಲಿ ಸ್ನಾನ ಮಾಡುತ್ತಲೇ ಅವರ ಅಂತಃಕರಣಗಳು ಶುದ್ಧವಾದುವು. ಅವರ ಬುದ್ಧಿಯು ಭಾಗವತ ಧರ್ಮದಲ್ಲಿ ತೊಡಗಿತು. ಆದರೂ ತಂದೆಯ ಆಜ್ಞೆಗೆ ಒಳಪಟ್ಟದ್ದರಿಂದ ಅವರು ಉಗ್ರವಾದ ತಪಸ್ಸು ಮಾಡುತ್ತಿದ್ದರು. ಹೀಗೆ ಭಾಗವತಧರ್ಮದಲ್ಲಿ ಅಭಿರುಚಿ ಹೊಂದಿದ್ದರೂ ಇವರು ಪ್ರಜಾವೃದ್ಧಿಗಾಗಿಯೇ ತತ್ಪರರಾಗಿರುವುದು ಕಂಡು ದೇವಋಷಿಗಳಾದ ಶ್ರೀನಾರದರು ಅವರ ಬಳಿಗೆ ಬಂದು ಹೀಗೆ ಉಪದೇಶಿಸಿದರು – ಎಲೈ ಹರ್ಯಶ್ವರೇ! ನೀವು ಪ್ರಜಾಪತಿಗಳಾಗಿದ್ದರೂ ನಿಜವಾಗಿ ಮೂರ್ಖರೇ ಆಗಿದ್ದೀರಲ್ಲ! ಭೂಮಿಯ ಕೊನೆಯನ್ನೇ ಕಾಣದಿರುವ ನೀವು ಸೃಷ್ಟಿಯನ್ನು ಹೇಗೆ ಮಾಡುವಿರಿ? ಹೇಳಿ. ತುಂಬಾ ಆಶ್ಚರ್ಯವಾಗಿದೆ. ॥ ೪-೬ ॥ ಒಬ್ಬನೇ ಇರುವ ದೇಶವೊಂದುಂಟು. ಅದರಿಂದ ಹೊರಕ್ಕೆ ಬರಲು ಮಾರ್ಗವೇ ಇಲ್ಲದಿರುವ ಬಿಲವೊಂದುಂಟು. ಅಲ್ಲಿ ಬಹುರೂಪಗಳುಳ್ಳ ಒಬ್ಬ ಸ್ತ್ರೀಯೂ ಇದ್ದಾಳೆ. ಆ ವ್ಯಭಿಚಾರಿಣಿಯಾದ ಹೆಂಗಸಿಗೆ ಪತಿಯಾಗಿರುವ ಪುರುಷನೊಬ್ಬನಿರುವನು. ಹಿಂದೆ-ಮುಂದೆ ಎರಡೂ ಕಡೆ ಹರಿಯುವಂತಹ ಒಂದು ನದಿಯಿದೆ. ಇಪ್ಪತ್ತೈದು ಪದಾರ್ಥಗಳಿಂದ ನಿರ್ಮಿತವಾದ ಒಂದು ವಿಚಿತ್ರವಾದ ಮನೆಯುಂಟು. ಅತಿ ವಿಚಿತ್ರವಾದ ಕಥೆಯುಳ್ಳ ಒಂದು ಹಂಸವೂ ಇದೆ. ಕತ್ತಿ ಮತ್ತು ವಜ್ರ ಇವುಗಳಿಂದ ಮಾಡಲ್ಪಟ್ಟ ತನ್ನಿಂದ-ತಾನೇ ತಿರುಗುತ್ತಿರುವ ಒಂದು ಚಕ್ರವಿದೆ. ಮೂರ್ಖರಾದ ಹರ್ಯಶ್ವರರೇ! ಸರ್ವಜ್ಞನಾದ ನಿಮ್ಮ ತಂದೆಯ ಉಚಿತವಾದ ಆದೇಶವನ್ನು ತಿಳಿದು ಕೊಳ್ಳುವತನಕ, ಮೇಲೆ ಹೇಳಿದ ವಸ್ತುಗಳನ್ನು ನೋಡುವವರೆಗೂ ಅವನ ಆಜ್ಞೆಯಂತೆ ಸೃಷ್ಟಿಯನ್ನು ಹೇಗೆ ಮಾಡಬಲ್ಲಿರಿ? ॥ ೭-೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಹರ್ಯಶ್ವರು ಹುಟ್ಟಿನಿಂದಲೇ ಬುದ್ಧಿವಂತರಾಗಿದ್ದರು. ಅವರು ದೇವಋಷಿ ನಾರದರ ಈ ಒಗಟಿನಂತಿರುವ ಮಾತನ್ನು ಕೇಳಿ, ತಾವು ತಮ್ಮ ಬುದ್ಧಿಯಿಂದ ವಿಚಾರಮಾಡತೊಡಗಿದರು – ॥ ೧೦ ॥

ಭೂಃ ಕ್ಷೇತ್ರಂ ಜೀವಸಂಜ್ಞಂ ಯದನಾದಿ ನಿಜಬಂಧನಮ್ ।
ಅದೃಷ್ಟ್ವಾ ತಸ್ಯ ನಿರ್ವಾಣಂ ಕಿಮಸತ್ಕರ್ಮಭಿರ್ಭವೇತ್ ॥ ೧೧ ॥

ಏಕ ಏವೇಶ್ವರಸ್ತುರ್ಯೋ ಭಗವಾನ್ ಸ್ವಾಶ್ರಯಃ ಪರಃ ।
ತಮದೃಷ್ಟ್ವಾಭವಂ ಪುಂಸಃ ಕಿಮಸತ್ಕರ್ಮಭಿರ್ಭವೇತ್ ॥ ೧೨ ॥

ಪುಮಾನ್ನೈವೈತಿ ಯದ್ಗತ್ವಾ ಬಿಲಸ್ವರ್ಗಂ ಗತೋ ಯಥಾ ।
ಪ್ರತ್ಯಗ್ಧಾಮಾವಿದ ಇಹ ಕಿಮಸತ್ಕರ್ಮಭಿರ್ಭವೇತ್ ॥ ೧೩ ॥

ನಾನಾರೂಪಾಽಽತ್ಮನೋ ಬುದ್ಧಿಃ ಸ್ವೈರಿಣೀವ ಗುಣಾನ್ವಿತಾ ।
ತನ್ನಿಷ್ಠಾಮಗತಸ್ಯೇಹ ಕಿಮಸತ್ಕರ್ಮಭಿರ್ಭವೇತ್ ॥ ೧೪ ॥

ತತ್ಸಂಗಭ್ರಂಶಿತೈಶ್ವರ್ಯಂ ಸಂಸರಂತಂ ಕುಭಾರ್ಯವತ್ ।
ತದ್ಗತೀರಬುಧಸ್ಯೇಹ ಕಿಮಸತ್ಕರ್ಮಭಿರ್ಭವೇತ್ ॥ ೧೫ ॥

ಸೃಷ್ಟ್ಯಪ್ಯಯಕರೀಂ ಮಾಯಾಂ ವೇಲಾಕೂಲಾಂತವೇಗಿತಾಮ್ ।
ಮತ್ತಸ್ಯ ತಾಮವಿಜ್ಞಸ್ಯ ಕಿಮಸತ್ಕರ್ಮಭಿರ್ಭವೇತ್ ॥ ೧೬ ॥

ಪಂಚವಿಂಶತಿತತ್ತ್ವಾನಾಂ ಪುರುಷೋಽದ್ಭುತದರ್ಪಣಮ್ ।
ಅಧ್ಯಾತ್ಮಮಬುಧಸ್ಯೇಹ ಕಿಮಸತ್ಕರ್ಮಭಿರ್ಭವೇತ್ ॥ ೧೭ ॥

'ದೇವರ್ಷಿಗಳಾದ ನಾರದರ ಮಾತು ನಿಜವೇ ಆಗಿದೆ. ಇವರು ಹೇಳಿರುವ ಭೂಮಿಯೆಂಬುದು ಆತ್ಮನಿಗೆ ಅನಾದಿಕಾಲದಿಂದ ಬಂಧನವಾಗಿರುವ ಲಿಂಗಶರೀರವಾಗಿದೆ. ಇದು ನಾಶಹೊಂದುವುದನ್ನು ನೋಡದೆ ಮೋಕ್ಷಕ್ಕೆ ಉಪಯೋಗವಲ್ಲದ ಕರ್ಮಗಳಿಂದ ಏನು ಲಾಭವಿದೆ? ॥ ೧೧ ॥ ನಿಜವಾಗಿ ಈಶ್ವರನು ಒಬ್ಬನೇ ಆಗಿದ್ದು ಅವನು ಜಾಗ್ರತ್, ಸ್ವಪ್ನ-ಸುಷುಪ್ತಿಗಳೆಂಬ ಮೂರು ಅವಸ್ಥೆಗಳಿಂದ ಮತ್ತು ಅವುಗಳ ಅಭಿಮಾನೀ ದೇವತೆಗಳಿಂದ ಬೇರೆಯಾಗಿ ಅವುಗಳಿಗೆ ಸಾಕ್ಷಿ ತುರೀಯನಾಗಿದ್ದಾನೆ. ಎಲ್ಲದರ ಆಶ್ರಯನು ಅವನೇ ಆಗಿದ್ದು ಅವನಿಗೆ ಯಾವ ಆಶ್ರಯವೂ ಇಲ್ಲ. ಅವನೇ ಭಗವಂತನಾಗಿದ್ದಾನೆ. ಪ್ರಕೃತಿಯೇ ಮುಂತಾದವುಗಳಿಂದ ಅತೀತನಾದ ಆ ನಿತ್ಯಮುಕ್ತ ಪರಮಾತ್ಮನನ್ನು ನೋಡದೆ, ಆ ಭಗವಂತನಿಗೆ ಕರ್ಮಗಳನ್ನು ಅರ್ಪಿಸದೇ ಜೀವನಿಗೆ ಯಾವ ಲಾಭವಿದೆ? ॥ ೧೨ ॥ ಬಿಲರೂಪವಾದ ಪಾತಾಳದಲ್ಲಿ ಹೊಕ್ಕ ಮನುಷ್ಯನು ಅಲ್ಲಿಂದ ಮರಳಲಾರನೋ, ಹಾಗೆಯೇ ಜೀವನು-ಸ್ವಯಂ ಅಂತರ್ಜ್ಯೋತಿ ಸ್ವರೂಪವನ್ನು ಪಡೆದುಕೊಂಡು ಮತ್ತೆ ಸಂಸಾರಕ್ಕೆ ಮರಳಲಾರನೋ, ಅಂತಹ ಪರಮಾತ್ಮನನ್ನು ತಿಳಿಯದೆ ನಾಶವುಳ್ಳ ಸ್ವರ್ಗಾದಿ ಫಲಗಳನ್ನೀಯುವ ಕರ್ಮಗಳನ್ನು ಮಾಡುವುದರಿಂದ ಏನು ಲಾಭವಿದೆ? ॥ ೧೩ ॥ ಬಹು ರೂಪವುಳ್ಳ, ಸತ್ತ್ವ, ರಜ ಮೊದಲಾದ ಗುಣಗಳನ್ನು ಧರಿಸಿದ ಬುದ್ಧಿಯೇ ವ್ಯಭಿಚಾರಿಣಿ ಸ್ತ್ರೀಯಂತೆ ಇದೆ. ಈ ಜೀವನದಲ್ಲಿ ಇದರ ಅಂತ್ಯವನ್ನು ತಿಳಿಯದೆ, ವಿವೇಕವನ್ನು ಪಡೆಯದೆ, ಅಶಾಂತಿಯನ್ನು ಹೆಚ್ಚೆಚ್ಚು ಬೆಳೆಸುವ ಕರ್ಮಗಳನ್ನು ಮಾಡುವುದರಿಂದ ಪ್ರಯೋಜನವೇನಿದೆ? ॥ ೧೪ ॥ ಈ ಬುದ್ಧಿಯೇ ಕುಲಟೆಯಾದ ಹೆಂಗಸಿನಂತೆ ಇದೆ. ಇವಳ ಸಂಗದಿಂದ ಜೀವರೂಪವಾದ ಪುರುಷನ ಐಶ್ವರ್ಯನಾಶವಾಗಿ ಹೋಗಿದೆ ಅಂದರೆ ತನ್ನ ಸ್ವರೂಪದಿಂದ ವಿಮುಖನಾದನು. ಇವಳ ಹಿಂದೆ-ಹಿಂದೆಯೇ ಕುಲಟಸ್ತ್ರೀಯ ಪತಿಯಂತೆ ಎಲ್ಲೆಲ್ಲಿ ಅಲೆಯುತ್ತಿರುವನೋ ತಿಳಿಯದು. ಇವಳ ಬೇರೆ-ಬೇರೆ ಗತಿಗಳನ್ನು, ತಂತ್ರಗಳನ್ನು ತಿಳಿಯದೆಯೇ ವಿವೇಕರಹಿತವಾದ ಕರ್ಮಗಳಿಂದ ಯಾವ ಸಿದ್ಧಿ ದೊರೆಯಬಲ್ಲದು? ॥ ೧೫ ॥ ಹಿಂದೆ-ಮುಂದೆ ಹರಿಯುತ್ತಿರುವ ನದಿಯೇ ಮಾಯೆಯಾಗಿದೆ. ಇದು ಸೃಷ್ಟಿ ಮತ್ತು ಪ್ರಳಯ ಎರಡನ್ನೂ ಮಾಡುತ್ತದೆ. ಇದರಿಂದ ಪಾರಾಗಲು ಜನರು ತಪಸ್ಸು ವಿದ್ಯೆ ಮುಂತಾದ ದಡಗಳನ್ನು ಆಶ್ರಯಿಸತೊಡಗಿದಾಗ, ಅವರನ್ನು ತಡೆಯಲು ಕ್ರೋಧ, ಅಹಂಕಾರ ಮುಂತಾದ ರೂಪಗಳಿಂದ ಅದು ಇನ್ನೂ ವೇಗವಾಗಿ ಹರಿಯತೊಡಗುತ್ತದೆ. ಆ ಮಾಯೆಯ ವೇಗದಿಂದ ವಿವಶನಾದ ಅಜ್ಞಾನಿಯಾದ ಜೀವಿಯು ಮಾಯಿಕ ಕರ್ಮಗಳಿಂದ ಏನು ಲಾಭ ಗಳಿಸಬಲ್ಲನು? ॥ ೧೬ ॥ ಈ ಶರೀರವು ಇಪ್ಪತ್ತೈದು ತತ್ತ್ವಗಳ ಒಂದು ಅದ್ಭುತಮನೆಯಾಗಿದೆ. ಪುರುಷನೇ ಅದರ ಆಶ್ಚರ್ಯಮಯ ಆಶ್ರಯನಾಗಿದ್ದಾನೆ. ಅವನೇ ಕಾರ್ಯ-ಕಾರಣಾತ್ಮಕ ಸಮಸ್ತ ಜಗತ್ತಿನ ಅಧಿಷ್ಠಾನನಾಗಿದ್ದಾನೆ. ಇದನ್ನು ಅರಿಯದೆ ನಿಜವಾದ ಸ್ವಾತಂತ್ರ್ಯವನ್ನು ಪಡೆಯದೆ ಮಿಥ್ಯಾ ಸ್ವತಂತ್ರತೆಯಿಂದ ಮಾಡಲಾಗುವ ಕರ್ಮಗಳು ವ್ಯರ್ಥವೇ ಆಗಿದೆ. ॥ ೧೭ ॥

ಐಶ್ವರಂ ಶಾಸ್ತ್ರಮುತ್ಸೃಜ್ಯ ಬಂಧಮೋಕ್ಷಾನುದರ್ಶನಮ್ ।
ವಿವಿಕ್ತಪದಮಜ್ಞಾಯ ಕಿಮಸತ್ಕರ್ಮಭಿರ್ಭವೇತ್
॥ ೧೮ ॥

ಕಾಲಚಕ್ರಂ ಭ್ರಮಿಸ್ತೀಕ್ಷ್ಣಂ ಸರ್ವಂ ನಿಷ್ಕರ್ಷಯಜ್ಜಗತ್ ।
ಸ್ವತಂತ್ರಮಬುಧಸ್ಯೇಹ ಕಿಮಸತ್ಕರ್ಮಭಿರ್ಭವೇತ್
॥ ೧೯ ॥

ಶಾಸ್ತ್ರಸ್ಯ ಪಿತುರಾದೇಶಂ ಯೋ ನ ವೇದ ನಿವರ್ತಕಮ್ ।
ಕಥಂ ತದನುರೂಪಾಯ ಗುಣವಿಶ್ರಂಭ್ಯುಪಕ್ರಮೇತ್
॥ ೨೦ ॥

ಇತಿ ವ್ಯವಸಿತಾ ರಾಜನ್ ಹರ್ಯಶ್ವಾ ಏಕಚೇತಸಃ ।
ಪ್ರಯಯುಸ್ತಂ ಪರಿಕ್ರಮ್ಯ ಪಂಥಾನಮನಿವರ್ತನಮ್
॥ ೨೧ ॥

ಸ್ವರಬ್ರಹ್ಮಣಿ ನಿರ್ಭಾತಹೃಷೀಕೇಶಪದಾಂಬುಜೇ ।
ಅಖಂಡಂ ಚಿತ್ತಮಾವೇಶ್ಯ ಲೋಕಾನನುಚರನ್ಮುನಿಃ
॥ ೨೨ ॥

ನಾಶಂ ನಿಶಮ್ಯ ಪುತ್ರಾಣಾಂ ನಾರದಾಚ್ಛೀಲಶಾಲಿನಾಮ್ ।
ಅನ್ವತಪ್ಯತ ಕಃ ಶೋಚನ್ ಸುಪ್ರಜಸ್ತ್ವಂ ಶುಚಾಂ ಪದಮ್
॥ ೨೩ ॥

ಸ ಭೂಯಃ ಪಾಂಚಜನ್ಯಾಯಾಮಜೇನ ಪರಿಸಾಂತ್ವಿತಃ ।
ಪುತ್ರಾನಜನಯದ್ದಕ್ಷಃ ಶಬಲಾಶ್ವಾನ್ಸಹಸ್ರಶಃ
॥ ೨೪ ॥

ತೇಽಪಿ ಪಿತ್ರಾ ಸಮಾದಿಷ್ಟಾಃ ಪ್ರಜಾಸರ್ಗೇ ಧೃತವ್ರತಾಃ ।
ನಾರಾಯಣಸರೋ ಜಗ್ಮುರ್ಯತ್ರ ಸಿದ್ಧಾಃ ಸ್ವಪೂರ್ವಜಾಃ
॥ ೨೫ ॥

ತದುಪಸ್ಪರ್ಶನಾದೇವ ವಿನಿರ್ಧೂತಮಲಾಶಯಾಃ ।
ಜಪಂತೋ ಬ್ರಹ್ಮ ಪರಮಂ ತೇಪುಸ್ತೇಽತ್ರ ಮಹತ್ತಪಃ
॥ ೨೬ ॥

ಭಗವಂತನ ಸ್ವರೂಪವನ್ನು ಬೋಧಿಸುವ ಶಾಸ್ತ್ರವೇ ಹಂಸದಂತೆ ನೀರ-ಕ್ಷೀರ ವಿವೇಕವಾಗಿದೆ. ಅದು ಬಂಧ-ಮೋಕ್ಷ, ಚೇತನ-ಜಡ ಇವುಗಳನ್ನು ಬೇರೆ-ಬೇರೆಯಾಗಿಸಿ ತೋರಿಸುತ್ತದೆ. ಇಂತಹ ಅಧ್ಯಾತ್ಮಶಾಸ್ತ್ರಸ್ವರೂಪವಾದ ಹಂಸನ ಆಶ್ರಯವನ್ನು ಬಿಟ್ಟು, ಅದನ್ನು ಅರಿಯದೆ ಬಹಿರ್ಮುಖಗೊಳಿಸುವ ಕರ್ಮಗಳಿಂದ ಏನು ಲಾಭವಿದೆ ? ॥ ೧೮ ॥ ಈ ಕಾಲವೇ ಒಂದು ಚಕ್ರವಾಗಿದೆ. ಇದು ನಿರಂತರ ತಿರುಗುತ್ತಾ ಇರುತ್ತದೆ. ಚೂರಿ ಮತ್ತು ವಜ್ರದಂತೆ ತೀಕ್ಷ್ಣವಾದ ಅಲಗುಗಳುಳ್ಳ ಈ ಚಕ್ರವು ಇಡೀ ಜಗತ್ತನ್ನು ತನ್ನ ಕಡೆಗೆ ಸೆಳೆಯುತ್ತಿದೆ. ಯಾರಿಂದಲೂ ತಡೆಯಲಾಗದ ಸ್ವತಂತ್ರ ವಾಗಿ ಸುತ್ತುತ್ತಿರುವ ಚಕ್ರವಿದು. ಇದನ್ನರಿಯದೆ ಕರ್ಮಗಳ ಫಲ ವನ್ನು ನಿತ್ಯವೆಂದು ತಿಳಿದ ಜನರು ಸಕಾಮಭಾವದಿಂದ ಅವನ್ನು ಅನು ಷ್ಠಾನ ಮಾಡುತ್ತಾರೆ. ಅವರಿಗೆ ಆ ಅನಿತ್ಯ ಕರ್ಮಗಳಿಂದ ಏನು ಲಾಭವಾದೀತು ? ॥ ೧೯ ॥ ಶಾಸ್ತ್ರವೇ ತಂದೆಯಾಗಿದೆ. ಏಕೆಂದರೆ ಎರಡನೆಯ ಜನ್ಮವು ಶಾಸ್ತ್ರದ ಮೂಲಕವೇ ಆಗುತ್ತದೆ ಮತ್ತು ಅದರ ಉಪದೇಶವು ಕರ್ಮಗಳಲ್ಲಿ ತೊಡಗಿಸುವುದಲ್ಲ, ಬದಲಿಗೆ ಅದ ರಿಂದ ನಿವೃತ್ತವಾಗಿಸುವುದಾಗಿದೆ. ಇದನ್ನು ತಿಳಿಯದವನು ಗುಣ ಮಯ ಶಬ್ದಾದಿ ವಿಷಯಗಳಲ್ಲಿ ವಿಶ್ವಾಸವಿರಿಸುತ್ತಾನೆ. ಇಂತಹವನು ಕರ್ಮಗಳಿಂದ ನಿವೃತ್ತಿ ಹೊಂದಬೇಕೆಂಬ ಆಜ್ಞೆಯನ್ನು ಹೇಗೆ ತಾನೇ ಪಾಲಿಸಬಲ್ಲನು ? ॥ ೨೦ ॥ ಪರೀಕ್ಷಿದ್ರಾಜನೇ ! ಹರ್ಯಶ್ವರು ಒಮ್ಮತದಿಂದ ಹೀಗೆ ನಿಶ್ಚಯಿಸಿಕೊಂಡು, ನಾರದರಿಗೆ ಪ್ರದಕ್ಷಿಣೆ ಬಂದು, ಎಲ್ಲಿಗೆ ಪ್ರಯಾಣಮಾಡಿದರೆ ಮರಳಿ ಸಂಸಾರಕ್ಕೆ ಬರ ಬೇಕಾಗಿಲ್ಲವೋ, ಆ ಮೋಕ್ಷಮಾರ್ಗದ ಪಥಿಕರಾಗಿಬಿಟ್ಟರು. ॥ ೨೧ ॥ ಅನಂತರ ದೇವರ್ಷಿ ನಾರದರು ಸಂಗೀತಲಹರಿಯ ಸ್ವರ ಬ್ರಹ್ಮದಲ್ಲಿ ಅಭಿವ್ಯಕ್ತವಾಗುವ ಭಗವಾನ್ ಶ್ರೀಕೃಷ್ಣನ ಚರಣಕಮಲ ಗಳಲ್ಲಿ ತಮ್ಮ ಚಿತ್ತವನ್ನು ಅಖಂಡರೂಪದಿಂದ ನೆಲೆಗೊಳಿಸಿ ಲೋಕ-ಲೋಕಾಂತರಗಳಲ್ಲಿ ಸಂಚರಿಸತೊಡಗಿದರು. ॥ ೨೨ ॥

ಮಹಾರಾಜನೇ ! ತನ್ನ ಶೀಲಸಂಪನ್ನರಾದ ಪುತ್ರರು ನಾರದರ ಉಪದೇಶದಿಂದ ಕರ್ತವ್ಯಚ್ಯುತರಾಗಿದ್ದಾರೆ ಎಂಬುದನ್ನು ದಕ್ಷಪ್ರಜಾ ಪತಿಯು ತಿಳಿದಾಗ, ಅವನಿಗೆ ಶೋಕದಿಂದ ವ್ಯಾಕುಲನಾಗಿ ಭಾರೀ ಪಶ್ಚಾತ್ತಾಪವುಂಟಾಯಿತು. ಒಳ್ಳೆಯ ಸಂತಾನವನ್ನು ಪಡೆಯುವುದೂ ಒಂದು ದೃಷ್ಟಿಯಿಂದ ದುಃಖಕ್ಕೆ ಕಾರಣವಾಗಿದೆ. ॥ ೨೩ ॥ ಆಗ ಬ್ರಹ್ಮದೇವರು ದಕ್ಷನನ್ನು ಸಮಾಧಾನ ಪಡಿಸಿದಾಗ ಅವನು ಪಂಚ ಜನೀಪುತ್ರಿಯಾದ ಅಸಿಕ್ನಿಯಿಂದ ಮತ್ತೆ ಸಾವಿರಾರು ಪುತ್ರರನ್ನು ಪಡೆದನು. ಅವರ ಹೆಸರು ಶಬಲಾಶ್ವರೆಂದಿತ್ತು. ॥ ೨೪ ॥ ಅವರೂ ಕೂಡ ತಮ್ಮ ತಂದೆಯಾದ ದಕ್ಷಪ್ರಜಾಪತಿಯ ಆಜ್ಞೆಯನ್ನು ಪಡೆದು ಪ್ರಜಾಸೃಷ್ಟಿಯ ಉದ್ದೇಶದಿಂದ ತಪಸ್ಸಿಗಾಗಿ ಹಿರಿಯಣ್ಣಂದಿರು ಸಿದ್ಧಿ ಯನ್ನು ಪಡೆದ ಅದೇ ನಾರಾಯಣ ಸರೋವರಕ್ಕೆ ಹೋದರು. ॥ ೨೫ ॥ ಶಬಲಾಶ್ವರೂ ಅಲ್ಲಿಗೆ ಹೋಗಿ ಆ ಸರೋವರದಲ್ಲಿ ಸ್ನಾನ ಮಾಡಿದರು. ಸ್ನಾನಮಾತ್ರದಿಂದಲೇ ಅವರ ಅಂತಃಕರಣದ ಎಲ್ಲ ದೋಷಗಳು ತೊಳೆದುಹೋದುವು. ಈಗ ಅವರು ಪರಬ್ರಹ್ಮ ಸ್ವರೂಪವಾದ ಪ್ರಣವವನ್ನು ಜಪಿಸುತ್ತಾ ಮಹಾ ತಪಸ್ಸಿಗೆ ತೊಡ ಗಿದರು. ॥ ೨೬ ॥

ಅಬ್ಭಕ್ಷಾಃ ಕತಿಚಿನ್ಮಾಸಾನ್ಕತಿಚಿದ್ವಾಯುಭೋಜನಾಃ ।
ಆರಾಧಯನ್ಮಂತ್ರಮಿಮಮಭ್ಯಸ್ಯಂತ ಇಡಸ್ಪತಿಮ್
॥ ೨೭ ॥

ಓಂ ನಮೋ ನಾರಾಯಣಾಯ ಪುರುಷಾಯ ಮಹಾತ್ಮನೇ ।
ವಿಶುದ್ಧಸತ್ತ್ವಧಿಷ್ಣ್ಯಾಯ ಮಹಾಹಂಸಾಯ ಧೀಮಹಿ
॥ ೨೮ ॥

ಇತಿ ತಾನಪಿ ರಾಜೇಂದ್ರ ಪ್ರತಿಸರ್ಗಧಿಯೋ ಮುನಿಃ ।
ಉಪೇತ್ಯ ನಾರದಃ ಪ್ರಾಹ ವಾಚಃಕೂಟಾನಿ ಪೂರ್ವವತ್
॥ ೨೯ ॥

ದಾಕ್ಷಾಯಣಾಃ ಸಂಶೃಣುತ ಗದತೋ ನಿಗಮಂ ಮಮ ।
ಅನ್ವಿಚ್ಛತಾನುಪದವೀಂ ಭ್ರಾತೄಣಾಂ ಭ್ರಾತೃವತ್ಸಲಾಃ
॥ ೩೦ ॥

ಭ್ರಾತೄಣಾಂ ಪ್ರಾಯಣಂ ಭ್ರಾತಾ ಯೋಽನುತಿಷ್ಠತಿ ಧರ್ಮವಿತ್ ।
ಸ ಪುಣ್ಯಬಂಧುಃ ಪುರುಷೋ ಮರುದ್ಭಿಃ ಸಹ ಮೋದತೇ
॥ ೩೧ ॥

ಏತಾವದುಕ್ತ್ವಾ ಪ್ರಯಯೌ ನಾರದೋಽಮೋಘದರ್ಶನಃ ।
ತೇಽಪಿ ಚಾನ್ವಗಮನ್ಮಾರ್ಗಂ ಭ್ರಾತೄಣಾಮೇವ ಮಾರಿಷ
॥ ೩೨ ॥

ಸಧ್ರೀಚೀನಂ ಪ್ರತೀಚೀನಂ ಪರಸ್ಯಾನುಪಥಂ ಗತಾಃ ।
ನಾದ್ಯಾಪಿ ತೇ ನಿವರ್ತಂತೇ ಪಶ್ಚಿಮಾ ಯಾಮಿನೀರಿವ
॥ ೩೩ ॥

ಏತಸ್ಮಿನ್ಕಾಲ ಉತ್ಪಾತಾನ್ ಬಹೂನ್ಪಶ್ಯನ್ ಪ್ರಜಾಪತಿಃ ।
ಪೂರ್ವವನ್ನಾರದಕೃತಂ ಪುತ್ರನಾಶಮುಪಾಶೃಣೋತ್
॥ ೩೪ ॥

ಚುಕ್ರೋಧ ನಾರದಾಯಾಸೌ ಪುತ್ರಶೋಕವಿಮೂರ್ಚ್ಛಿತಃ ।
ದೇವರ್ಷಿಮುಪಲಭ್ಯಾಹ ರೋಷಾದ್ವಿಸ್ಫುರಿತಾಧರಃ
॥ ೩೫ ॥

*ದಕ್ಷ ಉವಾಚ*

ಅಹೋ ಅಸಾಧೋ ಸಾಧೂನಾಂ ಸಾಧುಲಿಂಗೇನ ನಸ್ತ್ವಯಾ ।
ಅಸಾಧ್ವಕಾರ್ಯರ್ಭಕಾಣಾಂ ಭಿಕ್ಷೋರ್ಮಾರ್ಗಃ ಪ್ರದರ್ಶಿತಃ
॥ ೩೬ ॥

ಕೆಲವು ತಿಂಗಳವರೆಗೆ ಕೇವಲ ನೀರನ್ನು ಕುಡಿಯುತ್ತಾ , ಮತ್ತೆ ಕೆಲವು ತಿಂಗಳವರೆಗೆ ಕೇವಲ ಗಾಳಿಯನ್ನೇ ಸೇವಿಸುತ್ತಾ ಅವರು – "ವಿಶುದ್ಧವಾದ ಚಿತ್ತದಲ್ಲಿ ನಿವಾಸ ಮಾಡುವವನೂ, ಸರ್ವಾಂತರ್ಯಾಮಿಯೂ, ಸರ್ವವ್ಯಾಪಕನೂ, ಪರಮ ಹಂಸಸ್ವರೂಪಿಯೂ, ಓಂಕಾರಸ್ವರೂಪನೂ ಆಗಿರುವ ಪರಮ ಪುರುಷನಾದ ನಾರಾಯಣನನ್ನು ನಾವು ನಮಸ್ಕಾರ ಸಹಿತವಾಗಿ ಧ್ಯಾನಮಾಡುವೆವು" ಎಂಬ ಮಂತ್ರವನ್ನು ಜಪಿಸುತ್ತಾ ಮಂತ್ರಾಧಿಪತಿ ಭಗವಂತನನ್ನು ಆರಾಧಿಸಿದರು. ॥ ೨೭-೨೮ ॥ ಪರೀಕ್ಷಿತನೇ! ಹೀಗೆ ದಕ್ಷಪುತ್ರರಾದ ಶಬಲಾಶ್ವರು ತಪಸ್ಸಿನಲ್ಲಿ ಮಗ್ನರಾಗಿದ್ದಾಗ ದೇವರ್ಷಿ ನಾರದರು ಅವರ ಬಳಿಗೂ ಬಂದು ಹಿಂದಿನಂತೆಯೇ ಒಗಟಿನಂತಿರುವ ಮಾತುಗಳನ್ನು ಹೇಳಿದರು. ॥ ೨೯ ॥ ಎಲೈ ದಕ್ಷಪ್ರಜಾಪತಿಯ ಪುತ್ರರೇ! ನನ್ನ ಉಪದೇಶವನ್ನು ಕೇಳಿರಿ. ನಿಮಗೆ ನಿಮ್ಮ ಅಣ್ಣಂದಿರ ಮೇಲೆ ತುಂಬಾ ಪ್ರೀತಿ ಇದೆ. ಆದುದರಿಂದ ಅವರ ಮಾರ್ಗವನ್ನೇ ಅನುಸರಿಸಿರಿ. ॥ ೩೦ ॥ ತಮ್ಮ ಅಣ್ಣಂದಿರ ಶ್ರೇಷ್ಠಮಾರ್ಗವನ್ನು ಅನುಸರಿಸುವವರೇ ನಿಜವಾದ ಒಡಹುಟ್ಟಿದವರು. ಅಂತಹ ಪುಣ್ಯಶಾಲಿಗಳು ಪರಲೋಕದಲ್ಲಿ ಮರುದ್ಗಣರೊಂದಿಗೆ ಆನಂದವನ್ನು ಅನುಭವಿಸುವರು. ॥ ೩೧ ॥ ಮಹಾರಾಜನೇ! ಶಬಲಾಶ್ವರಿಗೆ ಹೀಗೆ ಉಪದೇಶಮಾಡಿ ನಾರದ ಮಹರ್ಷಿಗಳು ಅಲ್ಲಿಂದ ಹೊರಟು ಹೋದರು. ಅವರೂ ಕೂಡ ತಮ್ಮ ಅಣ್ಣಂದಿರ ದಾರಿಯನ್ನೇ ಹಿಡಿದರು. ಏಕೆಂದರೆ, ನಾರದರ ದರ್ಶನವು ಎಂದಿಗೂ ವ್ಯರ್ಥವಾಗುವುದಿಲ್ಲ. ॥ ೩೨ ॥ ಅವರು ಅಂತರ್ಮುಖೀ ವೃತ್ತಿಯಿಂದ ದೊರೆಯಬಹುದಾದ ಅತ್ಯಂತ ಸುಂದರ ಹಾಗೂ ಭಗವತ್ಪ್ರಾಪ್ತಿಗೆ ಅನುಕೂಲವಾದ ಆ ಮಾರ್ಗದ ಪಥಿಕರಾದರು. ಅಂತಹ ಪಥದಲ್ಲಿ ಸಾಗಿದವರು ಕಳೆದುಹೋದ ರಾತ್ರಿಯಂತೆ ಆ ಮಾರ್ಗದಿಂದ ಇಂದಿನವರೆಗೆ ಹಿಂದಿರುಗಲಿಲ್ಲ, ಮುಂದೆಯೂ ಮರಳಲಾರರು. ॥ ೩೩ ॥

ಅದೇ ಸಮಯದಲ್ಲಿ ಅನೇಕ ಅಪಶಕುನಗಳಾಗುತ್ತಿರುವುದನ್ನು ದಕ್ಷಪ್ರಜಾಪತಿಯು ನೋಡಿದನು. ಪುತ್ರರ ಕುರಿತು ಅವನ ಚಿತ್ತದಲ್ಲಿ ಅನಿಷ್ಟದ ಆಶಂಕೆ ಮೂಡಿತು. ಅಷ್ಟರಲ್ಲೇ ಅವನಿಗೆ – ಮೊದಲಿನಂತೆ ಈಗಲೂ ನಾರದರು ಬಂದು ತನ್ನ ಮಕ್ಕಳನ್ನು ನಿವೃತ್ತಿಮಾರ್ಗಕ್ಕೆ ಹಚ್ಚಿದ ಸಂಗತಿ ತಿಳಿಯಿತು. ॥ ೩೪ ॥ ತನ್ನ ಪುತ್ರರು ಕರ್ತವ್ಯಚ್ಯುತರಾದುದನ್ನು ಕಂಡು ಅವನಿಗೆ ಅತ್ಯಂತ ದುಃಖವಾಯಿತು ಹಾಗೂ ನಾರದರ ಕುರಿತು ವಿಪರೀತವಾದ ಸಿಟ್ಟುಬಂತು. ಒಮ್ಮೆ ನಾರದರು ಭೇಟಿಯಾದಾಗ ಕೋಪದಿಂದ ತುಟಿಗಳು ಅದುರುತ್ತಿರಲು ದಕ್ಷನು ಆವೇಶಭರಿತನಾಗಿ ಅವರಿಗೆ ಹೀಗೆಂದನು – ॥ ೩೫ ॥

**ದಕ್ಷಪ್ರಜಾಪತಿಯು ಹೇಳಿದನು** – ಎಲವೋ ದುಷ್ಟನೇ! ನೀನು ಸುಳ್ಳು-ಸುಳ್ಳೇ ಸಾಧುಗಳ ವೇಷವನ್ನು ಧರಿಸಿರುವೆ. ಸರಳ ಹೃದಯರಾದ ನನ್ನ ಮಕ್ಕಳಿಗೆ ಭಿಕ್ಷುಕರ ದಾರಿಯನ್ನು ತೋರಿ ನನಗೆ ಭಾರೀ ಅಪಕಾರವನ್ನೇ ಮಾಡಿರುವೆ. ॥ ೩೬ ॥

ಋಣೈಸ್ತ್ರಿಭಿರಮುಕ್ತಾನಾಮಮೀಮಾಂಸಿತಕರ್ಮಣಾಮ್ ।
ವಿಘಾತಃ ಶ್ರೇಯಸಃ ಪಾಪ ಲೋಕಯೋರುಭಯೋಃ ಕೃತಃ ॥ ೩೭ ॥

ಏವಂ ತ್ವಂ ನಿರನುಕ್ರೋಶೋ ಬಾಲಾನಾಂ ಮತಿಭಿದ್ಧರೇಃ ।
ಪಾರ್ಷದಮಧ್ಯೇ ಚರಸಿ ಯಶೋಹಾ ನಿರಪತ್ರಪಃ ॥ ೩೮ ॥

ನನು ಭಾಗವತಾ ನಿತ್ಯಂ ಭೂತಾನುಗ್ರಹಕಾತರಾಃ ।
ಋತೇ ತ್ವಾಂ ಸೌಹೃದಘ್ನಂ ವೈ ವೈರಂಕರಮವೈರಿಣಾಮ್ ॥ ೩೯ ॥

ನೇತ್ಥಂ ಪುಂಸಾಂ ವಿರಾಗಃ ಸ್ಯಾತ್ ತ್ವಯಾ ಕೇವಲಿನಾ ಮೃಷಾ ।
ಮನ್ಯಸೇ ಯದ್ಯುಪಶಮಂ ಸ್ನೇಹಪಾಶನಿಕೃಂತನಮ್ ॥ ೪೦ ॥

ನಾನುಭೂಯ ನ ಜಾನಾತಿ ಪುಮಾನ್ ವಿಷಯತೀಕ್ಷ್ಣತಾಮ್ ।
ನಿರ್ವಿದ್ಯೇತ ಸ್ವಯಂ ತಸ್ಮಾನ್ನ ತಥಾ ಭಿನ್ನಧೀಃ ಪರೈಃ ॥ ೪೧ ॥

ಯನ್ನಸ್ತ್ವಂ ಕರ್ಮಸಂಧಾನಾಂ ಸಾಧೂನಾಂಗೃಹಮೇಧಿನಾಮ್ ।
ಕೃತವಾನಸಿ ದುರ್ಮರ್ಷಂ ವಿಪ್ರಿಯಂ ತವ ಮರ್ಷಿತಮ್ ॥ ೪೨ ॥

ತಂತುಕೃಂತನ ಯನ್ನಸ್ತ್ವಮಭದ್ರಮಚರಃ ಪುನಃ ।
ತಸ್ಮಾಲ್ಲೋಕೇಷು ತೇ ಮೂಢ ನ ಭವೇದ್ಭ್ರಮತಃ ಪದಮ್ ॥ ೪೩॥

*ಶ್ರೀಶುಕ ಉವಾಚ*

ಪ್ರತಿಜಗ್ರಾಹ ತದ್ಬಾಢಂ ನಾರದಃ ಸಾಧುಸಮ್ಮತಃ ।
ಏತಾವಾನ್ ಸಾಧುವಾದೋ ಹಿ ತಿತಿಕ್ಷೇತೇಶ್ವರಃ ಸ್ವಯಮ್ ॥ ೪೪ ॥

ಅವರು ಇನ್ನೂ ಬ್ರಹ್ಮಚರ್ಯದಿಂದ ಋಷಿಋಣವನ್ನೂ, ಯಜ್ಞಗಳಿಂದ ದೇವಋಣವನ್ನೂ, ಪುತ್ರೋತ್ಪತ್ತಿಯಿಂದ ಪಿತೃ ಋಣವನ್ನೂ ತೀರಿಸ ಬೇಕಾಗಿತ್ತು. ಅವರಿಗೆ ಇನ್ನೂ ಕರ್ಮಫಲದ ನಶ್ವರತೆಯ ಸಂಬಂಧದಲ್ಲಿ ಯಾವ ವಿಚಾರವೂ ಇರಲಿಲ್ಲ. ಆದರೆ ಪಾಪಿಯಾದ ನೀನು ಅವರ ಎರಡೂ ಲೋಕಗಳ ಸುಖವನ್ನು ನಾಶಪಡಿಸಿ ಬಿಟ್ಟೆ ॥ ೩೭ ॥ ನಿಜವಾಗಿ ನಿನ್ನ ಹೃದಯದಲ್ಲಿ ದಯೆ ಎಂಬುದೇ ಇಲ್ಲ. ನೀನು ಹೀಗೆ ಮಕ್ಕಳ ಬುದ್ಧಿಯನ್ನು ಕೆಡಿಸುತ್ತಾ ಅಲೆಯುತ್ತಿರುವೆ. ನೀನು ಭಗವಂತನ ಪಾರ್ಷದರೊಂದಿಗೆ ಇದ್ದು ಅವರ ಕೀರ್ತಿಗೆ ಕಲಂಕವನ್ನು ಹಚ್ಚಿದೆ. ನೀನು ನಿರ್ಲಜ್ಜನೇ ಆಗಿರುವೆ. ॥ ೩೮ ॥ ಭಗವಂತನ ಪಾರ್ಷದರು ಸದಾ-ಕಾಲ ದುಃಖಿತರಾದ ಪ್ರಾಣಿಗಳ ಮೇಲೆ ದಯೆ ಮಾಡುವುದರಲ್ಲೇ ಆಸಕ್ತರಾಗಿರುತ್ತಾರೆ. ಆದರೆ ನೀನು ಪ್ರೇಮಭಾವವನ್ನು ನಾಶಮಾಡುವವನಾಗಿರುವೆ. ಯಾರೊಂದಿಗೂ ವೈರವನ್ನೇ ಮಾಡದಿರುವವರಲ್ಲಿಯೂ ನೀನು ವೈರವನ್ನು ಸಾಧಿಸುತ್ತಿರುವೆ. ॥ ೩೯ ॥ ವೈರಾಗ್ಯದಿಂದಲೇ ಸ್ನೇಹಪಾಶ-ವಿಷಯಾಸಕ್ತಿಯ ಬಂಧನ ಕಡಿದುಹೋಗುತ್ತದೆ ಎಂದು ನೀನು ತಿಳಿದಿದ್ದರೆ ನಿನ್ನ ಈ ವಿಚಾರ ಸರಿಯಾದುದಲ್ಲ. ಏಕೆಂದರೆ, ಸುಳ್ಳು-ಸುಳ್ಳೇ ವೈರಾಗ್ಯವಿರುವ ನಿನ್ನಂತಹವರಿಂದ ಯಾರಿಗೂ ವೈರಾಗ್ಯ ಉಂಟಾಗಲಾರದು. ॥ ೪೦ ॥ ನಾರದಾ! ವಿಷಯಗಳನ್ನು ಭೋಗಿಸದೇ ಮನುಷ್ಯನು ಅವುಗಳ ತೀಕ್ಷ್ಣತೆಯು ಏನೆಂಬುದು ತಿಳಿಯಲಾರನು. ಆದಕ್ಕಾಗಿ ಅವುಗಳ ದುಃಖ ಸ್ವರೂಪದ ಅನುಭವ ಉಂಟಾದಮೇಲೆ ಸ್ವತಃ ಉಂಟಾಗುವಂತಹ ವೈರಾಗ್ಯವು ಬೇರೆಯವರ ಪ್ರಚೋದನೆಯಿಂದ ಉಂಟಾಗುವುದಿಲ್ಲ ॥ ೪೧ ॥ ನಾವು ಧರ್ಮದ ಮರ್ಯಾದೆಯನ್ನು ಪಾಲಿಸುತ್ತಿರುವ ಸದ್‌ಗೃಹಸ್ಥರು. ಹಿಂದೊಮ್ಮೆಯೂ ನೀನು ನಮಗೆ ಭಯಂಕರ ಅಪಕಾರವನ್ನು ಮಾಡಿದ್ದೆ. ಆಗ ನಾವು ಅದನ್ನು ಸಹಿಸಿಕೊಂಡೆವು. ॥ ೪೨ ॥ ನೀನಾದರೋ ನಮ್ಮ ವಂಶಪರಂಪರೆಯನ್ನೇ ಕಡಿದುಹಾಕಲೆಂದೇ ದೀಕ್ಷೆಯನ್ನು ತೊಟ್ಟಂತಿದೆ. ನೀನು ಪುನಃ ನಮ್ಮೊಡನೆ ಅದೇ ದುಷ್ಟತೆಯ ವ್ಯವಹಾರ ಮಾಡಿರುವೆ. ಆದುದರಿಂದ 'ಎಲೈ ಮೂಢನೇ! ತೊಲಗು ಇಲ್ಲಿಂದ. ಲೋಕ-ಲೋಕಾಂತರಗಳಲ್ಲಿ ಅಲೆಯುತ್ತಾ ಇರು. ಎಲ್ಲಿಯೂ ನಿನಗೆ ನೆಲೆಯಾಗಿ ನಿಲ್ಲಲು ಠಾವೇ ಇಲ್ಲದಂತಾಗಲೀ.' ॥ ೪೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಸಾಧುಶಿರೋಮಣಿಗಳಾದ ದೇವಋಷಿ ನಾರದರು 'ಹಾಗೆಯೇ ಆಗಲಿ' ಎಂದು ಹೇಳಿ ದಕ್ಷನ ಶಾಪವನ್ನು ಸ್ವೀಕರಿಸಿದರು. ಪ್ರತೀಕಾರ ಸಾಮರ್ಥ್ಯವಿದ್ದರೂ ಬೇರೆಯವರು ಮಾಡಿದ ಅಪಕಾರವನ್ನು ಸಹಿಸುವುದೇ ಪ್ರಪಂಚದಲ್ಲಿ ನಿಜವಾದ ಸಾಧುತನವಾಗಿದೆ. ಅವರೇ ನಿಜವಾದ ಸಂತರು. ॥ ೪೪ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ
ನಾರದಶಾಪೋ ನಾಮಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ದಕ್ಷಪ್ರಜಾಪತಿಯ ಅರವತ್ತು ಕನ್ಯೆಯರ ವಂಶದ ವಿಸ್ತಾರ

*ಶ್ರೀಶುಕ ಉವಾಚ*

**ತತಃ ಪ್ರಾಚೇತಸೋಽಸಿಕ್ನ್ಯಾಮನುನೀತಃ ಸ್ವಯಂಭುವಾ ।
ಷಷ್ಟಿಂ ಸಂಜನಯಾಮಾಸ ದುಹಿತೄಃ ಪಿತೃವತ್ಸಲಾಃ ॥ ೧ ॥**

**ದಶಧರ್ಮಾಯ ಕಾಯೇಂದೋರ್ದ್ವಿಷಟ್ ತ್ರಿಣವ ದತ್ತವಾನ್ ।
ಭೂತಾಂಗಿರಃ ಕೃಶಾಶ್ವೇಭ್ಯೋ ದ್ವೇ ದ್ವೇ ತಾರ್ಕ್ಷ್ಯಾಯ ಚಾಪರಾಃ ॥ ೨ ॥**

**ನಾಮಧೇಯಾನ್ಯಮೂಷಾಂತ್ವಂ ಸಾಪತ್ಯಾನಾಂ ಚ ಮೇ ಶೃಣು ।
ಯಾಸಾಂ ಪ್ರಸೂತಿಪ್ರಸವೈರ್ಲೋಕಾ ಆಪೂರಿತಾಸ್ತ್ರಯಃ ॥ ೩ ॥**

**ಭಾನುರ್ಲಂಬಾ ಕಕುಬ್ಜಾಮಿರ್ವಿಶ್ವಾ ಸಾಧ್ಯಾ ಮರುತ್ವತೀ ।
ವಸುರ್ಮುಹೂರ್ತಾ ಸಂಕಲ್ಪಾ ಧರ್ಮಪತ್ನ್ಯಃ ಸುತಾನ್ ಶೃಣು ॥ ೪ ॥**

**ಭಾನೋಸ್ತು ದೇವಋಷಭ ಇಂದ್ರಸೇನಸ್ತತೋ ನೃಪ ।
ವಿದ್ಯೋತ ಆಸೀಲ್ಲಂಬಾಯಾಸ್ತತಶ್ಚ ಸ್ತನಯಿತ್ನವಃ ॥ ೫ ॥**

**ಕಕುಭಃ ಸಂಕಟಸ್ತಸ್ಯ ಕೀಕಟಸ್ತನಯೋ ಯತಃ ।
ಭುವೋ ದುರ್ಗಾಣಿ ಜಾಮೇಯಃ ಸ್ವರ್ಗೋ ನಂದಿಸ್ತತೋಽಭವತ್ ॥ ೬ ॥**

**ವಿಶ್ವೇದೇವಾಸ್ತು ವಿಶ್ವಾಯಾ ಅಪ್ರಜಾಂಸ್ತಾನ್ಪ್ರಚಕ್ಷತೇ ।
ಸಾಧ್ಯೋ ಗಣಸ್ತು ಸಾಧ್ಯಾಯಾ ಅರ್ಥಸಿದ್ಧಿಸ್ತು ತತ್ಸುತಃ ॥ ೭ ॥**

**ಮರುತ್ವಾಂಶ್ಚ ಜಯಂತಶ್ಚ ಮರುತ್ವತ್ಯಾಂ ಬಭೂವತುಃ ।
ಜಯಂತೋ ವಾಸುದೇವಾಂಶ ಉಪೇಂದ್ರ ಇತಿ ಯಂ ವಿದುಃ ॥ ೮ ॥**

**ಮೌಹೂರ್ತಿಕಾ ದೇವಗಣಾ ಮುಹೂರ್ತಾಯಾಶ್ಚ ಜಜ್ಞಿರೇ ।
ಯೇ ವೈ ಫಲಂ ಪ್ರಯಚ್ಛಂತಿ ಭೂತಾನಾಂ ಸ್ವಸ್ವಕಾಲಜಮ್ ॥ ೯ ॥**

**ಸಂಕಲ್ಪಾಯಾಶ್ಚ ಸಂಕಲ್ಪಃ ಕಾಮಃ ಸಂಕಲ್ಪಜಃ ಸ್ಮೃತಃ ।
ವಸವೋಽಷ್ಟೌ ವಸೋಃ ಪುತ್ರಾಸ್ತೇಷಾಂ ನಾಮಾನಿ ಮೇ ಶೃಣು ॥ ೧೦ ॥**

**ದ್ರೋಣಃ ಪ್ರಾಣೋ ಧ್ರುವೋಽರ್ಕೋಽಗ್ನಿರ್ದೋಷೋ ವಸುರ್ವಿಭಾವಸುಃ ।
ದ್ರೋಣಸ್ಯಾಭಿಮತೇಃ ಪತ್ನ್ಯಾ ಹರ್ಷಶೋಕಭಯಾದಯಃ ॥ ೧೧ ॥**

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ಪುತ್ರಶೋಕದಿಂದ ನೊಂದಿದ್ದ ದಕ್ಷಪ್ರಜಾಪತಿಯನ್ನು ಬ್ರಹ್ಮದೇವರು ಸಂತೈಸಿದರು. ಬಳಿಕ ದಕ್ಷನು ಅಸಿಕ್ನಿಯಲ್ಲಿ ಅರವತ್ತು ಮಂದಿ ಕನ್ಯೆಯರನ್ನು ಪಡೆದನು. ಆ ಕನ್ಯೆಯರಿಗೆ ತಂದೆಯಲ್ಲಿ ಎಣೆಯಿಲ್ಲದ ಪ್ರೀತಿಯಿತ್ತು. ॥ ೧ ॥ ದಕ್ಷಪ್ರಜಾಪತಿಯು ಅವರಲ್ಲಿ ಹತ್ತುಮಂದಿಯನ್ನು ಧರ್ಮನಿಗೂ, ಹದಿಮೂರು ಕಶ್ಯಪನಿಗೂ, ಇಪ್ಪತ್ತೇಳು ಚಂದ್ರನಿಗೂ, ಇಬ್ಬರನ್ನು ಭೂತನ್ಕೂ, ಇಬ್ಬರನ್ನು ಅಂಗೀರಸರಿಗೂ, ಇಬ್ಬರನ್ನು ಕೃಶಾಶ್ವನಿಗೂ ಹಾಗೂ ಉಳಿದ ನಾಲ್ವರನ್ನು ತಾರ್ಕ್ಷ್ಯನೆಂಬ ಹೆಸರುಳ್ಳ ಕಶ್ಯಪರಿಗೂ ವಿವಾಹ ಮಾಡಿಕೊಟ್ಟನು. ॥ ೨ ॥ ಪರೀಕ್ಷಿತನೇ! ಈಗ ಆ ಕನ್ಯೆಯರ ಹೆಸರುಗಳನ್ನು ಮತ್ತು ಅವರ ಸಂತಾನಗಳನ್ನೂ ತಿಳಿಸುವೆನು, ಕೇಳು. ಇವರ ವಂಶಪರಂಪರೆಯೇ ಮೂರೂ ಲೋಕಗಳಲ್ಲಿಯೂ ಹರಡಿಕೊಂಡಿದೆ. ॥ ೩ ॥

ಧರ್ಮನು – ಭಾನು, ಲಂಬಾ, ಕುಕುಭ್, ಜಾಮಿ, ವಿಶ್ವಾ, ಸಾಧ್ಯಾ, ಮರುತ್ವತೀ, ವಸು, ಮುಹೂರ್ತಾ, ಸಂಕಲ್ಪಾ ಎಂಬ ಹತ್ತು ಕನ್ಯೆಯರನ್ನು ವಿವಾಹವಾಗಿದ್ದನು. ಅವರ ಪುತ್ರರ ಹೆಸರುಗಳನ್ನು ಹೇಳುವೆನು, ಕೇಳು – ॥ ೪ ॥ ರಾಜನೇ! ಇವರಲ್ಲಿ – ಭಾನುವಿನ ಪುತ್ರನು ದೇವಋಷಭನು ಮತ್ತು ಅವನ ಪುತ್ರನು ಇಂದ್ರಸೇನನು. ಲಂಬೆಯ ಪುತ್ರ ವಿದ್ಯೋತ ಹಾಗೂ ಅವನ ಪುತ್ರ ಮೇಘಗಣನು. ॥ ೫ ॥ ಕಕುಭೆಯ ಪುತ್ರನು ಸಂಕಟನು. ಅವನ ಪುತ್ರ ಕೀಕಟನು. ಅವನ ಪುತ್ರನು – ಪೃಥಿವಿಯ ಸಮಸ್ತ ದುರ್ಗಗಳಿಗೂ ಅಭಿಮಾನಿ ದೇವತೆಯು. ಜಾಮಿಯ ಪುತ್ರನಿಗೆ ಸ್ವರ್ಗನೆಂದು ಹೆಸರು. ಅವನಿಗೆ ನಂದಿ ಎಂಬ ಪುತ್ರನು ಹುಟ್ಟಿದನು. ॥ ೬ ॥ ವಿಶ್ವಾ ಎಂಬುವಳ ಪುತ್ರರೇ ವಿಶ್ವೇದೇವತೆಗಳು. ಆ ವಿಶ್ವೇದೇವತೆಗಳಿಗೆ ಸಂತಾನವೇ ಆಗಲಿಲ್ಲ. ಸಾಧ್ಯೆಯ ಪುತ್ರರು ಸಾಧ್ಯರೆಂಬ ದೇವಗಣಗಳು. ಅವರ ಪುತ್ರ ಅರ್ಥಸಿದ್ಧನು. ॥ ೭ ॥ ಮರುತ್ವತಿಗೆ ಮರುತ್ವಂತ ಮತ್ತು ಜಯಂತ ಎಂಬ ಇಬ್ಬರು ಪುತ್ರರು ಹುಟ್ಟಿದರು. ಜಯಂತನು ಭಗವಾನ್ ಶ್ರೀವಾಸುದೇವನ ಅಂಶನು. ಆತನನ್ನು ಉಪೇಂದ್ರನೆಂದೂ ಹೇಳುವರು. ॥ ೮ ॥ ಮುಹೂರ್ತಾಳಿಗೆ ಮುಹೂರ್ತಕ್ಕೆ ಅಭಿಮಾನಿದೇವತೆಗಳು ಪುತ್ರರಾಗಿ ಜನಿಸಿದರು. ಇವರು ತಮ್ಮ-ತಮ್ಮ ಮುಹೂರ್ತಗಳಲ್ಲಿ ಜೀವರಿಗೆ ಅವರವರ ಕರ್ಮಗಳಿಗನುಗುಣವಾಗಿ ಫಲವನ್ನು ಕೊಡುವರು. ॥ ೯ ॥ ಸಂಕಲ್ಪೆಯ ಪುತ್ರನು ಸಂಕಲ್ಪನು. ಅವನ ಪುತ್ರನು ಕಾಮನು. ವಸುವಿನ ಪುತ್ರರೇ ಅಷ್ಟವಸುಗಳು. ಅವರ ಹೆಸರನ್ನು ಕೇಳು – ॥ ೧೦ ॥ ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷ, ವಸು ಮತ್ತು ವಿಭಾವಸು. ಅವರಲ್ಲಿ ದ್ರೋಣನ ಪತ್ನಿಯಾದ ಅಭಿಮತಿಯಲ್ಲಿ ಹರ್ಷ, ಶೋಕ, ಭಯ ಮುಂತಾದವುಗಳ ಅಭಿಮಾನಿ ದೇವತೆಗಳು ಉತ್ಪನ್ನರಾದರು. ॥ ೧೧ ॥ ಪ್ರಾಣನ ಪತ್ನಿಯಾದ ಊರ್ಜಸ್ವತಿಯ ಗರ್ಭದಲ್ಲಿ ಸಹ, ಆಯು ಮತ್ತು ಪುರೋಜವ ಎಂಬ ಮೂವರು ಪುತ್ರರು ಹುಟ್ಟಿದರು. ಧ್ರುವನ ಪತ್ನಿಯಾದ ಧರಣಿಯು ಅನೇಕ

ಪ್ರಾಣಸ್ಯೋರ್ಜಸ್ವತೀ ಭಾರ್ಯಾ ಸಹ ಆಯುಃ ಪುರೋಜವಃ ।
ಧ್ರುವಸ್ಯ ಭಾರ್ಯಾ ಧರಣಿರಸೂತ ವಿವಿಧಾಃ ಪುರಃ ॥ ೧೨ ॥

ಅರ್ಕಸ್ಯ ವಾಸನಾ ಭಾರ್ಯಾ ಪುತ್ರಾಸ್ತರ್ಷಾದಯಃ ಸ್ಮೃತಾಃ ।
ಅಗ್ನೇರ್ಭಾರ್ಯಾ ವಸೋರ್ಧಾರಾ ಪುತ್ರಾ ದ್ರವಿಣಕಾದಯಃ ॥ ೧೩ ॥

ಸ್ಕಂದಶ್ಚ ಕೃತ್ತಿಕಾಪುತ್ರೋ ಯೇ ವಿಶಾಖಾದಯಸ್ತತಃ ।
ದೋಷಸ್ಯ ಶರ್ವರೀಪುತ್ರಃ ಶಿಶುಮಾರೋ ಹರೇಃ ಕಲಾ ॥ ೧೪ ॥

ವಸೋರಾಂಗಿರಸೀಪುತ್ರೋ ವಿಶ್ವಕರ್ಮಾ ಕೃತೀಪತಿಃ ।
ತತೋ ಮನುಶ್ಚಾಕ್ಷುಷೋಽಭೂದ್ವಿಶ್ವೇ ಸಾಧ್ಯಾ ಮನೋಃ ಸುತಾಃ ॥ ೧೫ ॥

ವಿಭಾವಸೋರಸೂತೋಷಾ ವ್ಯುಷ್ಟಂ ರೋಚಿಷಮಾತಪಮ್ ।
ಪಂಚಯಾಮೋಽಥ ಭೂತಾನಿ ಯೇನ ಜಾಗ್ರತಿ ಕರ್ಮಸು ॥ ೧೬ ॥

ಸರೂಪಾಸೂತ ಭೂತಸ್ಯ ಭಾರ್ಯಾ ರುದ್ರಾಂಶ್ಚ ಕೋಟಿಶಃ ।
ರೈವತೋಽಜೋ ಭವೋ ಭೀಮೋ ವಾಮ ಉಗ್ರೋ ವೃಷಾಕಪಿಃ ॥ ೧೭ ॥

ಅಜೈಕಪಾದಹಿರ್ಬುಧ್ನ್ಯೋ ಬಹುರೂಪೋ ಮಹಾನಿತಿ ।
ರುದ್ರಸ್ಯ ಪಾರ್ಷದಾಶ್ಚಾನ್ಯೇ ಘೋರಾ ಭೂತವಿನಾಯಕಾಃ ॥ ೧೮ ॥

ಪ್ರಜಾಪತೇರಂಗಿರಸಃ ಸ್ವಧಾ ಪತ್ನೀ ಪಿತೄನಥ ।
ಅಥರ್ವಾಂಗಿರಸಂ ವೇದಂ ಪುತ್ರತ್ವೇ ಚಾಕರೋತ್ಸತೀ ॥ ೧೯ ॥

ಕೃಶಾಶ್ವೋಽರ್ಚಿಷಿ ಭಾರ್ಯಾಯಾಂ
ಧೂಮ್ರಕೇಶಮಜೀಜನತ್ ।
ಧಿಷಣಾಯಾಂ ವೇದಶಿರೋ
ದೇವಲಂ ವಯುನಂ ಮನುಮ್ ॥ ೨೦ ॥

ತಾರ್ಕ್ಷ್ಯಸ್ಯ ವಿನತಾ ಕದ್ರೂಃ ಪತಂಗೀ ಯಾಮಿನೀತಿ ಚ ।
ಪತಂಗ್ಯಸೂತ ಪತಗಾನ್ಯಾಮಿನೀ ಶಲಭಾನಥ ॥ ೨೧ ॥

ಸುಪರ್ಣಾಸೂತ ಗರುಡಂ ಸಾಕ್ಷಾದ್ಯಜ್ಞೇಶವಾಹನಮ್ ।
ಸೂರ್ಯಸೂತಮನೂರುಂ ಚ ಕದ್ರೂರ್ನಾಗಾನನೇಕಶಃ ॥ ೨೨ ॥

ಕೃತ್ತಿಕಾದೀನಿ ನಕ್ಷತ್ರಾಣೀಂದೋಃ ಪತ್ನ್ಯಸ್ತು ಭಾರತ ।
ದಕ್ಷಶಾಪಾತ್ಸೋಽನಪತ್ಯಸ್ತಾಸು ಯಕ್ಷ್ಮಗ್ರಹಾರ್ದಿತಃ ॥ ೨೩ ॥

ನಗರಗಳ ಅಭಿಮಾನಿ ದೇವತೆಗಳನ್ನು ಪುತ್ರರನ್ನಾಗಿ ಪಡೆದಳು. ॥ ೧೨ ॥ ಅರ್ಕನು ತನ್ನ ಪತ್ನಿಯಾದ ವಾಸನಾ ಎಂಬುವಳಲ್ಲಿ ತರ್ಷ (ತೃಷ್ಣಾ) ಮುಂತಾದ ಪುತ್ರರನ್ನು ಪಡೆದನು. ಅಗ್ನಿಯೆಂಬ ವಸುವಿನ ಪತ್ನಿಯಾದ ಧಾರಾದೇವಿಯಲ್ಲಿ ದ್ರವಿಣಕ ಮುಂತಾದ ಅನೇಕ ಪುತ್ರರು ಜನಿಸಿದರು. ॥ ೧೩ ॥ ಕೃತ್ತಿಕಾಪುತ್ರ ಸ್ಕಂದನೂ ಅಗ್ನಿಯಿಂದಲೇ ಹುಟ್ಟಿದನು. ಅವನಿಂದ ವಿಶಾಖಾ ಮುಂತಾದವರ ಜನ್ಮವಾಯಿತು. ದೋಷನ ಪತ್ನೀ ಶರ್ವರಿಯ ಗರ್ಭದಲ್ಲಿ ಶಿಶುಮಾರನ ಜನ್ಮವಾಯಿತು. ಅದು ಭಗವಂತನ ಕಲಾವತಾರವಾಗಿದೆ. ॥ ೧೪ ॥ ವಸುವಿನ ಪತ್ನಿಯಾದ ಆಂಗೀರಸೀಯಿಂದ ಶಿಲ್ಪಕಲೆಯ ಅಧಿಪತಿ ವಿಶ್ವಕರ್ಮನು ಉದಿಸಿದನು. ವಿಶ್ವಕರ್ಮನ ಭಾರ್ಯೆ ಕೃತಿಕೆಯಲ್ಲಿ ಚಾಕ್ಷುಷ ಮನುವು ಹುಟ್ಟಿದನು ಮತ್ತು ಅವನಿಗೆ ವಿಶ್ವೇದೇವ ಹಾಗೂ ಸಾಧ್ಯಗಣರು ಪುತ್ರರಾದರು. ॥ ೧೫ ॥ ವಿಭಾವಸುವಿನ ಪತ್ನಿಯಾದ ಉಷಾಳಿಂದ ವ್ಯುಷ್ಟ, ರೋಚಿಷ್, ಆತಪ ಎಂಬ ಮೂರು ಪುತ್ರರು ಉತ್ಪನ್ನರಾದರು. ಅವರಲ್ಲಿ ಆತಪನಿಗೆ ಪಂಚಯಾಮ (ದಿವಸ) ಎಂಬ ಪುತ್ರನು ಜನಿಸಿದನು. ಈ ಪಂಚಯಾಮನಿಂದಲೇ ಲೋಕದಲ್ಲಿ ಎಲ್ಲ ಜನರೂ ತಮ್ಮ-ತಮ್ಮ ಕಾರ್ಯಗಳಲ್ಲಿ ತೊಡಗಿರುತ್ತಾರೆ. ॥ ೧೬ ॥

ಭೂತನ ಪತ್ನಿಯಾದ ದಕ್ಷನಂದಿನೀ ಸರೂಪಳು ಕೋಟಿ ಕೋಟಿ ರುದ್ರಗಣಗಳನ್ನು ಪಡೆದಳು. ಇವರಲ್ಲಿ ರೈವತ, ಅಜ, ಭವ, ಭೀಮ, ವಾಮ, ಉಗ್ರ, ವೃಷಾಕಪಿ, ಅಜೈಕಪಾದ, ಅಹಿರ್ಬುಧ್ನ್ಯ, ಬಹುರೂಪ ಮತ್ತು ಮಹಾನ್ – ಎಂಬ ಹನ್ನೊಂದು ಮಂದಿ ಮುಖ್ಯರಾದರು. ಭೂತನ ಇನ್ನೋರ್ವ ಪತ್ನಿಯಾದ ಭೂತಾಳಿಂದ ಭಯಂಕರ ಭೂತಗಳು ಮತ್ತು ವಿನಾಯಕರೇ ಮುಂತಾದವರು ಹುಟ್ಟಿದರು. ಇವರೆಲ್ಲರೂ ಹನ್ನೊಂದನೆಯ ಪ್ರಧಾನರುದ್ರನಾದ ಮಹಾನ್ ಇವನ ಪಾರ್ಷದರಾದರು. ॥ ೧೭-೧೮ ॥ ಅಂಗಿರಾ ಪ್ರಜಾಪತಿಯ ಮೊದಲನೆಯ ಪತ್ನಿಯಾದ ಸ್ವಧಾಳಿಂದ ಪಿತೃಗಣಗಳು ಉತ್ಪನ್ನರಾದರು. ಎರಡನೆಯ ಪತ್ನಿ ಸತಿಯು ಅಥರ್ವಾಂಗಿರಸ ಎಂಬ ವೇದವನ್ನೇ ಪುತ್ರರೂಪದಿಂದ ಸ್ವೀಕರಿಸಿದಳು. ॥ ೧೯ ॥ ಕೃಶಾಶ್ವನ ಪತ್ನಿಯಾದ ಅರ್ಚಿಯಲ್ಲಿ ಧೂಮ್ರಕೇಶನ ಜನ್ಮವಾಯಿತು ಮತ್ತು ಧಿಷಣಾಳಿಂದ ವೇದಶಿರಾ, ದೇವಲ, ವಯುನ ಹಾಗೂ ಮನು ಎಂಬ ನಾಲ್ಕು ಪುತ್ರರು ಜನಿಸಿದರು. ॥ ೨೦ ॥ ತಾರ್ಕ್ಷ್ಯನೆಂಬ ಹೆಸರಿನ ಕಶ್ಯಪರಿಗೆ ವಿನತಾ, ಕದ್ರೂ, ಪತಂಗೀ, ಯಾಮಿನೀ ಎಂಬ ನಾಲ್ವರು ಪತ್ನಿಯರಿದ್ದರು. ಪತಂಗಿಯಿಂದ ಪಕ್ಷಿಗಳು ಮತ್ತು ಯಾಮಿನಿಯಿಂದ ಶಲಭ (ಮಿಡತೆ) ಗಳೂ ಉತ್ಪನ್ನವಾದುವು. ॥ ೨೧ ॥ ವಿನತಾದೇವಿಯು ಭಗವಾನ್ ವಿಷ್ಣುವಿನ ವಾಹನನಾದ ಗರುಡನನ್ನು ಪುತ್ರನಾಗಿ ಪಡೆದಳು. ವಿನತಾಳ ಇನ್ನೋರ್ವಪುತ್ರನು ಭಗವಾನ್ ಸೂರ್ಯನ ಸಾರಥಿಯಾದ ಅರುಣನು. ಕದ್ರುವಿನಿಂದ ಅನೇಕ ನಾಗಗಳೂ ಉತ್ಪನ್ನವಾದುವು. ॥ ೨೨ ॥

ಪರೀಕ್ಷಿತನೇ! ಕೃತ್ತಿಕಾದಿ ಇಪ್ಪತ್ತೇಳು ನಕ್ಷತ್ರಗಳ ಅಭಿಮಾನೀ ದೇವಿಯರು ಚಂದ್ರನ ಪತ್ನಿಯರು. ರೋಹಿಣಿಯಲ್ಲಿ ಚಂದ್ರನಿಗೆ ವಿಶೇಷ ಪ್ರೇಮವಿರುವ ಕಾರಣ ಅವನು ದಕ್ಷನ ಶಾಪಕ್ಕೆ

ಪುನಃ ಪ್ರಸಾದ್ಯ ತಂ ಸೋಮಃ ಕಲಾ ಲೇಭೇ ಕ್ಷಯೇ ದಿತಾಃ ।
ಶೃಣು ನಾಮಾನಿ ಲೋಕಾನಾಂ ಮಾತೄಣಾಂ ಶಂಕರಾಣಿ ಚ ॥ ೨೪ ॥

ಅಥ ಕಶ್ಯಪಪತ್ನೀನಾಂ ಯತ್ಪ್ರಸೂತಮಿದಂ ಜಗತ್ ।
ಅದಿತಿರ್ದಿತಿರ್ದನುಃ ಕಾಷ್ಠಾ ಅರಿಷ್ಟಾ ಸುರಸಾ ಇಲಾ ॥ ೨೫ ॥

ಮುನಿಃ ಕ್ರೋಧವಶಾ ತಾಮ್ರಾ ಸುರಭಿಃ ಸರಮಾ ತಿಮಿಃ ।
ತಿಮೇರ್ಯಾದೋಗಣಾ ಆಸನ್ ಶ್ವಾಪದಾಃ ಸರಮಾಸುತಾಃ ॥ ೨೬ ॥

ಸುರಭೇರ್ಮಹಿಷಾ ಗಾವೋ ಯೇ ಚಾನ್ಯೇ ದ್ವಿಶಫಾ ನೃಪ ।
ತಾಮ್ರಾಯಾಃ ಶ್ಯೇನಗೃಧ್ರಾದ್ಯಾ ಮುನೇರಪ್ಸರಸಾಂ ಗಣಾಃ ॥ ೨೭ ॥

ದಂದಶೂಕಾದಯಃ ಸರ್ಪಾ ರಾಜನ್ಕ್ರೋಧವಶಾತ್ಮಜಾಃ ।
ಇಲಾಯಾ ಭೂರುಹಾಃ ಸರ್ವೇ ಯಾತುಧಾನಾಶ್ಚ ಸೌರಸಾಃ ॥ ೨೮ ॥

ಅರಿಷ್ಟಾಯಾಶ್ಚ ಗಂಧರ್ವಾಃ ಕಾಷ್ಠಾಯಾ ದ್ವಿಶಫೇತರಾಃ ।
ಸುತಾ ದನೋರೇಕಷಷ್ಟಿಸ್ತೇಷಾಂ ಪ್ರಾಧಾನಿಕಾನ್ ಶೃಣು ॥ ೨೯ ॥

ದ್ವಿಮೂರ್ಧಾ ಶಂಬರೋಽರಿಷ್ಟೋ ಹಯಗ್ರೀವೋ ವಿಭಾವಸುಃ ।
ಅಯೋಮುಖಃ ಶಂಕುಶಿರಾಃ ಸ್ವರ್ಭಾನುಃ ಕಪಿಲೋಽರುಣಃ ॥ ೩೦ ॥

ಪುಲೋಮಾ ವೃಷಪರ್ವಾ ಚ ಏಕಚಕ್ರೋಽನುತಾಪನಃ ।
ಧೂಮ್ರಕೇಶೋ ವಿರೂಪಾಕ್ಷೋ ವಿಪ್ರಚಿತ್ತಿಶ್ಚ ದುರ್ಜಯಃ ॥ ೩೧ ॥

ಸ್ವರ್ಭಾನೋಃ ಸುಪ್ರಭಾಂ ಕನ್ಯಾಮುವಾಹ ನಮುಚಿಃ ಕಿಲ ।
ವೃಷಪರ್ವಣಸ್ತು ಶರ್ಮಿಷ್ಠಾಂ ಯಯಾತಿರ್ನಾಹುಷೋ ಬಲೀ ॥ ೩೨ ॥

ವೈಶ್ವಾನರಸುತಾ ಯಾಶ್ಚ ಚತಸ್ರಶ್ಚಾರುದರ್ಶನಾಃ ।
ಉಪದಾನವೀ ಹಯಶಿರಾ ಪುಲೋಮಾ ಕಾಲಕಾ ತಥಾ ॥ ೩೩ ॥

ಉಪದಾನವೀಂ ಹಿರಣ್ಯಾಕ್ಷಃ ಕ್ರತುರ್ಹಯಶಿರಾಂ ನೃಪ ।
ಪುಲೋಮಾಂ ಕಾಲಕಾಂ ಚ ದ್ವೇ ವೈಶ್ವಾನರಸುತೇ ತು ಕಃ ॥ ೩೪ ॥

ಉಪಯೇಮೇಽಥ ಭಗವಾನ್ಕಶ್ಯಪೋ ಬ್ರಹ್ಮಚೋದಿತಃ ।
ಪೌಲೋಮಾಃ ಕಾಲಕೇಯಾಶ್ಚ ದಾನವಾ ಯುದ್ಧಶಾಲಿನಃ ॥ ೩೫ ॥

ತುತ್ತಾಗಿ ಕ್ಷಯರೋಗಕ್ಕೆ ಗುರಿಯಾದನು. ಆದರಿಂದ ಅವನಿಗೆ ಯಾವ ಸಂತಾನವೂ ಜನಿಸಲಿಲ್ಲ. ॥ ೨೩ ॥ ಚಂದ್ರನು ದಕ್ಷನನ್ನು ಪ್ರಸನ್ನಗೊಳಿಸಿ ಕೃಷ್ಣಪಕ್ಷದಲ್ಲಿ ಕ್ಷೀಣಹೊಂದಿದ ಕಲೆಗಳು ಶುಕ್ಲಪಕ್ಷದಲ್ಲಿ ಪೂರ್ಣಹೊಂದುವ ವರವನ್ನೇನೋ ಪಡೆದನು. ಆದರೂ ನಕ್ಷತ್ರಾಭಿಮಾನಿದೇವಿಯರಿಂದ ಅವನಿಗೆ ಯಾವುದೇ ಸಂತತಿಯು ಉಂಟಾಗಲಿಲ್ಲ. ರಾಜನೇ! ಈಗ ನಿನಗೆ ಕಶ್ಯಪರ ಪತ್ನಿಯರ ಮಂಗಲಮಯ ಹೆಸರುಗಳನ್ನು ಹೇಳುವೆನು, ಕೇಳು. ಅವರು ಲೋಕಮಾತೆಯರು. ಅವರಿಂದಲೇ ಇವೆಲ್ಲ ಸೃಷ್ಟಿಯು ಉತ್ಪನ್ನವಾಗಿದೆ. ಅದಿತಿ, ದಿತಿ, ದನು, ಕಾಷ್ಠಾ, ಅರಿಷ್ಟಾ, ಸುರಸಾ, ಇಲಾ, ಮುನಿ, ಕ್ರೋಧವಶಾ, ತಾಮ್ರಾ, ಸುರಭಿ, ಸರಮಾ ಮತ್ತು ತಿಮಿ – ಇವು ಅವರ ಹೆಸರುಗಳು. ಇವರಲ್ಲಿ ತಿಮಿಯ ಪುತ್ರರು. ಎಲ್ಲ ಜಲಚರಪ್ರಾಣಿಗಳು, ಹುಲಿಯೇ ಮುಂತಾದ ಹಿಂಸಕ ಪ್ರಾಣಿಗಳು ಸರಮೆಯ ಸಂತಾನಗಳು. ॥ ೨೪ ॥ ಎಮ್ಮೆ, ಹಸುವೇ ಮುಂತಾದ ಎರಡು ಗೊರಸುಗಳುಳ್ಳ ಬೇರೆ ಪಶುಗಳೆಲ್ಲವೂ ಸುರಭಿಯ ಸಂತಾನಗಳು. ತಾಮ್ರೆಯ ಸಂತಾನಗಳು ಗಿಡುಗ, ಹದ್ದು ಮುಂತಾದ ಬೇಟೆಯಾಡುವ ಪಕ್ಷಿಗಳು. ಮುನಿ ಇವಳಿಂದ ಅಪ್ಸರೆಯರು ಜನಿಸಿದರು. ॥ ೨೭ ॥ ಸರ್ಪ, ಚೇಳು ಮುಂತಾದ ವಿಷವುಳ್ಳ ಜಂತುಗಳು ಕ್ರೋಧವಶೆಯ ಸಂತಾನಗಳು. ಇಲಾದೇವಿಯಿಂದ ವೃಕ್ಷಗಳು, ಲತೆಗಳು ಮುಂತಾದ ಭೂಮಿಯಲ್ಲಿ ಉತ್ಪನ್ನವಾಗುವ ವನಸ್ಪತಿಗಳು ಹುಟ್ಟಿದುವು. ಸುರಸೆಯಿಂದ ಯಾತುಧಾನ (ರಾಕ್ಷಸ)ರು ಹುಟ್ಟಿದರು. ॥ ೨೮ ॥ ಅರಿಷ್ಟಾಳಿಂದ ಗಂಧರ್ವರೂ ಹಾಗೂ ಕಾಷ್ಠಾಳಿಂದ ಕುದುರೆಯೇ ಮುಂತಾದ ಒಂದು ಗೊರಸಿನ ಪಶುಗಳು ಉತ್ಪನ್ನವಾದುವು. ದನುವಿಗೆ ಅರುವತ್ತೊಂದು ಮಂದಿ ಪುತ್ರರಾದರು. ಅವರಲ್ಲಿ ಮುಖ್ಯ-ಮುಖ್ಯರಾದವರ ಹೆಸರುಗಳನ್ನು ಕೇಳು. ॥ ೨೯ ॥ ದ್ವಿಮೂರ್ಧಾ, ಶಂಬರ, ಅರಿಷ್ಟ, ಹಯಗ್ರೀವ, ವಿಭಾವಸು, ಅಯೋಮುಖ, ಶಂಕುಶಿರಾ, ಸ್ವರ್ಭಾನು, ಕಪಿಲ, ಅರುಣ, ಪುಲೋಮಾ, ವೃಷಪರ್ವಾ, ಏಕಚಕ್ರ, ಅನುತಾಪನ, ಧೂಮ್ರಕೇಶ, ವಿರೂಪಾಕ್ಷ, ವಿಪ್ರಚಿತ್ತಿ ಮತ್ತು ದುರ್ಜಯ. ॥ ೩೦-೩೧ ॥ ಸ್ವರ್ಭಾನುವಿನ ಕನ್ಯೆಯಾದ ಸುಪ್ರಭೆಯೊಂದಿಗೆ ನಮೂಚಿಯು ಮತ್ತು ವೃಷಪರ್ವನ ಮಗಳು ಶರ್ಮಿಷ್ಠೆಯೊಂದಿಗೆ ಮಹಾಬಲಶಾಲಿಯಾದ ಯಯಾತಿಯು ವಿವಾಹವಾದರು. ॥ ೩೨ ॥ ದನುವಿನ ಪುತ್ರ ವೈಶ್ವಾನರನಿಗೆ ಉಪದಾನವೀ, ಹಯಶಿರಾ, ಪುಲೋಮಾ ಮತ್ತು ಕಾಲಕಾ ಎಂಬ ನಾಲ್ವರು ಸುಂದರ ಕನ್ಯೆಯರಿದ್ದರು. ॥ ೩೩ ॥ ಇವರಲ್ಲಿ ಉಪದಾನವಿಯೊಂದಿಗೆ ಹಿರಣ್ಯಾಕ್ಷನ ಮತ್ತು ಹಯಶಿರಾಳೊಂದಿಗೆ ಕ್ರತುವಿನ ವಿವಾಹ ವಾಯಿತು. ಬ್ರಹ್ಮದೇವರ ಅಪ್ಪಣೆಯಂತೆ ಪ್ರಜಾಪತಿ ಭಗವಾನ್ ಕಶ್ಯಪರು ವೈಶ್ವಾನರನ ಉಳಿದೆರಡು ಕನ್ಯೆಯರಾದ ಪುಲೋಮಾ ಮತ್ತು ಕಾಲಕಾ ಇವರೊಂದಿಗೆ ವಿವಾಹವಾದರು. ಅವರಲ್ಲಿ ಪೌಲೋಮ ಮತ್ತು ಕಾಲಕೇಯರೆಂಬ ಅರವತ್ತುಸಾವಿರ ರಣವೀರರಾದ ದಾನವರು ಜನಿಸಿದರು. ಇವರಿಗೇ ಇನ್ನೊಂದು ಹೆಸರು ನಿವಾತಕವಚರೆಂದಿತ್ತು. ಇವರು ಯಜ್ಞಕರ್ಮದಲ್ಲಿ ವಿಘ್ನವನ್ನೊಡ್ಡುತ್ತಿದ್ದರು. ಅದಕ್ಕಾಗಿ ಪರೀಕ್ಷಿದ್ರಾಜನೇ! ಇಂದ್ರನನ್ನು ಪ್ರಸನ್ನಗೊಳಿಸಲು ನಿನ್ನ ತಾತನಾದ ಅರ್ಜುನನು ಒಬ್ಬಂಟಿಗ ನಾಗಿಯೇ

ತಯೋಃ ಷಷ್ಟಿಸಹಸ್ರಾಣಿ ಯಜ್ಞಘ್ನಾಂಸ್ತೇ ಪಿತುಃ ಪಿತಾ ।
ಜಘಾನ ಸ್ವರ್ಗತೋ ರಾಜನ್ನೇಕ ಇಂದ್ರಪ್ರಿಯಂಕರಃ ॥ ೩೬ ॥

ವಿಪ್ರಚಿತ್ತಿಃ ಸಿಂಹಿಕಾಯಾಂ ಶತಂ ಚೈಕಮಜೀಜನತ್ ।
ರಾಹುಜ್ಯೇಷ್ಠಂ ಕೇತುಶತಂ ಗ್ರಹತ್ವಂ ಯ ಉಪಾಗತಾಃ ॥ ೩೭ ॥

ಅಥಾತಃ ಶ್ರೂಯತಾಂ ವಂಶೋ ಯೋಽದಿತೇರನುಪೂರ್ವಶಃ ।
ಯತ್ರ ನಾರಾಯಣೋ ದೇವಃ ಸ್ವಾಂಶೇನಾವತರದ್ವಿಭುಃ ॥ ೩೮ ॥

ವಿವಸ್ವಾನರ್ಯಮಾ ಪೂಷಾ ತ್ವಷ್ಟಾಥ ಸವಿತಾ ಭಗಃ ।
ಧಾತಾ ವಿಧಾತಾ ವರುಣೋ ಮಿತ್ರಃ ಶಕ್ರ ಉರುಕ್ರಮಃ ॥ ೩೯ ॥

ವಿವಸ್ವತಃ ಶ್ರಾದ್ಧದೇವಂ ಸಂಜ್ಞಾಸೂಯತ ವೈ ಮನುಮ್ ।
ಮಿಥುನಂ ಚ ಮಹಾಭಾಗಾ ಯಮಂ ದೇವಂ ಯಮೀಂ ತಥಾ ।
ಸೈವ ಭೂತ್ವಾಥ ವಡವಾ ನಾಸತ್ಯೌ ಸುಷುವೇ ಭುವಿ ॥ ೪೦ ॥

ಛಾಯಾ ಶನೈಶ್ಚರಂ ಲೇಭೇ ಸಾವರ್ಣಿಂ ಚ ಮನುಂ ತತಃ ।
ಕನ್ಯಾಂ ಚ ತಪತೀಂ ಯಾ ವೈ ವವ್ರೇ ಸಂವರಣಂ ಪತಿಮ್ ॥ ೪೧ ॥

ಅರ್ಯಮ್ಣೋ ಮಾತೃಕಾ ಪತ್ನೀ ತಯೋಶ್ಚರ್ಷಣಯಃ ಸುತಾಃ ।
ಯತ್ರ ವೈ ಮಾನುಷೀ ಜಾತಿರ್ಬ್ರಹ್ಮಣಾ ಚೋಪಕಲ್ಪಿತಾ ॥ ೪೨ ॥

ಪೂಷಾನಪತ್ಯಃ ಪಿಷ್ಟಾದೋ ಭಗ್ನದಂತೋಽಭವತ್ಪುರಾ ।
ಯೋಽಸೌ ದಕ್ಷಾಯ ಕುಪಿತಂ ಜಹಾಸ ವಿವೃತದ್ವಿಜಃ ॥ ೪೩ ॥

ತ್ವಷ್ಟುರ್ದೈತ್ಯಾತ್ಮಜಾ ಭಾರ್ಯಾ ರಚನಾ ನಾಮ ಕನ್ಯಕಾ ।
ಸಂನಿವೇಶಸ್ತಯೋರ್ಜಜ್ಞೇ ವಿಶ್ವರೂಪಶ್ಚ ವೀರ್ಯವಾನ್ ॥ ೪೪ ॥

ತಂ ವವ್ರಿರೇ ಸುರಗಣಾಃ ಸ್ವಸ್ರೀಯಂ ದ್ವಿಷತಾಮಪಿ ।
ವಿಮತೇನ ಪರಿತ್ಯಕ್ತಾ ಗುರುಣಾಽಽಂಗಿರಸೇನ ಯತ್ ॥ ೪೫ ॥

ಅವರೆಲ್ಲರನ್ನೂ ಸಂಹರಿಸಿಬಿಟ್ಟನು. ಅರ್ಜುನನು ಸ್ವರ್ಗಕ್ಕೆ ಹೋಗಿದ್ದಾಗ ನಡೆದ ಘಟನೆಯಿದು. ॥ ೩೪-೩೬ ॥ ವಿಪ್ರಚಿತ್ತಿಯ ಪತ್ನಿಯಾದ ಸಿಂಹಿಕೆಯ ಗರ್ಭದಿಂದ ಒಂದು ನೂರ ಒಂದು ಪುತ್ರರು ಹುಟ್ಟಿದರು. ಅವರಲ್ಲಿ ಎಲ್ಲರಿಗಿಂತ ಹಿರಿಯವನಾದವನ ಹೆಸರು ರಾಹು. ಇವನು ನವಗ್ರಹದಲ್ಲಿ ಲೆಕ್ಕಿಸಲ್ಪಡುತ್ತಾನೆ. ಉಳಿದ ನೂರು ಪುತ್ರರಿಗೂ ಕೇತುಗಳೆಂದು ಹೆಸರು. ॥ ೩೭ ॥

ಪರೀಕ್ಷಿತನೇ! ಈಗ ಕ್ರಮವಾಗಿ ಅದಿತಿಯ ವಂಶ ಪರಂಪರೆಯನ್ನು ಹೇಳುವೆನು, ಕೇಳು. ಈ ವಂಶದಲ್ಲೇ ಸರ್ವವ್ಯಾಪಕನಾದ ದೇವಾಧಿದೇವನಾದ ಶ್ರೀಮನ್ನಾರಾಯಣನೇ ತನ್ನ ಅಂಶದಿಂದ ವಾಮನನಾಗಿ ಅವತರಿಸಿದ್ದನು. ॥ ೩೮ ॥ ವಿವಸ್ವಂತ, ಅರ್ಯಮಾ, ಪೂಷಾ, ತ್ವಷ್ಟಾ, ಸವಿತಾ, ಭಗ, ಧಾತಾ, ವಿಧಾತಾ, ವರುಣ, ಮಿತ್ರ, ಇಂದ್ರ ಮತ್ತು ತ್ರಿವಿಕ್ರಮ (ವಾಮನ) ಇವರು ಅದಿತಿದೇವಿಯ ಪುತ್ರರು. ಈ ಹನ್ನೆರಡು ಮಂದಿಯೂ ದ್ವಾದಶಾದಿತ್ಯರೆಂದು ಕರೆಯಲ್ಪಟ್ಟರು. ॥ ೩೯ ॥ ವಿವಸ್ವಾನನ ಪತ್ನಿಯಾದ ಮಹಾ ಭಾಗ್ಯವತಿ ಸಂಜ್ಞೆಯ ಗರ್ಭದಿಂದ ಶ್ರಾದ್ಧ ದೇವ (ವೈವಸ್ವತ) ಮನು ಹಾಗೂ ಯಮ-ಯಮಿಯರೆಂಬ ಅವಳಿಮಕ್ಕಳು ಹುಟ್ಟಿದರು. ಸಂಜ್ಞೆಯೇ ಹೆಣ್ಣು ಕುದುರೆಯ ರೂಪವನ್ನು ಧರಿಸಿ ಭಗವಾನ್ ಸೂರ್ಯನಿಂದ ಭೂಲೋಕದಲ್ಲಿ ಅಶ್ವಿನೀಕುಮಾರರಿಗೆ ಜನ್ಮನೀಡಿದಳು. ॥ ೪೦ ॥ ವಿವಸ್ವಾನನು ಇನ್ನೋರ್ವ ಪತ್ನಿಯಾದ ಛಾಯಾದೇವಿಯಿಂದ ಶನೈಶ್ಚರ ಮತ್ತು ಸಾವರ್ಣಿಮನು ಎಂಬ ಇಬ್ಬರು ಪುತ್ರರನ್ನು ತಪತೀ ಎಂಬ ಓರ್ವ ಕನ್ಯೆಯನ್ನು ಪಡೆದುಕೊಂಡನು. ತಪತಿಯು ಸಂವರಣನನ್ನು ಪತಿಯನ್ನಾಗಿ ವರಿಸಿದಳು. ॥ ೪೧ ॥ ಅರ್ಯಮಾನ ಪತ್ನಿಯಾದ ಮಾತೃಕಾ ಎಂಬುವಳ ಗರ್ಭದಿಂದ ಚರ್ಷಣೀ ಎಂಬ ಪುತ್ರರು ಹುಟ್ಟಿದರು. ಅವರು ಕರ್ತವ್ಯ-ಅಕರ್ತವ್ಯಗಳ ಜ್ಞಾನದಿಂದ ಕೂಡಿದ್ದರು. ಅದಕ್ಕಾಗಿ ಬ್ರಹ್ಮದೇವರು ಅವರನ್ನು ಆಧರಿಸಿಯೇ ಮನುಷ್ಯಜಾತಿ (ಬ್ರಾಹ್ಮಣಾದಿ ವರ್ಣ)ಯನ್ನು ಕಲ್ಪಿಸಿದರು. ॥ ೪೨ ॥ ಪೂಷಾನಿಗೆ ಯಾವುದೇ ಸಂತಾನವಾಗಲಿಲ್ಲ. ಹಿಂದೆ ಶಿವನು ದಕ್ಷನ ಮೇಲೆ ಸಿಟ್ಟುಗೊಂಡಾಗ ಈ ಪೂಷಾನು ಹಲ್ಲುಕಿರಿದು ನಕ್ಕಿದ್ದನು. ಅದಕ್ಕಾಗಿ ವೀರಭದ್ರನು ಇವನ ಹಲ್ಲನ್ನು ಉದುರಿಸಿಬಿಟ್ಟಿದ್ದನು. ಅಂದಿನಿಂದ ಪೂಷಾನು ಹಿಟ್ಟಿನ ರೂಪದಲ್ಲಿರುವ ಅನ್ನವನ್ನೇ ಸೇವಿಸತೊಡಗಿದನು. ॥ ೪೩ ॥ ದೈತ್ಯರ ಕಿರಿಯ ತಂಗಿ ರಚನಾ ತ್ವಷ್ಟಾನ ಪತ್ನೀಯಾಗಿದ್ದಳು. ರಚನೆಯ ಗರ್ಭದಿಂದ ಸಂನಿವೇಶ ಮತ್ತು ಪರಾಕ್ರಮಿಯಾದ ವಿಶ್ವರೂಪರೆಂಬ ಇಬ್ಬರು ಪುತ್ರರು ಜನಿಸಿದರು. ॥ ೪೪ ॥ ಹೀಗೆ ವಿಶ್ವರೂಪನು ಶತ್ರುಗಳ ಅಳಿಯನಾಗಿದ್ದರೂ ದೇವಗುರು ಬೃಹಸ್ಪತಿಯು ಇಂದ್ರನಿಂದ ಅಪಮಾನಿತನಾಗಿ ದೇವತೆಗಳನ್ನು ತೊರೆದು ಹೋದಾಗ ದೇವತೆಗಳು ಈ ವಿಶ್ವರೂಪನನ್ನೇ ತಮ್ಮ ಪುರೋಹಿತರನ್ನಾಗಿಸಿ ಕೊಂಡರು. ॥ ೪೫ ॥

*ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ಷಷ್ಠೋಽಧ್ಯಾಯಃ ॥ ೬ ॥

# ಏಳನೆಯ ಅಧ್ಯಾಯ

## ಬೃಹಸ್ಪತಿಯು ದೇವತೆಗಳನ್ನು ತೊರೆದುದು ಮತ್ತು ವಿಶ್ವರೂಪನನ್ನು ದೇವಗುರುವಾಗಿ ವರಣಮಾಡಿದುದು

*ರಾಜೋವಾಚ*

**ಕಸ್ಯ ಹೇತೋಃ ಪರಿತ್ಯಕ್ತಾ ಆಚಾರ್ಯೇಣಾತ್ಮನಃ ಸುರಾಃ ।**
**ಏತದಾಚಕ್ಷ್ವ ಭಗವನ್ ಶಿಷ್ಯಾಣಾಮಕ್ರಮಂ ಗುರೌ ॥ ೧ ॥**

*ಶ್ರೀಶುಕ ಉವಾಚ*

**ಇಂದ್ರಸ್ತ್ರಿಭುವನೈಶ್ವರ್ಯಮದೋಲ್ಲಂಘಿತಸತ್ಪಥಃ ।**
**ಮರುದ್ಭಿರ್ವಸುಭೀ ರುದ್ರೈರಾದಿತ್ಯೈರ್ಋಭುಭಿರ್ನೃಪ ॥ ೨ ॥**

**ವಿಶ್ವೇದೇವೈಶ್ಚ ಸಾಧ್ಯೈಶ್ಚ ನಾಸತ್ಯಾಭ್ಯಾಂ ಪರಿಶ್ರಿತಃ ।**
**ಸಿದ್ಧಚಾರಣಗಂಧರ್ವೈರ್ಮುನಿಭಿರ್ಬ್ರಹ್ಮವಾದಿಭಿಃ ॥ ೩ ॥**

**ವಿದ್ಯಾಧರಾಪ್ಸರೋಭಿಶ್ಚ ಕಿನ್ನರೈಃ ಪತಗೋರಗೈಃ ।**
**ನಿಷೇವ್ಯಮಾಣೋ ಮಘವಾನ್ ಸ್ತೂಯಮಾನಶ್ಚ ಭಾರತ ॥ ೪ ॥**

**ಉಪಗೀಯಮಾನೋ ಲಲಿತಮಾಸ್ಥಾನಾಧ್ಯಾಸನಾಶ್ರಿತಃ ।**
**ಪಾಂಡುರೇಣಾತಪತ್ರೇಣ ಚಂದ್ರಮಂಡಲಚಾರುಣಾ ॥ ೫ ॥**

**ಯುಕ್ತಶ್ಚಾನ್ಯೈಃ ಪಾರಮೇಷ್ಠ್ಯೈಶ್ಚಾಮರವ್ಯಜನಾದಿಭಿಃ ।**
**ವಿರಾಜಮಾನಃ ಪೌಲೋಮ್ಯಾ ಸಹಾರ್ಧಾಸನಯಾ ಭೃಶಮ್ ॥ ೬ ॥**

**ಸ ಯದಾ ಪರಮಾಚಾರ್ಯಂ ದೇವಾನಾಮಾತ್ಮನಶ್ಚ ಹ ।**
**ನಾಭ್ಯನಂದತ ಸಂಪ್ರಾಪ್ತಂ ಪ್ರತ್ಯುತ್ಥಾನಾಸನಾದಿಭಿಃ ॥ ೭ ॥**

**ವಾಚಸ್ಪತಿಂ ಮುನಿವರಂ ಸುರಾಸುರನಮಸ್ಕೃತಮ್ ।**
**ನೋಚ್ಚಚಾಲಾಸನಾದಿಂದ್ರಃ ಪಶ್ಯನ್ನಪಿ ಸಭಾಗತಮ್ ॥ ೮ ॥**

**ತತೋ ನಿರ್ಗತ್ಯ ಸಹಸಾ ಕವಿರಾಂಗಿರಸಃ ಪ್ರಭುಃ ।**
**ಆಯಯೌ ಸ್ವಗೃಹಂ ತೂಷ್ಣೀಂ ವಿದ್ವಾನ್ ಶ್ರೀಮದವಿಕ್ರಿಯಾಮ್ ॥ ೯ ॥**

**ತರ್ಹ್ಯೇವ ಪ್ರತಿಬುದ್ಧ್ಯೇಂದ್ರೋ ಗುರುಹೇಲನಮಾತ್ಮನಃ ।**
**ಗರ್ಹಯಾಮಾಸ ಸದಸಿ ಸ್ವಯಮಾತ್ಮಾನಮಾತ್ಮನಾ ॥ ೧೦ ॥**

**ಪರೀಕ್ಷಿತಮಹಾರಾಜನು ಕೇಳಿದನು** – ಮಹಾತ್ಮರೇ! ದೇವತೆಗಳ ಆಚಾರ್ಯರಾದ ಬೃಹಸ್ಪತಿಯವರು ತಮ್ಮ ಪ್ರಿಯಶಿಷ್ಯರಾದ ದೇವತೆಗಳನ್ನು ಏಕೆ ತೊರೆದರು? ದೇವತೆಗಳು ತಮ್ಮ ಆಚಾರ್ಯರಿಗೆ ಅಂತಹ ಯಾವ ಅಪರಾಧ ಮಾಡಿದ್ದರು? ಕೃಪೆಯಿಟ್ಟು ತಿಳಿಸಿರಿ. ॥ ೧ ॥

**ಶ್ರೀಶುಕ ಮುನಿಗಳು ಹೇಳುತ್ತಾರೆ** – ಎಲೈ ರಾಜೇಂದ್ರಾ! ಮೂರುಲೋಕಗಳ ಐಶ್ವರ್ಯವನ್ನು ಪಡೆದು ಇಂದ್ರನು ಗರ್ವಾಂಧನಾಗಿದ್ದನು. ಈ ಅಹಂಕಾರದಿಂದ ಅವನು ಧರ್ಮ ಮರ್ಯಾದೆ ಸದಾಚಾರಗಳನ್ನು ಮೀರಿ ನಡೆಯತೊಡಗಿದ್ದನು. ಒಂದು ದಿನ ಈ ಘಟನೆ ನಡೆಯಿತು – ಮಹೇಂದ್ರನು ತುಂಬಿದ ಸಭೆಯಲ್ಲಿ ಪತ್ನಿಯಾದ ಶಚಿದೇವಿಯೊಂದಿಗೆ ಉನ್ನತವಾದ ಸಿಂಹಾಸನದಲ್ಲಿ ಕುಳಿತಿದ್ದನು. ಆಗ ನಲವತ್ತೊಂಭತ್ತು ಮಂದಿ ಮರುದ್ದೇವತೆಗಳು, ಅಷ್ಟವಸುಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಋಭುಗಣಗಳು, ವಿಶ್ವೇ ದೇವತೆಗಳು, ಸಾಧ್ಯಗಣಗಳು, ಇಬ್ಬರು ಅಶ್ವಿನೀದೇವತೆಗಳು ಒಡ್ಡೋಲಗದಲ್ಲಿ ಉಪಸ್ಥಿತರಿದ್ದು ಆತನ ಸೇವೆ ಮಾಡುತ್ತಿದ್ದರು. ಸಿದ್ಧರೂ, ಚಾರಣರೂ, ಗಂಧರ್ವರೂ, ಬ್ರಹ್ಮವಾದಿಗಳಾದ ಮುನಿಗಳು, ವಿದ್ಯಾಧರರು, ಅಪ್ಸರೆಯರೂ, ಕಿನ್ನರರೂ, ಪಕ್ಷಿಗಳೂ, ನಾಗಗಳೂ, ಅವನನ್ನು ಸ್ತುತಿಸುತ್ತಾ ಸೇವಿಸುತ್ತಿದ್ದರು. ಎಲ್ಲೆಡೆಗಳಲ್ಲಿ ಲಲಿತಸ್ವರದಿಂದ ದೇವೇಂದ್ರನ ಕೀರ್ತಿಯ ಗುಣಗಾನ ನಡೆಯುತ್ತಿತ್ತು. ಸಿಂಹಾಸನದ ಮೇಲ್ಗಡೆ ಚಂದ್ರಮಂಡಲದಂತೆ ಶುಭ್ರವೂ, ಸುಂದರವೂ ಆದ ಬೆಳ್ಗೊಡೆಯು ಶೋಭಿಸುತ್ತಿತ್ತು. ಚಾಮರ, ಬೀಸಣಿಗೆ ಮುಂತಾದ ಮಹಾರಾಜೋಚಿತವಾದ ಪದಾರ್ಥಗಳು ಆಯಾಯಾ ಜಾಗಗಳಲ್ಲಿ ಸುಸಜ್ಜಿತವಾಗಿದ್ದುವು. ಈ ದಿವ್ಯವಾದ ಸಭೆಯಲ್ಲಿ ದೇವರಾಜನಾದ ಮಹೇಂದ್ರನು ಮಂಡಿಸಿ ರಾರಾಜಿಸುತ್ತಿದ್ದನು. ॥ ೨-೬ ॥ ಅದೇ ಸಮಯಕ್ಕೆ ಸರಿಯಾಗಿ ದೇವೇಂದ್ರನಿಗೂ, ಸಮಸ್ತ ದೇವತೆಗಳಿಗೂ ಪರಮಾಚಾರ್ಯರಾದ ಬೃಹಸ್ಪತಿಯವರು ಅಲ್ಲಿಗೆ ಬಿಜಯಂಗೈದರು. ಸುರರು, ಅಸುರರು ಎಲ್ಲರಿಂದ ನಮಸ್ಕರಿಸಲ್ಪಡುವ ಪೂಜ್ಯರಾದ ಆಚಾರ್ಯರು ಅವರು. ಅವರು ಸಭೆಗೆ ಬಂದಿರುವುದನ್ನು ಇಂದ್ರನು ನೋಡಿದರೂ, ಅವನು ಎದ್ದು ನಿಲ್ಲಲಿಲ್ಲ, ಅವರಿಗೆ ನಮಸ್ಕಾರವೇ ಮುಂತಾದ ಸತ್ಕಾರಗಳನ್ನು ಮಾಡಲಿಲ್ಲ, ಆಸನದಿಂದ ಕೂಡ ಅಲ್ಲಾಡಲಿಲ್ಲ. ॥ ೭-೮ ॥ ತ್ರಿಕಾಲದರ್ಶಿಗಳಾದ ಬೃಹಸ್ಪತ್ಯಾಚಾರ್ಯರು – 'ಐಶ್ವರ್ಯಮದವೇ ಈ ಅಸಭ್ಯತೆಗೆ ಕಾರಣವಾಗಿದೆ' ಎಂದು ನೋಡಿ ಅವರು ಅಲ್ಲಿಂದ ಕೂಡಲೇ ಸುಮ್ಮನೆ ತಮ್ಮ ಮನೆಗೆ ಹೊರಟುಹೋದರು. ॥ ೯ ॥

ಪರೀಕ್ಷಿದ್ರಾಜನೇ! ಆಗಲೇ ದೇವೇಂದ್ರನಿಗೆ 'ನಾನು ನಮ್ಮ ಗುರುಗಳಿಗೆ ಎಂತಹ ಅವಹೇಳನ ಮಾಡಿದೆ?' ಎಂಬುದು ಅರಿವಾಯಿತು. ಅವನು ತುಂಬಿದ ಸಭೆಯಲ್ಲಿ ತನ್ನನ್ನು ಹೀಗೆ ನಿಂದಿಸಿಕೊಂಡನು. ॥ ೧೦ ॥

ಅಹೋ ಬತ ಮಮಾಸಾಧು ಕೃತಂ ವೈ ದಭ್ರಬುದ್ಧಿನಾ ।
ಯನ್ಮಯೈಶ್ವರ್ಯಮತ್ತೇನ ಗುರುಃ ಸದಸಿ ಕಾತ್ಕೃತಃ ॥ ೧೧ ॥

ಕೋ ಗೃಧ್ಯೇತ್ಪಂಡಿತೋ ಲಕ್ಷ್ಮೀಂ ತ್ರಿವಿಷ್ಟಪಪತೇರಪಿ ।
ಯಯಾಹಮಾಸುರಂ ಭಾವಂ ನೀತೋಽದ್ಯ ವಿಬುಧೇಶ್ವರಃ ॥ ೧೨ ॥

ಯೇ ಪಾರಮೇಷ್ಠ್ಯಂ ಧಿಷಣಮಧಿತಿಷ್ಠನ್ನ ಕಂಚನ ।
ಪ್ರತ್ಯುತ್ತಿಷ್ಠೇದಿತಿ ಬ್ರೂಯುರ್ಧರ್ಮಂ ತೇ ನ ಪರಂ ವಿದುಃ ॥ ೧೩ ॥

ತೇಷಾಂ ಕುಪಥದೇಷ್ಟೄಣಾಂ ಪತತಾಂ ತಮಸಿ ಹ್ಯಧಃ ।
ಯೇ ಶ್ರದ್ದಧ್ಯುರ್ವಚಸ್ತೇ ವೈ ಮಜ್ಜಂತ್ಯಶ್ಮಪ್ಲವಾ ಇವ ॥ ೧೪ ॥

ಅಥಾಹಮಮರಾಚಾರ್ಯಮಗಾಧಧಿಷಣಂ ದ್ವಿಜಮ್ ।
ಪ್ರಸಾದಯಿಷ್ಯೇ ನಿಶಠಃ ಶೀರ್ಷ್ಣಾ ತಚ್ಚರಣಂ ಸ್ಪೃಶನ್ ॥ ೧೫ ॥

ಏವಂ ಚಿಂತಯತಸ್ತಸ್ಯ ಮಘೋನೋ ಭಗವಾನ್ಗೃಹಾತ್ ।
ಬೃಹಸ್ಪತಿರ್ಗತೋಽದೃಷ್ಟಾಂ ಗತಿಮಧ್ಯಾತ್ಮಮಾಯಯಾ ॥ ೧೬ ॥

ಗುರೋರ್ನಾಧಿಗತಃ ಸಂಜ್ಞಾಂ ಪರೀಕ್ಷನ್ ಭಗವಾನ್ ಸ್ವರಾಟ್ ।
ಧ್ಯಾಯನ್ ಧಿಯಾ ಸುರೈರ್ಯುಕ್ತಃ ಶರ್ಮನಾಲಭತಾತ್ಮನಃ ॥ ೧೭ ॥

ತಚ್ಛ್ರುತ್ವೈವಾಸುರಾಃ ಸರ್ವ ಆಶ್ರಿತ್ಯೌಶನಸಂ ಮತಮ್ ।
ದೇವಾನ್ ಪ್ರತ್ಯುದ್ಯಮಂ ಚಕ್ರುರ್ದುರ್ಮದಾ ಆತತಾಯಿನಃ ॥ ೧೮ ॥

ತೈರ್ವಿಸೃಷ್ಟೇಷುಭಿಸ್ತೀಕ್ಷ್ಣೈರ್ನಿರ್ಭಿನ್ನಾಂಗೋರುಬಾಹವಃ ।
ಬ್ರಹ್ಮಾಣಂ ಶರಣಂ ಜಗ್ಮುಃ ಸಹೇಂದ್ರಾ ನತಕಂಧರಾಃ ॥ ೧೯ ॥

ತಾಂಸ್ತಥಾಭ್ಯರ್ದಿತಾನ್ವೀಕ್ಷ್ಯ ಭಗವಾನಾತ್ಮಭೂರಜಃ ।
ಕೃಪಯಾ ಪರಯಾ ದೇವ ಉವಾಚ ಪರಿಸಾಂತ್ವಯನ್ ॥ ೨೦ ॥

ಅಯ್ಯೋ! ನಾನು ಎಂತಹ ಅನ್ಯಾಯ ಮಾಡಿದೆನು? ಮೂರ್ಖತನದಿಂದ ಐಶ್ವರ್ಯದ ಮತ್ತೇರಿದವನಾಗಿ ತುಂಬಿದ ಸಭೆಯಲ್ಲಿ ಗುರುದೇವರಿಗೆ ತಿರಸ್ಕಾರ ಮಾಡಿದೆನಲ್ಲ? ನಿಜವಾಗಿಯೂ ಇದು ಅತ್ಯಂತ ನಿಂದನೀಯ ಕಾರ್ಯವಾಗಿದೆ. ॥ ೧೧ ॥ ಈ ಸ್ವರ್ಗದ ರಾಜ್ಯಲಕ್ಷ್ಮಿಯನ್ನು ಯಾವ ವಿವೇಕಿಯು ಪಡೆಯಲು ಬಯಸುವನು? ಇಂದು ಇದರಿಂದಲೇ ದೇವರಾಜನಾದ ನನ್ನಲ್ಲಿಯೂ ಅಸುರರ ರಜೋಗುಣಭಾವವು ತುಂಬಿ ಹೋಯಿತಲ್ಲ! ॥ ೧೨ ॥ 'ಸಾರ್ವಭೌಮ ಸಿಂಹಾಸನದಲ್ಲಿ ಕುಳಿತಿರುವ ಸಾಮ್ರಾಟನು ಯಾರು ಬಂದರೂ ಸಿಂಹಾಸನದಿಂದ ಏಳಬಾರದು' ಎಂದು ಹೇಳುವವರು ಧರ್ಮದ ನಿಜವಾದ ಸ್ವರೂಪವನ್ನು ಅರಿಯರು. ॥ ೧೩ ॥ ಇಂತಹ ಉಪದೇಶ ಮಾಡುವವರು ಕೆಟ್ಟದಾರಿಗೆ ಕೊಂಡೊಯ್ಯುವವರಾಗಿದ್ದಾರೆ. ಅವರು ಸ್ವತಃ ನರಕಕ್ಕೆ ಸಲ್ಲುವವರು. ಅವರ ಮಾತಿನಲ್ಲಿ ವಿಶ್ವಾಸವಿಡುವವರು ಕಲ್ಲಿನ ದೋಣಿಯಿಂದ ನದಿದಾಟುವವರಂತೆ ಮುಳುಗಿಹೋಗುತ್ತಾರೆ. ॥ ೧೪ ॥ ನನ್ನ ಗುರುಗಳಾದ ಬೃಹಸ್ಪತ್ಯಾಚಾರ್ಯರಾದರೋ ಆಳವಾದ ಜ್ಞಾನದ ಸಮುದ್ರರಾಗಿದ್ದಾರೆ. ಅವರಲ್ಲಿ ಕಪಟವನ್ನೂ ಅವಿನಯವನ್ನೂ ತೋರಿದ ನಾನು ಈಗ ಅವರ ಚರಣಗಳಲ್ಲಿ ತಲೆಯನ್ನಿಟ್ಟು ಅವರನ್ನು ಪ್ರಸನ್ನಗೊಳಿಸುವೆನು. ॥ ೧೫ ॥

ಪರೀಕ್ಷಿತನೇ! ದೇವರಾಜ ಇಂದ್ರನು ಹೀಗೆ ಯೋಚಿಸುತ್ತಿರುವಾಗಲೇ ಭಗವಂತರಾದ ಬೃಹಸ್ಪತ್ಯಾಚಾರ್ಯರು ತಮ್ಮ ಮನೆಯಿಂದ ಹೊರಬಿದ್ದು, ಯೋಗಬಲದಿಂದ ಅಂತರ್ಧಾನ ಹೊಂದಿದರು. ॥ ೬ ॥ ದೇವೇಂದ್ರನು ತಮ್ಮ ಗುರುಗಳನ್ನು ಬಹಳವಾಗಿ ಹುಡುಕಿದನು, ಹುಡುಕಿಸಿದನು. ಆದರೆ ಎಲ್ಲಿಯೂ ಅವರ ಸುಳಿವು ಸಿಗಲಿಲ್ಲ. ಆಗ ಅವನು ಗುರುವಿಲ್ಲದೆ ತಾನು ಸುರಕ್ಷಿತನಲ್ಲವೆಂದು ತಿಳಿದು, ದೇವತೆಗಳೊಂದಿಗೆ, ತನ್ನ ಬುದ್ಧಿಗನುಸಾರ ಸ್ವರ್ಗದ ರಕ್ಷಣೆಯ ಉಪಾಯವನ್ನು ಯೋಚಿಸತೊಡಗಿದನು. ಆದರೂ ಅವನು ಏನನ್ನೂ ನಿಶ್ಚಯಿಸದಾದನು. ಅವನ ಚಿತ್ತವು ಅಶಾಂತವೇ ಆಗಿ ಉಳಿಯಿತು. ॥ ೧೭ ॥ ರಾಜೇಂದ್ರಾ! ದೇವಗುರು ಬೃಹಸ್ಪತಿಯವರ ಮೇಲೆ ದೇವೇಂದ್ರನಿಗೆ ಉಂಟಾಗಿದ್ದ ಮನೋಮಾಲಿನ್ಯದ ಸುಳಿವು ದೈತ್ಯರಿಗೆ ಸಿಕ್ಕಿತು. ಆಗ ಆ ಮದೋನ್ಮತ್ತ, ಆತತಾಯಿಗಳಾದ ಅಸುರರು ತಮ್ಮ ಗುರುಗಳಾದ ಶುಕ್ರಾಚಾರ್ಯರ ಆದೇಶದಂತೆ ದೇವತೆಗಳ ಮೇಲೆ ವಿಜಯವನ್ನು ಸಾಧಿಸಲು ಯುದ್ಧವನ್ನು ಸಾರಿದರು. ॥ ೧೮ ॥ ಅವರು ದೇವತೆಗಳ ಮೇಲೆ ಹರಿತವಾದ ಬಾಣಗಳನ್ನು ಮಳೆಗರೆದರು. ಅದರಿಂದ ಅವರ ಅಂಗಾಂಗಗಳು ಛಿದ್ರ-ಛಿದ್ರವಾಗಿ ಕಳಚಿ ಬೀಳತೊಡಗಿದುವು. ಆಗ ದೇವೇಂದ್ರನೊಂದಿಗೆ ಎಲ್ಲ ದೇವತೆಗಳೂ ಸೇರಿ ಬ್ರಹ್ಮದೇವರ ಬಳಿಗೆ ಸಾರಿ ನತಮಸ್ತಕರಾಗಿ ಅವರಿಗೆ ಶರಣಾದರು. ॥ ೧೯ ॥ ಸ್ವಯಂಭುವೂ, ಸರ್ವಸಮರ್ಥರೂ ಆದ ಬ್ರಹ್ಮದೇವರಿಗೆ 'ದೇವತೆಗಳಿಗೆ ನಿಜವಾದ ದುರ್ದಶೆ ಉಂಟಾಗಿದೆ' ಎಂದು ಅರಿವಾಗಿ ಅವರ ಹೃದಯ ಅತ್ಯಂತ ಕರುಣೆಯಿಂದ ತುಂಬಿಹೋಯಿತು. ಅವರು ದೇವತೆಗಳಿಗೆ ಧೈರ್ಯವನ್ನು ತುಂಬುತ್ತಾ ಹೀಗೆ ನುಡಿದರು. ॥ ೨೦ ॥

*ಬ್ರಹ್ಮೋವಾಚ*

ಅಹೋ ಬತ ಸುರಶ್ರೇಷ್ಠಾ ಹ್ಯಭದ್ರಂ ವಃ ಕೃತಂ ಮಹತ್ ।
ಬ್ರಹ್ಮಿಷ್ಠಂ ಬ್ರಾಹ್ಮಣಂ ದಾಂತಮೈಶ್ವರ್ಯಾನ್ನಾಭ್ಯನಂದತ ॥ ೨೧ ॥

ತಸ್ಯಾಯಮನಯಸ್ಯಾಸೀತ್ಪರೇಭ್ಯೋ ವಃ ಪರಾಭವಃ ।
ಪ್ರಕ್ಷೀಣೇಭ್ಯಃ ಸ್ವವೈರಿಭ್ಯಃ ಸಮೃದ್ಧಾನಾಂ ಚ ಯತ್ಸುರಾಃ ॥ ೨೨ ॥

ಮಘವಂದ್ವಿಷತಃ ಪಶ್ಯ ಪ್ರಕ್ಷೀಣಾನ್ ಗುರ್ವತಿಕ್ರಮಾತ್ ।
ಸಂಪ್ರತ್ಯುಪಚಿತಾನ್ಭೂಯಃ ಕಾವ್ಯಮಾರಾಧ್ಯ ಭಕ್ತಿತಃ ।
ಆದದೀರನ್ನಿಲಯನಂ ಮಮಾಪಿ ಭೃಗುದೇವತಾಃ ॥ ೨೩ ॥

ತ್ರಿವಿಷ್ಟಪಂ ಕಿಂ ಗಣಯಂತ್ಯಭೇದ್ಯ-
ಮಂತ್ರಾ ಭೃಗೂಣಾಮನುಶಿಕ್ಷಿತಾರ್ಥಾಃ ।
ನ ವಿಪ್ರಗೋವಿಂದಗವೀಶ್ವರಾಣಾಂ
ಭವಂತ್ಯಭದ್ರಾಣಿ ನರೇಶ್ವರಾಣಾಮ್ ॥ ೨೪ ॥

ತದ್ ವಿಶ್ವರೂಪಂ ಭಜತಾಶು ವಿಪ್ರಂ
ತಪಸ್ವಿನಂ ತ್ವಾಷ್ಟ್ರಮಥಾತ್ಮವಂತಮ್ ।
ಸಭಾಜಿತೋಽರ್ಥಾನ್ ಸವಿಧಾಸ್ಯತೇ ವೋ
ಯದಿ ಕ್ಷಮಿಷ್ಯಧ್ವಮುತಾಸ್ಯ ಕರ್ಮ ॥ ೨೫ ॥

*ಶ್ರೀಶುಕ ಉವಾಚ*

ತ ಏವಮುದಿತಾ ರಾಜನ್ ಬ್ರಹ್ಮಣಾ ವಿಗತಜ್ವರಾಃ ।
ಋಷಿಂ ತ್ವಾಷ್ಟ್ರಮುಪವ್ರಜ್ಯ ಪರಿಷ್ವಜ್ಯೇದಮಬ್ರುವನ್ ॥ ೨೬ ॥

*ದೇವಾ ಊಚುಃ*

ವಯಂ ತೇಽತಿಥಯಃ ಪ್ರಾಪ್ತಾ ಆಶ್ರಮಂ ಭದ್ರಮಸ್ತು ತೇ ।
ಕಾಮಃ ಸಂಪಾದ್ಯತಾಂ ತಾತ ಪಿತೃಣಾಂ ಸಮಯೋಚಿತಃ ॥ ೨೭ ॥

ಪುತ್ರಾಣಾಂ ಹಿ ಪರೋ ಧರ್ಮಃ ಪಿತೃಶುಶ್ರೂಷಣಂ ಸತಾಮ್ ।
ಅಪಿ ಪುತ್ರವತಾಂ ಬ್ರಹ್ಮನ್ ಕಿಮುತ ಬ್ರಹ್ಮಚಾರಿಣಾಮ್ ॥ ೨೮ ॥

ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ ।
ಭ್ರಾತಾ ಮರುತ್ಪತೇರ್ಮೂರ್ತಿರ್ಮಾತಾ ಸಾಕ್ಷಾತ್ ಕ್ಷಿತೇಸ್ತನುಃ ॥ ೨೯ ॥

**ಬ್ರಹ್ಮದೇವರು ಹೇಳುತ್ತಾರೆ** – ಎಲೈ ದೇವಶ್ರೇಷ್ಠರಿರಾ! ನೀವು ಎಂತಹ ಕೆಲಸವನ್ನು ಮಾಡಿಬಿಟ್ಟಿರಿ? ಅಯ್ಯೋ! ಶಿವ-ಶಿವಾ! ನೀವು ಐಶ್ವರ್ಯಮದದಿಂದ ಕುರುಡರಾಗಿ ಬ್ರಹ್ಮಜ್ಞಾನಿಗಳೂ, ವೇದಜ್ಞರೂ, ಸಂಯಮಿಯೂ ಆದ ಬ್ರಾಹ್ಮಣನನ್ನು ಸತ್ಕರಿಸಲಿಲ್ಲವಲ್ಲ! ॥ ೨೧ ॥ ದೇವತೆಗಳಿರಾ! ಇಂದು ನೀವು ಸಮೃದ್ಧಶಾಲಿಗಳಾಗಿದ್ದರೂ ನಿಮ್ಮ ನಿರ್ಬಲರಾದ ಶತ್ರುಗಳ ಮುಂದೆ ತಲೆತಗ್ಗಿಸಬೇಕಾಯಿತಲ್ಲ! ಇದು ನೀವು ಗೈದ ಅನೀತಿಯ ಫಲವೇ ಆಗಿದೆ. ॥ ೨೨ ॥ ದೇವೇಂದ್ರಾ! ನೋಡು! ನಿಮ್ಮ ಶತ್ರುಗಳೂ ಕೂಡ ಹಿಂದೆ ತಮ್ಮ ಗುರುಗಳಾದ ಶುಕ್ರಾಚಾರ್ಯರನ್ನು ತಿರಸ್ಕರಿಸಿದ್ದರಿಂದ ಅತ್ಯಂತ ನಿರ್ಬಲರಾಗಿದ್ದರು. ಆದರೆ ಈಗ ಭಕ್ತಿಭಾವದಿಂದ ಅವರನ್ನು ಆರಾಧಿಸಿ ದೈತ್ಯರು ಪುನಃ ಧನ, ಜನ, ಬಲದಿಂದ ಸಂಪನ್ನರಾಗಿರುವರು. ಶುಕ್ರಾಚಾರ್ಯರನ್ನು ತಮ್ಮ ಆರಾಧ್ಯದೇವರೆಂದು ತಿಳಿದ ಈ ದೈತ್ಯರು ಕೆಲವೇ ದಿನಗಳಲ್ಲಿ ನನ್ನ ಈ ಬ್ರಹ್ಮಲೋಕವನ್ನೂ ಕಸಿದುಕೊಳ್ಳುವರೋ ಎಂದು ನನಗೆ ಅನಿಸುತ್ತದೆ. ॥ ೨೩ ॥ ಭೃಗುವಂಶೀಯರು ಇವರಿಗೆ ಅರ್ಥಶಾಸ್ತ್ರದ ಸಮಗ್ರ ಶಿಕ್ಷಣ ಕೊಟ್ಟಿರುವರು. ಇವರು ಏನು ಮಾಡಬೇಕೆಂದು ಬಯಸುವರೋ ಅದರ ಸುಳಿವು ನಿಮಗೆ ತಿಳಿಯದು. ಅವರ ಸಲಹೆ ಅತಿಗುಪ್ತವಾಗಿರುತ್ತದೆ. ಇಂತಹ ಸ್ಥಿತಿಯಲ್ಲಿ ಬರೇ ಈ ಸ್ವರ್ಗವೇನು, ಅವರು ಬಯಸಿದರೆ ಯಾವ ಲೋಕವನ್ನಾದರೂ ಗೆಲ್ಲಬಲ್ಲರು. ಯಾವ ರಾಜರು ಬ್ರಾಹ್ಮಣರು, ಗೋವಿಂದ ಮತ್ತು ಗೋವು ಇವರನ್ನು ತಮ್ಮ ಸರ್ವಸ್ವವೆಂದು ಭಾವಿಸುತ್ತಾ ಅವರ ಕೃಪೆಗೆ ಪಾತ್ರರಾಗಿದ್ದಾರೋ ಅವರಿಗೆ ಎಂದೂ ಅಮಂಗಲ ಉಂಟಾಗುವುದಿಲ್ಲ ಎಂಬುದು ನಿಜವಾಗಿದೆ. ॥ ೨೪ ॥ ಆದಕ್ಕಾಗಿ ಈಗ ನೀವು ಬೇಗನೇ ತ್ವಷ್ಟಾನ ಪುತ್ರನಾದ ವಿಶ್ವರೂಪರ ಬಳಿಗೆ ಹೋಗಿ, ಅವರ ಸೇವೆ ಮಾಡಿರಿ. ಅವರು ನಿಜವಾದ ಬ್ರಾಹ್ಮಣರಾಗಿದ್ದು ತಪಸ್ವಿಗಳೂ, ಸಂಯಮಿಗಳೂ ಆಗಿದ್ದಾರೆ. ಅವರಲ್ಲಿರುವ ಅಸುರರ ಕುರಿತು ಪ್ರೀತಿಯನ್ನು ಕ್ಷಮಿಸಿ, ಅವರನ್ನೂ ಸಮ್ಮಾನಿಸಿದರೆ ಅವರು ನಿಮ್ಮ ಕೆಲಸವನ್ನು ನೆರವೇರಿಸಿಕೊಡುವರು. ॥ ೨೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಬ್ರಹ್ಮದೇವರು ಹೀಗೆ ಹೇಳಲು ದೇವತೆಗಳ ಚಿಂತಾಜ್ವರವು ದೂರವಾಗಿ, ಅವರು ತ್ವಷ್ಟಾನ ಪುತ್ರನಾದ ವಿಶ್ವರೂಪನ ಬಳಿಗೆ ಹೋಗಿ ಅವನನ್ನು ಆಲಿಂಗಿಸಿಕೊಂಡು ಹೀಗೆ ಪ್ರಾರ್ಥಿಸಿದರು – ॥ ೨೬ ॥

**ದೇವತೆಗಳೆಂದರು** – ಮಗು ವಿಶ್ವರೂಪ! ನಿನಗೆ ಮಂಗಳವಾಗಲಿ. ನಾವು ಅತಿಥಿಗಳಾಗಿ ನಿನ್ನ ಆಶ್ರಮಕ್ಕೆ ಬಂದಿರುವೆವು. ನಾವು ಒಂದು ರೀತಿಯಲ್ಲಿ ನಿನ್ನ ತಂದೆಯ ಸ್ಥಾನದಲ್ಲಿರುವೆವು. ಅದಕ್ಕಾಗಿ ನೀನು ನಮ್ಮಗಳ ಸಮಯೋಚಿತವಾದ ಅಭಿಲಾಷೆಯನ್ನು ಈಡೇರಿಸಬೇಕು. ॥ ೨೭ ॥ ಎಲೈ ಬ್ರಾಹ್ಮಣೋತ್ತಮಾ! ತಂದೆಯ ಮತ್ತು ಗುರುಹಿರಿಯರ ಸೇವೆಮಾಡುವುದು ಸತ್ಪುತ್ರರಿಗೆ ಪರಮಧರ್ಮವೇ ಆಗಿದೆ. ಹೀಗಿರುವಾಗ ಬ್ರಹ್ಮಚಾರಿಗಳಿಗೆ ಹೇಳುವುದೇನಿದೆ? ॥ ೨೮ ॥ ವತ್ಸ! ಆಚಾರ್ಯನು ವೇದದ, ತಂದೆಯು ಬ್ರಹ್ಮದೇವರ, ಅಣ್ಣನು ಇಂದ್ರನ ಮತ್ತು ತಾಯಿಯು ಸಾಕ್ಷಾತ್ ಪೃಥಿವಿಯ ಮೂರ್ತಿಯೇ ಆಗಿದ್ದಾರೆ. ॥ ೨೯ ॥

ದಯಾಯಾ ಭಗಿನೀ ಮೂರ್ತಿರ್ಧರ್ಮಸ್ಯಾತ್ಮಾತಿಥಿಃ ಸ್ವಯಮ್ ।
ಅಗ್ನೇರಭ್ಯಾಗತೋ ಮೂರ್ತಿಃ ಸರ್ವಭೂತಾನಿ ಚಾತ್ಮನಃ ॥ ೩೦ ॥

ತಸ್ಮಾತ್ ಪಿತೄಣಾಮಾರ್ತಾನಾಮಾರ್ತಿಂ ಪರಪರಾಭವಮ್ ।
ತಪಸಾಪನಯಂಸ್ತಾತ ಸಂದೇಶಂ ಕರ್ತುಮರ್ಹಸಿ ॥ ೩೧ ॥

ವೃಣೀಮಹೇ ತ್ವೋಪಾಧ್ಯಾಯಂ ಬ್ರಹ್ಮಿಷ್ಠಂ ಬ್ರಾಹ್ಮಣಂ ಗುರುಮ್ ।
ಯಥಾಂಜಸಾ ವಿಜೇಷ್ಯಾಮಃ ಸಪತ್ನಾಂಸ್ತವ ತೇಜಸಾ ॥ ೩೨ ॥

ನ ಗರ್ಹಯಂತಿ ಹ್ಯರ್ಥೇಷು ಯವಿಷ್ಠಾಂಘ್ರ್ಯಭಿವಾದನಮ್ ।
ಛಂದೋಭ್ಯೋऽನ್ಯತ್ರ ನ ಬ್ರಹ್ಮನ್ವಯೋ ಜ್ಯೈಷ್ಠ್ಯಸ್ಯ ಕಾರಣಮ್ ॥ ೩೩ ॥

*ಋಷಿರುವಾಚ*

ಅಭ್ಯರ್ಥಿತಃ ಸುರಗಣೈಃ ಪೌರೋಹಿತ್ಯೇ ಮಹಾತಪಾಃ ।
ಸ ವಿಶ್ವರೂಪಸ್ತಾನಾಹ ಪ್ರಸನ್ನಃ ಶ್ಲಕ್ಷ್ಣಯಾ ಗಿರಾ ॥ ೩೪ ॥

*ವಿಶ್ವರೂಪ ಉವಾಚ*

ವಿಗರ್ಹಿತಂ ಧರ್ಮಶೀಲೈರ್ಬ್ರಹ್ಮವರ್ಚಉಪವ್ಯಯಮ್ ।
ಕಥಂ ನು ಮದ್ವಿಧೋ ನಾಥಾ ಲೋಕೇಶೈರಭಿಯಾಚಿತಮ್ ।
ಪ್ರತ್ಯಾಖ್ಯಾಸ್ಯತಿ ತಚ್ಛಿಷ್ಯಃ ಸ ಏವ ಸ್ವಾರ್ಥ ಉಚ್ಯತೇ ॥ ೩೫ ॥

ಅಕಿಂಚನಾನಾಂ ಹಿ ಧನಂ ಶಿಲೋಂಛನಂ
ತೇನೇಹ ನಿರ್ವರ್ತಿತಸಾಧುಸತ್ಕ್ರಿಯಃ ।
ಕಥಂ ವಿಗರ್ಹ್ಯಂ ನು ಕರೋಮ್ಯಧೀಶ್ವರಾಃ
ಪೌರೋಧಸಂ ಹೃಷ್ಯತಿ ಯೇನ ದುರ್ಮತಿಃ ॥ ೩೬ ॥

ತಥಾಪಿ ನ ಪ್ರತಿಬ್ರೂಯಾಂ ಗುರುಭಿಃ ಪ್ರಾರ್ಥಿತಂ ಕಿಯತ್ ।
ಭವತಾಂ ಪ್ರಾರ್ಥಿತಂ ಸರ್ವಂ ಪ್ರಾಣೈರರ್ಥೈಶ್ಚ ಸಾಧಯೇ ॥ ೩೭ ॥

*ಶ್ರೀಶುಕ ಉವಾಚ*

ತೇಭ್ಯ ಏವಂ ಪ್ರತಿಶ್ರುತ್ಯ ವಿಶ್ವರೂಪೋ ಮಹಾತಪಾಃ ।
ಪೌರೋಹಿತ್ಯಂ ವೃತಶ್ಚಕ್ರೇ ಪರಮೇಣ ಸಮಾಧಿನಾ ॥ ೩೮ ॥

ಹಾಗೆಯೇ ಸಹೋದರಿಯು ದಯೆಯ, ಅತಿಥಿ ಧರ್ಮದ, ಅಭ್ಯಾಗತರು ಅಗ್ನಿಯ ಮತ್ತು ಜಗತ್ತಿನ ಎಲ್ಲ ಪ್ರಾಣಿಗಳು ತನ್ನ ಆತ್ಮನ ಮೂರ್ತಿ-ಆತ್ಮಸ್ವರೂಪರಾಗಿದ್ದಾರೆ. ॥ ೩೦ ॥ ಎಲೈ ಪುತ್ರನೇ! ನಾವು ನಿನ್ನ ತಂದೆಯ ಸ್ಥಾನದಲ್ಲಿದ್ದೇವೆ. ಇಂತಹ ಪೂಜ್ಯಸ್ಥಾನದಲ್ಲಿರುವ ನಾವು ಶತ್ರುಗಳಿಂದ ಪರಾಜಿತರಾಗಿ ಬಹಳ ದುಃಖದಲ್ಲಿದ್ದೇವೆ. ನೀನು ನಿನ್ನ ತಪೋಬಲದಿಂದ ನಮ್ಮ ಈ ದುಃಖ, ದಾರಿದ್ರ್ಯ, ಪರಾಜಯಗಳನ್ನು ಹೋಗಲಾಡಿಸು. ನಮ್ಮ ಈ ಆಜ್ಞೆಯನ್ನು ನೀನು ನಡೆಸಿ ಕೊಡಬೇಕು. ॥ ೩೧ ॥ ನೀನು ಬ್ರಹ್ಮನಿಷ್ಠ ಬ್ರಾಹ್ಮಣನಾಗಿರುವುದರಿಂದ ಹುಟ್ಟಿನಿಂದಲೇ ನಮಗೆ ಗುರುವಾಗಿರುವೆ. ನಾವು ನಿನ್ನನ್ನು ಆಚಾರ್ಯನನ್ನಾಗಿ ವರಣಮಾಡಿ ನಿನ್ನ ಶಕ್ತಿಯಿಂದ ಅನಾಯಾಸವಾಗಿಯೇ ಶತ್ರುಗಳ ಮೇಲೆ ಜಯಗಳಿಸುವೆವು. ॥ ೩೨ ॥ ಬ್ರಾಹ್ಮಣೋತ್ತಮಾ! ಅವಶ್ಯಕತೆ ಒದಗಿದಾಗ ವಯಸ್ಸಿನಲ್ಲಿ ಚಿಕ್ಕವರಾದವರಿಗೆ ನಮಸ್ಕರಿಸುವುದು ನಿಂದ್ಯವಾಗುವುದಿಲ್ಲ. ಹಿರಿತನಕ್ಕೆ ವೇದಗಳ ಜ್ಞಾನವೇ ಹೊರತು ವಯಸ್ಸು ಕಾರಣವಲ್ಲ. ॥ ೩೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ದೇವತೆಗಳು ಹೀಗೆ ವಿಶ್ವರೂಪನನ್ನು ತಮ್ಮ ಪೌರೋಹಿತ್ಯವನ್ನು ವಹಿಸಿಕೊಳ್ಳಲು ಪ್ರಾರ್ಥಿಸಿದಾಗ ಪರಮತಪಸ್ವೀ ವಿಶ್ವರೂಪನು ಪ್ರಸನ್ನನಾಗಿ ಅತ್ಯಂತ ಪ್ರಿಯವೂ, ಮಧುರವೂ ಆದ ಮಾತುಗಳಿಂದ ಹೀಗೆಂದನು – ॥ ೩೪ ॥

**ವಿಶ್ವರೂಪನು ಹೇಳಿದನು** – ಧರ್ಮಶೀಲರಾದ ಮಹಾತ್ಮರು ಪೌರೋಹಿತ್ಯವೃತ್ತಿಯನ್ನು ನಿಂದಿಸುತ್ತಾರೆ. ಏಕೆಂದರೆ ಅದರಿಂದ ಬ್ರಹ್ಮವರ್ಚಸ್ಸು ಕ್ಷಯಹೊಂದುತ್ತದೆ. ಆದರೆ ನೀವು ನನಗೆ ಒಡೆಯರಾಗಿ ಲೋಕೇಶ್ವರರಾಗಿ ಅದನ್ನು ವಹಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತಿದ್ದೀರಿ. ಇಂತಹ ಸ್ಥಿತಿಯಲ್ಲಿ ನನ್ನಂತಹವನು ನಿಮ್ಮಗಳ ಮಾತನ್ನು ಹೇಗೆ ಮೀರಬಲ್ಲನು? ನಾನಾದರೋ ನಿಮ್ಮ ಸೇವಕ ನಾಗಿರುವೆನು. ನಿಮ್ಮ ಆಜ್ಞೆಯನ್ನು ಪಾಲಿಸುವುದೇ ನನ್ನ ಧರ್ಮವೂ ಆಗಿದೆ. ॥ ೩೫ ॥ ದೇವತೆಗಳಿರಾ! ವಿರಕ್ತರಾದ ದರಿದ್ರರಿಗೆ ಶಿಲೋಂಛವೃತ್ತಿಗಳೇ ಜೀವನಧನವು. ಆ ವೃತ್ತಿಗಳಿಂದ ದೇವಕಾರ್ಯ-ಪಿತೃಕಾರ್ಯ ಮುಂತಾದ ಧರ್ಮಕಾರ್ಯಗಳನ್ನು ನೆರವೇರಿಸುತ್ತಿರುವ ನಾನು ನಿಂದೆಗೆ ಯೋಗ್ಯವಾದ ಪುರೋಹಿತ ವೃತ್ತಿಯನ್ನು ಏಕೆ ಮಾಡಲಿ? ಬುದ್ಧಿ ಕೆಟ್ಟುಹೋದವರು ತಾನೇ ಈ ವೃತ್ತಿಯಿಂದ ಪ್ರಸನ್ನರಾಗುವರು. ॥ ೩೬ ॥ ನೀವು ನನ್ನಿಂದ ಏನನ್ನು ಬಯಸುವಿರೋ ಅದಕ್ಕೇ ಎದುರಾಡುವುದಿಲ್ಲ ಮತ್ತು ಗುರು-ಹಿರಿಯರಾದ ನಿಮ್ಮ ಪ್ರಾರ್ಥನೆಯನ್ನು ತಳ್ಳಿ ಹಾಕುವುದಿಲ್ಲ. ಅದಕ್ಕೆ ಎದುರಾಡುವುದಿಲ್ಲ. ನನ್ನ ತನು-ಮನ-ಧನಗಳಿಂದಲೂ ನೀವು ಹೇಳಿದುದನ್ನು ನಡೆಸಿ ಕೊಡುವೆನು. ॥ ೩೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರನೇ! ಮಹಾತಪಸ್ವಿಯಾದ ಆ ವಿಶ್ವರೂಪನು ದೇವತೆಗಳ ಮುಂದೆ ಹೀಗೆ ಪ್ರತಿಜ್ಞೆಮಾಡಿ ಅವರಿಂದ ಪೌರೋಹಿತ್ಯಕ್ಕಾಗಿ ವರಿಸಲ್ಪಟ್ಟು ಆ ಕಾರ್ಯವನ್ನು ಅತ್ಯಂತ ಶ್ರದ್ಧಾಸಕ್ತಿಗಳಿಂದ ನಡೆಸತೊಡಗಿದನು. ॥ ೩೮ ॥ ಶುಕ್ರಾಚಾರ್ಯರು ತಮ್ಮ ವಿದ್ಯಾಬಲದಿಂದ ಅಸುರರ ಸಂಪತ್ತನ್ನು ಸುರಕ್ಷಿತಗೊಳಿಸಿದ್ದರು. ಸಮರ್ಥನಾದ ವಿಶ್ವರೂಪನು

**ಸುರದ್ವಿಷಾಂ ಶ್ರಿಯಂ ಗುಪ್ತಾಮೌಶನಸ್ಯಾಪಿ ವಿದ್ಯಯಾ ।**
**ಆಚ್ಛಿದ್ಯಾದಾನ್ಮಹೇಂದ್ರಾಯ ವೈಷ್ಣವ್ಯಾ ವಿದ್ಯಯಾ ವಿಭುಃ ॥ ೩೯ ॥**

**ಯಯಾ ಗುಪ್ತಃ ಸಹಸ್ರಾಕ್ಷೋ ಜಿಗ್ಯೇಽಸುರಚಮೂರ್ವಿಭುಃ ।**
**ತಾಂ ಪ್ರಾಹ ಸ ಮಹೇಂದ್ರಾಯ ವಿಶ್ವರೂಪ ಉದಾರಧೀಃ ॥ ೪೦ ॥**

ವೈಷ್ಣವೀ ವಿದ್ಯೆಯ ಬಲದಿಂದ ಆ ಸಂಪತ್ತನ್ನು ಕಿತ್ತುಕೊಂಡು ದೇವೇಂದ್ರನಿಗೆ ಕೊಡಿಸಿದನು. ॥ ೩೯ ॥ ರಾಜನೇ! ಯಾವ ವಿದ್ಯೆಯ ಬಲದಿಂದ ಇಂದ್ರನು ಸಂರಕ್ಷಿತನಾಗಿ ಅಸುರರ ಸಮೂಹವನ್ನು ಗೆದ್ದು ವಿಜಯವನ್ನು ಗಳಿಸಿದನೋ ಆ ವೈಷ್ಣವೀವಿದ್ಯೆಯನ್ನು ಉದಾರ ಬುದ್ಧಿಯುಳ್ಳ ವಿಶ್ವರೂಪನೇ ಇಂದ್ರನಿಗೆ ಉಪದೇಶ ಮಾಡಿದ್ದನು. ॥ ೪೦ ॥

*ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ಸಪ್ತಮೋಽಧ್ಯಾಯಃ ॥ ೭ ॥**

# ಎಂಟನೆಯ ಅಧ್ಯಾಯ

## ವಿಶ್ವರೂಪನು ಇಂದ್ರನಿಗೆ ನಾರಾಯಣ ಕವಚವನ್ನು ಉಪದೇಶಿಸಿದುದು

*ರಾಜೋವಾಚ*

**ಯಯಾ ಗುಪ್ತಃ ಸಹಸ್ರಾಕ್ಷಃ ಸವಾಹಾನ್ ರಿಪುಸೈನಿಕಾನ್ ।**
**ಕ್ರೀಡನ್ನಿವ ವಿನಿರ್ಜಿತ್ಯ ತ್ರಿಲೋಕ್ಯಾ ಬುಭುಜೇ ಶ್ರಿಯಮ್ ॥ ೧ ॥**

**ಭಗವಂಸ್ತನ್ಮಮಾಖ್ಯಾಹಿ ವರ್ಮ ನಾರಾಯಣಾತ್ಮಕಮ್ ।**
**ಯಥಾಽಽತತಾಯಿನಃ ಶತ್ರೂನ್ಯೇನ ಗುಪ್ತೋಽಜಯನ್ಮೃಧೇ ॥ ೨ ॥**

**ಪರೀಕ್ಷಿತರಾಜನು ಕೇಳಿದನು** – ಮಹಾತ್ಮರೇ! ದೇವೇಂದ್ರನು ಯಾವ ವಿದ್ಯೆಯಿಂದ ಸಂರಕ್ಷಿತನಾಗಿ ಶತ್ರುಗಳ ಚತುರಂಗ ಸೈನ್ಯವನ್ನು ಆಟಗಾರಿಕೆಯೋ ಎಂಬಂತೆ ಅನಾಯಾಸವಾಗಿ ಸೋಲಿಸಿ ಮೂರುಲೋಕಗಳ ಐಶ್ವರ್ಯವನ್ನು ಅನುಭವಿಸಿದನೋ, ಆ ನಾರಾಯಣಕವಚವೆಂಬ ಮಹಾಮಂತ್ರವನ್ನು ನನಗೆ ತಿಳಿಸಿರಿ. ಅದರಿಂದ ಸುರಕ್ಷಿತನಾಗಿ ಅವನು ರಣಭೂಮಿಯಲ್ಲಿ ಆಕ್ರಮಣಕಾರಿಗಳಾದ ಶತ್ರುಗಳನ್ನು ಸೋಲಿಸಿ ವಿಜಯವನ್ನು ಹೇಗೆ ಪಡೆದನು? ಎಂಬುದನ್ನೂ ನಿರೂಪಿಸಿರಿ. ॥ ೧-೨ ॥

*ಶ್ರೀಶುಕ ಉವಾಚ*

**ವೃತಃ ಪುರೋಹಿತಸ್ತ್ವಾಷ್ಟ್ರೋ ಮಹೇಂದ್ರಾಯಾನುಪೃಚ್ಛತೇ ।**
**ನಾರಾಯಣಾಖ್ಯಂ ವರ್ಮಾಹ ತದಿಹೈಕಮನಾಃ ಶೃಣು ॥ ೩ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ದೇವತೆಗಳು ವಿಶ್ವರೂಪನನ್ನು ಪುರೋಹಿತನನ್ನಾಗಿ ಮಾಡಿಕೊಂಡಾಗ ದೇವೇಂದ್ರನು ಪ್ರಶ್ನಿಸಿದಾಗ ವಿಶ್ವರೂಪನು ಅವನಿಗೆ ನಾರಾಯಣಕವಚವನ್ನು ಉಪದೇಶಿಸಿದನು. ಅದನ್ನು ನಾನು ನಿನಗೆ ಹೇಳುವೆನು. ನೀನೂ ಏಕಾಗ್ರತೆಯಿಂದ ಶ್ರವಣಿಸು. ॥ ೩ ॥

*ವಿಶ್ವರೂಪ ಉವಾಚ*

**ಧೌತಾಂಘ್ರಿಪಾಣಿರಾಚಮ್ಯ ಸಪವಿತ್ರ ಉದಙ್ಮುಖಃ ।**
**ಕೃತಸ್ವಾಂಗಕರನ್ಯಾಸೋ ಮಂತ್ರಾಭ್ಯಾಂ ವಾಗ್ಯತಃ ಶುಚಿಃ ॥ ೪ ॥**

**ನಾರಾಯಣಮಯಂ ವರ್ಮ ಸನ್ನಹ್ಯೇದ್ ಭಯ ಆಗತೇ ।**
**ಪಾದಯೋರ್ಜಾನುನೋರೂರ್ವೋರುದರೇ ಹೃದ್ಯಥೋರಸಿ ॥ ೫ ॥**

**ವಿಶ್ವರೂಪನು ಹೇಳಿದನು** – ದೇವರಾಜ ಇಂದ್ರನೇ! ಭಯವು ಏನಾದರೂ ಒದಗಿದರೆ ನಾರಾಯಣಕವಚವನ್ನು ಧರಿಸಿಕೊಂಡು ತನ್ನ ಶರೀರವನ್ನು ರಕ್ಷಿಸಿಕೊಳ್ಳಬೇಕು. ಅದರ ವಿಧಾನ ಇಂತಿದೆ–ಮೊದಲು ಕೈ-ಕಾಲುಗಳನ್ನು ತೊಳೆದುಕೊಂಡು ಆಚಮನ ಮಾಡಬೇಕು. ದರ್ಭೆಯ ಪವಿತ್ರಕವನ್ನು ಧರಿಸಿಕೊಂಡು ಉತ್ತರಾಭಿಮುಖವಾಗಿ ಕುಳಿತುಕೊಳ್ಳಬೇಕು. ಅನಂತರ ಮಂತ್ರಾನುಷ್ಠಾನವು ಮುಗಿಯುವವರೆಗೆ ಮೌನವಾಗಿರಲು ನಿಶ್ಚಯಿಸಿ, ಶುಚಿಯಾಗಿ 'ಓಂ ನಮೋ ನಾರಾಯಣಾಯ' ಮತ್ತು 'ಓಂ ನಮೋ ಭಗವತೇ ವಾಸುದೇವಾಯ' ಎಂಬ ಮಹಾಮಂತ್ರಗಳಿಂದ ಹೃದಯಾದಿ ಅಂಗನ್ಯಾಸವನ್ನು ಅಂಗುಷ್ಠಾದಿ ಕರನ್ಯಾಸವನ್ನು ಮಾಡಬೇಕು. ಮೊದಲು ಓಂ ನಮೋ ನಾರಾಯಣಾಯ ಎಂಬ ಅಷ್ಟಾಕ್ಷರ ಮಂತ್ರದ ಓಂ ಇತ್ಯಾದಿ ಎಂಟು ಅಕ್ಷರಗಳನ್ನು ಕ್ರಮವಾಗಿ ಪಾದಗಳು, ಮೊಣಕಾಲುಗಳು, ತೊಡೆಗಳು, ಹೊಟ್ಟೆ, ಹೃದಯ, ವಕ್ಷಃಸ್ಥಳ, ಮುಖ ಮತ್ತು ತಲೆಯಲ್ಲಿ ನ್ಯಾಸಮಾಡಬೇಕು

ಮುಖೇ ಶಿರಸ್ಯಾನುಪೂರ್ವ್ಯಾದೋಂಕಾರಾದೀನಿ ವಿನ್ಯಸೇತ್ ।
ಓಂ ನಮೋ ನಾರಾಯಣಾಯೇತಿ ವಿಪರ್ಯಯಮಥಾಪಿ ವಾ ॥ ೬ ॥

ಕರನ್ಯಾಸಂ ತತಃ ಕುರ್ಯಾದ್ದ್ವಾದಶಾಕ್ಷರವಿದ್ಯಯಾ ।
ಪ್ರಣವಾದಿಯಕಾರಾಂತಮಂಗುಲ್ಯಂಗುಷ್ಠಪರ್ವಸು ॥ ೭ ॥

ನ್ಯಸೇದ್ಧೃದಯ ಓಂಕಾರಂ ವಿಕಾರಮನು ಮೂರ್ಧನಿ ।
ಷಕಾರಂ ತು ಭ್ರುವೋರ್ಮಧ್ಯೇ ಣಕಾರಂ ಶಿಖಯಾ ದಿಶೇತ್ ॥ ೮ ॥

ವೇಕಾರಂ ನೇತ್ರಯೋರ್ಯುಂಜ್ಯಾನ್ನಕಾರಂ ಸರ್ವಸಂಧಿಷು ।
ಮಕಾರಮಸ್ತ್ರಮುದ್ದಿಶ್ಯ ಮಂತ್ರ ಮೂರ್ತಿರ್ಭವೇದ್ಬುಧಃ ॥ ೯ ॥

ಸವಿಸರ್ಗಂ ಫಡಂತಂ ತತ್ ಸರ್ವದಿಕ್ಷು ವಿನಿರ್ದಿಶೇತ್ ।
ಓಂ ವಿಷ್ಣವೇ ನಮ ಇತಿ ॥ ೧೦ ॥

ಆತ್ಮಾನಂ ಪರಮಂ ಧ್ಯಾಯೇದ್ಧ್ಯೇಯಂ ಷಟ್‌ಶಕ್ತಿಭಿರ್ಯುತಮ್ ।
ವಿದ್ಯಾತೇಜಸ್ತಪೋಮೂರ್ತಿಮಿಮಂ ಮಂತ್ರಮುದಾಹರೇತ್ ॥ ೧೧ ॥

ಓಂ ಹರಿರ್ವಿದಧ್ಯಾನ್ಮಮ ಸರ್ವರಕ್ಷಾಂ
ನ್ಯಸ್ತಾಂಘ್ರಿಪದ್ಮಃ ಪತಗೇಂದ್ರಪೃಷ್ಠೇ ।
ದರಾರಿಚರ್ಮಾಸಿಗದೇಷುಚಾಪ-
ಪಾಶಾಂದಧಾನೋಽಷ್ಟಗುಣೋಽಷ್ಟಬಾಹುಃ ॥ ೧೨ ॥

ಜಲೇಷು ಮಾಂ ರಕ್ಷತು ಮತ್ಸ್ಯಮೂರ್ತಿ-
ರ್ಯಾದೋಗಣೇಭ್ಯೋ ವರುಣಸ್ಯ ಪಾಶಾತ್ ।
ಸ್ಥಲೇಷು ಮಾಯಾವಟುವಾಮನೋಽವ್ಯಾತ್-
ತ್ರಿವಿಕ್ರಮಃ ಖೇಽವತು ವಿಶ್ವರೂಪಃ ॥ ೧೩ ॥

ದುರ್ಗೇಷ್ವಟವ್ಯಾಜಿಮುಖಾದಿಷು ಪ್ರಭುಃ
ಪಾಯಾನ್ನೃಸಿಂಹೋಽಸುರಯೂಥಪಾರಿಃ ।
ವಿಮುಂಚತೋ ಯಸ್ಯ ಮಹಾಟ್ಟಹಾಸಂ
ದಿಶೋ ವಿನೇದುರ್ನ್ಯಪತಂಶ್ಚ ಗರ್ಭಾಃ ॥ ೧೪ ॥

(ಅರ್ಥಾತ್ – ಇರಿಸುವುದು) ಅಥವಾ ಇದಕ್ಕೆ ತಲೆಕೆಳಗಾಗಿ – ಆ ಮಂತ್ರದ ಯಕಾರದಿಂದ ಪ್ರಾರಂಭಿಸಿ ಓಂಕಾರದವರೆಗಿನ ಎಂಟು ಅಕ್ಷರಗಳನ್ನು ತಲೆಯಿಂದ ಪ್ರಾರಂಭಿಸಿ ಪಾದಗಳವರೆಗಿನ ಎಂಟು ಅಂಗಗಳಲ್ಲಿ ನ್ಯಾಸಮಾಡಬೇಕು. ॥ ೪-೬ ॥ ಅನಂತರ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರದ ಓಂಕಾರದಿಂದ ಆರಂಭಿಸಿ ಪ್ರತಿಯೊಂದು ಅಕ್ಷರವನ್ನು ಬಲಗಡೆಯ ತರ್ಜನಿಯಿಂದ ಎಡಗಡೆಯ ತರ್ಜನಿಯ ವರೆಗೆ ಎರಡೂ ಕೈಗಳ ಬೆರಳುಗಳಲ್ಲಿಯೂ ಮತ್ತು ಎರಡು ಅಂಗುಷ್ಠಗಳ ಎರಡೆರಡು ಗಂಟುಗಳಲ್ಲಿ ನ್ಯಾಸಮಾಡಬೇಕು. ॥ ೭ ॥ ಬಳಿಕ – 'ಓಂ ವಿಷ್ಣವೇ ನಮಃ' ಎಂಬ ಮಂತ್ರದ ಮೊದಲನೆಯ ಅಕ್ಷರವಾದ 'ಓಂ' ಕಾರವನ್ನು ಹೃದಯದಲ್ಲಿಯೂ, 'ವಿ' ಯನ್ನು ಬ್ರಹ್ಮರಂಧ್ರದಲ್ಲಿಯೂ, 'ಷ' ಕಾರವನ್ನು ಹುಬ್ಬುಗಳ ಮಧ್ಯದಲ್ಲೂ, 'ಣ' ಕಾರವನ್ನು ಶಿಖೆಯಲ್ಲಿಯೂ, 'ವೇ' ಕಾರವನ್ನು ಎರಡೂ ಕಣ್ಣುಗಳಲ್ಲಿಯೂ ಮತ್ತು 'ನ' ಕಾರವನ್ನು ಶರೀರದ ಎಲ್ಲ ಗಂಟುಗಳಲ್ಲಿಯೂ ನ್ಯಾಸಮಾಡಬೇಕು. ಇದಾದ ನಂತರ 'ಓಂ ಮಃ ಅಸ್ತ್ರಾಯಫಟ್' ಎಂದು ಹೇಳಿ ದಿಗ್ಬಂಧನವನ್ನು ಮಾಡಬೇಕು. ಈ ಪ್ರಕಾರ ನ್ಯಾಸ ಮಾಡುವುದರಿಂದ ಈ ವಿಧಿಯನ್ನು ತಿಳಿದ ಮನುಷ್ಯನು ಮಂತ್ರಸ್ವರೂಪನೇ ಆಗುತ್ತಾನೆ. ॥ ೮-೧೦ ॥ ಅನಂತರ ಸಮಗ್ರ ಐಶ್ವರ್ಯ, ಧರ್ಮ, ಯಶ, ಲಕ್ಷ್ಮೀ, ಜ್ಞಾನ ಮತ್ತು ವೈರಾಗ್ಯದಿಂದ ಪರಿಪೂರ್ಣನಾದ ಇಷ್ಟದೇವನಾದ ಭಗವಂತನನ್ನು ಧ್ಯಾನಿಸಬೇಕು ಮತ್ತು ತನ್ನನ್ನೂ ತದ್ರೂಪನಾಗಿಯೇ ಚಿಂತಿಸಬೇಕು. ಬಳಿಕ ವಿದ್ಯೆ, ತೇಜಸ್ಸು ಮತ್ತು ತಪಸ್ಸುರೂಪವಾದ ಈ ಕವಚವನ್ನು ಪಾರಾಯಣ ಮಾಡಬೇಕು. ॥ ೧೧ ॥

"ಭಗವಾನ್ ಶ್ರೀಹರಿಯು ಗರುಡನ ಹೆಗಲಮೇಲೆ ತನ್ನ ಚರಣಕಮಲಗಳನ್ನು ಇರಿಸಿಕೊಂಡಿರುವನು. ಅಣಿಮಾದಿ ಎಂಟೂ ಸಿದ್ಧಿಗಳು ಅವನ ಸೇವೆ ಮಾಡುತ್ತಿದ್ದಾರೆ. ಅವನು ತನ್ನ ಎಂಟು ಕೈಗಳಲ್ಲಿ ಶಂಖ, ಚಕ್ರ, ಗುರಾಣಿ, ಖಡ್ಗ, ಗದೆ, ಬಾಣ, ಧನುಸ್ಸು ಮತ್ತು ಪಾಶಗಳೆಂಬ ದಿವ್ಯ ಆಯುಧಗಳನ್ನು ಧರಿಸಿರುವನು. ಆ ಓಂಕಾರಸ್ವರೂಪನಾದ ಸ್ವಾಮಿಯು ಎಲ್ಲ ರೀತಿಯಿಂದ ಎಲ್ಲ ಕಡೆಗಳಿಂದಲೂ ನನ್ನನ್ನು ರಕ್ಷಿಸಲಿ. ॥ ೧೨ ॥ ಮತ್ಸ್ಯರೂಪನಾದ ಭಗವಂತನು ಜಲದಲ್ಲಿ ಜಲಜಂತುಗಳಿಂದಲೂ ಹಾಗೂ ವರುಣಪಾಶದಿಂದಲೂ ನನ್ನನ್ನು ರಕ್ಷಿಸಲಿ. ಮಾಯೆಯಿಂದ ಬ್ರಹ್ಮಚಾರಿಯ ರೂಪವನ್ನು ಧರಿಸಿದ ಭಗವಾನ್ ವಾಮನನು ನೆಲದ ಮೇಲೂ, ವಿಶ್ವರೂಪಿಯಾದ ಭಗವಾನ್ ತ್ರಿವಿಕ್ರಮನು ಆಕಾಶದಲ್ಲಿಯೂ ನನ್ನನ್ನು ರಕ್ಷಿಸಲಿ. ॥ ೧೩ ॥ ಯಾವನು ಘೋರವಾಗಿ ಅಟ್ಟಹಾಸವನ್ನು ಮಾಡಿದಾಗ ದಿಗ್‌ದಿಗಂತಗಳೆಲ್ಲ ಪ್ರತಿಧ್ವನಿಸಿ ದೈತ್ಯಸ್ತ್ರೀಯರಿಗೆ ಗರ್ಭಪಾತ ಉಂಟಾಯಿತೋ, ಅಂತಹ ದೈತ್ಯರ ಹಿಂಡಿಗೆ ಶತ್ರುವಾದ ಶ್ರೀಭಗವಂತನಾದ ನರಸಿಂಹನು ಕೋಟೆ, ಅರಣ್ಯ, ರಣಭೂಮಿ ಮುಂತಾದ ವಿಕಟವಾದ ಸ್ಥಾನಗಳಲ್ಲಿ ನನ್ನನ್ನು ಕಾಪಾಡಲಿ. ॥ ೧೪ ॥ ತನ್ನ ಕೋರೆದಾಡೆಗಳ ಮೇಲೆ ಭೂದೇವಿಯನ್ನು ಧರಿಸಿಕೊಂಡು ಯಜ್ಞಮೂರ್ತಿಯಾದ ಭಗವಾನ್ ವರಾಹನು ಮಾರ್ಗದಲ್ಲಿಯೂ, ಪರಶುರಾಮದೇವರು

ರಕ್ಷತ್ವಸೌ ಮಾಧ್ವನಿ ಯಜ್ಞಕಲ್ಪಃ
ಸ್ವದಂಷ್ಟ್ರಯೋನ್ನೀತಧರೋ ವರಾಹಃ ।
ರಾಮೋಽದ್ರಿಕೂಟೇಷ್ವಥ ವಿಪ್ರವಾಸೇ
ಸಲಕ್ಷ್ಮಣೋಽವ್ಯಾದ್ಭರತಾಗ್ರಜೋಽಸ್ಮಾನ್ ॥ ೧೫ ॥

ಪರ್ವತಗಳ ಶಿಖರಗಳಲ್ಲಿಯೂ ಮತ್ತು ಲಕ್ಷ್ಮಣನಸಹಿತ ಭರತಾಗ್ರಜನಾದ ಭಗವಾನ್ ಶ್ರೀರಾಮಚಂದ್ರನು ಪ್ರವಾಸದಲ್ಲಿಯೂ ನನ್ನನ್ನು ರಕ್ಷಿಸಲಿ. ॥ ೧೫ ॥

ಮಾಮುಗ್ರಧರ್ಮಾದಖಿಲಾತ್ಪ್ರಮಾದಾ-
ನ್ನಾರಾಯಣಃ ಪಾತು ನರಶ್ಚ ಹಾಸಾತ್ ।
ದತ್ತಸ್ತ್ವಯೋಗಾದಥ ಯೋಗನಾಥಃ
ಪಾಯಾದ್ಗುಣೇಶಃ ಕಪಿಲಃ ಕರ್ಮಬಂಧಾತ್ ॥ ೧೬ ॥

ಭಗವಾನ್ ನಾರಾಯಣನು ಮಾರಣ-ಮೋಹನ ಮುಂತಾದ ಭಯಂಕರ ಅಭಿಚಾರಗಳಿಂದಲೂ ಮತ್ತು ಎಲ್ಲ ಪ್ರಕಾರದ ಪ್ರಮಾದಗಳಿಂದಲೂ ನನ್ನನ್ನು ರಕ್ಷಿಸಲಿ. ಋಷಿಶ್ರೇಷ್ಠನಾದ ನರನು ಗರ್ವದಿಂದಲೂ, ಯೋಗೇಶ್ವರ ಭಗವಾನ್ ದತ್ತಾತ್ರೇಯನು ಯೋಗದ ವಿಘ್ನಗಳಿಂದಲೂ ಹಾಗೂ ತ್ರಿಗುಣಾಧಿಪತಿಯಾದ ಕಪಿಲ ಭಗವಂತನು ಕರ್ಮಬಂಧನಗಳಿಂದಲೂ ನನ್ನನ್ನು ಕಾಪಾಡಲಿ. ॥ ೧೬ ॥

ಸನತ್ಕುಮಾರೋಽವತು ಕಾಮದೇವಾ -
ದ್ಧಯಶೀರ್ಷಾ ಮಾಂ ಪಥಿ ದೇವಹೇಲನಾತ್ ।
ದೇವರ್ಷಿವರ್ಯಃ ಪುರುಷಾರ್ಚನಾಂತರಾತ್
ಕೂರ್ಮೋ ಹರಿರ್ಮಾಂ ನಿರಯಾದಶೇಷಾತ್ ॥ ೧೭ ॥

ಪರಮಋಷಿ ಸನತ್ಕುಮಾರನು ಕಾಮದೇವನಿಂದಲೂ, ಭಗವಾನ್ ಹಯಗ್ರೀವನು ಮಾರ್ಗದಲ್ಲಿ ನಡೆಯುವಾಗ ದೇವತಾಮೂರ್ತಿಗಳಿಗೆ ನಮಸ್ಕಾರಮಾಡದ ಅಪರಾಧದಿಂದಲೂ, ದೇವಋಷಿ ನಾರದರು ಸೇವಾಪರಾಧಗಳಿಂದಲೂ* ಮತ್ತು ಕೂರ್ಮಾವತಾರೀ ಶ್ರೀಹರಿಯು ಎಲ್ಲ ಪ್ರಕಾರದ ನರಕಗಳಿಂದಲೂ ನನ್ನನ್ನು ರಕ್ಷಿಸಲಿ. ॥ ೧೭ ॥

ಧನ್ವಂತರಿರ್ಭಗವಾನ್ಪಾತ್ವಪಥ್ಯಾದ್
ದ್ವಂದ್ವಾದ್ ಭಯಾದೃಷಭೋ ನಿರ್ಜಿತಾತ್ಮಾ ।
ಯಜ್ಞಶ್ಚ ಲೋಕಾದವತಾಜ್ಜನಾಂತಾದ್
ಬಲೋ ಗಣಾತ್ಕ್ರೋಧವಶಾದಹೀಂದ್ರಃ ॥ ೧೮ ॥

ಭಗವಂತನಾದ ಧನ್ವಂತರಿಯು ಕುಪಥ್ಯದಿಂದ, ಜಿತೇಂದ್ರಿಯ ಭಗವಾನ್ ಋಷಭದೇವನು ಸುಖ-ದುಃಖಾದಿ ಭಯದಾಯಕ ದ್ವಂದ್ವಗಳಿಂದ, ಯಜ್ಞಭಗವಂತನು ಲೋಕಾಪವಾದದಿಂದ, ಬಲರಾಮದೇವರು ಜನರು ಕೊಡುವ ಕಷ್ಟದಿಂದ ಮತ್ತು ಶ್ರೀಆದಿಶೇಷನು ಕ್ರೋಧವಶವೆಂಬ ಗಣಕ್ಕೆ ಸೇರಿದ ಸರ್ಪಗಳಿಂದಲೂ ನನ್ನನ್ನು ರಕ್ಷಿಸಲಿ. ॥ ೧೮ ॥

ದ್ವೈಪಾಯನೋ ಭಗವಾನಪ್ರಬೋಧಾದ್
ಬುದ್ಧಸ್ತು ಪಾಖಂಡಗಣಾತ್ಪ್ರಮಾದಾತ್ ।
ಕಲ್ಕಿಃ ಕಲೇಃ ಕಾಲಮಲಾತ್ಪ್ರಪಾತು
ಧರ್ಮಾವನಾಯೋರುಕೃತಾವತಾರಃ ॥ ೧೯ ॥

ಭಗವಾನ್ ಶ್ರೀಕೃಷ್ಣದ್ವೈಪಾಯನ ವ್ಯಾಸರು ಅಜ್ಞಾನದಿಂದ ಮತ್ತು ಬುದ್ಧ ದೇವನು ಪಾಷಂಡಿಗಳಿಂದ ಹಾಗೂ ಪ್ರಮಾದದಿಂದ ನನ್ನನ್ನು ಕಾಪಾಡಲಿ. ಧರ್ಮರಕ್ಷಣೆಗಾಗಿ ಅವತರಿಸುವ ಭಗವಾನ್ ಕಲ್ಕಿಯು ಪಾಪಬಾಹುಳ್ಯವುಳ್ಳ ಕಲಿಕಾಲದ ದೋಷಗಳಿಂದ ನನ್ನನ್ನು ರಕ್ಷಿಸಲಿ. ॥ ೧೯ ॥

ಮಾಂ ಕೇಶವೋ ಗದಯಾ ಪ್ರಾತರವ್ಯಾದ್
ಗೋವಿಂದ ಆಸಂಗವಮಾತ್ತವೇಣುಃ ।
ನಾರಾಯಣಃ ಪ್ರಾಹ್ಣ ಉದಾತ್ತಶಕ್ತಿ-
ರ್ಮಧ್ಯಂದಿನೇ ವಿಷ್ಣುರರೀಂದ್ರಪಾಣಿಃ ॥ ೨೦ ॥

ಪ್ರಾತಃಕಾಲದಲ್ಲಿ ಭಗವಾನ್ ಶ್ರೀಕೇಶವನು ಗದಾಹಸ್ತನಾಗಿಯೂ, ಹಗಲು ಸ್ವಲ್ಪ ಏರಿದಾಗ ಭಗವಾನ್ ಶ್ರೀಗೋವಿಂದನು ತನ್ನ ಕೊಳಲನ್ನು ಹಿಡಿದುಕೊಂಡು, ಮಧ್ಯಾಹ್ನದ ಮೊದಲು ಭಗವಾನ್ ಶ್ರೀನಾರಾಯಣನು ತನ್ನ ತೀಕ್ಷ್ಣವಾದ ಶಕ್ತ್ಯಾಯುಧಧಾರಿಯಾಗಿ, ಮಧ್ಯಾಹ್ನದಲ್ಲಿ ಭಗವಾನ್ ಶ್ರೀವಿಷ್ಣುವು ಚಕ್ರರಾಜ ಸುದರ್ಶನವನ್ನು ಹಿಡಿದು ನನ್ನನ್ನು ಕಾಪಾಡಲಿ. ॥ ೨೦ ॥

* ಶ್ರೀಭಗವಂತನ ಸೇವೆಯಲ್ಲಿ ಒದಗಬಹುದಾದ ೩೨ ಅಪಚಾರಗಳನ್ನು ಹೀಗೆ ಪರಿಗಣಿಸಲಾಗಿದೆ – ೧) ವಾಹನಾರೂಢನಾಗಿ ಅಥವಾ ಪಾದರಕ್ಷೆಗಳನ್ನು ಹಾಕಿಕೊಂಡು ಭಗವಂತನ ಮಂದಿರಕ್ಕೆ ಹೋಗುವುದು. ೨) ರಥೋತ್ಸವ ಮತ್ತು ಜನ್ಮಾಷ್ಟಮಿ ಮುಂತಾದ ಉತ್ಸವಗಳನ್ನು ಆಚರಿಸದೇ ಇರುವುದು ಅಥವಾ ಅವುಗಳನ್ನು ದರ್ಶಿಸದೇ ಇರುವುದು. ೩) ಶ್ರೀಭಗವನ್ಮೂರ್ತಿಗಳನ್ನು ದರ್ಶನಮಾಡಿ ನಮಸ್ಕರಿಸದಿರುವುದು. ೪) ಅಶುಚಿಯಾಗಿ ದೇವರ ದರ್ಶನ ಮಾಡುವುದು. ೫) ಒಂದೇ ಕೈಯಿಂದ ನಮಸ್ಕರಿಸುವುದು. ೬) ಪ್ರದಕ್ಷಿಣೆ ಮಾಡುವಾಗ ಭಗವಂತನ ಮುಂದೆ ಬಂದಾಗ ಸ್ವಲ್ಪ ನಿಲ್ಲದೆ ಮತ್ತೆ ಪ್ರದಕ್ಷಿಣೆ ಮಾಡುವುದು ಅಥವಾ ಕೇವಲ ಮುಂದುಗಡೆಯೇ ಪ್ರದಕ್ಷಿಣೆ ಮಾಡುವುದು. ೭) ಭಗವಂತನ ವಿಗ್ರಹದ ಮುಂದೆ ಕಾಲುಚಾಚಿ ಕುಳಿತುಕೊಳ್ಳುವುದು. ೮) ಭಗವಂತನ ಶ್ರೀವಿಗ್ರಹದ ಮುಂದೆ ಎರಡೂ ಮಂಡಿಗಳನ್ನು ಮೇಲಕ್ಕೆತ್ತಿ ಅವುಗಳನ್ನು ಕೈಗಳಿಂದ ಬಳಸಿಕೊಂಡು ಕುಳಿತುಕೊಳ್ಳುವುದು. ೯) ಭಗವಂತನ ಶ್ರೀವಿಗ್ರಹದ ಮುಂದೆ ಮಲಗುವುದು. ೧೦) ಭಗವಂತನ ಶ್ರೀಮೂರ್ತಿಯ ಮುಂದೆ ಊಟಮಾಡುವುದು. ೧೧) ಭಗವಂತನ ಶ್ರೀಮೂರ್ತಿಯ ಮುಂದೆ ಸುಳ್ಳು ಹೇಳುವುದು. ೧೨) ಭಗವಂತನ ಶ್ರೀವಿಗ್ರಹದ ಮುಂದೆ ಗಟ್ಟಿಯಾಗಿ ಮಾತಾಡುವುದು. ೧೩) ಶ್ರೀಭಗವದ್ವಿಗ್ರಹದ ಮುಂದೆ ಪರಸ್ಪರ ಮಾತಾಡಿಕೊಳ್ಳುವುದು. ೧೪) ಭಗವಂತನ ಶ್ರೀವಿಗ್ರಹದ ಮುಂದೆ ಬೊಬ್ಬೆಹಾಕುವುದು. ೧೫) ಭಗವಂತನ ಶ್ರೀಮೂರ್ತಿಯ ಮುಂದೆ ಜಗಳಾಡುವುದು. ೧೬) ಭಗವಂತನ ಶ್ರೀಮೂರ್ತಿಯ ಮುಂದೆ ಯಾರಿಗಾದರೂ ಪೀಡಿಸುವುದು. ೧೭) ಭಗವಂತನ ಶ್ರೀವಿಗ್ರಹದ ಮುಂದೆ ಯಾರಿಗಾದರೂ ಅನುಗ್ರಹಮಾಡುವುದು. ೧೮) ಭಗವಂತನ ಶ್ರೀವಿಗ್ರಹದ ಮುಂದೆ ಯಾರನ್ನಾದರೂ ಕುರಿತು ನಿಷ್ಠುರವಾದ ಮಾತುಗಳನ್ನಾಡುವುದು. ೧೯) ಭಗವಂತನ ಶ್ರೀವಿಗ್ರಹದ ಮುಂದೆ ಕಂಬಳಿಯಿಂದ ಇಡೀ ದೇಹವನ್ನು ಮುಚ್ಚಿಕೊಳ್ಳುವುದು. ೨೦) ಭಗವಂತನ ಶ್ರೀವಿಗ್ರಹದ ಮುಂದೆ ಇತರರನ್ನು ನಿಂದಿಸುವುದು. ೨೧) ಭಗವಂತನ ಶ್ರೀವಿಗ್ರಹದ ಮುಂದೆ ಬೇರೆಯವರನ್ನು ಸ್ತುತಿಸುವುದು.

ದೇವೋಽಪರಾಹ್ಣೇ ಮಧುಹೋಗ್ರಧನ್ವಾ
ಸಾಯಂ ತ್ರಿಧಾಮಾವತು ಮಾಧವೋ ಮಾಮ್ ।
ದೋಷೇ ಹೃಷೀಕೇಶ ಉತಾರ್ಧರಾತ್ರೇ
ನಿಶೀಥ ಏಕೋಽವತು ಪದ್ಮನಾಭಃ ॥ ೨೧ ॥

ಅಪರಾಹ್ಣಕಾಲದಲ್ಲಿ ಭಗವಾನ್ ಮಧುಸೂದನನು ತನ್ನ ಪ್ರಚಂಡವಾದ ಧನುಸ್ಸನ್ನು ಹಿಡಿದುಕೊಂಡು ನನ್ನನ್ನು ರಕ್ಷಿಸಲಿ. ಸಾಯಂಕಾಲದಲ್ಲಿ ತ್ರಿಮೂರ್ತಿಸ್ವರೂಪನಾದ ಮಾಧವನೂ, ಪ್ರದೋಷದಲ್ಲಿ ಹೃಷೀಕೇಶನೂ, ಅರ್ಧ ರಾತ್ರಿಯ ಮೊದಲು ಹಾಗೂ ಅರ್ಧರಾತ್ರಿಯಲ್ಲಿ ಭಗವಾನ್ ಪದ್ಮನಾಭನೊಬ್ಬನೇ ನನ್ನನ್ನು ಸಲಹಲಿ. ॥ ೨೧ ॥

ಶ್ರೀವತ್ಸಧಾಮಾಪರರಾತ್ರ ಈಶಃ
ಪ್ರತ್ಯೂಷ ಈಶೋಽಸಿಧರೋ ಜನಾರ್ದನಃ ।
ದಾಮೋದರೋಽವ್ಯಾದನುಸಂಧ್ಯಂ ಪ್ರಭಾತೇ
ವಿಶ್ವೇಶ್ವರೋ ಭಗವಾನ್ ಕಾಲಮೂರ್ತಿಃ ॥ ೨೨ ॥

ಶ್ರೀವತ್ಸಲಾಂಛನವನ್ನು ಧರಿಸಿದ ಶ್ರೀಹರಿಯು ಅಪರರಾತ್ರಿಯಲ್ಲೂ, ಖಡ್ಗಹಸ್ತನಾದ ಭಗವಾನ್ ಜನಾರ್ದನನು ಉಷಃಕಾಲದಲ್ಲಿಯೂ, ಶ್ರೀದಾಮೋದರ ಸ್ವಾಮಿಯು ಸೂರ್ಯೋದಯಕ್ಕೆ ಮೊದಲೂ ಮತ್ತು ಎಲ್ಲ ಸಂಧ್ಯೆಗಳಲ್ಲಿ ಕಾಲಮೂರ್ತಿ ಭಗವಾನ್ ವಿಶ್ವೇಶ್ವರನು ನನ್ನನ್ನು ರಕ್ಷಿಸಲಿ. ॥ ೨೨ ॥

ಚಕ್ರಂ ಯುಗಾಂತಾನಲತಿಗ್ಮನೇಮಿ
ಭ್ರಮತ್ಸಮಂತಾದ್ಭಗವತ್ಪ್ರಯುಕ್ತಮ್ ।
ದಂದಗ್ಧಿ ದಂದಗ್ಧ್ಯರಿಸೈನ್ಯಮಾಶು
ಕಕ್ಷಂ ಯಥಾ ವಾತಸಖೋ ಹುತಾಶಃ ॥ ೨೩ ॥

ಪ್ರಳಯಕಾಲದ ಅಗ್ನಿಯಂತೆ ತೀಕ್ಷ್ಣವಾದ ಅಲಗುಗಳಿಂದ ಕೂಡಿ, ಶ್ರೀಭಗವಂತನ ಪ್ರೇರಣೆಯಂತೆ ಸದಾಕಾಲ ಸುತ್ತುತ್ತಿರುವ ಚಕ್ರರಾಜನಾದ ಸುದರ್ಶನವೇ! ಗಾಳಿಯಿಂದೊಡಗೂಡಿದ ಬೆಂಕಿಯು ಹುಲ್ಲಿನಮೆದೆಯನ್ನು ಸುಟ್ಟುರುಹುವಂತೆ ನಮ್ಮ ಶತ್ರುಸೈನ್ಯವನ್ನು ಶೀಘ್ರಾತಿಶೀಘ್ರವಾಗಿ ಸುಟ್ಟುಹಾಕು, ಸುಟ್ಟುಹಾಕು. ॥ ೨೩ ॥

ಗದೇಽಶನಿಸ್ಪರ್ಶನವಿಸ್ಫುಲಿಂಗೇ
ನಿಷ್ಪಿಂಢಿ ನಿಷ್ಪಿಂಢ್ಯಜಿತಪ್ರಿಯಾಸಿ ।
ಕೂಷ್ಮಾಂಡವೈನಾಯಕಯಕ್ಷರಕ್ಷೋ-
ಭೂತಗ್ರಹಾಂಶ್ಚೂರ್ಣಯಚೂರ್ಣಯಾರೀನ್ ॥ ೨೪ ॥

ಎಲೈ ಕೌಮೋದಕೀ ಗದೆಯೇ! ನೀನು ವಜ್ರಾಯುಧಕ್ಕೆ ಎಣೆಯಾಗಿ ಮುಟ್ಟಲು ಅಸಾಧ್ಯವಾದ ಕಿಡಿಗಳನ್ನು ಉದುರಿಸುತ್ತಿರುವೆ. ನೀನು ಭಗವಾನ್ ಅಜಿತನಿಗೆ ಪ್ರಿಯವಾಗಿರುವೆ ಹಾಗೂ ನಾನು ಅವನ ಸೇವಕನಾಗಿರುವೆನು. ಅದಕ್ಕಾಗಿ ನೀನು ಕುಷ್ಮಾಂಡ, ವಿನಾಯಕ, ಯಕ್ಷ, ರಾಕ್ಷಸ, ಭೂತ-ಪ್ರೇತಾದಿ ಗ್ರಹರನ್ನು ಈಗಲೇ ಹೊಸಕಿಹಾಕಿಬಿಡು ಹಾಗೂ ನನ್ನ ಶತ್ರುಗಳನ್ನು ನುಚ್ಚುನೂರಾಗಿಸಿಬಿಡು. ॥ ೨೪ ॥

ತ್ವಂ ಯಾತುಧಾನಪ್ರಮಥಪ್ರೇತಮಾತೃ-
ಪಿಶಾಚವಿಪ್ರಗ್ರಹಘೋರದೃಷ್ಟೀನ್ ।
ದರೇಂದ್ರ ವಿದ್ರಾವಯ ಕೃಷ್ಣಪೂರಿತೋ
ಭೀಮಸ್ವನೋಽರೇರ್ಹೃದಯಾನಿ ಕಂಪಯನ್ ॥ ೨೫ ॥

ಎಲೈ ಶಂಖಶ್ರೇಷ್ಠನಾದ ಪಾಂಚಜನ್ಯನೇ! ನಿನ್ನನ್ನು ಭಗವಾನ್ ಶ್ರೀಕೃಷ್ಣನು ಊದಿದಾಗ ಭಯಂಕರವಾದ ಶಬ್ದವನ್ನು ಮಾಡಿ ನನ್ನ ಶತ್ರುಗಳ ಹೃದಯಗಳನ್ನು ನಡುಗಿಸಿಬಿಡು ಹಾಗೂ ಯಾತುಧಾನ, ಪ್ರಮಥ, ಪ್ರೇತ, ಮಾತೃಕಾ, ಪಿಶಾಚ, ಬ್ರಹ್ಮರಾಕ್ಷಸಾದಿ ಭಯಂಕರರಾದ ಪ್ರಾಣಿಗಳನ್ನು ಇಲ್ಲಿಂದ ಒಡನೆಯೇ ಓಡಿಸಿಬಿಡು. ॥ ೨೫ ॥

ತ್ವಂ ತಿಗ್ಮಧಾರಾಸಿವರಾರಿಸೈನ್ಯ-
ಮೀಶಪ್ರಯುಕ್ತೋ ಮಮ ಛಿಂಧಿ ಛಿಂಧಿ ।
ಚಕ್ಷೂಂಷಿ ಚರ್ಮಂಛತಚಂದ್ರಛಾದಯ
ದ್ವಿಷಾಮಘೋನಾಂ ಹರ ಪಾಪಚಕ್ಷುಷಾಮ್ ॥ ೨೬ ॥

ಭಗವಂತನಿಗೆ ಪ್ರಿಯವಾದ ಎಲೈ ಖಡ್ಗವೇ! ನಿನ್ನ ಅಲಗು ತುಂಬಾ ತೀಕ್ಷ್ಣವಾಗಿದೆ. ನೀನು ಭಗವಂತನ ಪ್ರೇರಣೆಯಿಂದ ನನ್ನ ಶತ್ರುಗಳನ್ನು ಛಿನ್ನ-ಭಿನ್ನವಾಗಿಸು. ಹಾಗೆಯೇ ನೂರಾರು ಚಂದ್ರಮಂಡಲಗಳ ಆಕಾರದಿಂದ ಬೆಳಗುತ್ತಿರುವ ಭಗವಂತನಿಗೆ ಪ್ರಿಯವಾದ ಗುರಾಣಿಯೇ! ನೀನು ಪಾಪದೃಷ್ಟಿಯುಳ್ಳ ಪಾಪಾತ್ಮಾ ಶತ್ರುಗಳ ಪಾಪೀಕಣ್ಣುಗಳನ್ನು ಮುಚ್ಚಿಸಿಬಿಡು. ॥ ೨೬ ॥

೨೨) ಭಗವಂತನ ಶ್ರೀವಿಗ್ರಹದ ಮುಂದೆ ಅಶ್ಲೀಲವಾಗಿ ಮಾತಾಡುವುದು. ೨೩) ಭಗವಂತನ ಶ್ರೀಮೂರ್ತಿಯ ಮುಂದೆ ಅಧೋವಾಯುವನ್ನು ಬಿಡುವುದು. ೨೪) ಮುಖ್ಯವಾದ ಉಪಚಾರಗಳನ್ನು ಮಾಡುವ ಶಕ್ತಿಯಿದ್ದರೂ ಗೌಣವಾದ ಉಪಚಾರಗಳಿಂದ ಭಗವಂತನ ಸೇವೆ-ಪೂಜೆ ಮಾಡುವುದು. ೨೫) ಶ್ರೀಭಗವಂತನಿಗೆ ನಿವೇದನೆ ಮಾಡದೆ ಇರುವ ಯಾವುದೇ ವಸ್ತುವನ್ನು ತಿನ್ನುವುದು-ಕುಡಿಯುವುದು. ೨೬) ಯಾವುದೇ ಋತುವಿನಲ್ಲಿ ಯಾವ ಹಣ್ಣು ಬಿಡುವುದೋ ಅದನ್ನು ಮೊಟ್ಟಮೊದಲಿಗೆ ಭಗವಂತನಿಗೆ ಅರ್ಪಿಸದಿರುವುದು. ೨೭) ಯಾವುದಾದರೂ ಕಾಯಿಪಲ್ಲೆ ಅಥವಾ ಹಣ್ಣು ಮುಂತಾದವುಗಳ ಮುಂಭಾಗವನ್ನು ಮುರಿದು ದೇವರ ವ್ಯಂಜನಾದಿಗಳಿಗಾಗಿ ಸಮರ್ಪಿಸುವುದು. ೨೮) ಭಗವಂತನ ಶ್ರೀವಿಗ್ರಹಕ್ಕೆ ಬೆನ್ನುಹಾಕಿ ಕುಳಿತುಕೊಳ್ಳುವುದು. ೨೯) ಭಗವಂತನ ಶ್ರೀವಿಗ್ರಹದ ಮುಂದೆ ಬೇರೆ ಯಾರನ್ನಾದರೂ ನಮಸ್ಕರಿಸುವುದು. ೩೦) ಶ್ರೀಗುರುದೇವರ ಪ್ರಾರ್ಥನೆ, ಕುಶಲಪ್ರಶ್ನೆ, ಸ್ತೋತ್ರ ಮುಂತಾದವುಗಳನ್ನು ಮಾಡದೇ ಇರುವುದು. ೩೧) ದೇವರ ಮುಂದೆ ತನ್ನನ್ನು ಪ್ರಶಂಸಿಕೊಳ್ಳುವುದು. ೩೨) ಯಾವುದೇ ದೇವತೆಯನ್ನು ನಿಂದಿಸುವುದು.

ಯನ್ನೋ ಭಯಂ ಗ್ರಹೇಭ್ಯೋಽಭೂತ್ ಕೇತುಭ್ಯೋ ನೃಭ್ಯ ಏವ ಚ ।
ಸರೀಸೃಪೇಭ್ಯೋ ದಂಷ್ಟ್ರಿಭ್ಯೋ ಭೂತೇಭ್ಯೋಂಽಹೋಭ್ಯ ಏವ ವಾ ॥ ೨೭ ॥

ಸರ್ವಾಣ್ಯೇತಾನಿ ಭಗವನ್ನಾಮರೂಪಾಸ್ತ್ರಕೀರ್ತನಾತ್ ।
ಪ್ರಯಾಂತು ಸಂಕ್ಷಯಂ ಸದ್ಯೋ ಯೇ ನಃ ಶ್ರೇಯಃಪ್ರತೀಪಕಾಃ ॥ ೨೮ ॥

ಗರುಡೋ ಭಗವಾನ್ಸ್ತೋತ್ರಸ್ತೋಭಶ್ಛಂದೋಮಯಃ ಪ್ರಭುಃ ।
ರಕ್ಷತ್ವಶೇಷಕೃಚ್ಛ್ರೇಭ್ಯೋ ವಿಷ್ವಕ್ಸೇನಃ ಸ್ವನಾಮಭಿಃ ॥ ೨೯ ॥

ಸರ್ವಾಪದ್ಭ್ಯೋ ಹರೇರ್ನಾಮರೂಪಯಾನಾಯುಧಾನಿ ನಃ ।
ಬುದ್ಧೀಂದ್ರಿಯಮನಃಪ್ರಾಣಾನ್ ಪಾಂತು ಪಾರ್ಷದಭೂಷಣಾಃ ॥ ೩೦ ॥

ಯಥಾ ಹಿ ಭಗವಾನೇವ ವಸ್ತುತಃ ಸದಸಚ್ಚ ಯತ್ ।
ಸತ್ಯೇನಾನೇನ ನಃ ಸರ್ವೇ ಯಾಂತು ನಾಶಮುಪದ್ರವಾಃ ॥ ೩೧ ॥

ಯಥೈಕಾತ್ಮ್ಯಾನುಭಾವಾನಾಂ ವಿಕಲ್ಪರಹಿತಃ ಸ್ವಯಮ್ ।
ಭೂಷಣಾಯುಧಲಿಂಗಾಖ್ಯಾ ಧತ್ತೇ ಶಕ್ತೀಃ ಸ್ವಮಾಯಯಾ ॥ ೩೨ ॥

ತೇನೈವ ಸತ್ಯಮಾನೇನ ಸರ್ವಜ್ಞೋ ಭಗವಾನ್ ಹರಿಃ ।
ಪಾತು ಸರ್ವೈಃ ಸ್ವರೂಪೈರ್ನಃ ಸದಾ ಸರ್ವತ್ರ ಸರ್ವಗಃ ॥ ೩೩ ॥

ವಿದಿಕ್ಷು ದಿಕ್ಷೂರ್ಧ್ವಮಧಃ ಸಮಂತಾದಂತರ್ಬಹಿರ್ಭಗವಾನ್ ನಾರಸಿಂಹಃ ।
ಪ್ರಹಾಪಯಲ್ಲೋಕಭಯಂ ಸ್ವನೇನ ಸ್ವತೇಜಸಾ ಗ್ರಸ್ತಸಮಸ್ತತೇಜಾಃ ॥ ೩೪ ॥

ಮಘವನ್ನಿದಮಾಖ್ಯಾತಂ ವರ್ಮ ನಾರಾಯಣಾತ್ಮಕಮ್ ।
ವಿಜೇಷ್ಯಸ್ಯಂಜಸಾ ಯೇನ ದಂಶಿತೋಽಸುರಯೂಥಪಾನ್ ॥ ೩೫ ॥

ಏತದ್ಧಾರಯಮಾಣಸ್ತು ಯಂ ಯಂ ಪಶ್ಯತಿ ಚಕ್ಷುಷಾ ।
ಪದಾ ವಾ ಸಂಸ್ಪೃಶೇತ್ಸದ್ಯಃ ಸಾಧ್ವಸಾತ್ಸ ವಿಮುಚ್ಯತೇ ॥ ೩೬ ॥

ನ ಕುತಶ್ಚಿದ್ಭಯಂ ತಸ್ಯ ವಿದ್ಯಾಂ ಧಾರಯತೋ ಭವೇತ್ ।
ರಾಜದಸ್ಯುಗ್ರಹಾದಿಭ್ಯೋ ವ್ಯಾಘ್ರಾದಿಭ್ಯಶ್ಚ ಕರ್ಹಿಚಿತ್ ॥ ೩೭ ॥

ಸೂರ್ಯಾದಿ ಗ್ರಹಗಳ ವಿರೋಧಿ ಧೂಮಕೇತು, ದುಷ್ಟ ಮನುಷ್ಯರು, ಸರ್ಪವೇ ಮುಂತಾದ ಹರಿದಾಡುವ ಪ್ರಾಣಿಗಳು, ಕೋರೆದಾಡೆಗಳುಳ್ಳ ಹಿಂಸ್ರಕ ಪಶುಗಳು, ಭೂತ-ಪ್ರೇತಗಳು ಮತ್ತು ಪಾಪಿಗಳಾದ ಪ್ರಾಣಿಗಳು ಇವುಗಳಿಂದ ನಮಗೆ ಉಂಟಾದ ಹಾಗೂ ಉಂಟಾಗುವ ಭಯಗಳೂ, ನಮ್ಮ ಶ್ರೇಯಸ್ಸಿಗೆ ಉಂಟಾದ ವಿರೋಧಗಳೆಲ್ಲವೂ ಭಗವಂತನ ನಾಮ, ರೂಪ, ಆಯುಧಗಳ ಕೀರ್ತನೆ ಮಾಡುವುದರಿಂದ ಒಡನೆಯೇ ನಾಶವಾಗಲೀ. ॥ ೨೭-೨೮ ॥ ಬೃಹದ್‌ರಥಂತರವೇ ಮೊದಲಾದ ಸಾಮವೇದದ ಸ್ತೋತ್ರ ಗಳಿಂದ ಸ್ತುತಿಸಲ್ಪಡುವ ವೇದಮೂರ್ತಿಯಾದ ಭಗವಾನ್ ಗರುಡ ದೇವರೂ ಮತ್ತು (ಭಗವಂತನ ಪಾರ್ಷದರಿಗೆ ಗಣ ನಾಯಕರಾದ) ವಿಶ್ವಕ್ಸೇನದೇವರೂ ತಮ್ಮ ನಾಮೋಚ್ಚಾರಣೆಯ ಪ್ರಭಾವದಿಂದ ನಮ್ಮನ್ನು ಎಲ್ಲ ವಿಧದ ವಿಪತ್ತುಗಳಿಂದ ಕಾಪಾಡಲಿ. ॥ ೨೯ ॥ ಶ್ರೀಹರಿಯ ನಾಮ, ರೂಪ, ವಾಹನ, ಆಯುಧಗಳು ಮತ್ತು ಶ್ರೇಷ್ಠ ಪಾರ್ಷದರು ನಮ್ಮ ಬುದ್ಧಿ, ಇಂದ್ರಿಯಗಳು, ಮನಸ್ಸು ಹಾಗೂ ಪ್ರಾಣಗಳನ್ನು ಎಲ್ಲ ಬಗೆಯ ಆಪತ್ತುಗಳಿಂದ ಕಾಪಾಡಲಿ. ॥ ೩೦ ॥

ಕಾರ್ಯ-ಕಾರಣರೂಪವಾದ ಈ ಜಗತ್ತೆಲ್ಲವೂ ವಾಸ್ತವವಾಗಿ ಭಗವಂತನೇ ಆಗಿರುವನು. ಭಗವಂತನಿಗೆ ಅಧೀನವಾಗಿದೆ ಎಂಬ ಸತ್ಯದಿಂದ ನಮ್ಮ ಎಲ್ಲ ಉಪದ್ರವಗಳು ನಾಶಹೊಂದಲಿ. ॥ ೩೧ ॥ ಬ್ರಹ್ಮ ಮತ್ತು ಆತ್ಮನ ಏಕತೆಯನ್ನು ಅನುಭವಿಸಿರುವ ಜನರ ದೃಷ್ಟಿಯಲ್ಲಿ ಭಗವಂತನ ಸ್ವರೂಪವು ಸಮಸ್ತ ವಿಕಲ್ಪ-ಭೇದಗಳಿಂದ ರಹಿತವಾಗಿದೆ. ಹೀಗಿದ್ದರೂ ಅವನು ತನ್ನ ಮಾಯಾಶಕ್ತಿಯ ಮೂಲಕ ಭೂಷಣ, ಆಯುಧ ಮತ್ತು ರೂಪ – ನಾಮವೆಂಬ ಶಕ್ತಿಗಳನ್ನು ಧರಿಸುತ್ತಾನೆ. ಇದು ನಿಶ್ಚಿತವಾಗಿ ಸತ್ಯವಾಗಿದೆ. ಇದರಿಂದ ಸರ್ವಜ್ಞನೂ, ಸರ್ವವ್ಯಾಪಕನೂ ಆದ ಭಗವಾನ್ ಶ್ರೀಹರಿಯು ಸದಾಕಾಲ, ಎಲ್ಲೆಡೆ, ಎಲ್ಲ ಸ್ವರೂಪಗಳಿಂದ ನಮ್ಮನ್ನು ರಕ್ಷಿಸಲಿ. ॥ ೩೨-೩೩ ॥ ಯಾರು ತನ್ನ ಭಯಂಕರ ಅಟ್ಟಹಾಸದಿಂದಲೇ ಎಲ್ಲ ಜನರ ಭಯವನ್ನು ಓಡಿಸಿಬಿಡುವನೋ ಮತ್ತು ತನ್ನ ತೇಜದಿಂದ ಎಲ್ಲರ ತೇಜವನ್ನು ನುಂಗಿಬಿಡುವನೋ ಅಂತಹ ಭಗವಾನ್ ನರಸಿಂಹದೇವರು ದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ, ಮೇಲೂ, ಕೆಳಗೂ, ಒಳಗೂ, ಹೊರಗೂ ಎಲ್ಲ ಕಡೆಗಳಿಂದ ನಮ್ಮನ್ನು ರಕ್ಷಿಸಲಿ. ॥ ೩೪ ॥

ಎಲೈ ದೇವೇಂದ್ರನೇ! ನಾನು ನಿನಗೆ ಈ ನಾರಾಯಣಕವಚವನ್ನು ಉಪದೇಶಿಸಿರುವೆನು. ಈ ಕವಚದಿಂದ ನೀನು ನಿನ್ನನ್ನು ಸುರಕ್ಷಿತನನ್ನಾಗಿಸಿಕೋ. ಸರಿ, ಮತ್ತೆ ನೀನು ಅನಾಯಾಸವಾಗಿಯೇ ಎಲ್ಲ ದೈತ್ಯರ ಗುಂಪನ್ನು ಗೆಲ್ಲಬಲ್ಲೆ. ॥ ೩೫ ॥ ಈ ನಾರಾಯಣ ಕವಚವನ್ನು ಧರಿಸಿರುವ ಮನುಷ್ಯನು ಯಾರನ್ನಾದರೂ ತನ್ನ ಕಣ್ಣುಗಳಿಂದ ನೋಡಿದರೆ ಅಥವಾ ಕಾಲು ಮುಟ್ಟಿಸಿಕೊಂಡರೆ ಅವನು ಒಡನೆಯೇ ಸಮಸ್ತ ಭಯಗಳಿಂದಲೂ ಬಿಡುಗಡೆ ಹೊಂದುವನು. ॥ ೩೬ ॥ ಈ ವೈಷ್ಣವೀ ವಿದ್ಯೆಯನ್ನು ಧರಿಸಿಕೊಂಡಿರುವವನಿಗೆ ರಾಜನಿಂದ, ಕಳ್ಳರಿಂದ, ಭೂತ-ಪ್ರೇತಾದಿಗಳಿಂದ, ಹುಲಿಯೇ ಮುಂತಾದ ಹಿಂಸಕ ಪ್ರಾಣಿಗಳಿಂದ ಎಂದಿಗೂ ಯಾವುದೇ ವಿಧದ ಭಯವು ಉಂಟಾಗಲಾರದು. ॥ ೩೭ ॥

ಇಮಾಂ ವಿದ್ಯಾಂ ಪುರಾ ಕಶ್ಚಿತ್ಕೌಶಿಕೋ ಧಾರಯನ್ದ್ವಿಜಃ ।
ಯೋಗಧಾರಣಯಾ ಸ್ವಾಂಗಂ ಜಹೌ ಸ ಮರುಧನ್ವನಿ ॥ ೩೮ ॥

ತಸ್ಯೋಪರಿ ವಿಮಾನೇನ ಗಂಧರ್ವಪತಿರೇಕದಾ ।
ಯಯೌ ಚಿತ್ರರಥಃ ಸ್ತ್ರೀಭಿರ್ವೃತೋ ಯತ್ರ ದ್ವಿಜಕ್ಷಯಃ ॥ ೩೯ ॥

ಗಗನಾನ್ನ್ಯಪತತ್ಸದ್ಯಃ ಸವಿಮಾನೋ ಹ್ಯವಾಕ್ಶಿರಾಃ ।
ಸ ವಾಲಖಿಲ್ಯವಚನಾದಸ್ಥೀನ್ಯಾದಾಯ ವಿಸ್ಮಿತಃ ।
ಪ್ರಾಸ್ಯ ಪ್ರಾಚೀಸರಸ್ವತ್ಯಾಂ ಸ್ನಾತ್ವಾ ಧಾಮ ಸ್ವಮನ್ವಗಾತ್ ॥ ೪೦ ॥

*ಶ್ರೀಶುಕ ಉವಾಚ*

ಯ ಇದಂ ಶೃಣುಯಾತ್ಕಾಲೇ ಯೋ ಧಾರಯತಿ ಚಾದೃತಃ ।
ತಂ ನಮಸ್ಯಂತಿ ಭೂತಾನಿ ಮುಚ್ಯತೇ ಸರ್ವತೋ ಭಯಾತ್ ॥ ೪೧ ॥

ಏತಾಂ ವಿದ್ಯಾಮಧಿಗತೋ ವಿಶ್ವರೂಪಾಚ್ಛತಕ್ರತುಃ ।
ತ್ರೈಲೋಕ್ಯಲಕ್ಷ್ಮೀಂ ಬುಭುಜೇ ವಿನಿರ್ಜಿತ್ಯ ಮೃಧೇಽಸುರಾನ್ ॥ ೪೨ ॥

ದೇವರಾಜನೇ! ಹಿಂದೆ ಕೌಶಿಕಗೋತ್ರದ ಬ್ರಾಹ್ಮಣನೊಬ್ಬನು ಈ ವಿದ್ಯೆಯನ್ನು ಧರಿಸಿಕೊಂಡು ಯೋಗಧಾರಣೆಯಿಂದ ತನ್ನ ಶರೀರವನ್ನು ಮರಳು ಗಾಡಿನಲ್ಲಿ ತ್ಯಜಿಸಿದನು. ॥ ೩೮ ॥ ಆ ಬ್ರಾಹ್ಮಣನ ಶರೀರವು ಬಿದ್ದ ಜಾಗದ ಮೇಲಿನಿಂದ ಒಂದುದಿನ ಗಂಧರ್ವರಾಜನಾದ ಚಿತ್ರ ರಥನು ತನ್ನ ಪತ್ನಿಯರೊಂದಿಗೆ ವಿಮಾನದಲ್ಲಿಕುಳಿತು ಹೋಗುತ್ತಿದ್ದನು. ॥ ೩೯ ॥ ಅಲ್ಲಿಗೆ ಬರುತ್ತಲೇ ತಲೆಕೆಳಗಾಗಿ ವಿಮಾನಸಹಿತ ಅವನು ಆಕಾಶದಿಂದ ಭೂಮಿಗೆ ಬಿದ್ದುಬಿಟ್ಟನು. ಈ ಘಟನೆಯಿಂದ ಅವನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ. ವಾಲಖಿಲ್ಯ ಮುನಿಗಳು ಅವನಿಗೆ ಇದು ನಾರಾಯಣಕವಚ ಧರಿಸಿದ ಪ್ರಭಾವವೆಂದು ತಿಳಿಸಿದಾಗ, ಅವನು ಆ ಭೂಸುರನ ಮೂಳೆಗಳನ್ನು ತೆಗೆಸಿ ಪೂರ್ವವಾಹಿನಿಯಾದ ಸರಸ್ವತೀನದಿಯಲ್ಲಿ ವಿಸರ್ಜನೆಮಾಡಿ, ಸ್ನಾನಮಾಡಿ ತನ್ನ ಲೋಕಕ್ಕೆ ಹೊರಟು ಹೋದನು. ॥ ೪೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಈ ನಾರಾಯಣಕವಚವನ್ನು ಸಕಾಲದಲ್ಲಿ ಕೇಳುವವನು, ಆದರದಿಂದ ಧರಿಸುವವನು, ಅವನ ಮುಂದೆ ಎಲ್ಲ ಪ್ರಾಣಿಗಳು ಆದರದಿಂದ ತಲೆತಗ್ಗಿಸುವರು ಹಾಗೂ ಎಲ್ಲ ರೀತಿಯ ಭಯದಿಂದ ಬಿಡುಗಡೆ ಹೊಂದುವವನು. ॥ ೪೧ ॥ ಮಹಾರಾಜಾ! ಇಂದ್ರನು ಆಚಾರ್ಯ ವಿಶ್ವರೂಪನಿಂದ ಈ ವೈಷ್ಣವೀ ವಿದ್ಯೆಯನ್ನು ಪಡೆದು ಕೊಂಡು ರಣರಂಗದಲ್ಲಿ ಅಸುರರನ್ನು ಗೆದ್ದುಕೊಂಡು, ಮೂರು ಲೋಕಗಳ ಸಾಮ್ರಾಜ್ಯಲಕ್ಷ್ಮಿಯನ್ನು ಅನುಭವಿಸ ತೊಡಗಿದನು. ॥ ೪೨ ॥

***ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ನಾರಾಯಣವರ್ಮಕಥನಂನಾಮಾಷ್ಟಮೋಽಧ್ಯಾಯಃ ॥ ೮ ॥**

# ಒಂಭತ್ತನೆಯ ಅಧ್ಯಾಯ

## ವಿಶ್ವರೂಪನ ವಧೆ, ವೃತ್ರಾಸುರನು ದೇವತೆಗಳನ್ನು ಸೋಲಿಸಿದುದು ಮತ್ತು ಭಗವಂತನ ಪ್ರೇರಣೆಯಂತೆ ದೇವತೆಗಳು ದಧೀಚಿಋಷಿಗಳ ಬಳಿಗೆ ಹೋದುದು

*ಶ್ರೀಶುಕ ಉವಾಚ*

ತಸ್ಯಾಸನ್ ವಿಶ್ವರೂಪಸ್ಯ ಶಿರಾಂಸಿ ತ್ರೀಣಿ ಭಾರತ ।
ಸೋಮಪೀಥಂ ಸುರಾಪೀಥಮನ್ನಾದಮಿತಿ ಶುಶ್ರುಮ ॥ ೧ ॥

ಸ ವೈ ಬರ್ಹಿಷಿ ದೇವೇಭ್ಯೋ ಭಾಗಂ ಪ್ರತ್ಯಕ್ಷಮುಚ್ಚಕೈಃ ।
ಅವದದ್ಯಸ್ಯ ಪಿತರೋ ದೇವಾಃ ಸಪ್ರಶ್ರಯಂ ನೃಪ ॥ ೨ ॥

ಸ ಏವ ಹಿ ದದೌ ಭಾಗಂ ಪರೋಕ್ಷಮಸುರಾನ್ ಪ್ರತಿ ।
ಯಜಮಾನೋಽವಹದ್ಭಾಗಂ ಮಾತೃಸ್ನೇಹವಶಾನುಗಃ ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಭರತ ಕುಲಮಣಿಯೇ! ವಿಶ್ವರೂಪನಿಗೆ ಮೂರು ತಲೆಗಳಿದ್ದುವು. ಅವನು ಒಂದು ಮುಖದಿಂದ ಸೋಮರಸವನ್ನು ಮತ್ತೊಂದರಿಂದ ಸುರೆ ಯನ್ನು ಕುಡಿಯುತ್ತಿದ್ದನು. ಮೂರನೆಯ ಮುಖದಿಂದ ಅನ್ನ ತಿನ್ನು ತ್ತಿದ್ದನು ಎಂದು ನಾವು ಕೇಳಿದ್ದೇವೆ. ॥ ೧ ॥ ಅವನ ತಂದೆಯಾದ ತ್ವಷ್ಟಾನು ದ್ವಾದಶಾದಿತ್ಯರಲ್ಲಿ ಒಬ್ಬನಾದ್ದರಿಂದ ವಿಶ್ವರೂಪನು ಯಜ್ಞವನ್ನು ಮಾಡುವಾಗ ಪ್ರತ್ಯಕ್ಷವಾಗಿ ಉಚ್ಚ-ಸ್ವರದಲ್ಲಿ ಮಂತ್ರ ಗಳನ್ನು ಹೇಳಿ ದೇವತೆಗಳಿಗೆ ಅತ್ಯಂತ ವಿನಯದಿಂದ ಆಹುತಿಗಳನ್ನು ಅರ್ಪಿಸುತ್ತಿದ್ದನು. ॥ ೨ ॥ ಜೊತೆ-ಜೊತೆಗೆ ಯಾರಿಗೂ ತಿಳಿಯ ದಂತೆ ಅಸುರರಿಗೂ ಆಹುತಿಗಳನ್ನು ಕೊಡುತ್ತಿದ್ದನು. ಅವನ ತಾಯಿ ಅಸುರಕುಲದವಳಾದ್ದರಿಂದ ಅವನು ಮಾತೃಸ್ನೇಹಕ್ಕೆ ವಶನಾಗಿ ಯಜ್ಞಮಾಡುವಾಗ ಹೀಗೆ ಅಸುರರಿಗೂ ಯಜ್ಞಭಾಗವನ್ನು ತಲುಪಿಸುತ್ತಿದ್ದನು. ॥ ೩ ॥

ತದ್ದೇವಹೇಲನಂ ತಸ್ಯ ಧರ್ಮಾಲೀಕಂ ಸುರೇಶ್ವರಃ ।
ಆಲಕ್ಷ್ಯ ತರಸಾ ಭೀತಸ್ತಚ್ಛೀರ್ಷಾಣ್ಯಚ್ಛಿನದ್ರುಷಾ ॥ ೪ ॥

ಸೋಮಪೀಥಂ ತು ಯತ್ತಸ್ಯ ಶಿರ ಆಸೀತ್ಕಪಿಂಜಲಃ ।
ಕಲವಿಂಕಃ ಸುರಾಪೀಥಮನ್ನಾದಂ ಯತ್ ಸ ತಿತ್ತಿರಿಃ ॥ ೫ ॥

ಬ್ರಹ್ಮಹತ್ಯಾಮಂಜಲಿನಾ ಜಗ್ರಾಹ ಯದಪೀಶ್ವರಃ ।
ಸಂವತ್ಸರಾಂತೇ ತದಘಂ ಭೂತಾನಾಂ ಸ ವಿಶುದ್ಧಯೇ ।
ಭೂಮ್ಯಂಬುದ್ರುಮಯೋಷಿದ್ಭ್ಯಶ್ಚತುರ್ಧಾ ವ್ಯಭಜದ್ಧರಿಃ ॥ ೬ ॥

ಭೂಮಿಸ್ತುರೀಯಂ ಜಗ್ರಾಹ ಖಾತಪೂರವರೇಣ ವೈ ।
ಈರಿಣಂ ಬ್ರಹ್ಮಹತ್ಯಾಯಾ ರೂಪಂ ಭೂಮೌ ಪ್ರದೃಶ್ಯತೇ ॥ ೭ ॥

ತುರ್ಯಂ ಛೇದವಿರೋಹೇಣ ವರೇಣ ಜಗೃಹುರ್ದ್ರುಮಾಃ ।
ತೇಷಾಂ ನಿರ್ಯಾಸರೂಪೇಣ ಬ್ರಹ್ಮಹತ್ಯಾ ಪ್ರದೃಶ್ಯತೇ ॥ ೮ ॥

ಶಶ್ವತ್ಕಾಮವರೇಣಾಂಹಸ್ತುರೀಯಂ ಜಗೃಹುಃ ಸ್ತ್ರಿಯಃ ।
ರಜೋರೂಪೇಣ ತಾಸ್ವಂಹೋ ಮಾಸಿ ಮಾಸಿ ಪ್ರದೃಶ್ಯತೇ ॥ ೯ ॥

ದ್ರವ್ಯಭೂಯೋವರೇಣಾಪಸ್ತುರೀಯಂ ಜಗೃಹುರ್ಮಲಮ್ ।
ತಾಸು ಬುದ್ಬುದಫೇನಾಭ್ಯಾಂ ದೃಷ್ಟಂ ತದ್ಧರತಿ ಕ್ಷಿಪನ್ ॥ ೧೦ ॥

ಹತಪುತ್ರಸ್ತತಸ್ತ್ವಷ್ಟಾ ಜುಹಾವೇಂದ್ರಾಯ ಶತ್ರವೇ ।
ಇಂದ್ರಶತ್ರೋ ವಿವರ್ಧಸ್ವ ಮಾಚಿರಂ ಜಹಿ ವಿದ್ವಿಷಮ್ ॥ ೧೧ ॥

ಹೀಗೆ ಅವನು ದೇವತೆಗಳಿಗೆ ಅಪರಾಧವನ್ನೂ ಹಾಗೂ ಧರ್ಮದ ಮರೆಯಲ್ಲಿ ಕಪಟವನ್ನು ಮಾಡುತ್ತಿರುವುದನ್ನು ನೋಡಿದ ದೇವೇಂದ್ರನು ಅದಕ್ಕೆ ಹೆದರಿ, ಕೋಪಗೊಂಡು ಅತಿವೇಗದಿಂದ ಅವನ ಮೂರೂ ತಲೆಗಳನ್ನು ಕತ್ತರಿಸಿಹಾಕಿದನು. ॥ ೪ ॥ ವಿಶ್ವರೂಪನ ಕತ್ತರಿಸಲ್ಪಟ್ಟ ತಲೆಗಳಲ್ಲಿ ಸೋಮರಸವನ್ನು ಪಾನಮಾಡುತ್ತಿದ್ದ ತಲೆಯು ಕಪಿಂಜಲ ಪಕ್ಷಿಯಾಗಿ, ಸುರಾಪಾನ ಮಾಡುತ್ತಿದ್ದ ತಲೆಯು ಕಲವಿಂಕ (ಗುಬ್ಬಚ್ಚಿ)ಯಾಗಿಯೂ, ಅನ್ನವನ್ನು ಉಣ್ಣುತ್ತಿದ್ದ ತಲೆಯು ತಿತ್ತಿರಿ ಪಕ್ಷಿಯಾಗಿ ರೂಪತಾಳಿದವು. ॥ ೫ ॥ ವಿಶ್ವರೂಪನ ವಧೆಯಿಂದ ತಗುಲಿದ್ದ ಬ್ರಹ್ಮಹತ್ಯೆಯ ದೋಷವನ್ನು ದೇವೇಂದ್ರನು ಬಯಸಿದ್ದರೆ ದೂರಮಾಡಿಕೊಳ್ಳ ಬಲ್ಲವನಾಗಿದ್ದನು. ಆದರೆ ಹೀಗೆ ಮಾಡುವುದು ಅನುಚಿತವೆಂದು ತಿಳಿದು, ಕೈ ಜೋಡಿಸಿಕೊಂಡು ಅದನ್ನು ಸ್ವೀಕರಿಸಿದನು. ಒಂದು ವರ್ಷದವರೆಗೆ ಅದರಿಂದ ಬಿಡುಗಡೆ ಹೊಂದುವ ಯಾವ ಉಪಾಯವನ್ನೂ ಮಾಡಲಿಲ್ಲ. ಅನಂತರ ಎಲ್ಲ ಜನರ ಮುಂದೆ ಪರಿಶುದ್ಧಿಯನ್ನು ಪಡೆಯಲಿಕ್ಕಾಗಿ ಆತನು ತನಗೆ ತಗುಲಿದ್ದ ಬ್ರಹ್ಮಹತ್ಯೆಯನ್ನು ನಾಲ್ಕು ಪಾಲಾಗಿ ವಿಂಗಡಿಸಿ ಅದನ್ನು ಭೂಮಿಗೆ, ಜಲಕ್ಕೆ, ವೃಕ್ಷಕ್ಕೆ ಮತ್ತು ಸ್ತ್ರೀಯರಿಗೆ ಹಂಚಿಬಿಟ್ಟನು. ॥ ೬ ॥ ಪರೀಕ್ಷಿತನೇ ! ಭೂಮಿಯು-ಎಲ್ಲಾದರೂ ನನ್ನಲ್ಲಿ ಹಳ್ಳ-ಕೊಳ್ಳಗಳಾದರೆ ಅದು ಕಾಲ-ಕಾಲದಲ್ಲಿ ಭರ್ತಿಯಾಗಲಿ ಎಂಬ ವರವನ್ನು ಪಡೆದು ಭೂಮಿಯು ಬ್ರಹ್ಮಹತ್ಯೆಯ ನಾಲ್ಕನೆಯ ಒಂದಂಶವನ್ನು ಸ್ವೀಕರಿಸಿತು. ಅದೇ ಬ್ರಹ್ಮಹತ್ಯೆಯು ಭೂಮಿಯಲ್ಲಿ ಕೆಲವೆಡೆ ಮರುಭೂಮಿಯ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ॥ ೭ ॥ ಮತ್ತೊಂದು ಚತುರ್ಥಾಂಶವನ್ನು ವೃಕ್ಷಗಳು ಸ್ವೀಕರಿಸಿದುವು. 'ನಮ್ಮಲ್ಲಿ ಕಡಿದುಹೋದ ಭಾಗಗಳು ತಾವಾಗಿಯೇ ಮತ್ತೆ ಬೆಳೆದು ಕೊಳ್ಳಲಿ' ಎಂಬ ವರವನ್ನು ಇಂದ್ರನಿಂದ ಪಡೆದು ಕೊಂಡವು. ವೃಕ್ಷಗಳಲ್ಲಿ ಈಗಲೂ ಅಂಟಿನ ರೂಪದಲ್ಲಿ ಆ ಬ್ರಹ್ಮ ಹತ್ಯೆಯು ಕಾಣಸಿಗುತ್ತದೆ. ॥ ೮ ॥ ಹಾಗೆಯೇ ಸ್ತ್ರೀಯರು – 'ನಮಗೆ ಸದಾಕಾಲ ಪುರುಷರ ಸಹವಾಸ ದೊರೆಯುತ್ತಿರಲಿ' ಎಂಬ ವರವನ್ನು ಪಡೆದು ಮೂರನೇ ಚತುರ್ಥಾಂಶವನ್ನು ಸ್ವೀಕರಿಸಿದರು. ಅವರಲ್ಲಿರುವ ಬ್ರಹ್ಮಹತ್ಯೆಯು ಪ್ರತಿತಿಂಗಳಲ್ಲಿ ರಜೋದರ್ಶನದ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ॥ ೯ ॥ ಹಾಗೆಯೇ ಜಲವು – 'ನಾನು ವ್ಯಯವಾಗುತ್ತಿದ್ದರೂ ಪ್ರವಾಹಾದಿರೂಪಗಳಲ್ಲಿ ನನ್ನ ವೃದ್ಧಿಯು ಆಗುತ್ತಾ ಇರಲಿ' ಎಂಬ ವರವನ್ನು ಪಡೆದು ಬ್ರಹ್ಮ ಹತ್ಯೆಯ ಉಳಿದ ನಾಲ್ಕನೆಯ ಒಂದಂಶವನ್ನು ಸ್ವೀಕರಿಸಿತು. ಈಗಲೂ ನೀರಿನಲ್ಲಿ ನೊರೆ, ಗುಳ್ಳೆ ಮುಂತಾದ ರೂಪಗಳಲ್ಲಿ ಆ ಬ್ರಹ್ಮಹತ್ಯೆಯು ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಮನುಷ್ಯರು ಅದನ್ನು ದೂರತಳ್ಳಿ ನೀರನ್ನು ಸೇವಿಸುತ್ತಾರೆ. ॥ ೧೦ ॥

ವಿಶ್ವರೂಪನ ತಂದೆಯಾದ ತ್ವಷ್ಟಾನಿಗೆ ಪುತ್ರನ ಮರಣದಿಂದಾಗಿ ಮಿತಿಮೀರಿದ ಕ್ರೋಧವು ಉಂಟಾಯಿತು. ಆಗ ಅವನು ಇಂದ್ರನ ಶತ್ರುವಾಗಿ ಇಂದ್ರನನ್ನು ಸಂಹರಿಸುವಂತಹ ಪುತ್ರನು ಉಂಟಾಗಲಿ ಎಂಬ ಆಶಯದಿಂದ – 'ಎಲೈ ಇಂದ್ರ ಶತ್ರುವೇ ! ನಿನ್ನ ಅಭಿವೃದ್ಧಿ ಉಂಟಾಗಲೀ. ಶೀಘ್ರಾತಿಶೀಘ್ರವಾಗಿ ಶತ್ರುವನ್ನು ಸಂಹರಿಸು' ಎಂಬ ಮಂತ್ರದಿಂದ ಅಗ್ನಿಯಲ್ಲಿ ಹೋಮ ಮಾಡಿದನು. ॥ ೧೧ ॥

ಅಥಾನ್ವಾಹಾರ್ಯಪಚನಾದುತ್ಥಿತೋ ಘೋರದರ್ಶನಃ ।
ಕೃತಾಂತ ಇವ ಲೋಕಾನಾಂ ಯುಗಾಂತಸಮಯೇ ಯಥಾ ॥ ೧೨ ॥

ವಿಷ್ವಗ್ವಿವರ್ಧಮಾನಂ ತಮಿಷುಮಾತ್ರಂ ದಿನೇ ದಿನೇ ।
ದಗ್ಧ ಶೈಲಪ್ರತೀಕಾಶಂ ಸಂಧ್ಯಾಭ್ರಾನೀಕವರ್ಚಸಮ್ ॥ ೧೩ ॥

ತಪ್ತತಾಮ್ರಶಿಖಾಶ್ಮಶ್ರುಂ ಮಧ್ಯಾಹ್ನಾರ್ಕೋಗ್ರಲೋಚನಮ್ ॥ ೧೪ ॥

ದೇದೀಪ್ಯಮಾನೇ ತ್ರಿಶಿಖೇ ಶೂಲ ಆರೋಪ್ಯ ರೋದಸೀ ।
ನೃತ್ಯಂತಮುನ್ನದಂತಂ ಚ ಚಾಲಯಂತಂ ಪದಾ ಮಹೀಮ್ ॥ ೧೫ ॥

ದರೀಗಂಭೀರವಕ್ತ್ರೇಣ ಪಿಬತಾ ಚ ನಭಸ್ತಲಮ್ ।
ಲಿಹತಾ ಜಿಹ್ವಯರ್ಕ್ಷಾಣಿ ಗ್ರಸತಾ ಭುವನತ್ರಯಮ್ ॥ ೧೬ ॥

ಮಹತಾ ರೌದ್ರದಂಷ್ಟ್ರೇಣ ಜೃಂಭಮಾಣಂ ಮುಹುರ್ಮುಹುಃ ।
ವಿತ್ರಸ್ತಾ ದುದ್ರುವುರ್ಲೋಕಾ ವೀಕ್ಷ್ಯ ಸರ್ವೇದಿಶೋ ದಶ ॥ ೧೭ ॥

ಯೇನಾವೃತಾ ಇಮೇ ಲೋಕಾಸ್ತಮಸಾ ತ್ವಾಷ್ಟ್ರ ಮೂರ್ತಿನಾ ।
ಸ ವೈ ವೃತ್ರ ಇತಿ ಪ್ರೋಕ್ತಃ ಪಾಪಃ ಪರಮದಾರುಣಃ ॥ ೧೮ ॥

ತಂ ನಿಜಘ್ನುರಭಿದ್ರುತ್ಯ ಸಗಣಾ ವಿಬುಧರ್ಷಭಾಃ ।
ಸ್ವೈಃ ಸ್ವೈರ್ದಿವ್ಯಾಸ್ತ್ರಶಸ್ತ್ರೌಘೈಃ ಸೋಽಗ್ರಸತ್ತಾನಿ ಕೃತ್ಸ್ನಶಃ ॥ ೧೯ ॥

ತತಸ್ತೇ ವಿಸ್ಮಿತಾಃ ಸರ್ವೇ ವಿಷಣ್ಣಾ ಗ್ರಸ್ತತೇಜಸಃ ।
ಪ್ರತ್ಯಂಚಮಾದಿಪುರುಷಮುಪತಸ್ಥುಃ ಸಮಾಹಿತಾಃ ॥ ೨೦ ॥

*ದೇವಾ ಊಚುಃ*

ವಾಯ್ವಂಬರಾಗ್ನ್ಯಪ್‌ಕ್ಷಿತಯಸ್ತ್ರಿಲೋಕಾ
ಬ್ರಹ್ಮಾದಯೋ ಯೇ ವಯಮುದ್ವಿಜಂತಃ ।
ಹರಾಮ ಯಸ್ಮೈ ಬಲಿಮಂತಕೋಽಸೌ
ಬಿಭೇತಿ ಯಸ್ಮಾದರಣಂ ತತೋ ನಃ ॥ ೨೧ ॥

ಯಜ್ಞವು ಸಮಾಪ್ತವಾಗುತ್ತಿದ್ದಂತೆ ಅನ್ವಹಾರ್ಯಪಚನವೆಂಬ ಅಗ್ನಿ (ದಕ್ಷಿಣಾಗ್ನಿ)ಯಿಂದ ಅತಿಭಯಂಕರ ರೂಪದ ಒಬ್ಬ ದೈತ್ಯನು ಮೇಲೆದ್ದು ಬಂದನು. ಲೋಕಗಳನ್ನು ನಾಶಪಡಿಸಲಿಕ್ಕಾಗಿ ಪ್ರಕಟಗೊಂಡಿರುವ ಕಾಲ ಮೃತ್ಯುವಿನಂತೆಯೇ ಅವನು ಕಾಣುತ್ತಿದ್ದನು. ॥ ೧೨ ॥ ಪರೀಕ್ಷಿತನೇ ! ಅವನು ಪ್ರತಿ ದಿನವೂ ತನ್ನ ದೇಹದ ಎಲ್ಲೆಡೆ ಬಾಣದಂತೆ ಬೆಳೆಯುತ್ತಾ, ಉರಿಯುತ್ತಿರುವ ಅಗ್ನಿಪರ್ವತದಂತೆ ಭೀಕರಾಕಾರ ವಿಕ್ರಮನಾಗಿ ಮೆರೆದನು. ಸಂಜೆಗಾಲದ ಮೋಡಗಳ ತಂಡದಂತೆ ಬೆಳಗತೊಡಗಿದನು. ॥ ೧೩ ॥ ಕೆಂಪಗೆ ಕಾದಿರುವ ತಾಮ್ರದಂತೆ ಹೋಲುವ ತಲೆಗೂದಲು, ಗಡ್ಡ-ಮೀಸೆಗಳಿಂದಲೂ, ನಡುಹಗಲಿನ ಸೂರ್ಯನಂತಹ ಕಣ್ಣುಗಳಿಂದ ಅವನು ಪ್ರಚಂಡನಾಗಿದ್ದನು. ॥ ೧೪ ॥ ಆ ಉಗ್ರಮೂರ್ತಿಯು ಥಳ-ಥಳಿಸುತ್ತಿದ್ದ ಮೂರು ಅಲಗುಗಳುಳ್ಳ ತ್ರಿಶೂಲವನ್ನು ಎತ್ತಿಕೊಂಡು, ಕುಣಿಯುತ್ತಾ, ಕುಪ್ಪಳಿಸುತ್ತಾ, ವಿಕಟಾಟ್ಟಹಾಸ ದೊಡನೆ ಅಬ್ಬರಿಸುತ್ತಾ ಭೂಮಿಯನ್ನು ಮೆಟ್ಟಿ ನಡುಗಿಸುತ್ತಿದ್ದವು. ಆ ತ್ರಿಶೂಲದ ಮೇಲೆ ಅವನು ಅಂತರಿಕ್ಷವನ್ನೇ ಎತ್ತಿ ಹಿಡಿದಿರುವನೋ ಎಂಬಂತೆ ಕಾಣುತ್ತಿತ್ತು. ॥ ೧೫ ॥ ಗುಹೆಯಂತೆ ಆಳವಾಗಿ ತೆರೆದ ಬಾಯಿಂದ ಇಡೀ ಅಂತರಿಕ್ಷವನ್ನೇ ಕುಡಿಯುವಂತೆಯೂ, ಅತಿವಿಶಾಲವಾಗಿದ್ದ ನಾಲಿಗೆಯಿಂದ ನಕ್ಷತ್ರ ಮಂಡಲವನ್ನೇ ನೆಕ್ಕುತ್ತಿರುವಂತೆಯೂ, ಮೂರುಲೋಕಗಳನ್ನು ನುಂಗಿಹಾಕುತ್ತಿರುವಂತೆಯೂ, ತನ್ನ ಭಯಂಕರ ಕೋರೆದಾಡೆಗಳನ್ನು ಪ್ರಕಟಿಸುತ್ತಾ ಅಡಿಗಡಿಗೆ ಆಕಳಿಸುತ್ತಿದ್ದನು. ಅವನ ಭೀಷಣರೂಪವನ್ನು ಕಂಡು ಎಲ್ಲ ಜನರು ಭಯದಿಂದ ಎಲ್ಲೆಡೆ ಓಡತೊಡಗಿದರು. ॥ ೧೬-೧೭ ॥

ಪರೀಕ್ಷಿದ್ರಾಜನೇ! ತ್ವಷ್ಟಾನ ತಮೋಗುಣೀ ಆ ಪುತ್ರನು ಎಲ್ಲ ಲೋಕಗಳನ್ನು ಆವರಿಸಿಕೊಂಡಿದ್ದನು. ಇದರಿಂದ ಆ ಪಾಪಿಯೂ, ಅತ್ಯಂತ ಕ್ರೂರನೂ ಆದ ಆ ಪುರುಷನ ಹೆಸರು 'ವೃತ್ರಾಸುರ' ಎಂದಾಯಿತು. ॥ ೧೮ ॥ ದೊಡ್ಡ-ದೊಡ್ಡ ದೇವತೆಗಳು ತಮ್ಮ-ತಮ್ಮ ಅನುಯಾಯಿಗಳೊಂದಿಗೆ ಒಟ್ಟಿಗೆ ಅವನ ಮೇಲೆ ಮುಗಿಬಿದ್ದರು ಮತ್ತು ತಮ್ಮ-ತಮ್ಮ ದಿವ್ಯ ಅಸ್ತ್ರಗಳಿಂದ ಹೊಡೆಯತೊಡಗಿದರು. ಆದರೆ ವೃತ್ರಾಸುರನು ಅವರ ಎಲ್ಲ ಶಸ್ತ್ರಾಸ್ತ್ರಗಳನ್ನು ನುಂಗಿಹಾಕಿದನು. ॥ ೧೯ ॥ ಆಗ ದೇವತೆಗಳಿಗೆ ಮಹದಾಶ್ಚರ್ಯವಾಯಿತು. ಅವರ ತೇಜಸ್ಸೆಲ್ಲವೂ ಉಡುಗಿ ಹೋಯಿತು. ಅವರೆಲ್ಲರೂ ದೀನ, ಹೀನರಾಗಿ ಕಳವಳಗೊಂಡು ಏಕಾಗ್ರಚಿತ್ತದಿಂದ ತಮ್ಮ ಹೃದಯದಲ್ಲಿ ವಿರಾಜಿಸುತ್ತಿರುವ ಆದಿಪುರುಷ ಶ್ರೀನಾರಾಯಣನಲ್ಲಿ ಶರಣಾಗಿ ಹೀಗೆ ಪ್ರಾರ್ಥಿಸಿದರು – ॥ ೨೦ ॥

ದೇವತೆಗಳು ಭಗವಂತನಲ್ಲಿ ಪ್ರಾರ್ಥಿಸುತ್ತಾರೆ – ವಾಯು, ಆಕಾಶ, ಅಗ್ನಿ, ಜಲ, ಪೃಥಿವಿಗಳೆಂಬ ಪಂಚಭೂತಗಳೂ ಅವುಗಳಿಂದ ನಿರ್ಮಿತವಾದ ಮೂರು ಲೋಕಗಳೂ, ಅವುಗಳಿಗೆ ಅಧಿಪತಿಗಳಾದ ಬ್ರಹ್ಮಾದಿಗಳೂ ಮತ್ತು ನಾವು ಯಾವನಿಗೆ ಹೆದರಿ ಕಾಣಿಕೆಗಳನ್ನು ಸಮರ್ಪಿಸುತ್ತಿದ್ದೇವೆಯೋ ಅಂತಹ ಕಾಲಪುರುಷನೂ ಕೂಡ ಭಗವಂತನಿಗೆ ಭಯಪಟ್ಟು ನಡೆಯುವನು. ಆದಕ್ಕಾಗಿ ಭಗವಂತನೇ ಈಗ ನಮ್ಮ ರಕ್ಷಕನಾಗಿದ್ದಾನೆ. ॥ ೨೧ ॥

ಅವಿಸ್ಮಿತಂ ತಂ ಪರಿಪೂರ್ಣಕಾಮಂ
ಸ್ವೇನೈವ ಲಾಭೇನ ಸಮಂ ಪ್ರಶಾಂತಮ್ ।
ವಿನೋಪಸರ್ಪತ್ಯಪರಂ ಹಿ ಬಾಲಿಶಃ
ಶ್ವಲಾಂಗುಲೇನಾತಿತಿತರ್ತಿ ಸಿಂಧುಮ್ ॥ ೨೨ ॥

ಪ್ರಭೋ! ನಿನಗಾಗಿ ಯಾವುದೇ ಹೊಸ ಮಾತಲ್ಲ, ಅದರಿಂದ ಏನನ್ನು ನೋಡಿದರೂ ನೀನು ವಿಸ್ಮಿತನಾಗುವುದಿಲ್ಲ. ನೀನು ನಿನ್ನ ಸ್ವರೂಪದ ಸಾಕ್ಷಾತ್ಕಾರದಿಂದಲೇ ಪೂರ್ಣಕಾಮನೂ, ಸಮನೂ, ಶಾಂತನೂ ಆಗಿರುವೆ. ಅಂತಹ ನಿನ್ನನ್ನು ಬಿಟ್ಟು ಬೇರೆಯವರಿಗೆ ಶರಣಾಗುವವನು ಮೂರ್ಖನೇ ಸರಿ. ಅವನು ನಾಯಿಯ ಬಾಲವನ್ನು ಹಿಡಿದುಕೊಂಡು ಸಮುದ್ರವನ್ನು ದಾಟಲು ಬಯಸುವಂತಹ ಗಾಂಪನೇ ಆಗಿದ್ದಾನೆ. ॥ ೨೨ ॥

ಯಸ್ಯೋರುಶೃಂಗೇ ಜಗತೀಂ ಸ್ವನಾವಂ
ಮನುರ್ಯಥಾಽಽಬಧ್ಯ ತತಾರ ದುರ್ಗಮ್ ।
ಸ ಏವ ನಸ್ತ್ವಾಷ್ಟ್ರಭಯಾದ್ ದುರಂತಾತ್
ತ್ರಾತಾಽಽಶ್ರಿತಾನ್ವಾರಿಚರೋಽಪಿ ನೂನಮ್ ॥ ೨೩ ॥

ನೀರಿನಲ್ಲಿ ಸಂಚರಿಸುತ್ತಿರುವ ಮೀನಿನ ಆಕಾರದಲ್ಲಿದ್ದರೂ ನೀನು ಆಶ್ರಿತರಕ್ಷಕನು. ವೈವಸ್ವತ ಮನುವು ಆತನ ವಿಶಾಲವಾದ ಶೃಂಗಕ್ಕೆ ಭೂಮಿಯೆಂಬ ನಾವೆಯನ್ನು ಕಟ್ಟಿ ಅನಾಯಾಸವಾಗಿಯೇ ಪ್ರಳಯಕಾಲದ ಪರಮ ಸಂಕಟವನ್ನು ದಾಟಿಬಿಟ್ಟನು. ಆ ಮಹಾಪುರುಷನೇ ಶರಣಾಗತರಾಗಿರುವ ನಮ್ಮನ್ನು ವೃತ್ರಾಸುರನ ದೆಸೆಯಿಂದ ಉಂಟಾಗಿರುವ ಭಯದಿಂದ ಖಂಡಿತವಾಗಿ ದಾಟಿಸುವನು. ॥ ೨೩ ॥

ಪುರಾ ಸ್ವಯಂಭೂರಪಿ ಸಂಯಮಾಂಭ-
ಸ್ಯುದೀರ್ಣವಾತೋರ್ಮಿರವೈಃ ಕರಾಲೇ ।
ಏಕೋಽರವಿಂದಾತ್ಪತಿತಸ್ತತಾರ
ತಸ್ಮಾದ್ಭಯಾದ್ಯೇನ ಸ ನೋಽಸ್ತು ಪಾರಃ ॥ ೨೪ ॥

ಹಿಂದೆ ಬ್ರಹ್ಮದೇವರು ತಾವು ಕುಳಿತಿದ್ದ ಪದ್ಮಪೀಠದಿಂದ – ಭೀಕರವಾದ ಬಿರುಗಾಳಿಯ ಹೊಡೆತದಿಂದ ಮೇಲೆದ್ದು ಮಹಾತರಂಗಗಳಿಂದ ಭೋರ್ಗರೆಯುತ್ತಿದ್ದ ಪ್ರಳಯಸಾಗರದ ಜಲದಲ್ಲಿ ಬಿದ್ದುಬಿಟ್ಟರು. ಆಗ ಏಕಾಕಿಯಾಗಿ ಅಸಹಾಯಕರಾಗಿದ್ದ ಅವರನ್ನು ಆ ಮಹಾಭಯದಿಂದ ಯಾರು ಪಾರುಮಾಡಿದನೋ, ಅವನೇ ಈಗ ನಮ್ಮನ್ನು ಪಾರು ಮಾಡಿಸಲಿ. ॥ ೨೪ ॥

ಯ ಏಕ ಈಶೋ ನಿಜಮಾಯಯಾ ನಃ
ಸಸರ್ಜ ಯೇನಾನು ಸೃಜಾಮ ವಿಶ್ವಮ್ ।
ವಯಂ ನ ಯಸ್ಯಾಪಿ ಪುರಃ ಸಮೀಹತಃ
ಪಶ್ಯಾಮ ಲಿಂಗಂ ಪೃಥಗೀಶಮಾನಿನಃ ॥ ೨೫ ॥

ಆ ಅದ್ವಿತೀಯ ಪರಮ ಪ್ರಭುವೇ ತನ್ನ ಮಾಯಾಶಕ್ತಿಯಿಂದ ನಮ್ಮನ್ನು ಸೃಷ್ಟಿಮಾಡಿದ್ದಾನೆ. ಅವನ ಅನುಗ್ರಹದಿಂದಲೇ ನಾವು ಸೃಷ್ಟಿಕಾರ್ಯವನ್ನು ನಡೆಸುತ್ತಿದ್ದೇವೆ. ನಾವು ಅವನ ಮುಂದೆಯೇ ಇದ್ದು ಅವನ ದಿವ್ಯ ವ್ಯಾಪಾರಗಳನ್ನು ನೋಡುತ್ತಿದ್ದೇವೆ. ಆದರೆ 'ನಾವೇ ಸ್ವತಂತ್ರರಾದ ಈಶ್ವರರು' ಎಂಬ ಅಹಂಕಾರದಿಂದ ನಾವು ಅವನ ಸ್ವರೂಪವನ್ನು ಕಾಣಲಾರದೇ ಇದ್ದೇವೆ. ॥ ೨೫ ॥

ಯೋ ನಃ ಸಪತ್ನೈರ್ಭೃಶಮರ್ದ್ಯಮಾನಾನ್-
ದೇವರ್ಷಿತಿರ್ಯಙ್ನೃಷು ನಿತ್ಯ ಏವ ।
ಕೃತಾವತಾರಸ್ತನುಭಿಃ ಸ್ವಮಾಯಯಾ
ಕೃತ್ವಾಽಽತ್ಮಸಾತ್ಪಾತಿ ಯುಗೇ ಯುಗೇ ಚ ॥ ೨೬ ॥

ದೇವತೆಗಳು ತಮ್ಮ ಶತ್ರುಗಳಿಂದ ಬಹಳ ಪೀಡಿತರಾಗಿದ್ದಾರೆ ಎಂದು ಆ ಪ್ರಭುವು ನೋಡಿದಾಗ ಅವನು ನಿಜವಾಗಿ ನಿರ್ವಿಕಾರನಾಗಿದ್ದರೂ ತನ್ನ ಮಾಯೆಯನ್ನು ಆಶ್ರಯಿಸಿ ದೇವತೆ, ಋಷಿ, ಪಶು-ಪಕ್ಷಿ ಮತ್ತು ಮನುಷ್ಯಾದಿ ರೂಪದಲ್ಲಿ ಅವತರಿಸುವನು ಹಾಗೂ ಯುಗ-ಯುಗಗಳಲ್ಲಿ ನಮ್ಮನ್ನು ತಮ್ಮವರೆಂದು ತಿಳಿದು ರಕ್ಷಿಸುತ್ತಿರುವನು. ॥ ೨೬ ॥

ತಮೇವ ದೇವಂ ವಯಮಾತ್ಮದೈವತಂ
ಪರಂ ಪ್ರಧಾನಂ ಪುರುಷಂ ವಿಶ್ವಮನ್ಯಮ್ ।
ವ್ರಜಾಮ ಸರ್ವೇ ಶರಣಂ ಶರಣ್ಯಂ
ಸ್ವಾನಾಂ ಸ ನೋ ಧಾಸ್ಯತಿ ಶಂ ಮಹಾತ್ಮಾ ॥ ೨೭ ॥

ಅವನೇ ಎಲ್ಲರ ಆತ್ಮನೂ, ಪರಮಾರಾಧ್ಯದೇವನೂ ಆಗಿರುವನು. ಅವನೇ ಪ್ರಕೃತಿ ಮತ್ತು ಪುರುಷ ರೂಪದಿಂದ ವಿಶ್ವದ ಕಾರಣನಾಗಿದ್ದಾನೆ. ಅವನು ವಿಶ್ವದಿಂದ ಬೇರೆಯಾಗಿಯೂ ಇದ್ದಾನೆ ಹಾಗೂ ವಿಶ್ವರೂಪನೂ ಆಗಿದ್ದಾನೆ. ನಾವೆಲ್ಲರೂ ಆ ಶರಣಾಗತವತ್ಸಲ ಭಗವಾನ್ ಶ್ರೀಹರಿಯಲ್ಲಿ ಶರಣಾಗತರಾಗಿದ್ದೇವೆ. ಉದಾರ ಶಿರೋಮಣಿಯಾದ ಪ್ರಭುವು ಖಂಡಿತವಾಗಿ ತನ್ನವರೇ ಆಗಿರುವ ನಮಗೆ ಮಂಗಳವನ್ನುಂಟು ಮಾಡುವನು. ॥ ೨೭ ॥

*ಶ್ರೀಶುಕ ಉವಾಚ*

ಇತಿ ತೇಷಾಂ ಮಹಾರಾಜ ಸುರಾಣಾಮುಪತಿಷ್ಠತಾಮ್ ।
ಪ್ರತೀಚ್ಯಾಂ ದಿಶ್ಯಭೂದಾವಿಃ ಶಂಖಚಕ್ರಗದಾಧರಃ
॥ ೨೮ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ದೇವತೆಗಳು ಹೀಗೆ ಭಗವಂತನನ್ನು ಪ್ರಾರ್ಥಿಸಿದಾಗ ಸ್ವಯಂ ಶಂಖ, ಚಕ್ರ, ಗದಾ, ಪದ್ಮಧಾರಿಯಾಗಿ ಭಗವಂತನು ಅವರ ಮುಂದೆ ಪ್ರಕಟನಾದನು. ॥ ೨೮ ॥

ಆತ್ಮತುಲ್ಯೈಃ ಷೋಡಶಭಿರ್ವಿನಾ ಶ್ರೀವತ್ಸಕೌಸ್ತುಭೌ ।
ಪರ್ಯುಪಾಸಿತಮುನ್ನಿದ್ರಶರದಂಬುರುಹೇಕ್ಷಣಮ್ ॥ ೨೯ ॥

ದೃಷ್ಟ್ವಾ ತಮವನೌ ಸರ್ವ ಈಕ್ಷಣಾಹ್ಲಾದವಿಕ್ಲವಾಃ ।
ದಂಡವತ್ಪತಿತಾ ರಾಜನ್ ಶನೈರುತ್ಥಾಯ ತುಷ್ಟುವುಃ ॥ ೩೦ ॥

*ದೇವಾ ಊಚುಃ*

ನಮಸ್ತೇ ಯಜ್ಞವೀರ್ಯಾಯ ವಯಸೇ ಉತ ತೇ ನಮಃ ।
ನಮಸ್ತೇ ಹ್ಯಸ್ತಚಕ್ರಾಯ ನಮಃ ಸುಪುರುಹೂತಯೇ ॥ ೩೧ ॥

ಯತ್ತೇ ಗತೀನಾಂ ತಿಸೃಣಾಮೀಶಿತುಃ ಪರಮಂ ಪದಮ್ ।
ನಾರ್ವಾಚೀನೋ ವಿಸರ್ಗಸ್ಯ ಧಾತರ್ವೇದಿತುಮರ್ಹತಿ ॥ ೩೨ ॥

ಓಂ ನಮಸ್ತೇಽಸ್ತು ಭಗವನ್ನಾರಾಯಣ ವಾಸುದೇವಾದಿಪುರುಷ ಮಹಾಪುರುಷ ಮಹಾನುಭಾವ ಪರಮಮಂಗಲ ಪರಮಕಲ್ಯಾಣ ಪರಮಕಾರುಣಿಕ ಕೇವಲ ಜಗದಾಧಾರ ಲೋಕೈಕನಾಥ ಸರ್ವೇಶ್ವರ ಲಕ್ಷ್ಮೀನಾಥ ಪರಮಹಂಸಪರಿವ್ರಾಜಕೈಃ ಪರಮೇಣಾತ್ಮ ಯೋಗ ಸಮಾಧಿನಾ ಪರಿಭಾವಿತಪರಿಸ್ಫುಟಪಾರಮಹಂಸ್ಯಧರ್ಮೇಣೋದ್ಘಾಟಿತತಮಃಕಪಾಟದ್ವಾರೇ ಚಿತ್ತೇಽಪಾವೃತ ಆತ್ಮಲೋಕೇ ಸ್ವಯಮುಪಲಬ್ಧ ನಿಜಸುಖಾನುಭವೋ ಭವಾನ್ ॥ ೩೩ ॥ ದುರವಬೋಧ ಇವ ತವಾಯಂ ವಿಹಾರಯೋಗೋ ಯದಶರಣೋಽಶರೀರ ಇದಮನವೇಕ್ಷಿತಾ ಸ್ಮತ್ಸಮವಾಯ ಆತ್ಮನೈವಾವಿಕ್ರಿಯಮಾಣೇನ ಸಗುಣಮಗುಣಃ ಸೃಜಸಿ ಪಾಸಿ ಹರಸಿ ॥ ೩೪ ॥ ಅಥ ತತ್ರ ಭವಾನ್ ಕಿಂ ದೇವದತ್ತವದಿಹ ಗುಣವಿಸರ್ಗಪತಿತಃ ಪಾರತಂತ್ರ್ಯೇಣ ಸ್ವಕೃತಕುಶಲಾಕುಶಲಂ ಫಲಮುಪಾದದಾತ್ಯಾಹೋಸ್ವಿದಾತ್ಮಾರಾಮ ಉಪಶಮ-

ಭಗವಂತನ ನೇತ್ರಗಳು ಶರತ್ಕಾಲದ ಕಮಲದಂತೆ ಅರಳಿದ್ದವು. ಅವನೊಡನೆ ಹದಿನಾರು ಪಾರ್ಷದರು ಅವನ ಸೇವೆಯಲ್ಲಿ ತೊಡಗಿದ್ದರು. ಅವರು ಎಲ್ಲ ವಿಧದಿಂದ ಭಗವಂತನಂತೆಯೇ ಕಾಣುತ್ತಿದ್ದರು. ಕೇವಲ ಅವರ ವಕ್ಷಃಸ್ಥಳದಲ್ಲಿ ಶ್ರೀವತ್ಸಲಾಂಛನ ಮತ್ತು ಕೊರಳಲ್ಲಿ ಕೌಸ್ತುಭ ಮಣಿಯು ಇರಲಿಲ್ಲ. ॥ ೨೯ ॥ ಮಹಾರಾಜನೇ! ಭಗವಂತನ ದರ್ಶನ ಪಡೆದು ಎಲ್ಲ ದೇವತೆಗಳು ಆನಂದಮಗ್ನರಾದರು. ಅವರು ಭೂಮಿಯಲ್ಲಿ ಹೊರಳಾಡುತ್ತಾ ಸಾಷ್ಟಾಂಗ ನಮಸ್ಕಾರ ಮಾಡಿ, ಮತ್ತೆ ನಿಧಾನವಾಗಿ ಮೇಲೆದ್ದು ಆ ಭಗವಂತನನ್ನು ಸ್ತುತಿಸ ತೊಡಗಿದರು. ॥ ೩೦ ॥

**ದೇವತೆಗಳೆಂದರು** – ಓ ಭಗವಂತಾ! ಯಜ್ಞಗಳ ಫಲವನ್ನು ಕೊಡುವ ಯಜ್ಞಶಕ್ತಿಯುಳ್ಳವನೂ, ಅದರ ಫಲದ ಎಲ್ಲೆಯನ್ನು ನಿರ್ಧರಿಸುವ ಕಾಲಸ್ವರೂಪನೂ ಆಗಿರುವ ನಿನಗೆ ನಮೋ ನಮಃ. ಅಸುರರ ಮೇಲೆ ಸುದರ್ಶನ ಚಕ್ರವನ್ನು ಪ್ರಯೋಗಿಸುವವನೂ, ಅನಂತ ನಾಮಗಳುಳ್ಳವನೂ ಆದ ನಿನಗೆ ನಮೋ ನಮಃ. ॥ ೩೧ ॥ ಓ ವಿಧಾತನೇ! ಸತ್ತ್ವ, ರಜ, ತಮ – ಎಂಬ ಈ ತ್ರಿಗುಣಗಳನ್ನು ಸಾರವಾಗಿ ಉಂಟಾಗುವ ಉತ್ತಮ, ಮಧ್ಯಮ, ಅಧಮವೆಂಬ ಗತಿಗಳ ನಿಯಾಮಕನು ನೀನೇ ಆಗಿರುವೆ. ನಿನ್ನ ಪರಮಪದದ ವಾಸ್ತವಿಕ ಸ್ವರೂಪವನ್ನು ಈ ಕಾರ್ಯ-ಕಾರಣ ರೂಪವಾದ ಜಗತ್ತಿನ ಯಾವುದೇ ಪ್ರಾಣಿಗಳು ತಿಳಿಯಲಾರವು. ॥ ೩೨ ॥

ಓಂ ನಿನಗೆ ನಮಸ್ಕಾರವಿರಲಿ. ಶ್ರೀಭಗವಂತನಾದ ನಾರಾಯಣನೇ! ವಾಸುದೇವನೇ! ಆದಿಪುರುಷನೇ! ಮಹಾಪುರುಷನೇ! ಮಹಾನುಭಾವನೇ! ಪರಮಮಂಗಳನೇ! ಪರಮ ಕಲ್ಯಾಣನೇ! ಪರಮಕಾರುಣಿಕನೇ! ಕೇವಲನೇ! ಜಗದಾಧಾರನೇ! ಲೋಕೈಕನಾಥನೇ! ಸರ್ವೇಶ್ವರನೇ! ಲಕ್ಷ್ಮೀಪತಿಯೇ! ಪರಮಹಂಸ ಪರಿವ್ರಾಜಕರು ಪರಮಹಂಸ ಧರ್ಮವನ್ನು ಚೆನ್ನಾಗಿ ಸ್ಪಷ್ಟವಾಗಿ ಭಾವಿಸಿಕೊಳ್ಳುವಂತಹ ಪರಮ ಶ್ರೇಷ್ಠವಾದ ಆತ್ಮಯೋಗ ಸಮಾಧಿಯಿಂದ ಹೃದಯದ ಅಜ್ಞಾನವೆಂಬ ಬಾಗಿಲನ್ನು ತೆರೆದುಕೊಂಡಾಗ ಅವರ ಆತ್ಮಲೋಕದಲ್ಲಿ, ಆತ್ಮಾನಂದರೂಪದಲ್ಲಿ ಯಾವ ಆವರಣವೂ ಇಲ್ಲದೆ ಪ್ರಕಟಗೊಳ್ಳುವವನೂ, ಆತ್ಮಸುಖಾನುಭವವನ್ನು ಸಹಜವಾಗಿಯೇ ಪಡೆದಿರುವವನೂ ಆದ ನಿನಗೆ ನಮೋ ನಮಃ. ॥ ೩೩ ॥ ಓ ಭಗವಂತಾ! ನಿನ್ನ ಲೀಲೆಯ ರಹಸ್ಯವನ್ನು ತಿಳಿಯುವುದು ಅತಿಕಷ್ಟ. ಏಕೆಂದರೆ, ನೀನು ಯಾವ ಆಶ್ರಯವೂ ಇಲ್ಲದೆ, ಪ್ರಾಕೃತ ಶರೀರವೂ ಇಲ್ಲದೆ, ಬೇರೆ ಯಾವ ಸಹಯೋಗವನ್ನೂ ಅಪೇಕ್ಷಿಸದೆ, ನಿರ್ಗುಣನೂ ನಿರ್ವಿಕಾರನೂ ಆಗಿದ್ದರೂ ತಾನಾಗಿಯೇ ಈ ಸಗುಣವಾದ ಜಗತ್ತಿನ ಸೃಷ್ಟಿ ಸ್ಥಿತಿ, ಸಂಹಾರಗಳನ್ನು ಮಾಡುತ್ತಿರುವೆ. ॥ ೩೪ ॥ ಓ ಭಗವಂತನೇ! ಸೃಷ್ಟಿಯೆಂಬ ಕಾರ್ಯದಲ್ಲಿ ನೀನು ದೇವದತ್ತನೇ ಮುಂತಾದ ಪ್ರಾಕೃತ ಜೀವರಂತೆ ಗುಣಗಳ ಕಾರ್ಯರೂಪವಾದ ಈ ಜಗತ್ತಿನಲ್ಲಿ ಪ್ರಕಟಗೊಂಡು ಕರ್ಮಾಧೀನನಾಗಿ ಪಾಪ-ಪುಣ್ಯಗಳ ಫಲವನ್ನು ಭೋಗಿಸುವವನೋ ಅಥವಾ ಆತ್ಮಾರಾಮನಾಗಿ, ಶಾಂತಸ್ವಭಾವವುಳ್ಳವನಾಗಿ, ವಿಷಯಗಳಲ್ಲಿ ಉದಾಸೀನನಾಗಿ ಸಾಕ್ಷಿಯಾಗಿ

ಶೀಲಃ ಸಮಂಜಸ ದರ್ಶನ ಉದಾಸ್ತ ಇತಿ ಹ ವಾವ ನ ವಿದಾಮಃ ॥ ೩೫ ॥ ನ ಹಿ ವಿರೋಧ ಉಭಯಂ ಭಗವತ್ಯಪರಿಗಣಿತಗುಣಗಣೇ ಈಶ್ವರೇಽನವಗಾಹ್ಯ-ಮಾಹಾತ್ಮ್ಯೇಽರ್ವಾಚೀನವಿಕಲ್ಪವಿತರ್ಕವಿಚಾರಪ್ರಮಾಣಾ-ಭಾಸಕುತರ್ಕಶಾಸ್ತ್ರಕಲಿಲಾಂತಃಕರಣಾ ಶ್ರಯದುರವಗ್ರಹ-ವಾದಿನಾಂ ವಿವಾದಾನವಸರ ಉಪರತಸಮಸ್ತ ಮಾಯಾಮಯೇ ಕೇವಲ ಏವಾತ್ಮಮಾಯಾಮಂತ-ರ್ಧಾಯ ಕೋನ್ವರ್ಥೋ ದುರ್ಘಟ ಇವ ಭವತಿ ಸ್ವರೂಪ-ದ್ವಯಾಭಾವಾತ್ ॥ ೩೬ ॥ ಸಮವಿಷಮಮತೀನಾಂ ಮತಮನು ಸರಸಿ ಯಥಾ ರಜ್ಜುಖಂಡಃ ಸರ್ಪಾದಿಧಿಯಾಮ್ ॥ ೩೭ ॥ ಸ ಏವ ಹಿ ಪುನಃ ಸರ್ವವಸ್ತುನಿ ವಸ್ತುಸ್ವರೂಪಃ ಸರ್ವೇಶ್ವರಃ ಸಕಲಜಗತ್ಕಾರಣ-ಕಾರಣಭೂತಃಸರ್ವಪ್ರತ್ಯಗಾತ್ಮತ್ವಾತ್ಸರ್ವ ಗುಣಾಭಾಸೋ-ಪಲಕ್ಷಿತ ಏಕ ಏವ ಪರ್ಯವ ಶೇಷಿತಃ ॥ ೩೮ ॥ ಅಥ ಹ ವಾವ ತವ ಮಹಿಮಾಮೃತರಸ-ಸಮುದ್ರವಿಪ್ರುಷಾ ಸಕೃದವಲೀಢಯಾ ಸ್ವಮನಸಿ ನಿಷ್ಯಂದ-ಮಾನಾನವರತಸುಖೇನ ವಿಸ್ಮಾರಿತದೃಷ್ಟಶ್ರುತವಿಷಯ-ಸುಖಲೇಶಾಭಾಸಾಃ ಪರಮಭಾಗವತಾ ಏಕಾಂತಿನೋ ಭಗವತಿ ಸರ್ವಭೂತಪ್ರಿಯಸುಹೃದಿ ಸರ್ವಾತ್ಮನಿ ನಿತರಾಂ ನಿರಂತರಂ ನಿರ್ವೃತಮನಸಃ ಕಥಮು ಹ ವಾ ಏತೇ ಮಧುಮಥನ ಪುನಃ ಸ್ವಾರ್ಥಕುಶಲಾ ಹ್ಯಾತ್ಮಪ್ರಿಯಸುಹೃದಃ

ಮಾತ್ರ ಇರುವವನೋ ಎಂಬುದೂ ಕೂಡ ನಮಗೆ ತಿಳಿಯದು. ॥ ೩೫ ॥ ಇವೆರಡೂ ನಿನ್ನಲ್ಲಿದ್ದರೂ ಅದರಲ್ಲಿ ವಿರೋಧವೇನಿಲ್ಲ. ಏಕೆಂದರೆ, ನೀನು ಸ್ವಯಂ ಭಗವಂತನೇ ಆಗಿರುವೆ. ನಿನ್ನ ಗುಣಗಳು ಅಗಣಿತವಾಗಿವೆ ಮತ್ತು ಮಹಿಮೆಯು ಅಗಾಧವಾಗಿದೆ. ನೀನು ಸರ್ವಶಕ್ತಿಸಂಪನ್ನನು. ಆಧುನಿಕರು ಅನೇಕ ಪ್ರಕಾರವಾದ ವಿಕಲ್ಪ, ವಿತರ್ಕ, ವಿಚಾರ, ಸುಳ್ಳುಪ್ರಮಾಣಗಳು ಹಾಗೂ ಕುತರ್ಕಪೂರ್ಣವಾದ ಶಾಸ್ತ್ರಗಳನ್ನು ಅಧ್ಯಯನಮಾಡಿ ತಮ್ಮ ಹೃದಯವನ್ನು ಮಲಿನವಾಗಿಸಿಕೊಳ್ಳುವರು. ಅವರು ದುರಾಗ್ರಹಿಗಳಾಗಿರುವುದಕ್ಕೂ ಇದೇ ಕಾರಣವು. ನಿನ್ನಲ್ಲಿ ಅವರ ಈ ವಾದ ವಿವಾದಗಳಿಗೆ ಸಂದರ್ಭವೇ ಇಲ್ಲ. ನಿನ್ನ ವಾಸ್ತವಿಕ ಸ್ವರೂಪವಾದರೋ ಸಮಸ್ತ ಮಾಯಾ ಪದಾರ್ಥಗಳನ್ನೂ ಮೀರಿ ಕೇವಲನಾಗಿರುವುದು. ಅದರಲ್ಲೇ ನೀನು ನಿನ್ನ ಮಾಯಾಶಕ್ತಿ ಯನ್ನು ಅಡಗಿಸಿಕೊಂಡೆಯಾದರೆ ನಿನ್ನಲ್ಲಿ ಯಾವುದು ತಾನೇ ಇರಲಾರದು ? ಆದ್ದರಿಂದ ನೀನು ಸಾಮಾನ್ಯಮನುಷ್ಯರಂತೆ ಕರ್ತೃತ್ವ-ಭೋಕ್ತೃತ್ವಗಳುಳ್ಳವನೂ ಆಗಿರಬಹುದು ಮತ್ತು ಮಹಾಪುರುಷರಂತೆ ಉದಾಸೀನನೂ ಆಗಿರಬಹುದು. ನೀನಾದರೋ ಇವೆರಡರಿಂದಲೂ ವಿಲಕ್ಷಣ, ಅನಿರ್ವಚನೀಯನಾಗಿರುವೆ. ॥ ೩೬ ॥ ಒಂದು ಹಗ್ಗದ ತುಂಡು ಭ್ರಾಂತಿಯುಳ್ಳವರಿಗೆ ಹಾವಾಗಿ ಕಂಡುಬಂದೀತು. ಆದರೆ ಭ್ರಾಂತಿಯಲ್ಲಿ ತಿಳುವಳಿಕೆ ಯುಳ್ಳವರಿಗೆ ಹಗ್ಗವಾಗಿಯೇ ಕಾಣುತ್ತದೆ. ಹಾಗೆಯೇ ನೀನೂ ಕೂಡ ಭ್ರಾಂತಬುದ್ಧಿಯುಳ್ಳವರಿಗೆ ಕರ್ತಾ, ಭೋಕ್ತಾ ಮುಂತಾದ ಅನೇಕ ರೂಪಗಳಲ್ಲಿ ಕಾಣುತ್ತೀಯೆ ಹಾಗೂ ಜ್ಞಾನಿಗಳಿಗೆ ಶುದ್ಧ ಸಚ್ಚಿದಾನಂದ ರೂಪದಲ್ಲಿ ಕಾಣುವೆ. ನೀನು ಎಲ್ಲರ ಬುದ್ಧಿಯನ್ನು ಅನುಸರಿಸುತ್ತಿರುವೆ. ॥ ೩೭ ॥ ವಿಚಾರಪೂರ್ವಕವಾಗಿ ನೋಡಿದರೆ ನೀನೇ ಸಮಸ್ತ ವಸ್ತುಗಳಲ್ಲಿ ವಸ್ತುತ್ವದ ರೂಪದಲ್ಲಿ ವಿರಾಜಮಾನನಾಗಿರುವೆ. ಎಲ್ಲರ ಸ್ವಾಮಿಯಾಗಿದ್ದು ಸಮಸ್ತ ಜಗತ್ತಿಗೆ ಕಾರಣರಾದ ಬ್ರಹ್ಮಾ, ಪ್ರಕೃತಿ ಮುಂತಾದವರಿಗೂ ಕಾರಣನಾಗಿರುವೆ. ನೀನೇ ಎಲ್ಲರ ಅಂತರ್ಯಾಮಿ, ಅಂತರಾತ್ಮನಾಗಿರುವೆ. ಅದಕ್ಕಾಗಿ ಜಗತ್ತಿನಲ್ಲಿ ಕಂಡುಬರುವ ಗುಣ-ದೋಷಗಳೆಲ್ಲದರ ಪ್ರತೀತಿಗಳು ತನ್ನ ಅಧಿಷ್ಠಾನಸ್ವರೂಪನಾದ ನಿನ್ನನ್ನೇ ಸಂಕೇತಮಾಡುತ್ತಿವೆ. ಶ್ರುತಿಗಳು ಸಮಸ್ತ ಪದಾರ್ಥಗಳನ್ನು ನಿಷೇಧಗೈದು ಕೊನೆಗೆ ನಿಷೇಧದ ಅವಧಿಯ ರೂಪದಲ್ಲಿ ಕೇವಲ ನಿನ್ನನ್ನೇ ಶೇಷವಾಗಿ ಇರಿಸಿದೆ. ॥ ೩೮ ॥ ಓ ಮಧುಸೂದನಾ ! ನಿನ್ನ ಮಹಿಮೆ ಯೆಂಬುದು ಅಮೃತರಸದ ಅನಂತಸಾಗರವಾಗಿದೆ. ಅದರ ಒಂದು ತೊಟ್ಟನ್ನಾದರೂ ಒಮ್ಮೆ ಸವಿದರೆ ಹೃದಯದಲ್ಲಿ ನಿತ್ಯನಿರಂತರ ಪರಮಾನಂದದ ಪ್ರವಾಹವೇ ಹರಿಯತೊಡಗುತ್ತದೆ. ಆದುದರಿಂದ ನಿನ್ನ ಆ ಅನನ್ಯ ಪ್ರೇಮಿಗಳಾದ ಭಕ್ತಶ್ರೇಷ್ಠರು ಜಗತ್ತಿನ ವಿಷಯೋಪಭೋಗಗಳ ಸುಖವು ಲೇಶಮಾತ್ರ ಅನುಭವಕ್ಕೆ ಬಂದಿದ್ದರೂ ಅಥವಾ ಆ ಸುಖವು ತೋರಿಕೆಯ ಸುಖವೆಂದು ಅನುಭವಕ್ಕೆ ಬಂದಿದ್ದರೂ – ಅವುಗಳನ್ನು ಮತ್ತು ಪರಲೋಕವೇ ಮುಂತಾದವುಗಳಲ್ಲಿ ಇರುವುದಾಗಿ ಕೇಳಿಬಂದಿರುವ ಸುಖವೆಲ್ಲವನ್ನೂ ಮರೆತು ಬಿಡುವರು. ಅವರು ಸಮಸ್ತ ಪ್ರಾಣಿಗಳಿಗೂ ಪರಮ ಪ್ರಿಯತಮನೂ, ಹಿತೈಷಿಯೂ, ಸ್ನೇಹಿತನೂ, ಸರ್ವಾ

ಸಾಧವಸ್ತ್ವಚ್ಚರಣಾಂಬುಜಾನುಸೇವಾಂ ವಿಸೃಜಂತಿ ನ ಯತ್ರ ಪುನರಯಂ ಸಂಸಾರ ಪರ್ಯಾವರ್ತಃ ॥ ೩೯ ॥ ತ್ರಿಭುವನಾತ್ಮಭವನ ತ್ರಿವಿಕ್ರಮ ತ್ರಿನಯನ ತ್ರಿಲೋಕಮನೋಹರಾನುಭಾವ ತವೈವ ವಿಭೂತಯೋ ದಿತಿಜದನುಜಾದಯಶ್ಚಾಪಿ ತೇಷಾಮನುಪಕ್ರಮಸಮಯೋಽಯಮಿತಿ ಸ್ವಾತ್ಮಮಾಯಯಾ ಸುರನರ ಮೃಗಮಿಶ್ರಿತಜಲಚರಾಕೃತಿಭಿರ್ಯಥಾಪರಾಧಂ ದಂಡಂ ದಂಡಧರ ದಧರ್ಥ ಏವಮೇನಮಪಿ ಭಗವನ್‌ಜಹಿ ತ್ವಾಷ್ಟ್ರಮುತ ಯದಿ ಮನ್ಯಸೇ ॥ ೪೦ ॥ ಅಸ್ಮಾಕಂ ತಾವಕಾನಾಂ ತವ ನತಾನಾಂ ತತ ತತಾಮಹ ತವ ಚರಣನಲಿನಯುಗಲಧ್ಯಾನಾನುಬದ್ಧಹೃದಯನಿಗಡಾನಾಂ ಸ್ವಲಿಂಗವಿವರಣೇನಾತ್ಮಸಾತ್ಕೃತಾನಾಮನುಕಂಪಾನುರಂಜಿತವಿಶದರುಚಿರಶಿಶಿರಸ್ಮಿತಾವಲೋಕೇನ ವಿಗಲಿತ ಮಧುರ ಮುಖರಸಾಮೃತ ಕಲಯಾ ಚಾಂತಸ್ತಾಪ ಮನಘಾರ್ಹಸಿ ಶಮಯಿತುಮ್ ॥ ೪೧ ॥ ಅಥ ಭಗವಂಸ್ತವಾಸ್ಮಾಭಿರಖಿಲ ಜಗದುತ್ಪತ್ತಿಸ್ಥಿತಿಲಯ ನಿಮಿತ್ತಾಯಮಾನ ದಿವ್ಯಮಾಯಾವಿನೋದಸ್ಯ ಸಕಲ ಜೀವನಿಕಾಯಾನಾಮಂತರ್ಹೃದಯೇಷು ಬಹಿರಪಿ ಚ ಬ್ರಹ್ಮಪ್ರತ್ಯಗಾತ್ಮಸ್ವರೂಪೇಣ ಪ್ರಧಾನರೂಪೇಣ ಚ ಯಥಾದೇಶಕಾಲದೇಹಾವಸ್ಥಾನವಿಶೇಷಂ ತದುಪಾದಾನೋಪಲಂಭಕತಯಾ-

ತ್ಮನೂ, ಐಶ್ವರ್ಯಗಳ ನಿಧಿಯೂ ಆದ ಪರಮಾತ್ಮನಲ್ಲಿ ತಮ್ಮ ಮನಸ್ಸನ್ನು ನಿರಂತರವಾಗಿ ನೆಲೆಗೊಳಿಸಿ ಆತನ ಚಿಂತನೆಯ ಸುಖವನ್ನೇ ಸೂರೆಗೊಳ್ಳುವರು. ಅಂತಹ ಮನುಷ್ಯರೇ ಸ್ವಾರ್ಥಸಾಧನೆ ಮತ್ತು ಪರಮಾರ್ಥ ಸಾಧನೆ ಎರಡರಲ್ಲೂ ನಿಪುಣರೆಂದು ತಿಳಿಯಬೇಕು. ಓ ಮಧುಸೂದನಾ! ಜನನ-ಮರಣರೂಪವಾದ ಸಂಸಾರ ಚಕ್ರದಿಂದ ಬಿಡುಗಡೆಹೊಂದುವಂತಹ ನಿನ್ನ ಅಡಿದಾವರೆಗಳ ಸೇವೆಯನ್ನು ನಿನಗೆ ಅತ್ಯಂತ ಪ್ರಿಯರೂ, ಮಿತ್ರರೂ, ಆಗಿರುವ ಭಕ್ತಜನರು ಹೇಗೆ ತಾನೇ ಬಿಡಬಲ್ಲರು? ॥ ೩೯ ॥ ಪ್ರಭುವೇ! ನೀನು ಮೂರು ಲೋಕಗಳಿಗೂ ಆತ್ಮನೂ, ಆಶ್ರಯನೂ ಆಗಿರುವೆ. ಮೂರು ಲೋಕಗಳನ್ನು ನಿನ್ನ ಮೂರು ಹೆಜ್ಜೆಗಳಿಂದ ಅಳೆದವನೂ ನೀನೇ. ಮೂರು ಲೋಕಗಳ ಸಂಚಾಲಕನೂ ನೀನೇ ಆಗಿರುವೆ. ನಿನ್ನ ಮಹಿಮೆಯು ಮೂರುಲೋಕಗಳ ಮನಸ್ಸನ್ನೂ ಸೂರೆಗೊಳ್ಳುವುದಾಗಿದೆ. ದೈತ್ಯರು, ದಾನವರು ಮುಂತಾದ ಅಸುರರೂ ಕೂಡ ನಿನ್ನದೇ ವಿಭೂತಿಗಳಾಗಿವೆ. ಇದರಲ್ಲಿ ಸಂದೇಹವೇ ಇಲ್ಲ. ಆದರೂ ಇದು ಅವರ ಉನ್ನತಿಯ ಕಾಲವಲ್ಲ ಎಂದು ಯೋಚಿಸಿ ನೀನು ನಿನ್ನ ಯೋಗಮಾಯೆಯಿಂದ ಸುರ, ನರ, ಪಶು, ನರ-ಮೃಗ ಮಿಶ್ರಣವಾದ ನಾರಸಿಂಹ, ಜಲಚರ ಮತ್ಸ್ಯಾದಿ ರೂಪಗಳಲ್ಲಿ ಅವತರಿಸಿ ಆ ದೈತ್ಯ-ದಾನವಾದಿಗಳಿಗೆ ಅವರ ಅಪರಾಧಕ್ಕೆ ತಕ್ಕ ದಂಡನೆಯನ್ನು ಕೊಡುತ್ತೀಯೆ. ದಂಡಧಾರಿಯಾದ ಪ್ರಭುವೇ! ನಿನಗೆ ಸರಿಯೆನಿಸಿದರೆ ಆ ಅಸುರರನ್ನು ಸಂಹರಿಸಿದಂತೆ ಈ ವೃತ್ರಾಸುರನನ್ನೂ ಸಂಹರಿಸುವವನಾಗು. ॥ ೪೦ ॥ ಓ ಭಗವಂತನೇ! ನೀನು ನಮಗೆ ತಂದೆ-ತಾತ ಎಲ್ಲವೂ ಆಗಿರುವೆ. ನಾವು ನಿನ್ನ ಸ್ವಜನರು. ನಿರಂತರವಾಗಿ ನಿನ್ನ ಮುಂದೆ ವಿನಯದಿಂದ ತಲೆತಗ್ಗಿಸಿಕೊಂಡಿರುವವರು. ನಿನ್ನ ಚರಣಕಮಲಗಳನ್ನು ಧ್ಯಾನ ಮಾಡುತ್ತಾ-ಮಾಡುತ್ತಾ ನಮ್ಮ ಹೃದಯವು ಅವುಗಳೊಡನೆ ಪ್ರೇಮಬಂಧನದಲ್ಲಿ ಬಿಗಿಯಲ್ಪಟ್ಟಿದೆ. ನೀನು ನಮ್ಮ ಮುಂದೆ ನಿನ್ನ ದಿವ್ಯಗುಣಗಳಿಂದ ಕೂಡಿದ ಸಾಕಾರ ವಿಗ್ರಹವನ್ನು ಪ್ರಕಟಪಡಿಸಿ ನಮ್ಮನ್ನು ನಿನ್ನವರಾಗಿಸಿಕೊಂಡಿರುವೆ. ಅದಕ್ಕಾಗಿ ಪ್ರಭೋ! ನಿನ್ನ ದಯಾಪೂರ್ಣವೂ, ಪರಿಶುದ್ಧವೂ, ಸುಂದರವೂ, ಶೀತಲವೂ ಆದ ಕಿರುನಗೆಯಿಂದ ಕೂಡಿದ ಚೆನ್ನೋಟದಿಂದಲೂ ಮತ್ತು ಮುಖಕಮಲದಿಂದ ತೊಟ್ಟಿಕ್ಕುತ್ತಿರುವ ವಾಣಿಯೆಂಬ ಸುಮಧುರವಾದ ಅಮೃತ ಬಿಂದುಗಳಿಂದ ನಮ್ಮ ಹೃದಯದ ತಾಪವನ್ನು ಶಮನಗೊಳಿಸು. ॥ ೪೧ ॥ ಪ್ರಭೋ! ಅಗ್ನಿಯ ಅಂಶಭೂತ ಕಿಡಿಗಳೇ ಮುಂತಾದವುಗಳು ಅಗ್ನಿಯನ್ನು ಪ್ರಕಾಶಪಡಿಸಲು ಅಸಮರ್ಥವಾಗಿರುವಂತೆಯೇ ನಾವೂ ಕೂಡ ನಿನ್ನಲ್ಲಿ ನಮ್ಮದಾದ ಯಾವುದೇ ಸ್ವಾರ್ಥ-ಪರಮಾರ್ಥಗಳನ್ನು ನಿವೇದಿಸಿಕೊಳ್ಳಲು ಅಸಮರ್ಥರಾಗಿದ್ದೇವೆ. ನಿನ್ನಲ್ಲಿ ಅರಿಕೆ ಮಾಡುವುದಾದರೂ ಏನಿದೆ? ಏಕೆಂದರೆ, ನೀನೇ ಸಮಸ್ತ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ ಮಾಡುವಂತಹ ದಿವ್ಯಮಾಯೆಯೊಡನೆ ವಿನೋದವಾಡುತ್ತಿರುವೆ ಹಾಗೂ ಎಲ್ಲ ಜೀವರ ಅಂತಃಕರಣದಲ್ಲಿ ಬ್ರಹ್ಮ ಮತ್ತು ಅಂತರ್ಯಾಮಿಯ ರೂಪದಲ್ಲಿ ವಿರಾಜಮಾನನಾಗಿರುವೆ. ಇಷ್ಟೇ ಅಲ್ಲದೆ ಅವುಗಳ ಹೊರಗಡೆಯಲ್ಲಿಯೂ ಪ್ರಕೃತಿಯ ರೂಪದಲ್ಲಿ ನೀನೇ ವಿರಾಜ

ನುಭವತಃ ಸರ್ವಪ್ರತ್ಯಯಸಾಕ್ಷಿಣ ಆಕಾಶಶರೀರಸ್ಯ ಸಾಕ್ಷಾತ್ಪರಬ್ರಹ್ಮಣಃ ಪರಮಾತ್ಮನಃ ಕಿಯಾನಿಹ ವಾ ಅರ್ಥವಿಶೇಷೋ ವಿಜ್ಞಾಪನೀಯಃ ಸ್ಯಾದ್ ವಿಸ್ಫುಲಿಂಗಾದಿಭಿರಿವ ಹಿರಣ್ಯರೇತಸಃ ॥ ೪೨ ॥

ಅತ ಏವ ಸ್ವಯಂ ತದುಪಕಲ್ಪಯಾಸ್ಮಾಕಂ ಭಗವತಃ ಪರಮ ಗುರೋಸ್ತವ ಚರಣಶತಪಲಾಶಚ್ಛಾಯಾಂ ವಿವಿಧ ವೃಜಿನಸಂಸಾರಪರಿಶ್ರಮೋಪಶಮನೀಮುಪ-ಸೃತಾನಾಂ ವಯಂ ಯತ್ಕಾಮೇನೋಪಸಾದಿತಾಃ ॥ ೪೩ ॥

ಅಥೋ ಈಶ ಜಹಿ ತ್ವಾಷ್ಟ್ರಂ ಗ್ರಸಂತಂ ಭುವನತ್ರಯಮ್ ।
ಗ್ರಸ್ತಾನಿ ಯೇನ ನಃ ಕೃಷ್ಣ ತೇಜಾಂಸ್ಯಸ್ತ್ರಾಯುಧಾನಿ ಚ ॥ ೪೪ ॥

ಹಂಸಾಯ ದಹ್ರನಿಲಯಾಯ ನಿರೀಕ್ಷಕಾಯ
ಕೃಷ್ಣಾಯ ಮೃಷ್ಟ ಯಶಸೇ ನಿರುಪಕ್ರಮಾಯ ।
ಸತ್ಸಂಗ್ರಹಾಯ ಭವಪಾಂಥನಿಜಾಶ್ರಮಾಪ್ತಾ-
ವಂತೇ ಪರೀಷ್ಟಗತಯೇ ಹರಯೇ ನಮಸ್ತೇ ॥ ೪೫ ॥

*ಶ್ರೀಶುಕ ಉವಾಚ*

ಅಥೈವಮೀಡಿತೋ ರಾಜನ್ಸಾದರಂ ತ್ರಿದಶೈರ್ಹರಿಃ ।
ಸ್ವಮುಪಸ್ಥಾನಮಾಕರ್ಣ್ಯ ಪ್ರಾಹ ತಾನಭಿನಂದಿತಃ ॥ ೪೬ ॥

*ಶ್ರೀಭಗವಾನುವಾಚ*

ಪ್ರೀತೋಽಹಂ ವಃ ಸುರಶ್ರೇಷ್ಠಾ ಮದುಪಸ್ಥಾನವಿದ್ಯಯಾ ।
ಆತ್ಮೈಶ್ವರ್ಯಸ್ಮೃತಿಃ ಪುಂಸಾಂ ಭಕ್ತಿಶ್ಚೈವ ಯಯಾ ಮಯಿ ॥ ೪೭ ॥

ಕಿಂ ದುರಾಪಂ ಮಯಿ ಪ್ರೀತೇ ತಥಾಪಿ ವಿಬುಧರ್ಷಭಾಃ ।
ಮಯ್ಯೇಕಾಂತಮತಿರ್ನಾನ್ಯನ್ಮತ್ತೋ ವಾಂಛತಿ ತತ್ತ್ವವಿತ್ ॥ ೪೮ ॥

ಮಾನನಾಗಿರುವೆ. ಜಗತ್ತಿನಲ್ಲಿ ಎಷ್ಟೆಲ್ಲಾ ದೇಶ, ಕಾಲ, ಶರೀರ ಮುಂತಾದವುಗಳು ಇವೆಯೋ ಅವುಗಳಿಗೆ ಉಪಾದಾನವೂ ಮತ್ತು ಅವುಗಳನ್ನು ಪ್ರಕಾಶಪಡಿಸುವವನೂ ಆಗಿ ಆ ರೂಪದಲ್ಲಿ ಅವುಗಳನ್ನು ನೀನು ಅನುಭವಿಸುತ್ತಿರುವೆ. ನೀನೇ ಎಲ್ಲ ವೃತ್ತಿಗಳಿಗೂ ಸಾಕ್ಷಿಗಿರುವೆ. ನೀನು ಆಕಾಶದಂತೆ ಸರ್ವಗತನೂ, ನಿರ್ಲಿಪ್ತನೂ ಆಗಿರುವೆ. ನೀನು ಸ್ವತಃ ಪರಬ್ರಹ್ಮ ಪರಮಾತ್ಮನಾಗಿರುವೆ. ॥ ೪೨ ॥ ಆದುದರಿಂದ – 'ಇವರು ತಮ್ಮ ಅಭಿಪ್ರಾಯಗಳನ್ನು ಅರಿಕೆಮಾಡಿಕೊಳ್ಳಲಿ' ಎಂಬುದನ್ನು ನಿರೀಕ್ಷಿಸದೆ ಯಾವ ಅಭಿಲಾಷೆಯಿಂದ ನಾವು ಇಲ್ಲಿಗೆ ಬಂದಿರುವೆವೋ, ಅದನ್ನು ಪೂರ್ಣಗೊಳಿಸು. ನೀನು ಅಚಿಂತ್ಯನೂ, ಐಶ್ವರ್ಯಸಂಪನ್ನನೂ, ಜಗತ್ತಿಗೆ ಪರಮಗುರುವೂ ಆಗಿರುವೆ. ವಿವಿಧ ಪಾಪಗಳ ಫಲಸ್ವರೂಪ ಜನ್ಮ-ಮೃತ್ಯು ರೂಪವಾದ ಸಂಸಾರದಲ್ಲಿ ಅಲೆಯುವ ಬಳಲಿಕೆಯನ್ನು ಅಳಿಸಿಹಾಕುವಂತಹ ನಿನ್ನ ಚರಣಕಮಲಗಳ ಛತ್ರಛಾಯೆಯಲ್ಲಿ ನಾವು ಆಸರೆ ಪಡೆದಿದ್ದೇವೆ. ॥ ೪೩ ॥ ಸರ್ವಶಕ್ತನಾದ ಶ್ರೀಕೃಷ್ಣನೇ! ವೃತ್ರಾಸುರನು ನಮ್ಮ ಪ್ರಭಾವವನ್ನೂ, ಶಸ್ತ್ರಾಸ್ತ್ರಗಳನ್ನೂ ನುಂಗಿ ಹಾಕಿರುವನು. ಈಗ ಅವನು ಮೂರು ಲೋಕಗಳನ್ನೂ ನುಂಗುತ್ತಿದ್ದಾನೆ. ನೀನು ಅವನನ್ನು ಸಂಹರಿಸಿಬಿಡು. ॥ ೪೪ ॥ ಪ್ರಭುವೇ! ನೀನು ಶುದ್ಧ ಹಂಸಸ್ವರೂಪನೂ, ಹೃದಯದಲ್ಲಿ ಶುದ್ಧವಾಗಿ ಬೆಳಗುತ್ತಿರುವ ಆಕಾಶಸ್ವರೂಪನೂ, ಎಲ್ಲರ ಸಾಕ್ಷಿಯೂ, ಅನಾದಿಯೂ, ಅನಂತನೂ, ಉಜ್ವಲಕೀರ್ತಿ ಸಂಪನ್ನನೂ ಆಗಿರುವೆ. ಸತ್ಪುರುಷರು ನಿನ್ನನ್ನೇ ಸಂಗ್ರಹಿಸುತ್ತಾರೆ. ಈ ಸಂಸಾರದ ಯಾತ್ರಿಕರು ಅಲೆಯುತ್ತಾ-ಅಲೆಯುತ್ತಾ ನಿನಗೆ ಶರಣಾದಾಗ ಕೊನೆಗೆ ನೀನೇ ಅವರಿಗೆ ಪರಮಾನಂದ ಸ್ವರೂಪವಾದ ಅಭೀಷ್ಟಫಲವನ್ನು ಕೊಡುವೆ ಮತ್ತು ಈ ವಿಧದಿಂದ ಅವರ ಜನ್ಮ-ಜನ್ಮಾಂತರದ ಕಷ್ಟಗಳನ್ನು ಪರಿಹರಿಸುವೆ. ಸ್ವಾಮಿ! ನಿನಗೆ ನಾವು ನಮಸ್ಕರಿಸುತ್ತಿದ್ದೇವೆ. ॥ ೪೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ರಾಜನೇ! ದೇವತೆಗಳು ಅತ್ಯಂತ ಆದರದಿಂದ ಹೀಗೆ ಭಗವಂತನನ್ನು ಸ್ತುತಿಸಿದಾಗ ಅವನು ಅದರಿಂದ ಬಹಳ ಪ್ರಸನ್ನನಾಗಿ ಅವರಿಗೆ ಇಂತೆಂದನು – ॥ ೪೬ ॥

**ಶ್ರೀಭಗವಂತನು ಹೇಳಿದನು** – ಎಲೈ ದೇವಶ್ರೇಷ್ಠರೇ! ನೀವೆಲ್ಲರೂ ಸ್ತುತಿಯಿಂದ ಕೂಡಿದ ಭಕ್ತಿ-ಜ್ಞಾನದಿಂದ ನನ್ನನ್ನು ಉಪಾಸನೆ ಮಾಡಿದ್ದೀರಿ. ಇದರಿಂದ ನಾನು ನಿಮ್ಮಮೇಲೆ ಪ್ರಸನ್ನನಾಗಿರುವೆನು. ಈ ಸ್ತುತಿಯ ಮೂಲಕ ಜೀವರಿಗೆ ತಮ್ಮ ವಾಸ್ತವಿಕ ಸ್ವರೂಪದ ಸ್ಮೃತಿ ಉಂಟಾಗಿ, ನನ್ನ ಭಕ್ತಿಯೂ ದೊರೆಯುವುದು. ॥ ೪೭ ॥ ದೇವಶಿರೋಮಣಿಗಳೇ! ನಾನು ಪ್ರಸನ್ನನಾದ ಮೇಲೆ ಯಾವುದೇ ವಸ್ತುವು ದುರ್ಲಭವಾಗಿ ಇರುವುದಿಲ್ಲ. ಆದರೂ ನನ್ನ ಅನನ್ಯ ಪ್ರೇಮಿ, ತತ್ತ್ವವೇತ್ತರಾದ ಭಕ್ತರು ನನ್ನನ್ನಲ್ಲದೆ ಬೇರೆ ಏನನ್ನೂ ನನ್ನಿಂದ ಬಯಸುವುದಿಲ್ಲ. ॥ ೪೮ ॥ ಜಗತ್ತಿನ ವಿಷಯಗಳನ್ನು ಸತ್ಯವೆಂದು ತಿಳಿದವನು ಮೂರ್ಖನಾಗಿದ್ದು ತನ್ನ ನಿಜವಾದ ಶ್ರೇಯಸ್ಸನ್ನು ಅರಿಯಲಾರನು. ಏಕೆಂದರೆ, ಅವನು ವಿಷಯಗಳನ್ನು ಬಯಸುತ್ತಿರುವನು. ಆದರೆ ಯಾರಾದರೂ ತಿಳಿವಳಿಕೆ ಯುಳ್ಳವನು ಅವನಿಗೆ ಅವನು ಇಚ್ಛಿಸಿದ ವಸ್ತುಗಳನ್ನು ಕೊಟ್ಟರೆ ಅವನೂ

ನ ವೇದ ಕೃಪಣಃ ಶ್ರೇಯ ಆತ್ಮನೋ ಗುಣವಸ್ತುದೃಕ್ ।
ತಸ್ಯ ತಾನಿಚ್ಛತೋ ಯಚ್ಛೇದ್ಯದಿ ಸೋಽಪಿ ತಥಾವಿಧಃ
॥ ೪೯ ॥

ಸ್ವಯಂ ನಿಃಶ್ರೇಯಸಂ ವಿದ್ವಾನ್ನ ವಕ್ತ್ಯಜ್ಞಾಯ ಕರ್ಮ ಹಿ ।
ನ ರಾತಿ ರೋಗಿಣೋಽಪಥ್ಯಂ ವಾಂಛತೋ ಹಿ ಭಿಷಕ್ತಮಃ
॥ ೫೦ ॥

ಮಘವನ್ಯಾತ ಭದ್ರಂ ವೋ ದಧ್ಯಂಚಮೃಷಿಸತ್ತಮಮ್ ।
ವಿದ್ಯಾವ್ರತತಪಃಸಾರಂ ಗಾತ್ರಂ ಯಾಚತ ಮಾ ಚಿರಮ್
॥ ೫೧ ॥

ಸ ವಾ ಅಧಿಗತೋ ದಧ್ಯಙ್‌ಅಶ್ವಿಭ್ಯಾಂ ಬ್ರಹ್ಮ ನಿಷ್ಕಲಮ್ ।
ಯದ್ವಾ ಅಶ್ವಶಿರೋ ನಾಮ ತಯೋರಮರತಾಂ ವ್ಯಧಾತ್
॥ ೫೨ ॥

ದಧ್ಯಙ್ ಆಥರ್ವಣಸ್ತ್ವಷ್ಟ್ರೇ ವರ್ಮಾಭೇದ್ಯಂ ಮದಾತ್ಮಕಮ್ ।
ವಿಶ್ವರೂಪಾಯ ಯತ್ಪ್ರಾದಾತ್ತ್ವಷ್ಟಾ ಯತ್ತ್ವಮಧಾಸ್ತತಃ
॥ ೫೩ ॥

ಯುಷ್ಮಭ್ಯಂ ಯಾಚಿತೋಽಶ್ವಿಭ್ಯಾಂ ಧರ್ಮಜ್ಞೋಽಂಗಾನಿ ದಾಸ್ಯತಿ ।
ತತಸ್ತೈರಾಯುಧಶ್ರೇಷ್ಠೋ ವಿಶ್ವಕರ್ಮವಿನಿರ್ಮಿತಃ ।
ಯೇನ ವೃತ್ರಶಿರೋ ಹರ್ತಾ ಮತ್ತೇಜ ಉಪಬೃಂಹಿತಃ
॥ ೫೪ ॥

ತಸ್ಮಿನ್ವಿನಿಹತೇ ಯೂಯಂ ತೇಜೋಽಸ್ತ್ರಾಯುಧಸಂಪದಃ ।
ಭೂಯಃ ಪ್ರಾಪ್ಸ್ಯಥ ಭದ್ರಂ ವೋ ನ ಹಿಂಸಂತಿ ಚ ಮತ್ಪರಾನ್
॥ ೫೫ ॥

ಅವನಂತೆಯೇ ಮೂರ್ಖನಾಗಿದ್ದಾನೆ. ॥ ೪೯ ॥ ಮುಕ್ತಿಯ ಸ್ವರೂಪವನ್ನು ತಿಳಿದ ಜ್ಞಾನಿಯು – ರೋಗಿಯು ಬಯಸಿದರೂ ಸದ್ವೈದ್ಯನು ಅವನಿಗೆ ಅಪಥ್ಯವಾದುದನ್ನು ಕೊಡದಿರುವಂತೆಯೇ ಅಜ್ಞಾನಿಗಳಿಗೆ ಕರ್ಮಗಳಲ್ಲಿ ಸಿಕ್ಕಿಕೊಳ್ಳುವಂತಹ ಉಪದೇಶಗಳನ್ನು ಮಾಡುವುದಿಲ್ಲ. ॥ ೫೦ ॥ ದೇವೇಂದ್ರನೇ! ನಿಮಗೆ ಮಂಗಳವಾಗಲಿ. ಈಗ ತಡಮಾಡದೆ ಋಷಿಶಿರೋಮಣಿ ದಧೀಚಿಯ ಬಳಿಗೆ ಹೋಗಿರಿ. ಉಪಾಸನೆ, ವ್ರತ ಮತ್ತು ತಪಸ್ಸಿನಿಂದಾಗಿ ಅವರ ಶರೀರವು ಅತ್ಯಂತ ಸದೃಢಗೊಂಡಿದೆ. ಅದನ್ನೇ ಕೇಳಿಕೊಳ್ಳಿ. ॥ ೫೧ ॥ ದಧೀಚಿ ಋಷಿಗಳಿಗೆ ಶುದ್ಧಬ್ರಹ್ಮನ ಜ್ಞಾನವಿದೆ. ಅಶ್ವಿನೀಕುಮಾರರಿಗೆ ಕುದುರೆಯ ತಲೆಯಿಂದ ಉಪದೇಶಮಾಡಿದ ಕಾರಣ ಇವರಿಗೆ 'ಅಶ್ವಶಿರ'* ಎಂದೂ ಹೆಸರಿದೆ. ಅವರು ಉಪದೇಶಿಸಿದ ಆತ್ಮವಿದ್ಯೆಯ ಪ್ರಭಾವದಿಂದಲೇ ಅಶ್ವಿನೀಕುಮಾರರಿಬ್ಬರೂ ಜೀವನ್ಮುಕ್ತರಾದರು. ॥ ೫೨ ॥ ಅಥರ್ವವೇದೀ ದಧೀಚಿ ಋಷಿಯೇ ಮೊಟ್ಟಮೊದಲು ನನ್ನ ಸ್ವರೂಪಭೂತವಾದ ಅಭೇದ್ಯ ನಾರಾಯಣಕವಚವನ್ನು ತ್ವಷ್ಟಾನಿಗೆ ಉಪದೇಶಿಸಿದನು. ತ್ವಷ್ಟಾನು ವಿಶ್ವರೂಪನಿಗೆ ಉಪದೇಶಿಸಿದನು, ಅವರು ನಿಮಗೆ ಕರುಣಿಸಿದರು. ॥ ೫೩ ॥ ದಧೀಚಿಋಷಿಯು ಧರ್ಮದ ಪರಮ ಮರ್ಮಜ್ಞರಾಗಿದ್ದಾರೆ. ಅಶ್ವಿನೀದೇವತೆಗಳು ಪ್ರಾರ್ಥನೆ ಮಾಡಿದರೆ ನಿಮಗೆ ಅವರು ತಮ್ಮ ಶರೀರದ ಅಂಗಾಂಗಗಳನ್ನು ಖಂಡಿತವಾಗಿ ಕೊಡುವರು. ಅನಂತರ ವಿಶ್ವಕರ್ಮನಿಂದ ಆ ಅಂಗಾಂಗಗಳ ಮೂಳೆಗಳಿಂದ ಒಂದು ಶ್ರೇಷ್ಠವಾದ ಆಯುಧವನ್ನು ರಚಿಸಿಕೊಳ್ಳಿರಿ. ದೇವೇಂದ್ರಾ! ನನ್ನ ಶಕ್ತಿಯಿಂದ ಒಡಗೊಂಡು ನೀವು ಅದೇ ಶಸ್ತ್ರದಿಂದ ವೃತ್ರಾಸುರನ ತಲೆಯನ್ನು ಕತ್ತರಿಸಬಲ್ಲಿರಿ. ॥ ೫೪ ॥ ದೇವತೆಗಳಿರಾ! ವೃತ್ರಾಸುರನ ವಧೆ ಯಾದ ಬಳಿಕ ನಿಮಗೆ ಪುನಃ ತೇಜಸ್ಸು, ಅಸ್ತ್ರ-ಶಸ್ತ್ರಗಳು, ಎಲ್ಲ ಸಂಪತ್ತೂ ದೊರೆಯುವುದು. ನಿಮಗೆ ಅವಶ್ಯವಾಗಿ ಮಂಗಳ ಉಂಟಾಗುವುದು. ಏಕೆಂದರೆ, ನನ್ನಲ್ಲಿ ಶರಣಾಗತರಾದವರನ್ನು ಯಾರೂ ಹಿಂಸೆಪಡಿಸಲಾರರು. ॥ ೫೫ ॥

*ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ನವಮೋಽಧ್ಯಾಯಃ ॥ ೯ ॥

---

* ದಧೀಚಿಮಹರ್ಷಿಗಳು ಪ್ರವರ್ಗ್ಯವೆಂಬ ಯಜ್ಞಕರ್ಮದಲ್ಲಿಯೂ ಮತ್ತು ಬ್ರಹ್ಮವಿದ್ಯೆಯಲ್ಲಿ ಪಾರಂಗತರಾಗಿದ್ದರು. ಅದನ್ನು ತಿಳಿದ ಅಶ್ವಿನೀಕುಮಾರರು ಒಮ್ಮೆ ಅವರ ಬಳಿಗೆ ಬಂದು ತಮಗೆ ಆ ವಿದ್ಯೆಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿದರು. ದಧೀಚಿಮುನಿಗಳು 'ಈಗ ನನಗೆ ಬೇರೆ ಕೆಲಸವಿದೆ, ಮತ್ತೊಮ್ಮೆ ಬನ್ನಿರಿ' ಎಂದು ಹೇಳಿ ಅವರನ್ನು ಕಳಿಸಿದರು. ಆಗ ಇಂದ್ರನು ಅವರ ಬಳಿಗೆ ಬಂದು 'ಅಶ್ವಿನೀಕುಮಾರರು ವೈದ್ಯರಾಗಿದ್ದಾರೆ. ಅವರಿಗೆ ನೀವು ಆ ವಿದ್ಯೆಯನ್ನು ಉಪದೇಶಮಾಡಕೂಡದು. ನನ್ನ ಮಾತಿಗೆ ವಿರುದ್ಧವಾಗಿ ನಡೆದರೆ ನಿಮ್ಮ ತಲೆಯನ್ನು ಕತ್ತರಿಸಿಹಾಕುವೆನು' ಎಂದು ಎಚ್ಚರಿಕೆ ನೀಡಿ ಇಂದ್ರನು ಹೊರಟುಹೋದನು. ಅಶ್ವಿನೀಕುಮಾರರು ಮರಳಿ ಮಹರ್ಷಿಗಳ ಬಳಿಗೆ ಬಂದು ವಿದ್ಯೆಯನ್ನು ಬೇಡಿದಾಗ – ಅವರು ಇಂದ್ರನು ಬಂದು ಹೇಳಿದ್ದ ವೃತ್ತಾಂತವನ್ನು ಅವರಿಗೆ ತಿಳಿಸಿದರು. ಅವರು ಮಹರ್ಷಿಗಳೇ! ನಾವು ನಿಮ್ಮ ತಲೆಯನ್ನು ಕತ್ತರಿಸಿ ಅದರ ಜಾಗದಲ್ಲಿ ಕುದುರೆಯ ತಲೆಯನ್ನು ಜೋಡಿಸುವೆವು ಎಂಬ ಸಲಹೆ ನೀಡಿದರು. ಮುನಿಯು ಮಿಥ್ಯಾಭಾಷಣದ ದೋಷಕ್ಕೆ ಹೆದರಿ ಅವರ ಮಾತನ್ನು ಒಪ್ಪಿಕೊಂಡರು. ಹೀಗೆ ಕುದುರೆಯ ಮುಖದಿಂದ ಅಶ್ವಿನೀದೇವತೆಗಳಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿದರು. ಹೀಗೆ ಅಶ್ವಮುಖದಿಂದ ಉಪದೇಶಿಸಲಾದ ಬ್ರಹ್ಮವಿದ್ಯೆಯ ಹೆಸರು 'ಅಶ್ವಶಿರಾ' ಎಂದಾಯಿತು. ಅವರು ಅದೇ ಹೆಸರಿನಿಂದ ಖ್ಯಾತರಾದರು.

# ಹತ್ತನೆಯ ಅಧ್ಯಾಯ

## ದೇವತೆಗಳು ದಧೀಚಿ ಮಹರ್ಷಿಗಳ ಅಸ್ಥಿಗಳಿಂದ ವಜ್ರಾಯುಧವನ್ನು ನಿರ್ಮಿಸಿಕೊಂಡು ವೃತ್ರನ ಸೇನೆಯನ್ನು ಆಕ್ರಮಿಸಿದುದು

*ಶ್ರೀಶುಕ ಉವಾಚ*

**ಇಂದ್ರಮೇವಂ ಸಮಾದಿಶ್ಯ ಭಗವಾನ್ ವಿಶ್ವಭಾವನಃ ।**
**ಪಶ್ಯತಾಮನಿಮೇಷಾಣಾಂ ತತ್ರೈವಾಂತರ್ದಧೇ ಹರಿಃ ॥ ೧ ॥**

**ತಥಾಭಿಯಾಚಿತೋ ದೇವೈರ್ಋಷಿರಾಥರ್ವಣೋ ಮಹಾನ್ ।**
**ಮೋದಮಾನ ಉವಾಚೇದಂ ಪ್ರಹಸನ್ನಿವ ಭಾರತ ॥ ೨ ॥**

**ಅಪಿ ವೃಂದಾರಕಾ ಯೂಯಂ ನ ಜಾನೀಥ ಶರೀರಿಣಾಮ್ ।**
**ಸಂಸ್ಥಾಯಾಂ ಯಸ್ತ್ವಭಿದ್ರೋಹೋ ದುಃಸಹಶ್ಚೇತನಾಪಹಃ ॥ ೩ ॥**

**ಜಿಜೀವಿಷೂಣಾಂ ಜೀವಾನಾಮಾತ್ಮಾ ಪ್ರೇಷ್ಠ ಇಹೇಪ್ಸಿತಃ ।**
**ಕ ಉತ್ಸಹೇತ ತಂ ದಾತುಂ ಭಿಕ್ಷಮಾಣಾಯ ವಿಷ್ಣವೇ ॥ ೪ ॥**

*ದೇವಾ ಊಚುಃ*

**ಕಿಂ ನು ತದ್ದುಸ್ತ್ಯಜಂ ಬ್ರಹ್ಮನ್ಪುಂಸಾಂ ಭೂತಾನುಕಂಪಿನಾಮ್ ।**
**ಭವದ್ವಿಧಾನಾಂ ಮಹತಾಂ ಪುಣ್ಯಶ್ಲೋಕೇಡ್ಯಕರ್ಮಣಾಮ್ ॥ ೫ ॥**

**ನನು ಸ್ವಾರ್ಥಪರೋ ಲೋಕೋ ನ ವೇದ ಪರಸಂಕಟಮ್ ।**
**ಯದಿ ವೇದ ನ ಯಾಚೇತ ನೇತಿ ನಾಹ ಯದೀಶ್ವರಃ ॥ ೬ ॥**

*ಋಷಿರುವಾಚ*

**ಧರ್ಮಂ ವಃ ಶ್ರೋತುಕಾಮೇನ ಯೂಯಂ ಮೇ ಪ್ರತ್ಯುದಾಹೃತಾಃ ।**
**ಏಷ ವಃ ಪ್ರಿಯಮಾತ್ಮಾನಂ ತ್ಯಜಂತಂ ಸಂತ್ಯಜಾಮ್ಯಹಮ್ ॥ ೭ ॥**

**ಯೋಽಧ್ರುವೇಣಾತ್ಮನಾ ನಾಥಾ ನ ಧರ್ಮಂ ನ ಯಶಃ ಪುಮಾನ್ ।**
**ಈಹೇತ ಭೂತದಯಯಾ ಸ ಶೋಚ್ಯಃ ಸ್ಥಾವರೈರಪಿ ॥ ೮ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ವಿಶ್ವದ ಜೀವನದಾತನಾದ ಶ್ರೀಹರಿಯು ಇಂದ್ರನಿಗೆ ಹೀಗೆ ಆದೇಶವನ್ನು ಕೊಟ್ಟು ದೇವತೆಗಳ ಎದುರಿನಲ್ಲೇ ಅಂತರ್ಧಾನ ಹೊಂದಿದನು. ॥ ೧ ॥ ಅನಂತರ ದೇವತೆಗಳು ಉದಾರ ಶಿರೋಮಣಿ ಅಥರ್ವವೇದಿಯಾದ ದಧೀಚಿಯ ಬಳಿಗೆಹೋಗಿ ಭಗವಂತನ ಆಜ್ಞಾನುಸಾರವಾಗಿ ಬೇಡಿಕೊಂಡರು. ದೇವತೆಗಳ ಬೇಡಿಕೆಯನ್ನು ಕೇಳಿ ದಧೀಚಿಗಳಿಗೆ ಬಹಳ ಆನಂದವಾಯಿತು. ಅವರು ನಗುತ್ತಾ ದೇವತೆಗಳಲ್ಲಿ ಹೇಳಿದರು. ॥ ೨ ॥ ದೇವತೆಗಳಿರಾ! ಪ್ರಾಣಿಗಳಿಗೆ ಸಾಯುವಾಗ ಎಷ್ಟು ಕಷ್ಟವಾಗುತ್ತದೆ? ಎಂಬುದು ಬಹುಶಃ ನಿಮಗೆ ಗೊತ್ತಿಲ್ಲವೆಂದು ಕಾಣುತ್ತದೆ. ಪ್ರಜ್ಞೆ ಇರುವವರೆಗೆ ಅವರಿಗೆ ಅಸಹ್ಯ ಪೀಡೆಯನ್ನು ಸಹಿಸಬೇಕಾಗುತ್ತದೆ ಮತ್ತು ಕೊನೆಗೆ ಅವು ಮೂರ್ಛಿತರಾಗುತ್ತಾರೆ. ॥ ೩ ॥ ಜಗತ್ತಿನಲ್ಲಿ ಬದುಕಿರಬೇಕೆಂದು ಬಯಸುವ ಜೀವಿಗೆ ಶರೀರವು ತುಂಬಾ ಅಮೂಲ್ಯವೂ, ಪ್ರಿಯವೂ, ಇಷ್ಟವಾದ ವಸ್ತು ಆಗಿದೆ. ಇಂತಹ ಸ್ಥಿತಿಯಲ್ಲಿ ಸ್ವತಃ ಭಗವಾನ್ ವಿಷ್ಣುವೇ ಜೀವಿಯಲ್ಲಿ ಅವರ ಶರೀರವನ್ನು ಕೇಳಿದರೂ ಕೊಡುವ ಸಾಹಸವನ್ನು ಯಾರು ತಾನೇ ಮಾಡಿಯಾರು? ॥ ೪ ॥

**ದೇವತೆಗಳೆಂದರು** – ಬ್ರಾಹ್ಮಣೋತ್ತಮರೇ! ನಿಮ್ಮಂತಹ ಉದಾರರೂ ಮತ್ತು ಪ್ರಾಣಿಗಳ ಮೇಲೆ ದಯೆತೋರುವ ಮಹಾಪುರುಷರಾದ ನಿಮ್ಮನ್ನು ದೊಡ್ಡ-ದೊಡ್ಡ ಮಹಾನುಭಾವರೂ ಪ್ರಶಂಸೆ ಮಾಡುತ್ತಾರೆ. ನಿಮ್ಮಂತಹವರಲ್ಲಿ ಪ್ರಾಣಿಗಳ ಒಳಿತಿಗಾಗಿ ಕೊಡದಿರುವ ಯಾವ ವಸ್ತುವಿದೆ? ॥ ೫ ॥ ಪೂಜ್ಯರೇ! ಬೇಡುವವರು ಸ್ವಾರ್ಥಿಗಳಾಗಿರುತ್ತಾರೆ. ಇದರಲ್ಲಿ ಸಂದೇಹವೇ ಇಲ್ಲ. ಅವರಲ್ಲಿ ಕೊಡುವವನ ಕಷ್ಟವನ್ನು ತಿಳಿಯುವ ಬುದ್ಧಿಯೇ ಇರುವುದಿಲ್ಲ. ಅವರಲ್ಲಿ ಅಷ್ಟು ತಿಳುವಳಿಕೆ ಇದ್ದರೆ ಅವರೇಕೆ ಬೇಡುತ್ತಿದ್ದರು? ಹೀಗೆಯೇ ದಾತೃವಾದವನೂ ಬೇಡುವವರ ವಿಪತ್ತನ್ನು ಅರಿಯನು. ಇಲ್ಲದಿದ್ದರೆ 'ಇಲ್ಲ' ಎಂಬುದು ಅವನ ಬಾಯಿಂದ ಎಂದಿಗೂ ಬರುತ್ತಿರಲೇ ಇಲ್ಲ. (ಆದ್ದರಿಂದ ತಾವು ನಮ್ಮ ವಿಪತ್ತನ್ನು ಮನಗಂಡು ನಮ್ಮ ಬೇಡಿಕೆಯನ್ನು ಪೂರ್ಣಗೊಳಿಸಿರಿ.) ॥ ೬ ॥

**ದಧೀಚಿಋಷಿಗಳು ಹೇಳಿದರು** – ದೇವತೆಗಳಿರಾ! ನಿಮ್ಮ ಬಾಯಿಂದ ಧರ್ಮದ ಮಾತುಗಳನ್ನು ಕೇಳಲಿಕ್ಕಾಗಿಯೇ ನಾನು ನಿಮ್ಮ ಬೇಡಿಕೆಯನ್ನು ಉಪೇಕ್ಷೆಮಾಡಿದ್ದು. ಇದೋ ತೆಗೆದುಕೊಳ್ಳಿರಿ. ನಾನು ನನ್ನ ಪ್ರಿಯವಾದ ಶರೀರವನ್ನು ನಿಮಗಾಗಿ ಈಗಲೇ ಬಿಟ್ಟುಬಿಡುತ್ತೇನೆ. ಏಕೆಂದರೆ, ಒಂದಲ್ಲ ಒಂದು ದಿನ ಇದು ತಾನಾಗಿ ನನ್ನನ್ನು ಬಿಟ್ಟುಹೋಗುವಂತಹುದು. ॥ ೭ ॥ ದೇವಶಿರೋಮಣಿಗಳೇ! ಈ ವಿನಾಶಿಯಾದ ಶರೀರದಿಂದ ದುಃಖಿತರಾದ ಪ್ರಾಣಿಗಳ ಮೇಲೆ ದಯೆಗೈದು ಮುಖ್ಯವಾಗಿ ಧರ್ಮವನ್ನು ಹಾಗೂ

ಏತಾವಾನವ್ಯಯೋ ಧರ್ಮಃ ಪುಣ್ಯಶ್ಲೋಕೈರುಪಾಸಿತಃ ।
ಯೋ ಭೂತಶೋಕಹರ್ಷಾಭ್ಯಾಮಾತ್ಮಾ ಶೋಚತಿ ಹೃಷ್ಯತಿ ॥ ೯ ॥

ಅಹೋ ದೈನ್ಯಮಹೋ ಕಷ್ಟಂ ಪಾರಕ್ಯೈಃ ಕ್ಷಣಭಂಗುರೈಃ ।
ಯನ್ನೋಪಕುರ್ಯಾದಸ್ವಾರ್ಥೈರ್ಮರ್ತ್ಯಃ ಸ್ವಜ್ಞಾತಿವಿಗ್ರಹೈಃ ॥ ೧೦ ॥

*ಶ್ರೀಶುಕ ಉವಾಚ*

ಏವಂ ಕೃತವ್ಯವಸಿತೋ ದಧ್ಯಙ್ ಆಥರ್ವಣಸ್ತನುಮ್ ।
ಪರೇ ಭಗವತಿ ಬ್ರಹ್ಮಣ್ಯಾತ್ಮಾನಂ ಸನ್ನಯಂಜಹೌ ॥ ೧೧ ॥

ಯತಾಕ್ಷಾಸುಮನೋಬುದ್ಧಿಸ್ತತ್ತ್ವದೃಗ್ ಧ್ವಸ್ತಬಂಧನಃ ।
ಆಸ್ಥಿತಃ ಪರಮಂ ಯೋಗಂ ನ ದೇಹಂ ಬುಬುಧೇ ಗತಮ್ ॥ ೧೨ ॥

ಅಥೇಂದ್ರೋ ವಜ್ರಮುದ್ಯಮ್ಯ ನಿರ್ಮಿತಂ ವಿಶ್ವಕರ್ಮಣಾ ।
ಮುನೇಃ ಶಕ್ತಿಭಿರುತ್ಸಿಕ್ತೋ ಭಗವತ್ತೇಜಸಾನ್ವಿತಃ ॥ ೧೩ ॥

ವೃತೋ ದೇವಗಣೈಃ ಸರ್ವೈರ್ಗಜೇಂದ್ರೋಪರ್ಯಶೋಭತ ।
ಸ್ತೂಯಮಾನೋ ಮುನಿಗಣೈಸ್ತ್ರೈಲೋಕ್ಯಂ ಹರ್ಷಯನ್ನಿವ ॥ ೧೪ ॥

ವೃತ್ರಮಭ್ಯದ್ರವಚ್ಛತ್ರುಮಸುರಾನೀಕಯೂಥಪೈಃ ।
ಪರ್ಯಸ್ತಮೋಜಸಾ ರಾಜನ್ಕ್ರುದ್ಧೋ ರುದ್ರ ಇವಾಂತಕಮ್ ॥ ೧೫ ॥

ತತಃ ಸುರಾಣಾಮಸುರೈ ರಣಃ ಪರಮದಾರುಣಃ ।
ತ್ರೇತಾಮುಖೇ ನರ್ಮದಾಯಾಮಭವತ್ಪ್ರಥಮೇ ಯುಗೇ ॥ ೧೬ ॥

ರುದ್ರೈರ್ವಸುಭಿರಾದಿತ್ಯೈರಶ್ವಿಭ್ಯಾಂ ಪಿತೃವಹ್ನಿಭಿಃ ।
ಮರುದ್ಭಿರ್ಋಭುಭಿಃ ಸಾಧ್ಯೈರ್ವಿಶ್ವೇದೇವೈರ್ಮರುತ್ಪತಿಮ್ ॥ ೧೭ ॥

ಗೌಣವಾಗಿ ಕೀರ್ತಿಯನ್ನು ಸಂಪಾದಿಸದಿರುವವನು ಜಡವಾದ ಗಿಡ-ಮರಗಳಿಂದಲೂ ಕೀಳುಮಟ್ಟದವನು. ॥ ೮ ॥ ದೊಡ್ಡ-ದೊಡ್ಡ ಮಹಾತ್ಮರು ಈ ಅವಿನಾಶಿಯಾದ ಧರ್ಮವನ್ನು ಉಪಾಸನೆ ಮಾಡಿರುವರು. ಅದರ ಸ್ವರೂಪವು – ಮನುಷ್ಯನು ಯಾವುದೇ ಪ್ರಾಣಿಯ ದುಃಖದಲ್ಲಿ ದುಃಖವನ್ನೂ, ಸುಖದಲ್ಲಿ ಸುಖವನ್ನು ಅನುಭವಿಸುವುದಿಷ್ಟೇ ಆಗಿದೆ. ॥ ೯ ॥ ಜಗತ್ತಿನಲ್ಲಿರುವ ಹಣ, ಜನ, ಶರೀರ ಮುಂತಾದ ಪದಾರ್ಥಗಳು ಕ್ಷಣಭಂಗುರವಾಗಿವೆ. ಇವು ನಮಗೆ ಯಾವ ಉಪಯೋಗಕ್ಕೂ ಬರುವುದಿಲ್ಲ, ಕೊನೆಗೆ ಬೇರೆ ಯವರಿಗೇ ಉಪಯೋಗಿಯಾಗಿವೆ. ಆದರೂ ಅಯ್ಯೋ! ಈ ಮರಣಧರ್ಮವುಳ್ಳ ಮನುಷ್ಯನು ಇವುಗಳ ಮೂಲಕ ಬೇರೆ ಯವರಿಗೆ ಉಪಕಾರ ಮಾಡುವುದಿಲ್ಲವಲ್ಲ! ಇದೆಂತಹ ಕಾರ್ಪಣ್ಯ ! ಎಷ್ಟು ದುಃಖದ ಮಾತಾಗಿದೆ ! ॥ ೧೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಅಥರ್ವವೇದಿಯಾದ ಮಹರ್ಷಿ ದಧೀಚಿಯು ಹೀಗೆ ನಿಶ್ಚಯಿಸಿ ಕೊಂಡು ತನ್ನನ್ನು ಪರಬ್ರಹ್ಮ ಪರಮಾತ್ಮನಾದ ಭಗವಂತನಲ್ಲಿ ಲೀನ ಗೊಳಿಸಿ ತನ್ನ ಸ್ಥೂಲಶರೀರವನ್ನು, ತ್ಯಜಿಸಿಬಿಟ್ಟರು. ॥ ೧೧ ॥ ಅವರ ಇಂದ್ರಿಯಗಳು, ಪ್ರಾಣಗಳು, ಮನಸ್ಸು, ಬುದ್ಧಿ ಸಂಯಮಿತ ವಾಗಿತ್ತು, ದೃಷ್ಟಿ ತತ್ತ್ವಮಯವಾಗಿತ್ತು. ಅವರ ಎಲ್ಲ ಬಂಧನಗಳು ಕಡಿದುಹೋಗಿದ್ದವು. ಆದ್ದರಿಂದ ಅವರು ಭಗವಂತನ ಚಿಂತನೆ ಮಾಡುತ್ತಾ ಸಮಾಧಿಸ್ಥರಾಗಿ ಶರೀರವನ್ನು ತ್ಯಜಿಸಿದರು. ಅದು ಬಿಟ್ಟು ಹೋದುದು ಅವರಿಗೆ ಅರಿವಾಗಲೇ ಇಲ್ಲ. ॥ ೧೨ ॥

ಭಗವಂತನ ಶಕ್ತಿಯನ್ನು ಪಡೆದ ಇಂದ್ರನು ಬಲ-ಪೌರುಷಗಳ ಪರಮಾವಧಿಯನ್ನು ಏರಿದನು. ಆಗ ವಿಶ್ವಕರ್ಮನು ದಧೀಚಿ ಋಷಿಯ ಅಸ್ಥಿಗಳಿಂದ ವಜ್ರಾಯುಧವನ್ನು ನಿರ್ಮಿಸಿ ಇಂದ್ರನಿಗೆ ಕೊಟ್ಟನು. ಅದನ್ನು ಕೈಯಲ್ಲಿ ಹಿಡಿದುಕೊಂಡು ಮಹೇಂದ್ರನು ಐರಾವತವನ್ನು ಏರಿದನು. ಅವನೊಡನೆ ಇತರ ದೇವತೆಗಳೂ ಯುದ್ಧಕ್ಕೆ ಸನ್ನದ್ಧರಾದರು. ದೊಡ್ಡ-ದೊಡ್ಡ ಋಷಿ-ಮುನಿಗಳು ಇಂದ್ರನನ್ನು ಸ್ತುತಿಸತೊಡಗಿದರು. ಆಗ ಅವನು ಮೂರು ಲೋಕ ವನ್ನು ಸಂತೋಷಪಡಿಸುತ್ತಾ ವೃತ್ರಾಸುರನನ್ನು ಸಂಹಾರಮಾಡು ವುದಕ್ಕಾಗಿ ತನ್ನ ಸರ್ವಶಕ್ತಿಯನ್ನು ತೊಡಗಿಸಿ – ಕ್ರುದ್ಧನಾದ ಭಗವಾನ್ ರುದ್ರನು ಅಂತಕನ ಮೇಲೆ ಎರಗುವಂತೆ ವೃತ್ರಾಸುರನ ಮೇಲೆ ಮುತ್ತಿಗೆ ಹಾಕಿದನು. ಪರೀಕ್ಷಿತನೇ! ವೃತ್ರಾಸುರನೂ ಕೂಡ ದೈತ್ಯ ಸೇನಾಪತಿಗಳ ದೊಡ್ಡ ಸೈನ್ಯದೊಡನೆ ಯುದ್ಧಕ್ಕಾಗಿ ಶತ್ರುವನ್ನು ಎದುರಿಸಿ ನಿಂತನು. ॥ ೧೩-೧೫ ॥ ಆ ಸಮಯದಲ್ಲಿ ನಡೆಯು ತ್ತಿದ್ದ ವೈವಸ್ವತ ಮನ್ವಂತರದ ಮೊದಲನೇ ಚತುರ್ಯುಗದ ತ್ರೇತಾ ಯುಗವು ಆಗಲೇ ಪ್ರಾರಂಭಗೊಂಡಿತ್ತು. ಅದೇ ಸಮಯದಲ್ಲಿ ನರ್ಮದಾ ನದಿಯ ದಡದಲ್ಲಿ ದೇವಾಸುರರ ಈ ಭಯಂಕರ ಸಂಗ್ರಾಮವು ನಡೆಯಿತು. ॥ ೧೬ ॥ ಆಗ ದೇವೇಂದ್ರನು ಕೈಯಲ್ಲಿ ವಜ್ರಾಯುಧವನ್ನು ಧರಿಸಿಕೊಂಡು – ರುದ್ರ, ವಸುಗಳು, ಆದಿ ತ್ಯರು, ಅಶ್ವಿನೀಕುಮಾರರಿಬ್ಬರು, ಪಿತೃಗಣರು, ಅಗ್ನಿ ಮರುದ್ಗ ಣರು, ಋಭುಗಣರು, ಸಾಧ್ಯಗಣರು, ವಿಶ್ವೇದೇವ ಮುಂತಾದವ ರೊಡನೆ ತನ್ನ ಕಾಂತಿಯಿಂದ ಶೋಭಾಯಮಾನನಾಗಿದ್ದನು.

ದೃಷ್ಟ್ವಾ ವಜ್ರಧರಂ ಶಕ್ರಂ ರೋಚಮಾನಂ ಸ್ವಯಾ ಶ್ರಿಯಾ ।
ನಾಮೃಷ್ಯನ್ನಸುರಾ ರಾಜನ್ಮೃಧೇ ವೃತ್ರಪುರಃಸರಾಃ ॥ ೧೮ ॥

ನಮುಚಿಃ ಶಂಬರೋಽನರ್ವಾ ದ್ವಿಮೂರ್ಧಾ ಋಷಭೋಽಂಬರಃ ।
ಹಯಗ್ರೀವಃ ಶಂಕುಶಿರಾ ವಿಪ್ರಚಿತ್ತಿರಯೋಮುಖಃ ॥ ೧೯ ॥

ಪುಲೋಮಾ ವೃಷಪರ್ವಾ ಚ ಪ್ರಹೇತಿರ್ಹೇತಿರುತ್ಕಲಃ ।
ದೈತೇಯಾ ದಾನವಾ ಯಕ್ಷಾ ರಕ್ಷಾಂಸಿ ಚ ಸಹಸ್ರಶಃ ॥ ೨೦ ॥

ಸುಮಾಲಿಮಾಲಿಪ್ರಮುಖಾಃ ಕಾರ್ತಸ್ವರಪರಿಚ್ಛದಾಃ ।
ಪ್ರತಿಷಿಧ್ಯೇಂದ್ರಸೇನಾಗ್ರಂ ಮೃತ್ಯೋರಪಿ ದುರಾಸದಮ್ ॥ ೨೧ ॥

ಅಭ್ಯರ್ದಯನ್ನಸಂಭ್ರಾಂತಾಃ ಸಿಂಹನಾದೇನ ದುರ್ಮದಾಃ ।
ಗದಾಭಿಃ ಪರಿಘೈರ್ಬಾಣೈಃ ಪ್ರಾಸಮುದ್ಗರತೋಮರೈಃ ॥ ೨೨ ॥

ಶೂಲೈಃ ಪರಶ್ವಧೈಃ ಖಡ್ಗೈಃ ಶತಘ್ನೀಭಿರ್ಭುಶುಂಡಿಭಿಃ ।
ಸರ್ವತೋಽವಾಕಿರನ್ ಶಸ್ತ್ರೈರಸ್ತ್ರೈಶ್ಚ ವಿಬುಧರ್ಷಭಾನ್ ॥ ೨೩ ॥

ನ ತೇಽದೃಶ್ಯಂತ ಸಂಛನ್ನಾಃ ಶರಜಾಲೈಃ ಸಮಂತತಃ ।
ಪುಂಖಾನುಪುಂಖಪತಿತೈರ್ಜ್ಯೋತೀಂಷೀವ ನಭೋಘನೈಃ ॥ ೨೪ ॥

ನ ತೇ ಶಸ್ತ್ರಾಸ್ತ್ರವರ್ಷೌಘಾ ಹ್ಯಾಸೇದುಃ ಸುರಸೈನಿಕಾನ್ ।
ಛಿನ್ನಾಃ ಸಿದ್ಧಪಥೇ ದೇವೈರ್ಲಘುಹಸ್ತೈಃ ಸಹಸ್ರಧಾ ॥ ೨೫ ॥

ಅಥ ಕ್ಷೀಣಾಸ್ತ್ರಶಸ್ತ್ರೌಘಾ ಗಿರಿಶೃಂಗದ್ರುಮೋಪಲೈಃ ।
ಅಭ್ಯವರ್ಷನ್ಸುರಬಲಂ ಚಿಚ್ಛಿದುಸ್ತಾಂಶ್ಚ ಪೂರ್ವವತ್ ॥ ೨೬ ॥

ತಾನಕ್ಷತಾನ್ ಸ್ವಸ್ತಿಮತೋ ನಿಶಾಮ್ಯ
ಶಸ್ತ್ರಾಸ್ತ್ರಪೂಗೈರಥ ವೃತ್ರನಾಥಾಃ ।
ದ್ರುಮೈರ್ದೃಷದ್ಭಿರ್ವಿವಿಧಾದ್ರಿಶೃಂಗೈ-
ರವಿಕ್ಷತಾಂಸ್ತತ್ರಸುರಿಂದ್ರಸೈನಿಕಾನ್ ॥ ೨೭ ॥

ಸರ್ವೇ ಪ್ರಯಾಸಾ ಅಭವನ್ವಿಮೋಘಾಃ
ಕೃತಾಃ ಕೃತಾ ದೇವಗಣೇಷು ದೈತ್ಯೈಃ ।
ಕೃಷ್ಣಾನುಕೂಲೇಷು ಯಥಾ ಮಹತ್ಸು
ಕ್ಷುದ್ರೈಃ ಪ್ರಯುಕ್ತಾ ರುಶತೀ ರೂಕ್ಷವಾಚಃ ॥ ೨೮ ॥

ತೇ ಸ್ವಪ್ರಯಾಸಂ ವಿತಥಂ ನಿರೀಕ್ಷ್ಯ
ಹರಾವಭಕ್ತಾ ಹತಯುದ್ಧದರ್ಪಾಃ ।
ಪಲಾಯನಾಯಾಜಿಮುಖೇ ವಿಸೃಜ್ಯ
ಪತಿಂ ಮನಸ್ತೇ ದಧುರಾತ್ತಸಾರಾಃ ॥ ೨೯ ॥

ವೃತ್ರಾಸುರರೇ ಮುಂತಾದ ದೈತ್ಯರು ಅವರು ಮುಂದೆ ಬಂದಿರುವುದನ್ನು ನೋಡಿ ಉರಿದುಬಿದ್ದನು. ॥ ೧೭-೧೮ ॥ ಆ ನಮೂಚಿ, ಶಂಬರ, ಅನರ್ವಾ, ದ್ವಿಮೂರ್ಧಾ, ಋಷಭ, ಅಂಬರ, ಹಯಗ್ರೀವ, ಶಂಕುಶಿರ, ವಿಪ್ರಚಿತ್ತಿ, ಅಯೋಮುಖ, ಪುಲೋಮಾ, ವೃಷಪರ್ವಾ, ಪ್ರಹೇತಿ, ಹೇತಿ, ಉತ್ಕಲ, ಸುಮಾಲಿ, ಮಾಲಿ ಮುಂತಾದ ಸಾವಿರಾರು ದೈತ್ಯ-ದಾನವರು ಹಾಗೂ ಯಕ್ಷ-ರಾಕ್ಷಸರು ಸ್ವರ್ಣಾಭರಣ – ಉಪಕರಣಗಳಿಂದ ಸುಸಜ್ಜಿತರಾಗಿ ದೇವರಾಜ ಇಂದ್ರನ ಸೇನೆಯನ್ನು ಮುಂದೆ ಬರದಂತೆ ತಡೆದರು. ಪರೀಕ್ಷಿತನೇ ! ಆಗ ದೇವತೆಗಳ ಸೇನೆಯು ಸ್ವತಃ ಮೃತ್ಯುವಿಗೂ ಕೂಡ ಅಜೇಯವಾಗಿತ್ತು. ॥ ೧೯-೨೦ ॥ ಆ ದುರಹಂಕಾರಿಗಳಾದ ಅಸುರರು ಸಿಂಹನಾದವನ್ನು ಮಾಡುತ್ತಾ ಬಹು ಎಚ್ಚರಿಕೆಯಿಂದ ದೇವಸೇನೆಯನ್ನು ಪ್ರಹರಿಸ ತೊಡಗಿದರು. ಅವರೆಲ್ಲರು ಗದೆ, ಪರಿಘ, ಬಾಣ, ಪ್ರಾಸ, ಮುದ್ಗರ, ತೋಮರ, ಶೂಲ, ಪರಶು, ಖಡ್ಗ, ಶತಘ್ನಿ (ತೋಪು), ಭುಶುಂಡೀ ಮುಂತಾದ ಅಸ್ತ್ರ-ಶಸ್ತ್ರಗಳ ಮಳೆಯಿಂದ ದೇವತೆಗಳನ್ನು ಎಲ್ಲ ಕಡೆಗಳಿಂದ ಮುಚ್ಚಿಬಿಟ್ಟರು. ॥ ೨೨-೨೩ ॥ ಮೋಡಗಳು ಮುಚ್ಚಿದಾಗ ಆಕಾಶದ ನಕ್ಷತ್ರಗಳು ಕಾಣದೇ ಇರುವಂತೆಯೇ ನಾಲ್ಕೂ ಕಡೆಗಳಿಂದಲೂ ಒಂದರ ಮೇಲೊಂದರಂತೆ ಪ್ರಯೋಗಿಸಿದ ಬಾಣಗಳ ಸುರಿಮಳೆಯಿಂದ ಮುಚ್ಚಿಹೋದ ದೇವತೆಗಳು ಕಾಣದೇ ಹೋದರು. ॥ ೨೪ ॥ ಪರೀಕ್ಷಿತನೇ ! ಆದರೆ ಅಸ್ತ್ರ-ಶಸ್ತ್ರಗಳ ಮಳೆಯು ದೇವತೆಗಳನ್ನು ಮುಟ್ಟಲು ಸಾಧ್ಯವೇ ಆಗಲಿಲ್ಲ, ಏಕೆಂದರೆ, ಅವರು ತಮ್ಮ ಕೈಚಳಕದಿಂದ ಅವುಗಳನ್ನು ಆಕಾಶದಲ್ಲಿಯೇ ಸಾವಿರಾರು ತುಂಡುಗಳಾಗುವಂತೆ ಕತ್ತರಿಸಿಬಿಟ್ಟರು. ॥ ೨೫ ॥ ಅಸುರರ ಶಸ್ತ್ರಾಸ್ತ್ರಗಳು ಮುಗಿದುಹೋದಾಗ ಅವರು ದೇವತೆಗಳ ಸೈನ್ಯದ ಮೇಲೆ ಪರ್ವತ ಶಿಖರಗಳನ್ನು, ವೃಕ್ಷಗಳನ್ನು, ಕಲ್ಲುಬಂಡೆಗಳನ್ನು ಮಳೆಗರೆದರು. ಆದರೆ ದೇವತೆಗಳು ಅವನ್ನು ಮೊದಲಿನಂತೆ ತುಂಡರಿಸಿ ಹಾಕಿದರು. ॥ ೨೬ ॥

ಪರೀಕ್ಷಿದ್ರಾಜನೇ ! ತಮ್ಮ ಅಸಂಖ್ಯ ಶಸ್ತ್ರಾಸ್ತ್ರಗಳೂ ಕೂಡ ದೇವತೆಗಳ ಸೈನ್ಯಕ್ಕೆ ಏನೂ ತೊಂದರೆಯನ್ನು ಮಾಡಲಾಗದೇ ಇರುವುದನ್ನೂ, ಮರ ಬಂಡೆಗಳು, ಪರ್ವತಗಳ ದೊಡ್ಡ-ದೊಡ್ಡ ಶಿಖರಗಳಿಂದಲೂ ದೇವತೆಗಳ ಶರೀರದ ಮೇಲೆ ಗಾಯದ ಗೆರೆಯೂ ಆಗದೇ ಕುಶಲರೇ ಆಗಿ ಇರುವುದನ್ನು ಕಂಡು ಅವರೆಲ್ಲರಿಗೂ ತುಂಬಾ ಭಯವಾಯಿತು. ಕ್ಷುದ್ರಮನುಷ್ಯರು ಪ್ರಯೋಗಿಸುವ ಕಠೋರವೂ, ಅಮಂಗಳಕರವೂ ಆದ ಕೆಟ್ಟ ಮಾತುಗಳು ಶ್ರೀಕೃಷ್ಣ ಪರಮಾತ್ಮನಿಂದ ಸಂರಕ್ಷಿತರಾದ ಭಕ್ತರ ಮೇಲೆ ಎಳ್ಳಷ್ಟು ಪ್ರಭಾವವು ಬೀಳದಂತೆಯೇ ದೈತ್ಯರು ದೇವತೆಗಳನ್ನು ಸೋಲಿಸಲಿಕ್ಕಾಗಿ ಮಾಡಿದ ಪ್ರಯತ್ನಗಳೆಲ್ಲವೂ ನಿಷ್ಫಲವಾದುವು. ॥ ೨೭-೨೮ ॥ ಭಗವದ್ವಿಮುಖರಾದ ಅಸುರರು ತಮ್ಮ ಪ್ರಯತ್ನವು ವ್ಯರ್ಥವಾದುದನ್ನು ಕಂಡು ಉತ್ಸಾಹಗುಂದಿದರು. ಅವರ ಪರಾಕ್ರಮದ ಗರ್ವವು ನುಚ್ಚುನೂರಾಯಿತು. ಆಗ ಅವರು ತಮ್ಮ ಅಧಿಪತಿಯಾದ ವೃತ್ರಾಸುರನನ್ನು ಯುದ್ಧಭೂಮಿಯಲ್ಲೇ ಬಿಟ್ಟು ಪಲಾಯನ ಮಾಡಿದರು. ಏಕೆಂದರೆ ದೇವತೆಗಳು ಅವರ ಬಲ-ಪೌರುಷಗಳೆಲ್ಲವನ್ನು ಸೆಳೆದುಕೊಂಡಿದ್ದರು. ॥ ೨೯ ॥

ವೃತ್ರೋಽಸುರಾಂಸ್ತಾನನುಗಾನ್ಮನಸ್ವೀ
ಪ್ರಧಾವತಃ ಪ್ರೇಕ್ಷ್ಯ ಬಭಾಷ ಏತತ್ ।
ಪಲಾಯಿತಂ ಪ್ರೇಕ್ಷ್ಯ ಬಲಂ ಚ ಭಗ್ನಂ
ಭಯೇನ ತೀವ್ರೇಣ ವಿಹಸ್ಯ ವೀರಃ ॥ ೩೦ ॥

ಕಾಲೋಪಪನ್ನಾಂ ರುಚಿರಾಂ ಮನಸ್ವಿನಾ-
ಮುವಾಚ ವಾಚಂ ಪುರುಷಪ್ರವೀರಃ ।
ಹೇ ವಿಪ್ರಚಿತ್ತೇ ನಮುಚೇ ಪುಲೋಮನ್
ಮಯಾನರ್ವಂಛಂಬರ ಮೇ ಶೃಣುಧ್ವಮ್ ॥ ೩೧ ॥

ಜಾತಸ್ಯ ಮೃತ್ಯುರ್ಧ್ರುವ ಏಷ ಸರ್ವತಃ
ಪ್ರತಿಕ್ರಿಯಾ ಯಸ್ಯ ನ ಚೇಹ ಕ್ಲೃಪ್ತಾ ।
ಲೋಕೋ ಯಶಶ್ಚಾಥ ತತೋ ಯದಿ ಹ್ಯಮುಂ
ಕೋ ನಾಮ ಮೃತ್ಯುಂ ನ ವೃಣೀತ ಯುಕ್ತಮ್ ॥ ೩೨ ॥

ದ್ವೌ ಸಂಮತಾವಿಹ ಮೃತ್ಯೂ ದುರಾಪೌ
ಯದ್ಬ್ರಹ್ಮಸಂಧಾರಣಯಾ ಜಿತಾಸುಃ ।
ಕಲೇವರಂ ಯೋಗರತೋ ವಿಜಹ್ಯಾದ್
ಯದಗ್ರಣೀರ್ವೀರಶಯೇಽನಿವೃತ್ತಃ ॥ ೩೩ ॥

ತನ್ನ ಅನುಯಾಯಿಗಳಾದ ದೈತ್ಯವೀರರು ಭಯಗೊಂಡು ಓಡಿಹೋಗುತ್ತಿರುವುದನ್ನೂ, ತನ್ನ ಸೈನ್ಯವು ಚೆಲ್ಲಾಪಿಲ್ಲಿಯಾಗುತ್ತಿರುವುದನ್ನು ಕಂಡು ಧೀರ-ವೀರನಾದ ವೃತ್ರಾಸುರನಿಗೆ ನಗುಬಂತು. ॥ ೩೦ ॥ ವೀರಶಿರೋಮಣಿ ವೃತ್ರಾಸುರನು ಸಮಯಕ್ಕೆ ಸರಿಯಾಗಿ ವೀರೋಚಿತ ವಾಣಿಯಿಂದ ವಿಪ್ರಚಿತ್ತಿ, ನಮುಚಿ, ಪುಲೋಮಾ, ಮಯ, ಅನರ್ವಾ, ಶಂಬರ ಮುಂತಾದ ದೈತ್ಯರನ್ನು ಸಂಬೋಧಿಸುತ್ತಾ ಅಸುರರೇ! ಓಡಬೇಡಿರಿ. ನನ್ನ ಒಂದು ಮಾತನ್ನು ಕೇಳಿಕೊಳ್ಳಿರಿ – ॥ ೩೧ ॥ ಹುಟ್ಟಿದವನು ಒಂದಲ್ಲ ಒಂದುದಿನ ಅವಶ್ಯವಾಗಿ ಸಾಯಲೇಬೇಕು. ಇದರಲ್ಲಿ ಸಂದೇಹವೇ ಇಲ್ಲ. ಈ ಜಗತ್ತಿನಲ್ಲಿ ವಿಧಾತನು ಮೃತ್ಯುವಿನಿಂದ ತಪ್ಪಿಸಿಕೊಳ್ಳುವ ಯಾವ ಉಪಾಯವನ್ನೂ ತಿಳಿಸಿಲ್ಲ. ಇಂತಹ ಸ್ಥಿತಿಯಲ್ಲಿ ಮೃತ್ಯುವಿನ ಮೂಲಕ ಸ್ವರ್ಗಾದಿ ಲೋಕಗಳು, ಕೀರ್ತಿಯು ಸಿಗುವುದಾದರೆ ಅಂತಹ ಮೃತ್ಯುವನ್ನು ಯಾವ ಬುದ್ಧಿವಂತನು ತಾನೇ ಸ್ವಾಗತಿಸುವುದಿಲ್ಲ? ॥ ೩೨ ॥ ಪ್ರಪಂಚದಲ್ಲಿ ಎರಡು ವಿಧದಿಂದ ಮೃತ್ಯುವನ್ನು ಪಡೆಯುವುದು ಪರಮ ದುರ್ಲಭ ಮತ್ತು ಶ್ರೇಷ್ಠವೆಂದು ತಿಳಿಯಲಾಗಿದೆ. ಒಂದು ಯೋಗಿಗಳು ತಮ್ಮ ಪ್ರಾಣಗಳನ್ನು ವಶಪಡಿಸಿಕೊಂಡು ಬ್ರಹ್ಮಚಿಂತನೆಯಿಂದ ಶರೀರವನ್ನು ತ್ಯಜಿಸುವುದು. ಮತ್ತೊಂದು ಯುದ್ಧಭೂಮಿಯಲ್ಲಿ ಬೆನ್ನುತೋರಿಸದೆ ಶತ್ರುವಿನ ಮುಂದೆ ನಿಂತು ಹೋರಾಡುತ್ತಾ ಮಡಿಯುವುದು. ಇಂತಹ ಒಳ್ಳೆಯ ಅವಕಾಶವನ್ನು ನೀವು ಏಕೆ ಕಳೆದುಕೊಳ್ಳುತ್ತಿರುವಿರಿ ? ॥ ೩೩ ॥

***ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ**
**ಇಂದ್ರ-ವೃತ್ರಾಸುರಯುದ್ಧವರ್ಣನಂ ನಾಮ ದಶಮೋಽಧ್ಯಾಯಃ ॥ ೧೦ ॥**

# ಹನ್ನೊಂದನೆಯ ಅಧ್ಯಾಯ

## ವೃತ್ರಾಸುರನ ವೀರವಾಣಿ ಮತ್ತು ಅವನು ಮಾಡಿದ ಭಗವತ್ ಸ್ತುತಿ

*ಶ್ರೀಶುಕ ಉವಾಚ*

ತ ಏವಂ ಶಂಸತೋ ಧರ್ಮಂ ವಚಃ ಪತ್ಯುರಚೇತಸಃ ।
ನೈವಾಗೃಹ್ಣನ್ಭಯತ್ರಸ್ತಾಃ ಪಲಾಯನಪರಾ ನೃಪ ॥ ೧ ॥

ವಿಶೀರ್ಯಮಾಣಾಂ ಪೃತನಾಮಾಸುರೀಮಸುರರ್ಷಭಃ ।
ಕಾಲಾನುಕೂಲೈಸ್ತ್ರಿದಶೈಃ ಕಾಲ್ಯಮಾನಾಮನಾಥವತ್ ॥ ೨ ॥

ದೃಷ್ಟ್ವಾತಪ್ಯತ ಸಂಕ್ರುದ್ಧ ಇಂದ್ರಶತ್ರುರಮರ್ಷಿತಃ ।
ತಾನ್ನಿವಾರ್ಯೌಜಸಾ ರಾಜನ್ನಿರ್ಭರ್ತ್ಸ್ಯೇದಮುವಾಚ ಹ ॥ ೩ ॥

**ಶ್ರೀಶುಕಮುನಿಗಳು ಹೇಳುತ್ತಾರೆ** – ಎಲೈ ರಾಜೇಂದ್ರನೇ! ಅಸುರರ ಸೈನ್ಯವು ಭಯಗೊಂಡು ಪಲಾಯನ ಮಾಡುತ್ತಿತ್ತು. ತನ್ನ ಒಡೆಯನ ಧರ್ಮಾನುಕೂಲ ವಚನಗಳ ಕಡೆಗೆ ಗಮನ ಕೊಡದಷ್ಟು ಅವರು ವಿವೇಕಪ್ರಜ್ಞೆ ಕಳೆದುಕೊಂಡಿದ್ದರು. ॥ ೧ ॥ ದೇವತೆಗಳಿಗೆ ಕಾಲವು ಅನುಕೂಲವಾದ್ದರಿಂದ ಅವರು ಅಸುರರ ಸೇನೆಯನ್ನು ಧ್ವಂಸಮಾಡುತ್ತಿದ್ದಾರೆ ಮತ್ತು ಅಸುರ ಸೈನ್ಯವು ಅನಾಯಕವಾದಂತೆ ಚೆಲ್ಲಾ-ಪಿಲ್ಲಿಯಾಗುತ್ತಿದೆ ಎಂಬುದನ್ನು ಕಂಡು ವೃತ್ರಾಸುರನಿಗೆ ಮಿತಿಮೀರಿದ ಕ್ರೋಧವು ಉಂಟಾಯಿತು. ರಾಜನೇ! ಆತನಿಗೆ ದೇವತೆಗಳ ಉತ್ಸಾಹವನ್ನೂ ತನ್ನ ಸೈನ್ಯದ ದೈನ್ಯ ವನ್ನೂ ತಡೆದುಕೊಳ್ಳಲಾಗಲಿಲ್ಲ. ಆಗ ಅವನು ಬಲಾತ್ಕಾರದಿಂದ ದೇವಸೇನೆಯನ್ನು ಮುನ್ನುಗ್ಗದಂತೆ ತಡೆದು, ಗದರಿಸುತ್ತಾ ಹೀಗೆಂದನು. ॥ ೨-೩ ॥ ಕ್ಷುದ್ರರಾದ ದೇವತೆಗಳಿರಾ! ರಣ ಭೂಮಿಯಲ್ಲಿ ಬೆನ್ನುತೋರಿಸಿ ಓಡಿಹೋಗುತ್ತಿರುವ ಹೇಡಿಗಳ

ಕಿಂ ವ ಉಚ್ಚರಿತೈರ್ಮಾತುರ್ಧಾವದ್ಭಿಃ ಪೃಷ್ಠತೋ ಹತೈಃ ।
ನ ಹಿ ಭೀತವಧಃ ಶ್ಲಾಘ್ಯೋ ನ ಸ್ವರ್ಗ್ಯಃ ಶೂರಮಾನಿನಾಮ್ ॥ ೪ ॥

ಯದಿ ವಃ ಪ್ರಧನೇ ಶ್ರದ್ಧಾ ಸಾರಂ ವಾ ಕ್ಷುಲ್ಲಕಾ ಹೃದಿ ।
ಅಗ್ರೇ ತಿಷ್ಠತ ಮಾತ್ರಂ ಮೇ ನ ಚೇದ್ಗ್ರಾಮ್ಯಸುಖೇ ಸ್ಪೃಹಾ ॥ ೫ ॥

ಏವಂ ಸುರಗಣಾನ್ಕ್ರುದ್ಧೋ ಭೀಷಯನ್ವಪುಷಾ ರಿಪೂನ್ ।
ವ್ಯನದತ್ಸುಮಹಾಪ್ರಾಣೋ ಯೇನ ಲೋಕಾ ವಿಚೇತಸಃ ॥ ೬ ॥

ತೇನ ದೇವಗಣಾಃ ಸರ್ವೇ ವೃತ್ರವಿಸ್ಫೋಟನೇನ ವೈ ।
ನಿಪೇತುರ್ಮೂರ್ಚ್ಛಿತಾ ಭೂಮೌ ಯಥೈವಾಶನಿನಾ ಹತಾಃ ॥ ೭ ॥

ಮಮರ್ದ ಪದ್ಭ್ಯಾಂ ಸುರಸೈನ್ಯಮಾತುರಂ
ನಿಮೀಲಿತಾಕ್ಷಂ ರಣರಂಗದುರ್ಮದಃ ।
ಗಾಂ ಕಂಪಯನ್ನುದ್ಯತಶೂಲ ಓಜಸಾ
ನಾಲಂ ವನಂ ಯೂಥಪತಿರ್ಯಥೋನ್ಮದಃ ॥ ೮ ॥

ವಿಲೋಕ್ಯ ತಂ ವಜ್ರಧರೋಽತ್ಯಮರ್ಷಿತಃ
ಸ್ವಶತ್ರವೇಽಭಿದ್ರವತೇ ಮಹಾಗದಾಮ್ ।
ಚಿಕ್ಷೇಪ ತಾಮಾಪತತೀಂ ಸುದುಃಸಹಾಂ
ಜಗ್ರಾಹ ವಾಮೇನ ಕರೇಣ ಲೀಲಯಾ ॥ ೯ ॥

ಸ ಇಂದ್ರಶತ್ರುಃ ಕುಪಿತೋ ಭೃಶಂ ತಯಾ
ಮಹೇಂದ್ರವಾಹಂ ಗದಯೋಗ್ರವಿಕ್ರಮಃ ।
ಜಘಾನ ಕುಂಭಸ್ಥಲ ಉನ್ನದನ್ಮೃಧೇ
ತತ್ಕರ್ಮ ಸರ್ವೇ ಸಮಪೂಜಯನ್ನೃಪ ॥ ೧೦ ॥

ಐರಾವತೋ ವೃತ್ರಗದಾಭಿಮೃಷ್ಟೋ
ವಿಘೂರ್ಣಿತೋಽದ್ರಿಃ ಕುಲಿಶಾಹತೋ ಯಥಾ ।
ಅಪಾಸರದ್ಭಿನ್ನಮುಖಃ ಸಹೇಂದ್ರೋ
ಮುಂಚನ್ನಸೃಕ್ಸಪ್ತಧನುರ್ಭೃಶಾರ್ತಃ ॥ ೧೧ ॥

ನ ಸನ್ನವಾಹಾಯ ವಿಷಣ್ಣಚೇತಸೇ
ಪ್ರಾಯುಂಕ್ತಭೂಯಃ ಸ ಗದಾಂ ಮಹಾತ್ಮಾ ।
ಇಂದ್ರೋಽಮೃತಸ್ಯಂದಿಕರಾಭಿಮರ್ಶ-
ವೀತವ್ಯಥಕ್ಷತವಾಹೋಽವತಸ್ಥೇ ॥ ೧೨ ॥

ಮೇಲೆ ಹಿಂದುಗಡೆಯಿಂದ ಪ್ರಹಾರಮಾಡುವುದರಿಂದ ಏನು ಲಾಭ? ಅಂಜುಬುರುಕರು ಒಳ್ಳೆಯ ತಂದೆ-ತಾಯಿಗಳ ಮಕ್ಕಳೇ ಅಲ್ಲ. ಅವರ ದೇಹದಿಂದ ಹೊರಹಾಕಲ್ಪಟ್ಟ ಮಲ-ಮೂತ್ರಗಳಿಗೆ ಸಮಾನರು. ಆದರೆ ತಮ್ಮನ್ನು ಶೂರ ವೀರರೆಂದು ತಿಳಿದಿರುವ ನಿಮ್ಮಂತಹವರಿಗೂ ಹೇಡಿಗಳನ್ನು ಹೊಡೆಯುವುದು ಪ್ರಶಂಸಾರ್ಹ ಮಾತಲ್ಲ, ಇದರಿಂದ ನಿಮಗೆ ಸ್ವರ್ಗವೂ ದೊರೆಯಲಾರದು. ॥ ೪ ॥ ನಿಮ್ಮ ಮನಸ್ಸಿನಲ್ಲಿ ಯುದ್ಧಮಾಡಬೇಕೆಂಬ ಶಕ್ತಿ, ಉತ್ಸಾಹ ವಿದ್ದರೆ, ಇನ್ನು ಬದುಕುಳಿದು ವಿಷಯಸುಖವನ್ನು ಭೋಗಿಸುವ ಆಸೆ ಇಲ್ಲದಿದ್ದರೆ ಸ್ವಲ್ಪಹೊತ್ತು ನನ್ನ ಮುಂದೆ ನಿಲ್ಲಿರಿ. ಯುದ್ಧದ ರುಚಿ ಯನ್ನು ಸವಿಯುವಿರಂತೆ. ॥ ೫ ॥

ಪರೀಕ್ಷಿತನೇ! ಮಹಾವೀರಾಗ್ರಣಿಯಾದ ವೃತ್ರಾಸುರನು ಕ್ರೋಧದಿಂದ ಬೆಂಕಿಯ ಕಿಡಿಯನ್ನು ಕಾರುತ್ತಾ ತನ್ನ ಭೀಕರ ರೂಪ ದಿಂದಲೂ, ವೀರವಾಣಿಯಿಂದಲೂ ದೇವತೆಗಳನ್ನು ಹೆದರಿಸುತ್ತಾ ಗಟ್ಟಿಯಾಗಿ ಸಿಂಹನಾದವನ್ನು ಮಾಡಿದನು. ಅದನ್ನು ಕೇಳಿದ ಅನೇಕ ಜನರು ಮೂರ್ಛಿತರಾದರು. ॥ ೬ ॥ ವೃತ್ರಾಸುರನ ಆ ಭಯಂ ಕರ ಗರ್ಜನೆಯಿಂದ ಎಲ್ಲ ದೇವತೆಗಳು ಸಿಡಿಲುಹೊಡೆದಂತೆ ಮೂರ್ಛಿತರಾಗಿ ನೆಲಕ್ಕುರುಳಿದರು. ॥ ೭ ॥ ಮತ್ತೇರಿದ ಗಜರಾ ಜನು ಜೊಂಡುಹುಲ್ಲಿನ ಕಾಡನ್ನು ತುಳಿದು ಹಾಕುವಂತೆ – ಯುದ್ಧೋ ತ್ಸಾಹದಿಂದ ಕೊಬ್ಬಿದ ಆ ವೃತ್ರಾಸುರನು ಕೈಯಲ್ಲಿ ತ್ರಿಶೂಲವನ್ನು ಎತ್ತಿಕೊಂಡು, ಕಣ್ಣುಮುಚ್ಚಿ ಮೂರ್ಛಿತರಾಗಿ ಬಿದ್ದಿದ್ದ ದೇವತೆಗಳ ಸೈನ್ಯವನ್ನು ಕಾಲಿನಿಂದ ಮೆಟ್ಟಿ ಮಡುಹಿದನು. ಆತನ ವೇಗಕ್ಕೆ ಭೂಮಿಯು ನಡುಗ ತೊಡಗಿತು. ॥ ೮ ॥ ವಜ್ರಪಾಣಿಯಾದ ದೇವೇಂದ್ರನಿಗೆ ಅದನ್ನು ಸಹಿಸಲಾಗಲಿಲ್ಲ. ಅವನು ತನ್ನತ್ತ ನುಗ್ಗಿ ಬಂದಾಗ ಇಂದ್ರನು ಇನ್ನೂ ಕ್ರುದ್ಧನಾಗಿ ಶತ್ರುವಿನ ಮೇಲೆ ದೊಡ್ಡದೊಂದು ಗದೆಯನ್ನು ಬೀಸಿ ಒಗೆದನು. ಆದರೆ ಆ ವೃತ್ರಾಸುರನು ಅದು ತನ್ನ ಬಳಿಗೆ ಬರುವ ಮೊದಲೇ ಅದನ್ನು ಲೀಲಾಜಾಲವಾಗಿ ಎಡಗೈಯಿಂದ ಹಿಡಿದುಬಿಟ್ಟನು. ॥ ೯ ॥ ರಾಜನೇ! ಪರಮ ಪರಾಕ್ರಮಿ ವೃತ್ರಾಸುರನು ಕೋಪದಿಂದ ಕಿಡಿ-ಕಿಡಿಯಾಗಿ ಘೋರವಾಗಿ ಗರ್ಜಿಸುತ್ತಾ ಅದೇ ಗದೆಯಿಂದ ಇಂದ್ರನ ವಾಹನ ಐರಾವತದ ಮಸ್ತಕದ ಮೇಲೆ ಬಿರುಸಿನಿಂದ ಬಡಿದನು. ಆತನ ಆ ಶೌರ್ಯವನ್ನು ಎಲ್ಲರೂ 'ಭಲೇ!' ಎಂದು ಹೊಗಳತೊಡಗಿದರು. ॥ ೧೦ ॥ ವೃತ್ರಾಸುರನು ಬೀಸಿದ ಗದೆಯ ಏಟಿನಿಂದ ಐರಾವತವು ವಜ್ರದಿಂದ ಹೊಡೆಯಲ್ಪಟ್ಟ ಪರ್ವತದಂತೆ ಘಾಸಿಗೊಂಡು ಒದ್ದಾಡ ತೊಡಗಿತು. ತಲೆಯು ಒಡೆದು ಹೋದು ದರಿಂದ ರಕ್ತವನ್ನು ಕಾರುತ್ತಾ, ನೋವಿನಿಂದ ನರಳುತ್ತಾ ಆ ಇಂದ್ರ ವಾಹನವು ತನ್ನ ಮೇಲೆ ಕುಳಿತಿದ್ದ ಪ್ರಭುವಿನೊಡನೆ ಇಪ್ಪತ್ತೆಂಟು ಕೈಗಳಷ್ಟು ಹಿಂದೆ ಸರಿಯಿತು. ॥ ೧೧ ॥ ತನ್ನ ದಿವ್ಯವಾಹನವು ಮೂರ್ಛೆಗೊಂಡಿದ್ದನ್ನು ಕಂಡು ಇಂದ್ರನಿಗೆ ಮತ್ತಷ್ಟು ಕಳವಳ ವಾಯಿತು. ಯುದ್ಧಧರ್ಮವನ್ನು ಅರಿತಿದ್ದ ಅಸುರೇಂದ್ರನು ಇದನ್ನು ಕಂಡು ಅವನ ಮೇಲೆ ಮತ್ತೆ ಗದೆಯನ್ನು ಪ್ರಯೋಗಿಸಲಿಲ್ಲ. ಆ ವೇಳೆಗೆ ಇಂದ್ರನು ಅಮೃತವು ಸೂಸುತ್ತಿದ್ದ ತನ್ನ ಹಸ್ತದ ಸ್ಪರ್ಶ ದಿಂದ ಗಾಯಗೊಂಡ ಐರಾವತದ ನೋವನ್ನು ಗುಣಪಡಿಸಿ, ಮತ್ತೆ ಯುದ್ಧಭೂಮಿಗೆ ಬಂದು ಶತ್ರುವನ್ನೆದುರಿಸಿದನು. ॥ ೧೨ ॥

ಸ ತಂ ನೃಪೇಂದ್ರಾಹವಕಾಮ್ಯಯಾ ರಿಪುಂ
ವಜ್ರಾಯುಧಂ ಭ್ರಾತೃಹಣಂ ವಿಲೋಕ್ಯ ।
ಸ್ಮರಂಶ್ಚ ತತ್ಕರ್ಮ ನೃಶಂಸಮಂಹಃ
ಶೋಕೇನ ಮೋಹೇನ ಹಸಂಜಗಾದ ॥ ೧೩ ॥

ಪರೀಕ್ಷಿತನೇ! ತನ್ನ ಅಣ್ಣನಾದ ವಿಶ್ವರೂಪನನ್ನು ವಧಿಸಿದ ಶತ್ರುವಾದ ಇಂದ್ರನು ಯುದ್ಧಕ್ಕಾಗಿ ಕೈಯಲ್ಲಿ ವಜ್ರವನ್ನು ಧರಿಸಿಕೊಂಡು ಪುನಃ ಮುಂದೆ ಬಂದಿರುವುದನ್ನು ವೃತ್ರಾಸುರನು ನೋಡಿದಾಗ ಅವನಿಗೆ ಅವನ ಕ್ರೂರ ಪಾಪಕರ್ಮವು ನೆನಪಾಗಿ, ಶೋಕ-ಮೋಹದಿಂದ ಕೂಡಿದವನಾಗಿ ನಗುತ್ತಾ ಅವನಲ್ಲಿ ಇಂತೆಂದನು. ॥ ೧೩ ॥

*ವೃತ್ರ ಉವಾಚ*

ದಿಷ್ಟ್ಯಾ ಭವಾನ್ಮೇ ಸಮವಸ್ಥಿತೋ ರಿಪು-
ರ್ಯೋ ಬ್ರಹ್ಮಹಾ ಗುರುಹಾ ಭ್ರಾತೃಹಾ ಚ ।
ದಿಷ್ಟ್ಯಾನೃಣೋಽದ್ಯಾಹಮಸತ್ತಮ ತ್ವಯಾ
ಮಚ್ಛೂಲನಿರ್ಭಿನ್ನದೃಷದ್ಧೃದಾಚಿರಾತ್ ॥ ೧೪ ॥

ಯೋ ನೋಽಗ್ರಜಸ್ಯಾತ್ಮವಿದೋ ದ್ವಿಜಾತೇ-
ರ್ಗುರೋರಪಾಪಸ್ಯ ಚ ದೀಕ್ಷಿತಸ್ಯ ।
ವಿಶ್ರಭ್ಯ ಖಡ್ಗೇನ ಶಿರಾಂಸ್ಯವೃಶ್ಚತ್
ಪಶೋರಿವಾಕರುಣಃ ಸ್ವರ್ಗಕಾಮಃ ॥ ೧೫ ॥

ಹ್ರೀಶ್ರೀದಯಾಕೀರ್ತಿಭಿರುಜ್ಝಿತಂ ತ್ವಾಂ
ಸ್ವಕರ್ಮಣಾ ಪುರುಷಾದೈಶ್ಚ ಗರ್ಹ್ಯಮ್ ।
ಕೃಚ್ಛ್ರೇಣ ಮಚ್ಛೂಲವಿಭಿನ್ನದೇಹ-
ಮಸ್ಪೃಷ್ಟವಹ್ನಿಂ ಸಮದಂತಿ ಗೃಧ್ರಾಃ ॥ ೧೬ ॥

ಅನ್ಯೇಽನು ಯೇ ತ್ವೇಹ ನೃಶಂಸಮಜ್ಞಾ
ಯೇ ಹ್ಯುದ್ಯತಾಸ್ತ್ರಾಃ ಪ್ರಹರಂತಿ ಮಹ್ಯಮ್ ।
ತೈರ್ಭೂತನಾಥಾನ್ಸಗಣಾನ್ನಿಶಾತ-
ತ್ರಿಶೂಲನಿರ್ಭಿನ್ನಗಲೈರ್ಯಜಾಮಿ ॥ ೧೭ ॥

ಅಥೋ ಹರೇ ಮೇ ಕುಲಿಶೇನ ವೀರ
ಹರ್ತಾ ಪ್ರಮಥ್ಯೈವ ಶಿರೋ ಯದೀಹ ।
ತತ್ರಾನೃಣೋ ಭೂತಬಲಿಂ ವಿಧಾಯ
ಮನಸ್ವಿನಾಂ ಪಾದರಜಃ ಪ್ರಪತ್ಸ್ಯೇ ॥ ೧೮ ॥

ಸುರೇಶ ಕಸ್ಮಾನ್ನ ಹಿನೋಷಿ ವಜ್ರಂ
ಪುರಃ ಸ್ಥಿತೇ ವೈರಿಣಿ ಮಯ್ಯಮೋಘಮ್ ।
ಮಾ ಸಂಶಯಿಷ್ಠಾ ನ ಗದೇವ ವಜ್ರಂ
ಸ್ಯಾನ್ನಿಷ್ಫಲಂ ಕೃಪಣಾರ್ಥೇವ ಯಾಚ್ಞಾ ॥ ೧೯ ॥

ವೃತ್ರಾಸುರನು ಹೇಳಿದನು – ಎಲೈ ದುರಾತ್ಮನೇ! ಬ್ರಾಹ್ಮಣನೂ, ನಿನಗೆ ಗುರುವೂ, ನನಗೆ ಅಣ್ಣನೂ ಆದ ವಿಶ್ವರೂಪನನ್ನು ಹತ್ಯೆಮಾಡಿದ ಕೊಲೆಪಾತಕಿಯೂ, ಶತ್ರುವೂ ಆದ ನೀನು ನನ್ನ ಎದುರಿಗೆ ಸಿಕ್ಕಿರುವುದು ನನ್ನ ಭಾಗ್ಯೋದಯವೇ ಸರಿ. ಎಲವೋ ದುಷ್ಟನೇ! ಈಗ ಶೀಘ್ರಾತಿಶೀಘ್ರವಾಗಿ ನಾನು ಕಲ್ಲಿನಂತಿರುವ ನಿನ್ನ ಕಠೋರಹೃದಯವನ್ನು ಈ ಶೂಲದಿಂದ ಸೀಳಿಹಾಕಿ ಅಣ್ಣನ ಋಣದಿಂದ ಮುಕ್ತನಾಗುವೆ. ಆಹಾ! ಇದು ನನಗೆ ಎಂತಹ ಆನಂದದ ಮಾತಾಗಿದೆ! ॥ ೧೪ ॥ ಎಲವೋ ಇಂದ್ರನೇ! ಬ್ರಾಹ್ಮಣನಾಗಿರುವುದರ ಜೊತೆಗೆ ಯಜ್ಞದಲ್ಲಿ ದೀಕ್ಷಿತನೂ ಆಗಿದ್ದು ನಿನಗೆ ಗುರುವಾಗಿದ್ದ; ಆತ್ಮಜ್ಞಾನಿಯೂ, ಪಾಪರಹಿತನೂ ಆಗಿದ್ದ ನನ್ನಣ್ಣನಿಗೆ ನಂಬಿಕೆಕೋರಿಸಿ – ಸ್ವರ್ಗವನ್ನು ಬಯಸುವವನು ಯಜ್ಞದಲ್ಲಿ ಪಶುವಿನ ತಲೆಯನ್ನು ಕತ್ತರಿಸುವಂತೆ ನೀನು ಖಡ್ಗದಿಂದ ಆತನ ಮೂರೂ ತಲೆಗಳನ್ನು ಕತ್ತರಿಸಿಬಿಟ್ಟಿರುವೆ. ॥ ೧೫ ॥ ದಯೆ, ಲಜ್ಜೆ ಲಕ್ಷ್ಮೀ ಮತ್ತು ಕೀರ್ತಿ ಇವುಗಳು ನಿನ್ನಿಂದ ಬಿಟ್ಟುಹೋಗಿವೆ. ನೀನು ಮಾಡಿದ ಅತಿನೀಚ ಕಾರ್ಯವನ್ನು ಮನುಷ್ಯರೇನು, ರಾಕ್ಷಸರೂ ಕೂಡ ನಿಂದಿಸುತ್ತಿದ್ದಾರೆ. ಇಂದು ನಿನ್ನ ಶರೀರವು ನನ್ನ ತ್ರಿಶೂಲದಿಂದ ಹೋಳು-ಹೋಳಾಗಿ ಹೋಗುವುದು. ಅತಿ ಕಷ್ಟವಾದ ಮೃತ್ಯುವು ನಿನಗೆ ಒದಗೀತು. ನಿನ್ನಂತಹ ಪಾಪಿಯನ್ನು ಬೆಂಕಿಯೂ ಮುಟ್ಟದು. ನಿನ್ನನ್ನಾದರೋ ರಣಹದ್ದುಗಳು ಚುಚ್ಚಿ-ಚುಚ್ಚಿ ತಿಂದುಬಿಡುವವು. ॥ ೧೬ ॥ ಈ ಅಜ್ಞಾನಿಗಳಾದ ದೇವತೆಗಳು ನಿನ್ನಂತಹ ನೀಚನೂ, ಕ್ರೂರಿಯೂ ಆದವನಿಗೆ ಅನುಯಾಯಿಗಳಾಗಿ ನನ್ನ ಮೇಲೆ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದಾರೆ. ನಾನು ನನ್ನ ಹರಿತವಾದ ತ್ರಿಶೂಲದಿಂದ ಅವರ ಕತ್ತನ್ನು ಕತ್ತರಿಸಿಬಿಡುವೆನು. ಅದರ ಮೂಲಕ ಗಣಗಳ ಸಹಿತ ಭೈರವಾದಿ ಭೂತನಾಥರಿಗೆ ಬಲಿಯನ್ನು ಅರ್ಪಿಸುವೆನು. ॥ ೧೭ ॥ ವೀರನೇ! ಇದರ ಬದಲಿಗೆ ನೀನೇ ನನ್ನ ಸೈನ್ಯವನ್ನು ಕತ್ತರಿಸಿಹಾಕಿ ನಿನ್ನ ವಜ್ರಾಯುಧದಿಂದ ನನ್ನ ತಲೆಯನ್ನು ಕತ್ತರಿಸಿಹಾಕುವ ಸಂಭವವೂ ಇದೆ. ಆಗಲಾದರೋ ನಾನು ನನ್ನ ಶರೀರವನ್ನು ಪಶು-ಪಕ್ಷಿಗಳಿಗೆ ಬಲಿಕೊಟ್ಟು, ಕರ್ಮಗಳ ಬಂಧನದಿಂದ ಬಿಡುಗಡೆ ಹೊಂದಿ, ಮಹಾಪುರುಷರ ಪಾದಧೂಳಿಯನ್ನು ಆಶ್ರಯಿಸುವೆನು. ಮಹಾಪುರುಷರು ಹೋಗುವ ಉತ್ತಮೋತ್ತಮವಾದ ಲೋಕಕ್ಕೆ ಹೋಗುವೆನು. ॥ ೧೮ ॥ ದೇವರಾಜನೇ! ಶತ್ರುವಾದ ನಾನು ನಿನ್ನ ಮುಂದೆಯೇ ನಿಂತಿರುವೆನು. ಈಗ ನೀನು ನನ್ನ ಮೇಲೆ ಅಮೋಘವಾದ ವಜ್ರಾಯುಧವನ್ನು ಏಕೆ ಪ್ರಯೋಗಿಸುತ್ತಿಲ್ಲ? ನಿನ್ನ ಗದೆಯು ನಿಷ್ಫಲವಾಯಿತು. ಕೃಪಣನಲ್ಲಿ ಗೈದ ಯಾಚನೆಯು ನಿಷ್ಫಲವಾಗುವಂತೆಯೇ ಈ ವಜ್ರವು ನಿಷ್ಫಲವಾದೀತು ಎಂದು ಸಂದೇಹಪಡಬೇಡ. ॥ ೧೯ ॥

ನನ್ವೇಷ ವಜ್ರಸ್ತವ ಶಕ್ರ ತೇಜಸಾ
ಹರೇರ್ದಧೀಚೇಸ್ತಪಸಾ ಚ ತೇಜಿತಃ ।
ತೇನೈವ ಶತ್ರುಂ ಜಹಿ ವಿಷ್ಣುಯಂತ್ರಿತೋ
ಯತೋ ಹರಿರ್ವಿಜಯಃ ಶ್ರೀರ್ಗುಣಾಸ್ತತಃ ॥ ೨೦ ॥

ಅಹಂ ಸಮಾಧಾಯ ಮನೋ ಯಥಾಽಽಹ
ಸಂಕರ್ಷಣಸ್ತಚ್ಚರಣಾರವಿಂದೇ ।
ತ್ವದ್ವಜ್ರರಂಹೋಲುಲಿತಗ್ರಾಮ್ಯಪಾಶೋ
ಗತಿಂ ಮುನೇರ್ಯಾಮ್ಯಪವಿದ್ಧಲೋಕಃ ॥ ೨೧ ॥

ಪುಂಸಾಂ ಕಿಲೈಕಾಂತಧಿಯಾಂ ಸ್ವಕಾನಾಂ
ಯಾಃ ಸಂಪದೋ ದಿವಿ ಭೂಮೌ ರಸಾಯಾಮ್ ।
ನ ರಾತಿ ಯದ್ದ್ವೇಷ ಉದ್ವೇಗ ಆಧಿ-
ರ್ಮದಃ ಕಲಿರ್ವ್ಯಸನಂ ಸಂಪ್ರಯಾಸಃ ॥ ೨೨ ॥

ತ್ರೈವರ್ಗಿಕಾಯಾಸವಿಘಾತಮಸ್ಮತ್
ಪತಿರ್ವಿಧತ್ತೇ ಪುರುಷಸ್ಯ ಶಕ್ರ ।
ತತೋಽನುಮೇಯೋ ಭಗವತ್ಪ್ರಸಾದೋ
ಯೋ ದುರ್ಲಭೋಽಕಿಂಚನಗೋಚರೋಽನ್ಯೈಃ ॥ ೨೩ ॥

ಅಹಂ ಹರೇ ತವ ಪಾದೈಕಮೂಲ-
ದಾಸಾನುದಾಸೋ ಭವಿತಾಸ್ಮಿ ಭೂಯಃ ।
ಮನಃ ಸ್ಮರೇತಾಸುಪತೇರ್ಗುಣಾಂಸ್ತೇ
ಗೃಣೀತ ವಾಕ್ಕರ್ಮ ಕರೋತು ಕಾಯಃ ॥ ೨೪ ॥

ನ ನಾಕಪೃಷ್ಠಂ ನ ಚ ಪಾರಮೇಷ್ಠ್ಯಂ
ನ ಸಾರ್ವಭೌಮಂ ನ ರಸಾಧಿಪತ್ಯಮ್ ।
ನ ಯೋಗಸಿದ್ಧೀರಪುನರ್ಭವಂ ವಾ
ಸಮಂಜಸ ತ್ವಾ ವಿರಹಯ್ಯ ಕಾಂಕ್ಷೇ ॥ ೨೫ ॥

ಅಜಾತಪಕ್ಷಾ ಇವ ಮಾತರಂ ಖಗಾಃ
ಸ್ತನ್ಯಂ ಯಥಾ ವತ್ಸತರಾಃ ಕ್ಷುಧಾರ್ತಾಃ ।
ಪ್ರಿಯಂ ಪ್ರಿಯೇವ ವ್ಯುಷಿತಂ ವಿಷಣ್ಣಾ
ಮನೋಽರವಿಂದಾಕ್ಷ ದಿದೃಕ್ಷತೇ ತ್ವಾಮ್ ॥ ೨೬ ॥

ಇಂದ್ರನೇ! ನಿನ್ನ ಈ ವಜ್ರವು ಶ್ರೀಹರಿಯ ತೇಜ ಮತ್ತು ದಧೀಚಿ ಋಷಿಯ ತಪಸ್ಸಿನಿಂದ ಶಕ್ತಿಶಾಲಿಯಾಗಿದೆ. ಭಗವಾನ್ ವಿಷ್ಣುವು ನನ್ನನ್ನು ಕೊಲ್ಲಲಿಕ್ಕಾಗಿ ನಿನಗೆ ಆಜ್ಞೆಯನ್ನು ಕೊಟ್ಟಿರುವನು. ಅದಕ್ಕಾಗಿ ಈಗ ನೀನು ಅದೇ ವಜ್ರದಿಂದ ನನ್ನನ್ನು ಕೊಂದುಬಿಡು. ಏಕೆಂದರೆ, ಭಗವಾನ್ ಶ್ರೀಹರಿಯು ಇರುವ ಪಕ್ಷದಲ್ಲೇ ವಿಜಯ, ಲಕ್ಷ್ಮೀ ಹಾಗೂ ಎಲ್ಲ ಗುಣಗಳು ವಾಸಿಸುತ್ತವೆ. ॥ ೨೦ ॥ ಎಲೈ ದೇವರಾಜನೇ! ಭಗವಾನ್ ಶ್ರೀಸಂಕರ್ಷಣನ ಆಣತಿಯಂತೆ ನಾನು ನನ್ನ ಮನಸ್ಸನ್ನು ಆತನ ಅಡಿದಾವರೆಗಳಲ್ಲಿ ಲಯಗೊಳಿಸುವೆನು. ನಿನ್ನ ವಜ್ರವು ನನ್ನ ದೇಹವನ್ನು ಮಾತ್ರವಲ್ಲದೆ ವಿಷಯಭೋಗ ರೂಪವಾದ ನನ್ನ ಬಲೆಯನ್ನೂ ಕತ್ತರಿಸಿಬಿಡುವುದು. ಆಗ ನಾನು ಈ ಶರೀರವನ್ನು ತ್ಯಜಿಸಿ ಮುನಿಗಳಿಗೆ ಉಚಿತವಾದ ಗತಿಯನ್ನು ಪಡೆಯುವೆನು. ॥ ೨೧ ॥ ಶ್ರೀಭಗವಂತನನ್ನು ಅನನ್ಯಭಾವದಿಂದ ಪ್ರೀತಿಸುತ್ತಿರುವ ಅವನ ಸ್ವಜನರಾದ ಭಕ್ತರಿಗೆ ಅವನು ಸ್ವರ್ಗ, ಭೂಮಿ ಅಥವಾ ಪಾತಾಳಲೋಕದ ಸಂಪತ್ತನ್ನು ಕೊಡುವುದಿಲ್ಲ, ಏಕೆಂದರೆ, ಅವುಗಳಿಂದ ಪರಮಾನಂದವು ದೊರೆಯುವುದೇ ಇಲ್ಲ, ಬದಲಾಗಿ ದ್ವೇಷ, ಉದ್ವೇಗ, ಅಹಂಕಾರ, ಮಾನಸಿಕಪೀಡೆಗಳು, ಕಲಹ, ದುಃಖ ಮತ್ತು ಆಯಾಸಗಳೇ ಬಂದು ಸೇರುವುವು. ॥ ೨೨ ॥ ಎಲೈ ಇಂದ್ರನೇ! ನಮ್ಮ ಪ್ರಭುವು ತನ್ನ ಭಕ್ತರ ಧರ್ಮ, ಅರ್ಥ, ಕಾಮ ಸಂಬಂಧವಾದ ಪ್ರಯಾಸಗಳನ್ನು ವ್ಯರ್ಥಗೊಳಿಸಿಬಿಡುತ್ತಾನೆ. ನಿಜವಾಗಿ ವಿಚಾರಮಾಡಿನೋಡಿದರೆ ಇದರಿಂದ ಶ್ರೀಭಗವಂತನ ಕೃಪೆಯೇ ಸೂಚಿತವಾಗುತ್ತದೆ. ಏಕೆಂದರೆ, ಆತನ ಇಂತಹ ಕೃಪಾ ಪ್ರಸಾದವು ಭೌತಿಕವಾಗಿ ದೀನ-ದರಿದ್ರರಾದ ಆತನ ಭಕ್ತರ ಅನುಭವಕ್ಕೆ ಮಾತ್ರ ಗೋಚರವಾಗುವುದು. ಇತರರಿಗೆ ಅದು ಅತ್ಯಂತ ದುರ್ಲಭವೇ ಆಗಿದೆ. ॥ ೨೩ ॥

ಭಗವಂತನನ್ನು ಪ್ರತ್ಯಕ್ಷವಾಗಿ ಅನುಭವಿಸುತ್ತಾ ವೃತ್ರಾಸುರನು ಅವನಲ್ಲಿ ಹೀಗೆ ಪ್ರಾರ್ಥಿಸಿದನು – ಪ್ರಭೋ! ಹರಿಯೇ! ಅನನ್ಯಭಾವದಿಂದ ನಿನ್ನ ಚರಣಕಮಲಗಳ ಆಶ್ರಿತ ಸೇವಕರ ಸೇವೆಯನ್ನು ಮಾಡುವ ಅವಕಾಶವನ್ನು ನನಗೆ ಮುಂದಿನ ಜನ್ಮದಲ್ಲಿಯೂ ದೊರೆಯುವಂತೆ ನನ್ನ ಮೇಲೆ ಕೃಪೆಮಾಡು. ಪ್ರಾಣವಲ್ಲಭನೇ! ನನ್ನ ಮನಸ್ಸು ನಿನ್ನ ಮಂಗಲಮಯ ಗುಣಗಳನ್ನು ಸ್ಮರಿಸುತ್ತಾ ಇರಲಿ. ನನ್ನ ವಾಣಿಯು ಅದನ್ನೇ ಗುಣಗಾನಮಾಡುತ್ತಾ, ಶರೀರವು ನಿನ್ನ ಸೇವೆಯಲ್ಲೇ ಆಸಕ್ತವಾಗಿರಲಿ. ॥ ೨೪ ॥ ಎಲೈ ಸಕಲ ಸೌಭಾಗ್ಯ ನಿಧಿಯೇ! ನಾನು ನಿನ್ನನ್ನು ಬಿಟ್ಟು ಸ್ವರ್ಗವನ್ನಾಗಲೀ, ಬ್ರಹ್ಮಲೋಕದ ಆಧಿಪತ್ಯವನ್ನಾಗಲೀ, ಭೂಮಂಡಲದ ಸಾಮ್ರಾಜ್ಯವನ್ನಾಗಲೀ, ರಸಾತಲದ ಏಕಚ್ಛತ್ರಾಧಿಪತ್ಯವನ್ನಾಗಲೀ, ಯೋಗಸಿದ್ಧಿಗಳಾಗಲೀ – ಯಾವುದನ್ನೂ ಬಯಸೆನು; ಹೆಚ್ಚೇನು ಮೋಕ್ಷವನ್ನೂ ಕೂಡ ಬಯಸುವುದಿಲ್ಲ. ॥ ೨೫ ॥ ಓ ಪುಂಡರೀಕಾಕ್ಷನೇ! ರೆಕ್ಕೆ ಹುಟ್ಟದೇ ಇರುವ ಹಕ್ಕಿಯ ಮರಿಗಳು ತಮ್ಮ ತಾಯಿಯನ್ನೇ ಎದುರು ನೋಡುತ್ತಿರುವಂತೆಯೇ, ಹಸಿದ ಕರುಗಳು ತಮ್ಮ ತಾಯಿಯ ಸ್ತನ್ಯವನ್ನು ಕುಡಿಯಲು ಆತುರಪಡುತ್ತಿರುವಂತೆಯೇ, ಮತ್ತು ಪತಿಯನ್ನು ಅಗಲಿದ ರಮಣಿಯರು ತಮ್ಮ ಪ್ರಿಯತಮನ ಸಮಾಗಮಕ್ಕಾಗಿ ಹಾತೊರೆಯುತ್ತಿರುವಂತೆಯೇ, ನನ್ನ ಮನಸ್ಸು ನಿನ್ನ

ಮಮೋತ್ತಮಶ್ಲೋಕಜನೇಷು ಸಖ್ಯಂ
ಸಂಸಾರಚಕ್ರೇ ಭ್ರಮತಃ ಸ್ವಕರ್ಮಭಿಃ ।
ತ್ವನ್ಮಾಯಯಾಽಽತ್ಮಾತ್ಮಜದಾರಗೇಹೇ-
ಷ್ವಾಸಕ್ತಚಿತ್ತಸ್ಯ ನ ನಾಥ ಭೂಯಾತ್ ॥ ೨೭ ॥

ದರ್ಶನಕ್ಕಾಗಿ ಹಂಬಲಿಸುತ್ತಾ ಇದೆ. ॥ ೨೬ ॥ ಮಹಾಪ್ರಭೋ! ನಾನು ಮುಕ್ತಿಯನ್ನು ಬಯಸುತ್ತಿಲ್ಲ. ಕರ್ಮಗಳ ಫಲವಾಗಿ ಸಂ ಸಾರದ ಚಕ್ರದಲ್ಲಿ ಅಲೆದಾಡುತ್ತಿರುವ ನನಗೆ ಉತ್ತಮ ಕೀರ್ತಿಯುಳ್ಳ ನಿನ್ನ ಪ್ರಿಯರಾದ ಭಕ್ತರೊಡನೆ ಸದಾ ಗೆಳೆತನವಿರಲಿ. ನಿನ್ನ ಮಾಯೆಯಿಂದ ದೇಹ, ಮನೆ, ಪತ್ನೀ-ಪುತ್ರರು ಮುಂತಾದವರಲ್ಲೇ ಆಸಕ್ತರಾದವರೊಡನೆ ನನಗೆ ಯಾವ ರೀತಿಯ ಸಂಬಂಧವೂ ಉಂಟಾಗದಿರಲಿ ಎಂಬಷ್ಟೇ ನಾನು ಬಯಸುತ್ತಿರುವುದು. ॥ ೨೭ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ವೃತ್ರಸ್ಯೇಂದ್ರೋಪದೇಶೋ ನಾಮೈಕಾದಶೋಽಧ್ಯಾಯಃ ॥ ೧೧ ॥**

# ಹನ್ನೆರಡನೆಯ ಅಧ್ಯಾಯ

## ವೃತ್ರಾಸುರನ ವಧೆ

*ಋಷಿರುವಾಚ*

ಏವಂ ಜಿಹಾಸುರ್ನೃಪ ದೇಹಮಾಜೌ
ಮೃತ್ಯುಂ ವರಂ ವಿಜಯಾನ್ಮನ್ಯಮಾನಃ ।
ಶೂಲಂ ಪ್ರಗೃಹ್ಯಾಭ್ಯಪತತ್ಸುರೇಂದ್ರಂ
ಯಥಾ ಮಹಾಪುರುಷಂ ಕೈಟಭೋಽಪ್ಸು ॥ ೧ ॥

ತತೋ ಯುಗಾಂತಾಗ್ನಿಕಠೋರಜಿಹ್ವ-
ಮಾವಿಧ್ಯ ಶೂಲಂ ತರಸಾಸುರೇಂದ್ರಃ ।
ಕ್ಷಿಪ್ತ್ವಾ ಮಹೇಂದ್ರಾಯ ವಿನದ್ಯ ವೀರೋ
ಹತೋಽಸಿ ಪಾಪೇತಿ ರುಷಾ ಜಗಾದ ॥ ೨ ॥

ಖ ಆಪತತ್ತದ್ವಿಚಲದ್ಗ್ರಹೋಲ್ಕವತ್
ನಿರೀಕ್ಷ್ಯ ದುಷ್ಪ್ರೇಕ್ಷ್ಯಮಜಾತವಿಕ್ಲವಃ ।
ವಜ್ರೇಣ ವಜ್ರೀ ಶತಪರ್ವಣಾಚ್ಛಿನದ್
ಭುಜಂ ಚ ತಸ್ಯೋರಗರಾಜಭೋಗಮ್ ॥ ೩ ॥

ಛಿನ್ನೈಕಬಾಹುಃ ಪರಿಘೇಣ ವೃತ್ರಃ
ಸಂರಬ್ಧ ಆಸಾದ್ಯ ಗೃಹೀತವಜ್ರಮ್ ।
ಹನೌ ತತಾಡೇಂದ್ರಮಥಾಮರೇಭಂ
ವಜ್ರಂ ಚ ಹಸ್ತಾನ್ನ್ಯಪತನ್ಮಘೋನಃ ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿದ್ರಾಜನೇ! ವೃತ್ರಾಸುರನು ರಣಭೂಮಿಯಲ್ಲಿ ತನ್ನ ಶರೀರವನ್ನು ಬಿಡಲು ಬಯಸುತ್ತಿದ್ದನು. ಏಕೆಂದರೆ, ಅವನ ದೃಷ್ಟಿಯಲ್ಲಿ ಇಂದ್ರನ ಮೇಲೆ ವಿಜಯವನ್ನು ಗಳಿಸಿ ಸ್ವರ್ಗವನ್ನು ಪಡೆಯುವುದಕ್ಕಿಂತಲೂ ದೇಹತ್ಯಾಗಮಾಡಿ ಶ್ರೀಭಗವಂತನನ್ನು ಪಡೆಯುವುದೇ ಶ್ರೇಷ್ಠವಾಗಿತ್ತು. ಅದಕ್ಕಾಗಿ ಅವನು – ಕೈಟಭಾಸುರನು ಹಿಂದೆ ಪ್ರಳಯ ಜಲದಲ್ಲಿ ಭಗವಾನ್ ವಿಷ್ಣುವನ್ನು ಎದುರಿಸಲು ಹೋದಂತೆ-ತ್ರಿಶೂಲವನ್ನೆತ್ತಿಕೊಂಡು ಇಂದ್ರನ ಮೇಲೆ ಎರಗಿದನು. ॥ ೧ ॥ ವೀರನಾದ ವೃತ್ರಾಸುರನು ಪ್ರಳಯಕಾಲದ ಅಗ್ನಿಯ ಜ್ವಾಲೆಗಳಂತೆ ತೀಕ್ಷ್ಣವಾಗಿದ್ದ ತುದಿಗಳುಳ್ಳ ತ್ರಿಶೂಲವನ್ನು ತಿರುಗಿಸುತ್ತಾ ಅತಿರಭಸದಿಂದ ಇಂದ್ರನ ಮೇಲೆ ಬೀಸಿ ಹೊಡೆದನು ಮತ್ತು ಕಡುಸಿಟ್ಟಿನಿಂದ ಸಿಂಹನಾದವನ್ನು ಮಾಡಿ – 'ಎಲವೋ ಪಾಪಿಯೇ! ಈಗ ನೀನು ಬದುಕಲಾರೆ' ಎಂದು ಅಬ್ಬರಿಸಿದನು. ॥ ೨ ॥ ಆ ಭಯಂಕರ ತ್ರಿಶೂಲವು ಗ್ರಹ ಮತ್ತು ಉಲ್ಕೆಗಳಂತೆ ತಿರುಗುತ್ತಾ ಆಕಾಶದಲ್ಲಿ ಬರುತ್ತಿರುವುದನ್ನು ನೋಡಿಯೂ ಇಂದ್ರನು ಸ್ವಲ್ಪವೂ ಅಳುಕಿದೆಯನ್ನು ತೋರಿಸಲಿಲ್ಲ. ಅಷ್ಟೇ ಅಲ್ಲದೆ ಆ ತ್ರಿಶೂಲದೊಂದಿಗೆ ವಾಸುಕಿ ನಾಗದಂತೆ ವಿಶಾಲವಾಗಿದ್ದ ವೃತ್ರಾಸುರನ ಭುಜವನ್ನು ನೂರು ಗಿಣ್ಣುಗಳಿಂದ ಬೆಳಗುತ್ತಿದ್ದ ತನ್ನ ವಜ್ರಾಯುಧದಿಂದ ಕತ್ತರಿಸಿ ಹಾಕಿದನು. ॥ ೩ ॥ ಒಂದು ತೋಳು ಕತ್ತರಿಸಿ ಹೋದುದರಿಂದ ವೃತ್ರಾಸುರನಿಗೆ ತಡೆಯಲಾರದಷ್ಟು ಕೋಪವುಂಟಾಯಿತು. ಆಗ ಅವನು ವಜ್ರಧಾರಿಯಾಗಿದ್ದ ಇಂದ್ರನ ಬಳಿಗೆ ಹೋಗಿ ಆತನ ಗದ್ದದ ಮೇಲೂ ಮತ್ತು ಐರಾವತದ ಮೇಲೂ ಪರಿಘಾಯುಧದಿಂದ ಬಲವಾಗಿ ಹೊಡೆದನು. ಅದರಿಂದ ಇಂದ್ರನ ಕೈಯಿಂದ ವಜ್ರಾ ಯುಧವು ಜಾರಿ ಬಿದ್ದು ಹೋಯಿತು. ॥ ೪ ॥

ವೃತ್ರಸ್ಯ ಕರ್ಮಾತಿಮಹಾದ್ಭುತಂ ತತ್
ಸುರಾಸುರಾಶ್ಚಾರಣಸಿದ್ಧಸಂಘಾಃ ।
ಅಪೂಜಯಂಸ್ತತ್ಪುರುಹೂತಸಂಕಟಂ
ನಿರೀಕ್ಷ್ಯ ಹಾ ಹೇತಿ ವಿಚುಕ್ರುಶುರ್ಭೃಶಮ್ ॥ ೫ ॥

ಇಂದ್ರೋ ನ ವಜ್ರಂ ಜಗೃಹೇ ವಿಲಜ್ಜಿತ-
ಶ್ಚ್ಯುತಂ ಸ್ವಹಸ್ತಾದರಿಸನ್ನಿಧೌ ಪುನಃ ।
ತಮಾಹ ವೃತ್ರೋ ಹರ ಆತ್ತವಜ್ರೋ
ಜಹಿ ಸ್ವಶತ್ರುಂ ನ ವಿಷಾದಕಾಲಃ ॥ ೬ ॥

ಯುಯುತ್ಸತಾಂ ಕುತ್ರಚಿದಾತತಾಯಿನಾಂ
ಜಯಃ ಸದೈಕತ್ರ ನ ವೈ ಪರಾತ್ಮನಾಮ್ ।
ವಿನೈಕಮುತ್ಪತ್ತಿಲಯಸ್ಥಿತೀಶ್ವರಂ
ಸರ್ವಜ್ಞಮಾದ್ಯಂ ಪುರುಷಂ ಸನಾತನಮ್ ॥ ೭ ॥

ಲೋಕಾಃ ಸಪಾಲಾ ಯಸ್ಯೇಮೇ ಶ್ವಸಂತಿ ವಿವಶಾ ವಶೇ ।
ದ್ವಿಜಾ ಇವ ಶಿಚಾ ಬದ್ಧಾಃ ಸ ಕಾಲ ಇಹ ಕಾರಣಮ್ ॥ ೮ ॥

ಓಜಃ ಸಹೋ ಬಲಂ ಪ್ರಾಣಮಮೃತಂ ಮೃತ್ಯುಮೇವ ಚ ।
ತಮಜ್ಞಾಯ ಜನೋ ಹೇತುಮಾತ್ಮಾನಂ ಮನ್ಯತೇ ಜಡಮ್ ॥ ೯ ॥

ಯಥಾ ದಾರುಮಯೀ ನಾರೀ ಯಥಾ ಯಂತ್ರಮಯೋ ಮೃಗಃ ।
ಏವಂ ಭೂತಾನಿ ಮಘವನ್ನೀಶತಂತ್ರಾಣಿ ವಿದ್ಧಿ ಭೋಃ ॥ ೧೦ ॥

ಪುರುಷಃ ಪ್ರಕೃತಿರ್ವ್ಯಕ್ತಮಾತ್ಮಾ ಭೂತೇಂದ್ರಿಯಾಶಯಾಃ ।
ಶಕ್ನುವಂತ್ಯಸ್ಯ ಸರ್ಗಾದೌ ನ ವಿನಾ ಯದನುಗ್ರಹಾತ್ ॥ ೧೧ ॥

ಅವಿದ್ವಾನೇವಮಾತ್ಮಾನಂ ಮನ್ಯತೇಽನೀಶಮೀಶ್ವರಮ್ ।
ಭೂತೈಃ ಸೃಜತಿ ಭೂತಾನಿ ಗ್ರಸತೇ ತಾನಿ ತೈಃ ಸ್ವಯಮ್ ॥ ೧೨ ॥

ಆಯುಃ ಶ್ರೀಃ ಕೀರ್ತಿರೈಶ್ವರ್ಯಮಾಶಿಷಃ ಪುರುಷಸ್ಯ ಯಾಃ ।
ಭವಂತ್ಯೇವ ಹಿ ತತ್ಕಾಲೇ ಯಥಾನಿಚ್ಛೋರ್ವಿಪರ್ಯಯಾಃ ॥ ೧೩ ॥

ತಸ್ಮಾದಕೀರ್ತಿಯಶಸೋರ್ಜಯಾಪಜಯಯೋರಪಿ ।
ಸಮಃ ಸ್ಯಾತ್ಸುಖದುಃಖಾಭ್ಯಾಂ ಮೃತ್ಯುಜೀವಿತಯೋಸ್ತಥಾ ॥ ೧೪ ॥

ವೃತ್ರಾಸುರನ ಆ ಅದ್ಭುತವಾದ ಕರ್ಮವನ್ನು ಕಂಡು ದೇವತೆಗಳೂ, ಅಸುರರೂ, ಚಾರಣರೂ, ಸಿದ್ಧಗಣರೂ ಮುಂತಾದವರೆಲ್ಲರೂ ಆತನನ್ನು ಪ್ರಶಂಸೆಮಾಡಿದರು. ಆದರೆ ಅವರೇ ಇಂದ್ರನ ಸಂಕಟವನ್ನು ನೋಡಿ ಪದೇ-ಪದೇ ಅಯ್ಯೋ! ಅಯ್ಯೋ! ಎಂದು ಕೂಗಿಕೊಳ್ಳತೊಡಗಿದರು. ॥ ೫ ॥ ಪರೀಕ್ಷಿತನೇ! ಆ ವಜ್ರಾಯುಧವು ಇಂದ್ರನ ಕೈಯಿಂದ ಜಾರಿ ವೃತ್ರಾಸುರನ ಬಳಿಯಲ್ಲೇ ಬಿದ್ದಿತ್ತು. ಅದರಿಂದ ಮಹೇಂದ್ರನಿಗೆ ಬಹಳ ನಾಚಿಕೆಯಾಗಿ ಅವನು ಅದನ್ನು ಮತ್ತೆ ಎತ್ತಿಕೊಳ್ಳಲಿಲ್ಲ. ಆಗ ವೃತ್ರಾಸುರನು ಹೇಳಿದನು – ಇಂದ್ರನೇ! ವಜ್ರವನ್ನು ಎತ್ತಿಕೊಂಡು ನಿನ್ನ ಶತ್ರುವನ್ನು ಸಂಹರಿಸುವವನಾಗು. ಇದು ವಿಷಾದಪಡುವ ಕಾಲವಲ್ಲ. ॥ ೬ ॥ ಸರ್ವಜ್ಞನೂ, ಸನಾತನನೂ, ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣನಾಗಿರುವವನೂ ಆದ ಆದಿಪುರುಷನಾದ ಭಗವಂತನೊಬ್ಬನಿಗೇ ಎಂದೆಂದಿಗೂ ಜಯವು. ದೇಹಾಭಿಮಾನಿಗಳೂ, ಯುದ್ಧಕ್ಕಾಗಿ ಉತ್ಸುಕರಾದ ಆತತಾಯಿಗಳಿಗೆ ಯಾವಾಗಲೂ ಜಯವೇ ಸಿಗುತ್ತದೆ ಎಂಬುದಿಲ್ಲ. ಅವರು ಕೆಲವೊಮ್ಮೆ ಗೆದ್ದರೆ, ಕೆಲವೊಮ್ಮೆ ಸೋಲುತ್ತಾರೆ. ॥ ೭ ॥ ಈ ಎಲ್ಲ ಲೋಕಗಳೂ ಮತ್ತು ಲೋಕಪಾಲಕರೂ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವ ಪಕ್ಷಿಗಳಂತೆ ಯಾವುದರ ವಶಕ್ಕೆ ಒಳಪಟ್ಟು ಚೇಷ್ಟೆ ಮಾಡುತ್ತಿರುವರೋ ಆ ಕಾಲವೇ ಎಲ್ಲರ ಜಯ-ಪರಾಜಯಗಳಿಗೂ ಕಾರಣವು. ॥ ೮ ॥ ಆ ಕಾಲವೇ ಮನುಷ್ಯರ ಮನೋಬಲ, ಇಂದ್ರಿಯಬಲ, ದೇಹಬಲ, ಪ್ರಾಣಗಳು, ಜೀವನ ಮತ್ತು ಮೃತ್ಯುರೂಪವಾಗಿದೆ. ಮನುಷ್ಯನು ಇದನ್ನು ತಿಳಿಯದೆ ಈ ಜಡವಾದ ಶರೀರವೇ ಜಯಾಪಜಯಗಳ ಕಾರಣವೆಂದು ಭಾವಿಸುತ್ತಾನೆ. ॥ ೯ ॥ ಇಂದ್ರನೇ! ಮರದ ಬೊಂಬೆ ಮತ್ತು ಯಂತ್ರದ ಜಿಂಕೆಯು ಅವನ್ನು ಕುಣಿಸುವವನ ಕೈಯಲ್ಲಿರುವಂತೆಯೇ ನೀನು ಸಮಸ್ತ ಪ್ರಾಣಿಗಳು ಭಗವಂತನಿಗೆ ಅಧೀನವೆಂದು ತಿಳಿ. ॥ ೧೦ ॥ ಶ್ರೀಭಗವಂತನ ಅನುಗ್ರಹವಿಲ್ಲದೇ ಪುರುಷ, ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಪಂಚ-ಭೂತಗಳು, ಇಂದ್ರಿಯಗಳು ಮತ್ತು ಅಂತಃಕರಣ ಚತುಷ್ಟಯ – ಇವು ಯಾವುವೂ ಈ ವಿಶ್ವದ ಉತ್ಪತ್ತಿಯೇ ಮುಂತಾದವುಗಳನ್ನು ಮಾಡಲು ಸಮರ್ಥವಾಗುವುದಿಲ್ಲ. ॥ ೧೧ ॥ ಭಗವಂತನೇ ಎಲ್ಲವನ್ನೂ ನಿಯಂತ್ರಣಮಾಡುತ್ತಾನೆ – ನಿಯಾಮಕನಾಗಿದ್ದಾನೆ ಎಂಬುದನ್ನು ಅರಿಯದವನೇ ಈ ಪರತಂತ್ರಜೀವನನ್ನು ಸ್ವತಂತ್ರಕರ್ತಾ – ಭೋಕ್ತಾ ಎಂದು ತಿಳಿಯುತ್ತಾನೆ. ವಾಸ್ತವವಾಗಿ ಭಗವಂತನೇ ಪ್ರಾಣಿಗಳ ಮೂಲಕ ಪ್ರಾಣಿಗಳ ಉತ್ಪತ್ತಿಯನ್ನು, ಪ್ರಾಣಿಗಳ ಮೂಲಕವೇ ಪ್ರಾಣಿಗಳ ಸಂಹಾರ ಮಾಡಿಸುತ್ತಾನೆ. ॥ ೧೨ ॥ ಸಮಯವು ವಿರುದ್ಧವಾಗಿದ್ದರೆ ಮನುಷ್ಯನು ಬಯಸದೇ ಇದ್ದರೂ ಮೃತ್ಯು ಅಪಕೀರ್ತಿ ಮುಂತಾದವುಗಳು ಅವನಿಗೆ ಒದಗುತ್ತವೆ. ಹಾಗೆಯೇ ಸಮಯವು ಅನುಕೂಲವಾಗಿದ್ದಾಗ ಅವನು ಬಯಸದೇ ಇದ್ದರೂ ಆಯಸ್ಸೂ, ಸಂಪತ್ತೂ, ಕೀರ್ತಿ, ಅಧಿಕಾರ ಮುಂತಾದ ಭೋಗಗಳು ಅವನಲ್ಲಿ ಬಂದು ಸೇರುವುವು. ॥ ೧೩ ॥ ಆದುದರಿಂದ ಕೀರ್ತಿ-ಅಪಕೀರ್ತಿ, ಜಯ-ಪರಾಜಯ, ಸುಖ-ದುಃಖ, ಜೀವನ-ಮರಣ ಇವುಗಳಲ್ಲಿ ಯಾವುದೇ ಒಂದರ ಇಚ್ಛೆ-ಅನಿಚ್ಛೆ ಇರಿಸದೆ ಎಲ್ಲ ಪರಿಸ್ಥಿತಿಯಲ್ಲಿ ಸಮಭಾವದಿಂದ ಇರಬೇಕು. ಹರ್ಷ-ಶೋಕಗಳಿಗೆ ವಶೀಭೂತನಾಗಬಾರದು. ॥ ೧೪ ॥

ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ನಾತ್ಮನೋ ಗುಣಾಃ ।
ತತ್ರ ಸಾಕ್ಷಿಣಮಾತ್ಮಾನಂ ಯೋ ವೇದ ನ ಸ ಬಧ್ಯತೇ ॥ ೧೫ ॥

ಪಶ್ಯ ಮಾಂ ನಿರ್ಜಿತಂ ಶಕ್ರ ವೃಕ್ಣಾಯುಧಭುಜಂ ಮೃಧೇ ।
ಘಟಮಾನಂ ಯಥಾಶಕ್ತಿ ತವ ಪ್ರಾಣಜಿಹೀರ್ಷಯಾ ॥ ೧೬ ॥

ಪ್ರಾಣಗ್ಲಹೋಽಯಂ ಸಮರ ಇಷ್ವಕ್ಷೋ ವಾಹನಾಸನಃ ।
ಅತ್ರ ನ ಜ್ಞಾಯತೇಽಮುಷ್ಯ ಜಯೋಽಮುಷ್ಯ ಪರಾಜಯಃ ॥ ೧೭ ॥

*ಶ್ರೀಶುಕ ಉವಾಚ*

ಇಂದ್ರೋ ವೃತ್ರವಚಃ ಶ್ರುತ್ವಾ ಗತಾಲೀಕಮಪೂಜಯತ್ ।
ಗೃಹೀತವಜ್ರಃ ಪ್ರಹಸಂಸ್ತಮಾಹ ಗತವಿಸ್ಮಯಃ ॥ ೧೮ ॥

*ಇಂದ್ರ ಉವಾಚ*

ಅಹೋ ದಾನವ ಸಿದ್ಧೋಽಸಿ ಯಸ್ಯ ತೇ ಮತಿರೀದೃಶೀ ।
ಭಕ್ತಃ ಸರ್ವಾತ್ಮನಾಽಽತ್ಮಾನಂ ಸುಹೃದಂ ಜಗದೀಶ್ವರಮ್ ॥ ೧೯ ॥

ಭವಾನತಾರ್ಷೀನ್ಮಾಯಾಂ ವೈ ವೈಷ್ಣವೀಂ ಜನಮೋಹಿನೀಮ್ ।
ಯದ್ವಿಹಾಯಾಸುರಂ ಭಾವಂ ಮಹಾಪುರುಷತಾಂ ಗತಃ ॥ ೨೦ ॥

ಖಲ್ವಿದಂ ಮಹದಾಶ್ಚರ್ಯಂ ಯದ್ರಜಃಪ್ರಕೃತೇಸ್ತವ ।
ವಾಸುದೇವೇ ಭಗವತಿ ಸತ್ತ್ವಾತ್ಮನಿ ದೃಢಾಮತಿಃ ॥ ೨೧ ॥

ಯಸ್ಯ ಭಕ್ತಿರ್ಭಗವತಿ ಹರೌ ನಿಃಶ್ರೇಯಸೇಶ್ವರೇ ।
ವಿಕ್ರೀಡತೋಽಮೃತಾಂಭೋಧೌ ಕಿಂ ಕ್ಷುದ್ರೈಃ ಖಾತಕೋದಕೈಃ ॥ ೨೨ ॥

*ಶ್ರೀಶುಕ ಉವಾಚ*

ಇತಿ ಬ್ರುವಾಣಾವನ್ಯೋನ್ಯಂ ಧರ್ಮಜಿಜ್ಞಾಸಯಾ ನೃಪ ।
ಯುಯುಧಾತೇ ಮಹಾವೀರ್ಯಾವಿಂದ್ರವೃತ್ರೌ ಯುಧಾಂಪತೀ ॥ ೨೩ ॥

ಆವಿಧ್ಯ ಪರಿಘಂ ವೃತ್ರಃ ಕಾರ್ಷ್ಣಾಯಸಮರಿಂದಮಃ ।
ಇಂದ್ರಾಯ ಪ್ರಾಹಿಣೋದ್ಘೋರಂ ವಾಮಹಸ್ತೇನ ಮಾರಿಷ ॥ ೨೪ ॥

ಸ ತು ವೃತ್ರಸ್ಯ ಪರಿಘಂ ಕರಂ ಚ ಕರಭೋಪಮಮ್ ।
ಚಿಚ್ಛೇದ ಯುಗಪದ್ದೇವೋ ವಜ್ರೇಣ ಶತಪರ್ವಣಾ ॥ ೨೫ ॥

ಸತ್ತ್ವ, ರಜ, ತಮ – ಈ ತ್ರಿಗುಣಗಳು ಪ್ರಕೃತಿಯದಾಗಿವೆ. ಆತ್ಮನದಲ್ಲ. ಆದ್ದರಿಂದ ಆತ್ಮವನ್ನು ಅದರ ಸಾಕ್ಷಿಮಾತ್ರವೆಂದು ತಿಳಿಯುವ ಮನುಷ್ಯನಿಗೆ ಅವುಗಳ ಗುಣ-ದೋಷಗಳು ಅಂಟಿಕೊಳ್ಳುವುದಿಲ್ಲ. ॥ ೧೫ ॥ ದೇವೇಂದ್ರನೇ ! ನನ್ನನ್ನಾದರೋ ನೋಡು ! ನೀನು ನನ್ನ ಕೈಯನ್ನು ಮತ್ತು ಶಸ್ತ್ರವನ್ನು ಕತ್ತರಿಸಿ ಒಂದು ರೀತಿಯಲ್ಲಿ ಸೋಲಿಸಿರುವೆ. ಹೀಗಿದ್ದರೂ ನಾನು ನಿನ್ನ ಪ್ರಾಣಗಳನ್ನು ಅಪಹರಿಸಲು ಯಥಾಶಕ್ತಿ ಪ್ರಯತ್ನವನ್ನು ಮಾಡುತ್ತಲೇ ಇದ್ದೇನೆ. ॥ ೧೬ ॥ ಈ ಯುದ್ಧವು ಒಂದು ಜೂಜಿನ ಆಟವಾಗಿದೆ. ಇದರಲ್ಲಿ ಪ್ರಾಣವನ್ನೇ ಪಣಕ್ಕೆ ಒಡ್ಡಲಾಗುತ್ತದೆ. ಬಾಣಗಳ ದಾಳಗಳು ಎಸೆಯಲ್ಪಡುತ್ತವೆ. ವಾಹನವೇ ಹಾಸು-ಹಲಗೆಯಾಗಿದೆ. ಇದರಲ್ಲಿ ಯಾರು ಗೆಲ್ಲುವರು, ಯಾರು ಸೋಲುವರು ಎಂಬುದು ಮೊದಲಿಗೆ ಗೊತ್ತಾಗುವುದಿಲ್ಲ. ॥ ೧೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ ! ವೃತ್ರಾಸುರನ ಈ ಸತ್ಯವಾದ ಹಾಗೂ ನಿಷ್ಕಪಟವಾದ ವಚನಗಳನ್ನು ಕೇಳಿ ಇಂದ್ರನು ಅವನನ್ನು ಆದರಿಸಿದನು ಮತ್ತು ತನ್ನ ವಜ್ರವನ್ನು ಎತ್ತಿಕೊಂಡನು. ಅನಂತರ ಯಾವುದೇ ಆಶ್ಚರ್ಯವಿಲ್ಲದೆ ನಸುನಗುತ್ತಾ ಅವನು ಹೇಳತೊಡಗಿದನು. ॥ ೧೮ ॥

**ದೇವೇಂದ್ರನು ಹೇಳಿದನು** – ಭಲೇ ದಾನವರಾಜ ! ನೀನು ನಿಜವಾಗಿ ಸಿದ್ಧನೇ ಆಗಿರುವೆ. ಅದಕ್ಕೇ ನಿನ್ನಲ್ಲಿ ಧೈರ್ಯ, ನಿಶ್ಚಯ, ಭಗವದ್ಭಾವ ವಿಲಕ್ಷಣವಾಗಿದೆ. ನೀನು ಸಮಸ್ತ ಪ್ರಾಣಿಗಳ ಸುಹೃದನಾದ ಆತ್ಮಸ್ವರೂಪನಾದ ಜಗದೀಶ್ವರನ ಭಕ್ತಿಯನ್ನು ಅನನ್ಯಭಾವದಿಂದ ಮಾಡಿರುವೆ. ॥ ೧೯ ॥ ಖಂಡಿತವಾಗಿಯೂ ನೀನು ಜನರನ್ನು ಮೋಹಿಸುವಂತಹ ಭಗವಂತನ ಮಾಯೆಯನ್ನು ದಾಟಿಬಿಟ್ಟಿರುವೆ. ಈಗಲಾದರೋ ನೀನು ಅಸುರೀ ಸ್ವಭಾವವನ್ನು ಬಿಟ್ಟು ಮಹಾಪುರುಷನಾಗಿರುವೆ. ॥ ೨೦ ॥ ನೀನು ರಜೋ ಗುಣ ಪ್ರಕೃತಿಯವನಾಗಿದ್ದರೂ ವಿಶುದ್ಧ ಸತ್ತ್ವಸ್ವರೂಪನಾದ ಭಗವಾನ್ ವಾಸುದೇವನಲ್ಲಿ ನಿನ್ನ ಬುದ್ಧಿಯು ದೃಢವಾಗಿ ತೊಡಗಿದೆ, ಇದು ಖಂಡಿತವಾಗಿ ದೊಡ್ಡ ಆಶ್ಚರ್ಯದ ಮಾತಾಗಿದೆ. ॥ ೨೧ ॥ ಪರಮ ಕಲ್ಯಾಣದ ಸ್ವಾಮಿಯಾದ ಭಗವಾನ್ ಶ್ರೀಹರಿಯ ಚರಣಗಳಲ್ಲಿ ಪ್ರೇಮಮಯ ಭಕ್ತಿಭಾವವನ್ನು ಇರಿಸುವವನಿಗೆ ಜಗತ್ತಿನ ಭೋಗಗಳ ಆವಶ್ಯಕತೆ ಏನಿದೆ? ಅಮೃತ ಸಮುದ್ರದಲ್ಲಿ ವಿಹರಿಸುವವನಿಗೆ ಕ್ಷುದ್ರವಾದ ಹಳ್ಳ-ಕೊಳ್ಳಗಳ ನೀರಿನಿಂದ ಏನು ಪ್ರಯೋಜನವಿದೆ ? ॥ ೨೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರ ! ಹೀಗೆ ಮಹಾಪರಾಕ್ರಮಿಗಳಾದ, ಯೋಧಶ್ರೇಷ್ಠರಾದ ಇಂದ್ರನು ಮತ್ತು ವೃತ್ರಾಸುರನು ಧರ್ಮವನ್ನು ತಿಳಿಯುವ ಇಚ್ಛೆಯಿಂದ ಪರಸ್ಪರ ಮಾತಾಡುತ್ತಾ ಯುದ್ಧವನ್ನು ಮಾಡತೊಡಗಿದರು. ॥ ೨೩ ॥ ರಾಜನೇ ! ಶತ್ರುಸಂಹಾರಕನಾದ ವೃತ್ರಾಸುರನು ಉಕ್ಕಿನಿಂದ ಮಾಡಿದ ಭಯಂಕರವಾದ ಒಂದು ಪರಿಘಾಯುಧವನ್ನು ಎಡಗೈಯಲ್ಲಿ ಎತ್ತಿಕೊಂಡು ಆಕಾಶದಲ್ಲಿ ಗಿರ-ಗಿರನೆ ತಿರುಗಿಸುತ್ತಾ ಇಂದ್ರನ ಮೇಲೆ ಎಸೆದನು. ॥ ೨೪ ॥ ಆದರೆ ದೇವೇಂದ್ರನು ವೃತ್ರಾಸುರನ ಆ ಪರಿಘ ಹಾಗೂ ಆನೆಯ ಸೊಂಡಿಲನಂತಿರುವ ಅವನ ಭುಜವನ್ನು ತನ್ನ ನೂರುಗಿಣ್ಣುಗಳಿಂದ ಕೂಡಿದ ವಜ್ರಾಯುಧದಿಂದ ಎರಡನ್ನೂ ಒಟ್ಟಿಗೆ ಕತ್ತರಿಸಿಬಿಟ್ಟನು. ॥ ೨೫ ॥

ವೃತ್ರಸ್ಯ ಕರ್ಮಾತಿಮಹಾದ್ಭುತಂ ತತ್
ಸುರಾಸುರಾಶ್ಚಾರಣಸಿದ್ಧಸಂಘಾಃ ।
ಅಪೂಜಯಂಸ್ತತ್ಪುರುಹೂತಸಂಕಟಂ
ನಿರೀಕ್ಷ್ಯ ಹಾ ಹೇತಿ ವಿಚುಕ್ರುಶುರ್ಭೃಶಮ್ ॥ ೫ ॥

ಇಂದ್ರೋ ನ ವಜ್ರಂ ಜಗೃಹೇ ವಿಲಜ್ಜಿತ-
ಶ್ಚ್ಯುತಂ ಸ್ವಹಸ್ತಾದರಿಸನ್ನಿಧೌ ಪುನಃ ।
ತಮಾಹ ವೃತ್ರೋ ಹರ ಆತ್ತವಜ್ರೋ
ಜಹಿ ಸ್ವಶತ್ರುಂ ನ ವಿಷಾದಕಾಲಃ ॥ ೬ ॥

ಯುಯುತ್ಸತಾಂ ಕುತ್ರಚಿದಾತತಾಯಿನಾಂ
ಜಯಃ ಸದೈಕತ್ರ ನ ವೈ ಪರಾತ್ಮನಾಮ್ ।
ವಿನೈಕಮುತ್ಪತ್ತಿಲಯಸ್ಥಿತೀಶ್ವರಂ
ಸರ್ವಜ್ಞಮಾದ್ಯಂ ಪುರುಷಂ ಸನಾತನಮ್ ॥ ೭ ॥

ಲೋಕಾಃ ಸಪಾಲಾ ಯಸ್ಯೇಮೇ ಶ್ವಸಂತಿ ವಿವಶಾ ವಶೇ ।
ದ್ವಿಜಾ ಇವ ಶಿಚಾ ಬದ್ಧಾಃ ಸ ಕಾಲ ಇಹ ಕಾರಣಮ್
॥ ೮ ॥

ಓಜಃ ಸಹೋ ಬಲಂ ಪ್ರಾಣಮಮೃತಂ ಮೃತ್ಯುಮೇವ ಚ ।
ತಮಜ್ಞಾಯ ಜನೋ ಹೇತುಮಾತ್ಮಾನಂ ಮನ್ಯತೇ ಜಡಮ್
॥ ೯ ॥

ಯಥಾ ದಾರುಮಯೀ ನಾರೀ ಯಥಾ ಯಂತ್ರಮಯೋ ಮೃಗಃ ।
ಏವಂ ಭೂತಾನಿ ಮಘವನ್ನೀಶತಂತ್ರಾಣಿ ವಿದ್ಧಿ ಭೋಃ
॥ ೧೦ ॥

ಪುರುಷಃ ಪ್ರಕೃತಿರ್ವ್ಯಕ್ತಮಾತ್ಮಾ ಭೂತೇಂದ್ರಿಯಾಶಯಾಃ ।
ಶಕ್ನುವಂತ್ಯಸ್ಯ ಸರ್ಗಾದೌ ನ ವಿನಾ ಯದನುಗ್ರಹಾತ್
॥ ೧೧ ॥

ಅವಿದ್ವಾನೇವಮಾತ್ಮಾನಂ ಮನ್ಯತೇಽನೀಶಮೀಶ್ವರಮ್ ।
ಭೂತೈಃ ಸೃಜತಿ ಭೂತಾನಿ ಗ್ರಸತೇ ತಾನಿ ತೈಃ ಸ್ವಯಮ್
॥ ೧೨ ॥

ಆಯುಃ ಶ್ರೀಃ ಕೀರ್ತಿರೈಶ್ವರ್ಯಮಾಶಿಷಃ ಪುರುಷಸ್ಯ ಯಾಃ ।
ಭವಂತ್ಯೇವ ಹಿ ತತ್ಕಾಲೇ ಯಥಾನಿಚ್ಛೋರ್ವಿಪರ್ಯಯಾಃ
॥ ೧೩ ॥

ತಸ್ಮಾದಕೀರ್ತಿಯಶಸೋರ್ಜಯಾಪಜಯಯೋರಪಿ ।
ಸಮಃ ಸ್ಯಾತ್ಸುಖದುಃಖಾಭ್ಯಾಂ ಮೃತ್ಯುಜೀವಿತಯೋಸ್ತಥಾ
॥ ೧೪ ॥

ವೃತ್ರಾಸುರನ ಆ ಅದ್ಭುತವಾದ ಕರ್ಮವನ್ನು ಕಂಡು ದೇವತೆಗಳೂ, ಅಸುರರೂ, ಚಾರಣರೂ, ಸಿದ್ಧಗಣರೂ ಮುಂತಾದವರೆಲ್ಲರೂ ಆತನನ್ನು ಪ್ರಶಂಸೆಮಾಡಿದರು. ಆದರೆ ಅವರೇ ಇಂದ್ರನ ಸಂಕಟವನ್ನು ನೋಡಿ ಪದೇ-ಪದೇ ಅಯ್ಯೋ ! ಅಯ್ಯೋ ! ಎಂದು ಕೂಗಿಕೊಳ್ಳತೊಡಗಿದರು. ॥ ೫ ॥ ಪರೀಕ್ಷಿತನೇ ! ಆ ವಜ್ರಾಯುಧವು ಇಂದ್ರನ ಕೈಯಿಂದ ಜಾರಿ ವೃತ್ರಾಸುರನ ಬಳಿಯಲ್ಲೇ ಬಿದ್ದಿತ್ತು. ಅದರಿಂದ ಮಹೇಂದ್ರನಿಗೆ ಬಹಳ ನಾಚಿಕೆಯಾಗಿ ಅವನು ಅದನ್ನು ಮತ್ತೆ ಎತ್ತಿಕೊಳ್ಳಲಿಲ್ಲ. ಆಗ ವೃತ್ರಾಸುರನು ಹೇಳಿದನು – ಇಂದ್ರನೇ ! ವಜ್ರವನ್ನು ಎತ್ತಿಕೊಂಡು ನಿನ್ನ ಶತ್ರುವನ್ನು ಸಂಹರಿಸುವವನಾಗು. ಇದು ವಿಷಾದಪಡುವ ಕಾಲವಲ್ಲ. ॥ ೬ ॥ ಸರ್ವಜ್ಞನೂ, ಸನಾತನನೂ, ಜಗತ್ತಿನ ಉತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣನಾಗಿರುವವನೂ ಆದ ಆದಿಪುರುಷನಾದ ಭಗವಂತನೊಬ್ಬನಿಗೇ ಎಂದೆಂದಿಗೂ ಜಯವು. ದೇಹಾಭಿಮಾನಿಗಳೂ, ಯುದ್ಧಕ್ಕಾಗಿ ಉತ್ಸುಕರಾದ ಆತತಾಯಿಗಳಿಗೆ ಯಾವಾಗಲೂ ಜಯವೇ ಸಿಗುತ್ತದೆ ಎಂಬುದಿಲ್ಲ. ಅವರು ಕೆಲವೊಮ್ಮೆ ಗೆದ್ದರೆ, ಕೆಲವೊಮ್ಮೆ ಸೋಲುತ್ತಾರೆ. ॥ ೭ ॥ ಈ ಎಲ್ಲ ಲೋಕಗಳೂ ಮತ್ತು ಲೋಕಪಾಲಕರೂ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿರುವ ಪಕ್ಷಿಗಳಂತೆ ಯಾವುದರ ವಶಕ್ಕೆ ಒಳಪಟ್ಟು ಚೇಷ್ಟೆ ಮಾಡುತ್ತಿರುವರೋ ಆ ಕಾಲವೇ ಎಲ್ಲರ ಜಯ-ಪರಾಜಯಗಳಿಗೂ ಕಾರಣವು. ॥ ೮ ॥ ಆ ಕಾಲವೇ ಮನುಷ್ಯರ ಮನೋಬಲ, ಇಂದ್ರಿಯಬಲ, ದೇಹಬಲ, ಪ್ರಾಣಗಳು, ಜೀವನ ಮತ್ತು ಮೃತ್ಯುರೂಪವಾಗಿದೆ. ಮನುಷ್ಯನು ಇದನ್ನು ತಿಳಿಯದೆ ಈ ಜಡವಾದ ಶರೀರವೇ ಜಯಾಪಜಯಗಳ ಕಾರಣವೆಂದು ಭಾವಿಸುತ್ತಾನೆ. ॥ ೯ ॥ ಇಂದ್ರನೇ ! ಮರದ ಬೊಂಬೆ ಮತ್ತು ಯಂತ್ರದ ಜಿಂಕೆಯು ಅವನ್ನು ಕುಣಿಸುವವನ ಕೈಯಲ್ಲಿರುವಂತೆಯೇ ನೀನು ಸಮಸ್ತ ಪ್ರಾಣಿಗಳು ಭಗವಂತನಿಗೆ ಅಧೀನವೆಂದು ತಿಳಿ. ॥ ೧೦ ॥ ಶ್ರೀಭಗವಂತನ ಅನುಗ್ರಹವಿಲ್ಲದೇ ಪುರುಷ, ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಪಂಚ-ಭೂತಗಳು, ಇಂದ್ರಿಯಗಳು ಮತ್ತು ಅಂತಃಕರಣ ಚತುಷ್ಟಯ – ಇವು ಯಾವುವೂ ಈ ವಿಶ್ವದ ಉತ್ಪತ್ತಿಯೇ ಮುಂತಾದವುಗಳನ್ನು ಮಾಡಲು ಸಮರ್ಥವಾಗುವುದಿಲ್ಲ. ॥ ೧೧ ॥ ಭಗವಂತನೇ ಎಲ್ಲವನ್ನೂ ನಿಯಂತ್ರಣಮಾಡುತ್ತಾನೆ – ನಿಯಾಮಕನಾಗಿದ್ದಾನೆ ಎಂಬುದನ್ನು ಅರಿಯದವನೇ ಈ ಪರತಂತ್ರಜೀವನನ್ನು ಸ್ವತಂತ್ರಕರ್ತಾ – ಭೋಕ್ತಾ ಎಂದು ತಿಳಿಯುತ್ತಾನೆ. ವಾಸ್ತವವಾಗಿ ಭಗವಂತನೇ ಪ್ರಾಣಿಗಳ ಮೂಲಕ ಪ್ರಾಣಿಗಳ ಉತ್ಪತ್ತಿಯನ್ನು, ಪ್ರಾಣಿಗಳ ಮೂಲಕವೇ ಪ್ರಾಣಿಗಳ ಸಂಹಾರ ಮಾಡಿಸುತ್ತಾನೆ. ॥ ೧೨ ॥ ಸಮಯವು ವಿರುದ್ಧವಾಗಿದ್ದರೆ ಮನುಷ್ಯನು ಬಯಸದೇ ಇದ್ದರೂ ಮೃತ್ಯು ಅಪಕೀರ್ತಿ ಮುಂತಾದವುಗಳು ಅವನಿಗೆ ಒದಗುತ್ತವೆ. ಹಾಗೆಯೇ ಸಮಯವು ಅನುಕೂಲವಾಗಿದ್ದಾಗ ಅವನು ಬಯಸದೇ ಇದ್ದರೂ ಆಯಸ್ಸೂ, ಸಂಪತ್ತೂ, ಕೀರ್ತಿ, ಅಧಿಕಾರ ಮುಂತಾದ ಭೋಗಗಳು ಅವನಲ್ಲಿ ಬಂದು ಸೇರುವುವು. ॥ ೧೩ ॥ ಆದುದರಿಂದ ಕೀರ್ತಿ-ಅಪಕೀರ್ತಿ, ಜಯ-ಪರಾಜಯ, ಸುಖ-ದುಃಖ, ಜೀವನ-ಮರಣ ಇವುಗಳಲ್ಲಿ ಯಾವುದೇ ಒಂದರ ಇಚ್ಛೆ-ಅನಿಚ್ಛೆ ಇರಿಸದೆ ಎಲ್ಲ ಪರಿಸ್ಥಿತಿಯಲ್ಲಿ ಸಮಭಾವದಿಂದ ಇರಬೇಕು. ಹರ್ಷ-ಶೋಕಗಳಿಗೆ ವಶೀಭೂತನಾಗಬಾರದು. ॥ ೧೪ ॥

ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ನಾತ್ಮನೋ ಗುಣಾಃ ।
ತತ್ರ ಸಾಕ್ಷಿಣಮಾತ್ಮಾನಂ ಯೋ ವೇದ ನ ಸ ಬಧ್ಯತೇ ॥ ೧೫ ॥

ಪಶ್ಯ ಮಾಂ ನಿರ್ಜಿತಂ ಶಕ್ರ ವೃಕ್ಣಾಯುಧಭುಜಂ ಮೃಧೇ ।
ಘಟಮಾನಂ ಯಥಾಶಕ್ತಿ ತವ ಪ್ರಾಣಜಿಹೀರ್ಷಯಾ ॥ ೧೬ ॥

ಪ್ರಾಣಗ್ಲಹೋಽಯಂ ಸಮರ ಇಷ್ವಕ್ಷೋ ವಾಹನಾಸನಃ ।
ಅತ್ರ ನ ಜ್ಞಾಯತೇಽಮುಷ್ಯ ಜಯೋಽಮುಷ್ಯ ಪರಾಜಯಃ ॥ ೧೭ ॥

ಶ್ರೀಶುಕ ಉವಾಚ

ಇಂದ್ರೋ ವೃತ್ರವಚಃ ಶ್ರುತ್ವಾ ಗತಾಲೀಕಮಪೂಜಯತ್ ।
ಗೃಹೀತವಜ್ರಃ ಪ್ರಹಸಂಸ್ತಮಾಹ ಗತವಿಸ್ಮಯಃ ॥ ೧೮ ॥

ಇಂದ್ರ ಉವಾಚ

ಅಹೋ ದಾನವ ಸಿದ್ಧೋಽಸಿ ಯಸ್ಯ ತೇ ಮತಿರೀದೃಶೀ ।
ಭಕ್ತಃ ಸರ್ವಾತ್ಮನಾಽಽತ್ಮಾನಂ ಸುಹೃದಂ ಜಗದೀಶ್ವರಮ್ ॥ ೧೯ ॥

ಭವಾನತಾರ್ಷೀನ್ಮಾಯಾಂ ವೈ ವೈಷ್ಣವೀಂ ಜನಮೋಹಿನೀಮ್ ।
ಯದ್ವಿಹಾಯಾಸುರಂ ಭಾವಂ ಮಹಾಪುರುಷತಾಂ ಗತಃ ॥ ೨೦ ॥

ಖಲ್ವಿದಂ ಮಹದಾಶ್ಚರ್ಯಂ ಯದ್ರಜಃಪ್ರಕೃತೇಸ್ತವ ।
ವಾಸುದೇವೇ ಭಗವತಿ ಸತ್ತ್ವಾತ್ಮನಿ ದೃಢಾಮತಿಃ ॥ ೨೧ ॥

ಯಸ್ಯ ಭಕ್ತಿರ್ಭಗವತಿ ಹರೌ ನಿಃಶ್ರೇಯಸೇಶ್ವರೇ ।
ವಿಕ್ರೀಡತೋಽಮೃತಾಂಭೋಧೌ ಕಿಂ ಕ್ಷುದ್ರೈಃ ಖಾತಕೋದಕೈಃ ॥ ೨೨ ॥

ಶ್ರೀಶುಕ ಉವಾಚ

ಇತಿ ಬ್ರುವಾಣಾವನ್ಯೋನ್ಯಂ ಧರ್ಮಜಿಜ್ಞಾಸಯಾ ನೃಪ ।
ಯುಯುಧಾತೇ ಮಹಾವೀರ್ಯಾವಿಂದ್ರವೃತ್ರೌ ಯುಧಾಂಪತೀ ॥ ೨೩ ॥

ಆವಿಧ್ಯ ಪರಿಘಂ ವೃತ್ರಃ ಕಾರ್ಷ್ಣಾಯಸಮರಿಂದಮಃ ।
ಇಂದ್ರಾಯ ಪ್ರಾಹಿಣೋದ್ಘೋರಂ ವಾಮಹಸ್ತೇನ ಮಾರಿಷ ॥ ೨೪ ॥

ಸ ತು ವೃತ್ರಸ್ಯ ಪರಿಘಂ ಕರಂ ಚ ಕರಭೋಪಮಮ್ ।
ಚಿಚ್ಛೇದ ಯುಗಪದ್ದೇವೋ ವಜ್ರೇಣ ಶತಪರ್ವಣಾ ॥ ೨೫ ॥

ಸತ್ತ್ವ, ರಜ, ತಮ – ಈ ತ್ರಿಗುಣಗಳು ಪ್ರಕೃತಿಯದಾಗಿವೆ. ಆತ್ಮನದಲ್ಲ, ಆದ್ದರಿಂದ ಆತ್ಮವನ್ನು ಅದರ ಸಾಕ್ಷಿಮಾತ್ರವೆಂದು ತಿಳಿಯುವ ಮನುಷ್ಯನಿಗೆ ಅವುಗಳ ಗುಣ-ದೋಷಗಳು ಅಂಟಿಕೊಳ್ಳುವುದಿಲ್ಲ. ॥ ೧೫ ॥ ದೇವೇಂದ್ರನೇ ! ನನ್ನನ್ನಾದರೋ ನೋಡು ! ನೀನು ನನ್ನ ಕೈಯನ್ನು ಮತ್ತು ಶಸ್ತ್ರವನ್ನು ಕತ್ತರಿಸಿ ಒಂದು ರೀತಿಯಲ್ಲಿ ಸೋಲಿಸಿರುವೆ. ಹೀಗಿದ್ದರೂ ನಾನು ನಿನ್ನ ಪ್ರಾಣಗಳನ್ನು ಅಪಹರಿಸಲು ಯಥಾಶಕ್ತಿ ಪ್ರಯತ್ನವನ್ನು ಮಾಡುತ್ತಲೇ ಇದ್ದೇನೆ. ॥ ೧೬ ॥ ಈ ಯುದ್ಧವು ಒಂದು ಜೂಜಿನ ಆಟವಾಗಿದೆ. ಇದರಲ್ಲಿ ಪ್ರಾಣವನ್ನೇ ಪಣಕ್ಕೆ ಒಡ್ಡಲಾಗುತ್ತದೆ. ಬಾಣಗಳ ದಾಳಗಳು ಎಸೆಯಲ್ಪಡುತ್ತವೆ. ವಾಹನವೇ ಹಾಸು-ಹಲಗೆಯಾಗಿದೆ. ಇದರಲ್ಲಿ ಯಾರು ಗೆಲ್ಲುವರು, ಯಾರು ಸೋಲುವರು ಎಂಬುದು ಮೊದಲಿಗೆ ಗೊತ್ತಾಗುವುದಿಲ್ಲ. ॥ ೧೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ ! ವೃತ್ರಾಸುರನ ಈ ಸತ್ಯವಾದ ಹಾಗೂ ನಿಷ್ಕಪಟವಾದ ವಚನಗಳನ್ನು ಕೇಳಿ ಇಂದ್ರನು ಅವನನ್ನು ಆದರಿಸಿದನು ಮತ್ತು ತನ್ನ ವಜ್ರವನ್ನು ಎತ್ತಿಕೊಂಡನು. ಅನಂತರ ಯಾವುದೇ ಅಚ್ಚರಿಯಿಲ್ಲದೆ ನಸುನಗುತ್ತಾ ಅವನು ಹೇಳತೊಡಗಿದನು. ॥ ೧೮ ॥

**ದೇವೇಂದ್ರನು ಹೇಳಿದನು** – ಭಲೇ ದಾನವರಾಜ ! ನೀನು ನಿಜವಾಗಿ ಸಿದ್ಧನೇ ಆಗಿರುವೆ. ಅದಕ್ಕೇ ನಿನ್ನಲ್ಲಿ ಧೈರ್ಯ, ನಿಶ್ಚಯ, ಭಗವದ್ಭಾವ ವಿಲಕ್ಷಣವಾಗಿದೆ. ನೀನು ಸಮಸ್ತ ಪ್ರಾಣಿಗಳ ಸುಹೃದನಾದ ಆತ್ಮಸ್ವರೂಪನಾದ ಜಗದೀಶ್ವರನ ಭಕ್ತಿಯನ್ನು ಅನನ್ಯಭಾವದಿಂದ ಮಾಡಿರುವೆ. ॥ ೧೯ ॥ ಖಂಡಿತವಾಗಿಯೂ ನೀನು ಜನರನ್ನು ಮೋಹಿಸುವಂತಹ ಭಗವಂತನ ಮಾಯೆಯನ್ನು ದಾಟಿಬಿಟ್ಟಿರುವೆ. ಈಗಲಾದರೋ ನೀನು ಆಸುರೀ ಸ್ವಭಾವವನ್ನು ಬಿಟ್ಟು ಮಹಾಪುರುಷನಾಗಿರುವೆ. ॥ ೨೦ ॥ ನೀನು ರಜೋ ಗುಣ ಪ್ರಕೃತಿಯವನಾಗಿದ್ದರೂ ವಿಶುದ್ಧ ಸತ್ತ್ವಸ್ವರೂಪನಾದ ಭಗವಾನ್ ವಾಸುದೇವನಲ್ಲಿ ನಿನ್ನ ಬುದ್ಧಿಯು ದೃಢವಾಗಿ ತೊಡಗಿದೆ, ಇದು ಖಂಡಿತವಾಗಿ ದೊಡ್ಡ ಆಶ್ಚರ್ಯದ ಮಾತಾಗಿದೆ. ॥ ೨೧ ॥ ಪರಮ ಕಲ್ಯಾಣದ ಸ್ವಾಮಿಯಾದ ಭಗವಾನ್ ಶ್ರೀಹರಿಯ ಚರಣಗಳಲ್ಲಿ ಪ್ರೇಮಮಯ ಭಕ್ತಿಭಾವವನ್ನು ಇರಿಸುವವನಿಗೆ ಜಗತ್ತಿನ ಭೋಗಗಳ ಆವಶ್ಯಕತೆ ಏನಿದೆ ? ಅಮೃತ ಸಮುದ್ರದಲ್ಲಿ ವಿಹರಿಸುವವನಿಗೆ ಕ್ಷುದ್ರವಾದ ಹಳ್ಳ-ಕೊಳ್ಳಗಳ ನೀರಿನಿಂದ ಏನು ಪ್ರಯೋಜನವಿದೆ ? ॥ ೨೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರ ! ಹೀಗೆ ಮಹಾಪರಾಕ್ರಮಿಗಳಾದ, ಯೋಧಶ್ರೇಷ್ಠರಾದ ಇಂದ್ರನು ಮತ್ತು ವೃತ್ರಾಸುರನು ಧರ್ಮವನ್ನು ತಿಳಿಯುವ ಇಚ್ಛೆಯಿಂದ ಪರಸ್ಪರ ಮಾತಾಡುತ್ತಾ ಯುದ್ಧವನ್ನು ಮಾಡತೊಡಗಿದರು. ॥ ೨೩ ॥ ರಾಜನೇ ! ಶತ್ರುಸಂಹಾರಕನಾದ ವೃತ್ರಾಸುರನು ಉಕ್ಕಿನಿಂದ ಮಾಡಿದ ಭಯಂಕರವಾದ ಒಂದು ಪರಿಘಾಯುಧವನ್ನು ಎಡಗೈಯಲ್ಲಿ ಎತ್ತಿಕೊಂಡು ಆಕಾಶದಲ್ಲಿ ಗಿರ-ಗಿರನೆ ತಿರುಗಿಸುತ್ತಾ ಇಂದ್ರನ ಮೇಲೆ ಎಸೆದನು. ॥ ೨೪ ॥ ಆದರೆ ದೇವೇಂದ್ರನು ವೃತ್ರಾಸುರನ ಆ ಪರಿಘ ಹಾಗೂ ಆನೆಯ ಸೊಂಡಿಲನಂತಿರುವ ಅವನ ಭುಜವನ್ನು ತನ್ನ ನೂರುಗಿಣ್ಣುಗಳಿಂದ ಕೂಡಿದ ವಜ್ರಾಯುಧದಿಂದ ಎರಡನ್ನೂ ಒಟ್ಟಿಗೆ ಕತ್ತರಿಸಿಬಿಟ್ಟನು. ॥ ೨೫ ॥

ದೋರ್ಭ್ಯಾಮುತ್ಕೃತ್ತಮೂಲಾಭ್ಯಾಂ ಬಭೌ ರಕ್ತಸ್ರವೋಽಸುರಃ ।
ಛಿನ್ನಪಕ್ಷೋ ಯಥಾ ಗೋತ್ರಃ ಖಾದ್ಭ್ರಷ್ಟೋ ವಜ್ರಿಣಾ ಹತಃ ॥ ೨೬ ॥

ಕೃತ್ವಾಧರಾಂ ಹನುಂ ಭೂಮೌ ದೈತ್ಯೋ ದಿವ್ಯುತ್ತರಾಂ ಹನುಮ್ ।
ನಭೋಗಂಭೀರವಕ್ತ್ರೇಣ ಲೇಲಿಹೋಲ್ಬಣಜಿಹ್ವಯಾ ॥ ೨೭ ॥

ದಂಷ್ಟ್ರಾಭಿಃ ಕಾಲಕಲ್ಪಾಭಿರ್ಗ್ರಸನ್ನಿವ ಜಗತ್ತ್ರಯಮ್ ।
ಅತಿಮಾತ್ರಮಹಾಕಾಯ ಆಕ್ಷಿಪಂಸ್ತರಸಾ ಗಿರೀನ್ ॥ ೨೮ ॥

ಗಿರಿರಾಟ್ಪಾದಚಾರೀವ ಪದ್ಭ್ಯಾಂ ನಿರ್ಜರಯನ್ಮಹೀಮ್ ।
ಜಗ್ರಾಸ ಸ ಸಮಾಸಾದ್ಯ ವಜ್ರಿಣಂ ಸಹವಾಹನಮ್ ॥ ೨೯ ॥

ಮಹಾಪ್ರಾಣೋ ಮಹಾವೀರ್ಯೋ ಮಹಾಸರ್ಪ ಇವ ದ್ವಿಪಮ್ ।
ವೃತ್ರಗ್ರಸ್ತಂ ತಮಾಲಕ್ಷ್ಯ ಸಪ್ರಜಾಪತಯಃ ಸುರಾಃ ।
ಹಾ ಕಷ್ಟಮಿತಿ ನಿರ್ವಿಣ್ಣಾಶ್ಚುಕ್ರುಶುಃ ಸಮಹರ್ಷಯಃ ॥ ೩೦ ॥

ನಿಗೀರ್ಣೋಽಪ್ಯಸುರೇಂದ್ರೇಣ ನ ಮಮಾರೋದರಂ ಗತಃ ।
ಮಹಾಪುರುಷಸನ್ನದ್ಧೋ ಯೋಗಮಾಯಾಬಲೇನ ಚ ॥ ೩೧ ॥

ಭಿತ್ತ್ವಾ ವಜ್ರೇಣ ತತ್ಕುಕ್ಷಿಂ ನಿಷ್ಕ್ರಮ್ಯ ಬಲಭಿದ್ವಿಭುಃ ।
ಉಚ್ಚಕರ್ತ ಶಿರಃ ಶತ್ರೋರ್ಗಿರಿಶೃಂಗಮಿವೌಜಸಾ ॥ ೩೨ ॥

ವಜ್ರಸ್ತು ತತ್ಕಂಧರಮಾಶುವೇಗಃ
ಕೃಂತನ್ಸಮಂತಾತ್ಪರಿವರ್ತಮಾನಃ ।
ನ್ಯಪಾತಯತ್ತಾವದಹರ್ಗಣೇನ
ಯೋ ಜ್ಯೋತಿಷಾಮಯನೇ ವಾರ್ತ್ರಹತ್ಯೇ ॥ ೩೩ ॥

ತದಾ ಚ ಖೇ ದುಂದುಭಯೋ ವಿನೇದು-
ರ್ಗಂಧರ್ವಸಿದ್ಧಾಃ ಸಮಹರ್ಷಿಸಂಘಾಃ ।
ವಾರ್ತ್ರಘ್ನಲಿಂಗೈಸ್ತಮಭಿಷ್ಟುವಾನಾ
ಮಂತ್ರೈರ್ಮುದಾ ಕುಸುಮೈರಭ್ಯವರ್ಷನ್ ॥ ೩೪ ॥

ವೃತ್ರಸ್ಯ ದೇಹಾನ್ನಿಷ್ಕ್ರಾಂತಮಾತ್ಮಜ್ಯೋತಿರರಿಂದಮ ।
ಪಶ್ಯತಾಂ ಸರ್ವಲೋಕಾನಾಮಲೋಕಂ ಸಮಪದ್ಯತ ॥ ೩೫ ॥

ಹೀಗೆ ಎರಡೂ ತೋಳುಗಳೂ ಬುಡಸಹಿತ ಕತ್ತರಿಸಲ್ಪಡಲು ವೃತ್ರಾಸುರನ ಎಡ-ಬಲ ಹೆಗಲುಗಳಿಂದ ರಕ್ತದ ಧಾರೆ ಹರಿಯ ತೊಡಗಿತು. ಆಗ ಅವನು – ಇಂದ್ರನ ವಜ್ರಾಯುಧದ ಏಟಿನಿಂದ ರೆಕ್ಕೆಗಳು ಕತ್ತರಿಸಿ ಹೋಗಿ ಆಕಾಶದಿಂದ ನೆಲಕ್ಕುರುಳಿದ ಮಹಾ ಪರ್ವತವೋ ಎಂಬಂತೆ ಕಾಣುತ್ತಿದ್ದವು. ॥ ೨೬ ॥ ಆಗ ಕಾಲು ಗಳಿಂದ ನಡೆದಾಡುವ ಪರ್ವತರಾಜನಂತೆ ಅತಿ ದೀರ್ಘಕಾಯ ನಾಗಿದ್ದ ಆ ವೃತ್ರಾಸುರನು ತನ್ನ ಕೆಳದವಡೆಯನ್ನು ಭೂಮಿ ಯಲ್ಲಿಯೂ, ಮೇಲಿನ ದವಡೆಯನ್ನು ಸ್ವರ್ಗಕ್ಕೂ ಚಾಚಿ, ಆಕಾಶ ದಂತೆ ಆಳವಾಗಿದ್ದ ಬಾಯಿಯು ಸರ್ಪದಂತೆ ಭೀಕರವಾಗಿದ್ದ ನಾಲಿಗೆ ಮತ್ತು ಮೃತ್ಯುವಿಗೆ ಸಮನಾದ ಕೋರೆದಾಡೆಗಳು ಇವು ಗಳಿಂದ ಮೂರು ಲೋಕಗಳನ್ನೇ ನುಂಗಿ ಹಾಕುವನೋ ಎಂಬಂತೆ ತನ್ನ ಕಾಲುಗಳಿಂದ ಭೂಮಿಯನ್ನು ಅಪ್ಪಳಿಸುತ್ತಾ, ಮಹಾವೇಗ ದಿಂದ ಪರ್ವತಗಳನ್ನು ತಲೆ ಕೆಳಗಾಗಿಸುತ್ತಾ ಇಂದ್ರನ ಬಳಿಗೆ ನುಗ್ಗಿ ಬಂದು ಅತಿಪರಾಕ್ರಮಿಯೂ, ಬಲಶಾಲಿಯೂ ಆದ ರಾಕ್ಷಸ ಕಾಯದ ಹೆಬ್ಬಾವೊಂದು ಆನೆಯನ್ನು ನುಂಗಿಹಾಕುತ್ತಿದೆಯೇ ಎಂಬಂತೆ ಇಂದ್ರನನ್ನು ಅವನ ವಾಹನ ಐರಾವತದೊಂದಿಗೆ ನುಂಗಿ ಬಿಟ್ಟನು. ಹೀಗೆ ವೃತ್ರಾಸುರನು ಇಂದ್ರನನ್ನು ನುಂಗಿದ್ದನ್ನು ಕಂಡು ಪ್ರಜಾಪತಿಗಳೂ, ಮಹರ್ಷಿಗಳೂ, ದೇವತೆಗಳೂ ಕಡುದುಃಖ ದಿಂದ ಅಯ್ಯೋ! ಅಯ್ಯೋ! ಎಂತಹ ಅನರ್ಥವಾಯಿತು? ಎಂದು ದುಃಖಿಸತೊಡಗಿದ್ದರು. ॥ ೨೭-೩೦ ॥ ಆದರೆ ದೇವ ರಾಜನಿಗೆ ಯಾವ ಅಪಾಯವೂ ಆಗಲಿಲ್ಲ. ನಾರಾಯಣಕವಚ ವೆಂಬ ಮಹಾಪುರುಷ ವಿದ್ಯೆಯು ಆತನನ್ನು ಸಂರಕ್ಷಿಸಿತು. ಯೋಗ ಬಲವೂ ಆತನನ್ನು ಕಾಪಾಡಿತು. ಆದುದರಿಂದ ವೃತ್ರಾಸುರನು ಇಂದ್ರನನ್ನು ನುಂಗಿದ್ದರೂ, ಅವನು ಹೊಟ್ಟೆಯೊಳಗೆ ಸೇರಿದ್ದರೂ ಸಾಯಲಿಲ್ಲ. ॥ ೩೧ ॥ ಅವನು ತನ್ನ ವಜ್ರದಿಂದ ಆತನ ಹೊಟ್ಟೆ ಯನ್ನು ಸೀಳಿಹಾಕಿ ಹೊರಕ್ಕೆ ಬಂದು ಕಡುರಭಸದಿಂದ ಪರ್ವತ ಶಿಖರದಂತೆ ಉನ್ನತವಾಗಿದ್ದ ಆತನ ತಲೆಯನ್ನು ಕಡಿದುಹಾಕಿದನು. ॥ ೩೨ ॥ ಗ್ರಹಗಳಿಗೆ ಉತ್ತರಾಯಣ-ದಕ್ಷಿಣಾಯನ ಗತಿಗಳಿಗೆ ತಗಲು ವಷ್ಟು ಕಾಲದಲ್ಲಿ, ಅಂದರೆ ಒಂದು ವರ್ಷದ ಅವಧಿಯಲ್ಲಿ ವೃತ್ರಸಂಹಾರಯೋಗವು ಒದಗಿದಾಗ ತೀವ್ರವೇಗದಿಂದ ಸುತ್ತುತ್ತಿದ್ದ ವಜ್ರಾಯುಧವು ಆತನ ಕುತ್ತಿಗೆಯನ್ನು ಎಲ್ಲ ಕಡೆಗಳಿಂದಲೂ ಕತ್ತರಿಸಿ ಭೂಮಿಯಲ್ಲಿ ಬೀಳಿಸಿತು. ॥ ೩೩ ॥ ಆಗ ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು. ಮಹರ್ಷಿಗಳೊಡನೆ ಗಂಧ ರ್ವರು, ಸಿದ್ಧರು ಮುಂತಾದವರು ಪರಮಾನಂದಭರಿತರಾಗಿ ವೃತ್ರ ಸಂಹಾರವನ್ನು ಕೊಂಡಾಡುವ ದಿವ್ಯ ಮಂತ್ರಗಳಿಂದ ದೇವರಾಜ ನನ್ನು ಸ್ತುತಿಸುತ್ತಾ ಹೂಮಳೆಯನ್ನು ಕರೆಯತೊಡಗಿದರು. ॥ ೩೪ ॥ ಶತ್ರುದಮನ ಪರೀಕ್ಷಿತನೇ! ಆಗ ವೃತ್ರಾಸುರನ ದೇಹದಿಂದ ಆತ್ಮ ಜ್ಯೋತಿಯು ಹೊರಬಂದು ಇಂದ್ರಾದಿ ದೇವತೆಗಳು ನೋಡು-ನೋಡುತ್ತಿರುವಂತೆಯೇ ಸರ್ವಲೋಕಾತೀತ ಭಗವಂತನ ಸ್ವರೂಪ ದಲ್ಲಿ ಲೀನವಾಗಿ ಹೋಯಿತು. ॥ ೩೫ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ವೃತ್ರವಧೋನಾಮ ದ್ವಾದಶೋಽಧ್ಯಾಯಃ ॥ ೧೨ ॥

# ಹದಿಮೂರನೆಯ ಅಧ್ಯಾಯ

## ಇಂದ್ರನನ್ನು ಬ್ರಹ್ಮಹತ್ಯೆಯು ಆವರಿಸಿದುದು

*ಶ್ರೀಶುಕ ಉವಾಚ*

**ವೃತ್ರೇ ಹತೇ ತ್ರಯೋ ಲೋಕಾ ವಿನಾ ಶಕ್ರೇಣ ಭೂರಿದ ।**
**ಸಪಾಲಾ ಹ್ಯಭವನ್ಸದ್ಯೋ ವಿಜ್ವರಾ ನಿರ್ವೃತೇಂದ್ರಿಯಾಃ ॥ ೧ ॥**

**ದೇವರ್ಷಿಪಿತೃಭೂತಾನಿ ದೈತ್ಯಾ ದೇವಾನುಗಾಃ ಸ್ವಯಮ್ ।**
**ಪ್ರತಿಜಗ್ಮುಃ ಸ್ವಧಿಷ್ಣ್ಯಾನಿ ಬ್ರಹ್ಮೇಶೇಂದ್ರಾದಯಸ್ತತಃ ॥ ೨ ॥**

*ರಾಜೋವಾಚ*

**ಇಂದ್ರಸ್ಯಾನಿರ್ವೃತೇರ್ಹೇತುಂ ಶ್ರೋತುಮಿಚ್ಛಾಮಿ ಭೋ ಮುನೇ ।**
**ಯೇನಾಸನ್ಸುಖಿನೋ ದೇವಾ ಹರೇರ್ದುಃಖಂ ಕುತೋಽಭವತ್ ॥ ೩ ॥**

*ಶ್ರೀಶುಕ ಉವಾಚ*

**ವೃತ್ರವಿಕ್ರಮಸಂವಿಗ್ನಾಃ ಸರ್ವೇ ದೇವಾಃ ಸಹರ್ಷಿಭಿಃ ।**
**ತದ್ವಧಾಯಾರ್ಥಯನ್ನಿಂದ್ರಂ ನೈಚ್ಛದ್ಭೀತೋ ಬೃಹದ್ವಧಾತ್ ॥ ೪ ॥**

*ಇಂದ್ರ ಉವಾಚ*

**ಸ್ತ್ರೀಭೂಜಲದ್ರುಮೈರೇನೋ ವಿಶ್ವರೂಪವಧೋದ್ಭವಮ್ ।**
**ವಿಭಕ್ತಮನುಗೃಹ್ಣದ್ಭಿರ್ವೃತ್ರಹತ್ಯಾಂ ಕ್ವ ಮಾರ್ಜ್ಮ್ಯಹಮ್ ॥ ೫ ॥**

*ಶ್ರೀಶುಕ ಉವಾಚ*

**ಋಷಯಸ್ತದುಪಾಕರ್ಣ್ಯ ಮಹೇಂದ್ರಮಿದಮಬ್ರುವನ್ ।**
**ಯಾಜಯಿಷ್ಯಾಮ ಭದ್ರಂ ತೇ ಹಯಮೇಧೇನ ಮಾ ಸ್ಮ ಭೈಃ ॥ ೬ ॥**

**ಹಯಮೇಧೇನ ಪುರುಷಂ ಪರಮಾತ್ಮಾನಮೀಶ್ವರಮ್ ।**
**ಇಷ್ಟ್ವಾ ನಾರಾಯಣಂ ದೇವಂ ಮೋಕ್ಷ್ಯಸೇಽಪಿ ಜಗದ್ವಧಾತ್ ॥ ೭ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಮಹಾದಾನಿಯಾದ ಪರೀಕ್ಷಿತನೇ! ವೃತ್ರಾಸುರನ ಮೃತ್ಯುವಿನಿಂದ ಇಂದ್ರನನ್ನು ಬಿಟ್ಟು ಮೂರುಲೋಕಗಳೂ, ಲೋಕಪಾಲರೂ ಒಡನೆಯೇ ಪರಮಸಂತೋಷಭರಿತರಾದರು. ಅವರ ಭಯ, ಚಿಂತೆ ಎಲ್ಲವೂ ಹೊರಟುಹೋಯಿತು. ॥ ೧ ॥ ಆ ಯುದ್ಧವು ಮುಗಿಯಲು ದೇವತೆಗಳೂ, ಋಷಿಗಳೂ, ಪಿತೃಗಳೂ, ಭೂತರೂ, ದೈತ್ಯರೂ, ದೇವತೆಗಳ ಅನುಚರರಾದ ಗಂಧರ್ವರೂ ಮುಂತಾದವರೆಲ್ಲರೂ ತಮ್ಮ-ತಮ್ಮ ಲೋಕಗಳಿಗೆ ಹೊರಟುಹೋದರು. ಅನಂತರ ಬ್ರಹ್ಮದೇವರು, ರುದ್ರದೇವರು, ಇಂದ್ರನು ಎಲ್ಲರೂ ಹೊರಟುಹೋದರು. ॥ ೨ ॥

**ಪರೀಕ್ಷಿತನು ಕೇಳಿದನು** – ಮುನಿವರ್ಯರೇ! ಇಂದ್ರನೊಬ್ಬನಿಗೆ ಮಾತ್ರ ಆಗ ಅಪ್ರಸನ್ನತೆಯುಂಟಾಗಲು ಕಾರಣವೇನು ? ವೃತ್ರಾಸುರನ ವಧೆಯಿಂದ ಎಲ್ಲ ದೇವತೆಗಳು ಸುಖಪಟ್ಟಿರುವಾಗ ಇಂದ್ರನೊಬ್ಬನಿಗೆ ಏಕೆ ದುಃಖವುಂಟಾಯಿತು ? ಇದನ್ನು ಕೇಳಲು ನಾನು ಬಯಸುವೆನು. ದಯವಿಟ್ಟು ತಿಳಿಸಬೇಕು. ॥ ೩ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಎಲೈ ರಾಜೇಂದ್ರನೇ! ವೃತ್ರಾಸುರನ ಪರಾಕ್ರಮದಿಂದ ಎಲ್ಲ ದೇವತೆಗಳೂ ಮತ್ತು ಋಷಿ-ಮಹರ್ಷಿಗಳೂ ಅತ್ಯಂತ ಭಯಗೊಂಡಾಗ, ಅವರೆಲ್ಲರೂ ಅಸುರನ ವಧೆಗಾಗಿ ಇಂದ್ರನಲ್ಲಿ ಪ್ರಾರ್ಥಿಸಿದ್ದರು. ಆದರೂ ಅವನು ಬ್ರಹ್ಮಹತ್ಯೆಯ ಭಯದಿಂದ ಅವನನ್ನು ಕೊಲ್ಲಲು ಬಯಸುತ್ತಿರಲಿಲ್ಲ. ॥ ೪ ॥

**ದೇವೇಂದ್ರನು ಅವರಲ್ಲಿ ಹೇಳಿದನು** – ಎಲೈ ದೇವತೆಗಳಿರಾ! ಋಷಿಗಳಿರಾ! ಹಿಂದೆ ವಿಶ್ವರೂಪನ ವಧೆಯಿಂದ ನನಗೆ ಹತ್ತಿಕೊಂಡಿದ್ದ ಬ್ರಹ್ಮಹತ್ಯೆಯನ್ನೇನೋ ಸ್ತ್ರೀಯರು, ಪೃಥಿವಿ, ಜಲ, ವೃಕ್ಷಗಳು ತಮ್ಮಲ್ಲಿ ಹಂಚಿಕೊಂಡು ಸ್ವೀಕರಿಸಿದ್ದರು. ಈಗ ನಾನು ವೃತ್ರನನ್ನು ವಧಿಸಿ ಅವನ ಬ್ರಹ್ಮಹತ್ಯೆಯಿಂದ ನನ್ನ ಬಿಡುಗಡೆ ಹೇಗಾದೀತು ? ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಮಹೇಂದ್ರನ ಮಾತನ್ನು ಕೇಳಿದ ಋಷಿಗಳು ಅವನಲ್ಲಿ ಹೇಳಿದರು – ಎಲೈ ದೇವೇಂದ್ರನೇ! ನಿನಗೆ ಮಂಗಳವುಂಟಾಗಲೀ. ನೀನು ಕಿಂಚಿತ್ತಾದರೂ ಭಯಪಡಬೇಡ. ಏಕೆಂದರೆ, ನಾವು ನಿನ್ನಿಂದ ಅಶ್ವಮೇಧ ಯಜ್ಞವನ್ನು ಮಾಡಿಸಿ ಎಲ್ಲ ಪಾಪಗಳಿಂದ ಬಿಡುಗಡೆಗೊಳಿಸುವೆವು. ॥ ೬ ॥ ಅಶ್ವಮೇಧಯಜ್ಞದ ಮೂಲಕ ಸರ್ವಾಂತರ್ಯಾಮಿ, ಸರ್ವಶಕ್ತಿಸಂಪನ್ನ ಪರಮಾತ್ಮನಾದ ಶ್ರೀಮನ್ನಾರಾಯಣನ ಆರಾಧನೆಯನ್ನು ಮಾಡಿ ನೀನು ಸಮಸ್ತ ಜಗತ್ತನ್ನು ವಧಿಸುವುದರಿಂದ ಉಂಟಾದ ಪಾಪದಿಂದಲೂ ಮುಕ್ತನಾಗುವೆ. ಹಾಗಿರುವಾಗ ವೃತ್ರಾಸುರನ ವಧೆಯ ಮಾತಾದರೂ ಏನಿದೆ ? ॥ ೭ ॥ ದೇವರಾಜಾ! ಭಗವಂತನ ನಾಮ-ಸಂಕೀರ್ತನ ಮಾತ್ರದಿಂದಲೇ ಬ್ರಾಹ್ಮಣ, ತಂದೆ, ಗೋವು, ತಾಯಿ, ಆಚಾರ್ಯ ಮುಂತಾದವರ

ಬ್ರಹ್ಮಹಾ ಪಿತೃಹಾ ಗೋಘ್ನೋ
ಮಾತೃಹಾऽऽಚಾರ್ಯಹಾಘವಾನ್ ।
ಶ್ವಾದಃ ಪುಲ್ಕಸಕೋ ವಾಪಿ
ಶುದ್ಧ್ಯೇರನ್ಯಸ್ಯ ಕೀರ್ತನಾತ್ ॥ ೮ ॥

ತಮಶ್ವಮೇಧೇನ ಮಹಾಮಖೇನ
ಶ್ರದ್ಧಾನ್ವಿತೋऽಸ್ಮಾಭಿರನುಷ್ಠಿತೇನ ।
ಹತ್ವಾಪಿ ಸಬ್ರಹ್ಮ ಚರಾಚರಂ ತ್ವಂ
ನ ಲಿಪ್ಯಸೇ ಕಿಂ ಖಲನಿಗ್ರಹೇಣ ॥ ೯ ॥

*ಶ್ರೀಶುಕ ಉವಾಚ*

ಏವಂ ಸಂಚೋದಿತೋ ವಿಪ್ರೈರ್ಮರುತ್ವಾನಹನದ್ರಿಪುಮ್ ।
ಬ್ರಹ್ಮಹತ್ಯಾ ಹತೇ ತಸ್ಮಿನ್ನಾಸಸಾದ ವೃಷಾಕಪಿಮ್ ॥ ೧೦ ॥

ತಯೇಂದ್ರಃ ಸ್ಮಾಸಹತ್ತಾಪಂ
ನಿರ್ವೃತಿರ್ನಾಮುಮಾವಿಶತ್ ।
ಹ್ರೀಮಂತಂ ವಾಚ್ಯತಾಂ ಪ್ರಾಪ್ತಂ
ಸುಖಯಂತ್ಯಪಿ ನೋ ಗುಣಾಃ ॥ ೧೧ ॥

ತಾಂ ದದರ್ಶಾನುಧಾವಂತೀಂ
ಚಾಂಡಾಲೀಮಿವ ರೂಪಿಣೀಮ್ ।
ಜರಯಾ ವೇಪಮಾನಾಂಗೀಂ
ಯಕ್ಷ್ಮಗ್ರಸ್ತಾಮಸೃಕ್ಪಟಾಮ್ ॥ ೧೨ ॥

ವಿಕೀರ್ಯ ಪಲಿತಾನ್ಕೇಶಾಂಸ್ತಿಷ್ಠ
ತಿಷ್ಠೇತಿ ಭಾಷಿಣೀಮ್ ।
ಮೀನಗಂಧ್ಯಸುಗಂಧೇನ ಕುರ್ವತೀಂ
ಮಾರ್ಗದೂಷಣಮ್ ॥ ೧೩ ॥

ನಭೋ ಗತೋ ದಿಶಃ ಸರ್ವಾಃ
ಸಹಸ್ರಾಕ್ಷೋ ವಿಶಾಂಪತೇ ।
ಪ್ರಾಗುದೀಚೀಂ ದಿಶಂ ತೂರ್ಣಂ ಪ್ರವಿಷ್ಟೋ
ನೃಪ ಮಾನಸಮ್ ॥ ೧೪ ॥

ಸ ಆವಸತ್ಪುಷ್ಕರನಾಲತಂತೂ-
ನಲಬ್ಧಭೋಗೋ ಯದಿಹಾಗ್ನಿದೂತಃ ।
ವರ್ಷಾಣಿ ಸಾಹಸ್ರಮಲಕ್ಷಿತೋऽಂತಃ
ಸ ಚಿಂತಯನ್ ಬ್ರಹ್ಮವಧಾದ್ವಿಮೋಕ್ಷಮ್ ॥ ೧೫ ॥

ಹತ್ಯೆಯನ್ನು ಮಾಡುವ ಮಹಾಪಾಪಿಯೂ, ಚಾಂಡಾಲನೂ, ಕಟುಕನೂ ಇಂತಹವರೂ ಕೂಡ ಶುದ್ಧರಾಗಿ ಬಿಡುತ್ತಾರೆ. ॥ ೮ ॥ ನಾವುಗಳು ನಿನಗಾಗಿ 'ಅಶ್ವಮೇಧ' ಎಂಬ ಮಹಾಯಜ್ಞದ ಅನುಷ್ಠಾನ ಮಾಡುವೆವು. ಇದರ ಮೂಲಕ ಶ್ರದ್ಧೆಯಿಂದ ಭಗವಂತನನ್ನು ಆರಾಧಿಸಿ ನೀನು ಬ್ರಹ್ಮನವರೆಗಿನ ಇಡೀ ಚರಾಚರ ಜಗತ್ತನ್ನು ಹತ್ಯೆಮಾಡಿದರೆ ಬರುವ ಪಾತಕವೂ ನಿನಗೆ ಅಂಟಲಾರದು. ಹಾಗಿರುವಾಗ ಈ ದುಷ್ಟನಿಗೆ ದಂಡವನ್ನು ವಿಧಿಸಿದ ಪಾಪದಿಂದ ಬಿಡುಗಡೆಹೊಂದುವ ಮಾತಾದರೂ ಏನಿದೆ ? ॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ ! ಹೀಗೆ ಬ್ರಾಹ್ಮಣರಿಂದ ಪ್ರೇರಿತನಾಗಿ ದೇವೇಂದ್ರನು ವೃತ್ರಾಸುರನನ್ನು ವಧಿಸಿದ್ದನು. ಈಗ ಅವನನ್ನು ಸಂಹರಿಸಿದ್ದರಿಂದ ಬ್ರಹ್ಮಹತ್ಯೆಯು ಇಂದ್ರನ ಬಳಿಗೆ ಬಂದಿತು. ॥ ೧೦ ॥ ಆದರ ಕಾರಣದಿಂದ ಇಂದ್ರನಿಗೆ ತುಂಬಾ ಕ್ಲೇಶವಾಯಿತು. ಮಹಾ ಸಂತಾಪವನ್ನು ಸಹಿಸಬೇಕಾಯಿತು. ಅವನಿಗೆ ಒಂದು ಕ್ಷಣವೂ ನೆಮ್ಮದಿ ಇಲ್ಲವಾಯಿತು. ನಾಚಿಕೆ-ಸಂಕೋಚವುಳ್ಳ ಸತ್ಪುರುಷನಿಗೆ ಕಳಂಕವು ತಗುಲಿದರೆ ಆಗ ಅವನ ಧೈರ್ಯವೇ ಮುಂತಾದ ಗುಣಗಳೂ ಆತನಿಗೆ ಸುಖವನ್ನುಂಟುಮಾಡಲಾರವು. ॥ ೧೧ ॥ ಆ ಬ್ರಹ್ಮಹತ್ಯೆಯು ಸಾಕ್ಷಾತ್ ಚಾಂಡಾಲಿನಿಯಂತೆ ತನ್ನ ಹಿಂದೆಯೇ ಬೆನ್ನಟ್ಟಿ ಬರುತ್ತಿರುವುದು ಇಂದ್ರನಿಗೆ ಕಾಣಿಸಿತು. ಅವಳು ಮುದುಕಿಯಾದ್ದರಿಂದ ಅಂಗಾಂಗಗಳು ನಡುಗುತ್ತಾ ಇವೆ. ಜೊತೆಗೆ ಕ್ಷಯ ರೋಗವೂ ಅದನ್ನು ಪೀಡಿಸುತ್ತಿದೆ. ಅದರ ಬಟ್ಟೆಗಳೆಲ್ಲ ರಕ್ತದಿಂದ ತೊಯ್ದುಹೋಗಿವೆ. ॥ ೧೨ ॥ ಅದು ತನ್ನ ಬಿಳಿಯ ಕೂದಲುಗಳನ್ನು ಕೆದರಿಕೊಂಡು ನಿಲ್ಲು! ನಿಲ್ಲು! ಎಂದು ಕಿರುಚುತ್ತಾ ಬರುತ್ತಿದೆ. ಅದರ ಉಸಿರಿನಿಂದ ಮೀನಿನಂತಹ ದುರ್ಗಂಧವು ಹೊರಹೊಮ್ಮುತ್ತಿದೆ. ಅದರಿಂದ ದಾರಿಯೆಲ್ಲವೂ ದೂಷಿತವಾಗುತ್ತಿದೆ. ॥ ೧೩ ॥ ರಾಜನೇ ! ದೇವೇಂದ್ರನು ಅದರ ಭಯದಿಂದ ದಿಕ್ಕು-ವಿದಿಕ್ಕುಗಳಿಗೂ, ಆಕಾಶಕ್ಕೂ ಓಡುತ್ತಾ ಅಲೆದಾಡಿದನು. ಕೊನೆಗೆ ಎಲ್ಲಿಯೂ ಆಸರೆ ಸಿಕ್ಕದೆ ಅವನು ಈಶಾನ್ಯದಿಕ್ಕಿನಲ್ಲಿರುವ ಮಾನಸ ಸರೋವರದೊಳಗೆ ಬೇಗನೇ ಪ್ರವೇಶಿಸಿಬಿಟ್ಟನು. ॥ ೧೪ ॥ ಮಹೇಂದ್ರನು ಮಾನಸಸರೋವರದ ಕಮಲದ ದಂಟಿನ ನೂಲು ಗಳೊಳಗೆ ಒಂದು ಸಾವಿರವರ್ಷ ಕಾಲ ಅವಿತಿದ್ದು – 'ಬ್ರಹ್ಮಹತ್ಯೆ ಯಿಂದ ತನಗೆ ಹೇಗೆ ಬಿಡುಗಡೆ ಯಾದೀತು ?' ಎಂಬುದನ್ನು ಯೋಚಿಸುತ್ತಿದ್ದನು. ಅಷ್ಟುಕಾಲದವರೆಗೂ ಅವನಿಗೆ ತಿನ್ನುವುದಕ್ಕೂ ಏನೂ ದೊರೆಯಲಿಲ್ಲ. ಏಕೆಂದರೆ, ಅವನು ಅಗ್ನಿದೇವನ ಮುಖದಿಂದಲೇ ಊಟಮಾಡುವುದು. ಆದರೆ ಅಗ್ನಿದೇವನಿಗೆ ನೀರಿನೊಳಗಿನ ತಾವರೆಯ ದಂಟಿನ ದಾರದೊಳಗೆ ಹೋಗಲು ಸಾಧ್ಯವಾಗುತ್ತಿರಲಿಲ್ಲ. ॥ ೧೫ ॥ ಹೀಗೆ ದೇವೇಂದ್ರನು ಕಮಲದ ದಂಟಿನ ದಾರದೊಳಗೆ ಅಡಗಿರುವಷ್ಟು ಕಾಲವು ರಾಜಾ ನಹುಷನು ತನ್ನ ವಿದ್ಯೆ, ತಪಸ್ಸು ಮತ್ತು ಯೋಗಬಲಗಳಿಂದ ಸ್ವರ್ಗವನ್ನು ಆಳುತ್ತಿದ್ದನು. ಆದರೆ ಆತನು ಸಂಪತ್ತು-ಅಧಿಕಾರಗಳ ಮದದಿಂದ ಕುರುಡನಾಗಿ ಇಂದ್ರಪತ್ನೀ ಶಚೀದೇವಿಯೊಂದಿಗೆ ಅಪಚಾರವನ್ನು ಮಾಡಲು ಬಯಸಿದನು. ಆಗ ಆಕೆಯು ಆತನು ಮಹರ್ಷಿಗಳಲ್ಲಿ

ತಾವತ್ತ್ರಿಣಾಕಂ ನಹುಷಃ ಶಶಾಸ
ವಿದ್ಯಾತಪೋಯೋಗಬಲಾನುಭಾವಃ ।
ಸ ಸಂಪದೈಶ್ವರ್ಯಮದಾಂಧಬುದ್ಧಿ-
ರ್ನೀತಸ್ತಿರಶ್ಚಾಂ ಗತಿಮಿಂದ್ರಪತ್ನ್ಯಾ ॥ ೧೬ ॥

ತತೋ ಗತೋ ಬ್ರಹ್ಮಗಿರೋಪಹೂತ
ಋತಂಭರಧ್ಯಾನನಿವಾರಿತಾಘಃ ।
ಪಾಪಸ್ತು ದಿಗ್ದೇವತಯಾ ಹತೌಜಾ-
ಸ್ತಂ ನಾಭ್ಯಭೂದವಿತಂ ವಿಷ್ಣುಪತ್ನ್ಯಾ ॥ ೧೭ ॥

ತಂ ಚ ಬ್ರಹ್ಮರ್ಷಯೋಽಭ್ಯೇತ್ಯ ಹಯಮೇಧೇನ ಭಾರತ ।
ಯಥಾವದ್ದೀಕ್ಷಯಾಂಚಕ್ರುಃ ಪುರುಷಾರಾಧನೇನ ಹ ॥ ೧೮ ॥

ಅಥೇಜ್ಯಮಾನೇ ಪುರುಷೇ ಸರ್ವದೇವಮಯಾತ್ಮನಿ ।
ಅಶ್ವಮೇಧೇ ಮಹೇಂದ್ರೇಣ ವಿತತೇ ಬ್ರಹ್ಮವಾದಿಭಿಃ ॥ ೧೯ ॥

ಸ ವೈ ತ್ವಾಷ್ಟ್ರವಧೋ ಭೂಯಾನಪಿ ಪಾಪಚಯೋ ನೃಪ ।
ನೀತಸ್ತೇನೈವ ಶೂನ್ಯಾಯ ನೀಹಾರ ಇವ ಭಾನುನಾ ॥ ೨೦ ॥

ಸ ವಾಜಿಮೇಧೇನ ಯಥೋದಿತೇನ
ವಿತಾಯಮಾನೇನ ಮರೀಚಿಮಿಶ್ರೈಃ ।
ಇಷ್ಟ್ವಾಧಿಯಜ್ಞಂ ಪುರುಷಂ ಪುರಾಣ-
ಮಿಂದ್ರೋ ಮಹಾನಾಸ ವಿಧೂತಪಾಪಃ ॥ ೨೧ ॥

ಇದಂ ಮಹಾಖ್ಯಾನಮಶೇಷಪಾಪ್ಮನಾಂ
ಪ್ರಕ್ಷಾಲನಂ ತೀರ್ಥಪದಾನುಕೀರ್ತನಮ್ ।
ಭಕ್ತ್ಯುಚ್ಛ್ರಯಂ ಭಕ್ತಜನಾನುವರ್ಣನಂ
ಮಹೇಂದ್ರಮೋಕ್ಷಂ ವಿಜಯಂ ಮರುತ್ವತಃ ॥ ೨೨ ॥

ಪಠೇಯುರಾಖ್ಯಾನಮಿದಂ ಸದಾ ಬುಧಾಃ
ಶೃಣ್ವಂತ್ಯಥೋ ಪರ್ವಣಿ ಪರ್ವಣೀಂದ್ರಿಯಮ್ ।
ಧನ್ಯಂ ಯಶಸ್ಯಂ ನಿಖಿಲಾಘಮೋಚನಂ
ರಿಪುಂಜಯಂ ಸ್ವಸ್ತ್ಯಯನಂ ತಥಾಽಽಯುಷಮ್ ॥ ೨೩ ॥

ಅಪರಾಧವನ್ನು ಆಚರಿಸುವಂತೆ ಮಾಡಿದಳು. ಅದರಿಂದ ಅವನು ಶಾಪಗ್ರಸ್ತನಾಗಿ ಹೆಬ್ಬಾವಿನ ರೂಪವನ್ನು ತಳೆದನು. ॥ ೧೬ ॥ ಅನಂತರ ಸತ್ಯಕ್ಕೆ ಪರಮಪೋಷಕನಾಗಿರುವ ಶ್ರೀಭಗವಂತನನ್ನು ಚೆನ್ನಾಗಿ ಧ್ಯಾನ ಮಾಡಿದ್ದರಿಂದ ಇಂದ್ರನ ಪಾಪವು ನಾಶವಾಗಿ ಹೋಯಿತು. ಬ್ರಾಹ್ಮಣರ ಕರೆಯಂತೆ ಅನಂತರ ಅವನು ಸ್ವರ್ಗಕ್ಕೆ ಹಿಂದಿರುಗಿದನು. ಕಮಲವನದಲ್ಲಿ ವಿಹರಿಸುವ ವಿಷ್ಣುಪತ್ನಿಯಾದ ಶ್ರೀಲಕ್ಷ್ಮೀದೇವಿಯು ಇಂದ್ರನನ್ನು ರಕ್ಷಿಸುತ್ತಿದ್ದಳು ಮತ್ತು ಈಶಾನ್ಯ ದಿಕ್ಕಿಗೆ ಅಧಿಪತಿಯಾದ ರುದ್ರದೇವರು ಪಾಪದ ತೇಜಸ್ಸನ್ನು ನಿಗ್ರಹಿಸಿದ್ದರಿಂದ ಬ್ರಹ್ಮಹತ್ಯೆಯು ಇಂದ್ರನನ್ನು ಆಕ್ರಮಿಸಲಾರದೆ ಹೋಯಿತು. ॥ ೧೭ ॥

ಪರೀಕ್ಷಿತನೇ! ಇಂದ್ರನು ಸ್ವರ್ಗಕ್ಕೆ ಹಿಂದಿರುಗಿದಾಗ ಬ್ರಹ್ಮರ್ಷಿಗಳು ಅಲ್ಲಿಗೆ ಬಂದು ಭಗವಂತನ ಆರಾಧನೆಗಾಗಿ ಇಂದ್ರನಿಗೆ ಅಶ್ವಮೇಧಯಜ್ಞದ ದೀಕ್ಷೆಕೊಟ್ಟು, ಅವನಿಂದ ಅಶ್ವಮೇಧ ಯಜ್ಞವನ್ನು ಮಾಡಿಸಿದರು. ॥ ೧೮ ॥ ವೇದವಾದಿಗಳಾದ ಬ್ರಾಹ್ಮಣರು ಅವನಿಂದ ಅಶ್ವಮೇಧ ಯಜ್ಞವನ್ನು ಮಾಡಿಸಿ, ದೇವೇಂದ್ರನು ಆ ಯಜ್ಞದ ಮೂಲಕ ಸರ್ವದೇವಸ್ವರೂಪನಾದ ಭಗವಾನ್ ಪುರುಷೋತ್ತಮನ ಆರಾಧನೆಯನ್ನು ಮಾಡಿದಾಗ ಭಗವಂತನ ಆರಾಧನೆಯ ಪ್ರಭಾವದಿಂದ ವೃತ್ರಾಸುರನ ವಧೆಯ ಆ ದೊಡ್ಡ ಪಾಪರಾಶಿಯು ಸೂರ್ಯೋದಯವಾಗುತ್ತಲೇ ಮಂಜು ಕರಗಿಹೋಗುವಂತೆ ಭಸ್ಮವಾಗಿ ಹೋಯಿತು. ॥ ೧೯-೨೦ ॥ ಮರೀಚಿಯೇ ಮುಂತಾದ ಮುನೀಶ್ವರರು ಅವನಿಂದ ವಿಧಿವತ್ತಾಗಿ ಅಶ್ವಮೇಧ ಯಜ್ಞವನ್ನು ಮಾಡಿಸಿದಾಗ ಅದರ ಮೂಲಕ ಸನಾತನ ಪುರುಷನೂ, ಯಜ್ಞಪತಿಯೂ ಆದ ಭಗವಂತನನ್ನು ಆರಾಧಿಸಿ ಇಂದ್ರನು ಎಲ್ಲ ಪಾಪಗಳಿಂದ ಬಿಡುಗಡೆಹೊಂದಿ, ಹಿಂದಿನಂತೆಯೇ ಲೋಕಪೂಜ್ಯನಾದನು. ॥ ೨೧ ॥

ಪರೀಕ್ಷಿತನೇ! ಈ ಶ್ರೇಷ್ಠವಾದ ಆಖ್ಯಾನದಲ್ಲಿ ಇಂದ್ರನ ವಿಜಯ, ಪಾಪಗಳಿಂದ ಅವನ ಮುಕ್ತಿ ಮತ್ತು ಭಗವಂತನ ಪ್ರಿಯ ಭಕ್ತ ವೃತ್ರಾಸುರನ ವರ್ಣನೆ ನಡೆದಿದೆ. ಇದರಲ್ಲಿ ತೀರ್ಥಗಳಿಗೂ ತೀರ್ಥಸ್ವರೂಪವಾದ ಭಗವಂತನ ಅನುಗ್ರಹವೇ ಮುಂತಾದ ಗುಣಗಳ ಸಂಕೀರ್ತನೆ ಇದೆ. ಇದು ಎಲ್ಲ ಪಾಪಗಳನ್ನು ತೊಳೆದುಹಾಕಿ, ಭಕ್ತಿಯನ್ನು ವೃದ್ಧಿಪಡಿಸುತ್ತದೆ. ॥ ೨೨ ॥ ಬುದ್ಧಿವಂತನಾದ ಮನುಷ್ಯನು ಈ ಇಂದ್ರಸಂಬಂಧೀ ಆಖ್ಯಾನವನ್ನು ಸದಾಕಾಲ ಪಠಿಸುತ್ತಾ, ಶ್ರವಣಿಸುತ್ತಾ ಇರಬೇಕು. ವಿಶೇಷವಾಗಿ ಪರ್ವದಿನಗಳಲ್ಲಿ ಅವಶ್ಯವಾಗಿ ಸೇವಿಸಬೇಕು. ಇದು ಧನವನ್ನೂ, ಕೀರ್ತಿಯನ್ನೂ ವೃದ್ಧಿಪಡಿಸಿ, ಎಲ್ಲ ಪಾಪಗಳಿಂದ ಬಿಡುಗಡೆ ಗೊಳಿಸುತ್ತದೆ. ಶತ್ರುಗಳ ಮೇಲೆ ವಿಜಯವನ್ನು ತಂದುಕೊಟ್ಟು, ಆಯುಸ್ಸನ್ನೂ, ಮಂಗಳವನ್ನೂ ವೃದ್ಧಿಪಡಿಸುವುದು. ॥ ೨೩ ॥

*ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ
ಇಂದ್ರವಿಜಯೋ ನಾಮ ತ್ರಯೋದಶೋಽಧ್ಯಾಯಃ ॥ ೧೩ ॥

# ಹದಿನಾಲ್ಕನೆಯ ಅಧ್ಯಾಯ

## ವೃತ್ರಾಸುರನ ಪೂರ್ವಚರಿತ್ರೆ

*ಪರೀಕ್ಷಿದುವಾಚ*

ರಜಸ್ತಮಃಸ್ವಭಾವಸ್ಯ ಬ್ರಹ್ಮನ್ವೃತ್ರಸ್ಯ ಪಾಪ್ಮನಃ ।
ನಾರಾಯಣೇ ಭಗವತಿ ಕಥಮಾಸೀದ್ದೃಢಾ ಮತಿಃ ॥ ೧ ॥

ದೇವಾನಾಂ ಶುದ್ಧಸತ್ತ್ವಾನಾಮೃಷೀಣಾಂ ಚಾಮಲಾತ್ಮನಾಮ್ ।
ಭಕ್ತಿರ್ಮುಕುಂದಚರಣೇ ನ ಪ್ರಾಯೇಣೋಪಜಾಯತೇ ॥ ೨ ॥

ರಜೋಭಿಃ ಸಮಸಂಖ್ಯಾತಾಃ ಪಾರ್ಥಿವೈರಿಹ ಜಂತವಃ ।
ತೇಷಾಂ ಯೇ ಕೇಚನೇಹಂತೇ ಶ್ರೇಯೋ ವೈ ಮನುಜಾದಯಃ ॥ ೩ ॥

ಪ್ರಾಯೋ ಮುಮುಕ್ಷವಸ್ತೇಷಾಂ ಕೇಚನೈವ ದ್ವಿಜೋತ್ತಮ ।
ಮುಮುಕ್ಷೂಣಾಂ ಸಹಸ್ರೇಷು ಕಶ್ಚಿನ್ಮುಚ್ಯೇತ ಸಿಧ್ಯತಿ ॥ ೪ ॥

ಮುಕ್ತಾನಾಮಪಿ ಸಿದ್ಧಾನಾಂ ನಾರಾಯಣಪರಾಯಣಃ ।
ಸುದುರ್ಲಭಃ ಪ್ರಶಾಂತಾತ್ಮಾ ಕೋಟಿಷ್ವಪಿ ಮಹಾಮುನೇ ॥ ೫ ॥

ವೃತ್ರಸ್ತು ಸ ಕಥಂ ಪಾಪಃ ಸರ್ವಲೋಕೋಪತಾಪನಃ ।
ಇತ್ಥಂ ದೃಢಮತಿಃ ಕೃಷ್ಣ ಆಸೀತ್ಸಂಗ್ರಾಮ ಉಲ್ಬಣೇ ॥ ೬ ॥

ಅತ್ರ ನಃ ಸಂಶಯೋ ಭೂಯಾಞ್ಛ್ರೋತುಂ ಕೌತೂಹಲಂ ಪ್ರಭೋ ।
ಯಃ ಪೌರುಷೇಣ ಸಮರೇ ಸಹಸ್ರಾಕ್ಷಮತೋಷಯತ್ ॥ ೭ ॥

*ಸೂತ ಉವಾಚ*

ಪರೀಕ್ಷಿತೋಽಥ ಸಂಪ್ರಶ್ನಂ ಭಗವಾನ್ ಬಾದರಾಯಣಿಃ ।
ನಿಶಮ್ಯ ಶ್ರದ್ದಧಾನಸ್ಯ ಪ್ರತಿನಂದ್ಯ ವಚೋಽಬ್ರವೀತ್ ॥ ೮ ॥

*ಶ್ರೀಶುಕ ಉವಾಚ*

ಶೃಣುಷ್ವಾವಹಿತೋ ರಾಜನ್ನಿತಿಹಾಸಮಿಮಂ ಯಥಾ ।
ಶ್ರುತಂ ದ್ವೈಪಾಯನಮುಖಾನ್ನಾರದಾದ್ದೇವಲಾದಪಿ ॥ ೯ ॥

ಆಸೀದ್ರಾಜಾ ಸಾರ್ವಭೌಮಃ ಶೂರಸೇನೇಷು ವೈ ನೃಪ ।
ಚಿತ್ರಕೇತುರಿತಿ ಖ್ಯಾತೋ ಯಸ್ಯಾಸೀತ್ಕಾಮಧುಙ್ಮಹೀ ॥ ೧೦ ॥

**ಪರೀಕ್ಷಿತನು ಕೇಳಿದನು** – ಮಹಾತ್ಮರೇ! ವೃತ್ರಾಸುರನಾದರೋ ರಜೋಗುಣ-ತಮೋಗುಣ ಪ್ರಕೃತಿಯುಳ್ಳ ಅಸುರನು, ಪಾಪ ಕರ್ಮಿಯು. ಅಂತಹವನಿಗೆ ಭಗವಾನ್ ಶ್ರೀನಾರಾಯಣನ ಚರಣಗಳಲ್ಲಿ ದೃಢವಾದ ಭಕ್ತಿಯು ಹೇಗೆ ಉಂಟಾಯಿತು? ॥ ೧ ॥ ಸಾಮಾನ್ಯವಾಗಿ ಶುದ್ಧಸತ್ತ್ವಮಯರಾದ ದೇವತೆಗಳೂ, ಪವಿತ್ರ ಹೃದಯವುಳ್ಳ ಮಹರ್ಷಿಗಳೂ, ಭಗವಾನ್ ಮುಕುಂದನ ಪರಮ ಪ್ರೇಮಮಯ ಅನನ್ಯ ಭಕ್ತಿಯಿಂದ ವಂಚಿತರೇ ಆಗಿರುತ್ತಾರೆ ಎಂಬುದನ್ನು ನಾವು ನೋಡುತ್ತೇವೆ. ನಿಜವಾಗಿಯೂ ಭಗವಂತನ ಭಕ್ತಿಯು ಅತಿ ದುರ್ಲಭವಾಗಿದೆ. ॥ ೨ ॥ ಪೂಜ್ಯರೇ! ಈ ಜಗತ್ತಿನಲ್ಲಿ ಭೂಮಿಯಲ್ಲಿರುವ ಧೂಳಿನ ಕಣಗಳಂತೆ ಜೀವಿಗಳು ಅಸಂಖ್ಯಾತರಾಗಿದ್ದಾರೆ. ಅವರಲ್ಲಿಯೂ ಮನುಷ್ಯರೇ ಮುಂತಾದ ಶ್ರೇಷ್ಠ ಜೀವರೇ ತಮ್ಮ ಶ್ರೇಯಸ್ಸಿಗಾಗಿ ಪ್ರಯತ್ನಿಸುತ್ತಾರೆ. ॥ ೩ ॥ ಬ್ರಾಹ್ಮಣೋತ್ತಮರೇ! ಅವರಲ್ಲಿಯೂ ಸಂಸಾರದಿಂದ ಮುಕ್ತಿಯನ್ನು ಬಯಸುವವರು ವಿರಳರೇ ಆಗಿದ್ದಾರೆ. ಅವರಲ್ಲಿ ಮೋಕ್ಷವನ್ನು ಬಯಸುವವರಲ್ಲಿಯೂ ಯಾರೋ ಸಾವಿರಕ್ಕೆ ಒಬ್ಬನು ಮುಕ್ತಿಯ ಸಿದ್ಧಿಲಾಭವನ್ನು ಪಡೆಯುತ್ತಾನೆ. ॥ ೪ ॥ ಮಹಾಮುನಿಗಳೇ! ಕೋಟ್ಯಾವಧಿ ಸಿದ್ಧರಲ್ಲಿ ಹಾಗೂ ಮುಕ್ತರಲ್ಲಿಯೂ ಏಕಮಾತ್ರ ಭಗವಂತನಲ್ಲೇ ಪರಾಯಣರಾದ ಶಾಂತಚಿತ್ತರಾದ ಮಹಾಪುರುಷರು ದೊರೆಯುವುದು ತುಂಬಾ ಕಠಿಣವಾಗಿದೆ. ॥ ೫ ॥ ಇಂತಹ ಸ್ಥಿತಿಯಲ್ಲಿ ಎಲ್ಲರಿಗೂ ಸತಾಯಿಸುತ್ತಿದ್ದ ದೊಡ್ಡ ಪಾಪಿಯಾದ ಆ ವೃತ್ರಾಸುರನು ಭಯಂಕರ ಯುದ್ಧದ ಸಮಯದಲ್ಲಿಯೂ ಭಗವಾನ್ ಶ್ರೀಕೃಷ್ಣನಲ್ಲಿ ತನ್ನ ವೃತ್ತಿಗಳನ್ನು ದೃಢವಾಗಿ ಹೇಗೆ ತೊಡಗಿಸಿದನು? ಇದರ ಕಾರಣವೇನು? ॥ ೬ ॥ ಪ್ರಭೋ! ಈ ವಿಷಯದಲ್ಲಿ ನಮಗೆ ಸಂದೇಹ ಉಂಟಾಗಿದೆ ಮತ್ತು ಕೇಳಲು ಬಹಳ ಕುತೂಹಲವೂ ಇದೆ. ಆಹಾ! ವೃತ್ರಾಸುರನು ರಣಭೂಮಿಯಲ್ಲಿ ದೇವರಾಜ ಇಂದ್ರನನ್ನೂ ಸಂತೋಷಗೊಳಿಸಿದ ಅವನ ಬಲ-ಪರಾಕ್ರಮಗಳು ಎಷ್ಟು ಮಹತ್ತರವಾಗಿದ್ದವು. ॥ ೭ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳಿರಾ! ಭಗವಂತರಾದ ಶ್ರೀಶುಕಮಹಾಮುನಿಗಳು ಶ್ರದ್ಧಾವಂತನಾದ ಪರೀಕ್ಷಿದ್ರಾಜನ ಆ ಶ್ರೇಷ್ಠವಾದ ಪ್ರಶ್ನೆಯನ್ನು ಕೇಳಿ, ಅವನನ್ನು ಅಭಿನಂದಿಸುತ್ತಾ ಹೀಗೆ ಉತ್ತರಿಸಿದರು. ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ನೃಪಶ್ರೇಷ್ಠನೇ! ನೀನು ಸಾವಧಾನವಾಗಿ ಈ ಇತಿಹಾಸವನ್ನು ಕೇಳು. ನಾನು ಇದನ್ನು ನನ್ನ ತೀರ್ಥರೂಪರಾದ ವೇದವ್ಯಾಸರು, ದೇವರ್ಷಿ ನಾರದರು ಮತ್ತು ಮಹರ್ಷಿದೇವಲ ಇವರ ಬಾಯಿಂದ ವಿಧಿಪೂರ್ವಕವಾಗಿ ಕೇಳಿದ್ದೇನೆ. ॥ ೯ ॥ ಬಹಳ ಹಿಂದಿನ ಕಾಲದ ಚರಿತ್ರೆ. ಶೂರಸೇನ ದೇಶದಲ್ಲಿ ಚಿತ್ರಕೇತು ಎಂಬ ಪ್ರಸಿದ್ಧನಾದ ಒಬ್ಬ ಸಾರ್ವಭೌಮನಿದ್ದನು. ಅವನ ರಾಜ್ಯದಲ್ಲಿ ಭೂಮಿಯು

ತಸ್ಯ ಭಾರ್ಯಾಸಹಸ್ರಾಣಾಂ ಸಹಸ್ರಾಣಿ ದಶಾಭವನ್ ।
ಸಾಂತಾನಿಕಶ್ಚಾಪಿ ನೃಪೋ ನ ಲೇಭೇ ತಾಸು ಸಂತತಿಮ್ ॥ ೧೧ ॥

ರೂಪೌದಾರ್ಯವಯೋಜನ್ಮವಿದ್ಯೈಶ್ವರ್ಯಶ್ರಿಯಾದಿಭಿಃ ।
ಸಂಪನ್ನಸ್ಯ ಗುಣೈಃ ಸರ್ವೈಶ್ಚಿಂತಾ ವಂಧ್ಯಾಪತೇರಭೂತ್ ॥ ೧೨ ॥

ನ ತಸ್ಯ ಸಂಪದಃ ಸರ್ವಾ ಮಹಿಷ್ಯೋ ವಾಮಲೋಚನಾಃ ।
ಸಾರ್ವಭೌಮಸ್ಯ ಭೂಶ್ಚೇಯಮಭವನ್ ಪ್ರೀತಿಹೇತವಃ ॥ ೧೩ ॥

ತಸ್ಯೈಕದಾ ತು ಭವನಮಂಗಿರಾ ಭಗವಾನೃಷಿಃ ।
ಲೋಕಾನನುಚರನ್ನೇತಾನುಪಾಗಚ್ಛನ್ಯದೃಚ್ಛಯಾ ॥ ೧೪ ॥

ತಂ ಪೂಜಯಿತ್ವಾ ವಿಧಿವತ್ಪ್ರತ್ಯುತ್ಥಾನಾರ್ಹಣಾದಿಭಿಃ ।
ಕೃತಾತಿಥ್ಯಮುಪಾಸೀದತ್ಸುಖಾಸೀನಂ ಸಮಾಹಿತಃ ॥ ೧೫ ॥

ಮಹರ್ಷಿಸ್ತಮುಪಾಸೀನಂ ಪ್ರಶ್ರಯಾವನತಂ ಕ್ಷಿತೌ ।
ಪ್ರತಿಪೂಜ್ಯ ಮಹಾರಾಜ ಸಮಾಭಾಷ್ಯೇದಮಬ್ರವೀತ್ ॥ ೧೬ ॥

*ಅಂಗಿರಾ ಉವಾಚ*

ಅಪಿ ತೇಽನಾಮಯಂ ಸ್ವಸ್ತಿ ಪ್ರಕೃತೀನಾಂ ತಥಾಽಽತ್ಮನಃ ।
ಯಥಾ ಪ್ರಕೃತಿಭಿರ್ಗುಪ್ತಃ ಪುಮಾನ್ರಾಜಾಪಿ ಸಪ್ತಭಿಃ ॥ ೧೭ ॥

ಆತ್ಮಾನಂ ಪ್ರಕೃತಿಷ್ವದ್ಧಾ ನಿಧಾಯ ಶ್ರೇಯ ಆಪ್ನುಯಾತ್ ।
ರಾಜ್ಞಾ ತಥಾ ಪ್ರಕೃತಯೋ ನರದೇವಾಹಿತಾಧಯಃ ॥ ೧೮ ॥

ಅಪಿ ದಾರಾಃ ಪ್ರಜಾಮಾತ್ಯಾ ಭೃತ್ಯಾಃ ಶ್ರೇಣ್ಯೋಽಥ ಮಂತ್ರಿಣಃ ।
ಪೌರಾ ಜಾನಪದಾ ಭೂಪಾ ಆತ್ಮಜಾ ವಶವರ್ತಿನಃ ॥ ೧೯ ॥

ಯಸ್ಯಾತ್ಮಾನುವಶಶ್ಚೇತ್ಸ್ಯಾತ್ಸರ್ವೇ ತದ್ವಶಗಾ ಇಮೇ ।
ಲೋಕಾಃ ಸಪಾಲಾ ಯಚ್ಛಂತಿ ಸರ್ವೇ ಬಲಿಮತಂದ್ರಿತಾಃ ॥ ೨೦ ॥

ಕಾಮಧೇನುವಿನಂತೆ ಪ್ರಜೆಗಳ ಇಚ್ಛೆಗನುಸಾರವಾಗಿ ಅನ್ನ-ರಸಾದಿಗಳನ್ನು ಕೊಡುತ್ತಿದ್ದಳು. ॥ ೧೦ ॥ ಅವನಿಗೆ ಒಂದುಕೋಟಿ ರಾಣಿಯರಿದ್ದು, ಅವನು ಸ್ವತಃ ಸಂತಾನವನ್ನು ಉತ್ಪನ್ನಗೊಳಿಸಲು ಸಮರ್ಥನೂ ಆಗಿದ್ದನು. ಆದರೆ ಅವರಲ್ಲಿ ಯಾರಲ್ಲಿಯೂ ಸಂತಾನವಿರಲಿಲ್ಲ. ॥ ೧೧ ॥ ಈ ಮಹಾರಾಜಾ ಚಿತ್ರಕೇತುವಿನಲ್ಲಿ ಯಾವುದೇ ಕೊರತೆ ಇರಲಿಲ್ಲ. ಸುಂದರತೆ, ಔದಾರ್ಯ, ಯೌವನ, ಕುಲೀನತೆ, ವಿದ್ಯೆ, ಐಶ್ವರ್ಯ, ಸಂಪತ್ತು ಮುಂತಾದ ಎಲ್ಲ ಗುಣಗಳಿಂದ ಸಂಪನ್ನನಾಗಿದ್ದನು. ಹೀಗಿದ್ದರೂ ಅವನ ಪತ್ನಿಯರು ಬಂಜೆಯರಾಗಿಯೇ ಇದ್ದರು. ಇದರಿಂದ ಅವನಿಗೆ ದೊಡ್ಡ ಚಿಂತೆಯೇ ಇಟ್ಟುಕೊಂಡಿತ್ತು. ॥ ೧೨ ॥ ಅವನು ಇಡೀ ಪೃಥಿವಿಯ ಏಕಛತ್ರ ಸಾಮ್ರಾಟನಾಗಿದ್ದನು. ಅನೇಕ ಸುಂದರ ರಾಣಿಯರಿದ್ದರು. ಸಮಸ್ತ ಪೃಥಿವಿಯು ಅವನ ವಶದಲ್ಲಿತ್ತು. ಎಲ್ಲ ರೀತಿಯ ಸಂಪತ್ತುಗಳು ಅವನ ಸೇವೆಗೆ ಸಿದ್ಧವಿದ್ದರೂ ಇವೆಲ್ಲ ವಸ್ತುಗಳು ಅವನನ್ನು ಸುಖಿಯಾಗಿಸಲು ಅಸಮರ್ಥವಾದುವು. ॥ ೧೩ ॥ ಒಂದು ದಿನ ಶಾಪಾನುಗ್ರಹಸಮರ್ಥರಾದ ಅಂಗಿರಾ ಎಂಬ ಋಷಿಗಳು ಯಥೇಚ್ಛವಾಗಿ ವಿವಿಧ ಲೋಕಗಳಲ್ಲಿ ಸಂಚರಿಸುತ್ತಾ ಚಿತ್ರಕೇತು ಮಹಾರಾಜನ ಅರಮನೆಗೆ ದಯಮಾಡಿಸಿದರು. ॥ ೧೪ ॥ ರಾಜನು ಎದ್ದುನಿಂತು ಅವರನ್ನು ಅರ್ಘ್ಯ-ಪಾದ್ಯಾದಿಗಳಿಂದ ವಿಧಿವತ್ತಾಗಿ ಪೂಜಿಸಿದನು. ಆತಿಥ್ಯವನ್ನು ಸ್ವೀಕರಿಸಿ ಅಂಗಿರಾ ಋಷಿಗಳು ಸುಖಾಸೀನರಾಗಿ ಮಂಡಿಸಿದಾಗ, ಚಿತ್ರಕೇತುರಾಜನೂ ಕೂಡ ಶಾಂತಭಾವದಿಂದ ಅವರ ಬಳಿ ಕುಳಿತುಕೊಂಡನು. ॥ ೧೫ ॥ ಮಹಾರಾಜನೇ! ರಾಜನು ಅತ್ಯಂತ ವಿನಯಶಾಲಿಯಾಗಿದ್ದು ತಮ್ಮ ಬಳಿಯಲ್ಲಿ ನೆಲದ ಮೇಲೆಯೇ ಕುಳಿತು ಭಕ್ತ್ಯಾದರಗಳನ್ನು ತೋರಿಸಿದ್ದನ್ನು ಗಮನಿಸಿದ ಅಂಗಿರಾ ಮಹರ್ಷಿಗಳು ಆತನನ್ನು ಆದರಿಸಿ ಕುಶಲ ಪ್ರಶ್ನೆಮಾಡುತ್ತಾ ಹೀಗೆಂದನು – ॥ ೧೬ ॥

**ಅಂಗಿರಾ ಋಷಿಯು ಹೇಳಿದನು** – ರಾಜಾ ಚಿತ್ರಕೇತುವೇ! ನೀನು ನಿನ್ನ ಗುರು, ಮಂತ್ರಿ, ರಾಷ್ಟ್ರ, ದುರ್ಗ, ಸೈನ್ಯ, ಮಿತ್ರರೇ ಮುಂತಾದ ಪ್ರಕೃತಿಗಳೊಡನೆ ಸುಖವಾಗಿರುವೆಯಾ? ಜೀವನು ಮಹತ್ತತ್ತ್ವಾದಿ ಏಳು ಆವರಣಗಳಿಂದ ಸುತ್ತುವರಿಯಲ್ಪಟ್ಟಿರುವಂತೆಯೇ ರಾಜನೂ ಕೂಡ ಈ ಏಳು ಪ್ರಕೃತಿಗಳಿಂದ ಸುತ್ತುವರಿಯಲ್ಪಡುತ್ತಾನೆ. ಅವುಗಳು ಕುಶಲವಾಗಿದ್ದರೆ ರಾಜನು ಕುಶಲನಾಗಿರುತ್ತಾನೆ. ॥ ೧೭ ॥ ನರೇಂದ್ರ! ಮೇಲೆ ಹೇಳಿದ ಪ್ರಕೃತಿಗಳು ಅನುಕೂಲವಾಗಿದ್ದರೇನೇ ರಾಜನು ರಾಜ್ಯಸುಖವನ್ನು ಅನುಭವಿಸಬಲ್ಲನು. ಹಾಗೆಯೇ ಪ್ರಕೃತಿಗಳೂ ಕೂಡ ತಮ್ಮ ರಕ್ಷಣೆಯ ಹೊಣೆಯನ್ನು ರಾಜನ ಮೇಲೆ ಬಿಟ್ಟು ಸುಖ-ಸಮೃದ್ಧಿಗಳನ್ನು ಅನುಭವಿಸಬಲ್ಲರು. ॥ ೧೮ ॥ ರಾಜನೇ! ನಿನ್ನ ರಾಣಿಯರು, ಪ್ರಜೆ, ಮಂತ್ರಿಗಳು, ಸೇವಕರು, ವ್ಯಾಪಾರಿಗಳು, ಅಮಾತ್ಯರು, ನಾಗರಿಕರು, ದೇಶವಾಸಿಗಳು, ಸಾಮಂತರಾಜರು ಮತ್ತು ಮಕ್ಕಳು ನಿನ್ನ ವಶದಲ್ಲೇ ಇರುವರಲ್ಲ? ॥ ೧೯ ॥ ಯಾರ ಮನಸ್ಸು ತನ್ನ ವಶದಲ್ಲಿ ಇರುತ್ತದೋ, ಅವನಿಗೇ ಇವರೆಲ್ಲರೂ ವಶವಾಗಿರುತ್ತಾರೆ; ಇದು ನಿಜವಾದ ಮಾತಾಗಿದೆ. ಇಷ್ಟೇ ಅಲ್ಲ, ಎಲ್ಲ ಲೋಕಗಳು ಮತ್ತು ಲೋಕಪಾಲರೂ ಕೂಡ ತುಂಬಾ ಸಾವಧಾನದಿಂದ ಅವನಿಗೆ

ಆತ್ಮನಃ ಪ್ರೀಯತೇ ನಾತ್ಮಾ ಪರತಃ ಸ್ವತ ಏವ ವಾ ।
ಲಕ್ಷಯೇಽಲಬ್ಧಕಾಮಂ ತ್ವಾಂ ಚಿಂತಯಾ ಶಬಲಂ ಮುಖಮ್ ॥ ೨೦ ॥

ಏವಂ ವಿಕಲ್ಪಿತೋ ರಾಜನ್ವಿದುಷಾ ಮುನಿನಾಪಿ ಸಃ ।
ಪ್ರಶ್ರಯಾವನತೋಽಭ್ಯಾಹ ಪ್ರಜಾಕಾಮಸ್ತತೋ ಮುನಿಮ್ ॥ ೨೨ ॥

*ಚಿತ್ರಕೇತುರುವಾಚ*

ಭಗವನ್ಕಿಂ ನ ವಿದಿತಂ ತಪೋಜ್ಞಾನಸಮಾಧಿಭಿಃ ।
ಯೋಗಿನಾಂ ಧ್ವಸ್ತಪಾಪಾನಾಂ ಬಹಿರಂತಃ ಶರೀರಿಷು ॥ ೨೩ ॥

ತಥಾಪಿ ಪೃಚ್ಛತೋ ಬ್ರೂಯಾಂ ಬ್ರಹ್ಮನ್ನಾತ್ಮನಿ ಚಿಂತಿತಮ್ ।
ಭವತೋ ವಿದುಷಶ್ಚಾಪಿ ಚೋದಿತಸ್ತ್ವದನುಜ್ಞಯಾ ॥ ೨೪ ॥

ಲೋಕಪಾಲೈರಪಿ ಪ್ರಾರ್ಥ್ಯಾಃ ಸಾಮ್ರಾಜ್ಯೈಶ್ವರ್ಯಸಂಪದಃ ।
ನ ನಂದಯಂತ್ಯಪ್ರಜಂ ಮಾಂ ಕ್ಷುತ್ತೃಟ್ಕಾಮಮಿವಾಪರೇ ॥ ೨೫ ॥

ತತಃ ಪಾಹಿ ಮಹಾಭಾಗ ಪೂರ್ವೈಃ ಸಹ ಗತಂ ತಮಃ ।
ಯಥಾ ತರೇಮ ದುಸ್ತಾರಂ ಪ್ರಜಯಾ ತದ್ವಿಧೇಹಿ ನಃ ॥ ೨೬ ॥

*ಶ್ರೀಶುಕ ಉವಾಚ*

ಇತ್ಯರ್ಥಿತಃ ಸ ಭಗವಾನ್ಕೃಪಾಲುರ್ಬ್ರಹ್ಮಣಃ ಸುತಃ ।
ಶ್ರಪಯಿತ್ವಾ ಚರುಂ ತ್ವಾಷ್ಟ್ರಂ ತ್ವಷ್ಟಾರಮಯಜದ್ವಿಭುಃ ॥ ೨೭ ॥

ಜ್ಯೇಷ್ಠಾ ಶ್ರೇಷ್ಠಾ ಚ ಯಾ ರಾಜ್ಞೋ ಮಹಿಷೀಣಾಂ ಚ ಭಾರತ ।
ನಾಮ್ನಾ ಕೃತದ್ಯುತಿಸ್ತಸ್ಯೈ ಯಜ್ಞೋಚ್ಛಿಷ್ಟಮದಾದ್ದ್ವಿಜಃ ॥ ೨೮ ॥

ಅಥಾಹ ನೃಪತಿಂ ರಾಜನ್ಭವಿತೈಕಸ್ತವಾತ್ಮಜಃ ।
ಹರ್ಷಶೋಕಪ್ರದಸ್ತುಭ್ಯಮಿತಿ ಬ್ರಹ್ಮಸುತೋ ಯಯೌ ॥ ೨೯ ॥

ಕಪ್ಪ-ಕಾಣಿಕೆಗಳನ್ನು ಅರ್ಪಿಸುತ್ತಾ ಅವನ ಪ್ರಸನ್ನತೆಯನ್ನು ಬಯಸುತ್ತಾರೆ. ॥ ೨೦ ॥ ಆದರೆ ನೀನು ಸ್ವತಃ ಸಂತುಷ್ಟನಾಗಿಲ್ಲ. ನಿನ್ನ ಯಾವುದೋ ಕಾಮನೆ ಅಪೂರ್ಣವಾಗಿದೆ ಎಂದು ನನಗೆ ಅನಿಸುತ್ತದೆ. ನಿನ್ನ ಮುಖದಲ್ಲಿ ಯಾವುದೋ ಆಂತರಿಕ ಚಿಂತೆಯ ಚಿಹ್ನೆ ಗೋಚರಿಸುತ್ತಿದೆ. ನಿನ್ನ ಈ ಅಸಂತೋಷದ ಕಾರಣ ಸ್ವತಃ ನೀನೇ ಆಗಿರುವೆಯಾ ಅಥವಾ ಬೇರೆ ಏನಾದರೂ ಕಾರಣ ಇದೆಯೇ? ॥ ೨೧ ॥ ಪರೀಕ್ಷಿದ್ರಾಜನೇ! ರಾಜನು ಮನಸ್ಸಿನಲ್ಲಿ ಯಾವುದನ್ನು ಚಿಂತಿಸುತ್ತಿದ್ದಾನೆ ಎಂಬುದನ್ನು ಅಂಗಿರಾ ಮಹರ್ಷಿಗಳು ಅರಿತಿದ್ದರೂ, ಅವರು ಅವನ ಚಿಂತೆಯ ವಿಷಯದಲ್ಲಿ ಅನೇಕ ಪ್ರಶ್ನೆಗಳನ್ನು ಮಾಡಿದ್ದರು. ಚಿತ್ರಕೇತುವಿಗೆ ಸಂತಾನದ ಕಾಮನೆಯಿತ್ತು. ಆದ್ದರಿಂದ ಮಹರ್ಷಿಗಳು ಕೇಳಿದಾಗ ಅವನು ವಿನಯದಿಂದ ತಲೆತಗ್ಗಿಸಿ ನಿವೇದಿಸಿಕೊಂಡನು. ॥ ೨೨ ॥

**ಸಾಮ್ರಾಟ ಚಿತ್ರಕೇತುವು ಹೇಳಿದನು** – ಪೂಜ್ಯರೇ! ತಪೋಜ್ಞಾನ ಸಮಾಧಿಗಳಿಂದ ಪಾಪಗಳನ್ನು ಕಳೆದುಕೊಂಡಿರುವ ಯೋಗಿಗಳಿಗೆ ಪ್ರಾಣಿಗಳ ಹೊರಗಾಗಲೀ, ಒಳಗಾಗಲೀ ಯಾವುದೂ ತಿಳಿಯದ ವಿಷಯವಿಲ್ಲ. ॥ ೨೩ ॥ ಹೀಗೆ ಎಲ್ಲವನ್ನೂ ತಿಳಿದು ಕೊಂಡಿದ್ದರೂ ನೀವು ನನ್ನ ಚಿಂತೆಗೆ ಕಾರಣವೇನೆಂಬುದನ್ನು ನನ್ನಲ್ಲಿ ಕೇಳುತ್ತಿದ್ದೀರಿ. ಆದ್ದರಿಂದ ತಮ್ಮ ಆಜ್ಞೆ ಮತ್ತು ಪ್ರೇರಣೆಯಂತೆ ನನ್ನ ಚಿಂತೆಯನ್ನು ತಮ್ಮಲ್ಲಿ ನಿವೇದಿಸಿಕೊಳ್ಳುವೆನು. ॥ ೨೪॥ ಲೋಕ ಪಾಲರೂ ಕೂಡ ಆಸೆಪಡುತ್ತಿರುವ ಪೃಥಿವಿಯ ಸಾಮ್ರಾಜ್ಯ, ಐಶ್ವರ್ಯ ಮತ್ತು ಸಂಪತ್ತುಗಳು ನನಗೆ ದೊರೆತಿವೆ. ಆದರೆ ಸಂತಾನವಿಲ್ಲದ ಕಾರಣ ನನಗೆ ಈ ಸುಖ-ಭೋಗಗಳಿಂದ–ಹಸಿದಿರುವ ಪ್ರಾಣಿಗಳಿಗೆ ಅನ್ನ-ನೀರಿಲ್ಲದೆ ಬೇರೆ ಭೋಗಗಳಿಂದ ತೃಪ್ತಿಯು ಉಂಟಾಗದಿರುವಂತೆಯೇ ನನಗೆ ಸ್ವಲ್ಪವಾದರೂ ಶಾಂತಿಯು ಸಿಗುತ್ತಿಲ್ಲ. ॥ ೨೫ ॥ ಮಹಾತ್ಮರೇ! ನಾನು ದುಃಖಿತನಾಗಿರುವುದು ಮಾತ್ರವಲ್ಲದೆ 'ಪಿಂಡದಾನವು ಮುಂದೆ ಸಿಗುವುದಿಲ್ಲವಲ್ಲಾ' ಎಂದು ನನ್ನ ಪಿತೃಗಳೂ ದುಃಖಪಡುತ್ತಿದ್ದಾರೆ. ಈಗ ತಾವು ನನಗೆ ಸಂತಾನಭಾಗ್ಯವನ್ನು ದಯಪಾಲಿಸಿ, ಪರಲೋಕದಲ್ಲಿ ದೊರೆಯುವ ಘೋರ ನರಕದಿಂದಲೂ ಉದ್ಧರಿಸಿರಿ ಮತ್ತು ನಾನು ಇಹ-ಪರಲೋಕಗಳಲ್ಲಿ ಎಲ್ಲ ದುಃಖಗಳಿಂದ ಬಿಡುಗಡೆಹೊಂದುವಂತಹ ವ್ಯವಸ್ಥೆಯನ್ನುಮಾಡಿರಿ. ॥ ೨೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಚಿತ್ರಕೇತುರಾಜನು ಹೀಗೆ ಪ್ರಾರ್ಥಿಸಿದಾಗ ಸರ್ವಸಮರ್ಥರೂ, ಪರಮ ಕೃಪಾಳುಗಳೂ, ಬ್ರಹ್ಮಪುತ್ರರೂ ಆದ ಭಗವಾನ್ ಅಂಗಿರಾರವರು ತ್ವಷ್ಟಾದೇವತೆಗೆ ಯೋಗ್ಯವಾದ ಚರುವನ್ನು ನಿರ್ಮಿಸಿ ಅದರಿಂದ ಆ ದೇವತೆಯನ್ನು ಪೂಜಿಸಿದರು. ॥ ೨೭॥ ಪರೀಕ್ಷಿದ್ರಾಜಾ! ಚಿತ್ರಕೇತು ಮಹಾರಾಜನ ರಾಣಿಯರಲ್ಲಿ ಹಿರಿಯಳೂ, ಗುಣಸಂಪನ್ನೆಯೂ ಆದ 'ಕೃತದ್ಯುತಿ' ಎಂಬಾಕೆಗೆ ಅಂಗಿರಾ ಮಹರ್ಷಿಗಳು ಯಜ್ಞದ ಅವಶೇಷ ಪ್ರಸಾದವನ್ನು ಕರುಣಿಸಿದರು. ॥ ೨೮ ॥ ಚಿತ್ರಕೇತುವನ್ನು ಕುರಿತು – 'ರಾಜನೇ! ನಿನ್ನ ಪತ್ನಿಯ ಗರ್ಭದಲ್ಲಿ ಓರ್ವ ಪುತ್ರನು ಹುಟ್ಟುವನು. ಅವನು ನಿನಗೆ ಹರ್ಷವನ್ನೂ-ಶೋಕವನ್ನೂ ಎರಡನ್ನೂ ಕೊಡುವನು' ಎಂದು ಹೇಳಿ ಅಂಗಿರಾಋಷಿಗಳು ಹೊರಟುಹೋದರು. ॥ ೨೯ ॥

ಸಾಪಿ ತತ್ಪ್ರಾಶನಾದೇವ ಚಿತ್ರಕೇತೋರಧಾರಯತ್ ।
ಗರ್ಭಂ ಕೃತದ್ಯುತಿರ್ದೇವೀ ಕೃತ್ತಿಕಾಗ್ನೇರಿವಾತ್ಮಜಮ್ ॥ ೩೦ ॥

ತಸ್ಯಾ ಅನುದಿನಂ ಗರ್ಭಃ ಶುಕ್ಲಪಕ್ಷ ಇವೋಡುಪಃ ।
ವವೃಧೇ ಶೂರಸೇನೇಶತೇಜಸಾ ಶನಕೈರ್ನೃಪ ॥ ೩೧ ॥

ಅಥ ಕಾಲ ಉಪಾವೃತ್ತೇ ಕುಮಾರಃ ಸಮಜಾಯತ ।
ಜನಯನ್ ಶೂರಸೇನಾನಾಂ ಶೃಣ್ವತಾಂ ಪರಮಾಂ ಮುದಮ್ ॥ ೩೨ ॥

ಹೃಷ್ಟೋ ರಾಜಾ ಕುಮಾರಸ್ಯ ಸ್ನಾತಃ ಶುಚಿರಲಂಕೃತಃ ।
ವಾಚಯಿತ್ವಾಽಽಶಿಷೋ ವಿಪ್ರೈಃ ಕಾರಯಾಮಾಸ ಜಾತಕಮ್ ॥ ೩೩ ॥

ತೇಭ್ಯೋ ಹಿರಣ್ಯಂ ರಜತಂ ವಾಸಾಂಸ್ಯಾಭರಣಾನಿ ಚ ।
ಗ್ರಾಮಾನ್ಹಯಾನ್ ಗಜಾನ್ಪ್ರಾದಾದ್ಧೇನೂನಾಮರ್ಬುದಾನಿ ಷಟ್ ॥ ೩೪ ॥

ವವರ್ಷ ಕಾಮಮನ್ಯೇಷಾಂ ಪರ್ಜನ್ಯ ಇವ ದೇಹಿನಾಮ್ ।
ಧನ್ಯಂ ಯಶಸ್ಯಮಾಯುಷ್ಯಂ ಕುಮಾರಸ್ಯ ಮಹಾಮನಾಃ ॥ ೩೫ ॥

ಕೃಚ್ಛ್ರಲಬ್ಧೇಽಥ, ರಾಜರ್ಷೇಸ್ತನಯೇಽನುದಿನಂ ಪಿತುಃ ।
ಯಥಾ ನಿಃಸ್ವಸ್ಯ ಕೃಚ್ಛ್ರಾಪ್ತೇ ಧನೇ ಸ್ನೇಹೋಽನ್ವವರ್ಧತ ॥ ೩೬ ॥

ಮಾತುಸ್ತ್ವತಿತರಾಂ ಪುತ್ರೇ ಸ್ನೇಹೋ ಮೋಹಸಮುದ್ಭವಃ ।
ಕೃತದ್ಯುತೇಃ ಸಪತ್ನೀನಾಂ ಪ್ರಜಾಕಾಮಜ್ವರೋಽಭವತ್ ॥ ೩೭ ॥

ಚಿತ್ರಕೇತೋರತಿಪ್ರೀತಿರ್ಯಥಾ ದಾರೇ ಪ್ರಜಾವತಿ ।
ನ ತಥಾನ್ಯೇಷು ಸಞ್ಜಜ್ಞೇ ಬಾಲಂ ಲಾಲಯತೋಽನ್ವಹಮ್ ॥ ೩೮ ॥

ತಾಃ ಪರ್ಯತಪ್ಯನ್ನಾತ್ಮಾನಂ ಗರ್ಹಯಂತ್ಯೋಽಭ್ಯಸೂಯಯಾ ।
ಆನಪತ್ಯೇನ ದುಃಖೇನ ರಾಜ್ಞಶ್ಚಾನಾದರೇಣ ಚ ॥ ೩೯ ॥

ಧಿಗಪ್ರಜಾಂ ಸ್ತ್ರಿಯಂ ಪಾಪಾಂ ಪತ್ಯುಶ್ಚಾಗೃಹಸಮ್ಮತಾಮ್ ।
ಸುಪ್ರಜಾಭಿಃ ಸಪತ್ನೀಭಿರ್ದಾಸೀಮಿವ ತಿರಸ್ಕೃತಾಮ್ ॥ ೪೦ ॥

ಅದರಂತೆಯೇ ಯಜ್ಞಪ್ರಸಾದವನ್ನು ಸೇವಿಸಿದ ಕೃತದ್ಯುತಿಯು– ಕೃತ್ತಿಕೆಯು ತನ್ನ ಗರ್ಭದಲ್ಲಿ ಅಗ್ನಿಕುಮಾರನನ್ನು ಧರಿಸಿದಂತೆ– ಮಹಾರಾಜಾ ಚಿತ್ರಕೇತುವಿನಿಂದ ಗರ್ಭವನ್ನು ಧರಿಸಿದಳು. ॥ ೩೦ ॥ ರಾಜನೇ! ಶೂರಸೇನದೇಶದ ರಾಜಾ ಚಿತ್ರಕೇತುವಿನ ನೋಟದಿಂದ ಕೃತದ್ಯುತಿಯ ಗರ್ಭವು ಶುಕ್ಲಪಕ್ಷದ ಚಂದ್ರನಂತೆ ದಿನೇ-ದಿನೇ ಕ್ರಮವಾಗಿ ವೃದ್ಧಿಹೊಂದತೊಡಗಿತು. ॥ ೩೧ ॥

ಅನಂತರ ಸಕಾಲದಲ್ಲಿ ಆಕೆಯ ಗರ್ಭದಿಂದ ಒಬ್ಬ ಪರಮ ಸುಂದರ ಪುತ್ರನು ಜನಿಸಿದನು. ಅವನು ಹುಟ್ಟಿದ ಸಮಾಚಾರ ತಿಳಿದ ಶೂರಸೇನ ದೇಶದ ಪ್ರಜಾಜನರಿಗೆ ಬಹಳ ಆನಂದವಾಯಿತು. ॥ ೩೨ ॥ ಚಕ್ರವರ್ತಿ ಚಿತ್ರಕೇತುವಿನ ಆನಂದಕ್ಕೆ ಪಾರವೇ ಇರಲಿಲ್ಲ. ಅವನು ಸ್ನಾನಮಾಡಿ ಪವಿತ್ರನಾಗಿ, ವಸ್ತ್ರಾಭೂಷಣಗಳಿಂದ ಅಲಂಕೃತನಾಗಿ ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಮಾಡಿಸಿ, ಆಶೀರ್ವಾದವನ್ನು ಪಡೆದು ಮಗುವಿಗೆ ಜಾತಕರ್ಮಸಂಸ್ಕಾರವನ್ನು ಮಾಡಿದನು. ॥ ೩೩ ॥ ಅವನು ಆ ಬ್ರಾಹ್ಮಣರಿಗೆ ಚಿನ್ನ, ಬೆಳ್ಳಿ, ವಸ್ತ್ರ, ಒಡವೆ, ಗ್ರಾಮಗಳು, ಕುದುರೆಗಳು, ಆನೆಗಳು ಮತ್ತು ಆರು ಅರ್ಬುದಗಳಷ್ಟು ಗೋವುಗಳನ್ನು ದಾನಮಾಡಿದನು. ॥ ೩೪ ॥ ಉದಾರಶಿರೋಮಣಿಯಾದ ಚಿತ್ರಕೇತು ಸಾರ್ವಭೌಮನು ಪುತ್ರನಿಗೆ ಧನ, ಕೀರ್ತಿ, ಆಯುಸ್ಸುಗಳು ಅಭಿವೃದ್ಧಿಯಾಗಲೆಂದು–ಮೋಡವು ಎಲ್ಲ ಜೀವಗಳ ಮನೋರಥವನ್ನು ಈಡೇರಿಸುವಂತೆ–ಇತರರಿಗೂ ಅವರು ಬೇಡಿದ ವಸ್ತುಗಳೆಲ್ಲವನ್ನು ಕೊಡುಗೈಯಿಂದ ನೀಡಿದನು. ॥ ೩೫ ॥ ಪರೀಕ್ಷಿತನೇ! ಕಾಸಿನ ಮುಖವನ್ನೇ ಕಾಣದ ಬಡವನಿಗೆ ಬಹಳ ಕಷ್ಟದಿಂದ ಸ್ವಲ್ಪ ಹಣವು ದೊರಕಿದರೆ ಅವನಿಗೆ ಅದರಲ್ಲಿ ಆಸೆ-ಆಸಕ್ತಿಗಳು ಉಂಟಾಗುವಂತೆಯೇ – ಬಹಳ ಕಷ್ಟದಿಂದ ಜನಿಸಿದ ಆ ಪುತ್ರನಲ್ಲಿ ರಾಜರ್ಷಿ ಚಿತ್ರಕೇತುವಿನ ಸ್ನೇಹಸಂಬಂಧವು ದಿನೇ-ದಿನೇ ಬಿಗಿಯಾಗತೊಡಗಿತು. ॥ ೩೬ ॥ ತಾಯಿಯಾದ ಕೃತದ್ಯುತಿಗೂ ಮಗುವಿನ ವಿಷಯದಲ್ಲಿ ಮೋಹದಿಂದ ಸ್ನೇಹ-ಮಮತೆಗಳು ಹೆಚ್ಚಿದವು. ಆದರೆ ಅವಳ ಸವತಿಯರಾಗಿದ್ದ ರಾಣಿಯರ ಮನಸ್ಸಿನಲ್ಲಿ ಪುತ್ರಕಾಮನೆಯಿಂದ ಮತ್ತಷ್ಟು ಹೊಟ್ಟೆಯುರಿ ಉಂಟಾಯಿತು. ॥ ೩೭ ॥ ಪ್ರತಿದಿನವು ಮಗುವನ್ನು ಮುದ್ದಿಸಿ, ಪ್ರೀತಿಸುತ್ತಿದ್ದ ಚಿತ್ರಕೇತುವಿಗೆ ಮಗುವಿನ ತಾಯಿಯಾದ ಕೃತದ್ಯುತಿಯಲ್ಲಿ ಇದ್ದಷ್ಟು ಪ್ರೇಮವು ಇತರ ರಾಣಿಯರಲ್ಲಿ ಇಲ್ಲವಾಯಿತು. ॥ ೩೮ ॥ ಹೀಗೆ ಆ ರಾಣಿಯರಿಗೆ ಸಂತಾನವಿಲ್ಲದ ದುಃಖವೊಂದು, ಜೊತೆಗೆ ಚಿತ್ರಕೇತುವು ತಮ್ಮನ್ನು ಉಪೇಕ್ಷಿಸುತ್ತಿದ್ದಾನೆ ಎಂಬ ವಿಷಾದ ಮತ್ತೊಂದು. ಎರಡೂ ಸೇರಿ ಅವರು ಮಾತ್ಸರ್ಯದಿಂದ ತಮ್ಮನ್ನೇ ಧಿಕ್ಕರಿಸಿಕೊಳ್ಳುತ್ತಾ ಮನಸ್ಸಿನಲ್ಲಿಯೇ ಕುದಿಯತೊಡಗಿದರು. ॥ ೩೯ ॥ ಅವರು ಪರಸ್ಪರ ಮಾತಾಡಿಕೊಳ್ಳುತ್ತಿದ್ದರು – 'ಅಕಟಾ! ತಂಗೀ! ಪುತ್ರಹೀನೆಯಾದ ಸ್ತ್ರೀಯು ತುಂಬಾ ಭಾಗ್ಯಹೀನಳಾಗಿರುವಳು. ಪುತ್ರವತಿಯಾದ ಸವತಿಯರು ಅವರನ್ನು ತಮ್ಮ ದಾಸಿಯರಂತೆ ಕಂಡು ತಿರಸ್ಕರಿಸುವರು. ಇತರ ವಿಷಯ ಹಾಗಿರಲಿ. ಆಕೆಯ ಪತಿಯೇ ಆಕೆಯನ್ನು ಪತ್ನೀ ಎಂದು ಸಂಭಾವಿಸುವುದಿಲ್ಲ. ನಿಜವಾಗಿಯೂ ಪುತ್ರಹೀನೆಯಾದ ಸ್ತ್ರೀಯರ ಸ್ಥಿತಿಯು ಅತ್ಯಂತ ಶೋಚನೀಯವಾದುದು. ॥ ೪೦ ॥

ದಾಸೀನಾಂ ಕೋ ನು ಸಂತಾಪಃ ಸ್ವಾಮಿನಃ ಪರಿಚರ್ಯಯಾ ।
ಅಭೀಕ್ಷ್ಣಂ ಲಬ್ಧಮಾನಾನಾಂ ದಾಸ್ಯಾ ದಾಸೀವ ದುರ್ಭಗಾಃ ॥ ೪೧ ॥

ಏವಂ ಸಂದಹ್ಯಮಾನಾನಾಂ ಸಪತ್ನ್ಯಾಃ ಪುತ್ರಸಂಪದಾ ।
ರಾಜ್ಞೋಽಸಮ್ಮತವೃತ್ತೀನಾಂ ವಿದ್ವೇಷೋ ಬಲವಾನಭೂತ್ ॥ ೪೨ ॥

ವಿದ್ವೇಷನಷ್ಟಮತಯಃ ಸ್ತ್ರಿಯೋ ದಾರುಣಚೇತಸಃ ।
ಗರಂ ದದುಃ ಕುಮಾರಾಯ ದುರ್ಮರ್ಷಾ ನೃಪತಿಂ ಪ್ರತಿ ॥ ೪೩ ॥

ಕೃತದ್ಯುತಿರಜಾನಂತೀ ಸಪತ್ನೀನಾಮಘಂ ಮಹತ್ ।
ಸುಪ್ತ ಏವೇತಿ ಸಂಚಿಂತ್ಯ ನಿರೀಕ್ಷ್ಯ ವ್ಯಚರದ್ಗೃಹೇ ॥ ೪೪ ॥

ಶಯಾನಂ ಸುಚಿರಂ ಬಾಲಮುಪಧಾರ್ಯ ಮನೀಷಿಣೀ ।
ಪುತ್ರಮಾನಯ ಮೇ ಭದ್ರೇ ಇತಿ ಧಾತ್ರೀಮಚೋದಯತ್ ॥ ೪೫ ॥

ಸಾ ಶಯಾನಮುಪವ್ರಜ್ಯ ದೃಷ್ಟ್ವಾ ಚೋತ್ತಾರಲೋಚನಮ್ ।
ಪ್ರಾಣೇಂದ್ರಿಯಾತ್ಮಭಿಸ್ತ್ಯಕ್ತಂ ಹತಾಸ್ಮೀತ್ಯಪತದ್ಭುವಿ ॥ ೪೬ ॥

ತಸ್ಯಾಸ್ತದಾಽಽಕರ್ಣ್ಯ ಭೃಶಾತುರಂ ಸ್ವರಂ
ಘ್ನಂತ್ಯಾಃ ಕರಾಭ್ಯಾಮುರ ಉಚ್ಚಕೈರಪಿ ।
ಪ್ರವಿಶ್ಯ ರಾಜ್ಞೀ ತ್ವರಯಾಽಽತ್ಮಜಾಂತಿಕಂ
ದದರ್ಶ ಬಾಲಂ ಸಹಸಾ ಮೃತಂ ಸುತಮ್ ॥ ೪೭ ॥

ಪಪಾತ ಭೂಮೌ ಪರಿವೃದ್ಧಯಾ ಶುಚಾ
ಮುಮೋಹ ವಿಭ್ರಷ್ಟಶಿರೋರುಹಾಂಬರಾ ॥ ೪೮ ॥

ತತೋ ನೃಪಾಂತಃಪುರವರ್ತಿನೋ ಜನಾ
ನರಾಶ್ಚ ನಾರ್ಯಶ್ಚ ನಿಶಮ್ಯ ರೋದನಮ್ ।
ಆಗತ್ಯ ತುಲ್ಯವ್ಯಸನಾಃ ಸುದುಃಖಿತಾ-
ಸ್ತಾಶ್ಚ ವ್ಯಲೀಕಂ ರುರುದುಃ ಕೃತಾಗಸಃ ॥ ೪೯ ॥

ದಾಸಿಯರ ಸ್ಥಿತಿಗಿಂತಲೂ ಹೀನಾಯವಾದ ಸ್ಥಿತಿ ಅವರದು. ಏಕೆಂದರೆ, ದಾಸಿಯರು ತಮ್ಮ ಪ್ರಭುವಿನ ಸೇವೆಮಾಡಿ ಅವನಿಂದ ನಿರಂತರವಾಗಿ ಸಮ್ಮಾನವನ್ನೇ ಪಡೆಯುತ್ತಿರುವರು. ಆದರೆ ದುರದೃಷ್ಟಶಾಲಿಗಳಾದ ನಾವು ಅವರಿಗಿಂತಲೂ ಕಡೆಯವರಾಗಿ ದಾಸಿಯರ ದಾಸಿಯರಂತೆ ಪುನಃ ಪುನಃ ತಿರಸ್ಕಾರಕ್ಕೆ ಪಾತ್ರರಾಗುತ್ತೇವೆ. ॥ ೪೧ ॥ ಪರೀಕ್ಷಿತನೇ ! ಆ ರಾಣಿಯರು ತಮ್ಮ ಸವತಿಯ ಪುತ್ರಸಂಪತ್ತಿನಿಂದ ಹೊಟ್ಟೆಯುರಿಪಟ್ಟುಕೊಳ್ಳುತ್ತಾ ಇರಲು, ರಾಜನೂ ಅವರ ವಿಷಯದಲ್ಲಿ ಉದಾಸೀನನಾದನು. ಅದರ ಫಲವಾಗಿ ಅವರೆಲ್ಲರಿಗೂ ಕೃತದ್ಯುತಿಯ ಕುರಿತು ತಡೆಯಲಾರದ ದ್ವೇಷವುಂಟಾಯಿತು. ॥ ೪೨ ॥ ಆ ದ್ವೇಷದಿಂದ ಅವರ ಬುದ್ಧಿ ಕೆಟ್ಟುಹೋಯಿತು. ಕ್ರೌರ್ಯವು ಅವರ ಚಿತ್ತವನ್ನು ತುಂಬಿಕೊಂಡಿತು. ಪತಿಯಾದ ಚಿತ್ರಕೇತುವಿನ ಪುತ್ರಸ್ನೇಹವು ಅವರಿಂದ ಸಹಿಸಲಾಗಲಿಲ್ಲ. ಇದರಿಂದ ಅವರು ಅಸಹನೆಯಿಂದ ಆ ಎಳೆವಯಸ್ಸಿನ ರಾಜಕುಮಾರನಿಗೆ ವಿಷವನ್ನು ಉಣಿಸಿದರು. ॥ ೪೩ ॥ ಮಹಾರಾಣಿ ಕೃತದ್ಯುತಿಗೆ ತನ್ನ ಸವತಿಯರ ಪಾಪದ ಪಿತೂರಿಯು ಸ್ವಲ್ಪವೂ ತಿಳಿಯಲಿಲ್ಲ. ಆಕೆಯು ದೂರದಿಂದ ನೋಡಿ ಮಗುವು ನಿದ್ದೆ ಮಾಡುತ್ತಿದೆ ಎಂದೇ ಭಾವಿಸಿ, ಅರಮನೆಯಲ್ಲಿ ನಿಶ್ಚಿಂತವಾಗಿ ಅಡ್ಡಾಡುತ್ತಿದ್ದಳು. ॥ ೪೪ ॥ ಬುದ್ಧಿಮತಿ ರಾಣಿಯು ಮಗುವು ಬಹಳ ಹೊತ್ತಾದರೂ ಇನ್ನೂ ಏಳದೇ ಇರುವುದನ್ನು ಗಮನಿಸಿ ದಾಸಿಯನ್ನು ಕರೆದು – 'ಕಲ್ಯಾಣೀ ! ನನ್ನ ಕಂದನನ್ನು ಕರೆದುಕೊಂಡು ಬಾ' ಎಂದು ಆಜ್ಞೆ ಮಾಡಿದಳು. ॥ ೪೫ ॥ ದಾದಿಯು ಮಲಗಿದ್ದ ಮಗುವಿನ ಬಳಿಗೆ ಹೋಗಿ ನೋಡಿದಾಗ ಆಕೆಗೆ ಗಾಬರಿ ಯುಂಟಾಯಿತು. 'ಮಗುವಿನ ಕಣ್ಣುಗುಡ್ಡೆಗಳು ತಿರುಗು ಮುರುಗಾಗಿವೆ. ಉಸಿರು ನಿಂತುಹೋಗಿದೆ. ಪ್ರಾಣ, ಇಂದ್ರಿಯಗಳು, ಜೀವಾತ್ಮ ಎಲ್ಲವೂ ಆ ಸುಕುಮಾರನ ದೇಹವನ್ನು ಬಿಟ್ಟು ಹೊರಟುಹೋಗಿವೆ. ಇದನ್ನು ನೋಡಿದೊಡನೆಯೇ 'ಅಯ್ಯೋ ! ಸತ್ತೆನು ! ಕೆಟ್ಟೆನು !' ಎಂದು ಕಿರುಚುತ್ತಾ ನೆಲಕ್ಕೆ ಕುಸಿದಳು. ॥ ೪೬ ॥

ಆ ದಾಸಿಯು ತನ್ನ ಎರಡು ಕೈಗಳಿಂದಲೂ ಎದೆಯನ್ನು ಬಡಿದುಕೊಳ್ಳುತ್ತಾ ಗಟ್ಟಿಯಾಗಿ ಗೋಳಾಡತೊಡಗಿದಳು. ಅವಳ ಅಳುವನ್ನು ಕೇಳಿ ಮಹಾರಾಣಿ ಕೃತದ್ಯುತಿಯು ಲಗುಬಗೆಯಿಂದ ಮಗುವಿನ ಬಳಿಗೆ ಓಡಿದಳು. ತನ್ನ ಕಂದನು ಅಕಸ್ಮಾತ್ತಾಗಿ ಸತ್ತು ಹೋಗಿರುವುದನ್ನು ನೋಡಿದಳು. ॥ ೪೭ ॥ ಆಗ ಅವಳು ಅತ್ಯಂತ ಶೋಕದಿಂದ ಮೂರ್ಛಿತಳಾಗಿ ನೆಲಕ್ಕೆ ಕುಸಿದುಬಿದ್ದಳು. ಅವಳ ತಲೆಯ ಕೂದಲು ಬಿಚ್ಚಿಹೋಗಿ, ಉಟ್ಟಸೀರೆಯು ಅಸ್ತವ್ಯಸ್ತವಾಗಿದ್ದುದನ್ನು ಗಮನಿಸದೆ ಪ್ರಜ್ಞೆತಪ್ಪಿಬಿದ್ದಳು. ॥ ೪೮ ॥ ಅನಂತರ ಮಹಾರಾಣಿಯ ಕರುಣಾಕ್ರಂದನವನ್ನು ಕೇಳಿ ಅಂತಃಪುರದ ಎಲ್ಲ ಸ್ತ್ರೀಯರೂ, ಪುರುಷರೂ ಅಲ್ಲಿಗೆ ಓಡಿ ಬಂದರು. ಸಹಾನುಭೂತಿಯಿಂದ ಅವರೂ ದುಃಖಿತರಾಗಿ ಅಳತೊಡಗಿದರು. ಮಗುವನ್ನು ಕೊಂದ ಆ ರಾಣಿಯರೂ ಅಲ್ಲಿಗೆ ಬಂದು ಕಪಟದ ಅಳುವಿನ ನಟನೆಮಾಡಿದರು. ॥ ೪೯ ॥ ತನ್ನ ಪುತ್ರನು ಅಕಾಲಮೃತ್ಯುವಿಗೆ ತುತ್ತಾಗಿದ್ದಾನೆ ಎಂದು ತಿಳಿದು ರಾಜಾ ಚಿತ್ರಕೇತುವಿಗೆ ಅತ್ಯಂತ ಸ್ನೇಹದಿಂದಾಗಿ ಶೋಕದ ಆವೇಗದಿಂದ ಕಣ್ಣುಕತ್ತಲೆ ಬಂತು.

ಶ್ರುತ್ವಾ ಮೃತಂ ಪುತ್ರಮಲಕ್ಷಿತಾಂತಕಂ
ವಿನಷ್ಟ ದೃಷ್ಟಿಃ ಪ್ರಪತನ್ ಸ್ಖಲನ್ ಪಥಿ ।
ಸ್ನೇಹಾನುಬಂಧೈಧಿತಯಾ ಶುಚಾ ಭೃಶಂ
ವಿಮೂರ್ಛಿತೋಽನುಪ್ರಕೃತಿರ್ದ್ವಿಜೈರ್ವೃತಃ ॥ ೫೦ ॥

ಪಪಾತ ಬಾಲಸ್ಯ ಸ ಪಾದಮೂಲೇ
ಮೃತಸ್ಯ ವಿಸ್ರಸ್ತಶಿರೋರುಹಾಂಬರಃ ।
ದೀರ್ಘಂ ಶ್ವಸನ್ಬಾಷ್ಪಕಲೋಪರೋಧತೋ
ನಿರುದ್ಧಕಂಠೋ ನ ಶಶಾಕ ಭಾಷಿತುಮ್ ॥ ೫೧ ॥

ಪತಿಂ ನಿರೀಕ್ಷ್ಯೋರುಶುಚಾರ್ಪಿತಂ ತದಾ
ಮೃತಂ ಚ ಬಾಲಂ ಸುತಮೇಕಸಂತತಿಮ್ ।
ಜನಸ್ಯ ರಾಜ್ಞೀ ಪ್ರಕೃತೇಶ್ಚ ಹೃದ್ರುಜಂ
ಸತೀ ದಧಾನಾ ವಿಲಲಾಪ ಚಿತ್ರಧಾ ॥ ೫೨ ॥

ಸ್ತನದ್ವಯಂ ಕುಂಕುಮಗಂಧಮಂಡಿತಂ
ನಿಷಿಂಚತೀ ಸಾಂಜನಬಾಷ್ಪಬಿಂದುಭಿಃ ।
ವಿಕೀರ್ಯ ಕೇಶಾನ್ವಿಗಲತ್ಸ್ರಜಃ ಸುತಂ
ಶುಶೋಚ ಚಿತ್ರಂ ಕುರರೀವ ಸುಸ್ವರಮ್ ॥ ೫೩ ॥

ಅಹೋ ವಿಧಾತಸ್ತ್ವಮತೀವ ಬಾಲಿಶೋ
ಯಸ್ತ್ವಾತ್ಮಸೃಷ್ಟ್ಯಪ್ರತಿರೂಪಮೀಹಸೇ ।
ಪರೇಽನುಜೀವತ್ಯಪರಸ್ಯ ಯಾ ಮೃತಿ-
ರ್ವಿಪರ್ಯಯಶ್ಚೇತ್ತ್ವಮಸಿ ಧ್ರುವಃ ಪರಃ ॥ ೫೪ ॥

ನ ಹಿ ಕ್ರಮಶ್ಚೇದಿಹ ಮೃತ್ಯುಜನ್ಮನೋಃ
ಶರೀರಿಣಾಮಸ್ತು ತದಾಽಽತ್ಮ ಕರ್ಮಭಿಃ ।
ಯಃ ಸ್ನೇಹಪಾಶೋ ನಿಜಸರ್ಗವೃದ್ಧಯೇ
ಸ್ವಯಂ ಕೃತಸ್ತೇ ತಮಿಮಂ ವಿವೃಶ್ಚಸಿ ॥ ೫೫ ॥

ತ್ವಂ ತಾತ ನಾರ್ಹಸಿ ಚ ಮಾಂ ಕೃಪಣಾಮನಾಥಾಂ
ತ್ಯಕ್ತುಂ ವಿಚಕ್ಷ್ವ ಪಿತರಂ ತವ ಶೋಕತಪ್ತಮ್ ।
ಅಂಜಸ್ತರೇಮ ಭವತಾಪ್ರಜದುಸ್ತರಂ ಯದ್
ಧ್ವಾಂತಂ ನ ಯಾಹ್ಯಕರುಣೇನ ಯಮೇನ ದೂರಮ್ ॥ ೫೬ ॥

ರಾಜನು ಶೋಕಭಾರದಿಂದ ಎಡವುತ್ತಾ, ಮುಗ್ಗರಿಸುತ್ತಾ ಮೆಲ್ಲ-ಮೆಲ್ಲನೆ ಮಂತ್ರಿ-ಬ್ರಾಹ್ಮಣಾದಿ ಪರಿವಾರ ಸಹಿತನಾಗಿ ಸತ್ತ ಮಗು ವಿದ್ದ ಸ್ಥಳಕ್ಕೆ ಬಂದು ದುಃಖವನ್ನು ತಡೆಯಲಾರದೆ ಪ್ರಜ್ಞೆತಪ್ಪಿ ನೆಲಕ್ಕೆ ಉರುಳಿದನು. ಅವನ ತಲೆಕೂದಲು ಕೆದರಿಕೊಂಡು, ವಸ್ತ್ರಗಳು ಅಸ್ತವ್ಯಸ್ತವಾದುವು. ಬಿಸಿ-ಬಿಸಿ ನಿಟ್ಟುಸಿರಿನಿಂದ ಮುಖವು ಒಣಗಿತು. ಉಮ್ಮಳಿಸುವ ಕಣ್ಣೀರಿನ ಧಾರೆಯಿಂದ ಗಂಟಲು ಕಟ್ಟಿಹೋಯಿತು. ಅವನ ಬಾಯಿಂದ ಮಾತೇ ಹೊರಡದಾಯಿತು. ॥ ೫೦-೫೧ ॥ ಸಾಧ್ವಿಮಣಿಯಾದ ಕೃತದ್ಯುತಿಗೆ ತನ್ನ ಪತಿಯು ಹಾಗೆ ದುಃಖದಲ್ಲಿ ಮುಳುಗಿದ್ದುದನ್ನೂ – ಇದ್ದ ಒಂದೇ ಮಗುವು ಸಾವಿಗೀಡಾದುದನ್ನೂ ಕಂಡು ಅತಿದೈನ್ಯದಿಂದ ಬಗೆ-ಬಗೆಯಾಗಿ ಗೋಳಾಡತೊಡಗಿದಳು. ಅದನ್ನು ಕಂಡು ಅಲ್ಲಿದ್ದ ಮಂತ್ರಿಯೇ ಮುಂತಾದವರೆಲ್ಲರೂ ಶೋಕಗ್ರಸ್ತರಾದರು. ॥ ೫೨ ॥ ಮಹಾರಾಣಿಯ ಕಣ್ಣುಗಳಿಂದ ಕಣ್ಣೀರಿನ ಕೋಡಿಯೇ ಹರಿದು ಕಣ್ಣುಗಳಿಗೆ ಹಾಕಿಕೊಂಡಿದ್ದ ಕಾಡಿಗೆಯು ಕರಗಿ ಕುಂಕುಮಕೇಸರಿ – ಗಂಧಗಳು ಪೂಸಿದ್ದ ವಕ್ಷಸ್ಥಳವೂ ನೆನೆಯತೊಡಗಿತು. ಆಕೆಯ ತಲೆಗೂದಲು ಚೆದುರಿಹೋಗಿ ಮುಡಿದ ಹೂವುಗಳು ಕೆಳಕ್ಕೆ ಬೀಳುತ್ತಿದ್ದವು. ಹೀಗೆ ಆಕೆಯು ಸಹಿಸಲಾರದ ಪುತ್ರಶೋಕದಿಂದ ಕುರರೀಹಕ್ಕಿಯಂತೆ ಅತ್ಯಂತ ಕರುಣಾಜನಕವಾಗಿ ಗಟ್ಟಿಯಾದ ದನಿಯಲ್ಲಿ ವಿವಿಧ ಪ್ರಕಾರದಿಂದ ವಿಲಪಿಸುತ್ತಿದ್ದಳು. ॥ ೫೩ ॥

ಅವಳ ಗೋಳಾಟವು ವರ್ಣನಾತೀತವು.. 'ಅಯ್ಯೋ! ವಿಧಿಯೇ! ನಿಜವಾಗಿಯೂ ನೀನು ಮೂರ್ಖನೇ ಸರಿ! ತನ್ನ ಸೃಷ್ಟಿಗೆ ಪ್ರತಿಕೂಲವಾಗಿ ಕೆಲಸವನ್ನು ಮಾಡುತ್ತಿರುವೆಯಲ್ಲ! ಮುದುಕರು ಬದುಕಿರುವಾಗಲೇ ಬಾಲಕರು ಸಾಯುವುದು ಎಂತಹ ಆಶ್ಚರ್ಯದ ವಿಷಯ! ನಿಜವಾಗಿಯೂ ನಿನ್ನ ಸ್ವಭಾವದಲ್ಲಿ ಇಂತಹ ವಿಪರೀತತೆ ಇದ್ದರೆ ನೀನು ಜೀವಿಗಳ ಶತ್ರುವೇ ಆಗಿರುವೆ! ॥ ೫೪ ॥ ಪ್ರಪಂಚದಲ್ಲಿ ಪ್ರಾಣಿಗಳ ಜೀವನ-ಮರಣದ ಯಾವುದೇ ಕ್ರಮವೇ ಇಲ್ಲದಿದ್ದರೆ, ಅವರು ಪ್ರಾರಬ್ಧಕ್ಕನುಸಾರ ಹುಟ್ಟುತ್ತಾ-ಸಾಯುತ್ತಾ ಇರುವರು. ಮತ್ತೆ ನಿನ್ನ ಆವಶ್ಯಕತೆ ಯಾದರೂ ಏನಿದೆ? ಆದರೆ ನೀನು ಹೀಗೆ ಮಕ್ಕಳನ್ನು ಸಾವಿಗೀಡುಮಾಡಿ ನಿನ್ನ ಸಂಕಲ್ಪವೃಕ್ಷವನ್ನು ನೀನೇ ಕಡಿದು ಹಾಕುವೆಯಲ್ಲಾ!' ॥ ೫೫ ॥ ಮತ್ತೆ ಅವಳು ತನ್ನ ಮಗುವಿನ ಕಡೆಗೆ ನೋಡುತ್ತಾ ಹೇಳತೊಡಗಿದಳು – ಅಪ್ಪಾ ಮಗು! ನೀನಿಲ್ಲದೆ ನಾನು ಅನಾಥಳೂ, ದೀನಳೂ ಆಗಿರುವೆನು. ನನ್ನನ್ನು ಬಿಟ್ಟು ಹೀಗೆ ಹೊರಟುಹೋಗುವುದು ನಿನಗೆ ಉಚಿತವೆ? ಸ್ವಲ್ಪ ಕಣ್ಣುತೆರೆದು ನೋಡಬಾರದೆ! ನಿನ್ನ ತಂದೆಯವರು ನಿನ್ನ ವಿಯೋಗದಲ್ಲಿ ಎಷ್ಟು ಶೋಕಪಡುತ್ತಿದ್ದಾರೆ. ಸಂತಾನಹೀನರಾದ ಪುರುಷರು ಯಾವ ಘೋರನರಕವನ್ನು ಕಷ್ಟದಿಂದ ದಾಟಬೇಕಾಗುತ್ತದೋ, ಆ ನರಕವನ್ನು ನಿನ್ನ ಸಹಾಯದಿಂದ ನಾವು ಆಯಾಸವಿಲ್ಲದೆಯೇ ದಾಟಬೇಕಾಗಿದೆ. ಕಂದಾ! ನೀನು ಈ ಯಮರಾಜನ ಜೊತೆಯಲ್ಲಿ ದೂರ ಹೋಗಬೇಡ. ಅವನು ದಯೆ-ದಾಕ್ಷಿಣ್ಯವಿಲ್ಲದವನು. ॥ ೫೬ ॥ ಎನ್ನ ಮುದ್ದಿನ ಮಗನೇ! ಓ ರಾಜಕುಮಾರಾ! ಎದ್ದೇಳು ಮಗು! ಇದೋ ನೋಡು. ನಿನ್ನ ಜೊತೆಯ ಬಾಲಕರು ನಿನ್ನನ್ನು ಆಟಕ್ಕೆ ಕರೆಯುತ್ತಿದ್ದಾರೆ. ನೀನು

ಉತ್ತಿಷ್ಠ ತಾತ ತ ಇಮೇ ಶಿಶವೋ ವಯಸ್ಯಾ-
ಸ್ತ್ವಾಮಾಹ್ವಯಂತಿ ನೃಪನಂದನ ಸಂವಿಹರ್ತುಮ್ ।
ಸುಪ್ತಶ್ಚಿರಂ ಹ್ಯಶನಯಾ ಚ ಭವಾನ್ಪರೀತೋ
ಭುಂಕ್ಷ್ವ ಸ್ತನಂ ಪಿಬ ಶುಚೋ ಹರ ನಃ ಸ್ವಕಾನಾಮ್ ॥ ೫೭ ॥

ನಾಹಂ ತನೂಜ ದದೃಶೇ ಹತಮಂಗಲಾ ತೇ
ಮುಗ್ಧಸ್ಮಿತಂ ಮುದಿತವೀಕ್ಷಣಮಾನನಾಬ್ಜಮ್ ।
ಕಿಂ ವಾ ಗತೋಽಸ್ಯ ಪುನರನ್ವಯಮನ್ಯಲೋಕಂ
ನೀತೋಽಘೃಣೇನ ನ ಶೃಣೋಮಿ ಕಲಾ ಗಿರಸ್ತೇ ॥ ೫೮ ॥

ಶ್ರೀಶುಕ ಉವಾಚ

ವಿಲಪಂತ್ಯಾ ಮೃತಂ ಪುತ್ರಮಿತಿ ಚಿತ್ರವಿಲಾಪನೈಃ ।
ಚಿತ್ರಕೇತುರ್ಭೃಶಂ ತಪ್ತೋ ಮುಕ್ತಕಂಠೋ ರುರೋದ ಹ ॥ ೫೯ ॥

ತಯೋರ್ವಿಲಪತೋಃ ಸರ್ವೇ ದಂಪತ್ಯೋಸ್ತದನುವ್ರತಾಃ ।
ರುರುದುಃ ಸ್ಮ ನರಾ ನಾರ್ಯಃ ಸರ್ವಮಾಸೀದಚೇತನಮ್ ॥ ೬೦ ॥

ಏವಂ ಕಶ್ಮಲಮಾಪನ್ನಂ ನಷ್ಟ ಸಂಜ್ಞಮನಾಯಕಮ್ ।
ಜ್ಞಾತ್ವಾಂಗಿರಾ ನಾಮ ಮುನಿರಾಜಗಾಮ ಸನಾರದಃ ॥ ೬೧ ॥

ಮಲಗಿ ತುಂಬಾ ಹೊತ್ತಾಯಿತು. ಈಗ ನಿನಗೆ ಹಸಿವಾಗಿರಬಹುದು. ಏಳು ಏನನ್ನಾದರೂ ಸ್ವಲ್ಪ ತಿನ್ನುವೆಯಂತೆ. ಬೇರೇನೂ ಇಲ್ಲದಿದ್ದರೆ ನನ್ನ ಹಾಲನ್ನಾದರೂ ಕುಡಿದು, ನೆಂಟರಿಷ್ಟರಾದ ನಮ್ಮ ದುಃಖವನ್ನು ಹೋಗಲಾಡಿಸು. ॥ ೫೭ ॥ ಪ್ರೀತಿಯ ಕಂದಮ್ಮನೇ! ಇದೇನು ಇಂದು ನಿನ್ನ ಮುಖಾರವಿಂದದಲ್ಲಿ ಎಂದಿನಂತೆ ಮುದ್ದಾದ ಎಳೆ ನಗೆಯೂ, ಆನಂದದಿಂದ ತುಂಬಿದ ಚೆನ್ನೋಟವೂ ಕಾಣುತ್ತಿಲ್ಲವಲ್ಲ! ಎಂತಹ ದುರ್ಭಾಗ್ಯಳು ನಾನು! ನಿನ್ನ ತೊದಲು ನುಡಿಗಳೂ, ಮುದ್ದು ಮಾತುಗಳೂ ನನಗೆ ಕೇಳಿಸುತ್ತಿಲ್ಲವಲ್ಲ! ನಿಜವಾಗಿಯೂ ನಿಷ್ಠುರವಾದ ಯಮರಾಜನು ಹಿಂದಕ್ಕೆ ಮರಳಿ ಬರಲಾಗದ ಪರಲೋಕಕ್ಕೆ ನಿನ್ನನ್ನು ಕರೆದುಕೊಂಡು ಹೋಗಿಬಿಟ್ಟನೋ? ಎಂದು ರೋದಿಸಿದಳು. ॥ ೫೮ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ತನ್ನ ರಾಣಿಯು ಮೃತನಾದ ಪುತ್ರನಿಗಾಗಿ ಹೀಗೆ ಬಗೆ-ಬಗೆಯಾಗಿ ವಿಲಪಿಸುತ್ತಿರುವುದನ್ನು ಕಂಡು ಚಿತ್ರಕೇತುವೂ ಅತ್ಯಂತ ಶೋಕಸಂತಪ್ತನಾಗಿ ಬಿಕ್ಕಿ-ಬಿಕ್ಕಿ ಅಳತೊಡಗಿದನು. ॥ ೫೯ ॥ ರಾಜ-ರಾಣಿಯರು ವಿಲಪಿಸುತ್ತಿರುವುದನ್ನು ಕಂಡು ಅವರ ಅನುಯಾಯಿಗಳಾದ ಗಂಡಸರೂ, ಹೆಂಗಸರೂ ಕೂಡ ದುಃಖಿತರಾಗಿ ಅಳತೊಡಗಿದರು. ಹೀಗೆ ಇಡೀ ನಗರವೇ ಶೋಕದಿಂದ ಜಡವಸ್ತುವಿನಂತಾಯಿತು. ॥ ೬೦ ॥ ರಾಜನೇ! ಚಿತ್ರಕೇತು ಮಹಾರಾಜನು ಹೀಗೆ ಪುತ್ರಶೋಕದಿಂದ ಚೇತನಾರಹಿತ ನಾಗಿಬಿಟ್ಟಿದ್ದಾನೆ. ಆಗ ಅವನಿಗೆ ತಿಳಿವಳಿಕೆ ಕೊಡುವವರೂ ಯಾರೂ ಇಲ್ಲದಿರುವುದನ್ನು ಕಂಡುಕೊಂಡ ಅಂಗೀರಸ ಮಹರ್ಷಿಗಳೂ ಮತ್ತು ನಾರದಮಹರ್ಷಿಗಳೂ ಅವನಿದ್ದೆಡೆಗೆ ದಯಮಾಡಿಸಿದರು. ॥ ೬೧ ॥

*ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ
ಚಿತ್ರಕೇತುವಿಲಾಪೋ ನಾಮ ಚತುರ್ದಶೋಽಧ್ಯಾಯಃ ॥ ೧೪ ॥

# ಹದಿನೈದನೆಯ ಅಧ್ಯಾಯ

## ಚಿತ್ರಕೇತುವಿಗೆ ಅಂಗೀರಸರಿಂದ ಮತ್ತು ನಾರದಮಹರ್ಷಿಗಳಿಂದ ಉಪದೇಶ

ಶ್ರೀಶುಕ ಉವಾಚ

ಊಚತುರ್ಮೃತಕೋಪಾಂತೇ ಪತಿತಂ ಮೃತಕೋಪಮಮ್ ।
ಶೋಕಾಭಿಭೂತಂ ರಾಜಾನಂ ಬೋಧಯಂತೌ ಸದುಕ್ತಿಭಿಃ ॥ ೧ ॥

ಕೋಽಯಂ ಸ್ಯಾತ್ತವ ರಾಜೇಂದ್ರ ಭವಾನ್ಯಮನುಶೋಚತಿ ।
ತ್ವಂ ಚಾಸ್ಯ ಕತಮಃ ಸೃಷ್ಟೌ ಪುರೇದಾನೀಮತಃ ಪರಮ್ ॥ ೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ಚಿತ್ರಕೇತು ಮಹಾರಾಜನು ಶೋಕಗ್ರಸ್ತನಾಗಿ ಹೆಣದಂತೆ ತನ್ನ ಸತ್ತಿರುವ ಪುತ್ರನ ಬಳಿಯಲ್ಲೇ ಬಿದ್ದಿದ್ದನು. ಆಗ ಅಂಗಿರಾ ಮಹರ್ಷಿಗಳೂ ಹಾಗೂ ನಾರದಮಹರ್ಷಿಗಳೂ ಅವನಿಗೆ ಒಳ್ಳೆಯ ಮಾತುಗಳಿಂದ ತಿಳಿವಳಿಕೆ ನೀಡುತ್ತಾ ಹೀಗೆಂದರು. ॥ ೧ ॥ ಎಲೈ ರಾಜೇಂದ್ರಾ! ಯಾರಿಗಾಗಿ ನೀನು ಇಷ್ಟು ಶೋಕಿಸುತ್ತಿರುವೆಯೋ ಆ ಬಾಲಕನು ಈ ಜನ್ಮದಲ್ಲಿ ಮತ್ತು ಹಿಂದಿನ ಜನ್ಮದಲ್ಲಿ ನಿನಗೇನಾಗಬೇಕು? ಅವನಿಗೆ ನೀನು ಏನಾಗಬೇಕು? ಮುಂದಿನ ಜನ್ಮದಲ್ಲಿಯೂ ಅವನೊಂದಿಗೆ ಯಾವ ಸಂಬಂಧ ಉಳಿದೀತು? ॥ ೨ ॥

ಯಥಾ ಪ್ರಯಾಂತಿ ಸಂಯಾಂತಿ ಸ್ರೋತೋವೇಗೇನ ವಾಲುಕಾಃ ।
ಸಂಯುಜ್ಯಂತೇ ವಿಯುಜ್ಯಂತೇ ತಥಾ ಕಾಲೇನ ದೇಹಿನಃ ॥ ೩ ॥

ಯಥಾ ಧಾನಾಸು ವೈ ಧಾನಾ ಭವಂತಿ ನ ಭವಂತಿ ಚ ।
ಏವಂ ಭೂತೇಷು ಭೂತಾನಿ ಚೋದಿತಾನೀಶಮಾಯಯಾ ॥ ೪ ॥

ವಯಂ ಚ ತ್ವಂ ಚ ಯೇ ಚೇಮೇ ತುಲ್ಯಕಾಲಾಶ್ಚರಾಚರಾಃ ।
ಜನ್ಮಮೃತ್ಯೋರ್ಯಥಾ ಪಶ್ಚಾತ್ಪ್ರಾಙ್ನೈವಮಧುನಾಪಿ ಭೋಃ ॥ ೫ ॥

ಭೂತೈರ್ಭೂತಾನಿ ಭೂತೇಶಃ ಸೃಜತ್ಯವತಿ ಹಂತ್ಯಜಃ ।
ಆತ್ಮಸೃಷ್ಟೈರಸ್ವತಂತ್ರೈರನಪೇಕ್ಷೋಽಪಿ ಬಾಲವತ್ ॥ ೬ ॥

ದೇಹೇನ ದೇಹಿನೋ ರಾಜನ್‌ದೇಹಾದ್ದೇಹೋಽಭಿಜಾಯತೇ ।
ಬೀಜಾದೇವ ಯಥಾ ಬೀಜಂ ದೇಹ್ಯರ್ಥ ಇವ ಶಾಶ್ವತಃ ॥ ೭ ॥

ದೇಹದೇಹಿವಿಭಾಗೋಽಯಮವಿವೇಕಕೃತಃ ಪುರಾ ।
ಜಾತಿವ್ಯಕ್ತಿ ವಿಭಾಗೋಽಯಂ ಯಥಾ ವಸ್ತುನಿ ಕಲ್ಪಿತಃ ॥ ೮ ॥

*ಶ್ರೀಶುಕ ಉವಾಚ*

ಏವಮಾಶ್ವಾಸಿತೋ ರಾಜಾ ಚಿತ್ರಕೇತುರ್ದ್ವಿಜೋಕ್ತಿಭಿಃ ।
ಪ್ರಮೃಜ್ಯ ಪಾಣಿನಾ ವಕ್ತ್ರಮಾಧಿಮ್ಲಾನಮಭಾಷತ ॥ ೯ ॥

*ರಾಜೋವಾಚ*

ಕೌ ಯುವಾಂ ಜ್ಞಾನಸಂಪನ್ನೌ ಮಹಿಷ್ಠೌ ಚ ಮಹೀಯಸಾಮ್ ।
ಅವಧೂತೇನ ವೇಷೇಣ ಗೂಢಾವಿಹ ಸಮಾಗತೌ ॥ ೧೦ ॥

ನೀರಿನ ಪ್ರವಾಹದಿಂದ ಮರಳ ಕಣಗಳು ಒಂದು ಮತ್ತೊಂದರ ಜೊತೆಗೂಡುತ್ತವೆ ಹಾಗೂ ಅಗಲುತ್ತವೆ. ಹಾಗೆಯೇ ಸಮಯದ ಪ್ರವಾಹದಲ್ಲಿ ಪ್ರಾಣಿಗಳೂ ಕೂಡ ಒಂದಾಗುತ್ತಾರೆ ಮತ್ತು ಅಗಲುತ್ತಾ ಇರುತ್ತಾರೆ. ॥ ೩॥ ರಾಜನೇ! ಕೆಲವು ಬೀಜಗಳಿಂದ ಬೇರೆ ಬೀಜಗಳು ಉತ್ಪನ್ನವಾಗುತ್ತವೆ ಮತ್ತು ನಾಶವಾಗಿಹೋಗುತ್ತವೆ. ಹಾಗೆಯೇ ಭಗವಂತನ ಮಾಯೆಯಿಂದ ಪ್ರೇರಿತರಾಗಿ ಪ್ರಾಣಿಗಳಿಂದ ಬೇರೆ ಪ್ರಾಣಿಗಳು ಹುಟ್ಟುತ್ತವೆ ಹಾಗೂ ಸಾಯುತ್ತವೆ. ॥ ೪ ॥ ಎಲೈ ರಾಜಾ! ನಾವು, ನೀನು ಮತ್ತು ನಮ್ಮೊಂದಿಗೆ ಈ ಜಗತ್ತಿನಲ್ಲಿ ಎಷ್ಟು ಚರಾಚರ ಪ್ರಾಣಿಗಳು ವರ್ತಮಾನದಲ್ಲಿವೆಯೋ, ಅವೆಲ್ಲವೂ ತಮ್ಮ ಜನ್ಮದ ಮೊದಲು ಇರಲಿಲ್ಲ ಮತ್ತು ಮೃತ್ಯುವಿನ ನಂತರ ಇರಲಾರರು. ಇದರಿಂದ ಅವರ ಅಸ್ತಿತ್ವವಿಲ್ಲವೆಂಬುದು ಸಿದ್ಧವಾಗುತ್ತದೆ. ಏಕೆಂದರೆ, ಸತ್ಯವಸ್ತುವಾದರೋ ಎಲ್ಲ ಸಮಯದಲ್ಲಿ ಒಂದೇ ರೀತಿಯಾಗಿ ಇರುತ್ತದೆ. ॥ ೫ ॥ ಭಗವಂತನೇ ಸಮಸ್ತ ಪ್ರಾಣಿಗಳ ಅಧಿಪತಿಯಾಗಿದ್ದಾನೆ. ಅವನಲ್ಲಿ ಜನ್ಮ-ಮೃತ್ಯು ಮುಂತಾದ ವಿಕಾರಗಳು ಖಂಡಿತವಾಗಿಯೂ ಇಲ್ಲ. ಅವನಿಗೆ ಯಾವುದೇ ಇಚ್ಛೆಯಾಗಲೀ, ಅಪೇಕ್ಷೆಯಾಗಲೀ ಇಲ್ಲ. ಮಕ್ಕಳು ವಿನೋದಕ್ಕಾಗಿ ಆಟದ ವಸ್ತುಗಳಿಂದ ಮನೆ-ಮಠ ಮುಂತಾದವುಗಳನ್ನು ರಚಿಸುತ್ತಾ – ಕೆಡಿಸುತ್ತಾ ಇರುವಂತೆಯೇ ಅವನು ತಾನೇ ತಾನಾಗಿ ಪರತಂತ್ರ ಪ್ರಾಣಿಗಳನ್ನು ಸೃಷ್ಟಿಸುತ್ತಾನೆ ಮತ್ತು ಅವರ ಮೂಲಕ ಬೇರೆ ಪ್ರಾಣಿಗಳನ್ನು ರಚಿಸುತ್ತಾನೆ, ಪಾಲಿಸುತ್ತಾನೆ, ಸಂಹರಿಸುತ್ತಾನೆ. ॥ ೬ ॥ ಒಂದು ಬೀಜದಿಂದ ಇನ್ನೊಂದು ಬೀಜವು ಹುಟ್ಟುವಂತೆಯೇ ತಂದೆಯ ದೇಹದ ಮೂಲಕ ತಾಯಿಯ ದೇಹದಿಂದ ಮಗನದೇಹ ಹುಟ್ಟುತ್ತದೆ. ತಂದೆ-ತಾಯಿ-ಮಗ ಜೀವರೂಪದಲ್ಲಿ ದೇಹಿಯಾಗಿದ್ದಾರೆ ಹಾಗೂ ಬಾಹ್ಯದೃಷ್ಟಿಯಿಂದ ಕೇವಲ ಶರೀರವಾಗಿದ್ದಾರೆ. ಅವರಲ್ಲಿ ದೇಹಿಯಾದ ಜೀವನು ಘಟವೇ ಮುಂತಾದ ಕಾರ್ಯಗಳಲ್ಲಿ ಪೃಥಿವಿಯಂತೆ ನಿತ್ಯನಾಗಿದ್ದಾನೆ.* ॥ ೭ ॥ ರಾಜನೇ! ಒಂದೇ ಮಣ್ಣಿನ ರೂಪವಾದ ಗಡಿಗೆಯೇ ಮುಂತಾದ ಜಾತಿ ಮತ್ತು ಘಟಾದಿ ವ್ಯಕ್ತಿಗಳ ವಿಭಾಗವು ಕೇವಲ ಕಲ್ಪನೆಯೇ ಆಗಿದೆ. ಹಾಗೆಯೇ ಈ ದೇಹಿ ಮತ್ತು ದೇಹದ ವಿಭಾಗವೂ ಅನಾದಿ ಹಾಗೂ ಅವಿದ್ಯಾ ಕಲ್ಪಿತವಾಗಿದೆ. ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಅಂಗಿರಾಮಹರ್ಷಿಗಳು ಮತ್ತು ಮಹರ್ಷಿ ನಾರದರು ಹೀಗೆ ಚಿತ್ರಕೇತು ರಾಜನನ್ನು ಸಮಾಧಾನಪಡಿಸಿದಾಗ ಅವನು ಸ್ವಲ್ಪ ಧೈರ್ಯ ತಂದುಕೊಂಡು, ಶೋಕದಿಂದ ಬಾಡಿದ ಮುಖವನ್ನು ಕೈಯಿಂದ ಒರೆಸಿಕೊಂಡು, ಅವರಲ್ಲಿ ಇಂತೆಂದನು – ॥ ೯ ॥

**ಚಿತ್ರಕೇತುರಾಜನು ಹೇಳಿದನು** – ಎಲೈ ಮಹಾತ್ಮರೇ! ಪರಮ ಜ್ಞಾನ ಸಂಪನ್ನರಾಗಿ, ಉತ್ತಮರಲ್ಲಿಯೂ ಮಹೋತ್ತಮರಾಗಿ ಅವಧೂತವೇಷದಿಂದ ಮಹಿಮೆಯನ್ನು ಮರೆಸಿಕೊಂಡು ಇಲ್ಲಿಗೆ ಬಂದಿರುವ ನೀವಿಬ್ಬರೂ ಯಾರು? ಕೃಪೆಯಿಟ್ಟು ತಿಳಿಸಿರಿ. ॥ ೧೦ ॥

* ಅನಿತ್ಯವಾದ್ದರಿಂದ ಶರೀರವು ಅಸತ್ಯವಾಗಿದೆ. ಶರೀರವು ಅಸತ್ಯವಾದ ಕಾರಣದಿಂದ ಅದರ ಬೇರೆ-ಬೇರೆ ಅಭಿಮಾನಿಗಳೂ ಕೂಡ ಅಸತ್ಯವೇ ಆಗಿವೆ. ತ್ರಿಕಾಲಾಬಾಧಿತ ಸತ್ಯವಾದರೋ ಏಕಮಾತ್ರ ಪರಮಾತ್ಮನೇ ಆಗಿದ್ದಾನೆ. ಆದ್ದರಿಂದ ಶೋಕಿಸುವುದು ಯಾವ ವಿಧದಿಂದಲೂ ಉಚಿತವಲ್ಲ.

ಚರಂತಿ ಹ್ಯವನೌ ಕಾಮಂ
ಬ್ರಾಹ್ಮಣಾ ಭಗವತ್ಪ್ರಿಯಾಃ ।
ಮಾದೃಶಾಂ ಗ್ರಾಮ್ಯಬುದ್ಧೀನಾಂ
ಬೋಧಾಯೋನ್ಮತ್ತಲಿಂಗಿನಃ ॥ ೧೧ ॥

ಕುಮಾರೋ ನಾರದ
ಋಭುರಂಗಿರಾ ದೇವಲೋಽಸಿತಃ ।
ಅಪಾಂತರತಮೋ ವ್ಯಾಸೋ
ಮಾರ್ಕಂಡೇಯೋಽಥಗೌತಮಃ ॥ ೧೨ ॥

ವಸಿಷ್ಠೋ ಭಗವಾನ್ ರಾಮಃ ಕಪಿಲೋ ಬಾದರಾಯಣಿಃ ।
ದುರ್ವಾಸಾ ಯಾಜ್ಞವಲ್ಕ್ಯಶ್ಚ ಜಾತೂಕರ್ಣ್ಯಸ್ತಥಾರುಣಿಃ ॥ ೧೩ ॥

ರೋಮಶಶ್ಚ್ಯವನೋ ದತ್ತ ಆಸುರಿಃ ಸಪತಂಜಲಿಃ ।
ಋಷಿರ್ವೇದಶಿರಾ ಬೋಧ್ಯೋ ಮುನಿಃ ಪಂಚಶಿರಾಸ್ತಥಾ ॥ ೧೪ ॥

ಹಿರಣ್ಯನಾಭಃ ಕೌಸಲ್ಯಃ ಶ್ರುತದೇವ ಋತಧ್ವಜಃ ।
ಏತೇ ಪರೇ ಚ ಸಿದ್ಧೇಶಾಶ್ಚರಂತಿ ಜ್ಞಾನಹೇತವಃ ॥ ೧೫ ॥

ತಸ್ಮಾದ್ಯುವಾಂ ಗ್ರಾಮ್ಯಪಶೋರ್ಮಾಮ ಮೂಢಧಿಯಃ ಪ್ರಭೂ ।
ಅಂಧೇ ತಮಸಿ ಮಗ್ನಸ್ಯ ಜ್ಞಾನದೀಪ ಉದೀರ್ಯತಾಮ್ ॥ ೧೬ ॥

*ಅಂಗಿರಾ ಉವಾಚ*

ಅಹಂ ತೇ ಪುತ್ರಕಾಮಸ್ಯ ಪುತ್ರದೋಽಸ್ಮ್ಯಂಗಿರಾ ನೃಪ ।
ಏಷ ಬ್ರಹ್ಮಸುತಃ ಸಾಕ್ಷಾನ್ನಾರದೋ ಭಗವಾನೃಷಿಃ ॥ ೧೭ ॥

ಇತ್ಥಂ ತ್ವಾಂ ಪುತ್ರಶೋಕೇನ ಮಗ್ನಂ ತಮಸಿ ದುಸ್ತರೇ ।
ಅತದರ್ಹಮನುಸ್ಮೃತ್ಯ ಮಹಾಪುರುಷಗೋಚರಮ್ ॥ ೧೮ ॥

ಅನುಗ್ರಹಾಯ ಭವತಃ ಪ್ರಾಪ್ತಾವಾವಾಮಿಹ ಪ್ರಭೋ ।
ಬ್ರಹ್ಮಣ್ಯೋ ಭಗವದ್ಭಕ್ತೋ ನಾವಸೀದಿತುಮರ್ಹತಿ ॥ ೧೯ ॥

ತದೈವ ತೇ ಪರಂ ಜ್ಞಾನಂ ದದಾಮಿ ಗೃಹಮಾಗತಃ ।
ಜ್ಞಾತ್ವಾನ್ಯಾಭಿನಿವೇಶಂ ತೇ ಪುತ್ರಮೇವ ದದಾವಹಮ್ ॥ ೨೦ ॥

ಅಧುನಾ ಪುತ್ರಿಣಾಂ ತಾಪೋ ಭವತೈವಾನುಭೂಯತೇ ।
ಏವಂ ದಾರಾ ಗೃಹಾ ರಾಯೋ ವಿವಿಧೈಶ್ವರ್ಯಸಂಪದಃ ॥ ೨೧ ॥

ಶಬ್ದಾದಯಶ್ಚ ವಿಷಯಾಶ್ಚಲಾ ರಾಜ್ಯ ವಿಭೂತಯಃ ।
ಮಹೀ ರಾಜ್ಯಂ ಬಲಂ ಕೋಶೋ ಭೃತ್ಯಾಮಾತ್ಯಾಃ ಸುಹೃಜ್ಜನಾಃ ॥ ೨೨ ॥

ಬ್ರಹ್ಮಜ್ಞಾನಿಗಳಾಗಿ ಶ್ರೀಭಗವಂತನಿಗೆ ಪ್ರಿಯರಾಗಿರುವ ಹಲವಾರು ಮಂದಿ ಭಾಗವತೋತ್ತಮರು ನನ್ನಂತಹ ಪಶುಬುದ್ಧಿಯುಳ್ಳ ಪ್ರಾಣಿಗಳಿಗೆ ಉಪದೇಶ ಮಾಡಲಿಕ್ಕಾಗಿ ಹುಚ್ಚರಂತೆ ವೇಷವನ್ನು ಧರಿಸಿಕೊಂಡು ಭೂಮಿಯ ಮೇಲೆ ಸಂಚರಿಸುತ್ತಿರುವುದುಂಟು. ಅಂತಹವರಲ್ಲಿ ನೀವು ಯಾರು? ॥ ೧೧ ॥ ಸನತ್ಕುಮಾರರು, ನಾರದರು, ಋಭುಗಳು, ಅಂಗಿರಸರು, ದೇವಲರು, ಅಸಿತರು, ಅಪಾಂತರತಮರು, ವ್ಯಾಸರು, ಮಾರ್ಕಂಡೇಯರು, ಗೌತಮರು, ವಸಿಷ್ಠರು, ಭಗವಾನ್‌ಪರಶುರಾಮರು, ಕಪಿಲಮಹಾಮುನಿಗಳು, ಶುಕಮುನಿಗಳು, ದುರ್ವಾಸರು, ಯಾಜ್ಞವಲ್ಕ್ಯರು, ಜಾತಕರ್ಣರು, ಆರುಣಿಗಳೂ, ರೋಮಶರು, ಚ್ಯವನರು, ದತ್ತಾತ್ರೇಯರು, ಆಸುರಿ ಮಹರ್ಷಿಗಳು, ಪತಂಜಲಿಯವರು, ವೇದಶಿರಾರವರು, ಬೋಧಾಯನಮುನಿಗಳು, ಪಂಚಶಿರಸರು, ಹಿರಣ್ಯನಾಭರು, ಕೌಸಲ್ಯರು, ಶ್ರುತದೇವರು ಮತ್ತು ಋತಧ್ವಜರು – ಇವರೇ ಅಲ್ಲದೆ ಬೇರೆ ಸಿದ್ಧೇಶ್ವರರಾದ ಋಷಿ-ಮುನಿಗಳು ಜ್ಞಾನದಾನ ಮಾಡುವುದಕ್ಕಾಗಿ, ಭೂಮಿಯ ಮೇಲೆ ಸಂಚರಿಸುತ್ತಾ ಇರುತ್ತಾರೆ. ॥ ೧೨-೧೫ ॥ ಓ ಸ್ವಾಮಿಗಳೇ! ವಿಷಯ ಭೋಗಗಳಲ್ಲಿ ಸಿಕ್ಕಿಕೊಂಡಿರುವ ಮೂಢಬುದ್ಧಿಯುಳ್ಳ ನಾನು ಗ್ರಾಮ್ಯ ಪಶುವಿನಂತೆ ಅಜ್ಞಾನದ ಘೋರವಾದ ಅಂಧಕಾರದಲ್ಲಿ ಮುಳುಗಿರುವವನು. ತಾವು ನನಗೆ ಜ್ಞಾನಜ್ಯೋತಿಯನ್ನು ತೋರಿ ಪ್ರಕಾಶದ ಕೇಂದ್ರಕ್ಕೆ ಕೊಂಡೊಯ್ಯಿರಿ. ॥ ೧೬ ॥

**ಅಂಗಿರಸ ಮಹರ್ಷಿಗಳು ಹೇಳಿದರು** – ರಾಜನೇ! ನೀನು ಪುತ್ರಕಾಮನಾಗಿದ್ದಾಗ ನಿನಗೆ ಪುತ್ರನನ್ನು ಕರುಣಿಸಿದ ಅಂಗಿರಸ ಮಹರ್ಷಿಯೇ ನಾನು. ಕಣ್ಣೆದುರಿಗೆ ಕಾಣುತ್ತಿರುವ ಇವರು ಬ್ರಹ್ಮದೇವರ ಪುತ್ರರಾದ ಭಗವಾನ್ ನಾರದ ಮಹರ್ಷಿಗಳು. ॥ ೧೭ ॥ ನೀನು ಪುತ್ರಶೋಕದಿಂದ ಗಾಢವಾದ ಅಜ್ಞಾನಾಂಧಕಾರದಲ್ಲಿ ಮುಳುಗಿದ್ದುದನ್ನು ನಾವು ನೋಡಿ – ನೀನು ಭಗವಂತನ ಭಕ್ತನಾಗಿದ್ದು ಶೋಕಿಸುವುದು ಉಚಿತವಲ್ಲ ಎಂದು ಯೋಚಿಸಿ ನಿನಗೆ ಅನುಗ್ರಹವನ್ನು ತೋರಲೆಂದೇ ನಾವಿಬ್ಬರೂ ಇಲ್ಲಿಗೆ ಬಂದಿರುವೆವು. ರಾಜನೇ! ಶ್ರೀಭಗವಂತನಲ್ಲಿಯೂ, ಬ್ರಾಹ್ಮಣರಲ್ಲಿಯೂ ಭಕ್ತಿಯುಳ್ಳವನು ನಿಜವಾಗಿಯೂ ಯಾವುದೇ ಸ್ಥಿತಿಯಲ್ಲಿಯೂ ಶೋಕಪಡಬಾರದು. ॥ ೧೮-೧೯ ॥ ನಿನ್ನ ಮನೆಗೆ ನಾನು ಮೊದಲು ಬಂದಿದ್ದಾಗಲೇ ನಿನಗೆ ಪರಮಜ್ಞಾನವನ್ನು ಉಪದೇಶಮಾಡಬಹುದಾಗಿತ್ತು. ಆದರೆ ಇನ್ನೂ ನಿನ್ನ ಹೃದಯದಲ್ಲಿ ಪುತ್ರನ ಕುರಿತು ಉತ್ಕಟವಾದ ಅಭಿಲಾಷೆಯು ತುಂಬಿದೆ ಎಂಬುದನ್ನು ಗಮನಿಸಿ, ನಾನು ನಿನಗೆ ಆಗ ಜ್ಞಾನವನ್ನು ಕೊಡದೆ ಪುತ್ರನನ್ನೇ ಕೊಟ್ಟೆನು. ॥ ೨೦ ॥ ಪುತ್ರವಂತರಿಗೆ ಎಷ್ಟು ದುಃಖವುಂಟಾಗುತ್ತದೆ? ಎಂಬುದು ಈಗ ನಿನಗೆ ಸ್ವತಃ ಅನುಭವಕ್ಕೆ ಬಂದಿದೆ. ಹೆಂಡತಿ, ಮನೆ, ಮಠ, ಹಣ, ಬಗೆ-ಬಗೆಯ ಅಧಿಕಾರ, ಐಶ್ವರ್ಯಗಳು, ಸಂಪತ್ತುಗಳು, ಶಬ್ದ-ರೂಪ-ರಸ ಮುಂತಾದ ವಿಷಯಗಳು, ರಾಜ್ಯವೈಭವ, ಭೂಮಿ, ರಾಜ್ಯ, ಸೈನ್ಯ, ಭಂಡಾರ, ಸೇವಕರು, ಅಮಾತ್ಯರು, ನೆಂಟರು, ಇಷ್ಟರು – ಇವೆಲ್ಲಕ್ಕೂ ಇದೇ ಮಾತು ಅನ್ವಯಿಸುತ್ತದೆ. ಏಕೆಂದರೆ ಇವೆಲ್ಲವೂ ಅನಿತ್ಯವೇ ಆಗಿವೆ. ॥ ೨೧-೨೨ ॥

ಸರ್ವೇಽಪಿ ಶೂರಸೇನೇಮೇ ಶೋಕಮೋಹಭಯಾರ್ತಿದಾಃ ।
ಗಂಧರ್ವನಗರಪ್ರಖ್ಯಾಃ ಸ್ವಪ್ನಮಾಯಾಮನೋರಥಾಃ ॥ ೨೩ ॥

ದೃಶ್ಯಮಾನಾ ವಿನಾರ್ಥೇನ ನ ದೃಶ್ಯಂತೇ ಮನೋಭವಾಃ ।
ಕರ್ಮಭಿರ್ಧ್ಯಾಯತೋ ನಾನಾಕರ್ಮಾಣಿ ಮನಸೋಽಭವನ್ ॥ ೨೪ ॥

ಅಯಂ ಹಿ ದೇಹಿನೋ ದೇಹೋ ದ್ರವ್ಯಜ್ಞಾನಕ್ರಿಯಾತ್ಮಕಃ ।
ದೇಹಿನೋ ವಿವಿಧಕ್ಲೇಶಸಂತಾಪಕೃದುದಾಹೃತಃ ॥ ೨೫ ॥

ತಸ್ಮಾತ್ಸ್ವಸ್ಥೇನ ಮನಸಾ ವಿಮೃಶ್ಯ ಗತಿಮಾತ್ಮನಃ ।
ದ್ವೈತೇ ಧ್ರುವಾರ್ಥವಿಶ್ರಂಭಂ ತ್ಯಜೋಪಶಮಮಾವಿಶ ॥ ೨೬ ॥

*ನಾರದ ಉವಾಚ*

ಏತಾಂ ಮಂತ್ರೋಪನಿಷದಂ ಪ್ರತೀಚ್ಛ ಪ್ರಯತೋ ಮಮ ।
ಯಾಂ ಧಾರಯನ್ಸಪ್ತರಾತ್ರಾದ್ದ್ರಷ್ಟಾ ಸಂಕರ್ಷಣಂ ಪ್ರಭುಮ್ ॥ ೨೭ ॥

ಯತ್ಪಾದಮೂಲಮುಪಸೃತ್ಯ ನರೇಂದ್ರ ಪೂರ್ವೇ
ಶರ್ವಾದಯೋ ಭ್ರಮಮಿಮಂ ದ್ವಿತಯಂ ವಿಸೃಜ್ಯ ।
ಸದ್ಯಸ್ತದೀಯಮತುಲಾನಧಿಕಂ ಮಹಿತ್ವಂ
ಪ್ರಾಪುರ್ಭವಾನಪಿ ಪರಂ ನಚಿರಾದುಪೈತಿ ॥ ೨೮ ॥

ಶೂರ ಸೇನನೇ! ಆದ್ದರಿಂದ ಇವೆಲ್ಲವೂ ಶೋಕ, ಮೋಹ, ಭಯ, ದುಃಖ ಇವುಗಳಿಗೆ ಕಾರಣವಾಗಿವೆ, ಮನೋವಿನೋದ ವಾಗಿವೆ, ಪೂರ್ಣವಾಗಿ ಕಲ್ಪಿತ ಮತ್ತು ಮಿಥ್ಯೆಗಳಾಗಿವೆ, ಏಕೆಂದರೆ, ಇವೆಲ್ಲವೂ ಇಲ್ಲದೆಯೇ ಕಂಡುಬರುತ್ತವೆ. ಇದರಿಂದಲೇ ಇವು ಒಂದು ಕ್ಷಣದಲ್ಲಿ ಕಾಣಿಸಿದರೂ ಮರುಕ್ಷಣದಲ್ಲೇ ಕಣ್ಮರೆಯಾಗುತ್ತವೆ. ಇವು ಗಂಧರ್ವನಗರದಂತೆ, ಸ್ವಪ್ನದಂತೆ, ಇಂದ್ರಜಾಲದಂತೆ, ಮನೋ ರಥದ ವಸ್ತುಗಳಂತೆ ಸರ್ವಥಾ ಅಸತ್ಯವಾಗಿವೆ. ಕರ್ಮ ವಾಸನೆಗಳಿಂದ ಪ್ರೇರಿತರಾಗಿ ವಿಷಯಗಳನ್ನು ಚಿಂತಿಸುತ್ತಲೇ ಇರುವ ಜನರ ಮನಸ್ಸು ಅನೇಕ ಪ್ರಕಾರದ ಕರ್ಮಗಳನ್ನು ಸೃಷ್ಟಿಸುತ್ತಾ ಇರುತ್ತದೆ. ॥ ೨೩-೨೪ ॥ ಪಂಚಭೂತ, ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ಸಂಘಾತವಾದ ಜೀವಾತ್ಮನ ಈ ದೇಹವು ಜೀವಿಗೆ ಅನೇಕ ವಿಧದ ಕ್ಲೇಶಗಳನ್ನೂ, ಸಂತಾಪಗಳನ್ನೂ ಕೊಡುವಂತಹುದು ಎಂದು ಹೇಳಲಾಗಿದೆ. ॥ ೨೫ ॥ ಅದಕ್ಕಾಗಿ ನೀನು ವಿಷಯಗಳಲ್ಲಿ ಅಲೆಯುತ್ತಿರುವ ಮನಸ್ಸನ್ನು ತಡೆದು ಶಾಂತಗೊಳಿಸು, ಸ್ವಸ್ಥ ಗೊಳಿಸು. ಮತ್ತೆ ಆ ಮನಸ್ಸಿನಿಂದ ನಿನ್ನ ನಿಜವಾದ ಸ್ವರೂಪದ ಕುರಿತು ವಿಚಾರಮಾಡು. ಈ ದ್ವೈತ ಭ್ರಮೆಯಲ್ಲಿರುವ ನಿತ್ಯತ್ವದ ಬುದ್ಧಿಯನ್ನು ಬಿಟ್ಟು, ಪರಮ ಶಾಂತಿಸ್ವರೂಪನಾದ ಪರಮಾತ್ಮನಲ್ಲಿ ನೆಲೆಯಾಗಿ ನಿಲ್ಲು. ॥ ೨೬ ॥

**ದೇವರ್ಷಿನಾರದರು ಹೇಳಿದರು** – ರಾಜೇಂದ್ರಾ! ನೀನು ಏಕಾಗ್ರಚಿತ್ತದಿಂದ ನಾನು ಉಪದೇಶಿಸುವ ಈ ಮಂತ್ರೋಪನಿಷತ್ತನ್ನು ಗ್ರಹಿಸುವವನಾಗು. ಇದನ್ನು ಜಪಿಸುವುದರಿಂದ ಏಳು ರಾತ್ರಿಗಳಲ್ಲಿ ಭಗವಾನ್ ಸಂಕರ್ಷಣನ ದರ್ಶನವಾಗುವುದು. ॥ ೨೭ ॥ ನರೇಂದ್ರನೇ! ಹಿಂದಿನ ಕಾಲದಲ್ಲಿ ಭಗವಾನ್ ಶಂಕರನೇ ಮುಂತಾದವರು ಶ್ರೀಸಂಕರ್ಷಣ ದೇವರ ಚರಣಕಮಲಗಳನ್ನೇ ಆಶ್ರಯಿಸಿದ್ದರು. ಇದರಿಂದ ಅವರು ದ್ವೈತಭ್ರಮೆಯನ್ನು ತ್ಯಾಗಗೈದು, ಅವನ ಆ ಮಹಿಮೆಯನ್ನು ಪಡೆದುಕೊಂಡರು. ಅದರಿಂದ ಮಿಗಿಲಾದುದು ಯಾವುದೂ ಇಲ್ಲ, ಅದಕ್ಕೆ ಸಮಾನವಾದುದೂ ಇಲ್ಲ. ನೀನೂ ಕೂಡ ಬಹು ಬೇಗನೇ ಭಗವಂತನ ಅದೇ ಪರಮಪದವನ್ನು ಪಡೆದುಕೊಳ್ಳುವೆ. ॥ ೨೮ ॥

*ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ
ಚಿತ್ರಕೇತುಸಾಂತ್ವನಂ ನಾಮ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ಚಿತ್ರಕೇತುವಿನ ವೈರಾಗ್ಯ ಮತ್ತು ಸಂಕರ್ಷಣಸ್ವಾಮಿಯ ದರ್ಶನ

*ಶ್ರೀಶುಕ ಉವಾಚ*

ಅಥ ದೇವಋಷೀ ರಾಜನ್ಸಂಪರೇತಂ ನೃಪಾತ್ಮಜಮ್ ।
ದರ್ಶಯಿತ್ವೇತಿ ಹೋವಾಚ ಜ್ಞಾತೀನಾಮನುಶೋಚತಾಮ್ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಅನಂತರ ದೇವರ್ಷಿ ನಾರದರು ತಮ್ಮ ಯೋಗಬಲದಿಂದ ಮೃತನಾದ ರಾಜಕುಮಾರನ ಜೀವಾತ್ಮನನ್ನು ಶೋಕಪಡುತ್ತಿದ್ದ ನೆಂಟರಿಷ್ಟರ ಮುಂದೆ ಪ್ರತ್ಯಕ್ಷವಾಗುವಂತೆ ಮಾಡಿ ಅವನಲ್ಲಿ ಕೇಳಿದರು – ॥ ೧ ॥

*ನಾರದ ಉವಾಚ*

ಜೀವಾತ್ಮನ್ಪಶ್ಯ ಭದ್ರಂ ತೇ ಮಾತರಂ ಪಿತರಂ ಚ ತೇ ।
ಸುಹೃದೋ ಬಾಂಧವಾಸ್ತಪ್ತಾಃ ಶುಚಾ ತ್ವತ್ಕೃತಯಾ ಭೃಶಮ್ ॥ ೨ ॥

ಕಲೇವರಂ ಸ್ವಮಾವಿಶ್ಯ ಶೇಷಮಾಯುಃ ಸುಹೃದ್ವೃತಃ ।
ಭುಂಕ್ಷ್ವ ಭೋಗಾನ್ ಪಿತೃಪ್ರತ್ತಾನಧಿತಿಷ್ಠ ನೃಪಾಸನಮ್ ॥ ೩ ॥

*ಜೀವ ಉವಾಚ*

ಕಸ್ಮಿನ್‌ಜನ್ಮನ್ಯಮೀ ಮಹ್ಯಂ ಪಿತರೋ ಮಾತರೋಽಭವನ್ ।
ಕರ್ಮಭಿರ್ಭ್ರಾಮ್ಯಮಾಣಸ್ಯ ದೇವತಿರ್ಯಙ್ನೃಯೋನಿಷು ॥ ೪ ॥

ಬಂಧುಜ್ಞಾತ್ಯರಿಮಧ್ಯಸ್ಥಮಿತ್ರೋದಾಸೀನವಿದ್ವಿಷಃ ।
ಸರ್ವ ಏವ ಹಿ ಸರ್ವೇಷಾಂ ಭವಂತಿ ಕ್ರಮಶೋ ಮಿಥಃ ॥ ೫ ॥

ಯಥಾ ವಸ್ತೂನಿ ಪಣ್ಯಾನಿ ಹೇಮಾದೀನಿ ತತಸ್ತತಃ ।
ಪರ್ಯಟಂತಿ ನರೇಷ್ವೇವಂ ಜೀವೋ ಯೋನಿಷು ಕರ್ತೃಷು ॥ ೬ ॥

ನಿತ್ಯಸ್ಯಾರ್ಥಸ್ಯ ಸಂಬಂಧೋ ಹ್ಯನಿತ್ಯೋ ದೃಶ್ಯತೇ ನೃಷು ।
ಯಾವದ್ಯಸ್ಯ ಹಿ ಸಂಬಂಧೋ ಮಮತ್ವಂ ತಾವದೇವ ಹಿ ॥ ೭ ॥

ಏವಂ ಯೋನಿಗತೋ ಜೀವಃ ಸ ನಿತ್ಯೋ ನಿರಹಂಕೃತಃ ।
ಯಾವದ್ಯತ್ರೋಪಲಭ್ಯೇತ ತಾವತ್ಸ್ವತ್ವಂ ಹಿ ತಸ್ಯ ತತ್ ॥ ೮ ॥

ಏಷ ನಿತ್ಯೋಽವ್ಯಯಃ ಸೂಕ್ಷ್ಮ ಏಷ ಸರ್ವಾಶ್ರಯಃ ಸ್ವದೃಕ್ ।
ಆತ್ಮಮಾಯಾಗುಣೈರ್ವಿಶ್ವಮಾತ್ಮಾನಂ ಸೃಜತಿ ಪ್ರಭುಃ ॥ ೯ ॥

ನ ಹ್ಯಸ್ಯಾತಿಪ್ರಿಯಃ ಕಶ್ಚಿನ್ನಾಪ್ರಿಯಃ ಸ್ವಃ ಪರೋಽಪಿ ವಾ ।
ಏಕಃ ಸರ್ವಧಿಯಾಂ ದ್ರಷ್ಟಾ ಕರ್ತೄಣಾಂ ಗುಣದೋಷಯೋಃ ॥ ೧೦ ॥

ನಾದತ್ತ ಆತ್ಮಾ ಹಿ ಗುಣಂ ನ ದೋಷಂ ನ ಕ್ರಿಯಾಫಲಮ್ ।
ಉದಾಸೀನವದಾಸೀನಃ ಪರಾವರದೃಗೀಶ್ವರಃ ॥ ೧೧ ॥

*ಶ್ರೀಶುಕ ಉವಾಚ*

ಇತ್ಯುದೀರ್ಯ ಗತೋ ಜೀವೋ ಜ್ಞಾತಯಸ್ತಸ್ಯ ತೇ ತದಾ ।
ವಿಸ್ಮಿತಾ ಮುಮುಚುಃ ಶೋಕಂ ಛಿತ್ತ್ವಾಽಽತ್ಮಸ್ನೇಹಶೃಂಖಲಾಮ್ ॥ ೧೨ ॥

**ದೇವಋಷಿ ನಾರದರು ಹೇಳಿದರು** – ಎಲೈ ಜೀವಾತ್ಮನೇ! ನಿನಗೆ ಮಂಗಳವಾಗಲಿ. ಇಲ್ಲಿ ನೋಡು. ನಿನ್ನ ತಂದೆ-ತಾಯಿ, ಬಂಧು-ಮಿತ್ರರು ನಿನ್ನ ಅಗಲಿಕೆಯಿಂದ ಅತ್ಯಂತ ಶೋಕತಪ್ತರಾಗಿದ್ದಾರೆ. ॥ ೨ ॥ ಅದಕ್ಕಾಗಿ ನೀನು ನಿನ್ನ ಶರೀರದೊಳಗೆ ಪ್ರವೇಶಿಸಿ ಉಳಿದ ಆಯುಸ್ಸನ್ನು ನಿನ್ನ ನೆಂಟರಿಷ್ಟರ ಜೊತೆಯಲ್ಲಿ ಇದ್ದು ಕಳೆಯುವವನಾಗು. ನಿನ್ನ ತಂದೆಯು ಕೊಡುವ ಭೋಗಗಳನ್ನು ಅನುಭವಿಸುತ್ತಾ, ರಾಜ್ಯಸಿಂಹಾಸನದ ಮೇಲೆ ಕುಳಿತುಕೋ ॥ ೩. ॥

**ಜೀವಾತ್ಮನು ಹೇಳಿದನು** – ದೇವರ್ಷಿಗಳೇ! ನಾನು ನನ್ನ ಕರ್ಮಾನುಸಾರವಾಗಿ ದೇವತೆಗಳು, ಮನುಷ್ಯರು, ಪಶು-ಪಕ್ಷಿ ಮುಂತಾದ ಯೋನಿಗಳಲ್ಲಿ ಎಷ್ಟು ಜನ್ಮಗಳಿಂದ ಅಲೆಯುತ್ತಿರುವೆನೋ ತಿಳಿಯದು. ಅವುಗಳಲ್ಲಿ ಯಾವ-ಯಾವ ಜನ್ಮಗಳಲ್ಲಿ ಇವರು ತಂದೆ-ತಾಯಿಗಳಾಗಿದ್ದರು ? ॥ ೪ ॥ ಬೇರೆ-ಬೇರೆ ಜನ್ಮಗಳಲ್ಲಿ ಎಲ್ಲರೂ ಒಬ್ಬರಿಗೊಬ್ಬರು ನೆಂಟರಿಷ್ಟರೋ, ಶತ್ರು-ಮಿತ್ರರೋ, ಮಧ್ಯಸ್ಥರೋ, ಉದಾಸೀನರೋ, ದ್ವೇಷಿಗಳೋ, ಆಗುತ್ತಾ ಇರುತ್ತಾರೆ. ॥ ೫ ॥ ಚಿನ್ನವೇ ಮುಂತಾದ ಕ್ರಯ-ವಿಕ್ರಯದ ವಸ್ತುಗಳು ಒಬ್ಬ ವ್ಯಾಪಾರಿಯಿಂದ ಮತ್ತೊಬ್ಬರ ಬಳಿಗೆ ಹೋಗುತ್ತಾ-ಬರುತ್ತಾ ಇರುವಂತೆಯೇ ಜೀವಿಯೂ ಬೇರೆ-ಬೇರೆ ಯೋನಿಗಳಲ್ಲಿ ಹೋಗುತ್ತಾ-ಬರುತ್ತಾ ಇರುತ್ತಾನೆ. ॥ ೬ ॥ ಹೀಗೆ ವಿಚಾರ ಮಾಡಿದರೆ ಮನುಷ್ಯರಿಂದ ಹೆಚ್ಚುದಿನ ಬಾಳುವಂತಹ ಚಿನ್ನವೇ ಮುಂತಾದ ಪದಾರ್ಥಗಳ ಸಂಬಂಧವೂ ಕೂಡ ಮನುಷ್ಯರೊಂದಿಗೆ ಸ್ಥಾಯಿಯಾಗಿಲ್ಲ, ಕ್ಷಣಿಕವೇ ಇರುತ್ತದೆ. ವಸ್ತುವಿನ ಸಂಬಂಧ ಇರುವತನಕ ಮನುಷ್ಯನಿಗೆ ಆ ವಸ್ತುವಿನಲ್ಲಿ ಮಮತೆಯೇ ಇರುತ್ತದೆ. ॥ ೭ ॥ ಜೀವನು ನಿತ್ಯನೂ, ಅಹಂಕಾರ ರಹಿತನೂ ಆಗಿರುವನು. ಅವನು ಗರ್ಭವನ್ನು ಪ್ರವೇಶಿಸಿ ಆ ಶರೀರದಲ್ಲಿ ಇರುವ ತನಕ ಆ ಶರೀರವನ್ನು ತನ್ನದೆಂದು ತಿಳಿಯುತ್ತಾನೆ. ॥ ೮ ॥ ಈ ಜೀವನು ನಿತ್ಯನೂ ಅವಿನಾಶಿಯೂ, ಸೂಕ್ಷ್ಮನೂ, ಜನ್ಮಾದಿರಹಿತನೂ, ಎಲ್ಲರ ಆಶ್ರಯನೂ, ಸ್ವಯಂ ಪ್ರಕಾಶನೂ ಆಗಿರುವನು. ಅವನಿಗೆ ಸ್ವರೂಪದಿಂದ ಹುಟ್ಟು-ಸಾವುಗಳಾವುವೂ ಇಲ್ಲ. ಹೀಗಿದ್ದರೂ ಇವನು ಈಶ್ವರರೂಪನೇ ಇರುವುದರಿಂದ ತನ್ನ ಮಾಯೆಯ ಗುಣಗಳಿಂದಲೇ ತಾನೇ-ತನ್ನನ್ನು ವಿಶ್ವದರೂಪದಲ್ಲಿ ಪ್ರಕಟಿಸಿಕೊಳ್ಳುವನು. ॥ ೯ ॥ ಇವನಿಗೆ ಅತ್ಯಂತ ಪ್ರಿಯರಾಗಲೀ, ಅಪ್ರಿಯರಾಗಲೀ ಯಾರೂ ಇಲ್ಲ. ತನ್ನವರು-ಇತರರು ಎಂಬುದೂ ಇಲ್ಲ. ಏಕೆಂದರೆ, ಗುಣ-ದೋಷ (ಹಿತ-ಅಹಿತ)ಗಳನ್ನುಂಟು ಮಾಡುವ ಶತ್ರುತ್ವ-ಮಿತ್ರತ್ವ ಮುಂತಾದ ಬೇರೆ-ಬೇರೆ ಬುದ್ಧಿಗಳ ವೃತ್ತಿಗಳಿಗೆ ಇವನೊಬ್ಬನೇ ಸಾಕ್ಷಿಯಾಗಿದ್ದು ನಿಜವಾಗಿ ಇವನು ಅದ್ವಿತೀಯನಾಗಿದ್ದಾನೆ. ॥ ೧೦ ॥ ಈ ಆತ್ಮನು ಕಾರ್ಯ-ಕಾರಣಗಳ ಸಾಕ್ಷಿ ಮತ್ತು ಸ್ವತಂತ್ರನಾಗಿದ್ದಾನೆ. ಅದಕ್ಕಾಗಿ ಇವನು ಶರೀರಾದಿಗಳ ಗುಣ-ದೋಷಗಳನ್ನು ಅಥವಾ ಕರ್ಮಫಲವನ್ನು ಸ್ವೀಕರಿಸುವುದಿಲ್ಲ, ಸದಾ ಉದಾಸೀನ ಭಾವದಿಂದಲೇ ಇರುತ್ತಾನೆ ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಹೀಗೆ ಹೇಳಿ ಆ ಜೀವಾತ್ಮನು ಹೊರಟುಹೋದನು. ಅವನ ಮಾತನ್ನು ಕೇಳಿ ನೆಂಟರಿಷ್ಟರು ಅತ್ಯಂತ ವಿಸ್ಮಿತರಾದರು. ಅವರ ಸ್ನೇಹ-ಬಂಧನ

ನಿರ್ಹೃತ್ಯ ಜ್ಞಾತಯೋ ಜ್ಞಾತೇರ್ದೇಹಂ ಕೃತ್ವೋಚಿತಾಃ ಕ್ರಿಯಾಃ ।
ತತ್ಯಜುರ್ದುಸ್ತ್ಯಜಂ ಸ್ನೇಹಂ ಶೋಕಮೋಹಭಯಾರ್ತಿದಮ್ ॥ ೧೩ ॥

ಬಾಲಘ್ನ್ಯೋ ವ್ರೀಡಿತಾಸ್ತತ್ರ ಬಾಲಹತ್ಯಾಹತಪ್ರಭಾಃ ।
ಬಾಲಹತ್ಯಾವ್ರತಂ ಚೇರುರ್ಬ್ರಾಹ್ಮಣೈರ್ಯನ್ನಿರೂಪಿತಮ್ ।
ಯಮುನಾಯಾಂ ಮಹಾರಾಜ ಸ್ಮರಂತ್ಯೋ ದ್ವಿಜಭಾಷಿತಮ್ ॥ ೧೪ ॥

ಸ ಇತ್ಥಂ ಪ್ರತಿಬುದ್ಧಾತ್ಮಾ ಚಿತ್ರಕೇತುರ್ದ್ವಿಜೋಕ್ತಿಭಿಃ ।
ಗೃಹಾಂಧ ಕೂಪಾನ್ನಿಷ್ಕ್ರಾಂತಃ ಸರಃಪಂಕಾದಿವ ದ್ವಿಪಃ ॥ ೧೫ ॥

ಕಾಲಿಂದ್ಯಾಂ ವಿಧಿವತ್ಸ್ನಾತ್ವಾ ಕೃತಪುಣ್ಯಜಲಕ್ರಿಯಃ ।
ಮೌನೇನ ಸಂಯತಪ್ರಾಣೋ ಬ್ರಹ್ಮಪುತ್ರಾವವಂದತ ॥ ೧೬ ॥

ಅಥ ತಸ್ಮೈ ಪ್ರಪನ್ನಾಯ ಭಕ್ತಾಯ ಪ್ರಯುತಾತ್ಮನೇ ।
ಭಗವಾನ್ನಾರದಃ ಪ್ರೀತೋ ವಿದ್ಯಾಮೇತಾಮುವಾಚ ಹ ॥ ೧೭ ॥

ಓಂ ನಮಸ್ತುಭ್ಯಂ ಭಗವತೇ ವಾಸುದೇವಾಯ ಧೀಮಹಿ ।
ಪ್ರದ್ಯುಮ್ನಾಯಾನಿರುದ್ಧಾಯ ನಮಃ ಸಂಕರ್ಷಣಾಯ ಚ ॥ ೧೮ ॥

ನಮೋ ವಿಜ್ಞಾನಮಾತ್ರಾಯ ಪರಮಾನಂದಮೂರ್ತಯೇ ।
ಆತ್ಮಾರಾಮಾಯ ಶಾಂತಾಯ ನಿವೃತ್ತದ್ವೈತದೃಷ್ಟಯೇ ॥ ೧೯ ॥

ಆತ್ಮಾನಂದಾನುಭೂತ್ಯೈವ ನ್ಯಸ್ತಶಕ್ತ್ಯೂರ್ಮಯೇ ನಮಃ ।
ಹೃಷೀಕೇಶಾಯ ಮಹತೇ ನಮಸ್ತೇ ವಿಶ್ವಮೂರ್ತಯೇ ॥ ೨೦ ॥

ವಚಸ್ಯುಪರತೇಽಪ್ರಾಪ್ಯ ಯ ಏಕೋ ಮನಸಾ ಸಹ ।
ಅನಾಮರೂಪಶ್ಚಿನ್ಮಾತ್ರಃ ಸೋಽವ್ಯಾನ್ನಃ ಸದಸತ್ಪರಃ ॥ ೨೧ ॥

ಕಡಿದುಹೋಯಿತು ಮತ್ತು ಅವನು ಸತ್ತಿರುವ ದುಃಖವೂ ದೂರ ವಾಯಿತು. ॥ ೧೨ ॥ ಇದಾದ ಬಳಿಕ ಜ್ಞಾತಿ ಬಂಧುಗಳು ಬಾಲಕನ ಶವವನ್ನು ಎತ್ತಿಕೊಂಡು ಹೋಗಿ ಅದಕ್ಕೆ ಕಾಲೋಚಿತ ಸಂಸ್ಕಾರ ಗಳನ್ನೂ, ಮರಣಾನಂತರದ ಕ್ರಿಯೆಗಳನ್ನು ಮಾಡಿ ಮುಗಿಸಿದರು. ಶೋಕ, ಮೋಹ, ಭಯ, ದುಃಖಗಳಿಗೆ ಕಾರಣವಾಗುವ ಸ್ನೇಹ-ಮಮತೆಗಳನ್ನೂ ತೊರೆದರು. ॥ ೧೩ ॥ ಪರೀಕ್ಷಿತನೇ ! ಆ ಮಗುವಿಗೆ ವಿಷವನ್ನಿಟ್ಟು ಸಾವಿಗೆ ಕಾರಣರಾದ ರಾಣಿಯರ ಮುಖವು ಬಾಲಹತ್ಯೆಯಿಂದ ಕಾಂತಿಹೀನವಾಗಿತ್ತು ಮತ್ತು ನಾಚಿಕೆ ಯಿಂದ ಕಣ್ಣೆತ್ತಿಯೂ ನೋಡದಾದರು. ಅವರು ಅಂಗಿರಾ ಋಷಿಯ ಉಪದೇಶವನ್ನು ನೆನೆದು ಮಾತ್ಸರ್ಯರಹಿತರಾಗಿ ಯಮುನಾತೀರದಲ್ಲಿ ಬ್ರಾಹ್ಮಣರ ಆದೇಶದಂತೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡರು. ॥ ೧೪ ॥ ಹೀಗೆ ಅಂಗಿರಸ ಮತ್ತು ನಾರದ ಮಹರ್ಷಿಗಳ ಉಪದೇಶಗಳಿಂದ ಚಿತ್ರಕೇತುವಿನ ವಿವೇಕ ಬುದ್ಧಿಯು ಎಚ್ಚರಗೊಂಡಿತು. ಇದರಿಂದ ಅವನು – ಸಲಗವು ಕೆರೆಯ ಕೆಸರಿನಿಂದ ಮೇಲೆದ್ದು ಬರುವಂತೆ – ಮನೆ- ವಾರ್ತೆಗಳ ಕಗ್ಗತ್ತಲೆಯ ಕೂಪದಿಂದ ಹೊರಬಂದನು. ॥ ೧೫ ॥ ಅವನು ಯಮುನಾನದಿಯಲ್ಲಿ ವಿಧಿವತ್ತಾಗಿ ಸ್ನಾನಮಾಡಿ, ತರ್ಪಣಾದಿ ಧಾರ್ಮಿಕ ಕ್ರಿಯೆಗಳನ್ನು ಪೂರೈಸಿದನು. ಅನಂತರ ಇಂದ್ರಿಯ ಸಂಯಮದಿಂದ ಕೂಡಿ, ಮೌನವಾಗಿ ಅವನು ದೇವರ್ಷಿನಾರದರ ಹಾಗೂ ಮಹರ್ಷಿ ಅಂಗಿರಸರ ಚರಣಗಳಲ್ಲಿ ವಂದಿಸಿ ಕೊಂಡನು. ॥ ೧೬ ॥ ಚಿತ್ರಕೇತುವು ಜಿತೇಂದ್ರಿಯನೂ, ಭಗವದ್ಭ ಕ್ತನೂ, ಶರಣಾಗತನೂ ಆಗಿದ್ದಾನೆಂದು ನಾರದರು ನೋಡಿ, ಅವರು ತುಂಬಾ ಪ್ರಸನ್ನರಾಗಿ ಅವನಿಗೆ ಈ ಸಂಕರ್ಷಣ ವಿದ್ಯೆ ಯನ್ನು ಉಪದೇಶಮಾಡಿದರು. ॥ ೧೭ ॥

ಓಂಕಾರಸ್ವರೂಪನಾದ ಭಗವಂತಾ ! ನೀನು ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ – ಈ ರೂಪಗಳಿಂದ ಕ್ರಮ ವಾಗಿ ಚಿತ್ತ, ಬುದ್ಧಿ, ಮನಸ್ಸು ಮತ್ತು ಅಹಂಕಾರಗಳಿಗೆ ಅಧಿಷ್ಠಾನ ನಾಗಿರುವೆ. ನಾನು ನಿನ್ನ ಈ ಚತುರ್ವ್ಯೂಹರೂಪವನ್ನು ಮತ್ತೆ-ಮತ್ತೆ ನಮಸ್ಕಾರಪೂರ್ವಕವಾಗಿ ಧ್ಯಾನಿಸುತ್ತೇನೆ. ॥ ೧೮ ॥ ನೀನು ವಿಶುದ್ಧ ವಿಜ್ಞಾನಸ್ವರೂಪನಾಗಿರುವೆ. ನಿನ್ನ ಮೂರ್ತಿಯು ಪರಮಾನಂದ ಮಯವಾಗಿದೆ. ನೀನು ನಿನ್ನ ಸ್ವರೂಪಭೂತ ಆನಂದದಲ್ಲೇ ಮಗ್ನನಾಗಿದ್ದು, ಪರಮಶಾಂತನಾಗಿರುವೆ. ದ್ವೈತದೃಷ್ಟಿಯು ನಿನ್ನನ್ನು ಸ್ಪರ್ಶಿಸಲಾರದು. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೧೯ ॥ ಸ್ವರೂಪಭೂತವಾದ ಆನಂದದ ಅನುಭವದಿಂದಲೇ ಮಾಯೆಯಿಂದುಂಟಾದ ರಾಗ-ದ್ವೇಷಾದಿ ದೋಷಗಳನ್ನು ತಿರಸ್ಕ ರಿಸಿದವನಿಗೆ ನಮಸ್ಕಾರವು. ಇಂದ್ರಿಯಗಳಿಗೆ ಅಧಿಪತಿಯೂ, ಮಹತ್‌ಸ್ವರೂಪನೂ, ವಿಶ್ವಮೂರ್ತಿಯೂ ಆಗಿರುವ ನಿನಗೆ ನಮಸ್ಕಾರವು. ॥ ೨೦ ॥ ಮನಸ್ಸುಸಹಿತ ವಾಣಿಯು ನಿನ್ನವರೆಗೆ ತಲುಪದೆ ಅದು ಮರಳುತ್ತದೆ. ಅದು ಉಪರತವಾದಾಗ ಉಳಿ ಯುವ ಅದ್ವಿತೀಯವೂ, ನಾಮ-ರೂಪರಹಿತವೂ, ಚೇತನ ಮಾತ್ರವೂ, ಕಾರ್ಯಕಾರಣಗಳಿಂದ ಅತೀತವೂ ಆದ ಆ ಪರ ತತ್ತ್ವವಾದ ಪರಮಾತ್ಮನು ನಮ್ಮನ್ನು ರಕ್ಷಿಸಲಿ. ॥ ೨೧ ॥

ಯಸ್ಮಿನ್ನಿದಂ ಯತಶ್ಚೇದಂ ತಿಷ್ಠತ್ಯಪ್ಯೇತಿ ಜಾಯತೇ ।
ಮೃಣ್ಮಯೇಷ್ವಿವ ಮೃಜ್ಜಾತಿಸ್ತಸ್ಮೈ ತೇ ಬ್ರಹ್ಮಣೇ ನಮಃ ॥ ೨೨ ॥

ಯನ್ನ ಸ್ಪೃಶಂತಿ ನ ವಿದುರ್ಮನೋಬುದ್ಧೀಂದ್ರಿಯಾಸವಃ ।
ಅಂತರ್ಬಹಿಶ್ಚ ವಿತತಂ ವ್ಯೋಮವತ್ತನ್ನತೋಽಸ್ಮ್ಯಹಮ್ ॥ ೨೩ ॥

ದೇಹೇಂದ್ರಿಯಪ್ರಾಣಮನೋಧಿಯೋಽಮೀ
ಯದಂಶವಿದ್ಧಾಃ ಪ್ರಚರಂತಿ ಕರ್ಮಸು ।
ನೈವಾನ್ಯದಾ ಲೋಹಮಿವಾಪ್ರತಪ್ತಂ
ಸ್ಥಾನೇಷು ತದ್ದ್ರಷ್ಟ್ರಪದೇಶಮೇತಿ ॥ ೨೪ ॥

ಓಂ ನಮೋ ಭಗವತೇ ಮಹಾಪುರುಷಾಯ ಮಹಾನುಭಾವಾಯ ಮಹಾವಿಭೂತಿಪತಯೇ ಸಕಲಸಾತ್ವತಪರಿವೃಢನಿಕರಕರಕಮಲಕುಡ್ಮಲೋಪಲಾಲಿತಚರಣಾರವಿಂದಯುಗಲ ಪರಮಪರಮೇಷ್ಠಿನ್ನಮಸ್ತೇ ॥ ೨೫ ॥

*ಶ್ರೀಶುಕ ಉವಾಚ*

ಭಕ್ತಾಯೈತಾಂ ಪ್ರಪನ್ನಾಯ ವಿದ್ಯಾಮಾದಿಶ್ಯ ನಾರದಃ ।
ಯಯಾವಂಗಿರಸಾ ಸಾಕಂ ಧಾಮ ಸ್ವಾಯಂಭುವಂ ಪ್ರಭೋ ॥ ೨೬ ॥

ಚಿತ್ರಕೇತುಸ್ತು ವಿದ್ಯಾಂ ತಾಂ ಯಥಾ ನಾರದಭಾಷಿತಾಮ್ ।
ಧಾರಯಾಮಾಸ ಸಪ್ತಾಹಮಬ್ಭಕ್ಷಃ ಸುಸಮಾಹಿತಃ ॥ ೨೭ ॥

ತತಶ್ಚ ಸಪ್ತರಾತ್ರಾಂತೇ ವಿದ್ಯಯಾ ಧಾರ್ಯಮಾಣಯಾ ।
ವಿದ್ಯಾಧರಾಧಿಪತ್ಯಂ ಸ ಲೇಭೇಽಪ್ರತಿಹತಂ ನೃಪಃ ॥ ೨೮ ॥

ತತಃ ಕತಿಪಯಾಹೋಭಿರ್ವಿದ್ಯಯೇದ್ಧಮನೋಗತಿಃ ।
ಜಗಾಮ ದೇವದೇವಸ್ಯ ಶೇಷಸ್ಯ ಚರಣಾಂತಿಕಮ್ ॥ ೨೯ ॥

ಮೃಣಾಲಗೌರಂ ಶಿತಿವಾಸಸಂ ಸ್ಫುರತ್
ಕಿರೀಟಕೇಯೂರಕಟಿತ್ರಕಂಕಣಮ್ ।
ಪ್ರಸನ್ನವಕ್ತ್ರಾರುಣಲೋಚನಂ ವೃತಂ
ದದರ್ಶ ಸಿದ್ಧೇಶ್ವರಮಂಡಲೈಃ ಪ್ರಭುಮ್ ॥ ೩೦ ॥

ಈ ಕಾರ್ಯಕಾರಣರೂಪವಾದ ಜಗತ್ತು ಯಾವನಿಂದ ಉತ್ಪನ್ನವಾಗುತ್ತದೋ, ಯಾವನಲ್ಲಿ ನೆಲೆಸುತ್ತದೋ, ಯಾವನಲ್ಲಿ ಲೀನವಾಗುತ್ತದೋ ಹಾಗೂ ಮಣ್ಣಿನ ವಸ್ತುಗಳಲ್ಲಿ ವ್ಯಾಪ್ತವಾದ ಮಣ್ಣಿನಂತೆ ಎಲ್ಲದರಲ್ಲಿ ಹಾಸು-ಹೊಕ್ಕಾಗಿ ವ್ಯಾಪಿಸಲ್ಪಟ್ಟಿದೆಯೋ ಆ ಪರಬ್ರಹ್ಮಸ್ವರೂಪನಾದ ನಿನಗೆ ನಾನು ನಮಸ್ಕರಿಸುತ್ತಿದ್ದೇನೆ. ॥ ೨೨ ॥ ನೀನು ಆಕಾಶದಂತೆ ಒಳ-ಹೊರಗೆ ಏಕರಸವಾಗಿ ವ್ಯಾಪಿಸಿಕೊಂಡಿದ್ದರೂ, ನಿನ್ನನ್ನು ಮನಸ್ಸು ಬುದ್ಧಿ ಮತ್ತು ಜ್ಞಾನೇಂದ್ರಿಯಗಳು ತಮ್ಮ ಜ್ಞಾನಶಕ್ತಿಯಿಂದ ಅರಿಯಲಾರರು. ಪ್ರಾಣ ಹಾಗೂ ಕರ್ಮೇಂದ್ರಿಯಗಳು ತಮ್ಮ ಕ್ರಿಯಾರೂಪವಾದ ಶಕ್ತಿಯಿಂದ ನಿನ್ನನ್ನು ಸ್ಪರ್ಶಿಸಲಾರವು. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೨೩ ॥ ಶರೀರ, ಇಂದ್ರಿಯಗಳು, ಪ್ರಾಣಗಳು, ಮನಸ್ಸು, ಬುದ್ಧಿ ಇವುಗಳು ಜಾಗ್ರತ್ ಹಾಗೂ ಸ್ವಪ್ನಾವಸ್ಥೆಗಳಲ್ಲಿ ನಿನ್ನ ಚೈತನ್ಯಾಂಶವನ್ನು ಕೂಡಿಕೊಂಡೇ ತಮ್ಮ-ತಮ್ಮ ಕೆಲಸಗಳನ್ನು ಮಾಡುತ್ತವೆ. ಸುಷುಪ್ತಿ ಮತ್ತು ಮೂರ್ಛೆಯ ಅವಸ್ಥೆಗಳಲ್ಲಿ ನಿನ್ನ ಚೈತನ್ಯಾಂಶದಿಂದ ಕೂಡದೇ ಇರುವುದರಿಂದ ತಮ್ಮ-ತಮ್ಮ ಕೆಲಸಗಳನ್ನು ಮಾಡಲು ಅಸಮರ್ಥವಾಗುತ್ತವೆ. ಹಾಗೆಯೇ ಕಬ್ಬಿಣವು ಬೆಂಕಿಯಲ್ಲಿ ಕಾದಾಗ ಸುಡಬಲ್ಲದು, ಇಲ್ಲದಿದ್ದರೆ ಇಲ್ಲ. ಯಾವುದನ್ನು ದ್ರಷ್ಟಾ ಎಂದು ಹೇಳುವರೋ ಅದೂ ನೀನೇ ಆಗಿರುವೆ. ಜಾಗ್ರತ್ ಮುಂತಾದ ಅವಸ್ಥೆಗಳಲ್ಲಿ ನೀನು ಅದನ್ನು ಸ್ವೀಕರಿಸುತ್ತೀಯೆ. ನಿಜವಾಗಿ ನಿನ್ನಿಂದ ಹೊರತು ಅವುಗಳಿಗೆ ಯಾವುದೇ ಅಸ್ತಿತ್ವವೂ ಇಲ್ಲ. ॥ ೨೪ ॥ ಓಂಕಾರಸ್ವರೂಪಿಯೂ, ಮಹಾಪುರುಷನೂ, ಮಹಾನುಭಾವನೂ, ಮಹಾವಿಭೂತಿಯುಳ್ಳವನೂ ಆದ ಭಗವಾನ್ ಸಂಕರ್ಷಣದೇವನಿಗೆ ನಮಸ್ಕಾರವು. ಶ್ರೇಷ್ಠತಮರಾದ ಎಲ್ಲ ಭಕ್ತರ ಸಮೂಹಗಳೂ ಮೊಗ್ಗಿನಂತೆ ಜೋಡಿಸಿದ ತಮ್ಮ ಕರಕಮಲಗಳಿಂದ ನಿನ್ನ ಸೇವೆ ಮಾಡುವುದರಲ್ಲಿ ಆಸಕ್ತವಾಗಿವೆ. ನೀನೇ ಸರ್ವಶ್ರೇಷ್ಠನು. ಓ ಮಹಾಪ್ರಭುವೇ ನಿನಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೨೫ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ದೇವರ್ಷಿ ನಾರದರು ತಮ್ಮಲ್ಲಿ ಶರಣಾಗತನಾಗಿದ್ದ ಭಕ್ತನಾದ ಚಿತ್ರಕೇತುವಿಗೆ ಈ ವಿದ್ಯೆಯನ್ನು ಉಪದೇಶಿಸಿ, ಅಂಗಿರಸಮಹರ್ಷಿಗಳೊಡನೆ ಬ್ರಹ್ಮಲೋಕಕ್ಕೆ ತೆರಳಿದರು. ॥ ೨೬ ॥ ಚಿತ್ರಕೇತುರಾಜನು ದೇವರ್ಷಿನಾರದರು ಉಪದೇಶಮಾಡಿದ್ದ ವಿದ್ಯೆಯನ್ನು ಅವರ ಆದೇಶದಂತೆ ಏಳು ದಿವಸಗಳ ಕಾಲ ಕೇವಲ ಜಲಾಹಾರದಿಂದಿದ್ದು ಏಕಾಗ್ರತೆಯಿಂದ ಅನುಷ್ಠಾನಮಾಡಿದನು. ॥ ೨೭ ॥ ಅನಂತರ ಆ ವಿದ್ಯೆಯ ಅನುಷ್ಠಾನದಿಂದ ಏಳು ರಾತ್ರಿಯ ಬಳಿಕ ರಾಜಾಚಿತ್ರಕೇತುವಿಗೆ ವಿದ್ಯಾಧರರ ಅಖಂಡ ಆಧಿಪತ್ಯವು ಪ್ರಾಪ್ತವಾಯಿತು. ॥ ೨೮ ॥ ಮತ್ತೆ ಕೆಲವೇ ದಿನಗಳಲ್ಲಿ ಆ ವಿದ್ಯೆಯ ಪ್ರಭಾವದಿಂದ ಅವನ ಮನಸ್ಸು ಮತ್ತೂ ಶುದ್ಧವಾಯಿತು. ಈಗ ಅವನು ದೇವಾಧಿದೇವ ಭಗವಾನ್ ಆದಿಶೇಷನ ಬಳಿಗೆ ತಲುಪಿದನು. ॥ ೨೯ ॥ ಅಲ್ಲಿ ಭಗವಾನ್ ಆದಿಶೇಷನು ಸಿದ್ಧೇಶ್ವರರ ಮಧ್ಯದಲ್ಲಿ ವಿರಾಜಮಾನವಾಗಿರುವುದನ್ನು ಅವನು ನೋಡಿದನು. ಅವನ ದಿವ್ಯಮಂಗಳ ದೇಹವು ಕಮಲದ ದಂಟಿನಂತೆ ಬೆಳ್ಳಗೆ ಹೊಳೆಯುತ್ತಿತ್ತು. ಅದರ

ತದ್ದರ್ಶನಧ್ವಸ್ತಸಮಸ್ತಕಿಲ್ಬಿಷಃ
ಸ್ವಚ್ಛಾಮಲಾಂತಃಕರಣೋಽಭ್ಯಯಾನ್ಮುನಿಃ ।
ಪ್ರವೃದ್ಧಭಕ್ತ್ಯಾ ಪ್ರಣಯಾಶ್ರುಲೋಚನಃ
ಪ್ರಹೃಷ್ಟ ರೋಮಾನಮದಾದಿಪೂರುಷಮ್ ॥ ೩೧ ॥

ಸ ಉತ್ತಮಶ್ಲೋಕಪದಾಬ್ಜವಿಷ್ಟರಂ
ಪ್ರೇಮಾಶ್ರುಲೇಶೈರುಪಮೇಹಯನ್ಮುಹುಃ ।
ಪ್ರೇಮೋಪರುದ್ಧಾಖಿಲವರ್ಣನಿರ್ಗಮೋ
ನೈವಾಶಕತ್ತಂ ಪ್ರಸಮೀಡಿತುಂ ಚಿರಮ್ ॥ ೩೨ ॥

ತತಃ ಸಮಾಧಾಯ ಮನೋ ಮನೀಷಯಾ
ಬಭಾಷ ಏತತ್ಪ್ರ ತಿಲಬ್ಧವಾಗಸೌ ।
ನಿಯಮ್ಯ ಸರ್ವೇಂದ್ರಿಯಬಾಹ್ಯವರ್ತನಂ
ಜಗದ್ಗುರುಂ ಸಾತ್ವತಶಾಸ್ತ್ರ ವಿಗ್ರಹಮ್ ॥ ೩೩ ॥

ಚಿತ್ರಕೇತುರುವಾಚ

ಅಜಿತ ಜಿತಃ ಸಮಮತಿಭಿಃ
ಸಾಧುಭಿರ್ಭವಾನ್ ಜಿತಾತ್ಮಭಿರ್ಭವತಾ ।
ವಿಜಿತಾಸ್ತೇಽಪಿ ಚ ಭಜತಾ-
ಮಕಾಮಾತ್ಮನಾಂ ಯ ಆತ್ಮದೋಽತಿಕರುಣಃ ॥ ೩೪ ॥

ತವ ವಿಭವಃ ಖಲು ಭಗವನ್
ಜಗದುದಯಸ್ಥಿತಿಲಯಾದೀನಿ ।
ವಿಶ್ವಸೃಜಸ್ತೇಽಂಶಾಂಶಾ-
ಸ್ತತ್ರ ಮೃಷಾ ಸ್ಪರ್ಧಂತೇ ಪೃಥಗಭಿಮತ್ಯಾ ॥ ೩೫ ॥

ಪರಮಾಣುಪರಮಮಹತೋ-
ಸ್ತ್ವಮಾದ್ಯಂತಾಂತರವರ್ತೀ ತ್ರಯವಿಧುರಃ ।
ಆದಾವಂತೇಽಪಿ ಚ ಸತ್ತ್ವಾನಾಂ
ಯದ್ಧ್ರುವಂ ತದೇವಾಂತರಾಲೇಽಪಿ ॥ ೩೬ ॥

ಮೇಲೆ ನೀಲಿಬಣ್ಣದ ವಸ್ತ್ರಗಳು ರಾರಾಜಿಸುತ್ತಿದ್ದುವು. ತಲೆಯ ಮೇಲೆ ಕಿರೀಟ, ಬಾಹುಗಳಲ್ಲಿ ತೋಳ್ಬಂದಿಗಳೂ, ಕಟಿಯಲ್ಲಿ ಉಡಿದಾರವೂ, ಕೈಯಲ್ಲಿ ಕಂಕಣಗಳೂ ಕಳಕಳಿಸುತ್ತಿದ್ದವು. ನಸುಗೆಂಪಾದ ಕಣ್ಣುಗಳಿಂದಲೂ ಮುಖದಲ್ಲಿ ಪ್ರಸನ್ನತೆ ಶೋಭಿಸುತ್ತಿತ್ತು. ॥ ೩೦ ॥ ಭಗವಾನ್ ಆದಿಶೇಷನ ದರ್ಶನಮಾಡುತ್ತಲೇ ರಾಜರ್ಷಿ ಚಿತ್ರಕೇತುವಿನ ಎಲ್ಲ ಪಾಪಗಳೂ ನಾಶವಾದವು. ಅವನ ಅಂತಃಕರಣ ಸ್ವಚ್ಛವೂ, ನಿರ್ಮಲವೂ ಆಯಿತು. ಹೃದಯದಲ್ಲಿ ಭಕ್ತಿ ಪ್ರವಾಹವು ಉಕ್ಕಿ ಹರಿಯಿತು. ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಉಮ್ಮಳಿಸಿದವು. ಮೈಪುಳಕದಿಂದ ಅರಳಿತು. ಅವನು ಅಂತಹ ಸ್ಥಿತಿಯಲ್ಲೇ ಆದಿಪುರುಷ ಭಗವಾನ್ ಶೇಷದೇವರಿಗೆ ನಮಸ್ಕರಿಸಿದನು. ॥ ೩೧ ॥ ಅವನ ಕಣ್ಣುಗಳಿಂದ ತೊಟ್ಟಿಕ್ಕುತ್ತಿದ್ದ ಆನಂದಬಾಷ್ಪಗಳಿಂದ ಭಗವಾನ್ ಶೇಷನ ಪಾದಪೀಠವು ನೆನೆಯಿತು. ಪ್ರೇಮೋದ್ರೇಕದಿಂದ ಅವನ ಬಾಯಿಂದ ಒಂದಕ್ಷರವೂ ಹೊರಡಲಿಲ್ಲ. ಅವನು ಬಹಳ ಹೊತ್ತಿನವರೆಗೆ ಶೇಷದೇವರನ್ನು ಸ್ತುತಿಸಲಿಕ್ಕೆ ಆಗಲಿಲ್ಲ. ॥ ೩೨ ॥ ಸ್ವಲ್ಪ ಹೊತ್ತಿನ ಬಳಿಕ ಅವನಿಗೆ ಮಾತಾಡುವ ಅಲ್ಪ-ಸ್ವಲ್ಪ ಶಕ್ತಿಯುಂಟಾಯಿತು. ಅವನು ವಿವೇಕದಿಂದ ಬುದ್ಧಿಯನ್ನು ಸ್ತಿಮಿತಕ್ಕೆ ತಂದುಕೊಂಡು, ಇಂದ್ರಿಯಗಳ ಬಾಹ್ಯವೃತ್ತಿಗಳನ್ನು ತಡೆಗಟ್ಟಿದನು. ಅನಂತರ ಪಾಂಚರಾತ್ರವೇ ಮುಂತಾದ ಭಕ್ತಿಶಾಸ್ತ್ರಗಳಲ್ಲಿ ವರ್ಣಿತವಾಗಿರುವ ದಿವ್ಯಸ್ವರೂಪವುಳ್ಳ ಆ ಜಗದ್ಗುರುವನ್ನು ಹೀಗೆ ಸ್ತೋತ್ರ ಮಾಡಿದನು. ॥ ೩೩ ॥

**ಚಿತ್ರಕೇತುವು ಹೇಳಿದನು** – ಓ ಅಜಿತನೇ ! ನೀನು ಅಜಿತನಾಗಿ ಯಾರಿಂದಲೂ ಗೆಲ್ಲಲ್ಪಡದವನಾಗಿದ್ದರೂ – ಸಮದರ್ಶಿಗಳೂ, ಜಿತೇಂದ್ರಿಯರೂ ಆದ ಸಾಧುಗಳು ನಿನ್ನನ್ನು ಭಕ್ತಿಯಿಂದ ಗೆದ್ದುಕೊಂಡಿರುವರು. ನೀನು ನಿನ್ನ ಸೌಂದರ್ಯ, ಮಾಧುರ್ಯ, ಕಾರುಣ್ಯಗಳೇ ಮುಂತಾದ ಗುಣಗಳಿಂದ ಅವರನ್ನು ಗೆದ್ದು ವಶಪಡಿಸಿಕೊಳ್ಳುವೆ. ಆಹಾ ! ನೀನು ಧನ್ಯನಾಗಿರುವೆ. ಏಕೆಂದರೆ, ನಿಷ್ಕಾಮಭಾವದಿಂದ ನಿನ್ನನ್ನು ಭಜಿಸುವವರಿಗೆ ನೀನು ಕರುಣಾವಶನಾಗಿ ನಿನ್ನನ್ನೇ ಕೊಟ್ಟುಕೊಳ್ಳುವೆ. ॥ ೩೪ ॥ ಓ ಭಗವಂತಾ ! ಜಗತ್ತಿನ ಉತ್ಪತ್ತಿ , ಸ್ಥಿತಿ ಮತ್ತು ಪ್ರಳಯಗಳು ನಿನ್ನ ಲೀಲಾವಿಲಾಸವಾಗಿದೆ. ಜಗತ್ತಿನ ಸೃಷ್ಟಿಕರ್ತರಾದ ಬ್ರಹ್ಮದೇವರೇ ಮುಂತಾದವರು ನಿನ್ನ ಅಂಶದ ಅಂಶಭೂತರಾದವರು. ಹೀಗಿದ್ದರೂ ಅವರು ಬೇರೆ-ಬೇರೆಯಾಗಿ ತಮ್ಮನ್ನು ಜಗತ್ಕರ್ತರು ಎಂದು ತಿಳಿದು ಕೊಂಡು ವ್ಯರ್ಥವಾದ ಅಭಿಮಾನದಿಂದ ಸ್ಪರ್ಧಿಸುತ್ತಾರೆ. ॥ ೩೫ ॥ ಪರಮಾಣುಗಳಿಂದ ಹಿಡಿದು ಪರಮ ಮಹತ್ತಿನವರೆಗಿನ ಸಮಸ್ತ ವಸ್ತುಗಳ ಆದಿ, ಮಧ್ಯ ಮತ್ತು ಅಂತ್ಯಗಳಲ್ಲಿಯೂ ನೀನೇ ಬೆಳಗುತ್ತಿರುವೆ. ಆದರೆ ನಿನಗೆ ಆದಿ-ಮಧ್ಯ-ಅಂತ್ಯಗಳು ಇಲ್ಲ. ಏಕೆಂದರೆ, ಯಾವುದೇ ಪದಾರ್ಥದ ಆದಿ ಮತ್ತು ಅಂತ್ಯದಲ್ಲಿ ಯಾವ ವಸ್ತು ಇರುತ್ತದೋ ಅದೇ ಮಧ್ಯದಲ್ಲಿಯೂ ಇರುತ್ತದೆ. ॥ ೩೬ ॥ ಈ ಬ್ರಹ್ಮಾಂಡಕೋಶವು ಪೃಥಿವಿಯೇ ಮುಂತಾಗಿ ಒಂದಕ್ಕಿಂತಲೂ ಒಂದು ಹತ್ತರಷ್ಟಿರುವ ಏಳು ಆವರಣಗಳಿಂದ ಸುತ್ತುವರಿದಿದೆ. ತನ್ನಂತೆಯೇ ಇರುವ ಬೇರೆ ಕೋಟಿ-ಕೋಟಿ ಬ್ರಹ್ಮಾಂಡಗಳೊಂದಿಗೆ ನಿನ್ನಲ್ಲಿ ಒಂದು ಪರಮಾಣುವಿನಂತೆ ಸುತ್ತುತ್ತಾ

ಕ್ಷಿತ್ಯಾದಿಭಿರೇಷ ಕಿಲಾವೃತಃ
ಸಪ್ತಭಿರ್ದಶಗುಣೋತ್ತರೈರಾಂಡಕೋಶಃ ।
ಯತ್ರ ಪತತ್ಯಣುಕಲ್ಪಃ
ಸಹಾಂಡಕೋಟಿಕೋಟಿಭಿಸ್ತದನಂತಃ ॥ ೩೭ ॥

ವಿಷಯತೃಷೋ ನರಪಶವೋ
ಯ ಉಪಾಸತೇ ವಿಭೂತೀರ್ನ ಪರಂ ತ್ವಾಮ್।
ತೇಷಾಮಾಶಿಷ ಈಶ
ತದನು ವಿನಶ್ಯಂತಿ ಯಥಾ ರಾಜಕುಲಮ್ ॥ ೩೮ ॥

ಕಾಮಧಿಯಸ್ತ್ವಯಿ ರಚಿತಾ
ನ ಪರಮ ರೋಹಂತಿ ಯಥಾ ಕರಂಭಬೀಜಾನಿ ।
ಜ್ಞಾನಾತ್ಮನ್ಯಗುಣಮಯೇ
ಗುಣಗಣತೋಽಸ್ಯ ದ್ವಂದ್ವಜಾಲಾನಿ ॥ ೩೯ ॥

ಜಿತಮಜಿತ ತದಾ ಭವತಾ
ಯದಾಽಽಹ ಭಾಗವತಂ ಧರ್ಮಮನವದ್ಯಮ್ ।
ನಿಷ್ಕಿಂಚನಾ ಯೇ ಮುನಯ
ಆತ್ಮಾರಾಮಾ ಯಮುಪಾಸತೇಽಪವರ್ಗಾಯ ॥ ೪೦ ॥

ವಿಷಮಮತಿರ್ನ ಯತ್ರ ನೃಣಾಂ
ತ್ವಮಹಮಿತಿ ಮಮ ತವೇತಿ ಚ ಯದನ್ಯತ್ರ ।
ವಿಷಮಧಿಯಾ ರಚಿತೋ ಯಃ
ಸ ಹ್ಯವಿಶುದ್ಧಃ ಕ್ಷಯಿಷ್ಣುರಧರ್ಮಬಹುಲಃ ॥ ೪೧ ॥

ಕಃ ಕ್ಷೇಮೋ ನಿಜಪರಯೋಃ
ಕಿಯಾನರ್ಥಃ ಸ್ವಪರದ್ರುಹಾ ಧರ್ಮೇಣ ।
ಸ್ವದ್ರೋಹಾತ್ತವ ಕೋಪಃ
ಪರಸಂಪೀಡನಯಾ ಚ ತಥಾಽಧರ್ಮಃ ॥ ೪೨ ॥

ನ ವ್ಯಭಿಚರತಿ ತವೇಕ್ಷಾ
ಯಯಾ ಹ್ಯಭಿಹಿತೋ ಭಾಗವತೋ ಧರ್ಮಃ ।
ಸ್ಥಿರಚರಸತ್ತ್ವಕದಂಬೇ
ಷ್ವಪೃಥಗ್ಧಿಯೋ ಯಮುಪಾಸತೇ ತ್ವಾರ್ಯಾಃ ॥ ೪೩ ॥

ನ ಹಿ ಭಗವನ್ನಘಟಿತಮಿದಂ
ತ್ವದ್ದರ್ಶನಾನ್ನೃಣಾಮಖಿಲಪಾಪಕ್ಷಯಃ ।
ಯನ್ನಾಮಸಕೃಚ್ಛ್ರವಣಾತ್
ಪುಲ್ಕಸಕೋಽಪಿ ವಿಮುಚ್ಯತೇ ಸಂಸಾರಾತ್ ॥ ೪೪ ॥

ಇರುತ್ತದೆ. ಹೀಗಿದ್ದರೂ ಅದಕ್ಕೆ ನಿನ್ನ ಎಲ್ಲೆಯು ತಿಳಿಯದು. ಅದಕ್ಕಾಗಿ ನೀನು ಅನಂತ ನಾಗಿರುವೆ. ॥ ೩೭ ॥ ವಿಷಯಭೋಗಗಳನ್ನೇ ಬಯಸುವ ನರಪಶುಗಳು ನಿನ್ನನ್ನು ಭಜಿಸದೆ ನಿನ್ನ ವಿಭೂತಿ ಸ್ವರೂಪರಾದ ಇಂದ್ರಾದಿ ದೇವತೆಗಳನ್ನು ಉಪಾಸಿಸುತ್ತಾರೆ. ಪ್ರಭೋ! ರಾಜಕುಲವು ನಾಶವಾದ ಬಳಿಕ ಅದರ ಅನುಯಾಯಿಗಳ ಬದುಕೂ ಕೂಡ ನಾಶವಾಗುವಂತೆಯೇ ಕ್ಷುದ್ರ ಉಪಾಸ್ಯ ದೇವತೆಗಳು ಹ್ರಾಸವಾದಾಗ ಅವರು ದಯಪಾಲಿಸಿದ ಭೋಗಗಳೂ ನಷ್ಟವಾಗಿ ಹೋಗುತ್ತವೆ. ॥ ೩೮ ॥ ಓ ಪರಮಾತ್ಮನೇ! ನೀನು ಜ್ಞಾನಸ್ವರೂಪಿಯೂ, ನಿರ್ಗುಣನೂ ಆಗಿರುವೆ. ಅದಕ್ಕಾಗಿ ನಿನ್ನ ಕುರಿತಾಗಿ ಮಾಡಿದ ಸಕಾಮ ಭಾವನೆಯೂ ಕೂಡ ಬೇರೆ-ಬೇರೆ ಕರ್ಮಗಳಂತೆ – ಹುರಿದ ಬೀಜಗಳು ಮೊಳೆಯದಂತೆ – ಜನನ-ಮರಣರೂಪೀ ಫಲವನ್ನು ಕೊಡಲಾರದು. ಏಕೆಂದರೆ, ಜೀವಿಗೆ ಉಂಟಾಗುವ ಸುಖ-ದುಃಖ ಮುಂತಾದ ದ್ವಂದ್ವಗಳು ಸತ್ತ್ವಾದಿ ಗುಣಗಳಿಂದಲೇ ಉಂಟಾಗುತ್ತವೆ. ನಿರ್ಗುಣದಿಂದಲ್ಲ. ॥ ೩೯ ॥ ಓ ಅಜಿತನೇ! ನೀನು ಪರಿಶುದ್ಧವಾದ ಭಾಗವತಧರ್ಮವನ್ನು ಉಪದೇಶಿಸಿದಾಗಲೇ ಎಲ್ಲರನ್ನು ಗೆದ್ದುಕೊಂಡಿರುವೆ. ಏಕೆಂದರೆ, ತಮ್ಮಲ್ಲಿ ಯಾವುದೇ ಸಂಗ್ರಹ-ಪರಿಗ್ರಹವನ್ನು ಇಟ್ಟುಕೊಳ್ಳದಿರುವ, ಯಾವುದೇ ವಸ್ತುವಿನಲ್ಲಿ ಅಹಂತೆ-ಮಮತೆಗಳಿಲ್ಲದಿರುವ, ಆತ್ಮಾರಾಮರಾದ ಸನಕಾದಿ ಪರಮ ಮಹರ್ಷಿಗಳೂ ಕೂಡ ಮೋಕ್ಷವನ್ನು ಪಡೆಯುವುದಕ್ಕಾಗಿ ಇದೇ ಭಾಗವತಧರ್ಮವನ್ನು ಆಶ್ರಯಿಸುತ್ತಾರೆ. ॥ ೪೦ ॥ ಈ ಭಾಗವತಧರ್ಮದಲ್ಲಿ ಸಕಾಮಧರ್ಮಗಳಂತೆ ಮನುಷ್ಯರಲ್ಲಿ 'ಇದು ನಾನು, ಇದು ನನ್ನದು; ಇದು ನೀನು, ಇದು ನಿನ್ನದು; ಎಂಬ ವಿಷಮ ಬುದ್ಧಿಯು ಉಂಟಾಗುವುದಿಲ್ಲ. ಹೀಗೆ ನಿಷ್ಕಾಮವಾಗಿ ಅಹಂಕಾರ- ಮಮಕಾರಾದಿ ರಹಿತವಾಗಿರುವ ಭಾಗವತಧರ್ಮವೇ ಶುದ್ಧವಾದ ಧರ್ಮವು. ಇದಕ್ಕೆ ವಿಪರೀತವಾಗಿ ಯಾವ ಧರ್ಮದ ಮೂಲದಲ್ಲೇ ವಿಷಮತೆಯ ಬೀಜವು ಬಿತ್ತಲ್ಪಟ್ಟಿದೆಯೋ ಅದು ಅಶುದ್ಧವೂ, ವಿನಾಶಿಯೂ ಮತ್ತು ಅಧರ್ಮದಿಂದ ತುಂಬಿರುವುದು. ॥ ೪೧ ॥ ಸಕಾಮಧರ್ಮವು ತನ್ನದೂ, ಇತರರದೂ ಅಹಿತವನ್ನೇ ಮಾಡುವುದು. ಅದರಿಂದ ತನ್ನ ಅಥವಾ ಪರರ ಯಾವುದೇ ಪ್ರಯೋಜನ ಹಾಗೂ ಹಿತವು ಸಿದ್ಧಿಸುವುದಿಲ್ಲ. ಆ ಧರ್ಮವನ್ನು ಅನುಷ್ಠಾನ ಮಾಡುವವನ ಚಿತ್ತವು ದುಃಖಿತವಾದಾಗ ನಿನಗೆ ರೋಷವುಂಟಾಗುವುದು. ಇತರ ಚಿತ್ತಕ್ಕೆ ದುಃಖವುಂಟಾದಾಗ ಅದು ಧರ್ಮವೇ ಆಗಿರದೆ ಅಧರ್ಮವೇ ಆಗುವುದು. ॥ ೪೨ ॥ ಓ ಭಗವಂತಾ! ನೀನು ಯಾವ ದೃಷ್ಟಿಯಿಂದ ಭಾಗವತ ಧರ್ಮವನ್ನು ನಿರೂಪಣೆ ಮಾಡಿರುವೆಯೋ ಅದು ಎಂದಿಗೂ ಪರಮಾರ್ಥದಿಂದ ಕದಲುವುದಿಲ್ಲ. ಅದಕ್ಕಾಗಿ ಚರಾಚರ ಸಮಸ್ತ ಪ್ರಾಣಿಗಳಲ್ಲಿ ಸಮದೃಷ್ಟಿಯುಳ್ಳ ಸಾಧು-ಸಂತರೇ ಅದನ್ನು ಸೇವಿಸುತ್ತಾರೆ. ॥ ೪೩॥ ಭಗವಂತನೇ! ನಿನ್ನ ದರ್ಶನಮಾತ್ರದಿಂದಲೇ ಮನುಷ್ಯನ ಎಲ್ಲ ಪಾಪಗಳು ಕ್ಷಯಹೊಂದುವುದರಲ್ಲಿ ಅಸಂಭವವೇನೂ ಇಲ್ಲ. ಏಕೆಂದರೆ, ಒಂದುಬಾರಿ ನಿನ್ನ ನಾಮವನ್ನು ಕೇಳುವುದರಿಂದಲೇ ನೀಚನಾದ ಚಾಂಡಾಲನೂ ಸಂಸಾರದಿಂದ ಮುಕ್ತನಾಗಿ ಹೋಗುವನು. ॥ ೪೪ ॥

ಅಥ ಭಗವನ್ವಯಮಧುನಾ
ತ್ವದವಲೋಕಪರಿಮೃಷ್ಟಾಶಯಮಲಾಃ ।
ಸುರಋಷಿಣಾ ಯದುದಿತಂ
ತಾವಕೇನ ಕಥಮನ್ಯಥಾ ಭವತಿ ॥ ೪೫ ॥

ವಿದಿತಮನಂತ ಸಮಸ್ತಂ
ತವ ಜಗದಾತ್ಮನೋ ಜನೈರಿಹಾಚರಿತಮ್ ।
ವಿಜ್ಞಾಪ್ಯಂ ಪರಮಗುರೋಃ
ಕಿಯದಿವ ಸವಿತುರಿವ ಖದ್ಯೋತೈಃ ॥ ೪೬ ॥

ನಮಸ್ತುಭ್ಯಂ ಭಗವತೇ
ಸಕಲಜಗತ್ಸ್ಥಿತಿಲಯೋದಯೇಶಾಯ ।
ದುರವಸಿತಾತ್ಮಗತಯೇ
ಕುಯೋಗಿನಾಂ ಭಿದಾ ಪರಮಹಂಸಾಯ ॥ ೪೭ ॥

ಯಂ ವೈ ಶ್ವಸಂತಮನು ವಿಶ್ವಸೃಜಃ ಶ್ವಸಂತಿ
ಯಂ ಚೇಕಿತಾನಮನು ಚಿತ್ತಯ ಉಚ್ಚಕಂತಿ ।
ಭೂಮಂಡಲಂ ಸರ್ಷಪಾಯತಿ ಯಸ್ಯ ಮೂರ್ಧ್ನಿ
ತಸ್ಮೈ ನಮೋ ಭಗವತೇಽಸ್ತು ಸಹಸ್ರಮೂರ್ಧ್ನೇ ॥ ೪೮ ॥

*ಶ್ರೀಶುಕ ಉವಾಚ*

ಸಂಸ್ತುತೋ ಭಗವಾನೇವಮನಂತಸ್ತಮಭಾಷತ ।
ವಿದ್ಯಾಧರಪತಿಂ ಪ್ರೀತಶ್ಚಿತ್ರಕೇತುಂ ಕುರೂದ್ವಹ ॥ ೪೯ ॥

*ಶ್ರೀಭಗವಾನುವಾಚ*

ಯನ್ನಾರದಾಂಗಿರೋಭ್ಯಾಂ ತೇ ವ್ಯಾಹೃತಂ ಮೇಽನುಶಾಸನಮ್ ।
ಸಂಸಿದ್ಧೋಽಸಿ ತಯಾ ರಾಜನ್ವಿದ್ಯಯಾ ದರ್ಶನಾಚ್ಚ ಮೇ ॥ ೫೦ ॥

ಅಹಂ ವೈ ಸರ್ವಭೂತಾನಿ ಭೂತಾತ್ಮಾ ಭೂತಭಾವನಃ ।
ಶಬ್ದಬ್ರಹ್ಮ ಪರಂ ಬ್ರಹ್ಮ ಮಮೋಭೇ ಶಾಶ್ವತೀ ತನೂ ॥ ೫೧ ॥

ಲೋಕೇ ವಿತತಮಾತ್ಮಾನಂ ಲೋಕಂ ಚಾತ್ಮನಿ ಸಂತತಮ್ ।
ಉಭಯಂ ಚ ಮಯಾ ವ್ಯಾಪ್ತಂ ಮಯಿ ಚೈವೋಭಯಂ ಕೃತಮ್ ॥ ೫೨ ॥

ಯಥಾ ಸುಷುಪ್ತಃ ಪುರುಷೋ ವಿಶ್ವಂ ಪಶ್ಯತಿ ಚಾತ್ಮನಿ ।
ಆತ್ಮಾನಮೇಕದೇಶಸ್ಥಂ ಮನ್ಯತೇ ಸ್ವಪ್ನ ಉತ್ಥಿತಃ ॥ ೫೩ ॥

ಓ ಭಗವಂತಾ! ಈಗ ನಿನ್ನ ದರ್ಶನ ಮಾತ್ರದಿಂದಲೇ ನನ್ನ ಅಂತಃಕರಣದ ಎಲ್ಲ ಮಲವೂ ತೊಳೆದುಹೋಯಿತು. ನಿನ್ನ ಅನನ್ಯ ಭಕ್ತರಾದ ದೇವರ್ಷಿ ನಾರದರು ಹೇಳಿರುವ ಮಾತು ಹೇಗೆ ಸುಳ್ಳಾದೀತು? ॥ ೪೫ ॥ ಓ ಅನಂತಾ! ನೀನು ಸಮಸ್ತ ಜಗತ್ತಿನ ಆತ್ಮನಾಗಿರುವೆ. ಆದುದರಿಂದ ಜಗತ್ತಿನ ಪ್ರಾಣಿಗಳು ಮಾಡುವುದೆಲ್ಲವನ್ನೂ ನೀನು ತಿಳಿದೇ ಇರುವೆ. ಹೇಗೆ ಮಿಣುಕುಹುಳುವು ಸೂರ್ಯನನ್ನು ಪ್ರಕಾಶಿತವಾಗಿಸಲಾರದೋ ಹಾಗೆಯೇ ಪರಮ ಗುರುವಾದ ನಿನ್ನಲ್ಲಿ ಏನೆಂದು ನಿವೇದಿಸಿಕೊಳ್ಳಲಿ? ॥ ೪೬ ॥ ಸಕಲ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಅಧಿಪತಿಯಾಗಿರುವ ಭಗವಂತನಾದ ನಿನಗೆ ನಮಸ್ಕಾರವು. ಅತ್ಯಂತ ಶುದ್ಧನಾದ ಪರಮಹಂಸನು ನೀನು. ಕುಯೋಗಿಗಳಿಗೆ ಭೇದದೃಷ್ಟಿಯು ಇರುವುದರಿಂದ ಅವರು ನಿನ್ನ ವಾಸ್ತವಿಕ ಸ್ವರೂಪವನ್ನು ತಿಳಿಯಲಾರರು. ॥ ೪೭ ॥ ನಿನ್ನಿಂದಲೇ ಶಕ್ತಿಯನ್ನು ಪಡೆದುಕೊಂಡೇ ಆ ಬ್ರಹ್ಮಾದಿ ಲೋಕಪಾಲರು ತಮ್ಮ-ತಮ್ಮ ವ್ಯಾಪಾರಗಳನ್ನು ಮಾಡಲು ಸಮರ್ಥ ರಾಗುತ್ತಾರೆ. ನಿನ್ನದೃಷ್ಟಿಯಿಂದ ಚೈತನ್ಯವನ್ನು ಪಡೆದೇ ಜ್ಞಾನೇಂದ್ರಿಯಗಳು ತಮ್ಮ-ತಮ್ಮ ವಿಷಯಗಳನ್ನು ಗ್ರಹಿಸಲು ಸಮರ್ಥವಾಗುತ್ತವೆ. ಈ ಭೂಮಂಡಲವು ನಿನ್ನ ತಲೆಯಮೇಲೆ ಒಂದು ಸಾಸಿವೆ ಕಾಳಿನಂತೆ ಕಂಡುಬರುತ್ತದೆ. ಅಂತಹ ಸಾವಿರ ತಲೆಗಳುಳ್ಳ ಪರಮ ಪುರುಷನಾದ ಭಗವಂತನಿಗೆ ಮತ್ತೆ-ಮತ್ತೆ ನಮಸ್ಕಾರಗಳು. ॥ ೪೮ ॥

**ಶ್ರೀಶುಕ ಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ವಿದ್ಯಾಧರರ ಅಧಿಪತಿಯಾದ ಚಿತ್ರಕೇತುವು ಹೀಗೆ ಭಗವಾನ್ ಅನಂತನನ್ನು ಸ್ತುತಿಸಿದಾಗ ಶ್ರೀಭಗವಂತನು ಪ್ರಸನ್ನನಾಗಿ ಅವನಲ್ಲಿ ಹೀಗೆಂದನು. ॥ ೪೯ ॥

**ಶ್ರೀಭಗವಂತನು ಹೇಳಿದನು** – ಎಲೈ ರಾಜನೇ! ದೇವರ್ಷಿ ನಾರದರು ಮತ್ತು ಅಂಗಿರಸ ಮಹರ್ಷಿಗಳು ನಿನಗೆ ನನ್ನ ಕುರಿತಾದ ವಿದ್ಯೆಯನ್ನು ಉಪದೇಶಿಸಿರುವರೋ, ಅದರಿಂದ ಹಾಗೂ ನನ್ನ ದರ್ಶನದಿಂದ ನೀನು ಸಂಸಿದ್ಧಿಯನ್ನು ಪಡೆದಿರುವೆ. ॥ ೫೦ ॥ ನಾನೇ ಸಮಸ್ತ ಪ್ರಾಣಿಗಳ ರೂಪದಲ್ಲಿದ್ದೇನೆ. ನಾನೇ ಅವರ ಆತ್ಮನಾಗಿರುವೆನು. ಅವರನ್ನು ಪಾಲಿಸುವವನೂ ನಾನೇ. ಶಬ್ದಬ್ರಹ್ಮ (ವೇದ) ಮತ್ತು ಪರಬ್ರಹ್ಮ ಎರಡೂ ನನ್ನ ಸನಾತನ ರೂಪವಾಗಿವೆ. ॥ ೫೧ ॥ ಆತ್ಮನು ಕಾರ್ಯಕಾರಣಾತ್ಮಕ ಜಗತ್ತಿನಲ್ಲಿ ವ್ಯಾಪ್ತನಾಗಿದ್ದಾನೆ. ಕಾರ್ಯ-ಕಾರಣಾತ್ಮಕವಾದ ಜಗತ್ತು ಆತ್ಮನಲ್ಲಿ ನೆಲೆಸಿದೆ ಹಾಗೂ ಇವೆರಡರಲ್ಲಿಯೂ ನಾನು ಅಧಿಷ್ಠಾನರೂಪದಿಂದ ವ್ಯಾಪ್ತನಾಗಿದ್ದೇನೆ ಮತ್ತು ಇವೆರಡೂ ನನ್ನಲ್ಲಿ ಕಲ್ಪಿತವಾಗಿವೆ. ॥ ೫೨ ॥ ಸ್ವಪ್ನದಲ್ಲಿ ಮಲಗಿರುವ ಮನುಷ್ಯನು ಸ್ವಪ್ನಾಂತರ (ಮತ್ತೊಂದು ಕನಸುಕಾಣುವಾಗ)ವಾದಾಗ ಸಮಸ್ತ ಜಗತ್ತನ್ನು ತನ್ನಲ್ಲಿಯೇ ನೋಡುತ್ತಾನೆ ಮತ್ತು ಸ್ವಪ್ನಾಂತರ ಮುಗಿದುಹೋದಾಗ ಸ್ವಪ್ನದಲ್ಲೇ ಎಚ್ಚರಗೊಳ್ಳುವನು. ತನ್ನನ್ನು ಜಗತ್ತಿನ ಒಂದು ಮೂಲೆಯಲ್ಲಿ ಇರುವಂತೆ ಕಾಣುವನು. ಆದರೆ ವಾಸ್ತವವಾಗಿ ಅದೂ ಸ್ವಪ್ನವೇ ಆಗಿದೆ. ಹಾಗೆಯೇ ಜೀವಿಯು ಜಾಗ್ರತ್ ಮುಂತಾದ ಅವಸ್ಥೆಗಳೂ ಕೂಡ ಪರಮೇಶ್ವರನ ಮಾಯೆಯೇ ಆಗಿದೆ. ಹೀಗೆ ತಿಳಿದು

ಏವಂ ಜಾಗರಣಾದೀನಿ ಜೀವಸ್ಥಾನಾನಿ ಚಾತ್ಮನಃ ।
ಮಾಯಾಮಾತ್ರಾಣಿ ವಿಜ್ಞಾಯ ತದ್ದ್ರಷ್ಟಾರಂ ಪರಂ ಸ್ಮರೇತ್ ॥ ೫೪ ॥

ಯೇನ ಪ್ರಸುಪ್ತಃ ಪುರುಷಃ ಸ್ವಾಪಂ ವೇದಾತ್ಮನಸ್ತದಾ ।
ಸುಖಂ ಚ ನಿರ್ಗುಣಂ ಬ್ರಹ್ಮ ತಮಾತ್ಮಾನಮವೇಹಿ ಮಾಮ್ ॥ ೫೫ ॥

ಉಭಯಂ ಸ್ಮರತಃ ಪುಂಸಃ ಪ್ರಸ್ವಾಪಪ್ರತಿಬೋಧಯೋಃ ।
ಅನ್ವೇತಿ ವ್ಯತಿರಿಚ್ಯೇತ ತಜ್ಜ್ಞಾನಂ ಬ್ರಹ್ಮ ತತ್ಪರಮ್ ॥ ೫೬ ॥

ಯದೇತದ್ವಿಸ್ಮೃತಂ ಪುಂಸೋ ಮದ್ಭಾವಂ ಭಿನ್ನಮಾತ್ಮನಃ ।
ತತಃ ಸಂಸಾರ ಏತಸ್ಯ ದೇಹಾದ್ದೇಹೋ ಮೃತೇರ್ಮೃತಿಃ ॥ ೫೭ ॥

ಲಬ್ಧ್ವೇಹ ಮಾನುಷೀಂ ಯೋನಿಂ ಜ್ಞಾನವಿಜ್ಞಾನಸಂಭವಾಮ್ ।
ಆತ್ಮಾನಂ ಯೋ ನ ಬುದ್ಧ್ಯೇತ ನ ಕ್ವಚಿತ್ಕ್ಷೇಮಮಾಪ್ನುಯಾತ್ ॥ ೫೮ ॥

ಸ್ಮೃತ್ವೇಹಾಯಾಂ ಪರಿಕ್ಲೇಶಂ ತತಃ ಫಲವಿಪರ್ಯಯಮ್ ।
ಅಭಯಂ ಚಾಪ್ಯನೀಹಾಯಾಂ ಸಂಕಲ್ಪಾದ್ವಿರಮೇತ್ಕವಿಃ ॥ ೫೯ ॥

ಸುಖಾಯ ದುಃಖಮೋಕ್ಷಾಯ ಕುರ್ವಾತೇ ದಂಪತೀ ಕ್ರಿಯಾಃ ।
ತತೋಽನಿವೃತ್ತಿರಪ್ರಾಪ್ತಿರ್ದುಃಖಸ್ಯ ಚ ಸುಖಸ್ಯ ಚ ॥ ೬೦ ॥

ಏವಂ ವಿಪರ್ಯಯಂ ಬುದ್ಧ್ವಾ ನೃಣಾಂ ವಿಜ್ಞಾಭಿಮಾನಿನಾಮ್ ।
ಆತ್ಮನಶ್ಚ ಗತಿಂ ಸೂಕ್ಷ್ಮಾಂ ಸ್ಥಾನತ್ರಯವಿಲಕ್ಷಣಾಮ್ ॥ ೬೧ ॥

ದೃಷ್ಟಶ್ರುತಾಭಿರ್ಮಾತ್ರಾಭಿರ್ನಿರ್ಮುಕ್ತಃ ಸ್ವೇನ ತೇಜಸಾ ।
ಜ್ಞಾನವಿಜ್ಞಾನಸಂತುಷ್ಟೋ ಮದ್ಭಕ್ತಃ ಪುರುಷೋ ಭವೇತ್ ॥ ೬೨ ॥

ಏತಾವಾನೇವ ಮನುಜೈರ್ಯೋಗನೈಪುಣಬುದ್ಧಿಭಿಃ ।
ಸ್ವಾರ್ಥಃ ಸರ್ವಾತ್ಮನಾ ಜ್ಞೇಯೋ ಯತ್ಪರಾತ್ಮೈಕದರ್ಶನಮ್ ॥ ೬೩ ॥

ಕೊಂಡು ಎಲ್ಲರ ಸಾಕ್ಷಿ, ಮಾಯಾತೀತ, ಪರಮಾತ್ಮನನ್ನೇಸ್ಮರಿಸಬೇಕು. ॥ ೫೩-೫೪ ॥ ಮಲಗಿರುವ ಮನುಷ್ಯನು ಯಾವುದರ ಸಹಾಯದಿಂದ ತನ್ನ ನಿದ್ರೆಯನ್ನು ಮತ್ತು ಅದರ ಅತೀಂದ್ರಿಯ ಸುಖವನ್ನು ಅನುಭವಿಸುವನೋ ಆ ಬ್ರಹ್ಮವೂ ನಾನೇ ಆಗಿದ್ದೇನೆ. ಅದನ್ನು ನೀನು ನಿನ್ನ ಆತ್ಮವೆಂದು ತಿಳಿ. ॥ ೫೫ ॥ ಪುರುಷನು ನಿದ್ರೆ ಮತ್ತು ಎಚ್ಚರ ಇವೆರಡು ಅವಸ್ಥೆಗಳನ್ನೂ ಅನುಭವಿಸುತ್ತಾನೆ. ಅವನು ಆ ಅವಸ್ಥೆಗಳಲ್ಲಿ ಅನುಗತನಾಗಿದ್ದರೂ ವಾಸ್ತವವಾಗಿ ಅವುಗಳಿಂದ ಬೇರೆಯೇ ಆಗಿದ್ದಾನೆ. ಅವನ ಎಲ್ಲ ಅವಸ್ಥೆಗಳಲ್ಲಿ ಇರುವ ಅಖಂಡ ಏಕರಸ ಜ್ಞಾನವೇ ಬ್ರಹ್ಮವಾಗಿದೆ. ಅದೇ ಪರಬ್ರಹ್ಮವಾಗಿದೆ. ॥ ೫೬ ॥ ಜೀವನು ನನ್ನ ಸ್ವರೂಪವನ್ನು ಮರೆತು ಹೋದಾಗ ಅವನು ತನ್ನನ್ನು ಬೇರೆ ಎಂದು ತಿಳಿದುಕೊಳ್ಳುವನು. ಅದರಿಂದಲೇ ಅವನಿಗೆ ಸಂಸಾರಚಕ್ರದಲ್ಲಿ ಬೀಳಬೇಕಾಗುತ್ತದೆ ಮತ್ತು ಹುಟ್ಟಿನ ನಂತರ ಸಾವು, ಸಾವಿನನಂತರ ಹುಟ್ಟು ಅವನಿಗೆ ಉಂಟಾಗುವುದು. ॥ ೫೭ ॥ ಈ ಮನುಷ್ಯಯೋನಿಯು ಜ್ಞಾನ ಮತ್ತು ವಿಜ್ಞಾನದ ಮೂಲ ಸ್ರೋತಸ್ಸಾಗಿದೆ. ಇದನ್ನು ಪಡೆದುಕೊಂಡರೂ ತನ್ನ ಆತ್ಮಸ್ವರೂಪನಾದ ಪರಮಾತ್ಮನನ್ನು ತಿಳಿದುಕೊಳ್ಳದಿರುವವನಿಗೆ ಎಲ್ಲಿಯೂ, ಯಾವುದೇ ಯೋನಿಯಲ್ಲಿ ಶಾಂತಿಯು ಸಿಗಲಾರದು. ॥ ೫೮ ॥ ರಾಜನೇ ! ಸಾಂಸಾರಿಕ ಸುಖಕ್ಕಾಗಿ ಮಾಡಲಾದ ಪ್ರಯತ್ನಗಳಲ್ಲಿ ಶ್ರಮವಿದೆ, ಕ್ಲೇಶವಿದೆ, ಪರಮ ಸುಖದ ಉದ್ದೇಶದಿಂದ ಮಾಡಲಾಗುವ ಕರ್ಮದಲ್ಲಿ ಅದಕ್ಕೆ ವಿರುದ್ಧವಾಗಿ ಪರಮ ದುಃಖವನ್ನೇ ಅವು ಕೊಡುವುವು. ಆದರೆ ಕರ್ಮಗಳಿಂದ ನಿವೃತ್ತನಾಗಿ ಹೋಗುವುದರಲ್ಲಿ ಯಾವುದೇ ಭಯವಿಲ್ಲ – ಹೀಗೆ ಯೋಚಿಸಿ ಬುದ್ಧಿವಂತನು ಯಾವುದೇ ಪ್ರಕಾರದ ಕರ್ಮ ಅಥವಾ ಅವುಗಳ ಫಲಗಳ ಸಂಕಲ್ಪವನ್ನು ಮಾಡಬಾರದು. ॥ ೫೯ ॥ ಜಗತ್ತಿನ ಎಲ್ಲ ಸ್ತ್ರೀ-ಪುರುಷರು ತಮಗೆ ಸುಖ ಸಿಗಲಿ ಮತ್ತು ದುಃಖದಿಂದ ಬಿಡುಗಡೆ ಆಗಲಿ ಎಂದೇ ಕರ್ಮಗಳನ್ನು ಮಾಡುತ್ತಾರೆ. ಆದರೆ ಆ ಕರ್ಮಗಳಿಂದ ಅವರ ದುಃಖವು ದೂರವಾಗುವುದಿಲ್ಲ ಮತ್ತು ಅವರಿಗೆ ಸುಖವೂ ದೊರೆಯುವುದಿಲ್ಲ. ॥ ೬೦ ॥ ತನ್ನನ್ನು ಬಹಳ ಬುದ್ಧಿವಂತನೆಂದು ತಿಳಿದು ಕರ್ಮದ ಹಿಡಿತದಲ್ಲಿ ಸಿಕ್ಕಿರುವವರಿಗೆ ವಿಪರೀತ ಫಲವೇ ಸಿಗುತ್ತದೆ ಎಂಬುದನ್ನು ಅರಿತುಕೊಳ್ಳಬೇಕು. ಜೊತೆಗೆ ಆತ್ಮನ ಸ್ವರೂಪವು ಅತ್ಯಂತ ಸೂಕ್ಷ್ಮವಾಗಿದೆ. ಜಾಗ್ರತ್, ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳಿಂದ ಹಾಗೂ ಅವುಗಳ ಅಭಿಮಾನಿಗಳಿಂದಲೂ ವಿಲಕ್ಷಣವಾಗಿದೆ ಎಂಬುದನ್ನು ತಿಳಿದುಕೊಳ್ಳಬೇಕು. ॥ ೬೧ ॥ ಇದನ್ನು ಅರಿತುಕೊಂಡು ಈ ಲೋಕದಲ್ಲಿ ನೋಡಿದ ಮತ್ತು ಪರಲೋಕದ ಕೇಳಿರುವ ವಿಷಯ ಭೋಗಗಳಿಂದ ವಿವೇಕ ಬುದ್ಧಿಯಿಂದ ಬಿಡಿಸಿಕೊಂಡು ಜ್ಞಾನ ಮತ್ತು ವಿಜ್ಞಾನದಲ್ಲೇ ಸಂತುಷ್ಟನಾಗಿ ನನ್ನ ಭಕ್ತನಾಗಬೇಕು. ॥ ೬೨ ॥ ಯೋಗಮಾರ್ಗದ ತತ್ತ್ವವನ್ನು ತಿಳಿಯುವುದರಲ್ಲಿ ನಿಪುಣನಿಗೆ – ಜೀವಿಗೆ ಎಲ್ಲಕ್ಕಿಂತ ದೊಡ್ಡ ಸ್ವಾರ್ಥ ಮತ್ತು ಪರಮಾರ್ಥ ಕೇವಲ ಬ್ರಹ್ಮ ಮತ್ತು ಆತ್ಮನ ಏಕತೆಯನ್ನು ಅನುಭವಿಸುವುದೇ ಆಗಿದೆ ಎಂಬುದನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ॥ ೬೩ ॥

ತ್ವಮೇತಚ್ಛ್ರದ್ಧಯಾ ರಾಜನ್ನಪ್ರಮತ್ತೋ ವಚೋ ಮಮ ।
ಜ್ಞಾನವಿಜ್ಞಾನಸಂಪನ್ನೋ ಧಾರಯನ್ನಾಶು ಸಿಧ್ಯಸಿ ॥ ೬೪ ॥

ರಾಜನೇ! ನೀನು ನನ್ನ ಈ ಉಪದೇಶವನ್ನು ಸಾವಧಾನವಾಗಿ ಶ್ರದ್ಧಾಭಾವದಿಂದ ಧರಿಸಿ ಕೊಂಡರೆ ಜ್ಞಾನ ಹಾಗೂ ವಿಜ್ಞಾನಗಳಿಂದ ಸಂಪನ್ನನಾಗಿ ಬೇಗನೇ ಸಿದ್ಧನಾಗಿ ಹೋಗುವೆ. ॥ ೬೪ ॥

*ಶ್ರೀಶುಕ ಉವಾಚ*

ಆಶ್ವಾಸ್ಯ ಭಗವಾನಿತ್ಥಂ ಚಿತ್ರಕೇತುಂ ಜಗದ್ಗುರುಃ ।
ಪಶ್ಯತಸ್ತಸ್ಯ ವಿಶ್ವಾತ್ಮಾ ತತಶ್ಚಾಂತರ್ದಧೇ ಹರಿಃ ॥ ೬೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಜಗದ್ಗುರು ವಿಶ್ವಾತ್ಮಾ ಭಗವಾನ್ ಶ್ರೀಹರಿಯು ಚಿತ್ರ ಕೇತುವಿಗೆ ಹೀಗೆ ತಿಳಿಹೇಳಿ ಅವನ ಮುಂದೆಯೇ ಅಲ್ಲಿಂದ ಅಂತರ್ಧಾನನಾದನು. ॥ ೬೫ ॥

**ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ಚಿತ್ರಕೇತೋಃ ಪರಮಾತ್ಮದರ್ಶನಂ ನಾಮ ಷೋಡಶೋಽಧ್ಯಾಯಃ ॥ ೧೬ ॥**

# ಹದಿನೇಳನೆಯ ಅಧ್ಯಾಯ

## ಚಿತ್ರಕೇತುವಿಗೆ ಪಾರ್ವತೀದೇವಿಯ ಶಾಪ

*ಶ್ರೀಶುಕ ಉವಾಚ*

ಯತಶ್ಚಾಂತರ್ಹಿತೋಽನಂತಸ್ತಸ್ಯೈ ಕೃತ್ವಾ ದಿಶೇ ನಮಃ ।
ವಿದ್ಯಾಧರಶ್ಚಿತ್ರಕೇತುಶ್ಚಚಾರ ಗಗನೇಚರಃ ॥ ೧ ॥

ಸ ಲಕ್ಷಂ ವರ್ಷಲಕ್ಷಾಣಾಮವ್ಯಾಹತಬಲೇಂದ್ರಿಯಃ ।
ಸ್ತೂಯಮಾನೋ ಮಹಾಯೋಗೀ ಮುನಿಭಿಃ ಸಿದ್ಧಚಾರಣೈಃ ॥ ೨ ॥

ಕುಲಾಚಲೇಂದ್ರದ್ರೋಣೀಷು ನಾನಾಸಂಕಲ್ಪಸಿದ್ಧಿಷು ।
ರೇಮೇ ವಿದ್ಯಾಧರಸ್ತ್ರೀಭಿರ್ಗಾಪಯನ್ಹರಿಮೀಶ್ವರಮ್ ॥ ೩ ॥

ಏಕದಾ ಸ ವಿಮಾನೇನ ವಿಷ್ಣುದತ್ತೇನ ಭಾಸ್ವತಾ ।
ಗಿರಿಶಂ ದದೃಶೇ ಗಚ್ಛನ್ಪರೀತಂ ಸಿದ್ಧಚಾರಣೈಃ ॥ ೪ ॥

ಆಲಿಂಗ್ಯಾಂಕೀಕೃತಾಂ ದೇವೀಂ ಬಾಹುನಾ ಮುನಿಸಂಸದಿ ।
ಉವಾಚ ದೇವ್ಯಾಃ ಶೃಣ್ವತ್ಯಾ ಜಹಾಸೋಚ್ಚೈಸ್ತದಂತಿಕೇ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ವಿದ್ಯಾಧರ ಚಿತ್ರಕೇತುವು ಸಂಕರ್ಷಣ ಭಗವಂತನು ಅಂತರ್ಧಾನ ಹೊಂದಿದ ದಿಕ್ಕಿನ ಕಡೆಗೆ ನಮಸ್ಕಾರಮಾಡಿ ಆಕಾಶಮಾರ್ಗದಲ್ಲಿ ಯಥೇಚ್ಛವಾಗಿ ಸಂಚರಿಸತೊಡಗಿದನು. ॥ ೧ ॥ ಮಹಾಯೋಗಿಯಾದ ಚಿತ್ರಕೇತುವು ಕೋಟ್ಯಂತರ ವರ್ಷಗಳವರೆಗೆ ಎಲ್ಲ ವಿಧದ ಸಂಕಲ್ಪಗಳನ್ನು ಪೂರ್ಣಗೊಳಿಸುವ ಸುಮೇರು ಪರ್ವತದ ತಪ್ಪಲುಗಳಲ್ಲಿ ವಿಹರಿಸುತ್ತಿದ್ದನು. ಅವನ ದೇಹಬಲ ಮತ್ತು ಇಂದ್ರಿಯ ಬಲಗಳು ಎಂದೂ ಕುಂದದೆ ಹಾಗೆಯೇ ಇತ್ತು. ದೊಡ್ಡ-ದೊಡ್ಡ ಮುನಿಗಳೂ, ಸಿದ್ಧರೂ, ಚಾರಣರೂ ಆತನನ್ನು ಸ್ತುತಿಸುತ್ತಿದ್ದರು. ಅವನ ಪ್ರೇರಣೆಯಂತೆ ವಿದ್ಯಾಧರರ ಸ್ತ್ರೀಯರು ಅವನ ಮುಂದೆ ಸರ್ವಶಕ್ತನಾದ ಭಗವಂತನ ಗುಣಗಳನ್ನೂ ಹಾಗೂ ಲೀಲೆಗಳನ್ನೂ ಗಾನ ಮಾಡುತ್ತಿದ್ದರು. ॥ ೨-೩ ॥ ಒಂದುದಿನ ಚಿತ್ರಕೇತುವು ಭಗವಂತನು ಕೊಟ್ಟಿರುವ ತೇಜೋಮಯ ವಿಮಾನದಲ್ಲಿ ಕುಳಿತು ಸಂಚರಿಸುತ್ತಿದ್ದಾಗ ಭಗವಾನ್ ಶಂಕರನನ್ನು ನೋಡಿದನು. ಆ ಪರಮೇಶ್ವರನನ್ನು ಸಿದ್ಧ-ಚಾರಣರು ಸುತ್ತುವರಿದು ಸೇವಿಸುತ್ತಿದ್ದರು. ಪರಶಿವನು ದೊಡ್ಡ-ದೊಡ್ಡ ಋಷಿಗಳ ದಿವ್ಯಸಭೆಯಲ್ಲಿ ಕುಳಿತಿದ್ದು, ಭಗವತಿ ಪಾರ್ವತಿಯನ್ನು ತನ್ನ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಒಂದು ಕೈಯಿಂದ ಆಕೆಯನ್ನು ಆಲಿಂಗಿಸಿದ್ದನು. ಚಿತ್ರಕೇತುವು ಇದನ್ನು ನೋಡಿ ವಿಮಾನದಲ್ಲಿ ಕುಳಿತುಕೊಂಡೇ ಅವನ ಬಳಿಗೆ ಹೋಗಿ ಪಾರ್ವತಿದೇವಿಯು ಕೇಳುವ ಹಾಗೇ ಗಟ್ಟಿಯಾಗಿ ನಗುತ್ತಾ ಇಂತೆಂದನು. ॥ ೪-೫ ॥

*ಚಿತ್ರಕೇತುರುವಾಚ*

ಏಷ ಲೋಕಗುರುಃ ಸಾಕ್ಷಾದ್ಧರ್ಮಂ ವಕ್ತಾ ಶರೀರಿಣಾಮ್ ।
ಆಸ್ತೇ ಮುಖ್ಯಃ ಸಭಾಯಾಂ ವೈ ಮಿಥುನೀಭೂಯ ಭಾರ್ಯಯಾ ॥ ೬ ॥

**ಚಿತ್ರಕೇತುವು ಹೇಳುತ್ತಾನೆ** – ಆಹಾ! ಈತನು ಜಗತ್ತಿನ ಎಲ್ಲ ಜೀವಿಗಳಿಗೂ ಧರ್ಮವನ್ನು ಬೋಧಿಸುವ ಜಗದ್ಗುರುವು. ಸರ್ವ ಪ್ರಾಣಿಗಳಲ್ಲಿಯೂ ಶ್ರೇಷ್ಠನಾದವನು. ಆದರೂ ತುಂಬಿದ ಸಭೆಯಲ್ಲಿ ಪತ್ನಿಯನ್ನು ಜೊತೆಗೂಡಿ ಕುಳಿತಿರುವನು. ॥ ೬ ॥

ಜಟಾಧರಸ್ತೀವ್ರತಪಾ ಬ್ರಹ್ಮವಾದಿಸಭಾಪತಿಃ ।
ಅಂಕೀಕೃತ್ಯ ಸ್ತ್ರಿಯಂ ಚಾಸ್ತೇ ಗತಹ್ರೀಃ ಪ್ರಾಕೃತೋ ಯಥಾ ॥ ೭ ॥

ಪ್ರಾಯಶಃ ಪ್ರಾಕೃತಾಶ್ಚಾಪಿ ಸ್ತ್ರಿಯಂ ರಹಸಿ ಬಿಭ್ರತಿ ।
ಅಯಂ ಮಹಾವ್ರತಧರೋ ಬಿಭರ್ತಿ ಸದಸಿ ಸ್ತ್ರಿಯಮ್ ॥ ೮ ॥

*ಶ್ರೀಶುಕ ಉವಾಚ*

ಭಗವಾನಪಿ ತಚ್ಛ್ರುತ್ವಾ ಪ್ರಹಸ್ಯಾಗಾಧಧೀರ್ನೃಪ ।
ತೂಷ್ಣೀಂ ಬಭೂವ ಸದಸಿ ಸಭ್ಯಾಶ್ಚ ತದನುವ್ರತಾಃ ॥ ೯ ॥

ಇತ್ಯತದ್ವೀರ್ಯವಿದುಷಿ ಬ್ರುವಾಣೇ ಬಹ್ವಶೋಭನಮ್ ।
ರುಷಾಽಽಹ ದೇವೀ ಧೃಷ್ಟಾಯ ನಿರ್ಜಿತಾತ್ಮಾಭಿಮಾನಿನೇ ॥ ೧೦ ॥

*ಪಾರ್ವತ್ಯುವಾಚ*

ಅಯಂ ಕಿಮಧುನಾ ಲೋಕೇ ಶಾಸ್ತಾ ದಂಡಧರಃ ಪ್ರಭುಃ ।
ಅಸ್ಮದ್ವಿಧಾನಾಂ ದುಷ್ಟಾನಾಂ ನಿರ್ಲಜ್ಜಾನಾಂ ಚ ವಿಪ್ರಕೃತ್ ॥ ೧೧ ॥

ನ ವೇದ ಧರ್ಮಂ ಕಿಲ ಪದ್ಮಯೋನಿ-
ರ್ನ ಬ್ರಹ್ಮಪುತ್ರಾ ಭೃಗುನಾರದಾದ್ಯಾಃ ।
ನ ವೈ ಕುಮಾರಃ ಕಪಿಲೋ ಮನುಶ್ಚ
ಯೇ ನೋ ನಿಷೇಧಂತ್ಯತಿವರ್ತಿನಂ ಹರಮ್ ॥ ೧೨ ॥

ಏಷಾಮನುಧ್ಯೇಯಪದಾಬ್ಜ ಯುಗ್ಮಂ
ಜಗದ್ಗುರುಂ ಮಂಗಲಮಂಗಲಂ ಸ್ವಯಮ್ ।
ಯಃ ಕ್ಷತ್ರಬಂಧುಃ ಪರಿಭೂಯ ಸೂರೀನ್
ಪ್ರಶಾಸ್ತಿ ಧೃಷ್ಟಸ್ತದಯಂ ಹಿ ದಂಡ್ಯಃ ॥ ೧೩ ॥

ನಾಯಮರ್ಹತಿ ವೈಕುಂಠಪಾದಮೂಲೋಪಸರ್ಪಣಮ್ ।
ಸಂಭಾವಿತಮತಿಃ ಸ್ತಬ್ಧಃ ಸಾಧುಭಿಃ ಪರ್ಯುಪಾಸಿತಮ್ ॥ ೧೪ ॥

ಅತಃ ಪಾಪೀಯಸೀಂ
ಯೋನಿಮಾಸುರೀಂಯಾಹಿದುರ್ಮತೇ ।
ಯಥೇಹ ಭೂಯೋ ಮಹತಾಂ
ನ ಕರ್ತಾ ಪುತ್ರ ಕಿಲ್ಬಿಷಮ್ ॥ ೧೫ ॥

*ಶ್ರೀಶುಕ ಉವಾಚ*

ಏವಂ ಶಪ್ತಶ್ಚಿತ್ರಕೇತುರ್ವಿಮಾನಾದವರುಹ್ಯ ಸಃ ।
ಪ್ರಸಾದಯಾಮಾಸ ಸತೀಂ ಮೂರ್ಧ್ನಾ ನಮ್ರೇಣ ಭಾರತ ॥ ೧೬ ॥

ಜಟೆಯನ್ನು ಧರಿಸಿದ್ದಾನೆ. ಬಹಳ ದೊಡ್ಡ ತಪಸ್ವೀಯಾಗಿದ್ದಾನೆ. ಬ್ರಹ್ಮವಾದಿಗಳ ಸಭೆಗೆ ಅಧಿಪತಿಯಾಗಿಯೂ ಸಾಧಾರಣ ಮನುಷ್ಯನಂತೆ ನಿರ್ಲಜ್ಜನಾಗಿ ತೊಡೆಯಲ್ಲಿ ಹೆಂಡತಿಯನ್ನು ಕುಳ್ಳಿರಿಸಿಕೊಂಡಿರುವನು. ॥ ೭ ॥ ಸಾಮಾನ್ಯವಾಗಿ ಸಾಧಾರಣ ಮನುಷ್ಯರು ಏಕಾಂತದಲ್ಲೇ ಸ್ತ್ರೀಯರೊಂದಿಗೆ ಎದ್ದು-ಕುಳಿತಿರುತ್ತಾರೆ. ಆದರೆ ಇವನು ಇಷ್ಟು ದೊಡ್ಡ ವ್ರತಧಾರಿಯಾಗಿದ್ದರೂ ತುಂಬಿದ ಸಭೆಯಲ್ಲಿ ಈಕೆಯನ್ನು ಧರಿಸಿ ಕುಳಿತಿರುವನಲ್ಲ! ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಭಗವಾನ್ ಶಂಕರನ ಬುದ್ಧಿಯು ಅಗಾಧವಾದುದು. ಚಿತ್ರಕೇತುವಿನ ಈ ಕುಚೋದ್ಯದ ಮಾತನ್ನು ಕೇಳಿಯೂ ಅವನು ನಕ್ಕು ಸುಮ್ಮನಾದನು. ಆ ಸಭೆಯಲ್ಲಿ ಕುಳಿತಿರುವ ಅವನ ಅನುಯಾಯಿ ಸದಸ್ಯರೂ ಮೌನವಾಗಿದ್ದರು. ಚಿತ್ರಕೇತುವಿಗೆ ಭಗವಾನ್ ಶಂಕರನ ಮಹಿಮೆ ತಿಳಿದಿರಲಿಲ್ಲ. ಆದರಿಂದ ಅವನು ಶಿವನಕುರಿತು ತೋಚಿದಂತೆ ಗಳಹುತ್ತಿದ್ದನು. ಅವನಲ್ಲಿ 'ನಾನು ಜಿತೇಂದ್ರಿಯನಾಗಿದ್ದೇನೆ' ಎಂಬುದರ ದುರಹಂಕಾರವುಂಟಾಗಿತ್ತು. ಪಾರ್ವತೀದೇವಿಯು ಅವನ ಉದ್ಧಟತನವನ್ನು ಕಂಡು ಕ್ರೋಧಗೊಂಡು ಹೀಗೆಂದಳು. ॥ ೯-೧೦ ॥

**ಪಾರ್ವತೀದೇವಿಯು ಹೇಳಿದಳು** – ಆಹಾ! ನಮ್ಮಂತಹ ದುಷ್ಟರೂ, ನಾಚಿಕೆಗೆಟ್ಟವರೂ ಆದ ಜನರ ಮೇಲೆ ದಂಡಾಧಿಕಾರಿಗಳಾಗಿ ಶಾಸನ ಮತ್ತು ತಿರಸ್ಕಾರವನ್ನು ಮಾಡುವ ಮಹಾಪ್ರಭುಗಳು ಈ ಜಗತ್ತಿನಲ್ಲಿ ಇವರೊಬ್ಬರೇ ಎಂದು ಕಾಣುತ್ತದೆ. ॥ ೧೧ ॥ ಅಯ್ಯೋ ಪಾಪ! ಬ್ರಹ್ಮದೇವರಿಗೆ, ಭೃಗು-ನಾರದರು, ಸನಕರೇ ಮುಂತಾದ ಬ್ರಹ್ಮಪುತ್ರರಿಗೆ, ಪರಮಋಷಿಗಳಿಗೆ, ಕಪಿಲರು ಮತ್ತು ಮನು ಮುಂತಾದ ಮಹಾಪುರುಷರಿಗೆ ಧರ್ಮರಹಸ್ಯವು ಗೊತ್ತೇ ಇಲ್ಲ. ಅದಕ್ಕೆ ಅವರು ಧರ್ಮಮರ್ಯಾದೆಯನ್ನು ಮೀರಿ ನಡೆದಿರುವ ಭಗವಾನ್ ಶಿವನನ್ನು ಈ ಕಾರ್ಯದಿಂದ ತಡೆಯುತ್ತಿಲ್ಲ. ॥ ೧೨ ॥ ಈ ಮಹಾತ್ಮರೆಲ್ಲರೂ ಧ್ಯಾನಮಾಡಲು ಯೋಗ್ಯವಾದ ಅಡಿದಾವರೆಗಳುಳ್ಳವನಾಗಿ, ಮಂಗಳಗಳಿಗೂ ಮಂಗಳವನ್ನುಂಟುಮಾಡುವ ಜಗದ್ಗುರುವಾದ ಭಗವಾನ್ ಶಂಕರನನ್ನೂ ಹಾಗೂ ಅವನ ಅನುಯಾಯಿಗಳಾದ ಮಹಾತ್ಮರನ್ನೂ ಈ ಕ್ಷತ್ರಿಯಾಧಮನು ತಿರಸ್ಕರಿಸಿ ಅವರ ಮೇಲೆ ಶಾಸನವನ್ನು ಮಾಡಲು ಪ್ರಯತ್ನಿಸಿದ್ದಾನೆ. ಆದರಿಂದ ಈ ದುರುಳನು ದಂಡನೆಗೆ ಯೋಗ್ಯನು. ॥ ೧೩ ॥ ತಾನು ಬಹಳ ದೊಡ್ಡವನೆಂದು ತಿಳಿದಿರುವ ಈ ದುರಹಂಕಾರಿಯಾದ ಮೂರ್ಖನು ಸಾಧುಶ್ರೇಷ್ಠರೆಲ್ಲರೂ ಉಪಾಸಿಸುತ್ತಿರುವ ಭಗವಾನ್ ಶ್ರೀಹರಿಯ ಪಾದಾರವಿಂದಗಳಲ್ಲಿ ಇರಲು ಯೋಗ್ಯನಲ್ಲ. ॥ ೧೪ ॥ ಎಲವೋ ದುರ್ಬುದ್ಧಿಯವನೇ! ನೀನು ಪಾಪಮಯ ಅಸುರಯೋನಿಯಲ್ಲಿ ಹೋಗಿ ಬೀಳು. ಹೀಗಾದರೆ ನೀನು ಮತ್ತೆ ಹೀಗೆ ಮಹಾಪುರುಷರಲ್ಲಿ ಅಪರಾಧವನ್ನು ಮಾಡಲಾರೆ. ॥ ೧೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜನೇ! ಪಾರ್ವತೀದೇವಿಯು ಹೀಗೆ ಶಾಪವನ್ನು ಕೊಟ್ಟಾಗ ಚಿತ್ರಕೇತುವು ಒಡನೆಯೇ ವಿಮಾನದಿಂದಿಳಿದು ತಲೆತಗ್ಗಿಸಿ, ನಮಸ್ಕರಿಸುತ್ತಾ ಆಕೆಯನ್ನು ಪ್ರಸನ್ನಗೊಳಿಸಲು ತೊಡಗಿದನು. ॥ ೧೬ ॥

*ಚಿತ್ರಕೇತುರುವಾಚ*

**ಪ್ರತಿಗೃಹ್ಣಾಮಿ ತೇ ಶಾಪಮಾತ್ಮನೋಽಂಜಲಿನಾಂಬಿಕೇ ।
ದೇವೈರ್ಮರ್ತ್ಯಾಯ ಯತ್ಪ್ರೋಕ್ತಂ ಪೂರ್ವದಿಷ್ಟಂ ಹಿ ತಸ್ಯ ತತ್ ॥ ೧೮ ॥**

**ಸಂಸಾರಚಕ್ರ ಏತಸ್ಮಿನ್‌ಜಂತುರಜ್ಞಾನಮೋಹಿತಃ ।
ಭ್ರಾಮ್ಯನ್ಸುಖಂ ಚ ದುಃಖಂ ಚ ಭುಂಕ್ತೇ ಸರ್ವತ್ರ ಸರ್ವದಾ ॥ ೧೯ ॥**

**ನೈವಾತ್ಮಾ ನ ಪರಶ್ಚಾಪಿ ಕರ್ತಾ ಸ್ಯಾತ್ಸುಖದುಃಖಯೋಃ ।
ಕರ್ತಾರಂ ಮನ್ಯತೇಽಪ್ರಾಜ್ಞ ಆತ್ಮಾನಂ ಪರಮೇವ ಚ ॥ ೧೯ ॥**

**ಗುಣಪ್ರವಾಹ ಏತಸ್ಮಿನ್ಕಃ ಶಾಪಃ ಕೋ ನ್ವನುಗ್ರಹಃ ।
ಕಃ ಸ್ವರ್ಗೋ ನರಕಃ ಕೋ ವಾ ಕಿಂ ಸುಖಂ ದುಃಖಮೇವ ವಾ ॥ ೨೦ ॥**

**ಏಕಃ ಸೃಜತಿ ಭೂತಾನಿ ಭಗವಾನಾತ್ಮಮಾಯಯಾ ।
ಏಷಾಂ ಬಂಧಂ ಚ ಮೋಕ್ಷಂ ಚ ಸುಖಂ ದುಃಖಂ ಚ ನಿಷ್ಕಲಃ ॥ ೨೧ ॥**

**ನ ತಸ್ಯ ಕಶ್ಚಿದ್ದಯಿತಃ ಪ್ರತೀಪೋ
ನ ಜ್ಞಾತಿಬಂಧುರ್ನ ಪರೋ ನ ಚ ಸ್ವಃ ।
ಸಮಸ್ಯ ಸರ್ವತ್ರ ನಿರಂಜನಸ್ಯ
ಸುಖೇ ನ ರಾಗಃ ಕುತ ಏವ ರೋಷಃ ॥ ೨೨ ॥**

**ತಥಾಪಿ ತಚ್ಛಕ್ತಿವಿಸರ್ಗ ಏಷಾಂ
ಸುಖಾಯ ದುಃಖಾಯ ಹಿತಾಹಿತಾಯ ।
ಬಂಧಾಯ ಮೋಕ್ಷಾಯ ಚ ಮೃತ್ಯುಜನ್ಮನೋಃ
ಶರೀರಿಣಾಂ ಸಂಸೃತಯೇಽವಕಲ್ಪತೇ ॥ ೨೩ ॥**

**ಅಥ ಪ್ರಸಾದಯೇ ನ ತ್ವಾಂ ಶಾಪಮೋಕ್ಷಾಯ ಭಾಮಿನಿ ।
ಯನ್ಮನ್ಯಸೇ ಅಸಾಧೂಕ್ತಂ ಮಮ ತತ್ಕ್ಷಮ್ಯತಾಂ ಸತಿ ॥ ೨೪ ॥**

*ಶ್ರೀಶುಕ ಉವಾಚ*

**ಇತಿ ಪ್ರಸಾದ್ಯ ಗಿರಿಶೌ ಚಿತ್ರಕೇತುರರಿಂದಮ ।
ಜಗಾಮ ಸ್ವವಿಮಾನೇನ ಪಶ್ಯತೋಃ ಸ್ಮಯತೋಸ್ತಯೋಃ ॥ ೨೫ ॥**

**ತತಸ್ತು ಭಗವಾನ್ರುದ್ರೋ ರುದ್ರಾಣೀಮಿದಮಬ್ರವೀತ್ ।
ದೇವರ್ಷಿದೈತ್ಯಸಿದ್ಧಾನಾಂ ಪಾರ್ಷದಾನಾಂ ಚ ಶೃಣ್ವತಾಮ್ ॥ ೨೬ ॥**

*ಶ್ರೀರುದ್ರ ಉವಾಚ*

**ದೃಷ್ಟವತ್ಯಸಿ ಸುಶ್ರೋಣಿ ಹರೇರದ್ಭುತಕರ್ಮಣಃ ।
ಮಾಹಾತ್ಮ್ಯಂ ಭೃತ್ಯಭೃತ್ಯಾನಾಂ ನಿಸ್ಪೃಹಾಣಾಂ ಮಹಾತ್ಮನಾಮ್ ॥ ೨೭ ॥**

**ಚಿತ್ರಕೇತುವು ಹೇಳಿದನು** – ಓ ಜಗನ್ಮಾತೆಯೇ! ನಿನ್ನ ಈ ಶಾಪವನ್ನು ನಾನು ಕೈಜೋಡಿಸಿಕೊಂಡು ವಿನಯದಿಂದ ಸ್ವೀಕರಿಸುತ್ತೇನೆ. ಏಕೆಂದರೆ, ದೇವತೆಗಳು ಮನುಷ್ಯರಿಗೆ ಏನಾದರೂ ನುಡಿದರೆ ಅದು ಅವರ ಪ್ರಾರಬ್ಧಕ್ಕನುಗುಣವಾಗಿ ಸಿಕ್ಕುವ ಫಲದ ಪೂರ್ವ ಸೂಚನೆ ಮಾತ್ರವಾಗಿರುತ್ತದೆ. ॥ ೧೮ ॥ ದೇವಿ! ಈ ಜೀವನು ಅಜ್ಞಾನದಿಂದ ಮೋಹಿತನಾದ್ದರಿಂದಲೇ ಈ ಸಂಸಾರಚಕ್ರದಲ್ಲಿ ಅಲೆದಾಡುತ್ತಾ ಸುಖ ಮತ್ತು ದುಃಖಗಳನ್ನು ಭೋಗಿಸುತ್ತಾ ಇರುತ್ತಾನೆ. ॥ ೧೯ ॥ ತಾಯೇ! ಸುಖವನ್ನು ಮತ್ತು ದುಃಖವನ್ನು ಕೊಡುವವನು ತಾನೂ ಅಲ್ಲ, ಇತರರೂ ಅಲ್ಲ. ಅಜ್ಞಾನಿಗಳಾದವರೇ ತನ್ನನ್ನು ಅಥವಾ ಇತರರನ್ನು ಸುಖ-ದುಃಖದ ಕರ್ತೃಗಳೆಂದು ತಿಳಿಯುತ್ತಾರೆ. ॥ ೧೯ ॥ ಈ ಜಗತ್ತು ಸತ್ತ್ವ, ರಜ, ತಮಗಳೆಂಬ ತ್ರಿಗುಣಗಳ ಸ್ವಾಭಾವಿಕ ಪ್ರವಾಹವೇ ಆಗಿದೆ. ಇದರಲ್ಲಿ ಶಾಪವೇನು? ಅನುಗ್ರಹವೇನು? ಸ್ವರ್ಗವೇನು? ನರಕವೇನು? ಸುಖವೇನು? ದುಃಖವೇನು? ॥ ೨೦ ॥ ಪರಿಪೂರ್ಣನಾದ ಪರಮಾತ್ಮನೇ ಬೇರೆ ಯಾರ ಸಹಾಯವೂ ಇಲ್ಲದೆ ತನ್ನ ಆತ್ಮಸ್ವರೂಪಿಣಿಯಾದ ಮಾಯಾಶಕ್ತಿಯಿಂದ ಸಮಸ್ತ ಪ್ರಾಣಿಗಳನ್ನು ಹಾಗೂ ಅವರ ಬಂಧನ, ಮೋಕ್ಷ, ಸುಖ, ದುಃಖ ಇವುಗಳನ್ನು ರಚಿಸುತ್ತಾನೆ. ॥ ೨೧ ॥ ಅಮ್ಮಾ! ಭಗವಾನ್ ಶ್ರೀಹರಿಯು ಎಲ್ಲದರಲ್ಲಿ ಸಮನೂ ಮತ್ತು ಮಾಯೆಯ ಮಲದ ಸೋಂಕು ಇಲ್ಲದವನು. ಅವನಿಗೆ ಯಾರೂ ಪ್ರಿಯನೂ ಇಲ್ಲ, ಅಪ್ರಿಯನೂ ಇಲ್ಲ. ಜ್ಞಾತಿ-ಬಂಧು, ತನ್ನವರು-ಪರರೂ ಎಂಬುದೂ ಇಲ್ಲ. ಸುಖದಲ್ಲಿ ಪ್ರೀತಿಯಿಲ್ಲ, ರೋಷವಾದರೂ ಎಲ್ಲಿಂದ ಬಂದೀತು? ॥ ೨೨ ॥ ಆದರೂ ಅವನ ಮಾಯಾಶಕ್ತಿಯ ಕಾರ್ಯಗಳಿಂದ ಪಾಪ-ಪುಣ್ಯಗಳೇ ಪ್ರಾಣಿಗಳ ಸುಖ-ದುಃಖ, ಹಿತ-ಅಹಿತ, ಬಂಧ-ಮೋಕ್ಷ, ಜನ್ಮ-ಮೃತ್ಯು ಮತ್ತು ಸಂಸಾರದಲ್ಲಿ ಬಂದುಹೋಗಲು ಕಾರಣವಾಗುತ್ತವೆ. ॥ ೨೩ ॥ ಓ ಪತಿಪ್ರಾಣೆಯಾದ ದೇವಿಯೇ! ನನ್ನನ್ನು ಶಾಪದಿಂದ ಬಿಡುಗಡೆ ಮಾಡು' ಎಂದು ನಿನ್ನನ್ನು ಬೇಡುತ್ತಿಲ್ಲ. ಕೆಟ್ಟದ್ದೆಂದು ನಿನಗೆ ಅನಿಸಿರುವ ನನ್ನ ಮಾತುಗಳನ್ನು ಕೃಪೆಯಿಟ್ಟು ಕ್ಷಮಿಸಬೇಕೆಂದೇ ನಾನು ಬಯಸುತ್ತೇನೆ. ॥ ೨೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಶತ್ರು ಹಂತಕನೇ! ಚಿತ್ರಕೇತುವು ಹೀಗೆ ಪಾರ್ವತೀ-ಪರಮೇಶ್ವರರನ್ನು ಪ್ರಸನ್ನಗೊಳಿಸಿ ಅವರು ನಸುನಗುತ್ತಾ ನೋಡುತ್ತಿರುವಂತೆಯೇ ತನ್ನ ವಿಮಾನವನ್ನೇರಿ ಹೊರಟುಹೋದನು. ॥ ೨೫ ॥ ಆಗ ಭಗವಾನ್ ರುದ್ರದೇವರು – ದೇವತೆಗಳು, ಋಷಿಗಳು, ದೈತ್ಯರು, ಸಿದ್ಧರು ಮತ್ತು ಪಾರ್ಷದರ ಮುಂದೆಯೇ ಭಗವತೀ ಪಾರ್ವತಿಗೆ ಹೀಗೆಂದರು – ॥ ೨೬ ॥

**ಭಗವಾನ್ ಶಂಕರನು ಹೇಳಿದನು** – ಎಲೈ ಸುಂದರಿಯೇ! ದಿವ್ಯಲೀಲಾವಿಹಾರೀ ಭಗವಂತನ ನಿಸ್ಪೃಹರೂ, ಉದಾರ ಹೃದಯರೂ ಆದ ದಾಸಾನುದಾಸರ ಮಹಿಮೆಯನ್ನು ನೀನು ಕಣ್ಣಾರೆ ನೋಡಿದೆಯಲ್ಲ. ॥ ೨೭ ॥ ಭಗವಂತನಿಗೆ ಶರಣಾದ ಜನರು ಯಾರಿಗೂ ಹೆದರುವುದಿಲ್ಲ. ಏಕೆಂದರೆ, ಅವರಿಗೆ ಸ್ವರ್ಗ, ಮೋಕ್ಷ ನರಕದಲ್ಲಿಯೂ ಕೂಡ ಕೇವಲ ಶ್ರೀಭಗವಂತನೊಬ್ಬನದೇ ಸಮಾನ

ಜಟಾಧರಸ್ತೀವ್ರತಪಾ ಬ್ರಹ್ಮವಾದಿಸಭಾಪತಿಃ ।
ಅಂಕೀಕೃತ್ಯ ಸ್ತ್ರಿಯಂ ಚಾಸ್ತೇ ಗತಹ್ರೀಃ ಪ್ರಾಕೃತೋ ಯಥಾ ॥ ೭ ॥

ಪ್ರಾಯಶಃ ಪ್ರಾಕೃತಾಶ್ಚಾಪಿ ಸ್ತ್ರಿಯಂ ರಹಸಿ ಬಿಭ್ರತಿ ।
ಅಯಂ ಮಹಾವ್ರತಧರೋ ಬಿಭರ್ತಿ ಸದಸಿ ಸ್ತ್ರಿಯಮ್ ॥ ೮ ॥

ಜಟೆಯನ್ನು ಧರಿಸಿದ್ದಾನೆ. ಬಹಳ ದೊಡ್ಡ ತಪಸ್ವೀಯಾಗಿದ್ದಾನೆ. ಬ್ರಹ್ಮವಾದಿಗಳ ಸಭೆಗೆ ಅಧಿಪತಿಯಾಗಿಯೂ ಸಾಧಾರಣ ಮನುಷ್ಯನಂತೆ ನಿರ್ಲಜ್ಜನಾಗಿ ತೊಡೆಯಲ್ಲಿ ಹೆಂಡತಿಯನ್ನು ಕುಳ್ಳಿರಿಸಿಕೊಂಡಿರುವನು. ॥ ೭ ॥ ಸಾಮಾನ್ಯವಾಗಿ ಸಾಧಾರಣ ಮನುಷ್ಯರು ಏಕಾಂತದಲ್ಲೇ ಸ್ತ್ರೀಯರೊಂದಿಗೆ ಎದ್ದು-ಕುಳಿತಿರುತ್ತಾರೆ. ಆದರೆ ಇವನು ಇಷ್ಟು ದೊಡ್ಡ ವ್ರತಧಾರಿಯಾಗಿದ್ದರೂ ತುಂಬಿದ ಸಭೆಯಲ್ಲಿ ಈಕೆಯನ್ನು ಧರಿಸಿ ಕುಳಿತಿರುವನಲ್ಲ! ॥ ೮ ॥

*ಶ್ರೀಶುಕ ಉವಾಚ*

ಭಗವಾನಪಿ ತಚ್ಛ್ರುತ್ವಾ ಪ್ರಹಸ್ಯಾಗಾಧಧೀರ್ನೃಪ ।
ತೂಷ್ಣೀಂ ಬಭೂವ ಸದಸಿ ಸಭ್ಯಾಶ್ಚ ತದನುವ್ರತಾಃ ॥ ೯ ॥

ಇತ್ಯತದ್ವೀರ್ಯವಿದುಷಿ ಬ್ರುವಾಣೇ ಬಹ್ವಶೋಭನಮ್ ।
ರುಷಾಽಽಹ ದೇವೀ ಧೃಷ್ಟಾಯ ನಿರ್ಜಿತಾತ್ಮಾಭಿಮಾನಿನೇ ॥ ೧೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಭಗವಾನ್ ಶಂಕರನ ಬುದ್ಧಿಯು ಅಗಾಧವಾದುದು. ಚಿತ್ರಕೇತುವಿನ ಈ ಕುಚೋದ್ಯದ ಮಾತನ್ನು ಕೇಳಿಯೂ ಅವನು ನಕ್ಕು ಸುಮ್ಮನಾದನು. ಆ ಸಭೆಯಲ್ಲಿ ಕುಳಿತಿರುವ ಅವನ ಅನುಯಾಯಿ ಸದಸ್ಯರೂ ಮೌನವಾಗಿದ್ದರು. ಚಿತ್ರಕೇತುವಿಗೆ ಭಗವಾನ್ ಶಂಕರನ ಮಹಿಮೆ ತಿಳಿದಿರಲಿಲ್ಲ. ಅದರಿಂದ ಅವನು ಶಿವನಕುರಿತು ತೋಚಿದಂತೆ ಗಳಹುತ್ತಿದ್ದನು. ಅವನಲ್ಲಿ 'ನಾನು ಜಿತೇಂದ್ರಿಯನಾಗಿದ್ದೇನೆ' ಎಂಬುದರ ದುರಹಂಕಾರವುಂಟಾಗಿತ್ತು. ಪಾರ್ವತೀದೇವಿಯು ಅವನ ಉದ್ಧಟತನವನ್ನು ಕಂಡು ಕ್ರೋಧಗೊಂಡು ಹೀಗೆಂದಳು. ॥ ೯-೧೦ ॥

*ಪಾರ್ವತ್ಯುವಾಚ*

ಅಯಂ ಕಿಮಧುನಾ ಲೋಕೇ ಶಾಸ್ತಾ ದಂಡಧರಃ ಪ್ರಭುಃ ।
ಅಸ್ಮದ್ವಿಧಾನಾಂ ದುಷ್ಟಾನಾಂ ನಿರ್ಲಜ್ಜಾನಾಂ ಚ ವಿಪ್ರಕೃತ್ ॥ ೧೧ ॥

ನ ವೇದ ಧರ್ಮಂ ಕಿಲ ಪದ್ಮಯೋನಿ-
ರ್ನ ಬ್ರಹ್ಮಪುತ್ರಾ ಭೃಗುನಾರದಾದ್ಯಾಃ ।
ನ ವೈ ಕುಮಾರಃ ಕಪಿಲೋ ಮನುಶ್ಚ
ಯೇ ನೋ ನಿಷೇಧಂತ್ಯತಿವರ್ತಿನಂ ಹರಮ್ ॥ ೧೨ ॥

ಏಷಾಮನುಧ್ಯೇಯಪದಾಬ್ಜಯುಗ್ಮಂ
ಜಗದ್ಗುರುಂ ಮಂಗಲಮಂಗಲಂ ಸ್ವಯಮ್ ।
ಯಃ ಕ್ಷತ್ರಬಂಧುಃ ಪರಿಭೂಯ ಸೂರೀನ್
ಪ್ರಶಾಸ್ತಿ ಧೃಷ್ಟಸ್ತದಯಂ ಹಿ ದಂಡ್ಯಃ ॥ ೧೩ ॥

ನಾಯಮರ್ಹತಿ ವೈಕುಂಠಪಾದಮೂಲೋಪಸರ್ಪಣಮ್ ।
ಸಂಭಾವಿತಮತಿಃ ಸ್ತಬ್ಧಃ ಸಾಧುಭಿಃ ಪರ್ಯುಪಾಸಿತಮ್ ॥ ೧೪ ॥

ಅತಃ ಪಾಪೀಯಸೀಂ
ಯೋನಿಮಾಸುರೀಂಯಾಹಿದುರ್ಮತೇ ।
ಯಥೇಹ ಭೂಯೋ ಮಹತಾಂ
ನ ಕರ್ತಾ ಪುತ್ರ ಕಿಲ್ಬಿಷಮ್ ॥ ೧೫ ॥

**ಪಾರ್ವತೀದೇವಿಯು ಹೇಳಿದಳು** – ಆಹಾ! ನಮ್ಮಂತಹ ದುಷ್ಟರೂ, ನಾಚಿಕೆಗೆಟ್ಟವರೂ ಆದ ಜನರ ಮೇಲೆ ದಂಡಾಧಿಕಾರಿಗಳಾಗಿ ಶಾಸನ ಮತ್ತು ತಿರಸ್ಕಾರವನ್ನು ಮಾಡುವ ಮಹಾಪ್ರಭುಗಳು ಈ ಜಗತ್ತಿನಲ್ಲಿ ಇವರೊಬ್ಬರೇ ಎಂದು ಕಾಣುತ್ತದೆ. ॥ ೧೧ ॥ ಅಯ್ಯೋ ಪಾಪ! ಬ್ರಹ್ಮದೇವರಿಗೆ, ಭೃಗು-ನಾರದರು, ಸನಕರೇ ಮುಂತಾದ ಬ್ರಹ್ಮಪುತ್ರರಿಗೆ, ಪರಮಋಷಿಗಳಿಗೆ, ಕಪಿಲರು ಮತ್ತು ಮನು ಮುಂತಾದ ಮಹಾಪುರುಷರಿಗೆ ಧರ್ಮರಹಸ್ಯವು ಗೊತ್ತೇ ಇಲ್ಲ. ಅದಕ್ಕೆ ಅವರು ಧರ್ಮಮರ್ಯಾದೆಯನ್ನು ಮೀರಿ ನಡೆದಿರುವ ಭಗವಾನ್ ಶಿವನನ್ನು ಈ ಕಾರ್ಯದಿಂದ ತಡೆಯುತ್ತಿಲ್ಲ. ॥ ೧೨ ॥ ಈ ಮಹಾತ್ಮರೆಲ್ಲರೂ ಧ್ಯಾನಮಾಡಲು ಯೋಗ್ಯವಾದ ಅಡಿದಾವರೆಗಳುಳ್ಳವನಾಗಿ, ಮಂಗಳಗಳಿಗೂ ಮಂಗಳವನ್ನುಂಟುಮಾಡುವ ಜಗದ್ಗುರುವಾದ ಭಗವಾನ್ ಶಂಕರನನ್ನೂ ಹಾಗೂ ಅವನ ಅನುಯಾಯಿಗಳಾದ ಮಹಾತ್ಮರನ್ನೂ ಈ ಕ್ಷತ್ರಿಯಾಧಮನು ತಿರಸ್ಕರಿಸಿ ಅವರ ಮೇಲೆ ಶಾಸನವನ್ನು ಮಾಡಲು ಪ್ರಯತ್ನಿಸಿದ್ದಾನೆ. ಅದರಿಂದ ಈ ದುರುಳನು ದಂಡನೆಗೆ ಯೋಗ್ಯನು. ॥ ೧೩ ॥ ತಾನು ಬಹಳ ದೊಡ್ಡವನೆಂದು ತಿಳಿದಿರುವ ಈ ದುರಹಂಕಾರಿಯಾದ ಮೂರ್ಖನು ಸಾಧುಶ್ರೇಷ್ಠರೆಲ್ಲರೂ ಉಪಾಸಿಸುತ್ತಿರುವ ಭಗವಾನ್ ಶ್ರೀಹರಿಯ ಪಾದಾರವಿಂದಗಳಲ್ಲಿ ಇರಲು ಯೋಗ್ಯನಲ್ಲ. ॥ ೧೪ ॥ ಎಲವೋ ದುರ್ಬುದ್ಧಿಯವನೇ! ನೀನು ಪಾಪಮಯ ಅಸುರಯೋನಿಯಲ್ಲಿ ಹೋಗಿ ಬೀಳು. ಹೀಗಾದರೆ ನೀನು ಮತ್ತೆ ಹೀಗೆ ಮಹಾಪುರುಷರಲ್ಲಿ ಅಪರಾಧವನ್ನು ಮಾಡಲಾರೆ. ॥ ೧೫ ॥

*ಶ್ರೀಶುಕ ಉವಾಚ*

ಏವಂ ಶಪ್ತಶ್ಚಿತ್ರಕೇತುರ್ವಿಮಾನಾದವರುಹ್ಯ ಸಃ ।
ಪ್ರಸಾದಯಾಮಾಸ ಸತೀಂ ಮೂರ್ಧ್ನಾ ನಮ್ರೇಣ ಭಾರತ ॥ ೧೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜನೇ! ಪಾರ್ವತೀದೇವಿಯು ಹೀಗೆ ಶಾಪವನ್ನು ಕೊಟ್ಟಾಗ ಚಿತ್ರಕೇತುವು ಒಡನೆಯೇ ವಿಮಾನದಿಂದಿಳಿದು ತಲೆತಗ್ಗಿಸಿ, ನಮಸ್ಕರಿಸುತ್ತಾ ಆಕೆಯನ್ನು ಪ್ರಸನ್ನಗೊಳಿಸಲು ತೊಡಗಿದನು. ॥ ೧೬ ॥

ಚಿತ್ರಕೇತುರುವಾಚ

ಪ್ರತಿಗೃಹ್ಣಾಮಿ ತೇ ಶಾಪಮಾತ್ಮನೋಽಂಜಲಿನಾಂಬಿಕೇ ।
ದೇವೈರ್ಮರ್ತ್ಯಾಯ ಯತ್ಪ್ರೋಕ್ತಂ ಪೂರ್ವದಿಷ್ಟಂ ಹಿ ತಸ್ಯ ತತ್ ॥ ೧೭ ॥

ಸಂಸಾರಚಕ್ರ ಏತಸ್ಮಿನ್ ಜಂತುರಜ್ಞಾನಮೋಹಿತಃ ।
ಭ್ರಾಮ್ಯನ್ಸುಖಂ ಚ ದುಃಖಂ ಚ ಭುಂಕ್ತೇ ಸರ್ವತ್ರ ಸರ್ವದಾ ॥ ೧೮ ॥

ನೈವಾತ್ಮಾ ನ ಪರಶ್ಚಾಪಿ ಕರ್ತಾ ಸ್ಯಾತ್ಸುಖದುಃಖಯೋಃ ।
ಕರ್ತಾರಂ ಮನ್ಯತೇಽಪ್ರಾಜ್ಞ ಆತ್ಮಾನಂ ಪರಮೇವ ಚ ॥ ೧೯ ॥

ಗುಣಪ್ರವಾಹ ಏತಸ್ಮಿನ್ಕಃ ಶಾಪಃ ಕೋ ನ್ವನುಗ್ರಹಃ ।
ಕಃ ಸ್ವರ್ಗೋ ನರಕಃ ಕೋ ವಾ ಕಿಂ ಸುಖಂ ದುಃಖಮೇವ ವಾ ॥ ೨೦ ॥

ಏಕಃ ಸೃಜತಿ ಭೂತಾನಿ ಭಗವಾನಾತ್ಮಮಾಯಯಾ ।
ಏಷಾಂ ಬಂಧಂ ಚ ಮೋಕ್ಷಂ ಚ ಸುಖಂ ದುಃಖಂ ಚ ನಿಷ್ಕಲಃ ॥ ೨೧ ॥

ನ ತಸ್ಯ ಕಶ್ಚಿದ್ದಯಿತಃ ಪ್ರತೀಪೋ
ನ ಜ್ಞಾತಿಬಂಧುರ್ನ ಪರೋ ನ ಚ ಸ್ವಃ ।
ಸಮಸ್ಯ ಸರ್ವತ್ರ ನಿರಂಜನಸ್ಯ
ಸುಖೇ ನ ರಾಗಃ ಕುತ ಏವ ರೋಷಃ ॥ ೨೨ ॥

ತಥಾಪಿ ತಚ್ಛಕ್ತಿವಿಸರ್ಗ ಏಷಾಂ
ಸುಖಾಯ ದುಃಖಾಯ ಹಿತಾಹಿತಾಯ ।
ಬಂಧಾಯ ಮೋಕ್ಷಾಯ ಚ ಮೃತ್ಯುಜನ್ಮನೋಃ
ಶರೀರಿಣಾಂ ಸಂಸೃತಯೇಽವಕಲ್ಪತೇ ॥ ೨೩ ॥

ಅಥ ಪ್ರಸಾದಯೇ ನ ತ್ವಾಂ ಶಾಪಮೋಕ್ಷಾಯ ಭಾಮಿನಿ ।
ಯನ್ಮನ್ಯಸೇ ಅಸಾಧೂಕ್ತಂ ಮಮ ತತ್ ಕ್ಷಮ್ಯತಾಂ ಸತಿ ॥ ೨೪ ॥

ಶ್ರೀಶುಕ ಉವಾಚ

ಇತಿ ಪ್ರಸಾದ್ಯ ಗಿರಿಶೌ ಚಿತ್ರಕೇತುರರಿಂದಮ ।
ಜಗಾಮ ಸ್ವವಿಮಾನೇನ ಪಶ್ಯತೋಃ ಸ್ಮಯತೋಸ್ತಯೋಃ ॥ ೨೫ ॥

ತತಸ್ತು ಭಗವಾನ್ರುದ್ರೋ ರುದ್ರಾಣೀಮಿದಮಬ್ರವೀತ್ ।
ದೇವರ್ಷಿದೈತ್ಯಸಿದ್ಧಾನಾಂ ಪಾರ್ಷದಾನಾಂ ಚ ಶೃಣ್ವತಾಮ್ ॥ ೨೬ ॥

ಶ್ರೀರುದ್ರ ಉವಾಚ

ದೃಷ್ಟವತ್ಯಸಿ ಸುಶ್ರೋಣಿ ಹರೇರದ್ಭುತಕರ್ಮಣಃ ।
ಮಾಹಾತ್ಮ್ಯಂ ಭೃತ್ಯಭೃತ್ಯಾನಾಂ ನಿಸ್ಪೃಹಾಣಾಂ ಮಹಾತ್ಮನಾಮ್ ॥ ೨೭ ॥

**ಚಿತ್ರಕೇತುವು ಹೇಳಿದನು** – ಓ ಜಗನ್ಮಾತೆಯೇ! ನಿನ್ನ ಈ ಶಾಪವನ್ನು ನಾನು ಕೈಜೋಡಿಸಿಕೊಂಡು ವಿನಯದಿಂದ ಸ್ವೀಕರಿಸುತ್ತೇನೆ. ಏಕೆಂದರೆ, ದೇವತೆಗಳು ಮನುಷ್ಯರಿಗೆ ಏನಾದರೂ ನುಡಿದರೆ ಅದು ಅವರ ಪ್ರಾರಬ್ಧಕ್ಕನುಗುಣವಾಗಿ ಸಿಕ್ಕುವ ಫಲದ ಪೂರ್ವ ಸೂಚನೆ ಮಾತ್ರವಾಗಿರುತ್ತದೆ. ॥ ೧೭ ॥ ದೇವಿ! ಈ ಜೀವನು ಅಜ್ಞಾನದಿಂದ ಮೋಹಿತನಾದ್ದರಿಂದಲೇ ಈ ಸಂಸಾರಚಕ್ರದಲ್ಲಿ ಅಲೆದಾಡುತ್ತಾ ಸುಖ ಮತ್ತು ದುಃಖಗಳನ್ನು ಭೋಗಿಸುತ್ತಾ ಇರುತ್ತಾನೆ. ॥ ೧೮ ॥ ತಾಯೇ! ಸುಖವನ್ನು ಮತ್ತು ದುಃಖವನ್ನು ಕೊಡುವವನು ತಾನೂ ಅಲ್ಲ, ಇತರರೂ ಅಲ್ಲ. ಅಜ್ಞಾನಿಗಳಾದವರೇ ತನ್ನನ್ನು ಅಥವಾ ಇತರರನ್ನು ಸುಖ-ದುಃಖದ ಕರ್ತೃಗಳೆಂದು ತಿಳಿಯುತ್ತಾರೆ. ॥ ೧೯ ॥ ಈ ಜಗತ್ತು ಸತ್ತ್ವ, ರಜ, ತಮಗಳೆಂಬ ತ್ರಿಗುಣಗಳ ಸ್ವಾಭಾವಿಕ ಪ್ರವಾಹವೇ ಆಗಿದೆ. ಇದರಲ್ಲಿ ಶಾಪವೇನು? ಅನುಗ್ರಹವೇನು? ಸ್ವರ್ಗವೇನು? ನರಕವೇನು? ಸುಖವೇನು? ದುಃಖವೇನು? ॥ ೨೦ ॥ ಪರಿಪೂರ್ಣನಾದ ಪರಮಾತ್ಮನೇ ಬೇರೆ ಯಾರ ಸಹಾಯವೂ ಇಲ್ಲದೆ ತನ್ನ ಆತ್ಮಸ್ವರೂಪಿಣಿಯಾದ ಮಾಯಾಶಕ್ತಿಯಿಂದ ಸಮಸ್ತ ಪ್ರಾಣಿಗಳನ್ನು ಹಾಗೂ ಅವರ ಬಂಧನ, ಮೋಕ್ಷ, ಸುಖ, ದುಃಖ ಇವುಗಳನ್ನು ರಚಿಸುತ್ತಾನೆ. ॥ ೨೧ ॥ ಅಮ್ಮಾ! ಭಗವಾನ್ ಶ್ರೀಹರಿಯು ಎಲ್ಲದರಲ್ಲಿ ಸಮನೂ ಮತ್ತು ಮಾಯೆಯ ಮಲದ ಸೋಂಕು ಇಲ್ಲದವನು. ಅವನಿಗೆ ಯಾರೂ ಪ್ರಿಯನೂ ಇಲ್ಲ, ಅಪ್ರಿಯನೂ ಇಲ್ಲ. ಜ್ಞಾತಿ-ಬಂಧು, ತನ್ನವರು-ಪರರೂ ಎಂಬುದೂ ಇಲ್ಲ. ಸುಖದಲ್ಲಿ ಪ್ರೀತಿಯಿಲ್ಲ, ರೋಷವಾದರೂ ಎಲ್ಲಿಂದ ಬಂದೀತು? ॥ ೨೨ ॥ ಆದರೂ ಅವನ ಮಾಯಾಶಕ್ತಿಯ ಕಾರ್ಯಗಳಿಂದ ಪಾಪ-ಪುಣ್ಯಗಳೇ ಪ್ರಾಣಿಗಳ ಸುಖ-ದುಃಖ, ಹಿತ-ಅಹಿತ, ಬಂಧ-ಮೋಕ್ಷ, ಜನ್ಮ-ಮೃತ್ಯು ಮತ್ತು ಸಂಸಾರದಲ್ಲಿ ಬಂದುಹೋಗಲು ಕಾರಣವಾಗುತ್ತವೆ. ॥ ೨೩ ॥ ಓ ಪತಿಪ್ರಾಣೆಯಾದ ದೇವಿಯೇ! ನನ್ನನ್ನು ಶಾಪದಿಂದ ಬಿಡುಗಡೆ ಮಾಡು' ಎಂದು ನಿನ್ನನ್ನು ಬೇಡುತ್ತಿಲ್ಲ. ಕೆಟ್ಟದ್ದೆಂದು ನಿನಗೆ ಅನಿಸಿರುವ ನನ್ನ ಮಾತುಗಳನ್ನು ಕೃಪೆಯಿಟ್ಟು ಕ್ಷಮಿಸಬೇಕೆಂದೇ ನಾನು ಬಯಸುತ್ತೇನೆ. ॥ ೨೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಶತ್ರು ಹಂತಕನೇ! ಚಿತ್ರಕೇತುವು ಹೀಗೆ ಪಾರ್ವತೀ-ಪರಮೇಶ್ವರರನ್ನು ಪ್ರಸನ್ನಗೊಳಿಸಿ ಅವರು ನಸುನಗುತ್ತಾ ನೋಡುತ್ತಿರುವಂತೆಯೇ ತನ್ನ ವಿಮಾನವನ್ನೇರಿ ಹೊರಟುಹೋದನು. ॥ ೨೫ ॥ ಆಗ ಭಗವಾನ್ ರುದ್ರದೇವರು – ದೇವತೆಗಳು, ಋಷಿಗಳು, ದೈತ್ಯರು, ಸಿದ್ಧರು ಮತ್ತು ಪಾರ್ಷದರ ಮುಂದೆಯೇ ಭಗವತೀ ಪಾರ್ವತಿಗೆ ಹೀಗೆಂದರು – ॥ ೨೬ ॥

**ಭಗವಾನ್ ಶಂಕರನು ಹೇಳಿದನು** – ಎಲೈ ಸುಂದರಿಯೇ! ದಿವ್ಯಲೀಲಾವಿಹಾರೀ ಭಗವಂತನ ನಿಸ್ಪೃಹರೂ, ಉದಾರ ಹೃದಯರೂ ಆದ ದಾಸಾನುದಾಸರ ಮಹಿಮೆಯನ್ನು ನೀನು ಕಣ್ಣಾರೆ ನೋಡಿದೆಯಲ್ಲ. ॥ ೨೭ ॥ ಭಗವಂತನಿಗೆ ಶರಣಾದ ಜನರು ಯಾರಿಗೂ ಹೆದರುವುದಿಲ್ಲ. ಏಕೆಂದರೆ, ಅವರಿಗೆ ಸ್ವರ್ಗ, ಮೋಕ್ಷ ನರಕದಲ್ಲಿಯೂ ಕೂಡ ಕೇವಲ ಶ್ರೀಭಗವಂತನೊಬ್ಬನದೇ ಸಮಾನ

ನಾರಾಯಣಪರಾಃ ಸರ್ವೇ ನ ಕುತಶ್ಚನ ಬಿಭ್ಯತಿ ।
ಸ್ವರ್ಗಾಪವರ್ಗನರಕೇಷ್ವಪಿ ತುಲ್ಯಾರ್ಥದರ್ಶಿನಃ ॥ ೨೮ ॥

ದೇಹಿನಾಂ ದೇಹಸಂಯೋಗಾದ್ದ್ವಂದ್ವಾನೀಶ್ವರಲೀಲಯಾ ।
ಸುಖಂ ದುಃಖಂ ಮೃತಿರ್ಜನ್ಮ ಶಾಪೋಽನುಗ್ರಹ ಏವ ಚ ॥ ೨೯ ॥

ಅವಿವೇಕಕೃತಃ ಪುಂಸೋ ಹ್ಯರ್ಥಭೇದ ಇವಾತ್ಮನಿ ।
ಗುಣದೋಷವಿಕಲ್ಪಶ್ಚ ಭಿದೇವ ಸ್ರಜಿವತ್ಕೃತಃ ॥ ೩೦ ॥

ವಾಸುದೇವೇ ಭಗವತಿ ಭಕ್ತಿಮುದ್ವಹತಾಂ ನೃಣಾಮ್ ।
ಜ್ಞಾನವೈರಾಗ್ಯವೀರ್ಯಾಣಾಂ ನೇಹ ಕಶ್ಚಿದ್ವ್ಯಪಾಶ್ರಯಃ ॥ ೩೧ ॥

ನಾಹಂ ವಿರಿಂಚೋ ನ ಕುಮಾರನಾರದೌ
ನ ಬ್ರಹ್ಮಪುತ್ರಾ ಮುನಯಃ ಸುರೇಶಾಃ ।
ವಿದಾಮ ಯಸ್ಯೇಹಿತಮಂಶಕಾಂಶಕಾ
ನ ತತ್ಸ್ವರೂಪಂ ಪೃಥಗೀಶಮಾನಿನಃ ॥ ೩೨ ॥

ನ ಹ್ಯಸ್ಯಾಸ್ತಿ ಪ್ರಿಯಃ ಕಶ್ಚಿನ್ನಾಪ್ರಿಯಃ ಸ್ವಃ ಪರೋಽಪಿ ವಾ ।
ಆತ್ಮತ್ವಾತ್ಸರ್ವಭೂತಾನಾಂ ಸರ್ವಭೂತಪ್ರಿಯೋಹರಿಃ ॥ ೩೩ ॥

ತಸ್ಯ ಚಾಯಂ ಮಹಾಭಾಗಶ್ಚಿತ್ರಕೇತುಃ ಪ್ರಿಯೋಽನುಗಃ ।
ಸರ್ವತ್ರ ಸಮದೃಕ್ ಶಾಂತೋ ಹ್ಯಹಂ ಚೈವಾಚ್ಯುತಪ್ರಿಯಃ ॥ ೩೪ ॥

ತಸ್ಮಾನ್ನ ವಿಸ್ಮಯಃ ಕಾರ್ಯಃ ಪುರುಷೇಷು ಮಹಾತ್ಮಸು ।
ಮಹಾಪುರುಷಭಕ್ತೇಷು ಶಾಂತೇಷು ಸಮದರ್ಶಿಷು ॥ ೩೫ ॥

*ಶ್ರೀಶುಕ ಉವಾಚ*

ಇತಿ ಶ್ರುತ್ವಾ ಭಗವತಃ ಶಿವಸ್ಯೋಮಾಭಿಭಾಷಿತಮ್ ।
ಬಭೂವ ಶಾಂತಧೀ ರಾಜನ್ ದೇವೀ ವಿಗತವಿಸ್ಮಯಾ ॥ ೩೬ ॥

ಇತಿ ಭಾಗವತೋ ದೇವ್ಯಾಃ ಪ್ರತಿಶಪ್ತುಮಲಂತಮಃ ।
ಮೂರ್ಧ್ನಾ ಸಂಜಗೃಹೇ ಶಾಪಮೇತಾವತ್ಸಾಧುಲಕ್ಷಣಮ್ ॥ ೩೭ ॥

ಜಜ್ಞೇ ತ್ವಷ್ಟುರ್ದಕ್ಷಿಣಾಗ್ನೌ ದಾನವೀಂ ಯೋನಿಮಾಶ್ರಿತಃ ।
ವೃತ್ರ ಇತ್ಯಭಿವಿಖ್ಯಾತೋ ಜ್ಞಾನವಿಜ್ಞಾನಸಂಯುತಃ ॥ ೩೮ ॥

ಭಾವದಿಂದ ದರ್ಶನವಾಗುತ್ತಾ ಇರುತ್ತದೆ. ॥ ೨೮ ॥ ಜೀವಿಗಳಿಗೆ ಭಗವಂತನ ಲೀಲೆಯಿಂದಲೇ ದೇಹದ ಸಂಯೋಗ ಉಂಟಾದ ಕಾರಣದಿಂದಲೇ ಸುಖ-ದುಃಖ, ಜನ್ಮ-ಮರಣ, ಶಾಪ-ಅನುಗ್ರಹ ಮುಂತಾದ ದ್ವಂದ್ವಗಳು ದೊರೆಯುತ್ತವೆ. ॥ ೨೯ ॥ ಸ್ವಪ್ನದಲ್ಲಿ ಭೇದ-ಭ್ರಮೆಯಿಂದ ಸುಖ-ದುಃಖಾದಿಗಳು ಕಂಡುಬರುತ್ತವೆ ಮತ್ತು ಜಾಗ್ರತ್ ಅವಸ್ಥೆಯಲ್ಲಿ ಭ್ರಮೆಯಿಂದ ಮಾಲೆಯಲ್ಲಿಯೂ ಸರ್ಪಬುದ್ಧಿ ಉಂಟಾಗುತ್ತದೆ. ಹಾಗೆಯೇ ಮನುಷ್ಯನು ಅಜ್ಞಾನದಿಂದಲೇ ಆತ್ಮನಲ್ಲಿ ದೇವತೆಗಳು, ಮನುಷ್ಯರು ಮುಂತಾದ ಭೇದ ಹಾಗೂ ಗುಣ-ದೋಷಾದಿ ಕಲ್ಪನೆ ಮಾಡುತ್ತಾನೆ. ॥ ೩೦ ॥ ಜ್ಞಾನ ಮತ್ತು ವೈರಾಗ್ಯದ ಬಲವಿರುವವರಿಗೆ ಮತ್ತು ಭಗವಾನ್ ಶ್ರೀವಾಸುದೇವನ ಚರಣಗಳಲ್ಲಿ ಭಕ್ತಿಭಾವವಿರಿಸಿದವರಿಗೆ ಈ ಜಗತ್ತಿನಲ್ಲಿ ಇದು ಹೇಯ, ಇದು ಉಪಾದೇಯ ಎಂಬ ರಾಗ-ದ್ವೇಷ ಮಾಡುವಂತಹ ಯಾವುದೇ ವಸ್ತು ಇರುವುದಿಲ್ಲ. ॥ ೩೧ ॥ ನಾನು, ಬ್ರಹ್ಮದೇವರು, ಸನಕಾದಿಗಳು, ನಾರದರು, ಬ್ರಹ್ಮಪುತ್ರರಾದ ಭೃಗು ಮುಂತಾದ ಮುನಿಗಳು ಮತ್ತು ದೊಡ್ಡ-ದೊಡ್ಡ ದೇವತೆಗಳು – ಯಾರೂ ಭಗವಂತನ ಲೀಲೆಯ ರಹಸ್ಯವನ್ನು ತಿಳಿಯಲಾರೆವು. ಇಂತಹ ಸ್ಥಿತಿಯಲ್ಲಿ ಅವನ ಅಂಶಾಂಶರು ಮತ್ತು ತನ್ನನ್ನು ಅವನಿಂದ ಬೇರೆ ಈಶ್ವರನೆಂದು ತಿಳಿದವರು ಅವನ ಸ್ವರೂಪವನ್ನು ಹೇಗೆ ತಿಳಿಯ ಬಲ್ಲರು ? ॥ ೩೨ ॥ ಭಗವಂತನಿಗೆ ಪ್ರಿಯರಾಗಲೀ, ಅಪ್ರಿಯರಾಗಲೀ ಯಾರೂ ಇಲ್ಲ. ಅವನಿಗೆ ಸ್ವಕೀಯನೂ, ಪರಕೀಯನೂ ಯಾರೂ ಇಲ್ಲ. ಅವನು ಎಲ್ಲ ಪ್ರಾಣಿಗಳ ಆತ್ಮನಾಗಿರುವನು, ಆದ್ದರಿಂದ ಎಲ್ಲ ಪ್ರಾಣಿಗಳ ಪ್ರಿಯತಮನಾಗಿರುವನು. ॥ ೩೩ ॥ ಪ್ರಿಯೇ ! ಈ ಪರಮಭಾಗ್ಯವಂತನಾದ ಚಿತ್ರಕೇತುವು ಆ ಭಗವಂತನಿಗೆ ಪ್ರಿಯನಾದ ಅನುಚರನೂ, ಶಾಂತನೂ, ಸಮದರ್ಶಿಯೂ ಆಗಿದ್ದಾನೆ. ನಾನೂ ಕೂಡ ಭಗವಾನ್ ಶ್ರೀಹರಿಗೆ ಪ್ರಿಯನಾಗಿದ್ದೇನೆ. ॥ ೩೪ ॥ ಆದಕ್ಕಾಗಿ ಭಗವಂತನ ಪ್ರಿಯಭಕ್ತರೂ, ಶಾಂತರೂ, ಸಮದರ್ಶಿಗಳೂ, ಮಹಾತ್ಮರೂ ಆದವರ ವಿಷಯದಲ್ಲಿ ನೀನು ಯಾವ ರೀತಿಯಿಂದಲೂ ಆಶ್ಚರ್ಯ ಪಡಬಾರದು. ॥ ೩೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ ! ಭಗವಾನ್ ಶಂಕರನ ಈ ಭಾಷಣವನ್ನು ಕೇಳಿ ಭಗವತಿ ಪಾರ್ವತಿಯ ಚಿತ್ತವೃತ್ತಿಯು ಶಾಂತವಾಯಿತು ಹಾಗೂ ಆಕೆಯು ಆಶ್ಚರ್ಯರಹಿತಳಾದಳು. ॥ ೩೬ ॥ ಭಾಗವತೋತ್ತಮನಾದ ಚಿತ್ರಕೇತುವು ಕೂಡ ಭಗವತೀ ಪಾರ್ವತಿಗೆ ಪ್ರತಿಶಾಪವನ್ನು ಕೊಡಲು ಸಮರ್ಥನಾಗಿದ್ದರೂ ಅವನು ಆಕೆಗೆ ಶಾಪವನ್ನು ಕೊಡದೆ ಅವಳ ಶಾಪವನ್ನು ಶಿರಸಾವಹಿಸಿಕೊಂಡನು. ಇದೇ ತಾನೇ ಸಾಧು-ಸಜ್ಜನರ ಲಕ್ಷಣವು ! ॥ ೩೭ ॥ ಇದೇ ವಿದ್ಯಾಧರ ಚಿತ್ರಕೇತುವು ದಾನವ ಯೋನಿಯನ್ನು ಆಶ್ರಯಿಸಿ ತ್ವಷ್ಟನ ದಕ್ಷಿಣಾಗ್ನಿಯಿಂದ ಹುಟ್ಟಿ ವೃತ್ರಾಸುರನೆಂಬ ಹೆಸರಿನಿಂದ ಖ್ಯಾತನಾದನು. ಅಲ್ಲಿಯೂ ಅವನು ಭಗವತ್ ಸ್ವರೂಪದ ಜ್ಞಾನದಿಂದಲೂ, ಭಕ್ತಿಯಿಂದಲೂ ಪರಿಪೂರ್ಣನಾಗಿದ್ದನು. ॥ ೩೮ ॥ ವೃತ್ರಾಸುರನು ದೈತ್ಯಯೋನಿಯಲ್ಲಿ ಏಕೆ ಜನಿಸಿದನು ? ಆ ಯೋನಿಯಲ್ಲಿಯೂ ಅವನಿಗೆ ಭಗವಂತನ ಅಂತಹ

ಏತತ್ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।
ವೃತ್ರಸ್ಯಾಸುರಜಾತೇಶ್ಚ ಕಾರಣಂ ಭಗವನ್ಮತೇಃ ॥ ೩೯ ॥

ಇತಿಹಾಸಮಿಮಂ ಪುಣ್ಯಂ ಚಿತ್ರಕೇತೋರ್ಮಹಾತ್ಮನಃ ।
ಮಾಹಾತ್ಮ್ಯಂ ವಿಷ್ಣುಭಕ್ತಾನಾಂ ಶ್ರುತ್ವಾ ಬಂಧಾದ್ವಿಮುಚ್ಯತೇ ॥ ೪೦ ॥

ಯ ಏತತ್ಪ್ರಾತರುತ್ಥಾಯ ಶ್ರದ್ಧಯಾ ವಾಗ್ಯತಃ ಪಠೇತ್ ।
ಇತಿಹಾಸಂ ಹರಿಂ ಸ್ಮೃತ್ವಾ ಸ ಯಾತಿ ಪರಮಾಂ ಗತಿಮ್ ॥ ೪೧ ॥

ಭಕ್ತಿಯು ಹೇಗೆ ದೊರೆಯಿತು ? ಎಂದು ನೀನು ಪ್ರಶ್ನೆ ಮಾಡಿದ್ದೆ. ಅದಕ್ಕೆ ವಿವರವಾದ ಉತ್ತರವನ್ನು ನಾನು ಕೊಟ್ಟಾಯಿತು. ॥ ೩೯ ॥ ಮಹಾತ್ಮಾ ಚಿತ್ರಕೇತುವಿನ ಈ ಪವಿತ್ರ ಇತಿಹಾಸವು ಕೇವಲ ಅವನಷ್ಟೇ ಅಲ್ಲ, ಸಮಸ್ತ ವಿಷ್ಣುಭಕ್ತರ ಮಹಾತ್ಮ್ಯವಾಗಿದೆ. ಇದನ್ನು ಕೇಳು ವವನು ಎಲ್ಲ ಬಂಧನಗಳಿಂದ ಮುಕ್ತನಾಗಿ ಹೋಗುತ್ತಾನೆ. ॥ ೪೦ ॥ ಪ್ರಾತಃಕಾಲದಲ್ಲಿ ಎದ್ದು ಮೌನದಿಂದಿದ್ದು, ಶ್ರದ್ಧೆಯಿಂದ ಭಗ ವಂತನ ಸ್ಮರಣೆ ಮಾಡುತ್ತಾ ಈ ಇತಿಹಾಸವನ್ನು ಓದುವವನು ಪರಮಗತಿಯನ್ನು ಹೊಂದುವನು. ॥ ೪೧ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ
ಚಿತ್ರಕೇತುಶಾಪೋ ನಾಮ ಸಪ್ತದಶೋಽಧ್ಯಾಯಃ ॥ ೧೭ ॥

# ಹದಿನೆಂಟನೆಯ ಅಧ್ಯಾಯ

## ಅದಿತಿ ಮತ್ತು ದಿತಿ ಇವರ ಸಂತಾನಗಳು ಮತ್ತು ಮರುದ್ಗಣಗಳ ಉತ್ಪತ್ತಿಯ ವರ್ಣನೆ

*ಶ್ರೀಶುಕ ಉವಾಚ*

ಪೃಶ್ನಿಸ್ತು ಪತ್ನೀ ಸವಿತುಃ ಸಾವಿತ್ರೀಂ ವ್ಯಾಹೃತಿಂ ತ್ರಯೀಮ್ ।
ಅಗ್ನಿಹೋತ್ರಂ ಪಶುಂ ಸೋಮಂ ಚಾತುರ್ಮಾಸ್ಯಂ ಮಹಾಮಖಾನ್ ॥ ೧ ॥

ಸಿದ್ಧಿರ್ಭಗಸ್ಯ ಭಾರ್ಯಾಂಗ ಮಹಿಮಾನಂ ವಿಭುಂ ಪ್ರಭುಮ್ ।
ಆಶಿಷಂ ಚ ವರಾರೋಹಾಂ ಕನ್ಯಾಂ ಪ್ರಾಸೂತ ಸುವ್ರತಾಮ್ ॥ ೨ ॥

ಧಾತುಃ ಕುಹೂಃ ಸಿನೀವಾಲೀ ರಾಕಾ ಚಾನುಮತಿಸ್ತಥಾ ।
ಸಾಯಂ ದರ್ಶಮಥ ಪ್ರಾತಃ ಪೂರ್ಣಮಾಸಮನುಕ್ರಮಾತ್ ॥ ೩ ॥

ಅಗ್ನೀನ್ ಪುರೀಷ್ಯಾನಾಧತ್ತ ಕ್ರಿಯಾಯಾಂ ಸಮನಂತರಃ ।
ಚರ್ಷಣೀ ವರುಣಸ್ಯಾಸೀದ್ಯಸ್ಯಾಂ ಜಾತೋ ಭೃಗುಃ ಪುನಃ ॥ ೪ ॥

ವಾಲ್ಮೀಕಿಶ್ಚ ಮಹಾಯೋಗೀ ವಲ್ಮೀಕಾದಭವತ್ಕಿಲ ।
ಅಗಸ್ತ್ಯಶ್ಚ ವಸಿಷ್ಠಶ್ಚ ಮಿತ್ರಾವರುಣಯೋರ್ಋಷೀ ॥ ೫ ॥

ರೇತಃ ಸಿಷಿಚತುಃ ಕುಂಭೇ ಊರ್ವಶ್ಯಾಃ ಸನ್ನಿಧೌ ದ್ರುತಮ್ ।
ರೇವತ್ಯಾಂ ಮಿತ್ರ ಉತ್ಸರ್ಗಮರಿಷ್ಟಂ ಪಿಪ್ಪಲಂ ವ್ಯಧಾತ್ ॥ ೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿದ್ರಾಜನೇ ! ಸವಿತೃದೇವತೆಯ ಪತ್ನಿಯಾದ ಪ್ರಶ್ನಿದೇವಿಯು – ಸಾವಿತ್ರೀ, ವ್ಯಾಹೃತಿ, ತ್ರಯೀ, ಅಗ್ನಿಹೋತ್ರ, ಪಶು, ಸೋಮ, ಚಾತುರ್ಮಾಸ್ಯ ಮತ್ತು ಪಂಚಮಹಾಯಜ್ಞ ಎಂಬ ಎಂಟು ಮಂದಿ ಮಕ್ಕಳನ್ನು ಪಡೆದಳು. ॥ ೧ ॥ ಭಗದೇವತೆಯ ಪತ್ನಿಯಾದ ಸಿದ್ಧಿಯಲ್ಲಿ– ಮಹಿಮಾ, ವಿಭು, ಪ್ರಭು ಎಂಬ ಮೂವರು ಪುತ್ರರೂ 'ಆಶಿಷ' ಎಂಬ ಸುಂದರಿಯೂ ಸದಾಚಾರಿಣಿಯೂ ಆದ ಒಬ್ಬಳು ಪುತ್ರಿಯೂ ಜನಿಸಿದರು. ॥ ೨ ॥ ಧಾತ್ರದೇವತೆಗೆ – ಕುಹೂ, ಸಿನಿವಾಲೀ, ರಾಕಾ, ಅನುಮತಿ ಎಂಬ ನಾಲ್ವರು ಪತ್ನಿಯರಿದ್ದರು. ಅವರಲ್ಲಿ ಕ್ರಮವಾಗಿ ಸಾಯಂಕಾಲ, ದರ್ಶ, ಪ್ರಾತಃಕಾಲ, ಪೂರ್ಣಮಾಸರೆಂಬ ನಾಲ್ವರು ಪುತ್ರರು ಹುಟ್ಟಿದರು. ॥ ೩ ॥ ಧಾತೃವಿನ ತಮ್ಮನಿಗೆ ವಿಧಾತಾ ಎಂದು ಹೆಸರು. ಅವನ ಪತ್ನಿಯು ಕ್ರಿಯೆ. ಅವಳಿಂದ ಪುರೀಷ್ಯ ಎಂಬ ಐದು ಅಗ್ನಿಗಳ ಉತ್ಪತ್ತಿಯಾಯಿತು. ವರುಣದೇವರ ಪತ್ನಿಯ ಹೆಸರು ಚರ್ಷಣೀ. ಆಕೆಯಲ್ಲಿ ಭೃಗುಮಹರ್ಷಿಗಳು ಪುನಃ ಜನ್ಮವನ್ನು ಪಡೆದರು. ಅದಕ್ಕೆ ಮೊದಲು ಅವರು ಬ್ರಹ್ಮದೇವರ ಪುತ್ರರಾಗಿದ್ದರು. ॥ ೪ ॥ ಮಹಾಯೋಗಿಗಳಾದ ವಾಲ್ಮೀಕಿಗಳೂ ಕೂಡ ವರುಣನ ಪುತ್ರರೇ ಆಗಿದ್ದರು. ಹುತ್ತ (ವಲ್ಮೀಕ)ದಿಂದ ಹುಟ್ಟಿದ್ದರಿಂದ ಅವರ ಹೆಸರು ವಾಲ್ಮೀಕಿ ಎಂದಾಯಿತು. ಊರ್ವಶಿಯನ್ನು ಕಂಡು ಮಿತ್ರ ಮತ್ತು ವರುಣ ದೇವತೆಗಳಿಬ್ಬರಿಗೂ ವೀರ್ಯಸ್ಖಲನವಾಯಿತು. ಆ ವೀರ್ಯವನ್ನು ಅವರು ಒಂದು ಗಡಿಗೆಯಲ್ಲಿರಿಸಿದರು. ಅದರಿಂದಲೇ ಮುನಿಶ್ರೇಷ್ಠರಾದ ಅಗಸ್ತ್ಯರ ಮತ್ತು ವಸಿಷ್ಠರ ಜನನವಾಯಿತು. ಮಿತ್ರದೇವತೆಯ ಪತ್ನಿಯು ರೇವತೀ. ಆಕೆಯಲ್ಲಿ ಉತ್ಸರ್ಗ, ಅರಿಷ್ಟ, ಪಿಪ್ಪಲ ಎಂಬ ಮೂವರು ಪುತ್ರರು ಉದಿಸಿದರು. ॥ ೫-೬॥

ಪೌಲೋಮ್ಯಾಮಿಂದ್ರ ಆಧತ್ತ ತ್ರೀನ್ಪುತ್ರಾನಿತಿ ನಃ ಶ್ರುತಮ್ ।
ಜಯಂತಮೃಷಭಂ ತಾತ ತೃತೀಯಂ ಮೀಢುಷಂ ಪ್ರಭುಃ ॥ ೭ ॥

ಉರುಕ್ರಮಸ್ಯ ದೇವಸ್ಯ ಮಾಯಾವಾಮನರೂಪಿಣಃ ।
ಕೀರ್ತೌ ಪತ್ನ್ಯಾಂ ಬೃಹಚ್ಛ್ಲೋಕಸ್ತಸ್ಯಾಸನ್ಸೌಭಗಾದಯಃ ॥ ೮ ॥

ತತ್ಕರ್ಮಗುಣವೀರ್ಯಾಣಿ ಕಾಶ್ಯಪಸ್ಯ ಮಹಾತ್ಮನಃ ।
ಪಶ್ಚಾದ್ವಕ್ಷ್ಯಾಮಹೇಽದಿತ್ಯಾಂ ಯಥಾ ವಾವತತಾರ ಹ ॥ ೯ ॥

ಅಥ ಕಶ್ಯಪದಾಯಾದಾನ್ದೈತೇಯಾನ್ಕೀರ್ತಯಾಮಿ ತೇ ।
ಯತ್ರ ಭಾಗವತಃ ಶ್ರೀಮಾನ್ ಪ್ರಹ್ಲಾದೋ ಬಲಿರೇವ ಚ ॥ ೧೦ ॥

ದಿತೇರ್ದ್ವಾವೇವ ದಾಯಾದೌ ದೈತ್ಯದಾನವವಂದಿತೌ ।
ಹಿರಣ್ಯಕಶಿಪುರ್ನಾಮ ಹಿರಣ್ಯಾಕ್ಷಶ್ಚ ಕೀರ್ತಿತೌ ॥ ೧೧ ॥

ಹಿರಣ್ಯಕಶಿಪೋರ್ಭಾರ್ಯಾ ಕಯಾಧುರ್ನಾಮ ದಾನವೀ ।
ಜಂಭಸ್ಯ ತನಯಾ ದತ್ತಾ ಸುಷುವೇ ಚತುರಃ ಸುತಾನ್ ॥ ೧೨ ॥

ಸಂಹ್ಲಾದಂ ಪ್ರಾಗನುಹ್ಲಾದಂ ಹ್ಲಾದಂ ಪ್ರಹ್ಲಾದಮೇವ ಚ ।
ತತ್ಸ್ವಸಾ ಸಿಂಹಿಕಾ ನಾಮ ರಾಹುಂ ವಿಪ್ರಚಿತೋಽಗ್ರಹೀತ್ ॥ ೧೩ ॥

ಶಿರೋಽಹರದ್ಯಸ್ಯ ಹರಿಶ್ಚಕ್ರೇಣ ಪಿಬತೋಽಮೃತಮ್ ।
ಸಂಹ್ಲಾದಸ್ಯ ಕೃತಿರ್ಭಾರ್ಯಾಸೂತ ಪಂಚಜನಂ ತತಃ ॥ ೧೪ ॥

ಹ್ಲಾದಸ್ಯ ಧಮನಿರ್ಭಾರ್ಯಾಸೂತ ವಾತಾಪಿಮಿಲ್ವಲಮ್ ।
ಯೋಽಗಸ್ತ್ಯಾಯ ತ್ವತಿಥಯೇ ಪೇಚೇ ವಾತಾಪಿಮಿಲ್ವಲಃ ॥ ೧೫ ॥

ಅನುಹ್ಲಾದಸ್ಯ ಸೂರ್ಮ್ಯಾಯಾಂ ಬಾಷ್ಕಲೋ ಮಹಿಷಸ್ತಥಾ ।
ವಿರೋಚನಸ್ತು ಪ್ರಾಹ್ಲಾದಿರ್ದೇವ್ಯಾಸ್ತಸ್ಯಾಭವದ್ಬಲಿಃ ॥ ೧೬ ॥

ಪ್ರಿಯ ಪರೀಕ್ಷಿತನೇ! ಇಂದ್ರದೇವರ ಪತ್ನಿಯು ಪುಲೋಮನ ಪುತ್ರಿಯಾದ ಶಚೀದೇವಿಯು. ಅವಳಲ್ಲಿ ಜಯಂತ, ಋಷಭ, ಮೀಢ್ವಾನ್ ಎಂಬ ಮೂವರು ಪುತ್ರರು ಹುಟ್ಟಿದರೆಂದು ನಾವು ಕೇಳಿದ್ದೇವೆ. ॥ ೭ ॥ ಸ್ವಯಂ ಭಗವಾನ್ ವಿಷ್ಣುವೇ (ಬಲಿಯ ಮೇಲೆ ಅನುಗ್ರಹವನ್ನು ತೋರಲು ಮತ್ತು ಇಂದ್ರನ ರಾಜ್ಯವನ್ನು ಮರಳಿ ಪಡೆಯಲಿಕ್ಕಾಗಿ) ಮಾಯೆಯಿಂದ ವಾಮನ (ಉಪೇಂದ್ರ) ರೂಪದಿಂದ ಅವತರಿಸಿದ್ದನು. ಅವನು ಮೂರು ಹೆಜ್ಜೆ ಭೂಮಿಯನ್ನು ಬೇಡಿ, ಮೂರು ಲೋಕಗಳನ್ನೂ ಅಳೆದು ಬಿಟ್ಟಿದ್ದನು. ಅವನಿಗೆ 'ಕೀರ್ತಿ' ಎಂಬ ಪತ್ನಿಯಿದ್ದಳು. ಅವಳಲ್ಲಿ ಬೃಹಚ್ಛ್ಲೋಕ ಎಂಬ ಪುತ್ರನು ಜನಿಸಿದನು. ಆ ಬೃಹಚ್ಛ್ಲೋಕನಿಗೆ ಸೌಭಗನೇ ಮುಂತಾದ ಅನೇಕ ಮಂದಿ ಪುತ್ರರು ಹುಟ್ಟಿದರು. ॥ ೮ ॥ ಕಶ್ಯಪನಂದನ ಭಗವಾನ್ ವಾಮನನು ತಾಯಿಯಾದ ಅದಿತಿಯ ಗರ್ಭದಿಂದ ಏಕೆ ಅವತರಿಸಿದನು. ಮತ್ತು ಈ ಅವತಾರದಲ್ಲಿ ಅವನು ಯಾವ-ಯಾವ ಗುಣಗಳನ್ನು ಲೀಲೆಗಳನ್ನು ಪರಾಕ್ರಮವನ್ನು ಪ್ರಕಟಿಸಿದನು. ಇದನ್ನು ನಾನು ಮುಂದೆ (ಎಂಟನೆಯ ಸ್ಕಂಧದಲ್ಲಿ) ವರ್ಣಿಸುವೆನು. ॥ ೯ ॥

ಪ್ರಿಯ ಪರೀಕ್ಷಿತನೇ! ಈಗ ನಾನು ಕಶ್ಯಪರ ಇನ್ನೊಬ್ಬ ಪತ್ನಿಯಾದ ದಿತಿದೇವಿಯಲ್ಲಿ ಉತ್ಪನ್ನವಾದ ಸಂತಾನ ಪರಂಪರೆಯನ್ನು ವರ್ಣಿಸುವೆನು ಕೇಳು. ಆ ವಂಶದಲ್ಲೇ ಭಗವಂತನ ಪ್ರಿಯಭಕ್ತ ಪ್ರಹ್ಲಾದನೂ ಮತ್ತು ಬಲಿಚಕ್ರವರ್ತಿಯೂ ಜನಿಸಿದ್ದರು. ॥ ೧೦ ॥ ದಿತಿಗೆ ದೈತ್ಯ-ದಾನವರೆಲ್ಲರಿಂದಲೂ ವಂದನೀಯರಾದ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷ ಎಂಬ ಇಬ್ಬರು ಪುತ್ರರು ಹುಟ್ಟಿದರು. ಇವರ ಸಂಕ್ಷಿಪ್ತ ಕಥೆಯನ್ನು ನಾನು ನಿನಗೆ (ಮೂರನೆಯ ಸ್ಕಂಧದಲ್ಲಿ) ಹೇಳಿಬಿಟ್ಟಿರುವೆನು. ॥ ೧೧ ॥ ಜಂಭ ದಾನವನು ತನ್ನ ಸುಪುತ್ರಿಯಾದ ಕಯಾಧುವನ್ನು ಹಿರಣ್ಯಕಶಿಪುವಿಗೆ ಕೊಟ್ಟು ವಿವಾಹ ಮಾಡಿದನು. ಕಯಾಧುವಿನಲ್ಲಿ ಸಂಹ್ಲಾದ, ಅನುಹ್ಲಾದ, ಹ್ಲಾದ ಮತ್ತು ಪ್ರಹ್ಲಾದ ಎಂಬ ನಾಲ್ವರು ಪುತ್ರರು ಜನಿಸಿದರು. ಅವರ ಸೋದರಿಯಾದ ಸಿಂಹಿಕೆ ಎಂಬುವಳನ್ನು ವಿಪ್ರಚಿತ್ತಿ ಎಂಬ ದಾನವನು ಮದುವೆಯಾಗಿ, ಅವಳಲ್ಲಿ ರಾಹು ಎಂಬ ಪುತ್ರನನ್ನು ಪಡೆದಳು. ॥ ೧೨-೧೩ ॥ ಅಮೃತಪಾನದ ಸಮಯದಲ್ಲಿ ಮೋಹಿನೀರೂಪಧಾರಿಯಾದ ಶ್ರೀಮಹಾವಿಷ್ಣುವು ಸುದರ್ಶನಚಕ್ರದಿಂದ ಕತ್ತರಿಸಿ ಹಾಕಿದ್ದು ಇದೇ ರಾಹುವಿನ ಶಿರಸ್ಸನ್ನು. ಸಂಹ್ಲಾದನ ಪತ್ನಿಯಾದ ಕೃತಿಯಲ್ಲಿ ಪಂಚಜನನೆಂಬ ಪುತ್ರನು ಹುಟ್ಟಿದನು. ॥ ೧೪ ॥ ಹ್ಲಾದನ ಪತ್ನಿಯು ಧಮನಿ. ಆಕೆಯು ಇಲ್ವಲ ಮತ್ತು ವಾತಾಪಿ ಎಂಬ ಇಬ್ಬರು ಪುತ್ರರನ್ನು ಪಡೆದಳು. ಈ ಇಲ್ವಲನೇ ಮಹರ್ಷಿ ಅಗಸ್ತ್ಯರ ಆತಿಥ್ಯದಲ್ಲಿ ವಾತಾಪಿಯನ್ನು ಬೇಯಿಸಿ ತಿನ್ನಿಸಿದನೆಂಬುದು ಪ್ರಸಿದ್ಧವಾಗಿದೆ. ॥ ೧೫ ॥ ಅನುಹ್ಲಾದನ ಪತ್ನಿಯು ಸೂರ್ಮ್ಯಾ. ಆಕೆಯಲ್ಲಿ ಬಾಷ್ಕಲ ಮತ್ತು ಮಹಿಷಾಸುರ ಎಂಬ ಇಬ್ಬರು ಪುತ್ರರು ಹುಟ್ಟಿದರು. ಪ್ರಹ್ಲಾದನ ಪುತ್ರನು ವಿರೋಚನ. ಅವನ ಪತ್ನಿಯಾದ ದೇವಿ ಎಂಬುವಳಲ್ಲಿ ದೈತ್ಯರಾಜನಾದ ಬಲಿಚಕ್ರವರ್ತಿಯು ಜನಿಸಿದನು. ॥ ೧೬ ॥

ಬಾಣಜ್ಯೇಷ್ಠಂ ಪುತ್ರಶತಮಶನಾಯಾಂ ತತೋಽಭವತ್ ।
ತಸ್ಯಾನುಭಾವಃ ಸುಶ್ಲೋಕ್ಯಃ ಪಶ್ಚಾದೇವಾಭಿಧಾಸ್ಯತೇ ॥ ೧೭ ॥

ಬಾಣ ಆರಾಧ್ಯ ಗಿರಿಶಂ ಲೇಭೇ ತದ್ಗಣಮುಖ್ಯತಾಮ್ ।
ಯತ್ಪಾರ್ಶ್ವೇ ಭಗವಾನಾಸ್ತೇ ಹ್ಯದ್ಯಾಪಿ ಪುರಪಾಲಕಃ ॥ ೧೮ ॥

ಮರುತಶ್ಚ ದಿತೇಃ ಪುತ್ರಾಶ್ಚತ್ವಾರಿಂಶನ್ನವಾಧಿಕಾಃ ।
ತ ಆಸನ್ನಪ್ರಜಾಃ ಸರ್ವೇ ನೀತಾ ಇಂದ್ರೇಣ ಸಾತ್ಮತಾಮ್ ॥ ೧೯ ॥

*ರಾಜೋವಾಚ*

ಕಥಂ ತ ಆಸುರಂ ಭಾವಮಪೋಹ್ಯೌತ್ಪತ್ತಿಕಂ ಗುರೋ ।
ಇಂದ್ರೇಣ ಪ್ರಾಪಿತಾಃ ಸಾತ್ಮ್ಯಂ ಕಿಂ ತತ್ಸಾಧು ಕೃತಂ ಹಿ ತೈಃ ॥ ೨೦ ॥

ಇಮೇ ಶ್ರದ್ದಧತೇ ಬ್ರಹ್ಮನ್ನೃಷಯೋ ಹಿ ಮಯಾ ಸಹ ।
ಪರಿಜ್ಞಾನಾಯ ಭಗವಂಸ್ತನ್ನೋ ವ್ಯಾಖ್ಯಾತುಮರ್ಹಸಿ ॥ ೨೧ ॥

*ಸೂತ ಉವಾಚ*

ತದ್ವಿಷ್ಣುರಾತಸ್ಯ ಸ ಬಾದರಾಯಣಿ-
ರ್ವಚೋ ನಿಶಮ್ಯಾದೃತಮಲ್ಪಮರ್ಥವತ್ ।
ಸಭಾಜಯನ್ಸಂನಿಭೃತೇನ ಚೇತಸಾ
ಜಗಾದ ಸತ್ರಾಯಣ ಸರ್ವದರ್ಶನಃ ॥ ೨೨ ॥

*ಶ್ರೀಶುಕ ಉವಾಚ*

ಹತಪುತ್ರಾ ದಿತಿಃ ಶಕ್ರಪಾರ್ಷ್ಣಿಗ್ರಾಹೇಣ ವಿಷ್ಣುನಾ ।
ಮನ್ಯುನಾ ಶೋಕದೀಪ್ತೇನ ಜ್ವಲಂತೀ ಪರ್ಯಚಿಂತಯತ್ ॥ ೨೩ ॥

ಕದಾ ನು ಭ್ರಾತೃಹಂತಾರಮಿಂದ್ರಿಯಾರಾಮಮುಲ್ಬಣಮ್ ।
ಅಕ್ಲಿನ್ನ ಹೃದಯಂ ಪಾಪಂ ಘಾತಯಿತ್ವಾ ಶಯೇ ಸುಖಮ್ ॥ ೨೪ ॥

ಕೃಮಿವಿಡ್ಭಸ್ಮಸಂಜ್ಞಾಽಽಸೀದ್ಯಸ್ಯೇಶಾಭಿಹಿತಸ್ಯ ಚ ।
ಭೂತಧ್ರುಕ್ತತ್ಕೃತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ ॥ ೨೫ ॥

ಆಶಾಸಾನಸ್ಯ ತಸ್ಯೇದಂ ಧ್ರುವಮುನ್ನದ್ಧಚೇತಸಃ ।
ಮದಶೋಷಕ ಇಂದ್ರಸ್ಯ ಭೂಯಾದ್ಯೇನ ಸುತೋ ಹಿ ಮೇ ॥ ೨೬ ॥

ಬಲಿಯ ಪತ್ನಿಯ ಹೆಸರು ಅಶನಾ ಎಂದಿತ್ತು. ಅವಳಲ್ಲಿ ಬಾಣನೇ ಮುಂತಾದ ನೂರು ಪುತ್ರರಾದರು. ದೈತ್ಯರಾಜ ಬಲಿಯ ಮಹಿಮೆಯು ಗಾನಮಾಡಲು ಯೋಗ್ಯವಾಗಿದೆ. ಅದನ್ನು ನಾನು ಮುಂದೆ (ಎಂಟನೆಯ ಸ್ಕಂಧದಲ್ಲಿ) ಹೇಳುವೆನು. ॥ ೧೭ ॥ ಬಲಿಪುತ್ರ ಬಾಣಾಸುರನು ಭಗವಾನ್ ಶಂಕರನನ್ನು ಆರಾಧಿಸಿ ಆತನ ಗಣಗಳಲ್ಲಿ ಮುಖ್ಯನಾದನು. ಇಂದೂ ಕೂಡ ಭಗವಾನ್ ಶಿವನು ಆತನ ನಗರವನ್ನು ರಕ್ಷಿಸಲಿಕ್ಕಾಗಿ ಆತನ ಬಳಿಯಲ್ಲೇ ಇರುತ್ತಾನೆ. ॥ ೧೮ ॥ ದಿತಿಗೆ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷರಲ್ಲದೆ ಇನ್ನೂ ನಲವತ್ತೊಂಭತ್ತು ಮಂದಿ ಪುತ್ರರಿದ್ದರು. ಅವರನ್ನು ಮರುದ್ಗಣರೆಂದು ಕರೆಯುತ್ತಾರೆ. ಅವರೆಲ್ಲರೂ ಸಂತಾನಹೀನರಾಗಿದ್ದರು. ದೇವೇಂದ್ರನು ಅವರನ್ನು ತನ್ನಂತೆಯೇ ದೇವತೆಗಳನ್ನಾಗಿ ಮಾಡಿಕೊಂಡನು. ॥ ೧೯ ॥

**ಪರೀಕ್ಷಿದ್ರಾಜನು ಕೇಳಿದನು** – ಮಹಾತ್ಮರೇ! ಮರುದ್ಗಣರು ತಮಗೆ ಹುಟ್ಟಿನಿಂದಲೇ ಬಂದಿದ್ದ ಅಸುರೋಚಿತವಾದ ಭಾವವನ್ನು ಬಿಟ್ಟು ದೇವೇಂದ್ರನಿಂದ ದೇವತೆಗಳು ಹೇಗಾದರು ? ಅವರು ಅದಕ್ಕಾಗಿ ಯಾವ ಪುಣ್ಯವನ್ನು ಆಚರಿಸಿದರು ? ॥ ೨೦ ॥ ಬ್ರಾಹ್ಮಣೋತ್ತಮರೇ! ಈ ವಿಷಯವನ್ನು ತಿಳಿದುಕೊಳ್ಳಬೇಕೆಂದು ನಾನಲ್ಲದೆ ಇಲ್ಲಿರುವ ಇತರ ಋಷಿಗಳ ಮಂಡಲಿಯೇ ಕುತೂಹಲಗೊಂಡಿದೆ. ದಯವಿಟ್ಟು ಆ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸಿರಿ. ॥ ೨೧ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿಗಳೇ! ಪರೀಕ್ಷಿದ್ರಾಜನು ಆತ್ಯಾದರದಿಂದ ಕೇಳಿದ ಈ ಸಾರಗರ್ಭಿತವಾದ ಪ್ರಶ್ನೆಯನ್ನು ಕೇಳಿ ಸರ್ವಜ್ಞರಾದ ಶ್ರೀಶುಕಮಹರ್ಷಿಗಳು ಪ್ರಸನ್ನವಾದ ಚಿತ್ತದಿಂದ ಅವನನ್ನು ಅಭಿನಂದಿಸಿ ಹೀಗೆಂದರು. ॥ ೨೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಮಹಾವಿಷ್ಣುವು ಇಂದ್ರನ ಪಕ್ಷವನ್ನುವಹಿಸಿ ದಿತಿಯ ಪುತ್ರರಾದ ಹಿರಣ್ಯಕಶಿಪು ಮತ್ತು ಹಿರಣ್ಯಾಕ್ಷರಿಬ್ಬರನ್ನೂ ಸಂಹರಿಸಿದನು. ಇದರಿಂದ ದಿತಿಯು ಶೋಕಾಗ್ನಿಯಿಂದ ಉರಿದೆದ್ದು ಕ್ರೋಧದಿಂದ ಹೀಗೆ ಯೋಚಿಸತೊಡಗಿದಳು. ॥ ೨೩ ॥ ಈ ಇಂದ್ರನು ನಿಜವಾಗಿ ಭಾರೀ ವಿಷಯಿಯೂ, ಕ್ರೂರಿಯೂ, ನಿರ್ದಯಿಯೂ ಆಗಿದ್ದಾನೆ. ರಾಮ! ರಾಮಾ! ಅವನು ತನ್ನ ಸೋದರರನ್ನೇ ಕೊಲ್ಲಿಸಿಬಿಟ್ಟನು. ನಾನೂ ಆ ಪಾಪಿಯನ್ನು ಕೊಲ್ಲಿಸಿಯೇ ಸುಖವಾಗಿ ನಿದ್ರೆಮಾಡುವ ಕಾಲ ಎಂದು ಬರುವುದೋ ? ॥ ೨೪ ॥ ಜನರು ರಾಜರ ಮತ್ತು ದೇವತೆಗಳ ಶರೀರವನ್ನು ಪ್ರಭು ಎಂದು ಹೇಳಿ ಕರೆಯುತ್ತಾರೆ. ಆದರೆ ಒಂದುದಿನ ಅದು ಹುಳು, ಮಲ ಅಥವಾ ಬೂದಿಯ ರಾಶಿಯಾಗಿಬಿಡುವುದು. ಆದುದರಿಂದ ಇತರ ಪ್ರಾಣಿಗಳನ್ನು ಗೋಳುಹೊಯ್ದುಕೊಳ್ಳುವವನಿಗೆ ತನ್ನ ನಿಜವಾದ ಸ್ವಾರ್ಥ ಅಥವಾ ಪರಮಾರ್ಥ ಯಾವುದೆಂಬುದು ಅರಿವಿರುವುದಿಲ್ಲ. ಆತನು ನರಕಕ್ಕೆ ಹೋಗಿಬೀಳುವನು. ॥ ೨೫॥ ಇಂದ್ರನು ತನ್ನ ಶರೀರವನ್ನು ನಿತ್ಯವೆಂದು ತಿಳಿದು ಉನ್ಮತ್ತನಾಗಿರುವಂತೆ ನನಗೆ ಅನಿಸುತ್ತದೆ. ತನ್ನ ವಿನಾಶದ ಅರಿವೇ ಆತನಿಗೆ ಇಲ್ಲವಾಗಿದೆ. ಈಗ ನಾನು ಅವನ ಅಹಂಕಾರವನ್ನು ಮುರಿದು ಹಾಕುವಂತಹ ಪುತ್ರನನ್ನು ಪಡೆಯುವ ಉಪಾಯವನ್ನು ಮಾಡುವೆನು. ॥ ೨೬ ॥

ಇತಿ ಭಾವೇನ ಸಾ ಭರ್ತುರಾಚಚಾರಾಸಕೃತ್ಪ್ರಿಯಮ್ ।
ಶುಶ್ರೂಷಯಾನುರಾಗೇಣ ಪ್ರಶ್ರಯೇಣ ದಮೇನ ಚ ॥ ೨೭ ॥

ದಿತಿಯು ಮನಸ್ಸಿನಲ್ಲಿ ಹೀಗೆ ಯೋಚಿಸಿ, ಸೇವೆ, ಶುಶ್ರೂಷೆ, ನಯ, ವಿನಯ, ಪ್ರೇಮ ಮತ್ತು ಜಿತೇಂದ್ರಿಯತ್ವ ಮುಂತಾದವುಗಳ ಮೂಲಕ ನಿರಂತರ ತನ್ನ ಪತಿದೇವರಾದ ಕಶ್ಯಪರನ್ನು ಪ್ರಸನ್ನಗೊಳಿಸತೊಡಗಿದಳು. ॥ ೨೭ ॥

ಭಕ್ತ್ಯಾ ಪರಮಯಾ ರಾಜನ್ಮನೋಜ್ಞೈರ್ವಲ್ಗುಭಾಷಿತೈಃ ।
ಮನೋ ಜಗ್ರಾಹ ಭಾವಜ್ಞಾ ಸುಸ್ಮಿತಾಪಾಂಗವೀಕ್ಷಣೈಃ ॥ ೨೮ ॥

ಆಕೆಯು ಪತಿಯ ಹೃದಯದ ಒಂದೊಂದು ಭಾವವನ್ನೂ ಅರ್ಥಮಾಡಿಕೊಂಡು ಪರಮ ಪ್ರೇಮಭಾವದಿಂದಲೂ, ಸವಿಮಾತುಗಳಿಂದಲೂ, ಕಿರುನಗೆಯಿಂದ ಕೂಡಿದ ಕಡೆಗಣ್ಣ ನೋಟಗಳಿಂದಲೂ ಅವನ ಮನಸ್ಸನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತಿದ್ದಳು. ॥ ೨೮ ॥

ಏವಂ ಸ್ತ್ರಿಯಾ ಜಡೀಭೂತೋ ವಿದ್ವಾನಪಿ ವಿದಗ್ಧಯಾ ।
ಬಾಢಮಿತ್ಯಾಹ ವಿವಶೋ ನ ತಚ್ಚಿತ್ರಂ ಹಿ ಯೋಷಿತಿ ॥ ೨೯ ॥

ಕಶ್ಯಪ ಮಹರ್ಷಿಗಳು ಮಹಾ ವಿದ್ವಾಂಸರೂ, ವಿಚಾರವಂತರೂ ಆಗಿದ್ದರೂ ಚತುರೆಯಾದ ದಿತಿಯ ಸೇವೆ-ಶುಶ್ರೂಷೆಯಿಂದ ಮೋಹಿತರಾಗಿ – ನಿನ್ನ ಇಚ್ಛೆಯನ್ನು ನಾನು ಈಡೇರಿಸುವೆನು' ಎಂದು ಮಾತುಕೊಟ್ಟರು. ಹೆಂಗಸರು ಹೀಗೆಲ್ಲ ಪತಿಯನ್ನು ಮೋಹಗೊಳಿಸಿ ವಶಪಡಿಸಿಕೊಳ್ಳುವುದು ಆಶ್ಚರ್ಯವೇನೂ ಅಲ್ಲ. ॥ ೨೯ ॥

ವಿಲೋಕ್ಯೈಕಾಂತಭೂತಾನಿ ಭೂತಾನ್ಯಾದೌ ಪ್ರಜಾಪತಿಃ ।
ಸ್ತ್ರಿಯಂ ಚಕ್ರೇ ಸ್ವದೇಹಾರ್ಧಂ ಯಯಾ ಪುಂಸಾಂ ಮತಿರ್ಹೃತಾ ॥ ೩೦ ॥

ಸೃಷ್ಟಿಯ ಪ್ರಾರಂಭದಲ್ಲಿ ಬ್ರಹ್ಮದೇವರು ಎಲ್ಲ ಜೀವರು ಅಸಂಗರಾಗುತ್ತಿದ್ದಾರಲ್ಲ ಎಂದು ನೋಡಿದಾಗ, ಅವರು ತಮ್ಮ ಅರ್ಧ ಶರೀರದಿಂದ ಸ್ತ್ರೀಯರನ್ನು ಸೃಷ್ಟಿಸಿದನು. ಆ ಸ್ತ್ರೀಯರು ಪುರುಷರ ಮತಿಯನ್ನು ತಮ್ಮ ಕಡೆಗೆ ಆಕರ್ಷಿಸಿ ಕೊಂಡರು. ॥ ೩೦ ॥

ಏವಂ ಶುಶ್ರೂಷಿತಸ್ತಾತ ಭಗವಾನ್ಕಶ್ಯಪಃ ಸ್ತ್ರಿಯಾ ।
ಪ್ರಹಸ್ಯ ಪರಮಪ್ರೀತೋ ದಿತಿಮಾಹಾಭಿನಂದ್ಯ ಚ ॥ ೩೧ ॥

ಇರಲಿ, ಅಯ್ಯಾ! ದಿತಿಯು ಭಗವಾನ್ ಕಶ್ಯಪರ ಸೇವೆಯನ್ನು ಚೆನ್ನಾಗಿ ಮಾಡಿದಳು ಎಂದು ಹೇಳುತ್ತಿದ್ದೆನಲ್ಲ! ಇದರಿಂದ ಅವರು ತುಂಬಾ ಪ್ರಸನ್ನರಾದರು. ಅವರು ದಿತಿಯನ್ನು ಅಭಿನಂದಿಸುತ್ತಾ ಮುಗುಳ್ನಗುತ್ತಾ ಇಂತೆಂದರು – ॥ ೩೧ ॥

*ಕಶ್ಯಪ ಉವಾಚ*

ವರಂ ವರಯ ವಾಮೋರು ಪ್ರೀತಸ್ತೇಽಹಮನಿಂದಿತೇ ।
ಸ್ತ್ರಿಯಾ ಭರ್ತರಿ ಸುಪ್ರೀತೇ ಕಃ ಕಾಮ ಇಹ ಚಾಗಮಃ ॥ ೩೨ ॥

**ಕಶ್ಯಪರು ಹೇಳಿದರು** – ಎಲೈ ಸುಂದರಿಯೇ! ಅನಿಂದ್ಯ ರೂಪಗುಣಸಂಪನ್ನೆಯೇ! ನಾನು ನಿನ್ನಲ್ಲಿ ಅತ್ಯಂತ ಸಂತುಷ್ಟನಾಗಿದ್ದೇನೆ. ನಿನಗೆ ಇಷ್ಟಬಂದ ವರವನ್ನು ಕೇಳಿಕೋ. ಪತಿಯು ಪ್ರಸನ್ನನಾದಾಗ ಪತ್ನಿಗೆ ಈ ಲೋಕ ಮತ್ತು ಪರಲೋಕದಲ್ಲಿ ಯಾವುದೇ ಅಭೀಷ್ಟ ವಸ್ತುವು ದುರ್ಲಭವಾಗುವುದಿಲ್ಲ. ॥ ೩೨ ॥

ಪತಿರೇವ ಹಿ ನಾರೀಣಾಂ ದೈವತಂ ಪರಮಂ ಸ್ಮೃತಮ್ ।
ಮಾನಸಃ ಸರ್ವಭೂತಾನಾಂ ವಾಸುದೇವಃ ಶ್ರಿಯಃ ಪತಿಃ ॥ ೩೩ ॥

'ಪತಿಯೇ ಸ್ತ್ರೀಯರಿಗೆ ಪರಮಾರಾಧ್ಯ ಇಷ್ಟದೇವರಾಗಿದ್ದಾನೆ' ಎಂಬುದು ಶಾಸ್ತ್ರಗಳಲ್ಲಿ ಸ್ಪಷ್ಟವಾಗಿ ಹೇಳಿದೆ. ಪ್ರಿಯೇ! ಲಕ್ಷ್ಮೀಪತಿಯಾದ ಭಗವಾನ್ ಶ್ರೀವಾಸುದೇವನೇ ಸಮಸ್ತ ಪ್ರಾಣಿಗಳ ಹೃದಯಗಳಲ್ಲಿ ಬೆಳಗುತ್ತಿರುವನು. ॥ ೩೩ ॥

ಸ ಏವ ದೇವತಾಲಿಂಗೈರ್ನಾಮರೂಪವಿಕಲ್ಪಿತೈಃ ।
ಇಜ್ಯತೇ ಭಗವಾನ್ಪುಂಭಿಃ ಸ್ತ್ರೀಭಿಶ್ಚ ಪತಿರೂಪಧೃಕ್ ॥ ೩೪ ॥

ಆತನೇ ಬೇರೆ-ಬೇರೆ ದೇವತೆಗಳ ನಾಮಗಳಿಂದಲೂ, ರೂಪಗಳಿಂದಲೂ ಉಪಾಸಿಸಲ್ಪಡುತ್ತಾನೆ. ಎಲ್ಲ ಪುರುಷರೂ ಯಾವುದೇ ದೇವತೆ ಯನ್ನು ಉಪಾಸನೆ ಮಾಡಿದರೂ ಅದು ಭಗವಂತನದೇ ಉಪಾಸನೆಯಾಗಿದೆ. ಹಾಗೆಯೇ ಸ್ತ್ರೀಯರಿಗಾಗಿ ಭಗವಂತನು ಪತಿಯ ರೂಪವನ್ನು ಧರಿಸಿರುವನು. ಅವರು ಅವನನ್ನು ಅದೇ ರೂಪದಲ್ಲಿ ಪೂಜೆ ಮಾಡುತ್ತಾರೆ. ॥ ೩೪ ॥

ತಸ್ಮಾತ್ಪತಿವ್ರತಾ ನಾರ್ಯಃ ಶ್ರೇಯಸ್ಕಾಮಾಃ ಸುಮಧ್ಯಮೇ ।
ಯಜಂತೇಽನನ್ಯಭಾವೇನ ಪತಿಮಾತ್ಮಾನಮೀಶ್ವರಮ್ ॥ ೩೫ ॥

ಅದಕ್ಕಾಗಿ ಪ್ರಿಯೇ! ತಮ್ಮ ಕಲ್ಯಾಣವನ್ನು ಬಯಸುವ ಪತಿವ್ರತಾ ಸ್ತ್ರೀಯರು ಅನನ್ಯ ಪ್ರೇಮಭಾವದಿಂದ ತಮ್ಮ ಪತಿದೇವನನ್ನೇ ಪೂಜಿಸುತ್ತಾರೆ. ಏಕೆಂದರೆ, ಪತಿದೇವನೇ ಅವರಿಗೆ ಪರಮ ಪ್ರಿಯತಮ ಆತ್ಮಾ ಮತ್ತು ಈಶ್ವರನಾಗಿರುವನು. ॥ ೩೫ ॥

ಸೋಽಹಂ ತ್ವಯಾರ್ಚಿತೋ ಭದ್ರೇ ಈದೃಗ್ಭಾವೇನ ಭಕ್ತಿತಃ ।
ತತ್ತೇ ಸಂಪಾದಯೇ ಕಾಮಮಸತೀನಾಂ ಸುದುರ್ಲಭಮ್ ॥ ೩೬ ॥

ಎಲೈ ಮಂಗಳಾಂಗಿಯೇ! ನೀನು ಅತ್ಯಂತ ಪ್ರೇಮಭಾವದಿಂದ, ಭಕ್ತಿಯಿಂದ ನನ್ನನ್ನು ಹಾಗೆಯೇ ಆರಾಧಿಸಿದ್ದೀಯೆ. ಈಗ ನಾನು ನಿನ್ನ ಎಲ್ಲ ಅಭಿಲಾಷೆಗಳನ್ನು ಪೂರ್ಣಗೊಳಿಸುವೆನು. ಗರತಿಯರಲ್ಲದವರಿಗೆ ಇಂತಹ ಭಾಗ್ಯವು ಸಿಗುವುದುದುರ್ಲಭವೇ. ॥ ೩೬ ॥

*ದಿತಿರುವಾಚ*

ವರದೋ ಯದಿ ಮೇ ಬ್ರಹ್ಮನ್ಪುತ್ರಮಿಂದ್ರಹಣಂ ವೃಣೇ ।
ಅಮೃತ್ಯುಂ ಮೃತಪುತ್ರಾಹಂ ಯೇನ ಮೇ ಘಾತಿತೌ ಸುತೌ
॥ ೩೭ ॥

ನಿಶಮ್ಯ ತದ್ವಚೋ ವಿಪ್ರೋ ವಿಮನಾಃ ಪರ್ಯತಪ್ಯತ ।
ಅಹೋ ಅಧರ್ಮಃ ಸುಮಹಾನದ್ಯ ಮೇ ಸಮುಪಸ್ಥಿತಃ
॥ ೩೮ ॥

ಅಹೋ ಅದ್ಯೇಂದ್ರಿಯಾರಾಮೋ
ಯೋಷಿನ್ಮಯ್ಯೇಹ ಮಾಯಯಾ ।
ಗೃಹೀತಚೇತಾಃ ಕೃಪಣಃ
ಪತಿಷ್ಯೇ ನರಕೇ ಧ್ರುವಮ್ ॥ ೩೯ ॥

ಕೋಽತಿಕ್ರಮೋಽನುವರ್ತಂತ್ಯಾಃ ಸ್ವಭಾವಮಿಹ ಯೋಷಿತಃ ।
ಧಿಙ್ಮಾಂ ಬತಾಬುಧಂ ಸ್ವಾರ್ಥೇ ಯದಹಂ ತ್ವಜಿತೇಂದ್ರಿಯಃ
॥ ೪೦ ॥

ಶರತ್ಪದ್ಮೋತ್ಸವಂ ವಕ್ತ್ರಂ ವಚಶ್ಚ ಶ್ರವಣಾಮೃತಮ್ ।
ಹೃದಯಂ ಕ್ಷುರಧಾರಾಭಂ ಸ್ತ್ರೀಣಾಂ ಕೋ ವೇದ ಚೇಷ್ಟಿತಮ್
॥ ೪೧ ॥

ನ ಹಿ ಕಶ್ಚಿತ್ಪ್ರಿಯಃ ಸ್ತ್ರೀಣಾಮಂಜಸಾ ಸ್ವಾಶಿಷಾತ್ಮನಾಮ್ ।
ಪತಿಂ ಪುತ್ರಂ ಭ್ರಾತರಂ ವಾ ಘ್ನಂತ್ಯರ್ಥೇ ಘಾತಯಂತಿ ಚ
॥ ೪೨ ॥

ಪ್ರತಿಶ್ರುತಂ ದದಾಮೀತಿ ವಚಸ್ತನ್ನ ಮೃಷಾ ಭವೇತ್ ।
ವಧಂ ನಾರ್ಹತಿ ಚೇಂದ್ರೋಽಪಿ ತತ್ರೇದಮುಪಕಲ್ಪತೇ
॥ ೪೩ ॥

ಇತಿ ಸಂಚಿಂತ್ಯ ಭಗವಾನ್ಮಾರೀಚಃ ಕುರುನಂದನ ।
ಉವಾಚ ಕಿಂಚಿತ್ಕುಪಿತ ಆತ್ಮಾನಂ ಚ ವಿಗರ್ಹಯನ್
॥ ೪೪ ॥

*ಕಶ್ಯಪ ಉವಾಚ*

ಪುತ್ರಸ್ತೇ ಭವಿತಾ ಭದ್ರೇ ಇಂದ್ರಹಾ ದೇವಬಾಂಧವಃ ।
ಸಂವತ್ಸರಂ ವ್ರತಮಿದಂ ಯದ್ಯಂಜೋ ಧಾರಯಿಷ್ಯಸಿ
॥ ೪೫ ॥

*ದಿತಿರುವಾಚ*

ಧಾರಯಿಷ್ಯೇ ವ್ರತಂ ಬ್ರಹ್ಮನ್ ಬ್ರೂಹಿ ಕಾರ್ಯಾಣಿ ಯಾನಿ ಮೇ ।
ಯಾನಿ ಚೇಹ ನಿಷಿದ್ಧಾನಿ ನ ವ್ರತಂ ಘ್ನಂತಿ ಯಾನಿ ತು
॥ ೪೬ ॥

**ದಿತಿಯು ಹೇಳಿದಳು** – ಬ್ರಾಹ್ಮಣೋತ್ತಮರೇ! ಇಂದ್ರನು ವಿಷ್ಣುವಿನ ಕೈಯಿಂದ ನನ್ನ ಇಬ್ಬರೂ ಪುತ್ರರನ್ನು ಕೊಲ್ಲಿಸಿ ನನ್ನನ್ನು ಪುತ್ರಹೀನೆಯನ್ನಾಗಿ ಮಾಡಿದ್ದಾನೆ. ಆದಕ್ಕಾಗಿ ನೀವು ನನಗೆ ಅಭೀಷ್ಟವಾದ ವರವನ್ನು ಕೊಡುವುದಾದರೆ – ಇಂದ್ರನನ್ನು ಸಂಹರಿಸುವಂತಹ ಅಮರ ಪುತ್ರನನ್ನು ನನಗೆ ಅನುಗ್ರಹಿಸಿರಿ. ॥ ೩೭ ॥

ಪರೀಕ್ಷಿತನೇ! ದಿತಿಯ ಮಾತನ್ನು ಕೇಳಿ ಕಶ್ಯಪರು ಖಿನ್ನರಾಗಿ ಮನಸ್ಸಿನಲ್ಲೇ ಪಶ್ಚಾತ್ತಾಪಪಡತೊಡಗಿದರು. ಅಯ್ಯೋ! ಶಿವನೇ! ಇಂದು ನನ್ನ ಜೀವನದಲ್ಲಿ ಅತಿದೊಡ್ಡ ಅಧರ್ಮದ ಪ್ರಸಂಗವು ಒದಗಿತಲ್ಲ! ॥ ೩೮ ॥ ಇಂದ್ರಿಯ ವಿಷಯಗಳಲ್ಲಿಯೇ ರಮಿಸತೊಡಗಿದ ನನ್ನ ಮನಸ್ಸನ್ನು ಈ ಸ್ತ್ರೀರೂಪಿಣಿಯಾದ ಮಾಯೆಯು ತನ್ನ ವಶಪಡಿಸಿಕೊಂಡಿತಲ್ಲ! ಅಯ್ಯೋ! ಇಂದು ನಾನು ಎಂತಹ ದೀನ-ಹೀನ ಅವಸ್ಥೆಯಲ್ಲಿದ್ದೇನೆ. ಈಗ ನನಗೆ ಖಂಡಿತವಾಗಿ ನರಕಕ್ಕೆ ಬೀಳಬೇಕಾದೀತು. ॥ ೩೯ ॥ ಆದರೆ ಈ ಹೆಂಗುಸಿನಲ್ಲಿ ಯಾವ ದೋಷವೂ ಇಲ್ಲ. ಈಕೆಯು ತನ್ನ ಹುಟ್ಟಿನ ಸ್ವಭಾವವನ್ನೇ ಅನುಸರಿಸಿದ್ದಾಳೆ. ದೋಷವಾದರೋ ನನ್ನದೇ ಆಗಿದೆ. ನಾನು ನನ್ನ ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಳ್ಳಲಾರದೇ ಹೋದೆನು. ನನ್ನ ನಿಜವಾದ ಸ್ವಾರ್ಥ ಮತ್ತು ಪರಮಾರ್ಥವನ್ನು ಅರಿಯದೇ ಹೋದೆ. ಇಂತಹ ಮೂಢನಾದ ನನಗೆ ಧಿಕ್ಕಾರವಿರಲಿ. ॥ ೪೦ ॥ ಸ್ತ್ರೀಯರ ನಡೆವಳಿಕೆಯು ಯಾರಿಗೆ ತಾನೇ ಅರ್ಥವಾದೀತು? ಇವರ ಮುಖವು ಶರತ್ಕಾಲದ ಕಮಲದಂತೆ ಅರಳಿರುವುದು. ಮಾತು ಅಮೃತದಂತೆ ಸವಿಯಾಗಿರುವುದು. ಆದರೆ ಹೃದಯವು ಮಾತ್ರ ಕತ್ತಿಯ ಅಲಗಿನಂತೆ ಕಡು ಹರಿತವಾದುದು. ॥ ೪೧ ॥ ಸ್ತ್ರೀಯರು ತಮ್ಮ ಅಭಿಲಾಷೆಗಳ ಕೈಗೊಂಬೆಯಾಗಿರುತ್ತಾರೆ. ನಿಜ ಹೇಳುವುದಾದರೆ ಇವರಿಗೆ ಯಾರಲ್ಲಿಯೂ ಪ್ರೀತಿ ಇರುವುದಿಲ್ಲ. ತಮ್ಮ ಸ್ವಾರ್ಥಕ್ಕಾಗಿ ಇವರು ತನ್ನ ಪತಿ, ಪುತ್ರ, ಸಹೋದರ ಇವರನ್ನು ಕೊಲ್ಲಬಲ್ಲಳು, ಕೊಲ್ಲಿಸಬಲ್ಲಳು; ಇದರಲ್ಲಿ ಸಂದೇಹವೇ ಇಲ್ಲ. ॥ ೪೨ ॥ ಆದರೆ ನಾನು ಈಕೆಗೆ 'ನಿನ್ನ ಇಷ್ಟಾರ್ಥವನ್ನು ಈಡೇರಿಸುತ್ತೇನೆ' ಎಂದು ಮಾತು ಕೊಟ್ಟಾಗಿದೆ. ಕೊಟ್ಟ ಮಾತು ಸುಳ್ಳಾಗಿಸಬಾರದು. ಆದರೆ ಇಂದ್ರನೂ ವಧಿಸಲ್ಪಡಬಾರದು. ಇರಲಿ; ಈಗ ಈ ವಿಷಯದಲ್ಲಿ ನಾನೊಂದು ಯುಕ್ತಿಯನ್ನು ಮಾಡುವೆ. ॥ ೪೩ ॥ ಪ್ರಿಯ ಪರೀಕ್ಷಿತನೇ! ಸರ್ವಸಮರ್ಥರಾದ ಕಶ್ಯಪರು ಹೀಗೆ ಮನಸ್ಸಿನಲ್ಲೇ ತನ್ನನ್ನು ಹಳಿದುಕೊಂಡು, ಎರಡೂ ಮಾತುಗಳು ನೆರವೇರುವಂತಹ ಉಪಾಯವನ್ನು ಯೋಚಿಸಿ, ಮತ್ತೆ ಸ್ವಲ್ಪ ಕೋಪಗೊಂಡವರಾಗಿ ದಿತಿಯಲ್ಲಿ ಹೀಗೆ ಹೇಳಿದರು – ॥ ೪೪ ॥

**ಕಶ್ಯಪರು ಹೇಳಿದರು** – ಭದ್ರೇ! ನಾನು ಹೇಳುವ ಒಂದು ವ್ರತವನ್ನು ಒಂದು ವರ್ಷದವರೆಗೆ ವಿಧಿಪೂರ್ವಕವಾಗಿ ಪಾಲಿಸಿದರೆ, ನಿನಗೆ ಇಂದ್ರನನ್ನು ಕೊಲ್ಲುವಂತಹ ಪುತ್ರನು ಜನಿಸುವನು. ಆದರೆ ಯಾವುದೇ ವಿಧದಿಂದ ವ್ರತನಿಯಮಗಳಲ್ಲಿ ಕುಂದು-ಕೊರತೆಗಳುಂಟಾದರೆ ಅವನು ದೇವತೆಗಳ ಮಿತ್ರನಾಗುವನು. ॥ ೪೫ ॥

**ದಿತಿಯು ಹೇಳಿದಳು** – ಬ್ರಾಹ್ಮಣೋತ್ತಮರೇ! ನಾನು ಆ ವ್ರತವನ್ನು ನಿಷ್ಠೆಯಿಂದ ಪಾಲಿಸುವೆನು. ವ್ರತದಲ್ಲಿ ನಾನೇನು ಮಾಡ

ಕಶ್ಯಪ ಉವಾಚ

**ನ ಹಿಂಸ್ಯಾದ್ಭೂತಜಾತಾನಿ ನ ಶಪೇನ್ನಾನೃತಂ ವದೇತ್ ।**
**ನಚ್ಛಿಂದ್ಯಾನ್ನಖರೋಮಾಣಿ ನ ಸ್ಪೃಶೇದ್ಯದಮಂಗಲಮ್ ॥ ೪೭ ॥**

**ನಾಪ್ಸು ಸ್ನಾಯಾನ್ನ ಕುಪ್ಯೇತ ನ ಸಂಭಾಷೇತ ದುರ್ಜನೈಃ ।**
**ನ ವಸೀತಾಧೌತವಾಸಃ ಸ್ರಜಂ ಚ ವಿಧೃತಾಂ ಕ್ವಚಿತ್ ॥ ೪೮ ॥**

**ನೋಚ್ಛಿಷ್ಟಂ ಚಂಡಿಕಾನ್ನಂ ಚ ಸಾಮಿಷಂ ವೃಷಲಾಹೃತಮ್ ।**
**ಭುಂಜೀತೋದಕ್ಯಯಾ ದೃಷ್ಟಂ ಪಿಬೇದಂಜಲಿನಾ ತ್ವಪಃ ॥ ೪೯ ॥**

**ನೋಚ್ಛಿಷ್ಟಾಸ್ಪೃಷ್ಟಸಲಿಲಾ ಸಂಧ್ಯಾಯಾಂ ಮುಕ್ತಮೂರ್ಧಜಾ ।**
**ಅನರ್ಚಿತಾಸಂಯತವಾಙ್ನಾ ಸಂವೀತಾ ಬಹಿಶ್ಚರೇತ್ ॥ ೫೦ ॥**

**ನಾಧೌತಪಾದಾಪ್ರಯತಾ ನಾರ್ದ್ರಪಾನ್ನೋ ಉದಕ್ಶಿರಾಃ ।**
**ಶಯೀತ ನಾಪರಾಙ್ನಾನ್ಯೈರ್ನ ನಗ್ನಾ ನ ಚ ಸಂಧ್ಯಯೋಃ ॥ ೫೧ ॥**

**ಧೌತವಾಸಾಃ ಶುಚಿರ್ನಿತ್ಯಂ ಸರ್ವಮಂಗಲಸಂಯುತಾ ।**
**ಪೂಜಯೇತ್ಪ್ರಾತರಾಶಾತ್ಪ್ರಾಗ್ಗೋವಿಪ್ರಾಂಛ್ರಿಯಮಚ್ಯುತಮ್ ॥ ೫೨ ॥**

**ಸ್ತ್ರಿಯೋ ವೀರವತೀಶ್ಚಾರ್ಚೇತ್ಸ್ರಗ್ಗಂಧಬಲಿಮಂಡನೈಃ ।**
**ಪತಿಂ ಚಾರ್ಚ್ಯೋಪತಿಷ್ಠೇತ ಧ್ಯಾಯೇತ್ಕೋಷ್ಠಗತಂ ಚ ತಮ್ ॥ ೫೩ ॥**

**ಸಾಂವತ್ಸರಂ ಪುಂಸವನಂ ವ್ರತಮೇತದವಿಪ್ಲುತಮ್ ।**
**ಧಾರಯಿಷ್ಯಸಿ ಚೇತ್ತುಭ್ಯಂ ಶಕ್ರಹಾ ಭವಿತಾ ಸುತಃ ॥ ೫೪ ॥**

**ಬಾಢಮಿತ್ಯಭಿಪ್ರೇತ್ಯಾಥ ದಿತೀ ರಾಜನ್ಮಹಾಮನಾಃ ।**
**ಕಾಶ್ಯಪಂ ಗರ್ಭಮಾಧತ್ತ ವ್ರತಂ ಚಾಂಜೋ ದಧಾರ ಸಾ ॥ ೫೫ ॥**

ಬೇಕು ? ವ್ರತದಲ್ಲಿ ಏನೇನನ್ನು ಮಾಡಬಾರದು ? ಎಂಬುದನ್ನು ತಿಳಿಸಿರಿ ; ಎಂದು ಪ್ರಾರ್ಥಿಸಿಕೊಂಡಳು. ॥ ೪೬ ॥

**ಕಶ್ಯಪರು ಹೇಳಿದರು** – ಪ್ರಿಯೇ ! ಈ ವ್ರತದಲ್ಲಿ ಯಾವುದೇ ಪ್ರಾಣಿಯನ್ನು ಮನಸ್ಸು, ಮಾತು ಅಥವಾ ಕ್ರಿಯೆಯಿಂದ ಹಿಂಸಿಸ ಬಾರದು. ಯಾರನ್ನೂ ಶಪಿಸಬಾರದು, ಬಯ್ಯಬಾರದು, ಸುಳ್ಳು ಹೇಳಬಾರದು. ಶರೀರದ ಉಗುರುಗಳನ್ನಾಗಲೀ, ಕೂದಲು ಗಳನ್ನಾಗಲೀ ಕತ್ತರಿಸಬಾರದು. ಯಾವುದೇ ಅಮಂಗಳ ವಸ್ತುವನ್ನು ಸ್ಪರ್ಶಿಸಬಾರದು. ॥ ೪೭ ॥ ನೀರಿನೊಳಗೆ ಮುಳುಗಿ ಸ್ನಾನಮಾಡ ಬಾರದು. ಸಿಟ್ಟಾಗಬಾರದು. ದುರ್ಜನರಲ್ಲಿ ಮಾತಾಡಬಾರದು. ತೊಳೆಯದಿರುವ ಬಟ್ಟೆಯನ್ನು ಧರಿಸಬಾರದು, ಬೇರೊಬ್ಬರು ಧರಿಸಿದ ಮಾಲೆಯನ್ನು ಧರಿಸಬಾರದು. ॥ ೪೮ ॥ ಎಂಜಲನ್ನು ತಿನ್ನಬಾರದು, ಭದ್ರಕಾಳಿಯ ಪ್ರಸಾದ ಅಥವಾ ಮಾಂಸಸೇರಿದ ಅನ್ನವನ್ನು ತಿನ್ನಬಾರದು. ಶೂದ್ರನು ತಂದಿರುವ ಅಥವಾ ರಜ ಸ್ವಲೆಯು ನೋಡಿದ ಅನ್ನವನ್ನು ಉಣ್ಣಬಾರದು. ಬೊಗಸೆಯಿಂದ ನೀರನ್ನು ಕುಡಿಯಬಾರದು. ॥ ೪೯ ॥ ಎಂಜಲುಬಾಯಿಂದ, ಆಚ ಮನ ಮಾಡದೆ, ಸಂಧ್ಯಾಸಮಯದಲ್ಲಿ, ಕೆದರಿದ ಕೂದಲಿನಿಂದ, ಶೃಂಗಾರವಿಲ್ಲದೆ, ಮಾತಿನ ಸಂಯಮವಿಲ್ಲದೆ, ಉತ್ತರೀಯವನ್ನು ಹೊದೆಯದೆ ಮನೆಯಿಂದ ಹೊರಗೆ ಹೋಗಬಾರದು. ॥ ೫೦ ॥ ಕಾಲು ತೊಳೆಯದೆ, ಅಪವಿತ್ರ ಸ್ಥಿತಿಯಲ್ಲಿ, ಒದ್ದೆಕಾಲುಗಳಿಂದ, ಉತ್ತರ ಅಥವಾ ಪಶ್ಚಿಮದ ಕಡೆ ತಲೆಹಾಕಿ, ಬೇರೊಬ್ಬರ ಜೊತೆಗೆ, ಬೆತ್ತಲೆಯಾಗಿ ಹಾಗೂ ಬೆಳಿಗ್ಗೆ-ಸಂಜೆ ಮಲಗಬಾರದು. ॥ ೫೧ ॥ ಹೀಗೆ ಈ ನಿಷಿದ್ಧ ಕರ್ಮಗಳನ್ನು ತ್ಯಜಿಸಿ, ಸದಾಕಾಲ ಪವಿತ್ರ ವಾಗಿರಬೇಕು. ಮಡಿಮಾಡಿದ ಬಟ್ಟೆಯನ್ನೇ ಧರಿಸಬೇಕು ಮತ್ತು ಎಲ್ಲ ಮಂಗಳಚಿಹ್ನೆಗಳಿಂದ ಸುಸಜ್ಜಿತವಾಗಿರಬೇಕು. ಪ್ರಾತಃಕಾಲ ದಲ್ಲಿ ಉಪಹಾರವನ್ನು ಸೇವಿಸುವ ಮೊದಲೇ ಗೋವು, ಬ್ರಾಹ್ಮಣ, ಲಕ್ಷ್ಮೀದೇವಿ, ಭಗವಾನ್ ಶ್ರೀನಾರಾಯಣ ಇವರನ್ನು ಪೂಜಿಸ ಬೇಕು. ॥ ೫೨ ॥ ಅನಂತರ ಹೂವಿನಮಾಲೆ, ಶ್ರೀಗಂಧವೇ ಮುಂತಾದ ಸುಗಂಧದ್ರವ್ಯಗಳೂ, ನೈವೇದ್ಯ ಮತ್ತು ಆಭರಣ ಮುಂತಾದವುಗಳಿಂದ ಸುವಾಸಿನೀ-ಸುಮಂಗಲಿಯರನ್ನು ಪೂಜಿ ಸಬೇಕು ಮತ್ತು ಪತಿಯ ಪೂಜೆಮಾಡಿ ಅವನ ಸೇವೆಯಲ್ಲೇ ಆಸಕ್ತ ಳಾಗಿರಬೇಕು. ಪತಿಯ ತೇಜಸ್ಸು ತನ್ನ ಗರ್ಭದಲ್ಲಿದೆ ಎಂಬುದನ್ನು ಭಾವಿಸುತ್ತಾ ಇರಬೇಕು. ॥ ೫೩ ॥ ಪ್ರಿಯೇ ! ಈ ವ್ರತದ ಹೆಸರು 'ಪುಂಸವನ' ಎಂದಾಗಿದೆ. ಒಂದು ವರ್ಷದವರೆಗೆ ನೀನು ಯಾವುದೇ ಕುಂದುಕೊರತೆಯಿಲ್ಲದೆ ಇದನ್ನು ಪಾಲಿಸಿದರೆ ನಿನ್ನ ಗರ್ಭದಿಂದ ಇಂದ್ರನನ್ನು ಸಂಹರಿಸುವಂತಹ ಪುತ್ರನು ಜನಿಸುವನು. ॥ ೫೪ ॥

ಪರೀಕ್ಷಿತನೇ ! ದೃಢನಿಶ್ಚಯವನ್ನು ಹೊಂದಿದ್ದ ದಿತಿದೇವಿಯು 'ಹಾಗೆಯೇ ಆಗಲೀ' ಎಂದು ಪತಿಯ ಆಜ್ಞೆಯನ್ನು ಶಿರಸಾವಹಿ ಸಿದಳು. ಆಕೆಯ ಮನೋಬಲವು ಅದ್ಭುತವಾಗಿತ್ತು. ಆಕೆಯು ತನ್ನ ಗರ್ಭದಲ್ಲಿ ಕಶ್ಯಪರ ವೀರ್ಯವನ್ನೂ, ಜೀವನದಲ್ಲಿ ಅವರು ಉಪ ದೇಶಿಸಿದ ವ್ರತವನ್ನೂ ಧರಿಸಿಕೊಂಡು ಅನಾಯಾಸವಾಗಿಯೇ ನಿಯಮಗಳನ್ನು ಪಾಲಿಸತೊಡಗಿದಳು. ॥ ೫೫ ॥ ಪ್ರಿಯ ಪರೀಕ್ಷಿ ತನೇ ! ದೇವರಾಜ ಇಂದ್ರನಿಗೆ ತನ್ನ ದೊಡ್ಡಮ್ಮಳಾದ ದಿತಿಯ ಆಶ ಯವು ತಿಳಿಯಿತು. ಅವನು ಬಹಳ ಬುದ್ಧಿವಂತಿಕೆಯಿಂದ ವೇಷ

ಮಾತೃಷ್ವಸುರಭಿಪ್ರಾಯಮಿಂದ್ರ ಆಜ್ಞಾಯ ಮಾನದ ।
ಶುಶ್ರೂಷಣೇನಾಶ್ರಮಸ್ಥಾಂ ದಿತಿಂ ಪರ್ಯಚರತ್ಕವಿಃ ॥ ೫೬ ॥

ನಿತ್ಯಂ ವನಾತ್ಸುಮನಸಃ ಫಲಮೂಲಸಮಿತ್ಕುಶಾನ್ ।
ಪತ್ರಾಂಕುರಮೃದೋಽಪಶ್ಚ ಕಾಲೇ ಕಾಲ ಉಪಾಹರತ್ ॥ ೫೭ ॥

ಏವಂ ತಸ್ಯಾ ವ್ರತಸ್ಥಾಯಾ ವ್ರತಚ್ಛಿದ್ರಂ ಹರಿರ್ನೃಪ ।
ಪ್ರೇಪ್ಸುಃ ಪರ್ಯಚರಜ್ಜಿಹ್ಮೋ ಮೃಗಹೇವ ಮೃಗಾಕೃತಿಃ ॥ ೫೮ ॥

ನಾಧ್ಯಗಚ್ಛದ್ವ್ರತಚ್ಛಿದ್ರಂ ತತ್ಪರೋಽಥ ಮಹೀಪತೇ ।
ಚಿಂತಾಂ ತೀವ್ರಾಂ ಗತಃ ಶಕ್ರಃ ಕೇನ ಮೇ ಸ್ಯಾಚ್ಛಿವಂ ತ್ವಿಹ ॥ ೫೯ ॥

ಏಕದಾ ಸಾ ತು ಸಂಧ್ಯಾಯಾಮುಚ್ಛಿಷ್ಟಾ ವ್ರತಕರ್ಶಿತಾ ।
ಅಸ್ಪೃಷ್ಟವಾರ್ಯಧೌತಾಂಘ್ರಿಃ ಸುಷ್ವಾಪ ವಿಧಿಮೋಹಿತಾ ॥ ೬೦ ॥

ಲಬ್ಧ್ವಾ ತದಂತರಂ ಶಕ್ರೋ ನಿದ್ರಾಪಹೃತಚೇತಸಃ ।
ದಿತೇಃ ಪ್ರವಿಷ್ಟ ಉದರಂ ಯೋಗೇಶೋ ಯೋಗಮಾಯಯಾ ॥ ೬೧ ॥

ಚಕರ್ತ ಸಪ್ತಧಾ ಗರ್ಭಂ ವಜ್ರೇಣ ಕನಕಪ್ರಭಮ್ ।
ರುದಂತಂ ಸಪ್ತಧೈಕೈಕಂ ಮಾ ರೋದೀರಿತಿ ತಾನ್ಪುನಃ ॥ ೬೨ ॥

ತೇ ತಮೂಚುಃ ಪಾಟ್ಯಮಾನಾಃ ಸರ್ವೇ ಪ್ರಾಂಜಲಯೋ ನೃಪ ।
ನೋ ಜಿಘಾಂಸಸಿ ಕಿಮಿಂದ್ರ ಭ್ರಾತರೋ ಮರುತಸ್ತವ ॥ ೬೩ ॥

ಮಾ ಭೈಷ್ಟ ಭ್ರಾತರೋ ಮಹ್ಯಂ ಯೂಯಮಿತ್ಯಾಹ ಕೌಶಿಕಃ ।
ಅನನ್ಯಭಾವಾನ್ಪಾರ್ಷದಾನಾತ್ಮನೋ ಮರುತಾಂ ಗಣಾನ್ ॥ ೬೪ ॥

ನ ಮಮಾರ ದಿತೇರ್ಗರ್ಭಃ ಶ್ರೀನಿವಾಸಾನುಕಂಪಯಾ ।
ಬಹುಧಾ ಕುಲಿಶಕ್ಷುಣ್ಣೋ ದ್ರೌಣ್ಯಸ್ತ್ರೇಣ ಯಥಾ ಭವಾನ್ ॥ ೬೫ ॥

ಸಕೃದಿಷ್ಟ್ವಾಽಽದಿಪುರುಷಂ ಪುರುಷೋ ಯಾತಿ ಸಾಮ್ಯತಾಮ್ ।
ಸಂವತ್ಸರಂ ಕಿಂಚಿದೂನಂ ದಿತ್ಯಾ ಯದ್ಧರಿರರ್ಚಿತಃ ॥ ೬೬ ॥

ವನ್ನು ಮರೆಸಿಕೊಂಡು ಆಶ್ರಮಕ್ಕೆ ಬಂದು ಅವಳ ಸೇವೆಯನ್ನು ಮಾಡತೊಡಗಿದನು. ॥ ೫೬ ॥ ಅವನು ಆಕೆಗೋಸ್ಕರ ಪ್ರತಿ ದಿನವೂ ಕಾಲಕಾಲಗಳಲ್ಲಿ ಕಾಡಿನಿಂದ ಹೂವು, ಹಣ್ಣು, ಗೆಡ್ಡೆ-ಗೆಣಸು, ಸಮಿತ್ತು , ದರ್ಭೆ, ಪತ್ರೆ, ಗರಿಕೆ, ಮಣ್ಣು ಮತ್ತು ನೀರನ್ನು ತಂದು ಒದಗಿಸುತ್ತಾ ಸೇವೆಮಾಡುತ್ತಿದ್ದನು. ॥ ೫೭ ॥ ರಾಜನೇ! ಕಪಟಿಗಳಾದ ಬೇಟೆಗಾರರು ಜಿಂಕೆಯನ್ನು ಕೊಲ್ಲುವುದಕ್ಕಾಗಿ ಜಿಂಕೆಯಂತೆ ರೂಪವನ್ನು ಧರಿಸಿ ಅದರ ಬಳಿಗೆ ಹೋಗುವಂತೆ – ದೇವರಾಜನು ಕಪಟವೇಶವನ್ನು ಧರಿಸಿ ದಿತಿಯ ಬಳಿಗೆ ಹೋಗಿ ವ್ರತ ಪರಾಯಣೆಯಾಗಿದ್ದ ಆಕೆಯ ವ್ರತದಲ್ಲಿ ಛಿದ್ರವನ್ನು ಹುಡುಕುವುದಕ್ಕಾಗಿ ಸೇವೆ ಮಾಡುತ್ತಿದ್ದನು. ॥ ೫೮ ॥ ಸದಾ ಸೂಕ್ಷ್ಮವಾಗಿ ಗಮನಿಸುತ್ತಿದ್ದರೂ ಆಕೆಯಲ್ಲಿ ಯಾವ ಛಿದ್ರವೂ ಅವನಿಗೆ ಕಂಡುಬರಲಿಲ್ಲ. ಅದರಿಂದ ಇಂದ್ರನಿಗೆ ತುಂಬಾ ಚಿಂತೆಯುಂಟಾಯಿತು. 'ಯಾವ ಉಪಾಯಮಾಡಿದರೆ ತನಗೆ ಒಳ್ಳೆಯದಾಗುವುದು ?' ಎಂಬುದನ್ನು ಅವನು ಯೋಚಿಸುತ್ತಿದ್ದನು. ॥ ೫೯ ॥

ದಿತಿಯು ವ್ರತನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾ ಬಹಳ ದುರ್ಬಲಳಾಗಿದ್ದಳು. ವಿಧಿಯ ಮೋಹಕ್ಕೆ ಒಳಗಾಗಿ ಆಕೆಯು ಒಂದುದಿನ ಸಂಧ್ಯಾಸಮಯದಲ್ಲಿ ಬಾಯಿಮುಕ್ಕಳಿಸದೆ ಎಂಜಲು ಬಾಯಿಂದ, ಆಚಮನಮಾಡದೆ, ಕಾಲು ತೊಳೆಯದೆ ಹಾಗೆಯೇ ಮಲಗಿಬಿಟ್ಟಳು. ॥ ೬೦ ॥ ತನ್ನ ಕಾರ್ಯವನ್ನು ಸಾಧಿಸಲು ಇದೇ ಒಳ್ಳೆಯ ಸಮಯವೆಂದು ಯೋಗೇಶ್ವರ ಇಂದ್ರನು ನೋಡಿದನು. ಕೂಡಲೇ ಅವನು ಯೋಗಬಲದಿಂದ ಮಲಗಿದ್ದ ದಿತಿಯ ಗರ್ಭವನ್ನು ಪ್ರವೇಶಿಸಿದನು. ॥ ೬೧ ॥ ಅವನು ಅಲ್ಲಿಗೆ ಹೋಗಿ ಭಂಗಾರದಂತೆ ಹೊಳೆಯುತ್ತಿರುವ ಗರ್ಭವನ್ನು ಏಳು ತುಂಡುಗಳಾಗಿ ಕತ್ತರಿಸಿದನು. ಆಗ ಆ ಗರ್ಭವು ಅಳತೊಡಗಿದಾಗ 'ಅಳಬೇಡ-ಅಳಬೇಡ' ಎಂದು ಹೇಳುತ್ತಾ ಏಳೂ ತುಂಡುಗಳಲ್ಲಿ ಮತ್ತೆ ಒಂದೊಂದನ್ನು ಏಳು-ಏಳಾಗಿ ತುಂಡರಿಸಿದನು. ॥ ೬೨ ॥ ಇಂದ್ರನು ತುಂಡರಿಸತೊಡಗಿದಾಗ ಅವೆಲ್ಲವೂ ಕೈಜೋಡಿಸಿ ಕೊಂಡು ಇಂದ್ರನಲ್ಲಿ ಹೇಳಿದವು – ದೇವರಾಜಾ! ನೀನು ನಮ್ಮನ್ನು ಏಕೆ ಕೊಲ್ಲುತ್ತಿರುವೆ ? ನಾವಾದರೋ ನಿನ್ನ ತಮ್ಮಂದಿರಾದ ಮರುದ್ಗಣರಾಗಿದ್ದೇವಲ್ಲ. ॥ ೬೩ ॥ ಆಗ ಇಂದ್ರನು ಮುಂದೆ ತನ್ನಲ್ಲಿ ಅನನ್ಯ ಪ್ರೇಮದಿಂದ ಕೂಡಿದ ಪಾರ್ಷದರಾದ ಆ ಮರುದ್ಗಣಗಳಿಗೆ – ಒಳ್ಳೆಯದು ! ನೀವು ನನಗೆ ತಮ್ಮಂದಿರಾದಿರಿ. ಇನ್ನು ಹೆದರಬೇಡಿರಿ ಎಂದು ಅಭಯವಿತ್ತನು. ॥ ೬೪ ॥ ಪರೀಕ್ಷಿತನೇ! ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ನಿನಗೆ ಯಾವುದೇ ಅನಿಷ್ಟವಾಗಲಿಲ್ಲ. ಹಾಗೆಯೇ ಭಗವಾನ್ ಶ್ರೀಹರಿಯ ಕೃಪೆಯಿಂದ ದಿತಿಯ ಆ ಗರ್ಭವು ವಜ್ರಾಯುಧದಿಂದ ತುಂಡು-ತುಂಡಾದರೂ ಸತ್ತಿಲ್ಲ. ॥ ೬೫ ॥ ಇದರಲ್ಲಿ ಸ್ವಲ್ಪವೂ ಆಶ್ಚರ್ಯವಿಲ್ಲ. ಏಕೆಂದರೆ, ಒಂದೇ ಬಾರಿಯಾದರೂ ಆದಿಪುರುಷನಾದ ಶ್ರೀಮನ್ನಾರಾಯಣನ ಆರಾಧನೆಯನ್ನು ಮಾಡುವವನು ಆತನ ಸಾಮ್ಯವನ್ನೇ ಪಡೆಯುವನು. ಹೀಗಿರುವಾಗ ದಿತಿಯು ಕೆಲವೇ ದಿನಗಳು ಕಡಿಮೆ ಒಂದು ವರ್ಷದವರೆಗೆ ಭಗವಂತನನ್ನು ಆರಾಧಿಸಿದ್ದಳು. ॥ ೬೬ ॥

ಸಜೂರಿಂದ್ರೇಣ ಪಂಚಾಶದ್ದೇವಾಸ್ತೇ ಮರುತೋಽಭವನ್ ।
ವ್ಯಪೋಹ್ಯ ಮಾತೃದೋಷಂ ತೇ ಹರಿಣಾ ಸೋಮಪಾಃ ಕೃತಾಃ
॥ ೬೭ ॥

ದಿತಿರುತ್ಥಾಯ ದದೃಶೇ ಕುಮಾರಾನನಲಪ್ರಭಾನ್ ।
ಇಂದ್ರೇಣ ಸಹಿತಾನ್‌ದೇವೀ ಪರ್ಯತುಷ್ಯದನಿಂದಿತಾ
॥ ೬೮ ॥

ಅಥೇಂದ್ರಮಾಹ ತಾತಾಹಮಾದಿತ್ಯಾನಾಂ ಭಯಾವಹಮ್ ।
ಅಪತ್ಯಮಿಚ್ಛಂತ್ಯಚರಂ ವ್ರತಮೇತತ್ಸುದುಷ್ಕರಮ್
॥ ೬೯ ॥

ಏಕಃ ಸಂಕಲ್ಪಿತಃ ಪುತ್ರಃ ಸಪ್ತ ಸಪ್ತಾಭವನ್ಕಥಮ್ ।
ಯದಿ ತೇ ವಿದಿತಂ ಪುತ್ರ ಸತ್ಯಂ ಕಥಯ ಮಾ ಮೃಷಾ
॥ ೭೦ ॥

*ಇಂದ್ರ ಉವಾಚ*

ಅಂಬ ತೇಽಹಂ ವ್ಯವಸಿತಮುಪಧಾರ್ಯಾಗತೋಽಂತಿಕಮ್ ।
ಲಬ್ಧಾಂತರೋಽಚ್ಛಿದಂ ಗರ್ಭಮರ್ಥಬುದ್ಧಿರ್ನ ಧರ್ಮವಿತ್
॥ ೭೧ ॥

ಕೃತ್ತೋ ಮೇ ಸಪ್ತಧಾ ಗರ್ಭ ಆಸನ್ಸಪ್ತ ಕುಮಾರಕಾಃ ।
ತೇಽಪಿ ಚೈಕೈಕಶೋ ವೃಕ್ಣಾಃ ಸಪ್ತಧಾ ನಾಪಿ ಮಮ್ರಿರೇ
॥ ೭೨ ॥

ತತಸ್ತತ್ಪರಮಾಶ್ಚರ್ಯಂ ವೀಕ್ಷ್ಯಾಧ್ಯವಸಿತಂ ಮಯಾ ।
ಮಹಾಪುರುಷಪೂಜಾಯಾಃ ಸಿದ್ಧಿಃ ಕಾಪ್ಯನುಷಂಗಿಣೀ
॥ ೭೩ ॥

ಆರಾಧನಂ ಭಗವತ ಈಹಮಾನಾ ನಿರಾಶಿಷಃ ।
ಯೇ ತು ನೇಚ್ಛಂತ್ಯಪಿ ಪರಂ ತೇ ಸ್ವಾರ್ಥಕುಶಲಾಃ ಸ್ಮೃತಾಃ
॥ ೭೪ ॥

ಆರಾಧ್ಯಾತ್ಮಪ್ರದಂ ದೇವಂ ಸ್ವಾತ್ಮಾನಂ ಜಗದೀಶ್ವರಮ್ ।
ಕೋ ವೃಣೀತೇ ಗುಣಸ್ಪರ್ಶಂ ಬುಧಃ ಸ್ಯಾನ್ನರಕೇಽಪಿ ಯತ್
॥ ೭೫ ॥

ತದಿದಂ ಮಮ ದೌರ್ಜನ್ಯಂ ಬಾಲಿಶಸ್ಯ ಮಹೀಯಸಿ ।
ಕ್ಷಂತುಮರ್ಹಸಿ ಮಾತಸ್ತ್ವಂ ದಿಷ್ಟ್ಯಾ ಗರ್ಭೋ ಮೃತೋತ್ಥಿತಃ
॥ ೭೬ ॥

ಈಗ ಆ ನಲವತ್ತೊಂಭತ್ತು ಮರುದ್ಗಣರು ಇಂದ್ರನೊಡನೆ ಸೇರಿ ಐವತ್ತಾದರು. ಇಂದ್ರನೂ ಕೂಡ ಬಲತಾಯಿ ಪುತ್ರರೊಂದಿಗೆ ಶತ್ರುಭಾವವನ್ನಿರಿಸದೆ ಅವರನ್ನೂ ಸೋಮಪಾನ ಮಾಡುವ ದೇವತೆಗಳನ್ನಾಗಿಸಿದನು. ॥ ೬೭ ॥ ದಿತಿಯು ಕಣ್ಣು ತೆರೆದು ನೋಡಿದಾಗ ಅಗ್ನಿಯಂತೆ ಹೊಳೆಯುತ್ತಿರುವ ತನ್ನ ನಲವತ್ತೊಂಭತ್ತು ಮಂದಿ ಬಾಲಕರು ಇಂದ್ರನೊಡನಿರುವುದನ್ನು ಕಂಡಳು. ಇದರಿಂದ ಅನಿಂದ್ಯವಾದ ಸ್ವಭಾವವುಳ್ಳ ದಿತಿಗೆ ತುಂಬಾ ಸಂತೋಷವಾಯಿತು. ॥ ೬೮ ॥ ಆಕೆಯು ಇಂದ್ರನನ್ನು ಸಂಬೋಧಿಸುತ್ತಾ – ಮಗನೇ ! ನಾನು 'ಅದಿತಿಯ ಪುತ್ರರಾದ ನಿಮಗೆ ಭಯವನ್ನುಂಟುಮಾಡುವ ಒಬ್ಬ ಪುತ್ರನು ಹುಟ್ಟಲಿ ಎಂದು ಈ ಅತ್ಯಂತ ಕಠಿಣವಾದ ವ್ರತವನ್ನು ಪಾಲಿಸುತ್ತಿದ್ದೆ. ॥ ೬೯ ॥ ನಾನು ಕೇವಲ ಒಬ್ಬನೇ ಪುತ್ರನಿಗಾಗಿ ಸಂಕಲ್ಪ ಮಾಡಿದ್ದೆ. ಹೀಗಿದ್ದರೂ ಈ ನಲವತ್ತೊಂಭತ್ತು ಪುತ್ರರು ಹೇಗಾದರು ? ಮಗು ಇಂದ್ರನೇ ! ನಿನಗೆ ಇದರ ರಹಸ್ಯ ತಿಳಿದಿದ್ದರೆ ನಿಜವನ್ನೇ ಹೇಳು. ಸುಳ್ಳನ್ನಾಡ ಬೇಡ' ಎಂದು ಕೇಳಿದಳು. ॥ ೭೦॥

**ಇಂದ್ರನು ಹೇಳಿದನು** – ಅಮ್ಮಾ! ನೀನು ಯಾವ ಉದ್ದೇಶದಿಂದ ವ್ರತವನ್ನು ಆಚರಿಸುತ್ತಿದ್ದೆ ಎಂಬುದು ನನಗೆ ತಿಳಿದು ಹೋಯಿತು. ಅದಕ್ಕಾಗಿ ಸ್ವಾರ್ಥಸಾಧನೆಗಾಗಿ ನಾನು ಸ್ವರ್ಗವನ್ನು ಬಿಟ್ಟು ನಿನ್ನ ಬಳಿಗೆ ಬಂದಿರುವೆನು. ನನ್ನ ಮನಸ್ಸಿನಲ್ಲಿ ಸ್ವಲ್ಪವೂ ಧರ್ಮಭಾವನೆ ಇರಲಿಲ್ಲ. ಇದರಿಂದ ನಿನ್ನ ವ್ರತದಲ್ಲಿ ಉಂಟಾದ ಕೊರತೆಯನ್ನು ಕಂಡು ನಾನು ಆ ಗರ್ಭವನ್ನು ತುಂಡು-ತುಂಡಾಗಿಸಿದೆನು. ॥ ೭೧ ॥ ಮೊದಲಿಗೆ ನಾನು ಅದನ್ನು ಏಳು ತುಂಡುಗಳಾಗಿಸಿದೆ. ಇದಾದ ಬಳಿಕ ನಾನು ಪುನಃ ಒಂದೊಂದನ್ನು ಏಳು-ಏಳಾಗಿ ತುಂಡುಮಾಡಿದೆ. ಆಗಲೂ ಅದು ಸಾಯದೆ ನಲವತ್ತೊಂಭತ್ತಾಯಿತು. ॥ ೭೨ ॥ ಇಂತಹ ಪರಮಾಶ್ಚರ್ಯಮಯ ಘಟನೆಯನ್ನು ಕಂಡು 'ಇದು ಪರಮಪುರುಷ ಭಗವಂತನ ಉಪಾಸನೆಯ ಯಾವುದೋ ಸಿದ್ಧಿಯಾಗಿದೆ' ಎಂದು ನಾನು ನಿಶ್ಚಯಿಸಿದೆನು. ॥ ೭೩ ॥ ನಿಷ್ಕಾಮಭಾವದಿಂದ ಭಗವಂತನನ್ನು ಆರಾಧಿಸುವವರು, ಬೇರೆ ವಸ್ತುವೇನು, ಮೋಕ್ಷವನ್ನೂ ಕೂಡ ಬಯಸದಿರುವವರೇ ತಮ್ಮ ಸ್ವಾರ್ಥ ಮತ್ತು ಪರಮಾರ್ಥದಲ್ಲಿ ನಿಪುಣರಾಗಿರುತ್ತಾರೆ. ॥ ೭೪ ॥ ಭಗವಾನ್ ಜಗದೀಶ್ವರನು ಎಲ್ಲರಿಗೂ ಆರಾಧ್ಯದೇವನಾಗಿದ್ದು ಎಲ್ಲರ ಆತ್ಮನಾಗಿರುವನು. ಅವನು ಪ್ರಸನ್ನನಾದರೆ ಭಕ್ತರಿಗೆ ತನ್ನನ್ನೇ ಕೊಟ್ಟುಕೊಳ್ಳುವನು. ಹೀಗಿರುವಾಗ ಯಾವ ವಿವೇಕಿಯು ತಾನೇ ಆತನನ್ನು ಆರಾಧಿಸಿ ವಿಷಯ ಭೋಗಗಳನ್ನು ವರವನ್ನಾಗಿ ಬೇಡಿಕೊಳ್ಳುವನು ? ಅಮ್ಮಾ! ಈ ವಿಷಯ ಭೋಗಗಳಾದರೋ ನರಕದಲ್ಲಿಯೂ ದೊರೆಯ ಬಲ್ಲವು. ॥ ೭೫ ॥ ವಾತ್ಸಲ್ಯಪೂರ್ಣಯಾದ ತಾಯೇ! ನೀನು ಎಲ್ಲ ವಿಧದಿಂದಲೂ ನನಗೆ ಪೂಜ್ಯಳಾಗಿರುವೆ. ನಾನು ಮೂರ್ಖತೆಯಿಂದ ಭಾರೀ ದುಷ್ಟತೆಯ ಕೆಲಸವನ್ನು ಮಾಡಿದೆನು. ನೀನು ನನ್ನ ಅಪರಾಧವನ್ನು ಕ್ಷಮಿಸಿ ಬಿಡು. ನಿನ್ನ ಗರ್ಭವು ಖಂಡ-ಖಂಡವಾಗಿ ಒಂದು ವಿಧದಿಂದ ಸತ್ತುಹೋದರೂ ಪುನಃ ಜೀವಿತವಾಯಿತು. ಇದು ದೊಡ್ಡ ಸೌಭಾಗ್ಯದ ಮಾತೇ ಆಗಿದೆ. ॥ ೭೬ ॥

*ಶ್ರೀಶುಕ ಉವಾಚ*

**ಇಂದ್ರಸ್ತಯಾಭ್ಯನುಜ್ಞಾತಃ ಶುದ್ಧಭಾವೇನ ತುಷ್ಟಯಾ ।**
**ಮರುದ್ಭಿಃ ಸಹ ತಾಂ ನತ್ವಾ ಜಗಾಮ ತ್ರಿದಿವಂ ಪ್ರಭುಃ ॥ ೭೭ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ದೇವರಾಜ ಇಂದ್ರನ ಈ ಶುದ್ಧಭಾವದಿಂದ ದಿತಿಯು ಸಂತೋಷಗೊಂಡಳು. ಅವಳಿಂದ ಅಪ್ಪಣೆಪಡೆದು, ಇಂದ್ರನು ಮರುದ್ಗಣರೊಂದಿಗೆ ಆಕೆಗೆ ವಂದಿಸಿಕೊಂಡು ಸ್ವರ್ಗಕ್ಕೆ ಹೊರಟು ಹೋದನು. ॥ ೭೭ ॥

**ಏವಂ ತೇ ಸರ್ವಮಾಖ್ಯಾತಂ ಯನ್ಮಾಂ ತ್ವಂ ಪರಿಪೃಚ್ಛಸಿ ।**
**ಮಂಗಲಂ ಮರುತಾಂ ಜನ್ಮ ಕಿಂ ಭೂಯಃ ಕಥಯಾಮಿ ತೇ ॥ ೭೮ ॥**

ರಾಜೇಂದ್ರನೇ! ನೀನು ಕೇಳಿದಂತೆ ಮರುದ್ಗಣಗಳ ಮಂಗಳಮಯ ಜನ್ಮವೃತ್ತಾಂತವನ್ನು ನಿನಗೆ ಸಮಗ್ರವಾಗಿ ತಿಳಿಸಿರುವೆನು. ಇನ್ನೇನು ಕೇಳಲು ನೀನು ಬಯಸುತ್ತಿರುವೆ? ॥ ೭೮ ॥

***ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ ಮರುದುತ್ಪತ್ತಿಕಥನಂ ನಾಮಾಷ್ಟಾದಶೋಽಧ್ಯಾಯಃ ॥ ೧೮ ॥**

# ಹತ್ತೊಂಭತ್ತನೆಯ ಅಧ್ಯಾಯ

## ಪುಂಸವನ ವ್ರತದ ವಿಧಿ

*ರಾಜೋವಾಚ*

**ವ್ರತಂ ಪುಂಸವನಂ ಬ್ರಹ್ಮನ್ ಭವತಾ ಯದುದೀರಿತಮ್ ।**
**ತಸ್ಯ ವೇದಿತುಮಿಚ್ಛಾಮಿ ಯೇನ ವಿಷ್ಣುಃ ಪ್ರಸೀದತಿ ॥ ೧ ॥**

**ಪರೀಕ್ಷಿತರಾಜನು ಕೇಳಿದನು** – ಭಗವಂತರೇ! ತಾವು ಈಗ ಪುಂಸವನವ್ರತವನ್ನು ವರ್ಣಿಸಿದಿರಿ. ಇದರಿಂದ ಭಗವಾನ್ ವಿಷ್ಣುವು ಪ್ರಸನ್ನನಾಗುವನು ಎಂದೂ ಹೇಳಿದಿರಿ. ಈಗ ನಾನು ಅದರ ವಿಧಿಯನ್ನು ತಿಳಿಯಲು ಬಯಸುತ್ತಿದ್ದೇನೆ. ದಯಮಾಡಿ ತಿಳಿಸಿರಿ. ॥ ೧ ॥

*ಶ್ರೀಶುಕ ಉವಾಚ*

**ಶುಕ್ಲೇ ಮಾರ್ಗಶಿರೇ ಪಕ್ಷೇ ಯೋಷಿದ್ಭರ್ತುರನುಜ್ಞಯಾ ।**
**ಆರಭೇತ ವ್ರತಮಿದಂ ಸಾರ್ವಕಾಮಿಕಮಾದಿತಃ ॥ ೨ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಈ ಪುಂಸವನವ್ರತವು ಸಮಸ್ತ ಕಾಮನೆಗಳನ್ನು ಈಡೇರಿಸುವಂತಹುದು. ಇದನ್ನು ಸ್ತ್ರೀಯರು ತಮ್ಮ-ತಮ್ಮ ಪತಿಗಳ ಅನುಮತಿಯನ್ನು ಪಡೆದು ಮಾರ್ಗಶಿರಮಾಸದ ಶುಕ್ಲಪಕ್ಷದ ಪ್ರತಿಪದೆಯಿಂದ ಪ್ರಾರಂಭಿಸಬೇಕು. ॥ ೨ ॥

**ನಿಶಮ್ಯ ಮರುತಾಂ ಜನ್ಮ ಬ್ರಾಹ್ಮಣಾನನುಮಂತ್ರ್ಯ ಚ ।**
**ಸ್ನಾತ್ವಾ ಶುಕ್ಲದತೀ ಶುಕ್ಲೇ ವಸೀತಾಲಂಕೃತಾಂಬರೇ ।**
**ಪೂಜಯೇತ್ಪ್ರಾತರಾಶಾತ್ಪ್ರಾಗ್ಭಗವಂತಂ ಶ್ರಿಯಾ ಸಹ ॥ ೩ ॥**

ಮೊದಲಿಗೆ ಮಂಗಳಕರವಾದ ಮರುದ್ಗಣರ ಕಥೆಯನ್ನು ಕೇಳಿ, ಬ್ರಾಹ್ಮಣರಿಂದ ಅಪ್ಪಣೆ ಪಡೆದು ವ್ರತವನ್ನು ಪ್ರಾರಂಭಿಸಬೇಕು. ಪ್ರತಿದಿನವೂ ಬೆಳಿಗ್ಗೆ ಹಲ್ಲುಗಳನ್ನು ಉಜ್ಜಿ ತೊಳೆದು, ಸ್ನಾನಮಾಡಿ ಶುಭ್ರವಾದ ವಸ್ತ್ರಾಲಂಕಾರಗಳನ್ನು ಧರಿಸಬೇಕು. ಪ್ರಾತಃಕಾಲದಲ್ಲಿ ಏನನ್ನೂ ತಿನ್ನದೆಯೇ ಭಗವಾನ್ ಲಕ್ಷ್ಮೀ-ನಾರಾಯಣರನ್ನು ಪೂಜೆ ಮಾಡಬೇಕು. ॥ ೩ ॥

**ಅಲಂ ತೇ ನಿರಪೇಕ್ಷಾಯ ಪೂರ್ಣಕಾಮ ನಮೋಽಸ್ತು ತೇ ।**
**ಮಹಾವಿಭೂತಿಪತಯೇ ನಮಃ ಸಕಲಸಿದ್ಧಯೇ ॥ ೪ ॥**

ಬಳಿಕ ಭಗವಂತನನ್ನು ಹೀಗೆ ಪ್ರಾರ್ಥಿಸಬೇಕು – ಪ್ರಭೋ! ನೀನು ಪೂರ್ಣಕಾಮನು. ಆದ್ದರಿಂದ ನಿನಗೆ ಯಾರಿಂದಲೂ ಏನನ್ನೂ ಕೊಟ್ಟು-ಕೊಳ್ಳುವುದಿರುವುದಿಲ್ಲ. ನೀನು ಸಮಸ್ತ ವಿಭೂತಿಗಳಿಗೆ ಸ್ವಾಮಿಯೂ, ಸಕಲಸಿದ್ಧಿ ಸ್ವರೂಪನೂ ಆಗಿರುವೆ. ನಾನು ನಿನಗೆ ಮತ್ತೆ-ಮತ್ತೆ ನಮಸ್ಕರಿಸುತ್ತೇನೆ. ॥ ೪ ॥

**ಯಥಾ ತ್ವಂ ಕೃಪಯಾ ಭೂತ್ಯಾ ತೇಜಸಾ ಮಹಿನೌಜಸಾ ।**
**ಜುಷ್ಟ ಈಶ ಗುಣೈಃ ಸರ್ವೈಸ್ತತೋಽಸಿ ಭಗವಾನ್ಪ್ರಭುಃ ॥ ೫ ॥**

ಓ ನನ್ನ ಆರಾಧ್ಯದೇವನೇ! ನೀನು ಕೃಪೆ, ವಿಭೂತಿ, ತೇಜ, ಮಹಿಮೆ ಮತ್ತು ವೀರ್ಯ ಮುಂತಾದ ಸಕಲಗುಣಗಳಿಂದ ನಿತ್ಯಯುಕ್ತನಾಗಿರುವೆ. ಇವುಗಳಿಗೆ ಭಗವೆಂದು ಹೆಸರು. ಈ ಭಗಗಳಿಂದ ಕೂಡಿರುವುದರಿಂದ ನಿನ್ನನ್ನು ಭಗವಂತನೆಂದು ಹೇಳುತ್ತಾರೆ. ನೀನು ಸರ್ವಶಕ್ತನು. ॥ ೫ ॥

ವಿಷ್ಣುಪತ್ನಿ ಮಹಾಮಾಯೇ
ಮಹಾಪುರುಷಲಕ್ಷಣೇ ।
ಪ್ರೀಯೇಥಾ ಮೇ ಮಹಾಭಾಗೇ
ಲೋಕಮಾತರ್ನಮೋಽಸ್ತು ತೇ ॥ ೬ ॥

ಮಾತೆ ಮಹಾಲಕ್ಷ್ಮಿಯೇ! ನೀನು ಭಗವಂತನ ಅರ್ಧಾಂಗಿನಿಯಾಗಿದ್ದು ಮಹಾಮಾಯಾ ಸ್ವರೂಪಳಾಗಿದ್ದೀಯೆ. ಭಗವಂತನ ಸರ್ವಗುಣಗಳೂ ನಿನ್ನಲ್ಲಿವೆ. ಮಹಾಭಾಗ್ಯವತಿಯಾದ ಭಗವತಿಯೆ! ಜಗನ್ಮಾತೆಯೇ! ನನ್ನಲ್ಲಿ ಪ್ರಸನ್ನಳಾಗು. ನಿನಗೆ ಬಾರಿ-ಬಾರಿಗೂ ನಮಸ್ಕಾರಗಳು. ॥ ೬ ॥

ಓಂ ನಮೋ ಭಗವತೇ ಮಹಾಪುರುಷಾಯ ಮಹಾನುಭಾವಾಯ ಮಹಾವಿಭೂತಿಪತಯೇ ಸಹ ಮಹಾವಿಭೂತಿಭಿರ್ಬಲಿಮುಪಹರಾಣೀತಿ । ಅನೇನಾ-ಹರಹರ್ಮಂತ್ರೇಣ ವಿಷ್ಣೋರಾವಾಹನಾರ್ಘ್ಯ-ಪಾದ್ಯೋಪಸ್ಪರ್ಶನಸ್ನಾನವಾಸಉಪವೀತವಿಭೂಷಣಗಂಧಪುಷ್ಪಧೂಪದೀಪೋಪಹಾರಾದ್ಯುಪಚಾರಾಂಶ್ಚ ಸಮಾಹಿತ ಉಪಾಹರೇತ್ ॥ ೭ ॥

ಹವಿಃಶೇಷಂ ತು ಜುಹುಯಾ-
ದನಲೇ ದ್ವಾದಶಾಹುತೀಃ ।
ಓಂ ನಮೋ ಭಗವತೇ ಮಹಾಪುರುಷಾಯ
ಮಹಾವಿಭೂತಿಪತಯೇ ಸ್ವಾಹೇತಿ ॥ ೮ ॥

ಪರೀಕ್ಷಿತನೇ! ಹೀಗೆ ಸ್ತುತಿಮಾಡಿ ಏಕಾಗ್ರಚಿತ್ತದಿಂದ – 'ಓಂಕಾರ ಸ್ವರೂಪನೂ, ಮಹಾಪುರುಷನೂ, ಮಹಾನುಭಾವನೂ, ಮಹಾ ವಿಭೂತಿಗಳಿಂದ ಕೂಡಿರುವ ಸ್ವಾಮಿಯೂ, ಆದ ಶ್ರೀಭಗವಂತನಿಗೆ ಹಾಗೂ ಆತನ ಮಹಾವಿಭೂತಿಗಳಿಗೆ ನಮಸ್ಕಾರ ಮಾಡಿ ಅವರಿಗೆ ಪೂಜೋಪಹಾರ ಸಾಮಗ್ರಿಗಳನ್ನು ಸಮರ್ಪಿಸುತ್ತೇನೆ' ಎಂಬ ಮಂತ್ರದ ಮೂಲಕ ಪ್ರತಿದಿನವೂ ಸ್ಥಿರವಾದ ಚಿತ್ತದಿಂದ ಭಗವಾನ್ ಶ್ರೀವಿಷ್ಣುವನ್ನು ಆವಾಹನ, ಅರ್ಘ್ಯ, ಪಾದ್ಯ, ಆಚಮನ, ಸ್ನಾನ, ವಸ್ತ್ರ ಯಜ್ಞೋಪವೀತ, ಆಭೂಷಣ, ಗಂಧ, ಪುಷ್ಪ ಧೂಪ, ದೀಪ, ನೈವೇದ್ಯಗಳೇ ಮುಂತಾದ ಉಪಚಾರಗಳಿಂದ ಪೂಜಿಸಬೇಕು. ॥ ೭ ॥ ಉಳಿದಿರುವ ನೈವೇದ್ಯದಿಂದ – 'ಓಂ ನಮೋ ಭಗವತೇ ಮಹಾಪುರುಷಾಯ ಮಹಾವಿಭೂತಿ ಪತಯೇ ಸ್ವಾಹಾ' (ಮಹಾವಿಭೂತಿಗಳಿಗೆ ಅಧಿಪತಿಯಾದ ಭಗವಾನ್ ಪುರುಷೋತ್ತಮನಿಗೆ ನಮಸ್ಕರಿಸುತ್ತೇನೆ) ಎಂಬ ಮಂತ್ರವನ್ನು ಹೇಳಿ ಅಗ್ನಿಯಲ್ಲಿ ಹನ್ನೆರಡು ಆಹುತಿಗಳನ್ನು ಅರ್ಪಿಸಬೇಕು. ॥ ೮ ॥

ಶ್ರೀಯಂ ವಿಷ್ಣುಂ ಚ ವರದಾವಾಶಿಷಾಂ ಪ್ರಭವಾವುಭೌ ।
ಭಕ್ತ್ಯಾ ಸಂಪೂಜಯೇನ್ನಿತ್ಯಂ ಯದೀಚ್ಛೇತ್ಸರ್ವಸಂಪದಃ ॥ ೯ ॥

ಪರೀಕ್ಷಿದ್ರಾಜನೇ! ಎಲ್ಲ ಬಗೆಯ ಸಂಪತ್ತುಗಳನ್ನು ಬಯಸುವವನು ಪ್ರತಿದಿನವೂ ಭಕ್ತಿಭಾವದಿಂದ ಭಗವಾನ್ ಲಕ್ಷ್ಮೀನಾರಾಯಣರನ್ನು ಪೂಜೆ ಮಾಡಬೇಕು. ಏಕೆಂದರೆ, ಅವರಿಬ್ಬರೂ ಸಮಸ್ತ ಅಭಿಲಾಷೆಗಳನ್ನು ಈಡೇರಿಸುವವರು ಹಾಗೂ ಶ್ರೇಷ್ಠತಮರಾದ ವರದಾಯಕರು. ॥ ೯ ॥

ಪ್ರಣಮೇದ್ದಂಡವದ್ಭೂಮೌ ಭಕ್ತಿಪ್ರಹ್ವೇಣ ಚೇತಸಾ ।
ದಶವಾರಂ ಜಪೇನ್ಮಂತ್ರಂ ತತಃ ಸ್ತೋತ್ರಮುದೀರಯೇತ್ ॥ ೧೦ ॥

ಅನಂತರ ಭಕ್ತಿಭಾವದಿಂದ ನಮ್ರವಾಗಿ ಶ್ರೀಭಗವಂತನಿಗೆ ಸಾಷ್ಟಾಂಗ ನಮಸ್ಕಾರ ಮಾಡಬೇಕು. ಹಿಂದೆ ಹೇಳಿದ ಮಂತ್ರವನ್ನು ಹತ್ತುಬಾರಿ ಜಪಿಸಬೇಕು. ಮತ್ತೆ ಈ ಕೆಳಗಿನ ಸ್ತೋತ್ರವನ್ನು ಪಾರಾಯಣ ಮಾಡಬೇಕು. ॥ ೧೦ ॥

ಯುವಾಂ ತು ವಿಶ್ವಸ್ಯ ವಿಭೂ ಜಗತಃ ಕಾರಣಂ ಪರಮ್ ।
ಇಯಂ ಹಿ ಪ್ರಕೃತಿಃ ಸೂಕ್ಷ್ಮಾ ಮಾಯಾಶಕ್ತಿರ್ದುರತ್ಯಯಾ ॥ ೧೧ ॥

ಓ ಲಕ್ಷ್ಮೀನಾರಾಯಣರೇ! ನೀವಿಬ್ಬರೂ ಸರ್ವವ್ಯಾಪಕರೂ ಹಾಗೂ ಇಡೀ ಜಗತ್ತಿಗೆ ಮೂಲಕಾರಣರೂ ಆಗಿದ್ದೀರಿ. ಆದರೆ ನಿಮಗೆ ಬೇರೊಂದು ಕಾರಣವಿಲ್ಲ. ಭಗವಂತಾ! ಮಾತೆ ಲಕ್ಷ್ಮಿಯು ನಿನ್ನ ಮಾಯಾಶಕ್ತಿಯೇ ಆಗಿರುವಳು. ಅವಳು ಸ್ವಯಂ ಅವ್ಯಕ್ತ ಪ್ರಕೃತಿಯೂ ಆಗಿರುವಳು. ಅವಳನ್ನು ದಾಟುವುದು ಅತಿಕಷ್ಟವು. ॥ ೧೧ ॥

ತಸ್ಯಾ ಅಧೀಶ್ವರಃ ಸಾಕ್ಷಾತ್ತ್ವಮೇವ ಪುರುಷಃ ಪರಃ ।
ತ್ವಂ ಸರ್ವಯಜ್ಞ ಇಜ್ಯೇಯಂ ಕ್ರಿಯೇಯಂ ಫಲಭುಗ್ಭವಾನ್ ॥ ೧೨ ॥

ಪ್ರಭೋ! ನೀನು ಆ ಮಹಾಮಾಯೆಯ ಅಧೀಶ್ವರನಾಗಿರುವೆ ಮತ್ತು ನೀನು ಸ್ವಯಂ ಪರಮಪುರುಷನೂ ಆಗಿರುವೆ. ನೀನು ಸಮಸ್ತ ಯಜ್ಞಗಳೇ ಆಗಿದ್ದು ಅವಳು ಯಜ್ಞ ಕ್ರಿಯೆಯಾಗಿರುವಳು. ನೀನು ಫಲದ ಭೋಕ್ತಾ ಆಗಿದ್ದು, ಅವಳು ಅದನ್ನು ಉತ್ಪನ್ನಗೊಳಿಸುವ ಕ್ರಿಯೆಯಾಗಿದ್ದಾಳೆ. ॥ ೧೨ ॥

ಗುಣವ್ಯಕ್ತಿರಿಯಂ ದೇವೀ ವ್ಯಂಜಕೋ ಗುಣಭುಗ್ಭವಾನ್ ।
ತ್ವಂ ಹಿ ಸರ್ವಶರೀರ್ಯಾತ್ಮಾ ಶ್ರೀಃ ಶರೀರೇಂದ್ರಿಯಾಶಯಾ ।
ನಾಮರೂಪೇ ಭಗವತೀ ಪ್ರತ್ಯಯಸ್ತ್ವಮಪಾಶ್ರಯಃ ॥ ೧೩ ॥

ತಾಯಿ ಲಕ್ಷ್ಮಿಯು ಮೂರುಗುಣಗಳ ಅಭಿವ್ಯಕ್ತಿಯಾದರೆ, ನೀನು ಅವುಗಳನ್ನು ವ್ಯಕ್ತಗೊಳಿಸುವವನೂ, ಅವುಗಳ ಭೋಕ್ತೃವೂ ಆಗಿರುವೆ. ನೀನು ಸಮಸ್ತ ಪ್ರಾಣಿಗಳ ಆತ್ಮನಾಗಿರುವೆ ಮತ್ತು ಲಕ್ಷ್ಮೀದೇವಿಯು ಶರೀರ, ಇಂದ್ರಿಯಗಳು ಹಾಗೂ ಅಂತಃಕರಣವಾಗಿದ್ದಾಳೆ. ಮಾತೆಯಾದ ಲಕ್ಷ್ಮೀದೇವಿಯು ನಾಮ ಮತ್ತು ರೂಪವಾಗಿದ್ದರೆ, ನೀನು ನಾಮ-ರೂಪ ಎರಡರ ಪ್ರಕಾಶಕ ಹಾಗೂ ಆಧಾರನಾಗಿರುವೆ. ॥ ೧೩ ॥

ಯಥಾ ಯುವಾಂ ತ್ರಿಲೋಕಸ್ಯ ವರದೌ ಪರಮೇಷ್ಠಿನೌ ।
ತಥಾ ಮ ಉತ್ತಮಶ್ಲೋಕ ಸಂತು ಸತ್ಯಾ ಮಹಾಶಿಷಃ
॥ ೧೪ ॥

ಇತ್ಯಭಿಷ್ಟೂಯ ವರದಂ ಶ್ರೀನಿವಾಸಂ ಶ್ರಿಯಾ ಸಹ ।
ತನ್ನಿಃಸಾರ್ಯೋಪಹರಣಂ ದತ್ತ್ವಾಽಽಚಮನಮರ್ಚಯೇತ್
॥ ೧೫ ॥

ತತಃ ಸ್ತುವೀತ ಸ್ತೋತ್ರೇಣ ಭಕ್ತಿಪ್ರಹ್ವೇಣ ಚೇತಸಾ ।
ಯಜ್ಞೋಚ್ಛಿಷ್ಟಮವಘ್ರಾಯ ಪುನರಭ್ಯರ್ಚಯೇದ್ಧರಿಮ್
॥ ೧೬ ॥

ಪತಿಂ ಚ ಪರಯಾ ಭಕ್ತ್ಯಾ ಮಹಾಪುರುಷಚೇತಸಾ ।
ಪ್ರಿಯೈಸ್ತೈಸ್ತೈರುಪನಮೇತ್ ಪ್ರೇಮಶೀಲಃ ಸ್ವಯಂ ಪತಿಃ ।
ಬಿಭೃಯಾತ್ಸರ್ವಕರ್ಮಾಣಿ ಪತ್ನ್ಯಾ ಉಚ್ಚಾವಚಾನಿ ಚ
॥ ೧೭ ॥

ಕೃತಮೇಕತರೇಣಾಪಿ ದಂಪತ್ಯೋರುಭಯೋರಪಿ ।
ಪತ್ನ್ಯಾಂ ಕುರ್ಯಾದನರ್ಹಾಯಾಂ ಪತಿರೇತತ್ಸಮಾಹಿತಃ
॥ ೧೮ ॥

ವಿಷ್ಣೋರ್ವ್ರತಮಿದಂ ಬಿಭ್ರನ್ ನ ವಿಹನ್ಯಾತ್ಕಥಂಚನ ।
ವಿಪ್ರಾನ್ ಸ್ತ್ರಿಯೋ ವೀರವತೀಃ ಸ್ರಗ್ಗಂಧಬಲಿಮಂಡನೈಃ ।
ಅರ್ಚೇದಹರಹರ್ಭಕ್ತ್ಯಾ ದೇವಂ ನಿಯಮಮಾಸ್ಥಿತಃ
॥ ೧೯ ॥

ಉದ್ವಾಸ್ಯ ದೇವಂ ಸ್ವೇ ಧಾಮ್ನಿ ತನ್ನಿವೇದಿತಮಗ್ರತಃ ।
ಅದ್ಯಾದಾತ್ಮವಿಶುದ್ಧ್ಯರ್ಥಂ ಸರ್ವಕಾಮರ್ದ್ಧಯೇ ತಥಾ
॥ ೨೦ ॥

ಏತೇನ ಪೂಜಾವಿಧಿನಾ ಮಾಸಾನ್ ದ್ವಾದಶ ಹಾಯನಮ್ ।
ನೀತ್ವಾಥೋಪರಮೇತ್ಸಾಧ್ವೀ ಕಾರ್ತಿಕೇ ಚರಮೇಽಹನಿ
॥ ೨೧ ॥

ಶ್ವೋಭೂತೇಽಪ ಉಪಸ್ಪೃಶ್ಯ ಕೃಷ್ಣಮಭ್ಯರ್ಚ್ಯ ಪೂರ್ವವತ್ ।
ಪಯಃಶೃತೇನ ಜುಹುಯಾಚ್ಚರುಣಾ ಸಹ ಸರ್ಪಿಷಾ ।
ಪಾಕಯಜ್ಞವಿಧಾನೇನ ದ್ವಾದಶೈವಾಹುತೀಃ ಪತಿಃ
॥ ೨೨ ॥

ಆಶಿಷಃ ಶಿರಸಾಽಽದಾಯ ದ್ವಿಜೈಃ ಪ್ರೀತೈಃ ಸಮೀರಿತಾಃ ।
ಪ್ರಣಮ್ಯ ಶಿರಸಾ ಭಕ್ತ್ಯಾ ಭುಂಜೀತ ತದನುಜ್ಞಯಾ
॥ ೨೩ ॥

ಪ್ರಭೋ! ನಿನ್ನ ಕೀರ್ತಿಯು ಪವಿತ್ರವಾದುದು. ನೀವಿಬ್ಬರೂ ಮೂರುಲೋಕಗಳಿಗೂ ವರದಾಯಕರಾದ ಪರಮೇಶ್ವರರಾಗಿ ರುವಿರಿ. ಆದ್ದರಿಂದ ನನ್ನ ದೊಡ್ಡ-ದೊಡ್ಡ ಆಸೆ-ಆಕಾಂಕ್ಷೆ ಗಳೆಲ್ಲವೂ ನಿಮ್ಮ ಕೃಪೆಯಿಂದ ಈಡೇರಲಿ. ॥ ೧೪ ॥

ಮಹಾರಾಜ ಪರೀಕ್ಷಿತನೇ! ಹೀಗೆ ಪರಮ ವರಪ್ರದರಾದ ಲಕ್ಷ್ಮೀನಾರಾಯಣರನ್ನು ಸ್ತೋತ್ರಮಾಡಿ, ನೈವೇದ್ಯವನ್ನು ತೆಗೆದಿಟ್ಟು ಆಚಮನ ಮಾಡಿ ದೇವದೇವಿಯರನ್ನು ಪೂಜಿಸಬೇಕು. ॥ ೧೫ ॥ ಅನಂತರ ಭಕ್ತಿಭರಿತವಾದ ಹೃದಯದಿಂದ ಭಗವಂತನನ್ನು ಸ್ತುತಿ ಸುತ್ತಾ, ಯಜ್ಞಾವಶೇಷವನ್ನು ಮೂಸಿನೋಡಿ ಪುನಃ ಭಗವಂತನನ್ನು ಪೂಜಿಸಬೇಕು. ॥ ೧೬ ॥ ಭಗವಂತನ ಪೂಜೆಯ ಬಳಿಕ ತನ್ನ ಪತಿಯನ್ನೇ ಸಾಕ್ಷಾತ್ ಭಗವಂತನೆಂದು ತಿಳಿದು ಪರಮಪ್ರೇಮ ದಿಂದ ಅವನ ಪ್ರಿಯವಾದ ವಸ್ತುಗಳನ್ನು ಸೇವಾರೂಪದಲ್ಲಿ ಸಮ ರ್ಪಿಸಬೇಕು. ಹಾಗೆಯೇ ತನ್ನ ಪತ್ನಿಗೆ ಪ್ರಿಯವಾದ ಪದಾರ್ಥ ಗಳನ್ನು ತಂದು ಆಕೆಗೆ ಕೊಡುವುದು ಮತ್ತು ಆಕೆಯ ಸಣ್ಣ-ಪುಟ್ಟ ಎಲ್ಲರೀತಿಯ ಕೆಲಸಗಳನ್ನು ಮಾಡಿ ಕೊಡುವುದು ಪತಿಯ ಕರ್ತವ್ಯವಾಗಿದೆ. ॥ ೧೭ ॥ ಪರೀಕ್ಷಿತನೇ! ಪತಿ-ಪತ್ನಿಯರಲ್ಲಿ ಯಾರಾದರೊಬ್ಬರು ಯಾವುದೇ ಕೆಲಸ ಮಾಡಿದರೆ ಅದರ ಫಲವು ಇಬ್ಬರಿಗೂ ಉಂಟಾಗುವುದು. ಅದಕ್ಕಾಗಿ ಪತ್ನಿಯು ಅನಿವಾರ್ಯ ಕಾರಣದಿಂದ ಈ ವ್ರತವನ್ನು ಮಾಡಲು ಅಯೋಗ್ಯಳಾದಾಗ ಪತಿಯೇ ಏಕಾಗ್ರಚಿತ್ತದಿಂದ ಇದನ್ನು ಅನುಷ್ಠಾನಮಾಡಬೇಕು. ॥ ೧೮ ॥ ಇದು ಭಗವಾನ್ ವಿಷ್ಣುವಿನ ವ್ರತವಾಗಿದೆ. ಇದನ್ನು ಮಾಡಲು ನಿಯಮವನ್ನು ಸ್ವೀಕರಿಸಿದ ಬಳಿಕ ನಡುವಿನಲ್ಲಿ ಎಂದೂ ಬಿಡಬಾರದು. ಈ ನಿಯಮವನ್ನು ಸ್ವೀಕರಿಸಿದವನು ಪ್ರತಿದಿನವೂ ಮಾಲೆ, ಗಂಧ, ನೈವೇದ್ಯ, ಆಭೂಷಣ ಮುಂತಾದವುಗಳಿಂದ ಭಕ್ತಿ ಪೂರ್ವಕವಾಗಿ ಬ್ರಾಹ್ಮಣ-ಸುವಾಸಿನಿಯರನ್ನು ಪೂಜಿಸಿ, ಭಗ ವಾನ್ ವಿಷ್ಣುವನ್ನೂ ಪೂಜಿಸಬೇಕು. ॥ ೧೯ ॥ ಅದಾದನಂತರ ಶ್ರೀಭಗವಂತನನ್ನು ಅವನ ಧಾಮಕ್ಕೆ ಬಿಜಯಮಾಡಿಸಿ ಉದ್ವಾಸನೆ ಮಾಡಬೇಕು. ಬಳಿಕ ಆತ್ಮಶುದ್ಧಿಗಾಗಿ ಮತ್ತು ಸಮಸ್ತ ಅಭಿಲಾಷೆಗಳ ಪೂರ್ತಿಗಾಗಿ ಮೊದಲೇ ಅವನಿಗೆ ನೈವೇದ್ಯಮಾಡಿದ ಪ್ರಸಾದವನ್ನು ಸೇವಿಸಬೇಕು. ॥ ೨೦ ॥ ಸಾಧ್ವಿಯಾದ ಪತ್ನಿಯು ಈ ವಿಧಿಯಂತೆ ಹನ್ನೆರಡು ತಿಂಗಳಕಾಲ (ಒಂದುವರ್ಷ) ಈ ವ್ರತವನ್ನು ಆಚರಣೆ ಮಾಡಿ ಕಾರ್ತಿಕ ಮಾಸದ ಅಮಾವಾಸ್ಯೆಗೆ ಉದ್ಯಾಪನ ಸಂಬಂಧೀ ಉಪವಾಸ ಮತ್ತು ಪೂಜನಾದಿಗಳನ್ನು ಮಾಡ ಬೇಕು. ॥ ೨೧ ॥ ಅಂದು ಪ್ರಾತಃಕಾಲವೇ ಸ್ನಾನಮಾಡಿ ಹಿಂದಿನಂತೆ ಭಗವಾನ್ ವಿಷ್ಣುವನ್ನು ಪೂಜಿಸಬೇಕು. ಅವಳ ಪತಿಯು ಪಾಕ ಯಜ್ಞದ ವಿಧಿಯಂತೆ ತುಪ್ಪಬೆರೆಸಿದ ಪಾಯಸಾನ್ನದಿಂದ ಅಗ್ನಿ ಯಲ್ಲಿ ಹನ್ನೆರಡು ಆಹುತಿಗಳನ್ನು ಕೊಡಬೇಕು. ॥ ೨೨ ॥ ಇದಾದ ಬಳಿಕ ಬ್ರಾಹ್ಮಣರು ಪ್ರಸನ್ನರಾಗಿ ಆಶೀರ್ವಾದಗಳನ್ನೂ ಕೊಟ್ಟರೆ, ಬಹಳ ಆದರದಿಂದ ತಲೆತಗ್ಗಿಸಿ ಅವನ್ನು ಸ್ವೀಕರಿಸ ಬೇಕು. ಭಕ್ತಿ ಭಾವದಿಂದ ಅವರ ಚರಣಗಳಲ್ಲಿ ತಲೆಯನ್ನಿಟ್ಟು ಅವರ ಅನುಜ್ಞೆ ಯನ್ನು ಪಡೆದು ಭೋಜನಮಾಡಬೇಕು. ॥ ೨೩ ॥

ಆಚಾರ್ಯಮಗ್ರತಃ ಕೃತ್ವಾ ವಾಗ್ಯತಃ ಸಹ ಬಂಧುಭಿಃ ।
ದದ್ಯಾತ್ಪತ್ನ್ಯೈ ಚರೋಃ ಶೇಷಂ ಸುಪ್ರಜಸ್ತ್ವಂ ಸುಸೌಭಗಮ್ ॥ ೨೪ ॥

ಮೊದಲಿಗೆ ಆಚಾರ್ಯನಿಗೆ ಭೋಜನ ಮಾಡಿಸಬೇಕು. ಬಳಿಕ ಮೌನದಿಂದ ಬಂಧು-ಬಾಂಧವರೊಂದಿಗೆ ತಾನು ಭೋಜನ ಮಾಡಬೇಕು. ಇದಾದಬಳಿಕ ಹವನಮಾಡಿ ಮಿಕ್ಕಿದ ತುಪ್ಪವನ್ನು ಬೆರೆಸಿದ ಪಾಯಸಾನ್ನವನ್ನು ಪತ್ನಿಗೆ ಕೊಡಬೇಕು. ಆ ಪ್ರಸಾದವು ಸ್ತ್ರೀಯಳಿಗೆ ಸತ್ಪುತ್ರನನ್ನೂ, ಸೌಭಾಗ್ಯವನ್ನೂ ಅನುಗ್ರಹಿಸುವುದು. ॥ ೨೪ ॥

ಏತಚ್ಚರಿತ್ವಾ ವಿಧಿವದ್ವ್ರತಂ ವಿಭೋ-
ರಭೀಪ್ಸಿತಾರ್ಥಂ ಲಭತೇ ಪುಮಾನಿಹ ।
ಸ್ತ್ರೀ ತ್ವೇತದಾಸ್ಥಾಯ ಲಭೇತ ಸೌಭಗಂ
ಶ್ರಿಯಂ ಪ್ರಜಾಂ ಜೀವಪತಿಂ ಯಶೋ ಗೃಹಮ್ ॥ ೨೫ ॥

ಕನ್ಯಾ ಚ ವಿಂದೇತ ಸಮಗ್ರಲಕ್ಷಣಂ
ವರಂ ತ್ವವೀರಾ ಹತಕಿಲ್ಬಿಷಾ ಗತಿಮ್ ।
ಮೃತಪ್ರಜಾ ಜೀವಸುತಾ ಧನೇಶ್ವರೀ
ಸುದುರ್ಭಗಾ ಸುಭಗಾ ರೂಪಮಗ್ರ್ಯಮ್ ॥ ೨೬ ॥

ವಿಂದೇದ್ವಿರೂಪಾ ವಿರುಜಾ ವಿಮುಚ್ಯತೇ
ಯ ಆಮಯಾವೀಂದ್ರಿಯಕಲ್ಪದೇಹಮ್ ।
ಏತತ್ಪಠನ್ನಭ್ಯುದಯೇ ಚ ಕರ್ಮಣ್ಯ-
ನಂತತೃಪ್ತಿಃ ಪಿತೃದೇವತಾನಾಮ್ ॥ ೨೭ ॥

ಪರೀಕ್ಷಿತನೇ! ಭಗವಂತನ ಈ ಪುಂಸವನ ವ್ರತವನ್ನು ವಿಧಿವತ್ತಾಗಿ ಅನುಷ್ಠಾನ ಮಾಡುವ ಪುರುಷನಿಗೆ ಇಲ್ಲೇ ಅವನ ಅಭೀಷ್ಟವಸ್ತುವು ದೊರೆಯುತ್ತದೆ. ಸ್ತ್ರೀಯು ಈ ವ್ರತವನ್ನು ಪಾಲಿಸುವುದರಿಂದ ಸೌಭಾಗ್ಯ, ಸಂಪತ್ತು, ಸಂತಾನ, ಕೀರ್ತಿ, ಮನೆ ಎಲ್ಲವೂ ದೊರೆಯುತ್ತದೆ ಹಾಗೂ ಅವಳ ಪತಿಯು ದೀರ್ಘಾಯುವಾಗುತ್ತಾನೆ. ॥ ೨೫ ॥ ಈ ವ್ರತವನ್ನು ಅನುಷ್ಠಾನ ಮಾಡುವ ಕನ್ಯೆಯು ಸಮಸ್ತ ಶುಭ ಲಕ್ಷಣಗಳಿಂದ ಯುಕ್ತನಾದ ಪತಿಯನ್ನು ಪಡೆಯುತ್ತಾಳೆ. ವಿಧವೆಯು ಈ ವ್ರತದಿಂದ ಪಾಪರಹಿತಳಾಗಿ ವೈಕುಂಠಕ್ಕೆ ಹೋಗುತ್ತಾಳೆ. ಯಾರ ಮಕ್ಕಳು ಸಾಯುತ್ತಾ ಇರುತ್ತವೋ ಆ ಸ್ತ್ರೀಯು ಇದರ ಪ್ರಭಾವದಿಂದ ದೀರ್ಘಾಯುಸ್ಸುಳ್ಳ ಪುತ್ರರನ್ನು ಪಡೆಯುತ್ತಾಳೆ. ಐಶ್ವರ್ಯವಂತಳಾಗಿದ್ದರೂ ದುರದೃಷ್ಟಳಾದ ಹೆಂಗಸಿಗೆ ಸೌಭಾಗ್ಯವು ಉಂಟಾಗುತ್ತದೆ ಮತ್ತು ಕುರೂಪಿಯಾದವಳಿಗೆ ಶ್ರೇಷ್ಠವಾದ ರೂಪವು ಉಂಟಾಗುತ್ತದೆ. ರೋಗಿಯು ಈ ವ್ರತದ ಪ್ರಭಾವದಿಂದ ರೋಗದಿಂದ ಮುಕ್ತನಾಗುತ್ತಾನೆ, ಹಾಗೂ ಬಲಿಷ್ಠವಾದ ಶರೀರ ಮತ್ತು ಶ್ರೇಷ್ಠ ಇಂದ್ರಿಯಗಳ ಶಕ್ತಿ ಪಡೆಯುತ್ತಾನೆ. ಯಾರು ಮಾಂಗಲಿಕ ಶ್ರಾದ್ಧದಲ್ಲಿ ಇದನ್ನು ಪಾರಾಯಣೆ ಮಾಡುತ್ತಾನೋ ಅವನ ಪಿತೃಗಳು ಮತ್ತು ದೇವತೆಗಳು ಅನಂತವಾದ ತೃಪ್ತಿಯನ್ನು ಪಡೆಯುತ್ತಾರೆ. ॥ ೨೬-೨೭ ॥

ತುಷ್ಟಾಃ ಪ್ರಯಚ್ಛಂತಿ ಸಮಸ್ತಕಾಮಾನ್
ಹೋಮಾವಸಾನೇ ಹುತಭುಕ್ ಶ್ರೀರ್ಹರಿಶ್ಚ ।
ರಾಜನ್ಮಹನ್ಮರುತಾಂ ಜನ್ಮ ಪುಣ್ಯಂ
ದಿತೇರ್ವ್ರತಂ ಚಾಭಿಹಿತಂ ಮಹತ್ತೇ ॥ ೨೮ ॥

ಅವರು ಸಂತುಷ್ಟರಾಗಿ ಹವನವು ಸಾಂಗವಾಗಿ ಮುಗಿದ ಬಳಿಕ ವ್ರತಿಯ ಸಮಸ್ತ ಇಚ್ಛೆಗಳನ್ನು ಪೂರ್ಣಗೊಳಿಸುತ್ತಾರೆ. ಇವರೆಲ್ಲರೂ ಸಂತುಷ್ಟರಾಗಿಯೇ ಆಗುತ್ತಾರೆ ಜೊತೆಗೆ ಸಮಸ್ತ ಯಜ್ಞಗಳ ಏಕಮಾತ್ರ ಭೋಕ್ತೃವಾಗಿರುವ ಭಗವಾನ್ ಲಕ್ಷ್ಮೀ- ನಾರಾಯಣರೂ ಸಂತುಷ್ಟರಾಗಿ ವ್ರತಿಯ ಎಲ್ಲ ಅಭಿಲಾಷೆಗಳನ್ನು ಪೂರ್ಣಗೊಳಿಸುತ್ತಾರೆ. ಪರೀಕ್ಷಿತನೇ! ನಾನು ನಿನಗೆ ಮರುದ್ಗಣರ ಆದರಣೀಯವೂ, ಪುಣ್ಯಪ್ರದವೂ ಆದ ಜನ್ಮ-ಕಥೆಯನ್ನು ಹೇಳಿದೆ ಹಾಗೂ ಜೊತೆಗೆ ದಿತಿಯ ಶ್ರೇಷ್ಠವಾದ ಪುಂಸವನ ವ್ರತವನ್ನೂ ವರ್ಣಿಸಿರುವೆನು. ॥ ೨೮ ॥

*ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಷಷ್ಠಸ್ಕಂಧೇ
ಪುಂಸವನವ್ರತಕಥನಂ ನಾಮೈಕೋನವಿಂಶೋಽಧ್ಯಾಯಃ ॥ ೧೯ ॥

ಆರನೆಯ ಸ್ಕಂಧವು ಸಂಪೂರ್ಣವಾಯಿತು.

॥ ಓಂನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ಸಪ್ತಮಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ನಾರದ-ಯುಧಿಷ್ಠಿರ ಸಂವಾದ ಮತ್ತು ಜಯ-ವಿಜಯರ ಕಥೆ

*ರಾಜೋವಾಚ*

**ಸಮಃ ಪ್ರಿಯಃ ಸುಹೃದ್ಬ್ರಹ್ಮನ್ಭೂತಾನಾಂ ಭಗವಾನ್ಸ್ವಯಮ್ ।
ಇಂದ್ರಸ್ಯಾರ್ಥೇ ಕಥಂ ದೈತ್ಯಾನವಧೀದ್ವಿಷಮೋ ಯಥಾ ॥ ೧ ॥**

**ನ ಹ್ಯಸ್ಯಾರ್ಥಃ ಸುರಗಣೈಃ ಸಾಕ್ಷಾನ್ನಿಃಶ್ರೇಯಸಾತ್ಮನಃ ।
ನೈವಾಸುರೇಭ್ಯೋ ವಿದ್ವೇಷೋ ನೋದ್ವೇಗಶ್ಚಾಗುಣಸ್ಯ ಹಿ ॥ ೨ ॥**

**ಇತಿ ನಃ ಸುಮಹಾಭಾಗ ನಾರಾಯಣಗುಣಾನ್ ಪ್ರತಿ ।
ಸಂಶಯಃ ಸುಮಹಾಂಜಾತಸ್ತದ್ಭವಾಂಶ್ಛೇತ್ತುಮರ್ಹತಿ ॥ ೩ ॥**

**ಪರೀಕ್ಷಿತ ಮಹಾರಾಜನು ಕೇಳಿದನು** – ಪೂಜ್ಯರಾದ ಮಹರ್ಷಿಗಳೇ! ಭಗವಂತನಾದರೋ ಸ್ವಭಾವದಿಂದಲೇ ಭೇದ ಭಾವ ರಹಿತನಾಗಿದ್ದು, ಸಮನಾಗಿದ್ದಾನೆ. ಸಮಸ್ತ ಪ್ರಾಣಿಗಳ ಪ್ರಿಯನೂ, ಸುಹೃದನೂ ಆಗಿದ್ದಾನೆ. ಆದರೂ ಅವನು ಸಾಧಾರಣ ಮನುಷ್ಯರು ಭೇದ-ಭಾವದಿಂದ ತನ್ನ ಮಿತ್ರನ ಪಕ್ಷವನ್ನು ವಹಿಸಿಕೊಂಡು, ಶತ್ರುಗಳಿಗೆ ಅನಿಷ್ಟವೆಸಗುವಂತೆ ಇಂದ್ರನಿಗಾಗಿ ದೈತ್ಯರನ್ನು ಏಕೆ ವಧಿಸಿದನು? ॥ ೧ ॥ ಅವನು ಸ್ವಯಂ ಪರಿಪೂರ್ಣನಾಗಿ ಕಲ್ಯಾಣ ಸ್ವರೂಪನಾಗಿರುವುದರಿಂದ ಅವನಿಗೆ ದೇವತೆಗಳಿಂದ ಯಾವ ಪ್ರಯೋಜನವೂ ಇಲ್ಲ ಮತ್ತು ತ್ರಿಗುಣಾತೀತನಾಗಿರುವುದರಿಂದ ಅವನಿಗೆ ದೈತ್ಯರೊಂದಿಗೆ ಯಾವುದೇ ವೈರ-ವಿರೋಧಗಳೂ ಇರಲಾರದು. ಯಾವ ಉದ್ವೇಗವೂ ಇಲ್ಲ. ॥ ೨ ॥ ಭಗವತ್ಪ್ರೇಮದ ಸೌಭಾಗ್ಯದಿಂದ ಸಂಪನ್ನರಾದ ಮಹಾತ್ಮರೇ! ಭಗವಂತನ ಸಮತ್ವವೇ ಮುಂತಾದ ಗುಣಗಳ ಸಂಬಂಧದಲ್ಲಿ ಮನಸ್ಸಿನಲ್ಲಿ ತುಂಬಾ ಸಂದೇಹ ಉಂಟಾಗಿದೆ. ತಾವು ದಯಮಾಡಿ ಅದನ್ನು ಪರಿಹರಿಸಬೇಕು. ॥ ೩ ॥

*ಶ್ರೀಶುಕ ಉವಾಚ*

**ಸಾಧು ಪೃಷ್ಟಂ ಮಹಾರಾಜ ಹರೇಶ್ಚರಿತಮದ್ಭುತಮ್ ।
ಯದ್ಭಾಗವತಮಾಹಾತ್ಮ್ಯಂ ಭಗವದ್ಭಕ್ತಿವರ್ಧನಮ್ ॥ ೪ ॥**

**ಗೀಯತೇ ಪರಮಂ ಪುಣ್ಯಮೃಷಿಭಿರ್ನಾರದಾದಿಭಿಃ ।
ನತ್ವಾ ಕೃಷ್ಣಾಯ ಮುನಯೇ ಕಥಯಿಷ್ಯೇ ಹರೇಃ ಕಥಾಮ್ ॥ ೫ ॥**

**ನಿರ್ಗುಣೋಽಪಿ ಹ್ಯಜೋಽವ್ಯಕ್ತೋ ಭಗವಾನ್ಪ್ರಕೃತೇಃ ಪರಃ ।
ಸ್ವಮಾಯಾಗುಣಮಾವಿಶ್ಯ ಬಾಧ್ಯಬಾಧಕತಾಂ ಗತಃ ॥ ೬ ॥**

**ಶ್ರೀಶುಕಮಹಾಮುನಿಗಳು ಹೇಳಿದರು** – ಮಹಾರಾಜಾ! ಭಗವಂತನ ಅದ್ಭುತ ಚರಿತ್ರೆಯ ಸಂಬಂಧವಾಗಿ ನೀನು ಬಹಳ ಒಳ್ಳೆಯ ಪ್ರಶ್ನೆಯನ್ನೇ ಕೇಳಿರುವೆ. ಏಕೆಂದರೆ, ಇಂತಹ ಪ್ರಸಂಗಗಳು ಪ್ರಹ್ಲಾದಾದಿ ಭಕ್ತರ ಮಹಿಮೆಯಿಂದಲೇ ಪರಿಪೂರ್ಣವಾಗುತ್ತವೆ. ಅವುಗಳ ಶ್ರವಣದಿಂದ ಭಗವಂತನಲ್ಲಿ ಭಕ್ತಿಯು ವೃದ್ಧಿಸುತ್ತದೆ. ॥ ೪ ॥ ಇಂತಹ ಪರಮ ಪುಣ್ಯಪ್ರದವಾದ ಪ್ರಸಂಗಗಳನ್ನು ನಾರದಾದಿ ಮಹಾತ್ಮರು ತುಂಬಾ ಪ್ರೇಮದಿಂದ ಹಾಡುತ್ತಾ ಇರುತ್ತಾರೆ. ಈಗ ನಾನು ನನ್ನ ತಂದೆಯಾದ ಶ್ರೀಕೃಷ್ಣದ್ವೈಪಾಯನ ಮುನಿಗಳಿಗೆ ನಮಸ್ಕರಿಸಿ ಭಗವಂತನ ಲೀಲಾ-ಕಥೆಯನ್ನು ವರ್ಣಿಸುವೆನು. ॥ ೫ ॥ ವಾಸ್ತವವಾಗಿ ಭಗವಂತನು ನಿರ್ಗುಣನೂ, ಜನ್ಮರಹಿತನೂ, ಅವ್ಯಕ್ತನೂ, ಪ್ರಕೃತಿಯಿಂದ ಮೀರಿದವನಾಗಿದ್ದಾನೆ. ಹೀಗಿದ್ದರೂ ಅವನು ತನ್ನ ಮಾಯೆಯ ಗುಣಗಳನ್ನು ಸ್ವೀಕರಿಸಿಕೊಂಡು ಬಾಧ್ಯ-ಬಾಧಕ ಭಾವವನ್ನು ಅಂದರೆ ಸಾಯುವ ಮತ್ತು ಸಾಯಿಸುವ ಎರಡರ ಪರಸ್ಪರ ವಿರೋಧೀ ರೂಪಗಳನ್ನು ಸ್ವೀಕರಿಸುವನು. ॥ ೬ ॥ ಸತ್ತ್ವಗುಣ, ರಜೋಗುಣ, ತಮೋಗುಣ ಇವು ಪ್ರಕೃತಿಯ ಗುಣಗಳು, ಪರಮಾತ್ಮನವುಗಳಲ್ಲ. ಪರೀಕ್ಷಿತನೇ! ಈ ಗುಣಗಳು

ಸತ್ತ್ವಂ ರಜಸ್ತಮ ಇತಿ ಪ್ರಕೃತೇರ್ನಾತ್ಮನೋ ಗುಣಾಃ ।
ನ ತೇಷಾಂ ಯುಗಪದ್ರಾಜನ್ ಹ್ರಾಸ ಉಲ್ಲಾಸ ಏವ ವಾ
॥ ೭ ॥

ಜಯಕಾಲೇ ತು ಸತ್ತ್ವಸ್ಯ ದೇವರ್ಷೀನ್ರಜಸೋಽಸುರಾನ್ ।
ತಮಸೋ ಯಕ್ಷರಕ್ಷಾಂಸಿ ತತ್ಕಾಲಾನುಗುಣೋಽಭಜತ್
॥ ೮ ॥

ಜ್ಯೋತಿರಾದಿರಿವಾಭಾತಿ ಸಂಘಾತಾನ್ನ ವಿವಿಚ್ಯತೇ ।
ವಿದಂತ್ಯಾತ್ಮಾನಮಾತ್ಮಸ್ಥಂ ಮಥಿತ್ವಾ ಕವಯೋಽಂತತಃ
॥ ೯ ॥

ಯದಾ ಸಿಸೃಕ್ಷುಃ ಪುರ ಆತ್ಮನಃ ಪರೋ
ರಜಃ ಸೃಜತ್ಯೇಷ ಪೃಥಕ್ಸ್ವಮಾಯಯಾ ।
ಸತ್ತ್ವಂ ವಿಚಿತ್ರಾಸು ರಿರಂಸುರೀಶ್ವರಃ
ಶಯಿಷ್ಯಮಾಣಸ್ತಮ ಈರಯತ್ಯಸೌ ॥ ೧೦ ॥

ಕಾಲಂ ಚರಂತಂ ಸೃಜತೀಶ ಆಶ್ರಯಂ
ಪ್ರಧಾನಪುಂಭ್ಯಾಂ ನರದೇವ ಸತ್ಯಕೃತ್ ।
ಯ ಏಷ ರಾಜನ್ನಪಿ ಕಾಲ ಈಶಿತಾ
ಸತ್ತ್ವಂ ಸುರಾನೀಕಮಿವೈಧಯತ್ಯತಃ ।
ತತ್ಪ್ರತ್ಯನೀಕಾನಸುರಾನ್ಸುರಪ್ರಿಯೋ
ರಜಸ್ತಮಸ್ಕಾನ್ಪ್ರಮಿಣೋತ್ಯುರುಶ್ರವಾಃ ॥ ೧೧ ॥

ಅತ್ರೈವೋದಾಹೃತಃ ಪೂರ್ವಮಿತಿಹಾಸಃ ಸುರರ್ಷಿಣಾ ।
ಪ್ರೀತ್ಯಾ ಮಹಾಕ್ರತೌ ರಾಜನ್ಪೃಚ್ಛತೇಽಜಾತಶತ್ರವೇ
॥ ೧೨ ॥

ದೃಷ್ಟ್ವಾ ಮಹಾದ್ಭುತಂ ರಾಜಾ ರಾಜಸೂಯೇ ಮಹಾಕ್ರತೌ ।
ವಾಸುದೇವೇ ಭಗವತಿ ಸಾಯುಜ್ಯಂ ಚೇದಿಭೂಭುಜಃ
॥ ೧೩ ॥

ತತ್ರಾಸೀನಂ ಸುರಋಷಿಂ ರಾಜಾ ಪಾಂಡುಸುತಃ ಕ್ರತೌ ।
ಪಪ್ರಚ್ಛ ವಿಸ್ಮಿತಮನಾ ಮುನೀನಾಂ ಶೃಣ್ವತಾಮಿದಮ್
॥ ೧೪ ॥

*ಯುಧಿಷ್ಠಿರ ಉವಾಚ*

ಅಹೋ ಅತ್ಯದ್ಭುತಂ ಹ್ಯೇತದ್ದುರ್ಲಭೈಕಾಂತಿನಾಮಪಿ ।
ವಾಸುದೇವೇ ಪರೇ ತತ್ತ್ವೇ ಪ್ರಾಪ್ತಿಶ್ಚೈದ್ಯಸ್ಯ ವಿದ್ವಿಷಃ
॥ ೧೫ ॥

ಒಟ್ಟಿಗೆ ವೃದ್ಧಿಯನ್ನಾಗಲೀ, ಕ್ಷಯವನ್ನಾಗಲೀ ಹೊಂದುವುದಿಲ್ಲ. ॥ ೭ ॥ ಭಗವಂತನು ಆಯಾ ಕಾಲಕ್ಕೆ ಅನುಗುಣವಾಗಿ ಗುಣಗಳನ್ನು ಸ್ವೀಕರಿಸುತ್ತಾನೆ. ಅವನಲ್ಲಿ ಸತ್ತ್ವಗುಣವು ವೃದ್ಧಿಹೊಂದಿದಾಗ ದೇವತೆಗಳನ್ನೂ ಮತ್ತು ಋಷಿಗಳನ್ನೂ; ರಜೋಗುಣವು ವೃದ್ಧಿ ಹೊಂದಿದಾಗ ದೈತ್ಯರನ್ನು ಹಾಗೂ ತಮೋಗುಣವು ವೃದ್ಧಿ ಹೊಂದಿದಾಗ ಯಕ್ಷರನ್ನೂ, ರಾಕ್ಷಸರನ್ನೂ ತನ್ನವರಾಗಿಸಿಕೊಂಡು ಅವರ ಅಭ್ಯುದಯವನ್ನು ಮಾಡುತ್ತಾನೆ. ॥ ೮ ॥ ವ್ಯಾಪಕವಾದ ಅಗ್ನಿಯು ಕಟ್ಟಿಗೆಯೇ ಮುಂತಾದ ಬೇರೆ-ಬೇರೆ ಆಶ್ರಯಗಳಲ್ಲಿದ್ದರೂ ಅವುಗಳಿಂದ ಪ್ರತ್ಯೇಕವಾಗಿ ಕಾಣುವುದಿಲ್ಲ, ಆದರೆ ಆಶ್ರಯವನ್ನು ಪಡೆದಾಗ ಅದು ಪ್ರಕಟಗೊಳ್ಳುವುದು. ಹಾಗೆಯೇ ಪರಮಾತ್ಮನು ಎಲ್ಲ ಶರೀರಗಳಲ್ಲಿ ಇದ್ದರೂ ಪ್ರತ್ಯೇಕವಾಗಿ ತಿಳಿದು ಬರುವುದಿಲ್ಲ. ಆದರೆ ವಿಚಾರಶೀಲರು ಹೃದಯವನ್ನು ಮಂಥನ ಮಾಡಿ, ಎಲ್ಲವೂ ಕಳೆದ ಬಳಿಕ ಕೊನೆಗೆ ತಮ್ಮ ಹೃದಯದಲ್ಲೇ ಅಂತರ್ಯಾಮಿ ರೂಪದಿಂದ ಆತನನ್ನು ಪಡೆದುಕೊಳ್ಳುವರು. ॥ ೯ ॥ ಪರಮೇಶ್ವರನು ತನಗಾಗಿ ಶರೀರಗಳನ್ನು ನಿರ್ಮಿಸಲು ಬಯಸಿದಾಗ ತನ್ನ ಮಾಯೆಯಿಂದ ರಜೋಗುಣವನ್ನು ಬೇರೆಯಾಗಿ ಸೃಷ್ಟಿಸುತ್ತಾನೆ. ಅವನು ವಿಚಿತ್ರಯೋನಿಗಳಲ್ಲಿ ರಮಿಸಲು ಬಯಸಿದಾಗ ಸತ್ತ್ವಗುಣ ಸೃಷ್ಟಿಸುತ್ತಾನೆ. ಅವನು ಶಯನ ಮಾಡಲು ಬಯಸಿದಾಗ ತಮೋಗುಣವನ್ನು ಬೆಳೆಸುತ್ತಾನೆ. ॥ ೧೦ ॥ ಪರೀಕ್ಷಿತನೇ! ಭಗವಂತನು ಸತ್ಯ ಸಂಕಲ್ಪನು. ಅವನೇ ಜಗತ್ತಿನ ಉತ್ಪತ್ತಿಗಾಗಿ ನಿಮಿತ್ತಭೂತನಾದ ಪ್ರಕೃತಿ ಮತ್ತು ಪುರುಷರ ಸಹಕಾರಿಯಾದ ಆಶ್ರಯವೂ ಆಗಿರುವ ಕಾಲವನ್ನು ಸೃಷ್ಟಿಸುತ್ತಾನೆ. ಅದಕ್ಕಾಗಿ ಅವನು ಕಾಲಕ್ಕೆ ಅಧೀನನಲ್ಲ, ಕಾಲವೇ ಅವನ ಅಧೀನ. ಈ ಕಾಲಸ್ವರೂಪನಾದ ಈಶ್ವರನು ಸತ್ತ್ವಗುಣವನ್ನು ವೃದ್ಧಿಪಡಿಸಿದಾಗ ಸತ್ತ್ವಮಯ ದೇವತೆಗಳ ಬಲವು ಹೆಚ್ಚುತ್ತವೆ. ಆಗಲೇ ಆ ಪರಮಯಶಸ್ವೀ ದೇವಪ್ರಿಯ ಪರಮಾತ್ಮನು ದೇವತೆಗಳ ವಿರೋಧಿಗಳಾದ ರಜೋಗುಣೀ ಹಾಗೂ ತಮೋಗುಣೀ ದೈತ್ಯರನ್ನು ಸಂಹರಿಸುತ್ತಾನೆ. ವಾಸ್ತವವಾಗಿ ಅವನು ಸರ್ವಸಮನೇ ಆಗಿರುವನು. ॥ ೧೧ ॥

ರಾಜನೇ! ಹಿಂದೆ ರಾಜಸೂಯ ಯಜ್ಞದಲ್ಲಿ ಯುಧಿಷ್ಠಿರನು ದೇವರ್ಷಿ ನಾರದರಲ್ಲಿ ಒಂದು ಪ್ರಶ್ನೆಯನ್ನು ಕೇಳಿದ್ದನು. ಆಗ ಉತ್ತರವಾಗಿ ಅವರು ಈ ಇತಿಹಾಸವನ್ನು ಹೇಳಿದ್ದರು. ॥ ೧೨ ॥ ಆ ರಾಜಸೂಯ ಯಜ್ಞದಲ್ಲಿ ರಾಜಾ ಯುಧಿಷ್ಠಿರನು ತನ್ನ ಕಣ್ಣು ಮುಂದೆಯೇ ಶ್ರೀಕೃಷ್ಣನಿಂದ ಸಂಹರಿಸಲ್ಪಟ್ಟ ಚೇದಿರಾಜನಾದ ಶಿಶುಪಾಲನು ಎಲ್ಲರೂ ನೋಡು-ನೋಡುತ್ತಿರುವಂತೆ ಭಗವಾನ್ ಶ್ರೀಕೃಷ್ಣನಲ್ಲಿ ಸೇರಿಹೋದ ಈ ಆಶ್ಚರ್ಯಜನಕ ಘಟನೆಯು ನಡೆಯಿತು. ॥ ೧೩ ॥ ಈ ಘಟನೆಯಿಂದ ಆಶ್ಚರ್ಯಚಕಿತನಾಗಿ ಆ ಯಜ್ಞಮಂಟಪದಲ್ಲಿ ಯುಧಿಷ್ಠಿರನು ದೊಡ್ಡ-ದೊಡ್ಡ ಮುನಿಗಳಿಂದ ತುಂಬಿದ ಸಭೆಯಲ್ಲೇ ಕುಳಿತಿದ್ದ ನಾರದರನ್ನು ಹೀಗೆ ಪ್ರಶ್ನಿಸಿದನು. ॥ ೧೪ ॥

**ಯುಧಿಷ್ಠಿರನು ಕೇಳಿದನು** – ಆಹಾ! ಇದಾದರೋ ಪರಮಾದ್ಭುತವಾದುದು. ಪರಮತತ್ತ್ವ ಭಗವಾನ್ ಶ್ರೀಕೃಷ್ಣನಲ್ಲಿ ಸೇರಿಹೋಗುವುದು ದೊಡ್ಡ-ದೊಡ್ಡ ಅನನ್ಯ ಭಕ್ತರಿಗೂ ದುರ್ಲಭವಾಗಿದೆ. ಹಾಗಿರುವಾಗ ಭಗವಂತನಲ್ಲಿ ಅತಿದ್ವೇಷ ಮಾಡುತ್ತಿದ್ದ

ಏತದ್ವೇದಿತುಮಿಚ್ಛಾಮಃ ಸರ್ವ ಏವ ವಯಂ ಮುನೇ ।
ಭಗವನ್ನಿಂದಯಾ ವೇನೋ ದ್ವಿಜೈಸ್ತಮಸಿ ಪಾತಿತಃ ॥ ೧೬ ॥

ದಮಘೋಷಸುತಃ ಪಾಪ ಆರಭ್ಯ ಕಲಭಾಷಣಾತ್ ।
ಸಂಪ್ರತ್ಯಮರ್ಷೀ ಗೋವಿಂದೇ ದಂತವಕ್ತ್ರಶ್ಚ ದುರ್ಮತಿಃ ॥ ೧೭ ॥

ಶಪತೋರಸಕೃದ್ವಿಷ್ಣುಂ ಯದ್ಬ್ರಹ್ಮ ಪರಮವ್ಯಯಮ್ ।
ಶ್ವಿತ್ರೋ ನ ಜಾತೋ ಜಿಹ್ವಾಯಾಂ ನಾಂಧಂ ವಿವಿಶತುಸ್ತಮಃ ॥ ೧೮ ॥

ಕಥಂ ತಸ್ಮಿನ್ಭಗವತಿ ದುರವಗ್ರಾಹಧಾಮನಿ ।
ಪಶ್ಯತಾಂ ಸರ್ವಲೋಕಾನಾಂ ಲಯಮೀಯತುರಂಜಸಾ ॥ ೧೯ ॥

ಏತದ್ಭ್ರಾಮ್ಯತಿ ಮೇ ಬುದ್ಧಿರ್ದೀಪಾರ್ಚಿರಿವ ವಾಯುನಾ ।
ಬ್ರೂಹ್ಯೇತದದ್ಭುತತಮಂ ಭಗವಾಂಸ್ತತ್ರ ಕಾರಣಮ್ ॥ ೨೦ ॥

*ಶ್ರೀಶುಕ ಉವಾಚ*

ರಾಜ್ಞಸ್ತದ್ವಚ ಆಕರ್ಣ್ಯ ನಾರದೋ ಭಗವಾನೃಷಿಃ ।
ತುಷ್ಟಃ ಪ್ರಾಹ ತಮಾಭಾಷ್ಯ ಶೃಣ್ವತ್ಯಾಸ್ತತ್ಸದಃ ಕಥಾಃ ॥ ೨೧ ॥

*ನಾರದ ಉವಾಚ*

ನಿಂದನಸ್ತವಸತ್ಕಾರನ್ಯಕ್ಕಾರಾರ್ಥಂ ಕಲೇವರಮ್ ।
ಪ್ರಧಾನಪರಯೋ ರಾಜನ್ನವಿವೇಕೇನ ಕಲ್ಪಿತಮ್ ॥ ೨೨ ॥

ಹಿಂಸಾ ತದಭಿಮಾನೇನ ದಂಡಪಾರುಷ್ಯಯೋರ್ಯಥಾ ।
ವೈಷಮ್ಯಮಿಹ ಭೂತಾನಾಂ ಮಮಾಹಮಿತಿ ಪಾರ್ಥಿವ ॥ ೨೩ ॥

ಯನ್ನಿಬದ್ಧೋಽಭಿಮಾನೋಽಯಂ ತದ್ವಧಾತ್ಪ್ರಾಣಿನಾಂ ವಧಃ ।
ತಥಾ ನ ಯಸ್ಯ ಕೈವಲ್ಯಾದಭಿಮಾನೋಽಖಿಲಾತ್ಮನಃ ।
ಪರಸ್ಯ ದಮಕರ್ತುರ್ಹಿ ಹಿಂಸಾ ಕೇನಾಸ್ಯ ಕಲ್ಪ್ಯತೇ ॥ ೨೪ ॥

ಶಿಶುಪಾಲನಿಗೆ ಈ ಸದ್ಗತಿಯು ಹೇಗೆ ದೊರೆಯಿತು ? ॥ ೧೫ ॥ ನಾರದಮುನಿಗಳೇ ! ಇದರ ರಹಸ್ಯವನ್ನು ನಾವೆಲ್ಲರೂ ಕೇಳಲು ಬಯಸುತ್ತಿದ್ದೇವೆ. ಹಿಂದೆ ಶ್ರೀಭಗವಂತನನ್ನು ನಿಂದಿಸಿದ ಕಾರಣ ವೇನರಾಜನನ್ನು ಋಷಿಗಳು ನರಕಕ್ಕೆ ತಳ್ಳಿಬಿಟ್ಟಿದ್ದರು. ॥ ೧೬ ॥ ಈ ದಮಘೋಷನ ಪುತ್ರ ಪಾಪಿಷ್ಠನಾದ ಶಿಶುಪಾಲನೂ ಮತ್ತು ದುರ್ಬುದ್ಧಿಯಾದ ದಂತವಕ್ತ್ರನೂ ತೊದಲು ಮಾತಾನ್ನಾಡುತ್ತಿದ್ದ ಕಾಲದಿಂದ ಈಗಿನವರೆಗೆ ಶ್ರೀಭಗವಂತನಲ್ಲಿ ದ್ವೇಷವನ್ನೇ ಸಾಧಿಸುತ್ತಿದ್ದರು. ॥ ೧೭ ॥ ಅವಿನಾಶಿಯಾದ ಪರಬ್ರಹ್ಮ ಭಗವಾನ್ ಶ್ರೀಕೃಷ್ಣನನ್ನು ಇವರು ಬಾರಿ-ಬಾರಿಗೂ ಬೈಯ್ಯುತ್ತಿದ್ದರು. ಇಂತಹ ಇವರ ನಾಲಿಗೆಗೆ ಕುಷ್ಠರೋಗವು ಬಂದಿಲ್ಲ, ಇವರಿಗೆ ಘೋರವಾದ ಅಂಧಕಾರಮಯ ನರಕವೂ ಸಿಗಲಿಲ್ಲ. ॥ ೧೮ ॥ ಆದರೆ, ಇದಕ್ಕೆ ವಿರುದ್ಧವಾಗಿ ಅವರಿಬ್ಬರೂ ಎಲ್ಲರೂ ನೋಡು-ನೋಡುತ್ತಿರುವಂತೆ ಅತಿದುರ್ಲಭವಾದ ಶ್ರೀಕೃಷ್ಣನ ಸಾಯುಜ್ಯವನ್ನೇ ಅನಾಯಾಸವಾಗಿ ಹೊಂದಿಬಿಟ್ಟರು. ಇದರ ಕಾರಣವೇನು ? ॥ ೧೯ ॥ ಮಹರ್ಷಿಗಳೇ ! ಗಾಳಿಯ ಹೊಡೆತದಿಂದ ಅಲ್ಲಾಡುತ್ತಿರುವ ದೀಪಜ್ವಾಲೆಯಂತೆ – ನನ್ನ ಮನಸ್ಸು ಈ ವಿಷಯದಲ್ಲಿ ತೂಗಾಡುತ್ತಿದೆ. ಸರ್ವಜ್ಞರಾದ ತಾವು ಈ ಅದ್ಭುತ ಘಟನೆಯ ರಹಸ್ಯವನ್ನು ತಿಳಿಸುವ ಕೃಪೆ ಮಾಡಬೇಕು. ॥ ೨೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಸರ್ವಸಮರ್ಥರಾದ ದೇವರ್ಷಿ ನಾರದರು ಯುಧಿಷ್ಠಿರನ ಈ ಪ್ರಶ್ನೆಯನ್ನು ಕೇಳಿ ಬಹಳ ಪ್ರಸನ್ನರಾದರು. ಅವರು ಧರ್ಮರಾಜನಿಗೆ ಸಂಬೋಧಿಸುತ್ತಾ ತುಂಬಿದ ಸಭೆಯಲ್ಲಿ ಎಲ್ಲರೂ ಕೇಳುತ್ತಿರುವಂತೆ ಈ ಕಥೆಯನ್ನು ನಿರೂಪಿಸಿದರು. ॥ ೨೧ ॥

**ನಾರದರು ಹೇಳಿದರು** – ಎಲೈ ಯುಧಿಷ್ಠಿರಾ ! ನಿಂದೆ, ಸ್ತುತಿ, ಸತ್ಕಾರ-ತಿರಸ್ಕಾರ ಇವೆಲ್ಲವೂ ಉಂಟಾಗುವುದು ಶರೀರಕ್ಕೆ ತಾನೇ. ಈ ಶರೀರದ ಕಲ್ಪನೆ ಪ್ರಕೃತಿ ಮತ್ತು ಪುರುಷರ ಸರಿಯಾದ ವಿವೇಕವಿಲ್ಲದಿರುವುದರಿಂದಲೇ ಉಂಟಾಗಿದೆ. ॥ ೨೨ ॥ ಈ ಶರೀರ ವನ್ನೇ ತನ್ನ ಆತ್ಮವೆಂದು ತಿಳಿದಾಗ – 'ಇದು ನಾನು, ಇದು ನನ್ನದು' ಎಂಬ ಭಾವವು ಉಂಟಾಗುವುದು. ಇದೇ ಎಲ್ಲ ಭೇದಭಾವದ ಮೂಲವಾಗಿದೆ. ಇದರಿಂದಲೇ ಏಟುಬಿದ್ದಾಗ ಹಾಗೂ ದುರ್ವಚನಗಳನ್ನು ಕೇಳಿದಾಗ ಪೀಡೆಯುಂಟಾಗುವುದು. ॥ ೨೩ ॥ ಯಾವ ಶರೀರದಲ್ಲಿ 'ಇದು ನಾನೇ' ಎಂಬ ಅಭಿಮಾನ ಉಂಟಾಗು ವುದೋ ಆ ಶರೀರವನ್ನು ವಧಿಸಿದಾಗ ತನ್ನ ವಧೆಯೇ ಆಯಿತೆಂದು ಪ್ರಾಣಿಗಳಿಗೆ ಅನಿಸುತ್ತದೆ. ಆದರೆ ಭಗವಂತನಲ್ಲಿ ಜೀವಿಗಳಂತೆ ಇಂತಹ ಅಭಿಮಾನ ಇರುವುದಿಲ್ಲ, ಏಕೆಂದರೆ, ಅವನು ಸರ್ವಾತ್ಮ ನಾಗಿದ್ದಾನೆ, ಅದ್ವಿತೀಯನಾಗಿದ್ದಾನೆ. ಅವನು ಬೇರೆಯವರಿಗೆ ಕೊಡುವ ದಂಡನೆಯೂ ಅವರ ಶ್ರೇಯಸ್ಸಿಗಾಗಿಯೇ ಇರುತ್ತದೆ, ಕ್ರೋಧದಿಂದಾಗಲೀ, ದ್ವೇಷದಿಂದಾಗಲೀ ಅಲ್ಲ. ಹೀಗಿರುವಾಗ ಭಗವಂತನ ಸಂಬಂಧದಲ್ಲಿ ಹಿಂಸಾದಿ ಕಲ್ಪನೆಯನ್ನು ಹೇಗೆ ಮಾಡಲಾಗುವುದು ? ॥ ೨೪ ॥ ಆದುದರಿಂದ ಸುದೃಢವಾದ ವೈರಭಾವದಿಂದಾಗಲೀ, ವೈರರಹಿತ ಭಕ್ತಿಭಾವದಿಂದಾಗಲೀ, ಭಯದಿಂದಾಗಲೀ, ಸ್ನೇಹದಿಂದಾಗಲೀ, ಅಥವಾ

ತಸ್ಮಾದ್ವೈರಾನುಬಂಧೇನ ನಿರ್ವೈರೇಣ ಭಯೇನ ವಾ ।
ಸ್ನೇಹಾತ್ಕಾಮೇನ ವಾ ಯುಂಜ್ಯಾತ್ಕಥಂಚಿನ್ನೇಕ್ಷತೇ ಪೃಥಕ್ ॥ ೨೫ ॥

ಯಥಾ ವೈರಾನುಬಂಧೇನ ಮರ್ತ್ಯಸ್ತನ್ಮಯತಾಮಿಯಾತ್ ।
ನ ತಥಾ ಭಕ್ತಿಯೋಗೇನ ಇತಿ ಮೇ ನಿಶ್ಚಿತಾ ಮತಿಃ ॥ ೨೬ ॥

ಕೀಟಃ ಪೇಶಸ್ಕೃತಾ ರುದ್ಧಃ ಕುಡ್ಯಾಯಾಂ ತಮನುಸ್ಮರನ್ ।
ಸಂರಂಭ ಭಯಯೋಗೇನ ವಿಂದತೇ ತತ್ಸರೂಪತಾಮ್ ॥ ೨೭ ॥

ಏವಂ ಕೃಷ್ಣೇ ಭಗವತಿ ಮಾಯಾಮನುಜ ಈಶ್ವರೇ ।
ವೈರೇಣ ಪೂತಪಾಪ್ಮಾನಸ್ತಮಾಪುರನುಚಿಂತಯಾ ॥ ೨೮ ॥

ಕಾಮಾದ್ದ್ವೇಷಾದ್ಭಯಾತ್ ಸ್ನೇಹಾದ್ಯಥಾ ಭಕ್ತ್ಯೇಶ್ವರೇ ಮನಃ ।
ಆವೇಶ್ಯ ತದಘಂ ಹಿತ್ವಾ ಬಹವಸ್ತದ್ಗತಿಂ ಗತಾಃ ॥ ೨೯ ॥

ಗೋಪ್ಯಃ ಕಾಮಾದ್ಭಯಾತ್ಕಂಸೋ
ದ್ವೇಷಾಚ್ಚೈದ್ಯಾದಯೋ ನೃಪಾಃ ।
ಸಂಬಂಧಾದ್ ವೃಷ್ಣಯಃ ಸ್ನೇಹಾದ್
ಯೂಯಂ ಭಕ್ತ್ಯಾ ವಯಂ ವಿಭೋ ॥ ೩೦ ॥

ಕತಮೋಽಪಿ ನ ವೇನಃ ಸ್ಯಾತ್ಪಂಚಾನಾಂ ಪುರುಷಂ ಪ್ರತಿ ।
ತಸ್ಮಾತ್ಕೇನಾಪ್ಯುಪಾಯೇನ ಮನಃ ಕೃಷ್ಣೇ ನಿವೇಶಯೇತ್ ॥ ೩೧ ॥

ಮಾತೃಷ್ವಸ್ರೇಯೋ ವಶ್ಚೈದ್ಯೋ ದಂತವಕ್ತ್ರಶ್ಚ ಪಾಂಡವ ।
ಪಾರ್ಷದಪ್ರವರೌ ವಿಷ್ಣೋರ್ವಿಪ್ರಶಾಪಾತ್ಪದಾಚ್ಚ್ಯುತೌ ॥ ೩೨ ॥

*ಯುಧಿಷ್ಠಿರ ಉವಾಚ*

ಕೀದೃಶಃ ಕಸ್ಯ ವಾ ಶಾಪೋ ಹರಿದಾಸಾಭಿಮರ್ಶನಃ ।
ಅಶ್ರದ್ಧೇಯ ಇವಾಭಾತಿ ಹರೇರೇಕಾಂತಿನಾಂ ಭವಃ ॥ ೩೩ ॥

ದೇಹೇಂದ್ರಿಯಾಸುಹೀನಾನಾಂ ವೈಕುಂಠಪುರವಾಸಿನಾಮ್ ।
ದೇಹಸಂಬಂಧಸಂಬದ್ಧಮೇತದಾಖ್ಯಾತುಮರ್ಹಸಿ ॥ ೩೪ ॥

ಕಾಮದಿಂದಾಗಲೀ – ಹೇಗಾದರೂ ಶ್ರೀಭಗವಂತನಲ್ಲಿ ತನ್ನ ಮನಸ್ಸನ್ನು ಪೂರ್ಣರೂಪದಿಂದ ತೊಡಗಿಸಬೇಕು. ಭಗವಂತನ ದೃಷ್ಟಿಯಲ್ಲಿ ಈ ಭಾವಗಳಲ್ಲಿ ಯಾವುದೇ ಭೇದವೂ ಇಲ್ಲ. ॥ ೨೫ ॥ ಯುಧಿಷ್ಠಿರನೇ! ಮನುಷ್ಯನು ವೈರಭಾವದಿಂದ ಭಗವಂತನಲ್ಲಿ ತನ್ಮಯನಾಗುವಷ್ಟು ಭಕ್ತಿಯೋಗದಿಂದ ಆಗುವುದಿಲ್ಲ – ಎಂಬುದು ನನ್ನ ದೃಢವಾದ ನಿಶ್ಚಯವಾಗಿದೆ. ॥ ೨೬ ॥ ಕಣಜವು ಒಂದು ಹುಳುವನ್ನು ತಂದು ಗೋಡೆಯ ತನ್ನ ಗೂಡಿನಲ್ಲಿ ಕೂಡಿ ಹಾಕುತ್ತದೆ. ಆಗ ಆ ಹುಳವು ಭಯದಿಂದಲೂ, ಉದ್ವೇಗದಿಂದಲೂ ಕಣಜವನ್ನೇ ಚಿಂತಿಸುತ್ತಾ-ಚಿಂತಿಸುತ್ತಾ ಅದರಂತೆಯೇ ಆಗಿಬಿಡುವುದು. ॥ ೨೭ ॥ ಹೀಗೆಯೇ ಮಾಯೆಯಿಂದ ಮನುಷ್ಯನಂತೆ ಕಂಡುಬರುವ ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣನಲ್ಲಿ ವೈರಭಾವದಿಂದ ನಿರಂತರ ಆತನನ್ನೇ ಚಿಂತಿಸುತ್ತಾ-ಚಿಂತಿಸುತ್ತಾ ಪಾಪರಹಿತನಾಗಿ ಅವನನ್ನೇ ಪಡೆದುಕೊಳ್ಳುವರು. ॥ ೨೮ ॥ ಒಬ್ಬರಲ್ಲ, ಅನೇಕ ಮನುಷ್ಯರು ಕಾಮದಿಂದ, ದ್ವೇಷದಿಂದ, ಭಯದಿಂದ, ಸ್ನೇಹದಿಂದ ತಮ್ಮ ಮನಸ್ಸನ್ನು ಭಗವಂತನಲ್ಲಿ ತೊಡಗಿಸಿ, ತಮ್ಮ ಎಲ್ಲ ಪಾಪಗಳನ್ನು ತೊಳೆದುಕೊಂಡು – ಭಕ್ತರು ಭಕ್ತಿಯಿಂದ ಭಗವಂತನನ್ನು ಪಡೆಯುವಂತೆ – ಆತನನ್ನು ಪಡೆದು ಕೊಂಡಿರುವರು. ॥ ೨೯॥ ಮಹಾರಾಜಾ! ಗೋಪಿಯರು ಭಗವಂತನನ್ನು ಸೇರುವ ತೀವ್ರ ಕಾಮದಿಂದ ಅರ್ಥಾತ್ ಪ್ರೇಮದಿಂದ, ಕಂಸನು ಭಯದಿಂದ, ಶಿಶುಪಾಲ-ದಂತವಕ್ತ್ರ ಮೊದಲಾದ ರಾಜರು ದ್ವೇಷದಿಂದ, ಯದುವಂಶೀಯರು ಕೌಟುಂಬಿಕ ಸಂಬಂಧದಿಂದ, ನೀವುಗಳು ಸ್ನೇಹದಿಂದ ಮತ್ತು ನಾವುಗಳು ಭಕ್ತಿಯಿಂದ ಮನಸ್ಸುಗಳನ್ನು ಭಗವಂತನಲ್ಲಿ ತೊಡಗಿಸಿರುವೆವು. ॥ ೩೦ ॥ ಭಕ್ತರಲ್ಲದೆ ಇತರ ಐದು ವಿಧದಿಂದ ಭಗವಂತನನ್ನು ಚಿಂತಿಸುವವನಲ್ಲಿ ಯಾರೊಂದಿಗೂ ವೇನನ ಗಣನೆಯಾಗುವುದಿಲ್ಲ. ಏಕೆಂದರೆ, ಅವನು ಯಾವುದೇ ರೀತಿಯಿಂದ ಭಗವಂತನಲ್ಲಿ ಮನಸ್ಸನ್ನು ತೊಡಗಿಸಿರಲಿಲ್ಲ. ಸಾರಾಂಶ – ಹೇಗೆ ಬೇಕಾದರೂ ಆಗಲೀ ನಮ್ಮ ಮನಸ್ಸನ್ನು ಭಗವಾನ್ ಶ್ರೀಕೃಷ್ಣನಲ್ಲಿ ತನ್ಮಯಗೊಳಿಸಬೇಕು. ॥ ೩೧ ॥ ಮಹಾರಾಜಾ! ಮತ್ತೆ ನಿಮ್ಮಗಳ ಚಿಕ್ಕಮ್ಮನ ಪುತ್ರನಾದ ಶಿಶುಪಾಲ ಮತ್ತು ದಂತವಕ್ತ್ರರು ಇಬ್ಬರೂ ಭಗವಂತನಾದ ಮಹಾವಿಷ್ಣುವಿನ ಮುಖ್ಯರಾದ ಪಾರ್ಷದರಾಗಿದ್ದರು. ಬ್ರಾಹ್ಮಣರ ಶಾಪದಿಂದ ಇವರಿಬ್ಬರೂ ತಮ್ಮ ಪದದಿಂದ ಚ್ಯುತರಾಗಬೇಕಾಯಿತು. ॥ ೩೨ ॥

**ಯುಧಿಷ್ಠಿರ ಮಹಾರಾಜನು ಕೇಳಿದನು** – ನಾರದ ಮಹರ್ಷಿಗಳೇ! ಶ್ರೀಭಗವಂತನ ಪಾರ್ಷದರನ್ನೂ ಕೂಡ ಪ್ರಭಾವಿತರಾಗುವಂತಹ ಶಾಪವನ್ನು ಯಾರು ಕೊಟ್ಟರು? ಆ ಶಾಪ ಏನಾಗಿತ್ತು? ಭಗವಂತನ ಅನನ್ಯ ಪ್ರೇಮೀ ಭಕ್ತರು ಪುನಃ ಜನ್ಮ-ಮೃತ್ಯುರೂಪವಾದ ಸಂಸಾರಕ್ಕೆ ಮರಳಿ ಬರುವುದೆಂದರೆ ನಂಬುವುದೇ ಕಷ್ಟ. ॥ ೩೩ ॥ ವೈಕುಂಠದಲ್ಲಿ ಇರುವವರು ಪ್ರಾಕೃತ ಶರೀರ, ಇಂದ್ರಿಯಗಳು, ಪ್ರಾಣಗಳು ಇವುಗಳಿಂದ ರಹಿತರಾಗಿರುತ್ತಾರೆ. ಅವರಿಗೆ ಪ್ರಾಕೃತಶರೀರದ ಸಂಬಂಧ ಹೇಗೆ ಉಂಟಾಯಿತು? ಇದನ್ನು ತಾವು ಅವಶ್ಯವಾಗಿ ತಿಳಿಸೋಣವಾಗಲಿ. ॥ ೩೪ ॥

ನಾರದ ಉವಾಚ

ಏಕದಾ ಬ್ರಹ್ಮಣಃ ಪುತ್ರಾ ವಿಷ್ಣೋರ್ಲೋಕಂ ಯದೃಚ್ಛಯಾ ।
ಸನಂದನಾದಯೋ ಜಗ್ಮುಶ್ಚರಂತೋ ಭುವನತ್ರಯಮ್ ॥ ೩೫ ॥

ಪಂಚಷಡ್ಢಾಯನಾರ್ಭಾಭಾಃ ಪೂರ್ವೇಷಾಮಪಿ ಪೂರ್ವಜಾಃ ।
ದಿಗ್ವಾಸಸಃ ಶಿಶೂನ್ಮತ್ವಾ ದ್ವಾಃಸ್ಥೌ ತಾನ್ಪತ್ಯಷೇಧತಾಮ್ ॥ ೩೬ ॥

ಅಶಪನ್ಕುಪಿತಾ ಏವಂ ಯುವಾಂ ವಾಸಂ ನ ಚಾರ್ಹಥಃ ।
ರಜಸ್ತಮೋಭ್ಯಾಂ ರಹಿತೇ ಪಾದಮೂಲೇ ಮಧುದ್ವಿಷಃ ।
ಪಾಪಿಷ್ಠಾಮಾಸುರೀಂ ಯೋನಿಂ ಬಾಲಿಶೌ ಯಾತಮಾಶ್ವತಃ ॥ ೩೭ ॥

ಏವಂ ಶಪ್ತೌ ಸ್ವಭವನಾತ್ಪತಂತೌ ತೈಃ ಕೃಪಾಲುಭಿಃ ।
ಪ್ರೋಕ್ತೌ ಪುನರ್ಜನ್ಮಭಿರ್ವಾಂ ತ್ರಿಭಿರ್ಲೋಕಾಯ ಕಲ್ಪತಾಮ್ ॥ ೩೮ ॥

ಜಜ್ಞಾತೇ ತೌ ದಿತೇಃ ಪುತ್ರೌ ದೈತ್ಯದಾನವವಂದಿತೌ ।
ಹಿರಣ್ಯಕಶಿಪುರ್ಜ್ಯೇಷ್ಠೋ ಹಿರಣ್ಯಾಕ್ಷೋಽನುಜಸ್ತತಃ ॥ ೩೯ ॥

ಹತೋ ಹಿರಣ್ಯಕಶಿಪುರ್ಹರಿಣಾ ಸಿಂಹರೂಪಿಣಾ ।
ಹಿರಣ್ಯಾಕ್ಷೋ ಧರೋದ್ಧಾರೇ ಬಿಭ್ರತಾ ಸೌಕರಂ ವಪುಃ ॥ ೪೦ ॥

ಹಿರಣ್ಯಕಶಿಪುಃ ಪುತ್ರಂ ಪ್ರಹ್ಲಾದಂ ಕೇಶವಪ್ರಿಯಮ್ ।
ಜಿಘಾಂಸುರಕರೋನ್ನಾನಾ ಯಾತನಾ ಮೃತ್ಯುಹೇತವೇ ॥ ೪೧ ॥

ಸರ್ವಭೂತಾತ್ಮಭೂತಂ ತಂ ಪ್ರಶಾಂತಂ ಸಮದರ್ಶನಮ್ ।
ಭಗವತ್ತೇಜಸಾ ಸ್ಪೃಷ್ಟಂ ನಾಶಕ್ನೋದ್ಧಂತುಮುದ್ಯಮೈಃ ॥ ೪೨ ॥

ತತಸ್ತೌ ರಾಕ್ಷಸೌ ಜಾತೌ ಕೇಶಿನ್ಯಾಂ ವಿಶ್ರವಃಸುತೌ ।
ರಾವಣಃ ಕುಂಭಕರ್ಣಶ್ಚ ಸರ್ವಲೋಕೋಪತಾಪನೌ ॥ ೪೩ ॥

ತತ್ರಾಪಿ ರಾಘವೋ ಭೂತ್ವಾ ನ್ಯಹನಚ್ಛಾಪಮುಕ್ತಯೇ ।
ರಾಮವೀರ್ಯಂ ಶ್ರೋಷ್ಯಸಿ ತ್ವಂ ಮಾರ್ಕಂಡೇಯಮುಖಾತ್ಪ್ರಭೋ ॥ ೪೪ ॥

**ನಾರದ ಮಹರ್ಷಿಗಳು ಹೇಳಿದರು** – ಒಂದು ದಿನ ಬ್ರಹ್ಮದೇವರ ಮಾನಸಪುತ್ರರಾದ ಸನಕಾದಿ ಋಷಿಗಳು ಮೂರೂ ಲೋಕಗಳಲ್ಲಿ ಯಥೇಷ್ಟವಾಗಿ ಸಂಚರಿಸುತ್ತಾ ವೈಕುಂಠಕ್ಕೆ ಹೋದರು. ॥ ೩೫ ॥ ಇವರಾದರೋ ಎಲ್ಲರಿಗಿಂತಲೂ ಹಳಬರಾಗಿದ್ದರೂ ಐದು-ಆರು ವರ್ಷದ ಬಾಲಕರಂತೆ ಕಂಡುಬರುತ್ತಿದ್ದರು. ವಸ್ತ್ರವನ್ನೂ ಧರಿಸುತ್ತಿರಲಿಲ್ಲ. ಅವರನ್ನು ಸಾಮಾನ್ಯ ಶಿಶುಗಳೆಂದು ತಿಳಿದುಕೊಂಡು ದ್ವಾರಪಾಲಕರು ಅವರನ್ನು ಒಳಗೆ ಹೋಗದಂತೆ ತಡೆದರು. ॥ ೩೬ ॥ ಇದರಿಂದ ಅವರು ಕೋಪಗೊಂಡವರಂತೆ ಆಗಿ ದ್ವಾರಪಾಲಕರಿಗೆ – ಎಲೈ ಮೂರ್ಖರೇ! ಭಗವಾನ್ ಶ್ರೀವಿಷ್ಣುವಿನ ಪಾದಮೂಲವು ರಜೋಗುಣ-ತಮೋಗುಣದಿಂದ ರಹಿತವಾದುದು. ನೀವು ಇಲ್ಲಿ ವಾಸಮಾಡಲು ಯೋಗ್ಯರಲ್ಲ. ಅದಕ್ಕಾಗಿ ಬೇಗನೇ ನೀವು ಇಲ್ಲಿಂದ ಹೋಗಿ ಪಾಪಮಯ ಅಸುರ ಯೋನಿಯನ್ನು ಹೊಂದಿರಿ' ಎಂದು ಶಾಪವನ್ನು ಕೊಟ್ಟರು. ॥ ೩೭ ॥ ಹೀಗೆ ಶಪಿಸಲ್ಪಟ್ಟ ಆ ದ್ವಾರಪಾಲಕರು ವೈಕುಂಠದಿಂದ ಕೆಳಗೆ ಬೀಳುತ್ತಿರುವುದನ್ನು ಕಂಡು ಕೃಪಾಳುಗಳಾದ ಆ ಮಹಾತ್ಮರು – 'ನೀವು ಮೂರು ಜನ್ಮಗಳಲ್ಲಿ ಈ ಶಾಪವನ್ನು ಅನುಭವಿಸಿ ಮತ್ತೆ ಇಲ್ಲಿಗೆ ಹಿಂದಿರುಗಿರಿ' ಎಂದು ಶಾಪವಿಮೋಚನೆಯನ್ನು ಅನುಗ್ರಹಿಸಿದರು. ॥ ೩೮ ॥

ಯುಧಿಷ್ಠಿರಾ! ಅವರೇ ದ್ವಾರಪಾಲಕರಿಬ್ಬರು ದಿತಿಯ ಪುತ್ರರಾದರು. ಅವರಲ್ಲಿ ಹಿರಿಯವನ ಹೆಸರು ಹಿರಣ್ಯಕಶಿಪು ಮತ್ತು ಕಿರಿಯವನ ಹೆಸರು ಹಿರಣ್ಯಾಕ್ಷ ಎಂದಿತ್ತು. ದೈತ್ಯ-ದಾನವರಲ್ಲಿ ಇವರಿಬ್ಬರೇ ಸರ್ವಶ್ರೇಷ್ಠರಾಗಿದ್ದರು. ॥ ೩೯ ॥ ಭಗವಾನ್ ಮಹಾವಿಷ್ಣುವು ನರಸಿಂಹರೂಪವನ್ನು ಧರಿಸಿ ಹಿರಣ್ಯಕಶಿಪುವನ್ನೂ ಮತ್ತು ಪೃಥಿವಿಯನ್ನು ಉದ್ಧರಿಸುವ ಸಮಯದಲ್ಲಿ ವರಾಹ ಅವತಾರದಿಂದ ಹಿರಣ್ಯಾಕ್ಷನನ್ನೂ ಸಂಹರಿಸಿದನು. ॥ ೪೦ ॥ ಹಿರಣ್ಯಕಶಿಪುವು ಭಗವತ್ಪ್ರೇಮಿಯಾಗಿದ್ದ ತನ್ನ ಪುತ್ರನಾದ ಪ್ರಹ್ಲಾದನನ್ನು ಕೊಲ್ಲಲು ಬಯಸಿದನು ಹಾಗೂ ಅದಕ್ಕಾಗಿ ಅವನಿಗೆ ಅನೇಕ ಕಷ್ಟಗಳನ್ನು ಕೊಟ್ಟನು. ॥ ೪೧ ॥ ಆದರೆ ಪ್ರಹ್ಲಾದನು ಸರ್ವಾತ್ಮನಾದ ಭಗವಂತನಿಗೆ ಪರಮ ಪ್ರಿಯನಾಗಿದ್ದನು, ಸಮದರ್ಶಿಯಾಗಿದ್ದನು. ಅವನ ಹೃದಯದಲ್ಲಿ ಕದಲಲಾರದ ಶಾಂತಿಯು ನೆಲೆಸಿತ್ತು. ಭಗವಂತನ ಪ್ರಭಾವದಿಂದ ಅವನು ಸುರಕ್ಷಿತನಾಗಿದ್ದನು. ಅದಕ್ಕಾಗಿ ಅನೇಕ ವಿಧದಿಂದ ಪ್ರಯತ್ನಿಸಿದರೂ ಹಿರಣ್ಯಕಶಿಪುವಿನಿಂದ ಆತನನ್ನು ಕೊಲ್ಲಲಾಗಲಿಲ್ಲ. ॥ ೪೨ ॥

ಧರ್ಮನಂದನಾ! ಅವರಿಬ್ಬರೇ ಪುನಃ ವಿಶ್ರವಸ್ಸು ಮುನಿಯ ಮೂಲಕ ಕೇಶಿನೀ (ಕೈಕಸೆ)ಯ ಗರ್ಭದಿಂದ ರಾವಣ- ಕುಂಭಕರ್ಣರೆಂಬ ಹೆಸರುಗಳಿಂದ ರಾಕ್ಷಸರಾಗಿ ಹುಟ್ಟಿದರು. ಅವರು ತಮ್ಮ ಉತ್ಪಾತಗಳಿಂದ ಎಲ್ಲ ಲೋಕಗಳಿಗೂ ಕಂಟಕರಾಗಿ ಸಂತಾಪವನ್ನು ಹರಡಿದರು. ॥ ೪೩ ॥ ಆಗಲೂ ಭಗವಂತನು ಅವರನ್ನು ಶಾಪಮುಕ್ತಗೊಳಿಸಲು ರಾಮಾವತಾರವನ್ನು ಎತ್ತಿ ಅವರನ್ನು ವಧಿಸಿದನು. ನೀನು ಮುಂದೆ ಮಾರ್ಕಂಡೇಯ ಮಹರ್ಷಿಗಳ ಬಾಯಿಯಿಂದ ಭಗವಾನ್ ಶ್ರೀರಾಮನ ಚರಿತ್ರೆಯನ್ನು ಕೇಳುವೆ. ॥ ೪೪ ॥ ಆ ಜಯ-ವಿಜಯರಿಬ್ಬರೇ ಪುನಃ ಈ ಜನ್ಮದಲ್ಲಿ ನಿನ್ನ ಚಿಕ್ಕಮ್ಮನ ಪುತ್ರರಾಗಿ ಶಿಶುಪಾಲ ಮತ್ತು ದಂತವಕ್ತ್ರರಾಗಿ ಕ್ಷತ್ರಿಯಕುಲದಲ್ಲಿ

ತಾವೇವ ಕ್ಷತ್ರಿಯೌ ಜಾತೌ ಮಾತೃಷ್ವಸ್ರಾತ್ಮಜೌ ತವ ।
ಅಧುನಾ ಶಾಪನಿರ್ಮುಕ್ತೌ ಕೃಷ್ಣಚಕ್ರಹತಾಂಹಸೌ ॥ ೪೫ ॥

ವೈರಾನುಬಂಧತೀವ್ರೇಣ ಧ್ಯಾನೇನಾಚ್ಯುತಸಾತ್ಮತಾಮ್ ।
ನೀತೌ ಪುನರ್ಹರೇಃ ಪಾರ್ಶ್ವಂ ಜಗ್ಮತುರ್ವಿಷ್ಣುಪಾರ್ಷದೌ ॥ ೪೬ ॥

*ಯುಧಿಷ್ಠಿರ ಉವಾಚ*

ವಿದ್ವೇಷೋ ದಯಿತೇ ಪುತ್ರೇ ಕಥಮಾಸೀನ್ಮಹಾತ್ಮನಿ ।
ಬ್ರೂಹಿ ಮೇ ಭಗವನ್ಯೇನ ಪ್ರಹ್ಲಾದಸ್ಯಾಚ್ಯುತಾತ್ಮತಾ ॥ ೪೭ ॥

ಜನಿಸಿದ್ದರು. ಭಗವಾನ್ ಶ್ರೀಕೃಷ್ಣನ ಚಕ್ರದ ಸ್ಪರ್ಶವಾಗುತ್ತಲೇ ಅವರ ಎಲ್ಲ ಪಾಪಗಳೂ ನಾಶವಾಗಿ, ಸನಕಾದಿಗಳ ಶಾಪದಿಂದ ಮುಕ್ತರಾದರು. ॥ ೪೫ ॥ ವೈರಭಾವದ ಕಾರಣ ನಿರಂತರವಾಗಿ ಅವರು ಭಗವಾನ್ ಶ್ರೀಕೃಷ್ಣನನ್ನು ಚಿಂತಿಸುತ್ತಾ ಇದ್ದರು. ಆ ತೀವ್ರವಾದ ತನ್ಮಯತೆಯಿಂದ ಅವರು ಭಗವಂತನನ್ನು ಸೇರಿದರು ಮತ್ತು ಪುನಃ ಅವನ ಪಾರ್ಷದರಾಗಿ ಅವನ ಬಳಿಗೇ ತಲುಪಿದರು. ॥ ೪೬ ॥

ಯುಧಿಷ್ಠಿರನು ಕೇಳಿದನು – ಮಹಾತ್ಮರೇ ! ಹಿರಣ್ಯಕಶಿಪುವು ತನ್ನ ಪ್ರಿಯಪುತ್ರನಾದ ಪ್ರಹ್ಲಾದನಲ್ಲಿ ಇಷ್ಟೊಂದು ದ್ವೇಷ ಏಕೆ ಮಾಡಿದನು ? ಪ್ರಹ್ಲಾದನಾದರೋ ಮಹಾತ್ಮನಾಗಿದ್ದನು. ಜೊತೆಗೆ ಯಾವ ಸಾಧನೆಯಿಂದ ಪ್ರಹ್ಲಾದನು ಭಗವನ್ಮಯನಾದನು ? ಇದನ್ನೂ ತಿಳಿಸಿರಿ. ॥ ೪೭ ॥

***ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ ಪ್ರಹ್ಲಾದಚರಿತೋಪಕ್ರಮೇ ಪ್ರಥಮೋಽಧ್ಯಾಯಃ ॥ ೧ ॥**

# ಎರಡನೆಯ ಅಧ್ಯಾಯ

## ಹಿರಣ್ಯಾಕ್ಷನ ವಧೆಯಿಂದ ದುಃಖಿತರಾದ ತಾಯಿಯನ್ನೂ ಮತ್ತು ಕುಟುಂಬದವರನ್ನೂ ಹಿರಣ್ಯಕಶಿಪುವು ಸಂತೈಸಿದುದು

*ನಾರದ ಉವಾಚ*

ಭ್ರಾತರ್ಯೇವಂ ವಿನಿಹತೇ ಹರಿಣಾ ಕ್ರೋಡಮೂರ್ತಿನಾ ।
ಹಿರಣ್ಯಕಶಿಪೂ ರಾಜನ್ಪರ್ಯತಪ್ಯದ್ರುಷಾ ಶುಚಾ ॥ ೧ ॥

ಆಹ ಚೇದಂ ರುಷಾ ಘೂರ್ಣಃ ಸಂದಷ್ಟದಶನಚ್ಛದಃ ।
ಕೋಪೋಜ್ಜ್ವಲದ್ಭ್ಯಾಂ ಚಕ್ಷುರ್ಭ್ಯಾಂ ನಿರೀಕ್ಷನ್ ಧೂಮ್ರಮಂಬರಮ್ ॥ ೨ ॥

ಕರಾಲದಂಷ್ಟ್ರೋಗ್ರದೃಷ್ಟ್ಯಾ ದುಷ್ಪ್ರೇಕ್ಷ್ಯಭ್ರುಕುಟೀಮುಖಃ ।
ಶೂಲಮುದ್ಯಮ್ಯ ಸದಸಿ ದಾನವಾನಿದಮಬ್ರವೀತ್ ॥ ೩ ॥

ಭೋ ಭೋ ದಾನವದೈತೇಯಾ ದ್ವಿಮೂರ್ಧಂಸ್ತ್ರ್ಯಕ್ಷ ಶಂಬರ ।
ಶತಬಾಹೋ ಹಯಗ್ರೀವ ನಮುಚೇ ಪಾಕ ಇಲ್ವಲ ॥ ೪ ॥

ವಿಪ್ರಚಿತ್ತೇ ಮಮ ವಚಃ ಪುಲೋಮನ್ ಶಕುನಾದಯಃ ।
ಶೃಣುತಾನಂತರಂ ಸರ್ವೇ ಕ್ರಿಯತಾಮಾಶು ಮಾ ಚಿರಮ್ ॥ ೫ ॥

ನಾರದರು ಹೇಳಿದರು – ಯುಧಿಷ್ಠಿರನೇ ! ಭಗವಂತನು ವರಾಹಾವತಾರವನ್ನು ತಾಳಿ ಹಿರಣ್ಯಾಕ್ಷನನ್ನು ವಧಿಸಿದನು. ತಮ್ಮನು ಈ ವಿಧವಾಗಿ ಕೊಲ್ಲಲ್ಪಟ್ಟಾಗ ಹಿರಣ್ಯಕಶಿಪುವು ಕ್ರೋಧದಿಂದ ಉರಿದೆದ್ದು ಶೋಕದಿಂದ ಸಂತಪ್ತನಾದನು. ॥ ೧ ॥ ಸಿಟ್ಟಿನಿಂದ ನಡುಗುತ್ತಾ ಪದೇ-ಪದೇ ಅವುಡುಗಳನ್ನು ಕಚ್ಚಿಕೊಳ್ಳತೊಡಗಿದನು. ಕೋಪದಿಂದ ಉರಿಯುತ್ತಿದ್ದ ಕಣ್ಣುಗಳ ಉರಿಯ ಹೊಗೆಯಿಂದ ಬೂದುಬಣ್ಣವನ್ನು ಹೊಂದಿದ ಆಕಾಶದ ಕಡೆಗೆ ನೋಡುತ್ತಾ ಹೇಳತೊಡಗಿದನು. ॥ ೨ ॥ ಆಗ ವಿಕರಾಳವಾದ ಕೋರೆದಾಡೆಗಳಿಂದ, ಬೆಂಕಿಯನ್ನು ಉಗುಳುತ್ತಿದ್ದ ಉಗ್ರವಾದ ದೃಷ್ಟಿಯಿಂದ ಹಾಗೂ ಗಂಟುಗಟ್ಟಿದ ಹುಬ್ಬುಗಳಿಂದ ಭೀಕರವಾಗಿ ಕಾಣುತ್ತಿದ್ದ ಅವನ ಮುಖವನ್ನು ನೋಡಲಾಗುತ್ತಿರಲಿಲ್ಲ. ತುಂಬಿದ ಸಭೆಯಲ್ಲಿ ತ್ರಿಶೂಲವನ್ನೆತ್ತಿ ಅವನು – ದ್ವಿಮೂರ್ಧಾ, ತ್ರ್ಯಕ್ಷ, ಶಂಬರ, ಶತಬಾಹು, ಹಯಗ್ರೀವ, ನಮುಚಿ, ಪಾಕ, ಇಲ್ವಲ, ವಿಪ್ರಚಿತ್ತಿ, ಪುಲೋಮಾ ಮತ್ತು ಶಕುನ ಮುಂತಾದವರನ್ನು ಸಂಬೋಧಿಸುತ್ತಾ –ಎಲೈ ದೈತ್ಯ-ದಾನವರೇ ! ನೀವೆಲ್ಲರೂ ಈ ನನ್ನ ಮಾತನ್ನು ಕೇಳಿರಿ. ಅನಂತರ ನಾನು ಹೇಳಿದಂತೆಯೇ ಮಾಡಿರಿ. ॥ ೩-೫ ॥ ಕ್ಷುದ್ರರಾದ ನನ್ನ ಶತ್ರುಗಳು ನನ್ನ ಪರಮ ಪ್ರಿಯನೂ, ಹಿತೈಷಿಯೂ ಆದ ತಮ್ಮನನ್ನು ವಿಷ್ಣುವಿನಿಂದ ಕೊಲ್ಲಿಸಿರುವುದು ನಿಮಗೆಲ್ಲ ತಿಳಿದೇ ಇದೆ. ಆ ವಿಷ್ಣುವು ದೇವತೆಗಳಿಗೆ, ದೈತ್ಯರಿಗೆ ಸಮಾನನಾಗಿದ್ದರೂ ದೇವತೆಗಳು ಮಹಾಪ್ರಯತ್ನಮಾಡಿ ಆತನನ್ನು ಒಲಿಸಿಕೊಂಡು ತಮ್ಮ ಪಕ್ಷದವನ

ಸುಪತ್ಸೈರ್ಘಾತಿತಃ ಕ್ಷುದ್ರೈರ್ಭ್ರಾತಾ ಮೇ ದಯಿತಃ ಸುಹೃತ್ ।
ಪಾರ್ಷ್ಣಿಗ್ರಾಹೇಣ ಹರಿಣಾ ಸಮೇನಾಪ್ಯುಪಧಾವನೈಃ ॥ ೭ ॥

ತಸ್ಯ ತ್ಯಕ್ತಸ್ವಭಾವಸ್ಯ ಘೃಣೇರ್ಮಾಯಾವನೌಕಸಃ ।
ಭಜಂತಂ ಭಜಮಾನಸ್ಯ ಬಾಲಸ್ಯೇವಾಸ್ಥಿರಾತ್ಮನಃ ॥ ೭ ॥

ಮಚ್ಛೂಲಭಿನ್ನಗ್ರೀವಸ್ಯ ಭೂರಿಣಾ ರುಧಿರೇಣ ವೈ ।
ರುಧಿರಪ್ರಿಯಂ ತರ್ಪಯಿಷ್ಯೇ ಭ್ರಾತರಂ ಮೇ ಗತವ್ಯಥಃ ॥ ೮ ॥

ತಸ್ಮಿನ್ಕೂಟೇಽಹಿತೇ ನಷ್ಟೇ ಕೃತ್ತಮೂಲೇ ವನಸ್ಪತೌ ।
ವಿಟಪಾ ಇವ ಶುಷ್ಯಂತಿ ವಿಷ್ಣುಪ್ರಾಣಾ ದಿವೌಕಸಃ ॥ ೯ ॥

ತಾವದ್ಯಾತ ಭುವಂ ಯೂಯಂ ಬ್ರಹ್ಮಕ್ಷತ್ರಸಮೇಧಿತಾಮ್ ।
ಸೂದಯಧ್ವಂ ತಪೋಯಜ್ಞಸ್ವಾಧ್ಯಾಯವ್ರತದಾನಿನಃ ॥ ೧೦ ॥

ವಿಷ್ಣುರ್ದ್ವಿಜಕ್ರಿಯಾಮೂಲೋ
ಯಜ್ಞೋ ಧರ್ಮಮಯಃ ಪುಮಾನ್ ।
ದೇವರ್ಷಿಪಿತೃಭೂತಾನಾಂ
ಧರ್ಮಸ್ಯ ಚ ಪರಾಯಣಮ್ ॥ ೧೧ ॥

ಯತ್ರ ಯತ್ರ ದ್ವಿಜಾ ಗಾವೋ ವೇದಾ ವರ್ಣಾಶ್ರಮಾಃ ಕ್ರಿಯಾಃ ।
ತಂ ತಂ ಜನಪದಂ ಯಾತ ಸಂದೀಪಯತ ವೃಶ್ಚತ ॥ ೧೨ ॥

ಇತಿ ತೇ ಭರ್ತೃನಿರ್ದೇಶಮಾದಾಯ ಶಿರಸಾಽಽದೃತಾಃ ।
ತಥಾ ಪ್ರಜಾನಾಂ ಕದನಂ ವಿದಧುಃ ಕದನಪ್ರಿಯಾಃ ॥ ೧೩ ॥

ಪುರಗ್ರಾಮವ್ರಜೋದ್ಯಾನಕ್ಷೇತ್ರಾರಾಮಾಶ್ರಮಾಕರಾನ್ ।
ಖೇಟಖರ್ವಟಘೋಷಾಂಶ್ಚ ದದಹುಃ ಪತ್ತನಾನಿ ಚ ॥ ೧೪ ॥

ಕೇಚಿತ್ಖನಿತ್ರೈರ್ಬಿಭಿದುಃ ಸೇತುಪ್ರಾಕಾರಗೋಪುರಾನ್ ।
ಆಜೀವ್ಯಾಂಶ್ಚಿಚ್ಛಿದುರ್ವೃಕ್ಷಾನ್ಕೇಚಿತ್ಪರಶುಪಾಣಯಃ ।
ಪ್ರಾದಹನ್ಶರಣಾನ್ಯನ್ಯೇ ಪ್ರಜಾನಾಂ ಜ್ವಲಿತೋಲ್ಮುಕೈಃ ॥ ೧೫ ॥

ಏವಂ ವಿಪ್ರಕೃತೇ ಲೋಕೇ ದೈತ್ಯೇಂದ್ರಾನುಚರೈರ್ಮುಹುಃ ।
ದಿವಂ ದೇವಾಃ ಪರಿತ್ಯಜ್ಯ ಭುವಿ ಚೇರುರಲಕ್ಷಿತಾಃ ॥ ೧೬ ॥

ನ್ನಾಗಿಸಿಕೊಂಡರು. ॥ ೬ ॥ ಈ ವಿಷ್ಣುವು ಮೊದಲು ತುಂಬಾ ಶುದ್ಧನೂ, ಪಕ್ಷಪಾತರಹಿತನೂ ಆಗಿದ್ದನು. ಆದರೆ ಈಗ ಮಾಯೆಯಿಂದ ವರಾಹವೇ ಮುಂತಾದ ರೂಪಗಳನ್ನು ಧರಿಸ ತೊಡಗಿರುವನು ಮತ್ತು ತನ್ನ ಸ್ವಭಾವದಿಂದ ಚ್ಯುತನಾಗಿರುವನು. ಮಕ್ಕಳಂತೆ – ಅವನ ಸೇವೆ ಮಾಡಿದವರ ಕಡೆಗೆ ಹೋಗುತ್ತಾನೆ. ಅವನ ಚಿತ್ತವು ಸ್ಥಿರವಾಗಿಲ್ಲ. ॥ ೭ ॥ ಈಗ ನಾನು ನನ್ನ ಈ ಶೂಲದಿಂದ ಅವನ ಕತ್ತನ್ನು ಕತ್ತರಿಸಿ ಹಾಕುವೆನು. ಅವನ ರಕ್ತದ ಧಾರೆಯಿಂದ ರುಧಿರಪ್ರೇಮಿಯಾದ ನನ್ನ ತಮ್ಮನಿಗೆ ತರ್ಪಣವನ್ನು ಕೊಡುವೆನು. ಆಗಲೇ ನನ್ನ ಹೃದಯದ ವ್ಯಥೆಯು ಶಾಂತವಾದೀತು. ॥ ೮ ॥ ಆ ಮಾಯಾವಿ ಶತ್ರುವು ನಾಶವಾದಾಗ – ಬೇರು ಕಡಿದಾಗ ಮರದ ಟೊಂಗೆಗಳು ಒಣಗಿ ಹೋಗುವಂತೆ – ಎಲ್ಲ ದೇವತೆಗಳು ತಾವಾಗಿಯೇ ಒಣಗಿಹೋಗುವರು. ಏಕೆಂದರೆ, ಅವರ ಜೀವನವು ವಿಷ್ಣುವೇ ಆಗಿರುವನು. ॥ ೯ ॥ ಆದಕ್ಕಾಗಿ ನೀವೆಲ್ಲ ಈಗಲೇ ಭೂಮಿಗೆ ಹೋಗಿರಿ. ಅಲ್ಲಿ ಬ್ರಾಹ್ಮಣರ ಮತ್ತು ಕ್ಷತ್ರಿಯರ ಸಂಖ್ಯೆಯು ತುಂಬಾ ಬೆಳೆದಿದೆ. ಅಲ್ಲಿ ತಪಸ್ಸು, ಯಜ್ಞ, ಸ್ವಾಧ್ಯಾಯ, ವ್ರತ, ದಾನಾದಿ ಶುಭಕರ್ಮಗಳನ್ನು ಮಾಡುತ್ತಿರುವ ಜನರೆಲ್ಲರನ್ನು ಕೊಂದುಹಾಕಿಬಿಡಿರಿ. ॥ ೧೦ ॥ ದ್ವಿಜರ ಧರ್ಮ-ಕರ್ಮಗಳೇ ವಿಷ್ಣುವಿನ ಮೂಲವಾಗಿದೆ. ಏಕೆಂದರೆ, ಯಜ್ಞ ಮತ್ತು ಧರ್ಮವೇ ಅವನ ಸ್ವರೂಪವಾಗಿದೆ. ದೇವತೆಗಳು, ಋಷಿಗಳು, ಪಿತೃಗಳು, ಸಮಸ್ತ ಪ್ರಾಣಿಗಳು ಮತ್ತು ಧರ್ಮ – ಇವುಗಳಿಗೆಲ್ಲ ಆತನೇ ಪರಮಾಶ್ರಯನಾಗಿದ್ದಾನೆ. ॥ ೧೧ ॥ ಬ್ರಾಹ್ಮಣರು, ಗೋವುಗಳು, ವೇದಗಳು, ವರ್ಣಾಶ್ರಮ ಮತ್ತು ಧರ್ಮ-ಕರ್ಮಗಳು ಎಲ್ಲೆಲ್ಲಿರುವವೋ, ಅಲ್ಲಿಗೆ ಹೋಗಿ ಅವೆಲ್ಲವನ್ನು ಹಾಳುಗೆಡವಿರಿ, ಸುಟ್ಟು ಹಾಕಿರಿ. ॥ ೧೨ ॥ ದೈತ್ಯರಾದರೋ ಸ್ವಭಾವದಿಂದಲೇ ಬೇರೆ ಜನರಿಗೆ ಕಷ್ಟಕೊಟ್ಟು ಆದರಿಂದ ಸುಖಪಡುವರು. ದೈತ್ಯರಾಜ ಹಿರಣ್ಯಕಶಿಪುವಿನ ಆಜ್ಞೆಯನ್ನು ಅವರು ಬಹಳ ಆದರದಿಂದ ತಲೆತಗ್ಗಿಸಿಕೊಂಡು ಸ್ವೀಕರಿಸಿ, ಅದರಂತೆ ಜನತೆಯನ್ನು ನಾಶಪಡಿಸ ತೊಡಗಿದರು. ॥ ೧೩ ॥ ಅವರು ನಗರಗಳನ್ನು, ಹಳ್ಳಿಗಳನ್ನು ಹಸುಗಳ ಹಟ್ಟಿಗಳನ್ನು, ತೋಟಗಳನ್ನು, ಹೊಲ-ಗದ್ದೆಗಳನ್ನು, ವಿಹಾರ ಸ್ಥಳಗಳನ್ನು, ಋಷಿಗಳ ಆಶ್ರಮಗಳನ್ನು, ರತ್ನಾದಿಗಳ ಗಣಿಗಳನ್ನು, ರೈತರ ವಾಸಸ್ಥಾನಗಳನ್ನು, ತಪ್ಪಲುಗಳಲ್ಲಿದ್ದ ಹಳ್ಳಿಗಳನ್ನು ಶ್ರೀಮಂತರ ಬಡಾವಣೆಗಳನ್ನು, ವ್ಯಾಪಾರಿಗಳ ಕೇಂದ್ರಗಳನ್ನು ದೊಡ್ಡ-ದೊಡ್ಡ ಊರುಗಳನ್ನು ಸುಟ್ಟುಹಾಕಿದರು. ॥ ೧೪ ॥ ಕೆಲವು ದೈತ್ಯರು ಅಗೆಯುವ ಶಸ್ತ್ರಗಳಿಂದ ದೊಡ್ಡ-ದೊಡ್ಡ ಸೇತುವೆಗಳನ್ನು, ಕೋಟೆಗೋಡೆಗಳನ್ನು, ನಗರದ್ವಾರಗಳನ್ನು ಒಡೆದು ಹಾಕಿದರು. ಮತ್ತೆ ಕೆಲವರು ಕೊಡಲಿಗಳಿಂದ ಹೂವು-ಹಣ್ಣು ಬಿಟ್ಟಿದ್ದ, ಸೊಂಪಾಗಿ ಬೆಳೆದ ಮರಗಳನ್ನು ಕಡಿದುಹಾಕಿದರು. ಕೆಲವರು ಉರಿಯುವ ಕೊಳ್ಳಿಗಳಿಂದ ಜನರ ಮನೆಗಳಿಗೆ ಬೆಂಕಿಯಿಟ್ಟರು. ॥ ೧೫ ॥ ಹೀಗೆ ದೈತ್ಯರು ನಿರಪರಾಧಿಗಳಾದ ಜನರಿಗೆ ತುಂಬಾ ಪೀಡೆಯನ್ನು ಕೊಡತೊಡಗಿದರು. ಆಗ ದೇವತೆಗಳು ಸ್ವರ್ಗವನ್ನು ಬಿಟ್ಟು ಮಾರುವೇಷ ಧರಿಸಿ ಅಡಗಿಸಿಕೊಂಡು ಪೃಥಿವಿಯಲ್ಲಿ ಸಂಚರಿಸುತ್ತಿದ್ದರು. ॥ ೧೬ ॥

ಹಿರಣ್ಯಕಶಿಪುರ್ಭ್ರಾತುಃ ಸಂಪರೇತಸ್ಯ ದುಃಖಿತಃ ।
ಕೃತ್ವಾ ಕಟೋದಕಾದೀನಿ ಭ್ರಾತೃಪುತ್ರಾನಸಾಂತ್ವಯತ್ ॥ ೧೭ ॥

ಶಕುನಿಂ ಶಂಬರಂ ಧೃಷ್ಟಂ ಭೂತಸಂತಾಪನಂ ವೃಕಮ್ ।
ಕಾಲನಾಭಂ ಮಹಾನಾಭಂ ಹರಿಶ್ಮಶ್ರುಮಥೋತ್ಕಚಮ್ ॥ ೧೮ ॥

ತನ್ಮಾತರಂ ರುಷಾಭಾನುಂ ದಿತಿಂ ಚ ಜನನೀಂ ಗಿರಾ ।
ಶ್ಲಕ್ಷ್ಣಯಾ ದೇಶಕಾಲಜ್ಞ ಇದಮಾಹ ಜನೇಶ್ವರ ॥ ೧೯ ॥

ಹಿರಣ್ಯಕಶಿಪುರುವಾಚ

ಅಂಬಾಂಬ ಹೇ ವಧೂಃ ಪುತ್ರಾ ವೀರಂ ಮಾರ್ಹಥ ಶೋಚಿತುಮ್ ।
ರಿಪೋರಭಿಮುಖೇ ಶ್ಲಾಘ್ಯಃ ಶೂರಾಣಾಂ ವಧ ಈಪ್ಸಿತಃ ॥ ೨೦ ॥

ಭೂತಾನಾಮಿಹ ಸಂವಾಸಃ ಪ್ರಪಾಯಾಮಿವ ಸುವ್ರತೇ ।
ದೈವೇನೈಕತ್ರ ನೀತಾನಾಮುನ್ನೀತಾನಾಂ ಸ್ವಕರ್ಮಭಿಃ ॥ ೨೧ ॥

ನಿತ್ಯ ಆತ್ಮಾವ್ಯಯಃ ಶುದ್ಧಃ ಸರ್ವಗಃ ಸರ್ವವಿತ್ಪರಃ ।
ಧತ್ತೇಽಸಾವಾತ್ಮನೋ ಲಿಂಗಂ ಮಾಯಯಾ ವಿಸೃಜನ್ಗುಣಾನ್ ॥ ೨೨ ॥

ಯಥಾಂಭಸಾ ಪ್ರಚಲತಾ ತರವೋಽಪಿ ಚಲಾ ಇವ ।
ಚಕ್ಷುಷಾ ಭ್ರಾಮ್ಯಮಾಣೇನ ದೃಶ್ಯತೇ ಚಲತೀವ ಭೂಃ ॥ ೨೩ ॥

ಏವಂ ಗುಣೈರ್ಭ್ರಾಮ್ಯಮಾಣೇ ಮನಸ್ಯವಿಕಲಃ ಪುಮಾನ್ ।
ಯಾತಿ ತತ್ಸಾಮ್ಯತಾಂ ಭದ್ರೇ ಹ್ಯಲಿಂಗೋ ಲಿಂಗವಾನಿವ ॥ ೨೪ ॥

ಏಷ ಆತ್ಮವಿಪರ್ಯಾಸೋ ಹ್ಯಲಿಂಗೇ ಲಿಂಗಭಾವನಾ ।
ಏಷ ಪ್ರಿಯಾಪ್ರಿಯೈರ್ಯೋಗೋ ವಿಯೋಗಃ ಕರ್ಮಸಂಸೃತಿಃ ॥ ೨೫ ॥

ಸಂಭವಶ್ಚ ವಿನಾಶಶ್ಚ ಶೋಕಶ್ಚ ವಿವಿಧಃ ಸ್ಮೃತಃ ।
ಅವಿವೇಕಶ್ಚ ಚಿಂತಾ ಚ ವಿವೇಕಾಸ್ಮೃತಿರೇವ ಚ ॥ ೨೬ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಯಮಸ್ಯ ಪ್ರೇತಬಂಧೂನಾಂ ಸಂವಾದಂ ತಂ ನಿಬೋಧತ ॥ ೨೭ ॥

ಯುಧಿಷ್ಠಿರನೇ! ತಮ್ಮನ ಮರಣದಿಂದ ಹಿರಣ್ಯಕಶಿಪುವಿಗೆ ಭಾರೀ ದುಃಖವಾಗಿತ್ತು. ಹಿರಣ್ಯಾಕ್ಷನ ಅಂತ್ಯೇಷ್ಟಿ ಕ್ರಿಯೆಗಳಾದ ಬಳಿಕ, ಅವನ ಮಕ್ಕಳಾದ ಶಕುನಿ, ಶಂಬರ, ಧೃಷ್ಟ, ಭೂತ ಸಂತಾಪನ, ವೃಕ, ಕಾಲನಾಭ, ಮಹಾನಾಭ, ಹರಿಶ್ಮಶ್ರು ಮತ್ತು ಉತ್ಕಚ ಎಂಬುವರಿಗೆ ಸಾಂತ್ವನ ಹೇಳಿದನು. ॥ ೧೭-೧೮ ॥ ಅವರ ತಾಯಿಯಾದ ರುಷಾಭಾನುವನ್ನೂ ಮತ್ತು ತನ್ನ ತಾಯಿಯಾದ ದಿತಿದೇವಿಯನ್ನು ದೇಶಕಾಲಕ್ಕನುಸಾರವಾಗಿ ಮಧುರವಾಣಿಯಿಂದ ಸಂತೈಸುತ್ತಾ ಹೀಗೆಂದನು – ॥ ೧೯ ॥

**ಹಿರಣ್ಯಕಶಿಪು ಹೇಳಿದನು** – ನನ್ನ ಪ್ರೀತಿಯ ತಾಯೇ! ಸೊಸೆಯೇ! ಪುತ್ರರೇ! ನೀವೆಲ್ಲರೂ ಮಹಾವೀರನಾದ ಹಿರಣ್ಯಾಕ್ಷನ ಕುರಿತು ಸ್ವಲ್ಪವೂ ಶೋಕಪಡಬಾರದು. ಏಕೆಂದರೆ, ರಣರಂಗದಲ್ಲಿ ಶತ್ರುವಿನೊಡನೆ ಹೋರಾಡುತ್ತಾ ಪ್ರಾಣತ್ಯಾಗ ಮಾಡುವುದೇ ವೀರಪುರುಷನು ಬಯಸುವ ಶ್ಲಾಘ್ಯವಾದ ಮರಣವು. ॥ ೨೦ ॥ ದೇವಿಯೇ! ಅರವಟ್ಟಿಗೆಯಲ್ಲಿ ಅನೇಕ ಜನರು ಒಂದಾಗುತ್ತಾರೆ. ಆದರೆ ಕೊಂಚಕಾಲ ಮಾತ್ರ ಜೊತೆಯಲ್ಲಿದ್ದು ಅಗಲಿಹೋಗುತ್ತಾರೆ. ಹಾಗೆಯೇ ತಮ್ಮ ಕರ್ಮಗಳನುಸಾರ ದೈವಸಂಕಲ್ಪದಿಂದ ಈ ಜಗತ್ತಿನಲ್ಲಿ ಒಂದಾಗುತ್ತಾರೆ – ಅಗಲುತ್ತಾ ಇರುತ್ತಾರೆ. ॥ ೨೧ ॥ ವಾಸ್ತವವಾಗಿ ಆತ್ಮನು ನಿತ್ಯನೂ, ಅವಿನಾಶಿಯೂ, ಶುದ್ಧನೂ, ಸರ್ವಗತನೂ, ಸರ್ವಜ್ಞನೂ, ದೇಹ-ಇಂದ್ರಿಯಗಳಿಂದ ಬೇರೆಯೇ ಆಗಿರುವನು. ಅವನು ತನ್ನ ಅವಿದ್ಯೆಯಿಂದಲೇ ದೇಹಾದಿಗಳ ಸೃಷ್ಟಿಗೈದು ಭೋಗಗಳಿಗೆ ಸಾಧನವಾದ ಸೂಕ್ಷ್ಮಶರೀರವನ್ನು ಸ್ವೀಕರಿಸುತ್ತಾನೆ. ॥ ೨೨ ॥ ಅಲ್ಲಾಡುತ್ತಿರುವ ನೀರಿನಲ್ಲಿ ಪ್ರತಿಬಿಂಬಿಸುವ ಮರಗಳೂ ಅಲ್ಲಾಡುತ್ತಿರುವಂತೆ ಕಾಣುತ್ತವೆ. ತಿರುಗುತ್ತಿರುವ ಕಣ್ಣುಗಳೊಂದಿಗೆ ಇದೇ ಪೃಥ್ವಿಯು ತಿರುಗಿದಂತೆ ಕಂಡುಬರುತ್ತದೆ. ಕಲ್ಯಾಣಿಯೇ! ಹಾಗೆಯೇ ವಿಷಯಗಳ ಕಾರಣದಿಂದ ಮನಸ್ಸು ಅಲೆಯತೊಡಗುತ್ತದೆ ಮತ್ತು ನಿಜವಾಗಿ ನಿರ್ವಿಕಾರನಾಗಿದ್ದರೂ ಮನಸ್ಸಿನಂತೆ ಆತ್ಮನೂ ಅಲೆಯುತ್ತಿರುವಂತೆ ತಿಳಿಯುತ್ತದೆ. ಅವನಿಗೆ ಸ್ಥೂಲ ಹಾಗೂ ಸೂಕ್ಷ್ಮ ಶರೀರಗಳೊಂದಿಗೆ ಯಾವುದೇ ಸಂಬಂಧ ವಿಲ್ಲದಿದ್ದರೂ ಅವನು ಸಂಬಂಧಪಟ್ಟವನಂತೆ ತಿಳಿದು ಬರುತ್ತಾನೆ. ॥ ೨೩-೨೪ ॥ ಎಲ್ಲ ವಿಧದಿಂದ ಶರೀರರಹಿತ ಆತ್ಮನನ್ನು ಶರೀರವೆಂದು ತಿಳಿಯುವುದೇ ಅಜ್ಞಾನವಾಗಿದೆ. ಇದರಿಂದಲೇ ಪ್ರಿಯ ಅಥವಾ ಅಪ್ರಿಯ ವಸ್ತುಗಳು ಒಂದಾಗುವುದು ಮತ್ತು ಅಗಲುವುದು ಉಂಟಾಗುತ್ತದೆ. ಇದರಿಂದಲೇ ಕರ್ಮಗಳೊಂದಿಗೆ ಸಂಬಂಧ ಉಂಟಾದ ಕಾರಣ ಸಂಸಾರದಲ್ಲಿ ಅಲೆದಾಡಬೇಕಾಗುತ್ತದೆ. ॥ ೨೫ ॥ ಜನ್ಮ, ಮೃತ್ಯು, ಅನೇಕ ಪ್ರಕಾರದ ಶೋಕಗಳು, ಅವಿವೇಕ, ಚಿಂತೆ, ವಿವೇಕದ ವಿಸ್ಮೃತಿ – ಇವೆಲ್ಲವುಗಳ ಕಾರಣ ಅಜ್ಞಾನವೇ ಆಗಿದೆ. ॥ ೨೬ ॥ ಈ ವಿಷಯದಲ್ಲಿ ಮಹಾತ್ಮರು ಒಂದು ಪ್ರಾಚೀನವಾದ ಇತಿಹಾಸವನ್ನು ಹೇಳುತ್ತಿರುತ್ತಾರೆ. ಆ ಇತಿಹಾಸವು ಸತ್ತಿರುವ ಮನುಷ್ಯನ ಸಂಬಂಧಿಗಳೊಂದಿಗೆ ಯಮರಾಜನ ಮಾತುಕತೆಯಾಗಿದೆ. ನೀವೆಲ್ಲರೂ ಗಮನಕೊಟ್ಟು ಕೇಳಿರಿ. ॥ ೨೭ ॥

ಉಶೀನರೇಷ್ವಭೂದ್ರಾಜಾ ಸುಯಜ್ಞ ಇತಿ ವಿಶ್ರುತಃ ।
ಸಪತ್ನೈರ್ನಿಹತೋ ಯುದ್ಧೇ ಜ್ಞಾತಯಸ್ತಮುಪಾಸತ ॥ ೨೮ ॥

ವಿಶೀರ್ಣರತ್ನಕವಚಂ ವಿಭ್ರಷ್ಟಾಭರಣಸ್ರಜಮ್ ।
ಶರನಿರ್ಭಿನ್ನಹೃದಯಂ ಶಯಾನಮಸೃಗಾವಿಲಮ್ ॥ ೨೯ ॥

ಪ್ರಕೀರ್ಣಕೇಶಂ ಧ್ವಸ್ತಾಕ್ಷಂ ರಭಸಾ ದಷ್ಟದಚ್ಛದಮ್ ।
ರಜಃಕುಂಠಮುಖಾಂಭೋಜಂ ಛಿನ್ನಾಯುಧಭುಜಂ ಮೃಧೇ ॥ ೩೦ ॥

ಉಶೀನರೇಂದ್ರಂ ವಿಧಿನಾ ತಥಾ ಕೃತಂ
ಪತಿಂ ಮಹಿಷ್ಯಃ ಪ್ರಸಮೀಕ್ಷ್ಯ ದುಃಖಿತಾಃ ।
ಹತಾಃ ಸ್ಮ ನಾಥೇತಿ ಕರೈರುರೋ ಭೃಶಂ
ಘ್ನಂತ್ಯೋ ಮುಹುಸ್ತತ್ಪದಯೋರುಪಾಪತನ್ ॥ ೩೧ ॥

ರುದತ್ಯ ಉಚ್ಚೈರ್ದಯಿತಾಂಘ್ರಿಪಂಕಜಂ
ಸಿಂಚಂತ್ಯ ಅಸ್ರೈಃ ಕುಚಕುಂಕುಮಾರುಣೈಃ ।
ವಿಸ್ರಸ್ತಕೇಶಾಭರಣಾಃ ಶುಚಂ ನೃಣಾಂ
ಸೃಜಂತ್ಯ ಆಕ್ರಂದನಯಾ ವಿಲೇಪಿರೇ ॥ ೩೨ ॥

ಅಹೋ ವಿಧಾತ್ರಾಕರುಣೇನ ನಃ ಪ್ರಭೋ
ಭವಾನ್ಪ್ರಣೀತೋ ದೃಗಗೋಚರಾಂ ದಶಾಮ್ ।
ಉಶೀನರಾಣಾಮಸಿ ವೃತ್ತಿದಃ ಪುರಾ
ಕೃತೋಽಧುನಾ ಯೇನ ಶುಚಾಂ ವಿವರ್ಧನಃ ॥ ೩೩ ॥

ತ್ವಯಾ ಕೃತಜ್ಞೇನ ವಯಂ ಮಹೀಪತೇ
ಕಥಂ ವಿನಾ ಸ್ಯಾಮ ಸುಹೃತ್ತಮೇನ ತೇ ।
ತತ್ರಾನುಯಾನಂ ತವ ವೀರ ಪಾದಯೋಃ
ಶುಶ್ರೂಷತೀನಾಂ ದಿಶ ಯತ್ರ ಯಾಸ್ಯಸಿ ॥ ೩೪ ॥

ಏವಂ ವಿಲಪತೀನಾಂ ವೈ ಪರಿಗೃಹ್ಯ ಮೃತಂ ಪತಿಮ್ ।
ಅನಿಚ್ಛತೀನಾಂ ನಿರ್ಹಾರಮರ್ಕೋಽಸ್ತಂ ಸಂನ್ಯವರ್ತತ ॥ ೩೫ ॥

ತತ್ರ ಹ ಪ್ರೇತಬಂಧೂನಾಮಾಶ್ರುತ್ಯ ಪರಿದೇವಿತಮ್ ।
ಆಹ ತಾನ್ಬಾಲಕೋ ಭೂತ್ವಾ ಯಮಃ ಸ್ವಯಮುಪಾಗತಃ ॥ ೩೬ ॥

*ಯಮ ಉವಾಚ*

ಅಹೋ ಅಮೀಷಾಂ ವಯಸಾಧಿಕಾನಾಂ
ವಿಪಶ್ಯತಾಂ ಲೋಕವಿಧಿಂ ವಿಮೋಹಃ ।
ಯತ್ರಾಗತಸ್ತತ್ರ ಗತಂ ಮನುಷ್ಯಂ
ಸ್ವಯಂ ಸಧರ್ಮಾ ಅಪಿ ಶೋಚಂತ್ಯಪಾರ್ಥಮ್ ॥ ೩೭ ॥

ಉಶೀನರ ದೇಶದಲ್ಲಿ ಒಬ್ಬ ಕೀರ್ತಿಶಾಲಿಯಾಗಿದ್ದ ರಾಜನಿದ್ದನು. ಅವನ ಹೆಸರು ಸುಯಜ್ಞ. ಕಾಳಗದಲ್ಲಿ ಅವನನ್ನು ಶತ್ರುಗಳು ಕೊಂದುಹಾಕಿದರು. ಆಗ ಅವನ ಬಂಧು-ಬಾಂಧವರು ಅವನನ್ನು ಸುತ್ತುವರೆದು ಕುಳಿತು ಗೋಳಾಡುತ್ತಿದ್ದರು. ॥ ೨೮ ॥ ರಾಜನ ರತ್ನಖಚಿತವಾದ ಕವಚವು ಹರಿದು ಚಿಂದಿಯಾಗಿತ್ತು. ಭೂಷಣಗಳೂ, ಮಾಲೆಗಳೂ ಚೆಲ್ಲಾಪಿಲ್ಲಿಯಾಗಿದ್ದವು. ಬಾಣಗಳಿಂದ ಅವನ ಎದೆಯು ಸೀಳಿಹೋಗಿತ್ತು. ರಕ್ತದಿಂದ ಶರೀರವು ತೊಯ್ದು ಹೋಗಿತ್ತು. ಕೂದಲು ಕೆದರಿತ್ತು. ಕಣ್ಣುಗಳು ಕುಸಿದುಹೋಗಿದ್ದವು. ಕೋಪದಿಂದ ಹಲ್ಲುಗಳು ತುಟಿಗಳನ್ನು ಕಚ್ಚಿಕೊಂಡಿದ್ದವು. ಕಮಲದಂತಿದ್ದ ಮುಖವು ಧೂಳಿನಿಂದ ಮುಚ್ಚಿಹೋಗಿತ್ತು. ಯುದ್ಧದಲ್ಲಿ ಅವನ ಶಸ್ತ್ರಗಳು, ಬಾಹುಗಳು ತುಂಡಾಗಿದ್ದವು. ॥ ೨೯-೩೦ ॥ ವಿಧಿವಶದಿಂದ ತಮ್ಮ ಪತಿಗೆ ಒದಗಿದ ಈ ಅವಸ್ಥೆಯನ್ನು ಕಂಡು ಉಶೀನರ ನರೇಶನ ರಾಣಿಯರಿಗೆ ಭಾರೀ ದುಃಖವಾಯಿತು. ಅವರು – ಹಾ ನಾಥಾ! ನಿರ್ಭಾಗ್ಯರಾದ ನಾವು ಸತ್ತೆವು. ಕೆಟ್ಟೆವು! ಎಂದು ಮತ್ತೆ-ಮತ್ತೆ ಗೋಳಾಡುತ್ತಾ, ಎದೆಯನ್ನು ಬಡಿದುಕೊಂಡು ತಮ್ಮ ಪತಿಯ ಪಾದಗಳ ಬಳಿ ಕುಸಿದುಬಿದ್ದರು. ॥ ೩೧ ॥ ಹಾಗೆ ಗಟ್ಟಿಯಾಗಿ ಅಳುತ್ತಿರುವಾಗ ಸ್ತನಗಳಿಗೆ ಲೇಪಿಸಿಕೊಂಡ ಕುಂಕುಮ-ಕೇಸರಿಯೊಂದಿಗೆ ಬೆರೆತ ಅವರ ಕಣ್ಣೀರಧಾರೆಗಳು ಕೆಂಪಾಗಿ ಪ್ರಿಯಕರನ ಪಾದಪದ್ಮಗಳನ್ನು ನೆನೆಸಿದವು. ಅವರ ತಲೆಗೂದಲು, ಆಭರಣಗಳೆಲ್ಲ ಅಸ್ತವ್ಯಸ್ತವಾಗಿದ್ದವು. ಅವರ ಆ ಕರುಣಾಜನಕವಾದ ವಿಲಾಪವನ್ನು ಕೇಳಿದವರೆಲ್ಲ ದುಃಖಪರವಶರಾಗುತ್ತಿದ್ದರು. ॥ ೩೨ ॥ ಅಯ್ಯೋ! ವಿಧಿಯು ಎಂತಹ ನಿಷ್ಕರುಣಿಯು! ಆತನೇ ಈಗ ನಿನ್ನನ್ನು ನಮ್ಮ ಕಣ್ಣುಗಳಿಂದ ಮರೆಮಾಚಿದ್ದಾನೆ. ಪ್ರಿಯನೇ! ಪ್ರಭೋ! ಹಿಂದೆ ನೀನು ಉಶೀನರ ದೇಶವಾಸಿಗಳಿಗೆಲ್ಲರಿಗೂ ಜೀವನದಾತನಾಗಿದ್ದೆ. ಆದರೆ ಈಗ ನಿನ್ನ ಜೀವನವನ್ನೇ ಕಳೆದುಕೊಂಡು ನಮ್ಮ ದುಃಖವನ್ನೇ ಹೆಚ್ಚಿಸುತ್ತಿರುವೆ. ॥ ೩೩ ॥ ಪತಿದೇವಾ! ನೀನು ನಮ್ಮನ್ನು ತುಂಬಾ ಪ್ರೀತಿಸುತ್ತಿದ್ದೆ. ನಮ್ಮ ಅತ್ಯಲ್ಪವಾದ ಸೇವೆಯನ್ನೇ ಬಹುದೊಡ್ಡದೆಂದು ತಿಳಿಯುತ್ತಿದ್ದೆ. ಅಯ್ಯೋ! ಈಗ ನೀನಿಲ್ಲದೆ ನಾವು ಬದುಕುವುದೆಂತು? ನಾವು ನಿನ್ನ ಪಾದಗಳ ಸೇವಕಿಯರಲ್ಲವೇ! ವೀರವರನೇ! ನೀನು ಹೋದಲ್ಲಿಗೆ ಬರಲು ನಮಗೂ ಅಪ್ಪಣೆಯನ್ನು ಕೊಡು. ॥ ೩೪ ॥ ಅವರೆಲ್ಲರೂ ತಮ್ಮ ಪತಿಯ ಶವವನ್ನು ಅಪ್ಪಿಕೊಂಡು ಹೀಗೆ ವಿಲಾಪಿಸುತ್ತಿದ್ದರು. ಆ ಶವವನ್ನು ದಹನಸಂಸ್ಕಾರಕ್ಕಾಗಿ ಅಲ್ಲಿಂದ ಎತ್ತಿಕೊಂಡು ಹೋಗಲು ಅವರು ಇಷ್ಟಪಡುತ್ತಿರಲಿಲ್ಲ. ಅಷ್ಟರಲ್ಲಿ ಸೂರ್ಯಾಸ್ತವಾಯಿತು. ॥ ೩೫ ॥ ಆಗ ಉಶೀನರ ರಾಜನ ಸಂಬಂಧಿಗಳು ಮಾಡಿದ ವಿಲಾಪವನ್ನು ಕೇಳಿದ ಯಮರಾಜನು ಸ್ವಯಂ ಬಾಲಕನ ವೇಷದಿಂದ ಅಲ್ಲಿಗೆ ಬಂದು ಆ ಜನರನ್ನು ಕುರಿತು ಹೀಗೆಂದನು – ॥ ೩೬ ॥

**ಯಮರಾಜನು ಹೇಳಿದನು** – ಆಹಾ! ಇದೇನಿದು! ವಯಸ್ಸಿನಲ್ಲಿ ಇಷ್ಟು ದೊಡ್ಡವರಾಗಿ ಲೋಕದಲ್ಲಿ ಜನರ ಬದುಕು-ಸಾವುಗಳನ್ನು ದಿನನಿತ್ಯವೂ ನೋಡುತ್ತಿದ್ದರೂ ಇವರು ಹೀಗೆ ಮೋಹಕ್ಕೆ ಒಳಗಾಗಿದ್ದಾರಲ್ಲ! ಅರೇ! ಈ ಮನುಷ್ಯನು ಎಲ್ಲಿಂದ

ಅಹೋ ವಯಂ ಧನ್ಯತಮಾ ಯದತ್ರ
ತ್ಯಕ್ತಾಃ ಪಿತೃಭ್ಯಾಂ ನ ವಿಚಿಂತಯಾಮಃ ।
ಅಭಕ್ಷ್ಯಮಾಣಾ ಅಬಲಾ ವೃಕಾದಿಭಿಃ
ಸ ರಕ್ಷಿತಾ ರಕ್ಷತಿ ಯೋ ಹಿ ಗರ್ಭೇ ॥ ೩೮ ॥

ಯ ಇಚ್ಛಯೇಶಃ ಸೃಜತೀದಮವ್ಯಯೋ
ಯ ಏವ ರಕ್ಷತ್ಯವಲುಂಪತೇ ಚ ಯಃ ।
ತಸ್ಯಾಬಲಾಃ ಕ್ರೀಡನಮಾಹುರೀಶಿತು-
ಶ್ಚರಾಚರಂ ನಿಗ್ರಹಸಂಗ್ರಹೇ ಪ್ರಭುಃ ॥ ೩೯ ॥

ಪಥಿ ಚ್ಯುತಂ ತಿಷ್ಠತಿ ದಿಷ್ಟರಕ್ಷಿತಂ
ಗೃಹೇ ಸ್ಥಿತಂ ತದ್ವಿಹತಂ ವಿನಶ್ಯತಿ ।
ಜೀವತ್ಯನಾಥೋಽಪಿ ತದೀಕ್ಷಿತೋ ವನೇ
ಗೃಹೇಽಪಿ ಗುಪ್ತೋಽಸ್ಯ ಹತೋ ನ ಜೀವತಿ ॥ ೪೦ ॥

ಭೂತಾನಿ ತೈಸ್ತೈರ್ನಿಜಯೋನಿಕರ್ಮಭಿ-
ರ್ಭವಂತಿ ಕಾಲೇ ನ ಭವಂತಿ ಸರ್ವಶಃ ।
ನ ತತ್ರ ಹಾತ್ಮಾ ಪ್ರಕೃತಾವಪಿ ಸ್ಥಿತ-
ಸ್ತಸ್ಯಾ ಗುಣೈರನ್ಯತಮೋ ನಿಬಧ್ಯತೇ ॥ ೪೧ ॥

ಇದಂ ಶರೀರಂ ಪುರುಷಸ್ಯ ಮೋಹಜಂ
ಯಥಾ ಪೃಥಗ್ಭೌತಿಕಮೀಯತೇ ಗೃಹಮ್ ।
ಯಥೌದಕೈಃ ಪಾರ್ಥಿವತೈಜಸೈರ್ಜನಃ
ಕಾಲೇನ ಜಾತೋ ವಿಕೃತೋ ವಿನಶ್ಯತಿ ॥ ೪೨ ॥

ಯಥಾನಲೋ ದಾರುಷು ಭಿನ್ನ ಈಯತೇ
ಯಥಾನಿಲೋ ದೇಹಗತಃ ಪೃಥಕ್ ಸ್ಥಿತಃ ।
ಯಥಾ ನಭಃ ಸರ್ವಗತಂ ನ ಸಜ್ಜತೇ
ತಥಾ ಪುಮಾನ್ಸರ್ವಗುಣಾಶ್ರಯಃ ಪರಃ ॥ ೪೩ ॥

ಬಂದಿದ್ದನೋ ಅಲ್ಲಿಗೆ ಹೊರಟುಹೋದನು. ಈ ಜನರೂ ಕೂಡ ಒಂದಲ್ಲ ಒಂದು ದಿನ ಅಲ್ಲಿಗೇ ಹೋಗಲೇಬೇಕು. ಆದರೂ ಹೀಗೇಕೆ ವ್ಯರ್ಥವಾಗಿ ಇಷ್ಟು ಶೋಕಪಡುತ್ತಿದ್ದಾರೆ? ॥ ೩೭ ॥ ನಿಮಗಿಂತಲೂ ನಾನೇ ಎಷ್ಟೋ ಪಾಲು ಶ್ರೇಷ್ಠನು. ಏಕೆಂದರೆ, ತಂದೆ-ತಾಯಿಗಳು ತೊರೆದುಬಿಟ್ಟಿದ್ದರೂ, ದೇಹದಿಂದ ದುರ್ಬಲನಾಗಿದ್ದರೂ ನಾನು ಎಳ್ಳಷ್ಟೂ ಚಿಂತೆ ಪಡುತ್ತಿಲ್ಲ. ತೋಳವೇ ಮುಂತಾದ ಕ್ರೂರಮೃಗಗಳು ನನ್ನನ್ನು ಏನೂ ಮಾಡಲಾರವು. ತಾಯಿಯ ಗರ್ಭದಲ್ಲಿದ್ದಾಗ ಯಾರು ರಕ್ಷಿಸಿದ್ದನೋ ಅವನೇ ಈ ಜೀವನದಲ್ಲಿಯೂ ನನ್ನನ್ನು ರಕ್ಷಿಸುತ್ತಾ ಇರುತ್ತಾನೆ. ॥ ೩೮ ॥ ದೇವಿಯರೇ! ತನ್ನ ಇಚ್ಛಾಮಾತ್ರದಿಂದ ಈ ಜಗತ್ತನ್ನು ರಚಿಸಿ, ರಕ್ಷಿಸಿ, ಲಯಗೊಳಿಸುವ ಪರಮೇಶ್ವರನಿಗೆ ಈ ಜಗತ್ತು ಒಂದು ಆಟದ ಬೊಂಬೆಯಂತೆ ಇದೆ. ಈ ಚರಾಚರ ಜಗತ್ತನ್ನು ನಿಗ್ರಹಿಸಲಿಕ್ಕೂ, ಅನುಗ್ರಹಿಸಲಿಕ್ಕೂ ಅವನೊಬ್ಬನೇ ಸಮರ್ಥನು. ॥ ೩೯ ॥ ಅದೃಷ್ಟವು ಅನುಕೂಲವಾಗಿದ್ದರೆ ರಸ್ತೆಯಲ್ಲಿ ಕಳೆದುಹೋದ ವಸ್ತುವೂ ಹಾಗೆಯೇ ಬಿದ್ದಿರುತ್ತದೆ. ಆದರೆ ಅದೇ ಅದೃಷ್ಟವು ಪ್ರತಿ ಕೂಲವಾದರೆ ಮನೆಯೊಳಗೆ ಪೆಟ್ಟಿಗೆಯೊಳಗೆ ಜೋಪಾನವಾಗಿ ಇಟ್ಟಿರುವ ವಸ್ತುವೂ ಕಳೆದುಹೋಗುವುದು. ಜೀವಿಯು ಯಾರ ಆಸರೆಯಿಲ್ಲದೆಯೇ ದೈವದ ದಯಾದೃಷ್ಟಿಯಿಂದ ಕಾಡಿನಲ್ಲಿಯೂ ಅನೇಕ ದಿನಗಳವರೆಗೆ ಬದುಕಿರಬಲ್ಲನು. ಆದರೆ ದೈವವು ವಿಪರೀತ ವಾದಾಗ ಮನೆಯಲ್ಲಿ ಸುರಕ್ಷಿತನಾಗಿದ್ದರೂ ಸತ್ತು ಹೋಗುತ್ತಾನೆ. ॥ ೪೦ ॥

ರಾಣಿಯರೇ! ಎಲ್ಲ ಪ್ರಾಣಿಗಳ ಮೃತ್ಯುವು ತಮ್ಮ ಪೂರ್ವ ಜನ್ಮಗಳ ಕರ್ಮವಾಸನೆಗನುಸಾರವಾಗಿ ಸಮಯಕ್ಕೆ ಸರಿಯಾಗಿ ಆಗುತ್ತದೆ ಮತ್ತು ಅದಕ್ಕನುಸಾರವೇ ಅವನ ಜನ್ಮವೂ ಉಂಟಾಗುತ್ತದೆ. ಆದರೆ ಆತ್ಮನು ಶರೀರದಿಂದ ಅತ್ಯಂತ ಭಿನ್ನನಾಗಿದ್ದಾನೆ. ಅದಕ್ಕಾಗಿ ಅವನು ಶರೀರದಲ್ಲಿದ್ದರೂ ಅವರ ಜನ್ಮ-ಮೃತ್ಯು ಮುಂತಾದ ಧರ್ಮಗಳು ಆತನನ್ನು ಮುಟ್ಟಲಾರವು. ॥ ೪೧ ॥ ಮನುಷ್ಯನು ತನ್ನ ಮನೆಯನ್ನು ತನ್ನಿಂದ ಬೇರೆ ವಸ್ತುವೆಂದೂ, ಒಂದು ಮಣ್ಣಿನ ಪದಾರ್ಥವೆಂದೂ ತಿಳಿಯುವಂತೆಯೇ ಈ ಶರೀರವು ಬೇರೆಯಾಗಿದ್ದು ಮಣ್ಣಿನದೇ ಆಗಿದೆ. ಮೋಹವಶದಿಂದ ಅವನು ಇದನ್ನು ತನ್ನದೆಂದು ತಿಳಿದಿರುತ್ತಾನೆ. ಗುಳ್ಳೆಗಳೇ ಮುಂತಾದವುಗಳು ನೀರಿನ ವಿಕಾರವು. ಮಡಕೆಯೇ ಮುಂತಾದವು ಮಣ್ಣಿನ ವಿಕಾರವು. ಒಡವೆ ಮುಂತಾದವುಗಳು ಚಿನ್ನದ ವಿಕಾರವು – ಇವು ಆಗಾಗ ಉಂಟಾಗುತ್ತವೆ, ರೂಪಾಂತರವಾಗುತ್ತವೆ ಹಾಗೂ ನಾಶವಾಗುತ್ತವೆ. ಹಾಗೆಯೇ ಈ ಮೂರರ ವಿಕಾರದಿಂದಲೇ ಉಂಟಾದ ಈ ಶರೀರವೂ ಕೂಡ ಆಗಾಗ ಉಂಟಾಗುತ್ತಾ-ಕೆಡುತ್ತಾ ಇರುತ್ತದೆ. ॥ ೪೨ ॥ ಕಟ್ಟಿಗೆಯಲ್ಲಿ ಅಡಗಿರುವ ವ್ಯಾಪಕ ಅಗ್ನಿಯು ಸ್ಪಷ್ಟವಾಗಿ ಅದರಿಂದ ಬೇರೆಯೇ ಆಗಿದೆ. ಶರೀರದಲ್ಲಿದ್ದರೂ ವಾಯುವಿಗೆ ಅದರೊಂದಿಗೆ ಯಾವ ಸಂಬಂಧವೂ ಇಲ್ಲ. ಆಕಾಶವು ಎಲ್ಲಕಡೆ ಒಂದೇ ರೀತಿಯಿಂದ ಇದ್ದರೂ ಯಾರ ಗುಣ-ದೋಷಗಳಿಂದಲೂ ಲಿಪ್ತವಾಗುವುದಿಲ್ಲ. ಹಾಗೆಯೇ ಸಮಸ್ತ ದೇಹೇಂದ್ರಿಯಗಳಲ್ಲಿ ಇರುತ್ತಿರುವ ಮತ್ತು ಅವುಗಳ ಆಶ್ರಯನಾದ ಆತ್ಮನೂ ಕೂಡ ಅವುಗಳಿಂದ ಬೇರೆಯಾಗಿ ನಿರ್ಲಿಪ್ತನೇ ಆಗಿದ್ದಾನೆ. ॥ ೪೩ ॥

ಸುಯಜ್ಞೋ ನನ್ವಯಂ ಶೇತೇ ಮೂಢಾ ಯಮನುಶೋಚಥ ।
ಯಃ ಶ್ರೋತಾ ಯೋಽನುವಕ್ತೇಹ ಸ ನ ದೃಶ್ಯೇತ ಕರ್ಹಿಚಿತ್ ॥ ೪೪ ॥

ಮೂರ್ಖರೇ! ಯಾರಿಗಾಗಿ ನೀವೆಲ್ಲರೂ ಶೋಕ ಮಾಡುತ್ತಿರುವಿರೋ ಆ ಸುಯಜ್ಞನೆಂಬ ಶರೀರವಾದರೋ ನಿಮ್ಮ ಮುಂದೆಯೇ ಬಿದ್ದಿದೆ. ನೀವೆಲ್ಲರೂ ನೋಡುತ್ತಾ ಇದ್ದೀರಿ. ಇದರಲ್ಲಿ ಯಾವ ಕೇಳುವವನು ಮತ್ತು ಮಾತಾಡುವವನು ಇದ್ದನೋ ಅವನಾದರೋ ಎಂದಿಗೂ ಯಾರಿಗೂ ಕಾಣುತ್ತಿರಲಿಲ್ಲ, ಮತ್ತೆ ಇಂದೂ ಕೂಡ ಕಾಣಿಸಿಕೊಳ್ಳುವುದಿಲ್ಲ. ಹಾಗಾದರೆ ಶೋಕವೇಕೆ? ॥ ೪೪ ॥

ನ ಶ್ರೋತಾ ನಾನುವಕ್ತಾಯಂ ಮುಖ್ಯೋಽಪ್ಯತ್ರ ಮಹಾನಸುಃ ।
ಯಸ್ತ್ವಿಹೇಂದ್ರಿಯವಾನಾತ್ಮಾ ಸ ಚಾನ್ಯಃ ಪ್ರಾಣದೇಹಯೋಃ ॥ ೪೫ ॥

('ಇದರೊಳಗೆ ಮಾತನಾಡುತ್ತಿದ್ದವನು ಮತ್ತು ಕೇಳುತ್ತಿದ್ದವನು ಪ್ರಾಣನು. ಅವನು ಇದನ್ನು ಬಿಟ್ಟು ಹೋದನು' ಎಂದು ಹೇಳುವಿರೋ? ಅದು ಸರಿಯಲ್ಲ, ಏಕೆಂದರೆ, ಗಾಢನಿದ್ರೆಯ ಸಮಯದಲ್ಲಿ ಪ್ರಾಣನು ಇದ್ದರೂ ಆತನು ಮಾತನಾಡುವುದಿಲ್ಲ, ಕೇಳುವುದೂ ಇಲ್ಲ.) ಶರೀರದಲ್ಲಿ ಎಲ್ಲ ಇಂದ್ರಿಯಗಳ ಚೇಷ್ಟೆಗಳಿಗೂ ಕಾರಣವಾಗಿರುವ ಯಾವ ಮಹಾಪ್ರಾಣವುಂಟೋ, ಅದು ಮುಖ್ಯವಾಗಿದ್ದರೂ ಕೇಳುವುದು ಮತ್ತು ಮಾತನಾಡುವುದು ಆ ಪ್ರಾಣವಲ್ಲ. ಏಕೆಂದರೆ ಅದು ಜಡವಾಗಿದೆ. ದೇಹ ಮತ್ತು ಇಂದ್ರಿಯಗಳ ಮೂಲಕ ಎಲ್ಲ ಪದಾರ್ಥಗಳನ್ನೂ ದರ್ಶಿಸುತ್ತಿರುವ, ಎಲ್ಲದಕ್ಕೂ ಸಾಕ್ಷಿಯಾಗಿರುವ ಯಾವ ಆತ್ಮವುಂಟೋ ಅದು ಶರೀರ ಮತ್ತು ಪ್ರಾಣ ಇವೆರಡಕ್ಕಿಂತಲೂ ಬೇರೆಯಾದುದು. ॥ ೪೫ ॥

ಭೂತೇಂದ್ರಿಯಮನೋಲಿಂಗಾನ್ ದೇಹಾನುಚ್ಚಾವಚಾನ್ವಿಭುಃ ।
ಭಜತ್ಯುತ್ಸೃಜತಿ ಹ್ಯನ್ಯಸ್ತಚ್ಚಾಪಿ ಸ್ವೇನ ತೇಜಸಾ ॥ ೪೬ ॥

ಈ ಆತ್ಮನು ವ್ಯಾಪಕನಾಗಿದ್ದಾನೆ, ಆದರೆ ಪರಿಚ್ಛಿನ್ನನಲ್ಲ. ಆದರೂ ಪಂಚಭೂತ, ಇಂದ್ರಿಯ ಮತ್ತು ಮನಸ್ಸುಗಳಿಂದ ಕೂಡಿದ ದೇವ, ಮನುಷ್ಯ, ಪಶು, ಪಕ್ಷಿ ಇತ್ಯಾದಿ ಉಚ್ಚ-ನೀಚ ಶರೀರಗಳನ್ನು ಧರಿಸುತ್ತಾನೆ ಮತ್ತು ತನ್ನ ವಿವೇಕದಿಂದ ಮುಕ್ತನೂ ಆಗುವನು. ವಾಸ್ತವವಾಗಿ ಅವನು ಇವೆಲ್ಲವುಗಳಿಂದ ಬೇರೆಯೇ ಆಗಿದ್ದಾನೆ. ॥ ೪೬ ॥

ಯಾವಲ್ಲಿಂಗಾನ್ವಿತೋ ಹ್ಯಾತ್ಮಾ ತಾವತ್ಕರ್ಮನಿಬಂಧನಮ್ ।
ತತೋ ವಿಪರ್ಯಯಃ ಕ್ಲೇಶೋ ಮಾಯಾಯೋಗೋಽನುವರ್ತತೇ ॥ ೪೭ ॥

ಅವನು ಪಂಚಪ್ರಾಣ, ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಬುದ್ಧಿ ಮತ್ತು ಮನಸ್ಸು – ಈ ಹದಿನೇಳು ತತ್ತ್ವಗಳಿಂದ ಉಂಟಾದ ಲಿಂಗಶರೀರದೊಂದಿಗೆ ಕೂಡಿಕೊಂಡಿರುವ ತನಕ ಕರ್ಮಗಳಿಂದ ಬಂಧಿತವಾಗಿರುತ್ತಾನೆ. ಈ ಬಂಧನದಿಂದಲೇ ಮಾಯೆಯಿಂದ ಉಂಟಾಗುವ ಮೋಹ ಮತ್ತು ಕ್ಲೇಶಗಳು ಯಾವಾಗಲೂ ಅವನ ಬೆನ್ನುಹತ್ತಿರುತ್ತವೆ. ॥ ೪೭ ॥

ವಿತಥಾಭಿನಿವೇಶೋಽಯಂ ಯದ್ಗುಣೇಷ್ವರ್ಥದೃಗ್ವಚಃ ।
ಯಥಾ ಮನೋರಥಃ ಸ್ವಪ್ನಃ ಸರ್ವಮೈಂದ್ರಿಯಕಂ ಮೃಷಾ ॥ ೪೮ ॥

ಪ್ರಕೃತಿಯ ಗುಣಗಳು ಮತ್ತು ಅವುಗಳಿಂದ ಉಂಟಾದ ವಸ್ತುಗಳನ್ನು ಪರಮಾರ್ಥವೆಂದು ತಿಳಿಯುವುದು ಅಥವಾ ಹೇಳುವುದು ವ್ಯರ್ಥವಾದ ದುರಾಗ್ರಹವಾಗಿದೆ. ಮನೋರಥ, ಸಮಯದ ಕಲ್ಪನೆ ಮತ್ತು ಸ್ವಪ್ನದಲ್ಲಿ ಕಂಡುಬರುವ ವಸ್ತುಗಳಂತೆ ಇಂದ್ರಿಯಗಳಿಂದ ಗ್ರಹಿಸಲಾಗುವುದೆಲ್ಲವೂ ಮಿಥ್ಯೆಯೇ ಆಗಿದೆ. ॥ ೪೮ ॥

ಅಥ ನಿತ್ಯಮನಿತ್ಯಂ ವಾ ನೇಹ ಶೋಚಂತಿ ತದ್ವಿದಃ ।
ನಾನ್ಯಥಾ ಶಕ್ಯತೇ ಕರ್ತುಂ ಸ್ವಭಾವಃ ಶೋಚತಾಮಿತಿ ॥ ೪೯ ॥

ಅದಕ್ಕಾಗಿ ಶರೀರ ಮತ್ತು ಆತ್ಮನ ತತ್ತ್ವವನ್ನರಿತ ಮನುಷ್ಯನು ಅನಿತ್ಯಶರೀರಕ್ಕಾಗಲಿ, ಆತ್ಮನಿಗಾಗಲೀ ಶೋಕಿಸುವುದಿಲ್ಲ. ಆದರೆ ಜ್ಞಾನವು ದೃಢವಾಗದಿರುವ ಕಾರಣ ಶೋಕಿಸುತ್ತಿರುವವರ ಸ್ವಭಾವವನ್ನು ಬದಲಿಸುವುದು ಅತಿಕಷ್ಟ. ॥ ೪೯ ॥

ಲುಬ್ಧಕೋ ವಿಪಿನೇ ಕಶ್ಚಿತ್ಪಕ್ಷಿಣಾಂ ನಿರ್ಮಿತೋಽಂತಕಃ ।
ವಿತತ್ಯ ಜಾಲಂ ವಿದಧೇ ತತ್ರ ತತ್ರ ಪ್ರಲೋಭಯನ್ ॥ ೫೦ ॥

ಒಂದು ಅರಣ್ಯದಲ್ಲಿ ಓರ್ವ ಬೇಟೆಗಾರನಿದ್ದನು. ಅವನು ಅರಣ್ಯದ ಹಕ್ಕಿಗಳ ಪಾಲಿಗೆ ವಿಧಿಯು ಸೃಷ್ಟಿಸಿ ಕಳಿಸಿದ ಯಮನೇ ಆಗಿದ್ದನು. ಅಲ್ಲಲ್ಲಿ ಬಲೆಯನ್ನು ಬೀಸಿ ಹಕ್ಕಿಗಳಿಗೆ ಆಹಾರದ ಆಸೆತೋರಿಸಿ ಬಲೆಯಲ್ಲಿ ಸಿಕ್ಕಿಸಿಕೊಳ್ಳುತ್ತಿದ್ದನು. ॥ ೫೦ ॥

ಕುಲಿಂಗಮಿಥುನಂ ತತ್ರ ವಿಚರತ್ಸಮದೃಶ್ಯತ ।
ತಯೋಃ ಕುಲಿಂಗೀ ಸಹಸಾ ಲುಬ್ಧಕೇನ ಪ್ರಲೋಭಿತಾ ॥ ೫೧ ॥

ಒಂದು ದಿನ ಅವನು ಒಂದು ಕುಲಿಂಗಪಕ್ಷಿಯ ಜೋಡಿಯು ಕಾಳು ತಿನ್ನುತ್ತಿರುವುದನ್ನು ನೋಡಿದನು. ಅವುಗಳಲ್ಲಿ ಅವನು

ಸಾಸಜ್ಜತ ಸಿಚಸ್ತಂತ್ಯಾಂ ಮಹಿಷೀ ಕಾಲಯಂತ್ರಿತಾ ।
ಕುಲಿಂಗಸ್ತಾಂ ತಥಾಽಽಪನ್ನಾಂ ನಿರೀಕ್ಷ್ಯ ಭೃಶದುಃಖಿತಃ ।
ಸ್ನೇಹಾದಕಲ್ಪಃ ಕೃಪಣಃ ಕೃಪಣಾಂ ಪರ್ಯದೇವಯತ್
॥ ೫೨ ॥

ಅಹೋ ಅಕರುಣೋ ದೇವಃ ಸ್ತ್ರಿಯಾಽಽಕರುಣಯಾ ವಿಭುಃ ।
ಕೃಪಣಂ ಮಾನುಶೋಚಂತ್ಯಾ ದೀನಯಾ ಕಿಂ ಕರಿಷ್ಯತಿ
॥ ೫೩ ॥

ಕಾಮಂ ನಯತು ಮಾಂ ದೇವಃ ಕಿಮರ್ಧೇನಾತ್ಮನೋ ಹಿ ಮೇ ।
ದೀನೇನ ಜೀವತಾ ದುಃಖಮನೇನ ವಿಧುರಾಯುಷಾ
॥ ೫೪ ॥

ಕಥಂ ತ್ವಜಾತಪಕ್ಷಾಂಸ್ತಾನ್ಮಾತೃಹೀನಾನ್ಬಿಭರ್ಮ್ಯಹಮ್ ।
ಮಂದಭಾಗ್ಯಾಃ ಪ್ರತೀಕ್ಷಂತೇ ನೀಡೇ ಮೇ ಮಾತರಂ ಪ್ರಜಾಃ
॥ ೫೫ ॥

ಏವಂ ಕುಲಿಂಗಂ ವಿಲಪಂತಮಾರಾತ್
ಪ್ರಿಯಾವಿಯೋಗಾತುರಮಶ್ರುಕಂಠಮ್ ।
ಸ ಏವ ತಂ ಶಾಕುನಿಕಃ ಶರೇಣ
ವಿವ್ಯಾಧ ಕಾಲಪ್ರಹಿತೋ ವಿಲೀನಃ ॥ ೫೬ ॥

ಏವಂ ಯೂಯಮಪಶ್ಯಂತ್ಯ ಆತ್ಮಾಪಾಯಮಬುದ್ಧಯಃ ।
ನೈನಂ ಪ್ರಾಪ್ಸ್ಯಥ ಶೋಚಂತ್ಯಃ ಪತಿಂ ವರ್ಷಶತೈರಪಿ
॥ ೫೭ ॥

*ಹಿರಣ್ಯಕಶಿಪುರುವಾಚ*

ಬಾಲ ಏವಂ ಪ್ರವದತಿ ಸರ್ವೇ ವಿಸ್ಮಿತಚೇತಸಃ ।
ಜ್ಞಾತಯೋ ಮೇನಿರೇ ಸರ್ವಮನಿತ್ಯಮಯಥೋತ್ಥಿತಮ್
॥ ೫೮ ॥

ಯಮ ಏತದುಪಾಖ್ಯಾಯ ತತ್ರೈವಾಂತರಧೀಯತ ।
ಜ್ಞಾತಯೋಽಪಿ ಸುಯಜ್ಞಸ್ಯ ಚಕ್ರುರ್ಯತ್ಸಾಂಪರಾಯಿಕಮ್
॥ ೫೯ ॥

ತತಃ ಶೋಚತ ಮಾ ಯೂಯಂ ಪರಂ ಚಾತ್ಮಾನಮೇವ ಚ ।
ಕ ಆತ್ಮಾ ಕಃ ಪರೋ ವಾತ್ರ ಸ್ವೀಯಃ ಪಾರಕ್ಯ ಏವ ವಾ ।
ಸ್ವಪರಾಭಿನಿವೇಶೇನ ವಿನಾಜ್ಞಾನೇನ ದೇಹಿನಾಮ್
॥ ೬೦ ॥

ಹೆಣ್ಣುಹಕ್ಕಿಯನ್ನು ಶೀಘ್ರವಾಗಿ ಬಲೆಯಲ್ಲಿ ಹಿಡಿದು ಬಿಟ್ಟನು. ॥ ೫೧ ॥ ಅದು ಕಾಲವಶದಿಂದ ಬಲೆಯಲ್ಲಿ ಸಿಕ್ಕಿಹಾಕಿಕೊಂಡು ಒದ್ದಾಡತೊಡಗಿತು. ತನ್ನ ಮಡದಿಯ ಆ ವಿಪತ್ತನ್ನು ಕಂಡು ಗಂಡು ಹಕ್ಕಿಗೆ ಅಪಾರವಾದ ಶೋಕವುಂಟಾಯಿತು. ಆ ಬಡಪಾಯಿಗೆ ಅದನ್ನು ಬಿಡಿಸಲಾಗದಿದ್ದರೂ, ಸ್ನೇಹವಶದಿಂದ ಆ ಹೆಣ್ಣುಪಕ್ಷಿಗಾಗಿ ವಿಲಾಪಿಸತೊಡಗಿತು. ॥ ೫೨ ॥ ಈ ವಿಧಾತನು ಎಲ್ಲವನ್ನೂ ಮಾಡಬಲ್ಲನು, ಆದರೆ ಇವನು ಅತ್ಯಂತ ನಿರ್ದಯಿಯು! ನನ್ನ ಸಹಚರಿಯು ಮೊದಲನೆಯದಾಗಿ ಹೆಂಗಸು, ಎರಡನೆಯದಾಗಿ ಭಾಗ್ಯಹೀನನಾದ ನನ್ನ ಕುರಿತು ಶೋಕಿಸುತ್ತಾ ತುಂಬಾ ದೀನತೆಯಿಂದ ಒದ್ದಾಡುತ್ತಿರುವಳು. ಈ ಬಡಪಾಯಿಯನ್ನು ಹೀಗೆ ವಿಪತ್ತಿಗೆ ತಳ್ಳಿ ಆ ವಿಧಿಗೆ ಏನು ಪ್ರಯೋಜನ ? ॥ ೫೩ ॥ ಹಾಗೆ ಕಾರಣವಿಲ್ಲದೆ ಕಷ್ಟಕೊಡುವುದೇ ಈತನ ಇಚ್ಛೆ ಇದ್ದರೆ ನನ್ನನ್ನೇ ಎತ್ತಿಕೊಂಡು ಹೋಗಲೀ. ಇವಳಿಲ್ಲದೆ ನನ್ನ ಈ ದೀನತೆ, ದುಃಖದಿಂದ ತುಂಬಿರುವ ವಿಧುರ ಜೀವನದಿಂದ ಏನು ಮಾಡಲಿ ? ॥ ೫೪ ॥ ಇನ್ನೂ ನನ್ನ ಮರಿಗಳ ರೆಕ್ಕೆಗಳೇ ಬಲಿತಿಲ್ಲ, ಈ ಮಡದಿಯು ಸತ್ತುಹೋದರೆ ತಬ್ಬಲಿಗಳಾದ ಆ ಮಕ್ಕಳನ್ನು ನಾನು ಹೇಗೆ ಸಾಕಲಿ ? ಅಯ್ಯೋ ಪಾಪ ! ಗೂಡಿನಲ್ಲಿ ಆ ನನ್ನ ಮರಿಗಳು ತಾಯಿಯ ದಾರಿಯನ್ನೇ ಎದುರು ನೋಡುತ್ತಿರಬಹುದು. ॥ ೫೫ ॥ ಹೀಗೆ ಆ ಪಕ್ಷಿಯು ಬಹಳ ವಿಧದಿಂದ ವಿಲಾಪಿಸತೊಡಗಿತು. ತನ್ನ ಸಂಗಾತಿಯ ವಿಯೋಗದಿಂದ ಅದು ಶೋಕದಲ್ಲಿ ಮುಳುಗಿಹೋಗಿತ್ತು. ಕಣ್ಣೀರಿನಿಂದ ಅದರ ಕಂಠ ಬಿಗಿದುಹೋಗಿತ್ತು. ಅಷ್ಟರಲ್ಲಿ ಕಾಲನಿಂದ ಪ್ರೇರಿತನಾದ ಅಲ್ಲೇ ಅಡಗಿಕೊಂಡಿದ್ದ ಆ ಬೇಟೆಗಾರನು ಅದರ ಮೇಲೆ ಬಲವಾದ ಬಾಣವನ್ನು ಬಿಟ್ಟು ಅದು ಅಲ್ಲೇ ಸತ್ತು ಉರುಳುವಂತೆ ಮಾಡಿದನು. ॥ ೫೬ ॥ ಮೂರ್ಖರಾದ ರಾಣಿಯರೇ ! ನಿಮ್ಮದೂ ಇದೇ ಸ್ಥಿತಿಯಾಗುವುದು. ನಿಮ್ಮ ಮೃತ್ಯುವು ನಿಮಗೆ ಕಂಡುಬರುತ್ತಿಲ್ಲ, ಅದಕ್ಕಾಗಿ ಗೋಳಾಡುತ್ತಿರುವಿರಿ ! ನೀವುಗಳು ಹೀಗೆ ನೂರು ವರ್ಷಗಳವರೆಗೆ ಶೋಕದಿಂದ ಎದೆಬಡಿದುಕೊಂಡರೂ ಇವನನ್ನು ಪಡೆಯಲಾರಿರಿ. ॥ ೫೭ ॥

**ಹಿರಣ್ಯಕಶಿಪು ಹೇಳಿದನು** – ಆ ಚಿಕ್ಕ ಹುಡುಗನ ಇಂತಹ ಜ್ಞಾನಪೂರ್ಣ ಮಾತುಗಳನ್ನು ಕೇಳಿ ಎಲ್ಲರೂ ಆಶ್ಚರ್ಯಚಕಿತರಾದರು. ಉಶೀನರ ನರೇಶನ ಬಂಧು-ಬಾಂಧವರೂ ಹಾಗೂ ಹೆಂಡಿರುಗಳೂ – ಸಮಸ್ತ ಸಂಸಾರವೂ ಮತ್ತು ಸುಖ-ದುಃಖಗಳು ಅನಿತ್ಯವಾಗಿ ಮಿಥ್ಯೆಯಾಗಿವೆ ಎಂಬ ಮಾತನ್ನು ಅರಿತು ಕೊಂಡರು. ॥ ೫೮ ॥ ಯಮರಾಜನು ಈ ಆಖ್ಯಾನವನ್ನು ಹೇಳಿ ಅಲ್ಲೇ ಅಂತರ್ಧಾನನಾದನು. ಬಂಧು-ಬಾಂಧವರೂ ಕೂಡ ಸುಯಜ್ಞನ ಅಂತ್ಯೇಷ್ಟಿಕ್ರಿಯೆಗಳನ್ನು ನಡೆಸಿದರು. ॥ ೫೯ ॥ ಅದಕ್ಕಾಗಿ ನೀವುಗಳೂ ತನಗಾಗಿ ಅಥವಾ ಇತರರಿಗಾಗಿ ಶೋಕ ಮಾಡಬೇಡಿರಿ. ಈ ಪ್ರಪಂಚದಲ್ಲಿ ಆತ್ಮನು ಯಾರು ಮತ್ತು ಆತನಿಂದ ಭಿನ್ನನಾದವನು ಯಾರು ? ಸ್ವಕೀಯನು ಯಾರು – ಪರಕೀಯನು ಯಾರು ? ಪ್ರಾಣಿಗಳಿಗೆ ಅಜ್ಞಾನದಿಂದಲೇ ಈ ತನ್ನವರು –ಪರಕೀಯರು ಎಂಬ ದುರಾಗ್ರಹವು ಉಂಟಾಗಿದೆ. ಅಜ್ಞಾನವಲ್ಲದೆ ಈ ಭೇದ-ಬುದ್ಧಿಗೆ ಬೇರೆ ಯಾವುದೇ ಕಾರಣವಿಲ್ಲ. ॥ ೬೦ ॥

ನಾರದ ಉವಾಚ

ಇತಿ ದೈತ್ಯಪತೇರ್ವಾಕ್ಯಂ ದಿತಿರಾಕರ್ಣ್ಯ ಸಸ್ನುಷಾ ।
ಪುತ್ರಶೋಕಂ ಕ್ಷಣಾತ್ತ್ಯಕ್ತ್ವಾ ತತ್ತ್ವೇ ಚಿತ್ತಮಧಾರಯತ್ ॥ ೬೧ ॥

**ನಾರದರು ಹೇಳಿದರು** – ಯುಧಿಷ್ಠಿರನೇ! ತನ್ನ ಸೊಸೆಯೊಂದಿಗೆ ದಿತಿಯು ಹಿರಣ್ಯಕಶಿಪುವಿನ ಈ ಮಾತುಗಳನ್ನು ಕೇಳಿ ಒಡನೆಯೇ ಪುತ್ರಶೋಕವನ್ನು ತ್ಯಜಿಸಿಬಿಟ್ಟಳು ಹಾಗೂ ತನ್ನ ಚಿತ್ತವನ್ನು ಪರಮ ತತ್ತ್ವಸ್ವರೂಪನಾದ ಪರಮಾತ್ಮನಲ್ಲಿ ತೊಡಗಿಸಿದಳು. ॥ ೬೧ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ
ದಿತಿಶೋಕಾಪನಯನಂ ನಾಮ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ
## ಹಿರಣ್ಯಕಶಿಪುವಿನ ತಪಸ್ಸು ಮತ್ತು ವರಪ್ರಾಪ್ತಿಯು

ನಾರದ ಉವಾಚ

ಹಿರಣ್ಯಕಶಿಪೂ ರಾಜನ್ ಅಜೇಯಮಜರಾಮರಮ್ ।
ಆತ್ಮಾನಮಪ್ರತಿದ್ವಂದ್ವಮೇಕರಾಜಂ ವ್ಯಧಿತ್ಸತ ॥ ೧ ॥

ಸ ತೇಪೇ ಮಂದರದ್ರೋಣ್ಯಾಂ ತಪಃ ಪರಮದಾರುಣಮ್ ।
ಊರ್ಧ್ವಬಾಹುರ್ನಭೋದೃಷ್ಟಿಃ ಪಾದಾಂಗುಷ್ಠಾಶ್ರಿತಾವನಿಃ ॥ ೨ ॥

ಜಟಾದೀಧಿತಿಭೀ ರೇಜೇ ಸಂವರ್ತಾರ್ಕ ಇವಾಂಶುಭಿಃ ।
ತಸ್ಮಿಂಸ್ತಪಸ್ತಪ್ಯಮಾನೇ ದೇವಾಃ ಸ್ಥಾನಾನಿ ಭೇಜಿರೇ ॥ ೩ ॥

ತಸ್ಯ ಮೂರ್ಧ್ನಃ ಸಮುದ್ಭೂತಃ ಸಧೂಮೋಽಗ್ನಿಸ್ತಪೋಮಯಃ ।
ತಿರ್ಯಗೂರ್ಧ್ವಮಧೋಲೋಕಾನತಪದ್ವಿಷ್ವಗೀರಿತಃ ॥ ೪ ॥

ಚುಕ್ಷುಭುರ್ನದ್ಯುದನ್ವಂತಃ ಸದ್ವೀಪಾದ್ರಿಶ್ಚಚಾಲ ಭೂಃ ।
ನಿಪೇತುಃ ಸಗ್ರಹಾಸ್ತಾರಾ ಜಜ್ವಲುಶ್ಚ ದಿಶೋ ದಶ ॥ ೫ ॥

ತೇನ ತಪ್ತಾ ದಿವಂ ತ್ಯಕ್ತ್ವಾ ಬ್ರಹ್ಮಲೋಕಂ ಯಯುಃ ಸುರಾಃ ।
ಧಾತ್ರೇ ವಿಜ್ಞಾಪಯಾಮಾಸುರ್ದೇವದೇವ ಜಗತ್ಪತೇ ॥ ೬ ॥

ದೈತ್ಯೇಂದ್ರತಪಸಾ ತಪ್ತಾ ದಿವಿ ಸ್ಥಾತುಂ ನ ಶಕ್ನುಮಃ ।
ತಸ್ಯ ಚೋಪಶಮಂ ಭೂಮನ್ವಿಧೇಹಿ ಯದಿ ಮನ್ಯಸೇ ।
ಲೋಕಾ ನ ಯಾವನ್ನಂಕ್ಷ್ಯಂತಿ ಬಲಿಹಾರಾಸ್ತವಾಭಿಭೂಃ ॥ ೭ ॥

**ನಾರದರು ಹೇಳುತ್ತಾರೆ** – ಎಲೈ ಯುಧಿಷ್ಠಿರನೇ! ಆ ಹಿರಣ್ಯಕಶಿಪುವು ತಾನು ಅಜೇಯನಾಗಬೇಕು, ಮುಪ್ಪು-ಸಾವುಗಳಿಲ್ಲದವನಾಗಬೇಕು. ಇಡೀ ಜಗತ್ತಿಗೆ ಏಕಚಕ್ರಾಧಿಪತಿಯಾಗ ಬೇಕು. ತನಗೆ ಯಾರೂ ಎದುರಾಳಿಗಳು ಇರದಂತೆ ಮಾಡಿ ಕೊಳ್ಳಬೇಕು –ಎಂದು ಸಂಕಲ್ಪಮಾಡಿದನು. ॥ ೧ ॥ ಅದಕ್ಕಾಗಿ ಅವನು ಮಂದರ ಪರ್ವತದ ತಪ್ಪಲಿಗೆ ಹೋಗಿ ಅಲ್ಲಿ ಅತ್ಯಂತ ದಾರುಣವಾದ ತಪಸ್ಸನ್ನು ಆಚರಿಸ ತೊಡಗಿದನು. ಕೈಗಳನ್ನು ಮೇಲಕ್ಕೆ ಎತ್ತಿಕೊಂಡು ಆಕಾಶದ ಕಡೆಗೆ ನೋಡುತ್ತಾ ಕಾಲಿನ ಹೆಬ್ಬೆರಳಿನ ಬಲದಿಂದ ಭೂಮಿಯ ಮೇಲೆ ನಿಂತುಕೊಂಡನು. ॥ ೨ ॥ ಆಗ ಅವನ ಜಟೆಗಳು ಪ್ರಳಯಕಾಲದ ಸೂರ್ಯಕಿರಣಗಳಂತೆ ಹೊಳೆಯುತ್ತಿದ್ದವು. ಅವನು ಹೀಗೆ ತಪಸ್ಸಿನಲ್ಲಿ ನಿರತನಾದಾಗ ದೇವತೆಗಳು ಹಿಂದಿನಂತೆ ತಮ್ಮ-ತಮ್ಮ ಸ್ಥಾನಗಳಲ್ಲಿ ನೆಲೆಗೊಂಡರು. ॥ ೩ ॥ ಬಹಳ ಕಾಲದವರೆಗೆ ತಪಸ್ಸು ಮಾಡಿದಾಗ ಅವನ ತಲೆಯಿಂದ ಹೊಗೆಯೊಂದಿಗೆ ತಪೋ ಜ್ವಾಲೆಯು ಹೊರಟು ಎಲ್ಲ ಕಡೆಗಳಲ್ಲಿಯೂ ಹರಡಿ ಕೊಂಡಿತು ಮತ್ತು ಮೇಲೂ, ಕೆಳಗೂ, ಅಕ್ಕಪಕ್ಕಗಳಲ್ಲಿಯೂ ಇದ್ದ ಲೋಕಗಳನ್ನು ಸುಡಲು ತೊಡಗಿತು. ॥ ೪ ॥ ಅದರ ಜ್ವಾಲೆಯಿಂದ ನದಿಗಳೂ, ಸಮುದ್ರಗಳೂ ಕುದಿಯತೊಡಗಿದವು. ದ್ವೀಪ ಮತ್ತು ಪರ್ವತಗಳಿಂದೊಡಗೂಡಿದ ಭೂಮಿಯು ನಡುಗ ತೊಡಗಿತು. ಗ್ರಹ-ನಕ್ಷತ್ರಗಳು ಉರುಳಿಬಿದ್ದವು. ದಶದಿಕ್ಕುಗಳೂ ಉರಿಯ ತೊಡಗಿದವು. ॥ ೫ ॥

ಹಿರಣ್ಯಕಶಿಪುವಿನ ಆ ತಪೋಮಯ ಅಗ್ನಿಜ್ವಾಲೆಗಳಿಂದ ಸ್ವರ್ಗದ ದೇವತೆಗಳೂ ಉರಿಯತೊಡಗಿದರು. ಅವರೆಲ್ಲರೂ ಗಾಬರಿಗೊಂಡು ಸ್ವರ್ಗದಿಂದ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮ ದೇವರಲ್ಲಿ ಪ್ರಾರ್ಥಿಸತೊಡಗಿದರು. ಓ ದೇವತೆಗಳಿಗೂ ಆರಾಧ್ಯ ದೇವನಾದ ಜಗತ್ಪಿತನಾದ ಬ್ರಹ್ಮದೇವರೇ! ನಾವುಗಳು ಹಿರಣ್ಯ ಕಶಿಪುವಿನ ತಪೋಜ್ವಾಲೆಗಳಿಂದ ಬೆಂದುಹೋಗುತ್ತಿದ್ದೇವೆ. ಈಗ ನಾವು ಸ್ವರ್ಗದಲ್ಲಿ ಇರಲಾರೆವು. ಓ ಅನಂತನೇ ಸರ್ವಾಧ್ಯಕ್ಷನೇ! ನಿನಗೆ ಉಚಿತವೆನಿಸಿದರೆ ನಿನ್ನ ಸೇವೆ ಮಾಡುವ ಜನತೆಯ ನಾಶವಾಗುವ ಮೊದಲೇ ಆ ಜ್ವಾಲೆಯನ್ನು ಶಾಂತಗೊಳಿಸು. ॥ ೬-೭ ॥

ತಸ್ಯಾಯಂ ಕಿಲ ಸಂಕಲ್ಪಶ್ಚರತೋ ದುಶ್ಚರಂ ತಪಃ ।
ಶ್ರೂಯತಾಂ ಕಿಂ ನ ವಿದಿತಸ್ತವಾಥಾಪಿ ನಿವೇದಿತಃ ॥ ೮ ॥

ಸೃಷ್ಟ್ವಾ ಚರಾಚರಮಿದಂ ತಪೋಯೋಗಸಮಾಧಿನಾ ।
ಅಧ್ಯಾಸ್ತೇ ಸರ್ವಧಿಷ್ಣ್ಯೇಭ್ಯಃ ಪರಮೇಷ್ಠೀ ನಿಜಾಸನಮ್ ॥ ೯ ॥

ತದಹಂ ವರ್ಧಮಾನೇನ ತಪೋಯೋಗಸಮಾಧಿನಾ ।
ಕಾಲಾತ್ಮನೋಶ್ಚ ನಿತ್ಯತ್ವಾತ್ಸಾಧಯಿಷ್ಯೇ ತಥಾಽಽತ್ಮನಃ ॥ ೧೦ ॥

ಅನ್ಯಥೇದಂ ವಿಧಾಸ್ಯೇಽಹಮಯಥಾಪೂರ್ವಮೋಜಸಾ ।
ಕಿಮನ್ಯೈಃ ಕಾಲನಿರ್ಧೂತೈಃ ಕಲ್ಪಾಂತೇ ವೈಷ್ಣವಾದಿಭಿಃ ॥ ೧೧ ॥

ಇತಿ ಶುಶ್ರುಮ ನಿರ್ಬಂಧಂ ತಪಃ ಪರಮಮಾಸ್ಥಿತಃ ।
ವಿಧತ್ಸ್ವಾನಂತರಂ ಯುಕ್ತಂ ಸ್ವಯಂ ತ್ರಿಭುವನೇಶ್ವರ ॥ ೧೨ ॥

ತವಾಸನಂ ದ್ವಿಜಗವಾಂ ಪಾರಮೇಷ್ಠ್ಯಂ ಜಗತ್ಪತೇ ।
ಭವಾಯ ಶ್ರೇಯಸೇ ಭೂತ್ಯೈ ಕ್ಷೇಮಾಯ ವಿಜಯಾಯ ಚ ॥ ೧೩ ॥

ಇತಿ ವಿಜ್ಞಾಪಿತೋ ದೇವೈರ್ಭಗವಾನಾತ್ಮಭೂರ್ನೃಪ ।
ಪರೀತೋ ಭೃಗುದಕ್ಷಾದ್ಯೈರ್ಯಯೌ ದೈತ್ಯೇಶ್ವರಾಶ್ರಮಮ್ ॥ ೧೪ ॥

ನ ದದರ್ಶ ಪ್ರತಿಚ್ಛನ್ನಂ ವಲ್ಮೀಕತೃಣಕೀಚಕೈಃ ।
ಪಿಪೀಲಿಕಾಭಿರಾಚೀರ್ಣಮೇದಸ್ತ್ವಙ್ಮಾಂಸಶೋಣಿತಮ್ ॥ ೧೫ ॥

ತಪಂತಂ ತಪಸಾ ಲೋಕಾನ್ಯಥಾಭ್ರಾಪಿಹಿತಂ ರವಿಮ್ ।
ವಿಲಕ್ಷ್ಯ ವಿಸ್ಮಿತಃ ಪ್ರಾಹ ಪ್ರಹಸನ್ ಹಂಸವಾಹನಃ ॥ ೧೬ ॥

ಬ್ರಹ್ಮೋವಾಚ

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ತಪಃಸಿದ್ಧೋಽಸಿ ಕಾಶ್ಯಪ ।
ವರದೋಽಹಮನುಪ್ರಾಪ್ತೋ ವ್ರಿಯತಾಮೀಪ್ಸಿತೋ ವರಃ ॥ ೧೭ ॥

ಎಲೈ ಭಗವಂತನೇ! ನೀನು ಎಲ್ಲವನ್ನೂ ಬಲ್ಲವನು. ಹೀಗಿದ್ದರೂ ನಾವು ನಮ್ಮ ಕಡೆಯಿಂದ – ಅವನು ಯಾವ ಅಭಿಪ್ರಾಯದಿಂದ ತಪಸ್ಸನ್ನು ಮಾಡುತ್ತಿದ್ದಾನೆಂಬುದನ್ನು ನಿವೇದಿಸಿಕೊಳ್ಳುವೆವು. ಕೇಳೋಣವಾಗಲಿ. 'ಬ್ರಹ್ಮದೇವರು ತಮ್ಮ ತಪಸ್ಸು ಮತ್ತು ಯೋಗದ ಪ್ರಭಾವದಿಂದ ಈ ಚರಾಚರ ಜಗತ್ತನ್ನು ಸೃಷ್ಟಿಸಿ ಎಲ್ಲ ಲೋಕಗಳಿಗೂ ಮೇಲಿನ ಸತ್ಯಲೋಕದಲ್ಲಿ ವಿರಾಜಿಸುತ್ತಿರುವಂತೆ ನಾನೂ ಕೂಡ ನನ್ನ ಉಗ್ರವಾದ ತಪಸ್ಸು ಮತ್ತು ಯೋಗದ ಪ್ರಭಾವದಿಂದ ಅದೇ ಪದವಿಯನ್ನು ಹಾಗೂ ಸ್ಥಾನವನ್ನು ಪಡೆದುಕೊಳ್ಳುವೆನು. ಒಂದು ಜನ್ಮದಲ್ಲಿ ಆಗದಿದ್ದರೆ ಅನೇಕ ಜನ್ಮಗಳಲ್ಲಿ, ಒಂದು ಯುಗದಲ್ಲಾಗದಿದ್ದರೆ ಅನೇಕ ಯುಗಗಳಲ್ಲಿ ಅದನ್ನು ಗಳಿಸಿಯೇ ಕೊಳ್ಳುವೆನು. ಏಕೆಂದರೆ ಸಮಯವು ಅಸೀಮವಾಗಿದೆ ಹಾಗೂ ಆತ್ಮನು ನಿತ್ಯನಾಗಿದ್ದಾನೆ. ॥ ೮-೧೦ ॥ ನನ್ನ ತಪಸ್ಸಿನ ಶಕ್ತಿಯಿಂದ ನಾನು ಪಾಪ-ಪುಣ್ಯಗಳ ನಿಯಮಗಳನ್ನು ತಲೆಕೆಳಗಾಗಿಸುವೆನು. ಈ ಜಗತ್ತಿನಲ್ಲಿ ಹಿಂದೆ ಎಂದೂ ಇಲ್ಲದ ಬದಲಾವಣೆಯನ್ನು ಮಾಡಿ ಬಿಡುವೆನು. ವೈಷ್ಣವಾದಿ ಲೋಕಗಳಲ್ಲಾದರೋ ಏನು ಮಹಿಮೆಯಿದ್ದೀತು? ಕಲ್ಪದ ಕೊನೆಯಲ್ಲಿ ಅವೂ ಕೂಡ ಕಾಲದ ದವಡೆಯಲ್ಲಿ ಸೇರಿ ಹೋಗುವುದು.* ॥ ೧೧ ॥ ಇಂತಹ ಹಟವನ್ನು ತೊಟ್ಟುಕೊಂಡೇ ಅವನು ತಪಸ್ಸು ಮಾಡುತ್ತಿದ್ದಾನೆ ಎಂದು ನಾವು ಕೇಳಿದ್ದೇವೆ. ನೀವು ಮೂರುಲೋಕಗಳಿಗೂ ಒಡೆಯರಾಗಿದ್ದೀರಿ. ಈಗ ತಮಗೆ ಉಚಿತವಾಗಿ ಕಂಡಂತೆ ಮಾಡಿರಿ. ॥ ೧೨ ॥ ಬ್ರಹ್ಮದೇವರೇ! ತಮ್ಮ ಈ ಸರ್ವಶ್ರೇಷ್ಠವಾದ ಪರಮೇಷ್ಠಿಪದವು ಬ್ರಾಹ್ಮಣರು ಹಾಗೂ ಗೋವುಗಳ ವೃದ್ಧಿ, ಕಲ್ಯಾಣ, ವಿಭೂತಿ, ಕುಶಲ ಮತ್ತು ವಿಜಯಕ್ಕಾಗಿಯೇ ಇದೆ. ಇದು ಎಲ್ಲಾದರೂ ಹಿರಣ್ಯಕಶಿಪುವಿನ ಕೈಗೆ ಸಿಕ್ಕಿದರೆ ಸಜ್ಜನರ ಮೇಲೆ ಸಂಕಟದ ಪರ್ವತವೇ ಬಿದ್ದಂತಾಗುವುದು. ॥ ೧೩ ॥

ಯುಧಿಷ್ಠಿರನೇ! ದೇವತೆಗಳು ಭಗವಾನ್ ಬ್ರಹ್ಮದೇವರಲ್ಲಿ ಹೀಗೆ ನಿವೇದಿಸಿಕೊಂಡಾಗ ಅವರು ಭೃಗು, ದಕ್ಷರೇ ಮುಂತಾದ ಪ್ರಜಾಪತಿಗಳೊಡನೆ ಹಿರಣ್ಯಕಶಿಪುವಿನ ಆಶ್ರಮಕ್ಕೆ ಹೋದರು. ॥ ೧೪ ॥ ಅಲ್ಲಿಗೆ ಹೋದಾಗ ಅವರಿಗೆ ಮೊದಲು ಅವನು ಕಾಣಿಸಲೇ ಇಲ್ಲ. ಏಕೆಂದರೆ, ಹುತ್ತದಿಂದ ಮತ್ತು ಹುಲ್ಲು-ಬಿದಿರು ಮೇಳೆಯಿಂದ ಅವನ ದೇಹವು ಮುಚ್ಚಿಹೋಗಿತ್ತು. ಇರುವೆಗಳು ಅವನ ದೇಹದ ಮೇದಸ್ಸು, ಚರ್ಮ, ಮಾಂಸ, ರಕ್ತ ಇವೆಲ್ಲವನ್ನು ಕಬಳಿಸಿಬಿಟ್ಟಿದ್ದುವು. ॥ ೧೫ ॥ ಮೋಡಗಳಿಂದ ಮುಚ್ಚಲ್ಪಟ್ಟ ಸೂರ್ಯನಂತೆ ಅವನು ತನ್ನ ತಪಸ್ಸಿನ ತೇಜದಿಂದ ಲೋಕಗಳನ್ನು ಸುಡುತ್ತಿದ್ದನು. ಅವನನ್ನು ನೋಡಿ, ಬ್ರಹ್ಮದೇವರೂ ಕೂಡ ವಿಸ್ಮಿತರಾಗಿ, ನಗುತ್ತಾ ಇಂತೆಂದರು. ॥ ೧೬ ॥

**ಬ್ರಹ್ಮದೇವರು ಹೇಳಿದರು** – ವತ್ಸ! ಹಿರಣ್ಯಕಶಿಪುವೇ! ಏಳು; ಮೇಲೇಳು! ನಿನಗೆ ಮಂಗಳವಾಗಲಿ. ಕಶ್ಯಪಪುತ್ರನೇ! ಈಗ ನಿನ್ನ ತಪಸ್ಸು ಸಿದ್ಧಿಸಿತು. ನಾನು ನಿನಗೆ ವರವನ್ನು ಕೊಡಲು ಬಂದಿರುವೆನು. ನಿನಗೆ ಇಷ್ಟವಾದ ವರವನ್ನು ಕೇಳಿಕೋ. ॥ ೧೭ ॥

* ವೈಕುಂಠಾದಿ ವೈಷ್ಣವ ನಿತ್ಯಧಾಮಗಳು ಅವಿನಾಶಿಯಾಗಿದ್ದರೂ, ಹಿರಣ್ಯಕಶಿಪುವು ತನ್ನ ಆಸುರೀ ಬುದ್ಧಿಯಿಂದ ಅವನ್ನು ಕಲ್ಪದ ಕೊನೆಯಲ್ಲಿ ನಾಶವಾಗುವುವು ಎಂದೇ ತಿಳಿಯುತ್ತಿದ್ದನು. ತಾಮಸೀ ಬುದ್ಧಿಗೆ ಹೀಗೆ ಎಲ್ಲವೂ ವಿಪರೀತವೇ ಕಂಡುಬರುತ್ತದೆ.

ಅದ್ರಾಕ್ಷಮಹಮೇತತ್ತೇ ಹೃತ್ಸಾರಂ ಮಹದದ್ಭುತಮ್ ।
ದಂಶಭಕ್ಷಿತದೇಹಸ್ಯ ಪ್ರಾಣಾ ಹ್ಯಸ್ಥಿಷು ಶೇರತೇ ॥ ೧೮ ॥

ನೈತತ್ಪೂರ್ವರ್ಷಯಶ್ಚಕ್ರುರ್ನ ಕರಿಷ್ಯಂತಿ ಚಾಪರೇ ।
ನಿರಂಬುರ್ಧಾರಯೇತ್ಪ್ರಾಣಾನ್ಕೋ ವೈ ದಿವ್ಯಸಮಾಃ ಶತಮ್ ॥ ೧೯ ॥

ವ್ಯವಸಾಯೇನ ತೇಽನೇನ ದುಷ್ಕರೇಣ ಮನಸ್ವಿನಾಮ್ ।
ತಪೋನಿಷ್ಠೇನ ಭವತಾ ಜಿತೋಽಹಂ ದಿತಿನಂದನ ॥ ೨೦ ॥

ತತಸ್ತ ಆಶಿಷಃ ಸರ್ವಾ ದದಾಮ್ಯ ಸುರಪುಂಗವ ।
ಮರ್ತ್ಯಸ್ಯ ತೇ ಅಮರ್ತ್ಯಸ್ಯ ದರ್ಶನಂ ನಾಫಲಂ ಮಮ ॥ ೨೧ ॥

*ನಾರದ ಉವಾಚ*

ಇತ್ಯುಕ್ತ್ವಾಽಽದಿಭವೋ ದೇವೋ ಭಕ್ಷಿತಾಂಗಂ ಪಿಪೀಲಿಕೈಃ ।
ಕಮಂಡಲುಜಲೇನೌಕ್ಷದ್ದಿವ್ಯೇನಾಮೋಘರಾಧಸಾ ॥ ೨೨ ॥

ಸ ತತ್ಕೀಚಕವಲ್ಮೀಕಾತ್ಸಹ ಓಜೋಬಲಾನ್ವಿತಃ ।
ಸರ್ವಾವಯವಸಂಪನ್ನೋ ವಜ್ರಸಂಹನನೋ ಯುವಾ ।
ಉತ್ಥಿತಸ್ತಪ್ತಹೇಮಾಭೋ ವಿಭಾವಸುರಿವೈಧಸಃ ॥ ೨೩ ॥

ಸ ನಿರೀಕ್ಷ್ಯಾಂಬರೇ ದೇವಂ ಹಂಸವಾಹಮವಸ್ಥಿತಮ್ ।
ನನಾಮ ಶಿರಸಾ ಭೂಮೌ ತದ್ದರ್ಶನಮಹೋತ್ಸವಃ ॥ ೨೪ ॥

ಉತ್ಥಾಯ ಪ್ರಾಂಜಲಿಃ ಪ್ರಹ್ವ ಈಕ್ಷಮಾಣೋ ದೃಶಾ ವಿಭುಮ್ ।
ಹರ್ಷಾಶ್ರುಪುಲಕೋದ್ಭೇದೋ ಗಿರಾ ಗದ್ಗದಯಾಗೃಣಾತ್ ॥ ೨೫ ॥

*ಹಿರಣ್ಯಕಶಿಪುರುವಾಚ*

ಕಲ್ಪಾಂತೇ ಕಾಲಸೃಷ್ಟೇನ ಯೋಽಂಧೇನ ತಮಸಾಽಽವೃತಮ್ ।
ಅಭಿವ್ಯನಗ್ಜಗದಿದಂ ಸ್ವಯಂಜ್ಯೋತಿಃ ಸ್ವರೋಚಿಷಾ ॥ ೨೬ ॥

ಆತ್ಮನಾ ತ್ರಿವೃತಾ ಚೇದಂ ಸೃಜತ್ಯವತಿ ಲುಂಪತಿ ।
ರಜಃಸತ್ತ್ವತಮೋಧಾಮ್ನೇ ಪರಾಯ ಮಹತೇ ನಮಃ ॥ ೨೭ ॥

ನಾನು ನಿನ್ನ ಹೃದಯದ ಅದ್ಭುತವಾದ ಬಲವನ್ನು ನೋಡಿದೆ. ಅಯ್ಯೋ ! ಇರುವೆ-ಸೊಳ್ಳೆಗಳು ನಿನ್ನ ದೇಹವನ್ನು ತಿಂದುಬಿಟ್ಟಿವೆ. ಆದರೂ ನಿನ್ನ ಪ್ರಾಣಗಳು ಅಸ್ಥಿಗತವಾಗಿ ಉಳಿದಿವೆ. ॥ ೧೮ ॥ ಇಂತಹ ಕಠಿಣವಾದ ತಪಸ್ಸನ್ನು ಹಿಂದೆ ಯಾವ ಋಷಿಯೂ ಮಾಡಿಲ್ಲ, ಮುಂದೆ ಯಾರೂ ಮಾಡಲಾರರು. ದೇವತೆಗಳ ದಿವ್ಯ ವಾದ ನೂರು ವರ್ಷಗಳವರೆಗೆ ನೀರೂ ಕುಡಿಯದೆ ಜೀವಿಸಿ ಯಾರು ತಾನೇ ಇರಬಲ್ಲರು ? ॥ ೧೯ ॥ ವತ್ಸ ಹಿರಣ್ಯಕಶಿಪು ! ನಿನ್ನ ಇಂತಹ ಕಾರ್ಯವನ್ನು ದೊಡ್ಡ-ದೊಡ್ಡ ಧೀರರು ಮಾತ್ರ ಕಷ್ಟದಿಂದ ಮಾಡಬಲ್ಲರು. ನೀನು ಈ ತಪೋನಿಷ್ಠೆಯಿಂದ ನನ್ನನ್ನು ನಿನ್ನ ವಶ ವಾಗಿಸಿಕೊಂಡು ಬಿಟ್ಟಿರುವೆ. ॥ ೨೦ ॥ ದೈತ್ಯಶಿರೋಮಣಿಯೇ ! ಇದರಿಂದ ಪ್ರಸನ್ನನಾದ ನಾನು ನೀನು ಬೇಡಿದ ವರವನ್ನು ಕೊಟ್ಟೇ ಬಿಡುವೆನು. ಸಾಯುವವನು ನೀನು, ಸಾಯದೇ ಇರುವ ಅಮರನು ನಾನು. ಆದ್ದರಿಂದ ನಿನಗಾದ ನನ್ನ ದರ್ಶನವು ನಿಷ್ಫಲವಾಗ ಲಾರದು. ॥ ೨೧ ॥

**ನಾರದರು ಹೇಳುತ್ತಾರೆ** – ಧರ್ಮನಂದನಾ ! ಇಷ್ಟು ಹೇಳಿ ಬ್ರಹ್ಮದೇವರು – ಇರುವೆಗಳಿಂದ ತಿಂದಿರುವ ಅವನ ಶರೀರದ ಮೇಲೆ ತನ್ನ ಕಮಂಡಲುವಿನ ದಿವ್ಯವೂ, ಅಮೋಘವೂ ಆದ ಪ್ರಭಾವಶಾಲಿ ನೀರನ್ನು ಚಿಮುಕಿಸಿದರು. ॥ ೨೨ ॥ ಆ ಜಲವನ್ನು ಪ್ರೋಕ್ಷಿಸುತ್ತಲೇ ಕಟ್ಟಿಗೆಯ ರಾಶಿಯಿಂದ ಬೆಂಕಿಯು ಉರಿದೇಳು ವಂತೆ ಅವನು ಬದಿರುಮೇಳಿ ಮತ್ತು ಹುತ್ತದ ಮಣ್ಣಿನಿಂದ ಎದ್ದು ನಿಂತನು. ಆಗ ಅವನ ದೇಹವು ಎಲ್ಲ ಅವಯವಗಳಿಂದ ಪರಿಪೂರ್ಣವಾಗಿ ಬಲಿಷ್ಠವಾಗಿತ್ತು. ಇಂದ್ರಿಯಗಳಿಗೆ ಶಕ್ತಿಯು ಬಂದು, ಮನಸ್ಸು ಎಚ್ಚರಗೊಂಡಿತ್ತು. ಎಲ್ಲ ಅಂಗಾಂಗಗಳು ವಜ್ರ ದಂತೆ ಕಠೋರ ಹಾಗೂ ಕಾದ ಚಿನ್ನದಂತೆ ಥಳ-ಥಳಿಸುತ್ತಿದ್ದವು. ॥ ೨೩॥ ತನ್ನ ಮುಂದೆ ಅಂತರಿಕ್ಷದಲ್ಲಿ ಹಂಸವಾಹನರಾಗಿ ಬ್ರಹ್ಮ ದೇವರು ನಿಂತಿರುವುದನ್ನು ಅವನು ನೋಡಿ, ಅವನಿಗೆ ಬಹಳ ಆನಂದವಾಯಿತು. ತನ್ನ ಶಿರಸ್ಸನ್ನು ಭೂಮಿಯ ಮೇಲಿರಿಸಿ ಅವನು ಬ್ರಹ್ಮದೇವರಿಗೆ ನಮಸ್ಕಾರ ಮಾಡಿದನು. ॥ ೨೪ ॥ ಮತ್ತೆ ಅಂಜಲಿ ಬದ್ಧನಾಗಿ ವಿನಮ್ರಭಾವದಿಂದ ನಿಂತುಕೊಂಡು, ತುಂಬುಪ್ರೇಮ ದಿಂದ ತನ್ನ ಕಣ್ಣುಗಳನ್ನು ಮಿಟುಕಿಸದೆ ಅವನನ್ನು ನೋಡುತ್ತಾ, ಗದ್ಗದ ವಾಣಿಯಿಂದ ಸ್ತುತಿಸತೊಡಗಿದನು. ಆಗ ಅವನ ಕಣ್ಣು ಗಳಿಂದ ಆನಂದಾಶ್ರುಗಳು ಹರಿಯುತ್ತಿದ್ದು, ಶರೀರವು ಪುಳಕಿತ ವಾಗಿತ್ತು. ॥ ೨೫ ॥

**ಹಿರಣ್ಯಕಶಿಪು ಹೇಳಿದನು** – ಕಲ್ಪಾಂತ್ಯದಲ್ಲಿ ಈ ಎಲ್ಲ ಸೃಷ್ಟಿಯು ಕಾಲನಿಂದ ಪ್ರೇರಿತವಾದ ತಮೋಗುಣದಿಂದ, ಘೋರ ಅಂಧಕಾರದಿಂದ ಮುಚ್ಚಿಹೋಗಿತ್ತು. ಆ ಸಮಯದಲ್ಲಿ ಸ್ವಯಂ ಪ್ರಕಾಶಸ್ವರೂಪನಾದ ನೀನೇ ನಿನ್ನ ತೇಜದಿಂದ ಪುನಃ ಇದನ್ನು ಪ್ರಕಟಿಸಿದೆ. ॥ ೨೬ ॥

ನೀನೇ ನಿನ್ನ ತ್ರಿಗುಣಮಯ ರೂಪದಿಂದ ಇದನ್ನು ರಚಿಸಿ, ರಕ್ಷಿಸಿ, ಸಂಹರಿಸುತ್ತಿರುವೆ. ನೀನೇ ಗುಣತ್ರಯಗಳಿಗೆ ಆಶ್ರಯ ನಾಗಿರುವೆ. ಎಲ್ಲರಿಗಿಂತಲೂ ಶ್ರೇಷ್ಠನೂ ದೊಡ್ಡವನೂ ನೀನೇ ಆಗಿರುವೆ. ಅಂತಹ ನಿನಗೆ ನಮಸ್ಕರಿಸುತ್ತೇನೆ. ॥ ೨೭ ॥

ನಮ ಆದ್ಯಾಯ ಬೀಜಾಯ ಜ್ಞಾನವಿಜ್ಞಾನಮೂರ್ತಯೇ ।
ಪ್ರಾಣೇಂದ್ರಿಯಮನೋಬುದ್ಧಿವಿಕಾರೈರ್ವ್ಯಕ್ತಿಮೀಯುಷೇ ॥ ೨೮ ॥

ತ್ವಮೀಶಿಷೇ ಜಗತಸ್ತಸ್ಥುಷಶ್ಚ
ಪ್ರಾಣೇನ ಮುಖ್ಯೇನ ಪತಿಃ ಪ್ರಜಾನಾಮ್ ।
ಚಿತ್ತಸ್ಯ ಚಿತ್ತೇರ್ಮನಇಂದ್ರಿಯಾಣಾಂ
ಪತಿರ್ಮಹಾನ್ಭೂತಗುಣಾಶಯೇಶಃ ॥ ೨೯ ॥

ತ್ವಂ ಸಪ್ತತಂತೂನ್ವಿತನೋಷಿ ತನ್ವಾ
ತ್ರಯ್ಯಾ ಚಾತುರ್ಹೋತ್ರಕವಿದ್ಯಯಾ ಚ ।
ತ್ವಮೇಕ ಆತ್ಮಾಽಽತ್ಮವತಾಮನಾದಿ-
ರನಂತಪಾರಃ ಕವಿರಂತರಾತ್ಮಾ ॥ ೩೦ ॥

ತ್ವಮೇವ ಕಾಲೋಽನಿಮಿಷೋ ಜನಾನಾ-
ಮಾಯುರ್ಲವಾದ್ಯಾವಯವೈಃ ಕ್ಷಿಣೋಷಿ ।
ಕೂಟಸ್ಥ ಆತ್ಮಾ ಪರಮೇಷ್ಠ್ಯಜೋ ಮಹಾಂ-
ಸ್ತ್ವಂ ಜೀವಲೋಕಸ್ಯ ಚ ಜೀವ ಆತ್ಮಾ ॥ ೩೧ ॥

ತ್ವತ್ತಃ ಪರಂ ನಾಪರಮಪ್ಯನೇಜ-
ದೇಜಚ್ಚ ಕಿಂಚಿದ್ವ್ಯತಿರಿಕ್ತಮಸ್ತಿ ।
ವಿದ್ಯಾಃ ಕಲಾಸ್ತೇ ತನವಶ್ಚ ಸರ್ವಾ
ಹಿರಣ್ಯಗರ್ಭೋಽಸಿ ಬೃಹತ್ತ್ರಿಪೃಷ್ಠಃ ॥ ೩೨ ॥

ವ್ಯಕ್ತಂ ವಿಭೋ ಸ್ಥೂಲಮಿದಂ ಶರೀರಂ
ಯೇನೇಂದ್ರಿಯಪ್ರಾಣಮನೋಗುಣಾಂಸ್ತ್ವಮ್ ।
ಭುಂಕ್ಷೇ ಸ್ಥಿತೋ ಧಾಮನಿ ಪಾರಮೇಷ್ಠ್ಯೇ
ಅವ್ಯಕ್ತ ಆತ್ಮಾ ಪುರುಷಃ ಪುರಾಣಃ ॥ ೩೩ ॥

ಅನಂತಾವ್ಯಕ್ತರೂಪೇಣ ಯೇನೇದಮಖಿಲಂ ತತಮ್ ।
ಚಿದಚಿಚ್ಛಕ್ತಿಯುಕ್ತಾಯ ತಸ್ಮೈ ಭಗವತೇ ನಮಃ ॥ ೩೪ ॥

ಯದಿ ದಾಸ್ಯಸ್ಯಭಿಮತಾನ್ ವರಾನ್ಮೇ ವರದೋತ್ತಮ ।
ಭೂತೇಭ್ಯಸ್ತ್ವದ್ವಿಸೃಷ್ಟೇಭ್ಯೋ ಮೃತ್ಯುರ್ಮಾ ಭೂನ್ಮಮ ಪ್ರಭೋ ॥ ೩೫ ॥

ನೀನೇ ಜಗತ್ತಿನ ಮೂಲಕಾರಣನು. ಜ್ಞಾನ-ವಿಜ್ಞಾನಗಳು ನಿನ್ನ ಮೂರ್ತಿಯೇ ಆಗಿದೆ. ಪ್ರಾಣ, ಇಂದ್ರಿಯಗಳು, ಮನಸ್ಸು, ಬುದ್ಧಿ ಮುಂತಾದ ವಿಕಾರಗಳಿಂದ ಪ್ರಕಟಗೊಳ್ಳುವ ನಿನಗೆ ನಮಸ್ಕಾರವು. ॥ ೨೮ ॥ ನೀನೇ ಮುಖ್ಯಪ್ರಾಣ ಸೂತ್ರಾತ್ಮನ ರೂಪದಲ್ಲಿ ಚರಾಚರ ಜಗತ್ತನ್ನು ನಿನ್ನ ನಿಯಂತ್ರಣದಲ್ಲಿ ಇರಿಸಿಕೊಳ್ಳುವೆ. ನೀನೇ ಪ್ರಜೆಯ ರಕ್ಷಕನಾಗಿರುವೆ. ಭಗವಂತಾ! ಚಿತ್ತ, ಚೈತನ್ಯ, ಮನಸ್ಸು, ಇಂದ್ರಿಯಗಳ ಸ್ವಾಮಿಯೂ ನೀನೇ ಆಗಿರುವೆ. ಪಂಚಭೂತಗಳು, ಶಬ್ದಾದಿ ವಿಷಯಗಳು ಮತ್ತು ಅವುಗಳ ಸಂಸ್ಕಾರಗಳನ್ನು ರಚಿಸುವವನೂ, ಮಹತ್ತತ್ತ್ವದ ರೂಪದಲ್ಲಿಯೂ ನೀನೇ ಇರುವೆ. ॥ ೨೯ ॥ ಹೋತಾ, ಅಧ್ವರ್ಯು, ಬ್ರಹ್ಮಾ, ಉದ್ಗಾತಾ – ಈ ನಾಲ್ಕು ಋತ್ವಿಜರಿಂದ ನೆರವೇರುವ ಯಜ್ಞದ ಪ್ರತಿಪಾದನೆ ಮಾಡುವ ವೇದವೇ ನಿನ್ನ ಶರೀರವಾಗಿದೆ. ಅವುಗಳ ಮೂಲಕ ಅಗ್ನಿಷ್ಟೋಮ ಮುಂತಾದ ಏಳು ಯಜ್ಞಗಳನ್ನು ನೀನೇ ವಿಸ್ತಾರಮಾಡುವೆ. ನೀನೇ ಸಮಸ್ತ ಪ್ರಾಣಿಗಳ ಆತ್ಮನಾಗಿರುವೆ. ಏಕೆಂದರೆ, ನೀನು ಅನಾದಿಯೂ, ಅನಂತನೂ, ಅಪಾರನೂ, ಸರ್ವಜ್ಞನೂ, ಸರ್ವಾಂತರ್ಯಾಮಿಯೂ ಆಗಿರುವೆ. ॥ ೩೦ ॥ ನೀನೇ ಕಾಲನಾಗಿರುವೆ. ನೀನು ಪ್ರತಿಕ್ಷಣವೂ ಎಚ್ಚರವಾಗಿದ್ದು ತನ್ನ ಕ್ಷಣ, ಲವ ಮುಂತಾದ ವಿಭಾಗಗಳಿಂದ ಜನರ ಆಯುಷ್ಯವನ್ನು ಕ್ಷೀಣಗೊಳಿಸುತ್ತಿರುವೆ. ಹೀಗಿದ್ದರೂ ನೀನು ನಿರ್ವಿಕಾರನಾಗಿರುವೆ. ಏಕೆಂದರೆ, ಜ್ಞಾನಸ್ವರೂಪನೂ, ಪರಮೇಶ್ವರನೂ, ಜನ್ಮರಹಿತನೂ, ಮಹಾನ್ ಆಗಿರುವ ನೀನು ಸಮಸ್ತ ಜೀವಿಗಳಿಗೂ ಜೀವನವನ್ನು ಕೊಡುವ ಅಂತರಾತ್ಮನಾಗಿರುವೆ. ॥ ೩೧ ॥ ಪ್ರಭೋ! ನಿನ್ನಿಂದ ಬೇರೆಯಾದ ಕಾರ್ಯ, ಕಾರಣ, ಚಲ ಮತ್ತು ಅಚಲವಾದ ಯಾವ ವಸ್ತುವೂ ಇಲ್ಲ. ಸಮಸ್ತ ವಿದ್ಯೆಗಳೂ ಕಲೆಗಳೂ ನಿನ್ನ ಶರೀರಗಳೇ ಆಗಿವೆ. ತ್ರಿಗುಣಮಯವಾದ ಮಾಯೆಯನ್ನು ಮೀರಿರುವ ಸ್ವಯಂ ಬ್ರಹ್ಮನು ನೀನೇ ಆಗಿರುವೆ. ಈ ಸ್ವರ್ಣಮಯ ಬ್ರಹ್ಮಾಂಡವು ನಿನ್ನ ಗರ್ಭದಲ್ಲೇ ಅಡಗಿದೆ. ನೀನು ಇದನ್ನು ನಿನ್ನಿಂದಲೇ ಪ್ರಕಟಗೊಳಿಸಿರುವೆ. ॥ ೩೨ ॥ ಪ್ರಭೋ! ಈ ವ್ಯಕ್ತವಾದ ಬ್ರಹ್ಮಾಂಡವು ನಿನ್ನ ಸ್ಥೂಲಶರೀರವಾಗಿದೆ. ಇದರಿಂದ ನೀನು ಇಂದ್ರಿಯಗಳು, ಪ್ರಾಣ ಮತ್ತು ಮನಸ್ಸಿನ ವಿಷಯಗಳನ್ನು ಉಪಭೋಗಿಸುತ್ತಿರುವೆ. ಆದರೆ ಆಗಲೂ ನೀನೇ ನಿನ್ನ ಪರಮ ಐಶ್ವರ್ಯಮಯ ಸ್ವರೂಪದಲ್ಲೇ ಸ್ಥಿತನಾಗಿರುವೆ. ವಾಸ್ತವವಾಗಿ ನೀನೇ ಪುರಾಣ ಪುರುಷನು. ಸ್ಥೂಲ-ಸೂಕ್ಷ್ಮಗಳನ್ನು ಮೀರಿರುವ ಬ್ರಹ್ಮಸ್ವರೂಪನೇ ಆಗಿದ್ದೀಯೆ. ॥ ೩೩ ॥ ನೀನು ಅನಂತನಾಗಿದ್ದು, ಅವ್ಯಕ್ತಸ್ವರೂಪದಿಂದ ಇಡೀ ಜಗತ್ತನ್ನು ವ್ಯಾಪಿಸಿಕೊಂಡಿರುವೆ. ಚೇತನ ಮತ್ತು ಅಚೇತನ ಎರಡೂ ನಿನ್ನ ಶಕ್ತಿಗಳೇ ಆಗಿವೆ. ಇಂತಹ ಭಗವಂತಾ! ನಾನು ನಿನಗೆ ನಮಸ್ಕರಿಸುತ್ತೇನೆ. ॥ ೩೪ ॥

ಪ್ರಭುವೇ! ನೀನೇ ವರ ಕೊಡುವವರಲ್ಲಿ ಸರ್ವಶ್ರೇಷ್ಠನಾಗಿರುವೆ. ನೀನು ನನಗೆ ಅಭೀಷ್ಟವಾದ ವರವನ್ನು ಕೊಡುವುದಾದರೆ – ನೀನು ಸೃಷ್ಟಿಸಿರುವ ಯಾವುದೇ ಪ್ರಾಣಿಯಿಂದಲೂ, ಬೇಕಾದರೆ ಮನುಷ್ಯನಿರಲಿ, ಪಶು, ಪ್ರಾಣಿಯಾಗಿರಲಿ, ಅಪ್ರಾಣಿಯಾಗಿರಲಿ, ದೇವತೆ, ದೈತ್ಯ, ನಾಗಗಳು ಮುಂತಾದ ಯಾರಿಂದಲೂ ನನ್ನ ಮೃತ್ಯುವು ಆಗದಿರಲಿ. ಒಳಗೆ-ಹೊರಗೆ, ಹಗಲಲ್ಲಿ-ರಾತ್ರಿಯಲ್ಲಿ,

ನಾಂತರ್ಬಹಿರ್ದಿವಾ ನಕ್ತಮನ್ಯಸ್ಮಾದಪಿ ಚಾಯುಧೈಃ ।
ನ ಭೂಮೌ ನಾಂಬರೇ ಮೃತ್ಯುರ್ನ ನರೈರ್ನ ಮೃಗೈರಪಿ ॥ ೩೬ ॥

ವ್ಯಸುಭಿರ್ವಾಸುಮದ್ಭಿರ್ವಾ ಸುರಾಸುರಮಹೋರಗೈಃ ।
ಅಪ್ರತಿದ್ವಂದ್ವತಾಂ ಯುದ್ಧೇ ಐಕಪತ್ಯಂ ಚ ದೇಹಿನಾಮ್ ॥ ೩೭ ॥

ಸರ್ವೇಷಾಂ ಲೋಕಪಾಲಾನಾಂ ಮಹಿಮಾನಂ ಯಥಾಽಽತ್ಮನಃ ।
ತಪೋಯೋಗಪ್ರಭಾವಾಣಾಂ ಯನ್ನ ರಿಷ್ಯತಿ ಕರ್ಹಿಚಿತ್ ॥ ೩೮ ॥

ಯಾವುದೇ ಅಸ್ತ್ರ-ಶಸ್ತ್ರಗಳಿಂದಾಗಲೀ, ಭೂಮಿಯಲ್ಲಾಗಲೀ, ಆಕಾಶದಲ್ಲಾಗಲೀ, ಯಾವುದರಿಂದಲೂ, ಎಲ್ಲೆಯಾಗಲೀ, ಯಾವಾಗಲೇ ಆಗಲೀ ನನಗೆ ಮರಣವುಂಟಾಗದಿರಲಿ. ಯುದ್ಧದಲ್ಲಿ ನನಗೆ ಎದುರಾಳಿಗಳು ಯಾರೂ ಇಲ್ಲದಿರಲಿ. ನಾನು ಎಲ್ಲ ಪ್ರಾಣಿಗಳಿಗೂ ಏಕಚ್ಛತ್ರಾಧಿಪತಿಯಾಗುವಂತೆ ವರವನ್ನು ಕರುಣಿಸು. ॥ ೩೫-೩೭ ॥ ಇಂದ್ರಾದಿ ಸಮಸ್ತ ಲೋಕಪಾಲಕರಲ್ಲಿ ಯಾವ ಮಹಿಮೆಯುಂಟೋ ಅಂತಹ ಮಹಿಮೆಯು ನನಗೂ ಇರಲಿ. ತಪಸ್ವಿಗಳಲ್ಲಿ ಯೋಗಿಗಳಲ್ಲಿ ಇರುವ ಅಕ್ಷಯವಾದ ಐಶ್ವರ್ಯವನ್ನು ನನಗೂ ಅನುಗ್ರಹಿಸು. ॥ ೩೮ ॥

ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ
ಹಿರಣ್ಯಕಶಿಪೋರ್ವರಯಾಚನಂ ನಾಮ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ಹಿರಣ್ಯಕಶಿಪುವಿನ ಅತ್ಯಾಚಾರಗಳು ಮತ್ತು ಪ್ರಹ್ಲಾದನ ಗುಣಗಳ ವರ್ಣನೆ

*ನಾರದ ಉವಾಚ*

ಏವಂ ವೃತಃ ಶತಧೃತಿರ್ಹಿರಣ್ಯಕಶಿಪೋರಥ ।
ಪ್ರಾದಾತ್ತತ್ತಪಸಾ ಪ್ರೀತೋ ವರಾಂಸ್ತಸ್ಯ ಸುದುರ್ಲಭಾನ್ ॥ ೧ ॥

*ಬ್ರಹ್ಮೋವಾಚ*

ತಾತೇಮೇ ದುರ್ಲಭಾಃ ಪುಂಸಾಂ ಯಾನ್ವೃಣೀಷೇ ವರಾನ್ಮಮ ।
ತಥಾಪಿ ವಿತರಾಮ್ಯಂಗ ವರಾನ್ಯದಪಿ ದುರ್ಲಭಾನ್ ॥ ೨ ॥

ತತೋ ಜಗಾಮ ಭಗವಾನಮೋಘಾನುಗ್ರಹೋ ವಿಭುಃ ।
ಪೂಜಿತೋಽಸುರವರ್ಯೇಣ ಸ್ತೂಯಮಾನಃ ಪ್ರಜೇಶ್ವರೈಃ ॥ ೩ ॥

ಏವಂ ಲಬ್ಧವರೋ ದೈತ್ಯೋ ಬಿಭ್ರದ್ಧೇಮಮಯಂ ವಪುಃ ।
ಭಗವತ್ಯಕರೋದ್ದ್ವೇಷಂ ಭ್ರಾತುರ್ವಧಮನುಸ್ಮರನ್ ॥ ೪ ॥

ಸ ವಿಜಿತ್ಯ ದಿಶಃ ಸರ್ವಾ ಲೋಕಾಂಶ್ಚ ತ್ರೀನ್ಮಹಾಸುರಃ ।
ದೇವಾಸುರಮನುಷ್ಯೇಂದ್ರಾನ್ಗಂಧರ್ವಗರುಡೋರಗಾನ್ ॥ ೫ ॥

ಸಿದ್ಧಚಾರಣವಿದ್ಯಾಧ್ರಾನೃಷೀನ್ಪಿತೃಪತೀನ್ಮನೂನ್ ।
ಯಕ್ಷರಕ್ಷಃ ಪಿಶಾಚೇಶಾನ್ಪ್ರೇತಭೂತಪತೀನಥ ॥ ೬ ॥

ಸರ್ವಸತ್ತ್ವಪತೀನ್‌ಜಿತ್ವಾ ವಶಮಾನೀಯ ವಿಶ್ವಜಿತ್ ।
ಜಹಾರ ಲೋಕಪಾಲಾನಾಂ ಸ್ಥಾನಾನಿ ಸಹ ತೇಜಸಾ ॥ ೭ ॥

**ನಾರದರು ಹೇಳುತ್ತಾರೆ** – ಯುಧಿಷ್ಠಿರನೇ! ಹಿರಣ್ಯಕಶಿಪು ಬ್ರಹ್ಮದೇವರಲ್ಲಿ ಹೀಗೆ ದುರ್ಲಭವಾದ ವರಗಳನ್ನು ಬೇಡಲು, ಅವರು ಅವನ ತಪಸ್ಸಿನಿಂದ ಪ್ರಸನ್ನರಾಗಿ ಅವನಿಗೆ ಆ ವರಗಳನ್ನು ಕರುಣಿಸಿದರು. ॥ ೧ ॥

**ಬ್ರಹ್ಮದೇವರು ಹೇಳಿದರು** – ಅಯ್ಯಾ ವತ್ಸ! ನೀನು ನನ್ನಲ್ಲಿ ಕೇಳಿರುವ ವರಗಳು ಮನುಷ್ಯರಿಗೆ ತುಂಬಾ ದುರ್ಲಭವಾದವುಗಳು. ಆದರೂ ಅವು ಅತಿದುರ್ಲಭವಾಗಿದ್ದರೂ ನಾನು ನಿನಗೆ ಅವೆಲ್ಲವನ್ನು ಕೊಡುತ್ತಿದ್ದೇನೆ. ॥ ೨ ॥ (ನಾರದರು ಹೇಳಿದರು) ಬ್ರಹ್ಮದೇವರ ವರದಾನವು ಎಂದೂ ಸುಳ್ಳಾಗುವುದಿಲ್ಲ. ಅವರು ಸಮರ್ಥರು ಮತ್ತು ಭಗವದ್ರೂಪರೇ ಆಗಿದ್ದಾರೆ. ವರಗಳು ದೊರೆತ ಬಳಿಕ ಹಿರಣ್ಯಕಶಿಪು ಅವರನ್ನು ಪೂಜಿಸಿದನು. ಅನಂತರ ಪ್ರಜಾಪತಿಗಳಿಂದ ತನ್ನ ಸ್ತುತಿಯನ್ನು ಕೇಳುತ್ತಾ ಅವರು ತಮ್ಮ ಲೋಕಕ್ಕೆ ಹೊರಟುಹೋದರು. ॥ ೩ ॥ ಬ್ರಹ್ಮದೇವರಿಂದ ವರಗಳನ್ನು ಪಡೆದುಕೊಂಡ ಅನಂತರ ಹಿರಣ್ಯಕಶಿಪುವಿನ ಶರೀರವು ಸುವರ್ಣದಂತೆ ಕಾಂತಿಯುಕ್ತವೂ, ಹೃಷ್ಟ- ಪುಷ್ಟವೂ ಆಯಿತು. ಅವನು ತನ್ನ ತಮ್ಮನ ಮೃತ್ಯುವನ್ನು ನೆನೆದು ಭಗವಂತನನ್ನು ದ್ವೇಷಿಸತೊಡಗಿದನು. ॥ ೪ ॥ ಆ ಮಹಾ ದೈತ್ಯನು ಎಲ್ಲ ದಿಕ್ಕುಗಳನ್ನು, ಮೂರುಲೋಕಗಳನ್ನು, ದೇವತೆಗಳನ್ನೂ, ಅಸುರರನ್ನೂ, ರಾಜರನ್ನೂ, ಗಂಧರ್ವರನ್ನೂ, ಗರುಡನನ್ನೂ, ಸರ್ಪರನ್ನೂ, ಸಿದ್ಧ-ಚಾರಣರನ್ನೂ, ವಿದ್ಯಾಧರರನ್ನೂ, ಋಷಿಗಳನ್ನೂ, ಪಿತೃಗಳ ಅಧಿಪತಿಗಳನ್ನೂ, ಮನುಗಳನ್ನೂ, ಯಕ್ಷರನ್ನೂ, ರಾಕ್ಷಸರನ್ನೂ, ಪಿಶಾಚರಾಜರನ್ನು, ಪ್ರೇತಗಳನ್ನೂ, ಭೂತಪತಿಗಳನ್ನೂ ಮತ್ತು ಸಮಸ್ತ ಪ್ರಾಣಿಗಳ ರಾಜರನ್ನೂ ಸೋಲಿಸಿ ವಶಪಡಿಸಿಕೊಂಡನು. ಇಷ್ಟೇ ಅಲ್ಲ, ವಿಶ್ವವಿಜಯಿಯಾದ ಆ ದೈತ್ಯನು ಲೋಕಪಾಲಕರ ಸ್ಥಾನ-ತೇಜಸ್ಸನ್ನು ಸೆಳೆದುಕೊಂಡನು. ॥ ೫-೭ ॥

ದೇವೋದ್ಯಾನಶ್ರಿಯಾ ಜುಷ್ಟಮಧ್ಯಾಸ್ತೇ ಸ್ಮ ತ್ರಿವಿಷ್ಟಪಮ್ ।
ಮಹೇಂದ್ರಭವನಂ ಸಾಕ್ಷಾನ್ನಿರ್ಮಿತಂ ವಿಶ್ವಕರ್ಮಣಾ ।
ತ್ರೈಲೋಕ್ಯಲಕ್ಷ್ಮ್ಯಾಯತನಮಧ್ಯುವಾಸಾಖಿಲರ್ದ್ಧಿಮತ್ ॥ ೮ ॥

ಯತ್ರ ವಿದ್ರುಮಸೋಪಾನಾ ಮಹಾಮಾರಕತಾ ಭುವಃ ।
ಯತ್ರ ಸ್ಫಾಟಿಕಕುಡ್ಯಾನಿ ವೈದೂರ್ಯಸ್ತಂಭಪಂಕ್ತಯಃ ॥ ೯ ॥

ಯತ್ರ ಚಿತ್ರವಿತಾನಾನಿ ಪದ್ಮರಾಗಾಸನಾನಿ ಚ ।
ಪಯಃಫೇನನಿಭಾಃ ಶಯ್ಯಾ ಮುಕ್ತಾದಾಮಪರಿಚ್ಛದಾಃ ॥ ೧೦ ॥

ಕೂಜದ್ಭಿರ್ನೂಪುರೈರ್ದೇವ್ಯಃ ಶಬ್ದಯಂತ್ಯ ಇತಸ್ತತಃ ।
ರತ್ನಸ್ಥಲೀಷು ಪಶ್ಯಂತಿ ಸುದತೀಃ ಸುಂದರಂ ಮುಖಮ್ ॥ ೧೧ ॥

ತಸ್ಮಿನ್ಮಹೇಂದ್ರಭವನೇ ಮಹಾಬಲೋ
ಮಹಾಮನಾ ನಿರ್ಜಿತಲೋಕ ಏಕರಾಟ್ ।
ರೇಮೇಽಭಿವಂದ್ಯಾಂಘ್ರಿಯುಗಃ ಸುರಾದಿಭಿಃ
ಪ್ರತಾಪಿತೈರೂರ್ಜಿತಚಂಡಶಾಸನಃ ॥ ೧೨ ॥

ತಮಂಗ ಮತ್ತಂ ಮಧುನೋರುಗಂಧಿನಾ
ವಿವೃತ್ತತಾಮ್ರಾಕ್ಷಮಶೇಷಧಿಷ್ಣ್ಯಪಾಃ ।
ಉಪಾಸತೋಪಾಯನಪಾಣಿಭಿರ್ವಿನಾ
ತ್ರಿಭಿಸ್ತಪೋಯೋಗಬಲೌಜಸಾಂ ಪದಮ್ ॥ ೧೩ ॥

ಜಗುರ್ಮಹೇಂದ್ರಾಸನಮೋಜಸಾ ಸ್ಥಿತಂ
ವಿಶ್ವಾವಸುಸ್ತುಂಬುರುರಸ್ಮದಾದಯಃ ।
ಗಂಧರ್ವಸಿದ್ಧಾ ಋಷಯೋಽಸ್ತುವನ್ಮುಹು-
ರ್ವಿದ್ಯಾಧರಾ ಅಪ್ಸರಸಶ್ಚ ಪಾಂಡವ ॥ ೧೪ ॥

ಸ ಏವ ವರ್ಣಾಶ್ರಮಿಭಿಃ ಕ್ರತುಭಿರ್ಭೂರಿದಕ್ಷಿಣೈಃ ।
ಇಜ್ಯಮಾನೋ ಹವಿರ್ಭಾಗಾನಗ್ರಹೀತ್ಸ್ವೇನ ತೇಜಸಾ ॥ ೧೫ ॥

ಅಕೃಷ್ಟಪಚ್ಯಾ ತಸ್ಯಾಸೀತ್ಸಪ್ತದ್ವೀಪವತೀ ಮಹೀ ।
ತಥಾ ಕಾಮದುಘಾ ದ್ಯೌಸ್ತು ನಾನಾಶ್ಚರ್ಯಪದಂ ನಭಃ ॥ ೧೬ ॥

ರತ್ನಾಕರಾಶ್ಚ ರತ್ನೌಘಾಂಸ್ತತ್ತ್ವಶ್ಚೋಹುರೂರ್ಮಿಭಿಃ ।
ಕ್ಷಾರಸೀಧುಘೃತಕ್ಷೌದ್ರದಧಿಕ್ಷೀರಾಮೃತೋದಕಾಃ ॥ ೧೭ ॥

ಈಗ ಅವನು ನಂದನವನವೇ ಮುಂತಾದ ಉದ್ಯಾನವನಗಳ ಸೌಂದರ್ಯದಿಂದ ಕೂಡಿದ ಸ್ವರ್ಗದಲ್ಲೇ ಇರತೊಡಗಿದನು. ಸ್ವಯಂ ವಿಶ್ವಕರ್ಮನೇ ರಚಿಸಿದ ಇಂದ್ರನ ಭವನವೇ ಅವನ ವಾಸ ಸ್ಥಾನವಾಯಿತು. ಆ ಅರಮನೆಯಲ್ಲಿ ಮೂರು ಲೋಕಗಳ ಸೌಂದರ್ಯದ ಮೂರ್ತಾಕಾರನಾಗಿ ವಾಸ ಮಾಡುತ್ತಿದ್ದನು. ಆತನು ಎಲ್ಲ ವಿಧದ ಸಂಪತ್ತುಗಳಿಂದ ಸಂಪನ್ನನಾಗಿದ್ದನು. ॥ ೮ ॥ ಆ ಅರಮನೆಯಲ್ಲಿ ಮೆಟ್ಟಲುಗಳು ಪಚ್ಚೆ ಮಣಿಗಳಿಂದಲೂ, ನೆಲಗಳು ಮರಕತ ಮಣಿಗಳಿಂದಲೂ, ಗೋಡೆಗಳು ಸ್ಫಟಿಕಮಣಿಗಳಿಂದಲೂ, ವೈಢೂರ್ಯ ಕಂಭಗಳಿಂದಲೂ, ಪದ್ಮರಾಗ ಮಣಿಗಳಿಂದ ನಿರ್ಮಿತ ಆಸನಗಳು ಇದ್ದವು. ಬಣ್ಣ-ಬಣ್ಣದ ತೋರಣಗಳೂ, ಹಾಲಿನ ನೊರೆಯಂತೆ ಶಯ್ಯೆಗಳು, ಅವುಗಳಿಗೆ ಮುತ್ತುಗಳ ಕುಚ್ಚುಗಳಿದ್ದು ಶೋಭಾಯ ಮಾನವಾಗಿತ್ತು. ॥ ೯-೧೦ ॥ ಸರ್ವಾಂಗಸುಂದರಿಯರಾದ ಅಪ್ಸರೆ ಯರು ತಮ್ಮ ಕಾಲಂದುಗೆಗಳ ಝಣ-ಝಣ ಧ್ವನಿಗೈಯುತ್ತಾ ರತ್ನಮಯ ಭೂಮಿಯಲ್ಲಿ ಅತ್ತ-ಇತ್ತ ಓಡಾಡುತ್ತಿದ್ದರು. ಕೆಲವೆಡೆ ಅದರಲ್ಲೇ ತಮ್ಮ ಸುಂದರ ಮುಖಗಳನ್ನು ನೋಡಿಕೊಳ್ಳುತ್ತಿದ್ದರು. ॥ ೧೧ ॥ ಮಹಾಬಲಶಾಲಿಯಾದ ಹಿರಣ್ಯಕಶಿಪು ಎಲ್ಲರನ್ನೂ ಜಯಿಸಿ ಏಕಚ್ಛತ್ರಾಪತಿಯಾಗಿ ಆ ಮಹೇಂದ್ರಭವನದಲ್ಲಿ ಯಥೇಷ್ಟವಾಗಿ ಸ್ವತಂತ್ರನಾಗಿ ವಿಹರಿಸುತ್ತಿದ್ದನು. ಅವನ ಶಾಸನವು ಎಷ್ಟು ಕಠೋರ ವಾಗಿತ್ತೆಂದರೆ – ದೇವ-ದಾನವರೆಲ್ಲರೂ ಭಯಭೀತರಾಗಿ ಅವನ ಅಡಿಗಳಿಗೆ ಅಡಿಗಡಿಗೆ ವಂದಿಸುತ್ತಿದ್ದರು. ॥ ೧೨ ॥ ಯುಧಿಷ್ಠಿರನೇ ! ಅವನು ಉತ್ಕಟವಾದ ಗಂಧವುಳ್ಳ ಮದ್ಯವನ್ನು ಕುಡಿದು ಉನ್ಮತ್ತನಾಗಿರುತ್ತ ಅವನ ಅಮಲೇರಿದ್ದ ಕಣ್ಣುಗಳು ಕೆಂಪಗಾಗಿದ್ದುವು. ತಪಸ್ಸು, ಯೋಗ, ಶಾರೀರಿಕ, ಮಾನಸಿಕ ಬಲಗಳಿಗೆ ಆಗರನಾಗಿದ್ದ ಅವನನ್ನು ಬ್ರಹ್ಮಾ, ವಿಷ್ಣು, ಮಹೇಶ್ವರರನ್ನು ಬಿಟ್ಟು ಉಳಿದ ಎಲ್ಲ ದೇವತೆಗಳು ತಮ್ಮ ಕೈಗಳಲ್ಲಿ ಕಪ್ಪ-ಕಾಣಿಕೆಗಳನ್ನು ಹಿಡಿದುಕೊಂಡು ಸೇವಿಸುತ್ತಿದ್ದರು. ॥ ೧೩ ॥ ಪಾಂಡುಪುತ್ರನೇ ! ಪೌರುಷದಿಂದ ಇಂದ್ರನ ಆಸನದಲ್ಲಿ ಕುಳಿತಿರುವಾಗ ವಿಶ್ವಾವಸು, ತುಂಬುರು ಮತ್ತು ನಾವೆಲ್ಲರೂ ಅವನ ಎದುರಿಗೆ ಗಾಯನ ಮಾಡುತ್ತಿದ್ದೆವು. ಹಾಗೆಯೇ ಗಂಧರ್ವರು, ಸಿದ್ಧರು, ಋಷಿಗಡಣ, ವಿದ್ಯಾಧರರೂ, ಅಪ್ಸರೆಯರೂ ಮತ್ತೆ-ಮತ್ತೆ ಅವನನ್ನು ಸ್ತುತಿ ಮಾಡುತ್ತಿದ್ದರು. ॥ ೧೪ ॥

ಯುಧಿಷ್ಠಿರನೇ ! ವರ್ಣಾಶ್ರಮ ಧರ್ಮಗಳನ್ನು ಪಾಲಿಸುತ್ತಿದ್ದ ಪುಣ್ಯಾತ್ಮರು ಮಾಡುತ್ತಿದ್ದ ದೊಡ್ಡ-ದೊಡ್ಡ ದಕ್ಷಿಣೆಯುಳ್ಳ ಯಜ್ಞ ಗಳ ಆಹುತಿಗಳನ್ನು ಆತನು ತನ್ನ ತೇಜಸ್ಸಿನಿಂದ ಕಸಿದು ಕೊಳ್ಳುತ್ತಿದ್ದನು. ॥ ೧೫ ॥ ಪೃಥ್ವಿಯ ಸಪ್ತದ್ವೀಪಗಳಲ್ಲಿಯೂ ಅವನ ಅಖಂಡ ರಾಜ್ಯವಿತ್ತು. ಎಲ್ಲ ಕಡೆಗಳಲ್ಲಿಯೂ ಉಳುಮೆಯಿಲ್ಲದೆಯೇ ಭೂಮಿಯು ಆಹಾರ ಬೆಳೆಗಳನ್ನು ನೀಡುತ್ತಿತ್ತು. ಅವನು ಬಯಸಿದೆಲ್ಲವೂ ಅಂತರಿಕ್ಷದಿಂದ ಅವನಿಗೆ ಸಿಗುತ್ತಿತ್ತು. ಆಕಾಶವು ಆತನಿಗೆ ಬಗೆ-ಬಗೆಯ ಆಶ್ಚರ್ಯಜನಕ ವಸ್ತುಗಳನ್ನು ತೋರಿಸಿ ಮನೋರಂಜನೆಯನ್ನು ಮಾಡುತ್ತಿತ್ತು. ॥ ೧೬ ॥ ಅದೇ ರೀತಿಯಲ್ಲಿ ಉಪ್ಪು, ಕಬ್ಬಿನ ಹಾಲು, ಸುರೆ, ತುಪ್ಪ, ಮೊಸರು, ಹಾಲು ಮತ್ತು ಸಿಹಿನೀರಿನ ಸಮುದ್ರಗಳೂ ಕೂಡ ತಮ್ಮ ಪತ್ನಿಯರಾದ ನದಿಗಳೊಂದಿಗೆ ಅಲೆಗಳ ಮೂಲಕ – ರತ್ನರಾಶಿಗಳನ್ನು ಅರ್ಪಿಸುತ್ತಿದ್ದುವು. ॥ ೧೭ ॥

ಶೈಲಾ ದ್ರೋಣೀಭಿರಾಕ್ರೀಡಂ ಸರ್ವರ್ತುಷು ಗುಣಾನ್ ದ್ರುಮಾಃ ।
ದಧಾರ ಲೋಕಪಾಲಾನಾಮೇಕ ಏವ ಪೃಥಗ್ಗುಣಾನ್ ॥ ೧೮ ॥

ಸ ಇತ್ಥಂ ನಿರ್ಜಿತಕಕುಬೇಕರಾಡ್ವಿಷಯಾನ್ ಪ್ರಿಯಾನ್ ।
ಯಥೋಪಜೋಷಂ ಭುಂಜಾನೋ ನಾತೃಪ್ಯದಜಿತೇಂದ್ರಿಯಃ ॥ ೧೯ ॥

ಏವಮೈಶ್ವರ್ಯಮತ್ತಸ್ಯ ದೃಪ್ತಸ್ಯೋಚ್ಛಾಸ್ತ್ರವರ್ತಿನಃ ।
ಕಾಲೋ ಮಹಾನ್ ವ್ಯತೀಯಾಯ ಬ್ರಹ್ಮಶಾಪಮುಪೇಯುಷಃ ॥ ೨೦ ॥

ತಸ್ಯೋಗ್ರದಂಡಸಂವಿಗ್ನಾಃ ಸರ್ವೇ ಲೋಕಾಃ ಸಪಾಲಕಾಃ ।
ಅನ್ಯತ್ರಾಲಬ್ಧಶರಣಾಃ ಶರಣಂ ಯಯುರಚ್ಯುತಮ್ ॥ ೨೧ ॥

ತಸ್ಯೈ ನಮೋಽಸ್ತು ಕಾಷ್ಠಾಯೈ ಯತ್ರಾತ್ಮಾ ಹರಿರೀಶ್ವರಃ ।
ಯದ್ಗತ್ವಾ ನ ನಿವರ್ತಂತೇ ಶಾಂತಾಃ ಸಂನ್ಯಾಸಿನೋಽಮಲಾಃ ॥ ೨೨ ॥

ಇತಿ ತೇ ಸಂಯತಾತ್ಮಾನಃ ಸಮಾಹಿತಧಿಯೋಽಮಲಾಃ ।
ಉಪತಸ್ಥುರ್ಹೃಷೀಕೇಶಂ ವಿನಿದ್ರಾ ವಾಯುಭೋಜನಾಃ ॥ ೨೩ ॥

ತೇಷಾಮಾವಿರಭೂದ್ವಾಣೀ ಅರೂಪಾ ಮೇಘನಿಃಸ್ವನಾ ।
ಸನ್ನಾದಯಂತೀ ಕಕುಭಃ ಸಾಧೂನಾಮಭಯಂಕರೀ ॥ ೨೪ ॥

ಮಾ ಭೈಷ್ಟ ವಿಬುಧಶ್ರೇಷ್ಠಾಃ ಸರ್ವೇಷಾಂ ಭದ್ರಮಸ್ತು ವಃ ।
ಮದ್ದರ್ಶನಂ ಹಿ ಭೂತಾನಾಂ ಸರ್ವಶ್ರೇಯೋಪಪತ್ತಯೇ ॥ ೨೫ ॥

ಜ್ಞಾತಮೇತಸ್ಯ ದೌರಾತ್ಮ್ಯಂ ದೈತೇಯಾಪಸದಸ್ಯ ಚ ।
ತಸ್ಯ ಶಾಂತಿಂ ಕರಿಷ್ಯಾಮಿ ಕಾಲಂ ತಾವತ್ಪ್ರತೀಕ್ಷತ ॥ ೨೬ ॥

ಯದಾ ದೇವೇಷು ವೇದೇಷು ಗೋಷು ವಿಪ್ರೇಷು ಸಾಧುಷು ।
ಧರ್ಮೇ ಮಯಿ ಚ ವಿದ್ವೇಷಃ ಸ ವಾ ಆಶು ವಿನಶ್ಯತಿ ॥ ೨೭ ॥

ನಿರ್ವೈರಾಯ ಪ್ರಶಾಂತಾಯ ಸ್ವಸುತಾಯ ಮಹಾತ್ಮನೇ ।
ಪ್ರಹ್ಲಾದಾಯ ಯದಾ ದ್ರುಹ್ಯೇದ್ಧನಿಷ್ಯೇಽಪಿ ವರೋರ್ಜಿತಮ್ ॥ ೨೮ ॥

*ನಾರದ ಉವಾಚ*

ಇತ್ಯುಕ್ತಾ ಲೋಕಗುರುಣಾ ತಂ ಪ್ರಣಮ್ಯ ದಿವೌಕಸಃ ।
ನ್ಯವರ್ತಂತ ಗತೋದ್ವೇಗಾ ಮೇನಿರೇ ಚಾಸುರಂ ಹತಮ್ ॥ ೨೯ ॥

ಪರ್ವತಗಳು ತಮ್ಮ ತಪ್ಪಲುಗಳಲ್ಲಿ ಅವನಿಗಾಗಿ ವಿಹಾರೋದ್ಯಾನಗಳನ್ನು ಒದಗಿಸುತ್ತಿದ್ದವು ಹಾಗೂ ವೃಕ್ಷಗಳು ಎಲ್ಲ ಋತುಗಳಲ್ಲಿಯೂ ಹೂವು-ಹಣ್ಣುಗಳನ್ನು ಬಿಡುತ್ತಿದ್ದವು. ಅವನೊಬ್ಬನೇ ಎಲ್ಲ ಲೋಕಪಾಲರ ಬೇರೆ-ಬೇರೆ ಗುಣ-ಮಹಿಮೆಗಳನ್ನು ಧರಿಸಿದ್ದನು. ॥ ೧೮ ॥ ಹೀಗೆ ದಿಗ್ವಿಜಯಿಯಾದ ಅವನು ಏಕಚ್ಛತ್ರಾಧಿಪತಿಯಾಗಿ ತನಗೆ ಪ್ರಿಯವಾದ ವಿಷಯಗಳನ್ನು ಸ್ವಚ್ಛಂದವಾಗಿ ಉಪಭೋಗಿಸತೊಡಗಿದನು. ಆದರೆ ಇಷ್ಟು ವಿಷಯಭೋಗಗಳಿಂದಲೂ ಅವನಿಗೆ ತೃಪ್ತಿಯುಂಟಾಗಲಿಲ್ಲ. ಏಕೆಂದರೆ, ಕೊನೆಗೂ ಅವನು ಇಂದ್ರಿಯಗಳ ಗುಲಾಮನೇ ಆಗಿದ್ದನಲ್ಲ! ॥ ೧೯ ॥

ಧರ್ಮನಂದನಾ ! ಈ ರೂಪದಲ್ಲಿಯೂ ಅವನು ಸನಕಾದಿಗಳಿಂದ ಶಪಿಸಲ್ಪಟ್ಟ ಭಗವಂತನ ಆ ಪಾರ್ಷದನೇ ಆಗಿದ್ದನಲ್ಲ. ಆದರೆ ಅವನು ಐಶ್ವರ್ಯಮದದಿಂದ ಉನ್ಮತ್ತನಾಗಿದ್ದನು ಹಾಗೂ ದುರಹಂಕಾರಿಯಾಗಿ ಶಾಸ್ತ್ರಗಳ ಮರ್ಯಾದೆಗಳನ್ನು ಮೀರಿ ನಡೆಯುತ್ತಿರಲು ನೋಡು-ನೋಡುತ್ತಾ ಅವನ ಜೀವನದ ಹೆಚ್ಚಿನ ಸಮಯ ಕಳೆದುಹೋಯಿತು. ॥ ೨೦ ॥ ಅವನ ಕಠೋರವಾದ ಶಾಸನದಿಂದ ಎಲ್ಲ ಲೋಕಗಳು ಮತ್ತು ಲೋಕಪಾಲರು ಗಾಬರಿಗೊಂಡರು. ಅವರಿಗೆ ಬೇರೆಲ್ಲಿಯೂ ಆಶ್ರಯ ದೊರೆಯದಿರಲು ಅವರೆಲ್ಲರೂ ಭಗವಂತನಿಗೆ ಶರಣಾದರು. ॥ ೨೧ ॥ ಸರ್ವಾತ್ಮಾ ಜಗದೀಶ್ವರನಾದ ಶ್ರೀಹರಿಯು ವಾಸವಾಗಿರುವಂತಹ, ಯಾವುದನ್ನು ಪಡೆದ ಬಳಿಕ ಶಾಂತರೂ, ನಿರ್ಮಲರೂ ಆದ ಸಂನ್ಯಾಸಿ ಮಹಾತ್ಮರು ಪ್ರಪಂಚಕ್ಕೆ ಮರಳುವುದಿಲ್ಲವೋ ಅಂತಹ ಭಗವಂತನ ಪರಮಧಾಮಕ್ಕೆ ನಾವು ನಮಸ್ಕರಿಸುತ್ತಿದ್ದೇವೆ. ॥ ೨೨ ॥ ಆ ದೇವತೆಗಳು ತಮ್ಮ ಇಂದ್ರಿಯಗಳನ್ನು ಸಂಯಮನಮಾಡಿ, ಮನಸ್ಸನ್ನು ಏಕಾಗ್ರಗೊಳಿಸಿ, ನಿದ್ರಾಹಾರಗಳನ್ನು ತೊರೆದು, ನಿರ್ಮಲವಾದ ಹೃದಯದಿಂದ ಭಗವಂತನನ್ನು ಆರಾಧಿಸಿದರು. ॥ ೨೩ ॥ ಒಂದು ದಿನ ಅವರಿಗೆ ಮೇಘಗಂಭೀರವಾದ ಆಕಾಶವಾಣಿಯು ಕೇಳಿಸಿತು. ಆ ಧ್ವನಿಯಿಂದ ಎಲ್ಲ ದಿಕ್ಕುಗಳು ಪ್ರತಿಧ್ವನಿಸಿದವು. ಸಾಧುಗಳಿಗೆ ಅಭಯವನ್ನೀಯುವ ಆ ಆಕಾಶವಾಣಿಯು ಹೀಗಿತ್ತು – ॥ ೨೪ ॥ ಶ್ರೇಷ್ಠ ದೇವತೆಗಳಿರಾ ! ಹೆದರಬೇಡಿರಿ. ನಿಮಗೆಲ್ಲರಿಗೂ ಮಂಗಳವುಂಟಾಗಲಿ. ನನ್ನ ದರ್ಶನದಿಂದ ಪ್ರಾಣಿಗಳಿಗೆ ಪರಮ ಕಲ್ಯಾಣವು ದೊರೆಯುತ್ತದೆ. ॥ ೨೫ ॥ ಈ ದೈತ್ಯಾಧಮನ ದುಷ್ಟತನವು ನನಗೆ ಮೊದಲಿನಿಂದಲೂ ತಿಳಿದಿದೆ. ನಾನು ಇವನನ್ನು ಸಂಹಾರ ಮಾಡುವೆನು. ಇನ್ನೂ ಕೆಲವು ದಿನಗಳವರೆಗೆ ಕಾಯುತ್ತಿರಿ. ॥ ೨೬ ॥ ಯಾವುದೇ ಪುರುಷನು ದೇವತೆ, ವೇದ, ಗೋವು, ಬ್ರಾಹ್ಮಣ, ಸಾಧುಗಳು, ಧರ್ಮ ಇವುಗಳನ್ನು ಮತ್ತು ನನ್ನನ್ನು ದ್ವೇಷಿಸತೊಡಗಿದಾಗ ಬೇಗನೇ ಅವನ ವಿನಾಶವಾಗುತ್ತದೆ. ॥ ೨೭ ॥ ವೈರಹೀನನೂ, ಶಾಂತಸ್ವಭಾವದವನೂ, ಮಹಾತ್ಮನೂ ಆದ ತನ್ನ ಪುತ್ರನಾದ ಪ್ರಹ್ಲಾದನಲ್ಲಿ ಈ ದೈತ್ಯನು ದ್ವೇಷಮಾಡಿದಾಗ, ಅವನಿಗೆ ಅನಿಷ್ಟವನ್ನು ಉಂಟು ಮಾಡಲು ಬಯಸಿದಾಗ, ಅವನು ಎಷ್ಟೇ ವರಬಲ ಸಂಪನ್ನನಾಗಿದ್ದರೂ ಅವನನ್ನು ಖಂಡಿತವಾಗಿ ಸಂಹರಿಸಿಬಿಡುವೆನು. ॥ ೨೮ ॥

**ನಾರದರು ಹೇಳುತ್ತಾರೆ** – ಲೋಕಗುರುವಾದ ಶ್ರೀಭಗವಂತನು ದೇವತೆಗಳಿಗೆ ಹೀಗೆ ಆದೇಶವನ್ನು ನೀಡಿದಾಗ ಅವರೆಲ್ಲರೂ ಆತನಿಗೆ ನಮಸ್ಕರಿಸಿ ಮರಳಿಹೋದರು. ಅವರ ಉದ್ವೇಗವೆಲ್ಲ ಶಾಂತವಾಗಿತ್ತು. ಇನ್ನು ಹಿರಣ್ಯಕಶಿಪುವು ಸತ್ತೇಹೋದನೆಂದು ಅವರು ತಿಳಿದರು. ॥ ೨೯ ॥

ತಸ್ಯ ದೈತ್ಯಪತೇಃ ಪುತ್ರಾಶ್ಚತ್ವಾರಃ ಪರಮಾದ್ಭುತಾಃ ।
ಪ್ರಹ್ಲಾದೋಽಭೂನ್ಮಹಾಂಸ್ತೇಷಾಂ ಗುಣೈರ್ಮಹದುಪಾಸಕಃ ॥ ೩೦ ॥

ಬ್ರಹ್ಮಣ್ಯಃ ಶೀಲಸಂಪನ್ನಃ ಸತ್ಯಸಂಧೋ ಜಿತೇಂದ್ರಿಯಃ ।
ಆತ್ಮವತ್ಸರ್ವಭೂತಾನಾಮೇಕಃ ಪ್ರಿಯಸುಹೃತ್ತಮಃ ॥ ೩೧ ॥

ದಾಸವತ್ಸನ್ನತಾರ್ಯಾಂಘ್ರಿಃ ಪಿತೃವದ್ದೀನವತ್ಸಲಃ ।
ಭ್ರಾತೃವತ್ಸದೃಶೇ ಸ್ನಿಗ್ಧೋ ಗುರುಷ್ವೀಶ್ವರಭಾವನಃ ।
ವಿದ್ಯಾರ್ಥರೂಪಜನ್ಮಾಢ್ಯೋ ಮಾನಸ್ತಂಭವಿವರ್ಜಿತಃ ॥ ೩೨ ॥

ನೋದ್ವಿಗ್ನಚಿತ್ತೋ ವ್ಯಸನೇಷು ನಿಃಸ್ಪೃಹಃ
ಶ್ರುತೇಷು ದೃಷ್ಟೇಷು ಗುಣೇಷ್ವವಸ್ತುದೃಕ್ ।
ದಾಂತೇಂದ್ರಿಯಪ್ರಾಣಶರೀರಧೀಃ ಸದಾ
ಪ್ರಶಾಂತಕಾಮೋ ರಹಿತಾಸುರೋಽಸುರಃ ॥ ೩೩ ॥

ಯಸ್ಮಿನ್ಮಹದ್ಗುಣಾ ರಾಜನ್ಗೃಹ್ಯಂತೇ ಕವಿಭಿರ್ಮುಹುಃ ।
ನ ತೇಽಧುನಾಪಿಧೀಯಂತೇ ಯಥಾ ಭಗವತೀಶ್ವರೇ ॥ ೩೪ ॥

ಯಂ ಸಾಧುಗಾಥಾಸದಸಿ ರಿಪವೋಽಪಿ ಸುರಾ ನೃಪ ।
ಪ್ರತಿಮಾನಂ ಪ್ರಕುರ್ವಂತಿ ಕಿಮುತಾನ್ಯೇ ಭವಾದೃಶಾಃ ॥ ೩೫ ॥

ಗುಣೈರಲಮಸಂಖ್ಯೇಯೈರ್ಮಾಹಾತ್ಮ್ಯಂ ತಸ್ಯ ಸೂಚ್ಯತೇ ।
ವಾಸುದೇವೇ ಭಗವತಿ ಯಸ್ಯ ನೈಸರ್ಗಿಕೀ ರತಿಃ ॥ ೩೬ ॥

ನ್ಯಸ್ತಕ್ರೀಡನಕೋ ಬಾಲೋ ಜಡವತ್ತನ್ಮನಸ್ತಯಾ ।
ಕೃಷ್ಣಗ್ರಹಗೃಹೀತಾತ್ಮಾ ನ ವೇದ ಜಗದೀದೃಶಮ್ ॥ ೩೭ ॥

ಆಸೀನಃ ಪರ್ಯಟನ್ನಶ್ನನ್ ಶಯಾನಃ ಪ್ರಪಿಬನ್ ಬ್ರುವನ್ ।
ನಾನುಸಂಧತ್ತ ಏತಾನಿ ಗೋವಿಂದಪರಿರಂಭಿತಃ ॥ ೩೮ ॥

ಯುಧಿಷ್ಠಿರನೇ! ದೈತ್ಯರಾಜ ಹಿರಣ್ಯಕಶಿಪುವಿಗೆ ಪರಮಾದ್ಭುತರಾದ ನಾಲ್ವರು ಪುತ್ರರಿದ್ದರು. ಅವರಲ್ಲಿ ಪ್ರಹ್ಲಾದನು ವಯಸ್ಸಿನಲ್ಲಿ ಕಿರಿಯವನಾಗಿದ್ದರೂ ಗುಣಗಳಲ್ಲಿ ಎಲ್ಲರಿಗಿಂತ ಹಿರಿಯವನಾಗಿದ್ದನು. ಅವನು ಸಂತರನ್ನು ಸೇವಿಸುವವನಾಗಿದ್ದನು. ॥ ೩೦ ॥ ಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೂ, ಸೌಮ್ಯಸ್ವಭಾವದವನೂ, ಸತ್ಯಪ್ರತಿಜ್ಞನೂ, ಜಿತೇಂದ್ರಿಯನೂ ಆಗಿದ್ದನು. ಎಲ್ಲ ಪ್ರಾಣಿಗಳೊಂದಿಗೆ ತನ್ನಂತೆಯೇ ಸಮತೆಯಿಂದ ವರ್ತಿಸುತ್ತಿದ್ದನು ಮತ್ತು ಎಲ್ಲರ ಏಕಮಾತ್ರ ಪ್ರಿಯನೂ, ನಿಜವಾದ ಹಿತೈಷಿಯೂ ಆಗಿದ್ದನು. ॥ ೩೧ ॥ ಹಿರಿಯರ ಚರಣಗಳಲ್ಲಿ ಸೇವಕನಂತೆ ತಲೆ ಬಾಗಿಕೊಂಡೇ ಇರುತಿದ್ದನು. ಬಡವರ ಮೇಲೆ ತಂದೆಯಂತೆ ಸ್ನೇಹವಿರಿಸಿದ್ದನು. ಸಮವಯಸ್ಕರಲ್ಲಿ ಸೋದರನಂತೆ ಪ್ರೇಮವಿರಿಸಿದ್ದನು ಮತ್ತು ಗುರುಗಳಲ್ಲಿ ಭಗವದ್ಭಾವವನ್ನೇ ಇಟ್ಟಿದ್ದನು. ವಿದ್ಯೆ, ಧನ, ಸೌಂದರ್ಯ ಮತ್ತು ಕುಲೀನತೆಗಳಿಂದ ಸಂಪನ್ನನಾಗಿದ್ದರೂ ಅವನಲ್ಲಿ ಅಹಂಕಾರ, ಮತ್ಸರ, ಎಳ್ಳಷ್ಟೂ ಇರಲಿಲ್ಲ. ॥ ೩೨ ॥ ದೊಡ್ಡ-ದೊಡ್ಡ ದುಃಖಗಳಲ್ಲಿಯೂ ಅವನು ಸ್ವಲ್ಪವೂ ಅಂಜುತ್ತಿರಲಿಲ್ಲ. ಲೋಕ-ಪರಲೋಕಗಳ ವಿಷಯಗಳ ಬಗ್ಗೆ ಅವನು ಬೇಕಾದಷ್ಟು ಕಂಡು-ಕೇಳಿದ್ದರೂ ಅವನ್ನು ನಿಸ್ಸಾರವೆಂದೂ, ತುಚ್ಛವೆಂದೂ, ಮಿಥ್ಯೆಯೆಂದೇ ತಿಳಿಯುತ್ತಿದ್ದನು. ಅದಕ್ಕಾಗಿ ಅವನ ಮನಸ್ಸಿನಲ್ಲಿ ಭಗವಂತನಲ್ಲದೇ ಬೇರೆ ಯಾವುದರ ಅಭಿಲಾಷೆಯೂ ಇರಲಿಲ್ಲ. ಇಂದ್ರಿಯಗಳು, ಪ್ರಾಣ, ಶರೀರ, ಮನಸ್ಸು ಅವನ ವಶದಲ್ಲಿತ್ತು. ಅವನ ಚಿತ್ತದಲ್ಲಿ ಎಂದೂ ಯಾವುದೇ ಕಾಮನೆ ಉಂಟಾಗುತ್ತಿರಲಿಲ್ಲ. ಅವನು ಹುಟ್ಟಿನಿಂದ ಅಸುರನಾಗಿದ್ದರೂ ಆಸುರೀ ಸ್ವಭಾವವು ಅವನಲ್ಲಿ ಕಿಂಚಿತ್ತಾದರೂ ಇರಲಿಲ್ಲ. ॥ ೩೩ ॥ ಶ್ರೀಭಗವಂತನ ಗುಣಗಳು ಅನಂತವಾಗಿರುವಂತೆಯೇ ಪ್ರಹ್ಲಾದನ ಶ್ರೇಷ್ಠಗುಣಗಳು ಎಲ್ಲೆಯನ್ನು ಮೀರಿದ್ದವು. ಮಹಾತ್ಮರು ಅವನನ್ನು ಸದಾಕಾಲ ವರ್ಣಿಸುತ್ತಾ , ತನ್ನವನನ್ನಾಗಿಸಿಕೊಳ್ಳುತ್ತಾ ಬಂದಿದ್ದಾರೆ. ಆದರೂ ಆತನು ಇಂದಿಗೂ ಹಾಗೆಯೇ ಇದ್ದಾನೆ. ॥ ೩೪ ॥ ಯುಧಿಷ್ಠಿರನೇ! ದೇವತೆಗಳು ಅವನ ಶತ್ರುಗಳಾಗಿದ್ದರೂ ಭಕ್ತರ ಚರಿತ್ರೆ ಗಳನ್ನು ಕೇಳಲು ಸಭೆ ಸೇರಿದಾಗ ಅವರು ಇತರ ಭಕ್ತರನ್ನು ಭಾಗವತೋತ್ತಮ ಪ್ರಹ್ಲಾದನಿಗೆ ಹೋಲಿಸಿ ಅವರಿಗೆ ಸಮ್ಮಾನಗಳನ್ನು ಸಲ್ಲಿಸುತ್ತಾರೆ. ಹೀಗಿರುವಾಗ ಅಜಾತಶತ್ರುವಾದ ನಿನ್ನಂತಹ ಭಗವದ್ಭಕ್ತರು ಅವನನ್ನು ಆದರಿಸುವುದರಲ್ಲಿ ಸಂದೇಹವೇನಿದೆ ? ॥ ೩೫ ॥ ಅವನ ಮಹಿಮೆಯನ್ನು ವರ್ಣಿಸಲಿಕ್ಕಾಗಿ ಎಣಿಸಲಾರದ ಸದ್ಗುಣ ಸಂಪತ್ತನ್ನು ಹೇಳುವ-ಕೇಳುವ ಆವಶ್ಯಕತೆ ಇಲ್ಲ. ಒಂದೇ ಒಂದು ಗುಣವನ್ನು ಹೇಳಿದರೆ ಸಾಕು. ಅದೇನೆಂದರೆ – ಅವನಿಗೆ ಭಗವಾನ್ ಶ್ರೀವಾಸುದೇವನಲ್ಲಿ ಸ್ವಾಭಾವಿಕ ಜನ್ಮಜಾತ ಪ್ರೇಮವಿತ್ತು. ॥ ೩೬ ॥

ಯುಧಿಷ್ಠಿರಾ! ಪ್ರಹ್ಲಾದನು ಬಾಲ್ಯದಲ್ಲಿಯೇ ಆಟ-ಪಾಟಗಳನ್ನು ಬಿಟ್ಟು ಭಗವಂತನ ಧ್ಯಾನದಲ್ಲಿ ಮಗ್ನನಾಗಿ ಜಡನಂತೆ ತನ್ಮಯನಾಗುತ್ತಿದ್ದನು. ಭಗವಾನ್ ಶ್ರೀಕೃಷ್ಣನ ಅನುಗ್ರಹವೆಂಬ ಗ್ರಹವು ಅವನ ಹೃದಯವನ್ನು ಸೆಳೆದುಕೊಂಡು ಅವನಿಗೆ ಜಗತ್ತಿನ ಪರಿವೆಯೇ ಇಲ್ಲದಂತೆ ಮಾಡಿಬಿಟ್ಟಿತ್ತು. ॥ ೩೭ ॥

ಭಗವಂತನೇ ತನ್ನನ್ನು ಆಲಿಂಗಿಸಿಕೊಂಡಿರುವನು ಎಂದು ಅವನು ಸದಾ ಭಾವಿಸುತ್ತಿದ್ದನು. ತಾನು ಕೂತಿದ್ದರೂ, ಓಡಾಡುತ್ತಿದ್ದರೂ,

ಕ್ವಚಿದ್ರುದತಿ ವೈಕುಂಠಚಿಂತಾಶಬಲಚೇತನಃ ।
ಕ್ವಚಿದ್ಧಸತಿ ತಚ್ಚಿಂತಾಹ್ಲಾದ ಉದ್ಗಾಯತಿ ಕ್ವಚಿತ್ ॥ ೩೯ ॥

ನದತಿ ಕ್ವಚಿದುತ್ಕಂಠೋ ವಿಲಜ್ಜೋ ನೃತ್ಯತಿ ಕ್ವಚಿತ್ ।
ಕ್ವಚಿತ್ತದ್ಭಾವನಾಯುಕ್ತಸ್ತನ್ಮಯೋಽನುಚಕಾರ ಹ ॥ ೪೦ ॥

ಕ್ವಚಿದುತ್ಪುಲಕಸ್ತೂಷ್ಣೀಮಾಸ್ತೇ ಸಂಸ್ಪರ್ಶನಿರ್ವೃತಃ ।
ಅಸ್ಪಂದಪ್ರಣಯಾನಂದಸಲಿಲಾಮೀಲಿತೇಕ್ಷಣಃ ॥ ೪೧ ॥

ಸ ಉತ್ತಮಶ್ಲೋಕಪದಾರವಿಂದಯೋ-
ರ್ನಿಷೇವಯಾಕಿಂಚನಸಂಗಲಬ್ಧಯಾ ।
ತನ್ವನ್ಪರಾಂ ನಿರ್ವೃತಿಮಾತ್ಮನೋ ಮುಹು-
ರ್ದುಃಸಂಗದೀನಸ್ಯ ಮನಃಶಮಂ ವ್ಯಧಾತ್ ॥ ೪೨ ॥

ತಸ್ಮಿನ್ಮಹಾಭಾಗವತೇ ಮಹಾಭಾಗೇ ಮಹಾತ್ಮನಿ ।
ಹಿರಣ್ಯಕಶಿಪೂ ರಾಜನ್ನಕರೋದಘಮಾತ್ಮಜೇ ॥ ೪೩ ॥

*ಯುಧಿಷ್ಠಿರ ಉವಾಚ*

ದೇವರ್ಷ ಏತದಿಚ್ಛಾಮೋ ವೇದಿತುಂ ತವ ಸುವ್ರತ ।
ಯದಾತ್ಮಜಾಯ ಶುದ್ಧಾಯ ಪಿತಾದಾತ್ಸಾಧವೇ ಹ್ಯಘಮ್ ॥ ೪೪ ॥

ಪುತ್ರಾನ್ವಿಪ್ರತಿಕೂಲಾಂಸ್ವಾನ್ ಪಿತರಃ ಪುತ್ರವತ್ಸಲಾಃ ।
ಉಪಾಲಭಂತೇ ಶಿಕ್ಷಾರ್ಥಂ ನೈವಾಘಮಪರೋ ಯಥಾ ॥ ೪೫ ॥

ಕಿಮುತಾನುವಶಾನ್ಸಾಧೂಂಸ್ತಾದೃಶಾನ್ಗುರುದೇವತಾನ್ ।
ಏತತ್ಕೌತೂಹಲಂ ಬ್ರಹ್ಮನ್ನಸ್ಮಾಕಂ ವಿಧಮ ಪ್ರಭೋ ।
ಪಿತುಃ ಪುತ್ರಾಯ ಯದ್ದ್ವೇಷೋ ಮರಣಾಯ ಪ್ರಯೋಜಿತಃ ॥ ೪೬ ॥

ತಿನ್ನುತ್ತಿದ್ದರೂ, ಕುಡಿಯುತ್ತಿದ್ದರೂ, ನಿದ್ರಿಸುತ್ತಿದ್ದರೂ, ಮಾತಾಡುತ್ತಿದ್ದರೂ ಇದಾವುದೂ ಅವನಿಗೆ ತಿಳಿಯುತ್ತಿರಲಿಲ್ಲ. ॥ ೩೮ ॥ ಕೆಲವೊಮ್ಮೆ ಅವನು ವೈಕುಂಠಪತಿಯು ತನ್ನನ್ನಗಲಿ ಹೋದನೆಂದು ಅಳುತ್ತಿದ್ದನು. ಕೆಲವೊಮ್ಮೆ ಆತನನ್ನು ಚಿಂತಿಸುತ್ತಾ ಆನಂದದಿಂದ ನಗುತ್ತಿದ್ದನು. ಕೆಲವೊಮ್ಮೆ ಅವನು ಧ್ಯಾನದ ಮಧುರ ಆನಂದವನ್ನು ಅನುಭವಿಸುತ್ತಾ ಗಟ್ಟಿಯಾಗಿ ಹಾಡುತ್ತಿದ್ದನು. ॥ ೩೯ ॥ ಕೆಲವೊಮ್ಮೆ ಅವನು ಉತ್ಸುಕತೆಯಿಂದ ಕೂಗಿಕೊಳ್ಳುತ್ತಿದ್ದನು. ಕೆಲವೊಮ್ಮೆ ನಿರ್ಲಜ್ಜನಾಗಿ ಹಾರಿ-ಹಾರಿ ಕುಣಿಯುತ್ತಿದ್ದನು. ಕೆಲವೊಮ್ಮೆ ಆತನ ಲೀಲೆಗಳನ್ನು ಚಿಂತಿಸುತ್ತಾ ತನ್ಮಯನಾಗಿ ತಿಳಿಯದೆಯೇ ಅವನನ್ನೇ ಅನುಕರಿಸುತ್ತಿದ್ದನು. ॥ ೪೦ ॥ ಕೆಲವೊಮ್ಮೆ ಒಳ-ಒಳಗೆ ಭಗವಂತನ ಕೋಮಲ ಸ್ಪರ್ಶವನ್ನು ಅನುಭವಿಸುತ್ತಾ ಆನಂದಮಗ್ನನಾಗಿ, ರೋಮಾಂಚಿತಗೊಂಡು ಸುಮ್ಮನೆ ಕುಳಿತುಬಿಡುತ್ತಿದ್ದನು. ಆತನ ಅರೆತೆರೆದ ಕಣ್ಣುಗಳು ಪ್ರೇಮದ ಮತ್ತು ಆನಂದದ ಕಂಬನಿಗಳಿಂದ ತುಂಬಿರುತ್ತಿದ್ದವು. ॥ ೪೧ ॥ ಭಗವಾನ್ ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ಇಂತಹ ಭಕ್ತಿಯು ಅಕಿಂಚನರಾದ ಭಗವತ್ಪ್ರೇಮಿ ಮಹಾತ್ಮರ ಸಂಗದಿಂದ ಆತನಿಗೆ ಉಂಟಾಯಿತು. ಆದರಿಂದ ಆತನ ಮನಸ್ಸು ಪರಮಾನಂದದಲ್ಲಿ ಮುಳುಗಿರುತ್ತಿತ್ತು. ಇಷ್ಟೇ ಅಲ್ಲ, ಅವನ ಸಂಗದಿಂದ ದುಸ್ಸಹವಾಸದಿಂದ ದೀನರಾಗಿದ್ದ ಜನರಿಗೂ ಕೂಡ ಶಾಂತಿಯು ದೊರೆಯುತ್ತಿತ್ತು. ॥ ೪೨ ॥ ಯುಧಿಷ್ಠಿರನೇ ! ಪ್ರಹ್ಲಾದನು ಭಗವಂತನ ಪರಮಪ್ರೇಮಿ ಭಕ್ತನೂ, ಪರಮಭಾಗ್ಯಶಾಲಿಯೂ, ಶ್ರೇಷ್ಠಮಟ್ಟದ ಮಹಾತ್ಮನೂ ಆಗಿದ್ದನು. ಹಿರಣ್ಯಕಶಿಪು ಇಂತಹ ಸಾಧು ಸ್ವಭಾವದ ಪುತ್ರನನ್ನೂ ಕೂಡ ಅಪರಾಧಿಯೆಂದು ತಿಳಿದು ಅವನಿಗೆ ಅನಿಷ್ಟವನ್ನುಂಟುಮಾಡಲು ಪ್ರಯತ್ನಿಸತೊಡಗಿದನು. ॥ ೪೩ ॥

**ಯುಧಿಷ್ಠಿರನು ಕೇಳಿದನು** – ದೇವರ್ಷಿಗಳೇ ! ನಿಮ್ಮ ವ್ರತವು ಅಖಂಡವಾಗಿದೆ. ಹಿರಣ್ಯಕಶಿಪುವು ತಂದೆಯಾಗಿದ್ದರೂ ಇಂತಹ ಶುದ್ಧಹೃದಯವುಳ್ಳ ಮಹಾತ್ಮನಾದ ಪುತ್ರನೊಡನೆ ಏಕೆ ದ್ರೋಹ ಮಾಡಿದನು ? ಇದನ್ನು ನಾವು ತಮ್ಮಿಂದ ಕೇಳಲಿಚ್ಛಿಸುತ್ತೇವೆ. ॥ ೪೪ ॥ ತಂದೆಯಾದರೋ ಸ್ವಭಾವಿಕವಾಗಿಯೇ ತನ್ನ ಪುತ್ರನನ್ನು ಪ್ರೀತಿಸುತ್ತಾನೆ. ಅವನು ಏನಾದರೂ ವಿರುದ್ಧವಾದ ಕಾರ್ಯ ಮಾಡಿದರೂ ಅವನಿಗೆ ತಿಳುವಳಿಕೆ ನೀಡುವುದಕ್ಕಾಗಿ ಗದರಿಸುತ್ತಾರೆಯೇ ಹೊರತು ಶತ್ರುವಿನಂತೆ ಅವನಲ್ಲಿ ವೈರ-ವಿರೋಧವನ್ನು ಮಾಡುವುದಿಲ್ಲ. ॥ ೪೫ ॥ ಹಾಗಿರುವಾಗ ಪ್ರಹ್ಲಾದನಂತಹ ವಿಧೇಯನೂ, ಶುದ್ಧಹೃದಯನೂ, ಗುರುಹಿರಿಯರಲ್ಲಿ ಭಗವದ್ಭಾವವನ್ನು ಇರಿಸುವವನೂ ಆದ ಪುತ್ರನಲ್ಲಿ ಯಾರು ತಾನೇ ದ್ವೇಷ ಮಾಡಬಲ್ಲನು ? ನಾರದರೇ ! ಎಲ್ಲವನ್ನು ಬಲ್ಲವರು ನೀವು. ತಂದೆಯು ದ್ವೇಷದಿಂದ ಪುತ್ರನನ್ನು ಕೊಂದುಹಾಕಲು ಬಯಸಿದನು. ಇದನ್ನು ತಿಳಿದು ನಮಗೆ ತುಂಬಾ ಕುತೂಹಲ ಉಂಟಾಗಿದೆ. ಅದನ್ನು ತಾವು ಶಾಂತಗೊಳಿಸಿರಿ. ॥ ೪೬॥

*ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ
ಪ್ರಹ್ಲಾದಚರಿತೇ ಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ಹಿರಣ್ಯಕಶಿಪುವು ಪ್ರಹ್ಲಾದನನ್ನು ವಧಿಸಲು ಪ್ರಯತ್ನಿಸಿದುದು

*ನಾರದ ಉವಾಚ*

ಪೌರೋಹಿತ್ಯಾಯ ಭಗವಾನ್ವೃತಃ ಕಾವ್ಯಃ ಕಿಲಾಸುರೈಃ ।
ಶಂಡಾಮರ್ಕೌ ಸುತೌ ತಸ್ಯ ದೈತ್ಯರಾಜಗೃಹಾಂತಿಕೇ ॥ ೧ ॥

ತೌ ರಾಜ್ಞಾ ಪ್ರಾಪಿತಂ ಬಾಲಂ ಪ್ರಹ್ಲಾದಂ ನಯಕೋವಿದಮ್ ।
ಪಾಠಯಾಮಾಸತುಃ ಪಾಠ್ಯಾನನ್ಯಾಂಶ್ಚಾಸುರಬಾಲಕಾನ್ ॥ ೨ ॥

ಯತ್ತತ್ರ ಗುರುಣಾ ಪ್ರೋಕ್ತಂ ಶುಶ್ರುವೇಽನು ಪಪಾಠ ಚ ।
ನ ಸಾಧು ಮನಸಾ ಮೇನೇ ಸ್ವಪರಾಸದ್ಗ್ರಹಾಶ್ರಯಮ್ ॥ ೩ ॥

ಏಕದಾಸುರರಾಟ್ಪುತ್ರಮಂಕಮಾರೋಪ್ಯ ಪಾಂಡವ ।
ಪಪ್ರಚ್ಛ ಕಥ್ಯತಾಂ ವತ್ಸ ಮನ್ಯತೇ ಸಾಧು ಯದ್ಭವಾನ್ ॥ ೪ ॥

*ಪ್ರಹ್ಲಾದ ಉವಾಚ*

ತತ್ಸಾಧು ಮನ್ಯೇಽಸುರವರ್ಯ ದೇಹಿನಾಂ
ಸದಾ ಸಮುದ್ವಿಗ್ನಧಿಯಾಮಸದ್ಗ್ರಹಾತ್ ।
ಹಿತ್ವಾಽಽತ್ಮಪಾತಂ ಗೃಹಮಂಧಕೂಪಂ
ವನಂ ಗತೋ ಯದ್ಧರಿಮಾಶ್ರಯೇತ ॥ ೫ ॥

*ನಾರದ ಉವಾಚ*

ಶ್ರುತ್ವಾ ಪುತ್ರಗಿರೋ ದೈತ್ಯಃ ಪರಪಕ್ಷಸಮಾಹಿತಾಃ ।
ಜಹಾಸ ಬುದ್ಧಿರ್ಬಾಲಾನಾಂ ಭಿದ್ಯತೇ ಪರಬುದ್ಧಿಭಿಃ ॥ ೬ ॥

ಸಮ್ಯಗ್ವಿಧಾರ್ಯತಾಂ ಬಾಲೋ ಗುರುಗೇಹೇ ದ್ವಿಜಾತಿಭಿಃ ।
ವಿಷ್ಣುಪಕ್ಷೈಃ ಪ್ರತಿಚ್ಛನ್ನೈರ್ನ ಭಿದ್ಯೇತಾಸ್ಯ ಧೀರ್ಯಥಾ ॥ ೭ ॥

ಗೃಹಮಾನೀತಮಾಹೂಯ ಪ್ರಹ್ಲಾದಂ ದೈತ್ಯಯಾಜಕಾಃ ।
ಪ್ರಶಸ್ಯ ಶ್ಲಕ್ಷ್ಣಯಾ ವಾಚಾ ಸಮಪೃಚ್ಛಂತ ಸಾಮಭಿಃ ॥ ೮ ॥

ವತ್ಸ ಪ್ರಹ್ಲಾದ ಭದ್ರಂ ತೇ ಸತ್ಯಂ ಕಥಯ ಮಾ ಮೃಷಾ ।
ಬಾಲಾನತಿ ಕುತಸ್ತುಭ್ಯಮೇಷ ಬುದ್ಧಿವಿಪರ್ಯಯಃ ॥ ೯ ॥

ಬುದ್ಧಿಭೇದಃ ಪರಕೃತ ಉತಾಹೋ ತೇ ಸ್ವತೋಽಭವತ್ ।
ಭಣ್ಯತಾಂ ಶ್ರೋತುಕಾಮಾನಾಂ ಗುರೂಣಾಂ ಕುಲನಂದನ ॥ ೧೦ ॥

**ನಾರದರು ಹೇಳುತ್ತಾರೆ** – ಯುಧಿಷ್ಠಿರನೇ! ದೈತ್ಯರು ಪರಮ ಪೂಜ್ಯರಾದ ಶುಕ್ರಾಚಾರ್ಯರನ್ನು ತಮ್ಮ ಪುರೋಹಿತನನ್ನಾಗಿಸಿ ಕೊಂಡಿದ್ದರು. ಅವರಿಗೆ ಶಂಡ-ಅಮರ್ಕ ಎಂಬ ಇಬ್ಬರು ಪುತ್ರರಿದ್ದರು. ಅವರಿಬ್ಬರೂ ದೈತ್ಯರಾಜನ ಅರಮನೆಯ ಬಳಿಯೇ ಇದ್ದು ಹಿರಣ್ಯ ಕಶಿಪು ಕಳಿಸಿಕೊಟ್ಟ ನೀತಿನಿಪುಣನಾದ ಬಾಲಕ ಪ್ರಹ್ಲಾದನಿಗೆ ಮತ್ತು ಬೇರೆ ಓದಲು ಯೋಗ್ಯರಾದ ದೈತ್ಯಬಾಲಕರಿಗೆ ರಾಜ ನೀತಿ, ಅರ್ಥಶಾಸ್ತ್ರಗಳನ್ನು ಕಲಿಸುತ್ತಿದ್ದರು. ॥ ೧-೨ ॥ ಪ್ರಹ್ಲಾದನು ಗುರುಗಳು ಹೇಳಿದ ಪಾಠಗಳನ್ನು ಕೇಳುತ್ತಿದ್ದನು ಮತ್ತು ಹಾಗೆಯೇ ಗುರುಗಳಿಗೆ ಒಪ್ಪಿಸುತ್ತಿದ್ದನು. ಆದರೆ ಅವನು ಮನಸ್ಸಿನಲ್ಲಿ ಆ ಪಾಠಗಳು ಸರಿ ಯೆಂದು ಒಪ್ಪುತ್ತಿರಲಿಲ್ಲ. ಏಕೆಂದರೆ, ಆ ಪಾಠಗಳ ಮೂಲ ಆಧಾರ ತಾನು ಮತ್ತು ಪರರು ಎಂಬ ಮಿಥ್ಯಾ ಆಗ್ರಹವೇ ಆಗಿತ್ತು. ॥ ೩ ॥ ಧರ್ಮನಂದನಾ! ಒಂದುದಿನ ಹಿರಣ್ಯಕಶಿಪು ತನ್ನ ಪುತ್ರನಾದ ಪ್ರಹ್ಲಾದನನ್ನು ಕರೆಸಿ ಪ್ರೇಮದಿಂದ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಕೇಳಿದನು – ಮಗು! ನೀನು ಓದಿದರಲ್ಲಿ ಯಾವುದು ನಿನಗೆ ಒಳ್ಳೆಯದೆಂದು ಅನಿಸುತ್ತದೋ ಅದನ್ನು ಹೇಳು ನೋಡೋಣ! ॥ ೪ ॥

**ಪ್ರಹ್ಲಾದನು ಹೇಳಿದನು** – 'ಅಪ್ಪಾ! ಪ್ರಪಂಚದಲ್ಲಿರುವ ಪ್ರಾಣಿಗಳು' 'ನಾನು-ನನ್ನದು' ಎಂಬ ಮಿಥ್ಯಾ ಆಗ್ರಹದಲ್ಲಿ ಬಿದ್ದು ಸದಾಕಾಲ ಅತ್ಯಂತ ಉದ್ವಿಗ್ನರಾಗಿರುತ್ತಾರೆ. ಅವರು ತಮ್ಮ ಅಧಃ ಪತನಕ್ಕೆ ಮೂಲಕಾರಣವಾದ ಹುಲ್ಲು ಮುಚ್ಚಿರುವ ಕತ್ತಲೆಯ ಬಾವಿಯಂತಿರುವ ಈ ಮನೆ-ಮಠಗಳನ್ನು ತೊರೆದು ಅರಣ್ಯಕ್ಕೆ ಹೋಗಿ ಭಗವಾನ್ ಶ್ರೀಹರಿಯಲ್ಲಿ ಶರಣುಹೊಂದುವುದೇ ಸರಿ ಎಂದು ನಾನು ತಿಳಿಯುತ್ತೇನೆ.' ॥ ೫ ॥

**ನಾರದರು ಹೇಳುತ್ತಾರೆ** – ಪ್ರಹ್ಲಾದನು ಹೀಗೆ ಶತ್ರುಪಕ್ಷವನ್ನು ಪ್ರಶಂಸೆಮಾಡುತ್ತಾ ಆಡಿದ ಮಾತುಗಳನ್ನು ಕೇಳಿ ಹಿರಣ್ಯಕಶಿಪು ಗಹಗಹಿಸಿ ನಕ್ಕುಬಿಟ್ಟನು. ಇತರರು ಆಡುವ ಒಡಕು ಮಾತುಗಳಿಂದ ಹುಡುಗರ ಬುದ್ಧಿಯು ಕೆಟ್ಟುಹೋಗುವುದು. ॥ ೬ ॥ ಗುರುಗಳ ಮನೆಯಲ್ಲಿ ವಿಷ್ಣುವಿನ ಪಕ್ಷಪಾತಿಗಳಾದ ಯಾರೋ ಬ್ರಾಹ್ಮಣರು ವೇಷಬದಲಿಸಿ ವಾಸಮಾಡುತ್ತಾರೆಂದು ಕಾಣುತ್ತದೆ. ಆದರಿಂದ ನಮ್ಮ ಮಗುವಿನ ಬುದ್ಧಿಯು ಕೆಡದಂತೆ ಸರಿಯಾಗಿ ನೋಡಿಕೊಳ್ಳಿ ಎಂದು ಅಧ್ಯಾಪಕರಿಗೆ ಆದೇಶ ನೀಡಿದನು. ॥ ೭ ॥

ದೈತ್ಯರು ಪ್ರಹ್ಲಾದನನ್ನು ಗುರುಗಳ ಮನೆಗೆ ಕರಕೊಂಡು ಬಂದಾಗ ದೈತ್ಯಪುರೋಹಿತರು ಅವನನ್ನು ಹತ್ತಿರಕ್ಕೆ ಕರೆದು ಸವಿಮಾತುಗಳಿಂದ ಪುಸಲಾಯಿಸುತ್ತಾ ಕೇಳಿದರು– ॥ ೮ ॥ ಮಗು ಪ್ರಹ್ಲಾದ! ನಿನಗೆ ಮಂಗಳವಾಗಲಿ. ನಿಜವಾಗಿ ಹೇಳು. ಸುಳ್ಳು ಹೇಳಬೇಡ. ನಿನ್ನ ಬುದ್ಧಿಯು ಏಕೆ ಹೀಗೆ ತಲೆಕೆಳಗಾಯಿತು ? ಬೇರೆ ಯಾವ ಹುಡು ಗರಿಗೂ ಹೀಗಾಗಿಲ್ಲವಲ್ಲ! ॥ ೯ ॥ ಕುಲಮಣಿಯೇ! ಮಗು! ನಿನ್ನ ಗುರುಗಳಾದ ನಾವು ಇದನ್ನು ತಿಳಿಯಬಯಸುತ್ತೇವೆ. ನಿನ್ನ ಬುದ್ಧಿಯು ತಾನಾಗಿಯೇ ಹೀಗಾಯಿತೋ ಅಥವಾ ಯಾರಾದರೂ ನಿಜವಾಗಿ ನಿನ್ನನ್ನು ಪ್ರಚೋದಿಸಿರುವರೇ ? ಹೇಳು, ಮಗು! ಎಂದಾಗ ಪ್ರಹ್ಲಾದನು ಉತ್ತರಿಸಿದನು ॥ ೧೦ ॥

*ಪ್ರಹ್ಲಾದ ಉವಾಚ*

ಸ್ವಃ ಪರಶ್ಚೇತ್ಯಸದ್ಗ್ರಾಹಃ ಪುಂಸಾಂ ಯನ್ಮಾಯಯಾ ಕೃತಃ ।
ವಿಮೋಹಿತಧಿಯಾಂ ದೃಷ್ಟಸ್ತಸ್ಮೈ ಭಗವತೇ ನಮಃ ॥ ೧೧ ॥

ಸ ಯದಾನುವ್ರತಃ ಪುಂಸಾಂ ಪಶುಬುದ್ಧಿರ್ವಿಭಿದ್ಯತೇ ।
ಅನ್ಯ ಏಷ ತಥಾನ್ಯೋಽಹಮಿತಿ ಭೇದಗತಾಸತೀ ॥ ೧೨ ॥

ಸ ಏಷ ಆತ್ಮಾ ಸ್ವಪರೇತ್ಯಬುದ್ಧಿಭಿ-
ರ್ದುರತ್ಯಯಾನುಕ್ರಮಣೋ ನಿರೂಪ್ಯತೇ ।
ಮುಹ್ಯಂತಿ ಯದ್ವರ್ತ್ಮನಿ ವೇದವಾದಿನೋ
ಬ್ರಹ್ಮಾದಯೋ ಹ್ಯೇಷ ಭಿನತ್ತಿ ಮೇ ಮತಿಮ್ ॥ ೧೩ ॥

ಯಥಾ ಭ್ರಾಮ್ಯತ್ಯಯೋ ಬ್ರಹ್ಮನ್ಸ್ವಯಮಾಕರ್ಷಸನ್ನಿಧೌ ।
ತಥಾ ಮೇ ಭಿದ್ಯತೇ ಚೇತಶ್ಚಕ್ರಪಾಣೇರ್ಯದೃಚ್ಛಯಾ ॥ ೧೪ ॥

*ನಾರದ ಉವಾಚ*

ಏತಾವದ್ಬ್ರಾಹ್ಮಣಾಯೋಕ್ತ್ವಾ ವಿರರಾಮ ಮಹಾಮತಿಃ ।
ತಂ ಸನ್ನಿರ್ಭರ್ತ್ಸ್ಯ ಕುಪಿತಃ ಸ ದೀನೋ ರಾಜಸೇವಕಃ ॥ ೧೫ ॥

ಆನೀಯತಾಮರೇ ವೇತ್ರಮಸ್ಮಾಕಮಯಶಸ್ಕರಃ ।
ಕುಲಾಂಗಾರಸ್ಯ ದುರ್ಬುದ್ಧೇಶ್ಚತುರ್ಥೋಽಸ್ಯೋದಿತೋ ದಮಃ ॥ ೧೬ ॥

ದೈತೇಯಚಂದನವನೇ ಜಾತೋಽಯಂ ಕಂಟಕದ್ರುಮಃ ।
ಯನ್ಮೂಲೋನ್ಮೂಲಪರಶೋರ್ವಿಷ್ಣೋರ್ನಾಲಾಯಿತೋಽರ್ಭಕಃ ॥ ೧೭ ॥

ಇತಿ ತಂ ವಿವಿಧೋಪಾಯೈರ್ಭೀಷಯಂಸ್ತರ್ಜನಾದಿಭಿಃ ।
ಪ್ರಹ್ಲಾದಂ ಗ್ರಾಹಯಾಮಾಸ ತ್ರಿವರ್ಗಸ್ಯೋಪಪಾದನಮ್ ॥ ೧೮ ॥

ತತ ಏನಂ ಗುರುರ್ಜ್ಞಾತ್ವಾ ಜ್ಞಾತಜ್ಞೇಯಚತುಷ್ಟಯಮ್ ।
ದೈತ್ಯೇಂದ್ರಂ ದರ್ಶಯಾಮಾಸ ಮಾತೃಮೃಷ್ಟಮಲಂಕೃತಮ್ ॥ ೧೯ ॥

ಪಾದಯೋಃ ಪತಿತಂ ಬಾಲಂ ಪ್ರತಿನಂದ್ಯಾಶಿಷಾಸುರಃ ।
ಪರಿಷ್ವಜ್ಯ ಚಿರಂ ದೋರ್ಭ್ಯಾಂ ಪರಮಾಮಾಪ ನಿರ್ವೃತಿಮ್ ॥ ೨೦ ॥

**ಪ್ರಹ್ಲಾದನು ಹೇಳಿದನು** – ಯಾರ ಬುದ್ಧಿಯು ಮೋಹದಿಂದ ಗ್ರಸ್ತವಾಗಿದೆಯೋ ಅವನಿಗೆ ಭಗವಂತನ ಮಾಯೆಯಿಂದ – ಇವನು ನನ್ನವನು – ಇವನು ಬೇರೆಯವನು ಎಂಬ ಈ ಅಸತ್ ದುರಾಗ್ರಹವು ಉಂಟಾಗುತ್ತದೆ. ಆ ಮಾಯೆಗೆ ಅಧಿಪತಿಯಾದ ಭಗವಂತನಿಗೆ ನಮಸ್ಕರಿಸುತ್ತೇನೆ. ॥ ೧೧ ॥ ಆ ಭಗವಂತನು ಕೃಪೆ ದೋರಿದಾಗಲೇ ಮನುಷ್ಯರ ಪಾಶವಿಕ ಬುದ್ಧಿಯು ನಾಶವಾಗುತ್ತನೆ. ಈ ಪಶುಬುದ್ಧಿಯಿಂದಲೇ 'ಇದು ನಾನು – ಇವನು ನನ್ನಿಂದ ಬೇರೆಯವನು' ಎಂಬ ಸುಳ್ಳಾದ ಭೇದ-ಭಾವವು ಉಂಟಾಗುತ್ತದೆ. ॥ ೧೨ ॥ ಅದೇ ಪರಮಾತ್ಮನು ಈ ಆತ್ಮನಾಗಿರುವನು. ಅಜ್ಞಾನೀ ಜನರು ತನ್ನದು ಮತ್ತು ಬೇರೆಯವರದು ಎಂಬ ಭೇದವನ್ನು ಮಾಡಿ ಅವನನ್ನು ವರ್ಣಿಸುತ್ತಾರೆ. ಅವರ ತಿಳುವಳಿಕೆಯು ಸರಿಯಾದುದಲ್ಲ. ಏಕೆಂದರೆ, ಅದರ ತತ್ತ್ವವನ್ನು ತಿಳಿಯುವುದು ತುಂಬಾ ಕಷ್ಟ, ಬ್ರಹ್ಮಾದಿ ದೊಡ್ಡ-ದೊಡ್ಡ ವೇದಜ್ಞರೂ ಕೂಡ ಅದರ ವಿಷಯದಲ್ಲಿ ಮೋಹಿತರಾಗುತ್ತಾರೆ. ನಿಮ್ಮ ಭಾಷೆಯಲ್ಲಿ ಹೇಳುವುದಾದರೆ – ಆ ಪರಮಾತ್ಮನೇ ನನ್ನ ಬುದ್ಧಿಯನ್ನು ಕೆಡಿಸಿರುವನು. ॥ ೧೩ ॥ ಗುರುಗಳೇ! ಸೂಜಿಗಲ್ಲಿನ ಕಡೆಗೆ ಕಬ್ಬಿಣವು ತಾನಾಗಿ ಸೆಳೆಯಲ್ಪಡುವಂತೆ ಚಕ್ರಪಾಣಿಯಾದ ಭಗವಂತನ ಸ್ವತಂತ್ರ ಇಚ್ಛೆಯಿಂದಲೇ ನನ್ನ ಚಿತ್ತವೂ ಕೂಡ ಪ್ರಪಂಚದಿಂದ ಬೇರೆಯಾಗಿ ಆತನ ಕಡೆಗೆ ಬಲವಂತನಾಗಿ ಸೆಳೆಯಲ್ಪಟ್ಟಿದೆ. ॥ ೧೪ ॥

**ನಾರದರು ಹೇಳುತ್ತಾರೆ** – ಮಹಾಜ್ಞಾನಿಯಾದ ಪ್ರಹ್ಲಾದನು ಇಷ್ಟು ಹೇಳಿ ಸುಮ್ಮನಾದನು. ಬಡಪಾಯಿಗಳಾದ ಆ ಪುರೋಹಿತರಾದರೋ ರಾಜಸೇವಕರು, ಪರಾಧೀನರಾಗಿದ್ದರು. ರಾಜನಿಗೆ ಹೆದರಿ ಅವರು ಪ್ರಹ್ಲಾದನ ಮೇಲೆ ಕೋಪಗೊಂಡು ಆತನನ್ನು ಗದರಿಸುತ್ತಾ ಹೀಗೆಂದರು – ॥ ೧೫ ॥ 'ಅರೇ! ಯಾರಲ್ಲಿ? ನನ್ನ ಬೆತ್ತ ತೆಗೆದುಕೊಂಡು ಬನ್ನಿ. ಇವನು ನಮ್ಮ ಕೀರ್ತಿಗೆ ಕಳಂಕವನ್ನು ತರುತ್ತಿದ್ದಾನೆ. ಕುಲಾಂಗಾರನಾದ ಈ ದುರ್ಬುದ್ಧಿಗೆ ನಾಲ್ಕನೆಯ ಉಪಾಯವಾದ ದಂಡವನ್ನು ಪ್ರಯೋಗಿಸುವುದೇ ಉಚಿತವಾಗಿದೆ. ॥ ೧೬ ॥ ದೈತ್ಯವಂಶವೆಂಬ ಶ್ರೀಗಂಧದ ಕಾಡಿನಲ್ಲಿ ಈ ಮುಳ್ಳಿನ ಜಾಲಿಮರ ಹೇಗೆ ಹುಟ್ಟಿಕೊಂಡಿತು? ಈ ವನದ ಬೇರನ್ನೇ ಕತ್ತರಿಸಲು ಕೊಡಲಿಯಂತೆ ಕೆಲಸಮಾಡುವ ವಿಷ್ಣುವಿಗೆ ಈ ಬಾಲಕನು ಅದರ ಕಾವಿನಂತಿದ್ದಾನೆ, ಸಹಾಯಕನಾಗುತ್ತಿದ್ದಾನೆ. ॥ ೧೭ ॥ ಹೀಗೆ ಪ್ರಹ್ಲಾದನನ್ನು ಗುರುಗಳು ಬಗೆ-ಬಗೆಯಾಗಿ ಗದರಿಸಿ, ಹೆದರಿಸಿ ಆತನಿಗೆ ಧರ್ಮ, ಅರ್ಥ ಮತ್ತು ಕಾಮ ಸಂಬಂಧವಾದ ಶಿಕ್ಷಣವನ್ನು ಕೊಟ್ಟರು. ॥ ೧೮ ॥ ಕೆಲ ಸಮಯದ ನಂತರ ಪ್ರಹ್ಲಾದನು ಸಾಮ, ದಾನ, ಭೇದ ಮತ್ತು ದಂಡಗಳೆಂಬ ನಾಲ್ಕು ಉಪಾಯಗಳ ಸಂಬಂಧವಾಗಿ ಎಲ್ಲ ವಿಷಯಗಳನ್ನು ಗ್ರಹಿಸಿರುವನು ಎಂದು ತಿಳಿದು ಗುರುಗಳು ಅವನನ್ನು ಅವನ ತಾಯಿಯ ಬಳಿಗೆ ಕರೆತಂದರು. ತಾಯಿಯು ಪ್ರೀತಿಯಿಂದ ಅವನಿಗೆ ಸ್ನಾನಮಾಡಿಸಿ, ಉಡಿಗೆ-ತೊಡಿಗೆಗಳಿಂದ ಅಲಂಕಾರ ಮಾಡಿದಳು. ಅನಂತರ ಗುರುಜನರು ಆತನನ್ನು ಹಿರಣ್ಯಕಶಿಪುವಿನ ಬಳಿಗೆ ಕೊಂಡೊಯ್ದರು. ॥ ೧೯ ॥ ಪ್ರಹ್ಲಾದನು ತನ್ನ ಪಾದಗಳಿಗೆ ಬೀಳಲು ದೈತ್ಯೇಂದ್ರನು ಅವನಿಗೆ ಆಶೀರ್ವದಿಸಿ, ಎರಡೂ ಕೈಗಳಿಂದ ಎತ್ತಿಕೊಂಡು ಬಹಳ ಹೊತ್ತಿನವರೆಗೆ ಆಲಿಂಗಿಸಿಕೊಂಡು ಪರಮಾನಂದಭರಿತನಾದನು. ॥ ೨೦ ॥

ಆರೋಪ್ಯಾಂಕಮವಘ್ರಾಯ ಮೂರ್ಧನ್ಯಶ್ರುಕಲಾಂಬುಭಿಃ ।
ಆಸಿಂಚನ್ವಿಕಸದ್ವಕ್ತ್ರಮಿದಮಾಹ ಯುಧಿಷ್ಠಿರ ॥ ೨೦ ॥

*ಹಿರಣ್ಯಕಶಿಪುರುವಾಚ*

ಪ್ರಹ್ರಾದಾನೂಚ್ಯತಾಂ ತಾತ ಸ್ವಧೀತಂ ಕಿಂಚಿದುತ್ತಮಮ್ ।
ಕಾಲೇನೈತಾವತಾಽಽಯುಷ್ಮನ್ಯದಶಿಕ್ಷದ್ಗುರೋರ್ಭವಾನ್ ॥ ೨೧ ॥

*ಪ್ರಹ್ಲಾದ ಉವಾಚ*

ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ ೨೩ ॥

ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ ।
ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇಽಧೀತಮುತ್ತಮಮ್ ॥ ೨೪ ॥

ನಿಶಮ್ಯೈತತ್ಸುತವಚೋ ಹಿರಣ್ಯಕಶಿಪುಸ್ತದಾ ।
ಗುರುಪುತ್ರಮುವಾಚೇದಂ ರುಷಾ ಪ್ರಸ್ಫುರಿತಾಧರಃ ॥ ೨೫ ॥

ಬ್ರಹ್ಮಬಂಧೋ ಕಿಮೇತತ್ತೇ ವಿಪಕ್ಷಂ ಶ್ರಯತಾಸತಾ ।
ಅಸಾರಂ ಗ್ರಾಹಿತೋ ಬಾಲೋ ಮಾಮನಾದೃತ್ಯ ದುರ್ಮತೇ ॥ ೨೬ ॥

ಸಂತಿ ಹ್ಯಸಾಧವೋ ಲೋಕೇ ದುರ್ಮೈತ್ರಾಶ್ಛದ್ಮವೇಷಿಣಃ ।
ತೇಷಾಮುದೇತ್ಯಘಂ ಕಾಲೇ ರೋಗಃ ಪಾತಕಿನಾಮಿವ ॥ ೨೭ ॥

*ಗುರುಪುತ್ರ ಉವಾಚ*

ನ ಮತ್ಪ್ರಣೀತಂ ನ ಪರಪ್ರಣೀತಂ
ಸುತೋ ವದತ್ಯೇಷ ತವೇಂದ್ರಶತ್ರೋ ।
ನೈಸರ್ಗಿಕೀಯಂ ಮತಿರಸ್ಯ ರಾಜ-
ನ್ನಿಯಚ್ಛ ಮನ್ಯುಂ ಕದದಾಃ ಸ್ಮ ಮಾ ನಃ ॥ ೨೮ ॥

*ನಾರದ ಉವಾಚ*

ಗುರುಣೈವಂ ಪ್ರತಿಪ್ರೋಕ್ತೋ ಭೂಯ ಆಹಾಸುರಃ ಸುತಮ್ ।
ನ ಚೇದ್ಗುರುಮುಖೀಯಂ ತೇ ಕುತೋಽಭದ್ರಾಸತೀ ಮತಿಃ ॥ ೨೯ ॥

ಯುಧಿಷ್ಠಿರನೇ ! ಹಿರಣ್ಯಕಶಿಪು ಪ್ರಸನ್ನಮುಖದಿಂದ ಪ್ರಹ್ಲಾದನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವನ ಶಿರವನ್ನು ಆಘ್ರಾಣಿಸಿದನು. ಅವನ ಕಣ್ಣುಗಳಿಂದ ಪ್ರೇಮಾಶ್ರುಗಳು ಸುರಿ-ಸುರಿದು ಪ್ರಹ್ಲಾದನ ಶರೀರವನ್ನು ನೆನೆಸಿದವು. ಅವನು ತನ್ನ ಪುತ್ರನಲ್ಲಿ ಕೇಳಿದನು – ॥ ೨೦ ॥

**ಹಿರಣ್ಯಕಶಿಪು ಹೇಳಿದನು** – 'ಮಗು ಪ್ರಹ್ಲಾದ ! ಚಿರಂಜೀವಿಯಾಗು ! ಇಷ್ಟು ದಿನಗಳಲ್ಲಿ ನೀನು ಗುರುಗಳಿಂದ ಕಲಿತಿರುವುದರಲ್ಲಿ ಯಾವುದಾದರೂ ಒಳ್ಳೆಯ ಒಂದು ಮಾತನ್ನು ಹೇಳು, ನೋಡೋಣ.' ॥ ೨೧ ॥

**ಪ್ರಹ್ಲಾದನು ಹೇಳಿದನು** – ತೀರ್ಥರೂಪರೇ ! ಭಗವಾನ್ ವಿಷ್ಣುವಿನ ಭಕ್ತಿಯಲ್ಲಿ ಒಂಭತ್ತು ಭೇದಗಳಿವೆ. ಭಗವಂತನ ಗುಣ-ಲೀಲೆ-ನಾಮ ಇವುಗಳನ್ನು ಕೇಳುವುದು, ಅವನನ್ನೇ ಕೀರ್ತಿಸುವುದು, ಅವನ ನಾಮ-ರೂಪಾದಿಗಳನ್ನು ಸ್ಮರಿಸುವುದು, ಅವನ ಚರಣಗಳ ಸೇವೆ ಮಾಡುವುದು, ಪೂಜೆ-ಅರ್ಚನೆ ಮಾಡುವುದು, ವಂದಿಸುವುದು, ದಾಸನಾಗುವುದು, ಸಖ್ಯವಿರಿಸುವುದು, ಆತ್ಮನಿವೇದನ ಮಾಡುವುದು. ಭಗವಂತನ ಕುರಿತು ಸಮರ್ಪಣ ಭಾವದಿಂದ ಈ ಒಂಭತ್ತು ಪ್ರಕಾರದ ಭಕ್ತಿಯನ್ನು ಮಾಡಿದರೆ, ನಾನು ಅದನ್ನೇ ಉತ್ತಮ ಅಧ್ಯಯನವೆಂದು ತಿಳಿಯುತ್ತೇನೆ. ॥ ೨೩-೨೪ ॥ ಪ್ರಹ್ಲಾದನ ಈ ಮಾತನ್ನು ಕೇಳುತ್ತಲೇ ಕ್ರೋಧದಿಂದ ಹಿರಣ್ಯಕಶಿಪುವಿನ ತುಟಿಗಳು ಅದುರ ತೊಡಗಿದವು. ಅವನು ಗುರುಪುತ್ರರಲ್ಲಿ ಹೇಳಿದನು– ॥ ೨೫ ॥ ಎಲೈ ಬ್ರಾಹ್ಮಣಾಧಮನೇ ! ನೀನು ಎಂತಹ ಪಿತೂರಿಯನ್ನು ಮಾಡಿದ್ದೀಯೆ. ದುರ್ಬುದ್ಧಿಯವನೇ ! ನೀನು ನನ್ನನ್ನು ಸ್ವಲ್ಪವೂ ಲಕ್ಷಿಸದೆ ಈ ಹುಡುಗನಿಗೆ ಎಂತಹ ನಿಸ್ಸಾರವಾದ ಶಿಕ್ಷಣವನ್ನು ಕೊಟ್ಟಿರುವೆ. ಖಂಡಿತವಾಗಿಯೂ ನೀನು ನಮ್ಮ ಶತ್ರುಗಳ ಆಶ್ರಿತನಾಗಿರುವೆ. ॥ ೨೬ ॥ ಜಗತ್ತಿನಲ್ಲಿ ಸ್ನೇಹಿತರಂತೆ ಮುಂದೆ ನಟಿಸಿ ಹಿಂದಿನಿಂದ ಶತ್ರುಗಳಂತೆ ಕಾರ್ಯ ಮಾಡುವಂತಹ ದುಷ್ಟರ ಕೊರತೆಯಿಲ್ಲ. ಆದರೆ ಮರೆಯಲ್ಲಿ ಮಾಡಿದ ಪಾಪವು ಸಮಯ ಬಂದಾಗ ರೋಗದ ರೂಪದಲ್ಲಿ ಪ್ರಕಟಗೊಂಡು ಬಯಲಾಗುವಂತೆ – ಅವರ ಕಪಟವು ಬಹಿರಂಗಕ್ಕೆ ಬಂದೇ ಬರುವುದು. ॥ ೨೭ ॥

**ಗುರುಪುತ್ರರು ಹೇಳಿದರು** – ಎಲೈ ಇಂದ್ರಶತ್ರುವೇ ! ನಿನ್ನ ಪುತ್ರನು ಹೇಳುತ್ತಿರುವುದು ನಾನು ಹೇಳಿಕೊಟ್ಟಿದ್ದಲ್ಲ ಅಥವಾ ಬೇರೆ ಯಾರಿಂದಲೂ ಕಲಿತದ್ದಲ್ಲ. ರಾಜನೇ ! ಇದಾದರೋ ಇವನ ಜನ್ಮಜಾತ ಸ್ವಾಭಾವಿಕ ಬುದ್ಧಿಯಾಗಿದೆ. ಕೋಪವನ್ನು ಶಾಂತಪಡಿಸಿಕೊಳ್ಳಿ. ವ್ಯರ್ಥವಾಗಿ ನಮ್ಮ ಮೇಲೆ ದೋಷವನ್ನು ಹೊರಿಸಬೇಡಿ. ॥ ೨೮ ॥

**ನಾರದರು ಹೇಳಿದರು** – ಯುಧಿಷ್ಠಿರನೇ ! ಗುರುಗಳು ಹೀಗೆ ಉತ್ತರಿಸಿದಾಗ ಹಿರಣ್ಯಕಶಿಪು ಪುನಃ ಪ್ರಹ್ಲಾದನಲ್ಲಿ – 'ಎಲವೋ ! ಅಹಿತವನ್ನುಂಟುಮಾಡುವ ಮೋಸದ ಬುದ್ಧಿಯು ನಿನಗೆ ಗುರುಮುಖದಿಂದ ಬಂದಿಲ್ಲವಾದರೆ ಎಲ್ಲಿಂದ ಬಂತು ? ಎಂದು ಕೇಳಿದನು. ॥ ೨೯ ॥

ಪ್ರಹ್ಲಾದ ಉವಾಚ

ಮತಿರ್ನ ಕೃಷ್ಣೇ ಪರತಃ ಸ್ವತೋ ವಾ
ಮಿಥೋಽಭಿಪದ್ಯೇತ ಗೃಹವ್ರತಾನಾಮ್ ।
ಅದಾಂತಗೋಭಿರ್ವಿಶತಾಂ ತಮಿಸ್ರಂ
ಪುನಃ ಪುನಶ್ಚರ್ವಿತಚರ್ವಣಾನಾಮ್ ॥ ೩೦ ॥

ನ ತೇ ವಿದುಃ ಸ್ವಾರ್ಥಗತಿಂ ಹಿ ವಿಷ್ಣುಂ
ದುರಾಶಯಾ ಯೇ ಬಹಿರರ್ಥಮಾನಿನಃ ।
ಅಂಧಾ ಯಥಾಂಧೈರುಪನೀಯಮಾನಾ
ವಾಚೀಶತಂತ್ಯಾಮುರುದಾಮ್ನಿ ಬದ್ಧಾಃ ॥ ೩೧ ॥

ನೈಷಾಂ ಮತಿಸ್ತಾವದುರುಕ್ರಮಾಂಘ್ರಿಂ
ಸ್ಪೃಶತ್ಯನರ್ಥಾಪಗಮೋ ಯದರ್ಥಃ ।
ಮಹೀಯಸಾಂ ಪಾದರಜೋಽಭಿಷೇಕಂ
ನಿಷ್ಕಿಂಚನಾನಾಂ ನ ವೃಣೀತ ಯಾವತ್ ॥ ೩೨ ॥

ಇತ್ಯುಕ್ತ್ವೋಪರತಂ ಪುತ್ರಂ ಹಿರಣ್ಯಕಶಿಪೂ ರುಷಾ ।
ಅಂಧೀಕೃತಾತ್ಮಾ ಸ್ವೋತ್ಸಂಗಾನ್ನಿರಸ್ಯತ ಮಹೀತಲೇ ॥ ೩೩ ॥

ಆಹಾಮರ್ಷರುಷಾವಿಷ್ಟಃ ಕಷಾಯೀಭೂತಲೋಚನಃ ।
ವಧ್ಯತಾಮಾಶ್ವಯಂ ವಧ್ಯೋ ನಿಸಾರಯತ ನೈರ್ಋತಾಃ ॥ ೩೪ ॥

ಅಯಂ ಮೇ ಭ್ರಾತೃಹಾ ಸೋಽಯಂ
ಹಿತ್ವಾ ಸ್ವಾನ್ಸುಹೃದೋಽಧಮಃ ।
ಪಿತೃವ್ಯಹಂತುರ್ಯಃ ಪಾದೌ
ವಿಷ್ಣೋರ್ದಾಸವದರ್ಚತಿ ॥ ೩೫ ॥

ವಿಷ್ಣೋರ್ವಾ ಸಾಧ್ವಸೌ ಕಿಂ ನು ಕರಿಷ್ಯತ್ಯಸಮಂಜಸಃ ।
ಸೌಹೃದಂ ದುಸ್ತ್ಯಜಂ ಪಿತ್ರೋರಹಾದ್ಯಃ ಪಂಚಹಾಯನಃ ॥ ೩೬ ॥

ಪರೋಽಪ್ಯಪತ್ಯಂ ಹಿತಕೃದ್ಯಥೌಷಧಂ
ಸ್ವದೇಹಜೋಽಪ್ಯಾಮಯವತ್ಸುತೋಽಹಿತಃ ।
ಛಿಂದ್ಯಾತ್ತದಂಗಂ ಯದುತಾತ್ಮನೋಽಹಿತಂ
ಶೇಷಂ ಸುಖಂ ಜೀವತಿ ಯದ್ವಿವರ್ಜನಾತ್ ॥ ೩೭ ॥

**ಪ್ರಹ್ಲಾದನು ಹೇಳಿದನು** – ಅಪ್ಪಾ! ಸಂಸಾರಿಗಳಾದ ಜನರು ಇಂದ್ರಿಯಗಳ ಮೇಲೆ ಹತೋಟಿಯಿಲ್ಲದಿರುವುದರಿಂದ ಅನುಭವಿಸಿದ ವಿಷಯಗಳನ್ನೇ ಮತ್ತೆ-ಮತ್ತೆ ಭೋಗಿಸಲಿಕ್ಕಾಗಿ, ಸಂಸಾರವೆಂಬ ಘೋರವಾದ ನರಕದ ಕಡೆಗೆ ಹೋಗುತ್ತಿದ್ದಾರೆ. ಚಪ್ಪರಿಸಿದುದನ್ನೇ ಮತ್ತೆ-ಮತ್ತೆ ಚಪ್ಪರಿಸುತ್ತಿರುವ ಮೂರ್ಖರು ಅವರು. ಇಂತಹ ಮನೆಯಲ್ಲೇ ಆಸಕ್ತರಾಗಿರುವವರ ಬುದ್ಧಿಯು ತಾನಾಗಿಯೇ ಯಾರದೋ ಉಪದೇಶದಿಂದ ಅಥವಾ ನಿಮ್ಮಂತಹವರ ಸಂಗದಿಂದ ಭಗವಾನ್ ಶ್ರೀಕೃಷ್ಣನಲ್ಲಿ ತೊಡಗುವುದಿಲ್ಲ. ॥ ೩೦ ॥ ಇಂದ್ರಿಯಗಳಿಂದ ಕಂಡುಬರುವ ಬಾಹ್ಯವಿಷಯಗಳನ್ನೇ ಪರಮ ಇಷ್ಟವೆಂದು ತಿಳಿದವರು ಮೂರ್ಖತೆಯಿಂದ ಕುರುಡನ ಬೆನ್ನುಹತ್ತಿದ ಕುರುಡನಂತೆ ಹಳ್ಳಕ್ಕೆ ಬೀಳಲು ಸಾಗುತ್ತಿದ್ದಾರೆ. ವೇದವಾಣೀರೂಪವಾದ ಹಗ್ಗದಿಂದ-ಕಾಮ್ಯಕರ್ಮಗಳ ದೃಢವಾದ ಬಂಧನದಿಂದ ಬಂಧಿಸಲ್ಪಟ್ಟಿರುವರು. ಅವರಿಗೆ ತಮ್ಮ ಸ್ವಾರ್ಥ ಮತ್ತು ಪರಮಾರ್ಥ ಭಗವಾನ್ ವಿಷ್ಣುವೇ ಆಗಿದ್ದಾನೆಂಬುದೂ, ಅವನ ಪ್ರಾಪ್ತಿಯಿಂದ ತಮಗೆ ಎಲ್ಲ ಪುರುಷಾರ್ಥಗಳು ದೊರೆಯಬಹುದೆಂಬುದೂ ತಿಳಿಯದು. ॥ ೩೧ ॥ ಭಗವಂತನ ಚರಣಕಮಲಗಳನ್ನು ಸ್ಪರ್ಶಿಸುವ ಬುದ್ಧಿಯುಳ್ಳವರ ಜನ್ಮ-ಮರಣರೂಪವಾದ ಅನರ್ಥಗಳು ಪೂರ್ಣವಾಗಿ ನಾಶವಾಗಿ ಹೋಗುತ್ತವೆ. ಆದರೆ ವೈರಾಗ್ಯಶೀಲರಾದ ಭಗವತ್ಪ್ರೇಮೀ ಮಹಾತ್ಮರ ಪಾದಧೂಳಿಯಲ್ಲಿ ಸ್ನಾನವನ್ನು ಮಾಡದವರ ಬುದ್ಧಿಯು ಕಾಮ್ಯಕರ್ಮಗಳನ್ನೇ ಪೂರ್ಣವಾಗಿ ಸೇವಿಸಿದರೂ ಭಗವಚ್ಚರಣಗಳ ಸ್ಪರ್ಶವನ್ನು ಮಾಡಲಾರರು. ॥ ೩೨ ॥

ಪ್ರಹ್ಲಾದನು ಇಷ್ಟು ಹೇಳಿ ಸುಮ್ಮನಾದನು. ಹಿರಣ್ಯಕಶಿಪು ಕ್ರೋಧಾಂಧನಾಗಿ ಅವನನ್ನು ತನ್ನ ತೊಡೆಯಿಂದ ಎತ್ತಿ ಭೂಮಿಗೆ ಅಪ್ಪಳಿಸಿದನು. ॥ ೩೩ ॥ ಪ್ರಹ್ಲಾದನ ಮಾತುಗಳು ಆತನಿಗೆ ಸಹಿಸಲಾಗಲಿಲ್ಲ. ಅವನ ಕಣ್ಣುಗಳು ರೋಷದಿಂದ ಕೆಂಪಾದವು. ಅವನು ತನ್ನ ಸೇವಕರಿಗೆ ಆದೇಶಿಸಿದನು. ಎಲೈ ದೈತ್ಯರೇ! ಈತನನ್ನು ಇಲ್ಲಿಂದ ಹೊರಕ್ಕೆ ಕೊಂಡುಹೋಗಿ ಕೂಡಲೇ ಕೊಂದುಹಾಕಿರಿ. ಈತನು ಕೊಲ್ಲಲು ಯೋಗ್ಯನಾಗಿದ್ದಾನೆ. ॥ ೩೪ ॥ ನೋಡಿರಲ್ಲ! ನೀಚನಾದ ಇವನು ತನ್ನ ನೆಂಟರಿಷ್ಟರನ್ನೂ, ಸ್ನೇಹಿತರನ್ನೂ ತೊರೆದು ತನ್ನ ಚಿಕ್ಕಪ್ಪನನ್ನು ಕೊಂದುಹಾಕಿದ ವಿಷ್ಣುವಿನ ಚರಣಗಳನ್ನು ದಾಸನಂತೆ ಪೂಜಿಸುತ್ತಿದ್ದಾನಲ್ಲ! ನನ್ನ ಸೋದರನನ್ನು ವಧಿಸಿದ ವಿಷ್ಣುವೇ ಇವನ ರೂಪದಲ್ಲಿ ಬಂದಿರಲಿಕ್ಕಿಲ್ಲವಲ್ಲ! ॥ ೩೫ ॥ ಈಗ ಈತನು ವಿಶ್ವಾಸಕ್ಕೆ ಯೋಗ್ಯನಲ್ಲ. ಐದು ವರ್ಷ ವಯಸ್ಸಿನವನಾಗಿರುವಾಗಲೇ ಬಿಡುವುದಕ್ಕೆ ಕಷ್ಟವಾದ ತನ್ನ ತಂದೆ-ತಾಯಿಯ ಸ್ನೇಹವನ್ನೇ ಮರೆತುಬಿಟ್ಟಿದ್ದಾನಲ್ಲ! ಇಂತಹ ಕೃತಘ್ನನು ಆ ವಿಷ್ಣುವಿಗಾದರೂ ಏನು ಒಳ್ಳೆಯದನ್ನು ಮಾಡಿಯಾನು ? ॥ ೩೬ ॥ ಪರಕೀಯನೇ ಆದರೂ ಔಷಧದಂತೆ ಹಿತವನ್ನು ಮಾಡಿದರೆ ಒಂದು ವಿಧದಿಂದ ಅವನು ಪುತ್ರನೇ ಆಗಿದ್ದಾನೆ. ಆದರೆ ತನ್ನ ಪುತ್ರನೇ ಅಹಿತವನ್ನು ಮಾಡತೊಡಗಿದರೆ ರೋಗದಂತೆ ಅವನು ಶತ್ರುವೇ ಆಗಿದ್ದಾನೆ. ತನ್ನ ಶರೀರದ ಯಾವುದಾದರೂ ಅವಯವದಿಂದ ಇಡೀ ಶರೀರಕ್ಕೆ ಹಾನಿಯಾಗುವುದಿದ್ದರೆ ಅದನ್ನು ತುಂಡರಿಸಿಬಿಡ

ಸರ್ವೈರುಪಾಯೈರ್ಹಂತವ್ಯಃ ಸಂಭೋಜಶಯನಾಸನೈಃ ।
ಸುಹೃಲ್ಲಿಂಗಧರಃ ಶತ್ರುರ್ಮುನೇರ್ದುಷ್ಟಮಿವೇಂದ್ರಿಯಮ್ ॥ ೩೮ ॥

ನೈರ್ಋತಾಸ್ತೇ ಸಮಾದಿಷ್ಟಾ ಭರ್ತ್ರಾ ವೈ ಶೂಲಪಾಣಯಃ ।
ತಿಗ್ಮದಂಷ್ಟ್ರಕರಾಲಾಸ್ಯಾಸ್ತಾಮ್ರಶ್ಮಶ್ರುಶಿರೋರುಹಾಃ ॥ ೩೯ ॥

ನದಂತೋ ಭೈರವಾನ್ನಾದಾಂಶ್ಛಿಂಧಿ ಭಿಂಧೀತಿ ವಾದಿನಃ ।
ಆಸೀನಂ ಚಾಹನಞ್ಶೂಲೈಃ ಪ್ರಹ್ಲಾದಂ ಸರ್ವಮರ್ಮಸು ॥ ೪೦ ॥

ಪರೇ ಬ್ರಹ್ಮಣ್ಯನಿರ್ದೇಶ್ಯೇ ಭಗವತ್ಯಖಿಲಾತ್ಮನಿ ।
ಯುಕ್ತಾತ್ಮನ್ಯಫಲಾ ಆಸನ್ನಪುಣ್ಯಸ್ಯೇವ ಸತ್ಕ್ರಿಯಾಃ ॥ ೪೧ ॥

ಪ್ರಯಾಸೇಽಪಹತೇ ತಸ್ಮಿಂದೈತ್ಯೇಂದ್ರಃ ಪರಿಶಂಕಿತಃ ।
ಚಕಾರ ತದ್ವಧೋಪಾಯಾನ್ನಿರ್ಬಂಧೇನ ಯುಧಿಷ್ಠಿರ ॥ ೪೨ ॥

ದಿಗ್ಗಜೈರ್ದಂದಶೂಕೈಶ್ಚ ಅಭಿಚಾರಾವಪಾತನೈಃ ।
ಮಾಯಾಭಿಃ ಸಂನಿರೋಧೈಶ್ಚ ಗರದಾನೈರಭೋಜನೈಃ ॥ ೪೩ ॥

ಹಿಮವಾಯ್ವಗ್ನಿಸಲಿಲೈಃ ಪರ್ವತಾಕ್ರಮಣೈರಪಿ ।
ನ ಶಶಾಕ ಯದಾ ಹಂತುಮಪಾಪಮಸುರಃ ಸುತಮ್ ।
ಚಿಂತಾಂ ದೀರ್ಘತಮಾಂ ಪ್ರಾಪ್ತಸ್ತತ್ಕರ್ತುಂ ನಾಭ್ಯಪದ್ಯತ ॥ ೪೪ ॥

ಏಷ ಮೇ ಬಹ್ವಸಾಧೂಕ್ತೋ ವಧೋಪಾಯಾಶ್ಚ ನಿರ್ಮಿತಾಃ ।
ತೈಸ್ತೈರ್ದ್ರೋಹೈರಸದ್ಧರ್ಮೈರ್ಮುಕ್ತಃ ಸ್ವೇನೈವ ತೇಜಸಾ ॥ ೪೫ ॥

ಬೇಕು. ಏಕೆಂದರೆ, ಅದನ್ನು ತುಂಡರಿಸುವುದರಿಂದ ಉಳಿದ ಶರೀರವು ಸುಖವಾಗಿ ಬದುಕಬಲ್ಲದು. ॥ ೩೭ ॥ ಇವನು ಸ್ವಜನರ ವೇಷವನ್ನು ಧರಿಸಿ ಬಂದಿರುವ ಶತ್ರುವೇ ಆಗಿದ್ದಾನೆ. ಯೋಗಿಯ ಭೋಗಾಸಕ್ತವಾದ ಇಂದ್ರಿಯಗಳು ಅವನಿಗೆ ಅನಿಷ್ಟವನ್ನೇ ಮಾಡುವಂತೆಯೇ ಇವನು ನನ್ನ ಅಹಿತವನ್ನೇ ಮಾಡುವವನಾಗಿದ್ದಾನೆ. ಅದಕ್ಕಾಗಿ ಉಂಬಾಗ, ಮಲಗಿದಾಗ, ಕುಳಿತಿರುವಾಗ, ಯಾವುದೇ ಸಮಯದಲ್ಲಾದರೂ ಯಾವುದೇ ಉಪಾಯದಿಂದ ಇವನನ್ನು ಕೊಂದುಹಾಕಿರಿ. ॥ ೩೮ ॥

ಹಿರಣ್ಯಕಶಿಪು ದೈತ್ಯರಿಗೆ ಹೀಗೆ ಅಪ್ಪಣೆಮಾಡಿದಾಗ ತೀಕ್ಷ್ಣವಾದ ಕೋರೆದಾಡೆಗಳಿಂದಲೂ, ವಿಕರಾಳ ಮುಖದಿಂದಲೂ, ಕೆಂಪು-ಕೆಂಪಾದ ಗಡ್ಡ-ಮೀಸೆ-ಕೂದಲುಗಳುಳ್ಳ ದೈತ್ಯರು ಕೈಯಲ್ಲಿ ತ್ರಿಶೂಲವನ್ನು ಎತ್ತಿಕೊಂಡು 'ಕೊಲ್ಲಿರಿ, ಕಡಿಯಿರಿ' ಎಂದು ಜೋರಾಗಿ ಕೂಗಿಕೊಳ್ಳತೊಡಗಿದರು. ಪ್ರಹ್ಲಾದನು ಸುಮ್ಮನೇ ಕುಳಿತಿದ್ದನು. ದೈತ್ಯರು ಅವನ ಎಲ್ಲ ಮರ್ಮಸ್ಥಾನಗಳಲ್ಲಿ ಶೂಲದಿಂದ ತಿವಿಯುತ್ತಿದ್ದರು. ॥ ೩೯-೪೦ ॥ ಆಗ ಭಕ್ತ ಪ್ರಹ್ಲಾದನ ಚಿತ್ತವು – ಮನಸ್ಸು-ಮಾತುಗಳಿಗೆ ಅಗೋಚರನಾಗಿ, ಸರ್ವಾತ್ಮನಾಗಿ, ಸಮಸ್ತ ಶಕ್ತಿಗಳಿಗೆ ಆಧಾರನಾಗಿರುವ, ಪರಬ್ರಹ್ಮ ಪರಮಾತ್ಮನಲ್ಲಿ ನೆಟ್ಟುಹೋಗಿತ್ತು. ಆದುದರಿಂದ ಭಾಗ್ಯಹೀನರು ಮಾಡುವ ಮಹತ್ಕಾರ್ಯಗಳು ನಿಷ್ಫಲವಾಗುವಂತೆ ಅವರ ಎಲ್ಲ ಪ್ರಯಾಸಗಳು ವ್ಯರ್ಥವಾದುವು. ॥ ೪೧ ॥ ಯುಧಿಷ್ಠಿರನೇ! ಶೂಲಗಳ ಹೊಡೆತದಿಂದ ಪ್ರಹ್ಲಾದನ ಶರೀರದ ಮೇಲೆ ಯಾವುದೇ ಪರಿಣಾಮ ಆಗದಿದ್ದಾಗ ಹಿರಣ್ಯಕಶಿಪುವಿಗೆ ಭಾರೀ ಚಿಂತೆ-ಶಂಕೆಗಳು ಉಂಟಾದವು. ಈಗ ಅವನು ಪ್ರಹ್ಲಾದನನ್ನು ಕೊಂದುಹಾಕಲು ಹಟತೊಟ್ಟು ಬಗೆ-ಬಗೆಯ ಉಪಾಯಗಳನ್ನು ಮಾಡತೊಡಗಿದನು. ॥ ೪೨ ॥ ಆತನು ಆ ಬಾಲಕನನ್ನು ದಿಗ್ಗಜಗಳಿಂದ ತುಳಿಸಿದನು. ವಿಷಸರ್ಪಗಳಿಂದ ಕಚ್ಚಿಸಿದನು. ಪುರೋಹಿತರಿಂದ ಆಭಿಚಾರಿಕ ಕೃತ್ಯಗಳನ್ನು ಮಾಡಿಸಿದನು. ಪರ್ವತದ ಶಿಖರದಿಂದ ತಳ್ಳಿಸಿದನು. ಶಂಬರಾಸುರನಿಂದ ಅನೇಕ ವಿಧದ ಮಾಯೆಗಳನ್ನು ಮಾಡಿಸಿದನು. ಕತ್ತಲೆಯ ಕೋಣೆಯಲ್ಲಿ ಕೂಡಿಹಾಕಿದನು. ವಿಷವುಣಿಸಿದನು. ಆಹಾರಸೇವನೆಯನ್ನು ನಿಲ್ಲಿಸಿಬಿಟ್ಟನು. ॥ ೪೩ ॥ ಕೊರೆಯುವ ಮಂಜಿನಮೇಲೆ, ಧಗ-ಧಗನೆ ಉರಿಯುವ ಬೆಂಕಿಯಲ್ಲೂ, ಹಾಗೂ ಸಮುದ್ರದಲ್ಲಿಯೂ ಮತ್ತೆ-ಮತ್ತೆ ಹಾಕಿಸಿದನು. ಬಿರುಗಾಳಿಗೆ ಒಡ್ಡಿದನು. ಪರ್ವತಗಳ ಕೆಳಗೆ ಅದುಮಿಸಿದನು. ಆದರೆ ಇವುಗಳಲ್ಲಿ ಯಾವುದೇ ಉಪಾಯಗಳಿಂದಲೂ ಅವನಿಂದ ನಿಷ್ಪಾಪನಾದ ತನ್ನ ಪುತ್ರನ ಕೂದಲನ್ನೂ ಕೊಂಕಿಸಲಾಗಲಿಲ್ಲ. ತನ್ನ ವಿವಶತೆಯನ್ನು ಕಂಡು ಹಿರಣ್ಯಕಶಿಪುವಿಗೆ ಭಾರೀ ಚಿಂತೆ ಉಂಟಾಯಿತು. ಆ ಬಾಲಕನನ್ನು ವಧಿಸಲು ಆತನಿಗೆ ಬೇರಾವ ಉಪಾಯವೂ ತೋಚಲಿಲ್ಲ. ॥ ೪೪ ॥ ಅವನು ಯೋಚಿಸತೊಡಗಿದನು – 'ಇವನನ್ನು ನಾನು ಸಿಕ್ಕಾಬಟ್ಟೆಯಾಗಿ ಕೆಟ್ಟ ಮಾತುಗಳಿಂದ ಥಳಿಸಿದೆನು. ಕೊಂದುಹಾಕಲು ಅನೇಕ ಉಪಾಯಗಳನ್ನು ಮಾಡಿದೆ. ಆದರೆ ಇವನು ನನ್ನ ದ್ರೋಹ ಮತ್ತು ದುರ್ವ್ಯವಹಾರಗಳಿಂದ ಯಾರ ಉಪಾಯವು ಇಲ್ಲದೆ ತನ್ನ ಪ್ರಭಾವದಿಂದಲೇ ಬದುಕಿರುವನಲ್ಲ! ॥ ೪೫ ॥

ವರ್ತಮಾನೋಽವಿದೂರೇ ವೈ ಬಾಲೋಽಪ್ಯಜಡಧೀರಯಮ್ ।
ನ ವಿಸ್ಮರತಿ ಮೇಽನಾರ್ಯಂ ಶುನಃಶೇಪ ಇವ ಪ್ರಭುಃ
॥ ೪೬ ॥

ಅಪ್ರಮೇಯಾನುಭಾವೋಽಯಮಕುತಶ್ಚಿದ್ಭಯೋಽಮರಃ ।
ನೂನಮೇತದ್ವಿರೋಧೇನ ಮೃತ್ಯುರ್ಮೇ ಭವಿತಾ ನ ವಾ
॥ ೪೭ ॥

ಇತಿ ತಂ ಚಿಂತಯಾ ಕಿಂಚಿನ್ಮ್ಲಾನಶ್ರಿಯಮಧೋಮುಖಮ್ ।
ಶಂಡಾಮರ್ಕಾವೌಶನಸೌ ವಿವಿಕ್ತ ಇತಿ ಹೋಚತುಃ
॥ ೪೮ ॥

ಜಿತಂ ತ್ವಯೈಕೇನ ಜಗತ್ತ್ರಯಂ ಭ್ರುವೋ-
ರ್ವಿಜೃಂಭಣತ್ರಸ್ತಸಮಸ್ತಧಿಷ್ಣ್ಯಪಮ್ ।
ನ ತಸ್ಯ ಚಿಂತ್ಯಂ ತವ ನಾಥ ಚಕ್ಷ್ಮಹೇ
ನ ವೈ ಶಿಶೂನಾಂ ಗುಣದೋಷಯೋಃ ಪದಮ್ ॥ ೪೯ ॥

ಇಮಂ ತು ಪಾಶೈರ್ವರುಣಸ್ಯ ಬದ್ಧ್ವಾ
ನಿಧೇಹಿ ಭೀತೋ ನ ಪಲಾಯತೇ ಯಥಾ ।
ಬುದ್ಧಿಶ್ಚ ಪುಂಸೋ ವಯಸಾಽಽರ್ಯಸೇವಯಾ
ಯಾವದ್ಗುರುರ್ಭಾರ್ಗವ ಆಗಮಿಷ್ಯತಿ ॥ ೫೦ ॥

ತಥೇತಿ ಗುರುಪುತ್ರೋಕ್ತಮನುಜ್ಞಾಯೇದಮಬ್ರವೀತ್ ।
ಧರ್ಮೋ ಹ್ಯಸ್ಯೋಪದೇಷ್ಟವ್ಯೋ ರಾಜ್ಞಾಂ ಯೋ ಗೃಹಮೇಧಿನಾಮ್
॥ ೫೧ ॥

ಧರ್ಮಮರ್ಥಂ ಚ ಕಾಮಂ ಚ ನಿತರಾಂ ಚಾನುಪೂರ್ವಶಃ ।
ಪ್ರಹ್ಲಾದಾಯೋಚತುಃ ರಾಜನ್ ಪ್ರಶ್ರಿತಾವನತಾಯ ಚ
॥ ೫೨ ॥

ಯಥಾ ತ್ರಿವರ್ಗಂ ಗುರುಭಿರಾತ್ಮನೇ ಉಪಶಿಕ್ಷಿತಮ್ ।
ನ ಸಾಧು ಮೇನೇ ತಚ್ಛಿಕ್ಷಾಂ ದ್ವಂದ್ವಾರಾಮೋಪವರ್ಣಿತಾಮ್
॥ ೫೩ ॥

ಇವನು ಬಾಲಕನಾಗಿದ್ದರೂ ತಿಳುವಳಿಕಸ್ಥನಾಗಿದ್ದು ನನ್ನ ಬಳಿಯಲ್ಲೇ ನಿಃಶಂಕಭಾವದಿಂದ ಇರುತ್ತಾನೆ. ಏನೇ ಇರಲಿ, ಇವನಲ್ಲಿ ಖಂಡಿತವಾಗಿ ಏನೋ ಅದ್ಭುತವಾದ ಸಾಮರ್ಥ್ಯವಿದೆ. ಶುನಃಶೇಪನು* ತನ್ನ ತಂದೆಯ ನೀಚತನದ ದೌರ್ಜನ್ಯಗಳಿಂದ ಅವನ ವಿರೋಧಿಯಾದಂತೆಯೇ ಇವನೂ ಕೂಡ ನಾನು ಮಾಡಿದ ಅಪಕಾರಗಳನ್ನು ಮರೆಯಲಾರನು. ॥ ೪೬ ॥ ಇವನು ಯಾರಿಗೂ ಹೆದರುವುದಿಲ್ಲ, ಇವನ ಮೃತ್ಯುವು ಆಗುವುದಿಲ್ಲ, ಇವನ ಶಕ್ತಿಯನ್ನು ಅಳೆಯಲು ಸಾಧ್ಯವಾಗುವುದಿಲ್ಲ. ಇವನ ವಿರೋಧದಿಂದ ಅವಶ್ಯವಾಗಿ ನನ್ನ ಮೃತ್ಯುವು ಆಗಬಹುದು ಅಥವಾ ಆಗದೆಯೂ ಇರಬಹುದು. ॥ ೪೭ ॥ ಹೀಗೆಲ್ಲಾಯೋಚಿಸುತ್ತಾ-ಯೋಚಿಸುತ್ತಾ ಅವನ ಮುಖವು ಸ್ವಲ್ಪ ಬಾಡಿತು. ಶುಕ್ರಾಚಾರ್ಯರ ಪುತ್ರರಾದ ಶಂಡ-ಅಮರ್ಕರು ಹಿರಣ್ಯಕಶಿಪು ತಲೆತಗ್ಗಿಸಿ ಕುಳಿತಿರುವುದನ್ನು ಕಂಡಾಗ ಅವರು ಏಕಾಂತದಲ್ಲಿ ಹೋಗಿ ಅವನಲ್ಲಿ ಹೀಗೆ ಹೇಳಿದರು –॥ ೪೮ ॥ 'ಮಹಾರಾಜಾ ! ನೀವೊಬ್ಬರೇ ಮೂರು ಲೋಕಗಳ ಮೇಲೆ ವಿಜಯವನ್ನು ಸಂಪಾದಿಸಿರುವಿರಿ. ನೀವು ಹುಬ್ಬು ಓರೆಮಾಡಿದರೆ ಸಾಕು, ಎಲ್ಲ ಲೋಕಪಾಲರು ನಡುಗಿ ಹೋಗುತ್ತಾರೆ. ಹೀಗೆ ಚಿಂತೆಪಡಲು ಯಾವ ಕಾರಣವೂ ನಮಗೆ ಕಾಣುವುದಿಲ್ಲ. ಮಕ್ಕಳು ಆಟಗಾರಿಕೆಯಲ್ಲಿ ಮಾಡುವ ಸರಿ-ತಪ್ಪುಗಳನ್ನು ಕುರಿತು ಯಾರಾದರೂ ಚಿಂತೆ ಪಡುವರೇ ? ॥ ೪೯ ॥ ನಮ್ಮ ತಂದೆಯಾದ ಶುಕ್ರಾಚಾರ್ಯರು ಬರುವುದರೊಳಗೆ ಇವನು ಹೆದರಿ ಎಲ್ಲಾದರೂ ಹೋಗದಿರುವಂತೆ ಇವನನ್ನು ವರುಣಪಾಶಗಳಿಂದ ಬಂಧಿಸಿಡಿರಿ. ವಯಸ್ಸು ಆಗುತ್ತಾ-ಆಗುತ್ತಾ ಮತ್ತು ಗುರು ಹಿರಿಯರ ಸೇವೆ ಮಾಡುತ್ತಾ- ಮಾಡುತ್ತಾ ಮನುಷ್ಯರಿಗೆ ಬುದ್ಧಿ ಬರುವುದು. ॥ ೫೦ ॥

ಹಿರಣ್ಯಕಶಿಪು 'ಹಾಗೆಯೇ ಆಗಲಿ' ಎಂದು ಹೇಳಿ ಗುರುಪುತ್ರರ ಸಲಹೆಯನ್ನು ಒಪ್ಪಿಕೊಂಡು – 'ಇವನಿಗೆ ಗೃಹಸ್ಥರಾದ ರಾಜರು ಆಚರಿಸಬೇಕಾದ ಧರ್ಮಗಳನ್ನೇ ಉಪದೇಶ ಮಾಡಿರಿ' ಎಂದು ಗುರುಪುತ್ರರಿಗೆ ಆದೇಶಮಾಡಿದನು. ॥ ೫೧ ॥ ಯುಧಿಷ್ಠಿರನೇ ! ಅದಾದ ಬಳಿಕ ಪುರೋಹಿತರು ಅವನನ್ನು ಕರಕೊಂಡು ಪಾಠಶಾಲೆಗೆ ಹೋದರು ಮತ್ತು ಕ್ರಮವಾಗಿ ಧರ್ಮ, ಅರ್ಥ ಮತ್ತು ಕಾಮ – ಈ ಮೂರು ಪುರುಷಾರ್ಥಗಳ ಶಿಕ್ಷಣವನ್ನು ಕೊಡಲು ತೊಡಗಿದರು. ಪ್ರಹ್ಲಾದನು ಅಲ್ಲಿ ಅತ್ಯಂತ ನಮ್ರ ಸೇವಕನಂತೆ ಇರತೊಡಗಿದನು. ॥ ೫೨ ॥ ಆದರೆ ಗುರುಗಳ ಆ ಶಿಕ್ಷಣವು ಪ್ರಹ್ಲಾದನಿಗೆ ಮೆಚ್ಚಿಕೆಯಾಗಲಿಲ್ಲ. ಏಕೆಂದರೆ ಗುರುಗಳು ಅವನಿಗೆ ಕೇವಲ ಅರ್ಥ, ಧರ್ಮ ಮತ್ತು ಕಾಮದ್ದೇ ಶಿಕ್ಷಣ ಕೊಡುತ್ತಿದ್ದರು. ಈ ಶಿಕ್ಷಣವು – ರಾಗ-ದ್ವೇಷಾದಿ ದ್ವಂದ್ವಗಳು ಮತ್ತು ವಿಷಯ ಭೋಗಗಳಲ್ಲಿ ರಸವನ್ನನುಭವಿಸುವಂತಹ ಜನರಿಗೆ ಮಾತ್ರವೇ ಇದೆ. ॥ ೫೩ ॥

* ಶುನಃಶೇಪನು ಅಜೀಗರ್ತನ ನಡುವಣ ಪುತ್ರನಾಗಿದ್ದನು. ಅವನನ್ನು ತಂದೆಯು ವರುಣನ ಯಜ್ಞದಲ್ಲಿ ಬಲಿಕೊಡಲಿಕ್ಕಾಗಿ ಹರಿಶ್ಚಂದ್ರನ ಪುತ್ರ ರೋಹಿತಾಶ್ವನಿಗೆ ಬದಲಿಗೆ ಮಾರಿಬಿಟ್ಟಿದ್ದನು. ಆಗ ಅವನ ಮಾವ ವಿಶ್ವಾಮಿತ್ರರು ಅವನನ್ನು ರಕ್ಷಿಸಿದ್ದರು ಮತ್ತು ಅವನು ತನ್ನ ತಂದೆಗೆ ವಿರುದ್ಧನಾಗಿ ಅವನ ವಿಪಕ್ಷಿಯಾದ ವಿಶ್ವಾಮಿತ್ರರ ಗೋತ್ರವನ್ನು ಸೇರಿಕೊಂಡನು. ಈ ಕಥೆ ಮುಂದೆ ಒಂಭತ್ತನೇ ಸ್ಕಂಧದ ಏಳನೆಯ ಅಧ್ಯಾಯದಲ್ಲಿ ಬರುವುದು.

ಯದಾಽಽಚಾರ್ಯಃ ಪರಾವೃತ್ತೋ ಗೃಹಮೇಧೀಯಕರ್ಮಸು ।
ವಯಸ್ಯೈರ್ಬಾಲಕೈಸ್ತತ್ರ ಸೋಪಹೂತಃ ಕೃತಕ್ಷಣೈಃ ॥ ೫೪ ॥

ಅಥ ತಾನ್ ಶ್ಲಕ್ಷ್ಣಯಾ ವಾಚಾ ಪ್ರತ್ಯಾಹೂಯ ಮಹಾಬುಧಃ ।
ಉವಾಚ ವಿದ್ವಾಂಸ್ತನ್ನಿಷ್ಠಾಂ ಕೃಪಯಾ ಪ್ರಹಸನ್ನಿವ ॥ ೫೫ ॥

ತೇ ತು ತದ್ಗೌರವಾತ್ಸರ್ವೇ ತ್ಯಕ್ತಕ್ರೀಡಾಪರಿಚ್ಛದಾಃ ।
ಬಾಲಾ ನ ದೂಷಿತಧಿಯೋ ದ್ವಂದ್ವಾರಾಮೇರಿತೇಹಿತೈಃ ॥ ೫೬ ॥

ಪರ್ಯುಪಾಸತ ರಾಜೇಂದ್ರ ತನ್ನ್ಯಸ್ತಹೃದಯೇಕ್ಷಣಾಃ ।
ತಾನಾಹ ಕರುಣೋ ಮೈತ್ರೋ ಮಹಾಭಾಗವತೋಽಸುರಃ ॥ ೫೭ ॥

ಒಂದು ದಿನ ಗುರುಗಳು ಮನೆಯ ಕೆಲಸಕ್ಕಾಗಿ ಎಲ್ಲೋ ಹೊರಗೆ ಹೋಗಿದ್ದರು. ಪಾಠಕ್ಕೆ ವಿರಾಮ ಸಿಕ್ಕಿದ್ದರಿಂದ ಸಮವಯಸ್ಸಿನ ಬಾಲಕರು ಪ್ರಹ್ಲಾದನನ್ನು ಆಟಕ್ಕಾಗಿ ಕರೆದರು. ॥ ೫೪ ॥ ಪರಮ ಜ್ಞಾನಿಯಾಗಿದ್ದ ಪ್ರಹ್ಲಾದನು ಆ ಹುಡುಗರ ಪ್ರೇಮವನ್ನು ಕಂಡು ಸಂತೋಷಗೊಂಡು ಸವಿಮಾತುಗಳಿಂದ ಅವರನ್ನೇ ತನ್ನ ಬಳಿಗೆ ಬರಮಾಡಿಕೊಂಡನು. ಅವರ ಮತಿಯನ್ನೂ, ಗತಿಯನ್ನೂ ಬಲ್ಲವನಾದ್ದರಿಂದ ಅವರ ಮೇಲೆ ಕರುಣೆದೋರಿ ಮುಗುಳ್ನಗುತ್ತಾ ಅವರಿಗೆ ಉಪದೇಶ ಮಾಡತೊಡಗಿದನು. ॥ ೫೫ ॥ ಯುಧಿಷ್ಠಿರ! ಅವರೆಲ್ಲರೂ ಇನ್ನೂ ಬಾಲಕರಾಗಿದ್ದರು. ಅದರಿಂದ ರಾಗ-ದ್ವೇಷ ಪರಾಯಣ ವಿಷಯಭೋಗೀ ಪುರುಷರ ಉಪದೇಶದಿಂದ, ಕೃತಿಗಳಿಂದ ಅವರ ಬುದ್ಧಿಯು ಇನ್ನೂ ದೂಷಿತವಾಗಿರಲಿಲ್ಲ. ಇದರಿಂದ ಹಾಗೂ ಪ್ರಹ್ಲಾದನ ಕುರಿತು ಆದರ ಬುದ್ಧಿ ಇರುವುದರಿಂದ ಅವರೆಲ್ಲರೂ ಆಟದ ವಸ್ತುಗಳನ್ನು ಬಿಟ್ಟು ಪ್ರಹ್ಲಾದನ ಹತ್ತಿರ ಹೋಗಿ ಸುತ್ತಲೂ ಕುಳಿತುಕೊಂಡರು. ಪ್ರಹ್ಲಾದನ ಉಪದೇಶವನ್ನು ಮನಸ್ಸಿಟ್ಟು ಕೇಳಲು ತುಂಬಾ ಪ್ರೇಮದಿಂದ ನೆಟ್ಟನೋಟದಿಂದ ಅವನನ್ನೇ ನೋಡತೊಡಗಿದರು. ಭಗವಂತನ ಪರಮ ಪ್ರೇಮಿಭಕ್ತನಾದ ಪ್ರಹ್ಲಾದನ ಹೃದಯವು ಅವರ ಕುರಿತು ಕರುಣೆ ಮತ್ತು ಮೈತ್ರೀಭಾವದಿಂದ ತುಂಬಿಹೋಗಿತ್ತು. ಅವನು ಹೇಳತೊಡಗಿದನು – ॥ ೫೬-೫೭ ॥

ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ ಪ್ರಹ್ಲಾದಾನುಚರಿತೇ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ಪ್ರಹ್ಲಾದನು ಅಸುರಬಾಲಕರಿಗೆ ಮಾಡಿದ ಉಪದೇಶ

*ಪ್ರಹ್ಲಾದ ಉವಾಚ*

ಕೌಮಾರ ಆಚರೇತ್ಪ್ರಾಜ್ಞೋ ಧರ್ಮಾನ್ಭಾಗವತಾನಿಹ ।
ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಮ್ ॥ ೧ ॥

ಪ್ರಹ್ಲಾದನು ಹೇಳಿದನು – ಮಿತ್ರರೇ! ಈ ಪ್ರಪಂಚದಲ್ಲಿ ಮನುಷ್ಯಜನ್ಮವು ಅತ್ಯಂತ ದುರ್ಲಭವಾದುದು. ಇದರ ಮೂಲಕ ಅವಿನಾಶಿಯಾದ ಪರಮಾತ್ಮನ ಪ್ರಾಪ್ತಿಯಾಗಬಲ್ಲದು. ಆದರೆ ಇದು ಯಾವಾಗ ನಾಶವಾಗಿಬಿಡುವುದೋ ತಿಳಿಯದು. ಆದುದರಿಂದ ವಿವೇಕಿಯಾದವನು ಮುಪ್ಪಿನವರೆಗೂ, ಯೌವನಕ್ಕೂ ಕಾಯದೇ ಬಾಲ್ಯದಲ್ಲೇ ಭಗವಂತನನ್ನು ದೊರಕಿಸಿಕೊಡುವ ಭಾಗವತ ಧರ್ಮವನ್ನು ಅನುಷ್ಠಾನಮಾಡಬೇಕು.* ॥ ೧ ॥

* ಇದಕ್ಕೆ ಹಿಂದೆ ಈ ಕೆಳಗಿನ ಐದು ಶ್ಲೋಕಗಳು ಶ್ರೀಮದ್ಭಾಗವತದ ಪ್ರಾಚೀನ ಪ್ರತಿಗಳಲ್ಲಿ ಕಂಡುಬರುತ್ತವೆ. ವಿಜಯಧ್ವಜೀಯದಲ್ಲಿ ಇವುಗಳನ್ನು ಮಾನ್ಯಮಾಡಿದೆ.

ಹಂಹೋಽರ್ಭಕಾ ಮೇ ಶೃಣುತ ವಚೋ ವಃ ಸರ್ವತಃ ಶಿವಮ್ । ವಯಸ್ಯಾಕಸ್ಸ್ವೃತ ಮೃತಾನ್ಕ್ರೀಡಾಂಧಾ ಮಾ ಪ್ರಮಾದ್ಯಥ ॥ ೧ ॥
ನ ಪುರಾ ವಿವಶಂ ಬಾಲಾ ಆತ್ಮನೋಽರ್ಥೇ ಪ್ರಿಯೈಷಿಣಃ । ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಮ್ ॥ ೨ ॥
ಯದುಕ್ತ್ಯಾ ನ ಪ್ರಬುಧ್ಯೇತ ಸುಪ್ತಸ್ತ್ವ ಜ್ಞಾನನಿದ್ರಯಾ । ನ ಶ್ರದ್ದಧ್ಯಾನ್ನತಂ ತಸ್ಯ ಯಥಾಂಧೋ ಹ್ಯಂಧನಾಯಕಃ ॥ ೩ ॥
ಕಃ ಶತ್ರುಃ ಕ ಉದಾಸೀನಃ ಕಿಂ ಮಿತ್ರಂ ಚೇಹ ಆತ್ಮನಃ । ಭವತ್ಸ್ವಪಿ ನಯೈಃ ಕಿಂ ಸ್ಯಾದ್ದೈವಂ ಸಂಪದ್ವಿಪತ್ಪದಮ್ ॥ ೪ ॥
ಯೋ ನ ಹಿಂಸ್ಯಾದ್ಧರ್ಮಕಾಮಮಾತ್ಮಾನಂ ಸ್ವಜನೇ ವಶಃ । ಪುನಃ ಶ್ರೀಲೋಕಯೋರ್ಹೇತುಃ ಸ ಮುಕ್ತಾಂಧ್ಯೋಽತಿದುರ್ಲಭಃ ॥ ೫ ॥

(ಮುಂದಿನ ಪುಟದಲ್ಲಿ ಮುಂದುವರೆಯುತ್ತದೆ.)

ಯಥಾ ಹಿ ಪುರುಷಸ್ಯೇಹ ವಿಷ್ಣೋಃ ಪಾದೋಪಸರ್ಪಣಮ್ ।
ಯದೇಷ ಸರ್ವಭೂತಾನಾಂ ಪ್ರಿಯ ಆತ್ಮೇಶ್ವರಃ ಸುಹೃತ್ ॥ ೨ ॥

ಸುಖಮೈಂದ್ರಿಯಕಂ ದೈತ್ಯಾ ದೇಹಯೋಗೇನ ದೇಹಿನಾಮ್ ।
ಸರ್ವತ್ರ ಲಭ್ಯತೇ ದೈವಾದ್ಯಥಾ ದುಃಖಮಯತ್ನತಃ ॥ ೩ ॥

ತತ್ಪ್ರಯಾಸೋ ನ ಕರ್ತವ್ಯೋ ಯತ ಆಯುರ್ವ್ಯಯಃ ಪರಮ್ ।
ನ ತಥಾ ವಿಂದತೇ ಕ್ಷೇಮಂ ಮುಕುಂದ ಚರಣಾಂಬುಜಮ್ ॥ ೪ ॥

ತತೋ ಯತೇತ ಕುಶಲಃ ಕ್ಷೇಮಾಯ ಭಯಮಾಶ್ರಿತಃ ।
ಶರೀರಂ ಪೌರುಷಂ ಯಾವನ್ನ ವಿಪದ್ಯೇತ ಪುಷ್ಕಲಮ್ ॥ ೫ ॥

ಪುಂಸೋ ವರ್ಷಶತಂ ಹ್ಯಾಯುಸ್ತದರ್ಧಂ ಚಾಜಿತಾತ್ಮನಃ ।
ನಿಷ್ಫಲಂ ಯದಸೌ ರಾತ್ರ್ಯಾಂ ಶೇತೇಽಂಧಂ ಪ್ರಾಪಿತಸ್ತಮಃ ॥ ೬ ॥

ಈ ಮನುಷ್ಯಜನ್ಮದಲ್ಲಿ ಭಗವಾನ್ ವಿಷ್ಣುವಿನ ಚರಣಗಳಲ್ಲಿ ಶರಣಾಗುವುದೇ ಜೀವನದ ಸಫಲತೆಯಾಗಿದೆ. ಏಕೆಂದರೆ ಭಗವಂತನೇ ಸಮಸ್ತ ಪ್ರಾಣಿಗಳಿಗೂ ಸ್ವಾಮಿಯೂ, ಸ್ನೇಹಿತನೂ, ಪ್ರಿಯತಮನೂ, ಆತ್ಮನೂ ಆಗಿದ್ದಾನೆ. ॥ ೨ ॥ ಗೆಳೆಯರೇ ! ಜೀವಿಯು ಯಾವುದೇ ಯೋನಿಯಲ್ಲಿದ್ದರೂ ಯಾವುದೇ ಪ್ರಯತ್ನವಿಲ್ಲದೆ, ನಿವಾರಿಸಿದರೂ ತಾನಾಗಿಯೇ ದುಃಖವು ಸಿಗುವಂತೆಯೇ – ಪ್ರಾರಬ್ಧಾನುಸಾರವಾಗಿ ಎಲ್ಲೆಡೆಗಳಲ್ಲಿ ಇಂದ್ರಿಯಗಳಿಂದ ಭೋಗಿಸಲಾಗುವ ಸುಖವು ದೊರೆಯುತ್ತಾ ಇರುತ್ತದೆ. ॥ ೩ ॥ ಅದಕ್ಕಾಗಿ ಸಾಂಸಾರಿಕ ಸುಖದ ಉದ್ದೇಶದಿಂದ ಯಾವುದೇ ಪ್ರಯತ್ನ ಮಾಡುವ ಆವಶ್ಯಕತೆ ಇರುವುದಿಲ್ಲ. ಏಕೆಂದರೆ, ತಾನಾಗಿಯೇ ಸಿಗುವಂತಹ ವಸ್ತುವಿಗಾಗಿ ಪರಿಶ್ರಮ ಪಡುವುದು ಆಯುಸ್ಸನ್ನೂ, ಶಕ್ತಿಯನ್ನೂ ವ್ಯರ್ಥವಾಗಿ ಕಳಕೊಳ್ಳುವುದೇ ಆಗಿದೆ. ಇದರಲ್ಲೇ ಆಸಕ್ತರಾದವರಿಗೆ ಭಗವಂತನ ಪರಮ ಕಲ್ಯಾಣಪ್ರದವಾದ ಚರಣಕಮಲಗಳ ಪ್ರಾಪ್ತಿಯಾಗುವುದಿಲ್ಲ. ॥ ೪ ॥ ನಮ್ಮ ತಲೆಯ ಮೇಲೆ ಅನೇಕ ಪ್ರಕಾರದ ಭಯಗಳು ಆಡರಿವೆ. ಅದಕ್ಕಾಗಿ ಭಗವತ್ಪ್ರಾಪ್ತಿಗಾಗಿಯೇ ಮೀಸಲಾದ ಈ ಶರೀರವು ರೋಗ-ಶೋಕಗಳಿಂದ ಗ್ರಸ್ತವಾಗಿ ಮೃತ್ಯುವಿನ ದವಡೆಯಲ್ಲಿ ಬೀಳುವ ಮೊದಲೇ ಬುದ್ಧಿವಂತರಾದವರು ತಮ್ಮ ಶ್ರೇಯಸ್ಸಿಗಾಗಿ ಪ್ರಯತ್ನಮಾಡಬೇಕು. ॥ ೫ ॥ ಮನುಷ್ಯನ ಪೂರ್ಣ ಆಯುಸ್ಸು ನೂರುವರ್ಷ. ಇಂದ್ರಿಯಗಳನ್ನು ವಶಪಡಿಸಿ ಕೊಳ್ಳದಿರುವವರ ಆಯುಸ್ಸಿನ ಅರ್ಧಭಾಗವು ಹೀಗೆಯೇ ವ್ಯರ್ಥವಾಗಿ ಕಳೆದುಹೋಗುತ್ತದೆ. ಏಕೆಂದರೆ, ಅವರು ರಾತ್ರಿಯಲ್ಲಿ ಘೋರವಾದ ತಮೋಗುಣ-ಅಜ್ಞಾನದಿಂದ ಕಬಳಿಸಲ್ಪಟ್ಟು ನಿದ್ದೆ ಮಾಡುತ್ತಿರುತ್ತಾರೆ. ॥ ೬ ॥ ಬಾಲ್ಯದಲ್ಲಿ ಅವರಿಗೆ ತನ್ನ ಹಿತ-ಅಹಿತ ಜ್ಞಾನವಿರುವುದಿಲ್ಲ. ಸ್ವಲ್ಪ ದೊಡ್ಡವರಾಗಿ ಕೌಮಾರ ಅವಸ್ಥೆಯಲ್ಲಿ ಆಟೋಟಗಳಲ್ಲೇ ತೊಡಗಿರುತ್ತಾರೆ. ಹೀಗೆ ಇಪ್ಪತ್ತು ವರ್ಷಗಳಾದರೋ ಅರಿಯದೆಯೇ ಕಳೆದುಹೋಗುತ್ತವೆ. ಮುದಿತನವು ಶರೀರವನ್ನು

ಎಲೈ ಬಾಲಕರೇ ! ನನ್ನ ಮಾತನ್ನು ಕೇಳಿರಿ. ಇದರಿಂದ ನಿಮಗೆ ಎಲ್ಲ ಕಡೆಗಳಲ್ಲಿಯೂ ಮಂಗಳವುಂಟಾಗುವುದು. ಪರಮಪುರುಷಾರ್ಥವು ದೊರೆಯುವುದು. ಪರಮ ಶ್ರೇಯಸ್ಸು ಉಂಟಾಗುವುದು. 'ಈಗ ಬಾಲ್ಯ ; ಮುಂದೆ ನೋಡೋಣ' – ಎಂದು ಶ್ರೇಯಸ್ಸಿನ ಸಾಧನೆಯನ್ನು ಮುಂದೂಡಬಾರದು. ನಿಮ್ಮ ಜೊತೆಗಾರರು ಎಷ್ಟೋ ಮಂದಿ ಸತ್ತುಹೋಗಿರುವುದನ್ನು ನೋಡಿದಿರಿ. ಆಟ-ಪಾಟಗಳಲ್ಲೇ ಆಸಕ್ತರಾಗಿ ಶ್ರೇಯಸ್ಸಿನ ಬಗೆಗೆ ಕುರುಡರಾಗಿ ಎಚ್ಚರತಪ್ಪದಿರಿ. ಪುರಾತನರಾದ ಬಾಲಕರು ತಮ್ಮ ಮನಸ್ಸನ್ನು ಆಟ-ಪಾಟಗಳಲ್ಲಿ ತೊಡಗಿಸುತ್ತಿರಲಿಲ್ಲ. ಬಾಲ್ಯದಿಂದಲೂ ತಮ್ಮ ಪರಮ ಪ್ರಯೋಜನದ ಸಿದ್ಧಿಯನ್ನೇ ಅವರು ಬಯಸುತ್ತಿದ್ದರು. ಪರಮಾತ್ಮಜ್ಞಾನವನ್ನೇ ಕೋರುತ್ತಿದ್ದರು. 'ನಾವೂ ಕೂಡ ಗುರುಗಳಾಗದ ಶಂಡಾಮರ್ಕರ ಉಪದೇಶದಲ್ಲಿ ಆಸಕ್ತರಾಗಿ ಅವರು ಬರುವ ಕಾಲದವರೆಗೆ ಮಾತ್ರ ಆಟವಾಡುತ್ತಿದ್ದೇವೆ' – ಎನ್ನುವಿರೋ ? ಅದೂ ಸರಿಯಲ್ಲ. ಅವರು ಮೋಕ್ಷವನ್ನು ಬಿಟ್ಟು ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗವನ್ನು ಮಾತ್ರ ಬೋಧಿಸುತ್ತಿದ್ದಾರೆ. ಅದು ಸಂಸಾರಕ್ಕೇ ಕಾರಣವಾಗುವುದು. ಆದುದರಿಂದ ಗುರುಗಳು ಹೇಳಿದರೂ ಅದನ್ನು ಗ್ರಹಿಸಬಾರದು. ಅದರಲ್ಲಿ ನಂಬಿಕೆಯನ್ನಿಟ್ಟರೆ ಅನರ್ಥದಲ್ಲಿ ಅರ್ಥವೆಂಬ ವಿರುದ್ಧವಾದ ಭಾವನೆಯನ್ನು ಇಟ್ಟಂತಾಗುವುದು. ಯಾವನ ಮಾತುಗಳನ್ನು ಕೇಳಿದರೆ ಅಜ್ಞಾನವೆಂಬ ನಿದ್ರೆಯಿಂದ ಎಚ್ಚರಿಕೆ ಉಂಟಾಗುವುದಿಲ್ಲವೋ – ಅಂತಹವನ ಮಾತನ್ನು ಸರಿಯೆಂದು ನಂಬಬಾರದು. ಹಾಗೆ ನಂಬಿದರೆ ಕುರುಡನು ಕುರುಡರನ್ನು ಒಯ್ಯುವಂತೆ ಅನರ್ಥವೇ ಉಂಟಾಗುವುದು. ಇಲ್ಲಿ ಆತ್ಮನಿಗೆ ಶತ್ರುವು ಯಾರು ? ಉದಾಸೀನನು ಯಾರು ? ಮಿತ್ರನಾದರೂ ಯಾರು ? ನಿಮ್ಮಲ್ಲಿಯೂ ಈ ಶತ್ರು ಮುಂತಾದವರು ಯಾರುಂಟು ? ಈ ಶತ್ರು-ಮಿತ್ರಾದಿಗಳನ್ನು ಬೋಧಿಸುವ ನೀತಿಶಾಸ್ತ್ರಗಳಿಂದ ಏನು ತಾನೇ ಪ್ರಯೋಜನ ? – 'ನೀತಿಗಳಿಂದ ಆಪತ್ತಿನ ಪರಿಹಾರವೂ, ಸಂಪತ್ತಿನ ಪ್ರಾಪ್ತಿಯೂ ಆಗುವುದಲ್ಲವೇ ?' ಎಂದರೆ : ಹಾಗಲ್ಲ. ದೈವವೇ ; ದೇವದೇವನಾದ ಶ್ರೀಮನ್ನಾರಾಯಣನೇ ಸಂಪತ್ತು ಮತ್ತು ವಿಪತ್ತುಗಳಿಗೆ ಆಶ್ರಯನು. ಆತನ ಅನುಗ್ರಹದಿಂದಲೇ ಅಜ್ಞಾನವೆಂಬ ವಿಪತ್ತಿನ ಪರಿಹಾರ ಮತ್ತು ಜ್ಞಾನವೆಂಬ ಸಂಪತ್ತಿನ ಲಾಭವುಂಟಾಗುವುದು. ತನ್ನ ಜನರಿಗೆ ಅಥವಾ ಇಂದ್ರಿಯಾದಿಗಳಿಗೆ ಪರವಶನಾಗದೇ ಧರ್ಮಕಾಮನಾಗಿರುವ, ತನಗೆ ಅಧರ್ಮದಿಂದ ಅಥವಾ ಪ್ರವೃತ್ತಿಧರ್ಮದಿಂದ ಹಿಂಸೆಯನ್ನುಂಟುಮಾಡಿಕೊಳ್ಳದೇ ಇಹಲೋಕದ ಸಂಪತ್ತು ಮತ್ತು ಪರಲೋಕದ ಸುಖ-ಇವೆರಡಕ್ಕೂ ಕಾರಣವಾಗುವ, ಕುರುಡುತನವನ್ನು ಬಿಟ್ಟಿರುವ ವಿವೇಕಿಯು ಲೋಕದಲ್ಲಿ ದುರ್ಲಭನು.

ಮುಗ್ಧಸ್ಯ ಬಾಲ್ಯೇ ಕೌಮಾರೇ ಕ್ರೀಡತೋ ಯಾತಿ ವಿಂಶತಿಃ ।
ಜರಯಾ ಗ್ರಸ್ತದೇಹಸ್ಯ ಯಾತ್ಯಕಲ್ಪಸ್ಯ ವಿಂಶತಿಃ ॥ ೭ ॥

ದುರಾಪೂರೇಣ ಕಾಮೇನ ಮೋಹೇನ ಚ ಬಲೀಯಸಾ ।
ಶೇಷಂ ಗೃಹೇಷು ಸಕ್ತಸ್ಯ ಪ್ರಮತ್ತಸ್ಯಾಪಯಾತಿ ಹಿ ॥ ೮ ॥

ಕೋ ಗೃಹೇಷು ಪುಮಾನ್ಸಕ್ತಮಾತ್ಮಾನಮಜಿತೇಂದ್ರಿಯಃ ।
ಸ್ನೇಹಪಾಶೈರ್ದೃಢೈರ್ಬದ್ಧಮುತ್ಸಹೇತ ವಿಮೋಚಿತುಮ್ ॥ ೯ ॥

ಕೋ ನ್ವರ್ಥತೃಷ್ಣಾಂ ವಿಸೃಜೇತ್ಪ್ರಾಣೇಭ್ಯೋಽಪಿ ಯ ಈಪ್ಸಿತಃ ।
ಯಂ ಕ್ರೀಣಾತ್ಯಸುಭಿಃ ಪ್ರೇಷ್ಠೈಸ್ತಸ್ಕರಃ ಸೇವಕೋ ವಣಿಕ್ ॥ ೧೦ ॥

ಕಥಂ ಪ್ರಿಯಾಯಾ ಅನುಕಂಪಿತಾಯಾಃ
ಸಂಗಂ ರಹಸ್ಯಂ ರುಚಿರಾಂಶ್ಚ ಮಂತ್ರಾನ್ ।
ಸುಹೃತ್ಸು ಚ ಸ್ನೇಹಸಿತಃ ಶಿಶೂನಾಂ
ಕಲಾಕ್ಷರಾಣಾಮನುರಕ್ತಚಿತ್ತಃ ॥ ೧೧ ॥

ಪುತ್ರಾನ್ಸ್ಮರಂಸ್ತಾ ದುಹಿತೄರ್ಹೃದಯ್ಯಾ
ಭ್ರಾತೄನ್ಸ್ವಸೄರ್ವಾ ಪಿತರೌ ಚ ದೀನೌ ।
ಗೃಹಾನ್ಮನೋಜ್ಞೋರುಪರಿಚ್ಛದಾಂಶ್ಚ
ವೃತ್ತೀಶ್ಚ ಕುಲ್ಯಾಃ ಪಶುಭೃತ್ಯವರ್ಗಾನ್ ॥ ೧೨ ॥

ತ್ಯಜೇತ ಕೋಶಸ್ಕೃದಿವೇಹಮಾನಃ
ಕರ್ಮಾಣಿ ಲೋಭಾದವಿತೃಪ್ತಕಾಮಃ ।
ಔಪಸ್ಥ್ಯಜೈಹ್ವ್ಯಂ ಬಹು ಮನ್ಯಮಾನಃ
ಕಥಂ ವಿರಜ್ಯೇತ ದುರಂತಮೋಹಃ ॥ ೧೩ ॥

ಕುಟುಂಬಪೋಷಾಯ ವಿಯನ್ನಿಜಾಯು-
ರ್ನ ಬುಧ್ಯತೇಽರ್ಥಂ ವಿಹತಂ ಪ್ರಮತ್ತಃ ।
ಸರ್ವತ್ರ ತಾಪತ್ರಯದುಃಖಿತಾತ್ಮಾ
ನಿರ್ವಿದ್ಯತೇ ನ ಸ್ವಕುಟುಂಬರಾಮಃ ॥ ೧೪ ॥

ಆವರಿಸಿದಾಗ ಕೊನೆಯ ಇಪ್ಪತ್ತು ವರ್ಷಗಳಲ್ಲಿ ಏನನ್ನೂ ಮಾಡುವ ಶಕ್ತಿ ಉಳಿಯುವುದಿಲ್ಲ. ॥ ೭ ॥ ನಡುವಿನಲ್ಲಿ ಇನ್ನು ಉಳಿದಿರುವ ಸ್ವಲ್ಪ ಆಯುಸ್ಸಿನಲ್ಲಿ ಎಂದೂ ಪೂರ್ಣವಾಗದ ದೊಡ್ಡ-ದೊಡ್ಡ ಕಾಮನೆಗಳಿವೆ. ಬಲವಂತವಾಗಿ ಹಿಡಿದಿಡುವ ಮೋಹವಿದೆ. ಮನೆ-ಮಠದ ಆಸಕ್ತಿ ಇದೆ. ಇವುಗಳಿಂದ ಜೀವಿಗೆ ಕರ್ತವ್ಯ ಯಾವುದು ? ಅಕರ್ತವ್ಯ ಯಾವುದು ? ಎಂಬ ಜ್ಞಾನವೇ ಇರುವುದಿಲ್ಲ. ಹೀಗೆ ಅಳಿದುಳಿದ ಆಯುಸ್ಸೂ ಕೂಡ ಕೈಬಿಟ್ಟು ಹೋಗುತ್ತದೆ. ॥ ೮ ॥

ದೈತ್ಯಬಾಲಕರೇ ! ಜಿತೇಂದ್ರಿಯನಲ್ಲದೇ ಇರುವವನು ಮನೆ ವಾರ್ತೆಗಳಲ್ಲಿ ಆಸಕ್ತನಾಗಿ ಮಾಯಾ ಮಮತೆಯ ದೃಢವಾದ ಪಾಶದಲ್ಲಿ ಸಿಕ್ಕಿಕೊಂಡು ತನ್ನನ್ನು ಅದರಿಂದ ಬಿಡಿಸಿಕೊಳ್ಳುವ ಸಾಹಸವನ್ನು ಯಾರು ತಾನೇ ಮಾಡಿಯಾನು ? ॥ ೯ ॥ ಕಳ್ಳರು, ಸೇವಕರು, ವ್ಯಾಪಾರಿಗಳು ತಮಗೆ ಅತ್ಯಂತ ಪ್ರಿಯವಾಗಿರುವ ಪ್ರಾಣಗಳನ್ನೇ ಪಣವಾಗಿಟ್ಟು ಹಣವನ್ನು ಕೂಡಿಹಾಕುತ್ತಾರೆ. ಅವರಿಗೆ ಅದು ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯವಾಗಿರುವುದು. ಇಂತಹ ಹಣದ ದುರಾಸೆಯನ್ನು ಯಾರು ತಾನೇ ಬಿಡಬಲ್ಲರು ? ॥ ೧೦ ॥ ತನ್ನ ಪ್ರಿಯಳಾದ ಪತ್ನಿಯ ಏಕಾಂತ ಸಹವಾಸ, ಆಕೆಯ ಪ್ರೇಮ ತುಂಬಿದ ಮಾತುಗಳು, ಸವಿಯಾದ ಸಲಹೆಗಳು – ಇವುಗಳಿಗೆ ತನ್ನನ್ನು ಕೊಟ್ಟುಕೊಂಡು, ಬಂಧು-ಮಿತ್ರರ ಸ್ನೇಹಪಾಶದಲ್ಲಿ ಕಟ್ಟು ಬಿದ್ದಿರುವವನು ಮತ್ತು ಎಳೆಮಕ್ಕಳ ತೊದಲು ಮಾತುಗಳಲ್ಲಿ ಲೋಭ ಹೊಂದಿರುವವನು ಅವುಗಳನ್ನು ಹೇಗೆ ತಾನೇ ಬಿಡಬಲ್ಲನು ? ॥ ೧೧ ॥ ಅತ್ತೆಯ ಮನೆಗೆ ಹೋಗಿರುವ ತನ್ನ ಪ್ರಿಯ ಪುತ್ರಿಯರನ್ನೂ, ಪುತ್ರರನ್ನೂ, ಸೋದರ-ಸೋದರಿಯರನ್ನೂ, ದೈನ್ಯಸ್ಥಿತಿಯಲ್ಲಿರುವ ತಂದೆ-ತಾಯಿಯರನ್ನೂ, ಬಹಳ ಸುಂದರವಾದ ಬಹುಮೂಲ್ಯವಾದ ಸಾಮಗ್ರಿಗಳಿಂದ ಸುಸಜ್ಜಿತವಾದ ಮನೆಯನ್ನೂ, ಕುಲಪರಂಪರೆಯಿಂದ ಬಂದಿರುವ ಜೀವಿಕೆಯ ಸಾಧನೆಗಳನ್ನೂ, ಪಶುಗಳನ್ನೂ ಮತ್ತು ಸೇವಕರನ್ನೂ ನಿರಂತರವಾಗಿ ಸ್ಮರಿಸುತ್ತಿರುವವನು ಹೇಗೆ ತಾನೇ ಇವುಗಳನ್ನು ಬಿಡಬಲ್ಲನು ? ॥ ೧೨ ॥ ಜನನೇಂದ್ರಿಯ ಮತ್ತು ರಸನೇಂದ್ರಿಯಗಳ ಸುಖವನ್ನೇ ಸರ್ವಸ್ವವೆಂದು ತಿಳಿದಿರುವವನು, ಭೋಗವಾಸನೆಗಳು ಪೂರ್ಣವಾಗಿ ತೃಪ್ತಿ ಹೊಂದದವನು, ಲೋಭಕ್ಕೆ ಒಳಗಾಗಿ ಕರ್ಮದ ಮೇಲೆ ಕರ್ಮಗಳನ್ನು ಆಚರಿಸುತ್ತಾ ರೇಶ್ಮೆಯ ಹುಳುವಿನಂತೆ ತನ್ನನ್ನು ಇನ್ನೂ ಬಿಗಿಯಾದ ಬಂಧನದಲ್ಲಿ ಕಟ್ಟಿಹಾಕಿಕೊಂಡಿರುವವನು ಮತ್ತು ಎಲ್ಲೆಯಿಲ್ಲದ ಮೋಹವನ್ನು ಹೊಂದಿರುವವನು ಹೇಗೆ ತಾನೇ ವಿರಕ್ತನಾಗಿ ಅವುಗಳನ್ನು ತ್ಯಜಿಸಬಲ್ಲನು ? ॥ ೧೩ ॥ 'ಈ ಕುಟುಂಬ ನನ್ನದಾಗಿದೆ' ಎಂಬ ಭಾವದಿಂದ ಅದರ ಪಾಲನೆ-ಪೋಷಣೆಗಳಿಗಾಗಿಯೇ ತನ್ನ ಅಮೂಲ್ಯವಾದ ಆಯುಸ್ಸನ್ನು ಪೋಲುಮಾಡುತ್ತಾನೆ. ಜೀವನದ ವಾಸ್ತವಿಕ ಉದ್ದೇಶವೇ ಇದರಿಂದ ನಷ್ಟವಾಗುತ್ತಿದೆ ಎಂಬುದನ್ನೂ ಅವನು ಗಮನಿಸುವುದಿಲ್ಲ. ಈ ಕುಟುಂಬದ ಪೋಷಣೆಯಿಂದ ಅವನಿಗೆ ಅಲ್ಪ-ಸ್ವಲ್ಪ ಸುಖವು ದೊರೆಯಬಹುದುದಾದರೂ ಅವನು ಹೋದೆಡೆಯಲ್ಲೆಲ್ಲಾ ತ್ರಿವಿಧತಾಪಗಳು ಅವನ ಹೃದಯವನ್ನು ಸುಡುತ್ತಾ ಇರುತ್ತವೆ. ಆದರೂ

ವಿತ್ತೇಷು ನಿತ್ಯಾಭಿನಿವಿಷ್ಟಚೇತಾ
ವಿದ್ವಾಂಶ್ಚ ದೋಷಂ ಪರವಿತ್ತಹರ್ತುಃ ।
ಪ್ರೇತ್ಯೇಹ ಚಾಥಾಪ್ಯಜಿತೇಂದ್ರಿಯಸ್ತ-
ದಶಾಂತಕಾಮೋ ಹರತೇ ಕುಟುಂಬೀ ॥ ೧೫ ॥

ವಿದ್ವಾನಪೀತ್ಥಂ ದನುಜಾಃ ಕುಟುಂಬಂ
ಪುಷ್ಣನ್ ಸ್ವಲೋಕಾಯ ನ ಕಲ್ಪತೇ ವೈ ।
ಯಃ ಸ್ವೀಯಪಾರಕ್ಯವಿಭಿನ್ನಭಾವ-
ಸ್ತಮಃ ಪ್ರಪದ್ಯೇತ ಯಥಾ ವಿಮೂಢಃ ॥ ೧೬ ॥

ಯತೋ ನ ಕಶ್ಚಿತ್ಕ್ವ ಚ ಕುತ್ರಚಿದ್ವಾ
ದೀನಃ ಸ್ವಮಾತ್ಮಾನಮಲಂ ಸಮರ್ಥಃ ।
ವಿಮೋಚಿತುಂ ಕಾಮದೃಶಾಂ ವಿಹಾರ-
ಕ್ರೀಡಾಮೃಗೋ ಯನ್ನಿಗಡೋ ವಿಸರ್ಗಃ ॥ ೧೭ ॥

ತತೋ ವಿದೂರಾತ್ಪರಿಹೃತ್ಯ ದೈತ್ಯಾ
ದೈತ್ಯೇಷು ಸಂಗಂ ವಿಷಯಾತ್ಮಕೇಷು ।
ಉಪೇತ ನಾರಾಯಣಮಾದಿದೇವಂ
ಸ ಮುಕ್ತಸಂಗೈರಿಷಿತೋಽಪವರ್ಗಃ ॥ ೧೮ ॥

ನ ಹ್ಯಚ್ಯುತಂ ಪ್ರೀಣಯತೋ ಬಹ್ವಾಯಾಸೋಽಸುರಾತ್ಮಜಾಃ ।
ಆತ್ಮತ್ವಾತ್ಸರ್ವಭೂತಾನಾಂ ಸಿದ್ಧತ್ವಾದಿಹ ಸರ್ವತಃ
॥ ೧೯ ॥

ಪರಾವರೇಷು ಭೂತೇಷು ಬ್ರಹ್ಮಾಂತಸ್ಥಾವರಾದಿಷು ।
ಭೌತಿಕೇಷು ವಿಕಾರೇಷು ಭೂತೇಷ್ವಥ ಮಹತ್ಸು ಚ
॥ ೨೦ ॥

ಗುಣೇಷು ಗುಣಸಾಮ್ಯೇ ಚ ಗುಣವ್ಯತಿಕರೇ ತಥಾ ।
ಏಕ ಏವ ಪರೋ ಹ್ಯಾತ್ಮಾ ಭಗವಾನೀಶ್ವರೋಽವ್ಯಯಃ
॥ ೨೧ ॥

ಪ್ರತ್ಯಗಾತ್ಮಸ್ವರೂಪೇಣ ದೃಶ್ಯರೂಪೇಣ ಚ ಸ್ವಯಮ್ ।
ವ್ಯಾಪ್ಯವ್ಯಾಪಕನಿರ್ದೇಶ್ಯೋ ಹ್ಯನಿರ್ದೇಶ್ಯೋಽವಿಕಲ್ಪಿತಃ
॥ ೨೨ ॥

ಕೇವಲಾನುಭವಾನಂದಸ್ವರೂಪಃ ಪರಮೇಶ್ವರಃ ।
ಮಾಯಯಾಂತರ್ಹಿತೈಶ್ವರ್ಯ ಈಯತೇ ಗುಣಸರ್ಗಯಾ
॥ ೨೩ ॥

ತಸ್ಮಾತ್ಸರ್ವೇಷು ಭೂತೇಷು ದಯಾಂ ಕುರುತ ಸೌಹೃದಮ್ ।
ಆಸುರಂ ಭಾವಮುನ್ಮುಚ್ಯ ಯಯಾ ತುಷ್ಯತ್ಯಧೋಕ್ಷಜಃ
॥ ೨೪ ॥

ವೈರಾಗ್ಯವು ಉಂಟಾಗುವುದಿಲ್ಲವಲ್ಲ! ಎಂತಹ ವಿಡಂಬನೆ! ಈ ಕುಟುಂಬದ ಮಮತೆಯಲ್ಲಿ ಮುಳುಗಿದ ಮನುಷ್ಯನ ಮನಸ್ಸು ಸದಾ ಹಣದ ಚಿಂತೆಯಲ್ಲೇ ಆಸಕ್ತವಾಗಿರುತ್ತದೆ. ಮತ್ತೊಬ್ಬನ ಹಣವನ್ನು ಕದ್ದರೆ ಇಹ-ಪರಲೋಕಗಳಲ್ಲಿಯೂ ಅಪಾಯವೇ ಎಂಬುದನ್ನು ತಿಳಿದಿದ್ದರೂ ಇಂದ್ರಿಯ ಭೋಗಗಳ ಆಸೆಯಿಂದ ಆತನು ಕಳ್ಳತನವನ್ನು ಮಾಡುತ್ತಾನೆ. ಏಕೆಂದರೆ, ಆತನಿಗೆ ಕಾಮನೆಗಳನ್ನು ವಶದಲ್ಲಿಟ್ಟುಕೊಳ್ಳಲು ಸಾಧ್ಯವಾಗುವುದಿಲ್ಲ. ॥ ೧೪-೧೫ ॥ ಎಲೈ ದೈತ್ಯಬಾಲಕರೇ! ಹೀಗೆ ತನ್ನ ಕುಟುಂಬದ ಪಾಲನೆ-ಪೋಷಣೆಯಲ್ಲೇ ಆಸಕ್ತನಾಗಿ ಭಗವಂತನ ಭಜನೆಯನ್ನು ಎಂದಿಗೂ ಮಾಡದೇ ಇರುವ ಮನುಷ್ಯನು ವಿದ್ವಾಂಸನಾಗಿದ್ದರೂ ಅವನಿಗೆ ಪರಮಾತ್ಮನ ಪ್ರಾಪ್ತಿಯು ಉಂಟಾಗುವುದಿಲ್ಲ. ಏಕೆಂದರೆ, ಅವನಲ್ಲಿ ಸ್ವಕೀಯ-ಪರಕೀಯ ಎಂಬ ಭೇದ-ಭಾವನೆ ಇರುವುದರಿಂದ ಅವನಿಗೂ ಅಜ್ಞಾನಿಗಳಂತೆ ತಮಃಪ್ರಧಾನವಾದ ಗತಿಯೇ ದೊರಕುತ್ತದೆ. ॥ ೧೬॥ ಕಾಮಿನಿಯರ ಆಟದ ಮೃಗವಾಗಿ ಅವರ ಮನೋರಂಜನೆಗೆ ಸಾಧನವಾಗಿ, ಸಂತಾನದ ಸಂಕೋಲೆಯಲ್ಲಿ ಸಿಕ್ಕಿ ಹಾಕಿಕೊಳ್ಳುವ ಬಡಪಾಯಿಯಾದ ಮನುಷ್ಯನು ಯಾರೇ ಆದರೂ, ಎಲ್ಲೇ ಇದ್ದರೂ, ಯಾವುದೇ ರೀತಿಯಲ್ಲೂ ಅವನ ಉದ್ಧಾರವಾಗುವುದಿಲ್ಲ. ॥ ೧೭ ॥ ಆದಕ್ಕಾಗಿ ದೈತ್ಯಬಂಧುಗಳೇ! ನೀವೆಲ್ಲರೂ ವಿಷಯಾಸಕ್ತ ದೈತ್ಯರ ಸಂಗವನ್ನು ದೂರದಲ್ಲೇ ತೊರೆದು, ಆದಿದೇವನಾದ ಭಗವಾನ್ ನಾರಾಯಣನನ್ನು ಶರಣುಹೊಂದಿರಿ. ಏಕೆಂದರೆ, ಸಂಸಾರದ ಆಸಕ್ತಿಯನ್ನು ಬಿಟ್ಟಿರುವ ಮಹಾತ್ಮರಿಗೆ ಆ ಪರಮಾತ್ಮನೇ ಪರಮಪ್ರಿಯನು ಮತ್ತು ಪರಮಗತಿಯು. ॥ ೧೮ ॥

ಗೆಳೆಯರೇ! ಭಗವಂತನನ್ನು ಒಲಿಸಿಕೊಳ್ಳಲು ಯಾವುದೇ ಪರಿಶ್ರಮ ಮತ್ತು ಪ್ರಯತ್ನಗಳನ್ನು ಮಾಡಬೇಕಾಗಿಲ್ಲ. ಏಕೆಂದರೆ, ಅವನು ಸಮಸ್ತ ಪ್ರಾಣಿಗಳ ಆತ್ಮನೇ ಆಗಿದ್ದಾನೆ. ಎಲ್ಲೆಡೆಗಳಲ್ಲಿ ಎಲ್ಲರ ಅಸ್ತಿತ್ವದ ರೂಪದಲ್ಲಿ ಸ್ವಯಂಸಿದ್ಧನಾಗಿದ್ದಾನೆ. ॥ ೧೯ ॥ ಬ್ರಹ್ಮದೇವರಿಂದ ಹಿಡಿದು ಹುಲ್ಲುಕಡ್ಡಿಯವರೆಗಿನ ಎಲ್ಲ ಪ್ರಾಣಿಗಳಲ್ಲಿ ಪಂಚಭೂತಗಳಿಂದ ಉಂಟಾದ ವಸ್ತುಗಳಲ್ಲಿ, ಪಂಚಭೂತಗಳಲ್ಲಿ, ಸೂಕ್ಷ್ಮತನ್ಮಾತ್ರೆಗಳಲ್ಲಿ, ಮಹತ್ತತ್ತ್ವದಲ್ಲಿ, ತ್ರಿಗುಣಗಳಲ್ಲಿ ಮತ್ತು ಗುಣಗಳ ಸಾಮ್ಯಾವಸ್ಥೆಯಾದ ಪ್ರಕೃತಿಯಲ್ಲಿ ಓರ್ವನೇ ಅವಿನಾಶಿಯಾದ ಪರಮಾತ್ಮನು ಬೆಳಗುತ್ತಿದ್ದಾನೆ. ॥ ೨೦-೨೧ ॥ ಅಂತರ್ಯಾಮಿ ದ್ರಷ್ಟಾರೂಪದಿಂದ ಮತ್ತು ದೃಶ್ಯ ಜಗತ್ತಿನ ರೂಪದಲ್ಲಿಯೂ ಅವನೇ ಇದ್ದಾನೆ. ಸರ್ವಥಾ ಅನಿರ್ವಚನೀಯ ಹಾಗೂ ವಿಕಲ್ಪರಹಿತನಾಗಿದ್ದರೂ ದ್ರಷ್ಟಾ ಮತ್ತು ದೃಶ್ಯ, ವ್ಯಾಪ್ತ ಮತ್ತು ವ್ಯಾಪಕ ರೂಪದಲ್ಲಿ ಆತನನ್ನೇ ನಿರ್ದೇಶಿಸುತ್ತಾರೆ. ವಾಸ್ತವವಾಗಿ ಅವನಲ್ಲಿ ಒಂದೂ ವಿಕಲ್ಪವಿಲ್ಲ. ॥ ೨೨ ॥ ಅವನು ಕೇವಲ ಅನುಭವ ಸ್ವರೂಪನೂ, ಆನಂದಸ್ವರೂಪನೂ ಆದ ಏಕಮಾತ್ರ ಪರಮೇಶ್ವರನೇ ಆಗಿದ್ದಾನೆ. ಗುಣಮಯ ಸೃಷ್ಟಿಯನ್ನು ಮಾಡುವ ಮಾಯೆಯಿಂದಲೇ ಅವನ ಐಶ್ವರ್ಯವು ಮುಚ್ಚಲ್ಪಟ್ಟಿದೆ. ಅದು ಹೋದೊಡನೆಯೇ ಅವನ ದರ್ಶನವಾಗುತ್ತದೆ. ॥ ೨೩ ॥ ಆದುದರಿಂದ ನೀವೆಲ್ಲರೂ ಆಸುರಭಾವವನ್ನು ಬಿಟ್ಟು, ಎಲ್ಲ ಪ್ರಾಣಿಗಳಲ್ಲಿಯೂ ದಯೆಯನ್ನಿಡಿರಿ, ಸ್ನೇಹವನ್ನು ತೋರಿಸಿರಿ. ಇದರಿಂದಲೇ ಭಗವಂತನು ಪ್ರಸನ್ನನಾಗುವನು. ॥ ೨೪ ॥ ಅನಂತನಾದ ಆದಿನಾರಾಯಣನು ಸಂತುಷ್ಟನಾಗಿಬಿಟ್ಟರೆ ದೊರಕದೆ ಇರುವ ವಸ್ತುವು

ತುಷ್ಟೇ ಚ ತತ್ರ ಕಿಮಲಭ್ಯಮನಂತ ಆದ್ಯೇ
ಕಿಂ ತೈರ್ಗುಣವ್ಯತಿಕರಾದಿಹ ಯೇ ಸ್ವಸಿದ್ಧಾಃ ।
ಧರ್ಮಾದಯಃ ಕಿಮಗುಣೇನ ಚ ಕಾಂಕ್ಷಿತೇನ
ಸಾರಂಜುಷಾಂ ಚರಣಯೋರುಪಗಾಯತಾಂ ನಃ ॥ ೨೫ ॥

ಯಾವುದು ತಾನೇ ಇದ್ದೀತು? ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳಾದರೋ ತ್ರಿಗುಣಗಳ ಪರಿಣಾಮಗಳು. ಅವು ಪ್ರಯಾಸವಿಲ್ಲದೆ ತಾವಾಗಿಯೇ ದೊರಕುತ್ತವೆ. ನಾವು ಶ್ರೀಭಗವಂತನ ಚರಣಾಮೃತವನ್ನು ಸೇವಿಸುತ್ತಾ, ಆತನ ದಿವ್ಯನಾಮಗಳನ್ನೂ, ಗುಣಗಳನ್ನೂ ಕೀರ್ತನೆ ಮಾಡುತ್ತಿದ್ದರೆ ನಮಗೆ ಮೋಕ್ಷದ ಆವಶ್ಯಕತೆಯೂ ಇರುವುದಿಲ್ಲ. ॥ ೨೫ ॥ ಶಾಸ್ತ್ರಗಳಲ್ಲಿ ಧರ್ಮ, ಅರ್ಥ, ಕಾಮಗಳೆಂಬ ಮೂರು ಪುರುಷಾರ್ಥಗಳು ವರ್ಣಿಸಲ್ಪಟ್ಟಿವೆ. ಹಾಗೆಯೇ ಆತ್ಮವಿದ್ಯೆ, ಕರ್ಮಕಾಂಡ, ನ್ಯಾಯ (ತರ್ಕಶಾಸ್ತ್ರ), ದಂಡನೀತಿ ಮತ್ತು ಜೀವನದ ವಿವಿಧ ಸಾಧನೆಗಳು – ಇವೆಲ್ಲವೂ ವೇದದ ಪ್ರತಿಪಾದ್ಯ ವಿಷಯಗಳೇ ಆಗಿವೆ. ಆದರೆ ಇವುಗಳು ತನ್ನ ಪರಮಹಿತೈಷಿ, ಪರಮಪುರುಷ ಭಗವಾನ್ ಶ್ರೀಹರಿಯಲ್ಲಿ ಆತ್ಮಸಮರ್ಪಣ ಮಾಡುವುದರಲ್ಲಿ ಸಹಾಯಕವಾದರೆ ಮಾತ್ರ ನಾನು ಇವುಗಳನ್ನು ಸತ್ಯ (ಸಾರ್ಥಕ)ವೆಂದು ತಿಳಿಯುತ್ತೇನೆ. ಇಲ್ಲದಿದ್ದರೆ ಇವೆಲ್ಲವೂ ನಿರರ್ಥಕವೇ ಸರಿ. ॥ ೨೬ ॥ ನಾನು ನಿಮಗೆ ಹೇಳಿರುವ ಈ ಭಾಗವತಧರ್ಮವು ಅತ್ಯಂತ ದುರ್ಲಭವಾದುದು. ಇದನ್ನು ಮೊದಲು ನರ–ನಾರಾಯಣರು ನಾರದರಿಗೆ ಉಪದೇಶಿಸಿದ್ದರು. ಯಾರು ಭಗವಂತನ ಅನನ್ಯ ಪ್ರೇಮಿ ಹಾಗೂ ಅಕಿಂಚನ ಭಕ್ತರ ಚರಣಕಮಲಗಳ ಧೂಳಿನಿಂದ ತಮ್ಮ ದೇಹಕ್ಕೆ ಅಭಿಷೇಕ ಮಾಡಿ ಕೊಳ್ಳುವರೋ ಅವರೆಲ್ಲರಿಗೂ ಈ ಜ್ಞಾನವು ದೊರೆಯುವುದು. ॥ ೨೭ ॥ ಈ ವಿಜ್ಞಾನಸಹಿತ ಜ್ಞಾನವೇ ವಿಶುದ್ಧವಾದ ಭಾಗವತ ಧರ್ಮವಾಗಿದೆ. ಇದನ್ನು ನಾನು ಭಗವಂತನ ದರ್ಶನ ಮಾಡುವಂತಹ ದೇವರ್ಷಿ ನಾರದರ ಮುಖದಿಂದ ಕೇಳಿರುವೆನು. ॥ ೨೮ ॥

ಧರ್ಮಾರ್ಥಕಾಮ ಇತಿ ಯೋಽಭಿಹಿತಸ್ತ್ರಿವರ್ಗ
ಈಕ್ಷಾ ತ್ರಯೀ ನಯದಮೌ ವಿವಿಧಾ ಚ ವಾರ್ತಾ ।
ಮನ್ಯೇ ತದೇತದಖಿಲಂ ನಿಗಮಸ್ಯ ಸತ್ಯಂ
ಸ್ವಾತ್ಮಾರ್ಪಣಂ ಸ್ವಸುಹೃದಃ ಪರಮಸ್ಯ ಪುಂಸಃ ॥ ೨೬ ॥

ಜ್ಞಾನಂ ತದೇತದಮಲಂ ದುರವಾಪಮಾಹ
ನಾರಾಯಣೋ ನರಸಖಃ ಕಿಲ ನಾರದಾಯ ।
ಏಕಾಂತಿನಾಂ ಭಗವತಸ್ತದಕಿಂಚನಾನಾಂ
ಪಾದಾರವಿಂದರಜಸಾಽಽಪ್ಲುತದೇಹಿನಾಂ ಸ್ಯಾತ್ ॥ ೨೭ ॥

ಶ್ರುತಮೇತನ್ಮಯಾ ಪೂರ್ವಂ ಜ್ಞಾನಂ ವಿಜ್ಞಾನಸಂಯುತಮ್ ।
ಧರ್ಮಂ ಭಾಗವತಂ ಶುದ್ಧಂ ನಾರದಾದ್ದೇವದರ್ಶನಾತ್
॥ ೨೮ ॥

ದೈತ್ಯಪುತ್ರಾ ಊಚುಃ

ಪ್ರಹ್ಲಾದ ತ್ವಂ ವಯಂ ಚಾಪಿ ನರ್ತೇಽನ್ಯಂ ವಿದ್ಮಹೇ ಗುರುಮ್ ।
ಏತಾಭ್ಯಾಂ ಗುರುಪುತ್ರಾಭ್ಯಾಂ ಬಾಲಾನಾಮಪಿ ಹೀಶ್ವರೌ
॥ ೨೯ ॥

ಪ್ರಹ್ಲಾದನ ಸಹಪಾಠಿಗಳು ಕೇಳಿದರು – ಮಿತ್ರ ಪ್ರಹ್ಲಾದನೇ! ಈ ಇಬ್ಬರು ಗುರುಪುತ್ರರನ್ನು ಬಿಟ್ಟು ಬೇರೆ ಯಾರೇ ಗುರುವನ್ನು ನಾವಾಗಲೀ, ನೀನಾಗಲೀ ಅರಿಯೆವು. ಇವರೇ ನಮ್ಮೆಲ್ಲ ಬಾಲಕರಿಗೆ ಶಾಸಕರಾಗಿದ್ದಾರೆ. ॥ ೨೯ ॥ ನೀನಾದರೋ ಇನ್ನೂ ಸಣ್ಣ ವಯಸ್ಸಿನವನು. ಅಲ್ಲದೆ ಹುಟ್ಟಿನಿಂದಲೇ ಅರಮನೆಯಲ್ಲಿ ತಾಯಿಯ ಬಳಿಯಲ್ಲೇ ಇದ್ದವನು. ಹೀಗಿರುವಾಗ ನಿನಗೂ–ನಾರದರಿಗೂ ಭೇಟಿಯಾಯಿತು ಎಂಬುದು ಸ್ವಲ್ಪ ಅಸಂಗತದಂತೆ ತೋರುತ್ತದಲ್ಲ. ಪ್ರಿಯನೇ! ಈ ವಿಷಯದಲ್ಲಿ ವಿಶ್ವಾಸ ಉಂಟಾಗುವಂತಹ ಯಾವುದಾದರೂ ಮಾತಿದ್ದರೆ ನೀನು ನಮಗೆ ಹೇಳಿ ನಮ್ಮ ಸಂಶಯವನ್ನು ಹೋಗಲಾಡಿಸು. ॥ ೩೦ ॥

ಬಾಲಸ್ಯಾಂತಃಪುರಸ್ಥಸ್ಯ ಮಹತ್ಸಂಗೋ ದುರನ್ವಯಃ ।
ಛಿಂದಿ ನಃ ಸಂಶಯಂ ಸೌಮ್ಯ ಸ್ಯಾಚ್ಚೇದ್ವಿಸ್ರಂಭಕಾರಣಮ್
॥ ೩೦ ॥

*ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ ಪ್ರಹ್ಲಾದಾನುಚರಿತೇ ಷಷ್ಠೋಽಧ್ಯಾಯಃ ॥ ೬ ॥

# ಏಳನೆಯ ಅಧ್ಯಾಯ

## ತಾಯಿಯ ಗರ್ಭದಲ್ಲಿದ್ದಾಗ ನಾರದರಿಂದ ಪಡೆದ ಉಪದೇಶವನ್ನು ಪ್ರಹ್ಲಾದನು ವರ್ಣಿಸಿದುದು

ನಾರದ ಉವಾಚ

ಏವಂ ದೈತ್ಯಸುತೈಃ ಪೃಷ್ಟೋ ಮಹಾಭಾಗವತೋಽಸುರಃ ।
ಉವಾಚ ಸ್ಮಯಮಾನಸ್ತಾನ್ ಸ್ಮರನ್ಮದನುಭಾಷಿತಮ್
॥ ೧ ॥

ನಾರದರು ಹೇಳುತ್ತಾರೆ – ಯುಧಿಷ್ಠಿರನೇ! ದೈತ್ಯಬಾಲಕರು ಹೀಗೆ ಪ್ರಶ್ನಿಸಿದಾಗ ಭಗವಂತನ ಪರಮಪ್ರೇಮೀ ಪ್ರಹ್ಲಾದನಿಗೆ ನನ್ನ ಮಾತು ನೆನಪಾಯಿತು. ಸ್ವಲ್ಪ ಮುಗುಳ್ನಕ್ಕು ಅವನು ಅವರಿಗೆ ಹೀಗೆಂದನು – ॥ ೧ ॥

*ಪ್ರಹ್ಲಾದ ಉವಾಚ*

ಪಿತರಿ ಪ್ರಸ್ಥಿತೇಽಸ್ಮಾಕಂ ತಪಸೇ ಮಂದರಾಚಲಮ್ ।
ಯುದ್ಧೋದ್ಯಮಂ ಪರಂ ಚಕ್ರುರ್ವಿಬುಧಾ ದಾನವಾನ್ಪ್ರತಿ ॥ ೨ ॥

ಪಿಪೀಲಿಕೈರಹಿರಿವ ದಿಷ್ಟ್ಯಾ ಲೋಕೋಪತಾಪನಃ ।
ಪಾಪೇನ ಪಾಪೋಽಭಕ್ಷೀತಿ ವಾದಿನೋ ವಾಸವಾದಯಃ ॥ ೩ ॥

ತೇಷಾಮತಿಬಲೋದ್ಯೋಗಂ ನಿಶಮ್ಯಾಸುರಯೂಥಪಾಃ ।
ವಧ್ಯಮಾನಾಃ ಸುರೈರ್ಭೀತಾ ದುದ್ರುವುಃ ಸರ್ವತೋದಿಶಮ್ ॥ ೪ ॥

ಕಲತ್ರಪುತ್ರಮಿತ್ರಾಪ್ತಾನ್ಗೃಹಾನ್ಪಶುಪರಿಚ್ಛದಾನ್ ।
ನಾವೇಕ್ಷಮಾಣಾಸ್ತ್ವರಿತಾಃ ಸರ್ವೇ ಪ್ರಾಣಪರೀಪ್ಸವಃ ॥ ೫ ॥

ವ್ಯಲುಂಪನ್ ರಾಜಶಿಬಿರಮಮರಾ ಜಯಕಾಂಕ್ಷಿಣಃ ।
ಇಂದ್ರಸ್ತು ರಾಜಮಹಿಷೀಂ ಮಾತರಂ ಮಮ ಚಾಗ್ರಹೀತ್ ॥ ೬ ॥

ನೀಯಮಾನಾಂ ಭಯೋದ್ವಿಗ್ನಾಂ ರುದತೀಂ ಕುರರೀಮಿವ ।
ಯದೃಚ್ಛಯಾಽಽಗತಸ್ತತ್ರ ದೇವರ್ಷಿರ್ದದೃಶೇ ಪಥಿ ॥ ೭ ॥

ಪ್ರಾಹ ನೈನಾಂ ಸುರಪತೇ ನೇತುಮರ್ಹಸ್ಯನಾಗಸಮ್ ।
ಮುಂಚ ಮುಂಚ ಮಹಾಭಾಗ ಸತೀಂ ಪರಪರಿಗ್ರಹಮ್ ॥ ೮ ॥

*ಇಂದ್ರ ಉವಾಚ*

ಆಸ್ತೇಽಸ್ಯಾ ಜಠರೇ ವೀರ್ಯಮವಿಷಹ್ಯಂ ಸುರದ್ವಿಷಃ ।
ಆಸ್ಯತಾಂ ಯಾವತ್ಪ್ರಸವಂ ಮೋಕ್ಷ್ಯೇಽರ್ಥಪದವೀಂಗತಃ ॥ ೯ ॥

*ನಾರದ ಉವಾಚ*

ಅಯಂ ನಿಷ್ಕಿಲ್ಬಿಷಃ ಸಾಕ್ಷಾನ್ಮಹಾಭಾಗವತೋಮಹಾನ್ ।
ತ್ವಯಾ ನ ಪ್ರಾಪ್ಸ್ಯತೇ ಸಂಸ್ಥಾಮನಂತಾನುಚರೋ ಬಲೀ ॥ ೧೦ ॥

ಇತ್ಯುಕ್ತಸ್ತಾಂ ವಿಹಾಯೇಂದ್ರೋ ದೇವರ್ಷೇರ್ಮಾನಯನ್ವಚಃ ।
ಅನಂತಪ್ರಿಯಭಕ್ತ್ಯೈನಾಂ ಪರಿಕ್ರಮ್ಯ ದಿವಂ ಯಯೌ ॥ ೧೧ ॥

ತತೋ ನೋ ಮಾತರಮೃಷಿಃ ಸಮಾನೀಯ ನಿಜಾಶ್ರಮಮ್ ।
ಆಶ್ವಾಸ್ಯೇಹೋಷ್ಯತಾಂ ವತ್ಸೇ ಯಾವತ್ತೇ ಭರ್ತುರಾಗಮಃ ॥ ೧೨ ॥

**ಪ್ರಹ್ಲಾದನು ಹೇಳಿದನು** – ನಮ್ಮ ತಂದೆಯವರು ತಪಸ್ಸಿಗೆ ಮಂದರಾಚಲಕ್ಕೆ ಹೋಗಿದ್ದಾಗ ಇಂದ್ರಾದಿ ದೇವತೆಗಳು ದಾನವರೊಂದಿಗೆ ಯುದ್ಧಹೂಡಲು ಸಿದ್ಧರಾದರು. ॥ ೨ ॥ 'ಇರುವೆಗಳು ಸರ್ಪವನ್ನು ತಿಂದುಹಾಕುವಂತೆ ಜನರಿಗೆ ಸಂತಾಪವನ್ನುಂಟು ಮಾಡುತ್ತಿದ್ದ ಪಾಪೀ ಹಿರಣ್ಯಕಶಿಪುವನ್ನು ಅವನ ಪಾಪಗಳೇ ತಿಂದುಹಾಕಿದವು. ಇದು ನಮ್ಮ ಭಾಗ್ಯ' ಎಂದು ದೇವತೆಗಳು ಹೇಳತೊಡಗಿದರು. ॥ ೩ ॥ ದೈತ್ಯಸೇನಾಪತಿಗಳಿಗೆ ದೇವತೆಗಳ ಭಾರೀ ತಯಾರಿಯ ಸಮಾಚಾರ ತಿಳಿದಾಗ ಅವರ ಸಾಹಸವು ಕರಗಿಹೋಯಿತು. ಅವರು ದೇವತೆಗಳನ್ನು ಇದಿರಿಸಲಾರದೇ ಹೋದರು. ದೇವತೆಗಳಿಂದ ಏಟುತಿಂದು ಪತ್ನಿಯರು, ಪುತ್ರರು, ಮಿತ್ರರು, ಗುರುಗಳು, ಅರಮನೆಗಳು, ಪಶುಗಳು ಮತ್ತು ಸಾಮಗ್ರಿಗಳು ಇವುಗಳ ಯಾವುದೇ ಪರಿವೆಯಿಲ್ಲದೆ, ಅವರೆಲ್ಲರೂ ತಮ್ಮ ಪ್ರಾಣಗಳನ್ನು ಉಳಿಸಿಕೊಳ್ಳಲಿಕ್ಕಾಗಿ ಬೇಗ ಬೇಗನೇ ಅತ್ತ-ಇತ್ತ ಓಡಿಹೋದರು. ॥ ೪-೫ ॥ ತಮ್ಮ ಗೆಲುವನ್ನು ಬಯಸುತ್ತಿದ್ದ ದೇವತೆಗಳು ದೈತ್ಯರಾಜನ ಅರಮನೆಯನ್ನು ಕೊಳ್ಳೆ ಹೊಡೆದರು. ಇಂದ್ರನಾದರೋ ರಾಜನ ಪಟ್ಟಮಹಿಷಿಯಾದ ನನ್ನ ತಾಯಿ ಕಯಾಧುವನ್ನು ಸೆರೆ ಹಿಡಿದನು. ॥ ೬ ॥ ನನ್ನ ತಾಯಿಯು ಭಯದಿಂದ ಹೆದರಿಕೊಂಡು ಕುರರೀಪಕ್ಷಿಯಂತೆ ಅಳುತ್ತಿದ್ದಳು. ಇಂದ್ರನು ಆಕೆಯನ್ನು ಬಲಾತ್ಕಾರವಾಗಿ ಕೊಂಡೊಯ್ಯುತ್ತಿದ್ದನು. ದೈವವಶದಿಂದ ದೇವರ್ಷಿಯಾದ ನಾರದರು ದಾರಿಯಲ್ಲಿ ಕಾಣಿಸಿಕೊಂಡು, ನನ್ನ ತಾಯಿಯನ್ನು ನೋಡಿದರು. ॥ ೭ ॥ ಅವರೆಂದರು – ದೇವೇಂದ್ರಾ ! ಇವಳು ನಿರಪರಾಧಿಯಾಗಿದ್ದಾಳೆ. ಇವಳನ್ನು ಕೊಂಡುಹೋಗುವುದು ಉಚಿತವಲ್ಲ. ಮಹಾಭಾಗನೇ ! ಪತಿವ್ರತಾ ಶಿರೋಮಣಿಯೂ, ಪರನಾರಿಯೂ ಆದ ಇವಳನ್ನು ತಿರಸ್ಕರಿಸಬೇಡ. ಇವಳನ್ನು ಬಿಟ್ಟುಬಿಡು ! ಬೇಗನೇ ಬಿಟ್ಟುಬಿಡು ! ॥ ೮ ॥

**ದೇವೇಂದ್ರನು ಹೇಳಿದನು** – ಇವಳ ಹೊಟ್ಟೆಯಲ್ಲಿ ದೇವತೆಗಳ ದ್ರೋಹಿಯಾದ ಹಿರಣ್ಯಕಶಿಪುವಿನ ಅತ್ಯಂತ ಪ್ರಭಾವಶಾಲಿಯಾದ ವೀರ್ಯವಿದೆ. ಇವಳು ಪ್ರಸವದವರೆಗೆ ನನ್ನ ಬಳಿಯಲ್ಲಿ ಇರಲಿ. ಮಗು ಹುಟ್ಟಿದಾಕ್ಷಣ ಅದನ್ನು ಕೊಂದು ಇವಳನ್ನು ಬಿಟ್ಟುಬಿಡುವೆ. ॥ ೯ ॥

**ನಾರದರು ಹೇಳಿದರು** – ಇವಳ ಗರ್ಭದಲ್ಲಿ ಭಗವಂತನ ಸಾಕ್ಷಾತ್ ಪರಮಪ್ರೇಮೀ ಭಕ್ತನೂ, ಸೇವಕನೂ, ಅತ್ಯಂತ ಬಲಶಾಲಿಯೂ, ಪುಣ್ಯಾತ್ಮನೂ ಆದ ಮಹಾತ್ಮನಿದ್ದಾನೆ. ಇವನನ್ನು ಕೊಲ್ಲುವ ಶಕ್ತಿಯು ನಿನ್ನಬಳಿ ಇಲ್ಲ. ॥ ೧೦ ॥

ದೇವರ್ಷಿ ನಾರದರ ಈ ಮಾತನ್ನು ಕೇಳಿ ಅವರ ಮಾತನ್ನು ಗೌರವಿಸಿ ಇಂದ್ರನು ನನ್ನ ತಾಯಿಯನ್ನು ಬಿಟ್ಟುಬಿಟ್ಟನು. ಇಷ್ಟಲ್ಲದೆ ಆಕೆಯ ಗರ್ಭದಲ್ಲಿ ಭಗವದ್ಭಕ್ತನಿದ್ದಾನೆ ಎಂಬ ಭಾವನೆಯಿಂದ ಆಕೆಯನ್ನು ಪ್ರದಕ್ಷಿಣೆ ಬಂದು ತನ್ನ ಲೋಕಕ್ಕೆ ಹೊರಟು ಹೋದನು. ॥ ೧೧ ॥

ಅನಂತರ ದೇವಋಷಿ ನಾರದರು ನನ್ನ ತಾಯಿಯನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡುಹೋಗಿ ಸಮಾಧಾನಪಡಿಸಿ –'ಮಗಳೇ ! ನಿನ್ನ ಪತಿಯು ತಪಸ್ಸನ್ನು ಮುಗಿಸಿ ಹಿಂದಿರುಗಿ ಬರುವವರೆಗೆ ನೀನು ಇಲ್ಲೇ ಇರು.' ॥ ೧೨ ॥ 'ಹಾಗೆಯೇ ಆಗಲಿ' ಎಂದು ಹೇಳಿ ನನ್ನ ತಂದೆಯು ತಪಸ್ಸನ್ನು ಮುಗಿಸಿ ಬರುವವರೆವಿಗೂ ಆಕೆಯು

ತಥೇತ್ಯವಾತ್ಸೀದ್ದೇವರ್ಷೇರಂತಿ ಸಾಪ್ಯಕುತೋಭಯಾ ।
ಯಾವದ್ಭೃತ್ಯಪತಿರ್ಘೋರಾತ್ತಪಸೋ ನ ನ್ಯವರ್ತತ
॥ ೧೩ ॥

ಋಷಿಂ ಪರ್ಯಚರತ್ತತ್ರ ಭಕ್ತ್ಯಾ ಪರಮಯಾ ಸತೀ ।
ಅಂತರ್ವತ್ನೀ ಸ್ವಗರ್ಭಸ್ಯ ಕ್ಷೇಮಾಯೇಚ್ಛಾಪ್ರಸೂತಯೇ
॥ ೧೪ ॥

ಋಷಿಃ ಕಾರುಣಿಕಸ್ತಸ್ಯಾಃ ಪ್ರಾದಾದುಭಯಮೀಶ್ವರಃ ।
ಧರ್ಮಸ್ಯ ತತ್ತ್ವಂ ಜ್ಞಾನಂ ಚ ಮಾಮಪ್ಯುದ್ದಿಶ್ಯ ನಿರ್ಮಲಮ್
॥ ೧೫ ॥

ತತ್ತು ಕಾಲಸ್ಯ ದೀರ್ಘತ್ವಾತ್ ಸ್ತ್ರೀತ್ವಾನ್ಮಾತುಸ್ತಿರೋದಧೇ ।
ಋಷಿಣಾನುಗೃಹೀತಂ ಮಾಂ ನಾಧುನಾಪ್ಯಜಹಾತ್ಸ್ಮೃತಿಃ
॥ ೧೬ ॥

ಭವತಾಮಪಿ ಭೂಯಾನ್ಮೇ ಯದಿ ಶ್ರದ್ದಧತೇ ವಚಃ ।
ವೈಶಾರದೀ ಧೀಃ ಶ್ರದ್ಧಾತಃ ಸ್ತ್ರೀಬಾಲಾನಾಂ ಚ ಮೇ ಯಥಾ
॥ ೧೭ ॥

ಜನ್ಮಾದ್ಯಾಃ ಷಡಿಮೇ ಭಾವಾ ದೃಷ್ಟಾ ದೇಹಸ್ಯ ನಾತ್ಮನಃ ।
ಫಲಾನಾಮಿವ ವೃಕ್ಷಸ್ಯ ಕಾಲೇನೇಶ್ವರಮೂರ್ತಿನಾ
॥ ೧೮ ॥

ಆತ್ಮಾ ನಿತ್ಯೋಽವ್ಯಯಃ ಶುದ್ಧ ಏಕಃ ಕ್ಷೇತ್ರಜ್ಞ ಆಶ್ರಯಃ ।
ಅವಿಕ್ರಿಯಃ ಸ್ವದೃಗ್ಘೇತುರ್ವ್ಯಾಪಕೋಽಸಂಗ್ಯನಾವೃತಃ
॥ ೧೯ ॥

ಏತೈರ್ದ್ವಾದಶಭಿರ್ವಿದ್ವಾನಾತ್ಮನೋ ಲಕ್ಷಣೈಃ ಪರೈಃ ।
ಅಹಂ ಮಮೇತ್ಯಸದ್ಭಾವಂ ದೇಹಾದೌ ಮೋಹಜಂ ತ್ಯಜೇತ್
॥ ೨೦ ॥

ಸ್ವರ್ಣಂ ಯಥಾ ಗ್ರಾವಸು ಹೇಮಕಾರಃ
ಕ್ಷೇತ್ರೇಷು ಯೋಗೈಸ್ತದಭಿಜ್ಞ ಆಪ್ನುಯಾತ್ ।
ಕ್ಷೇತ್ರೇಷು ದೇಹೇಷು ತಥಾಽಽತ್ಮಯೋಗೈ-
ರಧ್ಯಾತ್ಮವಿದ್ಬ್ರಹ್ಮಗತಿಂ ಲಭೇತ ॥ ೨೧ ॥

ಅಷ್ಟೌ ಪ್ರಕೃತಯಃ ಪ್ರೋಕ್ತಾಸ್ತ್ರಯ ಏವ ಹಿ ತದ್ಗುಣಾಃ ।
ವಿಕಾರಾಃ ಷೋಡಶಾಚಾರ್ಯೈಃ ಪುಮಾನೇಕಃ ಸಮನ್ವಯಾತ್
॥ ೨೨ ॥

ದೇಹಸ್ತು ಸರ್ವಸಂಘಾತೋ ಜಗತ್ತಸ್ಥುರಿತಿ ದ್ವಿಧಾ ।
ಅತ್ರೈವ ಮೃಗ್ಯಃ ಪುರುಷೋ ನೇತಿ ನೇತೀತ್ಯತತ್ತ್ಯಜನ್
॥ ೨೩ ॥

ನಿರ್ಭಯಳಾಗಿ ದೇವರ್ಷಿ ನಾರದರ ಆಶ್ರಮದಲ್ಲಿ ಇರ ತೊಡಗಿದಳು. ॥ ೧೩ ॥ ಗರ್ಭಿಣಿಯಾದ ನನ್ನ ತಾಯಿಯು ಗರ್ಭದಲ್ಲಿದ್ದ ಶಿಶುವಾದ ನನಗೆ ಮಂಗಳ ಉಂಟಾಗಲಿ ಮತ್ತು ಇಷ್ಟ ಬಂದ ಸಮಯದಲ್ಲಿ (ಅಂದರೆ ನನ್ನ ತಂದೆಯು ಹಿಂದಿರುಗಿದ ಬಳಿಕ) ಶಿಶುವು ಹುಟ್ಟಲಿ ಎಂಬ ಕಾಮನೆಯಿಂದ ನಾರದ ಮಹರ್ಷಿಗಳನ್ನು ಅತ್ಯಂತ ಭಕ್ತಿಯಿಂದ ಸೇವಿಸುತ್ತಿದ್ದಳು. ॥ ೧೪ ॥

ಪರಮ ಕಾರುಣಿಕರೂ, ಸರ್ವಸಮರ್ಥರೂ ಆದ ದೇವಋಷಿ ನಾರದರು ನನ್ನ ತಾಯಿಗೆ ಭಾಗವತ ಧರ್ಮದ ರಹಸ್ಯವನ್ನು ಹಾಗೂ ಪರಿಶುದ್ಧವಾದ ಜ್ಞಾನವನ್ನೂ ಉಪದೇಶಿಸಿದರು. ಉಪದೇಶಿಸುವಾಗ ನನ್ನನ್ನು ಉದ್ಧರಿಸಲೋಸುಗ ಅವರ ದೃಷ್ಟಿಯು ನನ್ನ ಮೇಲೆಯೇ ಇತ್ತು. ॥ ೧೫ ॥ ಬಹಳ ಸಮಯ ಕಳೆದುಹೋದದ್ದರಿಂದಲೂ, ಸ್ತ್ರೀಯಾಗಿದ್ದರಿಂದಲೂ ನನ್ನ ತಾಯಿಗೆ ಈಗ ಆ ಜ್ಞಾನದ ನೆನಪು ಉಳಿಯಲಿಲ್ಲ. ಆದರೆ ದೇವರ್ಷಿಗಳ ವಿಶೇಷ ಕೃಪೆಗೆ ಪಾತ್ರನಾದ ನನಗೆ ಅದರ ವಿಸ್ಮೃತಿಯಾಗಲಿಲ್ಲ. ॥ ೧೬ ॥ ನೀವುಗಳು ನನ್ನ ಮಾತಿನ ಮೇಲೆ ಶ್ರದ್ಧೆ ಇರಿಸುವವರಾದರೆ ನಿಮಗೂ ಆ ಜ್ಞಾನವು ಉಂಟಾಗಬಲ್ಲದು. ಏಕೆಂದರೆ ಶ್ರದ್ಧೆಯಿಂದಲೇ ಸ್ತ್ರೀಯರ ಮತ್ತು ಬಾಲಕರ ಬುದ್ಧಿಯೂ ಕೂಡ ನನ್ನಂತೆಯೇ ಶುದ್ಧವಾಗ ಬಲ್ಲದು. ॥ ೧೭ ॥ ಈಶ್ವರಮೂರ್ತಿಯಾದ ಕಾಲನ ಪ್ರೇರಣೆಯಿಂದಲೇ ವೃಕ್ಷಗಳಲ್ಲಿ ಹಣ್ಣುಬಿಟ್ಟು, ಅಲ್ಲೇ ಇದ್ದು ಬೆಳೆದು, ಹಣ್ಣಾಗಿ ಕ್ಷೀಣವಾಗಿ ನಾಶಹೊಂದುವಂತೆಯೇ ದೇಹಕ್ಕೆ ಹುಟ್ಟು ಇರುವಿಕೆ, ಬೆಳವಣಿಗೆ, ಪರಿಣಾಮ, ಕ್ಷಯ ಮತ್ತು ನಾಶ ಎಂಬ ಆರು ಭಾವವಿಕಾರಗಳು ಕಂಡು ಬರುತ್ತವೆ. ಆದರೆ ಈ ವಿಕಾರಗಳೊಂದಿಗೆ ಆತ್ಮನಿಗೆ ಯಾವ ಸಂಬಂಧವೂ ಇಲ್ಲ. ॥ ೧೮ ॥ ಆತ್ಮನು ನಿತ್ಯನೂ, ಅವಿನಾಶಿಯೂ, ಶುದ್ಧನೂ, ಅದ್ವಿತೀಯನೂ, ಕ್ಷೇತ್ರಜ್ಞನೂ, ಆಶ್ರಯನೂ, ನಿರ್ವಿಕಾರನೂ, ಸ್ವಯಂ ಪ್ರಕಾಶನೂ, ಎಲ್ಲರ ಕಾರಣನೂ, ವ್ಯಾಪಕನೂ, ಅಸಂಗನೂ ಮತ್ತು ಆವರಣ ರಹಿತನೂ ಆಗಿದ್ದಾನೆ. ॥ ೧೯ ॥ ಈ ಹನ್ನೆರಡು ಆತ್ಮನ ಶ್ರೇಷ್ಠ ಲಕ್ಷಣಗಳಾಗಿವೆ. ಇವುಗಳ ಮೂಲಕ ಆತ್ಮತತ್ತ್ವವನ್ನು ಅರಿತ ಮನುಷ್ಯನು ಶರೀರಾದಿಗಳಲ್ಲಿ ಅಜ್ಞಾನದಿಂದಾಗಿ ಉಂಟಾಗಿರುವ 'ನಾನು-ನನ್ನದು' ಎಂಬ ಮಿಥ್ಯೆಯಾದ ಭಾವನೆಯನ್ನು ಬಿಟ್ಟುಬಿಡಬೇಕು. ॥ ೨೦ ॥ ಚಿನ್ನದ ಗಣಿಯ ಕ್ಷೇತ್ರದಲ್ಲಿ ಕಲ್ಲುಗಳೊಂದಿಗೆ ಬೆರೆತಿರುವ ಚಿನ್ನವನ್ನು ತಜ್ಞನಾದ ಅಕ್ಕಸಾಲಿಗನು ಬಗೆ-ಬಗೆಯ ವಿಧಿಗಳಿಂದ ಪಡೆಯುವಂತೆಯೇ, ಅಧ್ಯಾತ್ಮತತ್ತ್ವವನ್ನು ತಿಳಿದಿರುವ ಮನುಷ್ಯನು ಆತ್ಮಪ್ರಾಪ್ತಿಯ ಉಪಾಯಗಳಿಂದ ತನ್ನ ಶರೀರರೂಪವಾದ ಕ್ಷೇತ್ರದಲ್ಲೇ ಪರಬ್ರಹ್ಮ ಪದವನ್ನು ಸಾಕ್ಷಾತ್ಕರಿಸಿಕೊಳ್ಳುವನು. ॥ ೨೧ ॥

ಆಚಾರ್ಯರು ಮೂಲಪ್ರಕೃತಿ, ಮಹತ್ತತ್ತ್ವ, ಅಹಂಕಾರ ಮತ್ತು ಪಂಚತನ್ಮಾತ್ರೆಗಳು ಈ ಎಂಟು ತತ್ತ್ವಗಳನ್ನು ಪ್ರಕೃತಿಯೆಂದು ತಿಳಿಸಿರುವರು. ಅದರ ಸತ್ತ್ವ, ರಜ, ತಮಗಳೆಂಬ ಮೂರು ಗುಣಗಳಿದ್ದು ಹತ್ತು ಇಂದ್ರಿಯಗಳು, ಒಂದು ಮನಸ್ಸು ಮತ್ತು ಪಂಚ ಮಹಾಭೂತಗಳೆಂಬ ಹದಿನಾರು ವಿಕಾರಗಳಾಗಿವೆ. ಇವೆಲ್ಲವುಗಳಲ್ಲಿ ಒಂದೇ ಪುರುಷತತ್ತ್ವವು ಸೇರಿಕೊಂಡಿದೆ. ॥ ೨೨ ॥ ಇವೆಲ್ಲದರ ಸಮುದಾಯವೇ ದೇಹವು. ದೇಹದಲ್ಲಿ ಸ್ಥಾವರದೇಹ, ಜಂಗಮದೇಹ ಎಂಬ ಎರಡು ಪ್ರಕಾರಗಳಿವೆ. ಇದರಲ್ಲೇ ಅಂತಃಕರಣ, ಇಂದ್ರಿಯಗಳು ಮುಂತಾದ ಅನಾತ್ಮವಸ್ತುಗಳನ್ನು 'ಇದು ಆತ್ಮನಲ್ಲ' ಹೀಗೆ ತೊರೆಯುತ್ತಾ ಆತ್ಮನನ್ನು ಹುಡುಕ ಬೇಕು. ॥ ೨೩ ॥

ಅನ್ವಯವ್ಯತಿರೇಕೇಣ ವಿವೇಕೇನೋಶತಾಽಽತ್ಮನಾ ।
ಸರ್ಗಸ್ಥಾನಸಮಾಮ್ನಾಯೈರ್ವಿಮೃಶದ್ಭಿರಸತ್ವರೈಃ
॥ ೨೪ ॥

ಬುದ್ಧೇರ್ಜಾಗರಣಂ ಸ್ವಪ್ನಃ ಸುಷುಪ್ತಿರಿತಿ ವೃತ್ತಯಃ ।
ತಾ ಯೇನೈವಾನುಭೂಯಂತೇ ಸೋಽಧ್ಯಕ್ಷಃ ಪುರುಷಃ ಪರಃ
॥ ೨೫ ॥

ಏಭಿಸ್ತ್ರಿವರ್ಣೈಃ ಪರ್ಯಸ್ತೈರ್ಬುದ್ಧಿ ಭೇದೈಃ ಕ್ರಿಯೋದ್ಭವೈಃ ।
ಸ್ವರೂಪಮಾತ್ಮನೋ ಬುಧ್ಯೇದ್ಗಂಧೈರ್ವಾಯುಮಿವಾನ್ವಯಾತ್
॥ ೨೬ ॥

ಏತದ್ದ್ವಾರೋ ಹಿ ಸಂಸಾರೋ ಗುಣಕರ್ಮನಿಬಂಧನಃ ।
ಅಜ್ಞಾನಮೂಲೋಽಪಾರ್ಥೋಽಪಿ ಪುಂಸಃ ಸ್ವಪ್ನ ಇವೇಷ್ಯತೇ
॥ ೨೭ ॥

ತಸ್ಮಾದ್ಭವದ್ಭಿಃ ಕರ್ತವ್ಯಂ ಕರ್ಮಣಾಂ ತ್ರಿಗುಣಾತ್ಮನಾಮ್ ।
ಬೀಜನಿರ್ಹರಣಂ ಯೋಗಃ ಪ್ರವಾಹೋಪರಮೋ ಧಿಯಃ
॥ ೨೮ ॥

ತತ್ರೋಪಾಯಸಹಸ್ರಾಣಾಮಯಂ ಭಗವತೋದಿತಃ ।
ಯದೀಶ್ವರೇ ಭಗವತಿ ಯಥಾ ಯೈರಂಜಸಾ ರತಿಃ
॥ ೨೯ ॥

ಗುರುಶುಶ್ರೂಷಯಾ ಭಕ್ತ್ಯಾ ಸರ್ವಲಬ್ಧಾರ್ಪಣೇನ ಚ ।
ಸಂಗೇನ ಸಾಧುಭಕ್ತಾನಾಮೀಶ್ವರಾರಾಧನೇನ ಚ
॥ ೩೦ ॥

ಶ್ರದ್ಧಯಾ ತತ್ಕಥಾಯಾಂ ಚ ಕೀರ್ತನೈರ್ಗುಣಕರ್ಮಣಾಮ್ ।
ತತ್ಪಾದಾಂಬುರುಹಧ್ಯಾನಾತ್ತಲ್ಲಿಂಗೇಕ್ಷಾರ್ಹಣಾದಿಭಿಃ
॥ ೩೧ ॥

ಹರಿಃ ಸರ್ವೇಷು ಭೂತೇಷು ಭಗವಾನಾಸ್ತ ಈಶ್ವರಃ ।
ಇತಿ ಭೂತಾನಿ ಮನಸಾ ಕಾಮೈಸ್ತೈಃ ಸಾಧು ಮಾನಯೇತ್
॥ ೩೨ ॥

ಏವಂ ನಿರ್ಜಿತಷಡ್ವರ್ಗೈಃ ಕ್ರಿಯತೇ ಭಕ್ತಿರೀಶ್ವರೇ ।
ವಾಸುದೇವೇ ಭಗವತಿ ಯಯಾ ಸಂಲಭತೇ ರತಿಮ್
॥ ೩೩ ॥

ಆತ್ಮನು ಇವೆಲ್ಲದರಲ್ಲಿ ಸೇರಿಕೊಂಡಿದ್ದಾನೆ, ಆದರೆ ಅವನು ಎಲ್ಲಕ್ಕಿಂತ ಬೇರೆಯೇ ಆಗಿದ್ದಾನೆ. ಹೀಗೆ ಶುದ್ಧಬುದ್ಧಿಯಿಂದ ನಿಧಾನವಾಗಿ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಳಯದ ಕುರಿತು ವಿಚಾರ ಮಾಡಬೇಕು. ಆತುರಪಡಬಾರದು. ॥ ೨೪ ॥ ಜಾಗ್ರತ್, ಸ್ವಪ್ನ ಸುಷುಪ್ತಿ – ಇವು ಮೂರು ಬುದ್ಧಿಯ ವೃತ್ತಿಗಳು. ಯಾವುದರ ಮೂಲಕ ಈ ವೃತ್ತಿಗಳ ಅನುಭವವಾಗುತ್ತದೋ ಅದೇ ಎಲ್ಲಕ್ಕಿಂತ ಅತೀತನೂ, ಎಲ್ಲರ ಸಾಕ್ಷಿಯೂ ಆದ ಪರಮಾತ್ಮನು. ॥ ೨೫ ॥ ಸುವಾಸನೆಯಿಂದ ಅದರ ಆಶ್ರಯವಾದ ವಾಯುವಿನ ಅರಿವಾಗುವಂತೆಯೇ, ಬುದ್ಧಿಯ ಈ ಕರ್ಮಜನ್ಯ ಹಾಗೂ ಬದಲಾಗುತ್ತಿರುವ ಮೂರೂ ಅವಸ್ಥೆಗಳಿಂದ ಇವುಗಳಲ್ಲಿರುವ ಸಾಕ್ಷಿರೂಪದಿಂದ ಸೇರಿಕೊಂಡಿರುವ ಆತ್ಮನನ್ನು ತಿಳಿಯಬೇಕು. ॥ ೨೬ ॥ ಆತ್ಮನನ್ನು ಶರೀರದಿಂದಲೂ ಪ್ರಕೃತಿಯಿಂದಲೂ ಬೇರ್ಪಡಿಸದೆ ಇರುವುದರಿಂದಲೇ ಈ ಗುಣ-ಕರ್ಮಗಳಿಂದ ಉಂಟಾಗುವ ಹುಟ್ಟು-ಸಾವುಗಳ ಚಕ್ರವು ಉಂಟಾಗುವುದು. ಇದು ಅಜ್ಞಾನ ಮೂಲವೂ, ಮಿಥ್ಯೆಯೂ ಆಗಿದೆ. ಆದರೂ ಕನಸಿನಂತೆ ಜೀವನಿಗೆ ಇದರ ಪ್ರತೀತಿ ಉಂಟಾಗುತ್ತದೆ. ॥ ೨೭ ॥

ಅದಕ್ಕಾಗಿ ನೀವೆಲ್ಲರೂ ಮೊಟ್ಟಮೊದಲು ಈ ಗುಣಗಳನುಸಾರ ಉಂಟಾಗುವ ಕರ್ಮಗಳ ಬೀಜವನ್ನೇ ನಾಶಮಾಡಿ ಬಿಡಬೇಕು. ಇದರಿಂದ ಬುದ್ಧಿ-ವೃತ್ತಿಗಳ ಪ್ರವಾಹವೇ ನಿಂತುಹೋಗುತ್ತದೆ. ಇದನ್ನೇ ಬೇರೆ ಶಬ್ದಗಳಲ್ಲಿ ಯೋಗ ಅಥವಾ ಪರಮಾತ್ಮನೊಂದಿಗೆ ಮಿಲನವೆಂದು ಹೇಳುತ್ತಾರೆ. ॥ ೨೮ ॥ ಈ ತ್ರಿಗುಣಾತ್ಮಕವಾದ ಕರ್ಮಗಳ ಬೇರುಗಳನ್ನು ಕಿತ್ತು ಎಸೆಯಲು ಅಥವಾ ಬುದ್ಧಿಯ ವೃತ್ತಿಗಳ ಪ್ರವಾಹವನ್ನು ತಡೆಗಟ್ಟುವುದಕ್ಕೆ ಸಾವಿರಾರು ಸಾಧನೆಗಳು ಇವೆ; ಆದರೂ ಸರ್ವಶಕ್ತಿವಂತ ಭಗವಂತನಲ್ಲಿ ಸ್ವಾಭಾವಿಕ ನಿಷ್ಕಾಮಪ್ರೇಮ ಉಂಟಾಗುವಂತಹ ಉಪಾಯವೇ ಸರ್ವಶ್ರೇಷ್ಠವಾಗಿದೆ. ಇದನ್ನು ಸ್ವಯಂ ಭಗವಂತನೇ ಅಪ್ಪಣೆ ಕೊಡಿಸಿರುವನು. ॥ ೨೯ ॥ ಗುರುಗಳಿಗೆ ಮಾಡಿದ ಪ್ರೇಮಪೂರ್ವಕ ಸೇವೆ, ತನಗೆ ಸಿಕ್ಕಿರುವುದೆಲ್ಲವನ್ನೂ ಭಗವಂತನಿಗೆ ಅರ್ಪಿಸುವುದು, ಭಾಗವತೋತ್ತಮ ಮಹಾತ್ಮರ ಸತ್ಸಂಗ, ಭಗವಂತನ ಆರಾಧನೆ, ಅವನ ಕಥೆಯಲ್ಲಿ ಶ್ರದ್ಧೆ ಅವನ ಗುಣ-ಲೀಲೆಗಳ ಕೀರ್ತನೆ, ಅವನ ಚರಣ ಕಮಲಗಳ ಧ್ಯಾನ ಮತ್ತು ಅವನ ಮಂದಿರಮೂರ್ತಿಗಳ ಅರ್ಚನೆ-ದರ್ಶನ ಮುಂತಾದ ಸಾಧನೆಗಳಿಂದ ಭಗವಂತನಲ್ಲಿ ಸ್ವಾಭಾವಿಕ ಪ್ರೇಮವು ಉಂಟಾಗುತ್ತದೆ. ॥ ೩೦-೩೧ ॥

ಸರ್ವೇಶ್ವರನಾದ ಭಗವಾನ್ ಶ್ರೀಹರಿಯೇ ಎಲ್ಲ ಪ್ರಾಣಿಗಳಲ್ಲಿ ಬೆಳಗುತ್ತಿದ್ದಾನೆ ಎಂಬ ಭಾವನೆಯಿಂದ ಶಕ್ತ್ಯಾನುಸಾರ ಎಲ್ಲ ಪ್ರಾಣಿಗಳ ಇಚ್ಛೆಯನ್ನು ಪೂರ್ಣಗೊಳಿಸಿ, ಅವರನ್ನು ಹೃತ್ಪೂರ್ವಕವಾಗಿ ಸಮ್ಮಾನಿಸಬೇಕು. ॥ ೩೨ ॥ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರ ಈ ಆರು ಶತ್ರುಗಳನ್ನು ಗೆದ್ದುಕೊಂಡು ಹೀಗೆ ಭಗವಂತನ ಸಾಧನ ಭಕ್ತಿಯ ಅನುಷ್ಠಾನ ಮಾಡುವವರಿಗೆ ಆ ಭಕ್ತಿಯಿಂದ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ಅನನ್ಯ ಪ್ರೇಮದ ಪ್ರಾಪ್ತಿಯಾಗುತ್ತದೆ. ॥ ೩೩ ॥

ನಿಶಮ್ಯ ಕರ್ಮಾಣಿ ಗುಣಾನತುಲ್ಯಾನ್
ವೀರ್ಯಾಣಿ ಲೀಲಾತನುಭಿಃ ಕೃತಾನಿ ।
ಯದಾತಿಹರ್ಷೋತ್ಪುಲಕಾಶ್ರುಗದ್ಗದಂ
ಪ್ರೋತ್ಕಂಠ ಉದ್ಗಾಯತಿ ರೌತಿ ನೃತ್ಯತಿ ॥ ೩೪ ॥

ಯದಾ ಗ್ರಹಗ್ರಸ್ತ ಇವ ಕ್ವಚಿದ್ಧಸ-
ತ್ಯಾಕ್ರಂದತೇ ಧ್ಯಾಯತಿ ವಂದತೇ ಜನಮ್ ।
ಮುಹುಃ ಶ್ವಸನ್ವಕ್ತಿ ಹರೇ ಜಗತ್ಪತೇ
ನಾರಾಯಣೇತ್ಯಾತ್ಮಮತಿರ್ಗತತ್ರಪಃ ॥ ೩೫ ॥

ತದಾ ಪುಮಾನ್ಮುಕ್ತಸಮಸ್ತಬಂಧನ-
ಸ್ತದ್ಭಾವಭಾವಾನುಕೃತಾಶಯಾಕೃತಿಃ ।
ನಿರ್ದಗ್ಧಬೀಜಾನುಶಯೋ ಮಹೀಯಸಾ
ಭಕ್ತಿಪ್ರಯೋಗೇಣ ಸಮೇತ್ಯಧೋಕ್ಷಜಮ್ ॥ ೩೬ ॥

ಅಧೋಕ್ಷಜಾಲಂಭಮಿಹಾಶುಭಾತ್ಮನಃ
ಶರೀರಿಣಃ ಸಂಸೃತಿಚಕ್ರಶಾತನಮ್ ।
ತದ್ಬ್ರಹ್ಮ ನಿರ್ವಾಣಸುಖಂ ವಿದುರ್ಬುಧಾ-
ಸ್ತತೋ ಭಜಧ್ವಂ ಹೃದಯೇ ಹೃದೀಶ್ವರಮ್ ॥ ೩೭ ॥

ಕೋಽತಿಪ್ರಯಾಸೋಽಸುರಬಾಲಕಾ ಹರೇ-
ರುಪಾಸನೇ ಸ್ವೇಹೃದಿ ಛಿದ್ರವತ್ಸತಃ ।
ಸ್ವಸ್ಯಾತ್ಮನಃ ಸಖ್ಯುರಶೇಷದೇಹಿನಾಂ
ಸಾಮಾನ್ಯತಃ ಕಿಂ ವಿಷಯೋಪಪಾದನೈಃ ॥ ೩೮ ॥

ರಾಯಃ ಕಲತ್ರಂ ಪಶವಃ ಸುತಾದಯೋ
ಗೃಹಾ ಮಹೀ ಕುಂಜರಕೋಶಭೂತಯಃ ।
ಸರ್ವೇಽರ್ಥಕಾಮಾಃ ಕ್ಷಣಭಂಗುರಾಯುಷಃ
ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ ॥ ೩೯ ॥

ಏವಂ ಹಿ ಲೋಕಾಃ ಕ್ರತುಭಿಃ ಕೃತಾ ಅಮೀ
ಕ್ಷಯಿಷ್ಣವಃ ಸಾತಿಶಯಾ ನ ನಿರ್ಮಲಾಃ ।
ತಸ್ಮಾದದೃಷ್ಟಶ್ರುತದೂಷಣಂ ಪರಂ
ಭಕ್ತ್ಯೈಕಯೇಶಂ ಭಜತಾತ್ಮಲಬ್ಧಯೇ ॥ ೪೦ ॥

ಭಗವಂತನ ಲೀಲಾಶರೀರಗಳಿಂದ ತೋರಿದ ಅದ್ಭುತ ಪರಾಕ್ರಮ, ಅವನ ಅನುಪಮಗುಣ ಮತ್ತು ಚರಿತ್ರೆಗಳ ಶ್ರವಣಗೈದು ಅತ್ಯಂತ ಆನಂದೋದ್ರೇಕದಿಂದ ಮನುಷ್ಯನು ಯಾವಾಗ ರೋಮಾಂಚಿತನಾಗಿ ಆನಂದದ ಕಣ್ಣೀರಿನಿಂದ ಕಂಠವು ಗದ್ಗದವಾಗಿ ಅವನು ಸಂಕೋಚವನ್ನು ಬಿಟ್ಟು ಗಟ್ಟಿಯಾಗಿ ಹಾಡುತ್ತಾ ಕೂಗಿಕೊಳ್ಳತೊಡಗುವನೋ ; ಯಾವಾಗ ಅವನು ಗ್ರಹಹಿಡಿದು ಹುಚ್ಚನಂತೆ ಕೆಲವೊಮ್ಮೆ ನಗುತ್ತಾ , ಕೆಲವೊಮ್ಮೆ ಅಳುತ್ತಾ, ಕೆಲವೊಮ್ಮೆ ಧ್ಯಾನಮಾಡಿದರೆ, ಕೆಲವೊಮ್ಮೆ ಭಗವದ್ಭಾವದಿಂದ ಜನರನ್ನು ವಂದಿಸುತ್ತಾನೆಯೋ ; ಅವನು ಭಗವಂತನಲ್ಲೇ ತನ್ಮಯನಾದಾಗ ಬಾರಿ-ಬಾರಿಗೂ ನಿಟ್ಟುಸಿರುಬಿಡುತ್ತಾ ಸಂಕೋಚವನ್ನು ಬಿಟ್ಟು 'ಹರೇ ! ಜಗತ್ಪತೇ ! ನಾರಾಯಣಾ !! ಎಂದು ಕೂಗಿಕೊಳ್ಳುತ್ತಾನೋ, ಆಗ ಭಕ್ತಿಯೋಗದ ಮಹಾನ್ ಪ್ರಭಾವದಿಂದ ಅವನ ಎಲ್ಲ ಬಂಧನಗಳು ಹರಿದುಹೋಗುತ್ತವೆ ಮತ್ತು ಭಗವದ್ಭಾವವನ್ನೇ ಭಾವಿಸುತ್ತಾ ಅವನ ಹೃದಯವೂ ತದಾಕಾರ-ಭಗವನ್ಮಯವಾಗಿ ಹೋಗುತ್ತದೆ. ಆಗ ಅವನ ಜನ್ಮ-ಮೃತ್ಯುಗಳ ಬೀಜಗಳ ಭಂಡಾರವೇ ಸುಟ್ಟುಹೋಗುತ್ತದೆ ಹಾಗೂ ಅವನು ಭಗವಂತನನ್ನು ಪಡೆದುಕೊಳ್ಳುವನು. ॥ ೩೪-೩೬ ॥ ಈ ಅಶುಭವಾದ ಸಂಸಾರದ ಕೆಸರಿನಲ್ಲಿ ಸಿಕ್ಕಿಕೊಂಡು ಅಶುಭಮಯನಾದ ಜೀವಿಗಾಗಿ ಭಗವಂತನ ಈ ಪ್ರಾಪ್ತಿಯು ಸಂಸಾರಚಕ್ರದಿಂದ ಬಿಡುಗಡೆ ಮಾಡುವಂತಹುದು. ಈ ಪರಮಾತ್ಮ ವಸ್ತುವನ್ನು ಕೆಲವು ವಿದ್ವಾಂಸರು ಬ್ರಹ್ಮವೆಂದೂ, ಕೆಲವರು ನಿರ್ವಾಣವೆಂದೂ, ಪರಮಸುಖವೆಂದೂ ಹೇಳುತ್ತಾರೆ. ಅದಕ್ಕಾಗಿ ಮಿತ್ರರೇ ! ನೀವೆಲ್ಲರೂ ನಿಮ್ಮ-ನಿಮ್ಮ ಹೃದಯಗಳಲ್ಲಿ ಹೃದಯೇಶ್ವರ ಭಗವಂತನನ್ನು ಭಜಿಸಿರಿ. ॥ ೩೭ ॥ ಅಸುರ ಬಾಲಕರೇ ! ನಮ್ಮ ಹೃದಯದಲ್ಲೇ ಆಕಾಶದಂತೆ ಬೆಳಗುತ್ತಿರುವ ಭಗವಂತನ ಭಜನೆ ಮಾಡುವುದರಲ್ಲಿ ಯಾವ ವಿಶೇಷ ಪರಿಶ್ರಮವಿದೆ ? ಅವನು ಸಮಾನವಾಗಿ ಸಮಸ್ತ ಪ್ರಾಣಿಗಳ ಅತ್ಯಂತ ಪ್ರೇಮಿಯಾಗಿದ್ದಾನೆ. ಹೆಚ್ಚೇನು ನಮ್ಮ ಆತ್ಮನೇ ಆಗಿರುವನು. ಅವನನ್ನು ಬಿಟ್ಟು ಭೋಗಸಾಮಗ್ರಿಗಳನ್ನು ಸಂಗ್ರಹಿಸಲಿಕ್ಕಾಗಿ ಅಲೆಯುವುದು ಅಯ್ಯೋ! ಅರರೇ !! ಎಷ್ಟು ಮೂರ್ಖತೆಯಾಗಿದೆ ! ॥ ೩೮ ॥ ಅಯ್ಯಾ ಸೋದರರೇ ! ಧನ, ಸ್ತ್ರೀ, ಪಶು, ಪುತ್ರರು, ಪುತ್ರಿಯರು, ಮನೆ, ಭೂಮಿ, ಆನೆ, ಭಂಡಾರ ಮತ್ತು ಬಗೆ-ಬಗೆಯ ವಿಭೂತಿಗಳು – ಹೆಚ್ಚೇನು, ಪ್ರಪಂಚದ ಸಮಸ್ತ ಧನ-ಭೋಗ- ಸಾಮಗ್ರಿಗಳು ಈ ಕ್ಷಣಭಂಗುರ ಮನುಷ್ಯನಿಗೆ ಏನು ಸುಖವನ್ನು ಕೊಡಬಲ್ಲವು ? ಅವು ಸ್ವತಃ ನಾಶವುಳ್ಳವುಗಳೇ ಆಗಿವೆ. ॥ ೩೯ ॥

ಈ ಲೋಕದ ಸಂಪತ್ತಿಯು ಪ್ರತ್ಯಕ್ಷವಾಗಿ ನಾಶವುಳ್ಳದ್ದಾಗಿರುವಂತೆಯೇ ಯಜ್ಞಗಳಿಂದ ದೊರೆಯುವ ಸ್ವರ್ಗಾದಿ ಲೋಕಗಳೂ ನಾಶವುಳ್ಳವುಗಳೇ ಆಗಿವೆ. ಅವುಗಳಲ್ಲಿಯೂ ಮೇಲು-ಕೀಳು, ಚಿಕ್ಕದು-ದೊಡ್ಡದು ಎಂಬುದಿದೆ. ಅದಕ್ಕಾಗಿ ಅವೂ ಕೂಡ ನಿರ್ದೋಷವಲ್ಲ, ನಿರ್ದೋಷನಾದರೋ ಕೇವಲ ಪರಮಾತ್ಮನೇ. ಯಾರೂ ಅವನಲ್ಲಿ ದೋಷವನ್ನು ನೋಡಿಲ್ಲ, ಕೇಳಿಲ್ಲ, ಆದ್ದರಿಂದ ಪರಮಾತ್ಮನ ಪ್ರಾಪ್ತಿಗಾಗಿ ಅನನ್ಯ ಭಕ್ತಿಯಿಂದ ಆ ಪರಮೇಶ್ವರ ಭಜನೆ ಮಾಡಬೇಕು. ॥ ೪೦ ॥

ಯದದ್ಧ್ಯರ್ಥ್ಯೇಹ ಕರ್ಮಾಣಿ ವಿದ್ವನ್ಮಾನ್ಯಸಕೃನ್ನರಃ ।
ಕರೋತ್ಯತೋ ವಿಪರ್ಯಾಸಮಮೋಘಂ ವಿಂದತೇ ಫಲಮ್
॥ ೪೧ ॥

ಇದಲ್ಲದೆ ತನ್ನನ್ನು ದೊಡ್ಡ ವಿದ್ವಾಂಸನೆಂದು ತಿಳಿದಿರುವ ಮನುಷ್ಯನು ಈ ಲೋಕದಲ್ಲಿ ಯಾವ ಉದ್ದೇಶದಿಂದ ಮತ್ತೆ-ಮತ್ತೆ ಅನೇಕ ಕರ್ಮಗಳನ್ನು ಮಾಡುತ್ತಾನೋ ಆ ಉದ್ದೇಶ ಪ್ರಾಪ್ತಿಯಾದರೋ ದೂರವುಳಿಯಿತು. ಬದಲಿಗೆ ಅವನಿಗೆ ವಿಪರೀತ ಫಲವೇ ದೊರೆಯುತ್ತದೆ. ಇದರಲ್ಲಿ ಸಂದೇಹವೇ ಇಲ್ಲ. ॥ ೪೧ ॥

ಸುಖಾಯ ದುಃಖಮೋಕ್ಷಾಯ ಸಂಕಲ್ಪ ಇಹ ಕರ್ಮಿಣಃ ।
ಸದಾಽಽಪ್ನೋತೀಹಯಾ ದುಃಖಮನೀಹಾಯಾಃ ಸುಖಾವೃತಃ
॥ ೪೨ ॥

ಕರ್ಮದಲ್ಲಿ ಪ್ರವೃತ್ತನಾಗಲು ಸುಖಪಡೆಯುವುದು – ದುಃಖದಿಂದ ಬಿಡುಗಡೆ ಹೊಂದುವುದು – ಇವೆರಡೇ ಉದ್ದೇಶಗಳಿರುತ್ತವೆ. ಆದರೆ ಮೊದಲು ಕಾಮನೆ ಇಲ್ಲದ ಕಾರಣ ಸುಖದಲ್ಲಿ ನಿಮಗ್ನನಾಗಿ ಇರುತ್ತಿದ್ದವನೂ ಈಗ ಕಾಮನೆಯ ಕಾರಣದಿಂದ ಇಲ್ಲಿ ಸದಾ-ಸರ್ವದಾ ದುಃಖವನ್ನೇ ಭೋಗಿಸಬೇಕಾಗುತ್ತದೆ. ॥ ೪೨ ॥

ಕಾಮಾನ್ಕಾಮಯತೇ ಕಾಮ್ಯೈರ್ಯದರ್ಥಮಿಹ ಪೂರುಷಃ ।
ಸ ವೈ ದೇಹಸ್ತು ಪಾರಕ್ಯೋ ಭಂಗುರೋ ಯಾತ್ಯುಪೈತಿ ಚ
॥ ೪೩ ॥

ಮನುಷ್ಯನು ಈ ಲೋಕದಲ್ಲಿ ಸಕಾಮಕರ್ಮಗಳ ಮೂಲಕ ಯಾವ ಶರೀರಕ್ಕಾಗಿ ಭೋಗಗಳನ್ನು ಒದಗಿಸಲು ಬಯಸುವನೋ, ಆ ದೇಹವೂ ತನ್ನದಲ್ಲ, ಬೇರೆಯವರದೇ ಆಗಿದೆ. ನರಿ-ನಾಯಿಗಳ ಭೋಜನವಾಗಿದ್ದು, ನಾಶವುಳ್ಳದ್ದಾಗಿದೆ. ಯಾವಾಗಲೋ ದೊರೆಯುತ್ತದೆ, ಯಾವಾಗಲೋ ಅಗಲಿ ಹೋಗುತ್ತದೆ. ॥ ೪೩ ॥

ಕಿಮು ವ್ಯವಹಿತಾಪತ್ಯದಾರಾಗಾರಧನಾದಯಃ ।
ರಾಜ್ಯಂ ಕೋಶಗಜಾಮಾತ್ಯಭೃತ್ಯಾಪ್ತಾ ಮಮತಾಸ್ಪದಾಃ
॥ ೪೪ ॥

ಶರೀರದ್ದೇ ಈ ಅವಸ್ಥೆಯಾದರೆ, ಇದರಿಂದ ಬೇರೆಯಾಗಿರುವ ಪತ್ನೀ, ಪುತ್ರ, ಮನೆ, ಧನ-ಸಂಪತ್ತು, ರಾಜ್ಯ, ಭಂಗಾರ, ಆನೆ-ಕುದುರೆ, ಮಂತ್ರಿಗಳು, ಸೇವಕರು, ಗುರುಗಳು ಮತ್ತು ತನ್ನವರು ಎಂದು ಹೇಳಿಕೊಳ್ಳುವ ಇತರರು – ಹೀಗೆಲ್ಲದರ ಕುರಿತು ಹೇಳುವುದೇನಿದೆ ? ॥ ೪೪ ॥

ಕಿಮೇತೈರಾತ್ಮನಸ್ತುಚ್ಛೈಃ ಸಹ ದೇಹೇನ ನಶ್ವರೈಃ ।
ಅನರ್ಥೈರರ್ಥಸಂಕಾಶೈರ್ನಿತ್ಯಾನಂದಮಹೋದಧೇಃ
॥ ೪೫ ॥

ಈ ತುಚ್ಛ ವಿಷಯಗಳು ಶರೀರದೊಂದಿಗೇ ನಾಶವಾಗಿ ಹೋಗುತ್ತವೆ. ಇವು ಪುರುಷಾರ್ಥದಂತೆ ಕಂಡುಬಂದರೂ ವಾಸ್ತವವಾಗಿ ಅನರ್ಥರೂಪವೇ ಆಗಿದೆ. ಆತ್ಮನು ಸ್ವಯಂ ಅನಂತ ಆನಂದದ ಮಹಾನ್ ಸಮುದ್ರನಾಗಿದ್ದಾನೆ. ಅವನಿಗೆ ಈ ವಸ್ತುಗಳ ಆವಶ್ಯಕತೆಯಾದರೂ ಏನಿದೆ ? ॥ ೪೫ ॥

ನಿರೂಪ್ಯತಾಮಿಹ ಸ್ವಾರ್ಥಃ ಕಿಯಾನ್‌ದೇಹಭೃತೋಽಸುರಾಃ ।
ನಿಷೇಕಾದಿಷ್ವವಸ್ಥಾಸು ಕ್ಲಿಶ್ಯಮಾನಸ್ಯ ಕರ್ಮಭಿಃ
॥ ೪೬ ॥

ಸೋದರರೇ ! ಜೀವನು ಗರ್ಭಾಧಾನದಿಂದ ಹಿಡಿದು ಮೃತ್ಯುವಿನವರೆಗೆ ಎಲ್ಲ ಅವಸ್ಥೆಗಳಲ್ಲಿ ತನ್ನ ಕರ್ಮಗಳ ಅಧೀನನಾಗಿ ಕ್ಲೇಶಗಳನ್ನೇ ಅನುಭವಿಸುತ್ತಾನೆ. ಅವನಿಗೆ ಈ ಪ್ರಪಂಚದಲ್ಲಿ ಸ್ವಾರ್ಥವಾದರೂ ಏನಿದೆ ? ಎಂಬುದನ್ನು ಸ್ವಲ್ಪ ವಿಚಾರಮಾಡಿರಿ. ॥ ೪೬ ॥

ಕರ್ಮಾಣ್ಯಾರಭತೇ ದೇಹೀ ದೇಹೇನಾತ್ಮಾನುವರ್ತಿನಾ ।
ಕರ್ಮಭಿಸ್ತನುತೇ ದೇಹಮುಭಯಂ ತ್ವವಿವೇಕತಃ
॥ ೪೭ ॥

ಆ ಜೀವಿಯು ಸೂಕ್ಷ್ಮಶರೀರವನ್ನೇ ತನ್ನ ಆತ್ಮನೆಂದು ತಿಳಿದುಕೊಂಡು, ಅದರ ಮೂಲಕ ಅನೇಕ ಪ್ರಕಾರದ ಕರ್ಮಗಳನ್ನು ಮಾಡುತ್ತಾನೆ ಮತ್ತು ಕರ್ಮಗಳ ಕಾರಣದಿಂದಲೇ ಪುನಃ ಶರೀರವನ್ನೇ ಪಡೆಯುತ್ತಾನೆ. ಹೀಗೆ ಕರ್ಮದಿಂದ ಶರೀರ, ಶರೀರದಿಂದ ಕರ್ಮ ಈ ಪರಂಪರೆ ನಡೆಯುತ್ತಾ ಇರುತ್ತದೆ. ಅವಿವೇಕದಿಂದಲೇ ಹೀಗಾಗುತ್ತದೆ. ॥ ೪೭ ॥

ತಸ್ಮಾದರ್ಥಾಶ್ಚ ಕಾಮಾಶ್ಚ ಧರ್ಮಾಶ್ಚ ಯದಪಾಶ್ರಯಾಃ ।
ಭಜತಾನೀಹಯಾಽಽತ್ಮಾನಮನೀಹಂ ಹರಿಮೀಶ್ವರಮ್
॥ ೪೮ ॥

ಅದಕ್ಕಾಗಿ ನಿಷ್ಕಾಮ ಭಾವದಿಂದ ನಿಷ್ಕ್ರಿಯನಾದ ಆತ್ಮಸ್ವರೂಪೀ ಭಗವಾನ್ ಶ್ರೀಹರಿಯ ಭಜನೆಯನ್ನು ಮಾಡಬೇಕು. ಅರ್ಥ, ಧರ್ಮ ಮತ್ತು ಕಾಮ – ಎಲ್ಲವೂ ಅವನಲ್ಲೇ ಆಶ್ರಿತವಾಗಿರುತ್ತವೆ. ಅವನ ಇಚ್ಛೆಯಿಲ್ಲದೆ ಅವು ಸಿಗಲಾರವು. ॥ ೪೮ ॥

ಸರ್ವೇಷಾಮಪಿ ಭೂತಾನಾಂ ಹರಿರಾತ್ಮೇಶ್ವರಃ ಪ್ರಿಯಃ ।
ಭೂತೈರ್ಮಹದ್ಭಿಃ ಸ್ವಕೃತೈಃ ಕೃತಾನಾಂ ಜೀವಸಂಜ್ಞಿತಃ
॥ ೪೯ ॥

ಭಗವಾನ್ ಶ್ರೀಹರಿಯು ಸಮಸ್ತ ಪ್ರಾಣಿಗಳ ಈಶ್ವರನೂ, ಆತ್ಮನೂ ಮತ್ತು ಪರಮ ಪ್ರಿಯತಮನೂ ಆಗಿರುವನು. ಅವನೇ ತಾನೇ ನಿರ್ಮಿಸಿದ ಪಂಚಭೂತಗಳು ಮತ್ತು ಸೂಕ್ಷ್ಮಭೂತ ಇವುಗಳ ಮೂಲಕ ಉಂಟಾದ ಶರೀರದಲ್ಲಿ ಜೀವನೆಂಬ ಹೆಸರಿನಿಂದ ಕರೆಯಲ್ಪಡುವನು. ॥ ೪೯ ॥

ದೇವೋಽಸುರೋ ಮನುಷ್ಯೋ ವಾ ಯಕ್ಷೋ ಗಂಧರ್ವ ಏವ ಚ ।
ಭಜನ್ಮುಕುಂದಚರಣಂ ಸ್ವಸ್ತಿಮಾನ್ಸ್ಯಾದ್ಯಥಾ ವಯಮ್ ॥ ೫೦ ॥

ದೇವತೆಗಳಾಗಲೀ, ದೈತ್ಯರಿರಲೀ, ಮನುಷ್ಯನಾಗಲೀ, ಯಕ್ಷ ಅಥವಾ ಗಂಧರ್ವರಾಗಿರಲೀ ಯಾವನೇ ಆದರೂ ಭಗವಂತನ ಚರಣಗಳನ್ನು ಸೇವಿಸುವವನು ನಮ್ಮಂತೆಯೇ ಕಲ್ಯಾಣಕ್ಕೆ ಪಾತ್ರನಾಗುವನು. ॥ ೫೦ ॥

ನಾಲಂ ದ್ವಿಜತ್ವಂ ದೇವತ್ವಮೃಷಿತ್ವಂ ವಾಸುರಾತ್ಮಜಾಃ ।
ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ॥ ೫೧ ॥

ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ ।
ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಮ್ ॥ ೫೨ ॥

ದೈತ್ಯಬಾಲಕರೇ ! ಭಗವಂತನನ್ನು ಪ್ರಸನ್ನಗೊಳಿಸಲು ಬ್ರಾಹ್ಮಣತ್ವವಾಗಲೀ, ದೇವತ್ವವಾಗಲೀ, ಋಷಿತ್ವವಾಗಲೀ, ಸದಾಚಾರವಾಗಲೀ, ವಿವಿಧ ಜ್ಞಾನಗಳಿಂದ ಸಂಪನ್ನನಾಗುವುದಾಗಲೀ ಹಾಗೂ ದಾನ, ತಪಸ್ಸು, ಯಜ್ಞ, ಶಾರೀರಿಕ-ಮಾನಸಿಕ ಶೌಚ, ದೊಡ್ಡ-ದೊಡ್ಡ ಯಜ್ಞಗಳ ಅನುಷ್ಠಾನವಾಗಲೀ ಇವುಗಳು ಯಾವುದೂ ಸಮರ್ಥವಾಗುವುದಿಲ್ಲ. ಭಗವಂತನು ಕೇವಲ ನಿಷ್ಕಾಮ ಪ್ರೇಮಾಭಕ್ತಿಯಿಂದಲೇ ಪ್ರಸನ್ನನಾಗುವನು. ಉಳಿದೆಲ್ಲವೂ ವಿಡಂಬನೆಯೇ ಆಗಿದೆ. ॥ ೫೧-೫೨ ॥ ಅದಕ್ಕಾಗಿ ದಾನವ ಬಂಧುಗಳೇ ! ಸಮಸ್ತ ಪ್ರಾಣಿಗಳನ್ನು ತನ್ನಂತೆಯೇ ತಿಳಿದು ಸರ್ವತ್ರ ವಿರಾಜಮಾನನಾದ ಸರ್ವಾತ್ಮಾ ಸರ್ವಶಕ್ತಿಸಂಪನ್ನ ಭಗವಂತನಲ್ಲಿ ಭಕ್ತಿಯನ್ನಿಡಿರಿ. ॥ ೫೩ ॥

ತತೋ ಹರೌ ಭಗವತಿ ಭಕ್ತಿಂ ಕುರುತ ದಾನವಾಃ ।
ಆತ್ಮೌಪಮ್ಯೇನ ಸರ್ವತ್ರ ಸರ್ವಭೂತಾತ್ಮನೀಶ್ವರೇ ॥ ೫೩ ॥

ದೈತೇಯಾ ಯಕ್ಷರಕ್ಷಾಂಸಿ ಸ್ತ್ರಿಯಃ ಶೂದ್ರಾ ವ್ರಜೌಕಸಃ ।
ಖಗಾ ಮೃಗಾಃ ಪಾಪಜೀವಾಃ ಸಂತಿ ಹ್ಯಚ್ಯುತತಾಂ ಗತಾಃ ॥ ೫೪ ॥

ಭಗವಂತನ ಭಕ್ತಿಯ ಪ್ರಭಾವದಿಂದ ದೈತ್ಯರು, ಯಕ್ಷರು, ರಾಕ್ಷಸರು, ಸ್ತ್ರೀಯರು, ಶೂದ್ರರು, ಗೋಪಾಲಕರು, ಪಕ್ಷಿಗಳು, ಮೃಗಗಳು ಹಾಗೂ ಇನ್ನೂ ಅನೇಕ ಪಾಪಿ ಜೀವಿಗಳೂ ಕೂಡ ಭಗವದ್ಭಾವವನ್ನು ಪಡೆದು ಕೊಂಡಿರುವರು. ॥ ೫೪ ॥ ಈ ಪ್ರಪಂಚದಲ್ಲಿ ಅಥವಾ ಮನುಷ್ಯಶರೀರದಲ್ಲಿ ಜೀವಿಗೆ ಎಲ್ಲಕ್ಕಿಂತ ದೊಡ್ಡ ಸ್ವಾರ್ಥ, ಅಂದರೆ – ಏಕಮಾತ್ರ ಪರಮಾರ್ಥವು ಭಗವಾನ್ ಶ್ರೀಕೃಷ್ಣನಲ್ಲಿ ಅನನ್ಯ ಭಕ್ತಿಯನ್ನು ಪ್ರಾಪ್ತಿ ಮಾಡಿಕೊಳ್ಳುವುದೇ ಆಗಿದೆ. ಆ ಭಕ್ತಿಯ ಸ್ವರೂಪವು ಸರ್ವದಾ, ಸರ್ವತ್ರ, ಎಲ್ಲ ವಸ್ತುಗಳಲ್ಲಿ ಭಗವಂತನನ್ನು ದರ್ಶಿಸುವುದಾಗಿದೆ. ॥ ೫೫ ॥

ಏತಾವಾನೇವ ಲೋಕೇಽಸ್ಮಿನ್ಪುಂಸಃ ಸ್ವಾರ್ಥಃ ಪರಃ ಸ್ಮೃತಃ ।
ಏಕಾಂತಭಕ್ತಿರ್ಗೋವಿಂದೇ ಯತ್ಸರ್ವತ್ರ ತದೀಕ್ಷಣಮ್ ॥ ೫೫ ॥

*ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ
ಪ್ರಹ್ಲಾದಾನುಚರಿತೇ ದೈತ್ಯಪುತ್ರಾನುಶಾಸನಂ ನಾಮ ಸಪ್ತಮೋಽಧ್ಯಾಯಃ ॥ ೭ ॥

# ಎಂಟನೆಯ ಅಧ್ಯಾಯ

## ಶ್ರೀನರಸಿಂಹದೇವರ ಪ್ರಾದುರ್ಭಾವ, ಹಿರಣ್ಯಕಶಿಪುವಿನ ವಧೆ, ಬ್ರಹ್ಮಾದಿಗಳಿಂದ ಭಗವಂತನ ಸ್ತುತಿ

*ನಾರದ ಉವಾಚ*

ಅಥ ದೈತ್ಯಸುತಾಃ ಸರ್ವೇ ಶ್ರುತ್ವಾ ತದನುವರ್ಣಿತಮ್ ।
ಜಗೃಹುರ್ನಿರವದ್ಯತ್ವಾನ್ನೈವ ಗುರ್ವನುಶಿಕ್ಷಿತಮ್ ॥ ೧ ॥

ಅಥಾಚಾರ್ಯಸುತಸ್ತೇಷಾಂ ಬುದ್ಧಿಮೇಕಾಂತಸಂಸ್ಥಿತಾಮ್ ।
ಆಲಕ್ಷ್ಯ ಭೀತಸ್ತ್ವರಿತೋ ರಾಜ್ಞ ಆವೇದಯದ್ಯಥಾ ॥ ೨ ॥

ನಾರದರು ಹೇಳುತ್ತಾರೆ – ಪ್ರಹ್ಲಾದನ ಪ್ರವಚನವನ್ನು ಕೇಳಿ ದೈತ್ಯಬಾಲಕರು ಆಗಿನಿಂದಲೇ, ನಿರ್ದೋಷವಿದ್ದ ಕಾರಣ ಅವನ ಮಾತನ್ನು ಸರಿ ಎಂದು ಒಪ್ಪಿಕೊಂಡರು. ಗುರುಗಳ ದೂಷಿತವಾದ ಶಿಕ್ಷಣದ ಕಡೆಗೆ ಅವರು ಲಕ್ಷ್ಯವೇ ಕೊಡಲಿಲ್ಲ. ॥ ೧ ॥ ಆ ಎಲ್ಲ ವಿದ್ಯಾರ್ಥಿಗಳ ಬುದ್ಧಿಯು ಭಗವಂತನಲ್ಲಿ ಸ್ಥಿರವಾಗಿರುವುದನ್ನು ಕಂಡು ಗುರುಗಳು ತುಂಬಾ ಗಾಬರಿಗೊಂಡು, ಕೂಡಲೇ ಹಿರಣ್ಯಕಶಿಪುವಿನ ಬಳಿಗೆ ಹೋಗಿ ಅದನ್ನು ನಿವೇದಿಸಿಕೊಂಡರು. ॥ ೨ ॥ ತನ್ನ ಪುತ್ರನ ಆ ಅಸಹ್ಯವೂ, ಅಪ್ರಿಯವೂ ಆಗಿದ್ದ ಅನೀತಿಯನ್ನು ಕಂಡು ದೈತ್ಯರಾಜನ ಶರೀರವು ಕ್ರೋಧದಿಂದ ಥರ-ಥರನೆ

ಶ್ರುತ್ವಾ ತದಪ್ರಿಯಂ ದೈತ್ಯೋ ದುಸ್ಸಹಂ ತನಯಾನಯಮ್ ।
ಕೋಪಾವೇಶಚಲದ್ಗಾತ್ರಃ ಪುತ್ರಂ ಹಂತುಂ ಮನೋ ದಧೇ ॥ ೩ ॥

ಕ್ಷಿಪ್ತ್ವಾ ಪರುಷಯಾ ವಾಚಾ ಪ್ರಹ್ಲಾದಮತದರ್ಹಣಮ್ ।
ಆಹೇಕ್ಷಮಾಣಃ ಪಾಪೇನ ತಿರಶ್ಚೀನೇನ ಚಕ್ಷುಷಾ ॥ ೪ ॥

ಪ್ರಶ್ರಯಾವನತಂ ದಾಂತಂ ಬದ್ಧಾಂಜಲಿಮವಸ್ಥಿತಮ್ ।
ಸರ್ಪಃ ಪದಾಹತ ಇವ ಶ್ವಸನ್ಪ್ರಕೃತಿದಾರುಣಃ ॥ ೫ ॥

ಹೇ ದುರ್ವಿನೀತ ಮಂದಾತ್ಮನ್ಕುಲಭೇದಕರಾಧಮ ।
ಸ್ತಬ್ಧಂ ಮಚ್ಛಾಸನೋದ್ವೃತ್ತಂ ನೇಷ್ಯೇ ತ್ವಾದ್ಯ ಯಮಕ್ಷಯಮ್ ॥ ೬ ॥

ಕ್ರುದ್ಧಸ್ಯ ಯಸ್ಯ ಕಂಪಂತೇ ತ್ರಯೋ ಲೋಕಾಃ ಸಹೇಶ್ವರಾಃ ।
ತಸ್ಯ ಮೇಽಭೀತವನ್ಮೂಢ ಶಾಸನಂ ಕಿಂಬಲೋಽತ್ಯಗಾಃ ॥ ೭ ॥

*ಪ್ರಹ್ಲಾದ ಉವಾಚ*

ನ ಕೇವಲಂ ಮೇ ಭವತಶ್ಚ ರಾಜನ್
ಸ ವೈ ಬಲಂ ಬಲಿನಾಂ ಚಾಪರೇಷಾಮ್ ।
ಪರೇಽವರೇಽಮೀ ಸ್ಥಿರಜಂಗಮಾ ಯೇ
ಬ್ರಹ್ಮಾದಯೋ ಯೇನ ವಶಂ ಪ್ರಣೀತಾಃ ॥ ೮ ॥

ಸ ಈಶ್ವರಃ ಕಾಲ ಉರುಕ್ರಮೋಽಸಾ-
ವೋಜಃ ಸಹಃಸತ್ತ್ವಬಲೇಂದ್ರಿಯಾತ್ಮಾ ।
ಸ ಏವ ವಿಶ್ವಂ ಪರಮಃ ಸ್ವಶಕ್ತಿಭಿಃ
ಸೃಜತ್ಯವತ್ಯತ್ತಿ ಗುಣತ್ರಯೇಶಃ ॥ ೯ ॥

ಜಹ್ಯಾಸುರಂ ಭಾವಮಿಮಂ ತ್ವಮಾತ್ಮನಃ
ಸಮಂ ಮನೋ ಧತ್ಸ್ವ ನ ಸಂತಿ ವಿದ್ವಿಷಃ ।
ಋತೇಽಜಿತಾದಾತ್ಮನ ಉತ್ಪಥಸ್ಥಿತಾತ್
ತದ್ಧಿ ಹ್ಯನಂತಸ್ಯ ಮಹತ್ಸಮರ್ಹಣಮ್ ॥ ೧೦ ॥

ದಸ್ಯೂನ್‌ಪುರಾ ಷಣ್ಣ ವಿಜಿತ್ಯ ಲುಂಪತೋ
ಮನ್ಯಂತ ಏಕೇ ಸ್ವಜಿತಾ ದಿಶೋ ದಶ ।
ಜಿತಾತ್ಮನೋ ಜ್ಞಸ್ಯ ಸಮಸ್ಯ ದೇಹಿನಾಂ
ಸಾಧೋಃ ಸ್ವಮೋಹಪ್ರಭವಾಃ ಕುತಃ ಪರೇ ॥ ೧೧ ॥

*ಹಿರಣ್ಯಕಶಿಪುರುವಾಚ*

ವ್ಯಕ್ತಂ ತ್ವಂ ಮರ್ತುಕಾಮೋಽಸಿ ಯೋಽತಿಮಾತ್ರಂ ವಿಕತ್ಥಸೇ ।
ಮುಮೂರ್ಷೂಣಾಂ ಹಿ ಮಂದಾತ್ಮನ್ನನು ಸ್ಯುರ್ವಿಪ್ಲವಾ ಗಿರಃ ॥ ೧೨ ॥

ನಡುಗತೊಡಗಿತು. ಕೊನೆಗೆ ಈ ಪ್ರಹ್ಲಾದನನ್ನು ಈಗ ನನ್ನ ಕೈಯಾರೆ ಕೊಂದುಹಾಕಬೇಕೆಂದು ಅವನು ನಿಶ್ಚಯಿಸಿದನು. ॥ ೩ ॥ ಜಿತೇಂದ್ರಿಯನಾಗಿದ್ದ ಪ್ರಹ್ಲಾದ ಕುಮಾರನು ವಿನಯದಿಂದ ಕೈಜೋಡಿಸಿಕೊಂಡು ತಂದೆಯ ಮುಂದೆ ಸುಮ್ಮನೆ ನಿಂತಿದ್ದನು. ಸ್ವಭಾವದಿಂದಲೇ ಕ್ರೂರನಾಗಿದ್ದ ಹಿರಣ್ಯಕಶಿಪು – ನಿಂದೆ – ತಿರಸ್ಕಾರಗಳಿಗೆ ಯೋಗ್ಯನಲ್ಲದ ಸಾಧುಶಿರೋಮಣಿಯನ್ನು ಕಠೋರವಾಣಿಯಿಂದ ಗದರಿಸುತ್ತಾ ಏಟುತಿಂದ ಸರ್ಪದಂತೆ ಬುಸುಗುಟ್ಟತೊಡಗಿದನು. ಪಾಪಿಷ್ಠವಾದ ಓರೆನೋಟದಿಂದ ಅವನನ್ನೇ ನೋಡುತ್ತಾ ಹೀಗೆಂದನು – ॥ ೪-೫ ॥ ಎಲವೋ ದುಷ್ಟ! ದುರಹಂಕಾರಿ ! ಮೂರ್ಖ ! ಕುಲಗೆಡುಕನೇ ! ತಾನು ಕೆಟ್ಟಿರುವುದಲ್ಲದೆ, ನಮ್ಮ ಕುಲದ ಬಾಲಕರನ್ನೂ ಕೆಡಿಸಲು ಬಯಸುತ್ತಿದ್ದೀಯೆ. ನನ್ನ ಆಜ್ಞೆಯನ್ನು ಉಲ್ಲಂಘಿಸುವ ದಿಟ್ಟತನವನ್ನು ತೋರಿದ್ದೀಯೆ. ಇದರ ಫಲವಾಗಿ ಇದೋ ನಿನ್ನನ್ನು ಈಗಲೇ ಯಮ ಸದನಕ್ಕೆ ಅಟ್ಟುತ್ತೇನೆ. ॥ ೬ ॥ ನಾನು ಸ್ವಲ್ಪ ಕೊಪಗೊಂಡರೂ ಮೂರು ಲೋಕಗಳೂ ಮತ್ತು ಲೋಕಪಾಲಕರೂ ಥರ-ಥರನೆ ನಡುಗುವರು. ಹೀಗಿರುವಾಗ ಎಲೈ ಮೂರ್ಖನೇ ! ನೀನು ಯಾರ ಬಲದ ಮೇಲೆ ನಿರ್ಭಯನಂತೆ ನನ್ನ ಶಾಸನವನ್ನು ಮುರಿದಿದ್ದೀಯೇ ? ಹೇಳು. ॥ ೭ ॥

**ಪ್ರಹ್ಲಾದನು ಹೇಳಿದನು** – ದೈತ್ಯರಾಜನೇ ! ಬ್ರಹ್ಮದೇವರಿಂದ ಹಿಡಿದು ಹುಲ್ಲುಕಡ್ಡಿಯವರೆಗಿನ ಚರಾಚರ ಜೀವಿಗಳೆಲ್ಲವೂ ಶ್ರೀಭಗವಂತನಿಗೆ ಅಧೀನವಾಗಿವೆ. ಆತನೇ ಎಲ್ಲರಿಗೂ ಬಲವು. ನನ್ನ ಮತ್ತು ನಿನ್ನ ಬಲಗಳಿಗೆ ಮಾತ್ರವಲ್ಲದೇ ಇಡೀ ಜಗತ್ತಿನಲ್ಲಿರುವ ಎಲ್ಲ ಬಲಶಾಲಿಗಳ ಬಲಗಳಿಗೂ ಆತನದೇ ಬಲವು. ॥ ೮ ॥ ಆ ಮಹಾಪರಾಕ್ರಮಿ ಸರ್ವಶಕ್ತಿಯುಳ್ಳ ಪ್ರಭುವೇ ಕಾಲನಾಗಿದ್ದಾನೆ. ಸಮಸ್ತ ಪ್ರಾಣಿಗಳ ಇಂದ್ರಿಯಬಲ, ಮನೋಬಲ, ದೇಹಬಲ, ಧೈರ್ಯ ಹಾಗೂ ಇಂದ್ರಿಯಗಳೂ ಕೂಡ ಅವನೇ ಆಗಿದ್ದಾನೆ. ಆ ಪರಮೇಶ್ವರನೇ ತನ್ನ ಶಕ್ತಿಗಳ ಮೂಲಕ ಈ ವಿಶ್ವವನ್ನು ರಚಿಸಿ, ರಕ್ಷಿಸಿ, ಸಂಹರಿಸುತ್ತಾನೆ. ಅವನೇ ತ್ರಿಗುಣಗಳ ಒಡೆಯನಾಗಿದ್ದಾನೆ. ॥ ೯ ॥ ನೀನು ನಿನ್ನ ಅಸುರಭಾವವನ್ನು ಬಿಟ್ಟುಬಿಡು. ಎಲ್ಲರ ವಿಷಯದಲ್ಲಿ ಸಮಾನತೆಯನ್ನು ತೋರಿಸು. ಈ ಪ್ರಪಂಚದಲ್ಲಿ ತನ್ನ ವಶದಲ್ಲಿ ಇರದಿರುವ, ಕುಮಾರ್ಗದಲ್ಲೇ ಸಂಚರಿಸುವ ಮನಸ್ಸಿಗಿಂತಲೂ ಬೇರೆ ಶತ್ರುವಿಲ್ಲ. ಮನಸ್ಸಿನಲ್ಲಿ ಎಲ್ಲರ ಕುರಿತು ಸಮತೆಯ ಭಾವವನ್ನಿರಿಸುವುದೇ ಭಗವಂತನ ಅತಿದೊಡ್ಡ ಪೂಜೆಯಾಗಿದೆ. ॥ ೧೦ ॥ ತಮ್ಮ ಸರ್ವಸ್ವವನ್ನು ಕೊಳ್ಳೆಹೊಡೆಯುವ ಈ ಆರು ಇಂದ್ರಿಯಗಳೆಂಬ ಕಳ್ಳರನ್ನು ಮೊದಲು ಗೆಲ್ಲದೆ 'ನಾವು ಹತ್ತು ದಿಕ್ಕುಗಳನ್ನೂ ಗೆದ್ದಿದ್ದೇವೆ' ಎಂದು ಜಂಭಕೊಚ್ಚಿಕೊಳ್ಳುವವರು ಕಡು ಮೂರ್ಖರು. ಜ್ಞಾನಿಯೂ, ಜಿತೇಂದ್ರಿಯನೂ ಆಗಿರುವ ಮಹಾತ್ಮನು – ಸಮಸ್ತ ಪ್ರಾಣಿಗಳಲ್ಲಿಯೂ ಸಮತೆಯ ಭಾವವನ್ನು ಹೊಂದಿದವರಿಗೆ ಅಜ್ಞಾನದಿಂದ ಉಂಟಾಗುವ ಕಾಮ-ಕ್ರೋಧಾದಿ ಶತ್ರುಗಳೂ ಹುಟ್ಟಿಕೊಂಡರೂ ಸತ್ತೇಹೋಗುವರು. ಇನ್ನು ಹೊರಗಿನ ಶತ್ರುಗಳಾದರೋ ಹೇಗೆ ಉಳಿಯಬಲ್ಲರು ? ॥ ೧೧ ॥

**ಹಿರಣ್ಯಕಶಿಪು ಹೇಳಿದನು** – ಎಲವೋ ಮಂದಬುದ್ಧಿಯೇ ! ನಿನ್ನ ಬೊಗಳುವಿಕೆಯು ಅತಿಯಾಯಿತು. ಈಗ ನೀನು ಸಾಯಲು

ಯಸ್ತ್ವಯಾ ಮಂದಭಾಗ್ಯೋಕ್ತೋ ಮದನ್ಯೋ ಜಗದೀಶ್ವರಃ ।
ಕ್ವಾಸೌ ಯದಿ ಸ ಸರ್ವತ್ರ ಕಸ್ಮಾತ್ಸ್ತಂಭೇ ನ ದೃಶ್ಯತೇ
॥ ೧೩ ॥

ಸೋಽಹಂ ವಿಕತ್ಥಮಾನಸ್ಯ ಶಿರಃ ಕಾಯಾದ್ಧರಾಮಿ ತೇ ।
ಗೋಪಾಯೇತ ಹರಿಸ್ತ್ವಾದ್ಯ ಯಸ್ತೇ ಶರಣಮೀಪ್ಸಿತಮ್
॥ ೧೪ ॥

ಏವಂ ದುರುಕ್ತೈರ್ಮುಹುರರ್ದಯನ್ರುಷಾ
ಸುತಂ ಮಹಾಭಾಗವತಂ, ಮಹಾಸುರಃ ।
ಖಡ್ಗಂ ಪ್ರಗೃಹ್ಯೋತ್ಪತಿತೋ ವರಾಸನಾತ್
ಸ್ತಂಭಂ ತತಾಡಾತಿಬಲಃ ಸ್ವಮುಷ್ಟಿನಾ ॥ ೧೫ ॥

ತದೈವ ತಸ್ಮಿನ್ನಿನದೋಽತಿಭೀಷಣೋ
ಬಭೂವ ಯೇನಾಂಡಕಟಾಹಮಸ್ಫುಟತ್ ।
ಯಂ ವೈ ಸ್ವಧಿಷ್ಣ್ಯೋಪಗತಂ ತ್ವಜಾದಯಃ
ಶ್ರುತ್ವಾ ಸ್ವಧಾಮಾಪ್ಯಯಮಂಗ ಮೇನಿರೇ ॥ ೧೬ ॥

ಸ ವಿಕ್ರಮನ್ಪುತ್ರವಧೇಪ್ಸುರೋಜಸಾ
ನಿಶಮ್ಯ ನಿರ್ಹ್ರಾದಮಪೂರ್ವಮದ್ಭುತಮ್ ।
ಅಂತಃ ಸಭಾಯಾಂ ನ ದದರ್ಶ ತತ್ಪದಂ
ವಿತತ್ರಸುರ್ಯೇನ ಸುರಾರಿಯೂಥಪಾಃ ॥ ೧೭ ॥

ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ
ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।
ಅದೃಶ್ಯತಾತ್ಯದ್ಭುತರೂಪಮುದ್ವಹನ್
ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್ ॥ ೧೮ ॥

ಸ ಸತ್ತ್ವಮೇನಂ ಪರಿತೋಽಪಿ ಪಶ್ಯನ್
ಸ್ತಂಭಸ್ಯ ಮಧ್ಯಾದನು ನಿರ್ಜಿಹಾನಮ್ ।
ನಾಯಂ ಮೃಗೋ ನಾಪಿ ನರೋ ವಿಚಿತ್ರ-
ಮಹೋ ಕಿಮೇತನ್ನೃಮೃಗೇಂದ್ರರೂಪಮ್ ॥ ೧೯ ॥

ಮೀಮಾಂಸಮಾನಸ್ಯ ಸಮುತ್ಥಿತೋಽಗ್ರತೋ
ನೃಸಿಂಹರೂಪಸ್ತದಲಂ ಭಯಾನಕಮ್ ।
ಪ್ರತಪ್ತಚಾಮೀಕರಚಂಡಲೋಚನಂ
ಸ್ಫುರತ್ಸಟಾಕೇಸರಜೃಂಭಿತಾನನಮ್ ॥ ೨೦ ॥

ಬಯಸುತ್ತಿರುವುದು ಸ್ಪಷ್ಟವಾಯಿತು. ಏಕೆಂದರೆ ಸಾಯಲು ಬಯಸುವವನೇ ಇಂತಹ ತಲೆ-ಬುಡವಿಲ್ಲದ ಮಾತುಗಳನ್ನು ಗಳಹುತ್ತಿರುತ್ತಾರೆ. ॥ ೧೨ ॥ ಎಲೈ ಮಂದಭಾಗ್ಯನೇ! ನನಗಿಂತಲೂ ಬೇರೆ ಇನ್ನಾವನೋ ಒಬ್ಬ ಜಗದೀಶ್ವರನಿರುವನೆಂದು ನೀನು ಹೇಳಿದೆಯಲ್ಲ! ಆ ಜಗದೀಶ್ವರನು ಎಲ್ಲಿದ್ದಾನೆ? ಅವನು ಎಲ್ಲೆಲ್ಲಿಯೂ ಇರುವನೇ? ಹಾಗಾದರೆ ಈ ಕಂಬದಲ್ಲಿ ಏಕೆ ಕಾಣಿಸುತ್ತಿಲ್ಲ? ॥ ೧೩ ॥ ಸರಿ, ನಿನಗೆ ಈ ಕಂಬದಲ್ಲಿ ಕಾಣಿಸುತ್ತಿರುವನೇ? ಎಲವೋ! ನೀನು ಏಕೆ ಹೀಗೆ ಜಂಬ ಕೊಚ್ಚಿಕೊಳ್ಳುವೆ,. ನಾನು ಈಗೀಂದೀಗಲೇ ನಿನ್ನ ತಲೆಯನ್ನು ದೇಹದಿಂದ ಬೇರ್ಪಡಿಸುವೆನು. ನಿನಗೆ ಸರ್ವಸ್ವನಾದ ನಿನ್ನ ಅದ್ಭುತ ಭರವಸೆಗೆ ಪಾತ್ರನಾದ ಆ ಹರಿಯು ಹೇಗೆ ನಿನ್ನನ್ನು ಕಾಪಾಡುತ್ತಾನೋ ನೋಡೋಣ. ॥ ೧೪ ॥ ಹೀಗೆ ಆ ಮಹಾಬಲಶಾಲಿಯಾದ ದೈತ್ಯನು ಭಾಗವತೋತ್ತಮನಾದ ಪ್ರಹ್ಲಾದನನ್ನು ಕೋಪಾವೇಶದಿಂದ ಪದೇ-ಪದೇ ಜರೆಯುತ್ತಾ ಖಡ್ಗವನ್ನು ಎತ್ತಿಕೊಂಡು ಸಿಂಹಾಸನದಿಂದ ಮೇಲಕ್ಕೆ ನೆಗೆದು ಕಂಬವನ್ನು ಮುಷ್ಟಿಯಿಂದ ಜೋರಾಗಿ ಗುದ್ದಿದನು. ॥ ೧೫ ॥ ಒಡನೆಯೇ ಅಲ್ಲಿ ಇಡೀ ಬ್ರಹ್ಮಾಂಡವೇ ಒಡೆದುಹೋಗುತ್ತಿದೆಯೋ ಎಂಬಂತೆ ಭಯಂಕರವಾದ ಒಂದು ಶಬ್ದವು ಕೇಳಿಬಂತು. ಆ ಧ್ವನಿಯು ಲೋಕಪಾಲಕರ ಲೋಕಗಳಿಗೆ ತಲುಪಿದಾಗ ಅದನ್ನು ಕೇಳಿ ಬ್ರಹ್ಮಾದಿಗಳು ತಮ್ಮ ಲೋಕಗಳ ಪ್ರಳಯವೇ ಆಗುತ್ತಿದೆಯೋ ಎಂದು ಭಾವಿಸಿದರು. ॥ ೧೬ ॥ ಹಿರಣ್ಯಕಶಿಪು ಪ್ರಹ್ಲಾದನನ್ನು ಕೊಂದುಹಾಕಲೆಂದೇ ಭರ್ರನೇ ಚಿಮ್ಮಿದನು. ಆದರೂ ದೈತ್ಯಸೇನಾಪತಿಗಳನ್ನೂ ಭಯದಿಂದ ನಡುಗಿಸುತ್ತಿದ್ದ ಆ ಅಪೂರ್ವ, ಅದ್ಭುತ ಶಬ್ದವನ್ನು ಕೇಳಿ ಆತನು ಚಕಿತನಾಗಿ 'ಯಾರು ಹೀಗೆ ಗರ್ಜಿಸುತ್ತಿದ್ದಾರೆ?' ಎಂಬುದನ್ನು ನೋಡ ತೊಡಗಿದನು. ಆದರೆ ಅವನಿಗೆ ಸಭೆಯಲ್ಲಿ ಯಾರೂ ಕಾಣಿಸಲಿಲ್ಲ. ॥ ೧೭ ॥

ಆಗಲೇ ತನ್ನ ಭೃತ್ಯನಾದ ಪ್ರಹ್ಲಾದನ ಮತ್ತು ಬ್ರಹ್ಮದೇವರ ಮಾತುಗಳನ್ನು ಸತ್ಯಗೊಳಿಸಲಿಕ್ಕಾಗಿ ಹಾಗೂ ಸಮಸ್ತ ಭೂತಗಳಲ್ಲಿ ವ್ಯಾಪಿಸಿರುವೆನೆಂಬುದನ್ನು ತೋರಿಸಲಿಕ್ಕಾಗಿ ಸಭೆಯಲ್ಲಿದ್ದ ಆ ಕಂಬದಲ್ಲಿ ಅತ್ಯದ್ಭುತವಾದ ರೂಪದಿಂದ ಭಗವಂತನು ಪ್ರಕಟಗೊಂಡನು. ಆ ರೂಪವು ಕೇವಲ ಮೃಗದಂತಿಲ್ಲ, ಕೇವಲ ಮನುಷ್ಯನೆಂದೂ ಹೇಳುವಂತಿಲ್ಲ. ॥ ೧೮ ॥ ಹಿರಣ್ಯಕಶಿಪು ಶಬ್ದಮಾಡುವವನು ಯಾರು ಎಂದು ಸುತ್ತಲೂ ನೋಡುತ್ತಿರುವಾಗಲೇ ಕಂಬದಿಂದ ಹೊರಬಂದ ಆ ಅದ್ಭುತ ಪ್ರಾಣಿಯನ್ನು ನೋಡಿದನು. ಓಹೋ! ಇದೆಂತಹ ವಿಚಿತ್ರಪ್ರಾಣಿ? ಇದು ಮನುಷ್ಯನೂ ಅಲ್ಲ, ಮೃಗವೂ ಅಲ್ಲ, ಮತ್ತೆ ಈ ನರ-ಸಿಂಹ ರೂಪದಲ್ಲಿರುವ ಅಲೌಕಿಕ ಜೀವವು ಯಾವುದು? ಎಂದು ಯೋಚಿಸತೊಡಗಿದನು. ॥ ೧೯ ॥ ಹೀಗೆ ಚಿಂತೆಯಲ್ಲಿ ಮುಳುಗಿದ್ದಾಗಲೇ ಹಿರಣ್ಯಕಶಿಪುವಿನ ಎದುರಿಗೇ ನರಸಿಂಹ ಭಗವಂತನು ಬಂದುನಿಂತನು. ಭಗವಂತನ ಆ ರೂಪವು ಭಯಂಕರವಾಗಿತ್ತು. ಅದರಲ್ಲಿ ಕಾದ ಚಿನ್ನದಂತೆ ಕೆಂಪು-ಹಳದಿ ಮಿಶ್ರವಾದ ಭೀಕರವಾದ ಕಣ್ಣುಗಳು, ಅಕಳಿಸುತ್ತಿದ್ದುದರಿಂದ ಕೇಸರಗಳು ಕೆದರಿ ಅತ್ತ-ಇತ್ತ ಅಲೆಗಳಂತೆ ಆಡುತ್ತಿದ್ದವು. ॥ ೨೦ ॥ ಕರಾಳವಾದ ಕೋರೆದಾಡೆಗಳು, ಕತ್ತಿಯಂತೆ ಝಳ

ಕರಾಲದಂಷ್ಟ್ರಂ ಕರವಾಲಚಂಚಲ-
ಕ್ಷುರಾಂತಜಿಹ್ವಂ ಭ್ರುಕುಟೀಮುಖೋಲ್ಬಣಮ್ ।
ಸ್ತಬ್ಧೋರ್ಧ್ವಕರ್ಣಂ ಗಿರಿಕಂದರಾದ್ಭುತ-
ವ್ಯಾತ್ತಾಸ್ಯನಾಸಂ ಹನುಭೇದಭೀಷಣಮ್ ॥ ೨೦ ॥

ದಿವಿಸ್ಪೃಶತ್ಕಾಯಮದೀರ್ಘಪೀವರ-
ಗ್ರೀವೋರುವಕ್ಷಃಸ್ಥಲಮಲ್ಪಮಧ್ಯಮಮ್ ।
ಚಂದ್ರಾಂಶುಗೌರೈಶ್ಛುರಿತಂ ತನೂರುಹೈ-
ರ್ವಿಷ್ವಗ್ಭುಜಾನೀಕಶತಂ ನಖಾಯುಧಮ್ ॥ ೨೨ ॥

ದುರಾಸದಂ ಸರ್ವನಿಜೇತರಾಯುಧ-
ಪ್ರವೇಕವಿದ್ರಾವಿತದೈತ್ಯದಾನವಮ್ ।
ಪ್ರಾಯೇಣ ಮೇಽಯಂ ಹರಿಣೋರುಮಾಯಿನಾ
ವಧಃ ಸ್ಮೃತೋಽನೇನ ಸಮುದ್ಯತೇನ ಕಿಮ್ ॥ ೨೩ ॥

ಏವಂ ಬ್ರುವಂಸ್ತ್ವಭ್ಯಪತದ್ಗದಾಯುಧೋ
ನದನ್ನೃಸಿಂಹಂ ಪ್ರತಿ ದೈತ್ಯಕುಂಜರಃ ।
ಅಲಕ್ಷಿತೋಽಗ್ನೌ ಪತಿತಃ ಪತಂಗಮೋ
ಯಥಾ ನೃಸಿಂಹೌಜಸಿ ಸೋಽಸುರಸ್ತದಾ ॥ ೨೪ ॥

ನ ತದ್ವಿಚಿತ್ರಂ ಖಲು ಸತ್ತ್ವಧಾಮನಿ
ಸ್ವತೇಜಸಾ ಯೋ ನು ಪುರಾಪಿಬತ್ತಮಃ ।
ತತೋಽಭಿಪದ್ಯಾಭ್ಯಹನನ್ಮಹಾಸುರೋ
ರುಷಾ ನೃಸಿಂಹಂ ಗದಯೋರುವೇಗಯಾ ॥ ೨೫ ॥

ತಂ ವಿಕ್ರಮಂತಂ ಸಗದಂ ಗದಾಧರೋ
ಮಹೋರಗಂ ತಾರ್ಕ್ಷ್ಯಸುತೋ ಯಥಾಗ್ರಹೀತ್ ।
ಸ ತಸ್ಯ ಹಸ್ತೋತ್ಕಲಿತಸ್ತದಾಸುರೋ
ವಿಕ್ರೀಡತೋ ಯದ್ವದಹಿರ್ಗರುತ್ಮತಃ ॥ ೨೬ ॥

ಅಸಾಧ್ವಮನ್ಯಂತ ಹೃತೌಕಸೋಽಮರಾ
ಘನಚ್ಛದಾ ಭಾರತ ಸರ್ವಧಿಷ್ಣ್ಯಪಾಃ ।
ತಂ ಮನ್ಯಮಾನೋ ನಿಜವೀರ್ಯಶಂಕಿತಂ
ಯದ್ಧಸ್ತಮುಕ್ತೋ ನೃಹರಿಂ ಮಹಾಸುರಃ ।
ಪುನಸ್ತಮಾಸಜ್ಜತ ಖಡ್ಗಚರ್ಮಣೀ
ಪ್ರಗೃಹ್ಯ ವೇಗೇನ ಜಿತಶ್ರಮೋ ಮೃಧೇ ॥ ೨೭ ॥

ಹಿಸುತ್ತಾ ಚೂರಿಯ ಅಲಗಿನಂತೆ ತೀಕ್ಷ್ಣವಾದ ನಾಲಿಗೆಯಿತ್ತು. ಓರೆಯಾದ ಹುಬ್ಬುಗಳಿಂದ ಅವನ ಮುಖವು ಇನ್ನೂ ಭಯಾನಕವಾಗಿತ್ತು. ನಿಶ್ಚಲವಾಗಿ ಮೇಲಕ್ಕೆ ನಿಮಿರಿನಿಂತ ಕಿವಿಗಳು, ಅರಳಿದ ಮೂಗಿನ ಹೊಳ್ಳೆಗಳು, ತೆರೆದಿರುವ ಬಾಯಿಯು ಪರ್ವತ ಗುಹೆಯಂತೆ ಅದ್ಭುತವಾಗಿ ಕಾಣುತ್ತಿತ್ತು. ಸೀಳಿದ ಕೆನ್ನೆಗಳಿಂದ ಅವನ ರೂಪವು ರೌದ್ರತಮವಾಗಿತ್ತು. ॥ ೨೦ ॥ ಸ್ವರ್ಗವನ್ನು ಮುಟ್ಟುತ್ತಿದ್ದ ವಿಶಾಲವಾದ ದೇಹ, ಉದ್ದವಾಗಿ ಪುಷ್ಟವಾದ ಕತ್ತು, ಅಗಲವಾದ ಎದೆ, ತೆಳುವಾದ ನಡು, ಚಂದ್ರಕಿರಣಗಳಂತೆ ಶರೀರದ ಮೇಲೆ ಥಳಥಳಿಸುತ್ತಿದ್ದ ಬಿಳಿಯ ಕೂದಲು, ಎಲ್ಲ ಕಡೆಗಳಲ್ಲಿಯೂ ಹರಡಿಕೊಂಡಿದ್ದ ನೂರಾರು ಭುಜಗಳು ಮತ್ತು ಅವುಗಳಲ್ಲಿ ಆಯುಧಗಳಂತೆ ಕಂಗೊಳಿಸುತ್ತಿದ್ದ ಉಗುರುಗಳು ಇದ್ದವು. ॥ ೨೨ ॥ ಆತನ ಬಳಿಯಲ್ಲಿ ಸುಳಿಯುವುದಕ್ಕೂ ಯಾರಿಗೂ ಧೈರ್ಯವು ಬರುತ್ತಿರಲಿಲ್ಲ. ಸುದರ್ಶನ ಚಕ್ರದಿಂದ ಮತ್ತು ವಜ್ರವೇ ಮುಂತಾದ ಇತರ ಶ್ರೇಷ್ಠ ಆಯುಧಗಳಿಂದ ಅವನು ಎಲ್ಲ ದೈತ್ಯ-ದಾನವರನ್ನು ಓಡಿಸಿಬಿಟ್ಟನು. ಹಿರಣ್ಯಕಶಿಪು ಯೋಚಿಸತೊಡಗಿದನು – ಮಹಾಮಾಯಾವಿಯಾದ ವಿಷ್ಣುವೇ ನನ್ನನ್ನು ಕೊಂದುಹಾಕಲು ಈ ರೂಪ-ವೇಷದಿಂದ ಬಂದಿರಲಿಕ್ಕಿಲ್ಲವಲ್ಲ! ಏನಾದರೇನಂತೆ, ಈತನ ಯಾವ ಆಟವೂ ನನ್ನ ಬಳಿಯಲ್ಲಿ ನಡೆಯಲಿಕ್ಕಿಲ್ಲ. ॥ ೨೩ ॥

ಹೀಗೆ ಅಂದುಕೊಂಡು ಸಿಂಹಗರ್ಜನೆಯನ್ನು ಮಾಡುತ್ತಾ ದೈತ್ಯರಾಜನಾದ ಹಿರಣ್ಯಕಶಿಪು ಕೈಯಲ್ಲಿ ಗದೆಯನ್ನೆತ್ತಿಕೊಂಡು ಶ್ರೀನರಸಿಂಹದೇವರ ಮೇಲೆ ಎಗರಿಬಿದ್ದನು. ಆದರೆ ಬೆಂಕಿಯನ್ನು ಆಕ್ರಮಿಸಲು ಹೋದ ಮಿಡತೆಯು ಅದರಲ್ಲಿ ಬಿದ್ದು ಅದೃಶ್ಯವಾಗುವಂತೆಯೇ ಭಗವಂತನಾದ ನರಸಿಂಹನನ್ನು ಮುತ್ತಲು ಹೋದ ಅಸುರನು ಸ್ವಾಮಿಯ ತೇಜಸ್ಸಿನಲ್ಲಿ ಮುಚ್ಚಿ ಹೋದನು. ॥ ೨೪ ॥ ಸಮಸ್ತ ಶಕ್ತಿಗಳಿಗೂ, ತೇಜಸ್ಸುಗಳಿಗೂ ಆಶ್ರಯನಾಗಿರುವ ಭಗವಂತನ ಸಂಬಂಧದಲ್ಲಿ ಇದು ಆಶ್ಚರ್ಯದ ವಿಷಯವಲ್ಲ. ಏಕೆಂದರೆ, ಸೃಷ್ಟಿಯ ಪ್ರಾರಂಭದಲ್ಲಿ ಅವನು ತನ್ನ ತೇಜಸ್ಸಿನಿಂದ ಪ್ರಳಯಕ್ಕೆ ಕಾರಣವಾದ ತಮೋಗುಣ ರೂಪವಾದ ಘೋರ ಅಂಧಕಾರವನ್ನು ನುಂಗಿಹಾಕಿದ್ದನು. ಅನಂತರ ಆ ದೈತ್ಯನು ಅತಿಕ್ರೋಧದಿಂದ ದೇವನ ಬಳಿಗೆ ನೆಗೆದು, ಗದೆಯನ್ನು ಜೋರಾಗಿ ತಿರುಗಿಸುತ್ತಾ ಬಿರುಸಿನಿಂದ ನರಸಿಂಹ ಭಗವಂತನನ್ನು ಹೊಡೆದನು. ॥ ೨೫ ॥ ಆದರೆ ಭಗವಂತನು – ದೈತ್ಯನು ಹೊಡೆಯುತ್ತಿರುವಂತೆಯೇ ಗರುಡನು ಸರ್ಪವನ್ನು ಹಿಡಿದುಕೊಳ್ಳುವಂತೆ ಭಗವಂತನು ಗದೆಯ ಸಹಿತ ಆತನನ್ನು ಹಿಡಿದುಕೊಂಡನು. ದೇವನು ದೈತ್ಯನೊಡನೆ ಆಟವಾಡ ತೊಡಗಿದಾಗ ಅವನು – ಆಟವಾಡುತ್ತಿರುವ ಗರುಡನ ಹಿಡಿತದಿಂದ ಹಾವು ತಪ್ಪಿಸಿಕೊಳ್ಳುವಂತೆ ಭಗವಂತನ ಕೈಯಿಂದ ತನ್ನನ್ನು ಬಿಡಿಸಿಕೊಂಡುಬಿಟ್ಟನು. ॥ ೨೬ ॥ ಯುಧಿಷ್ಠಿರನೇ! ಆ ಸಮಯದಲ್ಲಿ ಲೋಕಪಾಲಕರೆಲ್ಲರೂ ಮೋಡಗಳಲ್ಲಿ ಅವಿತುಕೊಂಡು ಈ ಯುದ್ಧವನ್ನು ನೋಡುತ್ತಿದ್ದರು. ಅವರ ಸ್ವರ್ಗವನ್ನಾದರೋ ಹಿರಣ್ಯಕಶಿಪು ಮೊದಲೇ ಕಸಿದುಕೊಂಡಿದ್ದನು. ದೈತ್ಯನು ಭಗವಂತನ ಕೈಯಿಂದ ಜಾರಿಹೋದುದನ್ನು ನೋಡಿದಾಗ ಅವರು ಇನ್ನೂ ಹೆದರಿದರು. ಹಿರಣ್ಯಕಶಿಪುವೂ ನರಸಿಂಹನು

ತಂ ಶ್ಯೇನವೇಗಂ ಶತಚಂದ್ರವರ್ತ್ಮಭಿ-
ಶ್ಚರಂತಮಚ್ಛಿದ್ರಮುಪರ್ಯಧೋ ಹರಿಃ ।
ಕೃತ್ವಾಟ್ಟಹಾಸಂ ಖರಮುತ್ಸ್ವನೋಲ್ಬಣಂ
ನಿಮೀಲಿತಾಕ್ಷಂ ಜಗೃಹೇ ಮಹಾಜವಃ ॥ ೨೮ ॥

ವಿಷ್ವಕ್ಸ್ಫುರಂತಂ ಗ್ರಹಣಾತುರಂ ಹರಿ-
ರ್ವ್ಯಾಲೋ ಯಥಾಽಽಖುಂ ಕುಲಿಶಾಕ್ಷತತ್ವಚಮ್ ।
ದ್ವಾರ್ಯೂರ ಆಪಾತ್ಯ ದದಾರ ಲೀಲಯಾ
ನಖೈರ್ಯಥಾಹಿಂ ಗರುಡೋ ಮಹಾವಿಷಮ್ ॥ ೨೯ ॥

ಸಂರಂಭದುಷ್ಪ್ರೇಕ್ಷ್ಯಕರಾಲಲೋಚನೋ
ವ್ಯಾತ್ತಾನನಾಂತಂ ವಿಲಿಹನ್ಸ್ವಜಿಹ್ವಯಾ ।
ಅಸೃಗ್ಲವಾಕ್ತಾರುಣಕೇಸರಾನನೋ
ಯಥಾಂತ್ರಮಾಲೀ ದ್ವಿಪಹತ್ಯಯಾ ಹರಿಃ ॥ ೩೦ ॥

ನಖಾಂಕುರೋತ್ಪಾಟಿತಹೃತ್ಸರೋರುಹಂ
ವಿಸೃಜ್ಯ ತಸ್ಯಾನುಚರಾನುದಾಯುಧಾನ್ ।
ಅಹನ್ಸಮಂತಾನ್ನಖಶಸ್ತ್ರಪಾರ್ಷ್ಣಿಭಿ-
ರ್ದೋರ್ದಂಡಯೂಥೋಽನುಪಥಾನ್ಸಹಸ್ರಶಃ ॥ ೩೧ ॥

ಸಟಾವಧೂತಾ ಜಲದಾಃ ಪರಾಪತನ್-
ಗ್ರಹಾಶ್ಚ ತದ್ದೃಷ್ಟಿವಿಮುಷ್ಟರೋಚಿಷಃ ।
ಅಂಭೋಧಯಃ ಶ್ವಾಸಹತಾ ವಿಚುಕ್ಷುಭು-
ರ್ನಿರ್ಹ್ರಾದಭೀತಾ ದಿಗಿಭಾ ವಿಚುಕ್ರುಶುಃ ॥ ೩೨ ॥

ದ್ಯೌಸ್ತತ್ಸಟೋತ್ಕ್ಷಿಪ್ತವಿಮಾನಸಂಕುಲಾ
ಪ್ರೋತ್ಸರ್ಪತ ಕ್ಷ್ಮಾ ಚ ಪದಾತಿಪೀಡಿತಾ ।
ಶೈಲಾಃ ಸಮುತ್ಪೇತುರಮುಷ್ಯ ರಂಹಸಾ
ತತ್ತೇಜಸಾ ಖಂ ಕಕುಭೋ ನ ರೇಜಿರೇ ॥ ೩೩ ॥

ನನ್ನ ಬಲವೀರ್ಯದಿಂದ ಹೆದರಿಯೇ ನನ್ನನ್ನು ತನ್ನ ಕೈಯಿಂದ ಬಿಟ್ಟುಬಿಟ್ಟನು ಎಂದೇ ತಿಳಿದನು. ಹೀಗೆ ವಿಚಾರಮಾಡಿದ್ದರಿಂದ ಅವನ ಬಳಲಿಕೆ ದೂರವಾಯಿತು. ಮತ್ತೆ ಅವನು ಯುದ್ಧಕ್ಕಾಗಿ ಕತ್ತಿ-ಗುರಾಣಿಗಳನ್ನು ಹಿಡಿದುಕೊಂಡು ನರಸಿಂಹದೇವರ ಕಡೆಗೆ ನುಗ್ಗಿದನು. ॥ ೨೭ ॥ ಆಗ ಅವನು ಗಿಡುಗಿನಂತೆ ಅತಿವೇಗ ದಿಂದ ಮೇಲೆ-ಕೆಳಗೆ ಕತ್ತಿ-ಗುರಾಣಿಗಳನ್ನು ತಿರುಗಿಸುವ ವರಸೆ ಗಳಿಂದ ಶತ್ರುವು ತನ್ನ ಮೇಲೆ ಆಕ್ರಮಣ ಮಾಡುವುದಕ್ಕೆ ಅವಕಾಶವೇ ಸಿಕ್ಕದಂತೆ ಮಾಡುತ್ತಿದ್ದನು. ಆಗ ಭಗವಂತನು ಗಟ್ಟಿ ಯಾಗಿ ಪ್ರಚಂಡ ಮತ್ತು ಭಯಂಕರ ಅಟ್ಟಹಾಸ ಮಾಡಿದನು. ಇದರಿಂದ ಹಿರಣ್ಯಕಶಿಪುವಿನ ಕಣ್ಣುಗಳು ಮುಚ್ಚಿಹೋದುವು. ಮತ್ತೆ ಅತಿರಭಸದಿಂದ ಜಿಗಿದು ಸರ್ಪವು ಇಲಿಯನ್ನು ಹಿಡಿಯುವಂತೆ ಭಗವಂತನು ಆತನನ್ನು ಹಿಡಿದು ಕೊಂಡನು. ವಜ್ರಾಯುಧದ ಏಟನಿಂದಲೂ ಯಾವಾತನ ಚರ್ಮವು ತರಚಲಿಲ್ಲವೋ ಅಂತಹ ಹಿರಣ್ಯಕಶಿಪು ಈಗ ಶ್ರೀನರಸಿಂಹನ ಪಂಜದಿಂದ ತನ್ನನ್ನು ಬಿಡಿಸಿಕೊಳ್ಳಲು ಚಡಪಡಿಸತೊಡಗಿದನು. ಭಗವಂತನು ಆತನನ್ನು ಸಭೆಯ ದ್ವಾರದ ಬಳಿಗೆ ಎಳೆದುಕೊಂಡು ಹೋಗಿ ಹೊಸ್ತಿಲಮೇಲೆ ಕುಳಿತು ತನ್ನ ತೊಡೆಯ ಮೇಲೆ ಕೆಡವಿಕೊಂಡು ಗರುಡನು ಮಹಾವಿಷಧಾರಿಯಾದ ಸರ್ಪವನ್ನು ಸೀಳಿಹಾಕುವಂತೆ – ಶ್ರೀನರ ಸಿಂಹನು ಲೀಲಾಜಾಲವಾಗಿ ತನ್ನ ಉಗುರುಗಳಿಂದಲೇ ಅವನ ಉದರವನ್ನು ಬಗೆದು ಸೀಳಿ ಹಾಕಿದನು. ॥ ೨೮-೨೯ ॥ ಆ ಸಮಯದಲ್ಲಿ ಅವನ ಕ್ರೋಧ ತುಂಬಿದ ವಿಕರಾಳ ಕಣ್ಣುಗಳ ಕಡೆಗೆ ನೋಡಲಾಗುತ್ತಿರಲಿಲ್ಲ. ಅವನು ಚಾಚಿದ ನಾಲಿಗೆಯಿಂದ ತನ್ನ ತೆರೆದ ಬಾಯಿಯ ಎರಡೂ ಮೂಲೆಗಳನ್ನೂ ನೆಕ್ಕುತ್ತಿದ್ದನು. ರಕ್ತದ ಕಣಗಳಿಂದ ಅವನ ಬಾಯಿಯು ಮತ್ತು ಕತ್ತಿನ ಕೇಸರಗಳು ಕೆಂಪಗಾಗಿದ್ದವು. ಆನೆಯನ್ನು ಕೊಂದು ಅದರ ಕರುಳಬಳ್ಳಿ ಯನ್ನು ಕುತ್ತಿಗೆಗೆ ಹಾಕಿಕೊಂಡ ಸಿಂಹದಂತೆ – ಆ ನರಸಿಂಹನು ರುದ್ರ ಸೌಂದರ್ಯದಿಂದ ಕಂಗೊಳಿಸುತ್ತಿದ್ದನು. ॥ ೩೦ ॥ ಅವನು ತನ್ನ ತೀಕ್ಷ್ಣವಾದ ಉಗುರುಗಳಿಂದ ಹಿರಣ್ಯಕಶಿಪುವಿನ ಹೃದಯ ವನ್ನು ಕಿತ್ತು ನೆಲಕ್ಕೆ ಒಗೆದುಬಿಟ್ಟನು. ಆಗ ಸಾವಿರಾರು ದೈತ್ಯ-ದಾನವರು ಕೈಗಳಲ್ಲಿ ಶಸ್ತ್ರಗಳನ್ನು ಹಿಡಿದುಕೊಂಡು ಭಗವಂತನ ಮೇಲೆ ಪ್ರಹಾರ ಮಾಡತೊಡಗಿದರು. ಆದರೆ ಭಗವಂತನು ತನ್ನ ಭುಜಗಳೆಂಬ ಸೈನ್ಯದಿಂದಲೂ, ಒದೆತಗಳಿಂದಲೂ, ಉಗುರು ಗಳೆಂಬ ಶಸ್ತ್ರಗಳಿಂದಲೂ ನಾಲ್ಕೂ ಕಡೆಗಳಲ್ಲಿಯೂ ಅವರನ್ನು ಕೊಂದು ಹಾಕಿದನು. ॥ ೩೧ ॥

ಯುಧಿಷ್ಠಿರನೇ! ಆಗ ಭಗವಾನ್ ನರಸಿಂಹನ ಕತ್ತಿನ ಕೇಸರ ಗಳ ಅಪ್ಪಳಿಕೆಯಿಂದ ಮೋಡಗಳು ಚೆದುರಿಹೋದುವು. ಅವನ ಕಣ್ಣುಗಳ ಜ್ವಾಲೆಗಳಿಂದ ಸೂರ್ಯಾದಿ ಗ್ರಹರ ತೇಜಸ್ಸು ಮಂಕಾ ಯಿತು. ಅವನ ಉಸಿರಾಟದ ಹೊಡೆತದಿಂದ ಸಮುದ್ರಗಳು ಕ್ಷೋಭೆಗೊಂಡವು. ಅವನ ಸಿಂಹನಾದಕ್ಕೆ ಹೆದರಿ ದಿಗ್ಗಜಗಳು ಘೀಳಿಟ್ಟವು. ॥ ೩೨ ॥ ಅವನ ಕೇಸರಗಳಿಗೆ ಢಿಕ್ಕಿ ಹೊಡೆದು ದೇವತೆಗಳ ವಿಮಾನಗಳು ಅಸ್ತ-ವ್ಯಸ್ತವಾದುವು. ಸ್ವರ್ಗವು ನಡುಗಿಹೋಯಿತು. ಅವನ ಪಾದಾಘಾತದಿಂದ ಭೂಕಂಪ ಉಂಟಾಯಿತು. ವೇಗದಿಂದ ಪರ್ವತಗಳು ಹಾರತೊಡಗಿದವು.

ತತಃ ಸಭಾಯಾಮುಪವಿಷ್ಟಮುತ್ತಮೇ
ನೃಪಾಸನೇ ಸಂಭೃತತೇಜಸಂ ವಿಭುಮ್ ।
ಅಲಕ್ಷಿತದ್ವೈರಥಮತ್ಯಮರ್ಷಣಂ
ಪ್ರಚಂಡ ವಕ್ತ್ರಂ ನ ಬಭಾಜ ಕಶ್ಚನ ॥ ೩೪ ॥

ನಿಶಮ್ಯ ಲೋಕತ್ರಯಮಸ್ತಕಜ್ವರಂ
ತಮಾದಿದೈತ್ಯಂ ಹರಿಣಾ ಹತಂ ಮೃಧೇ ।
ಪ್ರಹರ್ಷವೇಗೋತ್ಕಲಿತಾನನಾ ಮುಹುಃ
ಪ್ರಸೂನವರ್ಷೈರ್ವವೃಷುಃ ಸುರಸ್ತ್ರಿಯಃ ॥ ೩೫ ॥

ತದಾ ವಿಮಾನಾವಲಿಭಿರ್ನಭಸ್ತಲಂ
ದಿದೃಕ್ಷತಾಂ ಸಂಕುಲಮಾಸ ನಾಕಿನಾಮ್ ।
ಸುರಾನಕಾ ದುಂದುಭಯೋಽಥ ಜಘ್ನಿರೇ
ಗಂಧರ್ವಮುಖ್ಯಾ ನನೃತುರ್ಜಗುಃ ಸ್ತ್ರಿಯಃ ॥ ೩೬ ॥

ತತ್ರೋಪವ್ರಜ್ಯ ವಿಬುಧಾ ಬ್ರಹ್ಮೇಂದ್ರಗಿರಿಶಾದಯಃ ।
ಋಷಯಃ ಪಿತರಃ ಸಿದ್ಧಾ ವಿದ್ಯಾಧರಮಹೋರಗಾಃ ॥ ೩೭ ॥

ಮನವಃ ಪ್ರಜಾನಾಂ ಪತಯೋ ಗಂಧರ್ವಾಪ್ಸರಚಾರಣಾಃ ।
ಯಕ್ಷಾಃ ಕಿಂಪುರುಷಾಸ್ತಾತ ವೇತಾಲಾಃ ಸಿದ್ಧಕಿನ್ನರಾಃ ॥ ೩೮ ॥

ತೇ ವಿಷ್ಣು ಪಾರ್ಷದಾಃ ಸರ್ವೇ ಸುನಂದಕುಮುದಾದಯಃ ।
ಮೂರ್ಧ್ನಿ ಬದ್ಧಾಂಜಲಿಪುಟಾ ಆಸೀನಂ ತೀವ್ರತೇಜಸಮ್ ।
ಈಡಿರೇ ನರಶಾರ್ದೂಲಂ ನಾತಿದೂರಚರಾಃ ಪೃಥಕ್ ॥ ೩೯ ॥

ಬ್ರಹ್ಮೋವಾಚ

ನತೋಽಸ್ಮ್ಯನಂತಾಯ ದುರಂತಶಕ್ತಯೇ
ವಿಚಿತ್ರವೀರ್ಯಾಯ ಪವಿತ್ರಕರ್ಮಣೇ ।
ವಿಶ್ವಸ್ಯ ಸರ್ಗಸ್ಥಿತಿಸಂಯಮಾನ್ಗುಣೈಃ
ಸ್ವಲೀಲಯಾ ಸಂದಧತೇಽವ್ಯಯಾತ್ಮನೇ ॥ ೪೦ ॥

ಶ್ರೀರುದ್ರ ಉವಾಚ

ಕೋಪಕಾಲೋ ಯುಗಾಂತಸ್ತೇ
ಹತೋಽಯಮಸುರೋಽಲ್ಪಕಃ ।
ತತ್ಸುತಂ ಪಾಹ್ಯುಪಸೃತಂ
ಭಕ್ತಂ ತೇ ಭಕ್ತವತ್ಸಲ ॥ ೪೧ ॥

ಅವನ ತೇಜಸ್ಸಿನ ಮಿಂಚಿನಿಂದ ಆಕಾಶವೂ, ದಿಕ್ಕುಗಳೂ ಕಳೆಗುಂದಿ ಕತ್ತಲಾವರಿಸಿ ಕಾಣಿಸದೇ ಹೋದುವು. ॥ ೩೩ ॥ ಆ ಸಮಯದಲ್ಲಿ ನರಸಿಂಹ ಭಗವಂತನನ್ನು ಇದಿರಿಸುವವರು ಯಾರೂ ಕಂಡು ಬಂದಿಲ್ಲ. ಆದರೂ ಅವನ ಕ್ರೋಧವು ಇನ್ನೂ ಹೆಚ್ಚುತ್ತಲೇ ಇತ್ತು. ಅವನು ಹಿರಣ್ಯಕಶಿಪುವಿನ ರಾಜಸಭೆಯ ಎತ್ತರವಾದ ಸಿಂಹಾಸನದ ಮೇಲೆ ಹೋಗಿ ಕುಳಿತನು. ಆಗ ಅವನ ಅತ್ಯಂತ ತೇಜಃಪುಂಜ ಮತ್ತು ಕ್ರೋಧದಿಂದ ತುಂಬಿದ ಭಯಂಕರ ವದನವನ್ನು ಕಂಡು ಅವನ ಬಳಿಗೆ ಹೋಗಿ ಸೇವೆ ಮಾಡಲೂ ಯಾರಿಗೂ ಧೈರ್ಯಬರಲಿಲ್ಲ. ॥ ೩೪ ॥

ಯುಧಿಷ್ಠಿರನೇ! ಮೂರು ಲೋಕಗಳಿಗೂ ತಲೆನೋವಾಗಿದ್ದ ಆ ಆದಿದೈತ್ಯ ಹಿರಣ್ಯಕಶಿಪು ಯುದ್ಧದಲ್ಲಿ ಭಗವಂತನ ಕೈಯಿಂದ ಹತನಾದನೆಂಬ ಶುಭಸಮಾಚಾರವು ಸ್ವರ್ಗದ ದೇವಿಯರಿಗೆ ತಿಳಿದಾಗ ಆನಂದದಿಂದ ಅವರ ಮುಖಗಳು ಅರಳಿದವು. ಅವರು ಮತ್ತೆ-ಮತ್ತೆ ಭಗವಂತನ ಮೇಲೆ ಹೂವಿನ ಮಳೆಗರೆಯ ತೊಡಗಿದರು. ॥ ೩೫ ॥ ಭಗವಂತನ ದರ್ಶನಕ್ಕಾಗಿ ಬಂದ ದೇವತೆಗಳ ವಿಮಾನಗಳಿಂದ ಆಕಾಶವು ತುಂಬಿಹೋಯಿತು. ದೇವದುಂದುಭಿಗಳು ಮೊಳಗಿದವು. ಗಂಧರ್ವರು ಗಾನ ಮಾಡತೊಡಗಿದರು. ಅಪ್ಸರೆಯರು ನರ್ತನ ಮಾಡ ತೊಡಗಿದರು. ॥ ೩೬ ॥ ಅದೇ ಸಮಯಕ್ಕೆ ಬ್ರಹ್ಮದೇವರು, ಸ್ವಾಮಿ ಶಂಕರನು, ಇಂದ್ರಾದಿದೇವತೆಗಳೂ, ಋಷಿಗಳೂ, ಪಿತೃಗಳೂ, ಸಿದ್ಧರೂ, ವಿದ್ಯಾಧರರೂ, ಮಹಾನಾಗರೂ, ಮನುಗಳೂ, ಪ್ರಜಾಪತಿಗಳೂ, ಗಂಧರ್ವರೂ, ಅಪ್ಸರೆಯರೂ, ಚಾರಣರೂ, ಯಕ್ಷರೂ, ಕಿಂಪುರುಷರೂ, ಬೇತಾಳರೂ, ಸಿದ್ಧರೂ, ಕಿನ್ನರರೂ ಹಾಗೂ ಸುನಂದ-ಕುಮುದ ಮೊದಲಾದ ಭಗವಂತನ ಪಾರ್ಷದರೂ, ನರಸಿಂಹ ಭಗವಂತನ ಬಳಿಗೆ ಬಂದರು. ಅವರೆಲ್ಲರೂ ತಲೆಯಮೇಲೆ ಕೈಜೋಡಿಸಿಕೊಂಡು ಸಿಂಹಾಸನದ ಮೇಲೆ ಬೆಳಗುತ್ತಿದ್ದ ಅತ್ಯಂತ ತೇಜಸ್ವೀ ನರಸಿಂಹನನ್ನು ಸ್ವಲ್ಪ ದೂರದಿಂದಲೇ ಬೇರೆ-ಬೇರೆಯಾಗಿ ಸ್ತುತಿಸ ತೊಡಗಿದರು. ॥ ೩೭-೩೯॥

**ಬ್ರಹ್ಮದೇವರು ಹೇಳಿದರು** – ಪ್ರಭೋ! ನಿನ್ನ ಶಕ್ತಿಯ ಪಾರವನ್ನು ಕಾಣಲು ಸಾಧ್ಯವಿಲ್ಲದ ಅನಂತನಾದ ದೇವನಿಗೆ ನಮಸ್ಕಾರವು. ನಿನ್ನ ಪರಾಕ್ರಮವು ವಿಚಿತ್ರವಾಗಿದ್ದು ಕರ್ಮಗಳು ಪವಿತ್ರವಾಗಿವೆ. ಗುಣಗಳ ಮೂಲಕ ನೀನು ಲೀಲೆಯಿಂದಲೇ ಸಮಸ್ತ ವಿಶ್ವದ ಉತ್ಪತ್ತಿ , ಪಾಲನೆ, ಪ್ರಳಯಗಳನ್ನು ಯಥೋಚಿತವಾಗಿ ಮಾಡುತ್ತಿದ್ದರೂ, ನೀನು ಅವುಗಳೊಂದಿಗೆ ಯಾವ ಸಂಬಂಧವನ್ನೂ ಇರಿಸಿಕೊಳ್ಳುವುದಿಲ್ಲ. ಸ್ವಯಂ ನಿರ್ವಿಕಾರನಾಗಿರುವೆ. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೪೦ ॥

**ಶ್ರೀರುದ್ರದೇವರು ಹೇಳಿದರು** – ನಿನ್ನ ಕೋಪವನ್ನು ಉಪಸಂಹಾರ ಮಾಡಿಕೋ. ನೀನು ಕ್ರೋಧವನ್ನು ಪ್ರಕಟಿಸುವ ಕಾಲ ಮಹಾಪ್ರಳಯವಲ್ಲವೇ ? ಆದರೂ ಈ ತುಚ್ಛನಾದ ದೈತ್ಯನ ಮೇಲೆ ಕ್ರೋಧವನ್ನು ತೋರಿದೆ. ಆತನನ್ನು ಸಂಹಾರ ಮಾಡಿಯೂ ಆಯಿತು. ಅವನ ಪುತ್ರನು ನಿನಗೆ ಶರಣು ಬಂದಿರುವನು. ಭಕ್ತವತ್ಸಲ ಪ್ರಭೋ! ನೀನು ನಿನ್ನ ಈ ಭಕ್ತನನ್ನು ರಕ್ಷಿಸು. ॥ ೪೧ ॥

ತಂ ಶ್ಯೇನವೇಗಂ ಶತಚಂದ್ರವರ್ತ್ಮಭಿ-
ಶ್ಚರಂತಮಚ್ಛಿದ್ರಮುಪರ್ಯಧೋ ಹರಿಃ ।
ಕೃತ್ವಾಟ್ಟಹಾಸಂ ಖರಮುತ್ಸ್ವನೋಲ್ಬಣಂ
ನಿಮೀಲಿತಾಕ್ಷಂ ಜಗೃಹೇ ಮಹಾಜವಃ ॥ ೨೮ ॥

ವಿಷ್ವಕ್ಸ್ಫುರಂತಂ ಗ್ರಹಣಾತುರಂ ಹರಿ-
ರ್ವ್ಯಾಲೋ ಯಥಾಽಽಖುಂ ಕುಲಿಶಾಕ್ಷತತ್ವಚಮ್ ।
ದ್ವಾರ್ಯೂರ ಆಪಾತ್ಯ ದದಾರ ಲೀಲಯಾ
ನಖೈರ್ಯಥಾಹಿಂ ಗರುಡೋ ಮಹಾವಿಷಮ್ ॥ ೨೯ ॥

ಸಂರಂಭದುಷ್ಪ್ರೇಕ್ಷ್ಯಕರಾಲಲೋಚನೋ
ವ್ಯಾತ್ತಾನನಾಂತಂ ವಿಲಿಹನ್ ಸ್ವಜಿಹ್ವಯಾ ।
ಅಸೃಗ್ಲವಾಕ್ತಾರುಣಕೇಸರಾನನೋ
ಯಥಾಂತ್ರಮಾಲೀ ದ್ವಿಪಹತ್ಯಯಾ ಹರಿಃ ॥ ೩೦ ॥

ನಖಾಂಕುರೋತ್ಪಾಟಿತಹೃತ್ಸರೋರುಹಂ
ವಿಸೃಜ್ಯ ತಸ್ಯಾನುಚರಾನುದಾಯುಧಾನ್ ।
ಅಹನ್ಸಮಂತಾನ್ನಖಶಸ್ತ್ರಪಾರ್ಷ್ಣಿಭಿ-
ರ್ದೋರ್ದಂಡಯೂಥೋಽನುಪಥಾನ್ಸಹಸ್ರಶಃ ॥ ೩೧ ॥

ಸಟಾವಧೂತಾ ಜಲದಾಃ ಪರಾಪತನ್-
ಗ್ರಹಾಶ್ಚ ತದ್ದೃಷ್ಟಿವಿಮುಷ್ಟರೋಚಿಷಃ ।
ಅಂಭೋಧಯಃ ಶ್ವಾಸಹತಾ ವಿಚುಕ್ಷುಭು-
ರ್ನಿರ್ಹ್ರಾದಭೀತಾ ದಿಗಿಭಾ ವಿಚುಕ್ರುಶುಃ ॥ ೩೨ ॥

ದ್ಯೌಸ್ತತ್ಸಟೋತ್ಕ್ಷಿಪ್ತವಿಮಾನಸಂಕುಲಾ
ಪ್ರೋತ್ಸರ್ಪತ ಕ್ಷ್ಮಾ ಚ ಪದಾತಿಪೀಡಿತಾ ।
ಶೈಲಾಃ ಸಮುತ್ಪೇತುರಮುಷ್ಯ ರಂಹಸಾ
ತತ್ತೇಜಸಾ ಖಂ ಕಕುಭೋ ನ ರೇಜಿರೇ ॥ ೩೩ ॥

ನನ್ನ ಬಲವೀರ್ಯದಿಂದ ಹೆದರಿಯೇ ನನ್ನನ್ನು ತನ್ನ ಕೈಯಿಂದ ಬಿಟ್ಟುಬಿಟ್ಟನು ಎಂದೇ ತಿಳಿದನು. ಹೀಗೆ ವಿಚಾರಮಾಡಿದ್ದರಿಂದ ಅವನ ಬಳಲಿಕೆ ದೂರವಾಯಿತು. ಮತ್ತೆ ಅವನು ಯುದ್ಧಕ್ಕಾಗಿ ಕತ್ತಿ-ಗುರಾಣಿಗಳನ್ನು ಹಿಡಿದುಕೊಂಡು ನರಸಿಂಹದೇವರ ಕಡೆಗೆ ನುಗ್ಗಿದನು. ॥ ೨೭ ॥ ಆಗ ಅವನು ಗಿಡುಗಿನಂತೆ ಅತಿವೇಗ ದಿಂದ ಮೇಲೆ-ಕೆಳಗೆ ಕತ್ತಿ-ಗುರಾಣಿಗಳನ್ನು ತಿರುಗಿಸುವ ವರಸೆ ಗಳಿಂದ ಶತ್ರುವು ತನ್ನ ಮೇಲೆ ಆಕ್ರಮಣ ಮಾಡುವುದಕ್ಕೆ ಅವಕಾಶವೇ ಸಿಕ್ಕದಂತೆ ಮಾಡುತ್ತಿದ್ದನು. ಆಗ ಭಗವಂತನು ಗಟ್ಟಿ ಯಾಗಿ ಪ್ರಚಂಡ ಮತ್ತು ಭಯಂಕರ ಅಟ್ಟಹಾಸ ಮಾಡಿದನು. ಇದರಿಂದ ಹಿರಣ್ಯಕಶಿಪುವಿನ ಕಣ್ಣುಗಳು ಮುಚ್ಚಿಹೋದುವು. ಮತ್ತೆ ಅತಿರಭಸದಿಂದ ಜಗಿದು ಸರ್ಪವು ಇಲಿಯನ್ನು ಹಿಡಿಯುವಂತೆ ಭಗವಂತನು ಆತನನ್ನು ಹಿಡಿದು ಕೊಂಡನು. ವಜ್ರಾಯುಧದ ಏಟಿನಿಂದಲೂ ಯಾವಾತನ ಚರ್ಮವು ತರಚಲಿಲ್ಲವೋ ಅಂತಹ ಹಿರಣ್ಯಕಶಿಪು ಈಗ ಶ್ರೀನರಸಿಂಹನ ಪಂಜದಿಂದ ತನ್ನನ್ನು ಬಿಡಿಸಿಕೊಳ್ಳಲು ಚಡಪಡಿಸತೊಡಗಿದನು. ಭಗವಂತನು ಆತನನ್ನು ಸಭೆಯ ದ್ವಾರದ ಬಳಿಗೆ ಎಳೆದುಕೊಂಡು ಹೋಗಿ ಹೊಸ್ತಿಲಮೇಲೆ ಕುಳಿತು ತನ್ನ ತೊಡೆಯ ಮೇಲೆ ಕೆಡವಿಕೊಂಡು ಗರುಡನು ಮಹಾವಿಷಧಾರಿಯಾದ ಸರ್ಪವನ್ನು ಸೀಳಿಹಾಕುವಂತೆ – ಶ್ರೀನರ ಸಿಂಹನು ಲೀಲಾಜಾಲವಾಗಿ ತನ್ನ ಉಗುರುಗಳಿಂದಲೇ ಅವನ ಉದರವನ್ನು ಬಗೆದು ಸೀಳಿ ಹಾಕಿದನು. ॥ ೨೮-೨೯ ॥ ಆ ಸಮಯದಲ್ಲಿ ಅವನ ಕ್ರೋಧ ತುಂಬಿದ ವಿಕರಾಳ ಕಣ್ಣುಗಳ ಕಡೆಗೆ ನೋಡಲಾಗುತ್ತಿರಲಿಲ್ಲ. ಅವನು ಚಾಚಿದ ನಾಲಿಗೆಯಿಂದ ತನ್ನ ತೆರೆದ ಬಾಯಿಯ ಎರಡೂ ಮೂಲೆಗಳನ್ನೂ ನೆಕ್ಕುತ್ತಿದ್ದನು. ರಕ್ತದ ಕಣಗಳಿಂದ ಅವನ ಬಾಯಿಯು ಮತ್ತು ಕತ್ತಿನ ಕೇಸರಗಳು ಕೆಂಪಗಾಗಿದ್ದವು. ಆನೆಯನ್ನು ಕೊಂದು ಅದರ ಕರುಳಬಳ್ಳಿ ಯನ್ನು ಕುತ್ತಿಗೆಗೆ ಹಾಕಿಕೊಂಡ ಸಿಂಹದಂತೆ – ಆ ನರಸಿಂಹನು ರುದ್ರ ಸೌಂದರ್ಯದಿಂದ ಕಂಗೊಳಿಸುತ್ತಿದ್ದನು. ॥ ೩೦ ॥ ಅವನು ತನ್ನ ತೀಕ್ಷ್ಣವಾದ ಉಗುರುಗಳಿಂದ ಹಿರಣ್ಯಕಶಿಪುವಿನ ಹೃದಯ ವನ್ನು ಕಿತ್ತು ನೆಲಕ್ಕೆ ಒಗೆದುಬಿಟ್ಟನು. ಆಗ ಸಾವಿರಾರು ದೈತ್ಯ-ದಾನವರು ಕೈಗಳಲ್ಲಿ ಶಸ್ತ್ರಗಳನ್ನು ಹಿಡಿದುಕೊಂಡು ಭಗವಂತನ ಮೇಲೆ ಪ್ರಹಾರ ಮಾಡತೊಡಗಿದರು. ಆದರೆ ಭಗವಂತನು ತನ್ನ ಭುಜಗಳೆಂಬ ಸೈನ್ಯದಿಂದಲೂ, ಒದೆತಗಳಿಂದಲೂ, ಉಗುರು ಗಳೆಂಬ ಶಸ್ತ್ರಗಳಿಂದಲೂ ನಾಲ್ಕೂ ಕಡೆಗಳಲ್ಲಿಯೂ ಅವರನ್ನು ಕೊಂದು ಹಾಕಿದನು. ॥ ೩೧ ॥

ಯುಧಿಷ್ಠಿರನೇ ! ಆಗ ಭಗವಾನ್ ನರಸಿಂಹನ ಕತ್ತಿನ ಕೇಸರ ಗಳ ಅಪ್ಪಳಿಕೆಯಿಂದ ಮೋಡಗಳು ಚೆದುರಿಹೋದುವು. ಅವನ ಕಣ್ಣುಗಳ ಜ್ವಾಲೆಗಳಿಂದ ಸೂರ್ಯಾದಿ ಗ್ರಹರ ತೇಜಸ್ಸು ಮಂಕಾ ಯಿತು. ಅವನ ಉಸಿರಾಟದ ಹೊಡೆತದಿಂದ ಸಮುದ್ರಗಳು ಕ್ಷೋಭೆಗೊಂಡವು. ಅವನ ಸಿಂಹನಾದಕ್ಕೆ ಹೆದರಿ ದಿಗ್ಗಜಗಳು ಘೀಳಿಟ್ಟವು. ॥ ೩೨ ॥ ಅವನ ಕೇಸರಗಳಿಗೆ ಢಿಕ್ಕಿ ಹೊಡೆದು ದೇವತೆಗಳ ವಿಮಾನಗಳು ಅಸ್ತ-ವ್ಯಸ್ತವಾದುವು. ಸ್ವರ್ಗವು ನಡುಗಿಹೋಯಿತು. ಅವನ ಪಾದಾಘಾತದಿಂದ ಭೂಕಂಪ ಉಂಟಾಯಿತು. ವೇಗದಿಂದ ಪರ್ವತಗಳು ಹಾರತೊಡಗಿದವು.

ತತಃ ಸಭಾಯಾಮುಪವಿಷ್ಟಮುತ್ತಮೇ
ನೃಪಾಸನೇ ಸಂಭೃತತೇಜಸಂ ವಿಭುಮ್ ।
ಅಲಕ್ಷಿತದ್ವೈರಥಮತ್ಯಮರ್ಷಣಂ
ಪ್ರಚಂಡ ವಕ್ತ್ರಂ ನ ಬಭಾಜ ಕಶ್ಚನ ॥ ೩೪ ॥

ನಿಶಮ್ಯ ಲೋಕತ್ರಯಮಸ್ತಕಜ್ವರಂ
ತಮಾದಿದೈತ್ಯಂ ಹರಿಣಾ ಹತಂ ಮೃಧೇ ।
ಪ್ರಹರ್ಷವೇಗೋತ್ಕಲಿತಾನನಾ ಮುಹುಃ
ಪ್ರಸೂನವರ್ಷೈರ್ವವೃಷುಃ ಸುರಸ್ತ್ರಿಯಃ ॥ ೩೫ ॥

ತದಾ ವಿಮಾನಾವಲಿಭಿರ್ನಭಸ್ತಲಂ
ದಿದೃಕ್ಷತಾಂ ಸಂಕುಲಮಾಸ ನಾಕಿನಾಮ್ ।
ಸುರಾನಕಾ ದುಂದುಭಯೋಽಥ ಜಘ್ನಿರೇ
ಗಂಧರ್ವಮುಖ್ಯಾ ನನೃತುರ್ಜಗುಃ ಸ್ತ್ರಿಯಃ ॥ ೩೬ ॥

ತತ್ರೋಪವ್ರಜ್ಯ ವಿಬುಧಾ ಬ್ರಹ್ಮೇಂದ್ರಗಿರಿಶಾದಯಃ ।
ಋಷಯಃ ಪಿತರಃ ಸಿದ್ಧಾ ವಿದ್ಯಾಧರಮಹೋರಗಾಃ ॥ ೩೭ ॥

ಮನವಃ ಪ್ರಜಾನಾಂ ಪತಯೋ ಗಂಧರ್ವಾಪ್ಸರಚಾರಣಾಃ ।
ಯಕ್ಷಾಃ ಕಿಂಪುರುಷಾಸ್ತಾತ ವೇತಾಲಾಃ ಸಿದ್ಧಕಿನ್ನರಾಃ ॥ ೩೮ ॥

ತೇ ವಿಷ್ಣು ಪಾರ್ಷದಾಃ ಸರ್ವೇ ಸುನಂದಕುಮುದಾದಯಃ ।
ಮೂರ್ಧ್ನಿ ಬದ್ಧಾಂಜಲಿಪುಟಾ ಆಸೀನಂ ತೀವ್ರತೇಜಸಮ್ ।
ಈಡಿರೇ ನರಶಾರ್ದೂಲಂ ನಾತಿದೂರಚರಾಃ ಪೃಥಕ್ ॥ ೩೯ ॥

ಬ್ರಹ್ಮೋವಾಚ

ನತೋಽಸ್ಮ್ಯನಂತಾಯ ದುರಂತಶಕ್ತಯೇ
ವಿಚಿತ್ರವೀರ್ಯಾಯ ಪವಿತ್ರಕರ್ಮಣೇ ।
ವಿಶ್ವಸ್ಯ ಸರ್ಗಸ್ಥಿತಿಸಂಯಮಾನ್ಗುಣೈಃ
ಸ್ವಲೀಲಯಾ ಸಂದಧತೇಽವ್ಯಯಾತ್ಮನೇ ॥ ೪೦ ॥

ಶ್ರೀರುದ್ರ ಉವಾಚ

ಕೋಪಕಾಲೋ ಯುಗಾಂತಸ್ತೇ
ಹತೋಽಯಮಸುರೋಽಲ್ಪಕಃ ।
ತತ್ಸುತಂ ಪಾಹ್ಯುಪಸೃತಂ
ಭಕ್ತಂ ತೇ ಭಕ್ತವತ್ಸಲ ॥ ೪೧ ॥

ಅವನ ತೇಜಸ್ಸಿನ ಮಿಂಚಿನಿಂದ ಆಕಾಶವೂ, ದಿಕ್ಕುಗಳೂ ಕಳೆಗುಂದಿ ಕತ್ತಲಾವರಿಸಿ ಕಾಣಿಸದೇ ಹೋದುವು. ॥ ೩೩ ॥ ಆ ಸಮಯದಲ್ಲಿ ನರಸಿಂಹ ಭಗವಂತನನ್ನು ಇದಿರಿಸುವವರು ಯಾರೂ ಕಂಡು ಬಂದಿಲ್ಲ. ಆದರೂ ಅವನ ಕ್ರೋಧವು ಇನ್ನೂ ಹೆಚ್ಚುತ್ತಲೇ ಇತ್ತು. ಅವನು ಹಿರಣ್ಯಕಶಿಪುವಿನ ರಾಜಸಭೆಯ ಎತ್ತರವಾದ ಸಿಂಹಾಸನದ ಮೇಲೆ ಹೋಗಿ ಕುಳಿತನು. ಆಗ ಅವನ ಅತ್ಯಂತ ತೇಜಃಪುಂಜ ಮತ್ತು ಕ್ರೋಧದಿಂದ ತುಂಬಿದ ಭಯಂಕರ ವದನವನ್ನು ಕಂಡು ಅವನ ಬಳಿಗೆ ಹೋಗಿ ಸೇವೆ ಮಾಡಲೂ ಯಾರಿಗೂ ಧೈರ್ಯಬರಲಿಲ್ಲ. ॥ ೩೪ ॥

ಯುಧಿಷ್ಠಿರನೇ! ಮೂರು ಲೋಕಗಳಿಗೂ ತಲೆನೋವಾಗಿದ್ದ ಆ ಆದಿದೈತ್ಯ ಹಿರಣ್ಯಕಶಿಪು ಯುದ್ಧದಲ್ಲಿ ಭಗವಂತನ ಕೈಯಿಂದ ಹತನಾದನೆಂಬ ಶುಭಸಮಾಚಾರವು ಸ್ವರ್ಗದ ದೇವಿಯರಿಗೆ ತಿಳಿದಾಗ ಆನಂದದಿಂದ ಅವರ ಮುಖಗಳು ಅರಳಿದವು. ಅವರು ಮತ್ತೆ-ಮತ್ತೆ ಭಗವಂತನ ಮೇಲೆ ಹೂವಿನ ಮಳೆಗರೆಯ ತೊಡಗಿದರು. ॥ ೩೫ ॥ ಭಗವಂತನ ದರ್ಶನಕ್ಕಾಗಿ ಬಂದ ದೇವತೆಗಳ ವಿಮಾನಗಳಿಂದ ಆಕಾಶವು ತುಂಬಿಹೋಯಿತು. ದೇವದುಂದುಭಿಗಳು ಮೊಳಗಿದವು. ಗಂಧರ್ವರು ಗಾನ ಮಾಡತೊಡಗಿದರು. ಅಪ್ಸರೆಯರು ನರ್ತನ ಮಾಡ ತೊಡಗಿದರು. ॥ ೩೬ ॥ ಅದೇ ಸಮಯಕ್ಕೆ ಬ್ರಹ್ಮದೇವರು, ಸ್ವಾಮಿ ಶಂಕರನು, ಇಂದ್ರಾದಿದೇವತೆಗಳೂ, ಋಷಿಗಳೂ, ಪಿತೃಗಳೂ, ಸಿದ್ಧರೂ, ವಿದ್ಯಾಧರರೂ, ಮಹಾನಾಗರೂ, ಮನುಗಳೂ, ಪ್ರಜಾಪತಿಗಳೂ, ಗಂಧರ್ವರೂ, ಅಪ್ಸರೆಯರೂ, ಚಾರಣರೂ, ಯಕ್ಷರೂ, ಕಿಂಪುರುಷರೂ, ಬೇತಾಳರೂ, ಸಿದ್ಧರೂ, ಕಿನ್ನರರೂ ಹಾಗೂ ಸುನಂದ-ಕುಮುದ ಮೊದಲಾದ ಭಗವಂತನ ಪಾರ್ಷದರೂ, ನರಸಿಂಹ ಭಗವಂತನ ಬಳಿಗೆ ಬಂದರು. ಅವರೆಲ್ಲರೂ ತಲೆಯಮೇಲೆ ಕೈಜೋಡಿಸಿಕೊಂಡು ಸಿಂಹಾಸನದ ಮೇಲೆ ಬೆಳಗುತ್ತಿದ್ದ ಅತ್ಯಂತ ತೇಜಸ್ವೀ ನರಸಿಂಹನನ್ನು ಸ್ವಲ್ಪ ದೂರದಿಂದಲೇ ಬೇರೆ-ಬೇರೆಯಾಗಿ ಸ್ತುತಿಸ ತೊಡಗಿದರು. ॥ ೩೭-೩೯॥

ಬ್ರಹ್ಮದೇವರು ಹೇಳಿದರು – ಪ್ರಭೋ! ನಿನ್ನ ಶಕ್ತಿಯ ಪಾರವನ್ನು ಕಾಣಲು ಸಾಧ್ಯವಿಲ್ಲದ ಅನಂತನಾದ ದೇವನಿಗೆ ನಮಸ್ಕಾರವು. ನಿನ್ನ ಪರಾಕ್ರಮವು ವಿಚಿತ್ರವಾಗಿದ್ದು ಕರ್ಮಗಳು ಪವಿತ್ರವಾಗಿವೆ. ಗುಣಗಳ ಮೂಲಕ ನೀನು ಲೀಲೆಯಿಂದಲೇ ಸಮಸ್ತ ವಿಶ್ವದ ಉತ್ಪತ್ತಿ , ಪಾಲನೆ, ಪ್ರಳಯಗಳನ್ನು ಯಥೋಚಿತವಾಗಿ ಮಾಡುತ್ತಿದ್ದರೂ, ನೀನು ಅವುಗಳೊಂದಿಗೆ ಯಾವ ಸಂಬಂಧವನ್ನೂ ಇರಿಸಿಕೊಳ್ಳುವುದಿಲ್ಲ. ಸ್ವಯಂ ನಿರ್ವಿಕಾರನಾಗಿರುವೆ. ಅಂತಹ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೪೦ ॥

ಶ್ರೀರುದ್ರದೇವರು ಹೇಳಿದರು – ನಿನ್ನ ಕೋಪವನ್ನು ಉಪಸಂಹಾರ ಮಾಡಿಕೋ. ನೀನು ಕ್ರೋಧವನ್ನು ಪ್ರಕಟಿಸುವ ಕಾಲ ಮಹಾಪ್ರಳಯವಲ್ಲವೇ ? ಆದರೂ ಈ ತುಚ್ಛನಾದ ದೈತ್ಯನ ಮೇಲೆ ಕ್ರೋಧವನ್ನು ತೋರಿದೆ. ಆತನನ್ನು ಸಂಹಾರ ಮಾಡಿಯೂ ಆಯಿತು. ಅವನ ಪುತ್ರನು ನಿನಗೆ ಶರಣು ಬಂದಿರುವನು. ಭಕ್ತವತ್ಸಲ ಪ್ರಭೋ! ನೀನು ನಿನ್ನ ಈ ಭಕ್ತನನ್ನು ರಕ್ಷಿಸು. ॥ ೪೧ ॥

*ಇಂದ್ರ ಉವಾಚ*

ಪ್ರತ್ಯಾನೀತಾಃ ಪರಮ ಭವತಾ ತ್ರಾಯತಾ ನಃ ಸ್ವಭಾಗಾ
ದೈತ್ಯಾಕ್ರಾಂತಂ ಹೃದಯಕಮಲಂ ತ್ವದ್ಗೃಹಂ ಪ್ರತ್ಯಬೋಧಿ।
ಕಾಲಗ್ರಸ್ತಂ ಕಿಯದಿದಮಹೋ ನಾಥ ಶುಶ್ರೂಷತಾಂ ತೇ
ಮುಕ್ತಿಸ್ತೇಷಾಂ ನ ಹಿ ಬಹುಮತಾ ನಾರಸಿಂಹಾಪರೈಃ ಕಿಮ್ ॥ ೪೨ ॥

ಇಂದ್ರನು ಹೇಳಿದನು – ಓ ಪುರುಷೋತ್ತಮಾ! ನೀನು ನಮ್ಮನ್ನು ರಕ್ಷಿಸಿದ್ದೀಯೆ. ನೀನು ನಮ್ಮ ಯಜ್ಞಭಾಗಗಳನ್ನು ಹಿಂದಿರುಗಿಸಿ ಕೊಟ್ಟಿರುವೆ, ಅವು ವಾಸ್ತವವಾಗಿ ಅಂತರ್ಯಾಮಿಯಾದ ನಿನ್ನದೇ ಆಗಿವೆ. ದೈತ್ಯರ ಆತಂಕದಿಂದ ಮುಚ್ಚಿಹೋಗಿದ್ದ ನಮ್ಮ ಹೃದಯಕಮಲಗಳನ್ನು ನೀನು ಅರಳುವಂತೆ ಮಾಡಿರುವೆ. ಅವೂ ಕೂಡ ನಿನ್ನ ವಾಸಸ್ಥಾನಗಳೇ ಆಗಿವೆ. ನಮ್ಮಗಳಿಗೆ ಪುನಃ ದೊರೆತ ಈ ಸ್ವರ್ಗಾದಿ ರಾಜ್ಯವೆಲ್ಲವೂ ಕಾಲಕ್ಕೆ ತುತ್ತಾಗಿದೆ. ನಿನ್ನ ಸೇವಕರಾದವರಿಗೆ ಇದೇನು ಮಹಾ! ಸ್ವಾಮಿಯೇ! ನಿನ್ನ ಸೇವೆಯನ್ನು ಬಯಸುವವರು ಮುಕ್ತಿಯನ್ನು ಆದರಿಸುವುದಿಲ್ಲ. ಮತ್ತೆ ಬೇರೆ ಭೋಗಗಳಾದರೋ ಅವರಿಗೆ ಆವಶ್ಯಕತೆ ಏನಿದೆ? ॥ ೪೨ ॥

*ಋಷಯ ಊಚುಃ*

ತ್ವಂ ನಸ್ತಪಃ ಪರಮಮಾತ್ಥ ಯದಾತ್ಮತೇಜೋ
ಯೇನೇದಮಾದಿಪುರುಷಾತ್ಮಗತಂ ಸಸರ್ಜ ।
ತದ್ವಿಪ್ರಲುಪ್ತಮಮುನಾದ್ಯ ಶರಣ್ಯಪಾಲ
ರಕ್ಷಾಗೃಹೀತವಪುಷಾ ಪುನರನ್ವಮಂಸ್ಥಾಃ ॥ ೪೩ ॥

ಋಷಿಗಳು ಹೇಳಿದರು – ಓ ಶರಣಾಗತವತ್ಸಲನೇ! ಪುರುಷೋತ್ತಮನೇ! ನಿನ್ನಲ್ಲಿ ಲೀನವಾಗಿದ್ದ ಜಗತ್ತನ್ನು ನೀನು ತಪಸ್ಸಿನ ಮೂಲಕವೇ ಮತ್ತೆ ಸೃಷ್ಟಿಮಾಡಿ, ಕರುಣೆಯಿಂದ ಅದೇ ಆತ್ಮತೇಜೋರೂಪವಾದ ಶ್ರೇಷ್ಠ ತಪಸ್ಸಿನ ಉಪದೇಶವನ್ನು ನಮಗೆಲ್ಲರಿಗೂ ಕರುಣಿಸಿದ್ದೆ. ಈ ದೈತ್ಯನು ಆ ತಪಸ್ಸನ್ನೇ ಲುಪ್ತಗೊಳಿಸಿಬಿಟ್ಟಿದ್ದನು. ಆ ತಪಸ್ಸಿನ ರಕ್ಷಣೆಗಾಗಿಯೇ ಅವತಾರತಾಳಿ ನೀನು ಮತ್ತೆ ಆ ತಪಸ್ಸಿನ ಉಪದೇಶವನ್ನೇ ಅನುಮೋದಿಸಿರುವೆ ॥ ೪೩ ॥

*ಪಿತರ ಊಚುಃ*

ಶ್ರಾದ್ಧಾನಿ ನೋಽಧಿಬುಭುಜೇ ಪ್ರಸಭಂ ತನೂಜೈ-
ರ್ದತ್ತಾನಿ ತೀರ್ಥಸಮಯೇಽಪ್ಯಪಿಬತ್ತಿಲಾಂಬು ।
ತಸ್ಯೋದರಾನ್ನಖವಿದೀರ್ಣವಪಾದ್ಯ ಆರ್ಚ್ಛತ್
ತಸ್ಮೈ ನಮೋ ನೃಹರಯೇಽಖಿಲಧರ್ಮಗೋಪ್ತ್ರೇ ॥ ೪೪ ॥

ಪಿತೃಗಳು ಹೇಳಿದರು – ಪ್ರಭೋ! ನಮ್ಮ ಪುತ್ರರು ನಮಗಾಗಿ ಪಿಂಡಪ್ರದಾನ ಮಾಡಿದಾಗ ಈ ದುಷ್ಟದೈತ್ಯನು ಅವನ್ನು ಬಲವಂತವಾಗಿ ಕಿತ್ತುಕೊಂಡು ತಿಂದುಬಿಡುತ್ತಿದ್ದನು. ಅವರು ಪವಿತ್ರವಾದ ಪುಣ್ಯತೀರ್ಥಗಳಲ್ಲಿ ತರ್ಪಣವನ್ನೂ, ತಿಲಾಂಜಲಿಯನ್ನೂ ಕೊಡುತ್ತಿದ್ದರೆ ಅದನ್ನೂ ಈತನು ಕುಡಿದುಬಿಡುತ್ತಿದ್ದನು. ಇಂದು ನೀನು ನಿನ್ನ ಉಗುರುಗಳಿಂದ ಅವನ ಹೊಟ್ಟೆಯನ್ನು ಬಗೆದು ಅವೆಲ್ಲವನ್ನೂ ನಮಗೆ ಹಿಂದಿರುಗಿಸಿದ್ದೀಯೆ. ಸಮಸ್ತ ಧರ್ಮಗಳ ಏಕಮಾತ್ರ ರಕ್ಷಕನಾದ ನರಸಿಂಹದೇವನೇ! ನಿನಗೆ ನಾವು ನಮಸ್ಕರಿಸುತ್ತೇನೆ.॥ ೪೪ ॥

*ಸಿದ್ಧಾ ಊಚುಃ*

ಯೋ ನೋ ಗತಿಂ ಯೋಗಸಿದ್ಧಾಮಸಾಧು-
ರಹಾರಷೀದ್ ಯೋಗತಪೋಬಲೇನ ।
ನಾನಾದರ್ಪಂ ತಂ ನಖೈರ್ನಿರ್ದದಾರ
ತಸ್ಮೈ ತುಭ್ಯಂ ಪ್ರಣತಾಃ ಸ್ಮೋ ನೃಸಿಂಹ ॥ ೪೫ ॥

ಸಿದ್ಧರು ಹೇಳಿದರು – ಓ ನರಸಿಂಹಸ್ವಾಮಿಯೇ! ಈ ದುಷ್ಟನು ತನ್ನ ಯೋಗ ಮತ್ತು ತಪಸ್ಸಿನ ಬಲದಿಂದ ನಮ್ಮ ಯೋಗಸಿದ್ಧ ಗತಿಗಳನ್ನು ಕಸಿದುಕೊಂಡಿದ್ದನು. ನೀನು ನಿನ್ನ ನಖಗಳಿಂದ ಆ ದುರಹಂಕಾರಿಯನ್ನು ಸೀಳಿಹಾಕಿದೆ. ನಾವೆಲ್ಲರೂ ನಿನ್ನ ಚರಣಾರವಿಂದಗಳಲ್ಲಿ ವಿನಮ್ರರಾಗಿ ನಮಸ್ಕರಿಸುತ್ತಿದ್ದೇವೆ. ॥ ೪೫ ॥

*ವಿದ್ಯಾಧರಾ ಊಚುಃ*

ವಿದ್ಯಾಂ ಪೃಥಗ್ಧಾರಣಯಾನುರಾದ್ಧಾಂ
ನ್ಯಷೇಧದಜ್ಞೋ ಬಲವೀರ್ಯದೃಪ್ತಃ ।
ಸ ಯೇನ ಸಂಖ್ಯೇ ಪಶುವದ್ಧತಸ್ತಂ
ಮಾಯಾನೃಸಿಂಹಂ ಪ್ರಣತಾಃ ಸ್ಮ ನಿತ್ಯಮ್ ॥ ೪೬ ॥

ವಿದ್ಯಾಧರರು ಹೇಳಿದರು – ಈ ಮೂರ್ಖ ಹಿರಣ್ಯಕಶಿಪು ತನ್ನ ಬಲ ಪರಾಕ್ರಮಗಳ ದುರಹಂಕಾರದಿಂದ ಮತ್ತನಾಗಿದ್ದನು. ನಾವುಗಳು ವಿವಿಧ ಧಾರಣೆಗಳಿಂದ ಪಡೆದುಕೊಂಡಿದ್ದ ವಿದ್ಯೆಗಳನ್ನು ಇವನು ವ್ಯರ್ಥಗೊಳಿಸಿದ್ದನು. ನೀನು ಯುದ್ಧದಲ್ಲಿ ಯಜ್ಞಪಶುವಿನಂತೆ ಇವನನ್ನು ನಾಶಗೊಳಿಸಿದೆ. ತನ್ನ ಲೀಲೆಯಿಂದ ನರಸಿಂಹನಾದ ನಿನಗೆ ನಾವು, ನಿತ್ಯ ನಿರಂತರ ವಂದನೆಗಳನ್ನು ಸಲ್ಲಿಸುತ್ತೇವೆ. ॥ ೪೬ ॥

*ನಾಗಾ ಊಚುಃ*

ಯೇನ ಪಾಪೇನ ರತ್ನಾನಿ ಸ್ತ್ರೀರತ್ನಾನಿ ಹೃತಾನಿ ನಃ ।
ತದ್ವಕ್ಷಃಪಾಟನೇನಾಸಾಂ ದತ್ತಾನಂದ ನಮೋಽಸ್ತುತೇ ॥ ೪೭ ॥

ನಾಗಗಳು ಹೇಳಿದರು – ಈ ಪಾಪಿಯು ನಮ್ಮ ಮಣಿಗಳನ್ನು ಮತ್ತು ನಮ್ಮ ಶ್ರೇಷ್ಠ ಸುಂದರಸ್ತ್ರೀಯರನ್ನು ಕಸಿದುಕೊಂಡಿದ್ದನು. ಇಂದು ಅವನ ಎದೆಯನ್ನು ಸೀಳಿ ನೀನು ನಮ್ಮ ಪತ್ನಿಯರಿಗೆ ಬಹಳ ಆನಂದವನ್ನು ಕೊಟ್ಟಿರುವೆ. ಪ್ರಭೋ! ನಾವು ನಿನಗೆ ನಮಸ್ಕರಿಸುತ್ತೇವೆ. ॥ ೪೭ ॥

*ಮನವ ಊಚುಃ*

ಮನವೋ ವಯಂ ತವ ನಿದೇಶಕಾರಿಣೋ
ದಿತಿಜೇನ ದೇವ ಪರಿಭೂತಸೇತವಃ ।
ಭವತಾ ಖಲಃ ಸ ಉಪಸಂಹೃತಃ ಪ್ರಭೋ
ಕರವಾಮ ತೇ ಕಿಮನುಶಾಧಿ ಕಿಂಕರಾನ್ ॥ ೪೮ ॥

ಮನುಗಳು ಹೇಳಿದರು – ಓ ದೇವಾಧಿದೇವನೇ ! ನಾವು ನಿನ್ನ ಆಜ್ಞಾಕಾರಿ ಮನುಗಳು. ಈ ದೈತ್ಯನು ನಮ್ಮಗಳ ಧರ್ಮ ಮರ್ಯಾದೆಗಳನ್ನು ಭಂಗಗೊಳಿಸಿಬಿಟ್ಟಿದ್ದನು. ನೀನು ಆ ದುಷ್ಟನನ್ನು ಸಂಹರಿಸಿ ದೊಡ್ಡ ಉಪಕಾರವನ್ನು ಮಾಡಿರುವೆ. ಪ್ರಭೋ ! ನಾವು ನಿನ್ನ ಸೇವಕರಾಗಿದ್ದೇವೆ. ನಿನಗೆ ಏನು ಸೇವೆ ಮಾಡೋಣ ? ಅಪ್ಪಣೆ ಕೊಡಿಸು. ॥ ೪೮ ॥

*ಪ್ರಜಾಪತಯ ಊಚುಃ*

ಪ್ರಜೇಶಾ ವಯಂ ತೇ ಪರೇಶಾಭಿಸೃಷ್ಟಾ
ನ ಯೇನ ಪ್ರಜಾ ವೈ ಸೃಜಾಮೋ ನಿಷಿದ್ಧಾಃ ।
ಸ ಏಷ ತ್ವಯಾ ಭಿನ್ನವಕ್ಷಾ ನು ಶೇತೇ
ಜಗನ್ಮಂಗಲಂ ಸತ್ತ್ವಮೂರ್ತೇಽವತಾರಃ ॥ ೪೯ ॥

ಪ್ರಜಾಪತಿಗಳು ಹೇಳಿದರು – ಓ ಪರಮೇಶ್ವರಾ ! ನೀನೇ ನಮ್ಮನ್ನು ಪ್ರಜಾಪತಿಗಳನ್ನಾಗಿ ನೇಮಿಸಿದ್ದೆ. ಆದರೆ ಇವನು ತಡೆದುದರಿಂದ ನಾವು ಪ್ರಜೆಗಳನ್ನು ಸೃಷ್ಟಿಮಾಡಲಾಗುತ್ತಿರಲಿಲ್ಲ. ನೀನು ಇವನ ಎದೆಯನ್ನು ಸೀಳಿದಾಗ ಇವನು ಎಂದೆಂದಿಗೂ ನೆಲಕ್ಕೊರಗಿದನು. ಸತ್ತ್ವಮಯ ಮೂರ್ತಿಯನ್ನು ಧರಿಸುವ ಪ್ರಭುವೇ ! ನಿನ್ನ ಈ ಅವತಾರವು ಜಗತ್ತಿನ ಮಂಗಳಕ್ಕಾಗಿಯೇ ಆಗಿದೆ. ॥ ೪೯ ॥

*ಗಂಧರ್ವಾ ಊಚುಃ*

ವಯಂ ವಿಭೋ ತೇ ನಟನಾಟ್ಯಗಾಯಕಾ
ಯೇನಾತ್ಮಸಾದ್ವೀರ್ಯಬಲೌಜಸಾ ಕೃತಾಃ ।
ಸ ಏಷ ನೀತೋ ಭವತಾ ದಶಾಮಿಮಾಂ
ಕಿಮುತ್ಪಥಸ್ಥಃ ಕುಶಲಾಯ ಕಲ್ಪತೇ ॥ ೫೦ ॥

ಗಂಧರ್ವರು ಹೇಳಿದರು – ಪ್ರಭೋ ! ನಾವು ನಿನಗೆ ಸೇರಿದ ಸಂಗೀತಗಾರರು, ನಿನಗಾಗಿ ನಾಟ್ಯ-ಗೀತ-ವಾದ್ಯಗಳನ್ನು ನುಡಿಸಿ, ಅಭಿನಯಿಸುವ ಸೇವಕರು. ಈ ದೈತ್ಯನು ತನ್ನ ಬಲ-ವೀರ್ಯ-ಪರಾಕ್ರಮಗಳಿಂದ ನಮ್ಮನ್ನು ತನ್ನ ಗುಲಾಮರನ್ನಾಗಿಸಿಕೊಂಡಿದ್ದನು. ಆ ದುಷ್ಟನಿಗೆ ತಕ್ಕ ಶಾಸ್ತಿಯನ್ನೇ ಮಾಡಿದೆ. ಕುಮಾರ್ಗದಲ್ಲಿ ನಡೆಯುವವರಿಗೆ ಎಂದಾದರೂ ಕಲ್ಯಾಣ ಉಂಟಾದೀತೇ ! ॥ ೫೦ ॥

*ಚಾರಣಾ ಊಚುಃ*

ಹರೇ ತವಾಂಘ್ರಿಪಂಕಜಂ ಭವಾಪವರ್ಗಮಾಶ್ರಿತಾಃ ।
ಯದೇಷ ಸಾಧುಹೃಚ್ಛಯಸ್ತ್ವಯಾಸುರಃ ಸಮಾಪಿತಃ
॥ ೫೧ ॥

ಚಾರಣರು ಹೇಳಿದರು – ಪ್ರಭುವೇ ! ಸಜ್ಜನರಿಗೆ ಹೃದಯ ಶೂಲೆಯಾಗಿದ್ದ ಈ ದುಷ್ಟನನ್ನು ನೀನು ಮುಗಿಸಿಬಿಟ್ಟೆ. ಆದಕ್ಕಾಗಿ ನಾವು ಹುಟ್ಟು-ಸಾವುಗಳ ರೂಪವಾದ ಸಂಸಾರಚಕ್ರದಿಂದ ಬಿಡುಗಡೆಗೊಳಿಸುವಂತಹ ನಿನ್ನ ಈ ಚರಣಾರವಿಂದಗಳಲ್ಲಿ ಶರಣಾಗಿದ್ದೇವೆ. ॥ ೫೧ ॥

*ಯಕ್ಷಾ ಊಚುಃ*

ವಯಮನುಚರಮುಖ್ಯಾಃ ಕರ್ಮಭಿಸ್ತೇ ಮನೋಜ್ಞೈ-
ಸ್ತ ಇಹ ದಿತಿಸುತೇನ ಪ್ರಾಪಿತಾ ವಾಹಕತ್ವಮ್ ।
ಸ ತು ಜನಪರಿತಾಪಂ ತತ್ಕೃತಂ ಜಾನತಾ ತೇ
ನರಹರ ಉಪನೀತಃ ಪಂಚತಾಂ ಪಂಚವಿಂಶ ॥ ೫೨ ॥

ಯಕ್ಷರು ಹೇಳಿದರು – ಓ ಭಗವಂತನೇ ! ನಾವು ನಮ್ಮ ಶ್ರೇಷ್ಠ ಕರ್ಮಗಳಿಂದ ನಿನ್ನ ಸೇವಕರಲ್ಲಿ ಮುಖ್ಯರೆಂದು ಪರಿಗಣಿಸಲ್ಪಟ್ಟಿದ್ದೆವು. ಆದರೆ ಹಿರಣ್ಯಕಶಿಪು ನಮ್ಮನ್ನು ತನ್ನ ಪಲ್ಲಕ್ಕಿಯನ್ನು ಹೊರುವ ಬೋವಿಗಳಾಗಿಸಿಕೊಂಡಿದ್ದನು. ಪ್ರಕೃತಿಯ ನಿಯಾಮಕ ಪರಮಾತ್ಮನೇ ! ಇದರಿಂದ ನಿನ್ನವರಾದ ನಮಗೆ ಉಂಟಾಗಿದ್ದ ಕಷ್ಟಗಳನ್ನು ತಿಳಿದೇ ನೀನು ಈ ದುಷ್ಟನನ್ನು ಸಂಹಾರಮಾಡಿದೆ. ॥ ೫೨ ॥

*ಕಿಂಪುರುಷಾ ಊಚುಃ*

ವಯಂ ಕಿಂಪುರುಷಾಸ್ತ್ವಂ ತು ಮಹಾಪುರುಷ ಈಶ್ವರಃ ।
ಅಯಂ ಕುಪುರುಷೋ ನಷ್ಟೋ ಧಿಕ್ಕೃತಃ ಸಾಧುಭಿರ್ಯದಾ
॥ ೫೩ ॥

ಕಿಂಪುರುಷರು ಹೇಳಿದರು – ಪ್ರಭೋ ! ನಾವು ಅತ್ಯಂತ ತುಚ್ಛರಾದ ಕಿಂಪುರುಷರಾಗಿದ್ದೇವೆ. ನೀನು ಸರ್ವಶಕ್ತಿವಂತನಾದ ಮಹಾಪುರುಷನು. ಈ ಕಿಂಪುರುಷನು ಸಾಧುಗಳ ಧಿಕ್ಕಾರಕ್ಕೆ- ತಿರಸ್ಕಾರಕ್ಕೆ ಪಾತ್ರನಾದಾಗ ಆ ಅಸುರಾಧಮನನ್ನು ನೀನು ನಾಶಮಾಡಿಬಿಟ್ಟಿರುವೆ. ॥ ೫೩ ॥

*ವೈತಾಲಿಕಾ ಊಚುಃ*

ಸಭಾಸು ಸತ್ರೇಷು ತವಾಮಲಂ ಯಶೋ
ಗೀತ್ವಾ ಸಪರ್ಯಾಂ ಮಹತೀಂ ಲಭಾಮಹೇ ।
ಯಸ್ತಾಂ ವ್ಯನೈಷೀದ್ಭೃಶಮೇಷ ದುರ್ಜನೋ
ದಿಷ್ಟ್ಯಾ ಹತಸ್ತೇ ಭಗವನ್ಯಥಾಽಽಮಯಃ ॥ ೫೪ ॥

ವೈತಾಲಿಕರು ಹೇಳಿದರು – ಓ ಭಗವಂತಾ ! ದೊಡ್ಡ-ದೊಡ್ಡ ಸಭೆಗಳಲ್ಲಿ ಮತ್ತು ಜ್ಞಾನಯಜ್ಞಗಳಲ್ಲಿ ನಿನ್ನ ನಿರ್ಮಲ ಕೀರ್ತಿಯನ್ನು ಹಾಡಿ-ಹೊಗಳಿ ನಾವು ಪ್ರತಿಷ್ಠೆ-ಸಂಭಾವನೆಗಳನ್ನು ಪಡೆಯುತ್ತಿದ್ದವು. ಈ ದುಷ್ಟನು ನಮ್ಮ ಜೀವನೋಪಾಯವನ್ನೇ ನಾಶಮಾಡಿಬಿಟ್ಟಿದ್ದನು. ಮಹಾರೋಗದಂತೆ ಈ ದುಷ್ಟನನ್ನು ನೀನು ಬೇರುಸಹಿತ ಕಿತ್ತು ಬಿಸಾಡಿದೆ, ಇದು ಎಂತಹ ಸೌಭಾಗ್ಯದ ಮಾತಾಗಿದೆ. ॥ ೫೪ ॥

*ಕಿನ್ನರಾ ಊಚುಃ*

ವಯಮೀಶ ಕಿನ್ನರಗಣಾಸ್ತವಾನುಗಾ
ದಿತಿಜೇನ ವಿಷ್ಟಿಮಮುನಾನುಕಾರಿತಾಃ ।
ಭವತಾ ಹರೇ ಸ ವೃಜಿನೋಽವಸಾದಿತೋ
ನರಸಿಂಹ ನಾಥ ವಿಭವಾಯ ನೋ ಭವ ॥ ೫೫ ॥

**ಕಿನ್ನರರು ಹೇಳಿದರು** – ಕಿನ್ನರರಾದ ನಾವು ನಿನ್ನ ಸೇವಕರು. ಈ ದೈತ್ಯನು ನಮ್ಮಿಂದ ಬಿಟ್ಟಿಕೆಲಸವನ್ನು ಮಾಡಿಸುತ್ತಿದ್ದನು. ಭಗವಂತಾ! ನೀನು ಕೃಪೆದೋರಿ ಇಂದು ಈ ಪಾಪಿಯನ್ನು ನಾಶ ಪಡಿಸಿದೆ. ಪ್ರಭೋ! ನೀನು ಹೀಗೆಯೇ ನಮ್ಮ ಅಭ್ಯುದಯವನ್ನು ಮಾಡುತ್ತಾ ಇರು. ॥ ೫೫ ॥

*ವಿಷ್ಣುಪಾರ್ಷದಾ ಊಚುಃ*

ಅದ್ಯೈತದ್ಧರಿನರರೂಪಮದ್ಭುತಂ ತೇ
ದೃಷ್ಟಂ ನಃ ಶರಣದ ಸರ್ವಲೋಕಶರ್ಮ ।
ಸೋಽಯಂ ತೇ ವಿಧಿಕರ ಈಶ ವಿಪ್ರಶಪ್ತ-
ಸ್ತಸ್ಯೇದಂ ನಿಧನಮನುಗ್ರಹಾಯ ವಿದ್ಮಃ ॥ ೫೬ ॥

**ಭಗವಂತನ ಪಾರ್ಷದರು ಹೇಳಿದರು** – ಓ ಶರಣಾಗತ ವತ್ಸಲಾ! ಸಮಸ್ತ ಲೋಕಗಳಿಗೆ ಶಾಂತಿಯನ್ನು ಪ್ರದಾನ ಮಾಡುವಂತಹ ನಿನ್ನ ಈ ಅಲೌಕಿಕ ನರಸಿಂಹರೂಪವನ್ನು ನಾವು ಇಂದೇ ನೋಡಿದೆವು. ಭಗವಂತಾ! ಈ ದೈತ್ಯನು ನಿನ್ನ ಆ ಆಜ್ಞಾಕಾರಿ ಸೇವಕನೇ ಆಗಿದ್ದನು. ಇವನಿಗೆ ಸನಕಾದಿಗಳು ಶಾಪವನ್ನು ಕೊಟ್ಟಿದ್ದರು. ನೀನು ಕೃಪೆಮಾಡಿ ಇವನ ಉದ್ಧಾರಕ್ಕಾಗಿಯೇ ಇವನನ್ನು ವಧಿಸಿದ್ದೀಯೆ ಎಂದೇ ನಾವು ತಿಳಿಯುತ್ತೇವೆ. ॥ ೫೬ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ ಪ್ರಹ್ಲಾದಾನುಚರಿತೇ ದೈತ್ಯರಾಜವಧೇ ನೃಸಿಂಹಸ್ತವೋ ನಾಮಾಷ್ಟಮೋಽಧ್ಯಾಯಃ ॥ ೮ ॥**

# ಒಂಭತ್ತನೆಯ ಅಧ್ಯಾಯ

## ಪ್ರಹ್ಲಾದನು ಮಾಡಿದ ಶ್ರೀನರಸಿಂಹದೇವರ ಸ್ತುತಿ

*ನಾರದ ಉವಾಚ*

ಏವಂ ಸುರಾದಯಃ ಸರ್ವೇ ಬ್ರಹ್ಮರುದ್ರಪುರಃಸರಾಃ ।
ನೋಪೈತುಮಶಕನ್ಮನ್ಯುಸಂರಂಭಂ ಸುದುರಾಸದಮ್ ॥ ೧ ॥

ಸಾಕ್ಷಾಚ್ಛ್ರೀಃ ಪ್ರೇಷಿತಾ ದೇವೈರ್ದೃಷ್ಟ್ವಾ ತನ್ಮಹದದ್ಭುತಮ್ ।
ಅದೃಷ್ಟಾಶ್ರುತಪೂರ್ವತ್ವಾತ್ಸಾ ನೋಪೇಯಾಯ ಶಂಕಿತಾ ॥ ೨ ॥

ಪ್ರಹ್ಲಾದಂ ಪ್ರೇಷಯಾಮಾಸ ಬ್ರಹ್ಮಾವಸ್ಥಿತಮಂತಿಕೇ ।
ತಾತ ಪ್ರಶಮಯೋಪೇಹಿ ಸ್ವಪಿತ್ರೇ ಕುಪಿತಂ ಪ್ರಭುಮ್ ॥ ೩ ॥

ತಥೇತಿ ಶನಕೈ ರಾಜನ್ಮಹಾಭಾಗವತೋಽರ್ಭಕಃ ।
ಉಪೇತ್ಯ ಭುವಿ ಕಾಯೇನ ನನಾಮ ವಿಧೃತಾಂಜಲಿಃ ॥ ೪ ॥

**ನಾರದರು ಹೇಳಿದರು** – ಯುಧಿಷ್ಠಿರನೇ! ಹೀಗೆ ಬ್ರಹ್ಮದೇವರೂ, ರುದ್ರದೇವರೂ ಮೊದಲಾದ ಎಲ್ಲ ದೇವತೆಗಳೂ ಭಗವಾನ್ ನರಸಿಂಹನನ್ನು ಸ್ತೋತ್ರಮಾಡಿದರೂ ಅವನ ಕ್ರೋಧಾವೇಶವನ್ನು ಶಾಂತಗೊಳಿಸಲು ಸಾಧ್ಯವಾಗಲಿಲ್ಲ. ಅವನ ಬಳಿಗೆ ಹೋಗಲೂ ಅವರಿಂದ ಶಕ್ಯವಾಗಲಿಲ್ಲ. ಆತನನ್ನು ಹೊಂದುವುದಂತೂ ಅತಿಕಷ್ಟವಾಗಿತ್ತು. ॥ ೧ ॥ ದೇವತೆಗಳು ಅವನನ್ನು ಶಾಂತಗೊಳಿಸಲು ಸ್ವಯಂ ಲಕ್ಷ್ಮೀದೇವಿಯನ್ನು ಕಳಿಸಿದರು. ಆಕೆಯು ಹೋಗಿ ನರಸಿಂಹಭಗವಂತನ ಆ ಅದ್ಭುತ ಮಹಾನ್‌ರೂಪವನ್ನು ನೋಡಿದಾಗ ಭಯದಿಂದ ಅವಳಿಗೂ ಕೂಡ ಬಳಿಗೆ ಹೋಗಲಾಗಲಿಲ್ಲ. ಅವಳು ತನ್ನ ಸ್ವಾಮಿಯ ಇಂತಹ ಭಯಂಕರ ರೂಪವನ್ನು ಎಂದೂ ನೋಡಿರಲಿಲ್ಲ, ಕೇಳಿರಲಿಲ್ಲ. ॥ ೨ ॥ ಆಗ ಬ್ರಹ್ಮದೇವರು ತನ್ನ ಬಳಿಯಲ್ಲೇ ನಿಂತಿದ್ದ ಪ್ರಹ್ಲಾದನನ್ನು ಕುರಿತು – 'ಮಗು! ನಿನ್ನ ತಂದೆಯ ಮೇಲಲ್ಲವೇ ಭಗವಂತನು ಕುಪಿತನಾಗಿದ್ದನು. ಈಗ ನೀನೇ ಅವನ ಬಳಿಗೆ ಹೋಗಿ ಅವನನ್ನು ಶಾಂತಗೊಳಿಸು' ಎಂದು ಹೇಳಿ ಅವನನ್ನು ಭಗವಂತನ ಬಳಿಗೆ ಕಳಿಸಿದರು. ॥ ೩ ॥ ಪರಮಭಾಗವತ ಶ್ರೇಷ್ಠನಾದ ಪ್ರಹ್ಲಾದನು 'ಅಪ್ಪಣೆ' ಎಂದು ಹೇಳಿ ಮೆಲ್ಲಗೆ ಭಗವಂತನ ಬಳಿಗೆ ಹೋಗಿ ಕೈಜೋಡಿಸಿಕೊಂಡು ಭೂಮಿಯ ಮೇಲೆ ಸಾಷ್ಟಾಂಗ ನಮಸ್ಕಾರಮಾಡಿದನು. ॥ ೪ ॥

ಸ್ವಪಾದಮೂಲೇ ಪತಿತಂ ತಮರ್ಭಕಂ
ವಿಲೋಕ್ಯ ದೇವಃ ಕೃಪಯಾ ಪರಿಪ್ಲುತಃ ।
ಉತ್ಥಾಪ್ಯ ತಚ್ಛೀರ್ಷ್ಣ್ಯದಧಾತ್ಕರಾಂಬುಜಂ
ಕಾಲಾಹಿವಿತ್ರಸ್ತಧಿಯಾಂ ಕೃತಾಭಯಮ್ ॥ ೫ ॥

ಸ ತತ್ಕರಸ್ಪರ್ಶಧುತಾಖಿಲಾಶುಭಃ
ಸಪದ್ಯಭಿವ್ಯಕ್ತಪರಾತ್ಮದರ್ಶನಃ ।
ತತ್ಪಾದಪದ್ಮಂ ಹೃದಿ ನಿರ್ವೃತೋ ದಧೌ
ಹೃಷ್ಯತ್ತನುಃ ಕ್ಲಿನ್ನಹೃದಶ್ರುಲೋಚನಃ ॥ ೬ ॥

ಅಸ್ತೌಷೀದ್ಧರಿಮೇಕಾಗ್ರಮನಸಾ ಸುಸಮಾಹಿತಃ ।
ಪ್ರೇಮಗದ್ಗದಯಾ ವಾಚಾ ತನ್ನ್ಯಸ್ತಹೃದಯೇಕ್ಷಣಃ ॥ ೭ ॥

ಪ್ರಹ್ಲಾದ ಉವಾಚ

ಬ್ರಹ್ಮಾದಯಃ ಸುರಗಣಾ ಮುನಯೋಽಥ ಸಿದ್ಧಾಃ
ಸತ್ತ್ವೈಕತಾನಮತಯೋ ವಚಸಾಂ ಪ್ರವಾಹೈಃ ।
ನಾರಾಧಿತುಂ ಪುರುಗುಣೈರಧುನಾಪಿ ಪಿಪ್ರುಃ
ಕಿಂ ತೋಷ್ಟುಮರ್ಹತಿ ಸ ಮೇ ಹರಿರುಗ್ರಜಾತೇಃ ॥ ೮ ॥

ಮನ್ಯೇ ಧನಾಭಿಜನರೂಪತಪಃಶ್ರುತೌಜಃ
ತೇಜಃ ಪ್ರಭಾವಬಲಪೌರುಷಬುದ್ಧಿಯೋಗಾಃ ।
ನಾರಾಧನಾಯ ಹಿ ಭವಂತಿ ಪರಸ್ಯ ಪುಂಸೋ
ಭಕ್ತ್ಯಾ ತುತೋಷ ಭಗವಾನ್ಗಜಯೂಥಪಾಯ ॥ ೯ ॥

ವಿಪ್ರಾದ್ದ್ವಿಷಡ್ಗುಣಯುತಾದರವಿಂದನಾಭ-
ಪಾದಾರವಿಂದವಿಮುಖಾಚ್ಛ್ವಪಚಂ ವರಿಷ್ಠಮ್ ।
ಮನ್ಯೇ ತದರ್ಪಿತಮನೋವಚನೇಹಿತಾರ್ಥ-
ಪ್ರಾಣಂ ಪುನಾತಿ ಸ ಕುಲಂ ನ ತು ಭೂರಿಮಾನಃ ॥ ೧೦ ॥

ನೈವಾತ್ಮನಃ ಪ್ರಭುರಯಂ ನಿಜಲಾಭಪೂರ್ಣೋ
ಮಾನಂ ಜನಾದವಿದುಷಃ ಕರುಣೋ ವೃಣೀತೇ ।
ಯದ್ಯಜ್ಜನೋ ಭಗವತೇ ವಿದಧೀತ ಮಾನಂ
ತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ ॥ ೧೧ ॥

ಹೀಗೆ ಆ ಬಾಲಕನು ತನ್ನ ಪಾದಮೂಲದಲ್ಲಿ ಅಡ್ಡಬಿದ್ದಿರುವುದನ್ನು ಕಂಡು ದೇವದೇವನ ಹೃದಯವು ಕರುಣೆಯಿಂದ ತುಂಬಿಬಂತು. ಆತನು ಆ ಬಾಲಕನನ್ನು ಎಬ್ಬಿಸಿ ಕಾಳಸರ್ಪಕ್ಕೆ ಹೆದರಿದವರಿಗೆ ಅಭಯಪ್ರದಾನವನ್ನು ಮಾಡುವ ತನ್ನ ಕರಕಮಲವನ್ನು ಅವನ ಶಿರದಲ್ಲಿರಿಸಿದನು. ॥ ೫ ॥ ಭಗವಂತನ ಕರಕಮಲಗಳ ಸ್ಪರ್ಶವಾಗುತ್ತಲೇ ಪ್ರಹ್ಲಾದನಲ್ಲಿ ಉಳಿದಿದ್ದ ಅಲ್ಪ-ಸ್ವಲ್ಪ ಅಶುಭ ಸಂಸ್ಕಾರಗಳು ತೊಳೆದುಹೋದುವು. ಒಡನೆಯೇ ಆತನಿಗೆ ಪರಮಾತ್ಮನ ತತ್ತ್ವದ ಸಾಕ್ಷಾತ್ಕಾರವಾಯಿತು. ಅವನು ಪರಮಪ್ರೇಮದ ಆನಂದದಲ್ಲಿ ಮುಳುಗಿ ಭಗವಂತನ ಚರಣಕಮಲಗಳನ್ನು ತನ್ನ ಹೃದಯದಲ್ಲಿ ಧರಿಸಿಕೊಂಡನು. ಆಗ ಅವನ ಶರೀರವೆಲ್ಲ ಪುಳಕಿತವಾಗಿ, ಹೃದಯದಲ್ಲಿ ಪ್ರೇಮದ ಪ್ರವಾಹ ಹರಿಯತೊಡಗಿತು ಮತ್ತು ಕಣ್ಣುಗಳಿಂದ ಆನಂದಾಶ್ರುಗಳು ಹರಿಯ ತೊಡಗಿತು. ॥ ೬ ॥ ಪ್ರಹ್ಲಾದನು ಭಾವತುಂಬಿದ ಹೃದಯ ಮತ್ತು ರೆಪ್ಪೆಮಿಟುಕಿಸದ ಕಣ್ಣುಗಳಿಂದ ಭಗವಂತನನ್ನು ನೋಡುತ್ತಲೇ ಇದ್ದನು. ಭಾವಸಮಾಧಿಯಿಂದ ಸ್ವಯಂ ಏಕಾಗ್ರವಾದ ಮನಸ್ಸಿನಿಂದ ಅವನು ಭಗವಂತನ ಗುಣಗಳನ್ನು ಚಿಂತಿಸುತ್ತಾ ಪ್ರೇಮಗದ್ಗದ ವಾಣಿಯಿಂದ ಹೀಗೆ ಸ್ತುತಿಸಿದನು. ॥ ೭ ॥

**ಪ್ರಹ್ಲಾದನು ಹೇಳಿದನು** – ಬ್ರಹ್ಮಾದಿದೇವತೆಗಳು, ಋಷಿ-ಮುನಿಗಳ, ಸಿದ್ಧಪುರುಷರ ಬುದ್ಧಿಯು ನಿರಂತರ ಸತ್ತ್ವಗುಣದಲ್ಲೇ ನೆಲೆಸಿರುತ್ತದೆ. ಹೀಗಿದ್ದರೂ ಅವರಿಂದ ತಮ್ಮ ಧಾರಾಪ್ರವಾಹ ಸ್ತುತಿಗಳಿಂದ ಮತ್ತು ತಮ್ಮ ನಾನಾ ಗುಣಾತಿಶಯಗಳಿಂದ ನಿನ್ನನ್ನು ಇಷ್ಟರವರೆಗೆ ಸಂತುಷ್ಟಗೊಳಿಸಲಾಗಲಿಲ್ಲ. ಮತ್ತೆ ನಾನಾದರೋ ಘೋರ ಅಸುರ ಜಾತಿಯಲ್ಲಿ ಹುಟ್ಟಿರುವೆನು. ನಾನು ಶ್ರೀಹರಿಯನ್ನು ಸಂತುಷ್ಟಗೊಳಿಸಲು ಸಾಧ್ಯವೇ ? ॥ ೮ ॥ ಧನ, ಶ್ರೇಷ್ಠಕುಲ, ರೂಪ, ತಪಸ್ಸು, ವಿದ್ಯೆ, ಓಜಸ್ಸು, ತೇಜಸ್ಸು, ಪ್ರಭಾವ, ಬಲ, ಪೌರುಷ, ಬುದ್ಧಿ ಮತ್ತು ಯೋಗ – ಇವೆಲ್ಲ ಗುಣಗಳು ಪರಮಪುರುಷ ಭಗವಂತನನ್ನು ಸಂತುಷ್ಟಗೊಳಿಸಲು ಸಮರ್ಥವಾಗಲಾರವು ಎಂದೇ ನಾನು ತಿಳಿಯುತ್ತೇನೆ. ಆದರೆ ಭಕ್ತಿಯಿಂದಲೇ ಭಗವಂತನು ಗಜೇಂದ್ರನ ಮೇಲೆಯೂ ಸಂತುಷ್ಟನಾಗಿದ್ದನು. ॥ ೯ ॥ ಈ ಹನ್ನೆರಡು ಗುಣಗಳಿಂದ ಕೂಡಿದ ಬ್ರಾಹ್ಮಣನು ಭಗವಂತನಾದ ಕಮಲನಾಭನ ಚರಣಕಮಲಗಳಿಂದ ವಿಮುಖನಾಗಿದ್ದರೆ, ಅವನಿಗಿಂತ ತನ್ನ ಮನ, ವಚನ, ಕರ್ಮ, ಧನ ಮತ್ತು ಪ್ರಾಣಗಳನ್ನು ಭಗವಂತನ ಚರಣಗಳಲ್ಲಿ ಅರ್ಪಿಸಿದ ಚಾಂಡಾಲನೇ ಶ್ರೇಷ್ಠನೆಂದು ನಾನು ತಿಳಿಯುತ್ತೇನೆ. ಏಕೆಂದರೆ, ಆ ಚಾಂಡಾಲನಾದರೋ ತಾನು ಪವಿತ್ರನಾಗುವುದರೊಂದಿಗೆ ತನ್ನ ಕುಲವನ್ನೂ ಪವಿತ್ರಗೊಳಿಸುತ್ತಾನೆ. ಆದರೆ ದುರಭಿಮಾನಿಯಾದ ಬ್ರಾಹ್ಮಣನಾದರೋ ತನ್ನನ್ನೂ ಕೂಡ ಪವಿತ್ರವಾಗಿಸಿಕೊಳ್ಳಲಾರನು. ॥ ೧೦ ॥ ಸ್ವಸ್ವರೂಪದಲ್ಲಿದ್ದು ಅದರ ಅನುಭವದಲ್ಲೇ ಪರಿಪೂರ್ಣನಾಗಿರುವ ಆ ಮಹಾಪ್ರಭುವಿಗೆ ಕ್ಷುದ್ರ ಪುರುಷರು ಮಾಡುವ ಆರಾಧನೆಯ ಅಪೇಕ್ಷೆಯೇನೂ ಇಲ್ಲ. ಆದರೂ ಕರುಣಾಪೂರ್ಣನಾಗಿರುವ ಈತನು ಭಕ್ತರ ಹಿತಕ್ಕಾಗಿ ಅವರು ಮಾಡುವ ಪೂಜೆಯನ್ನು ಸರಳಹೃದಯದಿಂದ

ತಸ್ಮಾದಹಂ ವಿಗತವಿಕ್ಲವ ಈಶ್ವರಸ್ಯ
ಸರ್ವಾತ್ಮನಾ ಮಹಿ ಗೃಣಾಮಿ ಯಥಾಮನೀಷಮ್ ।
ನೀಚೋಽಜಯಾ ಗುಣವಿಸರ್ಗಮನುಪ್ರವಿಷ್ಟಃ
ಪೂಯೇತ ಯೇನ ಹಿ ಪುಮಾನನುವರ್ಣಿತೇನ ॥ ೧೨ ॥

ಸರ್ವೇ ಹ್ಯಮೀ ವಿಧಿಕರಾಸ್ತವ ಸತ್ತ್ವಧಾಮ್ನೋ
ಬ್ರಹ್ಮಾದಯೋ ವಯಮಿವೇಶ ನ ಚೋದ್ವಿಜಂತಃ ।
ಕ್ಷೇಮಾಯ ಭೂತಯ ಉತಾತ್ಮಸುಖಾಯ ಚಾಸ್ಯ
ವಿಕ್ರೀಡಿತಂ ಭಗವತೋ ರುಚಿರಾವತಾರೈಃ ॥ ೧೩ ॥

ತದ್ಯಚ್ಛ ಮನ್ಯುಮಸುರಶ್ಚ ಹತಸ್ತ್ವಯಾದ್ಯ
ಮೋದೇತ ಸಾಧುರಪಿ ವೃಶ್ಚಿಕಸರ್ಪಹತ್ಯಾ ।
ಲೋಕಾಶ್ಚ ನಿರ್ವೃತಿಮಿತಾಃ ಪ್ರತಿಯಂತಿ ಸರ್ವೇ
ರೂಪಂ ನೃಸಿಂಹ ವಿಭಯಾಯ ಜನಾಃ ಸ್ಮರಂತಿ ॥ ೧೪ ॥

ನಾಹಂ ಬಿಭೇಮ್ಯಜಿತ ತೇಽತಿಭಯಾನಕಾಸ್ಯ-
ಜಿಹ್ವಾರ್ಕನೇತ್ರಭ್ರುಕುಟೀರಭಸೋಗ್ರದಂಷ್ಟ್ರಾತ್ ।
ಆಂತ್ರಸ್ರಜಃ ಕ್ಷತಜಕೇಸರಶಂಕುಕರ್ಣಾ-
ನ್ನಿರ್ಹ್ರಾದಭೀತದಿಗಿಭಾದರಿಭಿನ್ನಖಾಗ್ರಾತ್ ॥ ೧೫ ॥

ತ್ರಸ್ತೋಽಸ್ಮ್ಯಹಂ ಕೃಪಣವತ್ಸಲ ದುಃಸಹೋಗ್ರ-
ಸಂಸಾರಚಕ್ರಕದನಾದ್ಗ್ರಸತಾಂ ಪ್ರಣೀತಃ ।
ಬದ್ಧಃ ಸ್ವಕರ್ಮಭಿರುಶತ್ತಮ ತೇಽಂಘ್ರಿಮೂಲಂ
ಪ್ರೀತೋಽಪವರ್ಗಶರಣಂ ಹ್ವಯಸೇ ಕದಾ ನು ॥ ೧೬ ॥

ಸ್ವೀಕರಿಸುತ್ತಾನೆ. ಮುಖವು ಸುಂದರವಾಗಿದ್ದರೆ ಅದು ಕನ್ನಡಿಯಲ್ಲಿ ಕಾಣುವ ತನ್ನ ಪ್ರತಿಬಿಂಬವನ್ನೂ ಸುಂದರವಾಗಿಸುತ್ತದೆ. ಹಾಗೆಯೇ ಶ್ರೀಭಗವಂತನನ್ನು ಸತ್ಯ-ಶಿವ-ಸುಂದರನಾಗಿ ಪೂಜಿಸಿದರೆ ಆ ಸತ್ಯ-ಶಿವ-ಸೌಂದರ್ಯಗಳು ಭಕ್ತನಿಗೂ ಬಂದುಸೇರುತ್ತವೆ ॥ ೧೧ ॥ ಅದಕ್ಕಾಗಿ ನಾನು ಶ್ರೀಭಗವಂತನನ್ನು ಸ್ತುತಿಸುವುದಕ್ಕೆ ಸರ್ವಥಾ ಅಯೋಗ್ಯನೂ, ಅನಧಿಕಾರಿಯೂ ಆಗಿದ್ದರೂ – ನನ್ನ ಬುದ್ಧಿಶಕ್ತಿಗೆ ಅನುಗುಣವಾಗಿ ಯಾವ ಶಂಕೆಯೂ ಇಲ್ಲದೇ ಈತನ ಮಹಿಮೆಯನ್ನು ಕೊಂಡಾಡುತ್ತಿದ್ದೇನೆ. ಈ ಮಹಿಮೆಯ ಗಾನಕ್ಕೆ ಎಷ್ಟು ಪ್ರಭಾವವಿದೆಯೆಂದರೆ – ಅವಿದ್ಯೆಯಿಂದ ಸಂಸಾರಚಕ್ರದಲ್ಲಿ ಸಿಕ್ಕಿಕೊಂಡಿರುವ ಜೀವನು ತತ್ಕಾಲದಲ್ಲೇ ಪವಿತ್ರವಾಗಿ ಹೋಗುತ್ತಾನೆ. ॥ ೧೨ ॥

ಓ ಭಗವಂತಾ! ನೀನು ಸತ್ತ್ವಗುಣಕ್ಕೆ ಆಶ್ರಯನಾಗಿರುವೆ. ಈ ಬ್ರಹ್ಮಾದಿ ದೇವತೆಗಳೆಲ್ಲರೂ ನಿನ್ನ ಆಜ್ಞಾಕಾರೀ ಭಕ್ತರಾಗಿದ್ದಾರೆ. ಇವರು ನಮ್ಮಂತೆ ಉದ್ವೇಗವಿಲ್ಲದೆ, ದ್ವೇಷವಿಲ್ಲದೆ ನಿನ್ನ ಸೇವೆಯನ್ನು ಮಾಡುತ್ತಾರೆ. ನೀನು ಅತಿಸುಂದರವಾದ ದೊಡ್ಡ-ದೊಡ್ಡ ಅವತಾರಗಳನ್ನು ಮಾಡಿ ಈ ಜಗತ್ತಿಗೆ ಕಲ್ಯಾಣವನ್ನೂ, ಏಳಿಗೆಯನ್ನೂ ಆತ್ಮಾನಂದವನ್ನೂ ಅನುಗ್ರಹಿಸುವುದಕ್ಕಾಗಿಯೇ ಬಗೆ-ಬಗೆಯ ಲೀಲೆಗಳನ್ನು ಮಾಡುತ್ತಿರುವೆ. ಈ ನರಸಿಂಹಾವತಾರವೂ ಅತ್ಯಂತ ದಿವ್ಯವಾದ ಲೀಲೆಯೇ. ॥ ೧೩ ॥ ಯಾವ ಅಸುರನನ್ನು ಕೊಲ್ಲುವುದಕ್ಕಾಗಿ ನೀನು ಕ್ರೋಧ ಗೊಂಡೆಯೋ ಅವನು ವಧಿಸಲ್ಪಟ್ಟನು. ಈಗ ನೀನು ನಿನ್ನ ಕ್ರೋಧವನ್ನು ಶಾಂತಗೊಳಿಸು. ಹಾವು-ಚೇಳುಗಳ ಸಾವಿನಿಂದ ಸಜ್ಜನರೂ ಕೂಡ ಸುಖಿಗಳಾಗುವಂತೆಯೇ ಈ ದೈತ್ಯನ ಸಂಹಾರದಿಂದ ಎಲ್ಲ ಜನರಿಗೂ ತುಂಬಾ ಸುಖವು ಉಂಟಾಗಿದೆ. ಈಗ ಎಲ್ಲರೂ ನಿನ್ನ ಶಾಂತಸ್ವರೂಪವನ್ನು ದರ್ಶಿಸಲು ದಾರಿ ನೋಡುತ್ತಿದ್ದಾರೆ. ಓ ನರಸಿಂಹ! ಭಯದಿಂದ ಮುಕ್ತರಾಗಲು ಭಕ್ತರು ನಿನ್ನ ಈ ರೂಪವನ್ನು ಸ್ಮರಿಸುವರು. ॥ ೧೪ ॥ ಪರಮಾತ್ಮನೇ! ನಿನ್ನ ಮುಖವು ಅತಿಭಯಂಕರವಾಗಿದೆ. ನಾಲಿಗೆಯು ಭೀಕರವಾಗಿ ಹೊರಕ್ಕೆ ಚಾಚಿದೆ. ಕಣ್ಣುಗಳು ಸೂರ್ಯನಂತೆ ಹೊಳೆಯುತ್ತಿವೆ. ಹುಬ್ಬುಗಳು ಮೇಲಕ್ಕೆದ್ದಿವೆ. ಕೋರೆದಾಡೆಗಳು ಕ್ರೂರಾಗಿವೆ (ತೀಕ್ಷ್ಣವಾಗಿವೆ). ನೀನು ಧರಿಸಿರುವ ಕರುಳಮಾಲೆಗಳು, ರಕ್ತದಿಂದ ತೊಯ್ದಿರುವ ಕೇಸರಗಳು, ಮೇಲಕ್ಕೆ ನಿಮಿರಿನಿಂತಿರುವ ಕಿವಿಗಳು, ದಿಗ್ಗಜಗಳನ್ನು ಭಯಪಡಿಸುವ ಸಿಂಹ ಗರ್ಜನೆ ಮತ್ತು ಶತ್ರುಗಳನ್ನು ಸೀಳಿಹಾಕುವಂತಹ ಉಗುರುಗಳು – ಇವೆಲ್ಲ ಅತಿಭಯಂಕರವಾಗಿದ್ದರೂ ನಾನು ಇವುಗಳನ್ನು ಕಂಡು ಸ್ವಲ್ಪವೂ ಭಯಪಡುವುದಿಲ್ಲ. ॥ ೧೫ ॥ ದೀನಬಂಧುವೇ! ಆದರೆ ನಾನು ಈ ಅಸಹ್ಯವೂ, ಉಗ್ರವೂ ಆದ ಸಂಸಾರಚಕ್ರದಲ್ಲಿ ಬಿದ್ದು ಕಬ್ಬಿನಂತೆ ಅಗಿಯಲ್ಪಡುತ್ತಿರುವುದರಿಂದ ಕರ್ಮಪಾಶಗಳಿಗೆ ಸಿಲುಕಿ ಈ ಭಯಂಕರವಾದ ಜಂತುಗಳ ಮಧ್ಯದಲ್ಲಿ ಬಿದ್ದಿದ್ದೇನೆ. ನನ್ನ ಸ್ವಾಮಿಯೇ! ನೀನು ಪ್ರಸನ್ನನಾಗಿ ಸಮಸ್ತ ಜೀವಿಗಳಿಗೂ ಏಕೈಕ ರಕ್ಷಕವಾದ ಮೋಕ್ಷಸ್ವರೂಪವೇ ಆಗಿರುವ ನಿನ್ನ ಪಾದಾರವಿಂದಗಳಲ್ಲಿ ನನ್ನನ್ನು ಎಂದು ಕರೆಸಿ ಕೊಳ್ಳುವೆ? ॥ ೧೬ ॥ ಪ್ರಭೋ! ಅನಂತ! ನಾನು ಇಷ್ಟರವರೆಗೆ ಹುಟ್ಟಿದ ಎಲ್ಲ ಯೋನಿಗಳಲ್ಲಿಯೂ ಇಷ್ಟಪದಾರ್ಥ

ಯಸ್ಮಾತ್ಪ್ರಿಯಾಪ್ರಿಯವಿಯೋಗಸಯೋಗಜನ್ಮ-
ಶೋಕಾಗ್ನಿನಾ ಸಕಲಯೋನಿಷು ದಹ್ಯಮಾನಃ ।
ದುಃಖೌಷಧಂ ತದಪಿ ದುಃಖಮತದ್ಧಿಯಾಹಂ
ಭೂಮನ್ ಭ್ರಮಾಮಿ ವದ ಮೇ ತವ ದಾಸ್ಯಯೋಗಮ್ ॥ ೧೭ ॥

ಸೋಽಹಂ ಪ್ರಿಯಸ್ಯ ಸುಹೃದಃ ಪರದೇವತಾಯಾ
ಲೀಲಾಕಥಾಸ್ತವ ನೃಸಿಂಹ ವಿರಿಂಚಗೀತಾಃ ।
ಅಂಜಸ್ತಿತರ್ಮ್ಯನುಗೃಣನ್ಗುಣವಿಪ್ರಮುಕ್ತೋ
ದುರ್ಗಾಣಿ ತೇ ಪದಯುಗಾಲಯಹಂಸಸಂಗಃ ॥ ೧೮ ॥

ಬಾಲಸ್ಯ ನೇಹ ಶರಣಂ ಪಿತರೌ ನೃಸಿಂಹ
ನಾರ್ತಸ್ಯ ಚಾಗದಮುದನ್ವತಿ ಮಜ್ಜತೋ ನೌಃ ।
ತಪ್ತಸ್ಯ ತತ್ಪ್ರತಿವಿಧಿರ್ಯ ಇಹಾಂಜಸೇಷ್ಟ-
ಸ್ತಾವದ್ವಿಭೋ ತನುಭೃತಾಂ ತ್ವದುಪೇಕ್ಷಿತಾನಾಮ್ ॥ ೧೯ ॥

ಯಸ್ಮಿನ್ಯತೋ ಯರ್ಹಿ ಯೇನ ಚ ಯಸ್ಯ ಯಸ್ಮಾದ್
ಯಸ್ಮೈ ಯಥಾ ಯದುತ ಯಸ್ತ್ವಪರಃ ಪರೋ ವಾ ।
ಭಾವಃ ಕರೋತಿ ವಿಕರೋತಿ ಪೃಥಕ್ಸ್ವಭಾವಃ
ಸಂಚೋದಿತಸ್ತದಖಿಲಂ ಭವತಃ ಸ್ವರೂಪಮ್ ॥ ೨೦ ॥

ಮಾಯಾ ಮನಃ ಸೃಜತಿ ಕರ್ಮಮಯಂ ಬಲೀಯಃ
ಕಾಲೇನ ಚೋದಿತಗುಣಾನುಮತೇನ ಪುಂಸಃ ।
ಛಂದೋಮಯಂ ಯದಜಯಾರ್ಪಿತಷೋಡಶಾರಂ
ಸಂಸಾರಚಕ್ರಮಜ ಕೋಽತಿತರೇತ್ತ್ವದನ್ಯಃ ॥ ೨೧ ॥

ಗಳ ಅಗಲಿಕೆ, ಅನಿಷ್ಟ ಪದಾರ್ಥಗಳ ಸಂಯೋಗದಿಂದ ಉಂಟಾದ ಶೋಕದ ಬೆಂಕಿಯಲ್ಲಿ ಬೇಯುತ್ತಾ ಬಂದಿದ್ದೇನೆ. ಈ ದುಃಖಗಳನ್ನು ಹೋಗಲಾಡಿಸಲು ಬಳಸಿದ ಔಷಧಗಳೂ ದುಃಖರೂಪವೇ ಆಗಿವೆ. ಇದರ ಪರಿಹಾರಕ್ಕಾಗಿ ನಿನ್ನ ಅತ್ಯಂತಿಕ ದಾಸರಾದ ನಾರದಾದಿ ಮಹಾತ್ಮರ ಸಂಗವು ಸದಾಕಾಲ ನನಗೆ ದೊರಕುತ್ತಿರಲಿ. ಅದರಿಂದ ನಿನ್ನ ದಿವ್ಯಲೀಲೆಗಳ ಚರ್ಚೆ ನಡೆಯುತ್ತಾ, ಆತ್ಮಸ್ವರೂಪದ ಅರಿವು ಉಂಟಾದೀತು. ॥ ೧೭ ॥ ಪ್ರಭೋ ! ನೀನು ನಮಗೆ ಅತ್ಯಂತ ಪ್ರಿಯನಾದವನು. ಅಹೈತುಕ ಹಿತೈಷಿಯೂ, ಪರಮಮಿತ್ರನೂ ಆಗಿರುವೆ. ನೀನೇ ನಿಜವಾಗಿ ಎಲ್ಲರ ಪರಮಾರಾಧ್ಯನಾಗಿರುವ ಪರದೇವತೆಯು. ಬ್ರಹ್ಮದೇವರಿಂದ ಗಾನಮಾಡಲ್ಪಟ್ಟ ನಿನ್ನ ಲೀಲಾ-ಕಥೆಗಳನ್ನು ಹಾಡುತ್ತಾ ನಾನು ತುಂಬಾ ಸುಲಭವಾಗಿ ರಾಗವೇ ಮುಂತಾದ ಪ್ರಾಕೃತಗುಣಗಳಿಂದ ಮುಕ್ತನಾಗಿ ಈ ಸಂಸಾರದ ಸಂಕಷ್ಟಗಳಿಂದ ದಾಟಿ ಬಿಡುವೆನು. ಏಕೆಂದರೆ, ನಿನ್ನ ಚರಣಯುಗಳಗಳಲ್ಲಿ ವಾಸ ಮಾಡುವ ಭಕ್ತರಾದ ಪರಮಹಂಸ ಮಹಾತ್ಮರ ಸಂಗವಾದರೋ ನನಗೆ ದೊರೆಯುತ್ತಲೇ ಇರುವುದು. ॥ ೧೮ ॥ ಭಗವಾನ್ ನರಸಿಂಹನೇ ! ಈ ಲೋಕದಲ್ಲಿ ಜೀವಿಗಳ ದುಃಖಗಳನ್ನು ಹೋಗಲಾಡಿಸಲು ಮಾಡಲಾಗುವ ಉಪಾಯಗಳೆಲ್ಲವನ್ನು ನೀನು ಉಪೇಕ್ಷೆ ಮಾಡಿದರೆ ಕ್ಷಣಕಾಲವೂ ಉಳಿಯಲಾರವು. ನೀನು ಉಪೇಕ್ಷೆ ಮಾಡಿದರೆ ತಂದೆ-ತಾಯಿಗಳು ಬಾಲಕನನ್ನು ರಕ್ಷಿಸಲಾರರು, ಔಷಧಿಯು ರೋಗವನ್ನು ಗುಣಪಡಿಸಲಾರದು. ಕಡಲಿನಲ್ಲಿ ಮುಳುಗುತ್ತಿರುವವನನ್ನು ಹಡಗು ಕಾಪಾಡಲಾರದು. ॥ ೧೯ ॥ ಸತ್ತ್ವಾದಿ ಗುಣಗಳಿಂದ ಬೇರೆ-ಬೇರೆ ಸ್ವಭಾವವುಳ್ಳ ಶ್ರೇಷ್ಠ ಬ್ರಹ್ಮಾದಿಗಳು ಮತ್ತು ಕಾಲವೇ ಮುಂತಾದ ಕನಿಷ್ಠ ಕರ್ತೃಗಳಿದ್ದಾರೋ, ಅವರೆಲ್ಲರನ್ನೂ ಪ್ರೇರಿಸುವವನು ನೀನೇ ಆಗಿದ್ದೀಯೆ. ನಿನ್ನ ಪ್ರೇರಣೆಯಿಂದ ಅವರು ಯಾವುದನ್ನು ಆಧರಿಸಿ, ಯಾವ ಕಾರಣದಿಂದ, ಯಾವ ಉಪಕರಣಗಳಿಂದ, ಯಾವ ಸಮಯದಲ್ಲಿ, ಯಾವ ಸಾಧನಗಳಿಂದ, ಯಾವ ಸಹಾಯದಿಂದ, ಯಾವ ಪ್ರಯೋಜನಕ್ಕಾಗಿ, ಯಾವ ವಿಧಿಯಿಂದ, ಏನೇನನ್ನು ಸೃಷ್ಟಿಸುತ್ತಾರೋ ಅಥವಾ ವಿಕಾರಗೊಳಿಸುತ್ತಾರೋ ಅದೆಲ್ಲವೂ ನಿನ್ನ ಸ್ವರೂಪವೇ ಆಗಿದೆ. ॥ ೨೦ ॥

ಓ ಜನ್ಮರಹಿತನಾದ ಪ್ರಭುವೇ ! ಪುರುಷನ ಅನುಮತಿಯಂತೆ ಕಾಲನ ಮೂಲಕ ಗುಣಗಳಲ್ಲಿ ಕ್ಷೋಭೆಯು ಉಂಟಾದಾಗ ಮಾಯೆಯು ಮನಃಪ್ರಧಾನವಾದ ಲಿಂಗಶರೀರವನ್ನು ನಿರ್ಮಾಣ ಮಾಡುತ್ತಾಳೆ. ಈ ಲಿಂಗಶರೀರವು ಬಲಶಾಲಿಯೂ, ಕರ್ಮಮಯವೂ, ಅನೇಕ ನಾಮ-ರೂಪಗಳಲ್ಲಿ ಆಸಕ್ತವೂ, ಛಂದೋಮಯವೂ ಆಗಿದೆ. ಇದೇ ಅವಿದ್ಯೆಯಿಂದ ಕಲ್ಪಿತ ಮನಸ್ಸು, ಹತ್ತು ಇಂದ್ರಿಯಗಳು, ಐದು ತನ್ಮಾತ್ರೆಗಳು – ಈ ಹದಿನಾರು ವಿಕಾರರೂಪವಾದ ಅರೆಪಟ್ಟೆಗಳಿಂದ ಕೂಡಿದ ಸಂಸಾರಚಕ್ರವಾಗಿದೆ. ನಿನ್ನಿಂದ ಬೇರೆಯಾಗಿದ್ದು ಈ ಮನರೂಪ ಸಂಸಾರಚಕ್ರವನ್ನು ಯಾರುತಾನೇ ದಾಟಿಹೋದಾನು ? ॥ ೨೧ ॥ ಸರ್ವಶಕ್ತಿಯುಳ್ಳ ಪ್ರಭೋ ! ಮಾಯೆಯು ಈ ಹದಿನಾರು ಅರೆಗಳುಳ್ಳ ಸಂಸಾರಚಕ್ರದಲ್ಲಿ ನನ್ನನ್ನು ಕೆಡವಿ ಕಬ್ಬಿನಂತೆ ಹಿಂಡುತ್ತಿದೆ. ನೀನು ನಿನ್ನ

ಸ ತ್ವಂ ಹಿ ನಿತ್ಯವಿಜಿತಾತ್ಮಗುಣಃ ಸ್ವಧಾಮ್ನಾ
ಕಾಲೋ ವಶೀಕೃತವಿಸೃಜ್ಯ ವಿಸರ್ಗಶಕ್ತಿಃ ।
ಚಕ್ರೇ ವಿಸೃಷ್ಟಮಜಯೇಶ್ವರ ಷೋಡಶಾರೇ
ನಿಷ್ಪೀಡ್ಯಮಾನಮುಪಕರ್ಷ ವಿಭೋ ಪ್ರಪನ್ನಮ್ ॥ ೨೨ ॥

ಚೈತನ್ಯಶಕ್ತಿಯಿಂದ ಬುದ್ಧಿಯು ಸಮಸ್ತ ಗುಣಗಳನ್ನು ಸದಾ ಗೆದ್ದವನಾಗಿ, ಕಾಲರೂಪದಿಂದ ಸಾಧ್ಯ-ಸಾಧನಗಳೆಲ್ಲವನ್ನೂ ಸ್ವಾಧೀನದಲ್ಲಿಟ್ಟುಕೊಂಡಿರುವವನು. ಇಂತಹ ನಿನ್ನನ್ನು ನಾನು ಶರಣು ಹೊಂದಿರುವೆನು. ನನ್ನನ್ನು ಈ ಮಾಯಾಚಕ್ರದಿಂದ ದಾಟಿಸಿ ನಿನ್ನ ಸನ್ನಿಧಿಗೆ ಸೆಳೆದುಕೋ ಸ್ವಾಮಿ! ॥ ೨೨ ॥ ಓ ಭಗವಂತಾ! ಸಂಸಾರದ ಜನರು ಯಾವುದನ್ನು ಪಡೆಯಲು ಹಾತೊರೆಯುತ್ತಿರುತ್ತಾರೋ ಆ ಸ್ವರ್ಗದಲ್ಲಿ ಸಿಗಬಹುದಾದ ಸಮಸ್ತ ಲೋಕಪಾಲರ ಆಯುಸ್ಸು, ಸಂಪತ್ತು, ಐಶ್ವರ್ಯ ಎಲ್ಲವನ್ನೂ ನಾನು ನೋಡಿಯಾಯಿತು. ನನ್ನ ತಂದೆಯು ಸ್ವಲ್ಪ ಕೋಪಗೊಂಡು ನಕ್ಕಾಗ, ಆತನು ಹುಬ್ಬುಗಳನ್ನು ಸ್ವಲ್ಪ ಓರೆಯಾಗಿಸಿದರೆ – ಅವರೆಲ್ಲರೂ ಚೆಲ್ಲಾಪಿಲ್ಲಿಯಾಗಿ ಚದುರಿಹೋಗುತ್ತಿದ್ದರು. ಅಂತಹ ಮಹಾ ಪರಾಕ್ರಮಶಾಲಿಯಾದ ನನ್ನ ತಂದೆಯನ್ನೇ ನೀನು ಸಂಹಾರ ಮಾಡಿಬಿಟ್ಟೆ. ॥ ೨೩ ॥ ಪ್ರಪಂಚದ ಜನರು ಬಯಸುವಂತಹ ಬ್ರಹ್ಮಲೋಕದವರೆಗಿನ ಆಯುಸ್ಸು, ಸಂಪತ್ತು, ಐಶ್ವರ್ಯ, ಇಂದ್ರಿಯಗಳ ಭೋಗ – ಇವು ಯಾವುದನ್ನೂ ನಾನು ಬಯಸುವುದಿಲ್ಲ. ಏಕೆಂದರೆ, ನೀನು ಮಹಾಬಲಶಾಲಿಯಾದ ಕಾಲನ ರೂಪವನ್ನು ಧರಿಸಿ ಅವೆಲ್ಲವನ್ನೂ ಕಬಳಿಸುವೆ ಎಂಬುದು ನನಗೆ ಗೊತ್ತು. ಆದಕ್ಕಾಗಿ ನಿನ್ನ ಸೇವಕರ ಸನ್ನಿಧಿಗೆ ನನ್ನನ್ನು ಕರೆದುಕೊಂಡು ಹೋಗು. ॥ ೨೪ ॥ ವಿಷಯ ಸುಖಭೋಗಗಳ ಮಾತುಗಳು ಕೇಳುವುದಕ್ಕೇನೋ ಚೆನ್ನಾಗಿರುತ್ತವೆ. ಆದರೆ ವಾಸ್ತವವಾಗಿ ಅವು ಬಿಸಿಲ್ಗುದುರೆಯ ನೀರಿನಂತೆ ಆಗಿವೆ. ಅವುಗಳನ್ನು ಭೋಗಿಸಲು ಸಾಧನವಾದ ಶರೀರವಾದರೋ ಎಲ್ಲ ರೋಗಗಳಿಗೆ ನೆಲೆವೀಡಾಗಿದೆ. ಇವೆರಡೂ ಕ್ಷಣಭಂಗುರವೂ ಅಸಾರವೂ ಎಂದು ತಿಳಿದಿದ್ದರೂ ಕೂಡ ಮನುಷ್ಯನಿಗೆ ಇವುಗಳಲ್ಲಿ ವೈರಾಗ್ಯ ಉಂಟಾಗುವುದಿಲ್ಲ. ಆತನು ಅತಿಕಷ್ಟದಿಂದ ದೊರೆಯುವ ವಿಷಯಭೋಗಗಳ ಸಣ್ಣ-ಪುಟ್ಟ ಸಿಹಿಜೇನಿನ ತೊಟ್ಟುಗಳಿಂದ ತನ್ನ ಕಾಮವೆಂಬ ಅಗ್ನಿಯನ್ನು ಆರಿಸಲು ಪ್ರಯತ್ನಿಸುತ್ತಿದ್ದಾನೆ. ॥ ೨೫ ॥ ಪ್ರಭೋ! ತಮೋಗುಣೀ ಅಸುರ ವಂಶದಲ್ಲಿ ರಜೋಗುಣದಿಂದ ಕೂಡಿ ಜನಿಸಿದ ನಾನೆಲ್ಲಿ? ನಿನ್ನ ಪರಮಶ್ರೇಷ್ಠವಾದ ಕೃಪೆಯೆಲ್ಲಿ? ಎಂತಹ ಧನ್ಯನು ನಾನು! ಬ್ರಹ್ಮದೇವರು, ಶಂಕರಪ್ರಭು, ಲಕ್ಷ್ಮೀದೇವಿ – ಇವರ ಶಿರಸ್ಸಿನ ಮೇಲೆ ಇರಿಸದೇ ಇದ್ದ ಸಕಲ ಸಂತಾಪಹರವಾದ ನಿನ್ನ ಅನುಗ್ರಹ ಹಸ್ತಪದ್ಮವನ್ನು ನನ್ನ ತಲೆಯ ಮೇಲೆ ಇರಿಸಿದೆಯಲ್ಲಾ! ॥ ೨೬ ॥ ನೀನು ಎಲ್ಲರಿಗೂ ಆತ್ಮನಾಗಿ ಎಲ್ಲರಿಗೂ ನಿಷ್ಕಾರಣ ಪ್ರೇಮಿಯಾಗಿದ್ದೀಯೆ. ಆದುದರಿಂದ ಸಂಸಾರಿ ಜೀವಿಗಳಲ್ಲಿರುವಂತೆ ನಿನ್ನಲ್ಲಿ ಮೇಲು-ಕೀಳು ಎಂಬ ಭೇದಭಾವನೆಯಿಲ್ಲ. ಆದರೂ ನೀನು ಕಲ್ಪವೃಕ್ಷದಂತೆ ಸೇವೆ ಮಾಡುವುದರಲ್ಲಿ ತಾನೇ ಕರುಣೆ-ಅನುಗ್ರಹವನ್ನು ಹರಿಸುವೆ. ತಮ್ಮ-ತಮ್ಮ ಸೇವೆಗೆ ಅನುಗುಣವಾಗಿ ಅವರು ನಿನ್ನ ಅನುಗ್ರಹವನ್ನು ಸಂಪಾದಿಸಿರುವರು. ಆ ಅನುಗ್ರಹಕ್ಕೆ ಜಾತಿ, ಕುಲ, ವಿದ್ಯೆ ಮುಂತಾದವುಗಳಿಂದ ಬರುವ ಮೇಲು-ಕೀಳು ಭಾವನೆಗಳು ಕಾರಣವಾಗುವುದಿಲ್ಲ. ॥ ೨೭ ॥

ದೃಷ್ಟಾ ಮಯಾ ದಿವಿ ವಿಭೋಽಖಿಲಧಿಷ್ಣ್ಯಪಾನಾ-
ಮಾಯುಃ ಶ್ರಿಯೋ ವಿಭವ ಇಚ್ಛತಿ ಯಾನ್ ಜನೋಽಯಮ್ ।
ಯೇಽಸ್ಮತ್ಪಿತುಃ ಕುಪಿತಹಾಸವಿಜೃಂಭಿತಭ್ರೂ-
ವಿಸ್ಫೂರ್ಜಿತೇನ ಲುಲಿತಾಃ ಸ ತು ತೇ ನಿರಸ್ತಃ ॥ ೨೩ ॥

ತಸ್ಮಾದಮೂಸ್ತನುಭೃತಾಮಹಮಾಶಿಷೋಽಜ್ಞ
ಆಯುಃ ಶ್ರಿಯಂ ವಿಭವಮೈಂದ್ರಿಯಮಾವಿರಿಂಚಾತ್ ।
ನೇಚ್ಛಾಮಿ ತೇ ವಿಲುಲಿತಾನುರುವಿಕ್ರಮೇಣ
ಕಾಲಾತ್ಮನೋಪನಯ ಮಾಂ ನಿಜಭೃತ್ಯಪಾರ್ಶ್ವಮ್ ॥ ೨೪ ॥

ಕುತ್ರಾಶಿಷಃ ಶ್ರುತಿಸುಖಾ ಮೃಗತೃಷ್ಣಿರೂಪಾಃ
ಕ್ವೇದಂ ಕಲೇವರಮಶೇಷರುಜಾಂ ವಿರೋಹಃ ।
ನಿರ್ವಿದ್ಯತೇ ನ ತು ಜನೋ ಯದಪೀತಿ ವಿದ್ವಾನ್
ಕಾಮಾನಲಂ ಮಧುಲವೈಃ ಶಮಯನ್ ದುರಾಪೈಃ ॥ ೨೫ ॥

ಕ್ವಾಹಂ ರಜಃಪ್ರಭವ ಈಶ ತಮೋಽಧಿಕೇಽಸ್ಮಿನ್
ಜಾತಃ ಸುರೇತರಕುಲೇ ಕ್ವ ತವಾನುಕಂಪಾ ।
ನ ಬ್ರಹ್ಮಣೋ ನ ತು ಭವಸ್ಯ ನ ವೈ ರಮಾಯಾ
ಯನ್ಮೇಽರ್ಪಿತಃ ಶಿರಸಿ ಪದ್ಮಕರಃ ಪ್ರಸಾದಃ ॥ ೨೬ ॥

ನೈಷಾ ಪರಾವರಮತಿರ್ಭವತೋ ನನು ಸ್ಯಾ-
ಜ್ಜಂತೋರ್ಯಥಾಽಽತ್ಮಸುಹೃದೋ ಜಗತಸ್ತಥಾಪಿ ।
ಸಂಸೇವಯಾ ಸುರತರೋರಿವ ತೇ ಪ್ರಸಾದಃ
ಸೇವಾನುರೂಪಮುದಯೋ ನ ಪರಾವರತ್ವಮ್ ॥ ೨೭ ॥

ಏವಂ ಜನಂ ನಿಪತಿತಂ ಪ್ರಭವಾಹಿಕೂಪೇ
ಕಾಮಾಭಿಕಾಮಮನು ಯಃ ಪ್ರಪತನ್ಪ್ರಸಂಗಾತ್ ।
ಕೃತ್ವಾಽಽತ್ಮಸಾತ್ಸುರರ್ಷಿಣಾ ಭಗವನ್ಗೃಹೀತಃ
ಸೋಽಹಂ ಕಥಂ ನು ವಿಸೃಜೇ ತವ ಭೃತ್ಯಸೇವಾಮ್ ॥ ೨೮ ॥

ಓ ಭಗವಂತನೇ! ಈ ಸಂಸಾರವೆಂಬುದು ಒಂದು ಕತ್ತಲೆ ತುಂಬಿದ ಬಾವಿಯಾಗಿದೆ. ಇದರಲ್ಲಿ ಕಾಲರೂಪೀ ಸರ್ಪವು ಕಚ್ಚಲು ಸದಾ ಸಿದ್ಧವಾಗಿರುವುದು. ವಿಷಯಭೋಗಗಳನ್ನು ಬಯಸುವ ಜನರು ಇದರಲ್ಲೇ ಬಿದ್ದಿರುವರು. ನಾನೂ ಕೂಡ ಪ್ರಸಂಗವಶಾತ್ ಅವರ ಹಿಂದೆ ಅದರಲ್ಲೇ ಬೀಳುವವನಾಗಿದ್ದೆ. ಆದರೆ ಭಗವಂತಾ! ದೇವಋಷಿ ನಾರದರು ನನ್ನನ್ನು ತನ್ನವನಾಗಿಸಿಕೊಂಡು ಅದರಿಂದ ರಕ್ಷಿಸಿದರು. ಹೀಗಿರುವಾಗ ನಾನು ನಿನ್ನ ಭಕ್ತಜನರ ಸೇವೆಯನ್ನು ಹೇಗೆ ತಾನೇ ಬಿಟ್ಟೇನು? ॥ ೨೮ ॥

ಮತ್ಪ್ರಾಣರಕ್ಷಣಮನಂತ ಪಿತುರ್ವಧಶ್ಚ
ಮನ್ಯೇ ಸ್ವಭೃತ್ಯಋಷಿವಾಕ್ಯಮೃತಂ ವಿಧಾತುಮ್ ।
ಖಡ್ಗಂ ಪ್ರಗೃಹ್ಯ ಯದವೋಚದಸದ್ವಿಧಿತ್ಸು-
ಸ್ತ್ವಾಮೀಶ್ವರೋ ಮದಪರೋಽವತು ಕಂ ಹರಾಮಿ ॥ ೨೯ ॥

ಓ ಅನಂತಪ್ರಭುವೇ! ನನ್ನ ತಂದೆಯು ಅಸತ್ಕಾರ್ಯವನ್ನು ಮಾಡುವುದಕ್ಕಾಗಿ ನಡುಕಟ್ಟಿ ಕೈಯಲ್ಲಿ ಖಡ್ಗವನ್ನು ಧರಿಸಿಕೊಂಡು – 'ಎಲವೋ! ನನ್ನನ್ನು ಬಿಟ್ಟು ಬೇರೆ ದೇವರು ಇದ್ದರೆ ನಿನ್ನನ್ನು ಅವನು ಕಾಪಾಡಲೀ. ನಾನು ನಿನ್ನ ತಲೆಯನ್ನು ಕೊಚ್ಚಿಹಾಕುತ್ತೇನೆ' ಎಂದು ಹೇಳಿದಾಗ, ನೀನು ನನ್ನ ಪ್ರಾಣಗಳನ್ನು ರಕ್ಷಿಸಿ, ನನ್ನ ತಂದೆಯನ್ನು ವಧಿಸಿದೆ. ನೀನು ನಿನ್ನ ಭೃತ್ಯರಾದ ಸನಕಾದಿ ಮಹರ್ಷಿಗಳ ಮಾತನ್ನು ಈಡೇರಿಸಿ ಸತ್ಯಗೊಳಿಸುವುದಕ್ಕಾಗಿಯೇ ಹಾಗೆ ಮಾಡಿದೆ ಎಂದು ಭಾವಿಸುತ್ತೇನೆ. ॥ ೨೯ ॥

ಏಕಸ್ತ್ವಮೇವ ಜಗದೇತದಮುಷ್ಯ ಯತ್ತ್ವ-
ಮಾದ್ಯಂತಯೋಃ ಪೃಥಗವಸ್ಯಸಿ ಮಧ್ಯತಶ್ಚ ।
ಸೃಷ್ಟ್ವಾ ಗುಣವ್ಯತಿಕರಂ ನಿಜಮಾಯಯೇದಂ
ನಾನೇವ ತೈರವಸಿತಸ್ತದನುಪ್ರವಿಷ್ಟಃ ॥ ೩೦ ॥

ಓ ಭಗವಂತನೇ! ಈ ಸಂಪೂರ್ಣ ಜಗತ್ತೆಲ್ಲವೂ ನೀನೊಬ್ಬನೇ ಆಗಿದ್ದೀಯೆ. ಎಲ್ಲವೂ ನಿನ್ನ ವಿಸ್ತಾರವೇ ಆಗಿದೆ. ಇದರ ಆದಿಯಲ್ಲಿಯೂ, ಅಂತ್ಯದಲ್ಲಿಯೂ, ಮಧ್ಯದಲ್ಲಿಯೂ ನೀನೇ ಇರುತ್ತಿದ್ದೀಯೆ. ನಿನ್ನ ಮಾಯಾಶಕ್ತಿಯಿಂದ ಈ ತ್ರಿಗುಣಾತ್ಮಕವಾದ ಜಗತ್ತನ್ನು ಸೃಷ್ಟಿಮಾಡಿ ಅದರ ಒಳಹೊಕ್ಕು ಒಬ್ಬನೇ ಆಗಿದ್ದರೂ ನಾನಾ ರೂಪಗಳಲ್ಲಿರುವಂತೇ ತೋರುತ್ತಿರುವೆ. ॥ ೩೦ ॥

ತ್ವಂ ವಾ ಇದಂ ಸದಸದೀಶ ಭವಾಂಸ್ತತೋಽನ್ಯೋ
ಮಾಯಾ ಯದಾತ್ಮಪರಬುದ್ಧಿರಿಯಂ ಹ್ಯಪಾರ್ಥಾ ।
ಯದ್ಯಸ್ಯ ಜನ್ಮ ನಿಧನಂ ಸ್ಥಿತಿರೀಕ್ಷಣಂ ಚ
ತದ್ವೈ ತದೇವ ವಸುಕಾಲವದಷ್ಟಿತರ್ವೋಃ ॥ ೩೧ ॥

ಭಗವಂತಾ! ಕಾರ್ಯ-ಕಾರಣರೂಪದಿಂದ ಕಂಡುಬರುವುದೆಲ್ಲವೂ ನೀನೇ ಆಗಿರುವೆ ಮತ್ತು ಇದಕ್ಕಿಂತ ಬೇರೆಯಾಗಿರುವ ಪರತತ್ತ್ವವೂ ನೀನೇ ಆಗಿರುವೆ. ತಾನು – ಬೇರೆಯವನು ಎಂಬ ಭೇದಭಾವವೂ ಅರ್ಥಹೀನ ಶಬ್ದಗಳ ಮಾಯೆಯೇ ಆಗಿದೆ. ಏಕೆಂದರೆ, ಯಾರಿಂದ, ಯಾವುದಕ್ಕೆ ಜನ್ಮ, ಸ್ಥಿತಿ, ಲಯ ಮತ್ತು ಪ್ರಕಾಶಗಳು ಉಂಟಾಗುತ್ತವೋ, ಅದು ಅದರ ಸ್ವರೂಪವೇ ಆಗಿರುತ್ತದೆ. ಬೀಜ ಮತ್ತು ವೃಕ್ಷ ಕಾರ್ಯ ಹಾಗೂ ಕಾರಣ ದೃಷ್ಟಿಯಿಂದ ಭಿನ್ನವಾಗಿದ್ದರೂ ಗಂಧ, ತನ್ಮಾತ್ರೆಯ ದೃಷ್ಟಿಯಿಂದ ಎರಡೂ ಒಂದೇ ಆಗಿದೆ. ॥ ೩೧ ॥

ನ್ಯಸ್ಯೇದಮಾತ್ಮನಿ ಜಗದ್ವಿಲಯಾಂಬುಮಧ್ಯೇ
ಶೇಷೇಽಽತ್ಮನಾ ನಿಜಸುಖಾನುಭವೋ ನಿರೀಹಃ ।
ಯೋಗೇನ ಮೀಲಿತದೃಗಾತ್ಮನಿಪೀತನಿದ್ರ-
ಸ್ತುರ್ಯೇ ಸ್ಥಿತೋ ನ ತು ತಮೋ ನ ಗುಣಾಂಶ್ಚ ಯುಂಕ್ಷೇ ॥ ೩೨ ॥

ಓ ಭಗವಂತನೇ! ನೀನು ಈ ಇಡೀ ವಿಶ್ವವನ್ನು ತನ್ನಲ್ಲಿಯೇ ಸೇರಿಸಿಕೊಂಡು ಆತ್ಮಸುಖವನ್ನು ಅನುಭವಿಸುತ್ತಾ ನಿಷ್ಕ್ರಿಯನಾಗಿ ಪ್ರಳಯಜಲದಲ್ಲಿ ಪವಡಿಸುವೆ. ಆಗ ತನ್ನ ಸ್ವಯಂಸಿದ್ಧ ಯೋಗದಿಂದ ಬಾಹ್ಯದೃಷ್ಟಿಯನ್ನು ಮುಚ್ಚಿ ನೀನು ನಿನ್ನ ಸ್ವರೂಪಪ್ರಕಾಶದಲ್ಲಿ ನಿದ್ರೆಯನ್ನು ಲಯಗೊಳಿಸಿ, ತುರೀಯವಾದ ಪರಬ್ರಹ್ಮಪದದಲ್ಲಿ ನೆಲೆಸಿರುವೆ. ಆ ಸಮಯದಲ್ಲಿ ನೀನು ತಮೋಗುಣದಿಂದ ಕೂಡಿರುವುದಿಲ್ಲ ಹಾಗೂ ವಿಷಯಗಳನ್ನು ಸ್ವೀಕರಿಸುವುದಿಲ್ಲ. ॥ ೩೨ ॥

ತಸ್ಯೈವ ತೇ ವಪುರಿದಂ ನಿಜಕಾಲಶಕ್ತ್ಯಾ
ಸಂಚೋದಿತಪ್ರಕೃತಿಧರ್ಮಣ ಆತ್ಮಗೂಢಮ್ ।
ಅಂಭಸ್ಯನಂತಶಯನಾದ್ವಿರಮತ್ಸಮಾಧೇ-
ರ್ನಾಭೇರಭೂತ್ಸ್ವಕಣಿಕಾವಟವನ್ಮಹಾಬ್ಜಮ್ ॥ ೩೩ ॥

ನೀನು ನಿನ್ನ ಕಾಲ ಶಕ್ತಿಯಿಂದ ಪ್ರಕೃತಿಯ ಗುಣಗಳನ್ನು ಪ್ರೇರಿಸುವುದರಿಂದ ಈ ಬ್ರಹ್ಮಾಂಡವೂ ನಿನ್ನ ಶರೀರವೇ ಆಗಿದೆ. ಸೃಷ್ಟಿಗೆ ಮೊದಲು ಇದು ನಿನ್ನಲ್ಲಿಯೇ ಲೀನವಾಗಿತ್ತು. ಪ್ರಳಯ ಕಾಲದ ಜಲದಲ್ಲಿ ಶೇಷಶಯ್ಯೆಯಲ್ಲಿ ಪವಡಿಸಿದ ನೀನು ಯೋಗನಿದ್ರೆಯ ಸಮಾಧಿಯನ್ನು ತ್ಯಜಿಸಿದಾಗ ಆಲದ ಬೀಜದಿಂದ ವಿಶಾಲವಾದ ಆಲದ ಮರವು ಹೊರಬರುವಂತೆ ನಿನ್ನ ನಾಭಿಯಿಂದ ಬ್ರಹ್ಮಾಂಡ ಕಮಲವು ಉತ್ಪನ್ನವಾಯಿತು. ॥ ೩೩ ॥

ತತ್ಸಂಭವಃ ಕವಿರತೋಽನ್ಯದಪಶ್ಯಮಾನ-
ಸ್ತ್ವಾಂ ಬೀಜಮಾತ್ಮನಿ ತತಂ ಸ್ವಬಹಿರ್ವಿಚಿಂತ್ಯ ।
ನಾವಿಂದದಬ್ದಶತಮಪ್ಸು ನಿಮಜ್ಜಮಾನೋ
ಜಾತೇಽಂಕುರೇ ಕಥಮು ಹೋಪಲಭೇತ ಬೀಜಮ್ ॥ ೩೪ ॥

ಅದರಲ್ಲಿ ಸೂಕ್ಷ್ಮದರ್ಶಿಯಾದ ಬ್ರಹ್ಮದೇವರು ಪ್ರಕಟಗೊಂಡರು. ಅವರಿಗೆ ಕಮಲವಲ್ಲದೆ ಬೇರೆ ಏನೂ ಕಾಣಸದಿದ್ದಾಗ ತನ್ನಲ್ಲೇ ಬೀಜರೂಪದಿಂದ ವ್ಯಾಪ್ತನಾದ ನಿನ್ನನ್ನು ತಿಳಿಯದೇ ಹೋದರು. ನಿನ್ನನ್ನು ತಮ್ಮಿಂದ ಹೊರಗಿನವನು ಎಂದು ಭಾವಿಸಿ ನೀರಿನೊಳಗೆ ಮುಳುಗಿ ನೂರು ವರ್ಷಗಳವರೆಗೆ ಹುಡುಕುತ್ತಲೇ ಇದ್ದರು. ಆದರೆ ಅಲ್ಲಿ ಅವರಿಗೆ ಏನೂ ಸಿಗಲಿಲ್ಲ. ಹೇಗೆ ತಾನೇ ಸಿಕ್ಕೀತು ? ಬೀಜವು ಮೊಳೆತು ಬೆಳೆದ ಬಳಿಕ ಅದರಲ್ಲಿ ವ್ಯಾಪಿಸಿ ಕೊಂಡಿರುವ ಬೀಜವನ್ನು ಯಾರಾದರೂ ಹೊರಗೆ ಬೇರೆಯಾಗಿ ಹೇಗೆ ನೋಡಬಲ್ಲರು ? ॥ ೩೪ ॥

ಸ ತ್ವಾತ್ಮಯೋನಿರತಿವಿಸ್ಮಿತ ಆಸ್ಥಿತೋಽಬ್ಜಂ
ಕಾಲೇನ ತೀವ್ರತಪಸಾ ಪರಿಶುದ್ಧಭಾವಃ ।
ತ್ವಾಮಾತ್ಮನೀಶ ಭುವಿ ಗಂಧಮಿವಾತಿಸೂಕ್ಷ್ಮಂ
ಭೂತೇಂದ್ರಿಯಾಶಯಮಯೇ ವಿತತಂ ದದರ್ಶ ॥ ೩೫ ॥

ಬ್ರಹ್ಮದೇವರಿಗೆ ತುಂಬಾ ಆಶ್ಚರ್ಯವಾಯಿತು. ಅವರು ಸೋತು ಹೋಗಿ ಕಮಲದ ಮೇಲೆ ಬಂದು ಕುಳಿತರು. ಬಹಳ ಕಾಲ ಕಳೆದ ಬಳಿಕ ತೀವ್ರವಾದ ತಪಸ್ಸನ್ನು ಮಾಡಿದ್ದರಿಂದ ಅವರ ಹೃದಯವು ಪರಿಶುದ್ಧವಾದಾಗ ಅವರಿಗೆ ಭೂತ, ಇಂದ್ರಿಯಗಳು ಮತ್ತು ಅಂತಃ ಕರಣರೂಪವಾದ ತನ್ನ ಶರೀರದಲ್ಲಿಯೇ ಹಾಸುಹೊಕ್ಕಾಗಿ ತುಂಬಿ ಕೊಂಡಿರುವ ನಿನ್ನ ಸೂಕ್ಷ್ಮರೂಪದ ಸಾಕ್ಷಾತ್ಕಾರವಾಯಿತು. ಪೃಥಿವಿಯಲ್ಲಿ ವ್ಯಾಪಿಸಿ ಕೊಂಡಿರುವ ಅದರ ಅತಿಸೂಕ್ಷ್ಮ ತನ್ಮಾತ್ರೆಯಾದ ಗಂಧವನ್ನು ಅರಿಯುವಂತೆ ನಿನ್ನನ್ನು ಅರಿತುಕೊಂಡರು. ॥ ೩೫ ॥

ಏವಂ ಸಹಸ್ರವದನಾಂಘ್ರಿಶಿರಃಕರೋರು-
ನಾಸಾಸ್ಯಕರ್ಣನಯನಾಭರಣಾಯುಧಾಢ್ಯಮ್ ।
ಮಾಯಾಮಯಂ ಸದುಪಲಕ್ಷಿತಸಂನಿವೇಶಂ
ದೃಷ್ಟ್ವಾ ಮಹಾಪುರುಷಮಾಪ ಮುದಂ ವಿರಿಂಚಃ ॥ ೩೬ ॥

ನಿನ್ನ ಲೀಲಾಮಯಮೂರ್ತಿಯಾದ ವಿರಾಟ್‌ಪುರುಷ ರೂಪದ ಸಾಕ್ಷಾತ್ಕಾರ ಅವರಿಗಾಯಿತು. ಸಾವಿರಾರು ಮುಖಗಳು, ಸಾವಿರಾರು ತಲೆಗಳು, ಸಾವಿರಾರು ಕಿವಿ-ಕಣ್ಣು-ಮೂಗು-ಬಾಯಿಗಳು, ಸಾವಿರಾರು ಕೈ-ಕಾಲುಗಳು ಮತ್ತು ಸಾವಿರಾರು ಭೂಷಣಾಯುಧಗಳಿಂದ ಕೂಡಿ ಹದಿನಾಲ್ಕು ಲೋಕಗಳನ್ನು ತನ್ನ ಅಂಗಾಂಗಗಳ ರೂಪದಲ್ಲಿ ಹೊಂದಿದ್ದ ಅದ್ಭುತರೂಪವದು. ಮಹಾಪುರುಷನಾದ ನಿನ್ನ ಆ ರೂಪವನ್ನು ನೋಡಿ ಬ್ರಹ್ಮದೇವರಿಗೆ ತುಂಬಾ ಆನಂದವುಂಟಾಯಿತು. ॥ ೩೬ ॥

ತಸ್ಮೈ ಭವಾನ್ಹಯಶಿರಸ್ತನುವಂ ಚ ಬಿಭ್ರ-
ದ್ವೇದದ್ರುಹಾವತಿಬಲೌ ಮಧುಕೈಟಭಾಖ್ಯೌ ।
ಹತ್ವಾಽನಯಚ್ಛ್ರುತಿಗಣಾಂಸ್ತು ರಜಸ್ತಮಶ್ಚ
ಸತ್ತ್ವಂ ತವ ಪ್ರಿಯತಮಾಂ ತನುಮಾಮನಂತಿ ॥ ೩೭ ॥

ರಜೋಗುಣ ಮತ್ತು ತಮೋಗುಣರೂಪಿಗಳಾದ ಮಧು, ಕೈಟಭರೆಂಬ ಇಬ್ಬರು ದೈತ್ಯರು ಭಾರೀ ಬಲಶಾಲಿಗಳಾಗಿದ್ದರು. ಅವರು ವೇದಗಳನ್ನು ಕದ್ದು ಕೊಂಡು ಹೋದಾಗ ನೀನು ಹಯಗ್ರೀವ ಅವತಾರವನ್ನು ತಾಳಿ, ಅವರಿಬ್ಬರನ್ನೂ ಕೊಂದು ಸತ್ತ್ವಗುಣರೂಪವಾದ ಶ್ರುತಿಗಳನ್ನು (ವೇದಗಳನ್ನು) ಬ್ರಹ್ಮದೇವರಿಗೆ ಹಿಂದಿರುಗಿಸಿಕೊಟ್ಟೆ. ಆ ಸತ್ತ್ವಗುಣವೇ ನಿನ್ನ ಅತ್ಯಂತ ಪ್ರಿಯಶರೀರವೆಂದು ಮಹಾತ್ಮರು ಹೀಗೆ ವರ್ಣಿಸುತ್ತಾರೆ. ॥ ೩೭ ॥

ಇತ್ಥಂ ನೃತಿರ್ಯಗೃಷಿದೇವಝಷಾವತಾರೈ-
ರ್ಲೋಕಾನ್ವಿಭಾವಯಸಿ ಹಂಸಿ ಜಗತ್ಪ್ರತೀಪಾನ್ ।
ಧರ್ಮಂ ಮಹಾಪುರುಷ ಪಾಸಿ ಯುಗಾನುವೃತ್ತಂ
ಛನ್ನಃ ಕಲೌ ಯದಭವಸ್ತ್ರಿಯುಗೋಽಥ ಸ ತ್ವಮ್ ॥ ೩೮ ॥

ಎಲೈ ಮಹಾಪುರುಷನೇ ! ಹೀಗೆ ನೀನು ಮನುಷ್ಯ, ಪಶು-ಪಕ್ಷಿ, ಋಷಿ, ದೇವತೆ ಮತ್ತು ಮತ್ಸ್ಯ ಮುಂತಾದ ಅನೇಕ ಅವತಾರಗಳನ್ನು ಎತ್ತಿ ಲೋಕಗಳನ್ನು ಪಾಲಿಸಿ, ವಿಶ್ವದ ದ್ರೋಹಿಗಳನ್ನು ಸಂಹಾರಮಾಡುತ್ತೀಯೆ. ಈ ಅವತಾರಗಳ ಮೂಲಕ ನೀನು ಪ್ರತಿಯೊಂದು ಯುಗದಲ್ಲಿಯೂ ಅದರ ಧರ್ಮಗಳನ್ನು ರಕ್ಷಿಸುತ್ತೀಯೆ. ಕಲಿಯುಗದಲ್ಲಿ ನೀನು ಮರೆಯಾಗಿ ಗುಪ್ತರೂಪದಿಂದಲೇ ಇರುತ್ತೀಯೆ. ಅದಕ್ಕಾಗಿ ನಿನಗೆ 'ತ್ರಿಯುಗ' ಎಂಬ ಒಂದು ಹೆಸರೂ ಇದೆ. ॥ ೩೮ ॥

ನೈತನ್ಮನಸ್ತವ ಕಥಾಸು ವಿಕುಂಠನಾಥ
ಸಂಪ್ರೀಯತೇ ದುರಿತದುಷ್ಟಮಸಾಧು ತೀವ್ರಮ್ ।
ಕಾಮಾತುರಂ ಹರ್ಷಶೋಕಭಯೈಷಣಾರ್ತಂ
ತಸ್ಮಿನ್ಕಥಂ ತವ ಗತಿಂ ವಿಮೃಶಾಮಿ ದೀನಃ ॥ ೩೯ ॥

ಓ ವೈಕುಂಠಪತಿಯೇ ! ನನ್ನ ಈ ಮನಸ್ಸು ನಿನ್ನ ಕಥೆಗಳನ್ನು ಕೇಳಿ ರಸಾನುಭವವನ್ನು ಪಡುತ್ತಿಲ್ಲ. ಪಾಪವಾಸನೆಗಳಿಂದ ಕಲುಷಿತಗೊಂಡಿದೆ. ದುಷ್ಟತನದಿಂದ ತುಂಬಿದೆ. ಸಾಮಾನ್ಯವಾಗಿ

ಜಿಹ್ವೈಕತೋಽಚ್ಯುತ ವಿಕರ್ಷತಿ ಮಾವಿತೃಪ್ತಾ
ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್ ।
ಘ್ರಾಣೋಽನ್ಯತಶ್ಚಪಲದೃಕ್ಕ್ವ ಚ ಕರ್ಮಶಕ್ತಿ-
ರ್ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನಂತಿ ॥ ೪೦ ॥

ಕಾಮಾತುರವೇ ಆಗಿದ್ದು ಸುಖ, ದುಃಖ, ಭಯ, ಇಹ ಲೋಕ-ಪರಲೋಕ, ಹಣ, ಹೆಂಡತಿ, ಮಕ್ಕಳು ಮುಂತಾದ ಚಿಂತೆಗಳಿಂದ ಕಳವಳಪಡುತ್ತಿದೆ. ಇದರಿಂದಾಗಿ ನಾನು ದೀನನಾಗಿದ್ದೇನೆ. ಇಂತಹ ಮನಸ್ಸಿನಿಂದ ನಿನ್ನ ಸ್ವರೂಪವನ್ನು ಹೇಗೆ ಚಿಂತಿಸಲಿ? ॥ ೩೯ ॥ ಓ ಅಚ್ಯುತಾ! ಎಂದೆಂದಿಗೂ ತೃಪ್ತಿಹೊಂದದ ಈ ನಾಲಿಗೆ ನನ್ನನ್ನು ರುಚಿಕರ ರಸಗಳ ಕಡೆಗೆ ಸೆಳೆಯುತ್ತಿದೆ. ಜನನೇಂದ್ರಿಯವು ಸುಂದರ ಸ್ತ್ರೀಯರ ಕಡೆಗೆ, ಚರ್ಮವು ಸುಕೋಮಲ ಸ್ಪರ್ಶಕ್ಕಾಗಿ, ಹೊಟ್ಟೆ ಊಟದ ಕಡೆಗೆ, ಕಿವಿಗಳು ಮಧುರ ಸಂಗೀತಕ್ಕಾಗಿ, ಮೂಗು ಸುವಾಸನೆಗಳ ಕಡೆಗೆ, ಈ ಚಪಲನೇತ್ರಗಳು ಸೌಂದರ್ಯದ ಕಡೆಗೆ ನನ್ನನ್ನು ಸೆಳೆಯುತ್ತಾ ಇವೆ. ಇಷ್ಟೇ ಅಲ್ಲದೆ ಕರ್ಮೇಂದ್ರಿಯಗಳೂ ತಮ್ಮ-ತಮ್ಮ ವಿಷಯಗಳ ಕಡೆಗೆ ಕೊಂಡು ಹೋಗಲು ಆತುರ ಪಡುತ್ತಿವೆ. ಗೃಹಸ್ಥನಾದ ಪತಿಯನ್ನು ಆತನ ಬಹುಮಂದಿ ಪತ್ನಿಯರು ತಮ್ಮ-ತಮ್ಮ ಕಡೆಗೆ ಸೆಳೆದುಕೊಳ್ಳುತ್ತಿರುವಂತೆ ನನ್ನ ಸ್ಥಿತಿಯಾಗಿದೆ. ॥ ೪೦ ॥

ಏವಂ ಸ್ವಕರ್ಮಪತಿತಂ ಭವವೈತರಣ್ಯಾ-
ಮನ್ಯೋನ್ಯಜನ್ಮಮರಣಾಶನಭೀತಭೀತಮ್ ।
ಪಶ್ಯನ್ ಜನಂ ಸ್ವಪರವಿಗ್ರಹವೈರಮೈತ್ರಂ
ಹಂತೇತಿ ಪಾರಚರ ಪೀಪೃಹಿ ಮೂಢಮದ್ಯ ॥ ೪೧ ॥

ಹೀಗೆ ಈ ಜೀವನು ತನ್ನ ಕರ್ಮಗಳ ಬಂಧನದಲ್ಲಿ ಸಿಕ್ಕಿಬಿದ್ದು ಸಂಸಾರವೆಂಬ ವೈತರಣೀ ನದಿಯಲ್ಲಿ ಬಿದ್ದಿರುವನು. ಹುಟ್ಟಿನ ನಂತರ ಸಾವು, ಸಾವಿನನಂತರ ಹುಟ್ಟು ಎಂಬ ಇವೆರಡರ ಮೂಲಕ ಕರ್ಮಗಳನ್ನು ಭೋಗಿಸುತ್ತಾ ಭಯಗೊಂಡಿರುವನು. ಇದು ನನ್ನದು – ಇದು ಪರರದು ಎಂಬ ಭೇದ-ಭಾವನೆಯಿಂದ ಕೂಡಿಕೊಂಡು ಕೆಲವರೊಂದಿಗೆ ಮಿತ್ರತ್ವವಿದ್ದರೆ, ಕೆಲವರೊಡನೆ ಶತ್ರುತ್ವವನ್ನು ಹೊಂದಿದ್ದಾನೆ. ನೀನು ಈ ಮೂಢಜೀವಿಯ ದುರ್ದಶೆಯನ್ನು ನೋಡಿ ಕರುಣೆಯಿಂದ ಕರಗಬೇಕು. ಈ ಭವನದಿಯಿಂದ ಆಚೆಗೆ ಇರುವ ಭಗವಂತನೇ! ಈ ಪ್ರಾಣಿಗಳನ್ನೂ ಅಲ್ಲಿಗೆ ದಾಟಿಸು. ॥ ೪೧ ॥

ಕೋ ನ್ವತ್ರ ತೇಽಖಿಲಗುರೋ ಭಗವನ್ಪ್ರಯಾಸ
ಉತ್ತಾರಣೇಽಸ್ಯ ಭವಸಂಭವಲೋಪಹೇತೋಃ ।
ಮೂಢೇಷು ವೈ ಮಹದನುಗ್ರಹ ಆರ್ತಬಂಧೋ
ಕಿಂ ತೇನ ತೇ ಪ್ರಿಯಜನಾನನುಸೇವತಾಂ ನಃ ॥ ೪೨ ॥

ಜಗದ್ಗುರುವೇ! ನೀನು ಈ ಸೃಷ್ಟಿಯ ಉತ್ಪತ್ತಿ, ಸ್ಥಿತಿ ಮತ್ತು ರಕ್ಷಣೆಗಳನ್ನು ಮಾಡುತ್ತಿರುವವನು. ಇಂತಹ ಸ್ಥಿತಿಯಲ್ಲಿ ಈ ಜೀವಿಗಳನ್ನು ಈ ಭವನದಿಯಿಂದ ದಾಟಿಸಿಬಿಡಲು ನಿನಗೆ ಪ್ರಯಾಸವೇನು? ದೀನಜನರ ಪರಮಹಿತೈಷಿ ಪ್ರಭೋ! ದಾರಿಗಾಣದೆ ಅಲೆಯುತ್ತಿರುವ ಮೂಢಜನರು ತಾನೇ ಮಹಾಪುರುಷರ ಅನುಗ್ರಹಕ್ಕೆ ವಿಶೇಷವಾಗಿ ಪಾತ್ರರಾಗಬೇಕು! ನಮಗೆ ಅದರ ಆವಶ್ಯಕತೆಯಿಲ್ಲ, ಏಕೆಂದರೆ, ನಾವು ನಿನಗೆ ಪ್ರಿಯರಾದ ಭಕ್ತರ ಸೇವೆಯಲ್ಲಿ ತೊಡಗಿದ್ದೇವೆ. ಅದರಿಂದ ದಾಟಿ ಹೋಗಲು ನಮಗೆ ಎಂದಿಗೂ ಚಿಂತೆಗೆ ಅವಕಾಶವಿಲ್ಲ. ॥ ೪೨ ॥

ನೈವೋದ್ವಿಜೇ ಪರ ದುರತ್ಯಯವೈತರಣ್ಯಾ-
ಸ್ತ್ವದ್ವೀರ್ಯಗಾಯನಮಹಾಮೃತಮಗ್ನಚಿತ್ತಃ ।
ಶೋಚೇ ತತೋ ವಿಮುಖಚೇತಸ ಇಂದ್ರಿಯಾರ್ಥ-
ಮಾಯಾಸುಖಾಯ ಭರಮುದ್ವಹತೋ ವಿಮೂಢಾನ್ ॥ ೪೩ ॥

ಎಲೈ ಪರಮಾತ್ಮನೇ! ಈ ಸಂಸಾರವೆಂಬ ವೈತರಣೀ ನದಿಯನ್ನು ದಾಟುವುದು ಇತರರಿಗೆ ಖಂಡಿತವಾಗಿ ಕಷ್ಟವೇ. ಆದರೆ ನಾನು ಇದಕ್ಕೆ ಸ್ವಲ್ಪವೂ ಭಯಪಡುವುದಿಲ್ಲ. ಏಕೆಂದರೆ, ನನ್ನ ಚಿತ್ತವು ಈ ವೈತರಣಿಯಲ್ಲಿ ಇಲ್ಲ. ಅದು – ಸ್ವರ್ಗದ ಅಮೃತವನ್ನೂ ಕೂಡ ತಿರಸ್ಕರಿಸುವಂತಹ ಪರಮಾಮೃತರೂಪವಾದ ನಿನ್ನ ಲೀಲೆಗಳ ಗಾನದಲ್ಲೇ ಮುಳುಗಿದೆ. ನಿನ್ನ ಗುಣಗಾನದಿಂದ ವಿಮುಖರಾಗಿದ್ದು ಇಂದ್ರಿಯಗಳ ವಿಷಯಗಳ ಮಿಥ್ಯಾಸುಖವನ್ನು ಪಡೆದುಕೊಳ್ಳಲಿಕ್ಕಾಗಿ ತಮ್ಮ ತಲೆಯ ಮೇಲೆ ಇಡೀ ಸಂಸಾರದ ಭಾರವನ್ನು ಹೊರುತ್ತಿರುವ ಆ ಮೂಢ ಪ್ರಾಣಿಗಳಿಗಾಗಿ ನಾನು ಶೋಕಿಸುತ್ತಾ ಇದ್ದೇನೆ. ॥ ೪೩ ॥

ಪ್ರಾಯೇಣ ದೇವ ಮುನಯಃ ಸ್ವವಿಮುಕ್ತಿಕಾಮಾ
ಮೌನಂ ಚರಂತಿ ವಿಜನೇ ನ ಪರಾರ್ಥನಿಷ್ಠಾಃ ।
ನೈತಾನ್ವಿಹಾಯ ಕೃಪಣಾನ್ವಿಮುಮುಕ್ಷ ಏಕೋ
ನಾನ್ಯಂ ತ್ವದಸ್ಯ ಶರಣಂ ಭ್ರಮತೋಽನುಪಶ್ಯೇ ॥ ೪೪ ॥

ಪ್ರಭುವೇ ! ದೊಡ್ಡ-ದೊಡ್ಡ ಋಷಿ , ಮುನಿಗಳು ಸಾಮಾನ್ಯವಾಗಿ ತಮ್ಮ ಮುಕ್ತಿಗಾಗಿ ನಿರ್ಜನವಾದ ಅರಣ್ಯಕ್ಕೆ ಹೋಗಿ ಮೌನವ್ರತವನ್ನು ಅವಲಂಬಿಸುತ್ತಾರೆ. ಇತರರ ಒಳಿತಿಗಾಗಿ ಯಾವುದೇ ವಿಶೇಷ ಪ್ರಯತ್ನವನ್ನು ಮಾಡುವುದಿಲ್ಲ. ಆದರೆ ನನ್ನ ಸ್ಥಿತಿಯೇ ಬೇರೆಯಾಗಿದೆ. ದಾರಿ ತಪ್ಪಿರುವ ಈ ಬಡಪಾಯಿಗಳನ್ನು ಬಿಟ್ಟು ಒಬ್ಬಂಟಿಗನಾಗಿಯೇ ಮುಕ್ತಿಹೊಂದುವಂತಹ ಲೋಭಿಯು ನಾನಲ್ಲ. ಹೀಗೆ ಅಲೆದಾಡುತ್ತಿರುವ ಈ ಪ್ರಾಣಿಗಳಿಗೆ ನಿನ್ನ ಹೊರತಾಗಿ ಬೇರೆ ಯಾವ ರಕ್ಷಕನೂ ನನಗೆ ಕಂಡುಬರುವುದಿಲ್ಲ. ॥ ೪೪ ॥

ಯನ್ಮೈಥುನಾದಿ ಗೃಹಮೇಧಿಸುಖಂ ಹಿ ತುಚ್ಛಂ
ಕಂಡೂಯನೇನ ಕರಯೋರಿವ ದುಃಖದುಃಖಮ್ ।
ತೃಪ್ಯಂತಿ ನೇಹ ಕೃಪಣಾ ಬಹುದುಃಖಭಾಜಃ
ಕಂಡೂತಿವನ್ಮನಸಿಜಂ ವಿಷಹೇತ ಧೀರಃ ॥ ೪೫ ॥

ಗೃಹಸ್ಥರಿಗೆ ಸಿಗುವ ಮೈಥುನವೇ ಮುಂತಾದ ಸುಖಗಳು ಅತ್ಯಂತ ತುಚ್ಛವೂ, ದುಃಖರೂಪವೂ ಆಗಿವೆ. ತುರಿಕೆಯನ್ನು ಹೋಗಲಾಡಿಸಲು ಎರಡೂ ಕೈಗಳಿಂದ ತುರಿಸಿಕೊಳ್ಳುವವನಿಗೆ ಮೊದಲು ಸ್ವಲ್ಪ ಸುಖದಂತೆ ಅನಿಸಿದರೂ ಅನಂತರ ಉರಿಯ ದುಃಖವೇ ಉಂಟಾಗುತ್ತದೆ. ಆದರೆ ತಪ್ಪುದಾರಿಗೆ ಬಿದ್ದಿರುವ ಈ ಅಜ್ಞಾನೀ ಜನರು ಅನೇಕ ದುಃಖಗಳನ್ನು ಭೋಗಿಸಿಯೂ ಈ ವಿಷಯಗಳಿಂದ ಬೇಸರಪಡುವುದಿಲ್ಲ. ಧೀರಪುರುಷರಾದರೋ ತುರಿಕೆಯನ್ನು ಸಹಿಸಿಕೊಳ್ಳುವಂತೆ ಕಾಮಾದಿ ವೇಗಗಳನ್ನು ಸಹಿಸಿಕೊಳ್ಳುತ್ತಾರೆ. ಸಹಿಸಿಕೊಳ್ಳುವುದರಿಂದಲೇ ಅವುಗಳ ನಾಶವಾಗುತ್ತದೆ. ॥ ೪೫ ॥

ಮೌನವ್ರತಶ್ರುತತಪೋಽಧ್ಯಯನಸ್ವಧರ್ಮ-
ವ್ಯಾಖ್ಯಾರಹೋಜಪಸಮಾಧಯ ಆಪವರ್ಗ್ಯಾಃ ।
ಪ್ರಾಯಃ ಪರಂ ಪುರುಷ ತೇ ತ್ವಜಿತೇಂದ್ರಿಯಾಣಾಂ
ವಾರ್ತಾ ಭವಂತ್ಯುತ ನ ವಾತ್ರ ತು ದಾಂಭಿಕಾನಾಮ್ ॥ ೪೬ ॥

ಓ ಪುರುಷೋತ್ತಮಾ ! ಮೌನ, ಬ್ರಹ್ಮಚರ್ಯ, ಶಾಸ್ತ್ರ ಶ್ರವಣ, ತಪಸ್ಸು, ಸ್ವಾಧ್ಯಾಯ, ಸ್ವಧರ್ಮಪಾಲನೆ, ಯುಕ್ತಿಗಳಿಂದ ಶಾಸ್ತ್ರಗಳ ವ್ಯಾಖ್ಯೆ, ಏಕಾಂತಸೇವನೆ, ಜಪ ಮತ್ತು ಸಮಾಧಿ – ಈ ಹತ್ತೂ ಮೋಕ್ಷಕ್ಕೆ ಸಾಧನೆಗಳೆಂದು ಪ್ರಸಿದ್ಧವಾಗಿದೆ. ಆದರೆ ಇಂದ್ರಿಯಗಳು ವಶದಲ್ಲಿ ಇಲ್ಲದಿರುವವರಿಗೆ ಇವೆಲ್ಲವೂ ಜೀವನಕ್ಕೆ ಸಾಧನೆಗಳು – ವ್ಯಾಪಾರ ಮಾತ್ರವೇ ಆಗಿಬಿಡುವವು. ದಾಂಭಿಕರಿಗಾದರೋ ಅವರ ಮೋಸವು ಬಯಲಾಗುವವರೆಗೂ ಜೀವನೋಪಾಯಗಳಾಗಿದ್ದು ಅನಂತರ ಯಾವ ಪ್ರಯೋಜನಕ್ಕೂ ಬರದೇ ಹೋಗುವವು. ॥ ೪೬ ॥

ರೂಪೇ ಇಮೇ ಸದಸತೀ ತವ ವೇದಸೃಷ್ಟೇ
ಬೀಜಾಂಕುರಾವಿವ ನ ಚಾನ್ಯದರೂಪಕಸ್ಯ ।
ಯುಕ್ತಾಃ ಸಮಕ್ಷಮುಭಯತ್ರ ವಿಚಿನ್ವತೇ ತ್ವಾಂ
ಯೋಗೇನ ವಹ್ನಿಮಿವ ದಾರುಷು ನಾನ್ಯತಃ ಸ್ಯಾತ್ ॥ ೪೭ ॥

ಬೀಜ ಮತ್ತು ಮೊಳಕೆಗಳಂತೆ ಕಾರ್ಯ ಮತ್ತು ಕಾರಣ ಇವೆರಡು ನಿನ್ನ ರೂಪಗಳೆಂದು ವೇದಗಳು ಹೇಳುತ್ತವೆ. ವಾಸ್ತವವಾಗಿ ನೀನು ಪ್ರಾಕೃತರೂಪಗಳಿಂದ ರಹಿತನಾಗಿರುವೆ. ಆದರೆ ಈ ಕಾರ್ಯ-ಕಾರಣ ರೂಪಗಳನ್ನು ಬಿಟ್ಟು ನಿನ್ನ ಜ್ಞಾನವನ್ನು ಪಡೆಯುವುದಕ್ಕೆ ಬೇರಾವ ಸಾಧನೆಯೂ ಇಲ್ಲ. ಅರಣಿಮಂಥನ ದಿಂದ ಅಗ್ನಿಯನ್ನು ಪ್ರಕಟಿಸುವಂತೆಯೇ ಯೋಗಿಗಳು ಭಕ್ತಿ ಯೋಗದ ಸಾಧನೆಯಿಂದ ಕಾರ್ಯ ಮತ್ತು ಕಾರಣ ಇವೆರಡರಲ್ಲೇ ನಿನ್ನನ್ನು ಹುಡುಕಿ ತೆಗೆಯುತ್ತಾರೆ. ಏಕೆಂದರೆ, ವಾಸ್ತವವಾಗಿ ಇವೆ ರಡೂ ನಿನ್ನಿಂದ ಬೇರೆಯಲ್ಲ, ನಿನ್ನ ಸ್ವರೂಪವೇ ಆಗಿದೆ. ॥ ೪೭ ॥

ತ್ವಂ ವಾಯುರಗ್ನಿರವನಿರ್ವಿಯದಂಬುಮಾತ್ರಾಃ
ಪ್ರಾಣೇಂದ್ರಿಯಾಣಿ ಹೃದಯಂ ಚಿದನುಗ್ರಹಶ್ಚ ।
ಸರ್ವಂ ತ್ವಮೇವ ಸಗುಣೋ ವಿಗುಣಶ್ಚ ಭೂಮನ್
ನಾನ್ಯತ್ತ್ವದಸ್ತ್ಯಪಿ ಮನೋವಚಸಾ ನಿರುಕ್ತಮ್ ॥ ೪೮ ॥

ಪ್ರಭೋ ! ಅನಂತ ! ವಾಯು, ಅಗ್ನಿ, ಪೃಥಿವಿ, ಆಕಾಶ, ಜಲ, ಪಂಚತನ್ಮಾತ್ರೆಗಳು, ಪ್ರಾಣ, ಇಂದ್ರಿಯಗಳು, ಮನಸ್ಸು, ಚಿತ್ತ, ಅಹಂಕಾರ, ಸಮಸ್ತ ಜಗತ್ತು ಹಾಗೂ ಸಗುಣ-ನಿರ್ಗುಣ – ಹೀಗೆ ಲ್ಲವೂ ಕೇವಲ ನೀನೇ ಆಗಿರುವೆ. ಹೆಚ್ಚೇನು ಮನಸ್ಸು ಮತ್ತು ಮಾತಿನ ಮೂಲಕ ಏನೆಲ್ಲ ನಿರೂಪಿಸಲಾಗುವುದೋ ಅದೆಲ್ಲವೂ ನಿನ್ನಿಂದ ಹೊರತಾಗಿಲ್ಲ. ॥ ೪೮ ॥ ವಿಶಾಲವಾದ ಕೀರ್ತಿಯುಳ್ಳ ಮಹಾವಿಷ್ಣುವೇ ! ಈ ಸತ್ತ್ವಾದಿ ಗುಣಗಳು ಮತ್ತು ಈ ಗುಣಗಳ ಪರಿಣಾಮವಾದ ಮಹತ್ತತ್ತ್ವಾದಿಗಳು, ದೇವತೆಗಳು, ಮನುಷ್ಯರು ಹಾಗೂ ಮನಸ್ಸೇ

ನೈತೇ ಗುಣಾ ನ ಗುಣಿನೋ ಮಹದಾದಯೋ ಯೇ
ಸರ್ವೇ ಮನಃಪ್ರಭೃತಯಃ ಸಹದೇವಮರ್ತ್ಯಾಃ ।
ಆದ್ಯಂತವಂತ ಉರುಗಾಯ ವಿದಂತಿ ಹಿ ತ್ವಾ-
ಮೇವಂ ವಿಮೃಶ್ಯ ಸುಧಿಯೋ ವಿರಮಂತಿ ಶಬ್ದಾತ್ ॥ ೪೯ ॥

ತತ್ತೇಽರ್ಹತ್ತಮ ನಮಃಸ್ತುತಿಕರ್ಮಪೂಜಾಃ
ಕರ್ಮ ಸ್ಮೃತಿಶ್ಚರಣಯೋಃ ಶ್ರವಣಂ ಕಥಾಯಾಮ್ ।
ಸಂಸೇವಯಾ ತ್ವಯಿ ವಿನೇತಿ ಷಡಂಗಯಾ ಕಿಂ
ಭಕ್ತಿಂ ಜನಃ ಪರಮಹಂಸಗತೌ ಲಭೇತ ॥ ೫೦ ॥

*ನಾರದ ಉವಾಚ*

ಏತಾವದ್ವರ್ಣಿತಗುಣೋ ಭಕ್ತ್ಯಾ ಭಕ್ತೇನ ನಿರ್ಗುಣಃ ।
ಪ್ರಹ್ಲಾದಂ ಪ್ರಣತಂ ಪ್ರೀತೋ ಯತಮನ್ಯುರಭಾಷತ ॥ ೫೧ ॥

*ಶ್ರೀಭಗವಾನುವಾಚ*

ಪ್ರಹ್ಲಾದ ಭದ್ರ ಭದ್ರಂ ತೇ ಪ್ರೀತೋಽಹಂ ತೇಽಸುರೋತ್ತಮ ।
ವರಂ ವೃಣೀಷ್ವಾಭಿಮತಂ ಕಾಮಪೂರೋಽಸ್ಮ್ಯಹಂ ನೃಣಾಮ್ ॥ ೫೨ ॥

ಮಾಮಪ್ರೀಣತ ಆಯುಷ್ಮನ್ದರ್ಶನಂ ದುರ್ಲಭಂ ಹಿ ಮೇ ।
ದೃಷ್ಟ್ವಾ ಮಾಂ ನ ಪುನರ್ಜಂತುರಾತ್ಮಾನಂ ತಪ್ತುಮರ್ಹತಿ ॥ ೫೩ ॥

ಪ್ರೀಣಂತಿ ಹ್ಯಥ ಮಾಂ ಧೀರಾಃ ಸರ್ವಭಾವೇನ ಸಾಧವಃ ।
ಶ್ರೇಯಸ್ಕಾಮಾ ಮಹಾಭಾಗಾಃ ಸರ್ವಾಸಾಮಾಶಿಷಾಂ ಪತಿಮ್ ॥ ೫೪ ॥

*ನಾರದ ಉವಾಚ*

ಏವಂ ಪ್ರಲೋಭ್ಯಮಾನೋಽಪಿ ವರೈರ್ಲೋಕಪ್ರಲೋಭನೈಃ ।
ಏಕಾಂತಿತ್ವಾದ್ಭಗವತಿ ನೈಚ್ಛತ್ತಾನಸುರೋತ್ತಮಃ ॥ ೫೫ ॥

ಮುಂತಾದ ಯಾವುದೂ ನಿನ್ನ ಸ್ವರೂಪವನ್ನು ಅರಿಯುವುದಕ್ಕೆ ಸಮರ್ಥವಲ್ಲ. ಏಕೆಂದರೆ, ಇವೆಲ್ಲವೂ ಆದಿ-ಅಂತ್ಯಗಳಿರುವುವು ಮತ್ತು ನೀನು ಅನಾದಿಯೂ, ಅನಂತನೂ ಆಗಿರುವೆ. ಹೀಗೆ ವಿಚಾರಮಾಡಿ ಜ್ಞಾನಿಗಳು ಶಬ್ದಜಾಲವನ್ನು ನಿಲ್ಲಿಸಿ ಮೌನವಾಗುವರು. ॥ ೪೯ ॥ ಪರಮಪೂಜ್ಯವಾದ ಪರ ಮಾತ್ಮನೇ! ನಮಸ್ಕಾರ, ಸ್ತುತಿ, ಸಮಸ್ತ ಕರ್ಮಗಳ ಸಮರ್ಪಣ, ಸೇವೆ-ಪೂಜೆ, ಚರಣಕಮಲಗಳ ಚಿಂತನೆ ಮತ್ತು ಲೀಲಾ-ಕಥೆಗಳ ಶ್ರವಣ – ಇವು ಆರು ನಿನ್ನ ಸೇವೆಯ ಅಂಗಗಳಾಗಿವೆ. ಈ ಷಡಂಗ ಸೇವೆಯಿಲ್ಲದೆ ನಿನ್ನ ಚರಣಕಮಲಗಳ ಭಕ್ತಿಯು ಹೇಗೆ ದೊರೆಯ ಬಲ್ಲದು! ಪ್ರಭೋ! ನೀನಾದರೋ ನಿನ್ನ ಪರಮಪ್ರಿಯ ಭಕ್ತರ, ಪರಮಹಂಸರ ಸರ್ವಸ್ವವೇ ಆಗಿರುವೆ. ॥ ೫೦ ॥

**ನಾರದರು ಹೇಳುತ್ತಾರೆ** – ಹೀಗೆ ಭಕ್ತಪ್ರಹ್ಲಾದನು ಪ್ರಕೃತಿ ಮತ್ತು ಪ್ರಾಕೃತಗುಣಗಳಿಂದ ರಹಿತನಾದ ಪರಮಾತ್ಮನ ಸ್ವರೂಪ ಗುಣಗಳನ್ನು ಪರಮಪ್ರೇಮದಿಂದ ಸ್ತೋತ್ರಮಾಡಿ, ಬಳಿಕ ಅವನು ಭಗವಂತನ ಚರಣಗಳಲ್ಲಿ ತಲೆಬಾಗಿ ಸುಮ್ಮನಾದನು. ನರಸಿಂಹ ಭಗವಂತನ ಕ್ರೋಧವು ಶಾಂತವಾಗಿ ಅವನು ತುಂಬಾ ಪ್ರಸನ್ನತೆಯಿಂದ, ಪ್ರೇಮದಿಂದ ಹೀಗೆಂದನು. ॥ ೫೧ ॥

**ಶ್ರೀನರಸಿಂಹ ಭಗವಂತನು ಹೇಳಿದನು** – ಭದ್ರ ಪ್ರಹ್ಲಾದನೇ! ನಿನಗೆ ಮಂಗಳವಾಗಲಿ. ಅಸುರೋತ್ತಮನೇ! ನಾನು ನಿನ್ನ ಮೇಲೆ ಅತ್ಯಂತ ಪ್ರಸನ್ನನಾಗಿರುವೆನು. ನಿನಗೆ ಅಭೀಷ್ಟವಾದ ವರವನ್ನು ಕೇಳಿಕೋ. ನಾನು ಜೀವಿಗಳ ಇಚ್ಛೆಯನ್ನು ಪೂರ್ಣಗೊಳಿಸುವವನು. ॥ ೫೨ ॥ ಆಯುಷ್ಮಂತನೇ! ನನ್ನನ್ನು ಪ್ರಸನ್ನಗೊಳಿಸದಿರುವವನಿಗೆ ನನ್ನ ದರ್ಶನವು ಬಹಳ ಕಷ್ಟ. ಆದರೆ ನನ್ನ ದರ್ಶನವಾಗುತ್ತಲೇ ಮತ್ತೆ ಪ್ರಾಣಿಗಳ ಹೃದಯದಲ್ಲಿ ಯಾವುದೇ ತಾಪವೂ ಇರುವುದಿಲ್ಲ. ॥ ೫೩ ॥ ನಾನು ಸಮಸ್ತ ಮನೋರಥಗಳನ್ನು ಪೂರ್ಣಗೊಳಿಸುವವನು. ಅದಕ್ಕಾಗಿ ಶ್ರೇಯಸ್ಸನ್ನು ಬಯಸುವ ಭಾಗ್ಯವಂತರಾದ ಸಾಧುಗಳು ಜಿತೇಂದ್ರಿಯರಾಗಿ, ತಮ್ಮ ಎಲ್ಲ ವೃತ್ತಿಗಳಿಂದ ನನ್ನನ್ನು ಪ್ರಸನ್ನಗೊಳಿಸಲಿಕ್ಕಾಗಿಯೇ ಪ್ರಯತ್ನಿಸುತ್ತಾರೆ. ॥ ೫೪ ॥

**ಶ್ರೀನಾರದರು ಹೇಳಿದರು** – ಯುಧಿಷ್ಠಿರನೇ! ಅಸುರಕುಲ ಭೂಷಣನಾದ ಪ್ರಹ್ಲಾದನು ಭಗವಂತನ ಅನನ್ಯ ಭಕ್ತನಾಗಿದ್ದನು. ಅದಕ್ಕಾಗಿ ದೊಡ್ಡ-ದೊಡ್ಡ ಜನರನ್ನು ಪ್ರಲೋಭನೆಗೊಳಿಸುವಂತಹ ವರಗಳ ಮೂಲಕ ಪ್ರಲೋಭನೆಗೊಳಿಸಿದರೂ ಅವನು ಅದನ್ನು ಬಯಸಲಿಲ್ಲ. ॥ ೫೫ ॥

*ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ
ಪ್ರಹ್ಲಾದಚರಿತೇ ಭಗವತ್ಸ್ತವೋ ನಾಮ ನವಮೋಽಧ್ಯಾಯಃ ॥ ೯ ॥

# ಹತ್ತನೆಯ ಅಧ್ಯಾಯ

## ಪ್ರಹ್ಲಾದನ ರಾಜ್ಯಾಭಿಷೇಕ ಮತ್ತು ತ್ರಿಪುರ ದಹನದ ಕಥೆ

*ನಾರದ ಉವಾಚ*

ಭಕ್ತಿಯೋಗಸ್ಯ ತತ್ಸರ್ವಮಂತರಾಯತಯಾರ್ಭಕಃ ।
ಮನ್ಯಮಾನೋ ಹೃಷೀಕೇಶಂ ಸ್ಮಯಮಾನ ಉವಾಚ ಹ ॥ ೧ ॥

*ಪ್ರಹ್ಲಾದ ಉವಾಚ*

ಮಾ ಮಾಂ ಪ್ರಲೋಭಯೋತ್ಪತ್ತ್ಯಾಽಽಸಕ್ತಂ ಕಾಮೇಷು ತೈರ್ವರೈಃ ।
ತತ್ಸಂಗಭೀತೋ ನಿರ್ವಿಣ್ಣೋ ಮುಮುಕ್ಷುಸ್ತ್ವಾಮುಪಾಶ್ರಿತಃ ॥ ೨ ॥

ಭೃತ್ಯಲಕ್ಷಣಜಿಜ್ಞಾಸುರ್ಭಕ್ತಂ ಕಾಮೇಷ್ವಚೋದಯತ್ ।
ಭವಾನ್ ಸಂಸಾರಬೀಜೇಷು ಹೃದಯಗ್ರಂಥಿಷು ಪ್ರಭೋ ॥ ೩ ॥

ನಾನ್ಯಥಾ ತೇಽಖಿಲಗುರೋ ಘಟೇತ ಕರುಣಾತ್ಮನಃ ।
ಯಸ್ತ ಆಶಿಷ ಆಶಾಸ್ತೇ ನ ಸ ಭೃತ್ಯಃ ಸ ವೈ ವಣಿಕ್ ॥ ೪ ॥

ಆಶಾಸಾನೋ ನ ವೈ ಭೃತ್ಯಃ ಸ್ವಾಮಿನ್ಯಾಶಿಷ ಆತ್ಮನಃ ।
ನ ಸ್ವಾಮೀ ಭೃತ್ಯತಃ ಸ್ವಾಮ್ಯಮಿಚ್ಛನ್ಯೋ ರಾತಿ ಚಾಶಿಷಃ ॥ ೫ ॥

ಅಹಂ ತ್ವಕಾಮಸ್ತ್ವದ್ಭಕ್ತಸ್ತ್ವಂ ಚ ಸ್ವಾಮ್ಯನಪಾಶ್ರಯಃ ।
ನಾನ್ಯಥೇಹಾವಯೋರರ್ಥೋ ರಾಜಸೇವಕಯೋರಿವ ॥ ೬ ॥

ಯದಿ ರಾಸೀಶ ಮೇ ಕಾಮಾನ್ವರಾಂಸ್ತ್ವಂ ವರದರ್ಷಭ ।
ಕಾಮಾನಾಂ ಹೃದ್ಯಸಂರೋಹಂ ಭವತಸ್ತು ವೃಣೇ ವರಮ್ ॥ ೭ ॥

ಇಂದ್ರಿಯಾಣಿ ಮನಃ ಪ್ರಾಣ ಆತ್ಮಾ ಧರ್ಮೋ ಧೃತಿರ್ಮತಿಃ ।
ಹ್ರೀಃ ಶ್ರೀಸ್ತೇಜಃ ಸ್ಮೃತಿಃ ಸತ್ಯಂ ಯಸ್ಯ ನಶ್ಯಂತಿ ಜನ್ಮನಾ ॥ ೮ ॥

ವಿಮುಂಚತಿ ಯದಾ ಕಾಮಾನ್ಮಾನವೋ ಮನಸಿ ಸ್ಥಿತಾನ್ ।
ತರ್ಹ್ಯೇವ ಪುಂಡರೀಕಾಕ್ಷ ಭಗವತ್ತ್ವಾಯ ಕಲ್ಪತೇ ॥ ೯ ॥

ನಾರದರು ಹೇಳುತ್ತಾರೆ – ಯುಧಿಷ್ಠಿರನೇ! ಪ್ರಹ್ಲಾದನು ಬಾಲಕನಾಗಿದ್ದರೂ ವರವನ್ನು ಬೇಡುವುದು ಪ್ರೇಮಾ-ಭಕ್ತಿಯಲ್ಲಿ ವಿಘ್ನವಾಗಿದೆ ಎಂದು ತಿಳಿದಿದ್ದನು. ಅದಕ್ಕಾಗಿ ಅವನು ನಸು ನಗುತ್ತಾ ಶ್ರೀಭಗವಂತನಲ್ಲಿ ಹೀಗೆ ವಿಜ್ಞಾಪಿಸಿಕೊಂಡನು. ॥ ೧ ॥

ಪ್ರಹ್ಲಾದನು ಹೇಳಿದನು – ಪ್ರಭೋ! ಈಗಾಗಲೇ ಕಾಮ ಭೋಗಗಳಲ್ಲಿ ಆಸಕ್ತನಾಗಿರುವ ನನಗೆ ಈ ವರಗಳ ಮೂಲಕ ಇನ್ನೂ ಆಸೆ ಹುಟ್ಟಿಸಬೇಡ. ನಾನು ಆ ಸಂಗಕ್ಕೆ ಹೆದರಿ, ಅವುಗಳಿಂದಾಗುವ ತೀವ್ರವೇದನೆಯನ್ನು ಅನುಭವಿಸಿ, ಅವುಗಳಿಂದ ಬಿಡುಗಡೆ ಹೊಂದುವ ಆಸೆಯಿಂದ ನಿನ್ನಲ್ಲಿ ಶರಣಾಗಿದ್ದೇನೆ. ॥ ೨ ॥ ಭಗವಂತಾ! ನನ್ನಲ್ಲಿ ಭಕ್ತಿಯ ಲಕ್ಷಣಗಳು ಇವೆಯೋ, ಇಲ್ಲವೋ ಎಂದು ತಿಳಿಯಲಿಕ್ಕಾಗಿ ನೀನು ನಿನ್ನ ಭಕ್ತನಿಗೆ ವರವನ್ನು ಕೇಳಲು ಪ್ರೇರೇಪಿಸಿದೆ. ಈ ವಿಷಯ ಭೋಗಗಳು ಹೃದಯದ ಗಂಟನ್ನು ಇನ್ನೂ ಬಲಪಡಿಸುವುವು ಹಾಗೂ ಮತ್ತೆ-ಮತ್ತೆ ಜನ್ಮ-ಮೃತ್ಯುವಿನ ಚಕ್ರದಲ್ಲಿ ಬೀಳಿಸುವಂತಹುದು. ॥ ೩ ॥ ಜಗದ್ಗುರುವೇ! ನೀನು ವರವನ್ನು ಬೇಡಿಕೋ ಎಂದು ಹೇಳಿರುವುದು ನನ್ನನ್ನು ಪರೀಕ್ಷಿಸುವುದಲ್ಲದೆ ಬೇರೆ ಯಾವ ಕಾರಣವೂ ಇರಲಾರದು. ಏಕೆಂದರೆ ನೀನು ಪರಮ ದಯಾಳುವಾಗಿರುವೆ. (ತನ್ನ ಭಕ್ತರನ್ನು ಭೋಗಗಳಲ್ಲಿ ಸಿಕ್ಕಿಸುವಂತಹ ವರವನ್ನು ನೀನು ಹೇಗೆ ಕೊಡಬಲ್ಲೆ?) ತನ್ನ ಕಾಮನೆಗಳನ್ನು ನಿನ್ನಿಂದ ಪೂರ್ಣಗೊಳಿಸಿ ಕೊಳ್ಳುವವನು ಸೇವಕನೇ ಅಲ್ಲ, ಅವನಾದರೋ ಕೊಟ್ಟು-ಕೊಳ್ಳುವ ವ್ಯಾಪಾರಿಯೇ ಸರಿ. ॥ ೪ ॥ ಒಡೆಯನಿಂದ ತನ್ನ ಕಾಮನೆಗಳನ್ನು ನೆರವೇರುವಂತೆ ಬಯಸುವವನು ಸೇವಕನೇ ಅಲ್ಲ ಮತ್ತು ಸೇವಕನಿಂದ ಸೇವೆ ಮಾಡಿಸಿಕೊಳ್ಳಲು ಒಡೆಯನಾದವನು ಅವನ ಕಾಮನೆಗಳನ್ನು ಪೂರ್ಣಗೊಳಿಸುವವನು ಸ್ವಾಮಿಯೂ ಅಲ್ಲ. ॥ ೫ ॥ ನಾನು ನಿನ್ನ ನಿಷ್ಕಾಮ ಸೇವಕನಾಗಿದ್ದೇನೆ. ನೀನು ನನ್ನ ನಿರಪೇಕ್ಷ ಸ್ವಾಮಿಯಾಗಿರುವೆ. ರಾಜ ಮತ್ತು ಅವನ ಸೇವಕರ ಪ್ರಯೋಜನಕ್ಕಾಗಿ ಸ್ವಾಮಿ. ಸೇವಕ ಸಂಬಂಧವಿರುವಂತೆ ನನ್ನ ಮತ್ತು ನಿನ್ನ ಸಂಬಂಧ ಅಲ್ಲವೇ ಅಲ್ಲ. ॥ ೬ ॥ ವರದಾನಿಗಳಲ್ಲಿ ಶಿರೋಮಣಿಯಾದ ಸ್ವಾಮಿಯೇ! ನೀನು ನನಗೆ ಇಚ್ಛಿತ ವರವನ್ನು ಕೊಡಲು ಬಯಸುವೆಯಾದರೆ – 'ನನ್ನ ಹೃದಯದಲ್ಲಿ ಯಾವುದೇ ಕಾಮನೆಯ ಬೀಜವೂ ಮೊಳೆಯದೆ ಹೋಗಲಿ' ಎಂಬ ವರವನ್ನು ಕರುಣಿಸು. ॥ ೭ ॥ ಹೃದಯದಲ್ಲಿ ಯಾವುದೇ ಕಾಮನೆಯ ಉದಯವಾಗುತ್ತಲೇ ಇಂದ್ರಿಯಗಳು, ಮನಸ್ಸು, ಪ್ರಾಣ, ದೇಹ, ಧರ್ಮ, ಧೈರ್ಯ, ಬುದ್ಧಿ, ಲಜ್ಜೆ, ಶ್ರೀ, ತೇಜ, ಸ್ಮೃತಿ ಮತ್ತು ಸತ್ಯ – ಇವೆಲ್ಲವೂ ನಾಶವಾಗಿ ಹೋಗುತ್ತವೆ. ॥ ೮ ॥ ಪುಂಡರೀಕಾಕ್ಷನೇ! ಮನುಷ್ಯನು ತನ್ನ ಮನಸ್ಸಿನಲ್ಲಿರುವ ಕಾಮನೆಗಳನ್ನು ಪರಿತ್ಯಾಗಮಾಡಿದಾಗಲೇ ಅವನು ಭಗವತ್ಸ್ವರೂಪವನ್ನು ಪಡೆದುಕೊಳ್ಳುವನು. ॥ ೯ ॥

ನಮೋ ಭಗವತೇ ತುಭ್ಯಂ ಪುರುಷಾಯ ಮಹಾತ್ಮನೇ ।
ಹರಯೇಽದ್ಭುತಸಿಂಹಾಯ ಬ್ರಹ್ಮಣೇ ಪರಮಾತ್ಮನೇ
॥ ೧೦ ॥

ಭಗವಂತಾ ! ನಿನಗೆ ನಮಸ್ಕಾರವು. ನೀನು ಎಲ್ಲರ ಹೃದಯದಲ್ಲಿ ಬೆಳಗುವವನೂ, ಉದಾರ ಶಿರೋಮಣಿಯೂ, ಸ್ವಯಂ ಪರಬ್ರಹ್ಮ ಪರಮಾತ್ಮನೂ ಆಗಿರುವೆ. ಅದ್ಭುತ ನರಸಿಂಹ ರೂಪವನ್ನು ಧರಿಸಿರುವ ಶ್ರೀಹರಿಯ ಚರಣಗಳಲ್ಲಿ ನಾನು ಮತ್ತೆ-ಮತ್ತೆ ನಮಸ್ಕರಿಸುತ್ತಿದ್ದೇನೆ. ॥ ೧೦ ॥

*ನೃಸಿಂಹ ಉವಾಚ*

ನೈಕಾಂತಿನೋ ಮೇ ಮಯಿ ಜಾತ್ವಿಹಾಶಿಷ
ಆಶಾಸತೇಽಮುತ್ರ ಚ ಯೇ ಭವದ್ವಿಧಾಃ ।
ಅಥಾಪಿ ಮನ್ವಂತರಮೇತದತ್ರ
ದೈತ್ಯೇಶ್ವರಾಣಾಮನುಭುಂಕ್ಷ್ವ ಭೋಗಾನ್ ॥ ೧೧ ॥

ಕಥಾ ಮದೀಯಾ ಜುಷಮಾಣಃ ಪ್ರಿಯಾಸ್ತ್ವ-
ಮಾವೇಶ್ಯ ಮಾಮಾತ್ಮನಿ ಸಂತಮೇಕಮ್ ।
ಸರ್ವೇಷು ಭೂತೇಷ್ವಧಿಯಜ್ಞಮೀಶಂ
ಯಜಸ್ವ ಯೋಗೇನ ಚ ಕರ್ಮ ಹಿನ್ವನ್ ॥ ೧೨ ॥

ಭೋಗೇನ ಪುಣ್ಯಂ ಕುಶಲೇನ ಪಾಪಂ
ಕಲೇವರಂ ಕಾಲಜವೇನ ಹಿತ್ವಾ ।
ಕೀರ್ತಿಂ ವಿಶುದ್ಧಾಂ ಸುರಲೋಕಗೀತಾಂ
ವಿತಾಯ ಮಾಮೇಷ್ಯಸಿ ಮುಕ್ತಬಂಧಃ ॥ ೧೩ ॥

ಯ ಏತತ್ಕೀರ್ತಯೇನ್ಮಹ್ಯಂ ತ್ವಯಾ ಗೀತಮಿದಂ ನರಃ ।
ತ್ವಾಂ ಚ ಮಾಂ ಚ ಸ್ಮರನ್ಕಾಲೇ ಕರ್ಮಬಂಧಾತ್ಪ್ರಮುಚ್ಯತೇ
॥ ೧೪ ॥

ಭಗವಾನ್ ನರಸಿಂಹನು ಹೇಳಿದನು – ನಿನ್ನಂತಹ ನನ್ನ ಏಕಾಂತಭಕ್ತರು ಈ ಲೋಕ ಅಥವಾ ಪರಲೋಕದ ಯಾವುದೇ ವಸ್ತುವಿಗಾಗಿ ಎಂದಿಗೂ ಯಾವುದೇ ಕಾಮನೆ ಮಾಡುವುದಿಲ್ಲ. ಹೀಗಿದ್ದರೂ ಹೆಚ್ಚಲ್ಲ, ಕೇವಲ ಒಂದು ಮನ್ವಂತರದವರೆಗೆ ನನ್ನ ಸಂತೋಷಕ್ಕಾಗಿ ನೀನು ಈ ಲೋಕದಲ್ಲಿ ದೈತ್ಯಾಧಿಪತಿಗಳ ಸಮಸ್ತ ಭೋಗಗಳನ್ನು ಸ್ವೀಕರಿಸು. ॥ ೧೧ ॥ ಸಮಸ್ತ ಪ್ರಾಣಿಗಳ ಹೃದಯದಲ್ಲಿ ಯಜ್ಞಗಳ ಭೋಕ್ತಾ ಈಶ್ವರರೂಪದಲ್ಲಿ ನಾನೇ ವಿರಾಜಮಾನನಾಗಿದ್ದೇನೆ. ನೀನು ನಿನ್ನ ಹೃದಯದಲ್ಲಿ ನನ್ನನ್ನು ನೋಡುತ್ತಾ, ನಿನಗೆ ಪ್ರಿಯವಾದ ನನ್ನ ಲೀಲಾ-ಕಥೆಗಳನ್ನು ಕೇಳುತ್ತಾ ಇರು. ಸಮಸ್ತ ಕರ್ಮಗಳ ಮೂಲಕ ನನ್ನನ್ನೇ ಆರಾಧಿಸುತ್ತಾ, ಹೀಗೆ ನಿನ್ನ ಪ್ರಾರಬ್ಧ ಕರ್ಮವನ್ನು ಕಳೆದುಕೋ. ॥ ೧೨ ॥ ಭೋಗದ ಮೂಲಕ ಪುಣ್ಯ ಕರ್ಮಗಳ ಫಲವನ್ನೂ, ನಿಷ್ಕಾಮಕರ್ಮಗಳ ಮೂಲಕ ಪಾಪವನ್ನೂ ನಾಶಮಾಡುತ್ತಾ, ಸಮಯಬಂದಾಗ ಶರೀರವನ್ನು ತ್ಯಜಿಸಿ ಸಮಸ್ತ ಬಂಧನಗಳಿಂದ ಮುಕ್ತನಾಗಿ ನೀನು ನನ್ನ ಬಳಿಗೆ ಬರುವಿಯಂತೆ. ವತ್ಸ! ಭಾಗವತೋತ್ತಮನಾದ ನಿನ್ನ ಪರಿಶುದ್ಧ ಕೀರ್ತಿಯನ್ನು ದೇವಲೋಕದಲ್ಲಿಯೂ ಗಾನಮಾಡುವರು. ॥ ೧೩ ॥ ನೀನು ಮಾಡಿದ ನನ್ನ ಈ ಸ್ತುತಿಯನ್ನು ಯಾವ ಮನುಷ್ಯನು ಕೀರ್ತಿಸುವನೋ, ಜೊತೆಗೆ ನನ್ನನ್ನು ಮತ್ತು ನಿನ್ನನ್ನು ಸ್ಮರಿಸುವನೋ ಅವನು ಸಮಯಬಂದಾಗ ಕರ್ಮಗಳ ಬಂಧನದಿಂದ ಮುಕ್ತನಾಗಿ ಹೋಗುವನು. ॥ ೧೪ ॥

*ಪ್ರಹ್ಲಾದ ಉವಾಚ*

ವರಂ ವರಯ ಏತತ್ತೇ ವರದೇಶಾನ್ಮಹೇಶ್ವರ ।
ಯದನಿಂದತ್ಪಿತಾ ಮೇ ತ್ವಾಮವಿದ್ವಾಂಸ್ತೇಜ ಐಶ್ವರಮ್
॥ ೧೫ ॥

ವಿದ್ಧಾಮರ್ಷಾಶಯಃ ಸಾಕ್ಷಾತ್ಸರ್ವಲೋಕಗುರುಂ ಪ್ರಭುಮ್ ।
ಭ್ರಾತೃಹೇತಿ ಮೃಷಾದೃಷ್ಟಿಸ್ತ್ವದ್ಭಕ್ತೇ ಮಯಿ ಚಾಘವಾನ್
॥ ೧೬ ॥

ತಸ್ಮಾತ್ಪಿತಾ ಮೇ ಪೂಯೇತ ದುರಂತಾದ್ದುಸ್ತರಾದಘಾತ್ ।
ಪೂತಸ್ತೇಽಪಾಂಗಸಂದೃಷ್ಟಸ್ತದಾ ಕೃಪಣವತ್ಸಲ
॥ ೧೭ ॥

ಪ್ರಹ್ಲಾದನು ಹೇಳಿದನು – ಮಹೇಶ್ವರನೇ! ನೀನು ವರ ಕೊಡುವವರ ಸ್ವಾಮಿಯಾಗಿರುವೆ. ನಿನ್ನಲ್ಲಿ ನಾನು ಇನ್ನೊಂದು ವರವನ್ನು ಬೇಡುವೆನು. ನನ್ನ ತಂದೆಯು ನಿನ್ನ ಈಶ್ವರೀಯ ತೇಜವನ್ನು ಮತ್ತು ಸರ್ವಶಕ್ತಿವಂತನಾದ ಚರಾಚರಗುರುವಾದ ಸ್ವಯಂ ನಿನ್ನನ್ನು ತಿಳಿಯದೆ ತುಂಬಾ ನಿಂದಿಸಿದನು. 'ಈ ವಿಷ್ಣುವು ನನ್ನ ತಮ್ಮನನ್ನು ಕೊಂದು ಹಾಕಿದನು' ಎಂಬ ಮಿಥ್ಯಾದೃಷ್ಟಿಯು ಇದ್ದ ಕಾರಣ ತಂದೆಯು ಕ್ರೋಧದ ವೇಗವನ್ನು ಸಹಿಸುವುದರಲ್ಲಿ ಅಸಮರ್ಥನಾಗಿದ್ದನು. ಇದರಿಂದ ಅವನು ನಿನ್ನ ಭಕ್ತನಾದ ಕಾರಣ ನನ್ನಲ್ಲಿ ದ್ರೋಹಮಾಡಿದನು. ॥ ೧೫-೧೬ ॥ ದೀನಬಂಧುವೇ! ನಿನ್ನ ದೃಷ್ಟಿಯು ಬೀಳುತ್ತಲೇ ಅವನು ಪವಿತ್ರನಾಗಿದ್ದರೂ ಬೇಗನೇ ನಾಶವಾಗದಿರುವ ಆ ದುಸ್ತರ ದೋಷದಿಂದ ನನ್ನ ತಂದೆಯು ಶುದ್ಧವಾಗಲೀ ಎಂದು ನಾನು ನಿನ್ನಲ್ಲಿ ಪ್ರಾರ್ಥಿಸುತ್ತೇನೆ. ॥ ೧೭ ॥

*ಶ್ರೀಭಗವಾನುವಾಚ*

ತ್ರಿಃಸಪ್ತಭಿಃ ಪಿತಾ ಪೂತಃ ಪಿತೃಭಿಃ ಸಹ ತೇಽನಘ ।
ಯತ್ಸಾಧೋಽಸ್ಯ ಗೃಹೇ ಜಾತೋ ಭವಾನ್ವೈ ಕುಲಪಾವನಃ
॥ ೧೮ ॥

ನರಸಿಂಹ ಭಗವಂತನು ಹೇಳಿದನು – ಪುಣ್ಯಾತ್ಮನಾದ ಪ್ರಹ್ಲಾದನೇ! ನಿನ್ನ ತಂದೆಯು ಸ್ವಯಂ ಪವಿತ್ರನಾಗಿ ಉದ್ಧಾರವಾದನು, ಇದರಲ್ಲಿ ಹೇಳುವುದೇನಿದೆ? ಅವನ ಇಪ್ಪತ್ತೊಂದು ತಲೆಮಾರಿನ ಪಿತೃಗಳೂ ಇರುತ್ತಿದ್ದರೆ ಇವನೊಂದಿಗೆ ಅವರೂ ಉದ್ಧಾರವಾಗುತ್ತಿದ್ದರು. ಏಕೆಂದರೆ, ಕುಲವನ್ನು ಪವಿತ್ರಗೊಳಿಸುವ ನಿನ್ನಂತಹ ಪುತ್ರನನ್ನು ಅವನು ಪಡೆದಿದ್ದನು. ॥ ೧೮ ॥

ಯತ್ರ ಯತ್ರ ಚ ಮದ್ಭಕ್ತಾಃ ಪ್ರಶಾಂತಾಃ ಸಮದರ್ಶಿನಃ ।
ಸಾಧವಃ ಸಮುದಾಚಾರಾಸ್ತೇ ಪೂಯಂತ್ಯಪಿ ಕೀಕಟಾಃ ॥ ೧೯ ॥

ಸರ್ವಾತ್ಮನಾ ನ ಹಿಂಸಂತಿ ಭೂತಗ್ರಾಮೇಷು ಕಿಂಚನ ।
ಉಚ್ಚಾವಚೇಷು ದೈತ್ಯೇಂದ್ರ ಮದ್ಭಾವೇನ ಗತಸ್ಪೃಹಾಃ ॥ ೨೦ ॥

ಭವಂತಿ ಪುರುಷಾ ಲೋಕೇ ಮದ್ಭಕ್ತಾಸ್ತ್ವಾಮನುವ್ರತಾಃ ।
ಭವಾನ್ಮೇ ಖಲು ಭಕ್ತಾನಾಂ ಸರ್ವೇಷಾಂ ಪ್ರತಿರೂಪಧೃಕ್ ॥ ೨೧ ॥

ಕುರು ತ್ವಂ ಪ್ರೇತಕಾರ್ಯಾಣಿ ಪಿತುಃ ಪೂತಸ್ಯ ಸರ್ವಶಃ ।
ಮದಂಗಸ್ಪರ್ಶನೇನಾಂಗ ಲೋಕಾನ್ಯಾಸ್ಯತಿ ಸುಪ್ರಜಾಃ ॥ ೨೨ ॥

ಪಿತ್ರ್ಯಂ ಚ ಸ್ಥಾನಮಾತಿಷ್ಠ ಯಥೋಕ್ತಂ ಬ್ರಹ್ಮವಾದಿಭಿಃ ।
ಮಯ್ಯಾವೇಶ್ಯ ಮನಸ್ತಾತ ಕುರು ಕರ್ಮಾಣಿ ಮತ್ಪರಃ ॥ ೨೩ ॥

*ನಾರದ ಉವಾಚ*

ಪ್ರಹ್ಲಾದೋಽಪಿ ತಥಾ ಚಕ್ರೇ ಪಿತುರ್ಯತ್ಸಾಂಪರಾಯಿಕಮ್ ।
ಯಥಾಽಽಹ ಭಗವಾನ್ರಾಜನ್ನಭಿಷಿಕ್ತೋ ದ್ವಿಜೋತ್ತಮೈಃ ॥ ೨೪ ॥

ಪ್ರಸಾದಸುಮುಖಂ ದೃಷ್ಟ್ವಾ ಬ್ರಹ್ಮಾ ನರಹರಿಂ ಹರಿಮ್ ।
ಸ್ತುತ್ವಾ ವಾಗ್ಭಿಃ ಪವಿತ್ರಾಭಿಃ ಪ್ರಾಹ ದೇವಾದಿಭಿರ್ವೃತಃ ॥ ೨೫ ॥

*ಬ್ರಹ್ಮೋವಾಚ*

ದೇವ ದೇವಾಖಿಲಾಧ್ಯಕ್ಷ ಭೂತಭಾವನ ಪೂರ್ವಜ ।
ದಿಷ್ಟ್ಯಾ ತೇ ನಿಹತಃ ಪಾಪೋ ಲೋಕಸಂತಾಪನೋಽಸುರಃ ॥ ೨೬ ॥

ಯೋಽಸೌ ಲಬ್ಧವರೋ ಮತ್ತೋ ನ ವಧ್ಯೋ ಮಮ ಸೃಷ್ಟಿಭಿಃ ।
ತಪೋಯೋಗಬಲೋನ್ನದ್ಧಃ ಸಮಸ್ತನಿಗಮಾನಹನ್ ॥ ೨೭ ॥

ದಿಷ್ಟ್ಯಾಸ್ಯ ತನಯಃ ಸಾಧುರ್ಮ-
ಹಾಭಾಗವತೋಽರ್ಭಕಃ ।
ತ್ವಯಾ ವಿಮೋಚಿತೋ ಮೃತ್ಯೋ-
ರ್ದಿಷ್ಟ್ಯಾ ತ್ವಾಂ ಸಮಿತೋಽಧುನಾ ॥ ೨೮ ॥

ಏತದ್ವಪುಸ್ತೇ ಭಗವನ್ಧ್ಯಾಯತಃ ಪ್ರಯತಾತ್ಮನಃ ।
ಸರ್ವತೋ ಗೋಪ್ತೃ ಸಂತ್ರಾಸಾನ್ಮೃತ್ಯೋರಪಿ ಜಿಘಾಂಸತಃ ॥ ೨೯ ॥

ಪ್ರಶಾಂತರೂ, ಸಮದರ್ಶಿಗಳೂ, ಸುಖವಾಗಿ ಸದಾಚಾರವನ್ನು ಪಾಲಿಸುವವರೂ ನನ್ನ ಪ್ರೇಮೀ ಭಕ್ತರು ಎಲ್ಲೆಲ್ಲಿ ವಾಸಿಸುತ್ತಾರೋ, ಆ ಸ್ಥಾನವು ಕೀಕಟವೇ ಆಗಿದ್ದರೂ ಪವಿತ್ರವಾಗಿ ಹೋಗುತ್ತದೆ. ॥ ೧೯ ॥ ದೈತ್ಯರಾಜನೇ! ನನ್ನ ಭಕ್ತಿಭಾವದಿಂದ ಕಾಮನೆಗಳು ನಾಶವಾದವರು ಸರ್ವತ್ರ ಆತ್ಮಭಾವ ಉಂಟಾದ ಕಾರಣ ಸಣ್ಣ-ದೊಡ್ಡ ಯಾವುದೇ ಪ್ರಾಣಿಗೆ ಯಾವ ವಿಧದಿಂದಲೂ ಕಷ್ಟಕೊಡುವುದಿಲ್ಲ. ॥ ೨೦ ॥ ಪ್ರಪಂಚದಲ್ಲಿ ನಿನ್ನ ಅನುಯಾಯಿ ಆಗುವವರೂ ಕೂಡ ನನ್ನ ಭಕ್ತರಾಗಿ ಹೋಗುವರು. ಮಗು! ನೀನು ನನ್ನ ಎಲ್ಲ ಭಕ್ತರಲ್ಲಿ ಆದರ್ಶನಾಗಿರುವೆ. ॥ ೨೧ ॥ ನನ್ನ ಅಂಗಸ್ಪರ್ಶದಿಂದ ನಿನ್ನ ತಂದೆಯು ಪೂರ್ಣವಾಗಿ ಪವಿತ್ರವಾಗಿ ಹೋಗಿದ್ದರೂ ನೀನು ಅವನ ಅಂತ್ಯೇಷ್ಟಿ ಕರ್ಮಗಳನ್ನು ಮಾಡು. ನಿನ್ನಂತಹ ಸಂತಾನದಿಂದಾಗಿ ಅವನಿಗೆ ಉತ್ತಮ ಲೋಕಗಳೇ ದೊರೆಯುವುವು. ॥ ೨೨ ॥ ವತ್ಸ! ನೀನು ನಿನ್ನ ತಂದೆಯ ಸ್ಥಾನದಲ್ಲಿ ಪಟ್ಟಾಭಿಷಿಕ್ತನಾಗು. ವೇದವಾದಿಗಳಾದ ಮುನಿಗಳ ಆಜ್ಞೆಯಂತೆ ನನ್ನಲ್ಲಿ ನಿನ್ನ ಮನಸ್ಸನ್ನಿರಿಸಿ, ನನ್ನಲ್ಲಿ ಶರಣಾಗಿ, ನನ್ನ ಸೇವೆಗಾಗಿಯೇ ನಿನ್ನ ಎಲ್ಲ ಕಾರ್ಯವನ್ನು ಮಾಡುತ್ತಿರು. ॥ ೨೩ ॥

**ನಾರದರು ಹೇಳಿದರು** – ಯುಧಿಷ್ಠಿರನೇ! ಭಗವಂತನ ಆಜ್ಞೆಯಂತೆ ಪ್ರಹ್ಲಾದನು ತನ್ನ ತಂದೆಯ ಅಂತ್ಯೇಷ್ಟಿ ಕ್ರಿಯೆಗಳನ್ನು ಮಾಡಿದನು. ಇದಾದ ಬಳಿಕ ಶ್ರೇಷ್ಠಬ್ರಾಹ್ಮಣರು ಅವನಿಗೆ ರಾಜ್ಯಾಭಿಷೇಕವನ್ನು ಮಾಡಿದರು. ॥ ೨೪ ॥ ಇದೇ ಸಮಯದಲ್ಲಿ ದೇವತೆಗಳು, ಋಷಿಗಳು ಮುಂತಾದವರೊಂದಿಗೆ ಬ್ರಹ್ಮದೇವರು ನರಸಿಂಹ ಭಗವಂತನ ಪ್ರಸನ್ನವದನವನ್ನು ಕಂಡು ಪವಿತ್ರವಚನಗಳಿಂದ ಅವನನ್ನು ಸ್ತುತಿಸಿ, ಅವನಲ್ಲಿ ಇಂತೆಂದರು. ॥ ೨೫ ॥

**ಬ್ರಹ್ಮದೇವರು ಹೇಳಿದರು** – ದೇವತೆಗಳಿಗೂ ಆರಾಧ್ಯನಾದ ಭಗವಂತನೇ! ನೀನು ಸರ್ವಾಂತರ್ಯಾಮಿಯೂ, ಜೀವರಿಗೆ ಜೀವನದಾತೃವೂ, ನನಗೆ ಪಿತನೂ ಆಗಿರುವೆ. ಈ ಪಾಪೀ ದೈತ್ಯನು ಜನರನ್ನು ತುಂಬಾ ಸತಾಯಿಸುತ್ತಿದ್ದನು. ನೀನು ಇವನನ್ನು ಸಂಹಾರ ಮಾಡಿದುದು ದೊಡ್ಡ ಸೌಭಾಗ್ಯದ ಮಾತಾಗಿದೆ. ॥ ೨೬ ॥ 'ನನ್ನ ಸೃಷ್ಟಿಯ ಯಾವುದೇ ಪ್ರಾಣಿಯು ನಿನ್ನನ್ನು ವಧಿಸಲಾರದು' ಎಂಬ ವರವನ್ನು ನಾನು ಇವನಿಗೆ ಕೊಟ್ಟಿದ್ದೆ. ಇದರಿಂದ ಇವನು ಉನ್ಮತ್ತನಾಗಿದ್ದನು. ತಪಸ್ಸು ಯೋಗ ಮತ್ತು ಬಲದಿಂದಾಗಿ ಉಚ್ಛೃಂಖಲನಾಗಿ ಇವನು ವೇದವಿಧಿಗಳನ್ನು ನಿರ್ಮೂಲನಗೊಳಿಸಿದ್ದನು. ॥ ೨೭ ॥ ಇವನ ಪುತ್ರನೂ ಪರಮಭಾಗವತನೂ, ಶುದ್ಧ ಹೃದಯನೂ ಆದ ಮಗು ಪ್ರಹ್ಲಾದನನ್ನು ನೀನು ಸಾವಿನ ದವಡೆಯಿಂದ ಬಿಡಿಸಿದುದು ದೊಡ ಸೌಭಾಗ್ಯದ ಮಾತಾಗಿದೆ ಹಾಗೂ ಅವನು ಈಗ ನಿನ್ನಲ್ಲಿ ಶರಣುಹೊಂದಿರುವುದು ಕೂಡ ಅತ್ಯಂತ ಆನಂದದ ಮತ್ತು ಮಂಗಳಕರ ವಿಷಯವೇ ಆಗಿದೆ. ॥ ೨೮ ॥ ಭಗವಂತಾ! ನಿನ್ನ ಈ ನರಸಿಂಹರೂಪವನ್ನು ಏಕಾಗ್ರ ಮನಸ್ಸಿನಿಂದ ಧ್ಯಾನಿಸುವವನು ಎಲ್ಲ ಬಗೆಯ ಭಯದಿಂದ ರಕ್ಷಿತನಾಗುವನು. ಕೊಲ್ಲಲು ಬಂದಿರುವ ಮೃತ್ಯುವೂ ಕೂಡ ಅವನಿಗೆ ಯಾವ ಕೆಡುಕನ್ನು ಮಾಡಲಾರದು. ॥ ೨೯ ॥

*ನೃಸಿಂಹ ಉವಾಚ*

ಮೈವಂ ವರೋಽಸುರಾಣಾಂ ತೇ ಪ್ರದೇಯಃ ಪದ್ಮಸಂಭವ ।
ವರಃ ಕ್ರೂರನಿಸರ್ಗಾಣಾಮಹೀನಾಮಮೃತಂ ಯಥಾ ॥ ೩೦ ॥

*ನಾರದ ಉವಾಚ*

ಇತ್ಯುಕ್ತ್ವಾ ಭಗವಾನ್ರಾಜಂಸ್ತತ್ರೈವಾಂತರ್ದಧೇ ಹರಿಃ ।
ಅದೃಶ್ಯಃ ಸರ್ವಭೂತಾನಾಂ ಪೂಜಿತಃ ಪರಮೇಷ್ಠಿನಾ ॥ ೩೧ ॥

ತತಃ ಸಂಪೂಜ್ಯ ಶಿರಸಾ ವವಂದೇ ಪರಮೇಷ್ಠಿನಮ್ ।
ಭವಂ ಪ್ರಜಾಪತೀನ್ದೇವಾನ್ಪ್ರಹ್ಲಾದೋ ಭಗವತ್ಕಲಾಃ ॥ ೩೨ ॥

ತತಃ ಕಾವ್ಯಾದಿಭಿಃ ಸಾರ್ಧಂ ಮುನಿಭಿಃ ಕಮಲಾಸನಃ ।
ದೈತ್ಯಾನಾಂ ದಾನವಾನಾಂ ಚ ಪ್ರಹ್ಲಾದಮಕರೋತ್ಪತಿಮ್ ॥ ೩೩ ॥

ಪ್ರತಿನಂದ್ಯ ತತೋ ದೇವಾಃ ಪ್ರಯುಜ್ಯ ಪರಮಾಶಿಷಃ ।
ಸ್ವಧಾಮಾನಿ ಯಯುಃ ರಾಜನ್ಬ್ರಹ್ಮಾದ್ಯಾಃ ಪ್ರತಿಪೂಜಿತಾಃ ॥ ೩೪ ॥

ಏವಂ ತೌ ಪಾರ್ಷದೌ ವಿಷ್ಣೋಃ ಪುತ್ರತ್ವಂ ಪ್ರಾಪಿತೌ ದಿತೇಃ ।
ಹೃದಿ ಸ್ಥಿತೇನ ಹರಿಣಾ ವೈರಭಾವೇನ ತೌ ಹತೌ ॥ ೩೫ ॥

ಪುನಶ್ಚ ವಿಪ್ರಶಾಪೇನ ರಾಕ್ಷಸೌ ತೌ ಬಭೂವತುಃ ।
ಕುಂಭಕರ್ಣದಶಗ್ರೀವೌ ಹತೌ ತೌ ರಾಮವಿಕ್ರಮೈಃ ॥ ೩೬ ॥

ಶಯಾನೌ ಯುಧಿ ನಿರ್ಭಿನ್ನಹೃದಯೌ ರಾಮಸಾಯಕೈಃ ।
ತಚ್ಚಿತ್ತೌ ಜಹತುರ್ದೇಹಂ ಯಥಾ ಪ್ರಾಕ್ತನಜನ್ಮನಿ ॥ ೩೭ ॥

ತಾವಿಹಾಥ ಪುನರ್ಜಾತೌ ಶಿಶುಪಾಲಕರೂಷಜೌ ।
ಹರೌ ವೈರಾನುಬಂಧೇನ ಪಶ್ಯತಸ್ತೇ ಸಮೀಯತುಃ ॥ ೩೮ ॥

ಏನಃ ಪೂರ್ವಕೃತಂ ಯತ್ತದ್ರಾಜಾನಃ ಕೃಷ್ಣವೈರಿಣಃ ।
ಜಹುಸ್ತ್ವಂತೇ ತದಾತ್ಮಾನಃ ಕೀಟಃ ಪೇಶಸ್ಕೃತೋ ಯಥಾ ॥ ೩೯ ॥

ಯಥಾ ಯಥಾ ಭಗವತೋ ಭಕ್ತ್ಯಾ ಪರಮಯಾಭಿದಾ ।
ನೃಪಾಶ್ಚೈದ್ಯಾದಯಃ ಸಾತ್ಮ್ಯಂ ಹರೇಸ್ತಚ್ಚಿಂತಯಾ ಯಯುಃ ॥ ೪೦ ॥

**ಶ್ರೀನರಸಿಂಹದೇವರು ಹೇಳಿದರು** – ಚತುರ್ಮುಖ ಬ್ರಹ್ಮನೇ! ನೀನು ದೈತ್ಯರಿಗೆ ಇಂತಹ ವರವನ್ನು ಕೊಡಬೇಡ. ಸ್ವಭಾವದಿಂದಲೇ ಕ್ರೂರರಾದವರಿಗೆ ಕೊಟ್ಟ ವರವು ಹಾವಿಗೆ ಹಾಲೆರೆದಂತೆ ಆಗುವುದು. ॥ ೩೦ ॥

**ನಾರದರು ಹೇಳಿದರು** – ಯುಧಿಷ್ಠಿರನೇ! ನರಸಿಂಹ ಭಗವಂತನು ಇಷ್ಟು ಹೇಳಿ, ಬ್ರಹ್ಮದೇವರಿಂದ ಪೂಜೆಗೊಂಡು ಯಾವ ಪ್ರಾಣಿಗಳಿಗೂ, ಕಾಣಿಸದಿರುವಂತೆ ಅಲ್ಲಿಯೇ ಅಂತರ್ಧಾನ ಹೊಂದಿದನು. ॥ ೩೧ ॥ ಇದಾದ ನಂತರ ಪ್ರಹ್ಲಾದನು ಭಗವತ್ಸ್ವರೂಪರಾದ ಬ್ರಹ್ಮಾ-ಶಂಕರ, ಪ್ರಜಾಪತಿಗಳು ಮತ್ತು ದೇವತೆಗಳು ಹೀಗೆ ಎಲ್ಲರ ಪೂಜೆಮಾಡಿ ಅವರಿಗೆ ಶಿರಸಾಷ್ಟಾಂಗ ನಮಸ್ಕಾರ ಮಾಡಿದನು. ॥ ೩೨ ॥ ಆಗ ಶುಕ್ರಾಚಾರ್ಯರೇ ಮುಂತಾದ ಮುನಿಗಳೊಂದಿಗೆ ಬ್ರಹ್ಮದೇವರು ಪ್ರಹ್ಲಾದನನ್ನು ಸಮಸ್ತ ದಾನವರ ಮತ್ತು ದೈತ್ಯರ ಅಧಿಪತಿಯಾಗಿಸಿದರು. ॥ ೩೩ ॥ ಅನಂತರ ಬ್ರಹ್ಮಾದಿ ದೇವತೆಗಳು ಪ್ರಹ್ಲಾದನನ್ನು ಅಭಿನಂದಿಸುತ್ತಾ, ಅವನಿಗೆ ಶುಭಾಶೀರ್ವಾದಗಳನ್ನು ಕೊಟ್ಟರು. ಪ್ರಹ್ಲಾದನಿಂದ ಎಲ್ಲರೂ ಯಥಾಯೋಗ್ಯ ಸತ್ಕಾರವನ್ನು ಸ್ವೀಕರಿಸಿ ತಮ್ಮ-ತಮ್ಮ ಲೋಕಗಳಿಗೆ ಹೊರಟು ಹೋದರು. ॥ ೩೪ ॥

ಯುಧಿಷ್ಠಿರನೇ! ಹೀಗೆ ಭಗವಂತನ ಪಾರ್ಷದರಾದ ಜಯ-ವಿಜಯರಿಬ್ಬರೂ ದಿತಿಯಪುತ್ರರಾಗಿ ದೈತ್ಯರಾಗಿದ್ದರು. ಅವರು ಭಗವಂತನಲ್ಲಿ ವೈರಭಾವವನ್ನಿರಿಸಿದ್ದರು. ಅವರ ಹೃದಯದಲ್ಲಿ ನೆಲೆಸಿರುವ ಭಗವಂತನು ಅವರ ಉದ್ಧಾರ ಮಾಡಲಿಕ್ಕಾಗಿಯೇ ಅವರನ್ನು ಸಂಹರಿಸಿದ್ದನು. ॥ ೩೫ ॥ ಋಷಿಗಳ ಶಾಪದಿಂದ ಅವರ ಮುಕ್ತಿಯು ಆಗದೆ ಅವರು ಮತ್ತೆ ಕುಂಭಕರ್ಣ ಮತ್ತು ರಾವಣರ ರೂಪದಲ್ಲಿ ರಾಕ್ಷಸರಾದರು. ಆ ಸಮಯದಲ್ಲಿ ಭಗವಾನ್ ಶ್ರೀರಾಮನು ಪರಾಕ್ರಮದಿಂದ ಅವರನ್ನು ಮುಗಿಸಿಬಿಟ್ಟನು. ॥ ೩೬ ॥ ಯುದ್ಧದಲ್ಲಿ ಭಗವಾನ್ ರಾಮನ ಬಾಣಗಳಿಂದ ಅವರ ಹೃದಯವು ಒಡೆದುಹೋಯಿತು. ಅವರು ಹಿಂದಿನ ಜನ್ಮದಂತೆ ಭಗವಂತನನ್ನು ಸ್ಮರಿಸುತ್ತಾ ತಮ್ಮ ಶರೀರವನ್ನು ತ್ಯಜಿಸಿದರು. ॥ ೩೭ ॥ ಅವರೇ ಈಗ ಈ ಯುಗದಲ್ಲಿ ಶಿಶುಪಾಲ ಮತ್ತು ದಂತವಕ್ತ್ರರ ರೂಪದಲ್ಲಿ ಹುಟ್ಟಿದ್ದರು. ಭಗವಂತನ ಕುರಿತು ವೈರಭಾವ ಉಂಟಾದ ಕಾರಣ ನಿನ್ನ ಎದುರಿನಲ್ಲೇ ಅವರು ಅವನಲ್ಲಿ ಒಂದಾಗಿಹೋದರು. ॥ ೩೮ ॥ ಯುಧಿಷ್ಠಿರ! ಶ್ರೀಕೃಷ್ಣನಲ್ಲಿ ಶತ್ರುತ್ವ ಎರಿಸಿಕೊಂಡ ರಾಜರೆಲ್ಲರೂ ಅಂತ್ಯಸಮಯದಲ್ಲಿ ಶ್ರೀಕೃಷ್ಣನ ಸ್ಮರಣೆಯಿಂದ ತದ್ರೂಪರಾಗಿ ತಮ್ಮ ಪೂರ್ವಕೃತ ಪಾಪಗಳಿಂದ ಎಂದೆಂದಿಗೂ ಮುಕ್ತರಾಗಿ ಹೋದರು. ದುಂಬಿಯು ಹಿಡಿದು ತಂದು ಗೂಡಿನಲ್ಲಿ ಕೂಡಿಹಾಕಿದ ಹುಳುವು ಭಯದಿಂದ ದುಂಬಿಯನ್ನೇ ಚಿಂತಿಸುತ್ತಾ ದುಂಬಿಯೇ ಆಗುವಂತೆ ಅವನಂತೆ ಆದರು. ॥ ೩೯ ॥ ಭಗವಂತನ ಪ್ರಿಯಭಕ್ತರು ತಮ್ಮ ಭೇದ-ಭಾವರಹಿತ ಅನನ್ಯ ಭಕ್ತಿಯ ಮೂಲಕ ಭಗವತ್ಸ್ವರೂಪವನ್ನು ಪಡೆದುಕೊಂಡಂತೆ ಶಿಶುಪಾಲರೇ ಮುಂತಾದ ರಾಜರೂ ಕೂಡ ಭಗವಂತನ ವೈರದಿಂದ ಉಂಟಾದ ಅನನ್ಯ ಚಿಂತನದಿಂದ ಭಗವಂತನ ಸಾರೂಪ್ಯವನ್ನೇ ಪಡೆದುಕೊಂಡರು. ॥ ೪೦ ॥

ಆಖ್ಯಾತಂ ಸರ್ವಮೇತತ್ತೇ ಯನ್ಮಾಂ ತ್ವಂ ಪರಿಪೃಷ್ಟವಾನ್ ।
ದಮಘೋಷಸುತಾದೀನಾಂ ಹರೇಃ ಸಾತ್ಮ್ಯಮಪಿ ದ್ವಿಷಾಮ್
॥ ೪೧ ॥

ಏಷಾ ಬ್ರಹ್ಮಣ್ಯದೇವಸ್ಯ ಕೃಷ್ಣಸ್ಯ ಚ ಮಹಾತ್ಮನಃ ।
ಅವತಾರಕಥಾ ಪುಣ್ಯಾ ವಧೋ ಯತ್ರಾದಿದೈತ್ಯಯೋಃ
॥ ೪೨ ॥

ಪ್ರಹ್ಲಾದಸ್ಯಾನುಚರಿತಂ ಮಹಾಭಾಗವತಸ್ಯ ಚ ।
ಭಕ್ತಿರ್ಜ್ಞಾನಂ ವಿರಕ್ತಿಶ್ಚ ಯಾಥಾತ್ಮ್ಯಂ ಚಾಸ್ಯ ವೈ ಹರೇಃ
॥ ೪೩ ॥

ಸರ್ಗಸ್ಥಿತ್ಯಪ್ಯಯೇಶಸ್ಯ ಗುಣಕರ್ಮಾನುವರ್ಣನಮ್ ।
ಪರಾವರೇಷಾಂ ಸ್ಥಾನಾನಾಂ ಕಾಲೇನ ವ್ಯತ್ಯಯೋ ಮಹಾನ್
॥ ೪೪ ॥

ಧರ್ಮೋ ಭಾಗವತಾನಾಂ ಚ ಭಗವಾನ್ಯೇನ ಗಮ್ಯತೇ ।
ಆಖ್ಯಾನೇಽಸ್ಮಿನ್ಸಮಾಮ್ನಾತಮಾಧ್ಯಾತ್ಮಿಕಮಶೇಷತಃ
॥ ೪೫ ॥

ಯ ಏತತ್ಪುಣ್ಯಮಾಖ್ಯಾನಂ ವಿಷ್ಣೋರ್ವೀರ್ಯೋಪಬೃಂಹಿತಮ್ ।
ಕೀರ್ತಯೇಚ್ಛ್ರದ್ಧಯಾ ಶ್ರುತ್ವಾ ಕರ್ಮಪಾಶೈರ್ವಿಮುಚ್ಯತೇ
॥ ೪೬ ॥

ಏತದ್ಯ ಆದಿಪುರುಷಸ್ಯ ಮೃಗೇಂದ್ರಲೀಲಾಂ
ದೈತ್ಯೇಂದ್ರಯೂಥಪವಧಂ ಪ್ರಯತಃ ಪಠೇತ ।
ದೈತ್ಯಾತ್ಮಜಸ್ಯ ಚ ಸತಾಂ ಪ್ರವರಸ್ಯ ಪುಣ್ಯಂ
ಶ್ರುತ್ವಾನುಭಾವಮಕುತೋಭಯಮೇತಿ ಲೋಕಮ್ ॥ ೪೭ ॥

ಯೂಯಂ ನೃಲೋಕೇ ಬತ ಭೂರಿಭಾಗಾ
ಲೋಕಂ ಪುನಾನಾ ಮುನಯೋಽಭಿಯಂತಿ ।
ಯೇಷಾಂ ಗೃಹಾನಾವಸತೀತಿ ಸಾಕ್ಷಾ-
ದ್ಗೂಢಂ ಪರಂ ಬ್ರಹ್ಮ ಮನುಷ್ಯಲಿಂಗಮ್ ॥ ೪೮ ॥

ಸ ವಾ ಅಯಂ ಬ್ರಹ್ಮ ಮಹದ್ವಿಮೃಗ್ಯ-
ಕೈವಲ್ಯನಿರ್ವಾಣಸುಖಾನುಭೂತಿಃ ।
ಪ್ರಿಯಃ ಸುಹೃದ್ವಃ ಖಲು ಮಾತುಲೇಯ
ಆತ್ಮಾರ್ಹಣೀಯೋ ವಿಧಿಕೃದ್ಗುರುಶ್ಚ ॥ ೪೯ ॥

ನ ಯಸ್ಯ ಸಾಕ್ಷಾದ್ಭವಪದ್ಮಜಾದಿಭೀ
ರೂಪಂ ಧಿಯಾ ವಸ್ತುತಯೋಪವರ್ಣಿತಮ್ ।
ಮೌನೇನ ಭಕ್ತ್ಯೋಪಶಮೇನ ಪೂಜಿತಃ
ಪ್ರಸೀದತಾಮೇಷ ಸ ಸಾತ್ವತಾಂ ಪತಿಃ ॥ ೫೦ ॥

ಯುಧಿಷ್ಠಿರನೇ! ಭಗವಂತನಲ್ಲಿ ದ್ವೇಷಮಾಡುತ್ತಿದ್ದ ಶಿಶುಪಾಲರೇ ಮುಂತಾದವರಿಗೆ ಶ್ರೀಭಗವಂತನ ಸಾರೂಪ್ಯ ಮುಕ್ತಿಯು ಹೇಗೆ ಉಂಟಾಯಿತು ? ಎಂದು ನೀನು ಕೇಳಿದ್ದೆ. ಅದಕ್ಕೆ ನಾನು ಉತ್ತರ ನೀಡಿಯಾಯಿತು. ॥ ೪೧ ॥ ಆದಿದೈತ್ಯರಾದ ಹಿರಣ್ಯಾಕ್ಷ-ಹಿರಣ್ಯಕಶಿಪುಗಳ ವಧೆಯನ್ನು ವರ್ಣಿಸುವ ಈ ಕಥೆಯು ಬ್ರಹ್ಮಣ್ಯದೇವನಾದ ಶ್ರೀಕೃಷ್ಣಪರಮಾತ್ಮನ ಪರಮಪವಿತ್ರ ಅವತಾರಚರಿತ್ರವೇ ಆಗಿದೆ. ॥ ೪೨ ॥ ಈ ಪ್ರಸಂಗದಲ್ಲಿ ಮಹಾಭಾಗವತೋತ್ತಮನಾದ ಪ್ರಹ್ಲಾದನ ಚರಿತ್ರೆಯನ್ನು, ಭಕ್ತಿ, ಜ್ಞಾನ, ವೈರಾಗ್ಯ ಹಾಗೂ ಪ್ರಪಂಚದ ಸೃಷ್ಟಿ, ಸ್ಥಿತಿ, ಪ್ರಳಯಗಳ ಸ್ವಾಮಿಯಾದ ಶ್ರೀಹರಿಯ ಯಥಾರ್ಥ ಸ್ವರೂಪವನ್ನೂ, ದಿವ್ಯಗುಣಗಳನ್ನೂ, ಲೀಲೆಗಳನ್ನೂ ವರ್ಣನೆ ಮಾಡಿದೆ. ಈ ಆಖ್ಯಾನದಲ್ಲಿ ದೇವತೆಗಳ, ದೈತ್ಯರ ಪದವಿಯಲ್ಲಿ ಕಾಲಕ್ರಮದಲ್ಲಿ ಉಂಟಾಗುವ ಪರಿವರ್ತನೆಯನ್ನು ನಿರೂಪಿಸಲಾಯಿತು. ॥ ೪೩-೪೪ ॥ ಭಗವಂತನನ್ನು ದೊರಕಿಸುವ ಭಾಗವತಧರ್ಮವನ್ನೂ ವರ್ಣಿಸಿದ್ದೇನೆ. ಅಧ್ಯಾತ್ಮಕ್ಕೆ ಸಂಬಂಧಪಟ್ಟಂತೆ ತಿಳಿಯಬೇಕಾದ ವಿಷಯಗಳನ್ನು ಇಲ್ಲಿ ಹೇಳಲಾಗಿದೆ. ॥ ೪೫ ॥ ಭಗವಂತನ ಪರಾಕ್ರಮದಿಂದ ಪೂರ್ಣವಾದ ಈ ಪವಿತ್ರವಾದ ಆಖ್ಯಾನವನ್ನು ಶ್ರದ್ಧೆಯಿಂದ ಕೀರ್ತಿಸುವವನು, ಶ್ರವಣಿಸುವವನು ಕರ್ಮಬಂಧನದಿಂದ ಬಿಡುಗಡೆಹೊಂದುವನು. ॥ ೪೬॥ ಪರಮಪುರುಷ ಪರಮಾತ್ಮನ ಈ ನರಸಿಂಹ ಲೀಲೆಯನ್ನೂ, ಸೇನಾಪತಿಗಳ ಸಹಿತ ಹಿರಣ್ಯಕಶಿಪುವಿನ ವಧೆಯನ್ನೂ, ಸಂತಶಿರೋಮಣಿ ಪ್ರಹ್ಲಾದನ ಪಾವನವಾದ ಪ್ರಭಾವವನ್ನೂ ಏಕಾಗ್ರವಾದ ಮನಸ್ಸಿನಿಂದ ಓದುವವನಿಗೆ, ಕೇಳುವವನಿಗೆ ಭಗವಂತನ ಅಭಯಪ್ರದವಾದ ಶ್ರೀವೈಕುಂಠ ಧಾಮವು ದೊರೆಯುವುದು. ॥ ೪೭ ॥

ಯುಧಿಷ್ಠಿರನೇ ! ಈ ಮನುಷ್ಯಲೋಕದಲ್ಲಿ ನಿಮ್ಮಗಳ ಭಾಗ್ಯವು ಅತ್ಯಂತ ಪ್ರಶಂಸನೀಯವಾಗಿದೆ. ಏಕೆಂದರೆ, ನಿಮ್ಮ ಮನೆಯಲ್ಲಿ ಸಾಕ್ಷಾತ್ ಪರಬ್ರಹ್ಮ ಪರಮಾತ್ಮನು ಮನುಷ್ಯರೂಪವನ್ನು ಧರಿಸಿ ಗುಪ್ತವಾಗಿ ವಾಸಿಸುತ್ತಾನೆ. ಇದರಿಂದ ಇಡೀ ಪ್ರಪಂಚವನ್ನು ಪವಿತ್ರಗೊಳಿಸುವಂತಹ ಋಷಿ-ಮುನಿಗಳು ಮೇಲಿಂದ-ಮೇಲೆ ಅವನ ದರ್ಶನ ಪಡೆಯಲು ಎಲ್ಲೆಡೆಗಳಿಂದ ನಿಮ್ಮ ಬಳಿಗೆ ಬರುತ್ತಾ ಇರುತ್ತಾರೆ. ॥ ೪೮ ॥ ದೊಡ್ಡ-ದೊಡ್ಡ ಮಹಾಪುರುಷರು ಯಾವನನ್ನು ನಿರಂತರವಾಗಿ ಹುಡುಕುತ್ತಿರುವರೋ, ಯಾರು ಮಾಯೆಯ ಲೇಶವೂ ಇಲ್ಲದ ಪರಮ ಶಾಂತ, ಪರಮಾನಂದಾನುಭವಸ್ವರೂಪ, ಪರಬ್ರಹ್ಮ ಪರಮಾತ್ಮನೇ ಆಗಿರುವನೋ, ಅವನು ನಿಮಗೆ ಪ್ರಿಯನೂ, ಹಿತೈಷಿಯೂ, ಸೋದರತ್ತೆಯ ಮಗನೂ, ಪೂಜ್ಯನೂ, ಆಜ್ಞಾಕಾರಿಯೂ, ಗುರುವೂ ಮತ್ತು ಸ್ವಯಂ ಆತ್ಮನೂ ಆದ ಶ್ರೀಕೃಷ್ಣನೇ ಆಗಿದ್ದಾನೆ. ॥ ೪೯ ॥ 'ಇವನು ಹೀಗೆಯೇ ಇದ್ದಾನೆ' ಎಂಬ ಇವನ ಸ್ವರೂಪವನ್ನು ಬ್ರಹ್ಮರುದ್ರಾದಿಗಳೂ ತಮ್ಮ ಬುದ್ಧಿಶಕ್ತಿಯಿಂದ ಹೇಗೆ ವರ್ಣಿಸಬಲ್ಲರು ? ಹೀಗಿರುವಾಗ ನಾವಾದರೋ ಹೇಗೆ ವರ್ಣಿಸಬಲ್ಲೆವು ? ನಾವುಗಳು ಮೌನ, ಭಕ್ತಿ ಮತ್ತು ಸಂಯಮದಿಂದ ಅವನಿಗೆ ನಮಸ್ಕರಿಸುತ್ತೇವೆ. ಅದನ್ನೇ ಪೂಜೆಯೆಂದು ಕರುಣೆಯಿಂದ ಸ್ವೀಕರಿಸಿ ಭಕ್ತವತ್ಸಲನಾದ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲಿ. ॥ ೫೦ ॥

ಸ ಏಷ ಭಗವಾನ್ರಾಜನ್ವ್ಯತನೋದ್ವಿಹತಂ ಯಶಃ ।
ಪುರಾ ರುದ್ರಸ್ಯ ದೇವಸ್ಯ ಮಯೇನಾನಂತಮಾಯಿನಾ ॥ ೫೦ ॥

ಯುಧಿಷ್ಠಿರನೇ! ಹಿಂದೆ ಮಹಾಮಾಯಾವಿಯಾದ ಮಯಾಸುರನು ಶ್ರೀರುದ್ರದೇವರ ಕೀರ್ತಿಗೆ ಕಲಂಕವನ್ನು ತರಲು ಬಯಸಿದಾಗ ಈ ಭಗವಂತನೇ ಅವರ ಕೀರ್ತಿಯನ್ನು ಮತ್ತೆ ರಕ್ಷಿಸಿ ವಿಸ್ತಾರಪಡಿಸಿದನು. ॥ ೫೦॥

*ರಾಜೋವಾಚ*

ಕಸ್ಮಿನ್ಕರ್ಮಣಿ ದೇವಸ್ಯ ಮಯೋಽಹನ್‌ಜಗದೀಶಿತುಃ ।
ಯಥಾ ಚೋಪಚಿತಾ ಕೀರ್ತಿಃ ಕೃಷ್ಣೇನಾನೇನ ಕಥ್ಯತಾಮ್ ॥ ೫೨ ॥

**ಯುಧಿಷ್ಠಿರ ಮಹಾರಾಜನು ಕೇಳಿದನು** – ನಾರದರೇ! ಮಯದಾನವನು ಯಾವ ಕಾರ್ಯದಲ್ಲಿ ವಿಶ್ವೇಶ್ವರನಾದ ರುದ್ರದೇವರ ಕೀರ್ತಿಯನ್ನು ಕೆಡಿಸಲು ಬಯಸಿದ್ದನು? ಮತ್ತು ಭಗವಾನ್ ಶ್ರೀಕೃಷ್ಣನು ಯಾವ ವಿಧದಿಂದ ಅವರ ಕೀರ್ತಿಯನ್ನು ರಕ್ಷಿಸಿದನು? ಎಂಬುದನ್ನು ಕೃಪೆಯಿಟ್ಟು ತಿಳಿಸಿರಿ. ॥ ೫೨ ॥

*ನಾರದ ಉವಾಚ*

ನಿರ್ಜಿತಾ ಅಸುರಾ ದೇವೈರ್ಯುಧ್ಯನೇನೋಪಬೃಂಹಿತೈಃ ।
ಮಾಯಿನಾಂ ಪರಮಾಚಾರ್ಯಂ ಮಯಂ ಶರಣಮಾಯಯುಃ ॥ ೫೩ ॥

**ನಾರದರು ಹೇಳಿದರು** – ಹಿಂದೊಮ್ಮೆ ಭಗವಾನ್ ಶ್ರೀಕೃಷ್ಣನ ಶಕ್ತಿಯನ್ನು ಪಡೆದುಕೊಂಡು ದೇವತೆಗಳು ಯುದ್ಧದಲ್ಲಿ ಅಸುರರನ್ನು ಗೆದ್ದುಕೊಂಡಿದ್ದರು. ಆಗ ಅಸುರರೆಲ್ಲರೂ ಮಾಯಾವಿಗಳ ಪರಮಗುರು ಮಯ ದಾನವನಿಗೆ ಶರಣಾದರು. ॥ ೫೩ ॥

ಸ ನಿರ್ಮಾಯ ಪುರಸ್ತಿಸ್ರೋ ಹೈಮೀರೌಪ್ಯಾಯಸೀರ್ವಿಭುಃ ।
ದುರ್ಲಕ್ಷ್ಯಾಪಾಯಸಂಯೋಗಾ ದುರ್ವಿತರ್ಕ್ಯಪರಿಚ್ಛದಾಃ ॥ ೫೪ ॥

ಮಹಾಶಕ್ತಿಶಾಲಿ ಮಯಾಸುರನು ಚಿನ್ನ, ಬೆಳ್ಳಿ ಮತ್ತು ಕಬ್ಬಿಣಗಳಿಂದ ಮೂರು ವಿಚಿತ್ರವಾದ ವಿಮಾನಗಳನ್ನು ರಚಿಸಿದನು. ಆ ವಿಮಾನಗಳೆಂದರೆ ಮೂರು ಪುರಗಳೇ ಆಗಿದ್ದವು. ಅವುಗಳು ಬಂದು-ಹೋಗುವುದು ಯಾರಿಗೂ ತಿಳಿಯದಷ್ಟು ವಿಲಕ್ಷಣವಾಗಿದ್ದವು. ಅವುಗಳಲ್ಲಿ ಅಪರಿಮಿತವಾದ ಯುದ್ಧದ ಸಾಮಗ್ರಿಗಳು ತುಂಬಿದ್ದವು. ॥ ೫೪ ॥

ತಾಭಿಸ್ತೇಽಸುರಸೇನಾನ್ಯೋ ಲೋಕಾಂಸ್ತ್ರೀನ್ಸೇಶ್ವರಾನ್ನೃಪ ।
ಸ್ಮರಂತೋ ನಾಶಯಾನ್‌ಚಕ್ರುಃ ಪೂರ್ವವೈರಮಲಕ್ಷಿತಾಃ ॥ ೫೫ ॥

ಯುಧಿಷ್ಠಿರನೇ! ದೈತ್ಯಸೇನಾಪತಿಗಳ ಮನಸ್ಸಿನಲ್ಲಿ ಮೂರೂ ಲೋಕಗಳ ಬಗ್ಗೆ ಹಾಗೂ ಲೋಕಪಾಲರ ಬಗ್ಗೆ ವೈರಭಾವವು ಇದ್ದೇ ಇತ್ತು. ಈಗ ಅದನ್ನು ನೆನೆದು ಆ ಮೂರು ವಿಮಾನಗಳಿಂದ ಅವರು ಅವುಗಳಲ್ಲಿ ಅಡಗಿದ್ದುಕೊಂಡು ಎಲ್ಲರನ್ನೂ ನಾಶಪಡಿಸತೊಡಗಿದರು. ॥ ೫೫ ॥

ತತಸ್ತೇ ಸೇಶ್ವರಾ ಲೋಕಾ ಉಪಾಸಾದ್ಯೇಶ್ವರಂ ವಿಭೋ ।
ತ್ರಾಹಿ ನಸ್ತಾವಕಾನ್‌ದೇವ ವಿನಷ್ಟಾಂಸ್ತ್ರಿಪುರಾಲಯೈಃ ॥ ೫೬ ॥

ಆಗ ಲೋಕಪಾಲರೊಂದಿಗೆ ಎಲ್ಲ ಪ್ರಜೆಯೂ ಭಗವಾನ್ ಶಂಕರನಲ್ಲಿ ಶರಣು ಹೊಕ್ಕರು ಮತ್ತು ಅವನಲ್ಲಿ ಪ್ರಾರ್ಥಿಸಿದರು – 'ಪ್ರಭೋ! ತ್ರಿಪುರಗಳಲ್ಲಿ ಇರುವ ಅಸುರರು ನಮ್ಮನ್ನು ನಾಶಪಡಿಸುತ್ತಿದ್ದಾರೆ. ನಾವು ನಿನ್ನವರೇ ಆಗಿದ್ದೇವೆ. ಆದ್ದರಿಂದ ಮಹಾದೇವಾ! ನಮ್ಮನ್ನು ರಕ್ಷಿಸು.' ॥ ೫೬ ॥

ಅಥಾನುಗೃಹ್ಯ ಭಗವಾನ್ಮಾ ಭೈಷ್ಟೇತಿ ಸುರಾನ್ವಿಭುಃ ।
ಶರಂ ಧನುಷಿ ಸಂಧಾಯ ಪುರೇಷ್ವಸ್ತ್ರಂ ವ್ಯಮುಂಚತ ॥ ೫೭ ॥

ಅವರ ಪ್ರಾರ್ಥನೆಯನ್ನು ಕೇಳಿ ಭಗವಾನ್ ಶಂಕರನು – 'ಹೆದರಬೇಡಿರಿ' ಎಂದು ಕೃಪಾಪೂರ್ಣವಾಗಿ ಅವರಿಗೆ ಅಭಯವನ್ನೂ ಇತ್ತು, ಮತ್ತೆ ಅವನು ಧನುಸ್ಸಿಗೆ ಬಾಣವನ್ನು ತೊಟ್ಟು ಮೂರೂ ಪುರಗಳ ಮೇಲೆ ಪ್ರಯೋಗಿಸಿದನು. ॥ ೫೭ ॥

ತತೋಽಗ್ನಿವರ್ಣಾ ಇಷವ ಉತ್ಪೇತುಃ ಸೂರ್ಯಮಂಡಲಾತ್ ।
ಯಥಾ ಮಯೂಖಸಂದೋಹಾ ನಾದೃಶ್ಯಂತ ಪುರೋ ಯತಃ ॥ ೫೮ ॥

ಅವನ ಆ ಬಾಣದಿಂದ ಸೂರ್ಯಮಂಡಲದಲ್ಲಿ ಹೊರ ಸೂಸುವ ಕಿರಣಗಳಂತೆ ಬೇರೆ ಅನೇಕ ಬಾಣಗಳು ಹೊರಟವು. ಬೆಂಕಿಯ ಜ್ವಾಲೆಗಳನ್ನೇ ಉಗುಳುತ್ತಿದ್ದ ಆ ಬಾಣಗಳಿಂದಾಗಿ ಆ ಪುರಗಳು ಕಾಣಿಸದಾದವು. ॥ ೫೮ ॥

ತೈಃ ಸ್ಪೃಷ್ಟಾ ವ್ಯಸವಃ ಸರ್ವೇ ನಿಪೇತುಃ ಸ್ಮ ಪುರೌಕಸಃ ।
ತಾನಾನೀಯ ಮಹಾಯೋಗೀ ಮಯಃ ಕೂಪರಸೇಽಕ್ಷಿಪತ್ ॥ ೫೯ ॥

ಆ ಬಾಣಗಳ ಸ್ಪರ್ಶದಿಂದ ವಿಮಾನದಲ್ಲಿ ವಾಸಿಸುವವರೆಲ್ಲರೂ ಗತಪ್ರಾಣರಾಗಿ ಬಿದ್ದುಬಿಟ್ಟರು. ಅನೇಕ ಉಪಾಯಗಳನ್ನು ಬಲ್ಲಂತಹ ಮಾಯಾವಿಯು ತಾನೇ ನಿರ್ಮಿಸಿದ ಅಮೃತದ ಕುಂಡಕ್ಕೆ ಆ ದೈತ್ಯರನ್ನು ಎತ್ತಿ ಹಾಕಿದನು. ॥ ೫೯ ॥

ಸಿದ್ಧಾಮೃತರಸಸ್ಪೃಷ್ಟಾ ವಜ್ರಸಾರಾ ಮಹೌಜಸಃ ।
ಉತ್ತಸ್ಥುರ್ಮೇಘದಲನಾ ವೈದ್ಯುತಾ ಇವ ವಹ್ನಯಃ ॥ ೬೦ ॥

ಆ ಸಿದ್ಧ ಅಮೃತರಸದ ಸ್ಪರ್ಶವಾಗುತ್ತಲೇ ಅಸುರರ ಶರೀರಗಳು ಅತ್ಯಂತ ತೇಜಸ್ವಿಯೂ, ವಜ್ರದಂತೆ ಸುದೃಢವೂ ಆಯಿತು. ಮೋಡಗಳನ್ನು ಚದುರಿಸುವ ಮಿಂಚಿನಂತೆ ಅವರು ಎದ್ದು ನಿಂತರು. ॥ ೬೦ ॥

ವಿಲೋಕ್ಯ ಭಗ್ನಸಂಕಲ್ಪಂ ವಿಮನಸ್ಕಂ ವೃಷಧ್ವಜಮ್ ।
ತದಾಯಂ ಭಗವಾನ್ವಿಷ್ಣುಸ್ತತ್ರೋಪಾಯಮಕಲ್ಪಯತ್ ॥ ೬೧ ॥

ವತ್ಸ ಆಸೀತ್ತದಾ ಬ್ರಹ್ಮಾ ಸ್ವಯಂ ವಿಷ್ಣುರಯಂ ಹಿ ಗೌಃ ।
ಪ್ರವಿಶ್ಯ ತ್ರಿಪುರಂ ಕಾಲೇ ರಸಕೂಪಾಮೃತಂ ಪಪೌ ॥ ೬೨ ॥

ತೇಽಸುರಾ ಹ್ಯಪಿ ಪಶ್ಯಂತೋ ನ ನ್ಯಷೇಧನ್ವಿಮೋಹಿತಾಃ ।
ತದ್ವಿಜ್ಞಾಯ ಮಹಾಯೋಗೀ ರಸಪಾಲಾನಿದಂ ಜಗೌ ॥ ೬೩ ॥

ಸ್ವಯಂ ವಿಶೋಕಃ ಶೋಕಾರ್ತಾನ್ ಸ್ಮರನ್ದೈವಗತಿಂ ಚ ತಾಮ್ ।
ದೇವೋಽಸುರೋ ನರೋಽನ್ಯೋ ವಾ ನೇಶ್ವರೋಽಸ್ತೀಹ ಕಶ್ಚನ ॥ ೬೪ ॥

ಆತ್ಮನೋಽನ್ಯಸ್ಯ ವಾ ದಿಷ್ಟಂ ದೈವೇನಾಪೋಹಿತುಂ ದ್ವಯೋಃ ।
ಅಥಾಸೌ ಶಕ್ತಿಭಿಃ ಸ್ವಾಭಿಃ ಶಂಭೋಃ ಪ್ರಾಧಾನಿಕಂ ವ್ಯಧಾತ್ ॥ ೬೫ ॥

ಧರ್ಮಜ್ಞಾನವಿರಕ್ತ್ಯೃದ್ಧಿತಪೋವಿದ್ಯಾಕ್ರಿಯಾದಿಭಿಃ ।
ರಥಂ ಸೂತಂ ಧ್ವಜಂ ವಾಹಾನ್ ಧನುರ್ವರ್ಮ ಶರಾದಿ ಯತ್ ॥ ೬೬ ॥

ಸನ್ನದ್ಧೋ ರಥಮಾಸ್ಥಾಯ ಶರಂ ಧನುರುಪಾದದೇ ।
ಶರಂ ಧನುಷಿ ಸಂಧಾಯ ಮುಹೂರ್ತೇಽಭಿಜಿತೀಶ್ವರಃ ॥ ೬೭ ॥

ದದಾಹ ತೇನ ದುರ್ಭೇದ್ಯಾ ಹರೋಽಥ ತ್ರಿಪುರೋ ನೃಪ ।
ದಿವಿ ದುಂದುಭಯೋ ನೇದುರ್ವಿಮಾನಶತಸಂಕುಲಾಃ ॥ ೬೮ ॥

ದೇವರ್ಷಿಪಿತೃಸಿದ್ಧೇಶಾ ಜಯೇತಿ ಕುಸುಮೋತ್ಕರೈಃ ।
ಅವಾಕಿರನ್ಜಗುರ್ಹೃಷ್ಟಾ ನನೃತುಶ್ಚಾಪ್ಸರೋಗಣಾಃ ॥ ೬೯ ॥

ಏವಂ ದಗ್ಧ್ವಾ ಪುರಸ್ತಿಸ್ರೋ ಭಗವಾನ್ಪುರಹಾ ನೃಪ ।
ಬ್ರಹ್ಮಾದಿಭಿಃ ಸ್ತೂಯಮಾನಃ ಸ್ವಧಾಮ ಪ್ರತ್ಯಪದ್ಯತ ॥ ೭೦ ॥

ಏವಂ ವಿಧಾನ್ಯಸ್ಯ ಹರೇಃ ಸ್ವಮಾಯಯಾ ವಿಡಂಬಮಾನಸ್ಯ ನೃಲೋಕಮಾತ್ಮನಃ ।
ವೀರ್ಯಾಣಿ ಗೀತಾನ್ಯೃಷಿಭಿರ್ಜಗದ್ಗುರೋ-ರ್ಲೋಕಾನ್ಪುನಾನಾನ್ಯಪರಂ ವದಾಮಿ ಕಿಮ್ ॥ ೭೧ ॥

ಭಗವಾನ್ ಶ್ರೀಕೃಷ್ಣನು–ಮಹಾದೇವನಾದರೋ ತನ್ನ ಸಂಕಲ್ಪವು ಪೂರ್ಣಗೊಳ್ಳದಿರುವ ಕಾರಣ ಚಿಂತಾಮಗ್ನನಾಗಿರುವುದನ್ನು ಕಂಡಾಗ ಆ ಅಸುರರನ್ನು ಗೆಲ್ಲಲಿಕ್ಕಾಗಿ ಅವನು ಒಂದು ಯುಕ್ತಿಯನ್ನು ಹೂಡಿದನು. ॥ ೬೧ ॥ ಇದೇ ಭಗವಾನ್ ವಿಷ್ಣುವು ಒಂದು ಹಸುವಿನ ರೂಪವನ್ನು ತಾಳಿದನು ಮತ್ತು ಬ್ರಹ್ಮದೇವರು ಕರುವಿನ ರೂಪವನ್ನು ಧರಿಸಿದರು. ಅವರಿಬ್ಬರೂ ಮಧ್ಯಾಹ್ನದ ಸಮಯದಲ್ಲಿ ಆ ತ್ರಿಪುರಗಳನ್ನು ಪ್ರವೇಶಿಸಿ ಆ ಸಿದ್ಧರಸದ ಕುಂಡದ ಎಲ್ಲ ಅಮೃತವನ್ನು ಕುಡಿದು ಬಿಟ್ಟರು. ॥ ೬೨ ॥ ಅದನ್ನು ಕಾಯುತ್ತಿದ್ದ ದೈತ್ಯರು ಇವರಿಬ್ಬರನ್ನು ನೋಡುತ್ತಿದ್ದರೂ ಭಗವಂತನ ಮಾಯೆಯಿಂದ ಮೋಹಿತರಾಗಿ ಇವರನ್ನು ತಡೆಯದಾದರು. ಸರ್ವ ಉಪಾಯಗಳನ್ನು ತಿಳಿಯುವವರಲ್ಲಿ ಶ್ರೇಷ್ಠನಾದ ಮಯಾಸುರನಿಗೆ ಈ ಸಂಗತಿ ಅರಿವಾದಾಗ ಭಗವಂತನ ಈ ಲೀಲೆಯನ್ನು ಸ್ಮರಿಸುತ್ತಾ ಅವನಿಗೆ ಶೋಕವು ಉಂಟಾಗಲಿಲ್ಲ. ಶೋಕಿಸುತ್ತಿರುವ ಅಮೃತ ರಕ್ಷಕರಲ್ಲಿ ಹೇಳಿದನು – ಅಯ್ಯಾ ! ದೇವತೆಗಳು, ಅಸುರರು, ಮನುಷ್ಯರು ಅಥವಾ ಯಾವುದೇ ಪ್ರಾಣಿಯೂ ಕೂಡ ತನಗಾಗಲೀ – ಪರರಿಗಾಗಲೀ ಇಬ್ಬರಿಗೂ ವಿಧಿಯು ವಿಧಿಸಿದ ಪ್ರಾರಬ್ಧವನ್ನು ಅಳಿಸಲಾರರು. ಏನಾಗಬೇಕಿತ್ತೋ ಅದು ಆಗಿಹೋಯಿತು. ಶೋಕಿಸಿ ಏನು ಮಾಡುವುದಿದೆ ? ಇದಾದ ಬಳಿಕ ಭಗವಾನ್ ಶ್ರೀಕೃಷ್ಣನು ತನ್ನ ಶಕ್ತಿಗಳ ಮೂಲಕ ಭಗವಾನ್ ಶಂಕರನ ಯುದ್ಧದ ಸಾಮಗ್ರಿಗಳನ್ನು ಸಿದ್ಧಪಡಿಸಿದನು. ॥ ೬೩-೬೫ ॥ ಅವನು ಧರ್ಮದಿಂದ ರಥವನ್ನೂ, ಜ್ಞಾನದಿಂದ ಸಾರಥಿಯನ್ನೂ, ವೈರಾಗ್ಯದಿಂದ ಧ್ವಜವನ್ನೂ, ಐಶ್ವರ್ಯದಿಂದ ಕುದುರೆಗಳನ್ನೂ, ತಪಸ್ಸಿನಿಂದ ಧನುಸ್ಸನ್ನೂ, ವಿದ್ಯೆಯಿಂದ ಕವಚವನ್ನೂ, ಕ್ರಿಯೆಯಿಂದ ಬಾಣಗಳನ್ನು ಮತ್ತು ಬೇರೆ-ಬೇರೆ ಶಕ್ತಿಗಳಿಂದ ಬೇರೆ-ಬೇರೆ ವಸ್ತುಗಳನ್ನು ನಿರ್ಮಾಣ ಮಾಡಿದನು. ॥ ೬೬ ॥ ಈ ಸಾಮಗ್ರಿಗಳಿಂದ ಸನ್ನದ್ಧನಾಗಿ ಭಗವಾನ್ ಶಂಕರನು ಅಭಿಜಿತ್ ಮುಹೂರ್ತದಲ್ಲಿ ಧನುಸ್ಸಿಗೆ ಬಾಣವನ್ನು ಹೂಡಿ ಆ ದುರ್ಭೇದ್ಯವಾದ ಮೂರೂ ವಿಮಾನಗಳನ್ನು ಭಸ್ಮಮಾಡಿಬಿಟ್ಟನು. ಯುಧಿಷ್ಠಿರನೇ ! ಆಗಲೇ ಸ್ವರ್ಗದಲ್ಲಿ ದೇವದುಂದುಭಿಗಳು ಮೊಳಗಿದವು. ನೂರಾರು ವಿಮಾನಗಳು ಮಹಾದೇವರನ್ನು ಅಭಿನಂದಿಸಲು ನೆರೆದವು. ॥ ೬೭-೬೮ ॥ ದೇವತೆಗಳು, ಋಷಿಗಳು, ಪಿತೃಗಳು, ಸಿದ್ಧೇಶ್ವರರು, ಆನಂದದಿಂದ ಜಯ-ಜಯಕಾರವನ್ನು ಮಾಡುತ್ತಾ ಹೂವಿನ ಮಳೆಯನ್ನು ಸುರಿಸಿದರು. ಅಪ್ಸರೆಯರು ಹಾಡುತ್ತಾ ಕುಣಿಯತೊಡಗಿದರು. ॥ ೬೯ ॥ ಯುಧಿಷ್ಠಿರನೇ ! ಹೀಗೆ ಆ ಮೂರು ಪುರಗಳನ್ನೂ ಸುಟ್ಟು ಭಗವಾನ್ ಶಂಕರನು 'ಪುರಾರಿ' ಎಂಬ ಹೆಸರನ್ನು ಗಳಿಸಿದನು ಮತ್ತು ಬ್ರಹ್ಮಾದಿದೇವತೆಗಳ ಸ್ತುತಿಯನ್ನು ಕೇಳುತ್ತಾ ತನ್ನ ಧಾಮಕ್ಕೆ ಬಿಜಯಂಗೈದನು. ॥ ೭೦ ॥ ಆತ್ಮಸ್ವರೂಪನಾದ ಜಗದ್ಗುರು ಭಗವಾನ್ ಶ್ರೀಕೃಷ್ಣನು ಹೀಗೆ ತನ್ನ ಮಾಯೆಯಿಂದ ಮನುಷ್ಯರಂತೆ ಲೀಲೆಗಳನ್ನು ಮಾಡುತ್ತಾನೆ. ಋಷಿಗಳು ಆ ಅನೇಕ ಲೋಕಪಾವನ ಲೀಲೆಗಳನ್ನು ಹಾಡುತ್ತಾ ಇರುತ್ತಾರೆ. ಈಗ ನಾನು ನಿನಗೆ ಮತ್ತೇನು ಹೇಳಲಿ ? ಕೇಳು. ॥ ೭೧ ॥

ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ ಯುಧಿಷ್ಠಿರ-ನಾರದಸಂವಾದೇ ತ್ರಿಪುರವಿಜಯೋ ನಾಮ ದಶಮೋಽಧ್ಯಾಯಃ ॥ ೧೦ ॥

# ಹನ್ನೊಂದನೆಯ ಅಧ್ಯಾಯ

## ಮಾನವಧರ್ಮ, ವರ್ಣಧರ್ಮ, ಸ್ತ್ರೀಧರ್ಮ ಇವುಗಳ ನಿರೂಪಣೆ

*ಶ್ರೀಶುಕ ಉವಾಚ*

**ಶ್ರುತ್ವೇಹಿತಂ ಸಾಧುಸಭಾಸಭಾಜಿತಂ**
**ಮಹತ್ತಮಾಗ್ರಣ್ಯ ಉರುಕ್ರಮಾತ್ಮನಃ ।**
**ಯುಧಿಷ್ಠಿರೋ ದೈತ್ಯಪತೇರ್ಮುದಾ ಯುತಃ**
**ಪಪ್ರಚ್ಛ ಭೂಯಸ್ತನಯಂ ಸ್ವಯಂಭುವಃ ॥ ೧ ॥**

*ಯುಧಿಷ್ಠಿರ ಉವಾಚ*

**ಭಗವನ್ ಶ್ರೋತುಮಿಚ್ಛಾಮಿ ನೃಣಾಂ ಧರ್ಮಂ ಸನಾತನಮ್ ।**
**ವರ್ಣಾಶ್ರಮಾಚಾರಯುತಂ ಯತ್ಪುಮಾನ್ವಿಂದತೇ ಪರಮ್ ॥ ೨ ॥**

**ಭವಾನ್ಪ್ರಜಾಪತೇಃ ಸಾಕ್ಷಾದಾತ್ಮಜಃ ಪರಮೇಷ್ಠಿನಃ ।**
**ಸುತಾನಾಂ ಸಮ್ಮತೋ ಬ್ರಹ್ಮನ್‌ಸ್ತಪೋಯೋಗಸಮಾಧಿಭಿಃ ॥ ೩ ॥**

**ನಾರಾಯಣಪರಾ ವಿಪ್ರಾ ಧರ್ಮಂ ಗುಹ್ಯಂ ಪರಂ ವಿದುಃ ।**
**ಕರುಣಾಃ ಸಾಧವಃ ಶಾಂತಾಃ ತ್ವದ್ವಿಧಾ ನ ತಥಾಪರೇ ॥ ೪ ॥**

*ನಾರದ ಉವಾಚ*

**ನತ್ವಾ ಭಗವತೇಽಜಾಯ ಲೋಕಾನಾಂ ಧರ್ಮಹೇತವೇ ।**
**ವಕ್ಷ್ಯೇ ಸನಾತನಂ ಧರ್ಮಂ ನಾರಾಯಣಮುಖಾಚ್ಛ್ರುತಮ್ ॥ ೫ ॥**

**ಯೋಽವತೀರ್ಯಾತ್ಮನೋಽಂಶೇನ**
**ದಾಕ್ಷಾಯಣ್ಯಾಂ ತು ಧರ್ಮತಃ ।**
**ಲೋಕಾನಾಂ ಸ್ವಸ್ತಯೇಽಧ್ಯಾಸ್ತೇ**
**ತಪೋ ಬದರಿಕಾಶ್ರಮೇ ॥ ೬ ॥**

**ಧರ್ಮಮೂಲಂ ಹಿ ಭಗವಾನ್ಸರ್ವವೇದಮಯೋ ಹರಿಃ ।**
**ಸ್ಮೃತಂ ಚ ತದ್ವಿದಾಂ ರಾಜನ್ಯೇನ ಚಾತ್ಮಾ ಪ್ರಸೀದತಿ ॥ ೭ ॥**

**ಸತ್ಯಂ ದಯಾ ತಪಃ ಶೌಚಂ ತಿತಿಕ್ಷೇಕ್ಷಾ ಶಮೋ ದಮಃ ।**
**ಅಹಿಂಸಾ ಬ್ರಹ್ಮಚರ್ಯಂ ಚ ತ್ಯಾಗಃ ಸ್ವಾಧ್ಯಾಯ ಆರ್ಜವಮ್ ॥ ೮ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಭಗವನ್ಮಯನಾದ ಪ್ರಹ್ಲಾದನ ಕುರಿತಾದ ಸಾಧುಸಭೆಯಲ್ಲಿ ಸಮ್ಮಾನಿತವಾದ ಪವಿತ್ರ ಚರಿತ್ರೆಯನ್ನು ಕೇಳಿ, ಸಂತಶಿರೋಮಣಿ ಯುಧಿಷ್ಠಿರನಿಗೆ ತುಂಬಾ ಆನಂದವಾಯಿತು. ಅವನು ನಾರದರಲ್ಲಿ ಮತ್ತೆ ಕೇಳಿದನು – ॥ ೧ ॥

**ಯುಧಿಷ್ಠಿರನು ಕೇಳಿದನು** – ಪೂಜ್ಯರೇ! ಈಗ ನಾನು ವರ್ಣ ಮತ್ತು ಆಶ್ರಮಗಳ ಸದಾಚಾರದೊಂದಿಗೆ ಮನುಷ್ಯರ ಸನಾತನ ಧರ್ಮವನ್ನು ಕೇಳಬಯಸುತ್ತೇನೆ. ಏಕೆಂದರೆ, ಧರ್ಮದಿಂದಲೇ ಮನುಷ್ಯನಿಗೆ ಜ್ಞಾನ, ಭಗವತ್ಪ್ರೇಮ, ಸಾಕ್ಷಾತ್ ಪರಮಪುರುಷ ಭಗವಂತನ ಪ್ರಾಪ್ತಿಯು ಉಂಟಾಗುತ್ತದೆ. ॥ ೨ ॥ ನೀವು ಸ್ವಯಂ ಪ್ರಜಾಪತಿ ಬ್ರಹ್ಮದೇವರ ಪುತ್ರರಾಗಿರುವಿರಿ. ನಾರದರೇ! ನಿಮ್ಮ ತಪಸ್ಸು, ಯೋಗ, ಸಮಾಧಿಯ ಕಾರಣದಿಂದಾಗಿ ಅವರು ತಮ್ಮ ಇತರ ಪುತ್ರರಿಗಿಂತ ನಿಮ್ಮನ್ನು ಹೆಚ್ಚು ಸಮ್ಮಾನಿಸುವರು. ॥ ೩ ॥ ನಿಮ್ಮಂತಹ ಪರಾಯಣರೂ, ದಯಾಳುಗಳೂ, ಸದಾಚಾರ ಸಂಪನ್ನರೂ, ಶಾಂತರೂ ಆಗಿರುವ ನೀವು ಬ್ರಾಹ್ಮಣ ಧರ್ಮದ ಅತಿಗೋಪ್ಯವಾದ ರಹಸ್ಯವನ್ನು ಯಥಾರ್ಥವಾಗಿ ತಿಳಿದಿರುವಂತೆ ಬೇರೆ ಯಾರೂ ತಿಳಿಯಲಾರರು. ॥ ೪ ॥

**ನಾರದರು ಹೇಳಿದರು** – ಯುಧಿಷ್ಠಿರನೇ! ಜನ್ಮರಹಿತನಾದ ಭಗವಂತನೇ ಸಮಸ್ತ ಧರ್ಮಗಳ ಮೂಲಕಾರಣನಾಗಿದ್ದಾನೆ. ಆ ಪ್ರಭುವೇ ಚರಾಚರ ಜಗತ್ತಿನ ಕಲ್ಯಾಣಕ್ಕಾಗಿ ಧರ್ಮ ಮತ್ತು ದಕ್ಷಪುತ್ರಿಯಾದ ಮೂರ್ತಿ ದೇವಿಯಲ್ಲಿ ತನ್ನ ಅಂಶದಿಂದ ಅವತರಿಸಿ ಬದರಿಕಾಶ್ರಮದಲ್ಲಿ ತಪಸ್ಸುಮಾಡುತ್ತಾ ಇರುವನು. ಆ ನಾರಾಯಣಮುನಿಯನ್ನು ನಮಸ್ಕರಿಸಿ, ಅವರ ಬಾಯಿಂದಲೇ ಕೇಳಿರುವ ಸನಾತನಧರ್ಮವನ್ನು ನಾನು ವರ್ಣಿಸುತ್ತೇನೆ ॥ ೫-೬ ॥ ಯುಧಿಷ್ಠಿರನೇ! ಸರ್ವವೇದಸ್ವರೂಪನಾದ ಭಗವಾನ್ ಶ್ರೀಹರಿಯೂ, ಅವನ ತತ್ತ್ವವನ್ನರಿತ ಮಹರ್ಷಿಗಳು ರಚಿಸಿದ ಸ್ಮೃತಿಗಳೂ ಮತ್ತು ಯಾವುದರಿಂದ ಮನಸ್ಸಿಗೆ ಪ್ರಸನ್ನತೆ ಉಂಟಾಗುತ್ತದೋ ಆ ಕರ್ಮವು ಧರ್ಮಕ್ಕೆ ಮೂಲವಾದುದು. ॥ ೭ ॥

ಎಲೈ ರಾಜನೇ! ಧರ್ಮಕ್ಕೆ ಮೂವತ್ತು ಲಕ್ಷಣಗಳನ್ನು ಶಾಸ್ತ್ರಗಳಲ್ಲಿ ಹೇಳಲಾಗಿದೆ – ಸತ್ಯ, ದಯೆ, ತಪಸ್ಸು, ಶೌಚ, ತಿತಿಕ್ಷೆ ಉಚಿತ-ಅನುಚಿತಗಳ ವಿಚಾರ, ಮನಸ್ಸಿನ ಮತ್ತು ಇಂದ್ರಿಯಗಳ ಸಂಯಮ, ಅಹಿಂಸಾ, ಬ್ರಹ್ಮಚರ್ಯ, ತ್ಯಾಗ, ಸ್ವಾಧ್ಯಾಯ, ಸರಳತೆ, ಸಂತೋಷ, ಸಮದರ್ಶಿತ್ವ, ಮಹಾತ್ಮರ ಸೇವೆ, ನಿಧಾನವಾಗಿ ಸಾಂಸಾರಿಕ ಭೋಗಗಳ ಚೇಷ್ಟೆಗಳಿಂದ ನಿವೃತ್ತಿ, ಮನುಷ್ಯರ ಅಭಿಮಾನಪೂರ್ಣ ಪ್ರಯತ್ನಗಳ ಫಲವು ವಿರುದ್ಧವಾಗಿಯೇ ಉಂಟಾಗುವುದು ಎಂಬ ವಿಚಾರ, ಮೌನ, ಆತ್ಮಚಿಂತನೆ, ಪ್ರಾಣಿಗಳಿಗೆ ಅನ್ನವೇ ಮುಂತಾದವುಗಳನ್ನು ಯಥಾಯೋಗ್ಯವಾಗಿ ಹಂಚಿಕೊಡುವುದು, ಪ್ರಾಣಿಗಳಲ್ಲಿ ಮತ್ತು ವಿಶೇಷವಾಗಿ ಮನುಷ್ಯರಲ್ಲಿ ತನ್ನ ಆತ್ಮನ ಹಾಗೂ ಇಷ್ಟದೇವರ ಭಾವ, ಸಂತರ ಪರಮಾಶ್ರಯ ಭಗವಾನ್ ಶ್ರೀಕೃಷ್ಣನ ನಾಮ-ಗುಣ-ಲೀಲೆ ಮುಂತಾದವುಗಳ

ಸಂತೋಷಃ ಸಮದೃಕ್ಸೇವಾ ಗ್ರಾಮ್ಯೇಹೋಪರಮಃ ಶನೈಃ ।
ನೃಣಾಂ ವಿಪರ್ಯಯೇಹೇಕ್ಷಾ ಮೌನಮಾತ್ಮವಿಮರ್ಶನಮ್
॥ ೯ ॥

ಅನ್ನಾದ್ಯಾದೇಃ ಸಂವಿಭಾಗೋ ಭೂತೇಭ್ಯಶ್ಚ ಯಥಾರ್ಹತಃ ।
ತೇಷ್ವಾತ್ಮದೇವತಾಬುದ್ಧಿಃ ಸುತರಾಂ ನೃಷು ಪಾಂಡವ
॥ ೧೦ ॥

ಶ್ರವಣಂ ಕೀರ್ತನಂ ಚಾಸ್ಯ ಸ್ಮರಣಂ ಮಹತಾಂ ಗತೇಃ ।
ಸೇವೇಜ್ಯಾವನತಿರ್ದಾಸ್ಯಂ ಸಖ್ಯಮಾತ್ಮಸಮರ್ಪಣಮ್
॥ ೧೧ ॥

ನೃಣಾಮಯಂ ಪರೋ ಧರ್ಮಃ ಸರ್ವೇಷಾಂ ಸಮುದಾಹೃತಃ ।
ತ್ರಿಂಶಲ್ಲಕ್ಷಣವಾನ್ರಾಜನ್ಸರ್ವಾತ್ಮಾ ಯೇನ ತುಷ್ಯತಿ
॥ ೧೨ ॥

ಸಂಸ್ಕಾರಾ ಯದವಿಚ್ಛಿನ್ನಾಃ ಸ ದ್ವಿಜೋಽಜೋ ಜಗಾದ ಯಮ್ ।
ಇಜ್ಯಾಧ್ಯಯನದಾನಾನಿ ವಿಹಿತಾನಿ ದ್ವಿಜನ್ಮನಾಮ್ ।
ಜನ್ಮಕರ್ಮಾವದಾತಾನಾಂ ಕ್ರಿಯಾಶ್ಚಾಶ್ರಮಚೋದಿತಾಃ
॥ ೧೩ ॥

ವಿಪ್ರಸ್ಯಾಧ್ಯಯನಾದೀನಿ ಷಡನ್ಯಸ್ಯಾಪ್ರತಿಗ್ರಹಃ ।
ರಾಜ್ಞೋ ವೃತ್ತಿಃ ಪ್ರಜಾಗೋಪ್ತುರವಿಪ್ರಾದ್ವಾ ಕರಾದಿಭಿಃ
॥ ೧೪ ॥

ವೈಶ್ಯಸ್ತು ವಾರ್ತಾವೃತ್ತಿಶ್ಚ ನಿತ್ಯಂ ಬ್ರಹ್ಮಕುಲಾನುಗಃ ।
ಶೂದ್ರಸ್ಯ ದ್ವಿಜಶುಶ್ರೂಷಾ ವೃತ್ತಿಶ್ಚ ಸ್ವಾಮಿನೋ ಭವೇತ್
॥ ೧೫ ॥

ವಾರ್ತಾ ವಿಚಿತ್ರಾ ಶಾಲೀನಯಾಯಾವರಶಿಲೋಂಛನಮ್ ।
ವಿಪ್ರವೃತ್ತಿಶ್ಚತುರ್ಧೇಯಂ ಶ್ರೇಯಸೀ ಚೋತ್ತರೋತ್ತರಾ
॥ ೧೬ ॥

ಜಘನ್ಯೋ ನೋತ್ತಮಾಂ ವೃತ್ತಿಮನಾಪದಿ ಭಜೇನ್ನರಃ ।
ಋತೇ ರಾಜನ್ಯಮಾಪತ್ಸು ಸರ್ವೇಷಾಮಪಿ ಸರ್ವಶಃ
॥ ೧೭ ॥

ಋತಾಮೃತಾಭ್ಯಾಂ ಜೀವೇತ ಮೃತೇನ ಪ್ರಮೃತೇನ ವಾ ।
ಸತ್ಯಾನೃತಾಭ್ಯಾಂ ಜೀವೇತ ನ ಶ್ವವೃತ್ತ್ಯಾ ಕಥಂಚನ
॥ ೧೮ ॥

ಶ್ರವಣ, ಕೀರ್ತನೆ, ಸ್ಮರಣೆ, ಅವನ ಸೇವೆ, ಪೂಜೆ ಮತ್ತು ನಮಸ್ಕಾರ, ಅವನ ಕುರಿತು ದಾಸ್ಯ, ಸಖ್ಯ, ಆತ್ಮಸಮರ್ಪಣ – ಈ ಮೂವತ್ತು ಬಗೆಯ ಆಚರಣೆಯು ಮನುಷ್ಯರೆಲ್ಲರ ಪರಮಧರ್ಮವಾಗಿದೆ. ಇವುಗಳ ಪಾಲನೆಯಿಂದ ಸರ್ವಾತ್ಮನಾದ ಭಗವಂತನು ಪ್ರಸನ್ನನಾಗುತ್ತಾನೆ. ॥ ೮-೧೨ ॥

ಧರ್ಮರಾಜನೇ! ಯಾರ ವಂಶದಲ್ಲಿ ಅಖಂಡವಾಗಿ ಸಂಸ್ಕಾರಗಳು ಆಗುತ್ತಾ ಬಂದಿವೆಯೋ, ಯಾರನ್ನು ಬ್ರಹ್ಮದೇವರು ಸಂಸ್ಕಾರಕ್ಕೆ ಯೋಗ್ಯರೆಂದು ಸ್ವೀಕರಿಸಿರುವರೋ, ಅವರನ್ನು 'ದ್ವಿಜ'ರೆಂದು ಹೇಳುತ್ತಾರೆ. ಜನ್ಮ ಮತ್ತು ಕರ್ಮಗಳಿಂದ ಶುದ್ಧರಾದ ದ್ವಿಜರಿಗಾಗಿ ಯಜ್ಞ, ಅಧ್ಯಯನ, ದಾನ ಮತ್ತು ಬ್ರಹ್ಮಚರ್ಯವೇ ಮುಂತಾದ ಎಲ್ಲ ಆಶ್ರಮಗಳ ವಿಶೇಷ ಧರ್ಮ-ಕರ್ಮಗಳೂ ವಿಹಿತವಾಗಿವೆ. ॥ ೧೩ ॥ ಅಧ್ಯಯನ, ಅಧ್ಯಾಪನ, ದಾನ ಪಡೆಯುವುದು, ದಾನ ಮಾಡುವುದು, ಯಜ್ಞಮಾಡುವುದು, ಯಜ್ಞಮಾಡಿಸುವುದು – ಈ ಆರು ಕರ್ಮಗಳು ಬ್ರಾಹ್ಮಣನದ್ದಾಗಿವೆ. ಕ್ಷತ್ರಿಯನು ದಾನವನ್ನು ತೆಗೆದುಕೊಳ್ಳಬಾರದು. ಪ್ರಜೆಗಳನ್ನು ರಕ್ಷಿಸುವ ಕ್ಷತ್ರಿಯನ ಜೀವನ ನಿರ್ವಾಹವು ಬ್ರಾಹ್ಮಣನನ್ನು ಬಿಟ್ಟು ಉಳಿದೆಲ್ಲರಿಂದ ಯಥಾಯೋಗ್ಯ ತೆರಿಗೆ, ದಂಡ (ಜುಲ್ಮಾನೆ) ಮುಂತಾದವುಗಳ ಮೂಲಕ ನಡೆಯುತ್ತದೆ. ॥ ೧೪ ॥ ವೈಶ್ಯರು ಸದಾಕಾಲ ಬ್ರಾಹ್ಮಣವಂಶೀಯರ ಅನುಯಾಯಿಗಳಾಗಿದ್ದು ಗೋರಕ್ಷಣೆ, ಕೃಷಿ ಮತ್ತು ವ್ಯಾಪಾರದ ಮೂಲಕ ತಮ್ಮ ಜೀವನವನ್ನು ನಡೆಸಬೇಕು. ಶೂದ್ರರ ಧರ್ಮವು ದ್ವಿಜಾತಿಯರ ಸೇವೆ. ಅವನ ಜೀವನ ನಿರ್ವಹಣೆಯನ್ನು ಅವನ ಒಡೆಯನು ಮಾಡುತ್ತಾನೆ. ॥ ೧೫ ॥ ಬ್ರಾಹ್ಮಣನಿಗೆ – ವಾರ್ತಾ,[೧] ಶಾಲೀನ,[೨] ಯಾಯಾವರ[೩] ಮತ್ತು ಶಿಲೋಂಛನ[೪]* ಎಂಬ ನಾಲ್ಕು ಬಗೆಯ ವೃತ್ತಿಗಳನ್ನು ಜೀವನ ನಿರ್ವಾಹಕ್ಕೆ ಹೇಳಲಾಗಿವೆ. ಇವುಗಳಲ್ಲಿ ಮುಂದು-ಮುಂದಿನ ವೃತ್ತಿಗಳು ಹಿಂದು-ಹಿಂದಿನಗಳಿಂದ ಶ್ರೇಷ್ಠವಾಗಿವೆ. ॥ ೧೬ ॥ ಕೆಳವರ್ಣದ ಮನುಷ್ಯನು ಆಪತ್ಕಾಲವಿಲ್ಲದೆ ಉತ್ತಮ ವರ್ಣದವರ ವೃತ್ತಿಗಳನ್ನೂ ಅವಲಂಬಿಸಬಾರದು. ಕ್ಷತ್ರಿಯನು ದಾನ ಪಡೆಯುವುದನ್ನು ಬಿಟ್ಟು ಬ್ರಾಹ್ಮಣರ ಉಳಿದ ಐದೂ ವೃತ್ತಿಗಳನ್ನು ಅವಲಂಬಿಸಬಹುದು. ಆಪತ್ಕಾಲದಲ್ಲಿ ಎಲ್ಲರೂ ಎಲ್ಲರ ವೃತ್ತಿಗಳನ್ನೂ ಸ್ವೀಕರಿಸಬಹುದು. ॥ ೧೭ ॥ ಋತ, ಅಮೃತ, ಮೃತ, ಪ್ರಮೃತ ಮತ್ತು ಸತ್ಯಾನೃತ – ಇವುಗಳಲ್ಲಿ ಯಾವುದೇ ವೃತ್ತಿಯನ್ನು ಅವಲಂಬಿಸಿದರೂ ಶ್ವಾನವೃತ್ತಿಯನ್ನು ಎಂದೂ ಅವಲಂಬಿಸಬಾರದು. ॥ ೧೮ ॥ ಮಂಡಿಯಲ್ಲಿ ಚೆಲ್ಲಿ ಹೋದ ಧಾನ್ಯವನ್ನು (ಉಂಛ) ಹಾಗೂ ಹೊಲದಲ್ಲಿ ಬಿದ್ದಿರುವ ಧಾನ್ಯವನ್ನು (ಶಿಲ) ಹೆಕ್ಕಿತಂದು ಶಿಲೋಂಛ ವೃತ್ತಿಯಿಂದ ಜೀವನ ನಿರ್ವಾಹ ಮಾಡುವುದು 'ಋತ'ವಾಗಿದೆ. ಬೇಡದೆಯೇ ಏನಾದರೂ ಸಿಕ್ಕಿದರೆ ಅದನ್ನು ಅಯಾಚಿತ (ಶಾಲೀನ) ವೃತ್ತಿಯಿಂದ ಜೀವನನಿರ್ವಾಹ ಮಾಡುವುದು, 'ಅಮೃತ'ವಾಗಿದೆ. ನಿತ್ಯವೂ

* ೧ – ಯಜ್ಞ-ಅಧ್ಯಯನಾದಿಗಳನ್ನೂ ಮಾಡಿಸಿ ಹಣ ಪಡೆಯುವುದು. ೨ – ಯಾಚಿಸದೇ ಏನಾದರೂ ಸಿಕ್ಕಿದರೆ ಅದರಲ್ಲೇ ನಿರ್ವಾಹ ಮಾಡುವುದು. ೩ – ಪ್ರತಿದಿನವು ಧಾನ್ಯಾದಿಗಳನ್ನು ಬೇಡಿತರುವುದು. ೪ – ರೈತನು ಹೊಲವಲ್ಲಿ ಕಟಾವುಮಾಡಿ ಧಾನ್ಯವನ್ನು ಮನೆಗೆ ಕೊಂಡುಹೋದ ಬಳಿಕ ಭೂಮಿಯಲ್ಲಿ ಬಿದ್ದಿರುವ ಕಾಳುಗಳನ್ನು 'ಶಿಲ' ಹಾಗೂ ಮಂಡಿಯಲ್ಲಿ ಬಿದ್ದಿರುವ ಧಾನ್ಯವನ್ನು 'ಉಂಛ' ಎಂದು ಹೇಳುತ್ತಾರೆ. ಆ ಶಿಲ ಮತ್ತು ಉಂಛಗಳನ್ನು ಹೆಕ್ಕಿ ತಂದು ತನ್ನ ಜೀವನ ನಿರ್ವಾಹ ಮಾಡುವುದು 'ಶಿಲೋಂಛನ' ವೃತ್ತಿ ಎಂದು ಹೇಳುತ್ತಾರೆ.

ಋತಮುಂಛಶಿಲಂ ಪ್ರೋಕ್ತಮಮೃತಂ ಯದಯಾಚಿತಮ್ ।
ಮೃತಂ ತು ನಿತ್ಯಯಾಚ್ಞಾ ಸ್ಯಾತ್ಪ್ರಮೃತಂ ಕರ್ಷಣಂ ಸ್ಮೃತಮ್ ॥ ೧೯ ॥

ಸತ್ಯಾನೃತಂ ತು ವಾಣಿಜ್ಯಂ ಶ್ವವೃತ್ತಿರ್ನೀಚಸೇವನಮ್ ।
ವರ್ಜಯೇತ್ತಾಂ ಸದಾ ವಿಪ್ರೋ ರಾಜನ್ಯಶ್ಚ ಜುಗುಪ್ಸಿತಾಮ್ ।
ಸರ್ವವೇದಮಯೋ ವಿಪ್ರಃ ಸರ್ವದೇವಮಯೋ ನೃಪಃ ॥ ೨೦ ॥

ಶಮೋ ದಮಸ್ತಪಃ ಶೌಚಂ ಸಂತೋಷಃ ಕ್ಷಾಂತಿರಾರ್ಜವಮ್ ।
ಜ್ಞಾನಂ ದಯಾಚ್ಯುತಾತ್ಮತ್ವಂ ಸತ್ಯಂ ಚ ಬ್ರಹ್ಮಲಕ್ಷಣಮ್ ॥ ೨೧ ॥

ಶೌರ್ಯಂ ವೀರ್ಯಂ ಧೃತಿಸ್ತೇಜಸ್ತ್ಯಾಗ ಆತ್ಮಜಯಃ ಕ್ಷಮಾ ।
ಬ್ರಹ್ಮಣ್ಯತಾ ಪ್ರಸಾದಶ್ಚ ರಕ್ಷಾ ಚ ಕ್ಷತ್ರಲಕ್ಷಣಮ್ ॥ ೨೨ ॥

ದೇವಗುರ್ವಚ್ಯುತೇ ಭಕ್ತಿಸ್ತ್ರಿವರ್ಗಪರಿಪೋಷಣಮ್ ।
ಆಸ್ತಿಕ್ಯಮುದ್ಯಮೋ ನಿತ್ಯಂ ನೈಪುಣಂ ವೈಶ್ಯಲಕ್ಷಣಮ್ ॥ ೨೩ ॥

ಶೂದ್ರಸ್ಯ ಸಂನತಿಃ ಶೌಚಂ ಸೇವಾ ಸ್ವಾಮಿನ್ಯಮಾಯಯಾ ।
ಅಮಂತ್ರಯಜ್ಞೋ ಹ್ಯಸ್ತೇಯಂ ಸತ್ಯಂ ಗೋವಿಪ್ರರಕ್ಷಣಮ್ ॥ ೨೪ ॥

ಸ್ತ್ರೀಣಾಂ ಚ ಪತಿದೇವಾನಾಂ ತಚ್ಛುಶ್ರೂಷಾನುಕೂಲತಾ ।
ತದ್ಬಂಧುಷ್ವನುವೃತ್ತಿಶ್ಚ ನಿತ್ಯಂ ತದ್ವ್ರತಧಾರಣಮ್ ॥ ೨೫ ॥

ಸಂಮಾರ್ಜನೋಪಲೇಪಾಭ್ಯಾಂ ಗೃಹಮಂಡಲವರ್ತನೈಃ ।
ಸ್ವಯಂ ಚ ಮಂಡಿತಾ ನಿತ್ಯಂ ಪರಿಮೃಷ್ಟಪರಿಚ್ಛದಾ ॥ ೨೬ ॥

ಕಾಮೈರುಚ್ಚಾವಚೈಃ ಸಾಧ್ವೀ ಪ್ರಶ್ರಯೇಣ ದಮೇನ ಚ ।
ವಾಕ್ಯೈಃ ಸತ್ಯೈಃ ಪ್ರಿಯೈಃ ಪ್ರೇಮ್ಣಾ ಕಾಲೇ ಕಾಲೇ ಭಜೇತ್ಪತಿಮ್ ॥ ೨೭ ॥

ಸಂತುಷ್ಟಾಲೋಲುಪಾ ದಕ್ಷಾ ಧರ್ಮಜ್ಞಾ ಪ್ರಿಯಸತ್ಯವಾಕ್ ।
ಅಪ್ರಮತ್ತಾ ಶುಚಿಃ ಸ್ನಿಗ್ಧಾ ಪತಿಂ ತ್ವಪತಿತಂ ಭಜೇತ್ ॥ ೨೮ ॥

ಯಾ ಪತಿಂ ಹರಿಭಾವೇನ ಭಜೇಚ್ಛ್ರೀರಿವ ತತ್ಪರಾ ।
ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ ॥ ೨೯ ॥

ಬೇಡಿತರುವುದು ಅರ್ಥಾತ್ 'ಯಾಯಾವರ' ವೃತ್ತಿಯಿಂದ ಜೀವನ ನಡೆಸುವುದು 'ಮೃತ'ವಾಗಿದೆ. ಕೃಷಿಯೇ ಮುಂತಾದವುಗಳಿಂದ 'ವಾರ್ತಾ' ವೃತ್ತಿಯಿಂದ ಜೀವನ ನಡೆಸುವುದು 'ಪ್ರಮೃತ'ವಾಗಿದೆ. ॥ ೧೯ ॥ ವಾಣಿಜ್ಯವು 'ಸತ್ಯಾನೃತ'ವಾಗಿದೆ. ಕೆಳವರ್ಣದವರ ಸೇವೆಮಾಡುವುದು 'ಶ್ವಾನವೃತ್ತಿ'ಯಾಗಿದೆ. ಬ್ರಾಹ್ಮಣರು ಮತ್ತು ಕ್ಷತ್ರಿಯರು ಈ ಕೊನೆಯ ನಿಂದಿತವೃತ್ತಿಯನ್ನು ಎಂದಿಗೂ ಆಶ್ರಯಿಸಬಾರದು. ಏಕೆಂದರೆ, ಬ್ರಾಹ್ಮಣನು ಸರ್ವವೇದಮಯನಾಗಿದ್ದರೆ, ಕ್ಷತ್ರಿಯನು ಸರ್ವದೇವಮಯನಾಗಿದ್ದಾನೆ. ॥ ೨೦ ॥

ಶಮ, ದಮ, ತಪಸ್ಸು, ಶೌಚ, ಸಂತೋಷ, ಕ್ಷಮೆ, ಸರಳತೆ, ಜ್ಞಾನ, ದಯೆ, ಭಗವತ್ಪರಾಯಣತೆ, ಮತ್ತು ಸತ್ಯ – ಇವು ಬ್ರಾಹ್ಮಣನ ಲಕ್ಷಣಗಳಾಗಿವೆ. ॥ ೨೧ ॥ ಯುದ್ಧದಲ್ಲಿ ಉತ್ಸಾಹ, ವೀರತೆ, ಧೀರತೆ, ತೇಜಸ್ವಿತೆ, ತ್ಯಾಗ, ಮನಸ್ಸಿನ ಜಯ, ಕ್ಷಮೆ, ಬ್ರಾಹ್ಮಣರ ಕುರಿತು ಭಕ್ತಿ, ಅನುಗ್ರಹ, ಮತ್ತು ಪ್ರಜಾರಕ್ಷಣೆ – ಇವು ಕ್ಷತ್ರಿಯರ ಲಕ್ಷಣಗಳು. ॥ ೨೨ ॥ ದೇವತೆ, ಗುರು ಮತ್ತು ಭಗವಂತನ ಕುರಿತು ಭಕ್ತಿ, ಅರ್ಥ, ಧರ್ಮ ಮತ್ತು ಕಾಮ – ಮೂರೂ ಪುರುಷಾರ್ಥಗಳನ್ನು ರಕ್ಷಿಸುವುದು, ಆಸ್ತಿಕತೆ, ಉದ್ಯೋಗಶೀಲತೆ, ವ್ಯಾವಹಾರಿಕ ನಿಪುಣತೆ – ಇವು ವೈಶ್ಯರ ಲಕ್ಷಣಗಳಾಗಿವೆ. ॥ ೨೩ ॥ ಮೇಲಿನ ವರ್ಣದವರ ಮುಂದೆ ನಮ್ರವಾಗಿರುವುದು. ಪವಿತ್ರತೆ, ಒಡೆಯನ ನಿಷ್ಕಪಟ ಸೇವೆ, ವೈದಿಕ ಮಂತ್ರಗಳಿಲ್ಲದೆ ಯಜ್ಞಮಾಡುವುದು, ಕಳ್ಳತನ ಮಾಡದಿರುವುದು, ಸತ್ಯ ಹಾಗೂ ಗೋ-ಬ್ರಾಹ್ಮಣರ ರಕ್ಷಣೆ – ಇವು ಶೂದ್ರನ ಲಕ್ಷಣಗಳು. ॥ ೨೪ ॥

ಪತಿಯ ಸೇವೆ ಮಾಡುವುದು, ಅವನಿಗೆ ಅನುಕೂಲಳಾಗಿರುವುದು ಪತಿಯ ಸಂಬಂಧಿಗಳನ್ನು ಸಂತೋಷಪಡಿಸುವುದು, ಸದಾಕಾಲ ಪತಿಯ ನಿಯಮಗಳನ್ನು ರಕ್ಷಿಸುವುದು – ಇವು ಪತಿಯನ್ನೇ ಈಶ್ವರನೆಂದು ತಿಳಿದಿರುವ ಪತಿವ್ರತಾ ಸ್ತ್ರೀಯರ ಧರ್ಮವಾಗಿದೆ. ॥ ೨೫ ॥ ಸಾಧ್ವಿಯಾದ ಹೆಂಗಸು ಮನೆಯನ್ನು ಗುಡಿಸಿ, ಸಾರಿಸಿ, ಒರೆಸಿ ಮಂಡಲ ರಂಗವಲ್ಲಿಗಳಿಂದ ಓರಣ ವಾಗಿಟ್ಟುಕೊಳ್ಳುವಿಕೆ, ಮನೋಹರವಾದ ಉಡಿಗೆ, ತೊಡಿಗೆಗಳಿಂದ ಶರೀರವನ್ನು ಅಲಂಕರಿಸಿಕೊಳ್ಳುವಿಕೆ, ವಸ್ತುಗಳನ್ನು ಅಚ್ಚುಕಟ್ಟಾಗಿ ಇಡುವುದು ಮುಂತಾದವುಗಳನ್ನು ಮಾಡಬೇಕು. ॥ ೨೬ ॥ ತನ್ನ ಪತಿದೇವರ ಸಣ್ಣ-ದೊಡ್ಡ ಇಚ್ಛೆಗಳನ್ನು ಸಮಯಾನುಸಾರ ಪೂರೈಸುವುದು, ವಿನಯ, ಇಂದ್ರಿಯ ಸಂಯಮ, ಸತ್ಯ ಹಾಗೂ ಪ್ರಿಯವಾದ ಮಾತುಗಳಿಂದ ಪ್ರೇಮಪೂರ್ವಕವಾಗಿ ಪತಿಯ ಸೇವೆಮಾಡಬೇಕು. ॥ ೨೭ ॥ ದೊರೆತುದರಲ್ಲಿ ಸಂತುಷ್ಟಳಾಗಿದ್ದು, ಯಾವುದೇ ವಸ್ತುವಿಗಾಗಿ ಆಸೆ ಪಡಬಾರದು. ಎಲ್ಲ ಕಾರ್ಯಗಳಲ್ಲಿಯೂ ದಕ್ಷಳಾಗಿದ್ದು ಧರ್ಮಜ್ಞಳಾಗಿರಬೇಕು. ಸತ್ಯ ಹಾಗೂ ಪ್ರಿಯವನ್ನೇ ನುಡಿಯಬೇಕು. ತನ್ನ ಕರ್ತವ್ಯಗಳಲ್ಲಿ ಎಚ್ಚರಿಕೆಯಿಂದಿರಬೇಕು. ಪವಿತ್ರಳಾಗಿದ್ದು, ಪ್ರೇಮದಿಂದ ತುಂಬಿದವಳಾಗಿ ಪತಿಯು ಧರ್ಮಭ್ರಷ್ಟನಾಗದೇ ಇದ್ದರೆ ಆತನ ಸಹವಾಸ ಮಾಡಬೇಕು. ॥ ೨೮ ॥ ಹೆಂಡತಿಯು ಲಕ್ಷ್ಮೀದೇವಿಯಂತೆ ಪತಿಪರಾಯಣೆಯಾಗಿ ತನ್ನ ಪತಿಯನ್ನು ಸಾಕ್ಷಾತ್ ಭಗವಂತನ ಸ್ವರೂಪವೆಂದು ತಿಳಿದು ಸೇವೆ ಮಾಡುವವಳ ಪತಿಯು ವೈಕುಂಠ ಲೋಕದಲ್ಲಿ ಭಗವತ್ಸ್ವರೂಪವನ್ನು ಪಡೆದುಕೊಳ್ಳುವನು. ಅವಳು ಲಕ್ಷ್ಮೀಯಂತೆ ಅವನೊಂದಿಗೆ ಆನಂದವಾಗಿರುವಳು. ॥ ೨೯ ॥

ವೃತ್ತಿಃ ಸಂಕರಜಾತೀನಾಂ ತತ್ತತ್ಕುಲಕೃತಾ ಭವೇತ್ ।
ಅಚೌರಾಣಾಮಪಾಪಾನಾಮಂತ್ಯಜಾಂತೇಽವಸಾಯಿನಾಮ್ ॥ ೩೦ ॥

ಪ್ರಾಯಃ ಸ್ವಭಾವವಿಹಿತೋ ನೃಣಾಂ ಧರ್ಮೋ ಯುಗೇ ಯುಗೇ ।
ವೇದದೃಗ್ಭಿಃ ಸ್ಮೃತೋ ರಾಜನ್ಪ್ರೇತ್ಯ ಚೇಹ ಚ ಶರ್ಮಕೃತ್ ॥ ೩೧ ॥

ವೃತ್ತ್ಯಾ ಸ್ವಭಾವಕೃತಯಾ ವರ್ತಮಾನಃ ಸ್ವಕರ್ಮಕೃತ್ ।
ಹಿತ್ವಾ ಸ್ವಭಾವಜಂ ಕರ್ಮ ಶನೈರ್ನಿರ್ಗುಣತಾಮಿಯಾತ್ ॥ ೩೨ ॥

ಉಪ್ಯಮಾನಂ ಮುಹುಃ ಕ್ಷೇತ್ರಂ ಸ್ವಯಂ ನಿರ್ವೀರ್ಯತಾಮಿಯಾತ್ ।
ನ ಕಲ್ಪತೇ ಪುನಃ ಸೂತ್ಯೈ ಉಪ್ತಂ ಬೀಜಂ ಚ ನಶ್ಯತಿ ॥ ೩೩ ॥

ಏವಂ ಕಾಮಾಶಯಂ ಚಿತ್ತಂ ಕಾಮಾನಾಮತಿಸೇವಯಾ ।
ವಿರಜ್ಯೇತ ಯಥಾ ರಾಜನ್ನಾಗ್ನಿವತ್ಕಾಮಬಿಂದುಭಿಃ ॥ ೩೪ ॥

ಯಸ್ಯ ಯಲ್ಲಕ್ಷಣಂ ಪ್ರೋಕ್ತಂ ಪುಂಸೋ ವರ್ಣಾಭಿವ್ಯಂಜಕಮ್ ।
ಯದನ್ಯತ್ರಾಪಿ ದೃಶ್ಯೇತ ತತ್ತೇನೈವ ವಿನಿರ್ದಿಶೇತ್ ॥ ೩೫ ॥

ಯುಧಿಷ್ಠಿರನೇ! ಕಳ್ಳತನವೇ ಮುಂತಾದ ಪಾಪಗಳನ್ನು ಆಚರಿಸದೇ ಇರುವ ಅಂತ್ಯಜ, ಚಾಂಡಲರೇ ಮುಂತಾದ ವರ್ಣಸಂಕರ ಜಾತಿಗಳಿಗೂ ಅವರವರ ವಂಶಪರಂಪರೆಯಿಂದ ಬಂದಿರುವ ವೃತ್ತಿಗಳೇ ಅವರ ಜೀವನೋಪಾಯಗಳು. ॥ ೩೦ ॥ ವೇದದರ್ಶಿ ಋಷಿ-ಮುನಿಗಳು ಸಾಮಾನ್ಯವಾಗಿ ಯುಗ-ಯುಗಗಳಲ್ಲಿ ಮನುಷ್ಯರ ಸ್ವಭಾವಕ್ಕನುಸಾರ ಧರ್ಮದ ವ್ಯವಸ್ಥೆ ಮಾಡಿರುವರು. ಆ ಧರ್ಮವೇ ಅವರಿಗೆ ಇಹ-ಪರಲೋಕಗಳಲ್ಲಿ ಕಲ್ಯಾಣಕಾರಿಯಾಗಿದೆ ॥ ೩೧ ॥ ಸ್ವಾಭಾವಿಕ ವೃತ್ತಿಯನ್ನು ಆಶ್ರಯಿಸಿ ತಮ್ಮ ಸ್ವಧರ್ಮವನ್ನು ಪಾಲಿಸುವವರು – ನಿಧಾನವಾಗಿ ಆ ಸ್ವಾಭಾವಿಕ ಕರ್ಮಗಳಿಂದಲೂ ಮೀರಿದವರಾಗಿ ತ್ರಿಗುಣಾತೀತರೇ ಆಗುವರು. ॥ ೩೨ ॥ ಮಹಾರಾಜಾ! ಮತ್ತೆ-ಮತ್ತೆ ಉಳುವುದರಿಂದ ಹೊಲವು ಶಕ್ತಿಹೀನವಾಗಿ, ಅದರಲ್ಲಿ ಬಿತ್ತಿದ ಬೀಜವು ಮೊಳೆಯವುದೂ ನಿಂತುಹೋಗುತ್ತದೆ. ಹಾಗೆಯೇ ವಾಸನೆಗಳ ಭಂಡಾರವಾದ ಈ ಚಿತ್ತವು ವಿಷಯಗಳನ್ನು ಮಿತಿಮೀರಿ ಸೇವಿಸುವುದರಿಂದ ಆ ಬಗೆಗೆ ಬೇಸರಹೊಂದವುದು. ಆದರೆ ಸ್ವಲ್ಪ ಭೋಗಗಳಿಂದ ಹೀಗಾಗುವುದಿಲ್ಲ. ಒಂದೇ-ಒಂದು ಬೊಟ್ಟು ತುಪ್ಪ ಹಾಕುವುದರಿಂದ ಬೆಂಕಿಯು ನಂದಿಹೋಗುವುದಿಲ್ಲ. ಆದರೆ ಒಮ್ಮೆಲೇ ಹೆಚ್ಚು ತುಪ್ಪ ಸುರಿದರೆ ಅದು ನಂದಿ ಹೋದೀತು. ॥ ೩೩-೩೪ ॥ ಮೇಲೆ ಹೇಳಲಾದ ಲಕ್ಷಣಗಳು ಎಲ್ಲಿ ಕಂಡುಬಂದರೂ ಅವನನ್ನು ಆ ವರ್ಣದವನೆಂದು ತಿಳಿಯಬೇಕು. ॥ ೩೫ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ
ಯುಧಿಷ್ಠಿರ-ನಾರದಸಂವಾದೇ ಸದಾಚಾರನಿರ್ಣಯೋ ನಾಮೈಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ಬ್ರಹ್ಮಚರ್ಯ ಮತ್ತು ವಾನಪ್ರಸ್ಥ ಆಶ್ರಮಗಳ ವರ್ಣನೆ

*ನಾರದ ಉವಾಚ*

ಬ್ರಹ್ಮಚಾರೀ ಗುರುಕುಲೇ ವಸನ್ದಾಂತೋ ಗುರೋರ್ಹಿತಮ್ ।
ಆಚರನ್ದಾಸವನ್ನೀಚೋ ಗುರೌ ಸುದೃಢಸೌಹೃದಃ ॥ ೧ ॥

ಸಾಯಂ ಪ್ರಾತರುಪಾಸೀತ ಗುರ್ವಗ್ನ್ಯರ್ಕಸುರೋತ್ತಮಾನ್ ।
ಉಭೇ ಸಂಧ್ಯೇ ಚ ಯತವಾಗ್ಜಪನ್ ಬ್ರಹ್ಮ ಸಮಾಹಿತಃ ॥ ೨ ॥

ಛಂದಾಂಸ್ಯಧೀಯೀತ ಗುರೋರಾಹೂತಶ್ಚೇತ್ಸುಯಂತ್ರಿತಃ ।
ಉಪಕ್ರಮೇಽವಸಾನೇ ಚ ಚರಣೌ ಶಿರಸಾ ನಮೇತ್ ॥ ೩ ॥

ನಾರದ ಮಹರ್ಷಿಗಳು ಹೇಳುತ್ತಾರೆ – ಧರ್ಮರಾಜನೇ! ಗುರುಕುಲದಲ್ಲಿ ವಾಸಿಸುವ ಬ್ರಹ್ಮಚಾರಿಯು ತನ್ನ ಇಂದ್ರಿಯಗಳನ್ನು ವಶದಲ್ಲಿರಿಸಿಕೊಂಡು, ದಾಸನಂತೆ ತನ್ನನ್ನು ಚಿಕ್ಕವನೆಂದು ತಿಳಿದು, ಗುರುಗಳ ಚರಣಗಳಲ್ಲಿ ದೃಢವಾದ ಭಕ್ತಿಯನ್ನಿರಿಸಿ, ಅವರ ಹಿತದ ಕಾರ್ಯವನ್ನೇ ಮಾಡುತ್ತಾ ಇರಬೇಕು. ॥ ೧ ॥ ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಗುರು, ಅಗ್ನಿ, ಸೂರ್ಯ ಮತ್ತು ಶ್ರೇಷ್ಠ ದೇವತೆಗಳ ಉಪಾಸನೆ ಮಾಡಬೇಕು. ಮೌನವಾಗಿದ್ದು ಏಕಾಗ್ರತೆಯಿಂದ ಗಾಯತ್ರಿಯ ಜಪವನ್ನು ಮಾಡುತ್ತಾ ಎರಡೂ ಹೊತ್ತಿನಲ್ಲಿ ಸಂಧ್ಯಾವಂದನೆ ಮಾಡಬೇಕು. ॥ ೨ ॥ ಗುರುಗಳು ಕರೆದಾಗಲೇ ಪೂರ್ಣವಾಗಿ ಅನುಶಾಸನದಲ್ಲಿದ್ದುಕೊಂಡು ಅವರಿಂದ ವೇದವನ್ನು ಕಲಿಯಬೇಕು. ವೇದಪಾಠದ ಮೊದಲಿಗೆ ಮತ್ತು ಕೊನೆಯಲ್ಲಿ ಗುರುಗಳ ಚರಣಗಳಲ್ಲಿ ತಲೆಯನ್ನಿಟ್ಟು ನಮಸ್ಕರಿಸಬೇಕು. ॥ ೩ ॥

ಮೇಖಲಾಜಿನವಾಸಾಂಸಿ ಜಟಾದಂಡ ಕಮಂಡಲೂನ್ ।
ಬಿಭೃಯಾದುಪವೀತಂ ಚ ದರ್ಭಪಾಣಿರ್ಯಥೋದಿತಮ್ ॥ ೪ ॥

ಸಾಯಂ ಪ್ರಾತಶ್ಚರೇದ್ಭೈಕ್ಷ್ಯಂ ಗುರವೇ ತನ್ನಿವೇದಯೇತ್ ।
ಭುಂಜೀತ ಯದ್ಯನುಜ್ಞಾತೋ ನೋ ಚೇದುಪವಸೇತ್ಕ್ವಚಿತ್ ॥ ೫ ॥

ಸುಶೀಲೋ ಮಿತಭುಗ್ದಕ್ಷಃ ಶ್ರದ್ದಧಾನೋ ಜಿತೇಂದ್ರಿಯಃ ।
ಯಾವದರ್ಥಂ ವ್ಯವಹರೇತ್ ಸ್ತ್ರೀಷು ಸ್ತ್ರೀನಿರ್ಜಿತೇಷು ಚ ॥ ೬ ॥

ವರ್ಜಯೇತ್ಪ್ರಮದಾಗಾಥಾಮಗೃಹಸ್ಥೋ ಬೃಹದ್ವ್ರತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತ್ಯಪಿ ಯತೇರ್ಮನಃ ॥ ೭ ॥

ಕೇಶಪ್ರಸಾಧನೋನ್ಮರ್ದಸ್ನಪನಾಭ್ಯಂಜನಾದಿಕಮ್ ।
ಗುರುಸ್ತ್ರೀಭಿರ್ಯುವತಿಭಿಃ ಕಾರಯೇನ್ನಾತ್ಮನೋ ಯುವಾ ॥ ೮ ॥

ನನ್ವಗ್ನಿಃ ಪ್ರಮದಾ ನಾಮ ಘೃತಕುಂಭಸಮಃ ಪುಮಾನ್ ।
ಸುತಾಮಪಿ ರಹೋ ಜಹ್ಯಾದನ್ಯದಾ ಯಾವದರ್ಥಕೃತ್ ॥ ೯ ॥

ಕಲ್ಪಯಿತ್ವಾಽಽತ್ಮನಾ ಯಾವದಾಭಾಸಮಿದಮೀಶ್ವರಃ ।
ದ್ವೈತಂ ತಾವನ್ನ ವಿರಮೇತ್ತತೋ ಹ್ಯಸ್ಯ ವಿಪರ್ಯಯಃ ॥ ೧೦ ॥

ಏತತ್ಸರ್ವಂ ಗೃಹಸ್ಥಸ್ಯ ಸಮಾಮ್ನಾತಂ ಯತೇರಪಿ ।
ಗುರುವೃತ್ತಿರ್ವಿಕಲ್ಪೇನ ಗೃಹಸ್ಥಸ್ಯರ್ತುಗಾಮಿನಃ ॥ ೧೧ ॥

ಅಂಜನಾಭ್ಯಂಜನೋನ್ಮರ್ದಸ್ತ್ರ್ಯವಲೇಪಾಮಿಷಂ ಮಧು ।
ಸ್ರಗ್ಗಂಧಲೇಪಾಲಂಕಾರಾನ್ಸ್ತ್ಯಜೇಯುರ್ಯೇ ಧೃತವ್ರತಾಃ ॥ ೧೨ ॥

ಉಷಿತ್ವೈವಂ ಗುರುಕುಲೇ ದ್ವಿಜೋಽಧೀತ್ಯಾವಬುಧ್ಯ ಚ ।
ತ್ರಯೀಂ ಸಾಂಗೋಪನಿಷದಂ ಯಾವದರ್ಥಂ ಯಥಾಬಲಮ್ ॥ ೧೩ ॥

ಶಾಸ್ತ್ರದ ಆಜ್ಞೆಯಂತೆ ಮೇಖಲೆ, ಮೃಗಚರ್ಮ, ವಸ್ತ್ರ ಜಟೆ, ದಂಡ, ಕಮಂಡಲು, ಯಜ್ಞೋಪವೀತ ಹಾಗೂ ಕೈಯಲ್ಲಿ ದರ್ಭೆಗಳ ಪವಿತ್ರಕವನ್ನು ಧರಿಸಬೇಕು. ॥ ೪ ॥ ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಭಿಕ್ಷೆಯನ್ನು ಎತ್ತಿತಂದು ಅದನ್ನು ಗುರುಗಳಿಗೆ ಅರ್ಪಿಸಬೇಕು. ಅವರು ಅಪ್ಪಣೆ ಮಾಡಿದಾಗ ಭೋಜನ ಮಾಡಬೇಕು. ಇಲ್ಲದಿದ್ದರೆ ಉಪವಾಸವಿರಬೇಕು. ॥ ೫ ॥ ತನ್ನ ಶೀಲವನ್ನು ಕಾಪಾಡಿಕೊಳ್ಳಬೇಕು. ಮಿತವಾಗಿ ಭೋಜನ ಮಾಡಬೇಕು. ತನ್ನ ಕೆಲಸಗಳನ್ನು ನಿಷ್ಠೆಯಿಂದ ಮಾಡಬೇಕು. ಶ್ರದ್ಧೆ ಇರಿಸಬೇಕು. ಇಂದ್ರಿಯಗಳನ್ನು ತನ್ನ ವಶದಲ್ಲಿರಿಸಿಕೊಳ್ಳಬೇಕು. ಸ್ತ್ರೀಯರೊಂದಿಗೆ ಮತ್ತು ಸ್ತ್ರೀಯರ ವಶದಲ್ಲಿರುವವರೊಂದಿಗೆ ಆವಶ್ಯಕತೆ ಇದ್ದಷ್ಟೇ ವ್ಯವಹಾರವಿಟ್ಟುಕೊಳ್ಳಬೇಕು. ॥ ೬ ॥ ಗೃಹಸ್ಥನಾಗದೆ ಬ್ರಹ್ಮಚರ್ಯ ವ್ರತದಲ್ಲೇ ಇರುವವನು ಸ್ತ್ರೀಯರ ಚರ್ಚೆಗಳಿಂದ ದೂರವಿರಬೇಕು. ಇಂದ್ರಿಯಗಳು ಅತ್ಯಂತ ಬಲಿಷ್ಠವಾಗಿರುವುವು. ಇವು ಪ್ರಯತ್ನಪೂರ್ವಕ ಸಾಧನೆ ಮಾಡುವವರ ಮನಸ್ಸನ್ನೂ ಕೂಡ ಸೆಳೆದುಕೊಳ್ಳುವುವು. ॥ ೭ ॥ ಯುವಕನಾದ ಬ್ರಹ್ಮಚಾರಿಯು ಯುವತಿಯರಾದ ಗುರುಪತ್ನಿಯರಿಂದ ಕೂದಲು ಬಾಚಿಸಿ ಕೊಳ್ಳುವುದು, ಶರೀರ ತಿಕ್ಕಿಸಿಕೊಳ್ಳುವುದು, ಸ್ನಾನ ಮಾಡಿಸಿಕೊಳ್ಳುವುದು, ಎಣ್ಣೆ ಹಚ್ಚಿಸಿಕೊಳ್ಳುವುದು ಮುಂತಾದ ಕಾರ್ಯಗಳನ್ನು ಮಾಡಿಸಿಕೊಳ್ಳಬಾರದು. ॥ ೮ ॥ ಸ್ತ್ರೀಯರು ಬೆಂಕಿಯಂತಿದ್ದು ಪುರುಷರು ತುಪ್ಪದ ಗಡಿಗೆಯಂತಿದ್ದಾರೆ. ಏಕಾಂತದಲ್ಲಿ ತನ್ನ ಮಗಳೊಂದಿಗೂ ಇರಬಾರದು. ಆಕೆಯು ಏಕಾಂತದಲ್ಲಿರದಿದ್ದರೂ ಅವಳೊಂದಿಗೆ ಆವಶ್ಯಕದಷ್ಟೇ ಇರಬೇಕು. ॥ ೯ ॥ ಜೀವನು ಆತ್ಮ ಸಾಕ್ಷಾತ್ಕಾರದ ಮೂಲಕ ಈ ದೇಹ-ಇಂದ್ರಿಯಗಳನ್ನು ಪ್ರತೀತಿ ಮಾತ್ರವೆಂದು ನಿಶ್ಚಯಿಸಿ ಸ್ವತಂತ್ರನಾಗುವವರೆಗೆ 'ನಾನು ಪುರುಷ ನಾಗಿದ್ದೇನೆ, ಈಕೆಯು ಸ್ತ್ರೀಯಾಗಿದ್ದಾಳೆ' ಎಂಬ ದ್ವೈತವು ಅಳಿಯುವುದಿಲ್ಲ. ಅಲ್ಲಿಯವರೆಗೆ ಇಂತಹ ಪುರುಷರು ಸ್ತ್ರೀಯ ಸಂಸರ್ಗದಲ್ಲಿ ಇದ್ದರೆ ಅವನಿಗೆ ಅವಳಲ್ಲಿ ಭೋಗ್ಯಬುದ್ಧಿಯು ಉಂಟಾಗುವುದೂ ನಿಶ್ಚಿತವಾಗಿದೆ. ॥ ೧೦ ॥

ಈ ಶೀಲರಕ್ಷಣೆಯೇ ಮುಂತಾದ ಗುಣಗಳು ಗೃಹಸ್ಥನಿಗೂ ಮತ್ತು ಸಂನ್ಯಾಸಿಗೂ ಕೂಡ ನಿಯತವಾಗಿವೆ. ಗುರುಕುಲದಲ್ಲಿದ್ದು ಗುರುವಿನ ಸೇವೆ, ಶುಶ್ರೂಷೆಗಳಲ್ಲೇ ನಿರತನಾಗಿರುವುದು ಗೃಹಸ್ಥನಿಗೆ ವೈಕಲ್ಪಿಕ, ಅನಿವಾರ್ಯವಲ್ಲ. ಏಕೆಂದರೆ, ಋತುಗಮನದಿಂದಾಗಿ ಅವನಿಗೆ ಅಲ್ಲಿಂದ ಬೇರೆಯಾಗಬೇಕಾಗುತ್ತದೆ. ॥ ೧೧ ॥ ಬ್ರಹ್ಮಚರ್ಯವ್ರತವನ್ನು ಕೈಗೊಂಡಿರುವವನು ಕಣ್ಣಿಗೆ ಕಾಡಿಗೆ ಹಚ್ಚಿಕೊಳ್ಳಬಾರದು. ಮೈಗೆ ಎಣ್ಣೆ ಹಚ್ಚಿಕೊಳ್ಳಬಾರದು. ಸ್ತ್ರೀಯರ ಚಿತ್ರಗಳನ್ನು ಬರೆಯಬಾರದು. ಮದ್ಯ-ಮಾಂಸವನ್ನು ಸೇವಿಸಲೇಬಾರದು. ಹೂಮಾಲೆ, ಅತ್ತರು, ಗಂಧ ಮತ್ತು ಆಭೂಷಣಗಳನ್ನು ತೊರೆಯಲೇಬೇಕು. ॥ ೧೨ ॥ ಹೀಗೆ ಗುರುಕುಲದಲ್ಲಿ ವಾಸಮಾಡಿ ದ್ವಿಜಾತಿಯಾದವನು ತನ್ನ ಶಕ್ತಿ ಮತ್ತು ಆವಶ್ಯಕತೆಗನುಸಾರ ವೇದವನ್ನು, ವೇದಾಂಗಗಳಾದ – ಶಿಕ್ಷಾ, ವ್ಯಾಕರಣ, ಛಂದಸ್ಸು ನಿರುಕ್ತ, ಜ್ಯೋತಿಷ್ಯ, ಕಲ್ಪ – ಇವುಗಳನ್ನೂ, ಉಪನಿಷತ್ತುಗಳನ್ನೂ ಅಧ್ಯಯನ ಮಾಡಿ ಜ್ಞಾನವನ್ನು ಗಳಿಸಬೇಕು. ॥ ೧೩ ॥

ದತ್ತ್ವಾ ವರಮನುಜ್ಞಾತೋ ಗುರೋಃ ಕಾಮಂ ಯದೀಶ್ವರಃ ।
ಗೃಹಂ ವನಂ ವಾ ಪ್ರವಿಶೇತ್ಪ್ರವ್ರಜೇತ್ತತ್ರ ವಾ ವಸೇತ್ ॥ ೧೪ ॥

ಅಗ್ನೌ ಗುರಾವಾತ್ಮನಿ ಚ ಸರ್ವಭೂತೇಷ್ವಧೋಕ್ಷಜಮ್ ।
ಭೂತೈಃ ಸ್ವಧಾಮಭಿಃ ಪಶ್ಯೇದಪ್ರವಿಷ್ಟಂ ಪ್ರವಿಷ್ಟವತ್ ॥ ೧೫ ॥

ಏವಂವಿಧೋ ಬ್ರಹ್ಮಚಾರೀ ವಾನಪ್ರಸ್ಥೋ ಯತಿರ್ಗೃಹೀ ।
ಚರನ್ವಿದಿತವಿಜ್ಞಾನಃ ಪರಂ ಬ್ರಹ್ಮಾಧಿಗಚ್ಛತಿ ॥ ೧೬ ॥

ವಾನಪ್ರಸ್ಥಸ್ಯ ವಕ್ಷ್ಯಾಮಿ ನಿಯಮಾನ್ಮುನಿಸಮ್ಮತಾನ್ ।
ಯಾನಾತಿಷ್ಠನ್ಮುನಿರ್ಗಚ್ಛೇದೃಷಿಲೋಕಮಿಹಾಂಜಸಾ ॥ ೧೭ ॥

ನ ಕೃಷ್ಟಪಚ್ಯಮಶ್ನೀಯಾದಕೃಷ್ಟಂ ಚಾಪ್ಯಕಾಲತಃ ।
ಅಗ್ನಿಪಕ್ವಮಥಾಮಂ ವಾ ಅರ್ಕಪಕ್ವಮುತಾಹರೇತ್ ॥ ೧೮ ॥

ವನ್ಯೈಶ್ಚರುಪುರೋಡಾಶಾನ್ನಿರ್ವಪೇತ್ಕಾಲಚೋದಿತಾನ್ ।
ಲಬ್ಧೇ ನವೇ ನವೇಽನ್ನಾದ್ಯೇ ಪುರಾಣಂ ತು ಪರಿತ್ಯಜೇತ್ ॥ ೧೯ ॥

ಅಗ್ನ್ಯರ್ಥಮೇವ ಶರಣಮುಟಜಂ ವಾದ್ರಿಕಂದರಾಮ್ ।
ಶ್ರಯೇತ ಹಿಮವಾಯ್ವಗ್ನಿವರ್ಷಾರ್ಕಾತಪಷಾಟ್ಸ್ವಯಮ್ ॥ ೨೦ ॥

ಕೇಶರೋಮನಖಶ್ಮಶ್ರುಮಲಾನಿ ಜಟಿಲೋ ದಧತ್ ।
ಕಮಂಡಲ್ವಜಿನೇ ದಂಡವಲ್ಕಲಾಗ್ನಿಪರಿಚ್ಛದಾನ್ ॥ ೨೧ ॥

ಚರೇದ್ವನೇ ದ್ವಾದಶಾಬ್ದಾನಷ್ಟೌ ವಾ ಚತುರೋ ಮುನಿಃ ।
ದ್ವಾವೇಕಂ ವಾ ಯಥಾ ಬುದ್ಧಿರ್ನ ವಿಪದ್ಯೇತ ಕೃಚ್ಛ್ರತಃ ॥ ೨೨ ॥

ಯದಾಕಲ್ಪಃ ಸ್ವಕ್ರಿಯಾಯಾಂ ವ್ಯಾಧಿಭಿರ್ಜರಯಾಥವಾ ।
ಆನ್ವೀಕ್ಷಿಕ್ಯಾಂ ವಾ ವಿದ್ಯಾಯಾಂ ಕುರ್ಯಾದನಶನಾದಿಕಮ್ ॥ ೨೩ ॥

ಅನಂತರ ಸಾಮರ್ಥ್ಯವಿದ್ದರೆ ಗುರುಗಳು ಕೇಳಿದಷ್ಟು ಗುರುದಕ್ಷಿಣೆಯನ್ನು ಕೊಡಬೇಕು. ಮತ್ತೆ ಅವರ ಅನುಮತಿಯನ್ನು ಪಡೆದು ಗೃಹಸ್ಥಾಶ್ರಮ, ವಾನಪ್ರಸ್ಥ ಅಥವಾ ಸಂನ್ಯಾಸ ಆಶ್ರಮಗಳಲ್ಲಿ ಪ್ರವೇಶಿಸಲಿ. ಅಥವಾ ಆಜೀವನ ಬ್ರಹ್ಮಚರ್ಯವನ್ನು ಪಾಲಿಸುತ್ತಾ ಅದೇ ಆಶ್ರಮದಲ್ಲಿ ಇರಬಹುದು. ॥ ೧೪ ॥ ಭಗವಂತನು ಸ್ವರೂಪತಃ ಸರ್ವತ್ರ ಏಕರಸನಾಗಿ ನೆಲೆಸಿದ್ದಾನೆ. ಆದ್ದರಿಂದ ಅವನು ಎಲ್ಲಿಗೂ ಪ್ರವೇಶಿಸುವುದು ಅಥವಾ ಹೊರಟುಹೋಗುವುದ ಆಗಲಾರದು. ಹೀಗಿದ್ದರೂ ಅಗ್ನಿ, ಗುರು, ಆತ್ಮಾ ಮತ್ತು ಸಮಸ್ತ ಪ್ರಾಣಿಗಳಲ್ಲಿ ತನ್ನ ಆಶ್ರಿತ ಜೀವರೊಂದಿಗೆ ಅವನು ವಿಶೇಷರೂಪದಿಂದ ವಿರಾಜಿಸುತ್ತಿದ್ದಾನೆ. ಅದಕ್ಕಾಗಿ ಇವುಗಳನ್ನು ಪರಮಾತ್ಮಭಾವದಿಂದ ನೋಡಬೇಕು. ॥ ೧೫ ॥ ಹೀಗೆ ಆಚರಿಸುವುದರಿಂದ ಬ್ರಹ್ಮಚಾರಿಯಾಗಲೀ, ವಾನಪ್ರಸ್ಥನಾಗಲೀ, ಸಂನ್ಯಾಸಿಯಾಗಲೀ ಅಥವಾ ಗೃಹಸ್ಥನಾಗಲೀ ವಿಜ್ಞಾನಸಂಪನ್ನನಾಗಿ ಪರಬ್ರಹ್ಮತತ್ತ್ವದ ಅನುಭವವನ್ನು ಪಡೆದುಕೊಳ್ಳುತ್ತಾನೆ. ॥ ೧೬ ॥

ಈಗ ನಾನು ಋಷಿಗಳ ಮತಾನುಸಾರವಾಗಿ ವಾನಪ್ರಸ್ಥ ಆಶ್ರಮದ ನಿಯಮಗಳನ್ನು ಹೇಳುತ್ತೇನೆ. ಇವುಗಳ ಆಚರಣೆಯಿಂದ ವಾನಪ್ರಸ್ಥ ಆಶ್ರಮಿಯು ಅನಾಯಾಸವಾಗಿ ಋಷಿಗಳ ಲೋಕವಾದ ಮಹರ್ಲೋಕವನ್ನು ಹೊಂದುವನು. ॥ ೧೭ ॥ ವಾನಪ್ರಸ್ಥಾಶ್ರಮಿಯು ಉತ್ತಿರುವ ನೆಲದಲ್ಲಿ ಬೆಳೆದ ಅಕ್ಕಿ, ಗೋಧಿ ಮುಂತಾದ ಧಾನ್ಯಗಳನ್ನು ತಿನ್ನಕೂಡದು. ಉಳದೇ ಉತ್ಪನ್ನವಾದ ಧಾನ್ಯವೂ ಕೂಡ ಅಕಾಲದಲ್ಲಿ ಬೆಳೆದಿದ್ದರೆ ಅದನ್ನು ಕೂಡ ತಿನ್ನಬಾರದು. ಬೆಂಕಿಯಲ್ಲಿ ಬೇಯಿಸಿದ ಅಥವಾ ಹಸಿಯಾದ ಧಾನ್ಯವನ್ನೂ ತಿನ್ನಬಾರದು. ಕೇವಲ ಸೂರ್ಯನ ತಾಪದಿಂದ ಪಕ್ವವಾದ ಕಂದ, ಮೂಲ, ಫಲ ಮುಂತಾದವುಗಳನ್ನೇ ಸೇವಿಸಬೇಕು. ॥ ೧೮ ॥ ಕಾಡಿನಲ್ಲಿ ತಾನಾಗಿಯೇ ಬೆಳೆದ ಧಾನ್ಯಗಳಿಂದ ನಿತ್ಯ-ನೈಮಿತ್ತಿಕ ಚರು ಮತ್ತು ಪುರೋಡಾಶವನ್ನು ಸಿದ್ಧಗೊಳಿಸಿ ಹವನ ಮಾಡಬೇಕು. ಹೊಸದಾಗಿ ಅನ್ನ, ಫಲ, ಪುಷ್ಪ ಮುಂತಾದವುಗಳು ಸಿಗಲು ಪ್ರಾರಂಭವಾದಾಗ ಸಂಗ್ರಹಿಸಿಟ್ಟ ಹಳೆಯ ಆಹಾರವನ್ನು ತ್ಯಜಿಸಿಬಿಡಬೇಕು. ॥ ೧೯ ॥ ಅಗ್ನಿಹೋತ್ರದ ಅಗ್ನಿಯ ರಕ್ಷಣೆಗಾಗಿಯೇ ಮನೆಯನ್ನು, ಪರ್ಣಕುಟಿಯನ್ನು ಅಥವಾ ಪರ್ವತದ ಗುಹೆಯನ್ನು ಆಶ್ರಯಿಸಬೇಕು. ಸ್ವತಃ ಚಳಿ, ಗಾಳಿ, ಮಳೆ ಬಿಸಿಲುಗಳನ್ನು ಸಹಿಸಿಕೊಳ್ಳಬೇಕು. ॥ ೨೦ ॥ ತಲೆಯಲ್ಲಿ ಜಟೆಯನ್ನು ಧರಿಸಬೇಕು ಮತ್ತು ಕೂದಲು, ರೋಮ, ಉಗುರು ಹಾಗೂ ಗಡ್ಡ-ಮೀಸೆಗಳನ್ನು ಕತ್ತರಿಸಬಾರದು. ಮೈಕೊಳೆಯನ್ನೂ ಕೂಡ ತೆಗೆಯಬಾರದು. ಕಮಂಡಲು, ಮೃಗಚರ್ಮ, ದಂಡ, ವಲ್ಕಲ-ವಸ್ತ್ರ ಮತ್ತು ಅಗ್ನಿಹೋತ್ರದ ಸಾಮಗ್ರಿಗಳನ್ನು ಮಾತ್ರವೇ ತನ್ನ ಬಳಿ ಇರಿಸಿಕೊಳ್ಳಬೇಕು. ॥ ೨೧॥ ವಿಚಾರಶೀಲನಾದ ಮನುಷ್ಯನು ಹನ್ನೆರಡು, ಎಂಟು, ನಾಲ್ಕು, ಎರಡು ಅಥವಾ ಒಂದು ವರ್ಷದವರೆಗೆ ವಾನಪ್ರಸ್ಥಾಶ್ರಮದ ನಿಯಮಗಳನ್ನು ಪಾಲಿಸಬೇಕು. ಎಲ್ಲಾದರೂ ಹೆಚ್ಚು ತಪಸ್ಸಿನ ಕ್ಲೇಶಗಳನ್ನು ಸಹಿಸುವುದರಿಂದ ಬುದ್ಧಿಯು ಕೆಟ್ಟುಹೋಗದಂತೆ ಗಮನವಿರಿಸಬೇಕು. ॥ ೨೨ ॥

ವಾನಪ್ರಸ್ಥಾಶ್ರಮವನ್ನು ಕೈಗೊಂಡ ಮನುಷ್ಯನಿಗೆ ರೋಗದ ಅಥವಾ ಮುಪ್ಪಿನ ಕಾರಣದಿಂದ ತನ್ನ ಕರ್ಮಗಳನ್ನು ಪೂರ್ಣಗೊಳಿಸಲು ಮತ್ತು ವೇದಾಂತವಿಚಾರ ಮಾಡುವ ಸಾಮರ್ಥ್ಯವು

ಆತ್ಮನ್ಯಗ್ನೀನ್ಸಮಾರೋಪ್ಯ ಸಂನ್ಯಸ್ಯಾಹಂಮಮಾತ್ಮತಾಮ್ ।
ಕಾರಣೇಷು ನ್ಯಸೇತ್ಸಮ್ಯಕ್ಸಂಘಾತಂ ತು ಯಥಾರ್ಹತಃ
॥ ೨೪ ॥

ಖೇ ಖಾನಿ ವಾಯೌ ನಿಃಶ್ವಾಸಾಂಸ್ತೇಜಸ್ಯೂಷ್ಮಾಣಮಾತ್ಮವಾನ್ ।
ಅಪ್ಸ್ವಸೃಕ್ಶ್ಲೇಷ್ಮಪೂಯಾನಿ ಕ್ಷಿತೌ ಶೇಷಂ ಯಥೋದ್ಭವಮ್
॥ ೨೫ ॥

ವಾಚಮಗ್ನೌ ಸವಕ್ತವ್ಯಾಮಿಂದ್ರೇ ಶಿಲ್ಪಂ ಕರಾವಪಿ ।
ಪದಾನಿ ಗತ್ಯಾ ವಯಸಿ ರತ್ಯೋಪಸ್ಥಂ ಪ್ರಜಾಪತೌ
॥ ೨೬ ॥

ಮೃತ್ಯೌ ಪಾಯುಂ ವಿಸರ್ಗಂ ಚ ಯಥಾಸ್ಥಾನಂ ವಿನಿರ್ದಿಶೇತ್ ।
ದಿಕ್ಷು ಶ್ರೋತ್ರಂ ಸನಾದೇನ ಸ್ಪರ್ಶಮಧ್ಯಾತ್ಮನಿ ತ್ವಚಮ್
॥ ೨೭ ॥

ರೂಪಾಣಿ ಚಕ್ಷುಷಾ ರಾಜನ್ ಜ್ಯೋತಿಷ್ಯಭಿನಿವೇಶಯೇತ್ ।
ಅಪ್ಸು ಪ್ರಚೇತಸಾ ಜಿಹ್ವಾಂ ಘ್ರೇಯೈರ್ಘ್ರಾಣಂ ಕ್ಷಿತೌ ನ್ಯಸೇತ್
॥ ೨೮ ॥

ಮನೋ ಮನೋರಥೈಶ್ಚಂದ್ರೇ ಬುದ್ಧಿಂ ಬೋಧ್ಯೈಃ ಕವೌ ಪರೇ ।
ಕರ್ಮಾಣ್ಯಧ್ಯಾತ್ಮನಾ ರುದ್ರೇ ಯದಹಂಮಮತಾಕ್ರಿಯಾ ।
ಸತ್ತ್ವೇನ ಚಿತ್ತಂ ಕ್ಷೇತ್ರಜ್ಞೇ ಗುಣೈರ್ವೈಕಾರಿಕಂ ಪರೇ
॥ ೨೯ ॥

ಅಪ್ಸು ಕ್ಷಿತಿಮಪೋ ಜ್ಯೋತಿಷ್ಯದೋ ವಾಯೌ ನಭಸ್ಯಮುಮ್ ।
ಕೂಟಸ್ಥೇ ತಚ್ಚ ಮಹತಿ ತದವ್ಯಕ್ತೇಽಕ್ಷರೇ ಚ ತತ್
॥ ೩೦ ॥

ಉಳಿಯದಿದ್ದಾಗ ಅವನು ಉಪವಾಸವೇ ಮುಂತಾದ ವ್ರತವನ್ನು ಆಚರಿಸಬೇಕು. ॥ ೨೩ ॥ ಉಪವಾಸದ ಮೊದಲಿಗೆ ಅವನು ತನ್ನ ಆಹವನೀಯ ಮುಂತಾದ ಅಗ್ನಿಗಳನ್ನು ತನ್ನ ಆತ್ಮನಲ್ಲಿ ಲೀನಗೊಳಿಸಿ ಕೊಳ್ಳಬೇಕು. 'ನಾನು ಮತ್ತು ನನ್ನದು' ಇವನ್ನು ತ್ಯಾಗಮಾಡಿ ಶರೀರವನ್ನು ಅದರ ಕಾರಣಭೂತ ತತ್ತ್ವಗಳಲ್ಲಿ ಯಥೋಚಿತವಾಗಿ ಚೆನ್ನಾಗಿ ಲೀನಗೊಳಿಸಬೇಕು. ॥ ೨೪ ॥ ಜಿತೇಂದ್ರಿಯನಾದವನು ತನ್ನ ಶರೀರದ ಛಿದ್ರಾಕಾಶಗಳನ್ನು ಮಹಾಕಾಶದಲ್ಲಿ, ಪ್ರಾಣಗಳನ್ನು ವಾಯುವಿನಲ್ಲಿ, ಉಷ್ಣತೆಯನ್ನು ಅಗ್ನಿಯಲ್ಲಿ, ರಕ್ತ, ಕಫ, ಕೀವು ಮುಂತಾದ ಜಲಕ್ಕೆ ಸೇರಿದ ತತ್ತ್ವಗಳನ್ನು ಜಲದಲ್ಲಿ ಮತ್ತು ಮೂಳೆಯೇ ಮುಂತಾದ ಘನಪದಾರ್ಥಗಳನ್ನು ಪೃಥಿವಿಯಲ್ಲಿ ಲೀನಗೊಳಿಸಬೇಕು. ॥ ೨೫ ॥ ಹೀಗೆಯೇ ವಾಣಿ ಮತ್ತು ಅದರ ಕರ್ಮ ಭಾಷಣವನ್ನು ಅದರ ಅಧಿಷ್ಠಾತೃ ದೇವತೆ ಅಗ್ನಿಯಲ್ಲಿಯೂ, ಕೈ ಮತ್ತು ಅದರಿಂದಾಗುವ ಕಲಾ-ಕೌಶಲ್ಯವನ್ನು ಇಂದ್ರನಲ್ಲಿಯೂ, ಕಾಲು ಮತ್ತು ಅದರ ಗತಿ (ನಡೆ)ಯನ್ನು ಕಾಲಸ್ವರೂಪನಾದ ವಿಷ್ಣುವಿನಲ್ಲಿಯೂ, ರತಿ ಮತ್ತು ಉಪಸ್ಥವನ್ನು ಪ್ರಜಾಪತಿಯಲ್ಲಿಯೂ, ಪಾಯು ಮತ್ತು ಮಲೋತ್ಸರ್ಗವನ್ನು ಅದರ ಆಶ್ರಯಕ್ಕನುಸಾರ ಮೃತ್ಯುವಿನಲ್ಲಿಯೂ ಲೀನಗೊಳಿಸಬೇಕು. ಶ್ರೋತ್ರ ಮತ್ತು ಅದರಿಂದ ಕೇಳುವ ಶಬ್ದವನ್ನು ದಿಕ್ಕುಗಳಲ್ಲಿಯೂ, ಸ್ಪರ್ಶ ಮತ್ತು ತ್ವಚೆಯನ್ನು ವಾಯುವಿನಲ್ಲಿಯೂ, ನೇತ್ರಸಹಿತ ರೂಪವನ್ನು ಜ್ಯೋತಿಯಲ್ಲಿಯೂ, ಮಧುರವೇ ಮುಂತಾದ ರಸಗಳ ಸಹಿತ * ರಸನೇಂದ್ರಿಯವನ್ನು ಜಲದಲ್ಲಿ ಹಾಗೂ ಯುಧಿಷ್ಠಿರನೇ! ಘ್ರಾಣೇಂದ್ರಿಯ ಹಾಗೂ ಅದರಿಂದ ಮೂಸಲಾಗು ಗಂಧವನ್ನು ಪೃಥಿವಿಯಲ್ಲಿ ಲೀನಗೊಳಿಸಬೇಕು. ॥ ೨೬-೨೮ ॥ ಮನೋರಥ ಗಳೊಂದಿಗೆ ಮನಸ್ಸನ್ನು ಚಂದ್ರನಲ್ಲಿಯೂ, ಅರಿವಿಗೆ ಬರುವ ಪದಾರ್ಥಗಳ ಸಹಿತ ಬುದ್ಧಿಯನ್ನು ಬ್ರಹ್ಮನಲ್ಲಿಯೂ ಹಾಗೂ ಅಹಂತೆ ಮತ್ತು ಮಮತಾರೂಪ ಕ್ರಿಯೆಗಳನ್ನು ಮಾಡುವ ಅಹಂಕಾರವನ್ನು ಅದರ ಕರ್ಮಗಳೊಂದಿಗೆ ರುದ್ರನಲ್ಲಿಯೂ ಲೀನ ಗೊಳಿಸಬೇಕು. ಹೀಗೆಯೇ ಚೈತನ್ಯಸಹಿತ ಚಿತ್ತವನ್ನು ಕ್ಷೇತ್ರಜ್ಞ (ಜೀವ)ನಲ್ಲಿ ಮತ್ತು ಗುಣಗಳ ಕಾರಣ ವಿಕಾರಿಯಂತೆ ಕಂಡು ಬರುವ ಜೀವವನ್ನು ಪರಬ್ರಹ್ಮನಲ್ಲಿ ಲೀನಗೊಳಿಸಿ ಬಿಡಬೇಕು. ॥ ೨೯ ॥ ಜೊತೆಗೆ ಪೃಥಿವಿಯನ್ನು ಜಲದಲ್ಲಿ, ಜಲವನ್ನು ಅಗ್ನಿಯಲ್ಲಿ, ಅಗ್ನಿ ಯನ್ನು ವಾಯುವಿನಲ್ಲಿ, ವಾಯುವನ್ನು ಆಕಾಶದಲ್ಲಿ, ಆಕಾಶವನ್ನು ಅಹಂಕಾರದಲ್ಲಿ, ಅಹಂಕಾರವನ್ನು ಮಹತ್ತತ್ತ್ವದಲ್ಲಿ, ಮಹತ್ತತ್ತ್ವ ವನ್ನು ಅವ್ಯಕ್ತದಲ್ಲಿ ಮತ್ತು ಅವ್ಯಕ್ತವನ್ನು ಅವಿನಾಶಿಯಾದ ಪರಮಾತ್ಮನಲ್ಲಿ ಲಯಗೊಳಿಸಬೇಕು. ॥ ೩೦ ॥ ಈ ವಿಧವಾಗಿ ಅವಿ ನಾಶಿಯಾದ ಪರಮಾತ್ಮನ ರೂಪದಲ್ಲಿ ಉಳಿದಿರುವ ಚಿದ್ವಸ್ತುವೇ

* ಇಲ್ಲಿ ಮೂಲದಲ್ಲಿ 'ಪ್ರಚೇತಸಾ' ಪದವಿದೆ. ಅದರ ಅರ್ಥ 'ವರುಣನ ಸಹಿತ' ಎಂದಾಗುತ್ತದೆ. ವರುಣನು ರಸನೇಂದ್ರಿಯದ ಅಧಿಷ್ಠಾತೃ ನಾಗಿದ್ದಾನೆ. ಶ್ರೀಧರಸ್ವಾಮಿಯೂ ಇದೇ ಮತವನ್ನು ಸ್ವೀಕರಿಸಿರುವರು. ಆದರೆ ಈ ಪ್ರಸಂಗದಲ್ಲಿ ಸರ್ವತ್ರ ಇಂದ್ರಿಯ ಮತ್ತು ಅದರ ವಿಷಯದ ಅಧಿಷ್ಠಾತೃದೇವತೆಯಲ್ಲಿ ಲಯಗೊಳಿಸಲು ಹೇಳಲಾಗಿದೆ. ಮತ್ತೆ ರಸನೇಂದ್ರಿಯಕ್ಕಾಗಿಯೇ ಹೊಸ ಕ್ರಮ ಯುಕ್ತಿಯುಕ್ತವೆಂದು ತಿಳಿಯುವುದಿಲ್ಲ. ಅದಕ್ಕಾಗಿ ಇಲ್ಲಿ ಶ್ರೀವಿಶ್ವನಾಥ ಚಕ್ರವರ್ತಿಯ ಮತಾನುಸಾರ 'ಪ್ರಚೇತಸಾ' ಪದದ ('ಪ್ರಕೃಷ್ಟಂ ಚೇತೋ ಯತ್ರ ಸ ಪ್ರಚೇತೋ ಮಧುರಾದಿರಸಸ್ತೇನ' -ಯಾವುದರ ಕಡೆಗೆ ಚಿತ್ತವು ಹೆಚ್ಚಾಗಿ ಆಕೃಷ್ಟವಾಗುವ ಆ ಮಧುರಾದಿ ರಸ 'ಪ್ರಚೇತಸ್' ಆಗಿದೆ. ಅದರ ಸಹಿತ) ಈ ವಿಗ್ರಹಕ್ಕನುಸಾರ ಪ್ರಸ್ತುತ ಅರ್ಥವನ್ನು ಮಾಡಲಾಗಿದೆ ಮತ್ತು ಇದೇ ಯುಕ್ತಿಯುಕ್ತವೆಂದೂ ತಿಳಿಯುತ್ತದೆ.

ಇತ್ಯಕ್ಷರತಯಾಽಽತ್ಮಾನಂ ಚಿನ್ಮಾತ್ರಮವಶೇಷಿತಮ್ ।
ಜ್ಞಾತ್ವಾದ್ವಯೋಽಥ ವಿರಮೇದ್ದಗ್ಧಯೋನಿರಿವಾನಲಃ ॥ ೩೧ ॥

ಆತ್ಮಾ ಆಗಿದೆ. ಅದು ನಾನೇ ಆಗಿದ್ದೇನೆ – ಹೀಗೆ ತಿಳಿದುಕೊಂಡು ಅದ್ವಿತೀಯ ಭಾವದಲ್ಲಿ ನೆಲೆಗೊಳ್ಳಬೇಕು. ತನ್ನ ಆಶ್ರಯವಾದ ಕಾಷ್ಠಾದಿಗಳು ಭಸ್ಮವಾಗಿ ಹೋದಮೇಲೆ ಅಗ್ನಿಯು ಶಾಂತವಾಗಿ ತನ್ನ ಸ್ವರೂಪದಲ್ಲಿ ಸ್ಥಿತವಾಗುವಂತೆ ಅವನೂ ಸ್ವ-ಸ್ವರೂಪದಲ್ಲಿ ನೆಲೆಗೊಂಡು ಮುಕ್ತನಾಗಬೇಕು. ॥ ೩೧ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ ಯುಧಿಷ್ಠಿರ-ನಾರದಸಂವಾದೇ ಸದಾಚಾರನಿರ್ಣಯೋ ನಾಮ ದ್ವಾದಶೋಽಧ್ಯಾಯಃ॥ ೧೨ ॥

# ಹದಿಮೂರನೆಯ ಅಧ್ಯಾಯ

## ಯತಿಧರ್ಮದ ನಿರೂಪಣೆ ಮತ್ತು ಅವಧೂತ-ಪ್ರಹ್ಲಾದ ಸಂವಾದ

*ನಾರದ ಉವಾಚ*

ಕಲ್ಪಸ್ತ್ವೇವಂ ಪರಿವ್ರಜ್ಯ ದೇಹಮಾತ್ರಾವಶೇಷಿತಃ ।
ಗ್ರಾಮೈಕರಾತ್ರವಿಧಿನಾ ನಿರಪೇಕ್ಷಶ್ಚರೇನ್ಮಹೀಮ್ ॥ ೧ ॥

ಬಿಭೃಯಾದ್ಯದ್ಯಸೌ ವಾಸಃ ಕೌಪೀನಾಚ್ಛಾದನಂ ಪರಮ್ ।
ತ್ಯಕ್ತಂ ನ ದಂಡ ಲಿಂಗಾದೇರನ್ಯತ್ಕಿಂಚಿದನಾಪದಿ ॥ ೨ ॥

ಏಕ ಏವ ಚರೇದ್ಭಿಕ್ಷುರಾತ್ಮಾರಾಮೋಽನಪಾಶ್ರಯಃ ।
ಸರ್ವಭೂತಸುಹೃಚ್ಛಾಂತೋ ನಾರಾಯಣಪರಾಯಣಃ ॥ ೩ ॥

ಪಶ್ಯೇದಾತ್ಮನ್ಯದೋ ವಿಶ್ವಂ ಪರೇ ಸದಸತೋಽವ್ಯಯೇ ।
ಆತ್ಮಾನಂ ಚ ಪರಂ ಬ್ರಹ್ಮ ಸರ್ವತ್ರ ಸದಸನ್ಮಯೇ ॥ ೪ ॥

ಸುಪ್ತಪ್ರಬೋಧಯೋಃ ಸಂಧಾವಾತ್ಮನೋ ಗತಿಮಾತ್ಮದೃಕ್ ।
ಪಶ್ಯನ್ ಬಂಧಂ ಚ ಮೋಕ್ಷಂ ಚ ಮಾಯಾಮಾತ್ರಂ ನ ವಸ್ತುತಃ ॥ ೫ ॥

ನಾಭಿನಂದೇದ್ಧ್ರುವಂ ಮೃತ್ಯುಮಧ್ರುವಂ ವಾಸ್ಯ ಜೀವಿತಮ್ ।
ಕಾಲಂ ಪರಂ ಪ್ರತೀಕ್ಷೇತ ಭೂತಾನಾಂ ಪ್ರಭವಾಪ್ಯಯಮ್ ॥ ೬ ॥

ನಾಸಚ್ಛಾಸ್ತ್ರೇಷು ಸಜ್ಜೇತ ನೋಪಜೀವೇತ ಜೀವಿಕಾಮ್ ।
ವಾದವಾದಾಂಸ್ತ್ಯಜೇತ್ತರ್ಕಾನ್ಪಕ್ಷಂ ಕಂ ಚ ನ ಸಂಶ್ರಯೇತ್ ॥ ೭ ॥

ನಾರದರು ಹೇಳುತ್ತಾರೆ – ಧರ್ಮರಾಜನೇ! ವಾನಪ್ರಸ್ಥ ಮುನಿಗೆ ಬ್ರಹ್ಮವಿಚಾರದ ಸಾಮರ್ಥ್ಯವಿದ್ದರೆ ಶರೀರಬಿಟ್ಟು ಉಳಿದೆಲ್ಲವನ್ನು ತ್ಯಾಗಮಾಡಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕು. ಯಾವುದೇ ವಸ್ತು, ವ್ಯಕ್ತಿ, ಸ್ಥಾನ, ಸಮಯದ ಅಪೇಕ್ಷೆಯನ್ನಿಡದೆ ಒಂದು ಹಳ್ಳಿಯಲ್ಲಿ ಒಂದು ರಾತ್ರಿ ಮಾತ್ರ ತಂಗುವ ನಿಯಮವನ್ನು ಕೈಗೊಂಡು ಭೂಮಿಯಲ್ಲಿ ಸಂಚರಿಸಬೇಕು. ॥ ೧ ॥ ಅವನು ವಸ್ತ್ರವನ್ನು ಧರಿಸುವುದಿದ್ದರೆ ಗುಹ್ಯಾಂಗಗಳನ್ನು ಮುಚ್ಚುವಂತಹ ಕೌಪೀನವನ್ನು ಮಾತ್ರ ಧರಿಸಬೇಕು. ಯಾವುದೇ ಆಪತ್ತು ಇಲ್ಲದಿದ್ದರೆ ದಂಡ-ಕಮಂಡಲುಗಳೇ ಮುಂತಾದ ಆಶ್ರಮದ ಚಿಹ್ನೆಗಳನ್ನು ಬಿಟ್ಟು ತಾನು ತ್ಯಜಿಸಿದ ಯಾವ ವಸ್ತುವನ್ನು ಪರಿಗ್ರಹಿಸಬಾರದು. ॥ ೨ ॥ ಸಂನ್ಯಾಸಿಯು ಎಲ್ಲ ಪ್ರಾಣಿಗಳಿಗೂ ಹಿತೈಷಿಯಾಗಿದ್ದು ಶಾಂತನಾಗಿರಬೇಕು. ಭಗವತ್ಪರಾಯಣನಾಗಿ, ಯಾರ ಆಶ್ರಯವನ್ನು ಪಡೆಯದೆ ತನ್ನ ಆತ್ಮಸ್ವರೂಪದಲ್ಲೇ ರಮಿಸುತ್ತಾ ಒಬ್ಬಂಟಿಗನಾಗಿ ಸಂಚರಿಸಬೇಕು. ॥ ೩ ॥ ಈ ಸಮಸ್ತ ವಿಶ್ವವು ಕಾರ್ಯ-ಕಾರಣಗಳಿಂದ ಅತೀತನಾದ ಪರಮಾತ್ಮನಲ್ಲಿ ನೆಲೆಸಿದೆ ಎಂದು ತಿಳಿಯಬೇಕು. ಕಾರ್ಯ-ಕಾರಣಸ್ವರೂಪವಾದ ಈ ಜಗತ್ತಿನಲ್ಲಿ ಬ್ರಹ್ಮಸ್ವರೂಪನಾದ ತನ್ನ ಆತ್ಮನು ತುಂಬಿರುವನೆಂದು ನೋಡಬೇಕು. ॥ ೪ ॥ ಆತ್ಮದರ್ಶಿಯಾದ ಸಂನ್ಯಾಸಿಯು ಸುಷುಪ್ತಿ ಮತ್ತು ಎಚ್ಚರದ ಸಂಧಿಯಲ್ಲಿ ತನ್ನ ಸ್ವಸ್ವರೂಪವನ್ನು ಅನುಭವಿಸಬೇಕು. ಬಂಧ ಮತ್ತು ಮೋಕ್ಷ ಇವೆರಡೂ ಕೇವಲ ಮಾಯೆಯಾಗಿದೆ. ವಸ್ತುತಃ ಏನೂ ಇಲ್ಲ ಎಂದು ತಿಳಿಯಬೇಕು. ॥ ೫ ॥ ಶರೀರಕ್ಕೆ ಅವಶ್ಯವಾಗಿ ಬರುವ ಮೃತ್ಯುವಿನ ಕುರಿತು ಮತ್ತು ಅನಿಶ್ಚಿತ ಜೀವನದ ಕುರಿತು ಚಿಂತಿಸಬಾರದು. ಕೇವಲ ಸಮಸ್ತ ಪ್ರಾಣಿಗಳ ಉತ್ಪತ್ತಿ ಹಾಗೂ ನಾಶದ ಕಾರಣನಾದ ಕಾಲನನ್ನು ಪ್ರತೀಕ್ಷೆ ಮಾಡುತ್ತಾ ಇರಬೇಕು. ॥ ೬ ॥ ಅಸತ್-ಅನಾತ್ಮ ವಸ್ತುಗಳನ್ನು ಪ್ರತಿಪಾದನೆ ಮಾಡುವ ಶಾಸ್ತ್ರಗಳನ್ನು ಪ್ರೀತಿಸಬಾರದು. ತನ್ನ ಜೀವನ ನಿರ್ವಾಹಕ್ಕಾಗಿ ಯಾವುದೇ ವೃತ್ತಿಯನ್ನು ಅವಲಂಬಿಸಬಾರದು. ಕೇವಲ ವಾದ-ವಿವಾದಕ್ಕಾಗಿಯೇ ಯಾವುದೇ ತರ್ಕಮಾಡಬಾರದು. ಪ್ರಪಂಚದಲ್ಲಿ ಯಾರ ಪಕ್ಷವನ್ನೂ ವಹಿಸಬಾರದು. ॥ ೭ ॥

ನ ಶಿಷ್ಯಾನನುಬಧ್ನೀತ ಗ್ರಂಥಾನ್ನೈವಾಭ್ಯಸೇದ್ಬಹೂನ್ ।
ನ ವ್ಯಾಖ್ಯಾಮುಪಯುಂಜೀತ ನಾರಂಭಾನಾರಭೇತ್ಕ್ವಚಿತ್ ॥ ೮ ॥

ನ ಯತೇರಾಶ್ರಮಃ ಪ್ರಾಯೋ ಧರ್ಮಹೇತುರ್ಮಹಾತ್ಮನಃ ।
ಶಾಂತಸ್ಯ ಸಮಚಿತ್ತಸ್ಯ ಬಿಭೃಯಾದುತ ವಾ ತ್ಯಜೇತ್ ॥ ೯ ॥

ಅವ್ಯಕ್ತಲಿಂಗೋ ವ್ಯಕ್ತಾರ್ಥೋ ಮನೀಷ್ಯುನ್ಮತ್ತಬಾಲವತ್ ।
ಕವಿರ್ಮೂಕವದಾತ್ಮಾನಂ ಸ ದೃಷ್ಟ್ಯಾ ದರ್ಶಯೇನ್ನೃಣಾಮ್ ॥ ೧೦ ॥

ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।
ಪ್ರಹ್ಲಾದಸ್ಯ ಚ ಸಂವಾದಂ ಮುನೇರಾಜಗರಸ್ಯ ಚ ॥ ೧೧ ॥

ತಂ ಶಯಾನಂ ಧರೋಪಸ್ಥೇ ಕಾವೇರ್ಯಾಂ ಸಹ್ಯಸಾನುನಿ ।
ರಜಸ್ವಲೈಸ್ತನೂದೇಶೈರ್ನಿಗೂಢಾಮಲತೇಜಸಮ್ ॥ ೧೨ ॥

ದದರ್ಶ ಲೋಕಾನ್ವಿಚರಲ್ಲೋಕತತ್ತ್ವವಿವಿತ್ಸಯಾ ।
ವೃತೋಽಮಾತ್ಯೈಃ ಕತಿಪಯೈಃ ಪ್ರಹ್ಲಾದೋ ಭಗವತ್ಪ್ರಿಯಃ ॥ ೧೩ ॥

ಕರ್ಮಣಾಽಽಕೃತಿಭಿರ್ವಾಚಾ ಲಿಂಗೈರ್ವರ್ಣಾಶ್ರಮಾದಿಭಿಃ ।
ನ ವಿದಂತಿ ಜನಾ ಯಂ ವೈ ಸೋಽಸಾವಿತಿ ನ ವೇತಿ ಚ ॥ ೧೪ ॥

ತಂ ನತ್ವಾಭ್ಯರ್ಚ್ಯ ವಿಧಿವತ್ಪಾದಯೋಃ ಶಿರಸಾ ಸ್ಪೃಶನ್ ।
ವಿವಿತ್ಸುರಿದಮಪ್ರಾಕ್ಷೀನ್ಮಹಾಭಾಗವತೋಽಸುರಃ ॥ ೧೫ ॥

ಬಿಭರ್ಷಿ ಕಾಯಂ ಪೀವಾನಂ ಸೋದ್ಯಮೋ ಭೋಗವಾನ್ಯಥಾ ।
ವಿತ್ತಂ ಚೈವೋದ್ಯಮವತಾಂ ಭೋಗೋ ವಿತ್ತವತಾಮಿಹ ।
ಭೋಗಿನಾಂ ಖಲು ದೇಹೋಽಯಂ ಪೀವಾ ಭವತಿ ನಾನ್ಯಥಾ ॥ ೧೬ ॥

ನ ತೇ ಶಯಾನಸ್ಯ ನಿರುದ್ಯಮಸ್ಯ
ಬ್ರಹ್ಮನ್ನು ಹಾರ್ಥೋ ಯತ ಏವ ಭೋಗಃ ।
ಅಭೋಗಿನೋಽಯಂ ತವ ವಿಪ್ರ ದೇಹಃ
ಪೀವಾ ಯತಸ್ತದ್ವದ ನಃ ಕ್ಷಮಂ ಚೇತ್ ॥ ೧೭ ॥

ಕವಿಃ ಕಲ್ಪೋ ನಿಪುಣದೃಕ್ಚಿತ್ರಪ್ರಿಯಕಥಃ ಸಮಃ ।
ಲೋಕಸ್ಯ ಕುರ್ವತಃ ಕರ್ಮ ಶೇಷೇ ತದ್ವೀಕ್ಷಿತಾಪಿ ವಾ ॥ ೧೮ ॥

ಶಿಷ್ಯ ಮಂಡಳಿಯನ್ನು ಕೂಡಿಸಬಾರದು. ಬಹಳ ಗ್ರಂಥಗಳನ್ನು ಅಭ್ಯಾಸ ಮಾಡಕೂಡದು. ವ್ಯಾಖ್ಯಾನ-ಉಪನ್ಯಾಸವನ್ನು ಮಾಡಬಾರದು. ದೊಡ್ಡ-ದೊಡ್ಡ ಕೆಲಸಗಳನ್ನು-ಯೋಜನೆಗಳನ್ನು ಕೈಗೊಳ್ಳಬಾರದು. ॥ ೮ ॥ ಶಾಂತನೂ, ಸಮದರ್ಶಿಯೂ, ಮಹಾತ್ಮನೂ ಆದ ಸಂನ್ಯಾಸಿಗೆ ಯಾವುದೇ ಆಶ್ರಮದ ಬಂಧನವು ಧರ್ಮದ ಕಾರಣವಾಗುವುದಿಲ್ಲ. ಅವನು ತನ್ನ ಆಶ್ರಮದ ಚಿಹ್ನೆಗಳನ್ನು ಬೇಕಾದರೆ ಧರಿಸಬಹುದು, ಬೇಡವಾದರೆ ಬಿಟ್ಟುಬಿಡಬಹುದು. ॥ ೯ ॥ ಅವನ ಬಳಿಯಲ್ಲಿ ಯಾವುದೇ ಆಶ್ರಮದ ಚಿಹ್ನೆಗಳು ಇಲ್ಲದಿದ್ದರೂ ಅವನು ಆತ್ಮಾನುಸಂಧಾನದಲ್ಲಿ ಮುಳುಗಿರಬೇಕು. ಅತ್ಯಂತ ವಿಚಾರಶೀಲನಾಗಿದ್ದರೂ ಹುಚ್ಚನಂತೆ, ಬಾಲಕನಂತೆ ಕಾಣಿಸಿಕೊಳ್ಳಬೇಕು. ಕವಿ (ಜ್ಞಾನಿ)ಯಾಗಿ ಸುಂದರವಾಗಿ ಮಾತಾಡಬಲ್ಲವನಾಗಿದ್ದರೂ ಇತರರಿಗೆ ಮೂಕನಂತೆ ತೋರಿಸಿಕೊಳ್ಳಬೇಕು. ॥ ೧೦ ॥

ಯುಧಿಷ್ಠಿರನೇ! ಈ ವಿಷಯದಲ್ಲಿ ಮಹಾತ್ಮರು ಒಂದು ಪ್ರಾಚೀನ ಇತಿಹಾಸವನ್ನು ಹೇಳುತ್ತಾರೆ. ಅದು ಅವಧೂತ ಶಿಖಾಮಣಿ ದತ್ತಾತ್ರೇಯಮುನಿಗಳಿಗೂ, ಭಕ್ತರಾಜ ಪ್ರಹ್ಲಾದನಿಗೂ ನಡೆದ ಸಂವಾದವಾಗಿದೆ. ॥ ೧೧ ॥ ಒಮ್ಮೆ ಭಗವಂತನ ಪರಮ ಪ್ರೇಮಿ ಪ್ರಹ್ಲಾದನು ತನ್ನ ಕೆಲವು ಮಂತ್ರಿಗಳೊಂದಿಗೆ ಜನರ ಹೃದಯದ ಮಾತನ್ನು ತಿಳಿಯಲಿಕ್ಕಾಗಿ ಲೋಕಸಂಚಾರ ಮಾಡುತ್ತಿದ್ದನು. ಆಗ ಅವನಿಗೆ ಸಹ್ಯಪರ್ವತದ ತಪ್ಪಲಿನಲ್ಲಿ ಕಾವೇರಿನದಿಯ ದಡದಲ್ಲಿ ನೆಲದಮೇಲೆ ಮಲಗಿದ್ದ ಓರ್ವ ಮುನಿಯು ದೃಷ್ಟಿಗೆ ಬಿದ್ದನು. ಅವರ ಶರೀರದ ನಿರ್ಮಲ ತೇಜಸ್ಸು – ಮೈಯೆಲ್ಲ ಧೂಳುತುಂಬಿದ್ದರಿಂದ ಮರೆಯಾಗಿತ್ತು. ॥ ೧೨-೧೩ ॥ ಅವರ ಕರ್ಮ, ಆಕಾರ, ಮಾತು, ವರ್ಣಾಶ್ರಮಾದಿಗಳ ಚಿಹ್ನೆಗಳಿಂದ ಇವರು ಯಾರೋ ಸಿದ್ಧಪುರುಷರಾಗಿದ್ದಾರೋ, ಅಲ್ಲವೋ ಎಂದು ಸಾಮಾನ್ಯಜನರು ತಿಳಿಯುತ್ತಿರಲಿಲ್ಲ. ॥ ೧೪ ॥ ಪರಮ ಭಾಗವತೋತ್ತಮನಾದ ಅಸುರರಾಜ ಪ್ರಹ್ಲಾದನು ಅವರ ಚರಣಗಳಲ್ಲಿ ಶಿರವನ್ನಿಟ್ಟು ನಮಸ್ಕಾರಮಾಡಿ, ವಿಧಿಪೂರ್ವಕವಾಗಿ ಅವರನ್ನು ಪೂಜಿಸಿ ತತ್ತ್ವವನ್ನು ತಿಳಿಯುವ ಇಚ್ಛೆಯಿಂದ ಹೀಗೆ ಪ್ರಶ್ನಿಸಿದನು. ॥ ೧೫ ॥ ಓ ಭಗವಂತರೇ! ತಮ್ಮ ಶರೀರವು ಉದ್ಯಮೀ ಮತ್ತು ಭೋಗೀ ಪುರುಷರಂತೆ ಹೃಷ್ಟ-ಪುಷ್ಟವಾಗಿದೆ. ಉದ್ಯೋಗ ಮಾಡುವವರಿಗೆ ಧನ ಸಿಗುತ್ತದೆ, ಧನಿಕರಿಗೇ ಭೋಗಗಳು ದೊರೆಯುತ್ತವೆ ಮತ್ತು ಭೋಗಿಗಳ ಶರೀರವೇ ಹೃಷ್ಟ-ಪುಷ್ಟವಾಗಿರುತ್ತದೆ. ಇದು ಪ್ರಪಂಚದ ನಿಯಮವಾಗಿದೆ. ಬೇರೆ ಯಾವ ಕಾರಣದಿಂದಲೂ ಹೀಗಾಗಲು ಸಾಧ್ಯವಿಲ್ಲ. ॥ ೧೬ ॥ ಪೂಜ್ಯರೇ! ನೀವು ಯಾವ ಉದ್ಯೋಗವನ್ನೂ ಮಾಡದೆ ಹೆಬ್ಬಾವಿನಂತೆ ಬಿದ್ದುಕೊಂಡಿರುವಿರಿ. ಇದರಿಂದ ನಿಮ್ಮ ಬಳಿಯಲ್ಲಿ ಧನವೂ ಇಲ್ಲ, ಮತ್ತೆ ಭೋಗಗಳು ನಿಮಗೆ ಎಲ್ಲಿಂದ ಬರಬೇಕು? ಭೂಸುರರೇ! ಭೋಗವಿಲ್ಲದೆಯೇ ನಿಮ್ಮ ಶರೀರವು ಇಷ್ಟು ಹೃಷ್ಟ-ಪುಷ್ಟ ಹೇಗಿದೆ? ನಾವು ಕೇಳಲು ಯೋಗ್ಯರಾಗಿದ್ದರೆ ಅವಶ್ಯವಾಗಿ ಹೇಳುವ ಕೃಪೆಮಾಡಬೇಕು. ॥ ೧೭ ॥ ತಾವು ಕವಿಗಳೂ, ವಿದ್ವಾಂಸರೂ, ಸಮರ್ಥರೂ, ಚತುರರೂ ಆಗಿದ್ದೀರಿ. ನಿಮ್ಮ ಮಾತುಗಳು ಅದ್ಭುತವೂ, ಪ್ರಿಯವೂ ಆಗಿರುತ್ತದೆ. ಇಂತಹ ಸ್ಥಿತಿಯಲ್ಲಿ ನೀವು ಇಡೀ ಜಗತ್ತು ಕರ್ಮ ಮಾಡುತ್ತಾ ಇರುವುದನ್ನು ನೋಡಿಯೂ ಸಮಭಾವದಿಂದ ಮಲಗಿಕೊಂಡೇ ಇರುವಿರಲ್ಲ! ಇದರ ಕಾರಣವೇನು? ॥ ೧೮ ॥

*ನಾರದ ಉವಾಚ*

**ಸ ಇತ್ಥಂ ದೈತ್ಯಪತಿನಾ ಪರಿಪೃಷ್ಟೋ ಮಹಾಮುನಿಃ ।**
**ಸ್ಮಯಮಾನಸ್ತಮಭ್ಯಾಹ ತದ್ವಾಗಮೃತಯಂತ್ರಿತಃ ॥ ೧೯ ॥**

**ನಾರದರು ಹೇಳಿದರು** – ಧರ್ಮನಂದನಾ! ಪ್ರಹ್ಲಾದನು ಮಹಾಮುನಿ ದತ್ತಾತ್ರೇಯರಲ್ಲಿ ಹೀಗೆ ಪ್ರಶ್ನೆಮಾಡಿದಾಗ ಅವರು ಇವನ ಅಮೃತಮಯ ವಾಣಿಗೆ ವಶರಾಗಿ ಮುಗುಳ್ನಗುತ್ತಾ ಹೀಗೆಂದರು – ॥ ೧೯ ॥

*ಬ್ರಾಹ್ಮಣ ಉವಾಚ*

**ವೇದೇದಮಸುರಶ್ರೇಷ್ಠ ಭವಾನ್ನನ್ವಾರ್ಯಸಮ್ಮತಃ ।**
**ಈಹೋಪರಮಯೋರ್ನೃಣಾಂ ಪದಾನ್ಯಧ್ಯಾತ್ಮ ಚಕ್ಷುಷಾ ॥ ೨೦ ॥**

**ಯಸ್ಯ ನಾರಾಯಣೋ ದೇವೋ ಭಗವಾನ್ಹೃದ್ಗತಃ ಸದಾ ।**
**ಭಕ್ತ್ಯಾ ಕೇವಲಯಾಜ್ಞಾನಂ ಧುನೋತಿ ಧ್ವಾಂತಮರ್ಕವತ್ ॥ ೨೧ ॥**

**ಅಥಾಪಿ ಬ್ರೂಮಹೇ ಪ್ರಶ್ನಾನ್ಸ್ತವ ರಾಜನ್ಯಥಾಶ್ರುತಮ್ ।**
**ಸಂಭಾವನೀಯೋ ಹಿ ಭವಾನಾತ್ಮನಃ ಶುದ್ಧಿಮಿಚ್ಛತಾಮ್ ॥ ೨೨ ॥**

**ದತ್ತಾತ್ರೇಯರು ಹೇಳಿದರು** – ಎಲೈ ಅಸುರೋತ್ತಮನೇ! ಎಲ್ಲ ಶ್ರೇಷ್ಠ ಪುರುಷರೂ ನಿನ್ನನ್ನು ಸಮ್ಮಾನಿಸುವರು. ಕರ್ಮಗಳ ಪ್ರವೃತ್ತಿ ಮತ್ತು ನಿವೃತ್ತಿ ಇವುಗಳ ಯಾವ ಫಲ ಮನುಷ್ಯನಿಗೆ ಸಿಗುತ್ತದೆ ಎಂಬುದು ನೀನು ನಿನ್ನ ಜ್ಞಾನದೃಷ್ಟಿಯಿಂದ ತಿಳಿದೇ ಇರುವೆ. ॥ ೨೦ ॥ ನಿನ್ನ ಅನನ್ಯ ಭಕ್ತಿಯಿಂದ ದೇವಾಧಿದೇವ ಭಗವಾನ್ ನಾರಾಯಣನು ಸದಾ ನಿನ್ನ ಹೃದಯದಲ್ಲಿ ಬೆಳಗುತ್ತಾ, ಸೂರ್ಯನು ಅಂಧಕಾರವನ್ನು ನಾಶಮಾಡಿಬಿಡುವಂತೆ ನಿನ್ನ ಅಜ್ಞಾನವನ್ನು ನಾಶಪಡಿಸುತ್ತಿದ್ದಾನೆ. ॥ ೨೧ ॥ ಆದರೂ ಪ್ರಹ್ಲಾದ! ನಾನು ತಿಳಿದಿರುವಂತೆ ನಿನ್ನ ಪ್ರಶ್ನೆಗಳ ಉತ್ತರಗಳನ್ನು ಕೊಡುವೆ. ಏಕೆಂದರೆ, ಆತ್ಮಶುದ್ಧಿಯ ಅಭಿಲಾಷಿಗಳು ನಿನ್ನನ್ನು ಅವಶ್ಯವಾಗಿ ಸಮ್ಮಾನಿಸಬೇಕು. ॥ ೨೨ ॥

**ತೃಷ್ಣಯಾ ಭವವಾಹಿನ್ಯಾ ಯೋಗ್ಯೈಃ ಕಾಮೈರಪೂರಯಾ ।**
**ಕರ್ಮಾಣಿ ಕಾರ್ಯಮಾಣೋಽಹಂ ನಾನಾಯೋನಿಷು ಯೋಜಿತಃ ॥ ೨೩ ॥**

**ಯದೃಚ್ಛಯಾ ಲೋಕಮಿಮಂ ಪ್ರಾಪಿತಃ ಕರ್ಮಭಿರ್ಭ್ರಮನ್ ।**
**ಸ್ವರ್ಗಾಪವರ್ಗಯೋರ್ದ್ವಾರಂ ತಿರಶ್ಚಾಂ ಪುನರಸ್ಯ ಚ ॥ ೨೪ ॥**

**ಅತ್ರಾಪಿ ದಂಪತೀನಾಂ ಚ ಸುಖಾಯಾನ್ಯಾಪನುತ್ತಯೇ ।**
**ಕರ್ಮಾಣಿ ಕುರ್ವತಾಂ ದೃಷ್ಟ್ವಾ ನಿವೃತ್ತೋಽಸ್ಮಿ ವಿಪರ್ಯಯಮ್ ॥ ೨೫ ॥**

ಪ್ರಹ್ಲಾದನೇ! ತೃಷ್ಣೆಯು ಇಚ್ಛಾನುಸಾರ ಭೋಗಗಳು ಪ್ರಾಪ್ತವಾದರೂ ಪೂರ್ಣವಾಗದಿರುವಂತಹ ಒಂದು ವಸ್ತು ಆಗಿದೆ. ಆದರಿಂದಲೇ ಹುಟ್ಟು-ಸಾವುಗಳ ಚಕ್ರದಲ್ಲಿ ಅಲೆಯಬೇಕಾಗುತ್ತದೆ. ತೃಷ್ಣೆಯು ನನ್ನಿಂದ ಎಷ್ಟು ಕರ್ಮಗಳನ್ನು ಮಾಡಿಸಿತೋ ತಿಳಿಯದು. ಅವುಗಳಿಂದಾಗಿಯೇ ಎಷ್ಟು ಯೋನಿಗಳಲ್ಲಿ ನನ್ನನ್ನು ಬೀಳಿಸಿದೆಯೋ? ತಿಳಿಯದು. ॥ ೨೩ ॥ ಕರ್ಮಗಳ ಕಾರಣದಿಂದ ಅನೇಕ ಯೋನಿಗಳಲ್ಲಿ ಅಲೆಯುತ್ತಾ ಕೊನೆಗೆ ದೈವವಶದಿಂದ ನನಗೆ – ಸ್ವರ್ಗ, ಮೋಕ್ಷ, ತಿರ್ಯಕ್ ಯೋನಿ ಹಾಗೂ ಈ ಮಾನವದೇಹದ ಪ್ರಾಪ್ತಿಯ ದ್ವಾರವಾದ ಈ ಮನುಷ್ಯಯೋನಿ ದೊರೆತಿದೆ. ಇದರಲ್ಲಿ ಪುಣ್ಯಮಾಡಿದರೆ ಸ್ವರ್ಗ, ಪಾಪಮಾಡಿದರೆ ಪಶು-ಪಕ್ಷಿ ಮುಂತಾದ ಯೋನಿಗಳು, ನಿವೃತ್ತನಾದರೆ ಮೋಕ್ಷ ಮತ್ತು ಎರಡು ರೀತಿಯ ಕರ್ಮಗಳನ್ನು ಮಾಡಿದರೆ ಪುನಃ ಮನುಷ್ಯಯೋನಿಯೇ ದೊರೆಯಬಲ್ಲದು. ॥ ೨೪ ॥ ಆದರೆ ಪ್ರಪಂಚದ ಸ್ತ್ರೀ-ಪುರುಷರೆಲ್ಲರೂ ಸುಖದ ಪ್ರಾಪ್ತಿಗಾಗಿ ಮತ್ತು ದುಃಖದ ನಿವೃತ್ತಿಗಾಗಿಯೇ ಕರ್ಮಗಳನ್ನು ಮಾಡುತ್ತಾರೆ. ಆದರೂ ಫಲವು ಅದಕ್ಕೆ ವಿಪರೀತವೇ ಆಗಿಹೋಗುತ್ತದೆ. ಅವರು ಇನ್ನೂ ದುಃಖದಲ್ಲೇ ಬಿದ್ದುಹೋಗುವರು. ಅದಕ್ಕಾಗಿ ನಾನು ಕರ್ಮಗಳಿಂದ ನಿವೃತ್ತನಾಗಿಬಿಟ್ಟಿದ್ದೇನೆ. ॥ ೨೫ ॥

**ಸುಖಮಸ್ಯಾತ್ಮನೋ ರೂಪಂ ಸರ್ವೇಹೋಪರತಿಸ್ತನುಃ ।**
**ಮನಃಸಂಸ್ಪರ್ಶಜಾನ್ದೃಷ್ಟ್ವಾ ಭೋಗಾನ್ಸ್ವಪ್ಸ್ಯಾಮಿ ಸಂವಿಶನ್ ॥ ೨೬ ॥**

**ಇತ್ಯೇತದಾತ್ಮನಃ ಸ್ವಾರ್ಥಂ ಸಂತಂ ವಿಸ್ಮೃತ್ಯ ವೈ ಪುಮಾನ್ ।**
**ವಿಚಿತ್ರಾಮಸತಿ ದ್ವೈತೇ ಘೋರಾಮಾಪ್ನೋತಿ ಸಂಸೃತಿಮ್ ॥ ೨೭ ॥**

ಸುಖವೇ ಆತ್ಮನ ಸ್ವರೂಪವಾಗಿದೆ. ಸಮಸ್ತ ವ್ಯಾಪಾರಗಳಿಂದ ನಿವೃತ್ತಿಯೇ ಆತ್ಮನ ಶರೀರ – ಅದು ಆತ್ಮನಾಗುವ ಸ್ಥಾನವಾಗಿದೆ. ಅದಕ್ಕಾಗಿ ಎಲ್ಲ ಭೋಗಗಳನ್ನು ಮನೋರಾಜ್ಯಮಾತ್ರವೆಂದು ತಿಳಿದು ನಾನು ನನ್ನ ಪ್ರಾರಬ್ಧವನ್ನು ಅನುಭವಿಸುತ್ತಾ ಬಿದ್ದುಕೊಂಡಿರುವೆನು. ॥ ೨೬ ॥ ಮನುಷ್ಯನು ತನ್ನ ನಿಜವಾದ ಸ್ವಾರ್ಥ ಅರ್ಥಾತ್ ತನ್ನ ಸ್ವರೂಪವೇ ಆದ ಸುಖವನ್ನು ಮರೆತು ಈ ಮಿಥ್ಯೆಯಾದ ದ್ವೈತವನ್ನೇ ಸತ್ಯವೆಂದು ತಿಳಿಯುತ್ತಾ ಅತ್ಯಂತ ಭಯಂಕರವೂ, ವಿಚಿತ್ರವೂ ಆದ ಜನ್ಮ-ಮೃತ್ಯುಗಳಲ್ಲಿ ಅಲೆಯುತ್ತಾ ಇರುತ್ತಾನೆ. ॥ ೨೭ ॥

ಜಲಂ ತದುದ್ಭವೈಶ್ಛನ್ನಂ ಹಿತ್ವಾಜ್ಞೋ ಜಲಕಾಮ್ಯಯಾ ।
ಮೃಗತೃಷ್ಣಾಮುಪಾಧಾವೇದ್ಯಥಾನ್ಯತ್ರಾರ್ಥದೃಕ್ಸ್ವತಃ ॥ ೨೮ ॥

ದೇಹಾದಿಭಿರ್ದೈವತಂತ್ರೈರಾತ್ಮನಃ ಸುಖಮೀಹತಃ ।
ದುಃಖಾತ್ಯಯಂ ಚಾನೀಶಸ್ಯ ಕ್ರಿಯಾ ಮೋಘಾಃ ಕೃತಾಃ ಕೃತಾಃ ॥ ೨೯ ॥

ಆಧ್ಯಾತ್ಮಿಕಾದಿಭಿರ್ದುಃಖೈರವಿಮುಕ್ತಸ್ಯ ಕರ್ಹಿಚಿತ್ ।
ಮರ್ತ್ಯಸ್ಯ ಕೃಚ್ಛ್ರೋಪನತೈರರ್ಥೈಃ ಕಾಮೈಃ ಕ್ರಿಯೇತ ಕಿಮ್ ॥ ೩೦ ॥

ಪಶ್ಯಾಮಿ ಧನಿನಾಂ ಕ್ಲೇಶಂ ಲುಬ್ಧಾನಾಮಜಿತಾತ್ಮನಾಮ್ ।
ಭಯಾದಲಬ್ಧನಿದ್ರಾಣಾಂ ಸರ್ವತೋಽಭಿವಿಶಂಕಿನಾಮ್ ॥ ೩೧ ॥

ರಾಜತಶ್ಚೋರತಃ ಶತ್ರೋಃ ಸ್ವಜನಾತ್ಪಶುಪಕ್ಷಿತಃ ।
ಅರ್ಥಿಭ್ಯಃ ಕಾಲತಃ ಸ್ವಸ್ಮಾನ್ನಿತ್ಯಂ ಪ್ರಾಣಾರ್ಥವದ್ಭಯಮ್ ॥ ೩೨ ॥

ಶೋಕಮೋಹಭಯಕ್ರೋಧ-
ರಾಗಕ್ಲೈಬ್ಯಶ್ರಮಾದಯಃ ।
ಯನ್ಮೂಲಾಃ ಸ್ಯುರ್ನೃಣಾಂ ಜಹ್ಯಾತ್
ಸ್ಪೃಹಾಂ ಪ್ರಾಣಾರ್ಥಯೋರ್ಬುಧಃ ॥ ೩೩ ॥

ಮಧುಕಾರಮಹಾಸರ್ಪೌ
ಲೋಕೇಽಸ್ಮಿನ್ನೋ ಗುರೂತ್ತಮೌ ।
ವೈರಾಗ್ಯಂ ಪರಿತೋಷಂ ಚ
ಪ್ರಾಪ್ತಾ ಯಚ್ಛಿಕ್ಷಯಾ ವಯಮ್ ॥ ೩೪ ॥

ವಿರಾಗಃ ಸರ್ವಕಾಮೇಭ್ಯಃ ಶಿಕ್ಷಿತೋ ಮೇ ಮಧುವ್ರತಾತ್ ।
ಕೃಚ್ಛ್ರಾಪ್ತಂ ಮಧುವದ್ವಿತ್ತಂ ಹತ್ವಾಪ್ಯನ್ಯೋ ಹರೇತ್ಪತಿಮ್ ॥ ೩೫ ॥

ಅನೀಹಃ ಪರಿತುಷ್ಟಾತ್ಮಾ ಯದೃಚ್ಛೋಪನತಾದಹಮ್ ।
ನೋ ಚೇಚ್ಛಯೇ ಬಹ್ವಹಾನಿ ಮಹಾಹಿರಿವ ಸತ್ತ್ವವಾನ್ ॥ ೩೬ ॥

ಕ್ವಚಿದಲ್ಪಂ ಕ್ವಚಿದ್ಭೂರಿ ಭುಂಜೇಽನ್ನಂ ಸ್ವಾದ್ವಸ್ವಾದು ವಾ ।
ಕ್ವಚಿದ್ಭೂರಿಗುಣೋಪೇತಂ ಗುಣಹೀನಮುತ ಕ್ವಚಿತ್ ॥ ೩೭ ॥

ಅಜ್ಞಾನೀ ಮನುಷ್ಯನು ನೀರಿನಲ್ಲಿರುವ ಜೊಂಡು, ಪಾಚಿಗಳಿಂದ ಮುಚ್ಚಿಹೋದ ನೀರನ್ನು ನೀರೆಂದು ತಿಳಿಯದೆ, ಬಿಸಿಲ್ಗುದುರೆಯ ಕಡೆಯ ಓಡುವಂತೆಯೇ ತನ್ನ ಆತ್ಮನಿಗಿಂತ ಭಿನ್ನವಾದ ವಸ್ತುಗಳಲ್ಲಿ ಸುಖವನ್ನು ತಿಳಿಯುವವನು ಆತ್ಮನನ್ನು ಬಿಟ್ಟು ವಿಷಯಗಳ ಕಡೆಗೆ ಓಡುತ್ತಾ ಇದ್ದಾನೆ. ॥ ೨೮ ॥ ಭಕ್ತ ಪ್ರಹ್ಲಾದನೇ ! ಶರೀರಾದಿಗಳಾದರೋ ಪ್ರಾರಬ್ಧಕ್ಕೆ ಅಧೀನವಾಗಿವೆ. ಅವುಗಳ ಮೂಲಕ ತನಗಾಗಿ ಸುಖವನ್ನು ಪಡೆಯಲು ಮತ್ತು ದುಃಖವನ್ನು ಹೋಗಲಾಡಿಸಲು ಬಯಸುವವನು ಎಂದಿಗೂ ತನ್ನ ಕಾರ್ಯದಲ್ಲಿ ಸಫಲನಾಗುವುದಿಲ್ಲ. ಅವನು ಬಾರಿ-ಬಾರಿಗೂ ಮಾಡಿದ ಕರ್ಮಗಳೆಲ್ಲ ವ್ಯರ್ಥವಾಗಿ ಹೋಗುತ್ತವೆ. ॥ ೨೯ ॥ ಮನುಷ್ಯನನ್ನು ಸದಾಕಾಲ ಶಾರೀರಿಕ, ಮಾನಸಿಕ ಮುಂತಾದ ದುಃಖಗಳು ಆಕ್ರಮಿಸಿಕೊಂಡಿರುತ್ತವೆ. ಅವನು ಸಾವನ್ನಂತೂ ಅಪ್ಪಲೇಬೇಕು. ಹೀಗಿರುವಾಗ ಆತನು ಅತಿಕಷ್ಟಪಟ್ಟು, ಪರಿಶ್ರಮ ದಿಂದ ಸ್ವಲ್ಪ ಧನ-ಭೋಗಗಳನ್ನು ಗಳಿಸಿಕೊಂಡರೂ ಏನು ಲಾಭವಿದೆ ? ॥ ೩೦ ॥ ಲೋಭಿಗಳು ಮತ್ತು ಇಂದ್ರಿಯಗಳಿಗೆ ವಶ ರಾದ ಶ್ರೀಮಂತರ ದುಃಖವನ್ನಂತೂ ನಾನು ನೋಡುತ್ತಾ ಇರು ತ್ತೇನೆ. ಭಯದಿಂದಾಗಿ ಅವರಿಗೆ ನಿದ್ದೆಯೇ ಬರುವುದಿಲ್ಲ. ಅವರಿಗೆ ಎಲ್ಲರ ಮೇಲೂ ಸಂದೇಹವೇ ಇರುತ್ತದೆ. ॥ ೩೧ ॥ ಜೀವನ ಮತ್ತು ಧನದ ಲೋಭಿಯಾದವನು – ರಾಜ, ಕಳ್ಳ, ಶತ್ರು, ಸ್ವಜನರು, ಪಶು-ಪಕ್ಷಿ, ಯಾಚಕ ಮತ್ತು ಕಾಲ – ಇವುಗಳಿಗೆ ಹೆದರುತ್ತಾ ಇರು ತ್ತಾನೆ. ಅಷ್ಟೇ ಅಲ್ಲ – 'ನಾನೆಲ್ಲಿಯಾದರೂ ತಪ್ಪುಮಾಡಿ, ಹೆಚ್ಚು ಖರ್ಚುಮಾಡಿಬಿಟ್ಟೇನೋ' ಎಂಬ ಆಶಂಕೆಯಿಂದ ತನ್ನ ಕುರಿತೂ ಕೂಡ ಭಯಪಡುತ್ತಾ ಇರುತ್ತಾನೆ. ॥ ೩೨ ॥ ಆದಕ್ಕಾಗಿ ಶೋಕ, ಮೋಹ, ಭಯ, ಕ್ರೋಧ, ರಾಗ, ಹೇಡಿತನ, ಶ್ರಮ – ಇವುಗಳಿಗೆ ತುತ್ತಾಗಬೇಕಾಗುವುದು. ಬುದ್ಧಿವಂತನಾದ ಮನುಷ್ಯನು – ಆ ಧನ ಮತ್ತು ಜೀವನದ ಆಸೆಯನ್ನು ತ್ಯಜಿಸಿಬಿಡಬೇಕು. ॥ ೩೩ ॥

ಈ ಲೋಕದಲ್ಲಿ ಅಜಗರ (ಹೆಬ್ಬಾವು) ಮತ್ತು ಜೇನುನೊಣ ಇವೆರಡೂ ಎಲ್ಲರಿಗಿಂತ ದೊಡ್ಡ ಗುರುಗಳು ನನಗೆ. ಅವುಗಳ ಶಿಕ್ಷಣ ದಿಂದ ನಮಗೆ ವೈರಾಗ್ಯ ಮತ್ತು ಸಂತೋಷಗಳು ಉಂಟಾಗಿವೆ. ॥ ೩೪ ॥ ಜೇನುನೊಣವು ಜೇನುತುಪ್ಪವನ್ನು ಸಂಗ್ರಹಿಸುವಂತೆಯೇ ಜನರು ಅತಿಕಷ್ಟದಿಂದ ಹಣವನ್ನು ಸಂಗ್ರಹಿಸುತ್ತಾರೆ. ಆದರೆ ಬೇರೆ ಯಾರೋ ಆ ಧನರಾಶಿಯ ಒಡೆಯನನ್ನು ಕೊಂದು ಅದನ್ನು ಕಿತ್ತು ಕೊಳ್ಳುವನು. ಇದರಿಂದ ನಾನು – 'ವಿಷಯ ಭೋಗಗಳಿಂದ ವಿರಕ್ತನೇ ಆಗಿರಬೇಕು' ಎಂಬ ಪಾಠವನ್ನು ಕಲಿತೆ. ॥ ೩೫ ॥

ನಾನು ಅಜಗರದಂತೆ ನಿಶ್ಚೇಷ್ಟಿತನಾಗಿ ಬಿದ್ದುಕೊಂಡಿರುತ್ತೇನೆ. ದೈವವಶದಿಂದ ಏನಾದರೂ ಸಿಕ್ಕಿದರೆ ಅದರಲ್ಲೇ ಸಂತುಷ್ಟನಾಗಿರು ತ್ತೇನೆ. ಏನೂ ಸಿಗದಿದ್ದರೆ ಅನೇಕ ದಿನಗಳವರೆಗೆ ಧೈರ್ಯವಹಿಸಿ ಹೀಗೆಯೇ ಬಿದ್ದುಕೊಂಡಿರುತ್ತೇನೆ. ॥ ೩೬ ॥ ಕೆಲವೊಮ್ಮೆ ಕಡಿಮೆ ಅನ್ನ ತಿಂದರೆ, ಕೆಲವೊಮ್ಮೆ ಹೆಚ್ಚು. ಅದೂ ಕೂಡ ಎಂದಾದರೂ ರುಚಿಕರವಾಗಿದ್ದರೆ, ಎಂದಾದರೂ ನೀರಸ, ಸಪ್ಪೆ, ಕೆಲವೊಮ್ಮೆ ಅನೇಕ ಗುಣಗಳಿಂದ ಕೂಡಿದ್ದರೆ, ಕೆಲವೊಮ್ಮೆ ಸರ್ವಥಾ ಗುಣ ಹೀನ. ॥ ೩೭ ॥

ಶ್ರದ್ಧಯೋಪಾಹೃತಂ ಕ್ವಾಪಿ ಕದಾಚಿನ್ಮಾನವರ್ಜಿತಮ್ ।
ಭುಂಜೇ ಭುಕ್ತ್ವಾಥ ಕಸ್ಮಿಂಶ್ಚಿದ್ದಿವಾ ನಕ್ತಂ ಯದೃಚ್ಛಯಾ ॥ ೩೮ ॥

ಕೌಮಂ ದುಕೂಲಮಜಿನಂ ಚೀರಂ ವಲ್ಕಲಮೇವ ವಾ ।
ವಸೇಽನ್ಯದಪಿ ಸಂಪ್ರಾಪ್ತಂ ದಿಷ್ಟಭುಕ್ತುಷ್ಟಧೀರಹಮ್ ॥ ೩೯ ॥

ಕ್ವಚಿಚ್ಛಯೇ ಧರೋಪಸ್ಥೇ ತೃಣಪರ್ಣಾಶ್ಮಭಸ್ಮಸು ।
ಕ್ವಚಿತ್ಪ್ರಾಸಾದಪರ್ಯಂಕೇ ಕಶಿಪೌ ವಾ ಪರೇಚ್ಛಯಾ ॥ ೪೦ ॥

ಕ್ವಚಿತ್ಸ್ನಾತೋಽನುಲಿಪ್ತಾಂಗಃ ಸುವಾಸಾಃ ಸ್ರಗ್ವ್ಯಲಂಕೃತಃ ।
ರಥೇಭಾಶ್ವೈಶ್ಚರೇ ಕ್ವಾಪಿ ದಿಗ್ವಾಸಾ ಗ್ರಹವದ್ವಿಭೋ ॥ ೪೧ ॥

ನಾಹಂ ನಿಂದೇ ನ ಚ ಸ್ತೌಮಿ ಸ್ವಭಾವವಿಷಮಂ ಜನಮ್ ।
ಏತೇಷಾಂ ಶ್ರೇಯ ಆಶಾಸೇ ಉತೈಕಾತ್ಮ್ಯಂ ಮಹಾತ್ಮನಿ ॥ ೪೨ ॥

ವಿಕಲ್ಪಂ ಜುಹುಯಾಚ್ಚಿತ್ತೌ ತಾಂ ಮನಸ್ಯರ್ಥವಿಭ್ರಮೇ ।
ಮನೋ ವೈಕಾರಿಕೇ ಹುತ್ವಾ ತನ್ಮಾಯಾಯಾಂ ಜುಹೋತ್ಯನು ॥ ೪೩ ॥

ಆತ್ಮಾನುಭೂತೌ ತಾಂ ಮಾಯಾಂ ಜುಹುಯಾತ್ಸತ್ಯದೃಙ್ಮುನಿಃ ।
ತತೋ ನಿರೀಹೋ ವಿರಮೇತ್ಸ್ವಾನುಭೂತ್ಯಾಽಽತ್ಮನಿ ಸ್ಥಿತಃ ॥ ೪೪ ॥

ಸ್ವಾತ್ಮವೃತ್ತಂ ಮಯೇತ್ಥಂ ತೇ ಸುಗುಪ್ತಮಪಿ ವರ್ಣಿತಮ್ ।
ವ್ಯಪೇತಂ ಲೋಕಶಾಸ್ತ್ರಾಭ್ಯಾಂ ಭವಾನ್ಹಿ ಭಗವತ್ಪರಃ ॥ ೪೫ ॥

ಕೆಲವೊಮ್ಮೆ ತುಂಬಾ ಶ್ರದ್ಧೆಯಿಂದ ದೊರೆತ ಅನ್ನವನ್ನು ತಿಂದರೆ, ಕೆಲವೊಮ್ಮೆ ಅಪಮಾನದಿಂದ ದೊರೆತ ಅನ್ನವನ್ನು ತಿನ್ನುತ್ತೇನೆ. ಕೆಲವೊಮ್ಮೆ ತಾನಾಗಿಯೇ ದೊರೆತಾಗ, ಕೆಲವೊಮ್ಮೆ ಹಗಲಿನಲ್ಲಿ, ಕೆಲವೊಮ್ಮೆ ರಾತ್ರೆಯಲ್ಲಿ ಭೋಜನ ಮಾಡುತ್ತೇನೆ. ಕೆಲವೊಮ್ಮೆ ಒಂದು ಊಟಮಾಡಿದರೆ ಕೆಲವೊಮ್ಮೆ ಎರಡುಬಾರಿ ಭುಂಜಿಸುತ್ತೇನೆ. ॥ ೩೮ ॥ ನಾನು ನನ್ನ ಪ್ರಾರಬ್ಧದ ಭೋಗದಲ್ಲೇ ಸಂತೋಷವಾಗಿರುತ್ತೇನೆ. ಅದರಿಂದ ನನಗೆ ರೇಷ್ಮೆ ಅಥವಾ ಹತ್ತಿಯ, ಮೃಗಚರ್ಮ ಅಥವಾ ನಾರುಬಟ್ಟೆ ಅಥವಾ ಬೇರೇನಾದರೂ ವಸ್ತ್ರವು ಒದಗಿಬರುತ್ತದೋ ಅದನ್ನೇ ಉಟ್ಟುಕೊಳ್ಳುತ್ತೇನೆ. ॥ ೩೯ ॥ ಕೆಲವೊಮ್ಮೆ ನಾನು ಭೂಮಿಯಲ್ಲಿ, ಹುಲ್ಲಿನಮೇಲೆ, ಎಲೆಗಳಮೇಲೆ, ಕಲ್ಲಿನಮೇಲೆ, ಬೂದಿಯರಾಶಿಯಲ್ಲೇ ಬಿದ್ದುಕೊಂಡಿರುತ್ತೇನೆ. ಕೆಲವೊಮ್ಮೆ ಇತರರ ಇಚ್ಛೆಯಂತೆ ಅರಮನೆಯಲ್ಲಿ ಮಂಚದಲ್ಲಿ, ಹಾಸಿಗೆಗಳಲ್ಲಿ ಮಲಗಿರುತ್ತೇನೆ. ॥ ೪೦ ॥ ದೈತ್ಯರಾಜನೇ ! ಕೆಲವೊಮ್ಮೆ ಸ್ನಾನಮಾಡಿ ಶುಚಿಯಾಗಿ, ಗಂಧವನ್ನು ಹಚ್ಚಿಕೊಂಡು, ಸುಂದರ ವಸ್ತ್ರಗಳನ್ನು ಉಟ್ಟು, ಹೂವಿನ ಹಾರವನ್ನು ಧರಿಸಿಕೊಂಡು, ಒಡವೆಗಳನ್ನು ತೊಟ್ಟು ರಥ, ಆನೆ, ಕುದುರೆಗಳನ್ನು ಏರಿಕೊಂಡು ಹೋಗುತ್ತಿರುತ್ತೇನೆ. ಆದರೆ ಕೆಲವೊಮ್ಮೆ ದಿಗಂಬರನಾಗಿ ಪಿಶಾಚಿಯಂತೆ ಓಡಾಡುತ್ತೇನೆ. ॥ ೪೧ ॥ ಮನುಷ್ಯರ ಸ್ವಭಾವಗಳು ಬೇರೆ-ಬೇರೆಯಾಗಿರುತ್ತವೆ. ಆದ್ದರಿಂದ ನಾನು ಯಾರನ್ನೂ ನಿಂದಿಸುವುದಿಲ್ಲ, ಸ್ತುತಿಸುವುದೂ ಇಲ್ಲ. ನಾನು ಕೇವಲ ಇವರ ಪರಮಕಲ್ಯಾಣ ಮತ್ತು ಪರಮಾತ್ಮನಲ್ಲಿ ಏಕತೆಯನ್ನು ಬಯಸುತ್ತೇನೆ. ॥ ೪೨ ॥

ಸತ್ಯವನ್ನು ಅನುಸಂಧಾನ ಮಾಡುವ ಮನುಷ್ಯನಿಗೆ ಕಂಡು ಬರುವ ನಾನಾ ಪದಾರ್ಥಗಳು ಮತ್ತು ಅವುಗಳ ಭೇದ-ವಿಭೇದಗಳನ್ನು ಚಿತ್ತವೃತ್ತಿಯಲ್ಲಿ ಹೋಮಮಾಡಬೇಕು. ಚಿತ್ತವೃತ್ತಿಯನ್ನು ಈ ಪದಾರ್ಥಗಳ ಸಂಬಂಧವಾಗಿ ವಿವಿಧ ಭ್ರಮೆಗಳನ್ನು ಉಂಟು ಮಾಡುವ ಮನಸ್ಸಿನಲ್ಲಿ, ಮನಸ್ಸನ್ನು ಸಾತ್ತ್ವಿಕ ಅಹಂಕಾರದಲ್ಲಿ, ಸಾತ್ತ್ವಿಕ ಅಹಂಕಾರವನ್ನು ಮಹತ್ತತ್ತ್ವದ ಮೂಲಕ ಮಾಯೆಯಲ್ಲಿ ಹವನ ಮಾಡಬೇಕು. ಹೀಗೆ ಇವೆಲ್ಲ ಭೇದ-ವಿಭೇದಗಳು ಮತ್ತು ಅವುಗಳ ಕಾರಣ ಮಾಯೆಯೇ ಆಗಿದೆ ಹೀಗೆ ನಿಶ್ಚಯಮಾಡಿ ಮತ್ತೆ ಆ ಮಾಯೆಯನ್ನು ಆತ್ಮಾನುಭೂತಿಯಲ್ಲಿ ಸ್ವಾಹಾಮಾಡಬೇಕು. ಈ ವಿಧವಾಗಿ ಆತ್ಮಸಾಕ್ಷಾತ್ಕಾರದ ಮೂಲಕ ಆತ್ಮಸ್ವರೂಪದಲ್ಲಿ ನೆಲೆಸಿ ಕರ್ಮರಹಿತನಾಗಿ ವಿಶ್ರಾಂತಿಯನ್ನು ಹೊಂದಬೇಕು. ॥ ೪೩-೪೪ ॥ ಎಲೈ ಪ್ರಹ್ಲಾದ ! ನನ್ನ ಈ ಆತ್ಮವೃತ್ತಾಂತವು ಅತ್ಯಂತ ಗೋಪ್ಯವೂ, ಲೋಕ ಮತ್ತು ಶಾಸ್ತ್ರಗಳ ಮರ್ಯಾದೆಯನ್ನು ಮೀರಿದ್ದರೂ, ನೀನು ಭಗವತ್ಪರಾಯಣನಾದ ಸಾಧುಶ್ರೇಷ್ಠನಾಗಿರುವುದರಿಂದ ನಿನಗೆ ಇದನ್ನು ವರ್ಣಿಸಿರುವೆನು. ॥ ೪೫ ॥

*ನಾರದ ಉವಾಚ*

**ಧರ್ಮಂ ಪಾರಮಹಂಸ್ಯಂ ವೈ ಮುನೇಃ ಶ್ರುತ್ವಾಸುರೇಶ್ವರಃ ।**
**ಪೂಜಯಿತ್ವಾ ತತಃ ಪ್ರೀತ ಆಮಂತ್ರ್ಯ ಪ್ರಯಯೌ ಗೃಹಮ್ ॥ ೪೬ ॥**

**ನಾರದರು ಹೇಳಿದರು** – ಯುಧಿಷ್ಠಿರನೇ! ಪ್ರಹ್ಲಾದನು ದತ್ತಾತ್ರೇಯಮುನಿಗಳಿಂದ ಪರಮಹಂಸರ ಈ ಧರ್ಮವನ್ನು ಶ್ರವಣಿಸಿ, ಅವರನ್ನು ಪೂಜಿಸಿ, ಅವರಿಂದ ಬೀಳ್ಕೊಂಡು, ಪರಮಸಂತೋಷದಿಂದ ತನ್ನ ರಾಜಧಾನಿಗೆ ಮರಳಿದನು. ॥ ೪೬ ॥

**ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ ಯುಧಿಷ್ಠಿರ-ನಾರದಸಂವಾದೇ ಯತಿಧರ್ಮೇ ತ್ರಯೋದಶೋಽಧ್ಯಾಯಃ ॥ ೧೩ ॥**

# ಹದಿನಾಲ್ಕನೆಯ ಅಧ್ಯಾಯ

## ಗೃಹಸ್ಥಾಶ್ರಮದ ಸದಾಚಾರ

*ಯುಧಿಷ್ಠಿರ ಉವಾಚ*

**ಗೃಹಸ್ಥ ಏತಾಂ ಪದವೀಂ ವಿಧಿನಾ ಯೇನ ಚಾಂಜಸಾ ।**
**ಯಾತಿ ದೇವಋಷೇ ಬ್ರೂಹಿ ಮಾದೃಶೋ ಗೃಹಮೂಢಧೀಃ ॥ ೧ ॥**

*ನಾರದ ಉವಾಚ*

**ಗೃಹೇಷ್ವವಸ್ಥಿತೋ ರಾಜನ್ ಕ್ರಿಯಾಃ ಕುರ್ವನ್ ಗೃಹೋಚಿತಾಃ ।**
**ವಾಸುದೇವಾರ್ಪಣಂ ಸಾಕ್ಷಾದುಪಾಸೀತ ಮಹಾಮುನೀನ್ ॥ ೨ ॥**

**ಶೃಣ್ವನ್ ಭಗವತೋಽಭೀಕ್ಷ್ಣಮವತಾರಕಥಾಮೃತಮ್ ।**
**ಶ್ರದ್ದಧಾನೋ ಯಥಾಕಾಲಮುಪಶಾಂತಜನಾವೃತಃ ॥ ೩ ॥**

**ಸತ್ಸಂಗಾಚ್ಛನಕೈಃ ಸಂಗಮಾತ್ಮಜಾಯಾತ್ಮಜಾದಿಷು ।**
**ವಿಮುಚ್ಯೇನ್ಮುಚ್ಯಮಾನೇಷು ಸ್ವಯಂ ಸ್ವಪ್ನವದುತ್ಥಿತಃ ॥ ೪ ॥**

**ಯಾವದರ್ಥಮುಪಾಸೀನೋ ದೇಹೇ ಗೇಹೇ ಚ ಪಂಡಿತಃ ।**
**ವಿರಕ್ತೋ ರಕ್ತವತ್ತತ್ರ ನೃಲೋಕೇ ನರತಾಂ ನ್ಯಸೇತ್ ॥ ೫ ॥**

**ಜ್ಞಾತಯಃ ಪಿತರೌ ಪುತ್ರಾ ಭ್ರಾತರಃ ಸುಹೃದೋಽಪರೇ ।**
**ಯದ್ವದಂತಿ ಯದಿಚ್ಛಂತಿ ಚಾನುಮೋದೇತ ನಿರ್ಮಮಃ ॥ ೬ ॥**

**ಯುಧಿಷ್ಠಿರರಾಜನು ಕೇಳಿದನು** – ದೇವಋಷಿಗಳಾದ ನಾರದರೇ! ನನ್ನಂತಹ ಗೃಹಾಸಕ್ತ ಗೃಹಸ್ಥನು ವಿಶೇಷ ಪರಿಶ್ರಮವಿಲ್ಲದೆ ಈ ಶ್ರೇಷ್ಠತಮವಾದ ಪದವನ್ನು ಹೇಗೆ ಪಡೆಯಬಲ್ಲನು? ಎಂಬುದನ್ನು ಕೃಪೆಯಿಟ್ಟು ತಿಳಿಸಬೇಕು. ॥ ೧ ॥

**ನಾರದರು ಹೇಳಿದರು** – ಯುಧಿಷ್ಠಿರನೇ! ಮನುಷ್ಯನು ಗೃಹಸ್ಥಾಶ್ರಮದಲ್ಲಿ ಇದ್ದು, ಗೃಹಸ್ಥ ಧರ್ಮಕ್ಕೆ ಅನುಗುಣವಾಗಿ ಎಲ್ಲ ಕೆಲಸವನ್ನು ಮಾಡಲಿ. ಆದರೆ ಆ ಎಲ್ಲ ಕರ್ಮಗಳನ್ನು ಭಗವಂತನಿಗೆ ಸಮರ್ಪಿಸಿ, ದೊಡ್ಡ-ದೊಡ್ಡ ಸಂತ-ಮಹಾತ್ಮರ ಸೇವೆಯನ್ನು ಮಾಡುತ್ತಿರಬೇಕು. ॥ ೨ ॥ ಅವಕಾಶವು ದೊರೆತಾಗ ಪ್ರಶಾಂತಚಿತ್ತರಾದ ಸಾಧು-ಸಜ್ಜನರ ಸಹವಾಸದಲ್ಲಿರುತ್ತಾ ಅವರಿಂದ ಶ್ರೀಭಗವಂತನ ಲೀಲಾ-ಕಥಾಮೃತವನ್ನು ಶ್ರದ್ಧೆಯಿಂದ ಮತ್ತೆ-ಮತ್ತೆ ಕೇಳುತ್ತಾ ಇರಬೇಕು. ॥ ೩ ॥ ಕನಸಿನಿಂದ ಎಚ್ಚರಗೊಂಡ ಮನುಷ್ಯನು ಕನಸಿನ ಸಂಬಂಧಿಗಳೊಂದಿಗೆ ಆಸಕ್ತನಾಗಿರುವುದಿಲ್ಲ. ಹಾಗೆಯೇ ಸತ್ಸಂಗದಿಂದ ಬುದ್ಧಿಯು ಶುದ್ಧವಾಗುತ್ತಾ ಹೋದಂತೆ ಶರೀರ, ಪತ್ನೀ, ಪುತ್ರ, ಧನ ಮುಂತಾದ ಆಸಕ್ತಿಯನ್ನು ಬಿಟ್ಟು ಬಿಡಬೇಕು. ಏಕೆಂದರೆ ಒಂದಲ್ಲ-ಒಂದುದಿನ ಇವುಗಳು ಬಿಟ್ಟು ಹೋಗುವಂತಹವುಗಳೇ ಆಗಿವೆ. ॥ ೪ ॥ ಬುದ್ಧಿವಂತನಾದ ಮನುಷ್ಯನು ಆವಶ್ಯಕತೆ ಇದ್ದಷ್ಟೇ ಮನೆಯ ಮತ್ತು ಶರೀರದ ಸೇವೆಮಾಡಬೇಕು. ಹೆಚ್ಚಾಗಬಾರದು. ಒಳಗಿನಿಂದ ವಿರಕ್ತನಾಗಿದ್ದು ಹೊರಗಿನಿಂದ ಆಸಕ್ತನಾಗಿರುವಂತೆ ಇತರ ಜನರೊಂದಿಗೆ ಸಾಮಾನ್ಯ ಮನುಷ್ಯರಂತೆ ವ್ಯವಹರಿಸುತ್ತಾ ಇರಬೇಕು. ॥ ೫ ॥ ತಂದೆ-ತಾಯಿ, ಅಣ್ಣ-ತಮ್ಮಂದಿರು, ಪುತ್ರ- ಮಿತ್ರರು, ಸ್ವಜನರು ಮತ್ತು ಇತರರು ಏನೇ ಹೇಳಿದರೂ ಅಥವಾ ಬಯಸಿದರೂ ಒಳಗಿನಿಂದ ಮಮತೆಯನ್ನು ಇಟ್ಟುಕೊಳ್ಳದೆ ಅದನ್ನು ಅನುಮೋದಿಸುತ್ತಿರಬೇಕು. ॥ ೬ ॥

ಬುದ್ಧಿವಂತನಾದ ಮನುಷ್ಯನು ದೇವತೆಗಳಿಂದಲೂ, ಭೂಮಿಯಿಂದಲೂ, ಅಂತರಿಕ್ಷದಿಂದಲೂ ತನಗೆ ದೊರಕುವ ಅನ್ನ-ಚಿನ್ನಗಳೇ ಮುಂತಾದ ಎಲ್ಲ ದ್ರವ್ಯಸಂಪತ್ತುಗಳನ್ನು ಶ್ರೀಭಗವಂತನ

ದಿವ್ಯಂ ಭೌಮಂ ಚಾಂತರಿಕ್ಷಂ ವಿತ್ತಮಚ್ಯುತನಿರ್ಮಿತಮ್ ।
ತತ್ಸರ್ವಮುಪಭುಂಜಾನ ಏತತ್ಕುರ್ಯಾತ್ಸ್ವತೋ ಬುಧಃ ॥ ೭ ॥

ಯಾವದ್ಭ್ರಿಯೇತ ಜಠರಂ ತಾವತ್ಸ್ವತ್ವಂ ಹಿ ದೇಹಿನಾಮ್ ।
ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ ॥ ೮ ॥

ಮೃಗೋಷ್ಟ್ರಖರಮರ್ಕಾಖುಸರೀಸೃಪ್ಖಗಮಕ್ಷಿಕಾಃ ।
ಆತ್ಮನಃ ಪುತ್ರವತ್ಪಶ್ಯೇತ್ತ್ಯೇಷಾಮಂತರಂ ಕಿಯತ್ ॥ ೯ ॥

ತ್ರಿವರ್ಗಂ ನಾತಿಕೃಚ್ಛ್ರೇಣ ಭಜೇತ ಗೃಹಮೇಧ್ಯಪಿ ।
ಯಥಾದೇಶಂ ಯಥಾಕಾಲಂ ಯಾವದ್ದೈವೋಪಪಾದಿತಮ್ ॥ ೧೦ ॥

ಆಶ್ವಾಘಾಂತೇಽವಸಾಯಿಭ್ಯಃ ಕಾಮಾನ್ಸಂವಿಭಜೇದ್ಯಥಾ ।
ಅಪ್ಯೇಕಾಮಾತ್ಮನೋ ದಾರಾಂ ನೃಣಾಂ ಸ್ವತ್ವಗ್ರಹೋ ಯತಃ ॥ ೧೧ ॥

ಜಹ್ಯಾದ್ಯದರ್ಥೇ ಸ್ವಪ್ರಾಣಾನ್ಹನ್ಯಾದ್ವಾ ಪಿತರಂ ಗುರುಮ್ ।
ತಸ್ಯಾಂ ಸ್ವತ್ವಂ ಸ್ತ್ರಿಯಾಂ ಜಹ್ಯಾದ್ಯಸ್ತೇನ ಹ್ಯಜಿತೋ ಜಿತಃ ॥ ೧೨ ॥

ಕೃಮಿವಿಡ್ಭಸ್ಮನಿಷ್ಠಾಂತಂ ಕ್ವೇದಂ ತುಚ್ಛಂ ಕಲೇವರಮ್ ।
ಕ್ವ ತದೀಯರತಿರ್ಭಾರ್ಯಾ ಕ್ವಾಯಮಾತ್ಮಾ ನಭಶ್ಛದಿಃ ॥ ೧೩ ॥

ಸಿದ್ಧೈರ್ಯಜ್ಞಾವಶಿಷ್ಟಾರ್ಥೈಃ ಕಲ್ಪಯೇದ್ವೃತ್ತಿಮಾತ್ಮನಃ ।
ಶೇಷೇ ಸ್ವತ್ವಂ ತ್ಯಜನ್ಪ್ರಾಜ್ಞಃ ಪದವೀಂ ಮಹತಾಮಿಯಾತ್ ॥ ೧೪ ॥

ದೇವಾನೃಷೀನ್ನೃಭೂತಾನಿ ಪಿತೄನಾತ್ಮಾನಮನ್ವಹಮ್ ।
ಸ್ವವೃತ್ತ್ಯಾಗತವಿತ್ತೇನ ಯಜೇತ ಪುರುಷಂ ಪೃಥಕ್ ॥ ೧೫ ॥

ಯರ್ಹ್ಯಾತ್ಮನೋಽಧಿಕಾರಾದ್ಯಾಃ ಸರ್ವಾಃ ಸ್ಯುರ್ಯಜ್ಞಸಂಪದಃ ।
ವೈತಾನಿಕೇನ ವಿಧಿನಾ ಅಗ್ನಿಹೋತ್ರಾದಿನಾ ಯಜೇತ್ ॥ ೧೬ ॥

ನ ಹ್ಯಗ್ನಿಮುಖತೋಽಯಂ ವೈ ಭಗವಾನ್ಸರ್ವಯಜ್ಞಭುಕ್ ।
ಇಜ್ಯೇತ ಹವಿಷಾ ರಾಜನ್ಯಥಾ ವಿಪ್ರಮುಖೇ ಹುತೈಃ ॥ ೧೭ ॥

ವರಪ್ರದಾನವೆಂದು ಸ್ವೀಕರಿಸಿ ಪ್ರಾರಬ್ಧಕ್ಕನುಸಾರವಾಗಿ ಅವನ್ನು ಉಪಭೋಗಿಸುತ್ತಾ, ಸಂಗ್ರಹಿಸದೆ, ಹಿಂದೆ ಹೇಳಿದ ಸಾಧುಸೇವೆ ಮುಂತಾದ ಕಾರ್ಯಗಳಲ್ಲಿ ತೊಡಗಿಸಬೇಕು. ॥ ೭ ॥ ಮನುಷ್ಯರಿಗೆ ಎಷ್ಟರಿಂದ ಅವರ ಹಸಿವು ಇಂಗಬಹುದೋ ಅಷ್ಟೇ ಧನದ ಮೇಲೆ ಅವನಿಗೆ ಅಧಿಕಾರವಿರುವುದು. ಇದಕ್ಕಿಂತ ಹೆಚ್ಚಿನ ಸಂಪತ್ತನ್ನು ತನ್ನದೆಂದು ತಿಳಿಯುವವನು ಕಳ್ಳನೇ ಸರಿ. ಅವನು ದಂಡಾರ್ಹನು. ॥ ೮ ॥ ಜಿಂಕೆ, ಒಂಟೇ, ಕತ್ತೆ, ಕಪಿ, ಇಲಿ, ಸರ್ಪವೇ ಮುಂತಾದ ಹರಿದಾಡುವ ಪ್ರಾಣಿ, ಪಕ್ಷಿ ಮತ್ತು ಸೊಳ್ಳೆ ಮುಂತಾದವುಗಳನ್ನು ತನ್ನ ಪುತ್ರರಂತೇ ಭಾವಿಸಬೇಕು. ಅವುಗಳಿಗೂ ಮತ್ತು ತನ್ನ ಪುತ್ರರಿಗೂ ಏನು ಮಹಾ ವ್ಯತ್ಯಾಸ? ॥ ೯ ॥ ಗೃಹಸ್ಥನಾದ ಮನುಷ್ಯನೂ ಕೂಡ ಧರ್ಮ, ಅರ್ಥ ಮತ್ತು ಕಾಮ ಇವುಗಳಿಗಾಗಿ ಮಿತಿಮೀರಿ ಕಷ್ಟಪಡಬಾರದು. ದೇಶ, ಕಾಲ, ಅದೃಷ್ಟಗಳಿಗೆ ತಕ್ಕಂತೆ ದೊರೆತುದರಲ್ಲೇ ಸಂತೋಷಪಟ್ಟುಕೊಳ್ಳಬೇಕು. ॥ ೧೦ ॥ ತನ್ನ ಸಮಸ್ತ ಭೋಗ-ಸಾಮಗ್ರಿಗಳನ್ನು ನಾಯಿ, ಪತಿತ ಮತ್ತು ಚಾಂಡಾಲರವರೆಗೆ ಎಲ್ಲ ಪ್ರಾಣಿಗಳಿಗೆ ಯಥಾಯೋಗ್ಯವಾಗಿ ಹಂಚಿಯೇ ತಾನು ಉಪಯೋಗಿಸಬೇಕು. ಹೆಚ್ಚೇನು ತನ್ನವಳೇ ಎಂದು ತಿಳಿದುಕೊಂಡಿರುವ ಪತ್ನಿಯನ್ನೂ ಕೂಡ ದೋಷವಿಲ್ಲದೇ ಇರುವ ರೀತಿಯಲ್ಲಿ ಅತಿಥಿಗಳ ಸೇವೆಯಲ್ಲಿ ನಿಯೋಜಿಸಬೇಕು. ॥ ೧೧ ॥ ಜನರು ಹೆಂಡತಿಗಾಗಿ ತನ್ನ ಪ್ರಾಣಗಳನ್ನಾದರೂ ಕೊಟ್ಟಾರು. ಅವಳಿಗಾಗಿ ತಂದೆ-ತಾಯಿಗಳನ್ನು ಮತ್ತು ಗುರುಗಳನ್ನು ಕೊಂದು ಹಾಕುವರು. ಅಂತಹ ಪತ್ನಿಯಲ್ಲಿರುವ ಮಮತೆಯನ್ನು ಗೆದ್ದವನು ಸರ್ವವಿಜಯಿಯಾದ ಭಗವಂತನನ್ನೂ ಕೂಡ ಗೆದ್ದು ಕೊಂಡಂತೆ. ॥ ೧೨ ॥ ಈ ಶರೀರವು ಕೊನೆಗೆ ಕ್ರಿಮಿ, ಕೀಟ, ಮಲ ಅಥವಾ ಬೂದಿಯ ರಾಶಿಯಾಗಿಬಿಡುವುದು. ಇಂತಹ ತುಚ್ಛವಾದ ಶರೀರ ಮತ್ತು ಅದರ ರತಿಗೆ ಕಾರಣಳಾದ ಆ ಸ್ತ್ರೀಯೆಲ್ಲಿ? ಮತ್ತು ತನ್ನ ಮಹಿಮೆಯಿಂದ ಆಕಾಶವನ್ನೂ ಆವರಿಸಿಕೊಂಡಿರುವ ಅನಂತನಾದ ಆತ್ಮನೆಲ್ಲಿ? ॥ ೧೩ ॥

ಗೃಹಸ್ಥನು ಪ್ರಾರಬ್ಧದಿಂದ ದೊರೆತ ಮತ್ತು ಪಂಚ ಮಹಾಯಜ್ಞಗಳಿಂದ ಮಿಗಿದ ಅನ್ನದಿಂದಲೇ ತನ್ನ ಜೀವನ ನಿರ್ವಹಿಸಬೇಕು. ಇದಲ್ಲದೆ ಬೇರೆ ಯಾವುದೇ ವಸ್ತುವನ್ನು ತನ್ನ ಸ್ವತ್ತನ್ನಾಗಿ ಭಾವಿಸದಿರುವ ಬುದ್ಧಿವಂತರಾದ ಮನುಷ್ಯರು ಸಂತರಿಗೆ ದೊರೆಯುವ ಉತ್ತಮಗತಿಯನ್ನು ಪಡೆಯುವರು. ॥ ೧೪ ॥ ತನ್ನ ವರ್ಣಾಶ್ರಮವಿಹಿತ ವೃತ್ತಿಯಿಂದ ದೊರೆತ ಸಾಮಗ್ರಿಗಳಿಂದ ಪ್ರತಿದಿನವೂ ದೇವತೆಗಳಿಗೂ, ಋಷಿಗಳಿಗೂ, ಮನುಷ್ಯರಿಗೂ, ಭೂತಗಣಗಳಿಗೂ, ಪಿತೃಗಳಿಗೂ ಮತ್ತು ತನ್ನ ಆತ್ಮಕ್ಕೂ ಪೂಜೆಯನ್ನು ಸಲ್ಲಿಸಬೇಕು. ಇದು ಪರಮೇಶ್ವರನೊಬ್ಬನದೇ ಬೇರೆ-ಬೇರೆ ರೂಪಗಳಲ್ಲಿ ಮಾಡುವ ಆರಾಧನೆಯಾಗಿದೆ. ॥ ೧೫ ॥ ತನಗೆ ಅಧಿಕಾರವಿದ್ದರೆ ಯಜ್ಞಕ್ಕಾಗಿ ಆವಶ್ಯಕವಾದ ಎಲ್ಲ ವಸ್ತುಗಳು ದೊರಕಿದ್ದರೆ ದೊಡ್ಡ-ದೊಡ್ಡ ಯಜ್ಞಗಳು ಅಥವಾ ಅಗ್ನಿಹೋತ್ರ ಮುಂತಾದವುಗಳ ಮೂಲಕ ಭಗವಂತನನ್ನು ಆರಾಧಿಸಬೇಕು. ॥ ೧೬ ॥

ಯುಧಿಷ್ಠಿರನೇ! ಸಮಸ್ತ ಯಜ್ಞಗಳ ಭೋಕ್ತಾ ಭಗವಂತನೇ ಆಗಿದ್ದಾನೆ. ಆದರೂ ಬ್ರಾಹ್ಮಣನ ಮುಖದಲ್ಲಿ ಅರ್ಪಿಸಲ್ಪಟ್ಟ ಹವಿಷ್ಯಾನ್ನದಿಂದ ಅವನಿಗೆ ತೃಪ್ತಿಯುಂಟಾಗುವಂತೆ ಅಗ್ನಿಮುಖದಲ್ಲಿ ಹವನ ಮಾಡುವುದರಿಂದ ಉಂಟಾಗುವುದಿಲ್ಲ. ॥ ೧೭ ॥

ತಸ್ಮಾದ್ಬ್ರಾಹ್ಮಣದೇವೇಷು ಮರ್ತ್ಯಾದಿಷು ಯಥಾರ್ಹತಃ ।
ತೈಸ್ತೈಃ ಕಾಮೈರ್ಯಜಸ್ವೈನಂ ಕ್ಷೇತ್ರಜ್ಞಂ ಬ್ರಾಹ್ಮಣಾನನು ॥ ೧೮ ॥

ಅದಕ್ಕಾಗಿ ಬ್ರಾಹ್ಮಣ, ದೇವತೆ, ಮನುಷ್ಯ ಮುಂತಾದ ಎಲ್ಲ ಪ್ರಾಣಿಗಳಿಗೆ ಯಥಾಯೋಗ್ಯ ಅವರಿಗೆ ಉಪಯುಕ್ತ ಸಾಮಗ್ರಿಗಳಿಂದ ಅವರೆಲ್ಲರ ಹೃದಯದಲ್ಲಿ ಅಂತರ್ಯಾಮಿರೂಪದಿಂದ ವಿರಾಜಮಾನನಾದ ಭಗವಂತನನ್ನು ಪೂಜಿಸಬೇಕು. ಇವುಗಳಲ್ಲಿ ಪ್ರಧಾನತೆ ಬ್ರಾಹ್ಮಣನದೇ ಆಗಿರಬೇಕು. ॥ ೧೮ ॥

ಕುರ್ಯಾದಾಪರಪಕ್ಷೀಯಂ ಮಾಸಿ ಪ್ರೌಷ್ಠಪದೇ ದ್ವಿಜಃ ।
ಶ್ರಾದ್ಧಂ ಪಿತ್ರೋರ್ಯಥಾವಿತ್ತಂ ತದ್ಬಂಧೂನಾಂ ಚ ವಿತ್ತವಾನ್ ॥ ೧೯ ॥

ಶ್ರೀಮಂತನಾದ ದ್ವಿಜನು ತನ್ನ ಧನಕ್ಕೆ ಅನುಸಾರವಾಗಿ ಭಾದ್ರಪದಮಾಸದ ಕೃಷ್ಣಪಕ್ಷದಲ್ಲಿ ತನ್ನ ಮಾತಾ-ಪಿತಾ ಹಾಗೂ ಅವರ ಬಂಧುಗಳನ್ನು ಉದ್ದೇಶಿಸಿ ಮಹಾಲಯ ಶ್ರಾದ್ಧವನ್ನು ಮಾಡಬೇಕು. ॥ ೧೯ ॥

ಅಯನೇ ವಿಷುವೇ ಕುರ್ಯಾದ್ವ್ಯತೀಪಾತೇ ದಿನಕ್ಷಯೇ ।
ಚಂದ್ರಾದಿತ್ಯೋಪರಾಗೇ ಚ ದ್ವಾದಶೀಶ್ರವಣೇಷು ಚ ॥ ೨೦ ॥

ತೃತೀಯಾಯಾಂ ಶುಕ್ಲಪಕ್ಷೇ ನವಮ್ಯಾಮಥ ಕಾರ್ತಿಕೇ ।
ಚತಸೃಷ್ವಪ್ಯಷ್ಟಕಾಸು ಹೇಮಂತೇ ಶಿಶಿರೇ ತಥಾ ॥ ೨೧ ॥

ಮಾಘೇ ಚ ಸಿತಸಪ್ತಮ್ಯಾಂ ಮಘಾರಾಕಾಸಮಾಗಮೇ ।
ರಾಕಯಾ ಚಾನುಮತ್ಯಾ ವಾ ಮಾಸರ್ಕ್ಷಾಣಿ ಯುತಾನ್ಯಪಿ ॥ ೨೨ ॥

ದ್ವಾದಶ್ಯಾಮನುರಾಧಾ ಸ್ಯಾಚ್ಛ್ರವಣಸ್ತಿಸ್ರ ಉತ್ತರಾಃ ।
ತಿಸೃಷ್ವೇಕಾದಶೀ ವಾಽಽಸು ಜನ್ಮರ್ಕ್ಷಶ್ರೋಣಯೋಗಯುಕ್ ॥ ೨೩ ॥

ತ ಏತೇ ಶ್ರೇಯಸಃ ಕಾಲಾ ನೃಣಾಂ ಶ್ರೇಯೋವಿವರ್ಧನಾಃ ।
ಕುರ್ಯಾತ್ಸರ್ವಾತ್ಮನೈತೇಷು ಶ್ರೇಯೋಽಮೋಘಂ ತದಾಯುಷಃ ॥ ೨೪ ॥

ಇದಲ್ಲದೆ ಅಯನ (ಮಕರಸಂಕ್ರಾಂತಿ ಮತ್ತು ಕರ್ಕಾಟಕ ಸಂಕ್ರಾಂತಿ)ಗಳಲ್ಲಿ, ವಿಷುವ (ತುಲಾ ಮತ್ತು ಮೇಷ ಸಂಕ್ರಾಂತಿ) ಗಳಲ್ಲಿ, ವ್ಯತೀಪಾತ, ದಿನಕ್ಷಯ, ಚಂದ್ರಗ್ರಹಣ, ಸೂರ್ಯಗ್ರಹಣಗಳ ಸಮಯದಲ್ಲಿ, ದ್ವಾದಶಿ, ಶ್ರವಣ, ಧನಿಷ್ಠಾ, ಅನುರಾಧಾ ನಕ್ಷತ್ರಗಳಲ್ಲಿ ವೈಶಾಖ ಶುಕ್ಲ ತೃತೀಯೆ (ಅಕ್ಷಯತದಿಗೆ)ಯಲ್ಲಿ, ಕಾರ್ತಿಕ ಶುಕ್ಲ ನವಮೀ (ಅಕ್ಷಯನವಮಿ)ಯಲ್ಲಿ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ ಈ ನಾಲ್ಕು ಮಾಸಗಳ ಕೃಷ್ಣ ಅಷ್ಟಮಿಗಳಲ್ಲಿ, ಮಾಘ ಶುಕ್ಲ ಸಪ್ತಮಿ, ಮಾಘಮಾಸದ ಮಘಾನಕ್ಷತ್ರ ಯುಕ್ತ ಪೌರ್ಣಮೆಯಲ್ಲಿ ಮತ್ತು ಮಾಸ ನಕ್ಷತ್ರ ಚಿತ್ರಾ, ವಿಶಾಖಾ, ಜ್ಯೇಷ್ಠ ಮುಂತಾದ ನಕ್ಷತ್ರಗಳಿಂದ ಕೂಡಿದ ಪೌರ್ಣಮೆಗಳಲ್ಲಿ ದ್ವಾದಶೀ ತಿಥಿಗೆ ಅನುರಾಧಾ, ಶ್ರವಣ, ಉತ್ತರಾಫಲ್ಗುನೀ, ಉತ್ತರಾಷಾಢಾ, ಉತ್ತರಾಭಾದ್ರಪದಾ ನಕ್ಷತ್ರಗಳ ಯೋಗವು ಇರುವ ಸಮಯದಲ್ಲಿ, ಏಕಾದಶೀ ತಿಥಿಗೆ ಮೂರು ಉತ್ತರಾ ನಕ್ಷತ್ರಗಳೊಡನೆಯೂ ಅಥವಾ ಜನ್ಮನಕ್ಷತ್ರ, ಇಲ್ಲದೇ ಶ್ರವಣಾನಕ್ಷತ್ರದೊಡನೆ ಯೋಗವಿರುವ ಸಮಯದಲ್ಲಿ, ಪಿತೃಗಣಗಳನ್ನು ಉದ್ದೇಶಿಸಿ ಶ್ರಾದ್ಧಮಾಡುವುದು ಯೋಗ್ಯವೂ ಶ್ರೇಷ್ಠವೂ ಆಗಿದೆ. ಈ ಯೋಗಗಳು ಕೇವಲ ಶ್ರಾದ್ಧಕ್ಕೆ ಮಾತ್ರ ಯೋಗ್ಯವಲ್ಲದೆ ಎಲ್ಲ ಪುಣ್ಯಕರ್ಮಗಳ ಆಚರಣೆಗೂ ಉಪಯೋಗಿಯಾಗಿವೆ. ಇವು ಶ್ರೇಯಸ್ಸಿನ ಸಾಧನೆಗೆ ಉಪಯುಕ್ತವು ಮತ್ತು ಶುಭವನ್ನು ವೃದ್ಧಿಪಡಿಸುವುವು. ಈ ಸಮಯಗಳಲ್ಲಿ ತನ್ನ ಸಂಪೂರ್ಣಶಕ್ತಿಯನ್ನು ತೊಡಗಿಸಿ ಶುಭಕರ್ಮಗಳನ್ನು ಮಾಡಬೇಕು. ಇದರಲ್ಲೇ ಜೀವನದ ಸಫಲತೆ ಇದೆ. ॥ ೨೦-೨೪ ॥

ಏಷು ಸ್ನಾನಂ ಜಪೋ ಹೋಮೋ ವ್ರತಂ ದೇವದ್ವಿಜಾರ್ಚನಮ್ ।
ಪಿತೃದೇವನೃಭೂತೇಭ್ಯೋ ಯದ್ದತ್ತಂ ತದ್ಧ್ಯನಶ್ವರಮ್ ॥ ೨೫ ॥

ಈ ಪರ್ವಕಾಲಗಳಲ್ಲಿ ಮಾಡಲಾಗುವ ಸ್ನಾನ, ಜಪ, ಹೋಮ, ವ್ರತ ಹಾಗೂ ದೇವ-ಬ್ರಾಹ್ಮಣರ ಪೂಜೆ ಇವುಗಳಿಂದ ಮತ್ತು ದೇವತೆಗಳಿಗೆ, ಪಿತೃಗಳಿಗೆ, ಮನುಷ್ಯರಿಗೆ ಮತ್ತು ಪ್ರಾಣಿಗಳಿಗೆ ಅರ್ಪಿಸಲ್ಪಡುವ ಪದಾರ್ಥಗಳಿಂದ ಅಕ್ಷಯವಾದ ಫಲವು ದೊರೆಯುತ್ತದೆ. ॥ ೨೫ ॥

ಸಂಸ್ಕಾರಕಾಲೋ ಜಾಯಾಯಾ ಅಪತ್ಯಸ್ಯಾತ್ಮನಸ್ತಥಾ ।
ಪ್ರೇತಸಂಸ್ಥಾ ಮೃತಾಹಶ್ಚ ಕರ್ಮಣ್ಯಭ್ಯುದಯೇ ನೃಪ ॥ ೨೬ ॥

ಯುಧಿಷ್ಠಿರನೇ! ಇದೇ ಪ್ರಕಾರ ಪತ್ನಿಯ ಪುಂಸವನ ಮುಂತಾದ, ಸಂತಾನದ ಜಾತಕರ್ಮ ಮುಂತಾದ, ತನ್ನ ಯಜ್ಞದೀಕ್ಷೆ ಮುಂತಾದ ಸಂಸ್ಕಾರಗಳ ಸಮಯದಲ್ಲಿ, ಪ್ರೇತಕರ್ಮಗಳಲ್ಲಿ, ವಾರ್ಷಿಕ ಪಿತೃಶ್ರಾದ್ಧದ ದಿನ, ಅಥವಾ ಇತರ ಮಾಂಗಲಿಕ ಕರ್ಮಗಳಲ್ಲಿ ದಾನ-ಧರ್ಮಗಳನ್ನು ವಿಶೇಷವಾಗಿ ಮಾಡಬೇಕು. ॥ ೨೬ ॥

ಅಥ ದೇಶಾನ್ಪ್ರವಕ್ಷ್ಯಾಮಿ ಧರ್ಮಾದಿಶ್ರೇಯಆವಹಾನ್ ।
ಸ ವೈ ಪುಣ್ಯತಮೋ ದೇಶಃ ಸತ್ಪಾತ್ರಂ ಯತ್ರ ಲಭ್ಯತೇ ॥ ೨೭ ॥

ಧರ್ಮರಾಯಾ! ಈಗ ನಾನು ಧರ್ಮವೇ ಮುಂತಾದ ಶ್ರೇಯಸ್ಸನ್ನುಂಟುಮಾಡುವಂತಹ ಸ್ಥಾನಗಳನ್ನು ವರ್ಣಿಸುತ್ತೇನೆ. ಸತ್ಪಾತ್ರರು ಎಲ್ಲಿ ಸಿಗುತ್ತಾರೋ ಅದು ಎಲ್ಲಕ್ಕಿಂತ ಪವಿತ್ರವಾದ ದೇಶವು. ॥ ೨೭ ॥

ಬಿಂಬಂ ಭಗವತೋ ಯತ್ರ ಸರ್ವಮೇತಚ್ಚರಾಚರಮ್ ।
ಯತ್ರ ಹ ಬ್ರಾಹ್ಮಣಕುಲಂ ತಪೋವಿದ್ಯಾದಯಾನ್ವಿತಮ್ ॥ ೨೮ ॥

ಯತ್ರ ಯತ್ರ ಹರೇರರ್ಚಾ ಸ ದೇಶಃ ಶ್ರೇಯಸಾಂ ಪದಮ್ ।
ಯತ್ರ ಗಂಗಾದಯೋ ನದ್ಯಃ ಪುರಾಣೇಷು ಚ ವಿಶ್ರುತಾಃ ॥ ೨೯ ॥

ಸರಾಂಸಿ ಪುಷ್ಕರಾದೀನಿ ಕ್ಷೇತ್ರಾಣ್ಯರ್ಹಾಶ್ರಿತಾನ್ಯುತ ।
ಕುರುಕ್ಷೇತ್ರಂ ಗಯಶಿರಃ ಪ್ರಯಾಗಃ ಪುಲಹಾಶ್ರಮಃ ॥ ೩೦ ॥

ನೈಮಿಷಂ ಫಾಲ್ಗುನಂ ಸೇತುಃ ಪ್ರಭಾಸೋऽಥ ಕುಶಸ್ಥಲೀ ।
ವಾರಾಣಸೀ ಮಧುಪುರೀ ಪಂಪಾ ಬಿಂದುಸರಸ್ತಥಾ ॥ ೩೧ ॥

ನಾರಾಯಣಾಶ್ರಮೋ ನಂದಾ ಸೀತಾರಾಮಾಶ್ರಮಾದಯಃ ।
ಸರ್ವೇ ಕುಲಾಚಲಾ ರಾಜನ್ಮಹೇಂದ್ರಮಲಯಾದಯಃ ॥ ೩೨ ॥

ಏತೇ ಪುಣ್ಯತಮಾ ದೇಶಾ ಹರೇರರ್ಚಾಶ್ರಿತಾಶ್ಚ ಯೇ ।
ಏತಾನ್‌ದೇಶಾನ್ನಿಷೇವೇತ ಶ್ರೇಯಸ್ಕಾಮೋ ಹ್ಯಭೀಕ್ಷ್ಣಶಃ ।
ಧರ್ಮೋ ಹ್ಯತ್ರೇಹಿತಃ ಪುಂಸಾಂ ಸಹಸ್ರಾಧಿಫಲೋದಯಃ ॥ ೩೩ ॥

ಪಾತ್ರಂ ತ್ವತ್ರ ನಿರುಕ್ತಂ ವೈ ಕವಿಭಿಃ ಪಾತ್ರವಿತ್ತಮೈಃ ।
ಹರಿರೇವೈಕ ಉರ್ವೀಶ ಯನ್ಮಯಂ ವೈ ಚರಾಚರಮ್ ॥ ೩೪ ॥

ದೇವರ್ಷ್ಯರ್ಹತ್ಸು ವೈ ಸತ್ಸು ತತ್ರ ಬ್ರಹ್ಮಾತ್ಮಜಾದಿಷು ।
ರಾಜನ್ಯದಗ್ರಪೂಜಾಯಾಂ ಮತಃ ಪಾತ್ರತಯಾಚ್ಯುತಃ ॥ ೩೫ ॥

ಜೀವರಾಶಿಭಿರಾಕೀರ್ಣ ಅಂಡಕೋಶಾಂಘ್ರಿಪೋ ಮಹಾನ್ ।
ತನ್ಮೂಲತ್ವಾದಚ್ಯುತೇಜ್ಯಾ ಸರ್ವಜೀವಾತ್ಮತರ್ಪಣಮ್ ॥ ೩೬ ॥

ಪುರಾಣ್ಯನೇನ ಸೃಷ್ಟಾನಿ ನೃತಿರ್ಯಗೃಷಿದೇವತಾಃ ।
ಶೇತೇ ಜೀವೇನ ರೂಪೇಣ ಪುರೇಷು ಪುರುಷೋ ಹ್ಯಸೌ ॥ ೩೭ ॥

ತೇಷ್ವೇಷು ಭಗವಾನ್ರಾಜನ್ ತಾರತಮ್ಯೇನ ವರ್ತತೇ ।
ತಸ್ಮಾತ್ಪಾತ್ರಂ ಹಿ ಪುರುಷೋ ಯಾವಾನಾತ್ಮಾ ಯಥೇಯತೇ ॥ ೩೮ ॥

ದೃಷ್ಟ್ವಾ ತೇಷಾಂ ಮಿಥೋ ನೃಣಾಮವಜ್ಞಾನಾತ್ಮತಾಂ ನೃಪ ।
ತ್ರೇತಾದಿಷು ಹರೇರರ್ಚಾ ಕ್ರಿಯಾಯೈ ಕವಿಭಿಃ ಕೃತಾ ॥ ೩೯ ॥

ಈ ಚರಾಚರ ಜಗತ್ತಿಗೆ ಆಶ್ರಯನಾಗಿರುವ ಭಗವಂತನ ಅರ್ಚಾಮೂರ್ತಿ ಇರುವ ದೇಶವು, ತಪಸ್ಸು, ವಿದ್ಯೆ, ದಯೆ ಮುಂತಾದ ಗುಣಗಳಿಂದ ಕೂಡಿದ ಬ್ರಾಹ್ಮಣರ ಪರಿವಾರಗಳು ನೆಲೆಸಿರುವ ಸ್ಥಳಗಳು, ಪುರಾಣಗಳಲ್ಲಿ ಪ್ರಸಿದ್ಧವಾದ ಗಂಗಾದಿ ನದಿಗಳಿರುವ ಜಾಗಗಳು – ಇವೆಲ್ಲವುಗಳೂ ಪರಮ ಶ್ರೇಯಸ್ಕರ ವಾದುವುಗಳು. ॥ ೨೮–೨೯ ॥ ಪುಷ್ಕರವೇ ಮುಂತಾದ ಸರೋವರ ಗಳು, ಸಿದ್ಧಪುರುಷರಿಂದ ಸೇವಿತವಾದ ಕ್ಷೇತ್ರಗಳು, ಕುರುಕ್ಷೇತ್ರ, ಗಯಾ, ಪ್ರಯಾಗ, ಪುಲಹಾಶ್ರಮ (ಸಾಲಿಗ್ರಾಮ ಕ್ಷೇತ್ರ), ನೈಮಿ ಷಾರಣ್ಯ, ಫಾಲ್ಗುಣಕ್ಷೇತ್ರ, ಸೇತುಬಂಧ ರಾಮೇಶ್ವರ, ಪ್ರಭಾಸ, ದ್ವಾರಕೆ, ಕಾಶೀ, ಮಥುರೆ, ಪಂಪಾಸರೋವರ, ಬಿಂದುಸರೋ ವರ, ಬದರಿಕಾಶ್ರಮ, ಅಲಕನಂದಾ – ಇವೇ ಪುಣ್ಯಕ್ಷೇತ್ರಗಳು ; ಅಯೋಧ್ಯೆ, ಚಿತ್ರಕೂಟ, ಮುಂತಾದ ಸೀತಾರಾಮಾಶ್ರಮ ಕ್ಷೇತ್ರ ಗಳು, ಮಹೇಂದ್ರ, ಮಲಯವೇ ಮುಂತಾದ ಸಮಸ್ತ ಕುಲ ಪರ್ವತಗಳು, ಭಗವಂತನ ಅರ್ಚಾವತಾರಗಳಿರುವ ಜಾಗಗಳು – ಇವೆಲ್ಲವುಗಳೂ ಅತ್ಯಂತ ಪವಿತ್ರವಾದ ದೇಶಗಳು. ॥ ೩೦–೩೩ ॥

ಯುಧಿಷ್ಠಿರನೇ ! ಸತ್ಪಾತ್ರರು ಯಾರು ? ಎಂದು ನಿರ್ಣಯಿ ಸುವ ಸಂದರ್ಭದಲ್ಲಿ ಶ್ರೇಷ್ಠರಾದ ತಜ್ಞರು 'ಶ್ರೀಹರಿಯೊಬ್ಬನೇ ಸತ್ಪಾತ್ರನು' ಎಂದು ಸಾರುತ್ತಾರೆ. ಈ ಚರಾಚರ ಜಗತ್ತೆಲ್ಲವೂ ಆ ಹರಿಮಯವೇ ಆಗಿದೆ. ॥ ೩೪ ॥ ಈಗ ನಿನ್ನ ಯಜ್ಞದ ವಿಷಯ ವನ್ನೇ ನೋಡು. ಆ ಯಜ್ಞದಲ್ಲಿ ದೇವತೆಗಳು, ಋಷಿಗಳು, ಸಿದ್ಧರು, ಸನಕಾದಿಗಳು ಉಪಸ್ಥಿತರಾಗಿದ್ದರೂ ಅಗ್ರಪೂಜೆಗಾಗಿ ಭಗ ವಾನ್ ಶ್ರೀಕೃಷ್ಣನನ್ನೇ ಸತ್ಪಾತ್ರನೆಂದು ತಿಳಿಯಲಾಯಿತು. ॥ ೩೫ ॥ ಅಸಂಖ್ಯ ಜೀವಿಗಳಿಂದ ತುಂಬಿರುವ ಈ ಬ್ರಹ್ಮಾಂಡವೆಂಬ ಮಹಾವೃಕ್ಷಕ್ಕೆ ಭಗವಾನ್ ಶ್ರೀಕೃಷ್ಣನೊಬ್ಬನೇ ಮೂಲ (ಬೇರು) ವಾಗಿದ್ದಾನೆ. ಅದರಿಂದ ಅವನ ಪೂಜೆಯಿಂದ ಸಮಸ್ತ ಜೀವಿಗಳ ಆತ್ಮನು ತೃಪ್ತನಾಗುತ್ತಾನೆ. ॥ ೩೬ ॥ ಈತನೇ ಮನುಷ್ಯ, ಪಶು–ಪಕ್ಷಿ, ಋಷಿ, ದೇವತೆಗಳು ಮುಂತಾದವುಗಳ ಶರೀರವೆಂಬ ಪುರಗಳನ್ನು ರಚಿಸಿ, ಅವನೇ ಈ ಪುರಗಳಲ್ಲಿ ಜೀವರೂಪದಿಂದ ಶಯನ ಮಾಡಿರುವನು. ಅದರಿಂದಲೇ ಅವನಿಗೆ 'ಪುರುಷ' ಎಂಬ ಒಂದು ಹೆಸರೂ ಇದೆ. ॥ ೩೭ ॥ ಯುಧಿಷ್ಠಿರನೇ ! ಭಗವಂತನು ಏಕರಸ ನಾಗಿದ್ದರೂ ಈ ಮನುಷ್ಯಾದಿ ಶರೀರಗಳಲ್ಲಿ ಅವುಗಳ ಭಿನ್ನತೆ ಯಿಂದಾಗಿ ತಾರತಮ್ಯದಿಂದ ಕೂಡಿರುವವನಂತೆ ಕಾಣುತ್ತಾನೆ. ಅದಕ್ಕಾಗಿ ಪಶು–ಪಕ್ಷಿ ಮುಂತಾದ ಶರೀರಗಳಿಗಿಂತ ಮನುಷ್ಯನೇ ಶ್ರೇಷ್ಠ ಪಾತ್ರನಾಗಿದ್ದಾನೆ. ಮನುಷ್ಯರಲ್ಲಿಯೂ ಯಾರಲ್ಲಿ ಭಗ ವಂತನ ಅಂಶವು ತಪಸ್ಸು–ಯೋಗಾದಿ ಎಷ್ಟು ಹೆಚ್ಚು ಕಂಡು ಬರುತ್ತದೋ ಅವನು ಅಷ್ಟೇ ಶ್ರೇಷ್ಠನಾಗಿದ್ದಾನೆ. ॥ ೩೮ ॥

ಧರ್ಮರಾಯಾ ! ತ್ರೇತಾಯುಗವೇ ಮುಂತಾದ ಯುಗ ಗಳಲ್ಲಿ ಮನುಷ್ಯರು ಪರಸ್ಪರ ಒಬ್ಬರನ್ನೊಬ್ಬರು ಅಪಮಾನ ಮಾಡು ವುದನ್ನು ನೋಡಿ ವಿದ್ವಾಂಸರು ಆ ಜನರಿಗೆ ಉಪಾಸನೆಯ ಸಿದ್ಧಿಗಾಗಿ ಭಗವಂತನ ಪ್ರತಿಮೆಗಳನ್ನು ಪ್ರತಿಷ್ಠಾಪಿಸಿದರು. ॥ ೩೯ ॥

ತತೋಽರ್ಚಾಯಾಂ ಹರಿಂ ಕೇಚಿತ್ಸಂಶ್ರದ್ಧಾಯ ಸಪರ್ಯಯಾ ।
ಉಪಾಸತ ಉಪಾಸ್ತಾಪಿ ನಾರ್ಥದಾ ಪುರುಷದ್ವಿಷಾಮ್ ॥ ೪೦ ॥

ಅಂದಿನಿಂದ ಎಷ್ಟೋ ಜನರು ಅತ್ಯಂತ ಶ್ರದ್ಧೆ ಮತ್ತು ಸಾಮಗ್ರಿಗಳಿಂದ ಪ್ರತಿಮೆಯಲ್ಲೇ ಭಗವಂತನನ್ನು ಪೂಜಿಸುತ್ತಾರೆ. ಆದರೆ ಮನುಷ್ಯರೊಂದಿಗೆ ದ್ವೇಷಮಾಡುವವನಿಗೆ ಪ್ರತಿಮೆಯ ಉಪಾಸನೆ ಮಾಡಿದರೂ ಸಿದ್ಧಿ ಸಿಗಲಾರದು. ॥ ೪೦ ॥

ಪುರುಷೇಷ್ವಪಿ ರಾಜೇಂದ್ರ ಸುಪಾತ್ರಂ ಬ್ರಾಹ್ಮಣಂ ವಿದುಃ ।
ತಪಸಾ ವಿದ್ಯಯಾ ತುಷ್ಟ್ಯಾ ಧತ್ತೇ ವೇದಂ ಹರೇಸ್ತನುಮ್ ॥ ೪೧ ॥

ಯುಧಿಷ್ಠಿರನೇ! ಮನುಷ್ಯರಲ್ಲಿಯೂ ಬ್ರಾಹ್ಮಣನೇ ವಿಶೇಷ ಸತ್ಪಾತ್ರನೆಂದು ತಿಳಿಯಲಾಗಿದೆ. ಏಕೆಂದರೆ, ಅವನು ತನ್ನ ತಪಸ್ಸು ವಿದ್ಯೆ, ಸಂತೋಷವೇ ಮುಂತಾದ ಗುಣಗಳಿಂದ ಭಗವಂತನ ವೇದ ರೂಪೀ ಶರೀರವನ್ನು ಧರಿಸಿರುತ್ತಾನೆ. ॥ ೪೧ ॥ ಮಹಾರಾಜ! ನಮ್ಮ-ನಿಮ್ಮ ಮಾತಿರಲಿ, ಈ ಸರ್ವಾತ್ಮನಾದ ಭಗವಾನ್ ಶ್ರೀಕೃಷ್ಣನಿಗೂ ಕೂಡ ಬ್ರಾಹ್ಮಣರೇ ಇಷ್ಟದೇವರಾಗಿದ್ದಾರೆ. ಏಕೆಂದರೆ, ಅವರ ಚರಣಧೂಳಿಯಿಂದ ಮೂರುಲೋಕಗಳೂಪವಿತ್ರವಾಗುತ್ತವೆ. ॥ ೪೨ ॥

ನನ್ವಸ್ಯ ಬ್ರಾಹ್ಮಣಾ ರಾಜನ್ಕೃಷ್ಣಸ್ಯ ಜಗದಾತ್ಮನಃ ।
ಪುನಂತಃ ಪಾದರಜಸಾ ತ್ರಿಲೋಕೀಂ ದೈವತಂ ಮಹತ್ ॥ ೪೨ ॥

*ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ
ಸದಾಚಾರನಿರ್ಣಯೋ ನಾಮ ಚತುರ್ದಶೋಽಧ್ಯಾಯಃ ॥ ೧೪ ॥

# ಹದಿನೈದನೆಯ ಅಧ್ಯಾಯ

## ಗೃಹಸ್ಥರಿಗಾಗಿ ಮೋಕ್ಷಧರ್ಮದ ವರ್ಣನೆ

*ನಾರದ ಉವಾಚ*

ಕರ್ಮನಿಷ್ಠಾ ದ್ವಿಜಾಃ ಕೇಚಿತ್ತಪೋನಿಷ್ಠಾ ನೃಪಾಪರೇ ।
ಸ್ವಾಧ್ಯಾಯೇಽನ್ಯೇ ಪ್ರವಚನೇ ಕೇಚನ ಜ್ಞಾನಯೋಗಯೋಃ ॥ ೧ ॥

ಜ್ಞಾನನಿಷ್ಠಾಯ ದೇಯಾನಿ ಕವ್ಯಾನ್ಯಾನಂತ್ಯಮಿಚ್ಛತಾ ।
ದೈವೇ ಚ ತದಭಾವೇ ಸ್ಯಾದಿತರೇಭ್ಯೋ ಯಥಾರ್ಹತಃ ॥ ೨ ॥

ದ್ವೌ ದೈವೇ ಪಿತೃಕಾರ್ಯೇ ತ್ರೀನೇಕೈಕಮುಭಯತ್ರ ವಾ ।
ಭೋಜಯೇತ್ಸುಸಮೃದ್ಧೋಽಪಿ ಶ್ರಾದ್ಧೇ ಕುರ್ಯಾನ್ನ ವಿಸ್ತರಮ್ ॥ ೩ ॥

ದೇಶಕಾಲೋಚಿತಶ್ರದ್ಧಾದ್ರವ್ಯಪಾತ್ರಾರ್ಹಣಾನಿ ಚ ।
ಸಮ್ಯಗ್ಭವಂತಿ ನೈತಾನಿ ವಿಸ್ತರಾತ್ಸ್ವಜನಾರ್ಪಣಾತ್ ॥ ೪ ॥

ದೇಶೇ ಕಾಲೇ ಚ ಸಂಪ್ರಾಪ್ತೇ ಮುನ್ಯನ್ನಂ ಹರಿದೈವತಮ್ ।
ಶ್ರದ್ಧಯಾ ವಿಧಿವತ್ಪಾತ್ರೇ ನ್ಯಸ್ತಂ ಕಾಮಧುಗಕ್ಷಯಮ್ ॥ ೫ ॥

**ನಾರದರು ಹೇಳುತ್ತಾರೆ** – ಯುಧಿಷ್ಠಿರನೇ! ಕೆಲವು ದ್ವಿಜರ ನಿಷ್ಠೆ ಕರ್ಮದಲ್ಲಾದರೆ, ಕೆಲವರಲ್ಲಿ ತಪಸ್ಸಿನಲ್ಲಿ, ಕೆಲವರಲ್ಲಿ ವೇದಗಳ ಅಧ್ಯಯನ-ಪ್ರವಚನಗಳಲ್ಲಿ, ಕೆಲವರಲ್ಲಿ ಆತ್ಮಜ್ಞಾನ ಸಂಪಾದನೆಯಲ್ಲಿ, ಕೆಲವರಲ್ಲಿ ಯೋಗದಲ್ಲಿ ನಿಷ್ಠೆ ಇರುತ್ತದೆ. ॥ ೧ ॥ ಶ್ರಾದ್ಧ ಅಥವಾ ದೇವರ ಪೂಜೆಗಳೇ ಮುಂತಾದ ಕರ್ಮಗಳ ಅಕ್ಷಯ ಫಲವನ್ನು ಬಯಸುವ ಗೃಹಸ್ಥನಾದವನು ಜ್ಞಾನನಿಷ್ಠ ದ್ವಿಜನಿಗೆ ಹವ್ಯ-ಕವ್ಯಗಳನ್ನು ಸಮರ್ಪಿಸಬೇಕು. ಅವರು ಸಿಗದಿದ್ದಾಗ ಯೋಗೀ, ಪ್ರವಚನಕಾರ ಮುಂತಾದವರಿಗೆ ಯಥಾಯೋಗ್ಯ, ಯಥಾಕ್ರಮದಲ್ಲಿ ದಾನಮಾಡಬೇಕು. ॥ ೨ ॥ ದೇವತಾ ಕಾರ್ಯದಲ್ಲಿ ಇಬ್ಬರು ಮತ್ತು ಪಿತೃಕಾರ್ಯದಲ್ಲಿ ಮೂರು ಅಥವಾ ಎರಡರಲ್ಲಿಯೂ ಒಂದೊಂದು ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ತುಂಬಾ ಶ್ರೀಮಂತನಾಗಿದ್ದರೂ ಶ್ರಾದ್ಧಕರ್ಮದಲ್ಲಿ ಹೆಚ್ಚು ವಿಸ್ತಾರವನ್ನು ಮಾಡಬಾರದು. ॥ ೩ ॥ ಏಕೆಂದರೆ, ನೆಂಟರಿಗೆ, ಸ್ವಜನರಿಗೆ ಕೊಡುವುದರಿಂದ, ಶ್ರಾದ್ಧವಿಸ್ತಾರ ಮಾಡುವುದರಿಂದ ದೇಶ-ಕಾಲೋಚಿತ ಶ್ರದ್ಧೆ, ಪದಾರ್ಥ, ಪಾತ್ರ ಮತ್ತು ಪೂಜೆ ಸರಿಯಾಗಿ ನಡೆಯುವುದಿಲ್ಲ. ॥ ೪ ॥ ಸರಿಯಾದ ದೇಶ-ಕಾಲಗಳು ಕೂಡಿಬಂದಾಗ ಋಷಿ-ಮುನಿಗಳಿಗೆ ಭೋಜನಯೋಗ್ಯವಾದ ಹವಿಷ್ಯಾನ್ನವನ್ನು ಭಗವಂತನಿಗೆ ನಿವೇದನೆಮಾಡಿ, ಶ್ರದ್ಧೆಯಿಂದ ವಿಧಿವತ್ತಾಗಿ ಸತ್ಪಾತ್ರರಿಗೆ ಕೊಡಬೇಕು. ಅದು ಸಮಸ್ತ ಕಾಮನೆಗಳನ್ನು ಪೂರ್ಣಗೊಳಿಸುವಂತಹುದು ಮತ್ತು ಅಕ್ಷಯವಾಗುತ್ತದೆ. ॥ ೫ ॥ ದೇವತೆಗಳಿಗೆ, ಋಷಿಗಳಿಗೆ, ಪಿತೃಗಳಿಗೆ, ಬೇರೆ ಪ್ರಾಣಿಗಳಿಗೆ, ಸ್ವಜನರಿಗೆ ಅನ್ನವನ್ನು ನೀಡುವಾಗ ಮತ್ತು ತನಗಾಗಿ

ದೇವರ್ಷಿಪಿತೃಭೂತೇಭ್ಯ ಆತ್ಮನೇ ಸ್ವಜನಾಯ ಚ ।
ಅನ್ನಂ ಸಂವಿಭಜನ್ಪಶ್ಯೇತ್ಸರ್ವಂ ತತ್ಪುರುಷಾತ್ಮಕಮ್ ॥ ೬ ॥

ನ ದದ್ಯಾದಾಮಿಷಂ ಶ್ರಾದ್ಧೇ ನ ಚಾದ್ಯಾದ್ಧರ್ಮತತ್ತ್ವವಿತ್ ।
ಮುನ್ಯನ್ನೈಃ ಸ್ಯಾತ್ಪರಾ ಪ್ರೀತಿರ್ಯಥಾ ನ ಪಶುಹಿಂಸಯಾ ॥ ೭ ॥

ನೈತಾದೃಶಃ ಪರೋ ಧರ್ಮೋ ನೃಣಾಂ ಸದ್ಧರ್ಮಮಿಚ್ಛತಾಮ್ ।
ನ್ಯಾಸೋ ದಂಡಸ್ಯ ಭೂತೇಷು ಮನೋವಾಕ್ಕಾಯಜಸ್ಯ ಯಃ ॥ ೮ ॥

ಏಕೇ ಕರ್ಮಮಯಾನ್ ಯಜ್ಞಾನ್ ಜ್ಞಾನಿನೋ ಯಜ್ಞವಿತ್ತಮಾಃ ।
ಆತ್ಮಸಂಯಮನೇಽನೀಹಾ ಜುಹ್ವತಿ ಜ್ಞಾನದೀಪಿತೇ ॥ ೯ ॥

ದ್ರವ್ಯಯಜ್ಞೈರ್ಯಕ್ಷ್ಯಮಾಣಂ ದೃಷ್ಟ್ವಾ ಭೂತಾನಿ ಬಿಭ್ಯತಿ ।
ಏಷ ಮಾಕರುಣೋ ಹನ್ಯಾದತಜ್ಞೋ ಹ್ಯಸುತೃಬ್ಧ್ರುವಮ್ ॥ ೧೦ ॥

ತಸ್ಮಾದ್ದೈವೋಪಪನ್ನೇನ ಮುನ್ಯನ್ನೇನಾಪಿ ಧರ್ಮವಿತ್ ।
ಸಂತುಷ್ಟೋಽಹರಹಃ ಕುರ್ಯಾನ್ನಿತ್ಯನೈಮಿತ್ತಿಕೀಃ ಕ್ರಿಯಾಃ ॥ ೧೧ ॥

ವಿಧರ್ಮಃ ಪರಧರ್ಮಶ್ಚ ಆಭಾಸ ಉಪಮಾ ಛಲಃ ।
ಅಧರ್ಮಶಾಖಾಃ ಪಂಚೇಮಾ ಧರ್ಮಜ್ಞೋಽಧರ್ಮವತ್ತ್ಯಜೇತ್ ॥ ೧೨ ॥

ಧರ್ಮಬಾಧೋ ವಿಧರ್ಮಃ ಸ್ಯಾತ್ಪರಧರ್ಮೋಽನ್ಯಚೋದಿತಃ ।
ಉಪಧರ್ಮಸ್ತು ಪಾಖಂಡೋ ದಂಭೋ ವಾ ಶಬ್ದಭಿಚ್ಛಲಃ ॥ ೧೩ ॥

ಯಸ್ತ್ವಿಚ್ಛಯಾ ಕೃತಃ ಪುಂಭಿರಾಭಾಸೋ ಹ್ಯಾಶ್ರಮಾತ್ಪೃಥಕ್ ।
ಸ್ವಭಾವವಿಹಿತೋ ಧರ್ಮಃ ಕಸ್ಯ ನೇಷ್ಟಃ ಪ್ರಶಾಂತಯೇ ॥ ೧೪ ॥

ಧರ್ಮಾರ್ಥಮಪಿ ನೇಹೇತ ಯಾತ್ರಾರ್ಥಂ ವಾಧನೋ ಧನಮ್ ।
ಅನೀಹಾನೀಹಮಾನಸ್ಯ ಮಹಾಹೇರಿವ ವೃತ್ತಿದಾ ॥ ೧೫ ॥

ತೆಗೆದಿರಿಸಿದಾಗಲೂ ಅವರೆಲ್ಲರನ್ನೂ ಪರಮಾತ್ಮಸ್ವರೂಪರೆಂದೇ ನೋಡಬೇಕು. ॥ ೬॥

ಧರ್ಮದ ಮರ್ಮವನ್ನು ಅರಿತಿರುವವರು ಶ್ರಾದ್ಧದಲ್ಲಿ ಮಾಂಸವನ್ನು ಅರ್ಪಿಸಬಾರದು ಮತ್ತು ಸ್ವತಃ ತಾನು ಕೂಡ ತಿನ್ನಬಾರದು. ಏಕೆಂದರೆ ಪಿತೃಗಳಿಗೆ, ಋಷಿ-ಮುನಿಗಳಿಗೆ ಯೋಗ್ಯವಾದ ಹವಿಷ್ಯಾನ್ನದಿಂದ ಪ್ರಸನ್ನತೆ ಉಂಟಾಗುವಂತೆ ಪಶು-ಹಿಂಸೆಯಿಂದ ಆಗುವುದಿಲ್ಲ. ॥ ೭ ॥ ಸದ್ಧರ್ಮವನ್ನು ಪಾಲಿಸಬೇಕೆಂದು ಬಯಸುವ ಜನರಿಗೆ ಯಾವುದೇ ಪ್ರಾಣಿಗೂ ಮನಸ್ಸಿನಿಂದ, ಮಾತಿನಿಂದ, ಶರೀರದಿಂದ ಯಾವ ವಿಧದಿಂದಲೂ ಕಷ್ಟ ಕೊಡಬಾರದು. ಇದರಿಂದ ಮಿಗಿಲಾದ ಬೇರೆ ಯಾವ ಧರ್ಮವು ಇಲ್ಲ. ॥ ೮ ॥ ಇದರಿಂದಲೇ ಕೆಲ-ಕೆಲವರು ಯಜ್ಞತತ್ತ್ವವನ್ನು ಬಲ್ಲಜ್ಞಾನಿಗಳು ಜ್ಞಾನದ ಮೂಲಕ ಪ್ರಜ್ವಲಿತ ಆತ್ಮಸಂಯಮವೆಂಬ ಅಗ್ನಿಯಲ್ಲಿ ಈ ಕರ್ಮಮಯ ಯಜ್ಞಗಳನ್ನು ಹೋಮಮಾಡಿಬಿಡುತ್ತಾರೆ ಮತ್ತು ಬಾಹ್ಯ ಕರ್ಮಕಲಾಪಗಳಿಂದ ಉಪರತರಾಗುತ್ತಾರೆ. ॥ ೯ ॥ ಯಾರಾದರೂ ಪಶುಬಲಿ ಇತ್ಯಾದಿ ಸಾಮಗ್ರಿಗಳಿಂದ ಯಜ್ಞ ಮಾಡಲು ಬಯಸಿದಾಗ ಎಲ್ಲ ಪ್ರಾಣಿಗಳು ಹೆದರಿಹೋಗುತ್ತವೆ. ಅವುಗಳು ಯೋಚಿಸುತ್ತವೆ – ಇವನು ತನ್ನ ಪ್ರಾಣಗಳನ್ನು ಪೋಷಿಸುವ ನಿರ್ದಯೀ ಮೂರ್ಖನು ನಮ್ಮನ್ನು ಖಂಡಿತವಾಗಿ ಕೊಂದುಬಿಟ್ಟಾನು ಎಂದುಕೊಳ್ಳುವವು. ॥ ೧೦ ॥ ಆದ್ದರಿಂದ ಧರ್ಮಜ್ಞನಾದವನು – ಪ್ರತಿದಿನವು ಪ್ರಾರಬ್ಧದ ಮೂಲಕ ದೊರೆತ ಮುನಿಜನೋಚಿತವಾದ ಹವಿಷ್ಯಾನ್ನದಿಂದಲೇ ತನ್ನ ನಿತ್ಯ-ನೈಮಿತ್ತಿಕ ಕರ್ಮಗಳನ್ನು ಮಾಡಿ, ಅದರಿಂದಲೇ ಸಂತುಷ್ಟನಾಗಿರುವುದೇ ಉಚಿತವಾಗಿದೆ. ॥ ೧೧ ॥

ವಿಧರ್ಮ, ಪರಧರ್ಮ, ಆಭಾಸ, ಉಪಮೆ ಮತ್ತು ಛಲ – ಎಂಬ ಈ ಐದು ಅಧರ್ಮದ ಶಾಖೆಗಳು. ಧರ್ಮಜ್ಞನಾದ ಮನುಷ್ಯನು ಅಧರ್ಮದಂತೆ ಇವುಗಳನ್ನು ತ್ಯಜಿಸಿಬಿಡಬೇಕು. ॥ ೧೨ ॥ ಯಾವ ಕಾರ್ಯವನ್ನು ಧರ್ಮಬುದ್ಧಿಯಿಂದ ಮಾಡಿದರೂ ತನ್ನ ಧರ್ಮದಲ್ಲಿ ಬಾಧೆ ಉಂಟಾದರೆ ಅದು 'ವಿಧರ್ಮ'ವಾಗಿದೆ. ಯಾರೋ ಬೇರೆಯವರಿಂದ ಇತರರಿಗೆ ಉಪದೇಶಿಸಲ್ಪಟ್ಟ ಧರ್ಮವು 'ಪರಧರ್ಮ'ವಾಗಿದೆ. ಪಾಷಂಡ ಮತ್ತು ಡಾಂಭಿಕತೆ ಯನ್ನು 'ಉಪಧರ್ಮ' ಅಥವಾ 'ಉಪಮಾ' ಎಂದು ಹೇಳುತ್ತಾರೆ. ಶಾಸ್ತ್ರವಚನಗಳನ್ನು ಬೇರೆ ಪ್ರಕಾರದಿಂದ ಅರ್ಥೈಸುವುದು 'ಛಲ'ವಾಗಿದೆ. ॥ ೧೩ ॥ ಮನುಷ್ಯನು ತನ್ನ ಆಶ್ರಮಕ್ಕೆ ವಿಪರೀತವಾಗಿ ಸ್ವೇಚ್ಛೆಯಿಂದ ಯಾವುದನ್ನು ಧರ್ಮವೆಂದು ತಿಳಿಯುತ್ತಾನೋ ಅದು 'ಆಭಾಸ' ವಾಗಿದೆ. ತಮ್ಮ-ತಮ್ಮ ಸ್ವಭಾವಕ್ಕನುಕೂಲವಾದ ವರ್ಣಾಶ್ರಮೋಚಿತ ಧರ್ಮಗಳು ಯಾರಿಗೆ ತಾನೇ ಶಾಂತಿಯನ್ನು ಉಂಟುಮಾಡುವುದಿಲ್ಲ? ॥ ೧೪ ॥

ಧರ್ಮಾತ್ಮ ಮನುಷ್ಯನು ನಿರ್ಧನನಾಗಿದ್ದರೂ ಧರ್ಮಕ್ಕಾಗಿ ಅಥವಾ ಶರೀರನಿರ್ವಾಹಕ್ಕಾಗಿ, ಹಣವನ್ನು ಗಳಿಸುವ ಪ್ರಯತ್ನ ಮಾಡಬಾರದು. ಏಕೆಂದರೆ, ಯಾವುದೇ ರೀತಿಯ ಪ್ರಯತ್ನ ಮಾಡದೆಯೇ ಹೆಬ್ಬಾವಿನ ಜೀವನ ನಡೆಯುವಂತೆಯೇ ನಿವೃತ್ತಿಪರಾಯಣ ಮನುಷ್ಯನ ನಿವೃತ್ತಿಯೇ ಅವನ ಜೀವನ ನಿರ್ವಹಣೆ ಮಾಡುತ್ತದೆ. ॥ ೧೫ ॥

ಸಂತುಷ್ಟಸ್ಯ ನಿರೀಹಸ್ಯ ಸ್ವಾತ್ಮಾರಾಮಸ್ಯ ಯತ್ಸುಖಮ್ ।
ಕುತಸ್ತತ್ಕಾಮಲೋಭೇನ ಧಾವತೋಽರ್ಥೇಹಯಾ ದಿಶಃ
॥ ೧೬ ॥

ಸದಾ ಸಂತುಷ್ಟಮನಸಃ ಸರ್ವಾಃ ಸುಖಮಯಾ ದಿಶಃ ।
ಶರ್ಕರಾಕಂಟಕಾದಿಭ್ಯೋ ಯಥೋಪಾನತ್ಪದಃ ಶಿವಮ್
॥ ೧೭ ॥

ಸಂತುಷ್ಟಃ ಕೇನ ವಾ ರಾಜನ್ನ ವರ್ತೇತಾಪಿ ವಾರಿಣಾ ।
ಔಪಸ್ಥ್ಯಜೈಹ್ವ್ಯಕಾರ್ಪಣ್ಯಾದ್ಗೃಹಪಾಲಾಯತೇ ಜನಃ
॥ ೧೮ ॥

ಅಸಂತುಷ್ಟಸ್ಯ ವಿಪ್ರಸ್ಯ ತೇಜೋ ವಿದ್ಯಾ ತಪೋ ಯಶಃ ।
ಸ್ರವಂತೀಂದ್ರಿಯಲೌಲ್ಯೇನ ಜ್ಞಾನಂ ಚೈವಾವಕೀರ್ಯತೇ
॥ ೧೯ ॥

ಕಾಮಸ್ಯಾಂತಂ ಚ ಕ್ಷುತ್ತೃಡ್ಭ್ಯಾಂ ಕ್ರೋಧಸ್ಯೈತತ್ಫಲೋದಯಾತ್ ।
ಜನೋ ಯಾತಿ ನ ಲೋಭಸ್ಯ ಜಿತ್ವಾ ಭುಕ್ತ್ವಾ ದಿಶೋ ಭುವಃ
॥ ೨೦ ॥

ಪಂಡಿತಾ ಬಹವೋ ರಾಜನ್ಬಹುಜ್ಞಾಃ ಸಂಶಯಚ್ಛಿದಃ ।
ಸದಸಸ್ಪತಯೋಽಪ್ಯೇಕೇ ಅಸಂತೋಷಾತ್ಪತಂತ್ಯಧಃ
॥ ೨೧ ॥

ಅಸಂಕಲ್ಪಾಜ್ಜಯೇತ್ಕಾಮಂ ಕ್ರೋಧಂ ಕಾಮವಿವರ್ಜನಾತ್ ।
ಅರ್ಥಾನರ್ಥೇಕ್ಷಯಾ ಲೋಭಂ ಭಯಂ ತತ್ತ್ವಾವಮರ್ಶನಾತ್
॥ ೨೨ ॥

ಆನ್ವೀಕ್ಷಿಕ್ಯಾ ಶೋಕಮೋಹೌ ದಂಭಂ ಮಹದುಪಾಸಯಾ ।
ಯೋಗಾಂತರಾಯಾನ್ಮೌನೇನ ಹಿಂಸಾಂ ಕಾಯಾದ್ಯನೀಹಯಾ
॥ ೨೩ ॥

ಕೃಪಯಾ ಭೂತಜಂ ದುಃಖಂ ದೈವಂ ಜಹ್ಯಾತ್ಸಮಾಧಿನಾ ।
ಆತ್ಮಜಂ ಯೋಗವೀರ್ಯೇಣ ನಿದ್ರಾಂ ಸತ್ತ್ವನಿಷೇವಯಾ
॥ ೨೪ ॥

ರಜಸ್ತಮಶ್ಚ ಸತ್ತ್ವೇನ ಸತ್ತ್ವಂ ಚೋಪಶಮೇನ ಚ ।
ಏತತ್ಸರ್ವಂ ಗುರೌ ಭಕ್ತ್ಯಾ ಪುರುಷೋ ಹ್ಯಂಜಸಾ ಜಯೇತ್
॥ ೨೫ ॥

ತನ್ನ ಆತ್ಮನಲ್ಲೇ ರಮಿಸುತ್ತಾ ಕರ್ಮರಹಿತನಾಗಿ ಸಂತುಷ್ಟನಾಗಿರುವ ಮನುಷ್ಯನಿಗೆ ಸಿಗುವ ಸುಖವು, ಕಾಮನೆಗಳಿಂದಲೂ, ಲೋಭದಿಂದಲೂ ಹಣಕ್ಕಾಗಿ ಹಂಬಲಿಸುತ್ತಾ ಅಲ್ಲಿ-ಇಲ್ಲಿ ಎಲ್ಲೆಡೆ ಅಲೆಯುತ್ತಿರುವ ಮನುಷ್ಯನಿಗೆ ಹೇಗೆ ತಾನೇ ಸಿಗಬಲ್ಲದು? ॥ ೧೬ ॥ ಕಾಲಿಗೆ ಎಕ್ಕಡಗಳನ್ನು ಧರಿಸಿಕೊಂಡು ನಡೆಯುವವನಿಗೆ ಕಲ್ಲು-ಮುಳ್ಳುಗಳ ಯಾವುದೇ ಭಯವು ಇರುವುದಿಲ್ಲ. ಅಂತೆಯೇ ಮನಸ್ಸಿನಲ್ಲಿ ಸಂತೋಷವಿರುವವನಿಗೆ ಎಂದೆಂದಿಗೂ ಮತ್ತು ಎಲ್ಲೆಡೆಗಳಲ್ಲಿಯೂ ಸುಖವೇ ಸುಖವಿದೆ; ದುಃಖವು ಇಲ್ಲವೇ ಇಲ್ಲ. ॥ ೧೭ ॥ ಯುಧಿಷ್ಠಿರನೇ! ಮನುಷ್ಯನು ಕೇವಲ ನೀರಿನಿಂದಲೇ ಸಂತುಷ್ಟನಾಗಿದ್ದು ತನ್ನ ಜೀವನ ನಿರ್ವಾಹ ಏಕೆ ಮಾಡಿಕೊಳ್ಳುವುದಿಲ್ಲವೋ ತಿಳಿಯದು. ಆದರೆ ರಸನೇಂದ್ರಿಯ ಮತ್ತು ಜನನೇಂದ್ರಿಯಗಳ ಆಸೆಗಳನ್ನು ತೀರಿಸುವ ಅಲ್ಪ ಸುಖಕ್ಕೆ ಒಳಗಾಗಿ ಮನೆಕಾಯುವ ನಾಯಿಯಂತೆ ಆಗುವನು. ॥ ೧೮ ॥ ಸಂತೋಷಿಯಲ್ಲದ ಬ್ರಾಹ್ಮಣನು ಇಂದ್ರಿಯಗಳ ಲೋಲುಪತೆಯಿಂದ ಅವನ ತೇಜ, ವಿದ್ಯೆ, ತಪಸ್ಸು, ಕೀರ್ತಿ ಇವುಗಳು ಕ್ಷೀಣಿಸಿಬಿಡುವುವು ಮತ್ತು ವಿವೇಕವನ್ನು ಕಳೆದುಕೊಳ್ಳುವನು. ॥ ೧೯ ॥ ಹಸಿವು, ಬಾಯಾರಿಕೆ ಇಂಗಿಹೋದ ಬಳಿಕ ತಿನ್ನುವ-ಕುಡಿಯುವ ಕಾಮನೆ ಮುಗಿದುಹೋಗುತ್ತದೆ. ಕ್ರೋಧವೂ ತನ್ನ ಕೆಲಸವನ್ನು ಪೂರ್ಣಗೊಳಿಸಿ ಶಾಂತವಾಗುವುದು. ಆದರೆ ಮನುಷ್ಯನು ಪೃಥಿವಿಯ ಎಲ್ಲ ದಿಕ್ಕುಗಳನ್ನು ಗೆದ್ದುಕೊಂಡು, ಭೋಗಿಸಿದರೂ ಅವನ ಲೋಭವು ಕೊನೆಗೊಳ್ಳುವುದಿಲ್ಲ. ॥ ೨೦ ॥ ಅನೇಕ ವಿಷಯಗಳನ್ನು ಬಲ್ಲವನಾಗಿ, ಸಂಶಯಗಳನ್ನು ಸಮಾಧಾನಪಡಿಸಿಕೊಂಡು ಮನಸ್ಸಿನಲ್ಲಿ ಶಾಸ್ತ್ರೋಕ್ತವಾದ ಅರ್ಥವನ್ನು ನಿಶ್ಚಯಿಸಿಕೊಂಡಿರುವವರು, ವಿದ್ವತ್ಸಭೆಗಳ ಅಧ್ಯಕ್ಷರಾದ ದೊಡ್ಡ-ದೊಡ್ಡ ವಿದ್ವಾಂಸರೂ ಕೂಡ ಅಸಂತೋಷದ ಕಾರಣ ಪತನಹೊಂದುವರು. ॥ ೨೧ ॥

ಧರ್ಮನಂದನಾ! ಸಂಕಲ್ಪಗಳ ಪರಿತ್ಯಾಗದಿಂದ ಕಾಮವನ್ನೂ, ಕಾಮನೆಗಳ ತ್ಯಾಗದಿಂದ ಕ್ರೋಧವನ್ನೂ, ಸಂಸಾರಿಗಳು ಹೇಳುವ 'ಅರ್ಥ'ವನ್ನು ಅನರ್ಥವೆಂದು ತಿಳಿದುಕೊಂಡು ಲೋಭವನ್ನೂ ಮತ್ತು ತತ್ತ್ವದ ವಿಚಾರದಿಂದ ಭಯವನ್ನೂ ಗೆದ್ದುಕೊಳ್ಳಬೇಕು. ॥ ೨೨ ॥ ಅಧ್ಯಾತ್ಮವಿದ್ಯೆಯಿಂದ ಶೋಕ-ಮೋಹಗಳನ್ನೂ, ಸಂತರ ಉಪಾಸನೆಯಿಂದ ದಂಭವನ್ನೂ, ಮೌನದಿಂದ ಯೋಗದ ವಿಘ್ನಗಳನ್ನೂ ಮತ್ತು ಶರೀರ-ಪ್ರಾಣ ಮುಂತಾದವುಗಳನ್ನು ನಿಶ್ಚೇಷ್ಟಗೊಳಿಸಿ ಹಿಂಸೆಯನ್ನು ಜಯಿಸಿಕೊಳ್ಳಬೇಕು. ॥ ೨೩ ॥ ಆಧಿಭೌತಿಕ ದುಃಖವನ್ನು ದಯೆಯ ಮೂಲಕ, ಆಧಿದೈವಿಕ ವೇದನೆಯನ್ನು ಸಮಾಧಿಯಿಂದ, ಆಧ್ಯಾತ್ಮಿಕ ದುಃಖವನ್ನು ಯೋಗಬಲದಿಂದ ಹಾಗೂ ನಿದ್ರೆಯನ್ನು ಸಾತ್ತ್ವಿಕ ಭೋಜನ, ಸ್ಥಾನ, ಸಂಗ ಮುಂತಾದವುಗಳ ಸೇವನೆಯಿಂದ ಗೆದ್ದುಕೊಳ್ಳಬೇಕು. ॥ ೨೪ ॥ ಸತ್ತ್ವಗುಣದಿಂದ ರಜೋಗುಣ-ತಮೋಗುಣಗಳನ್ನು ಮತ್ತು ಉಪಶಾಂತಿಯ ಮೂಲಕ ಸತ್ತ್ವಗುಣದ ಮೇಲೆ ವಿಜಯವನ್ನು ಪಡೆಯಬೇಕು. ಶ್ರೀಗುರುಗಳಲ್ಲಿರುವ ಭಕ್ತಿಯಿಂದ ಸಾಧಕನು ಇವೆಲ್ಲ ದೋಷಗಳ ಮೇಲೆ ಸುಲಭವಾಗಿ ವಿಜಯವನ್ನು ಪಡೆಯಬಲ್ಲನು. ॥ ೨೫ ॥

ಯಸ್ಯ ಸಾಕ್ಷಾದ್ಭಗವತಿ ಜ್ಞಾನದೀಪಪ್ರದೇ ಗುರೌ ।
ಮರ್ತ್ಯಾಸದ್ಧೀಃ ಶ್ರುತಂ ತಸ್ಯ ಸರ್ವಂ ಕುಂಜರಶೌಚವತ್ ॥ ೨೬ ॥

ಏಷ ವೈ ಭಗವಾನ್ಸಾಕ್ಷಾತ್ ಪ್ರಧಾನಪುರುಷೇಶ್ವರಃ ।
ಯೋಗೇಶ್ವರೈರ್ವಿಮೃಗ್ಯಾಂಘ್ರಿರ್ಲೋಕೋ ಯಂ ಮನ್ಯತೇ ನರಮ್ ॥ ೨೭ ॥

ಷಡ್ವರ್ಗಸಂಯಮೈಕಾಂತಾಃ ಸರ್ವಾ ನಿಯಮಚೋದನಾಃ ।
ತದಂತಾ ಯದಿ ನೋ ಯೋಗಾನಾವಹೇಯುಃ ಶ್ರಮಾವಹಾಃ ॥ ೨೮ ॥

ಯಥಾ ವಾರ್ತಾದಯೋ ಹ್ಯರ್ಥಾ ಯೋಗಸ್ಯಾರ್ಥಂ ನ ಬಿಭ್ರತಿ ।
ಅನರ್ಥಾಯ ಭವೇಯುಸ್ತೇ ಪೂರ್ತಮಿಷ್ಟಂ ತಥಾಸತಃ ॥ ೨೯ ॥

ಯಶ್ಚಿತ್ತವಿಜಯೇ ಯತ್ತಃ ಸ್ಯಾನ್ನಿಃಸಂಗೋಽಪರಿಗ್ರಹಃ ।
ಏಕೋ ವಿವಿಕ್ತಶರಣೋ ಭಿಕ್ಷುರ್ಭೈಕ್ಷ್ಯಮಿತಾಶನಃ ॥ ೩೦ ॥

ದೇಶೇ ಶುಚೌ ಸಮೇ ರಾಜನ್ಸಂಸ್ಥಾಪ್ಯಾಸನಮಾತ್ಮನಃ ।
ಸ್ಥಿರಂ ಸಮಂ ಸುಖಂ ತಸ್ಮಿನ್ನಾಸೀತರ್ಜ್ವಂಗ ಓಮಿತಿ ॥ ೩೧ ॥

ಪ್ರಾಣಾಪಾನೌ ಸನ್ನಿರುಂಧ್ಯಾತ್ಪೂರಕುಂಭಕರೇಚಕೈಃ ।
ಯಾವನ್ಮನಸ್ತ್ಯಜೇತ್ಕಾಮಾನ್ಸ್ವನಾಸಾಗ್ರನಿರೀಕ್ಷಣಃ ॥ ೩೨ ॥

ಯತೋ ಯತೋ ನಿಃಸರತಿ ಮನಃ ಕಾಮಹತಂ ಭ್ರಮತ್ ।
ತತಸ್ತತ ಉಪಾಹೃತ್ಯ ಹೃದಿ ರುಂಧ್ಯಾಚ್ಛನೈರ್ಬುಧಃ ॥ ೩೩ ॥

ಏವಮಭ್ಯಸತಶ್ಚಿತ್ತಂ ಕಾಲೇನಾಲ್ಪೀಯಸಾ ಯತೇಃ ।
ಅನಿಶಂ ತಸ್ಯ ನಿರ್ವಾಣಂ ಯಾತ್ಯನಿಂಧನವಹ್ನಿವತ್ ॥ ೩೪ ॥

ಕಾಮಾದಿಭಿರನಾವಿದ್ಧಂ ಪ್ರಶಾಂತಾಖಿಲವೃತ್ತಿ ಯತ್ ।
ಚಿತ್ತಂ ಬ್ರಹ್ಮ ಸುಖಸ್ಪೃಷ್ಟಂ ನೈವೋತ್ತಿಷ್ಠೇತ ಕರ್ಹಿಚಿತ್ ॥ ೩೫ ॥

ಹೃದಯದಲ್ಲಿ ಜ್ಞಾನದ ದೀಪವನ್ನು ಹಚ್ಚುವ ಗುರುದೇವನು ಸಾಕ್ಷಾತ್ ಭಗವಂತನೇ ಆಗಿರುವನು. ಅವರನ್ನು ಮನುಷ್ಯನೆಂದು ತಿಳಿಯುವ ದುರ್ಬುದ್ಧಿಯುಳ್ಳ ಮನುಷ್ಯನ ಸಮಸ್ತ ಶಾಸ್ತ್ರಶ್ರವಣವು ಗಜಸ್ನಾನದಂತೆ ವ್ಯರ್ಥವೇ ಆಗುವುದು. ॥ ೨೬ ॥ ದೊಡ್ಡ-ದೊಡ್ಡ ಯೋಗೇಶ್ವರರು ಯಾರ ಚರಣಕಮಲಗಳನ್ನು ಅನುಸಂಧಾನ ಮಾಡುವರೋ, ಪ್ರಕೃತಿ-ಪುರುಷರ ಅಧೀಶ್ವರನೋ ಅಂತಹ ಭಗವಂತನೇ ಗುರುದೇವರ ರೂಪದಲ್ಲಿ ಪ್ರಕಟನಾಗಿರುವನು. ಇವನನ್ನು ಜನರು ಭ್ರಮೆಯಿಂದ ಮನುಷ್ಯನೆಂದು ಭಾವಿಸುವರು. ॥ ೨೭ ॥

ಶಾಸ್ತ್ರಗಳಲ್ಲಿ ಎಷ್ಟು ನಿಯಮಸಂಬಂಧೀ ಆದೇಶಗಳಿವೆಯೋ ಅವುಗಳ ಏಕಮಾತ್ರ ತಾತ್ಪರ್ಯವು – ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ – ಈ ಆರು ಶತ್ರುಗಳನ್ನು ಗೆದ್ದುಕೊಳ್ಳುವುದು ಅಥವಾ ಐದು ಇಂದ್ರಿಯಗಳು, ಒಂದು ಮನಸ್ಸು – ಹೀಗೆ ಆರನ್ನು ವಶಪಡಿಸಿಕೊಳ್ಳುವುದೇ ಆಗಿದೆ. ಹೀಗಾದ ಬಳಿಕವೂ ಆ ನಿಯಮಗಳ ಮೂಲಕ ಭಗವಂತನ ಧ್ಯಾನ-ಚಿಂತನೆಗಳು ಪ್ರಾಪ್ತವಾಗದಿದ್ದರೆ, ಅವುಗಳನ್ನು ಕೇವಲ ಶ್ರಮವೆಂದೇ ತಿಳಿಯಬೇಕು. ॥ ೨೮ ॥ ಕೃಷಿ, ವ್ಯಾಪಾರ ಮುಂತಾದವುಗಳು ಮತ್ತು ಅದರ ಫಲಗಳೂ ಕೂಡ ಯೋಗಸಾಧನೆಯ ಫಲವಾದ ಭಗವತ್ಪ್ರಾಪ್ತಿ ಅಥವಾ ಮುಕ್ತಿಯನ್ನು ಕೊಡಲಾರವೋ, ಅಂತೆಯೇ ದುಷ್ಟ ಮನುಷ್ಯನ ಶ್ರೌತ-ಸ್ಮಾರ್ತ ಕರ್ಮಗಳೂ ಕೂಡ ಶ್ರೇಯಸ್ಕರವಾಗುವುದಿಲ್ಲ. ಬದಲಿಗೆ ವಿರುದ್ಧ ಫಲವನ್ನೇ ಕೊಡುವುವು. ॥ ೨೯ ॥

ತನ್ನ ಮನಸ್ಸಿನ ಮೇಲೆ ವಿಜಯವನ್ನು ಪಡೆದುಕೊಳ್ಳಲಿಕ್ಕಾಗಿ ಹೊರಟಿರುವ ಮನುಷ್ಯನು ಆಸಕ್ತಿ ಮತ್ತು ಪರಿಗ್ರಹವನ್ನು ತ್ಯಜಿಸಿ ಸಂನ್ಯಾಸವನ್ನು ಸ್ವೀಕರಿಸಬೇಕು. ಏಕಾಂತದಲ್ಲಿ ಒಬ್ಬಂಟಿಗನಾಗಿ ಇದ್ದು, ಭಿಕ್ಷೆ ಎತ್ತಿ ಶರೀರನಿರ್ವಾಹ ಮಾತ್ರಕ್ಕೆ ಸ್ವಲ್ಪ ಮತ್ತು ಪರಿಮಿತ ಭೋಜನವನ್ನು ಸೇವಿಸಬೇಕು. ॥ ೩೦ ॥ ಯುಧಿಷ್ಠಿರನೇ! ಶುಚಿಯಾಗಿ ಸಮತಟ್ಟಾಗಿರುವ ಭೂಮಿಯಲ್ಲಿ ತನ್ನ ಆಸನವನ್ನು ಹಾಸಿಕೊಂಡು, ಅದರ ಮೇಲೆ ನೇರವಾಗಿ, ಸ್ಥಿರವಾಗಿ, ಸಮವಾಗಿ, ಸುಖಕರವಾದ ಯೋಗಾಸನದಲ್ಲಿ ಕುಳಿತುಕೊಂಡು ಓಂಕಾರವನ್ನು ಜಪಿಸಬೇಕು. ॥ ೩೧ ॥ ಮನಸ್ಸು ಸಂಕಲ್ಪ-ವಿಕಲ್ಪಗಳನ್ನು ಬಿಟ್ಟುಬಿಡುವ ತನಕ ದೃಷ್ಟಿಯನ್ನು ನಾಸಿಕಾಗ್ರದಲ್ಲಿ ನೆಟ್ಟು ಪೂರಕ, ಕುಂಭಕ ಮತ್ತು ರೇಚಕದ ಮೂಲಕ ಪ್ರಾಣ ಹಾಗೂ ಅಪಾನದ ಗತಿಯನ್ನು ತಡೆಗಟ್ಟಬೇಕು. ॥ ೩೨ ॥ ಕಾಮದ ಆಘಾತದಿಂದ ಗಾಯಗೊಂಡ ಮನಸ್ಸು ಎಲ್ಲೆಲ್ಲಿ ಸುತ್ತಾಡುತ್ತಾ ಅಲೆಯುವುದೋ, ಅಲ್ಲಲ್ಲಿಂದ ಅದನ್ನು ಹಿಂದಿರುಗಿಸಿ ಮೆಲ್ಲ-ಮೆಲ್ಲನೆ ಹೃದಯದಲ್ಲಿ ನೆಲೆಗೊಳಿಸಬೇಕು. ॥ ೩೩ ॥ ಸಾಧಕನು ನಿರಂತರವಾಗಿ ಹೀಗೆ ಅಭ್ಯಾಸ ಮಾಡುವಾಗ ಕಟ್ಟಿಗೆ ಇಲ್ಲದೆ ಬೆಂಕಿಯು ಆರಿಹೋಗುವಂತೆಯೇ ಸ್ವಲ್ಪ ಸಮಯದಲ್ಲೇ ಅವನ ಚಿತ್ತವು ಶಾಂತವಾಗಿ ಹೋಗುತ್ತದೆ. ॥ ೩೪ ॥ ಹೀಗೆ ಕಾಮವಾಸನೆಗಳು ಏಟುಕೊಡುವುದನ್ನು ನಿಲ್ಲಿಸಿದಾಗ ಮತ್ತು ಸಮಸ್ತ ವೃತ್ತಿಗಳು ಅತ್ಯಂತ ಶಾಂತವಾಗಿ ಹೋದಾಗ ಚಿತ್ತವು ಬ್ರಹ್ಮಾನಂದದ ಸ್ಪರ್ಶದಲ್ಲಿ ಮುಳುಗಿಹೋಗುವುದು, ಮತ್ತೆ ಅದು ಎಂದಿಗೂ ಅಲ್ಲಿಂದ ಎದ್ದು ಬರುವುದಿಲ್ಲ. ॥ ೩೫ ॥

ಯಃ ಪ್ರವ್ರಜ್ಯ ಗೃಹಾತ್ಪೂರ್ವಂ ತ್ರಿವರ್ಗಾವಪನಾತ್ಪುನಃ ।
ಯದಿ ಸೇವೇತ ತಾನ್ಭಿಕ್ಷುಃ ಸ ವೈ ವಾಂತಾಶ್ಯಪತ್ರಪಃ
॥ ೩೬ ॥

ಯೈಃ ಸ್ವದೇಹಃ ಸ್ಮೃತೋ ನಾತ್ಮಾ ಮರ್ತ್ಯೋ ವಿಟ್‌ಕೃಮಿಭಸ್ಮಸಾತ್ ।
ತ ಏನಮಾತ್ಮಾತ್ಮನಾಸ್ತ್ವಾ ಶ್ಲಾಘಯಂತಿ ಹ್ಯಸತ್ತಮಾಃ
॥ ೩೭ ॥

ಗೃಹಸ್ಥಸ್ಯ ಕ್ರಿಯಾತ್ಯಾಗೋ ವ್ರತತ್ಯಾಗೋ ವಟೋರಪಿ ।
ತಪಸ್ವಿನೋ ಗ್ರಾಮಸೇವಾ ಭಿಕ್ಷೋರಿಂದ್ರಿಯಲೋಲತಾ
॥ ೩೮ ॥

ಆಶ್ರಮಾಪಸದಾ ಹ್ಯೇತೇ ಖಲ್ವಾಶ್ರಮವಿಡಂಬಕಾಃ ।
ದೇವಮಾಯಾವಿಮೂಢಾಂಸ್ತಾನುಪೇಕ್ಷೇತಾನುಕಂಪಯಾ
॥ ೩೯ ॥

ಆತ್ಮಾನಂ ಚೇದ್ವಿಜಾನೀಯಾತ್ಪರಂ ಜ್ಞಾನಧುತಾಶಯಃ ।
ಕಿಮಿಚ್ಛನ್ಕಸ್ಯ ವಾ ಹೇತೋರ್ದೇಹಂ ಪುಷ್ಣಾತಿ ಲಂಪಟಃ
॥ ೪೦ ॥

ಆಹುಃ ಶರೀರಂ ರಥಮಿಂದ್ರಿಯಾಣಿ
ಹಯಾನಭೀಷೂನ್ಮನ ಇಂದ್ರಿಯೇಶಮ್ ।
ವರ್ತ್ಮಾನಿ ಮಾತ್ರಾ ಧಿಷಣಾಂ ಚ ಸೂತಂ
ಸತ್ತ್ವಂ ಬೃಹದ್ಬಂಧುರಮೀಶಸೃಷ್ಟಮ್ ॥ ೪೧ ॥

ಅಕ್ಷಂ ದಶಪ್ರಾಣಮಧರ್ಮಧರ್ಮೌ
ಚಕ್ರೇಽಭಿಮಾನಂ ರಥಿನಂ ಚ ಜೀವಮ್ ।
ಧನುರ್ಹಿ ತಸ್ಯ ಪ್ರಣವಂ ಪಠಂತಿ
ಶರಂ ತು ಜೀವಂ ಪರಮೇವ ಲಕ್ಷ್ಯಮ್ ॥ ೪೨ ॥

ರಾಗೋ ದ್ವೇಷಶ್ಚ ಲೋಭಶ್ಚ
ಶೋಕಮೋಹೌ ಭಯಂ ಮದಃ ।
ಮಾನೋಽವಮಾನೋಽಸೂಯಾ ಚ
ಮಾಯಾ ಹಿಂಸಾ ಚ ಮತ್ಸರಃ ॥ ೪೩ ॥

ರಜಃ ಪ್ರಮಾದಃ ಕ್ಷುನ್ನಿದ್ರಾ ಶತ್ರವಸ್ತ್ವೇವಮಾದಯಃ ।
ರಜಸ್ತಮಃ ಪ್ರಕೃತಯಃ ಸತ್ತ್ವಪ್ರಕೃತಯಃ ಕ್ವಚಿತ್
॥ ೪೪ ॥

ಯಾವ ಸಂನ್ಯಾಸಿಯು ಮೊದಲಿಗೆ ಧರ್ಮ, ಅರ್ಥ ಮತ್ತು ಕಾಮ ಇವುಗಳ ಮೂಲ ಕಾರಣವಾದ ಗೃಹಸ್ಥಾಶ್ರಮವನ್ನು ತ್ಯಜಿಸಿ, ಪುನಃ ಅದನ್ನೇ ಸೇವಿಸತೊಡಗಿದರೆ, ನಿರ್ಲಜ್ಜನಾದ ಅವನು ತಾನು ಉಗುಳಿದುದನ್ನೇ ತಿನ್ನುವ ನಾಯಿಯೇ ಆಗಿದ್ದಾನೆ. ॥ ೩೬ ॥ ಯಾರು ತನ್ನ ಶರೀರವನ್ನು ಅನಾತ್ಮಾ, ಮೃತ್ಯುಗ್ರಸ್ತ ಮತ್ತು ಮಲ, ಕ್ರಿಮಿಗಳು, ಬೂದಿ ಎಂದು ತಿಳಿದಿದ್ದನೋ, ಅದನ್ನು ಮತ್ತೆ ಆತ್ಮಾ ಎಂದು ತಿಳಿದು ಪ್ರಶಂಸೆ ಮಾಡತೊಡಗಿದರೆ ಅವನು ಮೂಢನೇ ಸರಿ. ॥ ೩೭ ॥ ಕರ್ಮತ್ಯಾಗಿಯಾದ ಗೃಹಸ್ಥನು, ವ್ರತತ್ಯಾಗಿಯಾದ ಬ್ರಹ್ಮಚಾರಿ, ಊರಿನಲ್ಲಿ ವಾಸಿಸುವ ತಪಸ್ವೀ (ವಾನಪ್ರಸ್ಥ) ಮತ್ತು ಇಂದ್ರಿಯಲೋಲುಪನಾದ ಸಂನ್ಯಾಸಿ ಇವರು ನಾಲ್ವರೂ ಆಶ್ರಮಗಳಿಗೆ ಕಲಂಕಪ್ರಾಯರಾಗಿದ್ದಾರೆ. ವ್ಯರ್ಥವಾಗಿಯೇ ಆಶ್ರಮಗಳ ವೇಷವನ್ನು ಧರಿಸಿದವರು. ಭಗವಂತನ ಮಾಯೆಯಿಂದ ಮೋಹಿತರಾದ ಆ ಮೂಢರಲ್ಲಿ ಕನಿಕರಗೊಂಡು ಅವರ ವಿಷಯದಲ್ಲಿ ಉದಾಸೀನನಾಗಿರಬೇಕು. ॥ ೩೮-೩೯ ॥ ಆತ್ಮಜ್ಞಾನದಿಂದ ಎಲ್ಲ ವಾಸನೆಗಳನ್ನು ನಿರ್ಮೂಲನಗೊಳಿಸಿಕೊಂಡು ಪರಮಾತ್ಮ ಸಾಕ್ಷಾತ್ಕಾರಸುಖದ ಅನುಭವವನ್ನು ಪಡೆದ ಯಾವನೂ ಇಂದ್ರಿಯ ಲಂಪಟನಾಗುವುದಿಲ್ಲ. ಆತನು ಯಾವ ವಿಷಯದ ಬಯಕೆಯಿಂದ ಮತ್ತು ಯಾವ ಭೋಕ್ತೃವಿನ ತೃಪ್ತಿಗಾಗಿ ಇಂದ್ರಿಯ ಲಂಪಟನಾಗಿ ತನ್ನ ಶರೀರವನ್ನು ಪೋಷಿಸಿಯಾನು ? ॥ ೪೦ ॥

ಪರಮಾತ್ಮನ ಸಿದ್ಧಿಗಾಗಿ ಮಾಡುವ ಸಾಧನೆಯಲ್ಲಿ ಈ ಶರೀರವೇ ರಥವು-ಇಂದ್ರಿಯಗಳೇ ಕುದುರೆಗಳು, ಇಂದ್ರಿಯಗಳ ಒಡೆಯ ಮನಸ್ಸು ಲಗಾಮು. ಶಬ್ದಾದಿ ವಿಷಯಗಳೇ ಮಾರ್ಗವು. ಬುದ್ಧಿಯೇ ಸಾರಥಿ, ಚಿತ್ತವೇ ಭಗವಂತನಿಂದ ನಿರ್ಮಿತವಾದ ಕಟ್ಟುವ ವಿಶಾಲ ವಾದ ಹಗ್ಗ, ಹತ್ತು ಪ್ರಾಣಗಳೇ ಅಚ್ಚುಮರ, ಧರ್ಮ-ಅಧರ್ಮ ಗಳೇ ಚಕ್ರಗಳು. ಇದರ ಅಭಿಮಾನೀ ಜೀವನೇ ರಥಿಯೆಂದು ಹೇಳ ಲಾಗಿದೆ. ಓಂಕಾರವೇ ಆ ರಥಿಯ ಧನುಸ್ಸು, ಶುದ್ಧ ಜೀವಾತ್ಮನೇ ಬಾಣ ಮತ್ತು ಪರಮಾತ್ಮನೇ ಗುರಿಯಾಗಿದೆ ಎಂದು ಉಪನಿಷತ್ತು ಗಳು ಹೇಳುತ್ತವೆ. (ಈ ಓಂಕಾರದ ಮೂಲಕ ಅಂತರಾತ್ಮನನ್ನು ಪರ ಮಾತ್ಮನಲ್ಲಿ ಲೀನಗೊಳಿಸಬೇಕು.) ॥ ೪೧-೪೨ ॥ ರಾಗ, ದ್ವೇಷ, ಲೋಭ, ಶೋಕ, ಮೋಹ, ಭಯ, ಮದ, ಮಾನ, ಅಪಮಾನ, ಬೇರೆಯವರ ಗುಣಗಳಲ್ಲಿ ದೋಷ ನೋಡುವುದು ಛಲ, ಹಿಂಸೆ, ಇತರರ ಉನ್ನತಿಯನ್ನು ಕಂಡು ಹೊಟ್ಟೆಯುರಿ, ತೃಷ್ಣೆ ಪ್ರಮಾದ, ಹಸಿವು, ನಿದ್ದೆ – ಇವೆಲ್ಲವೂ ಜೀವಿಯ ಶತ್ರುಗಳು. ಇವುಗಳಲ್ಲದೆ ಇನ್ನೂ ಅನೇಕ ಶತ್ರುಗಳು ಅವನಿಗಿವೆ. ಅವುಗಳಲ್ಲಿ ರಜೋಗುಣ, ತಮೋಗುಣವೃತ್ತಿಗಳೇ ಹೆಚ್ಚಾಗಿವೆ. ಕೆಲ-ಕೆಲವು ಸತ್ತ್ವಗುಣ ಪ್ರಧಾನವೂ ಆಗಿರುತ್ತವೆ. ॥ ೪೩-೪೪ ॥ ಈ ಮನುಷ್ಯಶರೀರವೆಂಬ ರಥವು ತನ್ನ ವಶದಲ್ಲಿದ್ದು ಇಂದ್ರಿಯ, ಮನಸ್ಸು – ಮುಂತಾದ ಎಲ್ಲ ಸಾಧನೆಗಳು ಚೆನ್ನಾಗಿರುವಷ್ಟರೊಳಗೆ ಶ್ರೀಗುರುದೇವರ ಚರಣ ಕಮಲಗಳ ಸೇವೆ-ಪೂಜೆಗಳಿಂದ ಹರಿತವಾಗಿ ಮಾಡಲ್ಪಟ್ಟ ಜ್ಞಾನ ವೆಂಬ ತೀಕ್ಷ್ಣವಾದ ಖಡ್ಗವನ್ನು ಎತ್ತಿಕೊಂಡು ಶ್ರೀಭಗವಂತನ ಬಲ ದಿಂದ ಈ ಎಲ್ಲ ಶತ್ರುಗಳನ್ನು ನಾಶಪಡಿಸಿ, ತನ್ನ ಸ್ವಾರಾಜ್ಯವೆಂಬ ಸಿಂಹಾಸನದಲ್ಲಿ

ಯಾವನ್ನೃಕಾಯರಥಮಾತ್ಮವಶೋಪಕಲ್ಪಂ
ಧತ್ತೇ ಗರಿಷ್ಠ ಚರಣಾರ್ಚನಯಾ ನಿಶಾತಮ್ ।
ಜ್ಞಾನಾಸಿಮಚ್ಯುತಬಲೋ ದಧದಸ್ತಶತ್ರುಃ
ಸ್ವಾನಂದತುಷ್ಟ ಉಪಶಾಂತ ಇದಂ ವಿಜಹ್ಯಾತ್ ॥ ೪೫ ॥

ನೋ ಚೇತ್ಪ್ರಮತ್ತಮಸದಿಂದ್ರಿಯವಾಜಿಸೂತಾ
ನೀತ್ವೋತ್ಪಥಂ ವಿಷಯದಸ್ಯುಷು ನಿಕ್ಷಿಪಂತಿ ।
ತೇ ದಸ್ಯವಃ ಸಹಯಸೂತಮಮುಂ ತಮೋಽಂಧೇ
ಸಂಸಾರಕೂಪ ಉರುಮೃತ್ಯುಭಯೇ ಕ್ಷಿಪಂತಿ ॥ ೪೬ ॥

ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ವೈದಿಕಮ್ ।
ಆವರ್ತೇತ ಪ್ರವೃತ್ತೇನ ನಿವೃತ್ತೇನಾಶ್ನುತೇಽಮೃತಮ್ ॥ ೪೭ ॥

ಹಿಂಸ್ರಂ ದ್ರವ್ಯಮಯಂ ಕಾಮ್ಯಮಗ್ನಿಹೋತ್ರಾದ್ಯಶಾಂತಿದಮ್ ।
ದರ್ಶಶ್ಚ ಪೂರ್ಣಮಾಸಶ್ಚ ಚಾತುರ್ಮಾಸ್ಯಂ ಪಶುಃ ಸುತಃ ॥ ೪೮ ॥

ಏತದಿಷ್ಟಂ ಪ್ರವೃತ್ತಾಖ್ಯಂ ಹುತಂ ಪ್ರಹುತಮೇವ ಚ ।
ಪೂರ್ತಂ ಸುರಾಲಯಾರಾಮಕೂಪಾಜೀವ್ಯಾದಿಲಕ್ಷಣಮ್ ॥ ೪೯ ॥

ದ್ರವ್ಯಸೂಕ್ಷ್ಮವಿಪಾಕಶ್ಚ ಧೂಮೋ ರಾತ್ರಿರಪಕ್ಷಯಃ ।
ಅಯನಂ ದಕ್ಷಿಣಂ ಸೋಮೋ ದರ್ಶ ಓಷಧಿವೀರುಧಃ ॥ ೫೦ ॥

ಅನ್ನಂ ರೇತ ಇತಿ ಕ್ಷ್ಮೇಶ ಪಿತೃಯಾನಂ ಪುನರ್ಭವಃ ।
ಏಕೈಕಶ್ಯೇನಾನುಪೂರ್ವಂ ಭೂತ್ವಾ ಭೂತ್ವೇಹ ಜಾಯತೇ ॥ ೫೧ ॥

ನಿಷೇಕಾದಿಶ್ಮಶಾನಾಂತೈಃ ಸಂಸ್ಕಾರೈಃ ಸಂಸ್ಕೃತೋ ದ್ವಿಜಃ ।
ಇಂದ್ರಿಯೇಷು ಕ್ರಿಯಾಯಜ್ಞಾನ್ ಜ್ಞಾನದೀಪೇಷು ಜುಹ್ವತಿ ॥ ೫೨ ॥

ವಿರಾಜಮಾನನಾಗಬೇಕು. ಮತ್ತೆ ಪುನಃ ಅತ್ಯಂತ ಶಾಂತಭಾವದಿಂದ ಈ ಶರೀರವನ್ನು ಪರಿತ್ಯಾಗಮಾಡ ಬೇಕು. ॥ ೪೫ ॥ ಇಲ್ಲದಿದ್ದರೆ ಸ್ವಲ್ಪವೇ ಪ್ರಮಾದ ಉಂಟಾದರೂ ಈ ಇಂದ್ರಿಯಗಳೆಂಬ ದುಷ್ಟ ಕುದುರೆಗಳು ಮತ್ತು ಅವುಗಳೊಂದಿಗೆ ಮಿತ್ರತೆಯುಳ್ಳ ಬುದ್ಧಿ ರೂಪೀ ಸಾರಥಿಯು ರಥದ ಒಡೆಯ ಜೀವನನ್ನು ವಿರುದ್ಧವಾದ ದಾರಿಯಲ್ಲಿ ಕೊಂಡೊಯ್ದು ವಿಷಯ ರೂಪೀ ದರೋಡೆಗಾರರ ಕೈಗೊಪ್ಪಿಸುವರು. ಆ ಕಳ್ಳರು ಸಾರಥಿ ಮತ್ತು ಕುದುರೆಗಳೊಂದಿಗೆ ಈ ಜೀವನನ್ನು ಮೃತ್ಯುವಿಗಿಂತಲೂ ಅತ್ಯಂತ ಭಯಂಕರವಾದ ಸಂಸಾರವೆಂಬ ಕಗ್ಗತ್ತಲೆಯ ಬಾವಿಯೊಳಗೆ ತಳ್ಳಿಬಿಡುವರು. ॥ ೪೬ ॥

ವೈದಿಕ ಕರ್ಮಗಳಲ್ಲಿ ಎರಡು ವಿಧಗಳಿವೆ. ಒಂದು ಪ್ರವೃತ್ತಿಪರ ವಾದುದು. ಇದು ವೃತ್ತಿಗಳನ್ನು ಅವುಗಳ ವಿಷಯಗಳ ಕಡೆಗೆ ಕೊಂಡೊಯ್ಯುವುದು. ಇನ್ನೊಂದು ನಿವೃತ್ತಿಪರವಾದುದು. ಇದು ವೃತ್ತಿಗಳನ್ನು ಅವುಗಳ ವಿಷಯಗಳಿಂದ ಹಿಂದಿರುಗಿಸಿ ಶಾಂತ ಹಾಗೂ ಆತ್ಮಸಾಕ್ಷಾತ್ಕಾರಕ್ಕೆ ಯೋಗ್ಯವಾಗಿಸುತ್ತದೆ. ಪ್ರವೃತ್ತಿಪರ ಕರ್ಮಮಾರ್ಗದಿಂದ ಮತ್ತೆ-ಮತ್ತೆ ಹುಟ್ಟು-ಸಾವುಗಳು ಒದಗು ತ್ತವೆ ಮತ್ತು ನಿವೃತ್ತಿಪರ ಭಕ್ತಿಮಾರ್ಗ ಅಥವಾ ಜ್ಞಾನಮಾರ್ಗದಿಂದ ಪರಮಾತ್ಮನ ಪ್ರಾಪ್ತಿಯುಂಟಾಗುತ್ತದೆ. ॥ ೪೭ ॥ ಶ್ಯೇನಯಾಗಾದಿ ಹಿಂಸಾಮಯ ಕರ್ಮ, ಅಗ್ನಿಹೋತ್ರ, ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಪಶುಯಾಗ, ಸೋಮಯಾಗ, ವೈಶ್ವದೇವ, ಬಲಿಹರಣ ಮುಂತಾದ ದ್ರವ್ಯಮಯ ಕರ್ಮಗಳನ್ನು 'ಇಷ್ಟ'ವೆಂದು ಹೇಳುತ್ತಾರೆ. ದೇವಾಲಯ, ಹೂದೋಟ, ಕೆರೆ-ಕಟ್ಟೆ ಮುಂತಾದವು ಗಳನ್ನು ನಿರ್ಮಿಸುವುದು, ಅರವಟ್ಟಿಗೆ ಇರಿಸುವುದು ಮುಂತಾದವು ಗಳು 'ಪೂರ್ತ' ಕರ್ಮಗಳಾಗಿವೆ. ಇವೆಲ್ಲವೂ ಪ್ರವೃತ್ತಿಪರವಾದ ಕರ್ಮಗಳಾಗಿವೆ. ಸಕಾಮಭಾವದಿಂದ ಇವುಗಳನ್ನು ಆಚರಿಸಿದರೆ ಇವು ಅಶಾಂತಿಗೆ ಕಾರಣವಾಗುತ್ತವೆ. ॥ ೪೮-೪೯ ॥ ಪ್ರವೃತ್ತಿ ಪರಾಯಣನಾದ ಮನುಷ್ಯನು ಸತ್ತಮೇಲೆ ಚರು-ಪುರೋಡಾಶ ಮುಂತಾದ ಯಜ್ಞಸಂಬಂಧೀ ದ್ರವ್ಯಗಳ ಸೂಕ್ಷ್ಮವಾದ ಭಾಗದಿಂದ ಉಂಟಾದ ಶರೀರವನ್ನು ಧರಿಸಿ ಧೂಮಾಭಿಮಾನಿದೇವತೆಗಳ ಬಳಿಗೆ ಹೋಗುತ್ತಾನೆ. ಮತ್ತೆ ಕ್ರಮವಾಗಿ ರಾತ್ರಿ, ಕೃಷ್ಣಪಕ್ಷ, ದಕ್ಷಿಣಾ ಯನ – ಇವುಗಳ ಅಭಿಮಾನಿದೇವತೆಗಳ ಬಳಿಗೆ ಹೋಗಿ ಚಂದ್ರ ಲೋಕಕ್ಕೆ ತಲುಪುತ್ತಾನೆ. ಅಲ್ಲಿಯ ಭೋಗಗಳು ಮುಗಿದಾಗ ಅಮಾ ವಾಸ್ಯೆಯ ಚಂದ್ರನಂತೆ ಕ್ಷೀಣನಾಗಿ ಮಳೆಯ ಮೂಲಕ ಕ್ರಮವಾಗಿ ಔಷಧಿ, ಲತೆಗಳು,. ಅನ್ನ ಮತ್ತು ವೀರ್ಯರೂಪದಲ್ಲಿ ಪರಿಣಾಮ ಹೊಂದಿ ಪಿತೃಯಾನದಿಂದ ಪುನಃ ಸಂಸಾರದಲ್ಲಿ ಹುಟ್ಟುವನು. ॥ ೫೦-೫೧ ॥ ಯುಧಿಷ್ಠಿರನೇ! ಗರ್ಭಾಧಾನದಿಂದ ಹಿಡಿದು ಅಂತ್ಯೇಷ್ಟಿವರೆಗೆ ಎಲ್ಲ ಸಂಸ್ಕಾರಗಳು ಯಾರಿಗೆ ಆಗುತ್ತವೋ ಅವನಿಗೆ 'ದ್ವಿಜ' ಎಂದು ಹೇಳುತ್ತಾರೆ. ಅವರಲ್ಲಿ ಕೆಲವರು ಹಿಂದೆ ಹೇಳಿದ ಪ್ರವೃತ್ತಿಮಾರ್ಗವನ್ನು ಅನುಷ್ಠಾನಮಾಡಿದರೆ, ಕೆಲವರು ಮುಂದೆ ಹೇಳಲಿರುವ ನಿವೃತ್ತಿಮಾರ್ಗವನ್ನು ಅನುಸರಿಸುತ್ತಾರೆ. ನಿವೃತ್ತಿ ಪರಾಯಣ ಮನುಷ್ಯನು ಇಷ್ಟ-ಪೂರ್ತ ಮುಂತಾದ ಕರ್ಮ ಗಳಿಂದ ಉಂಟಾಗುವ ಸಮಸ್ತ ಯಜ್ಞಗಳನ್ನು ವಿಷಯಗಳ ಜ್ಞಾನ ಮಾಡಿಸುವ ಇಂದ್ರಿಯಗಳಲ್ಲಿ ಹವನ ಮಾಡುತ್ತಾನೆ. ॥ ೫೨ ॥

ಇಂದ್ರಿಯಾಣಿ ಮನಸ್ಯೂರ್ಮೌ ವಾಚಿ ವೈಕಾರಿಕಂ ಮನಃ ।
ವಾಚಂ ವರ್ಣಸಮಾಮ್ನಾಯೇ ತಮೋಂಕಾರೇ ಸ್ವರೇ ನ್ಯಸೇತ್ ।
ಓಂಕಾರಂ ಬಿಂದೌ ನಾದೇ ತಂ ತಂ ತು ಪ್ರಾಣೇ ಮಹತ್ಯಮುಮ್ ॥ ೫೩ ॥

ಇಂದ್ರಿಯಗಳನ್ನು ದರ್ಶನಾದಿ ಸಂಕಲ್ಪರೂಪೀ ಮನಸ್ಸಿನಲ್ಲಿ ವೈಕಾರಿಕ ಮನಸ್ಸನ್ನು ಪರಾವಾಣಿಯಲ್ಲೂ ಮತ್ತು ಪರಾವಾಣಿಯನ್ನು ವರ್ಣಸಮುದಾಯದಲ್ಲಿ, ವರ್ಣಸಮುದಾಯವನ್ನು 'ಅ-ಉ-ಮ್' ಈ ಮೂರು ಸ್ವರಗಳ ರೂಪದಲ್ಲಿರುವ ಓಂಕಾರದಲ್ಲಿ, ಓಂಕಾರವನ್ನು ಬಿಂದುವಿನಲ್ಲಿ, ಬಿಂದುವನ್ನು ನಾದದಲ್ಲಿ, ನಾದವನ್ನು ಸೂತ್ರಾತ್ಮ ಪ್ರಾಣದಲ್ಲಿ ಹಾಗೂ ಪ್ರಾಣವನ್ನು ಬ್ರಹ್ಮನಲ್ಲಿ ಲೀನಗೊಳಿಸುತ್ತಾನೆ. ॥ ೫೩ ॥ ಆ ನಿವೃತ್ತಿನಿಷ್ಠ ಜ್ಞಾನಿಯು ಕ್ರಮವಾಗಿ ಅಗ್ನಿ, ಸೂರ್ಯ, ಹಗಲು, ಸಾಯಂಕಾಲ, ಶುಕ್ಲಪಕ್ಷ, ಪೌರ್ಣಮಿ ಮತ್ತು ಉತ್ತರಾಯಣದ ಅಭಿಮಾನಿದೇವತೆಗಳ ಬಳಿಗೆ ಹೋಗಿ ಬ್ರಹ್ಮಲೋಕಕ್ಕೆ ತಲುಪುತ್ತಾನೆ. ಅಲ್ಲಿಯ ಭೋಗಗಳು ಮುಗಿದಾಗ ಅವನು ಸ್ಥೂಲೋಪಾಧಿಕ 'ವಿಶ್ವ' ವೆಂಬ ತನ್ನ ಸ್ಥೂಲ ಉಪಾಧಿಯನ್ನು ಸೂಕ್ಷ್ಮದಲ್ಲಿ ಲೀನಗೊಳಿಸಿ, ಸೂಕ್ಷ್ಮೋಪಾಧಿಕ 'ತೈಜಸ'ನಾಗುತ್ತಾನೆ. ಮತ್ತೆ ಸೂಕ್ಷ್ಮ ಉಪಾಧಿಯನ್ನು ಕಾರಣದಲ್ಲಿ ಲಯಗೊಳಿಸಿ, ಕಾರಣೋಪಾಧಿಕ 'ಪ್ರಾಜ್ಞ' ರೂಪದಿಂದ ಸ್ಥಿತನಾಗುತ್ತಾನೆ. ಮತ್ತೆ ಎಲ್ಲರ ಸಾಕ್ಷಿರೂಪದಿಂದ ಸರ್ವತ್ರ ತುಂಬಿಹೋದ ಕಾರಣ ಸಾಕ್ಷಿಯ ಸ್ವರೂಪದಲ್ಲೇ ಕಾರಣೋಪಾಧಿಯನ್ನು ಲಯಗೊಳಿಸಿ ತುರೀಯ ರೂಪದಲ್ಲಿ ಸ್ಥಿತನಾಗುತ್ತಾನೆ. ಹೀಗೆ ದೃಶ್ಯಗಳು ಲಯವಾಗಿ ಹೋದಮೇಲೆ ಅವನು ಶುದ್ಧ ಆತ್ಮನಾಗಿ ಉಳಿಯುವನು. ಇದೇ ಮೋಕ್ಷಪದವಾಗಿದೆ ॥ ೫೪ ॥

ಅಗ್ನಿಃ ಸೂರ್ಯೋ ದಿವಾ ಪ್ರಾಹ್ಣಃ
ಶುಕ್ಲೋ ರಾಕೋತ್ತರಂ ಸ್ವರಾಟ್ ।
ವಿಶ್ವಶ್ಚ ತೈಜಸಃ ಪ್ರಾಜ್ಞ-
ಸ್ತುರ್ಯ ಆತ್ಮಾ ಸಮನ್ವಯಾತ್ ॥ ೫೪ ॥

ದೇವಯಾನಮಿದಂ ಪ್ರಾಹುರ್ಭೂತ್ವಾ ಭೂತ್ವಾನುಪೂರ್ವಶಃ ।
ಆತ್ಮಯಾಜ್ಯುಪಶಾಂತಾತ್ಮಾ ಹ್ಯಾತ್ಮಸ್ಥೋ ನ ನಿವರ್ತತೇ ॥ ೫೫ ॥

ಇದನ್ನು 'ದೇವಯಾನ' ಮಾರ್ಗವೆಂದು ಹೇಳುತ್ತಾರೆ. ಈ ಮಾರ್ಗದಿಂದ ಹೋಗುವವರು ಆತ್ಮೋಪಾಸಕ ಸಂಸಾರದಿಂದ ನಿವೃತ್ತರಾಗಿ ಕ್ರಮವಾಗಿ ಒಬ್ಬರಿಂದ ಮತ್ತೊಬ್ಬ ದೇವತೆಯ ಬಳಿಗೆ ಹೋಗುತ್ತಾ , ಬ್ರಹ್ಮ ಲೋಕಕ್ಕೆ ಹೋಗಿ ನೆಲೆಗೊಳ್ಳುವನು. ಅವನು ಪ್ರವೃತ್ತಿಮಾರ್ಗಿಯಂತೆ ಮತ್ತೆ ಹುಟ್ಟು-ಸಾವುಗಳ ಚಕ್ರದಲ್ಲಿ ಬೀಳುವುದಿಲ್ಲ. ॥ ೫೫ ॥

ಯ ಏತೇ ಪಿತೃದೇವಾನಾಮಯನೇ ವೇದನಿರ್ಮಿತೇ ।
ಶಾಸ್ತ್ರೇಣ ಚಕ್ಷುಷಾ ವೇದ ಜನಸ್ಥೋಽಪಿ ನ ಮುಹ್ಯತಿ ॥ ೫೬ ॥

ಈ ಪಿತೃಯಾನ ಮತ್ತು ದೇವಯಾನ ಮಾರ್ಗಗಳೆರಡೂ ವೇದೋಕ್ತವೇ ಆಗಿವೆ. ಶಾಸ್ತ್ರೀಯ ದೃಷ್ಟಿಯಿಂದ ಇವನ್ನು ತತ್ತ್ವತಃ ಅರಿತುಕೊಳ್ಳುವವನು ಶರೀರದಲ್ಲೇ ಸ್ಥಿತನಾಗಿದ್ದರೂ ಮೋಹಿತನಾಗುವುದಿಲ್ಲ. ॥ ೫೬ ॥ ಶರೀರಗಳು ಹುಟ್ಟುವ ಮೊದಲೂ ಕೂಡ ಕಾರಣರೂಪದಿಂದ ಮತ್ತು ಅವುಗಳು ಅಂತ್ಯವಾದ ಬಳಿಕವೂ ಅವುಗಳ ಅವಧಿರೂಪದಿಂದ ಯಾವುದು ಸ್ವಯಂ ಇರುತ್ತದೋ, ಯಾವುದು ಭೋಗರೂಪದಿಂದ ಹೊರಗೆ ಮತ್ತು ಭೋಕ್ತಾರೂಪದಿಂದ ಒಳಗಡೆ ಹಾಗೂ ಉಚ್ಚ-ನೀಚ, ತಿಳಿಯುವುದು-ತಿಳಿಯುವ ವಿಷಯ, ವಾಣಿ-ವಾಣಿಯ ವಿಷಯ, ಅಂಧಕಾರ-ಪ್ರಕಾಶ ಮುಂತಾದ ವಸ್ತುಗಳ ರೂಪದಲ್ಲಿ ಏನೆಲ್ಲ ದೊರೆಯುತ್ತದೋ ಅವೆಲ್ಲ ಸ್ವಯಂ ಪರಮಾತ್ಮನೇ ಆಗಿದ್ದಾನೆ. ॥ ೫೭ ॥

ಆದಾವಂತೇ ಜನಾನಾಂ ಸದ್-
ಬಹಿರಂತಃ ಪರಾವರಮ್ ।
ಜ್ಞಾನಂ ಜ್ಞೇಯಂ ವಚೋ ವಾಚ್ಯಂ
ತಮೋ ಜ್ಯೋತಿಸ್ತ್ವಯಂ ಸ್ವಯಮ್ ॥ ೫೭ ॥

ಕನ್ನಡಿಯೇ ಮುಂತಾದವುಗಳಲ್ಲಿ ಕಾಣುವ ಪ್ರತಿಬಿಂಬವು ವಿಚಾರ ಮತ್ತು ಯುಕ್ತಿಯಿಂದ ಬಾಧಿತವಾಗುತ್ತದೆ. ಅದರಲ್ಲಿ ಅವರ ಅಸ್ತಿತ್ವವೇ ಇಲ್ಲ, ಆದರೂ ಅದು ವಸ್ತುವಿನ ರೂಪದಲ್ಲಿ ಕಂಡುಬರುತ್ತದೆ. ಹಾಗೆಯೇ ಇಂದ್ರಿಯಗಳ ಮೂಲಕ ಕಂಡುಬರುವ ವಸ್ತುಗಳ ಭೇದ-ಭಾವಗಳೂ ವಿಚಾರ, ಯುಕ್ತಿ ಮತ್ತು ಆತ್ಮಾನುಭವದಿಂದ ಅಸಂಭವವಾಗಿರುವ ಕಾರಣ ವಾಸ್ತವವಾಗಿ ಇಲ್ಲದಿದ್ದರೂ ಸತ್ಯದಂತೆ ಕಂಡುಬರುತ್ತದೆ. ॥ ೫೮ ॥

ಆಬಾಧಿತೋಽಪಿ ಹ್ಯಾಭಾಸೋ ಯಥಾ ವಸ್ತುತಯಾ ಸ್ಮೃತಃ ।
ದುರ್ಘಟತ್ವಾದೈಂದ್ರಿಯಕಂ ತದ್ವದರ್ಥವಿಕಲ್ಪಿತಮ್ ॥ ೫೮ ॥

ಕ್ಷಿತ್ಯಾದೀನಾಮಿಹಾರ್ಥಾನಾಂ ಛಾಯಾ ನ ಕತಮಾಪಿ ಹಿ ।
ನ ಸಂಘಾತೋ ವಿಕಾರೋಽಪಿ ನ ಪೃಥಙ್ನಾನ್ವಿತೋ ಮೃಷಾ ॥ ೫೯ ॥

ಧಾತವೋಽವಯವಿತ್ವಾಚ್ಚ ತನ್ಮಾತ್ರಾವಯವೈರ್ವಿನಾ ।
ನ ಸ್ಯುರ್ಹ್ಯಸತ್ಯವಯವಿನ್ಯಸನ್ನವಯವೋಽಂತತಃ ॥ ೬೦ ॥

ಸ್ಯಾತ್ಸಾದೃಶ್ಯಭ್ರಮಸ್ತಾವದ್ ವಿಕಲ್ಪೇ ಸತಿ ವಸ್ತುನಃ ।
ಜಾಗ್ರತ್ಸ್ವಾಪೌ ಯಥಾ ಸ್ವಪ್ನೇ ತಥಾ ವಿಧಿನಿಷೇಧತಾ ॥ ೬೧ ॥

ಭಾವಾದ್ವೈತಂ ಕ್ರಿಯಾದ್ವೈತಂ ದ್ರವ್ಯಾದ್ವೈತಂ ತಥಾಽಽತ್ಮನಃ ।
ವರ್ತಯನ್ಸ್ವಾನುಭೂತ್ಯೇಹ ತ್ರೀನ್ಸ್ವಪ್ನಾನ್ ಧುನುತೇ ಮುನಿಃ ॥ ೬೨ ॥

ಕಾರ್ಯಕಾರಣವಸ್ತ್ವೈಕ್ಯಮರ್ಶನಂ ಪಟತಂತುವತ್ ।
ಅವಸ್ತುತ್ವಾದ್ವಿಕಲ್ಪಸ್ಯ ಭಾವಾದ್ವೈತಂ ತದುಚ್ಯತೇ ॥ ೬೩ ॥

ಯದ್ಬ್ರಹ್ಮಣಿ ಪರೇ ಸಾಕ್ಷಾತ್ಸರ್ವಕರ್ಮಸಮರ್ಪಣಮ್ ।
ಮನೋವಾಕ್ತನುಭಿಃ ಪಾರ್ಥ ಕ್ರಿಯಾದ್ವೈತಂ ತದುಚ್ಯತೇ ॥ ೬೪ ॥

ಆತ್ಮಜಾಯಾಸುತಾದೀನಾಮನ್ಯೇಷಾಂ ಸರ್ವದೇಹಿನಾಮ್ ।
ಯತ್ಸ್ವಾರ್ಥಕಾಮಯೋರೈಕ್ಯಂ ದ್ರವ್ಯಾದ್ವೈತಂ ತದುಚ್ಯತೇ ॥ ೬೫ ॥

ಯದ್ಯಸ್ಯ ವಾನಿಷಿದ್ಧಂ ಸ್ಯಾದ್ಯೇನ ಯತ್ರ ಯತೋ ನೃಪ ।
ಸ ತೇನೇಹೇತ ಕರ್ಮಾಣಿ ನರೋ ನಾನ್ಯೈರನಾಪದಿ ॥ ೬೬ ॥

ಪೃಥಿವಿಯೇ ಮುಂತಾದ ಪಂಚಭೂತಗಳಿಂದ ಈ ಶರೀರದ ನಿರ್ಮಾಣವಾಗಲಿಲ್ಲ. ವಾಸ್ತವಿಕ ದೃಷ್ಟಿಯಿಂದ ನೋಡಿದರೆ ಅದು ಈ ಪಂಚಭೂತಗಳ ಸಮುದಾಯವೂ ಅಲ್ಲ ಮತ್ತು ವಿಕಾರ ಅಥವಾ ಪರಿಣಾಮವೂ ಅಲ್ಲ. ಏಕೆಂದರೆ, ಇದು ತನ್ನ ಅವಯವಗಳಿಂದ ಬೇರೆಯಾಗಿಲ್ಲ ಮತ್ತು ಅವುಗಳಲ್ಲಿ ಸೇರಿಕೊಂಡೂ ಇಲ್ಲ. ಆದ್ದರಿಂದ ಮಿಥ್ಯೆಯಾಗಿದೆ. ॥ ೫೯ ॥ ಹೀಗೆಯೇ ಶರೀರದ ಕಾರಣರೂಪೀ ಪಂಚಭೂತಗಳೂ ಕೂಡ ಅವಯವಿಯಾದ್ದರಿಂದ ತನ್ನ ಅವಯವಗಳಿಂದ – ಸೂಕ್ಷ್ಮ ಭೂತಗಳಿಂದ ಭಿನ್ನವಾಗಿಲ್ಲ. ಅವಯವರೂಪವೇ ಆಗಿವೆ. ಎಷ್ಟೇ ಹುಡುಕಿದರೂ ಅವಯವಗಳಲ್ಲದೆ ಅವಯವಿಯ ಅಸ್ತಿತ್ವವು ದೊರೆಯುವುದಿಲ್ಲ. ಅದು ಅಸತ್ತೆಂದೇ ಸಿದ್ಧವಾಗುತ್ತದೆ. ಆಗ ಈ ಅವಯವಗಳೂ ಅಸತ್ಯವೆಂದು ತಾನಾಗಿಯೇ ಸಿದ್ಧವಾಗುತ್ತದೆ. ॥ ೬೦ ॥ ಅಜ್ಞಾನದ ಕಾರಣ ಒಂದೇ ಪರಮತತ್ತ್ವದಲ್ಲಿ ಅನೇಕ ವಸ್ತುಗಳ ಭೇದಗಳು ಕಂಡುಬರುತ್ತಾ ಇರುವ ತನಕ ಯಾವ ವಸ್ತುವು ಮೊದಲಿಗೆ ಇತ್ತೋ ಅದು ಈಗಲೂ ಇದೆ ಎಂಬ ಭ್ರಮೆಯೂ ಇರಬಲ್ಲದು ಮತ್ತು ಸ್ವಪ್ನದಲ್ಲಿಯೂ ಹೇಗೆ ಜಾಗ್ರತ್, ಸ್ವಪ್ನ ಮುಂತಾದ ಅವಸ್ಥೆಗಳ ಬೇರೆ-ಬೇರೆ ಅನುಭವಗಳು ಆಗಿಯೇ ಆಗುತ್ತದೆ ಹಾಗೂ ಅವುಗಳಲ್ಲಿಯೂ ವಿಧಿನಿಷೇಧದ ಶಾಸ್ತ್ರ ಇರುತ್ತದೆ – ಹಾಗೆಯೇ ಈ ಭಿನ್ನತೆಗಳ ಅಸ್ತಿತ್ವದ ಮೋಹ ಇರುವ ತನಕ ಇಲ್ಲಿಯೂ ವಿಧಿನಿಷೇಧದ ಶಾಸ್ತ್ರವು ಇದ್ದೇ ಇರುತ್ತದೆ. ॥ ೬೧ ॥

ಯಾರು ವಿಚಾರಶೀಲನಾದ ಮನುಷ್ಯನು ಸ್ವಾನುಭೂತಿಯಿಂದ ಆತ್ಮನ ತ್ರಿವಿಧ ಅದ್ವೈತಗಳ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೋ – ಅದು ಜಾಗ್ರತ್, ಸ್ವಪ್ನ ಸುಷುಪ್ತಿ ಮತ್ತು ದ್ರಷ್ಟಾ, ದರ್ಶನ ಮತ್ತು ದೃಶ್ಯದ ಭೇದರೂಪೀ ಸ್ವಪ್ನವನ್ನು ತೊಡೆದುಹಾಕುತ್ತದೆ. ಭಾವಾದ್ವೈತ, ಕ್ರಿಯಾದ್ವೈತ ಮತ್ತು ದ್ರವ್ಯಾದ್ವೈತ – ಎಂಬ ಮೂರು ಪ್ರಕಾರದ ಅದ್ವೈತಗಳಿವೆ. ॥ ೬೨ ॥ ವಸ್ತ್ರವು ಸೂತ್ರರೂಪವೇ ಆಗಿರುವಂತೆಯೇ ಕಾರ್ಯವು ಕಾರಣಮಾತ್ರವೇ ಆಗಿದೆ. ಏಕೆಂದರೆ, ಭೇದವಾದರೋ ವಾಸ್ತವವಾಗಿ ಇಲ್ಲವೇ ಇಲ್ಲ. ಹೀಗೆ ಎಲ್ಲದರ ಏಕತೆಯ ವಿಚಾರವೇ 'ಭಾವಾದ್ವೈತ'ವಾಗಿದೆ. ॥ ೬೩ ॥ ಯುಧಿಷ್ಠಿರನೇ ! ಮನಸ್ಸು, ಮಾತು ಮತ್ತು ಶರೀರಗಳಿಂದಾಗುವ ಎಲ್ಲ ಕರ್ಮಗಳು ಸ್ವಯಂ ಪರಬ್ರಹ್ಮ ಪರಮಾತ್ಮನಲ್ಲೇ ಆಗುತ್ತಾ ಇವೆ, ಅದರಲ್ಲೇ ಅಧ್ಯಸ್ತವಾಗಿದೆ – ಈ ಭಾವದಿಂದ ಸಮಸ್ತ ಕರ್ಮ ಗಳನ್ನು ಸಮರ್ಪಿಸುವುದು 'ಕ್ರಿಯಾದ್ವೈತ'ವಾಗಿದೆ ॥ ೬೪ ॥ ಪತ್ನೀ-ಪುತ್ರಾದಿ ನೆಂಟರಿಷ್ಟರು ಹಾಗೂ ಪ್ರಪಂಚದ ಬೇರೆ ಸಮಸ್ತ ಪ್ರಾಣಿಗಳ ಹಾಗೂ ತನ್ನ ಸ್ವಾರ್ಥ ಮತ್ತು ಭೋಗಗಳು ಒಂದೇ ಆಗಿವೆ. ಅವುಗಳಲ್ಲಿ ತನ್ನದು ಹಾಗೂ ಪರರದು ಎಂಬ ಭೇದವೇ ಇಲ್ಲ – ಈ ವಿಧದ ವಿಚಾರ 'ದ್ರವ್ಯಾದ್ವೈತ'ವಾಗಿದೆ. ॥ ೬೫ ॥

ಯುಧಿಷ್ಠಿರನೇ ! ಯಾವ ಮನುಷ್ಯನಿಗೆ ಯಾವ ದ್ರವ್ಯವನ್ನು ಯಾವ ಸಮಯದಲ್ಲಿ ಯಾವ ಉಪಾಯದಿಂದ ಯಾರಿಂದ ಸ್ವೀಕರಿಸುವುದು ಶಾಸ್ತ್ರದ ಆಜ್ಞೆಗೆ ವಿರುದ್ಧವಲ್ಲವೋ ಅವನು ಅದರಿಂದಲೇ ಎಲ್ಲ ಕಾರ್ಯಗಳನ್ನು ನೆರವೇರಿಸಿಕೊಳ್ಳಬೇಕು. ಆಪತ್ಕಾಲವನ್ನು ಬಿಟ್ಟು ಇದರಿಂದ ಬೇರೆಯದನ್ನು ಮಾಡಬಾರದು. ॥ ೬೬ ॥

ಏತೈರನ್ಯೈಶ್ಚ ವೇದೋಕ್ತೈರ್ವರ್ತಮಾನಃ ಸ್ವಕರ್ಮಭಿಃ ।
ಗೃಹೇऽಪ್ಯಸ್ಯ ಗತಿಂ ಯಾಯಾದ್ರಾಜನ್‌ಸ್ತದ್ಭಕ್ತಿಭಾಙ್ನರಃ ॥ ೬೭ ॥

ಯಥಾ ಹಿ ಯೂಯಂ ನೃಪದೇವ ದುಸ್ತ್ಯಜಾ-
ದಾಪದ್ಗಣಾದುತ್ತರತಾತ್ಮನಃ ಪ್ರಭೋಃ ।
ಯತ್ಪಾದಪಂಕೇರುಹಸೇವಯಾ ಭವಾ-
ನಹಾರ್ಷೀನ್ನಿರ್ಜಿತದಿಗ್ಗಜಃ ಕ್ರತೂನ್ ॥ ೬೮ ॥

ಅಹಂ ಪುರಾಭವಂ ಕಶ್ಚಿದ್ಗಂಧರ್ವ ಉಪಬರ್ಹಣಃ ।
ನಾಮ್ನಾತೀತೇ ಮಹಾಕಲ್ಪೇ ಗಂಧರ್ವಾಣಾಂ ಸುಸಮ್ಮತಃ ॥ ೬೯ ॥

ರೂಪಪೇಶಲಮಾಧುರ್ಯಸೌಗಂಧ್ಯಪ್ರಿಯದರ್ಶನಃ ।
ಸ್ತ್ರೀಣಾಂ ಪ್ರಿಯತಮೋ ನಿತ್ಯಂ ಮತ್ತಸ್ತು ಪುರುಲಂಪಟಃ ॥ ೭೦ ॥

ಏಕದಾ ದೇವಸತ್ರೇ ತು ಗಂಧರ್ವಾಪ್ಸರಸಾಂ ಗಣಾಃ ।
ಉಪಹೂತಾ ವಿಶ್ವಸೃಗ್ಭಿರ್ಹರಿಗಾಥೋಪಗಾಯನೇ ॥ ೭೧ ॥

ಅಹಂ ಚ ಗಾಯಂಸ್ತದ್ವಿದ್ವಾನ್ ಸ್ತ್ರೀಭಿಃ ಪರಿವೃತೋ ಗತಃ ।
ಜ್ಞಾತ್ವಾ ವಿಶ್ವಸೃಜಸ್ತನ್ಮೇ ಹೇಲನಂ ಶೇಪುರೋಜಸಾ ।
ಯಾಹಿ ತ್ವಂ ಶೂದ್ರತಾಮಾಶು ನಷ್ಟಶ್ರೀಃ ಕೃತಹೇಲನಃ ॥ ೭೨ ॥

ತಾವದ್ದಾಸ್ಯಾಮಹಂ ಜಜ್ಞೇ ತತ್ರಾಪಿ ಬ್ರಹ್ಮವಾದಿನಾಮ್ ।
ಶುಶ್ರೂಷಯಾನುಷಂಗೇಣ ಪ್ರಾಪ್ತೋऽಹಂ ಬ್ರಹ್ಮಪುತ್ರತಾಮ್ ॥ ೭೩ ॥

ಧರ್ಮಸ್ತೇ ಗೃಹಮೇಧೀಯೋ ವರ್ಣಿತಃ ಪಾಪನಾಶನಃ ।
ಗೃಹಸ್ಥೋ ಯೇನ ಪದವೀಮಂಜಸಾ ನ್ಯಾಸಿನಾಮಿಯಾತ್ ॥ ೭೪ ॥

ಮಹಾರಾಜಾ ! ಭಗವದ್ಭಕ್ತ ಮನುಷ್ಯನು ವೇದದಲ್ಲಿ ಹೇಳಲ್ಪಟ್ಟ ಈ ಕರ್ಮಗಳನ್ನು ಹಾಗೂ ಬೇರೆ-ಬೇರೆ ಸ್ವಕರ್ಮಗಳನ್ನು ಅನುಷ್ಠಾನ ಮಾಡುತ್ತಾ ಮನೆಯಲ್ಲಿ ಇದ್ದರೂ ಕೂಡ ಶ್ರೀಕೃಷ್ಣನ ಗತಿಯನ್ನು ಪಡೆದುಕೊಳ್ಳುವನು. ॥ ೬೭ ॥ ಯುಧಿಷ್ಠಿರನೇ! ನೀನು ನಿನ್ನ ಸ್ವಾಮಿಯಾದ ಭಗವಾನ್ ಶ್ರೀಕೃಷ್ಣನ ಕೃಪೆ ಮತ್ತು ಸಹಾಯದಿಂದ ದೊಡ್ಡ-ದೊಡ್ಡ ಕಠಿಣ ವಿಪತ್ತುಗಳನ್ನೂ ದಾಟಿಹೋಗಿರುವೆ ಮತ್ತು ಅವನ ಚರಣಕಮಲಗಳ ಸೇವೆಯಿಂದ ಸಮಸ್ತ ಭೂಮಂಡಲವನ್ನು ಗೆದ್ದು ನೀನು ದೊಡ್ಡ-ದೊಡ್ಡ ರಾಜಸೂಯವೇ ಮುಂತಾದ ಯಜ್ಞಗಳನ್ನು ಮಾಡಿರುವೆ. ॥ ೬೮ ॥

ಹಿಂದಿನ ಜನ್ಮದಲ್ಲಿ ಇದಕ್ಕೆ ಮೊದಲಿನ ಕಲ್ಪದಲ್ಲಿ ನಾನು ಓರ್ವ ಗಂಧರ್ವನಾಗಿದ್ದೆ. ನನ್ನ ಹೆಸರು 'ಉಪಬರ್ಹಣ' ಎಂದಿತ್ತು ಮತ್ತು ಗಂಧರ್ವರಲ್ಲಿ ನನಗೆ ತುಂಬಾ ಸಮ್ಮಾನವಿತ್ತು. ॥ ೬೯ ॥ ನಾನು ಅಪೂರ್ವವಾದ ಸೌಂದರ್ಯ, ಸೌಕುಮಾರ್ಯ ಮತ್ತು ಮಾಧುರ್ಯಗಳಿಂದ ಸಂಪನ್ನನಾಗಿದ್ದೆನು. ನನ್ನ ಶರೀರದಿಂದ ಸುಗಂಧವು ಸೂಸುತ್ತಿತ್ತು ಮತ್ತು ನೋಡಲು ನಾನು ತುಂಬಾ ಸುಂದರನಾಗಿದ್ದೆ. ಸ್ತ್ರೀಯರು ನನ್ನಲ್ಲಿ ಬಹಳ ಪ್ರೇಮವಿಟ್ಟಿದ್ದರು ಮತ್ತು ನಾನೂ ಸದಾಕಾಲ ಪ್ರಮಾದದಲ್ಲೇ ಇರುತ್ತಿದ್ದು ಅತ್ಯಂತ ವಿಲಾಸಿಯಾಗಿದ್ದೆ. ॥ ೭೦ ॥ ಒಮ್ಮೆ ದೇವತೆಗಳು ಒಂದು ಜ್ಞಾನ ಸತ್ರವನ್ನು ಆಚರಿಸಿದರು. ದೊಡ್ಡ-ದೊಡ್ಡ ಪ್ರಜಾಪತಿಗಳು ಅಲ್ಲಿಗೆ ಬಂದಿದ್ದರು. ಭಗವಂತನ ಲೀಲೆಯನ್ನು ಹಾಡುವುದಕ್ಕಾಗಿ ಗಂಧರ್ವರನ್ನೂ, ಅಪ್ಸರೆಯನ್ನೂ ಕರೆಸಿದರು. ॥ ೭೧ ॥ ಅದು ಸಂತರ ಸಭೆ ಮತ್ತು ಅಲ್ಲಿ ಭಗವಂತನ ಲೀಲೆಗಳೇ ಹಾಡಲ್ಪಡುತ್ತವೆ ಎಂದು ನಾನು ತಿಳಿದಿದ್ದೆ. ಆದರೂ ನಾನು ಸ್ತ್ರೀಯರೊಂದಿಗೆ ಲೌಕಿಕ ಗೀತೆಗಳನ್ನು ಹಾಡುತ್ತಾ ಉನ್ಮತ್ತನಂತೆ ಅಲ್ಲಿಗೆ ತಲುಪಿದೆ. ಇವನಾದರೋ ನಮ್ಮಗಳ ಅನಾದರವನ್ನು ಮಾಡುತ್ತಿದ್ದಾನೆ ಎಂದು ದೇವತೆಗಳು ನೋಡಿದರು. ಅವರು ತಮ್ಮ ಶಕ್ತಿಯಿಂದ – ನೀನು ನಮ್ಮನ್ನು ಅವಹೇಳನ ಮಾಡಿರುವಿ, ಆದರಿಂದ ನಿನ್ನ ಎಲ್ಲ ಸೌಂದರ್ಯ ಸಂಪತ್ತು ನಾಶವಾಗಿ, ನೀನು ಬೇಗನೇ ಶೂದ್ರನಾಗು' ಎಂದು ಶಾಪವನ್ನು ಕೊಟ್ಟರು. ॥ ೭೨ ॥ ಅವರ ಶಾಪದಿಂದ ನಾನು ದಾಸೀ ಪುತ್ರನಾಗಿ ಹುಟ್ಟಿದೆ. ಆದರೆ ಆ ಶೂದ್ರಜೀವನದಲ್ಲಿ ಮಾಡಿದ ಮಹಾತ್ಮರ ಸತ್ಸಂಗ ಮತ್ತು ಸೇವೆ-ಶುಶ್ರೂಷೆಯ ಪ್ರಭಾವದಿಂದ ನಾನು ಮರುಜನ್ಮದಲ್ಲಿ ಬ್ರಹ್ಮದೇವರ ಪುತ್ರನಾದೆ. ॥ ೭೩ ॥ ಸಂತರ ಅವಹೇಳನೆ ಮತ್ತು ಸೇವೆಯ ಪ್ರತ್ಯಕ್ಷವಾದ ನನ್ನ ಅನುಭವವಾಗಿದೆ ಇದು. ಸಂತರ ಸೇವೆಯಿಂದಲೇ ಭಗವಂತನು ಪ್ರಸನ್ನನಾಗುತ್ತಾನೆ. ನಾನು ನಿನಗೆ ಗೃಹಸ್ಥರ ಪಾಪನಾಶಕ ಧರ್ಮವನ್ನು ಹೇಳಿದೆ. ಈ ಧರ್ಮದ ಆಚರಣೆಯಿಂದ ಗೃಹಸ್ಥರೂ ಕೂಡ ಆಯಾಸವಿಲ್ಲದೆ ಸಂನ್ಯಾಸಿಗಳಿಗೆ ಸಿಗುವಂತಹ ಪರಮಪದವನ್ನು ಪಡೆದುಕೊಳ್ಳುವರು. ॥ ೭೪ ॥

ಯುಧಿಷ್ಠಿರನೇ! ಈ ಮನುಷ್ಯಲೋಕದಲ್ಲಿ ನೀವೇ ಅತ್ಯಂತ ಭಾಗ್ಯಶಾಲಿಗಳು. ಏಕೆಂದರೆ, ನಿಮ್ಮ ಮನೆಯಲ್ಲಿ ಸಾಕ್ಷಾತ್ ಪರಬ್ರಹ್ಮ ಪರಮಾತ್ಮನು ಮನುಷ್ಯರೂಪವನ್ನು ಧರಿಸಿ ಗುಪ್ತರೂಪದಿಂದ ವಾಸಿಸುತ್ತಿರುವನು. ಇದರಿಂದ ಇಡೀ ಜಗತ್ತನ್ನು ಪವಿತ್ರ

ಯೂಯಂ ನೃಲೋಕೇ ಬತ ಭೂರಿಭಾಗಾ
ಲೋಕಂ ಪುನಾನಾ ಮುನಯೋಽಭಿಯಂತಿ ।
ಯೇಷಾಂ ಗೃಹಾನಾವಸತೀತಿ ಸಾಕ್ಷಾ-
ದ್ಗೂಢಂ ಪರಂ ಬ್ರಹ್ಮ ಮನುಷ್ಯಲಿಂಗಮ್ ॥ ೭೫ ॥

ಸ ವಾ ಅಯಂ ಬ್ರಹ್ಮ ಮಹದ್ವಿಮೃಗ್ಯಂ
ಕೈವಲ್ಯ ನಿರ್ವಾಣಸುಖಾನುಭೂತಿಃ ।
ಪ್ರಿಯಃ ಸುಹೃದ್ವಃ ಖಲು ಮಾತುಲೇಯ
ಆತ್ಮಾರ್ಹಣೀಯೋ ವಿಧಿಕೃದ್ಗುರುಶ್ಚ ॥ ೭೬ ॥

ನ ಯಸ್ಯ ಸಾಕ್ಷಾದ್ಭವಪದ್ಮಜಾದಿಭೀ
ರೂಪಂ ಧಿಯಾ ವಸ್ತುತಯೋಪವರ್ಣಿತಮ್ ।
ಮೌನೇನ ಭಕ್ತ್ಯೋಪಶಮೇನ ಪೂಜಿತಃ
ಪ್ರಸೀದತಾಮೇಷ ಸ ಸಾತ್ವತಾಂ ಪತಿಃ ॥ ೭೭ ॥

*ಶ್ರೀಶುಕ ಉವಾಚ*

ಇತಿ ದೇವರ್ಷಿಣಾ ಪ್ರೋಕ್ತಂ ನಿಶಮ್ಯ ಭರತರ್ಷಭಃ ।
ಪೂಜಯಾಮಾಸ ಸುಪ್ರೀತಃ ಕೃಷ್ಣಂ ಚ ಪ್ರೇಮವಿಹ್ವಲಃ ॥ ೭೮ ॥

ಕೃಷ್ಣಪಾರ್ಥಾವುಪಾಮಂತ್ರ್ಯ ಪೂಜಿತಃ ಪ್ರಯಯೌ ಮುನಿಃ ।
ಶ್ರುತ್ವಾ ಕೃಷ್ಣಂ ಪರಂ ಬ್ರಹ್ಮ ಪಾರ್ಥಃ ಪರಮವಿಸ್ಮಿತಃ ॥ ೭೯ ॥

ಇತಿ ದಾಕ್ಷಾಯಣೀನಾಂ ತೇ ಪೃಥಗ್ವಂಶಾಃ ಪ್ರಕೀರ್ತಿತಾಃ ।
ದೇವಾಸುರಮನುಷ್ಯಾದ್ಯಾ ಲೋಕಾ ಯತ್ರ ಚರಾಚರಾಃ ॥ ೮೦ ॥

ವಾಗಿಸುವ ಋಷಿ-ಮುನಿಗಳು ಮತ್ತೆ-ಮತ್ತೆ ಅವನ ದರ್ಶನ ಪಡೆಯಲು ನಾಲ್ಕೂ ಕಡೆಗಳಿಂದ ನಿಮ್ಮ ಬಳಿಗೆ ಬರುತ್ತಾ ಇರುತ್ತಾರೆ. ॥ ೭೫ ॥ ದೊಡ್ಡ-ದೊಡ್ಡ ಮಹಾಪುರುಷರು ನಿರಂತರವಾಗಿ ಯಾರನ್ನು ಹುಡುಕುತ್ತಾ ಇರುತ್ತಾರೋ, ಯಾರು ಮಾಯಾಲೇಶದಿಂದ ರಹಿತನಾಗಿ ಪರಮಶಾಂತ ಪರಮಾನಂದಾನುಭವಸ್ವರೂಪ ಪರಬ್ರಹ್ಮ ಪರಮಾತ್ಮನಿದ್ದಾನೋ ಅವನೇ ನಿಮ್ಮ ಹಿತೈಷಿಯೂ, ಪ್ರಿಯನೂ, ಸೋದರತ್ತೆಯ ಮಗನೂ, ಪೂಜ್ಯನೂ, ಆಜ್ಞಾಕಾರಿಯೂ, ಗುರುವೂ ಮತ್ತು ಸ್ವಯಂ ಆತ್ಮಾ ಶ್ರೀಕೃಷ್ಣನಾಗಿದ್ದಾನೆ. ॥ ೭೬ ॥ ರುದ್ರದೇವರು, ಬ್ರಹ್ಮದೇವರು ಮುಂತಾದ ವರೂ ಕೂಡ ತಮ್ಮ ಬುದ್ಧಿಯಿಂದ 'ಅವನು ಹೀಗೆಯೇ ಇದ್ದಾನೆ' ಈ ರೂಪದಿಂದ ಅವನನ್ನು ವರ್ಣಿಸಲಾರದೆ ಹೋದರು. ಹಾಗಿರುವಾಗ ನಾವು ಹೇಗೆ ವರ್ಣಿಸಬಲ್ಲೆವು? ನಾವಾದರೋ ಮೌನ, ಭಕ್ತಿ ಮತ್ತು ಸಂಯಮದ ಮೂಲಕವೇ ಅವನ ಪೂಜೆಯನ್ನು ಮಾಡುತ್ತೇವೆ. ಕೃಪೆಗೈದು ನಮ್ಮ ಈ ಪೂಜೆಯನ್ನು ಸ್ವೀಕರಿಸಿ ಭಕ್ತವತ್ಸಲ ಭಗವಂತನು ನಮ್ಮ ಮೇಲೆ ಕೃಪೆದೋರಲಿ. ॥ ೭೭ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ದೇವರ್ಷಿ ನಾರದರ ಈ ಪ್ರವಚನವನ್ನು ಕೇಳಿ ರಾಜಾ ಯುಧಿಷ್ಠಿರನಿಗೆ ಅತ್ಯಂತ ಆನಂದವಾಯಿತು. ಅವನು ಪ್ರೇಮವಿಹ್ವಲನಾಗಿ ದೇವರ್ಷಿ ನಾರದರನ್ನು ಮತ್ತು ಭಗವಾನ್ ಶ್ರೀಕೃಷ್ಣನನ್ನು ಪೂಜಿಸಿದನು. ॥ ೭೮ ॥ ದೇವರ್ಷಿ ನಾರದರು ಭಗವಾನ್ ಕೃಷ್ಣನಿಂದ ಮತ್ತು ಯುಧಿಷ್ಠಿರನಿಂದ ಬೀಳ್ಕೊಂಡು, ಅವನಿಂದ ಸತ್ಕಾರಪಡೆದು ಹೊರಟುಹೋದರು. ಭಗವಾನ್ ಶ್ರೀಕೃಷ್ಣನೇ ಪರಬ್ರಹ್ಮನಾಗಿದ್ದಾನೆ ಎಂದು ಕೇಳಿ ಯುಧಿಷ್ಠಿರನಿಗೆಪರಮಾಶ್ಚರ್ಯವಾಯಿತು. ॥ ೭೯ ॥ ಪರೀಕ್ಷಿತನೇ! ಹೀಗೆ ನಾನು ನಿನಗೆ ದಕ್ಷಪುತ್ರಿಯರ ವಂಶಗಳ ಬೇರೆ- ಬೇರೆಯಾಗಿ ವರ್ಣನೆ ಮಾಡಿದನು. ಅವರ ವಂಶದಲ್ಲೇ ದೇವತೆಗಳು ಅಸುರರು, ಮನುಷ್ಯರೇ ಮುಂತಾದವರು ಮತ್ತು ಸಮಸ್ತ ಚರಾಚರದ ಸೃಷ್ಟಿಯಾಯಿತು. ॥ ೮೦ ॥

*ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಸಪ್ತಮ ಸ್ಕಂಧೇ
ಪ್ರಹ್ಲಾದಾನುಚರಿತೇ ಯುಧಿಷ್ಠಿರ-ನಾರದಸಂವಾದೇ ಸದಾಚಾರನಿರ್ಣಯೋ ನಾಮ ಪಂಚದಶೋಽಧ್ಯಾಯಃ ॥ ೧೫ ॥

ಏಳನೆಯ ಸ್ಕಂಧವು ಸಂಪೂರ್ಣವಾಯಿತು.

॥ ಓಂನಮೋಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ಅಷ್ಟಮಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಮನ್ವಂತರಗಳ ವರ್ಣನೆ

*ರಾಜೋವಾಚ*

**ಸ್ವಾಯಂಭುವಸ್ಯೇಹ ಗುರೋ ವಂಶೋಽಯಂ ವಿಸ್ತರಾಚ್ಛ್ರುತಃ ।**
**ಯತ್ರ ವಿಶ್ವಸೃಜಾಂ ಸರ್ಗೋ ಮನೂನನ್ಯಾನ್ವದಸ್ವ ನಃ ॥ ೧ ॥**

**ಯತ್ರ ಯತ್ರ ಹರೇರ್ಜನ್ಮ ಕರ್ಮಾಣಿ ಚ ಮಹೀಯಸಃ ।**
**ಗೃಣಂತಿ ಕವಯೋ ಬ್ರಹ್ಮನ್‌ತಾನಿ ನೋ ವದ ಶೃಣ್ವತಾಮ್ ॥ ೨ ॥**

**ಯದ್ಯಸ್ಮಿನ್ನಂತರೇ ಬ್ರಹ್ಮನ್ಭಗವಾನ್ವಿಶ್ವಭಾವನಃ ।**
**ಕೃತವಾನ್ಕುರುತೇ ಕರ್ತಾ ಹ್ಯತೀತೇಽನಾಗತೇಽದ್ಯ ವಾ ॥ ೩ ॥**

*ಋಷಿರುವಾಚ*

**ಮನವೋಽಸ್ಮಿನ್ವ್ಯತೀತಾಃ ಷಟ್ಕಲ್ಪೇ ಸ್ವಾಯಂಭುವಾದಯಃ ।**
**ಆದ್ಯಸ್ತೇ ಕಥಿತೋ ಯತ್ರ ದೇವಾದೀನಾಂ ಚ ಸಂಭವಃ ॥ ೪ ॥**

**ಆಕೂತ್ಯಾಂ ದೇವಹೂತ್ಯಾಂ ಚ ದುಹಿತ್ರೋಸ್ತಸ್ಯ ವೈ ಮನೋಃ ।**
**ಧರ್ಮಜ್ಞಾನೋಪದೇಶಾರ್ಥಂ ಭಗವಾನ್ಪುತ್ರತಾಂ ಗತಃ ॥ ೫ ॥**

**ಕೃತಂ ಪುರಾ ಭಗವತಃ ಕಪಿಲಸ್ಯಾನುವರ್ಣಿತಮ್ ।**
**ಆಖ್ಯಾಸ್ಯೇ ಭಗವಾನ್ಯಜ್ಞೋ ಯಚ್ಚಕಾರ ಕುರೂದ್ವಹ ॥ ೬ ॥**

**ವಿರಕ್ತಃ ಕಾಮಭೋಗೇಷು ಶತರೂಪಾಪತಿಃ ಪ್ರಭುಃ ।**
**ವಿಸೃಜ್ಯ ರಾಜ್ಯಂ ತಪಸೇ ಸಭಾರ್ಯೋ ವನಮಾವಿಶತ್ ॥ ೭ ॥**

**ಪರೀಕ್ಷಿದ್ರಾಜನು ಕೇಳಿದನು** – ಗುರುದೇವರೇ! ತಮ್ಮ ಈ ಕಥಾ-ಕೀರ್ತನೆಯಲ್ಲಿ ಸ್ವಾಯಂಭುವ ಮನುವಿನ ವಂಶವಿಸ್ತಾರವನ್ನು ನಾನು ಕೇಳಿದೆ. ಇದೇ ವಂಶದಲ್ಲಿ ಅವನ ಪುತ್ರಿಯರಿಂದ ಮರೀಚಿಯೇ ಮುಂತಾದ ಪ್ರಜಾಪತಿಗಳು ತಮ್ಮ ವಂಶವನ್ನು ನಡೆಸಿದರು. ಈಗ ನೀವು ಇತರ ಮನುಗಳ ವಿಷಯವನ್ನು ವರ್ಣಿಸುವ ಕೃಪೆಮಾಡಿರಿ. ॥ ೧ ॥ ಬ್ರಾಹ್ಮಣೋತ್ತಮರೇ! ಮಹಾತ್ಮರಾದ ಜ್ಞಾನಿಗಳು ಯಾವ-ಯಾವ ಮನ್ವಂತರದಲ್ಲಿ ಮಹಾಮಹಿಮನಾದ ಶ್ರೀಹರಿಯ ಅವತಾರಗಳನ್ನೂ, ಲೀಲೆಗಳನ್ನೂ ವರ್ಣನೆ ಮಾಡಿದ್ದಾರೆ ಅವೆಲ್ಲವನ್ನು ಶ್ರವಣಮಾಡಲು ಬಯಸುವ ನಮಗೆ ತಿಳಿಸಿರಿ. ॥ ೨ ॥ ಪೂಜ್ಯರೇ! ವಿಶ್ವಭಾವನನಾದ ಭಗವಂತನು ಕಳೆದ ಮನ್ವಂತರಗಳಲ್ಲಿ ಯಾವ-ಯಾವ ಲೀಲೆಗಳನ್ನು ನಡೆಸಿದನು? ಈ ಮನ್ವಂತರದಲ್ಲಿ ಮಾಡುತ್ತಿರುವ ಲೀಲೆಗಳನ್ನೂ, ಮುಂದಿನ ಮನ್ವಂತರಗಳಲ್ಲಿ ಎಸಗಲಿರುವ ಲೀಲೆಗಳನ್ನೂ ಎಲ್ಲವನ್ನೂ ನಮಗೆ ಹೇಳಿರಿ. ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜನೇ! ಈ ಕಲ್ಪದಲ್ಲಿ ಸ್ವಾಯಂಭುವ ಮುಂತಾದ ಆರು ಮನ್ವಂತರಗಳು ಕಳೆದುಹೋಗಿವೆ. ಅವುಗಳಲ್ಲಿ ದೇವತೆಗಳೇ ಮುಂತಾದವರ ಉತ್ಪತ್ತಿಯು ಆಗಿರುವ ಮೊದಲನೆಯ ಮನ್ವಂತರವನ್ನು ನಿನಗೆ ವರ್ಣಿಸಿಯಾಗಿದೆ. ॥ ೪ ॥ ಸ್ವಾಯಂಭುವ ಮನುವಿನ ಪುತ್ರಿಯಾದ ಆಕೂತಿಯಲ್ಲಿ ಯಜ್ಞಪುರುಷನಾಗಿ ಧರ್ಮವನ್ನು ಉಪದೇಶ ಮಾಡಲಿಕ್ಕಾಗಿ ಹಾಗೂ ದೇವಹೂತಿಯಲ್ಲಿ ಕಪಿಲಾವತಾರವನ್ನು ಎತ್ತಿ ಜ್ಞಾನವನ್ನು ಉಪದೇಶಿಸಲಿಕ್ಕಾಗಿ ಭಗವಂತನು ಆವಿರ್ಭವಿಸಿದ್ದನು. ॥ ೫ ॥ ಪರೀಕ್ಷಿತನೇ! ಭಗವಾನ್ ಕಪಿಲಾವತಾರದ ವರ್ಣನೆಯನ್ನು ನಾನು ಮೊದಲೇ (ಮೂರನೆಯ ಸ್ಕಂಧದಲ್ಲಿ) ಮಾಡಿಯಾಗಿದೆ. ಈಗ ಭಗವಾನ್ ಯಜ್ಞಪುರುಷನು ಆಕೂತಿಯ ಗರ್ಭದಲ್ಲಿ ಅವತರಿಸಿ ಮಾಡಿದ ಲೀಲೆಗಳನ್ನು ವರ್ಣಿಸುತ್ತೇನೆ; ಕೇಳು. ॥ ೬ ॥

ಪರೀಕ್ಷಿದ್ರಾಜನೇ! ಪ್ರಭುವಾದ ಸ್ವಾಯಂಭುವ ಮನುವು ಸಮಸ್ತ ಕಾಮನೆಗಳಿಂದ ಮತ್ತು ಭೋಗಗಳಿಂದ ವಿರಕ್ತನಾಗಿ ರಾಜ್ಯವನ್ನು ತ್ಯಜಿಸಿ ಪತ್ನಿಯಾದ ಶತರೂಪಾಳೊಂದಿಗೆ ತಪಸ್ಸಿಗಾಗಿ ವನಕ್ಕೆ ತೆರಳಿದನು. ॥ ೭ ॥ ಅಲ್ಲಿ ಅವನು ಸುನಂದಾನದಿಯ ತೀರದಲ್ಲಿ

ಸುನಂದಾಯಾಂ ವರ್ಷಶತಂ ಪದೈಕೇನ ಭುವಂ ಸ್ಪೃಶನ್ ।
ತಪ್ಯಮಾನಸ್ತಪೋ ಘೋರಮಿದಮನ್ವಾಹ ಭಾರತ ॥ ೮ ॥

ಮನುರುವಾಚ

ಯೇನ ಚೇತಯತೇ ವಿಶ್ವಂ ವಿಶ್ವಂ ಚೇತಯತೇ ನ ಯಮ್ ।
ಯೋ ಜಾಗರ್ತಿ ಶಯಾನೇಽಸ್ಮಿನ್ನಾಯಂ ತಂ ವೇದ ವೇದ ಸಃ ॥ ೯ ॥

ಆತ್ಮಾವಾಸ್ಯಮಿದಂ ವಿಶ್ವಂ ಯತ್ಕಿಂಚಿಜ್ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಮ್ ॥ ೧೦ ॥

ಯಂ ನ ಪಶ್ಯತಿ ಪಶ್ಯಂತಂ ಚಕ್ಷುರ್ಯಸ್ಯ ನ ರಿಷ್ಯತಿ ।
ತಂ ಭೂತನಿಲಯಂ ದೇವಂ ಸುಪರ್ಣಮುಪಧಾವತ ॥ ೧೧ ॥

ನ ಯಸ್ಯಾದ್ಯಂತೌ ಮಧ್ಯಂ ಚ ಸ್ವಃ ಪರೋ ನಾಂತರಂ ಬಹಿಃ ।
ವಿಶ್ವಸ್ಯಾಮೂನಿ ಯದ್ಯಸ್ಮಾದ್ವಿಶ್ವಂ ಚ ತದೃತಂ ಮಹತ್ ॥ ೧೨ ॥

ಸ ವಿಶ್ವಕಾಯಃ ಪುರುಹೂತ ಈಶಃ
ಸತ್ಯಃ ಸ್ವಯಂಜ್ಯೋತಿರಜಃ ಪುರಾಣಃ ।
ಧತ್ತೇಽಸ್ಯ ಜನ್ಮಾದ್ಯಜಯಾಽಽತ್ಮಶಕ್ತ್ಯಾ
ತಾಂ ವಿದ್ಯಯೋದಸ್ಯ ನಿರೀಹ ಆಸ್ತೇ ॥ ೧೩ ॥

ಅಥಾಗ್ರೇ ಋಷಯಃ ಕರ್ಮಾಣೀಹಂತೇಽಕರ್ಮಹೇತವೇ ।
ಈಹಮಾನೋ ಹಿ ಪುರುಷಃ ಪ್ರಾಯೋಽನೀಹಾಂ ಪ್ರಪದ್ಯತೇ ॥ ೧೪ ॥

ಈಹತೇ ಭಗವಾನೀಶೋ ನ ಹಿ ತತ್ರ ವಿಷಜ್ಜತೇ ।
ಆತ್ಮಲಾಭೇನ ಪೂರ್ಣಾರ್ಥೋ ನಾವಸೀದಂತಿ ಯೇಽನು ತಮ್ ॥ ೧೫ ॥

ಭೂಮಿಯಲ್ಲಿ ಒಂಟಿಕಾಲಿನಲ್ಲಿ ನಿಂತು ನೂರುವರ್ಷಗಳವರೆಗೆ ತೀವ್ರವಾದ ತಪಸ್ಸನ್ನು ಮಾಡಿದನು. ತಪಸ್ಸು ಮಾಡುವಾಗ ಅವನು ಪರಮಾತ್ಮನನ್ನು ಹೀಗೆ ಸ್ತುತಿಸಿದನು. ॥ ೮ ॥

ಸ್ವಾಯಂಭುವ ಮನುವು ಹೇಳುತ್ತಿದ್ದ – ವಿಶ್ವಕ್ಕೆಲ್ಲ ಚೈತನ್ಯವನ್ನು ತುಂಬಿದ ಪರಮ ಚೇತನನಿವನು. ಆದರೆ ವಿಶ್ವವು ಇವನಿಗೆ ಚೈತನ್ಯವನ್ನು ನೀಡಲಾರದು. ವಿಶ್ವವೆಲ್ಲವೂ ನಿದ್ರಿಸುತ್ತಿರುವ ಪ್ರಳಯಕಾಲದಲ್ಲಿಯೂ ಇವನು ಎಚ್ಚರವಾಗಿರುತ್ತಾನೆ. ವಿಶ್ವವು ಈತನನ್ನು ತಿಳಿಯಲಾರದು, ಆದರೆ ಇವನು ಅದನ್ನು ಪೂರ್ಣವಾಗಿ ತಿಳಿದಿರುವನು. ॥ ೯ ॥ ಈ ಇಡೀ ವಿಶ್ವದಲ್ಲಿ ಮತ್ತು ಈ ವಿಶ್ವದಲ್ಲಿ ಇರುವ ಎಲ್ಲ ಚರಾಚರ ಪ್ರಾಣಿಗಳಲ್ಲಿ ಆ ಪರಮಾತ್ಮನೇ ಹಾಸುಹೊಕ್ಕಾಗಿ ತುಂಬಿದ್ದಾನೆ. ಅದರಿಂದ ಈ ಪ್ರಪಂಚದ ಯಾವ ವಸ್ತುವಿನಲ್ಲಿಯೂ ಮೋಹವನ್ನಿಡದೆ, ಅದನ್ನು ತ್ಯಾಗಬುದ್ಧಿಯಿಂದ ಜೀವನ-ನಿರ್ವಾಹಕ್ಕಷ್ಟೇ ಅದನ್ನು ಭೋಗಿಸಬೇಕು. ಆಸೆಯನ್ನು ತೊರೆಯಬೇಕು. ಯಾರ ಸಂಪತ್ತಿಗೂ ಆಸೆಪಡಬಾರದು. ॥ ೧೦ ॥ ಭಗವಂತನು ಎಲ್ಲರ ಸಾಕ್ಷಿಯಾಗಿದ್ದಾನೆ. ಅವನನ್ನು ಬುದ್ಧಿಯ ವೃತ್ತಿಗಳಾಗಲೀ, ಕಣ್ಣು ಮುಂತಾದ ಇಂದ್ರಿಯಗಳಾಗಲೀ ನೋಡಲಾರವು. ಆದರೂ ಅವನ ಜ್ಞಾನಶಕ್ತಿಯು ಅಖಂಡವಾಗಿದೆ. ಸಮಸ್ತ ಪ್ರಾಣಿಗಳ ಹೃದಯದಲ್ಲಿ ನೆಲೆಸಿರುವ ಆ ಸ್ವಯಂಪ್ರಕಾಶನಾದ, ಅಸಂಗನಾದ ಪರಮಾತ್ಮನಲ್ಲಿ ಶರಣಾಗಬೇಕು. ॥ ೧೧ ॥ ಆದಿ-ಅಂತ್ಯಗಳೇ ಇಲ್ಲದವನು ಮಧ್ಯದಲ್ಲಿ ಹೇಗೆ ಇರಬಲ್ಲನು ? ಸ್ವಕೀಯವಾಗಲೀ, ಪರಕೀಯನಾಗಲೀ ಯಾರೂ ಇಲ್ಲ. ಹೊರಗಿನದಾಗಲೀ, ಒಳಗಿನದಾಗಲೀ ಯಾವುದೂ ಇಲ್ಲ. ಆದರೆ ವಿಶ್ವದಲ್ಲಿ ಎಲ್ಲಕ್ಕೂ ಆದಿ, ಅಂತ್ಯ, ಮಧ್ಯವೂ ಆಗಿ, ಸ್ವಕೀಯ, ಪರಕೀಯ, ಹೊರಗಿನ, ಒಳಗಿನ ಎಲ್ಲವೂ ಅವನೇ ಆಗಿದ್ದಾನೆ. ಎಲ್ಲಕ್ಕೂ ಕಾರಣವಾಗಿರುವ ಮಹಾಸತ್ಯಸ್ವರೂಪನು ಇವನೇ. ॥ ೧೨ ॥ ಆ ಪರಮಾತ್ಮನೇ ವಿಶ್ವರೂಪನು. ಅವನಿಗೆ ಅನಂತನಾಮಗಳಿವೆ. ಅವನು ಸರ್ವೇಶ್ವರನೂ, ಸತ್ಯಸ್ವರೂಪಿಯೂ, ಸ್ವಯಂಪ್ರಕಾಶನೂ, ಅಜನೂ, ಪುರಾಣಪುರುಷನೂ ಆಗಿರುವನು. ಅವನೇ ತನ್ನ ಮಾಯಾಶಕ್ತಿಯಿಂದಲೇ ವಿಶ್ವಸೃಷ್ಟಿಯ ಜನ್ಮಾದಿಗಳನ್ನು ಸ್ವೀಕರಿಸುತ್ತಾನೆ ಮತ್ತು ತನ್ನ ವಿದ್ಯಾಶಕ್ತಿಯಿಂದ ಅದನ್ನು ತ್ಯಾಗಮಾಡಿ ನಿಷ್ಕ್ರಿಯನಾಗಿ ಸ್ವಸ್ವರೂಪಮಾತ್ರನಾಗಿ ಇರುತ್ತಾನೆ. ॥ ೧೩ ॥ ಇದರಿಂದಲೇ ಋಷಿ-ಮುನಿಗಳು ನೈಷ್ಕರ್ಮ್ಯಸ್ಥಿತಿಯನ್ನು ಅಂದರೆ ಬ್ರಹ್ಮನಲ್ಲಿ ಏಕತ್ವವನ್ನೇ ಹೊಂದಲು ಮೊದಲಿಗೆ ಕರ್ಮಯೋಗವನ್ನು ಅನುಷ್ಠಾನ ಮಾಡುತ್ತಾರೆ. ಸಾಮಾನ್ಯವಾಗಿ ಕರ್ಮಮಾಡುವವನೇ ಕೊನೆಗೆ ನಿಷ್ಕ್ರಿಯರಾಗಿ ಕರ್ಮಗಳಿಂದ ಬಿಡುಗಡೆಹೊಂದುವನು. ॥ ೧೪ ॥ ಸರ್ವಶಕ್ತನಾದ ಭಗವಂತನೂ ಕೂಡ ಕರ್ಮಗಳನ್ನು ಮಾಡುತ್ತಾನೆ. ಆದರೆ ಅವನು ಆತ್ಮಲಾಭದಿಂದ ಪೂರ್ಣಕಾಮನಾದ್ದರಿಂದ ಆ ಕರ್ಮಗಳಲ್ಲಿ ಆಸಕ್ತನಾಗಿರುವುದಿಲ್ಲ. ಆದ್ದರಿಂದ ಅವನನ್ನೇ ಅನುಸರಿಸುತ್ತಾ ಅನಾಸಕ್ತರಾಗಿ ಕರ್ಮಮಾಡುವವರೇ ಕರ್ಮಬಂಧನದಿಂದ ಮುಕ್ತರಾಗಿಯೇ ಇರುತ್ತಾರೆ. ॥ ೧೫ ॥ ಭಗವಂತನು ಜ್ಞಾನಸ್ವರೂಪನಾದ್ದರಿಂದ ಅವನಲ್ಲಿ ಅಹಂಕಾರ ಲವಲೇಶವೂ ಇಲ್ಲ. ಅವನು ಪರಿಪೂರ್ಣನಾದ್ದರಿಂದ ಅವನಿಗೆ

ತಮೀಹಮಾನಂ ನಿರಹಂಕೃತಂ ಬುಧಂ
ನಿರಾಶಿಷಂ ಪೂರ್ಣಮನನ್ಯಚೋದಿತಮ್ ।
ನೃನ್ ಶಿಕ್ಷಯಂತಂ ನಿಜವರ್ತ್ಮಸಂಸ್ಥಿತಂ
ಪ್ರಭುಂ ಪ್ರಪದ್ಯೇಽಖಿಲಧರ್ಮಭಾವನಮ್ ॥ ೧೬ ॥

*ಶ್ರೀಶುಕ ಉವಾಚ*

ಇತಿ ಮಂತ್ರೋಪನಿಷದಂ ವ್ಯಾಹರಂತಂ ಸಮಾಹಿತಮ್ ।
ದೃಷ್ಟ್ವಾಸುರಾ ಯಾತುಧಾನಾ ಜಗ್ಧುಮಭ್ಯದ್ರವನ್ ಕ್ಷುಧಾ ॥ ೧೭ ॥

ತಾಂಸ್ತಥಾವಸಿತಾನ್ವೀಕ್ಷ್ಯ ಯಜ್ಞಃ ಸರ್ವಗತೋ ಹರಿಃ ।
ಯಾಮೈಃ ಪರಿವೃತೋ ದೇವೈರ್ಹತ್ವಾಶಾಸತ್ತ್ರಿವಿಷ್ಟಪಮ್ ॥ ೧೮ ॥

ಸ್ವಾರೋಚಿಷೋ ದ್ವಿತೀಯಸ್ತು ಮನುರಗ್ನೇಃ ಸುತೋಽಭವತ್ ।
ದ್ಯುಮತ್ಸುಷೇಣರೋಚಿಷ್ಮತ್ಪ್ರಮುಖಾಸ್ತಸ್ಯ ಚಾತ್ಮಜಾಃ ॥ ೧೯ ॥

ತತ್ರೇಂದ್ರೋ ರೋಚನಸ್ತ್ವಾಸೀದ್ದೇವಾಶ್ಚ ತುಷಿತಾದಯಃ ।
ಊರ್ಜಸ್ತಂಭಾದಯಃ ಸಪ್ತ ಋಷಯೋ ಬ್ರಹ್ಮವಾದಿನಃ ॥ ೨೦ ॥

ಋಷೇಸ್ತು ವೇದಶಿರಸಸ್ತುಷಿತಾ ನಾಮ ಪತ್ನ್ಯಭೂತ್ ।
ತಸ್ಯಾಂ ಜಜ್ಞೇ ತತೋ ದೇವೋ ವಿಭುರಿತ್ಯಭಿವಿಶ್ರುತಃ ॥ ೨೧ ॥

ಅಷ್ಟಾಶೀತಿಸಹಸ್ರಾಣಿ ಮುನಯೋ ಯೇ ಧೃತವ್ರತಾಃ ।
ಅನ್ವಶಿಕ್ಷನ್ವ್ರತಂ ತಸ್ಯ ಕೌಮಾರಬ್ರಹ್ಮಚಾರಿಣಃ ॥ ೨೨ ॥

ತೃತೀಯ ಉತ್ತಮೋ ನಾಮ ಪ್ರಿಯವ್ರತಸುತೋ ಮನುಃ ।
ಪವನಃ ಸೃಂಜಯೋ ಯಜ್ಞಹೋತ್ರಾದ್ಯಾಸ್ತತ್ಸುತಾ ನೃಪ ॥ ೨೩ ॥

ವಸಿಷ್ಠ ತನಯಾಃ ಸಪ್ತ ಋಷಯಃ ಪ್ರಮದಾದಯಃ ।
ಸತ್ಯಾ ವೇದಶ್ರುತಾ ಭದ್ರಾ ದೇವಾ ಇಂದ್ರಸ್ತು ಸತ್ಯಜಿತ್ ॥ ೨೪ ॥

ಧರ್ಮಸ್ಯ ಸೂನೃತಾಯಾಂ ತು ಭಗವಾನ್ಪುರುಷೋತ್ತಮಃ ।
ಸತ್ಯಸೇನ ಇತಿ ಖ್ಯಾತೋ ಜಾತಃ ಸತ್ಯವ್ರತೈಃ ಸಹ ॥ ೨೫ ॥

ಸೋಽನೃತವ್ರತದುಃಶೀಲಾನಸತೋ ಯಕ್ಷರಾಕ್ಷಸಾನ್ ।
ಭೂತದ್ರುಹೋ ಭೂತಗಣಾಂಸ್ತ್ವವಧೀತ್ಸತ್ಯಜಿತ್ಸಖಃ ॥ ೨೬ ॥

ಯಾವುದೇ ವಸ್ತುವಿನ ಕಾಮನೆಯಿಲ್ಲ. ಅವನು ಯಾರ ಪ್ರೇರಣೆಯೂ ಇಲ್ಲದೆ ಸ್ವೇಚ್ಛೆಯಿಂದ ಕರ್ಮಮಾಡುತ್ತಾನೆ. ಅವನು ತಾನೇ ನಿರ್ಮಿಸಿದ ಮರ್ಯಾದೆಯಲ್ಲಿ ನೆಲೆಸಿ ತನ್ನ ಕರ್ಮಗಳ ಮೂಲಕ ಮನುಷ್ಯರಿಗೆ ಶಿಕ್ಷಣವನ್ನು ನೀಡುತ್ತಿರುವನು. ಅವನೇ ಸಮಸ್ತ ಧರ್ಮಗಳ ಪ್ರವರ್ತಕನೂ, ಅವುಗಳಿಗೆ ಜೀವನದಾತೃವೂ ಆಗಿದ್ದಾನೆ. ಅಂತಹ ಪ್ರಭುವಿಗೆ ನಾನು ಶರಣು ಹೊಂದುತ್ತೇನೆ.॥ ೧೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಒಮ್ಮೆ ಸ್ವಾಯಂಭುವಮನುವು ಏಕಾಗ್ರತೆಯಿಂದ ಈ ಮಂತ್ರಮಯ ಉಪನಿಷತ್ ಸ್ವರೂಪವಾದ ಶ್ರುತಿಯನ್ನು ಪಾರಾಯಣೆ ಮಾಡುತ್ತಾ ಸಮಾಧಿಯಲ್ಲಿ ಇದ್ದುದನ್ನು ಕಂಡು ಅಸುರರೂ ಮತ್ತು ರಾಕ್ಷಸರು ಅವನನ್ನು ತಿಂದುಹಾಕುವುದಕ್ಕಾಗಿ ಆಕ್ರಮಿಸಿದರು. ॥ ೧೭ ॥ ಇದನ್ನು ನೋಡಿದ ಅಂತರ್ಯಾಮಿ ಭಗವಾನ್ ಯಜ್ಞಪುರುಷನು ತನ್ನ ಪುತ್ರರಾದ ಯಾಮನೆಂಬ ದೇವತೆ ಗಳೊಂದಿಗೆ ಅಲ್ಲಿಗೆ ಆಗಮಿಸಿದನು. ಅವನು ತಿಂದುಹಾಕಲು ಹವಣಿಸುತ್ತಿರುವ ಅಸುರರನ್ನು ಸಂಹರಿಸಿದನು. ಮತ್ತೆ ಅವನು ಇಂದ್ರಪದದಲ್ಲಿ ನೆಲೆಗೊಂಡು ಸ್ವರ್ಗವನ್ನು ಆಳತೊಡಗಿ ದನು. ॥ ೧೮ ॥

ಪರೀಕ್ಷಿತನೇ! ಸ್ವಾರೋಚಿಷನೆಂಬುವನು ಎರಡನೆಯ ಮನುವು. ಅವನು ಅಗ್ನಿಯ ಪುತ್ರನಾಗಿದ್ದನು. ಅವನಿಗೆ ದ್ಯುಮಾನ್, ಸುಷೇಣ ಮತ್ತು ರೋಚಿಷ್ಮಾನ್ ಮುಂತಾದ ಪುತ್ರರಿದ್ದರು. ॥ ೧೯ ॥ ಆ ಮನ್ವಂತರದಲ್ಲಿ ರೋಚನನೆಂಬ ಇಂದ್ರನು ಇದ್ದನು. ತುಷಿತ ಮುಂತಾದ ದೇವತಾಗಣವು ಪ್ರಧಾನರಾಗಿದ್ದರು. ಊರ್ಜಸ್ತಂಭ ಮುಂತಾದವರು ವೇದವಾದಿಗಳಾದ ಸಪ್ತರ್ಷಿಗಳಾಗಿದ್ದರು. ॥ ೨೦ ॥ ಆ ಮನ್ವಂತರದಲ್ಲಿ ವೇದಶಿರಾ ಎಂಬ ಋಷಿಯ ಪತ್ನಿ ತುಷಿತೆ ಎಂಬುವಳಾಗಿದ್ದಳು. ಅವಳ ಗರ್ಭದಲ್ಲಿ ಭಗವಂತನು ಅವತರಿಸಿ ವಿಭು ಎಂಬ ನಾಮದಿಂದ ಪ್ರಸಿದ್ಧನಾದನು. ॥ ೨೧ ॥ ಅವನು ನೈಷ್ಠಿಕ ಬ್ರಹ್ಮಚಾರಿಯಾಗಿದ್ದನು. ಅವನ ಆಚರಣೆಯಿಂದಲೇ ಶಿಕ್ಷಣಪಡೆದು ಎಂಭತ್ತೆಂಟುಸಾವಿರ ಮಂದಿ ವ್ರತನಿಷ್ಠ ಋಷಿಗಳೂ ಬ್ರಹ್ಮಚರ್ಯವನ್ನು ಪಾಲಿಸಿದರು. ॥ ೨೨ ॥

ಉತ್ತಮನೆಂಬುವನು ಮೂರನೆಯ ಮನುವಾಗಿದ್ದಾನೆ. ಅವನು ಪ್ರಿಯವ್ರತನ ಪುತ್ರನಾಗಿದ್ದನು. ಅವನಿಗೆ ಪವನ, ಸೃಂಜಯ, ಯಜ್ಞಹೋತ್ರ ಮುಂತಾದ ಪುತ್ರರಿದ್ದರು. ॥ ೨೩ ॥ ಆ ಮನ್ವಂತರದಲ್ಲಿ ವಸಿಷ್ಠರ ಪುತ್ರರಾದ ಪ್ರಮದರೇ ಮುಂತಾದ ಏಳುಮಂದಿ ಸಪ್ತರ್ಷಿಗಳಾಗಿದ್ದರು. ಸತ್ಯ, ವೇದಶ್ರುತ ಮತ್ತು ಭದ್ರ ಎಂಬ ದೇವತೆಗಳ ಗಣಗಳು ಮುಖ್ಯರಾಗಿದ್ದರು ಹಾಗೂ ಸತ್ಯಜಿತ್‌ನೆಂಬ ಇಂದ್ರನಿದ್ದನು. ॥ ೨೪ ॥ ಆಗ ಧರ್ಮನ ಪತ್ನಿಯಾದ ಸೂನೃತಾ ದೇವಿಯಲ್ಲಿ ಭಗವಾನ್ ಪುರುಷೋತ್ತಮನು ಸತ್ಯಸೇನ ಎಂಬ ಹೆಸರಿನಿಂದ ಅವತರಿಸಿದ್ದನು. ಅವನೊಂದಿಗೆ ಸತ್ಯವ್ರತರೆಂಬ ದೇವಗಣಗಳೂ ಇದ್ದವು. ॥ ೨೫ ॥ ಆ ಸಮಯದ ಸತ್ಯಜಿತ ಇಂದ್ರನ ಸಖನಾಗಿ ಭಗವಂತನು ಅಸತ್ಯಪರಾಯಣರೂ, ದುಃಶೀಲರೂ, ದುಷ್ಟರೂ ಆದ ಯಕ್ಷ-ರಾಕ್ಷಸರನ್ನು ಮತ್ತು ಜೀವಿಗಳ ದ್ರೋಹಿಗಳಾದ ಭೂತಗಣಗಳನ್ನು ಸಂಹಾರಮಾಡಿದನು. ॥ ೨೬ ॥

ತಾಮಸ ಮನುವೇ ನಾಲ್ಕನೆಯವನು. ಈತನು ಮೂರನೆಯ ಮನು ಉತ್ತಮನ ಸ್ವಂತ ಸೋದರನು. ಇವನಿಗೆ ಪೃಥು, ಖ್ಯಾತಿ,

ಚತುರ್ಥ ಉತ್ತಮಭ್ರಾತಾ ಮನುರ್ನಾಮ್ನಾ ಚ ತಾಮಸಃ ।
ಪೃಥುಃ ಖ್ಯಾತಿರ್ನರಃ ಕೇತುರಿತ್ಯಾದ್ಯಾ ದಶ ತತ್ಸುತಾಃ ॥ ೨೭ ॥

ನರ, ಕೇತು ಮುಂತಾದ ಹತ್ತು ಪುತ್ರರಿದ್ದರು. ॥ ೨೭ ॥ ಸತ್ಯಕ, ಹರಿ ಮತ್ತು ವೀರರೆಂಬ ದೇವತೆಗಳ ಪ್ರಧಾನಗಣಗಳಿದ್ದವು. ಇಂದ್ರನ ಹೆಸರು ತ್ರಿಶಿಖ ಎಂದಿತ್ತು. ಆ ಮನ್ವಂತರದಲ್ಲಿ ಜ್ಯೋತಿರ್ಧಾಮ ರೆಂಬ ಸಪ್ತರ್ಷಿಗಳಿದ್ದರು. ॥ ೨೮ ॥ ಪರೀಕ್ಷಿತನೇ! ಆ ತಾಮಸ ವೆಂಬ ಮನ್ವಂತರದಲ್ಲಿ ವಿಧೃತಿಯ ಪುತ್ರ, ವೈಧೃತಿ ಎಂಬ ಇತರ ಇನ್ನೂ ಕೆಲವರು ದೇವತೆಗಳಾದರು. ಇವರು ಕಾಲಗತಿಯಿಂದ ನಷ್ಟಪ್ರಾಯವಾದ ವೇದಗಳನ್ನು ತಮ್ಮ ಶಕ್ತಿಯಿಂದ ಕಾಪಾಡಿದ್ದರು. ಅದಕ್ಕಾಗಿ ಇವರು ವೈಧೃತಿ ಎನಿಸಿದರು. ॥ ೨೯ ॥ ಈ ಮನ್ವಂತರ ದಲ್ಲಿ ಹರಿಮೇಧಾ ಋಷಿಯ ಹರಿಣಿ ಎಂಬ ಹೆಸರಿನ ಪತ್ನಿಯಲ್ಲಿ ಹರಿಯಾಗಿ ಭಗವಂತನು ಅವತರಿಸಿದನು. ಇದೇ ಮನ್ವಂತರದಲ್ಲಿ ಅವನು ಗಜೇಂದ್ರನನ್ನು ಮೊಸಳೆಯಿಂದ ರಕ್ಷಿಸಿದ್ದನು. ॥ ೩೦ ॥

ಸತ್ಯಕಾ ಹರಯೋ ವೀರಾ ದೇವಾಸ್ತ್ರಿಶಿಖ ಈಶ್ವರಃ ।
ಜ್ಯೋತಿರ್ಧಾಮಾದಯಃ ಸಪ್ತ ಋಷಯಸ್ತಾಮಸೇಽಂತರೇ ॥ ೨೮ ॥

ದೇವಾ ವೈಧೃತಯೋ ನಾಮ ವಿಧೃತೇಸ್ತನಯಾ ನೃಪ ।
ನಷ್ಟಾಃ ಕಾಲೇನ ಯೈರ್ವೇದಾ ವಿಧೃತಾಃ ಸ್ವೇನ ತೇಜಸಾ ॥ ೨೯ ॥

ತತ್ರಾಪಿ ಜಜ್ಞೇ ಭಗವಾನ್ಹರಿಣ್ಯಾಂ ಹರಿಮೇಧಸಃ ।
ಹರಿರಿತ್ಯಾಹೃತೋ ಯೇನ ಗಜೇಂದ್ರೋ ಮೋಚಿತೋ ಗ್ರಹಾತ್ ॥ ೩೦ ॥

*ರಾಜೋವಾಚ*

ಬಾದರಾಯಣ ಏತತ್ತೇ ಶ್ರೋತುಮಿಚ್ಛಾಮಹೇ ವಯಮ್ ।
ಹರಿರ್ಯಥಾ ಗಜಪತಿಂ ಗ್ರಾಹಗ್ರಸ್ತಮಮೂಮುಚತ್ ॥ ೩೧ ॥

**ಪರೀಕ್ಷಿದ್ರಾಜನು ಕೇಳಿದನು** – ಮುನಿವರ್ಯರೇ! ಭಗವಂತನು ಮೊಸಳೆಯ ಹಿಡಿತದಿಂದ ಗಜೇಂದ್ರನನ್ನು ಹೇಗೆ ಕಾಪಾಡಿದನು? ಇದನ್ನು ನಿಮ್ಮಿಂದ ಕೇಳಲು ನಾವು ಬಯಸುತ್ತೇವೆ. ॥ ೩೧ ॥ ಎಲ್ಲ ಕಥೆಗಳಲ್ಲಿ ಮಹಾತ್ಮರ ಮೂಲಕ ಹಾಡಲ್ಪಟ್ಟ ಭಗವಾನ್ ಶ್ರೀಹರಿಯ ಪವಿತ್ರಕೀರ್ತಿಯ ವರ್ಣನೆಗಳೇ ಪರಮ ಪುಣ್ಯ ಮಯವೂ, ಪ್ರಶಂಸನೀಯವೂ, ಮಂಗಳಕರವೂ, ಶುಭವೂ ಆಗಿವೆ. ॥ ೩೨ ॥

ತತ್ಕಥಾಸು ಮಹತ್ಪುಣ್ಯಂ ಧನ್ಯಂ ಸ್ವಸ್ತ್ಯಯನಂ ಶುಭಮ್ ।
ಯತ್ರ ಯತ್ರೋತ್ತಮಶ್ಲೋಕೋ ಭಗವಾನ್ಗೀಯತೇ ಹರಿಃ ॥ ೩೨ ॥

*ಸೂತ ಉವಾಚ*

ಪರೀಕ್ಷಿತೈವಂ ಸ ತು ಬಾದರಾಯಣಿಃ
ಪ್ರಾಯೋಪವಿಷ್ಟೇನ ಕಥಾಸು ಚೋದಿತಃ ।
ಉವಾಚ ವಿಪ್ರಾಃ ಪ್ರತಿನಂದ್ಯ ಪಾರ್ಥಿವಂ
ಮುದಾ ಮುನೀನಾಂ ಸದಸಿ ಸ್ಮ ಶೃಣ್ವತಾಮ್ ॥ ೩೩ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳೇ! ಪರೀಕ್ಷಿದ್ರಾಜನು ಆಮರಣ ಉಪವಾಸಕ್ಕಾಗಿ ಕುಳಿತಿದ್ದನಲ್ಲ. ಅವನು ಶ್ರೀಶುಕಮಹಾಮುನಿಗಳನ್ನು ಹೀಗೆ ಕಥೆಹೇಳಲು ಪ್ರೇರೇಪಿಸಿದಾಗ ಅವರು ತುಂಬಾ ಆನಂದಿತರಾಗಿ, ಪ್ರೇಮದಿಂದ ರಾಜನನ್ನು ಅಭಿನಂದಿಸಿ ಮುನಿಗಳ ಆ ತುಂಬಿದ ಸಭೆಯಲ್ಲಿ ಹೀಗೆ ಹೇಳತೊಡಗಿರು. ॥ ೩೩ ॥

***ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ಮನ್ವಂತರಾನುಚರಿತೇ ಪ್ರಥಮೋಽಧ್ಯಾಯಃ ॥ ೧ ॥**

# ಎರಡನೆಯ ಅಧ್ಯಾಯ

## ಗಜೇಂದ್ರನು ಮೊಸಳೆಯ ಹಿಡಿತಕ್ಕೆ ಸಿಕ್ಕಿಹಾಕಿಕೊಳ್ಳುವುದು

*ಶ್ರೀಶುಕ ಉವಾಚ*

ಆಸೀದ್ಗಿರಿವರೋ ರಾಜನ್ಸ್ತ್ರಿಕೂಟ ಇತಿ ವಿಶ್ರುತಃ ।
ಕ್ಷೀರೋದೇನಾವೃತಃ ಶ್ರೀಮಾನ್ಯೋಜನಾಯುತಮುಚ್ಛ್ರಿತಃ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಪರೀಕ್ಷಿದ್ರಾಜನೇ! ಕ್ಷೀರಸಾಗರದಿಂದ ಆವೃತವಾದ ತ್ರಿಕೂಟವೆಂಬ ಪ್ರಸಿದ್ಧವಾದ ಸುಂದರವಾದ ಹಾಗೂ ಶ್ರೇಷ್ಠವಾದ ಒಂದು ಪರ್ವತವಿತ್ತು. ಅದು ಹತ್ತುಸಾವಿರ ಯೋಜನ ಎತ್ತರವಾಗಿತ್ತು. ॥ ೧ ॥ ಅದರ ಉದ್ದ-ಅಗಲವೂ ಸುತ್ತಲೂ ಅಷ್ಟೇ ಇತ್ತು. ಅದರ ಬೆಳ್ಳಿ, ಕಬ್ಬಿಣ ಮತ್ತು ಚಿನ್ನದ ಮೂರು ಶಿಖರಗಳ ಕಾಂತಿಯಿಂದ ಸಮುದ್ರ, ದಿಕ್ಕುಗಳು ಮತ್ತು ಆಕಾಶವು ಝಗ-ಝಗಿಸುತ್ತಿದ್ದವು. ॥ ೨ ॥

ತಾವತಾ ವಿಸ್ತೃತಃ ಪರ್ಯಕ್ತ್ರಿಭಿಃ ಶೃಂಗೈಃ ಪಯೋನಿಧಿಮ್ ।
ದಿಶಃ ಖಂ ರೋಚಯನ್ನಾಸ್ತೇ ರೌಪ್ಯಾಯಸಹಿರಣ್ಮಯೈಃ ॥ ೨ ॥

ಅನ್ಯೈಶ್ಚ ಕಕುಭಃ ಸರ್ವಾ
ರತ್ನಧಾತುವಿಚಿತ್ರಿತೈಃ ।
ನಾನಾದ್ರುಮಲತಾಗುಲ್ಮೈರ್ನಿರ್ಘೋಷೈ-
ರ್ನಿರ್ಝರಾಂಭಸಾಮ್ ॥ ೩ ॥

ಸ ಚಾವನಿಜ್ಯಮಾನಾಂಘ್ರಿಃ ಸಮಂತಾತ್ಪಯಊರ್ಮಿಭಿಃ ।
ಕರೋತಿ ಶ್ಯಾಮಲಾಂ ಭೂಮಿಂ ಹರಿನ್ಮರಕತಾಶ್ಮಭಿಃ
॥ ೪ ॥

ಸಿದ್ಧಚಾರಣಗಂಧರ್ವವಿದ್ಯಾಧರಮಹೋರಗೈಃ ।
ಕಿನ್ನರೈರಪ್ಸರೋಭಿಶ್ಚ ಕ್ರೀಡದ್ಭಿರ್ಜುಷ್ಟಕಂದರಃ
॥ ೫ ॥

ಯತ್ರ ಸಂಗೀತಸನ್ನಾದೈರ್ನದದ್ಗುಹಮಮರ್ಷಯಾ ।
ಅಭಿಗರ್ಜಂತಿ ಹರಯಃ ಶ್ಲಾಘಿನಃ ಪರಶಂಕಯಾ
॥ ೬ ॥

ನಾನಾರಣ್ಯಪಶುವ್ರಾತಸಂಕುಲದ್ರೋಣ್ಯಲಂಕೃತಃ ।
ಚಿತ್ರದ್ರುಮಸುರೋದ್ಯಾನಕಲಕಂಠವಿಹಂಗಮಃ
॥ ೭ ॥

ಸರಿತ್ಸರೋಭಿರಚ್ಛೋದೈಃ ಪುಲಿನೈರ್ಮಣಿವಾಲುಕೈಃ ।
ದೇವಸ್ತ್ರೀಮಜ್ಜನಾಮೋದಸೌರಭಾಂಬ್ವನಿಲೈರ್ಯುತಃ
॥ ೮ ॥

ತಸ್ಯ ದ್ರೋಣ್ಯಾಂ ಭಗವತೋ ವರುಣಸ್ಯ ಮಹಾತ್ಮನಃ ।
ಉದ್ಯಾನಮೃತುಮನ್ನಾಮ ಆಕ್ರೀಡಂ ಸುರಯೋಷಿತಾಮ್
॥ ೯ ॥

ಸರ್ವತೋಽಲಂಕೃತಂ ದಿವ್ಯೈರ್ನಿತ್ಯಂ ಪುಷ್ಪಫಲದ್ರುಮೈಃ ।
ಮಂದಾರೈಃ ಪಾರಿಜಾತೈಶ್ಚ ಪಾಟಲಾಶೋಕಚಂಪಕೈಃ
॥ ೧೦ ॥

ಚೂತೈಃ ಪ್ರಿಯಾಲೈಃ ಪನಸೈರಾಮ್ರೈರಾಮ್ರಾತಕೈರಪಿ ।
ಕ್ರಮುಕೈರ್ನಾಲಿಕೇರೈಶ್ಚ ಖರ್ಜೂರೈರ್ಬೀಜಪೂರಕೈಃ
॥ ೧೧ ॥

ಮಧೂಕೈಃ ಸಾಲತಾಲೈಶ್ಚ ತಮಾಲೈರಸನಾರ್ಜುನೈಃ ।
ಅರಿಷ್ಟೋದುಂಬರಪ್ಲಕ್ಷೈರ್ವಟೈಃ ಕಿಂಶುಕಚಂದನೈಃ
॥ ೧೨ ॥

ಪಿಚುಮಂದೈಃ ಕೋವಿದಾರೈಃ ಸರಲೈಃ ಸುರದಾರುಭಿಃ ।
ದ್ರಾಕ್ಷೇಕ್ಷುರಂಭಾಜಂಬೂಭಿರ್ಬದರ್ಯಕ್ಷಾಭಯಾಮಲೈಃ
॥ ೧೩ ॥

ಬಿಲ್ವೈಃ ಕಪಿತ್ಥೈರ್ಜಮ್ಬೀರೈರ್ವೃತೋ ಭಲ್ಲಾತಕಾದಿಭಿಃ ।
ತಸ್ಮಿನ್ಸರಃ ಸುವಿಪುಲಂ ಲಸತ್ಕಾಂಚನಪಂಕಜಮ್
॥ ೧೪ ॥

ಇವಲ್ಲದೆ ಇನ್ನೂ ಅನೇಕ ಶಿಖರಗಳು ರತ್ನಗಳ ಮತ್ತು ಧಾತುಗಳ ಬಣ್ಣ-ಬಣ್ಣದ ಪ್ರಭೆಯನ್ನು ಪಸರಿಸುತ್ತಾ ಎಲ್ಲ ದಿಕ್ಕುಗಳನ್ನು ಬೆಳಗುತ್ತಿದ್ದವು. ಅವುಗಳಲ್ಲಿ ವಿವಿಧ ಜಾತಿಯ ಲತಾ-ವೃಕ್ಷಗಳು ಮತ್ತು ಪೊದೆಗಳಿದ್ದವು. ಜಳ-ಜಳನೆ ಹರಿಯುತ್ತಿದ್ದ ನದಿಗಳು, ಜಲಪಾತದ ಗಂಭೀರಧ್ವನಿಯು ಎಲ್ಲೆಡೆ ಕೇಳಿಬರುತ್ತಿದ್ದವು. ॥ ೩ ॥ ಸುತ್ತಲಿಂದಲೂ ಕ್ಷೀರಸಾಗರದ ಅಲೆಗಳು ಬಂದು ಅಪ್ಪಳಿಸುವಾಗ ಅವು ಪರ್ವತರಾಜನ ಕಾಲುಗಳನ್ನು ತೊಳೆಯುತ್ತಿವೆಯೋ ಎಂದು ಅನಿಸುತ್ತಿತ್ತು. ಆ ಪರ್ವತದ ಇಂದ್ರನೀಲಮಣಿಗಳಿಂದಲೂ, ಪಚ್ಚೆಯ ಕಲ್ಲುಗಳಿಂದ ಎಲ್ಲೆಡೆ ಹಸಿರಾದ ಗರಿಕೆಯೇ ತುಂಬಿರುವಂತೆ ಶ್ಯಾಮಲ ಭೂಮಿಯು ಕಂಗೊಳಿಸುತ್ತಿತ್ತು. ॥ ೪ ॥ ಅದರ ಗುಹೆಗಳಲ್ಲಿ ಸಿದ್ಧರೂ, ಚಾರಣರೂ, ಗಂಧರ್ವರೂ, ವಿದ್ಯಾಧರರೂ, ನಾಗರೂ, ಕಿನ್ನರರೂ, ಅಪ್ಸರೆಯರು ಮುಂತಾದವರೆಲ್ಲರೂ ವಿಹರಿಸಲು ಸಾಮಾನ್ಯವಾಗಿ ನೆರೆಯುತ್ತಿದ್ದರು. ॥ ೫ ॥ ಅಲ್ಲಿನ ಸಂಗೀತ ಧ್ವನಿಯು ಗುಹೆಯೊಳಗೆ ಪ್ರತಿಧ್ವನಿಸುತ್ತಿದ್ದಾಗ ಅದನ್ನು ಕೇಳಿದ ಸಿಂಹಗಳು ಅದು ಬೇರೆ ಸಿಂಹದ ಗರ್ಜನೆಯೆಂದು ಭ್ರಮಿಸಿ ಅದನ್ನು ಸಹಿಸಲಾರದೆ ಪ್ರತಿಗರ್ಜನೆ ಮಾಡುತ್ತಿದ್ದವು. ॥ ೬ ॥

ಆ ಪರ್ವತದ ತಪ್ಪಲು ಪ್ರದೇಶಗಳು ಬಗೆ-ಬಗೆಯ ಕಾಡುಮೃಗಗಳ ಹಿಂಡುಗಳಿಂದ ಅಲಂಕೃತವಾಗಿತ್ತು. ಅನೇಕ ಪ್ರಕಾರದ ವೃಕ್ಷಗಳಿಂದ ತುಂಬಿದ ದೇವತೋದ್ಯಾನಗಳಲ್ಲಿ ಸುಂದರವಾದ ಪಕ್ಷಿಗಳು ಮಧುರವಾಗಿ ಧ್ವನಿಮಾಡುತ್ತಿದ್ದವು. ॥ ೭ ॥ ಅದರಲ್ಲಿ ಅನೇಕ ನದಿಗಳೂ, ಸರೋವರಗಳೂ ನಿರ್ಮಲವಾದ ನೀರಿನಲ್ಲಿ ತುಂಬಿ ಹರಿಯುತ್ತಿದ್ದವು. ಅವುಗಳ ದಡಗಳಲ್ಲಿ ಮಣಿಮಯ ಮಳಲು ಹೊಳೆಯುತ್ತಿತ್ತು. ದೇವಾಂಗನೆಯರು ನದಿ-ಸರೋವರಗಳಲ್ಲಿ ಸ್ನಾನಮಾಡುತ್ತಿದ್ದುದರಿಂದ ಅವುಗಳ ನೀರು ಅತ್ಯಂತ ಸುಗಂಧಿತವಾಗಿತ್ತು. ಅದರ ಸುವಾಸನೆಯನ್ನು ಹೊತ್ತ ತಂಗಾಳಿಯು ಅಲ್ಲಿ ಬೀಸುತ್ತಿತ್ತು. ॥ ೮ ॥

ಪರ್ವತರಾಜ ತ್ರಿಕೂಟದ ತಪ್ಪಲಿನಲ್ಲಿ ಭಗವತ್ಪ್ರೇಮಿ ಮಹಾತ್ಮಾ ಭಗವಾನ್ ವರುಣನ ಒಂದು ಉದ್ಯಾನವನವಿತ್ತು. ಋತುಮಾನ್ ಎಂದು ಪ್ರಸಿದ್ಧವಾದ ಆ ಉದ್ಯಾನವನದಲ್ಲಿ ದೇವಾಂಗನೆಯರು ಕ್ರೀಡಿಸುತ್ತಿದ್ದರು. ॥ ೯ ॥ ಅದರ ಎಲ್ಲ ಕಡೆಗಳಲ್ಲಿಯೂ ಸದಾ ಹೂವು-ಹಣ್ಣುಗಳಿಂದ ತುಂಬಿ ಕಳಕಳಿಸುತ್ತಿದ್ದ ದಿವ್ಯ ವೃಕ್ಷಗಳು ಶೋಭಿಸುತ್ತಿದ್ದವು. ಮಂದಾರ, ಪಾರಿಜಾತ, ಪಾಟಲ, ಅಶೋಕ, ಸಂಪಿಗೆ, ಬಗೆ-ಬಗೆಯ ಹೂವುಗಳು, ಅಮಟೆ, ಮೊರಟೆ, ಮಾವು, ಹಲಸು, ಅಡಿಕೆ, ತೆಂಗು, ಖರ್ಜೂರ, ಮಾದಳ, ಹಿಪ್ಪೆ, ಸಾಲ, ತಾಳೆ, ಹೊಂಗೆ, ಹೊನ್ನೆಮರ, ಕೆಂಪುಮುತ್ತಿಮರ, ಅತ್ತಿಮರ, ಜುಲ್ಲಿಮರ, ಆಲದಮರ, ಮುಳ್ಳುಮುತ್ತುಗ, ಶ್ರೀಗಂಧದ ಮರ, ಬೇವಿನಮರ, ಕೆಂಗಾಂಚಾಲ, ಸರಳ, ದೇವದಾರು, ದ್ರಾಕ್ಷಿ, ಕಬ್ಬು, ಬಾಳೆ, ನೇರಳೆ, ಎಲಚೀಮರ, ತಾಳೆಯಮರ, ರುದ್ರಾಕ್ಷಿ ಮರ, ಅಳಲೇಮರ, ನೆಲ್ಲಿ, ಬಿಲ್ವಪತ್ರೆ, ಬೇಲ, ನಿಂಬೆ, ಗೇರು ಮುಂತಾದ ಮರಗಳು ಸುತ್ತಲೂ ಕಳಕಳಿಸುತ್ತಿದ್ದವು. ಆ ಉದ್ಯಾನವನದಲ್ಲಿ ಒಂದು ಸುಂದರವಾದ ಮತ್ತು ವಿಸ್ತಾರವಾದ ಸರೋವರವು ಕಂಗೊಳಿಸುತ್ತಿತ್ತು. ಅದರಲ್ಲಿ ಚಿನ್ನದ ಬಣ್ಣದ ಕಮಲಗಳು ಅರಳಿ ಶೋಭಿಸುತ್ತಿದ್ದವು. ॥ ೧೦-೧೪ ॥ ಹಾಗೆಯೇ

ಕುಮುದೋತ್ಪಲಕಲ್ಹಾರಶತಪತ್ರಶ್ರಿಯೋರ್ಜಿತಮ್ ।
ಮತ್ತಷಟ್ಪದನಿರ್ಘುಷ್ಟಂ ಶಕುಂತೈಶ್ಚ ಕಲಸ್ವನೈಃ ॥ ೧೫ ॥

ಹಂಸಕಾರಂಡವಾಕೀರ್ಣಂ ಚಕ್ರಾಹ್ವೈಃ ಸಾರಸೈರಪಿ ।
ಜಲಕುಕ್ಕುಟಕೋಯಷ್ಟಿದಾತ್ಯೂಹಕುಲಕೂಜಿತಮ್ ॥ ೧೬ ॥

ಮತ್ಸ್ಯಕಚ್ಛಪಸಂಚಾರಚಲತ್ಪದ್ಮರಜಃಪಯಃ ।
ಕದಂಬವೇತಸನಲನೀಪವಂಜುಲಕೈರ್ವೃತಮ್ ॥ ೧೭ ॥

ಕುಂದೈಃ ಕುರಬಕಾಶೋಕೈಃ ಶಿರೀಷೈಃ ಕುಟಜೇಂಗುದೈಃ ।
ಕುಬ್ಜಕೈಃ ಸ್ವರ್ಣಯೂಥೀಭಿರ್ನಾಗಪುನ್ನಾಗಜಾತಿಭಿಃ ॥ ೧೮ ॥

ಮಲ್ಲಿಕಾಶತಪತ್ರೈಶ್ಚ ಮಾಧವೀಜಾಲಕಾದಿಭಿಃ ।
ಶೋಭಿತಂ ತೀರಜೈಶ್ಚಾನ್ಯೈರ್ನಿತ್ಯರ್ತುಭಿರಲಂ ದ್ರುಮೈಃ ॥ ೧೯ ॥

ತತ್ರೈಕದಾ ತದ್ಗಿರಿಕಾನನಾಶ್ರಯಃ
ಕರೇಣುಭಿರ್ವಾರಣಯೂಥಪಶ್ಚರನ್ ।
ಸಕಂಟಕಾನ್ಕೀಚಕವೇಣುವೇತ್ರವದ್
ವಿಶಾಲಗುಲ್ಮಂ ಪ್ರರುಜನ್ವನಸ್ಪತೀನ್ ॥ ೨೦ ॥

ಯದ್ಗಂಧಮಾತ್ರಾದ್ಧರಯೋ ಗಜೇಂದ್ರಾ
ವ್ಯಾಘ್ರಾದಯೋ ವ್ಯಾಲಮೃಗಾಃ ಸಖಡ್ಗಾಃ ।
ಮಹೋರಗಾಶ್ಚಾಪಿ ಭಯಾದ್ದ್ರವಂತಿ
ಸಗೌರಕೃಷ್ಣಾಃ ಶರಭಾಶ್ಚಮರ್ಯಃ ॥ ೨೧ ॥

ವೃಕಾ ವರಾಹಾ ಮಹಿಷರ್ಕ್ಷಶಲ್ಯಾ
ಗೋಪುಚ್ಛಸಾಲಾವೃಕಮರ್ಕಟಾಶ್ಚ ।
ಅನ್ಯತ್ರ ಕ್ಷುದ್ರಾ ಹರಿಣಾಃ ಶಶಾದಯ-
ಶ್ಚರಂತ್ಯಭೀತಾ ಯದನುಗ್ರಹೇಣ ॥ ೨೨ ॥

ಸ ಘರ್ಮತಪ್ತಃ ಕರಿಭಿಃ ಕರೇಣುಭಿ-
ರ್ವೃತೋ ಮದಚ್ಯುತ್ಕಲಭೈರನುದ್ರುತಃ ।
ಗಿರಿಂ ಗರಿಮ್ಣಾ ಪರಿತಃ ಪ್ರಕಂಪಯನ್
ನಿಷೇವ್ಯಮಾಣೋಽಲಿಕುಲೈರ್ಮದಾಶನೈಃ ॥ ೨೩ ॥

ಸರೋಽನಿಲಂ ಪಂಕಜರೇಣುರೂಷಿತಂ
ಜಿಘ್ರನ್ವಿದೂರಾನ್ಮದವಿಹ್ವಲೇಕ್ಷಣಃ ।
ವೃತಃ ಸ್ವಯೂಥೇನ ತೃಷಾರ್ದಿತೇನ ತತ್
ಸರೋವರಾಭ್ಯಾಶಮಥಾಗಮದ್ದ್ರುತಮ್ ॥ ೨೪ ॥

ಬೇರೆ-ಬೇರೆ ಜಾತಿಯ ಕುಮುದ, ಉತ್ಪಲ, ಕಲ್ಹಾರ, ಶತದಲ ಮುಂತಾದ ಕಮಲಗಳ ಕಾಂತಿಯು ಹರಡಿತ್ತು. ಮತ್ತೇರಿದ ದುಂಬಿಗಳು ಝೇಂಕರಿಸುತ್ತಿದ್ದವು. ಮನೋಹರ ಪಕ್ಷಿಗಳ ಕೂಜನವು ಎಲ್ಲೆಡೆ ಕೇಳಿಬರುತ್ತಿತ್ತು. ಹಂಸ, ನೀರುಹಕ್ಕಿ, ಚಕ್ರವಾಕ, ತಾವರೆಹಕ್ಕಿ, ನೀರುಕೋಳಿ, ಕೋಯಷ್ಟಿ, ನೀರುಕಾಗೆ ಮುಂತಾದವುಗಳು ಇಂಪಾಗಿ ಕಲ-ಕಲ ಧ್ವನಿಮಾಡುತ್ತಿದ್ದವು. ಮೀನು, ಆಮೆ ಮುಂತಾದ ಜಲಚರಪ್ರಾಣಿಗಳು ಓಡಾಡುವಾಗ ತಾವರೆಹೂಗಳು ಅಲುಗಾಡುತ್ತಾ ನೀರಿನಲ್ಲಿ ಪರಾಗವನ್ನು ಚೆಲ್ಲುತ್ತಿದ್ದವು. ಈಚಲ, ಬೆತ್ತ, ಜೊಂಡುಗಳು, ನೀರುಕಾರಂಜೀಮರ, ಹಬ್ಬೆಗಿಡ ಮುಂತಾದವು ಅದರ ಸುತ್ತಲೂ ಕಂಗೊಳಿಸುತ್ತಿದ್ದವು. ॥ ೧೫-೧೭॥ ಮಾಘದ ಮೊಲ್ಲೆ, ಮುಳ್ಳುಗೊರಂಟೆ, ಅಶೋಕವೃಕ್ಷ, ಬಾಗೆ, ಬೆಟ್ಟದಮಲ್ಲಿಗೆ ಹಿಪ್ಪೆ, ಕುಬ್ಜಕ, ಸ್ವರ್ಣಯೂಧಿ, ನಾಗ, ಪುನ್ನಾಗ, ಜಾಜಿ, ಮಲ್ಲಿಗೆ, ಮಾಧವೀ ಮುಂತಾದ ಹೂವುಗಳು ಎಲ್ಲ ಋತುಗಳಲ್ಲಿ ಅರಳಿ ತುಂಬಿದ ಸೊಂಪಾಗಿ ಹೂಮರಗಳಿಂದ ಆ ಸರೋವರವು ಶೋಭಾಯಮಾನವಾಗಿತ್ತು. ॥ ೧೮-೧೯ ॥

ಆ ಪರ್ವತದ ಘೋರಾರಣ್ಯದಲ್ಲಿ ಹಲವಾರು ಹೆಣ್ಣಾನೆಗಳೊಡನೆ ಒಂದು ಗಜೇಂದ್ರವು ವಾಸವಾಗಿತ್ತು. ಅದು ದೊಡ್ಡ-ದೊಡ್ಡ ಶಕ್ತಿಶಾಲಿ ಆನೆಗಳಿಗೆಲ್ಲ ನಾಯಕವಾಗಿತ್ತು. ಒಂದುದಿನ ಅದೇ ಪರ್ವತದಲ್ಲಿ ತನ್ನ ಸಂಗಾತಿಗಳಾದ ಹೆಣ್ಣಾನೆಗಳಿಂದ ಕೂಡಿಕೊಂಡು ಅರಣ್ಯದಲ್ಲಿದ್ದ ಮುಳ್ಳುಗಳಿಂದ ಕೂಡಿದ್ದ ಹೆಬ್ಬಿದಿರುಗಳನ್ನೂ, ಕಿರುಬಿದಿರುಗಳನ್ನೂ, ಬೆತ್ತಗಳನ್ನೂ, ದೊಡ್ಡ-ದೊಡ್ಡ ಪೊದರುಗಳನ್ನು ಧ್ವಂಸಮಾಡುತ್ತಾ ಸಂಚರಿಸುತ್ತಿತ್ತು. ॥ ೨೦ ॥ ಅದರ ವಾಸನೆಯಿಂದಲೇ ಸಿಂಹ-ಆನೆ-ಹುಲಿ-ಚಿರತೆ ಮುಂತಾದ ಹಿಂಸ್ರಪ್ರಾಣಿಗಳು, ಸರ್ಪಗಳು, ಖಡ್ಗಮೃಗಗಳು, ಗೌರಮೃಗಗಳು, ಕೃಷ್ಣಸಾರ, ಶರಭಗಳು, ಚಮರೀಮೃಗಗಳು ಇನ್ನೂ ಅನೇಕ ದುಷ್ಟಮೃಗಗಳು ಓಡಿಹೋಗುತ್ತಿದ್ದವು. ॥ ೨೧ ॥ ತೋಳಗಳು, ಕಾಡುಹಂದಿ, ಕಾಡುಕೋಣಗಳು, ಕರಡಿಗಳು, ಮುಳ್ಳುಹಂದಿಗಳು, ಗೋಪುಚ್ಛಗಳು, ನಾಯಿಗಳು, ಕೋತಿಗಳು, ಹುಲ್ಲೆಗಳು, ಮೊಲಗಳು, ಇವೇ ಮುಂತಾದ ದುರ್ಬಲ ಪ್ರಾಣಿಗಳು ಗಜರಾಜನ ಕೃಪೆಯಿಂದ ನಿರ್ಭಯವಾಗಿ ಸಂಚರಿಸುತ್ತಿದ್ದವು. ॥ ೨೨ ॥ ಗಜರಾಜನ ಹಿಂದೆ-ಹಿಂದೆ ಸಣ್ಣ-ಸಣ್ಣ ಆನೆಮರಿಗಳು ಓಡುತ್ತಿದ್ದವು. ದೊಡ್ಡ-ದೊಡ್ಡ ಗಂಡಾನೆಗಳೂ, ಹೆಣ್ಣಾನೆಗಳೂ, ಅವನನ್ನು ಸುತ್ತುವರಿದು ನಡೆಯುತ್ತಿದ್ದವು. ಅದರ ಭಾರವಾದ ಹೆಜ್ಜೆಗಳಿಂದ ಆ ಪರ್ವತವೇ ನಡುಗುತ್ತಿತ್ತು. ಅದರ ಗಂಡಸ್ಥಲದಿಂದ ಒಸರುತ್ತಿದ್ದ ಮದೋದಕವನ್ನು ಪಾನಮಾಡಲು ದುಂಬಿಗಳು ಜೊತೆ-ಜೊತೆಯಾಗಿಯೇ ಹಾರಾಡುತ್ತಿದ್ದವು. ಮದದಿಂದ ಅದರ ಕಣ್ಣುಗಳು ವಿಹ್ವಲವಾಗಿದ್ದುವು. ಬಿಸಿಲು ಭಾರೀ ಸುಡುತ್ತಿತ್ತು. ಆದರಿಂದ ಗಜರಾಜನು ವ್ಯಾಕುಲನಾಗಿದ್ದನು. ಅವನಿಗೆ ಮತ್ತು ಸಂಗಡಿಗರಿಗೆ ಬಾಯಾರಿಕೆ ಪೀಡಿಸುತ್ತಿತ್ತು. ಆಗ ದೂರದಿಂದಲೇ ಕಮಲ ಪರಾಗದಿಂದ ಸುವಾಸಿತವಾದ ವಾಯುವನ್ನು ಮೂಸುತ್ತಾ, ಶೀತಲವಾದ ಸುಗಂಧವನ್ನು ಹೊತ್ತುತರುತ್ತಿದ್ದ ವಾಯುವಿನ ಜಾಡನ್ನು ಹಿಡಿದು ಆ ಸರೋವರದ ಕಡೆಗೆ ಹೊರಟು. ವೇಗವಾಗಿ ನಡೆಯುತ್ತಾ ಸ್ವಲ್ಪದರಲ್ಲೇ ಆ ಸರೋವರದ ಬಳಿಗೆ ಬಂದನು.॥೨೩-೨೪॥

ವಿಗಾಹ್ಯ ತಸ್ಮಿನ್ನಮೃತಾಂಬು ನಿರ್ಮಲಂ
ಹೇಮಾರವಿಂದೋತ್ಪಲರೇಣುವಾಸಿತಮ್ ।
ಪಪೌ ನಿಕಾಮಂ ನಿಜಪುಷ್ಕರೋದ್ಧೃತ-
ಮಾತ್ಮಾನಮದ್ಭಿಃ ಸ್ನಪಯನ್ಗತಕ್ಲಮಃ ॥ ೨೫ ॥

ಆ ಸರೋವರದ ನೀರು ಅತ್ಯಂತ ನಿರ್ಮಲವೂ, ಅಮೃತದಂತೆಯೂ ಮಧುರವಾಗಿತ್ತು. ಚಿನ್ನದ ಕಮಲದ ಮತ್ತು ಕನ್ನೈದಿಲೆಯ ಪರಾಗದಿಂದ ಸುಗಂಧಿತವಾಗಿತ್ತು. ಗಜೇಂದ್ರನು ಮೊದಲಿಗೆ ಆ ಸರೋವರದಲ್ಲಿ ಇಳಿದು ತನ್ನ ಸೊಂಡಿಲಿನಿಂದ ನೀರನ್ನು ಎತ್ತಿ-ಎತ್ತಿ ಯಥೇಚ್ಛವಾಗಿ ಕುಡಿದನು. ಮತ್ತೆ ಆ ನೀರಿನಲ್ಲಿ ಸ್ನಾನಮಾಡಿ ತನ್ನ ದಣಿವನ್ನು ಇಂಗಿಸಿಕೊಂಡನು. ॥ ೨೫ ॥

ಸ್ವಪುಷ್ಕರೇಣೋದ್ಧೃತಶೀಕರಾಂಬುಭಿ-
ರ್ನಿಪಾಯಯನ್ಸಂಸ್ನಪಯನ್ಯಥಾ ಗೃಹೀ ।
ಘೃಣೀ ಕರೇಣೂಃ ಕಲಭಾಂಶ್ಚ ದುರ್ಮದೋ
ನಾಚಷ್ಟ ಕೃಚ್ಛ್ರಂ ಕೃಪಣೋಽಜಮಾಯಯಾ ॥ ೨೬ ॥

ಗಜೇಂದ್ರನು ಗೃಹಸ್ಥ ಮನುಷ್ಯನಂತೆ ಮೋಹಗ್ರಸ್ತನಾಗಿ ತನ್ನ ಸೊಂಡಿಲಿನಿಂದ ನೀರನ್ನೆತ್ತಿ ಚೆಲ್ಲುತ್ತಾ ಸಂಗಡಿಗರಾದ ಹೆಣ್ಣಾನೆಗಳನ್ನು, ಮರಿಗಳನ್ನು ಸ್ನಾನಮಾಡಿಸತೊಡಗಿದನು. ಹಾಗೂ ಅವರ ಸೊಂಡಿಲಿನೊಳಗೆ ತನ್ನ ಸೊಂಡಿಲನ್ನು ಹಾಕಿ ನೀರು ಕುಡಿಸಿದನು. ಭಗವಂತನ ಮಾಯೆಯಿಂದ ಮೋಹಿತನಾದ ಗಜೇಂದ್ರನು ಉನ್ಮತ್ತನಾಗಿದ್ದನು. ನನ್ನ ತಲೆಯಮೇಲೆ ದೊಡ್ಡ ಆಪತ್ತು ಹೊಂಚು ಹಾಕುತ್ತಿದೆ ಎಂಬುದೂ ಆ ಬಡಪಾಯಿಗೆ ತಿಳಿದಿರಲಿಲ್ಲ. ॥ ೨೬ ॥

ತಂ ತತ್ರ ಕಶ್ಚಿನ್ನೃಪ ದೈವಚೋದಿತೋ-
ಗ್ರಾಹೋ ಬಲೀಯಾಂಶ್ಚರಣೇ ರುಷಾಗ್ರಹೀತ್ ।
ಯದೃಚ್ಛಯೈವಂ ವ್ಯಸನಂ ಗತೋ ಗಜೋ
ಯಥಾಬಲಂ ಸೋಽತಿಬಲೋ ವಿಚಕ್ರಮೇ ॥ ೨೭ ॥

ಪರೀಕ್ಷಿತನೇ! ಗಜೇಂದ್ರನು ಇಷ್ಟೊಂದು ಉನ್ಮತ್ತನಾಗಿದ್ದಾಗ ಪ್ರಾರಬ್ಧದ ಪ್ರೇರಣೆಯಿಂದ ಒಂದು ಬಲಿಷ್ಠವಾದ ಮೊಸಳೆಯು, ಆನೆಗಳ ತುಳಿತದಿಂದ ಕ್ರೋಧಗೊಂಡು ಗಜೇಂದ್ರನ ಕಾಲನ್ನು ಬಲವಾಗಿ ಹಿಡಿದುಬಿಟ್ಟಿತು. ಈ ವಿಧವಾಗಿ ಅಕಸ್ಮಾತ್ತಾಗಿ ವಿಪತ್ತಿಗೆ ಸಿಲುಕಿದ ಆ ಬಲಶಾಲಿಯಾದ ಗಜೇಂದ್ರನು ತನ್ನನ್ನು ಬಿಡಿಸಿಕೊಳ್ಳಲು ಬಹಳವಾಗಿ ಪ್ರಯತ್ನಿಸಿದನು. ಆದರೆ ಬಿಡಿಸಿಕೊಳ್ಳದಾದನು. ॥ ೨೭ ॥ ಬೇರೆ ಗಂಡಾನೆಗಳು, ಹೆಣ್ಣಾನೆಗಳು, ಮರಿಗಳು – ತಮ್ಮ ಒಡೆಯನನ್ನು ಬಲಿಷ್ಠವಾದ ಒಂದು ಮೊಸಳೆಯು ಹಿಡಿದು ವೇಗವಾಗಿ ಸೆಳೆಯುತ್ತಿದೆ ಮತ್ತು ಅವನು ಬಹಳ ಸಂಕಟಕ್ಕೊಳಗಾಗಿದ್ದಾನೆಂದು ನೋಡಿ ಅವುಗಳಿಗೆ ತುಂಬಾ ದುಃಖವಾಯಿತು. ಅವುಗಳೆಲ್ಲವೂ ಆರ್ತರಾಗಿ ಘೀಳಿಟ್ಟವು. ಅನೇಕರು ಅವನಿಗೆ ಸಹಾಯಮಾಡಿ ನೀರಿನಿಂದ ಹೊರಗೆ ತೆಗೆಯಲು ಬಯಸಿದರು, ಆದರೆ ಅವರೆಲ್ಲರೂ ಅಸಮರ್ಥರೇ ಆದರು. ॥ ೨೮ ॥

ತಥಾಽಽತುರಂ ಯೂಥಪತಿಂ ಕರೇಣವೋ
ವಿಕೃಷ್ಯಮಾಣಂ ತರಸಾ ಬಲೀಯಸಾ ।
ವಿಚುಕ್ರುಶುರ್ದೀನಧಿಯೋಽಪರೇ ಗಜಾಃ
ಪಾರ್ಷ್ಣಿಗ್ರಹಾಸ್ತಾರಯಿತುಂ ನ ಚಾಶಕನ್ ॥ ೨೮ ॥

ಗಜೇಂದ್ರ ಮತ್ತು ಮೊಸಳೆಯು ತಮ್ಮ-ತಮ್ಮ ಪೂರ್ಣಶಕ್ತಿಯಿಂದ ಸೆಣಸಾಡುತ್ತಿದ್ದರು. ಕೆಲವೊಮ್ಮೆ ಗಜೇಂದ್ರನು ಮೊಸಳೆಯನ್ನು ಹೊರಗೆ ಎಳೆದರೆ, ಕೆಲವೊಮ್ಮೆ ಮೊಸಳೆಯು ನೀರಿನೊಳಗೆ ಸೆಳೆದುಬಿಡುತ್ತಿತ್ತು. ಪರೀಕ್ಷಿತನೇ! ಹೀಗೆ ಕಾದಾಡುತ್ತಾ-ಕಾದಾಡುತ್ತಾ ಒಂದು ಸಾವಿರ ವರ್ಷಗಳು ಕಳೆದವು ಮತ್ತು ಇಬ್ಬರು ಸೋಲುತ್ತಾ-ಗೆಲ್ಲುತ್ತಾ ಇದ್ದರು. ಈ ಘಟನೆಯನ್ನು ನೋಡಿದ ದೇವತೆಗಳೂ ಆಶ್ಚರ್ಯಚಕಿತರಾದರು. ॥ ೨೯ ॥

ನಿಯುಧ್ಯತೋರೇವಮಿಭೇಂದ್ರನಕ್ರಯೋ-
ರ್ವಿಕರ್ಷತೋರಂತರತೋ ಬಹಿರ್ಮಿಥಃ ।
ಸಮಾಃ ಸಹಸ್ರಂ ವ್ಯಗಮನ್ಮಹೀಪತೇ
ಸಪ್ರಾಣಯೋಶ್ಚಿತ್ರಮಮಂಸತಾಮರಾಃ ॥ ೨೯ ॥

ಕೊನೆಗೆ ಬಹಳ ದಿನಗಳವರೆಗೆ ಮತ್ತೆ-ಮತ್ತೆ ನೀರಿಗೆ ಸೆಳೆಯಲ್ಪಟ್ಟದ್ದರಿಂದ ಗಜೇಂದ್ರನ ಶರೀರವು ಶಿಥಿಲವಾಗ ತೊಡಗಿತು. ಅವನ ಮನಸ್ಸಿನಲ್ಲಿ ಉತ್ಸಾಹವೂ, ದೇಹದಲ್ಲಿ ಬಲವು ಉಳಿಯಲಿಲ್ಲ. ಶಕ್ತಿಯೂ ಕ್ಷೀಣವಾಯಿತು. ಇತ್ತ ಮೊಸಳೆಯಾದರೋ ಹೇಳಿ-ಕೇಳಿ ಜಲಚರಪ್ರಾಣಿ. ಅದರ ಶಕ್ತಿಯು ಕುಗ್ಗುವ ಬದಲು ಹೆಚ್ಚುತ್ತಾಹೋಯಿತು. ಅದು ಅತೀವ ಉತ್ಸಾಹದಿಂದ ಇನ್ನೂ ಬಲವನ್ನು ಹಾಕಿ ಗಜೇಂದ್ರನನ್ನು ಸೆಳೆಯತೊಡಗಿತು. ॥ ೩೦ ॥

ತತೋ ಗಜೇಂದ್ರಸ್ಯ ಮನೋಬಲೌಜಸಾಂ
ಕಾಲೇನ ದೀರ್ಘೇಣ ಮಹಾನಭೂದ್ವ್ಯಯಃ ।
ವಿಕೃಷ್ಯಮಾಣಸ್ಯ ಜಲೇಽವಸೀದತೋ
ವಿಪರ್ಯಯೋಽಭೂತ್ಸಕಲಂ ಜಲೌಕಸಃ ॥ ೩೦ ॥

ಹೀಗೆ ದೇಹಾಭಿಮಾನಿಯಾದ ಗಜೇಂದ್ರನು ಅಕಸ್ಮಾತ್ತಾಗಿ ಸಂಕಟದಲ್ಲಿ ಬಿದ್ದು ತನ್ನನ್ನು ಬಿಡಿಸಿಕೊಳ್ಳುವುದರಲ್ಲಿ ಪೂರ್ಣವಾಗಿ ಅಸಮರ್ಥನಾದನು. ಬಹಳ ಹೊತ್ತಿನವರೆಗೆ ತನ್ನ ಬಿಡುಗಡೆಯ

ಇತ್ಥಂ ಗಜೇಂದ್ರಃ ಸ ಯದಾಽಽಪ ಸಂಕಟಂ
ಪ್ರಾಣಸ್ಯ ದೇಹೀ ವಿವಶೋ ಯದೃಚ್ಛಯಾ ।
ಅಪಾರಯನ್ನಾತ್ಮವಿಮೋಕ್ಷಣೇ ಚಿರಂ
ದಧ್ಯಾವಿಮಾಂ ಬುದ್ಧಿಮಥಾಭ್ಯಪದ್ಯತ ॥ ೩೧ ॥

ನ ಮಾಮಿಮೇ ಜ್ಞಾತಯ ಆತುರಂ ಗಜಾಃ
ಕುತಃ ಕರಿಣ್ಯಃ ಪ್ರಭವಂತಿ ಮೋಚಿತುಮ್ ।
ಗ್ರಾಹೇಣ ಪಾಶೇನ ವಿಧಾತುರಾವೃತೋಽ-
ಪ್ಯಹಂ ಚ ತಂ ಯಾಮಿ ಪರಂ ಪರಾಯಣಮ್ ॥ ೩೨ ॥

ಯಃ ಕಶ್ಚನೇಶೋ ಬಲಿನೋಽಂತಕೋರಗಾತ್
ಪ್ರಚಂಡವೇಗಾದಭಿಧಾವತೋ ಭೃಶಮ್ ।
ಭೀತಂ ಪ್ರಪನ್ನಂ ಪರಿಪಾತಿ ಯದ್ಭಯಾ-
ನ್ಮೃತ್ಯುಃ ಪ್ರಧಾವತ್ಯರಣಂ ತಮೀಮಹಿ ॥ ೩೩ ॥

ಬಗ್ಗೆ ಯೋಚಿಸಿ, ಕೊನೆಗೆ ಅವನು ಈ ನಿಶ್ಚಯಕ್ಕೆ ತಲುಪಿದನು. ॥ ೩೧॥ ಈ ನಕ್ರ (ಮೊಸಳೆ)ವು ವಿಧಾತನ ಉರುಳೇ ಆಗಿದೆ. ಇದರಲ್ಲಿ ಸಿಕ್ಕಿಕೊಂಡು ಸಂಕಟಕ್ಕೊಳಗಾದ ನನ್ನನ್ನು ನನ್ನ ಜೊತೆಯವರಾದ ಆನೆಗಳೇ ಈ ವಿಪತ್ತಿನಿಂದ ಎತ್ತಲಾರದೆ ಹೋದಾಗ ಬಡಪಾಯಿಗಳಾದ ಹೆಣ್ಣಾನೆಗಳೂ ಹೇಗೆ ತಾನೇ ಬಿಡಿಸಬಲ್ಲರು ? ಆದಕ್ಕಾಗಿ ನಾನು ಈಗ ಸಮಸ್ತ ವಿಶ್ವದ ಏಕೈಕ ಆಶ್ರಯನಾದ ಭಗವಂತನನ್ನೇ ಶರಣು ಹೊಂದುವೆನು. ॥ ೩೨ ॥ ಕಾಲವು ಭಾರೀ ಬಲಿಷ್ಠವಾಗಿದೆ. ಇದು ಸರ್ಪದಂತೆ ಅತ್ಯಂತ ಪ್ರಚಂಡ ವೇಗದಿಂದ ಎಲ್ಲರನ್ನೂ ನುಂಗಲು ಓಡುತ್ತಾ ಇರುತ್ತದೆ. ಇದಕ್ಕೆ ಭಯಗೊಂಡು ಯಾರಾದರೂ ಭಗವಂತನಲ್ಲಿ ಶರಣಾದರೆ ಅವನನ್ನು ಆ ಪ್ರಭುವು ಖಂಡಿತವಾಗಿ ಮೃತ್ಯುವಿನಿಂದ ಕಾಪಾಡುತ್ತಾನೆ. ಅವನ ಭಯದಿಂದಲೇ ಹೆದರಿ ಕಾಲವೂ ಕೂಡ ಓಡಿಹೋಗುತ್ತದೆ. ಆ ಪ್ರಭುವೇ ಎಲ್ಲರ ಆಶ್ರಯನಾಗಿದ್ದಾನೆ. ನಾನು ಅವನನ್ನೇ ಶರಣು ಹೊಂದುತ್ತೇನೆ. ॥ ೩೩ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ಮನ್ವಂತರಾನುವರ್ಣನೇ ಗಜೇಂದ್ರೋಪಾಖ್ಯಾನೇ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಗಜೇಂದ್ರನು ಮಾಡಿದ ಪರಮಾತ್ಮನ ಸ್ತೋತ್ರ – ಗಜೇಂದ್ರಮೋಕ್ಷ

*ಶ್ರೀಶುಕ ಉವಾಚ*

ಏವಂ ವ್ಯವಸಿತೋ ಬುದ್ಧ್ಯಾ ಸಮಾಧಾಯ ಮನೋ ಹೃದಿ ।
ಜಜಾಪ ಪರಮಂ ಜಾಪ್ಯಂ ಪ್ರಾಗ್ಜನ್ಮನ್ಯನುಶಿಕ್ಷಿತಮ್ ॥ ೧ ॥

*ಗಜೇಂದ್ರ ಉವಾಚ*

ಓಂ ನಮೋ ಭಗವತೇ ತಸ್ಮೈ ಯತ ಏತಚ್ಚಿದಾತ್ಮಕಮ್ ।
ಪುರುಷಾಯಾದಿಬೀಜಾಯ ಪರೇಶಾಯಾಭಿಧೀಮಹಿ ॥ ೨ ॥

ಯಸ್ಮಿನ್ನಿದಂ ಯತಶ್ಚೇದಂ ಯೇನೇದಂ ಯ ಇದಂ ಸ್ವಯಮ್ ।
ಯೋಽಸ್ಮಾತ್ಪರಸ್ಮಾಚ್ಚ ಪರಸ್ತಂ ಪ್ರಪದ್ಯೇ ಸ್ವಯಂಭುವಮ್ ॥ ೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ! ಗಜೇಂದ್ರನು ಹೀಗೆ ದಯಾಮಯನಾದ ಭಗವಂತನನ್ನೇ ಶರಣುಹೊಂದಲು ನಿಶ್ಚಯಿಸಿ ತನ್ನ ಮನಸ್ಸನ್ನು ಹೃದಯದಲ್ಲಿ ಏಕಾಗ್ರಗೊಳಿಸಿ, ಹಿಂದಿನ ಜನ್ಮದಲ್ಲಿ ಉಪದಿಷ್ಟವಾಗಿದ್ದ ಶ್ರೇಷ್ಠವಾದ ಸ್ತೋತ್ರದ ಮೂಲಕ ಭಗವಂತನನ್ನು ಸ್ತುತಿಸತೊಡಗಿದನು. ॥ ೧ ॥

ಗಜೇಂದ್ರನು ಹೇಳುತ್ತಾನೆ – ಯಾರು ಜಗತ್ತಿಗೆ ಮೂಲ ಕಾರಣನೋ, ಎಲ್ಲರ ಹೃದಯದಲ್ಲಿ ಪರಮಪುರುಷನ ರೂಪದಲ್ಲಿ ವಿರಾಜಮಾನನಾಗಿರುವನೋ, ಯಾರು ಸಮಸ್ತ ಜಗತ್ತಿನ ಏಕಮಾತ್ರ ಸ್ವಾಮಿಯಾಗಿರುವನೋ, ಯಾರ ಕಾರಣದಿಂದ ಈ ಪ್ರಪಂಚದಲ್ಲಿ ಚೈತನ್ಯದ ವಿಸ್ತಾರವಾಗುತ್ತದೋ, ಅಂತಹ ಸಚ್ಚಿದಾನಂದ ಸ್ವರೂಪೀ ಪರಮಾತ್ಮನಿಗೆ ನಾನು ನಮಸ್ಕರಿಸುತ್ತೇನೆ ; ಪ್ರೇಮದಿಂದ ಅವನನ್ನು ಧ್ಯಾನಿಸುತ್ತೇನೆ. ॥ ೨ ॥ ಈ ಸಮಸ್ತ ಜಗತ್ತು ಅವನಲ್ಲೇ ನೆಲೆಸಿದೆ. ಅವನ ಅಸ್ತಿತ್ವದಿಂದಲೇ ಗೋಚರಿಸುತ್ತಾ ಇದೆ. ಅವನೇ ಇದರಲ್ಲಿ ವ್ಯಾಪಿಸಿಕೊಂಡಿರುವನು ಮತ್ತು ಸ್ವತಃ ಅವನೇ ಇದರ ರೂಪದಲ್ಲಿ ಪ್ರಕಟನಾಗಿರುವನು. ಹೀಗಿದ್ದರೂ ಅವನು ಈ ಜಗತ್ತಿನಿಂದಲೂ, ಇದರ ಕಾರಣ – ಪ್ರಕೃತಿಯಿಂದ ಬೇರೆಯೇ ಆಗಿರುವನು. ಅಂತಹ ಸ್ವಯಂಪ್ರಕಾಶನೂ, ಸ್ವಯಂಸಿದ್ಧನೂ, ಸರ್ವಾತ್ಮಕನೂ ಆದ ಪರಮಾತ್ಮನಲ್ಲಿ ನಾನು ಶರಣಾಗುತ್ತೇನೆ. ಮೊರೆಹೋಗುತ್ತೇನೆ. ॥ ೩ ॥

ಯಃ ಸ್ವಾತ್ಮನೀದಂ ನಿಜಮಾಯಯಾರ್ಪಿತಂ
ಕ್ವಚಿದ್ವಿಭಾತಂ ಕ್ವ ಚ ತತ್ತಿರೋಹಿತಮ್ ।
ಅವಿದ್ಧದೃಕ್ಸಾಕ್ಷ್ಯುಭಯಂ ತದೀಕ್ಷತೇ
ಸ ಆತ್ಮಮೂಲೋಽವತು ಮಾಂ ಪರಾತ್ಪರಃ ॥ ४ ॥

ಕಾಲೇನ ಪಂಚತ್ವಮಿತೇಷು ಕೃತ್ಸ್ನಶೋ
ಲೋಕೇಷು ಪಾಲೇಷು ಚ ಸರ್ವಹೇತುಷು ।
ತಮಸ್ತದಾಽಽಸೀದ್ಗಹನಂ ಗಭೀರಂ
ಯಸ್ತಸ್ಯ ಪಾರೇಽಭಿವಿರಾಜತೇ ವಿಭುಃ ॥ ೫ ॥

ನ ಯಸ್ಯ ದೇವಾ ಋಷಯಃ ಪದಂ ವಿದು-
ರ್ಜಂತುಃ ಪುನಃ ಕೋಽರ್ಹತಿ ಗಂತುಮೀರಿತುಮ್ ।
ಯಥಾ ನಟಸ್ಯಾಕೃತಿಭಿರ್ವಿಚೇಷ್ಟತೋ
ದುರತ್ಯಯಾನುಕ್ರಮಣಃ ಸ ಮಾವತು ॥ ೬ ॥

ದಿದೃಕ್ಷವೋ ಯಸ್ಯ ಪದಂ ಸುಮಂಗಲಂ
ವಿಮುಕ್ತಸಂಗಾ ಮುನಯಃ ಸುಸಾಧವಃ ।
ಚರಂತ್ಯಲೋಕವ್ರತಮವ್ರಣಂ ವನೇ
ಭೂತಾತ್ಮಭೂತಾಃ ಸುಹೃದಃ ಸ ಮೇ ಗತಿಃ ॥ ೭ ॥

ನ ವಿದ್ಯತೇ ಯಸ್ಯ ಚ ಜನ್ಮ ಕರ್ಮ ವಾ
ನ ನಾಮರೂಪೇ ಗುಣದೋಷ ಏವ ವಾ ।
ತಥಾಪಿ ಲೋಕಾಪ್ಯಯಸಂಭವಾಯ ಯಃ
ಸ್ವಮಾಯಯಾ ತಾನ್ಯನುಕಾಲಮೃಚ್ಛತಿ ॥ ೮ ॥

ತಸ್ಮೈ ನಮಃ ಪರೇಶಾಯ ಬ್ರಹ್ಮಣೇಽನಂತಶಕ್ತಯೇ ।
ಅರೂಪಾಯೋರುರೂಪಾಯ ನಮ ಆಶ್ಚರ್ಯಕರ್ಮಣೇ ॥ ೯ ॥

ನಮ ಆತ್ಮಪ್ರದೀಪಾಯ ಸಾಕ್ಷಿಣೇ ಪರಮಾತ್ಮನೇ ।
ನಮೋ ಗಿರಾಂ ವಿದೂರಾಯ ಮನಸಶ್ಚೇತಸಾಮಪಿ ॥ ೧೦ ॥

ಈ ಪ್ರಪಂಚವು ಅವನ ಮಾಯೆಯಿಂದ ಅವನಲ್ಲಿಯೇ ಇಡಲ್ಪಟ್ಟಿದೆ. ಆದರೆ ಕೆಲವು ವೇಳೆ (ಸೃಷ್ಟಿಯ ಕಾಲದಲ್ಲಿ) ಕಾಣಿಸಿಕೊಳ್ಳುತ್ತದೆ. ಕೆಲವು ವೇಳೆ (ಪ್ರಳಯಕಾಲದಲ್ಲಿ) ಅದೃಶ್ಯವಾಗಿರುತ್ತದೆ. ಆದರೆ ಅವನ ದೃಷ್ಟಿಯು ಲೋಪವಾಗುವುದಿಲ್ಲ. ಸಾಕ್ಷೀಭೂತನಾಗಿ ಪ್ರಪಂಚದ ಸೃಷ್ಟಿಯನ್ನೂ, ಲಯವನ್ನೂ ನೋಡುತ್ತಲೇ ಇರುತ್ತಾನೆ. ಅಂತಹ ಆತ್ಮನೇ ಮೂಲವಾಗಿ ಉಳ್ಳ, ಎಲ್ಲದರಲ್ಲಿಯೂ ಆತ್ಮಸ್ವರೂಪದಿಂದ ಇರುವ ಸ್ವಯಂಪ್ರಕಾಶನಾದ ಪರಾತ್ಪರನಾದ ಪರಮಾತ್ಮನು ನನ್ನನ್ನು ರಕ್ಷಿಸಲಿ. ॥ ४ ॥ ಎರಡು ಪರಾರ್ಧಗಳು ಕಳೆದೊಡನೆಯೇ ಎಲ್ಲ ಲೋಕಗಳು – ಲೋಕಪಾಲರು ಮತ್ತು ಇವೆಲ್ಲದರ ಕಾರಣವು ಸಂಪೂರ್ಣವಾಗಿ ಲಯ ಹೊಂದುವುದು. ಆಗ ಕೇವಲ ಅತ್ಯಂತ ಗಾಢವಾದ ಗಹನವಾದ ಅಂಧಕಾರವೇ ಎಲ್ಲೆಡೆ ಹರಡಿಕೊಂಡಿರುತ್ತದೆ. ಆದರೆ ಅನಂತವಾದ ಪರಮಾತ್ಮನು ಅದರಿಂದ ತೀರಾ ಬೇರೆಯೇ ಆಗಿದ್ದು ಪ್ರಕಾಶಿಸುತ್ತಿರುವನು. ಅಂತಹ ಆದಿತ್ಯವರ್ಣನಾದ ಪ್ರಭುವು ನನ್ನನ್ನು ರಕ್ಷಿಸಲಿ. ॥ ೫ ॥ ಅವನ ಸ್ಥಾನವನ್ನು ದೇವತೆಗಳಾಗಲೀ, ಋಷಿಗಳಾಗಲೀ ತಿಳಿಯಲಾರರು. ಅಂತಹವರ ಪದವನ್ನು ಸಾಮಾನ್ಯರಾದವರು ಹೊಂದಲು ಮತ್ತು ಅದು ಹೀಗೆಯೇ ಇದೆ ಎಂದು ಹೇಳಲು ಹೇಗೆ ಸಮರ್ಥರಾಗುವರು ? ನಿಜರೂಪವನ್ನು ಮರೆಸಿ ನಾನಾ ವೇಷಗಳನ್ನು ಹಾಕಿಕೊಂಡು ಕುಣಿಯುವ ನಟನಂತೆ ತಿಳಿಯಲು ಅಸಾಧ್ಯವಾದ ಲೀಲೆಗಳಿಂದ ಕೂಡಿದವನಾಗಿ, ನಾನಾ ಅವತಾರಗಳನ್ನು ಹೊಂದುವ ಆ ಪರಮಾತ್ಮನು ನನ್ನನ್ನು ರಕ್ಷಿಸಲಿ. ॥ ೬ ॥ ಯಾವನ ಪರಮ ಮಂಗಲಮಯ ಸ್ವರೂಪವನ್ನು ಸಂದರ್ಶಿಸಲು ಮಹಾಮುನಿಗಳು ಸಂಸಾರದ ಸಮಸ್ತ ಆಸಕ್ತಿಗಳನ್ನು ಪರಿತ್ಯಜಿಸಿ ಅರಣ್ಯಕ್ಕೆ ಹೋಗಿ ನಿರಂತರವಾಗಿ ಬ್ರಹ್ಮಚರ್ಯವೇ ಮುಂತಾದ ಅಲೌಕಿಕ ವ್ರತಗಳನ್ನು ಪಾಲಿಸುವರೋ, ತಮ್ಮ ಆತ್ಮನನ್ನು ಎಲ್ಲರ ಹೃದಯದಲ್ಲಿ ವಿರಾಜಿಸುತ್ತಿರುವುದನ್ನು ನೋಡಿ ಸ್ವಾಭಾವಿಕವಾಗಿಯೇ ಎಲ್ಲರಿಗೂ ಒಳ್ಳೆಯದನ್ನು ಮಾಡುವರೋ, ಆ ಮುನಿಗಳ ಸರ್ವಸ್ವನಾದ ಭಗವಂತನು ನನಗೆ ಸಹಾಯಕನಾಗಿರುವನು. ಅವನೇ ನನಗೆ ಪರಮ ಗತಿಯು. ॥ ೭ ॥ ಯಾವನಿಗೆ ಜನ್ಮ-ಕರ್ಮಗಳಾಗಲೀ, ನಾಮ-ರೂಪಗಳಾಗಲೀ, ಇಲ್ಲವೋ, ಅವನ ಸಂಬಂಧವಾಗಿ ಗುಣ-ದೋಷಗಳನ್ನು ಹೇಗೆ ತಾನೇ ಕಲ್ಪಿಸಬಹುದು ? ಹೀಗಿದ್ದರೂ ವಿಶ್ವದ ಸೃಷ್ಟಿ ಮತ್ತು ಸಂಹಾರಮಾಡಲಿಕ್ಕಾಗಿ ಆಯಾ-ಕಾಲಕ್ಕೆ ಅವನು ತನ್ನ ಮಾಯೆಯನ್ನು ಸ್ವೀಕರಿಸಿ ಅವತರಿಸುವನು. ಅಂತಹ ಸಚ್ಚಿದಾನಂದ ಪರಮಾತ್ಮನು ನನ್ನನ್ನು ರಕ್ಷಿಸಲಿ. ॥ ೮ ॥ ಬ್ರಹ್ಮನೇ ಮೊದಲಾದವರಿಗೆ ಈಶನಾದ, ಅನಂತಶಕ್ತಿಯಾಪ, ಸರ್ವೈಶ್ವರ್ಯ ಸಂಪನ್ನನಾದ ಪರಬ್ರಹ್ಮಪರಮಾತ್ಮನಿಗೆ ನಾನು ನಮಸ್ಕರಿಸುತ್ತೇನೆ. ಅವನು ಅರೂಪನಾಗಿದ್ದರೂ ಬಹುರೂಪಿಯಾಗಿದ್ದಾನೆ. ಅವನ ಕರ್ಮಗಳು ಅತ್ಯಂತ ಆಶ್ಚರ್ಯಮಯವಾಗಿವೆ. ಅಂತಹವನ ಚರಣಗಳಿಗೆ ನಾನು ನಮಸ್ಕರಿಸುತ್ತೇನೆ. ॥ ೯ ॥ ಸ್ವಯಂ ಪ್ರಕಾಶನೂ, ಎಲ್ಲರ ಸಾಕ್ಷಿಯೂ ಆದ ಪರಮಾತ್ಮನಿಗೆ ನಾನು ನಮಸ್ಕರಿಸುತ್ತೇನೆ. ಮಾತು, ಮನಸ್ಸು ಮತ್ತು ಬುದ್ಧಿಗಳಿಗಿಂತ ಅತ್ಯಂತ ದೂರನಾದ ಆ ಪರಮಾತ್ಮನಿಗೆ ನಾನು ನಮಸ್ಕರಿಸುತ್ತೇನೆ. ॥ ೧೦ ॥

ಸತ್ತ್ವೇನ ಪ್ರತಿಲಭ್ಯಾಯ ನೈಷ್ಕರ್ಮ್ಯೇಣ ವಿಪಶ್ಚಿತಾ ।
ನಮಃ ಕೈವಲ್ಯನಾಥಾಯ ನಿರ್ವಾಣಸುಖಸಂವಿದೇ ॥ ೧೧ ॥

ನಮಃ ಶಾಂತಾಯ ಘೋರಾಯ ಮೂಢಾಯ ಗುಣಧರ್ಮಿಣೇ ।
ನಿರ್ವಿಶೇಷಾಯ ಸಾಮ್ಯಾಯ ನಮೋ ಜ್ಞಾನಘನಾಯ ಚ ॥ ೧೨ ॥

ಕ್ಷೇತ್ರಜ್ಞಾಯ ನಮಸ್ತುಭ್ಯಂ ಸರ್ವಾಧ್ಯಕ್ಷಾಯ ಸಾಕ್ಷಿಣೇ ।
ಪುರುಷಾಯಾತ್ಮಮೂಲಾಯ ಮೂಲಪ್ರಕೃತಯೇ ನಮಃ ॥ ೧೩ ॥

ಸರ್ವೇಂದ್ರಿಯಗುಣದ್ರಷ್ಟ್ರೇ ಸರ್ವಪ್ರತ್ಯಯಹೇತವೇ ।
ಅಸತಾ ಚ್ಛಾಯಯೋಕ್ತಾಯ ಸದಾಭಾಸಾಯ ತೇ ನಮಃ ॥ ೧೪ ॥

ನಮೋ ನಮಸ್ತೇಽಖಿಲಕಾರಣಾಯ
ನಿಷ್ಕಾರಣಾಯಾದ್ಭುತಕಾರಣಾಯ ।
ಸರ್ವಾಗಮಾಮ್ನಾಯಮಹಾರ್ಣವಾಯ
ನಮೋಽಪವರ್ಗಾಯ ಪರಾಯಣಾಯ ॥ ೧೫ ॥

ಗುಣಾರಣಿಚ್ಛನ್ನಚಿದೂಷ್ಮಪಾಯ
ತತ್ಕ್ಷೋಭವಿಸ್ಫೂರ್ಜಿತಮಾನಸಾಯ ।
ನೈಷ್ಕರ್ಮ್ಯಭಾವೇನ ವಿವರ್ಜಿತಾಗಮ-
ಸ್ವಯಂಪ್ರಕಾಶಾಯ ನಮಸ್ಕರೋಮಿ ॥ ೧೬ ॥

ಮಾದೃಕ್ಪ್ರಪನ್ನಪಶುಪಾಶವಿಮೋಕ್ಷಣಾಯ
ಮುಕ್ತಾಯ ಭೂರಿಕರುಣಾಯ ನಮೋಽಲಯಾಯ ।
ಸ್ವಾಂಶೇನ ಸರ್ವತನುಭೃನ್ಮನಸಿ ಪ್ರತೀತ-
ಪ್ರತ್ಯಗ್ದೃಶೇ ಭಗವತೇ ಬೃಹತೇ ನಮಸ್ತೇ ॥ ೧೭ ॥

ವಿವೇಕಿಗಳಾದವರು ಕರ್ಮಸಂನ್ಯಾಸದಿಂದ ಅಥವಾ ಕರ್ಮ-ಸಮರ್ಪಣೆಯ ಮೂಲಕ ತಮ್ಮ ಅಂತಃಕರಣವನ್ನು ಶುದ್ಧಗೊಳಿಸಿ ಕೊಂಡು ಯಾರನ್ನು ಪಡೆದುಕೊಳ್ಳುವರೋ ಹಾಗೂ ಸ್ವಯಂ ನಿತ್ಯ ಮುಕ್ತನೂ ಪರಮಾನಂದಮಯನೂ, ಜ್ಞಾನಸ್ವರೂಪನೂ ಆಗಿದ್ದು ಬೇರೆಯವರಿಗೆ ಕೈವಲ್ಯಮುಕ್ತಿಯನ್ನು ಕೊಡುವ ಸಾಮರ್ಥ್ಯವು ಕೇವಲ ಅವನೊಬ್ಬನಲ್ಲೇ ಇರುವುದೋ ಅಂತಹ ಸ್ವಾಮಿಗೆ ನಾನು ನಮಸ್ಕರಿಸುತ್ತೇನೆ. ॥ ೧೧ ॥ ಯಾರು ಸತ್ತ್ವ-ರಜ-ತಮ ಈ ತ್ರಿಗುಣ ಗಳನ್ನು ಸ್ವೀಕರಿಸಿ, ಕ್ರಮವಾಗಿ ಶಾಂತ, ಘೋರ ಮತ್ತು ಮೂಢ ಅವಸ್ಥೆಗಳನ್ನು ಹೊಂದುವನೋ ಆ ಭೇದರಹಿತವೂ, ಸಮಭಾವ ದಿಂದ ಇರುವವನೂ, ಆದ ಜ್ಞಾನಘನಸ್ವರೂಪನಾದ ಪರಮಾತ್ಮ ನಿಗೆ ನಾನು ಮತ್ತೆ-ಮತ್ತೆ ನಮಸ್ಕರಿಸುತ್ತೇನೆ. ॥ ೧೨ ॥ ನೀನು ಎಲ್ಲರ ಸ್ವಾಮಿಯೂ, ಕ್ಷೇತ್ರಜ್ಞನೂ, ಸಮಸ್ತ ಕ್ಷೇತ್ರಗಳಲ್ಲಿ ಏಕಮಾತ್ರ ಸರ್ವ ಸಾಕ್ಷಿಯೂ ಆಗಿರುವೆ. ಅಂತಹ ನಿನಗೆ ವಂದಿಸುತ್ತೇನೆ. ನೀನೇ ಸ್ವಯಂ ಮೂಲಕಾರಣನಾಗಿರುವೆ. ಪುರುಷ ಮತ್ತು ಮೂಲ ಪ್ರಕೃತಿಯ ರೂಪದಲ್ಲಿಯೂ ನೀನೇ ಇರುವೆ. ಅಂತಹ ನಿನಗೆ ಪದೇ-ಪದೇ ನಮಸ್ಕಾರಗಳು. ॥ ೧೩ ॥ ನೀನು ಸಮಸ್ತ ಇಂದ್ರಿಯ ಗಳು ಮತ್ತು ಅವುಗಳ ವಿಷಯಗಳ ದ್ರಷ್ಟಾ ಆಗಿದ್ದು, ಸಮಸ್ತ ಪ್ರತೀತಿಗಳಿಗೆ ಆಧಾರನಾಗಿರುವೆ. ಅಹಂಕಾರಾದಿ ಛಾಯಾರೂಪ ವಾದ ಅಸತ್ ವಸ್ತುಗಳ ಮೂಲಕ ನಿನ್ನ ಅಸ್ತಿತ್ವವೇ ಪ್ರಕಟ ವಾಗುತ್ತದೆ. ಸಮಸ್ತ ವಸ್ತುಗಳ ಅಸ್ತಿತ್ವದ ರೂಪದಲ್ಲಿಯೂ ಕೇವಲ ನೀನೇ ಕಂಡುಬರುತ್ತಿರುವೆ. ಅಂತಹ ನಿನಗೆ ನಾನು ನಮಸ್ಕರಿಸು ತ್ತೇನೆ. ॥ ೧೪ ॥ ನೀನು ಎಲ್ಲರ ಮೂಲ ಕಾರಣನಾಗಿರುವೆ. ನಿನಗೆ ಯಾವ ಕಾರಣವೂ ಇಲ್ಲ. ನೀನು ಜಗತ್ತಿನ ಸೃಷ್ಟಿಗೆ ಕಾರಣನಾದರೂ ನಿನ್ನಲ್ಲಿ ವಿಕಾರವಾಗಲೀ, ಪರಿಣಾಮವಾಗಲೀ ಉಂಟಾಗುವುದಿಲ್ಲ. ಆದುದರಿಂದ ನೀನು ಅದ್ಭುತಕಾರಣನಾಗಿರುವೆ. ನಿನಗೆ ಬಾರಿ-ಬಾರಿಗೂ ನಮಸ್ಕಾರವು. ನದೀನದಗಳಿಗೆಲ್ಲ ಪರಮಾಶ್ರಯವು ಸಮುದ್ರವಿರುವಂತೆ ಸಮಸ್ತ ವೇದಶಾಸ್ತ್ರಗಳಿಗೆ ನೀನೇ ಪರಮ ತಾತ್ಪರ್ಯನಾಗಿರುವೆ. ನೀನು ಮೋಕ್ಷಸ್ವರೂಪನೂ, ಸಾಧು-ಸತ್ಪುರುಷರಿಗೆ ಪರಮಾಶ್ರಯನೂ ಆಗಿರುವೆ ಅಂತಹ ನಿನಗೆ ನಮಸ್ಕಾರವು. ॥ ೧೫ ॥ ಯಜ್ಞದ ಅರಣಿಯಲ್ಲಿ ಅಗ್ನಿಯು ಗುಪ್ತ ವಾಗಿರುವಂತೆಯೇ ನೀನು ನಿನ್ನ ಜ್ಞಾನವನ್ನು ಗುಣಮಯ ಮಾಯೆ ಯಿಂದ ಮುಚ್ಚಿಟ್ಟಿರುವೆ. ಗುಣಗಳಲ್ಲಿ ಕ್ಷೋಭೆ ಉಂಟಾದಾಗ ಅವುಗಳ ಮೂಲಕ ವಿವಿಧ ಪ್ರಕಾರದ ಸೃಷ್ಟಿರಚನೆಯ ಸಂಕಲ್ಪವನ್ನು ನೀನು ಮಾಡುವೆ. ಸರ್ವಕರ್ಮ ಸಂನ್ಯಾಸ ಅಥವಾ ಕರ್ಮ ಸಮರ್ಪಣಮಾಡಿ ವಿಧಿನಿಷೇಧಗಳಿಗೆ ಒಳಪಡದಿರುವ ಜ್ಞಾನಿಗಳ ಹೃದಯದಲ್ಲಿ ನೀನು ಸ್ವಯಂಪ್ರಕಾಶನಾಗಿರುವೆ. ಇಂತಹ ನಿನಗೆ ನಮಸ್ಕಾರವು. ॥ ೧೬ ॥ ದಯಾಳುವಾದ ಮನುಷ್ಯನು ಬಂಧನಕ್ಕೆ ಸಿಕ್ಕಿಹಾಕಿಕೊಂಡಿರುವ ಪಶುವನ್ನು ಬಿಡಿಸುವಂತೆ ಸಂಸಾರಬಂಧನ ದಿಂದ ಬಂಧಿಸಲ್ಪಟ್ಟಿರುವ ಶರಣಾಗತನಾಗಿರುವ ನನ್ನನ್ನೂ ವಿಮುಕ್ತಿ ಗೊಳಿಸುವೆ. ನೀನು ನಿತ್ಯಮುಕ್ತನಾಗಿದ್ದು ಕರುಣಾಮಯನಾಗಿ ರುವೆ. ಭಕ್ತರಿಗೆ ಕಲ್ಯಾಣವನ್ನುಂಟುಮಾಡಲು ನಿನಗೆ ಎಂದಿಗೂ ಆಲಸ್ಯವೆಂಬುದೇ ಇಲ್ಲ. ಅಂತಹ ಪರಮಕಾರುಣಿಕನಾದ ನಿನಗೆ

ಆತ್ಮಾತ್ಮಜಾಪ್ತಗೃಹವಿತ್ತಜನೇಷು ಸಕ್ತೈ-
ರ್ದುಷ್ಪ್ರಾಪಣಾಯ ಗುಣಸಂಗವಿವರ್ಜಿತಾಯ ।
ಮುಕ್ತಾತ್ಮಭಿಃ ಸ್ವಹೃದಯೇ ಪರಿಭಾವಿತಾಯ
ಜ್ಞಾನಾತ್ಮನೇ ಭಗವತೇ ನಮ ಈಶ್ವರಾಯ ॥ ೧೮ ॥

ಯಂ ಧರ್ಮಕಾಮಾರ್ಥವಿಮುಕ್ತಿಕಾಮಾ
ಭಜಂತ ಇಷ್ಟಾಂ ಗತಿಮಾಪ್ನುವಂತಿ ।
ಕಿಂ ತ್ವಾಶಿಷೋ ರಾತ್ಯಪಿ ದೇಹಮವ್ಯಯಂ
ಕರೋತು ಮೇಽದಭ್ರದಯೋ ವಿಮೋಕ್ಷಣಮ್ ॥ ೧೯ ॥

ಏಕಾಂತಿನೋ ಯಸ್ಯ ನ ಕಂಚನಾರ್ಥಂ
ವಾಂಛಂತಿ ಯೇ ವೈ ಭಗವತ್ಪ್ರಪನ್ನಾಃ ।
ಅತ್ಯದ್ಭುತಂ ತಚ್ಚರಿತಂ ಸುಮಂಗಲಂ
ಗಾಯಂತ ಆನಂದ ಸಮುದ್ರಮಗ್ನಾಃ ॥ ೨೦ ॥

ತಮಕ್ಷರಂ ಬ್ರಹ್ಮ ಪರಂ ಪರೇಶ-
ಮವ್ಯಕ್ತಮಾಧ್ಯಾತ್ಮಿಕಯೋಗಗಮ್ಯಮ್ ।
ಅತೀಂದ್ರಿಯಂ ಸೂಕ್ಷ್ಮಮಿವಾತಿದೂರ-
ಮನಂತಮಾದ್ಯಂ ಪರಿಪೂರ್ಣಮೀಡೇ ॥ ೨೧ ॥

ಯಸ್ಯ ಬ್ರಹ್ಮಾದಯೋ ದೇವಾ ವೇದಾ ಲೋಕಾಶ್ಚರಾಚರಾಃ ।
ನಾಮರೂಪವಿಭೇದೇನ ಫಲ್ಗ್ವ್ಯಾ ಚ ಕಲಯಾ ಕೃತಾಃ
॥ ೨೨ ॥

ಯಥಾರ್ಚಿಷೋಽಗ್ನೇಃ ಸವಿತುರ್ಗಭಸ್ತಯೋ
ನಿರ್ಯಾಂತಿ ಸಂಯಾಂತ್ಯಸಕೃತ್ಸ್ವರೋಚಿಷಃ ।
ತಥಾ ಯತೋಽಯಂ ಗುಣಸಂಪ್ರವಾಹೋ
ಬುದ್ಧಿರ್ಮನಃ ಖಾನಿ ಶರೀರಸರ್ಗಾಃ ॥ ೨೩ ॥

ಸ ವೈ ನ ದೇವಾಸುರಮರ್ತ್ಯತಿರ್ಯಙ್
ನ ಸ್ತ್ರೀ ನ ಷಂಢೋ ನ ಪುಮಾನ್ನ ಜಂತುಃ ।
ನಾಯಂ ಗುಣಃ ಕರ್ಮ ನ ಸನ್ನ ಚಾಸನ್
ನಿಷೇಧಶೇಷೋ ಜಯತಾದಶೇಷಃ ॥ ೨೪ ॥

ನಮಸ್ಕರಿಸುತ್ತೇನೆ. ಸಮಸ್ತ ಪ್ರಾಣಿಗಳ ಹೃದಯದಲ್ಲಿಯೂ ನಿನ್ನ ಅಂಶದ ಮೂಲಕ ಅಂತರಾತ್ಮನಾಗಿ ನೀನು ಸರ್ವೈಶ್ವರ್ಯ ಪೂರ್ಣನೂ, ಅಪರಿಚ್ಛಿನ್ನನೂ ಆಗಿರುವೆ. ಇಂತಹ ನಿನಗೆ ನಮಸ್ಕಾರ ಮಾಡುತ್ತೇನೆ. ॥ ೧೭ ॥ ಶರೀರ, ಪುತ್ರರು, ಆಪ್ತರು, ಮನೆ, ಸಂಪತ್ತು, ಸ್ವಜನರು – ಹೀಗೆ ಇವರಲ್ಲಿ ಆಸಕ್ತರಾದ ಜನರಿಗೆ ನಿನ್ನ ಪ್ರಾಪ್ತಿಯು ಅತ್ಯಂತ ಕಠಿಣವಾಗಿದೆ. ಏಕೆಂದರೆ ನೀನು ಸ್ವತಃ ಗುಣಗಳ ಆಸಕ್ತಿಯಿಂದ ರಹಿತನಾಗಿರುವೆ. ಜೀವನ್ಮುಕ್ತರಾದವರು ತಮ್ಮ ಹೃದಯದಲ್ಲಿ ನಿರಂತರವಾಗಿ ನಿನ್ನನ್ನು ಚಿಂತಿಸುತ್ತಾ ಇರುತ್ತಾರೆ. ಆ ಸರ್ವೈಶ್ವರ್ಯಸಂಪನ್ನ ಜ್ಞಾನಸ್ವರೂಪನಾದ ಭಗವಂತನಿಗೆ ನಾನು ನಮಸ್ಕರಿಸುತ್ತೇನೆ. ॥ ೧೮ ॥ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಈ ಪುರುಷಾರ್ಥಗಳ ಕಾಮನೆಯಿಂದ ಮನುಷ್ಯರು ಭಗವಂತನನ್ನು ಭಜಿಸಿ ತಮ್ಮ ಇಷ್ಟಾರ್ಥಗಳನ್ನು ಪಡೆದುಕೊಳ್ಳುತ್ತಾರೆ. ಇಷ್ಟು ಮಾತ್ರವಲ್ಲ ಪ್ರಸನ್ನನಾದ ಶ್ರೀಭಗವಂತನು ಭಕ್ತರಿಗೆ ಇತರ ಅನೇಕ ವಿಧವಾದ ಸುಖಗಳನ್ನೂ, ನಾಶ ರಹಿತವಾದ ದಿವ್ಯಶರೀರವನ್ನೂ ದಯಪಾಲಿಸುತ್ತಾನೆ. ಅಂತಹ ಪರಮ ದಯಾಳುವಾದ ಪರಮಾತ್ಮನು ಈ ಮೊಸಳೆಯಿಂದ ನನ್ನನ್ನು ಬಿಡುಗಡೆಮಾಡಲಿ. ॥ ೧೯ ॥ ಭಗವಂತನಿಗೆ ಶರಣಾಗತರಾದ ಅವನ ಅನನ್ಯ ಭಕ್ತರು ಯಾವುದೇ ಪ್ರಯೋಜನವನ್ನು ಅಪೇಕ್ಷಿಸುವುದಿಲ್ಲ. ಸರ್ವಾಪೇಕ್ಷಿತವಾದ ಮೋಕ್ಷವನ್ನೂ ಬಯಸುವುದಿಲ್ಲ. ಮಂಗಳಕರವಾದ ಅತ್ಯದ್ಭುತವಾದ ಪರಮಾತ್ಮನ ಚರಿತ್ರೆಗಳನ್ನು ಹಾಡುತ್ತಾ, ನಲಿಯುತ್ತಾ ಆನಂದಸಮುದ್ರದಲ್ಲಿ ಮುಳುಗಿರುತ್ತಾರೆ. ॥ ೨೦ ॥ ಅವಿನಾಶಿಯೂ, ಸರ್ವಶಕ್ತಿ ಸಂಪನ್ನನೂ, ಅವ್ಯಕ್ತನೂ, ಇಂದ್ರಿಯಾತೀತನೂ, ಅತ್ಯಂತ ಸೂಕ್ಷ್ಮನೂ ಆದವನು ಅತ್ಯಂತ ಹತ್ತಿರವಿದ್ದರೂ ಬಹಳ ದೂರನೆಂದು ಭಾಸವಾಗುವವನೂ, ಆಧ್ಯಾತ್ಮಿಕಯೋಗ ಅರ್ಥಾತ್ ಜ್ಞಾನಯೋಗ-ಭಕ್ತಿಯೋಗದಿಂದ ದೊರೆಯುವಂತಹವನೂ ಆದ ಆ ಆದಿಪುರುಷ ಅನಂತ, ಪರಿಪೂರ್ಣ ಪರಬ್ರಹ್ಮ ಪರಮಾತ್ಮನನ್ನು ನಾನು ಸ್ತುತಿಸುತ್ತೇನೆ. ॥ ೨೧ ॥

ಯಾರ ಅತ್ಯಲ್ಪವಾದ ಅಂಶದಿಂದ ನಾನಾರೂಪಗಳ ಮತ್ತು ನಾಮಗಳ ಭೇದದಿಂದ ಕೂಡಿದ ಬ್ರಹ್ಮಾದಿದೇವತೆಗಳೂ, ವೇದಗಳೂ, ಚರಾಚರಗಳೂ, ಲೋಕಗಳೂ ರಚಿತವಾದುವೋ, ಹೇಗೆ ಧಗ-ಧಗನೆ ಉರಿಯುವ ಅಗ್ನಿಯಿಂದ ಜ್ವಾಲೆಗಳು ಮತ್ತು ಸೂರ್ಯನಿಂದ ಅವನ ಕಿರಣಗಳು ಹಲವು ಬಾರಿ ಹೊರಹೊಮ್ಮಿ ಲೀನವಾಗುವುವೋ, ಹಾಗೆಯೇ ಯಾವ ಸ್ವಯಂಪ್ರಕಾಶ ಪರಮಾತ್ಮನಿಂದ ಗುಣಗಳ ಪ್ರವಾಹರೂಪವಾದ ಬುದ್ಧಿ, ಮನಸ್ಸು ಇಂದ್ರಿಯಗಳು ಮತ್ತು ಶರೀರಗಳು ಮತ್ತೆ-ಮತ್ತೆ ಪ್ರಕಟವಾಗಿ, ಲೀನವಾಗಿ ಹೋಗುತ್ತವೆ. ಆ ಭಗವಂತನು ದೇವತೆಯಲ್ಲ, ರಾಕ್ಷಸನಲ್ಲ, ಮನುಷ್ಯನಲ್ಲ, ಪಶು-ಪಕ್ಷಿಯೂ ಅಲ್ಲ. ಅವನು ಸ್ತ್ರೀಯಲ್ಲ ಪುರುಷನಲ್ಲ, ನಪುಂಸಕನಲ್ಲ. ಅವನು ಯಾವುದೇ ಸಾಧಾರಣ ಅಥವಾ ಅಸಾಧಾರಣ ಪ್ರಾಣಿಯೂ ಅಲ್ಲ. ಅವನು ಗುಣವಲ್ಲ, ಕರ್ಮವಲ್ಲ, ಕಾರ್ಯವೂ ಅಲ್ಲ, ಕಾರಣವೂ ಅಲ್ಲ. ಎಲ್ಲವೂ ನಿಷೇಧವಾದ ಬಳಿಕ ಉಳಿಯುವುದೇ ಅವನ ಸ್ವರೂಪವಾಗಿದೆ ಹಾಗೂ ಅವನೇ ಎಲ್ಲವೂ ಆಗಿದ್ದಾನೆ. ಆ ಪರಮಾತ್ಮನೇ ನನ್ನ ಉದ್ಧಾರಕ್ಕಾಗಿ ಪ್ರಕಟನಾಗಲೀ. ॥ ೨೨-೨೪ ॥

ಜಿಜೀವಿಷೇ ನಾಹಮಿಹಾಮುಯಾ ಕಿ-
ಮಂತರ್ಬಹಿಶ್ಚಾವೃತಯೇಭಯೋನ್ಯಾ ।
ಇಚ್ಛಾಮಿ ಕಾಲೇನ ನ ಯಸ್ಯ ವಿಪ್ಲವ-
ಸ್ತಸ್ಯಾತ್ಮ ಲೋಕಾವರಣಸ್ಯ ಮೋಕ್ಷಮ್ ॥ ೨೫ ॥

ಸೋಽಹಂ ವಿಶ್ವಸೃಜಂ ವಿಶ್ವಮವಿಶ್ವಂ ವಿಶ್ವವೇದಸಮ್ ।
ವಿಶ್ವಾತ್ಮಾನಮಜಂ ಬ್ರಹ್ಮ ಪ್ರಣತೋಽಸ್ಮಿ ಪರಂ ಪದಮ್ ॥ ೨೬ ॥

ಯೋಗರಂಧಿತಕರ್ಮಾಣೋ
ಹೃದಿ ಯೋಗವಿಭಾವಿತೇ ।
ಯೋಗಿನೋ ಯಂ ಪ್ರಪಶ್ಯಂತಿ
ಯೋಗೇಶಂ ತಂ ನತೋಽಸ್ಮ್ಯಹಮ್ ॥ ೨೭ ॥

ನಮೋ ನಮಸ್ತುಭ್ಯಮಸಹ್ಯವೇಗ-
ಶಕ್ತಿತ್ರಯಾಯಾಖಿಲಧೀಗುಣಾಯ ।
ಪ್ರಪನ್ನಪಾಲಾಯ ದುರಂತಶಕ್ತಯೇ
ಕದಿಂದ್ರಿಯಾಣಾಮನವಾಪ್ಯವರ್ತ್ಮನೇ ॥ ೨೮ ॥

ನಾಯಂ ವೇದ ಸ್ವಮಾತ್ಮಾನಂ
ಯಚ್ಛಕ್ತ್ಯಾಹಂಧಿಯಾಹತಮ್ ।
ತಂ ದುರತ್ಯಯಮಾಹಾತ್ಮ್ಯಂ
ಭಗವಂತಮಿತೋಽಸ್ಮ್ಯಹಮ್ ॥ ೨೯ ॥

*ಶ್ರೀಶುಕ ಉವಾಚ*

ಏವಂ ಗಜೇಂದ್ರಮುಪವರ್ಣಿತನಿರ್ವಿಶೇಷಂ
ಬ್ರಹ್ಮಾದಯೋ ವಿವಿಧಲಿಂಗಭಿದಾಭಿಮಾನಾಃ ।
ನೈತೇ ಯದೋಪಸಸೃಪುರ್ನಿಖಿಲಾತ್ಮಕತ್ವಾ-
ತ್ತತ್ರಾಖಿಲಾಮರಮಯೋ ಹರಿರಾವಿರಾಸೀತ್ ॥ ೩೦ ॥

ತಂ ತದ್ವದಾರ್ತಮುಪಲಭ್ಯ ಜಗನ್ನಿವಾಸಃ
ಸ್ತೋತ್ರಂ ನಿಶಮ್ಯ ದಿವಿಜೈಃ ಸಹ ಸಂಸ್ತುವದ್ಭಿಃ ।
ಛಂದೋಮಯೇನ ಗರುಡೇನ ಸಮುಹ್ಯಮಾನ-
ಶ್ಚಕ್ರಾಯುಧೋಽಭ್ಯಗಮದಾಶು ಯತೋ ಗಜೇಂದ್ರಃ ॥ ೩೧ ॥

ನಾನು ಬದುಕಿರಲು ಬಯಸುವುದಿಲ್ಲ. ಈ ಆನೆಯ ಶರೀರವು ಒಳಗೆ-ಹೊರಗೆ ಎಲ್ಲ ಕಡೆಯಿಂದ ಅಜ್ಞಾನರೂಪೀ ಆವರಣದಿಂದ ಮುಚ್ಚಿ ಹೋಗಿದೆ. ಇದನ್ನು ಇರಿಸಿಕೊಂಡು ಏನು ಮಾಡಲಿ? ನಾನಾದರೋ ಆತ್ಮಪ್ರಕಾಶವನ್ನು ಮುಚ್ಚಿರುವ ಆ ಅಜ್ಞಾನ ರೂಪವಾದ ಆವರಣದಿಂದ ಬಿಡುಗಡೆಯನ್ನು ಬಯಸುತ್ತಿದ್ದೇನೆ. ಅದು ಕಾಲ ಕ್ರಮದಿಂದ ತಾನಾಗಿ ಬಿಟ್ಟುಹೋಗದು. ಅದು ಕೇವಲ ಭಗವತ್ಕೃಪೆಯಿಂದ ಅಥವಾ ತತ್ತ್ವಜ್ಞಾನದಿಂದಲೇ ನಾಶವಾಗುತ್ತದೆ. ॥ ೨೫ ॥ ಅದಕ್ಕಾಗಿ ನಾನು ಆ ಪರಬ್ರಹ್ಮ ಪರಮಾತ್ಮನಲ್ಲಿ ಶರಣಾಗಿದ್ದೇನೆ. ಅವನು ವಿಶ್ವರಹಿತನಾಗಿದ್ದರೂ ವಿಶ್ವವನ್ನೂ ರಚಿಸುವವನು, ವಿಶ್ವರೂಪನೂ ಆಗಿದ್ದಾನೆ. ಜೊತೆಗೆ ಅವನು ವಿಶ್ವದ ಅಂತರಾತ್ಮನ ರೂಪದಲ್ಲಿ ವಿಶ್ವರೂಪೀ ಸಾಮಗ್ರಿಗಳಿಂದ ಕ್ರೀಡಿಸುತ್ತಲೂ ಇರುವನು. ಅಂತಹ ಜನ್ಮರಹಿತ, ಪರಮಪದ ಸ್ವರೂಪನಾದ ಪರಬ್ರಹ್ಮನಿಗೆ ನಾನು ನಮಸ್ಕರಿಸುತ್ತೇನೆ. ॥ ೨೬ ॥ ಯೋಗಿಗಳು ಯೋಗದಿಂದ ಕರ್ಮಗಳು, ಕರ್ಮವಾಸನೆ ಮತ್ತು ಕರ್ಮಫಲಗಳನ್ನು ಭಸ್ಮಮಾಡಿ ತಮ್ಮ ಯೋಗಶುದ್ಧ ಹೃದಯದಲ್ಲಿ ಯೋಗೇಶ್ವರ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳುವರು. ಅಂತಹ ಸ್ವಾಮಿಯನ್ನು ನಾನು ನಮಸ್ಕರಿಸುತ್ತೇನೆ. ॥ ೨೭ ॥ ಪ್ರಭುವೇ! ನಿನ್ನ ಮೂರು ಶಕ್ತಿಗಳಾದ ಸತ್ತ್ವ, ರಜ, ತಮಗಳ ರಾಗಾದಿ ವೇಗಗಳು ಅಸಹ್ಯವಾಗಿವೆ. ಸಮಸ್ತ ಇಂದ್ರಿಯಗಳು ಮತ್ತು ಮನಸ್ಸಿನ ವಿಷಯಗಳ ರೂಪದಲ್ಲಿಯೂ ನೀನೇ ಕಂಡು ಬರುತ್ತೀಯೆ. ಅದಕ್ಕಾಗಿ ಇಂದ್ರಿಯಗಳು ವಶದಲ್ಲಿ ಇರದೇ ಇರುವವರಾದರೋ ನಿನ್ನ ಪ್ರಾಪ್ತಿಯ ಮಾರ್ಗವನ್ನೂ ತಿಳಿಯಲಾರರು. ನಿನ್ನ ಶಕ್ತಿಯು ಅನಂತವಾಗಿದೆ. ನೀನು ಶರಣಾಗತ ವತ್ಸಲನಾಗಿರುವೆ. ನಿನಗೆ ನಾನು ಮತ್ತೆ-ಮತ್ತೆ ನಮಸ್ಕರಿಸುತ್ತೇನೆ. ॥ ೨೮ ॥ ನಿನ್ನ ಮಾಯೆಯ ಅಹಂಬುದ್ಧಿಯಿಂದ ಆತ್ಮನ ಸ್ವರೂಪವು ಮುಚ್ಚಿ ಹೋಗಿದೆ. ಇದರಿಂದ ಈ ಜೀವನು ತನ್ನ ಸ್ವರೂಪವನ್ನು ತಿಳಿಯಲಾರನು. ನಿನ್ನ ಮಹಿಮೆ ಅಪಾರವಾಗಿದೆ. ಅಂತಹ ಸರ್ವಶಕ್ತಿ ಸಂಪನ್ನನಿಗೆ ಹಾಗೂ ಮಾಧುರ್ಯನಿಧಿ ಭಗವಂತನಲ್ಲಿ ನಾನು ಶರಣಾಗಿದ್ದೇನೆ. ॥ ೨೯ ॥

ಶ್ರೀಶುಕದೇವರು ಹೇಳುತ್ತಾರೆ – ಪರೀಕ್ಷಿತನೇ! ಗಜೇಂದ್ರನು ಯಾವುದೇ ಭೇದಭಾವವಿಲ್ಲದೆ ನಿರ್ವಿಶೇಷರೂಪದಿಂದ ಭಗವಂತನ ಸ್ತುತಿಯನ್ನು ಮಾಡಿದ್ದನು. ಅದಕ್ಕಾಗಿ ಭಿನ್ನ-ಭಿನ್ನ ನಾಮ-ರೂಪಗಳನ್ನು ತಮ್ಮ ಸ್ವರೂಪವೆಂದು ತಿಳಿದಿರುವ ಬ್ರಹ್ಮಾದಿದೇವತೆಗಳು ಅವನ ರಕ್ಷಣೆಗೆ ಬರಲಿಲ್ಲ. ಏಕೆಂದರೆ, ಅವರ ನಾಮಗಳನ್ನು ನಿರ್ದೇಶಿಸಿ ಅವರನ್ನು ಪ್ರಾರ್ಥಿಸಿರಲಿಲ್ಲ. ಆ ಸಮಯದಲ್ಲಿ ಸರ್ವಾತ್ಮನಾದ ಕಾರಣ ಸರ್ವದೇವಸ್ವರೂಪನಾದ ಸ್ವತಃ ಭಗವಾನ್ ಶ್ರೀಹರಿಯು ಪ್ರಕಟನಾದನು. ॥ ೩೦ ॥ ವಿಶ್ವದ ಏಕಮಾತ್ರ ಆಧಾರನಾದ ಭಗವಂತನು – ಗಜೇಂದ್ರನು ಅತ್ಯಂತ ಪೀಡಿತನಾಗಿ ದ್ದಾನೆಂದು ನೋಡಿದನು. ಆದ್ದರಿಂದ ಅವನ ಸ್ತುತಿಯನ್ನು ಕೇಳಿ ಚಕ್ರಧಾರಿಯಾದ ಶ್ರೀಹರಿಯು ವೇದಮಯ, ಗರುಡನಮೇಲೆ ಏರಿ, ಅತೀವ ಶೀಘ್ರವಾಗಿ ಗಜೇಂದ್ರನು ಭಾರೀ ಸಂಕಟದಲ್ಲಿ ಬಿದ್ದಲ್ಲಿಗೆ ಆಗಮಿಸಿದನು. ಅವನೊಡನೆ ಭಗವಂತನನ್ನು ಸ್ತುತಿಮಾಡುತ್ತಾ ಎಲ್ಲ ದೇವತೆಗಳೂ ಬಂದರು. ॥ ೩೧ ॥

ಸೋಽಂತಃಸರಸ್ಯುರುಬಲೇನ ಗೃಹೀತ ಆರ್ತೋ
ದೃಷ್ಟ್ವಾ ಗರುತ್ಮತಿ ಹರಿಂ ಖ ಉಪಾತ್ತಚಕ್ರಮ್ ।
ಉತ್ಕ್ಷಿಪ್ಯ ಸಾಂಬುಜಕರಂ ಗಿರಮಾಹ ಕೃಚ್ಛ್ರಾ-
ನ್ನಾರಾಯಣಾಖಿಲಗುರೋ ಭಗವನ್ನಮಸ್ತೇ ॥ ೩೨ ॥

ಸರೋವರದೊಳಗೆ ಬಲಿಷ್ಠವಾದ ಮೊಸಳೆಯು ಗಜೇಂದ್ರನನ್ನು ಹಿಡಿದುಕೊಂಡಿತ್ತು. ಗಜೇಂದ್ರನು ಅತ್ಯಂತ ವ್ಯಾಕುಲನಾಗಿದ್ದನು. ಆಕಾಶದಲ್ಲಿ ಗರುಡನ ಹೆಗಲೇರಿ, ಕೈಯಲ್ಲಿ ಸುದರ್ಶನ ಚಕ್ರವನ್ನು ಧರಿಸಿರುವ ಶ್ರೀಹರಿಯು ಬರುತ್ತಿರುವುದನ್ನು ಕಂಡು ಗಜೇಂದ್ರನು ತನ್ನ ಸೊಂಡಿಲಿನಿಂದ ಒಂದು ಸುಂದರ ಕಮಲ ಪುಷ್ಪವನ್ನು ಮೇಲೆತ್ತಿಕೊಂಡು ಅತೀವ ಕಷ್ಟದಿಂದ 'ನಾರಾಯಣಾ! ಜಗದ್ಗುರುವೇ! ಭಗವಂತಾ! ನಿನಗೆ ನಮಸ್ಕಾರವು' ಎಂದು ಸ್ತುತಿಸಿದನು. ॥ ೩೨ ॥ ಗಜೇಂದ್ರನು ಮೊಸಳೆಯಿಂದ ಪೀಡಿಸಲ್ಪಡುತ್ತಿರುವುದನ್ನು ನೋಡಿದೊಡನೆಯೇ ದಯಾಮಯನಾದ ನಾರಾಯಣನು ಗರುಡನಿಂದ ಥಟ್ಟನೆ ಕೆಳಗಿಳಿದು ಗಜೇಂದ್ರನೊಡನೆ ಅವನ ಕಾಲನ್ನು ಹಿಡಿದಿದ್ದ ಮೊಸಳೆಯನ್ನು ಅತಿಶೀಘ್ರವಾಗಿ ಸರೋವರದಿಂದ ಹೊರಗೆ ಎಳೆದುಕೊಂಡನು. ಮರುಕ್ಷಣದಲ್ಲೇ ಎಲ್ಲ ದೇವತೆಗಳು ನೋಡುತ್ತಿದ್ದಂತೆಯೇ ಶ್ರೀಹರಿಯು ಚಕ್ರಾಯುಧದಿಂದ ಮೊಸಳೆಯ ಬಾಯನ್ನು ಸೀಳಿಹಾಕಿ ಗಜೇಂದ್ರನನ್ನು ಬಿಡಿಸಿದನು. ॥ ೩೩ ॥

ತಂ ವೀಕ್ಷ್ಯ ಪೀಡಿತಮಜಃ ಸಹಸಾವತೀರ್ಯ
ಸಗ್ರಾಹಮಾಶು ಸರಸಃ ಕೃಪಯೋಜ್ಜಹಾರ ।
ಗ್ರಾಹಾದ್ವಿಪಾಟಿತಮುಖಾದರಿಣಾ ಗಜೇಂದ್ರಂ
ಸಂಪಶ್ಯತಾಂ ಹರಿರಮೂಮುಚದುಸ್ರಿಯಾಣಾಮ್ ॥ ೩೩ ॥

ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ಗಜೇಂದ್ರಮೋಕ್ಷಣೇ ತೃತೀಯೋಽಧ್ಯಾಯಃ ॥ ೩ ॥

# ನಾಲ್ಕನೆಯ ಅಧ್ಯಾಯ

## ಗಜೇಂದ್ರ ಮತ್ತು ಮೊಸಳೆಯ ಪೂರ್ವಚರಿತ್ರೆ ಹಾಗೂ ಅವರ ಉದ್ಧಾರ

*ಶ್ರೀಶುಕ ಉವಾಚ*

ತದಾ ದೇವರ್ಷಿಗಂಧರ್ವಾ ಬ್ರಹ್ಮೇಶಾನಪುರೋಗಮಾಃ ।
ಮುಮುಚುಃ ಕುಸುಮಾಸಾರಂ ಶಂಸಂತಃ ಕರ್ಮ ತದ್ಧರೇಃ ॥ ೧ ॥

ನೇದುರ್ದುಂದುಭಯೋ ದಿವ್ಯಾ ಗಂಧರ್ವಾ ನನೃತುರ್ಜಗುಃ ।
ಋಷಯಶ್ಚಾರಣಾಃ ಸಿದ್ಧಾಸ್ತುಷ್ಟುವುಃ ಪುರುಷೋತ್ತಮಮ್ ॥ ೨ ॥

ಯೋಽಸೌ ಗ್ರಾಹಃ ಸ ವೈ ಸದ್ಯಃ ಪರಮಾಶ್ಚರ್ಯರೂಪಧೃಕ್ ।
ಮುಕ್ತೋ ದೇವಲಶಾಪೇನ ಹೂಹೂರ್ಗಂಧರ್ವಸತ್ತಮಃ ॥ ೩ ॥

ಪ್ರಣಮ್ಯ ಶಿರಸಾಧೀಶಮುತ್ತಮಶ್ಲೋಕಮವ್ಯಯಮ್ ।
ಅಗಾಯತ ಯಶೋಧಾಮ ಕೀರ್ತನ್ಯಗುಣಸತ್ಕಥಮ್ ॥ ೪ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿದ್ರಾಜನೇ! ಆ ಸಮಯದಲ್ಲಿ ಬ್ರಹ್ಮ-ರುದ್ರರೇ ಮುಂತಾದ ದೇವತೆಗಳೂ, ಗಂಧರ್ವರೂ, ಋಷಿಗಳೂ ಶ್ರೀಹರಿಯ ಈ ಅದ್ಭುತ ಕಾರ್ಯವನ್ನು ಪ್ರಶಂಸಿಸುತ್ತಾ ಹೂಮಳೆಯನ್ನು ಸುರಿಸತೊಡಗಿದರು. ॥ ೧ ॥ ಸ್ವರ್ಗದಲ್ಲಿ ದೇವದುಂದುಭಿಗಳು ಮೊಳಗಿದವು. ಗಂಧರ್ವಾಪ್ಸರೆಯರು ನೃತ್ಯಗಾನವನ್ನು ಮಾಡತೊಡಗಿದರು. ಋಷಿ-ಚಾರಣ-ಸಿದ್ಧರು ಭಗವಾನ್ ಶ್ರೀಪುರುಷೋತ್ತಮನನ್ನು ಸ್ತುತಿಸತೊಡಗಿದರು. ॥ ೨ ॥ ಗಜೇಂದ್ರನ ಕಾಲನ್ನು ಹಿಡಿದುಕೊಂಡಿದ್ದ ಆ ಮೊಸಳೆಯು ಭಗವಂತನ ಚಕ್ರಸ್ಪರ್ಶಿಸುತ್ತಲೇ ಪರಮ ಆಶ್ಚರ್ಯಮಯ ದಿವ್ಯ ಶರೀರವನ್ನು ಹೊಂದಿತು. ಇವನು ಮೊದಲು ದೇವಲರ ಶಾಪದಿಂದ ಮೊಸಳೆಯಾಗಿದ್ದ ಹೂಹೂ ಎಂಬ ಗಂಧರ್ವನು. ಈಗ ಭಗವಂತನ ಕೃಪೆಯಿಂದ ಅವನು ಮುಕ್ತನಾದನು. ॥ ೩ ॥ ಅವನು ಸರ್ವೇಶ್ವರನಾದ ಶ್ರೀಭಗವಂತನ ಚರಣಗಳಲ್ಲಿ ಶಿರವನ್ನಿಟ್ಟು ಪ್ರಣಾಮಗೈದು, ಅವನ ಸತ್ಕೀರ್ತಿಯನ್ನು ಗಾನಮಾಡತೊಡಗಿದನು. ವಾಸ್ತವಿಕವಾಗಿ ಅವಿನಾಶೀ ಭಗವಂತನೇ ಸರ್ವಶ್ರೇಷ್ಠ ಕೀರ್ತಿಯಿಂದ ಸಂಪನ್ನನಾಗಿರುವನು. ಅವನ ಗುಣ ಗಳು ಮತ್ತು ಮನಮೋಹಕ ಲೀಲೆಗಳೇ ಗಾನಮಾಡಲು ಯೋಗ್ಯವಾದುವುಗಳು. ॥ ೪ ॥

ಸೋಽನುಕಂಪಿತ ಈಶೇನ ಪರಿಕ್ರಮ್ಯ ಪ್ರಣಮ್ಯ ತಮ್ ।
ಲೋಕಸ್ಯ ಪಶ್ಯತೋ ಲೋಕಂ ಸ್ವಮಗಾನ್ಮುಕ್ತ ಕಿಲ್ಬಿಷಃ ॥ ೫ ॥

ಗಜೇಂದ್ರೋ ಭಗವತ್ಸ್ಪರ್ಶಾದ್ವಿಮುಕ್ತೋಽಜ್ಞಾನಬಂಧನಾತ್ ।
ಪ್ರಾಪ್ತೋ ಭಗವತೋ ರೂಪಂ ಪೀತವಾಸಾಶ್ಚತುರ್ಭುಜಃ ॥ ೬ ॥

ಸ ವೈ ಪೂರ್ವಮಭೂದ್ರಾಜಾ ಪಾಂಡ್ಯೋ ದ್ರವಿಡಸತ್ತಮಃ ।
ಇಂದ್ರದ್ಯುಮ್ನ ಇತಿ ಖ್ಯಾತೋ ವಿಷ್ಣು ವ್ರತಪರಾಯಣಃ ॥ ೭ ॥

ಸ ಏಕದಾಽಽರಾಧನಕಾಲ ಆತ್ಮವಾನ್
ಗೃಹೀತಮೌನವ್ರತ ಈಶ್ವರಂ ಹರಿಮ್ ।
ಜಟಾಧರಸ್ತಾಪಸ ಆಪ್ಲುತೋಽಚ್ಯುತಂ
ಸಮರ್ಚಯಾಮಾಸ ಕುಲಾಚಲಾಶ್ರಮಃ ॥ ೮ ॥

ಯದೃಚ್ಛಯಾ ತತ್ರ ಮಹಾಯಶಾ ಮುನಿಃ
ಸಮಾಗಮಚ್ಛಿಷ್ಯಗಣೈಃ ಪರಿಶ್ರಿತಃ ।
ತಂ ವೀಕ್ಷ್ಯ ತೂಷ್ಣೀಮಕೃತಾರ್ಹಣಾದಿಕಂ
ರಹಸ್ಯುಪಾಸೀನಮೃಷಿಶ್ಚುಕೋಪ ಹ ॥ ೯ ॥

ತಸ್ಮಾ ಇಮಂ ಶಾಪಮದಾದಸಾಧು-
ರಯಂ ದುರಾತ್ಮಾಕೃತಬುದ್ಧಿರದ್ಯ ।
ವಿಪ್ರಾವಮಂತಾ ವಿಶತಾಂ ತಮೋಽಂಧಂ
ಯಥಾ ಗಜಃ ಸ್ತಬ್ಧಮತಿಃ ಸ ಏವ ॥ ೧೦ ॥

*ಶ್ರೀಶುಕ ಉವಾಚ*

ಏವಂ ಶಪ್ತ್ವಾ ಗತೋಽಗಸ್ತ್ಯೋ ಭಗವಾನ್ನೃಪ ಸಾನುಗಃ ।
ಇಂದ್ರದ್ಯುಮ್ನೋಽಪಿ ರಾಜರ್ಷಿರ್ದಿಷ್ಟಂ ತದುಪಧಾರಯನ್ ॥ ೧೧ ॥

ಆಪನ್ನಃ ಕೌಂಜರೀಂ ಯೋನಿಮಾತ್ಮಸ್ಮೃತಿವಿನಾಶಿನೀಮ್ ।
ಹರ್ಯರ್ಚನಾನುಭಾವೇನ ಯದ್ಗಜತ್ವೇಽಪ್ಯನುಸ್ಮೃತಿಃ ॥ ೧೨ ॥

ಏವಂ ವಿಮೋಕ್ಷ್ಯ ಗಜಯೂಥಪಮಬ್ಜನಾಭ-
ಸ್ತೇನಾಪಿ ಪಾರ್ಷದಗತಿಂ ಗಮಿತೇನ ಯುಕ್ತಃ ।
ಗಂಧರ್ವಸಿದ್ಧವಿಬುಧೈರುಪಗೀಯಮಾನ-
ಕರ್ಮಾದ್ಭುತಂ ಸ್ವಭವನಂ ಗರುಡಾಸನೋಽಗಾತ್ ॥ ೧೩ ॥

ಏತನ್ಮಹಾರಾಜ ತವೇರಿತೋ ಮಯಾ
ಕೃಷ್ಣಾನುಭಾವೋ ಗಜರಾಜಮೋಕ್ಷಣಮ್ ।
ಸ್ವರ್ಗ್ಯಂ ಯಶಸ್ಯಂ ಕಲಿಕಲ್ಮಷಾಪಹಂ
ದುಃಸ್ವಪ್ನನಾಶಂ ಕುರುವರ್ಯ ಶೃಣ್ವತಾಮ್ ॥ ೧೪ ॥

ಭಗವಂತನ ಕೃಪಾಪೂರ್ಣ ಸ್ಪರ್ಶದಿಂದ ಅವನ ಪಾಪಗಳೆಲ್ಲ ನಾಶವಾಗಿ ಹೋದುವು. ಅವನು ಭಗವಂತನಿಗೆ ಪ್ರದಕ್ಷಿಣೆ ಬಂದು ಅವನ ಚರಣಗಳಲ್ಲಿ ವಂದಿಸಿಕೊಂಡು ಎಲ್ಲರೂ ನೋಡು-ನೋಡುತ್ತಿರುವಂತೆ ತನ್ನ ಲೋಕಕ್ಕೆ ತೆರಳಿದನು. ॥ ೫ ॥

ಗಜೇಂದ್ರನೂ ಭಗವಂತನ ಸ್ಪರ್ಶಮಾತ್ರದಿಂದಲೇ ಅಜ್ಞಾನದ ಬಂಧನದಿಂದ ಮುಕ್ತನಾದನು. ಅವನಿಗೆ ಭಗವಂತನ ಸಾರೂಪ್ಯವು ಪ್ರಾಪ್ತವಾಯಿತು. ಅವನು ಪೀತಾಂಬರಧಾರಿಯಾಗಿ ಚತುರ್ಭುಜದಿಂದ ಕಂಗೊಳಿಸಿದನು. ॥ ೬ ॥ ಗಜೇಂದ್ರನು ಹಿಂದಿನ ಜನ್ಮದಲ್ಲಿ ದ್ರವಿಡದೇಶದ ಪಾಂಡ್ಯವಂಶೀಯ ರಾಜನಾಗಿದ್ದನು. ಅವನಿಗೆ ಇಂದ್ರದ್ಯುಮ್ನ ಎಂಬ ಹೆಸರಿತ್ತು. ಅವನು ಭಗವಂತನ ಶ್ರೇಷ್ಠ ಉಪಾಸಕನಾಗಿದ್ದು ಖ್ಯಾತನಾಗಿದ್ದನು. ॥ ೭ ॥ ಒಮ್ಮೆ ಇಂದ್ರದ್ಯುಮ್ನ ಮಹಾರಾಜನು ರಾಜ್ಯವೈಭವಗಳನ್ನು ಬಿಟ್ಟು ಮಲಯ ಪರ್ವತದಲ್ಲಿ ಇರುತ್ತಿದ್ದನು. ಅವನು ಜಟೆಗಳನ್ನು ಬೆಳೆಸಿ, ತಪಸ್ವಿಯ ವೇಷವನ್ನು ಧರಿಸಿದ್ದನು. ಒಂದು ದಿನ ಸ್ನಾನಾನಂತರ ಪೂಜೆಯ ಸಮಯ ಮನಸ್ಸನ್ನು ಏಕಾಗ್ರಗೊಳಿಸಿ, ಮೌನವ್ರತವನ್ನಾಂತು ಅವನು ಸರ್ವಶಕ್ತಿಸಂಪನ್ನ ಭಗವಂತನನ್ನು ಆರಾಧಿಸತೊಡಗಿದ್ದನು. ॥ ೮ ॥ ಅದೇ ಸಮಯಕ್ಕೆ ದೈವಯೋಗದಿಂದ ಪರಮ ತಪಸ್ವಿಗಳಾದ ಅಗಸ್ತ್ಯಮುನಿಗಳು ತನ್ನ ಶಿಷ್ಯಸಂದೋಹದೊಂದಿಗೆ ಅಲ್ಲಿಗೆ ಆಗಮಿಸಿದರು. ಇಂದ್ರದ್ಯುಮ್ನನು ಪ್ರಜಾಪಾಲನೆ, ಗೃಹಸ್ಥರಿಗೆ ಉಚಿತವಾದ ಅತಿಥಿಸೇವೆ ಮುಂತಾದ ಧರ್ಮಗಳನ್ನು ತ್ಯಜಿಸಿ, ತಪಸ್ವಿಗಳಂತೆ ಏಕಾಂತದಲ್ಲಿ ಮೌನವಾಗಿ ಕುಳಿತು ಉಪಾಸನೆ ಮಾಡುವುದನ್ನು ಕಂಡ ಅವರು ರಾಜನ ಮೇಲೆ ಕ್ರೋಧಗೊಂಡರು. ॥ ೯ ॥ "ಈ ರಾಜನು ಗುರುಹಿರಿಯರಿಂದ ಶಿಕ್ಷಣವನ್ನು ಗ್ರಹಿಸಲಿಲ್ಲ, ಅಭಿಮಾನಕ್ಕೆ ವಶನಾಗಿ ಪರೋಪಕಾರದಿಂದ ನಿವೃತ್ತನಾಗಿ ಮನಬಂದಂತೆ ಮಾಡುತ್ತಿದ್ದಾನೆ. ಬ್ರಾಹ್ಮಣರಿಗೆ ಅಪಮಾನಮಾಡುವ ಇವನು ಆನೆಯಂತೆ ಜಡಬುದ್ಧಿಯವನಾಗಿದ್ದಾನೆ. ಅದರಿಂದ ಇವನಿಗೆ ಘೋರ ಅಜ್ಞಾನಮಯ ಆನೆಯ ಜನ್ಮವು ದೊರೆಯಲಿ" ಎಂದು ಶಾಪವನ್ನು ಕೊಟ್ಟರು. ॥ ೧೦ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಶಾಪಾನುಗ್ರಹ ಸಮರ್ಥರಾದ ಅಗಸ್ತ್ಯಋಷಿಗಳು ಇಂದ್ರದ್ಯುಮ್ನನಿಗೆ ಹೀಗೆ ಶಾಪವನ್ನು ಕೊಟ್ಟು ಶಿಷ್ಯರೊಡನೆ ಅಲ್ಲಿಂದ ಹೊರಟು ಹೋದರು. ಇದು ನನ್ನ ಪ್ರಾರಬ್ಧವೇ ಹೀಗಿತ್ತು ಎಂದು ರಾಜರ್ಷಿಯು ಸಂತೋಷಪಟ್ಟು ಶಾಪವನ್ನು ಸ್ವೀಕರಿಸಿದನು. ॥ ೧೧ ॥ ಇದಾದ ಬಳಿಕ ಆತ್ಮವಿಸ್ಮೃತಿಯನ್ನು ಗೊಳಿಸುವ ಆನೆಯ ಯೋನಿಯು ರಾಜನಿಗೆ ಪ್ರಾಪ್ತವಾಯಿತು. ಆದರೆ ಅವನು ಆನೆಯಾಗಿದ್ದರೂ ಭಗವಂತನ ಆರಾಧನೆಯ ಪ್ರಭಾವದಿಂದ ಅವನಿಗೆ ಭಗವಂತನ ಸ್ಮೃತಿಯು ಹಿಂದಿನಂತೆಯೇ ಇತ್ತು. ॥ ೧೨ ॥ ಭಗವಾನ್ ಶ್ರೀಹರಿಯು ಹೀಗೆ ಗಜೇಂದ್ರನ ಉದ್ಧಾರಮಾಡಿ ಅವನನ್ನು ತನ್ನ ಪಾರ್ಷದನನ್ನಾಗಿಸಿಕೊಂಡನು. ಗಂಧರ್ವರು, ಸಿದ್ಧರು, ದೇವತೆಗಳು ಶ್ರೀಹರಿಯ ಈ ಲೀಲೆಯನ್ನು ಹಾಡತೊಡಗಿದರು ಮತ್ತು ಅವನು ಪಾರ್ಷದರೂಪೀ ಗಜೇಂದ್ರನೊಂದಿಗೆ ಗರುಡವಾಹನನಾಗಿ ಅಲೌಕಿಕವಾದ ತನ್ನ ಲೋಕಕ್ಕೆ ಹೊರಟುಹೋದನು. ॥ ೧೩ ॥ ಕುರುವಂಶಶಿರೋಮಣಿ ಪರೀಕ್ಷಿತನೇ! ನಾನು ನಿನಗೆ ಭಗವಾನ್ ಶ್ರೀಕೃಷ್ಣನ ಮಹಿಮೆಯನ್ನು ಹಾಗೂ ಗಜೇಂದ್ರನ ಉದ್ಧಾರದ

ಯಥಾನುಕೀರ್ತಯಂತ್ಯೇತಚ್ಛ್ರೇಯಸ್ಕಾಮಾ ದ್ವಿಜಾತಯಃ ।
ಶುಚಯಃ ಪ್ರಾತರುತ್ಥಾಯ ದುಃಸ್ವಪ್ನಾದ್ಯುಪಶಾಂತಯೇ ॥ ೧೫ ॥

ಇದಮಾಹ ಹರಿಃ ಪ್ರೀತೋ ಗಜೇಂದ್ರಂ ಕುರುಸತ್ತಮ ।
ಶೃಣ್ವತಾಂ ಸರ್ವಭೂತಾನಾಂ ಸರ್ವಭೂತಮಯೋ ವಿಭುಃ ॥ ೧೬ ॥

*ಶ್ರೀಭಗವಾನುವಾಚ*

ಯೇ ಮಾಂ ತ್ವಾಂ ಚ ಸರಶ್ಚೇದಂ ಗಿರಿಕಂದರಕಾನನಮ್ ।
ವೇತ್ರ ಕೀಚಕವೇಣೂನಾಂ ಗುಲ್ಮಾನಿ ಸುರಪಾದಪಾನ್ ॥ ೧೭ ॥

ಶೃಂಗಾಣೀಮಾನಿ ಧಿಷ್ಣ್ಯಾನಿ ಬ್ರಹ್ಮಣೋ ಮೇ ಶಿವಸ್ಯ ಚ ।
ಕ್ಷೀರೋದಂ ಮೇ ಪ್ರಿಯಂ ಧಾಮ ಶ್ವೇತದ್ವೀಪಂ ಚ ಭಾಸ್ವರಮ್ ॥ ೧೮ ॥

ಶ್ರೀವತ್ಸಂ ಕೌಸ್ತುಭಂ ಮಾಲಾಂ ಗದಾಂ ಕೌಮೋದಕೀಂ ಮಮ ।
ಸುದರ್ಶನಂ ಪಾಂಚಜನ್ಯಂ ಸುಪರ್ಣಂ ಪತಗೇಶ್ವರಮ್ ॥ ೧೯ ॥

ಶೇಷಂ ಚ ಮತ್ಕಲಾಂ ಸೂಕ್ಷ್ಮಾಂ ಶ್ರಿಯಂ ದೇವೀಂ ಮದಾಶ್ರಯಾಮ್ ।
ಬ್ರಹ್ಮಾಣಂ ನಾರದಮೃಷಿಂ ಭವಂ ಪ್ರಹ್ಲಾದಮೇವ ಚ ॥ ೨೦ ॥

ಮತ್ಸ್ಯಕೂರ್ಮವರಾಹಾದ್ಯೈರವತಾರೈಃ ಕೃತಾನಿ ಮೇ ।
ಕರ್ಮಾಣ್ಯನಂತಪುಣ್ಯಾನಿ ಸೂರ್ಯಂ ಸೋಮಂ ಹುತಾಶನಮ್ ॥ ೨೧ ॥

ಪ್ರಣವಂ ಸತ್ಯಮವ್ಯಕ್ತಂ ಗೋವಿಪ್ರಾನ್‌ಧರ್ಮಮವ್ಯಯಮ್ ।
ದಾಕ್ಷಾಯಣೀರ್ಧರ್ಮಪತ್ನೀಃ ಸೋಮಕಶ್ಯಪಯೋರಪಿ ॥ ೨೨ ॥

ಗಂಗಾಂ ಸರಸ್ವತೀಂ ನಂದಾಂ ಕಾಲಿಂದೀಂ ಸಿತವಾರಣಮ್ ।
ಧ್ರುವಂ ಬ್ರಹ್ಮರ್ಷೀನ್ಸಪ್ತ ಪುಣ್ಯಶ್ಲೋಕಾಂಶ್ಚ ಮಾನವಾನ್ ॥ ೨೩ ॥

ಉತ್ಥಾಯಾಪರರಾತ್ರಾಂತೇ ಪ್ರಯತಾಃ ಸುಸಮಾಹಿತಾಃ ।
ಸ್ಮರಂತಿ ಮಮ ರೂಪಾಣಿ ಮುಚ್ಯಂತೇ ಹ್ಯೇನಸೋಽಖಿಲಾತ್ ॥ ೨೪ ॥

ಯೇ ಮಾಂ ಸ್ತುವಂತ್ಯನೇನಾಂಗ ಪ್ರತಿಬುಧ್ಯ ನಿಶಾತ್ಯಯೇ ।
ತೇಷಾಂ ಪ್ರಾಣಾತ್ಯಯೇ ಚಾಹಂ ದದಾಮಿ ವಿಮಲಾಂ ಮತಿಮ್ ॥ ೨೫ ॥

*ಶ್ರೀಶುಕ ಉವಾಚ*

ಇತ್ಯಾದಿಶ್ಯ ಹೃಷೀಕೇಶಃ ಪ್ರಧ್ಮಾಯ ಜಲಜೋತ್ತಮಮ್ ।
ಹರ್ಷಯನ್ವಿಬುಧಾನೀಕಮಾರುರೋಹ ಖಗಾಧಿಪಮ್ ॥ ೨೬ ॥

ಕಥೆಯನ್ನು ಹೇಳಿದೆನು. ಈ ಕಥಾಪ್ರಸಂಗವು ಕೇಳುವವರ ಕಲಿಮಲ ಮತ್ತು ದುಃಸ್ವಪ್ನವನ್ನು ಇಲ್ಲವಾಗಿಸಿ, ಅವರಿಗೆ ಯಶಸ್ಸು ಉನ್ನತಿ ಹಾಗೂ ಸ್ವರ್ಗವನ್ನು ಕೊಡುವಂತಹುದು. ॥ ೧೪ ॥ ಅದಕ್ಕಾಗಿ ಶ್ರೇಯಸ್ಸನ್ನು ಬಯಸುವ ದ್ವಿಜರು ದುಃಸ್ವಪ್ನಾದಿಗಳ ಶಾಂತಿಗಾಗಿ ಪ್ರಾತಃಕಾಲ ಎದ್ದೊಡನೆಯೇ ಪವಿತ್ರರಾಗಿ ಇದನ್ನು ಪಾರಾಯಣ ಮಾಡುತ್ತಾರೆ. ॥ ೧೫ ॥ ಪರೀಕ್ಷಿತನೇ! ಗಜೇಂದ್ರನ ಸ್ತುತಿಯಿಂದ ಪ್ರಸನ್ನನಾದ ಸರ್ವವ್ಯಾಪಕನೂ, ಸರ್ವಸ್ವರೂಪನೂ ಆದ ಭಗವಾನ್ ಶ್ರೀಹರಿಯು ಎಲ್ಲ ಜನರು ಕೇಳುವಂತೆ ಈ ಮಾತನ್ನು ಹೇಳಿದ್ದನು. ॥ ೧೬ ॥

**ಶ್ರೀಭಗವಂತನು ಹೇಳಿದನು** – ಗಜೇಂದ್ರನೇ! ಯಾವ ಜನರು ಬ್ರಾಹ್ಮೀಮುಹೂರ್ತದಲ್ಲೆದ್ದು ಇಂದ್ರಿಯನಿಗ್ರಹಪೂರ್ವಕವಾಗಿ, ಏಕಾಗ್ರಮನಸ್ಸಿನಿಂದ ನನ್ನನ್ನು-ನಿನ್ನನ್ನು ಹಾಗೂ ಈ ಸರೋವರ, ಪರ್ವತ ಮತ್ತು ಗುಹೆಗಳನ್ನು, ವನವನ್ನೂ, ಬೆತ್ತ-ಬಿದಿರುಗಳ ಪೊದರುಗಳನ್ನು, ಇಲ್ಲಿಯ ದಿವ್ಯ ವೃಕ್ಷಗಳನ್ನೂ, ಪರ್ವತ ಶಿಖರಗಳನ್ನೂ, ನನ್ನ-ಬ್ರಹ್ಮದೇವರ-ಶಿವನ ನಿವಾಸಸ್ಥಾನಗಳನ್ನು, ನನಗೆ ಪ್ರಿಯವಾದ ಕ್ಷೀರಸಾಗರ, ಪ್ರಕಾಶಮಯ ಶ್ವೇತದ್ವೀಪವನ್ನು ಶ್ರೀವತ್ಸ, ಕೌಸ್ತುಭಮಣಿ, ವನಮಾಲೆ, ನನ್ನ ಕೌಮೋದಕೀ ಗದೆ, ಸುದರ್ಶನ ಚಕ್ರ, ಪಾಂಚಜನ್ಯ ಶಂಖ ಇವುಗಳನ್ನೂ, ಪಕ್ಷಿರಾಜ ಗರುಡ, ನನ್ನ ಸೂಕ್ಷ್ಮವಾದ ಕಲಾಸ್ವರೂಪವಾದ ಆದಿಶೇಷನನ್ನು ನನ್ನಲ್ಲೇ ಆಶ್ರಿತಳಾಗಿರುವ ಲಕ್ಷ್ಮೀದೇವಿಯನ್ನು, ಬ್ರಹ್ಮದೇವರನ್ನು, ದೇವರ್ಷಿನಾರದರನ್ನೂ, ಶಂಕರನನ್ನು ಹಾಗೂ ಭಕ್ತರಾಜ ಪ್ರಹ್ಲಾದನನ್ನೂ, ಮತ್ಸ್ಯ, ಕೂರ್ಮ, ವರಾಹ ಮುಂತಾದ ಅವತಾರಗಳಲ್ಲಿ ನನ್ನಿಂದ ಮಾಡಲ್ಪಟ್ಟ ಅನಂತ ಪುಣ್ಯಮಯ ಚರಿತ್ರೆಗಳನ್ನು, ಸೂರ್ಯ, ಚಂದ್ರ, ಅಗ್ನಿ ಓಂಕಾರ, ಸತ್ಯ, ಮೂಲಪ್ರಕೃತಿ, ಗೋವು, ಬ್ರಾಹ್ಮಣರು, ಅವಿನಾಶೀ ಸನಾತನಧರ್ಮವನ್ನು, ಸೋಮ, ಕಶ್ಯಪ ಇವರನ್ನು ಮತ್ತು ಧರ್ಮನ ಪತ್ನೀ ದಕ್ಷಕನ್ಯೆಯರನ್ನು, ಗಂಗಾ, ಸರಸ್ವತೀ, ಅಲಕನಂದಾ, ಯಮುನಾ, ಗಜರಾಜ, ಐರಾವತ, ಭಕ್ತಶಿರೋಮಣಿ ಧ್ರುವ, ಏಳು ಸಪ್ತರ್ಷಿಗಳನ್ನು, ಪುಣ್ಯಕೀರ್ತಿ (ನಳ, ಯುಧಿಷ್ಠಿರ, ಜನಕ ಮುಂತಾದ) ಮಹಾಪುರುಷರನ್ನು ಹೀಗೆ ಇವರೆಲ್ಲರನ್ನು ಸ್ಮರಿಸುತ್ತಾರೋ, ಅವರು ಸಮಸ್ತ ಪಾಪಗಳಿಂದ ಬಿಡುಗಡೆ ಹೊಂದುವರು. ಏಕೆಂದರೆ, ಇವೆಲ್ಲವೂ ನನ್ನ ಸ್ವರೂಪಗಳೇ ಆಗಿವೆ. ॥ ೧೭-೨೪ ॥ ಪ್ರಿಯ ಗಜೇಂದ್ರನೇ! ಬ್ರಾಹ್ಮೀಮುಹೂರ್ತದಲ್ಲಿ ಎಚ್ಚರಗೊಂಡು ನೀನು ಮಾಡಿದ ಸ್ತೋತ್ರದಿಂದ ನನ್ನನ್ನು ಸ್ತುತಿಸುವವರ ಮೃತ್ಯುವಿನ ಸಮಯದಲ್ಲಿ ಅವರಿಗೆ ನಾನು ನಿರ್ಮಲ ಬುದ್ಧಿಯನ್ನು ಕರುಣಿಸುವೆನು. ॥ ೨೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಹೀಗೆ ಹೇಳಿ, ದೇವತೆಗಳನ್ನು ಆನಂದಪಡಿಸುತ್ತಾ ತನ್ನ ಶ್ರೇಷ್ಠವಾದ ಶಂಖವನ್ನು ಊದಿದನು ಹಾಗೂ ಗರುಡನನ್ನು ಏರಿದನು. ॥ ೨೬ ॥

*ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ಗಜೇಂದ್ರಮೋಕ್ಷಣಂ ನಾಮಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ದೇವತೆಗಳೆಲ್ಲರೂ ಬ್ರಹ್ಮನ ಬಳಿಗೆ ಹೋದುದು, ಬ್ರಹ್ಮದೇವರು ಭಗವಂತನನ್ನು ಸ್ತುತಿಸಿದುದು

*ಶ್ರೀಶುಕ ಉವಾಚ*

ರಾಜನ್ನುದಿತಮೇತತ್ತೇ ಹರೇಃ ಕರ್ಮಾಘನಾಶನಮ್ ।
ಗಜೇಂದ್ರಮೋಕ್ಷಣಂ ಪುಣ್ಯಂ ರೈವತಂ ತ್ವಂತರಂ ಶೃಣು ॥ ೧ ॥

ಪಂಚಮೋ ರೈವತೋ ನಾಮ ಮನುಸ್ತಾಮಸಸೋದರಃ ।
ಬಲಿವಿಂಧ್ಯಾದಯಸ್ತಸ್ಯ ಸುತಾ ಅರ್ಜುನಪೂರ್ವಕಾಃ ॥ ೨ ॥

ವಿಭುರಿಂದ್ರಃ ಸುರಗಣಾ ರಾಜನ್ ಭೂತರಯಾದಯಃ ।
ಹಿರಣ್ಯರೋಮಾ ವೇದಶಿರಾ ಊರ್ಧ್ವಬಾಹ್ವಾದಯೋ ದ್ವಿಜಾಃ ॥ ೩ ॥

ಪತ್ನೀ ವಿಕುಂಠಾ ಶುಭ್ರಸ್ಯ ವೈಕುಂಠೈಃ ಸುರಸತ್ತಮೈಃ ।
ತಯೋಃ ಸ್ವಕಲಯಾ ಜಜ್ಞೇ ವೈಕುಂಠೋ ಭಗವಾನ್ ಸ್ವಯಮ್ ॥ ೪ ॥

ವೈಕುಂಠಃ ಕಲ್ಪಿತೋ ಯೇನ ಲೋಕೋ ಲೋಕನಮಸ್ಕೃತಃ ।
ರಮಯಾ ಪ್ರಾರ್ಥ್ಯಮಾನೇನ ದೇವ್ಯಾ ತತ್ಪ್ರಿಯಕಾಮ್ಯಯಾ ॥ ೫ ॥

ತಸ್ಯಾನುಭಾವಃ ಕಥಿತೋ ಗುಣಾಶ್ಚ ಪರಮೋದಯಾಃ ।
ಭೌಮಾನ್ ರೇಣೂನ್ ಸ ವಿಮಮೇ ಯೋ ವಿಷ್ಣೋರ್ವರ್ಣಯೇದ್ಗುಣಾನ್ ॥ ೬ ॥

ಷಷ್ಠಶ್ಚ ಚಕ್ಷುಷಃ ಪುತ್ರಶ್ಚಾಕ್ಷುಷೋ ನಾಮ ವೈ ಮನುಃ ।
ಪೂರುಪೂರುಷಸುದ್ಯುಮ್ನ ಪ್ರಮುಖಾಶ್ಚಾಕ್ಷುಷಾತ್ಮಜಾಃ ॥ ೭ ॥

ಇಂದ್ರೋ ಮಂತ್ರದ್ರುಮಸ್ತತ್ರ ದೇವಾ ಆಪ್ಯಾದಯೋ ಗಣಾಃ ।
ಮುನಯಸ್ತತ್ರ ವೈ ರಾಜನ್ ಹವಿಷ್ಮದ್ವೀರಕಾದಯಃ ॥ ೮ ॥

ತತ್ರಾಪಿ ದೇವಃ ಸಂಭೂತ್ಯಾಂ ವೈರಾಜಸ್ಯಾಭವತ್ಸುತಃ ।
ಅಜಿತೋ ನಾಮ ಭಗವಾನಂಶೇನ ಜಗತಃ ಪತಿಃ ॥ ೯ ॥

ಪಯೋಧಿಂ ಯೇನ ನಿರ್ಮಥ್ಯ ಸುರಾಣಾಂ ಸಾಧಿತಾ ಸುಧಾ ।
ಭ್ರಮಮಾಣೋಽಂಭಸಿ ಧೃತಃ ಕೂರ್ಮರೂಪೇಣ ಮಂದರಃ ॥ ೧೦ ॥

*ರಾಜೋವಾಚ*

ಯಥಾ ಭಗವತಾ ಬ್ರಹ್ಮನ್ಮಥಿತಃ ಕ್ಷೀರಸಾಗರಃ ।
ಯದರ್ಥಂ ವಾ ಯತಶ್ಚಾದ್ರಿಂ ದಧಾರಾಂಬುಚರಾತ್ಮನಾ ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಂತನ ಈ ಗಜೇಂದ್ರಮೋಕ್ಷದ ಪವಿತ್ರ ಲೀಲೆಯು ಸಮಸ್ತ ಪಾಪಗಳನ್ನು ನಾಶಮಾಡುವಂತಹುದು. ಅದನ್ನು ನಾನು ನಿನಗೆ ಹೇಳಿದೆನು. ಈಗ ರೈವತ ಮನ್ವಂತರದ ಕಥೆಯನ್ನು ಕೇಳು. ॥ ೧ ॥ ಐದನೆಯ ಮನುವಿನ ಹೆಸರು ರೈವತ. ಇವನು ನಾಲ್ಕನೆಯ ಮನುವಾದ ತಾಮಸನ ತಮ್ಮನು. ಅವನಿಗೆ ಅರ್ಜುನ, ಬಲ, ವಿಂಧ್ಯ ಮುಂತಾದವರು ಮಕ್ಕಳಿದ್ದರು. ॥ ೨ ॥ ಆ ಮನ್ವಂತರದಲ್ಲಿ ವಿಭು ಎಂಬುವನು ಇಂದ್ರನಾಗಿದ್ದನು. ಭೂತರಯ ಮುಂತಾದ ದೇವತೆಗಳು ಮುಖ್ಯರಾಗಿದ್ದರು. ಪರೀಕ್ಷಿತನೇ! ಆಗ ಹಿರಣ್ಯ ರೋಮಾ, ವೇದಶಿರಾ, ಊರ್ಧ್ವಬಾಹು ಮುಂತಾದವರು ಸಪ್ತರ್ಷಿಗಳಿದ್ದರು. ॥ ೩ ॥ ಅವರಲ್ಲಿ ಶುಭ್ರ ಎಂಬ ಋಷಿಯ ಪತ್ನಿಯ ಹೆಸರು ವಿಕುಂಠಾ. ಅವಳ ಗರ್ಭದಲ್ಲಿ ವೈಕುಂಠರೆಂಬ ಶ್ರೇಷ್ಠದೇವತೆಗಳೊಡನೆ ತನ್ನ ಅಂಶದಿಂದ ಸ್ವಯಂ ಭಗವಂತನು ವೈಕುಂಠನೆಂಬ ಹೆಸರಿನಿಂದ ಅವತರಿಸಿದನು. ॥ ೪ ॥ ಅವನು ಲಕ್ಷ್ಮೀದೇವಿಯ ಪ್ರಾರ್ಥನೆಯಂತೆ ಅವಳನ್ನು ಸಂತೋಷಪಡಿಸಲು ವೈಕುಂಠಧಾಮವನ್ನು ರಚಿಸಿದನು. ಆ ಲೋಕವು ಇತರ ಎಲ್ಲ ಲೋಕಗಳಿಗಿಂತ ಶ್ರೇಷ್ಠವಾದುದು. ॥ ೫ ॥ ಆ ವೈಕುಂಠನಾಥನ ಕಲ್ಯಾಣಗುಣಗಳನ್ನು ಮತ್ತು ಮಹಿಮೆಯನ್ನು ನಾನು ಸಂಕ್ಷೇಪವಾಗಿ (ಮೂರನೆಯ ಸ್ಕಂಧದಲ್ಲಿ) ಹಿಂದೆಯೇ ವರ್ಣಿಸಿದ್ದೇನೆ. ಭಗವಾನ್ ವಿಷ್ಣುವಿನ ಸಂಪೂರ್ಣಗುಣಗಳನ್ನಾದರೋ ಪೃಥಿವಿಯಲ್ಲಿರುವ ಧೂಳಿನ ಕಣಗಳನ್ನು ಎಣಿಸಬಲ್ಲವನೇ ವರ್ಣಿಸಬಲ್ಲನು. ಅಂದರೆ ವರ್ಣನಾತೀತವಾದವುಗಳು. ॥ ೬ ॥

ಆರನೆಯ ಮನುವು ಚಕ್ಷುವಿನ ಪುತ್ರ ಚಾಕ್ಷುಷನಾಗಿದ್ದನು. ಅವನಿಗೆ ಪೂರು, ಪುರುಷ, ಸುದ್ಯುಮ್ನ ಮುಂತಾದ ಅನೇಕ ಪುತ್ರರಿದ್ದರು. ॥ ೭ ॥ ಅವರಲ್ಲಿ ಮಂತ್ರದ್ರುಮನೆಂಬ ಇಂದ್ರನಿದ್ದನು ಮತ್ತು ಆಪ್ಯ ಮುಂತಾದ ಪ್ರಧಾನ ದೇವತೆಗಳಿದ್ದರು. ಆ ಮನ್ವಂತರದಲ್ಲಿ ಹವಿಷ್ಮಾನ್, ವೀರಕ ಮುಂತಾದವರು ಸಪ್ತರ್ಷಿಗಳಾಗಿದ್ದರು. ॥ ೮ ॥ ಜಗತ್ಪತಿಯಾದ ಭಗವಂತನು ಆ ಸಮಯದಲ್ಲಿಯೂ ವೈರಾಜನ ಪತ್ನಿಯಾದ ಸಂಭೂತಿಯಲ್ಲಿ ಅಜಿತನೆಂಬ ಹೆಸರಿನಿಂದ ಅಂಶಾವತಾರವನ್ನು ತಾಳಿದನು. ॥ ೯ ॥ ಅವನೇ ಸಮುದ್ರಮಂಥನ ಮಾಡಿ ದೇವತೆಗಳಿಗೆ ಅಮೃತಗಳನ್ನು ಕುಡಿಸಿದ್ದನು ಮತ್ತು ಕೂರ್ಮರೂಪವನ್ನು ಧರಿಸಿ ಗಿರ-ಗಿರನೆ ತಿರುಗುತ್ತಿದ್ದ ಮಂದರಾಚಲವನ್ನು ತನ್ನ ಬೆನ್ನಲ್ಲಿ ಹೊತ್ತನು. ॥ ೧೦ ॥

**ಪರೀಕ್ಷಿದ್ರಾಜನು ಕೇಳಿದನು** – ಬ್ರಾಹ್ಮಣಶ್ರೇಷ್ಠರೇ! ಭಗವಂತನು ಕ್ಷೀರಸಾಗರ ಮಂಥನವನ್ನು ಹೇಗೆ ಮಾಡಿದನು? ಅವನು ಕೂರ್ಮರೂಪವನ್ನು ಧರಿಸಿ ಯಾವ ಕಾರಣದಿಂದ ಮತ್ತು ಯಾವ ಉದ್ದೇಶದಿಂದ ಮಂದರಪರ್ವತವನ್ನು ಬೆನ್ನಿನ ಮೇಲೆ ಹೊತ್ತುಕೊಂಡನು? ॥ ೧೧ ॥ ದೇವತೆಗಳಿಗೆ ಆ ಸಮಯದಲ್ಲಿ ಅಮೃತವು ಹೇಗೆ ದೊರೆಯಿತು? ಇನ್ನೂ ಯಾವ-ಯಾವ

ಯಥಾಮೃತಂ ಸುರೈಃ ಪ್ರಾಪ್ತಂ ಕಿಂಚಾನ್ಯದಭವತ್ತತಃ ।
ಏತದ್ಭಗವತಃ ಕರ್ಮ ವದಸ್ವ ಪರಮಾದ್ಭುತಮ್ ॥ ೧೨ ॥

ತ್ವಯಾ ಸಂಕಥ್ಯಮಾನೇನ ಮಹಿಮ್ನಾ ಸಾತ್ವತಾಂ ಪತೇಃ ।
ನಾತಿತೃಪ್ಯತಿ ಮೇ ಚಿತ್ತಂ ಸುಚಿರಂ ತಾಪತಾಪಿತಮ್ ॥ ೧೩ ॥

*ಸೂತ ಉವಾಚ*

ಸಂಪೃಷ್ಟೋ ಭಗವಾನೇವಂ ದ್ವೈಪಾಯನಸುತೋ ದ್ವಿಜಾಃ ।
ಅಭಿನಂದ್ಯ ಹರೇರ್ವೀರ್ಯಮಭ್ಯಾಚಷ್ಟುಂ ಪ್ರಚಕ್ರಮೇ ॥ ೧೪ ॥

*ಶ್ರೀಶುಕ ಉವಾಚ*

ಯದಾ ಯುದ್ಧೇಽಸುರೈರ್ದೇವಾ ಬಾಧ್ಯಮಾನಾಃ ಶಿತಾಯುಧೈಃ ।
ಗತಾಸವೋ ನಿಪತಿತಾ ನೋತ್ತಿಷ್ಠೇರನ್ ಸ್ಮ ಭೂಯಶಃ ॥ ೧೫ ॥

ಯದಾ ದುರ್ವಾಸಃ ಶಾಪಾತ್ಸೇಂದ್ರಾ ಲೋಕಾಸ್ತ್ರಯೋ ನೃಪ ।
ನಿಃಶ್ರೀಕಾಶ್ಚಾಭವಂಸ್ತತ್ರ ನೇಶುರಿಜ್ಯಾದಯಃ ಕ್ರಿಯಾಃ ॥ ೧೬ ॥

ನಿಶಾಮ್ಯೈತತ್ಸುರಗಣಾ ಮಹೇಂದ್ರವರುಣಾದಯಃ ।
ನಾಧ್ಯಗಚ್ಛನ್ ಸ್ವಯಂ ಮಂತ್ರೈರ್ಮಂತ್ರಯಂತೋ ವಿನಿಶ್ಚಯಮ್ ॥ ೧೭ ॥

ತತೋ ಬ್ರಹ್ಮಸಭಾಂ ಜಗ್ಮುರ್ಮೇರೋರ್ಮೂರ್ಧನಿ ಸರ್ವಶಃ ।
ಸರ್ವಂ ವಿಜ್ಞಾಪಯಾಂಚಕ್ರುಃ ಪ್ರಣತಾಃ ಪರಮೇಷ್ಠಿನೇ ॥ ೧೮ ॥

ಸ ವಿಲೋಕ್ಯೇಂದ್ರವಾಯ್ವಾದೀನ್ನಿಃಸತ್ತ್ವಾನ್ವಿಗತಪ್ರಭಾನ್ ।
ಲೋಕಾನಮಂಗಲಪ್ರಾಯಾನಸುರಾನಯಥಾ ವಿಭುಃ ॥ ೧೯ ॥

ಸಮಾಹಿತೇನ ಮನಸಾ ಸಂಸ್ಮರನ್ಪುರುಷಂ ಪರಮ್ ।
ಉವಾಚೋತ್ಫುಲ್ಲವದನೋ ದೇವಾನ್ಸ ಭಗವಾನ್ಪರಃ ॥ ೨೦ ॥

ಅಹಂ ಭವೋ ಯೂಯಮಥೋಽಸುರಾದಯೋ
ಮನುಷ್ಯತಿರ್ಯಗ್ದ್ರುಮಘರ್ಮಜಾತಯಃ ।
ಯಸ್ಯಾವತಾರಾಂಶಕಲಾವಿಸರ್ಜಿತಾ
ವ್ರಜಾಮ ಸರ್ವೇ ಶರಣಂ ತಮವ್ಯಯಮ್ ॥ ೨೧ ॥

ವಸ್ತುಗಳು ಸಮುದ್ರಮಂಥನದಿಂದ ದೊರೆತವು ? ಭಗವಂತನ ಈ ಲೀಲೆಯು ನಿಶ್ಚಯವಾಗಿಯೂ ಪರಮಾದ್ಭುತವಾಗಿದೆ. ಕೃಪೆಯಿಟ್ಟು ತಾವು ಇದೆಲ್ಲವನ್ನೂ ವಿಶದವಾಗಿ ವರ್ಣಿಸಿರಿ. ॥ ೧೨ ॥ ಭಕ್ತವತ್ಸಲನಾದ ಭಗವಂತನ ಮಹಿಮೆಗಳನ್ನು ನೀವು ವರ್ಣಿಸಿದಂತೆಯೇ ನನ್ನ ಹೃದಯವು ಅವನ್ನು ಕೇಳಲು ಅಷ್ಟೇ ಉತ್ಸುಕವಾಗುತ್ತಾ ಹೋಗುತ್ತದೆ. ಬೇಸರಬರುವ ಮಾತೇ ಇಲ್ಲ, ಸಂಸಾರತಾಪದಿಂದ ಬೇಯುತ್ತಿರುವ ನನ್ನ ಮನಸ್ಸು ತವಕಪಡುತ್ತದೆ. ॥ ೧೩ ॥

**ಸೂತಪುರಾಣಿಕರು ಹೇಳಿದರು** – ಶೌನಕಾದಿ ಋಷಿಗಳಿರಾ ! ಪೂಜ್ಯರಾದ ಶ್ರೀಶುಕಮಹಾಮುನಿಗಳು ಪರೀಕ್ಷಿದ್ರಾಜನ ಈ ಪ್ರಶ್ನೆಯನ್ನು ಕೇಳಿ, ಅವನನ್ನು ಅಭಿನಂದಿಸುತ್ತಾ ಭಗವಂತನ ಸಮುದ್ರಮಂಥನ ಲೀಲೆಯನ್ನು ವರ್ಣಿಸತೊಡಗಿದರು. ॥ ೧೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತ ರಾಜನೇ ! ಹಿಂದೊಮ್ಮೆ ಅಸುರರು ತಮ್ಮ ನಿಶಿತವಾದ ಶಸ್ತ್ರಾಸ್ತ್ರಗಳಿಂದ ದೇವತೆಗಳನ್ನು ಪರಾಜಿತಗೊಳಿಸಿದರು. ಆ ದೇವಾಸುರರ ಯುದ್ಧದಲ್ಲಿ ಹಲವಾರು ದೇವತೆಗಳೂ ಅಸುನೀಗಿದ್ದರು. ಕೆಳಕ್ಕೆ ಬಿದ್ದವರು ಮೇಲೇಳಲೇ ಇಲ್ಲ. ॥ ೧೫ ॥ ದುರ್ವಾಸರ ಶಾಪದಿಂದ* ಮೂರು ಲೋಕಗಳು ಸೇರಿ ಸ್ವತಃ ಇಂದ್ರನೂ ಕೂಡ ಶ್ರೀಹೀನನಾದನು. ಇದರಿಂದ ಯಜ್ಞ-ಯಾಗಾದಿ ಧರ್ಮ-ಕರ್ಮಗಳೂ ನಿಂತುಹೋದುವು. ॥ ೧೬ ॥ ಈ ದುರ್ದಶೆಯನ್ನು ಕಂಡು ಇಂದ್ರ, ವರುಣರೇ ಮುಂತಾದ ದೇವತೆಗಳು ಪರಸ್ಪರ ಅನೇಕ ವಿಧದಿಂದ ವಿಚಾರಮಾಡಿದರೂ ತಮ್ಮ ವಿಚಾರಗಳಿಂದ ಯಾವುದೇ ಇತ್ಯರ್ಥಕ್ಕೆ ಬರಲಾಗಲಿಲ್ಲ. ॥ ೧೭ ॥ ಆಗ ಅವರೆಲ್ಲರೂ ಸುಮೇರುಪರ್ವತದ ಶಿಖರದಲ್ಲಿದ್ದ ಬ್ರಹ್ಮದೇವರ ಸಭೆಗೆ ಹೋದರು. ಅಲ್ಲಿ ಅವರು ಅತಿನಮ್ರರಾಗಿ ಬ್ರಹ್ಮದೇವರ ಸೇವೆಯಲ್ಲಿ ತೊಡಗಿ ತಮ್ಮ ಪರಿಸ್ಥಿತಿಯನ್ನು ವಿಶದವಾಗಿ ತಿಳಿಸಿದರು. ॥ ೧೮ ॥ ಬ್ರಹ್ಮದೇವರು ನೋಡಿದರು – ಇಂದ್ರ, ವಾಯು ಮುಂತಾದ ದೇವತೆಗಳು ಶ್ರೀಹೀನ ಮತ್ತು ಶಕ್ತಿಹೀನರಾಗಿರುವರು. ಜನರ ಪರಿಸ್ಥಿತಿಯು ಬಲು ವಿಕಟ, ಸಂಕಟಗ್ರಸ್ತವಾಗಿದೆ. ಅಸುರರಾದರೋ ಇದಕ್ಕೆ ವಿಪರೀತವಾಗಿ ಉನ್ನತಿಯನ್ನು ಪಡೆಯುತ್ತಿದ್ದಾರೆ. ॥ ೧೯ ॥ ಆಗ ಸರ್ವಸಮರ್ಥರಾದ ಬ್ರಹ್ಮದೇವರು ತಮ್ಮ ಮನಸ್ಸನ್ನು ಏಕಾಗ್ರಗೊಳಿಸಿ ಪರಮ ಪುರುಷ ಭಗವಂತನನ್ನು ಸ್ಮರಿಸಿದರು. ಮತ್ತೆ ಸ್ವಲ್ಪಹೊತ್ತು ತಡೆದು, ಪ್ರಫುಲ್ಲಿತ ವದನಾರವಿಂದದಿಂದ ದೇವತೆಗಳನ್ನು ಸಂಬೋಧಿಸಿ ಹೇಳಿದರು – ॥ ೨೦ ॥ ದೇವತೆಗಳಿರಾ ! ನಾನು, ಶಂಕರನು, ನೀವುಗಳು ಹಾಗೂ ಅಸುರರು, ದೈತ್ಯರು, ಮನುಷ್ಯರು, ಪಶು-ಪಕ್ಷಿಗಳು, ವೃಕ್ಷಗಳು, ಸ್ವೇದಜ ಮುಂತಾದ ಸಮಸ್ತ ಪ್ರಾಣಿಗಳು ಯಾರ ವಿರಾಟ್ ರೂಪದ ಒಂದು ಅತ್ಯಂತ ಸ್ವಲ್ಪಾತಿಸ್ವಲ್ಪ ಅಂಶದಿಂದ ರಚಿತವಾಗಿವೆಯೋ, ಆ ಅವಿನಾಶೀ ಪ್ರಭುವಿಗೆ ನಾವುಗಳು ಶರಣಾಗಬೇಕು. ॥ ೨೧ ॥

* ಈ ಪ್ರಸಂಗವು ವಿಷ್ಣುಪುರಾಣದಲ್ಲಿ ಹೀಗೆ ಬಂದಿದೆ – ಒಮ್ಮೆ ದುರ್ವಾಸರು ವೈಕುಂಠದಿಂದ ಬರುತ್ತಿದ್ದರು. ದಾರಿಯಲ್ಲಿ ಐರಾವತವನ್ನೇರಿದ ದೇವೇಂದ್ರನು ಸಿಕ್ಕಿದನು. ಅವನನ್ನು ತ್ರಿಲೋಕಾಧಿಪತಿ ಎಂದೆಣಿಸಿ ದುರ್ವಾಸರು ಭಗವಂತನ ಪ್ರಸಾದದ ಮಾಲೆಯನ್ನು ಕೊಟ್ಟರು. ಆದರೆ ಇಂದ್ರನು ಐಶ್ವರ್ಯದ ಮದದಿಂದ ಅದನ್ನು ಸ್ವಲ್ಪವೂ ಆದರಿಸದೆ ಐರಾವತದ ತಲೆಯಮೇಲಿಟ್ಟನು. ಐರಾವತವು ಅದನ್ನು ಸೊಂಡಿಲಿನಿಂದ ಎತ್ತಿಕೊಂಡು ಕಾಲಿನಿಂದ ತುಳಿದುಬಿಟ್ಟಿತು. ಇದರಿಂದ ದುರ್ವಾಸರು ಕ್ರೋಧಗೊಂಡು – 'ನೀನು ಮೂರು ಲೋಕಗಳಸಹಿತ ಶ್ರೀಹೀನನಾಗು. ಅಂದರೆ ಸಂಪತ್ತುರಹಿತನಾಗು' ಎಂದು ಶಪಿಸಿದರು. ಇದರಿಂದ ಇಂದ್ರನು ಶ್ರೀಯನ್ನು ಕಳಕೊಂಡನು.

ನ ಯಸ್ಯ ವಧ್ಯೋ ನ ಚ ರಕ್ಷಣೀಯೋ
ನೋಪೇಕ್ಷಣೀಯಾದರಣೀಯಪಕ್ಷಃ ।
ಅಥಾಪಿ ಸರ್ಗಸ್ಥಿತಿಸಂಯಮಾರ್ಥಂ
ಧತ್ತೇ ರಜಃಸತ್ತ್ವತಮಾಂಸಿ ಕಾಲೇ ॥ ೨೨ ॥

ಅಯಂ ಚ ತಸ್ಯ ಸ್ಥಿತಿಪಾಲನಕ್ಷಣಃ
ಸತ್ತ್ವಂ ಜುಷಾಣಸ್ಯ ಭವಾಯ ದೇಹಿನಾಮ್ ।
ತಸ್ಮಾದ್ವ್ರಜಾಮಃ ಶರಣಂ ಜಗದ್ಗುರುಂ
ಸ್ವಾನಾಂ ಸ ನೋ ಧಾಸ್ಯತಿ ಶಂ ಸುರಪ್ರಿಯಃ ॥ ೨೩ ॥

ಶ್ರೀಶುಕ ಉವಾಚ

ಇತ್ಯಾಭಾಷ್ಯ ಸುರಾನ್ವೇಧಾಃ ಸಹ ದೇವೈರರಿಂದಮ ।
ಅಜಿತಸ್ಯ ಪದಂ ಸಾಕ್ಷಾಜ್ಜಗಾಮ ತಮಸಃ ಪರಮ್ ॥ ೨೪ ॥

ತತ್ರಾದೃಷ್ಟಸ್ವರೂಪಾಯ ಶ್ರುತಪೂರ್ವಾಯ ವೈ ವಿಭೋ ।
ಸ್ತುತಿಮಬ್ರೂತ ದೈವೀಭಿರ್ಗೀರ್ಭಿಸ್ತ್ವವಹಿತೇಂದ್ರಿಯಃ ॥ ೨೫ ॥

ಬ್ರಹ್ಮೋವಾಚ

ಅವಿಕ್ರಿಯಂ ಸತ್ಯಮನಂತಮಾದ್ಯಂ
ಗುಹಾಶಯಂ ನಿಷ್ಕಲಮಪ್ರತರ್ಕ್ಯಮ್ ।
ಮನೋಽಗ್ರಯಾನಂ ವಚಸಾನಿರುಕ್ತಂ
ನಮಾಮಹೇ ದೇವವರಂ ವರೇಣ್ಯಮ್ ॥ ೨೬ ॥

ವಿಪಶ್ಚಿತಂ ಪ್ರಾಣಮನೋಧಿಯಾತ್ಮನಾ-
ಮರ್ಥೇಂದ್ರಿಯಾಭಾಸಮನಿದ್ರಮವ್ರಣಮ್ ।
ಛಾಯಾತಪೌ ಯತ್ರ ನ ಗೃಧ್ರಪಕ್ಷೌ
ತಮಕ್ಷರಂ ಖಂ ತ್ರಿಯುಗಂ ವ್ರಜಾಮಹೇ ॥ ೨೭ ॥

ಅಜಸ್ಯ ಚಕ್ರಂ ತ್ವಜಯೇರ್ಯಮಾಣಂ
ಮನೋಮಯಂ ಪಂಚದಶಾರಮಾಶು ।
ತ್ರಿಣಾಭಿ ವಿದ್ಯುಚ್ಚಲಮಷ್ಟನೇಮಿ
ಯದಕ್ಷಮಾಹುಸ್ತಮೃತಂ ಪ್ರಪದ್ಯೇ ॥ ೨೮ ॥

ಅವನ ದೃಷ್ಟಿಯಲ್ಲಿ ವಧಾರ್ಹನಾಗಲೀ, ರಕ್ಷಿಸಲ್ಪಡತಕ್ಕವರಾಗಲೀ, ಯಾರೂ ಇಲ್ಲದಿದ್ದರೂ, ಅವನಿಗೆ ಉಪೇಕ್ಷಣೀಯ ಹಾಗೂ ಆದರಣೀಯರು ಯಾರೂ ಇಲ್ಲದಿದ್ದರೂ ಸೃಷ್ಟಿ, ಸ್ಥಿತಿ, ಪ್ರಳಯಕ್ಕಾಗಿ ಆಗಾಗ ಅವನು ರಜೋಗುಣವನ್ನೂ, ಸತ್ತ್ವಗುಣವನ್ನು, ತಮೋಗುಣವನ್ನು ಸ್ವೀಕರಿಸುತ್ತಾನೆ. ॥ ೨೨ ॥ ಅವನು ಈ ಸಮಯದಲ್ಲಿ ಪ್ರಾಣಿಗಳ ಕಲ್ಯಾಣಕ್ಕಾಗಿ ಸತ್ತ್ವಗುಣವನ್ನು ಸ್ವೀಕರಿಸಿರುವನು. ಅದಕ್ಕಾಗಿ ಇದು ಜಗತ್ತಿನ ಸ್ಥಿತಿ ಮತ್ತು ರಕ್ಷಣೆಯ ಸಮಯವಾಗಿದೆ. ಆದ್ದರಿಂದ ನಾವೆಲ್ಲರೂ ಆ ಜಗದ್ಗುರು ಪರಮಾತ್ಮನನ್ನೇ ಶರಣು ಹೊಂದೋಣ. ಅವನಿಗೆ ದೇವತೆಗಳು ಪ್ರಿಯರೂ, ದೇವತೆಗಳಿಗೆ ಅವನೂ ಪ್ರಿಯನಾಗಿರುವನು. ಅದರಿಂದ ತನ್ನವರಾದ ನಮ್ಮನ್ನು ಅವನು ಖಂಡಿತವಾಗಿ ರಕ್ಷಿಸುವನು. ॥ ೨೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಬ್ರಹ್ಮದೇವರು ದೇವತೆಗಳಿಗೆ ಹೀಗೆ ಹೇಳಿ ಅವರನ್ನೊಳಗೊಂಡು ಭಗವಾನ್ ಅಜಿತನ ನಿಜಧಾಮವಾದ ವೈಕುಂಠಕ್ಕೆ ಹೋದರು. ಆ ಧಾಮವು ತಮೋಮಯ ಪ್ರಕೃತಿಯಿಂದ ಹೊರತಾಗಿದೆ. ॥ ೨೪ ॥ ಇವರೆಲ್ಲರೂ ಭಗವಂತನ ಸ್ವರೂಪ ಮತ್ತು ಧಾಮದ ಸಂಬಂಧವಾಗಿ ಮೊದಲಿನಿಂದಲೇ ಬಹಳಷ್ಟು ಕೇಳಿದ್ದರು. ಆದರೆ ಅಲ್ಲಿಗೆ ಹೋದಮೇಲೆ ಅವರಿಗೆ ಏನೂ ಕಂಡುಬಂದಿಲ್ಲ. ಆದಕ್ಕಾಗಿ ಬ್ರಹ್ಮದೇವರು ಏಕಾಗ್ರ ಮನಸ್ಸಿನಿಂದ ವೇದವಾಣಿಯ ಮೂಲಕ ವೇದಗಮ್ಯನಾದ ಭಗವಂತನನ್ನು ಸ್ತುತಿಸತೊಡಗಿದರು. ॥ ೨೫ ॥

**ಬ್ರಹ್ಮದೇವರು ಹೇಳಿದರು** – ನೀನು ನಿರ್ವಿಕಾರನೂ, ಸತ್ಯಸ್ವರೂಪನೂ, ಅನಂತನೂ, ಆದಿಪುರುಷನೂ, ಎಲ್ಲರ ಹೃದಯದಲ್ಲಿ ಅಂತರ್ಯಾಮಿಯ ರೂಪದಲ್ಲಿ ವಿರಾಜಿಸುತ್ತಿರುವವನೂ, ಉಪಾಧಿರಹಿತನೂ, ಊಹಿಸಲು ಅಸಾಧ್ಯನಾದವನೂ, ಮನಸ್ಸಿಗಿಂತಲೂ ವೇಗವಾದ ಗಮನವುಳ್ಳವನೂ, ಮಾತಿನಿಂದ ವಿವರಿಸಲು ಅಶಕ್ಯನಾದವನೂ, ದೇವತೆಗಳಲ್ಲಿ ಶ್ರೇಷ್ಠನೂ, ಸರ್ವೋತ್ತಮನೂ ಆಗಿರುವೆ. ಅಂತಹ ಭಗವಂತನಾದ ನಿನಗೆ ನಮಸ್ಕರಿಸುತ್ತೇವೆ. ॥ ೨೬ ॥ ನೀನು ಪ್ರಾಣ, ಮನಸ್ಸು, ಬುದ್ಧಿ, ಅಹಂಕಾರಗಳನ್ನು ತಿಳಿದವನಾಗಿರುವೆ. ಇಂದ್ರಿಯಗಳು ಮತ್ತು ಅವುಗಳ ವಿಷಯಗಳು ಎರಡೂ ನಿನ್ನಿಂದಲೇ ಪ್ರಕಾಶಿತವಾಗುತ್ತವೆ. ಅಜ್ಞಾನವು ನಿನ್ನನ್ನು ಸ್ಪರ್ಶಿಸಲಾರದು. ಪ್ರಕೃತಿಯ ವಿಕಾರವಾದ ಜನ್ಮ-ಮರಣಗಳಿಂದ ಕೂಡಿದ ಶರೀರದಿಂದಲೂ ನೀನು ರಹಿತನಾಗಿರುವೆ. ಜೀವಿಯ ಎರಡು ರೆಕ್ಕೆಗಳಾದ ವಿದ್ಯೆ-ಅವಿದ್ಯೆಗಳು ನಿನ್ನಲ್ಲಿರುವುದಿಲ್ಲ. ನೀನು ಅವಿನಾಶಿಯೂ, ಸುಖಸ್ವರೂಪನೂ ಆಗಿರುವೆ. ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ನೀನು ಅವತರಿಸುವೆ. ಅಂತಹ ನಿನ್ನನ್ನು ನಾವೆಲ್ಲರೂ ಶರಣುಹೊಂದುತ್ತೇವೆ. ॥ ೨೭ ॥ ಈ ಶರೀರವು ಜೀವಿಯ ಒಂದು ಮನೋಮಯ ಚಕ್ರವಾಗಿದೆ. ಹತ್ತು ಇಂದ್ರಿಯಗಳು ಮತ್ತು ಐದು ಪ್ರಾಣಗಳು – ಹೀಗೆ ಹದಿನೈದು ಅದರ ಅರೆಕಾಲುಗಳು. ಸತ್ತ್ವ, ರಜ, ತಮಗಳೆಂಬ ಮೂರು ಗುಣಗಳು ಆ ಚಕ್ರದ ನಾಭಿಯಾಗಿದೆ. ಪೃಥಿವಿ, ಜಲ, ತೇಜ, ವಾಯು, ಆಕಾಶ, ಮನ, ಬುದ್ಧಿ, ಅಹಂಕಾರ ಇವು ಎಂಟು ಚಕ್ರದ ಅಂಚಾಗಿದೆ. ಮಾಯೆಯೇ ಈ ಚಕ್ರವನ್ನು ನಡೆಸುತ್ತದೆ. ಇದು ಮಿಂಚಿಗಿಂತಲೂ ಹೆಚ್ಚು ಶೀಘ್ರಗಾಮಿಯಾಗಿದೆ. ಈ ಚಕ್ರಕ್ಕೆ ಸ್ವಯಂ ಪರಮಾತ್ಮನೇ ಅಚ್ಚುಮರವಾಗಿದ್ದಾನೆ. ಏಕಮಾತ್ರ ಸತ್ಯಸ್ವರೂಪನಾದ ಅವನಿಗೆ ನಾವು ಶರಣಾಗಿದ್ದೇವೆ. ॥ ೨೮ ॥

ಯ ಏಕವರ್ಣಂ ತಮಸಃ ಪರಂ ತತ್
ಅಲೋಕಮವ್ಯಕ್ತಮನಂತಪಾರಮ್ ।
ಆಸಾಂಚಕಾರೋಪಸುಪರ್ಣಮೇನ-
ಮುಪಾಸತೇ ಯೋಗರಥೇನ ಧೀರಾಃ ॥ ೨೯ ॥

ನ ಯಸ್ಯ ಕಶ್ಚಾತಿತಿರ್ತಿ ಮಾಯಾಂ
ಯಯಾ ಜನೋ ಮುಹ್ಯತಿ ವೇದ ನಾರ್ಥಮ್ ।
ತಂ ನಿರ್ಜಿತಾತ್ಮಾತ್ಮಗುಣಂ ಪರೇಶಂ
ನಮಾಮ ಭೂತೇಷು ಸಮಂ ಚರಂತಮ್ ॥ ೩೦ ॥

ಇಮೇ ವಯಂ ಯತ್ಪ್ರಿಯಯೈವ ತನ್ವಾ
ಸತ್ತ್ವೇನ ಸೃಷ್ಟಾ ಬಹಿರಂತರಾವಿಃ ।
ಗತಿಂ ನ ಸೂಕ್ಷ್ಮಾಮೃಷಯಶ್ಚ ವಿದ್ಮಹೇ
ಕುತೋಽಸುರಾದ್ಯಾ ಇತರಪ್ರಧಾನಾಃ ॥ ೩೧ ॥

ಪಾದೌ ಮಹೀಯಂ ಸ್ವಕೃತೈವ ಯಸ್ಯ
ಚತುರ್ವಿಧೋ ಯತ್ರ ಹಿ ಭೂತಸರ್ಗಃ ।
ಸ ವೈ ಮಹಾಪೂರುಷ ಆತ್ಮತಂತ್ರಃ
ಪ್ರಸೀದತಾಂ ಬ್ರಹ್ಮ ಮಹಾವಿಭೂತಿಃ ॥ ೩೨ ॥

ಅಂಭಸ್ತು ಯದ್ರೇತ ಉದಾರವೀರ್ಯಂ
ಸಿಧ್ಯಂತಿ ಜೀವಂತ್ಯುತ ವರ್ಧಮಾನಾಃ ।
ಲೋಕಾಸ್ತ್ರಯೋಽಥಾಖಿಲಲೋಕಪಾಲಾಃ
ಪ್ರಸೀದತಾಂ ಬ್ರಹ್ಮ ಮಹಾವಿಭೂತಿಃ ॥ ೩೩ ॥

ಸೋಮಂ ಮನೋ ಯಸ್ಯ ಸಮಾಮನಂತಿ
ದಿವೌಕಸಾಂ ವೈ ಬಲಮಂಧ ಆಯುಃ ।
ಈಶೋ ನಗಾನಾಂ ಪ್ರಜನಃ ಪ್ರಜಾನಾಂ
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೩೪ ॥

ಅಗ್ನಿರ್ಮುಖಂ ಯಸ್ಯ ತು ಜಾತವೇದಾ
ಜಾತಃ ಕ್ರಿಯಾಕಾಂಡನಿಮಿತ್ತಜನ್ಮಾ ।
ಅಂತಃಸಮುದ್ರೇಽನುಪಚನ್ಸ್ವಧಾತೂನ್
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೩೫ ॥

ಯಾರು ಏಕಮಾತ್ರ ಜ್ಞಾನಸ್ವರೂಪನೂ, ಪ್ರಕೃತಿಗೆ ಅತೀತನೂ, ಅದೃಶ್ಯನೂ ಆಗಿರುವನೋ, ಯಾರು ಸಮಸ್ತ ವಸ್ತುಗಳ ಮೂಲದಲ್ಲಿ ಅವ್ಯಕ್ತನಾಗಿರುವನೋ, ದೇಶ, ಕಾಲಗಳಿಗೆ ಒಳಪಡದವನೋ, ಆ ಪ್ರಭುವೇ ಈ ಜೀವಿಯ ಹೃದಯದಲ್ಲಿ ಅಂತರ್ಯಾಮಿರೂಪದಿಂದ ವಿರಾಜಿಸುತ್ತಿರುವನು. ಧೀರರಾದ ಮನುಷ್ಯರು ಭಕ್ತಿಯೋಗದ ಮುಲಕ ಅವನನ್ನೇ ಆರಾಧಿಸುತ್ತಾರೆ. ॥ ೨೯ ॥ ಯಾವ ಮಾಯೆಯಿಂದ ಮೋಹಿತನಾದ ಈ ಜೀವನು ತನ್ನ ವಾಸ್ತವಿಕ ಲಕ್ಷ್ಯವನ್ನು ಅಥವಾ ಸ್ವರೂಪವನ್ನು ಮರೆತಿರುವನೋ, ಅಂತಹ ಮಾಯೆಯು ಅವನದೇ ಆಗಿದೆ. ಬೇರೆ ಯಾರೂ ಅದನ್ನು ದಾಟಲಾರರು. ಆದರೆ ಸರ್ವಶಕ್ತಿಸಂಪನ್ನ ಪ್ರಭುವು ತನ್ನ ಆ ಮಾಯೆಯನ್ನು ಹಾಗೂ ಅದರ ಗುಣಗಳನ್ನು ತನ್ನ ವಶದಲ್ಲಿರಿಸಿಕೊಂಡು ಸಮಸ್ತ ಪ್ರಾಣಿಗಳ ಹೃದಯದಲ್ಲಿ ಸಮಭಾವದಿಂದ ಸಂಚರಿಸುತ್ತಿರುವನು. ಜೀವನು ತನ್ನ ಪುರುಷಾರ್ಥದಿಂದ ಅವನನ್ನು ಪಡೆಯಲಾರದೆ ಅವನ ಕೃಪೆಯಿಂದಲೇ ಪಡೆದುಕೊಳ್ಳಬಲ್ಲನು. ನಾವು ಅವನ ಚರಣಗಳಲ್ಲಿ ನಮಸ್ಕರಿಸುತ್ತೇವೆ. ॥ ೩೦ ॥ ದೇವತೆಗಳಾದ ನಾವು, ಋಷಿಗಳು ಅವನ ಪರಮಪ್ರಿಯ ಸತ್ತ್ವಮಯ ಶರೀರದಿಂದಲೇ ಉತ್ಪನ್ನರಾದವರು. ಹೀಗಿದ್ದರೂ ಅವನ ಒಳ-ಹೊರ ಏಕರಸವಾಗಿ ಪ್ರಾಕಟ್ಯವಾದ ವಾಸ್ತವಿಕ ಸ್ವರೂಪವನ್ನು ನಾವು ತಿಳಿಯಲಾರೆವು. ಹಾಗಿರುವಾಗ ರಜೋಗುಣ-ತಮೋಗುಣ ಪ್ರಧಾನರಾದ ಅಸುರರೇ ಮುಂತಾದವರು ಅವನನ್ನು ಹೇಗೆ ತಿಳಿಯಬಲ್ಲರು? ಅಂತಹ ಪ್ರಭುವಿನ ಚರಣಗಳಲ್ಲಿ ನಾವು ನಮಸ್ಕರಿಸುತ್ತೇವೆ. ॥ ೩೧ ॥

ಅವನಿಂದಲೇ ರಚಿತವಾದ ಈ ಪೃಥಿವಿಯು ಅವನ ಚರಣವಾಗಿದೆ. ಈ ಪೃಥಿವಿಯಲ್ಲೇ ಜರಾಯುಜ, ಅಂಡಜ, ಸ್ವೇದಜ ಮತ್ತು ಉದ್ಭಿಜ್ಜ – ಈ ನಾಲ್ಕೂ ಪ್ರಕಾರದ ಪ್ರಾಣಿಗಳು ವಾಸಿಸುತ್ತವೆ. ಆ ಪರಮ ಸ್ವತಂತ್ರ, ಪರಮ ಐಶ್ವರ್ಯಶಾಲಿಯಾದ ಪುರುಷೋತ್ತಮ ಪರಬ್ರಹ್ಮನು ನಮ್ಮ ಮೇಲೆ ಪ್ರಸನ್ನನಾಗಿರಲಿ. ॥ ೩೨ ॥ ಈ ಪರಮಶಕ್ತಿಶಾಲಿಯಾದ ಜಲವು ಅವನ ವೀರ್ಯವಾಗಿದೆ. ಇದರಿಂದಲೇ ಮೂರು ಲೋಕಗಳೂ ಮತ್ತು ಸಮಸ್ತ ಲೋಕಗಳ ಲೋಕಪಾಲರು ಉತ್ಪನ್ನರಾಗುತ್ತಾರೆ, ಬೆಳೆಯುತ್ತಾರೆ, ಜೀವಿಸಿ ಇರುತ್ತಾರೆ. ಆ ಪರಮ ಐಶ್ವರ್ಯಶಾಲಿಯಾದ ಪರಬ್ರಹ್ಮನು ನಮ್ಮ ಮೇಲೆ ಪ್ರಸನ್ನನಾಗಲೀ. ॥ ೩೩ ॥ ಚಂದ್ರನು ಆ ಪ್ರಭುವಿನ ಮನಸ್ಸು ಆಗಿದ್ದಾನೆ ಎಂದು ಶ್ರುತಿಗಳು ಹೇಳುತ್ತವೆ. ಈ ಚಂದ್ರನೇ ಸಮಸ್ತ ದೇವತೆಗಳ ಅನ್ನ, ಬಲ, ಆಯುಸ್ಸು ಆಗಿದ್ದಾನೆ. ಅವನೇ ವೃಕ್ಷಗಳ ಒಡೆಯನೂ, ಪ್ರಜೆಯನ್ನು ವೃದ್ಧಿಪಡಿಸುವವನೂ ಆಗಿದ್ದಾನೆ. ಅಂತಹ ಮನಸ್ಸನ್ನು ಸ್ವೀಕರಿಸುವ ಪರಮ ಐಶ್ವರ್ಯಶಾಲಿಯಾದ ಪ್ರಭುವು ನಮ್ಮ ಮೇಲೆ ಪ್ರಸನ್ನನಾಗಲಿ. ॥ ೩೪ ॥ ಅಗ್ನಿಯು ಪ್ರಭುವಿನ ಮುಖವಾಗಿದೆ. ಅದರ ಉತ್ಪತ್ತಿಯೂ – ವೇದದ ಯಜ್ಞ-ಯಾಗಾದಿ ಕರ್ಮಕಾಂಡವನ್ನು ಸಾಂಗವಾಗಿ ನೆರವೇರಲೆಂದೇ ಆಗಿದೆ. ಈ ಅಗ್ನಿಯೇ ಶರೀರದೊಳಗೆ ಜಠರಾಗ್ನಿಯ ರೂಪದಿಂದ ಮತ್ತು ಸಮುದ್ರದೊಳಗೆ ಬಡವಾನಲ ರೂಪದಿಂದ ಇದ್ದು ಅವುಗಳಲ್ಲಿರುವ ಅನ್ನ, ಜಲ ಮುಂತಾದ ಧಾತುಗಳನ್ನು ಜೀರ್ಣವಾಗಿಸುತ್ತಾನೆ. ಸಮಸ್ತ ದ್ರವ್ಯಗಳ ಉತ್ಪತ್ತಿಯೂ ಅದರಿಂದಲೇ ಆಗಿದೆ. ಅಂತಹ ಪರಮೈಶ್ವರ್ಯ ಸಂಪನ್ನನಾದ ಭಗವಂತನು ನಮ್ಮಮೇಲೆ ಪ್ರಸನ್ನನಾಗಲೀ. ॥ ೩೫ ॥

ಯಚ್ಚಕ್ಷುರಾಸೀತ್ತರಣಿರ್ದೇವಯಾನಂ
ತ್ರಯೀಮಯೋ ಬ್ರಹ್ಮಣ ಏಷ ಧಿಷ್ಣ್ಯಮ್ ।
ದ್ವಾರಂ ಚ ಮುಕ್ತೇರಮೃತಂ ಚ ಮೃತ್ಯುಃ
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೩೬ ॥

ಪ್ರಾಣಾದಭೂದ್ಯಸ್ಯ ಚರಾಚರಾಣಾಂ
ಪ್ರಾಣಃ ಸಹೋ ಬಲಮೋಜಶ್ಚ ವಾಯುಃ ।
ಅನ್ವಾಸ್ಮ ಸಮ್ರಾಜಮಿವಾನುಗಾ ವಯಂ
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೩೭ ॥

ಶ್ರೋತ್ರಾದ್ದಿಶೋ ಯಸ್ಯ ಹೃದಶ್ಚ ಖಾನಿ
ಪ್ರಜಜ್ಞಿರೇ ಖಂ ಪುರುಷಸ್ಯ ನಾಭ್ಯಾಃ ।
ಪ್ರಾಣೇಂದ್ರಿಯಾತ್ಮಾಸುಶರೀರಕೇತಂ
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೩೮ ॥

ಬಲಾನ್ಮಹೇಂದ್ರಸ್ತ್ರಿದಶಾಃ ಪ್ರಸಾದಾನ್
ಮನ್ಯೋರ್ಗಿರೀಶೋ ಧಿಷಣಾದ್ವಿರಿಂಚಃ ।
ಖೇಭ್ಯಶ್ಚ ಛಂದಾಂಸ್ಯೃಷಯೋ ಮೇಢ್ರತಃ ಕಃ
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೩೯ ॥

ಶ್ರೀರ್ವಕ್ಷಸಃ ಪಿತರಚ್ಛಾಯಯಾಽಽಸನ್
ಧರ್ಮಃ ಸ್ತನಾದಿತರಃ ಪೃಷ್ಠತೋಽಭೂತ್ ।
ದ್ಯೌರ್ಯಸ್ಯ ಶೀರ್ಷ್ಣೋಽಪ್ಸರಸೋ ವಿಹಾರಾತ್
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೪೦ ॥

ವಿಪ್ರೋ ಮುಖಂ ಬ್ರಹ್ಮ ಚ ಯಸ್ಯ ಗುಹ್ಯಂ
ರಾಜನ್ಯ ಆಸೀದ್ಭುಜಯೋರ್ಬಲಂ ಚ ।
ಊರ್ವೋರ್ವಿಡೋಜೋಽಙ್ಘ್ರಿರವೇದಶೂದ್ರೌ
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೪೧ ॥

ಲೋಭೋಽಧರಾತ್ಪ್ರೀತಿರುಪರ್ಯಭೂದ್ದ್ಯುತಿ-
ರ್ನಸ್ತಃ ಪಶವ್ಯಃ ಸ್ಪರ್ಶೇನ ಕಾಮಃ ।
ಭ್ರುವೋರ್ಯಮಃ ಪಕ್ಷ್ಮಭವಸ್ತು ಕಾಲಃ
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೪೨ ॥

ಯಾರ ಮೂಲಕ ಜೀವ ಭಾವ ತೊರೆದ ನಿಷ್ಕಾಮ ಕರ್ಮ ಯೋಗಿಗಳು ದೇವಯಾನಮಾರ್ಗದಿಂದ ಬ್ರಹ್ಮಲೋಕವನ್ನು ಸೇರುವರೋ, ಯಾರು ವೇದಗಳ ಸಾಕ್ಷಾತ್ ಮೂರ್ತಿಯಾಗಿದ್ದು, ಭಗವಂತನ ಧ್ಯಾನಮಾಡಲು ಯೋಗ್ಯವಾದ ಧಾಮನಾಗಿರುವನೋ, ಯಾರು ಪುಣ್ಯಲೋಕ ಸ್ವರೂಪನಾದ ಕಾರಣ ಮುಕ್ತಿಯ ದ್ವಾರ ಹಾಗೂ ಅಮೃತಮಯನಾಗಿರುವನೋ ಮತ್ತು ಕಾಲರೂಪನಾದ್ದರಿಂದ ಮೃತ್ಯುವೂ ಕೂಡ ಆಗಿರುವನೋ ಸೂರ್ಯನು ಯಾರ ಕಣ್ಣು ಆಗಿರುವನೋ ಆ ಪರಮೈಶ್ವರ್ಯಸಂಪನ್ನ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲೀ. ॥ ೩೬ ॥ ಪ್ರಭುವಿನ ಪ್ರಾಣದಿಂದಲೇ ಚರಾಚರದ ಪ್ರಾಣ ಹಾಗೂ ಅವುಗಳಿಗೆ ಮಾನಸಿಕ, ಶಾರೀರಿಕ, ಇಂದ್ರಿಯ ಸಂಬಂಧೀ ಬಲವನ್ನು ಕೊಡುವಂತಹ ವಾಯುವು ಪ್ರಕಟವಾಯಿತು. ಅವನು ಚಕ್ರವರ್ತಿ ಸಾಮ್ರಾಟನಾದರೆ ಇಂದ್ರಿಯಗಳ ಅಧಿಷ್ಠಾತೃದೇವತೆಗಳಾದ ನಾವೆಲ್ಲರೂ ಸೇವಕರಂತೆ ಅವನನ್ನು ಹಿಂಬಾಲಿಸುವೆವು. ಅಂತಹ ಪರಮೈಶ್ವರ್ಯ ಸಂಪನ್ನನಾದ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲಿ. ॥ ೩೭ ॥ ಪರಮಾತ್ಮನ ಕಿವಿಗಳಿಂದ ದಿಕ್ಕುಗಳು, ಹೃದಯದಿಂದ ಇಂದ್ರಿಯಗೋಲಕಗಳು, ನಾಭಿಯಿಂದ ಆಕಾಶವು ಉಂಟಾಯಿತು. ಐದು ಪ್ರಾಣಗಳಿಗೂ, ಐದು ಉಪ ಪ್ರಾಣಗಳಿಗೂ ಹತ್ತು ಇಂದ್ರಿಯಗಳಿಗೂ, ಮನಸ್ಸಿಗೂ, ಶರೀರಗಳಿಗೂ ಆಶ್ರಯನು ಅವನೇ. ಅಂತಹ ಮಹದೈಶ್ವರ್ಯಸಂಪನ್ನನಾದ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲೀ. ॥ ೩೮ ॥ ಯಾರ ಬಲದಿಂದ ಇಂದ್ರನೂ, ಪ್ರಸನ್ನತೆಯಿಂದ ದೇವತೆಗಳೂ, ಕ್ರೋಧದಿಂದ ಶಂಕರನೂ, ಬುದ್ಧಿಯಿಂದ ಬ್ರಹ್ಮನೂ (ನಾನು), ಇಂದ್ರಿಯಗಳಿಂದ ಋಷಿಗಳೂ ಮತ್ತು ವೇದಗಳೂ, ಲಿಂಗದಿಂದ ಪ್ರಜಾಪತಿಯೂ ಉತ್ಪನ್ನರಾದರೋ, ಅಂತಹ ಪರಮೈಶ್ವರ್ಯಸಂಪನ್ನನಾದ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲೀ. ॥ ೩೯ ॥ ಯಾರ ವಕ್ಷಸ್ಥಳದಿಂದ ಲಕ್ಷ್ಮಿಯೂ, ನೆರಳಿನಿಂದ ಪಿತೃಗಳೂ, ಸ್ತನದಿಂದ ಧರ್ಮವೂ, ಬೆನ್ನಿನಿಂದ ಅಧರ್ಮವೂ, ತಲೆಯಿಂದ ಆಕಾಶವೂ, ವಿಹಾರದಿಂದ ಅಪ್ಸರೆಯರೂ ಹುಟ್ಟಿದರೋ ಆ ಪರಮ ಐಶ್ವರ್ಯಸಂಪನ್ನನಾದ ಪರಮಾತ್ಮನು ನಮ್ಮ ಮೇಲೆ ಪ್ರಸನ್ನನಾಗಲೀ. ॥ ೪೦ ॥ ಯಾರ ಮುಖದಿಂದ ಬ್ರಾಹ್ಮಣರು ಮತ್ತು ಅತ್ಯಂತ ರಹಸ್ಯಮಯ ವೇದಗಳು, ಭುಜಗಳಿಂದ, ಕ್ಷತ್ರಿಯರೂ ಮತ್ತು ಬಲವೂ, ತೊಡೆಗಳಿಂದ ವೈಶ್ಯರೂ ಮತ್ತು ಅವರ ವೃತ್ತಿ-ವ್ಯಾಪಾರ ಕುಶಲತೆಯೂ, ಚರಣಗಳಿಂದ ಶೂದ್ರರೂ ಮತ್ತು ಅವರ ಸೇವಾವೃತ್ತಿಯೂ ಪ್ರಕಟವಾಗಿರುವುದೋ, ಆ ಪರಮೈಶ್ವರ್ಯಸಂಪನ್ನ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲೀ. ॥ ೪೧ ॥ ಯಾರ ಕೆಳದುಟಿಯಿಂದ ಲೋಭವೂ, ಮೇಲ್ತುಟಿಯಿಂದ ಪ್ರೀತಿಯೂ, ಮೂಗಿನಿಂದ ಕಾಂತಿಯೂ, ಸ್ಪರ್ಶದಿಂದ ಪಶುಗಳಿಗೆ ಪ್ರಿಯವಾದ ಕಾಮವೂ, ಹುಬ್ಬುಗಳಿಂದ ಯಮನೂ, ರೆಪ್ಪೆಗಳಿಂದ ಕಾಲವೂ ಹುಟ್ಟಿರುವರೋ ಅಂತಹ ಪರಮೈಶ್ವರ್ಯಸಂಪನ್ನ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲೀ. ॥ ೪೨ ॥

ದ್ರವ್ಯಂ ವಯಃ ಕರ್ಮ ಗುಣಾನ್ವಿಶೇಷಂ
ಯದ್ಯೋಗಮಾಯಾವಿಹಿತಾನ್ವದಂತಿ ।
ಯದ್ದುರ್ವಿಭಾವ್ಯಂ ಪ್ರಬುಧಾಪಬಾಧಂ
ಪ್ರಸೀದತಾಂ ನಃ ಸ ಮಹಾವಿಭೂತಿಃ ॥ ೪೩ ॥

ನಮೋಽಸ್ತು ತಸ್ಮಾ ಉಪಶಾಂತಶಕ್ತಯೇ
ಸ್ವಾರಾಜ್ಯಲಾಭಪ್ರತಿಪೂರಿತಾತ್ಮನೇ ।
ಗುಣೇಷು ಮಾಯಾರಚಿತೇಷು ವೃತ್ತಿಭಿ-
ರ್ನ ಸಜ್ಜಮಾನಾಯ ನಭಸ್ವದೂತಯೇ ॥ ೪೪ ॥

ಸ ತ್ವಂ ನೋ ದರ್ಶಯಾತ್ಮಾನಮಸ್ಮತ್ಕರಣಗೋಚರಮ್ ।
ಪ್ರಪನ್ನಾನಾಂ ದಿದೃಕ್ಷೂಣಾಂ ಸಸ್ಮಿತಂ ತೇ ಮುಖಾಂಬುಜಮ್ ॥ ೪೫ ॥

ತೈಸ್ತೈಃ ಸ್ವೇಚ್ಛಾಭೂತೈ ರೂಪೈಃ ಕಾಲೇ ಕಾಲೇ ಸ್ವಯಂ ವಿಭೋ ।
ಕರ್ಮ ದುರ್ವಿಷಹಂ ಯನ್ನೋ ಭಗವಾಂಸ್ತತ್ಕರೋತಿ ಹಿ ॥ ೪೬ ॥

ಕ್ಲೇಶಭೂರ್ಯಲ್ಪಸಾರಾಣಿ ಕರ್ಮಾಣಿ ವಿಫಲಾನಿ ವಾ ।
ದೇಹಿನಾಂ ವಿಷಯಾರ್ತಾನಾಂ ನ ತಥೈವಾರ್ಪಿತಂ ತ್ವಯಿ ॥ ೪೭ ॥

ನಾವಮಃ ಕರ್ಮಕಲ್ಪೋಽಪಿ ವಿಫಲಾಯೇಶ್ವರಾರ್ಪಿತಃ ।
ಕಲ್ಪತೇ ಪುರುಷಸ್ಯೈವ ಸ ಹ್ಯಾತ್ಮಾ ದಯಿತೋ ಹಿತಃ ॥ ೪೮ ॥

ಯಥಾ ಹಿ ಸ್ಕಂಧಶಾಖಾನಾಂ ತರೋರ್ಮೂಲಾವಸೇಚನಮ್ ।
ಏವಮಾರಾಧನಂ ವಿಷ್ಣೋಃ ಸರ್ವೇಷಾಮಾತ್ಮನಶ್ಚ ಹಿ ॥ ೪೯ ॥

ನಮಸ್ತುಭ್ಯಮನಂತಾಯ ದುರ್ವಿತರ್ಕ್ಯಾತ್ಮಕರ್ಮಣೇ ।
ನಿರ್ಗುಣಾಯ ಗುಣೇಶಾಯ ಸತ್ತ್ವಸ್ಥಾಯ ಚ ಸಾಂಪ್ರತಮ್ ॥ ೫೦ ॥

ಪಂಚಭೂತಗಳೂ, ಕಾಲ, ಕರ್ಮ ಸತ್ತ್ವಾದಿಗುಣಗಳು ಮತ್ತು ವಿವೇಕಿ ಪುರುಷರಿಂದ ನಿರಾಕರಿಸಲ್ಪಡುವ ನಿರ್ವಚನೀಯ ಅಥವಾ ಅನಿರ್ವಚನೀಯ ವಿಶೇಷ ಪದಾರ್ಥಗಳು – ಇವೆಲ್ಲವೂ ಭಗವಂತನ ಯೋಗಮಾಯೆಯಿಂದಲೇ ಉಂಟಾಗಿವೆ ಎಂದು ಶಾಸ್ತ್ರಗಳು ಹೇಳುತ್ತವೆ. ಅಂತಹ ಪರಮೈಶ್ವರ್ಯಸಂಪನ್ನ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲೀ. ॥ ೪೩ ॥ ಯಾರು ಮಾಯಾ ನಿರ್ಮಿತ ಗುಣಗಳಲ್ಲಿ ದರ್ಶನಾದಿವೃತ್ತಿಗಳ ಮೂಲಕ ಆಸಕ್ತ ನಾಗುವುದಿಲ್ಲವೋ, ಯಾರು ವಾಯುವಿನಂತೆ ಸದಾಕಾಲ ಅಸಂಗ ನಾಗಿರುವನೋ, ಯಾರಲ್ಲಿ ಸಮಸ್ತ ಶಕ್ತಿಗಳು ಶಾಂತವಾಗಿವೆಯೋ, ಆ ತನ್ನ ಆತ್ಮಾನಂದದ ಲಾಭದಿಂದ ಪರಿಪೂರ್ಣನೂ, ಆತ್ಮ ಸ್ವರೂಪನೂ ಆದ ಭಗವಂತನಿಗೆ ನಮ್ಮ ನಮಸ್ಕಾರಗಳು. ॥ ೪೪ ॥

ಪ್ರಭುವೇ! ನಾವು ನಿನ್ನಲ್ಲಿ ಶರಣಾಗತರಾಗಿದ್ದೇವೆ ಮತ್ತು ಮಂದ-ಮಂದ ಮುಗುಳ್ನಗೆಯಿಂದ ಕೂಡಿದ ನಿನ್ನ ಮುಖಕಮಲವನ್ನು ನಮ್ಮ ಕಣ್ಣುಗಳು ನೋಡಲಿ ಎಂದೇ ಬಯಸುತ್ತೇವೆ. ಕೃಪೆದೋರಿ ನೀನು ನಮಗೆ ಅದರ ದರ್ಶನಮಾಡಿಸು. ॥ ೪೫ ॥ ಪ್ರಭೋ! ನೀನು ಆಗಾಗ ಸ್ವತಃ ತನ್ನ ಇಚ್ಛೆಯಿಂದ ಅನೇಕ ರೂಪಗಳನ್ನು ಧರಿಸಿ, ನಮಗೆ ಅತ್ಯಂತ ಕಠಿಣವಾಗಿ ತೋರುವ ಕಾರ್ಯವನ್ನು ನೀನು ಸಹಜವಾಗಿ ಮಾಡಿಬಿಡುತ್ತೀಯೆ. ನೀನು ಸರ್ವಶಕ್ತಿ ಸಂಪನ್ನನಾಗಿರುವೆ. ನಿನಗೆ ಇದರಲ್ಲಿ ಯಾವ ಕಷ್ಟವಿದೆ? ॥ ೪೬ ॥ ವಿಷಯಗಳ ಲೋಭದಲ್ಲಿ ಬಿದ್ದು ದುಃಖವನ್ನು ಭೋಗಿಸುತ್ತಿರುವ ದೇಹಾಭಿಮಾನಿಗಳಿಗೆ ಕರ್ಮಮಾಡಲು ಪರಿಶ್ರಮ, ಕ್ಲೇಶಗಳು ಬಹಳ ಹೆಚ್ಚಾಗಿರುತ್ತವೆ. ಆದರೆ ಫಲವು ಬಹಳ ಕಮ್ಮಿ ಸಿಗುತ್ತದೆ. ಹೆಚ್ಚಾಗಿ ಅದರಲ್ಲಿ ವಿಫಲತೆಯೇ ಕೈಗೆ ಬರುತ್ತದೆ. ಆದರೆ ನಿನಗೆ ಸಮರ್ಪಿಸಲ್ಪಡುವ ಕರ್ಮಗಳನ್ನು ಮಾಡುವಾಗಲೂ ಪರಮ ಸುಖವುಂಟಾಗುತ್ತದೆ. ಅವು ಸ್ವಯಂ ಫಲರೂಪವೇ ಆಗಿರುತ್ತವೆ. ॥ ೪೭ ॥ ಭಗವಂತನಿಗೆ ಅರ್ಪಿಸಲ್ಪಟ್ಟ ಅತಿ ಚಿಕ್ಕ ಕರ್ಮವೂ ಕೂಡ ಎಂದೂ ವಿಫಲವಾಗುವುದಿಲ್ಲ. ಏಕೆಂದರೆ ಭಗವಂತನು ಜೀವರ ಪರಮ ಹಿತೈಷಿಯೂ, ಪರಮ ಪ್ರಿಯತಮನೂ, ಆತ್ಮನೂ ಆಗಿರುವನು. ॥ ೪೮ ॥ ಮರದ ಬೇರಿಗೆ ನೀರೆರೆದರೆ ಅದರ ಶಾಖೋಪಶಾಖೆಗಳು ತಣಿಯುವಂತೆಯೇ ಸರ್ವಾತ್ಮಾ ಭಗವಂತನ ಆರಾಧನೆಯಿಂದ ಸಮಸ್ತ ಪ್ರಾಣಿಗಳ ಮತ್ತು ತನ್ನದೂ ಕೂಡ ಆರಾಧನೆ ಆದಂತಾಗುತ್ತದೆ. ॥ ೪೯ ॥ ಯಾರು ಮೂರೂ ಕಾಲಗಳಲ್ಲಿಯೂ ಮತ್ತು ಅದರಿಂದ ಆಚೆಗೂ ಏಕರಸನಾಗಿ ಸ್ಥಿತನಾಗಿರುವನೋ, ಯಾರ ಲೀಲೆಗಳ ರಹಸ್ಯವು ತರ್ಕ-ವಿತರ್ಕಗಳಿಂದ ದೂರವಾಗಿದೆಯೋ, ಯಾರು ಸ್ವಯಂ ಗುಣಗಳಿಂದ ಅತೀತನಾಗಿದ್ದರೂ ಎಲ್ಲ ಗುಣಗಳ ಸ್ವಾಮಿಯಾಗಿರುವನೋ, ಈಗ ಸತ್ತ್ವ ಗುಣದಲ್ಲಿ ನೆಲೆಸಿರುವನೋ, ಅಂತಹ ನಿನಗೆ ಮತ್ತೆ-ಮತ್ತೆ ನಮಸ್ಕರಿಸುತ್ತೇನೆ. ॥ ೫೦ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ಅಮೃತಮಥನೇ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ದೇವ-ದಾನವರು ಸೇರಿ ಸಮುದ್ರವನ್ನು ಕಡೆದುದು

*ಶ್ರೀಶುಕ ಉವಾಚ*

ಏವಂ ಸ್ತುತಃ ಸುರಗಣೈರ್ಭಗವಾನ್ಹರಿರೀಶ್ವರಃ ।
ತೇಷಾಮಾವಿರಭೂದ್ರಾಜನ್ಸಹಸ್ರಾರ್ಕೋದಯದ್ಯುತಿಃ ॥ ೧ ॥

ತೇನೈವ ಮಹಸಾ ಸರ್ವೇ ದೇವಾಃ ಪ್ರತಿಹತೇಕ್ಷಣಾಃ ।
ನಾಪಶ್ಯನ್ ಖಂ ದಿಶಃ ಕ್ಷೋಣಿಮಾತ್ಮಾನಂ ಚ ಕುತೋ ವಿಭುಮ್ ॥ ೨ ॥

ವಿರಿಂಚೋ ಭಗವಾನ್ ದೃಷ್ಟ್ವಾ ಸಹ ಶರ್ವೇಣ ತಾಂ ತನುಮ್ ।
ಸ್ವಚ್ಛಾಂ ಮರಕತಶ್ಯಾಮಾಂ ಕಂಜಗರ್ಭಾರುಣೇಕ್ಷಣಾಮ್ ॥ ೩ ॥

ತಪ್ತಹೇಮಾವದಾತೇನ ಲಸತ್ಕೌಶೇಯವಾಸಸಾ ।
ಪ್ರಸನ್ನಚಾರುಸರ್ವಾಂಗೀಂ ಸುಮುಖೀಂ ಸುಂದರಭ್ರುವಮ್ ॥ ೪ ॥

ಮಹಾಮಣಿಕಿರೀಟೇನ ಕೇಯೂರಾಭ್ಯಾಂ ಚ ಭೂಷಿತಾಮ್ ।
ಕರ್ಣಾಭರಣನಿರ್ಭಾತಕಪೋಲಶ್ರೀಮುಖಾಂಬುಜಾಮ್ ॥ ೫ ॥

ಕಾಂಚೀಕಲಾಪವಲಯಹಾರನೂಪುರಶೋಭಿತಾಮ್ ।
ಕೌಸ್ತುಭಾಭರಣಾಂ ಲಕ್ಷ್ಮೀಂ ಬಿಭ್ರತೀಂ ವನಮಾಲಿನೀಮ್ ॥ ೬ ॥

ಸುದರ್ಶನಾದಿಭಿಃ ಸ್ವಾಸ್ತ್ರೈರ್ಮೂರ್ತಿಮದ್ಭಿರುಪಾಸಿತಾಮ್ ।
ತುಷ್ಟಾವ ದೇವಪ್ರವರಃ ಸಶರ್ವಃ ಪುರುಷಂ ಪರಮ್ ।
ಸರ್ವಾಮರಗಣೈಃ ಸಾಕಂ ಸರ್ವಾಂಗೈರವನಿಂ ಗತೈಃ ॥ ೭ ॥

*ಬ್ರಹ್ಮೋವಾಚ*

ಅಜಾತಜನ್ಮಸ್ಥಿತಿಸಂಯಮಾಯಾ-
ಗುಣಾಯ ನಿರ್ವಾಣಸುಖಾರ್ಣವಾಯ ।
ಅಣೋರಣಿಮ್ನೇಽಪರಿಗಣ್ಯಧಾಮ್ನೇ
ಮಹಾನುಭಾವಾಯ ನಮೋ ನಮಸ್ತೇ ॥ ೮ ॥

ರೂಪಂ ತವೈತತ್ಪುರುಷರ್ಷಭೇಜ್ಯಂ
ಶ್ರೇಯೋಽರ್ಥಿಭಿರ್ವೈದಿಕತಾಂತ್ರಿಕೇಣ ।
ಯೋಗೇನ ಧಾತಃ ಸಹ ನಸ್ತ್ರಿಲೋಕಾನ್
ಪಶ್ಯಾಮ್ಯಮುಷ್ಮಿನ್ನು ಹ ವಿಶ್ವಮೂರ್ತೌ ॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ದೇವತೆಗಳು ಸರ್ವೇಶ್ವರನಾದ ಭಗವಾನ್ ಶ್ರೀಹರಿಯನ್ನು ಹೀಗೆ ಸ್ತುತಿಸಿದಾಗ ಅವನು ಅವರ ನಡುವೆಯೇ ಪ್ರಕಟನಾದನು. ಅವನ ಶರೀರದ ಪ್ರಭೆಯು ಸಾವಿರಾರು ಸೂರ್ಯರು ಒಮ್ಮೆಲೇ ಉದಯಿಸಿದಂತೆ ಇತ್ತು. ॥ ೧ ॥ ಭಗವಂತನ ಉಜ್ವಲವಾದ ಪ್ರಭೆಯಿಂದಾಗಿ ದೇವತೆಗಳ ಕಣ್ಣುಗಳು ಕೋರೈಸಿ ಅವನನ್ನು ನೋಡುವುದಿರಲಿ, ಪೃಥಿವ್ಯಾಕಾಶಗಳನ್ನಾಗಲೀ, ದಿಕ್ಕುಗಳನ್ನಾಗಲೀ ನೋಡಲು ಅವರಿಂದ ಸಾಧ್ಯವಾಗಲಿಲ್ಲ. ಕಡೆಗೆ ತಮ್ಮ ಶರೀರಗಳನ್ನೂ ನೋಡಿಕೊಳ್ಳಲಾಗಲಿಲ್ಲ. ॥ ೨ ॥ ಕೇವಲ, ಭಗವಾನ್ ಶಂಕರನು ಮತ್ತು ಬ್ರಹ್ಮದೇವರು ಅವನ ದರ್ಶನ ಮಾಡಿದರು. ಅವನ ಸ್ವರೂಪವು ತುಂಬಾ ಸುಂದರವಾಗಿತ್ತು. ನಿರ್ಮಲವೂ, ಸ್ವಚ್ಛವೂ ಆದ ಅವನ ಅಂಗಕಾಂತಿಯು ಮರಕತಮಣಿಯಂತೆ ಶ್ಯಾಮಲವರ್ಣದಿಂದ ಶೋಭಿಸುತ್ತಿತ್ತು. ಕಮಲದ ಒಳಭಾಗದಲ್ಲಿರುವ ಕೆಂಪಾದ ಪರಾಗದಂತಹ ಎಣ್ಣೆಗೆಂಪಿನ ಕಣ್ಣುಗಳು, ಪುಟಕ್ಕಿಟ್ಟ ಚಿನ್ನದಂತೆ ಥಳ-ಥಳಿಸುವ ರೇಶ್ಮೆಯ ಪೀತಾಂಬರ, ಸರ್ವಾಂಗಸುಂದರ ಶರೀರದ ರೋಮ-ರೋಮಗಳಲ್ಲಿ ಪ್ರಸನ್ನತೆ ಉಕ್ಕುತ್ತಿತ್ತು. ಧನುಸ್ಸಿನಂತೆ ಬಾಗಿದ ಹುಬ್ಬುಗಳು, ಅತ್ಯಂತ ಸುಂದರವಾದ ಮುಖ-ತಲೆಯ ಮೇಲೆ ಮಹಾಮಣಿಮಯ ದಿವ್ಯಕಿರೀಟ, ಭುಜಗಳಲ್ಲಿ ಕನಕಾಂಗದ – ಕೇಯೂರಗಳು. ಕಿವಿಗಳಲ್ಲಿ ಓಲಾಡುತ್ತಿದ್ದ ಮಕರ ಕುಂಡಲಗಳ ಪ್ರಭೆಯಿಂದ ಕಂಗೊಳಿಸುವ ಕಪೋಲಗಳು ಇನ್ನೂ ಸುಂದರವಾಗಿದ್ದುವು. ಆದರಿಂದ ಮುಖವು ಮತ್ತಷ್ಟು ಶೋಭಿಸುತ್ತಿತ್ತು. ಒಡ್ಯಾಣ, ಕೈಕಡಗ, ಕಾಲಂದುಗೆ, ಕೊರಳಲ್ಲಿ ಮುತ್ತಿನಹಾರ ಇವುಗಳಿಂದ ಶೋಭಾಯಮಾನನಾಗಿದ್ದನು. ವಕ್ಷಸ್ಥಳದಲ್ಲಿ ಲಕ್ಷ್ಮೀ ಮತ್ತು ಕೊರಳಲ್ಲಿ ಕೌಸ್ತುಭಮಣಿ, ವನಮಾಲೆ ಸುಶೋಭಿಸುತ್ತಿತ್ತು. ॥ ೩-೬ ॥ ಭಗವಂತನ ಸುದರ್ಶನವೇ ಮುಂತಾದ ದಿವ್ಯಾಯುಧಗಳು ಮೂರ್ತಿಮತ್ತಾಗಿ ನಿಂತು ಪ್ರಭುವಿನ ಸೇವೆ ಮಾಡುತ್ತಿದ್ದವು. ಎಲ್ಲ ದೇವತೆಗಳು ಸಾಷ್ಟಾಂಗ ನಮಸ್ಕಾರಮಾಡಿ ಮತ್ತೆ ದೇವತೆಗಳೆಲ್ಲರೊಡನೆ ಸೇರಿ ಪರಶಿವನು ಮತ್ತು ಬ್ರಹ್ಮದೇವರು ಪರಮಪುರುಷನನ್ನು ಸ್ತುತಿಸತೊಡಗಿದರು. ॥ ೭ ॥

**ಬ್ರಹ್ಮದೇವರು ಹೇಳಿದರು** – ಯಾರು ಜನ್ಮ, ಸ್ಥಿತಿ, ಪ್ರಳಯಗಳೊಂದಿಗೆ ಯಾವುದೇ ಸಂಬಂಧವಿರಿಸಿಕೊಳ್ಳುವುದಿಲ್ಲವೋ, ಯಾರು ಪ್ರಾಕೃತ ಗುಣಗಳಿಂದ ರಹಿತನೂ, ಮೋಕ್ಷಸ್ವರೂಪನಾದ ಪರಮಾನಂದದ ಮಹಾಸಮುದ್ರನಾಗಿರುವನೋ, ಯಾರು ಸೂಕ್ಷ್ಮಕ್ಕೂ ಸೂಕ್ಷ್ಮನೋ, ಯಾರ ಸ್ವರೂಪವು ಅನಂತವಾಗಿದೆಯೋ ಆ ಪರಮೈಶ್ವರ್ಯಸಂಪನ್ನ ಪ್ರಭುವಿಗೆ ನಾವು ಮತ್ತೆ-ಮತ್ತೆ ನಮಸ್ಕರಿಸುತ್ತೇವೆ. ॥ ೮ ॥ ಪುರುಷೋತ್ತಮನೇ! ತಮ್ಮ ಶ್ರೇಯಸ್ಸನ್ನು ಬಯಸುವ ಸಾಧಕರು ವೇದೋಕ್ತ ಹಾಗೂ ಪಾಂಚರಾತ್ರೋಕ್ತ ವಿಧಿಯಿಂದ ನಿನ್ನ ಇದೇ ಸ್ವರೂಪವನ್ನು ಉಪಾಸನೆ

ತ್ವಯ್ಯಗ್ರ ಆಸೀತ್ತ್ವಯಿ ಮಧ್ಯ ಆಸೀ-
ತ್ತ್ವಯ್ಯಂತ ಆಸೀದಿದಮಾತ್ಮತಂತ್ರೇ ।
ತ್ವಮಾದಿರಂತೋ ಜಗತೋಽಸ್ಯ ಮಧ್ಯಂ
ಘಟಸ್ಯ ಮೃತ್ಸ್ನೇವ ಪರಃ ಪರಸ್ಮಾತ್ ॥ ೧೦ ॥

ತ್ವಂ ಮಾಯಯಾಽಽತ್ಮಾಶ್ರಯಯಾ ಸ್ವಯೇದಂ
ನಿರ್ಮಾಯ ವಿಶ್ವಂ ತದನುಪ್ರವಿಷ್ಟಃ ।
ಪಶ್ಯಂತಿ ಯುಕ್ತಾ ಮನಸಾ ಮನೀಷಿಣೋ
ಗುಣವ್ಯವಾಯೇಽಪ್ಯಗುಣಂ ವಿಪಶ್ಚಿತಃ ॥ ೧೧ ॥

ಯಥಾಗ್ನಿಮೇಧಸ್ಯಮೃತಂ ಚ ಗೋಷು
ಭುವ್ಯನ್ನಮಂಬೂದ್ಯಮನೇ ಚ ವೃತ್ತಿಮ್ ।
ಯೋಗೈರ್ಮನುಷ್ಯಾ ಅಧಿಯಂತಿ ಹಿ ತ್ವಾಂ
ಗುಣೇಷು ಬುದ್ಧ್ಯಾ ಕವಯೋ ವದಂತಿ ॥ ೧೨ ॥

ತಂ ತ್ವಾಂ ವಯಂ ನಾಥ ಸಮುಜ್ಜಿಹಾನಂ
ಸರೋಜನಾಭಾತಿಚಿರೇಪ್ಸಿತಾರ್ಥಮ್ ।
ದೃಷ್ಟ್ವಾ ಗತಾ ನಿರ್ವೃತಿಮದ್ಯ ಸರ್ವೇ
ಗಜಾ ದವಾರ್ತಾ ಇವ ಗಾಂಗಮಂಭಃ ॥ ೧೩ ॥

ಸ ತ್ವಂ ವಿಧತ್ಸ್ವಾಖಿಲಲೋಕಪಾಲಾ
ವಯಂ ಯದರ್ಥಾಸ್ತವ ಪಾದಮೂಲಮ್ ।
ಸಮಾಗತಾಸ್ತೇ ಬಹಿರಂತರಾತ್ಮನ್
ಕಿಂ ವಾನ್ಯವಿಜ್ಞಾಪ್ಯಮಶೇಷಸಾಕ್ಷಿಣಃ ॥ ೧೪ ॥

ಅಹಂ ಗಿರತ್ರಶ್ಚ ಸುರಾದಯೋ ಯೇ
ದಕ್ಷಾದಯೋಽಗ್ನೇರಿವ ಕೇತವಸ್ತೇ ।
ಕಿಂ ವಾ ವಿದಾಮೇಶ ಪೃಥಗ್ವಿಭಾತಾ
ವಿಧತ್ಸ್ವ ಶಂ ನೋ ದ್ವಿಜದೇವಮಂತ್ರಮ್ ॥ ೧೫ ॥

*ಶ್ರೀಶುಕ ಉವಾಚ*

ಏವಂ ವಿರಿಂಚಾದಿಭಿರೀಡಿತಸ್ತದ್
ವಿಜ್ಞಾಯ ತೇಷಾಂ ಹೃದಯಂ ತಥೈವ ।
ಜಗಾದ ಜೀಮೂತಗಭೀರಯಾ ಗಿರಾ
ಬದ್ಧಾಂಜಲೀನ್ಸಂವೃತಸರ್ವಕಾರಕಾನ್ ॥ ೧೬ ॥

ಮಾಡುತ್ತಾರೆ. ನನ್ನನ್ನೂ ಸೃಷ್ಟಿಸಿದ ಪ್ರಭೋ! ನಿನ್ನ ಈ ವಿಶ್ವಮಯ ಸ್ವರೂಪದಲ್ಲಿ ನನಗೆ ಸಮಸ್ತ ದೇವತೆಗಳ ಸಹಿತ ಮೂರು ಲೋಕಗಳು ಕಂಡುಬರುತ್ತಿವೆ. ॥ ೯ ॥ ನಿನ್ನಲ್ಲೇ ಮೊದಲು ಈ ಜಗತ್ತು ಲೀನವಾಗಿತ್ತು. ನಡುವೆಯೂ ಇದು ನಿನ್ನಲ್ಲೇ ನೆಲೆಸಿತ್ತು,. ಕೊನೆಗೆ ಇದು ಪುನಃ ನಿನ್ನಲ್ಲೇ ಲೀನವಾಗಿ ಹೋದೀತು. ನೀನು ಸ್ವತಃ ಕಾರ್ಯ-ಕಾರಣಗಳಿಂದ ಅತೀತ ಪರಮ ಸ್ವತಂತ್ರನಾಗಿರುವೆ. ಗಡಿಗೆಯಲ್ಲಿ ಆದಿ, ಮಧ್ಯ, ಅಂತ್ಯದಲ್ಲಿ ಮಣ್ಣೇ ಇರುವಂತೆ ಈ ಜಗತ್ತಿನ ಆದಿ, ಅಂತ್ಯ ಮತ್ತು ಮಧ್ಯದಲ್ಲಿ ನೀನೇ ಆಗಿರುವೆ. ॥ ೧೦ ॥ ನೀನು ನಿನ್ನಲ್ಲೇ ಆಶ್ರಿತನಾಗಿರುವ ನಿನ್ನ ಮಾಯೆಯಿಂದ ಈ ಪ್ರಪಂಚವನ್ನು ರಚಿಸುತ್ತೀಯೆ ಮತ್ತು ಇದರಲ್ಲಿ ಪುನಃ ಪ್ರವೇಶಿಸಿ ಅಂತರ್ಯಾಮಿಯ ರೂಪದಲ್ಲಿ ವಿರಾಜಿಸುತ್ತಿರುವೆ. ಅದಕ್ಕಾಗಿ ವಿವೇಕಿಗಳೂ, ಶಾಸ್ತ್ರಜ್ಞರೂ ಆದ ಜನರು ಹೆಚ್ಚು ಎಚ್ಚರಿಕೆಯಿಂದ ತಮ್ಮ ಮನಸ್ಸನ್ನು ಏಕಾಗ್ರಗೊಳಿಸಿ ಈ ಗುಣಗಳ, ವಿಷಯಗಳ ಗದ್ದಲದಲ್ಲಿಯೂ ನಿನ್ನ ನಿರ್ಗುಣ ಸ್ವರೂಪವನ್ನೇ ಸಾಕ್ಷಾತ್ಕರಿಸಿ ಕೊಳ್ಳುವರು. ॥ ೧೧ ॥ ಮನುಷ್ಯನು ಯುಕ್ತಿಯಿಂದ ಕಟ್ಟಿಗೆಯಿಂದ ಬೆಂಕಿಯನ್ನೂ, ಹಸುವಿನಿಂದ ಅಮೃತದಂತಿರುವ ಹಾಲನ್ನೂ, ಪೃಥಿವಿಯಿಂದ ನೀರು ಹಾಗೂ ಅನ್ನವನ್ನೂ ಮತ್ತು ವ್ಯಾಪಾರದಿಂದ ತನ್ನ ಜೀವನ ನಿರ್ವಹಣೆಯನ್ನು ಪಡೆದುಕೊಳ್ಳುವನೋ ಹಾಗೆಯೇ ವಿವೇಕಿ ಮನುಷ್ಯನೂ ಕೂಡ ತನ್ನ ಶುದ್ಧಬುದ್ಧಿಯಿಂದ, ಭಕ್ತಿ ಯೋಗ-ಜ್ಞಾನಯೋಗ ಮುಂತಾದವುಗಳ ಮೂಲಕ ನಿನ್ನನ್ನು ಈ ವಿಷಯಗಳಲ್ಲೇ ಪಡೆದುಕೊಳ್ಳುವರು ಹಾಗೂ ತಮ್ಮ ಅನುಭವಕ್ಕನು ಸಾರವಾಗಿ ನಿನ್ನನ್ನೂ ವರ್ಣಿಸುವರು. ॥ ೧೨ ॥ ಪದ್ಮನಾಭಾ! ಕಾಡುಗಿಚ್ಚಿನಿಂದ ಬೆಂದು ನೊಂದಿರುವ ಆನೆಯು ಗಂಗಾನದಿ ಯಲ್ಲಿ ಮುಳುಗಿ ಸುಖ-ಸಂತೋಷಪಡುವಂತೆಯೇ, ನಿನ್ನ ಆವಿರ್ಭಾವ ದಿಂದ ನಾವುಗಳು ಪರಮಸುಖಿಗಳು ಮತ್ತು ಶಾಂತಿಯನ್ನು ಹೊಂದಿರುವೆವು. ಸ್ವಾಮಿ! ನಾವುಗಳು ಅನೇಕ ದಿನಗಳಿಂದ ನಿನ್ನ ದರ್ಶನಕ್ಕಾಗಿ ಅತ್ಯಂತ ಕಾತರರಾಗಿದ್ದೆವೆ. ॥ ೧೩ ॥ ನೀನೇ ನಮ್ಮ ಹೊರಗಿನ-ಒಳಗಿನ ಆತ್ಮನಾಗಿರುವೆ. ನಾವೆಲ್ಲ ಲೋಕಪಾಲರು ಯಾವ ಉದ್ದೇಶದಿಂದ ನಿನ್ನ ಚರಣಗಳಲ್ಲಿ ಶರಣಾಗಿದ್ದೇವೋ ಅದನ್ನು ನೀನು ಕೃಪೆಮಾಡಿ ಪೂರ್ಣಮಾಡು. ನೀನು ಎಲ್ಲರ ಸಾಕ್ಷಿ ಯಾಗಿರುವೆ. ಆದ್ದರಿಂದ ಈ ವಿಷಯದಲ್ಲಿ ನಾವುಗಳು ನಿನ್ನಲ್ಲಿ ಇನ್ನೇನು ನಿವೇದಿಸಿಕೊಳ್ಳಲಿ? ॥ ೧೪ ॥ ಪ್ರಭೋ! ನಾನೂ, ಶಂಕರನೂ, ಬೇರೆ ದೇವತೆಗಳೂ, ಋಷಿಗಳೂ, ದಕ್ಷರೇ ಮುಂತಾದ ಪ್ರಜಾಪತಿಗಳೆಲ್ಲರೂ ಬೆಂಕಿಯಿಂದ ಸಿಡಿದ ಕಿಡಿಯಂತೆ ನಿನ್ನ ಅಂಶರೇ ಆಗಿದ್ದೇವೆ ಇಂತಹ ಸ್ಥಿತಿಯಲ್ಲಿ ಪ್ರಭೋ! ನಾವೇನು ಬಲ್ಲೆವು? ಬ್ರಾಹ್ಮಣರ ಮತ್ತು ದೇವತೆಗಳ ಕಲ್ಯಾಣಕ್ಕಾಗಿ ಏನು ಮಾಡುವ ಆವಶ್ಯಕತೆ ಇದೆಯೋ ಅದನ್ನು ನೀನೇ ಅಪ್ಪಣೆ ಮಾಡಬೇಕು ಹಾಗೂ ನೀನೂ ಸ್ವತಃ ಹಾಗೆಯೇ ಮಾಡು. ॥ ೧೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಹೀಗೆ ಬ್ರಹ್ಮಾದಿ ದೇವತೆಗಳು ಸ್ತುತಿಮಾಡಿದಾಗ ಶ್ರೀಹರಿಯು ಅವರ ಮನಸ್ಸಿನ ಆಶಯವನ್ನು ತಿಳಿದವನಾಗಿ ಜಿತೇಂದ್ರಿಯರಾಗಿದ್ದು ಕೈಜೋಡಿಸಿ ಕೊಂಡಿದ್ದ ಬ್ರಹ್ಮನೇ ಮುಂತಾದ ದೇವತೆಗಳನ್ನು ಕುರಿತು ಮೇಘ ದಂತೆ ಗಂಭೀರವಾದ ಮಾತಿನಿಂದ ಇಂತೆಂದನು – ॥ ೧೬ ॥

ಏಕ ಏವೇಶ್ವರಸ್ತಸ್ಮಿನ್ಸುರಕಾರ್ಯೇ ಸುರೇಶ್ವರಃ ।
ವಿಹರ್ತುಕಾಮಸ್ತಾನಾಹ ಸಮುದ್ರೋನ್ಮಥನಾದಿಭಿಃ ॥ ೧೭ ॥

ಪರೀಕ್ಷಿದ್ರಾಜನೇ ! ಸಮಸ್ತ ದೇವತೆಗಳಿಗೂ ಹಾಗೂ ಜಗತ್ತಿಗೂ ಏಕಮಾತ್ರ ಸ್ವಾಮಿಯಾದ ಭಗವಂತನೊಬ್ಬನೇ ಅವರ ಕಾರ್ಯಗಳನ್ನು ಮಾಡಿಕೊಡಲು ಸಮರ್ಥನಾಗಿದ್ದರೂ ಸಮುದ್ರ ಮಂಥನವೇ ಮುಂತಾದ ಲೀಲೆಗಳನ್ನು ತೋರಿಸಲಿಚ್ಛಿಸಿ ದೇವತೆಗಳಿಗೆ ಹೀಗೆ ಹೇಳತೊಡಗಿದನು. ॥ ೧೭ ॥

ಶ್ರೀಭಗವಾನುವಾಚ

ಹಂತ ಬ್ರಹ್ಮನ್ನಹೋ ಶಂಭೋ ಹೇ ದೇವಾ ಮಮ ಭಾಷಿತಮ್ ।
ಶೃಣುತಾವಹಿತಾಃ ಸರ್ವೇ ಶ್ರೇಯೋ ವಃ ಸ್ಯಾದ್ಯಥಾ ಸುರಾಃ ॥ ೧೮ ॥

ಯಾತ ದಾನವದೈತೇಯೈಸ್ತಾವತ್ಸಂಧಿರ್ವಿಧೀಯತಾಮ್ ।
ಕಾಲೇನಾನುಗೃಹೀತೈಸ್ತೈರ್ಯಾವದ್ವೋ ಭವ ಆತ್ಮನಃ ॥ ೧೯ ॥

ಅರಯೋಽಪಿ ಹಿ ಸಂಧೇಯಾಃ ಸತಿ ಕಾರ್ಯಾರ್ಥಗೌರವೇ ।
ಅಹಿಮೂಷಕವದ್ದೇವಾ ಹ್ಯರ್ಥಸ್ಯ ಪದವೀಂ ಗತೈಃ ॥ ೨೦ ॥

ಅಮೃತೋತ್ಪಾದನೇ ಯತ್ನಃ ಕ್ರಿಯತಾಮವಿಲಂಬಿತಮ್ ।
ಯಸ್ಯ ಪೀತಸ್ಯ ವೈ ಜಂತುರ್ಮೃತ್ಯುಗ್ರಸ್ತೋಽಮರೋ ಭವೇತ್ ॥ ೨೧ ॥

ಕ್ಷಿಪ್ತ್ವಾ ಕ್ಷೀರೋದಧೌ ಸರ್ವಾ ವೀರುತ್ತೃಣಲತೌಷಧೀಃ ।
ಮಂಥಾನಂ ಮಂದರಂ ಕೃತ್ವಾ ನೇತ್ರಂ ಕೃತ್ವಾ ತು ವಾಸುಕಿಮ್ ॥ ೨೨ ॥

ಸಹಾಯೇನ ಮಯಾ ದೇವಾ ನಿರ್ಮಂಥಧ್ವಮತಂದ್ರಿತಾಃ ।
ಕ್ಲೇಶಭಾಜೋ ಭವಿಷ್ಯಂತಿ ದೈತ್ಯಾ ಯೂಯಂ ಫಲಗ್ರಹಾಃ ॥ ೨೩ ॥

ಶ್ರೀಭಗವಂತನು ಹೇಳಿದನು – ಚತುರ್ಮುಖನೇ ! ಶಂಕರನೇ ! ದೇವತೆಗಳೇ ! ನೀವು ಸಾವಧಾನರಾಗಿ ನನ್ನ ಸಲಹೆಯನ್ನು ಕೇಳಿರಿ. ನಿಮ್ಮ ಶ್ರೇಯಸ್ಸಿನ ಉಪಾಯವು ಇದೇ ಆಗಿದೆ. ॥ ೧೮ ॥ ಈಗ ಅಸುರರಿಗೆ ಒಳ್ಳೆಯ ಕಾಲವಾಗಿದೆ. ಅದಕ್ಕಾಗಿ ನಿಮ್ಮ ಅಭ್ಯುದಯ ಮತ್ತು ಉನ್ನತಿಯ ಸಮಯವು ಬರುವವರೆಗೆ ನೀವು ದೈತ್ಯ-ದಾನವರ ಬಳಿಗೆ ಹೋಗಿ ಅವರೊಂದಿಗೆ ಸಂಧಿಯನ್ನು ಮಾಡಿಕೊಳ್ಳಿರಿ. ॥ ೧೯ ॥ ದೇವತೆಗಳಿರಾ ! ಯಾವುದಾದರೂ ದೊಡ್ಡ ಕಾರ್ಯವನ್ನು ಸಾಧಿಸಬೇಕಾದರೆ ಶತ್ರುಗಳೊಂದಿಗೆ ಸಂಧಾನ ಮಾಡಿಕೊಳ್ಳಬೇಕು. ಕೆಲಸವು ಸಿದ್ಧಿಸಿದ ಬಳಿಕ ಅವರೊಂದಿಗೆ ಹಾವು-ಇಲಿಯಿಂತೆ* ವರ್ತಿಸುವುದು ಅವಶ್ಯಕವಾಗಿದೆ. ॥ ೨೦ ॥ ನೀವು ದಾನವರೊಡನೆ ಸೇರಿ ತಡಮಾಡದೆ ಅಮೃತದ ಪ್ರಾಪ್ತಿಗಾಗಿ ಪ್ರಯತ್ನಿಸಿರಿ. ಅದನ್ನು ಕುಡಿದರೆ ಮರಣ ಧರ್ಮವಿರುವ ಪ್ರಾಣಿಯೂ ಅಮರನಾಗುತ್ತಾನೆ. ॥ ೨೧ ॥ ನೀವು ಮೊಟ್ಟಮೊದಲಿಗೆ ಕ್ಷೀರ ಸಾಗರದಲ್ಲಿ ಎಲ್ಲ ಪ್ರಕಾರದ ಹುಲ್ಲು, ಬಳ್ಳಿಗಳು, ನಾರು-ಬೇರು, ಔಷಧಿಗಳನ್ನು ಹಾಕಿರಿ. ಮತ್ತೆ ಮಂದರಪರ್ವತವನ್ನು ಕಡೆಗೋಲಾಗಿಸಿಯೂ, ವಾಸುಕಿಯನ್ನು ಕಡೆಯುವ ಹಗ್ಗವನ್ನಾಗಿಯೂ ಮಾಡಿಕೊಂಡು, ನನ್ನ ಸಹಾಯದಿಂದ ದಾನವರೊಡಗೂಡಿ ಸಮುದ್ರವನ್ನು ಕಡೆಯಿರಿ. ಈಗ ಆಲಸ್ಯ ಮತ್ತು ಪ್ರಮಾದದ ಸಮಯವಲ್ಲ, ದೇವತೆಗಳಿರಾ ! ದೈತ್ಯರಿಗೆ ಕೇವಲ ಶ್ರಮ, ಕ್ಲೇಶವೇ ದೊರೆಯುವುದು. ಆದರೆ ನಿಮಗೆ ಸತ್‌ಫಲ ದೊರೆಯುವುದರಲ್ಲಿ ವಿಶ್ವಾಸವಿಡಿರಿ. ॥ ೨೨-೨೩ ॥

ಯೂಯಂ ತದನುಮೋದಧ್ವಂ ಯದಿಚ್ಛಂತ್ಯಸುರಾಃ ಸುರಾಃ ।
ನ ಸಂರಂಭೇಣ ಸಿಧ್ಯಂತಿ ಸರ್ವೇಽರ್ಥಾಃ ಸಾಂತ್ವಯಾ ಯಥಾ ॥ ೨೪ ॥

ನ ಭೇತವ್ಯಂ ಕಾಲಕೂಟಾದ್ವಿಷಾಜ್ಜಲಧಿಸಂಭವಾತ್ ।
ಲೋಭಃ ಕಾರ್ಯೋ ನ ವೋ ಜಾತು ರೋಷಃ ಕಾಮಸ್ತು ವಸ್ತುಷು ॥ ೨೫ ॥

ದೇವತೆಗಳಿರಾ ! ಅಸುರರು ಬಯಸುವುದೆಲ್ಲವನ್ನು ಸ್ವೀಕರಿಸಿರಿ. ಶಾಂತಿಯಿಂದ ಎಲ್ಲ ಕೆಲಸಗಳು ಕೈಗೂಡುವುವು. ಕ್ರೋಧದಿಂದ ಏನೂ ಆಗುವುದಿಲ್ಲ. ॥ ೨೪ ॥ ಮೊದಲಿಗೆ ಸಮುದ್ರದಿಂದ ಕಾಲಕೂಟವಿಷವು ಹೊರಡುವುದು. ಅದಕ್ಕೆ ಭಯಪಡಬೇಡಿರಿ. ಯಾವುದೇ ವಸ್ತುಗಾಗಿಯೂ ಲೋಭವಿಲ್ಲದಿರಲಿ. ಮೊದಲಿಗೆ ಯಾವುದೇ ವಸ್ತುವಿನ ಕಾಮನೆಯೇ ಇಲ್ಲದಿರಲಿ. ಆದರೆ ಕಾಮನೆ ಇದ್ದು ಅದು ಪೂರ್ಣವಾಗದಿದ್ದರೂ ಕ್ರೋಧವನ್ನಂತೂ ಮಾಡಬಾರದು. ॥ ೨೫ ॥

ಶ್ರೀಶುಕ ಉವಾಚ

ಇತಿ ದೇವಾನ್ಸಮಾದಿಶ್ಯ ಭಗವಾನ್ಪುರುಷೋತ್ತಮಃ ।
ತೇಷಾಮಂತರ್ದಧೇ ರಾಜನ್ಸ್ವಚ್ಛಂದಗತಿರೀಶ್ವರಃ ॥ ೨೬ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ ! ದೇವತೆಗಳಿಗೆ ಹೀಗೆ ಆದೇಶಿಸಿ ಭಗವಾನ್ ಪುರುಷೋತ್ತಮನು ಅವರು ನೋಡುತ್ತಿರುವಂತೆ ತನ್ನ ಇಷ್ಟಾನುಸಾರವಾಗಿ ಅಂತರ್ಧಾನವಾದನು. ಅವನ ಲೀಲಾರಹಸ್ಯವನ್ನು ಯಾರು ಬಲ್ಲರು ? ॥ ೨೬ ॥

* 'ಅಹಿಮೂಷಕನ್ಯಾಯ' – ಹಾವಾಡಿಗನ ಬುಟ್ಟಿಯಲ್ಲಿ ಹಾವೊಂದು ಮೊದಲಿನಿಂದಲೇ ಇತ್ತು. ಆಕಸ್ಮಾತ್ತಾಗಿ ಒಂದು ಇಲಿಯು ಅದರೊಳಗೆ ಬಂದು ಸೇರಿತು. ಇಲಿಯು ಭಯಗೊಂಡಿದ್ದರೂ ಹಾವು ಅದಕ್ಕೆ ಪ್ರೇಮದಿಂದ ಹೇಳಿತು. ಇಲಿರಾಯಾ ! ನೀನು ಈ ಬುಟ್ಟಿಯನ್ನು ಕಡಿದು ತೂತುಮಾಡು. ಇದರಿಂದ ನಾವಿಬ್ಬರೂ ಇಲ್ಲಿಂದ ಹೊರಗೆ ಹೋಗಬಹುದು. ಮೊದಲಿಗೆ ಇಲಿಗೆ ಹಾವಿನ ಮಾತಿನಲ್ಲಿ ವಿಶ್ವಾಸ ಮೂಡಲಿಲ್ಲ. ಆದರೆ ಕೊನೆಗೆ, ಅದು ಬುಟ್ಟಿಯನ್ನು ಕೊರೆದು ರಂಧ್ರವನ್ನು ಮಾಡಿತು. ಹೀಗೆ ತನ್ನ ಕೆಲಸ ಸಾಧಿಸಿದಾಗ ಹಾವು ಇಲಿಯನ್ನು ನುಂಗಿಹಾಕಿ ಬುಟ್ಟಿಯಿಂದ ಹೊರಗೆ ಹೊರಟುಹೋಯಿತು.

ಅಥ ತಸ್ಮೈ ಭಗವತೇ ನಮಸ್ಕೃತ್ಯ ಪಿತಾಮಹಃ ।
ಭವಶ್ಚ ಜಗ್ಮತುಃ ಸ್ವಂ ಸ್ವಂ ಧಾಮೋಪೇಯುರ್ಬಲಿಂ ಸುರಾಃ ॥ ೨೭ ॥

ದೃಷ್ಟ್ವಾರೀನಪ್ಯಸಂಯತ್ತಾನ್ ಜಾತಕ್ಷೋಭಾನ್ಸ್ವನಾಯಕಾನ್ ।
ನ್ಯಷೇಧದ್ದೈತ್ಯರಾಟ್ ಶ್ಲೋಕ್ಯಃ ಸಂಧಿವಿಗ್ರಹಕಾಲವಿತ್ ॥ ೨೮ ॥

ತೇ ವೈರೋಚನಿಮಾಸೀನಂ ಗುಪ್ತಂ ಚಾಸುರಯೂಥಪೈಃ ।
ಶ್ರಿಯಾ ಪರಮಯಾ ಜುಷ್ಟಂ ಜಿತಾಶೇಷಮುಪಾಗಮನ್ ॥ ೨೯ ॥

ಮಹೇಂದ್ರಃ ಶ್ಲಕ್ಷ್ಣಯಾ ವಾಚಾ ಸಾಂತ್ವಯಿತ್ವಾ ಮಹಾಮತಿಃ ।
ಅಭ್ಯಭಾಷತ ತತ್ಸರ್ವಂ ಶಿಕ್ಷಿತಂ ಪುರುಷೋತ್ತಮಾತ್ ॥ ೩೦ ॥

ತದರೋಚತ ದೈತ್ಯಸ್ಯ ತತ್ರಾನ್ಯೇ ಯೇಽಸುರಾಧಿಪಾಃ ।
ಶಂಬರೋಽರಿಷ್ಟನೇಮಿಶ್ಚ ಯೇ ಚ ತ್ರಿಪುರವಾಸಿನಃ ॥ ೩೧ ॥

ತತೋ ದೇವಾಸುರಾಃ ಕೃತ್ವಾ ಸಂವಿದಂ ಕೃತಸೌಹೃದಾಃ ।
ಉದ್ಯಮಂ ಪರಮಂ ಚಕ್ರುರಮೃತಾರ್ಥೇ ಪರಂತಪ ॥ ೩೨ ॥

ತತಸ್ತೇ ಮಂದರಗಿರಿಮೋಜಸೋತ್ಪಾಟ್ಯ ದುರ್ಮದಾಃ ।
ನದಂತ ಉದಧಿಂ ನಿನ್ಯುಃ ಶಕ್ತಾಃ ಪರಿಘಬಾಹವಃ ॥ ೩೩ ॥

ದೂರಭಾರೋದ್ವಹಶ್ರಾಂತಾಃ ಶಕ್ರವೈರೋಚನಾದಯಃ ।
ಅಪಾರಯಂತಸ್ತಂ ವೋಢುಂ ವಿವಶಾ ವಿಜಹುಃ ಪಥಿ ॥ ೩೪ ॥

ನಿಪತನ್ಸ ಗಿರಿಸ್ತತ್ರ ಬಹೂನಮರದಾನವಾನ್ ।
ಚೂರ್ಣಯಾಮಾಸ ಮಹತಾ ಭಾರೇಣ ಕನಕಾಚಲಃ ॥ ೩೫ ॥

ತಾಂಸ್ತಥಾ ಭಗ್ನಮನಸೋ ಭಗ್ನಬಾಹೂರುಕಂಧರಾನ್ ।
ವಿಜ್ಞಾಯ ಭಗವಾಂಸ್ತತ್ರ ಬಭೂವ ಗರುಡಧ್ವಜಃ ॥ ೩೬ ॥

ಗಿರಿಪಾತವಿನಿಷ್ಪಿಷ್ಟಾನ್ವಿಲೋಕ್ಯಾಮರದಾನವಾನ್ ।
ಈಕ್ಷಯಾ ಜೀವಯಾಮಾಸ ನಿರ್ಜರಾನ್ನಿರ್ವ್ರಣಾನ್ಯಥಾ ॥ ೩೭ ॥

ಅನಂತರ ಬ್ರಹ್ಮ-ಶಂಕರರು ಶ್ರೀಭಗವಂತನಿಗೆ ಪುನಃ ನಮಸ್ಕರಿಸಿ ತಮ್ಮ-ತಮ್ಮ ಲೋಕಗಳಿಗೆ ಹೊರಟು ಹೋದರು. ಬಳಿಕ ಇಂದ್ರಾದಿ ದೇವತೆಗಳು ಬಲಿರಾಜನ ಬಳಿಗೆ ಹೋದರು. ॥ ೨೭ ॥ ದೇವತೆಗಳು ಶಸ್ತ್ರಾಸ್ತ್ರರಹಿತರಾಗಿ ತಮ್ಮ ಬಳಿಗೆ ಬಂದುದನ್ನು ನೋಡಿ ದೈತ್ಯ ಸೇನಾಪತಿಗಳ ಮನಸ್ಸಿನಲ್ಲಿ ತಳಮಳವುಂಟಾಯಿತು. ಅವರು ದೇವತೆಗಳನ್ನು ಬಂಧಿಸಲು ಬಯಸಿದರು. ಆದರೆ ಪವಿತ್ರಕೀರ್ತಿಯುಳ್ಳ ದೈತ್ಯರಾಜ ಬಲಿಯು ಸಂಧಿ-ನಿಗ್ರಹಗಳ ಕಾಲವನ್ನು ತಿಳಿದಿದ್ದನಾದ ಕಾರಣ ದೇವತೆಗಳನ್ನು ಬಂಧಿಸದಂತೆ ದೈತ್ಯರನ್ನು ತಡೆದನು. ॥ ೨೮ ॥ ಮೂರು ಲೋಕಗಳನ್ನೂ ಜಯಿಸಿದ್ದ, ಸಮಸ್ತ ಸಂಪತ್ತುಗಳಿಂದ ಸಂಪನ್ನನಾಗಿದ್ದು ಅಸುರಸೇನಾನಾಯಕರಿಂದ ರಕ್ಷಿಸಲ್ಪಡುತ್ತಿದ್ದ ರಾಜಸಿಂಹಾಸನಾರೂಢನಾದ ಬಲಿಚಕ್ರವರ್ತಿಯನ್ನು ಇಂದ್ರಾದಿ ದೇವತೆಗಳು ಸಂಧಿಸಿದರು. ॥ ೨೯ ॥ ಮಹಾಮತಿಯಾದ ಇಂದ್ರನು ಬಲಿಚಕ್ರವರ್ತಿಯನ್ನು ಮೃದು-ಮಧುರವಾದ ಮಾತುಗಳಿಂದ ಸಂತೈಸುತ್ತಾ ಭಗವಂತನು ಹೇಳಿ ಕಳುಹಿಸಿದ್ದಂತೆ ಎಲ್ಲ ವಿಷಯಗಳನ್ನು ಅವನಲ್ಲಿ ಹೇಳಿದನು. ॥ ೩೦ ॥ ಇಂದ್ರನು ಹೇಳಿದ ಮಾತು ಬಲಿಚಕ್ರವರ್ತಿಗೂ, ಅಲ್ಲಿ ಕುಳಿತಿದ್ದ ಶಂಬರ, ಅರಿಷ್ಟನೇಮಿ, ತ್ರಿಪುರಾಸುರ ಮುಂತಾದ ದೈತ್ಯನಾಯಕರಿಗೂ ಸಮ್ಮತವಾಯಿತು. ॥ ೩೧ ॥ ಬಳಿಕ ದೇವಾಸುರರು ಪರಸ್ಪರ ಶಾಂತಿ-ಸಂಧಾನವನ್ನು ಮಾಡಿಕೊಂಡು ಮಿತ್ರರಾದರು. ಪರೀಕ್ಷಿತನೇ! ಅವರೆಲ್ಲರೂ ಸೇರಿ ಅಮೃತದ ಪ್ರಾಪ್ತಿಗಾಗಿ ಸಮುದ್ರ ಮಂಥನಕ್ಕಾಗಿ ಅಗಾಧವಾದ ಪ್ರಯತ್ನಕ್ಕೆ ತೊಡಗಿದರು. ॥ ೩೨ ॥ ಪರಿಘಾಯುಧದಂತೆ ತೋಳುಗಳನ್ನು ಹೊಂದಿದ್ದ ಮಹಾಶಕ್ತಿವಂತರಾದ, ಬಲದಿಂದ ಕೊಬ್ಬಿಹೋಗಿದ್ದ ದೇವ-ದಾನವರು ತಮ್ಮ ಬಲ-ಪರಾಕ್ರಮದಿಂದ ಮಂದರಪರ್ವತವನ್ನು ಕಿತ್ತು ಅದನ್ನೆತ್ತಿಕೊಂಡು ನಾಲ್ಕು ದಿಕ್ಕುಗಳೂ ಪ್ರತಿಧ್ವನಿಸುವಂತೆ ಗರ್ಜನೆ ಮಾಡುತ್ತಾ ಕ್ಷೀರಸಮುದ್ರದ ಕಡೆಗೆ ಹೊರಟರು. ॥ ೩೩ ॥ ಆದರೆ ಆ ಮಂದರಪರ್ವತವು ಭಾರೀ ಭಾರವಾಗಿತ್ತು ಮತ್ತು ಕೊಂಡು ಹೋಗಲೂ ಬಹಳ ದೂರವಿತ್ತು. ಇದರಿಂದ ಇಂದ್ರ, ಬಲಿ ಮುಂತಾದವರೆಲ್ಲರೂ ಸೋತುಹೋದರು. ಯಾವರೀತಿಯಿಂದಲೂ ಮಂದರಾಚಲವನ್ನು ಮುಂದಕ್ಕೆ ಸಾಗಿಸದಾದಾಗ ವಿವಶರಾಗಿ ಅವರು ದಾರಿಯಲ್ಲೇ ಇರಿಸಿದರು. ॥ ೩೪ ॥ ಮಹಾಭಾರದಿಂದ ಕೂಡಿದ್ದ ಆ ಸ್ವರ್ಣಪರ್ವತವು ಕೆಳಕ್ಕೆ ಬೀಳುವಾಗ ಅದರ ಬುಡದಲ್ಲಿ ಹಲವಾರು ದೇವತೆಗಳು, ದಾನವರು ನುಚ್ಚುನೂರಾದರು. ॥ ೩೫ ॥

ಆ ದೇವತೆಗಳ-ದೈತ್ಯರ, ಕೈ, ಸೊಂಟ, ಭುಜಗಳು ಮುರಿದೇ ಹೋಗಿದ್ದವು. ಅವರ ಮನಸ್ಸೂ ಮುರಿದುಹೋಗಿತ್ತು. ಅವರ ಉತ್ಸಾಹಭಂಗಗೊಂಡಿರುವುದನ್ನು ಕಂಡ ಭಗವಂತನು ಗರುಡನನ್ನೇರಿ ಬಂದು ಅಲ್ಲಿ ಕಾಣಿಸಿಕೊಂಡನು. ॥ ೩೬ ॥ ದೇವತೆಗಳು, ಅಸುರರು ಪರ್ವತವು ಬೀಳುವುದರಿಂದ ಪುಡಿ-ಪುಡಿಯಾಗಿರುವುದನ್ನು ನೋಡಿ ಅವನು ತನ್ನ ಅಮೃತಮಯ ದೃಷ್ಟಿಯಿಂದ ಅವರನ್ನು ನೋಡಿ ಅವರ ಗಾಯಗಳು ವಾಸಿಯಾಗಿ, ಸಂಕಟರಹಿತರಾಗಿಸಿದನು. ॥ ೩೭ ॥ ಬಳಿಕ ಶ್ರೀಹರಿಯು ಲೀಲಾಜಾಲವಾಗಿ ಒಂದೇ

ಗಿರಿಂ ಚಾರೋಪ್ಯ ಗರುಡೇ ಹಸ್ತೇನೈಕೇನ ಲೀಲಯಾ ।
ಆರುಹ್ಯ ಪ್ರಯಯಾವಬ್ಧಿಂ ಸುರಾಸುರಗಣೈರ್ವೃತಃ ॥ ೩೮ ॥

ಅವರೋಪ್ಯ ಗಿರಿಂ ಸ್ಕಂಧಾತ್ಸುಪರ್ಣಃ ಪತತಾಂ ವರಃ ।
ಯಯೌ ಜಲಾಂತ ಉತ್ಸೃಜ್ಯ ಹರಿಣಾ ಸ ವಿಸರ್ಜಿತಃ ॥ ೩೯ ॥

ಕೈಯಿಂದ ಆ ಪರ್ವತವನ್ನು ಎತ್ತಿ ಗರುಡನ ಹೆಗಲಮೇಲಿಟ್ಟು ಕೊಂಡು ತಾನು ಹತ್ತಿಕೊಂಡು ಮತ್ತೆ ದೇವತೆಗಳು ಹಾಗೂ ಅಸುರ ರೊಂದಿಗೆ ಸಮುದ್ರದ ತಟಕ್ಕೆ ತೆರಳಿದನು. ॥ ೩೮ ॥ ಪಕ್ಷಿರಾಜ ಗರುಡನು ಸಮುದ್ರತೀರದಲ್ಲಿ ಆ ಪರ್ವತವನ್ನು ಇಳಿಸಿ, ಸಮುದ್ರದ ಮಧ್ಯದಲ್ಲಿ ಅದನ್ನು ಇರಿಸಿ, ಭಗವಂತನಿಂದ ಬೀಳ್ಕೊಂಡು ಅಲ್ಲಿಂದ ಹೊರಟುಹೋದನು. ॥ ೩೯ ॥

*ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ಅಮೃತಮಥನೇ ಮಂದರಾಚಲಾನಯನಂ ನಾಮ ಷಷ್ಠೋಽಧ್ಯಾಯಃ ॥ ೬ ॥

# ಏಳನೆಯ ಅಧ್ಯಾಯ

## ಸಮುದ್ರಮಂಥನದ ಪ್ರಾರಂಭ– ಪರಶಿವನು ವಿಷವನ್ನು ಪಾನಮಾಡಿದುದು

*ಶ್ರೀಶುಕ ಉವಾಚ*

ತೇ ನಾಗರಾಜಮಾಮಂತ್ರ್ಯ ಫಲಭಾಗೇನ ವಾಸುಕಿಮ್ ।
ಪರಿವೀಯ ಗಿರೌ ತಸ್ಮಿನ್ನೇತ್ರಮಬ್ಧಿಂ ಮುದಾನ್ವಿತಾಃ ॥ ೧ ॥

ಆರೇಭಿರೇ ಸುಸಂಯತ್ತಾ ಅಮೃತಾರ್ಥಂ ಕುರೂದ್ವಹ ।
ಹರಿಃ ಪುರಸ್ತಾಜ್ಜಗೃಹೇ ಪೂರ್ವಂ ದೇವಾಸ್ತತೋಽಭವನ್ ॥ ೨ ॥

ತನ್ನೈಚ್ಛನ್ ದೈತ್ಯಪತಯೋ ಮಹಾಪುರುಷಚೇಷ್ಟಿತಮ್ ।
ನ ಗೃಹ್ಣೀಮೋ ವಯಂ ಪುಚ್ಛಮಹೇರಂಗಮಮಂಗಲಮ್ ॥ ೩ ॥

ಸ್ವಾಧ್ಯಾಯಶ್ರುತಸಂಪನ್ನಾಃ ಪ್ರಖ್ಯಾತಾ ಜನ್ಮಕರ್ಮಭಿಃ ।
ಇತಿ ತೂಷ್ಣೀಂ ಸ್ಥಿತಾನ್ದೈತ್ಯಾನ್ವಿಲೋಕ್ಯ ಪುರುಷೋತ್ತಮಃ ।
ಸ್ಮಯಮಾನೋ ವಿಸೃಜ್ಯಾಗ್ರಂ ಪುಚ್ಛಂ ಜಗ್ರಾಹ ಸಾಮರಃ ॥ ೪ ॥

ಕೃತಸ್ಥಾನವಿಭಾಗಾಸ್ತ ಏವಂ ಕಶ್ಯಪನಂದನಾಃ ।
ಮಮಂಥುಃ ಪರಮಾಯತ್ತಾ ಅಮೃತಾರ್ಥಂ ಪಯೋನಿಧಿಮ್ ॥ ೫ ॥

ಮಥ್ಯಮಾನೇಽರ್ಣವೇ ಸೋಽದ್ರಿರನಾಧಾರೋ ಹ್ಯಪೋಽವಿಶತ್ ।
ಧ್ರಿಯಮಾಣೋಽಪಿ ಬಲಿಭಿರ್ಗೌರವಾತ್ಪಾಂಡುನಂದನ ॥ ೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ದೇವ-ದಾನವರು ವಾಸುಕಿಯ ಬಳಿಗೆ ಹೋಗಿ ನೀನು ಮಂದರ ಪರ್ವತವೆಂಬ ಕಡೆಗೋಲಿಗೆ ಹಗ್ಗವಾಗಬೇಕು. ಅಮೃತ ವನ್ನು ಕಡೆದ ನಂತರ ಅಮೃತದಲ್ಲಿ ನಿನಗೂ ಭಾಗವನ್ನು ಕೊಡುವೆವು ಎಂದು ಹೇಳಿ ಅವನನ್ನು ಒಪ್ಪಿಸಿದರು. ಸಂತೋಷಭರಿತರಾಗಿ ವಾಸುಕಿಯನ್ನು ಕರೆತಂದು ಮಂದರಪರ್ವತಕ್ಕೆ ಸುತ್ತಿದರು. ಅಮೃತ ವನ್ನು ಪಡೆಯಲಿಕ್ಕಾಗಿ ದೇವ-ದಾನವರು ಒಟ್ಟಾಗಿ ಸೇರಿ ಪ್ರಯತ್ನ ಪೂರ್ವಕ ಸಮುದ್ರವನ್ನು ಕಡೆಯಲು ಪ್ರಾರಂಭಿಸಿದರು. ಆಗ ಮೊಟ್ಟಮೊದಲಿಗೆ ಶ್ರೀಹರಿಯು ವಾಸುಕಿಯ ತಲೆಯಕಡೆ ಹಿಡಿದು ಕೊಂಡನು. ಅದರಿಂದ ದೇವತೆಗಳೂ ಅವನನ್ನೇ ಅನುಸರಿಸಿ ಅತ್ತಕಡೆಗೆ ಸೇರಿದರು. ॥ ೧-೨ ॥ ಆದರೆ ಭಗವಂತನ ಈ ವ್ಯವಸ್ಥೆ ದೈತ್ಯಸೇನಾಪತಿಗಳಿಗೆ ಮೆಚ್ಚಿಗೆಯಾಗಲಿಲ್ಲ. ಅವರೆಂದರು – ಬಾಲ ವಾದರೋ ಹಾವಿನ ಅಶುಭ ಅಂಗವಾಗಿದೆ. ನಾವು ಅದನ್ನು ಹಿಡಿಯುವುದಿಲ್ಲ. ॥ ೩ ॥ ನಾವು ವಿಧಿವತ್ತಾಗಿ ವೇದ-ಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದೇವೆ., ಹಿರಿದಾದ ವಂಶದಲ್ಲಿ ನಾವು ಹುಟ್ಟಿ ದ್ದೇವೆ ಮತ್ತು ಪರಾಕ್ರಮದಿಂದ ದೊಡ್ಡ-ದೊಡ್ಡ ಕಾರ್ಯಗಳನ್ನು ಮಾಡಿದ್ದೇವೆ. ನಾವು ದೇವತೆಗಳಿಗಿಂತ ಯಾವುದರಲ್ಲಿ ಕಮ್ಮಿಯಾಗಿ ದ್ದೇವೆ. ಹೀಗೆ ಹೇಳಿ ಅವರು ಸುಮ್ಮನೆ ಒಂದೆಡೆ ನಿಂತುಕೊಂಡಿರಲು, ಭಗವಂತನು ಅವರ ಮನೋವೃತ್ತಿಯನ್ನು ಅರಿತು ಮುಗುಳ್ನಕ್ಕು ವಾಸುಕಿಯ ತಲೆಯನ್ನು ಬಿಟ್ಟು ದೇವತೆಗಳೊಂದಿಗೆ ಅದರ ಬಾಲವನ್ನು ಹಿಡಿದುಕೊಂಡನು. ॥ ೪ ॥ ಹೀಗೆ ತಮ್ಮ-ತಮ್ಮ ಸ್ಥಾನ ಗಳನ್ನು ನಿಶ್ಚಯಿಸಿಕೊಂಡು ದೇವತೆಗಳು ಮತ್ತು ಅಸುರರು ಅಮೃತದ ಪ್ರಾಪ್ತಿಗಾಗಿ ಪೂರ್ಣತಯಾರಾಗಿ ಸಮುದ್ರವನ್ನು ಕಡೆಯಲು ಪ್ರಾರಂಭಿಸಿದರು. ॥ ೫ ॥

ಪರೀಕ್ಷಿತನೇ! ಸಮುದ್ರಮಂಥನವು ಪ್ರಾರಂಭವಾಗುತ್ತಲೇ ಮಹಾಬಲಿಷ್ಠರಾದ ದೇವ-ದಾನವರು ಕಡೆಗೋಲನ್ನು ವಾಸುಕಿಯ

ತೇ ಸುನಿರ್ವಿಣ್ಣಮನಸಃ ಪರಿಮ್ಲಾನಮುಖಶ್ರಿಯಃ ।
ಆಸನ್ನಷ್ಟಪೌರುಷೇ ನಷ್ಟೇ ದೈವೇನಾತಿಬಲೀಯಸಾ ॥ ೭ ॥

ವಿಲೋಕ್ಯ ವಿಘ್ನೇಶವಿಧಿಂ ತದೇಶ್ವರೋ
ದುರಂತವೀರ್ಯೋಽವಿತಥಾಭಿಸಂಧಿಃ ।
ಕೃತ್ವಾ ವಪುಃ ಕಾಚ್ಛಪಮದ್ಭುತಂ ಮಹ-
ತ್ಪ್ರವಿಶ್ಯ ತೋಯಂ ಗಿರಿಮುಜ್ಜಹಾರ ॥ ೮ ॥

ತಮುತ್ಥಿತಂ ವೀಕ್ಷ್ಯ ಕುಲಾಚಲಂ ಪುನಃ
ಸಮುತ್ಥಿತಾ ನಿರ್ಮಥಿತುಂ ಸುರಾಸುರಾಃ ।
ದಧಾರ ಪೃಷ್ಠೇನ ಸ ಲಕ್ಷಯೋಜನ-
ಪ್ರಸ್ತಾರಿಣಾ ದ್ವೀಪ ಇವಾಪರೋ ಮಹಾನ್ ॥ ೯ ॥

ಸುರಾಸುರೇಂದ್ರೈರ್ಭುಜವೀರ್ಯವೇಪಿತಂ
ಪರಿಭ್ರಮಂತಂ ಗಿರಿಮಂಗ ಪೃಷ್ಠತಃ ।
ಬಿಭ್ರತ್ತದಾವರ್ತನಮಾದಿಕಚ್ಛಪೋ
ಮೇನೇಽಂಗಕಂಡೂಯನಮಪ್ರಮೇಯಃ ॥ ೧೦ ॥

ತಥಾಸುರಾನಾವಿಶದಾಸುರೇಣ
ರೂಪೇಣ ತೇಷಾಂ ಬಲವೀರ್ಯಮೀರಯನ್ ।
ಉದ್ದೀಪಯನ್ ದೇವಗಣಾಂಶ್ಚ ವಿಷ್ಣು-
ರ್ದೈವೇನ ನಾಗೇಂದ್ರಮಬೋಧರೂಪಃ ॥ ೧೧ ॥

ಉಪರ್ಯಗೇಂದ್ರಂ ಗಿರಿರಾಡಿವಾನ್ಯ
ಆಕ್ರಮ್ಯ ಹಸ್ತೇನ ಸಹಸ್ರಬಾಹುಃ ।
ತಸ್ಥೌ ದಿವಿ ಬ್ರಹ್ಮಭವೇಂದ್ರಮುಖ್ಯೈ-
ರಭಿಷ್ಟುವದ್ಭಿಃ ಸುಮನೋಽಭಿವೃಷ್ಟಃ ॥ ೧೨ ॥

ಉಪರ್ಯಧಶ್ಚಾತ್ಮನಿ ಗೋತ್ರನೇತ್ರಯೋಃ
ಪರೇಣ ತೇ ಪ್ರಾವಿಶತಾ ಸಮೇಧಿತಾಃ ।
ಮಮಂಥುರಬ್ಧಿಂ ತರಸಾ ಮದೋತ್ಕಟಾ
ಮಹಾದ್ರಿಣಾ ಕ್ಷೋಭಿತನಕ್ರಚಕ್ರಮ್ ॥ ೧೩ ॥

ಮೂಲಕ ಭದ್ರವಾಗಿ ಹಿಡಿದುಕೊಂಡಿದ್ದರೂ ಪರ್ವತವು ಮಹಾ ಭಾರವಾದ್ದರಿಂದ ಹಾಗೂ ಅದಕ್ಕೆ ಕೆಳಗಡೆಯಲ್ಲಿ ಯಾವುದೇ ಆಧಾರವಿಲ್ಲದೇ ಇರುವುದರಿಂದ ಮಂದರಾಚಲವು ಸಮುದ್ರ ದಲ್ಲಿ ಮುಳುಗತೊಡಗಿತು. ॥ ೬॥ ಹೀಗೆ ಅತ್ಯಂತ ಬಲಿಷ್ಠವಾದ ದೈವದಿಂದ ತಮ್ಮ ಪುರುಷಪ್ರಯತ್ನವೆಲ್ಲವೂ ನಷ್ಟವಾದುದನ್ನು ನೋಡಿ ಖೇದಗೊಂಡು ದೇವ-ದಾನವರ ಮುಖವು ಕಳೆ ಗುಂದಿತು. ॥ ೭ ॥ ಇದಾದರೋ ವಿಘ್ನೇಶ್ವರನ ಕಾರ್ಯರೂಪ ವಾದ ವಿಘ್ನವನ್ನು ನೋಡಿದ ಭಗವಂತನು ಅದನ್ನು ನಿವಾರಿಸುವ ಉಪಾಯವನ್ನು ಯೋಚಿಸಿ ಆಗ ಅತ್ಯಂತ ವಿಶಾಲವೂ, ವಿಚಿತ್ರವೂ ಆದ ಕೂರ್ಮ(ಆಮೆ)ರೂಪವನ್ನು ಧರಿಸಿ ಸಮುದ್ರಜಲದಲ್ಲಿ ಮುಳುಗಿ ಮಂದರಾಚಲವನ್ನು ಮೇಲಕ್ಕೆತ್ತಿದನು. ಭಗವಂತನ ಶಕ್ತಿ ಅನಂತವಾಗಿದೆ. ಅವನು ಸತ್ಯಸಂಕಲ್ಪನಾಗಿರುವನು. ಅವನಿಗೆ ಇದು ಯಾವ ಮಹಾದೊಡ್ಡ ಕೆಲಸ? ॥ ೮ ॥ ಮಂದರ ಪರ್ವತವು ಮೇಲಕ್ಕೆ ಬಂದುದನ್ನು ನೋಡಿ ದೇವಾಸುರರು ಪುನಃ ಸಮುದ್ರ ಮಂಥನಕ್ಕಾಗಿ ಸಿದ್ಧರಾದರು. ಆಗ ಭಗವಂತನು ಜಂಬೂದ್ವೀಪ ದಂತೆ ಒಂದು ಲಕ್ಷಯೋಜನ ವಿಸ್ತಾರವಾದ ತನ್ನ ಬೆನ್ನಮೇಲೆ ಮಂದರಾಚಲವನ್ನು ಧರಿಸಿಕೊಂಡಿದ್ದನು. ॥ ೯ ॥ ರಾಜೇಂದ್ರ! ಮಹಾಪರಾಕ್ರಮಿಗಳಾದ ದೇವ-ದಾನವರು ತಮ್ಮ ಭುಜಬಲ ದಿಂದ ಮಂದರಾಚಲವನ್ನು ಕಡೆದಾಗ ಅದು ಭಗವಂತನ ಬೆನ್ನಿನ ಮೇಲೆ ತಿರುಗತೊಡಗಿತು. ಅಪ್ರಮೇಯ ಆದಿಕಚ್ಛಪ ಭಗವಂತನಿಗೆ ಆ ಪರ್ವತವು ಗಿರ-ಗಿರನೆ ತಿರುಗುತ್ತಿರುವಾಗ ಯಾರೋ ತನ್ನ ಬೆನ್ನನ್ನು ತುರಿಸುತ್ತಿರುವರೋ ಎಂದೆನಿಸಿತು. ॥ ೧೦ ॥ ಜೊತೆಗೆ ಸಮುದ್ರಮಂಥನವನ್ನು ಸಂಪನ್ನವಾಗಿಸಲು ಭಗವಂತನು ಅಸುರ ರಲ್ಲಿ ಅವರ ಶಕ್ತಿ-ಬಲಗಳನ್ನು ಹೆಚ್ಚಿಸಲೋಸುಗ ಅಸುರರೂಪ ದಿಂದ ಪ್ರವೇಶಿಸಿದನು. ಹಾಗೆಯೇ ದೇವತೆಗಳನ್ನು ಪ್ರೋತ್ಸಾಹಿಸಲಿ ಕ್ಕಾಗಿ ಅವರಲ್ಲಿ ದೇವತಾರೂಪದಿಂದ ಪ್ರವೇಶಿಸಿದನು ಹಾಗೂ ವಾಸುಕಿಯಲ್ಲಿ ನಿದ್ರಾರೂಪದಿಂದ ಪ್ರವೇಶಿಸಿದನು. ॥ ೧೧ ॥ ಇತ್ತ ಮಂದರಪರ್ವತದ ತುದಿಯಲ್ಲಿ ಇನ್ನೊಂದು ಪರ್ವತದಂತೆ ಸಹಸ್ರ ಬಾಹುವಾದ ಭಗವಂತನು ತನ್ನ ಕೈಗಳಿಂದ ಅದನ್ನು ಒತ್ತಿಹಿಡಿದು ಸ್ಥಿತನಾದನು. ಆ ಸಮಯದಲ್ಲಿ ಬ್ರಹ್ಮ-ರುದ್ರ-ಇಂದ್ರರೇ ಮುಂತಾ ದವರು ಅವನನ್ನು ಸ್ತುತಿಸುತ್ತಾ ಅವನ ಮೇಲೆ ಹೂಮಳೆಯನ್ನು ಸುರಿಸಿದರು. ॥ ೧೨ ॥ ಹೀಗೆ ಭಗವಂತನು ಪರ್ವತದ ಮೇಲ್ಗಡೆ ಯಿಂದ ಅದನ್ನು ಒತ್ತಿಹಿಡಿದ ರೂಪದಿಂದ, ಕೆಳಗಡೆಯಿಂದ ಅದಕ್ಕೆ ಆಧಾರವಾಗಿ ಕೂರ್ಮರೂಪದಿಂದ, ದೇವತೆಗಳ ಮತ್ತು ಅಸುರರ ಶರೀರಗಳಲ್ಲಿ ಅವರ ಶಕ್ತಿರೂಪದಿಂದ, ಪರ್ವತದಲ್ಲಿ ದೃಢತೆಯ ರೂಪದಿಂದ, ಕಡೆಯುವ ಹಗ್ಗವಾದ ವಾಸುಕಿಯಲ್ಲಿ ಅವನಿಗೆ ಕಷ್ಟವಾಗದಿರಲೆಂದು ನಿದ್ರೆಯ ರೂಪದಿಂದ ಪ್ರವೇಶಮಾಡಿ ಎಲ್ಲ ಕಡೆಯಿಂದ, ಎಲ್ಲರನ್ನು ಶಕ್ತಿಸಂಪನ್ನವಾಗಿಸಿದನು. ಆಗ ಅವರು ತಮ್ಮ ಬಲದಿಂದ ಉನ್ಮತ್ತರಾಗಿ ಮಂದರಾಚಲದಿಂದ ಅತ್ಯಂತ ವೇಗದಿಂದ ಸಮುದ್ರವನ್ನು ಕಡೆಯತೊಡಗಿದರು. ಇದರ ಪರಿಣಾಮವಾಗಿ ಸಮುದ್ರದಲ್ಲಿ ವಾಸಿಸುತ್ತಿದ್ದ ಮೀನು ಮೊಸಳೆಯೇ ಮುಂತಾದವುಗಳು ಕಳವಳಗೊಂಡವು. ॥ ೧೩ ॥

ಅಹೀಂದ್ರಸಾಹಸ್ರಕಠೋರದೃಙ್ಮುಖ-
ಶ್ವಾಸಾಗ್ನಿಧೂಮಾಹತವರ್ಚಸೋಽಸುರಾಃ ।
ಪೌಲೋಮಕಾಲೇಯಬಲೀಲ್ವಲಾದಯೋ
ದವಾಗ್ನಿದಗ್ಧಾಃ ಸರಲಾ ಇವಾಭವನ್ ॥ ೧೪ ॥

ದೇವಾಂಶ್ಚ ತಚ್ಛ್ವಾಸಶಿಖಾಹತಪ್ರಭಾನ್
ಧೂಮ್ರಾಂಬರಸ್ರಗ್ವರಕಂಚುಕಾನನಾನ್ ।
ಸಮಭ್ಯವರ್ಷನ್ಭಗವದ್ವಶಾ ಘನಾ
ವವುಃ ಸಮುದ್ರೋರ್ಮ್ಯುಪಗೂಢವಾಯವಃ ॥ ೧೫ ॥

ಮಥ್ಯಮಾನಾತ್ತಥಾ ಸಿಂಧೋರ್ದೇವಾಸುರವರೂಥಪೈಃ ।
ಯದಾ ಸುಧಾ ನ ಜಾಯೇತ ನಿರ್ಮಮಂಥಾಜಿತಃ ಸ್ವಯಮ್ ॥ ೧೬ ॥

ಮೇಘಶ್ಯಾಮಃ ಕನಕಪರಿಧಿಃ ಕರ್ಣವಿದ್ಯೋತವಿದ್ಯು-
ನ್ಮೂರ್ಧ್ನಿ ಭ್ರಾಜದ್ವಿಲುಲಿತಕಚಃ ಸ್ರಗ್ಧರೋ ರಕ್ತನೇತ್ರಃ ।
ಜೈತ್ರೈರ್ದೋರ್ಭಿರ್ಜಗದಭಯದೈರ್ದಂದಶೂಕಂ ಗೃಹೀತ್ವಾ
ಮಥ್ನನ್ಮಥ್ನಾ ಪ್ರತಿಗಿರಿರಿವಾಶೋಭತಾಥೋ ಧೃತಾದ್ರಿಃ ॥ ೧೭ ॥

ನಿರ್ಮಥ್ಯಮಾನಾದುದಧೇರಭೂದ್ವಿಷಂ
ಮಹೋಲ್ಬಣಂ ಹಾಲಹಲಾಹ್ವಮಗ್ರತಃ ।
ಸಂಭ್ರಾಂತ ಮೀನೋನ್ಮಕರಾಹಿಕಚ್ಛಪಾತ್
ತಿಮಿದ್ವಿಪಗ್ರಾಹತಿಮಿಂಗಿಲಾಕುಲಾತ್ ॥ ೧೮ ॥

ತದುಗ್ರವೇಗಂ ದಿಶಿ ದಿಶ್ಯುಪರ್ಯಧೋ
ವಿಸರ್ಪದುತ್ಸರ್ಪದಸಹ್ಯಮಪ್ರತಿ ।
ಭೀತಾಃ ಪ್ರಜಾ ದುದ್ರುವುರಂಗ ಸೇಶ್ವರಾ
ಅರಕ್ಷ್ಯಮಾಣಾಃ ಶರಣಂ ಸದಾಶಿವಮ್ ॥ ೧೯ ॥

ಆಗ ನಾಗರಾಜನಾದ ವಾಸುಕಿಯ ಕಠೋರವಾದ ಸಾವಿರಾರು ಕಣ್ಣುಗಳಿಂದಲೂ, ಮುಖಗಳಿಂದಲೂ, ನಿಟ್ಟುಸಿರಿನಿಂದಲೂ ವಿಷದ ಜ್ವಾಲೆಗಳು ಹೊರಹೊಮ್ಮತೊಡಗಿದವು. ಇದರ ಹೊಗೆಯಿಂದ ಮುಖದ ಭಾಗವನ್ನೇ ಹಿಡಿದುಕೊಂಡಿದ್ದ ಪೌಲೋಮ, ಕಾಲೇಯ, ಬಲಿ, ಇಲ್ವಲ ಮುಂತಾದ ಅಸುರರು ನಿಸ್ತೇಜರಾದರು. ಆಗ ಅವರು ಕಾಡುಗಿಚ್ಚಿನಿಂದ ಬೆಂದುಹೋದ ಸಾಲವೃಕ್ಷಗಳಂತೆ ಕಂಡು ಬರುತ್ತಿದ್ದರು. ॥ ೧೪॥ ದೇವತೆಗಳೂ ಕೂಡ ಅದರಿಂದ ತಪ್ಪಿಸಿ ಕೊಳ್ಳಲಾರದೆ ಹೋದರು. ವಾಸುಕಿಯ ಶ್ವಾಸದ ವಿಷಜ್ವಾಲೆ ಗಳಿಂದ ಅವರ ತೇಜವೂ ಕಳೆಗುಂದಿತು. ವಸ್ತ್ರಗಳು, ಮಾಲೆಗಳು, ಕವಚಗಳು ಹಾಗೂ ಮುಖಗಳೂ ಹೊಗೆಯಿಂದ ಕಪ್ಪಿಟ್ಟವು. ಅವರ ಈ ದುಃಸ್ಥಿತಿಯನ್ನು ಕಂಡು ಭಗವಂತನ ಪ್ರೇರಣೆಯಿಂದ ಮೋಡ ಗಳು ದೇವತೆಗಳ ಮೇಲೆ ಮಳೆಗರೆಯತೊಡಗಿದವು. ವಾಯುವು ಸಮುದ್ರದ ತರಂಗಗಳ ಮೇಲಿಂದ ಬೀಸುತ್ತಾ ತಂಪನ್ನೂ ಸುಗಂಧ ವನ್ನೂ ನೀಡಿದನು. ॥ ೧೫ ॥

ಹೀಗೆ ದೇವಾಸುರರು ಸಮುದ್ರಮಥನವನ್ನು ಮುಂದುವರಿ ಸಿದರೂ ಅಮೃತವು ಬಾರದಿರಲು ಭಗವಂತನಾದ ಅಜಿತನೇ ಸಮುದ್ರವನ್ನು ಕಡೆಯಲು ಪ್ರಾರಂಭಿಸಿದನು. ॥ ೧೬ ॥ ಆಗ ಮೇಘಶ್ಯಾಮನಾದ ಭಗವಂತನು ಚಿನ್ನದ ಬಣ್ಣದ ಪೀತಾಂಬರ ವನ್ನು ಉಟ್ಟಿದ್ದನು. ಅವನ ಕಿವಿಗಳಲ್ಲಿ ಮಿಂಚಿನಂತೆ ಹೊಳೆಯುವ ಕುಂಡಲಗಳಿದ್ದವು. ತಲೆಯಲ್ಲಿ ಹೊಳೆಯುತ್ತಿದ್ದು ಹಾರಾಡುವ ಗುಂಗುರುಕೂದಲುಗಳಿದ್ದವು. ಕಮನೀಯ ಕಣ್ಣುಗಳು ಕೆಂಬಣ್ಣ ದಿಂದ ಕೂಡಿದ್ದವು. ಕೊರಳಲ್ಲಿ ವನಮಾಲೆಯು ಶೋಭಿಸುತ್ತಿತ್ತು. ಸಮಸ್ತ ಜಗತ್ತಿಗೆ ಅಭಯದಾನವನ್ನೀಯುವ ಭುಜದಂಡಗಳು ವಾಸುಕಿಯನ್ನು ಹಿಡಿದುಕೊಂಡು, ಕೂರ್ಮರೂಪದಿಂದ ಪರ್ವತ ವನ್ನು ಹೊತ್ತುಕೊಂಡು, ಭಗವಂತನು ಮಂದರಾಚಲವೆಂಬ ಕಡೆ ಗೋಲಿನಿಂದ ಸಮುದ್ರವನ್ನು ಕಡೆಯುತ್ತಿರುವಾಗ ಅವನು ಇನ್ನೊಂದು ಪರ್ವತದಂತೆ ಅತ್ಯಂತ ಸುಂದರವಾಗಿ ಕಾಣುತ್ತಿ ದ್ದನು. ॥ ೧೭ ॥ ಅಜಿತ ಭಗವಂತನು ಹೀಗೆ ಸಮುದ್ರವನ್ನು ಕಡೆಯುವಾಗ ಸಮುದ್ರದಲ್ಲಿ ಕೋಲಾಹಲವುಂಟಾಗಿ, ಮೀನು, ಮೊಸಳೆ, ಹಾವುಗಳು, ಆಮೆಗಳು ಭಯಗೊಂಡು ಮೇಲಕ್ಕೆ ಬಂದು ಅತ್ತ-ಇತ್ತ ಓಡತೊಡಗಿದವು. ತಿಮಿ-ತಿಮಿಂಗಿಲಗಳು ಮುಂತಾದ ಮೀನುಗಳೂ, ನೀರಾನೆಗಳೂ, ಮೊಸಳೆಗಳೂ ತಳಮಳಗೊಂಡವು. ಅದೇ ಸಮಯಕ್ಕೆ ಆ ಕ್ಷೀರಸಾಗರದಿಂದ ಮೊಟ್ಟಮೊದಲು ಹಾಲಾಹಲವೆಂಬ ಅತ್ಯಂತ ಉಗ್ರವಾದ ವಿಷವು ಹೊರಟಿತು. ॥ ೧೮॥ ಮಹಾಘೋರವಾದ ಆ ಹಾಲಾಹಲ ಮಹಾ ವಿಷವು ದಿಕ್ಕುಗಳಲ್ಲಿಯೂ, ಉಪದಿಕ್ಕುಗಳಲ್ಲಿಯೂ, ಭೂಮ್ಯಂತ ರಿಕ್ಷಗಳಲ್ಲಿಯೂ ಸರ್ವತ್ರ ವ್ಯಾಪಿಸತೊಡಗಿತು. ಸಹಿಸಲು ಅಶಕ್ಯ ವಾದ ಆ ವಿಷದ ಜ್ವಾಲೆಯಿಂದ ಭಯಗೊಂಡ ಪ್ರಜೆಗಳೂ, ಪ್ರಜಾಪತಿಗಳೂ ಬೇರೆ ಯಾರೂ ರಕ್ಷಕರಿಲ್ಲದಿರಲು ಭಗವಾನ್ ಸದಾಶಿವನಿಗೆ ಶರಣುಹೋದರು. ॥ ೧೯ ॥ ಭಗವಾನ್ ಸದಾ ಶಿವನು ಪಾರ್ವತೀದೇವಿಯೊಡನೆ ಕೈಲಾಸದಲ್ಲಿ ವಿರಾಜಮಾನನಾಗಿ ದ್ದನು. ದೊಡ್ಡ-ದೊಡ್ಡ ಋಷಿ-ಮುನಿಗಳು ಅವನನ್ನು ಸೇವಿಸು

ವಿಲೋಕ್ಯ ತಂ ದೇವವರಂ ತ್ರಿಲೋಕ್ಯಾ
ಭವಾಯ ದೇವ್ಯಾಭಿಮತಂ ಮುನೀನಾಮ್ ।
ಆಸೀನಮದ್ರಾವಪವರ್ಗಹೇತೋ-
ಸ್ತಪೋ ಜುಷಾಣಂ ಸ್ತುತಿಭಿಃ ಪ್ರಣೇಮುಃ ॥ ೨೦ ॥

ಪ್ರಜಾಪತಯ ಊಚುಃ

ದೇವದೇವ ಮಹಾದೇವ ಭೂತಾತ್ಮನ್ ಭೂತಭಾವನ ।
ತ್ರಾಹಿ ನಃ ಶರಣಾಪನ್ನಾಂಸ್ತ್ರೈಲೋಕ್ಯದಹನಾದ್ವಿಷಾತ್ ॥ ೨೧ ॥

ತ್ವಮೇಕಃ ಸರ್ವಜಗತ ಈಶ್ವರೋ ಬಂಧಮೋಕ್ಷಯೋಃ ।
ತಂ ತ್ವಾಮರ್ಚಂತಿ ಕುಶಲಾಃ ಪ್ರಪನ್ನಾರ್ತಿಹರಂ ಗುರುಮ್ ॥ ೨೨ ॥

ಗುಣಮಯ್ಯಾ ಸ್ವಶಕ್ತ್ಯಾಸ್ಯ ಸರ್ಗಸ್ಥಿತ್ಯಪ್ಯಯಾನ್ವಿಭೋ ।
ಧತ್ಸೇ ಯದಾ ಸ್ವದೃಗ್ಭೂಮನ್ಬ್ರಹ್ಮವಿಷ್ಣುಶಿವಾಭಿಧಾಮ್ ॥ ೨೩ ॥

ತ್ವಂ ಬ್ರಹ್ಮ ಪರಮಂ ಗುಹ್ಯಂ ಸದಸದ್ಭಾವಭಾವನಃ ।
ನಾನಾಶಕ್ತಿಭಿರಾಭಾತಸ್ತ್ವಮಾತ್ಮಾ ಜಗದೀಶ್ವರಃ ॥ ೨೪ ॥

ತ್ವಂ ಶಬ್ದಯೋನಿರ್ಜಗದಾದಿರಾತ್ಮಾ
ಪ್ರಾಣೇಂದ್ರಿಯದ್ರವ್ಯಗುಣಸ್ವಭಾವಃ ।
ಕಾಲಃ ಕ್ರತುಃ ಸತ್ಯಮೃತಂ ಚ ಧರ್ಮ-
ಸ್ತ್ವಯ್ಯಕ್ಷರಂ ಯತ್ತ್ರಿವೃದಾಮನಂತಿ ॥ ೨೫ ॥

ಅಗ್ನಿರ್ಮುಖಂ ತೇಽಖಿಲದೇವತಾತ್ಮಾ
ಕ್ಷಿತಿಂ ವಿದುರ್ಲೋಕಭವಾಂಘ್ರಿಪಂಕಜಮ್ ।
ಕಾಲಂ ಗತಿಂ ತೇಽಖಿಲದೇವತಾತ್ಮನೋ
ದಿಶಶ್ಚ ಕರ್ಣೌ ರಸನಂ ಜಲೇಶಮ್ ॥ ೨೬ ॥

ನಾಭಿರ್ನಭಸ್ತೇ ಶ್ವಸನಂ ನಭಸ್ವಾ-
ನ್ಸೂರ್ಯಶ್ಚ ಚಕ್ಷೂಂಷಿ ಜಲಂ ಸ್ಮ ರೇತಃ ।
ಪರಾವರಾತ್ಮಾಶ್ರಯಣಂ ತವಾತ್ಮಾ
ಸೋಮೋ ಮನೋ ದ್ಯೌರ್ಭಗವನ್ ಶಿರಸ್ತೇ ॥ ೨೭ ॥

ತ್ತಿದ್ದರು. ಅವನು ಅಲ್ಲಿ ಮೂರುಲೋಕಗಳ ಅಭ್ಯುದಯಕ್ಕಾಗಿ ಹಾಗೂ ಮೋಕ್ಷಕ್ಕಾಗಿ ತಪಸ್ಸು ಮಾಡುತ್ತಿದ್ದನು. ಅಂತಹ ಪರಮೇಶ್ವರನನ್ನು ಪ್ರಜಾಪತಿಗಳು ದರ್ಶಿಸುತ್ತಾ, ಸ್ತುತಿಸುತ್ತಾ ಸಾಷ್ಟಾಂಗ ಪ್ರಣಾಮಮಾಡಿದರು. ॥ ೨೦ ॥

ಪ್ರಜಾಪತಿಗಳು ಭಗವಾನ್ ಶಂಕರನನ್ನು ಸ್ತುತಿಸುತ್ತಿದ್ದಾರೆ – ಓ ದೇವದೇವನೇ ! ಮಹಾದೇವನೇ ! ಸಕಲ ಪ್ರಾಣಿಗಳಲ್ಲಿಯೂ ಆತ್ಮ ರೂಪದಲ್ಲಿರುವವನೇ ! ಪ್ರಾಣಿಗಳನ್ನು ಸೃಷ್ಟಿಸುವವನೇ ! ಮೂರು ಲೋಕಗಳನ್ನೂ ಸುಡುತ್ತಿರುವ ಈ ಮಹಾವಿಷದಿಂದ ಶರಣಾಗತ ರಾಗಿರುವ ನಮ್ಮನ್ನು ರಕ್ಷಿಸು. ॥ ೨೧ ॥ ಪರಮೇಶ್ವರನೇ ! ಸಮಸ್ತ ಲೋಕಗಳ, ಪ್ರಾಣಿಗಳ ಬಂಧನ ಮತ್ತು ಮೋಕ್ಷಕ್ಕೆ ನೀನೊಬ್ಬನೇ ಒಡೆಯನು. ಆದ್ದರಿಂದ ಕುಶಲಮತಿಗಳಾದರೂ ಶರಣಾಗತರ ಕಷ್ಟಗಳನ್ನು ಪರಿಹರಿಸುವ ಲೋಕಗುರುವಾದ ನಿನ್ನನ್ನೇ ಆರಾಧಿ ಸುತ್ತಾರೆ. ॥ ೨೨ ॥ ಪ್ರಭೋ ! ನಿನ್ನ ಗುಣಮಯ ಶಕ್ತಿಯಿಂದ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವುದಕ್ಕಾಗಿ ನೀನು ಅನಂತನೂ, ಏಕರಸನೂ ಆಗಿದ್ದರೂ ಬ್ರಹ್ಮಾ, ವಿಷ್ಣು, ಶಿವ ಮುಂತಾದ ನಾಮಗಳನ್ನು ಧರಿಸಿಕೊಂಡಿರುವೆ. ॥ ೨೩ ॥ ದೇವ ದೇವನೇ ! ನೀನು ಅತಿಗುಹ್ಯವಾದ ಬ್ರಹ್ಮತತ್ತ್ವವೇ ಆಗಿರುವೆ. ಕಾರ್ಯ-ಕಾರಣರೂಪದಿಂದ ದೇವತೆಗಳನ್ನೂ, ಮನುಷ್ಯರನ್ನೂ, ಪಶುಪಕ್ಷಿಗಳನ್ನೂ ಸೃಷ್ಟಿಸಿ ಪೋಷಿಸುವವನೂ ನೀನೇ ಆಗಿರುವೆ. ಅನೇಕ ಶಕ್ತಿಗಳ ರೂಪದಲ್ಲಿಯೂ ಕಾಣಿಸಿಕೊಳ್ಳುವೆ. ಸಕಲ ಪ್ರಾಣಿಗಳ ಆತ್ಮಸ್ವರೂಪನೂ ಆಗಿರುವ ನೀನು ಜಗದೀಶ್ವರನೂ ಆಗಿರುವೆ. ॥ ೨೪ ॥ ಮಹಾದೇವನೇ ! ಸಮಸ್ತ ವೇದಗಳು ನಿನ್ನಿಂದಲೇ ಪ್ರಕಟ ವಾಗಿವೆ. ಆದರಿಂದ ನೀನು ಸಮಸ್ತ ಜ್ಞಾನಗಳಿಗೂ ಮೂಲಸ್ರೋತ ನಾಗಿ ಜ್ಞಾನಸ್ವರೂಪನೇ ಆಗಿರುವೆ. ಜಗತ್ತಿನ ಆದಿಕಾರಣ ಮಹ ತ್ತತ್ತ್ವ ಮತ್ತು ತ್ರಿವಿಧ ಅಹಂಕಾರವೂ ನೀನೇ ಆಗಿರುವೆ. ಪ್ರಾಣ, ಇಂದ್ರಿಯಗಳು, ಪಂಚಭೂತಗಳು ಹಾಗೂ ಶಬ್ದಾದಿ ವಿಷಯಗಳ ಬೇರೆ-ಬೇರೆ ಸ್ವಭಾವಗಳೂ, ಮೂಲಕಾರಣವೂ ನೀನೇ ಆಗಿರುವೆ. ಪ್ರಾಣಿಗಳನ್ನು ವೃದ್ಧಿಗೊಳಿಸುವ ಮತ್ತು ವಿನಾಶಗೊಳಿಸುವ ಕಾಲನೂ ನೀನೇ ಆಗಿರುವೆ. ಪ್ರಾಣಿಗಳಿಗೆ ಕಲ್ಯಾಣವನ್ನುಂಟುಮಾಡುವ ಯಜ್ಞಸ್ವರೂಪನೂ ನೀನೇ. ಸತ್ಯ ಮತ್ತು ಋತಗಳೂ ನೀನೇ. ಧರ್ಮವೆಂಬುದು ನಿನ್ನ ಸ್ವರೂಪವೇ ಆಗಿದೆ. ಅ-ಉ-ಮ-ಈ ಮೂರು ಅಕ್ಷರಗಳಿಂದ ಯುಕ್ತವಾದ ಓಂಕಾರಸ್ವರೂಪನೂ ನೀನೇ. ತ್ರಿಗುಣಾತ್ಮಕವಾದ ಪ್ರಕೃತಿಯೂ ನೀನೇ. ಹೀಗೆ ವೇದವಾದಿಗಳಾದ ಮಹಾತ್ಮರು ನಿನ್ನ ಗುಣಗಾನ ಮಾಡುತ್ತಾರೆ. ॥ ೨೫ ॥ ಮೂರು ಲೋಕಗಳಿಗೂ ಅಭ್ಯುದಯವನ್ನು ಮಾಡುವ ಶಂಕರನೇ ! ಸರ್ವ ದೇವ ಸ್ವರೂಪನಾದ ಅಗ್ನಿಯು ನಿನಗೆ ಮುಖವಾಗಿದ್ದಾನೆ. ಈ ಭೂಮಂಡಲವು ನಿನ್ನ ಚರಣಕಮಲವಾಗಿದೆ. ನೀನು ಸಕಲ ದೇವತಾಸ್ವರೂಪನಾಗಿರುವೆ. ಈ ಕಾಲವೇ ನಿನ್ನ ಗತಿಯಾಗಿದೆ. ದಿಕ್ಕುಗಳೇ ನಿನ್ನ ಕಿವಿಗಳಾಗಿವೆ. ವರುಣನೇ ನಿನ್ನ ರಸನೇಂದ್ರಿಯ ನಾಗಿದ್ದಾನೆ. ॥ ೨೬ ॥ ಭಗವಂತನೇ ! ಆಕಾಶವೇ ನಿನ್ನ ನಾಭಿಯು. ವಾಯುವು ಉಸಿರಾಗಿದೆ. ಸೂರ್ಯನು ಕಣ್ಣುಗಳಾಗಿದ್ದಾನೆ. ಜಲವೇ ನಿನ್ನ ರೇತಸ್ಸು. ನಿನ್ನ ಅಹಂಕಾರವೇ ಉಚ್ಚ-ನೀಚ ಸಮಸ್ತ ಪ್ರಾಣಿಗಳಿಗೂ ಪರಮಾಶ್ರಯವಾಗಿದೆ. ಚಂದ್ರನೇ ನಿನ್ನ ಮನಸ್ಸು ಸ್ವರ್ಗವೇ ನಿನ್ನ ತಲೆಯಾಗಿದೆ. ॥ ೨೭ ॥

ಕುಕ್ಷಿಃ ಸಮುದ್ರಾ ಗಿರಯೋಽಸ್ಥಿ ಸಂಘಾ
ರೋಮಾಣಿ ಸರ್ವೌಷಧೀವೀರುಧಸ್ತೇ ।
ಛಂದಾಂಸಿ ಸಾಕ್ಷಾತ್ತವ ಸಪ್ತ ಧಾತವ-
ಸ್ತ್ರಯೀಮಯಾತ್ಮನ್ ಹೃದಯಂ ಸರ್ವಧರ್ಮಃ ॥ ೨೮ ॥

ಮುಖಾನಿ ಪಂಚೋಪನಿಷದಸ್ತವೇಶ
ಯೈಸ್ತ್ರಿಂಶದಷ್ಟೋತ್ತರಮಂತ್ರವರ್ಗಃ ।
ಯತ್ತಚ್ಛಿವಾಖ್ಯಂ ಪರಮಾರ್ಥತತ್ತ್ವಂ
ದೇವ ಸ್ವಯಂಜ್ಯೋತಿರವಸ್ಥಿತಿಸ್ತೇ ॥ ೨೯ ॥

ಛಾಯಾ ತ್ವಧರ್ಮೋರ್ಮಿಷು ಯೈರ್ವಿಸರ್ಗೋ
ನೇತ್ರತ್ರಯಂ ಸತ್ತ್ವರಜಸ್ತಮಾಂಸಿ ।
ಸಾಂಖ್ಯಾತ್ಮನಃ ಶಾಸ್ತ್ರಕೃತಸ್ತವೇಕ್ಷಾ
ಛಂದೋಮಯೋ ದೇವ ಋಷಿಃ ಪುರಾಣಃ ॥ ೩೦ ॥

ನ ತೇ ಗಿರಿತ್ರಾಖಿಲಲೋಕಪಾಲ-
ವಿರಿಂಚಿವೈಕುಂಠಸುರೇಂದ್ರಗಮ್ಯಮ್ ।
ಜ್ಯೋತಿಃ ಪರಂ ಯತ್ರ ರಜಸ್ತಮಶ್ಚ
ಸತ್ತ್ವಂ ನ ಯದ್ಬ್ರಹ್ಮ ನಿರಸ್ತಭೇದಮ್ ॥ ೩೧ ॥

ಕಾಮಾಧ್ವರತ್ರಿಪುರಕಾಲಗರಾದ್ಯನೇಕ-
ಭೂತದ್ರುಹಃ ಕ್ಷಪಯತಃ ಸ್ತುತಯೇ ನ ತತ್ತೇ ।
ಯಸ್ತ್ವಂತಕಾಲ ಇದಮಾತ್ಮಕೃತಂ ಸ್ವನೇತ್ರ-
ವಹ್ನಿಸ್ಫುಲಿಂಗಶಿಖಯಾ ಭಸಿತಂ ನ ವೇದ ॥ ೩೨ ॥

ಯೇ ತ್ವಾತ್ಮರಾಮಗುರುಭಿರ್ಹೃದಿ ಚಿಂತಿತಾಂಘ್ರಿ-
ದ್ವಂದ್ವಂ ಚರಂತಮುಮಯಾ ತಪಸಾಭಿತಪ್ತಮ್ ।
ಕತ್ಥಂತ ಉಗ್ರಪರುಷಂ ನಿರತಂ ಶ್ಮಶಾನೇ
ತೇ ನೂನಮೂತಿಮವಿದಂಸ್ತವ ಹಾತಲಜ್ಜಾಃ ॥ ೩೩ ॥

ವೇದಸ್ವರೂಪನಾದ ಭಗವಂತನೇ! ಸಮುದ್ರಗಳೇ ನಿನಗೆ ಹೊಟ್ಟೆಯಾಗಿದೆ. ಪರ್ವತಗಳೇ ಮೂಳೆಯಾಗಿವೆ. ಎಲ್ಲ ಪ್ರಕಾರದ ಔಷಧಿಗಳೂ, ಹುಲ್ಲುಗಳೂ ನಿನ್ನ ರೋಮವಾಗಿವೆ. ಗಾಯತ್ರಿಯೇ ಮೊದಲಾದ ಛಂದಸ್ಸುಗಳೇ ನಿನ್ನ ಸಪ್ತಧಾತುಗಳು. ಸಮಸ್ತ ಧರ್ಮಗಳೂ ನಿನ್ನ ಹೃದಯವೇ ಆಗಿದೆ. ॥ ೨೮ ॥ ಸರ್ವೇಶನೇ! ಸದ್ಯೋಜಾತಾದಿ ಐದು ಉಪನಿಷತ್ತು ಮಂತ್ರಗಳೇ ನಿನ್ನ ತತ್ಪುರುಷ, ಅಘೋರ, ಸದ್ಯೋಜಾತ, ವಾಮದೇವ ಮತ್ತು ಈಶಾನವೆಂಬ ಐದು ಮುಖಗಳಾಗಿವೆ. ಅವುಗಳ ಪದಚ್ಛೇದದಿಂದಲೇ ಮೂವತ್ತೆಂಟು ಕಲಾತ್ಮಕ ಮಂತ್ರಗಳು ಉಂಟಾಗುತ್ತವೆ. ನೀನು ಸಮಸ್ತ ಪ್ರಪಂಚದಿಂದ ಉಪರತನಾಗಿ ನಿನ್ನ ಸ್ವರೂಪದಲ್ಲಿ ನೆಲೆಸಿದಾಗ ಅದೇ ಸ್ಥಿತಿಯ ಹೆಸರು 'ಶಿವ' ಎಂದಾಗಿದೆ. ವಾಸ್ತವವಾಗಿ ಅದೇ ಸ್ವಯಂ ಪ್ರಕಾಶ ಪರಮಾರ್ಥತತ್ತ್ವವಾಗಿದೆ. ॥ ೨೯ ॥ ಅಧರ್ಮಕ್ಕೆ ಮೂಲವಾದ ದಂಭಾಭಿಮಾನ ಅಹಂಕಾರಗಳೆಂಬ ತರಂಗಗಳೇ ನಿನ್ನ ನೆರಳಾಗಿದೆ. ವಿಧ-ವಿಧವಾದ ಸೃಷ್ಟಿಗೆ ಕಾರಣವಾಗಿರುವಂತಹ ಸತ್ತ್ವ-ರಜಸ್ತಮೋಗುಣಗಳೇ ನಿನ್ನ ಮೂರು ಕಣ್ಣುಗಳಾಗಿವೆ. ಪ್ರಭುವೇ! ಗಾಯತ್ರಿಯೇ ಮುಂತಾದ ಛಂದೋರೂಪವಾದ ಸನಾತನ ವೇದಗಳು ನಿನ್ನ ಸ್ವರೂಪವನ್ನೇ ಪ್ರತಿಪಾದಿಸುತ್ತವೆ. ಏಕೆಂದರೆ ನೀನೇ ಸಾಂಖ್ಯ ಮುಂತಾದ ಸಮಸ್ತ ಶಾಸ್ತ್ರಗಳ ರೂಪದಲ್ಲಿ ಸ್ಥಿತನಾಗಿದ್ದು ಅವುಗಳ ಕರ್ತೃವೂ ನೀನೇ ಆಗಿರುವೆ. ॥ ೩೦ ॥ ಗಿರಿತ್ರನೇ! ಪರಮೇಶ್ವರನೇ! ನೀನು ಪರಂಜ್ಯೋತಿ ಸ್ವರೂಪನು. ಪರಬ್ರಹ್ಮ ಪರಾತ್ಮತತ್ತ್ವವೇ ಆಗಿರುವೆ. ಸಚ್ಚಿದಾನಂದ ಸ್ವರೂಪನೂ ನೀನೇ. ಪರಂಜ್ಯೋತಿ ಸ್ವರೂಪನಾದ ನಿನ್ನಲ್ಲಿ ಸತ್ತ್ವರಜಸ್ತಮೋಗುಣಗಳಾಗಲೀ, ಯಾವುದೇ ಭೇದಭಾವವಾಗಲೀ ಇಲ್ಲ. ಅಂತಹ ನಿನ್ನ ಚಿದಾನಂದಘನ ಸ್ವರೂಪವನ್ನು ಲೋಕಪಾಲಕರಾಗಲೀ, ಬ್ರಹ್ಮೇಂದ್ರವಿಷ್ಣುಗಳಾಗಲೀ ಅರಿಯರು. ॥ ೩೧ ॥ ಕಾಮದಹನ, ದಕ್ಷಯಜ್ಞ ವಿಧ್ವಂಸ, ತ್ರಿಪುರಾಸುರಸಂಹಾರ, (ಈಗ ನಮ್ಮ ಪ್ರಾರ್ಥನೆಯಂತೆ ನಡೆಯಲಿರುವ) ಕಾಲಕೂಟವಿಷಭಕ್ಷಣ, ಜೀವದ್ರೋಹಿ ಅನೇಕ ರಾಕ್ಷಸರ ಸಂಹಾರ ಮುಂತಾದ ಪ್ರಪಂಚಕ್ಕೆ ಹಿತವಾದ ಕಾರ್ಯಗಳನ್ನು ನೀನು ಮಾಡಿರುವೆ. ಇದು ನಿನ್ನನ್ನು ಸ್ತುತಿಮಾಡುವುದಕ್ಕಾಗಿ ಹೇಳುತ್ತಿರುವ ಮಾತಲ್ಲ. ಏಕೆಂದರೆ, ಪ್ರಳಯಕಾಲದಲ್ಲಿ ನೀನೇ ಸೃಷ್ಟಿಸಿದ ಈ ಜಗತ್ತು ನಿನ್ನ ಕಣ್ಣಿಂದ ಹೊರಡುವ ಅಗ್ನಿಯ ಕಿಡಿಯ ಜ್ವಾಲೆಗಳಿಂದ ಕ್ಷಣಮಾತ್ರದಲ್ಲಿ ಭಸ್ಮವಾಗಿ ಹೋಗುತ್ತದೆ. ಸದಾ ಧ್ಯಾನಮಗ್ನನಾಗಿರುವ ನೀನು ಈ ಕಾರ್ಯಗಳ ಸಾಧನೆಯ ಬಗ್ಗೆ ಯೋಚಿಸುವುದೇ ಇಲ್ಲ. ನಿನ್ನ ಪರಮಾದ್ಭುತವಾದ ಶಕ್ತಿಯಿಂದ ತಾನೇ ತಾನಾಗಿ ಎಲ್ಲವೂ ನಡೆದುಹೋಗುತ್ತದೆ. ॥ ೩೨ ॥ ಜೀವನ್ಮುಕ್ತರೂ, ಆತ್ಮಾರಾಮರೂ ಆದ ಗುರುಜನರು ತಮ್ಮ ಹೃದಯಕಮಲದಲ್ಲಿ ನಿನ್ನ ದಿವ್ಯವಾದ ಪಾದದ್ವಯಗಳನ್ನು ಧ್ಯಾನಮಾಡುತ್ತಿರುತ್ತಾರೆ. ನೀನೂ ಕೂಡ ನಿರಂತರ ಜ್ಞಾನ, ತಪಸ್ಸಿನಲ್ಲೇ ಲೀನನಾಗಿರುವೆ. ಅಂತಹ ನಿನ್ನನ್ನು ಕೆಲವರು ಕಾಮಾಸಕ್ತನೆಂದೂ ಸದಾ ಉಮೆಯೊಡನೆ ತಿರುಗುತ್ತಿರುವನೆಂದೂ ಹೇಳುತ್ತಾರೆ. ಯಾವಾಗಲೂ ಸ್ಮಶಾನದಲ್ಲೇ ವಾಸಮಾಡುವ ನಿನ್ನನ್ನು ಉಗ್ರಪುರುಷನೆಂದೂ ತೆಗಳುತ್ತಾರೆ. ನಾಚಿಕೆಗೆಟ್ಟು ಹೀಗೆ ಹೇಳುವ ಅವರಿಗೆ ನಿನ್ನ ಮಹಿಮೆಯೇನಾದರೂ ತಿಳಿದಿರುವುದೇ? ॥ ೩೩ ॥

ತತ್ತಸ್ಯ ತೇ ಸದಸತೋಃ ಪರತಃ ಪರಸ್ಯ
ನಾಂಜಃ ಸ್ವರೂಪಗಮನೇ ಪ್ರಭವಂತಿ ಭೂಮ್ನಃ ।
ಬ್ರಹ್ಮಾದಯಃ ಕಿಮುತ ಸಂಸ್ತವನೇ ವಯಂ ತು
ತತ್ಸರ್ಗಸರ್ಗವಿಷಯಾ ಅಪಿ ಶಕ್ತಿಮಾತ್ರಮ್ ॥ ೩೪ ॥

ಏತತ್ಪರಂ ಪ್ರಪಶ್ಯಾಮೋ ನ ಪರಂ ತೇ ಮಹೇಶ್ವರ ।
ಮೃಡನಾಯ ಹಿ ಲೋಕಸ್ಯ ವ್ಯಕ್ತಿಸ್ತೇಽವ್ಯಕ್ತಕರ್ಮಣಃ ॥ ೩೫ ॥

*ಶ್ರೀಶುಕ ಉವಾಚ*

ತದ್ವೀಕ್ಷ್ಯ ವ್ಯಸನಂ ತಾಸಾಂ ಕೃಪಯಾ ಭೃಶಪೀಡಿತಃ ।
ಸರ್ವಭೂತಸುಹೃದ್ದೇವ ಇದಮಾಹ ಸತೀಂ ಪ್ರಿಯಾಮ್ ॥ ೩೬ ॥

*ಶ್ರೀಶಿವ ಉವಾಚ*

ಅಹೋ ಬತ ಭವಾನ್ಯೇತತ್ಪ್ರಜಾನಾಂ ಪಶ್ಯ ವೈಶಸಮ್ ।
ಕ್ಷೀರೋದಮಥನೋದ್ಭೂತಾತ್ಕಾಲಕೂಟಾದುಪಸ್ಥಿತಮ್ ॥ ೩೭ ॥

ಆಸಾಂ ಪ್ರಾಣಪರೀಪ್ಸೂನಾಂ ವಿಧೇಯಮಭಯಂ ಹಿ ಮೇ ।
ಏತಾವಾನ್ಹಿ ಪ್ರಭೋರರ್ಥೋ ಯದ್ದೀನಪರಿಪಾಲನಮ್ ॥ ೩೮ ॥

ಪ್ರಾಣೈಃ ಸ್ವೈಃ ಪ್ರಾಣಿನಃ ಪಾಂತಿ ಸಾಧವಃ ಕ್ಷಣಭಂಗುರೈಃ ।
ಬದ್ಧವೈರೇಷು ಭೂತೇಷು ಮೋಹಿತೇಷ್ವಾತ್ಮಮಾಯಯಾ ॥ ೩೯ ॥

ಪುಂಸಃ ಕೃಪಯತೋ ಭದ್ರೇ ಸರ್ವಾತ್ಮಾ ಪ್ರೀಯತೇ ಹರಿಃ ।
ಪ್ರೀತೇ ಹರೌ ಭಗವತಿ ಪ್ರೀಯೇಽಹಂ ಸಚರಾಚರಃ ।
ತಸ್ಮಾದಿದಂ ಗರಂ ಭುಂಜೇ ಪ್ರಜಾನಾಂ ಸ್ವಸ್ತಿರಸ್ತು ಮೇ ॥ ೪೦ ॥

*ಶ್ರೀಶುಕ ಉವಾಚ*

ಏವಮಾಮಂತ್ರ್ಯ ಭಗವಾನ್ಭವಾನೀಂ ವಿಶ್ವಭಾವನಃ ।
ತದ್ವಿಷಂ ಜಗ್ಧುಮಾರೇಭೇ ಪ್ರಭಾವಜ್ಞಾನ್ವಮೋದತ ॥ ೪೧ ॥

ಪ್ರಭುವೇ! ಕಾರ್ಯ-ಕಾರಣವಾದ ಈ ಜಗತ್ತಿನ ಆಚೆ ಮಾಯೆ ಇದೆ. ಆ ಮಾಯೆಗೂ ಅತೀತನಾಗಿ ನೀನಿರುವೆ. ನಿನ್ನ ಅನಂತಸ್ವರೂಪದ ಸಾಕ್ಷಾತ್ಕಾರ ಮಾಡಿಕೊಳ್ಳಲು ಬ್ರಹ್ಮಾದಿಗಳೂ ಅಸಮರ್ಥರೇ ಸರಿ. ನಿನ್ನ ಸ್ವರೂಪವೇ ತಿಳಿಯದಿದ್ದರೆ ಸ್ತುತಿಮಾಡುವುದಾದರೂ ಹೇಗೆ ಸಾಧ್ಯ? ಹೀಗಿರುವಾಗ ಬ್ರಹ್ಮನ ಅಂಶಾಂಶಸಂಭೂತರಾಗಿರುವ ನಾವೇನು ಮಾಡಬಲ್ಲೆವು? ಆದರೂ ನಮ್ಮ ಶಕ್ತಿಗನುಸಾರವಾಗಿ ನಿನ್ನ ಗುಣಗಾನವನ್ನು ಮಾಡುತ್ತಿದ್ದೇವೆ. ಇದರಿಂದಲೇ ತೃಪ್ತನಾಗಿ ವರದಾನವನ್ನು ಮಾಡು. ॥ ೩೪ ॥ ನಾವಾದರೋ ಕೇವಲ ನಿನ್ನ ಈ ಲೀಲಾವಿಹಾರೀ ಸ್ವರೂಪವನ್ನೇ ನೋಡುತ್ತಿದ್ದೇವೆ. ನಿನ್ನ ಪರಮಸ್ವರೂಪವನ್ನು ನಾವು ತಿಳಿಯಲಾರೆವು. ಮಹೇಶ್ವರಾ! ನಿನ್ನ ಲೀಲೆಗಳು ಅವ್ಯಕ್ತವಾಗಿದ್ದರೂ ಜಗತ್ತಿನ ಕಲ್ಯಾಣಕ್ಕಾಗಿಯೇ ನೀನು ವ್ಯಕ್ತರೂಪದಿಂದಲೂ ಇರುತ್ತೀಯೇ ॥ ೩೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಪ್ರಜೆಗಳ ಈ ಸಂಕಟವನ್ನು ನೋಡಿ ಸಮಸ್ತ ಪ್ರಾಣಿಗಳ ಹಿತೈಷಿಯೂ, ದೇವಾಧಿದೇವನೂ, ಕರುಣಾಮಯನೂ ಆದ ಭಗವಾನ್ ಶಂಕರನು ಹೃದಯದಲ್ಲಿ ವ್ಯಥೆಗೊಂಡು ಪ್ರೇಯಸಿಯಾದ ಪಾರ್ವತಿಯೊಡನೆ ಹೀಗೆಂದನು. ॥ ೩೬ ॥

**ಶ್ರೀಶಿವನು ಹೇಳಿದನು** – ದೇವಿ! ಅಯ್ಯೋ ಪಾಪ! ಕ್ಷೀರಸಮುದ್ರವನ್ನು ಕಡೆಯುವಿಕೆಯಿಂದ ಹುಟ್ಟಿದ ಮಹಾಘೋರವಾದ ಕಾಲಕೂಟವಿಷದಿಂದ ಪ್ರಜೆಗಳಿಗುಂಟಾದ ದುಃಖವನ್ನಾದರೂ ನೋಡು. ॥ ೩೭ ॥ ಈ ಬಡಪಾಯಿಗಳು ಹೇಗಾದರೂ ತಮ್ಮ ಪ್ರಾಣಗಳನ್ನು ಉಳಿಸಿಕೊಳ್ಳಲು ಬಯಸುತ್ತಾರೆ. ಇವರನ್ನು ನಿರ್ಭಯರನ್ನಾಗಿಸುವುದೇ ಈಗ ನನ್ನ ಕರ್ತವ್ಯವಾಗಿದೆ. ಸಮರ್ಥನಾದ ಪ್ರಭುವಿಗೆ ದೀನರಾದವರ ಸಂಕಟವನ್ನು ಪರಿಹರಿಸುವುದೇ ಜೀವನದ ಮುಖ್ಯ ಪ್ರಯೋಜನವಾಗಿದೆ. ॥ ೩೮ ॥ ಸಜ್ಜನರಾದವರು ತಮ್ಮ ಕ್ಷಣಭಂಗುರವಾದ ಪ್ರಾಣಗಳನ್ನು ಬಲಿಕೊಟ್ಟಾದರೂ ಬೇರೆಯವರ ಪ್ರಾಣಗಳನ್ನು ರಕ್ಷಿಸುತ್ತಾರೆ. ಕಲ್ಯಾಣೀ! ತಮ್ಮದೇ ಆದ ಮೋಹದ ಮಾಯೆಯಲ್ಲಿ ಸಿಕ್ಕಿಹಾಕಿಕೊಂಡು ಪ್ರಪಂಚದ ಪ್ರಾಣಿಗಳು ಮೋಹಿತರಾಗಿ ಪರಸ್ಪರವಾಗಿ ವೈರಕಟ್ಟಿಕೊಳ್ಳುವರು. ॥ ೩೯ ॥ ಸರ್ವಮಂಗಳೇ! ಇಂತಹವರ ಮೇಲೆ ಕೃಪೆ ಮಾಡುವವನ ಮೇಲೆ ಸರ್ವಾತ್ಮನಾದ ಶ್ರೀಹರಿಯು ಪ್ರಸನ್ನನಾಗುವನು. ಭಗವಂತನು ಪ್ರಸನ್ನನಾದಾಗ ಚರಾಚರ ಜಗತ್ತಿನೊಂದಿಗೆ ನಾನೂ ಪ್ರಸನ್ನನಾಗುತ್ತೇನೆ. ಅದಕ್ಕಾಗಿ ಈಗಿಂದೀಗಲೇ ನಾನು ಈ ವಿಷವನ್ನು ಕುಡಿಯುತ್ತೇನೆ. ಇದರಿಂದ ನನ್ನ ಪ್ರಜೆಗಳಿಗೆ ಕಲ್ಯಾಣವುಂಟಾಗಲೀ; ಲೋಕಕ್ಕೆ ಕ್ಷೇಮವಾಗಲೀ. ॥ ೪೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ವಿಶ್ವದ ಜೀವನದಾತನಾದ ಭಗವಾನ್ ಶಂಕರನು ಹೀಗೆ ಪಾರ್ವತಿಗೆ ಹೇಳಿ, ಅವಳ ಸಮ್ಮತಿಯನ್ನು ಪಡೆದು ಆ ಹಾಲಾಹಲವಿಷವನ್ನು ಕುಡಿಯಲು ಸಿದ್ಧನಾದನು. ಶಿವನ ಪ್ರಭಾವವನ್ನು ಚೆನ್ನಾಗಿ ಅರಿತಿದ್ದ ಪಾರ್ವತಿಯು ಹೃತ್ಪೂರ್ವಕವಾಗಿ ಅದಕ್ಕೆ ಸಮ್ಮತಿಸಿದಳು. ॥ ೪೧ ॥

**ತತಃ ಕರತಲೀಕೃತ್ಯ ವ್ಯಾಪಿ ಹಾಲಾಹಲಂ ವಿಷಮ್ ।**
**ಅಭಕ್ಷಯನ್ಮಹಾದೇವಃ ಕೃಪಯಾ ಭೂತಭಾವನಃ ॥ ೪೨ ॥**

**ತಸ್ಯಾಪಿ ದರ್ಶಯಾಮಾಸ ಸ್ವವೀರ್ಯಂ ಜಲಕಲ್ಮಷಃ ।**
**ಯಚ್ಚಕಾರ ಗಲೇ ನೀಲಂ ತಚ್ಚ ಸಾಧೋರ್ವಿಭೂಷಣಮ್ ॥ ೪೩ ॥**

**ತಪ್ಯಂತೇ ಲೋಕತಾಪೇನ ಸಾಧವಃ ಪ್ರಾಯಶೋ ಜನಾಃ ।**
**ಪರಮಾರಾಧನಂ ತದ್ಧಿ ಪುರುಷಸ್ಯಾಖಿಲಾತ್ಮನಃ ॥ ೪೪ ॥**

**ನಿಶಮ್ಯ ಕರ್ಮ ತಚ್ಛಂಭೋರ್ದೇವದೇವಸ್ಯ ಮೀಢುಷಃ ।**
**ಪ್ರಜಾ ದಾಕ್ಷಾಯಣೀ ಬ್ರಹ್ಮಾ ವೈಕುಂಠಶ್ಚ ಶಶಂಸಿರೇ ॥ ೪೫ ॥**

**ಪ್ರಸ್ಕನ್ನಂ ಪಿಬತಃ ಪಾಣೇರ್ಯತ್ಕಿಂಚಿಜ್ಜಗೃಹುಃ ಸ್ಮ ತತ್ ।**
**ವೃಶ್ಚಿಕಾಹಿವಿಷೌಷಧ್ಯೋ ದಂದಶೂಕಾಶ್ಚ ಯೇಽಪರೇ ॥ ೪೬ ॥**

ಪ್ರಾಣಿಗಳ ಹಿತೈಷಿಯಾದ ಭಗವಾನ್ ಶಂಕರನ ಶಕ್ತಿಯಿಂದಲೇ ಸಮಸ್ತ ಪ್ರಾಣಿಗಳು ಜೀವಿಸಿರುತ್ತಾರೆ. ಅವನು ಆ ತೀಕ್ಷ್ಣವಾದ ಹಾಲಾಹಲವಿಷವನ್ನು ತನ್ನ ಅಂಗೈಯಲ್ಲಿ ಎತ್ತಿಕೊಂಡು ಕುಡಿದು ಬಿಟ್ಟನು. ॥ ೪೨ ॥ ಜಲಕ್ಕೆ ಕಲ್ಮಷಪ್ರಾಯವಾಗಿದ್ದ ಆ ವಿಷವು ಪರಶಿವನ ಕೊರಳಲ್ಲಿ ಕಪ್ಪನ್ನುಂಟುಮಾಡಿ ತನ್ನ ಶಕ್ತಿಯನ್ನು ಪ್ರದರ್ಶಿಸಿತು. ಆದರೆ ಆ ನೀಲಛಾಯೆಯೂ ಜಗದ್ರಕ್ಷಕನಾದ ಪರಮೇಶ್ವರನಿಗೆ ಅಲಂಕಾರವೇ ಆಯಿತು. ॥ ೪೩ ॥ ಪರೋಪಕಾರೀ ಸಜ್ಜನರು ಪ್ರಾಯಶಃ ಪ್ರಜೆಗಳ ದುಃಖವನ್ನು ನಿವಾರಿಸಲಿಕ್ಕಾಗಿ ಸ್ವತಃ ದುಃಖವನ್ನು ಸ್ವೀಕರಿಸುತ್ತಾರೆ. ಆದರೆ ಅಂತಹ ಸೇವಾಕಾರ್ಯವು ಸರ್ವಾತ್ಮನಾದ ಪರಮಪುರುಷನ ಆರಾಧನೆಯೇ ಆಗುತ್ತದೆ. ॥ ೪೪ ॥

ದೇವಾಧಿದೇವನಾದ ಭಗವಾನ್ ಶಂಕರನು ಎಲ್ಲರ ಕಾಮನೆಗಳನ್ನು ಪೂರ್ಣಮಾಡುವವನಾಗಿದ್ದಾನೆ. ಅವನ ಈ ಕಲ್ಯಾಣಕಾರೀ ಅದ್ಭುತ ಕರ್ಮವನ್ನು ಕೇಳಿ ಸಮಸ್ತ ಪ್ರಜೆ, ದಾಕ್ಷಾಯಿಣೀ, ಬ್ರಹ್ಮದೇವರು ಹಾಗೂ ಸ್ವಯಂ ಭಗವಾನವ ವಿಷ್ಣುವೂ ಕೂಡ ಅವನನ್ನು ಪ್ರಶಂಸಿಸಿದರು. ॥ ೪೫ ॥ ಭಗವಾನ್ ಶಂಕರನು ವಿಷಪಾನ ಮಾಡುವಾಗ ಅವನ ಕೈಯಿಂದ ಸ್ವಲ್ಪ ವಿಷವು ಕೆಳಗೆ ಚೆಲ್ಲಿತ್ತು. ಅದನ್ನು ಚೇಳುಗಳೂ, ಹಾವುಗಳೂ ಹಾಗೂ ಇತರ ವಿಷಜಂತುಗಳೂ, ಕೆಲವು ವಿಷೌಷಧಿಗಳೂ ಅದನ್ನು ಸ್ವೀಕರಿಸಿದವು. ॥ ೪೬ ॥

***ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ಅಮೃತಮಥನೇ ಸಪ್ತಮೋಽಧ್ಯಾಯಃ ॥ ೭ ॥**

# ಎಂಟನೆಯ ಅಧ್ಯಾಯ

## ಕ್ಷೀರಸಮುದ್ರದಲ್ಲಿ ಅಮೃತವು ಪ್ರಕಟವಾದುದು – ಭಗವಂತನ ಮೋಹಿನೀ ಅವತಾರವು

*ಶ್ರೀಶುಕ ಉವಾಚ*

**ಪೀತೇ ಗರೇ ವೃಷಾಂಕೇಣ ಪ್ರೀತಾಸ್ತೇಽಮರದಾನವಾಃ ।**
**ಮಮಂಥುಸ್ತರಸಾ ಸಿಂಧುಂ ಹವಿರ್ಧಾನೀ ತತೋಽಭವತ್ ॥ ೧ ॥**

**ತಾಮಗ್ನಿಹೋತ್ರೀಮೃಷಯೋ ಜಗೃಹುರ್ಬ್ರಹ್ಮವಾದಿನಃ ।**
**ಯಜ್ಞಸ್ಯ ದೇವಯಾನಸ್ಯ ಮೇಧ್ಯಾಯ ಹವಿಷೇ ನೃಪ ॥ ೨ ॥**

**ತತ ಉಚ್ಚೈಃಶ್ರವಾ ನಾಮ ಹಯೋಽಭೂಚ್ಚಂದ್ರಪಾಂಡುರಃ ।**
**ತಸ್ಮಿನ್ಬಲಿಃ ಸ್ಪೃಹಾಂ ಚಕ್ರೇನೇಂದ್ರ ಈಶ್ವರಶಿಕ್ಷಯಾ ॥ ೩ ॥**

**ತತ ಐರಾವತೋ ನಾಮ ವಾರಣೇಂದ್ರೋ ವಿನಿರ್ಗತಃ ।**
**ದಂತೈಶ್ಚತುರ್ಭಿಃ ಶ್ವೇತಾದ್ರೇರ್ಹರನ್ಭಗವತೋ ಮಹಿಮ್ ॥ ೪ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ವೃಷಾಂಕನಾದ ಪರಶಿವನು ಹಾಲಾಹಲವಿಷವನ್ನು ಕುಡಿಯಲಾಗಿ ದೇವ-ದಾನವರು ಸಂತೋಷಗೊಂಡರು. ಮತ್ತೆ ಅವರು ಹೊಸದಾದ ಉತ್ಸಾಹದಿಂದ ಸಮುದ್ರವನ್ನು ಕಡೆಯಲು ತೊಡಗಿದರು. ಆಗ ಕ್ಷೀರಸಾಗರದಿಂದ ಕಾಮಧೇನುವು ಪ್ರಕಟವಾದಳು. ॥ ೧ ॥ ಅವಳು ಅಗ್ನಿಹೋತ್ರದ ಸಾಮಗ್ರಿಗಳನ್ನು ಉತ್ಪನ್ನಮಾಡುವವಳಾಗಿದ್ದಳು. ಆದಕ್ಕಾಗಿ ಬ್ರಹ್ಮಲೋಕದವರೆಗೆ ತಲುಪಿಸುವ ಯಜ್ಞಗಳಿಗಾಗಿ ಉಪಯೋಗಿಸುವ ಪವಿತ್ರ ಹಾಲು, ತುಪ್ಪ ಮುಂತಾದವುಗಳನ್ನು ಪಡೆಯಲಿಕ್ಕಾಗಿ ಬ್ರಹ್ಮವಾದಿಗಳಾದ ಋಷಿಗಳು ಆಕೆಯನ್ನು ಸ್ವೀಕರಿಸಿದರು. ॥ ೨ ॥ ಬಳಿಕ ಚಂದ್ರನಂತೆ ಬಿಳುಪಾದ ಉಚ್ಚೈಶ್ರವಸ್ಸೆಂಬ ಕುದುರೆಯು ಹೊರಟಿತು. ಅದನ್ನು ಪಡೆಯಲು ಬಲಿಯು ಇಚ್ಛಿಸಿದನು. ಇಂದ್ರನು ಅದನ್ನು ಬಯಸಲಿಲ್ಲ. ಏಕೆಂದರೆ, ಭಗವಂತನು ಮೊದಲೇ ಅವನಿಗೆ ಆದೇಶಿಸಿದ್ದನು. ॥ ೩ ॥ ಬಳಿಕ ನಾಲ್ಕು ದಂತಗಳುಳ್ಳ ಶ್ರೇಷ್ಠವಾದ ಐರಾವತವೆಂಬ ಆನೆಯು ಹುಟ್ಟಿತು. ಅದರ ಉಜ್ಜ್ವಲಶೋಭೆಯು ರುದ್ರನ ಉಜ್ಜ್ವಲವಾದ ಕಾಂತಿಯಿಂದ ಕೂಡಿದ್ದ ಕೈಲಾಸವನ್ನೂ ಮೀರಿಸುವಂತಿತ್ತು. ॥ ೪ ॥

ಕೌಸ್ತುಭಾಖ್ಯಮಭೂದ್ರತ್ನಂ ಪದ್ಮರಾಗೋ ಮಹೋದಧೇಃ ।
ತಸ್ಮಿನ್ಹರಿಃ ಸ್ಪೃಹಾಂ ಚಕ್ರೇ ವಕ್ಷೋಽಲಂಕರಣೇ ಮಣೌ
॥ ೫ ॥

ತತೋಽಭವತ್ಪಾರಿಜಾತಃ ಸುರಲೋಕವಿಭೂಷಣಮ್ ।
ಪೂರಯತ್ಯರ್ಥಿನೋ ಯೋಽರ್ಥೈಃ ಶಶ್ವದ್ಭುವಿ ಯಥಾ ಭವಾನ್
॥ ೬ ॥

ತತಶ್ಚಾಪ್ಸರಸೋ ಜಾತಾ ನಿಷ್ಕಕಂಠ್ಯಃ ಸುವಾಸಸಃ ।
ರಮಣ್ಯಃ ಸ್ವರ್ಗಿಣಾಂ ವಲ್ಗುಗತಿಲೀಲಾವಲೋಕನೈಃ
॥ ೭ ॥

ತತಶ್ಚಾವಿರಭೂತ್ಸಾಕ್ಷಾಚ್ಛ್ರೀ ರಮಾ ಭಗವತ್ಪರಾ ।
ರಂಜಯಂತೀ ದಿಶಃ ಕಾಂತ್ಯಾ ವಿದ್ಯುತ್ಸೌದಾಮನೀ ಯಥಾ
॥ ೮ ॥

ತಸ್ಯಾಂ ಚಕ್ರುಃ ಸ್ಪೃಹಾಂ ಸರ್ವೇ ಸಸುರಾಸುರಮಾನವಾಃ ।
ರೂಪೌದಾರ್ಯವಯೋವರ್ಣಮಹಿಮಾಕ್ಷಿಪ್ತಚೇತಸಃ
॥ ೯ ॥

ತಸ್ಯಾ ಆಸನಮಾನಿನ್ಯೇ ಮಹೇಂದ್ರೋ ಮಹದದ್ಭುತಮ್ ।
ಮೂರ್ತಿಮತ್ಯಃ ಸರಿಚ್ಛ್ರೇಷ್ಠಾ ಹೇಮಕುಂಭೈರ್ಜಲಂ ಶುಚಿ
॥ ೧೦ ॥

ಆಭಿಷೇಚನಿಕಾ ಭೂಮಿರಾಹರತ್ಸ ಕಲೌಷಧೀಃ ।
ಗಾವಃ ಪಂಚ ಪವಿತ್ರಾಣಿ ವಸಂತೋ ಮಧುಮಾಧವೌ
॥ ೧೧ ॥

ಋಷಯಃ ಕಲ್ಪಯಾಂಚಕ್ರುರಭಿಷೇಕಂ ಯಥಾವಿಧಿ ।
ಜಗುರ್ಭದ್ರಾಣಿ ಗಂಧರ್ವಾ ನಟ್ಯಶ್ಚ ನನೃತುರ್ಜಗುಃ
॥ ೧೨ ॥

ಮೇಘಾ ಮೃದಂಗಪಣವಮುರಜಾನಕಗೋಮುಖಾನ್ ।
ವ್ಯನಾದಯನ್ ಶಂಖವೇಣುವೀಣಾಸ್ತುಮುಲನಿಸ್ವನಾನ್
॥ ೧೩ ॥

ತತೋಽಭಿಷಿಷಿಚುರ್ದೇವೀಂ ಶ್ರಿಯಂ ಪದ್ಮಕರಾಂ ಸತೀಮ್ ।
ದಿಗಿಭಾಃ ಪೂರ್ಣಕಲಶೈಃ ಸೂಕ್ತವಾಕ್ಯೈರ್ದ್ವಿಜೇರಿತೈಃ
॥ ೧೪ ॥

ಸಮುದ್ರಃ ಪೀತಕೌಶೇಯವಾಸಸೀ ಸಮುಪಾಹರತ್ ।
ವರುಣಃ ಸ್ರಜಂ ವೈಜಯಂತೀಂ ಮಧುನಾ ಮತ್ತಷಟ್ಪದಾಮ್
॥ ೧೫ ॥

ಭೂಷಣಾನಿ ವಿಚಿತ್ರಾಣಿ ವಿಶ್ವಕರ್ಮಾ ಪ್ರಜಾಪತಿಃ ।
ಹಾರಂ ಸರಸ್ವತೀ ಪದ್ಮಮಜೋ ನಾಗಾಶ್ಚ ಕುಂಡಲೇ
॥ ೧೬ ॥

ಬಳಿಕ ಕ್ಷೀರಸಮುದ್ರದಿಂದ ಕೌಸ್ತುಭವೆಂಬ ಪದ್ಮರಾಗ ಮಣಿಯು ಹೊರಟಿತು. ಆ ಮಣಿಯನ್ನು ತನ್ನ ವಕ್ಷಃಸ್ಥಳದಲ್ಲಿ ಅಲಂಕರಿಸಿಕೊಳ್ಳಲು ಅಜಿತನಾದ ಭಗವಾನ್ ಮಹಾವಿಷ್ಣುವು ಸ್ವೀಕರಿಸಿದನು. ॥ ೫ ॥ ಬಳಿಕ ಸ್ವರ್ಗಲೋಕದ ಶೋಭೆಯನ್ನು ಹೆಚ್ಚಿಸುವ ಪಾರಿಜಾತ ಹುಟ್ಟಿತು. ಪರೀಕ್ಷಿತನೇ! ಭೂಮಂಡಲದಲ್ಲಿ ನೀನು ಸಕಲರ ಇಚ್ಛೆಗಳನ್ನು ಈಡೇರಿಸುವಂತೆಯೇ ಆ ಕಲ್ಪವೃಕ್ಷವು ಬೇಡಿದವರ ಇಷ್ಟಾರ್ಥಗಳೆಲ್ಲವನ್ನೂ ಪೂರ್ಣಗೊಳಿಸುತ್ತದೆ. ॥ ೬ ॥ ಅನಂತರ ಸುವರ್ಣದ ಹಾರಗಳಿಂದ ಸಮಲಂಕೃತರಾದ, ದಿವ್ಯವಸ್ತ್ರಗಳನ್ನುಟ್ಟಿದ್ದ, ನಡೆ-ಬೆಡಗು ನೋಟಗಳಿಂದ ದೇವತೆಗಳನ್ನು ಸಂತೋಷ ಪಡಿಸುವ ಕಡುಚೆಲುವೆಯರಾದ ಅಪ್ಸರೆಯರು ಹುಟ್ಟಿದರು. ॥ ೭ ॥ ಅನಂತರ ಭಗವಂತನ ನಿತ್ಯಶಕ್ತಿಯಾದ ಸೌಂದರ್ಯವೇ ಮೂರ್ತಿಭವಿಸಿದಂತೆ ಭಗವತಿ ಶ್ರೀಲಕ್ಷ್ಮೀದೇವಿಯು ಪ್ರಕಟಳಾದಳು. ಅವಳ ಮಿಂಚಿನಂತಹ ದಿವ್ಯವಾದ ಕಾಂತಿಯಿಂದ ದಶದಿಕ್ಕುಗಳು ಬೆಳಗುತ್ತಿದ್ದುವು. ॥ ೮ ॥ ಆ ಶ್ರೀದೇವಿಯ ರೂಪ, ಔದಾರ್ಯ, ಯೌವನ, ನಯನಮನೋಹರವಾದ ಶರೀರಕಾಂತಿ ಹಾಗೂ ಮಹಿಮೆಗಳಿಗೆ ಎಲ್ಲರ ಚಿತ್ತವೂ ಆಕರ್ಷಿಸಿತು. ದೇವತೆಗಳು, ಅಸುರರು, ಮನುಷ್ಯರು ಹೀಗೆ ಎಲ್ಲರೂ ಇವಳು ನಮಗೆ ದೊರೆಯಲಿ ಎಂದು ಬಯಸಿದರು. ॥ ೯ ॥ ಸ್ವತಃ ದೇವೇಂದ್ರನೇ ತನ್ನ ಕೈಗಳಿಂದ ಅವಳಿಗೆ ಕುಳಿತುಕೊಳ್ಳಲು ಅದ್ಭುತವಾದ ದಿವ್ಯ ಆಸನವನ್ನು ತಂದಿರಿಸಿದನು. ಶ್ರೇಷ್ಠನದಿಗಳೆಲ್ಲವೂ ಮೂರ್ತಿವತ್ತಾಗಿ ಬಂದು ಅವಳ ಅಭಿಷೇಕಕ್ಕಾಗಿ ಚಿನ್ನದ ಬಿಂದಿಗೆಗಳಲ್ಲಿ ಪರಿಶುದ್ಧವಾದ ನೀರನ್ನು ತಂದರು. ॥ ೧೦ ॥ ಭೂದೇವಿಯು ಅಭಿಷೇಕಕ್ಕಾಗಿ ಬೇಕಾದ ಗಿಡಮೂಲಿಕೆಗಳನ್ನು ಸಿದ್ಧಪಡಿಸಿದಳು. ಗೋವುಗಳು ಪವಿತ್ರವಾದ ಪಂಚಗವ್ಯವನ್ನೂ, ವಸಂತನು ಚೈತ್ರ-ವೈಶಾಖದಲ್ಲಿ ದೊರೆಯುವ ಬಗೆ-ಬಗೆಯ ಫಲ-ಪುಷ್ಪಗಳನ್ನು ಕಾಣಿಕೆಯಾಗಿ ಅರ್ಪಿಸಿದನು. ॥ ೧೧ ॥ ಇವೆಲ್ಲ ಸಾಮಗ್ರಿಗಳಿಂದ ಋಷಿಗಳು ಲಕ್ಷ್ಮೀದೇವಿಗೆ ಶಾಸ್ತ್ರೋಕ್ತವಾಗಿ ಶುದ್ಧ ಜಲದಿಂದ ಅಭಿಷೇಕ ಮಾಡಿದರು. ಗಂಧರ್ವರು ಮಂಗಳಗೀತೆಗಳನ್ನು ಹಾಡಿದರು. ನರ್ತಕಿಯರು ಹಾಡುತ್ತಾ, ನರ್ತಿಸುತ್ತಾ ಸೇವೆ ಸಲ್ಲಿಸಿದರು. ॥ ೧೨ ॥ ಮೇಘಗಳು ಮೂರ್ತಿವತ್ತಾಗಿ ಬಂದು ಮೃದಂಗ, ಪಣವ, ಆನಕ, ಗೋಮುಖ, ಶಂಖ, ಕೊಳಲು, ವೀಣೆ ಮುಂತಾದ ವಾದ್ಯಗಳನ್ನು ಇಂಪಾಗಿ ನುಡಿಸಿತು. ॥ ೧೩ ॥ ಆಗ ಭಗವತೀ ಲಕ್ಷ್ಮೀ ದೇವಿಯು ಕೈಯಲ್ಲಿ ಕಮಲವನ್ನು ಹಿಡಿದುಕೊಂಡ ದಿವ್ಯ ಸಿಂಹಾಸನದಲ್ಲಿ ವಿರಾಜಮಾನಳಾದಳು. ಬ್ರಾಹ್ಮಣೋತ್ತಮರು ವೇದ ಮಂತ್ರಗಳನ್ನು ಪಠಿಸುತ್ತಿರುವಂತೆ, ದಿಗ್ಗಜಗಳು ಪೂರ್ಣ ಕುಂಭ ಗಳಿಂದ ಅವಳಿಗೆ ಅಭಿಷೇಕಮಾಡಿದವು. ॥ ೧೪ ॥ ಸಮುದ್ರ ರಾಜನು ಆಕೆಗೆ ಎರಡು ರೇಷ್ಮೆಯ ಪೀತಾಂಬರಗಳನ್ನು ಉಡಲು ಕೊಟ್ಟನು. ವರುಣನು ಮಧುಪಾನದಿಂದ ಮತ್ತವಾದ ದುಂಬಿಗಳಿಂದ ಕೂಡಿದ್ದ ವೈಜಯಂತೀ ಮಾಲೆಯನ್ನು ಸಮರ್ಪಿಸಿದನು. ॥ ೧೫ ॥ ವಿಶ್ವಕರ್ಮ ಪ್ರಜಾಪತಿಯು ನಾನಾವಿಧವಾದ ವಿಚಿತ್ರವಾದ ಆಭರಣಗಳನ್ನೂ, ಸರಸ್ವತೀ ದೇವಿಯು ಮುತ್ತಿನ ಹಾರವನ್ನೂ, ಬ್ರಹ್ಮನು ದಿವ್ಯವಾದ ಕಮಲವನ್ನೂ, ನಾಗಶ್ರೇಷ್ಠರು ನಯನ ಮನೋಹರವಾದ ಕುಂಡಲಗಳನ್ನೂ ಲಕ್ಷ್ಮೀದೇವಿಗೆ ಅರ್ಪಿಸಿದರು. ॥೧೬॥

ತತಃ ಕೃತಸ್ವಸ್ತ್ಯಯನೋತ್ಪಲಸ್ರಜಂ
ನದದ್ದ್ವಿರೇಫಾಂ ಪರಿಗೃಹ್ಯ ಪಾಣಿನಾ ।
ಚಚಾಲ ವಕ್ತ್ರಂ ಸುಕಪೋಲಕುಂಡಲಂ
ಸವ್ರೀಡಹಾಸಂ ದಧತೀ ಸುಶೋಭನಮ್ ॥ ೧೭ ॥

ಇದಾದ ನಂತರ ವಿಪ್ರೋತ್ತಮರು ಸ್ವಸ್ತಿಮಂತ್ರಗಳನ್ನು ಪಠಿಸಿದ ಬಳಿಕ ಶ್ರೀರಮಾದೇವಿಯು ಝೇಂಕರಿಸುತ್ತಿದ್ದ ದುಂಬಿಗಳಿಂದ ವ್ಯಾಪ್ತವಾಗಿದ್ದ ಕನ್ನೈದಿಲೆಯ ಮಾಲೆಯನ್ನು ಕೈಯಲ್ಲಿ ಹಿಡಿದುಕೊಂಡಳು. ಕುಂಡಲಗಳ ಕಾಂತಿಯಿಂದ ಶ್ರೀಲಕ್ಷ್ಮೀದೇವಿಯ ಮುಖದ ಸೌಂದರ್ಯ ಅವರ್ಣನೀಯವಾಗಿತ್ತು. ಅವಳು ನಾಚಿಕೆಯಿಂದೊಡಗೂಡಿ ಕಿರುನಗೆಯಿಂದ ಕೂಡಿ ಮೆಲ್ಲನೆ ಹೊರಟಳು. ॥ ೧೭ ॥

ಸ್ತನದ್ವಯಂ ಚಾತಿಕೃಶೋದರೀ ಸಮಂ
ನಿರಂತರಂ ಚಂದನಕುಂಕುಮೋಕ್ಷಿತಮ್ ।
ತತಸ್ತತೋ ನೂಪುರವಲ್ಗುಶಿಂಜಿತೈ-
ರ್ವಿಸರ್ಪತೀ ಹೇಮಲತೇವ ಸಾ ಬಭೌ ॥ ೧೮ ॥

ಲಕ್ಷ್ಮೀದೇವಿಯ ಸೊಂಟವು ಬಹಳ ಸೂಕ್ಷ್ಮವಾಗಿತ್ತು. ಸುಂದರವಾದ ಆಕೆಯ ಸ್ತನಗಳು ಒಂದಕ್ಕೊಂದು ಸೇರಿಕೊಂಡು ತುಂಬಿಕೊಂಡಿದ್ದು ಕುಂಕುಮಕೇಸರಿಯ ಗಂಧದಿಂದ ಲೇಪಿಸಲ್ಪಟ್ಟಿದ್ದವು. ಕಾಲ್ಗೆಜ್ಜೆಗಳ ಝುಣ-ಝುಣ ಶಬ್ದದೊಡನೆ ಅತ್ತಂದಿತ್ತ ಸುಳಿದಾಡುತ್ತಿದ್ದ ರಮಾದೇವಿಯು ಚಿನ್ನದ ಬಳ್ಳಿಯಂತೆಯೇ ಕಾಣುತ್ತಿದ್ದಳು. ॥ ೧೮ ॥

ವಿಲೋಕಯಂತೀ ನಿರವದ್ಯಮಾತ್ಮನಃ
ಪದಂ ಧ್ರುವಂ ಚಾವ್ಯಭಿಚಾರಿಸದ್ಗುಣಮ್ ।
ಗಂಧರ್ವಯಕ್ಷಾಸುರಸಿದ್ಧಚಾರಣ-
ತ್ರೈವಿಷ್ಟಪೇಯಾದಿಷು ನಾನ್ವವಿಂದತ ॥ ೧೯ ॥

ದೋಷರಹಿತನಾದ, ಸಮಸ್ತ ಉತ್ತಮವಾದ ಗುಣಗಳಿಂದ ಸಂಪನ್ನನಾದ, ಅವಿನಾಶಿಯಾದ ಪುರುಷನ ಆಶ್ರಯವನ್ನು ಬಯಸಿ ಆಕೆಯು ಹೊರಟಿದ್ದಳು. ಆದರೆ ಗಂಧರ್ವ, ಯಕ್ಷ, ರಾಕ್ಷಸ, ಸಿದ್ಧ, ಚಾರಣ, ದೇವತೆಗಳೇ ಮೊದಲಾದವರಲ್ಲಿ ಅಂತಹ ಪುರುಷನು ಅವಳಿಗೆ ಸಿಗಲೇ ಇಲ್ಲ. ॥ ೧೯ ॥

ನೂನಂ ತಪೋ ಯಸ್ಯ ನ ಮನ್ಯುನಿರ್ಜಯೋ
ಜ್ಞಾನಂ ಕ್ವಚಿತ್ತಚ್ಚ ನ ಸಂಗವರ್ಜಿತಮ್ ।
ಕಶ್ಚಿನ್ಮಹಾಂಸ್ತಸ್ಯ ನ ಕಾಮನಿರ್ಜಯಃ
ಸ ಈಶ್ವರಃ ಕಿಂ ಪರತೋವ್ಯಪಾಶ್ರಯಃ ॥ ೨೦ ॥

ಆಗ ಅವಳು ತನ್ನಲ್ಲೇ ಹೀಗೆ ಯೋಚಿಸಿದಳು – ಕೆಲವರು ತಪಸ್ವಿಗಳೇನೋ ಹೌದು, ಆದರೆ ಕ್ರೋಧವನ್ನು ಗೆದ್ದುಕೊಂಡಿಲ್ಲ. (ದುರ್ವಾಸರು ತಪಸ್ವಿಗಳು, ಆದರೆ ಕೋಪವನ್ನು ಜಯಿಸಿದವರಲ್ಲ) ಕೆಲವರಲ್ಲಿ ಜ್ಞಾನವೇನೋ ಇದೆ, ಆದರೆ ಅವರು ಪೂರ್ಣ ಅನಾಸಕ್ತರಲ್ಲ. (ಗುರು-ಶುಕ್ರರಲ್ಲಿ ಜ್ಞಾನ, ತಪಸ್ಸೂ ಇದೆ. ಆದರೆ ಪ್ರಾಣಿಗಳಿಗೆ ಒಳ್ಳೆಯ ಕೆಟ್ಟ ಫಲಗಳನ್ನು ಕೊಡುವುದರಲ್ಲೇ ಆಸಕ್ತರಾದ್ದರಿಂದ ಸಂಗವರ್ಜಿತರಲ್ಲ.) ಕೆಲವರು ಮಹಾತ್ಮರಿರುತ್ತಾರೆ. ಆದರೆ ಕಾಮವನ್ನು ಗೆಲ್ಲಲಿಲ್ಲ. (ಚಂದ್ರನು ಮಹಾತ್ಮನೇ ಸರಿ. ಆದರೆ ದೇವಗುರುವಿನ ಪತ್ನಿಯಲ್ಲಿ ಆಸಕ್ತನಾದನು.) ಕೆಲವರಲ್ಲಿ ಐಶ್ವರ್ಯವೂ ಬಹಳವಿದೆ, ಆದರೆ ಅವರು ಬೇರೆಯವರ ಆಶ್ರಯ ಪಡೆಯಬೇಕಾಗುತ್ತದೆ. (ಇತರರ ಆಶ್ರಯದಿಂದಲೇ ತ್ರೈಲೋಕ್ಯಾಧಿಪತ್ಯವನ್ನು ಗಳಿಸಿದ ಇಂದ್ರನನ್ನು ಪ್ರಭು ಎಂದು ಎನ್ನಲಾದೀತೇ?) ॥ ೨೦ ॥

ಧರ್ಮಃ ಕ್ವಚಿತ್ತತ್ರ ನ ಭೂತಸೌಹೃದಂ
ತ್ಯಾಗಃ ಕ್ವಚಿತ್ತತ್ರ ನ ಮುಕ್ತಿಕಾರಣಮ್ ।
ವೀರ್ಯಂ ನ ಪುಂಸೋಽಸ್ತ್ಯಜವೇಗನಿಷ್ಕೃತಂ
ನ ಹಿ ದ್ವಿತೀಯೋ ಗುಣಸಂಗವರ್ಜಿತಃ ॥ ೨೧ ॥

ಕೆಲವರಲ್ಲಿ ಧರ್ಮವಿದೆ. ಆದರೆ ಭೂತದಯೆಯಿಲ್ಲ. (ಧರ್ಮಾತ್ಮರಿಗೆ ಮುಖ್ಯವಾಗಿ ಭೂತದಯೆ ಇರಬೇಕು. ಯಮಧರ್ಮನು ಧರ್ಮಾತ್ಮನೇ ಸರಿ. ಆದರೆ ಅವನಲ್ಲಿ ಭೂತದಯೆ ಇಲ್ಲ. ನಿಷ್ಕರುಣೆಯಿಂದ ಪ್ರಾಣಿಗಳನ್ನು ಸಂಹರಿಸುವನು.) ಕೆಲವರಲ್ಲಿ ತ್ಯಾಗವಿದೆ, ಆದರೆ ಆ ತ್ಯಾಗ ಮುಕ್ತಿಗೆ ಕಾರಣವಾಗುವುದಿಲ್ಲ. (ಮೋಕ್ಷಾಪೇಕ್ಷೆಯಿಂದಲೇ ತ್ಯಾಗ ಮಾಡಬೇಕು. ಶಿಬಿ ಮೊದಲಾದವರಲ್ಲಿ ತ್ಯಾಗವಿದೆ, ಆದರೆ ಅದು ನಿಷ್ಕಾಮಬುದ್ಧಿಯಿಂದ ಮಾಡಿದ ತ್ಯಾಗವಲ್ಲ.) ಕೆಲ-ಕೆಲವರಲ್ಲಿ ವೀರ್ಯ-ಪರಾಕ್ರಮಗಳಿವೆ. ಆದರೆ ಅವರು ಕಾಲನ ಹಿಡಿತದಿಂದ ಹೊರಗಾದವರಲ್ಲ. (ಕಾರ್ತವೀರ್ಯನೇ ಮೊದಲಾದವರಲ್ಲಿ ಶೌರ್ಯ-ಪರಾಕ್ರಮಗಳಿದ್ದರೂ ಕಾಲಚಕ್ರವನ್ನು ಗೆಲ್ಲಲಾಗಲಿಲ್ಲ.) ಕೆಲವು ಮಹಾತ್ಮರಲ್ಲಿ ವಿಷಯಾಸಕ್ತಿಯೂ ಖಂಡಿತವಾಗಿ ಇಲ್ಲ. ಆದರೆ ಅವರು ನಿರಂತರ ಅದ್ವೈತ-ಸಮಾಧಿಯಲ್ಲೇ ತಲ್ಲೀನರಾಗಿರುತ್ತಾರೆ. (ಪ್ರಕೃತಿಯ ಸಂಗವನ್ನೇ ತೊರೆದಿರುವ ಸನಕಾದಿಗಳು ವಿರಕ್ತರಾದ್ದರಿಂದ ನನಗೆ ತಕ್ಕವರಲ್ಲ.) ॥ ೨೧ ॥

ಕ್ವಚಿಚ್ಚಿರಾಯುರ್ನ ಹಿ ಶೀಲಮಂಗಲಂ
ಕ್ವಚಿತ್ತದಪ್ಯಸ್ತಿ ನ ವೇದ್ಯಮಾಯುಷಃ ।
ಯತ್ರೋಭಯಂ ಕುತ್ರ ಚ ಸೋಽಪ್ಯಮಂಗಲಃ
ಸುಮಂಗಲಃ ಕಶ್ಚ ನ ಕಾಂಕ್ಷತೇ ಹಿ ಮಾಮ್ ॥ ೨೨ ॥

ಯಾರೋ ಋಷಿಯು ಚಿರಾಯುವಾಗಿರುತ್ತಾನೆ, ಆದರೆ ಅವನಲ್ಲಿ ಶುಭಕರವಾದ ನಡತೆಯಿರುವುದಿಲ್ಲ. (ಮಾರ್ಕಂಡೇಯನೇ ಮೊದಲಾದವರು ಚಿರಂಜೀವಿಗಳೇ ಸರಿ. ಆದರೆ ಅವರು ನಿರಂತರ ಇಂದ್ರಿಯಗಳನ್ನು ನಿಗ್ರಹಿಸಿಯೇ ಇರುವುದರಿಂದ ಗೃಹಸ್ಥಾಶ್ರಮೋಚಿತವಾದ ಒಳ್ಳೆಯ ನಡೆವಳಿಕೆ ಅವರಲ್ಲಿರುವುದಿಲ್ಲ.) ಕೆಲವರಲ್ಲಿ ಶುಭಕರವಾದ ನಡೆವಳಿಕೆಯಿರುತ್ತದೆ, ಆದರೆ ಅವರು ಚಿರಾಯುಗಳಾಗಿರುವುದಿಲ್ಲ. (ಹಿರಣ್ಯಕಶಿಪು ಮುಂತಾದವರಲ್ಲಿ ಒಳ್ಳೆಯ ನಡತೆಯಿದ್ದರೂ ಆಯುಸ್ಸಿನ ಭರವಸೆ ಇಲ್ಲ.) ಕೆಲವರಲ್ಲಿ ದೀರ್ಘಾಯುಷ್ಯ ಮತ್ತು ಶೀಲ ಎರಡೂ ಇರುತ್ತವೆ. ಆದರೆ ಅವರು ಅಮಂಗಳ ವೇಶದಲ್ಲೇ ಇರುತ್ತಾರೆ. ಇನ್ನು ಉಳಿದವನೆಂದರೆ ಸಕಲ ಕಲ್ಯಾಣಗುಣಗಳಿಂದ ಕೂಡಿದ, ನಿರ್ದೋಷನಾದವನು ಭಗವಾನ್ ಮಹಾವಿಷ್ಣು ಒಬ್ಬನೇ. ಆದರೆ ಅವನು ನನ್ನನ್ನು ಬಯಸುವುದಿಲ್ಲ. ಅವನು ಆತ್ಮಾರಾಮನಾಗಿರುವುದೇ ಇದಕ್ಕೆ ಕಾರಣ. ॥ ೨೨ ॥

ಏವಂ ವಿಮೃಶ್ಯಾವ್ಯಭಿಚಾರಿಸದ್ಗುಣೈ-
ರ್ವರಂ ನಿಜೈಕಾಶ್ರಯತಾಽಗುಣಾಶ್ರಯಮ್ ।
ವವ್ರೇ ವರಂ ಸರ್ವಗುಣೈರಪೇಕ್ಷಿತಂ
ರಮಾ ಮುಕುಂದಂ ನಿರಪೇಕ್ಷಮೀಪ್ಸಿತಮ್ ॥ ೨೩ ॥

ಪರೀಕ್ಷಿತನೇ ! ಹೀಗೆ ಮಹಾಲಕ್ಷ್ಮಿಯು ಬಹಳವಾಗಿ ಯೋಚಿಸಿ ಕಡೆಗೆ ತನಗೆ ಇಷ್ಟವಾಗಿದ್ದ ಭಗವಾನ್ ಮುಕುಂದನನ್ನೇ ಪತಿಯನ್ನಾಗಿ ವರಿಸಿದಳು. ಏಕೆಂದರೆ, ಅವನಲ್ಲಿ ಸಮಸ್ತ ಸದ್ಗುಣಗಳು ಯಾವಾಗಲೂ ವಾಸಮಾಡುತ್ತಿದ್ದವು. ಪ್ರಾಕೃತಗುಣಗಳು ಅವನನ್ನು ಎಂದೂ ಸ್ಪರ್ಶಿಸಲಾರವು. ಅಣಿಮಾದಿ ಅಷ್ಟಸಿದ್ಧಿಗಳೂ ಅವನನ್ನೇ ಅಪೇಕ್ಷಿಸುತ್ತಿದ್ದವು. ಆದರೆ ಅವನು ಮಾತ್ರ ಯಾವುದನ್ನೂ ಅಪೇಕ್ಷಿಸುತ್ತಿರಲಿಲ್ಲ. ವಾಸ್ತವವಾಗಿ ಮಹಾಲಕ್ಷ್ಮಿಗೆ ಪರಮಾಶ್ರಯನು ಭಗವಂತನಾದ ಶ್ರೀಹರಿಯೇ ಆಗಿದ್ದನು. ಇದರಿಂದ ಅವಳು ಅವನನ್ನೇ ವರಿಸಿದಳು. ॥ ೨೩ ॥ ಹೀಗೆ ರಮಾದೇವಿಯು ತನ್ನ ಕೈಯಲ್ಲಿ ಹಿಡಿದಿದ್ದ ಸುಂದರವಾದ, ಮದಿಸಿದ ದುಂಬಿಗಳ ಝೇಂಕಾರದಿಂದ ಕೂಡಿದ, ವಿನೂತನವಾದ ಕಮಲದ ಹಾರವನ್ನು ಶ್ರೀಮುಕುಂದನ ಕೊರಳಲ್ಲಿ ಹಾಕಿದಳು. ನಾಚಿಕೆಯಿಂದ ಕೂಡಿದ ಕಿರುನಗೆಯ ನೋಟದಿಂದ ತನ್ನ ವಾಸಸ್ಥಳವಾದ ಶ್ರೀಹರಿಯ ವಕ್ಷಃಸ್ಥಳವನ್ನೇ ವೀಕ್ಷಿಸುತ್ತಾ ಅವನ ಬಳಿಗೆ ಹೋಗಿ ನಿಂತಳು. ॥ ೨೪ ॥

ತಸ್ಯಾಂಸದೇಶ ಉಶತೀಂ ನವಕಂಜಮಾಲಾಂ
ಮಾದ್ಯನ್ಮಧುವ್ರತವರೂಥಗಿರೋಪಘುಷ್ಟಾಮ್ ।
ತಸ್ಥೌ ನಿಧಾಯ ನಿಕಟೇ ತದುರಃ ಸ್ವಧಾಮ
ಸವ್ರೀಡಹಾಸವಿಕಸನ್ನಯನೇನ ಯಾತಾ ॥ ೨೪ ॥

ತಸ್ಯಾಃ ಶ್ರಿಯಸ್ತ್ರಿಜಗತೋ ಜನಕೋ ಜನನ್ಯಾ
ವಕ್ಷೋನಿವಾಸಮಕರೋತ್ಪರಮಂ ವಿಭೂತೇಃ ।
ಶ್ರೀಃ ಸ್ವಾಃ ಪ್ರಜಾಃ ಸಕರುಣೇನ ನಿರೀಕ್ಷಣೇನ
ಯತ್ರ ಸ್ಥಿತೈಧಯತ ಸಾಧಿಪತೀಂಸ್ತ್ರಿಲೋಕಾನ್ ॥ ೨೫ ॥

ಜಗತ್ಪತಿಯಾದ ಭಗವಂತನು ಜಗಜ್ಜನನಿಯಾದ ಸಮಸ್ತ ಸಂಪತ್ತುಗಳ ಅಧಿಷ್ಠಾತೃದೇವತೆಯಾದ ಲಕ್ಷ್ಮೀದೇವಿಗೆ ತನ್ನ ವಕ್ಷಃಸ್ಥಳದಲ್ಲೇ ನಿರಂತರವಾಗಿ ವಾಸಮಾಡಿಕೊಂಡಿರಲು ಸ್ಥಾನವನ್ನು ಕಲ್ಪಿಸಿಕೊಟ್ಟನು. ರಮಾದೇವಿಯು ವಿಷ್ಣುವಿನ ವಕ್ಷಃಸ್ಥಳದಲ್ಲಿಯೇ ವಿರಾಜಮಾನಳಾಗಿರುತ್ತಾ ದಯಾಪೂರ್ಣವಾದ ನೋಟದಿಂದ ಮೂರು ಲೋಕಗಳನ್ನೂ, ಲೋಕಪತಿಗಳನ್ನೂ, ಅವರ ಪ್ರಜೆಗಳನ್ನೂ ಅಭಿವೃದ್ಧಿಪಡಿಸಿದಳು. ॥ ೨೫ ॥ ಲಕ್ಷ್ಮೀನಾರಾಯಣರ ಮಂಗಳಮಯ ಈ ಕಲ್ಯಾಣೋತ್ಸವದಲ್ಲಿ ಯಕ್ಷ-ಗಂಧರ್ವ-ಕಿನ್ನರರೇ ಮೊದಲಾದವರು ಶಂಖ, ಮೃದಂಗ, ಭೇರಿ ಮೊದಲಾದ ವಾದ್ಯಗಳನ್ನು ನುಡಿಸುತ್ತಾ ಅಪ್ಸರೆಯರೊಂದಿಗೆ ನರ್ತನಮಾಡಿದರು. ಇದರಿಂದಾದ ಭಾರೀ ಶಬ್ದವು ಎಲ್ಲೆಡೆ ವ್ಯಾಪಿಸಿತು. ॥ ೨೬ ॥

ಶಂಖತೂರ್ಯಮೃದಂಗಾನಾಂ
ವಾದಿತ್ರಾಣಾಂ ಪೃಥುಃ ಸ್ವನಃ ।
ದೇವಾನುಗಾನಾಂ ಸಸ್ತ್ರೀಣಾಂ
ನೃತ್ಯತಾಂ ಗಾಯತಾಮಭೂತ್ ॥ ೨೬ ॥

ಬ್ರಹ್ಮ-ರುದ್ರ-ಅಂಗಿರಸ ಮೊದಲಾದ ಸಮಸ್ತ ಪ್ರಜಾಪತಿಗಳು ಪುಷ್ಪವೃಷ್ಟಿಯನ್ನು ಮಾಡುತ್ತಾ ಭಗವಂತನ ಗುಣ, ಸ್ವರೂಪ, ಲೀಲೆಗಳೇ ಮುಂತಾದವುಗಳನ್ನು ಯಥಾರ್ಥವಾಗಿ ವರ್ಣಿಸುತ್ತಿರುವ ಮಂತ್ರಗಳಿಂದ ಅವನನ್ನು ಸ್ತುತಿಸತೊಡಗಿದರು. ॥ ೨೭ ॥

ಬ್ರಹ್ಮರುದ್ರಾಂಗಿರೋಮುಖ್ಯಾಃ ಸರ್ವೇ ವಿಶ್ವಸೃಜೋ ವಿಭುಮ್ ।
ಈಡಿರೇಽವಿತಥೈರ್ಮಂತ್ರೈಸ್ತಲ್ಲಿಂಗೈಃ ಪುಷ್ಪವರ್ಷಿಣಃ
॥ ೨೭ ॥

ಶ್ರಿಯಾ ವಿಲೋಕಿತಾ ದೇವಾಃ ಸಪ್ರಜಾಪತಯಃ ಪ್ರಜಾಃ ।
ಶೀಲಾದಿಗುಣಸಂಪನ್ನಾ ಲೇಭಿರೇ ನಿರ್ವೃತಿಂ ಪರಾಮ್ ॥ ೨೮ ॥

ನಿಃಸತ್ತ್ವಾ ಲೋಲುಪಾ ರಾಜನ್ನಿರುದ್ಯೋಗಾ ಗತತ್ರಪಾಃ ।
ಯದಾ ಚೋಪೇಕ್ಷಿತಾ ಲಕ್ಷ್ಮ್ಯಾ ಬಭೂವುರ್ದೈತ್ಯದಾನವಾಃ ॥ ೨೯ ॥

ಅಥಾಸೀದ್ವಾರುಣೀ ದೇವೀ ಕನ್ಯಾ ಕಮಲಲೋಚನಾ ।
ಅಸುರಾ ಜಗೃಹುಸ್ತಾಂ ವೈ ಹರೇರನುಮತೇನ ತೇ ॥ ೩೦ ॥

ಅಥೋದಧೇರ್ಮಥ್ಯಮಾನಾತ್ಕಾಶ್ಯಪೈರಮೃತಾರ್ಥಿಭಿಃ ।
ಉದತಿಷ್ಠನ್ಮಹಾರಾಜ ಪುರುಷಃ ಪರಮಾದ್ಭುತಃ ॥ ೩೧ ॥

ದೀರ್ಘಪೀವರದೋರ್ದಂಡಃ ಕಂಬುಗ್ರೀವೋಽರುಣೇಕ್ಷಣಃ ।
ಶ್ಯಾಮಲಸ್ತರುಣಃ ಸ್ರಗ್ವೀ ಸರ್ವಾಭರಣಭೂಷಿತಃ ॥ ೩೨ ॥

ಪೀತವಾಸಾ ಮಹೋರಸ್ಕಃ ಸುಮೃಷ್ಟಮಣಿಕುಂಡಲಃ ।
ಸ್ನಿಗ್ಧಕುಂಚಿತಕೇಶಾಂತಃ ಸುಭಗಃ ಸಿಂಹವಿಕ್ರಮಃ ॥ ೩೩ ॥

ಅಮೃತಾಪೂರ್ಣಕಲಶಂ ಬಿಭ್ರದ್ವಲಯಭೂಷಿತಃ ।
ಸ ವೈ ಭಗವತಃ ಸಾಕ್ಷಾದ್ವಿಷ್ಣೋರಂಶಾಂಶಸಂಭವಃ ॥ ೩೪ ॥

ಧನ್ವಂತರಿರಿತಿ ಖ್ಯಾತ ಆಯುರ್ವೇದದೃಗಿಜ್ಯಭಾಕ್ ।
ತಮಾಲೋಕ್ಯಾಸುರಾಃ ಸರ್ವೇ ಕಲಶಂ ಚಾಮೃತಾಭೃತಮ್ ॥ ೩೫ ॥

ಲಿಪ್ಸಂತಃ ಸರ್ವವಸ್ತೂನಿ ಕಲಶಂ ತರಸಾಹರನ್ ।
ನೀಯಮಾನೇಽಸುರೈಸ್ತಸ್ಮಿನ್ಕಲಶೇಽಮೃತಭಾಜನೇ ॥ ೩೬ ॥

ವಿಷಣ್ಣ ಮನಸೋ ದೇವಾ ಹರಿಂ ಶರಣಮಾಯಯುಃ ।
ಇತಿ ತದ್ದೈನ್ಯಮಾಲೋಕ್ಯ ಭಗವಾನ್ಭೃತ್ಯಕಾಮಕೃತ್ ।
ಮಾ ಖಿದ್ಯತ ಮಿಥೋಽರ್ಥಂ ವಃ ಸಾಧಯಿಷ್ಯೇ ಸ್ವಮಾಯಯಾ ॥ ೩೭ ॥

ಸಮಸ್ತ ದೇವತೆಗಳೂ, ಪ್ರಜಾಪತಿಗಳೂ, ಪ್ರಜೆಗಳೂ ಶ್ರೀಲಕ್ಷ್ಮೀದೇವಿಯ ಕೃಪಾಕಟಾಕ್ಷದಿಂದ ಸೌಶೀಲ್ಯವೇ ಮುಂತಾದ ಶ್ರೇಷ್ಠ ಸದ್ಗುಣಗಳಿಂದ ಸಂಪನ್ನರಾಗಿ ಪರಮಾನಂದವನ್ನು ಹೊಂದಿದರು. ॥ ೨೮ ॥ ಮಹಾರಾಜಾ ! ಇತ್ತ ಲಕ್ಷ್ಮೀದೇವಿಯು ದೈತ್ಯ-ದಾನವರನ್ನು ಉಪೇಕ್ಷಿಸಿದಾಗ ಅವರೆಲ್ಲರೂ ನಿರ್ಬಲರೂ, ನಿಸ್ಸತ್ತ್ವರೂ, ನಿರುದ್ಯೋಗಿಗಳೂ, ನಿರ್ಲಜ್ಜರೂ, ಕಡುಲೋಭಿಗಳೂ ಆದರು. ॥ ೨೯ ॥

ಇದಾದ ಬಳಿಕ ಸಮುದ್ರಮಂಥನವನ್ನು ಮುಂದುವರಿಸಿದಾಗ ಕಮಲಲೋಚನೆಯಾದ ಕನ್ಯೆಯ ರೂಪದಲ್ಲಿ ವಾರುಣೀದೇವಿಯು ಪ್ರಕಟಳಾದಳು. ಭಗವಂತನ ಅನುಮತಿಯಂತೆ ದೈತ್ಯರು ಆಕೆಯನ್ನು ಪಡೆದುಕೊಂಡರು. ॥ ೩೦ ॥ ಅನಂತರ ಮಹಾರಾಜಾ ! ಕಶ್ಯಪನ ಮಕ್ಕಳಾದ ದೇವ-ದಾನವರು ಅಮೃತವನ್ನು ಬಯಸಿ ಸಮುದ್ರಮಂಥನವನ್ನು ಮುಂದುವರಿಸಿದಾಗ ಅದರಿಂದ ಪರಮಾದ್ಭುತನಾದ ಪುರುಷನೊಬ್ಬನು ಪ್ರಕಟನಾದನು. ॥ ೩೧ ॥ ಅವನ ತೋಳುಗಳು ನೀಳವಾಗಿಯೂ, ದಪ್ಪವಾಗಿಯೂ ಇದ್ದುವು. ಅವನ ಕುತ್ತಿಗೆಯು ಶಂಖವನ್ನು ಹೋಲುತ್ತಿತ್ತು. ಕಡೆಗಣ್ಣುಗಳು ಕೆಂಪಾಗಿದ್ದವು. ಅವನು ಶ್ಯಾಮಲವರ್ಣದ ಅಂಗಕಾಂತಿಯಿಂದ ಸುಂದರನಾಗಿದ್ದನು. ಕೊರಳಲ್ಲಿ ಮಾಲೆ, ಅಂಗಾಂಗಗಳಲ್ಲಿ ಸಮಸ್ತ ಆಭರಣಗಳಿಂದ ಸಮಲಂಕೃತನಾಗಿದ್ದನು. ಪೀತಾಂಬರವನ್ನು ಉಟ್ಟಿದ್ದನು. ಕಿವಿಗಳಲ್ಲಿ ಹೊಳೆಯುತ್ತಿರುವ ಕುಂಡಲಗಳಿದ್ದವು. ಅಗಲವಾದ ವಕ್ಷಃಸ್ಥಳವಿದ್ದು ಯುವಕನಾಗಿದ್ದನು. ಸಿಂಹದಂತಹ ಪರಾಕ್ರಮ, ಅನುಪಮ ಸೌಂದರ್ಯ, ನುಣುಪಾದ ಗುಂಗುರು ಕೂದಲುಗಳು ಹಾರಾಡುತ್ತಾ ಅವನ ಸ್ವರೂಪವು ಅದ್ವಿತೀಯವಾಗಿತ್ತು. ॥ ೩೨-೩೩ ॥ ಅವನ ಕೈಗಳಲ್ಲಿ ಕಂಕಣಗಳಿದ್ದು ಅಮೃತದಿಂದ ತುಂಬಿದ ಕಲಶವನ್ನು ಹಿಡಿದುಕೊಂಡಿದ್ದನು. ಅವನು ಸಾಕ್ಷಾತ್ ಭಗವಾನ್ ವಿಷ್ಣುವಿನ ಅಂಶಾಂಶ ಅವತಾರನಾಗಿದ್ದನು. ॥ ೩೪ ॥ ಅವನು ಆಯುರ್ವೇದ ಪ್ರವರ್ತಕನೂ, ಯಜ್ಞಭೋಕ್ತೃವೂ ಆದ ಧನ್ವಂತರೀ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಅವನ ಮೇಲೆ ಮತ್ತು ಅವನ ಕೈಯಲ್ಲಿದ್ದ ಅಮೃತಕಲಶದ ಮೇಲೆ ದೈತ್ಯರ ದೃಷ್ಟಿಬೀಳುತ್ತಲೇ ಅವರು ಶೀಘ್ರವಾಗಿ, ಬಲವಂತವಾಗಿ ಆ ಅಮೃತಕಲಶವನ್ನು ಕಸಿದುಕೊಂಡರು. ಅವರಾದರೋ ಮೊದಲಿನಿಂದಲೇ ಯಾವುದೇ ರೀತಿಯಿಂದ ಸಮುದ್ರಮಂಥನದಿಂದ ದೊರೆತ ಎಲ್ಲ ವಸ್ತುಗಳು ತಮಗೇ ಸೇರಬೇಕೆಂದು ಹೊಂಚು ಹಾಕುತ್ತಿದ್ದರು. ಅಸುರರು ಆ ಅಮೃತದಿಂದ ತುಂಬಿದ ಕಲಶವನ್ನು ಕಸಿದುಕೊಂಡಾಗ ದೇವತೆಗಳ ಮನಸ್ಸು ವಿಷಾದದಿಂದ ತುಂಬಿಹೋಯಿತು. ಅನ್ಯಮಾರ್ಗವನ್ನು ಕಾಣದೆ ಅವರು ಶ್ರೀಹರಿಯಲ್ಲಿ ಶರಣಾದರು. ದೇವತೆಗಳ ಆ ದೈನ್ಯಾವಸ್ಥೆಯನ್ನು ಕಂಡು ಭಕ್ತರ ಕಲ್ಪತರುವಾದ ಭಗವಂತನು ಹೇಳಿದನು – ದೇವತೆಗಳಿರಾ ! ನೀವು ದುಃಖಿಸಬೇಡಿರಿ. ನಾನು ನನ್ನ ಮಾಯೆಯಿಂದ ಅವರಲ್ಲಿ ಪರಸ್ಪರ ಕಲಹ ಉಂಟಾಗುವಂತೆ ಮಾಡಿ ಈಗಲೇ ನಿಮ್ಮ ಕಾರ್ಯವನ್ನು ಸಾಧಿಸಿಕೊಡುವೆನು. ॥ ೩೫-೩೭ ॥

ಮಿಥಃ ಕಲಿರಭೂತ್ತೇಷಾಂ ತದರ್ಥೇ ತರ್ಷಚೇತಸಾಮ್ ।
ಅಹಂ ಪೂರ್ವಮಹಂ ಪೂರ್ವಂ ನ ತ್ವಂ ನ ತ್ವಮಿತಿ ಪ್ರಭೋ ॥ ೩೮ ॥

ದೇವಾಃ ಸ್ವಂ ಭಾಗಮರ್ಹಂತಿ ಯೇ ತುಲ್ಯಾಯಾಸಹೇತವಃ ।
ಸತ್ರಯಾಗ ಇವೈತಸ್ಮಿನ್ನೇಷ ಧರ್ಮಃ ಸನಾತನಃ ॥ ೩೯ ॥

ಇತಿ ಸ್ವಾನ್ಪ್ರತ್ಯಷೇಧನ್ವೈ ದೈತೇಯಾ ಜಾತಮತ್ಸರಾಃ ।
ದುರ್ಬಲಾಃ ಪ್ರಬಲಾನ್ರಾಜನ್ಗೃಹೀತಕಲಶಾನ್ಮುಹುಃ ॥ ೪೦ ॥

ಏತಸ್ಮಿನ್ನಂತರೇ ವಿಷ್ಣುಃ ಸರ್ವೋಪಾಯವಿದೀಶ್ವರಃ ।
ಯೋಷಿದ್ರೂಪಮನಿರ್ದೇಶ್ಯಂ ದಧಾರ ಪರಮಾದ್ಭುತಮ್ ॥ ೪೧ ॥

ಪ್ರೇಕ್ಷಣೀಯೋತ್ಪಲಶ್ಯಾಮಂ ಸರ್ವಾವಯವಸುಂದರಮ್ ।
ಸಮಾನಕರ್ಣಾಭರಣಂ ಸುಕಪೋಲೋನ್ನಸಾನನಮ್ ॥ ೪೨ ॥

ನವಯೌವನನಿರ್ವೃತ್ತಸ್ತನಭಾರಕೃಶೋದರಮ್ ।
ಮುಖಾಮೋದಾನುರಕ್ತಾಲಿಝಂಕಾರೋದ್ವಿಗ್ನಲೋಚನಮ್ ॥ ೪೩ ॥

ಬಿಭ್ರತ್ಸ್ವಕೇಶಭಾರೇಣ ಮಾಲಾಮುತ್ಫುಲ್ಲಮಲ್ಲಿಕಾಮ್ ।
ಸುಗ್ರೀವಕಂಠಾಭರಣಂ ಸುಭುಜಾಂಗದಭೂಷಿತಮ್ ॥ ೪೪ ॥

ವಿರಜಾಂಬರಸಂವೀತನಿತಂಬದ್ವೀಪಶೋಭಯಾ ।
ಕಾಂಚ್ಯಾ ಪ್ರವಿಲಸದ್ವಲ್ಗುಚಲಚ್ಚರಣನೂಪುರಮ್ ॥ ೪೫ ॥

ಸವ್ರೀಡಸ್ಮಿತವಿಕ್ಷಿಪ್ತಭ್ರೂವಿಲಾಸಾವಲೋಕನೈಃ ।
ದೈತ್ಯಯೂಥಪಚೇತಃಸು ಕಾಮಮುದ್ದೀಪಯನ್ಮುಹುಃ ॥ ೪೬ ॥

ಪರೀಕ್ಷಿತನೇ! ಅಮೃತಲೋಲುಪರಾದ ದೈತ್ಯರಲ್ಲಿ ಅದರ ಕುರಿತು ಪರಸ್ಪರ ಜಗಳ ಪ್ರಾರಂಭವಾಯಿತು. ನಾನು ಮೊದಲು ಕುಡಿಯುವೆ – ನಾನು ಮೊದಲು ಕುಡಿಯುವೆ, ನೀನಲ್ಲವೆಂದು ಎಲ್ಲರೂ ಹೇಳತೊಡಗಿದರು. ॥ ೩೮ ॥ ಅವರಲ್ಲಿ ದುರ್ಬಲರಾದವರು ಬಲಿಷ್ಠರಾದ ದೈತ್ಯರೊಡನೆ ವಿರೋಧಮಾಡತೊಡಗಿದರು. ಕಲಶವನ್ನು ಕಿತ್ತುಕೊಂಡು ಕೈವಶಪಡಿಸಿಕೊಂಡಿರುವವರು ಈರ್ಷೆಯಿಂದ ಧರ್ಮದ ನೆವವನ್ನೊಡ್ಡಿ ಅವರನ್ನು ತಡೆಯುತ್ತಾ ಪದೇ-ಪದೇ ಹೇಳತೊಡಗಿದರು – ಅಯ್ಯಾ! ದೇವತೆಗಳೂ ನಮ್ಮಂತೆಯೇ ಪರಿಶ್ರಮಪಟ್ಟಿರುವರು. ಅವರಿಗೂ ಯಜ್ಞಭಾಗದಂತೆ ಸಮಾನವಾಗಿ ಇದರ ಭಾಗ ಸಿಗಬೇಕಲ್ಲ! ಇದೇ ಸನಾತನ ಧರ್ಮವಾಗಿದೆ. ॥ ೩೯-೪೦ ॥ ಇತ್ತ ಹೀಗೆ ದೈತ್ಯರು ನಾನು-ನಾನು ಎಂದು ಕಚ್ಚಾಡುತ್ತಿದ್ದಾಗ ಆ ಕಡೆ ಸಮಸ್ತ ಉಪಾಯಗಳನ್ನು ಬಲ್ಲಿದನಾದ ಲೋಕೇಶ್ವರ, ಚತುರಶಿರೋಮಣಿ ಭಗವಂತನು ಅತ್ಯಂತ ಅದ್ಭುತವಾದ, ಅವರ್ಣನೀಯವಾದ ಮೋಹಿನಿಯ ರೂಪವನ್ನು ಧರಿಸಿದನು. ॥ ೪೧ ॥ ಪ್ರೇಕ್ಷಣೀಯಳಾದ ಆ ಸುಂದರಿಯ ಶರೀರವು ನೈದಿಲೆಯಂತೆ ಶ್ಯಾಮಲವರ್ಣದಿಂದ ಶೋಭಿಸುತ್ತಿತ್ತು. ಅವಳ ಎಲ್ಲ ಅಂಗಾಂಗಗಳು ಆಕರ್ಷಣೀಯವಾಗಿದ್ದವು. ಎರಡೂ ಕಿವಿಗಳಲ್ಲಿ ಸಮಾನವಾದ ಕರ್ಣಾಭರಣಗಳು ಶೋಭಿಸುತ್ತಿದ್ದವು. ಸುಂದರವಾದ ಕಪೋಲಗಳು, ಎತ್ತರವೂ ನೀಳವೂ ಆದ ಮೂಗಿನಿಂದ ಕೂಡಿದ ಮುಖವು ರಮಣೀಯವಾಗಿತ್ತು. ॥ ೪೨ ॥ ಹೊಸ ಜವ್ವನೆಯಾದ್ದರಿಂದ ದುಂಡಾಗಿ ಹೊರಹೊಮ್ಮುತ್ತಿದ್ದ ಸ್ತನಗಳ ಭಾರದಿಂದ ಸೊಂಟವು ಕೃಶವಾಗಿ ಬಳುಕುತ್ತಿರುವಂತೆ ಕಾಣುತ್ತಿದ್ದಿತು. ಮುಖದ ಸುವಾಸನೆಯಿಂದ ಪುಷ್ಪವೆಂದು ಭ್ರಮಿಸಿ ಮುತ್ತಿಡುತ್ತಿದ್ದ ದುಂಬಿಗಳ ಝೇಂಕಾರದಿಂದ ಕಣ್ಣಾಲಿಗಳು ಉದ್ವಿಗ್ನವಾಗಿದ್ದವು. ॥ ೪೩ ॥ ಜೋಲುಬಿದ್ದಿದ್ದ ತುರುಬಿನಲ್ಲಿ ಅರಳಿದ ಮಲ್ಲಿಗೆಯ ಹಾರವು ಕಂಗೊಳಿಸುತ್ತಿದ್ದುವು. ಕಂಠಾಭರಣದಿಂದ ಕುತ್ತಿಗೆಯೂ ಅಂಗದ ಕೇಯೂರಗಳಿಂದ ತೋಳುಗಳು ಸುಂದರವಾಗಿ ಶೋಭಿಸುತ್ತಿದ್ದುವು. ॥ ೪೪ ॥ ದ್ವೀಪಗಳಂತಿದ್ದ ಎರಡು ನಿತಂಬಗಳು ಸ್ವಚ್ಛವಾದ ವಸ್ತ್ರದಿಂದಲೂ, ಡಾಬಿನಿಂದಲೂ ಸಮಲಂಕೃತವಾಗಿ ಮನೋಹರವಾಗಿ ಕಾಣುತ್ತಿದ್ದವು. ಅವಳ ಕಾಲಂದುಗೆಗಳು ಸುಮಧುರವಾಗಿ ಝಣ-ಝಣ ಶಬ್ದಮಾಡುತ್ತಿದ್ದವು. ॥ ೪೫ ॥ ಸರ್ವಾಂಗ ಸುಂದರಿಯಾದ ಆ ಮೋಹಿನಿಯು ನಾಚಿಕೆಯಿಂದ ಕೂಡಿದ ಕಿರುನಗೆಯಿಂದಲೂ, ಹಾರಿಸಲ್ಪಡುತ್ತಿದ್ದ ಹುಬ್ಬುಗಳಿಂದಲೂ, ವೈಯಾರದ ನೋಟದಿಂದಲೂ ದೈತ್ಯನಾಯಕರ ಮನಸ್ಸಿನಲ್ಲಿದ್ದ ಕಾಮವನ್ನು ಉದ್ದೀಪನಗೊಳಿಸಿದಳು. ॥ ೪೬ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ಭಗವನ್ಮಾಯೋಪಲಂಭನಂ ನಾಮಾಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಭಗವಂತನು ಮೋಹಿನಿಯ ರೂಪದಲ್ಲಿ ಅಮೃತವನ್ನು ಹಂಚಿದುದು

*ಶ್ರೀಶುಕ ಉವಾಚ*

**ತೇಽನ್ಯೋನ್ಯತೋಽಸುರಾಃ ಪಾತ್ರಂ ಹರಂತ್ಯಸ್ತಸೌಹೃದಾಃ ।
ಕ್ಷಿಪಂತೋ ದಸ್ಯುಧರ್ಮಾಣ ಆಯಾಂತೀಂ ದದೃಶುಃ ಸ್ತ್ರಿಯಮ್ ॥ ೧ ॥**

**ಅಹೋ ರೂಪಮಹೋ ಧಾಮ ಅಹೋ ಅಸ್ಯಾ ನವಂ ವಯಃ ।
ಇತಿ ತೇ ತಾಮಭಿದ್ರುತ್ಯ ಪಪ್ರಚ್ಛುರ್ಜಾತಹೃಚ್ಛಯಾಃ ॥ ೨ ॥**

**ಕಾ ತ್ವಂ ಕಂಜಪಲಾಶಾಕ್ಷಿ ಕುತೋ ವಾ ಕಿಂ ಚಿಕೀರ್ಷಸಿ ।
ಕಸ್ಯಾಸಿ ವದ ವಾಮೋರು ಮಥ್ನಂತೀವ ಮನಾಂಸಿ ನಃ ॥ ೩ ॥**

**ನ ವಯಂ ತ್ವಾಮರೈರ್ದೈತ್ಯೈಃ ಸಿದ್ಧಗಂಧರ್ವಚಾರಣೈಃ ।
ನಾಸ್ಪೃಷ್ಟಪೂರ್ವಾಂ ಜಾನೀಮೋ ಲೋಕೇಶೈಶ್ಚ ಕುತೋ ನೃಭಿಃ ॥ ೪ ॥**

**ನೂನಂ ತ್ವಂ ವಿಧಿನಾ ಸುಭ್ರೂಃ ಪ್ರೇಷಿತಾಸಿ ಶರೀರಿಣಾಮ್ ।
ಸರ್ವೇಂದ್ರಿಯಮನಃಪ್ರೀತಿಂ ವಿಧಾತುಂ ಸಘೃಣೇನ ಕಿಮ್ ॥ ೫ ॥**

**ಸಾ ತ್ವಂ ನಃ ಸ್ಪರ್ಧಮಾನಾನಾಮೇಕವಸ್ತುನಿ ಮಾನಿನಿ ।
ಜ್ಞಾತೀನಾಂ ಬದ್ಧವೈರಾಣಾಂ ಶಂ ವಿಧತ್ಸ್ವ ಸುಮಧ್ಯಮೇ ॥ ೬ ॥**

**ವಯಂ ಕಶ್ಯಪದಾಯಾದಾ ಭ್ರಾತರಃ ಕೃತಪೌರುಷಾಃ ।
ವಿಭಜಸ್ವ ಯಥಾನ್ಯಾಯಂ ನೈವ ಭೇದೋ ಯಥಾ ಭವೇತ್ ॥ ೭ ॥**

**ಇತ್ಯುಪಾಮಂತ್ರಿತೋ ದೈತ್ಯೈರ್ಮಾಯಾಯೋಷಿದ್ವಪುರ್ಹರಿಃ ।
ಪ್ರಹಸ್ಯ ರುಚಿರಾಪಾಂಗೈರ್ನಿರೀಕ್ಷನ್ನಿದಮಬ್ರವೀತ್ ॥ ೮ ॥**

*ಶ್ರೀಭಗವಾನುವಾಚ*

**ಕಥಂ ಕಶ್ಯಪದಾಯಾದಾಃ ಪುಂಶ್ಚಲ್ಯಾಂ ಮಯಿ ಸಂಗತಾಃ ।
ವಿಶ್ವಾಸಂ ಪಂಡಿತೋ ಜಾತು ಕಾಮಿನೀಷು ನ ಯಾತಿ ಹಿ ॥ ೯ ॥**

**ಸಾಲಾವೃಕಾಣಾಂ ಸ್ತ್ರೀಣಾಂ ಚ ಸ್ವೈರಿಣೀನಾಂ ಸುರದ್ವಿಷಃ ।
ಸಖ್ಯಾನ್ಯಾಹುರನಿತ್ಯಾನಿ ನೂತ್ನಂ ನೂತ್ನಂ ವಿಚಿನ್ವತಾಮ್ ॥ ೧೦ ॥**

**ಶ್ರೀಶುಕಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಅಸುರರು ತಮ್ಮ-ತಮ್ಮಲ್ಲಿಯೇ ಸದ್ಭಾವವನ್ನೂ, ವಿಶ್ವಾಸ ವನ್ನೂ ಕಳಕೊಂಡು ಒಬ್ಬರು ಮತ್ತೊಬ್ಬರನ್ನು ನಿಂದಿಸುತ್ತಾ, ಕಳ್ಳರಂತೆ ಒಬ್ಬರಿಂದ ಮತ್ತೊಬ್ಬರು ಅಮೃತಕಲಶವನ್ನು ಕಸಿದುಕೊಳ್ಳುತ್ತಾ ಇದ್ದರು. ಅದೇ ಸಮಯಕ್ಕೆ ಸರಿಯಾಗಿ ಸುಂದರಿಯಾದ ಓರ್ವ ಸ್ತ್ರೀಯು ತಮ್ಮ ಕಡೆಗೆ ಬರುತ್ತಿರುವುದನ್ನು ನೋಡಿದರು. ॥ ೧ ॥ ಆಹಾ! ಎಂತಹ ರೂಪು! ಎಂತಹ ತೇಜಸ್ಸು! ಎಂತಹ ನವ ಯೌವನ! ಎಂದು ಉದ್ಗರಿಸುತ್ತಾ ಕಾಮೋದ್ದೀಪ್ತರಾದ ಆ ದಾನ ವರು ಅವಳ ಬಳಿಗೆ ಓಡಿಬಂದು ಬೆಸಗೊಂಡರು. ॥ ೨ ॥ ಪದ್ಮ ಪತ್ರಾಕ್ಷಿಯೇ! ಸುಂದರಿಯೇ! ನೀನು ಯಾರು? ಎಲ್ಲಿಂದ ಬಂದಿರುವೆ? ಏನು ಮಾಡಲು ಬಯಸಿ ಇಲ್ಲಿಗೆ ಬಂದಿರುವೆ? ನೀನು ಯಾರ ಮಗಳಾಗಿರುವೆ? ನಿನ್ನನ್ನು ನೋಡಿ ನಮ್ಮ ಮನಸ್ಸು ಕಲಕಿಹೋಗಿದೆ. ॥ ೩ ॥ ಸುಂದರಿಯೇ! ನಮಗೆ ತಿಳಿದಿರುವಂತೆ ದೇವತೆಗಳಾಗಲೀ ದೈತ್ಯರಾಗಲೀ, ಸಿದ್ಧ-ಗಂಧರ್ವ-ಚಾರಣ ರಾಗಲೀ ನಿನ್ನನ್ನು ಸ್ಪರ್ಶಿಸಿರುವುದಿಲ್ಲ. ಹೀಗಿರುವಾಗ ಮನುಷ್ಯರು ನಿನ್ನನ್ನು ಹೇಗೆ ಸ್ಪರ್ಶಿಸಬಲ್ಲರು? ॥ ೪ ॥ ಸುಂದರೀ! ಖಂಡಿತ ವಾಗಿ ವಿಧಾತನೇ ದಯೆಗೈದು ಶರೀರಧಾರಿಗಳ ಸಮಸ್ತ ಇಂದ್ರಿಯ ಗಳನ್ನೂ ಮನಸ್ಸನ್ನೂ ತೃಪ್ತಿಪಡಿಸಲಿಕ್ಕಾಗಿಯೇ ನಿನ್ನನ್ನು ಇಲ್ಲಿಗೆ ಕಳಿಸಿರಬಹುದೇ? ನಿಜ! ಹಾಗೆಯೇ ಆಗಿರಬೇಕು. ॥ ೫ ॥ ಮಾನಿನೀ! ಹಾಗಂತ ನಾವುಗಳೆಲ್ಲ ಒಂದೇ ಜಾತಿಯವರು. ಹಾಗೂ ನಾವೆಲ್ಲ ಒಂದೇ ವಸ್ತುವನ್ನು ಬಯಸುತ್ತಿದ್ದೇವೆ. ಆದರಿಂದ ನಮ್ಮಲ್ಲಿ ಅಸೂಯೆ, ಬದ್ಧವೈರ ಉಂಟಾಗಿದೆ. ಸುಂದರೀ! ನೀನು ನಮ್ಮ ಜಗಳವನ್ನು ಕೊನೆಗಾಣಿಸು. ॥ ೬ ॥ ನಾವೆಲ್ಲರೂ ಕಶ್ಯಪನ ಮಕ್ಕಳು. ಅಣ್ಣ-ತಮ್ಮಂದಿರು. ನಾವುಗಳು ಅಮೃತಕ್ಕಾಗಿ ಭಾರೀ ಪುರುಷಾರ್ಥವನ್ನು ಮಾಡಿರುವೆವು. ನೀನು ನ್ಯಾಯವಾಗಿ ನಿಷ್ಪಕ್ಷ ಭಾವದಿಂದ ಇದನ್ನು ಹಂಚಿಬಿಡು. ಇದರಿಂದ ಮತ್ತೆ ನಮ್ಮಲ್ಲಿ ಯಾವುದೇ ಜಗಳ ಆಗದಿರಲಿ. ॥ ೭ ॥ ಅಸುರರು ಹೀಗೆ ಪ್ರಾರ್ಥಿಸಿದಾಗ ಮಾಯೆಯಿಂದ ಸ್ತ್ರೀವೇಷವನ್ನು ಧರಿಸಿದ್ದ ಶ್ರೀಹರಿಯು ನಗುತ್ತಾ ಸುಂದರವಾದ ಕಟಾಕ್ಷವೀಕ್ಷಣದಿಂದ ಅವರ ಕಡೆಗೆ ನೋಡುತ್ತಾ ಇಂತೆಂದನು. ॥ ೮ ॥

**ಶ್ರೀಭಗವಂತನು ಹೇಳಿದನು** – ದೈತ್ಯರೇ! ಮಹರ್ಷಿಗಳಾದ ಕಶ್ಯಪರ ಮಕ್ಕಳಾದ ನೀವು, ಸ್ವೇಚ್ಛೆಯಿಂದ ಮನೆ-ಮನೆ ತಿರುಗುವ ಕುಲಟೆಯಾದ ನನ್ನ ಮೇಲೆ ನ್ಯಾಯದ ಭಾರವನ್ನು ಏಕೆ ಹಾಕುತ್ತಿದ್ದೀರಿ? ಪಂಡಿತರಾದವರು ಯಾವಾಗಲೂ ಕಾಮಿನಿಯರಲ್ಲಿ ವಿಶ್ವಾಸ ವನ್ನಿಡುವುದಿಲ್ಲ. ॥ ೯ ॥ ದೈತ್ಯರೇ! ನಾಯಿಯಲ್ಲಿ ಮತ್ತು ಜಾರಿಣಿಯಾದ ಸ್ತ್ರೀಯರ ವಿಷಯದಲ್ಲಿ ಸ್ನೇಹವು ಅನಿತ್ಯವಾದುದು ಎಂದು ವಿದ್ವಾಂಸರು ಹೇಳುತ್ತಾರೆ. ಅವರಿಬ್ಬರೂ ಸದಾಕಾಲ ಹೊಸ-ಹೊಸ ಬೇಟೆಯನ್ನು ಹುಡುಕುತ್ತಾ ಇರುತ್ತಾರೆ. ॥ ೧೦ ॥

ಶ್ರೀಶುಕ ಉವಾಚ

ಇತಿ ತೇ ಕ್ಷ್ವೇಲಿತೈಸ್ತಸ್ಯಾ ಆಶ್ವಸ್ತಮನಸೋಽಸುರಾಃ ।
ಜಹಸುರ್ಭಾವಗಂಭೀರಂ ದದುಶ್ಚಾಮೃತಭಾಜನಮ್ ॥ ೧೧ ॥

ತತೋ ಗೃಹೀತ್ವಾಮೃತಭಾಜನಂ ಹರಿ-
ರ್ಬಭಾಷ ಈಷತ್ಸ್ಮಿತಶೋಭಯಾ ಗಿರಾ ।
ಯದ್ಯಭ್ಯುಪೇತಂ ಕ್ವ ಚ ಸಾಧ್ವಸಾಧು ವಾ
ಕೃತಂ ಮಯಾ ವೋ ವಿಭಜೇ ಸುಧಾಮಿಮಾಮ್ ॥ ೧೨ ॥

ಇತ್ಯಭಿವ್ಯಾಹೃತಂ ತಸ್ಯಾ ಆಕರ್ಣ್ಯಾಸುರಪುಂಗವಾಃ ।
ಅಪ್ರಮಾಣವಿದಸ್ತಸ್ಯಾಸ್ತತ್ತಥೇತ್ಯನ್ವಮಂಸತ ॥ ೧೩ ॥

ಅಥೋಪೋಷ್ಯ ಕೃತಸ್ನಾನಾ ಹುತ್ವಾ ಚ ಹವಿಷಾನಲಮ್ ।
ದತ್ತ್ವಾ ಗೋವಿಪ್ರಭೂತೇಭ್ಯಃ ಕೃತಸ್ವಸ್ತ್ಯಯನಾ ದ್ವಿಜೈಃ ॥ ೧೪ ॥

ಯಥೋಪಜೋಷಂ ವಾಸಾಂಸಿ ಪರಿಧಾಯಾಹತಾನಿ ತೇ ।
ಕುಶೇಷು ಪ್ರಾವಿಶನ್ಸರ್ವೇ ಪ್ರಾಗಗ್ರೇಷ್ವಭಿಭೂಷಿತಾಃ ॥ ೧೫ ॥

ಪ್ರಾಙ್ಮುಖೇಷೂಪವಿಷ್ಟೇಷು ಸುರೇಷು ದಿತಿಜೇಷು ಚ ।
ಧೂಪಾಮೋದಿತಶಾಲಾಯಾಂ ಜುಷ್ಟಾಯಾಂ ಮಾಲ್ಯದೀಪಕೈಃ ॥ ೧೬ ॥

ತಸ್ಯಾಂ ನರೇಂದ್ರ ಕರಭೋರುರುಶದ್ದುಕೂಲ-
ಶ್ರೋಣೀತಟಾಲಸಗತಿರ್ಮದವಿಹ್ವಲಾಕ್ಷೀ ।
ಸಾ ಕೂಜತೀ ಕನಕನೂಪುರಶಿಂಜಿತೇನ
ಕುಂಭಸ್ತನೀ ಕಲಶಪಾಣಿರಥಾವಿವೇಶ ॥ ೧೭ ॥

ತಾಂ ಶ್ರೀಸಖೀಂ ಕನಕಕುಂಡಲಚಾರುಕರ್ಣ-
ನಾಸಾಕಪೋಲವದನಾಂ ಪರದೇವತಾಖ್ಯಾಮ್ ।
ಸಂವೀಕ್ಷ್ಯ ಸಂಮುಮುಹುರುತ್ಸ್ಮಿತವೀಕ್ಷಣೇನ
ದೇವಾಸುರಾ ವಿಗಲಿತಸ್ತನಪಟ್ಟಿಕಾಂತಾಮ್ ॥ ೧೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಮೋಹಿನಿಯ ಇಂತಹ ಹುಡುಗಾಟದ ಮಾತುಗಳಿಂದ ದೈತ್ಯರ ಮನಸ್ಸಿನಲ್ಲಿ ಅವಳ ಮೇಲೆ ವಿಶ್ವಾಸವು ಹೆಚ್ಚಿತು. ಅವರೆಲ್ಲರೂ ಗಂಭೀರವಾಗಿ ನಕ್ಕು ಅಮೃತಕಲಶವನ್ನು ಆಕೆಯ ಕೈಗಿತ್ತರು. ॥ ೧೧ ॥ ಭಗವಂತನು ಅಮೃತದ ಕಲಶವನ್ನು ತನ್ನ ಕೈಯಲ್ಲಿ ಪಡೆದು ಕೊಂಚ ನಸುನಗುತ್ತಾ ಸವಿನುಡಿಗಳಿಂದ ಇಂತೆಂದನು – ದೈತ್ಯಶಿರೋಮಣಿಗಳೇ! ನಾನು ಮಾಡುವ ವಿಭಾಗ ಸರಿಯಾಗಿರಲಿ, ಸರಿಯಲ್ಲದಿರಲಿ ನೀವು ಅದನ್ನು ಸಮ್ಮತಿಸುವುದಾದರೆ, ನಿಮ್ಮ ಪ್ರಾರ್ಥನೆಯಂತೆ ಈ ಕಲಶದಲ್ಲಿರುವ ಅಮೃತವನ್ನು ನಾನು ಹಂಚುತ್ತೇನೆ. ॥ ೧೨ ॥ ಹೀಗೆ ಆಕೆಯ ಸವಿಮಾತುಗಳನ್ನು ಕೇಳಿ, ಅವಳ ಮಾತಿನಲ್ಲಿದ್ದ ಅಪ್ರಾಮಾಣ್ಯವನ್ನು ತಿಳಿಯದೆ ದೊಡ್ಡ-ದೊಡ್ಡ ದೈತ್ಯರೆಲ್ಲರೂ ಏಕಕಂಠದಿಂದ 'ನಮಗೆ ಸಮ್ಮತವಿದೆ' ಎಂದು ನುಡಿದರು. ಅವರಿಗೆ ಮೋಹಿನಿಯ ವಾಸ್ತವಿಕ ಸ್ವರೂಪದ ಅರಿವು ಇರಲಿಲ್ಲ. ॥ ೧೩ ॥

ಇದಾದ ಬಳಿಕ ಮೋಹಿನಿಯ ನಿರ್ದೇಶದಂತೆ ದೇವ-ದಾನವರು ಒಂದು ದಿನದ ಉಪವಾಸಮಾಡಿ ಎಲ್ಲರೂ ಸ್ನಾನಮಾಡಿದರು. ಹವಿಸ್ಸಿನಿಂದ ಯಜ್ಞೇಶ್ವರನಲ್ಲಿ ಹೋಮಮಾಡಿ, ಗೋ-ಬ್ರಾಹ್ಮಣರಿಗೂ, ಪ್ರಾಣಿಗಳಿಗೂ ಯಥಾಯೋಗ್ಯವಾದ ಉಪಹಾರಗಳನ್ನು ಕೊಟ್ಟು, ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿದರು. ॥ ೧೪ ॥ ತಮ್ಮ ಇಷ್ಟಾನುಸಾರವಾಗಿ ನೂತನವಾದ ವಸ್ತ್ರಗಳನ್ನು ಧರಿಸಿ, ಗಂಧ-ಮಾಲ್ಯಾದಿಗಳಿಂದ ಅಲಂಕರಿಸಿಕೊಂಡು ಪೂರ್ವಾಗ್ರವಾಗಿದ್ದ ದರ್ಭಾಸನಗಳಲ್ಲಿ ಕುಳಿತು ಕೊಂಡರು. ॥ ೧೫ ॥ ದೇವ-ದಾನವರೆಲ್ಲರೂ ಧೂಪದಿಂದ ಸುಗಂಧಿತವಾದ, ಮಾಲೆಗಳಿಂದ, ದೀಪಗಳಿಂದ ಅಲಂಕೃತವಾದ ಭವ್ಯಭವನದಲ್ಲಿ ಪೂರ್ವಾಗ್ರಗಳುಳ್ಳ ದರ್ಭಾಸನದಲ್ಲಿ ಕುಳಿತಿರುವಾಗ ಮೋಹಿನಿಯು ಅಮೃತದ ಕಲಶವನ್ನೆತ್ತಿಕೊಂಡು ಆ ಸಭಾಭವನಕ್ಕೆ ಆಗಮಿಸಿದಳು. ಆಗ ಅವಳು ಕಮನೀಯವಾದ ಪೀತಾಂಬರವನ್ನು ಉಟ್ಟಿದ್ದಳು. ಮೃದುವಾದ ನಿತಂಬಗಳ ಭಾರದಿಂದಾಗಿ ಮೆಲ್ಲ-ಮೆಲ್ಲನೆ ನಡೆಯುತ್ತಿದ್ದಳು. ಕಣ್ಣುಗಳು ಮದದಿಂದ ವಿಹ್ವಲವಾಗಿದ್ದವು. ಕಲಶಗಳಂತಿದ್ದ ಸ್ತನಗಳೂ ಉನ್ನತವಾಗಿದ್ದವು. ಆನೆಮರಿಯ ಸೊಂಡಿಲಿನಂತೆ ತೊಡೆಗಳು ದುಂಡಾಗಿದ್ದವು. ಚಿನ್ನದ ಕಾಲಂದುಗೆಗಳಿಂದ ಝುಣ-ಝುಣನೆ ಶಬ್ದಮಾಡುತ್ತಾ ಅಮೃತಹಸ್ತಳಾಗಿ ಸಭಾಭವನವನ್ನು ಬೆಳಗುತ್ತಾ ಪ್ರವೇಶಿಸಿದಳು. ॥ ೧೬-೧೭ ॥ ಅವಳ ಸುಂದರವಾದ ಕಿವಿಗಳಲ್ಲಿ ಸ್ವರ್ಣಕುಂಡಲಗಳು ಶೋಭಿಸುತ್ತಿದ್ದವು. ಮೂಗೂ, ಕಪೋಲಗಳು, ಮುಖವು ಬಹು ಅಂದವಾಗಿದ್ದವು. ಸ್ವಯಂ ಪರದೇವತೆಯಾದ ಭಗವಂತನು ಆ ಮೋಹಿನಿಯ ರೂಪದಲ್ಲಿ ಸಾಕ್ಷಾತ್ ಲಕ್ಷ್ಮೀದೇವಿಯ ಯಾರೋ ಶ್ರೇಷ್ಠ ಸಖಿಯೇ ಬಂದಂತೆ ಕಾಣುತ್ತಿದ್ದನು. ಮೋಹಿನಿಯು ತನ್ನ ಮಂದಹಾಸದಿಂದ ಕೂಡಿದ ಓರೆನೋಟದಿಂದ ದೇವ-ದಾನವರನ್ನು ನೋಡಿದಾಗ ಅವರೆಲ್ಲರೂ ಮೋಹಿತರಾಗಿ ಬಿಟ್ಟರು. ಆಗ ಅವಳ ಸೆರಗು ಸ್ತನಗಳಿಂದ ಸ್ವಲ್ಪ ಜಾರಿತ್ತು. ॥ ೧೮ ॥ ಭಗವಂತನು ಮೋಹಿನೀರೂಪದಲ್ಲಿರುವಾಗ ಅಸುರರಾದರೋ ಜನ್ಮತಃ ಕ್ರೂರ ಸ್ವಭಾವದವರು,

ಅಸುರಾಣಾಂ ಸುಧಾದಾನಂ ಸರ್ಪಾಣಾಮಿವ ದುರ್ನಯಮ್ ।
ಮತ್ವಾ ಜಾತಿನೃಶಂಸಾನಾಂ ನ ತಾಂ ವ್ಯಭಜದಚ್ಯುತಃ ॥ ೧೯ ॥

ಕಲ್ಪಯಿತ್ವಾ ಪೃಥಕ್ಪಂಕ್ತೀರುಭಯೇಷಾಂ ಜಗತ್ಪತಿಃ ।
ತಾಂಶ್ಚೋಪವೇಶಯಾಮಾಸ ಸ್ವೇಷು ಸ್ವೇಷು ಚ ಪಂಕ್ತಿಷು ॥ ೨೦ ॥

ದೈತ್ಯಾನ್ಗೃಹೀತಕಲಶೋ ವಂಚಯನ್ನುಪಸಂಚರೈಃ ।
ದೂರಸ್ಥಾನ್ಪಾಯಯಾಮಾಸ ಜರಾಮೃತ್ಯುಹರಾಂ ಸುಧಾಮ್ ॥ ೨೧ ॥

ತೇ ಪಾಲಯಂತಃ ಸಮಯಮಸುರಾಃ ಸ್ವಕೃತಂ ನೃಪ ।
ತೂಷ್ಣೀಮಾಸನ್ಕೃತಸ್ನೇಹಾಃ ಸ್ತ್ರೀವಿವಾದಜುಗುಪ್ಸಯಾ ॥ ೨೨ ॥

ತಸ್ಯಾಂ ಕೃತಾತಿಪ್ರಣಯಾಃ ಪ್ರಣಯಾಪಾಯಕಾತರಾಃ ।
ಬಹುಮಾನೇನ ಚಾಬದ್ಧಾ ನೋಚುಃ ಕಿಂಚನ ವಿಪ್ರಿಯಮ್ ॥ ೨೩ ॥

ದೇವಲಿಂಗಪ್ರತಿಚ್ಛನ್ನಃ ಸ್ವರ್ಭಾನುರ್ದೇವಸಂಸದಿ ।
ಪ್ರವಿಷ್ಟಃ ಸೋಮಮಪಿಬಚ್ಚಂದ್ರಾರ್ಕಾಭ್ಯಾಂ ಚ ಸೂಚಿತಃ ॥ ೨೪ ॥

ಚಕ್ರೇಣ ಕ್ಷುರಧಾರೇಣ ಜಹಾರ ಪಿಬತಃ ಶಿರಃ ।
ಹರಿಸ್ತಸ್ಯ ಕಬಂಧಸ್ತು ಸುಧಯಾಪ್ಲಾವಿತೋಽಪತತ್ ॥ ೨೫ ॥

ಶಿರಸ್ತ್ವಮರತಾಂ ನೀತಮಜೋ ಗ್ರಹಮಚೀಕ್ಲೃಪತ್ ।
ಯಸ್ತು ಪರ್ವಣಿ ಚಂದ್ರಾರ್ಕಾವಭಿಧಾವತಿ ವೈರಧೀಃ ॥ ೨೬ ॥

ಪೀತಪ್ರಾಯೇಽಮೃತೇ ದೇವೈರ್ಭಗವಾಲ್ಲೋಕಭಾವನಃ ।
ಪಶ್ಯತಾಮಸುರೇಂದ್ರಾಣಾಂ ಸ್ವಂ ರೂಪಂ ಜಗೃಹೇ ಹರಿಃ ॥ ೨೭ ॥

ಇವರಿಗೆ ಅಮೃತ ಕುಡಿಸಿದರೆ ಹಾವಿಗೆ ಹಾಲೆರೆದಂತೆ ಅನ್ಯಾಯವೇ ಆದೀತು ಎಂದು ವಿಚಾರಮಾಡಿ, ಅವನು ಅಸುರರಿಗೆ ಅಮೃತವನ್ನು ಹಂಚಿಕೊಡಲಿಲ್ಲ. ॥ ೧೯ ॥ ಭಗವಂತನು ದೇವತೆಗಳನ್ನು ಮತ್ತು ದಾನವರನ್ನು ಬೇರೆ-ಬೇರೆ ಪಂಕ್ತಿಗಳನ್ನಾಗಿಸಿದನು. ಅವರೆಲ್ಲರೂ ತಮ್ಮ-ತಮ್ಮವರೊಂದಿಗೆ ಎರಡುಸಾಲು ಹಿಡಿದು ಕುಳಿತುಬಿಟ್ಟರು. ॥ ೨೦ ॥ ಇದಾದ ಬಳಿಕ ಅಮೃತಕಲಶವನ್ನೆತ್ತಿಕೊಂಡು ಭಗವಂತನು ದೈತ್ಯರ ಬಳಿಗೆ ಬಂದನು. ಅವರನ್ನು ಹಾವ-ಭಾವ ಕಟಾಕ್ಷ-ವೀಕ್ಷಣಗಳಿಂದ ಮೋಹಿತರನ್ನಾಗಿಸಿ, ದೂರದಲ್ಲಿ ಕುಳಿತಿದ್ದ ದೇವತೆಗಳ ಬಳಿಗೆಬಂದು, ಯಾವುದನ್ನು ಕುಡಿಯುವುದರಿಂದ ಮುಪ್ಪು-ಸಾವುಗಳು ತೊಲಗುವುದೋ ಅಂತಹ ಅಮೃತವನ್ನು ದೇವತೆಗಳಿಗೆ ಕುಡಿಸಿದನು. ॥ ೨೧ ॥ ಪರೀಕ್ಷಿತನೇ! ಅಸುರರು ತಾವು ಮಾಡಿದ ಪ್ರತಿಜ್ಞೆಯನ್ನು ಪಾಲಿಸುತ್ತಿದ್ದರು. ಅವರಿಗೆ ಮೋಹಿನಿಯಲ್ಲಿ ಅಪಾರ ಸ್ನೇಹವೂ ಇತ್ತು ಹಾಗೂ ಸ್ತ್ರೀಯೊಡನೆ ಜಗಳಕಾಯುವುದು ತಮಗೆ ನಿಂದನೀಯವೆಂದೇ ತಿಳಿಯುತ್ತಿದ್ದರು. ಆದಕ್ಕಾಗಿ ಅವರು ಸುಮ್ಮನೆ ಕುಳಿತುಬಿಟ್ಟರು. ॥ ೨೨ ॥ ಮೋಹಿನಿಯಲ್ಲಿ ಅವರಿಗೆ ಅತ್ಯಂತ ಪ್ರೇಮ ಉಂಟಾಗಿತ್ತು. ಅವಳೊಂದಿಗಿನ ನಮ್ಮ ಪ್ರೇಮದ ಸಂಬಂಧ ಕಡಿದುಹೋದೀತೆಂದು ಅವರು ಭಯಪಡುತ್ತಿದ್ದರು. ಮೋಹಿನಿಯೂ ಮೊದಲಿಗೆ ಅವರಿಗೆ ಬಹಳ ಸಮ್ಮಾನ ಮಾಡಿದ್ದಳು. ಇದರಿಂದ ಅವರು ಮತ್ತೂ ಬಂಧಿತರಾಗಿದ್ದರು. ಈ ಕಾರಣದಿಂದಲೇ ಅವರು ಮೋಹಿನಿಗೆ ಯಾವುದೇ ಅಪ್ರಿಯ ಮಾತನ್ನೂ ಆಡಲಿಲ್ಲ. ॥ ೨೩ ॥

ಭಗವಂತನು ದೇವತೆಗಳಿಗೆ ಅಮೃತವನ್ನು ಕುಡಿಸುತ್ತಿರುವಾಗ ಸ್ವರ್ಭಾನು (ರಾಹು) ಎಂಬ ದಾನವನು ದೇವತೆಗಳ ವೇಷವನ್ನು ತೊಟ್ಟು ಅವರ ಸಾಲಿನಲ್ಲಿ ಬಂದು ಕುಳಿತಿದ್ದನು. ದೇವತೆಗಳೊಂದಿಗೆ ಅವನೂ ಅಮೃತವನ್ನು ಕುಡಿದುಬಿಟ್ಟನು. ಆದರೆ ಒಡನೆಯೇ ಸೂರ್ಯ-ಚಂದ್ರರು ಅವನ ಕಪಟವನ್ನು ಬಯಲುಗೊಳಿಸಿದರು. ॥ ೨೪ ॥ ಅಮೃತವನ್ನು ಕುಡಿಸುತ್ತಿರುವಾಗಲೇ ಭಗವಂತನು ತನ್ನ ತೀಕ್ಷ್ಣವಾದ ಸುದರ್ಶನ ಚಕ್ರದಿಂದ ಅವನ ತಲೆಯನ್ನು ತರಿದನು. ಆ ವೇಳೆಗೆ ಅಮೃತವು ಗಂಟಲಿನಿಂದ ಕೆಳಗೆ ಹೋಗದಿರುವುದರಿಂದ ಕಬಂಧವು (ತಲೆಯಿಲ್ಲದ ಶರೀರವು) ಬಿದ್ದುಹೋಯಿತು. ॥ ೨೫ ॥ ಆದರೆ ತಲೆಯು ಅಮರವಾಯಿತು. ಬ್ರಹ್ಮದೇವರು ಅವನನ್ನು ಗ್ರಹವನ್ನಾಗಿಸಿದರು. ಅದೇ ರಾಹುವು ಪರ್ವದಿನಗಳಲ್ಲಿ (ಗ್ರಹಣಗಳಲ್ಲಿ) ದ್ವೇಷಬುದ್ಧಿಯುಳ್ಳವನಾಗಿ ಸೂರ್ಯ-ಚಂದ್ರರನ್ನು ನುಂಗಲು ಹೋಗುತ್ತದೆ. ॥ ೨೬ ॥ ದೇವತೆಗಳು ಅಮೃತ ಪಾನಮಾಡಿದ ಬಳಿಕ ಸಮಸ್ತ ಲೋಕಗಳಿಗೆ ಜೀವನದಾನ ಮಾಡುವಂತಹ ಭಗವಂತನು ದೊಡ್ಡ-ದೊಡ್ಡ ದೈತ್ಯರ ಇದಿರಿನಲ್ಲೇ ಮೋಹಿನೀ ರೂಪವನ್ನು ತ್ಯಜಿಸಿ ನಿಜರೂಪವನ್ನು ತಾಳಿದನು. ॥ ೨೭ ॥ ಪರೀಕ್ಷಿತನೇ! ಹೀಗೆ ದೇವ-ದಾನವರು ಒಂದೇ ಕಡೆಯಲ್ಲಿ, ಒಂದೇ ಕಾಲದಲ್ಲಿ, ಅಮೃತರೂಪವಾದ ಒಂದೇ ಪ್ರಯೋಜನಕ್ಕಾಗಿ, ಒಂದೇ ವಸ್ತುವಿಗಾಗಿ, ಒಂದೇ ವಿಚಾರದಿಂದ, ಒಂದೇ ಕರ್ಮವನ್ನು ಮಾಡಿದ್ದರು; ಆದರೆ ಫಲದಲ್ಲಿ ದೊಡ್ಡ ಭೇದವೇ ಉಂಟಾಯಿತು. ಅವರಲ್ಲಿ

ಏವಂ ಸುರಾಸುರಗಣಾಃ ಸಮದೇಶಕಾಲ-
ಹೇತ್ವರ್ಥಕರ್ಮಮತಯೋಽಪಿ ಫಲೇ ವಿಕಲ್ಪಾಃ ।
ತತ್ರಾಮೃತಂ ಸುರಗಣಾಃ ಫಲಮಂಜಸಾಽಽಪು-
ರ್ಯತ್ಪಾದಪಂಕಜರಜಃಶ್ರಯಣಾನ್ನ ದೈತ್ಯಾಃ ॥ ೨೮ ॥

ದೇವತೆಗಳು ತುಂಬಾ ಸುಲಭವಾಗಿ ತಮ್ಮ ಪರಿಶ್ರಮದ ಫಲ-ಅಮೃತವನ್ನು ಪಡೆದುಕೊಂಡರು. ಏಕೆಂದರೆ, ಅವರು ಭಗವಂತನ ಚರಣರಜವನ್ನು ಆಶ್ರಯಿಸಿದ್ದರು. ಆದರೆ ದೈತ್ಯರು ಭಗವಂತನನ್ನು ವಿರೋಧಿಸುವುದರಿಂದ ಅಮೃತದಿಂದ ವಂಚಿತರಾದರು. ॥ ೨೮ ॥

ಯದ್ಯುಜ್ಯತೇಽಸುವಸುಕರ್ಮಮನೋವಚೋಭಿ-
ರ್ದೇಹಾತ್ಮಜಾದಿಷು ನೃಭಿಸ್ತದಸತ್ಪೃಥಕ್ತ್ವಾತ್ ।
ತೈರೇವ ಸದ್ಭವತಿ ಯತ್ಕ್ರಿಯತೇಽಪೃಥಕ್ತ್ವಾತ್
ಸರ್ವಸ್ಯ ತದ್ಭವತಿ ಮೂಲನಿಷೇಚನಂ ಯತ್ ॥ ೨೯ ॥

ಮನುಷ್ಯನು ತನ್ನ ಪ್ರಾಣ, ಧನ, ಕರ್ಮ, ಮನಸ್ಸು, ಮಾತು ಮುಂತಾದವುಗಳಿಂದ ಶರೀರ ಮತ್ತು ಪುತ್ರಾದಿಗಳಿಗಾಗಿ ಮಾಡುವುದೆಲ್ಲವೂ ವ್ಯರ್ಥವೇ ಸರಿ. ಏಕೆಂದರೆ, ಅದರ ಮೂಲದಲ್ಲಿ ಭೇದಬುದ್ಧಿ ಇರುತ್ತದೆ. ಆದರೆ ಅದೇ ಪ್ರಾಣ ಮುಂತಾದ ವಸ್ತುಗಳಿಂದ ಭಗವಂತನಿಗಾಗಿ ಮಾಡಲಾಗುವುದೆಲ್ಲವೂ ಭೇದಭಾವದಿಂದ ರಹಿತವಾಗಿರುವದರಿಂದ ತನ್ನ ಶರೀರ, ಪುತ್ರ ಮತ್ತು ಸಮಸ್ತ ಜಗತ್ತಿಗಾಗಿ ಸಫಲವಾಗಿ ಹೋಗುತ್ತದೆ. ವೃಕ್ಷದ ಬೇರುಗಳಿಗೆ ನೀರುಣಿಸಿದರೆ ಅದರ ಶಾಖೋಪಶಾಖೆಗಳಿಗೆ ನೀರು ಸಿಗುವಂತೆ ಭಗವಂತನಿಗಾಗಿ ಕರ್ಮಮಾಡುವುದರಿಂದ ಅವು ಎಲ್ಲರಿಗಾಗಿ ಆಗಿಹೋಗುತ್ತವೆ. ॥ ೨೯ ॥

*ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ಅಮೃತಮಥನೇ ನವಮೋಽಧ್ಯಾಯಃ ॥ ೯ ॥

# ಹತ್ತನೆಯ ಅಧ್ಯಾಯ

## ದೇವಾಸುರರ ಸಂಗ್ರಾಮ

*ಶ್ರೀಶುಕ ಉವಾಚ*

ಇತಿ ದಾನವದೈತೇಯಾ ನಾವಿಂದನ್ನಮೃತಂ ನೃಪ ।
ಯುಕ್ತಾಃ ಕರ್ಮಣಿ ಯತ್ತಾಶ್ಚ ವಾಸುದೇವಪರಾಙ್ಮುಖಾಃ ॥ ೧ ॥

ಸಾಧಯಿತ್ವಾಮೃತಂ ರಾಜನ್ಪಾಯಯಿತ್ವಾ ಸ್ವಕಾನ್ಸುರಾನ್ ।
ಪಶ್ಯತಾಂ ಸರ್ವಭೂತಾನಾಂ ಯಯೌ ಗರುಡವಾಹನಃ ॥ ೨ ॥

ಸಪತ್ನಾನಾಂ ಪರಾಮೃದ್ಧಿಂ ದೃಷ್ಟ್ವಾ ತೇ ದಿತಿನಂದನಾಃ ।
ಅಮೃಷ್ಯಮಾಣಾ ಉತ್ಪೇತುರ್ದೇವಾನ್ಪ್ರತ್ಯುದ್ಯತಾಯುಧಾಃ ॥ ೩ ॥

ತತಃ ಸುರಗಣಾಃ ಸರ್ವೇ ಸುಧಯಾ ಪೀತಯೈಧಿತಾಃ ।
ಪ್ರತಿಸಂಯುಯುಧುಃ ಶಸ್ತ್ರೈರ್ನಾರಾಯಣಪದಾಶ್ರಯಾಃ ॥ ೪ ॥

ತತ್ರ ದೈವಾಸುರೋ ನಾಮ ರಣಃ ಪರಮದಾರುಣಃ ।
ರೋಧಸ್ಯುದನ್ವತೋ ರಾಜಂಸ್ತುಮುಲೋ ರೋಮಹರ್ಷಣಃ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಓ ಪರೀಕ್ಷಿತನೇ! ದೈತ್ಯ-ದಾನವರು ಅಧಿಕ ಪ್ರಯಾಸದಿಂದಲೂ, ಅತ್ಯಂತ ಸಾಹಸದಿಂದಲೂ ಸಮುದ್ರಮಂಥನದ ಕೆಲಸದಲ್ಲಿ ಪಾಲ್ಗೊಂಡಿದ್ದರೂ, ಅವರು ಭಗವಂತನಿಂದ ವಿಮುಖರಾಗಿದ್ದರಿಂದ ಅವರಿಗೆ ಅಮೃತ ದೊರೆಯಲಿಲ್ಲ. ॥ ೧ ॥ ರಾಜನೇ! ಭಗವಂತನು ಕ್ಷೀರ ಸಮುದ್ರವನ್ನು ಕಡೆದು ಅಮೃತವನ್ನು ಪಡೆದು, ತನ್ನವರಾದ ದೇವತೆಗಳಿಗೆ ಪಾನಮಾಡಿಸಿ, ಎಲ್ಲರೂ ನೋಡುತ್ತಿರುವಂತೆ ಗರುಡಾರೂಢನಾಗಿ ಅಲ್ಲಿಂದ ಹೊರಟುಹೋದನು. ॥ ೨ ॥ ತಮ್ಮ ಶತ್ರುಗಳಿಗೆ ಅಮೃತಪಾನ ದಂತಹ ಸಫಲತೆ ದೊರೆತುದನ್ನು ಕಂಡು ದೈತ್ಯರು ಅವರ ಹಿರಿಮೆಯನ್ನು ಸಹಿಸದಾದರು. ಅವರು ಒಡನೆಯೇ ಆಯುಧಗಳನ್ನೆತ್ತಿಕೊಂಡು ದೇವತೆಗಳನ್ನು ಆಕ್ರಮಿಸಿದರು. ॥ ೩ ॥ ಇತ್ತ ದೇವತೆಗಳು ಅಮೃತವನ್ನು ಕುಡಿದು ವಿಶೇಷವಾದ ಶಕ್ತಿಯನ್ನು ಪಡೆದಿದ್ದರು; ಜೊತೆಗೆ ಭಗವಂತನ ಚರಣಕಮಲಗಳ ಆಶ್ರಯವೂ ಇತ್ತು. ಸರಿ, ಅವರೂ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿ ದೈತ್ಯರೊಡನೆ ಹೋರಾಡತೊಡಗಿದರು. ॥ ೪ ॥ ಪರೀಕ್ಷಿತನೇ! ಕ್ಷೀರಸಾಗರದ ತೀರದಲ್ಲಿ ದೇವತೆಗಳಿಗೂ, ದಾನವರಿಗೂ 'ದೇವಾಸುರಸಂಗ್ರಾಮ' ವೆಂಬ ಪರಮ ದಾರುಣವಾದ, ರೋಮಾಂಚಕರವಾದ, ಭೀಕರವಾದ ಯುದ್ಧವು ಪ್ರಾರಂಭವಾಯಿತು. ॥ ೫ ॥ ದೇವ-ದಾನವರಿಬ್ಬರೂ ಪರಸ್ಪರ ಪರಮ ಶತ್ರುಗಳಾಗಿದ್ದರು. ಉಭಯ ಪಕ್ಷದವರು

ತತ್ರಾನ್ಯೋನ್ಯಂ ಸಪತ್ನಾಸ್ತೇ ಸಂರಬ್ಧಮನಸೋ ರಣೇ ।
ಸಮಾಸಾದ್ಯಾಸಿಭಿರ್ಬಾಣೈರ್ನಿಜಘ್ನುರ್ವಿವಿಧಾಯುಧೈಃ
॥ ೬ ॥

ಶಂಖತೂರ್ಯಮೃದಂಗಾನಾಂ ಭೇರೀಡಮರಿಣಾಂ ಮಹಾನ್ ।
ಹಸ್ತ್ಯಶ್ವರಥಪತ್ತೀನಾಂ ನದತಾಂ ನಿಸ್ವನೋಽಭವತ್
॥ ೭ ॥

ರಥಿನೋ ರಥಿಭಿಸ್ತತ್ರ ಪತ್ತಿಭಿಃ ಸಹ ಪತ್ತಯಃ ।
ಹಯಾ ಹಯೈರಿಭಾಶ್ಚೇಭೈಃ ಸಮಸಜ್ಜಂತ ಸಂಯುಗೇ
॥ ೮ ॥

ಉಷ್ಟ್ರೈಃ ಕೇಚಿದಿಭೈಃ ಕೇಚಿದಪರೇ ಯುಯುಧುಃ ಖರೈಃ ।
ಕೇಚಿದ್ಗೌರಮೃಗೈರೃಕ್ಷೈರ್ದ್ವೀಪಿಭಿರ್ಹರಿಭಿರ್ಭಟಾಃ
॥ ೯ ॥

ಗೃಧ್ರೈಃ ಕಂಕೈರ್ಬಕೈರನ್ಯೇ ಶ್ಯೇನಭಾಸೈಸ್ತಿಮಿಂಗಿಲೈಃ ।
ಶರಭೈರ್ಮಹಿಷೈಃ ಖಡ್ಗೈರ್ಗೋವೃಷೈರ್ಗವಯಾರುಣೈಃ
॥ ೧೦ ॥

ಶಿವಾಭಿರಾಖುಭಿಃ ಕೇಚಿತ್ಕೃಕಲಾಸೈಃ ಶಶೈರ್ನರೈಃ ।
ಬಸ್ತೈರೇಕೇ ಕೃಷ್ಣಸಾರೈರ್ಹಂಸೈರನ್ಯೇ ಚ ಸೂಕರೈಃ
॥ ೧೧ ॥

ಅನ್ಯೇ ಜಲಸ್ಥಲಖಗೈಃ ಸತ್ತ್ವೈರ್ವಿಕೃತವಿಗ್ರಹೈಃ ।
ಸೇನಯೋರುಭಯೋ ರಾಜನ್ವಿವಿಶುಸ್ತೇಽಗ್ರತೋಽಗ್ರತಃ
॥ ೧೨ ॥

ಚಿತ್ರಧ್ವಜಪಟೈ ರಾಜನ್ನಾತಪತ್ರೈಃ ಸಿತಾಮಲೈಃ ।
ಮಹಾಧನೈರ್ವಜ್ರದಂಡೈರ್ವ್ಯಜನೈರ್ಬಾರ್ಹಚಾಮರೈಃ
॥ ೧೩ ॥

ವಾತೋದ್ಧೂತೋತ್ತರೋಷ್ಣೀಷೈರರ್ಚಿರ್ಭಿರ್ವರ್ಮಭೂಷಣೈಃ ।
ಸ್ಫುರದ್ಭಿರ್ವಿಶದೈಃ ಶಸ್ತ್ರೈಃ ಸುತರಾಂ ಸೂರ್ಯರಶ್ಮಿಭಿಃ
॥ ೧೪ ॥

ದೇವದಾನವವೀರಾಣಾಂ ಧ್ವಜಿನ್ಯೌ ಪಾಂಡುನಂದನ ।
ರೇಜತುರ್ವೀರಮಾಲಾಭಿರ್ಯಾದಸಾಮಿವ ಸಾಗರೌ
॥ ೧೫ ॥

ವೈರೋಚನೋ ಬಲಿಃ ಸಂಖ್ಯೇ ಸೋಽಸುರಾಣಾಂ ಚಮೂಪತಿಃ ।
ಯಾನಂ ವೈಹಾಯಸಂ ನಾಮ ಕಾಮಗಂ ಮಯನಿರ್ಮಿತಮ್
॥ ೧೬ ॥

ಸರ್ವಸಾಂಗ್ರಾಮಿಕೋಪೇತಂ ಸರ್ವಾಶ್ಚರ್ಯಮಯಂ ಪ್ರಭೋ ।
ಅಪ್ರತರ್ಕ್ಯಮನಿರ್ದೇಶ್ಯಂ ದೃಶ್ಯಮಾನಮದರ್ಶನಮ್
॥ ೧೭ ॥

ಕ್ರೋಧಾಭಿಭೂತರಾಗಿದ್ದರು. ಒಬ್ಬರಿಗೊಬ್ಬರು ಇದಿರು-ಬದುರು ನಿಂತು ಬಾಣ-ಖಡ್ಗ ಮುಂತಾದ ಅನೇಕಾನೇಕ ಅಸ್ತ್ರ-ಶಸ್ತ್ರಗಳಿಂದ ಪರಸ್ಪರ ಹೊಡೆದಾಡತೊಡಗಿದರು. ॥ ೬ ॥ ಆಗ ರಣರಂಗದಲ್ಲಿ ಶಂಖ, ತೂರ್ಯ, ಮೃದಂಗ, ಭೇರಿ, ಡಮರು ಮುಂತಾದ ವಾದ್ಯಗಳು ಜೋರಾಗಿ ಮೊಳಗಿದವು. ಆನೆಗಳ ಘೀಂಕಾರ, ಕುದುರೆಗಳ ಹೇಷಾರವ, ರಥಗಳ ಚೀತ್ಕಾರ, ಪದಾತಿಗಳ ಸಿಂಹನಾದ ಇವುಗಳಿಂದ ಭಾರೀ ಕೋಲಾಹಲವುಂಟಾಯಿತು. ॥ ೭॥ ಆ ಮಹಾ ಯುದ್ಧದಲ್ಲಿ ರಥಿಕರು-ರಥಿಕರೊಡನೆಯೂ, ಪದಾತಿಗಳು- ಕಾಲಾಳುಗಳೊಡನೆಯೂ, ಕುದುರೆಸವಾರರು-ಅಶ್ವಾರೋಹಿಗಳೊಡನೆಯೂ, ಗಜಸೈನಿಕರು-ಗಜಸೈನಿಕರೊಡನೆಯೂ ಕಾದಾಡುತ್ತಿದ್ದರು. ॥ ೮ ॥ ಅವರಲ್ಲಿ ಕೆಲವರು ಒಂಟೆಗಳ ಮೇಲೂ, ಕೆಲವರು ಆನೆಗಳ ಮೇಲೂ, ಕತ್ತೆಗಳ ಮೇಲೂ, ಕೆಲವರು ಗೌರಮೃಗಗಳ ಮೇಲೂ, ಕೆಲವರು ಕರಡಿ, ಹುಲಿ, ಸಿಂಹಗಳ ಮೇಲೂ ಹತ್ತಿಕೊಂಡು ಯುದ್ಧ ಮಾಡುತ್ತಿದ್ದರು. ॥ ೯ ॥ ಕೆಲ-ಕೆಲವು ಸೈನಿಕರು ಹದ್ದುಗಳ ಮೇಲೂ, ಬಕಗಳ ಮೇಲೆಯೂ, ಗಿಡುಗ, ತಿಮಿಂಗಿಲ, ಮೊಸಳೆ, ಶರಭ, ಎಮ್ಮೆ, ಖಡ್ಗಮೃಗ, ಎತ್ತು, ಗವಯ ಮುಂತಾದವುಗಳ ಮೇಲೆ ಕುಳಿತು ಯುದ್ಧ ಮಾಡುತ್ತಿದ್ದರು. ॥ ೧೦ ॥ ಕೆಲವರು ರುಣಗಳೆಂಬ ಪ್ರಾಣಿಗಳ ಮೇಲೂ, ನರಿಗಳು, ಇಲಿಗಳು, ಓತಿಕೇತ, ಇಲಿ, ಮೊಲ, ಮನುಷ್ಯ, ಟಗರು, ಜಿಂಕೆ, ಹಂಸ, ಹಂದಿಗಳು ಮುಂತಾದ ಪ್ರಾಣಿಗಳ ಮೇಲೆ ಕುಳಿತುಕೊಂಡು ಕಾದಾಡುತ್ತಿದ್ದರು. ॥ ೧೧ ॥ ಹೀಗೆ ನೆಲ-ಜಲ-ನಭಗಳಲ್ಲಿ ವಾಸಿಸುವ, ನೋಡಲು ಭಯಂಕರವಾದ ಶರೀರಗಳುಳ್ಳ ಅನೇಕ ಪ್ರಾಣಿಗಳ ಮೇಲೆ ಹತ್ತಿಕೊಂಡು ದೇವ-ದಾನವರು ಮುಂದೆ ನುಗ್ಗುತ್ತಾ ಹೋರಾಡುತ್ತಿದ್ದರು. ॥ ೧೨ ॥

ಪರೀಕ್ಷಿತನೇ! ಚಿತ್ರ-ವಿಚಿತ್ರವಾದ ಧ್ವಜ-ಪತಾಕೆಗಳಿಂದಲೂ, ಸ್ಫಟಿಕದಂತೆ ನಿರ್ಮಲವಾದ ಶುಭ್ರ ಛತ್ರಗಳಿಂದಲೂ, ವಜ್ರಖಚಿತವಾದ ದಂಡಗಳಿಂದಲೂ, ಬಹುಮೂಲ್ಯ ಬೀಸಣಿಗೆಗಳಿಂದಲೂ, ನವಿಲುಗರಿಗಳೂ, ಚಾಮರಗಳಿಂದಲೂ, ಗಾಳಿಗೆ ಹಾರಾಡುತ್ತಿದ್ದ ಉತ್ತರೀಯಗಳಿಂದಲೂ, ಪೇಟಗಳಿಂದಲೂ, ಸೈನಿಕರು ಧರಿಸಿದ್ದ ವಜ್ರಾಭರಣಗಳಿಂದಲೂ, ಸೂರ್ಯಕಿರಣಗಳಂತೆ ಹೊಳೆಯುವ ಖಡ್ಗವೇ ಮುಂತಾದ ಆಯುಧಗಳಿಂದಲೂ, ವೀರಮಾಲೆಗಳನ್ನು ಧರಿಸಿದ್ದ ದೇವತೆಗಳ ಸಾಲುಗಳಿಂದಲೂ, ಅಸುರರ ಸೈನ್ಯದಿಂದ ತುಂಬಿದ ಆ ರಣರಂಗವು ಜಲ-ಜಂತುಗಳಿಂದ ತುಂಬಿದ ಎರಡನೆಯ ಸಮುದ್ರದಂತೆ ಕಂಗೊಳಿಸುತ್ತಿತ್ತು. ॥ ೧೩-೧೫ ॥ ಪರೀಕ್ಷಿತನೇ! ರಣಾಂಗಣದಲ್ಲಿ ದೈತ್ಯರ ಸೇನಾಪತಿಯಾದ ವಿರೋಚನಪುತ್ರ ಬಲಿಯು ಮಯದಾನವನಿಂದ ನಿರ್ಮಿತವಾದ ವೈಹಾಯಸವೆಂಬ ವಿಮಾನದಲ್ಲಿ ಕುಳಿತಿದ್ದನು. ಆ ವಿಮಾನವು ಕುಳಿತಿದ್ದವರು ಇಚ್ಛಿಸಿದೆಡೆಗೆ ಹೋಗುವುದಾಗಿತ್ತು. ॥ ೧೬ ॥ ಅದರಲ್ಲಿ ಯುದ್ಧದ ಸಮಸ್ತ ಸಾಮಗ್ರಿಗಳು ಸುಸಜ್ಜಿತವಾಗಿದ್ದವು. ಮಹಾರಾಜಾ! ಆ ವಿಮಾನವು ಅತ್ಯಂತ ಆಶ್ಚರ್ಯಕರವಾಗಿದ್ದು, ಕೆಲವು ವೇಳೆ ಕಾಣಿಸಿಕೊಳ್ಳುತ್ತಾ, ಕೆಲವು ಸಲ ಅದೃಶ್ಯವಾಗಿರುತ್ತಿತ್ತು. ಅದು ಎಲ್ಲಿದೆ ಎಂದು ಯಾರಿಂದಲೂ ಹೇಳಲಾಗುತ್ತಿರಲಿಲ್ಲ; ಊಹಿಸಲಾಗುತ್ತಿರಲಿಲ್ಲ. ॥ ೧೭ ॥

ಆಸ್ಥಿತಸ್ತದ್ವಿಮಾನಾಗ್ರ್ಯಂ ಸರ್ವಾನೀಕಾಧಿಪೈರ್ವೃತಃ ।
ಬಾಲವ್ಯಜನಛತ್ರಾಗ್ರ್ಯೈ ರೇಜೇ ಚಂದ್ರ ಇವೋದಯೇ ॥ ೧೮ ॥

ತಸ್ಯಾಸನ್ಸರ್ವತೋ ಯಾನೈರ್ಯೂಥಾನಾಂ ಪತಯೋಽಸುರಾಃ ।
ನಮುಚಿಃ ಶಂಬರೋ ಬಾಣೋ ವಿಪ್ರಚಿತ್ತಿರಯೋಮುಖಃ ॥ ೧೯ ॥

ದ್ವಿಮೂರ್ಧಾ ಕಾಲನಾಭೋಽಥ ಪ್ರಹೇತಿರ್ಹೇತಿರಿಲ್ವಲಃ ।
ಶಕುನಿರ್ಭೂತಸಂತಾಪೋ ವಜ್ರದಂಷ್ಟ್ರೋ ವಿರೋಚನಃ ॥ ೨೦ ॥

ಹಯಗ್ರೀವಃ ಶಂಕುಶಿರಾಃ ಕಪಿಲೋ ಮೇಘದುಂದುಭಿಃ ।
ತಾರಕಶ್ಚಕ್ರದೃಕ್ಶುಂಭೋ ನಿಶುಂಭೋ ಜಂಭ ಉತ್ಕಲಃ ॥ ೨೧ ॥

ಅರಿಷ್ಟೋಽರಿಷ್ಟನೇಮಿಶ್ಚ ಮಯಶ್ಚ ತ್ರಿಪುರಾಧಿಪಃ ।
ಅನ್ಯೇ ಪೌಲೋಮಕಾಲೇಯಾ ನಿವಾತಕವಚಾದಯಃ ॥ ೨೨ ॥

ಅಲಬ್ಧಭಾಗಾಃ ಸೋಮಸ್ಯ ಕೇವಲಂ ಕ್ಲೇಶಭಾಗಿನಃ ।
ಸರ್ವ ಏತೇ ರಣಮುಖೇ ಬಹುಶೋ ನಿರ್ಜಿತಾಮರಾಃ ॥ ೨೩ ॥

ಸಿಂಹನಾದಾನ್ವಿಮುಂಚಂತಃ ಶಂಖಾನ್ದಧ್ಮುರ್ಮಹಾರವಾನ್ ।
ದೃಷ್ಟ್ವಾ ಸಪತ್ನಾನುತ್ಸಿಕ್ತಾನ್ಬಲಭಿತ್ಕುಪಿತೋ ಭೃಶಮ್ ॥ ೨೪ ॥

ಐರಾವತಂ ದಿಕ್ಕರಿಣಮಾರೂಢಃ ಶುಶುಭೇ ಸ್ವರಾಟ್ ।
ಯಥಾ ' ಸ್ರವತ್ಪ್ರಸ್ರವಣಮುದಯಾದ್ರಿಮಹರ್ಪತಿಃ ॥ ೨೫ ॥

ತಸ್ಯಾಸನ್ಸರ್ವತೋ ದೇವಾ ನಾನಾವಾಹಧ್ವಜಾಯುಧಾಃ ।
ಲೋಕಪಾಲಾಃ ಸಹ ಗಣೈರ್ವಾಯ್ವಗ್ನಿವರುಣಾದಯಃ ॥ ೨೬ ॥

ತೇಽನ್ಯೋನ್ಯಮಭಿಸಂಸೃತ್ಯ ಕ್ಷಿಪಂತೋ ಮರ್ಮಭಿರ್ಮಿಥಃ ।
ಆಹ್ವಯಂತೋ ವಿಶಂತೋಽಗ್ರೇ ಯುಯುಧುರ್ದ್ವಂದ್ವಯೋಧಿನಃ ॥ ೨೭ ॥

ಯುಯೋಧ ಬಲಿರಿಂದ್ರೇಣ ತಾರಕೇಣ ಗುಹೋಽಸ್ಯತ ।
ವರುಣೋ ಹೇತಿನಾಯುಧ್ಯನ್ಮಿತ್ರೋ ರಾಜನ್ಪ್ರಹೇತಿನಾ ॥ ೨೮ ॥

ಯಮಸ್ತು ಕಾಲನಾಭೇನ ವಿಶ್ವಕರ್ಮಾ ಮಯೇನ ವೈ ।
ಶಂಬರೋ ಯುಯುಧೇ ತ್ವಷ್ಟ್ರಾ ಸವಿತ್ರಾ ತು ವಿರೋಚನಃ ॥ ೨೯ ॥

ಅಪರಾಜಿತೇನ ನಮುಚಿರಶ್ವಿನೌ ವೃಷಪರ್ವಣಾ ।
ಸೂರ್ಯೋ ಬಲಿಸುತೈರ್ದೇವೋ ಬಾಣಜ್ಯೇಷ್ಠೈಃ ಶತೇನ ಚ ॥ ೩೦ ॥

ಅಂತಹ ಶ್ರೇಷ್ಠವಿಮಾನದಲ್ಲಿ ಬಲಿಯು ಕುಳಿತಿದ್ದನು. ದೊಡ್ಡ-ದೊಡ್ಡ ಸೇನಾಪತಿಗಳು ಅವನನ್ನು ಸುತ್ತುವರಿಯಲ್ಪಟ್ಟಿದ್ದರು. ಚಾಮರ, ಬೀಸಣಿಗೆ, ಬೆಳ್ಗೊಡೆ ಮುಂತಾದವುಗಳಿಂದ ಕೂಡಿದ ಬಲಿಯು ಆಗತಾನೇ ಉದಯಿಸಿದ ಚಂದ್ರನಂತೆ ಪ್ರಕಾಶಿಸುತ್ತಿದ್ದನು. ॥ ೧೮ ॥ ಅವನ ಸುತ್ತಲೂ ವಿಮಾನಾರೂಢ ಯೂಥಪತಿಗಳಾದ ನಮೂಚಿ, ಶಂಬರ, ಬಾಣ, ವಿಪ್ರಚಿತ್ತಿ, ಅಯೋಮುಖ, ದ್ವಿಮೂರ್ಧಾ, ಕಾಲನಾಭ, ಪ್ರಹೇತಿ, ಹೇತಿ, ಇಲ್ವಲ, ಶಕುನಿ, ಭೂತಸಂತಾಪ, ವಜ್ರದಂಷ್ಟ್ರ, ವಿರೋಚನ, ಹಯಗ್ರೀವ, ಶಂಕುಶಿರಸ, ಕಪಿಲ, ಮೇಘದುಂದುಭಿ, ತಾರಕ, ಚಕ್ರಾಕ್ಷ, ಶುಂಭ, ನಿಶುಂಭ, ಜಂಭ, ಉತ್ಕಲ, ಅರಿಷ್ಟ ಅರಿಷ್ಟನೇಮಿ, ತ್ರಿಪುರಾಧಿಪತಿಯಾದ ಮಯ, ಪೌಲೋಮ, ಕಾಲೇಯ, ನಿವಾತಕವಚ ಮೊದಲಾದವರು ತಮ್ಮ ತುಕಡಿಗಳಿಂದ ಯುದ್ಧ ಸನ್ನದ್ಧರಾಗಿದ್ದರು. ॥ ೧೯-೨೨ ॥ ಇವರೆಲ್ಲರೂ ಸಮುದ್ರ ಮಂಥನದಲ್ಲಿ ಪಾಲ್ಗೊಂಡವರೇ ಆಗಿದ್ದರು. ಆದರೆ ಇವರಿಗೆ ಅಮೃತದ ಪಾಲು ಸಿಗದೆ ಕೇವಲ ಕ್ಲೇಶವೇ ಕೈಹತ್ತಿತ್ತು. ಇವೆಲ್ಲ ಅಸುರರು ಒಮ್ಮೆಯಲ್ಲ, ಅನೇಕ ಬಾರಿ ಯುದ್ಧದಲ್ಲಿ ದೇವತೆಗಳನ್ನು ಸೋಲಿಸಿದ್ದರು. ॥ ೨೩ ॥ ಇದರಿಂದಾಗಿ ಅವರು ಭಾರೀ ಉತ್ಸಾಹದಿಂದ ಸಿಂಹನಾದವನ್ನು ಮಾಡುತ್ತಾ ತಮ್ಮ ಘೋರವಾದ ಶಬ್ದವುಳ್ಳ ಶಂಖಗಳನ್ನು ಊದುತ್ತಿದ್ದರು. ಸ್ವರ್ಗಾಧಿಪತಿಯಾದ ಇಂದ್ರನು – ಗರ್ವದಿಂದ ಬೀಗುತ್ತಿದ್ದ ಯುದ್ಧೋದ್ಯುಕ್ತರಾದ ಶತ್ರುಗಳನ್ನು ಕಂಡು ಭಾರೀ ಕ್ರುದ್ಧನಾದನು. ॥ ೨೪ ॥ ಗಿರಿ-ನದಿಗಳಿಂದ ಕೂಡಿದ ಉದಯಾಚಲವನ್ನೇರಿ ಪ್ರಕಾಶಿಸುವ ಸೂರ್ಯನಂತೆ ಇಂದ್ರನು ಮದೋದಕವನ್ನು ಸುರಿಸುತ್ತಿದ್ದ ಐರಾವತವೆಂಬ ದಿಗ್ಗಜದ ಮೇಲೆ ಕುಳಿತು ಬಹಳವಾಗಿ ಪ್ರಕಾಶಿಸಿದನು. ॥ ೨೫ ॥ ದೇವೇಂದ್ರನ ಸುತ್ತಲೂ ಅನೇಕ ವಿಧವಾದ ವಾಹನಗಳಿಂದಲೂ, ಧ್ವಜಗಳಿಂದಲೂ, ಆಯುಧಗಳಿಂದಲೂ ಯುಕ್ತರಾದ ವಾಯು, ಅಗ್ನಿ, ವರುಣ ಮುಂತಾದ ಲೋಕಪಾಲರು ತಮ್ಮ-ತಮ್ಮ ಗಣಗಳೊಂದಿಗೆ ಯುದ್ಧಸನ್ನದ್ಧರಾಗಿ ನಿಂತಿದ್ದರು. ॥ ೨೬ ॥

ದೇವ-ದಾನವರ ಸೈನ್ಯಗಳು ಎದುರು-ಬದುರಾಗಿ ನಿಂತವು. ಇಬ್ಬಿಬ್ಬರೇ ನಿಂತು ಮಾಡುವ ದ್ವಂದ್ವಯುದ್ಧವನ್ನು ಪ್ರಾರಂಭಿಸಿದರು. ಕೆಲವರು ಮುಂದೆ ಬಂದು ತಮ್ಮ ಎದುರಾಳಿಯನ್ನು ಹೆಸರುಹಿಡಿದು ಕರೆಯುತ್ತಿದ್ದರೆ, ಕೆಲವರು ಮರ್ಮಭೇದಕ ಚುಚ್ಚುಮಾತುಗಳಿಂದ ನಿಂದಿಸುತ್ತಿದ್ದರು. ॥ ೨೭ ॥ ರಾಜೇಂದ್ರನೇ! ಬಲಿಯು ಇಂದ್ರನೊಡನೆಯೂ, ತಾರಕನು ಕುಮಾರಸ್ವಾಮಿಯೊಂದಿಗೂ, ಹೇತಿಯು ವರುಣನೊಡನೆಯೂ, ಪ್ರಹೇತಿಯು ಸೂರ್ಯನೊಡನೆಯೂ ದ್ವಂದ್ವಯುದ್ಧವನ್ನು ಪ್ರಾರಂಭಿಸಿದರು. ॥ ೨೮ ॥ ಯಮನು ಕಾಲನಾಭನೊಡನೆಯೂ, ವಿಶ್ವಕರ್ಮನು ಮಯನೊಡನೆಯೂ, ಶಂಬರಾಸುರನು ತ್ವಷ್ಟೃವಿನೊಡನೆಯೂ, ಸವಿತೃವು ವಿರೋಚನನೊಡನೆಯೂ ದ್ವಂದ್ವಯುದ್ಧವನ್ನು ಪ್ರಾರಂಭಿಸಿದರು. ॥ ೨೯ ॥ ನಮುಚಿಯು ಅಪರಾಜಿತನೊಡನೆಯೂ, ಅಶ್ವಿನೀಕುಮಾರರು ವೃಷಪರ್ವನೊಡನೆಯೂ, ಸೂರ್ಯನು ಬಾಣನೇ ಮೊದಲಾದ ಬಲಿಯ ನೂರು ಮಕ್ಕಳೊಂದಿಗೂ ಯುದ್ಧ ಮಾಡತೊಡಗಿದರು. ॥ ೩೦ ॥

ರಾಹುಣಾ ಚ ತಥಾ ಸೋಮಃ ಪುಲೋಮ್ನಾ ಯುಯುಧೇಽನಿಲಃ ।
ನಿಶುಂಭಶುಂಭಯೋರ್ದೇವೀ ಭದ್ರಕಾಲೀ ತರಸ್ವಿನೀ
॥ ೩೧ ॥

ವೃಷಾಕಪಿಸ್ತು ಜಂಭೇನ ಮಹಿಷೇಣ ವಿಭಾವಸುಃ ।
ಇಲ್ವಲಃ ಸಹ ವಾತಾಪಿರ್ಬ್ರಹ್ಮಪುತ್ರೈರರಿಂದಮ
॥ ೩೨ ॥

ಕಾಮದೇವೇನ ದುರ್ಮರ್ಷ ಉತ್ಕಲೋ ಮಾತೃಭಿಃ ಸಹ ।
ಬೃಹಸ್ಪತಿಶ್ಚೋಶನಸಾ ನರಕೇಣ ಶನೈಶ್ಚರಃ
॥ ೩೩ ॥

ಮರುತೋ ನಿವಾತಕವಚೈಃ ಕಾಲೇಯೈರ್ವಸವೋಽಮರಾಃ ।
ವಿಶ್ವೇದೇವಾಸ್ತು ಪೌಲೋಮೈ ರುದ್ರಾಃ ಕ್ರೋಧವಶೈಃ ಸಹ
॥ ೩೪ ॥

ತ ಏವಮಾಜಾವಸುರಾಃ ಸುರೇಂದ್ರಾ
ದ್ವಂದ್ವೇನ ಸಂಹತ್ಯ ಚ ಯುಧ್ಯಮಾನಾಃ ।
ಅನ್ಯೋನ್ಯಮಾಸಾದ್ಯ ನಿಜಘ್ನುರೋಜಸಾ
ಜಿಗೀಷವಸ್ತೀಕ್ಷ್ಣಶರಾಸಿತೋಮರೈಃ ॥ ೩೫ ॥

ಭುಷುಂಡಿಭಿಶ್ಚಕ್ರಗದರ್ಷ್ಟಿಪಟ್ಟಿಶೈಃ
ಶಕ್ತ್ಯುಲ್ಮುಕೈಃ ಪ್ರಾಸಪರಶ್ವಧೈರಪಿ ।
ನಿಸ್ತ್ರಿಂಶಭಲ್ಲೈಃ ಪರಿಘೈಃ ಸಮುದ್ಗರೈಃ
ಸಭಿಂದಿಪಾಲೈಶ್ಚ ಶಿರಾಂಸಿ ಚಿಚ್ಛಿದುಃ ॥ ೩೬ ॥

ಗಜಾಸ್ತುರಂಗಾಃ ಸರಥಾಃ ಪದಾತಯಃ
ಸಾರೋಹವಾಹಾ ವಿವಿಧಾ ವಿಖಂಡಿತಾಃ ।
ನಿಕೃತ್ತಬಾಹೂರುಶಿರೋಧರಾಂಘ್ರಯ-
ಶ್ಛಿನ್ನಧ್ವಜೇಷ್ವಾಸತನುತ್ರಭೂಷಣಾಃ ॥ ೩೭ ॥

ತೇಷಾಂ ಪದಾಘಾತರಥಾಂಗ ಚೂರ್ಣಿತಾ-
ದಾಯೋಧನಾದುಲ್ಬಣ ಉತ್ಥಿತಸ್ತದಾ ।
ರೇಣುರ್ದಿಶಃ ಖಂ ದ್ಯುಮಣಿಂ ಚ ಛಾದಯನ್
ನ್ಯವರ್ತತಾಸೃಕ್‌ಸ್ರುತಿಭಿಃ ಪರಿಪ್ಲುತಾತ್ ॥ ೩೮ ॥

ಶಿರೋಭಿರುದ್ಧೂತಕಿರೀಟಕುಂಡಲೈಃ
ಸಂರಂಭದೃಗ್ಭಿಃ ಪರಿದಷ್ಟದಚ್ಛದೈಃ ।
ಮಹಾಭುಜೈಃ ಸಾಭರಣೈಃ ಸಹಾಯುಧೈಃ
ಸಾ ಪ್ರಾಸ್ತೃತಾ ಭೂಃ ಕರಭೋರುಭಿರ್ಬಭೌ ॥ ೩೯ ॥

ಕಬಂಧಾಸ್ತತ್ರ ಚೋತ್ಪೇತುಃ ಪತಿತಸ್ವಶಿರೋಽಕ್ಷಿಭಿಃ ।
ಉದ್ಯತಾಯುಧದೋರ್ದಂಡೈರಾಧಾವಂತೋ ಭಟಾನ್ಮೃಧೇ
॥ ೪೦ ॥

ಚಂದ್ರನು ರಾಹುವಿನೊಂದಿಗೂ, ವಾಯುವು ಪುಲೋಮನೊಂದಿಗೂ ಕಾದಾಡಿದರು. ಭದ್ರಕಾಳಿಯು ಶುಂಭ, ನಿಶುಂಭ ರೊಡನೆ ಹೋರಾಡಿದಳು. ॥ ೩೧ ॥ ಪರೀಕ್ಷಿತನೇ! ಜಂಭಾಸುರ ನೊಡನೆ ಮಹಾದೇವನೂ, ಮಹಿಷಾಸುರನೊಡನೆ ಅಗ್ನಿದೇವನೂ, ವಾತಾಪಿ-ಇಲ್ವಲರೊಡನೆ ಬ್ರಹ್ಮನ ಮಕ್ಕಳಾದ ಮರೀಚಿಯೇ ಮೊದಲಾದವರು ಯುದ್ಧಮಾಡಿದರು. ॥ ೩೨ ॥ ದುರ್ಮರ್ಷಣ ನೊಡನೆ ಕಾಮದೇವನೂ, ಉತ್ಕಲನೊಡನೆ ಮಾತೃದೇವತೆಗಳೂ, ಶುಕ್ರಾಚಾರ್ಯನೊಡನೆ ಬೃಹಸ್ಪತ್ಯಾಚಾರ್ಯರೂ, ನರಕಾಸುರ ನೊಡನೆ ಶನೈಶ್ಚರನೂ ಯುದ್ಧಮಾಡತೊಡಗಿದರು. ॥ ೩೩ ॥ ನಿವಾ ತಕವಚ ರೊಡನೆ ಮರುದ್ಗಣರೂ, ಕಾಲೇಯರೊಡನೆ ವಸುಗಣ ಗಳೂ, ಪೌಲೋಮರೊಡನೆ ವಿಶ್ವೇದೇವಗಣಗಳೂ, ಕ್ರೋಧವಶ ರೊಡನೆ ರುದ್ರಗಣಗಳೂ ದ್ವಂದ್ವಯುದ್ಧದಲ್ಲಿ ತೊಡಗಿದರು. ॥ ೩೪ ॥

ಹೀಗೆ ದೇವತೆಗಳೂ, ಅಸುರರೂ ರಣಭೂಮಿಯಲ್ಲಿ ದ್ವಂದ್ವ ಯುದ್ಧದ ಮೂಲಕವೂ, ಸಾಮೂಹಿಕಯುದ್ಧದ ಮೂಲಕವೂ ಒಂದು ಪಕ್ಷದವರು ಇನ್ನೊಂದು ಪಕ್ಷದವರೊಡನೆ ಕಾದಾಡುತ್ತಾ ವಿಜಯದ ಇಚ್ಛೆಯಿಂದ ಉತ್ಸಾಹದಿಂದ ತೀಕ್ಷ್ಣವಾದ ಖಡ್ಗಗಳಿಂದಲೂ, ಭಲ್ಲೆಗಳಿಂದಲೂ, ಬಾಣಗಳಿಂದಲೂ, ಪರಸ್ಪರ ಪ್ರಹಾರಮಾಡುತ್ತಾ ನಾನಾರೀತಿಯಿಂದ ಯುದ್ಧಮಾಡುತ್ತಿದ್ದಾರೆ. ॥ ೩೫ ॥ ಭುಶುಂಡಿ, ಚಕ್ರ, ಗದೆ, ಋಷ್ಟಿ, ಪಟ್ಟಿಶ, ಶಕ್ತಿ, ಉಲ್ಮುಕ, ಪ್ರಾಸ, ಗಂಡುಕೊಡಲಿ, ಕತ್ತಿ, ಭಲ್ಲೆ ಮುದ್ಗರ, ಪರಿಘ, ಭಿಂದಿಪಾಲ ಮುಂತಾದ ಆಯುಧಗಳಿಂದ ಒಬ್ಬರು ಮತ್ತೊಬ್ಬರ ತಲೆಯನ್ನು ತರಿಯತೊಡಗಿದರು. ॥ ೩೬ ॥ ಭಯಂಕರವಾದ ಆ ಮಹಾ ಯುದ್ಧದಲ್ಲಿ ಗಜಾಶ್ವ ಸೈನಿಕರ, ರಥಿಕರ, ಪದಾತಿಗಳ, ಸೇನಾಪತಿಗಳ ತೋಳು, ತೊಡೆ, ತಲೆ, ಕಾಲುಗಳೂ, ಅವರು ಧರಿಸಿದ್ದ ಧ್ವಜ, ಧನುಷ್ಯ, ಕವಚ, ಆಭೂಷಣಗಳೂ ಭಿನ್ನ-ಭಿನ್ನವಾದುವು. ॥ ೩೭ ॥ ಸೈನಿಕರ ಕಾಲುಗಳ ಸಂಘಟ್ಟನೆಯಿಂದಲೂ, ರಥಚಕ್ರಗಳ ಹರಿದಾಟದಿಂದಲೂ, ರಣರಂಗದಲ್ಲಿ ಎದ್ದಿರುವ ಧೂಳಿಯು ಎಲ್ಲ ದಿಕ್ಕುಗಳನ್ನೂ, ಅಂತರಿಕ್ಷವನ್ನೂ, ಸೂರ್ಯನನ್ನೂ ಮುಸುಕಿ ಬಿಟ್ಟಿತು. ಆದರೆ ಮರುಕ್ಷಣದಲ್ಲೇ ಪ್ರವಾಹರೂಪದಿಂದ ಹರಿದ ರಕ್ತ ದಿಂದ ನೆನೆದು ಆ ಧೂಳಿಯು ಉಡುಗಿಹೋಯಿತು. ॥ ೩೮॥ ಅನಂತರ ರಣರಂಗವು ಕತ್ತರಿಸಲ್ಪಟ್ಟ ಶಿರಸ್ಸುಗಳಿಂದ ತುಂಬಿ ಹೋಯಿತು. ಸೈನಿಕರ ಕಿರೀಟಗಳೂ, ಕುಂಡಲಗಳೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಕೆಲವರ ಕಣ್ಣುಗಳಿಂದ ಕ್ರೋಧದ ಚಿಹ್ನೆಯು ಕಾಣುತ್ತಿದ್ದಿತು. ಕೆಲವರು ಹಲ್ಲುಗಳಿಂದ ತುಟಿಗಳನ್ನು ಕಚ್ಚಿದ್ದರು. ಅನೇಕರ ಆಭೂಷಣಗಳಿಂದ, ಶಸ್ತ್ರಗಳಿಂದ ಸುಸಜ್ಜಿತವಾಗಿದ್ದ ಉದ್ದುದ್ದ ಬಾಹುಗಳು ತುಂಡಾಗಿ ಬಿದ್ದಿದ್ದವು. ಅನೇಕರ ದುಂಡಾದ ತೊಡೆಗಳು ಕತ್ತರಿಸಲ್ಪಟ್ಟು ಬಿದ್ದಿದ್ದವು. ಹೀಗೆ ಆ ರಣಭೂಮಿಯು ಬಹಳ ಭಯಂಕರವಾಗಿ ಕಾಣುತ್ತಿತ್ತು. ॥ ೩೯ ॥ ಆ ರಣರಂಗದ ಕೆಲವುಕಡೆ ತಲೆಯಿಲ್ಲದ ಮುಂಡಗಳು ಬಿದ್ದಿರುವ ತಲೆಗಳ ಕಣ್ಣುಗಳಿಂದ ನೋಡುತ್ತಾ ಕೈಗಳಲ್ಲಿ ಆಯುಧಗಳನ್ನೆತ್ತಿಕೊಂಡು ವೀರರತ್ತ ಓಡುತ್ತಾ ನೆಗೆಯುತ್ತಿದ್ದವು. ॥ ೪೦ ॥

ಬಲಿರ್ಮಹೇಂದ್ರಂ ದಶಭಿಸ್ತ್ರಿಭಿರೈರಾವತಂ ಶರೈಃ ।
ಚತುರ್ಭಿಶ್ಚತುರೋ ವಾಹಾನೇಕೇನಾರೋಹಮಾರ್ಚ್ಛಯತ್ ॥ ೪೧ ॥

ಸ ತಾನಾಪತತಃ ಶಕ್ರಸ್ತಾವದ್ಭಿಃ ಶೀಘ್ರವಿಕ್ರಮಃ ।
ಚಿಚ್ಛೇದ ನಿಶಿತೈರ್ಭಲ್ಲೈರಸಮ್ಪ್ರಾಪ್ತಾನ್ಹಸನ್ನಿವ ॥ ೪೨ ॥

ತಸ್ಯ ಕರ್ಮೋತ್ತಮಂ ವೀಕ್ಷ್ಯ ದುರ್ಮರ್ಷಃ ಶಕ್ತಿಮಾದದೇ ।
ತಾಂ ಜ್ವಲಂತೀಂ ಮಹೋಲ್ಕಾಭಾಂ ಹಸ್ತಸ್ಥಾಮಚ್ಛಿನದ್ಧರಿಃ ॥ ೪೩ ॥

ತತಃ ಶೂಲಂ ತತಃ ಪ್ರಾಸಂ ತತಸ್ತೋಮರಮೃಷ್ಟಯಃ ।
ಯದ್ಯಚ್ಛಸ್ತ್ರಂ ಸಮಾದದ್ಯಾತ್ಸರ್ವಂ ತದಚ್ಛಿನದ್ವಿಭುಃ ॥ ೪೪ ॥

ಸಸರ್ಜಾಥಾಸುರೀಂ ಮಾಯಾಮಂತರ್ಧಾನಗತೋಽಸುರಃ ।
ತತಃ ಪ್ರಾದುರಭೂಚ್ಛೈಲಃ ಸುರಾನೀಕೋಪರಿ ಪ್ರಭೋ ॥ ೪೫ ॥

ತತೋ ನಿಪೇತುಸ್ತರವೋ ದಹ್ಯಮಾನಾ ದವಾಗ್ನಿನಾ ।
ಶಿಲಾಃ ಸಟಂಕಶಿಖರಾಶ್ಚೂರ್ಣಯಂತ್ಯೋ ದ್ವಿಷದ್ಬಲಮ್ ॥ ೪೬ ॥

ಮಹೋರಗಾಃ ಸಮುತ್ಪೇತುರ್ದಂದಶೂಕಾಃ ಸವೃಶ್ಚಿಕಾಃ ।
ಸಿಂಹವ್ಯಾಘ್ರವರಾಹಾಶ್ಚ ಮರ್ದಯಂತೋ ಮಹಾಗಜಾನ್ ॥ ೪೭ ॥

ಯಾತುಧಾನ್ಯಶ್ಚ ಶತಶಃ ಶೂಲಹಸ್ತಾ ವಿವಾಸಸಃ ।
ಛಿಂಧಿ ಭಿಂಧೀತಿ ವಾದಿನ್ಯಸ್ತಥಾ ರಕ್ಷೋಗಣಾಃ ಪ್ರಭೋ ॥ ೪೮ ॥

ತತೋ ಮಹಾಘನಾ ವ್ಯೋಮ್ನಿ ಗಂಭೀರಪರುಷಸ್ವನಾಃ ।
ಅಂಗಾರಾನ್ಮುಮುಚುರ್ವಾತೈರಾಹತಾಃ ಸ್ತನಯಿತ್ನವಃ ॥ ೪೯ ॥

ಸೃಷ್ಟೋ ದೈತ್ಯೇನ ಸುಮಹಾನ್ವಹ್ನಿಃ ಶ್ವಸನಸಾರಥಿಃ ।
ಸಾಂವರ್ತಕ ಇವಾತ್ಯುಗ್ರೋ ವಿಬುಧಧ್ವಜಿನೀಮಧಾಕ್ ॥ ೫೦ ॥

ತತಃ ಸಮುದ್ರ ಉದ್ವೇಲಃ ಸರ್ವತಃ ಪ್ರತ್ಯದೃಶ್ಯತ ।
ಪ್ರಚಂಡವಾತೈರುದ್ಧೂತತರಂಗಾವರ್ತಭೀಷಣಃ ॥ ೫೧ ॥

ಬಲಿಚಕ್ರವರ್ತಿಯು ಹತ್ತು ಬಾಣಗಳನ್ನು ಇಂದ್ರನ ಮೇಲೆಯೂ, ಮೂರು ಅವನ ವಾಹನವಾದ ಐರಾವತಕ್ಕೂ, ನಾಲ್ಕು ಅವನ ಅಂಗ ರಕ್ಷಕರಿಗೂ, ಒಂದು ಬಾಣವನ್ನು ಮಾವಟಿಗನ ಮೇಲೆಯೂ ಒಟ್ಟಿಗೆ ಹದಿನೆಂಟು ಬಾಣಗಳನ್ನು ಪ್ರಯೋಗಿಸಿದನು. ॥ ೪೧ ॥ ಬಲಿಯ ಬಾಣಗಳಾದರೋ ನಮ್ಮನ್ನು ಘಾಸಿಪಡಿಸುವುವು ಎಂದು ನೋಡಿದ ಶೀಘ್ರವಿಕ್ರಮಿಯಾದ ಇಂದ್ರನು ಆ ಬಾಣಗಳು ತನ್ನ ಬಳಿಗೆ ಬರುವುದರೊಳಗಾಗಿಯೇ ಅಷ್ಟೇ ಸಂಖ್ಯೆಯ ಭಲ್ಲವೆಂಬ ಬಾಣಗಳಿಂದ ನಗು-ನಗುತ್ತಲೇ ಕತ್ತರಿಸಿಹಾಕಿದನು. ॥ ೪೨ ॥ ಇಂದ್ರನ ಈ ಶ್ರೇಷ್ಠವಾದ ಧನುರ್ವಿದ್ಯಾ ಪಾಂಡಿತ್ಯವನ್ನು ಕಂಡು ಕೆರಳಿದ ಬಲಿಯು ಇಂದ್ರನ ಮೇಲೆ ಪ್ರಯೋಗಿಸಲು ಪಂಜಿನಂತೆ ಪ್ರಜ್ವಲಿಸುತ್ತಿದ್ದ ಒಂದು ಭಾರೀ ಶಕ್ತ್ಯಾಯುಧವನ್ನು ಎತ್ತಿಕೊಂಡನು. ಅದನ್ನು ಅವನು ಪ್ರಯೋಗಿಸುವ ಮೊದಲೇ, ಅವನ ಕೈಯಲ್ಲಿರು ವಾಗಲೇ ಇಂದ್ರನು ಅದನ್ನೂ ಕತ್ತರಿಸಿಬಿಟ್ಟನು. ॥ ೪೩ ॥ ಬಳಿಕ ಬಲಿಯು ರೋಷಾವೇಶದಿಂದ ಕೈಗೆತ್ತಿಕೊಂಡ ಶೂಲ, ಪ್ರಾಸ, ತೋಮರ, ಋಷ್ಟಿಮುಂತಾದ ಆಯುಧಗಳನ್ನು ಒಂದಾದ ಮೇಲೆ ಮತ್ತೊಂದರಂತೆ ಇಂದ್ರನು ಕತ್ತರಿಸಿ ಹಾಕಿದನು. ಇಂತಹ ಕೈಚಳಕ ದಿಂದ ಇಂದ್ರನ ಐಶ್ವರ್ಯವು ಇನ್ನೂ ಬೆಳಗಿತು. ॥ ೪೪ ॥

ಪರೀಕ್ಷಿತನೇ! ಇಂದ್ರನ ಪರಾಕ್ರಮದಿಂದ ಗಾಬರಿಗೊಂಡ ಬಲಿಯು ಅಂತರ್ಧಾನನಾಗಿ ಮತ್ತೆ ಅವನು ಆಸುರೀ ಮಾಯೆ ಯನ್ನು ಸೃಷ್ಟಿಸಿದನು. ಮರುಕ್ಷಣದಲ್ಲೇ ದೊಡ್ಡ ಪರ್ವತವೊಂದು ದೇವಸೈನ್ಯದ ಮೇಲೆ ಬಿತ್ತು. ॥ ೪೫ ॥ ಅದನ್ನನುಸರಿಸಿ ಕಾಡುಗಿಚ್ಚಿ ನಿಂದ ಸುಡುತ್ತಿದ್ದ ವೃಕ್ಷಗಳು ಬೀಳತೊಡಗಿದವು. ಬಳಿಕ ಕಲ್ಲುಳಿಗ ಳಂತೆ ಹರಿತವಾದ ಶಿಖರಗಳಿಂದ ಕೂಡಿದ್ದ ಬಂಡೆಗಳು ದೇವಸೈನ್ಯ ವನ್ನು ನುಚ್ಚುನೂರಾಗಿಸುತ್ತಾ ಬೀಳತೊಡಗಿದವು. ॥ ೪೬ ॥ ಅನಂತರ ಹೆಬ್ಬಾವುಗಳೂ, ಚೇಳುಗಳೂ, ವಿಷಸರ್ಪಗಳೂ ಹಾಗೂ ಇತರ ವಿಷಜಂತುಗಳೂ ನೆಗೆ-ನೆಗೆಯುತ್ತಾ ದೇವಸೈನ್ಯವನ್ನು ಕಡಿ ಯತೊಡಗಿದವು. ಸಿಂಹ, ಹುಲಿ, ಕಾಡಹಂದಿಗಳು ಸೈನ್ಯದ ದೊಡ್ಡ-ದೊಡ್ಡ ಆನೆಗಳನ್ನೂ ಹರಿದು ನುಂಗತೊಡಗಿದವು. ॥ ೪೭ ॥ ರಾಜೇಂದ್ರಾ! ಕೈಯಲ್ಲಿ ಶೂಲಾಯುಧವನ್ನು ಹಿಡಿದು ಕೊಂಡಿದ್ದ ಬೆತ್ತಲೆಯರಾದ ರಾಕ್ಷಸಿಯರು ಮತ್ತು ರಾಕ್ಷಸರು 'ಕಡಿ-ಬಡಿ-ತಿವಿ' ಎಂದು ಅರಚಿಕೊಳ್ಳುತ್ತಾ ಸಮರಾಂಗಣಕ್ಕೆ ನುಗ್ಗಿದವು. ॥ ೪೮ ॥ ಕೆಲವೇ ಕ್ಷಣದಲ್ಲಿ ಆಕಾಶದಲ್ಲಿ ಘನಘೋರ ವಾದ ಕಾರ್ಮೋಡಗಳು ದಟ್ಟವಾಗಿ ವ್ಯಾಪಿಸಿದುವು. ಅವುಗಳು ಪರಸ್ಪರ ಅಪ್ಪಳಿಸಿದಾಗ ಭಯಂಕರ ಕಠೋರವಾದ ಶಬ್ದವಾಗ ತೊಡಗಿತು. ಮಿಂಚುಗಳು ಬೀಳತೊಡಗಿದವು. ಚಂಡಮಾರುತ ದೊಂದಿಗೆ ಬೆಂಕಿಯ ಮಳೆಯೇ ಬೀಳತೊಡಗಿತು. ॥ ೪೯ ॥ ದೈತ್ಯರಾಜ ಬಲಿಯು ಪ್ರಳಯಾಗ್ನಿಯಂತಹ ಭಯಾನಕ ಬೆಂಕಿ ಯನ್ನು ಸೃಷ್ಟಿಸಿದನು. ಅದು ನೋಡು-ನೋಡುತ್ತಲೇ ಗಾಳಿಯ ಸಹಾಯದಿಂದ ದೇವತೆಗಳ ಸೈನ್ಯವನ್ನು ಸುಡಲುತೊಡಗಿತು. ॥ ೫೦ ॥ ಬಳಿಕ ಚಂಡಮಾರುತದಿಂದ ಎಬ್ಬಿಸಲ್ಪಟ್ಟ ಅಲೆಗಳಿಂದಲೂ, ಸುಳಿಗಳಿಂದಲೂ ಕೂಡಿದ್ದ ಸಮುದ್ರವು ಎಲ್ಲ ಕಡೆಗಳಿಂದ ತನ್ನೆಲ್ಲೆ ಯನ್ನು ಮೀರಿ ಮುನ್ನುಗ್ಗಿ ಬರುತ್ತಿರುವಂತೆ ಎನಿಸಿತು. ॥ ೫೧ ॥

ಏವಂ ದೈತ್ಯೈರ್ಮಹಾಮಾಯೈರಲಕ್ಷ್ಯಗತಿಭೀಷಣೈಃ ।
ಸೃಜ್ಯಮಾನಾಸು ಮಾಯಾಸು ವಿಷೇದುಃ ಸುರಸೈನಿಕಾಃ
॥ ೫೨ ॥

ನ ತತ್ಪ್ರತಿವಿಧಿಂ ಯತ್ರ ವಿದುರಿಂದ್ರಾದಯೋ ನೃಪ ।
ಧ್ಯಾತಃ ಪ್ರಾದುರಭೂತ್ತತ್ರ ಭಗವಾನ್ವಿಶ್ವಭಾವನಃ
॥ ೫೩ ॥

ತತಃ ಸುಪರ್ಣಾಂಸಕೃತಾಂಘ್ರಿಪಲ್ಲವಃ
ಪಿಶಂಗವಾಸಾ ನವಕಂಜಲೋಚನಃ ।
ಅದೃಶ್ಯತಾಷ್ಟಾಯುಧಬಾಹುರುಲ್ಲಸ-
ಚ್ಛ್ರೀಕೌಸ್ತುಭಾನರ್ಘ್ಯಕಿರೀಟಕುಂಡಲಃ ॥ ೫೪ ॥

ತಸ್ಮಿನ್ಪ್ರವಿಷ್ಟೇಽಸುರಕೂಟಕರ್ಮಜಾ
ಮಾಯಾ ವಿನೇಶುರ್ಮಹಿನಾ ಮಹೀಯಸಃ ।
ಸ್ವಪ್ನೋ ಯಥಾ ಹಿ ಪ್ರತಿಬೋಧ ಆಗತೇ
ಹರಿಸ್ಮೃತಿಃ ಸರ್ವವಿಪದ್ವಿಮೋಕ್ಷಣಮ್ ॥ ೫೫ ॥

ದೃಷ್ಟ್ವಾ ಮೃಧೇ ಗರುಡವಾಹಮಿಭಾರಿವಾಹ
ಆವಿಧ್ಯಶೂಲಮಹಿನೋದಥ ಕಾಲನೇಮಿಃ ।
ತಲ್ಲೀಲಯಾ ಗರುಡಮೂರ್ಧ್ನಿ ಪತದ್ಗೃಹೀತ್ವಾ
ತೇನಾಹನನ್ನೃಪ ಸವಾಹಮರಿಂ ತ್ರ್ಯಧೀಶಃ ॥ ೫೬ ॥

ಮಾಲೀ ಸುಮಾಲ್ಯತಿಬಲೌ ಯುಧಿ ಪೇತತುರ್ಯ-
ಚ್ಚಕ್ರೇಣ ಕೃತ್ತಶಿರಸಾವಥ ಮಾಲ್ಯವಾಂಸ್ತಮ್ ।
ಆಹತ್ಯ ತಿಗ್ಮಗದಯಾಹನದಂಡಜೇಂದ್ರಂ
ತಾವಚ್ಛಿರೋಽಚ್ಛಿನದರೇರ್ನದತೋಽರಿಣಾಽಽದ್ಯಃ ॥ ೫೭ ॥

ಹೀಗೆ ಭಯಂಕರರಾದ ಅಸುರರು ಅದೃಶ್ಯರಾಗಿ ಚಿತ್ರ-ವಿಚಿತ್ರವಾದ ಮಾಯೆಯನ್ನು ಸೃಷ್ಟಿಮಾಡಿ ದೇವತೆಗಳ ಸೈನ್ಯವನ್ನು ಪೀಡಿಸುತ್ತಿದ್ದರು. ಅವರು ಅದೃಶ್ಯರಾಗಿದ್ದುದರಿಂದ ಅವರ ಮೇಲೆ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಲೂ ಸಾಧ್ಯವಾಗುತ್ತಿರಲಿಲ್ಲ. ಇದರಿಂದಾಗಿ ದೇವತೆಗಳು ಬಹಳ ಖಿನ್ನರಾದರು. ॥ ೫೨ ॥ ಪರೀಕ್ಷಿತನೇ! ಅಸುರರು ಕಲ್ಪಿಸಿದ ಮಾಯೆಗೆ ಪ್ರತೀಕಾರವನ್ನು ಮಾಡಲು ಇಂದ್ರಾದಿ ದೇವತೆಗಳು ಬಹಳವಾಗಿ ಯೋಚಿಸಿದರು. ಆದರೆ ಅವರಿಗೆ ಏನೂ ತೋಚಲಿಲ್ಲ. ಕೊನೆಗೆ ಅವರೆಲ್ಲರೂ ಜಗದ್ರಕ್ಷಕನಾದ ಭಗವಂತನನ್ನು ಅನನ್ಯ ಭಕ್ತಿಯಿಂದ ಧ್ಯಾನಮಾಡಿದರು. ಒಡನೆಯೇ ಭಕ್ತಪರಾಧೀನನಾದ ಶ್ರೀಹರಿಯು ಅಲ್ಲಿ ಪ್ರಕಟಗೊಂಡನು. ॥ ೫೩ ॥ ಅವನ ದರ್ಶನವು ಬಹು ಸುಂದರವಾಗಿತ್ತು. ಗರುಡನ ಹೆಗಲಿನಲ್ಲಿ ಭಗವಂತನ ಚರಣಕಮಲಗಳು ವಿರಾಜಮಾನವಾಗಿದ್ದವು. ನವಕಮಲದಂತೆ ವಿಶಾಲ ನೇತ್ರಗಳಿದ್ದವು. ದೇವದೇವನು ಪೀತಾಂಬರವನ್ನು ಧರಿಸಿದ್ದನು. ಎಂಟು ಕೈಗಳಿಂದ ಎಂಟು ಆಯುಧಗಳನ್ನು ಧರಿಸಿದ್ದನು. ಕೊರಳಲ್ಲಿ ಕೌಸ್ತುಭಮಣಿಯೂ, ಶಿರದಲ್ಲಿ ಅಮೂಲ್ಯವಾದ ಕಿರೀಟವೂ, ಕಿವಿಗಳಲ್ಲಿ ದಿವ್ಯಕುಂಡಲಗಳೂ ರಾರಾಜಿಸುತ್ತಿದ್ದವು. ಇಂತಹ ದಿವ್ಯವಾದ ಕಾಂತಿಯಿಂದ ಭಗವಂತನು ದೇವತೆಗಳಿಗೆ ಕಾಣಿಸಿಕೊಂಡನು. ॥ ೫೪ ॥ ಪರಮಪುರುಷ ಪರಮಾತ್ಮನು ಪ್ರಕಟವಾದೊಡನೆಯೇ ಅವನ ಪ್ರಭಾವದಿಂದ ಅಸುರರ ಆ ಕಪಟ ಮಾಯೆಯು – ಎಚ್ಚರವಾದಾಗ ಸ್ವಪ್ನವು ಇಲ್ಲವಾಗುವಂತೆ ವಿಲೀನವಾಗಿ ಹೋಯಿತು. 'ಹರಿಸ್ಮೃತಿಃ ಸರ್ವವಿಪದ್ವಿಮೋಕ್ಷಣಮ್' ಶ್ರೀಹರಿಯ ಸ್ಮರಣೆಯು ಸಮಸ್ತ ವಿಪತ್ತುಗಳನ್ನು ಪರಿಹರಿಸುತ್ತದೆ. ॥ ೫೫ ॥ ಇದಾದ ಬಳಿಕ ಯುದ್ಧರಂಗದಲ್ಲಿ ಗರುಡವಾಹನ ಭಗವಂತನು ಬಂದಿರುವುದನ್ನು ನೋಡಿದ ಕಾಲನೇಮಿ ಎಂಬ ದೈತ್ಯನು ತನ್ನ ಸಿಂಹದ ಮೇಲೆ ಕುಳಿತಿದ್ದೇ ಭಯಂಕರವಾದ ಶೂಲಾಯುಧವನ್ನು ಗರಗರನೇ ತಿರುಗಿಸುತ್ತಾ ಶ್ರೀಹರಿಯ ಮೇಲೆ ಪ್ರಯೋಗಿಸಿದನು. ಶ್ರೀಹರಿಯಾದರೋ ಗರುಡನ ತಲೆಯಮೇಲೆ ಬೀಳಲಿದ್ದ ಆ ಶೂಲಾಯುಧವನ್ನು ಲೀಲಾಜಾಲವಾಗಿ ಹಿಡಿದು ಅದೇ ಶೂಲಾಯುಧದಿಂದ ಸಿಂಹದ ಮೇಲೆ ಕುಳಿತಿದ್ದ ಕಾಲನೇಮಿಯನ್ನು ವಾಹನಸಹಿತನಾಗಿ ಸಂಹಾರಮಾಡಿದನು. ॥ ೫೬ ॥ ಬಳಿಕ ಮಾಲಿ ಮತ್ತು ಸುಮಾಲಿ ಎಂಬ ಮಹಾಬಲಿಷ್ಠರಾದ ರಾಕ್ಷಸರಿಬ್ಬರೂ ಶ್ರೀಹರಿಯನ್ನು ಆಕ್ರಮಿಸಿದರು. ಭಗವಂತನು ಕ್ಷಣಮಾತ್ರದಲ್ಲಿ ಅವರ ತಲೆಗಳನ್ನು ಚಕ್ರಾಯುಧದಿಂದ ತುಂಡರಿಸಿಬಿಟ್ಟನು. ಮತ್ತೆ ಮಾಲ್ಯವಂತನೆಂಬ ಮಹಾದೈತ್ಯನು ಭಾರೀ ಗರ್ಜಿಸುತ್ತಾ ಪ್ರಚಂಡ ವೇಗದಿಂದ ಗದೆಯನ್ನು ಗರುಡನ ಮೇಲೆ ಎಸೆದಾಗ ಅದು ಗರುಡನನ್ನು ಮುಟ್ಟುವ ಮೊದಲೇ ಭಗವಂತನು ಅದನ್ನು ನಿವಾರಿಸಿ ಮಾಲ್ಯವಂತನ ಶಿರಸ್ಸನ್ನು ಚಕ್ರದಿಂದ ಕತ್ತರಿಸಿಬಿಟ್ಟನು. ॥ ೫೭ ॥

ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ದೇವಾಸುರಸಂಗ್ರಾಮೇ ದಶಮೋಽಧ್ಯಾಯಃ ॥ ೧೦ ॥

# ಹನ್ನೊಂದನೆಯ ಅಧ್ಯಾಯ

## ದೇವಾಸುರರ ಸಂಗ್ರಾಮದ ಸಮಾಪ್ತಿ

*ಶ್ರೀಶುಕ ಉವಾಚ*

**ಅಥೋ ಸುರಾಃ ಪ್ರತ್ಯುಪಲಬ್ಧಚೇತಸಃ**
**ಪರಸ್ಯ ಪುಂಸಃ ಪರಯಾನುಕಂಪಯಾ ।**
**ಜಘ್ನುರ್ಭೃಶಂ ಶಕ್ರಸಮೀರಣಾದಯ-**
**ಸ್ತಾಂಸ್ತಾನ್ರಣೇ ಯೈರಭಿಸಂಹತಾಃ ಪುರಾ ॥ ೧ ॥**

**ವೈರೋಚನಾಯ ಸಂರಬ್ಧೋ ಭಗವಾನ್ಪಾಕಶಾಸನಃ ।**
**ಉದಯಚ್ಛದ್ಯದಾ ವಜ್ರಂ ಪ್ರಜಾ ಹಾ ಹೇತಿ ಚುಕ್ರುಶುಃ ॥ ೨ ॥**

**ವಜ್ರಪಾಣಿಸ್ತಮಾಹೇದಂ ತಿರಸ್ಕೃತ್ಯ ಪುರಃಸ್ಥಿತಮ್ ।**
**ಮನಸ್ವಿನಂ ಸುಸಂಪನ್ನಂ ವಿಚರಂತಂ ಮಹಾಮೃಧೇ ॥ ೩ ॥**

**ನಟವನ್ಮೂಢ ಮಾಯಾಭಿರ್ಮಾಯೇಶಾನ್ನೋ ಜಿಗೀಷಸಿ ।**
**ಜಿತ್ವಾ ಬಾಲಾನ್ನಿಬದ್ಧಾಕ್ಷಾನ್ನಟೋ ಹರತಿ ತದ್ಧನಮ್ ॥ ೪ ॥**

**ಆರುರುಕ್ಷಂತಿ ಮಾಯಾಭಿರುತ್ಸಿಸೃಪ್ಸಂತಿ ಯೇ ದಿವಮ್ ।**
**ತಾಂದಸ್ಯೂನ್ವಿಧುನೋಮ್ಯಜ್ಞಾನ್ಪೂರ್ವಸ್ಮಾಚ್ಚ ಪದಾದಧಃ ॥ ೫ ॥**

**ಸೋಽಹಂ ದುರ್ಮಾಯಿನಸ್ತೇಽದ್ಯ ವಜ್ರೇಣ ಶತಪರ್ವಣಾ ।**
**ಶಿರೋ ಹರಿಷ್ಯೇ ಮಂದಾತ್ಮನ್ಘಟಸ್ವ ಜ್ಞಾತಿಭಿಃ ಸಹ ॥ ೬ ॥**

*ಬಲಿರುವಾಚ*

**ಸಂಗ್ರಾಮೇ ವರ್ತಮಾನಾನಾಂ**
**ಕಾಲಚೋದಿತಕರ್ಮಣಾಮ್ ।**
**ಕೀರ್ತಿರ್ಜಯೋಽಜಯೋ ಮೃತ್ಯುಃ**
**ಸರ್ವೇಷಾಂ ಸ್ಯುರನುಕ್ರಮಾತ್ ॥ ೭ ॥**

**ತದಿದಂ ಕಾಲರಶನಂ ಜನಾಃ ಪಶ್ಯಂತಿ ಸೂರಯಃ ।**
**ನ ಹೃಷ್ಯಂತಿ ನ ಶೋಚಂತಿ ತತ್ರ ಯೂಯಮಪಂಡಿತಾಃ ॥ ೮ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಪರಮ ಪುರುಷನಾದ ಭಗವಂತನ ನಿರತಿಶಯವಾದ ಕೃಪೆಯಿಂದ ದೇವತೆಗಳ ಭಯವು ದೂರವಾಗಿ ಅವರಲ್ಲಿ ನವಚೈತನ್ಯ ವುಂಟಾಯಿತು. ಈ ಹಿಂದೆ ಇಂದ್ರ, ವಾಯುಗಳೇ ಮೊದಲಾದ ದೇವತೆಗಳು ಯಾವ-ಯಾವ ದೈತ್ಯರೊಡನೆ ಹೋರಾಡುತ್ತಿದ್ದರೋ ಪುನಃ ಅದೇ ದೈತ್ಯರನ್ನೆದುರಿಸಿ ಶೌರ್ಯದಿಂದ ಯುದ್ಧಮಾಡ ತೊಡಗಿದರು. ॥೧॥ ಮಹಾ ಮಹಿಮನಾದ ಇಂದ್ರನು ಅತ್ಯಂತ ಕ್ರುದ್ಧನಾಗಿ ಬಲಿಯನ್ನು ಸಂಹರಿಸಬೇಕೆಂಬ ಆಶಯದಿಂದ ವಜ್ರಾ ಯುಧವನ್ನೆತ್ತಿದನು. ಆಗ ಸಮಸ್ತ ಪ್ರಜೆಗಳಲ್ಲಿ ಹಾಹಾಕಾರವದ್ದಿತು. ॥ ೨ ॥ ಬಲಿಯು ಅಸ್ತ್ರ-ಶಸ್ತ್ರಗಳಿಂದ ಸುಸಜ್ಜಿತನಾಗಿ, ನಿರ್ಭಯ ನಾಗಿ ಪರಮೋತ್ಸಾಹದಿಂದ ಯುದ್ಧಭೂಮಿಯಲ್ಲಿ ಸಂಚರಿಸುತ್ತಿ ದ್ದನು. ತನ್ನ ಎದುರಿಗೆ ಬಂದ ಅವನನ್ನು ತಿರಸ್ಕರಿಸುತ್ತಾ ವಜ್ರಪಾಣಿ ಯಾದ ಇಂದ್ರನು ಇಂತೆಂದನು –॥ ೩ ॥ ಎಲೈ ಮೂರ್ಖಾ! ನಟನು (ಐಂದ್ರಜಾಲಿಕನು) ಮಕ್ಕಳ ಕಣ್ಣುಕಟ್ಟಿ ತನ್ನ ಮಾಯಾಜಾಲ ದಿಂದ ಅವರಲ್ಲಿದ್ದ ಹಣವನ್ನು ದೋಚುವಂತೆಯೇ ನೀನು ಮಾಯಾಜಾಲದಿಂದ ನಮ್ಮ ಮೇಲೆ ವಿಜಯ ಪಡೆಯಬಹು ದೆಂದು ಬಯಸಿದ್ದೆ. ಆದರೆ ನಾವುಗಳು ಮಾಯೆಯ ಅಧಿಪತಿ ಗಳೆಂದು ನೀನು ಅರಿಯೆ. ಅದು ನಮ್ಮನ್ನು ಏನೂ ಮಾಡ ಲಾರದು. ॥ ೪ ॥ ಮಾಯೆಯ ಮೂಲಕ ಸ್ವರ್ಗದ ಮೇಲೆ ಅಧಿ ಕಾರವನ್ನು ನಡೆಸಲು ಬಯಸುವವನು ಹಾಗೂ ಅದನ್ನು ದಾಟಿ ಮೇಲಿನ ಲೋಕಗಳಲ್ಲಿಯೂ ಅಧಿಕಾರ ಸ್ಥಾಪಿಸಲು ಬಯಸು ವಂತಹ ಮೂರ್ಖ ದರೋಡೆಕೋರನನ್ನು ನಾನು ಅವನು ಮೊದ ಲಿದ್ದ ಸ್ಥಾನದಿಂದಲೂ ಕೆಳಗೆ ತಳ್ಳಿಬಿಡುತ್ತೇನೆ. ॥ ೫ ॥ ಎಲವೋ ಮಂದಮತಿಯೇ! ನೀನು ಭಾರೀ ದೊಡ್ಡ ಮಾಯಾಜಾಲವನ್ನು ರಚಿಸಿದ್ದೆ ನೋಡು. ಇಂದು ನಾನು ನನ್ನ ನೂರು ಗಿಣ್ಣುಗಳಿಂದ ಕೂಡಿದ ಅಜೇಯ ವಜ್ರಾಯುಧದಿಂದ ನಿನ್ನ ರುಂಡ-ಮುಂಡ ಗಳನ್ನು ಬೇರ್ಪಡಿಸಿಬಿಡುತ್ತೇನೆ. ನೀನು ನಿನ್ನ ಜ್ಞಾತಿಗಳೊಡನೆ ಸೇರಿ ಏನು ಮಾಡಬಹುದೋ ಅದನ್ನು ಮಾಡು. ॥ ೬ ॥

**ಬಲಿಯು ಹೇಳಿದನು** – ಮಹೇಂದ್ರ! ಕಾಲಶಕ್ತಿಯ ಪ್ರೇರಣೆ ಯಿಂದ ತನ್ನ ಕರ್ಮಕ್ಕನುಸಾರ ಯುದ್ಧಮಾಡುವವರಿಗೆ ಜಯಾ ಪಜಯಗಳು ಅಥವಾ ಕೀರ್ತಿ-ಅಪಕೀರ್ತಿ, ಅಥವಾ ಮೃತ್ಯು ಇವು ಗಳು ಅನುಕ್ರಮವಾಗಿ ಆಗುತ್ತಲೇ ಇರುತ್ತವೆ. ॥ ೭ ॥ ಆದುದರಿಂದ ಪಂಡಿತರಾದವರು ಈ ಜಗತ್ತನ್ನು ಕಾಲಕ್ಕೆ ಅಧೀನವೆಂದು ತಿಳಿದು ವಿಜಯಿಯಾದಾಗ ಹರ್ಷಪಡುವುದಿಲ್ಲ, ಅಪಕೀರ್ತಿ, ಸೋಲು, ಮೃತ್ಯು ಸಂಭವಿಸಿದಾಗ ಶೋಕಕ್ಕೆ ವಶರಾಗುವುದಿಲ್ಲ. ನೀವೆಲ್ಲರೂ ಈ ತತ್ತ್ವವನ್ನು ತಿಳಿದವರಲ್ಲ. ॥ ೮ ॥ ನೀವುಗಳು ತಮ್ಮನ್ನು ಜಯ-ಪರಾಜಯಗಳ ಕರ್ತೃಗಳೆಂದು ತಿಳಿಯುತ್ತಿರುವಿರಿ. ಅದಕ್ಕಾಗಿ ಮಹಾತ್ಮರ ದೃಷ್ಟಿಯಲ್ಲಿ ನೀವುಗಳು ಶೋಚನೀಯರಾಗಿರುವಿರಿ.

ನ ವಯಂ ಮನ್ಯಮಾನಾನಾಮಾತ್ಮಾನಂ ತತ್ರ ಸಾಧನಮ್ ।
ಗಿರೋ ವಃ ಸಾಧುಶೋಚ್ಯಾನಾಂ ಗೃಹ್ಣೀಮೋ ಮರ್ಮತಾಡನಾಃ ॥ ೯ ॥

*ಶ್ರೀಶುಕ ಉವಾಚ*

ಇತ್ಯಾಕ್ಷಿಪ್ಯ ವಿಭುಂ ವೀರೋ ನಾರಾಚೈರ್ವೀರಮರ್ದನಃ ।
ಆಕರ್ಣಪೂರ್ಣೈರಹನದಾಕ್ಷೇಪೈರಾಹತಂ ಪುನಃ ॥ ೧೦ ॥

ಏವಂ ನಿರಾಕೃತೋ ದೇವೋ ವೈರಿಣಾ ತಥ್ಯವಾದಿನಾ ।
ನಾಮೃಷ್ಯತ್ತದಧಿಕ್ಷೇಪಂ ತೋತ್ರಾಹತ ಇವ ದ್ವಿಪಃ ॥ ೧೧ ॥

ಪ್ರಾಹರತ್ಕುಲಿಶಂ ತಸ್ಮಾ ಅಮೋಘಂ ಪರಮರ್ದನಃ ।
ಸಯಾನೋ ನ್ಯಪತದ್ಭೂಮೌ ಛಿನ್ನಪಕ್ಷ ಇವಾಚಲಃ ॥ ೧೨ ॥

ಸಖಾಯಂ ಪತಿತಂ ದೃಷ್ಟ್ವಾ ಜಂಭೋ ಬಲಿಸಖಃ ಸುಹೃತ್ ।
ಅಭ್ಯಯಾತ್ಸೌಹೃದಂ ಸಖ್ಯುರ್ಹತಸ್ಯಾಪಿ ಸಮಾಚರನ್ ॥ ೧೩ ॥

ಸ ಸಿಂಹವಾಹ ಆಸಾದ್ಯ ಗದಾಮುದ್ಯಮ್ಯ ರಂಹಸಾ ।
ಜತ್ರಾವತಾಡಯಚ್ಛಕ್ರಂ ಗಜಂ ಚ ಸುಮಹಾಬಲಃ ॥ ೧೪ ॥

ಗದಾಪ್ರಹಾರವ್ಯಥಿತೋ ಭೃಶಂ ವಿಹ್ವಲಿತೋ ಗಜಃ ।
ಜಾನುಭ್ಯಾಂ ಧರಣೀಂ ಸ್ಪೃಷ್ಟ್ವಾ ಕಶ್ಮಲಂ ಪರಮಂ ಯಯೌ ॥ ೧೫ ॥

ತತೋ ರಥೋ ಮಾತಲಿನಾ ಹರಿಭಿರ್ದಶಶತೈರ್ವೃತಃ ।
ಆನೀತೋ ದ್ವಿಪಮುತ್ಸೃಜ್ಯ ರಥಮಾರುರುಹೇ ವಿಭುಃ ॥ ೧೬ ॥

ತಸ್ಯ ತತ್ಪೂಜಯನ್ಕರ್ಮ ಯಂತುರ್ದಾನವಸತ್ತಮಃ ।
ಶೂಲೇನ ಜ್ವಲತಾ ತಂ ತು ಸ್ಮಯಮಾನೋಽಹನನ್ಮೃಧೇ ॥ ೧೭ ॥

ಸೇಹೇ ರುಜಂ ಸುದುರ್ಮರ್ಷಾಂ ಸತ್ತ್ವಮಾಲಂಬ್ಯ ಮಾತಲಿಃ ।
ಇಂದ್ರೋ ಜಂಭಸ್ಯ ಸಂಕ್ರುದ್ಧೋ ವಜ್ರೇಣಾಪಾಹರಚ್ಛಿರಃ ॥ ೧೮ ॥

ಜಂಭಂ ಶ್ರುತ್ವಾ ಹತಂ ತಸ್ಯ ಜ್ಞಾತಯೋ ನಾರದಾದೃಷೇಃ ।
ನಮುಚಿಶ್ಚ ಬಲಃ ಪಾಕಸ್ತತ್ರಾಪೇತುಸ್ತ್ವರಾನ್ವಿತಾಃ ॥ ೧೯ ॥

ವಚೋಭಿಃ ಪರುಷೈರಿಂದ್ರಮರ್ದಯಂತೋಽಸ್ಯ ಮರ್ಮಸು ।
ಶರೈರವಾಕಿರನ್ಮೇಘಾ ಧಾರಾಭಿರಿವ ಪರ್ವತಮ್ ॥ ೨೦ ॥

ಹರೀನ್ ದಶಶತಾನ್ಯಾಜೌ ಹರ್ಯಶ್ವಸ್ಯ ಬಲಃ ಶರೈಃ ।
ತಾವದ್ಭಿರರ್ದಯಾಮಾಸ ಯುಗಪಲ್ಲಘುಹಸ್ತವಾನ್ ॥ ೨೧ ॥

ಆದುದರಿಂದ ನಿನ್ನ ಮರ್ಮಭೇದಿಗಳಾದ ಮಾತನ್ನು ನಾವು ಲೆಕ್ಕಿಸುವುದೇ ಇಲ್ಲ. ॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ವೀರನಾದ ಬಲಿಯು ಇಂದ್ರನನ್ನು ಹೀಗೆ ನಿಂದಿಸಿದನು. ಬಲಿಯ ನಿಂದನೆಯಿಂದ ಇಂದ್ರನು ಸ್ವಲ್ಪನಾಚಿಕೊಂಡನು. ಅಷ್ಟರಲ್ಲಿ ಶತ್ರುಸೂದನನಾದ ಬಲಿಯು ತನ್ನ ಧನುಸ್ಸನ್ನು ಆಕರ್ಣಾಂತವಾಗಿ ಸೆಳೆದು ಅನೇಕ ಬಾಣಗಳನ್ನು ಪ್ರಯೋಗಿಸಿದನು. ॥ ೧೦ ॥ ಹೀಗೆ ಸತ್ಯವಾದಿಯಾದ ದೇವಶತ್ರು ಬಲಿಯಿಂದ ತಿರಸ್ಕರಿಸಲ್ಪಟ್ಟ ದೇವೇಂದ್ರನು ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ ಕೆರಳಿ ಆ ಬಲಿಯ ಮಾತುಗಳನ್ನು ಸಹಿಸಿಕೊಳ್ಳಲಿಲ್ಲ. ॥ ೧೧ ॥ ಅರಿಮರ್ದನನಾದ ಇಂದ್ರನು ಬಲಿಯನ್ನು ತನ್ನ ಅಮೋಘವಾದ ವಜ್ರಾಯುಧದಿಂದ ಪ್ರಹರಿಸಿದನು. ಆ ಏಟಿನಿಂದ ಬಲಿಯ ರೆಕ್ಕೆ ತುಂಡಾದ ಪರ್ವತದಂತೆ ವಿಮಾನದೊಂದಿಗೆ ನೆಲಕ್ಕೆ ಉರುಳಿದನು. ॥ ೧೨ ॥ ಬಲಿಯ ಮಿತ್ರನೂ, ಆಪ್ತನೂ ಆದ ಜಂಭಾಸುರನೆಂಬ ರಾಕ್ಷಸನು ತನ್ನ ಮಿತ್ರನಾದ ಬಲಿಯು ಕೆಳಕ್ಕೆ ಬಿದ್ದುದನ್ನು ನೋಡಿ ಅವನು ಸತ್ತು ಹೋಗಿದ್ದರೂ ಅವನ ಸ್ನೇಹವನ್ನು ನೆನೆಯುತ್ತಾ ಅದರ ಪ್ರತೀಕಾರದಿಂದ ಇಂದ್ರನ ಮುಂದೆ ಯುದ್ಧಕ್ಕೆ ಬಂದುನಿಂತನು. ॥ ೧೩ ॥ ಸಿಂಹವನ್ನೇರಿ ಇಂದ್ರನ ಬಳಿಗೆ ಬಂದು ಭಾರೀ ವೇಗದಿಂದ ತನ್ನ ಗದೆಯನ್ನು ಎತ್ತಿ ಇಂದ್ರನ ಕೊರಳ ಪ್ರದೇಶದಲ್ಲಿ ಪ್ರಹರಿಸಿದನು. ಜೊತೆಗೆ ಆ ಬಲಶಾಲಿಯು ಐರಾವತವನ್ನೂ ಗದೆಯಿಂದ ಪ್ರಹರಿಸಿದನು. ॥ ೧೪ ॥ ಗದಾಪ್ರಹಾರದಿಂದ ಐರಾವತವು ಬಹಳ ವ್ಯಥೆಗೊಂಡು ಮೊಣಕಾಲೂರಿ ನೆಲಕ್ಕೆ ಬಾಗಿ ಮೂರ್ಛಿತವಾಯಿತು. ॥ ೧೫ ॥ ಆಗಲೇ ಇಂದ್ರನ ಸಾರಥಿಯಾದ ಮಾತಲಿಯು ಸಾವಿರ ಕುದುರೆಗಳನ್ನು ಹೂಡಿದ್ದ ದಿವ್ಯವಾದ ರಥವನ್ನು ತಂದನು. ಶಕ್ತಿಶಾಲಿಯಾದ ಇಂದ್ರನು ಐರಾವತವನ್ನು ಬಿಟ್ಟು ಶೀಘ್ರವಾಗಿ ರಥಾರೂಢನಾದನು. ॥ ೧೬ ॥ ದಾನವೇಂದ್ರನಾದ ಜಂಭಾಸುರನು ಮಾತಲಿಯ ಈ ಕಾರ್ಯವನ್ನು ಪ್ರಶಂಸಿಸಿ ಮುಗುಳ್ನಗುತ್ತಾ ಹೊಳೆಯುತ್ತಿರುವ ತ್ರಿಶೂಲವೊಂದನ್ನು ಅವನ ಮೇಲೆ ಪ್ರಯೋಗಿಸಿದನು. ॥ ೧೭ ॥ ಮಾತಲಿಯು ಧೈರ್ಯದಿಂದ ಆ ಸಹಿಸಲಸಾಧ್ಯವಾದ ಸಂಕಟವನ್ನು ಸಹಿಸಿಕೊಂಡನು. ಇದನ್ನು ನೋಡಿದ ಇಂದ್ರನು ಕ್ರೋಧಗೊಂಡು ತನ್ನ ವಜ್ರಾಯುಧದಿಂದ ಜಂಭನ ತಲೆಯನ್ನು ತುಂಡರಿಸಿಬಿಟ್ಟನು. ॥ ೧೮ ॥

ಜಂಭಾಸುರನು ಹತನಾದುದನ್ನು ನಾರದ ಮಹರ್ಷಿಗಳಿಂದ ಕೇಳಿದ ಅವನ ಬಂಧುಗಳಾದ ನಮೂಚಿ, ಬಲ, ಪಾಕ ಮುಂತಾದವರು ತ್ವರಿತವಾಗಿ ಯುದ್ಧಭೂಮಿಗೆ ಆಗಮಿಸಿದರು. ॥ ೧೯ ॥ ನಮೂಚಿಯೇ ಮುಂತಾದ ರಾಕ್ಷಸರು ಇಂದ್ರನ ಕುರಿತು ಅತಿ ಕಠೋರವಾದ ಮರ್ಮಸ್ಪರ್ಶಿ ಮಾತುಗಳನ್ನಾಡಿ, ಮೇಘಗಳು ಜಲಧಾರೆಯಿಂದ ಪರ್ವತವನ್ನು ಮುಚ್ಚಿಬಿಡುವಂತೆ ಶರವರ್ಷಗಳಿಂದ ಇಂದ್ರನನ್ನು ಮುಚ್ಚಿಬಿಟ್ಟರು. ॥ ೨೦ ॥ ಬಲಾಸುರನು ತನ್ನ ಕೈಚಳಕದಿಂದ ಒಂದೇ ಬಾರಿಗೆ ಒಂದುಸಾವಿರ ಬಾಣಗಳನ್ನು ಪ್ರಯೋಗಿಸಿ ಇಂದ್ರನ ಒಂದುಸಾವಿರ ಕುದುರೆಗಳನ್ನು ಘಾಸಿಗೊಳಿಸಿದನು. ॥ ೨೧ ॥ ಪಾಕನು ನೂರು ಬಾಣಗಳಿಂದ ಮಾತಲಿಯನ್ನೂ, ನೂರು ಬಾಣಗಳಿಂದ ರಥದ ಅವಯವಗಳನ್ನೂ ಭೇದಿ

ಶತಾಭ್ಯಾಂ ಮಾತಲಿಂ ಪಾಕೋ ರಥಂ ಸಾವಯವಂ ಪೃಥಕ್ ।
ಸಕೃತ್ಸಂಧಾನಮೋಕ್ಷೇಣ ತದದ್ಭುತಮಭೂದ್ರಣೇ ॥ ೨೨ ॥

ನಮುಚಿಃ ಪಂಚದಶಭಿಃ ಸ್ವರ್ಣಪುಂಖೈರ್ಮಹೇಷುಭಿಃ ।
ಆಹತ್ಯ ವ್ಯನದತ್ಸಂಖ್ಯೇ ಸತೋಯ ಇವ ತೋಯದಃ ॥ ೨೩ ॥

ಸರ್ವತಃ ಶರಕೂಟೇನ ಶಕ್ರಂ ಸರಥಸಾರಥಿಮ್ ।
ಛಾದಯಾಮಾಸುರಸುರಾಃ ಪ್ರಾವೃಟ್ಸೂರ್ಯಮಿವಾಂಬುದಾಃ ॥ ೨೪ ॥

ಅಲಕ್ಷಯಂತಸ್ತಮತೀವ ವಿಹ್ವಲಾ
ವಿಚುಕ್ರುಶುರ್ದೇವಗಣಾಃ ಸಹಾನುಗಾಃ ।
ಅನಾಯಕಾಃ ಶತ್ರುಬಲೇನ ನಿರ್ಜಿತಾ
ವಣಿಕ್ಪಥಾ ಭಿನ್ನನವೋ ಯಥಾರ್ಣವೇ ॥ ೨೫ ॥

ತತಸ್ತುರಾಷಾಡಿಷುಬದ್ಧಪಂಜರಾದ್-
ವಿನಿರ್ಗತಃ ಸಾಶ್ವರಥಧ್ವಜಾಗ್ರಣೀಃ ।
ಬಭೌ ದಿಶಃ ಖಂ ಪೃಥಿವೀಂ ಚ ರೋಚಯನ್
ಸ್ವತೇಜಸಾ ಸೂರ್ಯ ಇವ ಕ್ಷಪಾತ್ಯಯೇ ॥ ೨೬ ॥

ನಿರೀಕ್ಷ್ಯ ಪೃತನಾಂ ದೇವಃ ಪರೈರಭ್ಯರ್ದಿತಾಂ ರಣೇ ।
ಉದಯಚ್ಛದ್ರಿಪುಂ ಹಂತುಂ ವಜ್ರಂ ವಜ್ರಧರೋ ರುಷಾ ॥ ೨೭ ॥

ಸ ತೇನೈವಾಷ್ಟಧಾರೇಣ ಶಿರಸೀ ಬಲಪಾಕಯೋಃ ।
ಜ್ಞಾತೀನಾಂ ಪಶ್ಯತಾಂ ರಾಜನ್ ಜಹಾರ ಜನಯನ್ಭಯಮ್ ॥ ೨೮ ॥

ನಮುಚಿಸ್ತದ್ವಧಂ ದೃಷ್ಟ್ವಾ ಶೋಕಾಮರ್ಷರುಷಾನ್ವಿತಃ ।
ಜಿಘಾಂಸುರಿಂದ್ರಂ ನೃಪತೇ ಚಕಾರ ಪರಮೋದ್ಯಮಮ್ ॥ ೨೯ ॥

ಅಶ್ಮಸಾರಮಯಂ ಶೂಲಂ ಘಂಟಾವದ್ಧೇಮಭೂಷಣಮ್ ।
ಪ್ರಗೃಹ್ಯಾಭ್ಯದ್ರವತ್ಕ್ರುದ್ಧೋ ಹತೋಽಸೀತಿ ವಿತರ್ಜಯನ್ ।
ಪ್ರಾಹಿಣೋದ್ದೇವರಾಜಾಯ ನಿನದನ್ಮೃಗರಾಡಿವ ॥ ೩೦ ॥

ತದಾಪತದ್ ಗಗನತಲೇ ಮಹಾಜವಂ
ವಿಚಿಚ್ಛಿದೇ ಹರಿರಿಷುಭಿಃ ಸಹಸ್ರಧಾ ।
ತಮಾಹನನ್ನೃಪ ಕುಲಿಶೇನ ಕಂಧರೇ
ರುಷಾನ್ವಿತಸ್ತ್ರಿದಶಪತಿಃ ಶಿರೋ ಹರನ್ ॥ ೩೧ ॥

ಸಿದನು. ಯುದ್ಧಭೂಮಿಯಲ್ಲಿ ಒಂದೇ ಬಾರಿಗೆ ಇಷ್ಟೊಂದು ಬಾಣಗಳನ್ನು ಹೂಡಿ, ಪ್ರಯೋಗಿಸಿದುದು ಪರಮಾದ್ಭುತವಾದ ಘಟನೆಯಾಗಿತ್ತು. ॥ ೨೨ ॥ ನಮೂಚಿಯು ಚಿನ್ನದ ಗರಿಕಟ್ಟಿದ ಭಾರೀ ಹದಿನೈದು ಬಾಣಗಳಿಂದ ಇಂದ್ರನನ್ನು ಪ್ರಹರಿಸಿ-ನೀರುತುಂಬಿದ ಮೇಘಗಳಂತೆ ಯುದ್ಧರಂಗದಲ್ಲಿ ಅವನು ಗರ್ಜಿಸಿದನು. ॥ ೨೩ ॥ ವರ್ಷಾಕಾಲದಲ್ಲಿ ಮೋಡಗಳು ಸೂರ್ಯನನ್ನು ಮುಚ್ಚಿಬಿಡುವಂತೆಯೇ ಅಸುರರು ಬಾಣಗಳ ಮಳೆಯಿಂದ ಇಂದ್ರನನ್ನೂ, ಅವನ ರಥ-ಸಾರಥಿಯನ್ನೂ ಎಲ್ಲೆಡೆಗಳಿಂದ ಮುಚ್ಚಿಬಿಟ್ಟರು. ॥ ೨೪ ॥ ತಮ್ಮ ನಾಯಕನಾದ ಇಂದ್ರನನ್ನು ಕಾಣದೆ ದೇವತೆಗಳೂ, ಅವನ ಅನುಚರರೂ ವಿಹ್ವಲರಾಗಿ ಅಳತೊಡಗಿದರು. ಒಂದು ಶತ್ರುಗಳಿಂದ ಜಯಿಸಲ್ಪಟ್ಟವರಾಗಿದ್ದರು, ಇನ್ನೊಂದು ಅವರಿಗೆ ಯಾರೂ ಸೇನಾಪತಿಯು ಇರಲಿಲ್ಲ. ಆಗ ಸಮುದ್ರಮಧ್ಯದಲ್ಲಿ ಒಡೆದುಹೋದ ನಾವೆಯಲ್ಲಿದ್ದ ವರ್ತಕರಂತೆ ಅವರ ಸ್ಥಿತಿಯಾಗಿತ್ತು. ॥ ೨೫ ॥ ಅಷ್ಟರಲ್ಲೇ ರಥಾಶ್ವ-ಧ್ವಜಗಳಿಂದ ಕೂಡಿದ ಇಂದ್ರನು ಬಾಣಗಳ ಪಂಜರದಿಂದ ಹೊರಬಂದು ಬೆಳಗಾದಕೂಡಲೇ ತನ್ನ ತೇಜಸ್ಸಿನಿಂದ ದಿಕ್ಕುಗಳನ್ನೂ, ಆಕಾಶವನ್ನೂ ಭೂಮಿಯನ್ನೂ ಪ್ರಕಾಶಗೊಳಿಸುವ ಸೂರ್ಯನಂತೆ ಇಂದ್ರನು ಬೆಳಗಿದನು. ॥ ೨೬ ॥ ಯುದ್ಧದಲ್ಲಿ ಶತ್ರುಗಳಿಂದ ಸತತವಾಗಿ ಪೀಡಿಸಲ್ಪಡುತ್ತಿದ್ದ ತನ್ನ ಸೈನ್ಯವನ್ನು ನೋಡಿ ವಜ್ರಧರನಾದ ಇಂದ್ರನು ಪರಮ ಕ್ರುದ್ಧನಾಗಿ ಶತ್ರುಗಳನ್ನು ನಿರ್ಮೂಲನ ಮಾಡುವುದಕ್ಕಾಗಿ ವಜ್ರಾಯುಧದಿಂದ ಆಕ್ರಮಣ ಮಾಡಿದನು. ॥ ೨೭ ॥ ಪರೀಕ್ಷಿತನೇ! ಎಂಟು ಮೂಲೆಗಳುಳ್ಳ ವಜ್ರದಿಂದ ಆ ದೈತ್ಯರ ಬಂಧುಗಳಿಗೆ ಭಯವನ್ನುಂಟುಮಾಡುತ್ತಾ ಇಂದ್ರನು ಬಲ ಮತ್ತು ಪಾಕ ಇವರ ತಲೆಗಳನ್ನು ಹಾರಿಸಿಬಿಟ್ಟನು. ॥ ೨೮ ॥

ಪರೀಕ್ಷಿತನೇ! ಬಲ-ಪಾಕರಿಬ್ಬರೂ ಇಂದ್ರನಿಂದ ಹತರಾದುದನ್ನು ನೋಡಿ ನಮೂಚಿಗೆ ಭಾರೀ ಶೋಕವುಂಟಾಯಿತು. ಅವನು ಅಸಹನೆಯಿಂದಲೂ, ಕೋಪದಿಂದಲೂ ಕೆಂಪೇರಿ ಅಸುರಶತ್ರುವಾದ ಇಂದ್ರನನ್ನು ಸಂಹರಿಸಲು ಬಹಳವಾಗಿ ಪ್ರಯತ್ನಿಸಿದನು. ॥ ೨೯ ॥ ಕಿರುಗಂಟೆಗಳಿಂದ ಝುಣ-ಝುಣಸುತ್ತಾ, ಸುವರ್ಣ ಭೂಷಿತವಾಗಿದ್ದ ಒಂದು ಶೂಲವನ್ನೆತ್ತಿಕೊಂಡು ಅತ್ಯಂತ ಕ್ರುದ್ಧನಾಗಿ – ಇಂದ್ರನೇ! 'ಈಗ ನೀನು ಬದುಕುಳಿಯಲಾರೆ' ಎಂದು ಗರ್ಜಿಸುತ್ತಾ, ಸಿಂಹನಾದವನ್ನು ಮಾಡುತ್ತಾ ದೇವೇಂದ್ರನ ಮೇಲೆ ಆ ನಮೂಚಿಯು ಶೂಲವನ್ನು ರಭಸದಿಂದ ಎಸೆದನು. ॥ ೩೦ ॥ ರಾಜೇಂದ್ರನೇ! ನಮೂಚಿಯಿಂದ ಬಿಡಲ್ಪಟ್ಟ ತ್ರಿಶೂಲವು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿದ ಇಂದ್ರನು ತನ್ನ ನಿಶಿತವಾದ ಬಾಣಗಳಿಂದ ಆಕಾಶದಲ್ಲೇ ಸಾವಿರಾರು ತುಂಡುಗಳಾಗಿ ಕತ್ತರಿಸಿಬಿಟ್ಟನು. ಇದಾದ ಬಳಿಕ ದೇವೇಂದ್ರನು ಅತ್ಯಂತ ಕ್ರುದ್ಧನಾಗಿ ಅವನ ಶಿರವನ್ನು ತುಂಡರಿಸಲಿಕ್ಕಾಗಿ ವಜ್ರಾಯುಧವನ್ನು ರಾಕ್ಷಸನ ಕತ್ತಿನ ಮೇಲೆ ಪ್ರಯೋಗಿಸಿದನು. ॥ ೩೧ ॥ ಇಂದ್ರನು ಭಾರೀ ವೇಗದಿಂದ ಆ ವಜ್ರವನ್ನು ಪ್ರಯೋಗಿಸಿದ್ದರೂ, ಆ ಯಶಸ್ವೀ ವಜ್ರದಿಂದ ಅವನ ಚರ್ಮದ ಮೇಲೆ ಗುರುತುಕೂಡ ಮಾಡದೆ ಹೋಯಿತು. ಯಾವ ವಜ್ರವು ಮಹಾಬಲಶಾಲಿಯಾದ ವೃತ್ರಾಸುರನ ಶರೀರವನ್ನು

ನ ತಸ್ಯ ಹಿ ತ್ವಚಮಪಿ ವಜ್ರ ಊರ್ಜಿತೋ
ಬಿಭೇದ ಯಃ ಸುರಪತಿನೌಜಸೇರಿತಃ ।
ತದದ್ಭುತಂ ಪರಮತಿವೀರ್ಯವೃತ್ರಭಿತ್
ತಿರಸ್ಕೃತೋ ನಮುಚಿಶಿರೋಧರತ್ವಚಾ ॥ ೩೨ ॥

ತಸ್ಮಾದಿಂದ್ರೋಽಬಿಭೇಚ್ಛತ್ರೋರ್ವಜ್ರಃ ಪ್ರತಿಹತೋ ಯತಃ ।
ಕಿಮಿದಂ ದೈವಯೋಗೇನ ಭೂತಂ ಲೋಕವಿಮೋಹನಮ್ ॥ ೩೩ ॥

ಯೇನ ಮೇ ಪೂರ್ವಮದ್ರೀಣಾಂ ಪಕ್ಷಚ್ಛೇದಃ ಪ್ರಜಾತ್ಯಯೇ ।
ಕೃತೋ ನಿವಿಶತಾಂ ಭಾರೈಃ ಪತತ್ತ್ರೈಃ ಪತತಾಂ ಭುವಿ ॥ ೩೪ ॥

ತಪಃಸಾರಮಯಂ ತ್ವಾಷ್ಟ್ರಂ ವೃತ್ರೋ ಯೇನ ವಿಪಾಟಿತಃ ।
ಅನ್ಯೇ ಚಾಪಿ ಬಲೋಪೇತಾಃ ಸರ್ವಾಸ್ತ್ರೈರಕ್ಷತತ್ವಚಃ ॥ ೩೫ ॥

ಸೋಽಯಂ ಪ್ರತಿಹತೋ ವಜ್ರೋ
ಮಯಾ ಮುಕ್ತೋಽಸುರೇಽಲ್ಪಕೇ ।
ನಾಹಂ ತದಾದದೇ ದಂಡಂ
ಬ್ರಹ್ಮತೇಜೋಽಪ್ಯಕಾರಣಮ್ ॥ ೩೬ ॥

ಇತಿ ಶಕ್ರಂ ವಿಷೀದಂತಮಾಹ ವಾಗಶರೀರಿಣೀ ।
ನಾಯಂ ಶುಷ್ಕೈರಥೋ ನಾರ್ದ್ರೈರ್ವಧಮರ್ಹತಿ ದಾನವಃ ॥ ೩೭ ॥

ಮಯಾಸ್ಮೈ ಯದ್ವರೋ ದತ್ತೋ
ಮೃತ್ಯುರ್ನೈವಾರ್ದ್ರಶುಷ್ಕಯೋಃ ।
ಅತೋಽನ್ಯಶ್ಚಿಂತನೀಯಸ್ತೇ
ಉಪಾಯೋ ಮಘವನ್ರಿಪೋಃ ॥ ೩೮ ॥

ತಾಂ ದೈವೀಂ ಗಿರಮಾಕರ್ಣ್ಯ ಮಘವಾನ್ಸುಸಮಾಹಿತಃ ।
ಧ್ಯಾಯನ್ ಫೇನಮಥಾಪಶ್ಯದುಪಾಯಮುಭಯಾತ್ಮಕಮ್ ॥ ೩೯ ॥

ನ ಶುಷ್ಕೇಣ ನ ಚಾರ್ದ್ರೇಣ ಜಹಾರ ನಮುಚೇಃ ಶಿರಃ ।
ತಂ ತುಷ್ಟುವುರ್ಮುನಿಗಣಾ ಮಾಲ್ಯೈಶ್ಚಾವಾಕಿರನ್ವಿಭುಮ್ ॥ ೪೦ ॥

ಗಂಧರ್ವಮುಖ್ಯೌ ಜಗತುರ್ವಿಶ್ವಾವಸುಪರಾವಸೂ ।
ದೇವದುಂದುಭಯೋ ನೇದುರ್ನರ್ತಕ್ಯೋ ನನೃತುರ್ಮುದಾ ॥ ೪೧ ॥

ಅನ್ಯೇಽಪ್ಯೇವಂ ಪ್ರತಿದ್ವಂದ್ವಾನ್ವಾಯ್ವಗ್ನಿವರುಣಾದಯಃ ।
ಸೂದಯಾಮಾಸುರಸ್ತ್ರೌಘೈರ್ಮೃಗಾನ್ಕೇಸರಿಣೋ ಯಥಾ ॥ ೪೨ ॥

ತುಂಡು-ತುಂಡುಮಾಡಿತ್ತೋ ಅದನ್ನು ನಮೂಚಿಯ ಕತ್ತಿನ ತ್ವಚೆಯು ತಿರಸ್ಕರಿಸಿತ್ತು. ಇದೊಂದು ಪರಮಾಶ್ಚರ್ಯಕರ ಘಟನೆ ನಡೆಯಿತು. ॥ ೩೨ ॥ ವಜ್ರಾಯುಧವು ನಮೂಚಿಯ ವಿಷಯದಲ್ಲಿ ಬಲಹೀನವಾಗಿರುವುದನ್ನು ಕಂಡು ಇಂದ್ರನು ಭಯಗೊಂಡನು. 'ಲೋಕಗಳನ್ನು ನಿರ್ಮೋಹಗೊಳಿಸುವ ರಾಕ್ಷಸ ರೂಪದ ಈ ಪ್ರಾಣಿಯು ದೈವಯೋಗದಿಂದಲೇ ಹುಟ್ಟಿರಬಹುದೇ ?' ಎಂದು ಇಂದ್ರನು ಯೋಚಿಸತೊಡಗಿದನು. ॥ ೩೩ ॥ ಹಿಂದಿನ ಯುಗದಲ್ಲಿ ಈ ಪರ್ವತಗಳು ರೆಕ್ಕೆಗಳಿಂದ ಹಾರಾಡುತ್ತಾ, ತಿರುಗುತ್ತಿರುವಾಗ ಭೂಮಿಯಲ್ಲಿ ಬಿದ್ದು ಪ್ರಜೆಗಳನ್ನು ನಾಶಮಾಡುತ್ತಿದ್ದವು. ಇದನ್ನು ಕಂಡ ನಾನು ನನ್ನ ಈ ವಜ್ರಾಯುಧದಿಂದಲೇ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿಹಾಕಿದ್ದೆ. ಈಗ ವಜ್ರಾಯುಧವು ನಮೂಚಿಯ ವಿಷಯದಲ್ಲಿ ವ್ಯರ್ಥವಾಗಿ ಬಿಟ್ಟಿದೆಯಲ್ಲ! ॥ ೩೪ ॥ ತ್ವಷ್ಟ್ರ ಪ್ರಜಾಪತಿಯ ತಪಸ್ಸಿನ ಸಾರವೇ ವೃತ್ರಾಸುರನ ರೂಪದಲ್ಲಿ ಪ್ರಕಟವಾಗಿತ್ತು. ಅಂತಹವನನ್ನೇ ನಾನು ಈ ವಜ್ರದಿಂದ ಸಂಹರಿಸಿಬಿಟ್ಟಿದ್ದೆ ಇನ್ನೂ ಅನೇಕ ಬಲಿಷ್ಠರಾಗಿದ್ದ ಮತ್ತು ಯಾವುದೇ ಶಸ್ತ್ರಗಳಿಂದ ಕಿಂಚಿತ್ತಾದರೂ ಗಾಯಗೊಳ್ಳದಿದ್ದ ಮಹಾಸುರರನ್ನು ಈ ವಜ್ರಾಯುಧದಿಂದಲೇ ನಾನು ಸಂಹರಿಸಿದ್ದೆ. ॥ ೩೫ ॥ ಅಂತಹ ಶ್ರೇಷ್ಠವಾದ ನನ್ನ ವಜ್ರಾಯುಧವು ಅತ್ಯಲ್ಪನಾದ ಈ ನಮೂಚಿರಾಕ್ಷಸನ ವಿಷಯದಲ್ಲಿ ಪರಾಭವವನ್ನು ಹೊಂದಿತು. ಈ ವಜ್ರಾಯುಧವು ಮಹಾಮಹಿಮನಾದ ದಧೀಚಿ ಮಹರ್ಷಿಯ ಬ್ರಹ್ಮತೇಜದಿಂದ ರೂಪಿತವಾಗಿದ್ದರೂ ನಿಷ್ಕಾರಣವಾಗಿ ಬಲಗುಂದಿದ ಇದನ್ನು ನಾನು ಇನ್ನು ಮುಂದೆ ಹಿಡಿಯುವುದಿಲ್ಲ. ॥ ೩೬ ॥ ಹೀಗೆ ಇಂದ್ರನು ವಿಷಾದಿಸುತ್ತಿರುವಾಗ ಆಕಾಶವಾಣಿಯು ಹೀಗೆಂದು ನುಡಿಯಿತು – 'ವಾಸವನೇ ! ಈ ರಾಕ್ಷಸನನ್ನು ಒಣಗಿರುವ ವಸ್ತುವಿನಿಂದಾಗಲೀ, ಹಸಿಯಾಗಿರುವ ವಸ್ತುವಿನಿಂದಾಗಲೀ ವಧಿಸಲು ಸಾಧ್ಯವಿಲ್ಲ. ಅವನಿಗೆ ಇಂತಹ ವರಬಲವಿದೆ. ಈಗ ನೀನು ಇವನನ್ನು ಕೊಲ್ಲುವ ಬೇರೆ ಉಪಾಯವನ್ನು ಯೋಚಿಸು'. ॥ ೩೭-೩೮ ॥ ಮಹೇಂದ್ರನು ಆ ದೇವವಾಣಿಯನ್ನು ಕೇಳಿ ಏಕಾಗ್ರಚಿತ್ತನಾಗಿ ಯೋಚಿಸುತ್ತಾ- ಯೋಚಿಸುತ್ತಾ ಕೊನೆಗೆ ಅವನಿಗೆ ಹೊಳೆಯಿತು – ಸಮುದ್ರದ ನೊರೆಯು ಒಣಗಿದ್ದೂ ಅಲ್ಲ, ಹಸಿಯೂ ಅಲ್ಲ. ॥ ೩೯ ॥ ಆದ್ದರಿಂದ ಅದನ್ನು ಹಸಿ ಎಂದೂ ಹೇಳುವ ಆಗಿಲ್ಲ, ಒಣಗಿದ್ದು ಎಂದೂ ಹೇಳುವ ಹಾಗಿಲ್ಲ. ಆದ್ದರಿಂದ ಇಂದ್ರನು ಆ ನೊರೆಯಿಂದಲೇ ನಮೂಚಿಯ ಶಿರವನ್ನು ತುಂಡರಿಸಿದನು. ಆಗ ಋಷಿ-ಮುನಿಗಳು ಒಡೆಯನಾದ ಇಂದ್ರನನ್ನು ಸ್ತುತಿಸಿ ಅವನ ಮೇಲೆ ಹೂಮಾಲೆಗಳನ್ನು ಮಳೆಗರೆದರು. ॥ ೪೦ ॥ ಗಂಧರ್ವ ಶಿರೋಮಣಿ ವಿಶ್ವಾವಸು ಹಾಗೂ ಪರಾವಸುಗಳು ಹಾಡತೊಡಗಿದರು. ದೇವತೆಗಳು ದುಂದುಭಿಗಳನ್ನು ನುಡಿಸತೊಡಗಿದರು. ನರ್ತಕಿಯರು ಕುಣಿಯತೊಡಗಿದರು. ॥ ೪೧ ॥ ಹೀಗೆಯೇ ವಾಯು, ಅಗ್ನಿ, ವರುಣ ಮುಂತಾದ ಇತರ ದೇವತೆಗಳೂ ಕೂಡ ತಮ್ಮ ಅಸ್ತ್ರ-ಶಸ್ತ್ರಗಳಿಂದ ಸಿಂಹವು ಜಿಂಕೆಗಳನ್ನು ಕೊಂದುಹಾಕುವಂತೆ ಎದುರಾಳಿ ರಾಕ್ಷಸರನ್ನು ಧ್ವಂಸಮಾಡಿದರು. ॥ ೪೨ ॥ ಪರೀಕ್ಷಿತನೇ ! ದಾನವರದ್ದಾದರೋ ಪೂರ್ಣನಾಶವಾಗಿದೆ ಎಂದು ನೋಡಿದ ಬ್ರಹ್ಮದೇವರು ದೇವರ್ಷಿಗಳಾದ

ಬ್ರಹ್ಮಣಾ ಪ್ರೇಷಿತೋ ದೇವಾನ್‌ದೇವರ್ಷಿರ್ನಾರದೋ ನೃಪ ।
ವಾರಯಾಮಾಸ ವಿಬುಧಾನ್ದೃಷ್ಟ್ವಾ ದಾನವಸಂಕ್ಷಯಮ್ ॥ ೪೩ ॥

ನಾರದರನ್ನು ದೇವತೆಗಳ ಬಳಿಗೆ ಕಳಿಸಿದರು. ನಾರದರು ಅಲ್ಲಿಗೆ ಹೋಗಿ ಮುಂದೆ ಯುದ್ಧ ಮಾಡದಂತೆ ದೇವತೆಗಳನ್ನು ತಡೆದರು. ॥ ೪೩ ॥

*ನಾರದ ಉವಾಚ*

ಭವದ್ಭಿರಮೃತಂ ಪ್ರಾಪ್ತಂ ನಾರಾಯಣಭುಜಾಶ್ರಯೈಃ ।
ಶ್ರಿಯಾ ಸಮೇಧಿತಾಃ ಸರ್ವ ಉಪಾರಮತ ವಿಗ್ರಹಾತ್ ॥ ೪೪ ॥

**ನಾರದರು ಹೇಳಿದರು** – ದೇವತೆಗಳಿರಾ ! ಶ್ರೀನಾರಾಯಣನ ಭುಜಬಲವನ್ನು ಆಶ್ರಯಿಸಿ ನೀವು ಅಮೃತವನ್ನು ಪಡೆದಿರಿ. ಶ್ರೀಲಕ್ಷ್ಮೀದೇವಿಯ ಕೃಪಾಕಟಾಕ್ಷದಿಂದ ಅಭಿವೃದ್ಧಿಯನ್ನು ಹೊಂದಿರುವಿರಿ. ನೀವು ಯುದ್ಧವನ್ನು ನಿಲ್ಲಿಸಿಬಿಡಿರಿ. ॥ ೪೪ ॥

*ಶ್ರೀಶುಕ ಉವಾಚ*

ಸಂಯಮ್ಯ ಮನ್ಯುಸಂರಂಭಂ ಮಾನಯಂತೋ ಮುನೇರ್ವಚಃ ।
ಉಪಗೀಯಮಾನಾನುಚರೈರ್ಯಯುಃ ಸರ್ವೇ ತ್ರಿವಿಷ್ಟಪಮ್ ॥ ೪೫ ॥

ಯೇಽವಶಿಷ್ಟಾ ರಣೇ ತಸ್ಮಿನ್ನಾರದಾನುಮತೇನ ತೇ ।
ಬಲಿಂ ವಿಪನ್ನಮಾದಾಯ ಅಸ್ತಂ ಗಿರಿಮುಪಾಗಮನ್ ॥ ೪೬ ॥

ತತ್ರಾವಿನಷ್ಟಾವಯವಾನ್ವಿದ್ಯಮಾನಶಿರೋಧರಾನ್ ।
ಉಶನಾ ಜೀವಯಾಮಾಸ ಸಂಜೀವಿನ್ಯಾ ಸ್ವವಿದ್ಯಯಾ ॥ ೪೭ ॥

ಬಲಿಶ್ಚೋಶನಸಾ ಸ್ಪೃಷ್ಟಃ ಪ್ರತ್ಯಾಪನ್ನೇಂದ್ರಿಯಸ್ಮೃತಿಃ ।
ಪರಾಜಿತೋಽಪಿ ನಾಖಿದ್ಯಲ್ಲೋಕತತ್ತ್ವವಿಚಕ್ಷಣಃ ॥ ೪೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜೇಂದ್ರ! ದೇವರ್ಷಿ ನಾರದರ ಮಾತನ್ನು ಅನುಮೋದಿಸಿ ದೇವತೆಗಳು ಕೋಪವನ್ನು ತೊರೆದು ಶಾಂತರಾದರು. ಮತ್ತೆ ಗಂಧರ್ವಾಪ್ಸರೆಯರು ಸ್ತುತಿಸುತ್ತಾ ಇರುವಾಗ ಅವರು ತಮ್ಮ ಸ್ವರ್ಗಲೋಕಕ್ಕೆ ಬಿಜಯಂಗೈದರು. ॥ ೪೫ ॥ ಯುದ್ಧದಲ್ಲಿ ಅಳಿದುಳಿದಿದ್ದ ದೈತ್ಯರು ನಾರದ ಮಹರ್ಷಿಗಳ ಸಮ್ಮತಿಯಿಂದ ವಜ್ರಾಯುಧದಿಂದ ಸತ್ತುಬಿದ್ದಿದ್ದ ಬಲಿಯನ್ನು ಎತ್ತಿಕೊಂಡು ಅಸ್ತಾಚಲಕ್ಕೆ ತೆರಳಿದರು. ॥ ೪೬ ॥ ಅಲ್ಲಿ ಶುಕ್ರಾಚಾರ್ಯರು ತಮ್ಮ ಸಂಜೀವನೀ ವಿದ್ಯೆಯಿಂದ ಅಂಗಾಂಗಗಳು ಪೂರ್ಣವಾಗಿ ತುಂಡಾಗದಿದ್ದವರನ್ನು, ಗಾಯಗೊಂಡವರನ್ನು ಬದುಕಿಸಿದರು. ॥ ೪೭ ॥ ಶುಕ್ರಾಚಾರ್ಯರು ಸ್ಪರ್ಶಿಸಿದೊಡನೆ ಬಲಿಯ ಇಂದ್ರಿಯಗಳಲ್ಲಿ ಚೈತನ್ಯವೂ, ಮನಸ್ಸಿನಲ್ಲಿ ಸ್ಮೃತಿಯೂ ಮರುಕಳಿಸಿ ಜೀವಂತನಾದನು. ಪ್ರಪಂಚದಲ್ಲಿ ಜಯಾಪಜಯಗಳು, ಜೀವನ-ಮೃತ್ಯುಗಳು ಕಾಲನ ಪ್ರೇರಣೆಯಿಂದ ನಡೆಯುತ್ತಿವೆ ಎಂದು ತಿಳಿದಿದ್ದ ಬಲಿಯು ತಾನು ಪರಾಜಿತನಾದುದಕ್ಕೆ ಸ್ವಲ್ಪವಾದರೂ ದುಃಖಿಸಲಿಲ್ಲ. ॥ ೪೮ ॥

*ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ದೇವಾಸುರಸಂಗ್ರಾಮೇ ಏಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ಮೋಹಿನೀರೂಪವನ್ನು ನೋಡಿ ಮಹಾದೇವನು ಮೋಹಿತನಾದುದು

*ಶ್ರೀಬಾದರಾಯಣಿರುವಾಚ*

ವೃಷಧ್ವಜೋ ನಿಶಮ್ಯೇದಂ ಯೋಷಿದ್ರೂಪೇಣ ದಾನವಾನ್ ।
ಮೋಹಯಿತ್ವಾ ಸುರಗಣಾನ್ಹರಿಃ ಸೋಮಮಪಾಯಯತ್ ॥ ೧ ॥

ವೃಷಮಾರುಹ್ಯ ಗಿರಿಶಃ ಸರ್ವಭೂತಗಣೈರ್ವೃತಃ ।
ಸಹ ದೇವ್ಯಾ ಯಯೌ ದ್ರಷ್ಟುಂ ಯತ್ರಾಸ್ತೇ ಮಧುಸೂದನಃ ॥ ೨ ॥

ಸಭಾಜಿತೋ ಭಗವತಾ ಸಾದರಂ ಸೋಮಯಾ ಭವಃ ।
ಸೂಪವಿಷ್ಟ ಉವಾಚೇದಂ ಪ್ರತಿಪೂಜ್ಯ ಸ್ಮಯನ್ಹರಿಮ್ ॥ ೩ ॥

**ಶ್ರೀಶುಕಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಶ್ರೀಹರಿಯು ಸ್ತ್ರೀರೂಪವನ್ನು ಧರಿಸಿ ಅಸುರರಿಗೆ ಮೋಹವನ್ನುಂಟುಮಾಡಿ, ದೇವತೆಗಳಿಗೆ ಅಮೃತವನ್ನು ಕುಡಿಸಿದನು ಎಂದು ಕೇಳಿ ವೃಷಭಧ್ವಜನಾದ ಪರಮೇಶ್ವರನು ಪಾರ್ವತಿಯೊಡನೆ ವೃಷಭವನ್ನೇರಿ ಸಮಸ್ತ ಭೂತಗಣಗಳನ್ನು ವೆರೆಸಿಕೊಂಡು ಭಗವಾನ್ ಮಧುಸೂದನನು ಇದ್ದಲ್ಲಿಗೆ ಆಗಮಿಸಿದನು. ॥ ೧-೨ ॥ ಭಗವಾನ್ ಶ್ರೀಹರಿಯು ಪ್ರೇಮದಿಂದ ಭಗವಂತನಾದ ಪಾರ್ವತೀ ಪರಮೇಶ್ವರರನ್ನು ಸ್ವಾಗತಿಸಿ ಸತ್ಕಾರಮಾಡಿದನು. ಶಿವನು ಸುಖಾಸೀನನಾಗಿ ಭಗವಂತನನ್ನು ಸಮ್ಮಾನಿಸುತ್ತಾ ನಸುನಗುತ್ತಾ ಇಂತೆಂದನು. ॥ ೩ ॥

ಶ್ರೀಮಹಾದೇವ ಉವಾಚ

ದೇವದೇವ ಜಗದ್ವ್ಯಾಪಿನ್ ಜಗದೀಶ ಜಗನ್ಮಯ ।
ಸರ್ವೇಷಾಮಪಿ ಭಾವಾನಾಂ ತ್ವಮಾತ್ಮಾ ಹೇತುರೀಶ್ವರಃ ॥ ೪ ॥

ಆದ್ಯಂತಾವಸ್ಯ ಯನ್ಮಧ್ಯಮಿದಮನ್ಯದಹಂ ಬಹಿಃ ।
ಯತೋಽವ್ಯಯಸ್ಯ ನೈತಾನಿ ತತ್ಸತ್ಯಂ ಬ್ರಹ್ಮ ಚಿದ್ಭವಾನ್ ॥ ೫ ॥

ತವೈವ ಚರಣಾಂಭೋಜಂ ಶ್ರೇಯಸ್ಕಾಮಾ ನಿರಾಶಿಷಃ ।
ವಿಸೃಜ್ಯೋಭಯತಃ ಸಂಗಂ ಮುನಯಃ ಸಮುಪಾಸತೇ ॥ ೬ ॥

ತ್ವಂ ಬ್ರಹ್ಮ ಪೂರ್ಣಮಮೃತಂ ವಿಗುಣಂ ವಿಶೋಕ-
ಮಾನಂದಮಾತ್ರಮವಿಕಾರಮನನ್ಯದನ್ಯತ್ ।
ವಿಶ್ವಸ್ಯ ಹೇತುರುದಯಸ್ಥಿತಿಸಂಯಮಾನಾ-
ಮಾತ್ಮೇಶ್ವರಶ್ಚ ತದಪೇಕ್ಷತಯಾನಪೇಕ್ಷಃ ॥ ೭ ॥

ಏಕಸ್ತ್ವಮೇವ ಸದಸದ್ದ್ವಯಮದ್ವಯಂ ಚ
ಸ್ವರ್ಣಂ ಕೃತಾಕೃತಮಿವೇಹ ನ ವಸ್ತುಭೇದಃ ।
ಅಜ್ಞಾನತಸ್ತ್ವಯಿ ಜನೈರ್ವಿಹಿತೋ ವಿಕಲ್ಪೋ
ಯಸ್ಮಾದ್ಗುಣೈರ್ವ್ಯತಿಕರೋ ನಿರುಪಾಧಿಕಸ್ಯ ॥ ೮ ॥

ತ್ವಾಂ ಬ್ರಹ್ಮ ಕೇಚಿದವಯಂತ್ಯುತ ಧರ್ಮಮೇಕೇ
ಏಕೇ ಪರಂ ಸದಸತೋಃ ಪುರುಷಂ ಪರೇಶಮ್ ।
ಅನ್ಯೇಽವಯಂತಿ ನವಶಕ್ತಿಯುತಂ ಪರಂ ತ್ವಾಂ
ಕೇಚಿನ್ಮಹಾಪುರುಷಮವ್ಯಯಮಾತ್ಮತಂತ್ರಮ್ ॥ ೯ ॥

ನಾಹಂ ಪರಾಯುರ್ಋಷಯೋ ನ ಮರೀಚಿಮುಖ್ಯಾ
ಜಾನಂತಿ ಯದ್ವಿರಚಿತಂ ಖಲು ಸತ್ತ್ವಸರ್ಗಾಃ ।
ಯನ್ಮಾಯಯಾ ಮುಷಿತಚೇತಸ ಈಶ ದೈತ್ಯ-
ಮರ್ತ್ಯಾದಯಃ ಕಿಮುತ ಶಶ್ವದಭದ್ರವೃತ್ತಾಃ ॥ ೧೦ ॥

**ಶ್ರೀಮಹಾದೇವನು ಹೇಳಿದನು** – ದೇವದೇವನೇ ! ಪ್ರಪಂಚವೆಲ್ಲವನ್ನು ವ್ಯಾಪಿಸಿಕೊಂಡಿರುವವನೇ ! ಮೂಜಗದೊಡೆಯನೇ ! ಜಗತ್ಸ್ವರೂಪನೇ ! ಸಮಸ್ತ ಚರಾಚರ ಪದಾರ್ಥಗಳ ಮೂಲ ಕಾರಣನೂ, ಈಶ್ವರನೂ, ಆತ್ಮನೂ ನೀನೇ ಆಗಿರುವೆ. ॥ ೪ ॥ ಈ ಜಗತ್ತಿಗೆ ಆದಿ-ಮಧ್ಯ-ಅಂತ್ಯವೂ ನೀನೇ ಆಗಿರುವೆ. ಆದರೆ ನಿನಗೆ ಆದಿ-ಮಧ್ಯಾಂತಗಳಾವುವೂ ಇಲ್ಲ. ನಿನ್ನ ಅವಿನಾಶೀ ಸ್ವರೂಪದಲ್ಲಿ ದ್ರಷ್ಟಾ ದೃಶ್ಯ, ಭೋಕ್ತಾ, ಭೋಗ್ಯ ಮುಂತಾದ ಭೇದಗಳಾವುವೂ ಇಲ್ಲ. ವಾಸ್ತವವಾಗಿ ನೀನು ಸತ್ಯ, ಚಿನ್ಮಾತ್ರ ಬ್ರಹ್ಮನೇ ಆಗಿರುವೆ. ॥ ೫ ॥ ಶ್ರೇಯಸ್ಕಾಮರಾದ ಮಹಾತ್ಮರು ಇಹ-ಪರಲೋಕಗಳ ಆಸಕ್ತಿಯನ್ನು ತೊರೆದು, ಸಮಸ್ತ ಕಾಮನೆಗಳನ್ನು ಪರಿತ್ಯಾಗಮಾಡಿ ನಿನ್ನ ಚರಣಕಮಲಗಳ ಆರಾಧನೆಯಲ್ಲೇ ಸದಾಕಾಲ ಆಸಕ್ತರಾಗಿರುತ್ತಾರೆ. ॥ ೬ ॥ ಪರಂಜ್ಯೋತಿಯೇ ! ಪರಮಾತ್ಮನೇ ! ನೀನು ಅಮೃತ ಸ್ವರೂಪನು. ಸಮಸ್ತ ಪ್ರಾಕೃತಗುಣಗಳಿಂದ ರಹಿತನಾದವನು. ಶೋಕದ ನೆರಳೂ ಕೂಡ ಇಲ್ಲದವನು. ನೀನು ಪರಿಪೂರ್ಣ ಬ್ರಹ್ಮ ಸ್ವರೂಪನಾಗಿರುವೆ. ಕೇವಲ ಆನಂದಸ್ವರೂಪನಾಗಿದ್ದು ನಿರ್ವಿಕಾರನಾಗಿರುವೆ. ನಿನ್ನಿಂದ ಭಿನ್ನವಾದುದು ಏನೂ ಇಲ್ಲ, ಆದರೆ ನೀನು ಎಲ್ಲಕ್ಕಿಂತ ಭಿನ್ನನಾಗಿರುವೆ. ನೀನು ವಿಶ್ವದ ಉತ್ಪತ್ತಿ-ಸ್ಥಿತಿ-ಪ್ರಳಯಗಳಿಗೆ ಪರಮ ಕಾರಣನಾಗಿರುವೆ. ಸಮಸ್ತ ಜೀವರಿಗೆ ಶುಭಾಶುಭ ಕರ್ಮಫಲಗಳನ್ನು ಕೊಡುವ ಸ್ವಾಮಿಯೂ ನೀನೇ ಆಗಿರುವೆ. ಆದರೆ ಇವೆಲ್ಲ ಮಾತುಗಳು ಜೀವಿಗಳ ಅಪೇಕ್ಷೆಯಿಂದಲೇ ಹೇಳಲಾಗುತ್ತವೆ. ವಾಸ್ತವವಾಗಿ ನೀನು ಎಲ್ಲರ ಅಪೇಕ್ಷೆಯಿಂದ ರಹಿತ – ಅನಪೇಕ್ಷನಾಗಿರುವೆ. ॥ ೭ ॥ ಸ್ವಾಮಿಯೇ ! ಆಭರಣದ ರೂಪದಲ್ಲಿರುವ ಚಿನ್ನಕ್ಕೂ, ಮೂಲರೂಪದಲ್ಲಿರುವ ಚಿನ್ನಕ್ಕೂ ಯಾವ ವ್ಯತ್ಯಾಸವೂ ಇರದೆ ಎರಡೂ ಒಂದೇ ವಸ್ತುವಾಗಿದೆ. ಹಾಗೆಯೇ ಇಲ್ಲಿ ಇರುವ ಕಾರ್ಯ-ಕಾರಣ, ದ್ವೈತ-ಅದ್ವೈತ ಇವೆಲ್ಲವೂ ಏಕಮಾತ್ರ ನೀನೇ ಆಗಿರುವೆ. ನಿನ್ನ ವಾಸ್ತವಿಕ ಸ್ವರೂಪವನ್ನು ತಿಳಿಯದ ಕಾರಣ ಜನರು ನಿನ್ನಲ್ಲಿ ನಾನಾರೀತಿಯ ಭೇದಭಾವಗಳನ್ನು ಮತ್ತು ವಿಕಲ್ಪಗಳನ್ನು ಮಾಡುತ್ತಾರೆ. ನಿನ್ನಲ್ಲಿ ಯಾವುದೇ ಪ್ರಕಾರದ ಉಪಾಧಿಯೂ ಇಲ್ಲದಿದ್ದರೂ ಗುಣಗಳಿಂದಾಗಿ ಭೇದದ ಪ್ರತೀತಿಯಾಗುವುದೇ ಇದಕ್ಕೆ ಕಾರಣವಾಗಿದೆ. ॥ ೮ ॥ ಪ್ರಭುವೇ ! ನಿನ್ನನ್ನು ಕೆಲವರು ಬ್ರಹ್ಮನೆಂದು ತಿಳಿಯುತ್ತಾರೆ. ಬೇರೆ ಕೆಲವರು ನಿನ್ನನ್ನು ಧರ್ಮನೆಂದು ತಿಳಿದು ವರ್ಣಿಸುತ್ತಾರೆ. ಹೀಗೆಯೇ ಇನ್ನೂ ಕೆಲವರು ನಿನ್ನನ್ನು ಪ್ರಕೃತಿ ಮತ್ತು ಪುರುಷರಿಗಿಂತಲೂ ಅತೀತನಾದ ಪರಮೇಶ್ವರನೆಂದು ಅರಿಯುತ್ತಾರೆ. ಕೆಲವರು ನಿನ್ನನ್ನು ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ , ಈಶಾನಾ ಮತ್ತು ಅನುಗ್ರಹಾ ಎಂಬ ಒಂಭತ್ತು ಶಕ್ತಿಗಳಿಂದ ಯುಕ್ತನಾದ ಮಹಾಪುರುಷನೆಂದು ಹೇಳುತ್ತಾರೆ. ಕೆಲವರು ಕ್ಲೇಶ-ಕರ್ಮ ಮುಂತಾದ ಬಂಧನಗಳಿಂದ ರಹಿತನಾದವನೆಂದೂ, ಪೂರ್ವಜರಿಗೂ ಪೂರ್ವಜನೆಂದೂ, ಅವಿನಾಶಿಯೆಂದೂ, ಸರ್ವತಂತ್ರಸ್ವತಂತ್ರನಾದ ಮಹಾಪುರುಷನೆಂದೂ ತಿಳಿಯುತ್ತಾರೆ. ॥ ೯ ॥ ಪ್ರಭೋ ! ಸತ್ತ್ವಗುಣದ ಸೃಷ್ಟಿಯ ಅಂತರ್ಗತರಾಗಿರುವ ನಾನು ಬ್ರಹ್ಮಾ, ಮರೀಚಿಯೇ ಮೊದಲಾದ ಮಹರ್ಷಿಗಳೂ ಕೂಡ ನಿನ್ನ ಸೃಷ್ಟಿಯ ರಹಸ್ಯವನ್ನು ಅರಿಯೆವು.

ಸ ತ್ವಂ ಸಮೀಹಿತಮದಃ ಸ್ಥಿತಿಜನ್ಮನಾಶಂ
ಭೂತೇಹಿತಂ ಚ ಜಗತೋ ಭವಬಂಧಮೋಕ್ಷೌ ।
ವಾಯುರ್ಯಥಾ ವಿಶತಿ ಖಂ ಚ ಚರಾಚರಾಖ್ಯಂ
ಸರ್ವಂ ತದಾತ್ಮಕತಯಾವಗಮೋಽವರುಂತ್ಸೇ ॥ ೧೧ ॥

ಅವತಾರಾ ಮಯಾ ದೃಷ್ಟಾ
ರಮಮಾಣಸ್ಯ ತೇ ಗುಣೈಃ ।
ಸೋಽಹಂ ತದ್ದ್ರಷ್ಟುಮಿಚ್ಛಾಮಿ
ಯತ್ತೇ ಯೋಷಿದ್ವಪುರ್ಧೃತಮ್ ॥ ೧೨ ॥

ಯೇನ ಸಮ್ಮೋಹಿತಾ ದೈತ್ಯಾಃ ಪಾಯಿತಾಶ್ಚಾಮೃತಂ ಸುರಾಃ ।
ತದ್ದಿದೃಕ್ಷವ ಆಯಾತಾಃ ಪರಂ ಕೌತೂಹಲಂ ಹಿ ನಃ ॥ ೧೩ ॥

*ಶ್ರೀಶುಕ ಉವಾಚ*

ಏವಮಭ್ಯರ್ಥಿತೋ ವಿಷ್ಣುರ್ಭಗವಾನ್ ಶೂಲಪಾಣಿನಾ ।
ಪ್ರಹಸ್ಯ ಭಾವಗಂಭೀರಂ ಗಿರಿಶಂ ಪ್ರತ್ಯಭಾಷತ ॥ ೧೪ ॥

*ಶ್ರೀಭಗವಾನುವಾಚ*

ಕೌತೂಹಲಾಯ ದೈತ್ಯಾನಾಂ ಯೋಷಿದ್ವೇಷೋ ಮಯಾ ಕೃತಃ ।
ಪಶ್ಯತಾ ಸುರಕಾರ್ಯಾಣಿ ಗತೇ ಪೀಯೂಷಭಾಜನೇ ॥ ೧೫ ॥

ತತ್ತೇಽಹಂ ದರ್ಶಯಿಷ್ಯಾಮಿ ದಿದೃಕ್ಷೋಃ ಸುರಸತ್ತಮ ।
ಕಾಮಿನಾಂ ಬಹು ಮಂತವ್ಯಂ ಸಂಕಲ್ಪಪ್ರಭವೋದಯಮ್ ॥ ೧೬ ॥

*ಶ್ರೀಶುಕ ಉವಾಚ*

ಇತಿ ಬ್ರುವಾಣೋ ಭಗವಾಂಸ್ತತ್ರೈವಾಂತರಧೀಯತ ।
ಸರ್ವತಶ್ಚಾರಯಂಶ್ಚಕ್ಷುರ್ಭವ ಆಸ್ತೇ ಸಹೋಮಯಾ ॥ ೧೭ ॥

ತತೋ ದದರ್ಶೋಪವನೇ ವರಸ್ತ್ರಿಯಂ
ವಿಚಿತ್ರಪುಷ್ಪಾರುಣಪಲ್ಲವದ್ರುಮೇ ।
ವಿಕ್ರೀಡತೀಂ ಕಂದುಕಲೀಲಯಾ ಲಸದ್
ದುಕೂಲಪರ್ಯಸ್ತನಿತಂಬ ಮೇಖಲಾಮ್ ॥ ೧೮ ॥

ಹಾಗಿರುವಾಗ ನಿನ್ನನ್ನು ತಿಳಿಯುವುದಾದರೂ ಹೇಗೆ? ಮತ್ತೆ ಮಾಯೆಯಿಂದ ಅಪಹೃತವಾದ ಚಿತ್ತವುಳ್ಳ ರಜಸ್ತಮೋಗುಣ ಪ್ರಧಾನವಾದ ಕರ್ಮಗಳಲ್ಲೇ ಆಸಕ್ತರಾದ ಅಸುರರು, ಮನುಷ್ಯರು ನಿನ್ನ ಸೃಷ್ಟಿಯ ರಹಸ್ಯವನ್ನು ಹೇಗೆ ತಾನೇ ತಿಳಿದಾರು? ॥ ೧೦ ॥ ಸ್ವಾಮಿಯೇ! ನೀನು ಸರ್ವಾತ್ಮನೂ, ಜ್ಞಾನಸ್ವರೂಪನೂ ಆಗಿರುವೆ. ಆದರಿಂದ ವಾಯುವಿನಂತೆ ಆಕಾಶದಲ್ಲಿ ಅದೃಶ್ಯನಾಗಿ ದ್ದರೂ ಸಂಪೂರ್ಣ ಚರಾಚರ ಜಗತ್ತಿನಲ್ಲಿಯೂ ನೀನು ಸದಾ-ಸರ್ವದಾ ಉಪಸ್ಥಿತನಾಗಿರುವೆ. ಈ ಜಗತ್ತಿನ ಸ್ಥಿತಿ, ಉತ್ಪತ್ತಿ, ನಾಶ, ಪ್ರಾಣಿಗಳ ಕರ್ಮಗಳು, ಸಂಸಾರದ ಬಂಧನ-ಮೋಕ್ಷ ಇವೆಲ್ಲ ವನ್ನೂ ನೀನು ತಿಳಿದವನಾಗಿರುವೆ. ॥ ೧೧ ॥ ಪ್ರಭುವೇ! ನೀನು ಗುಣಗಳನ್ನು ಸ್ವೀಕರಿಸಿ ಲೀಲೆಮಾಡಲೋಸುಗ ಅನೇಕ ಅವತಾರ ಗಳನ್ನು ಮಾಡಿದಾಗ ನಾನು ಅವುಗಳ ದರ್ಶನವನ್ನು ಮಾಡಿಯೇ ಮಾಡುತ್ತೇನೆ. ಈಗ ನೀನು ಸ್ತ್ರೀರೂಪವನ್ನು ಧರಿಸಿ ಮೋಹಿನಿಯ ಅವತಾರವನ್ನು ಮಾಡಿರುವೆಯೋ ಆ ಅವತಾರವನ್ನೂ ದರ್ಶಿಸಲು ನಾನು ಬಯಸುತ್ತೇನೆ. ॥ ೧೨ ॥ ಆದರಿಂದ ದೈತ್ಯರನ್ನು ಮೋಹ ಗೊಳಿಸಿ ನೀನು ದೇವತೆಗಳಿಗೆ ಅಮೃತವನ್ನು ಕುಡಿಸಿದ್ದೆ, ಸ್ವಾಮಿ! ಅದನ್ನು ನೋಡಲೆಂದೇ ನಾವೆಲ್ಲರೂ ಬಂದಿರುವೆವು. ನಮ್ಮ ಮನಸ್ಸಿ ನಲ್ಲಿ ಅದನ್ನು ನೋಡಲು ಬಹಳ ಕುತೂಹಲವಿದೆ. ॥ ೧೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಭಗವಾನ್ ಶಂಕ ರನು ಮಹಾವಿಷ್ಣುವಿನಲ್ಲಿ ಹೀಗೆ ಪ್ರಾರ್ಥಿಸಿದಾಗ ಗಂಭೀರಭಾವ ದಿಂದ ನಗುತ್ತಾ ಶಿವನಲ್ಲಿ ಇಂತೆಂದನು - ॥ ೧೪ ॥

**ಶ್ರೀಭಗವಾನ್ ವಿಷ್ಣುವು ಹೇಳಿದನು** - ಶಂಕರನೇ! ಆ ಸಮಯದಲ್ಲಿ ಅಮೃತಕಲಶವು ದೈತ್ಯರ ಕೈಸೇರಿ ಹೋಗಿತ್ತು. ಆದ್ದ ರಿಂದ ದೇವತೆಗಳ ಕಾರ್ಯವನ್ನು ನೆರವೇರಿಸಲೋಸುಗ ಹಾಗೂ ದೈತ್ಯರ ಮನಸ್ಸಿಗೆ ಹೊಸತೊಂದು ಕುತೂಹಲವನ್ನು ತೋರಲೋ ಸುಗ ನಾನೇ ಆ ಸ್ತ್ರೀರೂಪವನ್ನು ಧರಿಸಿದ್ದೆ. ॥ ೧೫ ॥ ದೇವಶಿರೋ ಮಣಿಯೇ! ಈಗ ನೀವೆಲ್ಲರೂ ಆ ರೂಪವನ್ನು ನೋಡಲು ಬಯಸುತ್ತಿರುವುದರಿಂದ ನಾನು ನಿಮಗೆ ತೋರಿಸುತ್ತೇನೆ. ಆದರೆ ಆ ನನ್ನ ರೂಪವು ಕಾಮಿಗಳಾದ ಪುರುಷರಿಗೆ ಆದರಣೀಯ ವಾದುದು. ಏಕೆಂದರೆ, ಅದು ಕಾಮಭಾವವನ್ನು ಉತ್ತೇಜಿತಗೊಳಿಸು ವಂತಹುದು. ॥ ೧೬॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಂತನು ಶಿವನಲ್ಲಿ ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನ ನಾದನು. ಭಗವಾನ್ ಶಂಕರನು ಉಮೆಯೊಡನೆ ನಾಲ್ಕೂ ದಿಕ್ಕು ಗಳನ್ನು ನೋಡುತ್ತಾ ಅಲ್ಲಿಯೇ ಕುಳಿತಿದ್ದನು. ॥ ೧೭ ॥ ಅಷ್ಟರಲ್ಲಿ ಇದಿರ್ಗಡೆಯೇ ಒಂದು ಸುಂದರವಾದ ಉಪವನವನ್ನು ನೋಡಿ ದನು. ಅದರಲ್ಲಿ ಹಲವು ಬಗೆಯ ವೃಕ್ಷಗಳಿದ್ದು ಅವುಗಳು ಬಣ್ಣ-ಬಣ್ಣದ ಹೂವುಗಳಿಂದಲೂ ಚಿಗುರುಗಳಿಂದಲೂ ತುಂಬಿ-ತುಳುಕು ತ್ತಿದ್ದವು. ಆ ಉದ್ಯಾನವನದಲ್ಲಿ ಪ್ರಕಾಶಮಾನವಾದ ಪೀತಾಂಬರ ವನ್ನು ಉಟ್ಟುಕೊಂಡು, ಸೊಂಟದಲ್ಲಿ ಒಡ್ಯಾಣ ಧರಿಸಿದ್ದು ಚೆಂಡಾಟ ವಾಡುತ್ತಿದ್ದ ಅತಿ ಚೆಲುವೆಯಾದ ಸ್ತ್ರೀಯನ್ನು ನೋಡಿದನು. ॥ ೧೮ ॥

ಆವರ್ತನೋದ್ವರ್ತನಕಂಪಿತಸ್ತನ-
ಪ್ರಕೃಷ್ಟಹಾರೋರುಭರೈಃ ಪದೇ ಪದೇ ।
ಪ್ರಭಜ್ಯಮಾನಾಮಿವ ಮಧ್ಯತಶ್ಚಲತ್
ಪದಪ್ರವಾಲಂ ನಯತೀಂ ತತಸ್ತತಃ ॥ ೧೯ ॥

ದಿಕ್ಷು ಭ್ರಮತ್ಕಂದುಕಚಾಪಲೈರ್ಭೃಶಂ
ಪ್ರೋದ್ವಿಗ್ನತಾರಾಯತಲೋಲಲೋಚನಾಮ್ ।
ಸ್ವಕರ್ಣವಿಭ್ರಾಜಿತಕುಂಡಲೋಲ್ಲಸತ್
ಕಪೋಲನೀಲಾಲಕಮಂಡಿತಾನನಾಮ್ ॥ ೨೦ ॥

ಶ್ಲಥದ್ದುಕೂಲಂ ಕಬರೀಂ ಚ ವಿಚ್ಯುತಾಂ
ಸನ್ನಹ್ಯತೀಂ ವಾಮಕರೇಣ ವಲ್ಗುನಾ ।
ವಿನಿಘ್ನತೀಮನ್ಯಕರೇಣ ಕಂದುಕಂ
ವಿಮೋಹಯಂತೀಂ ಜಗದಾತ್ಮಮಾಯಯಾ ॥ ೨೧ ॥

ತಾಂ ವೀಕ್ಷ್ಯ ದೇವ ಇತಿ ಕಂದುಕಲೀಲಯೇಷದ್
ವ್ರೀಡಾಸ್ಫುಟಸ್ಮಿತವಿಸೃಷ್ಟಕಟಾಕ್ಷಮುಷ್ಟಃ ।
ಸ್ತ್ರೀಪ್ರೇಕ್ಷಣಪ್ರತಿಸಮೀಕ್ಷಣವಿಹ್ವಲಾತ್ಮಾ
ನಾತ್ಮಾನಮಂತಿಕ ಉಮಾಂ ಸ್ವಗಣಾಂಶ್ಚ ವೇದ ॥ ೨೨ ॥

ತಸ್ಯಾಃ ಕರಾಗ್ರಾತ್ಸ ತು ಕಂದುಕೋ ಯದಾ
ಗತೋ ವಿದೂರಂ ತಮನುವ್ರಜತ್ಸ್ತ್ರಿಯಾಃ ।
ವಾಸಃ ಸಸೂತ್ರಂ ಲಘು ಮಾರುತೋಽಹರದ್
ಭವಸ್ಯ ದೇವಸ್ಯ ಕಿಲಾನುಪಶ್ಯತಃ ॥ ೨೩ ॥

ಏವಂ ತಾಂ ರುಚಿರಾಪಾಂಗೀಂ
ದರ್ಶನೀಯಾಂ ಮನೋರಮಾಮ್ ।
ದೃಷ್ಟ್ವಾ ತಸ್ಯಾಂ ಮನಶ್ಚಕ್ರೇ
ವಿಷಜ್ಜಂತ್ಯಾಂ ಭವಃ ಕಿಲ ॥ ೨೪ ॥

ತಯಾಪಹೃತವಿಜ್ಞಾನಸ್ತತ್ಕೃತಸ್ಮರವಿಹ್ವಲಃ ।
ಭವಾನ್ಯಾ ಅಪಿ ಪಶ್ಯಂತ್ಯಾ ಗತಹ್ರೀಸ್ತತ್ಪದಂ ಯಯೌ ॥ ೨೫ ॥

ಸಾ ತಮಾಯಾಂತಮಾಲೋಕ್ಯ ವಿವಸ್ತ್ರಾ ವ್ರೀಡಿತಾ ಭೃಶಮ್ ।
ನಿಲೀಯಮಾನಾ ವೃಕ್ಷೇಷು ಹಸಂತೀ ನಾನ್ವತಿಷ್ಠತ ॥ ೨೬ ॥

ತಾಮನ್ವಗಚ್ಛದ್ಭಗವಾನ್ಭವಃ ಪ್ರಮುಷಿತೇಂದ್ರಿಯಃ ।
ಕಾಮಸ್ಯ ಚ ವಶಂ ನೀತಃ ಕರೇಣುಮಿವ ಯೂಥಪಃ ॥ ೨೭ ॥

ಸೋಽನುವ್ರಜ್ಯಾತಿವೇಗೇನ ಗೃಹೀತ್ವಾನಿಚ್ಛತೀಂ ಸ್ತ್ರಿಯಮ್ ।
ಕೇಶಬಂಧ ಉಪಾನೀಯ ಬಾಹುಭ್ಯಾಂ ಪರಿಷಸ್ವಜೇ ॥ ೨೮ ॥

ಆಕೆಯು ಚೆಂಡಿನೊಡನೆ ಆಡುತ್ತಿದ್ದಾಗ ಅವಳ ಸ್ತನಗಳೂ, ಹಾರಗಳೂ ಕುಣಿದಾಡುತ್ತಿದ್ದವು. ಸ್ತನಗಳ ಭಾರದಿಂದ ಆಕೆಯ ತೆಳುವಾದ ಕಟಿಯು ಮುರಿದುಬೀಳುವುದೋ ಎಂದು ಅನಿಸುತ್ತಿತ್ತು. ನಲುಗಿ ಹೋಗಬಹುದೆಂಬ ಭಯದಿಂದ ಆ ಲಲನಾಮಣಿಯು ಚಿಗುರಿನಂತೆ ಸುಕೋಮಲವಾದ ಕೆಂಪು-ಕೆಂಪಾದ ತನ್ನ ಹೆಜ್ಜೆಗಳನ್ನು ಮೆಲ್ಲ-ಮೆಲ್ಲನೆ ಇಡುತ್ತಿದ್ದಳು. ॥ ೧೯ ॥ ನೆಗೆಯುತ್ತಿರುವ ಚೆಂಡನ್ನು ಹಾರಿ ಅದನ್ನು ಹಿಡಿದುಕೊಳ್ಳುತ್ತಿದ್ದಳು. ಇದರಿಂದ ಆ ಸುಂದರಿಯ ವಿಶಾಲವಾದ ಕಣ್ಣುಗಳು ಉದ್ವಿಗ್ನವಾಗಿರುವಂತೆ ಕಾಣುತ್ತಿತ್ತು. ಹೊಳೆಯುತ್ತಿರುವ ಕರ್ಣಕುಂಡಲ ಕಾಂತಿಯಿಂದ ಬೆಳಗುವ ಕಪೋಲಗಳಿಂದಲೂ, ಕಪ್ಪಾದ ಮುಂಗುರುಳುಗಳಿಂದಲೂ ಆಕೆಯ ಸುಂದರವಾದ ಮುಖಾರವಿಂದವು ಇನ್ನೂ ಅರಳಿದಂತಿತ್ತು. ॥ ೨೦ ॥ ಯಾವಾಗಲಾದರೂ ಸೆರಗುಜಾರಿ ಹೋದರೆ, ಕಬರಿಯು ಬಿಚ್ಚಿಹೋದರೆ, ಆಗಲೂ ಚೆಂಡಾಟವನ್ನು ನಿಲ್ಲಿಸದೆ ಬಲಗೈಯಿಂದ ಆಡುತ್ತಾ, ಎಡಗೈಯಿಂದ ಸೆರಗನ್ನೂ, ಕೂದಲನ್ನೂ ಸರಿಪಡಿಸಿಕೊಳ್ಳುತ್ತಾ, ಇಡೀ ಜಗತ್ತನ್ನು ತನ್ನ ಮಾಯೆಯಿಂದ ಮರುಳುಗೊಳಿಸುತ್ತಿದ್ದಳು. ॥ ೨೧ ॥ ಹೀಗೆ ಚೆಂಡಾಟವನ್ನು ಆಡುತ್ತಾ-ಆಡುತ್ತಾ ಆಕೆಯು ಸ್ವಲ್ಪ ಲಜ್ಜೆಯ ಭಾವದಿಂದ ಮುಗುಳ್ನಕ್ಕು ಓರೆನೋಟದಿಂದ ಶಂಕರನ ಕಡೆಗೆ ನೋಡಿದಳು. ಆ ಸ್ತ್ರೀಯ ಕಟಾಕ್ಷವೀಕ್ಷಣೆಯಿಂದಲೂ, ಪ್ರೇಮಭಾವದ ಸೂಚನೆಯಿಂದಲೂ ಕಾಮಪರವಶನಾದ ಶಂಕರನು ತನ್ನನ್ನು ತಾನೇ ಮರೆತನು. ಹೀಗಿರುವಾಗ ಹತ್ತಿರದಲ್ಲೇ ಕುಳಿತಿದ್ದ ಉಮೆ ಮತ್ತು ಗಣಗಳ ನೆನಪಾದರೂ ಹೇಗೆ ಇರಬಲ್ಲದು ? ॥ ೨೨ ॥ ಒಮ್ಮೆ ಚೆಂಡು ಮೋಹಿನಿಯ ಕೈಯಿಂದ ಜಾರಿ ದೂರಕ್ಕೆ ಹೋಯಿತು. ಆಕೆಯು ಅದರ ಹಿಂದೆಯೇ ಓಡಿದಳು. ಆ ಸಮಯದಲ್ಲಿ ಶಿವನು ನೋಡುತ್ತಿರುವಂತೆಯೇ ವಾಯುವು ಆಕೆಯು ಉಟ್ಟಿದ್ದ ತೆಳ್ಳಗಿನ ಸೀರೆಯನ್ನು ಒಡ್ಯಾಣಸಹಿತವಾಗಿ ಹಾರಿಸಿಬಿಟ್ಟನು. ॥ ೨೩ ॥ ಮೋಹಿನಿಯ ಪ್ರತಿಯೊಂದು ಅಂಗಾಂಗವೂ ಮನೋಹರವಾಗಿತ್ತು. ಒಮ್ಮೆ ಕಣ್ಣು ನೆಟ್ಟರೆ ಕೀಳಲು ಸಾಧ್ಯವಾಗುತ್ತಿರಲಿಲ್ಲ. ಅಷ್ಟೇ ಅಲ್ಲ, ಮನಸ್ಸೂ ಅಲ್ಲೇ ರಮಮಾಣವಾಗುತ್ತಿತ್ತು. ಈ ಸ್ಥಿತಿಯಲ್ಲಿ ಆಕೆಯನ್ನು ನೋಡಿದ ಭಗವಾನ್ ಶಂಕರನು ಅವಳ ಕಡೆಗೆ ಅತ್ಯಂತ ಆಕರ್ಷಿತನಾದನು. ಮೋಹಿನಿಯೂ ತನ್ನ ಕುರಿತು ಆಸಕ್ತಳಾಗಿರುವಂತೇ ಅವನಿಗೆ ಕಂಡಿತು. ॥ ೨೪ ॥ ಆಕೆಯು ಶಂಕರನ ವಿವೇಕವನ್ನು ಅಪಹರಿಸಿದಳು. ಆಕೆಯ ಹಾವ-ಭಾವಗಳಿಂದ ಶಿವನು ಕಾಮಾತುರನಾದನು ಮತ್ತು ಭವಾನಿಯ ಇದಿರಿನಲ್ಲೇ ಲಜ್ಜೆ ಬಿಟ್ಟು ಅವಳ ಕಡೆಗೆ ಓಡಿದನು. ॥ ೨೫ ॥ ಆ ಮೋಹಿನಿಯು ತನ್ನ ಕಡೆಗೆ ಶಿವನು ಬರುತ್ತಿರುವುದನ್ನು ನೋಡಿ ಬಹಳ ನಾಚಿಕೆಯಿಂದ ಕಿಲ-ಕಿಲನೆ ನಗುತ್ತಾ ಅಲ್ಲಿ ನಿಲ್ಲದೆ ವೃಕ್ಷದ ಹಿಂದೆ ಅವಿತುಕೊಂಡಳು. ॥ ೨೬ ॥ ಭಗವಾನ್ ಶಂಕರನ ಇಂದ್ರಿಯಗಳು ಅವನ ಕೈಯಿಂದ ಜಾರಿ ಹೋದುವು. ಅವನು ಕಾಮಪರವಶನಾಗಿದ್ದನು. ಆದ್ದರಿಂದ ಹೆಣ್ಣಾನೆಯ ಹಿಂದೆ ಓಡುವ ಗಂಡಾನೆಯಂತೆ ಆಕೆಯ ಹಿಂದೆ-ಹಿಂದೆ ಓಡತೊಡಗಿದನು. ॥ ೨೭ ॥ ಅವನು ಅತ್ಯಂತ ವೇಗದಿಂದ ಆಕೆಯನ್ನು ಹಿಂಬಾಲಿಸಿ ಹಿಂದಿನಿಂದ ಆಕೆಯ ಮುಡಿಯನ್ನು ಹಿಡಿದುಕೊಂಡನು. ಆಕೆ ಬಯಸದೇ ಇದ್ದರೂ ಶಿವನು ಅವಳನ್ನೂ ಎರಡೂ ಭುಜಗಳಿಂದ ಬಾಚಿ ತಬ್ಬಿಕೊಂಡನು. ॥ ೨೮ ॥

ಸೋಪಗೂಢಾ ಭಗವತಾ ಕರಿಣಾ ಕರಿಣೀ ಯಥಾ ।
ಇತಸ್ತತಃ ಪ್ರಸರ್ಪಂತೀ ವಿಪ್ರಕೀರ್ಣಶಿರೋರುಹಾ ॥ ೨೯ ॥

ಆತ್ಮಾನಂ ಮೋಚಯಿತ್ವಾಂಗ ಸುರರ್ಷಭಭುಜಾಂತರಾತ್ ।
ಪ್ರಾದ್ರವತ್ಸಾ ಪೃಥುಶ್ರೋಣೀ ಮಾಯಾ ದೇವವಿನಿರ್ಮಿತಾ ॥ ೩೦ ॥

ತಸ್ಯಾಸೌ ಪದವೀಂ ರುದ್ರೋ ವಿಷ್ಣೋರದ್ಭುತಕರ್ಮಣಃ ।
ಪ್ರತ್ಯಪದ್ಯತ ಕಾಮೇನ ವೈರಿಣೇವ ವಿನಿರ್ಜಿತಃ ॥ ೩೧ ॥

ತಸ್ಯಾನುಧಾವತೋ ರೇತಃ ಚಸ್ಕಂದಾಮೋಘರೇತಸಃ ।
ಶುಷ್ಮಿಣೋ ಯೂಥಪಸ್ಯೇವ ವಾಸಿತಾಮನು ಧಾವತಃ ॥ ೩೨ ॥

ಯತ್ರ ಯತ್ರಾಪತನ್ಮಹ್ಯಾಂ ರೇತಸ್ತಸ್ಯ ಮಹಾತ್ಮನಃ ।
ತಾನಿ ರೂಪ್ಯಸ್ಯ ಹೇಮ್ನಶ್ಚ ಕ್ಷೇತ್ರಾಣ್ಯಾಸನ್ಮಹೀಪತೇ ॥ ೩೩ ॥

ಸರಿತ್ಸರಸ್ಸು ಶೈಲೇಷು ವನೇಷೂಪವನೇಷು ಚ ।
ಯತ್ರ ಕ್ವ ಚಾಸನ್ನೃಷಯಸ್ತತ್ರ ಸಂನಿಹಿತೋ ಹರಃ ॥ ೩೪ ॥

ಸ್ಕನ್ನೇ ರೇತಸಿ ಸೋಽಪಶ್ಯದಾತ್ಮಾನಂ ದೇವಮಾಯಯಾ ।
ಜಡೀಕೃತಂ ನೃಪಶ್ರೇಷ್ಠ ಸಂನ್ಯವರ್ತತ ಕಶ್ಮಲಾತ್ ॥ ೩೫ ॥

ಅಥಾವಗತಮಾಹಾತ್ಮ್ಯ ಆತ್ಮನೋ ಜಗದಾತ್ಮನಃ ।
ಅಪರಿಜ್ಞೇಯವೀರ್ಯಸ್ಯ ನ ಮೇನೇ ತದು ಹಾದ್ಭುತಮ್ ॥ ೩೬ ॥

ತಮವಿಕ್ಲವಮವ್ರೀಡಮಾಲಕ್ಷ್ಯ ಮಧುಸೂದನಃ ।
ಉವಾಚ ಪರಮಪ್ರೀತೋ ಬಿಭ್ರತ್ಸ್ವಾಂ ಪೌರುಷೀಂ ತನುಮ್ ॥ ೩೭ ॥

*ಶ್ರೀಭಗವಾನುವಾಚ*

ದಿಷ್ಟ್ಯಾತ್ವಂ ವಿಬುಧಶ್ರೇಷ್ಠ ಸ್ವಾಂ ನಿಷ್ಠಾಮಾತ್ಮನಾ ಸ್ಥಿತಃ ।
ಯನ್ಮೇ ಸ್ತ್ರೀರೂಪಯಾ ಸ್ವೈರಂ ಮೋಹಿತೋಽಪ್ಯಂಗ ಮಾಯಯಾ ॥ ೩೮ ॥

ಕೋ ನು ಮೇಽತಿತರೇನ್ಮಾಯಾಂ ವಿಷಕ್ತಸ್ತ್ವದೃತೇ ಪುಮಾನ್ ।
ತಾಂಸ್ತಾನ್ವಿಸೃಜತೀಂ ಭಾವಾನ್‌ದುಸ್ತರಾಮಕೃತಾತ್ಮಭಿಃ ॥ ೩೯ ॥

ಸೇಯಂ ಗುಣಮಯೀ ಮಾಯಾ ನ ತ್ವಾಮಭಿಭವಿಷ್ಯತಿ ।
ಮಯಾ ಸಮೇತಾ ಕಾಲೇನ ಕಾಲರೂಪೇಣ ಭಾಗಶಃ ॥ ೪೦ ॥

ಗಂಡಾನೆಯು ಹೆಣ್ಣಾನೆಯನ್ನು ಆಲಿಂಗಿಸಿಕೊಳ್ಳುವಂತೆ ಭಗವಾನ್ ಶಂಕರನು ಆಕೆಯನ್ನು ಆಲಿಂಗಿಸಿಕೊಂಡನು. ಆಕೆಯು ಕೊಸರಾಡಿಕೊಂಡು ಅವನಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಗ ಆಕೆಯ ಮುಡಿಯು ಬಿಚ್ಚಿಹೋಯಿತು. ॥ ೨೯ ॥ ವಾಸ್ತವವಾಗಿ ಆ ಸುಂದರಿಯು ಭಗವಂತನಿಂದ ರಚಿತವಾದ ಮಾಯೆಯೇ ಆಗಿತ್ತು. ಇದರಿಂದ ಆಕೆಯು ಹೇಗೋ ಶಂಕರನ ಬಾಹುಪಾಶದಿಂದ ತನ್ನನ್ನು ಬಿಡಿಸಿಕೊಂಡು ವೇಗವಾಗಿ ಓಡಿಹೋದಳು. ॥ ೩೦ ॥ ಭಗವಾನ್ ಶಂಕರನೂ ಕೂಡ ಆ ಮೋಹಿನೀವೇಷಧಾರಿಯಾದ ಅದ್ಭುತಕರ್ಮಿಯಾದ ಭಗವಾನ್ ವಿಷ್ಣುವಿನ ಹಿಂದೆ-ಹಿಂದೆ ಓಡತೊಡಗಿದನು. ಆಗ ಅವನ ಶತ್ರುವಾದ ಕಾಮದೇವನು ಈಗ ಅವನ ಮೇಲೆ ವಿಜಯವನ್ನು ಸಾಧಿಸಿದಂತೆ ಕಂಡುಬರುತ್ತಿತ್ತು. ॥ ೩೧ ॥ ಕಾಮುಕವಾದ ಹೆಣ್ಣಾನೆಯ ಹಿಂದೆ ಓಡುವ ಮದಭರಿತವಾದ ಗಂಡಾನೆಯಂತೆ ಮೋಹಿನಿಯ ಹಿಂದೆ-ಹಿಂದೆ ಶಂಕರನು ಓಡುತ್ತಿದ್ದನು. ಭಗವಾನ್ ಶಂಕರನ ವೀರ್ಯವು ಅಮೋಘವಾಗಿದ್ದರೂ ಮೋಹಿನಿಯ ಮಾಯೆಯಿಂದ ಅದು ಸ್ಖಲಿತವಾಯಿತು. ॥ ೩೨ ॥ ಮಹೀಪತಿಯೇ! ಭಗವಾನ್ ಶಂಕರನ ವೀರ್ಯವು ಭೂಮಿಯಲ್ಲಿ ಬಿದ್ದಲ್ಲೆಲ್ಲ ಚಿನ್ನದ, ಬೆಳ್ಳಿಯ ಗಣಿಗಳಾದುವು. ॥ ೩೩ ॥ ಹೀಗೆ ಮೋಹಿನಿಯನ್ನು ಹಿಂಬಾಲಿಸುತ್ತಾ ಪರಶಿವನು ನದೀ-ನದ-ಸರೋವರ, ಪರ್ವತ, ವನ-ಉಪವನ ಹೀಗೆ ಋಷಿ-ಮುನಿಗಳು ವಾಸವಾಗಿದ್ದ ಆಶ್ರಮದಲ್ಲೆಲ್ಲ ಅಡ್ಡಾಡಿದನು. ॥ ೩೪ ॥

ಪರೀಕ್ಷಿತನೇ! ರೇತಸ್ಖಲನವಾದನಂತರ ಮಹರ್ಷಿಗಳ ಆಶ್ರಮಕ್ಕೆ ಬಂದ ಶಿವನು ವಿಷ್ಣುಮಾಯೆಯಿಂದ ವಿವೇಕಶೂನ್ಯನಾದೆನೆಂದು ಭಾವಿಸಿ ಕಾಮವಿಕಾರದಿಂದ ಮನಸ್ಸನ್ನು ಹಿಂದೆಗೆದುಕೊಂಡನು. ॥ ೩೫ ॥ ಇದಾದ ಬಳಿಕ ಆತ್ಮಸ್ವರೂಪನಾದ ಸರ್ವಾತ್ಮಾ ಭಗವಂತನ ಈ ಮಹಿಮೆಯನ್ನು ಅರಿತುಕೊಂಡು ಅವನಿಗೆ ಆಶ್ಚರ್ಯವಾಗಲಿಲ್ಲ. ಭಗವಂತನ ಶಕ್ತಿಗಳ ಅಂತವನ್ನು ಯಾರು ತಾನೇ ತಿಳಿಯಬಲ್ಲನು? ॥ ೩೬ ॥ ಭಗವಾನ್ ಶಂಕರನಿಗೆ ಇದರಿಂದ ವಿಷಾದ ಅಥವಾ ನಾಚಿಕೆಯಾಗಲಿಲ್ಲವೆಂದು ತಿಳಿದ ಭಗವಂತನು ಪುರುಷಶರೀರವನ್ನು ಧರಿಸಿಕೊಂಡು ಪ್ರಕಟನಾದನು ಹಾಗೂ ಪರಮಪ್ರೀತಿಯಿಂದ ಶಿವನಲ್ಲಿ ಇಂತೆಂದನು – ॥ ೩೭ ॥

**ಶ್ರೀಭಗವಂತನು ಹೇಳಿದನು** – ದೇವಶಿರೋಮಣಿಯೇ! ನನ್ನ ಸ್ತ್ರೀರೂಪವಾದ ಮಾಯೆಯಿಂದ ವಿಮೋಹಿತನಾದರೂ ನೀನು ಸ್ವಯಂ ನಿನ್ನ ನಿಷ್ಠೆಯಲ್ಲಿ ಸ್ಥಿತನಾಗಿರುವೆ. ಇದು ತುಂಬಾ ಆನಂದದ ಮಾತಾಗಿದೆ. ॥ ೩೮॥ ನನ್ನ ಮಾಯೆಯು ಅಪಾರವಾದುದು. ಅಜಿತೇಂದ್ರಿಯರಾದವರು ಯಾವ ವಿಧದಿಂದಲೂ ಅದರಿಂದ ಬಿಡಿಸಿಕೊಳ್ಳಲಾರದಂತಹ ಹಾವ-ಭಾವಗಳನ್ನು ರಚಿಸುತ್ತದೆ. ನೀನಲ್ಲದೆ ಬೇರೆ ಯಾರು ತಾನೇ ಒಮ್ಮೆ ನನ್ನ ಮಾಯಾಜಾಲದಲ್ಲಿ ಸಿಕ್ಕಿಹಾಕಿಕೊಂಡು ಸ್ವತಃ ಹೊರಬರಬಲ್ಲನು? ॥ ೩೯ ॥ ನನ್ನ ಈ ಗುಣಮಯ ಮಾಯೆಯು ದೊಡ್ಡ-ದೊಡ್ಡವರಿಗೂ ಮೋಹಿಸಿಬಿಡುತ್ತಿದ್ದರೂ ಇನ್ನು ಇದು ನಿನ್ನನ್ನು ಎಂದಿಗೂ ಮೋಹಿತಗೊಳಿಸಲಾರದು. ಏಕೆಂದರೆ, ಸೃಷ್ಟ್ಯಾದಿಗಳಿಗೆ ಆಯಾ ಸಮಯಗಳಲ್ಲಿ ಅದನ್ನು ಕ್ಷೋಭಿಸುತ್ತಿರುವ ಕಾಲನು ನಾನೇ ಆಗಿರುವೆನು. ಅದಕ್ಕಾಗಿ ನನ್ನ ಇಚ್ಛೆಗೆ ವಿರುದ್ಧವಾಗಿ ಅದು ರಜೋಗುಣಾದಿ ಸೃಷ್ಟಿಯನ್ನು ಮಾಡಲಾರದು. ॥ ೪೦ ॥

*ಶ್ರೀಶುಕ ಉವಾಚ*

ಏವಂ ಭಗವತಾ ರಾಜನ್ ಶ್ರೀವತ್ಸಾಂಕೇನ ಸತ್ಕೃತಃ ।
ಆಮಂತ್ರ್ಯ ತಂ ಪರಿಕ್ರಮ್ಯ ಸಗಣಃ ಸ್ವಾಲಯಂ ಯಯೌ ॥ ೪೧ ॥

ಆತ್ಮಾಂಶಭೂತಾಂ ತಾಂ ಮಾಯಾಂ ಭವಾನೀಂ ಭಗವಾನ್ಭವಃ ।
ಶಂಸತಾಮೃಷಿಮುಖ್ಯಾನಾಂ ಪ್ರೀತ್ಯಾಽಽಚಷ್ಟಾಥ ಭಾರತ ॥ ೪೨ ॥

ಅಪಿ ವ್ಯಪಶ್ಯಸ್ತ್ವಮಜಸ್ಯ ಮಾಯಾಂ
ಪರಸ್ಯ ಪುಂಸಃ ಪರದೇವತಾಯಾಃ ।
ಅಹಂ ಕಲಾನಾಮೃಷಭೋ ವಿಮುಹ್ಯೇ
ಯಯಾವಶೋಽನ್ಯೇ ಕಿಮುತಾಸ್ವತಂತ್ರಾಃ ॥ ೪೩ ॥

ಯಂ ಮಾಮಪೃಚ್ಛಸ್ತ್ವಮುಪೇತ್ಯ ಯೋಗಾ-
ತ್ಸಮಾಸಹಸ್ರಾಂತ ಉಪಾರತಂ ವೈ ।
ಸ ಏವ ಸಾಕ್ಷಾತ್ಪುರುಷಃ ಪುರಾಣೋ
ನ ಯತ್ರ ಕಾಲೋ ವಿಶತೇ ನ ವೇದಃ ॥ ೪೪ ॥

*ಶ್ರೀಶುಕ ಉವಾಚ*

ಇತಿ ತೇಽಭಿಹಿತಸ್ತಾತ ವಿಕ್ರಮಃ ಶಾರ್ಙ್ಗಧನ್ವನಃ ।
ಸಿಂಧೋರ್ನಿರ್ಮಥನೇ ಯೇನ ಧೃತಃ ಪೃಷ್ಠೇ ಮಹಾಚಲಃ ॥ ೪೫ ॥

ಏತನ್ಮುಹುಃ ಕೀರ್ತಯತೋಽನುಶೃಣ್ವತೋ
ನ ರಿಷ್ಯತೇ ಜಾತು ಸಮುದ್ಯಮಃ ಕ್ವಚಿತ್ ।
ಯದುತ್ತಮಶ್ಲೋಕಗುಣಾನುವರ್ಣನಂ
ಸಮಸ್ತ ಸಂಸಾರಪರಿಶ್ರಮಾಪಹಮ್ ॥ ೪೬ ॥

ಅಸದವಿಷಯಮಂಘ್ರಿಂ ಭಾವಗಮ್ಯಂ ಪ್ರಪನ್ನಾ-
ನಮೃತಮಮರವರ್ಯಾನಾಶಯತ್ಸಿಂಧುಮಥ್ಯಮ್ ।
ಕಪಟಯುವತಿವೇಷೋ ಮೋಹಯನ್ಯಃ ಸುರಾರೀಂ-
ಸ್ತಮಹಮುಪಸೃತಾನಾಂ ಕಾಮಪೂರಂ ನತೋಽಸ್ಮಿ ॥ ೪೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಮಹಾವಿಷ್ಣುವು ಹೀಗೆ ಶಂಕರನನ್ನು ಸತ್ಕರಿಸಿದನು. ಆಗ ಪರಶಿವನು ಅವನಿಂದ ಬೀಳ್ಕೊಂಡು, ಅವನಿಗೆ ಪ್ರದಕ್ಷಿಣೆ ಬಂದು ತನ್ನ ಗಣಗಳೊಂದಿಗೆ ಕೈಲಾಸಕ್ಕೆ ಹೊರಟುಹೋದನು. ॥ ೪೧ ॥ ಎಲೈ ಭರತವಂಶಶಿರೋಮಣಿಯೇ! ಭಗವಾನ್ ಶಂಕರನು ದೊಡ್ಡ-ದೊಡ್ಡ ಋಷಿಗಳ ಸಭೆಯಲ್ಲಿ ತನ್ನ ಅರ್ಧಾಂಗಿನಿಯಾದ ಪಾರ್ವತಿದೇವಿಗೆ ತನ್ನ ವಿಷ್ಣುಸ್ವರೂಪದ ಅಂಶಸಂಭೂತ ಮಾಯಾಮಯ ಮೋಹಿನಿಯನ್ನು ಈ ವಿಧವಾಗಿ ಪ್ರೇಮದಿಂದ ವರ್ಣಿಸಿದನು. ॥ ೪೨ ॥ ದೇವೀ! ಪರಮಪುರುಷ ಪರಮೇಶ್ವರನಾದ ಭಗವಾನ್ ವಿಷ್ಣುವಿನ ಮಾಯೆಯನ್ನು ನೀನು ನೋಡಿದೆಯಲ್ಲ! ಸಮಸ್ತ ಕಲಾವಲ್ಲಭನಾದ ನಾನೇ ಕಾಮವಶನಾಗಿ ವಿಮೋಹಗೊಂಡೆನು. ಹೀಗಿರುವಾಗ ಅಸ್ವತಂತ್ರವಾದ (ರಾಗ-ದ್ವೇಷಾದಿಗಳಿಗೆ ವಶರಾದ) ಇತರರ ವಿಷಯದಲ್ಲಿ ಹೇಳುವುದೇನಿದೆ? ॥ ೪೩ ॥ ಹಿಂದೆ ನಾನು ಒಂದುಸಾವಿರ ವರ್ಷಗಳ ಕಾಲದ ಸಮಾಧಿಯಿಂದ ಎಚ್ಚತ್ತಿರುವಾಗ ನೀನು ಬಳಿಗೆ ಬಂದು 'ಸ್ವಾಮಿ! ನೀವು ಯಾರ ಉಪಾಸನೆ ಮಾಡುತ್ತಿದ್ದೀರಿ?' ಎಂದು ಕೇಳಿದ್ದೆ. ಅವನು ಇದೇ ಸಾಕ್ಷಾತ್ ಸನಾತನ ಪುರುಷನಾಗಿದ್ದಾನೆ. ಕಾಲನೂ ಇವನನ್ನು ತನ್ನ ಸೀಮೆಯಲ್ಲಿ ಬಂಧಿಸಲಾರನು. ವೇದಗಳು ಇವನನ್ನು ಪೂರ್ಣವಾಗಿ ವರ್ಣಿಸಲಾರವು. ಇವನ ವಾಸ್ತವಿಕ ಸ್ವರೂಪವು ಅನಂತವೂ, ಅನಿರ್ವಚನೀಯವೂ ಆಗಿದೆ. ॥ ೪೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪ್ರಿಯ ಪರೀಕ್ಷಿತನೇ! ಸಮುದ್ರಮಂಥನ ಕಾಲದಲ್ಲಿ ದೊಡ್ಡದಾದ ಮಂದರ ಪರ್ವತವನ್ನು ಬೆನ್ನಮೇಲೆ ಧರಿಸಿದ ಕೂರ್ಮರೂಪಿಯಾದ ಶಾರ್ಙ್ಗಧನ್ವನಾದ ಮಹಾವಿಷ್ಣುವಿನ ಮಹಿಮೆಯನ್ನು ನಿನಗೆ ವರ್ಣಿಸಿ ಹೇಳಿರುವೆನು. ॥ ೪೫ ॥ ಈ ಪ್ರಸಂಗವನ್ನು ಪದೇ-ಪದೇ ಕೀರ್ತಿಸುವವನ ಹಾಗೂ ಶ್ರವಣಿಸುವವನ ಪ್ರಯತ್ನವು ಎಂದಿಗೂ, ಎಲ್ಲಿಯೂ ನಿಷ್ಫಲವಾಗುವುದಿಲ್ಲ. ಏಕೆಂದರೆ ಪವಿತ್ರಕೀರ್ತಿಯಾದ ಭಗವಂತನ ಗುಣ-ಲೀಲೆಗಳ ಸಂಕೀರ್ತನವು ಪ್ರಪಂಚದ ಸಮಸ್ತ ಕ್ಲೇಶಗಳನ್ನೂ, ಪರಿಶ್ರಮಗಳನ್ನೂ ಹೋಗಲಾಡಿಸುತ್ತದೆ. ॥ ೪೬ ॥ ದುಷ್ಟ ಜನರಿಗೆ ಶ್ರೀಭಗವಂತನ ದಿವ್ಯ ಚರಣಕಮಲಗಳು ಎಂದಿಗೂ ದೊರಕುವುದಿಲ್ಲ. ಅವುಗಳು ಭಕ್ತಿಭಾವದಿಂದ ಕೂಡಿರುವ ಮನುಷ್ಯರಿಗೇ ಮಾತ್ರ ಲಭ್ಯವಾಗುತ್ತವೆ. ಇದರಿಂದಲೇ ಅವನು ಮಾಯಾಮಯವಾದ ಹೆಂಗುಸಿನರೂಪವನ್ನು ಧರಿಸಿ ದೈತ್ಯರನ್ನು ಮೋಹಪರವಶರನ್ನಾಗಿ ಮಾಡಿದನು. ತನ್ನ ಚರಣಕಮಲಗಳಿಗೆ ಶರಣಾಗಿ ಬಂದಿರುವ ದೇವತೆಗಳಿಗೆ ಸಮುದ್ರಮಂಥನದಿಂದ ದೊರಕಿದ ಅಮೃತವನ್ನು ಕುಡಿಸಿದನು. ಕೇವಲ ದೇವತೆಗಳಿಗೆ ಮಾತ್ರವಲ್ಲ – ಅವನ ದಿವ್ಯ ಚರಣಕಮಲಗಳಿಗೆ ಯಾರೇ ಶರಣಾಗಲೀ, ಅವರ ಸಮಸ್ತ ಕಾಮನೆಗಳನ್ನು ಪೂರ್ಣಗೊಳಿಸುವನು. ಅಂತಹ ಪ್ರಭುವಿನ ಚರಣಕಮಲಗಳಿಗೆ ನಾನು ನಮಸ್ಕರಿಸುತ್ತೇನೆ. ॥ ೪೭ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ಶಂಕರಮೋಹನಂ ನಾಮ ದ್ವಾದಶೋಽಧ್ಯಾಯಃ ॥ ೧೨ ॥

# ಹದಿಮೂರನೆಯ ಅಧ್ಯಾಯ

## ಮುಂದಿನ ಏಳು ಮನ್ವಂತರಗಳ ವರ್ಣನೆ

*ಶ್ರೀಶುಕ ಉವಾಚ*

ಮನುರ್ವಿವಸ್ವತಃ ಪುತ್ರಃ ಶ್ರಾದ್ಧದೇವ ಇತಿ ಶ್ರುತಃ ।
ಸಪ್ತಮೋ ವರ್ತಮಾನೋ ಯಸ್ತದಪತ್ಯಾನಿ ಮೇ ಶೃಣು ॥ ೧ ॥

ಇಕ್ಷ್ವಾಕುರ್ನಭಗಶ್ಚೈವ ಧೃಷ್ಟಃ ಶರ್ಯಾತಿರೇವ ಚ ।
ನರಿಷ್ಯಂತೋಽಥ ನಾಭಾಗಃ ಸಪ್ತಮೋ ದಿಷ್ಟ ಉಚ್ಯತೇ ॥ ೨ ॥

ಕರೂಷಶ್ಚ ಪೃಷಧ್ರಶ್ಚ ದಶಮೋ ವಸುಮಾನ್ ಸ್ಮೃತಃ ।
ಮನೋರ್ವೈವಸ್ವತಸ್ಯೈತೇ ದಶ ಪುತ್ರಾಃ ಪರಂತಪ ॥ ೩ ॥

ಆದಿತ್ಯಾ ವಸವೋ ರುದ್ರಾ ವಿಶ್ವೇದೇವಾ ಮರುದ್ಗಣಾಃ ।
ಅಶ್ವಿನಾವೃಭವೋ ರಾಜನ್ನಿಂದ್ರಸ್ತೇಷಾಂ ಪುರಂದರಃ ॥ ೪ ॥

ಕಶ್ಯಪೋಽತ್ರಿರ್ವಸಿಷ್ಠಶ್ಚ ವಿಶ್ವಾಮಿತ್ರೋಽಥ ಗೌತಮಃ ।
ಜಮದಗ್ನಿರ್ಭರದ್ವಾಜ ಇತಿ ಸಪ್ತರ್ಷಯಃ ಸ್ಮೃತಾಃ ॥ ೫ ॥

ಅತ್ರಾಪಿ ಭಗವಜ್ಜನ್ಮ ಕಶ್ಯಪಾದದಿತೇರಭೂತ್ ।
ಆದಿತ್ಯಾನಾಮವರಜೋ ವಿಷ್ಣುರ್ವಾಮನರೂಪಧೃಕ್ ॥ ೬ ॥

ಸಂಕ್ಷೇಪತೋ ಮಯೋಕ್ತಾನಿ ಸಪ್ತ ಮನ್ವಂತರಾಣಿ ತೇ ।
ಭವಿಷ್ಯಾಣ್ಯಥ ವಕ್ಷ್ಯಾಮಿ ವಿಷ್ಣೋಃ ಶಕ್ತ್ಯಾನ್ವಿತಾನಿ ಚ ॥ ೭ ॥

ವಿವಸ್ವತಶ್ಚ ದ್ವೇ ಜಾಯೇ ವಿಶ್ವಕರ್ಮಸುತೇ ಉಭೇ ।
ಸಂಜ್ಞಾ ಛಾಯಾ ಚ ರಾಜೇಂದ್ರ ಯೇ ಪ್ರಾಗಭಿಹಿತೇ ತವ ॥ ೮ ॥

ತೃತೀಯಾಂ ವಡವಾಮೇಕೇ ತಾಸಾಂ ಸಂಜ್ಞಾಸುತಾಸ್ತ್ರಯಃ ।
ಯಮೋ ಯಮೀ ಶ್ರಾದ್ಧದೇವಶ್ಛಾಯಾಯಾಶ್ಚ ಸುತಾನ್ ಶೃಣು ॥ ೯ ॥

ಸಾವರ್ಣಿಸ್ತಪತೀ ಕನ್ಯಾ ಭಾರ್ಯಾ ಸಂವರಣಸ್ಯ ಯಾ ।
ಶನೈಶ್ಚರಸ್ತೃತೀಯೋಽಭೂದಶ್ವಿನೌ ವಡವಾತ್ಮಜೌ ॥ ೧೦ ॥

ಅಷ್ಟಮೇಽಂತರ ಆಯಾತೇ ಸಾವರ್ಣಿರ್ಭವಿತಾ ಮನುಃ ।
ನಿರ್ಮೋಕವಿರಜಸ್ಕಾದ್ಯಾಃ ಸಾವರ್ಣಿತನಯಾ ನೃಪ ॥ ೧೧ ॥

ತತ್ರ ದೇವಾಃ ಸುತಪಸೋ ವಿರಜಾ ಅಮೃತಪ್ರಭಾಃ ।
ತೇಷಾಂ ವಿರೋಚನಸುತೋ ಬಲಿರಿಂದ್ರೋ ಭವಿಷ್ಯತಿ ॥ ೧೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ!** ಈಗ ನಡೆಯುತ್ತಿರುವ ಏಳನೆಯ ಮನ್ವಂತರದ ಮನುವು ವಿವಸ್ವಂತನ ಮಗನೇ ಯಶೋವಂತನಾದ ಶ್ರಾದ್ಧದೇವ (ವೈವಸ್ವತ) ನೆಂಬುವನು. ಅವನ ಸಂತಾನವನ್ನು ನಾನು ವರ್ಣಿಸುತ್ತೇನೆ, ಕೇಳು. ॥ ೧ ॥ ವೈವಸ್ವತ ಮನುವಿಗೆ ಇಕ್ಷ್ವಾಕು, ನಭಗ, ಧೃಷ್ಟ, ಶರ್ಯಾತಿ, ನರಿಷ್ಯಂತ, ನಾಭಾಗ, ದಿಷ್ಟ, ಕರೂಷ, ಪೃಷಧ್ರ ಮತ್ತು ವಸುಮಾನರೆಂಬ ಹತ್ತು ಪುತ್ರರಿದ್ದಾರೆ. ॥ ೨-೩ ॥ ಪರೀಕ್ಷಿದ್ರಾಜಾ! ಈ ಮನ್ವಂತರದಲ್ಲಿ ಆದಿತ್ಯ, ವಸು, ರುದ್ರ, ವಿಶ್ವೇದೇವ, ಮರುದ್ಗಣ, ಅಶ್ವಿನೀಕುಮಾರರು ಮತ್ತು ಋಭು ಇವರುಗಳು ಪ್ರಧಾನ ದೇವತೆಗಳು. ಇವರಿಗೆ ಪುರಂದರನೆಂಬ ಇಂದ್ರನು ಇದ್ದಾನೆ. ॥ ೪ ॥ ಕಶ್ಯಪ, ಅತ್ರಿ, ವಸಿಷ್ಠ, ವಿಶ್ವಾಮಿತ್ರ, ಗೌತಮ, ಜಮದಗ್ನಿ ಮತ್ತು ಭಾರದ್ವಾಜ ಇವರು ಸಪ್ತರ್ಷಿಗಳು. ॥ ೫ ॥ ಈ ಮನ್ವಂತರದಲ್ಲಿಯೂ ಕಶ್ಯಪರ ಪತ್ನಿಯಾದ ಅದಿತಿಯ ಗರ್ಭದಿಂದ ಆದಿತ್ಯರ ಕಡೆಯ ತಮ್ಮನಾಗಿ ವಾಮನ ರೂಪದಲ್ಲಿ ಭಗವಂತನು ಅವತರಿಸಿದ್ದನು. ॥ ೬ ॥

ಪರೀಕ್ಷಿತನೇ! ಹೀಗೆ ನಾನು ನಿನಗೆ ಸಂಕ್ಷೇಪವಾಗಿ ಏಳು ಮನ್ವಂತರಗಳ ವರ್ಣನೆಯನ್ನು ಮಾಡಿದ್ದೇನೆ. ಇನ್ನು ಭಗವಂತನ ಶಕ್ತಿಯಿಂದ ಕೂಡಿದ ಮುಂದೆ ಬರುವ ಏಳು ಮನ್ವಂತರಗಳನ್ನು ವರ್ಣಿಸುತ್ತೇನೆ. ॥ ೭ ॥

ರಾಜೇಂದ್ರಾ! ನಾನು ಈ ಹಿಂದೆ ಆರನೆಯ ಸ್ಕಂಧದಲ್ಲಿ ವಿವಸ್ವಾನ್ (ಸೂರ್ಯದೇವನು) ಎಂಬುವನಿಗೆ ಸಂಜ್ಞಾ ಮತ್ತು ಛಾಯಾ ಎಂಬಿಬ್ಬರು ಮಡದಿಯರಿದ್ದ ವಿಷಯವನ್ನು ಹೇಳಿದ್ದೆ. ಇವರಿಬ್ಬರೂ ವಿಶ್ವಕರ್ಮನ ಪುತ್ರಿಯರಾಗಿದ್ದರು. ॥ ೮ ॥ ಸೂರ್ಯನಿಗೆ ವಡವಾ ಎಂಬ ಮೂರನೆಯ ಪತ್ನಿಯೂ ಇದ್ದಳೆಂದು ಕೆಲವರು ಹೇಳುತ್ತಾರೆ. (ನನ್ನ ವಿಚಾರದಲ್ಲಿ ಸಂಜ್ಞಾದೇವಿಗೆ ವಡವಾ ಎಂಬ ಹೆಸರಿತ್ತು.) ಆ ಸೂರ್ಯನ ಪತ್ನಿಯರಲ್ಲಿ ಸಂಜ್ಞಾದೇವಿಗೆ ಯಮ, ಯಮೀ ಮತ್ತು ಶ್ರಾದ್ಧದೇವರೆಂಬ ಮೂರು ಮಕ್ಕಳಾದರು. ಛಾಯೆಯಲ್ಲಿಯೂ ಸಾವರ್ಣಿ, ಶನೈಶ್ಚರ ಮತ್ತು ತಪತೀ ಎಂಬ ಮೂವರು ಮಕ್ಕಳು ಹುಟ್ಟಿದ್ದರು. ತಪತೀ ಎಂಬ ಕನ್ಯೆಯು ಸಂವರಣನ ಪತ್ನಿಯಾದಳು. ಸಂಜ್ಞೆಯು ವಡವಾ ಎಂಬ ರೂಪವನ್ನು ತಾಳಿದಾಗ ಅವಳಿಂದ ಅಶ್ವಿನೀಕುಮಾರರಿಬ್ಬರು ಜನಿಸಿದರು. ॥ ೯-೧೦ ॥ ಎಂಟನೆಯ ಮನ್ವಂತರದಲ್ಲಿ ಸಾವರ್ಣಿ ಎಂಬುವನು ಮನುವಾಗುವನು. ಅವನಿಗೆ ನಿರ್ಮೋಕ, ವಿರಜಸ್ಕ ಮೊದಲಾದ ಪುತ್ರರು ಹುಟ್ಟುವರು. ॥ ೧೧ ॥ ಪರೀಕ್ಷಿತನೇ! ಆ ಸಮಯದಲ್ಲಿ ಸುತಪಾ, ವಿರಜಾ ಮತ್ತು ಅಮೃತಪ್ರಭರೆಂಬ ದೇವತಾಗಣರಿರುವರು. ಈ ದೇವತೆಗಳಿಗೆ ವಿರೋಚನಪುತ್ರ ಬಲಿಯೇ ಇಂದ್ರನಾಗುವನು. ॥ ೧೨ ॥

ದತ್ತ್ವೇಮಾಂ ಯಾಚಮಾನಾಯ ವಿಷ್ಣವೇ ಯಃ ಪದತ್ರಯಮ್ ।
ರಾದ್ಧಮಿಂದ್ರಪದಂ ಹಿತ್ವಾ ತತಃ ಸಿದ್ಧಿಮವಾಪ್ಸ್ಯತಿ ॥ ೧೩ ॥

ಯೋಽಸೌ ಭಗವತಾ ಬದ್ಧಃ ಪ್ರೀತೇನ ಸುತಲೇ ಪುನಃ ।
ನಿವೇಶಿತೋಽಧಿಕೇ ಸ್ವರ್ಗಾದಧುನಾಽಽಸ್ತೇ ಸ್ವರಾಡಿವ ॥ ೧೪ ॥

ಗಾಲವೋ ದೀಪ್ತಿಮಾನ್ರಾಮೋ ದ್ರೋಣಪುತ್ರಃ ಕೃಪಸ್ತಥಾ ।
ಋಷ್ಯಶೃಂಗಃ ಪಿತಾಸ್ಮಾಕಂ ಭಗವಾನ್ಬಾದರಾಯಣಃ ॥ ೧೫ ॥

ಇಮೇ ಸಪ್ತರ್ಷಯಸ್ತತ್ರ ಭವಿಷ್ಯಂತಿ ಸ್ವಯೋಗತಃ ।
ಇದಾನೀಮಾಸತೇ ರಾಜನ್ಸ್ವೇ ಸ್ವ ಆಶ್ರಮಮಂಡಲೇ ॥ ೧೬ ॥

ದೇವಗುಹ್ಯಾತ್ಸರಸ್ವತ್ಯಾಂ ಸಾರ್ವಭೌಮ ಇತಿ ಪ್ರಭುಃ ।
ಸ್ಥಾನಂ ಪುರಂದರಾದ್ಧೃತ್ವಾ ಬಲಯೇ ದಾಸ್ಯತೀಶ್ವರಃ ॥ ೧೭ ॥

ನವಮೋ ದಕ್ಷಸಾವರ್ಣಿರ್ಮನುರ್ವರುಣಸಂಭವಃ ।
ಭೂತಕೇತುರ್ದೀಪ್ತಕೇತುರಿತ್ಯಾದ್ಯಾಸ್ತತ್ಸುತಾ ನೃಪ ॥ ೧೮ ॥

ಪಾರಾ ಮರೀಚಿಗರ್ಭಾದ್ಯಾ ದೇವಾ ಇಂದ್ರೋಽದ್ಭುತಃ ಸ್ಮೃತಃ ।
ದ್ಯುತಿಮತ್ಪ್ರಮುಖಾಸ್ತತ್ರ ಭವಿಷ್ಯಂತ್ಯೃಷಯಸ್ತತಃ ॥ ೧೯ ॥

ಆಯುಷ್ಮತೋಽಂಬುಧಾರಾಯಾಮೃಷಭೋ ಭಗವತ್ಕಲಾ ।
ಭವಿತಾ ಯೇನ ಸಂರಾದ್ಧಾಂ ತ್ರಿಲೋಕೀಂ ಭೋಕ್ಷ್ಯತೇಽದ್ಭುತಃ ॥ ೨೦ ॥

ದಶಮೋ ಬ್ರಹ್ಮ ಸಾವರ್ಣಿರುಪಶ್ಲೋಕಸುತೋ ಮಹಾನ್ ।
ತತ್ಸುತಾ ಭೂರಿಷೇಣಾದ್ಯಾ ಹವಿಷ್ಮತ್ಪ್ರಮುಖಾ ದ್ವಿಜಾಃ ॥ ೨೧ ॥

ಹವಿಷ್ಮಾನ್ಸುಕೃತಿಃ ಸತ್ಯೋ ಜಯೋ ಮೂರ್ತಿಸ್ತದಾ ದ್ವಿಜಾಃ ।
ಸುವಾಸನವಿರುದ್ಧಾದ್ಯಾ ದೇವಾಃ ಶಂಭುಃ ಸುರೇಶ್ವರಃ ॥ ೨೨ ॥

ವಿಷ್ವಕ್ಸೇನೋ ವಿಷೂಚ್ಯಾಂ ತು ಶಂಭೋಃ ಸಖ್ಯಂ ಕರಿಷ್ಯತಿ ।
ಜಾತಃ ಸ್ವಾಂಶೇನ ಭಗವಾನ್ಗೃಹೇ ವಿಶ್ವಸೃಜೋ ವಿಭುಃ ॥ ೨೩ ॥

ಮನುರ್ವೈ ಧರ್ಮಸಾವರ್ಣಿರೇಕಾದಶಮ ಆತ್ಮವಾನ್ ।
ಅನಾಗತಾಸ್ತತ್ಸುತಾಶ್ಚ ಸತ್ಯಧರ್ಮಾದಯೋ ದಶ ॥ ೨೪ ॥

ವಿಹಂಗಮಾಃ ಕಾಮಗಮಾ ನಿರ್ವಾಣರುಚಯಃ ಸುರಾಃ ।
ಇಂದ್ರಶ್ಚ ವೈಧೃತಸ್ತೇಷಾಮೃಷಯಶ್ಚಾರುಣಾದಯಃ ॥ ೨೫ ॥

ಭಗವಂತನಾದ ಮಹಾವಿಷ್ಣುವು ವಾಮನಾವತಾರವನ್ನು ತಾಳಿ ಈ ಬಲಿಯಿಂದಲೇ ಮೂರು ಹೆಜ್ಜೆ ಭೂಮಿಯನ್ನು ಕೇಳಿದ್ದನು. ಆದರೆ ಇವನು ಭಗವಂತನಿಗೆ ಮೂರು ಲೋಕಗಳನ್ನೇ ಅರ್ಪಿಸಿಬಿಟ್ಟನು. ಭಗವಂತನು ಒಮ್ಮೆ ಬಲಿಯನ್ನು ಬಂಧಿಸಿದ್ದನು. ಆದರೆ ಮತ್ತೆ ಪ್ರಸನ್ನನಾಗಿ ಅವನು ಇವನಿಗೆ ಸ್ವರ್ಗಕ್ಕಿಂತಲೂ ಶ್ರೇಷ್ಠವಾದ ಸುತಲ ಲೋಕದ ರಾಜ್ಯವನ್ನು ಕೊಟ್ಟನು. ಅವನು ಈಗಲೂ ಇಂದ್ರನಂತೆ ವಿರಾಜಮಾನನಾಗಿದ್ದಾನೆ. ಮುಂದೇ ಇವನೇ ಇಂದ್ರನಾಗುವನು ಮತ್ತು ಸಮಸ್ತ ಐಶ್ವರ್ಯದಿಂದ ಕೂಡಿದ ಇಂದ್ರಪದವಿಯನ್ನೂ ಪರಿತ್ಯಜಿಸಿ ಪರಮ ಸಿದ್ಧಿಯನ್ನು ಹೊಂದುವನು. ॥ ೧೩-೧೪॥ ಗಾಲವ, ದೀಪ್ತಿಮಾನ್, ಪರಶುರಾಮ, ಅಶ್ವತ್ಥಾಮಾ, ಕೃಪಾಚಾರ್ಯರು, ಋಷ್ಯಶೃಂಗ ಮತ್ತು ನನ್ನ ತಂದೆ ಭಗವಾನ್ ವೇದವ್ಯಾಸರು ಈ ಎಂಟನೆಯ ಮನ್ವಂತರದಲ್ಲಿ ಸಪ್ತರ್ಷಿಗಳಾಗುವರು. ಈ ಸಮಯದಲ್ಲವರು ಯೋಗಬಲದಿಂದ ತಮ್ಮ-ತಮ್ಮ ಆಶ್ರಮಗಳಲ್ಲಿ ನೆಲಸಿದ್ದಾರೆ. ॥ ೧೫-೧೬ ॥ ದೇವಗುಹ್ಯನ ಪತ್ನಿಯಾದ ಸರಸ್ವತೀ ಎಂಬುವಳ ಗರ್ಭದಲ್ಲಿ ಸಾರ್ವಭೌಮನೆಂಬ ಹೆಸರಿನಿಂದ ಭಗವಂತನು ಅವತರಿಸುವನು. ಇವನೇ ಒಡೆಯನಾದ ಇಂದ್ರನಿಂದ ಸ್ವರ್ಗದ ರಾಜ್ಯವನ್ನು ಕಿತ್ತುಕೊಂಡು ಬಲಿರಾಜನಿಗೆ ಕೊಡುವನು. ॥ ೧೭ ॥

ಪರೀಕ್ಷಿತನೇ! ವರುಣನ ಪುತ್ರನಾದ ದಕ್ಷಸಾವರ್ಣಿಯು ಒಂಭತ್ತನೆಯ ಮನು ಆಗುವನು. ಇವನಿಗೆ ಭೂತಕೇತು, ದೀಪ್ತಕೇತು ಮೊದಲಾದ ಅನೇಕ ಪುತ್ರರು ಹುಟ್ಟುವರು. ॥ ೧೮ ॥ ಪಾರ, ಮರೀಚಿಗರ್ಭ, ಮೊದಲಾದ ದೇವತಾಗಣಗಳು ಇರುವರು ಮತ್ತು ಅದ್ಭುತನೆಂಬ ಹೆಸರಿನ ಇಂದ್ರನಾಗುವನು. ಆ ಮನ್ವಂತರದಲ್ಲಿ ದ್ಯುತಿಮಾನ್ ಮೊದಲಾದವರು ಸಪ್ತರ್ಷಿಗಳಾಗುವರು. ॥ ೧೯ ॥ ಆಯುಷ್ಮಂತನ ಪತ್ನಿಯಾದ ಅಂಬುಧಾರಾ ಎಂಬುವಳ ಗರ್ಭದಿಂದ ಋಷಭನ ರೂಪದಲ್ಲಿ ಭಗವಂತನ ಕಲಾವತಾರವಾಗುವುದು. ಅದ್ಭುತನೆಂಬ ಇಂದ್ರನು ಇವನು ಕೊಟ್ಟಿರುವ ತ್ರೈಲೋಕ್ಯದ ರಾಜ್ಯವನ್ನು ಅನುಭವಿಸುವನು. ॥ ೨೦ ॥

ಉಪಶ್ಲೋಕನ ಪುತ್ರ ಬ್ರಹ್ಮಸಾವರ್ಣಿಯು ಹತ್ತನೆಯ ಮನುವಾಗುವನು. ಅವನಲ್ಲಿ ಸಮಸ್ತ ಸದ್ಗುಣಗಳು ವಾಸವಾಗಿರುವುವು. ಭೂರಿಷೇಣರೇ ಮುಂತಾದವರು ಅವನಿಗೆ ಮಕ್ಕಳಾಗುವರು. ಹವಿಷ್ಮಾನ್, ಸುಕೃತಿ, ಸತ್ಯ, ಜಯ, ಮೂರ್ತಿ ಮೊದಲಾದವರು ಸಪ್ತರ್ಷಿಗಳಾಗುವರು. ಸುವಾಸನ, ವಿರುದ್ಧ ಮೊದಲಾದವರು ದೇವತೆಗಳಾಗಿದ್ದು ಶಂಭು ಎಂಬುವನು ಇಂದ್ರನಾಗುವನು. ॥ ೨೧-೨೨ ॥ ವಿಶ್ವಸೃಜನ ಪತ್ನಿ ವಿಷೂಚಿಯ ಗರ್ಭದಲ್ಲಿ ಭಗವಂತನು ವಿಷ್ವಕ್‌ಸೇನನ ರೂಪದಲ್ಲಿ ಅಂಶಾವತಾರವನ್ನು ಎತ್ತಿ ಶಂಭುವೆಂಬ ಇಂದ್ರನೊಡನೆ ಸಖ್ಯ ಬೆಳೆಸುವನು. ॥ ೨೩ ॥

ಅತ್ಯಂತ ಸಂಯಮಿಯಾದ ಧರ್ಮಸಾವರ್ಣಿಯು ಹನ್ನೊಂದನೆಯ ಮನು ಆಗುವನು. ಅವನಿಗೆ ಸತ್ಯ, ಧರ್ಮ ಮೊದಲಾದ ಹತ್ತು ಪುತ್ರರಾಗುವರು. ॥ ೨೪ ॥ ವಿಹಂಗಮ, ಕಾಮಗಮ, ನಿರ್ವಾಣರುಚಿ ಮೊದಲಾದವರು ದೇವತೆಗಳಾಗುವರು. ಅರುಣಾದಿ ಸಪ್ತರ್ಷಿಗಳಿದ್ದು, ವೈಧೃತನೆಂಬುವನು ಇಂದ್ರನಾಗುವನು. ॥ ೨೫ ॥

ಆರ್ಯಕಸ್ಯ ಸುತಸ್ತತ್ರ ಧರ್ಮಸೇತುರಿತಿ ಸ್ಮೃತಃ ।
ವೈಧೃತಾಯಾಂ ಹರೇರಂಶಸ್ತ್ರಿಲೋಕೀಂ ಧಾರಯಿಷ್ಯತಿ ॥ ೨೬ ॥

ಆರ್ಯಕ್‌ನೆಂಬುವನ ಪತ್ನೀ ವೈಧೃತಿಯ ಗರ್ಭದಿಂದ ಧರ್ಮಸೇತುವಿನ ರೂಪದಲ್ಲಿ ಭಗವಂತನ ಅಂಶಾವತಾರವಾಗುವುದು ಮತ್ತು ಅದೇ ರೂಪದಲ್ಲಿ ಅವನು ತ್ರೈಲೋಕ್ಯವನ್ನು ರಕ್ಷಿಸುವನು. ॥ ೨೬ ॥

ಭವಿತಾ ರುದ್ರಸಾವರ್ಣೀ ರಾಜನ್ದ್ವಾದಶಮೋ ಮನುಃ ।
ದೇವವಾನುಪದೇವಶ್ಚ ದೇವಶ್ರೇಷ್ಠಾದಯಃ ಸುತಾಃ ॥ ೨೭ ॥

ಪರೀಕ್ಷಿತನೇ! ಹನ್ನೆರಡನೆಯ ಮನುವು ರುದ್ರಸಾವರ್ಣಿಯಾಗುವನು. ಅವನಿಗೆ ದೇವವಾನ್, ಉಪದೇವ, ದೇವಶ್ರೇಷ್ಠ ಮುಂತಾದವರು ಪುತ್ರರು ಹುಟ್ಟುವರು. ॥ ೨೭ ॥ ಆ ಮನ್ವಂತರದಲ್ಲಿ ಋತಧಾಮಾನೆಂಬುವನು ಇಂದ್ರನಾಗುವನು. ಹರಿತರೇ ಮುಂತಾದವರು ದೇವತೆಗಳಿರುವರು. ತಪೋಮೂರ್ತಿ, ತಪಸ್ವೀ, ಆಗ್ನೀಧ್ರಕ ಮೊದಲಾದವರು ಸಪ್ತರ್ಷಿಗಳಾಗುವರು. ॥ ೨೮ ॥ ಸತ್ಯಸಹಾಯನ ಪತ್ನೀ ಸೂನೃತಾಳ ಗರ್ಭದಿಂದ ಸ್ವಧಾಮವೆಂಬ ರೂಪದಲ್ಲಿ ಭಗವಂತನ ಅಂಶಾವತಾರವಾಗುವುದು ಹಾಗೂ ಅದೇ ರೂಪದಲ್ಲಿ ಭಗವಂತನು ಆ ಮನ್ವಂತರವನ್ನು ಪಾಲಿಸುವನು. ॥ ೨೯ ॥

ಋತಧಾಮಾ ಚ ತತ್ರೇಂದ್ರೋ ದೇವಾಶ್ಚ ಹರಿತಾದಯಃ ।
ಋಷಯಶ್ಚ ತಪೋಮೂರ್ತಿಸ್ತಪಸ್ವ್ಯಾಗ್ನೀಧ್ರಕಾದಯಃ ॥ ೨೮ ॥

ಸ್ವಧಾಮಾಖ್ಯೋ ಹರೇರಂಶಃ ಸಾಧಯಿಷ್ಯತಿ ತನ್ಮನೋಃ ।
ಅಂತರಂ ಸತ್ಯಸಹಸಃ ಸೂನೃತಾಯಾಃ ಸುತೋ ವಿಭುಃ ॥ ೨೯ ॥

ಮನುಸ್ತ್ರಯೋದಶೋ ಭಾವ್ಯೋ ದೇವಸಾವರ್ಣಿರಾತ್ಮವಾನ್ ।
ಚಿತ್ರಸೇನವಿಚಿತ್ರಾದ್ಯಾ ದೇವಸಾವರ್ಣಿದೇಹಜಾಃ ॥ ೩೦ ॥

ಪರಮ ಜಿತೇಂದ್ರಿಯನಾದ ದೇವಸಾವರ್ಣಿಯು ಹದಿಮೂರನೆಯ ಮನುವಾಗುವನು. ಚಿತ್ರಸೇನ, ವಿಚಿತ್ರ ಮುಂತಾದವರು ಅವನಿಗೆ ಪುತ್ರರಾಗಿ ಜನಿಸುವರು. ॥ ೩೦ ॥ ಸುಕರ್ಮ, ಸುತ್ರಾಮ ಮೊದಲಾದವರು ದೇವತೆಗಳಿರುವರು. ದಿವಸ್ಪತಿ ಎಂಬುವನು ಇಂದ್ರನಾಗುವನು. ನಿರ್ಮೋಕ ಮತ್ತು ತತ್ತ್ವದರ್ಶ ಮೊದಲಾದವರು ಸಪ್ತರ್ಷಿಗಳಾಗುವರು. ॥ ೩೧ ॥ ದೇವಹೋತ್ರನ ಪತ್ನೀ ಬೃಹತಿಯ ಗರ್ಭದಿಂದ ಯೋಗೇಶ್ವರನ ರೂಪದಲ್ಲಿ ಭಗವಂತನ ಅಂಶಾವತಾರವಾಗುವುದು. ಅದೇ ರೂಪದಲ್ಲಿ ದಿವಸ್ಪತಿಗೆ ಇಂದ್ರಪದವಿಯನ್ನು ಕರುಣಿಸುವನು. ॥ ೩೨ ॥

ದೇವಾಃ ಸುಕರ್ಮಸುತ್ರಾಮಸಂಜ್ಞಾ ಇಂದ್ರೋ ದಿವಸ್ಪತಿಃ ।
ನಿರ್ಮೋಕತತ್ತ್ವದರ್ಶಾದ್ಯಾ ಭವಿಷ್ಯಂತ್ಯೃಷಯಸ್ತದಾ ॥ ೩೧ ॥

ದೇವಹೋತ್ರಸ್ಯ ತನಯ ಉಪಹರ್ತಾ ದಿವಸ್ಪತೇಃ ।
ಯೋಗೇಶ್ವರೋ ಹರೇರಂಶೋ ಬೃಹತ್ಯಾಂ ಸಂಭವಿಷ್ಯತಿ ॥ ೩೨ ॥

ಮನುರ್ವಾ ಇಂದ್ರಸಾವರ್ಣಿಶ್ಚತುರ್ದಶಮ ಏಷ್ಯತಿ ।
ಉರುಗಂಭೀರಬುದ್ಧ್ಯಾದ್ಯಾ ಇಂದ್ರಸಾವರ್ಣಿವೀರ್ಯಜಾಃ ॥ ೩೩ ॥

ರಾಜೇಂದ್ರ! ಇಂದ್ರಸಾವರ್ಣಿಯು ಹದಿನಾಲ್ಕನೆಯ ಮನು ಆಗುವನು. ಉರು, ಗಂಭೀರಬುದ್ಧಿ ಮುಂತಾದವರು ಅವನಿಗೆ ಪುತ್ರರಾಗುವರು. ॥ ೩೩ ॥ ಆಗ ಪವಿತ್ರ, ಚಾಕ್ಷುಷ ಮುಂತಾದವರು ದೇವತೆಗಳಾಗುವರು. ಶುಚಿಯೆಂಬುವನು ಇಂದ್ರನಾಗುವನು. ಅಗ್ನಿ ಬಾಹು, ಶುಚಿ, ಶುದ್ಧ ಮಾಗಧ ಮುಂತಾದವರು ಸಪ್ತರ್ಷಿಗಳಾಗುವರು. ॥ ೩೪ ॥ ಆ ಸಮಯದಲ್ಲಿ ಸತ್ರಾಯಣದ ಪತ್ನೀ ವಿತಾನಾಳ ಗರ್ಭದಿಂದ ಬೃಹದ್ಭಾನುರೂಪನಾಗಿ ಭಗವಂತನು ಅವತರಿಸಿ ಕರ್ಮಕಾಂಡವನ್ನು ವಿಸ್ತರಿಸುವನು. ॥ ೩೫ ॥

ಪವಿತ್ರಾಶ್ಚಾಕ್ಷುಷಾ ದೇವಾಃ ಶುಚಿರಿಂದ್ರೋ ಭವಿಷ್ಯತಿ ।
ಅಗ್ನಿರ್ಬಾಹುಃ ಶುಚಿಃ ಶುದ್ಧೋ ಮಾಗಧಾದ್ಯಾಸ್ತಪಸ್ವಿನಃ ॥ ೩೪ ॥

ಸತ್ರಾಯಣಸ್ಯ ತನಯೋ ಬೃಹದ್ಭಾನುಸ್ತದಾ ಹರಿಃ ।
ವಿತಾನಾಯಾಂ ಮಹಾರಾಜ ಕ್ರಿಯಾತಂತೂನ್ವಿತಾಯಿತಾ ॥ ೩೫ ॥

ಪರೀಕ್ಷಿತನೇ! ಈ ಹದಿನಾಲ್ಕು ಮನ್ವಂತರಗಳು ಭೂತ, ವರ್ತಮಾನ, ಭವಿಷ್ಯ – ಮೂರೂ ಕಾಲಗಳಲ್ಲಿ ನಡೆಯುತ್ತಾ ಇರುತ್ತವೆ. ಇವುಗಳ ಮೂಲಕವೇ ಒಂದುಸಾವಿರ ಚತುರ್ಯುಗಗಳುಳ್ಳ ಕಲ್ಪದ ಗಣನೆ ಮಾಡಲಾಗುತ್ತದೆ. ॥ ೩೬ ॥

ರಾಜಂಶ್ಚತುರ್ದಶೈತಾನಿ ತ್ರಿಕಾಲಾನುಗತಾನಿ ತೇ ।
ಪ್ರೋಕ್ತಾನ್ಯೇಭಿರ್ಮಿತಃ ಕಲ್ಪೋ ಯುಗಸಾಹಸ್ರಪರ್ಯಯಃ ॥ ೩೬ ॥

*ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ಮನ್ವಂತರಾನುವರ್ಣನಂ ನಾಮ ತ್ರಯೋದಶೋಽಧ್ಯಾಯಃ ॥ ೧೩ ॥

# ಹದಿನಾಲ್ಕನೆಯ ಅಧ್ಯಾಯ

## ಮನುವೇ ಮೊದಲಾದವರ ಕರ್ತವ್ಯ ನಿರೂಪಣೆ

ರಾಜೋವಾಚ

ಮನ್ವಂತರೇಷು ಭಗವನ್ಯಥಾ ಮನ್ವಾದಯಸ್ತ್ವಿಮೇ ।
ಯಸ್ಮಿನ್ಕರ್ಮಣಿ ಯೇ ಯೇನ ನಿಯುಕ್ತಾಸ್ತದ್ವದಸ್ವ ಮೇ ॥ ೧ ॥

ಋಷಿರುವಾಚ

ಮನವೋ ಮನುಪುತ್ರಾಶ್ಚ ಮುನಯಶ್ಚ ಮಹೀಪತೇ ।
ಇಂದ್ರಾಃ ಸುರಗಣಾಶ್ಚೈವ ಸರ್ವೇ ಪುರುಷಶಾಸನಾಃ ॥ ೨ ॥

ಯಜ್ಞಾದಯೋ ಯಾಃ ಕಥಿತಾಃ ಪೌರುಷ್ಯಸ್ತನವೋ ನೃಪ ।
ಮನ್ವಾದಯೋ ಜಗದ್ಯಾತ್ರಾಂ ನಯಂತ್ಯಾಭಿಃ ಪ್ರಚೋದಿತಾ ॥ ೩ ॥

ಚತುರ್ಯುಗಾಂತೇ ಕಾಲೇನ ಗ್ರಸ್ತಾನ್‌ಶ್ರುತಿಗಣಾನ್ಯಥಾ ।
ತಪಸಾ ಋಷಯೋಽಪಶ್ಯನ್ಯತೋ ಧರ್ಮಃ ಸನಾತನಃ ॥ ೪ ॥

ತತೋ ಧರ್ಮಂ ಚತುಷ್ಪಾದಂ ಮನವೋ ಹರಿಣೋದಿತಾಃ ।
ಯುಕ್ತಾಃ ಸಂಚಾರಯಂತ್ಯದ್ಧಾ ಸ್ವೇ ಸ್ವೇ ಕಾಲೇ ಮಹೀಂ ನೃಪ ॥ ೫ ॥

ಪಾಲಯಂತಿ ಪ್ರಜಾಪಾಲಾ ಯಾವದಂತಂ ವಿಭಾಗಶಃ ।
ಯಜ್ಞಭಾಗಭುಜೋ ದೇವಾ ಯೇ ಚ ತತ್ರಾನ್ವಿತಾಶ್ಚ ತೈಃ ॥ ೬ ॥

ಇಂದ್ರೋ ಭಗವತಾ ದತ್ತಾಂ
ತ್ರೈಲೋಕ್ಯಶ್ರಿಯಮೂರ್ಜಿತಾಮ್ ।
ಭುಂಜಾನಃ ಪಾತಿ ಲೋಕಾಂ-
ಸ್ತ್ರೀನ್ಕಾಮಂ ಲೋಕೇ ಪ್ರವರ್ಷತಿ ॥ ೭ ॥

ಜ್ಞಾನಂ ಚಾನುಯುಗಂ ಬ್ರೂತೇ ಹರಿಃ ಸಿದ್ಧಸ್ವರೂಪಧೃಕ್ ।
ಋಷಿರೂಪಧರಃ ಕರ್ಮ ಯೋಗಂ ಯೋಗೇಶರೂಪಧೃಕ್ ॥ ೮ ॥

ಸರ್ಗಂ ಪ್ರಜೇಶರೂಪೇಣ ದಸ್ಯೂನ್ಹನ್ಯಾತ್ಸ್ವರಾಡ್ವಪುಃ ।
ಕಾಲರೂಪೇಣ ಸರ್ವೇಷಾಮಭಾವಾಯ ಪೃಥಗ್ಗುಣಃ ॥ ೯ ॥

**ಪರೀಕ್ಷಿದ್ರಾಜನು ಕೇಳಿದನು** – ಪೂಜ್ಯರೇ! ತಾವು ವರ್ಣಿಸಿದ ಈ ಮನುಗಳು, ಮನುಪುತ್ರರು, ಸಪ್ತರ್ಷಿಗಳು ತಮ್ಮ-ತಮ್ಮ ಮನ್ವಂತರಗಳಲ್ಲಿ ಯಾರಿಂದ ನಿಯುಕ್ತರಾಗುತ್ತಾರೆ? ಯಾವ-ಯಾವ ಕರ್ಮಗಳನ್ನು ಹೇಗೇಗೆ ಮಾಡುತ್ತಾರೆ? ಇದನ್ನು ತಾವು ದಯಮಾಡಿ ನನಗೆ ಹೇಳುವವರಾಗಿರಿ. ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಮನುಗಳನ್ನು, ಮನುಪುತ್ರರನ್ನು, ಸಪ್ತರ್ಷಿಗಳನ್ನು, ದೇವತೆಗಳನ್ನು, ಇಂದ್ರನನ್ನು ನಿಯುಕ್ತಗೊಳಿಸುವವನು ಸ್ವತಃ ಭಗವಂತನೇ ಆಗಿರುವನು. ॥ ೨ ॥ ರಾಜನೇ! ಯಜ್ಞಪುರುಷನೇ ಮೊದಲಾದ ಭಗವಂತನ ಅಂಶಾವತಾರಗಳನ್ನು ನಾನು ಹೇಳಿರುವೆನಲ್ಲ, ಅವುಗಳ ಪ್ರೇರಣೆಯಿಂದಲೇ ಮನುವೇ ಮೊದಲಾದವರು ಲೋಕದ ರಕ್ಷಣೆಯ ಕಾರ್ಯವನ್ನು ನಿರ್ವಹಿಸುತ್ತಾರೆ. ॥ ೩ ॥ ಕೃತ, ತ್ರೇತ, ದ್ವಾಪರ, ಕಲಿಗಳೆಂಬ ಚತುರ್ಯುಗಗಳ ಅಂತ್ಯದಲ್ಲಿ ಕಾಲಾನುಗುಣವಾಗಿ ನಷ್ಟವಾದ ವೇದಗಳನ್ನು ಸಪ್ತರ್ಷಿಗಳು ತಮ್ಮ ತಪಸ್ಸಿನಿಂದ ಪುನಃ ಕಂಡುಕೊಳ್ಳುವರು. ಆ ವೇದಗಳ ಸಮೂಹದಿಂದಲೇ ಸನಾತನ ಧರ್ಮದ ರಕ್ಷಣೆಯಾಗುತ್ತದೆ. ॥ ೪ ॥ ರಾಜೇಂದ್ರಾ! ಭಗವಂತನ ಪ್ರೇರಣೆಯಿಂದ ತಮ್ಮ-ತಮ್ಮ ಮನ್ವಂತರಗಳಲ್ಲಿ ಪ್ರಯತ್ನಪೂರ್ವಕ ಎಲ್ಲ ಮನುಗಳು ಪೃಥಿವಿಯಲ್ಲಿ ನಾಲ್ಕು ಚರಣಗಳಿಂದಲೂ ಪರಿಪೂರ್ಣವಾದ ಧರ್ಮದ ಅನುಷ್ಠಾನವನ್ನು ಮಾಡಿಸುತ್ತಾರೆ. ॥ ೫ ॥ ಮನುಪುತ್ರರು ಆಯಾ ಮನ್ವಂತರದ ಕಡೆಯವರೆಗೂ ಕಾಲ-ದೇಶಗಳನ್ನು ವಿಭಾಗಿಸಿಕೊಂಡು ಪ್ರಜಾಪಾಲನೆಯನ್ನೂ ಧರ್ಮದ ರಕ್ಷಣೆಯನ್ನೂ ಮಾಡುತ್ತಿರುತ್ತಾರೆ. ಪಂಚಮಹಾಯಜ್ಞಗಳಲ್ಲಿ ಭೋಕ್ತೃಗಳಾದ ಋಷಿಗಳೂ, ಪಿತೃಗಳೂ, ಭೂತಗಳೂ, ಮನುಷ್ಯರೂ ಇವರೊಡನೆ ದೇವತೆಗಳೂ ಆಯಾ ಮನ್ವಂತರದಲ್ಲಿ ನಡೆಯುವ ಯಜ್ಞಗಳ ಹವಿರ್ಭಾಗಗಳನ್ನು ಸ್ವೀಕರಿಸುತ್ತಾರೆ. ॥ ೬ ॥ ಇಂದ್ರನು ಭಗವಂತನಿಂದ ಕೊಡಲ್ಪಟ್ಟ ಸಂಪತ್ಸಮೃದ್ಧವಾದ ಮೂರು ಲೋಕಗಳ ಐಶ್ವರ್ಯವನ್ನೂ ಉಪಭೋಗಿಸುತ್ತಾ ಪ್ರಜೆಯ ಪಾಲನೆಯನ್ನು ಮಾಡುತ್ತಾನೆ. ಪ್ರಪಂಚದಲ್ಲಿ ಯಥೇಷ್ಟವಾಗಿ ಮಳೆಗರೆಯುವ ಅಧಿಕಾರವು ಇಂದ್ರನಿಗೇ ಇದೆ. ॥ ೭ ॥ ಭಗವಂತನು ಪ್ರತಿ ಯುಗ-ಯುಗಗಳಲ್ಲಿ ಸನಕಾದಿ ಸಿದ್ಧರ ರೂಪಗಳನ್ನು ಧರಿಸಿ ಜ್ಞಾನವನ್ನೂ, ಯಾಜ್ಞವಲ್ಕ್ಯಾದಿ ಋಷಿಗಳ ರೂಪದಿಂದ ಕರ್ತವ್ಯವನ್ನೂ, ದತ್ತಾತ್ರೇಯಾದಿ ಯೋಗೇಶ್ವರರ ರೂಪದಿಂದ ಯೋಗವನ್ನೂ ಉಪದೇಶಮಾಡುತ್ತಾನೆ. ॥ ೮ ॥ ಅವನು ಮರೀಚಿಯೇ ಮುಂತಾದ ಪ್ರಜಾಪತಿಗಳ ರೂಪದಿಂದ ಸೃಷ್ಟಿಯ ವಿಸ್ತಾರವನ್ನು ಮಾಡುತ್ತಾನೆ. ಸಾಮ್ರಾಟನ ರೂಪದಿಂದ ದಸ್ಯುಗಳನ್ನು ಸಂಹರಿಸುತ್ತಾನೆ. ಶೀತೋಷ್ಣವೇ ಮೊದಲಾದ ವಿಭಿನ್ನ ಗುಣಗಳನ್ನು ಧರಿಸಿ ಕಾಲರೂಪದಿಂದ ಎಲ್ಲರನ್ನು ಸಂಹಾರದ ಕಡೆಗೆ ಒಯ್ಯುವನು. ॥ ೯ ॥ ನಾಮ ಮತ್ತು ರೂಪಗಳ ಮಾಯೆಯಿಂದ ಪ್ರಾಣಿಗಳ

ಸ್ತೂಯಮಾನೋ ಜನೈರೇಭಿ-
ರ್ಮಾಯಯಾ ನಾಮರೂಪಯಾ ।
ವಿಮೋಹಿತಾತ್ಮಭಿರ್ನಾನಾ-
ದರ್ಶನೈರ್ನ ಚ ದೃಶ್ಯತೇ ॥ ೧೦ ॥

ಬುದ್ಧಿಯು ವಿಮೂಢವಾಗಿಬಿಟ್ಟಿದೆ. ಈ ಕಾರಣದಿಂದಲೇ ಅನೇಕ ಪ್ರಕಾರದ ದರ್ಶನ ಶಾಸ್ತ್ರಗಳ ಮೂಲಕ ಭಗವಂತನ ಮಹಿಮೆಯನ್ನೇ ಕೀರ್ತಿಸುತ್ತಿದ್ದರೂ ಅವನ ವಾಸ್ತವಿಕ ಸ್ವರೂಪವನ್ನು ತಿಳಿಯದೇ ಹೋಗುವರು. ॥ ೧೦ ॥

ಏತತ್ಕಲ್ಪವಿಕಲ್ಪಸ್ಯ ಪ್ರಮಾಣಂ ಪರಿಕೀರ್ತಿತಮ್ ।
ಯತ್ರ ಮನ್ವಂತರಾಣ್ಯಾಹುಶ್ಚತುರ್ದಶ ಪುರಾವಿದಃ ॥ ೧೧ ॥

ಪರೀಕ್ಷಿತನೇ! ಹೀಗೆ ನಾನು ನಿನಗೆ ಮಹಾಕಲ್ಪ ಮತ್ತು ಅವಾಂತರ ಕಲ್ಪದ ಪರಿಮಾಣವನ್ನು ಹೇಳಿದೆ. ಪುರಾಣತತ್ತ್ವವನ್ನು ಬಲ್ಲ ವಿದ್ವಾಂಸರು ಪ್ರತಿಯೊಂದು ಅವಾಂತರ ಕಲ್ಪದಲ್ಲಿ ಹದಿನಾಲ್ಕು ಮನ್ವಂತರಗಳನ್ನು ಹೇಳಿರುವರು. ॥ ೧೧ ॥

***ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ಚತುರ್ದಶೋಽಧ್ಯಾಯಃ ॥ ೧೪ ॥**

# ಹದಿನೈದನೆಯ ಅಧ್ಯಾಯ

## ಬಲಿಚಕ್ರವರ್ತಿಯು ಸ್ವರ್ಗವನ್ನು ಜಯಿಸಿದುದು – ವಾಮನಾವತಾರದ ಕಥೆ

*ರಾಜೋವಾಚ*

ಬಲೇಃ ಪದತ್ರಯಂ ಭೂಮೇಃ ಕಸ್ಮಾದ್ಧರಿರಯಾಚತ ।
ಭೂತ್ವೇಶ್ವರಃ ಕೃಪಣವಲ್ಲಬ್ಧಾರ್ಥೋಽಪಿ ಬಬಂಧ ತಮ್ ॥ ೧ ॥

ಏತದ್ವೇದಿತುಮಿಚ್ಛಾಮೋ ಮಹತ್ಕೌತೂಹಲಂ ಹಿ ನಃ ।
ಯಜ್ಞೇಶ್ವರಸ್ಯ ಪೂರ್ಣಸ್ಯ ಬಂಧನಂ ಚಾಪ್ಯನಾಗಸಃ ॥ ೨ ॥

**ಪರೀಕ್ಷಿದ್ರಾಜನು ಕೇಳಿದನು** – ಪೂಜ್ಯರೇ! ಶ್ರೀಹರಿಯು ಸ್ವಯಂ ಎಲ್ಲರಿಗೂ ಸ್ವಾಮಿಯಾಗಿದ್ದಾನೆ. ಹೀಗಿರುವಾಗ ಅವನು ದೀನನಂತೆ ಬಲಿಚಕ್ರವರ್ತಿಯ ಬಳಿ ಮೂರು ಹೆಜ್ಜೆ ಭೂಮಿಯನ್ನು ಏಕೆ ಬೇಡಿದನು? ಬೇಡಿದುದನ್ನು ಪಡೆದುಕೊಂಡ ಮೇಲೆ ಶ್ರೀಹರಿಯು ಬಲಿಯನ್ನು ಏಕೆ ಬಂಧಿಸಿದನು? ॥ ೧ ॥ ಪರಿಪೂರ್ಣಸ್ವರೂಪನೂ, ಯಜ್ಞೇಶ್ವರನೂ ಆದ ಭಗವಂತನು ಯಾಚಿಸಿದ್ದು ಮತ್ತು ನಿರಪರಾಧಿಯಾದ ಬಲಿಯನ್ನು ಬಂಧಿಸಿದ್ದು ಇವೆರಡೂ ನನಗೆ ಬಹಳ ಆಶ್ಚರ್ಯವುಂಟುಮಾಡಿದೆ. ಇದು ಹೇಗೆ ಸಂಭವಿಸಿತು? ಇವೆಲ್ಲವನ್ನು ನಾವು ಕೇಳಲು ಬಯಸುತ್ತೇವೆ. ॥ ೨ ॥

*ಶ್ರೀಶುಕ ಉವಾಚ*

ಪರಾಜಿತಶ್ರೀರಸುಭಿಶ್ಚ ಹಾಪಿತೋ
ಹೀಂದ್ರೇಣ ರಾಜನ್ಭೃಗುಭಿಃ ಸ ಜೀವಿತಃ ।
ಸರ್ವಾತ್ಮನಾ ತಾನಭಜದ್ಭೃಗೂನ್ಬಲಿಃ
ಶಿಷ್ಯೋ ಮಹಾತ್ಮಾರ್ಥನಿವೇದನೇನ ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಇಂದ್ರನು ಬಲಿಯನ್ನು ಪರಾಭವಗೊಳಿಸಿ ಅವನ ಸಂಪತ್ತನ್ನೂ ಕಸಿದುಕೊಂಡನಲ್ಲದೆ ಅವನ ಪ್ರಾಣಗಳನ್ನೂ ಕಿತ್ತುಕೊಂಡಾಗ ಭೃಗುನಂದನ ಶುಕ್ರಾಚಾರ್ಯರು ಅವನನ್ನು ಸಂಜೀವನೀ ವಿದ್ಯೆಯಿಂದ ಬದುಕಿಸಿದರು. ಇದರಿಂದ ಶುಕ್ರಾಚಾರ್ಯರ ಶಿಷ್ಯನಾದ ಮಹಾತ್ಮಾ ಬಲಿಯು ತನ್ನ ಸರ್ವಸ್ವವನ್ನು ಅವರ ಚರಣಗಳಲ್ಲಿ ಅರ್ಪಿಸಿದನು ಹಾಗೂ ಅವನು ತನು-ಮನದಿಂದ ಗುರುಗಳೊಂದಿಗೆ ಸಮಸ್ತ ಭೃಗುವಂಶೀಯರಾದ ಬ್ರಾಹ್ಮಣರ ಸೇವೆ ಮಾಡತೊಡಗಿದನು. ॥ ೩ ॥

ತಂ ಬ್ರಾಹ್ಮಣಾ ಭೃಗವಃ ಪ್ರೀಯಮಾಣಾ
ಅಯಾಜಯನ್ವಿಶ್ವಜಿತಾ ತ್ರಿಣಾಕಮ್ ।
ಜಿಗೀಷಮಾಣಂ ವಿಧಿನಾಭಿಷಿಚ್ಯ
ಮಹಾಭಿಷೇಕೇಣ ಮಹಾನುಭಾವಾಃ ॥ ೪ ॥

ಇದರಿಂದ ಪ್ರಭಾವಶಾಲಿಗಳಾದ ಭೃಗುವಂಶೀ ಬ್ರಾಹ್ಮಣರು ಅವನ ಮೇಲೆ ಬಹಳ ಪ್ರಸನ್ನರಾದರು. ಸ್ವರ್ಗವನ್ನು ಜಯಿಸಬೇಕೆಂಬ ಇಚ್ಛೆಯುಳ್ಳ ಬಲಿಚಕ್ರವರ್ತಿಗೆ ಮಹಾನುಭಾವರಾದ ಅವರು ಮಹಾಭಿಷೇಕದ ವಿಧಿಯಿಂದ ಅಭಿಷೇಕಮಾಡಿ ಅವನಿಂದ ವಿಶ್ವಜಿತ್ ಎಂಬ ಯಜ್ಞವನ್ನು ಮಾಡಿಸಿದರು. ॥ ೪ ॥ ಯಜ್ಞದ ವಿಧಿಯಿಂದ ಹವಿಸ್ಸುಗಳ ಮೂಲಕ ಯಜ್ಞೇಶ್ವರನನ್ನು ಪೂಜಿಸಿದಾಗ ಅಗ್ನಿಕುಂಡದಿಂದ ಇಂದ್ರನ

ತತೋ ರಥಃ ಕಾಂಚನಪಟ್ಟನದ್ಧೋ
ಹಯಾಶ್ಚ ಹರ್ಯಶ್ವತುರಂಗವರ್ಣಾಃ ।
ಧ್ವಜಶ್ಚ ಸಿಂಹೇನ ವಿರಾಜಮಾನೋ
ಹುತಾಶನಾದಾಸ ಹವಿರ್ಭಿರಿಷ್ಟಾತ್ ॥ ೫ ॥

ಧನುಶ್ಚ ದಿವ್ಯಂ ಪುರಟೋಪನದ್ಧಂ
ತೂಣಾವರಿಕ್ತೌ ಕವಚಂ ಚ ದಿವ್ಯಮ್ ।
ಪಿತಾಮಹಸ್ತಸ್ಯ ದದೌ ಚ ಮಾಲಾ-
ಮಮ್ಲಾನಪುಷ್ಪಾಂ ಜಲಜಂ ಚ ಶುಕ್ರಃ ॥ ೬ ॥

ಏವಂ ಸ ವಿಪ್ರಾರ್ಜಿತಯೋಧನಾರ್ಥ-
ಸ್ತೈಃ ಕಲ್ಪಿತಸ್ವಸ್ತ್ಯಯನೋಽಥ ವಿಪ್ರಾನ್ ।
ಪ್ರದಕ್ಷಿಣೀಕೃತ್ಯ ಕೃತಪ್ರಣಾಮಃ
ಪ್ರಹ್ರಾದಮಾಮಂತ್ರ್ಯ ನಮಶ್ಚಕಾರ ॥ ೭ ॥

ಅಥಾರುಹ್ಯ ರಥಂ ದಿವ್ಯಂ ಭೃಗುದತ್ತಂ ಮಹಾರಥಃ ।
ಸುಸ್ರಗ್ಧರೋಽಥ ಸಂನಹ್ಯ ಧನ್ವೀ ಖಡ್ಗೀ ಧೃತೇಷುಧಿಃ ॥ ೮ ॥

ಹೇಮಾಂಗದಲಸದ್ಬಾಹುಃ ಸ್ಫುರನ್ಮಕರಕುಂಡಲಃ ।
ರರಾಜ ರಥಮಾರೂಢೋ ಧಿಷ್ಣ್ಯಸ್ಥ ಇವ ಹವ್ಯವಾಟ್ ॥ ೯ ॥

ತುಲ್ಯೈಶ್ವರ್ಯಬಲಶ್ರೀಭಿಃ ಸ್ವಯೂಥೈರ್ದೈತ್ಯಯೂಥಪೈಃ ।
ಪಿಬದ್ಭಿರಿವ ಖಂ ದೃಗ್ಭಿರ್ದಹದ್ಭಿಃ ಪರಿಧೀನಿವ ॥ ೧೦ ॥

ವೃತೋ ವಿಕರ್ಷನ್ಮಹತೀಮಾಸುರೀಂ ಧ್ವಜಿನೀಂ ವಿಭುಃ ।
ಯಯಾವಿಂದ್ರಪುರೀಂ ಸ್ವೃದ್ಧಾಂ ಕಂಪಯನ್ನಿವ ರೋದಸೀ ॥ ೧೧ ॥

ರಮ್ಯಾಮುಪವನೋದ್ಯಾನೈಃ ಶ್ರೀಮದ್ಭಿರ್ನಂದನಾದಿಭಿಃ ।
ಕೂಜದ್ವಿಹಂಗಮಿಥುನೈರ್ಗಾಯನ್ಮತ್ತಮಧುವ್ರತೈಃ ॥ ೧೨ ॥

ಪ್ರವಾಲಫಲಪುಷ್ಪೋರುಭಾರಶಾಖಾಮರದ್ರುಮೈಃ ।
ಹಂಸಸಾರಸಚಕ್ರಾಹ್ವಕಾರಂಡವಕುಲಾಕುಲಾಃ ।
ನಲಿನ್ಯೋ ಯತ್ರ ಕ್ರೀಡಂತಿ ಪ್ರಮದಾಃ ಸುರಸೇವಿತಾಃ ॥ ೧೩ ॥

ಆಕಾಶಗಂಗಯಾ ದೇವ್ಯಾ ವೃತಾಂ ಪರಿಖಭೂತಯಾ ।
ಪ್ರಾಕಾರೇಣಾಗ್ನಿವರ್ಣೇನ ಸಾಟ್ಟಾಲೇನೋನ್ನತೇನ ಚ ॥ ೧೪ ॥

ಕುದುರೆಗಳಂತಿರುವ ಹಸಿರುಬಣ್ಣವುಳ್ಳ ಕುದುರೆಗಳಿಂದಲೂ, ಸಿಂಹದ ಚಿಹ್ನೆಯಿಂದ ವಿರಾಜಿಸುತ್ತಿದ್ದ ಧ್ವಜದಿಂದಲೂ ಕೂಡಿದ ಚಿನ್ನದ ಪರಿಕರಗಳಿಂದ ಸಮಲಂಕೃತವಾದ ರಥವೊಂದು ಹೊರಬಂದಿತು. ॥ ೫ ॥ ಜೊತೆಗೆ ಸ್ವರ್ಣಭೂಷಿತ ದಿವ್ಯ ಧನುಸ್ಸೂ, ಅಕ್ಷಯವಾದ ಬತ್ತಳಿಕೆಯೂ, ದಿವ್ಯವಾದ ಅಭೇದ್ಯಕವಚವೂ ಪ್ರಕಟಗೊಂಡವು. ಬಳಿಕ ಬ್ರಹ್ಮದೇವರು ಬಾಡದೇ ಇರುವ ಕಮಲದ ಮಾಲೆಯನ್ನೂ, ಶುಕ್ರಾಚಾರ್ಯರೂ ಒಂದು ಶಂಖವನ್ನು ಅವನಿಗೆ ಅನುಗ್ರಹಿಸಿದರು. ॥ ೬ ॥ ಹೀಗೆ ಬ್ರಾಹ್ಮಣರ ಕೃಪೆಯಿಂದ ಯುದ್ಧದ ಸಾಮಗ್ರಿಯನ್ನು ಪಡೆದುಕೊಂಡು, ಅವರಿಂದ ಸ್ವಸ್ತಿವಾಚನವನ್ನು ಮಾಡಿಸಿ ಬಲಿಚಕ್ರವರ್ತಿಯು ಆ ಬ್ರಾಹ್ಮಣರಿಗೆ ಪ್ರದಕ್ಷಿಣೆಮಾಡಿ ನಮಸ್ಕರಿಸಿದನು. ಬಳಿಕ ಅಜ್ಜನಾದ ಪ್ರಹ್ಲಾದನಿಂದಲೂ ದಿಗ್ವಿಜಯಕ್ಕೆ ಅನುಮತಿಯನ್ನು ಪಡೆದು ಅವನಿಗೂ ನಮಸ್ಕರಿಸಿದನು. ॥ ೭ ॥ ಮತ್ತೆ ಬ್ರಹ್ಮನು ಅನುಗ್ರಹಿಸಿದ ಬಾಡದಿರುವ ಕಮಲದ ಮಾಲೆಯನ್ನು ಧರಿಸಿ, ಭೃಗುವಂಶೀಯ ಬ್ರಾಹ್ಮಣರು ಕೊಟ್ಟಿರುವ ದಿವ್ಯವಾದ ರಥವನ್ನೇರಿ, ಧನುಸ್ಸನ್ನು ಹಿಡಿದುಕೊಂಡು, ಕತ್ತಿಯನ್ನು ಸೊಂಟಕ್ಕೆ ಬಿಗಿದು, ಬರಿದಾಗದ ಬತ್ತಳಿಕೆಯನ್ನು ಬೆನ್ನಿಗೇರಿಸಿದನು. ॥ ೮ ॥ ಸುವರ್ಣಮಯ ಭುಜಕೀರ್ತಿಗಳಿಂದಲೂ, ಹೊಳೆಯುತ್ತಿರುವ ಮಕರಾಕಾರದ ಕುಂಡಲಗಳಿಂದಲೂ ಶೋಭಿಸುತ್ತಿದ್ದನು. ರಥಾರೂಢನಾಗಿ ಕುಳಿತಿರುವ ಬಲಿಚಕ್ರವರ್ತಿಯು ಅಗ್ನಿಕುಂಡದಲ್ಲಿ ಪ್ರಜ್ವಲಿಸುವ ಅಗ್ನಿಯಂತೆ ಕಂಗೊಳಿಸುತ್ತಿದ್ದನು. ॥ ೯ ॥ ಅವನ ಜೊತೆಗೆ ಅವನಂತೆ ಐಶ್ವರ್ಯ, ಬಲ, ಪರಾಕ್ರಮಗಳಿಂದ ಕೂಡಿದ ದೈತ್ಯಸೇನಾಪತಿಗಳು ತಮ್ಮ-ತಮ್ಮ ಸೈನ್ಯದೊಂದಿಗೆ ಹೊರಟರು. ಬಲಿಚಕ್ರವರ್ತಿಯು ಕ್ರೋಧತುಂಬಿದ ಕಣ್ಣುಗಳಿಂದಲೇ ಆಕಾಶವನ್ನು ಕುಡಿಯುತ್ತಿರುವನೋ, ಎಂಬಂತೆಯೂ ದಿಕ್ಕುಗಳನ್ನು ಸುಟ್ಟುಬಿಡುತ್ತಿರುವನೋ ಎಂದು ಕಾಣುತ್ತಿತ್ತು. ॥ ೧೦ ॥ ರಾಕ್ಷಸರ ದೊಡ್ಡದಾದ ಸೈನ್ಯದೊಡನೆ ಪ್ರಭುವಾದ ಬಲಿಯು ಭೂಮ್ಯಾಕಾಶಗಳನ್ನು ನಡುಗಿಸುತ್ತಿರುವನೋ ಎಂಬಂತೆ ಗರ್ಜಿಸುತ್ತಾ ಸಂಪತ್ಸಮೃದ್ಧವಾದ ಅಮರಾವತಿಗೆ ಧಾಳಿಯಿಟ್ಟನು. ॥ ೧೧ ॥

ದೇವತೆಗಳ ಆ ರಾಜಧಾನೀ ಅಮರಾವತಿಯು ಭಾರೀ ಸುಂದರವಾದ ನಂದನವನವೇ ಮೊದಲಾದ ಉದ್ಯಾನವನಗಳಿಂದಲೂ, ಉಪವನಗಳಿಂದಲೂ ಪರಿಶೋಭಿಸುತ್ತಿತ್ತು. ಆ ಉದ್ಯಾನ-ಉಪವನಗಳಲ್ಲಿ ಪಕ್ಷಿಗಳ ಜೋಡಿಗಳೂ, ಮಧುಪಾನದಿಂದ ಮತ್ತೇರಿದ ದುಂಬಿಗಳು ಉಲಿಯುತ್ತಿದ್ದವು. ॥ ೧೨ ॥ ನವಪಲ್ಲವಗಳಿಂದಲೂ, ಫಲ-ಪುಷ್ಪಗಳಿಂದಲೂ, ಕಲ್ಪವೃಕ್ಷದ ಕೊಂಬೆಗಳು ಶೋಭಿಸುತ್ತಿದ್ದವು. ಅಲ್ಲಿಯ ಸರೋವರಗಳು ಹಂಸ, ಸಾರಸ, ಚಕ್ರವಾಕ, ಕಾರಂಡವ ಮೊದಲಾದ ಪಕ್ಷಿಗಳಿಂದ ತುಂಬಿದ್ದವು. ಆ ಸರೋವರಗಳಲ್ಲೇ ದೇವತೆಗಳಿಂದ ಸಮ್ಮಾನಿತರಾದ ದೇವಾಂಗನೆಯರು ಜಲಕ್ರೀಡೆಯಾಡುತ್ತಿದ್ದರು. ॥ ೧೩ ॥ ಜ್ಯೋತಿರ್ಮಯ ಆಕಾಶಗಂಗೆಯು ಕಂದಕದಂತೆ ಅಮರಾವತಿಯನ್ನು ಸುತ್ತಲೂ ಆವರಿಸಿಕೊಂಡಿತ್ತು. ಅಮರಾವತಿಯ ಸುತ್ತಲೂ ಎತ್ತರವಾದ ಬೆಂಕಿಯಂತೆ ಜಾಜ್ವಲ್ಯಮಾನವಾಗಿದ್ದ, ಉಪ್ಪರಿಗೆಯಿಂದ ಕೂಡಿದ ಸುವರ್ಣಮಯವಾದ ಪ್ರಾಕಾರವಿದ್ದಿತು. ॥ ೧೪ ॥ ಆ ಪ್ರಾಕಾರದ ಸುತ್ತಲೂ

ರುಕ್ಮಪಟ್ಟಕಪಾಟೈಶ್ಚ ದ್ವಾರೈಃ ಸ್ಫಟಿಕಗೋಪುರೈಃ ।
ಜುಷ್ಟಾಂ ವಿಭಕ್ತಪ್ರಪಥಾಂ ವಿಶ್ವಕರ್ಮವಿನಿರ್ಮಿತಾಮ್ ॥ ೧೫ ॥

ಸಭಾಚತ್ವರರಥ್ಯಾಢ್ಯಾಂ ವಿಮಾನೈರ್ನ್ಯರ್ಬುದೈರ್ಯುತಾಮ್ ।
ಶೃಂಗಾಟಕೈರ್ಮಣಿಮಯೈರ್ವಜ್ರವಿದ್ರುಮವೇದಿಭಿಃ ॥ ೧೬ ॥

ಯತ್ರ ನಿತ್ಯವಯೋರೂಪಾಃ ಶ್ಯಾಮಾ ವಿರಜವಾಸಸಃ ।
ಭ್ರಾಜಂತೇ ರೂಪವನ್ನಾರ್ಯೋ ಹ್ಯರ್ಚಿರ್ಭಿರಿವ ವಹ್ನಯಃ ॥ ೧೭ ॥

ಸುರಸ್ತ್ರೀಕೇಶವಿಭ್ರಷ್ಟನವಸೌಗಂಧಿಕಸ್ರಜಾಮ್ ।
ಯತ್ರಾಮೋದಮುಪಾದಾಯ ಮಾರ್ಗ ಆವಾತಿ ಮಾರುತಃ ॥ ೧೮ ॥

ಹೇಮಜಾಲಾಕ್ಷನಿರ್ಗಚ್ಛದ್ಧೂಮೇನಾಗುರುಗಂಧಿನಾ ।
ಪಾಂಡುರೇಣ ಪ್ರತಿಚ್ಛನ್ನಮಾರ್ಗೇ ಯಾಂತಿ ಸುರಪ್ರಿಯಾಃ ॥ ೧೯ ॥

ಮುಕ್ತಾವಿತಾನೈರ್ಮಣಿಹೇಮಕೇತುಭಿ-
ರ್ನಾನಾಪತಾಕಾವಲಭೀಭಿರಾವೃತಾಮ್ ।
ಶಿಖಂಡಿಪಾರಾವತಭೃಂಗನಾದಿತಾಂ
ವೈಮಾನಿಕಸ್ತ್ರೀಕಲಗೀತಮಂಗಲಾಮ್ ॥ ೨೦ ॥

ಮೃದಂಗಶಂಖಾನಕದುಂದುಭಿಸ್ವನೈಃ
ಸತಾಲವೀಣಾಮುರಜರ್ಷ್ಟಿವೇಣುಭಿಃ ।
ನೃತ್ಯೈಃ ಸವಾದ್ಯೈರುಪದೇವಗೀತಕೈ-
ರ್ಮನೋರಮಾಂ ಸ್ವಪ್ರಭಯಾ ಜಿತಪ್ರಭಾಮ್ ॥ ೨೧ ॥

ಯಾಂ ನ ವ್ರಜಂತ್ಯಧರ್ಮಿಷ್ಠಾಃ ಖಲಾ ಭೂತದ್ರುಹಃ ಶಠಾಃ ।
ಮಾನಿನಃ ಕಾಮಿನೋ ಲುಬ್ಧಾ ಏಭಿರ್ಹೀನಾ ವ್ರಜಂತಿ ಯತ್ ॥ ೨೨ ॥

ತಾಂ ದೇವಧಾನೀಂ ಸ ವರೂಥಿನೀಪತಿ-
ರ್ಬಹಿಃ ಸಮಂತಾದ್ರುರುಧೇ ಪೃತನ್ಯಯಾ ।
ಆಚಾರ್ಯದತ್ತಂ ಜಲಜಂ ಮಹಾಸ್ವನಂ
ದಧ್ಮೌ ಪ್ರಯುಂಜನ್ಭಯಮಿಂದ್ರಯೋಷಿತಾಮ್ ॥ ೨೩ ॥

ಚಿನ್ನದ ಕವಾಟಗಳಿಂದ ಕೂಡಿದ ಮಹಾದ್ವಾರಗಳೂ, ಸ್ಫಟಿಕ ಮಯವಾದ ಗೋಪುರಗಳಿದ್ದವು. ಅಲ್ಲಿ ಬೇರೆ-ಬೇರೆಯಾದ ದೊಡ್ಡ-ದೊಡ್ಡ ರಾಜಮಾರ್ಗಗಳಿದ್ದು ಸ್ವತಃ ವಿಶ್ವಕರ್ಮನೇ ಆ ನಗರವನ್ನು ನಿರ್ಮಿಸಿದ್ದನು. ॥ ೧೫ ॥ ಸಭಾಭವನಗಳಿಂದಲೂ, ಚೌಕಗಳಿಂದಲೂ, ಅಗಲವಾದ ರಥಬೀದಿಗಳಿಂದಲೂ ಅದು ಶೋಭಾಯಮಾನವಾಗಿತ್ತು. ಹತ್ತುಕೋಟಿ ವಿಮಾನಗಳು ಅಮರಾವತಿಯನ್ನು ಅಲಂಕರಿಸಿದ್ದವು. ರತ್ನಖಚಿತವಾದ ವಜ್ರ, ಹವಳಗಳಿಂದ ಚೆಂದವಾಗಿ ನಿರ್ಮಿಸಲ್ಪಟ್ಟ ಜಗುಲಿಗಳು ಅಮರಾವತಿಯ ನಾಲ್ಕು ಮಾರ್ಗಗಳು ಕೂಡುವ ಚೌಕಗಳಲ್ಲಿ ಶೋಭಿಸುತ್ತಿದ್ದವು. ॥ ೧೬ ॥ ಅಲ್ಲಿಯ ಸ್ತ್ರೀಯರು ಯಾವಾಗಲೂ ಹದಿನಾರು ವರ್ಷದವರಂತೆ ಇರುತ್ತಾರೆ. ಅವರ ಯೌವನ ಮತ್ತು ಸೌಂದರ್ಯವು ಸ್ಥಿರವಾಗಿರುತ್ತದೆ. ಅವರು ನಿರ್ಮಲವಾದ ವಸ್ತ್ರಗಳನ್ನು ಟ್ಟುಕೊಂಡು ಆ ನಾರಿಯರು ಜ್ವಾಲೆಗಳಿಂದ ಕೂಡಿದ ಅಗ್ನಿಯೋಪಾದಿಯಲ್ಲಿ ರಾರಾಜಿಸುತ್ತಿದ್ದರು. ॥ ೧೭ ॥

ದೇವಾಂಗನೆಯರ ಮುಡಿಯಿಂದ ಜಾರಿಬಿದ್ದ ನೂತನ ಸೌಗಂಧಿಕಾಪುಷ್ಪಗಳ ಸುರಭಿಯನ್ನು ಹೊತ್ತು ವಾಯುದೇವನು ಅಲ್ಲಿಯ ಮಾರ್ಗಗಳಲ್ಲಿ ಮಂದ-ಮಂದವಾಗಿ ಬೀಸುತ್ತಿದ್ದನು. ॥ ೧೮ ॥ ಮಹಾಸೌಧಗಳ ಸ್ವರ್ಣಮಯ ಕಿಟಕಿಗಳಿಂದ ಹೊರ ಸೂಸುತ್ತಿದ್ದ ಅಗರುವಾಸನೆಯಿಂದ ಕೂಡಿದ ಬಿಳಿಯ ಹೊಗೆಯಿಂದ ಸಮಾವೃತವಾದ ಮಾರ್ಗಗಳಲ್ಲಿ ದೇವಾಂಗನೆಯರು ಸಂಚರಿಸುತ್ತಿದ್ದರು. ॥ ೧೯ ॥ ಅಲ್ಲಲ್ಲಿ ಮುತ್ತುಗಳ ಝುಲ್ಲರಿಗಳಿಂದ ಅಲಂಕೃತವಾದ ಮಂಟಪಗಳಿಂದಲೂ, ರತ್ನಖಚಿತವಾದ ಚಿನ್ನದ ಧ್ವಜಗಳಿಂದಲೂ, ಸೌಧಗಳ ಮೇಲೆ ಹಾರಾಡುತ್ತಿದ್ದ ನಾನಾ ವಿಧವಾದ ಪತಾಕೆಗಳಿಂದಲೂ ಸಮಾವೃತವಾಗಿದ್ದು ನವಿಲು, ಪಾರಿವಾಳ, ದುಂಬಿಗಳ ಧ್ವನಿಗಳಿಂದಲೂ, ದೇವತೆಗಳ ಇಂಪಾದ ಸಂಗೀತದಿಂದಲೂ ಅಲ್ಲಿ ಮಂಗಳಮಯ ವಾತಾವರಣ ನಿರ್ಮಾಣವಾಗಿತ್ತು. ॥ ೨೦ ॥ ಮೃದಂಗ, ಶಂಖ, ಆನಕ, ಡೋಲು, ವೀಣಾ-ವೇಣು ಮೊದಲಾದ ವಾದ್ಯಗಳು ನುಡಿಸಲ್ಪಡುತ್ತಿದ್ದವು. ಗಂಧರ್ವರು ವಾದ್ಯಗಳ ಜೊತೆಗೆ ಹಾಡುತ್ತಿದ್ದರೆ, ಅಪ್ಸರೆಯರು ನರ್ತನ ಮಾಡುತ್ತಿದ್ದರು. ಆ ಅಮರಾವತಿಯು ತನ್ನ ಕಾಂತಿಯಿಂದ ಕಾಂತಿಯ ಅಧಿದೇವತೆಯನ್ನೂ ಧಿಕ್ಕರಿಸುತ್ತಿದೆಯೋ ಎಂಬಂತೆ ಕಾಣುತ್ತಿದ್ದಿತು. ಅಂತಹ ಅಮರಾವತಿಯನ್ನು ಬಲಿಯು ನೋಡಿದನು. ॥ ೨೧ ॥ ಆ ಪುರಿಯಲ್ಲಿ ಅಧರ್ಮಿಗಳು, ದುಷ್ಟರು, ಜೀವದ್ರೋಹಿಗಳು, ಮೋಸಗಾರರು, ದುರಭಿಮಾನಿಗಳು, ಕಾಮುಕರು, ಲೋಭಿಗಳು ಹೋಗಲಾರರು. ಇಂತಹ ದೋಷಗಳಿಂದ ರಹಿತರಾದವರು ಮಾತ್ರ ಅಲ್ಲಿಗೆ ಹೋಗಬಲ್ಲರು. ॥ ೨೨ ॥ ಅಸುರರ ಸೇನೆಯ ಒಡೆಯನಾದ ಬಲಿಚಕ್ರವರ್ತಿಯು ತನ್ನ ಭಾರೀ ದೊಡ್ಡ ಸೈನ್ಯದಿಂದ ಅಮರಾವತಿಯನ್ನು ಹೊರಗಿನಿಂದ ಮುತ್ತಿಗೆ ಹಾಕಿದನು. ಅವನು ಶುಕ್ರಾಚಾರ್ಯರು ಇತ್ತ ಮಹಾಶಂಖವನ್ನು ಊದಿದನು. ಇದರಿಂದ ಇಂದ್ರಪತ್ನಿಯರ ಹೃದಯದಲ್ಲಿ ಭಯವನ್ನು ಹುಟ್ಟಿಸುತ್ತಾ ಆ ಶಂಖಧ್ವನಿಯು ಎಲ್ಲೆಡೆ ಹರಡಿಕೊಂಡಿತು. ॥೨೩॥

**ಮಘವಾಂಸ್ತಮಭಿಪ್ರೇತ್ಯ ಬಲೇಃ ಪರಮಮುದ್ಯಮಮ್ ।**
**ಸರ್ವದೇವಗಣೋಪೇತೋ ಗುರುಮೇತದುವಾಚ ಹ ॥ ೨೪ ॥**

**ಭಗವನ್ನುದ್ಯಮೋ ಭೂಯಾನ್ಬಲೇರ್ನಃ ಪೂರ್ವವೈರಿಣಃ ।**
**ಅವಿಷಹ್ಯಮಿಮಂ ಮನ್ಯೇ ಕೇನಾಸೀತ್ತೇಜಸೋರ್ಜಿತಃ ॥ ೨೫ ॥**

**ನೈನಂ ಕಶ್ಚಿತ್ಕುತೋ ವಾಪಿ ಪ್ರತಿವ್ಯೋಢುಮಧೀಶ್ವರಃ ।**
**ಪಿಬನ್ನಿವ ಮುಖೇನೇದಂ ಲಿಹನ್ನಿವ ದಿಶೋ ದಶ ।**
**ದಹನ್ನಿವ ದಿಶೋ ದೃಗ್ಭಿಃ ಸಂವರ್ತಾಗ್ನಿರಿವೋತ್ಥಿತಃ ॥ ೨೬ ॥**

**ಬ್ರೂಹಿ ಕಾರಣಮೇತಸ್ಯ ದುರ್ಧರ್ಷತ್ವಸ್ಯ ಮದ್ರಿಪೋಃ ।**
**ಓಜಃ ಸಹೋ ಬಲಂ ತೇಜೋ ಯತ ಏತತ್ಸಮುದ್ಯಮಃ ॥ ೨೭ ॥**

*ಗುರುರುವಾಚ*

**ಜಾನಾಮಿ ಮಘವನ್ ಶತ್ರೋರುನ್ನತೇರಸ್ಯ ಕಾರಣಮ್ ।**
**ಶಿಷ್ಯಾಯೋಪಭೃತಂ ತೇಜೋ ಭೃಗುಭಿರ್ಬ್ರಹ್ಮವಾದಿಭಿಃ ॥ ೨೮ ॥**

**ಭವದ್ವಿಧೋ ಭವಾನ್ವಾಪಿ ವರ್ಜಯಿತ್ವೇಶ್ವರಂ ಹರಿಮ್ ।**
**ನಾಸ್ಯ ಶಕ್ತಃ ಪುರಃ ಸ್ಥಾತುಂ ಕೃತಾಂತಸ್ಯ ಯಥಾ ಜನಾಃ ॥ ೨೯ ॥**

**ತಸ್ಮಾನ್ನಿಲಯಮುತ್ಸೃಜ್ಯ ಯೂಯಂ ಸರ್ವೇ ತ್ರಿವಿಷ್ಟಪಮ್ ।**
**ಯಾತ ಕಾಲಂ ಪ್ರತೀಕ್ಷಂತೋ ಯತಃ ಶತ್ರೋರ್ವಿಪರ್ಯಯಃ ॥ ೩೦ ॥**

**ಏಷ ವಿಪ್ರಬಲೋದರ್ಕಃ ಸಂಪ್ರತ್ಯೂರ್ಜಿತವಿಕ್ರಮಃ ।**
**ತೇಷಾಮೇವಾಪಮಾನೇನ ಸಾನುಬಂಧೋ ವಿನಂಕ್ಷ್ಯತಿ ॥ ೩೧ ॥**

**ಏವಂ ಸುಮಂತ್ರಿತಾರ್ಥಾಸ್ತೇ ಗುರುಣಾರ್ಥಾನುದರ್ಶಿನಾ ।**
**ಹಿತ್ವಾ ತ್ರಿವಿಷ್ಟಪಂ ಜಗ್ಮುರ್ಗೀರ್ವಾಣಾಃ ಕಾಮರೂಪಿಣಃ ॥ ೩೨ ॥**

**ದೇವೇಷ್ವಥ ನಿಲೀನೇಷು ಬಲಿರ್ವೈರೋಚನಃ ಪುರೀಮ್ ।**
**ದೇವಧಾನೀಮಧಿಷ್ಠಾಯ ವಶಂ ನಿನ್ಯೇ ಜಗತ್ತ್ರಯಮ್ ॥ ೩೩ ॥**

**ತಂ ವಿಶ್ವಜಯಿನಂ ಶಿಷ್ಯಂ ಭೃಗವಃ ಶಿಷ್ಯವತ್ಸಲಾಃ ।**
**ಶತೇನ ಹಯಮೇಧಾನಾಮನುವ್ರತಮಯಾಜಯನ್ ॥ ೩೪ ॥**

ಬಲಿಯು ಯುದ್ಧಕ್ಕಾಗಿ ಭಾರೀ ಸಿದ್ಧತೆಯನ್ನು ಮಾಡಿರುವನು ಎಂದು ನೋಡಿದ ಇಂದ್ರನು ಎಲ್ಲ ದೇವತೆಗಳೊಂದಿಗೆ ತಮ್ಮ ಗುರುಗಳಾದ ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗಿ ಇಂತೆಂದನು – ॥ ೨೪ ॥ ಪೂಜ್ಯರೇ! ಹಿಂದಿನ ನಮ್ಮ ಶತ್ರುವಾದ ಬಲಿಯು ಈ ಬಾರಿ ಯುದ್ಧಕ್ಕಾಗಿ ಭಾರೀ ಸಿದ್ಧತೆ ಮಾಡಿರುವನು. ನಮ್ಮಿಂದ ಅವನನ್ನು ಇದಿರಿಸಲು ಸಾಧ್ಯವಾಗದೆಂದೇ ನನಗೆ ಅನಿಸುತ್ತದೆ. ಇವನು ಯಾವ ಶಕ್ತಿಯಿಂದ ನಮ್ಮನ್ನು ಎದುರಿಸುವಷ್ಟು ಬಲಶಾಲಿಯಾಗಿದ್ದಾನೆ, ತಿಳಿಯದು. ॥ ೨೫ ॥ ಈ ಸಮಯದಲ್ಲಿ ಬಲಿಯನ್ನು ಯಾರೂ ಕೂಡ ಯಾವ ರೀತಿಯಿಂದಲೂ ತಡೆಯಲಾರರು ಎಂದು ನನಗೆ ಭಾಸವಾಗುತ್ತದೆ. ಅವನು ಪ್ರಳಯಾಗ್ನಿಯಂತೆ ಬೆಳೆದಿರುವನು ಮತ್ತು ಈ ವಿಶ್ವವನ್ನೇ ಬಾಯಿಂದ ತಿಂದುಬಿಡುವನೋ ಎಂದೆನಿಸುತ್ತದೆ. ಹತ್ತು ದಿಕ್ಕುಗಳನ್ನೂ ಕಟವಾಯಿಂದ ನೆಕ್ಕಿಬಿಡುವನೋ ಮತ್ತು ಕಣ್ಣುಗಳ ಜ್ವಾಲೆಗಳಿಂದ ದಶದಿಕ್ಕುಗಳನ್ನೂ ಸುಟ್ಟುಬಿಡುವನೋ ಎಂಬಂತಿದೆ. ॥ ೨೬ ॥ ನನ್ನ ಶತ್ರುವಾದ ಬಲಿಗೆ ನಾನೂ ಕೂಡ ಎದುರಿಸಲಾರದಷ್ಟು ಪರಾಕ್ರಮವು ಎಲ್ಲಿಂದ ಬಂತು? ಯಾವುದರಿಂದ ಇವನಿಗೆ ಇಂದ್ರಿಯ ಶಕ್ತಿಯೂ, ಮನಶ್ಶಕ್ತಿಯೂ, ದೇಹಶಕ್ತಿಯೂ, ತೇಜಸ್ಸು ಮತ್ತು ಈ ಸಮರೋದ್ಯಮಕ್ಕೆ ಪ್ರೇರಣೆಯೂ ಲಭಿಸಿತು? ಎಂಬುದನ್ನು ದಯವಿಟ್ಟು ಹೇಳಿರಿ. ॥ ೨೭ ॥

**ದೇವಗುರು ಬೃಹಸ್ಪತ್ಯಾಚಾರ್ಯರು ಹೇಳಿದರು** – ಇಂದ್ರನೇ! ನಿನ್ನ ಈ ಶತ್ರುವಿನ ಉನ್ನತಿಯ ಕಾರಣವನ್ನು ಬಲ್ಲೆನು. ಬ್ರಹ್ಮವಾದಿಗಳಾದ ಭೃಗುವಂಶೀಯರು ತಮ್ಮ ಶಿಷ್ಯ ಬಲಿಯಲ್ಲಿ ಮಹಾನ್ ತೇಜ-ಬಲಗಳ ಭಂಡಾರವನ್ನೇ ತುಂಬಿರುವರು. ॥ ೨೮ ॥ ಸರ್ವೇಶ್ವರನಾದ ಶ್ರೀಹರಿಯನ್ನು ಬಿಟ್ಟು ನೀನಾಗಲೀ, ನಿನ್ನಂತಹವರು ಯಾರೂ ಬಲಿಯ ಮುಂದೆ – ಕಾಲನ ಮುಂದೆ ಪ್ರಾಣಿಗಳು ಹೇಗೆ ನಿಲ್ಲಲಾರರೋ ಹಾಗೇ ನಿಲ್ಲಲಾರಿರಿ. ॥ ೨೯ ॥ ಅದಕ್ಕಾಗಿ ನೀವೆಲ್ಲ ಸ್ವರ್ಗವನ್ನು ಬಿಟ್ಟು ಅಡಗಿಕೊಂಡಿರಿ. ಶತ್ರುವಿನ ಭಾಗ್ಯಚಕ್ರವು ವಿಪರೀತವಾಗುವವರೆಗೆ ನೀವು ಪ್ರತೀಕ್ಷೆಮಾಡುತ್ತಾ ಇರಿ. ॥ ೩೦ ॥ ಈ ಸಮಯದಲ್ಲಿ ಭೃಗುವಂಶೀ ಬ್ರಾಹ್ಮಣರ ತೇಜದಿಂದಲೇ ಬಲಿಯ ಅಭಿವೃದ್ಧಿ ಉತ್ತರೋತ್ತರವಾಗಿ ಬೆಳೆಯುತ್ತಾ ಇದೆ. ಅವನು ಬ್ರಾಹ್ಮಣರನ್ನು ತಿರಸ್ಕರಿಸಿದಾಗ, ಅವಮಾನಗೊಳಿಸಿದಾಗ ಅವನು ತನ್ನ ಪರಿವಾರದೊಂದಿಗೆ ವಿನಾಶಹೊಂದುವನು. ॥ ೩೧॥ ದೇವಗುರು ಬೃಹಸ್ಪತ್ಯಾಚಾರ್ಯರು ದೇವತೆಗಳ ಸ್ವಾರ್ಥ ಮತ್ತು ಪರಮಾರ್ಥವೆಲ್ಲವನ್ನು ಬಲ್ಲವರಾಗಿದ್ದರು. ಗುರುಗಳು ಹೀಗೆ ದೇವತೆಗಳಿಗೆ ಸಲಹೆ ನೀಡಿದಾಗ ಅವರೆಲ್ಲರೂ ಇಷ್ಟಾನುಸಾರವಾದ ರೂಪಗಳನ್ನು ಧರಿಸಿ ಸ್ವರ್ಗವನ್ನು ಬಿಟ್ಟು ಹೊರಟು ಹೋದರು. ॥ ೩೨ ॥ ದೇವತೆಗಳು ಅಡಗಿಕೊಂಡಾಗ ವಿರೋಚನನಂದನ ಬಲಿಯು ಅಮರಾವತಿಯ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿ, ಮೂರುಲೋಕಗಳನ್ನು ವಶಪಡಿಸಿಕೊಂಡು ಆಳತೊಡಗಿದನು. ॥ ೩೩ ॥ ಬಲಿಚಕ್ರವರ್ತಿಯು ವಿಶ್ವವಿಜಯಿಯಾದಾಗ ಶಿಷ್ಯಪ್ರೇಮಿ ಶುಕ್ರಾಚಾರ್ಯರೇ ಮೊದಲಾದ ಭೃಗುವಂಶೀಯರು ತಮ್ಮ ಶಿಷ್ಯನಾದ ಬಲಿಯಿಂದ ನೂರು ಅಶ್ವಮೇಧ ಯಜ್ಞಗಳನ್ನು ಮಾಡಿಸಿದರು. ॥ ೩೪ ॥

ತತಸ್ತದನುಭಾವೇನ ಭುವನತ್ರಯವಿಶ್ರುತಾಮ್ ।
ಕೀರ್ತಿಂ ದಿಕ್ಷು ವಿತನ್ವಾನಃ ಸ ರೇಜ ಉಡುರಾಡಿವ ॥ ೩೫ ॥

ಬುಭುಜೇ ಚ ಶ್ರಿಯಂ ಸ್ವೃದ್ಧಾಂ ದ್ವಿಜದೇವೋಪಲಂಭಿತಾಮ್ ।
ಕೃತಕೃತ್ಯಮಿವಾತ್ಮಾನಂ ಮನ್ಯಮಾನೋ ಮಹಾಮನಾಃ ॥ ೩೬ ॥

ಆ ಯಜ್ಞಗಳ ಮೂಲಕ ಬಲಿಯ ಕೀರ್ತಿ ಕೌಮುದಿಯು ಮೂರು ಲೋಕಗಳನ್ನೂ ಆಕ್ರಮಿಸಿ ದಶದಿಕ್ಕುಗಳಲ್ಲಿಯೂ ಪಸರಿಸಿತು ಹಾಗೂ ಅವನು ನಕ್ಷತ್ರಗಳ ರಾಜನಾದ ಚಂದ್ರನಂತೆ ಶೋಭಾಯಮಾನನಾದನು. ॥ ೩೫ ॥ ದೇವತಾ ಸ್ವರೂಪರಾದ ಬ್ರಾಹ್ಮಣರ ಕೃಪಾಶ್ರಯದಿಂದ ಲಭಿಸಿದ ಸಂಪತ್ಸಮೃದ್ಧವಾದ ರಾಜ್ಯಲಕ್ಷ್ಮಿಯನ್ನು ಮಹಾತ್ಮನಾದ ಬಲಿಯು ಉಪಭೋಗಿಸುತ್ತಾ ತನ್ನನ್ನು ಕೃತಕೃತ್ಯನೆಂದು ಭಾವಿಸಿಕೊಂಡನು. ॥ ೩೬ ॥

*ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ಕಶ್ಯಪರು ಅದಿತಿಗೆ ಪಯೋವ್ರತವನ್ನು ಉಪದೇಶಿಸಿದುದು

*ಶ್ರೀಶುಕ ಉವಾಚ*

ಏವಂ ಪುತ್ರೇಷು ನಷ್ಟೇಷು ದೇವಮಾತಾದಿತಿಸ್ತದಾ ।
ಹೃತೇ ತ್ರಿವಿಷ್ಟಪೇ ದೈತ್ಯೈಃ ಪರ್ಯತಪ್ಯದನಾಥವತ್ ॥ ೧ ॥

ಏಕದಾ ಕಶ್ಯಪಸ್ತಸ್ಯಾ ಆಶ್ರಮಂ ಭಗವಾನಗಾತ್ ।
ನಿರುತ್ಸವಂ , ನಿರಾನಂದಂ ಸಮಾಧೇರ್ವಿರತಶ್ಚಿರಾತ್ ॥ ೨ ॥

ಸ ಪತ್ನೀಂ ದೀನವದನಾಂ ಕೃತಾಸನಪರಿಗ್ರಹಃ ।
ಸಭಾಜಿತೋ ಯಥಾನ್ಯಾಯಮಿದಮಾಹ ಕುರೂದ್ವಹ ॥ ೩ ॥

ಅಪ್ಯಭದ್ರಂ ನ ವಿಪ್ರಾಣಾಂ ಭದ್ರೇ ಲೋಕೇಽಧುನಾಽಽಗತಮ್ ।
ನ ಧರ್ಮಸ್ಯ ನ ಲೋಕಸ್ಯ ಮೃತ್ಯೋಶ್ಛಂದಾನುವರ್ತಿನಃ ॥ ೪ ॥

ಅಪಿ ವಾಕುಶಲಂ ಕಿಂಚಿದ್ ಗೃಹೇಷು ಗೃಹಮೇಧಿನಿ ।
ಧರ್ಮಸ್ಯಾರ್ಥಸ್ಯ ಕಾಮಸ್ಯ ಯತ್ರ ಯೋಗೋ ಹ್ಯಯೋಗಿನಾಮ್ ॥ ೫ ॥

ಅಪಿ ವಾತಿಥಯೋಽಭ್ಯೇತ್ಯ ಕುಟುಂಬಾಸಕ್ತಯಾ ತ್ವಯಾ ।
ಗೃಹಾದಪೂಜಿತಾ ಯಾತಾಃ ಪ್ರತ್ಯುತ್ಥಾನೇನ ವಾ ಕ್ವಚಿತ್ ॥ ೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತ ಮಹಾರಾಜಾ! ದೇವತೆಗಳು ಹೀಗೆ ಸ್ವರ್ಗದಿಂದ ಪಲಾಯನಮಾಡಿ ಅಡಗಿಕೊಂಡರು ಮತ್ತು ದೈತ್ಯರು ಅಮರಾವತಿಯ ಮೇಲೆ ಅಧಿಕಾರವನ್ನು ಸ್ಥಾಪಿಸಿದಾಗ ದೇವಮಾತೆಯಾದ ಅದಿತಿಯು ದಿಕ್ಕಿಲ್ಲದವಳಂತೆ ಬಹಳವಾಗಿ ಸಂಕಟಪಟ್ಟಳು. ॥ ೧ ॥ ಬಹಳ ಕಾಲದ ಬಳಿಕ ಒಂದುದಿನ ಪರಮಪ್ರಭಾವಶಾಲಿಗಳಾದ ಕಶ್ಯಪ ಮಹಾಮುನಿಗಳು ಸಮಾಧಿಯಿಂದ ಬಹಿರ್ಮುಖರಾಗಿ ಅದಿತಿಯ ಆಶ್ರಮಕ್ಕೆ ಆಗಮಿಸಿದರು. ಅಲ್ಲಿ ಸುಖವಾಗಲೀ, ಶಾಂತಿಯಾಗಲೀ, ಉತ್ಸಾಹವಾಗಲೀ, ಅಲಂಕಾರವಾಗಲೀ ಏನೂ ಅವರಿಗೆ ಕಂಡುಬರಲಿಲ್ಲ. ॥ ೨ ॥ ಪರೀಕ್ಷಿತನೇ! ಅವರು ಅಲ್ಲಿಗೆ ಹೋಗಿ ಆಸನದಲ್ಲಿ ಕುಂಡಿಸಿದಾಗ ಅದಿತಿಯು ವಿಧಿವತ್ತಾಗಿ ಅವರನ್ನು ಪೂಜಿಸಿ-ಸತ್ಕರಿಸಿದಳು. ಬಾಡಿದ ಮುಖಭಾವದಿಂದ ಕೂಡಿದ ಪತ್ನಿಯನ್ನು ನೋಡಿ ಕಶ್ಯಪರು ಕೇಳಿದರು – ॥ ೩ ॥ ಕಲ್ಯಾಣೀ! ಈ ಸಮಯದಲ್ಲಿ ಜಗತ್ತಿನಲ್ಲಿ ಬ್ರಾಹ್ಮಣರ ಮೇಲೆ ಯಾವುದೇ ವಿಪತ್ತುಗಳು ಬಂದಿಲ್ಲವಲ್ಲ! ಧರ್ಮಪಾಲನೆಯು ಸರಿಯಾಗಿ ನಡೆಯುತ್ತಾ ಇದೆಯಲ್ಲ! ಮೃತ್ಯುವಿನ ವಶವರ್ತಿಗಳಾದ ಜನರಿಗೂ ಯಾವುದೇ ತೊಂದರೆಯೂ ಆಗಿಲ್ಲವಲ್ಲ? ॥ ೪ ॥ ಪ್ರಿಯೇ! ಗೃಹಸ್ಥಾಶ್ರಮವಾದರೋ ಯೋಗಾಭ್ಯಾಸವನ್ನು ಮಾಡದಿರುವವರಿಗೂ ಕೂಡ ಯೋಗದ ಫಲವನ್ನು ಕೊಡುವಂತಹುದು. ಇಂತಹ ಗೃಹಸ್ಥಾಶ್ರಮದಲ್ಲಿದ್ದು ಧರ್ಮ, ಅರ್ಥ, ಕಾಮ ಇವುಗಳ ಸೇವನೆಯಲ್ಲಿ ಯಾವುದೇ ವಿಘ್ನಗಳಾದರೋ ಇಲ್ಲವಲ್ಲ! ॥ ೫ ॥ ನೀನು ಯಾವಾಗಲಾದರೋ ಮನೆಕೆಲಸದಲ್ಲಿ ತೊಡಗಿದ್ದ ಸಮಯದಲ್ಲಿ ಯಾರಾದರೂ ಅತಿಥಿಗಳು ಬಂದು, ಅವರನ್ನು ನೀನು ಎದ್ದುಹೋಗಿ ಸತ್ಕರಿಸದೇ ಅವರು ನಿರಾಶರಾಗಿ ನಮ್ಮ ಮನೆಯಿಂದ ಹೊರಟುಹೋದರೇ ? ಅದರಿಂದೇನಾದರೂ ಖಿನ್ನಮನಸ್ಕಳಾಗಿರುವೆಯಾ ? ॥ ೬ ॥

ಗೃಹೇಷು ಯೇಷ್ವತಿಥಯೋ ನಾರ್ಚಿತಾಃ ಸಲಿಲೈರಪಿ ।
ಯದಿ ನಿರ್ಯಾಂತಿ ತೇ ನೂನಂ ಫೇರುರಾಜಗೃಹೋಪಮಾಃ
॥ ೭ ॥

ಅಪ್ಯಗ್ನಯಸ್ತು ವೇಲಾಯಾಂ ನ ಹುತಾ ಹವಿಷಾ ಸತಿ ।
ತ್ವಯೋದ್ವಿಗ್ನಧಿಯಾ ಭದ್ರೇ ಪ್ರೋಷಿತೇ ಮಯಿ ಕರ್ಹಿಚಿತ್
॥ ೮ ॥

ಯತ್ಪೂಜಯಾ ಕಾಮದುಘಾನ್ಯಾತಿ ಲೋಕಾನ್ಗೃಹಾನ್ವಿತಃ ।
ಬ್ರಾಹ್ಮಣೋಽಗ್ನಿಶ್ಚ ವೈ ವಿಷ್ಣೋಃ ಸರ್ವದೇವಾತ್ಮನೋ ಮುಖಮ್
॥ ೯ ॥

ಅಪಿ ಸರ್ವೇ ಕುಶಲಿನಸ್ತವ ಪುತ್ರಾ ಮನಸ್ವಿನಿ ।
ಲಕ್ಷಯೇಽಸ್ವಸ್ಥಮಾತ್ಮಾನಂ ಭವತ್ಯಾ ಲಕ್ಷಣೈರಹಮ್
॥ ೧೦ ॥

ಅದಿತಿರುವಾಚ

ಭದ್ರಂ ದ್ವಿಜಗವಾಂ ಬ್ರಹ್ಮನ್ ಧರ್ಮಸ್ಯಾಸ್ಯ ಜನಸ್ಯ ಚ ।
ತ್ರಿವರ್ಗಸ್ಯ ಪರಂ ಕ್ಷೇತ್ರಂ ಗೃಹಮೇಧಿನ್ಗೃಹಾ ಇಮೇ
॥ ೧೧ ॥

ಅಗ್ನಯೋಽತಿಥಯೋ ಭೃತ್ಯಾ ಭಿಕ್ಷವೋ ಯೇ ಚ ಲಿಪ್ಸವಃ ।
ಸರ್ವಂ ಭಗವತೋ ಬ್ರಹ್ಮನ್ನನುಧ್ಯಾನಾನ್ನ ರಿಷ್ಯತಿ
॥ ೧೨ ॥

ಕೋ ನು ಮೇ ಭಗವನ್ಕಾಮೋ ನ ಸಂಪದ್ಯೇತ ಮಾನಸಃ ।
ಯಸ್ಯಾ ಭವಾನ್ಪ್ರಜಾಧ್ಯಕ್ಷ ಏವಂ ಧರ್ಮಾನ್ಪ್ರಭಾಷತೇ
॥ ೧೩ ॥

ತವೈವ ಮಾರೀಚ ಮನಃಶರೀರಜಾಃ
ಪ್ರಜಾ ಇಮಾಃ ಸತ್ತ್ವರಜಸ್ತಮೋಜುಷಃ ।
ಸಮೋ ಭವಾಂಸ್ತಾಸ್ವಸುರಾದಿಷು ಪ್ರಭೋ
ತಥಾಪಿ ಭಕ್ತಂ ಭಜತೇ ಮಹೇಶ್ವರಃ ॥ ೧೪ ॥

ತಸ್ಮಾದೀಶ ಭಜಂತ್ಯಾ ಮೇ ಶ್ರೇಯಶ್ಚಿಂತಯ ಸುವ್ರತ ।
ಹೃತಶ್ರಿಯೋ ಹೃತಸ್ಥಾನಾನ್ಸಪತ್ನೈಃ ಪಾಹಿ ನಃ ಪ್ರಭೋ
॥ ೧೫ ॥

ಪರೈರ್ವಿವಾಸಿತಾ ಸಾಹಂ ಮಗ್ನಾ ವ್ಯಸನಸಾಗರೇ ।
ಐಶ್ವರ್ಯಂ ಶ್ರೀರ್ಯಶಃ ಸ್ಥಾನಂ ಹೃತಾನಿ ಪ್ರಬಲೈರ್ಮಮ
॥ ೧೬ ॥

ಯಥಾ ತಾನಿ ಪುನಃ ಸಾಧೋ ಪ್ರಪದ್ಯೇರನ್ಮಮಾತ್ಮಜಾಃ ।
ತಥಾ ವಿಧೇಹಿ ಕಲ್ಯಾಣಂ ಧಿಯಾ ಕಲ್ಯಾಣಕೃತ್ತಮ
॥ ೧೭ ॥

ಯಾವ ಮನೆಗಳಲ್ಲಿ ಬಂದಿರುವ ಅತಿಥಿಗಳಿಗೆ ನೀರಿನಿಂದಾದರೂ ಸತ್ಕರಿಸಲಾಗುವುದಿಲ್ಲವೋ, ಬಂದವರು ನಿರಾಶರಾಗಿ ಹಿಂತಿರುಗುವರೋ ಆ ಮನೆಯು ನರಿಗಳ ಮನೆಯಂತೆ ಆಗಿದೆ. ॥ ೭ ॥ ಪ್ರಿಯೇ! ನಾನು ತಪಸ್ಸಿಗೆ ಹೊರಟುಹೋಗಿರಲು ಕಳವಳಗೊಂಡ ಮನಸ್ಸಿನಿಂದ ಕೂಡಿದ ನೀನು ಆಯಾ ಕಾಲಗಳಲ್ಲಿ ಅಗ್ನಿ ಪರಿಚರ್ಯೆಯನ್ನು ಮಾಡದೇ ಹೋದೆಯಾ? ॥ ೮ ॥ ಸರ್ವದೇವಮಯನಾದ ಭಗವಂತನಿಗೆ ಬ್ರಾಹ್ಮಣರು ಮತ್ತು ಅಗ್ನಿಯು ಮುಖಪ್ರಾಯರಾಗಿದ್ದಾರೆ. ಗೃಹಸ್ಥನಾದ ಪುರುಷನು ಬ್ರಾಹ್ಮಣರನ್ನೂ, ಅಗ್ನಿಯನ್ನೂ ಆರಾಧಿಸಿದ್ದೇ ಆದರೆ ಸಮಸ್ತ ಕಾಮನೆಗಳನ್ನು ಪೂರ್ಣಗೊಳಿಸುವಂತಹ ಪುಣ್ಯಲೋಕಗಳಿಗೆ ಹೋಗುತ್ತಾನೆ. ॥ ೯ ॥ ಮನಸ್ವಿನಿಯೇ! ನಿನ್ನ ಮಕ್ಕಳೆಲ್ಲರೂ ಕುಶಲಿಗಳಾಗಿರುವರೇ? ನಿನ್ನ ಮುಖಲಕ್ಷಣಗಳಿಂದ ನೀನು ಸ್ವಲ್ಪ ಅಸ್ವಸ್ಥಳಾಗಿರುವೆಯೆಂದು ನಾನು ಗಮನಿಸುತ್ತಿದ್ದೇನೆ. ॥ ೧೦ ॥

**ಅದಿತಿಯು ಹೇಳಿದಳು** – ಪೂಜ್ಯರಾದ ಬ್ರಾಹ್ಮಣಶ್ರೇಷ್ಠರೇ! ಬ್ರಾಹ್ಮಣರು, ಗೋವುಗಳು, ಧರ್ಮವೂ ಹಾಗೂ ನಿಮ್ಮ ಸೇವಕಿಯಾದ ನಾನೂ – ಎಲ್ಲರೂ ಕುಶಲಿಗಳಾಗಿದ್ದೇವೆ. ಸ್ವಾಮಿಯೇ! ಈ ಗೃಹಸ್ಥಾಶ್ರಮವು ಧರ್ಮ, ಅರ್ಥ, ಕಾಮ ಇವುಗಳ ಸಾಧನೆಯಲ್ಲಿ ಪರಮ ಸಹಾಯಕವಾಗಿದೆ. ॥ ೧೧ ॥ ಪ್ರಭೋ! ನಿಮ್ಮ ನಿರಂತರ ಸ್ಮರಣೆ ಮತ್ತು ಶುಭಕಾಮನೆಯಿಂದಲೂ ಅಗ್ನಿ, ಅತಿಥಿ, ಸೇವಕ, ಭಿಕ್ಷುಕರು ಹಾಗೂ ಇತರ ಯಾಚಕರನ್ನೂ ತಿರಸ್ಕಾರ ಭಾವದಿಂದ ಕಂಡಿಲ್ಲ, ಎಲ್ಲರನ್ನೂ ಯಥಾಯೋಗ್ಯವಾಗಿ ಸತ್ಕರಿಸಿದ್ದೇನೆ. ॥ ೧೨ ॥ ಪೂಜ್ಯರೇ! ನಿಮ್ಮಂತಹ ಪ್ರಜಾಧ್ಯಕ್ಷರು ನನಗೆ ಧರ್ಮೋಪದೇಶ ಮಾಡುತ್ತಿರುವಾಗ ನನ್ನ ಮನಸ್ಸಿನ ಯಾವ ಕಾಮನೆಗಳು ತಾನೇ ಈಡೇರಲಾರವು? ॥ ೧೩ ॥ ಆರ್ಯಪುತ್ರ! ಸಮಸ್ತ ಪ್ರಜೆಯು ಸತ್ತ್ವಗುಣೀಯಾಗಿರಲೀ, ರಜೋಗುಣಿಯಾಗಿರಲೀ, ತಮೋಗುಣಿಯಾಗಿರಲೀ ನಿಮ್ಮ ಸಂತಾನವೇ ಆಗಿದೆಯಲ್ಲ? ಕೆಲವರು ಸಂಕಲ್ಪದಿಂದಲಾದರೆ, ಕೆಲವು ಶರೀರದಿಂದ ಉತ್ಪನ್ನರಾಗಿದ್ದಾರೆ. ಭಗವಂತನೇ! ಅಸುರರಾಗಿರಲೀ, ದೇವತೆಗಳಾಗಿರಲೀ ತಾವು ತಮ್ಮ ಸಂತಾನದ ಕುರಿತು ಒಂದೇ ರೀತಿಯ ಸಮಭಾವವನ್ನೇ ಇರಿಸಿರುವಿರಿ. ಆದರೂ ಸ್ವತಃ ಪರಮೇಶ್ವರನೂ ಕೂಡ ತನ್ನ ಭಕ್ತರ ಅಭಿಲಾಷೆಯನ್ನು ಪೂರ್ಣಗೊಳಿಸುತ್ತಾ ಇರುವನಲ್ಲ! ॥ ೧೪ ॥ ನನ್ನ ಸ್ವಾಮಿಯೇ! ನಾನು ನಿಮ್ಮ ದಾಸಿಯಾಗಿರುವೆನು. ನೀವು ನನ್ನ ಒಳಿತಿಗಾಗಿ ವಿಚಾರಮಾಡಿರಿ. ಮಾನಧನನೇ! ಪ್ರಭುವೇ! ಶತ್ರುಗಳು ನಮ್ಮ ಸಂಪತ್ತನ್ನೂ ರಾಜ್ಯವನ್ನೂ ಅಪಹರಿಸಿ ಬಿಟ್ಟಿರುವರು. ತಾವು ನಮ್ಮನ್ನು ರಕ್ಷಿಸಿರಿ. ॥ ೧೫ ॥ ಬಲಿಷ್ಠರಾದ ದೈತ್ಯರು ನಮ್ಮ ಐಶ್ವರ್ಯ, ಧನ, ಯಶಸ್ಸೂ, ಪದವಿ ಎಲ್ಲವನ್ನೂ ಕಸಿದುಕೊಂಡು, ನಮ್ಮನ್ನು ರಾಜ್ಯದಿಂದ ಹೊರಗೆ ಹಾಕಿರುವರು. ಹೀಗೆ ನಾನು ದುಃಖದ ಸಮುದ್ರದಲ್ಲಿ ಮುಳುಗಿಹೋಗಿದ್ದೇನೆ. ॥ ೧೬ ॥ ನಿಮ್ಮನ್ನು ಬಿಟ್ಟು ನಮ್ಮಗಳ ಒಳಿತನ್ನು ಮಾಡುವವರು ಬೇರೆ ಯಾರೂ ಇಲ್ಲ. ಅದಕ್ಕಾಗಿ ನನ್ನ ಹಿತೈಷಿಗಳಾದ ಸ್ವಾಮಿಯೇ! ನೀವು ಚೆನ್ನಾಗಿ ವಿಚಾರಮಾಡಿ ನನ್ನ ಮಕ್ಕಳಿಗೆ ಕಳೆದುಹೋದ ವಸ್ತುಗಳು ಪುನಃ ದೊರಕುವಂತೆ ತಮ್ಮ ಸಂಕಲ್ಪದಿಂದಲೇ ನನ್ನ ಕಲ್ಯಾಣವಾಗುವಂತಹ ಯಾವುದಾದರೂ ಉಪಾಯವನ್ನು ಮಾಡಿರಿ. ॥ ೧೭ ॥

*ಶ್ರೀಶುಕ ಉವಾಚ*

ಏವಮಭ್ಯರ್ಥಿತೋಽದಿತ್ಯಾ ಕಸ್ತಾಮಾಹ ಸ್ಮಯನ್ನಿವ ।
ಅಹೋ ಮಾಯಾಬಲಂ ವಿಷ್ಣೋಃ ಸ್ನೇಹಬದ್ಧಮಿದಂ ಜಗತ್ ॥ ೧೮ ॥

ಕ್ವ ದೇಹೋ ಭೌತಿಕೋಽನಾತ್ಮಾ ಕ್ವ ಚಾತ್ಮಾ ಪ್ರಕೃತೇಃ ಪರಃ ।
ಕಸ್ಯ ಕೇ ಪತಿಪುತ್ರಾದ್ಯಾ ಮೋಹ ಏವ ಹಿ ಕಾರಣಮ್ ॥ ೧೯ ॥

ಉಪತಿಷ್ಠಸ್ವ ಪುರುಷಂ ಭಗವಂತಂ ಜನಾರ್ದನಮ್ ।
ಸರ್ವಭೂತಗುಹಾವಾಸಂ ವಾಸುದೇವಂ ಜಗದ್ಗುರುಮ್ ॥ ೨೦ ॥

ಸ ವಿಧಾಸ್ಯತಿ ತೇ ಕಾಮಾನ್‌ಹರಿರ್ದೀನಾನುಕಂಪನಃ ।
ಅಮೋಘಾ ಭಗವದ್ಭಕ್ತಿರ್ನೇತರೇತಿ ಮತಿರ್ಮಮ ॥ ೨೧ ॥

*ಅದಿತಿರುವಾಚ*

ಕೇನಾಹಂ ವಿಧಿನಾ ಬ್ರಹ್ಮನ್ನುಪಸ್ಥಾಸ್ಯೇ ಜಗತ್ಪತಿಮ್ ।
ಯಥಾ ಮೇ ಸತ್ಯಸಂಕಲ್ಪೋ ವಿದಧ್ಯಾತ್ಸಮನೋರಥಮ್ ॥ ೨೨ ॥

ಆದಿಶ ತ್ವಂ ದ್ವಿಜಶ್ರೇಷ್ಠ ವಿಧಿಂ ತದುಪಧಾವನಮ್ ।
ಆಶು ತುಷ್ಯತಿ ಮೇ ದೇವಃ ಸೀದಂತ್ಯಾಃ ಸಹ ಪುತ್ರಕೈಃ ॥ ೨೩ ॥

*ಕಶ್ಯಪ ಉವಾಚ*

ಏತನ್ಮೇ ಭಗವಾನ್ಪೃಷ್ಟಃ ಪ್ರಜಾಕಾಮಸ್ಯ ಪದ್ಮಜಃ ।
ಯದಾಹ ತೇ ಪ್ರವಕ್ಷ್ಯಾಮಿ ವ್ರತಂ ಕೇಶವತೋಷಣಮ್ ॥ ೨೪ ॥

ಫಾಲ್ಗುನಸ್ಯಾಮಲೇ ಪಕ್ಷೇ ದ್ವಾದಶಾಹಂ ಪಯೋವ್ರತಃ ।
ಅರ್ಚಯೇದರವಿಂದಾಕ್ಷಂ ಭಕ್ತ್ಯಾ ಪರಮಯಾನ್ವಿತಃ ॥ ೨೫ ॥

ಸಿನೀವಾಲ್ಯಾಂ ಮೃದಾಽಽಲಿಪ್ಯ ಸ್ನಾಯಾತ್ಕ್ರೋಡವಿದೀರ್ಣಯಾ ।
ಯದಿ ಲಭ್ಯೇತ ವೈ ಸ್ರೋತಸ್ಯೇತಂ ಮಂತ್ರಮುದೀರಯೇತ್ ॥ ೨೬ ॥

ತ್ವಂ ದೇವ್ಯಾದಿವರಾಹೇಣ ರಸಾಯಾಃ ಸ್ಥಾನಮಿಚ್ಛತಾ ।
ಉದ್ಧೃತಾಸಿ ನಮಸ್ತುಭ್ಯಂ ಪಾಪ್ಮಾನಂ ಮೇ ಪ್ರಣಾಶಯ ॥ ೨೭ ॥

ನಿರ್ವರ್ತಿತಾತ್ಮನಿಯಮೋ ದೇವಮರ್ಚೇತ್ಸಮಾಹಿತಃ ।
ಅರ್ಚಾಯಾಂ ಸ್ಥಂಡಿಲೇ ಸೂರ್ಯೇ ಜಲೇ ವಹ್ನೌ ಗುರಾವಪಿ ॥ ೨೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಹೀಗೆ ಅದಿತಿಯು ಕಶ್ಯಪರಲ್ಲಿ ಪ್ರಾರ್ಥಿಸಿದಾಗ ಅವರು ಕೊಂಚ ವಿಸ್ಮಿತರಾಗಿ ನುಡಿದರು – ದೇವೀ! ಇದೆಂತಹ ಆಶ್ಚರ್ಯದ ಮಾತಾಗಿದೆ? ಭಗವಂತನ ಮಾಯೆಯು ಎಷ್ಟು ಪ್ರಬಲವಾಗಿದೆ! ಈ ಇಡೀ ಪ್ರಪಂಚವು ಸ್ನೇಹವೆಂಬ ಹಗ್ಗದಿಂದ ಕಟ್ಟಲ್ಪಟ್ಟಿದೆ. ॥ ೧೮ ॥ ಪಂಚಭೂತಗಳಿಂದ ಸೃಷ್ಟಿಯಾಗಿರುವ ಅನಾತ್ಮವಾದ ಶರೀರವೆಲ್ಲಿ? ಪ್ರಕೃತಿಗಿಂತಲೂ ಆಚೆ ಇರುವ ಆತ್ಮನೆಲ್ಲಿ? ಯಾರಿಗೆ ಯಾರೂ ಪತಿಯೂ ಇಲ್ಲ, ಪುತ್ರನೂ ಇಲ್ಲ, ಸಂಬಂಧಿಯೂ ಇಲ್ಲ. ಮೋಹವೇ ಎಲ್ಲ ಮನುಷ್ಯರನ್ನು ಕುಣಿಸುತ್ತಾ ಇದೆ. ॥ ೧೯ ॥ ಪ್ರಿಯೇ! ನೀನು ಸಮಸ್ತ ಪ್ರಾಣಿಗಳ ಹೃದಯದಲ್ಲಿ ವಿರಾಜಮಾನನಾಗಿರುವ ತನ್ನ ಭಕ್ತರ ದುಃಖಗಳನ್ನು ಕಳೆಯುವಂತಹ ಜಗದ್ಗುರು ಭಗವಾನ್ ವಾಸುದೇವನನ್ನು ಆರಾಧಿಸು. ॥ ೨೦ ॥ ಅವನು ಅತ್ಯಂತ ದಯಾಳುವಾಗಿದ್ದಾನೆ. ಆ ಶ್ರೀಹರಿಯು ಅವಶ್ಯವಾಗಿಯೇ ನಿನ್ನ ಕಾಮನೆಯನ್ನು ಪೂರ್ಣಗೊಳಿಸುವನು. ಭಗವಂತನ ಭಕ್ತಿಯು ಎಂದಿಗೂ ವ್ಯರ್ಥವಾಗುವುದಿಲ್ಲ ಎಂಬ ದೃಢವಾದ ವಿಶ್ವಾಸವು ನನಗಿದೆ. ಇದು ಬಿಟ್ಟರೆ ಬೇರೆ ಯಾವ ಉಪಾಯವೂ ಇಲ್ಲ. ॥ ೨೧ ॥

**ಅದಿತಿಯು ಕೇಳಿದಳು** – ಪೂಜ್ಯರೇ! ಸತ್ಯಸಂಕಲ್ಪನಾದ ಭಗವಾನ್ ಜಗದೀಶ್ವರನು ನನ್ನ ಮನೋರಥವನ್ನು ಪೂರ್ಣಗೊಳಿಸುವಂತೆ ಅವನನ್ನು ನಾನು ಹೇಗೆ ಆರಾಧಿಸಬೇಕು? ನನಗೆ ತಿಳಿಸಿರಿ. ॥ ೨೨ ॥ ಪತಿದೇವಾ! ನಾನು ನನ್ನ ಮಕ್ಕಳೊಡನೆ ಬಹಳವಾದ ದುಃಖವನ್ನು ಅನುಭವಿಸುತ್ತಿರುವೆನು. ಪರಬ್ರಹ್ಮ ಪರಮಾತ್ಮನು ಶೀಘ್ರವಾಗಿ ಪ್ರಸನ್ನನಾಗುವಂತಹ ಆರಾಧನಾ ವಿಧಿಯನ್ನು ನನಗೆ ತಿಳಿಸೋಣವಾಗಲೀ ಎಂದು ಪ್ರಾರ್ಥಿಸಿದಳು. ॥ ೨೩ ॥

**ಕಶ್ಯಪರು ಹೇಳಿದರು** – ಸಾಧ್ವಿಯೇ! ಹಿಂದೊಮ್ಮೆ ನಾನು ಸಂತಾನದ ಅಪೇಕ್ಷೆಯಿಂದ ಬ್ರಹ್ಮದೇವರ ಬಳಿಯಲ್ಲಿ ಪ್ರಾರ್ಥಿಸಿದ್ದೆ. ನನ್ನ ಪ್ರಾರ್ಥನೆಯಂತೆ ಅವರು ಭಗವಂತನನ್ನು ಪ್ರಸನ್ನಗೊಳಿಸುವಂತಹ (ಸಂತಾನವನ್ನು ಪಡೆಯುವಂತಹ) ವ್ರತವನ್ನು ಉಪದೇಶಿಸಿದ್ದರು. ಅದನ್ನು ನಾನು ನಿನಗೆ ಹೇಳುತ್ತೇನೆ. ॥ ೨೪ ॥ ಫಾಲ್ಗುಣ ಮಾಸದ ಶುಕ್ಲಪಕ್ಷದಲ್ಲಿ ಪ್ರತಿಪದೆಯಿಂದ ದ್ವಾದಶಿಯವರೆಗೆ ಹನ್ನೆರಡುದಿನಗಳು ಕೇವಲ ಹಾಲನ್ನು ಕುಡಿದುಕೊಂಡು ಅನನ್ಯ ಭಕ್ತಿಯಿಂದ ಭಗವಾನ್ ಕಮಲಾಕ್ಷನನ್ನು ಪೂಜಿಸಬೇಕು. ॥ ೨೫ ॥ ಹಿಂದಿನ ಮಾಘಮಾಸದ ಅಮಾವಾಸ್ಯೆಯ ದಿನ ಕಾಡುಹಂದಿಯು ಅಗೆದು ಹಾಕಿರುವ ಮೃತ್ತಿಕೆಯನ್ನು ಮೈಗೆ ಹಚ್ಚಿಕೊಂಡು ನದಿಯಲ್ಲಿ ಸ್ನಾನಮಾಡಬೇಕು. 'ತ್ವಂ ದೇವ್ಯಾದಿವರಾಹೇಣ......' ಈ ಮಂತ್ರವನ್ನು ಜಪಿಸಬೇಕು. ॥ ೨೬ ॥ ಹೇ ಭಗವತಿ ಭೂದೇವಿಯೆ! ಪ್ರಾಣಿಗಳಿಗೆ ಜೀವಿಸಲು ಸ್ಥಾನವನ್ನು ಕಲ್ಪಿಸಿಕೊಡುವ ಸಲುವಾಗಿ ಭಗವಾನ್ ವರಾಹಸ್ವಾಮಿಯು ರಸಾತಳದಿಂದ ನಿನ್ನನ್ನು ತಂದು ಉದ್ಧರಿಸಿದ್ದನು. ನಿನಗೆ ನನ್ನ ನಮಸ್ಕಾರವು. ನೀನು ನನ್ನ ಪಾಪಗಳನ್ನು ನಾಶಮಾಡಿಬಿಡು. ॥ ೨೭ ॥ ಸ್ನಾನಾದಿಗಳ ಬಳಿಕ ನಿನ್ನ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಏಕಾಗ್ರಚಿತ್ತದಿಂದ ಮೂರ್ತಿ, ವೇದೀ, ಸೂರ್ಯ, ಜಲ, ಅಗ್ನಿ ಮತ್ತು ಗುರುದೇವರು – ಹೀಗೆ ಇವರ ರೂಪದಲ್ಲಿ ಭಗವಂತನನ್ನು ಪೂಜಿಸಬೇಕು. ॥ ೨೮ ॥ (ಹಾಗೂ ಈ

ನಮಸ್ತುಭ್ಯಂ ಭಗವತೇ ಪುರುಷಾಯ ಮಹೀಯಸೇ ।
ಸರ್ವಭೂತನಿವಾಸಾಯ ವಾಸುದೇವಾಯ ಸಾಕ್ಷಿಣೇ ॥ ೨೯ ॥

ನಮೋಽವ್ಯಕ್ತಾಯ ಸೂಕ್ಷ್ಮಾಯ ಪ್ರಧಾನಪುರುಷಾಯ ಚ ।
ಚತುರ್ವಿಂಶದ್ಗುಣಜ್ಞಾಯ ಗುಣಸಂಖ್ಯಾನಹೇತವೇ ॥ ೩೦ ॥

ನಮೋ ದ್ವಿಶೀರ್ಷ್ಣೇ ತ್ರಿಪದೇ ಚತುಃಶೃಂಗಾಯ ತಂತವೇ ।
ಸಪ್ತಹಸ್ತಾಯ ಯಜ್ಞಾಯ ತ್ರಯೀವಿದ್ಯಾತ್ಮನೇ ನಮಃ ॥ ೩೧ ॥

ನಮಃ ಶಿವಾಯ ರುದ್ರಾಯ ನಮಃ ಶಕ್ತಿಧರಾಯ ಚ ।
ಸರ್ವವಿದ್ಯಾಧಿಪತಯೇ ಭೂತಾನಾಂ ಪತಯೇ ನಮಃ ॥ ೩೨ ॥

ನಮೋ ಹಿರಣ್ಯಗರ್ಭಾಯ ಪ್ರಾಣಾಯ ಜಗದಾತ್ಮನೇ ।
ಯೋಗೈಶ್ವರ್ಯಶರೀರಾಯ ನಮಸ್ತೇ ಯೋಗಹೇತವೇ ॥ ೩೩ ॥

ನಮಸ್ತ ಆದಿದೇವಾಯ ಸಾಕ್ಷಿಭೂತಾಯ ತೇ ನಮಃ ।
ನಾರಾಯಣಾಯ ಋಷಯೇ ನರಾಯ ಹರಯೇ ನಮಃ ॥ ೩೪ ॥

ನಮೋ ಮರಕತಶ್ಯಾಮವಪುಷೇಽಧಿಗತಶ್ರಿಯೇ ।
ಕೇಶವಾಯ ನಮಸ್ತುಭ್ಯಂ ನಮಸ್ತೇ ಪೀತವಾಸಸೇ ॥ ೩೫ ॥

ತ್ವಂ ಸರ್ವವರದಃ ಪುಂಸಾಂ ವರೇಣ್ಯ ವರದರ್ಷಭ ।
ಅತಸ್ತೇ ಶ್ರೇಯಸೇ ಧೀರಾಃ ಪಾದರೇಣುಮುಪಾಸತೇ ॥ ೩೬ ॥

ಅನ್ವವರ್ತಂತ ಯಂ ದೇವಾಃ ಶ್ರೀಶ್ಚ ತತ್ಪಾದಪದ್ಮಯೋಃ ।
ಸ್ಪೃಹಯಂತ ಇವಾಮೋದಂ ಭಗವಾನ್ಮೇ ಪ್ರಸೀದತಾಮ್ ॥ ೩೭ ॥

ಏತೈರ್ಮಂತ್ರೈರ್ಹೃಷೀಕೇಶಮಾವಾಹನಪುರಸ್ಕೃತಮ್ ।
ಅರ್ಚಯೇಚ್ಛ್ರದ್ಧಯಾ ಯುಕ್ತಃ ಪಾದ್ಯೋಪಸ್ಪರ್ಶನಾದಿಭಿಃ ॥ ೩೮ ॥

ಪ್ರಕಾರವಾಗಿ ಸ್ತುತಿಸಬೇಕು) ಷಡ್ಗುಣಸಂಪನ್ನನೂ, ಸಮಸ್ತ ಪ್ರಾಣಿಗಳಲ್ಲಿ ವಾಸಮಾಡುವವನೂ, ಸರ್ವಶ್ರೇಷ್ಠನೂ, ಸಮಸ್ತ ಪ್ರಾಣಿಗಳನ್ನು ತನ್ನಲ್ಲಿಯೇ ಧರಿಸುವವನೂ, ಸಮಸ್ತ ಚರಾಚರ ಜಗತ್ತಿಗೂ, ಅದರ ಕಾರಣಕ್ಕೂ ಸಾಕ್ಷೀಭೂತನಾಗಿರುವವನೂ, ವಾಸುದೇವನೂ ಆದ ನಿನಗೆ ನಮಸ್ಕರಿಸುತ್ತೇನೆ. ॥ ೨೯ ॥ ನೀನು ಅವ್ಯಕ್ತನೂ, ಸೂಕ್ಷ್ಮನೂ ಆಗಿರುವೆ. ಪ್ರಕೃತಿ ಮತ್ತು ಪುರುಷರ ರೂಪದಲ್ಲಿ ನೀನೇ ನೆಲೆಸಿರುವೆ. ನೀನು ಇಪ್ಪತ್ತನಾಲ್ಕು ಗುಣಗಳನ್ನು ತಿಳಿದವನೂ, ಗುಣಗಳನ್ನೂ ಎಣಿಸುವಂತಹ ಸಾಂಖ್ಯಶಾಸ್ತ್ರದ ಪ್ರವರ್ತಕನೂ ಆಗಿರುವೆ. ಅಂತಹ ನಿನಗೆ ನಮಸ್ಕಾರವು. ॥ ೩೦ ॥ ನೀನು ಯಜ್ಞಸ್ವರೂಪನಾಗಿರುವೆ. ಪ್ರಾಪಣೀಯ ಮತ್ತು ಉದಯನೀಯಗಳೆಂಬ ಎರಡು ಯಜ್ಞಕರ್ಮಗಳು ನಿನ್ನ ಶಿರಸ್ಸು ಆಗಿದೆ. ಪ್ರಾತಃಸವನ, ಮಾಧ್ಯಂದಿನಸವನ ಮತ್ತು ಸಾಯಂಸವನ ಎಂಬ ಮೂರು ಸವನಗಳೇ ನಿನ್ನ ಪಾದಗಳು. ನಾಲ್ಕು ವೇದಗಳೇ ನಿನ್ನ ನಾಲ್ಕು ಕೊಂಬುಗಳು. ಗಾಯತ್ರಿಯೇ ಮುಂತಾದ ಏಳು ಛಂದಸ್ಸುಗಳೇ ನಿನ್ನ ಏಳು ಕೈಗಳು. ಧರ್ಮಮಯವಾದ ವೃಷಭರೂಪವಾದ ಈ ಯಜ್ಞವು ವೇದಗಳಿಂದ ಪ್ರತಿಪಾದಿತವಾಗಿದೆ. ಇದರ ಆತ್ಮಾ ನೀನೇ ಆಗಿರುವೆ. ಇಂತಹ ಯಜ್ಞಸ್ವರೂಪನಾದ ನಿನಗೆ ನಮಸ್ಕರಿಸುತ್ತೇನೆ. ॥ ೩೧ ॥ ಭಗವಂತಾ! ಲೋಕಕ್ಕೆ ಕಲ್ಯಾಣವನ್ನುಂಟು ಮಾಡುವ ಶಿವನೂ ನೀನೇ ಆಗಿರುವೆ. ಪ್ರಳಯಕಾರೀ ರುದ್ರನೂ ನೀನೇ. ಸಮಸ್ತ ಶಕ್ತಿಗಳನ್ನು ಧರಿಸುವವನೂ ನೀನೇ. ನಿನಗೆ ಮತ್ತೆ-ಮತ್ತೆ ನಮಸ್ಕಾರಗಳು. ಸಮಸ್ತ ವಿದ್ಯೆಗಳ ಅಧಿಪತಿಯೂ, ಸರ್ವಭೂತರ ಸ್ವಾಮಿಯೂ ನೀನೇ ಆಗಿರುವೆ. ಅಂತಹ ನಿನಗೆ ನಮಸ್ಕರಿಸುತ್ತೇನೆ. ॥ ೩೨ ॥ ನೀನೇ ಎಲ್ಲರ ಪ್ರಾಣನೂ, ಜಗತ್ತಿಗೆ ಆತ್ಮಸ್ವರೂಪನೂ ಆಗಿರುವೆ. ಯೋಗಸ್ವರೂಪನೂ ಮತ್ತು ಯೋಗದಿಂದ ಪ್ರಾಪ್ತನಾಗುವ ಐಶ್ವರ್ಯಸ್ವರೂಪನೂ ನೀನೇ ಆಗಿರುವೆ. ಓ ಹಿರಣ್ಯಗರ್ಭನೇ! ನಿನಗೆ ನನ್ನ ನಮಸ್ಕಾರಗಳು. ॥ ೩೩ ॥ ಆದಿದೇವನಾಗಿರುವ ನಿನಗೆ ನಮಸ್ಕಾರವು. ಎಲ್ಲರ ಸಾಕ್ಷಿಭೂತನಾಗಿರುವ ನಿನಗೆ ನಮಸ್ಕಾರ. ನರ-ನಾರಾಯಣರ ರೂಪದಲ್ಲಿ ಪ್ರಕಟನಾದ ಶ್ರೀಹರಿಗೆ ನಮಸ್ಕಾರವು. ॥ ೩೪ ॥ ಮರಕತಮಣಿಯಂತೆ ಶ್ಯಾಮಲ ಶರೀರವುಳ್ಳ ನಿನಗೆ ನಮಸ್ಕಾರ. ಸಮಸ್ತವಾದ ಸಂಪತ್ತನ್ನೂ, ಸಂಪತ್ತುಗಳಿಗೆ ಅಧಿದೇವತೆಯಾದ ಮಹಾಲಕ್ಷ್ಮಿಯನ್ನು ಹೊಂದಿರುವ ನಿನಗೆ ನಮಸ್ಕಾರವು. ಪೀತಾಂಬರಧರನಾದ ಕೇಶವನೇ ನಿನಗೆ ನಮಸ್ಕಾರವು. ॥ ೩೫ ॥ ನೀನು ಎಲ್ಲ ವಿಧದ ವರಗಳನ್ನು ಕೊಡುವವನಾಗಿರುವೆ. ಭಕ್ತರಿಗೆ ವರಗಳನ್ನು ಕೊಡುವವರಲ್ಲಿ ನೀನು ಶ್ರೇಷ್ಠನಾಗಿರುವೆ. ಆದುದರಿಂದಲೇ ಭಕ್ತರಿಗೆ ನೀನು ಇಷ್ಟನಾಗಿರುವೆ. ಅದಕ್ಕಾಗಿಯೇ ಧೀರರಾದವರು, ವಿವೇಕಿಗಳು ತಮ್ಮ ಶ್ರೇಯಸ್ಸಿಗಾಗಿ ನಿನ್ನ ಚರಣರಜವನ್ನು ಉಪಾಸನೆ ಮಾಡುತ್ತಾರೆ. ॥ ೩೬ ॥ ಯಾರ ಚರಣಕಮಲಗಳ ಸುಗಂಧವನ್ನು ಪಡೆಯುವ ಆಸೆಯಿಂದ ಸಮಸ್ತ ದೇವತೆಗಳೂ, ಮಹಾಲಕ್ಷ್ಮಿಯೂ ನಿರಂತರವಾಗಿ ಆಶ್ರಯಿಸಿಕೊಂಡಿರುವರೋ ಅಂತಹ ಭಗವಂತನು ನನ್ನ ಮೇಲೆ ಪ್ರಸನ್ನವಾಗಲೀ. ॥ ೩೭ ॥

ಪ್ರಿಯೇ! ಅದಿತಿಯೇ! ಈ ಮಂತ್ರಗಳಿಂದ ಹೃಷೀಕೇಶನನ್ನು ಮೊದಲಿಗೆ ಆವಾಹಿಸಬೇಕು. ಬಳಿಕ ವಿಷ್ಣುವನ್ನು ಶ್ರದ್ಧಾಪೂರ್ವಕ

ಅರ್ಚಿತ್ವಾ ಗಂಧಮಾಲ್ಯಾದ್ಯೈಃ ಪಯಸಾ ಸ್ನಪಯೇದ್ವಿಭುಮ್ ।
ವಸ್ತ್ರೋಪವೀತಾಭರಣಪಾದ್ಯೋಪಸ್ಪರ್ಶನೈಸ್ತತಃ ।
ಗಂಧಧೂಪಾದಿಭಿಶ್ಚಾರ್ಚೇದ್ದ್ವಾದಶಾಕ್ಷರವಿದ್ಯಯಾ
॥ ೩೯ ॥

ಶೃತಂ ಪಯಸಿ ನೈವೇದ್ಯಂ ಶಾಲ್ಯನ್ನಂ ವಿಭವೇ ಸತಿ ।
ಸಸರ್ಪಿಃ ಸಗುಡಂ ದತ್ತ್ವಾ ಜುಹುಯಾನ್ಮೂಲವಿದ್ಯಯಾ
॥ ೪೦ ॥

ನಿವೇದಿತಂ ತದ್ಭಕ್ತಾಯ ದದ್ಯಾದ್ಭುಂಜೀತ ವಾ ಸ್ವಯಮ್ ।
ದತ್ತ್ವಾಽಽಚಮನಮರ್ಚಿತ್ವಾ ತಾಂಬೂಲಂ ಚ ನಿವೇದಯೇತ್
॥ ೪೧ ॥

ಜಪೇದಷ್ಟೋತ್ತರಶತಂ ಸ್ತುವೀತ ಸ್ತುತಿಭಿಃ ಪ್ರಭುಮ್ ।
ಕೃತ್ವಾ ಪ್ರದಕ್ಷಿಣಂ ಭೂಮೌ ಪ್ರಣಮೇದ್ದಂಡವನ್ಮುದಾ
॥ ೪೨ ॥

ಕೃತ್ವಾ ಶಿರಸಿ ತಚ್ಛೇಷಾಂ ದೇವಮುದ್ವಾಸಯೇತ್ತತಃ ।
ದ್ವ್ಯವರಾನ್ಭೋಜಯೇದ್ವಿಪ್ರಾನ್ ಪಾಯಸೇನ ಯಥೋಚಿತಮ್
॥ ೪೩ ॥

ಭುಂಜೀತ ತೈರನುಜ್ಞಾತಃ ಶೇಷಂ ಸೇಷ್ಟಃ ಸಭಾಜಿತೈಃ ।
ಬ್ರಹ್ಮಚಾರ್ಯಥ ತದ್ರಾತ್ರ್ಯಾಂ ಶ್ವೋಭೂತೇ ಪ್ರಥಮೇಽಹನಿ
॥ ೪೪ ॥

ಸ್ನಾತಃ ಶುಚಿರ್ಯಥೋಕ್ತೇನ ವಿಧಿನಾ ಸುಸಮಾಹಿತಃ ।
ಪಯಸಾ ಸ್ನಾಪಯಿತ್ವಾರ್ಚೇದ್ಯಾವದ್ವ್ರತಸಮಾಪನಮ್
॥ ೪೫ ॥

ಪಯೋಭಕ್ಷೋ ವ್ರತಮಿದಂ ಚರೇದ್ವಿಷ್ಣ್ವರ್ಚನಾದೃತಃ ।
ಪೂರ್ವವಜ್ಜುಹುಯಾದಗ್ನಿಂ ಬ್ರಾಹ್ಮಣಾಂಶ್ಚಾಪಿ ಭೋಜಯೇತ್
॥ ೪೬ ॥

ಏವಂ ತ್ವಹರಹಃ ಕುರ್ಯಾದ್ದ್ವಾದಶಾಹಂ ಪಯೋವ್ರತಃ ।
ಹರೇರಾರಾಧನಂ ಹೋಮಮರ್ಹಣಂ ದ್ವಿಜತರ್ಪಣಮ್
॥ ೪೭ ॥

ಪ್ರತಿಪದ್ದಿನಮಾರಭ್ಯ ಯಾವಚ್ಛುಕ್ಲತ್ರಯೋದಶೀ ।
ಬ್ರಹ್ಮಚರ್ಯಮಧಃಸ್ವಪ್ನಂ ಸ್ನಾನಂ ತ್ರಿಷವಣಂ ಚರೇತ್
॥ ೪೮ ॥

ವರ್ಜಯೇದಸದಾಲಾಪಂ ಭೋಗಾನುಚ್ಚಾವಚಾಂಸ್ತಥಾ ।
ಅಹಿಂಸ್ರಃ ಸರ್ವಭೂತಾನಾಂ ವಾಸುದೇವಪರಾಯಣಃ
॥ ೪೯ ॥

ತ್ರಯೋದಶ್ಯಾಮಥೋ ವಿಷ್ಣೋಃ ಸ್ನಪನಂ ಪಂಚಕೈರ್ವಿಭೋಃ ।
ಕಾರಯೇಚ್ಛಾಸ್ತ್ರದೃಷ್ಟೇನ ವಿಧಿನಾ ವಿಧಿಕೋವಿದೈಃ
॥ ೫೦ ॥

ವಾಗಿ ಅರ್ಘ್ಯ, ಪಾದ್ಯ, ಆಚಮನಾದಿಗಳಿಂದ ಅರ್ಚನೆ ಮಾಡ ಬೇಕು. ॥ ೩೮ ॥ ಮತ್ತೆ ಶ್ರೀಹರಿಯನ್ನು ಹಾಲಿನಿಂದ ಅಭಿಷೇಕ ಮಾಡಿ, ಗಂಧಮಾಲ್ಯಾದಿಗಳಿಂದ ಅರ್ಚಿಸಿ, ವಸ್ತ್ರೋಪವೀತ ಗಳಿಂದಲೂ, ಆಭರಣಾದಿಗಳಿಂದಲೂ ಪರಮಾತ್ಮನನ್ನು ಅಲಂಕರಿಸಿ, ಪಾದ್ಯಾಚಮನೀಯಗಳಿಂದಲೂ, 'ಓಂ ನಮೋ ಭಗವತೇ ವಾಸುದೇವಾಯ' ಈ ದ್ವಾದಶಾಕ್ಷರ ಮಂತ್ರವನ್ನು ಹೇಳಿಕೊಂಡು ಗಂಧ-ಅಕ್ಷತೆ-ಪುಷ್ಪ-ಧೂಪ-ದೀಪಾದಿಗಳನ್ನು ಶ್ರೀಹರಿಗೆ ಅರ್ಪಿಸ ಬೇಕು. ॥ ೩೯ ॥ ಸಾಮರ್ಥ್ಯವಿದ್ದರೆ ಹಾಲಿನಲ್ಲಿ ಪಕ್ವವಾದ ಹಾಗೂ ತುಪ್ಪ-ಬೆಲ್ಲ ಇವುಗಳಿಂದ ಕೂಡಿದ ಶಾಲ್ಯಾನ್ನವನ್ನು ನೈವೇದ್ಯ ಮಾಡಬೇಕು ಹಾಗೂ ಅದೇ ಪಾಯಸದಿಂದ ದ್ವಾದಶಾಕ್ಷರ ಮಂತ್ರದಿಂದ ಹೋಮಮಾಡಬೇಕು. ॥ ೪೦ ॥ ಆ ನೈವೇದ್ಯವನ್ನು ಭಗವದ್ಭಕ್ತರಿಗೆ ಹಂಚಿ ತಾನು ಸ್ವೀಕರಿಸಬೇಕು. ಬಳಿಕ ಭಗವಂತನಿಗೆ ಆಚಮನವನ್ನು ಅರ್ಪಿಸಿ ತಾಂಬೂಲವನ್ನು ನಿವೇದಿಸಬೇಕು. ॥ ೪೧ ॥ ಅನಂತರ ನೂರೆಂಟು ಬಾರಿ ದ್ವಾದಶಾಕ್ಷರ ಮಂತ್ರವನ್ನು ಜಪಿಸಿ ಭಗವಂತನನ್ನು ಸ್ತುತಿಗಳಿಂದ ಕೊಂಡಾಡಬೇಕು. ಪ್ರದಕ್ಷಿಣೆ ಮಾಡಿ ದೀರ್ಘದಂಡ ನಮಸ್ಕಾರವನ್ನು ಮಾಡಬೇಕು. ॥ ೪೨ ॥ ನಿರ್ಮಾಲ್ಯವನ್ನು ತಲೆಯಲ್ಲಿ ಧರಿಸಿಕೊಂಡು ಸ್ವಾಮಿಯನ್ನು ಉದ್ವಾಸನೆ ಮಾಡಬೇಕು. ಕನಿಷ್ಠ ಇಬ್ಬರು ಬ್ರಾಹ್ಮಣರಿಗೆ ಯಥೋ ಚಿತವಾಗಿ ಪಾಯಸಾನ್ನದಿಂದ ಭೋಜನ ಮಾಡಿಸಬೇಕು. ॥ ೪೩ ॥ ದಕ್ಷಿಣಾದಿಗಳಿಂದ ಅವರನ್ನು ಸತ್ಕರಿಸಿ, ಅವರಿಂದ ಅನುಜ್ಞೆಯನ್ನು ಪಡೆದು ತಮ್ಮ ಇಷ್ಟ-ಮಿತ್ರರೊಡನೆ ಪ್ರಸಾದಶೇಷವನ್ನು ಸ್ವೀಕರಿಸ ಬೇಕು. ಅಂದು ಬ್ರಹ್ಮಚರ್ಯದಿಂದ ಇದ್ದು, ಮರುದಿನ ಪ್ರಾತಃ ಕಾಲದಲ್ಲೇ ಸ್ನಾನಾದಿಗಳನ್ನು ಮಾಡಿ ಪವಿತ್ರತೆಯಿಂದ ಹಿಂದೆ ಹೇಳಿದ ವಿಧಿಯಿಂದ ಏಕಾಗ್ರತೆಯಿಂದ ಭಗವಂತನನ್ನು ಪೂಜಿಸ ಬೇಕು. ಹೀಗೆ ವ್ರತ ಸಮಾಪ್ತವಾಗುವತನಕ ಹಾಲಿನಿಂದ ಅಭಿಷೇಕ ಮಾಡಿ ಪ್ರತಿದಿನವೂ ಭಗವಂತನನ್ನು ಪೂಜಿಸಬೇಕು. ॥ ೪೪-೪೫ ॥

ಭಗವಂತನ ಪೂಜೆಯಲ್ಲಿ ಆದರ ಬುದ್ಧಿಯನ್ನಿರಿಸುತ್ತಾ ಕೇವಲ ಪಯೋವ್ರತಿಯಾಗಿದ್ದು ಈ ವ್ರತವನ್ನು ಮಾಡಬೇಕು. ಹಿಂದಿ ನಂತೆಯೇ ಪ್ರತಿದಿನವೂ ಹೋಮ ಮತ್ತು ಬ್ರಾಹ್ಮಣ ಭೋಜನವನ್ನು ಮಾಡಿಸಬೇಕು. ॥ ೪೬ ॥ ಹೀಗೆ ಪಯೋವ್ರತಿಯಾಗಿದ್ದು ಹನ್ನೆರಡು ದಿನಗಳವರೆಗೆ ಪ್ರತಿದಿನವೂ ಭಗವಂತನ ಆರಾಧನೆ, ಹೋಮ, ಪೂಜೆ, ಬ್ರಾಹ್ಮಣಭೋಜನ ಮಾಡಿಸುತ್ತಾ ಇರಬೇಕು. ॥ ೪೭ ॥

ಫಾಲ್ಗುಣ ಶುದ್ಧ ಪ್ರತಿಪದೆಯಿಂದ ಹಿಡಿದು ತ್ರಯೋದಶಿವರೆಗೆ ಬ್ರಹ್ಮಚರ್ಯದಿಂದ ಇದ್ದು ನೆಲದ ಮೇಲೆ ಮಲಗಬೇಕು. ಮೂರು ಹೊತ್ತು ಸ್ನಾನಮಾಡಬೇಕು. ॥ ೪೮ ॥ ಸುಳ್ಳು ಹೇಳಬಾರದು. ಪಾಪಿಗಳೊಡನೆ ಮಾತನಾಡಬಾರದು. ಕೆಟ್ಟಮಾತುಗಳನ್ನು ಆಡ ಬಾರದು. ಎಲ್ಲ ರೀತಿಯ ಭೋಗಗಳನ್ನು ತ್ಯಜಿಸಬೇಕು. ಯಾವುದೇ ಪ್ರಾಣಿಗಳಿಗೆ ಹಿಂಸೆ ಮಾಡಬಾರದು. ಭಗವಂತನ ಆರಾಧನೆ ಯಲ್ಲೇ ತೊಡಗಿರಬೇಕು. ॥ ೪೯ ॥ ತ್ರಯೋದಶಿಯ ದಿನ ಪೂಜಾವಿಧಿ-ವಿಧಾನಗಳನ್ನು ಬಲ್ಲ ಬ್ರಾಹ್ಮಣರ ಮೂಲಕ ಶಾಸ್ತ್ರೋಕ್ತ ವಿಧಿಯಿಂದ ಭಗವಾನ್ ಮಹಾವಿಷ್ಣುವಿಗೆ ಪಂಚಾಮೃತ ಅಭಿಷೇಕ ವನ್ನು ಮಾಡಿಸಬೇಕು. ॥ ೫೦ ॥ ಅಂದು ವಿತ್ತಶಾಠ್ಯಮಾಡದೆ (ಜಿಪುಣತನವನ್ನು ಬಿಟ್ಟು) ಭಗವಂತನ ಮಹಾಪೂಜೆಯನ್ನು ಮಾಡಬೇಕು. ಹಾಲಿನಲ್ಲಿ ಬೇಯಿಸಿದ ಪಾಯಸವನ್ನು ಮಹಾ

ಪೂಜಾಂ ಚ ಮಹತೀಂ ಕುರ್ಯಾದ್ವಿತ್ತಶಾಠ್ಯವಿವರ್ಜಿತಃ ।
ಚರುಂ ನಿರೂಪ್ಯ ಪಯಸಿ ಶಿಪಿವಿಷ್ಟಾಯ ವಿಷ್ಣವೇ ॥ ೫೧ ॥

ಶೃತೇನ ತೇನ ಪುರುಷಂ ಯಜೇತ ಸುಸಮಾಹಿತಃ ।
ನೈವೇದ್ಯಂ ಚಾತಿಗುಣವದ್ದದ್ಯಾತ್ಪುರುಷತುಷ್ಟಿದಮ್ ॥ ೫೨ ॥

ಆಚಾರ್ಯಂ ಜ್ಞಾನಸಂಪನ್ನಂ ವಸ್ತ್ರಾಭರಣಧೇನುಭಿಃ ।
ತೋಷಯೇದೃತ್ವಿಜಶ್ಚೈವ ತದ್ವಿದ್ಧ್ಯಾರಾಧನಂ ಹರೇಃ ॥ ೫೩ ॥

ಭೋಜಯೇತ್ತಾನ್ಗುಣವತಾ ಸದನ್ನೇನ ಶುಚಿಸ್ಮಿತೇ ।
ಅನ್ಯಾಂಶ್ಚ ಬ್ರಾಹ್ಮಣಾನ್ ಶಕ್ತ್ಯಾ ಯೇ ಚ ತತ್ರ ಸಮಾಗತಾಃ ॥ ೫೪ ॥

ದಕ್ಷಿಣಾಂ ಗುರವೇ ದದ್ಯಾದೃತ್ವಿಗ್ಭ್ಯಶ್ಚ ಯಥಾರ್ಹತಃ ।
ಅನ್ನಾದ್ಯೇನಾಶ್ವಪಾಕಾಂಶ್ಚ ಪ್ರೀಣಯೇತ್ಸಮುಪಾಗತಾನ್ ॥ ೫೫ ॥

ಭುಕ್ತವತ್ಸು ಚ ಸರ್ವೇಷು ದೀನಾಂಧಕೃಪಣೇಷು ಚ ।
ವಿಷ್ಣೋಸ್ತತ್ಪ್ರೀಣನಂ ವಿದ್ವಾನ್ಭುಂಜೀತ ಸಹ ಬಂಧುಭಿಃ ॥ ೫೬ ॥

ನೃತ್ಯವಾದಿತ್ರಗೀತೈಶ್ಚ ಸ್ತುತಿಭಿಃ ಸ್ವಸ್ತಿವಾಚಕೈಃ ।
ಕಾರಯೇತ್ತತ್ಕಥಾಭಿಶ್ಚ ಪೂಜಾಂ ಭಗವತೋಽನ್ವಹಮ್ ॥ ೫೭ ॥

ಏತತ್ಪಯೋವ್ರತಂ ನಾಮ ಪುರುಷಾರಾಧನಂ ಪರಮ್ ।
ಪಿತಾಮಹೇನಾಭಿಹಿತಂ ಮಯಾ ತೇ ಸಮುದಾಹೃತಮ್ ॥ ೫೮ ॥

ತ್ವಂ ಚಾನೇನ ಮಹಾಭಾಗೇ ಸಮ್ಯಕ್ಚೀರ್ಣೇನ ಕೇಶವಮ್ ।
ಆತ್ಮನಾ ಶುದ್ಧಭಾವೇನ ನಿಯತಾತ್ಮಾ ಭಜಾವ್ಯಯಮ್ ॥ ೫೯ ॥

ಅಯಂ ವೈ ಸರ್ವಯಜ್ಞಾಖ್ಯಃ ಸರ್ವವ್ರತಮಿತಿ ಸ್ಮೃತಮ್ ।
ತಪಃಸಾರಮಿದಂ ಭದ್ರೇ ದಾನಂ ಚೇಶ್ವರತರ್ಪಣಮ್ ॥ ೬೦ ॥

ತ ಏವ ನಿಯಮಾಃ ಸಾಕ್ಷಾತ್ತ ಏವ ಚ ಯಮೋತ್ತಮಾಃ ।
ತಪೋ ದಾನಂ ವ್ರತಂ ಯಜ್ಞೋ ಯೇನ ತುಷ್ಯತ್ಯಧೋಕ್ಷಜಃ ॥ ೬೧ ॥

ತಸ್ಮಾದೇತದ್ವ್ರತಂ ಭದ್ರೇ ಪ್ರಯತಾ ಶ್ರದ್ಧಯಾ ಚರ ।
ಭಗವಾನ್ಪರಿತುಷ್ಟಸ್ತೇ ವರಾನಾಶು ವಿಧಾಸ್ಯತಿ ॥ ೬೨ ॥

ವಿಷ್ಣುವಿಗೆ ಅರ್ಪಿಸಬೇಕು. ॥ ೫೧ ॥ ಅತ್ಯಂತ ಏಕಾಗ್ರವಾದ ಮನಸ್ಸಿನಿಂದ ಪುರುಷಸೂಕ್ತಮಂತ್ರಗಳಿಂದ ಹಾಲಿನಿಂದ ಬೇಯಿಸಿದ ಪಾಯಸವನ್ನು ಅಗ್ನಿಯಲ್ಲಿ ಹೋಮಮಾಡಬೇಕು. ಬಳಿಕ ಶ್ರೀಭಗವಂತನಿಗೆ ತೃಪ್ತಿಯಾಗುವ ರೀತಿಯಲ್ಲಿ ಷಡ್ರಸೋಪೇತವಾದ ನೈವೇದ್ಯವನ್ನು ಅರ್ಪಿಸಬೇಕು. ॥ ೫೨ ॥ ಇದಾದ ಬಳಿಕ ಜ್ಞಾನಸಂಪನ್ನ ಆಚಾರ್ಯ ಮತ್ತು ಋತ್ವಿಜರಿಗೆ ವಸ್ತ್ರ, ಆಭೂಷಣ, ಗೋವು ಮುಂತಾದವುಗಳನ್ನು ಕೊಟ್ಟು ಸಂತುಷ್ಟಪಡಿಸಬೇಕು. ಬ್ರಾಹ್ಮಣರನ್ನು ಪೂಜಿಸಿ ತೃಪ್ತಿಪಡಿಸುವುದು ಶ್ರೀಹರಿಯ ಆರಾಧನೆಯೇ ಆಗಿದೆ. ॥ ೫೩ ॥ ಪ್ರಿಯೇ! ರುಚಿ-ಶುಚಿಯಾದ ಭಕ್ಷ್ಯ-ಭೋಜ್ಯಾದಿಗಳಿಂದ ಕೂಡಿದ ಮೃಷ್ಟಾನ್ನದಿಂದ ಆಚಾರ್ಯ-ಋತ್ವಿಜರಿಗೂ, ಪೂಜಾ ಸಮಾರಂಭಕ್ಕೆ ಆಗಮಿಸಿರುವ ಇತರ ಬ್ರಾಹ್ಮಣರಿಗೂ ಶಕ್ತ್ಯಾನುಸಾರವಾಗಿ ಭೋಜನಮಾಡಿಸಬೇಕು. ॥ ೫೪ ॥ ಗುರುವಿಗೂ, ಋತ್ವಿಜರಿಗೂ ಯಥಾಯೋಗ್ಯವಾದ ದಕ್ಷಿಣೆಯನ್ನು ಕೊಡಬೇಕು. ಪೂಜೆಯ ಸಮಯಕ್ಕೆ ಆಗಮಿಸಿದ ಚಂಡಾಲರೇ ಮೊದಲಾದವರನ್ನೂ ಅನ್ನ-ವಸ್ತ್ರಗಳಿಂದ ತೃಪ್ತಿಗೊಳಿಸಬೇಕು. ದೀನರು, ಬಡವರು, ಕುಂಟರು, ಕುರುಡರು, ಕೈಲಾಗದವರೂ – ಇವರೆಲ್ಲರೂ ಊಟಮಾಡಿದನಂತರ ಮಹಾವಿಷ್ಣುವು ಸುಪ್ರೀತನಾದನೆಂದು ಭಾವಿಸಿ, ತಮ್ಮ ಬಂಧು-ಬಳಗದವರೊಡನೆ ಕುಳಿತು ಶಿಷ್ಟಾನ್ನವನ್ನು ಊಟಮಾಡಬೇಕು. ॥ ೫೫-೫೬ ॥ ಪಾಡ್ಯದಿಂದ ಹಿಡಿದು ತ್ರಯೋದಶಿವರೆವಿಗೂ ವಿರಾಮಕಾಲದಲ್ಲಿ ಪ್ರತಿದಿನವೂ ಗೀತ-ನೃತ್ಯ, ಸಂಗೀತ, ಸ್ವಸ್ತಿವಾಚನ, ಹರಿಕಥೆಗಳಿಂದ ಭಗವಂತನ ಆರಾಧನೆಯನ್ನೂ, ಸೇವೆಯನ್ನೂ ಮಾಡಬೇಕು. ॥ ೫೭ ॥

ಪ್ರಿಯಳೇ! ಇದು ಭಗವಂತನ ಶ್ರೇಷ್ಠವಾದ ಆರಾಧನೆಯಾಗಿದೆ. ಬ್ರಹ್ಮದೇವರು ನನಗೆ ಉಪದೇಶಿಸಿದ ಈ ಪಯೋವ್ರತವನ್ನು ನಿನಗೆ ಯಥಾವತ್ತಾಗಿ ತಿಳಿಸಿರುವೆನು. ॥ ೫೮ ॥ ದೇವಿ! ಭಾಗ್ಯವತಿಯೇ! ನಿನ್ನ ಇಂದ್ರಿಯಗಳನ್ನು ವಶಪಡಿಸಿಕೊಂಡು, ಶುದ್ಧವಾದ ಭಾವ-ಶ್ರದ್ಧಾಪೂರ್ಣ ಚಿತ್ತದಿಂದ ನೀನೂ ಈ ವ್ರತವನ್ನು ಚೆನ್ನಾಗಿ ಅನುಷ್ಠಾನ ಮಾಡು ಹಾಗೂ ಇದರ ಮೂಲಕ ಅವಿನಾಶಿಯಾದ ಭಗವಂತನನ್ನು ಆರಾಧಿಸು. ॥ ೫೯॥ ಕಲ್ಯಾಣೀ! ಈ ವ್ರತವು ಭಗವಂತನನ್ನು ಸಂತುಷ್ಟಗೊಳಿಸುವಂತಹುದು. ಅದಕ್ಕಾಗಿ ಇದನ್ನು 'ಸರ್ವಯಜ್ಞ', 'ಸರ್ವವ್ರತ' ಎಂದು ಹೇಳುತ್ತಾರೆ. ಇದು ಸಮಸ್ತ ತಪಸ್ಸುಗಳ ಸಾರವೂ, ಮುಖ್ಯವಾದ ದಾನವೂ ಆಗಿದೆ. ॥ ೬೦ ॥ ವಾಸ್ತವವಾಗಿ ಭಗವಂತನು ಪ್ರಸನ್ನನಾಗುವಂತಹ ನಿಯಮ, ಯಮ, ತಪಸ್ಸು, ದಾನ, ವ್ರತ, ಯಜ್ಞ ಇವುಗಳೇ ಶ್ರೇಷ್ಠವಾದವುಗಳು. ॥೬೧॥ ಅದಕ್ಕಾಗಿ ಅದಿತಿದೇವಿಯೇ! ಸಂಯಮದಿಂದಲೂ, ಶ್ರದ್ಧೆಯಿಂದಲೂ ನೀನು ಈ ವ್ರತದ ಅನುಷ್ಠಾನವನ್ನು ಆಚರಿಸು. ಭಗವಂತನು ಶೀಘ್ರವಾಗಿಯೇ ನಿನಗೆ ಪ್ರಸನ್ನನಾಗುವನು ಮತ್ತು ನಿನ್ನ ಅಭಿಲಾಷೆಯನ್ನು ಪೂರ್ಣಗೊಳಿಸುವನು.॥೬೨॥

*ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ಅದಿತಿಪಯೋವ್ರತಕಥನಂ ನಾಮ ಷೋಡಶೋಽಧ್ಯಾಯಃ ॥ ೧೬ ॥

# ಹದಿನೇಳನೆಯ ಅಧ್ಯಾಯ

## ಭಗವಂತನು ಪ್ರತ್ಯಕ್ಷನಾಗಿ ಅದಿತಿಗೆ ವರವನ್ನು ಕೊಡುವುದು

*ಶ್ರೀಶುಕ ಉವಾಚ*

ಇತ್ಯುಕ್ತಾ ಸಾದಿತೀ ರಾಜನ್ಸ್ವಭರ್ತ್ರಾ ಕಶ್ಯಪೇನ ವೈ ।
ಅನ್ವತಿಷ್ಠದ್ವ್ರತಮಿದಂ ದ್ವಾದಶಾಹಮತಂದ್ರಿತಾ ॥ ೧ ॥

ಚಿಂತಯಂತ್ಯೇಕಯಾ ಬುದ್ಧ್ಯಾ ಮಹಾಪುರುಷಮೀಶ್ವರಮ್ ।
ಪ್ರಗೃಹ್ಯೇಂದ್ರಿಯದುಷ್ಟಾಶ್ವಾನ್ಮನಸಾ ಬುದ್ಧಿಸಾರಥಿಃ ॥ ೨ ॥

ಮನಶ್ಚೈಕಾಗ್ರಯಾ ಬುದ್ಧ್ಯಾ ಭಗವತ್ಯಖಿಲಾತ್ಮನಿ ।
ವಾಸುದೇವೇ ಸಮಾಧಾಯ ಚಚಾರ ಹ ಪಯೋವ್ರತಮ್ ॥ ೩ ॥

ತಸ್ಯಾಃ ಪ್ರಾದುರಭೂತ್ತಾತ ಭಗವಾನಾದಿಪೂರುಷಃ ।
ಪೀತವಾಸಾಶ್ಚತುರ್ಬಾಹುಃ ಶಂಖಚಕ್ರಗದಾಧರಃ ॥ ೪ ॥

ತಂ ನೇತ್ರಗೋಚರಂ ವೀಕ್ಷ್ಯ ಸಹಸೋತ್ಥಾಯ ಸಾದರಮ್ ।
ನನಾಮ ಭುವಿ ಕಾಯೇನ ದಂಡವತ್ಪ್ರೀತಿವಿಹ್ವಲಾ ॥ ೫ ॥

ಸೋತ್ಥಾಯ ಬದ್ಧಾಂಜಲಿರೀಡಿತುಂ ಸ್ಥಿತಾ
ನೋತ್ಸೇಹ ಆನಂದಜಲಾಕುಲೇಕ್ಷಣಾ ।
ಬಭೂವ ತೂಷ್ಣೀಂ ಪುಲಕಾಕುಲಾಕೃತಿ-
ಸ್ತದ್ದರ್ಶನಾತ್ಯುತ್ಸವಗಾತ್ರವೇಪಥುಃ ॥ ೬ ॥

ಪ್ರೀತ್ಯಾ ಶನೈರ್ಗದ್ಗದಯಾ ಗಿರಾ ಹರಿಂ
ತುಷ್ಟಾವ ಸಾ ದೇವ್ಯದಿತಿಃ ಕುರೂದ್ವಹ ।
ಉದ್ವೀಕ್ಷತೀ ಸಾ ಪಿಬತೀವ ಚಕ್ಷುಷಾ
ರಮಾಪತಿಂ ಯಜ್ಞಪತಿಂ ಜಗತ್ಪತಿಮ್ ॥ ೭ ॥

*ಅದಿತಿರುವಾಚ*

ಯಜ್ಞೇಶ ಯಜ್ಞಪುರುಷಾಚ್ಯುತ ತೀರ್ಥಪಾದ
ತೀರ್ಥಶ್ರವಃ ಶ್ರವಣಮಂಗಲನಾಮಧೇಯ ।
ಆಪನ್ನಲೋಕವೃಜಿನೋಪಶಮೋದಯಾದ್ಯ
ಶಂ ನಃ ಕೃಧೀಶ ಭಗವನ್ನಸಿ ದೀನನಾಥಃ ॥ ೮ ॥

ವಿಶ್ವಾಯ ವಿಶ್ವಭವನಸ್ಥಿತಿಸಂಯಮಾಯ
ಸ್ವೈರಂ ಗೃಹೀತಪುರುಶಕ್ತಿಗುಣಾಯ ಭೂಮ್ನೇ ।
ಸ್ವಸ್ಥಾಯ ಶಶ್ವದುಪಬೃಂಹಿತಪೂರ್ಣಬೋಧ-
ವ್ಯಾಪಾದಿತಾತ್ಮ ತಮಸೇ ಹರಯೇ ನಮಸ್ತೇ ॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ತನ್ನ ಪತಿಯಾದ ಮಹರ್ಷಿ ಕಶ್ಯಪರ ಉಪದೇಶವನ್ನು ಪಡೆದ ಅದಿತಿದೇವಿಯು ಬಹಳ ಎಚ್ಚರಿಕೆಯಿಂದ ಹನ್ನೆರಡು ದಿನಗಳವರೆಗೆ ಪಯೋವ್ರತವನ್ನು ಆಚರಿಸಿದಳು. ॥ ೧ ॥ ಆಕೆಯು ಬುದ್ಧಿಯನ್ನು ಸಾರಥಿಯನ್ನಾಗಿಸಿಕೊಂಡು, ಮನಸ್ಸೆಂಬ ಲಗಾಮಿನಿಂದ ಇಂದ್ರಿಯ ರೂಪವಾದ ತುಂಟಕುದುರೆಗಳನ್ನು ತನ್ನ ವಶಪಡಿಸಿಕೊಂಡು, ಏಕಾಗ್ರಬುದ್ಧಿಯಿಂದ ಪುರುಷೋತ್ತಮನಾದ ಭಗವಂತನನ್ನು ಧ್ಯಾನಿಸುತ್ತಿದ್ದಳು. ॥ ೨ ॥ ಅದಿತಿಯು ಏಕಾಗ್ರವಾದ ಬುದ್ಧಿಯಿಂದ ತನ್ನ ಮನಸ್ಸನ್ನು ಸರ್ವಾತ್ಮನಾದ ಭಗವಾನ್ ವಾಸುದೇವನಲ್ಲಿ ಸಂಪೂರ್ಣವಾಗಿ ತೊಡಗಿಸಿ ಪಯೋವ್ರತದ ಅನುಷ್ಠಾನವನ್ನು ಮಾಡಿದಳು. ॥ ೩ ॥ ಆಗ ಭಗವಾನ್ ಪುರುಷೋತ್ತಮನು ಅವಳ ಮುಂದೆ ಪ್ರಕಟನಾದನು. ಪರೀಕ್ಷಿತನೇ! ಆ ಭಗವಂತನು ಪೀತಾಂಬರವನ್ನು ಉಟ್ಟಿದ್ದನು. ಚತುರ್ಭುಜನಾಗಿದ್ದು, ಶಂಖ, ಚಕ್ರ, ಗದೆಗಳನ್ನು ಧರಿಸಿದ್ದನು. ॥ ೪ ॥ ತನ್ನ ಕಣ್ಮುಂದೆ ನಿಂತಿದ್ದ ಭಗವಂತನನ್ನು ಸಾಕ್ಷಾತ್ತಾಗಿ ನೋಡಿದ ಅದಿತಿದೇವಿಯು ಒಡನೆಯೇ ಆದರದಿಂದ ಎದ್ದು ನಿಂತು, ಪ್ರೇಮಪರವಶಳಾಗಿ ಭೂಮಿಯ ಮೇಲೆ ದೀರ್ಘದಂಡ ನಮಸ್ಕಾರವನ್ನು ಮಾಡಿದಳು. ॥ ೫ ॥ ಮತ್ತೆ ಮೇಲೆದ್ದು ಕೈಜೋಡಿಸಿಕೊಂಡು ಭಗವಂತನನ್ನು ಸ್ತುತಿಸಲು ಪ್ರಯತ್ನಿಸಿದಳು. ಆದರೆ ಕಣ್ಣುಗಳಲ್ಲಿ ಆನಂದ ಬಾಷ್ಪಗಳು ಉಕ್ಕಿಹರಿಯುತ್ತಿದ್ದುದರಿಂದ, ಕಂಠ ತುಂಬಿಬಂತು. ಮಾತನಾಡಲಾಗಲಿಲ್ಲ. ಶರೀರವಿಡೀ ಪುಳಕಿತವಾಗಿತ್ತು. ದರ್ಶನದ ಆನಂದೋಲ್ಲಾಸದಿಂದ ಅವಳ ಶರೀರವು ನಡುಗುತ್ತಿತ್ತು. ಸ್ತುತಿಸಲಾರದೆ ಅವಳು ಸುಮ್ಮನೆ ನಿಂತಿದ್ದಳು. ॥ ೬ ॥ ಪರೀಕ್ಷಿತನೇ! ಲಕ್ಷ್ಮೀಪತಿಯೂ, ಜಗತ್ಪತಿಯೂ, ಯಜ್ಞಪತಿಯೂ ಆದ ಭಗವಂತನನ್ನು ಕಣ್ಣುಗಳಿಂದಲೇ ಕುಡಿದುಬಿಡುವಳೋ ಎಂಬಂತೆ ಅದಿತಿಯು ತನ್ನ ಕಣ್ಣುಗಳಿಂದ ಪ್ರೇಮಪೂರ್ಣವಾಗಿ ನೋಡುತ್ತಿದ್ದಳು. ಅನಂತರ ಪ್ರೀತಿಯಿಂದ ಗದ್ಗದವಾದ ಮಾತುಗಳಿಂದ ಮೆಲ್ಲ-ಮೆಲ್ಲನೆ ಶ್ರೀಭಗವಂತನನ್ನು ಸ್ತುತಿಸಿದಳು. ॥ ೭ ॥

**ಅದಿತಿದೇವಿಯು ಹೇಳಿದಳು** – ಓ ಯಜ್ಞೇಶ್ವರನೇ! ಯಜ್ಞಪುರುಷನೇ! ಅಚ್ಯುತನೇ! ತೀರ್ಥಶ್ರೇಷ್ಠವಾದ ಗಂಗಾನದಿಯನ್ನು ಪಾದಗಳಲ್ಲಿ ಧರಿಸಿರುವವನೇ! ಪುಣ್ಯಕೀರ್ತಿಯೇ! ಶ್ರವಣಮಾತ್ರದಿಂದಲೇ ಮಂಗಳವನ್ನುಂಟು ಮಾಡುವ ನಾಮಾವಳಿಗಳುಳ್ಳವನೇ! ಶರಣಾಗತರ ಪಾಪಗಳನ್ನು ಹೋಗಲಾಡಿಸುವುದಕ್ಕಾಗಿಯೇ ಅವತರಿಸಿರುವವನೇ! ಆದಿಪುರುಷನೇ! ನೀನು ದೀನರಿಗೆ ನಾಥನಾಗಿರುವೆ. ನೀನು ನಮಗೆ ಮಂಗಳವನ್ನುಂಟು ಮಾಡು. ॥ ೮ ॥ ನೀನು ವಿಶ್ವದ ಉತ್ಪತ್ತಿ, ಸ್ಥಿತಿ ಮತ್ತು ಪ್ರಳಯಗಳಿಗೆ ಕಾರಣನಾಗಿರುವೆ. ವಿಶ್ವರೂಪನೂ ನೀನೇ ಆಗಿರುವೆ. ಅನಂತನಾಗಿದ್ದರೂ ಸ್ವೇಚ್ಛೆಯಿಂದ ನೀನು ಅನೇಕ ಶಕ್ತಿಗಳನ್ನು ಮತ್ತು ಗುಣಗಳನ್ನು ಸ್ವೀಕರಿಸುತ್ತೀಯೆ. ನೀನು ಸದಾ ನಿನ್ನ ಸ್ವರೂಪದಲ್ಲೇ

ಆಯುಃ ಪರಂ ವಪುರಭೀಷ್ಟಮತುಲ್ಯ ಲಕ್ಷ್ಮೀ-
ರ್ದ್ಯೋಭೂರಸಾಃ ಸಕಲಯೋಗಗುಣಾಸ್ತ್ರಿವರ್ಗಃ ।
ಜ್ಞಾನಂ ಚ ಕೇವಲಮನಂತ ಭವಂತಿ ತುಷ್ಟಾ-
ತ್ತ್ವತ್ತೋ ನೃಣಾಂ ಕಿಮು ಸಪತ್ನಜಯಾದಿರಾಶೀಃ ॥ ೧೦ ॥

ಶ್ರೀಶುಕ ಉವಾಚ

ಅದಿತ್ಯೈವಂ ಸ್ತುತೋ ರಾಜನ್ಭಗವಾನ್ಪುಷ್ಕರೇಕ್ಷಣಃ ।
ಕ್ಷೇತ್ರಜ್ಞಃ ಸರ್ವಭೂತಾನಾಮಿತಿ ಹೋವಾಚ ಭಾರತ ॥ ೧೧ ॥

ಶ್ರೀಭಗವಾನುವಾಚ

ದೇವಮಾತರ್ಭವತ್ಯಾ ಮೇ ವಿಜ್ಞಾತಂ ಚಿರಕಾಂಕ್ಷಿತಮ್ ।
ಯತ್ಸಪತ್ನೈರ್ಹೃತಶ್ರೀಣಾಂ ಚ್ಯಾವಿತಾನಾಂ ಸ್ವಧಾಮತಃ ॥ ೧೨ ॥

ತಾನ್ವಿನಿರ್ಜಿತ್ಯ ಸಮರೇ ದುರ್ಮದಾನಸುರರ್ಷಭಾನ್ ।
ಪ್ರತಿಲಬ್ಧಜಯಶ್ರೀಭಿಃ ಪುತ್ರೈರಿಚ್ಛಸ್ಯುಪಾಸಿತುಮ್ ॥ ೧೩ ॥

ಇಂದ್ರಜ್ಯೇಷ್ಠೈಃ ಸ್ವತನಯೈರ್ಹತಾನಾಂ ಯುಧಿ ವಿದ್ವಿಷಾಮ್ ।
ಸ್ತ್ರಿಯೋ ರುದಂತೀರಾಸಾದ್ಯ ದ್ರಷ್ಟುಮಿಚ್ಛಸಿ ದುಃಖಿತಾಃ ॥ ೧೪ ॥

ಆತ್ಮಜಾನ್ಸುಸಮೃದ್ಧಾಂಸ್ತ್ವಂ ಪ್ರತ್ಯಾಹೃತಯಶಃಶ್ರಿಯಃ ।
ನಾಕಪೃಷ್ಠಮಧಿಷ್ಠಾಯ ಕ್ರೀಡತೋ ದ್ರಷ್ಟುಮಿಚ್ಛಸಿ ॥ ೧೫ ॥

ಪ್ರಾಯೋಽಧುನಾ ತೇಽಸುರಯೂಥನಾಥಾ
ಅಪಾರಣೀಯಾ ಇತಿ ದೇವಿ ಮೇ ಮತಿಃ ।
ಯತ್ತೇಽನುಕೂಲೇಶ್ವರವಿಪ್ರಗುಪ್ತಾ
ನ ವಿಕ್ರಮಸ್ತತ್ರ ಸುಖಂ ದದಾತಿ ॥ ೧೬ ॥

ಅಥಾಪ್ಯುಪಾಯೋ ಮಮ ದೇವಿ ಚಿಂತ್ಯಃ
ಸಂತೋಷಿತಸ್ಯ ವ್ರತಚರ್ಯಯಾ ತೇ ।
ಮಮಾರ್ಚನಂ ನಾರ್ಹತಿ ಗಂತುಮನ್ಯಥಾ
ಶ್ರದ್ಧಾನುರೂಪಂ ಫಲಹೇತುಕತ್ವಾತ್ ॥ ೧೭ ॥

ತ್ವಯಾರ್ಚಿತಶ್ಚಾಹಮಪತ್ಯಗುಪ್ತಯೇ
ಪಯೋವ್ರತೇನಾನುಗುಣಂ ಸಮೀಡಿತಃ ।
ಸ್ವಾಂಶೇನ ಪುತ್ರತ್ವಮುಪೇತ್ಯ ತೇ ಸುತಾನ್
ಗೋಪ್ತಾಸ್ಮಿ ಮಾರೀಚತಪಸ್ಯಧಿಷ್ಠಿತಃ ॥ ೧೮ ॥

ಉಪಧಾವ ಪತಿಂ ಭದ್ರೇ ಪ್ರಜಾಪತಿಮಕಲ್ಮಷಮ್ ।
ಮಾಂ ಚ ಭಾವಯತೀ ಪತ್ಯಾವೇವಂರೂಪಮವಸ್ಥಿತಮ್ ॥ ೧೯ ॥

ನೆಲೆಸಿರುತ್ತೀಯೆ. ನಿತ್ಯ-ನಿರಂತರ ಬೆಳೆಯುತ್ತಿರುವ ಪೂರ್ಣ ಬೋಧದಿಂದ ನೀನು ಹೃದಯದ ಅಂಧಕಾರವನ್ನು ನಾಶಮಾಡಿ ಬಿಡುತ್ತೀಯೆ. ಭಗವಂತಾ ! ನಾನು ನಿನಗೆ ನಮಸ್ಕರಿಸುತ್ತೇನೆ. ॥ ೯ ॥ ಪ್ರಭೋ ! ಅನಂತನೇ ! ನೀನು ಸಂತುಷ್ಟನಾದಲ್ಲಿ ದೀರ್ಘಾಯುಷ್ಯವೂ, ಇಷ್ಟವಾದ ಶರೀರವೂ, ಅಸದೃಶವಾದ ಐಶ್ವರ್ಯವೂ, ಸ್ವರ್ಗ, ಮರ್ತ್ಯ, ಪಾತಾಳಲೋಕಗಳು, ಯೋಗದ ಸಮಸ್ತ ಸಿದ್ಧಿಗಳೂ, ಧರ್ಮಾರ್ಥಕಾಮಗಳೂ, ಇವೆಲ್ಲಕ್ಕಿಂತಲೂ ಮಿಗಿಲಾದ ಅಪರೋಕ್ಷಜ್ಞಾನವೂ ಮನುಷ್ಯರಿಗೆ ಪ್ರಾಪ್ತವಾಗುತ್ತದೆ. ಹೀಗಿರುವಾಗ ಶತ್ರುಜಯವೇ ಮೊದಲಾದ ಸಣ್ಣ-ಪುಟ್ಟ ಕೋರಿಕೆಗಳ ವಿಷಯದಲ್ಲಿ ಹೇಳುವುದೇನಿದೆ ? ॥ ೧೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ ! ಅದಿತಿಯು ಕಮಲನಯನ ಭಗವಂತನನ್ನು ಹೀಗೆ ಸ್ತುತಿಸಿದಾಗ ಸಮಸ್ತ ಪ್ರಾಣಿಗಳ ಹೃದಯದಲ್ಲಿ ಅಂತರ್ಯಾಮಿ ಯಾಗಿರುವ ಭಗವಂತನು ಇಂತೆಂದನು – ॥ ೧೧ ॥

**ಶ್ರೀಭಗವಂತನು ಹೇಳಿದನು** – ಎಲೈ ದೇವಮಾತೆಯಾದ ಅದಿತಿಯೇ ! ನಿನ್ನ ಮನಸ್ಸಿನಲ್ಲಿ ಬಹಳ ಕಾಲದಿಂದಿರುವ ಆಶಯವನ್ನು ನಾನು ಬಲ್ಲೆನು. ಶತ್ರುಗಳು ನಿನ್ನ ಮಕ್ಕಳ ಸಂಪತ್ತನ್ನು ಅಪಹರಿಸಿರುವುದಲ್ಲದೆ ಅವರನ್ನು ಅವರ ಲೋಕ(ಸ್ವರ್ಗ)ದಿಂದ ಓಡಿಸಿಬಿಟ್ಟಿದ್ದಾರೆ. ॥ ೧೨ ॥ ಯುದ್ಧದಲ್ಲಿ ನಿನ್ನ ಮಕ್ಕಳು ಆ ಕೊಬ್ಬಿರುವ ಅಸುರರನ್ನು, ಬಲಿಯನ್ನು ಗೆದ್ದು ವಿಜಯಲಕ್ಷ್ಮಿಯನ್ನು ಪಡೆದುಕೊಂಡಾಗ ನೀನು ಅವರೊಂದಿಗೆ ಭಗವಂತನ ಉಪಾಸನೆ ಮಾಡಬೇಕೆಂದು ಬಯಸುತ್ತಿರುವೆ. ॥ ೧೩ ॥ ಇಂದ್ರನೇ ಮೊದಲಾದ ನಿನ್ನ ಪುತ್ರರು ಶತ್ರುಗಳನ್ನು ಕೊಂದುಹಾಕಿದಾಗ ನೀವು ಆ ದೈತ್ಯಸ್ತ್ರೀಯರು ದುಃಖದಿಂದ ಅಳುವುದನ್ನು ಕಣ್ಣಾರೆ ಕಾಣಬೇಕೆಂಬುದೂ ನಿನ್ನ ಬಯಕೆಯಾಗಿದೆ. ॥ ೧೪ ॥ ಅದಿತಿಯೇ ! ಯುದ್ಧದಲ್ಲಿ ದೈತ್ಯರನ್ನು ಗೆದ್ದು ಕಳೆದುಹೋಗಿದ್ದ ಕೀರ್ತಿ, ಐಶ್ವರ್ಯವನ್ನು ಪುನಃ ಪಡೆದುಕೊಂಡು ಸಕಲೈಶ್ವರ್ಯ ಸಂಪನ್ನರಾಗಿ ಸ್ವರ್ಗಲೋಕದಲ್ಲಿ ಪುನಃ ನೆಲೆಸಿ ಹಿಂದಿನಂತೆ ವಿಹರಿಸಬೇಕೆಂಬುದನ್ನೂ ಬಯಸುತ್ತಿರುವೆಯಲ್ಲ! ॥ ೧೫ ॥ ಆದರೆ ದೇವೀ ! ಆ ಅಸುರ ಸೇನಾಪತಿಗಳನ್ನು ಈ ಸಮಯದಲ್ಲಿ ಜಯಿಸಲು ಸಾಧ್ಯವಾಗದೆಂದು ನನಗೆ ಅನಿಸುತ್ತದೆ. ಏಕೆಂದರೆ, ಈಶ್ವರನು ಮತ್ತು ಬ್ರಾಹ್ಮಣರು ಈಗ ಅವರಿಗೆ ಅನುಕೂಲರಾಗಿದ್ದಾರೆ. ಈಗಲಂತೂ ಅವರೊಂದಿಗೆ ಯುದ್ಧಹೂಡಿದರೆ ಅವರಿಂದ ಸುಖ ಸಿಗುವ ಆಸೆ ಇಲ್ಲ. ॥ ೧೬ ॥ ಹೀಗಿದ್ದರೂ ದೇವಿ! ನಿನ್ನ ಈ ವ್ರತಾನುಷ್ಠಾನದಿಂದ ನಾನು ಬಹಳ ಪ್ರಸನ್ನನಾಗಿರುವೆನು. ಅದಕ್ಕಾಗಿ ಈ ಸಂಬಂಧವಾಗಿ ನನಗೆ ಏನಾದರೂ ಉಪಾಯ ಮಾಡಲೇಬೇಕಾಗಿದೆ. ಏಕೆಂದರೆ, ನನ್ನ ಆರಾಧನೆಯು ವ್ಯರ್ಥವಾಗಬಾರದು. ಅದರಿಂದ ಶ್ರದ್ಧೆಗನುಸಾರವಾಗಿ ಫಲವು ಅವಶ್ಯವಾಗಿ ಸಿಗುತ್ತದೆ. ॥ ೧೭ ॥ ನೀನು ನಿನ್ನ ಪುತ್ರರ ರಕ್ಷಣೆಗಾಗಿಯೇ ವಿಧಿವತ್ತಾಗಿ ಪಯೋವ್ರತದಿಂದ ನನ್ನ ಪೂಜೆ-ಸ್ತುತಿ ಮಾಡಿರುವೆ. ಆದ್ದರಿಂದ ನಾನು ಅಂಶರೂಪದಿಂದ ಕಶ್ಯಪರ ತಪಸ್ಸಿನಲ್ಲಿ ನೆಲೆಸಿ ನಿನ್ನ ಪುತ್ರನಾಗಿ ಅವತರಿಸಿ ನಿನ್ನ ಸಂತಾನವನ್ನು ರಕ್ಷಿಸುವೆನು. ॥ ೧೮ ॥ ಕಲ್ಯಾಣೀ ! ನೀನು ನಿನ್ನ ಪತಿಯಾದ ಕಶ್ಯಪರಲ್ಲಿ ನನ್ನನ್ನು ಇದೇ ರೂಪದಿಂದ ನೆಲೆಸಿರುವನೆಂದು ತಿಳಿದು, ಪಾಪರಹಿತರಾದ ಪ್ರಜಾಪತಿಯ ಸೇವೆಯನ್ನು ಮಾಡು. ॥ ೧೯ ॥

ನೈತತ್ಪರಸ್ಮಾ ಆಖ್ಯೇಯಂ ಪೃಷ್ಟಯಾಪಿ ಕಥಂಚನ ।
ಸರ್ವಂ ಸಂಪದ್ಯತೇ ದೇವಿ ದೇವಗುಹ್ಯಂ ಸುಸಂವೃತಮ್ ॥ ೨೦ ॥

*ಶ್ರೀಶುಕ ಉವಾಚ*

ಏತಾವದುಕ್ತ್ವಾ ಭಗವಾಂಸ್ತತ್ರೈವಾಂತರಧೀಯತ ।
ಅದಿತಿರ್ದುರ್ಲಭಂ ಲಬ್ಧ್ವಾ ಹರೇರ್ಜನ್ಮಾತ್ಮನಿ ಪ್ರಭೋಃ ॥ ೨೧ ॥

ಉಪಾಧಾವತ್ಪತಿಂ ಭಕ್ತ್ಯಾ ಪರಯಾ ಕೃತಕೃತ್ಯವತ್ ।
ಸ ವೈ ಸಮಾಧಿಯೋಗೇನ ಕಶ್ಯಪಸ್ತದಬುಧ್ಯತ ॥ ೨೨ ॥

ಪ್ರವಿಷ್ಟಮಾತ್ಮನಿ ಹರೇರಂಶಂ ಹ್ಯವಿತಥೇಕ್ಷಣಃ ।
ಸೋऽದಿತ್ಯಾಂ ವೀರ್ಯಮಾಧತ್ತ ತಪಸಾ ಚಿರಸಂಭೃತಮ್ ।
ಸಮಾಹಿತಮನಾ ರಾಜನ್‌ದಾರುಣ್ಯಗ್ನಿಂ ಯಥಾನಿಲಃ ॥ ೨೩ ॥

ಅದಿತೇರ್ಧಿಷ್ಠಿತಂ ಗರ್ಭಂ ಭಗವಂತಂ ಸನಾತನಮ್ ।
ಹಿರಣ್ಯಗರ್ಭೋ ವಿಜ್ಞಾಯ ಸಮೀಡೇ ಗುಹ್ಯನಾಮಭಿಃ ॥ ೨೪ ॥

*ಬ್ರಹ್ಮೋವಾಚ*

ಜಯೋರುಗಾಯ ಭಗವನ್ನುರುಕ್ರಮ ನಮೋಸ್ತು ತೇ ।
ನಮೋ ಬ್ರಹ್ಮಣ್ಯದೇವಾಯ ತ್ರಿಗುಣಾಯ ನಮೋ ನಮಃ ॥ ೨೫ ॥

ನಮಸ್ತೇ ಪೃಶ್ನಿಗರ್ಭಾಯ ವೇದಗರ್ಭಾಯ ವೇಧಸೇ ।
ತ್ರಿನಾಭಾಯ ತ್ರಿಪೃಷ್ಠಾಯ ಶಿಪಿವಿಷ್ಟಾಯ ವಿಷ್ಣವೇ ॥ ೨೬ ॥

ತ್ವಮಾದಿರಂತೋ ಭುವನಸ್ಯ ಮಧ್ಯ-
ಮನಂತಶಕ್ತಿಂ ಪುರುಷಂ ಯಮಾಹುಃ ।
ಕಾಲೋ ಭವಾನಾಕ್ಷಿಪತೀಶ ವಿಶ್ವಂ
ಸ್ರೋತೋ ಯಥಾಂತಃ ಪತಿತಂ ಗಭೀರಮ್ ॥ ೨೭ ॥

ತ್ವಂ ವೈ ಪ್ರಜಾನಾಂ ಸ್ಥಿರಜಂಗಮಾನಾಂ
ಪ್ರಜಾಪತೀನಾಮಸಿ ಸಂಭವಿಷ್ಣುಃ ।
ದಿವೌಕಸಾಂ ದೇವ ದಿವಶ್ಚ್ಯುತಾನಾಂ
ಪರಾಯಣಂ ನೌರಿವ ಮಜ್ಜತೋऽಪ್ಸು ॥ ೨೮ ॥

ದೇವೀ ! ನೋಡು, ಯಾರು ಕೇಳಿದರೂ ಈ ಮಾತನ್ನು ಇತರರಿಗೆ ಹೇಳಬೇಡ. ದೇವತೆಗಳ ರಹಸ್ಯ ಗುಪ್ತವಾದಷ್ಟು ಸಫಲವಾಗುತ್ತದೆ. ॥೨೦॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಭಗವಂತನು ಹೀಗೆ ಹೇಳಿ ಅಲ್ಲಿಯೇ ಅಂತರ್ಧಾನನಾದನು. ಆ ಸಮಯದಲ್ಲಿ ಸ್ವಯಂ ಭಗವಂತನೇ ನನ್ನ ಗರ್ಭದಿಂದ ಅವತರಿಸುವನು ಎಂದು ತಿಳಿದು, ತಾನು ಕೃತಕೃತ್ಯಳಾದೆನೆಂದು ಭಾವಿಸಿದಳು. ಇದೆಂತಹ ದುರ್ಲಭವಾದ ಮಾತು. ಅವಳು ಬಹಳ ಪ್ರೀತಿಯಿಂದ ಪತಿಯಾದ ಕಶ್ಯಪರನ್ನು ಸೇವೆ ಮಾಡತೊಡಗಿದಳು. ಕಶ್ಯಪರು ಸತ್ಯದರ್ಶಿಗಳಾಗಿದ್ದರು. ಅವರಿಂದ ಮರೆಯಾದ ಯಾವ ಮಾತೂ ಇರಲಿಲ್ಲ. ಭಗವಂತನು ತನ್ನ ಅಂಶದಿಂದ ನನ್ನೊಳಗೆ ಪ್ರವೇಶಿಸಿರುವನೆಂದು ಅವರು ಸಮಾಧಿಯೋಗದಿಂದ ತಿಳಿದುಕೊಂಡರು. ವಾಯುವು ಪ್ರಚಂಡವಾಗಿ ಬೀಸುತ್ತಾ ಬಿದಿರುಗಳ ಘರ್ಷಣೆಯಿಂದ ಅಗ್ನಿಯನ್ನು ಹುಟ್ಟಿಸುವಂತೆಯೇ ಕಶ್ಯಪರು ತಪಸ್ಸು ಮಾಡುತ್ತಾ ಬಹಳ ಕಾಲದಿಂದ ಧರಿಸಿದ್ದ ರೇತಸ್ಸನ್ನು ಅದಿತಿ ದೇವಿಯ ಗರ್ಭದಲ್ಲಿರಿಸಿದರು. ॥ ೨೧-೨೩ ॥ ಅದಿತಿಯ ಗರ್ಭದಲ್ಲಿ ಅವಿನಾಶಿಯಾದ ಭಗವಂತನು ನೆಲೆಸಿರುವನೆಂದು ತಿಳಿದ ಬ್ರಹ್ಮದೇವರು ಬ್ರಹ್ಮಪ್ರತಿಪಾದಕವಾದ ಸ್ತೋತ್ರಗಳಿಂದ ಆ ಶ್ರೀಹರಿಯನ್ನು ಹೊಗಳತೊಡಗಿದರು. ॥ ೨೪ ॥

**ಬ್ರಹ್ಮದೇವರು ಹೇಳಿದರು** – ಸಮಗ್ರ ಕೀರ್ತಿಗೂ ಆಶ್ರಯನಾಗಿರುವ ಭಗವಂತನೇ ! ನಿನಗೆ ಜಯವಾಗಲೀ. ಅನಂತ ಶಕ್ತಿಗಳಿಗೆ ಅಧಿಷ್ಠಾನನಾಗಿರುವವನೇ ! ನಿನ್ನ ಚರಣಕಮಲಗಳಿಗೆ ನಮಸ್ಕರಿಸುತ್ತೇನೆ. ಬ್ರಾಹ್ಮಣರಿಗೆ ಹಿತವಾಗಿರುವವನೇ ! ತ್ರಿಗುಣಗಳ ನಿಯಾಮಕನೇ ! ನಿನ್ನ ಅಡಿದಾವರೆಗಳಲ್ಲಿ ಬಾರಿ-ಬಾರಿಗೂ ನಮಸ್ಕರಿಸುತ್ತೇನೆ. ॥ ೨೫ ॥ ಪ್ರಶ್ನಿ ಎಂಬುವಳಿಗೆ ಪುತ್ರರೂಪದಲ್ಲಿ ಹುಟ್ಟಿರುವವನೇ ! ವೇದಗಳ ಸಮಸ್ತ ಜ್ಞಾನವನ್ನು ನಿನ್ನೊಳಗೆ ಇರಿಸಿಕೊಂಡಿರುವ ಸ್ವಾಮಿಯೇ ! ವಾಸ್ತವವಾಗಿ ನೀನೇ ಎಲ್ಲರ ವಿಧಾತೃವಾಗಿರುವೆ. ನಿನಗೆ ನಾನು ಮತ್ತೆ-ಮತ್ತೆ ನಮಸ್ಕರಿಸುತ್ತೇನೆ. ಮೂರೂ ಲೋಕಗಳೂ ನಿನ್ನ ನಾಭಿಯಲ್ಲಿ ನೆಲೆಸಿವೆ. ಮೂರೂ ಲೋಕಗಳಿಗೂ ಅತೀತವಾದ ವೈಕುಂಠದಲ್ಲಿ ನೀನು ಸದಾ ವಿರಾಜಮಾನನಾಗಿರುವೆ. ಸಕಲ ಜೀವರ ಅಂತಃಕರಣದಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವೆ. ಇಂತಹ ಸರ್ವವ್ಯಾಪಕ ವಿಷ್ಣುವಿಗೆ ನಾನು ನಮಸ್ಕರಿಸುತ್ತೇನೆ. ॥ ೨೬ ॥ ಪ್ರಭೋ ! ನೀನೇ ಜಗತ್ತಿನ ಆದಿಯೂ, ಅಂತ್ಯನೂ ಆಗಿರುವುದರಿಂದ ಮಧ್ಯದಲ್ಲಿಯೂ ನೀನೇ ಇರುವೆ. ಇದರಿಂದಲೇ ವೇದಗಳು ನಿನ್ನನ್ನು ಅನಂತ ಶಕ್ತಿಯುಳ್ಳ ಪುರುಷನೆಂದು ಕೊಂಡಾಡುತ್ತವೆ. ಆಳವಾದ ನೀರಿನ ಸುಳಿಯು ಅದರಲ್ಲಿ ಬಿದ್ದ ಪದಾರ್ಥವನ್ನು ಒಳಗೆ ಸೆಳೆದುಕೊಳ್ಳುವಂತೆಯೇ ನೀನು ಕಾಲರೂಪದಿಂದ ಈ ಜಗತ್ತನ್ನು ಪ್ರಳಯಕಾಲದಲ್ಲಿ ಒಳಕ್ಕೆ ಸೆಳೆದು ಕೊಳ್ಳುವೆ. ॥ ೨೭ ॥ ಚರಾಚರ ಪ್ರಜೆಗಳನ್ನೂ, ಪ್ರಜಾಪತಿಗಳನ್ನೂ ಉಂಟುಮಾಡುವ ಮೂಲ ಕಾರಣನು ನೀನೇ ಆಗಿರುವೆ. ದೇವಾಧಿದೇವಾ ! ನೀರಿನಲ್ಲಿ ಮುಳುಗುವವನಿಗೆ ದೋಣಿಯು ಆಸರೆ ಯಾಗಿರುವಂತೆ, ಸ್ವರ್ಗದಿಂದ ಓಡಿಸಿದ ದೇವತೆಗಳಿಗೆ ಏಕಮಾತ್ರ ಆಶ್ರಯವು ನೀನೇ ಆಗಿರುವೆ. ॥ ೨೮ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ವಾಮನಪ್ರಾದುರ್ಭಾವೇ ಸಪ್ತದಶೋऽಧ್ಯಾಯಃ ॥ ೧೭ ॥

# ಹದಿನೆಂಟನೆಯ ಅಧ್ಯಾಯ

## ಭಗವಾನ್ ವಾಮನನ ಪ್ರಾಕಟ್ಯ ಮತ್ತು ಬಲಿಚಕ್ರವರ್ತಿಯ ಯಜ್ಞಶಾಲೆಯನ್ನು ಪ್ರವೇಶಿಸಿದುದು

*ಶ್ರೀಶುಕ ಉವಾಚ*

ಇತ್ಥಂ ವಿರಿಂಚಸ್ತುತಕರ್ಮವೀರ್ಯಃ
ಪ್ರಾದುರ್ಬಭೂವಾಮೃತಭೂರದಿತ್ಯಾಮ್ ।
ಚತುರ್ಭುಜಃ ಶಂಖಗದಾಬ್ಜಚಕ್ರಃ
ಪಿಶಂಗವಾಸಾ ನಲಿನಾಯತೇಕ್ಷಣಃ ॥ ೧ ॥

ಶ್ಯಾಮಾವದಾತೋ ಝಷರಾಜಕುಂಡಲ-
ತ್ವಿಷೋಲ್ಲಸಚ್ಛ್ರೀವದನಾಂಬುಜಃ ಪುಮಾನ್ ।
ಶ್ರೀವತ್ಸವಕ್ಷಾ ವಲಯಾಂಗದೋಲ್ಲಸ-
ತ್ಕಿರೀಟಕಾಂಚೀಗುಣಚಾರುನೂಪುರಃ ॥ ೨ ॥

ಮಧುವ್ರತವ್ರಾತವಿಘುಷ್ಟಯಾ ಸ್ವಯಾ
ವಿರಾಜಿತಃ ಶ್ರೀವನಮಾಲಯಾ ಹರಿಃ ।
ಪ್ರಜಾಪತೇರ್ವೇಶ್ಮತಮಃ ಸ್ವರೋಚಿಷಾ
ವಿನಾಶಯನ್ಕಂಠನಿವಿಷ್ಟಕೌಸ್ತುಭಃ ॥ ೩ ॥

ದಿಶಃ ಪ್ರಸೇದುಃ ಸಲಿಲಾಶಯಾಸ್ತದಾ
ಪ್ರಜಾಃ ಪ್ರಹೃಷ್ಟಾ ಋತವೋ ಗುಣಾನ್ವಿತಾಃ ।
ದ್ಯೌರಂತರಿಕ್ಷಂ ಕ್ಷಿತಿರಗ್ನಿಜಿಹ್ವಾ
ಗಾವೋ ದ್ವಿಜಾಃ ಸಂಜಹೃಷುರ್ನಗಾಶ್ಚ ॥ ೪ ॥

ಶ್ರೋಣಾಯಾಂ ಶ್ರವಣದ್ವಾದಶ್ಯಾಂ
ಮುಹೂರ್ತೇಽಭಿಜಿತಿ ಪ್ರಭುಃ ।
ಸರ್ವೇ ನಕ್ಷತ್ರತಾರಾದ್ಯಾ-
ಶ್ಚಕ್ರುಸ್ತಜ್ಜನ್ಮ ದಕ್ಷಿಣಮ್ ॥ ೫ ॥

ದ್ವಾದಶ್ಯಾಂ ಸವಿತಾ ತಿಷ್ಠನ್ಮಧ್ಯಂದಿನಗತೋ ನೃಪ ।
ವಿಜಯಾ ನಾಮ ಸಾ ಪ್ರೋಕ್ತಾ ಯಸ್ಯಾಂ ಜನ್ಮ ವಿದುರ್ಹರೇಃ ॥ ೬ ॥

ಶಂಖದುಂದುಭಯೋ ನೇದುರ್ಮೃದಂಗಪಣವಾನಕಾಃ ।
ಚಿತ್ರವಾದಿತ್ರತೂರ್ಯಾಣಾಂ ನಿರ್ಘೋಷಸ್ತುಮುಲೋಽಭವತ್ ॥ ೭ ॥

ಪ್ರೀತಾಶ್ಚಾಪ್ಸರಸೋಽನೃತ್ಯನ್ಗಂಧರ್ವಪ್ರವರಾ ಜಗುಃ ।
ತುಷ್ಟುವುರ್ಮುನಯೋ ದೇವಾ ಮನವಃ ಪಿತರೋಽಗ್ನಯಃ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಹೀಗೆ ಬ್ರಹ್ಮದೇವರು ಭಗವಂತನ ಅಪಾರವಾದ ಶಕ್ತಿಯನ್ನೂ, ಲೀಲೆಗಳನ್ನೂ ಸ್ತೋತ್ರಮಾಡಿದ ನಂತರ ಆದ್ಯಂತರಹಿತನಾದ ಶ್ರೀಹರಿಯು ಅದಿತಿಯ ಮುಂದೆ ಪ್ರಕಟನಾದನು. ಭಗವಂತನಿಗೆ ನಾಲ್ಕು ಭುಜಗಳಿದ್ದು, ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದ್ದನು. ಕಮಲದಂತೆ ಕೋಮಲ-ವಿಶಾಲವಾದ ನೇತ್ರಗಳಿದ್ದು ದಿವ್ಯ ಪೀತಾಂಬರವನ್ನು ಧರಿಸಿದ್ದನು. ॥ ೧ ॥ ಭಗವಂತನ ಶರೀರವು ಶ್ಯಾಮಲವರ್ಣದಿಂದ ಕೂಡಿತ್ತು. ಮಕರಾಕೃತಿಯ ಕುಂಡಲಗಳ ಕಾಂತಿಯಿಂದ ಅವನ ಮುಖಕಮಲದ ಶೋಭೆಯು ಇನ್ನೂ ಹೆಚ್ಚಿತ್ತು. ವಕ್ಷಸ್ಥಳವು ಶ್ರೀವತ್ಸ ಚಿಹ್ನೆಯಿಂದ ಸಮಲಂಕೃತವಾಗಿತ್ತು. ಕರಗಳಲ್ಲಿ ಕಂಕಣಗಳೂ, ತೋಳುಗಳಲ್ಲಿ ಬಾಜುಬಂದಿಗಳೂ, ಶಿರದಲ್ಲಿ ಕಿರೀಟವೂ, ನಡುವಿನಲ್ಲಿ ಒಡ್ಯಾಣವೂ, ಚರಣಗಳಲ್ಲಿ ಸುಂದರವಾದ ನೂಪುರಗಳು ಶೋಭಿಸುತ್ತಿದ್ದವು. ॥ ೨ ॥ ಭಗವಂತನ ಕಂಠದಲ್ಲಿ ರತ್ನಹಾರಗಳೂ, ಸ್ವಚ್ಛವಾದ ವನಮಾಲೆಯನ್ನೂ ಧರಿಸಿದ್ದನು. ಅದರ ಸುತ್ತಲೂ ಮತ್ತಭೃಂಗಗಳು ಹಿಂಡುಹಿಂಡಾಗಿ ಝೇಂಕರಿಸುತ್ತಿದ್ದವು. ಕೌಸ್ತುಭಮಣಿಯ ಶೋಭೆಯು ಕಂಠದಲ್ಲಿ ವಿರಾಜಿಸುತ್ತಿತ್ತು. ಭಗವಂತನ ಅಂಗಕಾಂತಿಯಿಂದ ಪ್ರಜಾಪತಿ ಕಶ್ಯಪರ ಆಶ್ರಮದ ಕತ್ತಲೆಯು ಕಳೆದುಹೋಗಿತ್ತು. ॥ ೩ ॥ ಭಗವಂತನು ಅವತರಿಸಿದಾಗ ದಿಕ್ಕುಗಳು ನಿರ್ಮಲವಾದುವು. ನದೀ-ಸರೋವರಗಳ ನೀರು ಸ್ವಚ್ಛವಾಯಿತು. ಪ್ರಜೆಗಳ ಹೃದಯದಲ್ಲಿ ಆನಂದದ ನೆರೆಯೇ ಬಂದಂತಾಯ್ತು. ಎಲ್ಲ ಋತುಗಳು ಒಟ್ಟಿಗೆ ತಮ್ಮ-ತಮ್ಮ ಗುಣಗಳನ್ನು ಪ್ರಕಟಿಸಿದುವು. ಸ್ವರ್ಗಲೋಕ, ಅಂತರಿಕ್ಷ ಪೃಥಿವಿ, ದೇವತೆಗಳು, ಗೋವುಗಳು, ದ್ವಿಜರು, ಪರ್ವತಗಳು ಹೀಗೆ ಎಲ್ಲವೂ ಹರ್ಷಗೊಂಡವು. ॥ ೪ ॥

ಪರೀಕ್ಷಿತನೇ! ಭಗವಂತನು ಅವತರಿಸಿದಾಗ ಚಂದ್ರನು ಶ್ರವಣಾನಕ್ಷತ್ರದಲ್ಲಿದ್ದನು. ಭಾದ್ರಪದ ಮಾಸದ ಶುಕ್ಲ ದ್ವಾದಶೀ ಶ್ರವಣನಕ್ಷತ್ರದ ಅಭಿಜಿನ್ಮುಹೂರ್ತದಲ್ಲಿ ಭಗವಂತನು ಪ್ರಾದುರ್ಭವಿಸಿದನು. ಎಲ್ಲ ಗ್ರಹ-ನಕ್ಷತ್ರಗಳೂ ಜನ್ಮ ಮುಹೂರ್ತವನ್ನು ಮಂಗಲಮಯವಾಗಿಸಿದುವು. ॥ ೫ ॥ ರಾಜೇಂದ್ರಾ! ಭಗವಂತನು ಜನ್ಮತಾಳಿದ ತಿಥಿಯನ್ನು 'ವಿಜಯದ್ವಾದಶೀ' ಎಂದು ಹೇಳುತ್ತಾರೆ. ಆ ಸಮಯದಲ್ಲಿ ಸೂರ್ಯನು ಆಗಸದ ಮಧ್ಯಭಾಗದಲ್ಲಿದ್ದನು. ॥ ೬ ॥ ಭಗವಂತನ ಅವತಾರದ ಸಮಯದಲ್ಲಿ ಶಂಖ, ಡೋಲು, ಮೃದಂಗ, ದುಂದುಭಿ, ಪಣವ, ಆನಕ ಮುಂತಾದ ವಾದ್ಯಗಳು ಮೊಳಗಿದವು. ಹೀಗೆ ನಾನಾರೀತಿಯ ವಾದ್ಯಗಳು, ಕೊಂಬು, ಕಹಳೆ ಮುಂತಾದವುಗಳ ತುಮುಲಧ್ವನಿಯು ಉಂಟಾಯಿತು. ॥ ೭ ॥ ಅಪ್ಸರೆಯರು ಕುಣಿಯತೊಡಗಿದರು, ಗಂಧರ್ವರು ಹಾಡತೊಡಗಿದರು. ಮುನಿಗಳು, ದೇವತೆಗಳು, ಮನುಗಳು, ಪಿತೃಗಳು ಅಗ್ನಿ – ಹೀಗೆ ಎಲ್ಲರೂ ಸ್ತುತಿಸತೊಡಗಿದರು. ॥ ೮ ॥ ಸಿದ್ಧರು, ವಿದ್ಯಾಧ

ಸಿದ್ಧವಿದ್ಯಾಧರಗಣಾಃ ಸಕಿಂಪುರುಷಕಿನ್ನರಾಃ ।
ಚಾರಣಾ ಯಕ್ಷರಕ್ಷಾಂಸಿ ಸುಪರ್ಣಾ ಭುಜಗೋತ್ತಮಾಃ ॥ ೯ ॥

ಗಾಯಂತೋಽತಿಪ್ರಶಂಸಂತೋ ನೃತ್ಯಂತೋ ವಿಬುಧಾನುಗಾಃ ।
ಅದಿತ್ಯಾ ಆಶ್ರಮಪದಂ ಕುಸುಮೈಃ ಸಮವಾಕಿರನ್ ॥ ೧೦ ॥

ದೃಷ್ಟ್ವಾದಿತಿಸ್ತಂ ನಿಜಗರ್ಭಸಂಭವಂ
ಪರಂ ಪುಮಾಂಸಂ ಮುದಮಾಪ ವಿಸ್ಮಿತಾ ।
ಗೃಹೀತದೇಹಂ ನಿಜಯೋಗಮಾಯಯಾ
ಪ್ರಜಾಪತಿಶ್ಚಾಹ ಜಯೇತಿ ವಿಸ್ಮಿತಃ ॥ ೧೧ ॥

ಯತ್ತದ್ವಪುರ್ಭಾತಿ ವಿಭೂಷಣಾಯುಧೈ-
ರವ್ಯಕ್ತಚಿದ್ವ್ಯಕ್ತಮಧಾರಯದ್ಧರಿಃ ।
ಬಭೂವ ತೇನೈವ ಸ ವಾಮನೋ ವಟುಃ
ಸಂಪಶ್ಯ ತೋರ್ದಿವ್ಯಗತಿರ್ಯಥಾ ನಟಃ ॥ ೧೨ ॥

ತಂ ವಟುಂ ವಾಮನಂ ದೃಷ್ಟ್ವಾ ಮೋದಮಾನಾ ಮಹರ್ಷಯಃ ।
ಕರ್ಮಾಣಿ ಕಾರಯಾಮಾಸುಃ ಪುರಸ್ಕೃತ್ಯ ಪ್ರಜಾಪತಿಮ್ ॥ ೧೩ ॥

ತಸ್ಯೋಪನೀಯಮಾನಸ್ಯ ಸಾವಿತ್ರೀಂ ಸವಿತಾಬ್ರವೀತ್ ।
ಬೃಹಸ್ಪತಿರ್ಬ್ರಹ್ಮಸೂತ್ರಂ ಮೇಖಲಾಂ ಕಶ್ಯಪೋಽದದಾತ್ ॥ ೧೪ ॥

ದದೌ ಕೃಷ್ಣಾಜಿನಂ ಭೂಮಿರ್ದಂಡಂ ಸೋಮೋ ವನಸ್ಪತಿಃ ।
ಕೌಪೀನಾಚ್ಛಾದನಂ ಮಾತಾ ದ್ಯೌಶ್ಛತ್ರಂ ಜಗತಃ ಪತೇಃ ॥ ೧೫ ॥

ಕಮಂಡಲುಂ ವೇದಗರ್ಭಃ ಕುಶಾನ್ಸಪ್ತರ್ಷಯೋ ದದುಃ ।
ಅಕ್ಷಮಾಲಾಂ ಮಹಾರಾಜ ಸರಸ್ವತ್ಯವ್ಯಯಾತ್ಮನಃ ॥ ೧೬ ॥

ತಸ್ಮಾ ಇತ್ಯುಪನೀತಾಯ ಯಕ್ಷರಾಟ್ಪಾತ್ರಿಕಾಮದಾತ್ ।
ಭಿಕ್ಷಾಂ ಭಗವತೀ ಸಾಕ್ಷಾದುಮಾದಾದಂಬಿಕಾ ಸತೀ ॥ ೧೭ ॥

ಸ ಬ್ರಹ್ಮವರ್ಚಸೇನೈವಂ ಸಭಾಂ ಸಂಭಾವಿತೋ ವಟುಃ ।
ಬ್ರಹ್ಮರ್ಷಿಗಣಸಂಜುಷ್ಟಾಮತ್ಯರೋಚತ ಮಾರಿಷಃ ॥ ೧೮ ॥

ಸಮಿದ್ಧಮಾಹಿತಂ ವಹ್ನಿಂ ಕೃತ್ವಾ ಪರಿಸಮೂಹನಮ್ ।
ಪರಿಸ್ತೀರ್ಯ ಸಮಭ್ಯರ್ಚ್ಯ ಸಮಿದ್ಭಿರಜುಹೋದ್ದ್ವಿಜಃ ॥ ೧೯ ॥

ರರು, ಕಿಂಪುರುಷರು, ಕಿನ್ನರರು, ಚಾರಣರು, ಯಕ್ಷರು, ರಾಕ್ಷಸರು, ಪಕ್ಷಿಗಳು, ಮುಖ್ಯ-ಮುಖ್ಯನಾಗರು ಮತ್ತು ದೇವತೆಗಳ ಅನುಚರರು ಹಾಡುತ್ತಾ-ಕುಣಿಯುತ್ತಾ ಭಗವಂತನ ಅಪಾರ ಗುಣಗಳನ್ನೂ, ಸತ್ಕಥೆಗಳನ್ನೂ ಸಂಕೀರ್ತನೆ ಮಾಡುತ್ತಾ ಅದಿತಿಯ ಆಶ್ರಮವನ್ನು ಪುಷ್ಪವೃಷ್ಟಿಯಿಂದ ಮುಚ್ಚಿಬಿಟ್ಟರು. ॥ ೯-೧೦ ॥

ಅದಿತಿಯು ತನ್ನ ಗರ್ಭದಿಂದ ಪ್ರಕಟಗೊಂಡ ಪರಮಪುರುಷ ಪರಮಾತ್ಮನನ್ನು ನೋಡಿದಾಗ ಅವಳು ಅತ್ಯಂತ ಆಶ್ಚರ್ಯ ಚಕಿತಳಾಗಿ, ಪರಮಾನಂದಭರಿತಳಾದಳು. ಕಶ್ಯಪ ಪ್ರಜಾಪತಿಯೂ ಭಗವಂತನು ತನ್ನ ಯೋಗಮಾಯೆಯಿಂದ ಶರೀರವನ್ನು ಧರಿಸಿರುವುದನ್ನು ನೋಡಿ ವಿಸ್ಮಿತರಾಗಿ 'ಜಯವಾಗಲೀ! ಭಗವಂತನಿಗೆ ಜಯವಾಗಲೀ' ಎಂದು ಉದ್ಗಾರವೆತ್ತಿದರು. ॥ ೧೧ ॥ ಪರೀಕ್ಷಿತನೇ! ಭಗವಂತನು ಸ್ವಯಂ ಅವ್ಯಕ್ತನೂ, ಚಿತ್‌ಸ್ವರೂಪನು. ಅಂತಹವನು ಪರಮಕಾಂತಿಮಯ ಆಭರಣ ಮತ್ತು ಆಯುಧಗಳಿಂದ ಕೂಡಿದ ಆ ಶರೀರವನ್ನು ಧರಿಸಿ ಆವಿರ್ಭವಿಸಿದ್ದನು. ಆ ದಿವ್ಯಶರೀರವನ್ನು ಅದಿತಿ-ಕಶ್ಯಪರು ನೋಡು-ನೋಡುತ್ತಿರುವಂತೆ ನಟನು ತನ್ನ ವೇಷವನ್ನು ಬದಲಿಸುವಂತೆ ಭಗವಂತನು ಕುಳ್ಳ ಬ್ರಹ್ಮಚಾರಿಯ ರೂಪವನ್ನು ತಾಳಿದನು. ನಿಶ್ಚಯವಾಗಿಯೂ ಪರಮಾತ್ಮನ ಲೀಲೆಯು ಪರಮಾದ್ಭುತವಾದುದು. ॥ ೧೨ ॥

ಭಗವಂತನನ್ನು ವಾಮನ ಬ್ರಹ್ಮಚಾರಿಯ ರೂಪದಲ್ಲಿ ನೋಡಿ ಮಹರ್ಷಿಗಳಿಗೆ ಮಹದಾನಂದವಾಯಿತು. ಅವರೆಲ್ಲರೂ ಕಶ್ಯಪ ಪ್ರಜಾಪತಿಯನ್ನು ಮುಂದೆಮಾಡಿ ಉಪೇಂದ್ರನ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ಮಾಡಿಸಿದರು. ॥ ೧೩ ॥ ಅವನ ಉಪನಯನ ಸಂಸ್ಕಾರವು ಪ್ರಾರಂಭವಾದಾಗ ಗಾಯತ್ರಿಯ ಅಧಿಷ್ಠಾತೃ ದೇವತೆಯಾದ ಸವಿತೃವೇ ವಾಮನನಿಗೆ ಗಾಯತ್ರಿಯನ್ನು ಉಪದೇಶಿಸಿದನು. ದೇವಗುರು ಬೃಹಸ್ಪತಿಯು ಯಜ್ಞೋಪವೀತವನ್ನೂ, ಕಶ್ಯಪರು ಮೇಖಲೆ (ಮೌಂಜಿ)ಯನ್ನು ಕೊಟ್ಟರು. ॥ ೧೪ ॥ ಪೃಥಿವಿದೇವಿಯು ಕೃಷ್ಣಾಜಿನವನ್ನೂ, ವನಸ್ಪತಿಗಳ ಒಡೆಯನಾದ ಚಂದ್ರನು ದಂಡವನ್ನೂ, ಮಾತಾ ಅದಿತಿಯು ಕೌಪೀನವನ್ನೂ ಮತ್ತು ಕಟಿವಸ್ತ್ರವನ್ನೂ, ಆಕಾಶಾಭಿಮಾನಿದೇವತೆಗಳು ವಾಮನವೇಷಧಾರಿಯಾದ ಭಗವಂತನಿಗೆ ಛತ್ರವನ್ನೂ ಅರ್ಪಿಸಿದರು. ॥ ೧೫ ॥ ಪರೀಕ್ಷಿತನೇ! ಅವಿನಾಶಿಯಾದ ವಾಮನಪ್ರಭುವಿಗೆ ಬ್ರಹ್ಮದೇವರು ಕಮಂಡಲುವನ್ನೂ, ಸಪ್ತರ್ಷಿಗಳು ಕುಶಗಳನ್ನೂ, ಸರಸ್ವತಿದೇವಿಯು ರುದ್ರಾಕ್ಷಮಾಲೆಯನ್ನೂ ಅರ್ಪಿಸಿದರು. ॥ ೧೬ ॥ ಹೀಗೆ ಭಗವಾನ್ ವಾಮನನ ಉಪನಯನ ಸಂಸ್ಕಾರವಾದಾಗ ಯಕ್ಷಪತಿ ಕುಬೇರನು ಅವನಿಗೆ ಭಿಕ್ಷಾಪಾತ್ರೆಯನ್ನು ಕೊಟ್ಟನು. ಸತಿಶಿರೋಮಣಿ ಜಗಜ್ಜನನಿಯಾದ ಭಗವತಿ ಉಮಾದೇವಿಯು ಪ್ರಥಮ ಭಿಕ್ಷೆಯನ್ನು ನೀಡಿದಳು. ॥ ೧೭ ॥ ಹೀಗೆ ಋಷಿ-ಮುನಿ-ದೇವತೆಗಳಾದಿಯಾಗಿ ಎಲ್ಲರೂ ವಟುವೇಷಧರನಾದ ಶ್ರೀಭಗವಂತನನ್ನು ಸಮ್ಮಾನಿಸಿದರು. ಬ್ರಹ್ಮರ್ಷಿಗಳಿಂದ ತುಂಬಿದ ಆ ಮಹಾಸಭೆಯಲ್ಲಿ ವಾಮನನು ತನ್ನ ಬ್ರಹ್ಮತೇಜದಿಂದ ಅತ್ಯಂತ ಪ್ರಕಾಶಮಾನನಾದನು. ॥ ೧೮ ॥

ಬಳಿಕ ಭಗವಾನ್ ವಾಮನನು ಸ್ಥಾಪಿಸಲ್ಪಟ್ಟ ಪ್ರಜ್ವಲಿತ ಅಗ್ನಿಯನ್ನು ಕುಶಗಳಿಂದ ಪರಿಸಮೂಹ ಮತ್ತು ಪರಿಸ್ತರಣಗೈದು, ಅಗ್ನಿಪೂಜೆ ಮಾಡಿ ಸಮಿಧೆಗಳಿಂದ ಹೋಮವನ್ನು ಮಾಡಿದನು. ॥ ೧೯ ॥

ಶ್ರುತ್ವಾಶ್ವಮೇಧೈರ್ಯಜಮಾನಮೂರ್ಜಿತಂ
ಬಲಿಂ ಭೃಗೂಣಾಮುಪಕಲ್ಪಿತೈಸ್ತತಃ ।
ಜಗಾಮ ತತ್ರಾಖಿಲಸಾರಸಂಭೃತೋ
ಭಾರೇಣ ಗಾಂ ಸನ್ನಮಯನ್ಪದೇ ಪದೇ ॥ ೨೦ ॥

ತಂ ನರ್ಮದಾಯಾಸ್ತಟ ಉತ್ತರೇ ಬಲೇ-
ರ್ಯ ಋತ್ವಿಜಸ್ತೇ ಭೃಗುಕಚ್ಛಸಂಜ್ಞಕೇ ।
ಪ್ರವರ್ತಯಂತೋ ಭೃಗವಃ ಕ್ರತೂತ್ತಮಂ
ವ್ಯಚಕ್ಷತಾರಾದುದಿತಂ ಯಥಾ ರವಿಮ್ ॥ ೨೧ ॥

ತ ಋತ್ವಿಜೋ ಯಜಮಾನಃ ಸದಸ್ಯಾ
ಹತತ್ವಿಷೋ ವಾಮನತೇಜಸಾ ನೃಪ ।
ಸೂರ್ಯಃ ಕಿಲಾಯಾತ್ಯುತ ವಾ ವಿಭಾವಸುಃ
ಸನತ್ಕುಮಾರೋಽಥ ದಿದೃಕ್ಷಯಾ ಕ್ರತೋಃ ॥ ೨೨ ॥

ಇತ್ಥಂ ಸಶಿಷ್ಯೇಷು ಭೃಗುಷ್ವನೇಕಧಾ
ವಿತರ್ಕ್ಯಮಾಣೋ ಭಗವಾನ್ಸ ವಾಮನಃ ।
ಛತ್ರಂ ಸದಂಡಂ ಸಜಲಂ ಕಮಂಡಲುಂ
ವಿವೇಶ ಬಿಭ್ರದ್ಧಯಮೇಧವಾಟಮ್ ॥ ೨೩ ॥

ಮೌಂಜ್ಯಾ ಮೇಖಲಯಾ ವೀತಮುಪವೀತಾಜಿನೋತ್ತರಮ್ ।
ಜಟಿಲಂ ವಾಮನಂ ವಿಪ್ರಂ ಮಾಯಾಮಾಣವಕಂ ಹರಿಮ್ ॥ ೨೪ ॥

ಪ್ರವಿಷ್ಟಂ ವೀಕ್ಷ್ಯ ಭೃಗವಃ ಸಶಿಷ್ಯಾಸ್ತೇ ಸಹಾಗ್ನಿಭಿಃ ।
ಪ್ರತ್ಯಗೃಹ್ಣನ್ಸಮುತ್ಥಾಯ ಸಂಕ್ಷಿಪ್ತಾಸ್ತಸ್ಯ ತೇಜಸಾ ॥ ೨೫ ॥

ಯಜಮಾನಃ ಪ್ರಮುದಿತೋ
ದರ್ಶನೀಯಂ ಮನೋರಮಮ್ ।
ರೂಪಾನುರೂಪಾವಯವಂ
ತಸ್ಮಾ ಆಸನಮಾಹರತ್ ॥ ೨೬ ॥

ಸ್ವಾಗತೇನಾಭಿನಂದ್ಯಾಥ ಪಾದೌ ಭಗವತೋ ಬಲಿಃ ।
ಅವನಿಜ್ಯಾರ್ಚಯಾಮಾಸ ಮುಕ್ತಸಂಗಮನೋರಮಮ್ ॥ ೨೭ ॥

ಪರೀಕ್ಷಿತನೇ! ಆ ಸಮಯದಲ್ಲಿ ಸಮಸ್ತ ವಿಧವಾದ ಯಜ್ಞ ಸಾಮಗ್ರಿಗಳಿಂದಲೂ ಸಂಪನ್ನನಾದ ಯಶಸ್ವೀ ಬಲಿಚಕ್ರವರ್ತಿಯು ಭೃಗುವಂಶೀಯ ಬ್ರಾಹ್ಮಣರ ಆದೇಶಾನುಸಾರವಾಗಿ ಹಲವಾರು ಅಶ್ವಮೇಧಗಳನ್ನು ಮಾಡುತ್ತಿರುವನೆಂಬ ವಿಷಯವು ಭಗವಂತನಾದ ವಾಮನಮೂರ್ತಿಗೆ ತಿಳಿಯಿತು. ಆಗ ಸಮಸ್ತ ಶಕ್ತಿಗಳಿಂದಲೂ ಯುಕ್ತನಾಗಿ ಅವನು ನಡೆಯುವಾಗ ಅತ್ಯಂತ ಭಾರವಾದ ಹೆಜ್ಜೆಯನ್ನಿಡುತ್ತಿರುವಾಗ ಭೂಮಿಯನ್ನೇ ಬಗ್ಗಿಸುತ್ತಾ ಬಲಿಚಕ್ರವರ್ತಿಯ ಯಜ್ಞಶಾಲೆಗೆ ಹೊರಟನು. ॥ ೨೦॥ ನರ್ಮದಾ ನದಿಯ ಉತ್ತರದ ತೀರದಲ್ಲಿ 'ಭೃಗುಕಚ್ಛ'ವೆಂಬ ಸುಂದರವಾದ ಮತ್ತು ಪವಿತ್ರವಾದ ಸ್ಥಳವಿದೆ. ಅಲ್ಲಿಯೇ ಭೃಗುವಂಶೀಯ ಋತ್ವಿಜರು ಬಲಿಚಕ್ರವರ್ತಿಯಿಂದ ಯಜ್ಞಗಳನ್ನು ಮಾಡಿಸುತ್ತಿದ್ದರು. ಅವರು ದೂರದಿಂದಲೇ ವಾಮನ ಭಗವಂತನನ್ನು ನೋಡಿ ಸಾಕ್ಷಾತ್ ಸೂರ್ಯನಾರಾಯಣನೇ ಉದಯಿಸಿ ಬರುತ್ತಿರುವಂತೆ ಭಾವಿಸಿದರು. ॥ ೨೧ ॥ ಪರೀಕ್ಷಿತನೇ! ಭಗವಾನ್ ಶ್ರೀವಾಮನನ ದಿವ್ಯ ತೇಜಸ್ಸಿನ ಮುಂದೆ ಋತ್ವಿಜರು, ಯಜಮಾನ, ಸದಸ್ಯರು ಇವರೆಲ್ಲರೂ ನಿಸ್ತೇಜರಾದರು. ಯಜ್ಞವನ್ನು ನೋಡುವ ಸಲುವಾಗಿ ಸೂರ್ಯನೋ, ಅಗ್ನಿಯೋ ಅಥವಾ ಸನತ್ಕುಮಾರನೋ ಅವಶ್ಯವಾಗಿ ಬರುತ್ತಿರಬಹುದೆಂದು ಊಹಿಸಿದರು. ॥ ೨೨ ॥ ಭೃಗುಪುತ್ರ ಶುಕ್ರಾಚಾರ್ಯರೇ ಮೊದಲಾದವರು ತಮ್ಮ ಶಿಷ್ಯರೊಂದಿಗೆ ಹೀಗೆ ಅನೇಕ ಕಲ್ಪನೆಗಳನ್ನು ಮಾಡುತ್ತಿದ್ದರು. ಅದೇ ಸಮಯಕ್ಕೆ ಸರಿಯಾಗಿ ಕೈಯಲ್ಲಿ ಛತ್ರವನ್ನು, ದಂಡವನ್ನು, ನೀರಿನಿಂದ ತುಂಬಿದ ಕಮಂಡಲುವನ್ನು ಹಿಡಿದುಕೊಂಡು ವಾಮನ ಭಗವಂತನು ಅಶ್ವಮೇಧ ಯಜ್ಞದ ಮಂಡಪವನ್ನು ಪ್ರವೇಶಿಸಿದನು. ॥ ೨೩ ॥ ಅವನು ಸೊಂಟದಲ್ಲಿ ಮೌಂಜಿ (ಮೇಖಲೆ) ಯನ್ನೂ, ಕತ್ತಿನಲ್ಲಿ ಯಜ್ಞೋಪವೀತವನ್ನು ಧರಿಸಿದ್ದನು. ಕಂಕುಳಲ್ಲಿ ಮೃಗಚರ್ಮವಿತ್ತು. ತಲೆಯ ಮೇಲೆ ಜಟೆಯಿತ್ತು. ಈ ಪ್ರಕಾರ ಕುಳ್ಳ ಬ್ರಾಹ್ಮಣನ ವೇಷದಲ್ಲಿ ತನ್ನ ಮಾಯೆಯಿಂದ ಬ್ರಹ್ಮಚಾರಿಯಾದ ಭಗವಂತನು ಆ ಯಜ್ಞಶಾಲೆಯನ್ನು ಪ್ರವೇಶಿಸಿದಾಗ ಭೃಗುವಂಶೀ ಬ್ರಾಹ್ಮಣರು ಅವನನ್ನು ನೋಡಿ ತಮ್ಮ ಶಿಷ್ಯರೊಂದಿಗೆ ಅವನ ದಿವ್ಯತೇಜಸ್ಸಿನಿಂದ ನಿಸ್ತೇಜರಾಗಿ ಏನು ಮಾಡಬೇಕೆಂದು ಅರಿಯದೆ ಥಟ್ಟನೆ ಎದ್ದುನಿಂತರು. ತಮ್ಮ ಶಿಷ್ಯನಾದ ಬಲಿಚಕ್ರವರ್ತಿಯೊಡನೆ ಯಜ್ಞೇಶ್ವರನನ್ನು ಮುಂದೆಮಾಡಿಕೊಂಡು ಭೃಗುವಂಶೀಯ ಬ್ರಾಹ್ಮಣರು ಶ್ರೀವಾಮನ ಮೂರ್ತಿಯನ್ನು ಸ್ವಾಗತಿಸಿದರು. ॥ ೨೪-೨೫ ॥ ಭಗವಂತನ ಪುಟ್ಟ ರೂಪಕ್ಕನುಸಾರವಾಗಿ ಎಲ್ಲ ಅವಯವಗಳು ಸಣ್ಣ-ಸಣ್ಣದಾಗಿದ್ದು ಬಹಳ ಮನೋಹರ ಹಾಗೂ ದರ್ಶನೀಯವಾಗಿದ್ದವು. ಅವನನ್ನು ನೋಡಿ ಬಲಿಚಕ್ರವರ್ತಿಗೆ ಪರಮಾನಂದವಾಗಿ ಭಗವಾನ್ ವಾಮನನಿಗೆ ಒಂದು ಉತ್ತಮಾಸನವನ್ನು ನೀಡಿದನು. ॥ ೨೬ ॥ ಬಳಿಕ ಬಲಿಯು ಕುಶಲಪ್ರಶ್ನೆಗಳ ಮೂಲಕವಾಗಿ ವಟು ವನ್ನು ನಮಸ್ಕರಿಸಿ, ಅವನ ದಿವ್ಯಪಾದಗಳನ್ನು ತೊಳೆದು, ನಿಸ್ಸಂಗರಾದ ಯೋಗಿಗಳ ಮನಸ್ಸಿನಲ್ಲಿ ಸದಾ ರಮಿಸುವ ಆ ವಾಮನ ಮೂರ್ತಿಯನ್ನು ಯಥಾವಿಧಿಯಾಗಿ ಪ್ರೇಮಾದರಗಳಿಂದ ಪೂಜಿಸಿದನು. ॥ ೨೭ ॥ ಭಗವಂತನ ಚರಣಕಮಲಗಳ ಪಾದ ತೀರ್ಥವು ಪರಮ ಮಂಗಳಕರವಾದುದು. ಆದರಿಂದ ಜೀವಿಗಳ ಎಲ್ಲ ಪಾಪ-ತಾಪಗಳು ತೊಳೆದುಹೋಗುತ್ತವೆ. ಸ್ವತಃ ದೇವಾಧಿ

ತತ್ಪಾದಶೌಚಂ ಜನಕಲ್ಮಷಾಪಹಂ
ಸ ಧರ್ಮವಿನ್ಮೂರ್ಧ್ನ್ಯದಧಾತ್ಸುಮಂಗಲಮ್ ।
ಯದ್ದೇವದೇವೋ ಗಿರಿಶಶ್ಚಂದ್ರಮೌಲಿ-
ರ್ದಧಾರ ಮೂರ್ಧ್ನಾ ಪರಯಾ ಚ ಭಕ್ತ್ಯಾ ॥ ೨೮ ॥

ದೇವನಾದ ಚಂದ್ರಮೌಳಿ ಭಗವಾನ್ ಶಂಕರನು ಅತ್ಯಂತ ಭಕ್ತಿಭಾವದಿಂದ ಅದನ್ನು ತನ್ನ ತಲೆಯಲ್ಲಿ ಧರಿಸಿದ್ದನು. ಇಂದು ಅದೇ ಚರಣಾಮೃತವು ಧರ್ಮದ ಮರ್ಮಜ್ಞನಾದ ರಾಜಾಬಲಿಗೆ ಪ್ರಾಪ್ತವಾಯಿತು. ಅವನು ಬಹಳ ಭಕ್ತಿಯಿಂದ ಅದನ್ನು ತನ್ನ ತಲೆಯಮೇಲೆ ಇರಿಸಿಕೊಂಡನು. ॥ ೨೮ ॥

*ಬಲಿರುವಾಚ*

ಸ್ವಾಗತಂ ತೇ ನಮಸ್ತುಭ್ಯಂ ಬ್ರಹ್ಮನ್ಕಿಂ ಕರವಾಮ ತೇ ।
ಬ್ರಹ್ಮರ್ಷೀಣಾಂ ತಪಃಸಾಕ್ಷಾನ್ಮನ್ಯೇ ತ್ವಾಽಽರ್ಯ ವಪುರ್ಧರಮ್ ॥ ೨೯ ॥

ಅದ್ಯ ನಃ ಪಿತರಸ್ತೃಪ್ತಾ ಅದ್ಯ ನಃ ಪಾವಿತಂ ಕುಲಮ್ ।
ಅದ್ಯ ಸ್ವಿಷ್ಟಃ ಕ್ರತುರಯಂ ಯದ್ಭವಾನಾಗತೋ ಗೃಹಾನ್ ॥ ೩೦ ॥

ಅದ್ಯಾಗ್ನಯೋ ಮೇ ಸುಹುತಾ ಯಥಾವಿಧಿ
ದ್ವಿಜಾತ್ಮಜ ತ್ವಚ್ಚರಣಾವನೇಜನೈಃ ।
ಹತಾಂಹಸೋ ವಾರ್ಭಿರಿಯಂ ಚ ಭೂರಹೋ
ತಥಾ ಪುನೀತಾ ತನುಭಿಃ ಪದೈಸ್ತವ ॥ ೩೧ ॥

ಯದ್ಯದ್ವಟೋ ವಾಂಛಸಿ ತತ್ಪ್ರತೀಚ್ಛ ಮೇ
ತ್ವಾಮರ್ಥಿನಂ ವಿಪ್ರಸುತಾನುತರ್ಕಯೇ ।
ಗಾಂ ಕಾಂಚನಂ ಗುಣವದ್ಧಾಮ ಮೃಷ್ಟಂ
ತಥಾನ್ನಪೇಯಮುತ ವಾ ವಿಪ್ರಕನ್ಯಾಮ್ ।
ಗ್ರಾಮಾನ್ಸಮೃದ್ಧಾಂಸ್ತುರಗಾಂಗಜಾನ್ವಾ
ರಥಾಂಸ್ತಥಾರ್ಹತ್ತಮ ಸಂಪ್ರತೀಚ್ಛ ॥ ೩೨ ॥

**ಬಲಿಯು ಹೇಳಿದನು** – ಬ್ರಾಹ್ಮಣವಟುವೇ! ನಿನ್ನನ್ನು ಆದರದಿಂದ ಸ್ವಾಗತಿಸುತ್ತೇನೆ ಮತ್ತು ನಿನಗೆ ನಮಸ್ಕಾರ ಮಾಡುತ್ತೇನೆ. ನಾನು ನಿನಗೆ ಯಾವ ಕಾರ್ಯವನ್ನು ಮಾಡಿ ಕೊಡಲಿ! ನಿನ್ನನ್ನು ನೋಡಿದರೆ ಬ್ರಹ್ಮರ್ಷಿಗಳು ಮಾಡಿದ ತಪಸ್ಸೆಲ್ಲವೂ ಒಂದಾಗಿ ಮೂರ್ತೀಭವಿಸಿ ನನ್ನ ಮುಂದೆ ಬಂದಂತಿದೆ. ॥ ೨೯ ॥ ಮಹಾನುಭಾವನೇ! ಇಂದು ನೀನು ನಮ್ಮ ಮನೆಗೆ ಆಗಮಿಸಿದ್ದರಿಂದ ನಮ್ಮ ಪಿತೃದೇವತೆಗಳು ತೃಪ್ತರಾದರು. ನಮ್ಮ ಕುಲವು ಪವಿತ್ರವಾಯಿತು. ಇಂದಿಗೆ ನಾನು ಮಾಡಿದ ಯಜ್ಞವು ಸಫಲವಾಯಿತು. ॥ ೩೦ ॥ ಬ್ರಾಹ್ಮಣಕುಮಾರನೇ! ನಿನ್ನ ಪಾದಪ್ರಕ್ಷಾಳನದಿಂದ ನನ್ನ ಪಾಪಗಳೆಲ್ಲವೂ ತೊಳೆದುಹೋದುವು. ವಿಧಿವತ್ತಾಗಿ ಯಜ್ಞಮಾಡುವುದರಿಂದ, ಅಗ್ನಿಯಲ್ಲಿ ಆಹುತಿಗಳನ್ನು ಅರ್ಪಿಸುವುದರಿಂದ ದೊರೆಯಬಹುದಾದ ಫಲವು ಆಯಾಸವಿಲ್ಲದೆ ನನಗೆ ದೊರೆಯಿತು. ನಿನ್ನ ಈ ಕೋಮಲವಾದ ಮುದ್ದು ಚರಣಗಳಿಂದ ಮತ್ತು ಇವುಗಳನ್ನು ತೊಳೆದುದರಿಂದ ಪೃಥಿವಿಯು ಪವಿತ್ರಳಾದಳು. ॥ ೩೧ ॥ ಬ್ರಾಹ್ಮಣವಟುವೇ! ನೀನು ಏನೋ ಬಯಸುತ್ತಿರುವೆ ಎಂದು ನನಗೆ ಅನಿಸುತ್ತದೆ. ಪರಮಪೂಜ್ಯ ಬ್ರಹ್ಮಚಾರಿಯೇ! ನೀನು ಬಯಸುವ – ಗೋವುಗಳು, ಚಿನ್ನ, ಸಕಲ ಸಾಮಗ್ರಿಗಳಿಂದ ಸುಸಜ್ಜಿತಮನೆ, ಪವಿತ್ರವಾದ ಅನ್ನ, ಕುಡಿಯುವ ವಸ್ತು, ವಿವಾಹಕ್ಕಾಗಿ ಬ್ರಾಹ್ಮಣಕನ್ಯೆ, ಸಂಪತ್ಸಮೃದ್ಧವಾದ ಊರು, ಕುದುರೆ, ಆನೆ, ರಥ – ಇವೆಲ್ಲವನ್ನು ನನ್ನಿಂದ ಕೇಳಿಕೋ. ನಿನಗೆ ಇಷ್ಟವಾದುದನ್ನು ಅವಶ್ಯವಾಗಿ ಕೇಳಿ ಪಡೆದುಕೋ. ॥ ೩೨ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ವಾಮನಪ್ರಾದುರ್ಭಾವೇ ಬಲಿವಾಮನಸಂವಾದೇಽಷ್ಟಾದಶೋಽಧ್ಯಾಯಃ ॥ ೧೮ ॥

# ಹತ್ತೊಂಭತ್ತನೆಯ ಅಧ್ಯಾಯ

## ಭಗವಾನ್ ವಾಮನನು ಬಲಿಯಲ್ಲಿ ಮೂರು ಹೆಜ್ಜೆ ಭೂಮಿಯನ್ನು ಬೇಡಿದುದು, ಬಲಿಯ ಸಮ್ಮತಿ, ಶುಕ್ರಾಚಾರ್ಯರು ತಡೆದುದು

*ಶ್ರೀಶುಕ ಉವಾಚ*

ಇತಿ ವೈರೋಚನೇರ್ವಾಕ್ಯಂ ಧರ್ಮಯುಕ್ತಂ ಸಸೂನೃತಮ್ ।
ನಿಶಮ್ಯ ಭಗವಾನ್ಪ್ರೀತಃ ಪ್ರತಿನಂದ್ಯೇದಮಬ್ರವೀತ್ ॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಬಲಿಯು ಹೇಳಿದ ಮಾತುಗಳು ಧರ್ಮಯುಕ್ತವಾಗಿಯೂ, ಸತ್ಯವಾಗಿಯೂ, ಪ್ರಿಯವಾಗಿಯೂ ಇದ್ದವು. ಅದನ್ನು ಕೇಳಿದ ಭಗವಾನ್ ವಾಮನನು ಅತ್ಯಂತ ಸಂತೋಷದಿಂದ ಬಲಿಯನ್ನು ಅಭಿನಂದಿಸುತ್ತಾ ಇಂತೆಂದನು – ॥ ೧ ॥

*ಶ್ರೀಭಗವಾನುವಾಚ*

**ವಚಸ್ತವೈತಜ್ಜನದೇವ ಸೂನೃತಂ**
**ಕುಲೋಚಿತಂ ಧರ್ಮಯುತಂ ಯಶಸ್ಕರಮ್ ।**
**ಯಸ್ಯ ಪ್ರಮಾಣಂ ಭೃಗವಃ ಸಾಂಪರಾಯೇ**
**ಪಿತಾಮಹಃ ಕುಲವೃದ್ಧಃ ಪ್ರಶಾಂತಃ ॥ ೨ ॥**

**ಶ್ರೀಭಗವಂತನು ಹೇಳಿದನು** – ಮಹಾರಾಜಾ! ನೀನು ಆಡಿದ ಮಾತುಗಳು ನಿನ್ನ ಕುಲಪರಂಪರೆಗೆ ಅನುರೂಪವಾಗಿವೆ. ಧರ್ಮಭಾವದಿಂದ ಪರಿಪೂರ್ಣವಾಗಿವೆ. ಯಶಸ್ಕರವೂ, ಸತ್ಯವೂ, ಪ್ರಿಯವೂ ಆಗಿವೆ. ಇದಕ್ಕೆ ಕಾರಣ – ಪರಲೋಕಹಿತಕಾರಿಯಾದ ಧರ್ಮದ ಸಂಬಂಧದಲ್ಲಿ ನೀನು ಭೃಗುವಂಶೀಯರಾದ ಶುಕ್ರಾಚಾರ್ಯರನ್ನೇ ಪರಮಪ್ರಮಾಣವೆಂದು ತಿಳಿದಿರುವೆ. ಜೊತೆಗೆ ಕುಲವೃದ್ಧನಾದ ಪಿತಾಮಹ ಪರಮ ಶಾಂತಸ್ವಭಾವದ ಪ್ರಹ್ಲಾದನ ಆಜ್ಞೆಯನ್ನೂ ಪರಮಪ್ರಮಾಣವೆಂದೂ ಪಾಲಿಸುತ್ತಿರುವೆ. ॥ ೨ ॥

**ನ ಹ್ಯೇತಸ್ಮಿನ್ಕುಲೇ ಕಶ್ಚಿನ್ನಿಃಸತ್ತ್ವಃ ಕೃಪಣಃ ಪುಮಾನ್ ।**
**ಪ್ರತ್ಯಾಖ್ಯಾತಾ ಪ್ರತಿಶ್ರುತ್ಯ ಯೋ ವಾದಾತಾ ದ್ವಿಜಾತಯೇ ॥ ೩ ॥**

ನಿನ್ನ ವಂಶಪರಂಪರೆಯಲ್ಲಿ ಇಂದಿನವರೆಗೆ ಧೈರ್ಯಹೀನರೂ, ಕೃಪಣರೂ ಯಾರೂ ಹುಟ್ಟಲಿಲ್ಲ. ಬ್ರಾಹ್ಮಣನಿಗೆ ದಾನವನ್ನು ಕೊಡದವನಾಗಲೀ, ಇಂತಹ ವಸ್ತುವನ್ನು ಕೊಡುವೆನೆಂದು ಪ್ರತಿಜ್ಞೆಮಾಡಿ ಅದನ್ನು ಭಂಗಪಡಿಸಿದವನಾಗಲೀ ನಿನ್ನ ವಂಶದಲ್ಲಿ ಹುಟ್ಟಲಿಲ್ಲ. ॥ ೩ ॥

**ನ ಸಂತಿ ತೀರ್ಥೇ ಯುಧಿ ಚಾರ್ಥಿನಾರ್ಥಿತಾಃ**
**ಪರಾಙ್ಮುಖಾ ಯೇ ತ್ವಮನಸ್ವಿನೋ ನೃಪಾಃ ।**
**ಯುಷ್ಮತ್ಕುಲೇ ಯದ್ಯಶಸಾಮಲೇನ**
**ಪ್ರಹ್ಲಾದ ಉದ್ಭಾತಿ ಯಥೋಡುಪಃ ಖೇ ॥ ೪ ॥**

ದಾನಕೊಡಬೇಕಾದ ಸಮಯದಲ್ಲಿ ಯಾಚಕರ ಯಾಚನೆಯನ್ನು ಕೇಳಿ ಮುಖತಿರುಗಿಸಿದವನಾಗಲೀ, ಯುದ್ಧದ ಸಂದರ್ಭದಲ್ಲಿ ಶತ್ರುವು ಯುದ್ಧಕ್ಕಾಗಿ ಆಹ್ವಾನಿಸಿದಾಗ ಬೆನ್ನುತೋರುವ ಹೇಡಿಯಾಗಲೀ ನಿನ್ನ ವಂಶದಲ್ಲಿ ಯಾರೂ ಹುಟ್ಟಲಿಲ್ಲ. ನಿಮ್ಮ ಕುಲಪರಂಪರೆಯಲ್ಲಿ ಪ್ರಹ್ಲಾದನು ಈಗಲೂ ಆಕಾಶದಲ್ಲಿರುವ ಚಂದ್ರನಂತೆ ನಿರ್ಮಲವಾದ ಯಶಸ್ಸಿನಿಂದ ಬೆಳಗುತ್ತಿರುವನು. ॥ ೪ ॥

**ಯತೋ ಜಾತೋ ಹಿರಣ್ಯಾಕ್ಷಶ್ಚರನ್ನೇಕ ಇಮಾಂ ಮಹೀಮ್ ।**
**ಪ್ರತಿವೀರಂ ದಿಗ್ವಿಜಯೇ ನಾವಿಂದತ ಗದಾಯುಧಃ ॥ ೫ ॥**

ನಿನ್ನ ಕುಲದಲ್ಲೇ ಹಿರಣ್ಯಾಕ್ಷನಂತಹ ವೀರರ ಜನ್ಮವಾಗಿತ್ತು. ಆ ವೀರನು ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಒಬ್ಬಂಟಿಗನಾಗಿ ದಿಗ್ವಿಜಯಕ್ಕಾಗಿ ಹೋದಾಗ ಇಡೀ ಪೃಥಿವಿಯಲ್ಲಿ ತಿರುಗಿದರೂ ಅವನಿಗೆ ತನಗೆ ಸಮಾನನಾದ ವೀರನು ದೊರೆಯಲೇ ಇಲ್ಲ. ॥ ೫ ॥

**ಯಂ ವಿನಿರ್ಜಿತ್ಯ ಕೃಚ್ಛ್ರೇಣ ವಿಷ್ಣುಃ ಕ್ಷ್ಮೋದ್ಧಾರ ಆಗತಮ್ ।**
**ನಾತ್ಮಾನಂ ಜಯಿನಂ ಮೇನೇ ತದ್ವೀರ್ಯಂ ಭೂರ್ಯನುಸ್ಮರನ್ ॥ ೬ ॥**

ಭಗವಾನ್ ವಿಷ್ಣುವು ನೀರಿನಿಂದ ಪೃಥಿವಿಯನ್ನು ಉದ್ಧರಿಸುತ್ತಿದ್ದಾಗ ಅವನು ಅವನ ಮುಂದೆ ಬಂದನು ಮತ್ತು ಭಾರೀ ಕಷ್ಟದಿಂದ ಅವನನ್ನು ಗೆದ್ದುಕೊಂಡನು. ಆದರೂ ಇದಾದ ಬಹಳ ದಿನಗಳವರೆಗೂ ವಿಷ್ಣುವಿಗೆ ಪದೇ-ಪದೇ ಹಿರಣ್ಯಾಕ್ಷನ ಶಕ್ತಿ ಮತ್ತು ಬಲದ ಸ್ಮರಣೆಯಾಗುತ್ತಿತ್ತು. ಅವನನ್ನು ಗೆದ್ದುಕೊಂಡಿದ್ದರೂ ಅವನು ತನ್ನನ್ನು ವಿಜಯಿ ಎಂದು ತಿಳಿಯುತ್ತಿರಲಿಲ್ಲ. ॥ ೬ ॥

**ನಿಶಮ್ಯ ತದ್ವಧಂ ಭ್ರಾತಾ ಹಿರಣ್ಯಕಶಿಪುಃ ಪುರಾ ।**
**ಹಂತುಂ ಭ್ರಾತೃಹಣಂ ಕ್ರುದ್ಧೋ ಜಗಾಮ ನಿಲಯಂ ಹರೇಃ ॥ ೭ ॥**

ಹಿರಣ್ಯಾಕ್ಷನ ಸಹೋದರ ಹಿರಣ್ಯಕಶಿಪುವಿಗೆ ತನ್ನ ತಮ್ಮನ ವಧೆಯ ವೃತ್ತಾಂತ ತಿಳಿದಾಗ ಅವನು ತನ್ನ ತಮ್ಮನನ್ನು ವಧಿಸಿದವನನ್ನು ಕೊಂದುಹಾಕಲಿಕ್ಕಾಗಿ ಕ್ರೋಧಗೊಂಡು ಭಗವಂತನ ನಿವಾಸಸ್ಥಾನವಾದ ವೈಕುಂಠಕ್ಕೆ ಹೋದನು. ॥ ೭ ॥

**ತಮಾಯಾಂತಂ ಸಮಾಲೋಕ್ಯ**
**ಶೂಲಪಾಣಿಂ ಕೃತಾಂತವತ್ ।**
**ಚಿಂತಯಾಮಾಸ ಕಾಲಜ್ಞೋ**
**ವಿಷ್ಣುರ್ಮಾಯಾವಿನಾಂ ವರಃ ॥ ೮ ॥**

ಮಾಯಾವಿಗಳಲ್ಲಿ ಶ್ರೇಷ್ಠನಾದ, ಕಾಲಜ್ಞನಾದ, ಯಾವ ಕಾಲದಲ್ಲಿ ಹೇಗೆ ವರ್ತಿಸಬೇಕೆಂದು ತಿಳಿದಿದ್ದ ವಿಷ್ಣುವು ಯಮನಂತೆ ಶೂಲವನ್ನು ಕೈಯಲ್ಲಿ ಹಿಡಿದುಕೊಂಡು ಹಿರಣ್ಯಕಶಿಪು ತನ್ನನ್ನು ಆಕ್ರಮಿಸುತ್ತಿರುವನೆಂದು ತಿಳಿದು ಹೀಗೆ ಯೋಚಿಸಿದನು. ॥ ೮ ॥

**ಯತೋ ಯತೋಽಹಂ ತತ್ರಾಸೌ ಮೃತ್ಯುಃ ಪ್ರಾಣಭೃತಾಮಿವ ।**
**ಅತೋಽಹಮಸ್ಯ ಹೃದಯಂ ಪ್ರವೇಕ್ಷ್ಯಾಮಿ ಪರಾಗ್ದೃಶಃ ॥ ೯ ॥**

ಯಾವಾಗಲೂ ಮೃತ್ಯುವು ಪ್ರಾಣಿಗಳ ಬೆನ್ನುಬಿಡದೆ ಇರುವಂತೆ ಈ ರಾಕ್ಷಸನು ನಾನು ಹೋದಲ್ಲೆಲ್ಲ ಹಿಂಬಾಲಿಸುವನು. ಅದಕ್ಕಾಗಿ ನಾನು ಇವನ ಹೃದಯದಲ್ಲಿ ಪ್ರವೇಶಿಸುವೆನು. ಆದರಿಂದ ಇವನು ನನ್ನನ್ನು ನೋಡಲಾರನು. ಏಕೆಂದರೆ, ಇವನಾದರೋ ಬಹಿರ್ಮುಖನಾಗಿದ್ದಾನೆ. ಹೊರಗಿನ ವಸ್ತುಗಳನ್ನು ಮಾತ್ರ ನೋಡಬಲ್ಲನು. ॥ ೯ ॥

ಏವಂ ಸ ನಿಶ್ಚಿತ್ಯ ರಿಪೋಃ ಶರೀರ-
ಮಾಧಾವತೋ ನಿರ್ವಿವಿಶೇಽಸುರೇಂದ್ರ ।
ಶ್ವಾಸಾನಿಲಾಂತರ್ಹಿತಸೂಕ್ಷ್ಮದೇಹ-
ಸ್ತತ್ಪ್ರಾಣರಂಧ್ರೇಣ ವಿವಿಗ್ನಚೇತಾಃ ॥ ೧೦ ॥

ಸ ತನ್ನಿಕೇತಂ ಪರಿಮೃಶ್ಯ ಶೂನ್ಯ-
ಮಪಶ್ಯಮಾನಃ ಕುಪಿತೋ ನನಾದ ।
ಕ್ಷ್ಮಾಂ ದ್ಯಾಂ ದಿಶಃ ಖಂ ವಿವರಾನ್ಸಮುದ್ರಾನ್
ವಿಷ್ಣುಂ ವಿಚಿನ್ವನ್ನ ದದರ್ಶ ವೀರಃ ॥ ೧೧ ॥

ಅಪಶ್ಯನ್ನಿತಿ ಹೋವಾಚ ಮಯಾನ್ವಿಷ್ಟಮಿದಂ ಜಗತ್ ।
ಭ್ರಾತೃಹಾ ಮೇ ಗತೋ ನೂನಂ ಯತೋ ನಾವರ್ತತೇ ಪುಮಾನ್ ॥ ೧೨ ॥

ವೈರಾನುಬಂಧ ಏತಾವಾನಾಮೃತ್ಯೋರಿಹ ದೇಹಿನಾಮ್ ।
ಅಜ್ಞಾನಪ್ರಭವೋ ಮನ್ಯುರಹಂಮಾನೋಪಬೃಂಹಿತಃ ॥ ೧೩ ॥

ಪಿತಾ ಪ್ರಹ್ಲಾದಪುತ್ರಸ್ತೇ ತದ್ವಿದ್ವಾನ್ ದ್ವಿಜವತ್ಸಲಃ ।
ಸ್ವಮಾಯುರ್ದ್ವಿಜಲಿಂಗೇಭ್ಯೋ ದೇವೇಭ್ಯೋಽದಾತ್ಸ ಯಾಚಿತಃ ॥ ೧೪ ॥

ಭವಾನಾಚರಿತಾನ್ ಧರ್ಮಾನಾಸ್ಥಿತೋ ಗೃಹಮೇಧಿಭಿಃ ।
ಬ್ರಾಹ್ಮಣೈಃ ಪೂರ್ವಜೈಃ ಶೂರೈರನ್ಯೈಶ್ಚೋದ್ದಾಮಕೀರ್ತಿಭಿಃ ॥ ೧೫ ॥

ತಸ್ಮಾತ್ತ್ವತ್ತೋ ಮಹೀಮೀಷದ್ವೃಣೇಽಹಂ ವರದರ್ಷಭಾತ್ ।
ಪದಾನಿ ತ್ರೀಣಿ ದೈತ್ಯೇಂದ್ರ ಸಂಮಿತಾನಿ ಪದಾ ಮಮ ॥ ೧೬ ॥

ನಾನ್ಯತ್ತೇ ಕಾಮಯೇ ರಾಜನ್ವದಾನ್ಯಾಜ್ಜಗದೀಶ್ವರಾತ್ ।
ನೈನಃ ಪ್ರಾಪ್ನೋತಿ ವೈ ವಿದ್ವಾನ್ಯಾವದರ್ಥಪ್ರತಿಗ್ರಹಃ ॥ ೧೭ ॥

*ಬಲಿರುವಾಚ*

ಅಹೋ ಬ್ರಾಹ್ಮಣದಾಯಾದ ವಾಚಸ್ತೇ ವೃದ್ಧಸಂಮತಾಃ ।
ತ್ವಂ ಬಾಲೋ ಬಾಲಿಶಮತಿಃ ಸ್ವಾರ್ಥಂ ಪ್ರತ್ಯಬುಧೋ ಯಥಾ ॥ ೧೮ ॥

ಮಾಂ ವಚೋಭಿಃ ಸಮಾರಾಧ್ಯ
ಲೋಕಾನಾಮೇಕಮೀಶ್ವರಮ್ ।
ಪದತ್ರಯಂ ವೃಣೀತೇ ಯೋಽ-
ಬುದ್ಧಿಮಾನ್ ದ್ವೀಪದಾಶುಷಮ್ ॥ ೧೯ ॥

ಅಸುರಶಿರೋಮಣಿಯೇ! ಹಿರಣ್ಯಕಶಿಪು ಅವನ ಮೇಲೆ ಆಕ್ರಮಿಸಿದಾಗ ಹೀಗೆ ಯೋಚಿಸಿ ಭಯದಿಂದ ನಡುಗುತ್ತಾ ಭಗವಾನ್ ವಿಷ್ಣುವು ತನ್ನ ಶರೀರವನ್ನು ಸೂಕ್ಷ್ಮವಾಗಿಸಿಕೊಂಡು ಅವನ ಪ್ರಾಣಗಳೊಂದಿಗೆ ಮೂಗಿನ ಮೂಲಕ ಹೃದಯದಲ್ಲಿ ಹೋಗಿ ಕುಳಿತನು. ॥ ೧೦ ॥ ಹಿರಣ್ಯಕಶಿಪು ಅವನ ಲೋಕವನ್ನು ಚೆನ್ನಾಗಿ ಜಾಲಾಡಿದನು. ಆದರೆ ಅವನು ಎಲ್ಲಿಯೂ ಕಾಣಲಿಲ್ಲ. ಇದರಿಂದ ಕ್ರೋಧಿತನಾಗಿ ಸಿಂಹನಾದವನ್ನು ಮಾಡತೊಡಗಿದನು. ಆ ವೀರನು ಪೃಥಿವಿ, ಸ್ವರ್ಗ, ದಿಕ್ಕುಗಳು, ಆಕಾಶ, ಪಾತಾಳ, ಸಮುದ್ರ – ಹೀಗೆ ಎಲ್ಲೆಡೆ ಮಹಾವಿಷ್ಣುವನ್ನು ಹುಡುಕಿದನು. ಆದರೆ ಅವನು ಎಲ್ಲಿಯೂ ಅವನಿಗೆ ಕಂಡುಬರಲಿಲ್ಲ. ॥ ೧೧ ॥ ಅವನನ್ನು ಎಲ್ಲಿಯೂ ಕಾಣದೆ – 'ನಾನು ಇಡೀ ಜಗತ್ತನ್ನು ಹುಡುಕಿಬಿಟ್ಟೆ ಆದರೆ ಅವನು ಸಿಗಲೇ ಇಲ್ಲ. ಆ ಭ್ರಾತೃಘಾತಿಯು ಜೀವಿಗಳು ಹೋದಬಳಿಕ ಮರಳಿ ಬರದಿರುವ ಲೋಕಕ್ಕೆ (ಯಮಲೋಕಕ್ಕೆ) ಹೋಗಿರಬೇಕು' ಎಂದು ಯೋಚಿಸಿದನು. ॥ ೧೨ ॥ ಮೃತ್ಯುವಶನಾದವನಲ್ಲಿ ವೈರಭಾವವನ್ನು ಇರಿಸಿಕೊಳ್ಳುವ ಆವಶ್ಯಕತೆ ಇಲ್ಲ. ಏಕೆಂದರೆ, ವೈರವಾದರೋ ದೇಹದೊಂದಿಗೆ ಮುಗಿದುಹೋಗುತ್ತದೆ. ಕ್ರೋಧದ ಕಾರಣ ಅಜ್ಞಾನ ಮತ್ತು ಅಹಂಕಾರದಿಂದ ಅದು ಬೆಳೆಯುತ್ತದೆ. ॥ ೧೩ ॥ ರಾಜನೇ! ನಿನ್ನ ತಂದೆಯಾದ ಪ್ರಹ್ಲಾದನಂದನ ವಿರೋಚನನೂ ಬ್ರಾಹ್ಮಣಭಕ್ತನಾಗಿದ್ದನು. ಅವನ ಶತ್ರುಗಳಾದ ದೇವತೆಗಳು ಬ್ರಾಹ್ಮಣರ ವೇಷವನ್ನು ತಳೆದು ಅವನಲ್ಲಿ ಅವನ ಆಯುಸ್ಸನ್ನು ದಾನವಾಗಿ ಬೇಡಿದರು. ಅವನು ಬ್ರಾಹ್ಮಣರ ಕಪಟವನ್ನು ಅರಿತಿದ್ದರೂ ತನ್ನ ಆಯುಸ್ಸನ್ನು ದಾನ ಮಾಡಿಬಿಟ್ಟನು. ॥ ೧೪ ॥ ನಿನ್ನ ಪೂರ್ವಜರಂತೆ ನೀನೂ ಕೂಡ ಶುಕ್ರಾಚಾರ್ಯರೇ ಮೊದಲಾದ ಗೃಹಸ್ಥ ಬ್ರಾಹ್ಮಣರು ಆಚರಿಸುವ ಧರ್ಮಗಳನ್ನೂ, ನಿನ್ನ ಪೂರ್ವಜರಾದ ಪ್ರಹ್ಲಾದನೇ ಮೊದಲಾದ ಇತರ ಯಶಸ್ವೀ ವೀರರು ಆಚರಿಸಿದ ಧರ್ಮವನ್ನೇ ಆಚರಿಸುತ್ತಿರುವೆ. ॥ ೧೫ ॥ ದೈತ್ಯೇಂದ್ರನೇ! ನೀನು ಕೇಳಿದ ವಸ್ತುವನ್ನು ಕೊಡುವವರಲ್ಲಿ ಶ್ರೇಷ್ಠನಾಗಿರುವೆ. ಇದರಿಂದಲೇ ನಾನು ನಿನ್ನಲ್ಲಿ ಕೇವಲ ನನ್ನ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಬೇಡುತ್ತೇನೆ. ॥ ೧೬ ॥ ಮಹಾರಾಜಾ! ನೀನು ಇಡೀ ಜಗತ್ತಿನ ಒಡೆಯನಾಗಿರುವೆ. ಉದಾರನಾಗಿರುವೆ. ಹೀಗಿದ್ದರೂ ನಾನು ನಿನ್ನಲ್ಲಿ ಇದಕ್ಕಿಂತ ಹೆಚ್ಚಿನದನ್ನು ಬಯಸುವುದಿಲ್ಲ. ವಿದ್ವಾಂಸನಾದವನು ಕೇವಲ ತನ್ನ ಆವಶ್ಯಕತೆಗನುಸಾರವಾಗಿಯೇ ದಾನವನ್ನು ಸ್ವೀಕರಿಸಬೇಕು. ಇದರಿಂದ ಅವನು ಪ್ರತಿಗ್ರಹಜನ್ಯ ದೋಷದಿಂದ ಮುಕ್ತನಾಗುತ್ತಾನೆ. ॥ ೧೭ ॥

ಬಲಿರಾಜನು ಹೇಳಿದನು – ಬ್ರಾಹ್ಮಣಕುಮಾರಾ! ನಿನ್ನ ಮಾತುಗಳಾದರೋ ವೃದ್ಧರ ಮಾತುಗಳಂತೆ ಇವೆ. ಆದರೆ ನಿನ್ನ ಬುದ್ಧಿಯು ಇನ್ನೂ ಬಾಲಕರಂತೆಯೇ ಇದೆಯಲ್ಲ! ಈಗ ನೀನು ಎಷ್ಟಾದರೂ ಹುಡುಗನೇ ಅಲ್ಲವೇ! ಇದರಿಂದ ನಿನ್ನ ಲಾಭ-ಹಾನಿ ತಿಳಿಯುತ್ತಿಲ್ಲ. ॥ ೧೮ ॥ ನಾನು ಮೂರು ಲೋಕಗಳಿಗೂ ಏಕಮಾತ್ರ ಅಧಿಪತಿಯಾಗಿರುವೆನು. ಬೇಕಾದರೆ ಒಂದು ದ್ವೀಪವನ್ನೇ ಕೊಡಬಲ್ಲೆನು. ನನ್ನನ್ನು ಸುಮಧುರ ಮಾತುಗಳಿಂದ ಸಂತೋಷಗೊಳಿಸಿ, ಕೇವಲ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ಬಯಸಿದರೆ ಅವನನ್ನು ಬುದ್ಧಿವಂತನೆಂದು ಹೇಳಬಹುದೇ? ॥ ೧೯ ॥

ನ ಪುಮಾನ್ಮಾಮುಪವ್ರಜ್ಯ ಭೂಯೋ ಯಾಚಿತುಮರ್ಹತಿ ।
ತಸ್ಮಾದ್ವೃತ್ತಿಕರೀಂ ಭೂಮಿಂ ವಟೋ ಕಾಮಂ ಪ್ರತೀಚ್ಛ ಮೇ ॥ ೨೦ ॥

ಬ್ರಹ್ಮಚಾರಿಯೇ! ಯಾರೇ ಆಗಲೀ, ನನ್ನ ಬಳಿಯಲ್ಲಿ ಯಾಚಿಸಲು ಒಮ್ಮೆ ಬಂದವನು ಮತ್ತೆಂದಿಗೂ ಯಾರಲ್ಲಿಯೂ ಪುನಃ ಬೇಡಲು ಹೋಗಬಾರದು. ಇದು ನನ್ನ ಅಭಿಮತವಾಗಿದೆ. ಆದುದರಿಂದ ನಿನ್ನ ಜೀವನನಿರ್ವಾಹಕ್ಕೆ ಬೇಕಾದಷ್ಟು ಫಲವತ್ತಾದ ಭೂಮಿಯನ್ನು ಕೇಳಿಕೋ. ॥ ೨೦ ॥

*ಶ್ರೀಭಗವಾನುವಾಚ*

ಯಾವಂತೋ ವಿಷಯಾಃ ಪ್ರೇಷ್ಠಾಸ್ತ್ರಿಲೋಕ್ಯಾಮಜಿತೇಂದ್ರಿಯಮ್ ।
ನ ಶಕ್ನುವಂತಿ ತೇ ಸರ್ವೇ ಪ್ರತಿಪೂರಯಿತುಂ ನೃಪ ॥ ೨೧ ॥
ತ್ರಿಭಿಃ ಕ್ರಮೈರಸಂತುಷ್ಟೋ ದ್ವೀಪೇನಾಪಿ ನ ಪೂರ್ಯತೇ ।
ನವವರ್ಷಸಮೇತೇನ ಸಪ್ತದ್ವೀಪವರೇಚ್ಛಯಾ ॥ ೨೨ ॥
ಸಪ್ತದ್ವೀಪಾಧಿಪತಯೋ ನೃಪಾ ವೈನ್ಯಗಯಾದಯಃ ।
ಅರ್ಥೈಃ ಕಾಮೈರ್ಗತಾ ನಾಂತಂ ತೃಷ್ಣಾಯಾ ಇತಿ ನಃ ಶ್ರುತಮ್ ॥ ೨೩ ॥
ಯದೃಚ್ಛಯೋಪಪನ್ನೇನ ಸಂತುಷ್ಟೋ ವರ್ತತೇ ಸುಖಮ್ ।
ನಾಸಂತುಷ್ಟಸ್ತ್ರಿಭಿರ್ಲೋಕೈರಜಿತಾತ್ಮೋಪಸಾದಿತೈಃ ॥ ೨೪ ॥
ಪುಂಸೋಽಯಂ ಸಂಸೃತೇರ್ಹೇತುರಸಂತೋಷೋಽರ್ಥಕಾಮಯೋಃ ।
ಯದೃಚ್ಛಯೋಪಪನ್ನೇನ ಸಂತೋಷೋ ಮುಕ್ತಯೇ ಸ್ಮೃತಃ ॥ ೨೫ ॥
ಯದೃಚ್ಛಾಲಾಭತುಷ್ಟಸ್ಯ ತೇಜೋ ವಿಪ್ರಸ್ಯ ವರ್ಧತೇ ।
ತತ್ಪ್ರಶಾಮ್ಯತ್ಯಸಂತೋಷಾದಂಭಸೇವಾಶುಶುಕ್ಷಣಿಃ ॥ ೨೬ ॥
ತಸ್ಮಾತ್ತ್ರೀಣಿ ಪದಾನ್ಯೇವ ವೃಣೇ ತ್ವದ್ವರದರ್ಷಭಾತ್ ।
ಏತಾವತೈವ ಸಿದ್ಧೋಽಹಂ ವಿತ್ತಂ ಯಾವತ್ಪ್ರಯೋಜನಮ್ ॥ ೨೭ ॥

ಶ್ರೀಭಗವಂತನು ಹೇಳಿದನು – ರಾಜನೇ! ಪ್ರಪಂಚದ ಎಲ್ಲ ಪ್ರಿಯವಾದ ವಿಷಯಗಳು ದೊರೆತರೂ ಜಿತೇಂದ್ರಿಯನಲ್ಲದ, ಸಂತೋಷಿಯಲ್ಲದ ಓರ್ವ ಮನುಷ್ಯನ ಕಾಮನೆಗಳನ್ನೂ ಕೂಡ ಪೂರ್ಣಗೊಳಿಸಲು ಸಮರ್ಥವಾಗಿಲ್ಲ. ॥ ೨೧ ॥ ಮೂರು ಹೆಜ್ಜೆ ಭೂಮಿಯಿಂದ ಸಂತೋಷಪಡದವನಿಗೆ ಒಂದು ದ್ವೀಪವನ್ನೇ ಕೊಟ್ಟರೂ ಅವನು ಸಂತುಷ್ಟನಾಗಲಾರನು. ಏಕೆಂದರೆ, ಅವನ ಮನಸ್ಸಿನಲ್ಲಿ ಏಳೂ ದ್ವೀಪಗಳನ್ನೂ ಪಡೆಯುವ ಇಚ್ಛೆ ಇದ್ದೇ ಇರುತ್ತದೆ. ॥ ೨೨ ॥ ಪೃಥು, ಗಯ, ಮೊದಲಾದ ರಾಜರು ಏಳು ದ್ವೀಪಗಳ ಅಧಿಪತಿಗಳಾಗಿದ್ದರು. ಆದರೂ ಅಷ್ಟು ಧನ, ಭೋಗ ಸಾಮಗ್ರಿಗಳು ದೊರತೆರೂ ಅವರು ತೃಷ್ಣೆಯ ಪಾರವನ್ನು ಕಾಣಲು ಸಾಧ್ಯವಾಗಲಿಲ್ಲವೆಂದು ನಾನು ಕೇಳಿದ್ದೇನೆ. ॥ ೨೩ ॥ ಪ್ರಾರಬ್ಧದಿಂದ ದೊರೆತುದರಲ್ಲಿ ಸಂತುಷ್ಟನಾಗಿರುವವನು ತನ್ನ ಜೀವನವನ್ನು ಸುಖವಾಗಿ ಕಳೆಯುತ್ತಾನೆ. ಆದರೆ ಜಿತೇಂದ್ರಿಯನಲ್ಲದವನು ಮೂರುಲೋಕದ ರಾಜ್ಯ ಸಿಕ್ಕಿದರೂ ದುಃಖಿಯಾಗಿಯೇ ಇರುತ್ತಾನೆ. ಏಕೆಂದರೆ, ಅವನ ಹೃದಯದಲ್ಲಿ ಅಸಂತೋಷದ ಅಗ್ನಿಯು ಧಗ-ಧಗಿಸುತ್ತಿರುತ್ತದೆ. ॥ ೨೪ ॥ ಧನ ಮತ್ತು ಭೋಗಗಳಿಂದ ಸಂತೋಷಪಡದಿರುವುದೇ ಜೀವಿಯು ಜನ್ಮ-ಮರಣದ ಚಕ್ರದಲ್ಲಿ ಬೀಳುವುದಾಗಿದೆ. ದೈವೇಚ್ಛೆಯಿಂದ ದೊರೆತುದರಲ್ಲಿ ಸಂತೋಷಪಡುವುದೇ ಮುಕ್ತಿಗೆ ಕಾರಣವಾಗುತ್ತದೆ. ॥ ೨೫ ॥ ತಾನಾಗಿ ದೊರೆತ ವಸ್ತುವಿನಿಂದಲೇ ಸಂತುಷ್ಟನಾಗುವ ಬ್ರಾಹ್ಮಣನ ತೇಜವು ವೃದ್ಧಿಯಾಗುತ್ತದೆ. ಅವನು ಅತೃಪ್ತನಾದರೆ ಅವನ ತೇಜವು – ನೀರಿನಿಂದ ಅಗ್ನಿಯು ಶಾಂತವಾಗುವಂತೆ ಇಲ್ಲವಾಗುತ್ತದೆ. ॥ ೨೬ ॥ ಕೇಳಿದ ವಸ್ತುವನ್ನು ಕೊಡುವುದರಲ್ಲಿ ನೀನು ಶಿರೋಮಣಿಯಾಗಿರುವೆ. ಇದರಲ್ಲಿ ಸಂದೇಹವೇ ಇಲ್ಲ. ಆದಕ್ಕಾಗಿ ನಾನು ನಿನ್ನಲ್ಲಿ ಕೇವಲ ಮೂರು ಹೆಜ್ಜೆ ಭೂಮಿಯನ್ನು ಬೇಡುತ್ತಿದ್ದೇನೆ. ಇಷ್ಟರಿಂದಲೇ ನನ್ನ ಕೆಲಸ ಆಗಿಹೋದೀತು. ಆವಶ್ಯಕತೆ ಇದ್ದಷ್ಟೇ ಧನವನ್ನು ಸಂಗ್ರಹಿಸಬೇಕು. ॥ ೨೭ ॥

*ಶ್ರೀಶುಕ ಉವಾಚ*

ಇತ್ಯುಕ್ತಃ ಸ ಹಸನ್ನಾಹ ವಾಂಛಾತಃ ಪ್ರತಿಗೃಹ್ಯತಾಮ್ ।
ವಾಮನಾಯ ಮಹೀಂ ದಾತುಂ ಜಗ್ರಾಹ ಜಲಭಾಜನಮ್ ॥ ೨೮ ॥
ವಿಷ್ಣವೇ ಕ್ಷ್ಮಾಂ ಪ್ರದಾಸ್ಯಂತಮುಶನಾ ಅಸುರೇಶ್ವರಮ್ ।
ಜಾನಂಶ್ಚಿಕೀರ್ಷಿತಂ ವಿಷ್ಣೋಃ ಶಿಷ್ಯಂ ಪ್ರಾಹ ವಿದಾಂ ವರಃ ॥ ೨೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಭಗವಂತನು ಹೀಗೆ ಹೇಳಿದಾಗ ಬಲಿಯು ನಗುತ್ತಾ – 'ಒಳ್ಳೆಯದು, ನಿನಗೆ ಇಷ್ಟವಿರುವಷ್ಟೇ ಪಡೆದುಕೋ.' ಹೀಗೆ ಹೇಳಿ ಭಗವಾನ್ ವಾಮನನಿಗೆ ಮೂರು ಹೆಜ್ಜೆ ಭೂಮಿಯನ್ನು ದಾನಮಾಡುವ ಸಂಕಲ್ಪಕ್ಕಾಗಿ ನೀರಿನ ಪಾತ್ರೆಯನ್ನು ಎತ್ತಿಕೊಂಡನು. ॥ ೨೮ ॥ ಶುಕ್ರಾಚಾರ್ಯರು ಎಲ್ಲವನ್ನೂ ಬಲ್ಲವರಾಗಿದ್ದರು. ಭಗವಂತನ ಈ ಲೀಲೆಯೂ ಕೂಡ ಅವರಿಗೆ ತಿಳಿದಿತ್ತು. ಅವರು ರಾಜಾಬಲಿಗೆ ಭೂಮಿಯನ್ನು ಕೊಡಲು ಉದ್ಯುಕ್ತನಾದುದನ್ನು ಕಂಡು ಅವನಲ್ಲಿ ಹೇಳಿದರು – ॥ ೨೯ ॥

*ಶುಕ್ರ ಉವಾಚ*

ಏಷ ವೈರೋಚನೇ ಸಾಕ್ಷಾದ್ಭಗವಾನ್ವಿಷ್ಣುರವ್ಯಯಃ ।
ಕಶ್ಯಪಾದದಿತೇರ್ಜಾತೋ ದೇವಾನಾಂ ಕಾರ್ಯಸಾಧಕಃ ॥ ೩೦ ॥

ಶುಕ್ರಾಚಾರ್ಯರು ಹೇಳುತ್ತಾರೆ – ವಿರೋಚನಪುತ್ರನಾದ ಬಲಿಯೇ! ಇವನು ಸ್ವತಃ ಅವಿನಾಶಿ ಭಗವಂತನಾಗಿದ್ದಾನೆ. ದೇವತೆಗಳ ಕಾರ್ಯವನ್ನು ಸಾಧಿಸಿಕೊಡಲಿಕ್ಕಾಗಿ ಕಶ್ಯಪರ ಪತ್ನೀ ಅದಿತಿಯ ಗರ್ಭದಿಂದ ಅವತರಿಸಿರುವನು. ॥ ೩೦ ॥

ಪ್ರತಿಶ್ರುತಂ ತ್ವಯೈತಸ್ಮೈ ಯದನರ್ಥಮಜಾನತಾ ।
ನ ಸಾಧು ಮನ್ಯೇ ದೈತ್ಯಾನಾಂ ಮಹಾನುಪಗತೋಽನಯಃ
॥ ೩೧ ॥

ಏಷ ತೇ ಸ್ಥಾನಮೈಶ್ವರ್ಯಂ ಶ್ರಿಯಂ ತೇಜೋ ಯಶಃ ಶ್ರುತಮ್ ।
ದಾಸ್ಯತ್ಯಾಚ್ಛಿದ್ಯ ಶಕ್ರಾಯ ಮಾಯಾಮಾಣವಕೋ ಹರಿಃ
॥ ೩೨ ॥

ತ್ರಿಭಿಃ ಕ್ರಮೈರಿಮಾಂಲ್ಲೋಕಾನ್ವಿಶ್ವಕಾಯಃ ಕ್ರಮಿಷ್ಯತಿ ।
ಸರ್ವಸ್ವಂ ವಿಷ್ಣವೇ ದತ್ತ್ವಾ ಮೂಢ ವರ್ತಿಷ್ಯಸೇ ಕಥಮ್
॥ ೩೩ ॥

ಕ್ರಮತೋ ಗಾಂ ಪದೈಕೇನ ದ್ವಿತೀಯೇನ ದಿವಂ ವಿಭೋಃ ।
ಖಂ ಚ ಕಾಯೇನ ಮಹತಾ ತಾರ್ತೀಯಸ್ಯ ಕುತೋ ಗತಿಃ
॥ ೩೪ ॥

ನಿಷ್ಠಾಂ ತೇ ನರಕೇ ಮನ್ಯೇ ಹ್ಯಪ್ರದಾತುಃ ಪ್ರತಿಶ್ರುತಮ್ ।
ಪ್ರತಿಶ್ರುತಸ್ಯ ಯೋಽನೀಶಃ ಪ್ರತಿಪಾದಯಿತುಂ ಭವಾನ್
॥ ೩೫ ॥

ನ ತದ್ದಾನಂ ಪ್ರಶಂಸಂತಿ ಯೇನ ವೃತ್ತಿರ್ವಿಪದ್ಯತೇ ।
ದಾನಂ ಯಜ್ಞಸ್ತಪಃ ಕರ್ಮ ಲೋಕೇ ವೃತ್ತಿಮತೋ ಯತಃ
॥ ೩೬ ॥

ಧರ್ಮಾಯ ಯಶಸೇಽರ್ಥಾಯ ಕಾಮಾಯ ಸ್ವಜನಾಯ ಚ ।
ಪಂಚಧಾ ವಿಭಜನ್ವಿತ್ತಮಿಹಾಮುತ್ರ ಚ ಮೋದತೇ
॥ ೩೭ ॥

ಅತ್ರಾಪಿ ಬಹ್ವೃಚೈರ್ಗೀತಂ ಶೃಣು ಮೇಽಸುರಸತ್ತಮ ।
ಸತ್ಯಮೋಮಿತಿ ಯತ್ಪ್ರೋಕ್ತಂ ಯನ್ನೇತ್ಯಾಹಾನೃತಂ ಹಿ ತತ್
॥ ೩೮ ॥

ಸತ್ಯಂ ಪುಷ್ಪಫಲಂ ವಿದ್ಯಾದಾತ್ಮವೃಕ್ಷಸ್ಯ ಗೀಯತೇ ।
ವೃಕ್ಷೇಽಜೀವತಿ ತನ್ನ ಸ್ಯಾದನೃತಂ ಮೂಲಮಾತ್ಮನಃ
॥ ೩೯ ॥

ಇವನು ತನ್ನೆಲ್ಲವನ್ನು ಕಸಿದುಕೊಳ್ಳುವನು ಎಂಬುದನ್ನು ನೀನು ತಿಳಿಯೆ. ಇವನಿಗೆ ದಾನವನ್ನು ಕೊಡುವ ಪ್ರತಿಜ್ಞೆಯನ್ನು ಮಾಡಿರುವೆಯಲ್ಲ, ಇದರಿಂದ ಭಾರೀ ಅನರ್ಥವಾದೀತು. ಇದರಿಂದ ಸಕಲ ದೈತ್ಯರಿಗೆ ಅಪಾರ ವಿಪತ್ತು ಸಂಭವಿಸುತ್ತದೆ. ಇದು ಸರಿಯೆಂದು ನನಗೆ ಅನಿಸುವುದಿಲ್ಲ. ॥ ೩೧ ॥ ಸ್ವಯಂ ಭಗವಂತನೇ ತನ್ನ ಯೋಗಮಾಯೆಯಿಂದ ಹೀಗೆ ಬ್ರಹ್ಮಚಾರಿಯಾಗಿ ನಿನ್ನ ಮುಂದೆ ಕುಳಿತಿರುವನು. ಇವನು ನಿನ್ನ ರಾಜ್ಯ, ಐಶ್ವರ್ಯ, ಲಕ್ಷ್ಮೀ, ತೇಜ ಮತ್ತು ವಿಶ್ವವಿಖ್ಯಾತ ಕೀರ್ತಿ – ಇವೆಲ್ಲವನ್ನೂ ನಿನ್ನಿಂದ ಕಸಿದುಕೊಂಡು ಒಪ್ಪಿಸುವನು. ॥ ೩೨ ॥ ಇವನು ವಿಶ್ವರೂಪನಾಗಿದ್ದಾನೆ. ಮೂರು ಹೆಜ್ಜೆಗಳಿಂದ ಇವನು ಎಲ್ಲ ಲೋಕಗಳನ್ನು ಅಳೆದು ಕೊಂಡಾನು. ಮೂರ್ಖ ! ತನ್ನೆಲ್ಲವನ್ನೂ ನೀನು ವಿಷ್ಣುವಿಗೆ ಕೊಟ್ಟು ಬಿಟ್ಟರೆ ನಿನ್ನ ಜೀವನ ನಿರ್ವಾಹ ಹೇಗೆ ತಾನೇ ನಡೆದೀತು ? ॥ ೩೩ ॥ ಈ ವಿಶ್ವವ್ಯಾಪಕ ಭಗವಂತನು ಒಂದು ಹೆಜ್ಜೆಯಿಂದ ಪೃಥಿವಿಯನ್ನೂ, ಎರಡನೆ ಹೆಜ್ಜೆಯಿಂದ ಸ್ವರ್ಗವನ್ನೂ ಅಳೆದು ಕೊಂಡಾನು. ಇವನ ವಿಶಾಲ ಶರೀರದಿಂದ ಆಕಾಶ ತುಂಬಿ ಹೋದೀತು. ಆಗ ಇವನು ಮೂರನೆಯ ಹೆಜ್ಜೆಯನ್ನು ಎಲ್ಲಿಡುವನು ? ॥ ೩೪ ॥ ನೀನು ಅದನ್ನು ಪೂರ್ಣಗೊಳಿಸಲಾರೆ. ಇಂತಹ ಸ್ಥಿತಿಯಲ್ಲಿ ಪ್ರತಿಜ್ಞೆಮಾಡಿ ಪೂರ್ಣಗೊಳಿಸದೇ ಇರುವುದರಿಂದ ನಿನಗೆ ನರಕಕ್ಕೆ ಹೋಗಬೇಕಾದೀತು ಎಂದು ನಾನು ತಿಳಿಯುತ್ತೇನೆ. ಏಕೆಂದರೆ ನೀನು ಮಾಡಿರುವ ಪ್ರತಿಜ್ಞೆಯನ್ನು ಪೂರ್ಣಗೊಳಿಸಲು ಸರ್ವಥಾ ಅಸಮರ್ಥನಾಗುವೆ. ॥ ೩೫ ॥ ಯಾವ ದಾನಮಾಡಿದ ನಂತರ ಜೀವನ ನಿರ್ವಹಣೆಗೂ ಏನೂ ಉಳಿಯುವುದಿಲ್ಲವೋ, ಆ ದಾನವನ್ನು ವಿದ್ವಾಂಸರು ಪ್ರಶಂಸಿಸುವುದಿಲ್ಲ. ಜೀವನನಿರ್ವಾಹವು ಸರಿಯಾಗಿ ನಡೆಸುವವನೇ ಜಗತ್ತಿನಲ್ಲಿ ದಾನ, ಯಜ್ಞ, ತಪಸ್ಸು, ಪರೋಪಕಾರದ ಕರ್ಮ ಇವುಗಳನ್ನು ಮಾಡಬಲ್ಲನು. ॥ ೩೬ ॥ ತನ್ನ ಧನದಲ್ಲಿ ಸ್ವಲ್ಪ ಧರ್ಮಕ್ಕಾಗಿ, ಸ್ವಲ್ಪ ಕೀರ್ತಿಗಾಗಿ, ಸ್ವಲ್ಪ ಧನದ ಅಭಿವೃದ್ಧಿಗಾಗಿ, ಸ್ವಲ್ಪ ಭೋಗಗಳಿಗಾಗಿ, ಸ್ವಲ್ಪ ಸ್ವಜನರಿಗಾಗಿ ಹೀಗೆ ಐದು ಭಾಗಗಳಲ್ಲಿ ಹಂಚುವ ಮನುಷ್ಯನೇ ಈ ಲೋಕ ಮತ್ತು ಪರಲೋಕದಲ್ಲಿ ಸುಖವಾಗಿರುತ್ತಾನೆ. ॥ ೩೭ ॥ ಅಸುರಶಿರೋಮಣಿಯೇ ! ತನ್ನ ಪ್ರತಿಜ್ಞೆಯು ಭಂಗವಾದೀತೆಂಬ ಚಿಂತೆ ನಿನಗಿದ್ದರೆ ನಾನು ಈ ವಿಷಯದಲ್ಲಿ ನಿನಗೆ ಸತ್ಯಾನೃತಗಳ ಕುರಿತು ಋಗ್ವೇದದಲ್ಲಿ ಹೇಳಿರುವುದನ್ನು ತಿಳಿಸುವೆನು ಕೇಳು. ಯಾರಿಗಾದರೂ ಏನಾದರೂ ಕೊಡುತ್ತೇನೆ ಎಂದು ಹೇಳುವುದು ಸತ್ಯವಾಗಿದೆ ಮತ್ತು ಅಸ್ವೀಕಾರ ಮಾಡುವುದು – ಕೊಡುವುದಿಲ್ಲವೆಂದು ಹೇಳುವುದು ಅಸತ್ಯವಾಗಿದೆ. ॥ ೩೮ ॥ ಈ ಶರೀರವು ಒಂದು ವೃಕ್ಷವಾಗಿದೆ. ಸತ್ಯವು ಇದರ ಫಲ-ಪುಷ್ಪವಾಗಿದೆ. ಆದರೆ ವೃಕ್ಷವೇ ಇಲ್ಲದಿದ್ದರೆ (ದೇಹವೇ ಇಲ್ಲದಿದ್ದರೆ) ಫಲ-ಪುಷ್ಪಗಳು ಹೇಗೆ ಇರಬಲ್ಲವು ? ಏಕೆಂದರೆ, ಇಲ್ಲವೆಂದು ಹೇಳುವುದು, ತನ್ನ ವಸ್ತುವನ್ನು ಬೇರೆಯವರಿಗೆ ಕೊಡದಿರುವುದು, ಇನ್ನೊಂದು ಅರ್ಥದಲ್ಲಿ ತನ್ನ ಸಂಗ್ರಹವನ್ನು ಉಳಿಸಿಕೊಳ್ಳುವುದು – ಇದೇ ಶರೀರ ವೃಕ್ಷದ ಮೂಲವಾಗಿದೆ. ॥ ೩೯ ॥ ಬೇರುಗಳು ಕತ್ತರಿಸಿದಾಗ ಮರವು ಒಣಗಿಹೋಗಿ ಕೆಲವೇ ದಿನಗಳಲ್ಲಿ ಬಿದ್ದುಹೋಗುವಂತೆಯೇ ಧನವನ್ನು ಕೊಡಲು ಸ್ವೀಕರಿಸಿದರೆ ಈ ಜೀವನವು

ತದ್ಯಥಾ ವೃಕ್ಷ ಉನ್ಮೂಲಃ ಶುಷ್ಯತ್ಯುದ್ವರ್ತತೇಽಚಿರಾತ್ ।
ಏವಂ ನಷ್ಟಾನೃತಃ ಸದ್ಯ ಆತ್ಮಾ ಶುಷ್ಯೇನ್ನ ಸಂಶಯಃ ॥ ೪೦ ॥

ಒಣಗಿ ಹೋಗುವುದರಲ್ಲಿ ಸಂದೇಹವೇ ಇಲ್ಲ. ॥ ೪೦ ॥ 'ನಾನು ಕೊಡುವೆನು' ಈ ವಾಕ್ಯವೇ ಧನವನ್ನು ದೂರತಳ್ಳುತ್ತದೆ. ಅದಕ್ಕಾಗಿ ಇದನ್ನು ಉಚ್ಚರಿಸುವುದೇ ಅಪೂರ್ಣ ಅರ್ಥಾತ್ – ಧನವನ್ನು ಖಾಲಿಯಾಗಿಸುವುದಾಗಿದೆ. 'ನಾನು ಕೊಡುತ್ತೇನೆ ' ಎಂದು ಹೇಳುವುದೇ ಧನದಿಂದ ಬರಿದಾಗುವ ಕಾರಣವಾಗಿದೆ. ಯಾರು ಯಾಚಕನಿಗೆ ಎಲ್ಲವನ್ನು ಕೊಡಲು ಸ್ವೀಕರಿಸುವನೋ ಅವನು ತನಗಾಗಿ ಭೋಗದ ಯಾವ ಸಾಮಗ್ರಿಯನ್ನು ಇರಿಸಲಾರನು. ॥ ೪೧ ॥ ಇದಕ್ಕೆ ವಿರುದ್ಧವಾಗಿ 'ನಾನು ಕೊಡುವುದಿಲ್ಲ' ಈ ಅಸ್ವೀಕಾರಾತ್ಮಕ ಅಸತ್ಯವು ತನ್ನ ಧನವನ್ನು ಸುರಕ್ಷಿತವಾಗಿಡುವುದು ಹಾಗೂ ಪೂರ್ಣಗೊಳಿಸುವುದಾಗಿದೆ. ಆದರೆ ಎಲ್ಲ ಸಮಯದಲ್ಲಿ ಹೀಗೆ ಮಾಡಬಾರದು. ಇದನ್ನು ಎಲ್ಲರೊಂದಿಗೆ, ಎಲ್ಲ ವಸ್ತುಗಳಿಗಾಗಿ ಹೇಳಬಾರದು. ಇದರಿಂದ ಅಪಕೀರ್ತಿಯು ಉಂಟಾಗುತ್ತದೆ. ಅವನು ಜೀವಿಸಿದ್ದರೂ ಸತ್ತಂತೆಯೇ ಆಗಿದ್ದಾನೆ. ॥ ೪೨ ॥ ಸ್ತ್ರೀಯರನ್ನು ಪ್ರಸನ್ನಗೊಳಿಸಲು, ಪರಿಹಾಸ್ಯಮಾಡುವಾಗ, ಮದುವೆಯ ವಿಷಯದಲ್ಲಿ, ತನ್ನ ಜೀವನದ ರಕ್ಷಣೆಗಾಗಿ, ಪ್ರಾಣಸಂಕಟವು ಸನ್ನಿಹಿತವಾಗಿರುವಾಗ, ಗೋ, ಬ್ರಾಹ್ಮಣರ ಹಿತಾರ್ಥವಾಗಿ ಅಥವಾ ಯಾರನ್ನಾದರೂ ಬದುಕಿಸಲಿಕ್ಕಾಗಿ ಸುಳ್ಳನ್ನೂ ಹೇಳಬೇಕಾಗಿ ಬಂದರೂ ಅದು ನಿಂದನೀಯವಲ್ಲ. ॥ ೪೩ ॥

ಪರಾಗ್ರಿಕ್ತಮಪೂರ್ಣಂ ವಾ ಅಕ್ಷರಂ ಯತ್ತದೋಮಿತಿ ।
ಯತ್ಕಿಂಚಿದೋಮಿತಿ ಬ್ರೂಯಾತ್ತೇನ ರಿಚ್ಯೇತ ವೈ ಪುಮಾನ್ ।
ಭಿಕ್ಷವೇ ಸರ್ವಮೋಂಕುರ್ವನ್ನಾಲಂ ಕಾಮೇನ ಚಾತ್ಮನೇ ॥ ೪೧ ॥

ಅಥೈತತ್ಪೂರ್ಣಮಭ್ಯಾತ್ಮಂ ಯಚ್ಚ ನೇತ್ಯನೃತಂ ವಚಃ ।
ಸರ್ವಂ ನೇತ್ಯನೃತಂ ಬ್ರೂಯಾತ್ಸ ದುಷ್ಕೀರ್ತಿಃ ಶ್ವಸನ್ಮೃತಃ ॥ ೪೨ ॥

ಸ್ತ್ರೀಷು ನರ್ಮ ವಿವಾಹೇ ಚ ವೃತ್ತ್ಯರ್ಥೇ ಪ್ರಾಣಸಂಕಟೇ ।
ಗೋಬ್ರಾಹ್ಮಣಾರ್ಥೇ ಹಿಂಸಾಯಾಂ ನಾನೃತಂ ಸ್ಯಾಜ್ಜುಗುಪ್ಸಿತಮ್ ॥ ೪೩ ॥

*ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ವಾಮನಪ್ರಾದುರ್ಭಾವೇ ಏಕೋನವಿಂಶೋಽಧ್ಯಾಯಃ ॥ ೧೯ ॥

# ಇಪ್ಪತ್ತನೆಯ ಅಧ್ಯಾಯ

## ಭಗವಾನ್ ವಾಮನನು ವಿರಾಟ್‌ಸ್ವರೂಪನಾಗಿ ಎರಡೇ ಹೆಜ್ಜೆಗಳಿಂದ ಪೃಥಿವೀ ಮತ್ತು ಸ್ವರ್ಗವನ್ನು ಅಳೆದುದು

*ಶ್ರೀಶುಕ ಉವಾಚ*

ಬಲಿರೇವಂ ಗೃಹಪತಿಃ ಕುಲಾಚಾರ್ಯೇಣ ಭಾಷಿತಃ ।
ತೂಷ್ಣೀಂ ಭೂತ್ವಾ ಕ್ಷಣಂ ರಾಜನ್ನುವಾಚಾವಹಿತೋ ಗುರುಮ್ ॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ರಾಜೇಂದ್ರಾ ! ಕುಲಗುರುಗಳಾದ ಶುಕ್ರಾಚಾರ್ಯರು ಹೀಗೆ ಹೇಳಲು ಆದರ್ಶ ಗೃಹಸ್ಥನಾದ ಬಲಿಯು ಸ್ವಲ್ಪಹೊತ್ತು ಸುಮ್ಮನಿದ್ದು, ಅನಂತರ ವಿನಮ್ರನಾಗಿ ಶುಕ್ರಾಚಾರ್ಯರ ಬಳಿಯಲ್ಲಿ ಹೀಗೆಂದನು–॥ ೧ ॥

*ಬಲಿರುವಾಚ*

ಸತ್ಯಂ ಭಗವತಾ ಪ್ರೋಕ್ತಂ ಧರ್ಮೋಽಯಂ ಗೃಹಮೇಧಿನಾಮ್ ।
ಅರ್ಥಂ ಕಾಮಂ ಯಶೋ ವೃತ್ತಿಂ ಯೋ ನ ಬಾಧೇತ ಕರ್ಹಿಚಿತ್ ॥ ೨ ॥

ಬಲಿರಾಜನು ಹೇಳುತ್ತಾನೆ – ಪೂಜ್ಯರೇ ! ಗೃಹಸ್ಥಾಶ್ರಮದಲ್ಲಿ ಇರುವವರಿಗೆ ಅರ್ಥ, ಕಾಮ, ಯಶಸ್ಸು ಮತ್ತು ಜೀವನನಿರ್ವಹಣೆಯಲ್ಲಿ ಯಾವುದೇ ಬಾಧೆ ಉಂಟಾಗದಿರುವುದೇ ಧರ್ಮವಾಗಿದೆ ಎಂದು ನೀವು ಹೇಳಿರುವುದು ಸತ್ಯವಾಗಿದೆ. ॥ ೨ ॥ ಆದರೆ ಗುರುಗಳೇ ! ನಾನು ಪ್ರಹ್ಲಾದನ ಮೊಮ್ಮಗನಾಗಿದ್ದೇನೆ. ಒಮ್ಮೆ ಕೊಡುವೆನೆಂದು ಪ್ರತಿಜ್ಞೆಮಾಡಿಬಿಟ್ಟಿರುವೆನು. ಆದ್ದರಿಂದ ಈಗ ನಾನು ಧನಲೋಭದಿಂದ ಮೋಸಗಾರನಂತೆ 'ನಾನು ಕೊಡುವುದಿಲ್ಲ' ಎಂದು ಬ್ರಾಹ್ಮಣನಲ್ಲಿ ಹೇಗೆ ಹೇಳಲಿ ? ॥ ೩ ॥

ಸ ಚಾಹಂ ವಿತ್ತಲೋಭೇನ ಪ್ರತ್ಯಾಚಕ್ಷೇ ಕಥಂ ದ್ವಿಜಮ್ ।
ಪ್ರತಿಶ್ರುತ್ಯ ದದಾಮೀತಿ ಪ್ರಾಹ್ಲಾದಿಃ ಕಿತವೋ ಯಥಾ ॥ ೩ ॥

ನ ಹ್ಯಸತ್ಯಾತ್ಪರೋಽಧರ್ಮ ಇತಿ ಹೋವಾಚ ಭೂರಿಯಮ್ ।
ಸರ್ವಂ ಸೋಢುಮಲಂ ಮನ್ಯೇ ಋತೇಽಲೀಕಪರಂ ನರಮ್
॥ ೪ ॥

ನಾಹಂ ಬಿಭೇಮಿ ನಿರಯಾನ್ನಾಧನ್ಯಾದಸುಖಾರ್ಣವಾತ್ ।
ನ ಸ್ಥಾನಚ್ಯವನಾನ್ಮೃತ್ಯೋರ್ಯಥಾ ವಿಪ್ರಪ್ರಲಂಭನಾತ್
॥ ೫ ॥

ಯದ್ಯದ್ಧಾಸ್ಯತಿ ಲೋಕೇಽಸ್ಮಿನ್ಸಂಪರೇತಂ ಧನಾದಿಕಮ್ ।
ತಸ್ಯ ತ್ಯಾಗೇ ನಿಮಿತ್ತಂ ಕಿಂ ವಿಪ್ರಸ್ತುಷ್ಯೇನ್ನ ತೇನ ಚೇತ್
॥ ೬ ॥

ಶ್ರೇಯಃ ಕುರ್ವಂತಿ ಭೂತಾನಾಂ ಸಾಧವೋ ದುಸ್ತ್ಯಜಾಸುಭಿಃ।
ದಧ್ಯಙ್ ಶಿಬಿಪ್ರಭೃತಯಃ ಕೋ ವಿಕಲ್ಪೋ ಧರಾದಿಷು
॥ ೭ ॥

ಯೈರಿಯಂ ಬುಭುಜೇ ಬ್ರಹ್ಮನ್ದೈತ್ಯೇಂದ್ರೈರನಿವರ್ತಿಭಿಃ ।
ತೇಷಾಂ ಕಾಲೋಽಗ್ರಸೀಲ್ಲೋಕಾನ್ನ ಯಶೋಽಧಿಗತಂ ಭುವಿ
॥ ೮ ॥

ಸುಲಭಾ ಯುಧಿ ವಿಪ್ರರ್ಷೇ ಹ್ಯನಿವೃತ್ತಾಸ್ತನುತ್ಯಜಃ ।
ನ ತಥಾ ತೀರ್ಥ ಆಯಾತೇ ಶ್ರದ್ಧಯಾ ಯೇ ಧನತ್ಯಜಃ
॥ ೯ ॥

ಮನಸ್ವಿನಃ ಕಾರುಣಿಕಸ್ಯ ಶೋಭನಂ
ಯದರ್ಥಿಕಾಮೋಪನಯೇನ ದುರ್ಗತಿಃ ।
ಕುತಃ ಪುನರ್ಬ್ರಹ್ಮವಿದಾಂ ಭವಾದೃಶಾಂ
ತತೋ ವಟೋರಸ್ಯ ದದಾಮಿ ವಾಂಛಿತಮ್ ॥ ೧೦ ॥

ಯಜಂತಿ ಯಜ್ಞಕ್ರತುಭಿರ್ಯಮಾದೃತಾ
ಭವಂತ ಆಮ್ನಾಯವಿಧಾನಕೋವಿದಾಃ ।
ಸ ಏವ ವಿಷ್ಣುರ್ವರದೋಽಸ್ತು ವಾ ಪರೋ
ದಾಸ್ಯಾಮ್ಯಮುಷ್ಮೈ ಕ್ಷಿತಿಮೀಪ್ಸಿತಾಂ ಮುನೇ ॥ ೧೧ ॥

ಯದ್ಯಪ್ಯಸಾವಧರ್ಮೇಣ ಮಾಂ ಬಧ್ನೀಯಾದನಾಗಸಮ್ ।
ತಥಾಪ್ಯೇನಂ ನ ಹಿಂಸಿಷ್ಯೇ ಭೀತಂ ಬ್ರಹ್ಮತನುಂ ರಿಪುಮ್
॥ ೧೨ ॥

ಏಷ ವಾ ಉತ್ತಮಶ್ಲೋಕೋ ನ ಜಿಹಾಸತಿ ಯದ್ಯಶಃ ।
ಹತ್ವಾ ಮೈನಾಂ ಹರೇದ್ಯುದ್ಧೇ ಶಯೀತ ನಿಹತೋ ಮಯಾ
॥ ೧೩ ॥

'ಅಸತ್ಯಕ್ಕಿಂತ ಮಿಗಿಲಾದ ಅಧರ್ಮವಿಲ್ಲ. ನಾನು ಎಲ್ಲವನ್ನೂ ಸಹಿಸುವುದರಲ್ಲಿ ಸಮರ್ಥಳಿದ್ದೇನೆ. ಆದರೆ ಸುಳ್ಳುಗಾರನ ಭಾರವನ್ನು ನನ್ನಿಂದ ಸಹಿಸಲಾಗುವುದಿಲ್ಲ' ಎಂದು ಭೂದೇವಿಯು ಹೇಳಿರುವಳು. ॥ ೪ ॥ ಬ್ರಾಹ್ಮಣನಲ್ಲಿ ಪ್ರತಿಜ್ಞೆಮಾಡಿ ಅವನಿಗೆ ಮೋಸ ಮಾಡುವುದಕ್ಕೆ ಹೆದರುವಷ್ಟು ನಾನು ನರಕದಿಂದ, ದರಿದ್ರತೆಯಿಂದ, ದುಃಖದ ಸಮುದ್ರದಿಂದ, ತನ್ನ ರಾಜ್ಯ ನಾಶದಿಂದ ಮತ್ತು ಸಾವಿನಿಂದಲೂ ಹೆದರುವುದಿಲ್ಲ. ॥ ೫ ॥ ಈ ಜಗತ್ತಿನಲ್ಲಿ ಸತ್ತಬಳಿಕ ಧನ-ಕನಕ ಮೊದಲಾದ ವಸ್ತುಗಳು ಇಲ್ಲೇ ಬಿಟ್ಟುಹೋಗುವುವು. ಅವುಗಳ ಮೂಲಕ ಬ್ರಾಹ್ಮಣರನ್ನು ದಾನಾದಿಗಳಿಂದ ಸಂತೋಷಪಡಿಸದಿದ್ದರೆ ಅದರ ತ್ಯಾಗದಿಂದ ಏನು ಲಾಭ? ಅದೆಂತಹ ಸಂಪತ್ತು? ॥ ೬ ॥ ದಧೀಚಿ, ಶಿಬಿ ಮೊದಲಾದ ಮಹಾಪುರುಷರು ತಮ್ಮ ಪರಮಪ್ರಿಯ ಪ್ರಾಣಗಳನ್ನೂ ತ್ಯಜಿಸಲು ಅತಿಕಷ್ಟಕರವಾದ ಪ್ರಾಣಗಳನ್ನೂ ದಾನಮಾಡಿ ಪ್ರಾಣಿಗಳ ಒಳಿತನ್ನು ಮಾಡಿರುವರು. ಹಾಗಿರುವಾಗ ಭೂಮಿಯೇ ಮುಂತಾದ ವಸ್ತುಗಳನ್ನು ಕೊಡುವುದರಲ್ಲಿ ಯೋಚಿಸುವ ಆವಶ್ಯಕತೆ ಏನಿದೆ? ॥ ೭ ॥ ಬ್ರಾಹ್ಮಣೋತ್ತಮರೇ! ಹಿಂದಿನ ಯುಗದಲ್ಲಿ ದೊಡ್ಡ-ದೊಡ್ಡ ದೈತ್ಯರಾಜರು ಈ ಪೃಥಿವಿಯನ್ನು ಉಪಭೋಗಿಸಿದರು. ಭೂಮಿಯಲ್ಲಿ ಅವರನ್ನು ಇದಿರಿಸುವವರು ಯಾರೂ ಇರಲಿಲ್ಲ. ಅವರ ಲೋಕ-ಪರಲೋಕಗಳನ್ನು ಕಾಲವು ನುಂಗಿಹಾಕಿತು. ಆದರೆ ಅವರ ಕೀರ್ತಿಯು ಈಗಲೂ ಭೂಮಂಡಲದಲ್ಲಿ ಹಾಗೆಯೇ ಇದೆ. ॥ ೮ ॥ ಗುರುಗಳೇ! ಯುದ್ಧದಲ್ಲಿ ಬೆನ್ನುತೋರದೆ ತಮ್ಮ ಪ್ರಾಣಗಳನ್ನು ಬಲಿದಾನ ಮಾಡಿದ ಅನೇಕ ಜನರು ಈ ಜಗತ್ತಿನಲ್ಲಿ ಇದ್ದರು. ಆದರೆ ಸತ್ಪಾತ್ರನು ದೊರಕಿದಾಗ ಶ್ರದ್ಧೆಯಿಂದ ಧನವನ್ನು ದಾನಮಾಡುವವರು ದುರ್ಲಭರಾಗಿದ್ದಾರೆ. ॥ ೯ ॥ ಗುರುದೇವಾ! ಉದಾರವೂ, ಕರುಣಾಶೀಲನೂ ಆದ ಮನುಷ್ಯನು - ಸಾಮಾನ್ಯ ಯಾಚಕನ ಕಾಮನೆಯನ್ನು ಪೂರ್ಣಗೊಳಿಸಿ ದುರ್ಗತಿಯನ್ನು ಅನುಭವಿಸಿದರೂ, ಆ ದುರ್ಗತಿಯೂ ಕೂಡ ಅವನಿಗೆ ಶೋಭನೀಯವಾಗಿದೆ. ಹಾಗಿರುವಾಗ ನಿಮ್ಮಂತಹ ಬ್ರಹ್ಮವಿದ್ ಪುರುಷರಿಗೆ ದಾನಮಾಡುವುದರಿಂದ ದುಃಖವು ಪ್ರಾಪ್ತವಾದರೆ ಅದಕ್ಕೆ ಏನು ಹೇಳಬೇಕು. ಅದಕ್ಕಾಗಿ ನಾನು ಈ ಬ್ರಹ್ಮಚಾರಿಯು ತಮ್ಮಂತೆಯೇ ಬ್ರಹ್ಮವೇತ್ತಾ ಆಗಿದ್ದಾನೆ. ಆದ್ದರಿಂದ ಇವನ ಇಷ್ಟಾರ್ಥವನ್ನು ಖಂಡಿತವಾಗಿ ಪೂರ್ಣಗೊಳಿಸುವೆನು. ॥ ೧೦ ॥ ಗುರುಗಳೇ! ವೇದವಿಧಿಗಳನ್ನು ತಿಳಿದವರಾದ ನೀವು ಅತ್ಯಾದರದಿಂದ ಯಾವನನ್ನು ಯಜ್ಞ- ಯಾಗಾದಿಗಳ ಮೂಲಕ ಆರಾಧಿಸುವಿರೋ, ಅಂತಹ ವರದನಾದ ಮಹಾವಿಷ್ಣುವೇ ಈ ರೂಪದಿಂದ ಬಂದಿರಲೀ ಅಥವಾ ಬೇರೆ ಯಾರೇ ಆಗಿರಲೀ ಇವನ ಇಚ್ಛೆಗನುಸಾರವಾಗಿ ನಾನು ಇವನಿಗೆ ಭೂಮಿಯನ್ನು ದಾನ ಮಾಡುವೆನು. ॥ ೧೧ ॥

ನಿರಪರಾಧಿಯಾದ ನನ್ನನ್ನು ಇವನು ಅಧರ್ಮದಿಂದ ಬಂಧಿಸಿದರೂ ನಾನು ಇವನ ಅನಿಷ್ಟವನ್ನು ಬಯಸುವುದಿಲ್ಲ. ಏಕೆಂದರೆ, ನನ್ನ ಶತ್ರುವಾಗಿದ್ದರೂ ಇವನು ಭಯಗೊಂಡು ಬ್ರಾಹ್ಮಣ ಶರೀರವನ್ನು ಧರಿಸಿರುವನು. ॥ ೧೨ ॥ ಇವನು ಪವಿತ್ರಕೀರ್ತಿಯಾದ ಭಗವಾನ್ ವಿಷ್ಣುವೇ ಆಗಿದ್ದರೆ ತನ್ನ ಕೀರ್ತಿಯನ್ನು ಕಳೆದು

*ಶ್ರೀಶುಕ ಉವಾಚ*

ಏವಮಶ್ರದ್ಧಿತಂ ಶಿಷ್ಯಮನಾದೇಶಕರಂ ಗುರುಃ ।
ಶಶಾಪ ದೈವಪ್ರಹಿತಃ ಸತ್ಯಸಂಧಂ ಮನಸ್ವಿನಮ್ ॥ ೧೪ ॥

ದೃಢಂ ಪಂಡಿತಮಾನ್ಯಜ್ಞಃ ಸ್ತಬ್ಧೋಽಸ್ಮದುಪೇಕ್ಷಯಾ ।
ಮಚ್ಛಾಸನಾತಿಗೋ ಯಸ್ತ್ವಮಚಿರಾದ್ಭ್ರಶ್ಯಸೇ ಶ್ರಿಯಃ ॥ ೧೫ ॥

ಏವಂ ಶಪ್ತಃ ಸ್ವಗುರುಣಾ ಸತ್ಯಾನ್ನ ಚಲಿತೋ ಮಹಾನ್ ।
ವಾಮನಾಯ ದದಾವೇನಾಮರ್ಚಿತ್ವೋದಕಪೂರ್ವಕಮ್ ॥ ೧೬ ॥

ವಿಂಧ್ಯಾವಲಿಸ್ತದಾಽಽಗತ್ಯ ಪತ್ನೀ ಜಾಲಕಮಾಲಿನೀ ।
ಆನಿನ್ಯೇ ಕಲಶಂ ಹೈಮಮವನೇಜನ್ಯಪಾಂ ಭೃತಮ್ ॥ ೧೭ ॥

ಯಜಮಾನಃ ಸ್ವಯಂ ತಸ್ಯ ಶ್ರೀಮತ್ಪಾದಯುಗಂ ಮುದಾ ।
ಅವನಿಜ್ಯಾವಹನ್ಮೂರ್ಧ್ನಿ ತದಪೋ ವಿಶ್ವಪಾವನೀಃ ॥ ೧೮ ॥

ತದಾಽಸುರೇಂದ್ರಂ ದಿವಿ ದೇವತಾಗಣಾ
ಗಂಧರ್ವವಿದ್ಯಾಧರಸಿದ್ಧಚಾರಣಾಃ ।
ತತ್ಕರ್ಮ ಸರ್ವೇಽಪಿ ಗೃಣಂತ ಆರ್ಜವಂ
ಪ್ರಸೂನವರ್ಷೈರ್ವವೃಷುರ್ಮುದಾನ್ವಿತಾಃ ॥ ೧೯ ॥

ನೇದುರ್ಮುಹುರ್ದುಂದುಭಯಃ ಸಹಸ್ರಶೋ
ಗಂಧರ್ವ ಕಿಂಪೂರುಷಕಿನ್ನರಾ ಜಗುಃ ।
ಮನಸ್ವಿನಾನೇನ ಕೃತಂ ಸುದುಷ್ಕರಂ
ವಿದ್ವಾನದಾದ್ಯದ್ರಿಪವೇ ಜಗತ್ತ್ರಯಮ್ ॥ ೨೦ ॥

ತದ್ವಾಮನಂ ರೂಪಮವರ್ಧತಾದ್ಭುತಂ
ಹರೇರನಂತಸ್ಯ ಗುಣತ್ರಯಾತ್ಮಕಮ್ ।
ಭೂಃ ಖಂ ದಿಶೋ ದ್ಯೌರ್ವಿವರಾಃ ಪಯೋಧಯ-
ಸ್ತಿರ್ಯಙ್ನೃದೇವಾ ಋಷಯೋ ಯದಾಸತ ॥ ೨೧ ॥

ಕಾಯೇ ಬಲಿಸ್ತಸ್ಯ ಮಹಾವಿಭೂತೇಃ
ಸಹರ್ತ್ವಿಗಾಚಾರ್ಯಸದಸ್ಯ ಏತತ್ ।
ದದರ್ಶ ವಿಶ್ವಂ ತ್ರಿಗುಣಂ ಗುಣಾತ್ಮಕೇ
ಭೂತೇಂದ್ರಿಯಾರ್ಥಾಶಯಜೀವಯುಕ್ತಮ್ ॥ ೨೨ ॥

ಕೊಳ್ಳುವುದಿಲ್ಲ. (ತಾನು ಬೇಡಿದ ವಸ್ತುವನ್ನು ಪಡೆದೇ ತೀರುವನು.) ನನ್ನನ್ನು ಯುದ್ಧದಲ್ಲಿ ಕೊಂದಾದರೂ ಪೃಥಿವಿಯನ್ನು ಪಡೆದುಕೊಳ್ಳ ಬಲ್ಲನು. ಒಂದೊಮ್ಮೆ ಇವನು ಬೇರೆ ಯಾರಾಗಿದ್ದರೆ ನನ್ನ ಬಾಣಗಳ ಹತಿಯಿಂದ ರಣದಲ್ಲಿ ಧರಾಶಾಯಿಯಾಗುವನು. ॥ ೧೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಬಲಿಯ ಗುರುಗಳಾದ ಶುಕ್ರಾಚಾರ್ಯರು – ತನ್ನ ಶಿಷ್ಯನು ತನ್ನನ್ನು ಆದರಿಸದೆ ತನ್ನ ಆಜ್ಞೆಯನ್ನು ಉಲ್ಲಂಘಿಸಿರುವನೆಂದು ತಿಳಿದು ದೈವಪ್ರೇರಣೆಯಿಂದ ಸತ್ಯಸಂಧನಾದ, ಸ್ಥಿರಚಿತ್ತನಾದ ರಾಜಾ ಬಲಿಯನ್ನು ಶಪಿಸಿದರು. ॥ ೧೪ ॥ ಎಲೈ ಮೂರ್ಖ! ನೀನು ಅಜ್ಞಾನಿಯಾಗಿದ್ದರೂ ನಿನ್ನನ್ನು ಮಹಾಪಂಡಿತನೆಂದು ತಿಳಿಯುತ್ತೀಯೆ. ಮಹಾಗರ್ವಿಷ್ಠನಾಗಿ ನನ್ನನ್ನು ಉಪೇಕ್ಷಿಸುತ್ತಿರುವೆ. ನನ್ನ ಆಜ್ಞೆಯನ್ನು ಮೀರಿ ನಡೆಯುತ್ತಿರುವೆ. ಆದರಿಂದ ನೀನು ಬಹು ಬೇಗನೇ ನಿನ್ನ ಸಂಪತ್ತನ್ನು ಕಳೆದುಕೊಳ್ಳುವೆ. ॥ ೧೫ ॥ ಬಲಿ ಚಕ್ರವರ್ತಿಯು ಶ್ರೇಷ್ಠಮಹಾತ್ಮನಾಗಿದ್ದನು. ಗುರುಗಳು ಶಾಪ ವಿತ್ತರೂ ಸತ್ಯದಿಂದ ವಿಚಲಿತನಾಗಲಿಲ್ಲ. ಅವನು ಭಗವಾನ್ ವಾಮನನನ್ನು ವಿಧಿಪೂರ್ವಕವಾಗಿ ಪೂಜಿಸಿ ಕೈಯಲ್ಲಿ ನೀರನ್ನೆತ್ತಿ ಕೊಂಡು ಮೂರುಹೆಜ್ಜೆ ಭೂದಾನದ ಸಂಕಲ್ಪವನ್ನು ಮಾಡಿದನು. ॥ ೧೬ ॥ ಅದೇ ಸಮಯದಲ್ಲಿ ಮುಕ್ತಾಹಾರಗಳಿಂದ ಅಲಂಕೃತ ಳಾದ ಬಲಿಯ ಪತ್ನಿಯಾದ ವಿಂಧ್ಯಾವಳಿಯು ಭಗವಾನ್ ವಾಮನನ ದಿವ್ಯಪಾದಗಳನ್ನು ತೊಳೆಯಲು ಸ್ವರ್ಣಕಲಶದಲ್ಲಿ ನೀರನ್ನು ತುಂಬಿ ತಂದಿತ್ತಳು. ॥ ೧೭ ॥ ಬಲಿಚಕ್ರವರ್ತಿಯು ತಾನೇ ಶ್ರೀವಾಮನಮೂರ್ತಿಯ ಸುಂದರವಾದ ಪಾದಪದ್ಮಗಳನ್ನು ತೊಳೆದು ಆನಂದಭರಿತನಾಗಿ ಗಂಗೆಗೆ ಸಮಾನವಾದ ವಿಶ್ವಪಾವನ ವಾದ ಆ ಚರಣಾಮೃತವನ್ನು ಭಕ್ತಿಯಿಂದ ತನ್ನ ತಲೆಯಲ್ಲಿ ಧರಿಸಿ ಕೊಂಡನು. ॥ ೧೮ ॥ ಆಗ ಅಂತರಿಕ್ಷದಲ್ಲಿ ಉಪಸ್ಥಿತರಾದ ದೇವ, ಗಂಧರ್ವ, ವಿದ್ಯಾಧರ, ಸಿದ್ಧ, ಚಾರಣ, ಋಷಿ-ಮುನಿ ಹೀಗೆ ಎಲ್ಲರೂ ಬಲಿರಾಜನ ಈ ಅಲೌಕಿಕವಾದ ಕಾರ್ಯವನ್ನೂ, ಸರಳತೆ ಯನ್ನೂ ಸತ್ಯನಿಷ್ಠೆಯನ್ನು ಪ್ರಶಂಸಿಸುತ್ತಾ ಅತೀವ ಆನಂದದಿಂದ ಅವನ ಮೇಲೆ ದಿವ್ಯಪುಷ್ಪಗಳ ಮಳೆಯನ್ನೇ ಸುರಿಸಿದರು. ॥ ೧೯ ॥ ದೇವದುಂದುಭಿಗಳು ಅಡಿಗಡಿಗೆ ಮೊಳಗುತ್ತಲೇ ಇದ್ದವು. ಗಂಧ ರ್ವರು, ಕಿಂಪುರುಷರು, ಕಿನ್ನರರು ಹಾಡತೊಡಗಿದರು. ಆಹಾ! ಧನ್ಯ! ಧನ್ಯ! ಉದಾರಶಿರೋಮಣಿಯಾದ ಬಲಿಚಕ್ರವರ್ತಿಯು ಇತರರಿಗೆ ಮಾಡಲು ಅತ್ಯಂತ ದುಷ್ಕರವಾದ ಕಾರ್ಯವನ್ನೇ ಮಾಡಿತೋರಿರುವನು. ತಿಳಿದೂ-ತಿಳಿದೂ ತನ್ನ ಶತ್ರುವಿಗೆ ಮೂರು ಲೋಕಗಳನ್ನು ದಾನಮಾಡಿಬಿಟ್ಟಿರುವನು. ॥ ೨೦ ॥

ಪರೀಕ್ಷಿತನೇ! ಆಗಲೇ ಅಲ್ಲಿ ಒಂದು ಅದ್ಭುತವಾದ ಘಟ ನೆಯು ನಡೆಯಿತು. ಅನಂತನಾದ ಭಗವಂತನ ಆ ತ್ರಿಗುಣಾತ್ಮಕ ವಾದ ವಾಮನರೂಪವು ಇದ್ದಕ್ಕಿದ್ದಂತೆ ಬೆಳೆಯತೊಡಗಿತು. ಅದು ಬೆಳೆಯುತ್ತಾ-ಬೆಳೆಯುತ್ತಾ ಭೂಮಿ, ಆಕಾಶ, ದಿಕ್ಕುಗಳು, ಸ್ವರ್ಗ, ಪಾತಾಳ, ಸಮುದ್ರ, ಪಶು-ಪಕ್ಷಿ, ಮನುಷ್ಯರು, ದೇವತೆಗಳು, ಋಷಿಗಳು ಹೀಗೆ ಎಲ್ಲವೂ ಅವನೊಳಗೆ ಸೇರಿಹೋಗುವಷ್ಟು ಬೃಹದಾಕಾರವಾಯಿತು. ॥ ೨೧ ॥ ಋತ್ವಿಜರಿಂದಲೂ, ಆಚಾರ್ಯ ರಿಂದಲೂ, ಸಭಾಸದರಿಂದಲೂ ಕೂಡಿದ್ದ ಆ ಬಲಿಯು ಸಮಸ್ತ

ರಸಾಮಚಷ್ಟಾಂಘ್ರಿತಲೇಽಥ ಪಾದಯೋ-
ರ್ಮಹೀಂ ಮಹೀಧ್ರಾನ್ಪುರುಷಸ್ಯ ಜಂಘಯೋಃ ।
ಪತತ್ತ್ರಿಣೋ ಜಾನುನಿ ವಿಶ್ವಮೂರ್ತೇ-
ರೂರ್ವೋರ್ಗಣಂ ಮಾರುತಮಿಂದ್ರಸೇನಃ ॥ ೨೩ ॥

ಸಂಧ್ಯಾಂ ವಿಭೋರ್ವಾಸಸಿ ಗುಹ್ಯ ಐಕ್ಷತ್
ಪ್ರಜಾಪತೀನ್ ಜಘನೇ ಆತ್ಮಮುಖ್ಯಾನ್ ।
ನಾಭ್ಯಾಂ ನಭಃ ಕುಕ್ಷಿಷು ಸಪ್ತಸಿಂಧೂ-
ನುರುಕ್ರಮಸ್ಯೋರಸಿ ಚರ್ಕ್ಷಮಾಲಾಮ್ ॥ ೨೪ ॥

ಹೃದ್ಯಂಗ ಧರ್ಮಂ ಸ್ತನಯೋರ್ಮುರಾರೇಃ
ಋತಂ ಚ ಸತ್ಯಂ ಚ ಮನಸ್ಯಥೇಂದುಮ್ ।
ಶ್ರಿಯಂ ಚ ವಕ್ಷಸ್ಯರವಿಂದಹಸ್ತಾಂ
ಕಂಠೇ ಚ ಸಾಮಾನಿ ಸಮಸ್ತರೇಫಾನ್ ॥ ೨೫ ॥

ಇಂದ್ರಪ್ರಧಾನಾನಮರಾನ್ ಭುಜೇಷು
ತತ್ಕರ್ಣಯೋಃ ಕಕುಭೋ ದ್ಯೌಶ್ಚ ಮೂರ್ಧ್ನಿ ।
ಕೇಶೇಷು ಮೇಘಾನ್ ಛ್ವಸನಂ ನಾಸಿಕಾಯಾ-
ಮಕ್ಷ್ಣೋಶ್ಚ ಸೂರ್ಯಂ ವದನೇ ಚ ವಹ್ನಿಮ್ ॥ ೨೬ ॥

ವಾಣ್ಯಾಂ ಚ ಛಂದಾಂಸಿ ರಸೇ ಜಲೇಶಂ
ಭ್ರುವೋರ್ನಿಷೇಧಂ ಚ ವಿಧಿಂ ಚ ಪಕ್ಷ್ಮಸು ।
ಅಹಶ್ಚ ರಾತ್ರಿಂ ಚ ಪರಸ್ಯ ಪುಂಸೋ
ಮನ್ಯುಂ ಲಲಾಟೇಽಧರ ಏವ ಲೋಭಮ್ ॥ ೨೭ ॥

ಸ್ಪರ್ಶೇ ಚ ಕಾಮಂ ನೃಪ ರೇತಸೋಽಂಭಃ
ಪೃಷ್ಠೇ ತ್ವಧರ್ಮಂ ಕ್ರಮಣೇಷು ಯಜ್ಞಮ್ ।
ಛಾಯಾಸು ಮೃತ್ಯುಂ ಹಸಿತೇ ಚ ಮಾಯಾಂ
ತನೂರುಹೇಷ್ವೋಷಧಿಜಾತಯಶ್ಚ ॥ ೨೮ ॥

ನದೀಶ್ಚ ನಾಡೀಷು ಶಿಲಾ ನಖೇಷು
ಬುದ್ಧಾವಜಂ ದೇವಗಣಾನೃಷೀಂಶ್ಚ ।
ಪ್ರಾಣೇಷು ಗಾತ್ರೇ ಸ್ಥಿರಜಂಗಮಾನಿ
ಸರ್ವಾಣಿ ಭೂತಾನಿ ದದರ್ಶ ವೀರಃ ॥ ೨೯ ॥

ಸರ್ವಾತ್ಮನೀದಂ ಭುವನಂ ನಿರೀಕ್ಷ್ಯ
ಸರ್ವೇಽಸುರಾಃ ಕಶ್ಮಲಮಾಪುರಂಗ ।
ಸುದರ್ಶನಂ ಚಕ್ರಮಸಹ್ಯತೇಜೋ
ಧನುಶ್ಚ ಶಾರ್ಙ್ಗಂ ಸ್ತನಯಿತ್ನುಘೋಷಮ್ ॥ ೩೦ ॥

ಐಶ್ವರ್ಯಗಳ ಸ್ವಾಮಿಯಾದ ಭಗವಂತನ ಆ ತ್ರಿಗುಣಾತ್ಮಕವಾದ ಶರೀರದಲ್ಲಿ ಪಂಚಭೂತಗಳನ್ನೂ, ಇಂದ್ರಿಯಗಳನ್ನು, ಅವುಗಳ ವಿಷಯಗಳನ್ನೂ, ಅಂತಃಕರಣ ಮತ್ತು ಜೀವಿಗಳೊಂದಿಗೆ ಸಮಸ್ತ ತ್ರಿಗುಣಮಯವಾದ ಜಗತ್ತನ್ನೂ ನೋಡಿದನು. ॥ ೨೨ ॥ ಬಲಿಚಕ್ರ ವರ್ತಿಯು ವಿಶ್ವರೂಪನಾದ ಭಗವಂತನ ಚರಣಗಳ ತಲದಲ್ಲಿ ರಸಾತಲವನ್ನೂ, ಹೆಜ್ಜೆಗಳಲ್ಲಿ ಪೃಥ್ವಿಯನ್ನೂ, ಕಣಕಾಲುಗಳಲ್ಲಿ ಪರ್ವತಗಳನ್ನೂ, ಮೊಣಕಾಲುಗಳಲ್ಲಿ ಪಕ್ಷಿಗಳನ್ನೂ, ತೊಡೆಗಳಲ್ಲಿ ಮರುದ್ಗಣಗಳನ್ನೂ, ನೋಡಿದನು. ॥ ೨೩ ॥ ಹೀಗೆಯೇ ಭಗ ವಂತನ ವಸ್ತ್ರಗಳಲ್ಲಿ ಸಂಧ್ಯೆಯನ್ನೂ, ಮೇಢ್ರದಲ್ಲಿ ನವಪ್ರಜಾಪತಿ ಗಳನ್ನೂ, ಜಘನದಲ್ಲಿ ತನ್ನ ಮುಂದಾಳುತನದಲ್ಲಿರುವ ಅಸುರ ರನ್ನೂ, ನಾಭಿಯಲ್ಲಿ ಆಕಾಶವನ್ನೂ, ಹೊಟ್ಟೆಯಲ್ಲಿ ಸಪ್ತಸಮುದ್ರ ಗಳನ್ನೂ, ವಕ್ಷಸ್ಥಳದಲ್ಲಿ ನಕ್ಷತ್ರಮಂಡಲವನ್ನೂ ನೋಡಿದನು. ॥ ೨೪ ॥ ಭಗವಂತನ ಹೃದಯದಲ್ಲಿ ಧರ್ಮವನ್ನೂ, ಸ್ತನಗಳಲ್ಲಿ ಋತ ಮತ್ತು ಸತ್ಯಗಳನ್ನೂ, ಮನಸ್ಸಿನಲ್ಲಿ ಚಂದ್ರನನ್ನೂ, ಎದೆಯಲ್ಲಿ ಕಮಲಹಸ್ತಳಾದ ಮಹಾಲಕ್ಷ್ಮಿಯನ್ನೂ, ಕೊರಳಿನಲ್ಲಿ ಸಾಮ ವೇದವೇ ಮುಂತಾದ ಸಮಸ್ತ ವೇದಗಳನ್ನೂ, ಶಬ್ದಸಮೂಹವನ್ನೂ ನೋಡಿದನು. ॥ ೨೫ ॥ ಬಾಹುಗಳಲ್ಲಿ ಇಂದ್ರಾದಿ ಸಮಸ್ತ ದೇವತೆ ಗಳನ್ನೂ, ಕಿವಿಗಳಲ್ಲಿ ದಿಕ್ಕುಗಳನ್ನೂ, ತಲೆಯಲ್ಲಿ ಸ್ವರ್ಗವನ್ನೂ, ಕೂದಲುಗಳಲ್ಲಿ ಮೇಘಗಳನ್ನೂ, ಮೂಗಿನಲ್ಲಿ ವಾಯುವನ್ನೂ, ಕಣ್ಣುಗಳಲ್ಲಿ ಸೂರ್ಯನನ್ನೂ, ಮುಖದಲ್ಲಿ ಅಗ್ನಿಯನ್ನೂ ನೋಡಿ ದನು. ॥ ೨೬ ॥ ದೇವದೇವನ ವಾಣಿಯಲ್ಲಿ ವೇದಗಳನ್ನೂ, ನಾಲಿಗೆಯಲ್ಲಿ ವರುಣನನ್ನೂ, ಹುಬ್ಬುಗಳಲ್ಲಿ ವಿಧಿ-ನಿಷೇಧ ಗಳನ್ನೂ, ರೆಪ್ಪೆಗಳಲ್ಲಿ ಅಹೋರಾತ್ರಿಗಳನ್ನೂ, ಆ ವಿಶ್ವರೂಪನ ಹಣೆಯಲ್ಲಿ ಕ್ರೋಧವನ್ನೂ, ಕೆಳತುಟಿಯಲ್ಲಿ ಲೋಭವನ್ನೂ, ದರ್ಶಿಸಿದನು. ॥ ೨೭ ॥ ಪರೀಕ್ಷಿತನೇ! ಅವನ ಸ್ಪರ್ಶದಲ್ಲಿ ಕಾಮ ವನ್ನೂ, ವೀರ್ಯದಲ್ಲಿ ಜಲವನ್ನೂ, ಬೆನ್ನಿನಲ್ಲಿ ಅಧರ್ಮವನ್ನೂ, ನಡೆಯಲ್ಲಿ ಯಜ್ಞಗಳನ್ನೂ, ನೆರಳಿನಲ್ಲಿ ಮೃತ್ಯುವನ್ನೂ, ನಗುವಿ ನಲ್ಲಿ ಮಾಯೆಯನ್ನೂ, ಮೈಗೂದಲುಗಳಲ್ಲಿ ಎಲ್ಲ ವಿಧದ ಸಸ್ಯ-ಔಷಧಿಗಳನ್ನೂ ನೋಡಿದರು. ॥ ೨೮ ॥ ಅವನ ನರಗಳಲ್ಲಿ ನದಿ ಗಳನ್ನೂ, ಉಗುರುಗಳಲ್ಲಿ ಕಲ್ಲುಗಳನ್ನೂ, ಬುದ್ಧಿಯಲ್ಲಿ ಬ್ರಹ್ಮನನ್ನೂ, ದೇವತೆಗಳನ್ನೂ, ಋಷಿಗಳನ್ನೂ, ಇಂದ್ರಿಯಗಳನ್ನೂ ಮತ್ತು ಶರೀರದಲ್ಲಿ ಎಲ್ಲ ಸಚರಾಚರ ಪ್ರಾಣಿಗಳನ್ನೂ ಆ ಭಗ ವಂತನ ಭವ್ಯ ವಿಶ್ವರೂಪದಲ್ಲಿ ಬಲಿಚಕ್ರವರ್ತಿಯು ದರ್ಶಿಸಿದನು. ॥ ೨೯ ॥

ಪರೀಕ್ಷಿತಮಹಾರಾಜನೇ! ಸರ್ವಾತ್ಮನಾದ ಭಗವಂತನಲ್ಲಿ ಈ ಸಮಸ್ತ ಜಗತ್ತನ್ನು ಕಂಡು ಬಲಿಪ್ರಮುಖರಾದ ಎಲ್ಲ ಅಸುರರು ಅತ್ಯಂತ ಭಯಭ್ರಾಂತರಾದರು. ಅದೇ ಸಮಯದಲ್ಲಿ ಸಹಿಸ ಲಾಗದ ಮಹಾತೇಜಸ್ಸಿನಿಂದ ಕೂಡಿದ ಸುದರ್ಶನ ಚಕ್ರವೂ, ಮೇಘದಂತೆ ಭಯಂಕರ ಟೇಂಕಾರ ಶಬ್ದವಿದ್ದ ಶಾರ್ಙ್ಗವೆಂಬ ಮಹಾ ಧನುಸ್ಸೂ, ಮೇಘದಂತೆ ಗಂಭೀರವಾಗಿ ಶಬ್ದಮಾಡುವ ಪಾಂಚಜನ್ಯ ವೆಂಬ ಶಂಖವೂ, ಅತ್ಯಂತ ವೇಗವುಳ್ಳ ಕೌಮೋದಕೀ ಗದೆಯೂ, ಶತಚಂದ್ರಗಳ ಚಿಹ್ನೆಗಳಿದ್ದ ಗುರಾಣಿಯೂ, ವಿದ್ಯಾಧರವೆಂಬ ಖಡ್ಗವೂ, ಎರಡು ಅಕ್ಷಯ ಬತ್ತಳಿಕೆಗಳೂ,

ಪರ್ಜನ್ಯಘೋಷೋ ಜಲಜಃ ಪಾಂಚಜನ್ಯಃ
ಕೌಮೋದಕೀ ವಿಷ್ಣುಗದಾ ತರಸ್ವಿನೀ ।
ವಿದ್ಯಾಧರೋಽಸಿಃ ಶತಚಂದ್ರಯುಕ್ತ-
ಸ್ತೂಣೋತ್ತಮಾವಕ್ಷಯಸಾಯಕೌ ಚ ॥ ೩೦ ॥

ಸುನಂದಮುಖ್ಯಾ ಉಪತಸ್ಥುರೀಶಂ
ಪಾರ್ಷದಮುಖ್ಯಾಃ ಸಹಲೋಕಪಾಲಾಃ ।
ಸ್ಫುರತ್ಕಿರೀಟಾಂಗದಮೀನಕುಂಡಲ-
ಶ್ರೀವತ್ಸರತ್ನೋತ್ತಮಮೇಖಲಾಂಬರೈಃ ॥ ೩೨ ॥

ಮಧುವ್ರತಸ್ರಗ್ವನಮಾಲಯಾ ವೃತೋ
ರರಾಜ ರಾಜನ್ಭಗವಾನುರುಕ್ರಮಃ ।
ಕ್ಷಿತಿಂ ಪದೈಕೇನ ಬಲೇರ್ವಿಚಕ್ರಮೇ
ನಭಃ ಶರೀರೇಣ ದಿಶಶ್ಚ ಬಾಹುಭಿಃ ॥ ೩೩ ॥

ಪದಂ ದ್ವಿತೀಯಂ ಕ್ರಮತಸ್ತ್ರಿವಿಷ್ಟಪಂ
ನ ವೈ ತೃತೀಯಾಯ ತದೀಯಮಣ್ವಪಿ ।
ಉರುಕ್ರಮಸ್ಯಾಂಘ್ರಿರುಪರ್ಯುಪರ್ಯಥೋ
ಮಹರ್ಜನಾಭ್ಯಾಂ ತಪಸಃ ಪರಂ ಗತಃ ॥ ೩೪ ॥

ಭಗವಂತನ ಬಳಿ ಮೂರ್ತಿಮತ್ತಾಗಿ ನಿಂತಿದ್ದವು. ಸಮಸ್ತ ಲೋಕ ಪಾಲಕರೊಂದಿಗೆ ಭಗವಂತನ ಸುನಂದರೇ ಮುಂತಾದ ಪಾರ್ಷದರು ಅವನನ್ನು ಸೇವಿಸಲು ಉಪಸ್ಥಿತರಾದರು,. ಆ ಸಮಯದಲ್ಲಿ ಉರುಕ್ರಮ ಭಗವಂತನು ತಲೆಯಲ್ಲಿ ಕಿರೀಟವನ್ನೂ, ತೋಳುಗಳಲ್ಲಿ ಅಂಗದ ಕೇಯೂರಗಳನ್ನೂ, ಕಿವಿಗಳಲ್ಲಿ ಮಕರಾಕೃತಿಯ ಕುಂಡಲಗಳನ್ನೂ, ವಕ್ಷಸ್ಥಳದಲ್ಲಿ ಶ್ರೀವತ್ಸಚಿಹ್ನೆಯನ್ನೂ, ಕುತ್ತಿಗೆಯಲ್ಲಿ ಕೌಸ್ತುಭಮಣಿಯನ್ನು ಧರಿಸಿ, ಸೊಂಟದಲ್ಲಿ ಪೀತಾಂಬರ ವನ್ನುಟ್ಟು ಸ್ವರ್ಣಮೇಖಲೆಯನ್ನೂ, ಹೆಗಲಿನಲ್ಲಿ ಉತ್ತರೀಯವನ್ನು ಧರಿಸಿಕೊಂಡು ಅತ್ಯಂತ ಶೋಭಾಯಮಾನವಾಗಿ ಕಾಣುತ್ತಿದ್ದನು. ॥ ೩೦-೩೨ ॥ ದುಂಬಿಗಳ ಸಮೂಹಗಳಿಂದ ಕೂಡಿದ್ದ ವನಮಾಲೆಯನ್ನೂ ಅವನು ಧರಿಸಿದ್ದನು. ಪರೀಕ್ಷಿತನೇ! ಆ ಉರುಕ್ರಮನು (ತ್ರಿವಿಕ್ರಮನು) ತನ್ನ ಒಂದು ಹೆಜ್ಜೆಯಿಂದ ಬಲಿಗೆ ಸೇರಿದ ಭೂ ಮಂಡಲವನ್ನೂ, ಶರೀರದಿಂದ ಅಂತರಿಕ್ಷವನ್ನೂ, ಭುಜಗಳಿಂದ ದಿಕ್ಕುಗಳನ್ನೂ ಆಕ್ರಮಿಸಿದನು. ಎರಡನೆಯ ಹೆಜ್ಜೆಯಿಂದ ಸ್ವರ್ಗವನ್ನೂ ಆಕ್ರಮಿಸಿದನು. ಮೂರನೆಯ ಹೆಜ್ಜೆಯನ್ನಿಡಲು ಬಲಿಯ ಯಾವ ವಸ್ತುವೂ ಉಳಿಯಲಿಲ್ಲ. ಭಗವಂತನಾದ ತ್ರಿವಿಕ್ರಮನ ಆ ಎರಡನೆಯ ಹೆಜ್ಜೆಯು ಮೇಲೆ-ಮೇಲೆ ಬೆಳೆಯುತ್ತಾ ಮಹರ್ಲೋಕ, ಜನೋಲೋಕ, ತಪೋಲೋಕಗಳನ್ನು ದಾಟಿ ಎಲ್ಲಕ್ಕಿಂತ ಮೇಲ್ಭಾಗದಲ್ಲಿರುವ ಸತ್ಯಲೋಕವನ್ನು ಸೇರಿತು. ॥ ೩೩-೩೪ ॥

**ಇಪ್ಪತ್ತನೆಯ ಅಧ್ಯಾಯವು ಮುಗಿಯಿತು. ॥ ೨೦ ॥**

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ವಿಶ್ವರೂಪದರ್ಶನಂ ನಾಮ ವಿಂಶೋಽಧ್ಯಾಯಃ ॥ ೨೦ ॥**

# ಇಪ್ಪತ್ತೊಂದನೆಯ ಅಧ್ಯಾಯ

## ಬಲಿಬಂಧನ

*ಶ್ರೀಶುಕ ಉವಾಚ*

ಸತ್ಯಂ ಸಮೀಕ್ಷ್ಯಾಬ್ಜಭವೋ ನಖೇಂದುಭಿ-
ರ್ಹತಸ್ವಧಾಮದ್ಯುತಿರಾವೃತೋಽಭ್ಯಗಾತ್ ।
ಮರೀಚಿಮಿಶ್ರಾ ಋಷಯೋ ಬೃಹದ್ವ್ರತಾಃ
ಸನಂದನಾದ್ಯಾ ನರದೇವ ಯೋಗಿನಃ ॥ ೧ ॥

ವೇದೋಪವೇದಾ ನಿಯಮಾನ್ವಿತಾ ಯಮಾ-
ಸ್ತರ್ಕೇತಿಹಾಸಾಂಗ ಪುರಾಣಸಂಹಿತಾಃ ।
ಯೇ ಚಾಪರೇ ಯೋಗಸಮೀರದೀಪಿತ-
ಜ್ಞಾನಾಗ್ನಿನಾ ರಂಧಿತಕರ್ಮಕಲ್ಮಷಾಃ ।
ವವಂದಿರೇ ಯತ್ಸ್ಮರಣಾನುಭಾವತಃ
ಸ್ವಾಯಂಭುವಂ ಧಾಮ ಗತಾ ಅಕರ್ಮಕಮ್ ॥ ೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿದ್ರಾಜನೇ! ಭಗವಂತನ ಚರಣಕಮಲವು ಸತ್ಯಲೋಕವನ್ನು ವ್ಯಾಪಿಸಿತು. ಅವನ ದಿವ್ಯವಾದ ನಖಚಂದ್ರಿಕೆಯಿಂದ ಸತ್ಯಲೋಕದ ಕಾಂತಿಯು ಮಸುಕಾಗಿ ಹೋಯಿತು. ಸ್ವಯಂ ಬ್ರಹ್ಮನೂ ಕೂಡ ಆ ಪ್ರಕಾಶದಲ್ಲಿ ಮುಳುಗಿಹೋದನು. ಮರೀಚಿಯೇ ಮೊದಲಾದ ಋಷಿಗಳೂ, ಸನಂದನಾದಿ ನೈಷ್ಠಿಕ ಬ್ರಹ್ಮಚಾರಿಗಳೂ, ಇತರ ಮಹಾಮಹಾ ಯೋಗಿಗಳೂ ಕೂಡ ಭಗವಂತನ ಚರಣಕಮಲವನ್ನು ಭಕ್ತಿಭಾವದಿಂದ ಸ್ವಾಗತಿಸಿದರು. ॥ ೧ ॥ ಬ್ರಹ್ಮಲೋಕದಲ್ಲಿ ಮೂರ್ತಿವತ್ತಾಗಿ ನೆಲೆಸಿರುವ ವೇದಗಳೂ, ಉಪವೇದಗಳೂ, ನಿಯಮ-ಯಮಗಳೂ, ತರ್ಕ-ಇತಿಹಾಸಗಳೂ, ವೇದಾಂಗಗಳೂ, ಪುರಾಣ-ಸಂಹಿತೆಗಳೂ ಎಲ್ಲವೂ ಪರಮಪುರುಷನ ಚರಣಾರವಿಂದವನ್ನು ಸ್ವಾಗತಿಸಲು ಸಿದ್ಧರಾದರು. ಯೋಗರೂಪವಾದ ವಾಯುವಿನಿಂದ ಜ್ಞಾನಾಗ್ನಿಯನ್ನು ಪ್ರಜ್ವಲಿತಗೊಳಿಸಿ ಕರ್ಮಮಲವನ್ನು ಭಸ್ಮಗೊಳಿಸಿದ್ದ ಮಹಾತ್ಮರೆಲ್ಲರೂ ಭಗವಂತನ ಚರಣವನ್ನು ವಂದಿಸಿದರು. ಇದೇ ಚರಣಕಮಲದ ಸ್ಮರಣೆಯ ಮಹಿಮೆಯಿಂದ ಇವರೆಲ್ಲರೂ

ಅಥಾಂಘ್ರಯೇ ಪ್ರೋನ್ನಮಿತಾಯ ವಿಷ್ಣೋ-
ರುಪಾಹರತ್ಪದ್ಮಭವೋಽರ್ಹಣೋದಕಮ್ ।
ಸಮರ್ಚ್ಯ ಭಕ್ತ್ಯಾಭ್ಯಗೃಣಾಚ್ಛುಚಿಶ್ರವಾ
ಯನ್ನಾಭಿಪಂಕೇರುಹಸಂಭವಃ ಸ್ವಯಮ್ ॥ ೩ ॥

ಧಾತುಃ ಕಮಂಡಲುಜಲಂ ತದುರುಕ್ರಮಸ್ಯ
ಪಾದಾವನೇಜನಪವಿತ್ರತಯಾ ನರೇಂದ್ರ ।
ಸ್ವರ್ಧುನ್ಯಭೂನ್ನಭಸಿ ಸಾ ಪತತೀ ನಿಮಾರ್ಷ್ಟಿ
ಲೋಕತ್ರಯಂ ಭಗವತೋ ವಿಶದೇವ ಕೀರ್ತಿಃ ॥ ೪ ॥

ಬ್ರಹ್ಮಾದಯೋ ಲೋಕನಾಥಾಃ ಸ್ವನಾಥಾಯ ಸಮಾದೃತಾಃ ।
ಸಾನುಗಾ ಬಲಿಮಾಜಹ್ರುಃ ಸಂಕ್ಷಿಪ್ತಾತ್ಮವಿಭೂತಯೇ ॥ ೫ ॥

ತೋಯೈಃ ಸಮರ್ಹಣೈಃ ಸ್ರಗ್ಭಿರ್ದಿವ್ಯಗಂಧಾನುಲೇಪನೈಃ ।
ಧೂಪೈರ್ದೀಪೈಃ ಸುರಭಿಭಿರ್ಲಾಜಾಕ್ಷತಫಲಾಂಕುರೈಃ ॥ ೬ ॥

ಸ್ತವನೈರ್ಜಯಶಬ್ದೈಶ್ಚ ತದ್ವೀರ್ಯಮಹಿಮಾಂಕಿತೈಃ ।
ನೃತ್ಯವಾದಿತ್ರಗೀತೈಶ್ಚ ಶಂಖದುಂದುಭಿನಿಸ್ವನೈಃ ॥ ೭ ॥

ಜಾಂಬವಾನೃಕ್ಷರಾಜಸ್ತು ಭೇರೀಶಬ್ದೈರ್ಮನೋಜವಃ ।
ವಿಜಯಂ ದಿಕ್ಷು ಸರ್ವಾಸು ಮಹೋತ್ಸವಮಘೋಷಯತ್ ॥ ೮ ॥

ಮಹೀಂ ಸರ್ವಾಂ ಹೃತಾಂ ದೃಷ್ಟ್ವಾ ತ್ರಿಪದವ್ಯಾಜಯಾಚ್ಞಯಾ ।
ಊಚುಃ ಸ್ವಭರ್ತುರಸುರಾ ದೀಕ್ಷಿತಸ್ಯಾತ್ಯಮರ್ಷಿತಾಃ ॥ ೯ ॥

ನ ವಾ ಅಯಂ ಬ್ರಹ್ಮಬಂಧುರ್ವಿಷ್ಣುರ್ಮಾಯಾವಿನಾಂ ವರಃ ।
ದ್ವಿಜರೂಪಪ್ರತಿಚ್ಛನ್ನೋ ದೇವಕಾರ್ಯಂ ಚಿಕೀರ್ಷತಿ ॥ ೧೦ ॥

ಅನೇನ ಯಾಚಮಾನೇನ ಶತ್ರುಣಾ ವಟುರೂಪಿಣಾ ।
ಸರ್ವಸ್ವಂ ನೋ ಹೃತಂ ಭರ್ತುರ್ನ್ಯಸ್ತದಂಡಸ್ಯ ಬರ್ಹಿಷಿ ॥ ೧೧ ॥

ಕರ್ಮದಿಂದ ದೊರೆಯದಿರುವ ಬ್ರಹ್ಮದೇವರ ಧಾಮವನ್ನು ಹೊಂದಿದ್ದರು. ॥ ೨ ॥ ಭಗವಾನ್ ಬ್ರಹ್ಮದೇವರ ಕೀರ್ತಿಯು ಪರಿಶುದ್ಧವಾದುದು. ಅವರು ಮಹಾವಿಷ್ಣುವಿನ ನಾಭಿಕಮಲದಿಂದ ಉತ್ಪನ್ನರಾಗಿದ್ದರು. ಅವರು ತಮ್ಮ ಲೋಕಕ್ಕೆ ಆಗಮಿಸಿದ್ದ ವಿಶ್ವ ರೂಪನಾದ ಭಗವಂತನ ಅಡಿದಾವರೆಗೆ ಸ್ವಾಗತವಿತ್ತ ಬಳಿಕ ಅರ್ಘ್ಯ-ಪಾದ್ಯಗಳಿಂದ ಸಂಪೂಜಿಸಿ ಆ ದಿವ್ಯ ಪಾದ-ಪದ್ಮವನ್ನು ತೊಳೆದರು. ಹೀಗೆ ತುಂಬುಭಕ್ತಿಯಿಂದಲೂ ಅರ್ಚಿಸಿದ ಬಳಿಕ ಪ್ರೇಮಭಾವದಿಂದ ಅವನನ್ನು ಸ್ತುತಿಸಿದರು. ॥ ೩ ॥

ಪರೀಕ್ಷಿತನೇ! ಬ್ರಹ್ಮನ ಕಮಂಡಲುವಿನಲ್ಲಿದ್ದ ಆ ತೀರ್ಥವು ಭಗವಾನ್ ತ್ರಿವಿಕ್ರಮನ ಪಾದವನ್ನು ತೊಳೆದುದರಿಂದ ಪವಿತ್ರವಾದ ಗಂಗೆಯಾಗಿ ಪರಿಣಮಿಸಿತು. ಅದು ಆಕಾಶದಿಂದ ಭೂಮಿಗೆ ಬಂದು ಮೂರು ಲೋಕಗಳನ್ನು ಪವಿತ್ರಗೊಳಿಸುತ್ತಿದೆ. ವಿಷ್ಣು ಪಾದೋದ್ಭವೆಯಾದ ಈ ಗಂಗೆಯು ಭಗವಂತನ ಮೂರ್ತಿಮಂತ ಉಜ್ವಲ ಕೀರ್ತಿಯಾಗಿದೆ. ॥ ೪ ॥ ಭಕ್ತರ ಅನುಕೂಲಕ್ಕಾಗಿ ಭಗ ವಂತನು ತನ್ನ ರೂಪವನ್ನು ಸಣ್ಣದಾಗಿಸಿಕೊಂಡು ತನ್ನ ವಿಭೂತಿ ಗಳನ್ನು ಸಂಕೋಚಗೊಳಿಸಿಕೊಂಡಾಗ ಬ್ರಹ್ಮಾದಿ ಲೋಕಪಾಲರು ತಮ್ಮ ಅನುಯಾಯಿಗಳೊಂದಿಗೆ ಅತ್ಯಂತ ಆದರಭಾವದಿಂದ ತಮ್ಮ ಸ್ವಾಮಿಯಾದ ಭಗವಂತನಿಗೆ ಪೂಜೆಯನ್ನು ಸಮರ್ಪಿಸಿದರು. ॥ ೫ ॥ ಅವರು ಅರ್ಘ್ಯ ಪಾದ್ಯಾಚಮನೀಯ ಮಧುಪರ್ಕ ಗಳಿಂದಲೂ, ಪುಷ್ಪಗಳಿಂದಲೂ, ದಿವ್ಯವಾದ ಗಂಧ-ಅಂಗರಾಗ ಗಳಿಂದಲೂ, ಸುವಾಸನೆಯುಳ್ಳ ಧೂಪ-ದೀಪ, ಅರಳು-ಅಕ್ಷತೆ ಗಳಿಂದಲೂ ಫಲ-ಅಂಕುರಗಳಿಂದಲೂ, ಭಗವಂತನ ಪರಾಕ್ರಮ-ಮಹಿಮೆಗಳಿಂದೊಡಗೂಡಿದ ಸ್ತೋತ್ರಗಳಿಂದಲೂ, ಜಯ-ಜಯ ಘೋಷಗಳಿಂದಲೂ, ನೃತ್ಯ-ಗೀತ-ವಾದ್ಯಗಳಿಂದಲೂ, ಶಂಖ-ದುಂದುಭಿಗಳ ಧ್ವನಿಯಿಂದಲೂ ಆ ತ್ರಿವಿಕ್ರಮ ಭಗವಂತನನ್ನು ಆರಾಧಿಸಿದರು. ॥ ೬-೭ ॥ ಆ ಸಮಯದಲ್ಲಿ ಕರಡಿಗಳ ರಾಜ ನಾದ ಜಾಂಬವಂತನು ಮನೋವೇಗಕ್ಕೆ ಸಮಾನವಾಗಿ ವೇಗದಿಂದ ಎಲ್ಲ ದಿಕ್ಕುಗಳಲ್ಲಿಯೂ ಓಡಾಡುತ್ತಾ ಭೇರಿಯ ಶಬ್ದದೊಡನೆ ಭಗವಂತನ ಮಂಗಲಮಯ ವಿಜಯೋತ್ಸವ ವಾರ್ತೆಯನ್ನು ಸಾರಿ ದನು. ॥ ೮ ॥

ಈ ವಾಮನ ಮೂರ್ತಿಯು ಮೂರುಹೆಜ್ಜೆ ಭೂಮಿಯನ್ನು ಬೇಡುವ ನೆಪದಿಂದ ಇಡೀ ಭೂಮಿಯನ್ನೇ ಮೂರು ಲೋಕಗಳನ್ನೇ ತಮ್ಮಿಂದ ಕಿತ್ತುಕೊಂಡಿರುವುದನ್ನು ನೋಡಿ ಅಸುರರು ಅತ್ಯಂತ ಕ್ರುದ್ಧರಾದರು. ಅವರು ತಮ್ಮ-ತಮ್ಮಲ್ಲೇ ಯೋಚಿಸತೊಡಗಿದರು – 'ನಮ್ಮ ಒಡೆಯನು ಈ ಸಮಯದಲ್ಲಿ ಯಜ್ಞದೀಕ್ಷಿತ ನಾಗಿರುವನು. ಆದರಿಂದ ಅವನು ಏನನ್ನೂ ಮಾತನಾಡು ವುದಿಲ್ಲ. ॥ ೯ ॥ ಎಲಾ! ಇವನು ಸಾಮಾನ್ಯ ಬ್ರಾಹ್ಮಣನಲ್ಲ! ಇವನು ಮಹಾಮಾಯಾವಿಯಾದ ವಿಷ್ಣುವೇ ಆಗಿದ್ದಾನೆ. ಬ್ರಾಹ್ಮಣ ರೂಪವನ್ನು ಧರಿಸಿ ಇವನು ದೇವತೆಗಳ ಕಾರ್ಯವನ್ನು ಸಾಧಿ ಸಿಕೊಡಲು ಬಯಸುತ್ತಿರುವನು. ॥ ೧೦ ॥ ನಮ್ಮ ಒಡೆಯನು ಯಜ್ಞದ ದೀಕ್ಷಿತನಾಗಿರುವಾಗ ಯಾರಿಗೂ ಯಾವ ವಿಧವಾದ ಶಿಕ್ಷೆಯನ್ನೂ ಕೊಡಲಾರನು. ಇಂತಹ ಸಮಯದಲ್ಲೇ ಈ ನಮ್ಮ ಶತ್ರುವು ಬ್ರಹ್ಮಚಾರಿಯ ವೇಷವನ್ನು ಧರಿಸಿ ಮೊದಲು ಮೂರಡಿ ಭೂಮಿಯನ್ನು ಯಾಚಿಸಿ ಅನಂತರದಲ್ಲಿ ನಮ್ಮ ಸರ್ವಸ್ವವನ್ನು ಅಪಹರಿಸಿಬಿಟ್ಟನಲ್ಲ! ॥ ೧೧ ॥

ಸತ್ಯವ್ರತಸ್ಯ ಸತತಂ ದೀಕ್ಷಿತಸ್ಯ ವಿಶೇಷತಃ ।
ನಾನೃತಂ ಭಾಷಿತುಂ ಶಕ್ಯಂ ಬ್ರಹ್ಮಣ್ಯಸ್ಯ ದಯಾವತಃ ॥ ೧೨ ॥

ತಸ್ಮಾದಸ್ಯ ವಧೋ ಧರ್ಮೋ ಭರ್ತುಃ ಶುಶ್ರೂಷಣಂ ಚ ನಃ ।
ಇತ್ಯಾಯುಧಾನಿ ಜಗೃಹುರ್ಬಲೇರನುಚರಾಸುರಾಃ ॥ ೧೩ ॥

ತೇ ಸರ್ವೇ ವಾಮನಂ ಹಂತುಂ ಶೂಲಪಟ್ಟಿಶಪಾಣಯಃ ।
ಅನಿಚ್ಛತೋ ಬಲೇ ರಾಜನ್ಪ್ರಾದ್ರವನ್ ಜಾತಮನ್ಯವಃ ॥ ೧೪ ॥

ತಾನಭಿದ್ರವತೋ ದೃಷ್ಟ್ವಾ ದಿತಿಜಾನೀಕಪಾನ್ನೃಪ ।
ಪ್ರಹಸ್ಯಾನುಚರಾ ವಿಷ್ಣೋಃ ಪ್ರತ್ಯಷೇಧನ್ನುದಾಯುಧಾಃ ॥ ೧೫ ॥

ನಂದಃ ಸುನಂದೋಽಥ ಜಯೋ ವಿಜಯಃ ಪ್ರಬಲೋ ಬಲಃ ।
ಕುಮುದಃ ಕುಮುದಾಕ್ಷಶ್ಚ ವಿಷ್ವಕ್ಸೇನಃ ಪತತ್ರಿರಾಟ್ ॥ ೧೬ ॥

ಜಯಂತಃ ಶ್ರುತದೇವಶ್ಚ ಪುಷ್ಪದಂತೋಽಥ ಸಾತ್ವತಃ ।
ಸರ್ವೇ ನಾಗಾಯುತಪ್ರಾಣಾಶ್ಚಮೂಂ ತೇ ಜಘ್ನುರಾಸುರೀಮ್ ॥ ೧೭ ॥

ಹನ್ಯಮಾನಾನ್ಸ್ವಕಾನ್ ದೃಷ್ಟ್ವಾ ಪುರುಷಾನುಚರೈರ್ಬಲಿಃ ।
ವಾರಯಾಮಾಸ ಸಂರಬ್ಧಾನ್ಕಾವ್ಯಶಾಪಮನುಸ್ಮರನ್ ॥ ೧೮ ॥

ಹೇ ವಿಪ್ರಚಿತ್ತೇ ಹೇ ರಾಹೋ ಹೇ ನೇಮೇ ಶ್ರೂಯತಾಂ ವಚಃ ।
ಮಾ ಯುಧ್ಯತ ನಿವರ್ತಧ್ವಂ ನ ನಃ ಕಾಲೋಽಯಮರ್ಥಕೃತ್ ॥ ೧೯ ॥

ಯಃ ಪ್ರಭುಃ ಸರ್ವಭೂತಾನಾಂ ಸುಖದುಃಖೋಪಪತ್ತಯೇ ।
ತಂ ನಾತಿವರ್ತಿತುಂ ದೈತ್ಯಾಃ ಪೌರುಷೈರೀಶ್ವರಃ ಪುಮಾನ್ ॥ ೨೦ ॥

ಯೋ ನೋ ಭವಾಯ ಪ್ರಾಗಾಸೀದಭವಾಯ ದಿವೌಕಸಾಮ್ ।
ಸ ಏವ ಭಗವಾನದ್ಯ ವರ್ತತೇ ತದ್ವಿಪರ್ಯಯಮ್ ॥ ೨೧ ॥

ಬಲೇನ ಸಚಿವೈರ್ಬುದ್ಧ್ಯಾ ದುರ್ಗೈರ್ಮಂತ್ರೌಷಧಾದಿಭಿಃ ।
ಸಾಮಾದಿಭಿರುಪಾಯೈಶ್ಚ ಕಾಲಂ ನಾತ್ಯೇತಿ ವೈ ಜನಃ ॥ ೨೨ ॥

ಭವದ್ಭಿರ್ನಿರ್ಜಿತಾ ಹ್ಯೇತೇ ಬಹುಶೋಽನುಚರಾ ಹರೇಃ ।
ದೈವೇನರ್ದ್ಧೈಸ್ತ ಏವಾದ್ಯ ಯುಧಿ ಜಿತ್ವಾ ನದಂತಿ ನಃ ॥ ೨೩ ॥

ಏತಾನ್ವಯಂ ವಿಜೇಷ್ಯಾಮೋ ಯದಿ ದೈವಂ ಪ್ರಸೀದತಿ ।
ತಸ್ಮಾತ್ಕಾಲಂ ಪ್ರತೀಕ್ಷಧ್ವಂ ಯೋ ನೋಽರ್ಥತ್ವಾಯ ಕಲ್ಪತೇ ॥ ೨೪ ॥

ನಮ್ಮ ಸ್ವಾಮಿಯಾದರೋ ಸತತವಾಗಿ ಸತ್ಯದಲ್ಲಿಯೇ ಪರಮ ನಿಷ್ಠೆಯುಳ್ಳವನು. ಅದರಲ್ಲಿಯೂ ವಿಶೇಷವಾಗಿ ಯಜ್ಞದ ದೀಕ್ಷಿತನಾಗಿರುವನು. ಅವನು ಬ್ರಾಹ್ಮಣ ಭಕ್ತನೂ, ದಯಾಳುವೂ ಆಗಿರುವುದರಿಂದ ಸುಳ್ಳುಹೇಳಲು ಸಾಧ್ಯವಾಗುವುದಿಲ್ಲ. ॥ ೧೨ ॥ ಇಂತಹ ಸಂದರ್ಭದಲ್ಲಿ ನಮ್ಮ ಶತ್ರುವನ್ನು ವಧಿಸುವುದೇ ನಮ್ಮ ಧರ್ಮವೂ, ಕರ್ತವ್ಯವೂ ಆಗಿದೆ. ಇದರಿಂದ ನಮ್ಮ ಒಡೆಯನ ಸೇವೆಯೂ ಆಗುವುದು' ಎಂದು ನಿರ್ಧರಿಸಿ ಬಲಿ ಚಕ್ರವರ್ತಿಯ ಅನುಚರರು ತಮ್ಮ-ತಮ್ಮ ಆಯುಧಗಳಿಂದ ಸಜ್ಜಾದರು. ॥ ೧೩ ॥ ಪರೀಕ್ಷಿತನೇ! ರಾಜನಾದ ಬಲಿಯು ಬಯಸದಿದ್ದರೂ, ಅವನ ಅನುಮತಿಯನ್ನೂ ಪಡೆಯದೆಯೇ ಎಲ್ಲರೂ ಅತ್ಯಂತ ಕ್ರೋಧಗೊಂಡು ಶೂಲ, ಪಟ್ಟಿಶ ಮುಂತಾದ ಆಯುಧಗಳನ್ನು ಹಿಡಿದುಕೊಂಡು ಭಗವಾನ್ ವಾಮನನನ್ನು ಕೊಲ್ಲಲು ಮುಗಿಬಿದ್ದರು. ॥ ೧೪ ॥ ರಾಜೇಂದ್ರಾ! ದೈತ್ಯ ಸೇನಾಪತಿಗಳು ಆಕ್ರಮಣಕ್ಕಾಗಿ ಓಡಿಬರುವುದನ್ನು ಮಹಾವಿಷ್ಣುವಿನ ಪಾರ್ಷದರು ನೋಡಿದಾಗ ಗಹಗಹಿಸಿ ನಗುತ್ತಾ ತಮ್ಮ-ತಮ್ಮ ಶಸ್ತ್ರಾಸ್ತ್ರಗಳನ್ನು ಎತ್ತಿಕೊಂಡು ದೈತ್ಯಸೈನಿಕರನ್ನು ತಡೆದು ನಿಲ್ಲಿಸಿದರು. ॥ ೧೫ ॥ ನಂದ, ಸುನಂದ, ಜಯ, ವಿಜಯ, ಪ್ರಬಲ, ಬಲ, ಕುಮುದ, ಕುಮುದಾಕ್ಷ, ವಿಶ್ವಕ್ಸೇನ, ಗರುಡ, ಜಯಂತ, ಶ್ರುತದೇವ, ಪುಷ್ಪದಂತ, ಸಾತ್ವತ ಮುಂತಾದ ಭಗವಂತನ ಪಾರ್ಷದರೆಲ್ಲರೂ ಹತ್ತು-ಹತ್ತುಸಾವಿರ ಆನೆಗಳ ಬಲವುಳ್ಳವರು. ಇವರೆಲ್ಲರೂ ಅಸುರರ ಸೇನೆಯನ್ನು ಸಂಹರಿಸತೊಡಗಿದರು. ॥ ೧೬-೧೭ ॥ ಭಗವಂತನ ಪಾರ್ಷದರು ತನ್ನ ಸೈನಿಕರನ್ನು ಕೊಲ್ಲುತ್ತಿರುವುದನ್ನು ಬಲಿಯು ನೋಡಿದನು. ನಮ್ಮ ಸೈನಿಕರು ಕ್ರೋಧಗೊಂಡು ಅವರೊಂದಿಗೆ ಯುದ್ಧಮಾಡಲು ಸಿದ್ಧರಾಗಿದ್ದಾರೆ. ಅವನು ಶುಕ್ರಾಚಾರ್ಯರ ಶಾಪವನ್ನು ನೆನೆದು ವಿಪ್ರಚಿತ್ತಿ, ರಾಹು, ನೇಮಿ ಮೊದಲಾದ ದೈತ್ಯರನ್ನು ಸಂಬೋಧಿಸುತ್ತಾ – ಸಹೋದರರೇ! ನನ್ನ ಮಾತನ್ನು ಕೇಳಿರಿ. ಯುದ್ಧಮಾಡದೆ ಹಿಂದೆ ಸರಿಯಿರಿ. ಈ ಸಮಯವು ನಮಗೆ ಅನುಕೂಲವಾಗಿಲ್ಲ ಎಂದು ನುಡಿದನು. ॥ ೧೮-೧೯ ॥ ಸಮಸ್ತ ಪ್ರಾಣಿಗಳಿಗೆ ಸುಖ ಮತ್ತು ದುಃಖವನ್ನು ಕೊಡಲು ಸಮರ್ಥವಾದ ಕಾಲವನ್ನು ಯಾರಾದರೂ ತನ್ನ ಪ್ರಯತ್ನದಿಂದ ಅತಿಕ್ರಮಿಸಲು ಬಯಸಿದರೆ ಅದು ಅವನ ಶಕ್ತಿಗೆ ಮೀರಿದುದು. ॥ ೨೦ ॥ ಯಾವ ಕಾಲಪುರುಷನು ಈ ಹಿಂದೆ ನಮ್ಮ ಉನ್ನತಿಗೂ, ದೇವತೆಗಳ ಅವನತಿಗೂ ಕಾರಣನಾಗಿದ್ದನೋ ಆ ಕಾಲಪುರುಷನೇ ಇಂದು ನಮ್ಮ ಅವನತಿಗೂ, ದೇವತೆಗಳ ಉನ್ನತಿಗೂ ಕಾರಣವಾಗಿದೆ. ॥ ೨೧ ॥ ಮನುಷ್ಯರು – ಬಲ, ಮಂತ್ರೀ, ಬುದ್ಧಿ ದುರ್ಗ, ಮಂತ್ರ, ಔಷಧಿ ಹಾಗೂ ಸಾಮ-ದಾನ ಮೊದಲಾದ ಉಪಾಯಗಳು – ಇವುಗಳಲ್ಲಿ ಯಾವ ಉಪಾಯದಿಂದಾಗಲೀ, ಅಥವಾ ಎಲ್ಲದರ ಮೂಲಕವಾಗಲೀ ಕಾಲಪುರುಷನನ್ನು ಗೆಲ್ಲಲಾಗುವುದಿಲ್ಲ. ॥ ೨೨ ॥ ದೈವವು ನಿಮಗೆ ಅನುಕೂಲವಾಗಿದ್ದಾಗ ನೀವು ದೇವತೆಗಳನ್ನು ಅನೇಕಬಾರಿ ಗೆದ್ದಿರುವಿರಿ. ಆದರೆ ಇಂದು ಅವರೇ ಯುದ್ಧದಲ್ಲಿ ನಮ್ಮನ್ನು ಗೆದ್ದು ಸಿಂಹನಾದ ಮಾಡುತ್ತಿದ್ದಾರೆ. ॥ ೨೩ ॥ ಮುಂದೆ ದೈವಾನುಕೂಲವು ನಮಗೆ ಒದಗಿ ಬಂದಾಗ ನಾವೂ ಅವರನ್ನು ಗೆದ್ದೇ ಗೆಲ್ಲುತ್ತೇವೆ. ಆದುದರಿಂದ ನೀವೆಲ್ಲ ಈಗ ಯುದ್ಧವನ್ನು ನಿಲ್ಲಿಸಿ, ಕಾರ್ಯಸಿದ್ಧಿಯಾಗುವಂತಹ ಕಾಲವನ್ನು ಪ್ರತೀಕ್ಷೆ ಮಾಡುತ್ತಿರಿ. ॥ ೨೪ ॥

*ಶ್ರೀಶುಕ ಉವಾಚ*

**ಪತ್ಯುರ್ನಿಗದಿತಂ ಶ್ರುತ್ವಾ ದೈತ್ಯದಾನವಯೂಥಪಾಃ ।**
**ರಸಾಂ ನಿವಿವಿಶುೂ ರಾಜನ್ವಿಷ್ಣುಪಾರ್ಷದತಾಡಿತಾಃ ॥ ೨೫ ॥**

**ಅಥ ತಾರ್ಕ್ಷ್ಯಸುತೋ ಜ್ಞಾತ್ವಾ ವಿರಾಟ್ಪ್ರಭುಚಿಕೀರ್ಷಿತಮ್ ।**
**ಬಬಂಧ ವಾರುಣೈಃ ಪಾಶೈರ್ಬಲಿಂ ಸೌತ್ಯೇಽಹನಿ ಕ್ರತೌ ॥ ೨೬ ॥**

**ಹಾಹಾಕಾರೋ ಮಹಾನಾಸೀದ್ರೋದಸ್ಯೋಃ ಸರ್ವತೋದಿಶಮ್ ।**
**ಗೃಹ್ಯಮಾಣೇಽಸುರಪತೌ ವಿಷ್ಣುನಾ ಪ್ರಭವಿಷ್ಣುನಾ ॥ ೨೭ ॥**

**ತಂ ಬದ್ಧಂ ವಾರುಣೈಃ ಪಾಶೈರ್ಭಗವಾನಾಹ ವಾಮನಃ ।**
**ನಷ್ಟಶ್ರಿಯಂ ಸ್ಥಿರಪ್ರಜ್ಞಮುದಾರಯಶಸಂ ನೃಪ ॥ ೨೮ ॥**

**ಪದಾನಿ ತ್ರೀಣಿ ದತ್ತಾನಿ ಭೂಮೇರ್ಮಹ್ಯಂ ತ್ವಯಾಸುರ ।**
**ದ್ವಾಭ್ಯಾಂ ಕ್ರಾಂತಾ ಮಹೀ ಸರ್ವಾ ತೃತೀಯಮುಪಕಲ್ಪಯ ॥ ೨೯ ॥**

**ಯಾವತ್ತಪತ್ಯಸೌ ಗೋಭಿರ್ಯಾವದಿಂದುಃ ಸಹೋಡುಭಿಃ ।**
**ಯಾವದ್ವರ್ಷತಿ ಪರ್ಜನ್ಯಸ್ತಾವತೀ ಭೂರಿಯಂ ತವ ॥ ೩೦ ॥**

**ಪದೈಕೇನ ಮಯಾ ಕ್ರಾಂತೋ ಭೂರ್ಲೋಕಃ ಖಂ ದಿಶಸ್ತನೋಃ ।**
**ಸ್ವರ್ಲೋಕಸ್ತು ದ್ವಿತೀಯೇನ ಪಶ್ಯತಸ್ತೇ ಸ್ವಮಾತ್ಮನಾ ॥ ೩೧ ॥**

**ಪ್ರತಿಶ್ರುತಮದಾತುಸ್ತೇ ನಿರಯೇ ವಾಸ ಇಷ್ಯತೇ ।**
**ವಿಶ ತ್ವಂ ನಿರಯಂ ತಸ್ಮಾದ್ಗುರುಣಾ ಚಾನುಮೋದಿತಃ ॥ ೩೨ ॥**

**ವೃಥಾ ಮನೋರಥಸ್ತಸ್ಯ ದೂರೇ ಸ್ವರ್ಗಃ ಪತತ್ಯಧಃ ।**
**ಪ್ರತಿಶ್ರುತಸ್ಯಾದಾನೇನ ಯೋಽರ್ಥಿನಂ ವಿಪ್ರಲಂಭತೇ ॥ ೩೩ ॥**

**ವಿಪ್ರಲಬ್ಧೋ ದದಾಮೀತಿ ತ್ವಯಾಹಂ ಚಾಢ್ಯಮಾನಿನಾ ।**
**ತದ್ವ್ಯಲೀಕಫಲಂ ಭುಂಕ್ಷ್ವ ನಿರಯಂ ಕತಿಚಿತ್ಸಮಾಃ ॥ ೩೪ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಹೀಗೆ ದೈತ್ಯಸೇನಾನಾಯಕರು ತಮ್ಮ ಒಡೆಯನಾದ ಬಲಿಯ ಮಾತನ್ನು ಕೇಳಿ ಭಗವಂತನ ಪಾರ್ಷದರಿಂದ ಪರಾಜಿತ ರಾದ ದಾನವರೂ, ದೈತ್ಯಸೇನಾಪತಿಗಳೂ ರಸಾತಳಕ್ಕೆ ಹೊರಟು ಹೋದರು. ॥ ೨೫ ॥ ಅವರು ಹೊರಟುಹೋದ ಬಳಿಕ ಪಕ್ಷಿಶ್ರೇಷ್ಠ ನಾದ ಗರುಡನು ಭಗವಾನ್ ಶ್ರೀವಾಮನನ ಮನಸ್ಸಿನ ಇಂಗಿತವನ್ನು ಅರಿತು, ಬಲಿಯ ಆ ಅಶ್ವಮೇಧ ಯಜ್ಞದಲ್ಲಿ ಸೋಮಪಾನವಾಗ ಬೇಕಿದ್ದ ಆ ದಿನದಲ್ಲಿ ವರುಣನ ಪಾಶಗಳಿಂದ ಬಲಿಯನ್ನು ಬಂಧಿ ಸಿದನು. ॥ ೨೬ ॥ ಸರ್ವಶಕ್ತನಾದ ಭಗವಾನ್ ಮಹಾವಿಷ್ಣುವು ಬಲಿಯನ್ನು ಹೀಗೆ ಬಂಧಿಸಿದಾಗ ಭೂಮ್ಯಂತರಿಕ್ಷಗಳಲ್ಲಿಯೂ, ಸಮಸ್ತ ದಿಕ್ಕುಗಳಲ್ಲಿ ಭಾರೀ ಹಾಹಾಕಾರವೇ ಉಂಟಾಯಿತು. ॥ ೨೭ ॥ ಬಲಿಚಕ್ರವರ್ತಿಯು ವರುಣಪಾಶಗಳಿಂದ ಬಂಧಿಸಲ್ಪಟ್ಟಿದ್ದರೂ, ಅವನ ಸಮಸ್ತ ಸಂಪತ್ತು ನಷ್ಟವಾಗಿ ಹೋಗಿದ್ದರೂ ಅವನು ಮಾತ್ರ ಸ್ಥಿತಪ್ರಜ್ಞನಾಗಿದ್ದನು. ಎಲ್ಲರೂ ಅವನ ಶ್ರೇಷ್ಠವಾದ ಯಶಸ್ಸನ್ನು ಕೊಂಡಾಡುತ್ತಿದ್ದರು. ಪರೀಕ್ಷಿತನೇ! ಆಗ ಭಗವಂತನು ಬಲಿಯ ಬಳಿ ಇಂತೆಂದನು –॥ ೨೮ ॥ ಅಸುರಶ್ರೇಷ್ಠನೇ! ನೀನು ನನಗೆ ಮೂರುಹೆಜ್ಜೆ ಭೂಮಿಯನ್ನು ದಾನವಾಗಿ ಕೊಟ್ಟಿದ್ದೆ. ಎರಡು ಹೆಜ್ಜೆಗಳಿಂದ ನಾನು ಸಮಸ್ತ ಭೂಮಂಡಲವನ್ನೂ, ಸ್ವರ್ಗಪಾತಾಳ ಹೀಗೆ ಎಲ್ಲವನ್ನೂ ಅಳೆದುಕೊಂಡುಬಿಟ್ಟೆ. ಈಗ ನನಗೆ ಕೊಡಬೇಕಾದ ಮೂರನೆಯ ಹೆಜ್ಜೆಗೆ ಸ್ಥಳಾವಕಾಶವನ್ನು ಮಾಡಿಕೊಡು. ॥ ೨೯ ॥ ಸೂರ್ಯನ ಕಿರಣಗಳು ಎಲ್ಲಿಯವರೆಗೆ ಪ್ರಸರಿಸಿವೆಯೋ, ಚಂದ್ರ ಮತ್ತು ನಕ್ಷತ್ರಗಳ ಕಿರಣಗಳು ಎಲ್ಲಿಯವರೆಗೆ ಪ್ರಸರಿಸಿವೆಯೋ, ಮೋಡಗಳು ಎಲ್ಲಿಯವರೆಗೆ ಮಳೆಗರೆಯುತ್ತವೆಯೋ ಅಲ್ಲಿಯವರೆಗಿನ ಇಡೀ ಪೃಥಿವಿಯು ನಿನ್ನ ಅಧಿಕಾರದಲ್ಲಿತ್ತು. ॥ ೩೦ ॥ ನೀನು ನೋಡು-ನೋಡುತ್ತಿರುವಂತೆ ನಾನು ಒಂದೇ ಹೆಜ್ಜೆಯಿಂದ ಭೂರ್ಲೋಕವನ್ನೂ, ಶರೀರದಿಂದ ಆಕಾಶ ಮತ್ತು ದಿಕ್ಕುಗಳನ್ನು ಅಳೆದುಬಿಟ್ಟೆ. ಎರಡನೆಯ ಹೆಜ್ಜೆಯಿಂದ ಸ್ವರ್ಗವನ್ನು ಅಳೆದುಬಿಟ್ಟೆ. ಹೀಗೆ ನಿನ್ನದೆಲ್ಲವೂ ಈಗ ನನ್ನದಾಗಿದೆ. ॥ ೩೧ ॥ ನೀನು ಮಾಡಿದ ಪ್ರತಿಜ್ಞೆಗನುಸಾರವಾಗಿ ನಿನ್ನಿಂದ ನಡೆಯಲು ಸಾಧ್ಯವಾಗದೆ ಇರುವುದರಿಂದ ನೀನೀಗ ನರಕಕ್ಕೆ ಹೋಗಬೇಕಾಗಿದೆ. ನಿನ್ನ ಗುರುವಿನ ಅನುಮತಿಯು ಇದಕ್ಕೆ ಇದ್ದೇ ಇದೆ. ಈಗ ನೀನು ನರಕವನ್ನು ಪ್ರವೇಶಿಸು. ॥ ೩೨ ॥ ಯಾಚಕನಿಗೆ ದಾನಕೊಡುವ ಪ್ರತಿಜ್ಞೆಮಾಡಿ ಅದನ್ನು ಈಡೇರಿಸದವನು, ಅವನಿಗೆ ಮೋಸ ಮಾಡುವವನ ಎಲ್ಲ ಮನೋರಥಗಳು ವ್ಯರ್ಥವಾಗಿಹೋಗುತ್ತವೆ. ಸ್ವರ್ಗದ ಮಾತಿರಲಿ ಅವನಿಗೆ ನರಕಕ್ಕೆ ಹೋಗಬೇಕಾಗುತ್ತದೆ. ॥ ೩೩ ॥ ನಾನು ಆಢ್ಯನೆಂಬ ಅಭಿಮಾನ ನಿನ್ನಲ್ಲಿತ್ತು. ನಿನಗೆ ಕೊಡುತ್ತೇನೆ ಎಂದು ನೀನು ನನ್ನಲ್ಲಿ ಪ್ರತಿಜ್ಞೆಮಾಡಿ ತಪ್ಪಿರುವೆ. ಈಗ ನೀನು ಕೆಲವು ವರ್ಷಗಳವರೆಗೆ ಈ ಪಾಪದ ಫಲವನ್ನು ಅನುಭವಿಸಬೇಕಾಗುವುದು. ॥ ೩೪ ॥

***ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೨೧ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ**
**ವಾಮನಪ್ರಾದುರ್ಭಾವೇ ಬಲಿನಿಗ್ರಹೋ ನಾಮೈಕವಿಂಶೋಽಧ್ಯಾಯಃ ॥ ೨೧ ॥**

# ಇಪ್ಪತ್ತೆರಡನೆಯ ಅಧ್ಯಾಯ

## ಬಲಿಯು ಭಗವಂತನನ್ನು ಸ್ತುತಿಸಿದುದು – ಭಗವಂತನು ಬಲಿಗೆ ಪ್ರಸನ್ನನಾದುದು

*ಶ್ರೀಶುಕ ಉವಾಚ*

ಏವಂ ವಿಪ್ರಕೃತೋ ರಾಜನ್ಬಲಿರ್ಭಗವತಾಸುರಃ ।
ಭಿದ್ಯಮಾನೋಽಪ್ಯಭಿನ್ನಾತ್ಮಾ ಪ್ರತ್ಯಾಹಾವಿಕ್ಲವಂ ವಚಃ ॥ ೧ ॥

*ಬಲಿರುವಾಚ*

ಯದ್ಯುತ್ತಮಶ್ಲೋಕ ಭವಾನ್ಮಮೇರಿತಂ
ವಚೋ ವ್ಯಲೀಕಂ ಸುರವರ್ಯ ಮನ್ಯತೇ ।
ಕರೋಮ್ಯೃತಂ ತನ್ನ ಭವೇತ್ಪ್ರಲಂಭನಂ
ಪದಂ ತೃತೀಯಂ ಕುರು ಶೀರ್ಷ್ಣಿ ಮೇ ನಿಜಮ್ ॥ ೨ ॥

ಬಿಭೇಮಿ ನಾಹಂ ನಿರಯಾತ್ಪದಚ್ಯುತೋ
ನ ಪಾಶಬಂಧಾದ್ವ್ಯಸನಾದ್ದುರತ್ಯಯಾತ್ ।
ನೈವಾರ್ಥಕೃಚ್ಛ್ರಾದ್ಭವತೋ ವಿನಿಗ್ರಹಾ-
ದಸಾಧುವಾದಾದ್ಭೃಶಮುದ್ವಿಜೇ ಯಥಾ ॥ ೩ ॥

ಪುಂಸಾಂ ಶ್ಲಾಘ್ಯತಮಂ ಮನ್ಯೇ ದಂಡಮರ್ಹತ್ತಮಾರ್ಪಿತಮ್ ।
ಯಂ ನ ಮಾತಾ ಪಿತಾ ಭ್ರಾತಾ ಸುಹೃದಶ್ಚಾದಿಶಂತಿ ಹಿ ॥ ೪ ॥

ತ್ವಂ ನೂನಮಸುರಾಣಾಂ ನಃ ಪಾರೋಕ್ಷ್ಯಃ ಪರಮೋ ಗುರುಃ ।
ಯೋ ನೋಽನೇಕಮದಾಂಧಾನಾಂ ವಿಭ್ರಂಶಂ ಚಕ್ಷುರಾದಿಶತ್ ॥ ೫ ॥

ಯಸ್ಮಿನ್ವೈರಾನುಬಂಧೇನ ರೂಢೇನ ವಿಬುಧೇತರಾಃ ।
ಬಹವೋ ಲೇಭಿರೇ ಸಿದ್ಧಿಂ ಯಾಮು ಹೈಕಾಂತಯೋಗಿನಃ ॥ ೬ ॥

ತೇನಾಹಂ ನಿಗೃಹೀತೋಽಸ್ಮಿ ಭವತಾ ಭೂರಿಕರ್ಮಣಾ ।
ಬದ್ಧಶ್ಚ ವಾರುಣೈಃ ಪಾಶೈರ್ನಾತಿವ್ರೀಡೇ ನ ಚ ವ್ಯಥೇ ॥ ೭ ॥

ಪಿತಾಮಹೋ ಮೇ ಭವದೀಯಸಂಮತಃ
ಪ್ರಹ್ಲಾದ ಆವಿಷ್ಕೃತಸಾಧುವಾದಃ ।
ಭವದ್ವಿಪಕ್ಷೇಣ ವಿಚಿತ್ರವೈಶಸಂ
ಸಂಪ್ರಾಪಿತಸ್ತ್ವಂ ಪರಮಃ ಸ್ವಪಿತ್ರಾ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಹೀಗೆ ಭಗವಂತನು ಬಲಿಯನ್ನು ಬಹಳವಾಗಿ ತಿರಸ್ಕರಿಸಿ ಮಾತಾಡಿದರೂ ಬಲಿಯು ಧೈರ್ಯದಿಂದ ಕದಲಲಿಲ್ಲ. ಸ್ವಲ್ಪವಾದರೂ ಎದೆಗುಂದದೆ ನಿರ್ಭಯನಾಗಿ ಇಂತೆಂದನು – ॥ ೧ ॥

**ದೈತ್ಯರಾಜ ಬಲಿಯು ಹೇಳಿದನು** – ಸುರಶ್ರೇಷ್ಠನೇ! ಪುಣ್ಯಶ್ಲೋಕನೇ! ನಾನು ಕೊಟ್ಟಮಾತನ್ನು ಅಸತ್ಯವೆಂದು ಭಾವಿಸುವೆಯಾ? ಹಾಗೆಂದಿಗೂ ಆಗಲಾರದು. ನಾನು ಅದನ್ನು ಸತ್ಯವಾಗಿಸಿ ತೋರುವೆನು. ನಿನ್ನನ್ನು ಎಂದಿಗೂ ವಂಚಿಸುವುದಿಲ್ಲ. ನೀನು ಕೃಪೆದೋರಿ ನಿನ್ನ ಮೂರನೆಯ ಹೆಜ್ಜೆಯನ್ನು ನನ್ನ ತಲೆಯ ಮೇಲಿರಿಸು. ॥ ೨ ॥ ನನಗೆ ನರಕಕ್ಕೆ ಹೋಗಲು ಅಥವಾ ರಾಜ್ಯಭ್ರಷ್ಟನಾದ ಬಗ್ಗೆ ದುಃಖವಿಲ್ಲ. ನಾನು ಪಾಶಗಳಿಂದ ಬಂಧಿತನಾಗಿ, ಅಪಾರವಾದ ದುಃಖಸಾಗರದಲ್ಲಿ ಮುಳುಗಿದರೂ ನನಗೆ ಭಯವಿಲ್ಲ. ಅರ್ಥವೆಲ್ಲವೂ ಹೋಗಿ ದಾರಿದ್ರ್ಯ ಬಂತೆಂದೂ, ನೀನು ನನ್ನನ್ನು ಶಿಕ್ಷಿಸುವೆಯೆಂದೂ ನಾನು ಅಂಜುವುದಿಲ್ಲ. ನಾನು ಭಯಪಡುವುದು ಕೇವಲ ಅಪಯಶಸ್ಸಿಗೆ ಮಾತ್ರ. ॥ ೩ ॥ ಪೂಜ್ಯತಮನಾದ ಭಗವಂತನು ಕೊಡುವ ಶಿಕ್ಷೆಯು ಪುರುಷರಿಗೆ ಶ್ರೇಯಸ್ಕರವೆಂದೇ ನಾನು ಭಾವಿಸುತ್ತೇನೆ. ಏಕೆಂದರೆ, ಅಂತಹ ಶಿಕ್ಷೆಯನ್ನು ಮೋಹಪರವಶರಾದ ಮಾತಾ-ಪಿತೃಗಳಾಗಲೀ, ಸಹೋದರ-ಸಹೃದಯರಾಗಲಿ ಕೊಡಲಾರರು. ॥ ೪ ॥ ನೀನು ಅಡಗಿಕೊಂಡೇ ಅಸುರರಾದ ನಮಗೆ ಉತ್ತಮವಾದ ಶಿಕ್ಷಣವನ್ನು ಕೊಡುತ್ತಾ ಇರುವೆ. ಅದ್ದರಿಂದ ನೀನು ನಮಗೆ ಪರಮ ಗುರುವಾಗಿರುವೆ. ನಾವುಗಳು ಧನ-ಕುಲ-ಬಲ ಮುಂತಾದ ಮದಗಳಿಂದ ಕುರುಡರಾದಾಗ ನೀನು ಆ ವಸ್ತುಗಳನ್ನು ನಮ್ಮಿಂದ ಕಸಿದುಕೊಂಡು ಜ್ಞಾನದೃಷ್ಟಿಯನ್ನು ಕೊಡುವೆ. ॥ ೫ ॥ ಅಸುರರಾದ ನಮಗೆ ನಿನ್ನಿಂದ ಆಗುವ ಉಪಕಾರವನ್ನು ನಾನು ಎಷ್ಟೆಂದು ಹೇಳಲಿ? ಅನನ್ಯಭಾವದಿಂದ ಯೋಗವನ್ನಾಚರಿಸಿ ಯೋಗಿಗಳು ಪಡೆಯುವ ಸಿದ್ಧಿಯನ್ನೇ ಅನೇಕ ಅಸುರರು ನಿನ್ನೊಡನೆ ದೃಢಮೂಲವಾದ ವೈರಭಾವದಿಂದಲೇ ಪಡೆದುಕೊಂಡಿಲ್ಲವೇ? ॥ ೬ ॥ ಇಂತಹ ಅಪಾರ ಮಹಿಮೆಯುಳ್ಳ, ಅನಂತವಾದ ಲೀಲೆಗಳುಳ್ಳ ಪರಮಪುರುಷ ಪರಮಾತ್ಮನಾದ ನಿನ್ನಿಂದ ನಾನು ಶಿಕ್ಷಿಸಲ್ಪಟ್ಟು ವರುಣಪಾಶಗಳಿಂದ ಬಂಧಿತನಾಗಿದ್ದೇನೆ. ಇದರಿಂದ ನನಗೆ ಯಾವ ವಿಧವಾದ ನಾಚಿಕೆಯೂ, ವ್ಯಥೆಯೂ ಇಲ್ಲ. ॥ ೭ ॥ ಪ್ರಭುವೇ! ನನ್ನ ಪಿತಾಮಹನಾದ ಪ್ರಹ್ಲಾದನ ಕೀರ್ತಿಯು ಜಗತ್ಪ್ರಸಿದ್ಧವಾಗಿದೆ. ಅವನನ್ನು ನಿನ್ನ ಭಕ್ತರಲ್ಲಿ ಶ್ರೇಷ್ಠನೆಂದು ಪರಿಗಣಿಸಲ್ಪಟ್ಟಿದೆ. ಅವನ ತಂದೆಯಾದ ಹಿರಣ್ಯಕಶಿಪುವಿಗೆ ನಿನ್ನಲ್ಲಿ ವೈರವಿದ್ದ ಕಾರಣ ಅವನು ಮಗುವಿಗೆ ಅನೇಕ ಪ್ರಕಾರದ ದುಃಖವನ್ನು ಕೊಟ್ಟನು. ಆದರೂ ಪ್ರಹ್ಲಾದನು ನಿನ್ನನ್ನೇ ಪರಮಾಶ್ರಯವನ್ನಾಗಿ ಭಾವಿಸಿದನು. ತನ್ನ ಜೀವನವನ್ನೇ ಅವನು ಸಂಪೂರ್ಣವಾಗಿ ನಿನಗೆ ಒಪ್ಪಿಸಿಬಿಟ್ಟನು. ॥ ೮ ॥ ನಮ್ಮ ತಾತನಾದ ಪ್ರಹ್ಲಾದನ ಅಭಿಪ್ರಾಯ

ಕಿಮಾತ್ಮನಾನೇನ ಜಹಾತಿ ಯೋಽಂತತಃ
ಕಿಂ ರಿಕ್ಥಹಾರೈಃ ಸ್ವಜನಾಖ್ಯದಸ್ಯುಭಿಃ ।
ಕಿಂ ಜಾಯಯಾ ಸಂಸೃತಿಹೇತುಭೂತಯಾ
ಮರ್ತ್ಯಸ್ಯ ಗೇಹೈಃ ಕಿಮಿಹಾಯುಷೋ ವ್ಯಯಃ ॥ ೯ ॥

ಇತ್ಥಂ ಸ ನಿಶ್ಚಿತ್ಯ ಪಿತಾಮಹೋ ಮಹಾ-
ನಗಾಧಬೋಧೋ ಭವತಃ ಪಾದಪದ್ಮಮ್ ।
ಧ್ರುವಂ ಪ್ರಪೇದೇ ಹ್ಯಕುತೋಭಯಂ ಜನಾದ್
ಭೀತಃ ಸ್ವಪಕ್ಷಕ್ಷಪಣಸ್ಯ ಸತ್ತಮಃ ॥ ೧೦ ॥

ಅಥಾಹಮಪ್ಯಾತ್ಮರಿಪೋಸ್ತವಾಂತಿಕಂ
ದೈವೇನ ನೀತಃ ಪ್ರಸಭಂ ತ್ಯಾಜಿತಶ್ರೀಃ ।
ಇದಂ ಕೃತಾಂತಾಂತಿಕವರ್ತಿ ಜೀವಿತಂ
ಯಯಾಧ್ರುವಂ ಸ್ತಬ್ಧಮತಿರ್ನ ಬುಧ್ಯತೇ ॥ ೧೧ ॥

*ಶ್ರೀಶುಕ ಉವಾಚ*

ತಸ್ಯೇತ್ಥಂ ಭಾಷಮಾಣಸ್ಯ ಪ್ರಹ್ಲಾದೋ ಭಗವತ್ಪ್ರಿಯಃ ।
ಆಜಗಾಮ ಕುರುಶ್ರೇಷ್ಠ ರಾಕಾಪತಿರಿವೋತ್ಥಿತಃ ॥ ೧೨ ॥

ತಮಿಂದ್ರಸೇನಃ ಸ್ವಪಿತಾಮಹಂ ಶ್ರಿಯಾ
ವಿರಾಜಮಾನಂ ನಲಿನಾಯತೇಕ್ಷಣಮ್ ।
ಪ್ರಾಂಶುಂ ಪಿಶಂಗಾಂಬರಮಂಜನತ್ವಿಷಂ
ಪ್ರಲಂಬಬಾಹುಂ ಸುಭಗಂ ಸಮೈಕ್ಷತ ॥ ೧೩ ॥

ತಸ್ಮೈ ಬಲಿರ್ವಾರುಣಪಾಶಯಂತ್ರಿತಃ
ಸಮರ್ಹಣಂ ನೋಪಜಹಾರ ಪೂರ್ವವತ್ ।
ನನಾಮ ಮೂರ್ಧ್ನಾಶ್ರುವಿಲೋಲಲೋಚನಃ
ಸವ್ರೀಡನೀಚೀನಮುಖೋ ಬಭೂವ ಹ ॥ ೧೪ ॥

ಸ ತತ್ರ ಹಾಸೀನಮುದೀಕ್ಷ್ಯ ಸತ್ಪತಿಂ
ಸುನಂದನಂದಾದ್ಯನುಗೈರುಪಾಸಿತಮ್ ।
ಉಪೇತ್ಯ ಭೂಮೌ ಶಿರಸಾ ಮಹಾಮನಾ
ನನಾಮ ಮೂರ್ಧ್ನಾ ಪುಲಕಾಶ್ರುವಿಕ್ಲವಃ ॥ ೧೫ ॥

*ಪ್ರಹ್ಲಾದ ಉವಾಚ*

ತ್ವಯೈವ ದತ್ತಂ ಪದಮೈಂದ್ರಮೂರ್ಜಿತಂ
ಹೃತಂ ತದೇವಾದ್ಯ ತಥೈವ ಶೋಭನಮ್ ।
ಮನ್ಯೇ ಮಹಾನಸ್ಯ ಕೃತೋ ಹ್ಯನುಗ್ರಹೋ
ವಿಭ್ರಂಶಿತೋ ಯಚ್ಛ್ರಿಯ ಆತ್ಮಮೋಹನಾತ್ ॥ ೧೬ ॥

ಹೀಗಿದ್ದಿತು – ಎಂದಾದರೊಂದು ದಿನ ಕಳಚಿ ಬಿದ್ದುಹೋಗುವ ಶರೀರದಿಂದ ಏನು ಪ್ರಯೋಜನವಿದೆ? ಧನ-ಸಂಪತ್ತನ್ನು ದೋಚುವ ಸ್ವಜನರಂತೆ ಕಂಡುಬರುವ ಕಳ್ಳರಿಂದ ತನಗೆ ಏನಾಗಬೇಕಾಗಿದೆ? ಜನ್ಮ-ಮರಣ ಚಕ್ರದಲ್ಲಿ ಕೆಡಹುವಂತಹ ಹೆಂಡತಿಯಿಂದಲಾದರೂ ಏನು ಲಾಭವಿದೆ? ಒಂದಲ್ಲ ಒಂದುದಿನ ಸಾಯಲೇಬೇಕಾಗಿರುವಾಗ ಮನೆಯ ಕುರಿತು ಮೋಹವಿಡುವುದರಲ್ಲಿ ಯಾವ ಸ್ವಾರ್ಥವಿದೆ? ಇವೆಲ್ಲ ವಸ್ತುಗಳಲ್ಲಿ ಮೈಮರೆಯುವುದು ಕೇವಲ ತನ್ನ ಆಯುಸ್ಸನ್ನು ಹಾಳುಮಾಡುವುದು ಮಾತ್ರವಾಗಿದೆ. ॥ ೯ ॥ ಹೀಗೆ ನಿಶ್ಚಯಮಾಡಿದ ನನ್ನ ಪಿತಾಮಹ ಪ್ರಹ್ಲಾದನು ಲೌಕಿಕ ದೃಷ್ಟಿಯಿಂದ ಅವನ ಬಂಧು-ಬಾಂಧವರನ್ನು ನಾಶಮಾಡುವ ಶತ್ರುವು ನೀನೇ ಎಂದು ತಿಳಿದಿದ್ದರೂ ಭಯ ರಹಿತವಾದ, ಅವಿನಾಶಿಯಾದ ನಿನ್ನ ಚರಣ ಕಮಲಗಳಲ್ಲೇ ಶರಣಾಗಿದ್ದನು. ಏನೇ ಇರಲಿ, ಅವನು ಸಂಸಾರದಿಂದ ಪರಮ ವಿರಕ್ತನೂ, ಅಗಾಧಬೋಧಸಂಪನ್ನನೂ, ಉದಾರ ಹೃದಯನೂ, ಸಂತ ಶಿರೋಮಣಿಯೂ ಆಗಿದ್ದನು. ॥ ೧೦ ॥ ಹಾಗೆ ನೋಡಿದರೆ ನೀನೂ ನನ್ನ ಶತ್ರುವೇ ಆಗಿರುವೆ. ಹಾಗಿದ್ದರೂ ವಿಧಿಯು ನನ್ನನ್ನು ಬಲವಂತವಾಗಿ ಸಕಲ ಸಂಪತ್ತಿನಿಂದ ಬೇರ್ಪಡಿಸಿ ನಿನ್ನ ಬಳಿಗೆ ತಂದುಬಿಟ್ಟಿದೆ. ಇದೂ ಒಳ್ಳೆಯದೇ ಆಯಿತು. ಏಕೆಂದರೆ, ಸಂಪತ್ತು-ಐಶ್ವರ್ಯದಿಂದ ಜೀವಿಯ ಬುದ್ಧಿಯು ಜಡವಾಗಿ – ನನ್ನ ಈ ಜೀವನ ಮೃತ್ಯುವಿನ ಹಿಡಿತದಲ್ಲಿದೆ, ಇದು ಅನಿತ್ಯವಾಗಿದೆ ಎಂಬುದೂ ತಿಳಿಯದೇ ಹೋಗುತ್ತಾನೆ. ॥ ೧೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಬಲಿಚಕ್ರವರ್ತಿಯು ಹೀಗೆ ಹೇಳುತ್ತಿದ್ದಂತೆ ಭಗವಂತನ ಪ್ರೇಮ ಪಾತ್ರನಾದ ಪ್ರಹ್ಲಾದನು ಚಂದ್ರನು ಉದಯಿಸಿಬಂದಂತೆ ಅಲ್ಲಿಗೆ ಆಗಮಿಸಿದನು. ॥ ೧೨ ॥ ಶ್ರೀಸಂಪನ್ನನಾಗಿದ್ದ (ಸೌಂದರ್ಯದಿಂದ ಕೂಡಿದ) ಕಾಂತಿಯಿಂದ ವಿರಾಜಿಸುತ್ತಿದ್ದ, ಕಮಲದಂತೆ ವಿಶಾಲಕಣ್ಣುಗಳುಳ್ಳ, ಆಜಾನುಬಾಹುವಾಗಿದ್ದು ಉನ್ನತವಾಗಿದ್ದ ಶ್ಯಾಮಲ ಶರೀರದಲ್ಲಿ ಪೀತಾಂಬರವನ್ನು ಧರಿಸಿದ್ದ ಪಿತಾಮಹನಾದ ಪ್ರಹ್ಲಾದನನ್ನು ಬಲಿಯು ನೋಡಿದನು. ॥ ೧೩ ॥ ಆ ಸಮಯದಲ್ಲಿ ಬಲಿಯು ವರುಣಪಾಶದಲ್ಲಿ ಬಂಧಿತನಾದ್ದರಿಂದ ಪ್ರಹ್ಲಾದನು ಬಂದಾಗ ಮೊದಲಿನಂತೆ ಪೂಜಿಸದೇ ಹೋದನು. ಕಂಬನಿ ತುಂಬಿದ ಕಣ್ಣುಗಳಿಂದ ಕೂಡಿ ಕೇವಲ ತಲೆಯನ್ನು ತಗ್ಗಿಸುವುದರಿಂದಲೇ ಪ್ರಹ್ಲಾದನನ್ನು ವಂದಿಸಿ ಪುನಃ ನಾಚಿಕೆಯಿಂದ ತಲೆತಗ್ಗಿಸಿ ಕುಳಿತನು. ॥ ೧೪ ॥ ಮಹಾತ್ಮನಾದ ಸುನಂದರೇ ಮೊದಲಾದ ಭಕ್ತರಿಂದ ಸೇವಿಸಲ್ಪಡುತ್ತಿದ್ದ, ಸತ್ಪುರುಷರಿಗೆ ಒಡೆಯನಾದ ಭಕ್ತವತ್ಸಲ ಶ್ರೀಹರಿಯು ಅಲ್ಲೇ ನಿಂತಿರುವುದನ್ನು ನೋಡಿ ಪುಳಕಿತನಾಗಿ, ಆನಂದಬಾಷ್ಪಗಳನ್ನು ಸುರಿಸುತ್ತಾ ಭಗವಂತನ ಬಳಿಗೆ ಹೋಗಿ ದೀರ್ಘದಂಡ ನಮಸ್ಕಾರವನ್ನು ಮಾಡಿ, ಕೈಜೋಡಿಸಿಕೊಂಡು ಇಂತೆಂದನು – ॥ ೧೫ ॥

ಪ್ರಹ್ಲಾದನು ಹೇಳಿದನು – ಭಗವಂತಾ! ಈ ಬಲಿಗೆ ಐಶ್ವರ್ಯ ಪೂರ್ಣವಾದ ಇಂದ್ರಪದವಿಯನ್ನು ಕೊಟ್ಟವನೂ ನೀನೇ. ಈಗ ಅದೇ ಸಾರ್ವಭೌಮತ್ವವನ್ನು ಅಪಹರಿಸಿದವನೂ ನೀನೇ. ನೀನು ಕೊಡುವುದು ಎಷ್ಟು ಸುಂದರವೋ ಪಡೆಯುವುದೂ ಅಷ್ಟೇ

ಯಯಾ ಹಿ ವಿದ್ವಾನಪಿ ಮುಹ್ಯತೇ ಯತಃ
ತತ್ಕೋ ವಿಚಷ್ಟೇ ಗತಿಮಾತ್ಮನೋ ಯಥಾ ।
ತಸ್ಮೈ ನಮಸ್ತೇ ಜಗದೀಶ್ವರಾಯ ವೈ
ನಾರಾಯಣಾಯಾಖಿಲಲೋಕಸಾಕ್ಷಿಣೇ ॥ ೧೭ ॥

ಸುಂದರವು. ಮನಸ್ಸನ್ನು ಮರಳುಗೊಳಿಸುವ ರಾಜ್ಯಲಕ್ಷ್ಮಿಯಿಂದ ಇವನನ್ನು ದೂರಗೊಳಿಸಿದುದು ನೀನು ಇವನ ಮೇಲೆ ತೋರಿದ ಪರಮಾನುಗ್ರಹವೆಂದೇ ನಾನು ಭಾವಿಸುತ್ತೇನೆ ॥ ೧೬ ॥ ಐಶ್ವರ್ಯ ಮದವು ವಿದ್ವಾಂಸನನ್ನೂ ಕೂಡ ಮರಳುಗೊಳಿಸುತ್ತದೆ. ಧನಮದ ವಿರುವಾಗ ಯಾರಿಗೆ ತಾನೇ ನಿಜವಾದ ಸ್ವ-ಸ್ವರೂಪವನ್ನು ಕಂಡು ಕೊಳ್ಳಲು ಸಾಧ್ಯವಾಗುತ್ತದೆ? ಆದ್ದರಿಂದ ಆತ್ಮೋದ್ಧಾರಕ್ಕೆ ತಡೆ ಯನ್ನುಂಟು ಮಾಡುವಂತಹ ಐಶ್ವರ್ಯ ಕಸಿದುಕೊಂಡು ಮಹೋ ಪಕಾರ ಮಾಡಿದ ಸಮಸ್ತ ಜಗತ್ತಿಗೆ ಈಶ್ವರನಾದ, ಎಲ್ಲರ ಹೃದಯ ದಲ್ಲಿ ವಿರಾಜಮಾನನಾದ, ಎಲ್ಲರ ಸಾಕ್ಷೀಭೂತನಾಗಿರುವ ಶ್ರೀಮನ್ನಾ ರಾಯಣನಾದ ನಿನಗೆ ನಾನು ನಮಸ್ಕರಿಸುತ್ತೇನೆ. ॥ ೧೭ ॥

*ಶ್ರೀಶುಕ ಉವಾಚ*

ತಸ್ಯಾನುಶೃಣ್ವತೋ ರಾಜನ್ ಪ್ರಹ್ಲಾದಸ್ಯ ಕೃತಾಂಜಲೇಃ ।
ಹಿರಣ್ಯಗರ್ಭೋ ಭಗವಾನುವಾಚ ಮಧುಸೂದನಮ್ ॥ ೧೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಶ್ರೀವಾಮನಮೂರ್ತಿಯ ಮುಂದೆ ಪ್ರಹ್ಲಾದನು ಕೈಮುಗಿದು ಕೊಂಡು ನಿಂತಿದ್ದನು. ಅವನಿಗೆ ಕೇಳಿಸುವಂತೆ ಪೂಜ್ಯರಾದ ಬ್ರಹ್ಮ ದೇವರು ಭಗವಾನ್ ವಾಮನನ ಬಳಿ ಏನೋ ಹೇಳಬೇಕೆಂದಿದ್ದರು. ॥ ೧೮ ॥

ಬದ್ಧಂ ವೀಕ್ಷ್ಯ ಪತಿಂ ಸಾಧ್ವೀ ತತ್ಪತ್ನೀ ಭಯವಿಹ್ವಲಾ ।
ಪ್ರಾಂಜಲಿಃ ಪ್ರಣತೋಪೇಂದ್ರಂ ಬಭಾಷೇಽವಾಙ್ಮುಖೀ ನೃಪ ॥ ೧೯ ॥

ಆದರೆ ಅಷ್ಟರಲ್ಲಿ ಬಲಿಯಪತ್ನಿಯಾದ ಪರಮ ಸಾಧ್ವಿಯಾದ ವಿಂಧ್ಯಾವಲಿಯು ವರುಣಪಾಶಗಳಿಂದ ಬಂಧಿಸಲ್ಪಟ್ಟ ತನ್ನ ಪತಿಯನ್ನು ನೋಡಿ ಭಯದಿಂದ ಗಾಬರಿಗೊಂಡು ಭಗ ವಂತನ ಪಾದಗಳಲ್ಲಿ ನಮಸ್ಕರಿಸಿ, ಕೈಜೋಡಿಸಿಕೊಂಡು, ತಲೆ ಯನ್ನು ತಗ್ಗಿಸಿಕೊಂಡು ಪ್ರಾರ್ಥಿಸಿದಳು. ॥ ೧೯ ॥

*ವಿಂಧ್ಯಾವಲಿರುವಾಚ*

ಕ್ರೀಡಾರ್ಥಮಾತ್ಮನ ಇದಂ ತ್ರಿಜಗತ್ಕೃತಂ ತೇ
ಸ್ವಾಮ್ಯಂ ತು ತತ್ರ ಕುಧಿಯೋಽಪರ ಈಶ ಕುರ್ಯುಃ ।
ಕರ್ತುಃ ಪ್ರಭೋಸ್ತವ ಕಿಮಸ್ಯತ ಆವಹಂತಿ
ತ್ಯಕ್ತಹ್ರಿಯಸ್ತ್ವದವರೋಪಿತಕರ್ತೃವಾದಾಃ ॥ ೨೦ ॥

**ವಿಂಧ್ಯಾವಲಿಯು ಹೇಳಿದಳು** – ಸ್ವಾಮಿಯೇ! ನೀನು ನಿನ್ನ ಕ್ರೀಡೆಗಾಗಿಯೇ ಈ ಮೂರು ಲೋಕಗಳನ್ನು ಸೃಷ್ಟಿಸಿರುವೆ. ಬುದ್ಧಿ ಹೀನರಾದವರೇ ತಮ್ಮನ್ನು ಇದರ ಒಡೆಯರೆಂದು ಭಾವಿಸುತ್ತಾರೆ. ಆದರೆ ನೀನೇ ಇದರ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾಗಿರುವೆ. ನಿನ್ನ ಮಾಯೆಯಿಂದ ಮೋಹಿತರಾಗಿ ತಮ್ಮನ್ನು ಸುಳ್ಳು-ಸುಳ್ಳೇ ಕರ್ತೃವೆಂದು ತಿಳಿಯುವ ನಿರ್ಲಜ್ಜರಾದವರು ನಿನಗೇನು ಅರ್ಪಿಸ ಬಲ್ಲರು? ॥ ೨೦ ॥

*ಬ್ರಹ್ಮೋವಾಚ*

ಭೂತಭಾವನ ಭೂತೇಶ ದೇವದೇವ ಜಗನ್ಮಯ ।
ಮುಂಚೈನಂ ಹೃತಸರ್ವಸ್ವಂ ನಾಯಮರ್ಹತಿ ನಿಗ್ರಹಮ್ ॥ ೨೧ ॥

**ಬ್ರಹ್ಮದೇವರು ಹೇಳಿದರು** – ಸಕಲ ಪ್ರಾಣಿಗಳನ್ನೂ ಸಲಹತಕ್ಕ ವನೇ! ಎಲ್ಲ ಪ್ರಾಣಿಗಳಿಗೂ ಒಡೆಯನೇ! ಜಗತ್ಸ್ವರೂಪನಾದ ದೇವಶ್ರೇಷ್ಠನೇ! ಈಗ ನೀನು ಇವನನ್ನು ಬಿಟ್ಟುಬಿಡು. ನೀನು ಇವನ ಸರ್ವಸ್ವವನ್ನು ಪಡೆದುಕೊಂಡಿರುವೆ. ಆದ್ದರಿಂದ ಈಗ ಇವನು ಶಿಕ್ಷೆಗೆ ಅರ್ಹನಲ್ಲ ॥ ೨೧ ॥

ಕೃತ್ಸ್ನಾ ತೇಽನೇನ ದತ್ತಾ ಭೂರ್ಲೋಕಾಃ ಕರ್ಮಾರ್ಜಿತಾಶ್ಚ ಯೇ ।
ನಿವೇದಿತಂ ಚ ಸರ್ವಸ್ವಮಾತ್ಮಾವಿಕ್ಲವಯಾ ಧಿಯಾ ॥ ೨೨ ॥

ಇವನು ತನ್ನ ಸಮಗ್ರವಾದ ಭೂ ಮಂಡಲವನ್ನು ಹಾಗೂ ಸತ್ಕರ್ಮಗಳಿಂದ ಸಂಪಾದಿಸಿದ ಸ್ವರ್ಗಾದಿ ಪುಣ್ಯಲೋಕಗಳನ್ನೂ, ತನ್ನ ಸರ್ವಸ್ವವನ್ನೂ ಹಾಗೂ ಆತ್ಮವನ್ನೇ (ಶರೀರವನ್ನೇ) ನಿನಗೆ ಸಮರ್ಪಿಸಿಬಿಟ್ಟಿರುವನು. ಹೀಗೆ ಮಾಡು ವಾಗಲೂ ಇವನ ಬುದ್ಧಿಯು ಸ್ಥಿರವಾಗಿದೆ, ಧೈರ್ಯದಿಂದ ಚ್ಯುತ ನಾಗಲಿಲ್ಲ ॥ ೨೨ ॥

ಯತ್ಪಾದಯೋರಶಠಧೀಃ ಸಲಿಲಂ ಪ್ರದಾಯ
ದೂರ್ವಾಂಕುರೈರಪಿ ವಿಧಾಯ ಸತೀಂ ಸಪರ್ಯಾಮ್ ।
ಅಪ್ಯುತ್ತಮಾಂ ಗತಿಮಸೌ ಭಜತೇ ತ್ರಿಲೋಕೀಂ
ದಾಶ್ವಾನವಿಕ್ಲವಮನಾಃ ಕಥಮಾರ್ತಿಮೃಚ್ಛೇತ್ ॥ ೨೩ ॥

ಓ ಕರುಣಾಳುವಾದ ಪ್ರಭುವೇ! ಶುದ್ಧ ಹೃದಯದಿಂದ ಲೋಭವನ್ನು ಬಿಟ್ಟು ನಿನ್ನ ಚರಣಕಮಲಗಳಲ್ಲಿ ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಿ ಕೇವಲ ದೂರ್ವಾದಲ (ತುಲಸೀದಳ)ದಿಂದ ನಿನ್ನನ್ನು ಪೂಜಿಸುವವನೂ ಕೂಡ ಉತ್ತಮಗತಿ ಯನ್ನು ಹೊಂದುತ್ತಾನೆ. ಹೀಗಿರುವಾಗ ಆದರಪೂರ್ವಕವಾಗಿ ಧೈರ್ಯ ಮತ್ತು ಸ್ಥಿರತೆಯಿಂದ ತನ್ನ ಮೂರುಲೋಕಗಳನ್ನೇ ನಿನಗೆ ದಾನವಾಗಿ ನಿನ್ನ ಪಾದಾರವಿಂದಗಳಲ್ಲಿ ಸಮರ್ಪಿಸಿರುವ ಈ ಬಲಿಯು ಹೇಗೆ ತಾನೇ ದುಃಖಕ್ಕೆ ಭಾಗಿಯಾಗುವನು? ॥ ೨೩ ॥

*ಶ್ರೀಭಗವಾನುವಾಚ*

ಬ್ರಹ್ಮನ್ಯಮನುಗೃಹ್ಣಾಮಿ ತದ್ವಿಶೋ ವಿಧುನೋಮ್ಯಹಮ್ ।
ಯನ್ಮದಃ ಪುರುಷಃ ಸ್ತಬ್ಧೋ ಲೋಕಂ ಮಾಂ ಚಾವಮನ್ಯತೇ ॥ ೨೪ ॥

ಯದಾ ಕದಾಚಿಜ್ಜೀವಾತ್ಮಾ ಸಂಸರನ್ನಿಜಕರ್ಮಭಿಃ ।
ನಾನಾಯೋನಿಷ್ವನೀಶೋಽಯಂ ಪೌರುಷೀಂ ಗತಿಮಾವ್ರಜೇತ್ ॥ ೨೫ ॥

ಜನ್ಮಕರ್ಮವಯೋರೂಪವಿದ್ಯೈಶ್ವರ್ಯಧನಾದಿಭಿಃ ।
ಯದ್ಯಸ್ಯ ನ ಭವೇತ್ಸ್ತಂಭಸ್ತತ್ರಾಯಂ ಮದನುಗ್ರಹಃ ॥ ೨೬ ॥

ಮಾನಸ್ತಂಭನಿಮಿತ್ತಾನಾಂ ಜನ್ಮಾದೀನಾಂ ಸಮಂತತಃ ।
ಸರ್ವಶ್ರೇಯಃಪ್ರತೀಪಾನಾಂ ಹಂತ ಮುಹ್ಯೇನ್ನ ಮತ್ಪರಃ ॥ ೨೭ ॥

ಏಷ ದಾನವದೈತ್ಯಾನಾಮಗ್ರಣೀಃ ಕೀರ್ತಿವರ್ಧನಃ ।
ಅಜೈಷೀದಜಯಾಂ ಮಾಯಾಂ ಸೀದನ್ನಪಿ ನ ಮುಹ್ಯತಿ ॥ ೨೮ ॥

ಕ್ಷೀಣರಿಕ್ಥಶ್ಚ್ಯುತಃ ಸ್ಥಾನಾತ್ ಕ್ಷಿಪ್ತೋ ಬದ್ಧಶ್ಚ ಶತ್ರುಭಿಃ ।
ಜ್ಞಾತಿಭಿಶ್ಚ ಪರಿತ್ಯಕ್ತೋ ಯಾತನಾಮನುಯಾಪಿತಃ ॥ ೨೯ ॥

ಗುರುಣಾ ಭರ್ತ್ಸಿತಃ ಶಪ್ತೋ ಜಹೌ ಸತ್ಯಂ ನ ಸುವ್ರತಃ ।
ಛಲೈರುಕ್ತೋ ಮಯಾ ಧರ್ಮೋ ನಾಯಂ ತ್ಯಜತಿ ಸತ್ಯವಾಕ್ ॥ ೩೦ ॥

ಏಷ ಮೇ ಪ್ರಾಪಿತಃ ಸ್ಥಾನಂ ದುಷ್ಪ್ರಾಪಮಮರೈರಪಿ ।
ಸಾವರ್ಣೇರಂತರಸ್ಯಾಯಂ ಭವಿತೇಂದ್ರೋ ಮದಾಶ್ರಯಃ ॥ ೩೧ ॥

ತಾವತ್ಸುತಲಮಧ್ಯಾಸ್ತಾಂ ವಿಶ್ವಕರ್ಮವಿನಿರ್ಮಿತಮ್ ।
ಯನ್ನಾಧಯೋ ವ್ಯಾಧಯಶ್ಚ ಕ್ಲಮಸ್ತಂದ್ರಾ ಪರಾಭವಃ ।
ನೋಪಸರ್ಗಾ ನಿವಸತಾಂ ಸಂಭವಂತಿ ಮಮೇಕ್ಷಯಾ ॥ ೩೨ ॥

ಇಂದ್ರಸೇನ ಮಹಾರಾಜ ಯಾಹಿ ಭೋ ಭದ್ರಮಸ್ತು ತೇ ।
ಸುತಲಂ ಸ್ವರ್ಗಿಭಿಃ ಪ್ರಾರ್ಥ್ಯಂ ಜ್ಞಾತಿಭಿಃ ಪರಿವಾರಿತಃ ॥ ೩೩ ॥

ನ ತ್ವಾಮಭಿಭವಿಷ್ಯಂತಿ ಲೋಕೇಶಾಃ ಕಿಮುತಾಪರೇ ।
ತ್ವಚ್ಛಾಸನಾತಿಗಾನ್ ದೈತ್ಯಾಂಶ್ಚಕ್ರಂ ಮೇ ಸೂದಯಿಷ್ಯತಿ ॥ ೩೪ ॥

**ಶ್ರೀಭಗವಂತನು ಹೇಳಿದನು** – ಬ್ರಹ್ಮನೇ ನಾನು ಯಾರಮೇಲೆ ಕೃಪೆದೋರುವೆನೋ ಅವನ ಧನವನ್ನು ಮೊದಲಿಗೆ ಕಿತ್ತುಕೊಳ್ಳುವೆನು. ಏಕೆಂದರೆ, ಮನುಷ್ಯನು ಧನಮದದಿಂದ ಉನ್ಮತ್ತನಾದಾಗ ನನ್ನನ್ನೂ, ಲೋಕವನ್ನೂ (ಜನರನ್ನೂ) ತಿರಸ್ಕಾರಬುದ್ಧಿಯಿಂದ ಕಾಣುತ್ತಾನೆ. ॥ ೨೪ ॥ ಈ ಜೀವಿಯು ತಾನು ಮಾಡಿದ ಶುಭಾ ಶುಭ ಕರ್ಮಗಳಿಂದ ವಿವಶನಾಗಿ ಅನೇಕ ಯೋನಿಗಳಲ್ಲಿ ಅಲೆಯುತ್ತಾ ಇರುತ್ತಾನೆ. ಎಂದಾದರೊಮ್ಮೆ ನನ್ನ ಹಿರಿದಾದ ಕೃಪೆಯಿಂದ ಮನುಷ್ಯ ಶರೀರವನ್ನು ಪಡೆಯುತ್ತಾನೆ. ॥ ೨೫ ॥ ಮನುಷ್ಯನಾಗಿ ಹುಟ್ಟಿದ ಬಳಿಕ ಕುಲೀನತೆ, ಕರ್ಮ, ವಯಸ್ಸು, ರೂಪ, ವಿದ್ಯೆ, ಐಶ್ವರ್ಯ, ಸಂಪತ್ತು ಇತ್ಯಾದಿಗಳಿಂದ ಅಹಂಕಾರ ಬಾರದಿದ್ದರೆ ನನ್ನ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ ಎಂದು ತಿಳಿಯಬೇಕು. ॥ ೨೬ ॥ ಕುಲೀನತೆ, ವಿದ್ಯೆ, ಸಂಪತ್ತು ಮುಂತಾದವುಗಳು ಅಹಂಕಾರ, ಜಡತೆಗಳನ್ನುಂಟು ಮಾಡುವುದಾದರೂ, ಮನುಷ್ಯನ ಶ್ರೇಯಸ್ಸಿಗೆ ಪ್ರತಿಬಂಧಕಗಳಾಗಿದ್ದರೂ, ನನಗೆ ಶರಣಾಗತರಾದವರು ಇವುಗಳಿಂದ ಮೋಹಿತರಾಗುವುದಿಲ್ಲ. ॥ ೨೭ ॥ ದೈತ್ಯ-ದಾನವ ವಂಶಗಳೆರಡರಲ್ಲೂ ಅಗ್ರಗಣ್ಯನಾಗಿರುವ ಈ ಬಲಿಯು ಆ ವಂಶಗಳ ಕೀರ್ತಿಯನ್ನು ಹೆಚ್ಚಿಸುವವನಾಗಿದ್ದಾನೆ. ಈತನು ಜಯಿಸಲು ಅಸಾಧ್ಯವಾದ ನನ್ನ ಮಾಯೆಯನ್ನು ಗೆದ್ದಿರುವನು. ನೀನೇ ನೋಡುತ್ತಿರುವಂತೆ ಇಷ್ಟು ಕಷ್ಟಪಡುತ್ತಿದ್ದರೂ ಇವನು ಮೋಹಿತನಾಗಲಿಲ್ಲ. ॥ ೨೮ ॥ ಇವನ ಧನ-ಐಶ್ವರ್ಯ ಕಸಿದುಕೊಂಡೆ. ರಾಜ್ಯಪದವಿ ಕೈಬಿಟ್ಟುಹೋಯಿತು. ಅನೇಕ ವಿಧದಿಂದ ಆಕ್ಷೇಪಿಸಿದೆ. ಶತ್ರುಗಳಿಂದ ಬಂಧಿಸಲ್ಪಟ್ಟನು. ಬಂಧು-ಬಾಂಧವರು ತೊರೆದು ಹೋದರು. ಇಷ್ಟೇ ಅಲ್ಲ, ಇವನ ಗುರುಗಳಾದ ಶುಕ್ರಾಚಾರ್ಯರು ಗದರಿಸಿದರು. ಕಡೆಗೆ ಶಾಪವನ್ನೂ ಕೊಟ್ಟರು. ನಾನೂ ಕೂಡ ವಂಚಿಸಲೆಂದೇ ಧರ್ಮೋಪದೇಶ ಮಾಡಿದೆ. ಆದರೆ ಈ ಸತ್ಯವಾದಿಯೂ, ದೃಢವ್ರತಿಯೂ ಆದ ಬಲಿಯು ತನ್ನ ಧರ್ಮವನ್ನು ಬಿಡಲಿಲ್ಲ. ॥ ೨೯-೩೦ ॥ ಆದ್ದರಿಂದ ಶ್ರೇಷ್ಠ ದೇವತೆಗಳಿಗೂ ಅತಿಕಷ್ಟದಿಂದ ದೊರೆಯಬಹುದಾದ ಸ್ಥಾನವನ್ನು ನಾನು ಇವನಿಗೆ ಕೊಟ್ಟಿರುವೆನು. ಇವನು ಸಾವರ್ಣಿ ಮನ್ವಂತರದಲ್ಲಿ ನನ್ನ ಆಶ್ರಯವನ್ನು ಪಡೆದು ಇಂದ್ರನಾಗುವನು. ॥ ೩೧ ॥ ಅಲ್ಲಿಯವರೆಗೆ ಇವನು ವಿಶ್ವಕರ್ಮನಿಂದ ನಿರ್ಮಿತವಾದ ಸುತಲಲೋಕದಲ್ಲಿ ವಾಸಿಸುವನು. ಅಲ್ಲಿ ಇರುವವರಿಗೆ ನನ್ನ ಕೃಪಾದೃಷ್ಟಿಯಿಂದ ಮಾನಸಿಕರೋಗವಾಗಲೀ, ಬಳಲಿಕೆಯಾಗಲೀ, ಸೋಮಾರಿತನವಾಗಲೀ, ಆಂತರ್ಬಾಹ್ಯ ಶತ್ರುಗಳಿಂದ ಪರಾಜಯವಾಗಲೀ ಉಂಟಾಗುವುದಿಲ್ಲ. ॥ ೩೨ ॥ ಹೀಗೆ ಬ್ರಹ್ಮದೇವರಿಗೆ ಹೇಳಿ ಬಲಿಯನ್ನು ಸಂಬೋಧಿಸುತ್ತಾ – ಮಹಾರಾಜ ಇಂದ್ರಸೇನನೇ ! ನಿನಗೆ ಮಂಗಳವಾಗಲಿ. ಈಗ ನೀನು ಸ್ವರ್ಗದ ದೇವತೆಗಳೂ ಕೂಡ ಬಯಸುವಂತಹ ಸುತಲ ಲೋಕಕ್ಕೆ ಹೋಗಿ ನಿನ್ನ ಪರಿವಾರದೊಂದಿಗೆ ಇರು. ॥ ೩೩ ॥ ಅಲ್ಲಿ ವಾಸವಾಗಿರುವ ನಿನ್ನನ್ನು ಲೋಕಪಾಲರೂ ಕೂಡ ಸೋಲಿಸಲಾರರು. ಇತರರ ಮಾತಿರಲಿ, ನಿನ್ನ ಅಪ್ಪಣೆಯನ್ನು ಮೀರಿ ನಡೆಯುವ ದೈತ್ಯರನ್ನು ನನ್ನ ಸುದರ್ಶನಚಕ್ರವೇ ನಾಶಗೊಳಿಸುತ್ತದೆ. ॥ ೩೪ ॥ ವೀರವರೇಣ್ಯನೇ ! ನಿನ್ನನ್ನು, ನಿನ್ನ ಅನುಯಾಯಿಗಳನ್ನು, ನಿನ್ನ ಭೋಗ

ರಕ್ಷಿಷ್ಯೇ ಸರ್ವತೋಽಹಂ ತ್ವಾಂ ಸಾನುಗಂ ಸಪರಿಚ್ಛದಮ್ ।
ಸದಾ ಸನ್ನಿಹಿತಂ ವೀರ ತತ್ರ ಮಾಂ ದ್ರಕ್ಷ್ಯತೇ ಭವಾನ್ ॥ ೩೫ ॥

ತತ್ರ ದಾನವದೈತ್ಯಾನಾಂ ಸಂಗಾತ್ತೇ ಭಾವ ಆಸುರಃ ।
ದೃಷ್ಟ್ವಾ ಮದನುಭಾವಂ ವೈ ಸದ್ಯಃ ಕುಂಠೋ ವಿನಂಕ್ಷ್ಯತಿ ॥ ೩೬ ॥

ಸಾಮಗ್ರಿಗಳನ್ನು ನಾನು ಎಲ್ಲ ವಿಧದಿಂದ ರಕ್ಷಿಸುವೆನು. ಅಲ್ಲಿ ನೀನು ಯಾವಾಗಲೂ ನನ್ನನ್ನು ನಿನ್ನ ಬಳಿಯಲ್ಲೇ ನೋಡುತ್ತಾ ಇರುವೆ. ॥ ೩೫ ॥ ದೈತ್ಯ-ದಾನವರ ಸಂಬಂಧದಿಂದ ಉಂಟಾದ ನಿನ್ನ ಅಸುರಭಾವವು ನನ್ನ ಮಹಿಮೆಯಿಂದಾಗಿ, ನನ್ನ ಸಾನ್ನಿಧ್ಯವಿರುವುದರಿಂದ ಕುಗ್ಗಿಹೋಗಿ ನಾಶಹೊಂದುವುದು. ॥ ೩೬ ॥

*ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೨೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ ವಾಮನಪ್ರಾದುರ್ಭಾವೇ ಬಲಿವಾಮನಸಂವಾದೋ ನಾಮ ದ್ವಾವಿಂಶೋಽಧ್ಯಾಯಃ ॥ ೨೨ ॥

# ಇಪ್ಪತ್ತಮೂರನೆಯ ಅಧ್ಯಾಯ

## ಬಲಿಯು ಬಂಧನದಿಂದ ಬಿಡುಗಡೆಹೊಂದಿ ಸುತಲಲೋಕಕ್ಕೆ ಹೋದುದು

*ಶ್ರೀಶುಕ ಉವಾಚ*

ಇತ್ಯುಕ್ತವಂತಂ ಪುರುಷಂ ಪುರಾತನಂ
ಮಹಾನುಭಾವೋಽಖಿಲಸಾಧುಸಂಮತಃ ।
ಬದ್ಧಾಂಜಲಿರ್ಬಾಷ್ಪಕಲಾಕುಲೇಕ್ಷಣೋ
ಭಕ್ತ್ಯುದ್ಗಲೋ ಗದ್ಗದಯಾ ಗಿರಾಬ್ರವೀತ್ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಪುರಾಣಪುರುಷನಾದ ಭಗವಂತನು ಹೀಗೆ ಹೇಳುತ್ತಲೇ ಸಾಧುಗಳ ಆದರಣೀಯನಾದ ಮಹಾನುಭಾವನಾದ ದೈತ್ಯರಾಜನ ಕಣ್ಣುಗಳಿಂದ ಆನಂದಬಾಷ್ಪಗಳು ಸುರಿಯತೊಡಗಿದವು. ಪ್ರೇಮೋದ್ರೇಕದಿಂದ ಅವನ ಕಂಠವು ಬಿಗಿಯಿತು. ಕೈಮುಗಿದುಕೊಂಡು ಗದ್ಗದಧ್ವನಿಯಿಂದ ಬಲಿಯು ಭಗವಂತನಲ್ಲಿ ಇಂತೆಂದನು – ॥ ೧ ॥

*ಬಲಿರುವಾಚ*

ಅಹೋ ಪ್ರಣಾಮಾಯ ಕೃತಃ ಸಮುದ್ಯಮಃ
ಪ್ರಪನ್ನಭಕ್ತಾರ್ಥವಿಧೌ ಸಮಾಹಿತಃ ।
ಯಲ್ಲೋಕಪಾಲೈಸ್ತ್ವದನುಗ್ರಹೋಽಮರೈ-
ರಲಬ್ಧಪೂರ್ವೋಽಪಸದೇಽಸುರೇಽರ್ಪಿತಃ ॥ ೨ ॥

**ಬಲಿಯು ಹೇಳಿದನು** – ಪ್ರಭುವೇ! ನಾನಾದರೋ ನಿನಗೆ ಪೂರ್ಣವಾಗಿ ಪ್ರಣಾಮವನ್ನೂ ಮಾಡಲಿಲ್ಲ, ಪ್ರಣಾಮಮಾಡಲು ಪ್ರಯತ್ನಿಸಿದೆ ಅಷ್ಟೆ. ಇಷ್ಟರಿಂದಲೇ ನಿನ್ನ ಚರಣಕಮಲಗಳಲ್ಲಿ ಶರಣಾಗತರಾದ ಭಕ್ತರಿಗೆ ದೊರೆಯುವಂತಹ ಫಲವು ನನಗೆ ಸಿಕ್ಕಿಬಿಟ್ಟಿತು. ಲೋಕಪಾಲಕರಿಗಾಗಲೀ, ದೇವತೆಗಳಿಗಾಗಲೀ ಅಲಭ್ಯವಾದ ಅನುಗ್ರಹವನ್ನು ನೀಚ ಅಸುರನಾದ ನನ್ನ ಮೇಲೆ ತೋರಿರುವೆ. ಪರಮ ಕರುಣಾಶಾಲಿಯಾದ ನಿನಗೆ ನಮೋ ನಮಃ ॥ ೨ ॥

*ಶ್ರೀಶುಕ ಉವಾಚ*

ಇತ್ಯುಕ್ತ್ವಾ ಹರಿಮಾನಮ್ಯ ಬ್ರಹ್ಮಾಣಂ ಸಭವಂ ತತಃ ।
ವಿವೇಶ ಸುತಲಂ ಪ್ರೀತೋ ಬಲಿರ್ಮುಕ್ತಃ ಸಹಾಸುರೈಃ ॥ ೩ ॥

ಏವಮಿಂದ್ರಾಯ ಭಗವಾನ್ಪ್ರತ್ಯಾನೀಯ ತ್ರಿವಿಷ್ಟಪಮ್ ।
ಪೂರಯಿತ್ವಾದಿತೇಃ ಕಾಮಮಶಾಸತ್ಸಕಲಂ ಜಗತ್ ॥ ೪ ॥

ಲಬ್ಧಪ್ರಸಾದಂ ನಿರ್ಮುಕ್ತಂ ಪೌತ್ರಂ ವಂಶಧರಂ ಬಲಿಮ್ ।
ನಿಶಾಮ್ಯ ಭಕ್ತಿಪ್ರವಣಃ ಪ್ರಹ್ಲಾದ ಇದಮಬ್ರವೀತ್ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಹೀಗೆ ಹೇಳುವಂತೆಯೇ ಬಲಿಯು ವರುಣಪಾಶಗಳಿಂದ ಬಿಡುಗಡೆಹೊಂದಿದನು. ಆಗ ಅವನು ಭಗವಾನ್ ಶ್ರೀಹರಿಯನ್ನೂ, ಬ್ರಹ್ಮದೇವನನ್ನೂ, ರುದ್ರದೇವರನ್ನೂ, ನಮಸ್ಕರಿಸಿ, ಪರಮ ಸಂತುಷ್ಟನಾಗಿ ತನ್ನ ಪರಿವಾರದೊಡನೆ ಸುತಲಲೋಕವನ್ನು ಪ್ರವೇಶಿಸಿದನು. ॥ ೩ ॥ ಈ ವಿಧವಾಗಿ ಭಗವಂತನು ಬಲಿಯಿಂದ ಸ್ವರ್ಗವನ್ನು ಕಿತ್ತುಕೊಂಡು ಇಂದ್ರನಿಗೆ ಕೊಟ್ಟನು. ಅದಿತಿಯ ಆಶಯವನ್ನು ಪೂರ್ಣಗೊಳಿಸಿದನು. ತಾನು ಉಪೇಂದ್ರನಾಗಿ (ಇಂದ್ರನ ತಮ್ಮನಾಗಿ) ಸಮಸ್ತ ಜಗತ್ತನ್ನು ಶಾಸನಮಾಡತೊಡಗಿದನು. ॥ ೪ ॥ ತನ್ನ ಮೊಮ್ಮಗನಾದ ಬಲಿಯು ವರುಣನ ಪಾಶಗಳಿಂದ ಮುಕ್ತನಾದುದನ್ನು ಮತ್ತು ಭಗವಂತನ ಪೂರ್ಣಾನುಗ್ರಹವನ್ನು ಪಡೆದುಕೊಂಡುದನ್ನು ಭಕ್ತಾಗ್ರೇಸರನಾದ ಪ್ರಹ್ಲಾದನು ನೋಡಿ ಸಂತೋಷಭರಿತನಾಗಿ ಭಕ್ತಿಭಾವದಿಂದ ಭಗವಂತನನ್ನು ಇಂತು ಸ್ತುತಿಸಿದನು. ॥ ೫ ॥

*ಪ್ರಹ್ಲಾದ ಉವಾಚ*

ನೇಮಂ ವಿರಿಂಚೋ ಲಭತೇ ಪ್ರಸಾದಂ
ನ ಶ್ರೀರ್ನ ಶರ್ವಃ ಕಿಮುತಾಪರೇ ತೇ ।
ಯನ್ನೋಽಸುರಾಣಾಮಸಿ ದುರ್ಗಪಾಲೋ
ವಿಶ್ವಾಭಿವಂದ್ಯೈರಪಿ ವಂದಿತಾಂಘ್ರಿಃ ॥ ೬ ॥

ಯತ್ಪಾದಪದ್ಮಮಕರಂದನಿಷೇವಣೇನ
ಬ್ರಹ್ಮಾದಯಃ ಶರಣದಾಶ್ನುವತೇ ವಿಭೂತೀಃ ।
ಕಸ್ಮಾದ್ವಯಂ ಕುಸೃತಯಃ ಖಲಯೋನಯಸ್ತೇ
ದಾಕ್ಷಿಣ್ಯದೃಷ್ಟಿಪದವೀಂ ಭವತಃ ಪ್ರಣೀತಾಃ ॥ ೭ ॥

ಚಿತ್ರಂ ತವೇಹಿತಮಹೋಽಮಿತಯೋಗಮಾಯಾ-
ಲೀಲಾವಿಸೃಷ್ಟಭುವನಸ್ಯ ವಿಶಾರದಸ್ಯ ।
ಸರ್ವಾತ್ಮನಃ ಸಮದೃಶೋ ವಿಷಮಃ ಸ್ವಭಾವೋ
ಭಕ್ತಪ್ರಿಯೋ ಯದಸಿ ಕಲ್ಪತರುಸ್ವಭಾವಃ ॥ ೮ ॥

*ಶ್ರೀಭಗವಾನುವಾಚ*

ವತ್ಸ ಪ್ರಹ್ಲಾದ ಭದ್ರಂ ತೇ ಪ್ರಯಾಹಿ ಸುತಲಾಲಯಮ್ ।
ಮೋದಮಾನಃ ಸ್ವಪೌತ್ರೇಣ ಜ್ಞಾತೀನಾಂ ಸುಖಮಾವಹ ॥ ೯ ॥

ನಿತ್ಯಂ ದ್ರಷ್ಟಾಸಿ ಮಾಂ ತತ್ರ ಗದಾಪಾಣಿಮವಸ್ಥಿತಮ್ ।
ಮದ್ದರ್ಶನಮಹಾಹ್ಲಾದಧ್ವಸ್ತಕರ್ಮನಿಬಂಧನಃ ॥ ೧೦ ॥

*ಶ್ರೀಶುಕ ಉವಾಚ*

ಆಜ್ಞಾಂ ಭಗವತೋ ರಾಜನ್ಪ್ರಹ್ಲಾದೋ ಬಲಿನಾ ಸಹ ।
ಬಾಢಮಿತ್ಯಮಲಪ್ರಜ್ಞೋ ಮೂರ್ಧ್ನ್ಯಾಧಾಯ ಕೃತಾಂಜಲಿಃ ॥ ೧೧ ॥

ಪರಿಕ್ರಮ್ಯಾದಿಪುರುಷಂ ಸರ್ವಾಸುರಚಮೂಪತಿಃ ।
ಪ್ರಣತಸ್ತದನುಜ್ಞಾತಃ ಪ್ರವಿವೇಶ ಮಹಾಬಿಲಮ್ ॥ ೧೨ ॥

ಅಥಾಹೋಶನಸಂ ರಾಜನ್ಹರಿರ್ನಾರಾಯಣೋಽಂತಿಕೇ ।
ಆಸೀನಮೃತ್ವಿಜಾಂ ಮಧ್ಯೇ ಸದಸಿ ಬ್ರಹ್ಮವಾದಿನಾಮ್ ॥ ೧೩ ॥

*ಶ್ರೀಭಗವಾನುವಾಚ*

ಬ್ರಹ್ಮನ್ಸಂತನು ಶಿಷ್ಯಸ್ಯ ಕರ್ಮಚ್ಛಿದ್ರಂ ವಿತನ್ವತಃ ।
ಯತ್ತತ್ಕರ್ಮಸು ವೈಷಮ್ಯಂ ಬ್ರಹ್ಮದೃಷ್ಟಂ ಸಮಂ ಭವೇತ್ ॥ ೧೪ ॥

**ಪ್ರಹ್ಲಾದನು ಹೇಳಿದನು** – ಪ್ರಭುವೇ! ಬ್ರಹ್ಮದೇವರಿಗಾಗಲೀ, ಲಕ್ಷ್ಮೀದೇವಿಗಾಗಲೀ, ರುದ್ರದೇವರಿಗಾಗಲೀ ಇಂತಹ ಕೃಪಾಪ್ರಸಾದವು ದೊರೆಯಲಿಲ್ಲ. ಹಾಗಿರುವಾಗ ಇತರರ ಮಾತಿರಲಿ, ವಿಶ್ವವಂದ್ಯರಾದ ಬ್ರಹ್ಮಾದಿಗಳು ಯಾರ ಚರಣಾರವಿಂದಗಳಿಗೆ ನಮಸ್ಕರಿಸುವರೋ ಅಂತಹ ಪರಮದಯಾಳುವಾದ ನೀನು ನಮ್ಮಂತಹ ಅಸುರರ ಬಾಗಿಲುಕಾಯುವವನಾದೆ. ಇದೆಂತಹ ಅಚ್ಚರಿಯ ಮಾತು! ॥ ೬ ॥ ಓ ಶರಣಾಗತವತ್ಸಲನಾದ ಪ್ರಭುವೇ! ಬ್ರಹ್ಮಾದಿ ಲೋಕಪಾಲರು ನಿನ್ನ ಚರಣಾರವಿಂದಗಳ ಮಕರಂದವನ್ನು ಪಾನಮಾಡುವುದರಿಂದ ಸೃಷ್ಟಿರಚನಾದಿ ಅನೇಕ ಶಕ್ತಿಗಳನ್ನೂ, ವಿಭೂತಿಗಳನ್ನೂ ಪಡೆದುಕೊಳ್ಳುವರು. ನಾವಾದರೋ ಜನ್ಮದಿಂದಲೇ ಖಲರೂ, ಕುಮಾರ್ಗಿಗಳು. ಇಂತಹ ನಮ್ಮ ಮೇಲೆ ನಿನ್ನ ದಾಕ್ಷಿಣ್ಯದಿಂದ ಕೂಡಿದ ಅನುಗ್ರಹ ದೃಷ್ಟಿಯು ಹೇಗೆ ತಾನೇ ಬಿದ್ದೀತು? ಇಂತಹ ಪರಮಾನುಗ್ರಹದಿಂದ ನೀನು ನಮ್ಮ ಮನೆಯ ದ್ವಾರಪಾಲಕನೇ ಆಗಿಬಿಟ್ಟೆಯಲ್ಲ? ॥ ೭ ॥ ನೀನು ನಿನ್ನ ಯೋಗಮಾಯೆಯಿಂದ ಲೀಲಾಮಾತ್ರದಿಂದ ತ್ರಿಭುವನಗಳನ್ನು ರಚಿಸಿಬಿಟ್ಟಿರುವೆ. ನೀನು ಸರ್ವಜ್ಞನೂ, ಸರ್ವಾತ್ಮನೂ, ಸಮದರ್ಶಿಯೂ ಆಗಿರುವೆ. ಹೀಗಿದ್ದರೂ ನಿನ್ನ ಲೀಲಾವಿಲಾಸವು ತುಂಬಾ ವಿಚಿತ್ರವಾಗಿದೆ. ನಿನ್ನ ಸ್ವಭಾವವು ಕಲ್ಪವೃಕ್ಷದಂತೆ ಇದೆ. ಏಕೆಂದರೆ, ನೀನು ನಿನ್ನ ಭಕ್ತರಲ್ಲಿ ಅತ್ಯಂತ ಪ್ರೀತಿಯನ್ನು ತೋರುತ್ತಿರುವೆ. ಇದರಿಂದಲೇ ಕೆಲವೊಮ್ಮೆ ಉಪಾಸಕರ ಕುರಿತು ಪಕ್ಷಪಾತ ಮತ್ತು ನಿನಗೆ ವಿಮುಖರಾದವರಲ್ಲಿ ನಿರ್ದಯಕತೆಯೂ ಕಂಡುಬರುತ್ತದೆ. ॥ ೮ ॥

**ಶ್ರೀಭಗವಂತನು ಹೇಳಿದನು** – ವತ್ಸ! ಪ್ರಹ್ಲಾದನೇ! ನಿನಗೆ ಮಂಗಳವಾಗಲಿ. ಈಗ ನೀನು ಕೂಡ ಸುತಲಲೋಕಕ್ಕೆ ಹೋಗು. ಅಲ್ಲಿ ನಿನ್ನ ಮೊಮ್ಮಗನೊಂದಿಗೆ ಆನಂದವಾಗಿ ಇರುತ್ತಾ ನಿನ್ನ ಜ್ಞಾತಿ-ಬಾಂಧವರಿಗೆ ಸುಖದಾಯಕನಾಗು. ॥ ೯ ॥ ಅಲ್ಲಿ ನೀನು ನಿತ್ಯವೂ ಗದಾಪಾಣಿಯಾಗಿ ನಿಂತಿರುವ ನನ್ನನ್ನು ನೋಡುವೆ. ನನ್ನ ದರ್ಶನದ ಪರಮಾನಂದದಲ್ಲಿ ಮುಳುಗಿ ಇರುವ ನಿನ್ನ ಸರ್ವಕರ್ಮಬಂಧನಗಳು ನಾಶವಾಗಿಹೋಗುವುವು. ॥ ೧೦॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಸಮಸ್ತ ದೈತ್ಯಸೈನ್ಯಗಳಿಗೂ ಸ್ವಾಮಿಯಾಗಿದ್ದ ವಿಶುದ್ಧ ಬುದ್ಧಿಯುಳ್ಳ ಪ್ರಹ್ಲಾದನು 'ಹಾಗೆಯೇ ಆಗಲಿ' ಎಂದು ಹೇಳಿ ಭಗವಂತನ ಆಜ್ಞೆಯನ್ನು ಶಿರಸಾವಹಿಸಿ, ಕೈಜೋಡಿಸಿಕೊಂಡು ಅವನಿಗೆ ನಮಸ್ಕರಿಸಿ, ಬಲಿಯೊಂದಿಗೆ ಆದಿಪುರುಷನಾದ ಭಗವಂತನಿಗೆ ಪ್ರದಕ್ಷಿಣೆ ಬಂದು ವಂದಿಸಿ, ಅವನ ಅನುಜ್ಞೆಯನ್ನು ಪಡೆದುಕೊಂಡು ಸುತಲಲೋಕಕ್ಕೆ ಹೊರಟುಹೋದನು. ॥ ೧೧-೧೨ ॥ ರಾಜೇಂದ್ರನೇ! ಆಗ ಭಗವಾನ್ ಶ್ರೀಹರಿಯು ಬ್ರಹ್ಮವಾದಿಗಳಾದ ಋತ್ವಿಜರ ಸಭೆಯಲ್ಲಿ ತನ್ನ ಬಳಿಯಲ್ಲೇ ಕುಳಿತಿರುವ ಶುಕ್ರಾಚಾರ್ಯರನ್ನು ಕುರಿತು ಇಂತೆಂದನು – ॥ ೧೩ ॥

**ಶ್ರೀಭಗವಂತನು ಹೇಳಿದನು** – 'ಬ್ರಾಹ್ಮಣಶ್ರೇಷ್ಠನೇ! ನಿಮ್ಮ ಶಿಷ್ಯನು ಯಜ್ಞವನ್ನು ಮಾಡುತ್ತಿದ್ದನು. ಅದರಲ್ಲಿ ಇರುವ ಕೊರತೆಯನ್ನು ನೀವು ಪೂರ್ಣಗೊಳಿಸಿರಿ. ಏಕೆಂದರೆ, ಕರ್ಮಗಳಲ್ಲೇನಾದರೂ ನ್ಯೂನಾತಿರೇಕಗಳು ಉಂಟಾದರೆ, ಅವೆಲ್ಲವೂ ಬ್ರಾಹ್ಮಣರ ಕೃಪಾದೃಷ್ಟಿಯಿಂದಲೇ ಪರಿಹಾರವಾಗಿ ಬಿಡುತ್ತವೆ.' ॥ ೧೪ ॥

*ಶುಕ್ರ ಉವಾಚ*

**ಕುತಸ್ತತ್ಕರ್ಮವೈಷಮ್ಯಂ ಯಸ್ಯ ಕರ್ಮೇಶ್ವರೋ ಭವಾನ್ ।**
**ಯಜ್ಞೇಶೋ ಯಜ್ಞಪುರುಷಃ ಸರ್ವಭಾವೇನ ಪೂಜಿತಃ ॥ ೧೫ ॥**

**ಮಂತ್ರತಸ್ತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುತಃ ।**
**ಸರ್ವಂ ಕರೋತಿ ನಿಶ್ಛಿದ್ರಂ ನಾಮಸಂಕೀರ್ತನಂ ತವ ॥ ೧೬ ॥**

**ತಥಾಪಿ ವದತೋ ಭೂಮನ್ಕರಿಷ್ಯಾಮ್ಯನುಶಾಸನಮ್ ।**
**ಏತಚ್ಛ್ರೇಯಃ ಪರಂ ಪುಂಸಾಂ ಯತ್ತವಾಜ್ಞಾನುಪಾಲನಮ್ ॥ ೧೭ ॥**

*ಶ್ರೀಶುಕ ಉವಾಚ*

**ಅಭಿನಂದ್ಯ ಹರೇರಾಜ್ಞಾಮುಶನಾ ಭಗವಾನಿತಿ ।**
**ಯಜ್ಞಚ್ಛಿದ್ರಂ ಸಮಾಧತ್ತ ಬಲೇರ್ವಿಪ್ರರ್ಷಿಭಿಃ ಸಹ ॥ ೧೮ ॥**

**ಏವಂ ಬಲೇರ್ಮಹೀಂ ರಾಜನ್ಭಿಕ್ಷಿತ್ವಾ ವಾಮನೋ ಹರಿಃ ।**
**ದದೌ ಭ್ರಾತ್ರೇ ಮಹೇಂದ್ರಾಯ ತ್ರಿದಿವಂ ಯತ್ಪರೈರ್ಹೃತಮ್ ॥ ೧೯ ॥**

**ಪ್ರಜಾಪತಿಪತಿರ್ಬ್ರಹ್ಮಾ ದೇವರ್ಷಿ ಪಿತೃಭೂಮಿಪೈಃ ।**
**ದಕ್ಷಭೃಗ್ವಂಗಿರೋಮುಖ್ಯೈಃ ಕುಮಾರೇಣ ಭವೇನ ಚ ॥ ೨೦ ॥**

**ಕಶ್ಯಪಸ್ಯಾದಿತೇಃ ಪ್ರೀತ್ಯೈ ಸರ್ವಭೂತಭವಾಯ ಚ ।**
**ಲೋಕಾನಾಂ ಲೋಕಪಾಲಾನಾಮಕರೋದ್ವಾಮನಂ ಪತಿಮ್ ॥ ೨೧ ॥**

**ವೇದಾನಾಂ ಸರ್ವದೇವಾನಾಂ ಧರ್ಮಸ್ಯ ಯಶಸಃ ಶ್ರಿಯಃ ।**
**ಮಂಗಲಾನಾಂ ವ್ರತಾನಾಂ ಚ ಕಲ್ಪಂ ಸ್ವರ್ಗಾಪವರ್ಗಯೋಃ ॥ ೨೨ ॥**

**ಉಪೇಂದ್ರಂ ಕಲ್ಪಯಾಂಚಕ್ರೇ ಪತಿಂ ಸರ್ವವಿಭೂತಯೇ ।**
**ತದಾ ಸರ್ವಾಣಿ ಭೂತಾನಿ ಭೃಶಂ ಮುಮುದಿರೇ ನೃಪ ॥ ೨೩ ॥**

**ತತಸ್ತ್ವಿಂದ್ರಃ ಪುರಸ್ಕೃತ್ಯ ದೇವಯಾನೇನ ವಾಮನಮ್ ।**
**ಲೋಕಪಾಲೈರ್ದಿವಂ ನಿನ್ಯೇ ಬ್ರಹ್ಮಣಾ ಚಾನುಮೋದಿತಃ ॥ ೨೪ ॥**

**ಪ್ರಾಪ್ಯ ತ್ರಿಭುವನಂ ಚೇಂದ್ರ ಉಪೇಂದ್ರಭುಜಪಾಲಿತಃ ।**
**ಶ್ರಿಯಾ ಪರಮಯಾ ಜುಷ್ಟೋ ಮುಮುದೇ ಗತಸಾಧ್ವಸಃ ॥ ೨೫ ॥**

**ಶುಕ್ರಾಚಾರ್ಯರು ಹೇಳಿದರು** – ಭಗವಂತನೇ! ಯಾರು ತನ್ನ ಸಮಸ್ತ ಕರ್ಮಗಳನ್ನು ಕರ್ಮೇಶ್ವರನಾದ ನಿನಗೆ ಅರ್ಪಿಸಿ, ಯಜ್ಞೇಶ್ವರನೂ, ಯಜ್ಞಪುರುಷನೂ ಆದ ನಿನ್ನನ್ನು ಆರಾಧಿಸಿರುವನೋ, ಅವನ ಕರ್ಮದಲ್ಲಿ ಕೊರತೆ, ವಿಷಮತೆ ಹೇಗೆ ಉಳಿಯಬಲ್ಲದು? ॥ ೧೫ ॥ ಏಕೆಂದರೆ, ಮಂತ್ರಗಳ, ಅನುಷ್ಠಾನ ಪದ್ಧತಿಯ, ದೇಶ, ಕಾಲ, ಪಾತ್ರ, ವಸ್ತು ಇವೆಲ್ಲವುಗಳ ಲೋಪ ದೋಷಗಳು ಅಚ್ಯುತಾನಂತಗೋವಿಂದ ಎಂಬ ನಿನ್ನ ನಾಮಸಂಕೀರ್ತನೆಯಿಂದಲೇ ಪರಿಹಾರವಾಗುವುವು. ನಿನ್ನ ನಾಮವು ಎಲ್ಲ ಕೊರತೆಗಳನ್ನೂ ಪೂರ್ಣಗೊಳಿಸುವುದು. ॥ ೧೬ ॥ ಆದರೂ ಅನಂತನೇ! ನೀನು ಸ್ವತಃ ಹೇಳುತ್ತಿರುವೆ. ಆದ್ದರಿಂದ ನಿನ್ನ ಆಜ್ಞೆಯನ್ನು ಅವಶ್ಯವಾಗಿ ಪಾಲಿಸುತ್ತೇವೆ. ನಿನ್ನ ಆಜ್ಞೆಯನ್ನು ಪಾಲಿಸುವುದೇ ಮನುಷ್ಯನಿಗೆ ಶ್ರೇಯಸ್ಸಿನ ದೊಡ್ಡ ಸಾಧನೆಯಾಗಿದೆ. ॥ ೧೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ರಾಜಾ! ಪೂಜ್ಯರಾದ ಶುಕ್ರಾಚಾರ್ಯರು ಭಗವಾನ್ ಶ್ರೀಹರಿಯ ಈ ಆಜ್ಞೆಯನ್ನು ಶಿರಸಾವಹಿಸಿ ಇತರ ಬ್ರಹ್ಮರ್ಷಿಗಳೊಡನೆ ಬಲಿಯ ಯಜ್ಞದಲ್ಲಿ ಉಳಿದಿರುವ ಕರ್ಮಾಂಗಗಳನ್ನು ವಿಧಿವತ್ತಾಗಿ ಪೂರ್ಣಗೊಳಿಸಿದರು. ॥ ೧೮ ॥ ಪರೀಕ್ಷಿತನೇ! ಹೀಗೆ ಭಗವಾನ್ ವಾಮನನು ಬಲಿಯಿಂದ ಮೂರು ಹೆಜ್ಜೆಗಳಷ್ಟು ಭೂಮಿಯನ್ನು ದಾನವಾಗಿ ಕೇಳಿ, ಶತ್ರುಗಳು ಅಪಹರಿಸಿಕೊಂಡಿದ್ದ ಸ್ವರ್ಗದ ರಾಜ್ಯವನ್ನು ತನ್ನ ಅಣ್ಣನಾದ ಇಂದ್ರನಿಗೆ ಕೊಡಿಸಿದನು. ॥ ೧೯ ॥ ಇದಾದ ಬಳಿಕ ಪ್ರಜಾಪತಿಗಳಿಗೆ ಒಡೆಯರಾದ ಬ್ರಹ್ಮದೇವರು ದೇವತೆಗಳು, ಋಷಿಗಳು, ಪಿತೃಗಳು, ಮನು, ದಕ್ಷ, ಭೃಗು, ಅಂಗಿರಾ, ಸನತ್ಕುಮಾರರು ಮತ್ತು ರುದ್ರದೇವರು ಇವರುಗಳೊಡನೆ ಕಶ್ಯಪ-ಅದಿತಿಯರಿಗೆ ಸಂತೋಷಗೊಳಿಸಲು ಹಾಗೂ ಸಮಸ್ತ ಪ್ರಾಣಿಗಳ ಅಭ್ಯುದಯಕ್ಕಾಗಿ, ಎಲ್ಲ ಲೋಕಗಳಿಗೂ, ಲೋಕಪಾಲಕರಿಗೂ ಒಡೆಯನನ್ನಾಗಿ ಶ್ರೀವಾಮನಮೂರ್ತಿಯನ್ನು ಅಭಿಷೇಕ ಮಾಡಿದರು. ॥ ೨೦-೨೧ ॥

ಪರೀಕ್ಷಿತನೇ! ವೇದಗಳು, ಸಮಸ್ತ ದೇವತೆಗಳು, ಧರ್ಮ, ಯಶಸ್ಸು ಲಕ್ಷ್ಮೀ, ಮಂಗಳ, ವ್ರತ, ಸ್ವರ್ಗ, ಅಪವರ್ಗ ಇವೆಲ್ಲದರ ರಕ್ಷಕನ ರೂಪದಲ್ಲಿ ಸಮಸ್ತರ ಪರಮ ಕಲ್ಯಾಣಕ್ಕಾಗಿ ಸರ್ವಶಕ್ತಿವಂತನಾದ ಭಗವಾನ್ ವಾಮನನನ್ನು ಬ್ರಹ್ಮದೇವರು ಉಪೇಂದ್ರನ ಪದವಿಯಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿದರು. ಇದನ್ನು ನೋಡಿ ಎಲ್ಲ ಪ್ರಾಣಿಗಳಿಗೂ ಮಹದಾನಂದವಾಯಿತು. ॥ ೨೨-೨೩ ॥ ಬಳಿಕ ದೇವೇಂದ್ರನು ಬ್ರಹ್ಮದೇವರ ಅಪ್ಪಣೆಯಂತೆ ಲೋಕಪಾಲಕರೊಂದಿಗೆ ವಾಮನ ಭಗವಂತನನ್ನು ಮುಂದೆಮಾಡಿಕೊಂಡು ವಿಮಾನದಲ್ಲಿ ಕುಳ್ಳಿರಿಸಿಕೊಂಡು ತನ್ನೊಂದಿಗೆ ಸ್ವರ್ಗಕ್ಕೆ ಕೊಂಡುಹೋದನು. ॥ ೨೪ ॥ ದೇವೇಂದ್ರನಿಗಾದರೋ ಮೂರು ಲೋಕದ ರಾಜ್ಯ ದೊರೆಯಿತು. ಅದಕ್ಕಿಂತಲೂ ಮಿಗಿಲಾಗಿ ಭಗವಾನ್ ವಾಮನನ ಕರಕಮಲಗಳ ಛತ್ರಛಾಯೆ ದೊರೆಯಿತು. ಸರ್ವಶ್ರೇಷ್ಠ ಐಶ್ವರ್ಯಲಕ್ಷ್ಮಿಯಿಂದ ಸೇವಿತನಾಗಿ ಅವನು ನಿರ್ಭಯನಾಗಿ ಆನಂದೋತ್ಸವವನ್ನು ಆಚರಿಸಿದನು. ॥ ೨೫ ॥

ಬ್ರಹ್ಮಾ ಶರ್ವಃ ಕುಮಾರಶ್ಚ ಭೃಗ್ವಾದ್ಯಾ ಮುನಯೋ ನೃಪ ।
ಪಿತರಃ ಸರ್ವಭೂತಾನಿ ಸಿದ್ಧಾ ವೈಮಾನಿಕಾಶ್ಚ ಯೇ ॥ ೨೬ ॥

ಸುಮಹತ್ಕರ್ಮ ತದ್ವಿಷ್ಣೋರ್ಗಾಯಂತಃ ಪರಮಾದ್ಭುತಮ್ ।
ಧಿಷ್ಣ್ಯಾನಿ ಸ್ವಾನಿ ತೇ ಜಗ್ಮುರದಿತಿಂ ಚ ಶಶಂಸಿರೇ ॥ ೨೭ ॥

ಸರ್ವಮೇತನ್ಮಯಾಽಽಖ್ಯಾತಂ ಭವತಃ ಕುಲನಂದನ ।
ಉರುಕ್ರಮಸ್ಯ ಚರಿತಂ ಶ್ರೋತೃಣಾಮಘಮೋಚನಮ್ ॥ ೨೮ ॥

ಪಾರಂ ಮಹಿಮ್ನ ಉರು ವಿಕ್ರಮತೋ ಗೃಣಾನೋ
ಯಃ ಪಾರ್ಥಿವಾನಿ ವಿಮಮೇ ಸ ರಜಾಂಸಿ ಮರ್ತ್ಯಃ ।
ಕಿಂ ಜಾಯಮಾನ ಉತ ಜಾತ ಉಪೈತಿ ಮರ್ತ್ಯ
ಇತ್ಯಾಹ ಮಂತ್ರದೃಗೃಷಿಃ ಪುರುಷಸ್ಯ ಯಸ್ಯ॥ ೨೯ ॥

ಯ ಇದಂ ದೇವದೇವಸ್ಯ ಹರೇರದ್ಭುತಕರ್ಮಣಃ ।
ಅವತಾರಾನುಚರಿತಂ ಶೃಣ್ವನ್ಯಾತಿ ಪರಾಂ ಗತಿಮ್ ॥ ೩೦ ॥

ಕ್ರಿಯಮಾಣೇ ಕರ್ಮಣೀದಂ ದೈವೇ ಪಿತ್ರ್ಯೇಽಥ ಮಾನುಷೇ ।
ಯತ್ರ ಯತ್ರಾನುಕೀರ್ತ್ಯೇತ ತತ್ತೇಷಾಂ ಸುಕೃತಂ ವಿದುಃ ॥ ೩೧ ॥

ಶಿವ, ವಿರಿಂಚಿ, ಸನತ್ಕುಮಾರರು, ಭೃಗುವೇ ಮುಂತಾದ ಮುನಿಗಳು, ಪಿತೃಗಳು, ಸಮಸ್ತ ಪ್ರಾಣಿಗಳು, ಸಿದ್ಧರೂ, ವಿಮಾನಾರೂಢರಾದ ದೇವತೆಗಳು ಭಗವಂತನ ಈ ಪರಮ ಅದ್ಭುತವಾದ ಹಾಗೂ ಅತ್ಯಂತ ಮಹತ್‌ಕರ್ಮವನ್ನು ಹೇಳುತ್ತಾ, ಅದಿತಿದೇವಿಯನ್ನು ಶ್ಲಾಘಿಸುತ್ತಾ ತಮ್ಮ-ತಮ್ಮ ಲೋಕಗಳಿಗೆ ತೆರಳಿದರು. ॥ ೨೬-೨೭ ॥

ಕುರುನಂದನನೇ! ಕೇಳಿದವರ ಸಮಸ್ತ ಪಾಪಗಳನ್ನು ಪರಿಹರಿಸುವ ಭಗವಾನ್ ತ್ರಿವಿಕ್ರಮನ ಅದ್ಭುತವಾದ ಈ ಚರಿತ್ರೆಯನ್ನು ನಾನು ನಿನಗೆ ಹೇಳಿರುತ್ತೇನೆ. ॥ ೨೮ ॥ ಭಗವಂತನ ಲೀಲೆಗಳು ಅನಂತ. ಅವನ ಮಹಿಮೆ ಅಪಾರ. ಅವನ ಮಹಿಮೆಯ ಪಾರವನ್ನು ಕಾಣಲಿಚ್ಛಿಸುವವನು ಪೃಥಿವೀಯ ಪರಮಾಣುಗಳನ್ನು ಎಣಿಸಲು ಹೊರಟಿರುವಂತೆ ಇದೆ. ಭಗವಂತನ ಸಂಬಂಧದಲ್ಲಿ ಮಂತ್ರದ್ರಷ್ಟಾರರಾದ ಮಹರ್ಷಿ ವಸಿಷ್ಠರು ವೇದದಲ್ಲಿ - 'ಭಗವಂತನ ಮಹಿಮೆಯ ಪಾರವನ್ನು ಕಾಣಬಲ್ಲ ಪುರುಷನು ಈ ಹಿಂದೆ ಯಾರೂ ಇರಲಿಲ್ಲ, ಈಗಲೂ ಇಲ್ಲ, ಮುಂದೆಯೂ ಇರಲಾರರು' ಎಂದು ಹೇಳಿರುವರು. ॥ ೨೯ ॥ ದೇವತೆಗಳ ಆರಾಧ್ಯದೇವನಾದ ಅದ್ಭುತಲೀಲಾಧಾರೀ ವಾಮನ ಭಗವಂತನ. ಈ ಅವತಾರ ಚರಿತ್ರವನ್ನು ಶ್ರವಣಿಸುವವನಿಗೆ ಪರಮಗತಿಯು ಪ್ರಾಪ್ತವಾಗುವುದು. ॥ ೩೦ ॥ ದೇವಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ (ಅತಿಥಿಸೇವೆ) ಮುಂತಾದ ಯಾವುದೇ ಕರ್ಮಗಳ ಅನುಷ್ಠಾನ ನಡೆಯುವಲ್ಲಿ ಭಗವಂತನ ಈ ಲೀಲೆಯ ಕೀರ್ತನೆಯು ಆ ಕರ್ಮವನ್ನು ಸಫಲಗೊಳಿಸುತ್ತದೆ ಎಂದು ಮಹಾ-ಮಹಾ ವಿದ್ವಾಂಸರು ಹೇಳುತ್ತಾರೆ. ॥ ೩೧ ॥

*ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೨೩ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ವಾಮನಾವತಾರಚರಿತೇ ತ್ರಯೋವಿಂಶೋಽಧ್ಯಾಯಃ ॥ ೨೩ ॥

# ಇಪ್ಪತ್ತನಾಲ್ಕನೆಯ ಅಧ್ಯಾಯ

## ಭಗವಂತನ ಮತ್ಸ್ಯಾವತಾರದ ಕಥೆ

*ರಾಜೋವಾಚ*

ಭಗವನ್ ಶ್ರೋತುಮಿಚ್ಛಾಮಿ ಹರೇರದ್ಭುತಕರ್ಮಣಃ ।
ಅವತಾರಕಥಾಮಾದ್ಯಾಂ ಮಾಯಾಮತ್ಸ್ಯವಿಡಂಬನಮ್ ॥ ೧ ॥

ಯದರ್ಥಮದಧಾದ್ರೂಪಂ ಮಾತ್ಸ್ಯಂ ಲೋಕಜುಗುಪ್ಸಿತಮ್ ।
ತಮಃಪ್ರಕೃತಿ ದುರ್ಮರ್ಷಂ ಕರ್ಮಗ್ರಸ್ತ ಇವೇಶ್ವರಃ ॥ ೨ ॥

ಪರೀಕ್ಷಿದ್ರಾಜನು ಕೇಳಿದನು - ಪೂಜ್ಯರೇ! ಭಗವಂತನ ಕರ್ಮಗಳು ಪರಮಾದ್ಭುತವಾದವುಗಳು. ಅವನೊಮ್ಮೆ ತನ್ನ ಯೋಗಮಾಯೆಯಿಂದ ಮತ್ಸ್ಯಾವತಾರವನ್ನು ತಾಳಿ ಸುಂದರವಾದ ಲೀಲೆಗಳನ್ನು ತೋರಿಸಿದನು. ನಾನು ಭಗವಂತನ ಆ ಆದಿ ಅವತಾರದ ಕಥೆಯನ್ನು ಕೇಳಲು ಇಚ್ಛಿಸುತ್ತೇನೆ. ॥ ೧ ॥ ಪೂಜ್ಯರೇ! ಮತ್ಸ್ಯಯೋನಿಯಾದರೋ ಲೋಕನಿಂದಿತವಾಗಿದೆ. ಇನ್ನೊಂದು ತಮೋಗುಣೀ ಮತ್ತು ಅಸಹ್ಯ ಪರತಂತ್ರತೆಯಿಂದಲೂ ಕೂಡಿದೆ. ಸರ್ವಶಕ್ತನಾಗಿದ್ದರೂ ಭಗವಂತನು ಕರ್ಮಬಂಧನದಲ್ಲಿ ಬಂಧಿತರಾದ ಜೀವಿಗಳಂತೆ ಈ ಮತ್ಸ್ಯರೂಪವನ್ನು ಏಕೆ ಧರಿಸಿದನು? ॥ ೨ ॥ ಮಹಾತ್ಮರೇ! ಮಹಾತ್ಮರಿಂದ ಕೀರ್ತಿಸಲ್ಪಡುವ

ಏತನ್ನೋ ಭಗವನ್ಸರ್ವಂ ಯಥಾವದ್ವಕ್ತುಮರ್ಹಸಿ ।
ಉತ್ತಮಶ್ಲೋಕಚರಿತಂ ಸರ್ವಲೋಕಸುಖಾವಹಮ್ ॥ ೩ ॥

*ಸೂತ ಉವಾಚ*

ಇತ್ಯುಕ್ತೋ ವಿಷ್ಣುರಾತೇನ ಭಗವಾನ್ಬಾದರಾಯಣಿಃ ।
ಉವಾಚ ಚರಿತಂ ವಿಷ್ಣೋರ್ಮಾತ್ಸ್ಯರೂಪೇಣ ಯತ್ಕೃತಮ್ ॥ ೪ ॥

*ಶ್ರೀಶುಕ ಉವಾಚ*

ಗೋವಿಪ್ರಸುರಸಾಧೂನಾಂ ಛಂದಸಾಮಪಿ ಚೇಶ್ವರಃ ।
ರಕ್ಷಾಮಿಚ್ಛಂಸ್ತನೂರ್ಧತ್ತೇ ಧರ್ಮಸ್ಯಾರ್ಥಸ್ಯ ಚೈವ ಹಿ ॥ ೫ ॥

ಉಚ್ಚಾವಚೇಷು ಭೂತೇಷು ಚರನ್ವಾಯುರಿವೇಶ್ವರಃ ।
ನೋಚ್ಚಾವಚತ್ವಂ ಭಜತೇ ನಿರ್ಗುಣತ್ವಾದ್ಧಿಯೋ ಗುಣೈಃ ॥ ೬ ॥

ಆಸೀದತೀತಕಲ್ಪಾಂತೇ ಬ್ರಾಹ್ಮೋ ನೈಮಿತ್ತಿಕೋ ಲಯಃ ।
ಸಮುದ್ರೋಪಪ್ಲುತಾಸ್ತತ್ರ ಲೋಕಾ ಭೂರಾದಯೋ ನೃಪ ॥ ೭ ॥

ಕಾಲೇನಾಗತನಿದ್ರಸ್ಯ ಧಾತುಃ ಶಿಶಯಿಷೋರ್ಬಲೀ ।
ಮುಖತೋ ನಿಃಸೃತಾನ್ವೇದಾನ್ಹಯಗ್ರೀವೋಽಂತಿಕೇಽಹರತ್ ॥ ೮ ॥

ಜ್ಞಾತ್ವಾ ತದ್ದಾನವೇಂದ್ರಸ್ಯ ಹಯಗ್ರೀವಸ್ಯ ಚೇಷ್ಟಿತಮ್ ।
ದಧಾರ ಶಫರೀರೂಪಂ ಭಗವಾನ್ಹರಿರೀಶ್ವರಃ ॥ ೯ ॥

ತತ್ರ ರಾಜಋಷಿಃ ಕಶ್ಚಿನ್ನಾಮ್ನಾ ಸತ್ಯವ್ರತೋ ಮಹಾನ್ ।
ನಾರಾಯಣ ಪರೋಽತಪತ್ತಪಃ ಸ ಸಲಿಲಾಶನಃ ॥ ೧೦ ॥

ಯೋಽಸಾವಸ್ಮಿನ್ಮಹಾಕಲ್ಪೇ ತನಯಃ ಸ ವಿವಸ್ವತಃ ।
ಶ್ರಾದ್ಧದೇವ ಇತಿ ಖ್ಯಾತೋ ಮನುತ್ವೇ ಹರಿಣಾರ್ಪಿತಃ ॥ ೧೧ ॥

ಏಕದಾ ಕೃತಮಾಲಾಯಾಂ ಕುರ್ವತೋ ಜಲತರ್ಪಣಮ್ ।
ತಸ್ಯಾಂಜಲ್ಯುದಕೇ ಕಾಚಿಚ್ಛಫರ್ಯೇಕಾಭ್ಯಪದ್ಯತ ॥ ೧೨ ॥

ಸತ್ಯವ್ರತೋಽಂಜಲಿಗತಾಂ ಸಹ ತೋಯೇನ ಭಾರತ ।
ಉತ್ಸಸರ್ಜ ನದೀತೋಯೇ ಶಫರೀಂ ದ್ರವಿಡೇಶ್ವರಃ ॥ ೧೩ ॥

ಭಗವಂತನ ಚರಿತ್ರೆಯು ಸಮಸ್ತ ಪ್ರಾಣಿಗಳಿಗೆ ಸುಖವನ್ನು ಕೊಡುವಂತಹುದಾಗಿದೆ. ತಾವು ದಯಮಾಡಿ ಅವನ ಆ ಎಲ್ಲ ಲೀಲೆಗಳನ್ನು ಪೂರ್ಣರೂಪದಿಂದ ವರ್ಣಿಸಿರಿ. ॥ ೩ ॥

**ಸೂತಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳಿರಾ! ಪರೀಕ್ಷಿದ್ರಾಜನು ಶ್ರೀಶುಕಮಹಾಮುನಿಗಳಲ್ಲಿ ಹೀಗೆ ಪ್ರಶ್ನಿಸಿದಾಗ ಅವರು ಮತ್ಸ್ಯಾವತಾರವನ್ನೆತ್ತಿ ಮಹಾವಿಷ್ಣುವು ಮಾಡಿದ ಕರ್ಮಗಳನ್ನು ವರ್ಣಿಸಲು ಪ್ರಾರಂಭಿಸಿದರು – ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಭಗವಂತನಾದರೋ ಎಲ್ಲರ ಏಕಮಾತ್ರ ಸ್ವಾಮಿಯಾಗಿದ್ದಾನೆ. ಹೀಗಿದ್ದರೂ ಅವನು ಗೋವು, ಬ್ರಾಹ್ಮಣರು, ದೇವತೆಗಳು, ಸಾಧುಗಳು, ವೇದ, ಧರ್ಮಾರ್ಥಗಳು ಹೀಗೆ ಇವುಗಳ ರಕ್ಷಣೆಗಾಗಿ ನಾನಾ ವಿಧವಾದ ಶರೀರಗಳನ್ನು ಧರಿಸಿ ಅವತರಿಸುತ್ತಾನೆ. ॥ ೫ ॥ ಆ ಸರ್ವಶಕ್ತನಾದ ಪ್ರಭುವು ವಾಯುವಿನಂತೆ ಮೇಲೆ-ಕೆಳಗೆ, ಸಣ್ಣ-ದೊಡ್ಡ ಎಲ್ಲ ಪ್ರಾಣಿಗಳಲ್ಲಿ ಅಂತರ್ಯಾಮಿ ರೂಪದಿಂದ ಲೀಲೆ ಮಾಡುತ್ತಾನೆ. ಆದರೆ ಆಯಾ ಪ್ರಾಣಿಗಳ ಬುದ್ಧಿಗತ ಗುಣಗಳಿಂದ ಅವನು ಸಣ್ಣವನು-ದೊಡ್ಡವನು, ಎತ್ತರ-ತಗ್ಗು ಆಗುವುದಿಲ್ಲ, ಏಕೆಂದರೆ, ಅವನು ವಾಸ್ತವವಾಗಿ ಸಮಸ್ತ ಪ್ರಾಕೃತಗುಣಗಳಿಂದ ರಹಿತನಾಗಿದ್ದು ನಿರ್ಗುಣನೇ ಆಗಿದ್ದಾನೆ. ॥ ೬ ॥ ರಾಜೇಂದ್ರ! ಹಿಂದಿನ ಕಲ್ಪದ ಅಂತ್ಯದಲ್ಲಿ ಬ್ರಹ್ಮದೇವರು ನಿದ್ರಿಸಿದ್ದರಿಂದ ಬ್ರಾಹ್ಮವೆಂಬ ನೈಮಿತ್ತಿಕ ಪ್ರಳಯವಾಗಿತ್ತು. ಆಗ ಭೂರ್ಲೋಕ ಮೊದಲಾದ ಎಲ್ಲ ಲೋಕಗಳು ಸಮುದ್ರದಲ್ಲಿ ಮುಳುಗಿಹೋಗಿದ್ದವು. ॥ ೭ ॥ ಹಗಲು ಕಳೆದುಹೋಗಿ ರಾತ್ರಿಯು ಪ್ರಾರಂಭವಾದ ಕಾರಣ ಬ್ರಹ್ಮನು ನಿದ್ರಾಪರವಶನಾದನು. ಆ ಸಮಯದಲ್ಲಿ ವೇದಗಳು ಅವನ ಮುಖದಿಂದ ಹೊರಬಂದವು. ಆಗ ಸಮೀಪದಲ್ಲಿಯೇ ಇದ್ದ ಹಯಗ್ರೀವನೆಂಬ ಬಲಾಢ್ಯನಾದ ದೈತ್ಯನು ವೇದಗಳನ್ನು ಯೋಗಬಲದಿಂದ ಅಪಹರಿಸಿಬಿಟ್ಟನು. ॥ ೮ ॥ ಸರ್ವಶಕ್ತನಾದ ಭಗವಾನ್ ಶ್ರೀಹರಿಗೆ ದಾನವರಾಜನಾದ ಹಯಗ್ರೀವನ ಈ ಕಾರ್ಯವು ತಿಳಿದುಹೋಯಿತು,. ವೇದಗಳನ್ನು ಉದ್ಧರಿಸುವುದಕ್ಕಾಗಿಯೇ ಅವನು ಮತ್ಸ್ಯಾವತಾರವನ್ನು ತಾಳಿದನು. ॥ ೯ ॥

ಪರೀಕ್ಷಿದ್ರಾಜನೇ! ಆ ಸಮಯದಲ್ಲಿ ಸತ್ಯವ್ರತನೆಂಬ ಉದಾರಿಯೂ, ನಾರಾಯಣಪರಾಯಣನೂ ಆದ ರಾಜರ್ಷಿಯು ಕೇವಲ ನೀರನ್ನು ಮಾತ್ರ ಕುಡಿದು ತಪಸ್ಸನ್ನಾಚರಿಸುತ್ತಿದ್ದನು. ॥ ೧೦ ॥ ಆ ಸತ್ಯವ್ರತನೇ ವರ್ತಮಾನ ಶ್ವೇತವರಾಹ ಮಹಾಕಲ್ಪದಲ್ಲಿ ಸೂರ್ಯದೇವನ ಮಗನಾಗಿ ಶ್ರಾದ್ಧದೇವನೆಂಬ ಹೆಸರಿನಿಂದ ವಿಖ್ಯಾತನಾಗಿದ್ದಾನೆ. ಅವನನ್ನು ಭಗವಂತನು ವೈವಸ್ವತಮನುವನ್ನಾಗಿ ಮಾಡಿರುವನು. ॥ ೧೧ ॥ ಒಂದು ದಿನ ಆ ರಾಜರ್ಷಿಯು ಕೃತಮಾಲಾ ನದಿಯಲ್ಲಿ ನೀರಿನಿಂದ ತರ್ಪಣಗಳನ್ನು ಕೊಡುತ್ತಿದ್ದನು. ಆಗಲೇ ಅವನ ಬೊಗಸೆಯ ನೀರಿನಲ್ಲಿ ಒಂದು ಸಣ್ಣ ಮೀನು ಬಂದುಬಿಟ್ಟಿತು. ॥ ೧೨ ॥ ಪರೀಕ್ಷಿತನೇ! ದ್ರವಿಡದೇಶದ ಸತ್ಯವ್ರತರಾಜನು ತನ್ನ ಬೊಗಸೆಯಲ್ಲಿ ಬಂದಿರುವ ಮೀನನ್ನು ನೀರಿನೊಂದಿಗೆ ಪುನಃ ನದಿಯಲ್ಲಿ ಬಿಟ್ಟುಬಿಟ್ಟನು. ॥ ೧೩ ॥ ನೀರಿಗೆ ಬಿಟ್ಟೊಡನೆ ಆ ಮೀನು ಕರುಣಾಜನಕ ರೀತಿಯಿಂದ ಪರಮದ

ತಮಾಹ ಸಾತಿಕರುಣಂ ಮಹಾಕಾರುಣಿಕಂ ನೃಪಮ್ ।
ಯಾದೋಭ್ಯೋ ಜ್ಞಾತಿಘಾತಿಭ್ಯೋ ದೀನಾಂ ಮಾಂ ದೀನವತ್ಸಲ ।
ಕಥಂ ವಿಸೃಜಸೇ ರಾಜನ್ಭೀತಾಮಸ್ಮಿನ್ಸರಿಜ್ಜಲೇ ॥ ೧೪ ॥

ತಮಾತ್ಮನೋಽನುಗ್ರಹಾರ್ಥಂ ಪ್ರೀತ್ಯಾ ಮತ್ಸ್ಯವಪುರ್ಧರಮ್ ।
ಅಜಾನನ್ರಕ್ಷಣಾರ್ಥಾಯ ಶಫರ್ಯಾಃ ಸ ಮನೋ ದಧೇ ॥ ೧೫ ॥

ತಸ್ಯಾ ದೀನತರಂ ವಾಕ್ಯಮಾಶ್ರುತ್ಯ ಸ ಮಹೀಪತಿಃ ।
ಕಲಶಾಪ್ಸು ನಿಧಾಯೈನಾಂ ದಯಾಲುರ್ನಿನ್ಯ ಆಶ್ರಮಮ್ ॥ ೧೬ ॥

ಸಾ ತು ತತ್ರೈಕರಾತ್ರೇಣ ವರ್ಧಮಾನಾ ಕಮಂಡಲೌ ।
ಅಲಬ್ಧ್ವಾಽಽತ್ಮಾವಕಾಶಂ ವಾ ಇದಮಾಹ ಮಹೀಪತಿಮ್ ॥ ೧೭ ॥

ನಾಹಂ ಕಮಂಡಲಾವಸ್ಮಿನ್ ಕೃಚ್ಛ್ರಂ ವಸ್ತುಮಿಹೋತ್ಸಹೇ ।
ಕಲ್ಪಯೌಕಃ ಸುವಿಪುಲಂ ಯತ್ರಾಹಂ ನಿವಸೇ ಸುಖಮ್ ॥ ೧೮ ॥

ಸ ಏನಾಂ ತತ ಆದಾಯ ನ್ಯಧಾದೌದಂಚನೋದಕೇ ।
ತತ್ರ ಕ್ಷಿಪ್ತಾ ಮುಹೂರ್ತೇನ ಹಸ್ತತ್ರಯಮವರ್ಧತ ॥ ೧೯ ॥

ನ ಮ ಏತದಲಂ ರಾಜನ್ಸುಖಂ ವಸ್ತುಮುದಂಚನಮ್ ।
ಪೃಥು ದೇಹಿ ಪದಂ ಮಹ್ಯಂ ಯತ್ತ್ವಾಹಂ ಶರಣಂ ಗತಾ ॥ ೨೦ ॥

ತತ ಆದಾಯ ಸಾ ರಾಜ್ಞಾ ಕ್ಷಿಪ್ತಾ ರಾಜನ್ಸರೋವರೇ ।
ತದಾವೃತ್ಯಾತ್ಮನಾ ಸೋಽಯಂ ಮಹಾಮೀನೋಽನ್ವವರ್ಧತ ॥ ೨೧ ॥

ನೈತನ್ಮೇ ಸ್ವಸ್ತಯೇ ರಾಜನ್ನುದಕಂ ಸಲಿಲೌಕಸಃ ।
ನಿಧೇಹಿ ರಕ್ಷಾಯೋಗೇನ ಹ್ರದೇ ಮಾಮವಿದಾಸಿನಿ ॥ ೨೨ ॥

ಇತ್ಯುಕ್ತಃ ಸೋಽನಯನ್ಮತ್ಸ್ಯಂ ತತ್ರ ತತ್ರಾವಿದಾಸಿನಿ ।
ಜಲಾಶಯೇ ಸಮ್ಮಿತಂ ತಂ ಸಮುದ್ರೇ ಪ್ರಾಕ್ಷಿಪಜ್ಝಷಮ್ ॥ ೨೩ ॥

ಕ್ಷಿಪ್ಯಮಾಣಸ್ತಮಾಹೇದಮಿಹ ಮಾಂ ಮಕರಾದಯಃ ।
ಅದಂತ್ಯತಿಬಲಾ ವೀರ ಮಾಂ ನೇಹೋತ್ಸ್ರಷ್ಟುಮರ್ಹಸಿ ॥ ೨೪ ॥

ಯಾಳುವಾದ ರಾಜನಲ್ಲಿ ಹೇಳಿತು – ಮಹಾರಾಜನೇ! ನೀನು ದೀನವತ್ಸಲನಾಗಿರುವೆ. ನೀರಿನಲ್ಲಿರುವ ಜಂತುಗಳು ತಮ್ಮ ಜಾತಿಗೆ ಸೇರಿದವರನ್ನೇ ತಿಂದುಹಾಕುತ್ತವೆ. ಚಿಕ್ಕಮೀನನ್ನು ದೊಡ್ಡಮೀನುಗಳು ನುಂಗಿಹಾಕುತ್ತವೆ. ನಾನು ಅವುಗಳ ಭಯದಿಂದ ಅತ್ಯಂತ ವ್ಯಾಕುಲವಾಗಿದ್ದೇನೆ. ನೀನು ನನ್ನನ್ನು ಪುನಃ ಈ ನದಿಯ ನೀರಿನಲ್ಲಿ ಏಕೆ ಬಿಡುತ್ತಿರುವೆ ? ॥ ೧೪ ॥ ಸತ್ಯವ್ರತಮಹಾರಾಜನಿಗೆ ಭಗವಂತನೇ ಸ್ವತಃ ನನ್ನ ಮೇಲೆ ಪ್ರಸನ್ನನಾಗಿ ಕರುಣೆದೋರಲು ಮತ್ಸ್ಯ ರೂಪದಿಂದ ಆಗಮಿಸಿದ್ದಾನೆ ಎಂಬುದು ತಿಳಿಯದು. ಅದಕ್ಕಾಗಿ ಅವನು ಆ ಮೀನನ್ನು ರಕ್ಷಿಸಬೇಕೆಂದು ಮನಸ್ಸಿನಲ್ಲೇ ಸಂಕಲ್ಪಿಸಿದನು. ॥ ೧೫ ॥

ಆ ಮೀನಿನ ಅತ್ಯಂತ ದೈನ್ಯದ ಮಾತನ್ನು ಕೇಳಿದ ರಾಜಾ ಸತ್ಯವ್ರತನು ದಯಾರ್ದ್ರಹೃದಯನಾಗಿ ತನ್ನ ಕಮಂಡಲುವಿನ ನೀರಿನಲ್ಲಿ ಅದನ್ನಿಟ್ಟುಕೊಂಡು ಆಶ್ರಮಕ್ಕೆ ತಂದನು. ॥ ೧೬ ॥ ಆಶ್ರಮಕ್ಕೆ ತಂದಬಳಿಕ ಒಂದೇ ರಾತ್ರಿಯಲ್ಲಿ ಆ ಮೀನು ಆ ಕಮಂಡಲುವಿನಲ್ಲಿ ಹಿಡಿಸಲಾರದಷ್ಟು ದೊಡ್ಡದಾಯಿತು. ಆಗ ಆ ಮೀನು ರಾಜನಲ್ಲಿ ಹೇಳಿತು –॥ ೧೭ ॥ ಮಹಾರಾಜಾ! ಈ ಕಮಂಡಲುವಿನಲ್ಲಿ ನಾನು ಕಷ್ಟಪಟ್ಟಾದರೂ ಇರಲು ಸಾಧ್ಯವಾಗದು. ಆದ್ದರಿಂದ ನಾನು ಸುಖವಾಗಿ ಇರಬಹುದಾದ ಒಂದು ದೊಡ್ಡದಾದ ಸ್ಥಾನವನ್ನು ನನಗಾಗಿ ಕಲ್ಪಿಸಿಕೊಡು. ॥ ೧೮ ॥ ಸತ್ಯವ್ರತರಾಜನು ಆ ಮೀನಿನ ಮಾತನ್ನು ಕೇಳಿ ಒಂದು ದೊಡ್ಡದಾದ ನೀರಿನ ಮಡಕೆಯಲ್ಲಿ (ಹರಿಯಲ್ಲಿ) ಇರಿಸಿದನು. ಆದರೆ ಅದರಲ್ಲಿ ಇರಿಸುತ್ತಲೇ ಎರಡೇ ಗಳಿಗೆಯಲ್ಲಿ ಮೂರು ಮೊಳದಷ್ಟು ದೊಡ್ಡದಾಯಿತು. ॥ ೧೯ ॥ ಪುನಃ ಅದು ರಾಜನಿಗೆ ಹೇಳಿತು – ಸತ್ಯವ್ರತನೇ! ಈಗ ಈ ಮಡಕೆಯೂ ನನಗೆ ಸುಖವಾಗಿ ಇರಲು ಸಾಲದಾಗಿದೆ. ನಾನು ನಿನ್ನನ್ನೇ ಮರೆಹೊಕ್ಕಿದ್ದೇನೆ. ಅದಕ್ಕಾಗಿ ನನಗೆ ಇರಲು ಯಾವುದಾದರೊಂದು ಯೋಗ್ಯವಾದ ದೊಡ್ಡ ಸ್ಥಾನವನ್ನು ಕಲ್ಪಿಸಿಕೊಡು. ॥ ೨೦ ॥

ಪರೀಕ್ಷಿತನೇ! ಸತ್ಯವ್ರತಮಹಾರಾಜನು ಆ ಮೀನನ್ನು ಅಲ್ಲಿಂದ ಎತ್ತಿಕೊಂಡುಹೋಗಿ ಒಂದು ದೊಡ್ಡ ಸರೋವರದಲ್ಲಿ ಇರಿಸಿದನು. ಆದರೆ ಅದು ಸ್ವಲ್ಪಹೊತ್ತಿನಲ್ಲೇ ಒಂದು ಮಹಾಮತ್ಸ್ಯವಾಗಿ ಬೆಳೆದು ತನ್ನ ಶರೀರದಿಂದ ಆ ಸರೋವರವನ್ನೆಲ್ಲಾ ವ್ಯಾಪಿಸಿ ಬಿಟ್ಟಿತು. ॥ ೨೧ ॥ ಮತ್ತೆ ಪುನಃ ಹೇಳಿತು – ರಾಜನೇ! ನಾನು ಜಲಚರ ಪ್ರಾಣಿಯಾಗಿದ್ದೇನೆ. ಈ ಸರೋವರದ ನೀರೂ ಕೂಡ ನನಗೆ ಸುಖವಾಗಿ ವಾಸಿಸಲು ಸಾಲದಾಗಿದೆ. ಅದಕ್ಕಾಗಿ ನೀನು ನನ್ನನ್ನು ರಕ್ಷಿಸಿ ನನಗೆ ಯಾವುದಾದರೂ ಆಳವಾದ ದೊಡ್ಡ ಸರೋವರದಲ್ಲಿ ಇರಿಸು. ॥ ೨೨ ॥ ಅದರಂತೆ ರಾಜನು ಅದಕ್ಕಿಂತ ದೊಡ್ಡ ಸರೋವರದಲ್ಲಿ ಇರಿಸಿದಾಗ ಆ ಮೀನು ಬೆಳೆಯುತ್ತಲೇ ಹೋಯಿತು. ಮತ್ತೊಂದು ಸರೋವರ ಅದು ಸಾಲದಾದಾಗ ಇನ್ನೊಂದು ಸರೋವರ ಹೀಗೆ ಕಡೆಗೆ ರಾಜನು ಆ ಲೀಲಾಮತ್ಸ್ಯವನ್ನು ಸಮುದ್ರಕ್ಕೆ ತಂದುಬಿಟ್ಟನು. ॥ ೨೩ ॥ ಸಮುದ್ರಕ್ಕೆ ಹಾಕುವ ಸಮಯದಲ್ಲಿ ಮತ್ಸ್ಯರೂಪೀ ಭಗವಂತನು ಸತ್ಯವ್ರತನಿಗೆ ಹೇಳಿದನು – 'ವೀರಾಧಿವೀರನೇ! ಸಮುದ್ರದಲ್ಲಿ ದೊಡ್ಡ-ದೊಡ್ಡ ತಿಮಿಂಗಿಲಗಳಿವೆ. ಅವು ನನ್ನನ್ನು ತಿಂದುಬಿಟ್ಟಾವು. ಅದಕ್ಕಾಗಿ ನೀನು ನನ್ನನ್ನು ಸಮುದ್ರದಲ್ಲಿ ಬಿಡಬೇಡ.' ॥ ೨೪ ॥

ಏವಂ ವಿಮೋಹಿತಸ್ತೇನ ವದತಾ ವಲ್ಗುಭಾರತೀಮ್ ।
ತಮಾಹ ಕೋ ಭವಾನಸ್ಮಾನ್ಮತ್ಸ್ಯರೂಪೇಣ ಮೋಹಯನ್
॥ ೨೫ ॥

ನೈವಂವೀರ್ಯೋ ಜಲಚರೋ ದೃಷ್ಟೋಽಸ್ಮಾಭಿಃ ಶ್ರುತೋಽಪಿ ಚ ।
ಯೋ ಭವಾನ್ಯೋಜನಶತಮಹ್ನಾಭಿವ್ಯಾನಶೇ ಸರಃ
॥ ೨೬ ॥

ನೂನಂ ತ್ವಂ ಭಗವಾನ್ಸಾಕ್ಷಾದ್ಧರಿರ್ನಾರಾಯಣೋಽವ್ಯಯಃ ।
ಅನುಗ್ರಹಾಯ ಭೂತಾನಾಂ ಧತ್ಸೇ ರೂಪಂ ಜಲೌಕಸಾಮ್
॥ ೨೭ ॥

ನಮಸ್ತೇ ಪುರುಷಶ್ರೇಷ್ಠ ಸ್ಥಿತ್ಯುತ್ಪತ್ತ್ಯಪ್ಯಯೇಶ್ವರ ।
ಭಕ್ತಾನಾಂ ನಃ ಪ್ರಪನ್ನಾನಾಂ ಮುಖ್ಯೋ ಹ್ಯಾತ್ಮಗತಿರ್ವಿಭೋ
॥ ೨೮ ॥

ಸರ್ವೇ ಲೀಲಾವತಾರಾಸ್ತೇ ಭೂತಾನಾಂ ಭೂತಿಹೇತವಃ ।
ಜ್ಞಾತುಮಿಚ್ಛಾಮ್ಯದೋ ರೂಪಂ ಯದರ್ಥಂ ಭವತಾ ಧೃತಮ್
॥ ೨೯ ॥

ನ ತೇಽರವಿಂದಾಕ್ಷ ಪದೋಪಸರ್ಪಣಂ
ಮೃಷಾ ಭವೇತ್ಸರ್ವಸುಹೃತ್ಪ್ರಿಯಾತ್ಮನಃ ।
ಯಥೇತರೇಷಾಂ ಪೃಥಗಾತ್ಮನಾಂ ಸತಾ-
ಮದೀದೃಶೋ ಯದ್ವಪುರದ್ಭುತಂ ಹಿ ನಃ ॥ ೩೦ ॥

*ಶ್ರೀಶುಕ ಉವಾಚ*

ಇತಿ ಬ್ರುವಾಣಂ ನೃಪತಿಂ ಜಗತ್ಪತಿಃ
ಸತ್ಯವ್ರತಂ ಮತ್ಸ್ಯವಪುರ್ಯುಗಕ್ಷಯೇ ।
ವಿಹರ್ತುಕಾಮಃ ಪ್ರಲಯಾರ್ಣವೇಽಬ್ರವೀ-
ಚ್ಚಿಕೀರ್ಷುರೇಕಾಂತಜನಪ್ರಿಯಃ ಪ್ರಿಯಮ್ ॥ ೩೧ ॥

*ಶ್ರೀಭಗವಾನುವಾಚ*

ಸಪ್ತಮೇಽದ್ಯತನಾದೂರ್ಧ್ವಮಹನ್ಯೇತದರಿಂದಮ ।
ನಿಮಂಕ್ಷ್ಯತ್ಯಪ್ಯಯಾಂಭೋಧೌ ತ್ರೈಲೋಕ್ಯಂ ಭೂರ್ಭುವಾದಿಕಮ್
॥ ೩೨ ॥

ತ್ರಿಲೋಕ್ಯಾಂ ಲೀಯಮಾನಾಯಾಂ ಸಂವರ್ತಾಂಭಸಿ ವೈ ತದಾ ।
ಉಪಸ್ಥಾಸ್ಯತಿ ನೌಃ ಕಾಚಿದ್ವಿಶಾಲಾ ತ್ವಾಂ ಮಯೇರಿತಾ
॥ ೩೩ ॥

ತ್ವಂ ತಾವದೋಷಧೀಃ ಸರ್ವಾ ಬೀಜಾನ್ಯುಚ್ಚಾವಚಾನಿ ಚ ।
ಸಪ್ತರ್ಷಿಭಿಃ ಪರಿವೃತಃ ಸರ್ವಸತ್ತ್ವೋಪಬೃಂಹಿತಃ
॥ ೩೪ ॥

ಭಗವಾನ್ ಮತ್ಸ್ಯಮೂರ್ತಿಯ ಈ ಸುಮಧುರ ವಾಣಿಯನ್ನು ಕೇಳಿ ಸತ್ಯವ್ರತರಾಜನು ಮೋಹಮುಗ್ಧನಾಗಿ ಹೇಳಿದನು – ಮತ್ಸ್ಯ ರೂಪವನ್ನು ಧರಿಸಿ ನನ್ನನ್ನು ವಿಮೋಹಗೊಳಿಸುತ್ತಿರುವ ನೀನು ಯಾರು ? ॥ ೨೫ ॥ ಮಹಾನುಭಾವನೇ ! ನೀನು ಒಂದೇ ದಿನದಲ್ಲಿ ನೂರುಯೋಜನ ವಿಸ್ತಾರವುಳ್ಳ ಸರೋವರವನ್ನು ವ್ಯಾಪಿಸಿಬಿಟ್ಟಿರುವೆ. ಇಂತಹ ಅಮೋಘಶಕ್ತಿಯುಳ್ಳ ಜಲಚರವನ್ನು ನಾವು ಇಂದಿನವರೆಗೆ ಕಂಡಿಲ್ಲ, ಕೇಳಿಲ್ಲ. ॥ ೨೬ ॥ ನಿಶ್ಚಯವಾಗಿಯೂ ನೀನು ಸರ್ವಶಕ್ತಿಯುಳ್ಳ, ಸರ್ವಾಂತರ್ಯಾಮಿ, ಅವಿನಾಶಿ ಸಾಕ್ಷಾತ್ ಭಗವಾನ್ ಶ್ರೀಹರಿಯೇ ಆಗಿರುವೆ. ಜೀವಿಗಳ ಮೇಲೆ ಅನುಗ್ರಹ ತೋರಲೆಂದೇ ನೀನು ಜಲಚರದ ರೂಪವನ್ನು ಧರಿಸಿರುವೆ. ॥ ೨೭ ॥ ಪುರುಷೋತ್ತಮನೇ ! ನೀನೇ ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರಮಾಡುವ ಸ್ವಾಮಿಯಾಗಿರುವೆ. ನಿನಗೆ ನಾನು ನಮಸ್ಕರಿಸುತ್ತೇನೆ. ವಿಭುವೇ ! ಶರಣಾಗತ ಭಕ್ತರಾದ ನಮ್ಮಂತಹವರಿಗೆ ನೀನೇ ಪರಮಾತ್ಮನೂ, ಪರಮಾಶ್ರಯನೂ ಆಗಿರುವೆ. ॥ ೨೮ ॥ ನಿನ್ನ ಎಲ್ಲ ಲೀಲಾವತಾರಗಳು ಪ್ರಾಣಿಗಳ ಶ್ರೇಯಸ್ಸಿಗಾಗಿಯೇ ಇದ್ದರೂ ನೀನು ಈ ರೂಪವನ್ನು ಯಾವ ಉದ್ದೇಶಕ್ಕಾಗಿ ಧರಿಸಿರುವೆ ? ಇದನ್ನು ತಿಳಿಯಲು ನಾನು ಇಚ್ಛಿಸುತ್ತೇನೆ. ॥ ೨೯ ॥ ಅರವಿಂದನೇ ! ದೇಹಾದಿ ಅನಾತ್ಮ ಪದಾರ್ಥಗಳಲ್ಲಿ ಆತ್ಮಬುದ್ಧಿಯ ಅಭಿಮಾನಪಡುವ ಸಂಸಾರೀ ಜನರ ಆಶ್ರಯವು ವ್ಯರ್ಥವಾಗಿ ಹೋಗುವಂತೆ ನಿನ್ನ ಚರಣಕಮಲಗಳ ಶರಣಾಗತಿಯು ವ್ಯರ್ಥವಾಗಲಾರದು. ಏಕೆಂದರೆ, ನೀನು ಎಲ್ಲರ ಅಹೈತುಕ ಪ್ರೇಮಿಯಾಗಿರುವೆ. ಪರಮ ಪ್ರಿಯತಮನಾಗಿರುವೆ, ಆತ್ಮನಾಗಿರುವೆ. ಈಗ ನಮಗೆ ದರ್ಶನ ಕೊಡುತ್ತಿರುವ ಈ ರೂಪವು ಅದ್ಭುತವಾಗಿದೆ. ॥ ೩೦ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ ! ಭಕ್ತಪ್ರಿಯನಾದ, ಜಗತ್ಪತಿಯಾದ ಭಗವಂತನು ಮತ್ಸ್ಯರೂಪವನ್ನು ಧರಿಸಿ ಪ್ರಳಯಕಾಲದಲ್ಲಿ ಸಮುದ್ರದಲ್ಲಿ ವಿಹರಿಸಬೇಕೆಂಬ ಇಚ್ಛೆಯಿಂದ ಕೂಡಿದ್ದನು. ತನ್ನನ್ನು ನಾನಾ ಪ್ರಕಾರವಾಗಿ ಸ್ತೋತ್ರ ಮಾಡುತ್ತಿದ್ದ ಸತ್ಯವ್ರತನಿಗೆ ಪ್ರಿಯವನ್ನುಂಟುಮಾಡಬೇಕೆಂದು ಬಯಸಿ ಇಂತೆಂದನು – ॥ ೩೧ ॥

ಶ್ರೀಭಗವಂತನು ಹೇಳಿದನು – ಸತ್ಯವ್ರತಮಹಾರಾಜನೇ ! ಇಂದಿನಿಂದ ಏಳನೆಯ ದಿನ ಭೂಲೋಕವೇ ಮೊದಲಾದ ಮೂರೂ ಲೋಕಗಳೂ ಪ್ರಳಯಸಮುದ್ರದಲ್ಲಿ ಮುಳುಗಿಹೋಗುವುವು. ॥ ೩೨ ॥ ಮೂರೂ ಲೋಕಗಳು ಪ್ರಳಯಜಲದಲ್ಲಿ ಮುಳುಗಿಹೋದಾಗ ನನ್ನ ಪ್ರೇರಣೆಯಂತೆ ನಿನ್ನ ಬಳಿಗೆ ವಿಶಾಲವಾದೊಂದು ನೌಕೆಯು ಬರುವುದು. ॥ ೩೩ ॥ ಆಗ ನೀನು ಸಮಸ್ತ ಪ್ರಾಣಿಗಳ ಸೂಕ್ಷ್ಮಶರೀರಗಳನ್ನು ತೆಗೆದುಕೊಂಡು ಸಪ್ತರ್ಷಿಗಳೊಡನೆ ಆ ನೌಕೆಯನ್ನು ಹತ್ತಬೇಕು. ಸಮಸ್ತ ಮೂಲಿಕೆಗಳನ್ನು, ಬಗೆ-ಬಗೆಯ ಬೀಜಗಳನ್ನು ನೀನು ಜೊತೆಯಲ್ಲಿರಿಸಿಕೊಳ್ಳಬೇಕು. ॥ ೩೪ ॥ ಆ ಸಮಯದಲ್ಲಿ ಎಲ್ಲ ಕಡೆಯಲ್ಲಿಯೂ ಮಹಾಸಾಗರವೇ ಕಂಡು ಬಂದೀತು. ಬೆಳಕೂ ಇರುವುದಿಲ್ಲ. ಕೇವಲ ಸಪ್ತರ್ಷಿಗಳ ದಿವ್ಯ ಪ್ರಕಾಶವನ್ನೇ ನೀನು ಕಾಣುವೆ. ಅದರಿಂದಾಗಿ ಯಾವುದೇ ಭಯ

ಆರುಹ್ಯ ಬೃಹತೀಂ ನಾವಂ ವಿಚರಿಷ್ಯಸ್ಯವಿಕ್ಲವಃ ।
ಏಕಾರ್ಣವೇ ನಿರಾಲೋಕೇ ಋಷೀಣಾಮೇವ ವರ್ಚಸಾ ॥ ೩೫ ॥

ದೋಧೂಯಮಾನಾಂ ತಾಂ ನಾವಂ ಸಮೀರೇಣ ಬಲೀಯಸಾ ।
ಉಪಸ್ಥಿತಸ್ಯ ಮೇ ಶೃಂಗೇ ನಿಬಧ್ನೀಹಿ ಮಹಾಹಿನಾ ॥ ೩೬ ॥

ಅಹಂ ತ್ವಾಮೃಷಿಭಿಃ ಸಾಕಂ ಸಹನಾವಮುದನ್ವತಿ ।
ವಿಕರ್ಷನ್ವಿಚರಿಷ್ಯಾಮಿ ಯಾವದ್ಬ್ರಾಹ್ಮೀ ನಿಶಾ ಪ್ರಭೋ ॥ ೩೭ ॥

ಮದೀಯಂ ಮಹಿಮಾನಂ ಚ ಪರಂ ಬ್ರಹ್ಮೇತಿ ಶಬ್ದಿತಮ್ ।
ವೇತ್ಸ್ಯಸ್ಯನುಗೃಹೀತಂ ಮೇ ಸಂಪ್ರಶ್ನೈರ್ವಿವೃತಂ ಹೃದಿ ॥ ೩೮ ॥

ಇತ್ಥಮಾದಿಶ್ಯ ರಾಜಾನಂ ಹರಿರಂತರಧೀಯತ ।
ಸೋಽನ್ವವೈಕ್ಷತ ತಂ ಕಾಲಂ ಯಂ ಹೃಷೀಕೇಶ ಆದಿಶತ್ ॥ ೩೯ ॥

ಆಸ್ತೀರ್ಯ ದರ್ಭಾನ್ಪ್ರಾಕ್ಕೂಲಾನ್ರಾಜರ್ಷಿಃ ಪ್ರಾಗುದಙ್ಮುಖಃ ।
ನಿಷಸಾದ ಹರೇಃ ಪಾದೌ ಚಿಂತಯನ್ಮತ್ಸ್ಯರೂಪಿಣಃ ॥ ೪೦ ॥

ತತಃ ಸಮುದ್ರ ಉದ್ವೇಲಃ ಸರ್ವತಃ ಪ್ಲಾವಯನ್ಮಹೀಮ್ ।
ವರ್ಧಮಾನೋ ಮಹಾಮೇಘೈರ್ವರ್ಷದ್ಭಿಃ ಸಮದೃಶ್ಯತ ॥ ೪೧ ॥

ಧ್ಯಾಯನ್ಭಗವದಾದೇಶಂ ದದೃಶೇ ನಾವಮಾಗತಾಮ್ ।
ತಾಮಾರುರೋಹ ವಿಪ್ರೇಂದ್ರೈರಾದಾಯೌಷಧಿವೀರುಧಃ ॥ ೪೨ ॥

ತಮೂಚುರ್ಮುನಯಃ ಪ್ರೀತಾ ರಾಜನ್ ಧ್ಯಾಯಸ್ವ ಕೇಶವಮ್ ।
ಸ ವೈ ನಃ ಸಂಕಟಾದಸ್ಮಾದವಿತಾ ಶಂ ವಿಧಾಸ್ಯತಿ ॥ ೪೩ ॥

ಸೋಽನುಧ್ಯಾತಸ್ತತೋ ರಾಜ್ಞಾ ಪ್ರಾದುರಾಸೀನ್ಮಹಾರ್ಣವೇ ।
ಏಕಶೃಂಗಧರೋ ಮತ್ಸ್ಯೋ ಹೈಮೋ ನಿಯುತಯೋಜನಃ ॥ ೪೪ ॥

ನಿಬಧ್ಯ ನಾವಂ ತಚ್ಛೃಂಗೇ ಯಥೋಕ್ತೋ ಹರಿಣಾ ಪುರಾ ।
ವರತ್ರೇಣಾಹಿನಾ ತುಷ್ಟಸ್ತುಷ್ಟಾವ ಮಧುಸೂದನಮ್ ॥ ೪೫ ॥

*ರಾಜೋವಾಚ*

ಅನಾದ್ಯವಿದ್ಯೋಪಹತಾತ್ಮಸಂವಿದ-
ಸ್ತನ್ಮೂಲಸಂಸಾರಪರಿಶ್ರಮಾತುರಾಃ ।
ಯದೃಚ್ಛಯೇಹೋಪಸೃತಾ ಯಮಾಪ್ನುಯು-
ರ್ವಿಮುಕ್ತಿದೋ ನಃ ಪರಮೋ ಗುರುರ್ಭವಾನ್ ॥ ೪೬ ॥

ವಿಲ್ಲದೆ ನೀನು ಆ ವಿಶಾಲವಾದ ನೌಕೆಯಲ್ಲಿ ಕುಳಿತುಕೊಂಡು ಎಲ್ಲೆಡೆ ಸಂಚರಿಸುತ್ತಿರು. ॥ ೩೫ ॥ ಪ್ರಚಂಡವಾದ ಚಂಡಮಾರುತದಿಂದ ನೌಕೆಯು ಅಲ್ಲೋಲ ಕಲ್ಲೋಲವಾದಾಗ ನಾನು ಇದೇ ರೂಪದಿಂದ ಅಲ್ಲಿಗೆ ಬರುವೆನು. ಆಗ ನೀವುಗಳು ಸರ್ಪರಾಜನಾದ ವಾಸುಕಿಯನ್ನು ಹಗ್ಗವನ್ನಾಗಿಸಿ ಆ ನೌಕೆಯನ್ನು ನನ್ನ ಕೊಂಬಿಗೆ ಕಟ್ಟಿಹಾಕಿ. ॥ ೩೬ ॥ ಸತ್ಯವ್ರತನೇ! ಬಳಿಕ ಬ್ರಹ್ಮದೇವರ ರಾತ್ರಿಯು ಇರುವತನಕ ನಾನು ಸಪ್ತರ್ಷಿಗಳೊಡನೆ ನಿನ್ನನ್ನು ಆ ನೌಕೆಯಲ್ಲಿ ಕುಳ್ಳಿರಿಸಿಕೊಂಡು ಅದನ್ನು ಎಳೆದುಕೊಂಡು ಹೋಗುತ್ತಾ ಸಮುದ್ರದಲ್ಲಿ ಸಂಚರಿಸುವೆನು. ॥ ೩೭ ॥

ಆಗ ನೀನು ಪ್ರಶ್ನಿಸಿದುದಕ್ಕೆಲ್ಲ ನಾನು ಉತ್ತರಿಸುತ್ತಾ ಇರುವೆನು. ನನ್ನ ವಾಸ್ತವಿಕ ಪರಬ್ರಹ್ಮ ಮಹಿಮೆಯು ನನ್ನ ಅನುಗ್ರಹದಿಂದ ನಿನ್ನ ಹೃದಯದಲ್ಲಿ ಪ್ರಕಟವಾದೀತು. ಆದರಿಂದ ನೀನು ಸರಿಯಾಗಿ ಅರಿತುಕೊಳ್ಳುವೆ. ॥ ೩೮ ॥ ಸತ್ಯವ್ರತರಾಜನಿಗೆ ಹೀಗೆ ಆದೇಶವನ್ನಿತ್ತು ಭಗವಂತನು ಅಂತರ್ಧಾನನಾದನು. ಆದ್ದರಿಂದ ಭಗವಂತನು ನಿರ್ದೇಶಿಸಿದ್ದ ಆ ಕಾಲವನ್ನು ರಾಜನು ನಿರೀಕ್ಷಿಸುತ್ತಾ ಇದ್ದನು. ॥ ೩೯ ॥ ಬಳಿಕ ರಾಜರ್ಷಿಯಾದ ಸತ್ಯವ್ರತನು ಪೂರ್ವಾಗ್ರವಾಗಿ ದರ್ಭೆಗಳನ್ನು ಹಾಸಿ ಈಶಾನ್ಯದಿಕ್ಕಿಗೆ ಅಭಿಮುಖನಾಗಿ ಕುಳಿತು, ಮತ್ಸ್ಯರೂಪಿಯಾದ ಭಗವಂತನ ಚರಣಕಮಲಗಳನ್ನು ಧ್ಯಾನಿಸುತ್ತಿದ್ದನು. ॥ ೪೦ ॥ ಇಷ್ಟರಲ್ಲೇ ಭಗವಂತನು ಹೇಳಿದ ಆ ಸಮಯ ಸನ್ನಿಹಿತವಾಯಿತು. ರಾಜನು ನೋಡುತ್ತಾನೆ – ಸಮುದ್ರವು ತನ್ನ ಮೇರೆಗಳನ್ನು ಮೀರಿ ಉಕ್ಕುತ್ತಾ ಇದೆ. ಪ್ರಳಯಕಾಲದ ಭಯಂಕರ ಮೇಘಗಳು ಮಳೆಗರೆಯುತ್ತಾ ಇದೆ. ನೋಡುನೋಡುತ್ತಿರುವಂತೆ ಇಡೀ ಪೃಥಿವಿಯು ನೀರಿನಲ್ಲಿ ಮುಳುಗ ತೊಡಗಿತು. ॥ ೪೧ ॥ ಆಗ ರಾಜನು ಭಗವಂತನ ಆದೇಶವನ್ನು ನೆನೆದಾಗ ಒಂದು ನೌಕೆಯು ಬಳಿಗೆ ಬಂದಿರುವುದನ್ನು ನೋಡಿದನು. ಸತ್ಯವ್ರತನು ಸಕಲ ಔಷಧಿ-ವನಸ್ಪತಿ-ಧಾನ್ಯಬೀಜಗಳನ್ನು ಎತ್ತಿಕೊಂಡು ಸಪ್ತರ್ಷಿಗಳೊಡನೆ ನಾವೆಯನ್ನು ಹತ್ತಿದನು. ॥ ೪೨ ॥ ಸಪ್ತರ್ಷಿಗಳು ತುಂಬುಪ್ರೇಮದಿಂದ ಸತ್ಯವ್ರತರಾಜನಲ್ಲಿ ಹೇಳಿದರು – ರಾಜನೇ! ನೀನು ಭಗವಂತನನ್ನು ಧ್ಯಾನಿಸು. ಅವನೇ ನಮ್ಮನ್ನು ಈ ಸಂಕಟದಿಂದ ಪಾರುಗೊಳಿಸುವನು ಹಾಗೂ ಪರಮಸುಖವನ್ನು ಅನುಗ್ರಹಿಸುವನು. ॥ ೪೩ ॥ ಅವರ ಆದೇಶದಂತೆ ರಾಜನು ಭಗವಂತನ ಧ್ಯಾನ ಮಾಡಿದನು. ಆಗಲೇ ಆ ಮಹಾಸಮುದ್ರದಲ್ಲಿ ಮತ್ಸ್ಯರೂಪದಿಂದ ಭಗವಂತನು ಪ್ರಕಟನಾದನು. ಮತ್ಸ್ಯಭಗವಂತನ ಶರೀರವು ಭಂಗಾರದಂತೆ ಹೊಳೆಯುತ್ತಿತ್ತು. ಅವನ ಶರೀರವು ಒಂದುಲಕ್ಷ ಯೋಜನ ವಿಸ್ತಾರವಾಗಿತ್ತು. ತಲೆಯಲ್ಲಿ ಭಾರೀ ದೊಡ್ಡ ಒಂದು ಕೊಂಬೂ ಇತ್ತು. ॥ ೪೪ ॥ ಭಗವಂತನು ಹಿಂದೆ ಹೇಳಿದಂತೆ ಆ ನೌಕೆಯನ್ನು ನಾಗರಾಜ ವಾಸುಕಿಯನ್ನು ಹಗ್ಗವಾಗಿಸಿ ಭಗವಂತನ ಕೊಂಬಿಗೆ ಕಟ್ಟಲಾಯಿತು. ಬಳಿಕ ಸತ್ಯವ್ರತ ರಾಜನು ಪರಮ ಸಂತುಷ್ಟನಾಗಿ ಭಗವಂತನನ್ನು ಸ್ತುತಿಸತೊಡಗಿದನು. ॥ ೪೫ ॥

**ಸತ್ಯವ್ರತರಾಜನು ಹೇಳಿದನು** – ಪ್ರಭುವೇ! ಪ್ರಪಂಚದಲ್ಲಿರುವ ಜೀವಿಗಳ ಆತ್ಮಜ್ಞಾನವು ಅನಾದಿಯಾದ ಅವಿದ್ಯೆಯಿಂದ

ಜನೋಽಬುಧೋಽಯಂ ನಿಜಕರ್ಮಬಂಧನಃ
ಸುಖೇಚ್ಛಯಾ ಕರ್ಮ ಸಮೀಹತೇಽಸುಖಮ್ ।
ಯತ್ಸೇವಯಾ ತಾಂ ವಿಧುನೋತ್ಯಸನ್ಮತಿಂ
ಗ್ರಂಥಿಂ ಸ ಭಿಂದ್ಯಾದ್ಧೃದಯಂ ಸ ನೋ ಗುರುಃ ॥ ೪೭ ॥

ಯತ್ಸೇವಯಾಗ್ನೇರಿವ ರುದ್ರರೋದನಂ
ಪುಮಾನ್ವಿಜಹ್ಯಾನ್ಮಲಮಾತ್ಮನಸ್ತಮಃ ।
ಭಜೇತ ವರ್ಣಂ ನಿಜಮೇಷ ಸೋಽವ್ಯಯೋ
ಭೂಯಾತ್ಸ ಈಶಃ ಪರಮೋ ಗುರೋರ್ಗುರುಃ ॥ ೪೮ ॥

ನ ಯತ್ಪ್ರಸಾದಾಯುತಭಾಗಲೇಶ-
ಮನ್ಯೇ ಚ ದೇವಾ ಗುರವೋ ಜನಾಃ ಸ್ವಯಮ್ ।
ಕರ್ತುಂ ಸಮೇತಾಃ ಪ್ರಭವಂತಿ ಪುಂಸ-
ಸ್ತಮೀಶ್ವರಂ ತ್ವಾಂ ಶರಣಂ ಪ್ರಪದ್ಯೇ ॥ ೪೯ ॥

ಅಚಕ್ಷುರಂಧಸ್ಯ ಯಥಾಗ್ರಣೀಃ ಕೃತ-
ಸ್ತಥಾ ಜನಸ್ಯಾವಿದುಷೋಽಬುಧೋ ಗುರುಃ ।
ತ್ವಮರ್ಕದೃಕ್ಸರ್ವದೃಶಾಂ ಸಮೀಕ್ಷಣೋ
ವೃತೋ ಗುರುರ್ನಃ ಸ್ವಗತಿಂ ಬುಭುತ್ಸತಾಮ್ ॥ ೫೦ ॥

ಜನೋ ಜನಸ್ಯಾದಿಶತೇಽಸತೀಂ ಮತಿಂ
ಯಯಾ ಪ್ರಪದ್ಯೇತ ದುರತ್ಯಯಂ ತಮಃ ।
ತ್ವಂ ತ್ವವ್ಯಯಂ ಜ್ಞಾನಮಮೋಘಮಂಜಸಾ
ಪ್ರಪದ್ಯತೇ ಯೇನ ಜನೋ ನಿಜಂ ಪದಮ್ ॥ ೫೧ ॥

ತ್ವಂ ಸರ್ವಲೋಕಸ್ಯ ಸುಹೃತ್ಪ್ರಿಯೇಶ್ವರೋ
ಹ್ಯಾತ್ಮಾ ಗುರುರ್ಜ್ಞಾನಮಭೀಷ್ಟಸಿದ್ಧಿಃ ।
ತಥಾಪಿ ಲೋಕೋ ನ ಭವಂತಮಂಧಧೀ-
ರ್ಜಾನಾತಿ ಸಂತಂ ಹೃದಿ ಬದ್ಧಕಾಮಃ ॥ ೫೨ ॥

ತಂ ತ್ವಾಮಹಂ ದೇವವರಂ ವರೇಣ್ಯಂ
ಪ್ರಪದ್ಯ ಈಶಂ ಪ್ರತಿಬೋಧನಾಯ ।
ಛಿಂಧ್ಯರ್ಥದೀಪೈರ್ಭಗವನ್ವಚೋಭಿ-
ರ್ಗ್ರಂಥೀನ್ ಹೃದಯ್ಯಾನ್ವಿವೃಣು ಸ್ವಮೋಕಃ ॥ ೫೩ ॥

ಮುಚ್ಚಿಹೋಗಿದೆ. ಇದರಿಂದಲೇ ಅವರು ಅನೇಕಾನೇಕ ಪ್ರಾಪಂಚಿಕ ಕ್ಲೇಶಗಳಿಂದ ಪೀಡಿತರಾಗಿ ಅನಾಯಾಸವಾಗಿಯೇ ನಿನ್ನ ಅನುಗ್ರಹದಿಂದ ಅವರು ನಿನಗೆ ಶರಣಾದಾಗ ನಿನ್ನನ್ನು ಪಡೆದುಕೊಳ್ಳುವರು. ಅದಕ್ಕಾಗಿ ನಮ್ಮನ್ನು ಬಂಧನದಿಂದ ಬಿಡಿಸಿ ನಿಜವಾದ ಮುಕ್ತಿಯನ್ನು ದಯಪಾಲಿಸುವ ಪರಮಗುರು ನೀನೇ ಆಗಿರುವೆ. ॥ ೪೬॥ ಅಜ್ಞಾನಿಯಾದ ಈ ಜೀವನು ತನ್ನ ಕರ್ಮಗಳಿಂದ ಬಂಧಿತನಾಗಿದ್ದಾನೆ. ಅವನು ವಿಷಯಸುಖಗಳ ಇಚ್ಛೆಯಿಂದ ಕಷ್ಟಕರವಾದ ಕರ್ಮಾನುಷ್ಠಾನಗಳನ್ನು ಮಾಡುತ್ತಾನೆ. ಯಾವನ ಸೇವೆಯಿಂದ ಅವನ ಈ ಅಜ್ಞಾನವು ನಷ್ಟವಾಗುತ್ತದೋ, ಆ ಪರಮಗುರುವಾದ ನೀನು ನನ್ನ ಹೃದಯಗ್ರಂಥಿಯನ್ನು ಕತ್ತರಿಸಿಬಿಡು. ॥ ೪೭ ॥ ಬೆಂಕಿಯಲ್ಲಿ ಕಾಯಿಸಿದ ಚಿನ್ನ-ಬೆಳ್ಳಿಗಳು ಕೊಳೆಯನ್ನು ನೀಗಿ ತನ್ನ ನಿಜವಾದ ಹೊಳಪನ್ನು ಪಡೆಯುವಂತೆಯೇ, ನಿನ್ನ ಸೇವೆಯಿಂದ ಜೀವನು ತನ್ನ ಅಂತಃಕರಣದ ಅಜ್ಞಾನವೆಂಬ ಕೊಳೆಯನ್ನು ತೊಳೆದುಕೊಂಡು ತನ್ನ ನಿಜವಾದ ಸ್ವರೂಪ ಸ್ಥಿತಿಯಲ್ಲಿ ನೆಲೆಸುವನು. ಸರ್ವಶಕ್ತನೂ, ಅವಿನಾಶಿಯೂ, ಪ್ರಭುವೂ ಆದ ನೀನೇ ನಮ್ಮ ಗುರುಜನರಿಗೂ ಪರಮಗುರುವಾಗಿರುವೆ. ಆದ್ದರಿಂದ ಈಶನಾದ ನೀನೇ ನನಗೂ ಗುರು ಆಗಿರುವೆ. ॥ ೪೮ ॥ ಪ್ರಪಂಚದಲ್ಲಿ ಎಷ್ಟು ದೇವತೆಗಳಿರುವರೋ, ಎಷ್ಟು ಗುರುಗಳು-ಸಾಧು-ಸತ್ಪುರುಷರಿರುವರೋ, ಅವರೆಲ್ಲರೂ ಒಟ್ಟಾಗಿ ಸೇರಿ ಕೃಪೆದೋರಿದರೂ ಅವರೆಲ್ಲರ ಕೃಪೆಯೂ ಕೃಪಾಸಾಗರನಾದ ನಿನ್ನ ಕೃಪೆಯ ಹತ್ತುಸಾವಿರದಲ್ಲಿ ಒಂದು ಅಂಶಕ್ಕೂ ಸರಿದೂಗಲಾರದು. ಪ್ರಭುವೇ ! ನೀನು ಸರ್ವಶಕ್ತನಾಗಿರುವೆ. ನಾನು ನಿನ್ನನ್ನೇ ಶರಣು ಹೋಗುತ್ತೇನೆ. ॥ ೪೯ ॥ ಕುರುಡನಿಗೆ ಕುರುಡನೇ ದಾರಿನಡೆಸುವವನಾಗುವಂತೆಯೇ ಅಜ್ಞಾನಿಯಾದ ಜೀವನು ಅಜ್ಞಾನಿಯನ್ನೇ ತನ್ನ ಗುರುವನ್ನಾಗಿಸಿಕೊಳ್ಳುವನು. ನೀನು ಸೂರ್ಯನಂತೆ ಸ್ವಯಂ ಪ್ರಕಾಶನೂ, ಸಮಸ್ತ ಇಂದ್ರಿಯಗಳ ಪ್ರೇರಕನೂ ಆಗಿರುವೆ. ಆತ್ಮತತ್ತ್ವದ ಜಿಜ್ಞಾಸುಗಳಾದ ನಾವು ನಿನ್ನನ್ನೇ ಗುರುವಾಗಿ ಪರಿಗ್ರಹಿಸಿದ್ದೇವೆ. ॥ ೫೦ ॥ ಅಜ್ಞಾನಿಯಾದ ಮನುಷ್ಯನು ಮಾಡುವ ಉಪದೇಶವು ಅಜ್ಞಾನವಾಗಿಯೇ ಇರುತ್ತದೆ. ಅವನಿಂದ ಸಂಸಾರರೂಪವಾದ ಅಂಧಕಾರವೇ ಹೆಚ್ಚೆಚ್ಚು ದೊರೆಯುತ್ತದೆ. ಆದರೆ ನೀನಾದರೋ ಅವಿನಾಶಿಯಾದ, ಅಮೋಘವಾದ ಜ್ಞಾನವನ್ನೇ ಉಪದೇಶಿಸುವೆ. ಇದರಿಂದ ಮನುಷ್ಯನು ಸುಲಭವಾಗಿ ಸ್ವಸ್ವರೂಪವನ್ನು ಪಡೆದುಕೊಳ್ಳುವನು. ॥ ೫೧ ॥ ಮಹಾನುಭಾವನೇ ! ನೀನು ಸಮಸ್ತ ಜನರಿಗೂ ಹಿತೈಷಿಯೂ, ಪ್ರಿಯತಮನೂ, ಒಡೆಯನೂ, ಆತ್ಮನೂ ಆಗಿರುವೆ. ಗುರುವಿನ ಮೂಲಕ ದೊರೆಯುವ ಜ್ಞಾನವೂ, ಅಭೀಷ್ಟವಾದ ಸಿದ್ಧಿಯೂ ನಿನ್ನ ಸ್ವರೂಪವೇ ಆಗಿದೆ. ಹೀಗಿದ್ದರೂ ಕಾಮನೆಗಳಲ್ಲಿ ಬಂಧಿತರಾದ ಜನರು ಕುರುಡರಾಗಿದ್ದಾರೆ. ಅವರಿಗೆ ನೀನೇ ಅವರ ಹೃದಯದಲ್ಲಿ ವಿರಾಜಿಸುತ್ತಿರುವೆ ಎಂಬುದೂ ತಿಳಿಯದು. ॥ ೫೨ ॥ ನೀನು ದೇವತೆಗಳಿಗೂ ಪರಮಾರಾಧ್ಯ, ಪರಮ ಪೂಜನೀಯ ಪರಮೇಶ್ವರನಾಗಿರುವೆ. ನಾನು ನಿನ್ನಿಂದ ಜ್ಞಾನವನ್ನು ಪಡೆಯಲಿಕ್ಕಾಗಿ ನಿನಗೆ ಶರಣು ಬಂದಿರುವೆನು. ಭಗವಂತಾ ! ಪರಮಾರ್ಥವನ್ನು ಪ್ರಕಾಶಗೊಳಿಸುವಂತಹ ನಿನ್ನ ವಾಣಿಯ ಮೂಲಕ ನನ್ನ ಹೃದಯಗ್ರಂಥಿಯನ್ನು ಭೇದಿಸಿಬಿಡು ಹಾಗೂ ನಿನ್ನ ನಿಜಸ್ವರೂಪವನ್ನು ಪ್ರಕಾಶಗೊಳಿಸು. ॥ ೫೩ ॥

*ಶ್ರೀಶುಕ ಉವಾಚ*

**ಇತ್ಯುಕ್ತವಂತಂ ನೃಪತಿಂ ಭಗವಾನಾದಿಪೂರುಷಃ ।**
**ಮತ್ಸ್ಯರೂಪೀ ಮಹಾಂಭೋಧೌ ವಿಹರನ್ ತತ್ತ್ವಮಬ್ರವೀತ್ ॥ ೫೪ ॥**

**ಪುರಾಣಸಂಹಿತಾಂ ದಿವ್ಯಾಂ ಸಾಂಖ್ಯಯೋಗಕ್ರಿಯಾವತೀಮ್ ।**
**ಸತ್ಯವ್ರತಸ್ಯ ರಾಜರ್ಷೇರಾತ್ಮಗುಹ್ಯಮಶೇಷತಃ ॥ ೫೫ ॥**

**ಅಶ್ರೌಷೀದೃಷಿಭಿಃ ಸಾಕಮಾತ್ಮತತ್ತ್ವಮಸಂಶಯಮ್ ।**
**ನಾವ್ಯಾಸೀನೋ ಭಗವತಾ ಪ್ರೋಕ್ತಂ ಬ್ರಹ್ಮ ಸನಾತನಮ್ ॥ ೫೬ ॥**

**ಅತೀತಪ್ರಲಯಾಪಾಯ ಉತ್ಥಿತಾಯ ಸ ವೇಧಸೇ ।**
**ಹತ್ವಾಸುರಂ ಹಯಗ್ರೀವಂ ವೇದಾನ್ ಪ್ರತ್ಯಾಹರದ್ಧರಿಃ ॥ ೫೭ ॥**

**ಸ ತು ಸತ್ಯವ್ರತೋ ರಾಜಾ ಜ್ಞಾನವಿಜ್ಞಾನಸಂಯುತಃ ।**
**ವಿಷ್ಣೋಃ ಪ್ರಸಾದಾತ್ಕಲ್ಪೇಽಸ್ಮಿನ್ನಾಸೀದ್ವೈವಸ್ವತೋ ಮನುಃ ॥ ೫೮ ॥**

**ಸತ್ಯವ್ರತಸ್ಯ ರಾಜರ್ಷೇರ್ಮಾಯಾಮತ್ಸ್ಯಸ್ಯ ಶಾರ್ಙ್ಗಿಣಃ ।**
**ಸಂವಾದಂ ಮಹದಾಖ್ಯಾನಂ ಶ್ರುತ್ವಾ ಮುಚ್ಯೇತ ಕಿಲ್ಬಿಷಾತ್ ॥ ೫೯ ॥**

**ಅವತಾರೋ ಹರೇರ್ಯೋಽಯಂ ಕೀರ್ತಯೇದನ್ವಹಂ ನರಃ ।**
**ಸಂಕಲ್ಪಾಸ್ತಸ್ಯ ಸಿಧ್ಯಂತಿ ಸ ಯಾತಿ ಪರಮಾಂ ಗತಿಮ್ ॥ ೬೦ ॥**

**ಪ್ರಲಯಪಯಸಿ ಧಾತುಃ ಸುಪ್ತಶಕ್ತೇರ್ಮುಖೇಭ್ಯಃ**
**ಶ್ರುತಿಗಣಮಪನೀತಂ ಪ್ರತ್ಯುಪಾದತ್ತ ಹತ್ವಾ ।**
**ದಿತಿಜಮಕಥಯದ್ಯೋ ಬ್ರಹ್ಮ ಸತ್ಯವ್ರತಾನಾಂ**
**ತಮಹಮಖಿಲಹೇತುಂ ಜಿಹ್ಮಮೀನಂ ನತೋಽಸ್ಮಿ ॥ ೬೧ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಸತ್ಯವ್ರತರಾಜನು ಹೀಗೆ ಪ್ರಾರ್ಥಿಸಿದಾಗ ಮತ್ಸ್ಯರೂಪಧಾರೀ ಭಗವಾನ್ ಪುರುಷೋತ್ತಮನು ಪ್ರಳಯಸಮುದ್ರದಲ್ಲಿ ವಿಹರಿಸುತ್ತಿರುವಂತೆಯೇ ಅವನಿಗೆ ಆತ್ಮತತ್ತ್ವವನ್ನು ಉಪದೇಶಿಸಿದನು. ॥ ೫೪ ॥ ರಾಜರ್ಷಿ ಸತ್ಯವ್ರತನಿಗೆ ಭಗವಂತನು ತನ್ನ ಸ್ವರೂಪದ ಸಮಗ್ರ ರಹಸ್ಯವನ್ನು ವರ್ಣಿಸುತ್ತಾ ಜ್ಞಾನ, ಭಕ್ತಿ, ಕರ್ಮಯೋಗಗಳಿಂದ ಪರಿಪೂರ್ಣವಾದ ಜ್ಞಾನವನ್ನು ಉಪದೇಶಿಸಿದನು. ಅದನ್ನೇ 'ಮತ್ಸ್ಯಪುರಾಣ'ವೆಂದು ಹೇಳುತ್ತಾರೆ. ॥ ೫೫ ॥ ಸತ್ಯವ್ರತನು ಸಪ್ತರ್ಷಿಗಳೊಂದಿಗೆ ನೌಕೆಯಲ್ಲಿ ಕುಳಿತುಕೊಂಡೇ ಭಗವಂತನಿಂದ ಹೇಳಲ್ಪಟ್ಟ ಸನಾತನ ಬ್ರಹ್ಮಸ್ವರೂಪ ಆತ್ಮತತ್ತ್ವವನ್ನು ಸ್ವಲ್ಪವೂ ಸಂದೇಹಕ್ಕೆ ಎಡೆಯಿಲ್ಲದೆ ಶ್ರವಣಿಸಿದನು. ॥ ೫೬ ॥ ಇದಾದ ಬಳಿಕ ಹಿಂದಿನ ಪ್ರಳಯವು ಅಂತ್ಯವಾಗಿ ಬ್ರಹ್ಮದೇವರು ಎಚ್ಚರಗೊಂಡಾಗ ಭಗವಂತನು ಹಯಗ್ರೀವ ಅಸುರನನ್ನು ಕೊಂದು ಅವನು ಕದ್ದೊಯ್ದ ವೇದಗಳನ್ನು ತಂದು ಬ್ರಹ್ಮದೇವರಿಗೆ ಹಿಂದಿರುಗಿಸಿದನು. ॥ ೫೭ ॥ ಭಗವಂತನ ಕೃಪೆಯಿಂದ ಸತ್ಯವ್ರತರಾಜನೇ ಜ್ಞಾನ ಮತ್ತು ವಿಜ್ಞಾನದಿಂದ ಕೂಡಿಕೊಂಡು ಈ ಕಲ್ಪದಲ್ಲಿ ವೈವಸ್ವತಮನು ಆದನು. ॥ ೫೮ ॥ ತನ್ನ ಯೋಗಮಾಯೆಯಿಂದ ಮತ್ಸ್ಯರೂಪವನ್ನು ಧರಿಸಿದ ಭಗವಾನ್ ಮಹಾವಿಷ್ಣುವಿನ ಮತ್ತು ರಾಜರ್ಷಿ ಸತ್ಯವ್ರತರ ಈ ಸಂವಾದರೂಪವಾದ ಶ್ರೇಷ್ಠವಾದ ಆಖ್ಯಾನವನ್ನು ಶ್ರವಣಿಸಿ ಮನುಷ್ಯನು ಎಲ್ಲ ವಿಧವಾದ ಪಾಪಗಳಿಂದ ಬಿಡುಗಡೆ ಹೊಂದುವನು. ॥ ೫೯ ॥ ಭಗವಂತನ ಈ ಅವತಾರವನ್ನು ಪ್ರತಿದಿನವೂ ಕೀರ್ತಿಸುವವನ ಎಲ್ಲ ಸಂಕಲ್ಪಗಳು ಸಿದ್ಧಿಯಾಗುತ್ತವೆ ಮತ್ತು ಅವನಿಗೆ ಪರಮಗತಿಯು ಪ್ರಾಪ್ತವಾಗುತ್ತದೆ. ॥ ೬೦ ॥

ಪ್ರಳಯಕಾಲದ ಸಮುದ್ರದಲ್ಲಿ, ಬ್ರಹ್ಮದೇವರು ಮಲಗಿದ್ದಾಗ, ಅವರ ಸೃಷ್ಟಿಶಕ್ತಿಯು ಲುಪ್ತವಾಗಿದ್ದಾಗ, ಅವರ ಬಾಯಿಂದ ಹೊರಟ ವೇದಗಳನ್ನು ಕದ್ದು ಹಯಗ್ರೀವನೆಂಬ ದೈತ್ಯನು ಪಾತಾಳಕ್ಕೆ ಕೊಂಡುಹೋಗಿದ್ದನು. ಭಗವಂತನು ಅವನನ್ನು ಸಂಹರಿಸಿ ಆ ವೇದಗಳನ್ನು ಬ್ರಹ್ಮದೇವರಿಗೆ ಹಿಂದಿರುಗಿಸಿದನು ಹಾಗೂ ಸತ್ಯವ್ರತ ಮತ್ತು ಸಪ್ತರ್ಷಿಗಳಿಗೆ ಬ್ರಹ್ಮತತ್ತ್ವವನ್ನು ಉಪದೇಶಿಸಿದನು. ಅಂತಹ ಸಮಸ್ತ ಜಗತ್ತಿನ ಪರಮಕಾರಣನಾದ ಮಾಯಾಮತ್ಸ್ಯ ಭಗವಂತನಿಗೆ ನಾನು ನಮಸ್ಕಾರಮಾಡುತ್ತೇನೆ. ॥ ೬೧ ॥

*ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೨೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಅಷ್ಟಮ ಸ್ಕಂಧೇ
ಮತ್ಸ್ಯಾವತಾರಚರಿತಾನುವರ್ಣನಂ ನಾಮ ಚತುರ್ವಿಂಶೋಽಧ್ಯಾಯಃ ॥ ೨೪ ॥

ಎಂಟನೆಯ ಸ್ಕಂಧವು ಸಂಪೂರ್ಣವಾಯಿತು.

॥ ಶ್ರೀಹರಿಃ ॥

# ಶ್ರೀಮದ್ಭಾಗವತ ಆರತಿ

ಆರತಿ ಅತಿಪಾವನ ಪುರಾನಕೀ ।
ಧರ್ಮ ಭಕ್ತಿ ವಿಜ್ಞಾನ ಖಾನಕೀ ॥ ಧೃ ॥

ಮಹಾಪುರಾಣ ಭಾಗವತ ನಿರಮಲ ।
ಶುಕ ಮುಖ ವಿಗಲಿತ ನಿಗಮಕಲ್ಪ ಫಲ ॥
ಪರಮಾನಂದ ಸುಧಾ ರಸಮಯ ಕಲ ।
ಲೀಲಾ ರತಿ ರಸ ರಸನಿಧಾನ ಕೀ ॥ ೧ ॥

ಕಲಿಮಲ ಮಥಿನಿ ತ್ರಿತಾಪ ನಿವಾರಣಿ ।
ಜನ್ಮ ಮೃತ್ಯುಮಯ ಭವ ಭಯ ಹಾರಿಣಿ ॥
ಸೇವತ ಪತಿತ ಸಕಲ ಸುಖ ಕಾರಿಣಿ ।
ಸುಮಹೌಷಧಿ ಹರಿ ಚರಿತ ಗಾನಕೀ ॥ ೨ ॥

ವಿಷಯ ವಿಲಾಸ ವಿಮೋಹ ವಿನಾಶಿನಿ ।
ವಿಮಲ ವಿರಾಗ ವಿವೇಕ ವಿಕಾಶಿನಿ ॥
ಭಗವತತ್ತ್ವ ರಹಸ್ಯ ಪ್ರಕಾಶಿನಿ ।
ಪರಮಜ್ಯೋತಿ ಪರಮಾತ್ಮ ಜ್ಞಾನಕೀ ॥ ೩ ॥

ಪರಮಹಂಸ ಮುನಿ ಮನ ಉಲ್ಲಾಸಿನಿ ।
ರಸಿಕ ಹೃದಯ ರಸ ರಾಸ ವಿಲಾಸಿನಿ ॥
ಭುಕ್ತಿ ಮುಕ್ತಿ, ರತಿ, ಪ್ರೇಮ ಸುದಾಸಿನಿ ।
ಕಥಾ ಅಕಿಂಚನಪ್ರಿಯ ಸುಜಾನಕೀ ॥ ೪ ॥



# Gita Press, Gorakhpur - Wholesale & Retail Outlets

| Gorakhpur | Delhi |
|---|---|
| **Gita Press**<br>P.O. Gita Press, Gorakhpur- 273005<br>Phone -(0551) 2334721; Fax 2336997<br>e-mail : booksales@gitapress.org<br>website : www.gitapress.org | 2609, Nai Sarak , Delhi - 110006<br>Phone - (011) 23269678<br>Fax - (011) 23259140 |
| **Kolkata** | **Mumbai** |
| **Gobind Bhavan-Karyalaya**<br>151, Mahatma Gandhi Road,<br>Kolkata - 700007<br>Phone- (033)22686894;Fax-22680251<br>e-mail : gobindbhawan@gitapress.org | 282, Samaldas Gandhi Marg<br>(Princess Street), Near Marine Lines<br>Station, Mumbai - 400002<br>Phone - (022) 22030717 |
| **Kanpur** | **Patna** |
| 24/55, Birhana Road,<br>Kanpur- 208001<br>Phone - (0512) 2352351<br>Fax - (0512) 2352351 | Ashok Rajpath, Opposite Women's<br>Hospital, Patna - 800004<br>Phone - (0612) 2300325 |
| **Ranchi** | **Surat** |
| Court Sarai Road, Upper Bazar<br>Ranchi - 834001<br>Phone - (0651) 2210685 | Vaibhav Apartment, Opposite Nutan<br>Niwas, Bhatar Road, Surat— 395001<br>Phone - (0261) 2237362, 2238065<br>e-mail : suratdukan@gitapress.org |
| **Indore** | **Jalgaon** |
| G-5, Shree Vardhan, 4 R.N.T. Marg<br>Indore - 452001<br>Phone - (0731) 2526516, 2511977 | 7, Bhim Singh Market, Near Rail-<br>way Station, Jalgaon - 425001<br>Phone - (0257) 2226393 |
| **Hyderabad** | **Nagpur** |
| 41, 4-4-1, Dilshad Plaza, Sultan Bazar<br>Hyderabad - 500096<br>Phone - (040) 24758311 | Shriji Kripa Complex, 851, New Etawari<br>Road, Nagpur - 440002<br>Phone - (0712) 2734354 |

| Cuttack | Raipur |
| --- | --- |
| Bhartiya Towers, Badam Badi<br>Cuttack - 753009<br>Phone - (0671) 2335481 | Mittal Complex, Ganjpara<br>Telghani Chowk, Raipur - 492009<br>Phone - (0771) 4034430 |
| **Varanasi** | **Haridwar** |
| 59/9, Nichibag<br>Varanasi - 221001<br>Phone - (0542) 2413551 | Sabjimandi, Motibazar<br>Haridwar - 249401<br>Phone - (01334) 222657 |
| **Rishikesh** | **Rishikesh** |
| **Gita Bhawan**<br>P.O. Swargashram, Rishikesh - 249304<br>Phone - (0135) 2430122, 2432792<br>e-mail : gitabhawan@gitapress.org | Muni Ki Reti<br>Rishikesh - 249192 |
| **Bangalore** | **Churu** |
| 15, 4th 'E' Cross, K.S. Garden,<br>Lalbagh Road, Bangalore — 560027<br>Phone - (080) 22955190 | **Rishikul-Brahmacharyashram**<br>Purani Sarak, Churu— 331001<br>Phone - (01562) 252674 |
| **Coimbatore** | **Tirupati** |
| Gita Press Mansion, 8/1M, Racecourse<br>Coimbatore (T.N.) - 641018<br>Phone - (0422) 3202521 | Shop No. 56, T.T.D. Mini Shopping<br>Complex, Tirumalai Hills<br>Tirupati - 517504 |

## Station-Stalls — City (Platform No.)

**Delhi** (12); **New Delhi** (8-9); **Hazarat Nizamuddin** [Delhi] (4-5); **Kota** [Rajasthan] (1); **Bikaner** (1); **Gorakhpur** (1); **Kanpur** (1); **Lucknow** [N.E. Railway]; **Varanasi** (4-5); **Mughal Sarai** (3-4); **Haridwar** (1); **Patna** (Main Entrance); **Ranchi** (1); **Dhanbad** (2-3); **Muzaffarpur**(1); **Samastipur** (2); **Howrah** (5 & 18 Both); **Sealdah Main** (8); **Cuttack** (1); **Bhubaneshwar** (1); **Rourkela** (Books-Trolley); **Rajgangpur** (Books-Trolley); **Guwahati** (1); **Asansol** (5); **Aurangabad** [Maharashtra] (1); **Secunderabad** [A.P.] (1); **Khadagpur** (1-2); **Raipur** [Chhattisgarh] (1) and **I.S.B.T. (Delhi).**

